ತೀವಿರ್ದ ಸೀಂಬುಟ್ಟುವಂ ಬಾಯ್ಗೆಟಿ ನೂಂಕು ಪಾಕುಳಿದೊಳ್ . . . ಎಂಬ ಕಾಲಯುಮನಂ ಕಂಡೆಂ (ದಕಸು. ೩-೦೭). [?]

**ಪಾಕುಳಿಗ** (ನಾ). = ಪಾಕಿಗ : ಪಾಕುಳಿಗಂ, ಪಾಕಿಗಂ, ಪಾಕಕರ್ತರ್ (ಶಬ್ದಾಸು. ೪೦೦ ವ್ಯಾಖ್ಯಾ). [ಪಾಕ₁ + — ಉಳಿಗ₃]

**ಪಾಕುಳಿಗಿತಿ** (ನಾ). ಅಡುಗೆಯವಳು ; ರಂದಣಗಿತ್ತಿ : ದೇವುಳಿಗಿತಿ, ಪಾಕುಳಿಗಿತಿ, ಕಯ್ಪುಳಿಗಿತಿ (ಶಬ್ದಾಸು. ೧೯೨ ಪ್ರಯೋ). [ಪಾಕುಳಿಗ + — ಇತಿ₁ (< — ಇತ್ತಿ)]

**ಪಾಕೆಟ್ಟು** ‘ ಪಾಕೀಟು ’ ನೋ.

**ಪಾಕ್ಯ** (ಗು). ೧. ಬೇಯಿಸಬೇಕಾದ. ೨. ಬೇಯಿಸಿ ಸಿದ್ಧಪಡಿಸಿದ. (ನಾ). ೩. ಒಂದು ಬಗೆಯ ಉಪ್ಪು ; ಅಟ್ಟುಪ್ಪು : "ಪಾಕ್ಯಂ, ಬಿಡಂ— ಈ ೨ ಅಟ್ಟುಪ್ಪಿನ ಹೆಸರು" (ಸಿದ್ಧಾಂತಿ. ೨೮೭). [ಸಂ.]

**ಪಾಕ್ಷಿಕ** (ಗು). ೧. ಹದಿನೈದು ದಿನಗಳ ಗಡುವಿನ ; ಹದಿನೈದು ದಿನಗಳಿಗೊಮ್ಮೆ ಬರುವ : ಇಬ್ಬರು ಸದಸ್ಯರು ಪಾಕ್ಷಿಕ ಸಭೆಯಲ್ಲಿ . . . ಒಂದೊಂದು ಪ್ರಬಂಧವನ್ನು ಓದಬೇಕಾಗಿತ್ತು (ದಾದಾಕ. ೦೭). ೨. ಒಂದುಂ ಪಕ್ಷಕ್ಕೆ ಒಲಿದ ; ಒಂದುಂ ಪಂಗಡಕ್ಕೆ ಸೀಮಿತವಾದ. (ನಾ). ೩. ಹದಿನೈದುದಿನಗಳಿಗೆ ಸಂಬಂಧಪಟ್ಟುದು ; ಒಂದು ಪಕ್ಷಕ್ಕೆ ಸೀಮಿತವಾದುದು : ಪಾಕ್ಷಿಕವೊ ಮಾಸಿಕವೊ ವಾರ್ಷಿಕವೊ ಏನೇನೊ ಬರುವ ಯೋಜನೆ ಸಕಾಲಕ್ಕೆ ಬರಲಿ (ಕೀಶಂ. ೯೭-೧೦). ೪. ಹದಿನೈದು ದಿನಗಳಿಗೆ ಒಮ್ಮೆ ಪ್ರಕಟವಾಗುವ ಪತ್ರಿಕೆ : ಮಾಸಿಕವಾಗಿದ್ದ ಪತ್ರಿಕೆ ಈಗ ಪಾಕ್ಷಿಕವಾಗಿ ಮಾರ್ಪಟ್ಟಿದೆ (ರೂಢಿ). ೫. [ಜೈನ] ಹಿಂಸೆಯನ್ನು ತ್ಯಾಗಮಾಡಿ ಶ್ರಾವಕಧರ್ಮವನ್ನು ಆಚರಿಸುವವನು . ಕಷಾಯಂಗಳ ಕ್ಷಯೋಪಶಮ ಹೀನಾಧಿಕಭಾವದ ವಶದತ್ತಣಿಂದವು ದಾರ್ಶನಿಕ ಮೊದಲಾದ ಹನ್ನೊಂದುಸ್ಥಾನದ ವಶವನುಳ್ಳ ಪಾಕ್ಷಿಕನಾಪೇಕ್ಷೆಯಿಂದವು ಹಿರಿದು ಸಂಪನ್ನನಾಹಾತನು ನೈಷ್ಠಿಕನಹನು (ಜಾಗಾರ. ೨೯-೦). [ಸಂ.]

**ಪಾಖಂಡ** (ನಾ). ೧. ವೇದಧರ್ಮವನ್ನು ಖಂಡಿಸುವ ನಾಸ್ತಿಕ ಮತದವನು ; ಧರ್ಮಲಂಡ ; ನಾಸ್ತಿಕ. ೨. ಧರ್ಮಲಂಡತನ ; ಸ್ತ್ರಿಕತೆ : ರಾಮಗುಣಸಮೂಹವು ಕುಪಂಥ, ಕುತರ್ಕ . . . ದಂಭ, ಪಾಖಂಡಗಳೆಂಬ ಉರುವಲಗಳನ್ನು ಸುಡುವ ಪ್ರಚಂಡಅಗ್ನಿಯಾಗಿರುವುದು (ತುಳಸೀ. ೯). [ಸಂ.]

**ಪಾಖಂಡಮತ** (ನಾ). ನಾಸ್ತಿಕಮತ : ಕೋವರ್ಣಿಕಸನ ಹಿಂದೆ ಅವನ ಮತಕ್ಕೆ ಪಾಖಂಡಮತವೆಂಬ ಹೆಸರು ಬಿತ್ತು (ತುಂಬಿಹು. ೩-೨೨೦). [ಪಾಖಂಡ + ಮತ]

**ಪಾಖಂಡಿ** (ನಾ). = ಪಾಖಂಡ ೧ : ಬ್ರಹ್ಮವಿಷ್ಣುಮಹೇಶ್ವರರನ್ನು ಭೇದಬುದ್ಧಿಯಿಂದ ನೋಡುವವನು ಪಾಖಂಡಿಯೆಂದು ಹೇಳಿದೆ (ಹಾರಿದ. ೦೪೨); ಅವನ ಮನಸ್ಸು ಮಾರುಳಾರ್ಯನಂಥ ಪಾಖಂಡಿಯ ದರ್ಶನದಿಂದ ಇನ್ನಷ್ಟು ಕ್ಷುಬ್ಧವಾಯಿತು (ಅಕ್ರಸು. ೯೭). [ಸಂ. ಪಾಖಂಡಿನ್]

**ಪಾಗ₁**, **ಹಾಗ** (ನಾ). ೧. ಕಾಲುಭಾಗ; ನಾಲ್ಕನೆಯ ಒಂದು ಅಂಶ : "ಪಾಗ — ಪಾದ = ಕಾಲಂಶ" (ಕರ್ಣಕೋ. ೨೫). ೨. ಚಿಕ್ಕಬೆಲೆಯ ಒಂದು ನಾಣ್ಯ ; ಹಣದ ಕಾಲುಭಾಗ : ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ (ಪಾಂರೇಡ್. ೩-೨೨ ಪ; 1042); ಅಯ್ನೂರ್ವರುಮಿಟ್ಟು ಪಸುಂಬೆಯ ಸೇಸೆಯಲು ಪಾಗಮುಮಂ ಅಂಗಡಿಯಲು ಸೊಟಿಗೆ ಭತ್ತಮ ಬಿಟ್ಟರ್ (ಸೌಇ. IX-1, ೦೪೯-೪೦ ; 1074) ; ಕೊಯ್ನಾಳಿಗಳೆಲ್ಲರುಮೆತ್ತಿಕಾಟರು ದೇವರ್ಗೆ ನನ್ದಾದೀವಿಗೆಗೆ ಬಿಟ್ಟ ಧರ್ಮ ಏಣಿಗೆ ಪಾಗ (ಸೌಇ. IX-1, ೦೪೦-೩೫; 1130); ಸುಸಿಲೇಂ ಪೇಟಿಚ್ ಪಾಗದೊಳ್ ತೀರದೇ (ಕಾವ್ಯಾಶ. ೬೩೩). ೩. ತೂಕದ ಒಂದು ಪ್ರಮಾಣ : "ಪಾಗವುವು ನಾಲ್ಕಿಗೆ ಪಣಂ . . . ಬಳ್ಳವುವು ನಾಲ್ಕನಲು ಕೊಳಗವುವು ವಿಂಶತಿಗೆ ಖಂಡುಗಾಖ್ಯಂ" (ಷುಂಗಣಾ. ೦೦೪-೦೦). **ಹಾಗ** : ೧. ಹಣದ ತಲೆಯಕ್ಕಿ ನೆಲದೆಟೆಯ ಹಾಗ ಶವದುಡಿಗೆಯೆನಗಾಯ್ತು (ಹಕಕಾ. ೦೦-೩೮); ಇಲ್ಲಿ ಅಭಿವ್ಯಕ್ತ ಗೊಂಡಿರುವುದೇನಿದ್ದರೂ ಆ ವಿರಾಟ್‌ಪುರುಷನ ‘ ಹಾಗ ’ ಮಾತ್ರ (ಸೌಂದಕ. ೦೦೮). ೨. ಸೆಟ್ಟಿಯರೊಕ್ಕಲಿಗೆ ಹಾಗ ಎಂಟು (ಸೌಇ. ೦೯೪೭, ಹಾಪಗಲ್. ೩೪೯-೪೩; 1036); ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ (ಬಸವ. ೦೫೮); ಹಾಗದ[ಕಾಣಾ. ಪಚ್ಚೆಯ] ಪಸುರ್ವಣಿಯಂ ಕುಡಲಿಲ್ಲದಂತು ಬಾಯ್ಕಂಬುಲಮೆಂಬುದಂ ಪಡೆಯದಂತುಟೆ (ರೀಣಾವ. ೨-೦೦೭) ; ಹಾಗದ ಕೋಶಿ ಮುಪ್ಪಾಗದ ಬೆಲ್ಲ ತಿಂತು (ಗಾದೆ). ೪. ಭಾಗ ; ಪಾಲು : ಕಾವಗೌಡಂ ತನ್ನ ಹಾಗದ ಬಳದೊಳಗೆ ಬಿಟ್ಟ ಮತ್ತರೆರಡು ಕಮ್ಮ (ಕಇ. I, ೨೪-೨೦; 1148); ಬಾಚಗಾವುಂಡನ ಹಾಗದಿಂ ಪಡುವಲು ಮತ್ತಂ (ಕಇ. I, ೨೫-೭೭; 1186) ; ಬೊಮ್ಮಗವುಡಂಗೆ ಹಾಗದ ಕೆಯ್ಯನು ಗವುಡು ಗೊಡೆಗೆಯಾಗಿ . . . ಕೊಟ್ಟ (ಎಕ. VI. ಚಿಕ್ಕಮ. ೮೩-೪; ?).

ಹಾಗದ ಕಾಸು = ಚಿಕ್ಕಬೆಲೆಯ ನಾಣ್ಯ : ಹಣ ತಿಂದು ಹುಟ್ಟಿದವನಿಗೂ ಹಾಗದ ಕಾಸು ತಿಂದು ಹುಟ್ಟಿದವನಿಗೂ ಸಮವೆ ? (ಕಂಗಾಳ್ಯ. ೯) ; ಮೇಲೆ ಬಿದ್ದು ಬರುವ ಸೂಳೆ ಹಾಗದ ಕಾಸಿಗೂ ಬೇಡ (ಗಾದೆ). [< ಸಂ. ಪಾದ]

**ಪಾಗ₂** ‘ಪಾಗಾ’ ನೋ.

**ಪಾಗಡ** ‘ಪಾಡಗ₁’ ನೋ.

**ಪಾಗಡಿ** ‘ಪಗಡಿ₁’ ನೋ.

**ಪಾಗಡೆ** ‘ಪಾಡಗ₂’ ನೋ.

**ಪಾಗದ** (ನಾ). ೧. ಪ್ರಾಕೃತಭಾಷೆ : ಸಕ್ಕದಮುಂ ಪಾಗದಮುಂ ಮದಕ್ಕಂ ಬಗೆದಂತೆ ಸಮಟಿ ಪೇಟಲ್ (ಕವಿರಾ. ೦-೪೦) ; ಸಕ್ಕದದೊಳ್ ಮುನ್ನಂ ಪಾಗದದೊಳಾದ [ಸು]ಕೃತಿಗಳೆಲ್ಲಂ ಕನ್ನಡ ಮುಂಡಿಗವಿದಂತೆ ಜಗನ್ನುತಮಿಾ ಕೃತಿಯೆ ತಾನಲಂಕೃತಿಯೆನಿಪಾ (ವರ್ಧಮಾ. ೦೭-೪೯) ; ಪ್ರಾಕೃತ-ಪಾಗದ (ಕಮರ. ೨೬೯ ಪ್ರಯೋ). ೨. ಜನಸಾಮಾನ್ಯರ ಭಾಷೆ ; ದೇಶಭಾಷೆ : "ಪಾಗದಂ ನರಭಾಷಿತಂ" (ಕರ್ಣಾಟಿ. ೬೨) ; ಸಕ್ಕದದೊಳಿರ್ಪುದಂ ನಲವಿಂ ಪಾಗದದಿಂ ರಚಿಯಿಸಿ ಕೇಳ್ವೊಳ್ಪುಳ್ಳುದೆ ಸೆ (ಶಬ್ದಾಸು. ೦-೩೪). [< ಪ್ರಾ. ಪಾಗಯ. / ಸಂ. ಪ್ರಾಕೃತ]

**ಪಾಗರ₁** ‘ಪಾಗಾರ’ ನೋ.

**ಪಾಗರ₂** ‘ಪಕ್ಕರೆ’ ನೋ.

**ಪಾಗರಗೋಡೆ** (ನಾ.) ಸುತ್ತುಗೋಡೆ ; ಪ್ರಾಕಾರದ ಗೋಡೆ ; ಪೌಳಿ : ಮಟಕೆ ಹಾಕಿದ ಪಾಗರಗೋಡೆ ಗಡಿ (ಎಕ. VIII, ತೀರ್ಥಹ. ೫೨-೦೭ ; 1641). [ಪಾಗರ₁ (< ಪಾಗಾರ) + ಗೋಡೆ]

**ಪಾಗಲ್₁**, ಹಾಗಲ್, ಹಾಗಲ, ಹಾಗಲು (ನಾ). ಒಂದು ಬಗೆಯ ಬಳ್ಳಿ ಹಾಗೂ ತರಕಾರಿಯಾಗಿ ಬಳಸುವ ಅದರ **ಕಾಯಿ** : ಸಲೆ ಪಂದಿಯ ನೆಣನುಮನಂಕೊಲೆಯ ಕಷಾಯಮುಮನೆಟಿಗೆ ಮೂಲದೊಳಾಮುಂಡಲಗೆಗಿದಚ್ಚರಿಯೆನೆ ಪಾಗಲ ಕಾಯಕ್ಕಂ (ಕೂಕೋಶ. ೬-೫೪) ; ಸಾಗರಮೊಂದು ಕಂಕಣದಿನುರ್ವರೆ ಕಾವಲಿಯಿಂ ಕುಲಾದ್ರಿಗಳ್ ಪಾಗಲ ಕಾಯ್ಗಳಿಂ . . . ಕರಂ ಕಿಟಿಯವಾದುವು ಕಣ್ಗೆ ಗುಣಾವಲೋಕನಾ (ಅರ್ಜಸೀ. ೬-೪) ; ಪೊತ್ತದೆ ಪೊಗಸುತ್ತದೆ ನಸುಬತ್ತದೆ ಕೆಂಪಚರ್ಮಬೆಂದ ಪಾಗಲ ಕಾಯಂ ಪತ್ತೆಂಟು ತುತ್ತಿದಲ್ಲದೆ ಚಿತ್ತಂ ತಣಿಗುಮೆ (ಸೂಕ್ತಿಸು. ೦೦-೯೨). **ಹಾಗಲ್** : "ಹಾಗಲ್‌-ಕಾರವೇಲ್ಲ,

ಕಟಿಲ್ಲಕ, ಸುಷವಿ" (ನಾಶಾ. ೩.). **ಹಾಗಲ** : ಹಾಗಲ ಹಡಲಂ ಕುಳಂ ಕೂಗಲಿ ಕೂಷ್ಮಾಂಡವವರೆ ಬದನೆಗಳಿಂ ಲೇಸಾಗಿರೆ ಮಾಡಿದ ಸವಿಮೇಲೋಗರವಂ ತಂದು ಬಡಿಸಿದರ್ ಮಾನಿನಿಯರ್ (ರರ್ವೇಶ. ೨-೫೫) ; ಕತ್ತರಿಗುಳ್ಳ ಹಡಲ ಹಾಗಲ ಕೂಗರಿ ಬದನೆ ಮೊದಲಾದ ಕಾಯ್ಗಳ ರಸಂಗಳಂ ತೆಗೆದು (ಸೂಶಶಾ. ೫-೪೧) ; ಹಾಗಲ ಬದನೆ ಹೆಗ್ಗುಳ್ಳ . . . ಹಲವು ಫಲಕಂದಗಳ ಶಾಖಾವಳಿಯ ಸವಿಯೊಪ್ಪುರಣೆ ಘಮಘಮಿಸಲಿಕೆ ಬಡಿಸಿದರು (ಅನಂಶಾ. ೬-೨೫-೩೯) ; ಹಾಗಲ ಕಾಯನ್ನು ಹೇಗೆ ಅಟ್ಟರೂ ಕಹಿ (ಹಳ್ಳ. ೬೬). **ಹಾಗಲು** : "ಹಾಗಲು ಪೀತಪುಷ್ಪ ಕರ್ಕೋಟಕಿಯೆನಿಸಿಕ್ಕು" (ಮಂಗರಾ. ೪೪-೪೪) ; ಹರಳುಗಳಂ ಹಂದಿಗಳ ರಕ್ತವಪೆಗಳಲ್ಲಿಯೂ ಅಂಕೋಲೆ ತೈಲದಲ್ಲಿಯೂ ನೆನಸಿ ಬಿತ್ತಲು ಅದರಲ್ಲಿ ಹಾಗಲುಕಾಯಿ ಹುಟ್ಟುವುದು (ಶಿಗುಂ. ೪೩೬-೦೪).

**ಹಾಗಲ ಕಾಯಿಗೆ ಬೇವಿನ ಕಾಯಿ ಸಾಕ್ಷಿ**=(ಅಲಂ) ದುಷ್ಟನಿಗೆ ಅದೇ ಮನೋಭಾವದ ಇನ್ನೊಬ್ಬನು ಕೊಡುವ ಸಾಕ್ಷಿ : ಹಾಗಲ ಕಾಯಿಗೆ ಬೇವಿನ ಕಾಯಿ ಸಾಕ್ಷಿ (ಗಾದೆ).

[ದೇ. ॥ ತಮಿ. ಪಾಕಲ್, ಪಾವಲ್ ; ಮಲ. ಪಾವಲ್]

**ಪಾಗಲ್₂** 'ಪಾಗಾರ' ನೋ.

**ಪಾಗಲ** 'ಪಾಗಾರ' ನೋ.

**ಪಾಗಲು** 'ಪಾಗಾರ' ನೋ.

**ಪಾಗಾ, ಪಾಗ್₂** (ನಾ). ಆನೆ ಮತ್ತು ಕುದುರೆಗಳ ಲಾಯ : ಪೂರ್ವಕಾಲದಲ್ಲಿ ಆನೆಗಳ ಪಾಗಾ ಈ ಬಾಜಾರಿನಲ್ಲಿ ಇತ್ತು (ಕಳಾಗ. ೫೨೯) ; ಮೋಜಿನ ಕುದುರಿ . . . ಪಾಂಡವರ ಮನಿಯೊಳಗ ಪಾಗಾದಾಗಿತ್ತು. ಪಾಗಾದ ಗೂಟವ ಜಾಡಿಸಿ ಕಿತ್ತು ಹೋಗುವಾಗ ಶಿಶುನಾಳಕೋಡ್ಯೋಡಿ ಬಂತು (ಕಂಶ. ೪೬). **ಪಾಗ್₂** : ಕುದುರಿಗೆ ಪಾಗದ ಮನೆಯಿರಲಿ ಕೋ ಪಲ್ಲಕ್ಕಿ ಅಬಶಾಗಿರಿ ಚಿತ್ರಗಿರಿಗಿವನಿಯಿರಲಿ (ಕನ್ನಡಾ. ೩೨೪).

[← ಮರಾ. ಪಾಗಾ]

**ಪಾಗಾಣತಿ** (ನಾ). ದಾಸಿ (?) : ಮಾರುವುದು ನಿನ್ನ ತೊತ್ತಿನ ಮಕ್ಕಳಿಗೆ ಮಾರುವುದು ನಿನ್ನ ಪಾಗಾಣತಿಯರಿಗೆ ಮಾರುವುದು ನಿನ್ನ ಬೋನಕಾರ್ತಿಯರಿಗೆ . . . ಮಾರದಿರು ಎನ್ನ ಮಾರಿಗೆ ಗುರಿಮಾಡಿ (ಪೋಕ್ಷಂ. ೬೦-೬).

[?]

**ಪಾಗಾರ, ಪಾಕಲ್, ಪಾಕಲ₁, ಪಾಕಲು, ಪಾಗರ₁, ಪಾಗಲ್₂, ಪಾಗಲ, ಪಾಗಲು** (ನಾ). ಸುತ್ತುಗೋಡೆ ; ಪ್ರಾಕಾರ ; ಪೌಳಿ : ಝುಗೆಯ ಲಹರಿಯ ಜಾಳಿಗೆಯ ಪಚ್ಚಿಗಳ ಪಾಗಾರದ ಸುರತ್ನಾಳಿಗಳ ಲೆಸೆದುದು ರಾಜಸಭೆ (ಕುಮಾ. ೦೩-೨೫) ; ಕಟೆಯ ಪಾಗಾರವು (ಬೊಂಕಶಾ. ೧೯೪೦, ಕುಮುಟ. ೧೧೩-೯; 1476) ; ಮರಳಿನ ಪಾಗಾರವಳಿವುದು ಖಚಿತವು (ಗಾಕಾಶ. ೩-೪೫) ; ಮನೆಯ ಸುತ್ತಲೂ ಎತ್ತರವಾದ ಪಾಗಾರವನ್ನು ಮಾಡಿಸಿದನು (ಮಕಿಸ. ೪೨). **ಪಾಕಲ್** : ಪಳುಕಿನ ಪಾಕಲಂ ಬಳಸಿ ರಂಜಿಸುತಿರ್ಪ ಮಹೇಶಗೇಹದೊಳ್ (ಶೀರಶಿ. ೩-೪೦) ; ಪ್ರಾಕಾರ_ಪಾಗರ, ಪಾಕಲ್ (ಶಬ್ದಸ. ೬೦ ಪ್ರಯೋ). **ಪಾಕಲ₁** : "ಪಾಕಲೆನಲು ಪಾಕಲ ಮೆನಲುಂ ಕಂಗೊಳಿಕು ಪ್ರಾಕಾರದೊಳ್" (ಕಕರ. ೬೫). **ಪಾಕಲು** : "ಪಾಕಲುಯೆಂಬ ಶಬ್ದಂ = ಪ್ರಾಕಾರದಲ್ಲಿಯುಂ, ಕಾಂಗಿನಲ್ಲಿಯುಂ" (ಕಮುರ. ಮ. ೩೦೨ ಫುಟಿ). **ಪಾಗರ₁** : "ಕೋಟಾ = ಪಾಗರಂ" (ಕಾಶಳ. ೨೫೫) ; ತಳವಾಸುಗೆಯ ಪಚ್ಚೆ ಪಳಿಕೆಸೆವ ಪಾಗರಂ ಹೊಳೆವ ವಜ್ರಸ್ತಂಭ (ಮಸೋಂ. ೦-೨೩) ; ಬೇಲಿಯಿಕ್ಕಿದ ಕಲ್ಲುಬಸ್ತಿಯ ಪಾಗರದಡಿ ತೆಂಕಲು ಹರಿದ ಅರಳೆಗಡಿ (ಕಶ. I, ೪೧-೫೧; 1417) ; ಪಾಗರ[ಪಾಕಾಂ. ಬಾಗಿಲ] ಪೊಂದೆರಡನು ದಾಟಿ ಮುಂದೊಂದು ಬಾಗಿಲೊಳ್ಳಿಂದನಾ ರಾಯ (ಕರಶ. ೨೨-೬೬); ಭವಿದ್ಯಷ್ಟಿ ಪೂದೋಂಟಕಂ ಬೇಳದಂದದಿಂ ತವೆ ಪಾಗರವ ಕಟ್ಟಿಸುವುದಣೆಯರದೊಳು (ಪಾಸೋಕ್ಷ. ೨-೬೬). **ಪಾಗಲ್₂** : ಸೌಧಶಿಖರಪ್ರಾಗ್ಭಾಗಮಂ ಪತ್ತಿ ಪಾಗಲ[ಸಾ]ಶ್ರ್ಯಸಿ . . . ಅಟ್ಟಾಳಮಂ ಮೆಟ್ಟಿ ನೋಟ್ಟಿ ಲತಾತನ್ವಿಯರಂಬರೇಚರಿಯರೆಂಬಾಶಂಕೆಯಂ ಮಾಡಿದರ್ (ಪುಷ್ಪಪು. ೮-೪೬) ; ಪ್ರಾಕಾರ _ ಪಾಗಲ್ (ಶಮರ. ೨೮೦ ಪ್ರಯೋ) ; ದೇಗುಲಮಂ ಗೋಪುರಮಂ ಪಾಗಲ್ಗಳನಡಿಗೆಸೆಜ್ಜೆ ವಜ್ಜಣಮನೆ ಮುಂತಾಗಿ . . . ಒಡರಿಸಿದಂ (ಶಳಶಿ. ೨-೦೪೦). **ಪಾಗಲ** : ಪಾಗಲಂ = ಪ್ರಾಕಾರಂ (ಕಮರ. ಕಂ.೨). **ಪಾಗಲು** : ಪ್ರಾಕಾರ _ ಪಾಗರ, ಪಾಗಲು (ಹೊಸನ. ೧೦೮). [<ಪಾಲಿ. ಪಾಗಾರ. / ಪ್ರಾ. ಪಾಕಾರ, ಪಾಗಾರ./ ಸಂ. ಪ್ರಾಕಾರ]

**ಪಾಗಿವಾಳ** (ನಾ). ಕಾಲವನ್ನು ಅಳೆಯುವ ಒಂದು ಪ್ರಮಾಣ : ಅರುವತ್ತುಅಕ್ಷರ ಕೂಡಲು ಒಂದು ಪಾಗಿವಾಳ, ೬೦ ಪಾಗಿವಾಳ ಕೂಡಲು ೧ ಘಳಿಗೆ (ರುದ್ರಶಾ. ೮೫). [?]

**ಪಾಗು₁, ಪಾಂಗು₂, ಪಾಕು₁** (ನಾ). ೧. ತಲೆಗೆ ಸುತ್ತುವ ಉತ್ತಮ ವಸ್ತ್ರ ; ರುಮಾಲು; ಪೇಟ : ಧರೆಯ ಪಾಗನೆ ಮಾಡಿ ಸಿರಕೆ ಸುತ್ತಿದನೊಬ್ಬ (ರೇಪಾಂಪು. ೩-೦೬೧) ; ಪತ್ತಿದ ಪನ್ನ ಸುತ್ತಿದ ನಿರಾಜಿಯ ಪಾಗು ರೂಪೆತ್ತು ನಿಂದಿಹನಾರು (ಶಿಂದಶಾ. ೯-೬೬) ; ಚಂದ್ರಗಾವಿಯ ಅಂಗಿ ತೊಟ್ಟು ಇಂದ್ರನೀಲದ ಪಾಗು ಸುತ್ತಿ (ಗೋಹಾಡು. ೨೯); ಈ ಸೈನಿಕರಾದರೋ ಪೀತವಸ್ತ್ರಧಾರಿಗಳು. ಕೆಂಪುಪಾಗು ಸುತ್ತಿದ್ದರು (ಕುಟಿಖಾ. ೮೨). ೨. ಒಂದು ಶ್ರೇಷ್ಠ ಬಗೆಯ ಸೀರೆ : ಚಿತ್ರ ಚಿತ್ರಾವಳಿ ಪಾಗು ಪಸುರ[ಪಾಕಾಂ. ಪಾಂಗುಪಶು]ಪಟ್ಟೆ ಸೂತ್ರಪಳಿಯ ಚಿನ್ನಧಾರೆ (ಅಮುಶಾಂ. ೪-೮). **ಪಾಂಗು₂** : ೧. ಒಡಿದೆತ್ತಿ ತನ್ನ ಪಾಂಗಿಂ ಬಿಡದಡಿಯಂ ಕಟ್ಟಿ ತೂಗಿ ವಿತ್ತಮನಿಕ್ಕೆಂದಡಿಗಡಿಗೆ ಜಡಿಯುತುಂ ಬಿಡುನುಡಿಯಂ ನುಡಿಯುತ್ತುಮಿರ್ದನಾ ಶಿವಭಕ್ತಂ (ಉದ್ಭಟ. ೧೨-೯೪) ; ಪೆಗಲ್ವರವಿಟಾದಾ ತುಱುಂಬರೆವ ಟೊಪ್ಪಿಗೆ ಕಟ್ಟಿದ ಪಾಂಗು ಪೂಸಿ ಸೂಗಿರಿಸಿದ ಗಡ್ಡವಿಸಾಸೆ ಕರದೊಳ್ ಸಲೆ ಚಿತ್ರಿತ ವೇತ್ರದಂಡಮೊಪ್ಪಿರೆ ಸಹವಾಸಿಗಳ್ ತಳರ್ದರ್ (ಶಾಂತೀಶ್ವ. ೧೫-೮೯). **ಪಾಕು₁** : ೧. ಪಾರು ಅವನಿಗೆ ವೀಳ್ಯದೆಲೆ – ಹೊಗೆಸೊಪ್ಪುಗಳನ್ನಿತ್ತಳು. ಅವುಗಳನ್ನು ಅವನು ತನ್ನ ಪಾಕಿನೊಳಗೆ ಸೇರಿಸಿದ (ರೂಪುಕು. ೨೬).

**ಪಾಗುಸುತ್ತು**=ರುಮಾಲನ್ನು ಸುತ್ತು,-ಕಟ್ಟು: ತಲೆಗೆ ಒಂದು ಥಾನು ಬಟ್ಟೆಯನ್ನು ಪಾಗು ಸುತ್ತಿ ಕಾಲಿನಲ್ಲಿ ಪಾಪಾಸು ಮೆಟ್ಟಿ . . . ತೊರೆದುತ್ತಿದ್ದರು (ಕಕಡ. ೮೦೬).

[ದೇ. ॥ ತಮಿ. ಪಾಕು ; ತೆಲು. ಪಾಗ, ಪಾಗಾ. / ಹಿಂ.ಪಾಗು, ಪಾಗ]

**ಪಾಗು₂** (ನಾ). ಒಂದು ಬಗೆಯ ಚರ್ಮವಾದ್ಯ : ಮಣ್ಣಿನ ಮಕ್ಕಳು ಹಾಲಕ್ಕಿಒಕ್ಕಲು, ಭೂದಾಯಿ ನಕ್ಕಳು ಅವರಾಟಕೆ ಹರಿದಿನ ಹಗರಣ ಗುಮಟೆಯ ಪಾಗಿನ ಒಡೆ – ಕೊಟ್ಟೆ – ಪಾಯಸ ರಸದೂಟಕೆ ! (ಕ್ರಾಂತರ್. ೩-೬). 'ಗಂಮಂಟೆಪಾಗಂ' ಪರಾ.

[ದೇ. ॥ ತುಳು. ಪಾಂಕ್]

**ಪಾಗುಡ₁** 'ಪಾವುಡ₁' ನೋ.

**ಪಾಗುಡ₂** 'ಪಾವುಡ₂' ನೋ.

**ಪಾಗುಡಂಗಟ್ಟು** (ಕ್ರಿ). ಉಡುಗೊರೆಯನ್ನು ಗಂಟು ಕಟ್ಟು : ಪ್ರಜಾಪತಿಮಹಾರಾಜಂ ಪಾಗುಡಂಗಟ್ಟಿ ಸಂಪೂರ್ಣೇಂದುಮುಖಿಯನಿಂದು ನಾಳೆನ್ನದೆ ಬಂದ ಪೊಟ್ಟಿ ಪೊಟ್ಟಾಗೆ ರಥನೂಪುರಚಕ್ರವಾಳಕ್ಕೆ ಬೇಗಮಟ್ಟುವುದುಂ (ಶಾಂತಿಪು. ೫-೩೬ ವ). [ಪಾಗುಡ₂ (< ಪಾವುಡ₂) + ಕಟ್ಟು₁]

**ಪಾಗುಡಂಗೊಡು, ಪಾಗುಡಗೊಡು** (ಕ್ರಿ). ಉಡುಗೊರೆಯನ್ನು ಕೊಡು : ಸೇಸೆಯಿಕ್ಕುವ ಪಾಗುಡಂಗೊಡುವೀ ಸಮಯದೊಳಗತ್ತು ನಾಕವಾಸದೊಳು ಸುರರೆಜಗದೆಜಗದವರ ಮಕುಟಗಳು (ಶಾಳ್ಳಶಾ. ೩೩-೮).

**ಪಾಗುಡಗೊಡು** : ಎಬಿಗೆ ಮಂತ್ರಿಗಳೊಂದಿ ಕಾಣಿಕೆಯಿಕ್ಕಿ ಪಾಗುಡಗೊಟ್ಟು (ಸಾಳ್ವಭಾ. ೪೦-೯). [ ಪಾಗುಡ$_2$ (<ಪಾವುಡ$_2$) + ಕೊಡು$_1$ ]

**ಪಾಗುಡಂತರ್** (ಕ್ರಿ). ಉಡುಗೊರೆಯನ್ನು ತರು : ಸ್ತ್ರೀರತ್ನಮಂ ದೇವರ್ಗೆ ಪಾಗುಡಂತುದೆನೆಂದೊಪ್ಪಿಸುವುದುಂ (ಧರ್ಮಾಮೃ. ೩-೧೬೭).
[ ಪಾಗುಡ$_2$ (<ಪಾವುಡ$_2$) + ತರ್ ]

**ಪಾಗುಡಗೊಡು** 'ಪಾಗುಡಂಗೊಡು' ನೋ.

**ಪಾಗುಪಟ್ಟೆ** (ನಾ). ಉತ್ತಮವಾದ ರೇಷ್ಮೆಬಟ್ಟೆ : ತೂಗುತೊಟ್ಟಿಲಿಗೊಂದು ಪಾಗುಪಟ್ಟೆಯ ಹಾಸಿ ಮಾಗಾಯಿ ಮಗನ ಮಲಗೀಸಿ ಅವರಮ್ಮ ಜೋಗುಳ ಹಾಡಿ ಹಿಗ್ಗ್ಯಾಳ (ಜಾನಪದ. ೭೭). [ ಪಾಗು$_1$ + ಪಟ್ಟೆ$_3$ ]

**ಪಾಗೋಟ**, ಪಾಗೋಟೆ (ನಾ). ಒಂದು ಬಗೆಯ ರುಮಾಲು ; ಪಗಡಿ : ಮುಂಡಾಸ, ತುರುಬಿನ ರುಮಾಲು, ಪಟಕಾ, ಪಾಗೋಟ ಎಂದು ರುಮಾಲಿನ ವಿಭಾಗಗಳು (ಗೋಕಾಕಸಾಹಿ. ೪೪). **ಪಾಗೋಟೆ** : ಪಾಗೋಟೆಯನ್ನು ಧರಿಸಿದ ಅವರ ತಂದೆಯೂ ಮುಖರೆಯನ್ನು ಧರಿಸಿದ ಅವರ ತಾಯಿಯೂ ಬಂದವರನ್ನೆಲ್ಲ ಸ್ವಾಗತಿಸುವದರಲ್ಲಿ ತೊಡಗಿದ್ದರು (ಸಮುದ್ರ. ೧೩೩); ತಲೆಯ ಮೇಲೆ ಒಂದು ಗೋಲಾಕಾರದ ಪಾಗೋಟಿ ಮತ್ತು ವಾರ್ನಿಶ್ ಮಾಡಿದ ಹೊಸದೊಂದು ಜೋಡುಪಾದರಕ್ಷೆ ಧರಿಸಿ... ಹೊರಬಿದ್ದನು (ಇಕ್ಷುಕ. ೩೯). [←ಮರಾ. ಪಾಗೋಟೀ, ಪಾಗೋಟೇ ]

**ಪಾಗೋಟೆ** 'ಪಾಗೋಟ' ನೋ.

**ಪಾಚಕ** (ಗು). ೧. ಜೀರ್ಣಶಕ್ತಿಯನ್ನುಂಟುಮಾಡುವ : 'ಪಾಚಕರಸ' ಪರಾ. (ನಾ). ೨. ಬೇಯಿಸುವಿಕೆ ; ಅಡುಗೆಮಾಡುವಿಕೆ. ೩. ಅಡುಗೆ ಮಾಡುವವನು; ಬಾಣಸಿಗ : ಒಂದು ಕಬ್ಬಿನ ರಸವೆ ಪಾಚಕನಿಂದ ಗುಡ ಶರ್ಕರೆಗಳ ಬಹುಭೇದವಾದಂತೆ (ಗಗಶಾ. ೦೪ ೭); ಪಾಚಕನು ಬಂದು . . . ಇಂದು ಯಾವ ಬಗೆಯ ಖಾನಾ ಸಿದ್ಧಗೊಳಿಸಬೇಕು ಎಂದು ವಿಚಾರಿಸಿದನು (ಇಕ್ಷುಕ. ೦೩೪) ; ಅವನು . . . ವಿಚಾರಣೆ ಮಾಡಿಸಿ, ಆ ಪಾಚಕನಿಗೂ ಮಗನಾದ ನಾಗಪ್ಪನಿಗೂ ಮರಣ ದಂಡನೆಯನ್ನು ವಿಧಿಸಿದನು (ಪಾಳೆಗಾ. ೬೯). [ ಸಂ. ]

**ಪಾಚಕತ್ವ** (ನಾ). ಅಡುಗೆಯ ವಿದ್ಯೆ : ಪಾಚಕತ್ವವು ಪುರುಷನನ್ನು ಬಿಟ್ಟು ಸ್ತ್ರೀಯಲ್ಲಿರುವುದು (ಧಾತುಕ. ೬೫೦). [ ಸಂ. ]

**ಪಾಚಕರಸ** (ನಾ). ಉಂಡ ಆಹಾರವು ಪಚನವಾಗಲು ಜಠರವು ಸ್ರವಿಸುವ ರಸ; ಪಿತ್ತಕೋಶದ ರಸ : ಒಂದೇ ಪ್ರಕಾರದ ಆಹಾರವನ್ನು ಯಾವಾಗಲೂ ಪಚನಮಾಡುವ ಪಾಚಕರಸದೊಳಗೆ ಅನ್ಯಜಾತಿಯ ಆಹಾರವನ್ನು ಪಚನ ಮಾಡುವ ಸಾಮರ್ಥ್ಯ ಉಳಿಯುವದಿಲ್ಲ (ಮುಂಬಯಿ. ೩-೦೬೪); ಆಮಾಶಯುಲ್ಲಿರುವ ರಸದಿಂದ ಅನ್ನವು ಪಚನವಾಗುವ ಕಾರಣ ಅದಕ್ಕೆ ಪಾಚಕರಸವೆಂದು ಹೆಸರು (ಮುಂಬಯಿ. ೬-೩೦೮). [ಪಾಚಕ + ರಸ]

**ಪಾಚಕಶಕ್ತಿ** (ನಾ). ಉಂಡ ಆಹಾರವನ್ನು ಜೀರ್ಣಿಸುವ ಸಾಮರ್ಥ್ಯ : ಸಿಕ್ಕ ಹಾಗೆ ತಿನ್ನಬಾರದು. ತಿಂದರೆ ನಿಶ್ಚಯವಾಗಿ ಜೀರ್ಣಕೋಶದ ಪಾಚಕಶಕ್ತಿಯು ಕಡಿಮೆಯಾಗುವದು (ಮುಂಬಯಿ. ೪-೨೩).
[ ಪಾಚಕ + ಶಕ್ತಿ ]

**ಪಾಚನ** (ನಾ). ೧. ಅಡುಗೆ ಮಾಡುವಿಕೆ; ಬೇಯಿಸುವಿಕೆ. ೨. ಪಕ್ವಗೊಳಿಸುವಿಕೆ. ೩. ಜೀರ್ಣಗೊಳಿಸುವಿಕೆ ; ಪಚನಕ್ರಿಯೆ : ಲಂಘನವು ದೀಪನ ಪಾಚನಂಗಳನ್ನುಂಟುಮಾಡುವುದು (ಸಕಪ್ರ. ೦೦೧). [ಸಂ.]

**ಪಾಚವಾರಿ** (ನಾ). ಐದು ಗಜದ ಸೀರೆ : ವಸೂ ಪರಕರದ ಪೋರಿಯಾಗಿ ಉಳಿಯದೆ ಪಾಚವಾರಿಯಲ್ಲಿಯ ಸಣ್ಣ ಹೆಣ್ಣಾಗಿ ಬಂದಿದ್ದಳು (ಅಂಕಕ. I. ೦೦೭).
[ ←ಮರಾ. ಪಾಂಚ್‌ವಾರ್ = ಐದು ಗಜ ]

**ಪಾಚಿ$_1$** 'ಪಾವಸೆ' ನೋ.

**ಪಾಚಿ$_2$** (ನಾ). (ಮಕ್ಕಳ ಭಾಷೆಯಲ್ಲಿ) ಹಾಲು : (೯).
[ದೇ. ॥ ತಮಿ. ಮಲ. ಪಾಚ್ಚಿ]

**ಪಾಚಿ$_3$** (ನಾ). ಮೂಡಣದಿಕ್ಕು; ಪೂರ್ವದಿಕ್ಕು : "ಪಾಚಿ_ಪ್ರಾಚಿ= ಮೂಡುದಿಕ್ಕು" (ಶಬ್ದಕೋ. ೨೩). [<ಸಂ. ಪ್ರಾಚೀ]

**ಪಾಚಿ$_4$** 'ಪಾಜಿ$_2$' ನೋ.

**ಪಾಚಿಕೆ** 'ಪಾಸಂಗೆ' ನೋ.

**ಪಾಚಿಬಳ್ಳಿ** (ನಾ). ಒಂದು ಬಗೆಯ ಔಷಧಿ ಸಸ್ಯ : ಬೇಲದ ತಿರುಳು (ಹಣ್ಣು), ಪಾಚಿಬಳ್ಳಿ (ಕರ್ನಾಟಕಿ), ಮಗ್ಗಾರೆಕಾಯಿ, ಮಗ್ಗಾರೆಬೇರು_ ಇವನ್ನು ಬಗೆಯೊಂದಕ್ಕೆ ಒಂದು ಸೇರಿನಂತೆ ಹಾಕಿ ಚೂರ್ಣಿಸಿ (ಸಕಪ್ರ. ಶಂ. ೯೩೮). [ ಪಾಚಿ$_1$ (<ಪಾವಸೆ) + ಬಳ್ಳಿ ]

**ಪಾಚಿಸು$_1$** (ಕ್ರಿ). ಸುಡು; ಬೇಯಿಸು : ಪುಸಿದೊಡಂತಕನವರ್ ಪಾಚಿಸರೆ ನರಕದೊಳ್ ಮ್ಮೈಯನು (ತ್ರಿಪುಭಾ. ೨೬-೪೯). [ಪಾಚನ + _ಇಸು$_3$]

**ಪಾಚಿಸು$_2$** (ಕ್ರಿ). (ಮಕ್ಕಳ ಭಾಷೆಯಲ್ಲಿ) ಮಲಗಿಸು; ನಿದ್ರೆಮಾಡಿಸು : ಆಟವಾಡಿದ್ದು ಸಾಕು, ಪಾಚಿಸುತ್ತೇನೆ ಬಾ (ರೂಢಿ).
[ ಪಾಚು + _ಇಸು$_3$ ]

**ಪಾಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡುಬಿಳಿಸಜ್ಜೆಹುಲ್ಲು, ಪಾಚಿಹುಲ್ಲು (ವೃಕ್ಷಾಶಿ. ೯೯-೯೮೭).
[ ಪಾಚಿ$_1$ (<ಪಾವಸೆ) + ಹುಲ್ಲು (<ಪುಲ್) ]

**ಪಾಚು** (ಕ್ರಿ). (ಮಕ್ಕಳ ಭಾಷೆಯಲ್ಲಿ) ಮಲಗು; ನಿದ್ರಿಸು : ಬೂಚಿ ಬಂದಿದೆ ರಂಗ ಬೂಚಿ ಬಂದಿದೆ ಚಾಚಿ ಕುಡಿದು ಸುಮ್ಮನೆ ನೀ ಪಾಚಿ ಕೊಳ್ಳೊ ಕೃಷ್ಣಯ್ಯ (ಪುರಂದ. ೪-೧೦೦ ಅನುಬಂಧ). [ ? ]

**ಪಾಚೆ** 'ಪಾವಸೆ' ನೋ.

**ಪಾಚ್ಛಾ** 'ಪಾತಶಹ' ನೋ.

**ಪಾಚ್ಛಾಯಿ** 'ಪಾತಶಹ' ನೋ.

**ಪಾಛಾ** 'ಪಾತಶಹ' ನೋ.

**ಪಾಜಿ$_1$** (ಗು). ೧. ಕೀಳುತರದ; ನೀಚ : (೯). (ನಾ). ೨. ಕ್ಷುಲ್ಲಕ ವ್ಯಕ್ತಿ ; ಅಲ್ಪ ; ಕೀಳುಮನುಷ್ಯ : ಇಂದು ಕಾಜಿಯಾದವ ನಾಳೆ ಪಾಜಿಯಾಗುತ್ತಾನೆ ! (ಸಿಕ್ಕಾಮ. ೦೪೩).
[←ಪಾರ. ಹಿಂ. ಮರಾ. ಪಾಜೀ]

**ಪಾಜಿ$_2$**, ಪಾಚಿ$_4$ (ನಾ). ಒಂದು ಬಗೆಯ ಬಲೆ : ಕೊರಲ್ವಲೆ ನಿಡುವಲೆ ಪಾಜಿ ಬೆಳ್ಳಾರ ಬಡಿವಲೆ ಬಲುವಲೆಗಾಣರು ತೂಗಿ ಬೊಬ್ಬಿಡುತಲೈದಿದರು ಮುಂಗಡೆಯ (ಪ್ರೋಹಕ. ೧೯-೧೭). **ಪಾಚಿ$_4$** : ಪಾಚಿ ಸಿಡಿಯು ಸಲೆ ಕಾಲು ಕಣ್ಣಿ ತಡಿಕೆ ಸೆಳೆಗೋಲಿನ ಬಲುನಾಯಕರೊಳಗಿದರು (ಹಂಸಾ. ೧-೬೬).
[ ? ]

**ಪಾಜಿಕ** (ನಾ). (?) : ಪರದನಾರ್ಬ್ಬನ್ನಡಸಂಗಡಿಯ ಪಾಜಿಕಮಿಂದಿಟಿ ಯನನ್ಯಾಯದೊಳ್ಪರಧನಂ ಪೊಯ್ದಡೆ ಸಾವು ಸಾಲ್ವರ್ (ಶಾಇಇ. IX-1, ೭೭-೩೪; 992). [ ? ]

**ಪಾಜು** (ನಾ). (ಕರಾ) ನೀರು ಮೇಲಿನಿಂದ ಕೆಳಗೆ ಹರಿಯಲು ಅಗಲವಾಗಿ ಕಟ್ಟಿರುವ ಕಲ್ಲಿನ ಪಾವಟಿಗೆ,–ಮೆಟ್ಟಿಲು. [ ? ]

**ಪಾಜೆ$_1$** (ನಾ). ಭಾಷೆ; ಮಾತು : ಇದು ಬಸವಯ್ಯ ಆದೇ ಮಾತು . . . ಅವನ ಪಾಜೆ ನಿಮ್ಮ ಬಾಯಲ್ಲಿ ಬರಬಾರದಲ್ಲ (ಚಿಕರಾ. ೦೪೨).
[ ←ತಮಿ. ಪಾಚೈ. / ಸಂ. ಭಾಷಾ ]

**ಪಾಜೆ$_2$** 'ಫಾಜೆ' ನೋ.

**ಪಾಟ$_1$** (ನಾ). ಹಾಡುವಿಕೆ; ಗಾಯನ : ವೀರಶ್ರೀಯುಂ . . . ಆ ರೂಪಂ ಕಂಡು ನಕ್ಕು ದುಃಖಮಂ ಮಾಟದೊಳಾಗಳಾ ನಗ್ಗಿಸಿದ ಪಗರಣಿಗಂಗೆ ಒರಿದು ಕಸವರವುನಿತ್ತೂನಂದಿಂದಿತ್ತ ಬಾದುಬ್ಬೆಯ ಪರ್ವಮುಂ ಪಗರಣ

ದಾಟಪಾಟಮುಮಪಾದುವು (ವಡ್ಡಾರಾ. ೧೧೮-೨೩) ; ಮಸದ ಮದನನಲಗಿನಲರ್ಗಣೆಗಳಂತೆ ಕಣ್ಣೊಳ್ ಬೆಳೆದೆಳಸಿ ಬಂದಿರ್ದ ಪಾಟದಾಟದ ಮುದ್ದಿನ ಬರ್ದಿನ ಪರಿವಾರದೇವಿಯುರುಮಂ (ಆದಿಪು. ೨-೬೩ ವ) ; ತನ್ನ ಪಾಡು ವಿಂಚರದಿಂದೆಮ್ಮ ಪಾಟಮಂ ಕೀಟ್ಮಾಡಿದಳಿವಳ್ (ಕಾದಂಬ. ೩೩೪) ; ಎತ್ತ ಕೇಳ್ವೊಡಮೆಸೆವ ಪಾಟಮೆ [ಪಾಠಾಂ. ಗೀತಮೆ, ಪಾಡಮೆ] ಎತ್ತಲುಂ ಕೀಡುವೊಡವೊಳ್ಗಂಧಮೆ (ಶಬ್ದಸಂ. ೨೩೪-೨). 'ಪಾಟ್ಟು' ಹೋ. [<ಪಾಡು₁./ತಮಿ. ಮಲ. ಪಾಟ್ಟು ; ತೆಲು. ಸಾಯ್ಕ. ಪರ್ಜಿ. ಕೊಂಡ. ಪಾಟ ; ಗಡಬ. ಪಾಟಿ]

**ಪಾಟ್ಟ₂** (ನಾ). ೧. ಪಠ್ಯವಿಷಯಗಳ ಪಠನ ; ಗ್ರಂಥಗಳ ವಾಚನ : "ಪಾಠಃ — ಪಾಟಂ" (ಕಾಶಕ್ಕ. ೧೧) ; ಅಟ್ಟಿಯಿಟ್ಟೆಯುಬಾದುಂ ಪರಿವಾರಿಸಿ ಪಾಟವೋದಲಚ್ಚರಸಿಯರಾಡಲಚ್ಚರಸಿಯರ್...ಎಂದೊಡೇ ಪೊಗಟ್ಟುದೋ ಜನಚಂದ್ರವಿಭೂತಿಲೀಲೆಯುಂ (ಶಾಂತಿಪು. ೭-೭೩). ೨. ವಾಡಿಕೆ ; ರೂಢಿ ; ಅಭ್ಯಾಸ : ನಿಮಗೆ ಈ ಗಾಳೀಲಿ ಕೂತ್ಕೊಂಡು ಪಾಟ ಇಲ್ವೇನೋ (ಘಟಾಮು. ೧೦೦) ; ಮದರಂಗಿದನ ಚಿರತೆಗೆ ಪಾಟ ಆಗಿಬಿಟ್ಟಿದೆ. ಬೇರೆ ದನ ಇಷ್ಟು ರುಚಿ ಇಲ್ಲವೇನೊ (ಸಣ್ಣಕ. VI, ೧೧೯) ; ಅವನಿಗೂ ಆ ಹೆಸರೇ ಪಾಟಾಗಿ ಹೋಗಿತ್ತು (ವಸ್ತೂರು. ೧೬೦). [<ಸಂ. ಪಾಠ]

**ಪಾಟ್ಟ₃** 'ಪಟ್ಟ₂' ನೋ.

**ಪಾಟಕ₁** (ನಾ). ಓದುವವನು ; ಪಾಠಕ : ಶ್ರಾವಕರ ಪಾಟಕರ ಜನನಿಯು ಭಾವದಿಂ ಚಿಂತಕರ ಪೊರೆವುದದಾವ ಕೃತಿಯಿದನುಳಿದು ಧರಣೀತಲದೊಳಿರುತಿಹುದು (ವಿವೇಕ. ೧೮-೪೪). [<ಸಂ. ಪಾಠಕ]

**ಪಾಟಕ₂** (ನಾ). ೧. ಸೀಳುವವನು ; ಹೋಳುಮಾಡುವವನು ; ಕತ್ತರಿಸುವವನು : ಕರ್ನಾಟಕಚೀಣಾಪೋಟಕದರಸುಗಳಿರ್ದರು ರಿಪುಶಿರಪಾಟಕನೋಲಗದೊಳಗೆ (ತರ್ಕಶಾ. ೩-೬). ೨. ಗ್ರಾಮದ ಒಂದು ಭಾಗ. [ಸಂ.]

**ಪಾಟಕಾಜಿ** (ನಾ). ರಾಜನ ಬಿರುದಾವಳಿಗಳನ್ನು ಹಾಡಿ ಹೊಗಳುವವನು ; ವಂದಿ ; ಪಾಠಕ : ಪಾಟಕಾಜಿರರಸಾಳ್ಗಳ ಗೇಟ್ಪರ ಕಳಕಳ ನಿನದಂ ಭೋರ್ಗರೆದಂಬುಧಿನಿನದದಂತುಟಾದುದು (ವರ್ಧಮಾ. ೩-೫೫) ; ಬಗೆಕಾಜಿಂ ಪಾಟಕಾಜಿನೊಳ್ನುಡಿಕಾಜಿಂ ಪಗೆಕಾಜಿನಾಗಿಯುಂ ಕೆಯ್ಮಿಗೆ ತಕ್ಕಂ ಕೆಯ್ಯುದ್ದಿಕಾಜಿನೆನಿಸಲ್ಕಾಜಿಂ (ಕಾವ್ಯಾವ. ೩೨೫) ; ಅಲಿಗಳ್ ಫಟ್ಟಿಪಳ್ಳರ ಪಸರದಂತೆ ಕಂಪಂ ಪ[ರ]ಕಲಿಸೆ ತುಂಬಿಯೆ ಪಾಟಕಾಜನಂತೆ ಮೊರೆಯೆ (ಜಿಂಹಂ. ೫-೩ ವ). [ಪಾಟ₁ + — ಕಾಜಿ]

**ಪಾಟಚ್ಚರ** (ನಾ). ಬಟ್ಟೆಯನ್ನು ಕಳವು ಮಾಡುವವನು; ವಸ್ತ್ರಚೋರ : "ಪಾಟಚ್ಚರಃ, ಪಟಚ್ಚರಃ—ಈ ೨ ಸೀರೆಗಳ್ಳಂ" (ಹಲಾಯು. ೫೬-೧೮೫). [ಸಂ.]

**ಪಾಟನ** (ನಾ). ಸೀಳುವಿಕೆ ; ಕತ್ತರಿಸುವಿಕೆ : ವನಕರಿಕುಂಭಪಾಟನಪಟಿಷ್ಠಕಠೋರನಖಪ್ರಹಾರಭೇದನಗಳಿತಾಸ್ತ್ರರಕ್ತನವಮೌಕ್ತಿಕಪಂಕ್ತಿವಿಳಾಸಭಾಸುರಾನನಂ (ಶಂಶಖಾ. ೧೩-೫೦). [ಸಂ.]

**ಪಾಟಲ, ಪಾಟಳ** (ಗು). ೧. ತಿಳಿಗೆಂಪು ಬಣ್ಣದ ; ನಸುಗೆಂಪು ಬಣ್ಣದ : ಪಾಟಲಲೋಲವಿಲೋಚನಂ ಮನಂಬುಗೆ ನಳಿತೋಳ ಕೋಳಿಸೆಯೆ (ಶಂಶಖಾ. ೮-೫೯); ಉದ್ಯಾನಲತೆಯನೀಕ್ಷಿಸಿ ನಾಂ ಪಾಟಲವರ್ಣಾಂಗ್ಯೆವೆನಿಂದು ದೇವಿಯು ಮೊಗಮಂ (ಭ್ರಮಾನ್ಮಲೋ. ೮೩). (ನಾ). ೨. ನಸುಗೆಂಪು ಬಣ್ಣ : ಸತಿ ಮುದದಿಂದೆ ಪಾಟಲಮನಾಂತ ಕಪೋಲದೆ ರಕ್ತಲೋಚನೋತ್ಪಲದೆ ವಿಲಾಸಮಂ ತಳೆದ (ಪಾರವಾ. ೨-೭೬); ಜಿಡದೆ ಪಾಟಲವಿಡಿದು ಸಿರದೊಳ್ ತೊಡರಿ ಮಿರುಗುತೆ ಪುಷ್ಪಭಾಗವ ಪೊಡೆಪೊಡೆವ ಬಿಳಿಲಿಡದ ಜಡೆಗಳನಾಂತು (ಶಾವೇಮು. ೫೪-೨೭).

೩. ಒಂದು ಬಗೆಯ ಹೂವಿನ ಗಿಡ ಮತ್ತು ಅದರ ಹೂವು; ಪಾದರಿ: ಪೂಗ ವಟ ದಾಡಿಮ ಪಾಟಲ . . . ಹಿಂತಾಳಮಹೀಜಮುಖ್ಯತರು ಸಂತತಿಯಿಂ ವನಬ್ಬಂದಮೊಪ್ಪುಗುಂ (ಯಶೋಧ. ೧-೩೩). ೪. ಮಳೆಗಾಲದಲ್ಲಿ ಕೊಯ್ಲಾಗುವ ಒಂದು ಬಗೆಯ ಬತ್ತ. **ಪಾಟಳ** : ೧. ಕಳಕಂಠಲೋಚನಚ್ಛವಿವಿಳಾಸಮಂ ತಳೆದ ನೀಲಪಾಟಳಜಂಬೂಫಳಮಧುರರಸಮನೀಂಟಿದೆಂ (ಕಾದಂಪೂ. ೮೬). ೨. "ಅರುಣಃ . . . ಪಾಟಳಃ, (ಅ)ಶಾಮ್ರಃ, ಲೋಹಿತಃ—ಈ ೭ ಕೆಂಪು" (ಹಲಾಯು. ೦೨೦-೪೮). ೩."ಪಾದರಿ ಪಾಟಳಂ ಪಾಟಳಿಯೆನಿಕ್ಕು"(ಮಂಗರಾ. ೩೬-೧೬); ವಿದಳಿತ ಚಂಪಕಲವಲೀನಾಗಂ ವಕುಳಪಾಟಳಾಶ್ವತ್ಥವ್ರಾತಂ . . . ಆದಿಯಾಗೆ ಪಲವುಂ ಪೆಜವಂದದ ಪಾದಪಂಗಳಿಂದೊಪ್ಪುವ ಚಂದದ ಬನದೊಳೆತ್ತಲುಂ ಸುಟೀಮರಗಿಳಿಗಳ್ (ಸುಕುಮಾ. ೧೦-೫೬ರಗಳೆ) ; ಸೊಗಯಿಸುವಾಟದ ಸುರರ ಭವನಮಂ ವಿಕಸಿತ ಪಾಟಳಗಂಧಯುತಿ ಕಂಡಳ್ (ಜಿಂಹಂ. ೯-೧೦೪). [ಸಂ.]

**ಪಾಟಲದ್ಯುತಿ** (ನಾ). ತಿಳಿಗೆಂಪು ಬಣ್ಣ : ಬಿಂಬಾಧರದ ಕೆಂಬೆಳಗು ಸುಲಿಪಲ್ಲ ಸೂಸುವೆಳಗಿನೊಡವೆರೆದು ವದನವಿಧುಮಂಡಳದ ಪಾಟಲದ್ಯುತಿಯಂತೆ ಪಸರಿಸಿ ಬೀದಿವರಿಯೆ (ರಾಜಶೇ. ೫-೧೯ ವ). [ಪಾಟಲ + ದ್ಯುತಿ]

**ಪಾಟಲಾಧರ, ಪಾಟಳಾಧರ** (ನಾ). ತಿಳಿಗೆಂಪುಬಣ್ಣದ ತುಟಿ : ಸುದತಿಯೆ . . . ಜಯಾನ್ವಿತನಾದೆಂ ಇದೊ ನಿನ್ನ ಪಾಟಲಾಧರವದನಾಬ್ಜವನಾಂ ವಿಲೋಕಿಸಿದ ಕತದಿಂದಂ (ಶಾಕುಂತ. ೧೧೯-೧೮೬). **ಪಾಟಳಾಧರ** : ಪಾಟಳಾಧರಸುಧಾರಸಮಂ ಸವಿದಟ್ಟಿಜಂ ಲತಾಂಗಮನಮರ್ದಪ್ಪಿ ದಕ್ಷಿಣ ವಿಟಂಗಣೆಯಾದುದು ದಕ್ಷಿಣಾನಿಳಂ (ಮಲ್ಲಿಪು. ೫-೨೩). [ಪಾಟಲ + ಅಧರ]

**ಪಾಟಲಿ₁, ಪಾಟಳಿ** (ನಾ). ೧. ಪಾದರಿಗಿಡ ಮತ್ತು ಅದರ ಹೂವು : "ಪಾದರಿ ಪಾಟಳಂ ಪಾಟಲಿ[ಪಾಠಾಂ. ಪಾಟಳಿ, ಪಾಡಳಿ]ಯೆನಿಕ್ಕು" (ಮಂಗರಾ. ೩೬-೧೬) ; ಮತ್ತೊರ್ವಳ್, ಸುರಭಿಪಾಟಲೀಪಾಟಲದಶನವಸನೆ (ಆದಿಪು. ೧೧-೧೧೦ ವ); ಜೀವನದೊಳಗೆಮ್ಮರಳನೊಂದಿಸಿ ನೆಟ್ ಸೇವಿಸಿದವರ ಶ್ರಮಗಳ ಗಾವಳಿಯನು ಪರಿದಪೆವೆಂದು ನಜುಗಂಪು ತೀವಿದ ಪಾಟಲಿಯಿಹುವು (ಕಂಪನ. ೭-೫೩). ೨. ಒಂದು ದೇಶದ ಹೆಸರು : ಮಹಾರಾಷ್ಟ್ರದೇಶದ ಸ್ತ್ರೀಯರು, ಪಾಟಲಿದೇಶದ ಸ್ತ್ರೀಯರು, ಪುಂಡು ಮಾತುಗಳಂ ಅಪೇಕ್ಷೆಯೊಡನೆ ಕೂಡಿ ಆಡುವರು ; ರತಿಯಲ್ಲಿ ನಾಚಿಕೆಯಿಲ್ಲದವರು (ಕಾಮಶಾ. ೨೦೯). **ಪಾಟಳಿ** : ೧. ಕಂಪುಗೊಳಲ್ ತೆಗೆದುಸಿರಿನಿಸಂ ಪೊಜಮಟ್ಟೆಸಟ ತುದಿಯನೆಯ್ದಲೊಡಂ ಮುನ್ನಂ ಪಟಿಯವಪ್ಪ ಪೂಗಳ ಕಂಪಿನೊಳೀಂ ಪೊಗಟ ಪಾಟಳೀಪರಿಮಳಮಂ (ಆದಿಪು. ೧೦-೧೦೦೦) ; ಪಾಟಳಿಗಳೆಸಕದಿಂ ನಿಂಬೆಗಳುಂಬದಿಂ . . . ಅನಂತತಿಲಕದ ಕುಜಂಗಳಿಂ . . . ಪೊಂಗಿ ಪೊಂಪುಟಿಯೋಗಿ (ಅದ್ಭುಟ. ೩-೯೩). [ಸಂ.]

**ಪಾಟಲಿ₂, ಪಾಟ್ಲಿ** (ನಾ). ಸುಮಾರು ಕಾಲಂಗುಲದಷ್ಟು ದಪ್ಪವಾದ ಚಿನ್ನದ ಕೈಬಳೆ : ಭಿಕಾರಿತಾಯಿ ನನಗೆ ಪಾಟಲಿ, ಬಿಲ್ವಾರ ಮುಂತಾದ ವಸ್ತ ಮಾಡಿಸಿದಳು (ಸ್ಮೃತಿಚಿ. ೨೦೪) ; ಬಂಗಾರದ ಗೋಟು ಪಾಟಲೀ ಬಿಡಿಸಿ ಕೊಡು . . . ವಂಕೀಜೋಡು ಕೊಡಸು (ರಕ್ತಾಕ್ಷ. ೮೨) ; ಮೈಮೇಲೆ ಬಂಗಾರ ಹಾಗು ಮುತ್ತಿನ ಆಭರಣಗಳು, ಪಂಕಿ, ಸರಿಗೆ, ಗೋಟು, ಪಾಟಲಿ ಮೊದಲಾದ ಎಲ್ಲ ವಸ್ತುಗಳೂ ಇದ್ದವು (ಜ್ಞಾಪಕಚಿ. ೧೧). **ಪಾಟ್ಲಿ** : ನಾ ಗೋಟು ಪಾಟ್ಲಿ ಎಲ್ಲಾ ಇಟಗೊಂಡರ ಕೈ ಹಿಂಗ ಮ್ಯಾಲ ಎತ್ತಲಿಕ್ಕೆ ಆಗತಿದ್ದಿಲ್ಲ (ಗಂಪಾಮು. ೧೬) ; ಒಂದು ಜತಿ ಪಾಟ್ಲಿ ಮಾಡಸರಿ ಅಂತ ಹೇಳಿದರ ಕೇಳಪಲ್ಲರಿ (ಕುಂಕುಮ. ೧೬). [← ಮರಾ. ಪಾಟಲೀ]

**ಪಾಟಲಿತ, ಪಾಟಳಿತ** (ಗು). ನಸುಗೆಂಪಾದ : ಶೂಲಧರಂ . . . ಮುಷ್ಟಿಯುದ್ಧಸನ್ನದ್ಧನಾಗಿ ನಿಂದ ಪಾರ್ಥನಿದಿರ್ಗೆಪಂದೊರೋರ್ವರುದೀರ್ಣರೋಷಾವೇಶಪರುಷಪಾಟಲಿತಕಟಾಕ್ಷದಿನದರೆ ನೋಡಿ ಬಾಹಾಸ್ಫಾಲನಂಗೆಯ್ಯಲ್ (ಪಂಪಭಾ. ೪-೭೦ ವ). **ಪಾಟಳಿತ** : ಇದಿರೆಲ್ದೀರ್ಷ್ಯಾರೋಷದಿಂ

ಶಶಿಪ್ರಭೆ ನವೋದಯಶಶಿಪ್ರಭೆಯಂತೆ ಪಾಟಳಿತಮುಖಿಯಾಗಿ (ಚಂದ್ರಪ್ರ. ೮-೯೩ ವ). [ಸಂ.]

**ಪಾಟಲಿಮ, ಪಾಟಳಿಮ**(ಗು). ೧. ನಸುಗೆಂಪುಬಣ್ಣದ : ಪರಿಣತಪ್ರವಾಳ ಪಾಟಲಿ[ಪಾಠಾಂ. ೪]ಮಲೀಲಾಧರನಿಜಾಧರಪಲ್ಲವನುಂ (ಚಂದ್ರಪ್ರ. ೪-೮೦ ವ). (ನಾ). ೨. ನಸುಗೆಂಪು ಬಣ್ಣ. **ಪಾಟಳಿಮ** : ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ. ಪಾಟಲಿಮನ್]

**ಪಾಟಲೀಪುತ್ರ,** ಪಾಟಳೀಪುತ್ರ (ನಾ). ಮಗಧದೇಶದ ರಾಜಧಾನಿ ; ಈಗಿನ ಪಾಟ್ನಾನಗರ : ಪಾಟಲೀಪುತ್ರದ ಮಾರ್ಗದಲ್ಲಿ ನಾಗಸೇನನಿಗೆ ಧನಿಕವ್ಯಾಪಾರಿಯೊಬ್ಬನು ಸಿಕ್ಕಿದನು (ಬುದ್ಧ. ಪ್ರಬಂಧ. ೨೪); ಮೂರನೆಯ ಸಂಗೀತಿ—ದೇವಾನಾಂಪ್ರಿಯ ಪ್ರಿಯದರ್ಶಿಯೆಂಬ ಅಶೋಕರಾಜನ ಕಾಲದಲ್ಲಿ ಪಾಟಲೀಪುತ್ರದಲ್ಲಿ ನಡೆದದ್ದು (ಭಾರದ. ೨೦೩). **ಪಾಟಳೀಪುತ್ರ** : ಪಾಟಳೀಪುತ್ರಮೆಂಬ ಪುರಮಲ್ಲಿ ಶ್ರೇಷ್ಠಿ ಸುದತ್ತನೆಂಬೊಂ (ಪಶ್ಚಾ. ೧೫-೧೯). [ಸಂ.]

**ಪಾಟಲೀಪುಷ್ಪ** (ನಾ). ಪಾದರಿ ಹೂವು : ಪಾಟಲೀಪುಷ್ಪ ಅಥವಾ ಪಾದರಿಹೂವನ್ನು ಧರಿಸುವುದರಿಂದ ಮನಸ್ಸಿನ ಕ್ಲೇಶವನ್ನು ಪರಿಹಾರ ಮಾಡಿ . . . ಮಹಾಪರಿಮಳದೊಡನೆ ಕೂಡಿರುವುದು (ಸಕಪ್ರ. ೪೪); ಮಂತ್ರ ಇಪ್ಪತ್ತುಸಾವಿರಮಂ ಜಪಿಸಿ ಪಾಟಲೀಪುಷ್ಪದಿಂ ಹತ್ತುಸಾವಿರ ಹೋಮಮಂ ಮಾಡೆ ಮಂತ್ರಸಿದ್ಧಿಯಪ್ಪುದು (ಕಾಮಶಾ. ೨೬೦). [ಸಂ.]

**ಪಾಟಲೂನು,** ಪಾಟಲೋಣ, ಪಾಟಲೋನು, ಪಾಟ್ಲೋನು (ನಾ). ಐರೋಪ್ಯಮಾದರಿಯ ಷರಾಯಿ ; ಪ್ಯಾಂಟು : ಬೆಲೆಯುಳ್ಳ ಕೋಟು ಪಾಟಲೂನುಗಳ ಜೊತೆಗಳು ಅವರಲ್ಲಿ ಹತ್ತೆಂಟು ಇದ್ದವು (ಕೋಕಿಮು. ೨೩೦) ; ಪಾಟಲೂನು ಸಾಹೇಬರ ಪೋಷಾಕು. ಬೆಲೆಯುಳ್ಳದ್ದು (ಶ್ರೀಜಾಂಕ. ೭); ಒಮ್ಮೆಲೇ ಅವಳ ಮೊಮ್ಮಗ ಗಾಡಿಯಿಂದ ಜಿಗಿದ, ಪಾಟಲೂನು, ಉದ್ದ ಕೈಯ ಅಂಗಿ ಹಾಕ್ಕೊಂಡು (ಹೊಸಕ್ಷಿ. ೭೩). **ಪಾಟಲೋಣ** : ಮೊಳಕಾಲ ಕೆಳಗೆ ಪಾದದ ಮೇಲೆ ಗೇಣು ಅಂತರದಲ್ಲಿ ನೇಣು ಹಾಕಿಕೊಂಡಂತೆ ಜೋತಾಡುವ ಇಸ್ತ್ರೀಯ ಅಸ್ಪಷ್ಟದ . . . ಕಿರಮಂಜೀಬಣ್ಣದ ಪಾಟಲೋಣ (ದೀಶಹ. I, ೨೪). **ಪಾಟಲೋನು** : ಪಾಟಲೋನಿನ ಜೇಬಿನೊಳಗಿಂದ ಸಿಗರೇಟಿನ ಡಬ್ಬಿಯನ್ನು ತೆಗೆಯುತ್ತ ಕೇಳಿದ ಗದ್ರೆ (ಪ್ರಜಸ. ೫೯). **ಪಾಟ್ಲೋನು** : ಬೂಟು ಪಾಟ್ಲೋನು ಧರಿಸಿ ದೇಶಭಾಷೆ ಮಾತನಾಡುವುದಕ್ಕೆ ನಾಚಿಕೆಯೆನಿಸಲಾರಂಭಿಸಿತು (ಯುಕ್ತಕ್ರ. ೩೪).

[←ಮರಾ. ಪಾಟಲೂಣ, ಪಾಟಲೋಣ. / ಇಂ. Pantaloon]

**ಪಾಟಲೋಣ** ‘ ಪಾಟಲೂನು ’ ನೋ.

**ಪಾಟಲೋನು** ‘ ಪಾಟಲೂನು ’ ನೋ.

**ಪಾಟವ** (ನಾ). ೧. ತೀಕ್ಷ್ಣತೆ; ಚುರುಕು. ೨. ಜಾಣತನ ; ಚಾತುರ್ಯ : ಒಳ್ಳೆಯ ಸಂಗ್ರಹಶಕ್ತಿಯೂ ಭೂಗರ್ಭಶೋಧನಪಾಟವವೂ ಬಂದುವಲ್ಲದೆ ಅವನಿಗೆ . . . ಪ್ರಾಣಿಶಾಸ್ತ್ರದ ಗಾಢಪರಿಚಯವಾಯಿತು (ಖಗ್ನಾಕ. ೯೨) ; ಅವನು . . . ಊಹೆ ಮಾಡುವುದರಲ್ಲಿ ಪಾಟವ ಹೊಂದಿದತಕ್ಕವನು (ಭಾರಮಾ. ೩೭೪). ೩. ಪಟುತ್ವ ; ಶಕ್ತಿ ; ಸಾಮರ್ಥ್ಯ : ಮಾಟದಿಂದರಿವರ್ಜನರ್ನುಡಿಯಾಟದಿಂ ಪಂಡಿತರು ನೆನಹಿನ ಪಾಟವದೆ ದೇವರ್ಕಳಂಗೈನೆಲ್ಲಿಕಾಯಂದದಲಿ (ಖವೀಶ. ೮-೨೭) ; ಕತ್ತಲೆಗೆ ಜಗದಾಂಧ್ಯ ಕರಣಪಾಟವವೀಯೆ (ವೆಂಕಾರಾ. ೩-೩೬-೨೩) ; ವಾದಗಳು ನಡೆಯುತ್ತಿದ್ದ ಕಾಲಿನ ಅವಾಂತರದಲ್ಲಿ . . . ಕಿವಿಗಳ ಪಾಟವವೇ ಕುಗ್ಗಿರಬೇಕೆಂದು ಅನೇಕರು ಸಿದ್ಧಾಂತ ಮಾಡುತ್ತಲೇ ಇದ್ದರು (ಕುರಾಯ. ೧೨೭). ‘ ದೃಷ್ಟಿಪಾಟವ ’ ಪರಾ. ೪. ಕಲಿತನ ; ಶೌರ್ಯ : “ಪಾಟವಂ = ಬಂಟತನಂ” (ಕಾಕಕ್ಕ. ೨೭೯). ೫. ಆರೋಗ್ಯ : ಕೋಟಿಚಂದ್ರಾದಿತ್ಯದೇಹಪ್ರಕಾಶಉದ್ಘಾಟಿತನೇತ್ರತೀಕ್ಷ್ಣಾಂಗಪಾಟವದಿವ್ಯಮಹಾಲಕ್ಷಣದೊಳ ಮಾಟವಲ್ಲವೆ ತೀರ್ಥಕರರು (ಮುಕಿವಂ. ೩-೩೪) ; ಊಟ ಉಪಚಾರಗಳ ಬೇಡವೆನ್ನದಿರು ಪಾಟವವು ಮೈಗಿರಲಿ ನೋಟ ತತ್ತ್ವದೊಳಿರಲಿ ಪಾರಿಸು ಸಮಸ್ಯೆಯವ (ಮಂಕುಕ. ೨೬೧). ೬. ದುಡುಕುಸ್ವಭಾವ. [ಸಂ.]

**ಪಾಟಳ** ‘ ಪಾಟಲ ’ ನೋ.

**ಪಾಟಳಕಾಂತಿ** (ನಾ). ನಸುಗೆಂಪುಬಣ್ಣ ; ಪಾದರಿ ಹೂವಿನ ಹೊಳಪು : ನೇತ್ರಾಂಬುಜಂ ಪಾಟಳಕಾಂತಿಶ್ರೀಯಿನೊಪ್ಪುತ್ತಿರೆ . . . ಲೀಲೆಯಿಂದುಪ್ಪವಡಿಸಿದಳ್ ಹೃದ್ಯಾಂಗಿ ಶಯ್ಯಾಗ್ರದಿಂದಂ (ಜಗವಿ. ೨-೭೮).

[ಪಾಟಳ (=ಪಾಟಲ) + ಕಾಂತಿ]

**ಪಾಟಳಾಧರ** ‘ ಪಾಟಲಾಧರ ’ ನೋ.

**ಪಾಟಳಿ** ‘ ಪಾಟಲಿ₁ ’ ನೋ.

**ಪಾಟಳಿತ** ‘ ಪಾಟಲಿತ ’ ನೋ.

**ಪಾಟಳಿಮ** ‘ ಪಾಟಲಿಮ ’ ನೋ.

**ಪಾಟಳೀಪುತ್ರ** ‘ ಪಾಟಲೀಪುತ್ರ ’ ನೋ.

**ಪಾಟಾಳಿ** (ನಾ). ದೇವಸ್ಥಾನದಲ್ಲಿ ಸ್ತೋತ್ರಗಳನ್ನು ಹಾಡಿ ಸೇವೆ ಸಲ್ಲಿಸುವ ಒಂದು ವರ್ಗ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ : ಪಾರ್ತಿಸುಬ್ಬನೆಂದರೆ . . . ಕುಂಬಳೆ ಪಾಟಾಳಿಯೂ ಆಗಿದ್ದನು (ಪಾರ್ತಿಸು. ೪) ; ಸುಬ್ಬನ ತಂದೆ ಊರ ದೇವಸ್ಥಾನದ ಪಾಟಾಳಿ (ಅನಾಥೆ. ೧೪೩) ; ಪಾಟಾಳಿ ಕೆಲಸ ಮಾಡಿದ ಬಗ್ಗೆ ದೇವಸ್ಥಾನದಿಂದ ದಿನಕ್ಕೆ ಒಂದು ಸೇರು ಬೆಳ್ತಿಗೆ ಅಕ್ಕಿ ಸಿಗುತ್ತದೆ (ಹಹಸ. ೪೪).

[<ಪಾಠಾಳಿ. / ತವಿ. ಪಾಟ್ಟಾಳಿ, ಪಾಟ್ಟಾಳ್]

**ಪಾಟಿ₁** ‘ ಪಾಟಿ₂ ’ ನೋ.

**ಪಾಟಿ₂** (ನಾ). ೧. ಹಲಗೆ ; ಫಲಕ : ತುಸು ಹೊತ್ತಿನಲ್ಲಿ “ಕರ್ನಾಟಕ ಖಾನಾವಳಿ” ಎಂಬ ಹೆಸರಿನ ಪಾಟಿಯು ಕಂಡಿತು (ರಕ್ತಶ್ರ. ೧೪) ; ಅಲ್ಲಿ “ಎಂಚೂರಕರ ಹೋಟ್ಲು” ಎಂದು ‘ಪಾಟಿ’ ಹಚ್ಚಿದ ಒಂದು ಉಪ್ಪರಿಗೆಯ ಕಟ್ಟಡ ಕಂಡಿತು (ಖಗ್ನಾಮ. ೫೫). ೨. ಬಳಪದಿಂದ ಬರೆಯುವುದಕ್ಕಾಗಿ ಸಿದ್ಧಪಡಿಸಿದ ಕಲ್ಲಿನ ಕಪ್ಪುಹಲಗೆ ; ಸ್ಲೇಟು : ತನ್ನ ಪಾಟಿ ಪುಸ್ತಕಗಳನ್ನು ಕಟ್ಟಿ ಅಲ್ಲಿ ಮೂಲೆಯಲ್ಲಿಟ್ಟು ಮಾಸ್ತರರ ಕಡೆಗೆ ಸಿದ್ಧ ಹೊರಟನು (ರಾಜಾದೇ. ೫೫) ; ವತ್ಸಲಾ ಇಡೀ ಪಾಟಿ ತುಂಬ ಅಆ ಬರೆದು ಆತನಿಗೆ ತೀಡಲಿಕ್ಕೆ ಹಚ್ಚಿದ್ದಳು (ವೃಶಿ. ೩೫೬).

[←ಮರಾ. ಪಾಟೀ]

**ಪಾಟಿಕುಂಭ** (ನಾ). ದೊಡ್ಡಗಡಿಗೆ (?) : ಕಾಟಕೋಟನೆಸುಟ್ಟ ಗೊಲ್ಲರ ಮೋಟ ಅಡಿನ ಹಿಕ್ಕೆಯಂ ಶಶಿಜೂಟನೀಶ್ವರನೆಂದು ಪಾಲಂ ಕಾನದಟ ಮೇಲೆ ಪಾಟಿಕುಂಭದಿ ಕಜ್ಜೆದಜ್ಜೆದು ಕಾಲಾಟದಿಂದಾಬುಬೆಂದು ಕುಣಿವುತ . . . ಭಜಿಸುತಿರೆ (ಬಸಪು. ೯-೧೨). [ಪಾಟಿ₂ + ಕುಂಭ]

**ಪಾಟಿಗಾಣ್** (ಕ್ರಿ). ಸಮವೆಂದು ಭಾವಿಸು ; ಸರಿಸಮಾನವೆಂದು ತಿಳಿ : ಅದಿರದೆ ವೀರವೈರಿಭಟರಂ ಘಟಕೋಟಿಗೆ ಪಾಟಿಗಂಡು . . . ಘನಕಪಿತ್ಥಮನಾ ಬನದೊಳ್ ಕಡಂಗಿ ಕಿಟ್ಟಿದಟದು ಪೋದುದೇ ನಿನಗಮಿಾ ತೆಜದಿಂ ಕೆಡೆವಂತುಟಾದುದೇ (ವರ್ಧಪು. ೩-೦೫).

[ಪಾಟಿ₁ (<ಪಾಟಿ₂) + ಕಾಣ್]

**ಪಾಟಿಗೆಡಿಸು** (ಕ್ರಿ). ಸ್ಥಿತಿಗೆಡುವಂತೆ ಮಾಡು ; ನಾಶಮಾಡು : ಪಾಟಿಗೆಡಿಸುವೆಪಘವನೆಂಬಾ ನವಕೋಟಿಮುನಿಗಳ ಮೆಲ್ಲಡಿಗೆ ತಾಟಿಸಿ ಪಣೆಸೂನೇವಿಾಶಸಂಗತಿಯ ಸಂಘಾಟದಿಂದಾನುಸುರುವೆನು (ಪೇಮಸಂ. ೧-೨೦).

[ಪಾಟಗೆಡು (<ಪಾಟಿಗೆಡು) + -ಇಸು₃]

**ಪಾಟಿಗೆಡು** 'ಪಾಟಿಗೆಡು' ನೋ.

**ಪಾಟಿಗೆಯ್** (ಕ್ರಿ). ಸಮಾನವಾಗಿ ಕಾಣು ; ಎಣೆಯೆಂದು ಎಣಿಸು : ಕಾಗೆ ಕಲ್ರನ್ನಲಾ ಕೋಗಿಲೆಗೆ ಬಣ್ಣಮಪ್ಪುದೆಯುದಂತಿಲ್ಲಾಗಿ ಪಾಟಿಗೆಯ್ಯೆಂ (ಸಿದ್ಧೇಪು. ೧-೧೮). [ಪಾಟ್$_1$ (<ಪಾಟ್$_2$) + ಕೆಯ್$_1$]

**ಪಾಟಿತ** (ಗು). ಸೀಳಿದ ; ಒಡೆದ ; ಮುರಿದ : ಕೂರಿಸೆ ಗುರು ಶುಶ್ರೂಷೆಯೊಳಾ ರಾಮನನುಗ್ರಪರಶುಪಾಟಿತರಿಪುವಂಶಾರಾಮನನಿಷು ವಿದ್ಯಾಪಾರಗನೆನಿಸಿದುದು ಬಲ್ಮೆ ವೈಕರ್ತನನಾ (ಶಂಶಭಾ. ೧-೧೦೯); ಪರಿಮಳಾ ಕಿಲಂಪಟಷಟ್ಚರಣಪಟಲಪಾಟಿತ ಕುಟ್ಮಲಾವಳೀಸ್ಯಂದಮಾನ ಮಕರಂದ ಬಿಂದುಸಂದೋಹಜನಿತ ದುರ್ದಿನಂಗಳಿಂ (ಚಂದ್ರಪು. ೧-೧೦೫ ವ). [ಸಂ.]

**ಪಾಟದೈವ** (ನಾ). ಸರಿಸಮವಾದ ದೇವತೆ ; ಸದೃಶವಾದ ದೇವತೆ : ಪಾಟದೈವವಿದೆಂದು ನಾಡೊಳು ಪಾಟಿಸುವರೆಲೊ ಜನನ ವಿಧಿಗಳ ಕೋಟಲೆ ಯನೆಣಿಸುವೊಡೆ ತಾಂ ಫಣಿಪತಿಗೆ ಹವಣಲ್ಲ (ಬಸವು. ೫೧-೭೫). [ಪಾಟ್$_1$ (<ಪಾಟ್$_2$) + ದೈವ]

**ಪಾಟದೋಱು** (ಕ್ರಿ). ಸಮಾನವೆಂದು ಗಣಿಸು,–ಎಣಿಸು : ಅನೇಕ ನೃಪಾಲರಂ ಭುಜಾಬಳದಿನದಿರ್ಪಿ ತತ್ಕುಲಧನಂಬೆರಸೀಱ್ಕುಳಿಗೊಂಡ ಕನ್ನಕಾ ಕುಳದೊಳಗಾರ ಪೋಲ್ವೆಯುವಳೀಕೆಯನೀಕೆಯೊ ಪಾಟದೋಱುವರ್ (ಪುಷ್ಪಪು. ೭-೫೭). [ಪಾಟ್$_1$ (<ಪಾಟ್$_2$) + ತೋಱು]

**ಪಾಟಿಸವಾಲು** 'ಪಾಟೀಸವಾಲು' ನೋ.

**ಪಾಟಿಸು**$_1$, **ಪಾಳಿಸು**$_1$ (ಕ್ರಿ). ೧. ಸರಿಸಮಾನವೆಂದು ಎಣಿಸು : ನೋಟ ವೊಂದಲ್ಲದೆ ನುಡಿಯಿಲ್ಲ ಮೈಯೊಲೆದಾಟವಿಲ್ಲ ಕುವರರಿಗೆ ಮಾಟದ ಬೊಂಬೆ ಯಂತಿರೆ ಕಂಡು ದೇವೇಂದ್ರ ಪಾಟಿಸಿ ನುಡಿದನಿಂತೆಂದು (ಭರತ. ೭೭-೩೯); ಪಾಟಿಸಿ ಕೇಳಣ್ಣ ನಾನು ನೀನಾಡುವರಾಟಕಾಱರು ನಮ್ಮ ಭಟರು ನೋಟ ಕಾಱರೆ ನೀನು ನೆನೆದ ಸಂಗ್ರಾಮ ಸಫಾಟಿಕೆಯಾಯ್ತು ಕಂಜಾಸ್ತ್ರಾ (ಭರತ. ೫೦-೮೦). ೨. ವಿಮರ್ಶಿಸು ; ಪರಾಮರ್ಶಿಸು ; ಪರಿಶೀಲಿಸು : ನೀಟಂಗೆಜಗದ ಜೈತಜಿಕಾಟಕನಂ ಕಡಿದು ಬಿಸುಡೆ ಚಿಕದೇವೇಂದ್ರಂ ಪಾಟಿಸಿ ಬಲ್ಲವರಲ್ಲದ ಮಾಟದ ರಾವಣಿಯುನಿಂದು ಮುಡಿಪಿದನೆಂದರ್ (ಅಕ್ರಿತ. ೬೧-೨೦). ೩. ಕೊಡು ; ನೀಡು : ಒದಗಿಸು : ಹಾಟಕಭಿತ್ತಿಸಮನ್ವಿತ ನಾಟಕಶಾಲೆಗಳ ವಿವಿಧಸೌಧಂಗಳ ಕೋಡಾಟವುನೆ ಮೆಚ್ಚಿದಾ ಮೆಚ್ಚಂ ಪಾಟಿಸುವುವು ಮಿಥುನಸತಿಗೆ ಗೃಹಮಹಿಜಾತಂ (ಆದಿಪು. ೫-೩೭) ; ತೃಣಮನುಜರು ಕೈಮುಗಿದು ವಂದನೆ ಮಾಡೆ ಅನುಮಾನ ಇಲ್ಲದಲೆ ಪಾಟಿಸುವ ಕರ್ಣ (ಕೀರ್ಪಬು. ೧೬-೧). ೪. ಆದರಿಸು ; ಗೌರವಿಸು ; ಮೆಚ್ಚಿಸು : ವಿಪಾಟು ಸಿಂಗರದಿಂಪುವಡೆದು ಮಿಗೆ ಬಯಸಿ ಬಯಸಿದ ಸುವಸ್ತುಗಳನಿತ್ತು ಪಾಟಿಸುವ ಭೀಮಫಲ್ಗುಣರ . . . ಕೌತಿಕದ ಮಾಳ್ಕೆಯಂ ಕಂಡು ನಲಿದಾಡಿತು ಜನಂ (ಕೃಬಿಭಾ. ೩೯-೧೧). ೫. ಅಪೇಕ್ಷಿಸು ; ಬಯಸು : ಊಟದಿನಾಟದಿನೊಪ್ಪುವ ಪಾಟದಿ ನಾಟಿಸುವ ಕೀಟದಿಂ ಕಂಪಿನ ಕಯ್ಯೂಟದಿನಪ್ಪ ಸುಖಂಗಳೆ ಪಾಟಿಸಿದ ಸುಖಂಗಳೆಂದ್ರಿಯಂಗಳ ದೆಸೆಯಿಂ (ಅಜಪು. ೨-೮೧); ಚೆನ್ನಿಂಗೆ ಮಱುಗಿ ಮಾಣದೆ ಚೆನ್ನಂ ಪಾಟಿಸುವರಾಗಳುಂ ವಿಕಳಂಗರ್ (ಸಮುಕ. ೬-೪೪); ಓಪರೊಳಾರುಂ ಬೇಟವುಂ ಪಾಟಿಸಿದವರೊಳೆ ನಿನ್ನಂತು ನಾಣ್ಗೆಟ್ಟು ಬಾಯ್ಬಿಟ್ಟರನಾನೀ ಲೋಕದೊಳ್ ಕಂಡಱಿಯೆಂ (ಶೃಂಗಾರ. ೪-೧೮); ಮೋಕ್ಷವಸು ಪಾಟಿಸುವ ನರ ನಿರಪೇಕ್ಷನಾಗಿಯೆ ಭಜಿಸ ಬೇಹುದು (ತಿಮ್ಮಳ. ೨-೪೭). ೬. ಮಾಡು ; ರಚಿಸು ; ನಿರ್ವಿಸು : ಪೊಸದುರ್ಗವಂ ಪಾಟಿಸಿ ಒರಿಯ ನಿಡುಬಾವಿಗಳನಗುಳಿಸಿ ದ್ವಾರದಱೊಳಗೆ (ಬಸವು. ೧೭-೧೧); ಕೋಟೆಯಿದ್ದುದು ಮುಂದೆ ಶಿವನ ಕರೋಟಮಾಲಾವಳಯುದವೊಲುಱೆ ಪಾಟಿಸಿದ ಕೊತ್ತಳದ ಮುಗಿ ಲಟ್ಟಳೆಯ ಮುರುಹಿನಲಿ (ತೊರವ. ೫-೨-೪); ಬಳಸದಧಿಕಸ್ನೇಹವನು ವೆಗ್ಗಳ ಮೆನಿಪ ಹಗೆತನವ ಪಾಟಿಸಿ ಬಳಗವೆಲ್ಲವ ಕೊಲಿಸಿ ತಾನಳಿದನು ಸುಯೋಧನನು (ತಿಮ್ಮಕೃ. ೧-೮೪). ೭. ಉಂಟುಮಾಡು ; ಹುಟ್ಟಿಸು : ಬೇಟದ ಸುಗ್ಗಿ ನಾಲ್ಕೆ ದಿನಮಾ ದೆಸೆಯೊಳ್ ಬಸಮಾದ ಗಂಡರಿಂಗೂಟಮೆ ಕೋ [ಪಾಠಾಂ. ತೋ]ಟಿಯೆಂದು ಸಮಸಂದೆಮೆಯುಂ ಮಱಿಯಾಗದಂತು ಬಾಯ್ ನಾಟಿರೆ ಬಾಯೊಳಪ್ಪುದುಗದಂತು ತೊಡಂಕಿರದೇಕೆ ತೋಟಿಯಂ ಪಾಟಿಸೆ ತಾವೆ ತಮ್ಮಗಳನಾಱಿಡಿಗೊಳ್ವರೊ ನಾಱ ಗೊಡ್ಡೆಯರ್ (ಲೀಲಾವ. ೧೪-೪೦). ೮. ಹೊಂದು; ತಾಳು; ಅವಲಂಬಿಸು: ಸಂಸ್ಕೃತಿಪಾರ್ಥಿಯಲ್ಲಿ ಬಿರ್ದರುಳದೆ ವೀರವೃತ್ತಿಯನೆ ಪಾಟಿಸಿ ಮೋಕ್ಷಸುಖಕ್ಕೆ ಚಿತ್ರಮಂ ತಿರಿಪುತುಮಿರ್ದ ಜೈನಮುನಿಪುಂಗವರಿಂ ಮಿಗಿಲಾರೊ ಲೋಕದೊಳ್ (ಧರ್ಮಾಮೃ. ೧೨-೫೦). ೯. ಬೆರಸು ; ಹೊಂದಿಸು ; ಜೋಡಿಸು : ಮೋಟ ಪುರುಷಳ್ಕಿ ಎಲೆಯುತ್ತಾ ಟಿಸುಗುಂ ನಸ್ಯಕರ್ಮದೊಳ್ ವಿಷಮನದುಂ ಪಾಟಿ[ಪಾಠಾಂ. ಪಾರಿ, ಲೋಟಿ]ಸಿ ಮರಿಚದೊಳೀಯಲ್ ಕೋಟಲತಾ ಕುಲಮುದೇವುದಿಂತಿದಱಿದಿರೊಳ್ (ಖಮಿರ. ೭-೮೯). **ಪಾಳಿಸು**$_1$ : ೧೦. ಜೊತೆಸೇರು ; ಬೆರೆ ; ಜೊತೆಯಾಗು : "ಪಾಳಿಸು – ಸಂಯೋಗೇ" (ಶಮಧಾ.). P ಇಲ್ಲಿ ಕುಳಸಹಿತವಾದ ರೂಪವು ಪ್ರಾಚೀನವಲ್ಲದು ದರಿಂದ ಪರ್ಯಾಯಪದವಾಗಿ ಗಣಿಸಲಾಗಿದೆ. [ಪಾಟ್$_1$ + –ಇಸು$_3$]

**ಪಾಟಿಸು**$_2$ (ಕ್ರಿ). ೧. ಓದು ; ಪಠಿಸು : ಬಗವುಗೆ ಜೈನಮನೋದದೆ ಮಿಗೆ ಪಾಟಿಸಿ ಕುಮತಿ ಕುಮತಮಂ ಪಲ್ಲಂ ನಾಲಗೆ ತಪ್ಪುವನ್ನಮಿರ ದೆಱೆದುಗೆ ಸಮ್ಯಗ್ಜ್ಞಾನಿಯಾಗಲೇನಱಿದಪನೇ (ಸಮುಕ. ೩-೩೩). ೨. ಹೊಗಳು ; ಕೀರ್ತಿಸು : ಪಾಟದೈವವಿದೆಂದು ನಾಡೊಳು ಪಾಟಿಸುವ ರೆಲೊ ಜನನ ವಿಧಿಗಳ ಕೋಟಲೆಯನೆಣಿಸುವಡೆ ತಾಂ ಫಣಿಪತಿಗೆ ಹವಣಲ್ಲ (ಬಸವು.೫೧-೭೫). ೩. ತಿಳಿದುಕೊಳ್ಳು ; ಕಲಿತುಕೊಳ್ಳು ; ಅಭ್ಯಾಸ ಮಾಡು : ತೋಟಗೆಳಸದರನೊಯ್ಯನೊಯ್ಯನೆ ಮನೋಭವನ ಧಾಟಿ ಗೊಳಗಾಗಿ ನಿಲಿಸುವ ಮದನಕಲೆಗಳಂ ಪಾಟಿಸುವ ಬಗೆಯನೆಳೆಯರ್ಗೆ ಕಲಿಸುವ . . . ಚಾರುಚೇಟಿಯರ್ ಚಲಿಸುವರ್ (ಕೃಬಿಭಾ. ೬-೩೭). ೪. ಪಳಗು ; ಹತೋಟಿಗೆ ಬರು : ಪಾಟಿಸಿದಯಾಹವಮೃಗಂಗಳ ಬೇಟೆಗೊಳಿಸಿದ ಶಬರರಟವಿಯ ಪಾಟಿಸಿಹ ಹೊಲಮರಿಗಳಿಂದೈದಿದನು ದೆಸೆ ಗಳನು (ಜತ್ತಿಕ. ೧೧-೩). ೫. ರೂಢಿಯಾಗಿರು ; ಅಭ್ಯಾಸವಾಗಿರು ; ವಾಡಿಕೆಯಲ್ಲಿರು : ಪಾಟಿಸಿ ಮಾಡಿದ ಸೊರ್ಕಿಪಳಾಟಮೆ ವಲಮೆನಿಸಿ ನೆಗಟ್ದ ನೀಲಾಂಜನೆ . . . ನೋಟಕರಂ ತವದ ಮಾಟಕ್ಕೆಯಿಂ ಮೋಹಿಸಿ ದಳ್ (ಆದಿಪು. ೯-೩೮) ; ಮಸೆವುದು ಮಾಸಲಿರ್ದ ಪಱಿವೇಟಮನಿಚ್ಚೆಯ ಬಿಚ್ಚತಿಕ್ಕೆಯುಂ ಪೊಸಯಿಪುದೊಳ್ಕಮಂ ನಡಪುತಿರ್ಪುದು ಧಾತುವನೊಳ್ಪಿ ತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು . . . ಬೇಟ ಪೆಱತಾವುದು ಕೇಳಿಕೆಯುಂ ವಿಟತ್ವಮುಂ (ಶಾಂತಿಪು. ೮-೪೧). [ಪಾಟ್$_2$ + – ಇಸು$_3$]

**ಪಾಟಿಸು**$_3$ (ಕ್ರಿ). ೧. ಸೀಳು ; ಹೋಳುಮಾಡು ; ಕತ್ತರಿಸು : ಕಾಟಕ ನಾನಿಮಿಷಮಂ ಮಿಗೆ ಪಾಟಿಸಿ ಮಾಱುತ್ತಮಿರ್ಪ ವೈತಂಸಿಕಂ (ವಸ್ತುಕೋ. ೬೭-೮೫). ೨. ಕಳೆ ; ನಾಶವಾಗು ; ನಿವಾರಣೆಯಾಗು : ಕೋಟದಿನ ದೊಂದು ಯಾತನೆ ಪಾಟಿಸುಗುಂ ಮಾಯೆಕಾರನೀತನ ಚದುರಿಂ(ವಸ್ತುಕೋ.೬೦). ೩. ಕೀಳು ; ಉತ್ಪಾಟಿಸು : ಸಮಂತು ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳನೆಂದು ತಾನೀ ನಯದಿಂದೆ ಪೆರ್ಚೆ ಪೊರೆದಟ್ಟಿ ಚಿಟೊಳಂದೊಡನುಂಡನಲ್ಲನೇ (ಶಂಶಭಾ. ೯-೭೭). [ಪಾಟನ + – ಇಸು$_3$]

**ಪಾಟಿಹೆಂಡ** (ನಾ). ಹಿಂದಿನ ದಿನದ ಹೆಂಡ ; ಹಳೆಯ ಹೆಂಡ : ಗೌಡರ ಮಗ . . . ಪಾಟಿಹೆಂಡ ಮತ್ತು ಹೊಸಹೆಂಡ ಎಷ್ಟು ಅಂತ ಬೇರೆಬೇರೆ ಅಳೆಸಿ ಇಷ್ಟು ಹೊಸಹೆಂಡಕ್ಕೆ ಅಷ್ಟು ಪಾಟಿಹೆಂಡ ಎಂದು

ಸೇರಿಸಿ, ಶಿಶ್ತಿಗೆ ತುಂಬಿಸಿ ಮಾರಾಟಕ್ಕೆ ಕಳುಹಿಸುತ್ತಿದ್ದ (ಶಹ್ಮರು. ೧೩೯).
[ಪಾಟ$_1$ + ಹೆಂಡ (<ಪೆಂಡ)]

**ಪಾಟೀಕ**, ಪಾಠೀಕ(ನಾ). ವಿದ್ವಾಂಸ ; ಪಂಡಿತ : ಸದ್ಬುಧ ಪುರೋಹಿತ . . . ಪಾಂಡಿತ್ಯ ಪಾಟೀಕ ಸಕಲವಿನಿಯೋಗ . . . ಸಂದಣಿಸೆ (ಶಶಶೋ. ೩೪-೧೮). **ಪಾಠೀಕ** : ಎಂತಹ ಪಾಠೀಕನಾಗಲಿ . . . ದಾಸರನ್ನು ಕಂಡರೆ ಸನ್ಯಾಸಿಗಳಿಗೆ ಮಾಡುವಂತೆ ನಮಸ್ಕಾರ ಮಾಡುವುದು ರೂಢಿಗೆ ಬಂತು (ಕಶಬ. ೩೯೧). [←ಮರಾ. ಪಢೀಕ. / ಸಂ. ಪಾಠಕ]

**ಪಾಟೀಲ** ‘ಪಟ್ವಾಯಿಲ’ ನೋ.

**ಪಾಟೀಸವಾಲು**, ಪಾಟಿಸವಾಲು (ನಾ). (ನ್ಯಾಯಾಲಯದಲ್ಲಿ ಹಿಂದೆ ನಡೆದ ವಿಚಾರಣೆಯಿಂದ ತಿಳಿದು ಬಂದ ವಿಷಯಗಳನ್ನು ತಾಳೆ ನೋಡುವುದಕ್ಕಾಗಲಿ, ಮುಚ್ಚಿಟ್ಟ ವಿಷಯಗಳನ್ನು ಹೊರಡಿಸು ವುದಕ್ಕಾಗಲಿ ಮಾಡುವ) ಪ್ರಶ್ನಾವಳಿ ; ಅಡ್ಡಸವಾಲು : ವಕೀಲರು ಪಾಟಿ ಸವಾಲು ಹಾಕುವುದೆಂದರೆ ಅದೊಂದು ಚಿತ್ರಹಿಂಸೆ (ಪಾಡಗೇ. ೯೩); ತನ್ನ ಅಂತರಾತ್ಮ ಎದುರಿಗೆ ಬಂದು ನಿಂತು ತನ್ನನ್ನು ಪಾಟೀಸವಾಲು ಮಾಡುತ್ತಿದೆಯೋನೋ ಎನಿಸಿತು ಅವನಿಗೆ (ಸ್ವಾಬಸ್ನೇ. ೧೫೨); ಮರುದಿನ ಬೆಳಗ್ಗೆ ಇಂದಿರೆಯ ಪಾಟೀಸವಾಲಿಗೆ ಆರಂಭವಾಯಿತು (ಬಂಕಿಮ. ೧೨೨). **ಪಾಟಿಸವಾಲು** : ಏನಾದರೂ ಕಳುವಾಗಿದ್ದರೆ ಅವಳೊಬ್ಬಳೇ ಅದಕ್ಕೆ ಜವಾಬ್ದಾರಳೆಂದೂ ಪಾಟಿಸವಾಲು ನಡೆಸಿದಾಗ ಆಪಾದಿತೆಯಾದ ಯೆವ್ ಫೀಮಿಯಾ ಬಾಷ್ಕೋವ ಹೇಳಿಕೆಯಿತ್ತಳು (ಪುಶರು. ೪೪); ಇವಳ ಪಾಟಿಸವಾಲಿನ ಮುಂದೆ ತಮ್ಮ ಲಾಯರತ್ವ ಸತ್ವವಿಲ್ಲದ್ದೆಂದು ಲಾಯರು . . . ಬಲ್ಲರು (ಪೂಪುಪಿ. ೦೬೮). [ಪಾಟೀ$_0$ + ಸವಾಲು (<ಸವಾಲ್)]

**ಪಾಟು$_1$** ‘ಪಾಡು$_3$’ ನೋ.

**–ಪಾಟು$_2$** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : ‘ತಿದ್ದು ಪಾಟು’ ಪರಾ.

**ಪಾಟುಗೆಡಿಸು** (ಕ್ರಿ). ಕಷ್ಟಕ್ಕೆ ಗುರಿಮಾಡು ; ದುರ್ಗತಿಗೆ ಈಡು ಮಾಡು : ಆಟವಲ್ಲವು ಕಪಟನಾಟಕಧಾರಕನೆ ಕಾಟಕಾರು ಕ್ರೂರನೋಟ ದಿಂದ ಪಾಟುಗೆಡಿಸಿ ಹೀನಕೋಟಲೆಯೊಳು ನೂಕಿ ಬೂಟಕತನ ಮಾಯ ದಾಟದಂತೆ (ಕೋಕ್ಷದೀ. ೫೦-೧). [ಪಾಟುಗೆಡು + —ಇಸು$_3$]

**ಪಾಟುಗೆಡು** (ಕ್ರಿ). ರೀತಿಗೆಡು ; ನಡತೆಗೆಡು : ಪಾಟುಗೆಟ್ಟು ಹೆಂಗ ಳೊಡನೆ ಕೋಟಲೆಗೊಂಡು ತಿರುಗಬೇಡಿ ನೀಟುಗಾತಿಯರೊಲುಮೆ ಬೂಟಕವೆಂದು ತಿಳಿಯಿರೊ (ಪುರಂದ. ೨-೧೬-೧).
[ಪಾಟು$_1$ (<ಪಾಡು$_3$) + ಕೆಡು$_1$]

**ಪಾಟುಪಡು** ‘ಪಾಡುಪಡು’ ನೋ.

**ಪಾಟುಬಡಿಸು** ‘ಪಾಡುಪಡಿಸು’ ನೋ.

**ಪಾಟುಬಡು** ‘ಪಾಡುಪಡು’ ನೋ.

**ಪಾಟ್ಟು** (ನಾ). ೧. ತಮಿಳು ಹಾಡು, — ಸ್ತೋತ್ರ : ಅಂದೆಸಗಿ ನಾಲ್ಕನೆಯ ತಿರುಮಂದಾಧಿಯುಮಂ ಚತುರ್ನವತಿಯುಂ ಪಾಟ್ಟಂ ಸಂದ ತಿರುಚಂದ್ರವೃತ್ತಮನೊಂದಿಸಿ ಪೇಟ್ದರ್ ಕಡಂಗಿ ನೂಚಿರ್ಪತ್ತಂ (ದಿಕ್ಯಚ. ೩-೩೮). ೨. ಕವಿತೆ; ಕಾವ್ಯ : ಪುಲಿಗೆಜೆಯ ತಿರುಳ ಕನ್ನಡದ ಪುರುಳ ರಸರಸದ ಬಾವಿ ಮನೆಮನೆಗೆ ತೀವಿ ತನ್ನೆರಡು ಪಾಟ್ಟು ಮೆಸೆಯೆ . . .ಪಂಪನ್ ಎಮ್ಮ ತಾಯ್‌ನುಡಿಗೀಗೆ ಪೊಸಪೊಸತು ಪೆಂಪನ್ (ಹೊಂಗಳು. ೩೯-೪). ‘ಪಾಡು$_2$’ ಪರಾ. [←ತಮಿ. ಪಾಟ್ಟು]

**ಪಾಟ್ಲ** ‘ಪಾಟಲಿ$_2$’ ನೋ.

**ಪಾಟ್ಲೂನು** ‘ಪಾಟಲೂನು’ ನೋ.

**ಪಾಠ$_1$** (ನಾ). ಒಂದು ಬಗೆಯ ಮೂಲಿಕೆ ; ಅಗುಳುಶುಂಠಿ : “ದೀಪಿಪೀ_ಅಳಲಿ, ಪಾಠ, ಓವ, ಮೆಂಥೆಯು” (ಓಸಂ. ೭೬). [ಸಂ. ಪಾಠಾ]

**ಪಾಠ$_2$** (ನಾ). ೧. ಓದು; ವಾಚನ. ೨. ಉಗ್ಗಡಣೆ ; ಘೋಷ ; ‘ಸ್ತುತಿ ಪಾಠ’ ಪರಾ. ೩. ಅಭ್ಯಾಸ ; ಅಧ್ಯಯನ : “ಅಧ್ಯಯನೇ, ಪಾಠದೊಳ್” (ಕಾಶಶ. ೨೬೪) ; ಅಂದು ಪಾಠವು ಕಾಟ ಎಂದು ತಿಳಿದಿದ್ದೆ (ಕಂಪ್ಪ. ೯-೨); ಪಾಠ್ಯ ಪಾಠಕ್ಕಾಗದು, ವಿಧಾರ್ಥ್ಯ ಕೆಲಸ ಕ್ಕಾಗದು (ಗಾದೆ). ೪. ಕಲಿಸುವಿಕೆ ; ಅಧ್ಯಾಪನ : “ಅಧ್ಯಯನಂ, ಅಧ್ಯಾಪನಂ . . . ಅಧೀತ್_ ಈ ೮ ಪಾಠಂ” (ಕಾಶಶ. ೦೬೪). ೫. ಪರಂಪರಾಗತವಾದ ಗ್ರಂಥಸ್ವರೂಪ : ಮಹಾಭಾರತಕ್ಕೆ ದಾಕ್ಷಿಣಾತ್ಯಪಾಠ, ಔತ್ತರೆಯಪಾಠವೆಂದು ಎರಡು ಪಾಠಗಳಿವೆ (ಕಾರಡ. ೯೬). ೬. ಲಿಖಿತ ಭಾಗ, —ರೂಪ : ಕೆಲವು ಸಂದರ್ಭಗಳಲ್ಲಿ ಕವಿಯ ಪಾಠ ಇದೇ ಎಂದು ನಿಷ್ಕೃಷ್ಟವಾಗಿ ಹೇಳುವುದಕ್ಕಾಗದಿರಬಹುದು (ಕಷ್ಟಸಂ. ೦೬೨). ೭. ಅಭ್ಯಾಸಕ್ಕಾಗಿ ಆಯ್ದುಕೊಂಡ ಭಾಗ ; ಕಲಿಯುವುದಕ್ಕಾಗಿ ನಿಯೋಜಿಸಿಕೊಂಡ ಭಾಗ : ಒಂದೊಂದು ಪಾಠಕ್ಕೂ ಆಗುವಷ್ಟನ್ನು ಆರಿಸಿಕೊಂಡು ಪಾಠಮಾಡುವುದು ಸಂಪ್ರದಾಯ ವಾಗಿ ಬಂದಿದೆ (ಶಿಕ್ಷದ. ೨೨೦). ೮. ವೇದಾಧ್ಯಯನ ; ಬ್ರಾಹ್ಮಣನು ಪ್ರತಿನಿತ್ಯ ಮಾಡಬೇಕಾದ ಪಂಚಯಜ್ಞಗಳಲ್ಲಿ ಒಂದಾದ ಬ್ರಹ್ಮಯಜ್ಞ : “ಪಾಠಃ_ವೇದಪಾರಾಯಣ ಜಪಾದಿಗಳು . . . ಪಾಠವೇ ಬ್ರಹ್ಮಯಜ್ಞ” (ಸಿದ್ಧಾಂತಿ. ೨೦೬); ಎನಗೀ ಶಾಸ್ತ್ರಂ ಪಾಠಂ ಜನರಂಜನ ಮಾಡಿ ಪೇಟ್ದು ಕಟೂವೆಂ ಪೊಟ್ಟಂ (ಅಟ್ಟಿಮ. ೧-೨೬). ೯. ವಿವೇಕ ; ತಿಳಿವಳಿಕೆ : ಆ ಅಹಂಕಾರಿಗೆ ಸರಿಯಾದ ಪಾಠವನ್ನು ಕಲಿಸಬೇಕು (ರೂ). **ಪಾಠಮಾಡು**=೧. ಕಲಿಸು ; ಪಾಠ ಹೇಳು : ಈಗ ಬಂದಿರುವ ಹೊಸ ಮೇಷ್ಟರು ಬಹಳ ಚೆನ್ನಾಗಿ ಪಾಠಮಾಡುತ್ತಾರೆ (ರೂ). ೨. ಉರು ಹೊಡೆ ; ಗಟ್ಟಿಮಾಡು ; ಬಾಯಿಪಾಠ ಮಾಡು : ಇನ್ನು ಅರ್ಧ ಗಂಟೆಯಲ್ಲಿ ಈ ನಾಲ್ಕು ಮಗ್ಗಿಗಳನ್ನು ಪಾಠ ಮಾಡು (ರೂ). [ಸಂ.]

**ಪಾಠಕ** (ನಾ). ೧. ಬಿರುದಾವಳಿಗಳನ್ನು ಹೊಗಳಿ ಹಾಡುವವನು ; ಭಟ್ಟಂಗಿ : ಕವಿಗಳಿಗೆ ಪಾಠಕಜನಕೆ ದೈವಜ್ಞರಿಗೆ ವೈದ್ಯರಿಗೆ . . . ಎಚಿದು (ಬಸಪು. ೫೯-೨೯); ಮುನಿಗಳೆ ಮಾಣಿಯರು . . . ಸೂರ್ಯಾದಿಗಳೇ ಸಹಚರರು ಘನಚತುರ್ದಶವಿದ್ಯೆ ಪಾಠಕಜನವಲ್ಲೈ (ಕುವ್ಯಾಸ. ೦-೯೦) ; ಬವರದಾದಿಯಲಸುರಪತಿಯುಪ್ಪವಡಿಸಿದನಿದ್ದೆಸಿಯ ಮಂಗಳರವದ ಪಾಠಕ ಸೂತಮಾಗಧರುಗಳ ಸೂಕ್ತಿಯಲಿ (ಕೂರಂ. ೬-೨೦-೦೦). ೨. ಓದುವವನು ; ಓದುಗ ; ವಾಚಕ : “ಓದಾಳಿ ಯೆಂದು ಪಾಠಕಂ” (ಕಶಸಾ. ೬೦-೩೨೯); ಕೆಲವು ಪಾಠಕರು ಈ ಗ್ರಂಥವ ಕೊನೆಯನ್ನು ನೋಡಿ ದುಃಖಿತರಾಗಬಹುದು (ಬಂಕಿಮ. ೦೬೬); ಈ ದೀರ್ಘ ವಿವರಣೆಯು ಪಾಠಕರಿಗೆ ಬೇಸರವಾಗಬಹುದು (ಶೀವಾಕ್ಯ. ೦೮೦). ೩. ಕಲಿಸುವವನು ; ಶಿಕ್ಷಕ ; ಗುರು. ೪. ವೇದ, ಪುರಾಣ ಮೊದಲಾದುವುಗಳನ್ನು ಓದಿ ಹೇಳುವವನು ; ಪ್ರವಚನಕಾರ.
[ಸಂ.]

**ಪಾಠಕರಣ** (ನಾ). [ಸಂಗೀತ] ನೂರೆಂಟುಂ ತಾಳಗಳಲ್ಲಿ ಒಂದು : ಧ್ರುವ ಮಟಯ . . . ಪಾಠ[ ಪಾಕಾಂ. ಟೀ]ಕರಣ . . . ಜಮಾಳ ವೆಂಬವೇ ಮೊದಲಾದ ನೂಚೆಂಟು ತಾಳಂಗಳು (ಬಸೇಕ. ೦೯೨). [ಸಂ.]

**ಪಾಠಕಲಿ** (ಕ್ರಿ). ೧. ಅಭ್ಯಾಸಮಾಡು : ಜನನಿಯಿಂದ ಪಾಠಕಲಿತ ಜನರು ಧನ್ಯರು (ಕಶಪು. ೫-೧೪೮). ೨. ಅನುಭವದಿಂದ ತಿಳಿದುಕೊಳ್ಳು ; ಬುದ್ಧಿಕಲಿ : ಆ ದುಷ್ಟನು ಸರಿಯಾಗಿ ಪಾಠಕಲಿಯುವಂತೆ ಮಾಡಬೇಕು (ರೂ). [ಪಾಠ$_2$ + ಕಲಿ$_1$ (<ಕಲ್$_1$)]

**ಪಾಠಕಲಿಸು** (ಕ್ರಿ). ೧. ಪಾಠವನ್ನು ಹೇಳಿಕೊಡು : ಆ ಪಂಡಿತರು ತುಂಬ ಚೆನ್ನಾಗಿ ಪಾಠ ಕಲಿಸುತ್ತಾರೆ (ರೂ). ೨. (ಶಿಕ್ಷೆಗೊಳಗಾಗಿಸಿ) ತಪ್ಪನ್ನು ತಿದ್ದಿಕೊಳ್ಳುವಂತೆ ಮಾಡು ; ಬುದ್ಧಿಕಲಿಸು : ಬಲು

ಸೊಕ್ಕಿಗೆ ಬಂದಿದ್ದಾನೆ, ಅವನಿಗೆ ಪಾಠ ಕಲಿಸಬೇಕಾಗಿದೆ (ಬೂಶಿ).
[ಪಾಠ$_2$ + ಕಲಿಸು$_1$]

**ಪಾಠಕಾಟಿ** (ನಾ). ಭಟ್ಟಂಗಿ ; ಸ್ತುತಿಪಾಠಕ : ಪೊಗಟುತೆ ಪರ್ಪವರ ಸರಂಗಳೊಳಂ ಪಾಡುವ ಪಾಠಕಾಟಿರಿಂಚರಂಗಳೊಳೆಲ್ಲಂ ದಿಗ್ಭಿತ್ತಿಗಳ್ ತೆಕ್ಕನೆ ಶೀಪೆ (ಶಂಶಭಾ. ೩-೩೪ ವ). [ಪಾಠ$_2$ + — ಕಾಟಿ]

**ಪಾಠಕಿ** (ನಾ). ಕಲಿಸುವವಳು ; ಅಧ್ಯಾಪಿಕೆ : "ಅಧ್ಯೇತ್ರೀ = ಪಾಠಕಿ" (ಕಾಶಕ್ಕ. ೧೬೪). [ಸಂ. ಪಾಠಕೀ]

**ಪಾಠಕ್ರಮ** (ನಾ). ೧. ಓದಬೇಕಾದ ಕ್ರಮಂ ; ಅಭ್ಯಾಸ ಮಾಡಬೇಕಾದ ಕ್ರಮಂ : ವರ್ಣಗಳ ಪಾಠಕ್ರಮಮುವರ್ಣವವ್ಯತಥಾತ್ರಿಯೊಳ್ ಪ್ರಸಿದ್ಧಂ (ಶಬ್ದ. ೪). ೨. ಗ್ರಂಥದಲ್ಲಿರುವ ವಿಷಯದ ಅನುಕ್ರಮ : ಜ್ಞಾನಾವರಣೀಯಂ . . . ಅಂತರಾಯಮೆಂದಿಂತು ಮುಂ ಪೇಳ್ದ ಪಾಠಕ್ರಮಮಾ ಪ್ರಕಾರದಿಂದಂ ಸಿದ್ಧಮಾದುದು (ಗೊಮ್ಮಸಾ. ೨-೮).
[ಪಾಠ$_2$ + ಕ್ರಮ]

**ಪಾಠಗ್ರಂಥಿ** (ನಾ). (ಹಸ್ತಪ್ರತಿಯಲ್ಲಿ) ಮೂಲಪಾಠವೇನಿರಬಹುದೆಂದು ಊಹಿಸಲಾಗದಂತೆ ಕೆಟ್ಟುಹೋಗಿರುವ ಪಾಠ ; ಸಮಸ್ಯಾತ್ಮಕವಾದ ಪಾಠ : ಇಂಥ ಅಪರಿಹಾರ್ಯವಾದ ಅತಿ ದುಷ್ಟ ಪಾಠಕ್ಕೆ ಪಾಠಗ್ರಂಥಿ (Crux) ಎಂಬ ಹೆಸರನ್ನು ಕೊಟ್ಟಿದೆ (ಕನ್ನಸಂ. ೨೦೭).
[ಪಾಠ$_2$ + ಗ್ರಂಥಿ]

**ಪಾಠಣ** (ನಾ). ಕಲಿಸುವಿಕೆ ; ಅಧ್ಯಾಪನ : ಓದಿಸುವ ಬುಧವರನ ಬರಿಸಿ ವೊಲಿದು . . . ಪುತ್ರಚಿಂತಾಮಣಿಯ ಪಾಠಣದ ಬುಧವರನ ಚರಣಗಳಿಗೆರಗಿಸುತ್ತ ಕಳುಹೆ (ಪಪಮೋ. ೧೫-೬೦). [<ಸಂ. ಪಾಠನ]

**ಪಾಠದೋಷ** (ನಾ). ಗ್ರಂಥಗಳಲ್ಲಿ ಕಾಣುವ ಅಶುದ್ಧವಾದ ಅಥವಾ ತಪ್ಪಾದ ಬರವಣಿಗೆ : ಈ ಎರಡು ಪ್ರಧಾನದೋಷಗಳಿಂದ ಉದ್ಭವಿಸುವ ಪಾಠದೋಷಗಳ ಬಗ್ಗೆ ಇನ್ನೊಂದು ಅಧ್ಯಾಯದಲ್ಲಿ ಹೇಳಲಾಗುತ್ತದೆ (ಭಾರಶ. ೩೦). [ಪಾಠ$_2$ + ದೋಷ]

**ಪಾಠನಿರ್ಣಯ** (ನಾ). (ಹಳೆಯ ಗ್ರಂಥಗಳ ಹಸ್ತಪ್ರತಿಗಳನ್ನು ತಾಳೆ ನೋಡಿ) ಸರಿಯಾದ ಪಾಠ ಯಾವುದೆಂಬುದನ್ನು ನಿರ್ಧರಿಸುವಿಕೆ : ಪಾಠನಿರ್ಣಯದ ವಿಷಯದಲ್ಲಿ ತೋರುವ ವ್ಯವಸ್ಥಿತವೂ ಕೌಶಲ್ಯಪೂರ್ಣವೂ ಆದ ವಿವೇಚನೆಯಿಂದು ಇದನ್ನು ಸೂತ್ರಿಸಬಹುದು (ಭಾರಶ. ೯); ಹಸ್ತಪ್ರತಿಗಳ ಆಧಾರದ ಮೇಲೆ ಅದರ ಪಾಠನಿರ್ಣಯ ಮಾಡುವುದು (ಕನ್ನಸಂ. ೨೮). [ಪಾಠ$_2$ + ನಿರ್ಣಯ]

**ಪಾಠಪರಿಷ್ಕರಣ** (ನಾ). ಹಳೆಯ ಹಸ್ತಪ್ರತಿಗಳಲ್ಲಿರುವ ಪಾಠದೋಷಗಳನ್ನು ನಿವಾರಿಸುವಿಕೆ : ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡ ಮೇಲೆ ಗ್ರಂಥಸಂಪಾದನಕಾರ್ಯ ಪಾಠಪರಿಷ್ಕರಣದಲ್ಲಿ ಪರ್ಯವಸಾನವಾಗುತ್ತದೆ (ಕನ್ನಸಂ. ೧೬೩); ಅತ್ಯುತ್ತಮಹಸ್ತಪ್ರತಿ ಇಲ್ಲವೆ ದಾಖಲೆಗಳಲ್ಲಿಯೂ ಸಹ ಕಂಡುಬರುವ, ಆದರೆ ನಂಬಲು ಯೋಗ್ಯವಲ್ಲದ ಅಂಶಗಳನ್ನು ಹಸ್ತಪ್ರತಿಸಂಪ್ರದಾಯದಿಂದ ತೆಗೆದುಹಾಕುವುದೇ ಪಾಠಪರಿಷ್ಕರಣ . . . ಗ್ರಂಥಕಾರನ ಪಾಠದ ಮೂಲರೂಪವನ್ನು ಸಾಧಿಸುವುದು (ಭಾರಶ. ४೧).
[ಪಾಠ$_2$ + ಪರಿಷ್ಕರಣ]

**ಪಾಠಭೇದ** (ನಾ). ಪ್ರಾಚೀನಕಾವ್ಯಗಳ ಹಸ್ತಪ್ರತಿಗಳಲ್ಲಿರುವ ಬೇರೆ ಬೇರೆ ಪಾಠ ; ಪಾಠಾಂತರ : ಗ್ರಂಥಗಳಲ್ಲಿ ಪಾಠಭೇದಗಳುಂಟಾಗುವುದು, ಪ್ರಕ್ಷೇಪಗಳಾಗುವುದು, ಗ್ರಂಥಪಾತವಾಗುವುದು, ಅಸ್ತವ್ಯಸ್ತವಾಗುವುದು, ಪ್ರತ್ಯಂತರಗಳ ಸಹಾಯದಿಂದ ಪಾಠಶೋಧನೆ ಮಾಡುವುದು —ಇವೇ ಮುಂತಾದುವನ್ನು ಪ್ರಾಚೀನ ಭಾರತೀಯವಿದ್ವಾಂಸರು ಬಲ್ಲವರಾಗಿದ್ದರು (ಕನ್ನಸಂ. ೧೧) ; ಈ ಉಪನಿಷತ್ತಿನ ಎರಡು ಬೇರೆಬೇರೆ ಪ್ರತಿಗಳಲ್ಲಿ ಪಾಠಭೇದವಿದೆ (ಶಿಅಶ್ಕ. ೨೦೭). [ಪಾಠ$_2$ + ಭೇದ]

**ಪಾಠಭ್ರಾಂತಿ** (ನಾ). ಹಸ್ತಪ್ರತಿಯನ್ನು ಬರೆಯುವವನ ತಪ್ಪಿನಿಂದಾಗಿ ಉಂಟಾದ ಪಾಠ : ಪಾಠಭ್ರಾಂತಿ ಮತ್ತು ಅವುಗಳನ್ನು ಪರಿಹರಿಸುವ ಪ್ರಯತ್ನಗಳು (ಭಾರಶ. ೭೭). [ಪಾಠ$_2$ + ಭ್ರಾಂತಿ]

**ಪಾಠಮಿಶ್ರಣ** (ನಾ). ಬೇರೆ ಬೇರೆ ಸಂಪ್ರದಾಯದ ಪಾಠಗಳನ್ನು ಮಿಶ್ರಣ ಮಾಡಿ ಬರೆಯುವಿಕೆ : ಭಿನ್ನಶಾಖೆಗಳು ಹೀಗೆ ಒಂದರೊಡನೊಂದು ಸೇರುವುದಕ್ಕೆ ಪಾಠಮಿಶ್ರಣ (Crossing or Intermixing) ಎಂದೂ . . . ಹೆಸರು (ಭಾರಶ. ೩೪) ; ಎಲ್ಲ ಪ್ರತಿಗಳ ಉತ್ತಮಾಂಶಗಳನ್ನೊಳಕೊಂಡ ಒಂದು ಪಾಠವನ್ನು (Eclectic text) ಸಂಪಾದಕನು ಕೊಡಬೇಕಾಗುತ್ತದೆ. ಆಗ ಅದರಲ್ಲಿ ಭಿನ್ನಸಂಪ್ರದಾಯಗಳ ಪಾಠಮಿಶ್ರಣ ಆಗಲೇಬೇಕಾಗುತ್ತದೆ (ಕನ್ನಸಂ. ೧೭೭). [ಪಾಠ$_2$ + ಮಿಶ್ರಣ]

**ಪಾಠಯಿಸು** 'ಪಾಠಿಸು' ನೋ.

**ಪಾಠಯೋಜನೆ** (ನಾ). ಭಿನ್ನಭಿನ್ನಪ್ರತಿಗಳ ಉತ್ತಮಾಂಶಗಳನ್ನು ಆಯ್ದುಕೊಂಡು ಬಹುಶಃ ಸರಿಯೆನ್ನಿಸಬಹುದಾದ ಪಾಠವನ್ನು ನಿರ್ಮಿಸುವುದು: ಈ ರೀತಿಯ ಪಾಠಯೋಜನೆಯನ್ನು ಕೆಲವರು ಸಂಪಾದನಶಾಸ್ತ್ರಜ್ಞರು ಒಪ್ಪುವುದಿಲ್ಲ . . . ಉತ್ತಮಪ್ರತಿಗಳು ದೊರೆತಂತೆಲ್ಲ ಇಂಥ ಪಾಠಯೋಜನೆಯಲ್ಲಿ ವ್ಯತ್ಯಾಸಗಳನ್ನು ಮಾಡುತ್ತಲೇ ಇರಬೇಕಾಗುತ್ತದೆ (ಕನ್ನಸಂ. ೧೭೭). [ಪಾಠ$_2$ + ಯೋಜನೆ]

**ಪಾಠವಿಕಲತೆ** (ನಾ). ಗ್ರಂಥಸ್ವರೂಪವು ಕೆಟ್ಟುಹೋಗುವಿಕೆ; ಗ್ರಂಥದ ಮೂಲಶಬ್ದಸ್ವರೂಪವು ಬದಲಾಗುವಿಕೆ : ಪಾಠವಿಕಲತೆ ಎಷ್ಟು ಶೀಘ್ರಗತಿಯಲ್ಲಿ ಘಟಿಸುತ್ತಾ ಹೋಗುವುದೆಂದರೆ ಹೊಸ ಸ್ವಾರಸ್ಯಗಳ ಹುಲುಸುಬೆಳೆಯಲ್ಲಿ ಮೂಲಪಾಠಾಂತರಗಳು ಮರೆಯಾಗಿ ಬಿಡುತ್ತವೆ (ಭಾರಶ. ೭೭). [ಪಾಠ$_2$ + ವಿಕಲತೆ]

**ಪಾಠಶಾಲೆ** (ನಾ). ವಿದ್ಯಾಭ್ಯಾಸ ಮಾಡುವ ಸಂಸ್ಥೆ ; ವಿದ್ಯಾಲಯ : ಸುರಬಾಲೆಯ ಸಂಗಡ ಒಟ್ಟಾಗಿ ಪಾಠಶಾಲೆಗೆ ಹೋಗಿದ್ದೇನೆ (ಇಶ್ಯಕ. ೮); ಮನೆಯೆ ಮೊದಲ ಪಾಠಶಾಲೆ (ಕಪಪು. ೫-೧೪೮). [ಪಾಠ$_2$ + ಶಾಲೆ$_2$]

**ಪಾಠಶೋಧಕ** (ನಾ). ಗ್ರಂಥದ ಸರಿಯಾದ ಪಾಠವನ್ನು ಕಂಡುಹಿಡಿಯುವವನು : ಅವನ ಮುಂದಿನ ಕೆಲಸ ಪ್ರಾಮಾಣಿಕನಾದ ಪಾಠಶೋಧಕನ ಕೆಲಸ, ಪಾಠವಿಮರ್ಶಕನ ಕೆಲಸವಲ್ಲ (ಭಾರಶ. ೭೭).
[ಪಾಠ$_2$ + ಶೋಧಕ]

**ಪಾಠಶೋಧನೆ** (ನಾ). ಗ್ರಂಥದ ಸರಿಯಾದ ಪಾಠವನ್ನು ಗೊತ್ತುಪಡಿಸುವಿಕೆ : ಪ್ರತ್ಯಂತರಗಳ ಸಹಾಯದಿಂದ ಪಾಠಶೋಧನೆ ಮಾಡುವುದು (ಕನ್ನಸಂ. ೧೧). [ಪಾಠ$_2$ + ಶೋಧನೆ]

**ಪಾಠಸಂಪ್ರದಾಯ** (ನಾ). ಕಾವ್ಯಗಳಲ್ಲಿ ಸಾಂಪ್ರದಾಯಿಕವಾಗಿ ಬಂದಿರುವ ಗ್ರಂಥಪಾಠ ಮತ್ತು ಅದನ್ನು ಅನುಸರಿಸಿರುವ ಪದ್ಧತಿ : ಪ್ರತಿ ಮಾಡುವ ಕೆಲಸ ಯಾವ ಊರಿನಲ್ಲಿ ನಡೆಯಿತೆಂಬುದು ಗೊತ್ತಾಗುತ್ತದೆ. ಇದರಿಂದ ಪ್ರಾದೇಶಿಕ ಪಾಠಸಂಪ್ರದಾಯಗಳನ್ನು ತಿಳಿಯಲು ನೆರವಾಗುತ್ತದೆ (ಕನ್ನಸಂ. ೫೩). 'ಪಾಠಸಂಪ್ರದಾಯನಿರ್ಣಯ' ಪರಾ.
[ಪಾಠ$_2$ + ಸಂಪ್ರದಾಯ]

**ಪಾಠಸಂಪ್ರದಾಯನಿರ್ಣಯ** (ನಾ). ಒಂದು ಗ್ರಂಥದಲ್ಲಿ ಯಾವುದಾದರೊಂದು ಶಬ್ದವು ಬೇರೆ ಬೇರೆ ಪರಂಪರೆಗಳಲ್ಲಿ ಉಲ್ಲೇಖಿತವಾಗಿದ್ದರೆ ಯಾವ ಸಂಪ್ರದಾಯಕ್ಕೆ ಹೆಚ್ಚು ಪ್ರಾಧಾನ್ಯ ಕೊಡಬೇಕೆಂದು ತೀರ್ಮಾನಿಸುವುದು : ಪಾಠಸಂಪ್ರದಾಯನಿರ್ಣಯ (Recension) : ಮೇಲೆ ಹೇಳಿದ ಸಾಮಗ್ರಿಗಳ ಮೂಲರೂಪವನ್ನು ಸಾಧಿಸುವುದು (ಭಾರಶ. ४೧). [ಪಾಠಸಂಪ್ರದಾಯ + ನಿರ್ಣಯ]

**ಪಾಠಸಾಕ್ಷಿ** (ನಾ). ಹಸ್ತಪ್ರತಿಗಳನ್ನು ತಾಳೆ ನೋಡುವುದರಿಂದ ಸಿಕ್ಕುವ ಮೂಲಗ್ರಂಥಸ್ವರೂಪಗಳ ಆಧಾರ : ಹಸ್ತಪ್ರತಿಗಳ ಪಾಠಸಾಕ್ಷಿ

ಗಳನ್ನು ತೂಗಿನೋಡುವುದು ; ಅವು ತಪ್ಪಾಗಿದ್ದರೆ ಅವನ್ನು ತಿದ್ದುವುದು ಅಥವಾ ಸರಿಪಡಿಸುವುದು (ಕನ್ನಸಂ. ೨೮). [ಪಾಠ೨ + ಸಾಕ್ಷಿ]

**ಪಾಠಹೇಳು** (ಕ್ರಿ). ಕಲಿಸು ; ವಿದ್ಯಾಭ್ಯಾಸ ಮಾಡಿಸು : ಅವನ ವ್ಯಯನ್ನು ಮುಟ್ಟದೆ ಪಾಠ ಹೇಳಲಿಕ್ಕೆ ನನ್ನಿಂದಾಗದು (ಮರಮ. ೧೭೯). [ಪಾಠ೨ + ಹೇಳು (<ಪೇೞ್)]

**ಪಾಠಾಂತರ** (ನಾ). ಹಸ್ತಪ್ರತಿಗಳಲ್ಲಿ ದೊರೆಯುವ ಬೇರೆಬೇರೆ ಪಾಠ : ಇದಕ್ಕೆ ಕೆಲವು ಪಾಠಾಂತರಗಳೂ ಉಂಟು (ಕುಮಾಸಾಂ. ೨೩); ಹಸ್ತಪ್ರತಿಗಳನ್ನು ಪರಸ್ಪರ ಹೋಲಿಸಿ ಪಾಠಾಂತರಗಳಲ್ಲಿ ಉಚಿತವಾದುದನ್ನು ಆರಿಸಿಕೊಳ್ಳುವ ಕ್ರಮವನ್ನು ಈತನು ಅವಲಂಬಿಸಿರುವುದು ಮುಖ್ಯವಾದುದಾಗಿದೆ (ಕನ್ನಸಂ. ೦೫); ಲಭ್ಯಪ್ರತಿಗಳ ಪ್ರಮಾಣಗಳನ್ನು ಪಾಠಾಂತರದಿಂದ (Collation) ನಿರ್ಧರ ಮಾಡಿಕೊಳ್ಳಬೇಕು (ಭಾರಶ. ೯೦). [ಸಂ.]

**ಪಾಠಾಳಿ** (ನಾ). ದೇವಸ್ಥಾನದಲ್ಲಿ ಮಂತ್ರಗಳನ್ನೂ ಸ್ತೋತ್ರಗಳನ್ನೂ ಪಠಿಸುವವನು : ಉದಯಕಾಲದಲ್ಲಿ ನೈವೇದ್ಯಕ್ಕೆ ಪಾಠಾಳಿ ಹೊಯ್ದ ಪಡಿಯಿಂದಲೂ ದಿನವೊಂದಕ್ಕೆ ವೇಟಿಯ ಮೂಡೆ ೪ ಅಕ್ಕಿಯು ಲೆಕ್ಕದಲ್ಲಿ (ಮೈಆರಿ. ೧೯೨೮, ೧೦೨-೧೯; 1598); ಈ ಹಾಡುಗಳನ್ನು ಹಾಡುವಾಗ ಪಾಠಾಳಿ (ಪಾಟಾಳಿ) ಎಂಬುವನು ಪ್ರತ್ಯೇಕ ವ್ಯಕ್ತಿ. ಅವನ ಕೆಲಸಗಳಲ್ಲಿ ದೇವರ ಸ್ತುತಿಪಾಠ ಒಂದು (ಜಾನಗೀ. ೧೫); ಈಗಲೂ ಪೆರಡೂರು, ಎಲ್ಲೂರು ದೇವಸ್ಥಾನಗಳಲ್ಲಿ ಪಾಠಾಳಿಯು ಶಿವಳ್ಳಿಬ್ರಾಹ್ಮಣವರ್ಗಕ್ಕೆ ಸೇರಿದವರು ಆಗಿರುವರು (ತುಳುನಾ. ೧೦೯). [ಪಾಠ೨ + –ಆಳಿ೩]

**ಪಾಠಿ** (ನಾ). ಒಂದು ಬಗೆಯ ಸಸ್ಯ ; ಚಿತ್ರಮೂಲ : "ಪಾಠಿನ್, ಚಿತ್ರಕಃ, ವಹ್ನಿಸಂಜ್ಞಕಃ–ಇ ಚಿತ್ರಮೂಲದ ಹೆಸರುಗಳು" (ಸಿದ್ಧಾಂತಿ. ೧೩೦). [ಸಂ. ಪಾಠಿನ್]

**ಪಾಠಿಸು, ಪಾಠಯಿಸು** (ಕ್ರಿ). ೧. ಓದು ; ಪಠನಮಾಡು ; ಅಧ್ಯಯನ ಮಾಡು : ಪರಿಪ್ರಶ್ನಾನಂತರಂ ಪಾಠಿಸಲ್ ಪೋಗವೇಟಿ ಕನ್ಯಾಭವನಕ್ಕೆ ಪೋದಲ್ (ಜಾಪುಂಪು. ೫೫). ೨. ಓದಿಸು : ಕೃಷ್ಣಚಂತೆಯ ಪೀಠಿಕೆಯೊಳಗೋದು ಪದನ ಪಾಠಿಸಿ ಕೇಳದ ಸುಜನರ್ಗೆ ಮುಕುತಿವಧೂಟಿಯ ಸಂಸರ್ಗವಹುದು (ಪೋಹಕ. ೦-೩೯). ೩. ಸಾಧಿಸು ; ರೂಢಿಸಿಕೊಳ್ಳು : ಘನವಿವೇಕವನುಳ್ಳವರು ಹಗೆತನವ ಪಾಠಿಸಿ ಮುಳುಗರಧಿಕಭವಾಂಬುರಾಶಿಯಲಿ (ತಿಮ್ಮತಿ. ೦-೭); ಪಾಟವವು ಮೈಗಿರಲಿ ನೋಟ ತತ್ತ್ವದೊಳಿರಲಿ ಪಾಠಿಸು ಸಮನ್ವಯವ (ಮಂಕುತಿ. ೨೬೦). **ಪಾಠಯಿಸು** : ೪. ಉರುಹೊಡೆ ; ಕಂಠಪಾಠ ಮಾಡು : ಕೋಟಿಗೀತವನೋದಿ ಪಾಠಯಿಸಿ ಫಲವೇನು ಕೂಟಸ್ಥನಲ್ಲದವನೋದು ಗಿಳಿ ಕಲಿತ ಪಾಠದಂತಕ್ಕು (ಸರ್ವಜ್ಞ. ೪೪೦). [ಪಾಠ + –ಇಸು೨]

**ಪಾಠೀಕ** 'ಪಾಟೀಕ' ನೋ.

**ಪಾಠೀನ** (ನಾ). ೧. ಸಾರ್ವಜನಿಕರಿಗೆ ಪುರಾಣ, ಪುಣ್ಯಕಥೆಗಳನ್ನು ಓದಿ ಹೇಳುವವನು; ಪುರಾಣಿಕ. ೨.ಒಂದು ಬಗೆಯ (ದೊಡ್ಡ) ಮೀನು,–ಮತ್ಸ್ಯ : "ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಸಾರಂ ಮತ್ಸ್ಯಂ ಮೀನವೆಸರ್" (ಶಬ್ದಮಣಿ. ೨೨-೫); ಉತ್ಕಮಾತಲಾಟನಕಾರಿನ್ಯ ಪಾಠೀನಮತ್ಸ್ಯಚ್ಛದನಚ್ಛೇದಾದಿ ನಾನಾಜಲಚರನಿಕರ . . . ರೌದ್ರಂ ಸಮುದ್ರಂ (ಕಾವ್ಯಸಾ. ೭೪)... ೩. ಮತ್ಸ್ಯಾವತಾರಿಯಾದ ವಿಷ್ಣು : ಕೃಷ್ಣ ಪಾಠೀನ ಕಮಠ ವರಾಹ ವರ್ಧಿಷ್ಣು ನೃಸಿಂಹ ವಾಮನಾಖ್ಯ ಜಿಷ್ಣು ರಾಮತ್ರಯ ಬುದ್ಧರೂಪ ಕಲ್ಕಿವಿಷ್ಣು ರಂಗಾ ರಕ್ಷಿಸೆನ್ನ (ಕಕಸಾಂ. ೬೫-೫೫). [ಸಂ.]

**ಪಾಠೀನಪಾಳಿ** (ನಾ). ೧. ಮನ್ಮಥನ ಬಾವುಟ ; ಮೀನಧ್ವಜ. ೨. ಮನ್ಮಥ ; ಕಾಮ : ಮಂತ್ರಿಯುಮನ್ನಖಿಳಸೇನಾಧಿಪರು ಸಹಿತ ಬಂದು ಭಾವು ನೀನಲ್ಲದಿನ್ನಾರೆಮ್ಮ ಸಲಹೆಂಬುತಾ ಪೊಳೆವ ಪಾಠೀನಪಾಳಿಯಡಿಗೊಂದಿಸಲು . . . ಅವರ್ಗೆಯುಭಯಮುಮನಿತ್ತು ಮನ್ನಿಸಿದನು (ಶಶಪೋ. ೧೨-೯೩). [ಪಾಠೀನ + ಪಾಳಿ೩ (=ಪಾಲಿ೨)]

**ಪಾಠೆ** (ನಾ). ೧. ಒಂದು ಬಗೆಯ ಮೂಲಿಕೆ ; ಅಗುಳುಶುಂಠಿ ; "ಪಾಠೆಯೊಂದೆನಲಗುಳುಶುಂಠಿಯುಕ್ಕುಂ" (ಮಂಗರಾ. ೪೩-೪೦). ೨. ಒಂದು ಬಗೆಯ ವನಸ್ಪತಿಯ ಬೇರು ; "ಸಿತಪಾಟಲಿ" (ಕಂಡಿಕ. ೨೩೬). [ಸಂ. ಪಾಠಾ]

**ಪಾಠೋಪಕರಣ** (ನಾ). ಪಾಠವನ್ನು ಕಲಿಸುವಾಗ ಸಹಾಯಕವಾಗಿ ಬಳಸುವ ಚಿತ್ರ, ವಿಗ್ರಹ, ಫಲಕ ಮೊದಲಾದ ಸಲಕರಣೆ : ಬೋಧನಕ್ರಮ ಹೆಚ್ಚು ಫಲಪ್ರದವಾಗಬೇಕಾದರೆ ಹಲವು ಸಲಕರಣೆಗಳು ನೆರವಾಗುತ್ತವೆ. ಅವನ್ನು ಪಾಠೋಪಕರಣಗಳೆಂದು ಕರೆಯಬಹುದು (ಶಿಕ್ಷರ. ೨೬೫). [ಪಾಠ೨ + ಉಪಕರಣ]

**ಪಾಠ್ಯ** (ಗು). ೧. ಓದಬೇಕಾದ ; ಪಠಿಸಬೇಕಾದ. (ನಾ). ೨. ಓದಬೇಕಾದುದು ; ಪಠಿಸುವಂತಹುದು : ಮೊದಲಿನಲ್ಲಿ ಸಾಹಿತ್ಯದ ಕೃತಿಗಳು ಕೇವಲ ಗೇಯ ಅಥವಾ ಪಾಠ್ಯವಾಗಿದ್ದುವು (ಕಂಕಾ. ೨೦೫). ೩. ಹಾಡಿನ ಸಾಹಿತ್ಯ : ಬ್ರಹ್ಮನು . . . ಋಗ್ವೇದದಿಂದ ಪಾಠ್ಯವನ್ನೂ ಸಾಮವೇದದಿಂದ ಸಂಗೀತವನ್ನೂ ಯಜುರ್ವೇದದಿಂದ ಅಭಿನಯವನ್ನೂ ಅಥರ್ವವೇದದಿಂದ ರಸವನ್ನೂ ತೆಗೆದುಕೊಂಡು ನಾಟ್ಯವೇದವನ್ನು ನಿರ್ಮಿಸುತ್ತಾನೆ (ಭಾರಶ. ೫೫೦). 'ಪಠ್ಯ' ಪರಾ. [ಸಂ.]

**ಪಾಡ್** 'ಪಾಂಡ್ಯ೨' ನೋ.

**ಪಾಡಗ**೧, ಹಾಡಂಗಿ, ಹಾಡಗ (ನಾ). ತೇಗದ ಮರ : "ಪಾಡಗವೆಂದು ತೇಗು" (ಕಕಸಾ. ೫೦-೭೩); "ಪಾಡಗವೆ ತೇಗು" (ಕನ್ನಕೈ. ೭೦). **ಹಾಡಂಗಿ** : ಸಿರಿಸಂ ಹಾಡಂಗಿ ಭಾರಂಗಿ . . . ಎಂಬೀ ಮರದಬುಗಲಿ ಬುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೦೨-೫೮). **ಹಾಡಗ** : "ಹಾಡಗಂ ಸುರವತಿಯುಕ್ಕುಂ" (ಮಂಗರಾ. ೪೦-೩೨); ಹಾಡಗ, ಬಳೇಚಳ್ಳೆ, ಗವುಡಿ (ವೃಕಿಗಿ. ೨೪-೪೫೦) ; ತೇಗು ಮುಪ್ಪಾಗುವಾಗ ಹಾಡಗ ಹಸಿಯಾರಲಿಲ್ಲ (ಗಾದೆ).

**ಪಾಡಗ**೨, ಪಾಗಡ, ಪಾಗಡೆ (ನಾ). ಕಾಲಿನ ಕಡಗ ; ಕಾಲುಬಳೆ : ಗೆಜ್ಜೆಗಳ ಸಜ್ಜೆನೆಗೆ ಅಂದುಗೆಯಾನಂದೆಗೆ ನೇವುರದ ಭಾವಕಿಗೆ ಪಾಡಗದ ಪರುಷಕ್ಕೆ . . . ತಂದೆ ನಿಯಾಮಿಸಿ ಕೊಟ್ಟ . . . ಷೋಡಶಸಹಸ್ರ ವಿಲಾಸಿನಿಯರ್ವೆರಸು ನಡೆತಂದು (ಗಂಕ. ೩-೪೧ ವ) ; ಬೆರಳ ಚೆಲ್ವಿಕೆಯಿಂದ ಮುದ್ರಿಕೆ ಮೆಂಟಿಯ ಪಾಡಗ ನೇವುರಂಗಳು ಕರಚರಣ ಸೌಂದರ್ಯದಲಿ . . . ಒಪ್ಪಿದವು (ಕುಮಾಇ. ೧೩-೦೫) ; ಚಂದವ ನೋಡಿರೆ . . . ಅಂದುಗೆ ಪಾಡಗ ಗೆಜ್ಜೆಯ ಧರಿಸಿ ಧಿಂಧಿಮಿಕೆಂದು ಕುಣಿಯುವ ಕೃಷ್ಣನ (ಪುರಂದ. ೩-೧೦೫ ಅನುಪಲ್ಲವಿ) ; ಚರಣದಲ್ಲಿ ಗೆಜ್ಜೆ ಪಾಡಗವು ಶಬ್ದಮಾಡಿತು (ಕೋಹಿನೂ. ೩೭). **ಪಾಗಡ** : "ಪಾಗಡ—ಕಾಲಕಡಗ" (ಜಾವಕೋ. ೦೫). **ಪಾಗಡೆ** : ಬಾಗಿರೆ ಪತಿಯೊಳಕಮನಿಂಬಾಗಿರೆ ಮುಳಿಸಾಱುವನ್ನೆಗಂ ಸಿಲ್ಕಿಸುಗೀ ಪಾಗಡೆಯೆಂದೊದವಿರೆ ಪೆಂಪಾಗಡೆ ಪದಪದ್ಮದೊಳ್ ಪೆಱಲ್ ಪದಮಿಟ್ಟಳ್ (ಲೀಲಾವ. ೦೨-೭೭).
[ದೇ.॥ ತಮಿ. ಪಾಟಕ ; ಮಲ. ಪಾಡಕ ; ತುಳು. ಪಾಡಗೊ ; ತೆಲು. ಪಾಡಗ./ಸಂ. ಪಾದಕಟಕ]

**ಪಾಡಳಿ** 'ಪಾಡಟಿ' ನೋ.

**ಪಾಡಟಿ** (ಕ್ರಿ). ೧. ಕ್ರಮವನ್ನು ಕಿಳಿದುಕೊಳ್ಳು : ತೋಡುಂ ಬೀಡುಮದುಡುಗದೆ ಪಾಡಟಿದೆಚ್ಚುಜಿರಂಗದೊಳ್ ಮಾಜಿಯ[ನ]ಟ್ಟಾಡಿ ಸುರಾ[೦]ಗನೆಯರೊಳ[೦] ಕೂಡಿದೊನೇಂ ಕಲಿಯೆ ನೆಗಳ್ದ ಕಂ[ದರಕೇತಂ] (ಎಕ. XVIII. ೦೭೨-೮ ; 985) ; ಭಯಭಕ್ತಿಯಿಂ ಪಾಡಟಿದು ಭಜಿಸಿ

(ಕದ್ಯರಾ. ೩-೪೦). ೨. ಸ್ಥಿತಿಯನ್ನು ತಿಳಿ : ಫಲುಗುಣನ ಚಿತ್ರದ ಪಾಡಱ್ದು ನುಡಿವುತ್ತ ತಂದನು ಪಾಳೆಯಕೆ ರಥವ (ಕುವ್ಯಾಕ. ೧೬-೨). ೩. ಅಂದವನ್ನು ಅರಿ : ಅಸುಗೆದಳಿರ ದುಪ್ಪಟಿಯಂ ಪಾಡಱ್ದುಟ್ಟು ಪುಳಿಂದಪುರಂಧ್ರಿಯರೊಪ್ಪವಡೆದರಲ್ಲಿ (ಜಯುಕಾ. ೧೫-೩೮). ೪. ಯೋಗ್ಯತೆಯನ್ನು ಅರಿತುಕೊಳ್ಳು : ರೂಢಿಪತಿ ಸತ್ಕರಿಸಿ ವಂಶದ ಪಾಡಱ್ದು ವುಣಲಿಕ್ಕ ಕಳುಹಿದ (ಸಂಭಶ. ೨೬-೧೩). [ಪಾಡು₃ + ಅಱ್]

**ಪಾಡೞ್**, ಪಾಡಳಿ (ಕ್ರಿ). ೧. ಸ್ಥಿತಿಗೆಡು; ನೆಲೆಗೆಡು : ಕವಿಯು ನೆಯ್ದಿ ಕನ್ಯಾಕಲಕಂಠರವಂ ಶ್ರೀಕಂಠಂ ರಾಗರಸೋತ್ಕಂಠಂ ಪ್ರತಿಷ್ಠೆಯೊಳ್ ಪಾಡೞ್ದಂ (ಶಂರಾಪೂ. ೧೦-೧೧೦) ; ನಾಡೆಯುಮಾ ನೃಪವುವನಂ ಪಾಡೞ್ದಲ್ಲಲ್ಲಿ ಪೊಕ್ಕು ನಿಜವಲ್ಲಭೆಯಂ ಕೂಡೆ ತೊಟಲ್ದೋರಂದದೆ (ಕುಸುಮ. ೧೪-೧೨೫) ; ಪಾಡೞ್ದು ಇಂತು ಶಿಕ್ಷೆಗಾನ್ ಸಂದೆನ್ (ಐದ್ಯಶ್ರ. ೧೪-೨೮೪). ೨. ಬಲಗುಂದು ; ನಿಃಸತ್ತ್ವವಾಗು ; ನಿರ್ವಿಣ್ಣವಾಗು : ಪರಮುಮಿತ್ರು ಇಂತೇಕೆ ಬರ್ದ ಬಂಬಳಂಬಾಡಿ ಪಾಡೞ್ದುಬ್ಬೆಗಂಬಟ್ಟರ್ದ (ವಡ್ಡಾರಾ. ೩೯-೬) : ಬಾಡಿ ಪಾಡೞ್ದು ಬಟಲ್ದು ಜೋಲ್ದಿರವು ಮೆಯ್ಯೊಳ್ ಮೆಯ್ವಿಡಿದೆನ್ನ ಕಣ್ಗಳೊಳ್ ಸುೞ್ದುವು (ಸಂಶಧಾ. ೪-೬೦) ; ಕೋಡನೂಱ್ ಪಾಡೞ್ದು ಪರಿಕಲಿಸಿ ಕೆಡೆದ ಮದಾಂಧಗಂಧಸಿಂಧುರಂಗಳಡಿಯೊಳಡಂಗಿದನೆ ಗೆತ್ತು ಕೈಗುತ್ತಿ ನೋಡಿಯುಂ (ಗದಾಯು. ೬-೨೮ ವ). ೩. ಕಳೆಗುಂದು; ಕಾಂತಿಗುಂದು ; ಬಣ್ಣಗೆಡು : ನಸುವಾಸಿ ಪಾಡೞ್ದ ರೂಪಿನೊಳುಣ್ಮುವ ಗಾಡಿ ನಾಡೆ ಕಣ್ಗೆದಱೆ (ಸಂಶಧಾ. ೦೩-೯೯) ; ಪೊಗೆಗೊಂಡ ಚಿತ್ರಲತೆ ಧೂಳಿಗೊಂಡ ಪುತ್ತಳಿಗೆ ಮಂಜುಗೊಂಡಬ್ಜಿನಿ ಕಾರ್ಮುಗಿಲೊಳಕೊಂಡೆಳೆವೆಱೆಯೆನೆ ಮೃಗಲೋಚನೆ ಸೀತೆ ನಾಡೆ ಪಾಡೞ್ದಿರ್ದಳ್ (ಶಂರಾಪೂ. ೧೧-೮೩) ; ಚಿತ್ತವಲ್ಲಭನುೞ್ದ ವಿರಹಪರಿತಾಪದಿಂ ಬಾಡಿ ಪಾಡೞ್ದ ಗುಡಿಕಾರ್ತಿಯಂ ನೋಡಿ (ಅಸಂಪು. ೮-೨೭ ಪ). ೪. ಮೈಮರೆ ; ಪರವಶವಾಗು : ವನಚರಿ ಪಾಡೆ ಪಾಡೞ್ದು ಸಾರ್ದೊಲಿದಾಲಿಸುತಿರ್ಪ ದಂತಿಯಂ ವನಚರನೆಚ್ಚೊಡೆ (ಲೀಲಾವ. ೮-೩೫). **ಪಾಡಳಿ** : ೧. ನಿಲಲ್ಬಗೆಗಾಣದೆ ಪಾಡಳಿದುರುಳ್ವಂದದಿನಸ್ತ್ರಾದ್ರಿಯ ಕೋಡುಂಗಲ್ಲು ಪರಿಮದಿಂ ಬಿಳ್ದನದಿತಿಸುತನಬುಧಿಯೊಳು (ಜಯುಕಾ. ೧೩-೫೮) ; ತೀಡುವ ಸುಯ್ಯುಲ್ಬಗೆಗೊಂಡೊಡಲಿಂದವೆ ಪಾಡಳಿದನು ಸುಕುಮಾರ (ಶ್ರೀಪಾಲ. ೪-೫೩). ೨. ತೋಳಂ ತೂಗಿ ಬಾತ ಬೆರಳೊರಸಿ ಮಸೆದು ಪಾಡಳಿದ ತೊಡೆ ಹಲವು ಹರಳೊತ್ತಿ ಬೊಕ್ಕೆಗಳು ಮೂಡಿ ನಡೆಗೆಟ್ಟು ದುಲ್ಲಡಿಯು ನಿಜವನಿತೆಯಂ ನೋಡಿ (ಹಕಕಾ. ೯-೨೯) ; ಬಾಡಲು ಪಂಕಜ ಕೂಡಲು ಚಾತಗೆ ಮೂಡಲು ಉತ್ಪಲರಾಗವನು ಪಾಡಳಿಯಲು ವಿರಹಿಗಳಂಬುಧಿ ಪೆಚ್ಚೆ ಮೂಡ ಮೂಡಲು ಚಂದ್ರಮನು (ಜೀಮಸಾಂ. ೪-೩೦) ; ಕಡುಪಸಿವಿನಿಂ ಪಾಡಳಿದು ತದ್ವೇದಿಕಾಗ್ರದೊಳಗಿರುತಿರ್ದನು (ಶಬಪು. ೫೨-೪೬). [ಪಾಡು₃ + ಅೞ್₁]

**ಪಾಡಾಟ** (ನಾ). ಹಾಡುವಿಕೆ : ದುಃಖ ಸುಖವಾಯ್ತೇ, ಪಗೆಯು ಪುಡಿಯಾಯ್ತೇ, ಗೋಳಿಲ್ಲ ಪಾಡಾಟವಾಯ್ತೇ ! (ಕಾರಸಿ. ೧೩-೨೯೩).

[ಪಾಡು₂ + ಆಟ]

**ಪಾಡಾವಿಗ** (ನಾ). (?) : ಗಾನ್ಧರ್ವಿಗರ್ಗ್ಗಂ ಪಾಡಾವಿಗಂಗಂ ಪಾತ್ರಕ್ಕೆ ಮದ್ದಳೆಯವಂಗಯಾ ಕೋಲ ಮ ೩೦ (ಸೌಇಇ. IX-1, ೧೫೫-೫ ; ಕ್ರಿ. 1086). [?]

**ಪಾಡಿ₁** 'ಪಾೞ್₂' ನೋ.

**ಪಾಡಿ₂**, ಪಾಳಿ₁, ವಾಡಿ₁, ಹಾಡಿ, ಹಾಡು₄, ಹಾಡ್ಯ (ನಾ). ೧. ಊರು; ಹಳ್ಳಿ ; ಗ್ರಾಮ : ಶ್ರೀಪುರುಷಮಹಾರಾಜರ್ ಪೃಥುವೀರಾಜ್ಯಗೆಯೆ ಕೂಡಲೂಪ್ಪಾರ್ಡಿಬಡೆಯ ನಂದಿ ಕಾದನಾ ಎಱನಾಗನಾ ವ್ಯವಹಾರದನ್ತರಂ ಸಾಲಮಿಲ್ಲಾಪ್ರ್ (ಎಕ. X, ಕೋಲಾರ. ೭೨ ; 760) ; ಈ 'ಪಾಡಿ' ಯಿಂದಲೇ 'ಪಟ್ಟಿ' 'ಹಟ್ಟಿ' ಎಂಬುವುಗಳು ಹುಟ್ಟುತ್ತವೆ (ತುಳುಪಾ. ೩೦) ; ಕಾಡುಮೇಡುಗಳುಳಿದು ಪಾಡಿಗಳ ಬಳಿವಿಡಿದು . . . ನಡೆದು (ಕಾಂಜೂರ. ೧೫೧-೩೩೦). ಅನೇಕ ಊರುಗಳ ಹೆಸರಿನ ಕೊನೆಯಲ್ಲಿ ಈ ಶಬ್ದ ಉಳಿದುಕೊಂಡಿದೆ. ಉದಾ : ಕನ್ನಂಬಾಡಿ, ಬಾಗೆವಾಡಿ, ಹಾಗಲವಾಡಿ. ೨. ಜಿಲ್ಲೆ; ನಾಡು; ಪ್ರಾಂತ್ಯ : 'ಗಂಗವಾಡಿ' ಪರಾ. ೩. ದನ ಮುಂತಾದುವನ್ನು ಕಟ್ಟುವ ಸ್ಥಳ : ಹಟ್ಟಿ; ಕೊಟ್ಟಿಗೆ : ಕೇಳಿದನು ಕುದುರೆಪಾಡಿಯೊಳಿರ್ದ ನಳ (ತುರಂಗ. ೩೨-೧೨). ೪. ಮನೆಗಳ ಶ್ರೇಣಿ; ಕೇರಿ : ಅತನು ಗೇರು ಬೀಜ ಶೇಖರಿಸುವ ರೀತಿಯೇ ಬೇರೆ. ಪರರ ಪಾಡಿಯಿಂದ ಕದ್ದು ಬೀಜ ತರುವುದಿಲ್ಲ (ಶರಾವ. ೪೨) ; ಗಿರಿಜನರು ಬಿದಿರಿನಿಂದ ಗುಡಿಸಲುಗಳನ್ನು ನಿರ್ಮಿಸಿ ಹುಲ್ಲಿನ ಮಾಡುಗಳನ್ನು ಕಟ್ಟಿ ಅವಲ್ಲಿ ವಾಸಿಸುತ್ತಾರೆ. ಇಂತಹ ಮನೆಗಳ ಗುಂಪಿಗೆ 'ಪಾಡಿ' ಎಂದು ಕರೆಯುತ್ತಾರೆ (ತುಳುಪಾ. ೨೨೦). ೫. ಪಡೆ; ದಳ; ಸೈನ್ಯ : ಆನೆ ರಿಪುಸೇನೆಗೆ ಸಾಲ್ವೆನವುಂಕೆ ಪೇಡಿ ಪಾಡಿಗಟ್ಟಱ್ವೆಡೆಗೈಯು ಕೈಯುಗುರೆ ಸಾಲದೆ ನಚ್ಚಿನ ಕೈದುವೇಟ್ಟುದೇ (ಕಾವ್ಯಸಾ. ४೧೧ ಶೂದ್ರಕ); ಪೂಡಿದ ಕಣೆ ಕುಣಿದು ತೆಗೆದ ಕೊಮರನ ಬಿಲ್ಲೊಳ್ ಮೂಡಿದುದು ನುಂಗಲಹಿತರ ಪಾಡಿಗಳಂ ಮಸಗಿ ಮಿಟ್ಟು ಬಾಯ್ದೆಱೆದ ತೆಱಂ (ಅರ್ಜನೇ. ೬-೪೨); ಕಟ್ಟೋಡಿ ಪಾಡಿಯೆಲ್ಲಂ ಪಿಟ್ಟುಂಪಿಟ್ಟಾಗಿ ಪೋದೊಡಂ . . . ಈಸನೊರ್ವನೆ ನಿಂದಂ (ಕಕ್ಕಾ. ೨೯೫); ಮನೆಯಲ್ಲೆಡೆಯ ಮಾಡಿದ ನೃಪನ ಪಾಡಿಯ ಪಡಿತಳಿಸಿ ತತ್ಸೈನ್ಯಸಾಗರಕೊಂದು ನಿಮಿಷದಲಿ (ಸಂಭಶ. ೨೬-೧೫). ೬. ಸೈನ್ಯದ ಬೀಡು : ಪಾಳೆಯಂ : ನೆರೆದನುರಾಗದಿಂ ಪಡೆಯ ಪಾಡಿಯ ಬೀರರ ಪೆಂಡಿರಟ್ಟಿಕೆಱಂ ಪರಸಿಯೊಱಲ್ದು ಸೇಸೆಗಳನಿಕ್ಕೆ . . . ಪೊಕ್ಕನಾತ್ಮಮಂದಿರ ಮನುದಾತ್ತಚಿತ್ತನವನೀತಳಪೂಜ್ಯಗುಣಂ ಗುಣಾರ್ಣವಂ (ಸಂಶಧಾ. ೦೦-೧೨೫). ೭. ಸೇವಕರ ಸಮೂಹ ; ಕೆಲಸಗಾರರ ಗುಂಪು : (*). ೮. ಸೈನಿಕ ; ಯೋಧ : ಹಡಪದ ಹುಡುಗ ಸತ್ತಿಗೆಯೊಳು ಬಲ್ಲಹವಿಡಿದ ಪಾಡಿಗಳೊಡಬರಲು ಪಡಿಗುದುರೆಯ ರಾವುತರು ಪೊಳಲ ಪೊಱವಡುತಿರ್ದರು (ಶ್ರೀಪಾಲ. ೦೩-೩೬). **ಪಾಳಿ₁** : ೫. ತುಂಬಿ ಪೊಸದಾವರೆ ಮಲ್ಲಿಗೆಯೆಂಬಿವಾಂತರಂ ದೆಸೆವಲಿಗೆಯ್ವ ಪಾಳಿ (ಕಬ್ಬಿಕಾ. ೦೭೪). **ವಾಡಿ₁** : ೧. ಊರು, ಕೇರಿ. . .ವಾಡ, ವಾಡಿ. . .ಕೋಟೆ (ಕಂಮಹು. ೭೯). ೩. 'ವಾಡಿ' ಪದಕ್ಕೆ ಇರುವ ದನಗಳ ಹಟ್ಟಿ ಎಂಬ ಅರ್ಥವು ಉತ್ತರ ಹಿಂದುಸ್ತಾನದ ಪ್ರಾಚೀನಗ್ರಂಥದಲ್ಲಿ ದೊರೆಯುತ್ತಿದ್ದುದನ್ನು ಹೇಳಿದ್ದಾಗಿದೆ (ಕರ್ಣಾಟ. ೯೫). ೯. ಬೇಲಿಯಿಂದಾವೃತವಾದ ಹುಲ್ಲುಗಾವಲು, ತೋಟ ಮುಂತಾದುವು: (*). ೧೦. ನಗರದ ಬಡಾವಣೆ; ಉಪನಗರ : (*). ೧೧. (?) : ಜಿನಚಂದ್ರಮುನೀಂದ್ರರ ಪಾದಮೂಲದೊಳ್ವಿನಮಿತರಾಗಿ ಕೊಂಡು ಕೊನೆವರ್ ಸಲೆ ಮಾಣಿಯ ವಾಡಿಯೊಳ್ ಮಹಾವನಿಪರ್ (ಶಾಂತಿಪು. ೧-೩೩). **ಹಾಡಿ** : ೧. ಕೂಲಿ ಆಳುಗಳು ರೈಟರಿಗೆ ತಮ್ಮ ಹೆಸರುಗಳನ್ನು ಕೊಟ್ಟು ತಾವು ವಾಸ ಮಾಡುವ ಹಾಡಿಗಳಿಗೆ ತೆರಳಿದರು (ಸಶನೀ. ೨೦). 'ಹಾಡಿಹಕ್ಕಲು' ಪರಾ. ೪. ಪಣೆಯುರ ಹಾಡಿಯಲ್ಲಿ ಕೊಳುಂಬನ ಮನವನ್ನು ಸೆಳೆದ ಚೆಲುವೆಯ ಹೆಸರು ದೇಚು (೧೦ಕ. ೧). **ಹಾಡು₄** : ೧. ಮತ್ತಮಪರೊಳಗೆ ಕರುವರ ಕಲ್ಲಣಂ ಹಂದಿಗೆಯ್ಯ ಸ್ಥಳಂ ತಂನ ವೀಸಂ ಕಾಣೆಯ ಬಳದೊಳಗೆ ಬಡಗಣ ಮೊದಲ ಹಾಡಿನಲಾ ಹಬ್ಬೇಶ್ವರದೇವರ ದೇವಕಾರ್ಯಕ್ಕೆ ಬಿಟ್ಟ ಎರೆಯ ಮತ್ತರೊಂದು (ಕಇ. I. ೨೫-೮೩ ; 1190). **ಹಾಡ್ಯ** : ೧೨. ಹುಲ್ಲು, ಸೌದೆ ಮುಂತಾದುವು ದೊರೆಯುವ ಸಣ್ಣ ಕಾಡು : ಬೈಸಿಕಲ್ಲನ್ನು ಮೋಹನನ ಮನೆಯ ಹಿಂದುಗಡೆ ಹಾಡ್ಯದಲ್ಲಿಟ್ಟು . . .

ನಿಂತು ನೋಡುತ್ತಿದ್ದನು (ಶಂಕಶಂ. ೧೩೫) ; ಅದರ ಒತ್ತಿಗೆ ಬ್ಯಾಣದ ಹಕ್ಕಲು, ಅದರಾಚೆಗೆ ಸೊಪ್ಪಿನ ಹಾಡ್ಯ ಕಣ್ಣೊಲವಾಗಿತ್ತು (ಮಲೆಮ. ೧೩೩). ಹಾಡ್ಯ–ಹುಲ್ಲುಸಾದೆಯು ಕುರುಚುಕಾಡು (ನಮ್ಮನು. ೩೪೭) ; ಅಲ್ಲಿಂದ ಗದ್ದೆ, ಹಾಡ್ಯ, ಹಕ್ಕಲು, ಒಡ್ಡು ಇತ್ಯಾದಿಗಳನ್ನು ಸುತ್ತಿ ನೋಡಿಕೊಂಡು ಮನೆಗೆ ಹಿಂದಿರುಗುವಾಗ ಕಪ್ಪು ಕವಿದಿತ್ತು (ಗಂಗಾಳ. ೧೯).
[ದೇ. ॥ ತಮಿ. ಪಾಟ ; ಮಲ. ಪಾಡಿ ; ತುಳು. ಪಾಡಿ, ಹಾಡಿ ; ತೆಲು. ಪಾಡು ; ಕೊಡ. ಪಡಿ = ಕುರುಬರ ಹಟ್ಟಿ, –ಗುಡಿಸಲು./ಮರಾ. ಪಾಡಾ, ಪಾಡೀ./ಪ್ರಾ. ಪಾಡಿ, ಪಾಡೀ./ಸಂ. ಪಾಟೀ]

**ಪಾಡಿ₃** ' ಪಹಡಿ ' ನೋ.

**ಪಾಡಿ₄** (ನಾ). ಒಂದು ಬಗೆಯ ಬಲೆ : ಉರುಳು ಪಾಡಿ ಸಿಡಿ ಸೆಳೆಗಾಣ ಬೆಳ್ಳಾರ ತಡಿಕೆ ದೀವದ ಖಗಮೃಗಸಂತತಿಗೂಡಿ ನಡೆತಂದನಾ ವನಚರನು (ವೀಬಸಂ. ೩-೩೮). ' ಪಾಚ್ಚಿ₂' ಪರಾ. [?]

**ಪಾಡಿಗೈ ?** (ಕ್ರಿ). ಮಲಗು ; ಒರಗು (?) : ಕಳಚಿ ನೊಗನನು ತೆಗೆದು ಕಬ್ಬಿಯನಿಳುಹಿ ಪಡಿವಾಘೆಗಳ ಸರಿದನುಕೊಳಿಸಿ ಹಿಡಿಯಲು ಪಾಡಿಗೈದವು ಮರಳಿದೆಡಬಲಕೆ (ಕುಮಾದ್ರೋ. ೧೦-೩೩) ; ಅಳಿದವೈನೂಱಾನೆ ಮಗ್ಗುಲ ನೆಲಕೆ ಕೀಲಿಸಿ ಪಾಡಿಗೈದವು ಬಲುಗುದುರೆ ಹದಿನೈದುಸಾವಿರವೇಳುನೂಱುರಥ ಮಲಗಿದವು (ಕುಮಾದ್ರೋ. ೧೮-೬). [ ಪಾಡಿ ? + ಗೈ (<ಕೆಯ್₁) ]

**ಪಾಡಿತನ** (ನಾ). ಒಂದು ಬಗೆಯ ಊಳಿಗ,—ಸೇವೆ (?) : ಭಕ್ತರ ಮಂದಿರಕ್ಕೆ ಹೂಕಾಯಿ ಹಣ್ಣು ಹುಲ್ಲ ಹೊಱೆ ಕಟ್ಟಿಗೆ ಬೊಕ್ಕಸ ಪಹರಿ ಪಾಡಿತನ ಬಾಗಿಲು ಮುಂತಾಗಿ ಶುಶ್ರೂಷೆಯ ಮಾಡಿ ಉಂಬಾಗ . . . ತುಡುಗುಣಿಗೆಲ್ಲಿಯದೋ ನಿಜಜಂಗಮಸ್ಥಲ (ಮೋಳಮಾ. ೪೩-೧೮೦).
[ಪಾಡಿ ? + –ತನ]

**ಪಾಡಿಯ** ' ಪಾಡಿವ ' ನೋ.

**ಪಾಡಿರಾವುತ** (ನಾ). ಸರಿಸಮಾನವಾದ ರಾವುತ : ಓಡಿದ ಕುದುರೆಯ ನೇಱುವ ಪಾ [ಶಾಕಾಂ. ಪ] ಡಿರಾವುತರೆಡಬಲದೊಳಗೈನೂಱು ಬಿಡದೆ ಮೆಱೆಯ . . . ಪಡೆಗಿದಿರಾಗಿ ಮಲೆತನು (ಕುರಾಸಾಂ. ೧೪-೧೦೮).
[ಪಾಡಿ₁ (<ಪಾಟಿ₂) + ರಾವುತ]

**ಪಾಡಿವ, ಪಾಡಿಯ, ಪಾಡ್ಯ** (ನಾ). ಪಕ್ಷದ ಮೊದಲನೆಯ ತಿಥಿ ; ಪ್ರತಿಪದೆ : '' ಪ್ರತಿಪತ್ ಪಕ್ಷತಿ ನಾಮದ್ವಿತಯಂ ಪಾಡಿವಂ '' (ವಸ್ತುಕೋ. ೧೬-೭) ; ಚೈತ್ರಮಾಸ ಸುದ್ಧಪಕ್ಷದ ಪಾಡಿವದ ಬುಧವಾರಂ . . . ಈಶ್ವರಯ್ಯಗೆ ಕೊಟ್ಟರ್ (ಎಕ. VIII, ಸೊರಬ. ೭೧-೩; 938) ; ಪಾಡಿವದೆಳವೆಱೆ ಪುಣ್ಣಮಿವರೆಗಂ ರೂಡಿಸಿ ದಿನದಿನದಪ್ಪದೆ ಕಲೆಯೊಳ್ ಕೂಡಿ ಬಳೆದು ಕುವಲಯಕತ್ಯಾನಂದಮನೀವಂದದೊಳು (ಜಯಕಾ. ೨-೬೫); ಪಾಡಿವದ ಶಶಿಯ ಮೂಡಿದುದನಾರ್ ಕಂಡರಾ ಇರುಳ್ ? (ಶ್ರೀರಾಮಾ. ೬೩೨-೮೩). **ಪಾಡಿಯ** : ನಾಡಿಯಱುವತ್ತಕ್ಕೆ ಒಂದು ತಿಥಿಯಕ್ಕದಕೆ ಪಾಡಿಯ[ಶಾಕಾಂ. ವ]ಮೊದಲು ಪೌರ್ಣಮಿಯದಮಾವಾಸ್ಯೆ ಕಡೆ (ಮಂಗರಾ. ೨೦-೯). **ಪಾಡ್ಯ** : "ಪ್ರತಿಪತ್ತಿಂಗೆ ಪಾಡ್ಯಮೆಂದವತರಿಕು" (ಶಬ್ದಮಂ. ೩೦) ; ಅಶುಭ ಷಷ್ಟಿ ಅಷ್ಟಮಿ ನವಮಿ ಪಾಡ್ಯ (ಗಗಶಾ. ೪-೬೬) ; ಪಾಡ್ಯ ಪಾಠಕ್ಕಾಗದು, ಪೌರ್ಣಿಮೆ ಕೆಲಸಕ್ಕಾಗದು (ಗಾದೆ).
[<ಪ್ರಾ. ಪಾಡಿವಯಾ. / ಸಂ. ಪ್ರತಿಪದ್]

**ಪಾಡಿಸು, ಹಾಡಿಸು** (ಕ್ರಿ). ೧. ಹಾಡುವಂತೆ ಮಾಡು ; ಹಾಡು ಹೇಳಿಸು ; ಗಾಯನ ಮಾಡಿಸು : " ಪಾಡಿಸು – ಗಾಯನೇ " (ಶಮಧಾ); ಬದ್ದವಣವಂ ಬಾಜಿಸಿ ಮಂಗಳವಂ ಪಾಡಿಸಿ (ಶಂಶಭಾ. ೧-೧೩೩ ವ) ; ಸಕಲಲೋಕಗಳಂ ಹೆತ್ತ ಮುತ್ತೈದೆ ಬಾಲಕತನದ ನಟನೆಯಂ ನೋಡಿ . . . ತೊಟ್ಟಿಲೊಳು ಪಟ್ಟಿರಿಸಿ ಜೋಗುಳಂ ಪಾಡಿಸಿದಳು (ಸಿದ್ಧರಾ. ೧-೫೮); ಪಾಡಿಸುತ್ತುಂ ಪೆಸರ್ವಡೆದ ಗಾಣರಿಂ (ಶಬ್ದಕಾ. ೩೯೦). ೨. ಬಿರುದಾವಳಿ, ಗುಣಾತಿಶಯ ಮೊದಲಾದುವುಗಳನ್ನು ಹೊಗಳಿ ಹೇಳಿಸು ; ಸ್ತುತಿ ಮಾಡಿಸು : ಪೆಸರೆಸೆಯೆ ಬೀರವಂ ಪಾಡಿಸಿಯುಂ ಪೊಗೞಿಸಿಯುಮುರ್ಕಿ ಬಿಱ್ದಾಹವದೊಳ್ ಕುಸಿದು ಪೆಱಪಿಂಗಿ ಪೇಱದ್ ಮಾನಸರೇನಿನ್ನೂಱು ವರ್ಷಮಂ ಬಟ್ಟಿಪರೇ (ಶಂಶಭಾ.೦೨ ೦೬೬); ಪೊಱವಟ್ಟಂ ಲಲಿತಾಂಗನೆಂದೊಡಮವರ್ . . . ಭೀತಿಯಿಂ ಬೀರವಂ ಮಱೆದುಂ ಪಾಡಿಸಲಣ್ಮರ್ (ಧರ್ಮಾಮೃ. ೨-೬೭) ; ಗಮಕಿತ್ವದ ವಾಗ್ಮಿವೃಂದದೊಳ್ ಲೀಲೆ ಮಿಗಲ್ಕೆ ಪಾಡಿಸುತಮಾಡಿಸುತುಂ (ನಂಬಿರ. ೧೦ ಸೂಚನೆ). **ಹಾಡಿಸು** : ೧. ಹಾಡಿಸಬೇಡ ನಾನಾವಾದ್ಯವ ದನಿಮಾಡಿಸಬೇಡ . . . ಸ್ವಸ್ತದಿ ನಿದ್ದೆಗೆಯ್ವುದು (ಮೋಹಕ. ೨೭-೩೬); ಚಿಕ್ಕಪ್ಪನಿಗೆ ಹುಡುಗಿಯ ಬಾಯಿಂದ ಮತ್ತೊಂದು ಹಾಡನ್ನು ಹಾಡಿಸಬೇಕೆಂದು ಆಶೆಯುಂಟಾಗಿರಬಹುದು (ಜನಜೀ. ೧೩೯).
[ಪಾಡು₁ + –ಇಸು₃]

**ಪಾಡಿಱಿಸು** (ಕ್ರಿ). ಬಲಗುಂದಿಸು ; ಸೋಲಿಸು : ಇದಿರಾಂಪರೆಲ್ಲವನ ಸೞಿದು ಪಾಡಿಱಿಸಿ ಬಸವಱಿಸದೀ ಚೆಲ್ವೆಯರದೇಂ ನಿಲ್ವರೇ (ಚಳದಿ. ೬-೧೫೪). [ಪಾಡು₃ + ಇಱಿಸು]

**ಪಾಡು₁, ಹಾಡು₁** (ಕ್ರಿ). ೧. ಗಾಯನ ಮಾಡು ; ರಾಗಬದ್ಧವಾಗಿ ಗೀತೆಯನ್ನು ಹೇಳು ; ಸಂಗೀತ ಹೇಳು : ಲೋಗರ್ ಪಗರಣಿಗರಾಗಿ ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಮೆಂತುಮಱಿಕೆ ಮಾಣ್ದಿದಿರ್ದೊಡೆ (ವಡ್ಡಾರಾ. ೧೧೮-೧೫) ; ಎರಲೆಗೆ ಪಾಡುವ ಗೋರಿಯನರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ (ಆದಿಪು. ೧೪-೮೦) ; ರಸಮೊಸರ್ವಂತು ಪಾಡುತಿರೆ ಶುದ್ಧಮನೋಮಣಿದೀಪ್ತಿ ಪೊಣ್ಮೆ ರಾಜಿಸಿದಪುದೋ (ಕಾದಂಪೂ. ೬೭೩) ; ಸಕಲರಾಗಂಗಳಿಂದೊಸೆದು ತುಂಬುರ ನಾರದರ್ ಪಾಡುತಿರ್ಪ ರೊಂದೆಸೆಯೊಳತಿವಿಭವದಿಂದೆ (ಶಬಪು. ೨-೨೮). ೨. ಮಧುರವಾಗಿ ಧ್ವನಿಮಾಡು ; ಗುಂಜಾರವ ಮಾಡು : ಕುಕಿಲ್ವ ಕೋಗಿಲೆಯ ಪಾಡುವ ತುಂಬಿಯ ನಲ್ಲರೊಳ್ಮೊಗಂ ನಗೆಮೊಗದೊಳ್ ಪಳಂಚಲೆಯ ಕೂಡುವ ನಲ್ಲರೆ ನೋಟಿಱ್ಪಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಶಂಶಭಾ. ೪-೨೮); ಪಾಡುವ ತುಂಬಿಯಿಂ ಕುಕಿಲ್ವ ಕೋಗಿಲೆಯಿಂ ಕಡುರಯ್ಯಮಾಗಿರಲ್ (ಧರ್ಮಾಮೃ. ೨-೦೪೪) ; ಗಿಳಿ ಯೋದಿದಪುದು . . . ಅಳಿ ಪಾಡಿದಪುದು (ಶಬ್ದಾಮ. ೪೫೪ ಪ್ರಯೋ). ೩. ಹೊಗಳು ; ಕೀರ್ತಿಸು : ಪಾಡುವರು ಕೆಲರಲ್ಲಿ ಹರಿಯನು ನೋಡುವರು ನಿಜದೃಷ್ಟಿ ದಣಿಯಲು ಆಡುವರು ತಮ್ಮಿಂದ ಪುಣ್ಯರದಾರು ಲೋಕದಲಿ (ಕೌಶಿರಾ. ೪೪-೧೩) ; ಭೂತಗಣ ಕರತಾಳದಲಿ ಕುಣಿದಾಡುತಿರ್ದವು ಪಾಡುತವನಿಪನ (ತೊರರಾ. ೩-೬-೧೩) ; ಕಂದರ್ಪತನಯನ ಕಡಿದಾಡಿ ತೆಗೆತಂದ ಮಂದರಧರನ ಪಾಡಿದರು (ಮೋಹಕ. ೪೨-೪೭). **ಹಾಡು₁** : ೧. '' ಗಾಯತೇ-ಹಾಡಿದಪಂ '' (ಕಾಶಕ್ಕ. ೧೨೮) ; ಎನ್ನ ಕಾಯವ ದಂಡಿಗೆಯ ಮಾಡಯ್ಯಾ . . . ಬತ್ತೀಸರಾಗವ ಹಾಡಯ್ಯಾ (ಬಸವ. ೫೦೦); ಓತು ಕೊಂಡಾಡುತಂ ಹಾ[ಶಾಕಾಂ. ಆ]ಡುತಂ ಹರಸುತಂ (ಬಸರ. ೭-೮೨). ೨. ಕೈವಿಡಿದು ಕುಣಿವುತ ತಣಿವುತಂ ಬೊಬ್ಬಿಡುತ ಹಾಱುತ ಚಪ್ಪಳಿಕ್ಕುತ ಹಾ[ಶಾಕಾಂ. ಪಾ]ಡುತಾಡುತ್ತ (ಬಸಪು. ೫೯-೨೪). ೩. ತಮ್ಮಂಗದ ಮೇಲೆ ಲಿಂಗವಿರಲು ಅನ್ಯರನೆ ಹಾಡಿ ಅನ್ಯರನೆ ಹೊಗಳಿ ಅನ್ಯರ ವಚನವ ಕೊಂಡಾಡಲು ಕರ್ಮ ಬಿಡದು (ಬಸವ. ೦೦೭) ; ಎನ್ನನಲ್ಲದೆ ಬೇಡನೆನ್ನನಲ್ಲದೆ ನೋಡನೆನ್ನನಲ್ಲದೆ ಹಾಡನು (ಕಣ್ಣರ. ದೇ. ೦೪೪-೦೦) ; ನೋಡಿ ದಣಿಯನು ಬಿರುದ ಹೊಗಳಿಸಿ ಹಾಡಿ ದಣಿಯನು ನಿಚ್ಚಲುಚಿತವ ಮಾಡಿ ತಣಿಯನು ಮಾನನಿಧಿಯನದೆಂತು ಮಱೆದಪೆನು ಕಾಡಲಾಗದು ಕೃಷ್ಣ ಖಾತಿಯ ಮಾಡಲಾಗದು ಬಂದೆನಾದೊಡೆ ರೂಢಿ ಮೆಚ್ಚದು ಕೌರವನ ಹಗೆ ಹರಿಬ ತನಗೆ (ಕುಮಾಉ. ೧೦-೧೮).

**ಪಾತ್ರಚಾರಿ** (ನಾ). ಪಾತ್ರವನ್ನು ಅಭಿನಯಿಸುವವನು : ನಟ : ಸೂತ್ರಧಾರಿಣಿ ನೀನು : ಪಾತ್ರಚಾರಿಯು ನಾನು : ಯಾವ ಪಾತ್ರವನಿತ್ತರೇನು ನೀನೆನಗೆ (ಅಗ್ನಿಹಂ. ೧೯-೧). [ಸಂ. ಪಾತ್ರಚಾರಿನ್]

**ಪಾತ್ರಚಿತ್ರಣ** (ನಾ). =ಪಾತ್ರನಿರ್ಮಾಣ : ಕಾಳಿದಾಸನ ಶಕುಂತಲೆಯ ಪಾತ್ರಚಿತ್ರಣ ತುಂಬ ಸೊಗಸಾಗಿದೆ (ರೂಢಿ). [ಪಾತ್ರ+ಚಿತ್ರಣ$_0$]

**ಪಾತ್ರತೆ** (ನಾ). ಯೋಗ್ಯತೆ; ಅರ್ಹತೆ : ಅಳಸಿಂಗರಾಚಾರ್ಯರ ಶಿಷ್ಯೆಯಾಗುವ ಪಾತ್ರತೆಯನ್ನು ಪಡೆದುದಕ್ಕೆ ಹೊನ್ನಮ್ಮನಿಗೆ ಸಂತೋಷ! (ಕರ್ನಾಕ. ೧೯೭) ; ವಿದ್ಯೆಯಿಂದ ಬರಬೇಕಾದ ವಿನಯವನ್ನು ನೀನು ಪಡೆದಿದ್ದೀಯೆ. ಅದೇ ನಿನಗಿಂದು ಈ ಪಾತ್ರತೆಯನ್ನು ಕೊಟ್ಟದ್ದು (ಹೊಸಕ್ಷಿ. ೩೮) . [ಸಂ. ಪಾತ್ರತಾ]

**ಪಾತ್ರತ್ರಿತಯ** (ನಾ). (ದಾನ ತೆಗೆದುಕೊಳ್ಳುವವರಲ್ಲಿ) ಉತ್ತಮ, ಮಧ್ಯಮ ಮತ್ತು ಅಧಮರೆಂಬ ಮೂರು ವಿಧದ ವ್ಯಕ್ತಿಗಳು : ಆ ಭೋಗಭೂಮಿಯೊಳ್ ಪಾತ್ರತ್ರಿತಯದಾನಫಲಂಗಳಿಂದೇಕದ್ವಿತ್ರಿಪಲ್ಯೋಪಮಾಯುಷ್ಯರುಂ . . . ಆರ್ಯಾಭಿಧಾನರುಮಾಗಿ ದಂಪತಿಸ್ವರೂಪದಿಂ ಪುಟ್ಟಿ (ಚಂದ್ರಪ್ರ. ೩-೩೭ ವ). [ಪಾತ್ರ+ತ್ರಿತಯ]

**ಪಾತ್ರತ್ವ** (ನಾ). ಅರ್ಹತೆಯನ್ನು ಹೊಂದಿರುವಿಕೆ : ಅತಿಬಾಲವಿದ್ಯಾಕುಲಾವಧಿವರ್ಣೋತ್ತಮತ್ವ ಪಾತ್ರತ್ವ ಸೃಷ್ಟ್ಯಧಿಕಾರ ವ್ಯವಹಾರೇಶಿತ್ವಾವಧ್ಯತ್ವಾದಂಡ್ಯತ್ವ ಮಾನಾರ್ಹತ್ವ ಪ್ರಜಾಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಱಿಪಿ (ಆದಿಪು. ೧೫-೦೭ ವ): ಅತಿಬಾಲವಿದ್ಯಾಕುಳಾವಧಿ ವರ್ಣೋತ್ತಮತ್ವಂ ಪಾತ್ರತ್ವ . . . ಪ್ರಜಾಸಂಬಂಧಾಂತರಮೆಂಬಿಪ್ಪತ್ತುಮಧಿಕಾರಂಗಳುಮನಱಿಪೆ (ಚಾವುಂಪು. ೨೦೩). [ಸಂ.]

**ಪಾತ್ರದ** (ನಾ). ತಕ್ಕಡಿ; ತ್ರಾಸು : "ಪಾತ್ರದಂ ತ್ರಾಸು ಸಮದಂಡಿ ತೂಗುವ ಕೋಲು" (ಮಂಗರಾ. ೧೦೫-೧೪). [ಸಂ.]

**ಪಾತ್ರದತ್ತಿ** (ನಾ). [ಜೈನ] ಮಹಾತಪೋಧನರಾದ ಮುನಿಗಳಿಗೆ ಶುದ್ಧವಾದ ಆಹಾರಾದಿಗಳನ್ನು ಮತ್ತು ಸಂಯಮೋಪಕರಣಗಳನ್ನು ವಿಧಿಪೂರ್ವಕವಾಗಿ ನೀಡುವುದು : ಪರಮತಪಶ್ಚರಣನಿರತಯತಿಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾಹಾರಾದಿ ವಿತರಣರೂಪಪಾತ್ರದತ್ತಿಯುಂ . . . ಬೆರಸು (ಆದಿಪು. ೧೫-೧೩ ವ) ; ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ಪ್ರತಿಗ್ರಹಾರ್ಚನಾ ವಿಧಿಪೂರ್ವಕಂ ನಿರವದ್ಯಾಹಾರಸಂಯಮೋಪಕರಣಂಗಳಂ ಕುಡುವುದು (ಚಾವುಂಪು. ೨೦೧): ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ನಿರವದ್ಯಾಹಾರಮುಮಂ ಸಂಯಮೋಪಕರಣಮುಮಂ ಕುಡುವುದು (ಅಜಿಪು. ೧೨-೧ ವ). [ಪಾತ್ರ+ದತ್ತಿ]

**ಪಾತ್ರದಾನ** (ನಾ). =ಪಾತ್ರದತ್ತಿ : ಪಾತ್ರದಾನವಿಧಾನಮೆ ವಿನೋದಮಾಗೆಯುಮಿಂತು ನಿತ್ಯೋತ್ಸವಂಗಳೊಳೆ ಕೆಲವು ಕಾಲಂ ಸಲೆ (ಆದಿಪು. ೯-೫೨ ವ) ; ಕ್ರಮದೆ ಪರಪ್ಯಪದೇಶಂ ಸಮತ್ಸರತ್ವಂ ಸಚಿತ್ತನಿಕ್ಷೇಪಪಿಧಾನಮತಿಕ್ರಮ ಕಾಲಮತಿಕ್ರಮಮುಮಕ್ಕುಂ ಪಾತ್ರದಾನಮಂ ಕುಡುವೆಡೆಯೊಳ್ (ಸುಕುಮಾ. ೬-೨೨). [ಪಾತ್ರ+ದಾನ]

**ಪಾತ್ರದಾನಿ** (ನಾ). ಪಾತ್ರದತ್ತಿಯನ್ನು ಕೊಡುವವನು : ಮಾಯಾಚಾರಪರಿಣತರುಮಪ್ಪ ಪಾತ್ರದಾನಿಗಳುಂ ತಿರ್ಯಗ್ಜಾತಿತ್ವಮಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರವೈರಂಗಳಿಲ್ಲದೆ . . . ರಮಿಯಿಸುವುವು (ಆದಿಪು. ೫-೪೧ ವ). [ಸಂ. ಪಾತ್ರದಾನಿನ್]

**ಪಾತ್ರಧರ** (ನಾ). ಊಟದ ತಟ್ಟೆ ಮುಂತಾದುವನ್ನು ಇಡುವ ಪೀಠ, — ಮಣೆ : ಅಡ್ಡಣಿಗೆ : "ಪಾತ್ರಯೆನೆ ತಟ್ಟೆ ಪಾತ್ರಧರ ಮಡ್ಡಣಿಗೆ [ಪಾಠಾಂ. ಪಾತ್ರಪದಡ್ಡಣಿಗೆ]" (ಮಂಗರಾ. ೩೩-೨೫). [ಸಂ.]

**ಪಾತ್ರಧಾರಿ** (ನಾ). ಪಾತ್ರ ವಹಿಸುವ ವ್ಯಕ್ತಿ; ನಟ : ಭಾಗವತ ಹಿಮ್ಮೇಳದೊಡನೆ ಕುಳಿತು ಪ್ರಸಂಗವನ್ನು ಹಾಡುತ್ತಿದ್ದರೆ ಪಾತ್ರಧಾರಿಗಳು ಮಾತುಗಳಿಂದ ಅರ್ಥಪ್ರತಿಪಾದನೆ ಮಾಡುತ್ತಾರೆ (ಯಕ್ಷಬ. ೧೭) ; ನೀನೂ ಅದರಾಗ ಪಾತ್ರಧಾರೀ ಆಗೀದಿ (ದೀಪಹ. II, ೫). [ಸಂ. ಪಾತ್ರಧಾರಿನ್]

**ಪಾತ್ರನಿರ್ಮಾಣ** (ನಾ). ಸಾಹಿತ್ಯಕೃತಿಗಳಲ್ಲಿ ಸೃಷ್ಟಿಸುವ ವ್ಯಕ್ತಿಚಿತ್ರಣ : ದುಷ್ಯಂತನ ಪಾತ್ರನಿರ್ಮಾಣಕ್ಕಿಂತಲೂ ಶಕುಂತಲೆಯ ಪಾತ್ರನಿರ್ಮಿತಿಯಲ್ಲಿ ಕವಿ ಹೆಚ್ಚು ಗಮನ ಕೊಟ್ಟಿದ್ದಾನೆಂಬುದು ಹೇಳಿದರೆ ಅದು ಕಾಳಿದಾಸನ ಪ್ರತಿಷ್ಠೆಗೆ ಧಕ್ಕೆ (ರಮ್ಯಸಾ. ೭೪). [ಪಾತ್ರ+ನಿರ್ಮಾಣ]

**ಪಾತ್ರನಿರ್ಮಿತಿ** (ನಾ). = ಪಾತ್ರನಿರ್ಮಾಣ : ಸಂಸ್ಕೃತ ನಾಟಕಕಾರರು ಪಾತ್ರನಿರ್ಮಿತಿಯಲ್ಲಿ ನಿಷ್ಣಾತರಲ್ಲ ಎಂಬ ಒಂದು ಅಭಿಪ್ರಾಯವುಂಟು (ರಮ್ಯಸಾ. ೭೩). [ಪಾತ್ರ+ನಿರ್ಮಿತಿ]

**ಪಾತ್ರಪಾವುಳ** 'ಪಾತ್ರ' ಪರಾ.

**ಪಾತ್ರವಹಿಸು** (ಕ್ರಿ). ೧. ಪಾಲುಗೊಳ್ಳು; ಭಾಗವಹಿಸು : ಹಲವಾರು ಉಪಾಧ್ಯಾಯರು ಪಾತ್ರವಹಿಸಿ ಅಂಕಿ ಅಂಶಗಳನ್ನೂ ಅಭಿಪ್ರಾಯಗಳನ್ನೂ ಸೂಚಿಸಿರುತ್ತಾರೆ (ಶಿಕ್ಷದ. ೩೬೯). ೨. ನಾಟಕ ಮುಂತಾದುವುಗಳಲ್ಲಿ ವೇಷ ಹಾಕು, -ನಟಿಸು : ನೀನೇ ಪಾತ್ರ ವಹಿಸಿ ನೀನೇ ತಗೋಬೇಕು ಬಹುಮಾನ (ರಂಗನಾ. ೯೩). [ಪಾತ್ರ+ವಹಿಸು]

**ಪಾತ್ರವಾಡು** (ಕ್ರಿ). ನರ್ತನ ಮಾಡು; ನರ್ತಿಸು : ಕಾಮಿನಿಯೊತಾ ಭರತಸಂಭವ ಭೂಮಿಯೋ ಪೇಳೆನಲು ಮೆಚ್ಚಿದಾ ಶ್ಯಾಮೆ ಮಾಯಾದೇವಿ ಮೋಹಿಪಿ ಪಾತ್ರವಾಡಿದಳು (ಪ್ರಭುಲಿಂ. ೪-೫೭) ; ಪಾತ್ರವಾಡಿದ ಸತಿಯರಿಗೆ ತಂಪಹಂತೆ ಧಾತ್ರೀಶಗಿಂಪಾಗುವಂತೆ . . . ಪವಿತ್ರಪಾತ್ರಕಲೆಯ ಪಾಡಿದರು (ಶರಚ. ೧೩-೨೦೪) ; ನಟನ ತಾಂಡವ ನೃತ್ಯದುತ್ಕಟ ಶಿರುಪು ನೇಱು ಗುಂಡಾಳವ ನಟಿಸಿ ಪಾತ್ರವಾಡಿದನು (ಭೈರಸೂ. I, ೨೫೭). [ಪಾತ್ರ+ಆಡು$_1$]

**ಪಾತ್ರವಿಕೀರ್ಣ** (ನಾ). ೧. ನದಿ, ತೊರೆ ಮುಂತಾದುವು ಹರಿಯುವ ಸ್ಥಳ,—ಪಾತಳಿ. ೨. ನಟಿಸುವವರಿಂದ ಆವೃತವಾದುದು. ೧, ೨ : ಪಾತ್ರವಿಕೀರ್ಣಮಾತತಸುತಾಳಧರಂ ವಿವಿಧಾವನದ್ಧವಾ ಸೂತ್ರಿತವಂಶಕಾರನಿಕರಂ ಕಳಕಂಠಸಮೂಹಸಂಶ್ರಿತಂ ಚಿತ್ರಿತರೂಪಶೋಭೆಗೆಡೆಯಾದುದು ಭಾವಿಸಿ ನೋಡೆ ನಾಡೆ ತೂರ್ಯತ್ರಯಸಂಪ್ರದಾಯಮೆನೆ ಕಾನನಮಾವೃತದಿಕ್ಕುಳಾನನಂ (ಚಂದ್ರಪ್ರ. ೫-೫೩). [ಪಾತ್ರ+ವಿಕೀರ್ಣ]

**ಪಾತ್ರವೆಣ್** (ನಾ). ನರ್ತಕಿ : ಪರಿಪರಿ ಪಾತ್ರವೆಣ್ಗಳು ಸಿಂಗರಿಸಿಯೆ ಹರುಷದೊಳಗೆ ನಡೆತಂದು ಕರದಭಿನಯ ಕಟ್ಟಳೆ ಕಳಾಸಿಕೆಯಿಂದ ಸಿರಿಯರಸನನೋಲಗಿಪರು (ಕಂಸವ. ೭-೧೦೭). [ಪಾತ್ರ+ಪೆಣ್]

**ಪಾತ್ರಸಂಕ್ರಮಣ** (ನಾ). ಪಾತ್ರಗಳ ಜೋಡಣೆ : ದಶರೂಪಲಕ್ಷಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱಿ ಭರತದ ಸಾರಸರ್ವಸ್ವಮುಮಂ ನಾಟ್ಯಧರ್ಮದೊಳ್ ಸೌಧರ್ಮಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್ (ಅಜಿಪು. ೫-೨೮ ವ). [ಪಾತ್ರ+ಸಂಕ್ರಮಣ]

**ಪಾತ್ರಸೃಷ್ಟಿ** (ನಾ). =ಪಾತ್ರನಿರ್ಮಾಣ : ಪಾತ್ರಾಸೃಷ್ಟಿಯು ಕವಿಯ ಪ್ರತಿಭೆಗೆ ಒರೆಗಲ್ಲಾಗಿರುತ್ತದೆ (ರೂಢಿ). [ಪಾತ್ರ+ಸೃಷ್ಟಿ]

**ಪಾತ್ರಾಭಿಗರ** 'ಪಾತ್ರಾಭಿಗಾರ' ನೋ. ಪಾತ್ರ

**ಪಾತ್ರಾಭಿಗಾರ, ಪಾತ್ರಾಭಿಗರ** (ನಾ). ಊಟಕ್ಕೆ ಮುಂಚೆ (ಶುದ್ಧಿಗಾಗಿ) ಎಲೆಗಳಿಗೆ ಮತ್ತು ಎಲ್ಲ ಅಡಿಗೆಪಾತ್ರೆಗಳಿಗೆ ತುಪ್ಪವನ್ನು ಪ್ರೋಕ್ಷಿಸುವುದು : ಘೃತಸಮುದ್ರದ ಸಡಗರವು ಪಾತ್ರಾಭಿಗಾರವ್ಯಯಕೆ ತೀರುವುದೆ (ತಿಮ್ಮಕ. ೫-೭೧): ಪಾತ್ರಾಭಿಗಾರವಂ ಮಾಡಿಸಿ ಪದಾರ್ಥಂಗಳು ಬಡಿಸೆಂದು (ಕುಚೇಲೋ. ೧೧೫). **ಪಾತ್ರಾಭಿಗರ :** ಪರಮ

ಸೌಖ್ಯವನಾಂತು ತಿಗುಳರು ಪಾತ್ರಾಭಿಗರ ಪರಮಾನ್ನ . . . ತೊಪ್ಪೆ ವಳಿದ್ಮವ ತರತರದಲಿ ಬಡಿಸಿದರು (ಮೋಹತ. ೩-೩೧).
[ಪಾತ್ರ + ಅಭಿಗಾರ]

**ಪಾತ್ರಿ** (ನಾ). ೧. ಪಾತ್ರ ವಹಿಸುವವನು : ಈ ಭೂತಾರಾಧನೆಯಲ್ಲಿ ಹಂದಿಯ ಮುಖವಾಡವನ್ನು ಅದರ ಪಾತ್ರಿಯು ಧರಿಸಿ ಕುಣಿಯುವುದು ವಾಡಿಕೆಯಾಗಿದೆ (ಜಾಪಗೀ. ೬೧) ; ಅವರಿಗೆ ಇದಿರಾಗಿ ನಾಗನ 'ಪಾತ್ರಿ'ಯು (ಪಾತ್ರ ವಹಿಸುವಾತ) ಕಾಳಿಂಗಸರ್ಪದಂತೆ ಕುಣಿಯುತ್ತ ತಿರುಗುತ್ತಾನೆ (ಹುಮುಖ. ೨೩). ೨. (ಕರಾ) (ದೆವ್ವ, ದೇವರು ಮುಂತಾದ) ಅಲೌಕಿಕಶಕ್ತಿಗಳ ಆರಾಧಕ ; ಅಲೌಕಿಕಶಕ್ತಿಗಳು ಮೈ ಮೇಲೆ ಬರುವ ವ್ಯಕ್ತಿ : ಕೋಲ ಮಾಡಿಸಲು ಉಂಟಾದ ಮುಖ್ಯ ಅಡಚಣೆ ಎಂದರೆ, ದೈವದ ಪಾತ್ರಿ ಬಿರುಮಣ್ಣ ಸತ್ತದ್ದು (ಕುಡಿಕೊ. ೩೫೯) ; ಕಂಡ್ಲೂರಿನ ಮುಜುರ್ಲಿದೆವ್ವದ ಪಾತ್ರಿಯನ್ನು ಕರೆಯಿಸಿ, ಬೊಬ್ಬರ್ಯನನ್ನು ಬಂಧಿಸಿ . . . ಗೋಳಿಮರದಲ್ಲಿ ಸ್ಥಾನ ಕಲ್ಪಿಸಿಕೊಟ್ಟರು (ರೇವಹಂ. ೫೭). [ಸಂ. ಪಾತ್ರಿನ್]

**ಪಾತ್ರೀಕರಿಸು** (ಕ್ರಿ). ಅರ್ಹನನ್ನಾಗಿ ಮಾಡು ; ಯೋಗ್ಯನನ್ನಾಗಿ ಮಾಡು : ಧನಿಕಂ ಕಳ್ಳೊಡವೆಗೆ ಕಳ್ಳನ ಪಾತ್ರನ ಗೈದ ತೆರದೆ ನೀಂ ಮುಟ್ಟಿದ ನಂದನೆಯಂ ಬಹುಮತಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯೆ ವಿಮಾನ್ಯಂ (ಶಾಕುಂತ. ೬೮-೧೩೦).
[ಪಾತ್ರೀಕರಣ + — ಇಸು]

**ಪಾತ್ರೀಭೂತ** (ಗು). ೧. ಅರ್ಹತೆಯನ್ನು ಹೊಂದಿದ ; ಯೋಗ್ಯತೆಯನ್ನು ಪಡೆದ : ಪಾತ್ರೀಭೂತ ವಿನೇಯಸಂತತಿಗೆ ಸಮ್ಯಗ್ದರ್ಶನಜ್ಞಾನಚಾರಿತ್ರಂಗಳ್ ನಿಜಮಪ್ಪನಂತಸುಖಮುಂ ರಾಗಾದಿಗಳ್ ಜನ್ಮಮೃತ್ಯು ತ್ರಾಸಂಗಳನೀವುವು (ಕುರಾಪು. ೧-೪). (ನಾ). ೨. ಅರ್ಹತೆಯನ್ನು ಪಡೆದವನು ; ಯೋಗ್ಯ : ಶ್ರೋತ್ರೀಯರುಂ ಕ್ಷತ್ರಿಯರುಂ ಪಡೆಗುಟ್ಟಿ ಪಶುಯಾಗಂಗೆಯ್ದು ಲೋಕದೊಳ್ ಪಾತ್ರೀಭೂತರುಂ ಪವಿತ್ರಗೋತ್ರರುಮಾಗಿ ಪರಲೋಕದೊಳ್ ಪಾಕಶಾಸನಸಮಾನಭೋಗಿಗಳಪ್ಪರ್ (ಶಂಪತಂ. ೬೩-೪). [ಸಂ.]

**ಪಾತ್ರೆ** (ನಾ). ೧. ಕೊಳಗ, ತಪ್ಪಲೆ, ತಟ್ಟೆ, ಹರಿವಾಣ ಮುಂತಾದ ಸಾಧನ; ಭಾಜನ : "ಪಾತ್ರೆಯೆನೆ ತಟ್ಟೆ . . . ಪಾತ್ರೆಯೆನೆ ಪಡಿಗಮೆನಿಸಿಕ್ಕು" (ಮಂಗರಾ. ೬೩-೫೩); ಕೆಡದಂತೆ ಬಯ್ಚಿಟ್ಟು ಕುಡುವುದೀ ಪಾತ್ರೆಯುಂ (ತಿರುರ. ದೇ. ೧೧-೧೬); ವಿರಾಜಿಪ್ಪ ಮನೋಜ್ಞ ಪಾಯಸದ ಪಾತ್ರಗಳಂ . . . ಪಾಲ್ಗೊಸರಿಪ್ಪ ಕಟಾಹಕೋಟಿಯಿಂದೊಪ್ಪಿದುದಂದ ನೂನವಿಭವಂಬಡೆದು ವರಯಜ್ಞಮಂಟಪಂ (ಅದ್ಭುಟಿ. ೪-೪೮) ; ಈ ಹಾಲನ್ನು ಮೊಂಡ ಚೂರಿಗಳಿಂದ ಪಾತ್ರೆಗಳಲ್ಲಿ ಸವರಿಕೊಳ್ಳುತ್ತಾರೆ (ಮುಂಬಯಿ. ೪-೪೦). ೨. ನದಿ, ಹೊಳೆ ಮುಂತಾದುವುಗಳ ಒಡಲು, ಎರಡು ದಡಗಳ ನಡುವಿನ ಪ್ರದೇಶ : ಹೊಳೆ ತುಂಬಿದಾಗ ಅದರ ಪಾತ್ರೆಯು ಅಗಲು ೫೦೦ ಫೂಟು ಇರುತ್ತದೆ (ಕಭಾಗ. ೧೯); ಮೇಲಣ ಪರ್ವತಗಳ ನೀರು ಆ ಕೊರಕಲಿನ ಬಂಡೆಗಳ ಮೇಲಿಂದ ಉರುಳಾಡುತ್ತ ಹರಿದು ಬರುವಂತೆ ಕಂಡಿತು. ಇನ್ನು ಅದರ ಪಾತ್ರೆಯನ್ನು ತುಳಿದೇ ಬೆಟ್ಟವನ್ನು ಏರಬೇಕು (ಸ್ವಕೃಹೊ. ೦೬೩).

**ಪಾತ್ರೆಪಡಗ, ಪಾತ್ರೆಪಗಡ, ಪಾತ್ರೆಪಡಗು, ಪಾತ್ರೆಪಡದೆ** = ಕೊಳಗ, ತಪ್ಪಲೆ ಮುಂತಾದ ಪಾತ್ರೆ,—ಸಾಮಾನು : ಮನೆಯ ಪಾತ್ರೆ ಪಡಗಗಳೆಲ್ಲವೂ ದೇವಸ್ಥಾನಕ್ಕೆ ಸೇರಿದುವು (ಮಂಶಸ್ವ. ೪೦೭); ಕಾಳು ಕಡಿ ತೀರಿದ ಮೇಲೆ ಮನೆಯಲ್ಲಿ ಹೆಂಗಸರು ಪಾತ್ರೆ ಹಿರಿಯರಿಗೆ ಕಾಣದಂತೆ ಪಾತ್ರೆ ಪಡಗಗಳನ್ನು ಕೊಟ್ಟು ದೋಸೆ, ಖಾರ ತಿಂದದ್ದೂ ಉಂಟು (ಎರೀ. ೩); ದನಕರುಗಳು ಹೋದುವು, ದೊಡ್ಡ ಪ್ರಮಾಣದ ಪಾತ್ರೆ ಪಗಡಗಳೂ ಹರಾಜಾಗಿ ಹೋದುವು (ಮನಳೊ. ೪); ಇದ್ದ ಅಲ್ಪಸ್ವಲ್ಪ ಪಾತ್ರೆ ಪಡಗುಗಳು ಸೇಟನಂಗಡಿಯ ಹಾದಿ ಹಿಡಿಯಲೂ ಹೆಚ್ಚು ಕಾಲ ಬೇಕಾಗಿರಲಿಲ್ಲ (ಕಾಗಿತ. ೨೭); ನಾಳೆ ಉಪವಾಸವಿದ್ದರೂ ಸರಿ, ಅವನ ಪಾತ್ರೆ ಪಡದೆಗಳಲ್ಲಿ ನಾನೇನೂ ಮಾಡಲಿಕ್ಕಿಲ್ಲ (ಕತ. ೯೩). **ಪಾತ್ರೆಪರಟ, ಪಾತ್ರೆಪರಡಿ, ಪಾತ್ರೆಪರಾಟು** = ಪಾತ್ರೆಪಡಗ : ಹರೇಕೃಷ್ಣನ ಪಾತ್ರೆಪರಟ . . . ವಶಪಡಿಸಿಕೊಂಡನು (ಬಂಕಿಮ. ೧೦೭); ಅವರು ದಿನಾಲು ಅಡುಗೆಗಾಗಿ ಕಾಳು ಕಡಿಗಳನ್ನು ಹಸನು ಮಾಡಿಕೊಡ ಬೇಕಾಗುತ್ತಿತ್ತು. ಪಾತ್ರೆ-ಪರಡಿಗಳನ್ನು ತಿಕ್ಕಿ ಕೊಡಬೇಕಾಗುತ್ತಿತ್ತು (ಮಣ್ಣಮ. ೧೬೫); ನಾಲ್ಕು ದಿನ ಬಿಟ್ಟು ಹೋದರೆ ಇಲ್ಲಿನ ಪಾತ್ರೆ ಪರಡಿ ಉಳಿದೀತೆ ? (ಮುಗಿಯು. ೧೪೯); ಪಾತ್ರೆ ಪರಾಟುಗಳು ಹೋಗಲಿ . . . ಈ ಕಣಜದ ಕಾಳನ್ನಾದರೂ ಬಿಟ್ಟುಬಿಡಿ ಸ್ವಾಮಿ (ಹೀಮುಕೊ. ೩೩). **ಪಾತ್ರೆಪಳಿಗೆ** = ಪಾತ್ರೆ ಪಡಗ : ಒಗೆಯುವುದನ್ನು ಪೂರೈಸಿದ ಬಳಿಕ ಕೂಡ ನಲ್ಲಿ ಇದ್ದುದಾದರೆ, ಪಾತ್ರೆ-ಪಳಿಗೆಗಳನ್ನು ತೆಗೆದುಕೊಂಡು ಬಂದು ಬೆಳಗುವಳು (ಶ್ರತಿಬಿಂ. ೨೭). **ಪಾತ್ರೆಪೇಣೆ** = ಪಾತ್ರೆ ಪಡಗ : ವಿಪರೀತ ಪಾತ್ರೆ ಪೇಣೆ ಕುರ್ಚಿ ಮೇಜುಗಳನ್ನು ಅಡುಕಿಕೊಂಡು ಮನೆಯಲ್ಲಿ ಓಡಾಡುವುದಕ್ಕೆ ಜಾಗ ಸಾಲದಂತೆ ಮಾಡುವುದು ಜಾಣತನವಲ್ಲ (ಗೃಹಬಿ. ೧೬೭). [ಸಂ. ಪಾತ್ರ]

**ಪಾತ್ಶಾಹ** 'ಪಾತಶಹ' ನೋ.

**ಪಾತ್ಶ್ಯಾವು** 'ಪಾತಶಹ' ನೋ.

**ಪಾಥ** (ನಾ). ೧. ನೀರು ; ಉದಕ : "ಸಲಿಲಂ ಜೀವನಮಂಬುತೋಯಮುದಕಂ ಪಾಥಂ . . . ಪಾನೀಯಮೆಂದಿಂತನಾಕುಳದಿಂದಂ ತಜಿಸಲ್ಗೆ ನೀರ್ಗೆ ಪೆಸರಂ ಪರ್ಯಾಯದಿಂ ಪಾಗ್ನಿದರ್" (ಪಸ್ತುಕೋ. ೨೨-೧); ಬಂದೇಚಿದಂ ಧೀರಂ ಶೌರಿ ವರೂಥಮಂ . . . ಶಸ್ತ್ರತೂಣೀರವ್ರಾತಸನಾಥಮಂ ಧ್ವಜಝಷಾಪ್ಪಸ್ವರ್ಣದೀ ಪಾಥಮಂ (ಜಗಪು. ೧೫-೭೦). ೨. ಅಗ್ನಿ. ೩. ಸೂರ್ಯ. [ಸಂ.]

**ಪಾಥೆ** (ನಾ). ಒಂದು ಬಗೆಯ ಔಷಧದ್ರವ್ಯ ; ಅತಿಬಜೆ : ಲವಣಪಂಚಕಮಿಂಗು ಪಿಪ್ಪಲಿ ಶುಂಠಿ ತುಂಬುರುಧಾನ್ಯಕಂ ಶಿವೆ ದುರಾಲಭೆ ಪಾಥೆ ಚಿತ್ರಕವೋಪಮೆಂಬಿವನೆಲ್ಲಮಂ ಸವನೆ ಕೊಂಡು ಸುರಾನ್ವಿತಂ ಕುಡೆ (ಲೋಕೋಪ. ೯-೩೨೯). [ ? ]

**ಪಾಥೇಯ** (ನಾ). ಪ್ರಯಾಣಕಾಲದಲ್ಲಿ ದಾರಿಯ ಊಟಕ್ಕಾಗಿ ಸಿದ್ಧಮಾಡಿ ತೆಗೆದುಕೊಂಡು ಹೋಗುವ ಆಹಾರವಸ್ತು ; ಬುತ್ತಿ : "ಪಾಥೇಯಂ, ಸಂಬಳಂ—ಈ ೨ ಸಂಬಳಂ" (ಹಲಾಯು. ೫೯-೨೦೩); ಮೋಕ್ಷಪುರಪ್ರಸ್ಥಿತ ಭವ್ಯಪಥಿಕಪಾಥೇಯಮಪ್ಪ ಸಮ್ಯಕ್ತ್ವಮುಮಂ (ಅಜಿತ. ೧೩-೧ ವ) ; ರಾಘವಂ ಜಾನಕೀಸ್ಮೇರಮುಖಾಬ್ಜಾಲೋಕನಂ ಲೋಚನಸುಖಮುಖಪಾಥೇಯಮಾಗೆಯ್ದೆವಂದಂ (ಕಂರಾಮಾ. ೭-೨೯); ಪಾಥೇಯಮುಮಂ ಭೋಜನಂಗೈದು ವಿಶ್ರಮನಾಗಿ ತಳಿತ ಮಾಮರನ ನೆಳಲಂ ಸಾರ್ದನು (ಕೃಷ್ಣಭಾ. ೩೯-೪೦). [ಸಂ.]

**ಪಾಥೇಯಧನ** (ನಾ). ಪ್ರವಾಸಕ್ಕೆ ಬೇಕಾಗುವ ಹಣ ; ದಾರಿವೆಚ್ಚ : ಬೋಧಿದರ್ಶನಚಾರಿತ್ರಮೆ ಮೋಕ್ಷಮಾರ್ಗಪಾಥೇಯಧನಂ (ಅಪಂಚ. ೩-೬೩). [ಪಾಥೇಯ + ಧನ]

**ಪಾಥೋಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : "ಪಾಥೋಜಂ—ತಾವರೆ" (ಒಪಂ. ೯೭); ತತ್ತಪಸ್ವಿಯ ಪಾದಪಾಥೋಜಯುಗಲಮಂ ಚಿತ್ತದೊಳ್ಸ್ಮರಿಸುತ್ತೆ (ದುರಳಿ. ೨೩-೩೭). [ಸಂ.]

**ಪಾಥೋದ** (ನಾ). ೧. ನೀರನ್ನು ಕೊಡುವಂತಹುದು ; ಮೋಡ. ೨. ಕೊನ್ನಾರಿಗಡ್ಡೆ : "ಪಾಥೋದಃ—ಭದ್ರಮುಸ್ತೆ" (ಓಪಂ. ೯೭).
[ಸಂ.]

**ಪಾಥೋದಂತಿ** (ನಾ). ನೀರಾನೆ : ಎನಸುಂ ಕಣ್ಗೆಯ್ದೆ ಚೆಲ್ವಂ ಪಡೆವುದು ವಿಚಳತ್ಕ್ಯಾನ್ವರ್ಸ್ಕ ಪಾಠೀನಸಂಘಟ್ಟನಪಾಥೋದಂತಿದಂತಾಹತಮಕರಕರ ಕ್ಷೋಭಸಂಜಾತಕಲ್ಲೋಲ . . . ಅಂಭೋನಿಧಾನಂ (ಎಪಿ. XV. ೩೪-೩ ; 1189). [ಸಂ. ಪಾಥೋದಂತಿನ್]

**ಪಾಥೋದರ** (ನಾ). ಮೋಡ ; ಮೇಘ. [ಸಂ.]

**ಪಾಥೋಧಿ** (ನಾ). ಸಮುದ್ರ : ಹರ್ಷೋನ್ಮಾದಕದುದ್ದದು ಕಪಿಧ್ವಜಿನಿ, ಘೇ ಘೇ ಜಯಧ್ವನಿಗೈವ ರಾಕ್ಷಸಧ್ವಜಿನಿಯುಂ ಕೂಡಿ, ಪಯೋಧಿಯಪ್ಪವೊಲ್ ಪಾಥೋಧಿಯೊಳ್! (ಶ್ರೀರಾಮಾ. ೬೪೬ ೫೭೯). [ಸಂ.]

**ಪಾಥೋನಿಧಿ** (ನಾ). = ಪಾಥೋಧಿ : ಅನತರಾಗಿ ಜೀವಿಸದೆ ದುಷ್ಟನೃಪರ್ ಕೆಲರೋಡಿ ಪೋಗೆ ಪಾಥೋಧಿಯಲ್ಲಿ ಪೊಕ್ಕೊಡವರಂ ತವಿಸಲ್ ಬಟಸಂದು (ಪುಷ್ಪ. ೫-೫೩). [ಸಂ.]

**ಪಾಥೋರುಹ** (ನಾ). = ಪಾಥೋಜ : "ಪಾಥೋರುಹಂ–ತಾವರೆ" (ಟಕಾ. ೯೫). 'ಪಾಥೋರುಹಾಕ್ಷ' ಪದಾ. [ಸಂ.]

**ಪಾಥೋರುಹಾಕ್ಷ** (ನಾ). ಕಮಲದಂತಹ ಕಣ್ಣುಗಳನ್ನುಳ್ಳವನು ; ಕೃಷ್ಣ : ಪಾಥೋರುಹಾಕ್ಷನಂ ದಾರುಕಂ ನಿಟ್ಟಿಸಿ ವರೂಥಮಂ ತಿರುಗಿಸಿದನು (ಕೃಷ್ಣಾ. ೭-೫೭). [ಸಂ. (ಪಾಥೋರುಹ+ಅಕ್ಷಿ+ –)]

**ಪಾದ** (ನಾ). ೧. ಕಾಲು ; ಚರಣ : "ಅಂಘ್ರಿಃ, ಚರಣಃ, ಪಾದಃ—ಈ ೩ ಕಾಲ್" (ಹಲಾಯು. ೬೪-೩೫೭); ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸಯ್ಯಾ (ಬಸವ. ೨೭೪); ಸಾಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ ವರದಾನೋನ್ನತಭದ್ರ ಲಕ್ಷಣಪದಂ . . . ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ (ಜಗಪ. ೦-೫); ಹರಿ ಪದ್ಮಾನಂದಿ ಪೀತಾಂಬರೋಲ್ಲಸಿತಂ ಚಕ್ರಸಹಾಯ ನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಪುಷ್ಪ. ೯-೨೩). ೨. ಕದಿರು ; ಕಿರಣ ; ರಶ್ಮಿ : "ಉಸ್ರಃ, ಧಾಮ . . . ಪಾದಃ, ವಿರೋಕಃ, ಗೌಃ—ಈ ೩೨ ರಶ್ಮಿಗಳ ಪೆಸರ್" (ಹಲಾಯು. ೯-೯೯). ೧, ೨ : ಜನಚಿತ್ತಾಹ್ಲಾದಪಾದಂ . . . ಉದ್ಯನ್ಮಂಡಲಾಗ್ರಂ ಸಲೆ ಘನಪವನೀ ಶೋಭೆಯುಂ ಪೆರ್ಚಿಸುತ್ತಿರ್ಪನವೊಲ್ಪಂ ಪೆತ್ತಾತ್ತದಾಂ ಬೆಳಗುಗೆ ಜಗಮಂ ಗೋಪನಾರ್ತಂಡದೇವಂ (ಜಗಪ. ೦-೪) ; ಭೂಭೃದ್ವರರಾ ತಲೆಯಲಿ ಮೆರೆಯುತ ಮೇಣಮರರ ಶಿರಭಾಗದಲಿ ಆ ಎರಡೂ ದಿನಪನ ಪಾದಗಳು ಸೌಖ್ಯವ ತರಲೆಮಗನವರತ (ಧ್ವನ್ಯಾಲೋ. ೯೭). ೩. ಪರ್ವತಗಳ ಬುಡ : "ದರಿ ಕಂದರಂ . . . ಗಿರಿಪರ್ಯಂತಂ ಪಾದಂ" (ಪಂಪ್ನಕೋ. ೨೮-೩). ೪. ಸಣ್ಣಗುಡ್ಡ : "ಪಾದಾಃ, ಪ್ರತ್ಯಂತ ಪರ್ವತಾಃ—ಈ ೨ ಕೆಲದ ಕಿಱುಬೆಟ್ಟುಗಳ್" (ಹಲಾಯು. ೨೮-೦೩) ; "ಕಿಱುಗಿರಿ ಪಾದಮಕ್ಕು" (ಮಂಗರಾ. ೩೦-೨). ೫. (ಮರದ) ಬೇರು ; ಮೂಲ : "ಪಾದಂ, ಮೂಲಂ—ಈ ೨ ಮರದ ಬೇರ್" (ಹಲಾಯು. ೩೦-೨೯) ; "ಪಾದಮೆನೆ ಮೂಲಮೆನೆ ಪಸರಿಸಿದ ಬೇರಕ್ಕುಂ" (ಮಂಗರಾ. ೩೨-೨). ೬. ಗುರುಹಿರಿಯರಾದವರನ್ನು ಗೌರವಾರ್ಥವಾಗಿ ಸಂಬೋಧಿಸುವ ಒಂದು ನುಡಿ : ಪಾದ ಪರುಕು ಚಿತ್ತವಿಪುದು (ಜಕಪ. ೪-೨೪); ಹಿಂದೆ ನಾಲ್ಕೈವರ್ಷಗಳ ಕೆಳಗೊಂದು ಸಲ ನಾನಿಲ್ಲಿಗೆ ಬಂದು, ಗೈದಾಟಕ್ಕೆ ಪಾದದ ತಂದೆ ತಂಗಿ ಸುನಂದೆಯು . . . ಹಿಂದೆ ಬಂದಳು ಪಾಪಿಯಾ (ಕಂಪು. ೪೦-೩೦). ೭. ಗುರುಹಿರಿಯರ ಹೆಸರುಗಳ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ ಶಬ್ದ : "ಪಾದಃ, ದೇವಃ, ಭಟ್ಟಾರಕಃ —ಈ ಮೂಱುಂ ಪೆಸರ ಕಡೆಯೊಳ್ ಪೂಜಾಪ(ಚ)ನಂ" (ಹಲಾಯು. ೨೫-೦೫೪). ೮. ಭಾಗ ; ಅಂಶ. ೯. ನಾಲ್ಕನೆಯ ಒಂದು ಭಾಗ,–ಅಂಶ ; ಕಾಲುಭಾಗ : "ಪಾದಂ ತುರ್ಯಾಂಶಂ" (ಪಂಪ್ನಕೋ. ೦೨೦-೨೨). ೧೦. ಹನ್ನೆರಡು ಅಂಗುಲಗಳ ಅಳತೆ ; ಒಂದು ಅಡಿ. ೧೧. [ಛಂದ] ಪದ್ಯದ ಒಂದು ಸಾಲು: ಪಾದದೊಳೆರಡನೆಯಕ್ಕರಮಾದರದಿಂದಾದುದಾವುವದನ ಱಿದನಿತಂ ಪಾದದೊಳಿಡುವುದದಕ್ಕುಂ ಭೇದೋಕ್ತಿಕ್ರಮವಿಚಾರಿತೋರು ಪ್ರಾಸಂ (ಕವಿರಾ. ೨-೩೨); ಒಂದಿದ ಖುತುಷಟ್ಪದಿಗಳೊಳೊಂದೇ ತೆಱನೆರಡು ಪಾದಮುಂ ದೋಣ್ ಮುಂದಕೆರ್ದಂದರೆ ಬಕ್ರಂ (ಛಂದೋಂಬು. ೫-೨೫೯ ಅಡಿ); ಪದ್ಯವು ಪಾದದಿಂದ ಕೂಡಿರುವುದು. ಪದ್ಯದ ಪಾದವು ಗಣ ಮತ್ತು ಪ್ರಾಸಗಳ ನಿಯಮವುಳ್ಳ ಶಬ್ದಸಂಘಟನೆಯಾಗಿರುವುದು (ಕೃಶಿಖ. ೭೯). ೧೨. [ಜ್ಯೋತಿ] ಒಂದು ನಕ್ಷತ್ರದ ಕಾಲಮಾನದ ನಾಲ್ಕನೆಯ ಒಂದು ಭಾಗ ; ರಾಶಿಯ ಒಂಬತ್ತನೆಯ ಒಂದು ಭಾಗ . ಒಂದು ನಕ್ಷತ್ರಕೆ ನಾಲ್ಕು ಪಾದ, ಒಂಭತ್ತು ಪಾದಕ್ಕೆ ಒಂದು ರಾಶಿ (ಭಾಸ್ಕರ. ೩೪-೭); "ಪದಪೂರಣೆ ಕಾಲು ತೇಜ ಮೂಪರ್ಾದಾಖ್ಯಂ" (ನಾನಾಕಂ. ೦೫೩); "ಅಂಘ್ರಿ ಪದಪೂರು ತೇಜ ಪಾದಾಹ್ವಯಂ" (ನಾನಾರ. ೦೩೧).

**ಪಾದ ಬೆಳಸು, ಪಾದ ಬೆಳೆಸು** = (ಗೌರವಾರ್ಥದಲ್ಲಿ ಅಥವಾ ವ್ಯಂಗ್ಯವಾಗಿ) ಬರು ; ಆಗಮಿಸು; ದಯಮಾಡಿಸು : ನಾಮಕರಣದ ದಿನ ಸ್ವತಃ ಅವರೇ ಪಾದ ಬೆಳಸಿ ಬಂದು ನೋಡಿ ಹೋದರು (ಬಿಡ್ಡಿ. ೦೩) ; ತಾಯಿ ತಕ್ಕ ಮಟ್ಟಿಗೆ ಸಂತೃಪ್ತಳಾಗಿ ದಿವಾನಖಾನೆಯ ಕಡೆಗೆ ಪಾದ ಬೆಳಸಿದಳು (ಪುಸರು. ೫೭೭). [ಸಂ.]

**ಪಾದಕಟಕ** (ನಾ). ಕಾಲಿಗೆ ಹಾಕಿಕೊಳ್ಳುವ ಕಡಗ, – ಬಳೆ : "ಸಿಂಜಿನೀ, ಪಾದಕಟಕಃ—ಈ ೨ ಕಾಲ ಕಡಗಂ" (ಹಲಾಯು. ೯೨-೪೦೭); "ಪಾದಾಂಗದಂ . . . ಪಾದಕಟಕಃ—೯ ಅಂದಿಗೆ, ಕಾಲುಸರಪಣಿ, ಪಾಗಡ, ಕಾಲುಕಡಗ, ಕಾಲುತೊಡಿಗೆ" (ಸಿದ್ಧಾಂತಿ. ೨೦೦). [ ಪಾದ+ಕಟಕ$_3$ ]

**ಪಾದಕಡಗ** (ನಾ). = ಪಾದಕಟಕ : ಅಭಿಮನ್ಯುವನ್ನು ರಮಣೀಯವಾದ ಪೀತಾಂಬರಗಳಿಂದಲೂ . . . ಪಾದಕಡಗಗಳಿಂದಲೂ ಅಲಂಕರಿಸಿ (ಕೃಪಾಪಿ. ೦೨೯). [ ಪಾದ+ಕಡಗ$_1$ ]

**ಪಾದಕೃಚ್ಛ್ರ** (ನಾ). ಪ್ರಾಯಶ್ಚಿತ್ತರೂಪವಾಗಿ ನಾಲ್ಕು ದಿನಗಳು ಮಾಡುವ ಒಂದು ವ್ರತ ; P ಮೊದಲ ದಿನ ಒಪ್ಪತ್ತು ಹಗಲು ಊಟ, ಎರಡನೆಯ ದಿನ ಒಪ್ಪತ್ತು ರಾತ್ರಿ ಊಟ, ಮೂರನೆಯ ದಿನ ಅಯಾಚಿತ ಅನ್ನ (ಬೇಡದೆ ಆಹಾರ), ನಾಲ್ಕನೆಯ ದಿನ ಪೂರ್ಣ ಉಪವಾಸ–ಹೀಗೆ ವ್ರತ ಮಾಡುವಿಕೆ. ಇದರ ಇನ್ನೊಂದು ಪ್ರಕಾರ–ಮೊದಲ ದಿನ ರಾತ್ರಿ ಊಟ, ಎರಡನೆಯ ದಿನ ಉಪವಾಸ, ಮೂರನೆಯ ದಿನ ಊಟ, ನಾಲ್ಕನೆಯ ದಿನ ಉಪವಾಸ : ದೋಷಪರಿಹಾರಾರ್ಥವಾಗಿ ಶರೀರಬಾಧಾತ್ಮಕತ್ವದಿಂ ಮಹತ್ಕಷ್ಟಸಾಧ್ಯಂಗಳಾದ ಪಾದಕೃಚ್ಛ್ರ ಮುಂತಾದವುಗಳ ಪಕ್ಷವಾಸಾದಿಕಂಗಳಲಿ ಅನ್ನಮಂ ಪೇರ್ಚಿಸಿ ತಗ್ಗಿಸಿಕೊಂಬುದು (ಏಕೀಶ. ೦೩೯) ; ಒಂದು ಉಪವಾಸಮಂ ಮಾಡಿ ಮರುದಿನ ಪಾರಣೆಯೇಕಭುಕ್ತ ಮೊದಲಾದ ನಾಲ್ಕುದಿನದ ವ್ರತವೂ ಪಾದಕೃಚ್ಛ್ರವೆನಿಸೂದು (ಶಾಕೀಮು. ೪೪೨-೩). [ ಸಂ. ]

**ಪಾದಗಟ್ಟೆ** (ನಾ). ೧. ತೇರನ್ನು ಕಟ್ಟಿ ಹೊರಡಿಸುವ ಸ್ಥಳ : ಕಳಸದಾರತಿ ಹಿಡಿದ ಐದೆಯರ ಗುಂಪು ತೇರಿಗೂ ಪಾದಗಟ್ಟೆಗೂ ಆರತಿಯನ್ನು ಬೆಳಗಿತು (ಜವಕೀ. ೦೪೫); ಅವನಿಗೆ ಊರಿನ ಮುಂದಿನ ಪಾದಗಟ್ಟೆಯ ಬಸವನೂ ಬೇಕು ; ಊರ ಹೊರಗಿನ ಗರುಡಗಂಬದೆದುರಿನ ಹನುಮನೂ ಬೇಕು (ಕನ್ನಡಾ. ೦). ೨. ಕೆಳಗಿನ ಭಾಗ ; ಅಡಿಭಾಗ : ಪಾದಚಾರಿಯಾಗಿಯೇ ಅನಂತ 'ಚಾರಮಿನಾರ' ನೋಡಲು ನಡೆದ . . . ಪಾದಗಟ್ಟೆ ಮುಟ್ಟಿ, ಮೇಲೆ ಕೆಳಗೆ ನೋಡಿ ಮಹಡಿಗೆ ಹಂತಿರಾಗಿದ (ಜೀದಾವ. ೫೭). [ ಪಾದ+ಕಟ್ಟೆ$_1$ ]

**ಪಾದಗಾಣಿಕೆ** 'ಪಾದಗಾಣ್ಕೆ' ನೋ.

**ಪಾದಗಾಣ್ಕೆ,** ಪಾದಗಾಣಿಕೆ (ನಾ). ಪೂಜ್ಯರಾದ ಗುರು ಹಿರಿಯರಿಗೆ ಒಪ್ಪಿಸುವ ಕಾಣಿಕೆ : ವಿಕ್ರಮನಾಯಕಂ ಮತ್ತೆ ಕೆಲಂಬರ್ ಧೀರ ಕಿರಾತರುಂ ಬಂದು ವಂದಿಸಿ ಪಾದಗಾಣ್ಕೆ ಮಾಡಿದರ್ (ಹಮ್ಮೀ. ೯-೬೨ ವ). **ಪಾದಗಾಣಿಕೆ :** ಗುರುಗಳಿಗೆ ಪಾದಗಾಣಿಕೆ ಅರ್ಪಿಸಬೇಕು (ಜಾನ). [ ಪಾದ+ಕಾಣ್ಕೆ ]

**ಪಾದಘಾತ** (ನಾ). ೧. ಹೆಜ್ಜೆಯ ಹೊಡೆತ, — ಪೆಟ್ಟು. ೨. ಹೆಜ್ಜೆಯಿಡುವ ಶಬ್ದ ; ಹೆಜ್ಜೆಸದ್ದು : ತಾಯಿಯ ಪಾದಘಾತ ಮಂದವಾಗಲು ತನ್ನ ವಿಚಾರವನ್ನು ಮುಂದುವರಿಸುವನು (ಐಯ್ಯಂ. ೦).
[ ಪಾದ+ಘಾತ ]

**ಪಾದಚಾರಿ** (ನಾ). ೧. ಕಾಲುನಡಗೆಯಲ್ಲಿ ಸಾಗುವಂತಹುದು : ಬರುವಾಗ ದುರದೃಷ್ಟ ಬೇಗನೆ ಬರುವುದು ಧಾವಿಸಿ ಕುದುರೆಯನೇರಿ ಬೀಳ್ಕೊಂಡು ಹೋಹಾಗ ಮೆಲ್ಲನೆ ಹೋಹುದು ಹೋಹುದು ಅದು ಪಾದಚಾರಿ (ಇಂಚಾಕ. ೦೬೨-೯೬). ೨. ಕಾಲುನಡಿಗೆಯಲ್ಲಿ ಸಾಗುವ ವ್ಯಕ್ತಿ : ಪ್ರಭುಗಳೂ ಇವರ ಸಂಗಡ ಸೇರಿ, ಪಾದಚಾರಿಗಳಾಗಿ ಬೆಟ್ಟ ಗುಡ್ಡಗಳನ್ನು ಹತ್ತಿ ಇಳಿದು . . . ವನಭೋಜನ ಮಾಡಿದುದುಂಟು (ಶಾಂಕಲ. ೦೨೨); ರಥದಿಂದ ಇಳಿದು, ಪಾದಚಾರಿಯಾಗಿ ಗುರುವಿನ ಬಳಿಗೆ ಸಾರಿ, ವಂದನೆ ಮಾಡಿ, ಒಂದು ಕಡೆ ನಿಂತಳು (ಹಸ್ತುಹು. ೦೮). ೩. ಕಾಲುನಡೆಯ ಸೈನಿಕ ; ಪದಾತಿ ; ಕಾಲಾಳು : "ಪದಾತಿಃ . . . ಪದಿಕಃ, ಪಾದಚಾರೀ — ಈ ೮ ಕಾಲಾಳ್" (ಹಲಾಯು. ೬೯-೨೯೬).
[ ಸಂ. ಪಾದಚಾರಿನ್ ]

**ಪಾದಚ್ಛಾಯೆ** (ನಾ). ಕಾಲಿನ ಪಡಿಯಚ್ಚು ; ಹೆಜ್ಜೆಯ ಪಡಿಯಚ್ಚು : ಪಾದಚ್ಛಾಯೆಯುನಿಟ್ಟು ಜೋಯಿಸದಭಿಪ್ರಾಯಂಗಳಿಂ . . . ಪೇಟ್ವ ಜೋಯಿಸಮದಾರ್ಗಂ ಮರ್ತ್ಯರೊಳ್ ದುರ್ಲಭಂ (ಸುಕುಮಾ. ೩-೨೦).
[ ಸಂ. ಪಾದಚ್ಛಾಯಾ ]

**ಪಾದಜ** (ನಾ). ಭಗವಂತನ ಪಾದಗಳಿಂದ ಜನಿಸಿದವನು ; ಶೂದ್ರ : ಸಂಪದದೊಳನೂನರಕ್ಕೆ ಪರದರ್ ಸಲೆ ಧಾರ್ಮಿಕರಕ್ಕೆ ಪಾದಜ[ಶಾಕಾಂ. ಶೂದ್ರ]ರ್ (ಶಂಕಕಂ. ೩೧೨-೮); ನಿಜ ಕೃಷಿವ್ಯವಸಾಯದಲಿ ತದ್ದ್ವಿಜಕುಲದ ಶಿಶ್ರೂಷೆಯಲಿ ಪಾದಜರು ಕೃತ್ಯರು (ಕುಮಾ. ೦೯-೯೬).
[ ಸಂ. ]

**ಪಾದತಲ,** ಪಾದತಳ (ನಾ). ಹೆಜ್ಜೆಯ ಕೆಳಭಾಗ ; ಅಂಗಾಲು : ಮುಖ ಚಂದ್ರಕಾಂತವು ಕುಂತಲ ನೀಲವು ಪದ್ಮರಾಗವು ಪಾದತಲವು (ಇಂಚಾಕ. ೯೯-೩೬). **ಪಾದತಳ :** "ಪಾದತಳಮದಡಿಯೆನೆ" (ಚನ್ನುಕೋ. ೬೬-೨) ; ಸಿರದಲುದಯ ತತ್ತೀಸಕೋಟಿ ದೇವತೆಗಳು ಪಾದತಳದಲ್ಲಿ ಭೂಮಿ ಜನನವು (ಚಕಕ. ೩೩೬).
[ ಪಾದ+ತಲ ]

**ಪಾದತಳ** 'ಪಾದತಲ' ನೋ.

**ಪಾದತಿಱುಗೆ** (ನಾ). ಪಾದಪೂಜೆಯ ಸಮಯದಲ್ಲಿ ಕೊಡುವ ಕಾಣಿಕೆ : ಹೊರಣು ದಂಡದೋಷದಿಂ ಪಾದತಿಱುಗೆಯುಂ ಕೊಂಬು ದಿಲ್ಲೆಂದು [ಒ]ಂದು ಹೊಂನ ಪಾದಪೂಜೆಯುಂ ಕೊಂಡು (ಳಶಾ. ೪; ೩೦ -೩; 1221). [ ಪಾದ+ತಿಱುಗೆ ]

**ಪಾದತ್ರಾಣ** (ನಾ). ೧. ಕಾಲಿನ ಶಕ್ತಿ, — ಬಲ : ಧಾರವಾಡದ ಜೀವಕ್ಕೆ ಪಾದತ್ರಾಣ ಬಹಳ ಬೇಕು (ದೀಕ್ಷೆ. ೦೯೦). ೨. ರಕ್ಷಣಾರ್ಥವಾಗಿ ಪಾದಗಳಿಗೆ ತೊಡುವ ಸಾಧನ ; ಮೆಟ್ಟು ; ಪಾದರಕ್ಷೆ : " ಪಾದ ತ್ರಾಣಮುಪಾನತ್ [ಪಾದುಕೆ] ತಾನೆಂತದನುಪದೀ[ ನಾ ]ನಾಥಂ " (ಚನ್ನುಕೋ. ೯೯-೨೯). [ ಪಾದ+ತ್ರಾಣ ]

**ಪಾದದಾಹ** (ನಾ). ಒಂದು ವಿಧವಾದ ವಾತರೋಗ ; ಪಿತ್ತರಕ್ತದಿಂದ ಕೂಡಿದ ವಾತಸಂಚಾರದಿಂದ ಉಂಟಾಗುವ ಉರಿಮಾಯು : ಮುಡಿವಾಳ, ಲಾವಂಚ . . . ಪ್ರಾತಃಕಾಲದಲ್ಲಿ ದುಡ್ಡು ೧ ತೂಕ ಚೂರ್ಣವಂ ಜೇನುತುಪ್ಪದಿಂ ಕಲಸಿ ಸೇವಿಸೆ ಕ್ಷಯ, ರಕ್ತಪಿತ್ತ, ಪಾದದಾಹ, ಪ್ರಮೇಹ . . . ರಕ್ತಾರ್ಶರೋಗ ಸಹ ಕೆಡುಗುಂ (ಕಕಕ್ಕ. ೨೯೯). [ ಸಂ. ]

**ಪಾದಧೂಳಿ** (ನಾ). ಪಾದಕ್ಕೆ ಹತ್ತಿರುವ ಧೂಳು : ಅಂತರಂಗ ದೊಳಣ್ಣನ ಪಾದವ ಭಜಿಪ ಭಾವೆಯರ ಪಾದಧೂಳಿಗಳಿಂದೆ ಪಾವನಮಹುದೀ ಮೇದಿನಿಯೆನೆ ಮಿಕ್ಕುದೇನು (ಹರಿ. ೨-೩); ನಮ್ಮ ತಾಯಿಯ ಪಾದಧೂಳಿಯು ನಮ್ಮ ಪ್ರಾಣದ ನಿಲುಗಡೆ (ಕಂಹು. ೯೬-೨೩); ಶಿವಶರಣ — ಸಾಧು — ಸತ್ಪುರುಷರ ಪಾದಧೂಳಿಯಿಂದ ಕನ್ನಡನಾಡು ಪಾವನವಾಗಿದೆ (ಕನ್ನಹಾ. ೦೩).
[ ಪಾದ+ಧೂಳಿ (=ಧೂಲಿ) ]

**ಪಾದನ್ಯಾಸ** (ನಾ). ಹೆಜ್ಜೆಯಿಡುವಿಕೆ : ಪಾದನ್ಯಾಸವಿಳಾಸಮಾರ್ವರೆಯು ವಿಥ್ಯಾಥ್ಯಂತಮಂ ತಾಳ್ದಿ . . . ದಾವರಿಗೆ ವಂದಂ ಪಾರ್ಶ್ವ ಯೋಗೀಶ್ವರಂ (ಪಾರ್ಶ್ವ. ೦೫-೯೩). [ ಪಾದ+ನ್ಯಾಸ ]

**ಪಾದಪ** (ನಾ). ಬೇರಿನಿಂದ ನೀರು ಕುಡಿಯುವುದು ; ಮರ, ಗಿಡ ಮುಂತಾದುವು : "ತರು ಶಾಖಿ ಪಾದಪಂ . . . ಶಿಖಿ ವೃಕ್ಷಂ" (ಚನ್ನುಕೋ. ೩೦-೦); ಪಾದಪಂಗಳ ಪುಷ್ಪಸ್ತಬಕಂಗಳಂ ಮುಜ್ಜೇತಂ (ಚಾದಂಪು. ೬೩೦); ಕಡಿದರರಿಭಟಪಾದಪವನಡಗೆಡಹಿದರು ಗಜಗಿರಿಗಳನು (ಕುಮಾ. ೮. ೩-೯). [ ಸಂ. ]

**ಪಾದಪಟ್ಟ** (ನಾ). ಗೌರವಸೂಚಕಚಿಹ್ನೆಯಾಗಿ ಕಾಲಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; ಕಾಲ ತೊಡರು : (೪). [ ಸಂ. ]

**ಪಾದಪಲ್ಲಟ** (ನಾ). (ಪದ್ಯದ) ಸಾಲುಗಳ ಅದಲು ಬದಲು : ಈ ಮೇಲಿನ ಪದ್ಯಗಳಲ್ಲಿ ಅಕ್ಷರಪಲ್ಲಟ, ಪದಪಲ್ಲಟ, ಪಾದಪಲ್ಲಟ ಮತ್ತು ಪ್ರಾಸಪಲ್ಲಟಗಳೂ ಕಂಡುಬರುವುದನ್ನು ಗಮನಿಸಬಹುದು (ಕುಸುಮಾಂ. ೯೩).
[ ಪಾದ+ಪಲ್ಲಟ ]

**ಪಾದಪಾತ** (ನಾ). ಮಲ್ಲಯುದ್ಧದಲ್ಲಿಯ ದೋಷಗಳಲ್ಲಿ ಒಂದು ; ಕಾಲಿನಿಂದ ಒದೆಯುವುದು : ಕಳಂದೊಕ್ಕು ನಿಜಸುಗೆಯುದ್ದ ನಖಹತಿ ದಶನಹತಿ ಪಾದಪಾತಂ ಮುಷ್ಟಿಪಾತಮೆಂಬ ದೋಷಂಗಳು ಪೊರ್ದದ ನಾಲ್ಕುಂ ಸ್ಥಾನದೊಳಂ . . . ಪಲತೆಱದ ಪಾತಂಗಳೊಳಂ ನೆರೆದು (ಶಂಕ್ರಪು. ೩-೬೬ ವ). [ ಪಾದ+ಪಾತ ]

**ಪಾದಪಾಶ** (ನಾ). ೧. ದನ, ಕರು ಮುಂತಾದ ಪ್ರಾಣಿಗಳ ಕಾಲಿಗೆ ಕಟ್ಟುವ ಹಗ್ಗ : ಪಾದಪಾಶ—ಪಾವಪಾಸ (ಚುರ. ೨೯೨ ಕ್ರಯೋ). ೨. [ ಛಂದ ] ಮಧ್ಯಲಘುವುಳ್ಳ ಗಣ ; ಅಗ್ನಿಗಣ ; ರಗಣ : ಇದಱಿಂ [ ತೆಯಪ್ಪ ] ನಿಯಮಂಗಳಿಂದಯುಸೆ ತೃತೀಯ [ ಪಾದದೊಳ್ ] ಪಾದಪಾಶ [ ಸುರಪಾರ್ಕಹರಂ ] ಮದವದ್ಗಜೇಂದ್ರಗತಿ ನಾಗವರ್ಮನಿಂ (ಛಂದೋಂಬು. ೩-೨೦೩). [ ಸಂ. ]

**ಪಾದಪಾಶನ** (ನಾ). ೧. ಮರ, ಗಿಡ ಅಥವಾ ಸೌದೆಯೇ ಆಹಾರವಾದುದು ; ಬೆಂಕಿ ; ಅಗ್ನಿ. ೨. [ ಛಂದ ] ಮಧ್ಯಲಘುವುಳ್ಳ ಗಣ ; ಅಗ್ನಿಗಣ : ನಯುಗ ಮಿರೆ ಪಾದಪಾಶನನಿರೆ ಬಂದು ಕೋಕನದವದನೆ ನಾಕಿಯಿಂ ವಿನುತವಿದುವೆ ನಾಮದಿಂ (ಛಂದೋಂಬು. ೨-೦೩). [ ಪಾದಪ+ಅಶನ ]

**ಪಾದಪೀಠ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ ; ಕಾಲುಮಣೆ : ಪಜಾ ಪೊಡಮಡುವ ತೆಱನೆರ್ದೆಯೊಱಕಮನನುವಡಿಸಿ ಪೊಳೆವ ಮಕುಟದ ಕಿಕ್ಕಿಱಿಗಿಱಿದ ಪೊನ್ನ ಪೂಂಗಳ ತುಱುಗಲ್ ಮಱಲಿಸೆ ಪಾದಪೀಠದ

ಮೊದಲೊಳ್ (ಶಾಂತಿ. ೦೦-೬೦); ಯಾದವವಾಹೀಭುಜವನೌಲಿವಾಣಬ್ರಜ ಪ್ರಭಾಲಿಂಗಿತಪಾದಪೀಠಂ (ಶಾಸ. XX. ೯೬-೬; 1072); ವಿನಯಂ ಗುಂದದೆ ಪಾದಪೀಠತಳದೊಳ್ ಕುಳ್ಳಿರ್ದ ಲೋಕೈಕಮಿತ್ರನ ನೊತ್ತಂಬದಿನೆತ್ತಿ (ಪುಷ್ಪ. ೯-೬೨). [ ಪಾದ+ಪೀಠ ]

**ಪಾದಪೂಜೆ** (ನಾ). ೧. ಗುರುಹಿರಿಯರ ಪಾದಗಳನ್ನು ಪೂಜಿಸುವುದು : ಅಂತು ಮಹಾಜನರ ಪಾದಪೂಜೆಯುಂ ಕೊಟ್ಟು (ಎಪಿ.ಕ. ೬-೬೬ 1079); ಮೇಗಣ ಅರಿವಾತ್ರರು ಗದ್ದೆಯು ನೀರ್ನ್ನಾರಿಗಂ ಕ್ರಿಯಾವಂ ಕೊಟ್ಟು ಊರಿಂಗೆ ಪಾದಪೂಜೆಯು ಕೊಟ್ಟು ಮಾನ್ಯವಾಗಿ ಆ ದೇವರಿಗೆ ಬಿಟ್ಟರು (ಶಾಸ. XX. ೬೨-೨೦; 1122). ೨. ಮಠಾಧಿಪತಿಗಳೆದುರಿಗೆ ಪಂಥದ ಮೂಲಪುರುಷರ ಪಾದುಕೆಗಳಿಗೆ ಮಾಡುವ ಪೂಜೆ : ಇಂದು ಅವರ ಮನೆಯಲ್ಲಿ ಶೃಂಗೇರಿಮಠದ ಸ್ವಾಮಿಗಳನ್ನು ಕರೆಸಿ ಪಾದಪೂಜೆ ನಡೆಸಿದರು (ಜನ). ೩. (ಅಲಂ) ಒದೆಯುವುದು; ಥಳಿಸುವುದು : ಸತ್ತರ್ಗೆ ಪಾದಪೂಜೆಯನೆಸಪ ನಯಗಾಣನ್ (ಅಭಿ.ಪು. ೧೦-೧೦೭); ಮೂರು, ನಾಲ್ಕು ಜನ ಆಳುಗಳಿಗೆ ಅವರು 'ಪಾದಪೂಜೆ'ಯನ್ನು ಮಾಡಿದರು (ಎಡೆ. ೦೨೯).
[ ಪಾದ+ಪೂಜೆ ]

**ಪಾದಪೂರಕ** (ನಾ). ಪದ್ಯದ ಸಾಲನ್ನು ಪೂರ್ಣಗೊಳಿಸಲು ಪದ ಅಥವಾ ಅಕ್ಷರವನ್ನು ಸೇರಿಸುವುದು; ಸಾಲನ್ನು ಭರ್ತಿಮಾಡುವುದು : ತನ್ನ ಆಶ್ರಯದಾತನಿಗೆ ಆದರವನ್ನು ತೋರಿಸಲೂ . . . ಪಾದಪೂರಕವಾಗಿಯೂ ನೃಪತುಂಗನ ಹೆಸರನ್ನು ಗ್ರಂಥಕಾರನು ಬಳಸಿರುವನೆಂಬುದು ಸ್ಪಷ್ಟವಾಗಿದೆ (ಕಾಪ್ರ. ೩೬). [ ಪಾದ+ಪೂರಕ ]

**ಪಾದಪೂರಣ** (ನಾ). ಪದ್ಯದ ಪಾದಗಳನ್ನು ಪೂರ್ಣಗೊಳಿಸುವುದು : "ನೆಱೆ ಸಲೆ ತವೆ ಮಿಗೆಯೊಗುಮಿಗೆಯುಂಟೆಯೆಂಬಿವು ಪಾದಪೂರಣಾರ್ಥಂ" (ಶಮ. ೭೯); ಹಠಾತ್ತಾಗಿ ಪಾದಪೂರಣಕಾರ್ಯದಲ್ಲಿ ಅವುಗಳಿಗೆ ಸವನ್ನು ಹೋಗುತ್ತದೆ ; ಅವುಗಳಿಂದ ಮಾತ್ರಾಪೂರಕಣವಾಗುವುದು ಮಾತ್ರ (ಶಾಂತ. II. ೨೦೦). [ ಪಾದ+ಪೂಣ ]

**ಪಾದಪೆಂಡೆಯ** (ನಾ). ಬಿರುದಿನ ಚಿಹ್ನೆಯಾಗಿ ಕಾಲಲ್ಲಿ ಧರಿಸುವ ಒಂದು ಬಗೆಯ ಕಡಗ : ಪಾದಪೆಂಡೆಯಂಪಡೆದೆಸೆವ ಪೆಂಪು (ಶಾಸ.೬೩).
[ ಪಾದ + ಪೆಂಡೆಯ ]

**ಪಾದಪ್ರಕ್ಷಾಲನ**, ಪಾದಪ್ರಕ್ಷಾಳನ (ನಾ). ಕಾಲುಗಳನ್ನು ತೊಳೆಯುವುದು : ತನ್ನಿನಿಯಂಗಲಪಾದಪ್ರಕ್ಷಾಲ [ ಜಾಳಂ. ೪ ] ನೋದಕದೊಳ್ಪರಳ್ದು (ಅಭಿ. ೩-೨ ೩); ಪಾದಪ್ರಕ್ಷಾಲನಮುಂ ಸಾದರದಿಂ ಮಾಡಿ ಸಾರ್ತರಲ್ (ಕುಶಾಸ. ೦೦-೨೦). ಪಾದಪ್ರಕ್ಷಾಳನ : ಶ್ರೀಕೃಷ್ಣನು ಯಜ್ಞ ರಕ್ಷಣೆಯ ಭಾರವನ್ನೂ ಬ್ರಾಹ್ಮಣರ ಪಾದಪ್ರಕ್ಷಾಳನಾದಿ ಕೈಂಕರ್ಯವನ್ನೂ ವಹಿಸಿದನು (ಆಕೃ.ಕ. ೦೦೦). [ ಪಾದ+ಪ್ರಕ್ಷಾಲನ ]

**ಪಾದಪ್ರಕ್ಷಾಳನ** 'ಪಾದಪ್ರಕ್ಷಾಲನ' ನೋ.

**ಪಾದಪ್ರಣತ** (ನಾ). ಪಾದಗಳಿಗೆ ನಮಸ್ಕರಿಸಿದವನು, -ಬಾಗಿದವನು : ದ್ವಾರಪಾಲಕರರಸಂಗವರ ಬರವನಱಿಪಿ ಬಂದು ಕಾಣಿಸೆ ಲೋಕಾಂತಿಕದೇವರವನೀಶ್ವರಂಪಾದಪ್ರಣತರಪ್ಪಾಗಿ (ಶಾಂತಿ. ೦೦-೯೨ ೩).
[ ಪಾದ+ಪ್ರಣತ ]

**ಪಾದಪ್ರಣಾಮ** (ನಾ). ಕಾಲಿಗೆ ನಮಸ್ಕಾರ ಮಾಡುವುದು: ಕಾದಂಬರಿಯುಂ ಮೆಯ್ಯ ವಲಪುಗೂಡಿ ಚಂದ್ರಾಪೀಡನಿಗೆ ಪಾದಪ್ರಣಾಮಮಂ ಮಾಡಿ . . . ಕುಳಿತುಕೊಂಡಳು (ಕಹಿ. ೩೩). [ಪಾದ + ಪ್ರಣಾಮ]

**ಪಾದಬಂಧ** (ನಾ). (ಆನೆ ಮೊದಲಾದವುಗಳ) ಕಾಲಿಗೆ ಕಟ್ಟುವ ಸರಪಣಿ; ಸಂಕೋಲೆ : "ನಿಗಳಃ, ಪಾದಬಂಧಃ, ಹಿಂಜೀರಃ, ಶೃಂಖಲಾ, ಅಂದುಕಃ — ಈ ೫ ಆನೆಯ ಕಾಲ್ಗಟ್ಟು" (ಕರಾಭು. ೬೬-೬೦); "ಹಿಂಜೀರ ಮಂದುಕಂ ಶೃಂಖಳಂ ಪಾದಬಂಧಂ ನಿಗಳಮೆನಲು ಸಂಕಲೆಯೆನಿಪ್ಪುಂ" (ಕುಂಜ. ೯೬-೨). [ ಪಾದ+ಬಂಧ ]

**ಪಾದಮಾರ್ಗ** (ನಾ). ೧. ಕಾಲುನಡಗೆಯ ದಾರಿ; ಕಾಲುದಾರಿ. ೨. ಕಾಲುನಡಗೆ : ಅವಧಿಜ್ಞಾನಿಗಳ್ ಪವನಮಾರ್ಗದಿಂದಿಟ್ಟುದಂ ಕಂಡು ಪಾದಮಾರ್ಗದೊಳ್ ಕಿಱಿದಂತರದೊಳ್ ಅವನತಿಪುರಸ್ಸರಮಿದಿರ್ಗೊಂಡು (ಅಪು. ೩-೩೩ ೩); ಪಾದಮಾರ್ಗದಿಂ ಪೋಗಿ ಸೌಧರ್ಮಕಲ್ಪದೊಳಕೃತಕಚೈತ್ಯಾಲಯಂಗಳಂ ಕಲ್ಪಪಾದಪಪ್ರತಿಪಾದಿತ ವಿವಿಧಾರ್ಚನಂಗಳಿಂದರ್ಚಿಸಿ (ಪಂಶ್ರ. ೯-೬೮ ೩). [ಪಾದ + ಮಾರ್ಗ]

**ಪಾದಮೂಲ**, ಪಾದಮೂಳ (ನಾ). ೧. ಕಾಲಿನ ಕೆಳಭಾಗ ; ಅಂಗಾಲು. ೨. ದೇವಸ್ಥಾನದ ಸೇವೆಯಲ್ಲಿ ಕಾಯಮ್ಮಾಗಿ ನಿರತರಾದ ಪರಿಚಾರಕ ವರ್ಗ: ಶ್ರೀಮದ್ದಿವ್ಯಶಕ್ತಿಪಣ್ಡಿತಭಟಾರರ ಮಯ್ದುನಾವನ್ನಾನಂ ಪಾದಮೂಲಮುಂ ಪನ್ನಕದಱಿಕ್ಷಾಣ್ಡಕುಳುಮಿಟ್ಟು (ಎಪಿ. X (೩). ಕಾ.ಬ. ೨೬-೩ ; ೯೫೩ ೩೩). ೩. (ಅಲಂ) ಕಾಲಿನ ಬಳಿ,—ಸಮೀಪ : ಆತನ ಪಾದಮೂಲದಲ್ಲಿ ಆರಿಂದಮನ ಅಸಮಸಾಹಸಿಯಾದ ವೀರವಿಕ್ರಮನೆಂಬು ನಾಯಿಯೊಂದು ಕುಳಿತುಕೊಂಡು ದೇವೇಂದ್ರನ ಮುಖವನ್ನೇ ನೋಡುತ್ತಿದ್ದಿತು (ಕಾದಂ. ೦) ; ಒಂದು ಬಾಣವು ಎಲ್ಲಿಂದಲೋ ಬಂದು ಅವರ ಪಾದಮೂಲದಲ್ಲಿ ಬಿತ್ತು (ಕುಶಾ. ೯೯). ಪಾದಮೂಳ : ೨. ಶ್ರೀರಾಮೇಶ್ವರದೇವರ್ಗ್ಗೆ ಅಂಗಭೋಗಕ್ಕಂ ರಂಗಭೋಗಕ್ಕಂ ಗನ್ಧಧೂಪದೀಪನಿವೇದ್ಯಕ್ಕೆ ದೇಗುಲದ ಖಂಡಸ್ಫುಟಿತಕಲ್ಲಿಯ ತಪೋಧನರ ಗ್ರಾಸಕ್ಕ [೦] ಪಾದಮೂಳಪರಿಗ್ರಹಕ್ಕಂ . . . ಕೊಟ್ಟರು (ಕಶಾ. ೩೦-೯೦-೯೦ ; 1121); ಅಲ್ಲಿಯ ಬ್ರಾಹ್ಮಣರ ತಪೋಧನರ ದೇವರ ಬ್ರಹ್ಮಪುರಿ ನಾಗಿಯಣ್ಣಭಟ್ಟನ ಗ್ರಾಸಕ್ಕಂ ಪಾದಮೂಳ ಪರಿಗ್ರಹಕ್ಕಂ . . . ಬಿಟ್ಟರು (ಕಶಾ. ೫೦-೩೩-೨೩; 1121). [ ಪಾದ+ಮೂಲ ]

**ಪಾದಮೂಲಿ** (ನಾ). =ಪಾದಮೂಲ ೨ : ಆ ಊರ ೨೪ ಪ್ರಜೆ ಜನನಿಗಳು ಯಮ್ಮಾಳದೇವರ ಪಾದಮೂಲಿಗಳು ಯಿವರೆಲ್ಲರ ಸನುಮತದಿಂದ . . . ಕೊಂಡ ಕ್ಷೇತ್ರದ ವಿವರ (ಶಾಸ. IX-II ; ೯೩೬-೯ : 1402) ; ತುಳುವದ ಶಾಸನಗಳಲ್ಲಿ ಬರುವ ಅಧಿಕಾರಿಗಳು ಯಾ ಅಧಿಕಾರವರ್ಗಗಳು . . . ಒಕ್ಕಲರು (ಒಕ್ಕಲ ಮಕ್ಕಳು), ಮೂಲಿಗರು, ಪಾದಮೂಲಿಗಳು ( ತುಳುಶಾ. ೫೬೦ ). [ ಸಂ. ಪಾದಮೂಲಿನ್ ]

**ಪಾದಮೂಳ** 'ಪಾದಮೂಲ' ನೋ.

**ಪಾದರ**₁ 'ಪಾರದಾರ' ನೋ.

**ಪಾದರ**₂ (ನಾ). ಒಂದು ಬಗೆಯ ಸಸ್ಯ : "ಮಟೋರಃ — ಹಲಸು, ಪಾದರ, ಪಾರಿವಾ(ಣ)ಳ, ಕಕ್ಕಿ, ಅರಸಿಕ್ಕೆ, ಮುತ್ತುಗ, ಮಂದಾರ" (ಓಪ್ರ. ೦೦೭). [ ? ]

**ಪಾದರಕ್ಕೆ** (ನಾ). =ಪಾದರಕ್ಷೆ : ಪರಪದಂ ತದ್ಭವವಾದ ಸಮಾಸಕ್ಕೆ . . . ಪಾದರಕ್ಷಾ—ಪಾದರಕ್ಕೆ (ಶುಂಶ. ೨೯೯ ಪ್ರಯೋ); ಪಾದರಕ್ಕೆ, ಪರದೊಮ್ಮಂ, ದಾನಸಾಲೆ ( ಕಶಾ.ಸು. ೨೯೬ ಪ್ರಯೋ). [ <ಸಂ. ಪಾದರಕ್ಷಾ ]

**ಪಾದರಕ್ಷಣ** (ನಾ). =ಪಾದರಕ್ಷೆ : "ಉಪಾನತ್, ಪಾದರಕ್ಷಣಂ— ಈ ೨ ಪಾದರಕ್ಷೆ" ( ಕರಾಭು. ೩೨-೦೩೩ ). [ ಪಾದ+ರಕ್ಷಣ ]

**ಪಾದರಕ್ಷೆ** (ನಾ). ರಕ್ಷಣಾರ್ಥವಾಗಿ ಪಾದಗಳಿಗೆ ತೊಡುವ ಸಾಧನ ಮೆಟ್ಟು ; ಪಾದತ್ರಾಣ : "ಉಪಾನತ್, ಪಾದರಕ್ಷಣಂ — ಈ ೨ ಪಾದರಕ್ಷೆ" ( ಕರಾಭು. ೩೨-೦೩೩ ) ; ಅವನಾದರೇನು ಶ್ರೀಮಹಾದೇವನ ನೆನೆವವನ ಬಾಯ ತಂಬುಲ ಮೆಲುವೆ ಬೀಳುಡಿಗೆಯ ಹೊದೆವೆ ಪಾದರಕ್ಷೆಯ ಕಾಯ್ದು ಬದುಕುವೆ ( ಏಕ. ೯೬೩ ) ; ದೇವತಾದರ್ಶನಕ್ಕೆ . . . ಪಾದರಕ್ಷೆಗಳನ್ನು ಮೆಟ್ಟಿ ಹೋಗಬಾರದು ( ಶಾಂತಶಾ. ೯ ).
[ ಸಂ. ಪಾದರಕ್ಷಾ ]

**ಪಾದರಗಿತ್ತಿ**, ಹಾದರಗಿತ್ತಿ (ನಾ). ವ್ಯಭಿಚಾರ ಮಾಡುವವಳು ; ಜಾರೆ : ಪರಿಜನಂಗಳ ಮೆಚ್ಚಿಸುವಾಗ ಪಾದರಗಿತ್ತಿಯೇ ಶರಣ ಸರ್ವರ ಮೆಚ್ಚಿಸುವಾಗ ಸಂತೆಯ ಸೂಳೆಯೇ ಶರಣ (ಸಿದ್ಧೇವ. ೦೦೫-೩೨೬). **ಹಾದರಗಿತ್ತಿ :** ಈ ಮಹಾಮಹಿಮರಿಗೆ ಜಗದ ಜತ್ತಿಗೆಯ ಹಾದರಗಿತ್ತಿಯು ಹದಿನೆಂಟುಜಾತಿಯ ಮನೆಯಲ್ಲಿ ತೊತ್ತಾಗಿ ಹುಟ್ಟಿದ ಶಿವದ್ರೋಹಿಯ ಲಿಂಗವಂತರ ಮನೆಯ ಹೊಗಿಸುವರೆ (ಶೂನ್ಯಸಂ. ೨೩೯-೦೦); ಗೋಣುಗೊಯ್ಕೆಯರು. . . ಹಾದರ ಗಿತ್ತಿಯರು ಬ್ರಹ್ಮಹತ್ಯಕಾತಿಯರನವರತಮುಂ ಹೊನ್ನುಬಾಕಿಯರು (ಬಸಪು. ೪೦-೩೫); ಗಂಡನಲ್ಲಿ ವಿಕಾರನಾದ ನೀಚವ್ಯಾಪಾರವಂ ಮಾಡುವಳು. ಹಾದರಗಿತ್ತಿಯಂತೆ ಒಯ್ಯಾರದಿಂ ನಟಿಪಳು (ಕಾಮಶಾ. ೨೦೪); ಹಾದರಗಿತ್ತಿ ಕಾಲು ಹಸೆಮಣೆ ಮೇಲೂ ನಿಲ್ಲುವುದಿಲ್ಲ (ಗಾದೆ).

[ ಪಾದರ$_1$ (<ಪಾರದಾರ)+–ಗಿತ್ತಿ ]

**ಪಾದರಜ** (ನಾ). ೧. ಕಾಲುನಡಗೆಯಿಂದೆದ್ದ ಧೂಳು ; ಕಾಲುಧೂಳಂ : ಭಯವಶವಿಮುಕ್ತಭೂಷಣಚಯ ಕೇರಳಕಾಮಿನೀಮುಖಶ್ರೀನೃಪಸೇನೆಯ ಪಾದರಜದಿನಂದೇನಯುತ್ತ್ಕರ್ಷಂ ಮವಿಳ ಸವಂ ತಾಳ್ದಿದುದೋ (ಶಾಂತಿಪು. ೦೦-೦೫). ೨. ಹೆಜ್ಜೆಗಳಿಗೆ ಅಂಟಿರುವ ಧೂಳು ; ಪಾದಧೂಳಿ : ಕಮಲಭವಾದ್ಯರುಂ ಪಡೆವರೇ ಹರಿಪಾದರಜೋಲವಪ್ರಸಾದವಂ (ಜಗಪು. ೩-೯೨); ಕಾಲಿಗೆ ಬಿದ್ದು ನಮಸ್ಕರಿಸಿ, ಪಾದರಜವನ್ನು ನನ್ನ ತಲೆಯ ಮೇಲೆ ಸಿಂಪಿಸಿ . . . ಓಡಿ ಹೋದೆನು (ಮುಚಿಕ. ೫). [ ಪಾದ+ರಜ$_1$ ]

**ಪಾದರಸ** (ನಾ). ೧. ಒಂದು ಬಗೆಯ ದ್ರವರೂಪದ ಲೋಹ ; ಪಾರಜ : "ರಸ ಪಾರದ ಸೂತಕ ಚಪಲ[ಸಂ]ಜ್ಞಿತಂ ಗಿರಿಶವೀರ್ಯಮದು ಪಾದರಸಂ" (ಪಟ್ಟುಕೋ. ೯೯-೦೫); ವೈಕ್ರಿಯಕಶರೀರಂಗಳ್ ಪಾದರಸದ ಮಾರ್ಗದಿಂ ಪತ್ತುತ್ತುಮಿರ್ಕುಂ (ಸುಕುಮಾ. ೦೦-೯೬೪) ; ಚೋರಿಸಿ ನಿಲುಕಿದರು ಫಣಿಯಂತೆ ಮಮಮ್ಮೈಲುಳಿಯಲೊಲೆದರು ಪಾದರಸದಂದದಲಿ ಪಟುಭಟರು (ಕುಮಾ.ಗ. ೬-೨) ; ಪಾದರಸ ಕರತಳದಲಿರುತದನಂಟದಂದದಿ ತಿಳಿವಿಗರು ಸಂಸೃತಿಯಲಿರೆ ನಿರ್ಲೇಪರೆಂದೆಣಿಸು (ಗಗಚಾ. ೦೫-೨೫); ಇಲಿ ಪಾದರಸ ಕುಡಿದ ಹಾಗೆ (ಗಾದೆ). ೨. (ಅಲಂ) ಚುರುಕಾದ ವ್ಯಕ್ತಿ: ಉರಿಯ ಬಂದಿಯು ಹಿಡಿದು ಹೆಚ್ಚುವ ದೊರೆಯಲೇ ದಿಟ ಪಾದರಸವೆಲೆ ಯರಸ ನಿನ್ನ ಕುಮಾರನು (ಕುಮಾ.ದ್ರೋ. ೯-೪೦).

[<ಪಾರದ+ರಸ./ತಮಿ. ಪಾತ್ತರಚ ; ತುಳು. ತೆಲು. ಪಾದರಸ ]

**ಪಾದರಿ$_1$** (ನಾ). ಜಾರೆ ; ವ್ಯಭಿಚಾರಿಣಿ ; ಹಾದರಗಿತ್ತಿ : ಪೋದಿರುಳಿನ ಕಿತ್ತಡವಂ ಮೂಣಲೆಯಾಗಿಂತು ನುಡಿದೊಡಬ್ಬುದನದಾ ಪಾದರಿ ಬೇಸತ್ತವೊಲಿರೆ ಪೋದಂ ಬಗೆ ಕದಡಿ ತಾಯ ಪೊರೆಗೆ ನೃಪೇಂದ್ರಂ (ಧರ್ಮಾಮೃ. ೨-೬೦); ಚಪಲೆ ಚಂಚಲೆ . . . ಪರವಶೆ ಪಾದರಿ ವಿಫಲೆ ವಿಹ್ವಲೆ . . . ತಾಮಸಿಯೆನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಶೃಂಚಾ. ೫-೬೦) ; ಅತಿಪಾತಂ ಮಧುಪಾನವ್ಯಸನ ದೊಳ್, ಮಧುಪಾನವ್ಯಸನಪಾಜಿಡಿಯೊಳ್, ಆಬಿಡಿ ಪಾದರಿಯೊಳ್, ಪಾದರಿ ಬನದೊಳ್ಳಲ್ಲದಿಲ್ಲಂ (ರಾಮಾಶ್ವ. ೬-೨).

[ ಪಾದರ$_1$ (<ಪಾರದಾರ)+–ಇ$_2$ ]

**ಪಾದರಿ$_2$**, ಹಾದರಿ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ; ಪಾಟಲಿ : "ಪಾದರಿ ಪಾಟಳಾಖ್ಯಂ" (ಪಟ್ಟುಕೋ.೩೬-೦); ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳ್ (ಅಜಿಪು. ೦೦-೬೫); ಅತಿಪಾತಂ ಮಧುಪಾನವ್ಯಸನದೊಳ್, ಮಧುಪಾನವ್ಯಸನಪಾಜಿಡಿಯೊಳ್, ಆಬಿಡಿ ಪಾದರಿಯೊಳ್, ಪಾದರಿ ಬನದೊಳ್ಳಲ್ಲದಿಲ್ಲಂ (ರಾಮಾಶ್ವ. ೬-೨). **ಹಾದರಿ :** "ಹಾದರಿ—ಪಾಟಲಾ—ಪಾದರಿ" (ಕರ್ಣಕೋ. ೪೯); ಕೇದಗೆ ಸಂಪಗೆ ನಾಗಂ ಹಾದರಿಯದಿರ್ಗುಂತೆ ಸುರಂಜಿ ಪಕುಳ ಲವಂಗಂ ಜಾದಿ ಮೊದಲಾದನೇಕ ಪೂದೋಂಟಂ ಸುರಭಿಪರಿಮಳಮೋದಂಗಳ್ (ಎಕ. VIII. ಸಾಗರ.೦೦೯-೫೦, 1042); ಅಶೋಕೆಯನೊದೆದು ಪಲ್ಲವಿಸೆಂಬ ಹಾದ[ಕಾಂಸಾಂ. ಪಾದಿ] ರಿಯ ನೆಳಲ್ಗೆ ಹರಿಣಂಗಳಂ ಹೊಡೆಯೆಂಬ ಕೆಲಸದ ನೆವದಿಂ ರತಿಮಂಗಳೆ . . . ಕಳುಪಿ (ಪಂಪಭಾ. ೦೪-೩೯); ಹಾಲೆ ಹಾದರಿ ಬನ್ನಿ ಮೊದಲಾದ ತರುಗಳ ಜಾಲದಿಂದೆಸೆದುದಾ ವಿಪಿನ (ರಾಜಶೇ. ೦೫-೩೯).

[ <ಸಂ. ಪಾಟಲಿ./ತಮಿ. ಮಲ. ಪಾತಿರಿ ; ತುಳು. ಪಾದರಿ ; ತೆಲು. ಪಾದಿರಿ, ಪಾದಿಲಿ ]

**ಪಾದರಿ$_3$** 'ಪಾದ್ರಿ' ನೋ.

**ಪಾದರಿಗ**, ಪಾರದರಿಗ, ಹಾದರಿಗ (ನಾ). ಹಾದರ ಮಾಡುವವನು ; ವ್ಯಭಿಚಾರಿ ; ವಿಟ : ವಿಪ್ರಾನ್ನಳಂತೆ ಗಾಳಿಯೊಳ್ ತೊಡರ್ದಿರ್ದ ಪಾದರಿಗರಿಂ (ಕಾವ್ಯಸಾ. ೫೨೯ ಕೂರ್ಪ್ರ೯); ಪೃಥ್ವಿಯಂ ರಕ್ಷಿಸುವ ಸ್ವಾಮಿ ಚೋರ ಜಾರ ಪಾದರಿಗರ್ಕಳಂ ಕೊಲ್ಲದಿರ್ಕುಮೆ (ಪದ್ಮಾಚಾ. ೬೦-೯); ಪಾದರಿಗೆಯ ಮೂಗನರಿದು ಪಾದರಿಗನಂ ಕೊಲ್ವರು (ಶಾಸನ. IX-1, ೬೬-೩೩; 992); ನಾವಿದನ ಪೆಂಡತಿಯಪ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು (ಶಂಕಸಂ. ೬೩-೩). **ಪಾರದರಿಗ :** ಕ್ಷಪಾಕರನಿನಾತ್ಮಜಾಂಶಗತನಾಗೆ ನೋಡಲ್ ದಿನಾಧಿಪಪ್ರಭೃತಿ ಷಡ್ಗ್ರಹಂ ಗಳವನಲ್ಪಪುತ್ರಂ ಸುಖಿತ್ವಮೇತಧನಭಾಗಿ . . . ಪಾರದರಿಗಂ ಮಹಾ ಕೃಪಣನಕ್ಕುಮಾ ಲಗ್ನಜಂ (ಜಾತಕ. ೨೦-೨೨). **ಹಾದರಿಗ :** "ಜಾರ, ಉಪಪತಿ — ಈ ೨ ಹಾದರಿಗಂ" (ಹಲಾಯು. ೬೬-೨೨೯) ; ಕಳ್ಳ ಹಾದರಿಗರ ಸಂಪಾದನೆ ಹೊಳ್ಳ ಕುಟ್ಟಿ ಕೈ ಹೊಟ್ಟಾದಂತೆ ಕಾಣಾ (ದೇವಾಪ. ೨೨-೩೬); ಕಡುಹುಗಳ್ಳನು ಹಾದರಿಗನುಂ ಗಡಣೆಗಿವರೆನೆ ಶರದ್ರಿಕಂ ಕುಲಗೆಡಿಕನಹ ಕೀಚಕನು ನೆಟಿ ಕಡಿವಡೆವರು (ಬಸಪು. ೦೦-೫೦); ಹೋದನತ್ತಲು ಸತಿಯ ಕೊಂಡಾ ಹಾದರಿಗನು (ಕೌಶಿಚಾ. ೬-೯೩).

[ ಪಾದರ$_1$ (<ಪಾರದಾರ)+–ಇಗ ]

**ಪಾದರಿಗೆ** (ನಾ). =ಪಾದರಿ$_1$ : ಪಾದರಿಗೆಯ ಮೂಗನರಿದು ಪಾದರಿಗನಂ ಕೊಲ್ವರು (ಶಾಸನ. IX-1, ೬೬-೩೩; 992); ಪಾದರಿಗೆಯ ದೂದವಿ ಯಂತೆ ಪೆಜಿರಂ ಸಂಕೇತಂಗೊಳಿಸದೆ (ಧರ್ಮಾಮೃ. ೫-೯೯); ನಿಗ್ರಹಕ್ಕೆ ಪಾದರಿಗೆಯ ನೋಡಿ ನಿಗ್ರಹಮನೆಯ್ದಿ ಪರುಗ್ರದುರಂತದುಃಖಮಂ (ಕಸಾರ. ೪೦೦). [ ಪಾದರಿಗ+–ಎ$_2$ ]

**ಪಾದರಿಸು** (ಕ್ರಿ). ಹಾದರ ಮಾಡು ; ವ್ಯಭಿಚಾರ ಮಾಡು : ಜಲಜಶರತಾಪವಂ ನಿಲಿಸಲಾಱದೆ ಬಂಧುಗಳು ತಿಳಿಯದಂತೆ ಪಾದರಿಸು ತಡಕದೊಳಿತಲು (ರಾಜಶೇ. ೦೦-೩೯); ದನುಜೇಂದ್ರನಾತ್ಮಸುತೆ ಕರ್ನಿಕೆಯು ಪಾದರಿಪುದನುಮತವೆ (ಪಡಮೋ. ೨೬-೮).

[ ಪಾದರ$_1$ (<ಪಾರದಾರ)+–ಇಸು$_2$ ]

**ಪಾದಲೇಪೌಷಧಿ** (ನಾ). ಕಾಲಿಗೆ ಹಚ್ಚಿಕೊಳ್ಳುವ ಒಂದು ಬಗೆಯ ಅಂಜನ : ಪಾದಲೇಪೌಷಧಿಪ್ರಭಾವದಿಂ ವಿಂಶತಿಸಹಸ್ರಸೋಪಾನಂಗಳ ನಸಂಗದಿಂದಮೇಱ ಗಂಧಕುಟಿಯಂ ಪೊಕ್ಕು (ಚಂದ್ರಪು. ೬-೫ ಪ); ಅಲ್ಲಿ ಸರ್ವರೂ ಪಾದಲೇಪೌಷಧಿಸಾಮರ್ಥ್ಯದಿಂ ಆ ಸೋಪಾನಗಳನ್ನಾರೋಹಿ ಸಿದರು (ಪುರುಷ. ೦೨೯). [ ಸಂ. ]

**ಪಾದವಟ್ಟ** (ನಾ). ಕಾಲಿನ ಒಂದು ಬಗೆಯ ಆಭರಣ ; ಕಾಲಂದುಗೆ : ಪೆಂಡೆಯ ಪಾದವಟ್ಟಗಳೊಪ್ಪಿದುವು ಚಂದ್ರಮಂಡಲಮುಖಿಯಡಿಗಳೊಳು (ಶಬರ. ೪೦-೬೦). 'ಪಾಯಂವಟ್ಟ' ಪರಾ. [ <ಪಾದಪಟ್ಟ ]

**ಪಾದವಟ್ಟಿಗೆ** (ನಾ). ಮೆಟ್ಟಿಲು ; ಸೋಪಾನ : ಪಾಸಿದ ತಣ್ಣಿದಿರಱಿಯ ಪಾದವಟ್ಟಿಗೆಗೊಳಗೇರಿಯ ನಿಡುಮಾರಂಗಳಿಟಂಬಿನ ಕಟ್ಟಲೆಯನೊಳ ಕೊಂಡು. . . ಕಿಱುಗಾಳಿಯಲೆಪದಿಂ ಕಲ್ಪರಿಪ ತೆರೆಯಿನೊಂದು ಕೊಳಂ ಪಗಲ್ವೆಣ್ಣ ಕ್ರೀಡೆಯೆಂಬಂತಿರೆ ಸೊಗಯಿಸಿದತ್ತು (ರಾಮಾಶ್ವ. ೫೨-೦೪).

[<ಸಂ. ಪಾದಪಟ್ಟಿಕಾ ]

**ಪಾದವಲ್ಮೀಕ** (ನಾ). ಆನೆಯ ಕಾಲಿನಂತೆ ಕಾಲು ದಪ್ಪವಾಗಿ ಊದಿಕೊಳ್ಳುವ ಒಂದು ಬಗೆಯ ರೋಗ; ಆನೆಕಾಲುರೋಗ: "ಶ್ಲೀಪದಂ, ಪಾದವಲ್ಮೀಕಂ... ಈ ೨ ಆನೆಗಾಲ್" (ಕಠಾಯು. ೯೯-೪೩೦). [ಪಾದ+ವಲ್ಮೀಕ]

**ಪಾದವಾಸ** (ನಾ). =ಪಾದಪಾಶ ೧: ಪರಪದದ ಮೊದಲೊಳ್ ಪಕಾರ ಬಕಾರ ಮಕಾರಂಗಳಿರೆ ವತ್ವಮಕ್ಕುಂ . . . ಪಾದಪಾಶ—ಪಾದವಾಸ, ಯೋಗಪಾದುಕಾ — ಜೋಗವಾವುಗೆ (ಶಬ್ದ. ೨೬೩ ವೃ ಯೋ). [<ಸಂ. ಪಾದಪಾಶ]

**ಪಾದವಿನ್ಯಾಸ** (ನಾ). ೧. ನಡೆಯುವಾಗ ಕಾಲನ್ನು ಇಡುವುದು. ೨. ಪದ್ಯದ ಪಾದಗಳನ್ನು ಜೋಡಿಸುವುದು. ೩. ಕಿರಣಗಳನ್ನು ಹರಡುವುದು, — ಪಸರಿಸುವುದು. ೨, ೩: ಅತಿಶಯಪದಾರ್ಥ ನಿಕರಪ್ರತೀತಿಯಂ ಪಡೆವ ಪಾದವಿನ್ಯಾಸಂ ಭೂನುತವಾಗದಲ್ತೆ ನಿರ್ದೋಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ (ಚಂದ್ರಪ್ರ. ೦-೯೬). [ಪಾದ+ವಿನ್ಯಾಸ]

**ಪಾದವಿಷ್ಟರ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ; ಕಾಲಮಣೆ; ಪಾದಪೀಠ: ಕ್ಷಮರಾಪ್ತರ್ ನಯಕೋವಿದರ್ ಸಕಳಶಾಸ್ತ್ರಾರ್ಥರ್ . . . ಕುಲೀನರ್ ನೃಪೇಂದ್ರಮೃಗೇಂದ್ರಾಸನಪಾದವಿಷ್ಟರದೋರ್ದರ್ (ಆದಿಪು. ೨-೨೩). [ಪಾದ+ವಿಷ್ಟರ]

**ಪಾದಶಾ** 'ಪಾತಶಹ' ನೋ.

**ಪಾದಶಾಖೆ** (ನಾ). ಕಾಲಿನ ಬೆರಳು. [ಸಂ. ಪಾದಶಾಖಾ]

**ಪಾದಶಾಯಿ** 'ಪಾತಷಾಹಿ' ನೋ.

**ಪಾದಶಾಹ** 'ಪಾತಶಹ' ನೋ.

**ಪಾದಶಿಲೆ** (ನಾ). ಕಂಬದ ತಳಕ್ಕೆ ಆಧಾರವಾಗಿ ಕೊಡುವ ಕಲ್ಲು; ಕಂಬದ ಅಡಿಗಲ್ಲು: ಎನ್ನ ಪಾದವೇ ಪಾದಶಿಲೆಯಾಗಿ ಎನ್ನ ಕಾಲೇ ಕದಹದ ಕಂಬಗಳಾಗಿ (ಶರಣ. ೦೮೦-೬೩೦). [ಪಾದ+ಶಿಲೆ]

**ಪಾದಶೂಲೆ** (ನಾ). ಕಾಲಿನಲ್ಲಿ ಉಂಟಾಗುವ ನೋವು: ಪುಣಿಮಾನ ಪುಷ್ಪಿಗೆ ಒಂದು ಹಿಡಿ ಲೊಕ್ಕಿಯ ಸೊಪ್ಪಿನೊಳಗೆ ಹೋಯ್ದು . . . ಸೇವಿಸಿ ಮರ್ದನಂ ಮಾಡೆ ಮಂದಾಗ್ನಿ. ಪಾತಶೂಲೆ. ಪಾದಶೂಲೆ. ಸರ್ವಾಂಗ(ಗ)ಶೂಲೆ. ಮುಂಡುಬುಶೂಲೆ, ಪ್ರಾಣ್ಣುಂ (ಬಸ್ತಿ. ೬೩). [ಪಾದ+ಶೂಲೆ$_1$]

**ಪಾದಶೃಂಖಲೆ** (ನಾ). ಕಾಲನ್ನು ಕಟ್ಟಲು ಉಪಯೋಗಿಸುವ ಸರಪಣಿ: ಪರಪದಂ ತದ್ಭವಮಾದ ಸಮಾಸಕ್ಕೆ— ಉತ್ತರದೇಶ— ಉತ್ತರದೇಸ . . . ಪಾದಶೃಂಖಲಾ— ಪಾದಸಂಕಲೆ (ಶಬ್ದ. ೨೮೯ ವೃ ಯೋ). [ಪಾದ + ಶೃಂಖಲೆ]

**ಪಾದಷಹ** 'ಪಾತಶಹ' ನೋ.

**ಪಾದಷಹಾ** 'ಪಾತಶಹ' ನೋ.

**ಪಾದಷಾಹ** 'ಪಾತಶಹ' ನೋ.

**ಪಾದಸಂಕಲೆ** (ನಾ). = ಪಾದಶೃಂಖಲೆ: ಪರಪದಂ ತದ್ಭವಮಾದ ಸಮಾಸಕ್ಕೆ — ಉತ್ತರದೇಶ — ಉತ್ತರದೇಸ . . . ಪಾದಶೃಂಖಲಾ — ಪಾದಸಂಕಲೆ (ಶಬ್ದ. ೨೮೯ ವೃ ಯೋ); ದಾನಸಾಲೆ. ಬಾಹುಬಲೆ. ಪಾದಸಂಕಲೆ (ಶಬ್ದಾನು. ೨೯೬ ವೃ ಯೋ). [ಪಾದ+ಸಂಕಲೆ]

**ಪಾದಸರ** (ನಾ). ಕಾಲಿಗೆ ಧರಿಸುವ ಒಂದು ಬಗೆಯ ಸರಪಣಿಯಾಕಾರದ ಆಭರಣ; ಕಾಲುಸರ: ಜಗನ್ಮೋಹನಾಕಾರದಿಂ . . . ಪಾದಸರ ಕಾಲುಂಗುರಗಳಿಂ ಬಂಧುರವಾದ ಪಾದದ್ವಂದ್ವವಿನ್ಯಾಸದಿಂ (ಸೌಗಂಧಿ. ೩೯-೦೦); ಹೆಜ್ಜೆಯ ಕುಣಿತಕ್ಕೆ ತಕ್ಕಂತೆ ಈ ಪಾದಸರಗಳ ಕಿರುಗೆಜ್ಜೆಯು ನಾದ ಅನುರಣಿಸುವಂತಿದೆ (ನೋಳಂಬ. ೯೬). [ಪಾದ+ಸರ$_3$]

**ಪಾದಸಾಲೆ** (ನಾ). ಕಾಲಿನ ಆಭರಣ: ಬಿಜ್ಜಣಿಯು ಕಾಳಂಜಿಯುಂದವಹ ಪಾದಸಾಲೆಯುಂ ಮುಖ್ಯವುಪಕರಣವೃಂದವುಂ ನೆರಪಿ . . . ಶೃಂಗರಿಸುತಿರಲು (ಸವಸೋ. ೨೬-೬೬). [ಪಾದ+ಸಾಲೆ$_2$./ ತಮಿ. ಪಾತ್ತಚಾಲ]

**ಪಾದಾಂಗುಲೀಯಕ** (ನಾ). ಕಾಲಿನ ಬೆರಳಿಗೆ ಇಟ್ಟುಕೊಳ್ಳುವ ಉಂಗುರ; ಕಾಲುಂಗುರ; ಕಾಲುಸುತ್ತು: ಪಾದಾಂಗುಲೀಯಕಗಳು—ಸ್ತ್ರೀಯರುಗಳು ಕಾಲುಬೆರಳುಗಳಲ್ಲಿ ಉಂಗುರಗಳು, ಓಲ್ಲಿ . . . ಧರಿಸಿದಲ್ಲಿ ಹೆಚ್ಚಾದ ಮಂಗಳವೂ, ಸರ್ವದುಷ್ಟಗ್ರಹೋಚ್ಚಾಟನವೂ ಸದಾ ಆನಂದವೂ ಆಗುವುವು (ಸಕಪ್ರ. ೯೦). [ಸಂ. ಪಾದಾಂಗುಲೀಯಕ]

**ಪಾದಾಂಬು** (ನಾ). ಪಾದದಲ್ಲಿ ಹುಟ್ಟಿದ ನೀರು: ನೈಜದಿಂದಜನ ಕರಪಾತ್ರದಗ್ರೋದಕಂ ವೈಜಯಂತೀಧರನ ಪಾದಾಂಬು . . . ತಾನಂತು ಪುಲ್ಲಪತಿಪಾಪಂಗಳ ಮೈಜೋಡನಂಗಿದು ಬಿಸುಡುವ ಗಂಗೆ ಬೆದಱುದಳ್ (ಜೈಮಿನಿ. ೯-೨೬). [ಪಾದ+ಅಂಬು$_1$]

**ಪಾದಾಕ್ಷ** (ನಾ). ಪಾದದಲ್ಲಿ ಕಣ್ಣುಳ್ಳವನು; ಶಿವ; ೯ ವಿಷ್ಣುವು ಕ್ಷುಪನೆಂಬ ರಾಜನ ನಿಮಿತ್ತವಾಗಿ ದಧೀಚಿಮುನಿಯನ್ನು ಚಕ್ರಾಯುಧದಿಂದ ಹೊಡೆದಾಗ ಅದು ಮುರಿದು ಹೋಗಲು, ಶಿವನನ್ನು ಮೆಚ್ಚಿಸಿ ಪುನಃ ಚಕ್ರವನ್ನು ಪಡೆಯುವೆನೆಂದು ವಿಷ್ಣುವು ಸಹಸ್ರಕಮಲಗಳಿಂದ ಅರ್ಚಿಸತೊಡಗಿದನು. ಆಗ ಒಂದು ಕಮಲವು ಸಾಲದಾಗಲು ಭಕ್ತಿಭರದಲ್ಲಿ ತನ್ನ ಕಣ್ಣನ್ನೇ ಕಿತ್ತು ಶಿವನ ಪಾದಗಳಿಗೆ ಅರ್ಪಿಸಿ, ಸಂತುಷ್ಟನಾದ ಶಿವನಿಂದ ತನ್ನ ಕಣ್ಣು, ಚಕ್ರ ಎರಡನ್ನೂ ಮರಳಿ ಪಡೆದನು. ಇದರಿಂದ ಶಿವನು 'ಪಾದಾಕ್ಷ'ನಾದನೆಂದು ಶೈವಪುರಾಣಗಳಲ್ಲಿ ಹೇಳಿದೆ: ಫಾಲಾಕ್ಷ ಪಾದಾಕ್ಷನಂ . . . ಶಿವನು ಸೋಮಾಭರಾಮಾಂಗನಂ ಹೃದ್ರಾಜೀವದೊಳಿಟ್ಟು ನಾಡೆ ನೆನೆದು (ಚನ್ನಾ. ೨-೬). 'ಕಣ್ಣಡಿಗ' ವರಾ. [ಸಂ. (ಪಾದ+ಅಕ್ಷಿ+—)]

**ಪಾದಾಗ್ರ** (ನಾ). ಕಾಲಿನ ತುದಿ; ತುದಿಗಾಲು: "ಪಾದಾಗ್ರಂ, ಪ್ರಪದಂ — ಈ ೨ ತುದಿಕಾಲ್" (ಕಠಾಯು. ೯೬-೩೬೩); ತೊವರೆ ಪಾದಾಗ್ರದೆ ನೂಂಕಿದಂ ಮುಳಿದವಂ ವಾರಾಶಿಯೊಳ್ ಚೇದ್ಯನಂ (ರಾಜಶೇ. ೯-೨೨). [ಪಾದ+ಅಗ್ರ$_1$]

**ಪಾದಾಘಾತ** (ನಾ). ಕಾಲಿನ ಹೊಡೆತ; ಒದೆತ: ಅಮುರಿತು ಪಾದಾಘಾತದಿಂದ ಧರೆ (ಬಸವ. ೩೯೦); ಅಶೋಕವೃಕ್ಷಗಳು . . . ಧಾರಿಣಿಯಂದಲೋ ಮಾಲವಿಕೆಯಿಂದಲೋ ಪಾದಾಘಾತದೋಹದ ಮಾಡಿಸಿಕೊಂಡಂತೆ ಮೈಯೆಲ್ಲ ಹೂ ತಳೆದಿತ್ತು (ಪಕುಹೂ. ೦೬೦). [ಪಾದ+ಆಘಾತ]

**ಪಾದಾತ** (ನಾ). ೧. ಕಾಲುನಡೆಯ ಸೈನಿಕ; ಕಾಲಾಳು: "ಪದಾತಿಃ, ಪತ್ತಿಃ, ಪಾದಾತಃ . . . ಪಾದಚಾರೀ — ಈ ೮ ಕಾಲಾಳ್" (ಕಠಾಯು. ೬೯-೨೯೬); "ಯಾತಂ ಪದಾತಿಕಂ . . . ಪಾದಾತಂ ಪದಾಜಿಯುಂ ಪದಿಕನೆನೆ ಕಾಲಾಳ್" (ಮಂಗರಾ. ೬೫-೨೬). ೨. ಕಾಲಾಳುಗಳ ಸೈನ್ಯ; — ಪಡೆ: ಪದಾತಿ ಸೈನ್ಯ: ನಡೆದುದು ಪಾದಾತಂ ಚತುರಶೀತಿಕೋಟಿಪ್ರಮಿತಂ (ಆದಿಪು. ೦೦-೩೩); ಆ ಪಾದಾತಂ ಲಕ್ಷಾಲಕ್ಷಮಪ್ಪಂ ಪ[ರಿ]ವೀಕ್ಷಿಸಲರಿದುಜಿದುದಿರ್ಪ ಕಾದುಪರೊಳರೇ (ಶಾಂತಿಪು. ೦೦-೦೦೬). [ಸಂ.]

**ಪಾದಾತಿ** (ನಾ). ಕಾಲಾಳು; ಪದಾತಿ. [ಸಂ.]

**ಪಾದಾತಿಕ** (ನಾ). ೧.=ಪಾದಾತ ೧: "ಪದಾತಿಃ. ಪತ್ತಿಃ, ಪಾದಾತಃ, ಪಾದಾತಿಕಃ . . . ಪಾದಚಾರೀ — ಈ ೮ ಕಾಲಾಳ್" (ಕಠಾಯು. ೬೯-೨೯೬). ೨. =ಪಾದಾತ$_2$: "ಪದಿಕಂ ಪತ್ತಿ ಪದಾತಂ ಪದಾತಿ ಪಾದಾತಿಕಂ ಪಾದಾಜಿಗೆ ನಾಮಂ" (ಚನ್ನುಕೋ. ೬೩-೦೦). [ಸಂ.]

**ಪಾದಾದಿಯಮಕ** (ನಾ). [ಕಾವ್ಯಮೀ] ಶಬ್ದಾಲಂಕಾರಗಳಲ್ಲಿ ಒಂದು: ಪದ್ಯದ ಸಾಲುಗಳ ಮೊದಲಲ್ಲಿ ನಿಯತವಾಗಿ ಬರುವ ಯಮಕ:

ಪಾದಾದಿಯಮಕಕ್ಕೆ — ಉಪದಾತ್ತನುತೋನ್ನತವಂ ದ್ವಿಪಮದಪರಿಪೂರ್ಣಗಿರಿಸರಿತ್ಸಂತತಿಯಂ ಉಪದಾತ್ತನುತೋನ್ನತವಂ ತಪನಕರೋತ್ತಪನತಪ್ತತಪನೋಪಲಮಂ (ಕಾವ್ಯಾ.ಅ. ೩೩೪). [ಸಂ.]

**ಪಾದಾಪವಿದ್ಧ** (ನಾ). [ನಾಟ್ಯ]ನೃತ್ಯದ ಒಂದು ಭಂಗಿ; ನೂರೆಂಟು ಕರಣಗಳಲ್ಲಿ ಒಂದು; "ಕಟಕಾಮುಖ ಹಸ್ತಗಳೆರಡನ್ನು ಒಂದಕ್ಕೊಂದು ಹಿಮ್ಮುಖವಾಗಿರುವಂತೆ ನಾಭಿಯ ಹತ್ತಿರ ಹಿಡಿದು ಸೂಚೀಪಾದದಿಂದ ಅಪಕ್ರಾಂತಚಾರಿಯನ್ನು ಮಾಡುವುದು" (ಲಾಸ್ಯರಂ. ೨೧೪ ಗದ್ಯಾನುವಾದ); ತಲಪುಷ್ಪಪುಟ, ಲೀನ . . . ದಂಡಪಕ್ಷ, ಪಾದಾಪವಿದ್ಧ . . . ಗಂಗಾವತರಣ — ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೬೨ ವ). [ಪಾದ + ಅಪವಿದ್ಧ]

**ಪಾದಾಪವಿದ್ಧಕ** (ನಾ).=ಪಾದಾಪವಿದ್ಧ: ಸಲೆ ವಲಿತ ದಂಡಪಕ್ಷಂ ಸುಲಲಿತ ಪಾದಾಪವಿದ್ಧಕಂ . . . ಭುಜಗತ್ರಸ್ತರೇಚಿತಾಖ್ಯಮಿವಿಂತುಂ (ಲಾಸ್ಯರಂ. ೪-೩೦). [ಸಂ.]

**ಪಾದಾಭಿಘಾತ** (ನಾ).=ಪಾದಾಘಾತ: ಪಾದಾಭಿಘಾತವಿಚಲನ್ಮೇದಿನ್ಯುತ್ಥಿತವಿಶಾಲಧೂಳಿಪಟಲಾಚ್ಛಾದಿತಗಗನಂ ನಡೆದುದು ಪಾದಾತಂ ಚತುರಶೀತಿಕೋಟಿಪ್ರಮಿತಂ (ಆದಿಪು. ೧೦-೩೩). [ಪಾದ + ಅಭಿಘಾತ]

**ಪಾದಾಭಿಷೇಚನ** (ನಾ). ಪಾದಗಳಿಗೆ ಅಭಿಷೇಕ ಮಾಡುವುದು: ಪೌರವರ್ಗಾಡಿದ ನಲಿನೀಪತ್ರಪುಟಪ್ರಸಾದಿತಸಾರಜಲಪಾದಾಭಿಷೇಚನದೊಳಮಭಿಷೇಕವಿಧಿಯಂ ನಿರ್ವರ್ತಿಸಿ (ಆದಿಪು. ೬-೩೭ ವ). [ಪಾದ + ಅಭಿಷೇಚನ]

**ಪಾದಾಭ್ಯಂಗನ** (ನಾ). ಎಣ್ಣೆ ಮುಂತಾದ ಲೇಪನದ್ರವ್ಯಗಳನ್ನು ಪಾದಗಳಿಗೆ ಹಚ್ಚಿ ತೊಳೆಯುವುದು: ಪಾದಾಭ್ಯಂಗನದಿಂದ ನೇತ್ರರೋಗವೂ . . . ಶಿರೋಭ್ಯಂಜನದಿಂದ ಸರ್ವರೋಗವೂ ಹರವಾಗುವುದು (ಸಕವ್ಯ. ೩೦). [ಪಾದ + ಅಭ್ಯಂಗನ]

**ಪಾದಾರ್ಚನೆ** (ನಾ). ಪಾದಗಳನ್ನು ಪೂಜಿಸುವುದು,—ಅರ್ಚಿಸುವುದು; ಪಾದಪೂಜೆ: ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ . . . ಕರೆದು ಕುಳ್ಳಿರಿಸಿ ಪಾದಾರ್ಚನೆಯಂ ಮಾಡಿ ಪಾದೋದಕವಂ ಕೊಂಡು (ಬಸವ. ೬೬೪); ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕದ ಹಂಗಿಂಗೆ (ಬಸವ. ೬೬೬). [ಪಾದ+ಅರ್ಚನೆ]

**ಪಾದಾರ್ಧ** (ನಾ). ಪದ್ಯದ ಸಾಲಿನ ಅರ್ಧಭಾಗ: ಯಮಕಂ (ಪ)ದಪಾದಾರ್ಧ ಸಮಶ್ಲೋ(ಕಾದಿ)ಗೋಚರಂ (ಕಐಾ. ೨-೦೨೪). [ಪಾದ+ಅರ್ಧ]

**ಪಾದಾವರ್ತ** (ನಾ). ೧. ಬಾವಿಯಿಂದ ನೀರನ್ನು ಮೇಲಕ್ಕೆತ್ತಲು ಉಪಯೋಗಿಸುವ (ಕಾಲಿನಿಂದ ತಿರುಗಿಸಬಹುದಾದ) ಒಂದು ಬಗೆಯ ರಾಟೆ,—ಯಂತ್ರ: "ಉದ್ಘಾಟಕಂ, ಘಟೀಯಂತ್ರಂ, ಪಾದಾವರ್ತಃ, ಅರಘಟ್ಟಕಃ — ಈ ೪ ಱಾಟಣಂ" (ಹಲಾಯು. ೦೦೩-೩೩). ೨. ಕ್ಷೇತ್ರದ ಒಂದು ಅಳತೆ; ಒಂದು ಚದರಡಿ: ಪಾದಾವರ್ತಶತತ್ರಯಂ (ಎಇ. III. ೩೨೦-೦೩; ೬೨೬). [ಸಂ.]

**ಪಾದಾಶ್ರಿತ** (ನಾ). ಪಾದಗಳಲ್ಲಿ ಆಶ್ರಯವನ್ನು ಪಡೆದವನು; ಶರಣಾದವನು: ಹರಿಪಾದಾಶ್ರಿತರಾಗಿಮಿಲ್ಲದೊಡೆ ಪಗೆಗೊಳ್ಳಿಂ (ಜಗರ. ೬-೦೦೩). [ಪಾದ + ಆಶ್ರಿತ]

**ಪಾದಾಶ್ರಿತೆ** (ನಾ). ಪಾದಗಳಲ್ಲಿ ಆಶ್ರಯವನ್ನು ಹೊಂದಿರುವವಳು; ಶರಣಾಗತೆ: ನಾವೀಗ ಜಗದಂಬೆಯ ಪಾದಾಶ್ರಿತೆಯರಾಗಿದ್ದೇವೆ (ಕಪಾಳುಂ. ೩೩). [ಪಾದಾಶ್ರಿತ + —ಎ₂]

**ಪಾದಾಸ್ತ್ರ** (ನಾ). ಕಾಲುಗಳನ್ನೇ ಆಯುಧವಾಗಿ ಉಳ್ಳುದು; ಕೋಳಿ: ಪಾರಿವ ಶಿಖಿ ಗಂಡಭೇರುಂಡ ಕೆಂಗ್ಣಾ ಕೀರಂಚೆ ಕೊಂಚೆ ಪಾದಾಸ್ತ್ರ . . . ಖಂಜರೀಟ ಖಗದ ಸಂಚಾರ . . . ಆ ನಗದಿ ರಂಜಿಸುವದಪಾರ (ಕೃರವೇ. ೦-೫೫). [ಪಾದ + ಅಸ್ತ್ರ]

**ಪಾದಾಹತಿ** (ನಾ). = ಪಾದಾಘಾತ: ಆಸ್ಥಾನದಲ್ಲಿರ್ದ ದುರ್ಧರವಿದ್ಯಾಧರವೀರರಂ ಜವನ ಬಾಯೊಳ್ ತೂಂಕಿದಂ ತನ್ನ ನಿಷ್ಠುರಪಾದಾಹತಿಯಿಂ ಪ್ರಭಂಜನಸುತಂ ಹಸ್ತಪ್ರಹಾರಂಗಳಿಂ (ಕಂಠಾಪು. ೦೦-೦೪೨). [ಪಾದ + ಆಹತಿ]

**ಪಾದಿ₁**, ಹಾದಿ (ನಾ). ೧. ಬಟ್ಟೆ; ದಾರಿ; ಮಾರ್ಗ: ಅಕ್ಕಿ ಬತ್ತ ಹೇಱಿಂಗೆ ಮಾನ ೨ ಎಣ್ಣೆ ಕೊಡಕ್ಕೆ × ಳಸಿಗೆ ೨ ಪಟ್ಟಣಸಾಮಿ ಗೊಯ್ದುಸೆಟ್ಟಿದೇವರ್ಗೆ ಯೆತ್ತದೋಪಾದಿಯೆಲಿಯೆತ್ತಿ ಕೊಂಬನ್ತು ಊರು ಗಡಪೂರಗಂಗರ × × × ಬಾಚಗಉಡ ಬಮ್ಮಿಸೆಟ್ಟಿ ಕನುಲ್ವರುಂ ಗೊಯ್ದುಸೆಟ್ಟಿಯ ಪಾದಿಯ ಸಂತೆಯ ಯೆತ್ತಿಕೊಂಬರು (ಎಕ. VII, ಶಿಕಮೊ. ೬೬-೩೩; 1203); ಇದುವೆ ಕಡವೆಯ ನೊರೆಯು ಭಲ್ಲುಕಂ ಕೆದರ್ದೆಡೆಯುಯಿದು ಗಜಂ ಪೋದ ಪಾದಿ (ರಾಶಶ. ೦೩-೩೯). **ಹಾದಿ**: ೧. ಇದು ಸತ್ಪಥಕ್ಕೆ ಎಯ್ದುವ ಹಾದಿ (ಬಶೀಕ್ಷ. ೪. ೪೨೯-೨೦); ಅಸುರರು ಹಾದಿಯನು ಸವಱದರು ಯಮಪುರದತ್ತ ಪಯಣಕ್ಕೆ (ಕೌರಿಂಡ. ೨೦-೦೭); ವಿದುರನ ಗೃಹದಿ ಪೋದದಿ ಒಕ್ಕುಡುತೆಯ ಪಾಲನೆ ಕೊಂಡು ಹಾದಿಲಿ ಹರಿಸಿದ್ದು ಎಲ್ಲಿ ಕಲಿತೆಯ್ಯ (ಕೃಂಡ. ೦-೯೩-೬); ಆದಿದೈವವನು ತಾ ಭೇದಿಸಲಿಕಱಿಯದಲೆ ಹಾದಿಯ ರಿಳ್ಳಿಗೆಡೆಮಾಡಿ ನವಿಸುವ ಮಾದಿಗರ ನೋಡು (ಸರ್ವಜ್ಞ. ೦೯೯). ೨. ಪಂಕ್ತಿ; ಸಾಲು; ಓಳಿ: ಕಯ್ಯೋಳರ ಹಾದಿಗಳೊಂದೆಸೆಯೊಳು ಬಯ್ಯೆಯ ಸತಿಯರ ಸಾಲೊಂದೆಸೆಯೊಳು (ತಿರುನಾ. ದೇ. ೨೨೨-೦೪). ೩. ರೀತಿ; ಬಗೆ; ಕ್ರಮ: ಮೊದಲು ಕವಿ ಕಾವ್ಯದೊಳ್ ಪೊಗಳಬೇಕೆಂಬ ಹಾದಿಯಂ ಪೊಗಳ್ದಡೀಶ್ವರನಾಣೆ ಶಿವಸಿದ್ಧರಾದಿತ್ಯ ಸಿದ್ಧರಾಮನ ಚರಿತ್ರವನೆಯ್ದೆ ಪೊಗಳಲಾನೆನಿತಱವನು (ಸಿದ್ಧರಾ. ೦-೩); ಕಮಲೋದರನು ಕಾಮಿನಿಯನೆದೆಯೊಳಗಾದರಿಸಿದನು ಕಮಲಭವ ಜಗವಱಿಯೆ ನಂದನೆಯ ಐದೆಯನು ನೆಱೆ ಮಾಡಿಯರವೇಣ್ಣಾದನೀಶ್ವರನಿಂದ್ರಗಿಂದ್ರರ ಹಾದಿಯದು (ಕೊರಾಂ. ೦-೫-೩೭); ಮುಂದಿನ ಪೀಳಿಗೆಗೆ ಅನುಕೂಲವಾಗುವಂತಹ ಮತ್ತು ಉಪಯೋಗವಾಗುವಂತಹ ಹಲವಾರು ಮಹತ್ವದ ವಿಷಯಗಳ ಬಗ್ಗೆ ಹಾದಿ ಹಾಕಿಕೊಡುವುದೂ . . . ಅಷ್ಟೇ ಮಹತ್ವದ್ದು (ಸಸ್ಯಕ. ೮೦).

**ಹಾದಿಗುಂಟ**=ದಾರಿಯ ಉದ್ದಕ್ಕೂ: ಹಳ್ಳವಾಗಿ ಬಂದ ಹಾಲು ಹಾದಿಗುಂಟ ಹರಿವುದಿನ್ನೂ (ಹಾಡುಹಾ. ೩೨-೩). **ಹಾದಿಗೆ ಬರು**=ದಾರಿಗೆ ಬರು; ಸರಿಯಾದ ಕ್ರಮಕ್ಕೆ ಬರು; ಸರಿಯಾಗು. ರಾಮನು ಒಬ್ಬ ಸ್ತ್ರೀಯನ್ನೇ ಉದ್ಧರಿಸಿದನು . . . ಆದರೆ ನಾಮದಿಂದ ಕೋಟ್ಯವಧಿಜನರ ವಿಪರೀತಬುದ್ಧಿಯು ಹಾದಿಗೆ ಬಂದಿರುವದು (ತುಳಸೀ. ೬); ಅಂತೂ ಹಾದಿಗೆ ಬಂದಿದ್ದಾನೆ (ಕಚ್ಛಿಕು. ೬೦). **ಹಾದಿಗೆ ಹಚ್ಚು** = ದಾರಿಯನ್ನು ಕಾಣಿಸು; ಸರಿಯಾದ ಮಾರ್ಗದಲ್ಲಿ ನಡೆಸು: ನನ್ನನ್ನು . . . ಈ ಹಳ್ಳದಿಂದ ಎತ್ತಿ ಹಾದಿಗೆ ಹಚ್ಚು ದೇವಾ (ಹಳ್ಳಹಾ. ೬೪). **ಹಾದಿಗೆ ಹತ್ತು**=ಹಾದಿಗೆ ಬರು: ಅಪ್ಪ . . . ಹಾಗೆ ನಡೆಸಿಕೊಂಡದ್ದರಿಂದಲೇ ಹುಡುಗ ಹಾದಿಗೆ ಹತ್ತಿದ (ಪೂಸ್ಕೃ. ೦೬೬). **ಹಾದಿ ಬೀದಿ ರಂಪ** = ಬೀದಿಯಲ್ಲಿ ನಡೆಯುವ ಜಗಳ; ಬೀದಿಜಗಳ: ಅಲ್ಲಿಗೇನು ಹೋಗಿ ನೀವು ಹಾದಿ ಬೀದಿ ರಂಪ ಎಬ್ಬಿಸಬೇಡಿ (ಗಂಗಾಶ. ೯೬).

[ದೇ.॥ ತಮಿ. ಪಾತ್ತೈ; ಮಲ. ಪಾಥ; ತುಳು. ಹಾದಿ. / ಸಂ. ಪಥ]

**ಪಾದಿ₂** (ನಾ). ಕಾಲಾಳು; ಪದಾತಿ: ಥಳಥಳಿಸುವ ರಥಯೂಥಪಾದಿಗಳಿಂದ ಥಳಪಳನೆಸೆವ ಕೈದುಗಳ ಥಳಥಳಿಕೆಯೊಳು ಮೇಲಿಕ್ಕಿದ ಮಾಗಧನ ಥಳಕನೆ ಗೆಲಿದನ ಜಯತು (ಕಶಹಾ. ೭೦-೫೯). [ಸಂ. ಪಾದಿನ್]

**ಪಾದಿಕ** (ನಾ).=ಪಾದಿ₂: "ಪದಾತಿಃ, ಪತ್ತಿಃ, ಪಾದಾತಃ, ಪಾದಾತಿಕಃ, ಪದಾ (ಜಿ)ಜಯಃ, ಪಾದಿಕಃ, ಪದಿಕಃ, ಪಾದಚಾರೀ — ಈ ೮ ಕಾಲಾಳ್" (ಹಲಾಯು. ೩೪-೨೪೩). [ಸಂ.]

**ಪಾದಿಲೋಣ** 'ಪಾದೆಲೋಣ' ನೋ.

**ಪಾದುಕ** (ನಾ). ಹಾವುಗೆ; ಪಾದುಕೆ : "ಪಾದುಕವುದನುಪದೀನವೆನೆ ಹಾವುಗೆಯು" (ಶಬ್ದಮ. ೬೧-೦೪). [ಸಂ.]

**ಪಾದುಕಾಕಾರ** (ನಾ). ಹಾವುಗೆಯನ್ನು ತಯಾರಿಸುವವನು; ಚಮ್ಮಾರ : "ಚರ್ಮಕೃತ್, ಪಾದುಕಾಕಾರಃ – ೨ ಸಮ್ಮಗಾರು" (ಹಲಾಯು. ೯೯ ೯೪೨). [ಸಂ.]

**ಪಾದುಕಾಸಿದ್ಧಿ** (ನಾ). ಐದು ಬಗೆಯ ಸಿದ್ಧಿಗಳಲ್ಲಿ ಒಂದು; ಮಂತ್ರಶಕ್ತಿಯುಳ್ಳ ಪಾದುಕೆಗಳನ್ನು ಧರಿಸಿ ಇಚ್ಛೆ ಬಂದಲ್ಲಿ ಸಂಚರಿಸಬಹುದಾದ ಸಿದ್ಧಿ : ಪಾದುಕಾಸಿದ್ಧಿ ಅಂಜನಾಸಿದ್ಧಿ ಘಟಿಕಾಸಿದ್ಧಿ ಮೂಲಿಕಾಸಿದ್ಧಿ ರಸರಸಾಯನಾದಿ ಸಿದ್ಧಿಗಳಂ ಸಾಧಿಸುತ್ತಿರ್ಕುಂ (ವಿವೇಕ. ೦೦). [ಸಂ.]

**ಪಾದುಕೆ** (ನಾ). ೧. (ಮರ, ಲೋಹ ಮುಂತಾದುವುಗಳಿಂದ ಮಾಡಿದ) ಪಾದರಕ್ಷೆ ; ಹಾವುಗೆ : "ಪಾದುಕಾ, ಅನುಪದೀನಾ – ಈ ೨ ಹಾವುಗೆ" (ಹಲಾಯು. ೫೨-೦೫೬); ಚರ್ಮದ ಪಾದುಕೆಗಳನ್ನು ಹಾಕಿಕೊಳ್ಳುವುದರಿಂದ . . . ಮಹಾಹಿತಕರವಾಗಿರುವುದು (ಸಕಪ್ರ. ೫೫); ರಾಮನ ಪಾದುಕೆಯನ್ನು ತಂದಿಟ್ಟುಕೊಂಡು ರಾಮನ ಪ್ರತಿನಿಧಿಯಾಗಿ . . . ರಾಜ್ಯವನ್ನು ನೋಡಿಕೊಳ್ಳುತ್ತೇನೆ (ವಾರಾಕ್ಟ. ೨೯); ಪೂಜ್ಯ ಪಾದುಕೆಗಳಂ ಪೂಜ್ಯಪಾದಂಗೆತ್ತು ಸಿಂಹಾಸನದೊಳಿಟ್ಟು ಪೂಜಿಸುವೆನಾಂ (ಶ್ರೀರಾಮಾ. ೦೭೩-೫೬೬). ೨. ಕಲ್ಲು ಅಥವಾ ಮರದ ಮೇಲೆ ಮೂಡಿರುವ, ದೇವರು ಅಥವಾ ಗುರುಗಳ ಪೂಜಾರ್ಹವಾದ ಪಾದದ ಗುರುತು, – ಮುಂದ್ರೆ. [ಸಂ. ಪಾದುಕಾ]

**ಪಾದುಕೆಗೆಯ್**, ಪಾದುಕೆಗೈ (ಕ್ರಿ). ಪಾದರಕ್ಷೆಯಾಗಿ ಮಾಡು ; ಹಾವುಗೆಯನ್ನಾಗಿ ಮಾಡು : ಗಣ್ಯ ಪುಣ್ಯರ ಚರಣಕೆನ್ನೆರ್ದೆಯನೊಸೆದು ಪಾದುಕೆಗೆಯ್ವೆನು (ರಾಘಶ. ೦-೦೩). **ಪಾದುಕೆಗೈ** : ನಿರ್ಮಲಾತ್ಮಕ ಪರಮಶಿವಶರಣರಡಿಗೆಯನ್ನೆರ್ದೆಯ ಪಾದುಕೆಗೈವೆನು (ಪಪಮೋ. ೦-೦೪). [ಪಾದುಕೆ+ಕೆಯ್₁]

**ಪಾದುಕೆಗೈ** 'ಪಾದುಕೆಗೆಯ್' ನೋ.

**ಪಾದುಶಾಹ** 'ಪಾತಶಹ' ನೋ.

**ಪಾದುಷಹ** 'ಪಾತಶಹ' ನೋ.

**ಪಾದುಷಾ** 'ಪಾತಶಹ' ನೋ.

**ಪಾದೂಯುಗ್ಮ** (ನಾ). (ಹೆಚ್ಚಾಗಿ ಗುರುಗಳ) ಹಾವುಗೆಗಳ ಜೊತೆ : ಶಿವನಾಮಾಂಕಿತಮಂ ರತ್ನವಿರಚಿತಮನುತ್ತಮಾಂಗದೊಳ್ ಪಾದೂಯುಗ್ಮವನೆಸೆಯೆ ತಳೆದು (ಕಾದಂಪು. ೬೬೦). [ಸಂ.]

**ಪಾದೆಲೋಣ**, ಪಾದಿಲೋಣ (ನಾ). ಒಂದು ಬಗೆಯ ಕಪ್ಪುಬಣ್ಣದ ಉಪ್ಪು ; ಬಿಡುಲವಣ : ಸೂರ್ತಿಚಪಾಳಾಮಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸಗಳು. ೧. ಅಕ್ಕಲಖಾಂ . . . ೧೨೬. ಪಾದೆಲೋಣ (ಮುಂಬವ್ರಾ. ೦೨೬). **ಪಾದಿಲೋಣ** : ಆ ಜೀನಸಗಳು . . . ಈ ಪ್ರಕಾರ-ಆಕ್ರೋಡ, ಅಕ್ಕಲಖಾರ . . . ಪಚ್ಚಕರ್ಪೂರ, ಪಾದಿಲೋಣ, ಪಿಸ್ತ, ಹಿಪ್ಪಲಿ (ಮುಂಬವ್ರಾ. ೨೦೪). [←ಮರಾ. ಪಾದೇಲೋಣ]

**ಪಾದೋದಕ** (ನಾ). ೧. ಕಾಲುಗಳನ್ನು ತೊಳೆಯಲು ಕೊಡುವ ನೀರು : ಅತಿಥಿಗಳಿಗೆ ಪಾದೋದಕವನ್ನೀಯುವುದು ಅದರ ಸತ್ಕಾರದ ಪದ್ಧತಿ (ಕ್ರಶಿಂಶ. ೯೫). ೨. [ವಿಶೇ] ಗುರುಹಿರಿಯರ ಕಾಲುಗಳನ್ನು ತೊಳೆದ ನೀರು ; ಪಾದತೀರ್ಥ : ಒಳಗೆ ತೊಳೆಯಲಾಯದೆ ಹೊರಗ ತೊಳೆದು ಕುಡಿವುತ್ತಿದ್ದರಯ್ಯ ಪಾದೋದಕಪ್ರಸಾದವನರಿಯದೆ ಬಂದ ಬಟ್ಟೆಯಲ್ಲಿ ಮುಳುಗುತ್ತೈದಾರೆ (ಅವಚಂ. ೩೬-೦೬೦); ಗಂಡ ಕೊಂಬುದು ಪಾದೋದಕಪ್ರಸಾದ ಹೆಂಡತಿ ಕೊಂಬುದು ಸುರೆ ಮಾಂಸ (ಬಸವ. ೦೦೪); ಶ್ರೀಪಾದಮಂ ತೊಳೆದು ಪಾದೋದಕಮಂ ತಳೆದು . . . ಕೃತಾರ್ಥಮನನಾಗುತ್ತಿರಲ್ (ಶಂಶರ. ೬-೩೦). ೫ ಪಾದೋದಕದಲ್ಲಿ ಹತ್ತು ಬಗೆಗಳನ್ನು ಹೇಳುತ್ತಾರೆ : "ದಶವಿಧಪಾದೋದಕ : ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಸ್ಪರ್ಶನೋದಕ, ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ" (ಕನ್ನಡ. ೪ ೬೩೦ ಪಾರಿಭಾಷಿಕಶಬ್ದಕೋಶ). [ಪಾದ+ಉದಕ₂]

**ಪಾದೋದಕಿ** (ನಾ). ಪಾದೋದಕವನ್ನು ಸ್ವೀಕರಿಸುವವನು, – ಸೇವಿಸುವವನು : ಹುಟ್ಟಲಿಲ್ಲದೆ ಪ್ರಸಾದಿಯಲ್ಲ ತೃಷೆಯಡಗಲ್ಲದೆ ಪಾದೋದಕಿಯಲ್ಲ (ಅವಚಂ. ೧೨೪-೫೬೫). [ಸಂ. ಪಾದೋದಕಿನ್]

**ಪಾದ್ಯ** (ಗು). ೧. ಕಾಲಿಗೆ ಸಂಬಂಧಿಸಿದ. (ನಾ). ೨. ಕಾಲುಗಳನ್ನು ತೊಳೆಯುವ ನೀರು : ಮುನಿಜನಪೂಜಾನ್ನದಾನಾದಿಕರಣಜನಗೃಹಜನಸತತೋಪನೀಯಮಾನಪಾದ್ಯಗಂಧಾಕ್ಷತಕುಸುಮಚರುಧೂಪದೀಪಫಲಾದ್ಯರ್ಚನಾತ್ಮಕಪುಷ್ಪನಿಕ್ಷೇಪವುಮಮುಂ (ಆದಿಪು. ೧೫-೦೩೪); ರಾಘವಂಗಾನತರಾಗಿ ಮೌಳಿಮಣಿದೀಪ್ತಿಜಲಂಗಳಿನೀಯೆ ಪಾದ್ಯಮಂ (ಶಂರಾಮಾ. ೧೬-೩೦); ಅಕ್ಕನ ಕೇಸಡಿದಳಿರ್ಗೆ ಜಯಶ್ರೀಯುಮ ಪಾದ್ಯಮಂ ಪ್ರಕಟಿಸಿದಳ್ (ಅಶಂಪು. ೨-೫೦). ೩. ಕಾಲುಗಳನ್ನು ತೊಳೆಯುವುದು ; ಪಾದಪ್ರಕ್ಷಾಲನ : ಜನಪತಿಗಂದು ಪಾದ್ಯಮನದೇಂ ಪೊಣಿಪಂತೆ ಮೆಲ್ಲನೆ . . . ಸುರಿದತ್ತು ಸದ್ಯಸರಸೀಶರಶೀಕರ ಮಂದಮಾರುತಂ (ಮಲ್ಲಿಪು. ೭-೪೮); ಮುದದೊಳೆದ್ದು . . . ಪುಣ್ಯಸಂಪದದ ಸಂಧ್ಯಾವಂದನಂ ಮಾಡಿ ವಿಹಿತಾರ್ಘ್ಯಪಾದ್ಯಮಂ ನಿರ್ವರ್ತಿಸಿ (ಹಪಕಾ. ೪-೫೪); ಮುನಿಯನಿದಿರ್ಗೊಂಡು ಪೊಡೆಮಟ್ಟು ಭದ್ರಾಸನದೊಳ್ಕುಳ್ಳಿರಿಸಿ ಅರ್ಘ್ಯಪಾದ್ಯಂಗಳಿಂ ಪೂಜಿಸಿ (ರಾಪಾಕ್ಯ. ೧೧-೮); ಪಾದ್ಯಕ್ಕೆ ನೀರು ಇಲ್ಲ, ಊಟಕ್ಕೆ ಮಜ್ಜಿಗೆಯೆಲ್ಲಿ? (ಗಾದೆ). [ಸಂ.]

**ಪಾದ್ಯದ್ರವ್ಯ** (ನಾ). ಕಾಲುಗಳನ್ನು ತೊಳೆಯುವ ನೀರಿನ ಜೊತೆಗೆ ಉಪಯೋಗಿಸುವ ವಸ್ತು ; ಪೂಜಾಸಾಮಗ್ರಿ : ಬಿಳಿಯ ಸಾಸುವೆ ಕುಸುಮ ದೂರ್ವೆ ಕೋಷ್ಠ ಲಾವಂಚ ಕರ್ಪೂರವೆಂಬಾಬು ಪಾದ್ಯದ್ರವ್ಯಂಗಳಂ . . . ಸಂಪಾದಿಸಿ (ವಿವೇಕ. ೯೪). [ಪಾದ್ಯ+ದ್ರವ್ಯ]

**ಪಾದ್ಯಪಾತ್ರೆ** (ನಾ). ಪಾದ್ಯದ್ರವ್ಯಗಳೊಂದಿಗೆ ಬೆರೆಸಿದ ನೀರಿರುವ ಪಾತ್ರೆ, – ಬಟ್ಟಲು : ವಿವಿಧಾಷ್ಟಗಂಧ ಕರ್ಪೂರ ಲಾವಂಚ ಸಾಸವೆ ಕೋಷ್ಠ ದೂರ್ವೆಯೆಂಬಾಬು ನೀರೊಳು ಬೆರಸಿ ಶಿವನ ಪಾದಕ್ಕೆಂದು ಸಂಕಲ್ಪಿಸುತ್ತೊಲಿದು ಪಾದ್ಯಪಾತ್ರೆಯೊಳೆಚಿವುದು (ಗುರುಕಾ. ೫ ೫೯). [ಪಾದ್ಯ+ಪಾತ್ರೆ]

**ಪಾದ್ಯವಿಧಿ** (ನಾ). ಕಾಲುಗಳನ್ನು ತೊಳೆಯುವ ಕ್ರಿಯೆ ; ಪಾದಪ್ರಕ್ಷಾಲನ : ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವಗ್ರಜಂ (ಆದಿಪು. ೧೪-೦೩೩). [ಪಾದ್ಯ+ವಿಧಿ]

**ಪಾದ್ರಿ**, ಪಾದರಿ (ನಾ). ಕ್ರೈಸ್ತರ ಧರ್ಮಗುರು ; ಚರ್ಚಿನ ಒಬ್ಬ ಕಾರ್ಯಕರ್ತ : ದೂಬಾಯಿ ಪಾದ್ರಿ ತನ್ನ ಮಿತ್ರರಿಗೆ ಬರೆದ ಕೆಲವು ಪತ್ರಗಳು ಫ್ರಾನ್ಸ್‌ದೇಶದಲ್ಲಿ ನೊಶಟೋನ್ ವಿಶ್ವವಿದ್ಯಾಲಯದ ಪುಸ್ತಕ ಭಂಡಾರದಲ್ಲಿವೆಯಂತೆ (ಸಪ್ರಶ. II ೨೮); ಪಾದ್ರಿ . . . ನಮ್ಮನ್ನು ಭಿಕ್ಷೆಯಾಗಿ ಸಂತೆ ತಮ್ಮನ್ನು ಇಟಲು ಹೇಳಿದ್ದರು (ಅಮೋಲ. ೦೪). **ಪಾದರಿ** : ಆಂಗ್ಲರ ಆಳ್ವಿಕೆ ಆರಂಭದಿಂದ ಕೊಂಚಕಾಲ ಕ್ರಿಶ್ಚಿಯನ್ ಪಾದರಿಗಳಿಗೆ ಭರತಖಂಡದ ಪ್ರವೇಶಕ್ಕೆ ಅನುಮತಿ ಇರಲಿಲ್ಲ (ಮಂಗ್ಯಾಶ. ೦೦೪ ಶಿರ೯೪). [← ಸ್ಪ್ಯಾನಿಷ್. ಪೋರ್ಚು. Padre]

**ಪಾನ್‌ದಾನು**, ಪಾನದಾನು (ನಾ). ೧. (ಉಕ) ಎಲೆಯಡಿಕೆ ತಾಂಬೂಲ ; ವೀಳೆಯ : ಆ ಸಾಹೇಬರು . . . ಹರ್ಷಿತರಾಗಿ ಹೂವಿನ ಹಾರ ಪಾನ್‌ದಾನುಗಳನ್ನು ಸ್ವೀಕರಿಸಿ ಮಹಾಸ್ವಾಮಿಯವರಿಂದ ಅಪ್ಪಣೆ ತೆಗೆದುಕೊಂಡರು (ಮಹಾಮಂ. 'II, ೦೨೦). **ಪಾನದಾನು** : ೨. ತಾಂಬೂಲವನ್ನು ಇಡುವ ಡಬ್ಬಿ, – ಸಂಪುಟ : ಪರಿಚಾರಿಕೆಯ

ಕೈಲಿದ್ದ ಪಾನದಾನು ನೆಲದ ಮೇಲೆ ಬಿದ್ದು ರಘುನೆರ್ಘುನ ಶಬ್ದವಾಯಿತು (ರೇಖಾಚಿ. ೭೩). [←ಹಿಂ. ಮರಾ. ಪಾನ್‌ದಾನ್]

**ಪಾನ್‌ಪಟ್ಟಿ**, ಪಾನಪಟ್ಟಿ (ನಾ). ೧.=ಪಾನ್‌ದಾನು ೧: ಪಟ್ಟದ ಆನೆ, ಪಟ್ಟದ ಕುದುರೆಗಳು ಕೆರೆಯ ಬಳಿಗೆ ಹೋಗಿ ಪೂಜೆ ಆಗಿ ಬಂದ ಮೇಲೆ ಎಲ್ಲರಿಗೂ ಹೂವಿನ ಹಾರ ಪಾನ್‌ಪಟ್ಟಿ ಮರ್ಯಾದೆ ಆಯಿತು (ಮಹಾಪಂ. II, ೧೮೪). **ಪಾನಪಟ್ಟಿ**: ೨. ಸಣ್ಣ, ಅಡಿಕೆಯನ್ನು ಹಾಕಿ ಸಿದ್ಧಪಡಿಸಿದ ವೀಳ್ಯ; ಬೀಡ: ಅವರು . . . ಭಜಿ, ಚಹ, ಪಾನಪಟ್ಟಿ ಇಷ್ಟರಿಂದಲೇ ಎದ್ದುಬಿಟ್ಟರು (ಮಣ್ಣುಕ. ೧೦೯).
[←ಮರಾ. ಪಾನ್‌ಪಟ್ಟೀ]

**ಪಾನ್‌ಸುಪಾರಿ**, ಪಾನಸುಪಾರಿ, ಪಾನುಸುಪಾರಿ (ನಾ).=ಪಾನ್‌ದಾನು ೧: ಅಕ್ಷತೆಗೆ ಬಂದ ಅತಿಥಿಗಳಿಗೆಲ್ಲಾ ಸಾರಿಗೆ ಮೇಲೆ ಸಾರಿಗೆಯಂತೆ ಚಹಾ, ಪಾನ್‌ಸುಪಾರಿ ಮುಗಿಯುವವರೆಗೂ ತಾಸೆರಡು ತಾಸಾಯಿತು (ವೃ. ೧೩). **ಪಾನಸುಪಾರಿ**: ಪಾನಸುಪಾರಿ, ಅತ್ತರದಾಣಿ, ಗುಲಾಬದಾಣಿ, ಹೂಗುಚ್ಛ ಇವುಗಳನ್ನು ಕೊಡುವ ಕಾರ್ಯಕ್ರಮ ನಡೆಯಿತು (ಅನ್ನ. ೨೪೭); ಪಾನ-ಸುಪಾರಿಯ ಭರ್ಜರೀ ತಯಾರಿ ನಡೆಯಿತು (ದೀಶಹ. II, ೩೩೪). **ಪಾನುಸುಪಾರಿ**: ಪಾನುಸುಪಾರಿಯ ಕೆಲಸ ಮುಗಿದ ಮೇಲೆ ಸಿವರಾಮಪ್ಪನೂ ಅಲ್ಲಿಗೆ ಬಂದನು (ಅನ್ನ. ೨೪೮).
[←ಹಿಂ. ಮರಾ. ಪಾನ್‌ಸುಪಾರೀ]

**ಪಾನ$_1$** (ನಾ). (ಕುದುರೆಯ) ಅಪಾನ; ಗುಂದಪ್ರದೇಶ: ಬಾಲದ ದಂಡಿಗೆ ಬಾಲದ ದಂಡೆಂಬ ಪೆಸರನನುಕರಿಸಿರ್ಕುಂ ಬಾಲದ ಮುಚಿಯೊಳಗಿರ್ಪುದ ಲೀಲೆಯಿನಚು ಪಾನವೆಂಬ ಪೆಸರದಕೆಂದುಂ (ಅಶ್ವಶಾ. ೯-೪೭).
[<ಸಂ. ಅಪಾನ]

**ಪಾನ$_2$** (ನಾ). ೧. ಕುಡಿಯುವಿಕೆ; ಕುಡಿತ: ಜ್ಞಾನ ತಪ್ಪಿಸುವ ಪಾನಗಳನ್ನು ಮಾಡಬಾರದು (ಶೀಲಶಿಂ. II, ೬). ೨. ಪಾನೀಯ; ಪೇಯ: ಬಲುವಿಧವಾದ ರಸವನೆ ಕೂಡಿಸಿ ಪಾನಪ್ರಭೇದವನ್ನು ಅನುವಾಗಿ ಮಾಡಿ ತಂದು ವಸ್ತ್ರಕ್ಕೆ ಹಚ್ಚಿ ದೀಪವನೆ ಮುಟ್ಟಿಸಿದರದು ಪಸನ ಸುಡದು (ಶಿವಾಕ್ಕ. ೧೯-೩). ೩. ಕುಡಿಸಿದ ಪದಾರ್ಥ: "ಬೀಯದ ರಸಃ ಪಾನಂಗಳೆಂದೆನಿಕ್ಕುಂ" (ಮಂಗರಾ. ೬೪-೪). ೪. ಕಷಾಯ: ಮರಿಚಾಮೃತರುಚಿ ಚಾತುರ್ಜಾತಕಯುತಮಾಗೆ ಸುಧೋಪಮಾನಮಕ್ಕುಂ ಪಾನಂ (ಲೋಕೋಪ. ೮-೫೭). ೫. ಕುಡಿಯುವ ಬಟ್ಟಲು; ಚಷಕ. ೬. ನೀರಿನ ಕಾಲುವೆ; ನಾಲೆ. [ಸಂ.]

**ಪಾನಂದಿಪಡಿ** (ನಾ). ಒಂದು ಸ್ಥಳದ ಹೆಸರು: ಅನ್ತೆ ಬನ್ದು ಪಟ್ಟಗಲ್ಲ ನೈರಿತ್ಯನ್ಸಿಸಿ ಪಾನನ್ದಿಪಡಿಯ (ಎಕ. IV (R), ಹಾಸುರಾ. ೩೫೪-೬೩; 904).
[?]

**ಪಾನಕ** (ನಾ). ಬೆಲ್ಲ ಅಥವಾ ಸಕ್ಕರೆಯೊಂದಿಗೆ, ನಿಂಬೆ ಮುಂತಾದ ರಸ, ನೀರು – ಇವುಗಳನ್ನು ಸೇರಿಸಿ ತಯಾರಿಸಿದ ಪಾನೀಯ; ಪರಬತ್ತು: ಪಾನಕವು ಶ್ರಮ ಹಸಿವೆ ನೀರಡಿಕೆ ದಣುವುಗಳನ್ನು ನಾಶ ಮಾಡುವುದು (ಅಷ್ಟಾಂಗ. ೦೨೨-೩೪ ಅರ್ಥ); ಬೆಳಿಗ್ಗೆ ಊಟವಿಲ್ಲದೆ ಬರಿಯ ಹುಣಿಸೆಹಣ್ಣನ್ನು ಕಿವುಚಿ ಬೆಲ್ಲದಲ್ಲಿ "ಪಾನಕ" ಕುಡಿದಿದ್ದರು (ಅಂಹೂ. ೧೮); ವಿಧವಿಧವಾದ ಪಾನಕಗಳಿಗೆ ಮಂಜಿನ ಗಡ್ಡೆಗಳನ್ನು ಸೇರಿಸಿ ಕುಡಿಯುವುದು (ಕಾಶ್ಮೀರ. ೦೨೪).

**ಪಾನಕ ಪಣ್ಯಾರ**=ಪರಬತ್ತು ಮತ್ತು ಪ್ರಸಾದರೂಪವಾದ ತಿಂಡಿ: ರಾಮನವಮಿಯಂದು ಮನೆಗೆ ಬಂದವರಿಗೆ ಪಾನಕ ಪಣ್ಯಾರ ಕೊಡುವುದು ಕೆಲವರ ಸಂಪ್ರದಾಯ (ರೂ). [ಸಂ.]

**ಪಾನಕಪೂಜೆ** (ನಾ). (ನರಸಿಂಹಜಯಂತಿ, ರಾಮನವಮಿ ಮುಂತಾದ ಹಬ್ಬಗಳಂದು) ಪೂಜೆ ಮಾಡಿ ಪ್ರಸಾದರೂಪವಾಗಿ ಭಕ್ತಾದಿಗಳಿಗೆ ಇತರ ಖಾದ್ಯಗಳೊಡನೆ ಪಾನಕ, ಮಜ್ಜಿಗೆ ಮುಂತಾದುವನ್ನು ಹಂಚುವುದು: ನನ್ನ ಕಾಲದಲ್ಲಿ ಶ್ರೀರಾಮನವಮಿ ನಡೆಯುವುದು. ಎಲ್ಲೆಲ್ಲೂ ಅರವಟ್ಟಿಗೆಗಳನ್ನಿಡಿಸುತ್ತೇನೆ. ಪಾನಕ ಪೂಜೆಗಳನ್ನು ಮಾಡಿಸುತ್ತೇನೆ (ಕಂಳಕ. ೨೨); ಅವರು ರಾಮನವಮಿ ಪ್ರಯುಕ್ತ ಪಾನಕ ಪೂಜೆಗೆ ಕರೆದಿದ್ದಾರೆ (ರೂ). [ಪಾನಕ+ಪೂಜೆ]

**ಪಾನಕೇಳಿ** (ನಾ). ಮದ್ಯ ಮುಂತಾದುವನ್ನು ಕುಡಿಯುವ ಲೀಲೆ,–ವಿನೋದ: ಎಲೆ, ತಡವೇಕೆ ಪಾನಕೇಳಿ ಮೊದಲಾಗಲೀಗ, ಅಂಗಡಿಯು ಕದವ ಈ ಕ್ಷಣಕೆ ತೆರೆಯ ಹೇಳಿ (ಅರಳು. ೦೭೭-೪).
[ಪಾನ$_2$+ಕೇಳಿ (=ಕೇಲಿ)]

**ಪಾನಕ್ರೀಡನ** (ನಾ).=ಪಾನಕೇಳಿ: ದುಶ್ಶಾಸನನ ನೆತ್ತರದಿ ಪಾನ ಕ್ರೀಡನಾಸೌಭಾಗ್ಯಸಂಪದಕೆ ಸರಿಯುದಾವದು (ಕುಮಾರ. ೨೨-೪೩).
[ಪಾನ$_2$+ಕ್ರೀಡನ]

**ಪಾನಕ್ರೀಡೆ** (ನಾ).=ಪಾನಕೇಳಿ: ಕಾಮತ್ರಿಲೋಕೀಜಯಾಕರಶಾಖಾಸಿಲತಾಳಿಯೋ ಬಗೆವೊಡೆಂಬಂತಿರ್ಪುದಿಂದ್ರಾಂಕ ಕರ್ಬುರಕಾಯಂ ಶಬರೀಚಯಂ ನೆರೆದು ಪಾನಕ್ರೀಡೆಯೊಳ್ ನಾಡೆಯುಂ (ಶಂಶ್ರಕ. ೫-೫೬).
[ಪಾನ$_2$+ಕ್ರೀಡೆ]

**ಪಾನಗೋಷ್ಠಿ** (ನಾ). ೧. ಕೆಲವು ಜನ ಸೇರಿ ಒಟ್ಟಿಗೆ ಮದ್ಯಪಾನ ಮಾಡುವುದು,–ಕುಡಿಯುವುದು: "ಆಪಾನಂ, ಪಾನಗೋಷ್ಠಿ – ಈ ೨ ಕಳ್ಳುಡಿವುದು" (ಶಠಾಯು. ೫೪-೦೭೩). ೨. ಮದ್ಯಪಾನ ಮಾಡುವವರ ಗುಂಪು; ಕುಡಿಯುವವರ ಕೂಟ: (೪). ೩. ಮದ್ಯಪಾನ ಮಾಡುವ ಸ್ಥಳ; ಹೆಂಡದಂಗಡಿ: (೪). [ಪಾನ$_2$+ಗೋಷ್ಠಿ]

**ಪಾನಗೋಷ್ಠಿಕೆ** (ನಾ). ೧.=ಪಾನಗೋಷ್ಠಿ ೨: "ಪಾನಗೋಷ್ಠಿಕೆ= ಸರಾಯ ಕುಡಿಯುವುದಕ್ಕಾಗಿ ಕೂಡಿದ ಮಂದಿ" (ಗಂಗಾಮು. ೨೦೩). ೨.=ಪಾನಗೋಷ್ಠಿ ೩: "ಆಪಾನಂ, ಪಾನಗೋಷ್ಠಿಕಾ – ೨ ಅನೇಕ ಮಂದಿ ಕೂಡಿ ಮದ್ಯಪಾನ ಮಾಡುವ ಸ್ಥಳದ ಹೆಸರುಗಳು" (ಸಿದ್ಧಾಂತ. ೩೦೯). [ಪಾನ$_2$+ಗೋಷ್ಠಿಕೆ]

**ಪಾನದಾನು** 'ಪಾನ್‌ದಾನು' ನೋ.

**ಪಾನನಿರೋಧ** (ನಾ). ಮಾದಕಪಾನೀಯಂಗಳ ತಯಾರಿಕೆ ಮತ್ತು ಮಾರಾಟದ ಮೇಲೆ ಹಾಕುವ ನಿಷೇಧ,–ನಿರ್ಬಂಧ: ಪಾನನಿರೋಧ ಬಂದ ಮೇಲೆ ಕುಡಿಯುವವರು ಹೆಚ್ಚಾಗಿದ್ದಾರೆ (ಪಷ್ಟೂರು. ೩೦೩).
[ಪಾನ$_2$+ನಿರೋಧ]

**ಪಾನಪಟ್ಟಿ** 'ಪಾನ್‌ಪಟ್ಟಿ' ನೋ.

**ಪಾನಪಭಟಾರ** (ನಾ). ಒಬ್ಬಾತನ ಹೆಸರು: ಶ್ರೀನೆಡುಬೊಟಿಯ ಪಾನಪಭಟಾರರ್ನ್ನೋನ್ನು ಮುಡಿಪ್ಪಿದಾರ್ (ಎಕ. II, ೯-೦; ಸು. 700).
[ಪಾನಪ$_2$ + ಭಟಾರ]

**ಪಾನಪಾತ್ರ** (ನಾ). (ವಿಶೇಷವಾಗಿ ಮದ್ಯವನ್ನು) ಕುಡಿಯುವ ಪಾತ್ರೆ: "ಚಷಕಃ, ಪಾನಪಾತ್ರಂ, ಸರಕಃ, ಅನುತರ್ಷಣಂ__೪ ಹೆಂಡ ಕುಡಿಯುವ ಬಟ್ಲು ಹೆಸರು" (ಸಿದ್ಧಾಂತ. ೩೦೯). [ಪಾನ$_2$+ಪಾತ್ರ]

**ಪಾನಪಾತ್ರೆ** (ನಾ).=ಪಾನಪಾತ್ರ: ಈ ಸಾಂಗತ್ಯದ ಪುಟ್ಟಪುಟ್ಟ ಪಾನ ಪಾತ್ರೆಗಳಲ್ಲಿ ಸಂಸ್ಕೃತದ ಸುಭಾಷಿತಗಳನ್ನೂ ಮುಕ್ತಕಗಳನ್ನೂ ಕನ್ನಡಿಸಿ ಕೊಟ್ಟಿದ್ದೇನೆ (೩ಂಖಕ. IV, ೫೦೩). [ಪಾನ$_2$+ಪಾತ್ರೆ]

**ಪಾನಭಾಜನ** (ನಾ).=ಪಾನಪಾತ್ರ: "ಕಂಸಃ, ಪಾನಭಾಜನಂ — ೨ ಬಟ್ಲು" (ಸಿದ್ಧಾಂತ. ೨೮೩). [ಪಾನ$_2$+ಭಾಜನ]

**ಪಾನಭೂಮಿ** (ನಾ). ಮದ್ಯಪಾನ ಮಾಡುವ ಸ್ಥಳ: ಪಾನಭೂಮಿ ಯೊಳೆಂತು ಯಜ್ಞಕುಂಡದೊಳಂತು ಪ್ರಜ್ವಲಿಸುವನು ಕೃಶಾನು (ಗಾಥಾಸ. ೫೭-೨೭). [ಪಾನ$_2$+ಭೂಮಿ]

**ಪಾನವಾಟಿ** (ನಾ). ಮದ್ಯಪಾನ ಮಾಡುವ ಸ್ಥಳ ; ಪಡಖಾನೆ ; ಹೆಂಡದಂಗಡಿ : ಈ ವೇಳೆಗೆ ಪಾನವಾಟಿಯ ಹೆಣ್ಣಾಳುಗಳು ವ್ಹಿಸ್ಕಿ ಮತ್ತಷ್ಟು ಬಿಯರ್ ತಂದಳು (ಸಣ್ಣ.ಕ. VIII, ೧೦೨). [ಸಂ. ಪಾನವಾಟೀ]

**ಪಾನವ್ಯಸನ** (ನಾ). ಮದ್ಯಪಾನ ಮಾಡುವ ಗೀಳು ; ಕುಡಿಯುವ ಚಟ : ಖೈದಿಗಳಲ್ಲಿ ಮನೆಮಾಡಿಕೊಂಡಿದ್ದ ದುಷ್ಟಪ್ರವೃತ್ತಿಗಳು ಪಾನವ್ಯಸನ, ದ್ಯೂತಕ್ರೀಡೆ, ಕ್ರೂರಹಿಂಸೆ, ನರಮಾಂಸಭಕ್ಷಣ ಮೊದಲಾದ ಘೋರಾಪರಾಧಗಳು . . . ನೆಕ್ಲುದೋವನಿಗೆ ಮನವರಿಕೆಯಾಗಿತ್ತು (ಪುನರು. ೫೫೪). [ಪಾನ್ನ₂+ವ್ಯಸನ]

**ಪಾನಸುಪಾರಿ** 'ಪಾನ್‌ಸುಪಾರಿ' ನೋ.

**ಪಾನಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಮಧುರವಾದ ಪೇಯಗಳನ್ನು ಒದಗಿಸುವುದೆಂದು ನಂಬಲಾದ ಕಲ್ಪವೃಕ್ಷ : ಪಾನಾಂಗ : ಈ ಜಾತಿಯ ಕಲ್ಪವೃಕ್ಷದಿಂದ . . . ನೀರು ಮತ್ತು ಪೇಯಪದಾರ್ಥಗಳು ದೊರೆಯುತ್ತವೆ (ಪ್ರಕಾ. ೨೬೨). [ಸಂ.]

**ಪಾನಾಂಬು** (ನಾ). ಕುಡಿಯುವ ನೀರು : ಬೇಸಗೆಗೆ ತೆರೆಗೊಂಡಿ ತಂಬುಗೆ ವಾಸಿಸುವ ಪಾನಾಂಬುವೊಪ್ಪೆ (ಜಸಪು. ೧೨-೯). [ಪಾನ್ನ₂+ಅಂಬು₃]

**ಪಾನಿ₁** (ನಾ). ಕುಡಿಯುವವನು : ವಿಲೋಕಪ್ರಪಂಚವಿರಹಿತಾರಾಧ್ಯರಮಾ ಸದ್ಗೀತಪೀಯೂಷಪಾನಿ (ಚಕೋರ. ೧-೫೧). [ ಸಂ. ಪಾನಿನ್ ]

**ಪಾನಿ₂** (ನಾ). ೧. ವಸ್ತ್ರ ; ಬಟ್ಟೆ : 'ಇರ್ಪಾನಿ' ಪರಾ. ೨. (?) : ಅರಟ್ಟಿಗಳರಸರ್ ಚೊತ್ತಮ್ಮನ್ ಎಡೆತ್ತೊಱೆನಾಡುಸಾಸಿರವುಮಾಳುತ್ತಿದು ವಿಟ್ಟದು ಒನ್ದಡಿ ಪಾನಿಯೆಮೇಟುಂ ಒನ್ಪತ್ತು ದಿವಸಂ ಪಟ್ಟುಂಗಟ್ (ಎಕ. III, ಮೈಸೂರು. ೫೫-೮; ಸು. 740). [?]

**ಪಾನಿಗಟ್ಟು** (ಕ್ರಿ). [ಜೈನ] ಚರಿಗೆಗೆ ಬಂದ ಜೈನಸಂನ್ಯಾಸಿಗಳನ್ನು ಭಿಕ್ಷೆಗೆ ನಿಲ್ಲಿಸಿಕೊಳ್ಳು : ಭಟ್ಟಾರರೊಡವಂದ ಬ್ರಹ್ಮಚಾರಿ ತಪಂಬಟ್ಟು ಪೆಱಾದಂ ಕೇಳ್ದೊಡಿದು ಮಾಣ್ಕೆಮ್ಮ ಮನೆಯೊಳುಂಡು ತಪಂಬಟ್ಟುವಿಂ ಪಾಳೆ ನಮ್ಮ ಮನೆಯೊಳ್ ಪಾನಿ[ಪಾಠಾಂ. ನೆ]ಗಟ್ಟುವಮೆಂದು ಬಗೆದಿರ್ದ (ಧರ್ಮಾ. ೭೯-೦೨) ; ಎಮ್ಮಲ್ಲಿಗೆ ನೀಮುಂ ಕಿತ್ತ್ಯಂಗಳನೊಡಗೊಂಡು ಬಂದು ಪಕ್ಕದಿರ್ದ ಪಾನಿ[ಪಾಠಾಂ. ನೆ]ಗಟ್ಟೆ ಮಾರ್ಗಮಂ ತೋಱೆ ಮಗುಟೆ ಬಿಜಯಂಗೆಯ್ಯಿಂ (ಧರ್ಮಾ. ೮೦-೧). P ಇಲ್ಲಿ 'ಪಾನಿಗಟ್ಟೆ' ಎಂಬ ಕೃದಂತಪದವು ಶ್ರಾವಕ, ಶ್ರಮಣ ಈ ಇಬ್ಬರಿಗೂ ಅನ್ವಯವಾಗುವಂತೆ ಪ್ರಯೋಗವಾಗಿದೆ. ಆದುದರಿಂದ ಅರ್ಥಕ್ಲೇಶವಿದೆ. ಶ್ರಮಣರನ್ನು ಭಿಕ್ಷೆಗಾಗಿ ಆಹ್ವಾನಿಸಿ ಕಾಲು ತೊಳೆಯುವ ಸಮಯದಲ್ಲಿ ಅವರ ತಲೆಯ ಮೇಲುಭಾಗದಲ್ಲಿ ಚೌಕಾಕಾರದ ಶುಭ್ರವಸ್ತ್ರವನ್ನು ಕಟ್ಟುವ ಪದ್ಧತಿಯಿದೆಯಂತೆ. ಆದುದರಿಂದ ಇಲ್ಲಿ 'ಪಾನಿ' ಎನ್ನುವುದು ಯಾವ ಶಬ್ದದಿಂದ ಉತ್ಪನ್ನವಾಗಿದೆ ಎಂಬುದು ಚರ್ಚೆಗೆ ಆಸ್ಪದವನ್ನುಂಟುಮಾಡುತ್ತದೆ. 'ಇರ್ಪಾನಿ' ಹೋ.

[ಪಾನಿ₂ + ಕಟ್ಟು₁]

**ಪಾನಿಪತ್ತು**, ಪಾಣಿಪತ್ತು (ನಾ). ೧. ದಿಲ್ಲಿ ಮತ್ತು ಅಂಬಾಲಗಳ ನಡುವೆ ಇರುವ ಐತಿಹಾಸಿಕ ಪ್ರಸಿದ್ಧಿಯುಳ್ಳ ಒಂದು ಯುದ್ಧಭೂಮಿ. ೨. (ಅಲಂ) ಯುದ್ಧದಲ್ಲಿ ಉಂಟಾಗುವ ರಕ್ತಪಾತ : ಒಕ್ಕುಡಿತೆ ಅರೆಮುಕ್ಕು ಎನುತೆನುತೆ ಹಲಕೆಲವು ಪಾನಿಪತ್ತುಗಳನ್ನು ಮುಕ್ಕುಳಿಸುವೆ (ನಾದಲೀ. ೪೦-೦೨). **ಪಾಣಿಪತ್ತು**: ೩. ಮಹಾಯುದ್ಧ : ಪ್ರಪಂಚದ ಪಾಣಿಪತ್ತಿನಲ್ಲಿ ಇವೆರಡೇ ವರ್ಗಗಳು ಒಂದಕ್ಕೊಂದು ಇದಿರಾಗಿ ಪಡೆಗಟ್ಟಿ ನಿಲ್ಲುವವು (ಮಾಪಾದ. ೧೧೦). [←ಹಿಂ. ಪಾನೀಪತ್]

**ಪಾನಿಯಾಲಯ** (ನಾ). ಸಮುದ್ರ (?) : ಕೇಶಕಲಾಪಾದುವುದ ಕೇಳುತ ವಿಭೀಷಣಂ ಪಾನಿಯಾಲಯುವ ಕಳೆದುತ್ತರದ ತಟದೊಳು ದಿನೆ ಸಸಂದದ ನಿರ್ದೊಡಲ್ಲಿಗೈತಂದು (ವಂಶಾಶಾ. ೬-೫-೪). [<ಪಾನೀಯ+ಆಲಯ]

**ಪಾನಿವಟ್ಟಲು** 'ಪಾಣಿವಟ್ಟ' ನೋ.

**ಪಾನಿಸು** (ಕ್ರಿ). ಕುಡಿ; ಪಾನಮಾಡು : ಶುನಕಮಾಂಸವ ಭಕ್ಷಿಸುರಯ ಪಾನಿಸಿದವರ ಪಾಪಕೆ ಹೋಹರು (ಎಕ. XII. ತುಮ್ಕೂರು. ೮೮-೦೭ ; 1544) ಗಂಗೆಯಿಂದೆಸಗಿದಾ ಮದಿರೆಯಂ ಪಾನಿಪರೆ ? (ಹಿಮ್ಮರ. ೧೨-೭೯).

[ಪಾನ್ನ₂+–ಇಸು₃]

**ಪಾನೀಯ** (ಗು). ೧. ಕುಡಿಯಬಹುದಾದ ; ಕುಡಿಯಲು ಯೋಗ್ಯವಾದ. (ನಾ). ೨. ಕುಡಿಯಲು ಯೋಗ್ಯವಾದ ಪಾನಕ, ಸೋಮರಸ, ಹಣ್ಣಿನ ರಸ, ಮದ್ಯಮುಂತಾದ ದ್ರವಪದಾರ್ಥ : ಸಹಕಾರಪಕ್ವರಸಸಾರಾಸಾರಪಾನೀಯದಿಂ ಸವಿಶೇಷಂ ಬೆಳೆದೊಪ್ಪಿ ತೋರ್ಪ ಕಳಮಂ ತಾನೆಲ್ಲಿಯುಂ (ಸುಕುಮಾ. ೦-೭೪). ೩. ನೀರು ; ಜಲ. "ಆಪಃ(ಪ್), ತೋಯಂ . . . ಪಾನೀಯಂ . . . ಜೀವನೀಯಂ—ಈ ೨೬ ನೀರ್" (ಹಲಾಯು. ೧೦೭-೨೬); ಇತ್ತ ಶಿಷ್ಯಂ ಮುದದೊಳು ಪರಿಶುದ್ಧ ಪಾನೀಯದಿಂ ಸ್ನಾನಮಂ ಮಾಡಿ (೭ಶ್ರೆ. ೬-೪೧). [ಸಂ.]

**ಪಾನೀಯಖೇಯ** (ನಾ). (ಊರಿನ ಸುತ್ತಲೂ ತೋಡಿರುವ) ಕಂದಕ ; ಅಗಳು : ಮಾವಳಸುಮಳಸಿ ಸುತ್ತಿರ್ದುದಂಭೋಧಿಯೆಂಬಂತೆ ಗಭೀರಾರಾಮದಿಂ ಪಲ್ಮೊರೆಪವೊಸೆಗುಂ ಸುತ್ತಿ ಪಾನೀಯಖೇಯಂ (ಸುಕುಮಾ. ೯-೫೭). [ಪಾನೀಯ+ಖೇಯ]

**ಪಾನೀಯಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ : 'ಪಾನೀಯಜಾಸನ' ಪರಾ. [ಸಂ.]

**ಪಾನೀಯಜಾಸನ** (ನಾ). ತಾವರೆಯನ್ನು ಪೀಠವಾಗಿ ಉಳ್ಳವನು ; ಬ್ರಹ್ಮ: ಅಂಭೋಜಾಯತಾಕ್ಷನ ನಾಭಿಯಲಿ ಪಾನೀಯಜಾಸನನುದಿಸಿದನು (ಕೊರಡಾ. ೪-೨-೧೩). [ಪಾನೀಯಜ+ಆಸನ]

**ಪಾನೀಯಧಾರಕ** (ನಾ). ಮದ್ಯ ಮುಂತಾದ ಪಾನೀಯಂಗಳನ್ನು ಸದಾ ಹಿಡಿದು ಸಿದ್ಧವಾಗಿ ನಿಂತಿರುವ ಸೇವಕ : ತಾ ಭೋಗಿಸದೆ ಬಳಸದೆ ರಾಜನನೋಲಗಿಸುವವನೆ ಪಾನೀಯಧಾರಕನು (ಕುಮ್ಮಾರಾ. ೩-೯೩). [ಪಾನೀಯ+ಧಾರಕ]

**ಪಾನೀಯಮಂಡಪ** (ನಾ). (ನೀರು, ಪಾನಕ, ಮಜ್ಜಿಗೆ ಮುಂತಾದ) ಪೇಯಗಳನ್ನು ದಾರಿಹೋಕರಿಗೆ ನೀಡಲು ದಾರಿಯ ಪಕ್ಕಗಳಲ್ಲಿ ಕಟ್ಟಿರುವ ಮಂಟಪ ; ಅರವಟ್ಟಿಗೆ : ಪಾನೀಯಮಂಡಪಂಗಳೊಳ್ ಕಲಶಮನೆತ್ತಿ ನೀರೆಱೆವ ಕಾಂತೆಯ . . . ನೋಡಿ (ಚಂದ್ರಪ್ರ. ೧-೯೭). [ಪಾನೀಯ+ಮಂಡಪ]

**ಪಾನೀಯಶಾಲಿಕೆ** (ನಾ). =ಪಾನೀಯಮಂಡಪ : "ಪ್ರಪಾ. ಪಾನೀಯಶಾಲಿಕಾ—೨ . . . ಅರವಟಿಕೆ" (ಸಿದ್ಧಾಂತಿ. ೧೦೦).

[ಸಂ. ಪಾನೀಯಶಾಲಿಕಾ]

**ಪಾನೀಯಶಾಲೆ** (ನಾ). =ಪಾನೀಯಮಂಡಪ : "ಪ್ರಪಾ, ಪಾನೀಯಶಾಲಾ — ಈ ೨ ಅಱವಟ್ಟಿಗೆ" (ಹಲಾಯು. ೫೦ (೪೨) ; ಅನಂಗಶೃಂಗಾರಲೀಲೆಗಳೆನಿಪ್ಪ ಪಾನೀಯಶಾಲೆಗಳುಂ (ಭುಜಬ. ೯-೨೨ ವ) ; ಆ ಪಾನೀಯಶಾಲೆಯೊಳು ನಿಂದು ನೀರೆಱೆವ ನಾರಿಯರ ಲಾವಣ್ಯದ ಸುಂದರ ಲೋಚನದಿಂದ ಬಂದದೀಂಟುತ ಪಥಿಕರು ಜಲಪಾನ ಸಾಕೆಂದೆನ್ನರಾ ಬಟ್ಟೆಗಳೊಳು (ವರ್ಧಮ. ೧-೫೮). [ಪಾನೀಯ+ಶಾಲೆ₃]

**ಪಾನೀಯಸಂಚರ** (ನಾ). ನೀರಿನಲ್ಲಿ ಸಂಚರಿಸುವಂಥಹುದು ; ಮೀನು : "ಮೀನಂ ಝಷಂ . . . ಪಾನೀಯಸಂಚರಂ ಶಕಲಿ ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಶಬ್ದಗರಾ. ೧೨೧-೬). [ಪಾನೀಯ+ಸಂಚರ]

**ಪಾನು** (ನಾ). ೧. ಎಲೆ ; ಪತ್ರ : (೪). ೨ ಪುಸ್ತಕದ ಅಥವಾ ಪತ್ರಿಕೆಯ ಹಾಳೆ : ಬಳವಂತನು' ಅವಸರದಿಂದ ಪಾನು ತಿರುವುತ್ತ ಹೋದ್ದರಿಂದ ಆ ಚಿತ್ರಗಳು ಗೋದುವರಿಗೆ ನೆಟ್ಟಗೆ ಕಾಣಿಸಲಿಲ್ಲ

(ಅಶ್ವಗ್ರ. ೬೦) : ಒಂದು ಮಾಸಪತ್ರಿಕೆಯನ್ನು ತೆಗೆದುಕೊಂಡು ಅದರ ಹಾನುಗಳನ್ನು ತಿರುವಿಹಾಕುತ್ತಿದ್ದರು (ಕಾಂಹಿಂ. ೪). ೩. ವೀಳ್ಯದೆಲೆ : "ವೀಳ್ಯದೆಲೆ . . . ನಾಗಲತೆ, ತಾಂಬೂಲವಲ್ಲಿ, ಎಲೆಬಳ್ಳಿ, ಪಾನು, ಅಂಬಾಡಿಎಲೆ, ನಾಗವಲ್ಲಿ" (ಹ್ಮ.ಅ. ೦೦೩). 'ಪಾನುಸಂಪಾರಿ' ಪರಾ. ೪. ಅಡಕೆ, ಸುಣ್ಣ ಮೊದಲಾದುವನ್ನು ಹಾಕಿ ಮಡಿಸಿರುವ ವೀಳೆಯದೆಲೆಯ ಸುರುಳಿ ; ಬೀಡ ; ಪಾನ್‌ಪಟ್ಟಿ : (೬). ೫. ಇಸ್ಪೀಟು ಎಲೆ : ಹಾನುಗಳು ಸರಿಯಾಗಿ ಬರದೆ ಈ ಸಲವೂ ಅವನು ಸೋತುಹೋದನು (ಜೂ೩). [←ಹಿಂ. ಮರಾ. ಪಾನ್]

**ಹಾನುಂಗಲ್**, ಪಾನಂಗಲ್ಲು, ಹಾನಂಗಲ್, ಹಾನುಂಗಲು, ಹಾನಂಗಲ್, ಹಾನಗಲ್ಲು (ನಾ). ಒಂದು ಸ್ಥಳದ ಹೆಸರು ; ಈಗಿನ ಧಾರವಾಡಜಿಲ್ಲೆಗೆ ಸೇರಿದ ಒಂದು ಊರು : ಮಾಧವಶರ್ಮಣೇ ಪಾನುಂಗಲ್ವಿಷಯೇ (ಎಕ. X. ಕೋಲಾರ. ೬೨–೬೭ ; 757). **ಪಾನುಗಲ್ಲು** : ಪಾನುಗಲ್ಲೆಂಬ ಪುರವರಕಿಯ್ದ್ದ ಗೋವಿಂದಪೆಗಡೆಯೆಂದೆನಿಪ ಶಿಷ್ಯನ ಸದನದಲ್ಲಿರುತಿರೆ (ಜಿಸೋಕ. ೬–೦೦೦). **ಹಾನುಂಗಲ್** : ಬನವಾಸಿ ಪಲಸಿಗೆ ಹಾನುಙ್ಗಲ್ಲುಚ್ಚಂಗಿಗೊಣ್ಡ ಹೊಯ್ಸಳವೀರಬಲ್ಲಾಳದೇವರ ರಾಜ್ಯದ . . . ಬಲಗೋವಿಂದರಸರುಂ ಉಮ್ಮಡಿಯ ಬವರಕ್ಕೆ ನಡದಲ್ಲಿ (ಎಕ. X. ಗೌರಿಬಿ. ೪೦–೩ ; 1180) ; ಶ್ರೀಮತ್ತೈಲಪದೇವರಸರು . . . ಹಾನುಂಗಲ್ಪೈನೂರುಮಂ ಸ(ಬಾ)ಹ್ಯಾಭ್ಯಾಂತರಸಿದ್ಧಾಯವಿನಯು ಸ್ವಾಮ್ಯವಮನಾಳುತ್ತಮಿರೆ (ಕಕಶಿಂ. ೯–೬). **ಹಾನುಂಗಲು** : ನರಸಿಂಗವರ್ಮ್ಮ ನಿಮ್ಮರ್ಮ್ಮಳನಂ ಕಳಪಾಳಕಾಳಾನಳಂ ಹಾನುಂಗಲುಗೊಣ್ಡ ಚಿತುಮರ್ಮ್ಮಬಿಗಣ್ಡ (ಎಕ. II, ೦೪೩–೪೯; 1131); ಬನವಸೆ ಹಾನುಂಗಲು . . . ಘಂಟೀ ಸಮಸ್ತ ದುರ್ಗ್ಗಂಗಳಂ (ಎಕ. VII. ಶಿಕಾ. ೪೦–೩೩; 1180 ?). **ಹಾನುಗಲ್** : ಹಾನುಗಲ್ನಾಡಯೊಲಂಬಿಯ ಕಂಪಣದ ಬಟಿಯ ಬಾಡಂ (ಎಕ. VII. ಶಿಕಾ. ೬೨–೩೬ ; 1168). **ಹಾನುಗಲ್ಲು** : ಹಾನುಗಲ್ಲ ಮಹಾಸೀಮ್ನಿ ವಿಖ್ಯಾತಿಮಧಿಕಂಶ್ರಿತಂ (ಎಕ. VII, ಶಿಕಾ. ೬೩–೬೪ ;1527). [?]

**ಹಾನುಗಲ್ಲು** 'ಪಾನಂಗಲ್' ನೋ.

**ಹಾನುಸುಪಾರಿ** 'ಪಾನ್‌ಸಂಪಾರಿ' ನೋ.

**ಹಾನೆ**, ಬಾಣ್₁, ಬಾನ್₁, ಬಾನಿ₁, ಬಾನಂ₂, ಬಾನೆ, ಹನ್ನೆ, ಹಾನೆ (ನಾ). ೧. ಲೋಹ, ಮರ, ಮಣ್ಣು ಮೊದಲಾದುವುಗಳಿಂದ ಮಾಡಿದ ಅಗಲಬಾಯಿಯ ಪಾತ್ರೆ : ಕಟಕಕ್ಕಮಿರ್ದ ನೆರೆ ಸಂಕಟಮೆನಿಸದೆ ತೆಟಿವುಗುಡುವವೊಲ್ ಪಾನೆಯ ಕೊಟಿ ಟಕಂ ನೆರೆದುಂಡೂ ಡಮುತ್ಕಟಪುಷ್ಪಕ್ಷೀಣಋದ್ಧಿಯಂ ಮುನಿ ತಳೆದಂ (ಅಪಂ. ೯–೦೦೨) ; ದೊಕ್ಕನೆ ಪಾನೆಯನಿಕ್ಕದೆ ಕೆಕ್ಕಳಿಸದೆ ಕಣ್ಣನುಗುಳದಗುಳಂ ಬೆರಲಿಂ ತಕ್ಕುದ ನೆರೆಯದೆ ಭಕ್ತಿಯನಿಕ್ಕಿದವೋಲುದರಗರ್ತ್ತಮಂ ಪೂರ್ಗ್ಗಿನಿತಂ (ಉಜಾರ. ೨೦–೦೩). ೨. ಅಳೆಯುವ ಒಂದು ಸಾಧನ : ಅವರ ತಮ್ಮೋ ಅಮ್ಮಯ್ಯಂ ದೇಗುಲಮಂ ಮಾಡಿಸಿ ಭುಜಾರಗ್ಗೆ ಊರಮುನ್ನಾಡಣ ಕಿಳಾರಕೆಯ್ಯೊಳ್ಪಿರಿಯ ಪಾನೆಯೊಳಟು ಗಣ್ಡುಗಂ ಮಣ್ಣುಮ × × × ಕೇಸಪಯ್ಯಂಗೆ ಬಿ × × ಟ್ಟ (ಎಕ. VII. ಹೀರೆಕೆರ. ೨೭–೦೩; ೯೭೦) ; ಗುಣಿಗನ ಒಂದು ಮತ್ತಲ್ಗೆ ಪಿರಿಯ ಪಾನೆಯೊಳ್ ಎರಡು ಪಾನೆ ಬತ್ತವ . . . ಎಲ್ಲ ಕಾಲಕ್ಕವ್ ಕೊಟ್ಟೋರ್ (ಎಕ. VIII, ಸೊರಬ. ೬೩–೩; ೯೪೧). 'ಇಪ್ಪಾನೆ', 'ಒಪ್ಪಾನೆ' ಪರಾ. ಬಾಣ್₁. ೩. ನೀರು, ಮಂಸರೆ ಇತ್ಯಾದಿಗಳನ್ನು ಹಾಕಿಡುವ ಅಗಲವಾದ ಬಾಯುಳ್ಳ ದೊಡ್ಡದಾದ ತೊಟ್ಟಿ : ಸಮತಟ್ಟಾದ ಬಯಲುಗಳಲ್ಲಿ ರೈಲುಹಾದಿಯ ಎರಡು ಮಗ್ಗುಲಿಗೂ ಬಲು ಉದ್ದವಾದ ಎರಡು ನೀರಿನ ಬಾಣಿಗಳನ್ನು ಮಾಡುತ್ತಾರೆ (ಅಂತ್ರ.I. ೩೪೯). ೪. ದೋಣಿಯಲ್ಲಿ ಪ್ರಯಾಣಿಕರು ಕೂರಲು ಹಾಕಿರುವ ಅಡ್ಡಹಲಗೆ: ಅವಸರದಿಂ ದೋಣಿ ಹತ್ತಿ ಕುಳಿತಳಾಕೆ ಬಾಣಗೂಕ್ಕಿ (ಗ್ರಿಶಿಂ. ೬೩–೦೦); ಯಾವುದೋ ಒಂದು ಮಹಾಯಿಯು ದೋಣಿಯ ಬಾಣಿಯಲ್ಲಿ ಕುಳಿತ ಆ ಹುಡುಗನನ್ನು ಅಪ್ಪಳಿಸಿ ಸೆಳೆದು ಒಯ್ದುಬಿಟ್ಟಿತ್ತು ( ಮೃಂಮಾ. ೪೬). **ಬಾಣ್₁** : ೧. ಶತ್ರುನುಡಿಸಾ ಜನನಿಯಿಲ್ಲದಡತ್ತಲಿತ್ತಲು ಪರಿಕಿಸುತ ಹಸಿವೆತ್ತಿ ಬ್ಯಾ[ ಣಾಣಂ. ಬೋ ] ನ ದೊಳೊಂದು ಹೂರಿಗೆಯಂ ತೆಗೆದು ಮೆಲಲು (ಐಕಕ. ೨೪–೩೩). **ಬಾನಿ₁** : ೧. ಆಕೆ ಕಮಂಡಲು ಒಂದನ್ನು ತಂದಿದ್ದಳು . . . ಈ ಮಣ್ಣು ಬಾನಿಯಂತೆ ಎಡವಿ ಬಿದ್ದರೆ ಎಲ್ಲಿ ಒಡೆದುಹೋಗುವುದೋ ಎಂಬ ಭಯವೇ ಇಲ್ಲ (ಶಿವರಾ. ೦೩೬) ; ಸಬಕಾರದ ನೊರೆಯನ್ನು ಒಂದು ಬಾನಿಯಲ್ಲಿ ತುಂಬಿಟ್ಟು ಬೋಳಿಸಬೇಕಾದ ಮುಖವನ್ನು ನಾಲ್ಕಾರು ನಿಮಿಷ ಅದರಲ್ಲಿ ನೆನೆಯಿಟ್ಟು ತೆಗೆದರಾಯಿತು (ದೇಕಸ್ಕ. ೬೬). ೩. ಕಲಗಚ್ಚನ್ನು ಬಾನಿಗೆ ಸುರಿಯಲು ಬಂದ ರಂಗವ್ವ . . . ಕೇಳಿದಳು (ಶಿಕಂ. ೪೮). ೫. ಹೂವಿನ ಸಸಿ ಮುಂತಾದುವುಗಳನ್ನು ಬೆಳೆಸುವ ಮಣ್ಣಿನ ಪಾತ್ರೆ; ಕುಂಡ: ನಾನು ಬಾಗಿಲೆದುರು ಒಂದು ಸುಂದರವಾದ ಕೈತೋಟ ಮಾಡಿದೆ. ಐವತ್ತು ಬಾನಿಗಳನ್ನು ತಂದಿರಿಸಿದೆವು (ಸ್ಮತಿ. ೩೨೪) ; ಸಂಜೆಯ ಮುಂದೆ ಬಂಕದಲ್ಲಿಟ್ಟ ಬಾನಿಯೊಳಗೆ ಅರಳಿದ ಮಲ್ಲಿಗೆಯ ಹೂವಿನ ಗಂಧ ಬರುತ್ತಿತ್ತು (ಇಕ್ಷ. ೨೩೩). **ಬಾನ್₂** : ೫. ನಾಗಪ್ಪನು . . . ಹೂವಿನ ಬಾನುಗಳಿಗೆ ನೀರು ತಣಿಸುತ್ತಿದ್ದನು (ಕಪಕ. ೯೩). **ಬಾನೆ** : ೧. ಗಮಗಮಿಸುತ್ತಿದ್ದ ಕಾಫಿ ತುಂಬಿದ್ದ ಬೆಳ್ಳಿಯ ಗಡಿಗೆ, ಸಕ್ಕರೆಯ ಬಾನೆ . . . ರೊಟ್ಟಿಗಳನ್ನುಳ್ಳ ಬುಟ್ಟಿಗಳನ್ನು ಜೋಡಿಸಲಾಗಿತ್ತು (ಕೃಷು. ೦೫) ; ಬಾನೆಯನ್ನು ತಲೆ ಮೇಲೆ ಕವಿಚಿಕೊಂಡು ತಿರುಗಲಾರಂಭಿಸಿದನು (ಕಥಾಶಿಂ. IV. ೦೦೬). ೩. ಬಾನೇಯಂತಾ ಬಾಯಿದೆರೆಯ ಬಾಯ ಕುಟಿಯು ವಿಕಾರದ ಹಲ್ಲು . . . ಆ ನಳರಾಜ ತಾನು ಯಿಂತಾ ರೂಪು ಧರಿಸಿದ (ಯುಕಳ. ೦೦೦) ; ಒಳಗಿದ್ದ ದೊಡ್ಡ ಬಾನೆಗಳಲ್ಲಿ ಮದ್ಯ ತುಂಬಿದ್ದಿತು (ಕಾಂತಲಾ. ೨೨೮) ; ಈ ಕಲಗಚ್ಚಿನ ಬಾನೆಯಲ್ಲಿ ಅಲ್ಲಿದ್ದ ಗೋಗಣವು . . . ಅಕೃತ್ರಿಮಸುಖವನ್ನು ಸವಿಯುತ್ತಿದ್ದಿತು (ಕಮಕ. ೦೩೮). ೫. ಚಿತ್ರವಿಚಿತ್ರವಾದ ಅನೇಕ ಬಗೆಯ ಗಿಡ ಬಳ್ಳಿಗಳು ಇರುವ ಮಣ್ಣು ಬಾನೆಗಳು ಸಾಲಾಗಿ ಇವೆ (ಪ್ರಕರ್ಣ. ೯೫). ೬. ಎತ್ತುಗಳನ್ನು ಹೂಡಿ, ಬಾವಿಯಿಂದ ನೀರೆತ್ತಲು, ಚರ್ಮದಿಂದ ಮಾಡಿದ ಒಂದು ಸಾಧನ; ಕಪಿಲೆ : ಧರ್ಮಡೋಣಿಗೆ ನೀರ ಎತುವ ಕಬಿನದ ಏತದ ಬಾನೆ ಕಬಿನದ ಕಟ್ಟು ಬಿಟ್ಟಂ ಧರ್ಮವನು ತಪದೆ ನಡಸಿ ಬಾಹೆಉ (ಶಾಇ. IX–ii. ೬೬೦–೨೨ ; 1559). **ಹನ್ನೆ** : ೨. ಕೊಟ್ಟ ಧ್ರುಂ(ಧ)ರ್ಮ್ಮ ಚೈತ್ರ ಪವಿತ್ರದಲಿ ಪೊಕ್ಕಲಿಗೆ ಹಾಗೆ ಪೊಟ್ಟಲುಗೊಳಗ ಹನೆಗೆ ಮಾನವತ್ತ ಸೊಂಟಿಗೆಯಣ್ (ಶಾಇ. XV. ೯೩–೩೨ ; 1154). **ಹಾನೆ** : ೨. ಶ್ರೀಪ್ರಸಂನಕೇಶವ ದೇವರ [ದೇವಡಿ]ಗಳಿಗೆ ಗುಗ್ಗರಿಗೆ ಹಾನೆಯಲಂ ಅಂಗಡಿಗಳಲು ಸಟ್ಟು ಗಾಯಮಂ ಬಿಟ್ಟರು (ಶಾಇ. XV. ೩೪೩–೦೦ ; 1166); ನಸಿಂಹದೇವರ ಬಾಳಿನ [ತೆ] ಬುಪರಾಹ ಪ ೬ ಭತ್ತ ಹಾನೆ ೪೫ ನೊ ಧಾರೆಯಾಗಿ ಎರದು ಕೊಟ್ಟರು (ಕ. III–i. ೨–೬ ; 1331); ಯಳ್ಳೆಂಣೆ ಹಾನೆ ೩.೬ (ಸ್ಕಂ. ೦೯೪೩. ೩೯–೦೩ ; 1673); ಎರಡು ಹಾನೆ ಭತ್ತಕ್ಕಾಗಿ, ಹನ್ನೆರಡು ಗಂಟೆ ದುಡಿಯುವ ಜನವಾಗಿರಲಿಲ್ಲ (ದೇಕಶು. ೩೯). ೭. ಭೂಮಿಯ ಒಂದು ಅಳತೆ : ಯಿವ ಅಕ್ಕಿಯ ಕೊಟಿತೆಗೆ ಕೊಠಾರಿ ಗುಡಿಯ ನಾಲ್ವತ್ತು ಹಾನೆ ಗದ್ದೆಯ ಮೇಲಣ ಎಂಟು ಹಾನೆಯಕ್ಕಿಯೂ ಕೂಡಿ ಸಡಲುದು (ಶಾಇ. IX–ii. ೪೦೩–೨೬ ; 1872). [ ದೇ.] ತಮಿ. ಪಾನೈ, ಪಾಣಾ; ಮಲ. ಪಾನ, ಪಾನಿ; ತುಳು. ಪಾಣೆ, ಪಾಣೆ, ಪಾನೆ, ಬಾಣ, ಬಾಣೆ, ಬಾನ, ಹಾನೆ ; ತೆಲು. ಬಾನ ; ಕೊಡ. ಪಾನಿ ]

**ಹಾನ್ನಾಡು** (ನಾ). ಒಂದು ಪ್ರದೇಶದ ಹೆಸರು : ಶ್ರೀಮತ್ ಕೊಙ್ಗಣಿ ವೃದ್ಧರಾಜೇನ ದುರ್ವ್ವಿನೀತ ನಾಮಧೇಯೇನ ಸಮಸ್ತ ಪಾನ್ನಾಡ (? ಪಾಖಾಡ) ಪುನ್ನಾಡಾಧಿಪತಿನಾ (ಎಕ. V, ೦೩೯–೦೦ ; ೬೩೩). [? + ನಾಡು]

**ಹಾಪ್₁** 'ಪಾವೆ' ನೋ.

**ಪಾಪ್ಮ** (ನಾ). ೧. ದೋಷ ; ಪುಣ್ಯವಲ್ಲದ ಕಾರ್ಯ ; ದುರಾಚಾರ : "ವೃಜಿನಂ, ದುರಿತಂ . . . ಪಾಪಂ, ಪಾಪ್ಮ, ಪಾತಕಂ—ಈ ೧೪ ಪಾಪಂ" (ಹಲಾಯು. ೦೧೩–೫) ; ಪಾಪವಿದು ಪುಣ್ಯವಿದು ಹಿತರೂಪವಿದುಹಿತಪ್ರಕಾರವಿದು ಸುಖವಿದು ದುಃಖೋಪಾತ್ತವಿದೆಂದಱಿವುಗುಮಾ ಪರಮಕವಿಪ್ರಧಾನರಾ ಕಾವ್ಯಂಗಳ್ (ಕಾವ್ಯಾ. ೦–೦೬); ಪಾಪದ ಪುಣ್ಯದ ಭೇದಮುನೀಪರಿಯಿಂದಱಿಯದಿರ್ಪ ನಡೆಪಾಪಿಯರ್ಗಾ ಶ್ರೀಪುರುಷೋತ್ತಮನಂ ಮನೆಗಾಪೆನಿಸಿದ ದಿವ್ಯಪಾದಕಾನೆಱಗಿದಪೆಂ (ಜಗ. ೬–೨೨೬). ೨. ದುರಾಚಾರದಿಂದ ಬಂದ ಕರ್ಮಫಲ : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗ ನರೋಗಂ (ಶಾಂತಿಪು. ೬–೦೪೦); ಮುನ್ನ ಮಾಡಿದ ಪಾಪ ಬೆನ್ನ ಬಿಡದನ್ನಕ್ಕ ಇನ್ನು ಬಯಸಿದರುಂಟೆ (ಬಸವ.೨೪); ಬಸವ ಶರಣನೆ ಪಾಪವಳಿವುಗು (ಬಸವ. ೦–೨೫). ೩. ತಪ್ಪು ; ಅಪರಾಧ : ಭೂಪನಂ ಹೊದ್ದುವುದು ರಾಷ್ಟ್ರದ ಪಾಪ (ಬಸವ. ೫೫–೬). ೪. ಕೆಟ್ಟ ವಸ್ತು : "ಅವರ್ಣಂ, ಅಣಕಂ . . . ಪಾಪಂ, ರೇಫಸಂ—ಈ ೧೩ ಹೊಲ್ಲಹ ವಸ್ತು" (ಹಲಾಯು. ೫೬–೦೫). ೫. ಕೆಟ್ಟ ಮನುಷ್ಯ; ದುಷ್ಟ; ಪಾಪಿ :"ನೃಶಂಸಃ, ಘಾತುಕಃ, ಕ್ರೂರಃ, ಪಾಪಃ—೪ ಪರರಿಗೆ ಬಾಧೆಮಾಡುವ ಸ್ವಭಾವವುಳ್ಳವನ ಹೆಸರುಗಳು" (ಸಿದ್ಧಾಂತ. ೩೩೩); ಮಿಟ್ಟು ಪೊಟ್ಟು ಪಾರೆ ಪಾಪರ್ ದೇವರಂ ತೆಗಟಿಸಲೊಡಮೋನಕ್ಕುಂ ? (ರಾಮಾಶ್ವ. ೨೪–೪). ೬. ದುರ್ದೈವ ; ದುರದೃಷ್ಟ. ೭. ಕೇಡು ; ಅನಿಷ್ಟ : 'ಪಾಪಶಂಕೆ' ಪರಾ. ೮. ಅನುಕಂಪೆಯನ್ನು ಸೂಚಿಸುವಾಗ ಬಳಸುವ ಒಂದು ಶಬ್ದ : ಕೂಸಿಗಿಂತ ತ್ರಾಣೆಯುಲ್ಲ ಪಾಪ ರಾಯರು (ರಾಮಾನ. ೯೬) ; ಏನೋ ಚೋರಾಚಾರು ಅಂತಿಂತಹ ಕಾಳುಕಡಿ ತಿಂದರೆ ತಿನ್ನಲಿ ಪಾಪ ಎಂಬಂತಿಲ್ಲ (ದೇಶಸ್ವ. ೪೪) ; ಪಾಪ ಮಗು ಏನೆಂದುಕೊಂಡಿತೋ ಕಾಣೆ (ಕಣ್ಣ. ೦೬). ೯. [ಜೈನ] ಒಂಬತ್ತು ವಿಧವಾದ ಪದಾರ್ಥಗಳಲ್ಲಿ ಒಂದು : 'ನವಪದಾರ್ಥ', 'ಪಾಪಪದಾರ್ಥ' ಪರಾ. [ಸಂ.]

**ಪಾಪ್ಮ** (ನಾ). ಒಂದು ಬಗೆಯ ಗಿಡ : "ಪರ್ಪಟಃ—ಪಾಪ, ಚಪಲ, ಗೇರು" (ಓಷಧಿ. ೯೦). [?]

**ಪಾಪಕರ್ತ** (ನಾ). ದುರಾಚಾರವನ್ನು ಮಾಡಿದವನು : ಪಾಪಕರ್ತನು ನಾನು ಪಾಪನಾಶನ ನೀನು (ಪುರಂದ. ೪–೧೦–೦). [ಪಾಪ್ಮ+ಕರ್ತ]

**ಪಾಪಕರ್ಮ** (ನಾ). ೧. ಕೆಟ್ಟ ಕೆಲಸ ; ದುರಾಚಾರ : ಆತನ ಭಾರ್ಯೆ ಪೃಥ್ವಿಶ್ರೀಯೆಂಬೊಳಾಕೆಯ ಗರ್ಭದೊಳ್ ಪಾಪಕರ್ಮ ಜೀವಂ ನೆಲಸಿದೊಡೆ (ಶಬ್ದಾರ. ೬೬–೪); ಎಲವೊ ಎಲವೋ ಪಾಪಕರ್ಮವ ಮಾಡಿದವನೇ . . . ಒಮ್ಮೆ ಶರಣೆನ್ನೆಲವೋ ಒಮ್ಮೆ ಶರಣೆಂದರೆ ಪಾಪಕರ್ಮ ಓಡುವುವು (ಬಸವ. ೬೨೧); ಪಾಪಕರ್ಮವ ಮಾಡಿದಡಮಿಳನ ಯಮಭಟರು ಕೋಪದಿಂದಲಿ ಸೆಳೆಯೆ (ಪುರಂದ. ರಾ. ೨–೯೩–೪); ಪಾಪಕರ್ಮಗಳ ನಶಿಗಳೆದು ನಿಂದವಗೆ ಕೋಪವೆಲ್ಲಿಯದು (ಸರ್ವಜ್ಞ. ೫೦೨). ೨. ಕೆಟ್ಟ ಕೆಲಸವನ್ನು ಮಾಡಿದವನು ; ದುಷ್ಕರ್ಮವನ್ನು ಮಾಡಿದವನು ; ಪಾಪಿಷ್ಠ : ಎನ್ನ ಪಾಪಕರ್ಮನ ಕತದಿಂದಮಿಾ ನಿಮಗಮಿಾಯಿರವಾದುದೆ ಸಿಂಧುನಂದನಾ (ಗದಾಯು. ೫–೪೦); ತನಗಿಕ್ಕುವೆಜೆವ ಕರುಣಂ ಮನದೊಳಮಿನಿತಿಲ್ಲ ಪಾಪಕರ್ಮನಪಂ ಮಾವನೆ (ಕುಸುಮಾ. ೨–೬೦) ; ಇಂ(ಇ)ದನ್ನಾ[ರಾ]ನುಂ ಕಿಡಿಸಿಹೆನೆಂಬ ಪಾಪಕರ್ಮ್ಮಂಗುಪೇಕ್ಷಿಸಿದಂಗಂ . . . ಸಾಸಿರಕವಿಲೆಯುಮಂ ವಾರಣಾಸಿಯೊಳಂ ಕುರುಕ್ಷೇತ್ರದೊಳಂ ತಂನ ಸ್ವಹಸ್ತದೊಳು ಕೊಂದ ದೋಷಮಕ್ಕು (ಎಪಿ. XXVII. ೬೩–೫೪: 1114).
[ಪಾಪ್ಮ+ಕರ್ಮ]

**ಪಾಪಕೃತ್ಯ** (ನಾ). ಕೆಟ್ಟಕೆಲಸ ; ದುರಾಚಾರ ; ಪಾಪಕರ್ಮ : ನಾವು ಅಹರ್ನಿಶಿ ಅನೇಕ ಪಾಪಕೃತ್ಯಗಳನ್ನೆಸಗುತ್ತಿದ್ದೇವೆ. (ಭಾಸರು. ೩೪೫).
[ಪಾಪ್ಮ+ಕೃತ್ಯ]

**ಪಾಪಕ್ಷಯ** (ನಾ). ಪಾಪವು ನಾಶವಾಗುವುದು; ದುಷ್ಕರ್ಮ ಕಳೆಯುವುದು : ಪಾಪಕ್ಷಯಕ್ಕೆಂದು ಗಂಗೆಯೊಳ್ಮಿಂದರೆ ಪಾಪಿಯ ... ತಿಂದಂತೆ ತಾಪಸ್ಥಸುರರಿಂಗೆ ಹಿತಗೈಯ ಬಂದ ಪ್ರಾಣೋಪವನ... ನೀನು(ಸೋಮಶ. ೬–೩೩); ಶುಭತಾರೆಯಲಿ ಪಾಪಕ್ಷಯವು (ಗಗಸ. ೪–೩೦).
[ಪಾಪ್ಮ+ಕ್ಷಯ]

**ಪಾಪಗ್ರಹ** (ನಾ). ದುಷ್ಪರಿಣಾಮವನ್ನುಂಟುಮಾಡುವ ರಾಹು, ಕೇತು, ಶನಿ, ಮಂಗಳ ಮೊದಲಾದ ಅಶುಭಗ್ರಹ : ಪಾಪಗ್ರಹಮು [ಶಾಕಾಂ. ಗ್ರಹಮುದ್ಯುದಯದೊಳಿರೆ ಪಾಪೇಕ್ಷಣಮಾಗೆ ತಱಟಯಕ್ಕುಂ (ಜಾತಕ. ೨೦–೨೦). [ಪಾಪ್ಮ+ಗ್ರಹ]

**ಪಾಪಚಿತ್ತ** (ನಾ). ೧. ಕೆಟ್ಟ ಮನಸ್ಸು. ೨. ಕೆಟ್ಟ ಮನಸ್ಸುಳ್ಳವನು ; ದುಷ್ಟ : ಪಾಪಚಿತ್ತರು ಗೋಣಿಯಲಿ ನರರೂಪನೊಂದಂ ರಚಿಸಿಯದಿಯಲಿ ಕೌಪನುಡಿಸಿ ವಿಭೂತಿಯಂ ಸರ್ವಾಂಗದಲಿ ಪೂಸಿ (ಬಸವ. ೬೩–೫೦).
[ಪಾಪ್ಮ+ಚಿತ್ತ]

**ಪಾಪಚೇಲಿ** (ನಾ). ಒಂದು ಬಗೆಯ ಮೂಲಿಕೆ; ಅಗಳುಶುಂಠಿ : "ಅಗುಳುಸುಂಟಿ—ಪಾಠೆ, ಅಂಬಷ್ಠೆ, ವಿದ್ಧಕರ್ಣಿ, ಪಾಪಚೇಲಿ, ಪ್ರಾಚೀನೆ, ರಸೆ" (ಬಾಶಬ್ದಾ. ೬). [ಸಂ. ಪಾಪಚೇಲೀ]

**ಪಾಪಚ್ಚಿ** (ನಾ). ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಒಂದು ಮಾತು : ಆ ಮಾಯಾ ನಗರಿಯಲ್ಲಿ, ಪಾತಾಳದಲ್ಲಿಯ ಪಾಪಚ್ಚಿಯಂತೆ, ಮಂದಾಕಿನಿ ಗಾಬರಿಯಾದಳೇನೊ (ಕ್ಷಿತಿ. ೨೦). 'ಪಾಪಣ್ಣ' ಪರಾ. [← ತಮಿ. ಪಾಪ್ಪಾಚ್ಚಿ]

**ಪಾಪಟ** 'ಪಾಪಟ್ಕೆ' ನೋ.

**ಪಾಪಟೆ**$_1$ (ನಾ). ೧. ಬೈತಲೆ ; ಸೀಮಂತ. ೨. ಒಂದು ಬಗೆಯ ಆಭರಣ (?) : ಪೊಸಮಿಸುನಿಯೊಳು ಬಿಗಿದ ಕತ್ತದ ಯಸುಳುದೆನೆಗಳ ಶಹಲೆದಿಂಡಿನ ಬೆಸದ ಬಂಕದ ಹಿಳುಕು ಪಾಪಟೆ ಪಚ್ಚೆ ನಿಚ್ಚಳದ . . . ವಜ್ರದ್ವಾರಸೊಬಗಿನೊಳೆಸದುದುಾಕ್ಷಣ ಮಯನ ನಿರ್ಮಿತದಿಂದಲಾ ನಗರ (ಅಂಬಿಕಾ. ೬–೫) ; ಕಡಗ ಸರಪಣಿ ಸಾರಸನ ಶಿರಕಿಡುವ ಮಲಕುಗಳಿಂದ ಮುತ್ತಿನಗಲೊಡನೆ ತೊಡರಿದ ಮುದ್ದು ಪಾಪಟೆಬಲೆಯು ರಂಜಿಸುತ , . . ನಡೆತರುವ ಶಿಶುಗಳ ಬೆಡಗ ನೋಡುತಲಿ (ಜನಪ. ೬–೦೪).
[ದೇ.॥ ತುಳು. ಪಾಪಟೆ ; ತೆಲು. ಪಾಪಟ ; ಕುವಿ. ಪಾಪೆಟ್ಟು]

**ಪಾಪಟ್ಕೆ**, ಪಾಪಟಿ, ಪಾಪಡಿ$_1$, ಪಾವಟೆ (ನಾ). ೧. ಒಂದು ಬಗೆಯ ಔಷಧಿ ಸಸ್ಯ; ಇಂದ್ರವಾರುಣಿ; ಹಾವುಮೆಕ್ಕೆ: "ಕಾಕಚ್ಛೇದಿ–ಪಾಪಟಿ" (ಓಷಂ. ೩೦); ನೆಲಗೋಣಿ ಪು(ಹು)ಣಿಸೆ ಪಾಪಟೆ ಹುಲಿಗಿಲ್ ದೊಗ್ಗಳೆಯ ಹಱುಹೆಯೆಂಬಿವಱೆಲೆಯಂ ಕಟಿಯೊಳುಱಿ ಕಾಸಿ ಕಟ್ಟಲ್ ತೊಲಗುಗು ಮೊದಱಸುವ ಮುಳ್ಳ ವಿಷಮೆನಿತನಿತುಂ (ಖಮುರ. ೨–೨೦೦); ಮುಳ್ಳು ಮುತ್ತುಗದ ರಸ, ಪಾಪಟೆಸೊಪ್ಪಿನ ರಸ, ಹೆಗ್ಗುಳ್ಳಂಗಡಲೆಸೊಪ್ಪಿನ ರಸ . . . ಪ್ರಾತಃಕಾಲದಲ್ಲಿ ಗ ೪ ತೂಕವಂ ಸೇವಿಸುವುದು (ಸಕಲ. ೨೦೬). ೨. ಒಂದು ಬಗೆಯ ಮರ ಮತ್ತು ಉಪ್ಪಿನಕಾಯಿಗೆ ಉಪಯೋಗಿಸುವ ಅದರ ಹುಳಿಯಾದ ಕಾಯಿ : ಅಂಬಟೆಯ ತದುಕಲ ಸುಂಡೆ ಪಾಪಟೆಯ ಚಳ್ಳೆ ಮಾಗುಳಿ ತಳಲೆ ತೊಗರಿ ಗುಳ್ಳ ತಿಂತ್ರಿಣಿಯುಪ್ಪುಗಾಯಿಗಳೆಲ್ಲ ಸುಪ್ಪಾರಿಯರು ಬಡಿಸಿದರತಿವಿಚಿತ್ರದಲಿ (ಅಪಂಶಾ. ೬–೨೫–೩೪). **ಪಾಪಟಿ** : ೧. "ಪಾಪಟಿ—ಪರ್ಪಟ=ಒಂದು ಗಿಡ" (ಕರ್ಣಕೋ. ೨೬); ಗಸಗಸೆ, ಸಾಸಿವೆ . . . ಪಾಪಟಿ, ಮಂಗಾರೆ (ವಸ್ತುಕೋ. ೨೪೬). **ಪಾಪಡಿ$_1$**: ೧. ಸೆ(ಸಿ)ೀಗುಡಿತೆಯ ಮುಳ್ ಕೊಗ್ಗಿಯ ದಾಗುಡಿ ಚಿತ್ರರಟ ಪಾಪಡಿಗ ಲೆಂಬಿವಱೊಳ್ ಪ್ರಾಗುಕ್ತ ಮೂಲವಿಾರದರೆದಾಗಳ್ ಖರಮೂತ್ರ ಲೇಪಮುತ್ತೆ ವಿಷಮುಂ (ಖಮುರ. ೬–೩೨). **ಪಾವಟೆ** : ೧. ಪಾವಟೆ :— ಈ ಕಾಯಿ ಸಮೂಲವಂ ತಂದು ಅರೆದು ಬೆಣ್ಣೆಯಲ್ಲಿ ಕಲಸಿ ಮೂಱು

ಆದಿತ್ಯವಾರ ತೆಗೆದುಕೊಳ್ಳಿ ಮೂಲವ್ಯಾಧಿ ಗುಣ (ಔಷ್ಯ. ೬); ಪಾಪಟೀ ಬೀಜ, ತಕ್ಕೋಲ . . . ಲಾಮಂಚ—ಇವನ್ನು ಪ್ರತ್ಯೇಕ ಕರ್ಷಪ್ರಮಾಣ ಹಾಕಿ ಚೂರ್ಣಿಸಿ ಹಾಲಿನಲ್ಲಿ ಕಲಸಿ ಹಾಕುವುದು (ಸಕಲ್ಪ. ೪೫೦ ಪ).
[ದೇ.॥ ತಮಿ. ಪಾಪಟ್ಟ್ಯು; ಮಲ. ಪಾಪಟ್ಟ; ತುಳು. ಪಾಪಟೆ ; ತೆಲು. ಪಾಪಟಿ]

**ಪಾಪಟೆ₃**, ಪಾಪಡಿ₂ (ನಾ). ೧. "ಸುವಾಸನಾಯುಕ್ತವಾದ ಮಣ್ಣು" (ಶಬ್ದಮ). ೨. ಒಂದು ಬಗೆಯ ಸುಗಂಧದ್ರವ್ಯ : "ಜತುಕೆ ಪಾಪಟೆ [ಪಾಠಾಂ.ಡಿ] ಯೆನಿಕ್ಕುಂ" (ಮಂಗರಾ. ೫೨-೩೯). **ಪಾಪಡಿ₂** : ೧. ಘಟ ಅಂದರೆ ಉಸುಬುಮಣ್ಣು ಹೊಟ್ಟು (ಪಾಪಡಿ) ಮುಂತಾದವುಗಳು (ಮುಂಬವ್ಯಾ. ೩೯). ೨. ಮೇಲಿನ 'ಮಂಗರಾ.' ಪ್ರಯೋಗದ ಪಾಠಾಂತರವನ್ನು ನೋಡಿ.
[<ಸಂ. ಪರ್ಪಟೀ]

**ಪಾಪಡಖಾರ** 'ಪಪ್ಪಡಕಾರ' ನೋ.

**ಪಾಪಡಿ₁** 'ಪಾಪಟೆ₂' ನೋ.

**ಪಾಪಡಿ₂** 'ಪಾಪಟೆ₃' ನೋ.

**ಪಾಪಡಿ₃** (ನಾ). (ಉಕ) ಹಳದಿ ರೇಷ್ಮೆಯಲ್ಲಿ ಒಂದು ಪ್ರಕಾರ : ೧೯, ಪಾಪಡಿ ೨೦, ಮಾನಚುಂಗ . . . ೪೩, ಕುಬೀನ ಇದರ ಹೊರ್ತು ಮತ್ತೂ ರೇಶ್ಮಿಯಲ್ಲಿ ಬಹಳ ಜಾತಿಗಳುಂಟು (ಮುಂಬವ್ಯಾ. ೦೦೯).
[←ಮರಾ. ಪಾಪಡೀ]

**ಪಾಪಣ್ಣ** (ನಾ). ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಒಂದು ಮಾತು: ಪಾಪಣ್ಣ ಸ್ಕೂಲಿಗೆ ಹೋಗಲು ಹಟ ಮಾಡಲಿಲ್ಲ (ರೂಢಿ). 'ಪಾಪಚ್ಚಿ' ನೋ.
[ಪಾಪ₁ (<ಪಾಪೆ) + ಅಣ್ಣ₁]

**ಪಾಪನಾಯಕಿಹೊನ್ನು** (ನಾ). ಒಂದು ಬಗೆಯ ಬಂಗಾರದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧ ಗಬರು . . . ೧ ಪಾಪ ನಾಯಕಿಹೊನ್ನು (ಚಿತ್ರಶಾ. ೦೦೯). [? + ಹೊನ್ನು₁ (<ಪೊನ್)]

**ಪಾಪನಾಶನ** (ನಾ). ೧. ಪಾಪದ ನಿವಾರಣೆ; ದುಷ್ಕರ್ಮದ ನಾಶ. ೨. ಪಾಪವನ್ನು ನಾಶ ಮಾಡುವವನು; ದುಷ್ಕರ್ಮವನ್ನು ಹೋಗಲಾಡಿಸುವವನು : ಗಾರಿಸಹಿತಂ ಮುಂದೆ ನಿಂದು ಮಾಹೇಶ ನೀಶನು ಪಾಪನಾಶನನು [ಪಾಠಾಂ. ಪಾಪಧರಕರನು] . . . ಮೆಚ್ಚಿ ತಾನೊಲಿದು (ಬಸವ. ೨೬-೨೬); ಪಾಪಕರ್ತನು ನಾನು ಪಾಪನಾಶನ ನೀನು (ಕರಂದ. ೪-೪೦-೧). [ಸಂ.]

**ಪಾಪಪದಾರ್ಥ** (ನಾ). [ಜೈನ] ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ ಮತ್ತು ಮೋಕ್ಷ ಎಂಬ ಒಂಬತ್ತು ವಿಧವಾದ ಪದಾರ್ಥಗಳಲ್ಲಿ ಒಂದು : ಜೀವಪದಾರ್ಥಮ ಜೀವಪದಾರ್ಥಂ ಮೋಕ್ಷಪದಾರ್ಥಂ ಆಸ್ರವಪದಾರ್ಥಂ ಸಂವರಪದಾರ್ಥಂ . . . ಪುಣ್ಯಪದಾರ್ಥಂ ಪಾಪಪದಾರ್ಥಮೆಂಬ ನವಪದಾರ್ಥಮುಮಂ . . . ಕೈಕೊಂಡು (ಸುಕುಮಾ. ೩-೩೯ ವ). [ಪಾಪ₂ + ಪದಾರ್ಥ]

**ಪಾಪಪ್ರಜ್ಞೆ** (ನಾ). ತಾನು ಮಾಡಿದ ದುಷ್ಕರ್ಮದ ಅರಿವು – ತಿಳಿವಳಿಕೆ : ಈ ಕರುಳಸಾವಿಗೆ ತಾವೂ ಕಾರಣರು ಎಂಬ ಪಾಪಪ್ರಜ್ಞೆ ವಾಸುದೇವನ ಪತ್ರದ ಕತೆಯಲ್ಲಿ ಬಿಡುಗಡೆ ಪಡೆಯುವ ಹವಣಿಕೆಯಲ್ಲಿತ್ತು (ಮಾರುದಾ. ೩೩೬); ಮಗನಿಗೆ ತನ್ನ ವ್ಯವಹಾರವೆಲ್ಲ ಗೊತ್ತಾದಾಗ ಅವಳು ಪಾಪಪ್ರಜ್ಞೆಯಿಂದ ನಿರ್ಬಲಳಾಗುತ್ತಾಳೆ (ಹೊಸಕ್ಷಿ. ೨೪೨).
[ಪಾಪ₂ + ಪ್ರಜ್ಞೆ]

**ಪಾಪಭೀತಿ** (ನಾ). ಪಾಪದ ಅಂಜಿಕೆ : ಪಾರ್ಥನು ಪಾಪಭೀತಿಯಿಂದ ವಿಹ್ವಲನಾಗಿದ್ದಾನೆ (ಭಾರತ. ೦೦೬). [ಪಾಪ₂ + ಭೀತಿ]

**ಪಾಪಭೀರು** (ನಾ). ಪಾಪಕ್ಕೆ ಹೆದರುವವನು; ದುಷ್ಕರ್ಮಕ್ಕೆ ಅಂಜುವವನು : ಅವನಾ ನಿಸ್ತ್ರಿಂಶಕರ್ಮಕ್ಕೆ ಕೊಕ್ಕರಿಸಿ, ಪಾಪಭೀರು ವಪ್ಪುದರಿಂ (ಆದಿಪು. ೨-೦೯ ವ) ; ಜನಕತನೂಜೆ ನೆಟ್ಟನೆ ಮಹಾಸತಿ ಗರ್ಭಿಣಿ ಪಾಪಭೀರು (ಜಗನ್ನಾಥ. ೦೫-೬೨); ಅಧಿಕಪಾಪಭೀರುಗಳೀ ಮಾಸದಲಿ ಓರಂತೆ ದೀಪಪೂಜೆಯ ಮಾಡಿದವರು ಮುರಾರಿಯ ಕೆಲದ ಲೊಪ್ಪುವರು (ರುಕ್ಮಾಂಗ. ೬-೦೪). [ಪಾಪ₂+ಭೀರು]

**ಪಾಪಭೀರುತ್ವ** (ನಾ). ಪಾಪಕ್ಕೆ ಹೆದರುವ ಸ್ವಭಾವ : ಅಂತುಪಶಮ ಭಾವಮುಂ ಪಾಪಭೀರುತ್ವಮುಂ ತನಗೆ ತೊಟ್ಟನೆ ಪುಟ್ಟೆ (ಜಗನ್ನಾಥ. ೪-೦೫ವ); ಇಲ್ಲಿ ಧರ್ಮರಾಜನ ಪಾಪಭೀರುತ್ವ, ಸತ್ಯಸಂಧತೆ ಅಭಿವ್ಯಕ್ತವಾಗುತ್ತದೆ (ಭಾರತ. ೦೦೩). [ಸಂ.]

**ಪಾಪರ್** 'ಪಾಪರು' ನೋ.

**ಪಾಪರ್‌ಚೀಟಿ** (ನಾ). ದಿವಾಳಿ ; ಪಾಪರು : ಪಾಪರ್‌ಚೀಟಿ ತೆಗೆದುಕೊಂಡಿದ್ದ ಒಬ್ಬ ಸಾಲಗಾರನನ್ನು ದೋಷಾರೋಪಣೆಯಿಂದ ತಪ್ಪಿಸಿದ್ದಾಯ್ತು (ಕುವರು. ೨೦೨). [ಪಾಪರ್ (<ಪಾಪರು) + ಚೀಟಿ₂ (< ಚೀಟ್ಟು)]

**ಪಾಪರತ** (ನಾ). ದುರಾಚಾರದಲ್ಲಿ ಆಸಕ್ತಿಯುಳ್ಳವನು : ಪಾಣ್ಬಂ ಖಳ ಪ್ರೀತಿ ಪಾಪರತಂ ಕಾನವರೋಹಿಯಪ್ಪ ದಶೆಯೊಳ್ ವಿಶ್ವಂಭರಾಪುತ್ರನಾ (ಪಾಪತಿ. ೯-೨೨). [ಪಾಪ₂+ರತ]

**ಪಾಪರಹಿತ** (ನಾ). ೧. ಪಾಪವಿಲ್ಲದುದು ; ದೋಷಮುಕ್ತವಾದುದು : ಪಾಪರಹಿತಂಗಳುರುಸುಖರೂಪಂಗಳೆನಿಪ್ಪನೇಕವಿಧಕೇಳಿಗಳಿಂದಾ ಪುಣ್ಯ ದಂಪತಿಗೆ ನಿವಿಮೋಪಸುಮೆನೆ ಪೋಯ್ತನೇಕವತ್ಸರನಿಕರು (ಚಂದ್ರಪ್ರ. ೦೦-೦೦೯). ೨. ಪಾಪದಿಂದ ದೂರವಾದವನು ; ದುಷ್ಕರ್ಮದಿಂದ ದೂರವಾದವನು : ಆ ಪರಸುಕಾರುಣಿಕಗೆಱಗಿಯೆ ಪಾಪರಹಿತನು ಮಾಡಿದನು ವಿನಯದಲಿ ಬಿನ್ನಪವ (ಜೈಭಾಗ. ೦೦-೩೨-೩೩). [ಪಾಪ₂ + ರಹಿತ]

**ಪಾಪರು**, ಪಾಪರ್ (ನಾ). ದಿವಾಳಿಯಾದವನು ; ನಿರ್ಗತಿಕ : 'ಜನತಾ' ಎಂಬ ಆಧುನಿಕಯುಗದ ಈ ಹೆಸರು ಪ್ರಜಾಪ್ರಭುತ್ವದ ಪಾಪರು ಅಥವಾ ಅರ್ಧಪಾಪರುಗಳಾದ ಯಾತ್ರಿಕರನ್ನು ಸಾಗಿಸುವಂಥ ಬಂಡಿಯದು (ಅಲಂ. ೦); ಎಲ್ಲಾ ಹೋಯಿತು, ಪಾಪರಾದೆ (ಬೌಂಕ್. ೦೯೯). **ಪಾಪರ್**: ಪಾಪರ್‌ಆಗಿ ಅಪ್ಪೀಲುಮಾಡಲಿಕ್ಕೆ ಅಪ್ಪಣೆಗೋಸ್ಕರ ಮೂವತ್ತುದಿವಸಗಳು (ನ್ಯಾಶಿಕ್. ೦೬೩); ಕೋರ್ಟಿಗೆ ಹೋದವರು . . . ಆಸ್ತಿಪಾಸ್ತಿ ಎಲ್ಲವನ್ನು ವಕೀಲರ ಪಾಲುಮಾಡಿ ಪಾಪರ್ ಆಗ್ತಾರೆ (ನಮ್ಮೂ. ೪೪); ನೀವೂ ನಮ್ಮ ಹಾಗೆ ಬೇಗ 'ಪಾಪರ್' ಆಗ್ತೀರಿ (ನಮ್ಮೂರ. ೬೩).

**ಪಾಪರು ಮಾಡು**=ನಿರ್ಗತಿಕನನ್ನಾಗಿ ಮಾಡು ; ದಿವಾಳಿಯಾಗುವಂತೆ ಮಾಡು : ಎಷ್ಟೋ ಜನ ಒಬ್ಬರ ಮೇಲೊಬ್ಬರನ್ನು ಕಡಹಿ ಅವರನ್ನು ಪಾಪರು ಮಾಡಿ ತಾವೂ ಹಾಳಾಗುತ್ತಾರೆ (ಹುಬ್ಬಿಹ. ೦೬೬).
[←ಇಂ. Pauper]

**ಪಾಪರ್ಧಿ** (ನಾ). ಬೇಟೆ; ಮೃಗಯಾವಿಹಾರ: "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿ, ಆಖೇಟಕಃ—ಈ ೫ ಬೇಟೆ" (ಹಲಾಯು. ೬೦-೨೬೦); ಶಬರನ ಮಾತಂ ಶ್ರೇಣಿಕಂ ಕೇಳ್ದು ಪಾಪರ್ಧಿಗರ್ತಿಕನಾಗಿ ಬೇಂಟೆಬಿನ್ನಣದವರಂ ಕೂಡಿಕೊಂಡಟವ್ಯಮಂ ಪುಗುತಪ್ಪುದುಂ (ಧರ್ಮಾಮೃ. ೩-೩೩ ವ); ದ್ಯೂತ ಮದ್ಯ ಪಿಶಿತ ವೇಶ್ಯಾಪಾಪರ್ಧಿ ಚೌರ್ಯ ಪರದಾರಮೆಂಬ ಸಪ್ತವ್ಯಸನಮುಮಂ ನಿರಾಕರಿಸಿಯುಂ (ಶ್ರೀಪುರಾ. ೦೯-೬೩ ವ).
[<ಸಂ. ಪಾಪರ್ದ್ಧಿ]

**ಪಾಪವಿಘಾತಿ** (ನಾ). ಪಾಪವನ್ನು ನಿವಾರಿಸುವಿಕೆ ; ಪಾಪವನ್ನು ನಾಶಮಾಡುವಿಕೆ : ಕೇಳಿದನು ಜನಮೇಜಯಕ್ಷಿತಿಪಾಲಕನು ವರಸರ್ಪಯಜ್ಞಸ್ಥೂಲಪಾಪವಿಘಾತಿಗೋಸುಗವೀ ಮಹಾಕಥೆಯ (ಕುಮಾವ್ಯ. ೨-೪).
[ಪಾಪ₂ + ವಿಘಾತಿ]

**ಪಾಪವಿನಾಶ** (ನಾ). ಪಾಪವನ್ನು ನಾಶಮಾಡುವವನು ; ದುಷ್ಕರ್ಮವನ್ನು ಹೋಗಲಾಡಿಸುವವನು : ಜಯಜಯ ನಂದನಂದ ಪರಮೇಶ್ವರ ಪಾಪವಿನಾಶ ಲೋಕವಿಸ್ಮಯಕರ ಶಂಭು ಶಂಕರ (ಆದಿಪು. ೧೧-೨೨); ದಾಶರಥಿ ವೈಕುಂಠನಗರನಿವೇಶ ತ್ರೈಜಗದೀಶ ಪಾಪವಿನಾಶ (ಹಂಸಾ. ೧೧). [ಪಾಪ$_2$ + ವಿನಾಶ]

**ಪಾಪಶಂಕಿ** (ನಾ). ಅನಿಷ್ಟವಾಗುವುದೆಂಬ ಸಂದೇಹವುಳ್ಳುದು : ಅತಿಸ್ನೇಹವು ಪಾಪಶಂಕಿಯಾವವ್ದು (ಶಾಕುಂತ. ೫೬-೨). [ಸಂ. ಪಾಪಶಂಕಿನ್]

**ಪಾಪಸತ್ವ** (ನಾ). ದುಷ್ಟಪ್ರಾಣಿ; ಕೆಟ್ಟ ಜೀವಿ : ನಾಲ್ಕನೆಯ ಕುಳಧರಂ ಪುಟ್ಟಿ ಪಾಪಸತ್ವಂಗಳ್ ಕಾಡೆ ಲಕುಟಯುಷ್ಟ್ಯಾದಿ ರಕ್ಷಾವಿಧಿಯನುಪದೇಶಂಗೆಯ್ದಾತಂ ಕ್ಷೇಮಂಧರನೆಂಬ ಪೆಸರಂ ಪಡೆದಂ (ಆದಿಪು. ೬-೫೬ವ). [ಪಾಪ$_2$+ಸತ್ವ$_2$]

**ಪಾಪಹರ** (ಗು). ೧. ಪಾಪವನ್ನು ನಾಶಮಾಡುವ ; ದುಷ್ಕರ್ಮವನ್ನು ಹೋಗಲಾಡಿಸುವ : ಪಾಪಹರಮೂರ್ತಿ . . . ತಾಪಸಸುತನೆನ್ನನಂದು ಭೋಂಕೆನೆ ಕಂಡಂ (ರಶಕು. ೪-೬೪). (ನಾ). ೨. ಪಾಪವನ್ನು ನಾಶಮಾಡುವವನು : ಪಾಪಹರಂ ಪ್ರಕಾಶಿತವೃಷಂ ವೃಷಧ್ವಜಂ. . . ಉಪಾಶ್ರಿತಭವ್ಯಜನಾಭಿನಂದನಂ (ಆದಿಪು. ೧-೪೦): ಅಹಮಿಂದ್ರರಧಿಕ ಭಕ್ತಿಯಿನಹರ್ನಿಶಂ ತಮ್ಮ ನೆಲೆಗಳಿಂ ತಳರದೆ ಪಾಪಹರಂಗೆಱಗುಮೆನಿಸಿದ ಮಹಿಮೆಯ ಪೆರ್ಗಡೆದ ಪರಮಾತೋಟಿಯೊಳಿರ್ಪರ್ (ಶಾಂತಿಪು. ೯-೧೨೪). [ಸಂ.]

**ಪಾಪಹೃತ್ತು** (ಗು). ಪಾಪವನ್ನು ಪರಿಹಾರ ಮಾಡುವ ; ಪಾಪವನ್ನು ಹೋಗಲಾಡಿಸುವ : ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ . . . ಪಾಪಹೃತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ (ಆದಿಪು. ೧-೧). [ಸಂ. ಪಾಪಹೃತ್]

**ಪಾಪಾಂತಕ** (ಗು). ಪಾಪವನ್ನು ನಾಶಮಾಡುವ : ಆ ಪರಮಧರೆಯೊಳಾಶ್ರಿತಪಾಪಾಂತಕಪುಣ್ಯತೀರ್ಥಪಾನಕಜನಸಂತಾಪಪ್ರನಳಿಪತಿ ಶುಭಕರ ದಾಪಗೆಗಳ್ ಮಹಿಮೆಯಿಂದೆ ಪರಿರಾಜಿಕುರ್ಂ (ಹಮ್ಮಿರ. ೧-೫೪). [ಪಾಪ$_2$+ಅಂತಕ]

**ಪಾಪಾತ್ಮ** (ನಾ). ದುಷ್ಟ ; ಪಾಪಿ : ಪಾಪಾತ್ಮ ನಾನಲ್ಲ ಪಾಪವೆನಗಿನಿತಿಲ್ಲ (ಕವಳ. ೧೪೦ ಪಲ್ಲವಿ); ಪಾಪಾತ್ಮನ್ನ ಪರಮಾತ್ಮ ತಿಳಿಯನೆ ? (ಗಾದೆ). [ಸಂ. ಪಾಪಾತ್ಮನ್]

**ಪಾಪಾಲೋಕನ** (ನಾ). [ಜ್ಯೋತಿ] ಅಶುಭಗ್ರಹಗಳ ದೃಷ್ಟಿ ; ದುಷ್ಟಗ್ರಹಗಳ ನೋಟ : ಪಾಪಗ್ರಹಮುದಯದೊಳಿರೆ ಪಾಪೇಕ್ಷಣಮಾಗೆ ತಜಟೆಯಕ್ಕುಂ ಲಗ್ನ ಚಾಪ ಮಪಮೇಷನಾಗಿರೆ ಪಾಪಾಲೋಕನದೆ ವಿಕೃತದಂತನೆನಿಕ್ಕುಂ (ಜಾತಕ. ೨೧-೨೦). [ಪಾಪ$_2$ + ಆಲೋಕನ]

**ಪಾಪಾವಹ** (ನಾ). ಪಾಪದಿಂದ ಕೂಡಿದವನು ; ಪಾಪಿಷ್ಠ ; ಪಾಪಿ : ಖರರುಜ್ಜಂದನಂ . . . ತ್ರಿಕೋಣಸ್ಥನಾಗಿರೆ ಪಾಪಾವ [ಜಾತಾಂ. ಪಾಪ. ಪ] ಹನಕ್ಕುಂ (ಜಾತಕ. ೧೬-೧೪). [ಪಾಪ$_2$+ಆವಹ]

**ಪಾಪಾಸಕಳ್ಳಿ** ‘ಪಾಪಾಸುಕಳ್ಳಿ’ ನೋ.

**ಪಾಪಾಸು** ‘ಪಾಪೋಸು’ ನೋ.

**ಪಾಪಾಸುಕಳ್ಳಿ**, ಪಾಪಾಸಕಳ್ಳಿ (ನಾ). ಕಳ್ಳಿಯ ಜಾತಿಗೆ ಸೇರಿದ ಒಂದು ಬಗೆಯ ಮುಳ್ಳಿನ ಸಸ್ಯ; ಡಬ್ಬುಗಳ್ಳಿ (ಉಕ): ಹಳ್ಳಿಯ ಸುತ್ತ . . . ಪಾಪಾಸುಕಳ್ಳಿಯ ಬೇಲಿಯೂ ಇದೆ (ಮಲೆನಾ. ೨೩); ಆ ಹಸುವಿನ ಕೊರಳಿಗೂ ಹೊಟ್ಟೆಗೂ ಹುಡುಗರು ಬೇಕಾದಷ್ಟು ಪಾಪಾಸುಕಳ್ಳಿ ಹಣ್ಣಿನ ರಸವನ್ನು ಸವರಿದರು (ಕಳಹು. ೫೦). **ಪಾಪಾಸಕಳ್ಳಿ** : ಪಾಪಾಸಕಳ್ಳಿಬೇರು . . . ಗಡ್ಡುಗದ ಬೇರು ಇವನ್ನು ಪ್ರತ್ಯೇಕ ೧೦ ಪಲ ತೆಗೆದುಕೊಂಡು ಸಣ್ಣಗೆ ಕತ್ತರಿಸಿ (ಸಕವೈ. ೪೪೦ ಪಂ). [ಪಾಪಾಸು (<ಪಾಪೋಸು)+ಕಳ್ಳಿ$_1$]

**ಪಾಪಾಸ್ರವ** (ನಾ). [ಜೈನ] ಜೀವನಲ್ಲಿ ಹರಿದು ಬರುವ ಪಾಪಕರ್ಮಗಳು: ಆಸ್ರವಮೆರಡುತೆಱಂ ಪುಣ್ಯಾಸ್ರವಮೊಂದದಱ ವೈಪರೀತ್ಯಭವಂ ಪಾಪಾಸ್ರವಮಂತವಱೊಳ್ ಪುಣ್ಯಾಸ್ರವವಸ್ತುಸ್ವರೂಪಮಕ್ಕುಂ ತ್ರಿವಿಧಂ (ಶಾಂತಿಪು. ೧೨-೪). [ಪಾಪ$_2$ + ಆಸ್ರವ]

**ಪಾಪಿ** (ಗು). ೧. ಕೆಟ್ಟ; ದುಷ್ಟ. (ನಾ). ೨. ಪಾಪ ಮಾಡಿದವನು; ಕೆಟ್ಟ ಕೆಲಸವನ್ನು ಮಾಡಿದವನು ; ಪಾಪಿಷ್ಠ : “ಖಳನುಗ್ರಂ ಪಾಪಿ ದುಷ್ಟಾತ್ಮಕ(ನವನೆ) ಶಠಂ ದುರ್ಜನಂ ತಾನನಾರ್ಯಂ” (ಪಾಲ್ಕು ಕೋ. ೧೨೦-೧೧); ಕಿಱಿದಾನುಂ ಬೇಗಮಿರ್ದಲ್ಲಿ ಕಾರ್ಯವ್ಯಗ್ರಪಾಪಿ [ಪಾಠಾಂ. ಪಾಪಿ] ಪಾಶಾಶ್ರಿತರೆಲ್ಲರುಂ ಕೇಳಲೆಂದು ಮಹೀಭುಜನಿಂತೆಂದಂ (ಶಂಕಥಾ. ೧೩-೯ ವ); ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ (ಬಸವ. ೨೨೩); ಅಟಮಟಿಸಿ ಪರವಧುವ ತಂದುತ್ಕಟದ ಪಾಪಿಗೆ ಹೇಸಿ ವನವಧು ಚಿಟುಕ ಮುರಿದಪಳ್ (ತೊರಾ. ೫-೪-೧೧) ; ಪಾಪಿ ಸಮುದ್ರಕ್ಕೆ ಹೋದರೂ ಮೊಳಕಾಲುದ್ದ ನೀರು (ಗಾದೆ).

**ಪಾಪಿಕೂಸು, ಪಾಪಿಯ ಕೂಸು** = ಶ್ರೀಶೈಲದಲ್ಲಿ ಕೆಲವರ ಕಣ್ಣಿಗೆ ಬೀಳುವುದೆಂದು ನಂಬಲಾದ ಒಂದು ಮಗು; P ಇದು ಎತ್ತಿಕೊಂಡವರನ್ನೇ ನಾಶಮಾಡುವುದೆಂದು ಹೇಳುತ್ತಾರೆ : ಕೂಸೊಂದು ಮುಟ್ಟಲು ಹೋದ ಏಸೊಂದು ಜನಗಳು ಆಸು ನೀಗಿ ತುತ್ತಾಗಿ ಹೋದರು ಪಾಪಿಗೂಸು ವಿಶಾಲರೂಪು ತಾಳಿ ನುಂಗುತಿರೆ (ಸಿದ್ಧಪು. ೬-೩೦) ; ಪಾಪಿಯ ಕೂಸನೆತ್ತಿದಂತೆ ಕೂಡಲಸಂಗಮದೇವರ ಭಕ್ತಿ ಅಳಿಮನದವರಿಗೆ ಅಳವಡದಯ್ಯಾ (ಬಸವ. ೬೬೭); ಬಾಬಾಯೆಂದು ಪಾಪಿಯ ಕೂಸನೆತ್ತಿಕೊಳ್ವಂತಟುವ ಕೂಸನೆತ್ತಿಕೊಂಡು (ಅರ್ಥವೇ. ೬-೬೦ ವ); ಧರಿಸಿ ಪಾಪಿಯ ಕೂಸ (ರೇತಣ. ೧೧೪-೨೩). [ಸಂ. ಪಾಪಿನ್]

**ಪಾಪಿಯಸಿ** (ನಾ). ಕೆಟ್ಟವಳು; ದುಷ್ಟೆ; ಪಾಪಿಷ್ಠೆ : ನಾನೆಂಥ ಪಾಪಿಯಸಿ ?— ಎಂದು ತನ್ನನ್ನು ತಾನೇ ಹಳಿದುಕೊಂಡಳು (ಶಕುಂತಾ. ೧೨), [<ಸಂ. ಪಾಪೀಯಸೀ]

**ಪಾಪಿಷ್ಠ** (ನಾ). = ಪಾಪಾತ್ಮ : ಲೋಕಂ ಪೊಗಳಲಿದಱಿಂದ ಹೋಗದ ಸಹ್ಯಭಾವನೆಯಿಂದಪಂದಿರು ಮತ್ತೆಯುಂ ಪಾಪಿಷ್ಠರಾಗಿರ್ದು (ಬಸಪು. ೬೦-೨೦); ಆ ಸೂರ್ಯನು ಹ್ಯಾಗೆ ಪಾಪಿಷ್ಠನಾದನೋ ಪುನಃ ಯಾವ ಉಪಾಯದಿಂದ ಪರಿಶುದ್ಧನಾದನೋ (ಅರ್ಕಕಥಾ. ೨). [ಸಂ.]

**ಪಾಪಿಷ್ಠೆ** (ನಾ). ದುಷ್ಟೆ : ಪಾಪಿ : ನಿಮ್ಮಡಿಗಳ ವಕ್ಷಸ್ಥಳಮಂ ವಿದಾರಿಸಿ ರಕ್ತಪಾನಮಂ ಮಾಳ್ಪೆನೆಂಬ ದೋಹಳಮೆನಗೆ ಪಾಪಿಷ್ಠೆಗೆ ಪುಟ್ಟಿರ್ದುದು (ಶ್ರಾವ್ಯಸ್ರ. ೩-೬೬ಪ); ನಿಮ್ಮಿಬ್ಬರಲ್ಲಾರೋ ಒಬ್ಬಳು ಆ ಪಾಪಿಷ್ಠೆಯಾಗಿರಬೇಕು (ದೇವೀಭಾ. ೧೪೬). [ಸಂ. ಪಾಪಿಷ್ಠಾ]

**ಪಾಪು**, ಪಾಂಪು (ನಾ). (ಕರಾ) ಸೇತುವೆ ; ಪೂಲು ; ಸಂಕ : ಅಬ್ಬಿಯ ನೀರು, ಕಳೆದ ವರ್ಷದ ಪಾಪನ್ನು ಕೊಚ್ಚಿಕೊಂಡು ಹೋಗಿದೆ (ಕುಡಿಯ.೬೫). **ಪಾಂಪು** : ಅಶ್ವತ್ಥಪುರಕ್ಕೆ ಈ ಪಾಂಪಿನ ಮೇಲಿಂದಲ್ಲದೆ ಬೇರೆ ಕಡೆಯಿಂದ ಹೋಗಲು . . . ಅಸಾಧ್ಯವೇ ಆಗಿತ್ತು (ಹಾಸ. ೫೫). [ ←ತುಳು. ಪಾಪು ]

**ಪಾಪೆ**, ಪಾಪ$_1$, ಹಾಹೆ$_1$ (ನಾ). ೧. ಗೊಂಬೆ ; ಪುತ್ತಳಿ ; ವಿಗ್ರಹ ; ಪುಡುಕೆಯಂ ತೆಱೆದು ನೋಟ್ಟನನ್ನೆಗಮದಱೊಳಗಿರ್ದ ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝುಣಂಬಮುಂ ಕೊಂಡು (ಪಶ್ಚಾತ್ತಾ. ೧೪-೧೧); ಪಳುಕಿನ ಪಾಪೆಯನಮರ್ದಿಂ ತೊಳೆದಂತೊಪ್ಪೊಡದ ದಿವ್ಯವಪು ಮಣಿಮಯಕುಂಡಲಮಕುಟಕಟಕಭೂಷಣವಿಲಾಸದಿಂದೇಂ ವಿಲಾಸಮಂ ತಾಳ್ದಿದುದೋ (ಆದಿಪು. ೬-೩೪) ; ಕದನದೊಳಾದರ್ಸಾರ್ದಿಸೆ ಮಹಾರಥರಬ್ಜು ಸಿಡಿಲ್ದುದು . . . ಪಾಪೆ ರೂಪುಗೆಟ್ಟುದು ನೊಗನೊರೆಪೋಯ್ತು (ಶಂಕಾಪು. ೧೩-೬೪); ಲೋಗರ್ . . . ತಿಟ್ಟವಿಟ್ಟ

ಪಾಪೆಯೆನೆ ಮೂಗುವಟ್ಟಿರ್ವರ್ (ಅಜಿತಪು. ೧೦-೧೯). ೨. ಕಣ್ಣಿನ ಗೊಂಬೆ ; ಕನೀನಿಕೆ ; ಕಣ್ಣುಗುಡ್ಡೆ : ಸುಭದ್ರೆಯ ರೂಪು ಕಣ್ಣ ಪಾಪೆಯಂತೆ ಕಣ್ಗಳೊಳೆ ತೊಳಲಿ (ಪಂಪಭಾ. ೯-೬೯ ವ); ಮೋಹಲತಾ ಪರಿವೃದ್ಧಿಗೀಗಳೇ ಸುರಿವುವೆ ಕಣ್ಣ ಪಾಪೆಯೆನೆ ಪೊಣ್ಮಿದುವುತ್ಪಲಬಾಷ್ಪವಾರಿಗಳ್ (ಪುಷ್ಪದ. ೯-೬೯); ಅಡಿದಳಂ ಸುಟ್ಟ ಮಣಿಗ್ಗಿಡೆಯಾಗೆ ಪಾಪೆ ಕಪ್ಪಡರೆ . . . ಧನಿಕಂ ಬೆಳ್ಪುವಿಡಿಯಲುಮಭಕ್ಷ್ಯಭಕ್ಷಣನೆನಿಪನು (ಜಗವ. ೧೧-೧೩); ಎನ್ನ ಮನದಲಿ ನೀನು ನಿನ್ನ ಮನದಲಿ ನಾನು ಎಮ್ಮ ಕಣ್ ಪಾಪೆಯೊಳು ನಾವು ನಾವುಗಳು (ಹರಿಭಕ್ತಿ. ೪೦-೧೧). ೩. ಗೊಂಬೆಗಳಿಂದ ಕೂಡಿದ ಬಿರುದಿನ ಪೆಂಡೆಯ : (೪). ಪಾಪ₁: ೨. 'ಕಾಶಿಬಿಂದು' . . . ಇದರ ಮಧ್ಯೆ ಗುಂಡಾದ ರಂಧ್ರವಿರುತ್ತದೆ. ಇದಕ್ಕೆ 'ಪಾಪ' ಎಂದು ಹೆಸರು . . . ಈ ಕಾಶಿಬಿಂದುವಿನ ಮೇಲೆ ಬೆಳಕು ಬಿದ್ದರೆ ಪಾಪವು ಸಂಕುಚಿತವಾಗುತ್ತದೆ (ಜಿವ್ಯ್ದ. ೦೦೫). ೪. ಮಗು ; ಕೂಸು : ಅವರ ಪಾಪ ಒಂದೇ ಸಮನೆ ಅಳುತ್ತಿತ್ತು (ರೂಢಿ). ಪಾಹೆ₁: ೧. ಕರುಣದ ಹಾಹೆಯಂತೆ ದೈನ್ಯದ ಸೀಮೆಯಂತೆ . . . ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಶಯಮಂ ಗಿರಿರಾಜಂ ಕರುಣಿಸಿ ನೋಡಿ (ಗಿರಿಜಾ. ೯-೦೦೬ ವ); ತಾಳವಟ್ಟದೊಳ್ ಮೂಡಿದ ಹಾಹೆಯಂತೆಬಲಿ (ಅಜಂಕ. ೦೩-೭೯); ನೀನಾಡಿಸುವ ಹಾಹೆಯಾನು (ಶಬ್ದಾಲಾ. ೦-೩) ; ಹಳಚುವುವು ಹಾಹೆಗಳು ಸೂತ್ರಧನಲುಗಿದೊಡೆ ತತ್ಪುಣ್ಯಪಾಪಾಪ್ಗಳೆಗಳಾ ಹಾಹೆಗಳಗುಂಟೀ ಸೂತ್ರಧರನಿರಲು (ಕುವ್ಯಾಉ. ೯-೬೨). ೨. ನೇತ್ರ ಹಾಹೆಗೆ ವಿಶ್ವರೂಪಜೀವ ಬಲುಹುಂಟೆ (ಲೀಲಾಮೋ. ೪೦-೦೩) ; ರಾಹು ತೊಡಕಿದ ರವಿಯವೊಲು . . . ದಿಟ್ಟಿಸಿದ ಕಂಗಳ ಹಾಹೆಯವೊಲೆಸೆದಿರ್ದ ನಾಹಪರಂಗಮಧ್ಯದಲಿ (ತೊರವೆ. ೯-೪-೩೨). ೩. "ತೊಡರೇಂದೊಡಕ್ಕು ಬಿರುದಿನ ಹಾಹೆ" (ಕಾವ್ಯವಂ. ೩೨) ; ಕಾಲ ಪೊಂದೊಡರ ದೈತ್ಯರ ಹಾಹೆಗಳೊಪ್ಪೆ ವೇಣುವಿಂ ತುತ್ತುರುನಿಸ್ವನಂ ನೆಗಟೆ ಗೋವಳರಾಯನ ಲೀಲೆ ರಂಜಿಕುಂ (ಜಗ. ೩-೯೩) ; ಅವುರರ ತೊಡರ ಹಾಹೆಯನೆಡದ ಕಾಲಿಂಗಿಟ್ಟು ಹೊಜವಂಟ (ಕಾಶಿಖಂ. ೦೦-೩೨) ; ರಾಜಾಜರ ಧುರದೊಳಗೆ ಗೆದ್ದವರ ಹೆಸರಿನ ಹಲವು ಹಾಹೆಗಳ ಬಿರುದುಗಳ ವಿಡೆಯುವನು ಕಾಲಲಿ ಧರಿಸಿದನು (ತೊರವೆ. ೬-೨೦-೦೩). ೫. ರೂಪ ; ಆಕಾರ ; ಮಾಟ : ಜಗವೆಲ್ಲವು ನಿನ್ನ ಹಾಹೆ ಉತ್ಪತ್ತಿ ಸ್ಥಿತಿಲಯವೆಲ್ಲವೂ ನಿನ್ನ ಹಾಹೆ ಕ್ರಿ ನಿಃಕ್ರಿ ಎಂಬುದೆಲ್ಲವು ನಿನ್ನ ಹಾಹೆ (ಮೋಳಿಗೆ. ೦೦೩-೯೯೫) ; ಚಿತ್ರದ ಬೊಂಬೆಯು ಹಾಹೆ ಎಲ್ಲಕ್ಕೆ ಆತ್ಮನಿಂದ ಚೇತನಿಸಿ ನಡೆವುತ್ತಿವೆ (ಪುರೇಪ. ೨೬೬-೩೦). ೬. (ಆಲಂ) ನೋಟ; ದೃಷ್ಟಿ: ಆತ್ಮಂಗೆ ಕಾಯವೆ ರೂಪು ಆ ಕಾಯಕ್ಕೆ ಆತ್ಮನೆ ಹಾಹೆ ಆ ಹಾಹೆಗೆ ಅಜೀವೆ ಬೀಜ ಆ ಬೀಜಕ್ಕೆ ಗೋಪತಿನಾಥ ವಿಶ್ವೇಶ್ವರ ಲಿಂಗವೆ ನಿರ್ಬೀಜ (ತುಜಂಗ. ೬-೩೦); ಕಟ್ಟಿದರೆ ವಿಷವೇಜೀತಲ್ಲದೆ ವಿಷಕ್ಕೆ ಹಾಹೆಯಿಲ್ಲ . . . ಹಾವಿದ್ದಂತೆ ವಿಷವ ಕೊಲಬಹುದೆ (ಸಗವೊ. ೪. ೬೬೭-೫೭). 'ಹೂಹೆ₁' ಪರಾ.

ಹಾಹೆಯ ಕಟ್ಟು=ಕೇಡಿನ ನಾಶಕ್ಕಾಗಿ ಗೊಂಬೆಗಳಿರುವ ಯಂತ್ರವನ್ನು ಕಟ್ಟು : ರತಿಗೆ ಹಾಹೆಯ ಕಟ್ಟುವಳು ತನ್ನತಿಶಯದ ಚೆಲುವಿನಲಿ ಯೆನಿಸಿದ ಸುತೆಯನಾ ವಿಭು ತಾಂ ಸ್ವಯಂವರವಿಧಿಯಲೀಯುಲಿಕೆ (ಶಾಲ್ಯಶಾ. ೨೯-೪೦). ಹಾಹೆಯ ತೊಡರು=ಸಣ್ಣ ಸಣ್ಣ ಬೊಂಬೆಗಳಿಂದ ಕೂಡಿದ ಕಾಲಿನ ಆಭರಣ ; ಬಿರುದಿನ ಪೆಂಡೆಯ : ನಕ್ಷತ್ರಕುಲವಿಟ್ಟಣಿಪ ಮುಡಿ ಹೂವನಿಟ್ಟು ಚರಣದೊಳಗಳವಟ್ಟ ಹಾಹೆಯ ತೊಡರನಿಟ್ಟ ವೀರೇಶ್ವರನ ಚರಣಾಂಬುಜಕ್ಕೆ ಶರಣು (ಲಿಕಿಶಂ. ೦೬-೦೬) ; ಹಾಹೆಯ ತೊಡರ ಭಂಡರು ಕೆಲರು ಕೆಲರು ಕುಲಕ್ರಮಾಗತದ ಗಡಬಡೆಯ ಭಂಡರು (ಕುವ್ಯಾಳ. ೦೩-೫).
[ದೇ.॥ ತಮಿ. ಪಾಪ್ಪಾ, ಪಾವ್ಯೆ ; ಮಲ. ಪಾವ ; ತುಳು. ಪಾಪೆ ; ತೆಲು. ಪಾಪ]

ಪಾಪೋಸು, ಪಾಪಾಸು, ಪಾಯಿಪೋಸು (ನಾ). ೧. ಕಾಲನ್ನು ಮುಚ್ಚುವಂತಹುದು ; ಮೊಚ್ಚೆ; ಪಾದರಕ್ಷೆ: ಪಾಪೋಸು ಹೋದುವಲ್ಲ ಸ್ವಾಮಿ ಎನ್ನ (ಪುರಂದ. ೯-೦೦೯ ಪಲ್ಲವಿ) ; ಕಾಲ ಕುಪ್ಪಸ ಪಾಪೋಸು ಜೋಲುವ ಜವಿಕೆಯ ಮೊಲೆಕಟ್ಟುಗಳ ಚೆಲ್ವ ಸೂಳೆಯರ್ಗಿದಿರಾಗ (ಕಂಸವ. ೦೦ ೯) ; ಗೆಳೆಯರು . . . ತಮ್ಮ ಪಾಪೋಸುಗಳನ್ನು ಎಳೆಯುತ್ತ ಮುಂದೆ ಮುಂದೆ ನಡೆದರು (ಕವಕ. ೯೦) ; ಪಾದಕ್ಕೆ ತಕ್ಕ ಪಾಪೋಸು, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ (ಗಾದೆ). ಪಾಪಾಸು: ೧. ವ್ಯಾಪಾರ ನಮಗಾಯಿತು . . . ಪರಮಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ ದುರಾತ್ಮರಾದವರ ಎದೆ ಮೇಲೆ ನಡೆವಂಥ (ಪುರಂದ. (೨-೦೫-೦) ; ಪಾಪಾಸು, ಎಕ್ಕಡ, ಛತ್ರಿ ಮುಂತಾದವುಗಳನ್ನು ಉಪಯೋಗಿಸಿದರೆ . . . ಕಾಲುಕಣ್ಣುಗಳಲ್ಲಿ ಹುಟ್ಟುವ ಸಕಲ ರೋಗಗಳನ್ನೂ ಕೆಡಿಸುವುವು (ಸಕವ್ಯ. ೩೫); ಒಂದುದೇಶದ ಜನರು ಪಾಪಾಸು ಹಾಕುವರು, ಇನ್ನೊಂದು ಕಡೆಯವರು ಬೂಟ್ಸುಗಳನ್ನು ಉಪಯೋಗಿಸುವರು (ಪಾಲ್ಸ್ಕ. I, ೯೬೦). ೨. ಎಕ್ಕಡದ ಆಕಾರದಲ್ಲಿರುವ ಮತ್ತು ಮುಳ್ಳುಗಳಿಂದ ಕೂಡಿದ ಎಲೆಗಳುಳ್ಳ ಒಂದು ಬಗೆಯ ಸಸ್ಯ ; 'ಪಾಪಾಸುಕಳ್ಳಿ' ಪರಾ. ಪಾಯಿಪೋಸು: ೧. ಈ ಶರೀರ ನಿನ್ನ ದಾಸರ ಪದಕೆ ಪಾಯಿಪೋಸು ಮಾಡಿದರೂ ಋಣಾ ಸಲ್ಲಿಸುವೇನೆ (ಮೋಹನ್ತರಂ. ೨೬-೨).
[←ಪಾರ. ಪಾಪೋಷ್ ; ಹಿಂ. ಪಾಪೋಶ್, ಪಾಯಪೋಶ್ ; ಮರಾ. ಪಾಯ್‌ಪೋಶ್, ಪಾಯಪೋಸ್]

ಪಾಪೌಘ (ನಾ). ದುಷ್ಕರ್ಮದ ರಾಶಿ.–ಸಮೂಹ : ಕಲ್ಯಾಣದಾಯಕಾಹಲ್ಯಾಪನುತಿಪಾತ್ರ ಕಲ್ಯಾಣಾಚಲಧನ್ವ ಪ್ರಮಥತೌಲ್ಯತಿಪಾಪೌಘವಲ್ಯಲವಿತ್ರ ಧಾವಲ್ಯಾಂಗ (ಭೈರವೇ. ೯-೦೦); ಪಾಪೌಘಪ್ರಬದ್ಧಂ ಮರುಳರೆಗೆಲಡದೇಕಿರ್ಪನಾ ಗೆಲ್ವ ಪಾಂಗಂ ನಡೆ ನೋಳ್ಪಂ (ವೃಷಭ. ೨೬-೦೦೩).
[ ಪಾಪ₂ + ಓಘ ]

ಪಾಪ್ಪಳಿ 'ಪೊಪ್ಪಳಿ₁' ನೋ.

ಪಾಪ್ಮ (ನಾ). ಪಾಪ ; ದುಷ್ಕರ್ಮ ; ಪಾತಕ : "ವೃಜಿನಂ, ದುರಿತಂ . . . ಅಶುಭಂ, ಪಾಪಂ, ಪಾಪ್ಮ, ಪಾತಕಂ_ಈ ೧೪ ಪಾಪಂ" (ಹಲಾಯು. ೦೦೩-೫). [ ಸಂ. ಪಾಪ್ಮನ್ ]

ಪಾಬ (ನಾ). (?) : ಸದಾಯ ಪಾಬ ಕೂಪ ತಟಾಕ ನಿಧಿನಿಕ್ಷೇಪ (ಎಕ. X (S), ಕೋಲಾರ. ೩೦೯-೦೫; 17ನೆಯ ಶತ). [ ? ]

ಪಾಭಸೆ (ನಾ). ಒಂದು ಸ್ಥಳದ ಹೆಸರು : ಇನ್ನು ವಿಂಧ್ಯಾಟವೀನಿಕಟಕಾಪೀತತಟವುಂ . . . ಜನವಾಸಿ ದೇಶವುಂ ಪಾಭಸೆಯ ಕೋಟೆಯುಂ ಮೊದಲಾಗೆ (ಎಕ. II, ೫೯-೦೦೦ ; 974). [ ? ]

ಪಾಮ (ನಾ). ಒಂದು ಬಗೆಯ ಚರ್ಮರೋಗ ; ತುರಿಕೆ : "ಕಚ್ಚೂ ನಾಮಯುಜೀಗೆ ಪಾಮಂ" (ವಸ್ತುಕೋ. ೬೩-೬೫) ; "ಪಾಮಂ ಖಸಂ ಖತ್ತುವನೆ ಕೆರಕನಿಕ್ಕುಂ" (ಮಂಗರಾ. ೦೦೩-೦). [ ಸಂ. ಪಾಮಾ ]

ಪಾಮನ (ಗು). ೧. ಕಜ್ಜಿ ಹತ್ತಿದ. (ನಾ). ೨. ಕಜ್ಜಿ ಹತ್ತಿದವನಂ : "ಕಚ್ಛು ಪಾಮನನಕ್ಕುಂ" (ವಸ್ತುಕೋ. ೬೯-೪೦). [ಸಂ. ಪಾಮನ್]

ಪಾಮರ₁ (ನಾ). ನೆಲಬಾವಿಯಿಂದ ನೀರು ಸೇದುವಾಗ ಕಾಲಿಡಲು ಅನುಕೂಲವಾಗುವಂತೆ ಬಾವಿಗೆ ಅಡ್ಡಲಾಗಿ ಹಾಕುವ ಮರದ ಹಾಸುಹಲಗೆ. [ < ಪಾಯ್ಮ₂ + ಮರ₁ ]

ಪಾಮರ₂ (ಗು). ೧. ಅಲ್ಪವಾದ ; ತುಚ್ಛ : ಗರುವಪ್ಯಾತಕೊ ನಿನಗೆ ಪಾಮರಮಾನುಜನೆ (ಪುರಂದ. ೨-೦೬೬ ಪಲ್ಲವಿ). ೨. ಏನೂ ತಿಳಿಯದ. ೩. ಕಜ್ಜಿ ಹತ್ತಿದ. (ನಾ). ೪. ಅಲ್ಪ ; ನೀಚ : "ವಿವರ್ಣಃ, ಪಾಮರಃ . . . ಕ್ಷುಲ್ಲಕಃ, ಇತರಃ–೧೦ ನೀಚನ ಪೆಸರು" (ನಿಘ್ಯಂಶಿ. ೩೦೨). ೫. ಏನೂ ತಿಳಿಯದವನಂ ; ದಡ್ಡ ; ಮೂಢ : ಬರಿ ತಾರಾಡಿ ಅವನರಿವಿಗೆಟುಕುವವೊಲೊಂದಾತ್ಮನಯವ ಹವಣಿಸಿದನಿದನು

ಪಾಮರಜನದ ಮಾತಿನಲಿ (ಮಂಕುಕ. ೯೩೮) : ಪಾಮರ ಮೊದಲಾಗಿ ಪಂಡಿತರವರೆಗೆ ಯಾರೂ 'ನಾನಿರುವೆನೇ ಇಲ್ಲವೇ' ಎಂದು ಸಂಶಯಪಡುವುದಿಲ್ಲ (ಭಾರದ. ೨೩೫). ೬. ಒಕ್ಕಲಿಗ ; ರೈತ : ಮೂಡೆಗಟ್ಟಂ ಕಟ್ಟಿ ಹುಡುಕುನೀರೊಳ್ ಮೆಟ್ಟಿ ಕಾಡುತಿಹ ಪಾಮರರ ಕೈವಿಡಿತೆಗೊಳಗಾಗಿ (ಭಾವಜಂ. ೨-೮) ; ಗಗನವೆನಿಪ್ಪ ಪಾಳ್ಪೊಲದೊಳ್ . . . ಮರ್ಬೆನಿಪ ಗೊಬ್ಬರಮಂ ತಳಿದಲ್ಲಿ ಚೆಲ್ಲಿ ತಾರಗೆಗಳೆನಿಪ್ಪ ಬಿಳ್ತುಗಳನಂತವ ಕೈಂದವಬಿಂಬರೌಪ್ಯಕುಂಭಗತಸುಧಾಮರೀಚಿಜಳಮಂ ಸುರಿದಂ ಸಲೆ ಕಾಲ ಪಾಮರಂ (ರಾಜಶೇ. ೧೧-೬೮). [ಸಂ.]

**ಪಾಮರಿ** (ನಾ). ೧. ಹಳ್ಳಿಯ ಹೆಂಗಸು ; ಒಕ್ಕಲಗಿತ್ತಿ : ಪಾಮರಿಯರ್ ಜಿತಾಮರಿಯರಿರ್ಪರ್ಕಾದು ಕೇದಾರಮಂ (ಪುಲ್ಲಶು. ೨-೨೦): ನೆಯ್ದಿಲ್ವೂವುಡಿಯನೆತ್ತಿ ಬೈತಲೆದೀವುವ ಪಾಮರಿಯರಂ ಮಹೀಪತಿ ಕಂಡಂ (ಅಭಿರಾವ. ೫-೬೮) : ನಸುಬಾಗಿ ಬೀಸುಗಲ್ಗಳನಡುತಿರ್ಪ ಪಾಮರಿಯರೊಪ್ಪುವರಾ ಕಳಮಪ್ರದೇಶದೊಳ್ (ದಶಕು. ೧-೨೯) ; ಶಾಲಿಗಳ ಕೈಗಂಪ ಪೊಲಗಾವ ಪಾಮರಿಯರೋಳಿಗಳ ಮೈಗಂಪ . . . ಸೇವಿಸುತೆ ಪಥಿಕರಾಸರ್ಗಳಿಪರಾ ನಾಡೊಳು (ಕೃಬಾಭಾ. ೩-೮). ೨. ತಿಳಿವಳಿಕೆಯಿಲ್ಲದವಳು ; ದಡ್ಡಿ. [ಸಂ. ಪಾಮರೀ]

**ಪಾಮರೀಜನ** (ನಾ). ಹಳ್ಳಿಯ ಹೆಂಗಸರು ; ಚದುರಿಂದೆ ಗರ್ದೆಗಳನೊಲ್ದುಜಿ ಕಾವುದು ಪಾಮರೀಜನಂ (ತ್ರಿಶೂ. ೨-೯೦). [ಸಂ.]

**ಪಾಮರೆ** (ನಾ). = ಪಾಮರಿ ೧ : ಪಾಮರೆಯರ ಕಲಪದೊಳು ಗಿಳಿಯ ಸೋಪಲು (ತರ್ಕಶಾ. ೦೩-೫). [ಸಂ. ಪಾಮರಾ]

**ಪಾಮಾಜಿ** 'ಪಾವಸೆ' ನೋ.

**ಪಾಮೆ** (ನಾ). ೧. = ಪಾಮ : "ಪಾಮಾ, ಕಚ್ಛೂಃ, ಖಸಃ – ಈ ೩ ಕೆರಕು (ಕೆರಂಕು)" (ಹಲಾಯು. ೯೮-೪೪೮). ೨. ಹೊಟ್ಟೆರೋಗವಂತ ಹಂದು ; ಉಮೀಯಿಂದ ಕೂಡಿದುದು : ಮೂಲವಲ್ಲಿ ಪಾರವಾಳದ (ಮೂವಿ) ಬಣ್ಣನಂಥಾ ಕಾಳುಗಳು ಕೂಡಿರಬಾರದು. ಮತ್ತು "ಪಾಮಾ" ಅಂತಂದರೆ ಹೊರಟು ಕೂಡಿರಬಾರದು (ಮುಂಬಮಾ. ೫೬). [ಸಂ. ಪಾಮಾ]

**ಪಾಯ್**₁, ಪಾಯ್₁, ಹಾಯು (ಕ್ರಿ). ಪಾಯಿದ, ಪಾಯ್ದ, ಹಾದ, ಹಾಯ್ದ (ಭೂತಕೃ). ಪಾಯಿದು, ಪಾಯ್ದು, ಹಾದು, ಹಾಯಿದು (ಭೂತನ್ಯೂ). ೧. ನೆಗೆ ; ಹಾರು : "ಪಾಯ್ – ಲಂಘನೇ" (ಶಮಧಾ) ; ನೆಲಸಿರ್ದ ವಜ್ರಪಂಜರಮಳಱುವಿನಂ ಪಾಯ್ದು ಸಿಂಧುರಾರಾತಿಯನುಜ್ಜ್ವಳತನುವನಭ್ರಪಥದತ್ತ ಲಂಘಿಸಲ್ಕಿ ದುರ್ಗದಂ ಚಮೂಪತಿ ಕಂಡಂ (ಆದಿಪು. ೦೬-೪೫). ಆಗಳಾ ಪಟುಮಂಗಳಿಂದೆ ಪಾಯ್ವ ಪುಲಿಗಳ ಪಾಳಿಗಳೊಳ್ ಪರಿದಾಡುವ ತರುಣಹರಿಣಂಗಳುಮಂ . . . ನೋಡಿ (ಶಂಕಭಾ. ೦-೦೦೫ ವ) ; ಧೀಂಕಿಟ್ಟು ಪಾಯುತ್ತೆ . . . ಕಿಡಪಿತೊಂದೇಣನಂ ಚಿತ್ರಕಾಯೆಂ (ಗಂಕ. ೦-೯೫) ; ಮೇಗಣ್ಗೆ ಪಾಯ್ವ ಸೆಂಡಂ ವನಿತೆಯೊರ್ವಳ್ ಕೀಳ್ಪಡಿಸಿ ಪೊಯ್ಯೆ (ಶದ್ಮರಾ. ೮-೯೮) ೨. ಮೇಲಿನಿಂದ ಕೆಳಕ್ಕೆ ಹಾರಂ ; ಧುಮುಕು : ಆ ಕೋಡಗಂ . . . ಒಂದು ದಿವಸಂ ಪರ್ವತಶಿಖರದಿಂ ಪಾಯ್ದು ಬಂದು ಬರ್ದುಂಕಿ ಮುನಿವರರ ಪಕ್ಕದೆ ಬಿರ್ದತ್ತಾಗಳ್ (ವಡ್ಡಾರಾ. ೦೬೨-೨೪) ; ಬೊದಿಲ್ಲೆನೆ ಪಾಯ್ದು ನೀರೊಳಾ ಬಾಳನನಾದಮಾದರದೆ ಕಂಡೊಸೆದಂ ನಿಧಿಗಂಡನಂತೆವೋಲ್ (ಶಂಕಭಾ. ೦-೯೬) : ಕೋಪಾನಳನಳುರೆ ಮಹಾಕೂಪದೊಳಿಭವೈರಿ ಪಾಯ್ದು ಸತ್ತುದು (ಶಂಕಶಂ. ೯೦-೨) ; ರಥದಿಂದಾ ಕ್ಷೋಣಿಗೆ ಪಾಯ್ದಂ ಬಳಾಹಕಂ ಭಯದಿಂದಂ (ಕುಸುಮಾ. ೦೦-೨೯). ೩. ತುಡಿ ; ಸ್ಪಂದಿಸು ; ಮಿಡುಕು ; ಹೊಡೆದುಕೊಳ್ಳು : ಅಟ್ಟು ಪಟ್ಟ ಪುಲ್ಲೆಯಂತಿರರ್ದೆ ಪಡಪಡ ಪಾಯೆ (ಅಭಿರಾವ. ೦೦-೬೦ ವ). ೪. ಹೊರಸೂಸು ; ಹೊಮ್ಮು : ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳಿ ನಾಂದು ಸೇಡುಗೊಳುತಂ (ಕಾವ್ಯಸಾ. ೬೮ ಶೂದ್ರಕ) ; ಎಚ್ಚ ಶರಾಳಿಗಳ್ ಛಟಿಲ್‌ಛಟಿಲೆನೆ ಪಾಯೆ ಪಾಯ್ವ ಬಿಸುನೆತ್ತರ ಸುಟ್ಟುರೆ ಚಾತುರಂಗಮಂ ಕಟಕುಟವಾಗೆ ಪೇಟಿ ಪಸರಿಲ್ಲೆನೆ ಪಾಯಿಸಿ ತೇರಂ (ಶಂಕಭಾ. ೮-೦೦೫) ; ಪೂತ್ತರಿಸುವ ಚಕ್ರಸಿಂಧುರದ ಪುಷ್ಕರದಿಂದಿರಮಣ್ಮಿ ಪಾಯ್ವ ಶೀಕರನಿಕರಂ (ಕುಸುಮಾ. ೪-೩೮) ; ಬೆಚ್ಚನೆ ಪಾಯ್ತಂದು ಪೊದಟ್ಟ ರಕ್ತಜಲದಿಂದಂ ತೋಯ್ದು ಕಂದರ್ಪದೇವನ ಚಕ್ರಕ್ಕೆಣೆಯಾಯ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ (ಕಾವ್ಯಸಾ. ೯೩೨). ೫. ದಾಟಿ ಹೋಗು ; ದಾಟು ; ಉತ್ತರಿಸು : ಜಲನಿಧಿಯಂ ಪಾಯ್ದೊರ್ವನೆ ನಿಲಿಕಿ ದಶಾನನನ ಪೊಟಲನಾ ಲಂಕೆಯುಂ (ಕಬಿರಾ. ೩-೦೯೦) ; ನಿಜಪರಿಜನಂಬೆರಸು ಗಂಗೆಯಂ ಪಾಯ್ದು ದಱಿ ಪಡುವಣದೆಸೆಯ ಕಾಮ್ಯಕವನದ ಬಟ್ಟೆಯಂ ತಗುಳ್ದು ಪೋಗೆವೋಗೆ (ಶಂಕಭಾ. ೬-೨೦ ವ) ; ಗಂಗೆಯಂ ಪಾಯ್ವಾಗಳಂಬಿಗರ ಮಗಳ್ ಮತ್ಸ್ಯಗಂಧಿಯೆಂಬ ಕನ್ನಿಕೆ ನಾವೆಗೆ ಹುಟ್ಟನಿಕ್ಕುವಲ್ಲಿ (ರರ್ಪುಶ. ೩-೦೦೦ ವ) ; ಕಱಂಗಿದ ತಮಾಲಮೆಂಬ ಕಾಟಿಪೊಚ್ಚಮಂ ಪಾಯ್ದುಂ (ರಾಮಾಶ್ವ. ೫೬-೨೯). ೬. ಅಪ್ಪಳಿಸು ; ಡಿಕ್ಕಿಹೊಡೆ ; ತಾಟಿಸು : ಗಗನತಳಂಬರಂ ನೆಗೆದು ಮತ್ತಗಜಂಗಳ ಮಸ್ತಕಕ್ಕೆ ಪಾಯ್ದುಗಿಬಗಿ ಮಾಡುವಲ್ಲಿ (ಕಾದಂಪೂ. ೯೯) ; ಬಲವದ್ವೃಕ್ಷಮನೊತ್ತಿ ಪಾಯ್ದು . . . ಸುಟಿದತ್ತಂದೊಂದು ಜಂಝಾನಿಲಂ (ಉದ್ಭಟ. ೬. ೮೨) ; ಎನ್ನ ತ್ರಿವಿಧಸಪ್ತಕಜನ್ಮಸಾಫಲ್ಯವೆಂದು ಕಂಭವನೆ ಪಾಯಲ್ (ಭಾವಜಂ. ೩-೬) ; ಕಾಯ ಬಲಿದಿಹುದೆಂದು ಬೆಟ್ಟವ ಪಾಯೆ ಕೆಡುತಿಹ ಬಹಳ ಪಾಪಿಯ ದಾಯ ಬಳಿಕವಗಾಯ್ತು (ಕೋಗಯು. ೫-೦೪). ೭. ಎರಗು ; ಮೇಲೆ ಬೀಳು ; ಆಕ್ರಮಣ ಮಾಡು : ತುಱುಗೋಳೊಳೆ ಸಾವುದು ಸೈಪಿದೆಂದು ಪಾಯ್ದುಱಿಕೆಯ ಗೋವರಣ್ಮಿ ಬರೆ (ಶಂಕಭಾ. ೮-೯೫) ; ಅರ್ಕಾಶ್ವಂಗಳಂ ನೀಳ್ಕಿ ತೊಪ್ಪರದಿಂ ಪಾಯ್ವಳವಿಂದೆ ಕೇಶಿ ಪರಿತಂದಂ ಕಂಸಾನಾದೇಶದಿಂ (ಜಗಪ. ೫-೪೪) ; ಒಲಿದು ಪಿಡಿದ ಚೆನ್ನಿಗನೊಲ್ಲದೆ ಪೋದ ಲಲನಾಜನದ ರೋಷವನು ಗೆಲಲಱಿಯದು ಪಾಯ್ದು ಪಶು ತಪ್ಪಿ ಪೋದ ಪೆಣ್ಬುಲಿಯ ಕೋಪಾಟೋಪದಾಟ (ಕುರಂಗಸಾಂ. ೩೩-೮೩). ೮. ಮುಸುಕು ; ಮುತ್ತು : [ನವ]ಶಾಳಿಗೆ ಪಾಯ್ವ ಶುಕಾಳಿ ತೋಱಿ (ಶಂಕಭಾ. ೦-೫೨) ; ವಿಶಾಲಮಪ್ಪ ಆಲದ ಮರದ ಮೇಲೆ ಕಾಗೆ ಬಂದು ಪಾಯ್ದುಂ ದುಸ್ವರದಿಂ ಕರೆವುದುಂ (ಶಂಕಶಂ. ೨೨೪-೦೦) ; ಬಂಡನುಣ್ಬಳಿಪಿನಿಂ ಪೆಣ್ದುಂಬಿಗಳ್ಪಾಯ್ದು ಪುಷ್ಪರಸಾಸಾರದ ತುಂತುಱುಂದೆಱಿಕೆ ನಾಂದಾಂದೋಳಿತಾಶೋಕಮಂಜರಿಯಂ ಸಾರ್ವುವು ಪಲ್ಲವೋಲ್ಲಸಿತಮಂ ಬಾಲಾತಪಭ್ರಾಂತಿಯಿಂ (ಪುಲ್ಲಶು. ೨-೩೬) ; ಕೇಣವಿಲ್ಲದ ರೋಹಿತ ವಾರ್ಧಿಯೊಳು ಕಟ್ಟುಗಾಣಕ್ಕೆ ಪಾಯ್ವ ಮೀನೆನಲು ಗೋಣರೆಗಡಿದು ಪೆರ್ನೆರವಾಂತು ಮಿಡುಕುವ ಪ್ರಾಣದ ಶವಗಳೊಪ್ಪಿದುವು (ಶೋಹಶ. ೪೦-೬೦). ೯. (ಭೂತ, ಪಿಶಾಚಿ ಮುಂತಾದುವು) ಮೆಟ್ಟು ; ಹಿಡಿದುಕೊಳ್ಳು : ಪಾಯ್ದತ್ತು ಭೂತಮೆಂಬರ್ ಕೆಲರ್ ; ಮತ್ಸರದ ಕೌರವನ ಪ್ರೇತವೆಂಬರ್ ಕೆಲರ್ (ಅಶ್ವಶಾ. ೦-೦೨). ೧೦. ಮುಂದೆ ನುಗ್ಗು : ಸಂಜಾತರೋಷಂ ಮೇಷಂ ಮುಳಿದು ಕಡೆಯೆ ಪಾಯ್ದೊಡವಳ್ ಕಡುಮುಳಿದು ಪಿರಿಯದೊಂದುರಿವ ಕೊಳ್ಳಿಯಂ ತಂದಾ ತಗರಂ ಪೊಯ್ಯಲೊಡನದಱ ಮೆಯ್ಯನುರಿ ಪತ್ತಲ್ ಕಟ್ಟಿದ ನೇಣಂ ಪಱಿಯೆ ಪಾಯ್ದಾ ತಗರ್ ಪರಿದು ಕುದುರೆಯ ಮಂದುರಮಂ ಮಾರಿ ಪುಗುವಂತೆ ಪೊಕ್ಕು (ಶಂಕಶಂ. ೦೬೯-೦೦) ; ಆ ಕಲಕಂಠಜಾಲಕಂಗಳ ಕಳಕಳಕ್ಕೆ ತೆರಳ್ದು ಕೇಱಿ ಪಾಯ್ವ ಗೋಲಾಂಗೂಲಂಗಳ್ (ಕುಸುಮಾ. ೨-೬೦ ವ) : ಮುತ್ತಿದ ಕಿರಾತರಂ ಕಾಣುತ್ತುಂ ನಾಲ್ದೆಸೆಗೆ ಪಾಯ್ವ ಮಿಗಮಂ ಕಡೆಯೆ ಚೊತ್ತಿ (ಉದ್ಭಟ. ೨-೬೦) ; ಕಂಡೆಡೆಗೆ ಪಾಯ್ವರಿಂ ಕಾಯ್ವರಿಂ

ಸುಯ್ವುರಿಂ ತದ್ರಣಾಂಕಣಮೊಸೆದುದು (ಶಬಕ್ಕ. ೦೬-೨೦). ೧೧. (ರಭಸದಿಂದ) ಹೋಗು ; ಬಳಿಸಾರು ; ಪಲತೆಱದಿಂ ಲೋಗರ್ದಾನಲಾಭಭೋಗೋಪಭೋಗವೀರ್ಯಾದಿಗಳಂ ಸಲಿಸುವೆಡೆಗೆಡೆಗೆವಾಯ್ದು ಬೞಿಸಂದೊಂಗಂತರಾಯಮನುಬಂಧಿಸುಗುಂ (ಸುಕುಮಾ. ೯-೨೬) ; ಹರಿಯುಜರ್ ಪಂದಿ ಪದುರ್ಗಳಾಗುತೆ ಮೇದಿನಿಗೆ ನಭಕೆ ಪಾಯ್ದುಱಿಸಿ ಕಾಣದೆ (ಶವ್ಯರಾ. ೧೧-೨೩೦). ೧೨. ಎಡೆಯಾಡು ; ತೊಳಲಾಡು : ನೆಯ್ದಿಲ್ಗೊಳಂಗಳೊಳೋಲಾಡಿಯುಮೊಸರ್ವ ಚಂದ್ರಕಾಂತಶಿಲಾತಳಂಗಳೊಳ್ಕರಂಗಳನೆಟವಿಯುಂ ವಿಘಟಿತ ಚಕ್ರವಾಕಂಗಳಪ್ಪ ಕಮಲವನಂಗಳೊಳ್ ಪಾಯ್ದುಮಿಂತು ಪಲತೆಱದೆ ಕೋಟಲೆಗೊಳುತ್ತಿರ್ಪಂ (ಕಾದಂಕೃ. ೯೯೯). ೧೩. ಇರಿ ; ತಿವಿ ; ಗುಮ್ಮು : ನಸೆವಣಕದೆ ಬೆನ್ನಂ ಸಂಧಿಸುವುದುಮಸವಸದಿನೆಡೆಗೆ ಪುಗಲೊಡನಂತಾ ಬಸವಂ ಪಾಯ್ದೊಡೆ ಕೆಸಱೊಳ್ ಬಸವೞಿದಿರ್ದೊಂದು ಗೊಂದೆ ಪೊಂದಿತ್ತಾಗಳ್ (ಶಂಪ್ರಕ್ಕ. ೨-೨೯) ; ನಿಟಿಲ್ಪಡಲನಂ ನಿರ್ವ್ಯಗ್ರನಂ ತತ್ಪುರೋರುಪದಪ್ರಾಪ್ತನನೆಟ್ಟಿ ಪಾಯ್ದು ಪಸುಱೊಗರ್ಗೀಡಿಂದೆ ಕೋದೆತ್ತಿ ಮಂಡಪಸೋಪಾನದ ಪಾರ್ಶ್ವದಲ್ಲಿ ಕೆಡವಂತೀಡಾಡಿದತ್ತೆತ್ತಲುಂ (ವರ್ಧಕ್ಕ. ೪-೬). ೧೪. ಆವರಿಸು ; ಹಬ್ಬು : ಮುಂದೈಸಿ ಪಾಯ್ದು ಸಾಯಕಸಂದೋಹದಿನಭ್ರಮಾರ್ಗಮಾರ್ಗಂ ಕಾಣಲ್ ಬಂದುದಣಮಿಲ್ಲ ಶರಭಯದಿಂದೋಡಿದುದಕ್ಕುಮೆಂಬ ನುಡಿ ಪರೆವಿನೆಗಂ (ಶಾಂತಿಕ್ಕ. ೯-೦೯). ೧೫. ತೆಮಳು ; ನುಸುಳು : ಪುಱುವೊಲ್ಪಾಯ್ದು ಮೃಗಂಗಳೋಡಲವಕಾಶಂ ತಾನದಿಲ್ಲೆಂದಿನಂ ಸುಱಿದಂಭೋನಿಧಿ ಮೀರೆದಪ್ಪಿದ ತೆಱಂ ಬಂದತ್ತನೀಕಾರ್ಣವಂ (ಕಾವ್ಯಸಾ. ೯೬೩). ೧೬. ಕೈನೀಡು ; ಚಾಚು : ಧರ್ಮಪತ್ನಿ ಬಾಯುೞಿದು ಕೊರಲ್ಗೆ ಪಾಯ್ದು ಪರಿದಾಡುವ ಬಾಲಕನಾದ ಶೋಕದಿಂ ಗೞಗೞ ಕಣ್ಣನೀರ್ ಸುರಿಯೆ ಚಿಂತಿಪ ಪಾರ್ಶ್ವನ ಕೋದೊಂದು ಪೊಂಪುೞಿಯುನೆ ನೋಡಿ ನಾಡೆ ಕರುಣಂ ತನಗಾಗಿರೆ ಕೊಂತಿ ಚಿಂತೆಯಿಂ (ಶಂಶಭಾ. ೪-೨೩) ; ಮೋಕ್ಷಮಾರ್ಗದೊಳ್ ಪದವಿಡೆ ಪಾಯೆ ಮುಂದಲೆಗೆ ಪಾಯುಳಿ (ಶಂಕಶ. ೬೦). **ಹಾಯ್$_1$** : ೧. ಷಡಾಧಾರ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಆವವ. ೦೨-೨೦) ; ಬಂದರಿಬ್ಬರು ಮಹೀತಳಕಿಂದುವದನೆಗೆ ಸಾತರನಿತ್ತರು ಮಂದಗಮನೆಯು ಕಳುಹಿ ಹಾಯ್ದರು ಗಗನಮಂಡಲಕೆ (ಸಂಶಶ. ೦೩-೯೦); ಆ ಲತಾಂಗಿಯು ಪತಿಯ ಕೀರ್ತಿ ವಿಶಾಲವಾದಂಗದಲಿ ರಾಜಮರಾಳ ಗಗನಕೆ ಹಾಯ್ದು ಕಂಡಿಳಿತುದುದಾ ಪುರಕೆ (ವಳಶ. ೨-೨೬). ೪. ಅಜಲುಗೊಂಡ ಕೆಱೆಗೆ ತೊಱೆ ಬಂದು ಹಾಯ್ದಂತೆ ಬಜಲುಗೊಂಡ ಸಸಿಗೆ ಮಳೆ ಸುರಿದಂತಾಯಿತ್ತು ನೋಡಾ (ಬುಹಾದೇ. ಬ. ೨೯-೯೩) ; ಇದು ಹೊಸತು ಬಾಣಾಬ್ಧಿವೇಲೆಯನೊದೆದು ಹಾಯ್ದುದೊ ಭುವನವಳಿಪಂದುದಯಿಸಿದ ಮಳೆಗಾಲವೋ ಮಾಮಾ ಶರಾವಳಿಯೊ (ಕುವ್ಯಾರಾ. ೯-೪೬). ೫. ಉಂಭವನೆ ದಾಂಟಿ ಮೇಲಣ ಬಾಗಿಲನೆ ಹಾಯ್ದು ಕುಂಭಿನಿಯ ಮೊಲೆವಾಲನುಂಡು ದಣಿಯದ ಶಿಶುವೆ (ಶಿವಗೀ. ೦೯೨-೯೬೦) ; ಆ ಭವನಮುಖದಲಿ ಕಿಚ್ಚನೊಟ್ಟಿಸಿ ಪವನಸುತಸಹಿತಿವರು ಹಾಯ್ದರು ಬಿಲದ ಮಾರ್ಗದಲಿ (ಕುವ್ಯಾಆ. ೬-೯೮) ; ಆ ಭರತ ನಿಜಬಲಸಹಿತ ಭಾಗೀರಥಿಯ ಹಾಯ್ದೊಲವು ಮಿಗಿಲ್ವೆತಂದನಾ ಮುನಿನಾಥನಿದ್ದೆಡೆಗೆ (ತೊರರಾ. ೨-೬-೦೯). ೬. ದಟ್ಟೈಸಿ ಮುಡಲಿಱಿದ ಕಾಳ್ದೊಳು ನಡುವಿರುಳು ನಟ್ಟ ಮುಳ್ಳುಗಳನೆಡಹಿದ ಕಲ್ಲ ಹಾಯ್ದು ಪುರಮುಟ್ಟಿಂ . . . ಮುಱಿದು ಗೋಳಿಟ್ಟು ಬಾಯ್ಬಿಟ್ಟು ಮೊಱೆಯಿಡುತ ನಡೆತಂದು (ಹತಕಾ. ೦೨-೨೦); ಸ್ಥಳವನೇ ಜಲವೆಂದು ನಿರ್ಮಳಜಲವನೇ ಸ್ಥಳವೆಂದು ಬಾಗಿಲ ನೆಳಲ ಭಿತ್ತಿಯ ಹಾಯ್ದು ಬಾಗಿಲ ಭಿತ್ತಿಯೆಂದಿಳಿದು (ಕುವ್ಯಾಸ. ೦೪-೨೬). ೭. ಪೊನ್ಕ್ಕಳದ ಎಮ್ಮೆತುಱುಗಳೊ ××× ಹಾಯ್ದು ಪಡೆಕಪ್ಪಣ ಕಾದಿ ಸತ್ತು ಸಗ್ಗಿಯಾದ (ಪ್ಯಕಂ. ೦೯೩೦, ೧೨-೪ ; ಸು. 961) ; ಇರುಳುಗಳ್ಳನ ಕೂಡೆ ಸೇರಿದ ಮರುಳಿನಂತಿರೆ ನೀವು ರಣದಲಿ ತಱಿಸಿಕೊಂಬಿರಿ ಹಾಯ್ದರವದಿರು ನಿಮ್ಮನೆಡೆಯೊಡ್ಡಿ (ಕುವ್ಯಾದ್ರೋ. ೦೩-೪೨). ೮. ತಾವರೆಯೆಸಳ ದೋಣಿಯ ಮೇಲೆ ಹಾಯ್ದವು ಕುಸುಮ ದುಬ್ಬರದ ತೊಱೆಯನು ಕೂಡೆ ತುಂಬಿಗಳು (ಕುವ್ಯಾಆ. ೩-೯). ೧೦. ಹಲಉ ಕುದುರೆ ಹರೀಸಲು ಕಳ ಹಾಯ್ದು ಕುದುರೆಯ ಕೆಡಹಿ (ಪ್ಯಕಂ. ೦೯೩೦, ೬೭-೮ ; ಸು. 1164). ೧೧. ನಾರಿಯರು ಕಂಡರು ಸುಲಜ್ಞಾಭಾರದಲಿ ತಡಿಗಳಿಗೆ ಹಾಯ್ದರು [ಪಾಠಾಂ. ಹಾಯಿದು] ಸೀರೆಗಳ ತೆರೆವಿಡಿದರಂಗೋಪಾಂಗಲತೆಗಳಿಗೆ (ಕುವ್ಯಾಆ. ೧೧-೪೦) ; ಹಾಯ್ದನು ಹಂಸೆಯಾ ಮುನಿಪ (ತೊರರಾ. ೦-೩-೨೩) ; ಸೇನಾಸಮಗ್ರದಿಂ . . . ಕುದುರೆಗಳ ಹಿಂದುಗೊಂಡು ಬರಲು ತರ್ಮಿಯೊಳವು ಹಾಯ್ದು ಅನಿಲಜವದಿಂ ಪಡೆಯೊಳೊರ್ವರುಮುಱಿಯದಂತೆ ಕುಂತಳನಗರಕೆ (ಕೃಬಿಶಾ. ೨೯-೬). ೧೬. ನುಡಿಯದಿರಸತ್ಯವನು ರಾಜ್ಯವ ಬಿಡು ವಿಭಾಡಿಸಿ ನಿನ್ನ ವಧುವಿನ ಮುಡಿಗೆ ಹಾಯ್ದರೆ ನೀನಧರ್ಮದ ತಡಿಯನಡರದಿರು (ಕುವ್ಯಾಸ. ೧೧-೪೦). ೧೭. ಓಡಿಹೋಗು ; ಪಲಾಯನ ಮಾಡು : ಕಪಿಸೇನೆ ಕಂಗೆಟ್ಟೊದಱಿ ಹಲುಗಿರಿಯುತ್ತ ಹಾಯ್ದುದು ಕದನ ಸಾಕೆವನೊಡನೆನುತ (ತೊರರಾ. ೨೩-೨) ; ಗಡ್ಡದ ಮುದುರರು . . . ಕಂಗೆಟ್ಟು ಹಾಯ್ದರು [ಪಾಠಾಂ. ಯ್ದುದು] ಹೊದಕೆ ದಂಡು ಕಮಂಡಲವ ಬಿಸುಟಱಿಳದೆಸೆದೆಸೆಗೆ (ತೊರರಾ. ೦-೦೦-೦೨) ; ಹಯಚತುಷ್ಟಯವನಿಸಲು ಉಗ್ರಶರಘಾತಿಗವು ಸೂತನಂ ಕೈಕೊಳದೆ ವಿಗ್ರಹವನುಳಿದೊಂದು ಕಡೆಗೆ ಹಾಯ್ದುವು (ಕೃಬಿಶಾ. ೬-೩೨). ೧೮. ದಾಟಿ ಹೊರಬರು ; ಹೊರಬೀಳು : ಪಶುಪತೀಶ್ವರ ಕಡಿವ ತೆಱಹಿನೊಳಸುರನೆಚ್ಚಂಬಡಸಿ ರಾಮನ ಬಸುಱನುಚ್ಚಳಿಸಿದವು ಹಾಯ್ದುವು ತೋದರಕುತದಲಿ (ತೊರರಾ. ೪೩-೪೨) ; ಕೊಯ್ದು ಕೊರಳಿನ ಕೊಱೆದ ತೋಳಿನ ಹಾಯ್ದು ಮೂಳೆಯ ಸುರಿವ ಕರುಳಿನಲೆಯ್ದೆ ಪಡೆಗೇಱಾಯ್ತು ಚೂಣಿಯ ಚಾತುರಂಗದಲಿ (ಕುವ್ಯಾಕ. ೨-೯) ; ಉಚ್ಚಳಿಸಿ ಹಾಯ್ದಂಬುಗಳವನ ಕಾಯದಿಂದಚ್ಚಱಿಲ್ಲದೆ ನಿಮಿಷಮಿರ್ದು ಚೇತರಿಸಿಕೊಂಡೆಚ್ಚನು (ಕೃಬಿಶಾ. ೬-೯೩). ೧೯. ಉಂಟಾಗು ; ಸಂಭವಿಸು : ಭೂಸುರವಿಷಯಕೀತನನು ಕೊಟ್ಟೆ ತಾನೆನೆ ಹಾಯ್ದು ನಾಲ್ವರ ಹೊಟ್ಟೆಯೊಳಗುರಿ ಬಳಿಕ ನೀವಿದ ಕೊಟ್ಟರೇಕೌ ತಾಯೆ ಭೀಮನನೇನ ಮಾಡಿದರಿ (ಸಂಶಶ. ೨೪ ೯೬). **ಹಾಯು** : ೧. ಮರನನೇಱಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯು [ಪಾಠಾಂ. ಜುಂ]ತಲಿದೆ ಬೆಂದ ಮಾನವ ನಾನೆಂತು ನಂಬುವೆನಯ್ಯಾ (ಬಸವ. ೪೪). ೪. ಎಲೋ, ಹುಡುಗಾ ! ನಿನ್ನ ಕೈಯೊಳಗಿಂದ ನೆತ್ತರ. ಹಾಯುತ್ತದೆ (ಶುಂಬಯಿ. ೯. ೨-೯೬). ೫. ಕಿಂದರಜೋಗಿಗೆ ಮಕ್ಕಳೆಲ್ಲ ಮುಗ್ಧರಾಗಿ ಹಳ್ಳ ಹೊಳೆಗಳನ್ನೂ ಹಾಯ್ದು ಬೆಟ್ಟದ ಒಡಲಲ್ಲಿ ನುಗ್ಗಿದರಂತೆ (ಗಾಕಶ. ೬೩) ; ಈ ದೇವರ ರಥೋತ್ಸವದಲ್ಲಿ ಜನರು ಕಿಚ್ಚು ಹಾಯುವರು (ಕಶ್ಯಶಾ. ೦೦). ೬. ಅಲ್ಲವಹುದೆಂಬ ಅಜ್ಞಾನಿಯೊಡನಾಟ ಕಲ್ಲು ಹಾದಂತೆ (ಸರ್ವಜ್ಞ. ೯೨೦) ; ತಲೆ ಗಟ್ಟಿಯೆಂದು ನೀ ಕಲ್ಲನು ಹಾಯ್ವರೆ (ಇಂಶಾಕ. ೯೨-೯೯). ೭. ಧನುಜರತಿಭೀತಿಯಲಿ ಸೈನ್ಯವ ಕೂಡಿ ಧಾಳಿಯನು ನಿರುತ ಹಾಯುತೆ (ಸಂಶಶ. ಶ೦, ೪೦೯); ಲಖನೌಗೆ ಬಂದ ಬಳಿಕ ಅವರ ಕಿರಿತನ ಶಬ್ದಗಳಲ್ಲಿ ಹೊರಡಲಾರಂಭಿಸಿತು. ಜೇಡರವನ ಸಿಟ್ಟು ಗಡ್ಡದ ಮೇಲೆ ಹಾಯುತ್ತಿತ್ತು (ಶ್ರೀಮಾತೃ. ೬೩). ೧೦. ಕಾರು ಹಾಯ್ದರೆ ಬಾಯ್ಗೆ ಸಿಡಿವುದು ಕೆಂಪುಗೋದಿಯ ಕಿಚಡಿಯು (ಪೆಲಮು. ೦೨-೨೦). ೧೧. ಆ ಪುಣ್ಯಾತ್ಮಳ ಮನಸಿನೊಳಗ ಏನಿದೆಯೊ ಏನೊ . . . ಮೊದಲೇ ಒಂದು ಕಾಗೆ ಸಮೀಪ ಹಾಯಲೊಲ್ಲದು (ಅಶ್ವಮೇ. ೬೯) ; ಮುಂದೆ ಎಂಟಾನೆಂಟು ದಿವಸಗಳಾದರೂ ಅವನ ಮನೆಯ ಕಡೆಗೆ ಹಾಯಲಿಲ್ಲ (ಶುಂಬಯಿ. ೯-೩೪) ; ಜೈನ ಕವಿಗಳು ಚಂಪುವಿನ ಹತ್ತಿರ ಹಾಯಲಿಲ್ಲವೆಂದರೂ ಸರಿ (ಕಶಾಶ. ೪೯೬).. ೧೩. ಮುಂದೆ ಬಂದರೆ ಹಾಯದೀರಿ ಹಿಂದೆ ಬಂದರೆ ಒದೆಯದೀರಿ (ಗೋಹಾಡು. ೯೦) ; ಒಂದು ಹಸುವು ಗೋಪಾಲಕನನ್ನು ಹಾಯಲಿಕ್ಕೆ ಹೋಯಿತು (ಪುಶಾಕ. ೦೦೯)

೧೮. ಏಷ್ಯದ ದೊಡ್ಡ ಪರ್ವತಗಳೆಲ್ಲ ಪ್ರಾಯಶಃ ಪಶ್ಚಿಮದಿಂದ **ಪೂರ್ವ**ಕಡೆಗೆ ಹಾಯುತ್ತವೆ (ಭೂಗೋಳ. ೨೫). ೧೯. ನೆಗಡಿ ಹಾಯು ದಂತೆ ಅವನು ತನಗೇನೊ ಉಪಾಯ ಮಾಡಿಕೊಂಡಿದ್ದಾನೆ (ದೇಶಸ್ನೆ. ೧೦). ೨೦. ಗೋಚರಿಸು; ಹೊಳೆ : ಚಹಾ ಗುಟುಕರಿಸಿದ. ಕೊನೆಯ ಗುಟುಕು ಗುಟುಕರಿಸುವಾಗ ತಾನು ಹೊರಗೆ ಹೋಗಬೇಕು ಎಂಬ ವಿಚಾರ ಹಾಯಿತು (ಅಶವಾ. ೨೬).

**ಹಾದಾಟ**=ಪರಸ್ಪರ ಹಾಯುವಿಕೆ : ಎತ್ತುಗಳ ಹಾದಾಟದ ನಡುವೆ ಸಿಕ್ಕ ಮಗು ಕಂಗಾಲಾಯಿತು (ಬೂಶಿ). **ಹಾದು ಬರು**=ದಾಟಿ ಬರು : ಕಳಿಸಿದರೆ ಕಳಿಸು ಬೆಲೆಬಾಳುವಂತಹ ಸರಕು ಎಲ್ಲ ಬಂದರುಗಳಿಗು ಹಾದು ಬರಲಿ (ಕೆಲಮು. ೦೬–೮); ಅವರಿಬ್ಬರು . . . ಒಂದು ತೋಟಕ್ಕೆ ಹೋಗಿ, ಅಲ್ಲಿಯ ಮಾವಿನ ತೋಪಿನೊಳಗಿಂದ ಹಾದು ಬರುತ್ತಿದ್ದರು (ಕುಂಬಯು. ೬. ೩–೩೭). **ಹಾಯ್ದಾಡು, ಹಾದಾಡು**=೧. ಓಡಾಡು; ನಡೆದಾಡು; ತಿರುಗಾಡು : ಆನೆ ಅರಣ್ಯವನ್ನು ದಾಟಿ ಬಂದು, ಜನರು ಹಾಯ್ದಾಡು ತ್ತಿರುವ ಗುರುತಿನ ದಾರಿಯಲ್ಲಿ ಅವನನ್ನು ಇಳಿಸಿ (ಬುದ್ಧಚಾ. ೬೫). ೨. ಕೊಂಬಿನಿಂದ ಇರಿ, –ತಿವಿ : (೬). ೩. ದಾಟು : (೬). **ಹಾಯ್ದು ಹೋಗು, ಹಾದು ಹೋಗು**=ದಾಟಿ ಹೋಗು : ಗೌಡರ ಗರ್ಜನೆ ದೂರದಲ್ಲಿ ಹಾಯ್ದು ಹೋಗುವವರಲ್ಲಿಯೂ ಹೆದರಿಕೆ ಹುಟ್ಟಿಸುತ್ತದೆ (ಗ್ರಾಮಗು. ೩); ಎಲ್ಲಾ ಗ್ರಹಗಳೂ . . . ಒಂದಕ್ಕೊಂದು ತಾಗದೆ . . . ಪ್ರತ್ಯೇಕವಾಗಿ ದೂರವಾಗಿವೆ. ಒಂದರ ಮೇಲೆ ಒಂದು ಹಾದು ಹೋಗಿಲ್ಲ (ಆಕಾಶ. ೦೩); ಬಗೆಬಗೆಯ ಸುಂದರ ಆಕೃತಿಗಳು ನಮ್ಮ ಕಣ್ಮುಂದೆ ಹಾದು ಹೋಗುತ್ತವೆ (ಭಾರದ. ೫೨೫).

[ದೇ.॥ ತಮಿ. ಕೊಡ. ಪಾಯ್. ಮಲ. ತೆಲು. ಪಾಯು]

**ಪಾಯ್$_2$, ಪಾಯು$_1$, ಹಾಯ್$_2$, ಹಾಯಿ$_1$, ಹಾಹೆ$_2$** (ನಾ). ೧. ಚಲಿಸುವುದು; ನಡೆಯುವುದು : (೬). ೨. ರೀತಿ; ಕ್ರಮ : (೬). ೩. ಔಚಿತ್ಯ; ಯುಕ್ತತೆ : (೬). **ಪಾಯು$_1$** : ೨. ದುಡ್ಡು ಇರೂತನಕ ಎಲ್ಲಾರೂ ಬೇಕಾಗೋದು, ದುಡ್ಡು ಹೋದ ಮ್ಯಾಲ ಎಲ್ಲಾರೂ ಘಾನಾಘಾನಾ ಆಗೋದು. ಇದು ಲೋಕದ ಪಾಯಾಸ ಅದ (ಗಂಡೂಯು. ೧೦೦); **ಪುಟ್ಟ** . . . ಪೈಲವಾನನೇನಲ್ಲ. ಆದರೂ ಕುಸ್ತಿಯ ಪಾಯವನ್ನು ನೋಡುವುದು ಎಂದರೆ ಅವನಿಗೆ ತುಂಬಾ ಆಸೆ (ರೇಮುಕಾ. ೬೭). **ಹಾಯ್$_2$** : ೪. ದಾಟುವುದು; ದಾಟುವಿಕೆ : (೬). **ಹಾಯಿ$_1$** : ೫. ಗಾಳಿಯ ಅನುಕೂಲತೆಗಾಗಿ ದೋಣಿಯ ನಡು ಗಂಬಕ್ಕೆ ಕಟ್ಟುವ ನೌಕಾಪಟ; ಹಡಗಿನ ಪಟ : ತೇಲಿದ್ದು ತೇಲಿತ್ತು ಮುಳುಗಿದ್ದು ಮುಳುಗಿತ್ತು ಗಾಳಿ ನೀರ್ ಬಾಳು ಒಗುಮಿಗುತಲಿಹುದು. ಮೇಲೆ ಕೀರ್ತಿಯ ಹಾಯಿ ಪಾಪ ಬಿಡುತಿದೆ ಬಾಯಿ ತೆರೆನೊರೆಯಲಿತಿಹಾಸ ನಗುತಲಿಹುದು (ಗಂ. ೬೯–೦೭); ಹಾಯಿ ಇರಲಿಲ್ಲ ದೋಣಿಗೆ: ಸುಮ್ಮ ಸುಮ್ಮನೆ ಗೊತ್ತುಗುರಿ ಇಲ್ಲದೆ ಅದು ನೀರ ಮೇಲೆ ತೇಲುತಿತ್ತು (ಬವಕಂ. ೦೦೭); ಎತ್ತಿದ್ದ ಹಾಯಿಗಳನ್ನು ಅನುಕೂಲವಾರುತವು ತುಂಬಿ. ಹಡಗವನ್ನು ಸಮುದ್ರದ ಮೇಲೆ ವೇಗವಾಗಿ ಓಡಿಸಿತು (ಮುಕಿಸ. ೭೯). ೬. ಹಾಯಿಪಟವನ್ನು ಕಟ್ಟಿರುವ ದೋಣಿ; ನೌಕಾಪಟವನ್ನು ಹೊಂದಿಸಿರುವ ನಾವೆ : ಹಾಯಿ ವಿಷ್ಣು ಹಿಡಿಯುವರು ನೀರ ಮೇಲೆ ಹೋಗಲು ಉಪಯೋಗಿಸುವ ಸಣ್ಣ ಹರಿಗೋಲು (ಸಮ್ಮನು. ೦೯೯); ಹೆಲನರಿಗೆ ಮುನ್ನೂರು ಹಡಗುಗಳು . . . ಕಡುವೇಗ ಇನ್ನೂರು ಹಾಯಿಗಳು (ಶಾರು. ೦೯–೩೨೭); ಹಾಯಿ ಬಿಟ್ಟಿದ್ದನ್ನು ನೋಡಿ ಮನೆಯ ದಾರಿ ಹಿಡಿದಿದ್ದೆ. ತಾನು (ಹೊಸಕ್ಕೆ. ೫೭). **ಹಾಹೆ$_2$** : ೫. "ಹಡಗಿನ . . . ಪಟ ಹಾಹೆಯುಕ್ಕು" (ಮುಂಗಠಾ. ೦೨೦–೫); ಗಾಳಿಗೆಷ್ಟು ಹರಿದೀತು ಹಾಹೆ ಹುಟ್ಟಿಲ್ಲದಾಗೆ ಹಡಗ? (ಸೊರ್ಯಾಣಠಾ. ೩೩–೨).

**ಪಾಯ್ಕಟ್ಟು**=ರೀತಿ; ವೈಖರಿ; ಕ್ರಮ : ದುರುಗೋಜಿಯು ಹೊಲಿಯುವ ಪಾಯ್ಕಟ್ಟಿನಲ್ಲಿ ಅಂಗಿಯನ್ನು ಹೊಲಿಯುವವರು ಈ ಊರಿನಲ್ಲಿ ಮತ್ತಾರು ಇಲ್ಲ (ಬೂಶಿ). [<ಪಾಯ್$_1$./ತುಳು. ಪಾಯಿ]

**ಪಾಯು$_1$** 'ಪಾಯ್$_2$' ನೋ.

**ಪಾಯು$_2$** (ನಾ) ೧. ಪಾದ; ಅಡಿ; ಚರಣ: "ಪಾಯ (ಪಾಯು, ಪಾಯಿ)– ಪಾದ" (ಶಬ್ದಕೋ. ೨೬); ಗತಿ ಸ್ತಂಭಿಸಿ ಪಾಯುಂ [ಪಾಠಾಂ. ದಂ] ಪೈಸರಂ ಬೋಗಿ ಪಸ್ತಂ ಪಾಲಂಗಿ ನೋಟಮುಚ್ಛೆತ್ತಿ ಮೂರ್ಛಿಸುವ ಮಗಳಂ ಪದ್ಮಾವತಿ ಕಂಡು (ಮಲುರ. ಹ. ೦೬೯–೦೮). ೨. ಬುನಾದಿ; ಅಸ್ತಿವಾರ; ಅಡಿಪಾಯ : ಸಖಿತ್ವದಿಂದಲೂ ಸಂತೋಷದಿಂದಲೂ ಪಾಯ ಗಟ್ಟಿ ಮಾಡುವ ಬಗ್ಗೆ . . . ಒಂದು ದಾರಿ ಮಾಡಿ ಇರಿಸಬೇಕಾಗಿ ಇದೆ (ರಾಜೇಂದ್ರ. ೦೬೫); ಉಪ್ಪಾರನಾಗಿ ಪಾಯಾ ತುಂಬಬೇಕು (ಮುಂಬಯು. ೪–೦೪೫); ಸದ್ಯದಲ್ಲೇ ನಾನು ಮನೆಯ ಪಾಯ ತೆಗೆಸಬೇಕಾಗಿದೆ (ಯೋರಹ. ೩೨). ೩. ನಾಲ್ಕನೆಯ ಒಂದು ಭಾಗ; ಕಾಲುಭಾಗ: 'ಪಾಯುದ್ರವ್ಯ' ಪರಾ.

**ಪಾಯ ಹಾಕಿಸು**=ಬುನಾದಿಯನ್ನು ಹಾಕಿಸು; ಅಡಿಪಾಯವನ್ನು ಹಾಕಿಸು : ಅತ್ತಿಮಬ್ಬೆ ಯೋಚಿಸಿ ಮೊಟ್ಟಮೊದಲು ಜಿನಾಲಯಕ್ಕೆ ಪಾಯ ಹಾಕಿಸಿದಳು (ದಾನಚಿಂ. ೦೬೫). **ಪಾಯ ಹಾಕು**=ಬುನಾದಿ ಹಾಕು; ಅಡಿಪಾಯ ಹಾಕು : ಪಾಯ ಹಾಕಿದ್ದಾರೆ; ಮೇಲೆ ಕಟ್ಟಡ ಎದ್ದಿಲ್ಲ (ರಂಗಕ. ೦೫೫). [<ಪ್ರಾ. ಪಾಯ. /ಸಂ. ಪಾದ]

**ಪಾಯಕ** (ನಾ). ಕಾಲಾಳು; ಪದಾತಿ : ಚಾಳಾಂಧ್ರ ದೇಶದ ಅರಸು ಆನೆಯನೇರಿ ನಾಯಕ ಪಾಯಕ ಮಾಮತಿಗರ ತಳತಂತ್ರ ಮಾರ್ಬಲ ಸಹಿತ ರಾಜಬೀದಿಯೊಳು ಬರುತ್ತಿರಲು (ಸರ್ವಪ. ೨೦೫–೯೩೦); ಹರಿಗೆಯ ತುಳುವ ಪಾಯಕರು ಬಿಲ್ಲವರು ಕಾಡೆರೆಯ ವೀರರು. . ನಡೆದರು ಶರಣಮಣಿಯೊಡನೆ (ಶಂಕರಾ. ೬–೩೫). 'ಕಾಲುಪಾಯಕ' ಪರಾ. [<ಪ್ರಾ. ಪಾಇಕ್ಕ. / ಸಂ. ಪಾಯಿಕ]

**ಪಾಯಕು** 'ಪಾಯಕ್ಕ$_2$' ನೋ.

**ಪಾಯಖಾನೆ, ಪಾಯಿಖಾನೆ, ಪಾಯ್ಖಾನೆ** (ನಾ). ೧. ಶೌಚಗೃಹ; ಕಕ್ಕಸು : ಕಾಮ ತುಚ್ಛವಾದ ಸಂಗತಿ–ಪಾಯಖಾನೆಗಳ ಗೋಡೆಗಳ ಮೇಲೆ ರೂಪಿಸುವ ಸಂಗತಿ–ಎಂಬ ಕಲ್ಪನೆ ಆಗ (ಮುಕ್ತಿ. ೦೦೯); ಉಳದದ್ದ ನಿದ್ದೀ ಪಾಯಖಾನ್ಯಾಗ ಮುಗಸಿದಿ ಏನಲೇ ರ್ಝುಣಕ್ಯಾ! (ಚಂದಯು. ೦೦೦). ೨. ಮಲ; ಅಮೇಧ್ಯ : ಪಾಯಿಸೆ ಬಿದ್ದ ಮಗುವಿನ ಪಾಯಖಾನೆ ತೆಗೆಯಲು ಅಲ್ಲಿ ಯಾರೂ ಇರಲಿಲ್ಲ (ಬೂಶಿ). **ಪಾಯಿಖಾನೆ** : (೬). **ಪಾಯ್ಖಾನೆ** : (೬).

[←ಪಾರ. ಪಾಖಾನಹ್, ಪಾಖಾನಾ; ಹಿಂ. ಪಾಖಾನಾ, ಪಾಯ ಖಾನಾ; ಮರಾ. ಪಾಯ್‌ಖಾನಾ]

**ಪಾಯಜಾಮ, ಪಾಯಜಾಮೆ, ಪಾಯಿಜಾಮ, ಪಾಯಿಜಾಮೆ, ಪೈಜಾಮ, ಪೈಜಾಮಾ** (ನಾ). ದೊಗಲೆ ಷರಾಯಿ; ಅಳ್ಳಕವಾದ ಇಜಾರ : ಸ್ವಲ್ಪ ಹರಿದಿದ್ದ ಪಾಯಜಾಮ, ಮಾಸಿದ ಅಂಗಿ (ರಂಗಪ. ೦೨೯). **ಪಾಯಜಾಮೆ** : ಕಪ್ಪು ಬಣ್ಣದ ರೇಶ್ಮೆಯ ನಿಲುವಂಗಿ, ಹತ್ತಿಕಾಲಿನ ನೂಲಿನ ಪಾಯಜಾಮೆ (ತ್ರಿಕಾಶ. ೩). **ಪಾಯಿಜಾಮ** : ಒಬ್ಬ ಸಂಗೀತಗಾರನು . . . ಕುತ್ತಿನ ಪಾಯಿಜಾಮ ಹಾಕಿಕೊಂಡು ಹಾಡುತ್ತಿರಲಾಗಿ (ಕಥಾಮಂ. IV, ೦೦); ಮೆಲ್ಲನೆ ಕಡಲ ತೆರೆ ಅಂಗರನ ಪಾಯಿಜಾಮವನ್ನು ಮುತ್ತಿಡುತ್ತಿತ್ತು (ಹೊಸಕ್ಕೆ. ೬೨). **ಪಾಯಿಜಾಮೆ** : ಬಣ್ಣ ಬಣ್ಣದ ಪಾಯಿಜಾಮ, ಅದೇ ರೀತಿಯ ಅಂಗಿ ತೊಟ್ಟ ಈ ವ್ಯಕ್ತಿ ದೊಡ್ಡಪ್ಪನೇ ಎಂದು ಯಶೋದೆ ಒಂದು ಕ್ಷಣ ಶಂಕಿಸಿದಳು (ವಾತ್ಸಲ್ಯ. ೦೫). **ಪೈಜಾಮ** : ಅಜಾನ ದೃಷ್ಟಿ ಕಿಶೋರನ ಪೈಜಾಮದ ಕಡೆ ಹರಿಯಿತು (ಅಕ್ಕಾರ್ಕ. ೨೩). **ಪೈಜಾಮಾ** : ಶ್ರೀಧರ . . . ಪೈಜಾಮಾ ಬದಲಿ

ಒಮ್ಮೆ ಶಾಂತ ಮಲಗಿದ್ದಲ್ಲಿಗೆ ಹೋಗಿ ಮಗುವಿನ ಹಣೆ ಮುಟ್ಟಿ ನೋಡಿದ (ವಾತ್ಸಲ್ಯ. ೯೭); ಶರಟನ್ನು ತೆಗೆಯುವನು . . . ಪೈಜಾಮಾ ಕಳೆದೊಗೆಯುವನು (ಅಕ್ಕವೋ. ೦೦೭).

[← ಪಾರ. ಪಾಎಜಾಮಹ್, ಪಾಜಾಮಹ್; ಹಿಂ. ಪಾಯಜಾಮಾ, ಪಾಜಾಮಾ; ಮರಾ. ಪಾಯ್‌ಜಮಾ, ಪಾಯ್‌ಜಾಮಾ]

**ಪಾಯಜಾಮೆ** 'ಪಾಯಜಾಮ' ನೋ.

**ಪಾಯಣ್ಣೆ** (ನಾ). (?): ಅರಸುಗಳ ಕೈ ಉತ್ತಾರರತ್ನ ಪಾಯಣೆ ಸಂದಾದೀಪ ಪುಡಿಪಟ್ಟು ಅಲಂಕಾರದಿ ಪಕೆ ಸಹಾ ನಾಣ್ಯ ೩೦ ಲಾ ೦ (ಎಕ. XI. ಹೊಳಲ್ಕೆ. ೭–೩೯; 1568). [?]

**ಪಾಯದಳ**, ಪಾಯಿದಳ, ಪಾಯ್ದಳ (ನಾ). ಕಾಲಾಳುಗಳ ದಂಡು; ಪದಾತಿಸೈನ್ಯ: "ಯಾತಂ ಪಟಾತಿಕಂ ಪಾಯದಳ ಪತ್ತಿ ಪಾದಾತಂ ಪದಾಜಯಂ ಪದಿಕನೆನೆ ಕಾಲಾಳ್" (ಶಂಗಂ. ೯೩–೨೭); ಒಂದು ಕೊಡಗ . . . ಆ ಪುರವರಸು ತನ್ನ ಪಾ[ಕಾಣಂ. ಪಾಯ]ಯದಳ ಸಹಿತ ಬಂದರೆ ಒಂದೇ ಬಾರಿ ಮುಜ್ಜಿದು ಸುಂಗಿತ್ತ ಕಂಡೆ (ಅವಕಂ. ೪೬–೨೦೦); ನೂಕಿತೊಂದೇ ವಾಘೆಯಲಿ ರಥ ನಾಕುಸಾವಿರ . . . ಲಕ್ಕಪಾಯದಳ (ಕುವ್ಯಾ. ೨–೬); ಕದನದ ಗಾಯದಲಿ ನೊಂದೊಜ್ಜಲಿ ಬಾಯಲಿ ಬೆರಳನಿಟ್ಟುದು ವೈರಿಪಾಯದಳ (ಶಳಶ. ೯–೩೪); ರಾವುತ, ಪಾಯದಳ, ದಳದಳದ ಪೆರಗೆ, ಬಂದು ಬಂದೆತ್ತಲು . . . ಬೀಡುಬಿಟ್ಟಳಿಯೆ (ಶಾರಿಸಿ. ೩–೦೦೯). **ಪಾಯಿದಳ:** ತುರಗ ಕರಿ ರಥ ಪಾಯಿದಳ ಬಲ ಹೊರಳಿಯೊಡೆದುದು (ಕುವ್ಯಾದ್ರೋ. ೦೨–೦೯); ಬಂದು ಭಂಡಾರ ಬೊಕ್ಕಸ ರಥ ಪಟ್ಟಿಯ ಒಂದು ಉಳಿಯದೆ ಪಾಯಿದಳವ ಇಂದು ಒಪ್ಪಿಸಿ ಹೋಗು (ಹಂಕಾಂ. ೪೦–೦೦೩); ಅರ್ಜುನನು ಪಾಯಿದಳದ ಮೇಲೆ ಕಾಣಿಸಿಕೊಂಡು ಅದನ್ನು...ನೋಯಿಸಲು (ಕೃಶಾವಿ. ೦೦೬). **ಪಾಯ್ದಳ:** "ಪಾಯ್ದಳ (ಪಾಯದಳ) — ಪಾದದಲ = ಕಾಲಾಳ ಸೈನ್ಯ" (ಶದ್ಮಕೋ. ೨೭); ಮುಜ್ಜಿದನೊಗ್ಗಿನ ಪಾಯ್ದಳವನು (ಕುವ್ಯಾದ್ರೋ. ೩–೭೭); ನೆರೆದುದಗಣಿತವರಸುಗಳು ಕರಿತುರಗರಥಪಾಯ್ದಳದ ಸಂದಣಿ (ಶಳಶ. ೩–೩೦); ವಾಜಿಯ ಕಾಪಿಂ ಪಾಯ್ದಳಂ ಸಡಗರದಿಂ ನಿಚ್ಚ ಪಯಣದಿಂ ದೇಶದೇಶಂಗಳಂ ಕಟಕಟದು ಪೋಗುತುಮಿರ್ದುದು (ರಾಜಶೇ. ೩೦–೨). [ಪಾಯ್ಯ$_2$ + ದಳ$_2$ (= ದಲ)]

**ಪಾಯದಟ**, ಪಾಯಿದಟ (ನಾ). = ಪಾಯದಳ: ಪಾಯದಟವೆಲ್ಲ ಮೆಚ್ಚು ಮುಜ್ಜಿದು ರಾಜಪಜ್ಜಿಯಾಗೆ ತೆಜ್ಜಿವುಪಡೆದಿದಿರೊಡ್ಡಿನ ತೇರೊಡ್ಡುಗಳ್ ಶೂರಸಾರಥಿಪ್ರೇರಣದಿನೋರೊಂದು ಪತ್ತೆ ಸಾರ್ಚಿದಾಗಳ್ (ಚಂದ್ರಶೇ. ೧೦–೭೯ ವ) **ಪಾಯಿದಟ:** ಮೂಲಬಲದೊಳ್ . . . ನೂಜಾನೆಯಿಪ್ಪಾಸಾಸಿರಕುದುರೆ ಲಕ್ಕಪಾಯಿದಟಮಾಯ್ತೆಂದು ಲೆಕ್ಕಿಗಂ ಬಿನ್ನವಿಸೆ (ಶಳಸಂ. ೨೨–೦೯). [ಪಾಯ್ಯ$_2$ + ದಟ]

**ಪಾಯದೂತ** (ನಾ). ಕಾಲಾಳು: ಪಾಯಪಾದರರಿಕಾಲನಾ ಪಾಯದೂತರತಿವೇಗದಿಂ (ಹಾಲಾಸ್ಯ. ೨–೯–೩೪). [ಪಾಯ್ಯ$_2$ + ದೂತ]

**ಪಾಯದೆ** 'ಫಾಯಿದೆ' ನೋ.

**ಪಾಯದ್ರಮ್ಮ** (ನಾ). ದ್ರಮ್ಮದ ನಾಲ್ಕನೆಯ ಒಂದು ಭಾಗ; ದ್ರಮ್ಮದ ಕಾಲುಭಾಗ: ಪಾಯದ್ರಮ್ಮಂ ಅಡಿಗಚ್ಚು ಕಾಣಿಕೆ (ದೊಂಕಶಾ. ೦೯೩೪, ಬಂಕಾಪುರ. ೩–೦೯; 984). [ಪಾಯ್ಯ$_2$ + ದ್ರಮ್ಮ]

**ಪಾಯನ್ನೇರಳೆ** (ನಾ). ಒಂದು ಬಗೆಯ ನೇರಿಳೆ: ಕರೀನೇರಳೆ, ಪಾಯನ್ನೇರಳೆ (ವೃಕಿಗ. ೭೩–೦೯೯೭). [? + ನೇರಳೆ (< ನೇಜಾಲ್)]

**ಪಾಯಬಂದ** (ನಾ). ಕುದುರೆಯ ಹಿಂಗಾಲಿಗೆ ಕಟ್ಟುವ ಹಗ್ಗ; ಪಿಚಾಡಿ: ಪುಶಳಾ. . . ಧಾಬೆಗೆ ಹೋಗಿ ಬಾಪೂಸಾಹೇಬನ ಕುದುರೆಯ 'ಪಾಯಬಂದ ಕಾಡಣೆ'ಯನ್ನು ಬಿಚ್ಚಿಕೊಂಡು, ತಿರುಗಿ ಕೋಣೆಗೆ ಬಂದು ಬಾಗಿಲು ಹಾಕಿಕೊಂಡಳು (ಗ್ರಾಮಾಯ. ೦೪೦). [← ಮರಾ. ಪಾಯ್‌ಬಂದ್]

**ಪಾಯಭರಣ** (ನಾ). ತಳಪಾಯವನ್ನು ತುಂಬುವುದು; ಅಡಿಪಾಯವನ್ನು ಮಂಚುವುದು: ಈಗ ಬಸವಂತಿ–ಶ್ಯಾಮರಾಯರ ನಡುವೆ ಚೈನಾ–ಭಿತ್ತಿ ನಿರ್ಮಿಸುವ ಹಂಚಿಕೆ ಹಾಕಿದ್ದ. ಭಿತ್ತಿಯ ಪಾಯಭರಣ ಸರಬಲಿಗೆ ಆಸುರಿಸಿತ್ತು (೦೬ಹ. II. ೩೪೩). [ಪಾಯ್ಯ$_1$ + < ಭರಣ$_1$]

**ಪಾಯರಿ** (ನಾ). ಅಂತಸ್ತು; ಪದವಿ: ಏ ಪಾಯರಿ ಏರಾಕ ಪತ್ರೀದೆಲಾ. ಮೊದಲ ನನ್ನ ಇಲ್ಲೆ ಬರೇ ಮುಸುರೀ ತಿಕ್ಕಾಕ ಕರತಂದಿ. ಈಗ ಮದುವೆಗೆ ತಯಾರಾದಿ (ರಕ್ತಕ್ಷ. ೦೦೬). [← ಮರಾ. ಪಾಯರೀ]

**ಪಾಯಲಿ**, ಪಾಯಿಲಿ, ಪಾಯಿಲೆ (ನಾ). ಧಾನ್ಯವನ್ನು ಅಳೆಯುವ, ನಾಲು ಸೇರಿನ ಒಂದು ಅಳತೆ: ೪ ಶೇರಿಗೆ ೧ ಸೊಲಿಗೆ, ಪಾಯಲಿ ಅಥವಾ ಚಿಟ್ಟ . . . ೨೦ ಮಣಕ್ಕೆ ಅಥವಾ ೧೦ ಹೇರಿಗೆ ೧ ಖಂಡುಗ; ಈ ಪರಿಮಾಣಗಳು ಬಹುತರವೊಂದೇ ಸವನಾಗಿ ಯೆಲ್ಲ ಕಡೆಯಲ್ಲಿ ನಡಿಯುತ್ತವೆ (ಕರಾಗ. ೨೯೦). **ಪಾಯಿಲಿ:** ರೂಪಾಯಕ್ಕೆ ಇಷ್ಟು ಪಾಯಿಲಿ ಮೇಲೆ ಅಂತಾ ಇರತಕ್ಕ ಜೀನಸುಗಳು (ಮುಂಬವ್ಯಾ. ೦೩೩). **ಪಾಯಿಲೆ:** ಚೊರುಮರಿ (ಅಕ್ಕಿಅರಳು) ಮುಂಬಯಿಯಲ್ಲಿಯ ಅಳಿಯುವ ಪಾಯಿಲೆ ೨೦೪ ಸೂರ್ತಿ ರೂಪಾಯಿಯ ಭಾರ ಇರುತ್ತದೆ (ಮುಂಬವ್ಯಾ. ೦೩೩).

[← ಮರಾ. ಪಾಯಲೀ]

**ಪಾಯವಟ್ಟ**, ಪಾಯಿವಟ್ಟ (ನಾ). ೧. ಕಾಲಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ; ಕಾಲಂದುಗೆ; ನೂಪುರ: "ಸಿಂಜಿನಿ ಹಂಸಕಂ ಕಡೆಯ ಪೆಂಡೆಯಂ ಪಾಯವಟ್ಟಂ" (ಶಂಗಂ. ೦೦೨–೩೦); ಸಂದಿವಟ್ಟದ ಪಾಯವಟ್ಟವುಮಂ ... ವಿವಿಧ ಕಿಸಲಯದ ಕಿಸಲಯಮುಮಂ ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಶೇ. ೭–೦೦೯ ವ); ರಾಜೀವಲೋಚನೆ ಕಳುಹಿದಳು ವಿಕ್ರಯಿಸಲೆಂದವದೆ ಪಾಯವಟ್ಟವನು (ಬಸಶೇ. ೪೨–೦೨); ಉಲಿವ ನೇವುರ ಪಾಯವಟ್ಟದ ಲಲಿತಕಂಕಣ ತೋಳಬಂದಿಯ . . . ಕೋಮಲೆಯರಿರ್ದ್ದರು (ಕ್ರಶುಂ. ೯–೨೯); ಬಾಯಿಬಡಿಕ ತವಸಿಗಳ ಶಾಯೆ ನೀ ಕಡೆಮೆಟ್ಟೆನುತೆ ಕಾಲಂದುಗೆ ಪಾಯವಟ್ಟವ ತಂದಿಕ್ಕಿದರು (ಪೋಹಶ. ೨೩–೪೭). ೨. ಗೌರವಸೂಚಕಚಿಹ್ನೆಯಾಗಿ ಕಾಲಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ಕಾಲ ತೊಡರು; ಪೆಂಡೆಯ: "ಪಾಯವಟ್ಟ — ಪಾದಪಟ್ಟ = ಪೆಂಡೆಯ" (ಶದ್ಮಕೋ. ೨೭); ಪಾದಪಟ್ಟ — ಪಾಯವಟ್ಟ (ಕಮತ. ೨೯೨ ಕ್ರಯೋ); ವೀರಮುದ್ರಿಕೆ ಪಾಯವಟ್ಟ ಕಾಂಚಿದಾಮ ಹಾರ ಕೇಯೂರ (ಬಕೋಶೇ ೩–೭೦). **ಪಾಯಿವಟ್ಟ:** ೧. ಝಣಝಣರೆಂಬ ನೇವುರ ಪಾಯಿವಟ್ಟಂಗಳು ತರುಣಿಗೊಪ್ಪಿದವು (ಶಿಶಕಾಂ. ೨–೦೨೩); ಕೇವಾವರೆಯ ಬಂಡುಣಿಸಿಗಳಿಸಿರ್ಯೆತಂದಿಪ ಮದಹಂಸೆಯಂತೆ ಚೆಂದದ ಮುತ್ತಿನ ಪಾಯಿವಟ್ಟದ ಪದದ್ವಂದ್ವವೆಸೆದು ಮಂದವಳ (ಶಂಶವ. ೯–೨೨). [< ಸಂ. ಪಾದಪಟ್ಟ]

**ಪಾಯವಧಾರು** (ನಾ). (ಆಚಾರ್ಯರು, ರಾಜರು ಮೊದಲಾದವರನ್ನು ಕುರಿತ) ಕೊಂಡಾಟದ ಒಂದು ನುಡಿ; ಪರಾಕು ಹೇಳುವಾಗ ಬಳಸುವ ಒಂದು ಮಾತು: ಪಾಯವಧಾರುಯೆನಲು ಗಜಮಸ್ತಕದೊಳಳವಟ್ಟು ಕೈವೀಸೆ ಭೋರೆಂಬ ಲಗ್ಗೆವಜೀಗಳ ಬೊಬ್ಬೆಯಬ್ಬರಂಗಳೊಳು ಚಂದ್ರಾದಿತ್ಯ ಮುತ್ತಿದ ಶಿವಾಲಯವನು (ಸೋಮತ. ೩–೭); ಇನನಂದನನು . . . ಮುಂದೆ ಪಾಯವಧಾರು ರಿಪುನೃಪಬಂದಿಕಾಟವಧಾರು ಧಿರುಪಯವೆಂದು ಕಳಕಳ ಗಜಬಜ ಮಿಗೆ ಕುರುಭೂಮಿಗೈತಂದ (ಕುವ್ಯಾದ್ರೋ. ೦–೦೯); ಕೆಲದ ಪಾಯವಧಾರುಗಳ ಮಂಗಳಮಹಾರವವೆಸೆಯಲುತ್ಸವದೊಳಗೆ ಸುಮುಹೂರ್ತದಲಿ ಹೊಕ್ಕರು ಹರಿಬಲರು ಪುರವ (ಶಿಭಾಗ. ೦೦–೪೨–೩). [ಪಾಯ್ಯ$_2$ + ಅವಧಾರು]

**ಪಾಯಶುದ್ಧಿ** (ನಾ). ಕಟ್ಟಡ ಮೊದಲಾದುವಕ್ಕೆ ತಳಹದಿ ಹಾಕುವಾಗ ಅಡಿಪಾಯದಲ್ಲಿ ಅಮಂಗಳಕರವಾದುದೇನೂ ಇಲ್ಲದಿರುವಿಕೆ, —

ಶುದ್ಧವಾಗಿರುವಿಕೆ : ಮನೆ ಕಟ್ಟುವಾಗ ಪಾಯಶುದ್ಧಿ ಚೆನ್ನಾಗಿರಬೇಕು (ಲೂ). [ ಪಾಯ್ಮು$_2$+ಶುದ್ಧಿ ]

**ಪಾಯಸ** (ನಾ). ೧. ಅಕ್ಕಿ, ರವೆ, ಗಸಗಸೆ, ಸೇವಗೆ ಮುಂತಾದುವು ಗಳನ್ನು ತುಪ್ಪದಲ್ಲಿ ಹುರಿದು, ಹಾಲಿನಲ್ಲಿ ಬೇಯಿಸಿ ಸಕ್ಕರೆ ಅಥವಾ ಬೆಲ್ಲವನ್ನು ಸೇರಿಸಿ ಸಿದ್ಧಪಡಿಸುವ ಒಂದು ಬಗೆಯ ಸಿಹಿಪೇಯ : "ಕ್ಷೈರೇಯಂ, ಪಾಯಸಂ, ಪರಮಾನ್ನಂ—ಈ ೩ ತುಯ್ಯಲ್" (ಹಲಾಯು. ೫೩–೦೬೫) ; ಮುದದೆ ಮಾಡಿದಲ್ ಪಾಯಸಮಂ ನವಘೃತಸಮನ್ವಿತಂ ಸಿತಸಹಿತಂ (ಜಂತಶಂ. ೦೫೪–೨೨) ; ದೇವ ಪರಡಿಯ ಪಾಯಸಪನಣ್ಣು ದಮ್ಮಯ್ಯ (ಬಸರ. ೬–೦೨೮) ; ಶಾಕಶೀಕರಣೆಯ ಗುಡಪೋಣೆಯ ಸುಪಾಕ ಪೊಂಗ್ಗರಣೆ ಪಾಯಸವ. . . ಬಡಿಸಿದರು (ಭಕ್ತ. ೪–೭೪). ೨. ಒಂದು ಬಗೆಯ ಗಂಧದ್ರವ್ಯ ; ಲೋಬಾನ : "ಪಾಯಸಃ, ಶ್ರೀವಾಸಃ, ವೃಕ್ಷಧೂಪಃ, ಶ್ರೀವೇಷ್ಟಃ, ಸರಳದ್ರವಃ—೫ ಸರಳದೇವದಾರುವೃಕ್ಷದ ಬೊಂಕೆ, ರಾಳ್ಕಳೆವ ಬೊಂಕೆ" (ಸಿದ್ಧಾಂತ. ೨೦೬). [ ಸಂ. ]

**ಪಾಯಸಂಕಲೆ** (ನಾ). ಕಾಲಿಗೆ ಕಟ್ಟುವ ಸರಪಣಿ,—ಸಂಕೋಲೆ : "ಪಾಯು(ಪಾದ) ಸಂಕಲೆ—ಪಾದಶೃಂಖಲಾ" (ಶಬ್ದಕೋ. ೨೬). [ ಪಾಯ್ಮು$_2$+ಸಂಕಲೆ$_1$ ]

**ಪಾಯಟಿ** (ನಾ). (?) : ಬಯ್ದಂಗೆ ಪಣಮುಮೊ[ಂದುಂ] ಪೊಯ್ದಂಗಾಱು ಪಣಮಿಱಿಯೆ ಪನ್ನೆರಡುಪಣಂ ಪಾಯಟಿದೆ ಸುರಿಗಿಗಿರ್ಱಿರದೆಯ್ದಿದವಂ ಗೆಂಟುಮಣಮ ದಣ್ಡಂ (ಶಾಶಾಇ. IX–I. ೦೦೨–೪೫ ; 1046). [?]

**ಪಾಯಾಳ** (ನಾ). ದೂತ ; ಹರಿಕಾರ ; ಸಂದೇಶವಾಹಕ : ಪಂಚ ಶರನ ಪಾಯಾ[ ಪಾಠಾಂ. ಯ್ದಾ, ಯ್ವಾ ] ಳನಂತೆ ಚಂಚರೀಕದ ಕುಂಚ ಮನೆತ್ತಿ ಕಿಂಜಲ್ಕದ ಕೆಂದೂಳಿಯೊಳ್ಪೊರೆದು ಮಕರಂದಬಿಂದುವೆಂಬ ಬೆಮರಂ ಪೇಱ ಪರಿತರ್ಪ ತಣ್ಣೆಲರಿಂ . . . ಮನಂಗೊಳಿಸಿ (ಅರ್ಜನೀ. ೪–೬೮ ಪ); ಗಾಳಿಯ ಮುಂದೋಡುವ ಜಂಘಾಳಹಯದ್ವಯಮನೇಱ ಪಥಗತಪುರವರಾಳಾಳಿಗಳಂ ಕಟಿದಾ ಜಂಘಾಳರ್ ಪಾಯಾಳರೆಯ್ದಿ ಶೌರೀಪುರಮಂ (ಜುಹಾನೀ. ೩–೭೭). [ <ಪ್ರಾ. ಪಾಯಾಲ ]

**ಪಾಯಾಳು** (ನಾ). ಪಾದಚಾರಿ : ಗುರುವೆಂಬ ಅಂಜನ ಶಿಷ್ಯನೆಂಬ ಪಾಯಾಳು (ಶಸ್ತವ. ೪. ೬೨೩–೦೪೦೦). [ ಪಾಯ್ಮು$_2$+ಆಳ್ಮು$_3$ (<ಆಳ್$_3$) ]

**ಪಾಯ್ಮಿ$_1$** (ನಾ). ೧. ಪಾಪಿ ; ಪಾಪಿಷ್ಠ : "ಪಾಯಿ—ಪಾಪಿನ್. ೨. ಪಾದ (ಶಬ್ದಕೋ. ೨೬). ೨. ಬಡವ ; ನಿರ್ಗತಿಕ : "ಪಾಯಿ — ಬಡವಂ" (ಕಾಕ್ಕ. ೦೬೬). 'ಬಡಪಾಯಿ' ಪರಾ." [ <ಸಂ. ಪಾಪಿನ್ ]

**ಪಾಯ್ಮಿ$_2$, ಪೈ$_2$** (ನಾ). ೧. ಒಂದು ನಾಣ್ಯದ ಹೆಸರು : ಪ್ರತಾಪ ಚೌಲ ನಾಲ್ಕುಂ ಸತತಂ ಚೌಲಕ್ಕೆ ನಾಲ್ಕು ಪಾಯಿಗಳಕ್ಕುಂ ಅತಿಶಯದ ಪಾಯಿ ಯೊಂದಕೆ ಗತಿಸಂಖ್ಯೆಯ ಗಿತಿಯುಮಯೆಂಬ (ಪ್ರವಶಾ. ಅನುಬಂಧ I. ೩–೨೬); ಪ್ರತಾಪಕೆ ಪಣವು ಬಾಣಂ . . . ಪ್ರತಾಪಕಂ ಪದಿನಾಱುಪಾಯಿ ಚೌಪಕ್ಕಗಿತಿಗಳುಮಂ (ಪ್ರವಶಾ. ಅನುಬಂಧ I. ೩–೨೮). ಪೈ$_2$ : ೨. ಹಿಂದೆ ಚಲಾವಣೆಯಲ್ಲಿದ್ದ ತಾಮ್ರದ ಒಂದು ಸಣ್ಣ ನಾಣ್ಯ ; ಆಣೆಯ ಹನ್ನೆರಡನೆಯ ಒಂದು ಅಂಶ ; ಒಂದು ಬಿಡಿಗಾಸು : ಮುಪ್ಪಾ ಗವು ಮೂಱುವೀಸಕ್ಕವು ಪೈಗಳವಾಗುತ್ತಿರಲಾ ಧಾರಣೆಯೊಳಿಪ್ಪತ್ತು ಹಣವು ಹಾಗಕೆ ತಪ್ಪದೆಯೆಷ್ಟೆಂದು ಪೇಳು (ಶಾಕ್ಕರ. ೬–೦೯) ; ಜಗದೀಶ ಚಂದ್ರನು . . . ಒಂದು ಪೈಯನ್ನೂ ತೆಗೆದುಕೊಳ್ಳದೆ, ಶ್ರದ್ಧಾಸಕ್ತಿ ಯಿಂದ ತನ್ನ ಕೆಲಸವನ್ನು ನಿರ್ವಹಿಸಿಕೊಂಡು ಹೋದನು (ಸತ್ಯಕ. ೯೬). ೩. ಈಗ ಚಲಾವಣೆಯಲ್ಲಿರುವ ರೂಪಾಯಿಯ ಮೂರನೆಯ ಒಂದು ಭಾಗ: ಒಂದು ಪೈಯನ್ನು ಖರ್ಚು ಮಾಡಲೂ ಹಿಂದುಮುಂದು ನೋಡುವ ಸ್ವಭಾವ ಅವರದು (ರೂಢಿ). [ ←ಮರಾ. ಪೈ. / ಪ್ರಾ. ಪಾಯ. / ಸಂ. ಪಾದ ]

**ಪಾಯ್ಮಿ$_3$** (ನಾ). ಮೊಳಕೆ : ಬೀಜದ ಬೆಳ್ಳುಳ್ಳಿಯ ಹಿಳುಕುಗಳನ್ನು ಸೀಳಿದರೆ ಮೊಳಕೆ ಬಂದಿರುವುದು ಚೆನ್ನಾಗಿ ಕಾಣಿಸುತ್ತದೆ. ಅಂತಹ ಪಾಯಿಗಳನ್ನು ೪–೫ ಅಂಗುಲ ದೂರಕ್ಕೊಂದಿರುವಂತೆ ನೆಡಬೇಕು (ತರಕಾ. ೩೩). [?].

**ಪಾಯಿಂಟ್** 'ಪಾಯಿಂಟು' ನೋ.

**ಪಾಯಿಂಟು,** ಪಯಿಂಟು, ಪಾಯಿಂಟ್, ಪೈಂಟು (ನಾ). ೧. ವಿಷಯ; ಅಂಶ : ಈ ಕೆಳಗೆ ವಿವರಿಸಿರುವ ಪಾಯಿಂಟುಗಳನ್ನು ವಿಚಾರಿಸಿ ಅವು ಗಳನ್ನು ನೋಟು ಮಾಡಿಕೊಳ್ಳಬೇಕು (ಗ್ರಾಮಾಕ. ೩೭); ಇಲ್ಲಿರೋ ಪಾಯಿಂಟಷ್ಟೆ ನೋಡು (ಎಮುಳ. ೫೯). **ಪಯಿಂಟು :** ೧. ನನಗೂ ನಿಮ್ಮ ಪಯಿಂಟು ಸಮನೆಂದೇ ಕಾಣಿಸುತ್ತದೆ (ಪುಂಜಕ್ಕ. ೨೨೦). **ಪಾಯಿಂಟ್ :** ೨. ಮುದ್ರಣವಲ್ಲಿ ಅಚ್ಚಿನ ಮೊಳೆಗಳ ಅಳತೆಯ ಒಂದು ಮಾನ : ಅಚ್ಚುಮೊಳೆಗಳ ತಯಾರಿಕೆ ಮತ್ತು ಇತರ ಕೆಲವು ಮುದ್ರಣಕ್ಷೇತ್ರಗಳಲ್ಲಿ ಪಾಯಿಂಟ್ ಎಂಬ ಕ್ರಮಬದ್ಧ ಅಳತೆಯು ಬಳಕೆಯಲ್ಲಿದೆ. ಪಾಯಿಂಟ್ ಎಂದರೆ ೧/೭೨ ಅಂಗುಲ (ಮುದ್ರಣ. ೦೨). **ಪೈಂಟು :** ೧. ಹೌದು ಅಮ್ಮ, ನೀವೆನ್ನುವ ಪೈಂಟು ಸಮ (ಸ್ವಕ್ಷಹೊ. ೯೧). [← ಇಂ. Point]

**ಪಾಯಿಕ** (ನಾ). ಕಾಲಾಳು ; ಪದಾತಿ. [ಸಂ.]

**ಪಾಯಿಕು** 'ಪಾಯ್ಕು$_2$' ನೋ.

**ಪಾಯಿಖಾನೆ** 'ಪಾಯಖಾನೆ' ನೋ.

**ಪಾಯಿಜಾಮ** 'ಪಾಯಜಾಮ' ನೋ.

**ಪಾಯಿಜಾಮೆ** 'ಪಾಯಜಾಮ' ನೋ.

**ಪಾಯಿತರ್** 'ಪಾಯ್ತರ್' ನೋ.

**ಪಾಯಿದಳ** 'ಪಾಯದಳ' ನೋ.

**ಪಾಯಿದಟ** 'ಪಾಯದಟ' ನೋ.

**ಪಾಯಿದೆ** 'ಪಾಯಿದೆ' ನೋ.

**ಪಾಯಿನಿ** (ನಾ). ಒಂದು ಬಗೆಯ ತಂತೀವಾದ್ಯ : ವಿಪಂಚಿಕೆ ಚಿತ್ರಿಕೆ . . . ಪಾಯಿನೀ ರಾಗಮಾಲಿನೀ ಕಾಲಕೀಯೆಂಬ ಮೂವತ್ತುಮೂಱು ತಂತ್ರಿ ವಾದ್ಯಂಗಳಲ್ಲಿ (ವಿವೇಕ. ೨೪೬). [ ? ]

**ಪಾಯಿಪೋಸು** 'ಪಾಪೋಸು' ನೋ.

**ಪಾಯಿಲಿ** 'ಪಾಯಲಿ' ನೋ.

**ಪಾಯಿಲೆ** 'ಪಾಯಲಿ' ನೋ.

**ಪಾಯಿಮಟ್ಟ** 'ಪಾಯಮಟ್ಟ' ನೋ.

**ಪಾಯಿಸು,** ಪಾಯ್ಸು, ಹಾಯಿಸು, ಹಾಯ್ಸು, ಹಾಸ್ತು (ಕ್ರಿ). ೧. ಹಾರುವಂತೆ ಮಾಡು ; ನೆಗೆಯುವಂತೆ ಮಾಡು : (೯). ೨. ಹರಿಯುವಂತೆ ಮಾಡು ; ಪ್ರವಹಿಸುವಂತೆ ಮಾಡು : (೯). ೩. ದಾಟುವಂತೆ ಮಾಡು ; ದಾಟಿಸು : ತೊಱೆಯ ತಡಿಯೊ ಳೋತನುಂ ನಡೆಯಿಸುವ ಮತ್ಸ್ಯಗಂಧಿಯುಂ ಕಂಡೆಮ್ಮನೀ ತೊಱೆಯಂ ಪಾಯಿಸೆಂಬುದುಂ (ಶಾಂತಶಾ. ೦–೬೮ ಪ) ; ಮುನಿಯ ಮಾಸಲ್ವಮಂ ಮಳ್ಗಿಸಲ್ಕಿನ್ನರುಬ್ಬೇಶ್ವರನು ಹಿಮಾದ್ರಿಯುಂ ಪಾಯಿಸ(ಲ) (ಲಾ?) ದರಿಸುವಂ . . . ಕುಂಥರಾಜಂ (ಕಳಂಶ. ೬–೬). ೪. ಮೇಲೆ ಬೀಳುವಂತೆ ಮಾಡು ; ನುಗ್ಗಿಸು : ಹೆಳ್ವಾರ ಸಮರದೊಳ್ ಮುರಾರಿ ಮಾರನಾಗಿ ಗುದುರೆಯ ಪಾಯಿಸಿ ತಾನ್ನಯನಿಱಿದು (ಎಕ. III. ಸಂಜಪ. ೦೨೨–೦೫ ; ಸು. 266 ?) ; ಮುಂ ಪುಸಿದಿಪನಿಂತೆ ಪಾಯಿಸಿದನಿಂದ್ರ ನೊಳಾದಿನರೇಂದ್ರರೆಲ್ಲರಂ, (ಶಾಂತಶಾ. ೩–೬೨) ; ನೂಂಕುವಿಭಸಂತತಿ ಪಾಯಿಸುವಶ್ವವೃಂದಮರ್ವಿಸೆ ಕವಿತರ್ಪರಾತಿಚತುರಂಗಪತಾಕಿನಿಯಂ ಮುಕುಂದನೀಕ್ಷಿಸಿ ಮುಳಿದೆಚ್ಚನಾ ಪಡೆಗೆ ಮಾರ್ಪಡೆಯಂ (ಜಗಪ. ೦೫–೯೯);

೫. ಒಳಗಾಗುವಂತೆ ಮಾಡು ; ಒಳಗಾಗಿಸು : ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ರಮಾಮ್ನ. ೯-೨೩). ೬. ಹೋಗುವಂತೆ ಮಾಡು; ಚಲಿಸುವಂತೆ ಮಾಡು; ಮುನ್ನಡೆಸು : ಪೊಳೆವ ಬಾಳುಳ್ಕಂಗಳುಂ ಪೋಲ್ ಪಾಯಿಸಲೆಂದಿರ್ದಳವಂ ಪೊದಟ್ಟಿಸೆಯೆ ಚಕ್ರಾರಾವಂ (ಆದಿಪು. ೧೪-೧೧೧); ಬೆಲಗಸೆ ತೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲ ಪರಿನೀರಿನೊಳ್ ಪರಿಯ ಲೋಳಯಿಸಲ್ ಪಡಿಗೋಲನಿಕ್ಕಿ ಪಾಯಿಸಲ್ [ಪಾಠಾಂ. ಪಾಯ್ಸಲೆ] ನೆಲೆಯೆಂದು . . . ಬಗೆದುದಂದು ಜನಂ ಘನಚಂದ್ರಿಕಾಂಬುಮಂ (ಅಜಿಪು ೬-೯೩). **ಪಾಯ್ಸು :** ೪. ಭೀಮಯ್ಯನ ಮಗಂ ಪೆರ್ಗ್ಗಡೆ ಬೆಣಾಯ್ಯಂ ಗಂಗರಾನೆಯ ಕುಂಭಸ್ಥಳಕ್ಕೆ ಕುದುರೆಯಂ ಪಾಯ್ಸಿ ಸತ್ತೊಡೆ (ಎಕ. XII. ಮಧ್ಯಗಿ. ೭೦-೯; ಸು. ೯೭೧). ೭. ಸೇರಿಸಿಕೊಳ್ಳು ; ಕೂಡಿಸಿಕೊಳ್ಳು : ವದನಂ ಗೆಲವಿಂ ವಿಧುಬಿಂಬದ ಕಳೆಗಳನೊಳಗೆ ಪಾಯ್ಸಿಕೊಂಡುದೆನಲ್ ಕುಂದದ ಕಾಂತಿಯಿನಾ ಕಾಂತೆಯ ರದನಾವಳಿಯೇಂ ಕರಂ ತಳತ್ತಳಿಸಿದುದೋ (ಪುಷ್ಪಪು. ೬-೯೬). **ಹಾಯಿಸು :** ೨. ಆ ಉಪೇಂದ್ರಂಗಾದ ಶೇಷಸನೀ ವಿಧಾತ್ರನು ಧರೆಗೆ ಹಾಯಿಸಲೀ ವಿಧದಿ ದಧಿ ಕಡಲು ವುಟ್ಟಿದುದು (ಕಂಠೀಶ. ೬-೧೧) ; ನೆಟ್ಟ ಬೀ ಕ್ಯಾಗಲಿ ಪೈರಾಗಲಿ ನೀರು ಹಾಯಿಸಬೇಕು (ಕಠಶ. ೬೬); ಬುದ್ಧಿವಂತಮನುಷ್ಯ ಕಾಲುವೆ ತೋಡಿ, ಗದ್ದೆ ತೋಟಗಳಿಗೆ ನೀರು ಹಾಯಿಸಿ ಗಿಡ ಮರಗಳನ್ನು ಬೆಳೆಯಿಸುತ್ತಾ ಬಂದ (ನನಂ. ೪). ೩. ನಾನೀ ಹೊಳೆಯಂ ತಂದು ಅಂಬಿಗನ ಕೇಳಿದರೆ ನಾ ನಿನ್ನ ಹಾಯಿಸಿಕೊಟ್ಟಿಹೆನೆಂದನು (ಕೊನ್ನಸಂ. ೦೨೬-೩೬) ; ತೊರೆಯಬರೆರೆಯಾ . . . ಹೊತ್ತ ಹಿಂಗಿಸಿ ಹಾಯಿಸೆನ್ನ (ಗೀಪಂ. ೩೩-೦೫) ; ಒಕ್ಕಲಿಗನು . . . ದನಗಳನ್ನು ಬಿಚ್ಚಿ, ಹೊಡೆದು ಕಿಚ್ಚು ಹಾಯಿಸುವನು (ಕನ್ನವಾ. ೦೬೬). ೪. ಈಯೊಳ್ಳಿಗನನೆಡಕಿಕ್ಕಿ ಹಾಯಿಸು ಕಲ್ಲೆಯಲಿ ಮುರಿನೂಕು ನಡೆ ಭೂಪತಿಯು ಸಮ್ಮುಖಕೆ (ಕುವ್ಯಾದ್ರೋ. ೨-೩೪) ; ಹೀಗೆ ತಾವೇ ಮೋಟಾರು ಹಾಯಿಸಿ ಕೊಲ್ಲುವದಾದರೆ ನಮ್ಮ ಕಾವಲುಯೇತಕ್ಕೆ ? (ಶ್ರೀಪಶ. ೬೬). ೮. ಬರುವಂತೆ ಮಾಡು ; ತರು : ಆ ದಿವಸದ ಕನ್ನಡಕವಿಗಳ್ಲ . . . ಭಾರತದ ಇತರ ಭಾಷೆಗಳ ಸಾರವನ್ನು ಕನ್ನಡಕ್ಕೆ ಹಾಯಿಸಿದವರು (ರಾಮು. ೯೩). **ಹಾಯ್ಸು :** ೪. ಮುಂಗಡೆಗೆ ಪೂಪಂಕರಾ ಮಾತುಂಗವಂ ತವೆ ಹಾಯ್ಸಿ ನೋಡುತ ಲಿಂಗನಂತನ ಬರವಿಗವರುಗಳಡ್ಡಗಟ್ಟಿರಲು (ಬಸಪು. ೨೦-೩೯) ; ಹಾಯ್ಸಿ ರಥವನು ಭೀಮಸೇನನ ರಥದ ಮುಂಗುಡಿಗೆ (ಕುವ್ಯಾಕ. ೨೦-೨೩). **ಹಾಸ್ಯು :** ೯. ದಾಟು ; ಹೋಗು : ರಾಣಿ ಹುಬ್ಬುಗುಟಕ್ಕಿದಳು. ಕಾವಲುಗಾರನ ಮೇಲೆ ಹಾಸಿ ಹೋಯಿತು (ಜಜಶಾ. ೩೪). [ಪಾಯ್$_1$ + — ಇಸು]

**ಪಾಯು** (ನಾ). ಐದು ಕರ್ಮೇಂದ್ರಿಯಗಳಲ್ಲಿ ಒಂದು ; ನವದ್ವಾರಗಳಲ್ಲಿ ಒಂದು ; ಮಲದ್ವಾರ ; ಗುದ : "ಗುದಃ, ಪಾಯುಃ, ಅಪಾನಂ—ಈ ೩ ಗುದವು" (ಹಲಾಯು. ೬೫-೩೫೯) ; ಏಳನೆಯ ತಿಂಗಳಿಗೆ ಪಾಯು ಮೇಢ್ರ ಯೋನಿಯು ಉದಯಿಸುಗು (ಲಕಿಪಂ. ೩೯-೩೫) ; ಪ್ರಾಣ ಮಾರುತ ನಾಸಿಕಂ ಗಂಧ ಪಾಯುಗಳೈದು ಭೂಮಿ ಪಂಚಕವೆನಿಪವು (ಶೀಲ್ವಪು. ೬-೩-೦೨) ; ವಾಕ್, ಪಾಣಿ, ಪಾದ, ಪಾಯು, ಉಪಸ್ಥ—ಈ ಐದು ಕರ್ಮೇಂದ್ರಿಯಗಳು (ಹಿಂದಶಾ. ೨೩೬). [ಸಂ.]

**ಪಾಯ್ಕು**, ಹಾಕು, ಹಾಯಿಕು, ಹಾಯಿಕ್ಕು, ಹಾಯಿಕ್ಕು (ಕ್ರಿ). ೧. ಕಳಚು ; ತೆಗೆ ; ಬಿಚ್ಚು : ಅವರ್ . . . ಅಸಗವೊಳಿಗೆ ಬಂದು ತಮ್ಮ ತಮ್ಮ ಸೀರೆಗಳಂ ಪಾಯ್ಕಲ್ಕಾ ತಿಜುಕುಜುಪಿತೊಂಡಂ ಹಸಾದವೆನುತ್ತವಂ ನಿರ್ಮಳಮಪ್ಪಂತೊಗೆಯುಲುದ್ಯುತನಾದಂ (ಶ್ರೀಪು. ೩೩-೯೮) ; ಹಱಿದ ವಿವಿಧವಸ್ತ್ರಂಗಳಂ ಪಾಯ್ಕಿ ಪೊಸತಾದ ವಸ್ತ್ರವನಲಂಕರಿಸಿಕೊಂಬಂದದಿಂ ಕರ್ಮದಿಂ ದಗ್ಧದೇಹವನೆ ಬಿಟ್ಟು (ಶೀಲ್ವಪು. ೬-೬-೩೩). **ಹಾಕು :** ೨. ಇಡು ; ಇರಿಸು : ಅಸುವಿಲ್ಲದಂತಿರ್ದೊಡಿವು ಸತ್ತುವೆಂದು ಭಾವಿಸಿ ಬಿಟದೆ ನೆಲಕೆ ಹಾಕದೆ ಮಾಣಂ (ಸಮ್ಯಕ್ತ್ವ. ೨-೩೬) ; ನಾನು ಅವರ ಮನೆಗೆ ಕಾಲು ಹಾಕುವುದಿಲ್ಲ (ರೂಢಿ). ೩. ಧರಿಸು ; ತೊಡು ; ಬೇಸಗೆಯಲ್ಲಿ ಹತ್ತಿಬಟ್ಟೆ ಹಾಕಬೇಕು (ರೂಢಿ). ೪. ಸ್ಥಾಪಿಸು : 'ಅಂಗಡಿ ಹಾಕು' ಪರಾ. ೫. ನೆಡು ; ಬಿತ್ತನೆ ಮಾಡು : ನಮ್ಮ ಮನೆಯ ಮುಂದೆ ಒಂದು ಮಲ್ಲಿಗೆಯ ಬಳ್ಳಿಯನ್ನು ಹಾಕಿದ್ದೇನೆ (ರೂಢಿ). ೬. ಸುರಿ ; ಹೊಯ್ಯು ; ಎರೆ : ಗಿಡಗಳಿಗೆ ದಿನಾಲು ನೀರು ಹಾಕಬೇಕು (ರೂಢಿ). ೭. ತೂರು ; ಎಸೆ ; ಬಿಸುಡು : ಒಃಲು ದಿಟವೆಂದಡೆ ಅದು ಒಡೆಯಹಾಕುವ ಕುಂಭ (ಕೋಲಕಾಂ. ೩-೦೩) ; ಉದಿತದಿನೇಶನೆಂಬ ಮಣಿಕಂದುಕಮಂ ಧರೆಯೆಂಬ ಕಾಂತೆ ತನ್ನುದಯಗಿರೀಂದ್ರಮೆಂಬ ಕರದಿಂದದು ಹಾಕಿ ತದಸ್ತಶೈಲಮೆಂಬೊದವಿದ ಹಸ್ತದಿಂದೆ ಪಿಡಿಪಲ್ಲಿ ಪುರಾಂಗನೆ ಮಧ್ಯದೊಳ್ ವಿನೋದದೆ ಪಿಡಿಯಲ್ಕದಂ ಕರಮನೆತ್ತಿದವೊಲ್ ಮೆಟಿಗುಂ ನೃಪಾಲಯಂ (ರಾಠಪು. ೦-೦೩೩). ೮. ಪ್ರಸವಿಸು ; ಈಯು : ಅವತೋಕಾ, ಸ್ರವದ್ಗರ್ಭಾ — ೨ . . . ಕಂಡು ಹಾಕಿದ ಹಸುವು (ಸಿದ್ಧಾಂತ. ೨೧೪) ; ಈ ದಿನ ನಮ್ಮ ಮನೆಯ ಹಸು ಕರು ಹಾಕಿತು (ರೂಢಿ). ೯. ಗುರುತಿಸು ; ರೇಖಿಸು ; ಬರೆ : ಈ ಚಿತ್ರದಲ್ಲಿ ಹಾಕಿರುವ ಗೆರೆಗಳು ಕಂಡೂ ಕಾಣದಂತಿವೆ (ರೂಢಿ). ೧೦. ಆರಂಭಿಸು ; ತೊಡಗು : 'ಕೈಹಾಕು' ಪರಾ. ೧೧. ತೊಡಗಿಸು ; ವಿನಿಯೋಗಿಸು : ದ್ರವ್ಯ ಗಳಿಸುವುದಕ್ಕೆ ಎಂದಿಗೂ ಮನಸು ಹಾಕುತ್ತಿದ್ದಿಲ್ಲ (ಮುಂಬಯಿ. ೩-೨೦೬) ; ಈ ವ್ಯಾಪಾರಕ್ಕೆ ಬಂಡವಾಳವನ್ನು ಹಾಕುವುದೇ ತುಂಬಾ ಕಷ್ಟದ ಕೆಲಸ (ರೂಢಿ). ೧೨. ಸೇರಿಸು : ನಮ್ಮ ಹುಡುಗನನ್ನು ಸ್ಕೂಲಿಗೆ ಹಾಕಬೇಕು (ರೂಢಿ). ೧೩. ನೀಡು ; ಬಡಿಸು : ನೂಕುವವನು ಹಾಕನು, ಬೋಕಿಯುವನು ಕೊಡನು (ಗಾದೆ) ; ನನಗೆ ಊಟ ಹಾಕು (ರೂಢಿ). ೧೪. ಹೊಡೆ ; ಪೆಟ್ಟು ಕೊಡು ; ಬಡಿ : ಅವನಿಗೆ ಎರಡು ಹಾಕು (ರೂಢಿ). ೧೫. ಮಾಡು ; ರಚಿಸು : ಜಂಗಮವು ಬೇಡಿದಡೆ ಹೊಸವಸ್ತ್ರಂಗಳನೆ ಕೊಡುವಂ ನಿರಂತರ ಲಿಂಗಸಂಪದವೊದಗಿ ಹಾಕಿದ ಸೀರೆಗಳನವರ್ಗೆ (ಬಸಪು. ೨೦-೩೩) ; ಶ್ರೀಮಂತ ಕರಿಯಪಗಳ ಸಿಸ್ತ ತಮ್ಮಯನು ಮಾತಾಪಿತೃಗಳಿಗೆ ಪುಣ್ಯವಾಗಲಿಯೆಂದು ಹಾಕಿದ ಬನಕ್ಕೆ ಮಂಗಳ (ಮೈಅಂ. ೦೯೨೪, ೨೬-೯; ೪). ೧೬. ತ್ಯಜಿಸು ; ತೊರೆ : ಆ ಕಲ್ಪದೊಳಗುಳ್ಳನೇಕಸುಖಂಗಳ ಸಾಕಲ್ಯಮಾಗನುಭವಿಸಿ ನಾಕೋದ್ಭವನು ನಿಜಾಯುವಿನಂತ್ಯದೊಳ್ ಹಾಕಿದ ನಿಜದೇಹವನು (ಅಂಜನ. ೯-೨೩೯). ೧೭. ಹಚ್ಚು ; ಲೇಪಿಸು : ಎಣ್ಣೆ ಹಾಕಿದರೆ ಕಣ್ಣಿಗೆ ಗುಣ, ಮಣ್ಣು ಹಾಕಿದರೆ ಬುಡಕ್ಕೆ ಗುಣ (ಗಾದೆ). ೧೮. ಹೇರು ; ಹೊರಿಸು : ನಿಶ್ಚಯಿಸಿದ ದರದಂತೆ ಅಡತಿ ಮಜೂರಿ ಮುಂತಾದುವುಗಳನ್ನು ಹಾಕಲು ತೊಂದರೆಯಾದೀತು (ಮುಂಬಯಾ. ೪). ೧೯. ಹಾಸು : ಹೊಸ ಕೌಟವಟಿತ್ತು ಹಾಸಿಗೆಯನು ಹಾಕುವ ಶಿಶುವು ಏನೆ ಅಮ್ಮ (ಪುರಂದ. ೨-೬೩-೩). ೨೦. ಒಟ್ಟು ; ಗಿಡಿ : ಆಳಿಯರ್ ಬೀಸುವ ಚಮರಾಲವಟ್ಟತಣ್ಗಾಳಿಯಿಂದವಳೊಡಲ್ಗಿಚ್ಚು ತಾಳಿಯ ಹಾಕಿ ಪೆರ್ಮೊಚೆಗೊಂಡ ತೆಱದಿ ಭಡಾಳಿಸಿತುಷ್ಣ ಸಂಘಟಿಸಿ (ಸೋಹಶ. ೨೬-೬೨). **ಹಾಯಿಕು :** ೧. ಛಾಯಾವಡೆದಾನೆಗಳುಗುಳವನು ಹಾಯಿಕಲು ನೆಲಕುರುಳಿದವು ವಾನಾಯುಜಂಗಳು ಬಿಗುಹ ಬಿಡೆ ದೊಪ್ಪೆಂದವಾಚೆಯಲಿ (ಕುವ್ಯಾಕ. ೩-೪). ೬. ಪುಳಕಜಲ ವುಬ್ಬರಿಸೆ ಕುಸುಮಾಂಜಳಿಯನಂಘ್ರಿದ್ವಯಕೆ ಹಾಯಿಕಿ ನಳಿನಭವ

ವ್ಯಯಿಕ್ಕಿದನು (ಶಂಪ್ರಾ.ಕ. ೬-೨೦). ೭. ಖಡುಗ ಕೊಂತವ ನಭಕೆ ಹಾಯಿಕಿ ಹಿಡಿವ ಸುಭಟರ ಭುಜವ ಹೊಯ್ಲಿನ ಕಡುಮನದ ರಣದವಕಿಗರ ಸೌರಂಭ ರಂಜಿಸಿತು (ಶಂಪ್ರಾ.ದ್ರೋ. ೯-೨೬) ; ಇಡುವ ಡೆಂಕಣಿ ಹಾಯಿಕುವ ಗುಂಡು ಮೇಲುಜೆ ಕೆಡಹುವ ತೊಲೆ ಪಕ್ಕಿದವರ ಬಡಿವ ಬಲ್ಗುದಿಗೆ (ಶಂಶಾಸಂ. ೩೭-೫೩) ; ತಂದು ನಾ ಬಡಕುಮಾರಕನನು ಕಡಲೊಳಗಂದೆ ಹಾಯಿಕಿ ಮರ್ದಿಸಿದೆ (ತೊ.ಹಕ. ೦೨-೩). ೧೬. ಈ ದುರಾಗ್ರಹ ನಿಲಲಿ ಹಾಯಿಕು ಕೈದುವನು (ಶಂಪ್ರಾ.ದ್ರೋ. ೦೮-೫೮). ೨೧. ಬೀಸು : ಸಿಲುಕಿದನು ಭಢ ಸ್ವಾಮಿದ್ರೋಹಿಗೆ ಬಲೆಯ ಹಾಯಿಕೊ ಗಂಡು ಮಿನಗ್ಗಳಿಯ ಗಾಣವ ಕೊಳ್ಳದೆನುತ್ತೌಕಿದರು ಬಳಸಿನಲಿ (ಶಂಪ್ರಾ.ಕ. ೦೯-೯೮). ೨೨. ಕೆಡೆಯಿಸು ; ಬೀಳಿಸು : ಬಲುಕಣೆಗಳಿಪದಿರಸು ಕರಿ ಮುಂಕೊಳಿಸಿ ಕೆಡಹಿತು ಮಾಪನಕೌಸಲಬಲವ ಕೈಕೆಯುಮಗಧಭೂಪರ ಕೊಡಹಿ ಹಾಯಿಕಿತು (ಶಂಪ್ರಾ.ದ್ರೋ. ೬-೨೪). **ಹಾಯಿಕ್ಕು :** ೨೧. ಮುನಿ ಹಾಯ್ಕಿದಸಲಾ ಬಲೆಯನಕಟಾ ಸಿಕ್ಕಿದಿರಲಾ ಸ್ವಾಮಿದ್ರೋಹರು (ಶಂಪ್ರಾ.ಕ. ೨-೦೪). **ಹಾಯ್ಕು :** ೨. ಹೃದಯವಲ್ಲಭ ಕನ್ನಡಿಯ ಮಧ್ಯದಲಿ ಉದ್ದಿನ ಬೀಜವನು ಹಾಯ್ಕುವಡೆ ಬೀಳುವುದೆನಿತು ತಳುವಿಂತನಿತು ಮಾತ್ರದಲಿ . . . ಶಿವನಂ ಕೀರ್ತಿಸಾ (ಬಸವ. ೯೨-೩೫) ; ಗಗನದಲಿ ರಥ ಯೋಜನಾಂತಕೆ ಚಿಗಿದು ಧರಣಿಯ ಮೇಲೆ ಬೀಳಲು ನಗುತ ಕರಣವ ಹಾಯ್ಕಿ ಮಂಡಿಯೊಳಿರ್ದನಾ ದ್ರೋಣ (ಶಂಪ್ರಾ.ದ್ರೋ. ೦೩-೦೪). ೩. ಒಪ್ಪಾರು ಕೇಶಪಾಶವ ಮಾಡಿ ತ್ರಿಭಾಗೆಯ ಘಮ್ಮನೆ ನಿಡುಜಡೆವೆರೆದು ಕಮ್ಮಲರ್ಗಳ ಸೂಡಿ ಸಿರಿಮುಡಿಯಲಿ ವಿರಚಿಸುಮ್ಮರಿಯನು ಹಾಯ್ಕಿದನು (ತೊ.ಹಕ. ೩೬-೫೯) ; ತಲೆಗಳ ಕೋದು ಕೊರಳೊಳಗೆ ಹಾಯ್ಕಿ . . . ಪೆರ್ಮರುಳೊಂದಿರುತ್ತಿರಲ್ ಕಂಡು ಭಯಭಕ್ತಿಯಿಂ ಚರಣಕೆಜಗಿದುದೋಗು ಪುಪ್ಪಿರುಳ್ (ಕಿಬಸ. ೯೦-೨೬). ೪. ವೈಶ್ಯಕುಲಸಂಭವರು ಹಾಯ್ಕಿನರಲ್ಲಿ [ಪಾಠಾಂ. ಹೊಯಿಸಿದರು] ಗೂಡಾರವನು (ಶಕಶ. ೩-೯೯). ೭. ಸದಮದ ಭರಿಕ್ಕೆಯೊಳಗೆ ಈರೇಳುಭುವನವನು ಒದಜೆ ಹಾಯ್ಕಿ ತಾನೆ ನಿಂದುದಲಾ (ತನ್ನದ. ೯. ೫೯೬-೦೩೩) ; ಪಾಕವೆಲ್ಲವಸಕ್ಕಟ ವೃಥಾಪಾಠವಂ ಮಾಡಿದನಿವಂ ನಮಗೇಕೆನುತ್ತವೆ ತನಯನಂ ಕೊಂದೆಳೆದು ಹಾಯ್ಕಿದಳು (ಬಸವ. ೨೯-೫೯) ; ಕಲಿಭೀಮಂ . . . ಶರ ಧನುವ ಹಾಯ್ಕಿದನಾ ಧೊಪ್ಪನೆ ಧರೆಗೆ ಧುಮ್ಮಿಕ್ಕಿದನು (ಶಂಪ್ರಾ.ಕ. ೦೨-೨೬) ; ಹೆಗ್ಗಿರಿಯೊಂದ ಕಿತ್ತೆತ್ತಿ . . . ತಂದನು ಗಂಡುಗಲಿ ಹಾಯ್ಕಿದರೆ ಮುಳುಗಿತು ತಳದ ಪರಿಯಂತ (ಶ್ರೀರಾ. ೦೬-೭) ; ಕಮರ್ಸಂಗವಮಾಗಿರ್ದ ಪಿಂಡವಮಂ ತೆಗೆದು ಮಡುವಿನೊಳೆ ಹಾಯ್ಕೆಂದೊಡುದ್ದಂಡದಿಂದೆತ್ತಿ ಬೀದಿಗೆ ಬಿಸುಡಲ್ (ಕೈಬಸಾ. ೧೦-೩೦). ೨೧. ಹತ್ತಿ ತದ್ಗಿರಿಶಿಖರವನು ಮರವೊತ್ತದಲಿ ಬಲಿಗಳನು ಹಾಯ್ಕಿದರೊತ್ತಿ ಸೋಹಿದರು (ಶಕಶ. ೨-೦೩). ೨೨. ಭುಜಗ ಸಮೂಹವ ಖಗರಾಜ ಹೊಕ್ಕಂತೆ ಕುಜನರ ಕುಟ್ಟಿ ಹಾಯ್ಕಿದನು (ತೊ.ಹಕ. ೩೫.೨೦). ೨೩. ತೊಡಿಗು : ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು ಕಿವಿಯಲಿ ಕೀಲುಗಳ ಸರಿಸಿ ಜಡಿವ ಗಳವನು ಹಾಯ್ಕಿ ಬೀಸಿದರೊಡನೊತನೆ ಹಕ್ಕರಿಕೆ ಜೋಡಿಸಬಡಿಸಿ ಗಾಲಿಯ ಜಿಗಿದು (ಶಂಪ್ರಾ.ದ್ರೋ.೬-೯೫) : ನೃಪ ನಿವಹದಲಿ ನೀ ಹಾಯ್ಕು ಮಾನವಿದ್ದವನ ಕೊರಳಿಗೆನುತ್ತ ಕೊಟ್ಟನು ಪುಷ್ಪ ಮಾಲಿಕೆಯ (ಶಕಶ. ೩-೩೬) ; ಅಂಗಲಾಚುತ್ತವನ ಹಾಯ್ಕೆಂದೆಗಳ್ . . . ಅಳುತಿರೆ ಚಿಕ್ಕಲಿಂಗಣ್ಣನಾ ಲಿಂಗಮಂ ಕಂಡು ತಂದವನ ಕೊರಲಿಂಗೆ ಹಾಯ್ಕಿಲೊಡನೆ ಲಿಂಗಣ್ಣನಸು ಬರಲ್ (ಕಿಬಸ. ೬-೪೦). ೨೪. ಕೊಡು : ಕುಡಿತೆಯೆರಡಜೊಳಘ್ರ್ಯಜಲವನು ಹಿಡಿದು ಹಾಯ್ಕುವ ಸಮಯದಲಿ ತಲೆ ನಡುವೆ ಬಿದ್ದುದು ಅರ್ಘ್ಯಜಲ ಸವರಕ್ಷಮಯವಾಗೆ (ಶಂಪ್ರಾ.ದ್ರೋ. ೨೯-೬೩); ಕುಚದ ವೃತ್ತತೆಯ ಕೊಟ್ಟಳು ಕೋಕಪಕ್ಷಿಗೆ ಕಚದ ಭಾರವ ಕೊಟ್ಟು ನವಿಲ್ಗೆ ವಚನ ಸುಸ್ವರ ತನಗೇಕೆಂದು ಶುಕಪಿಕನಿಚಯಕ್ಕೆ ಹಂಚಿ ಹಾಯ್ಕಿದಳು (ತೊ.ಹಕ. ೯-೩೦). ೨೫. ಗುರಿಪಡಿಸು ; ಒಳಗಾಗಿಸು : ಕಾಮನ ಸೂನು ಬಾಣನ ಮಗಳಿಗೆ ಹೊಗಲವರ್ ಕಂಡು ವಿಗಡನ ಹಿಡಿದು ಸಂಕಲೆಗೆ ಹಾಯ್ಕಿದರು (ತೊ.ಹಕ. ೩೬-೪೦). ೨೬. ಉಂಟುಮಾಡು : ತೀವ್ರತೇಜವ ಹಾಯ್ಕಿ ಜನಿಯಿಸಿತಾ ವಿಧಾತೃವಿಹಿತವ ತಾಳ್ದುಜೆಯಿಯಾ ವಸುಂಧರೆಯೊಳಗೆ ಬಡಬಾನಳವು ಮುಸ್ಸಹವು (ಸಂಕಶ. ೨೫-೬೨). ೨೭. ಹೊಂದಿಸು ; ಜೋಡಿಸು ; ಅಳವಡಿಸು : ಕರಿಯುರವಣೆಸಿ ಬಂದು ದೀರ್ಘಕರಾಗ್ರದಿಂ ಪಿಡಿದು ಭರದೊಳುದ್ದಕೆ ಹಾಯ್ಕಿ ಕೊಂಬುಗಳರಡ ನೆಗ್ಗಲು (ಬಸವ. ೨೨-೦೨) ; ನವಹೆಮಮಂಪದ ಹಳವಿಗೆಯ ಕುದಿವಲಗೆಯಲಿ ಹಾಯ್ಕಿದರು ಪನ್ನಗನ (ಶಂಪ್ರಾ.ದ್ರೋ.೦೦-೯೦): ಸೂಸಿದರ್ ಕೆಂಡಮಂ ಬಲ್ಪಣೆಕಲ್ಗಳಂ ಬೀಸಿದರ್ . . . ಬೀರ್ವಗ್ಗಮಂ ಹಾಯ್ಕಿ ಸೇದಿದರ್ ಮರುಳ್ಗಳಂ ತೂಂತರು (ಕಬಸ. ೯೨-೩೬). ೨೮. ಪಕ್ಕಕ್ಕೆ ತಳ್ಳು ; ಸರಿಸು : ಹಿಡಿದ ಬಿಡುವೊಬ್ಬುಳಿಗೆ ತಹ ಬಲನೆಡಕೆ ಹಾಯ್ಕುವ ಸುಪ್ರತೀಗಜ (ಶಂಪ್ರಾ.ದ್ರೋ. ೩-೦೦). ೨೯. ಇರಿ ; ತಿವಿ ; ಗುಮ್ಮು : ಹಾವಿನಂತಿರೆ ನಿಲುಕಿದರು ಸೂಕರನವೊಲು ಕೋಡೆತ್ತಿ ಹಾಯ್ಕಿದರು (ಶಂಪ್ರಾ.ಅ. ೯-೩೫). ೩೦. ಬಿಡು : ರಕ್ಕಸಿಯು ಜೀವವನೊದೆದು ಹಾಯ್ಕು (ಕೂರಾ. ೦-೦೦-೬).

**ಹಾಕಿಕೊಳ್ಳು** = ೧. ಧರಿಸು ; ತೊಡು : ಹಬ್ಬದ ದಿನ ಹೊಸಬಟ್ಟೆ ಹಾಕಿಕೊಳ್ಳುವುದರಲ್ಲಿ ಮಕ್ಕಳಿಗೆ ತುಂಬಾ ಉತ್ಸಾಹ (ಕಂಶ). ೨. ಹೊಂದು ; ವಶಪಡಿಸಿಕೊಳ್ಳು : ಅಣ್ಣನ ಹೆಂಡಿರ ತಮ್ಮ ಹಾಕಿಕೊಂಡು ಕೊಡದಿರಲಾಗಿ ಇದು ಅನ್ಯಾಯವೆಂದು ಅವನ ಕಿಜೆಯ ತಮ್ಮ ತಾ ತೆಕ್ಕೊಂಡ (ಶಗಶಾ. ೪. ೯೩೪-೪೬). **ಹಾಕಿಡು** = ಇರಿಸು ; ಇಡು : ನಾಗೊಂದಿಗೆ ಅಥವಾ ಹಲಿಗೆಗಳಲ್ಲಿ ಸಾಮಾನುಗಳನ್ನು ಹಾಕಿಡುವ ಪಾತ್ರೆಗಳನ್ನು ವ್ಯವಸ್ಥಿತವಾಗಿ ಇರಿಸಬೇಕು (ಅಡುಶಾ ೫೨). **ಹಾಕಿಯಾಡು, ಹಾಕ್ಯಾಡು** = ಹೊಡೆದಾಡು : ಅವನು ಹಾಗೆ ಹೇಳಿದರೆ, ನೀನು ತಿರುಗಿ ಮಾಡಬೇಕಾಗಿತ್ತು. ಮಹಾರಾಜ ! ನಾನು ಹಾಕಿಯಾಡಿದೆನು. ಆದರೂ ಅವನು ಕೇಳಲಿಲ್ಲ (ಶೀರಬ. ೦೬೬) ; ಗೋಕುಲದೊಳು ಪುಟ್ಟಿ ಆಕಾರವಡಗಿಸಿ ಹೋಕತನದಲ್ಲಿ ಹಾಕ್ಯಾಡುತ ಗೊಲ್ಲರ ಕೂಡಲಿ ಬೆಳೆದು (ವೀಕ್ಷಸಿ. ೨೦-೨) ; ಇವು ತಮ್ಮ ಹುಡುಗರದೆ ಅಂತ ರಂಗಣ್ಣರಾಯರು, ಅಲ್ಲ, ತಮ್ಮ ಹುಡುಗರವು ಅಂತ ಯಂಕಣ್ಣರಾಯರು ಹಾಕ್ಯಾಡಿದರು (ಶ್ರೀಪಾಕೆ. ೯೩). **ಹಾಕ್ಯಾಟ** = ಬಡಿದಾಟ ; ಗುದ್ದಾಟ : ಯಾರ ಸಂಗಾಟಾದ್ರೂ ಹಾಕ್ಯಾಟ ಗೀಕ್ಯಾಟ ಆಗೇತೇನು ? (ಶ್ರೀಪೂರ್ವ. ೯); ಮನ್ಯಾಗ ಏನಾರೇ ಹಾಕ್ಯಾಟ ಗೀಕ್ಯಾಟ ಆಗೇತೇನ್ರಿ ? (ರಂದಯ. ೨೬).

[ ಪಾಯ ⁸₁ + − ಕ್ಕು₁ ]

**ಹಾಯ್ಕು₂**, ಪಾಕ್ಕು, ಪಾಯಿಕು, ಹಾಯಿಕು (ನಾ). ಒಳ್ಳೆಯದು, ಭಲೆ ಎಂಬರ್ಥದ ಕೊಂಡಾಟದ ಒಂದು ನುಡಿ: "ಅರರೆ ಧಣ್ಣ ಭಾಪು ಭಳಿರೇ ಧಿರುರೇ ಮಝ್ಜು ಪೂತುರೆ ಪಾಯ್ಕು [ಪಾಠಾಂ. ಪಾಕು, ಪಾಯಿಕು] ಚಾಗು ಸಲೆ ಸುಂಪುರಯೆನೆ ಕೊಂಡಾಟದ ನುಡಿ" (ಶಬರಂ. ೯೬); ಅನಿಮಿಷಾವಳಿ ಪೂತು ಪಾಯ್ಕೆನೆ ಹೆಣಗಿದರು ಭಟರು (ಶಂಪ್ರಾ.ದ್ರೋ. ೬-೫೬) ; ಆಯಿತಿದು ಸಮರದಲಿ ಗುರು ಗಾಂಗೇಯ ಕರ್ಣ ದ್ರೌಣಿಗಳ ತಜುವಾಯ ಲೆಕ್ಕಕೆ ಸಂದನೈ ಮಝ್ಜು ಪೂತು ಪಾಯ್ಕೆನುತ (ಶಂಪ್ರಾ.ಕ. ೨೦-೩೫). **ಪಾಕ್ಕು :** ಮೇಲಿನ 'ಭಾರನಿ' ಪ್ರಯೋಗದ ಪಾಠಾಂತರವನ್ನು ನೋಡಿ. **ಪಾಯಿಕು :** ಸರಿಸ ಸಬಳಿಗೆ ಪೂತು ಪಾಯಿಕುಯೆಂಬ ಕಳಕಳಿಕೆ . . . ಮಸಗಿದುದೊಂದು ಕಡೆಯಲಿ (ಶಂಪ್ರಾ.ಐ. ೬-೬); ಪೂತು ಪಾಯಕು ಮಝ್ಜು ಭಾಪು ಭಲರೆಯೆಂದು ಸೂತಸೂತರು ಕೊಂಡಾಡೆ (ಶಂಸೂಶಾ. ೦೯-೯೨). **ಪಾಯಿಕು :** ಪೂತು ಪಾಯಿಕು ತತ್ತ್ವ ಹೊಕ್ಕಿನೊಳಾತುಕೊಂಬವ

ಕಪ್ಪೆ ನೊಣಕ್ಕೆ ಹಾರುವಂತೆ ಆಪ್ಯಾಯನ ಬಿಡದು (ಮುಹಾದೇ. ಬ. ೩೬-೦೩೮); ಮಾವಣ್ಗಳಂ ಪೀರ್ವ ಕೀರವಿಟ್ಟಿಯ ಪಣ್ಗೆ ಚಿತ್ತಂ ಹಾರಿದಪುದೇ (ಬಸವ. ೧೧-೦೦); ಧಾರುಣಿಯ ಲಂಪಟರು ಕದನವ ಹಾರಿ ಬಂದರು ಗಡ (ಕುವ್ಯಾಭೀ. ೦-೪); ಹಾರಿದ ಸಖಿಯರ ಪೊರೆವಿರಿ ನೀವೊಂದ ಹಾರಲಿಲ್ಲದ ಬಲ್ಲೆನೆನ್ನ ಹಾರಪಂತೊಪ್ಪದಿ ಬಾಳಿರಂದೊಂದೋದು ಹಾರವ ಹರಸಿಯಿಕ್ಕಿದಳು (ಚಂತ. ೩೩-೬೦). ೪. ಹಾರಲತಿಶಯತೃಷ್ಣೆ ನಾಶಕೆ ಕಾರಣವಲೇ ಮಾವ (ಕುವ್ಯಾಸ. ೦೩-೩೩); ಅಧರ ಉರುಟಣಿ ಮದನಮಂದಿರ ಸದರ ರೋಮಾವು ಒರಿದು ನುಡಿಗಳು ತೊದಳು ಲಜ್ಜೆಯು ಹೀನದ್ವಿಗುಣ ಹಾರಿ ನೋಡೆಂದ (ಕಕ್ಕೋಳ. ೩-೨೦). [ದೇಶ. ತಮಿ. ಮಲ. ಪಾರ್]

**ಪಾರ್₂** 'ಪಾಟು₁' ನೋ.

**ಪಾರ₁** 'ಪಾಟು₂' ನೋ.

**ಪಾರ₂** (ನಾ). ೧. ನದಿ, ಸಮುದ್ರ ಮುಂತಾದುವುಗಳ ದಡ,-ತೀರ: "ಪಾರವೆಂಬುದು ತಡಿ" (ಹಲಾಯು. ೦೦೦-೪೩); ಕಾಣದಂಬುಧಿಯ ತೋಳ್ ನೀಡಿ ಸನ್ನೆಗೈವೀಸಿ ಕರೆದಂತಾಯ್ತು ರಾಮಂಗೆ, ತನ್ನಾತ್ಮದತಿ ದೂರದಾ ಪಾರದಿಂ (ಶ್ರೀರಾಮಾ. ೦೩೭-೩೪೪); ಪಾರವಿರ್ಪ ಜಲರೂಪ ಸಿಂಧುವಂ ಪೀರಿದಾತನ ಮಹತ್ತ್ವಮೇನೊ ಪೇಳ್ (ಸೀಗಟ್ಟು. ೭೪). ೨. ಎಲ್ಲೆ; ಗಡಿ; ಮೇರೆ; ಸೀಮೆ: ಅಮಿತಮತಿಗುಣದಿನತಿ ವಿಕ್ರಮಗುಣದಿಂ ಶಾಸ್ತ್ರಪಾ[ಪಾಠಾಂ. ಶಸ್ತ್ರ ಪಾ]ರಮುಂ ರಿಪುಬಳ[ಪಾ] [ಪಾಠಾಂ. ಪಾ, ಹಾ]ರಮುಮೊಡನೆ ಸಂದುವೆನಿಸಿದನಮೋಘಬಲಶಾಲಿ ಮನುಜಪಾರ್ತಂಡನೃಪಂ (ಶಂಕರಾ. ೦-೪೩); ಸ್ವಾರಸ್ಯವಮಿತ ಮಾರಿಗಮಿರದು ಜೀವನದಿ ಪಾರದರ್ಶಿಯು ನೆನೆದು ನಡೆಯಲದು ಸಫಲ (ಮಂಕುತಿ. ೬-೭೬); ಅವರ ಸಂತೋಷಕ್ಕೆ ಪಾರವೇ ಇಲ್ಲ (ಶಕ್ತಿದ. ೦೦೩). ೩. [ಸಾಂಖ್ಯ] ಒಂಬತ್ತು ಬಗೆಯ ತುಷ್ಟಿಗಳಲ್ಲಿ ಐದನೆಯದು: ಪಾರ ಎಂದರೆ ದ್ರವ್ಯಾರ್ಜನೆ. ಐದನೆಯದು (ಹಿಂದಸಾ. ೬೩). [ಸಂ.]

**ಪಾರಂ** (ಅ). ಚೆನ್ನಾಗಿ; ಅತಿಶಯವಾಗಿ: ಆರೂಢವ್ಯಸನಕ್ಕೆಪೋಪ ಯುವರಾಜಾಗ್ರಾನಕಥಾನದಿಂ . . . ಪಾರಸ್ಮೀಗಪುಸೋತ್ಥವಸ್ತುರಚನಾಲಂಕಾರರ್ಪುಂಕಾರದಿಂ ಪಾರಂ ಪಟ್ಟಪದಂ ಜನಶ್ರುತಿಪಥಕ್ಕಾಗಿರ್ಪುದಾಹ್ಲಾದನಂ (ಮಹಾನೇ. ೦-೭೮). 'ಪಾರಂತಗುಳ್' ಪರಾ. [<ಪಾರ₂]

**ಪಾರಂಗತ** (ಗು). ೧. ಸಂಪೂರ್ಣವಾಗಿ ತಿಳಿದ; ಸಮಗ್ರವಾಗಿ ಅರಿತ: ಸುಪ್ರಸಿದ್ಧವೈದ್ಯನಾದ ಪಾರಂಗತ ಕಾನ್ಟೇಮನೂ ಕೂಡ ಶಾಕನ ಸಂಶೋಧನೆಯಿಂದ ಬೆರಗಾಗಿ ಹೋದನು (ವಿಕಾಸ. ೬೪). (ನಾ). ೨. ಚೆನ್ನಾಗಿ ತಿಳಿದವನು; ನಿಷ್ಣಾತ: ಪಾರಂಗತಂಗಂತರಾಳ ದೂರಗಳೇನು? ಸ್ವೈರಪಥವಾತನದು (ಮಂಕುತಿ. ೭೯೮); ಅಂಡಯ್ಯನು . . . ತನ್ನ ಕುಲಪರಂಪರೆಗನುಗುಣವಾಗಿ ವಿದ್ಯೆಯಲ್ಲಿ ಪಾರಂಗತನಾದನು (ಕಾಹಿಸ. ೧೦೩). [ಸಂ.]

**ಪಾರಂಗಮತೆ** (ನಾ). ಪೂರ್ಣಪಾಂಡಿತ್ಯ; ಸಂಪೂರ್ಣಜ್ಞಾನ: ಪ್ರಸೇನಜಿತನ ತಂದೆಯು, ಮಗನು ಕಲಿತು ಬಂದ ವಿದ್ಯೆಯ ಪಾರಂಗಮತೆಯನ್ನು ಕಂಡು ಸಂತುಷ್ಟನಾಗಿ, ಅವನಿಗೆ ರಾಜ್ಯದಲ್ಲಿ ಅಭಿಷೇಕ ಮಾಡಿದನು (ಹತ್ತುಕು. ೧೨೪). [ಸಂ. ಪಾರಂಗಮತಾ]

**ಪಾರಂತಗುಳ್** (ಕ್ರಿ). ಎಲ್ಲವನ್ನೂ ಚೆನ್ನಾಗಿ ತಿಳಿ; ಪಾರಂಗತನಾಗು: ಕಾವ್ಯತತ್ತ್ವದಜೀವೊಳ್ ಪಾರಂತಗುಳ್ವೇಟ್ಟಿತಂಗುಡುವೊಲ್ದಂತೊಡಗೂಡುವ . . . ಬರ್ಪಪಂಗಬಲೆಯರ್ ಸೋಲ್ವರ್ ಮಹೋತ್ಸಾಹದಿಂ (ಮಸ್ಮಾವಿ. ೦೬-೭). [ಪಾರಂ + ತಗುಳ್₁]

**ಪಾರಂಪರೆ** (ನಾ). ೧. ಕುಲ; ವಂಶ; ಪರಂಪರೆ: ಹುಸಿ ಹೊದ್ದದಂತೆ ನಡೆವ ಕಲಿಗಳಾರಯ್ಯ ಹೇಳವರ ಪಾರಂಪರೆಗೆ ಸಲೆ ಸಂದ ರಾಜಗುರು ನೀನಲ್ಲಿಯುದವರಿಲ್ಲ (ಹಕಶಾ. ೨-೬); ಅವನಿಗೆ ಇಕ್ಷ್ವಾಕು ಮೊದಲಾದ ಪಾರಂಪರೆ[ಪಾಠಾಂ. ಪರಂಪರಿ, ಪರಂಪರೆ]ಯಿಂದ . . ., ಸಕಲ ಕ್ಷತ್ರಿಯವರ್ಗ ಹಾಗೂ ಸಮಸ್ತ ಸ್ತ್ರೀವರ್ಗ ಜನಿಸಿತ್ತು (ಧೈರಸೂ. I, ೦೩). ೨. ಸಂಪ್ರದಾಯ: ದಶರಥಧರಣಿಪತಿ ರವಿಕುಲದ ಪಾರಂಪರೆಯ ಪರಮಾಪ್ತ ಪ್ರಧಾನರ ಕರೆಸಿ (ತೊರರಾ. ೦-೩-೦).

[<ಪ್ರಾ. ಪಾರಂಪರ. / ಸಂ. ಪಾರಂಪರ್ಯ]

**ಪಾರಂಪರ್ಯ** (ನಾ). ಪರಂಪರೆಯಿಂದ ಬಂದಿರುವುದು; ಸಂಪ್ರದಾಯ; ಆಚಾರ: "ಆಮ್ನಾಯಃ, ಸಂಪ್ರದಾಯಃ, ಪಾರಂಪರ್ಯಂ, ಗುರುಕ್ರಮಃ— ಈ ೪ ಎಡೆವಜಿಯುವ ಗುರೂಪದೇಶಂ" (ಹಲಾಯು. ೬೭-೨೪೮); ಅರ್ಧಗಪ್ಪಡದ ತೀರ್ಥಪಾರಂಪರ್ಯದಿಂದಂ ಸುರಥಮೆಂಬುದು ನಾಡಲ್ಲಿ ವಳಭಿಯೆಂಬುದು ಪೊಬಲದನಾಳ್ವೊಂ ವಜ್ರಪಾಳಂ (ವಡ್ಡಾರಾ. ೯೩-೩); ಅನೇಕ ಶತಮಾನಗಳಿಂದ ಪಾರಂಪರ್ಯವಾಗಿ ನಡೆದು ಬಂದಿರುವ ದೈನ್ಯಭಾವವಿನ್ನೂ ತೊಲಗಿಲ್ಲ (ಆರ್ಯರ. ೮೩). [ಸಂ.]

**ಪಾರಂಪರ್ಯೆ** (ನಾ). = ಪಾರಂಪರ್ಯ: "ಮುಂತೆ ಪಾರಂಪರ್ಯೆ [ಪಾಠಾಂ. ಪರಿಯ]ಸಂಪ್ರದಾಯಮೆನಲ್ ನಿರಂತರಂ ಗುರೂಪದೇಶಮೆನಿಕ್ಕು" (ಮಂಗರಾ. ೭೩-೩). [ಸಂ. ಪಾರಂಪರ್ಯ]

**ಪಾರಂಬಿ, ಪಾರಂಬೆ** (ನಾ). ಮರದ ಬೀಳಲು: ಕರುಳಿಗೊಂದು ಹೊಸ ಕರುಳ ಪಾರಂಬಿ ಇಳಿಬಿಟ್ಟು ನೆಲವ ನಿನ್ನದೆ ಮಾಡಿಕೊಂಬಿ (ಪವ್ಯರ್ಥ. ೭-೬). ಪಾರಂಬೆ: ಐಶಿತ ವಟತರುಶಾಖೆಯಿಂ ನೇಲ್ಕಿಳಿದ ಪಾರಂಬೆಗಳ ಪೋಲುವ ಬೆಳೆದ ಶ್ಮಶ್ರುಗಳುಳ್ಳ ಸಚಿವರನತಿಗಳನು ಕೊಂಡು (ರಕುವಂ. ೦೪೯-೭೦).

[← ಮರಾ. ಪಾರಂಬೀ, ಪಾರಂಬಾ]

**ಪಾರಂಬೆ** 'ಪಾರಂಬಿ' ನೋ.

**ಪಾರಕ₁** (ಗು). ೧. ಆಚೆಗೆ ಒಯ್ಯುವ; ದಾಟಿಸುವ; ಪಾರುಮಾಡುವ. (ನಾ). ೨. ಆಚೆಗೆ ಒಯ್ಯುವವನು; ದಾಟಿಸುವವನು: ಗ್ವಾರ ದ್ವಾರಂಗಳೊಳಗಲದಿಹ ಪಾರಕರ ಬಗೆಗೊಳ್ಳದಂತರ್ದ್ವಾರದಾ ಸಾಮಾಸಿಗಳ ವಿಹಾಜುತ್ತ ನಡೆತರಲು (ಬಸವ. ೬೧-೨೪); ಕಟ್ಟಿದ ಪುಟ್ಟ ಪಟ್ಟೆಯ ಕಾಸೆಯ ಥಟ್ಟ ಕಟ್ಟಾಯತದ ಹಿಂಡಿವಾಳ ನೆಟ್ಟನೆ ಮೊಜೆಯ ಪಾರ[ಪಾಠಾಂ. ರು]ಕರು ಕಣ್ಗೆಸೆದರು ಪಟ್ಟದಾನೆಗಳಂತಲ್ಲಿ (ಕುರಾಸಾ. ೨೭-೩೦). [ಸಂ.]

**ಪಾರಕ₂**, ಪಾರಗ₂ (ನಾ). ೧. ಹರಿಗೆಯನ್ನು ಹಿಡಿದ ಯೋಧ; ಗುರಾಣಿಯನ್ನು ಹಿಡಿದಿರುವ ಸೈನಿಕ (?): ಒಜಲೆ ಗಜದಾಡೆಗಳ ಕೈಗಳ ಹಜಿಯ ಹೊಯ್ದರು ಪಾರಕರು ಮುಕ್ಕಜೀಕಿದರೆ ಸಬಳಿಗರು ಕೋದೆತ್ತಿದರು ಕರಿಘಟೆಯ (ಕುವ್ಯಾಶ. ೨-೦೬); ಸೀಳ ಬಡಿದನು ಸಮರಥರ ಪಾಂಚಾಳ ರಾವುತರನು ಮಹಾರಥಬಾಲವನು ಜೋಧರನು ಭಾರಿಯ ಪಾರಕಪ್ರಜವ (ಕುವ್ಯಾಗ. ೯-೩೬). **ಪಾರಗ₂**: ೨. ಒಂದು ಬಗೆಯ ಆಯುಧ; ಹರಿಗೆ; ಡಾಲು: ವೀರನಹಿದಿರಾಗೆನುತ ಬಹುಭಾರಣದ ಚಮ್ಮಟದ ಖಡುಗದ ಪಾರಗದ ಪರಿಣತರು ಹೆಣಗಿದರು (ಕುವ್ಯಾದ್ರೋ. ೦೯-೩); ಚಾರಣದ ಚಮ್ಮಟದ ಖಡುಗದ ಪಾರಗದಬಿಚ್ಚಟದ ಲಾಳಿಯ ಬ್ಯಾರದೊಡ್ಡಿನ ಹೊಯ್ಲ ಹೋರಟೆಗಳ ಸುರೇಖೆಗಳ ಸುರತರಶ್ರಮ ರೊದಗಿದರು (ಕುವ್ಯಾಕ. ೦೯-೩೩).

[<ಪ್ರಾ. ಫಾರಕ್ಕ ?./ಸಂ. ಸ್ಫಾರಕ ?]

**ಪಾರಕಾವಣೆ** 'ಪಾರಖಾವಣೆ' ನೋ.

**ಪಾರಕು**, ಪಾರಕ್ಕು, ಹಾರಕ, ಹಾರಕು, ಹಾರಕ್ಕಿ, ಹಾರಕ್ಕು (ನಾ). ಒಂದು ಬಗೆಯ ಧಾನ್ಯ: ಪ್ರಥಮದಿವಸದೊಳೆ ಪಾರಕಿನ ಕೂಳುಮಂ ಪರೆಯುಮೆಣ್ಣೆಯುಮಾಡಿನಳಿಯುಮಂ ಬಡ್ಡಿಸಿದೊಡದನಮೃತಮಂ ನುಣ್ಣುಂತುಂಡು (ವಡ್ಡಾರಾ. ೬೮-೨೬); ಪಂಚ ತ್ರ ದೊ ಳು ಪೊಯ್ದ ಪಾರಕಿನಂತೆ ತನ್ನ ಕಾಲದ ತಪನಂತರದೊಳು ವರ್ಶನಮೋಹನೀಯಾತ್ರಯದೊಳಾವುದಾನುಮೊಂದುದಯಕ್ಕೆ ಬಕ್ಕುಂ (ಹರಿವ. ೪೦೦ ೧೨); ಬರಗಳ್ಳು

ಕೋರೆ ಪಾರಕುವೆರಸಗಸೆ ಕುಸುಂಬೆ ಕಬುವೆ ನೆಲ್ ಸಾವೆಗಳುಂ ತರಗಕ್ಕಹಿತಂ (ಅಕ್ಕಶಾ. ೭-೩೯). **ಪಾರಕ್ಕು :** ಅದರದೆ ಜ್ಯೇಷ್ಠದಪತದ ಬೂದಿಯ ಮೃಗಶಿರದೆ(ರಾದಿ) ಕೊಂಡ ಮಟಿಯಿಂ ಬೆಳೆಗುಂ ಮೇದಿನಿ ಪೂಜಗಣ(ವರ) ನಾಲ್ಕುಟಿಯಾದೊಡೆ ಪಾರಕ್ಕು ಬರ(ಬ)ಗು ಬೆಳೆಗುಂ ಸ್ವಲ್ಪಂ (ಜ್ಯೋಮು. ೬-೦೩೩); ಉಪ್ಪಿಲ್ಲದ ಪಾರಕ್ಕಿನ ಸಪ್ಪಾನೋಗರದೊಳಾನ್ನುವೇಜಿದ ಕಟಿಯುಂ ತಪ್ಪದೆ ಟಲಸಿಕ್ಕೆ (ಭೀಮಸ್ವ. ೩-೯೬).

**ಹಾರಕ :** "ಕೋದ್ರವಾ ಹಾರಕಂಗಳು" (ಶಿಕಾ. ೦೩-೬೦); ಹಾರೆವಕ್ಕಿ ಅಶನ ಹೆಸಜಿ ಗುಗ್ಗರಿ ಹುಗ್ಗಿ ಪಾಯಸ. . . ನಿವಾಳಿಸಿ (ಶಾಲಿಶಃ ೦೨೩-೬) : ಸೆಜೆನವಣೆ ನೆಲು ಪಾರಕ × × × ಧಾನ್ಯ ಕುಳಪಾಲ ಭತ ಖ ೧ (ಕೌಇ. IX-ii, ೩೩೯-೨೯ ; 1633) ; ಹಾರುವರ ಹೊಲಕ್ಕೆ ಹಾರಕ, ದೇವರ ಹೊಲಕ್ಕೆ ಹುಚ್ಚೆಳ್ಳು (ಗರುಡ. ೯೩). **ಹಾರಕು :** "ಉನ್ಮಾಳಃ, ಕೋದ್ರವಃ, ಕೋರದೂಷಕಃ—ಈ ೩ ಹಾರಕು" (ಹಲಾಯು. ೧೩-೪೨೬).

**ಹಾರಕ್ಕಿ :** ಕ್ಷೀರಸಿತಪಾನದಿಂ ಧುತ್ತೂರದ ಕೂಷ್ಮಾಂಡರಸದೊಳಂ ಬೆಲ್ಲದೊಳಂ ಹಾರಕ್ಕಿನ(ಯ) ಸೊರ್ಕಟಿಗುಂ (ಕೋಕೋಶ. ೦೦-೯೨).

**ಹಾರಕ್ಕು :** ಮರಿಚಂ ಕುಂಬಳದೆಲೆಯುಮನರೆದ ರಸಂ ಸಿಂಧುಜಾತಮುಂ ಕೂಡಿ ಬಟಿಕ್ಕಿರದೀಂಟಲ್ ಹಾರಕ್ಕಿನ ಪಿರಿದೆನಿಪ ವಿಷಾಪಹರಣಮುಕ್ಕುಮಮೋಘಂ (ಚವುದ. ೨-೦೩೯).

[ದೇ. ॥ ತೆಲು. ಅರಿಕ, ಆರಿಕೆ, ಅರುಕ, ಆರುಗ]

**ಪಾರಕ್ಕು** 'ಪಾರಕಂ' ನೋ.

**ಪಾರಖ** (ನಾ). (ಮುತ್ತು, ರತ್ನ ಮುಂತಾದುವುಗಳ) ದರ್ಜೆ ; ಕಿಮ್ಮತ್ತು ; ಯೋಗ್ಯತೆ : ಪಾರಖ ನಮೂನೆ—ತೂಕದ ಸಮಯ ಗಿರಾಯಿಕರು ಅರಳಿ ತೆಗೆದುಕೊಂಡರೆ, ಈ ಖರ್ಚಿನ ರಕಮು ಬೀಳುವದಿಲ್ಲ (ಮುಂಬಜ್ಯಾ. ೦೬). [←ಮರಾ. ಪಾರಖ್]

**ಪಾರಖಾವಣೆ** 'ಪಾರಖಾವಣೆ' ನೋ.

**ಪಾರಖಾವಣೆ, ಪಾರಕಾವಣೆ, ಪಾರಖಾವಣಿ, ಪಾರ್ಖಿವಣೆ** (ನಾ). ೧. (ನಾಣ್ಯ, ಮುತ್ತು, ರತ್ನ ಮೊದಲಾದುವುಗಳನ್ನು) ಪರೀಕ್ಷಿಸಿ ನೋಡುವುದು ; ಪರೀಕ್ಷೆ ; ತಪಾಸಣೆ : (೬). ೨. ಸಲ್ಲಿಸುವುದು ; ಜಮಾ ಮಾಡುವುದು ; ಪಾವತಿ ಮಾಡುವುದು : ಅದು ವರ್ತಕ ಧರ್ಮವಲ್ಲ. ಹಾಗಿದ್ದರೆ ಜಾಗ್ರತೆಯಾಗಿ ಪಾರಖಾವಣೆಗೆ ಹಣ ತರಿಸು (ಅನಾಥ. ೦೦) ; ಗ್ರಾಮದ ಕಂದಾಯವು ವಸೂಲಾದ ಕೂಡಲೇ ಪಟೇಲನ ಅಪ್ಪಣೆ ಪ್ರಕಾರ ಆ ಹಣವನ್ನು ತಾಲ್ಲೂಕು ಖಜಾನೆಗೆ ಪಾರಖಾವಣೆ ಮಾಡುವುದಕ್ಕಾಗಿ ತೆಗೆದುಕೊಂಡು ಹೋಗುವ ಕೆಲಸವು ಇವನದಾಗಿರುತ್ತದೆ (ಗ್ರಾಮಶಾ. ೩). **ಪಾರಕಾವಣೆ :** ೧. ಲಿಂಗರಾಜ ಅನ್ಯಾಯ ಮಾಡಿದರು. ಅದರ ಲೆಕ್ಕ ದೇವರೆದುರು ಪಾರಕಾವಣೆ ಆಗುತ್ತೆ (ಬಳರಾ. ೦೬೯). **ಪಾರಖಾವಣೆ :** ೨. ಆ ಮೇರೆಗೆ ಐವಜು ಪಾರಖಾವಣೆ ಮಾಡಿಕೊಂಡು ಕಳಪಿಷ್ಟಣವನ್ನು ವಾಪಸ್ ಕೊಟ್ಟು ಬಾಕಿ ಐವಜಿಗೆ ಆಗಿಂದಾಗ್ಯೆ . . . ರಶೀದಿ ಕೊಡಬೇಕು (ಮಹಾಪಂ. II, ೩೩). **ಪಾರ್ಖಿವಣೆ :** ೨. (ಪ್ರಗಿತಿ. IV, ೬೮೨). 'ಪಾರಖಾಣೆಯು' ಪರಾ.

[←ಮರಾ. ಪಾರಖಾವಣ್]

**ಪಾರಖೀ** (ನಾ). (ಮುತ್ತು, ರತ್ನ, ನಾಣ್ಯ ಮೊದಲಾದುವುಗಳನ್ನು) ಪರೀಕ್ಷಿಸುವವನು : ಪರೀಕ್ಷಕ : ಅದು ಸರ್ರಾಫರ ದಂಧೆಯಲ್ಲಿ ಕಳೆದ ೪೦ ವರುಷದ ಅನುಭವ. ಬಂಗಾರದ, ಮುತ್ತುರತ್ನದ ಪಾರಖೀ ನಾವು (ಗೀತಾಗ. ೯೨). [←ಹಿಂ. ಮರಾ. ಪಾರಖೀ]

**ಪಾರಗ**[1] (ನಾ). ೧. ತೀರವನ್ನು ಮುಟ್ಟಿದವನು ; ದಡವನ್ನು ಕಂಡವನು : . . ಅನುಪಮಗುಣರನುಪಮತಪರನುಪಮಸಿದ್ಧಾಂತವಾರ್ಧಿಪಾರಗರೆಂದೀ ವಸುಧೆಪರೀವೃತಸಕಳಿವನಿ ಪೊಗಟ್ಟುದು ಸಕಳಚಂದ್ರಸೈದ್ಧಾಂತಿಗಳಂ (ಸುಕುಮಾ. ೦-೨೯) ; ಸ್ವಸ್ತಿ ಸಮಸ್ತಶಾಸ್ತ್ರಾಪ್ರಾತಪಾರಾವಾರಪಾರಗರುಂ ತದುಕ್ತತಪೋನುಷ್ಠಾನನಿಷ್ಠಿತರುಂ (ಕಇಅ. ೯೯-೩-೯; 1124); ಸಂಗೀತಾಂಬುಧಿಪಾರಗರ್ ಪಲರುಮಿಾ ತಾನಂಗಳಂ ಬಲ್ಲರೇ (ಅಕ್ರತಿ. ೯೨-೦೩). ೨. ಸಂಪೂರ್ಣವಾಗಿ ತಿಳಿದವನು ; ನಿಪುಣ ; ಪಂಡಿತ: 'ಚತುರ್ವೇದಪಾರಗ', 'ಶ್ರುತಪಾರಗ' ಪರಾ. [ಸಂ.]

**ಪಾರಗ**[2] 'ಪಾರಕ್ಕ[2]' ನೋ.

**ಪಾರಗತ್ವ** (ನಾ). ನೈಪುಣ್ಯ : ಅಪರುಪದೇಶಕೌಶಲಮುಮಂ ಪರವಾಗಮ ಪಾರಗತ್ವಮುಂ . . . ಭವ್ಯಜನಕಂ ಪರಿಕೀರ್ತಿಸುತಿರ್ದು (ಮಹಾಪೇ. ೩-೦೮).

[ಸಂ.]

**ಪಾರಗಾಣಿಸು** (ಕ್ರಿ). ಒಂದು ಕಡೆಯಿಂದ ಮತ್ತೊಂದು ಕಡೆಗೆ ದಾಟಿಸು; ಪಾರುಮಾಡು : ಯಾರೂ ಕಾಯುವರಿಲ್ಲ ಸೇರಿದೆ ನಿನಗಯ್ಯಾ ಧೀರ ವೇಣುಗೋಪಾಲ ಪಾರಗಾಣಿಸೊ ಸ್ವಾಮಿ (ಕಠಂ. ೩೩೯); ಸಂಕಷ್ಟಗಳ ಮಾರುವ ದಾಂಟಿಸಿ ಪಾರಗಾಣಿಸುವ ಒಂಟಿ ಇವನೆಂದು ಪಿಲಾತನಕಟರಿ ವನೇಂ (ಗೊಲ್ಗೊಥಾ. ೨-೯೩). [ಪಾರಗಾಣು + — ಇಸು[3]]

**ಪಾರಗಾಣು** (ಕ್ರಿ). ದಡವನ್ನು ಸೇರು ; ಪಾರಾಗು : ಕಡಲ ಕಡೆದರು ಸುರಾಸುರರು ನಿಜಬಲದಿಂದ ಕುಡಿದವನದನು ತಪಸ್ಸಿನಿಂದ ಕುಂಭಜನು ಕಡಮೆಜನ ಪಾರಗಾಂಬರೆ ಗಾಸಿಯನು ಪಡದೆ ? (ಮುಂಕುಶ. ೨೩೯); ಈ ಸಲದ ಕೆಲಸದಲ್ಲಿ ನಾವು ಪಾರಗಾಣುತ್ತೇವೆಂಬ ಭರವಸೆಯೇ ಸನಗಿಲ್ಲ (ಬಿಶಾಶ. ೦೫). [ಪಾರ[2]+ಕಾಣು (<ಕಾಣ್)]

**ಪಾರಗಾವ** (ನಾ). ಒಂದು ಊರಿನ ಹೆಸರು : ದಕ್ಷಿಣತಃ ಪಾರಗಾವಾ ಪ್ರಾ(ಬ್ರಾ)ಹ್ಮಣ ಗ್ರಾಮಃ ಪಶ್ಚಿಮತಃ ಏಲ್ವ ?ವಾಡೇಗ್ರಾಮಃ (ಇ. XI. ೦೦೩-೩೯; 753). [? +ಗಾವ (<ಗಾಮ)]

**ಪಾರಗೆಯ್** (ಕ್ರಿ). ಹಿಂಜರಿ ; ಹಿಂದೆಗೆ : ಅಕ್ಕುಳಿಸಿತೆಂದುಂ, ಮೆಯ್ದುಗೆದುದೆಂದುಂ . . . ನುಣ್ಚಿತೆಂದುಂ, ಪಾರಗೆಯ್ದೆಂದುಂ—ಈ ೧೩ ಅಪಸರಣಕ್ಕೆ ಪೆಸರ್ (ಕಶಾ. ೬೨-೬೪೯). [ಪಾರ[?] +ಕೆಯ್[1]]

**ಪಾರಜ** (ನಾ). ದ್ರವರೂಪದ ಒಂದು ಬಗೆಯ ಲೋಹ : ಪಾದರಸ : ರಸದೊಳು ಪಾರಜದೊಳು . . . ಷಡುರಸದೊಳಾ ರಸಾಖ್ಯಂ (ಶಂಗರಾ. ೦೯೩-೩೨) ; ಭಯ ಮತ್ತು ಧೈರ್ಯವು ಬೆಂಕಿ ಮತ್ತು ಬರ್ಫಕ್ಕೆ ತಗುಲಿದ ಪಾರಜದಂತೆ ಕೆಳಗೆ ಮೇಲೆ ಒಮ್ಮೆಲೆ ಸರಿದಾಡ ಹತ್ತಿದುವು (ಜದುಂತ. ೯೯); ಕನ್ನಡಿಯ ಒಂದು ಮೈಗೆ ಪಾರಜ ಹಾಕಿ . . . ನೋಡುವ ಕನ್ನಡಿಯನ್ನು ಮಾಡುತ್ತಾರೆ (ಮುಂಬಶಾ. ೯-೨೨೨). 'ಪಾದರಸ' ಪರಾ. [<ಸಂ. ಪಾರದ]

**ಪಾರಟ** 'ಪರಡೆ[4]' ನೋ.

**ಪಾರಡೆ** 'ಪರಡೆ[4]' ನೋ.

**ಪಾರಣಕ್ಷಮ** (ನಾ). ಬೇರೆಯವರ ಉಪವಾಸವನ್ನು ಕೊನೆಗೊಳಿಸುವುದರಲ್ಲಿ ಸಮರ್ಥನಾದವನು : ಚಾರುಚಕೋರವಿದೂರಪಾರಣಕ್ಷಮನವವಲ್ಲಭಂ ಬೆಳಗಿದಂ ಪುರವೊಂದೆನೆ ಲೋಕಮೆಲ್ಲಮಂ (ಚಂದ್ರಕೃ. ೬-೩೨).

[ಸಂ.]

**ಪಾರಣಾವಾಸರ** (ನಾ). ಪಾರಣೆ ಮಾಡುವ ದಿವಸ : ಪಾರಣಾವಾಸರಾಳಿಗಳಿಂತೀರ್ತಿಟನಪ್ಪ ಪುಣ್ಯದಿನಮಂ ಸಮ್ಮಿಶ್ರಮಂ ಮಾಡೆ (ಸುಕುಮಾ. ೯-೦೨).

[ಸಂ.]

**ಪಾರಣಾವಿಧಿ** (ನಾ). ಪಾರಣೆಯನ್ನು ಮಾಡುವ ರೀತಿ,—ಕ್ರಮ ; [ಪ್ರವ್ಯ]ಜ್ಯಾಶ್ರಮಗುರೂರ್ವರಾಸ್ಯತಿಲಕಂ ಯಾಮಿನೀವಿಯೋಗಮಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿಯೊಳಮೃತಾಹಾರಮನಾರೋಗಿಸಿ (ಶಾಂತಿಪು. ೯-೯೯ ವ) ; ಮಂಡೋದರಿಯುಂ ತಾನುಂ ಪಾರಣಾವಿಧಿಯಂ ಮಾಡಿಸಿ ರಾಮನಲ್ಲಿಗೆ ವಂದು (ಶಾಪುಂ. ೩೦೦). [ಸಂ.]

**ಪಾರಣೆ₁** (ನಾ). ೧. ವ್ರತೋಪವಾಸದ ಮಾರನೆಯ ದಿನ ಮಾಡುವ ಊಟ: ಪಕ್ಷೋಪವಾಸದ ಪಾರಣೆಗೆಂದು ಪೋಟಲ್ ಚರಿಗೆವುಗುತಂದೊಡೆ (ಪಕ್ಕಾರಾ. ೬೬-೨೬); ಪಾರಣೆಯು ಎನಂಗಳೊಳವಧಾರಿಸಿ ಜಠರಾಗ್ನಿ ನಂದದಂದದಿನರ್ಧಾಹಾರವನಾರೋಗಿಸುವಾಚಾರದಿನಳವಟ್ಟುದವರೊ ಳವ ವೋದರ್ಯಂ (ಸುಕುಮಾ. ೪-೩); ಘಡ ತೊಲಗು ಕೌರವಕೃತಾಂತನ ಪಡೆಗೆ ಪಾರಣೆಯಾಗಳೀಗಳೆ ನಡೆಸುವನು ನಾಳಕ್ಕೆ ನೆಬಿಸಿದ ಮಹಾ ರಥಾವಳಿಯ (ಕುಮಾರವ್ಯಾ. ಕರ. ೨೬೮); ಪಾರಣೆಯಾದರೂ ಪಾರಾಯಣ ತೀರಲಿಲ್ಲ (ಗಾದೆ). ೨. ತೃಪ್ತಿ; ಸಂತೋಷ: ಅಲ್ಲವೋ ಬರಿಯ ವಾಸನೆ ಅಲ್ಲ ಬರಿ ಕಣ್ಣು ಪಾರಣೆ (ಪಾಸಿಗ. ೦೬-೦೬).

**ಪಾರಣೆ ಪರ್ವ** = ಪಾರಣೆ ಮಾಡುವ ಹಬ್ಬ: ಬರಿಸುವುದೊಂದೂ ರೋಳಿಪರ್ವಗಳನುಪಚಾರವೆರಸಿ ಪಾರಣೆ ಪರ್ವಗಳಿಗೆ ನೆರೆಯೂರೊಳು ಬಾಳುವ ನಿಜತನುಜೆಯು ಕರೆಯಿಸುವುದನು ಕಾಲವಱಿತು (ಶಬಿ. ೩-೨೯). **ಪಾರಣೆ ಮಾಡು** = ಉಪವಾಸ ಮುಗಿದ ನಂತರ ಊಟ ಮಾಡು: ಬಸವಂತಿ ತನ್ನ ಆರೋಗಣೆಯನ್ನು ಬಡಿಸಿಕೊಂಡು ಉಪವಾಸದ ಪಾರಣೆ ಮಾಡಿ ದಳು. (ಬೀಜಪ. II. ೦೩೭). [ಸಂ. ಪಾರಣ]

**ಪಾರಣೆ₂** (ನಾ). ಒಂದು ಗ್ರಂಥದ ಪೂರ್ಣವಾದ ವಾಚನ (?): ಕವಿಳಾಸಪುರದೊಳಗೆ ಸ್ವಯಂಭುವಲ್ಲಿಕಾರ್ಜುನ ಸಂಗಮೇಸ್ವರ ನಾಗೇಸ್ವರ ಯಾ ಮಾಱುಲಿಂಗಕಂ ಅಂಗಭೋಗ ರಂಗಭೋಗ ಜೀರ್ಣೋದ್ಧಾರಕ್ಕಂ ಪಾರಣೆಯ ಜಂಗಮಾರಾಧನೆಗಂ . . . ಸಲುವಂತೆ (ಎಇ. XXI. ೦೯-೬೦; ೧೫೬೦). [<ಸಂ. ಪಾರಾಯಣ ?]

**ಪಾರಣೆ₃, ಹಾರಣೆ, ಹಾರಣೆ** (ನಾ). ಒಂದು ಬಗೆಯ ತೆರಿಗೆ: ಕೆಯ್ಗಂ ಮನೆಗಂ ತೊ ಣ್ಣಕ್ಕಮಾರುವಣಂ ಗದ್ಯಾಣಂ ಮಾಱು ಪಣವಾಱು ಪರಿವೂಂ ಪಾರಣೆಯುಂ ಮೊದಲಾಗಿ ಕಿರುಕುಳಬಾಧೆಯೊನ್ದುಮಿಲ್ಲದನ್ತಾಗಿ ಗಾವುಣ್ಡುಗಳ್ ಪ್ರತಿಪಾಳಿಸುವರ್ (ಸೌಇಇ. XI-1. ೬೮-೩೬; 1045); **ಪರಿವು, ಪಾರಣೆ**–ಇವೆರಡೂ 'ಕಿಱುಕುಳ'ಗಳು, ಎಂದರೆ ಸಣ್ಣ ತೆರಿಗೆಗಳು (ಕಶಾಅ. ೪೦೦). **ಹಾರಣೆ**: ಆ ಪೆರುಮಾಳಿಪುರದ ಮಹಾ ಜನಂಗಳು ಹದಿಕೆ ಹಾರಣೆಯೆಂದೆನ್ನದೆ ಸರ್ವ್ವಬಾಧೆಪರಿಹಾರ ಸರ್ವ್ವ ಮಾನ್ಯವಾಗಿ . . . ನಡಸಿ ಕೊಡುವರು (ಎಕ. XI. ಚಳ್ಳಕೆರೆ. ೦೨-೪೩; 1286). **ಹಾರಣೆ**: ಕುನ್ನಿವಱ ಪರಿವೂಂ ಹಾರಣೆ ಮೊದಲಾಗ (ಬೊಂಕಇ. ೦೯೩೩, ಕುಕಿಪಮ್ಮಾರ್. ೬-೨೨; 955). [?]

**ಪಾರಣೆಗೆಯ್** (ಕ್ರಿ). ಉಪವಾಸದ ನಂತರ ಊಟವನ್ನು ಮಾಡು: ಅಂಬರೀಷನವೊಲು ದ್ವಾದಶಿ ದ್ವಿಜನಿಕುರಂಬಕ್ಕೆಯನ್ನದಾನಗಳ ಸಂಭ್ರಮ ದಲಿ ಮಾಡಿ ಪಾರಣೆಗೆಯ್ವನಾ ಕುಂಭಿನೀಪತಿ ಭಕ್ತಿಯಲಿ (ಕಂಶಂ. ೪-೯).

[ಪಾರಣೆ₁ + ಕೆಯ್₁]

**ಪಾರತಂತ್ರತೆ** (ನಾ). ಇನ್ನೊಬ್ಬರ ಅಧೀನವಾಗಿರುವಿಕೆ; ಬೇರೆಯವರ ವಶವಾಗುವಿಕೆ: ಪುತ್ರದೋಹಳಕಾರಣವುಂ ಧಾರಿಣೀಪತಿಗೆ ಸವಿಸ್ತರಂ ಬಿನ್ನವಿಸೆ ಕೇಳ್ದರಸನುಂ ತತ್ಕ್ಷಣೋಪಗತತನೂಭವಾಲಾಭಚಿಂತಾಪಾರ ತಂತ್ರತೆಯು ವ್ಯಾಕುಲಮನನುಂ ದೀನಾನನನುಮಾಗಿ (ಕಂದ್ರಪ್ರ. ೩-೬೨ ವ).

[<ಪರತಂತ್ರ]

**ಪಾರತಂತ್ರ್ಯ** (ನಾ). ಅನ್ಯರಿಗೆ ಅಧೀನವಾಗಿರುವುದು; ಪರಾಧೀನತೆ: ಶ್ರುತಿಯೊಳಗಾಡುವ ಹಾಡಿನ ತೆರದಿ ಸ್ವತಂತ್ರ ನೀನೀ ಪಾರತಂತ್ರ್ಯದಿ (ನಡೀಕ. ೪-೬೯); ಭವ್ಯಪರಂಪರೆಯ ನಾಡು ಪಾರತಂತ್ರ್ಯದ ಸಂಕೋಲೆಯಿಂದ ಬಂಧಿತವಾಯಿತು (ಅಕ್ಕಾರ್ಕ. ೨). [ಸಂ.]

**ಪಾರತೆ** (ನಾ). ವೀಕ್ಷಣೆ; ನಿರೀಕ್ಷಣೆ: ಹರವಿಚಾರತೆಗಳೊ ನಿರುತ ಪಾರತೆ ಗಳೋ ನಿಷ್ಠೆ ತೋರತೆಗಳೊ ತಮವಿದೂರತೆಗಳೋ (ಕಶಂ. ೩-೩೪).

[<ಪಾರ್₁ + –ತೆ]

**ಪಾರತ್ರ್ಯ** (ನಾ). ಪರಲೋಕ: ಹೆಂಡತಿ ಮಕ್ಕಳಿಗಾಗಿ ಎನ್ನ ಹಿತವನೆ ಮರೆದು ಕಂಡಕಂಡವರ ಕಾಡಿ ಬೇಡಿ ಉಂಡುಟ್ಟು ಸುಖಪಟ್ಟು ಪಾರತ್ರ್ಯವ ಮರೆದು ಕೊಂಡೆಯಲಿ ನಿಪುಣನಾಗಿ ತೂಗಿ (ಬಿದ್ರಾಕೃ. ೩೪-೩).

[<ಸಂ. ಪಾರತ್ರ್ಯ]

**ಪಾರತ್ರಿಕ** (ಗು). ೧. ಪರಲೋಕಕ್ಕೆ ಸಂಬಂಧಪಟ್ಟ; ಪಾರಲೌಕಿಕ ವಾದ: ಐಹಿಕದ ನಾನಾಭೋಗವುಂ ಮತ್ತಮುನ್ನತಪಾರತ್ರಿಕಸೌಖ್ಯದೇಳ್ಗೆ ಯುನನೂನಂ ಮಾಳ್ಪ . . . ಕವಿ ನಿಂ ಬೇಗಂ ಪೊಗಳ್ (ತ್ರಿಕೂ. ೦-೨೯); ಪಾರತ್ರಿಕಾನಂದವುಂ ಗಳಿಪು ನಾಯಕನಾಗೆ ಮತ್ಯ್ರತಿಯದೇಂ ಸ್ವಪಾಂ ತುದೋ ಲೋಕದೊಳ್ (ಮೃಸೂಮ. ೦-೨೨). (ನಾ). ೨. ಪರಲೋಕ: ಖರರುಜ್ಯಂದನನೊಂದಿದಂದುದಯದೊಳ್ ರೋಗಾನ್ವಿತಂ ಬಾಲ್ಯಕಾಲ ರುಜಾರ್ತಂ ಮಲಿನಂ ಸಕಾಮನಲಸಂ ಪಾರತ್ರಿಕವ್ಯಾಪ್ತಿ[ಪಾಠಾಂ. ಪಾತತ್ರಿಕದ್ಯಾಪ್ತಿ, ಪಾತತ್ರಿಕವ್ಯಾಪ್ತಿ]ತತ್ಪರನಕ್ಕುಂ (ಜಾತಕ. ೦೯-೦೪). ೩. ಪರಲೋಕಕ್ಕೆ ಸಂಬಂಧಿಸಿದುದು; ಪಾರಲೌಕಿಕವಾದುದು: ಬಟಿಕ್ಕೆಂದ್ರವ್ಯೈಹಿಕಪಾರತ್ರಿಕಭೋಗವುಂ ಕುಡುವಿನಂ ಮಾಣಿಕ್ಯಭಟ್ಟಾರ ಕಾಂತಿಕಮಂ ಸಾರೆ ವಿನೇಯರಾಜಿಗೆ ಜಯಂ ಭದ್ರಂ ಶುಭಂ ಮಂಗಳಂ (ಅಂಕ್ಕ. ೦೬-೮); ಸಾಂಸಾರಿಕ — ಪಾರತ್ರಿಕಗಳೆಂಬ ಇತ್ತರಡ ಪುರು ಷಾರ್ಥಗಳೂ ನಿಕಟಸಂಬಂಧದಿಂದ ಒಡಗೂಡಿ ಚತುರ್ವರ್ಗವೆನ್ನಿಸುವುದು (ನಾಡಕೀಜ. ೩೩೪). [ಸಂ.]

**ಪಾರದ** (ನಾ). ೧. ದ್ರವರೂಪದ ಒಂದು ಬಗೆಯ ಲೋಹ; ಪಾದರಸ; ಪಾರಜ: "ರಸ ಪಾರದ ಸೂತಕ ಚಪಲ[ಸಂ]ಜ್ಞಿತಂ ಗಿರಿಶ ವೀರ್ಯಮದು ಪಾದರಸಂ" (ಪಟ್ಟುಕೋ. ೬೪-೦೩); ಮಾಸರಮನೆ ಪಾರದದಿಂ ಪೂಸಿದ ಪೋಲ್ ಪೊನ್ನ ಮುಕುರಮಂ ಹಿಮಲಿಪ್ತಂ ನೇಸಱ ಬಿಂಬಂ ತಿಂಗಳ ಕೂಸಿನ ಪೋಲ್ ಕೋಡುತಿರ್ದುದಂದಿನ ದಿನದೊಳ್ (ಅಂಜಿ. ೯-೬); ಪಾರದಂ ಸಿದ್ಧರಸಮಾದೊಂದು ಸಂತಸಂ ಬಾಲ ನಿರವಂ ಕಂಡೊಡಪ್ಪುದುಂ (ರಾಜಾಶ್ಯ. ೬೬-೦೭). ೨. ಲೋಹವನ್ನು ಚಿನ್ನವನ್ನಾಗಿ ಮಾಡುವ ರಸ; ಸಿದ್ಧರಸ: ಪಾರದಂ ಪಾರದೆ ಬಂದ ತೋರ್ಕೆರ್ಗೆ ಸುಮನೋಮಣಿಸನ್ನಣಿಹಾರದಲ್ಲಿ ಬಂದೋರಣವಾಗಿ ನಿನ್ನ ಪರಿವನ್ದಿಜನಕ್ಕೆನಿಪೊನ್ನು ದಾನಗಂಭೀರತೆಯಾದುದೇಂ ಪೊಗಳ್ವಿಂ (ಎಕ. III. ಸೊರಬ. ೨೬೦-೨೬; 1408). [ಸಂ.]

**ಪಾರದಂದೊಡೆ** (ಕ್ರಿ). ಪಾದರಸವನ್ನು ಹಚ್ಚು,–ಲೇಪಿಸು: ಕಡೆವರೊ ಶಂಖದಿಂ . . . ರುಚಿರೋಜ್ವಲಾಗವುಂ ಬಿಡದವ್ಯಾತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂದೊಡೆದರೊ ವೇಟಿನಲ್ ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ಕಾದಂಪೂ. ೬೬೭).

[ಪಾರದ + ತೊಡು₁]

**ಪಾರದರ** 'ಪಾರದಾರ' ನೋ.

**ಪಾರದರಿಗ** 'ಪಾದರಿಗ' ನೋ.

**ಪಾರದರಿಗೆ** (ನಾ). ಹಾದರ; ವ್ಯಭಿಚಾರ: ಹರವರಕ್ಕನಂಗಡೊಳಾ ರ ದರಿಗೆಯ ಪಚ್ಚವಂ ಕೊಣ್ಡು ಪಾದರಿಗೆಯ ಮಾಗನರಿದು ಪಾದರಿಗನಂ ಕೊಲ್ವರು (ಸೌಇಇ. IX-1, ೬೭-೬೨; 992).

[ಪಾರದರ (<ಪಾರದಾರ) + –ಇಗೆ₆]

**ಪಾರದರ್ಶಕ** (ಗು). ೧. ತನ್ನ ಮೂಲಕ ನೋಡಿದರೆ ಆಚೆಯ ಕಡೆ ಇರುವ ವಸ್ತು ಸ್ಪಷ್ಟವಾಗಿ ಕಾಣಲಾಗುವಂತೆ ಬೆಳಕನ್ನು ತನ್ನ ಮೂಲಕ ಶುದ್ಧವಾಗಿ ಹಾಯಗೊಡುವ: ಗಾಜು ಪಾರದರ್ಶಕ ಪದಾರ್ಥವು (ಶುಂಬಯು. ೪-೨೨೦); ಬೆಳಕು ಕೆಲವು ವಸ್ತುಗಳ ಮೂಲಕ ಹೆಚ್ಚು ನಷ್ಟ ಹೊಂದದೆ ಹೊರಕ್ಕೆ ಬರುವುದು. ಇಂತಹ ವಸ್ತುಗಳನ್ನು ಪಾರದರ್ಶಕವಸ್ತುಗಳೆಂದು ಹೇಳುತ್ತೇವೆ (ಭೌತಶಿ. ೦೩೩). (ನಾ). ೨.

ತನ್ನ ಮೂಲಕ ಆಚೆಯ ಪಕ್ಕವನ್ನು ಕಾಣಿಸುವಂತೆ ಬೆಳಕನ್ನು ಸಾಗಿಸುವಂತಹುದು : ಈ ಬರ್ಫವು ಹೆಚ್ಚು ಕಡಿಮೆ ಪಾರದರ್ಶಕ ವಾಗಿರುತ್ತದೆ (ಮುಂಬಯಿ. ೬–೧೪೦). 'ಅಪಾರದರ್ಶಕ' ಪರಾ. [ಸಂ.]

**ಪಾರದರ್ಶಕತೆ** (ನಾ). ಪಾರದರ್ಶಕ ಗುಣ : ಶಾಸ್ತ್ರಗಳ ಸಂಕ್ಷಿಪ್ತಶೈಲಿ ಇದಕ್ಕೆ ಎಷ್ಟರ ಮಟ್ಟಿಗೆ ಕಾರಣವೋ ಸಂಸ್ಕೃತಭಾಷೆಯ ಪಾರದರ್ಶಕತೆಯೂ ಅಷ್ಟರ ಮಟ್ಟಿಗೇ ಕಾರಣವಾಗಿರಬಹುದು (ಸವಾಲೋ. ೧೩೩); ಗುಟ್ಟುಗುಟ್ಟಿನ ಗಂಟು ವ್ಯಕ್ತಿವ್ಯಕ್ತಿಗಳಿಲ್ಲ ; ಈ ಗುಡಿಯು ಮುದರ ನಂಟು ಈ ಮಹಾಗುಟ್ಟಿನೆಡೆ ಒಬ್ಬೊಬ್ಬನೂ ಪಡೆವ ಪಾರದರ್ಶಕತೆಯನು ಅರಿವರಾರುಂಟು ? (ಮಲೆದೇ. ೪೫–೦೦). [ಸಂ. ಪಾರದರ್ಶಕತಾ]

**ಪಾರದರ್ಶಿ** (ನಾ). ಯಾವುದೇ ವಿಷಯವನ್ನಾಗಲಿ ಪೂರ್ಣವಾಗಿ ತಿಳಿದುಕೊಂಡವನು ; ಪಾರಂಗತ ; ನಿಷ್ಣಾತ : ಆ ದ್ವಾರಕೆಯಿಂದಲದನಜಿತು ವೃದ್ಧವಚೋವಿಶೇಷವರಿ ಶೌರಿ ಕರೆಸಿದನಾತ್ಮ ವಿದ್ಯಾಪಾರದರ್ಶಿಯನೊಲಿದು ಮನದಲಿ ಸೀರಧರಸಹಿತಾತನೊಡನಿಂತೆಂದನುಚಿತದಲಿ (ಕಿಭಾಸ.೧೦–೭೭–೯೮); ಅರ್ಜುನನು ಧನುರ್ಧರನೆನಿಸಿಕೊಂಡಂತೆಯೇ ಖಡ್ಗಪ್ರಯೋಗದಲ್ಲಿಯೂ ರಥಯುದ್ಧದಲ್ಲಿಯೂ ಕೂಡ ಪಾರದರ್ಶಿಯೆನಿಸಿಕೊಂಡನು (ಭೀಷ್ಮಕ. ೫೯). [ಸಂ. ಪಾರದರ್ಶಿನ್]

**ಪಾರದಾರ**, ಪಾದರ₁, ಪಾರದರ, ಪಾರದ್ವಾರ, ಹಾದರ (ನಾ). ೧. ಮತ್ತೊಬ್ಬನ ಹೆಂಡತಿಯೊಡನೆ ಹೊಂದಿರುವ ಅನೈತಿಕಸಂಬಂಧ ; ಪರಸ್ತ್ರೀಗಮನ,— ಸಂಸರ್ಗ : ಅದು ಕಾರಣದಿಂದಂ ಮಹಾದುಃಖಕೆ ಪಾರದಾರಮೆ ಮೊದಲೆಂದು ಬೆರ್ಚಿ ಪರಸ್ತ್ರೀಯರಂ ತಾಯಂ ಕಾಣ್ಬಂತೆ ಕಾಣ್ಬುದು (ರರ್ಮಾಮೃ. ೬–೦೯೩). ೨. ಪರಪುರುಷನೊಡನೆ ಇಟ್ಟುಕೊಳ್ಳುವ ಅನೈತಿಕ ಸಂಬಂಧ ; ಪರಪುರುಷಗಮನ : ಪತಿ ತಪ್ಪಿ ಪಾರದಾರವ ಮಾಡಿದಲ್ಲಿ ಒಳಗಿಟ್ಟುಕೊಂಡು ಸಂದು ಸಂಶಯವಿಲ್ಲದೆ ಗುರು ಲಿಂಗಜಂಗಮಕ್ಕೆ ಉದಾಸೀನವ ಮಾಡಿದಡೆ ತಪ್ಪನೊಪ್ಪಬಹುದೆ (ಸೋಲಪೂ. ೫೯– ೨೨೯). ೩. ವ್ಯಭಿಚಾರ; ಜಾರತನ : ಪಾರದಾರ ಮಾಡಿದೊಡೆ (ಕೃಅಂ. ೦೯೩೬. ೨೫–೩೬; 872); ಪಾರದಾರ ಮಾಡಿದೊಡೆ ಇಟ್ಟೂಜಿ ಇಪ್ಪತ್ತನಾಲ್ಕು ದ್ರಮ್ಮ ಆ × × ವಿಣಕ್ಕಡೆ ಇಪ್ಪತ್ತ ನಾಲ್ಕು [ದ್ರ]ಮ್ಮ (ಕಶಾಶ. ೯೬–೦೯–೩೬; 932). **ಪಾದರ₁** : ೩. ಪಸೆಯೊಳ್ಪಸುರ್ವಂದರೊಳ್ಗಿನಿಸಾಕ್ಷಿಯೊಳ್ಕೊಂಡ ಪಾಂಡುಪತಿಯರೆ ದೋಷಾವಸಥಾರ್ಪಾದರದಿಂ ಜನಿಯಿಸಿದರ್ (ಗದಾಯು. ೩–೩೯); ಪಾದರಂ ಲೇಸು ಸಾವುದರಿದು (ಧರ್ಮಾಮೃ. ೮–೭೦); ಪೆಸರನಡಗಿಸಿ ಕಳವು ಪಾದರಂಗಳ ಹಿಂಸೆಯಸುವ ತೊಲಗಿಸಿ ಧರಾತಳಮನಾಜ್ಞೆಯೊಳೆ ಪಾಲಿಸುವ ರಾಜಂಗಿಹಪರಂಗಳೊಳ ಗನುಮಾನವಿಲ್ಲ (ಜಂಭೂ. ೮–೦೬). **ಪಾರದರ** : ೧. ನೃಪತನಯಂ . . . ಪಾರದರದೊಳ್ ಪುಟ್ಟಿವನರಸುಗಮರಸಿಗಂ ಪುಟ್ಟಿದನೇ (ಶಂಭಪು. ೧೫–೦೩೩) ; ಇನಿತೊಂದು ಪರಾಭವಪದಮನೆಯ್ದುವರ್ ಪಾರದರದೊಳೆಂದಾಂ ಪರದಾರನಿವೃತ್ತಿಗೆಯ್ದಿಂ (ಸುಕುಮಾ. ೬–೩೯). ೩. ನುಡಿಯಲ್ಕಾರ್ತರುಮಿಲ್ಲ ಪಾರದರದೊಳ್ ಸತ್ತಂಗಚಬ್ಬನ್ನರಾರ್ (ಶಂಭಪು. ೮–೬೧); ಶೋಭವಿರ್ಪಶಿಶಯುತೋಷವಿರ್ಪ ಮತವಿರ್ಪೆಡೆಯೊಳ್ . . . ಪಾರದರವಿರ್ಪ ಪರಿಗ್ರಹಕಾಂಕ್ಷೆಯಿರ್ಪ ಕುತ್ಸಿತಮಾತವಿರ್ಪವಲ್ತು (ಅರ್ಜನೀ. ೦–೫೯). **ಪಾರದ್ವಾರ**: ೩. ಹೋಗಬಿಟ್ಟು ಮರಳಿ ಹಿಂದೆ ನೋಡಿ ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ ಅದೆ ಪಾರದ್ವಾರ ನಾಯಕನರಕ ತಪ್ಪದು (ಬಸವ. ೬೫೫) ; ಸಾವಿರ ನೋಂಪಿಯ ನೋಂತು ಪಾರದ್ವಾರ ಮಾಡಿದಂತಾಯಿತ್ತು ಅವನ ವ್ರತ (ಸರ್ವ. ೦೬೪–೬೪೭). **ಹಾದರ** : ೧. ಶಿವನರೆವಣ್ಣನಂ ಹರಿಯ ಹಾ[ಶಾಕಾಂ. ಪಾ]ದರವಬ್ಬೆ ಜನೊಲ್ದಲಜ್ಜೆ ಹೇಱವ ನನೆಸಿಲ್ಲ ಬಲ್ಲಹನ ಶೌರ್ಯಮಂ (ಅಸಂಪು. ೦–೯೦); ಕೊಳಲರಾಗದ ರಹಿಯೊಳಲ್ಲಿಯ ಕಲಸುಗೂಳೋ ಹಳ್ಳಿಕಾತಿಯರೊಳಗುಡಿಯ ಹಾದರವೊ . . . ಜಯಸಿರಿಯ ಕಾಪಿನೊಳಾರು ನೀನು (ಕುವ್ಯಾಸ. ೨–೭೮). ೩. ಸಾಸಿರನೋಂಪಿಯೊಂದೆ ಹಾ[ಶಾಕಾಂ. ಪಾ]ದರದೊಳೆ ಕೆಟ್ಟುಪೋಕುಂ (ಸಮುಶ. ೫–೭೮); ಅನ್ಯದೈವವೆಂಬುದು ಹಾದರ (ಬಸವ. ೬೦೮); ಕಳವು ಹಾದರವೆರಡಱಲಿ ತಾನಳಿದವಂ ಗತಕೀರ್ತಿನರಕದೊಳಿಳಿವನಲ್ಲದೆ ಸಗ್ಗಸುಖವಿಲ್ಲ (ಕೌಶಿರಾ. ೪೮–೦೫); ಹಾದರಕ್ಕೆ ಹುಟ್ಟಿದ ಮಕ್ಕಳು ಚೆನ್ನ, ಹಲವು ಸೊಪ್ಪಿನ ಮೇಲೋಗರ ಚೆನ್ನ (ಗಾದೆ).

ಪಾದರವಾಸು, ಹಾದರವಾಡು=ವ್ಯಭಿಚಾರ ಮಾಡು: ಧುರದೊಳ್ . . . ಅಂತಾಸುರನಂ ಕೊಂದಂ ಕಪಾಲದೊಳ್ತಿರಿದುಂಡಂ ಸುರಮುನಿ ಪತ್ನಿಯರೊಳ್ಪಾದರವಾಡಿದು (ಸಮುಶ. ಅನುಬಂಧ I. ೩೬೨) ; ಗೊಲ್ಲರಲ್ಲಿಗೆ ಬೆಣ್ಣೆಯಂ ಕಳು ಲ್ಲಿಗೆಯ್ದಿ ಮುರಾರಿ ಗೋಪಿಯರಲ್ಲಿ ಹಾದರವಾಡಿ (ಬಸಪು. ೫೯–೪೦) ; ಏಡಿ ಹಾದರವಾಡೆ ಗೋಡಾರಗಪ್ಪೆಯು ಕೂಡಿ (ಜದಾಶ. ೦೦–೯). [<ಸಂ. ಪಾರದಾರ್ಯ. / ತುಳು. ಹಾದರೊ ; ಕೊಡ. ಪಾದರ]

**ಪಾರದಾರಿಕ** (ನಾ). ೧. ವ್ಯಭಿಚಾರ ; ಹಾದರ : ಸಾಧಾರಣಮೆಂಬಧಿಕರಣಮುಂ ಚಾರಾಯಣಂ ಸಾಂಪ್ರಯೋಗಿಕಮುಂ ಸ್ವರ್ಣನಾಭಂ . . . ಪಾರದಾರಿಕಮಂ ಗಾಣಿಕಾಪುತ್ರಂ . . . ಪೇಱ್ದಂ (ಮದತಿ. ೦–೫೬ವ ). ೨. ವ್ಯಭಿಚಾರ ಮಾಡುವವನು ; ಹಾದರಿಗ. [ಸಂ.]

**ಪಾರದಾರ್ಯ** (ನಾ). ಹಾದರ ; ವ್ಯಭಿಚಾರ : ಚೋರವಿದ್ಯವು ಸಹಜ ನಿನಗಾ ಪಾರದಾರ್ಯವು ನಿಯತ ದಿಟದಿಟ ಹಾರುವಂಗವು ಹಸನು (ಕೌಶಿರಾ. ೩೭–೯೩). [ಸಂ.]

**ಪಾರದಿ**, ಪಾರುಧಿ, ಹಾರುದಿ (ನಾ). ಬೇಟೆ ; ಮೃಗಯೆ ; ಶಿಕಾರಿ : ಬನವಾಸಿಪುರವರಾಧೀಶ್ವರಂ . . . ಅಧಿನವಪಾರ್ಥಂ ಸುಭಟರ ತೀರ್ಥಂ [ನಿಂ]ದಿರಿಪಾತಂ ಪಾರದಿಪರಸುರಾಮನುಭಯದೇಸಿವಲ್ಲಭಂ (ಕ್ಶಾಇಇ. XX, ೦೦೦–೦೦; 1129); ಧಾರಿಣಿಯ ಜನದ ಹುಯ್ಯಲ ನಿಲಿಸಬೇಕೆಂದು ಪಾರದಿಗೆ ಪೊಱಮಟ್ಟು ಮೃಗಪಕ್ಷಿಗಳವ ಸಂಹಾರಿಸುತ ಹೇಮ ಕೂಟದಿ ಗುರುವಿರೂಪಾಕ್ಷನಂ ಕಂಡನವನೀಶನು (ಹಕಶಾ. ೫ ಸಂಹಿತೆ) ; ವರಪುರೇಶ್ವರ ತನ್ನ ಸೇನೆಯ ನೆರಹಿ ಪಾರಡಿ[ದಿ]ಯಾಡುತಲ್ಲಿಗೆ ಸರಿದು ಬಂದನು ಜಾಮದಗ್ನಿಯ ವರತಪೋವನಕೆ (ಸಂಭಶ. ೨೬–೦೨). **ಪಾರುಧಿ** : ಮಱುದಿವಸ ಪಾರುಧಿಯನಾಡಿಯೆ ಪರಮಹಾಪಾಳೆಯುವ ಹೊಕ್ಕರು (ಸಂಭಶ. ಶಂ. ೩೨೯); ನೆಱೆಯ ಕಾಲದ ವೃಷ್ಟಿ ಸುರಿಯಲು ಪರಿಹರಿಸಿ ಪಾರುಧಿಯ ಭೂಪತಿ ಮರಳುತತಿ ಮಳೆಗಂಜಿ ಹೊಕ್ಕನು ನೈತ್ಯ ನಂದನೆಯ ನಿರುತಮಂದಿರದೊಳಗೆ (ಸಂಭಶ. ಶಂ. ೩೨೯). **ಹಾರುದಿ** : ಅಖಿಳಜಗದಳಲುರಿಯ ನಂದಿಸುವ ಹಾರು[ಶಾಕಾಂ. ಪಾರ]ದಿಯೆ ಸಂಸಾರವಾರುಧಿಯುತ್ತರಿಪ ಗುರುಪಾದವ ಶಂದು ತೋಱೆತ್ತಲಾ (ಹಕಶಾ. ೫–೯೪). [<ಪ್ರಾ. ಪಾರದ್ಧಿ./ಸಂ. ಪಾಪರ್ದ್ಧಿ]

**ಪಾರದೃಶ್ಯ** (ನಾ). ದೂರದ ದೃಶ್ಯ,–ನೋಟ : ಪಾರದೃಶ್ಯವನ್ನು ಕಳುಹುವವರು, ಎದುರಿನ ನೋಟವು ಒಂದು ಕೆಮೆರಾಲೆನ್ಸಿನಿಂದ ಈ ಗೋಲಕದ ಒಳಗಿರುವ ಲೋಹದ ಹಾಳೆಯ ಮೇಲೆ ಬೀಳುವಂತೆ ಮಾಡುತ್ತಾರೆ (ಪಾಲಕ್ರ. III, ೦೩೩೩). [ಪಾರ₂ + ದೃಶ್ಯ]

**ಪಾರದೃಶ್ವ** (ನಾ). ಪೂರ್ಣವಾಗಿ ತಿಳಿದುಕೊಂಡವನು ; ಪಾರಂಗತ ; ನಿಷ್ಣಾತ ; ಆ ನೃಪಾಲಮೌಲಿಮಾಣಿಕ್ಯಂ ಪದವಾಕ್ಯಪ್ರಮೇಯನ್ಯಾಯ ರಾಜನೀತಿಭರತಸುರತಾದಿ ಸಮಸ್ತಶಾಸ್ತ್ರಪಾರಾವಾರಪಾರದೃಶ್ವನುಂ . . . ಇಕ್ಷ್ವಾಕುವಂಶಕುಶೇಶಯಾಕರಭೂಲೋಕದಿವಾಕರನುಮೆಂಬ ನೆಗಟ್ತೆಗಂ ಪೊಗಟ್ತೆಗತ್ತಳಗಮಾದಂ (ಅಸಂಪು. ೨.೦೦ ವ). [ಸಂ. ಪಾರದೃಶ್ವನ್]

**ಪಾರದೇಶಿಕ** (ಗು). ಪರದೇಶಕ್ಕೆ ಸಂಬಂಧಿಸಿದ : 'ನವೀನಸಂಸ್ಕೃತಿಯುಪರಿಗೆ ಅವರೋಧಿ ಅರಿತಿರುವ ಪಾರದೇಶಿಕಪಂಥದ ರೀತಿಯಲ್ಲಿ ಧರ್ಮವೆಂದರೆ ಮತವು . . . ಭಕ್ತಿಯು ಎಂದೇ ಭಾವನೆಯು (ಆರ್ಯಾಶ. ೩). [ಸಂ.]

**ಪಾರದ್ವಾರ** ‘ ಪಾರದಾರ ’ ನೋ.

**ಪಾರದ್ವಾರಿ** (ನಾ). ಹಾದರಿಗ ; ಜಾರ : ಕ್ರೂರಕರ್ಮಿಗೆ ಶಠಗೆ ಪಾರ ದ್ವಾರಿಗೆ . . . ಇಹಪರವಿಲ್ಲ (ಜಿನಂಕ. ೩-೬೦).

[ ಪಾರದ್ವಾರ (<ಪಾರದಾರ) + –ಇ ]

**ಪಾರಪತೆಗಾರ** ‘ ಪಾರುಪತ್ಯಗಾರ ’ ನೋ.

**ಪಾರಪತ್ತೆಗಾರ** ‘ ಪಾರುಪತ್ಯಗಾರ ’ ನೋ.

**ಪಾರಪತ್ಯ** ‘ ಪಾರುಪತ್ಯ ’ ನೋ.

**ಪಾರಪತ್ಯಗಾರ** ‘ ಪಾರುಪತ್ಯಗಾರ ’ ನೋ.

**ಪಾರಪತ್ರ** (ನಾ). ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣ ಮಾಡಲು ಪಡೆಯುವ ಅಪ್ಪಣೆಚೀಟಿ, ಅಧಿಕಾರಪತ್ರ ; ರಹದ್ದಾರಿ: ಭಾರತದೊಳಕ್ಕೆ ಪ್ರವೇಶ ಮತ್ತು ಅಲ್ಲಿಂದ ಉತ್‌ಪ್ರವಾಸನ ಮತ್ತು ನಿರ್ವಾಸನ ; ಪಾರಪತ್ರಗಳು ಮತ್ತು ದೃಷ್ಟಾಂಕಗಳು (ಭಾರಸಂ. ೨೬೯).

[ ಪಾರ್ + ಪತ್ರ ]

**ಪಾರಮಾರ್ಥ** (ನಾ). ೧. ಮಹೋನ್ನತವಾದ ಸತ್ಯ. ೨. ಒಳ್ಳೆಯದು; ಉತ್ತಮವಾದುದು : ನೀರ ಬೊಬ್ಬುಳಿಕೆಯ ಬೆರ್ಮನ್ನೊಳೆ ಕಟ್ಟಿಯಾ ರೈಕೆಗೆಯ್ವ ಮರುಳನಂತೆ ಶಾರೀರಸೌಖ್ಯವ ನಿಜವೆಂದು ತಿಳಿವುದು ಪಾರ ಮಾರ್ಥವೆ ಬಲ್ಲವರಿಗೆ (ತ್ರಿಕುತ. ೯-೨೭). ೩. ಪರಮಾರ್ಥಕ್ಕೆ ಸಂಬಂಧಿಸಿದುದು ; ಮೋಕ್ಷ : ವಿಭ್ರಾಂತಿಯ ಪೊಂದಿ ದೂಷಿತನಾದಾಗಿ ನಿರಂತರಪಾರಮಾರ್ಥಸಚ್ಚಿಂತನೆಯುಂ ತೊಲಂಗಿಸಿ (ಅಮಕ. ೫೫).

[ < ಪರಮಾರ್ಥ ]

**ಪಾರಮಾರ್ಥಿಕ** (ಗುಂ). ೧. ಪರಮಾರ್ಥಕ್ಕೆ ಸಂಬಂಧಿಸಿದ ; ಮೋಕ್ಷ ಮಾರ್ಗಕ್ಕೆ ಸಂಬಂಧಿಸಿದ : ಮುಕುಳಿತಕರೋಪೇತಂ ದೂತಂ ಪ್ರಜಾ ಪತಿ ಪಾರಮಾರ್ಥಿಕವಚನಸದ್ಭಾವಂ (ಶಾಂತಿಪು. ೫-೯೭); ನಿಮ್ಮ ನಿಮ್ಮ ಕರ್ಮಗಳನ್ನು ಅನಾಸಕ್ತವಾಗಿ, ನಿಮ್ಮ ನಿಮ್ಮ ಯೋಗ್ಯತೆಗನುಗುಣ ವಾಗಿ ಮಾಡುತ್ತ ಹೋಗಿರಿ. ಅದರಲ್ಲಿಯೇ ನಿಮ್ಮ ಐಹಿಕ, ಪಾರಮಾರ್ಥಿಕ ಸುಖವಿದೆ (ರಹುಗಾ. ೧೪೭). ೨. ತತ್ತ್ವವಿಚಾರದಲ್ಲಿ ಮನಸ್ಸನ್ನು ತೊಡಗಿಸಿದ. ೩. ಶ್ರೇಷ್ಠವಾದ ; ಮುಖ್ಯವಾದ. (ನಾ). ೪. ಪರಮಾರ್ಥಕ್ಕೆ ಸಂಬಂಧಿಸಿದುದು ; ಮೋಕ್ಷಮಾರ್ಗಕ್ಕೆ ಸಂಬಂಧಿ ಸಿದುದು : ಪಾರಮಾರ್ಥಿಕ ವ್ಯಾವಹಾರಿಕ ಪ್ರಾತಿಭಾಸಿಕ ತುಚ್ಛವೆಂದು ಪದಾರ್ಥಗಳು ನಾಲ್ಕಾಗಿ ತಿಳಿಯಲಕ್ಕುಂ (ಬವೇಳ. ೨೦) ; ಮಾನವನ ಜೀವನಸಂಗ್ರಾಮ ಹೇಗೆ ದ್ವಿಮುಖವೊ ಹಾಗೆಯೇ ಮಾನವನ ಅನ್ವೇಷಣೆಗೆ ವಿಷಯವಾದ ವಿಶ್ವವೂ ದ್ವಿಮುಖ—ಪಾರಮಾರ್ಥಿಕ ; ವ್ಯಾವಹಾರಿಕ; ನಿತ್ಯ ; ಅನಿತ್ಯ (ಮುಕ್ತ್ವ. ೪ ಬೀಳ); ನಾನು ಎರಡು ಕೃತಿಗಳನ್ನು ರಚಿಸಿರುವೆನು. ಒಂದು ಲೌಕಿಕ, ಇನ್ನೊಂದು ಪಾರಮಾರ್ಥಿಕ (ದಾಪಸಂ. ೬). ೫. ಪರಮಾರ್ಥವನ್ನು ಕುರಿತ ಚಿಂತನೆ ; ತತ್ತ್ವವಿಚಾರ : ಇವರು ನಿಶ್ಚಿಂತರಾಗಿ ವೃದ್ಧ ರಾಜಮಾತೆಯೊಡನೆ ತಮ್ಮ ಉಳಿದ ಆಯುಷ್ಯ ವನ್ನು ಪಾರಮಾರ್ಥಿಕದಲ್ಲಿ ಕಳೆಯುತ್ತಿದ್ದರು (ಸಚಿತ. ೨೯). ೬. ಅತಿಶ್ರೇಷ್ಠವಾದ ಸತ್ಯ : ಅದ್ವೈತವೇದಾಂತದಲ್ಲಿ ಪರಮಾತ್ಮನನ್ನು ವಿನಾಯಿಸಿ ಬೇರೆ ಯಾವ ವಸ್ತುವೂ ಪಾರಮಾರ್ಥಿಕವಾಗಿ ಇರುವುದಿಲ್ಲ (ಕೆತ್ರಿ. ೧೧). ೭. ವಿಚಾರಮಾಡತಕ್ಕವನು ; ಬಲ್ಲವನು ; ಪ್ರಾಜ್ಞ : ಪಾರಮಾರ್ಥಿಕನೆಂದೊಡೆ ಪ್ರಾಜ್ಞನೆಂಬುದರ್ಥಂ (ಮಮೋಬಿ. ೬-೧೭ ಟೀಕು) ; ಒಂದೆ ಜಾಗ್ರದಿ ವ್ಯಾವಹಾರಿಕನೆಂದು ಸ್ವಪ್ನದಿ ಪ್ರಾತಿಭಾಸಿಕನೆಂದು ಸುಷ್ಪ್ತಿಲಿ ಪಾರಮಾರ್ಥಿಕನೆಂದು ಪೆಸರದಕೆ (ಅಮೃತ. ೯-೨೯); ಸುಷುಪ್ತ್ಯವಸ್ಥೆ ಯಲ್ಲಿಯೂ ವ್ಯಷ್ಟಿಕಾರಣಶರೀರದಲ್ಲಿಯೂ ಅಭಿಮಾನವ ಮಾಡಿದ ಜೀವನಿಗೆ ಪ್ರಾಜ್ಞನೆನುತಲೂ ಪಾರಮಾರ್ಥಿಕನೆನುತಲೂ . . . ಹೆಸರು (ವೇಸಾರ. ೬).

[ಸಂ.]

**ಪಾರಮೇಶ್ವರಾಗಮ** (ನಾ). ಆಗಮಂಗಳಲ್ಲಿ ಒಂದು ಬಗೆ : ಆ ಸಿದ್ಧಾಂತ ಭೇದಂಗಳಾವಾವೆಂದೊಡೆ ಕಾಮಿಕಾಗಮ ಯೋಗಜಾಗಮ . . . ಪಾರ ಮೇಶ್ವರಾಗಮ ಕಿರಣಾಗಮ ವಾತುಲಾಗಮವೆಂಬವಿಪ್ಪತ್ತೆಂಟು ದಿವ್ಯಾ ಗಮಂಗಳಕ್ಕುಂ (ಬವೇಳ. ೬೮). [ಸಂ.]

**ಪಾರಮೇಷ್ಠ್ಯ** (ನಾ). ಬ್ರಹ್ಮಪದವಿ ; ಬ್ರಹ್ಮತ್ವ : ಪಾರಮೇಷ್ಠ್ಯದ ಪರಮವಿಭವದ ಸಾರಭವನವದಾಂಗು (ಬಭಾಗ ೧೧-೯-೧೧);ಪಾರಮೇಷ್ಠ್ಯದ ತನ್ನ ನಿಜಪದಸಾರಸುಖವಜ್ಞಾನ ಮೂಢಶರೀರಿಗಳಿಗಳವಡದೆನುತ ಮನದೊಳಗೆ ಕರುಣಿಸಿದ (ಬಭಾಗ. ೧೧-೨೯-೩೯). [ಸಂ.]

**ಪಾರಮೈಶ್ವರ್ಯ** (ನಾ). ೧. ಅತಿಶಯವಾದ ಸಿರಿ ; ಉತ್ಕೃಷ್ಟವಾದ ಸಂಪತ್ತು. ೨. ಚಕ್ರವರ್ತಿತ್ವ ; ಸಾರ್ವಭೌಮತ್ವ : ಉತ್ತರಾಪಥದ ರಾಜರನ್ನು ಗೆದ್ದು ಅವರಿಂದ ಪಾಳಿಧ್ವಜಾದಿ ಪಾರಮೈಶ್ವರ್ಯಸೂಚಕ ಚಿಹ್ನಗಳನ್ನು ತೆಗೆದುಕೊಂಡನೆಂದು ಬರೆದಿದೆ (ಕಕಾಇ. ೬೨). [ಸಂ.]

**ಪಾರಮ್ಯ** (ನಾ). ೧. ಪರಾಕಾಷ್ಠೆ ; ತಂತ್ರತಂದಿ : ‘ ಬಾಳಗಂಗಾಧರ ಟಿಳಕ ’ ಎಂಬ ಹೆಸರು ಕಿವಿಗೆ ಬಿದ್ದೊಡನೆ . . . ಅತ್ಯತಿಮಹೋತ್ಸಾಹ, ಪ್ರಸ್ಫುಟಿತ ಗಾಂಭೀರ್ಯ, ಪರಿಣತಿಯ ಪಾರಮ್ಯ—ಇವೆಲ್ಲವೂ ಮನಃ ಪಟಲದೆದುರು ಸುಳಿದುಹೋಗುತ್ತವೆ (ರಹುಗಾ. ೧೨೮). ೨. ಪ್ರಾಧಾನ್ಯ : ಜೀವ ಮಾನುಷ್ಯದೊಳು ಪಡೆವಮಿತಭಾವನೆಗಳ ಪಾರಮ್ಯ ವಿಲ್ಲೆಂಬ ಭೂಮಾನುಭೂತಿ (ಮುಕಿಕೆ. ೩೯-೬); ಈ ಗ್ರಂಥಗಳಲ್ಲಿ ದೇಶ ಭಾಷೆಗೆ ಕೊಟ್ಟಿರುವ ಪ್ರಾಶಸ್ತ್ಯ, ಜಾತಿಕುಲಗೋತ್ರಗಳನ್ನು ಬದಿಗೊತ್ತಿ ಭಕ್ತಿಗೆ ಕೊಟ್ಟ ಪಾರಮ್ಯ, ಅತಿಶಯ ಬೆಲೆಯುಳ್ಳದ್ದೆಂದು ಇಂದಿನವರಿಗೆ ತೋಚದೇ ಇರದು (ಶಾರದ. ೩೯೮). ೩. ಶ್ರೇಷ್ಠತೆ : ಸತ್ಯ, ಅಹಿಂಸೆ ಮತ್ತು ಗುರಿಯನ್ನು ಸಾಧಿಸುವ ಸಾಧುಮಾರ್ಗ—ಇವು ಮೂರೂ ಪರಸ್ಪರ ಸಂಬಂಧವುಳ್ಳವುಗಳಾಗಿವೆ ; ಮತ್ತು ನೀತಿನಿಯಮಗಳ ಹಿರಿಮೆಯೂ ಪಾರಮ್ಯವೂ ಅವಕ್ಕೆ ಮೂಲಾವಲಂಬನ (ಶ್ರೀಜಾತಿ. ೧೩೯). [ಸಂ.]

**ಪಾರಯಿಸು**, ಪಾರಯಿಸು, ಪಾರೈಸು, ಹಾರಯಿಸು, ಹಾರಯಿಸು, ಹಾರವಿಸು[1], ಹಾರೈಸು (ಕ್ರಿ). ೧. ಬಯಸು ; ಅಪೇಕ್ಷಿಸು : ಪೌರಾನಗೋಪಕಂಠವನದೊಳ್ ವನಕೇಳಿವಿಳಾಸಮಂ ಸ್ವಯಂಭೂರಮಾ ಣಾಂಬುರಾಶಿವಿಲಸತ್ತಟದೊಳ್ ಜಲಕೇಳಿಲೀಲೆಯಂ ಪಾರಯಿಸಿರ್ದುದಂ ನೆನೆವೊ ನೀಂ (ಆದಿಪು. ೩-೯೩) ; ಪರಿವರ್ತಿತ ಕಟಾಕ್ಷಕಿರಣಾಕ್ಷತಂಗಳಿಂ ನಿಜಾಂಘ್ರಿಗಳನರ್ಚಿಸುವ ಕನ್ಯಾರತ್ನಮಂ ನಿಜಕುಲಕ್ಕಿರುವೆ ಚೂಡಾರತ್ನ ಮೆಂದು ನೋಡಿ ಪಾರಯಿಸಿ[ಪಾಠಾಂ. ಯ್ಸಿ] ಪಲವಂ ನಲ್ಪರಕೆಯಂ ಪರಸಿ (ಹರಿಪು. ೩-೯೭ ವ). **ಪಾರಯ್ಸು** : ೧. ಅದರ್ಕೆ ಪಾರಯ್ಸಿ ಸೌಭಾಗ್ಯಶಾಲಿ ವಿಟನಿಂತೆಂದಂ (ಶಾಂತಿಪು. ೬-೬೫ ವ); ಪಯ್ಸಿಂ ತೊದಳೊಳ್ಪುದಬ್ಬ ನುಡಿಯಂ ಪಾರಯ್ಸಿ[ಪಾಠಾಂ. ರೈಸಿ] ಕೇಳಲ್ಕೆ ನೋನೆನೊ (ಸುಕುಮಾ. ೯-೧೧೩). **ಪಾರೈಸು** : ೧. ಆ ರಾಜಸುತಂ ಪಸಿದಂ ನೀರಡಸಿದೆನೆನಗಿವಲ್ಲದ ಲ್ಲಲ್ಲೆನ್ನಂ ಪಾರೈಸಂ ಪಲವಂ (ಅಜಿತಪು. ೩-೬೬) ; ಆ ರಮಣೀರಮಣರ ಶೃಂಗಾರರಸಾಪೂರ್ವತರ ತರಂಗಿಣಿಯೊಳದೇಂ ಪಾರೈಸಿ ತೊಟಲ್ದುವೊ ರಸ ಪೂರದ ಪಿಂಗಳನೆ ಪೋಲ್ತು ನೋಟ್ಟರ ಕಣ್ಗಳ್ (ಚಂದ್ರಪ್ರ. ೬-೭೭) : ಅಮೃತಮನಿಪ್ಪತ್ತಾಪಕವೊಂದಲ್ಲದಬ್ಬ ವಿಕಾಸಂ ನೆಲೆಗೊಂಡು ಕೋಕಮಿಥುನಂ ಪಾರೈಸಿರಲ್ ಮಬ್ಬು ಪಿಂಗುವುದೇ (ಕಳಸಂ. ೩೯೭). **ಹಾರಯಿಸು** : ೧. ಧಾರಿಣೀಪತಿ ಧರ್ಮಸುತ ತಾ ಹಾರಯಿಸಿಯಿಹುದೆಂದು ಕುಂತೀನಾರಿ ತಾ ಪತಿಕರಿಸೆ ಪಾರ್ಥನು ಚಲುವಮಾತನೆಂದ (ಸಂಧಸ. ೨೩-೯೬) ಎನ್ನ ಪ್ರಾಣ ನಿಮ್ಮ ಪ್ರಸಾದವನೆ ಹಾರಯಿಸುತಿರ್ಪುದಯ್ಯಾ (ಅಪಾಂಕೆ. ೦೬೨-೬೭); ಆರೋಗ್ಯಭಾಗ್ಯವನು ಮನಕೆ ತನುಗೆಂತಂತೆ ಹಾರಯಿಸುವೊಡೆ ಹಲವು ಸರಳನೀತಿಗಳ ಧಾರಯಿಸು ನೆನಸಿನಲಿ ನುಡಿಯಲ್ಲಿ ನಡತೆಯಲಿ ಪಾರಾಗು ಸುಳಿಯಿಂದ ( ಮುಂಕುಳ. ೬೦೬ ). ೨. ಒಳ್ಳೆಯದನ್ನು ಬಯಸು ; ಶುಭ

ಕೋರು ; ಹರಸು : ಈ ಸಂಸ್ಥೆಯು ಕೆಲಸ ನಾನಾಮುಖವಾಗಿ ಹಬ್ಬಲೆಂದು ಹಾರಯಿಸುತ್ತೇನೆ (ಕಬುಕಾಂ. ೧೨೬). ೩. ಎದುರು ನೋಡು ; ನಿರೀಕ್ಷಿಸು ; ಕಾಯು : ರಾಜಕುಮಾರಿ ಬನದೊಳಲ್ಲಲ್ಲಲೆದು, ನಿಂತಾಲಿಸುತ್ತ, ಮರಳಿ ಮುಂಬರಿದು ಹಾರಯಿಸಿ ನಿಡುನೋಟವಟ್ಟುತ್ತೆ . . . ಸವ್ಯಸಾಚಿಯನರಸುತಿರೆ (ಶಕ್ಶ್ಯಂಗ. ೨೦–೫೯೬). ೪. ಸಂತೋಷ ಪಡು ; ಮೆಚ್ಚು : ನಿತ್ಯನುರವಣಿಸಿ ಬರುತಿರ್ದನುಮ್ಮಹದಲ್ಲಿ ಹಾರಯಿಸುತಂ ಹಿಗ್ಗುತಂ ಹೊಂಗಿ ಹೊಗಳುತಂ ಕೀರದೆನ್ನಳವಲ್ಲ ನಿಷ್ಠೆ ಪಿರಿದೆನ್ನುತಂ (ಶಬಸ. ದೀ. ೧೧-೧೫); ಕಂಗಳವಟ್ಟು ಬೆಳೆದೆಳೆಯ ದರ್ಭೆಯಂ ಕಂಡು ಹಾರಯಿಸಿ . . . ಕುಡುಗೋಲ್ವಿಡಿದು ಸಾರ್ದಂ (ಹಕಾ. ೧೨–೯).

**ಹಾರಯ್ಸು** : ೧. ಬಡಿದ ಬಳಲಬೇಡಮ್ಮಲ್ಲಿ ಹಾರಯ್ಸು [ಪಾಠಾಂ. ರೈಸ]ದಿರ್ದಯವನು (ಕೃಬಿಶಾ. ೦೩-೫). ೨. ಮೇಲಣ ಜಗದ ಜನ ಹಾರಯ್ಸು [ಪಾಠಾಂ. ರೈಸಿ] ತಲೆದೂಗುಗಳಲಿರಲಿದ್ದೆಸೆಯ ಬಲ ಮೊಚಿದುದು ಮಹಾಹವವ (ಕೊರಡಾ. ೬–೦೯-೨೦). ೩. ಬರವನೇ ಹಾರಯ್ಸು [ಪಾಠಾಂ. ರೈಸಿ] ಕೃಶಿಯಾದ ಕೌಸಲೆಗೆ ರಾಮನಭಿವಂದಿಸಿದನು (ಕೃಬಿಶಾ. ೦೬–೯). ೪. ಊರುದ್ವಯದೊಳ್ ಕರದೊಳ್ ಚಾರು ಭುಜಾಗ್ರಂಗಳೊಳ್ ಸುಬಾಹುಗಳೊಳ್ ಪೃಥುವಕ್ಷಃಸ್ಥಳದೊಳ್ ಗಿರಿಸುತೆ ಹಾರಯ್ಸುಕೆ ಕುಸುಮಮಾಲೆಯುಂ ಪಸರಿಸಿದಳ್ (ಗಿರಿಕ. ೫–೮೦): ಹರುಷದಿಂದ ಪಿನಾಕಿ ಹಾರಯ್ಸಿದನು ಪೊಯ್ಸಿದನಖಿಳಭೇರಿಗಳ ನಾಕಪತಿ . . . ರಾವಣಿಯ ಮರಣದಲಿ (ತೊರಾ. ೬–೪೪–೫೪). **ಹಾರವಿಸು₁** : ೧. ಹಾರವಿಸಿ ನಲಿದೆತ್ತಿ ಕಿಂಚಿತು ಭಾರವಿಲ್ಲದೆ ಕೈಗೆ ಸೋಂಕದೆ ಸಾರತೇಜಃಪುಂಜತನು ಶಿಶು ತನ್ನ ಕೈಯೊಳಗೆ ಪೊರವಿಸಿಕೊಂಡಿರಲು (ಪ್ರಭುಲೀ. ೬–೩೬) ; ಕಲ್ಲೆದೆಯೋಲಿರ್ದು ಹಾರವಿಸಿದೆನು ಪಿಡಿದು ಮುಟ್ಟಿದ ಕೊಂಬೆಗಳ್ಮುರಿದುವೇ ಇಲ್ಲ ತನಗಿನ್ನು ಗತಿ ಸೆರೆಗಳಂ ಬಿಡಿಸುವವರಿಲ್ಲಿನ್ನು . . . ಎಂದು ಮೊರೆಯಿಟ್ಟಳು (ಹರಿಶ್ಚಂ. ೩–೨೯). ೩. ಹರಿಯ ಬರವಿಗೆ ಹಾರವಿಸಿ . . . ಮೆರೆದಿಹವು ತೋರಣಗಳತ್ತರದಲ್ಲಿ ಸಾಲ್ವೆರೆದು (ಕೋಗದು. ೩–೧೧). ೪. ನೋಡಿರೆ ಬಸವಸುಕುಮಾರನಂ ನೀವೆನಲು ಸರ್ಬರು ಕಂಡು ತಾವಾಗ ಹಾರವಿಸಿ ಹೊಡವಂಟು (ಬಸಪು. ೫–೪೬) ; ತಂಗಿಯ ನಾರು ಸೋಲಿಸುವವರು ತಾವಾರಿಲ್ಲ ನೃಪರೊಳಗೆ ಭೂರಿವಿಪ್ರರ ಮಧ್ಯದಲ್ಲಿನ್ನಾರದುಂಟೆಂದೆನುತ ಮನದಲಿ ಹಾರವಿಸಿ ಶ್ರೀಕಂಠವರವಿದು ಸಿದ್ಧಿಸುವುದೆಂದ (ಶಂಚಕ. ೩೦–೪೦); ಹಾಡುವ ಹಾರವಿಸುವ ಸುರೆಯರ . . . ಕಂಡು ಹೇಸುತ ಹನುಮ ಹೊರಟನು (ತೊರಾ. ೫–೨–೩೬). **ಹಾರೈಸು**: ೧. ನೀರೊಳಗಣ ಪೆಣನಂತೆಪೊಲಾರೆಟ್ಟೊಡಮುರುಳೆವಂದು ಪುರುಳಿಲ್ಲದ ಹುಂಕಾರದೆ ಬಾತು ಬಲ್ಮೆಗೆ ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್ (ಲೀಲಾವ. ೧–೨೪); ಹರನ ಕರುಣಕ್ಕೆ ಹಾರೈಸಿ ಭಕ್ತಿಭರದಿಂ ಭಾರೈಸಿ (ಬಸ. ೪–೬೦); ಹರಿ ಮೆಚ್ಚನಯ್ಯ . . . ಹಣವಿಗೆ ಹಾರೈಸಿಕೊಂಡು ತಿರುಪತಿಗ್ಹೋಹರ ಕಂಡು ಹಣಕಾಸು ಕೊಂಡು ಬಂದು ಸ್ವಾಮಿಯ ನೋಡುವವಗೆ (ಪುರಂದ. ೨–೬೪–೪); ನಾನೆಂದೂ ಅವರಿಗೆ ಕೆಡಕು ಹಾರೈಸೊಲ್ಲ (ಪುಸರು. ೩೩೨). ೨. ಮಂಗಳವೃತ್ತಂಗಳನೋದಿ ಪೊಗಟ್ದು ಹಾರೈಸಿ ಪರಸುವ ಮಂದಾರುವೃಂದಾರಕರ ಸಂದಣಿಗಳೊಳಂ . . . ಅತ್ಯುತ್ಸವೋತ್ಸವಪ್ರಕ್ಷೋಭಿತವಾಗಿರ್ದುದು (ಅಪಂಪು. ೫–೫೩) ; ಈ ವಿವಾಹ ನಿರ್ವಿಘ್ನವಾಗಿ ನೆರವೇರಲಿ ಎಂದು ಹಾರೈಸದವರು ಒಬ್ಬರೂ ಇಲ್ಲ (ಶ್ರೀಕಾಶ ೧೧೬). ೩. ತರುಣಿಯರು ವೀಧಿವೀಧಿಯೊಳಡ್ಡಗಟ್ಟಿ ಸೌಂದರ ನಿಮ್ಮ ಬರವ ಹಾರೈಸುತಿರ್ದಪರು (ಸೌಂದಪು. ೦೫–೮); ಆರ ಹಾರೈಸಿವರೇನುಂಟು ಬಟ್ಟನೀರ ಕಡೆದರಲ್ಲೇನುಂಟು (ಪುರಂದ. ೧–೧೨೪ ಪಲ್ಲವಿ); ಬಾಯಾರಿ ಹೋದರೆ, ನೀರೊಡನೆ ಬತ್ತುವುದು. ತಾಯ ಸೋದರರೆಂದು ಹಾರೈಸಲು . . . ಮಾಯಾವಾಗುವರು ಮೆಲ್ಲನೆ ದೂರದಿಂದ (ಕಂಪು. ೫೦–೧). ೪. ಅಯ್ಯ ನೀ ನೋಡಿದರೆ ನೋಡು ನೋಡದಿದ್ದರೆ ಮಾಣು ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ (ಪುರಾದೇ. ಬ. ೩೯–೮೩) ; ಚಿತ್ರದಲಿ ಹಾರೈಸಿ ನಗುತಲು ಮತ್ತೆ ಸುಮ್ಮಾನದಲಿ ಬಂದಳು ಮತ್ತಗಜಗತಿಯಿಂದಲಾ ಸಮಯದಲಿ ಮದವತಿ(ಪ್ರಭುಲೀ. ೫–೪೦) ; ಮುನಿಪತಿ ಚಿತ್ರದಲಿ ಹಾರೈಸಿ ಹರಸಿದನಂದನುಸುತನ (ತೊರಾ. ೫–೦–೩೫). [<ಪಾರ್₁ + –ಇಸು₃]

**ಪಾರಯ್ಸು** ' ಪಾರಯಿಸು ' ನೋ.

**ಪಾರಲೌಕಿಕ** (ಗು). ೧. ಪರಲೋಕಕ್ಕೆ ಸಂಬಂಧಿಸಿದ ; ಪರಲೋಕದ : ಪುಸ್ತಕಗಳೆಂಬ ಗುರುಗಳು . . . ಲೌಕಿಕ ಮತ್ತು ಪಾರಲೌಕಿಕ ವಿಷಯಗಳ ಪರಿಜ್ಞಾನ ಮಾಡಿಕೊಡುವರು (ಗ್ರಂಥಾಂ. ೨); ಸತ್ಯಂ ಎಂದರೆ ಪಾರಲೌಕಿಕ ಸದ್ರೂಪಿಯಾದ ಬ್ರಹ್ಮವೆಂತಲೂ ಅರ್ಥ ಮಾಡುತ್ತಾರೆ (ಭಾರತ. ಬ್ರ ಅ೩೬). (ನಾ). ೨. ಪರಲೋಕಕ್ಕೆ ಸಂಬಂಧಿಸಿದುದು : ಮೋಕ್ಷ : ಮಾಗನೀವೆನೆ ಪಾರಲೌಕಿಕವಗಡಹುದೆಪಖ್ಯಾತಿ ತನ್ನನು ತಹುಹುದ್ಯೋಗದಲ್ಲಿ (ಕುಮ್ಯಾ. ೧೧–೧೩) ; ದಶರಥಂ . . . ಪಾರಲೌಕಿಕದೆಡೆಗೆ ತನ್ನಾತ್ಮವಂ ತಿರುಗಿಸಲ್ಕೆಳಸಿ, ಸಚಿವರಂ ಗುರುಗಳಂ ಪ್ರಜೆಗಳಂ ಕರೆದೊರೆದಂ (ಶ್ರೀರಾಮಾ. ೫೬–೬೬). [ಸಂ.]

**ಪಾರಲೌಕಿಕವಿಧಿ** (ನಾ). ಸತ್ತವರಿಗಾಗಿ ಮಾಡುವ ಕ್ರಿಯೆ ; ಉತ್ತರ ಕ್ರಿಯೆ ; ಅಪರಕರ್ಮ : ದವಿತಾರಿಯ ಭುಜಬಲವಿಕ್ರಮದಳವಿಗ ಮಚ್ಚಿ ಮಚ್ಚುಗುಡಿಸುವವೊಲನುಕ್ರಮದಿಂ ನೀಗರ್ದಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯಂ (ಶಾಂತಿಪು. ೪–೫೬). [ಪಾರಲೌಕಿಕ + ವಿಧಿ]

**ಪಾರವಶ್ಯ** (ನಾ). ೧. ಬೇರೆಯವರಿಗೆ ವಶವಾಗುವುದು ; ಪರಾಧೀನತೆ : " ಪರವಸಮೆಂಬುದು ಪಾರವಶ್ಯಮೆಂದೆನಿಪರ್ಥಂ " (ಶಸಾ. ೦೦೬). ೨. ಆನಂದದ ಪರವಶತೆ,– ಮೈಮರೆವು : ಅತ್ತಲೊಬ್ಬಯ್ಯಂ ಶಿವಾವಂದೋತ್ಸವಂ ತಾನೆಂಬ ಪೆಸರಂ ಪೊತ್ತು ಲಿಂಗಧ್ಯಾನತದ್ಗತಪಾರವಶ್ಯದಲಿ . . . ಸಮಾಧಿಸ್ಥನಾಗಿರಲು (ಬಸಪು. ೩೪–೪). [ಸಂ.]

**ಪಾರವಾರಿ** (ನಾ). (?) : ಪೊಗೆ ಭೋಗೆಯುಂ ಪಾರವಾರಿಯುಂ × × × ಲವಿದಾದೋನುಂ ಕೊಟ್ಟೋನುಂ(ಎಕ. IV, ಕೃಷ್ಣರಾ. ೯೩–೩; ಶ. 780).[?]

**ಪಾರವೆಯ್ದಿಸು** (ಕ್ರಿ). ೧. ದಡವನ್ನು ಸೇರಿಸು ; ದಾಟಿಸು : ಘೋರತರನಿಸ್ಸಾರಪಟು ಸಂಸಾರಪಾರಾವಾರವಂ ಬೇಗೆ ಪಾರವೆ[ಪಾಠಾಂ. ವ]ಯ್ದಿಸಲಾವುಮಾಪತನೂಭವನೆ ಬಾರಾ (ಬಸಪು. ೨೪–೪೦). ೨. ತುದಿ ಮುಟ್ಟಿಸು ; ಕೊನೆಗಾಣಿಸು : ಪೂತವಾಗಿಹ ನಿಮ್ಮ ಕೃತಿಯಂ ಪಾರವೆ [ಪಾಠಾಂ. ವ]ಯ್ದಿಸಿ ಪೊರೆವುದೆಮ್ಮನುದಾರವಾಹಿಮಾಗಾರ ಬಸವ ಕುಮಾರ ಭವದೂರ (ಬಸಪು. ೦–೬). [ಪಾರ್₃ + ಎಯ್ದಿಸು]

**ಪಾರವೆಯ್ದು** (ಕ್ರಿ). ದಡವನ್ನು ಸೇರು ; ದಾಟು ; ಪಾರಾಗು : ಹೆದ್ದೊರೆಯಮುಚ್ಚಿ ತಡಿಗೆ ದಾಂಟಿಸುವ ತೋರವಹ ಬಲುದೆಪ್ಪವಿರೆ ಮಾನಹಾರಿ ಸೋರೆಯೋಡಂ ಪಿಡಿದು ತಾಂ ಪಾರವೆ[ಪಾಠಾಂ. ವ]ಯ್ದುವೆನೆಂಬವನವೊಲು ಕೇಳು ಜಗದೇವಾ (ಬಸಪು. ೬೦–೪೬). [ಪಾರ್₃ + ಎಯ್ದು]

**ಪಾರಶವ** (ನಾ). ೧. ಒಂದು ಬಗೆಯ ಲೋಹ ; ಹದಮಾಡಿದ ಕಬ್ಬಿಣ; ಉಕ್ಕು. ೨. ಒಂದು ಬಗೆಯ ಕಬ್ಬಿಣದ ಆಯುಧ : " ಪಾರಶ [ಪಾಠಾಂ. ಸ]ವಮನೆ ಶಸ್ತ್ರ "(ಶಂಗಸಾ. ೩೦–೩). ೩. ಬ್ರಾಹ್ಮಣನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಮಗ. [ಸಂ.]

**ಪಾರಶಿಕ, ಪಾರ್ಸಿಕ** (ನಾ). ೧. ಪರ್ಷಿಯಾದೇಶ ; ಇರಾನ್ : ನಡೆದುದು ಭೂರಿಬಲ . . . ವಿಂಧ್ಯ ಬೋಟಕ ಪಾರಶಿ[ಪಾಠಾಂ. ಸಿ]ಕ ಸಾಂಬ್ರಾಣಿ ಹುರುಮಂಜಿಗಳ ಬಳಿವಿಡಿದು (ತೊರಾ. ೪–೯–೪). ೨. ಪರ್ಷಿಯಾದೇಶದ ವ್ಯಕ್ತಿ : ಜಡಗತಿಯ ಕೋಣದುಗ್ಗಡದ ಕೇಳಿಯ ತಕ್ಕ ನುಡಿಯುವಳೆ ಪಾರ

ಶಿಕದವಳಸಿಯಳಿ (ಜಜ. ೬-೨೦). ೩. ಪರ್ಷಿಯಾದೇಶದ ಕುದುರೆ.

**ಪಾರ್ಸಿಕ** : ೨. ಕಾಳಗವ, ತಾಂತಿ ನಿನಗಿಲ್ಲೆಂದು ಪಾರ್ಸಿಕಂಗಿತ್ತುದಾ ದೈವಂ (ಶಾರಸಿ. ೬-೦೩೨). [<ಸಂ. ಪಾರಸೀಕ]

**ಪಾರಶೀಕ** (ನಾ). ಪರ್ಷಿಯಾದೇಶದ ಜನ : ಪಾರಶೀ[ಜಾತಾಂ. ಸೀ]ಕ ಕಿರಾತ ಬರ್ಬರ ಪಾರಿಯಾತ್ರರ ಮುಂಜುದು ಸರ್ವವಿಹಾರವನು ಮಾಡಿದನು ಮ್ಲೇಚ್ಛ ಸಹಸ್ರಕೋಟಿಗಳ (ಕುವ್ಯಾಸ. ೬-೨೮). [ಸಂ.]

**ಪಾರಸ** (ನಾ). -ಪಾರಶಿಕ ೧ : ಬರ್ಬ್ಬರಂ×[ಪಾರಸ]ದೈಕಪಾದ ಲಂಬ ಕರ್ಣ್ಣಸ್ತ್ರೀರಾಜ್ಯ ಘೋಳಪಾ×ವೆಂಬ ನಾನಾದೇಶದೇಶಾಂತರ×××ಗಳ (ಕೌಇಇ. XX, ೦೦೨-೪೦; 1144 ?) ; ಪೂರ್ವಕಾಲದಲ್ಲಿ ಪಾರಸದೇಶವನ್ನು ಆಳಿದಂಥ ವಿಖ್ಯಾತರಾದ ಮುಸಲ್ಮಾನ ಅರಸರಲ್ಲಿ ಒಬ್ಬ ಬಹುಪರಾಕ್ರಮಶಾಲಿಯಾದ ಪಾತ್ರಷಹನು ಇದ್ದನು (ಕಗದ್ಯ. II, ೦೩). [ಸಂ.]

**ಪಾರಸವ** (ನಾ). =ಪಾರಶವ ೧ : "ಶಸ್ತ್ರಂ, ತಿಕ್ಷ್ಣಂ, ಅಯಃ, ಪಾರಸವಂ —ಈ ೪ ಉಕ್ಕು" (ಹಲಾಯು. ೨೮-೦೭). [ಸಂ.]

**ಪಾರಸಿ** (ಗು). ೧. ಪರ್ಷಿಯಾದೇಶಕ್ಕೆ ಸಂಬಂಧಿಸಿದ. (ನಾ). ೨. ಪರ್ಷಿಯಾದೇಶದ ಭಾಷೆ : ಓರೆದು ನೋಡೀ ಲಿಪಿಯು ಓದಲ ಬಲ್ಲವರು ಆರೆ ಪಾರಸಿಯುಲ್ಲ ಅರಬ್ಬಿಯುಲ್ಲ (ಕರಂ. ೦೩೯-೬). [ಸಂ. ಪಾರಸೀ]

**ಪಾರಸಿಕ** (ನಾ). ೧.=ಪಾರಶಿಕ ೧ : ಪಾರಸಿಕದೇಶದಲಿ ಪುಟ್ಟಿರೆ ವನಾಯುಜಂ (ಶುಂಗರಾ. ೬೩-೨೦); ಏಷ್ಮವನು ಯಾರೋಹಿಗೊಂದಿಸಿದ ಸೇತು, ಪಾರಸಿಕವೀರರಿಗೆ ಹಾ ರಾಹು ಕೇತು ! (ಪಾರಸಿ. ೬-೦೫೬). ೨. ಪರ್ಷಿಯಾದೇಶದ ಜನ : ಪಾರಸಿಕರಸಾಧ್ಯಬಲಂ ಪೆಚ್ಚಿದ ಹಲ ಸಿರಿಯ ಪೋಗೆ (ಪಾರಸಿ. ೦-೦). ೩. ಪರ್ಷಿಯಾದೇಶದ ಕುದುರೆ. [ಸಂ.]

**ಪಾರಸಿಗ** (ನಾ). ಪರ್ಷಿಯಾದೇಶಕ್ಕೆ ಸೇರಿದವನು ; ಪಾರಸಿಕ : ರುದ್ರದತ್ತಂ ಪಾರಸಿಗನುಪದೇಶಮಂ ಬೇಟೆಯುಂ ಕೇಳ್ದನಪ್ಪುದಱಿಂ ತನ್ನ ಕಯ್ಯ ಕತ್ತಿಗೆಯಿಂದೇಟಾಡ ಪೋರಿಗಳಂ ತಲೆಯನರಿದು (ಬಂಕಂ. ೯-೩೩ ಪ). [ಪಾರಸ+-ಇಗ]

**ಪಾರಸೀಕ** (ನಾ). ೧. = ಪಾರಶಿಕ ೧ : ಪಾರಸೀಕದೇಶದಲ್ಲಿ ಹುಟ್ಟಿದುವು ವನಾಯುಜಂಗಳೆಂಬುದು (ಹಲಾಯು. ೬೨-೨೬೩); ಬರ್ಬರ ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕರ ತುರುಷ್ಕ ಮರುಪ್ರಭೃತಿಭೂಪಾಲರಿಂ ಭಯಾನಕರಸಮುಂ . . . ನೆಗೞುತ್ತುಮಿರೆಯಿರೆ (ಜಗ. ೨-೪೯ ಪ). ೨. = ಪಾರಸಿಗ : ತುರುಕ ಬರ್ಬರ ಪಾರಸೀಕರ ತುರಗವೈಸಾವಿರ ಸಹಿತ ಮೋಹರಿಸಿ ನಿಂದನು ಶಕುನಿ ಥಟ್ಟಿನ ಬಲದ ಬಾಹೆಯಲಿ (ಕುವ್ಯಾಗ. ೦-೯). ೩. ಪರ್ಷಿಯಾದೇಶದ ಭಾಷೆ ; ಪಾರಸಿ : ಈ ಶಾಸನಗಳು ಬಾಣಮುಖಾಕ್ಷರದಿಂದ ಕೆತ್ತಲ್ಪಟ್ಟಿರುವುವು. ಇವ್ವಗಳು ಪಾರಸೀಕ, ಸೂಸಾನ್ ಮತ್ತು ಶೇವಿಯಾಯು ಎಂಬ ಮೂರು ಭಾಷೆಗಳಲ್ಲಿವೆ (ಕಶಾಶ. ೨-೩). ೪. ಪರ್ಷಿಯಾದೇಶದ ಕುದುರೆ : "ವಾನಾಯುಜ ವಾಜಿಕುಳಂ ಪಾರಸೀಕವೆಂದಱಿಗವಱಿಗೊಳ್" (ಪಮ್ಮಕೋ. ೬೬-೨೩). [ಸಂ.]

**ಪಾರಳತೆ** (ನಾ). (ಭೂಮಿಯ) ಒಂದು ತುದಿಯಿಂದ ಮತ್ತೊಂದು ತುದಿಯವರೆಗಿನ ಅಳತೆ ; ವ್ಯಾಸದ ಅಳತೆ : ಭೂಗೋಳದ ವ್ಯಾಸವು ಅಥವಾ ಭೂಗರ್ಭದ ಪಾರಳತೆಯು ೭೯೧೨ ಮೈಲುಗಳುಳ್ಳದ್ದಾಗಿದೆ (ಕೂಗೋಳ. ೩). [ ಪಾರ್₂+ಅಳತೆ ]

**ಪಾರಾ** ' ಪಹರೆ ' ನೋ.

**ಪಾರಾಚೌಕಿ** (ನಾ). ಪಹರೆಯವರು ಕಾವಲು ಇರುವ ಚಾವಡಿ,-ಠಾಣೆ : ಅವರು ಹಗಲು ಟೀಪುಸುಲ್ತಾನರ ಸರಹದ್ದಿನಲ್ಲು ಇದ್ದುಕೊಂಡು, ರಾತ್ರಿ ಕಾಲದಲ್ಲಿ ಪಾರಾಚೌಕಿ ತಪ್ಪಿಸಿ, ಕಳ್ಳಮಾರ್ಗವಾಗಿ ಕೊಡಗಿನ ಸೀಮೆ ಸರಹದ್ದಿನ ಒಳಗೆ ಬರುವುದು (ರಾಜೇಂದ್ರ. ೦೦೩). [ಪಾರಾ (<ಪಹರೆ)+ಚೌಕಿ]

**ಪಾರಾಟ** ' ಪಾಱಾಟ ' ನೋ.

**ಪಾರಾಪತ** (ನಾ). ಪಾರಿವಾಳ ; ಕಪೋತ : ಮಯೂರಪಾರಾಪತಪ್ರಕರ ಕುಕ್ಕುಟ ಘಟಕತ್ತುಚಾಪ ತಿತ್ತಿರಿ ಕಪಿಂಜಳಾದಿ ವಿವಿಧವಿಹಂಗಪರಿಶೋಭಿತೋಪಾಂತದೊಳ್ (ಧರ್ಮಾಮೃ. ೩-೬೨ ಪ) ; ಪ್ರಮತ್ತ ಪರಪುಷ್ಟಮಯೂರ ಕೀರಪಾರಾಪತಂಗಳುಲಿವಮುಂ . . . ಸೊಗಯಿಸುತ್ತುಮಿರಲ್ (ಶುಕಾಸ. ೬ ೬೨ ಪ). [ ಸಂ. ]

**ಪಾರಾಯಣ** (ನಾ). ೧. ದಾಟುವುದು ; ಕಡೆಹಾಯುವುದು. ೨. ಗ್ರಂಥಾದಿಗಳನ್ನು ಮೊದಲಿನಿಂದ ಕಡೆಯವರೆಗೆ ಓದುವುದು ; ಗ್ರಂಥಾದಿಗಳ ಆಮೂಲಾಗ್ರವಾದ ಪಠನ : "ಸಾಕಲ್ಯವಾಚನಂ, ಪಾರಾಯಣಂ—ಈ ೨ ಕಡೆ ಮುಟ್ಟಲೋದುವುದು" (ಹಲಾಯು. ೬೬-೨೪೭); ವೇದಪಾರಾಯಣದ ಫಲ ಗಂಗಾದಿ ತೀರ್ಥಸ್ನಾನಫಲ . . . ವಸ್ತ್ರಾದಿ ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ (ಕುವ್ಯಾಗ. ೦೩-೨೦) ; ತಿರುಪರಾತ್ಪರವಾಸುದೇವನ ತಿರುಪಡಿಗಳನು ನುತಿಸಿ ಪೂಜಿಸಿ ತಿರುಪ್ರಬಂಧಾದಿಗಳ ಪಾರಾಯಣವ ಮಾಡುತಲಿ (ರಗಶಾ. ೦೯-೯೯); ಪಾರಾಯಣ, ಜಪಗಳು ಪೂಜೆಯಲ್ಲಿ ಆವಶ್ಯಕಗಳಾಗಿರುತ್ತವೆ (ಶಾರದ. ೨೨೬). ೩. ಗ್ರಂಥಾದಿಗಳನ್ನು ಮೊದಲಿನಿಂದ ಕಡೆಯವರೆಗೆ ಓದಿದವನು : ಪಂಡಿತ ; ಪಾರಗ : "ಅನಂತಪಾರಾಯಣಂ ಮಿಗೆ ಓದಿದವನಕ್ಕುಂ" (ಶುಂಗರಾ. ೭೩-೩) ; ನಿಜಾನ್ವವಾಯಪಾರಾಯಣ ನಿಂತು ಸಂತತಿಗದರ್ಪನೊರ್ದಟದನುತ್ತರೋತ್ತರಂ (ಶಾಂತಿಪು. ೬-೦೦೩).

**ಪಾರಾಯಣ ಮಾಡು** = ೧. ಗ್ರಂಥಾದಿಗಳನ್ನು ಮೊದಲಿನಿಂದ ಕೊನೆಯವರೆಗೆ ಓದು : ಪಾರಾಯಣ ಮಾಡಿದ ಬ್ರಾಹ್ಮಣಭೋಜನಕ್ಕಂ ದಕ್ಷಿಣೆಗಂ ಬಿಟ್ಟರು (ಕೌಇಇ. XI-i, ೦೦೭-೯ ; 1076) ; ಶ್ರೋತ್ರಿಯರು . . . ದಿನವೂ ರಾಮಾಯಣವನ್ನು ಪಾರಾಯಣ ಮಾಡುತ್ತಿದ್ದರು (ಹಂಪೆ. ೦೯೭). ೨. ಒಂದೇ ವಿಚಾರವನ್ನು ಹಲವು ಸಲ ವಿವರಿಸಿ ಹೇಳು : ಮತ್ತೆ ಮತ್ತೆ ಅದೇ ವಿಷಯವನ್ನು ಪಾರಾಯಣ ಮಾಡಬೇಡ (ರೂಢಿ). [ ಸಂ. ]

**ಪಾರಾವತ₁** (ನಾ). ಪಾರಿವಾಳ ; ಕಪೋತ : "ಪಾರಾವತಾಖ್ಯಂ ಕಪೋತಂ" (ಪಮ್ಮಕೋ. ೯೨-೦೯) ; ರಾಜಹಂಸ ಪಾರಾವತಮಿಥುನಂಗಳುತ್ತುಂಗ ಪ್ರಾಸಾದ ಶಿಖರಮಣಿಗವಾಕ್ಷಾಂತರಾಳವಿವಿಧಗೃಹಾಂತರಗತಂಗಳಾದುವು (ಶಂಕಶಾ. ೯-೯೯ ಪ) ; ಪಾರಾವತಂ ವಾನರನೆತ್ತಾಡಂಬೆ ಸಿಂಹಂ . . . ಕಾಜೆಗ್ರೋಟೆಯೆಂಬೀ ತಿರಿಕವ್ರಾತಂಗಳೊಳ್ ಸಂಭವಿಸಿ ದುರುತದಿಂ ದುಃಖಮಂ ಪೆತ್ತಲಾಟೆಂ (ಧರ್ಮಾಮೃ. ೦೪-೦೫೭); ಶುಕ ನೀಲಕಂಠ ಪಾರಾವತ ಮಧುಕರನಿಕರದಿಂದದು ಸೊಗಯಿಪುದು (ಕುಂರಾಸಾಂ. ೯-೩೦). [ಸಂ.]

**ಪಾರಾವತ₂** (ನಾ). ಒಂದು ಬಗೆಯ ಮರ ; ಹಾಲಿವಾಣ : ಪಾರಾವತವೆಂಬ ಮರಂಗಳಂ ಪಶ್ಚಿಮದಲ್ಲಿ ನೆಲ್ಲಿಮರಗಳಂ ಉತ್ತರದಲ್ಲಿ . . . ಹಾಕಬೇಕು (ಸೌಗಂಧಿ. ೯೨೭-೦೯). [ ? ]

**ಪಾರಾವಾರ** (ನಾ). ೧. ನದಿ, ಸಮುದ್ರ ಮೊದಲಾದುವುಗಳ ಎರಡು ದಂಡೆಗಳು,- ತೀರಗಳು. ೨. ಸಮುದ್ರ ; ಕಡಲು : "ರತ್ನಾಕರಃ . . . ಪಾರಾವಾರಃ, ತೋಯಧಿಃ, ಅರ್ಣವಃ, ಜಲರಾಶಿಃ, ಸಾಗರಃ, ಸಮುದ್ರಃ—ಈ ೧೨ ಸಮುದ್ರಂ" (ಹಲಾಯು. ೦೦೭-೬೦) ; ಶ್ರೀರಮಣಿಯಂ ದ್ವಿಷದ್ಬಳಪಾರಾವಾರದೊಳುದಗ್ರಭುಜವಿಜಯಮಹಾಮೇರು [ವಿ]ನೆ ಕಡೆದು ಪಡೆದಳವಾರುಮನಿಱಿಸಿದುದುದಾತ್ತನಾರಾಯಣಾ (ಶಂಕಶಾ. ೯-೦); ಸದಸದಾದಿಪಸುಸ್ವರೂಪನಿರೂಪಣಪ್ರವೀಣಸಿದ್ಧಾನ್ತಾದಿ ಸಮಸ್ತಶಾ[ಸ್ತ್ರಾ]ವ್ಯಾಕೃತಪಾರಾವಾರಪಾರಗರುಂ (ಕೌಇಇ. XX, ೯೬-೨೫; 1072) ; ಕಾಯುದ್ದ ಛಾಯ್ಯೆಂದುವೇಟುಂ ಕುಲಪಾರಾವಾರವಿಪಾ ಬೇಸಗೆಯ ಬಿಸಿಲೊಳ್ (ಜಗತಿ. ೦೭-೬೦). ೩. ಎಲ್ಲೆ ; ಮೇರೆ : ಅಮ್ಮಯ್ಯನ

ಸಂತೋಷಕ್ಕೆ ಪಾರಾವಾರವೇ ಇಲ್ಲಿಲ್ಲ (ಶಂಗಾಶ್ಮ. ೩೨೭); ನಾನು . . . ನನ್ನ ಪಾರಾವಾರವಿಲ್ಲದ ಅಂಧಜಗತ್ತಿನ ಪರಮೇಶ್ವರನನ್ನು ಕರೆಯು ತ್ತಿದ್ದೆನು (ಇತ್ಯಾ. ೨೦೬). ೪. [ಜೈನ] ಒಂದು ದೀರ್ಘವಾದ ಅವಧಿ,- ಕಾಲ; "ಪಲ್ಯತಕ್ಕಿಂತ ಬಹು ಮಹತ್ತಾದ ಕಾಲ" (ಕೈಪಕೋ. ೦೬೬): ಏಕಪಾರಾವಾರೋಪಮಾಯುಷ್ಯನುಂ ವರ್ಷಸಹಸ್ರಸಂಕಲ್ಪಕಲ್ಪಿತಾಮೃತಾ ಹಾರನುಂ . . . ಆಗಿ (ಚಂಪು. ೨-೬೯ ವ). [ಸಂ.]

**ಪಾರಾವಾರಗ** (ನಾ). ಎಲ್ಲವನ್ನೂ ಸಂಪೂರ್ಣವಾಗಿ ತಿಳಿದವನು; ಪಂಡಿತ; ನಿಷ್ಣಾತ: ಕುಮಾರಬ್ರಹ್ಮಚಾರಿಯಾಗಿ ಭದ್ರಬಾಹು ತಪಂ ಬಟ್ಟು ಕೆಲವುದಿವಸದಿಂದೊಳಗೆ ದ್ವಾದಶಾಂಗಚತುರ್ದಶಪೂರ್ವಮಪ್ಪಾಗಮ ಮೆಲ್ಲಮಂ ಗ್ರಂಥಾರ್ಥಸ್ವರೂಪದಿಂ ಕಲ್ತು ಸಕಲಶಾಸ್ತ್ರಪಾರಾವಾರಗನಾಗಿ (ವಡ್ಡಾರಾ. ೬೯-೨೪). [ಸಂ.]

**ಪಾರಾಶರ** (ಗು). ೧. ಪರಾಶರಋಷಿಗೆ ಸಂಬಂಧಿಸಿದ. (ನಾ). ೨. ಪರಾಶರಋಷಿಯ ಮಗ; ವೇದವ್ಯಾಸ: "ಪಾ[ಶಾಕಾ. ಪ]ರಾಶರಂ ವ್ಯಾಸನಕ್ಕುಂ" (ಮಂಗರಾ. ೬೬-೦೦); ಇದಂ ಮುನಿಪಾರಾಶರನೊಲ್ದು ಪೇಟ್ದ (ಪಂಪಭಾ. ೬-೩). ೩. ಪರಾಶರಸಂಪ್ರದಾಯದ ಸೂತ್ರಗಳು,- ನಿಯಮಗಳು. [ಸಂ.]

**ಪಾರಾಶರಿ** (ನಾ). ಪರಾಶರಸಂಪ್ರದಾಯದ ಸಂನ್ಯಾಸಿ,- ಭಿಕ್ಷು: "ಭಿಕ್ಷುಃ, ಪರಿವ್ರಾಟ್, ಕರ್ಮಂದೀ, ಪಾರಾಶರೀ, ಮಸ್ಕರೀ-ಸನ್ಯಾಸಿಯ ಹೆಸರುಗಳು" (ಸಿದ್ಧಾಂತಿ. ೩೩೬). [ಸಂ. ಪಾರಾಶರಿನ್]

**ಪಾರಿ**$_1$ 'ಪಾಟು' ನೋ.

**ಪಾರಿ**$_2$ (ನಾ). ಗಾಡಿಯ ತೊಟ್ಟಿಲಿಗೆ ಆಸರೆಯಾಗಿರುವ ಎರಡೂ ಪಕ್ಕಗಳ ಮರದ ಪಟ್ಟಿ: ಬಂಡಿಯ ಜಾಡು ತುಂಬಾ ಏರುಪೇರಾಗಿದೆ. ಇಳಿದು ಪಾರಿ ಹಿಡಿಯುತ್ತೇನೆ. ನಿಧಾನವಾಗಿ ಬಿಡು (ರೂಢಿ).

[ದೇ.॥ ತಮಿ. ಪಾರ್]

**ಪಾರಿ**$_3$, **ಬಾರಿ**$_1$ (ನಾ). ಒಂದು ಬಗೆಯ ಸಸ್ಯ: ಹಿಂಗು ನಿಳಂಗ ವಹ್ನಿ ಕಟುಕತ್ರಯ ಸೈಂಧವಮುಂ ಫಲತ್ರಯಂ ಸಂಗತಮಪ್ಪ ಪಾರಿ [ಶಾಕಾ. ರೆ, ಲೆ]ಯಜಮೋದ ಪುರಂದರದೆಂಬಿವಂ . . . ಕೊಳಲ್ ಶೃಂಗಿ ಮಹೋರಗಾದಿ ವಿಷಸಂತತಿಯಂ ಕಳೆಗುಂ (ಖಸುದ. ೩-೬೨). **ಹಾರಿ**$_1$: "ಬಹುಪ್ರಜಾ-ಮೊದೆ, ಇಲಿ, ತಕ್ಕೋಲ, ಹಾರಿ" (ಓಕಧ. ೦೦೬).

[ದೇ.॥ ತಮಿ. ಪಾರಿ]

**ಪಾರಿ**$_4$, **ಹಾರಿ**$_2$ (ನಾ). ಸಾಲು; ಪಂಕ್ತಿ; ಶ್ರೇಣಿ: "ಪಾರಿಯೆನಲಾದ ಪುದು ಜಾಲಗಂ ಶ್ರೇಣಿಗಂ" (ಕಕಕ. ೬೪). 'ಪಾರಿಪಂಜು' ಪರಾ. **ಹಾರಿ**$_2$: ಕಾದೆಮ್ಮೆಪೋರಿಯ ಹಾರಿಯಂತೆಯುಂ ಪಂದಿಯ ಗೊಂದಳ ದಂತೆಯು (ಭುಕ್ಕೃಶು. ೩-೦೭೬ ವ); ಸುರಿವ ಘಟಾಳಿ ಶೀವುವ ಘಟಾಳಿ ಮರಳ್ವ ಘಟಾಳಿ ಹಾರಿಯೊಳ್ಪರಿವ ಘಟಾಳಿ ಸಾಗರದ ಮೇರುವಿನಂತರದೊಳ್ ನಿರಂತರಂ ತಿರುಗೆ (ಅನಂಪು. ೩-೬೩). [< ಸಂ. ಪಾಲಿ]

**ಪಾರಿ**$_5$ (ನಾ). ೧. ಕುಡಿಯುವ ಬಟ್ಟಲು; ಪಾನಪಾತ್ರೆ; ಲೋಟ. ೨. ಪುಡಿ; ಹುಡಿ: ಅತಿಸುರಭಿಸಹಕಾರಕಸ್ತೂರಿಕರ್ಪೂರಪಾರಿ [ಶಾಕಾ. ಲಿ]ಸಮ್ಮಿಶ್ರಿತಾಂಬೂಲರಾಗರಕ್ತಾಧರಪ್ರವಾಲಪ್ರಭಾಪ್ರಕಟಿತ ಪೂರ್ವಸಂಧ್ಯಾರಾಗನುಂ (ಅಂಪು. ೩-೯೦ ವ). [ಸಂ. ಪಾರೀ]

**ಪಾರಿ**$_6$ 'ಪಸರಿ' ನೋ.

**ಪಾರಿಕತ್ತು** 'ಫಾರೀಕತ್ತು' ನೋ.

**ಪಾರಿಕಾಂಕ್ಷಿ** (ನಾ). ಮುನಿ; ಋಷಿ: "ತಪಸ್ವೀ, ತಾಪಸಃ, ಪಾರಿ ಕಾಂಕ್ಷೀ-೩ ತಪಸುಳ್ಳವನ ಹೆಸರುಗಳು" (ಸಿದ್ಧಾಂತಿ. ೩೩೪); ಆ ಕೌರವನ ನಗರಿಗೆ ಪಾರಿಕಾಂಕ್ಷಿಪ್ರವರನೊಬ್ಬನು ಬಂದು ಹೊಕ್ಕನು ರಾಜ ಮಂದಿರವ (ಕುಮ್ಮಾಭಾ. ೦ ೧೧೦); ಪೂಜಾಯೋಗ್ಯವಸ್ತುಗಳ ಕೈಕೊಂಡು ಪರಮಶ್ರದ್ಧಾನ್ವಿತದಿ ನರದೇವನೈತಂದನಾ ಪಾರಿಕಾಂಕ್ಷಿಯೆಡೆಗೆ (ಪಂಕಾಶಾ. ೦-೦೬-೯೩). [ಸಂ. ಪಾರಿಕಾಂಕ್ಷಿನ್]

**ಪಾರಿಕಾಯ** 'ಪಾರಿಖಾಯ' ನೋ.

**ಪಾರಿಕೆ** (ನಾ). ದರ್ಶನ; ಕಾಣ್ಕೆ: ಪಾರ್ವರ ಪಾರಿಕೆ ತ್ರಿನೇತ್ರಶಿಖೆಯೊಲು ಉತ್ತರೋತ್ತರವು ಮೇಲುಮುಖ (ಸೂರ್ಯಶಾ. ೦೦೩-೯).

[ಪಾರು$_1$ (< ಪಾರ್$_1$) + - ಇಕೆ]

**ಪಾರಿಖತ್ತು** 'ಫಾರೀಕತ್ತು' ನೋ.

**ಪಾರಿಖಾಯ**, ಪಾರಿಕಾಯ, ಹಾರಿಕಾಯ, ಹಾರಿಕಾಯಿ (ನಾ). ಒಂದು ಬಗೆಯ ತೆರಿಗೆ,- ಸುಂಕ: ಇದನುಪೇಕ್ಷಿಸಿದಾತಂ ಕಬಿಲೆಯನೊಡೆದ ಪಾತಕನಕ್ಕುಂ ಪಾರಿಖಾಯಂ ಮೊದಲಾಗೆಲ್ಲಮುಂಗ್ಗೆ × × ನಿವೇಶನಂ ಕೊಟ್ಟ (ಎಇ.XX, ೬೮-೯೩; 1012); ತಿಪ್ಪೆಸುಂಕ ಮನೆದೆಜೆ ಪಾರಿಖಾಯು ಹೊಲೆಗೊಟ್ಟಿ ಮುಖವ ಈಲಿತಿನಿತುಪಂ . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಕೌಇಇ. XX. ೦೫೬-೯೩; 1176). **ಪಾರಿಕಾಯ**: ಶ್ರೀಮಜ್ಜಗ ದೇವ ನಾರಾಯಣದೇವರಿಂಗಾಳ ಹೊಳಲು ಹನೆರಡಲ ಬಳಿಯ ಪಿರಿಯ ಪೆಂಬಜೆತಿಯ ಪಟ್ಟಂ ಪಾರಿಕಾಯಮುಮಂ ಕುಮವಿದೆಜೆಯುಮ[ಂ] ದೇವರಂಗಭೋಗಕ್ಕೆ ಧಾರಾಪೂರ್ವ್ವಕಂ ಮಾಡಿ ಕೊಟ್ಟರ್ (ಕಇಆ. ೫೩-೯೯-೦೯; 1107). **ಹಾರಿಕಾಯ**: ಕೇಮನ ಕೇಸಿಯಣನಾಯಕ ಸತ್ರಕ್ಕೆ ಬಿಟ್ಟ ಧ[ರ್ಮ್ಮ]ಹಾರಿಕಾಯ ತಿಪ್ಪೆಸುಂಕ ಗಾಣದಲಿ ಕಾಶ್ಮೀರಭೂಮಿ ಮತ್ತ ಇದಿನಿಸುಮಂ ನಿರ್ವ್ವಾಣದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಧರ್ಮ್ಮ (ಕೌಇಇ. IX-1, ೨೩೫-೦೬; 1141); ಹಿರಿಯ ಕಟಿಯ ತುಂಬಿನ ಹರಿಯ ಎರಡು [ಧ]ರಣ ತೋಟ ಪೂರೊಳಗೆ ಹಾರಿಕಾಯ ಹೊಂಗೆ ವೀಸದ ಆಯ ಗಾಣಂಗಳಲ್ಲಿ ಸೊಲ್ಲ[ಗೆ] ಎಣ್ಣೆ ಒಂದು ಗಾಣ . . . ಸರ್ವ್ವನಮಸ್ಯವಾಗಿ ಕೊಟ್ಟ ವ್ರಿತಿ (ಕಇ. IV, ೨-೦೮; 1241); ಮಗ್ಗ ಮುದ್ರೆ ಕ್ರಯ ಕಡ್ಡಾಯ ಹಾರಿಕಾಯ ಬಾಳುಕ . . . ನೀಲು ಆಗುಮಾಡಿಕೊಂಡು . . . ಭೋಗಿಸಿ ಬಹುದು (ಕೌಇಇ. IX-ii, ೪೪೦-೨೫; 1419). **ಹಾರಿಕಾಯಿ**: ಅನುವು ಹಾರಿಕಾಯಿ ಮೊದಲಾದ ಏನುಂಟಾದದನು ಸರ್ವಮಾನ್ಯವಾಗಿ . . . ಸಮರ್ಪಿಸಿದೆವು (ಕೌಇಇ. IX-ii, ೪೪೦-೦೭; 1513). [?]

**ಪಾರಿಜಾತ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; P ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ ಮತ್ತು ಹರಿಚಂದನ ವೆಂಬ ಐದು ದೇವತರುಗಳು ಇಂದ್ರನ ನಂದನವನದಿಂದ ಬಂದು ವೆಂದು ನಂಬಲಾಗಿದೆ: ಕನಕಧ್ವಜನೆಂಬ ದೇವಂ . . . ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ ದೇವ ರ್ಕಳ ದೇವಿಯರ್ಕಳ್ ಸಹಿತಂ ಕ್ಷಪಣಕನ ವಿಮಾನದ ಮುಂದೆ ಇಂತೆಂದು ಪೇಟ್ದುದು (ವಡ್ಡಾರಾ. ೮೪-೮); ದೇವರ್ಕಳೀಗಳರ್ಚಿಸಿ ಹೋದರಲಿ ದೇಪ ದೇವಲೋಕದ ಪಾರಿಜಾತದರಳಿವೆ ದೇವ (ಶಂಶರ. ೯-೩೮); ಮಂದಾರ ಪಾರಿಜಾತ ಸಂತಾನ ಕಲ್ಪ ಹರಿಚಂದನಗಳೆಂಬ ಪೆಸರಿನಿಂ ಪ್ರಸಿದ್ಧ ಮಾದ ಕಲ್ಪವೃಕ್ಷಪಂಚಕಮಿಪ್ಪದು (ಶಪೇಕ. ೨೦೦). [ಸಂ.]

**ಪಾರಿಜಾತಕ** (ನಾ). = ಪಾರಿಜಾತ: "ಮಂದಾರಃ, ಪಾರಿಜಾತಕಃ, ಹರಿ ಚಂದನಃ, ಕಲ್ಪವೃಕ್ಷಃ, ಸಂತಾನಃ-ಈ ೫ ದೇವರ ಮರಂಗಳ್" (ಹಲಾಯು. ೨೨-೦೩೫); ನಂದನವನಸಂಭವಹರಿಚಂದನ ಸಂತಾನ ಪಾರಿಜಾತಕ ವಿಲಸನ್ಮಂದಾರನಮೇರುದ್ರುಮಸಂದೋಹದ ಕುಸುಮಕೋಟಿಯುಂ ವಾಸಿತಮಂ . . . ಮದಾಳಿಗಳ್ ಮುಸುಱೆ (ಭುಕ್ಕೃಶು. ೦೧-೪೪); ಅಲ್ಲಿ ಸಂಪಿಗೆಯುತ್ತು ಪಾರಿಜಾತಕವಿತ್ತು ಮಾವು ಮಲ್ಲಿಗೆಯಿತ್ತು ಮನೆಯಿದಿರು (ಸಬಗೀ. ೧೭-೨೪೩). [ಸಂ.]

**ಪಾರಿಣಾಮಿಕ** (ಗು). ೧. ಪರಿಣಾಮಕ್ಕೆ ಸಂಬಂಧಿಸಿದ. (ನಾ). ೨. [ಜೈನ] ಜೀವತ್ವ, ಭವ್ಯತ್ವ, ಅಭವ್ಯತ್ವ ಮೊದಲಾದ ಕರ್ಮಗಳು

ಉದಯ, ಉಪಶಮ ಮೊದಲಾದುವುಗಳಿಂದ ಉತ್ಪನ್ನವಾಗದೆ ಇರುವುದು : ಭಾವೋಪಲಕ್ಷಕಂ ಜೀವನೆಂಬುದು ಅವಾವುವೆಂದೊಡೆ ಔದಯಿಕಭಾವಂ . . . ಕ್ಷಾಯೋಪಶಮಿಕಭಾವಂ ಪಾರಿಣಾಮಿಕಭಾವಮೆಂದಿಂತು ಭಾವಪಂಚಯಮುತ್ತೆ ಜೀವಕ್ಕುಂ (ಸುಕುಮಾ. ೮-೪ ವ) ; ಸಾಸಾದನ ಸಮ್ಯಗ್ದೃಷ್ಟಿಗೆ ಪಾರಿಣಾಮಿಕಭಾವಂ . . . ಅಕ್ಕುಂ (ತತ್ತ್ವಸೂ. ೪೮). [ಸಂ.]

**ಪಾರಿತಥ್ಯ** (ನಾ). ಹೆಂಗಸರು ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ : "ಪಾರಿತಥ್ಯ=ಮುಡಿಯ ಮೇಗಣ ಮುತ್ತಿನ ಸೆಂಡು, ಮುತ್ತಿನ ದಂಡೆಯೆಂದೂ ಎಂಬರು" (ಶಬ್ದಮ. ೬). [ಸಂ. ಪಾರಿತಥ್ಯಾ]

**ಪಾರಿತೋಷ** (ನಾ). ಬಹುಮಾನ : ಶಾಲಾವಾರ್ಷಿಕೋತ್ಸವದಲ್ಲಿ ಆ ಹುಡುಗನಿಗೆ ಅನೇಕ ಪಾರಿತೋಷಗಳು ಬಂದುವು (ರೂಢಿ). [ಸಂ.]

**ಪಾರಿತೋಷಕ** (ನಾ). = ಪಾರಿತೋಷ : ಶ್ರೀಮನ್ನರ ಪಾರಿತೋಷಕದಿಂದ ನಾನೂ ಧನ್ಯೆಯಾದೆನಲ್ಲ! (ಚಿತ್ರಾಂ.೦೩-೦೭); ಇಂದಿಗೆ ಸುಮಾರು ನಲವತ್ತೇಳು ವರುಷಗಳ ಹಿಂದೆ ರವೀಂದ್ರನಾಥಠಾಕೂರ ಅವರಿಗೆ ಒಂದು ಪಾರಿತೋಷಕವು ಸಿಕ್ಕಿತು. ಅದು ನೋಬೆಲ್ ಪಾರಿತೋಷಕ (ಕಥಾ. ೩-೧೩೦). [< ಸಂ. ಪಾರಿತೋಷಿಕ]

**ಪಾರಿತೋಷಿಕ** (ನಾ). = ಪಾರಿತೋಷ : ಬಳಿದ ಮುನಿನಾಥವಾರ್ತೆಯ ವಿಳಸತ್ಕಲ್ಪಲತೆ ಫಲಿತವಾದತ್ತೆನೆ ಭೂತಳಪಾಲಂ ವನಪಾಲಂಗಳತೆಗೆ ವಿಗಿಲೆನಿಸಿ ಪಾರಿತೋಷಿ[ಪಾಠಾಂ.ಷ]ಕಮಿತ್ತಂ (ಚಂದ್ರಪ್ರ. ೨-೧೦೦) ; ಅವರ ಆ ಕರಕೌಶಲಕೆ ಬೆರಗಾದರು . . . ಪಾರಿತೋಷಿಕಗಳನೇಕವನಿತ್ತರು ಮೆಚ್ಚಿದ ಸರಕಾರದವರು (ಇಂಡಿಯ. ೦೦-೩೬). [ಸಂ.]

**ಪಾರಿಪಂಜು** (ನಾ). ಕಾಲುದೀವಟಿಗೆ : ಸುತ್ತ ಕೋವರದ ಕಾವಲು ಪಾರಿಪಂಜಿನ ಬೆಳ್ತವನೇನ ಬಣ್ಣಿಸುವೆ (ಅಮುಕಾಂ. ೨-೩೩). [ಪಾರ್ಶ್ವ + ಪಂಜು]

**ಪಾರಿಪಂಥಿಕ** (ನಾ). ದಾರಿಹೋಕರನ್ನು ಸುಲಿಯುವವನು ; ಕಳ್ಳ : "ಏಕಾಗಾರಿಕಃ, ತಸ್ಕರಃ, ದಸ್ಯುಃ . . . ಪಾರಿಪಂಥಿಕಃ,ಸ್ತೇನಃ—ಈ ೧೦ ಕಳ್ಳಂ" (ಹಲಾಯು. ೩೬೦-೯೩) ; ಅರಸುಗಳ ಪನಿತೆಯರ್ಕಳ ಪರಿಕರಪರಿಪೂರ್ಣಭೋಜನಂಗಳ ದುರಿತಾಚರಣರತಪಾರಿಪಂಥಿಕ ನರರಂ. ಕಥಾಶ್ರವಣಮಹಿತಮೆಂಬರ್ ಶ್ರವಣರ್ (ಉಪಾರ. ೨೩-೦೪೯). [ಸಂ]

**ಪಾರಿಪಕ್ಷ** (ನಾ). ಕುದುರೆಯ ಬಾಯಲ್ಲಿರುವ ಕಡೆಯ ನಾಲ್ಕು ದವಡೆ ಹಲ್ಲುಗಳು : "ಎರಡು ನಡುದಂತಗಳು ಸಂದಂಶವಮುಕ್ಕಿನೆರಡು" ಪಲ್ಗಳು ಮಧ್ಯಮಂಗಳಕ್ಕವಚಿತೊತ್ತಿನೆರಡು ದ್ವಿಜಂ ಪಾರಿಪಕ್ಷಂಗಳ್ (ಕುಂಗರು. ೬೩-೨೦); ಕಡೆಯ ಪಲ್ಗಳ್ ನಾಲ್ಕುಕ್ಕಂ ಪಾರಿಪಕ್ಷ(ಕ್ಷ)ವೆಂಬುದು (ಅಶ್ವಶಾ. ೬೬-೯). [ಸಂ.]

**ಪಾರಿಪತ್ಯ** 'ಪಾರುಪತ್ಯ' ನೋ.

**ಪಾರಿಪಾಟ್ಯ** (ನಾ). ರೀತಿ ; ಓರಣ ; ಕ್ರಮ : ವೇಣಿಯ ರಚನೆಯಲ್ಲಿ ಚಾತುರ್ಯದ ಪಾರಿಪಾಟ್ಯವು ಕಾಣುತ್ತಿದ್ದಿತು (ಕಥಾಕುಂ. ೯೪). [ಸಂ.]

**ಪಾರಿಪಾರ್ಶ್ವಕ** (ನಾ). ೧. ಆಳು ; ಸೇವಕ ; ಪರಿಚಾರಕ. ೨. ನಾಟಕದಲ್ಲಿ ನಾಂದಿಯನ್ನು ಹೇಳುವವನು : "ಸಾಮಾನ್ಯಾಭಿನಯ" ಪ್ರಕರಣ ಸಂಬಂಧದಲ್ಲಿಯೇ ನಾಯಕ ನಾಯಿಕೆಯರ ಭೇದ, ಅವರ ಶೀಲಸ್ವರೂಪಗಳು, ಪರಿವಾರ, ಸೂತ್ರಧಾರ, ಪಾರಿಪಾರ್ಶ್ವಕ ಮುಂತಾದವರ ಗುಣಗಳು . . . ಇವೆಲ್ಲಾ ನಿರೂಪಿಸಲ್ಪಟ್ಟಿವೆ (ಸಂಪಾಟಿ. ೦೨). [ಸಂ.]

**ಪಾರಿಪಾರ್ಶ್ವಿಕ** (ನಾ). = ಪಾರಿಪಾರ್ಶ್ವಕ. [ಸಂ.]

**ಪಾರಿಪ್ಲವ** (ಗು). ೧. ಅಲುಗುವ ; ಹೊಯ್ದಾಡುವ ; ಚಂಚಲವಾದ : ವಸ್ತುಹೀನಮಭಿಧಾನಮುಂಟಕ್ಕುಮಪ್ಪೊಡೆ ಶಬ್ದಾರ್ಥಸಂಬಂಧಂ ಪಾರಿಪ್ಲವ ಪರಿಪ್ಲವಮಕ್ಕುಂ (ಶಾಂತಿಪು. ೬-೦೩೬ ವ) ; ಪಯಃಪ್ಲವದೊಳಗೆ ಮುಟ್ಟಿ ಪಾರಿಪ್ಲವನೇತ್ರೆಯರಮರಕಾಂತೆಯರ್ ಸೊಗಯಿಸಿದರ್ (ಆದಿಪು. ೪-೬೦). ೨. ತೇಲುವ. (ನಾ). ೩. ಹೊಯ್ದಾಟ; ಅಸ್ಥಿರತೆ; ಚಾಂಚಲ್ಯ : "ಲೋಲಂ, ಚಪಲಂ . . . ಪಾರಿಪ್ಲವಂ, ಚಳಾಚಳಂ, ಸಂಚಳಂ—ಈ ೧೦ ಸಂಚಳಂ" (ಹಲಾಯು. ೦೦೩-೦೦) ; ಅವಬೋಧಂ ವಿಷಯಪರಿಪ್ಲವಂ (ಮನೋವಚನಕಾಯನಿಯಮಂ ಪಾರಿಪ್ಲವ)ಮಿನಿತಿಲ್ಲದೆ ಮೂಜಗಂ ಭುವನಮನೆಬಗಿಸುವ ಸಮತೆ ಸಮನಿಸದಪುದೇ (ಶಾಂತಿಪು. ೯ ೦೦೯). ೪. ವ್ಯಾಪನೆ; ಹರಡುವಿಕೆ; ವಿಸ್ಫುರಣೆ: ವರ್ಣಕ್ಕಿಂತಲೂ ನಯನಗಳಿಂತಲೂ ಸೌಂದರ್ಯದಾ ಪಾರಿಪ್ಲವವು ಅತ್ಯಂತ ಮುಗ್ಧರವಾಗಿದ್ದಿತು (ಕಥಾಕುಂ. ೯೩). ೫. ದೋಣಿ. ೬. ಒಂದು ದೇಶದ ಹೆಸರು : ಹಯಮುತ್ತರಾಭಿಮುಖಿವಾಗಿ ಪಾರಿಪ್ಲವಧರೆಯೊಳೈದಿ ಪೆಣ್ಣಾದುದೆಯಾಗಿ ಪುಲಿಯಾಗಿ . . . ಮುನ್ನಿನಂತೆ ನಿಯಮಿತಮಖಾಶ್ವಮಾದತ್ತು (ಜೈಮಿ. ೦೩-೬). [ಸಂ.]

**ಪಾರಿಬರುಹ** (ನಾ). (ಮದುವೆ ಮುಂತಾದ ಶುಭಸಮಾರಂಭಗಳಲ್ಲಿ ಕೊಡುವ) ಬಳುವಳಿ ; ಉಡುಗೊರೆ : ಪಾರಿಬರುಹಂಗಳನು ಕೊಂಡು ಮುರಾರಿ ಪಾರ್ಥ ಸುಭದ್ರೆಯರು ಸಹಿತೇಟಿ ರಥವನು . . . ಬಿಜಯಂಗೈದನಿಂದ್ರಪ್ರಸ್ಥಪುರವರಕೆ (ಸಭಾಪ. ೦೦-೬೨-೩೬). [<ಸಂ. ಪಾರಿಬರ್ಹ]

**ಪಾರಿಬ್ರಾಜಕ** (ನಾ). ವಿರಕ್ತಿ ; ಸಂನ್ಯಾಸ : ಪಾರಿಬ್ರಾಜಮೆಂದಭಿಷ್ಟುತಿಗೆಯಲ್ ನಿನ್ನೊಳಲ್ಲಿನಂ ಮಾಸದೇ (ಸುಕುಮಾ. ೪-೩೦). [ <ಪಾರಿವ್ರಾಜಕ ]

**ಪಾರಿಭದ್ರ** (ನಾ). ೧. ಒಂದು ಬಗೆಯ ಮರ; ಹಾಲಿವಾಣದ ಮರ: "ಪಾರಿಭದ್ರಃ, ನಿಂಬತರುಃ, ಮಂದಾರಃ, ಪಾರಿಜಾತಕಃ—೪ ಹಾಲಿವಾಣದ ಮರದ ಹೆಸರುಗಳು" (ಸಿದ್ಧಾಂತ. ೦೦೭). ೨. ಬೇವಿನ ಮರ. ೩. ದೇವದಾರುವೃಕ್ಷ. ೪. ಚಂಗಲಕೋಷ್ಟ. [ಸಂ.]

**ಪಾರಿಭದ್ರಕ** (ನಾ.) = ಪಾರಿಭದ್ರ ೧:"ಮಂದಾರಃ, ಪಾರಿಭದ್ರ (ಜಾತ್ಯಃ)ಕಃ—ಈ ೨ ಹಾರಿವಾಳಂ" (ಹಲಾಯು. ೩೩-೯೩). ೨. ದೇವದಾರುವೃಕ್ಷ : "ಶಕ್ರಪಾದಪಃ, ಪಾರಿಭದ್ರಕಃ, ಭದ್ರದಾರು, ದ್ರುಕಿಲಿಮಂ, ಪೀತದಾರು, ದಾರು, ಪೂತಿಕಾಷ್ಠಂ—೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತ. ೦೨೪). [ಸಂ.]

**ಪಾರಿಭಾವ್ಯ** (ನಾ). ಒಂದು ಬಗೆಯ ಮೂಲಿಕೆ : "ವ್ಯಾಧಿ." ಕುಷ್ಠಂ, ಪಾರಿಭಾವ್ಯಂ. . . ಉತ್ಪಲಂ—೬ ಚಂಗಲಕೋಷ್ಟ" (ಸಿದ್ಧಾಂತ. ೦೫೧). [ಸಂ.]

**ಪಾರಿಭಾಷಿಕ** (ಗು). ೧. ಯಾವುದಾದರೊಂದು ಕಲೆ, ವಿಜ್ಞಾನ,ಕೈಗಾರಿಕೆ ಮೊದಲಾದುವಕ್ಕೆ ವಿಶಿಷ್ಟವಾದ ಅರ್ಥದಲ್ಲಿ ಬಳಕೆಗೆ ಬಂದಿರುವ; ತಾಂತ್ರಿಕವಾದ ಅರ್ಥವುಳ್ಳ. (ನಾ). ೨. ತಾಂತ್ರಿಕವಾದ ಅರ್ಥವುಳ್ಳದ್ದು : ಅನುಭಾವ ಎಂಬ ಮಾತನ್ನು ಪಾರಿಭಾಷಿಕವಾಗಿ, ಬಹುಮಟ್ಟಿಗೆ "mysticism" ಎಂಬರ್ಥದಲ್ಲಿ, ಕನ್ನಡದಲ್ಲಿ ವೀರಶೈವರಲ್ಲದೆ ಇನ್ನಾರೂ ಉಪಯೋಗಿಸಿಲ್ಲ (ಶೂನ್ಯಸಂ. ೦೩೦); ವಾಕ್ಯಗಳ ಅಂತಸ್ಸಿಗೆ ಹಿಡಿಯದ ಜಟಿಲವೂ ಪಾರಿಭಾಷಿಕವೂ ಆದ ಅಂಶಗಳನ್ನು ಕಡಿಮೆ ಮಾಡುವುದುತ್ತಮ (ಶಿಕ್ಷದ. ೦೩೦). [ಸಂ.]

**ಪಾರಿಭೋಗಿಕ** (ನಾ). ಬುದ್ಧನು ಉಪಯೋಗಿಸಿದ ವಸ್ತುಗಳು : ಬುದ್ಧನು ಉಪಯೋಗಿಸಿದ ಪದಾರ್ಥಗಳು (ಪಾರಿಭೋಗಿಕ) : ಇವರಲ್ಲಿ ಭಿಕ್ಷಾಪಾತ್ರೆ, ಕಮಂಡಲು ಮತ್ತು ಆಸನಗಳು ಮುಖ್ಯ ಉದಾಹರಣೆಗಳು (ಶಾರದ. ೪೬೩). [ಸಂ.]

**ಪಾರಿಯ** 'ಪಾರಿವ' ನೋ.

**ಪಾರಿಯಪಟ್ಟೆ** 'ಪಾರಿಯಪಟ್ಟೆ' ನೋ.

**ಪಾರಿಯರ** 'ಪಾರಿಯಾರ' ನೋ.

**ಪಾರಿಯವಟ್ಟೆ**, ಪಾರಿಯುಪಟ್ಟೆ, ಪಾರಿವಟ್ಟೆ (ನಾ). ಒಂದು ಬಗೆಯ ಬಣ್ಣದ ಬಟ್ಟೆ : ಪಸಿರ್ಪಟ್ಟೆ ಪಾರಿಯವ[ ಪಾಠಾಂ. ಪ ]ಟ್ಟೆ ಕೆಂಬಟ್ಟೆ ಕ್ಷಂಗಿಸೆವ ಹಳದಿಯ ಪಟ್ಟೆಗಳ ಪೊಸಗುಡಿಗಳ ಸಾಲು ಹೊಯ್ದುವು ಗಣಿಕಾ ನಿಸರಕಾ ಪಾಳೆಯದೊಳಗೆ (ಶಂಣಾಸಾಂ. ೪೨-೬೨). **ಪಾರಿಯುಪಟ್ಟೆ** : ಉಟ್ಟ ದುಕೂಲಮೆಂಬುದದು ಪಾರಿಯುಪಟ್ಟೆಪೊಲಾಗೆ (ಶೀರವಿ. ೬-೩೦) ; ಕಂಗಾಣಿಸದೆ ಪಾರಿಯುಪಟ್ಟ[ಟ್ಟೆ] ಕರ್ವಣ್ಣ ಗೊಂಗಡಿ ಮುಸುಕಿಟ್ಟುಕೊಂಡು . . . ದುಸ್ಸಂಗದಂಪತಿಗಳೊಪ್ಪಿದರು (ಮೋಹತ. ೧೮-೨೩). **ಪಾರಿವಟ್ಟೆ** : ಭೂದೇವಿಯರ್ ಕುಚಾವಳಿಯೆಂಬ ಮಕ್ಕಳಿಗೆ ಸಾದರದಿ ಪಾರಿವಟ್ಟೆಯ ಪಾಸಿ ನಿಲಿಸಿದೊಲ್ (ಚಕೋಕ್ಷ. ೧೦-೨೩).

[ ಪಾರಿಯ ( <ಪಾರಿವ$_2$ ) + ಪಟ್ಟೆ$_3$ ]

**ಪಾರಿಯಾತ್ರ** (ನಾ). ೧. ಏಳುಕುಲಪರ್ವತಗಳಲ್ಲಿ ಒಂದು ; ☞ ಇದು ವಿಂಧ್ಯಪರ್ವತದ ಪಶ್ಚಿಮಭಾಗದಿಂದ ನರ್ಮದೆಯ ಉತ್ಪತ್ತಿಸ್ಥಾನದ ವರೆಗೂ ಹಬ್ಬಿ ಅರಾವಳಿಬೆಟ್ಟಗಳಲ್ಲಿ ಸೇರಿಕೊಂಡಿದೆ. ೨. ಒಂದು ದೇಶದ ಹೆಸರು : ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆ (ಜಗಂ. ೨-೩೪ ಪ); ಪಾರಿಯಾತ್ರ ಮಿಥಿಲಾ ಪಾಂಚಾಳ . . . ಮತ್ಸ್ಯದೇಶಕ್ಕೆ ತಸ್ಕರ ರೋಗಾದಿ ಭಯಂಗಳಂ ಜನಿಯಿಕುಂ ಪಂಕೇಜಮಿತ್ರಾತ್ಮಜಂ (ಜಟ್ಟಿಮ. ೧೨-೬೦); ಪುಷ್ಕರ ಪಾರಿಯಾತ್ರ ಕರೂಷ ಕಾಂಭೋಜ . . . ಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೧-೬-೧೮). ೩. ಪಾರಿಯಾತ್ರದೇಶದಲ್ಲಿ ಹುಟ್ಟಿದುದು : ಮನುತಗಮನದ ಪಾರಿಯಾತ್ರನ ತುರಗ ಹೂಡಿದ ಹೇಮನಿರ್ಮಿತ ಹಿರಿಯ ಟೆಕ್ಕೆಯದ . . . ತಳಿತ ಶಸ್ತ್ರದಿ ಭರದಿ ತುಂಬಿದ ಕೋಟರಥಗಳು ರಣಕೆ ಹೊಱಮಡಲು (ಕೌಶಿರಾ. ೨೦-೬). [ ಸಂ. ]

**ಪಾರಿಯಾತ್ರಕ** (ನಾ). ೧. = ಪಾರಿಯಾತ್ರ ೧: '' ಹಿಮವಾನ್, ನಿಷಧಃ, ವಿಂಧ್ಯಃ, ಮಾಲ್ಯವಾನ್, ಪಾರಿಯಾತ್ರಕಃ, ಗಂಧಮಾದನಂ ___ ೬ ಹೇಮ ಕೂಟಾದಯಃ '' (ಸಿದ್ಧಾಂತಿ. ೦೦೬). ೨. = ಪಾರಿಯಾತ್ರ ೨ : ಪಾರಿಯಾತ್ರಕ ಕೇರಳಮುಖಾಪಾರದೇಶಂಗಳೊಳಿಸೆವ ಜಂಗಮವು ಭಕ್ತಾಳಿ ಎಡೆಯೆಡೆಯೊಳೀ ಗಡಣೆಯಿಂದೆಡೆವಿಡದೆ ನಡೆವುತ್ತಿರಲು (ಬಸವ. ೬-೧೪); ಪಾರಿಯಾತ್ರಕದೇಶದಲ್ಲಿಪ್ಪ ಮಲ್ಲಿಕಾಪುರದಲ್ಲಿ ಪಾರಿಯಾತ್ರಕನೆಂಬ ರಾಜನಿಪ್ಪನು (ಕೃರಸೂ. I, ೩೬೦). [ ಸಂ. ]

**ಪಾರಿಯಾತ್ರಿಕ** (ನಾ). ಪ್ರಯಾಣಕ್ಕೆ ಯೋಗ್ಯವಾದ ರಥ : ''ಅಧ್ವನ್ಯಃ, ಪಾರಿಯಾತ್ರಿಕಃ, ಕರ್ಣೀರಥಃ ___ ಈ ೩ ಪಯಣದ ರಥಂ '' (ಹಲಾಯು. ೩೩-೨೯೦). [ ಸಂ. ]

**ಪಾರಿಯಾತ್ರೆ** (ನಾ). = ಪಾರಿಯಾತ್ರ ೧ : ಸ್ವಸ್ತಿ ಅನೇಕಸುಧಾರಸ × ತ್ರವೀಚಿಚ್ಛಾಯಲವಣಾಬ್ಧಿ ವಳಿಯವಳಯಿತವೇಳಾವನಗಂಗಾತೀರಪಾರಿಯಾತ್ರೆ ತನುಮಧ್ಯದೇಶಾಧೀಶ್ವರ ಮಾಹಿಷ್ಮತೀಪುರವರಾಧೀಶ್ವರನ ಹಿಹಯ ವಂಶೋದ್ಭವಂ (ಕಇಳ. ೦೨-೪-೬೪; 1148). [ ಸಂ. ಪಾರಿಯಾತ್ರ ]

**ಪಾರಿಯಾನಿಕ** (ನಾ). = ಪಾರಿಯಾತ್ರಿಕ. [ ಸಂ. ]

**ಪಾರಿರಕ್ಷಕ** (ನಾ). ಸಂನ್ಯಾಸಿ ; ಭಿಕ್ಷು: '' ಪರಾಶರೀ . . ಪಾರಿರಕ್ಷಕಃ, ಪಾರಿವ್ರಾಜಕಃ, ತಪಸ್ವೀ, ಕರ್ಮಂದೀ, ತಾಪಸಃ ___ ಈ ೯ ತಪಸ್ವಿ '' (ಹಲಾಯು. ೬೮-೨೩೩). [ ಸಂ. ]

**ಪಾರಿರ್ಯಾರ**, ಪಾರಿಯರ (ನಾ). ಪರಿಹಾರ : ಮನ್ನೆಗಾಮುಣ್ಣು ಪ್ರಜೆ ಕರಣ ಚೈತ್ಯನಿತ್ಯುದಃ ಮುವತ್ತಎರಡು ಸರ್ವ್ವಪಾದ ಪಾರಿರ್ಯ್ಯಾರ (ಸೌಇಇ. IX-1, ೩೨-೩; ?). **ಪಾರಿಯರ** : ಇ ಪಾರಿಯರಮನಱಿವೊನ್ನಂದನ ನ್ನಾಯ ತಪ್ಪಿಗ್ಗಿಯುಮಾನ್ನೆಡೆಸೋಣಕ್ಕು ತಾನ್ (ಸೌಇಇ. IX-1, ೩೨-೭ ;?).

[ <ಸಂ. ಪರಿಹಾರ ]

**ಪಾರಿವ$_1$** (ನಾ). ಒಂದು ಬಗೆಯ ಪಕ್ಷಿ ; ಕಪೋತ ; ಪಾರಿವಾಳ : ''ದೃಶದಾಶನಂ ಪಾರಿವಮೆನಿಕ್ಕು'' (ಮಂಗರಾ. ೫೨-೪); ದಿವ್ಯಮು[ಖಿ]ಮಾಂ ಕೆಯ್ಕೊಂಡು ಸಗ್ಗಕ್ಕೆ ಪಾಱಿಡುವಾ ಪಾರಿವ ಜಕ್ಕವಕ್ಕಿಗಳ್ (ಶಂಪಾ. ೬-೩೮); ಕಾಮಿನೀಮಣಿತಮೆಂದು ಪಾರಿವದ ಮೆಲ್ಲುಲಿಯಂ . . . ತಣಿಯದೆ ಕೇಳ್ವರ್ (ಉದ್ಭಟ. ೦-೯೨); ಕಾಬುಜಾಲೆ ಲಾವುಗೆ ಗಾಜು ಪಾರಿವ . . . ಗಿಂಚಲು ಗರಿಗ ಮೊದಲಾದಖಿಳಖಗಕುಲ ಬಿದ್ದುದುರಿಯೊಳಗೆ (ಕುಮಾ್ರ. ೨೦-೩೩). [ <ಪ್ರಾ. ಪಾರಾವಯ, ಪಾರೇವಯ./ಸಂ. ಪಾರಾವತ./ತೆಲು. ಪಾರುವ, ಪಾರುವಾ, ಪಾವುರಾ]

**ಪಾರಿವ$_2$**, 'ಪಾರಿಯ (ನಾ). ೧. ಒಂದು ಬಗೆಯ ಬಣ್ಣ : ಪವಣ್ಬಡೆದ ಸುವರ್ಣಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್ದು ಕಣ್ಗೆಡಱದೆ ಪೆಂಡವಾಸದ ವಿಳಾಸದ ಸೂಳೆಯರೊಪ್ಪಿ ತೋಱಿದರ್ (ಶಂಪಾ. ೯-೧೦೩); ''ಪಾರಿವಾಳದ ಬಣ್ಣ '' (ಶಂಪದೀ. ೩೯೦) ; ಬೀಸುಬಡಿಗೆಯ ಧನುಸರಳ ಪಾರಿವ[ಪಾಠಾಂ. ಭಾಸುರ]ದ ಕುಪ್ಪಸದ ಕೇಶದಲಿ ತಳಿರುಗಳ ಕಟ್ಟಿ ವಿಲಾಸದಲಿ ಹರಿತಹ ಕಿರಾತರು ಘಾಸಿಯಾದರು (ಕುಮಾ್ರ. ಓ೦ಇ. ೯-೦೦). **ಪಾರಿಯ** : ೨. ಒಂದು ಬಗೆಯ ಬಣ್ಣದ ಬಟ್ಟೆ : ದೈತ್ಯಮರ್ದನನ ದಾಸಪಾರಿಯ ರಕ್ತಸಜೂಜಿನ ಪಚ್ಚೆಯ ಪರಿಗೆಯ ಪಸರದ ಪಾರಿಯ ದೊಯ್ಯಾರದ ಕೆಂದಟ್ಟಿನ ಪಂತಿಯ . . . ತಟ್ಟನೊಟ್ಟಿಜೆಯ ಟಟ್ಟುಬ್ಬಟೆಯ ಬಿರುದಿನ ಹರಿಗೆಕಾಜಿನ ಪರಿವೀಥಿಯೊಳಂ (ಗಂಶ.೬-೩೩ ಪ); ತವೆ ಪಾರಿಯದಿ ನಿಂದ್ರಗೋಪದಿಂ ಶಿವನಾಂತ ತೊವಲಿರದನಣಕಿಸುತೆ ಪೊಂಬಟ್ಟೆಯಿಂದೆ ಮಾಧವನ ಮಲ್ಗಿಸುತೆ . . . ಒಪ್ಪಿವರಲ್ಲಿ ದೂಸಿಗರ್ (ಶಪ್ಪಾ. ೯-೬೬); ಬಟ್ಟಮುತ್ತುಗಳು ಕೇಪಣಿಸಿರ್ದ ಪಾರಿಯ ಪಟ್ಟಾವಳಿ ಚಲ್ಲಣವ ತೊಟ್ಟು (ಮೋಹತ. ೦೨-೪೩). [ <ಪ್ರಾ. ಪಾರಯ./ತಮಿ. ಮಲ. ಪಾರಿ]

**ಪಾರಿವಂಕ** (ನಾ). = ಪಾರಿವ$_1$ . ಗೊರವ ಗಾಜನು ಕಾಡೆ ಗಿಡಗ ಸಬಲ ಮಂಡೆ ಹರಟೆ ಕೆಂಬೋತು ಪಾರಿವಂಕ . . . ಪರಿಯನಿನ್ನೇನ ಪೇಳುವೆನು (ಮಾರೀಸಾಂ. ೦-೬೨). [ <ಪಾರಿವ$_1$ ]

**ಪಾರಿವಗೂಗು** (ನಾ). ೧. ಪಾರಿವಾಳದ ಧ್ವನಿ. ೨. (ಅಲಂ) ಸಂಭೋಗ ಕಾಲದಲ್ಲಿ ಕೊರಳಿನಿಂದ ಹೊರಡುವ ಧ್ವನಿ ; ಮಣಿತ ; ರತಿ ಕೂಜಿತ : ನಳಿತೋಳಂ ಪಿಡಿದೀಟ್ಟು ಬಿಣ್ಪೊಡೆಯ ಮೇಲಿಟ್ಟಿನ್ನ ಮೆಯ್ಮೇಲ್ಮೆಗೊಳ್ಳಳಪ್ಪಂತಿರೆ ತಳ್ಕೆಗೆಯ್ದು . . . ಅಗ್ಗಳದೊಳ್ಪಾರಿವ ಗೂಗಿನಿಂ ತಣಿಪಂ (ಜಕಿಶ. ೬-೨೩೩). [ ಪಾರಿವ$_1$+ಕೂಗು$_2$ ]

**ಪಾರಿವಟ್ಟೆ** 'ಪಾರಿಯವಟ್ಟೆ ' ನೋ.

**ಪಾರಿವಾಣ$_1$** ' ಪಾರಿವಾಳ$_1$ ' ನೋ.

**ಪಾರಿವಾಣ$_2$** ' ಪಾರಿವಾಳ$_2$ ' ನೋ.

**ಪಾರಿವಾಳ$_1$**, ಪಾರಿವಾಣ$_1$, ಪಾರಂವಾಣ$_1$, ಪಾಲ್ವಣ, ಹಾರವಾಣ$_1$, ಹಾಲುವಾಣ$_1$ (ನಾ). = ಪಾರಿವ$_1$ : '' ಪಾರಾವತಃ, ಕಲರವಃ, ಕಪೋತಃ ___ ಈ ೩ ಪಾರಿವಾಳ '' (ಪಾತರಾ. ೦೦೪) ; ಅಂಬಾಲಿಕೆ ನಿನ್ನಯ ಕಿವಿಯಿಂ ಬಿಟ್ಟಪುದೆಂದು ಜಗುಟ್ಟಿ ಚೆನ್ನೆಯ್ದಿಲ ಪೂಮಂ ಭರದೆ ತೆಗೆದು ಬೀಸಿದೆನಂಬರದೊಳ್ ಪಾರಿವಾಳಮಂ ಬೆದಱಿಪವೋಲ್ (ದಶಕು. ೯-೨೩೬) ; ಶುಕಪಿಕಪಾರಿವಾಳದ ಹುಯ್ಯಲುಬ್ಬಿತು ಸುಕರವಾಯ್ತೆಂದುಸುರುವೆನು (ಶರಶ. ೦೦-೪೪) ; ಅವನು ನಿರ್ಮಲಳು ಕೊಟ್ಟಿದ್ದ ಪಾರಿವಾಳದ ಕಾಲಿಗೆ ಒಂದು ಪತ್ರವನ್ನು ಕಟ್ಟಿ ಹಾರಿಬಿಟ್ಟನು (ಬಂಕಿಮ. ೨೨೪). **ಪಾರಿವಾಣ$_1$** : '' ಪಾರಾವತಃ, ಕಲರವಃ ಕಪೋತಃ . . . ಪಾರಿವಾಣದ ಹಕ್ಕಿ '' (ಸಿದ್ಧಾಂತಿ. ೦೫೬); ಶ್ಲೇಷ್ಮಾಧಿಕವಾದ ನಾಡಿಯು ಪಾರಿವಾಣದ ಹಾಗೆ ವೇಗ ಮಂದವಾಗಿ ಶೀತವಾಗಿ ಆಡುತ್ತಿಹುದು (ಸಕವ್ಯ. ೦೩); ಪಾರಿವಾಣ ಬಿಡೋಕೆ ಹೋಗಿದ್ದೆಯ? (ಧರ್ಮಶ್ರೀ. ೩೦೦). **ಪಾರುವಾಣ$_1$** : (+). **ಪಾಲ್ವಣ** : ಕಾಡ ಗಾಜಲು ಕರಿಯ ಲಾವುಗೆ . . . ಪರಿತ ಪಾಲ್ವಣ ಸ್ವೇತಸೋರೆಯು

ಪರಿವ ಗೀಜಗ ಮೊರೆದವು (ಗೋಹಾಡು. ೨೪). **ಹಾರವಾಣ₁** : (೪), **ಹಾಲುವಾಣ₁** : “ ಪಾರಾವತಃ, ಕಲರವಃ, ಕಪೋತಃ —೩ ಹಾಲು ವಾಣದ ಹಕ್ಕೀ ಹೆಸರುಗಳು ” (ಸಿದ್ಧಾಂತ. ೦೫೬). [<ಸಂ. ಪಾರಾವತ]

**ಪಾರಿವಾಳ₂**, ಪಾರಿವಾಣ₂, ಪಾರುವಾಣ₂, ಹರಿವಾಣ₂, ಹರಿವಾಳ₁, ಹಾರವಾಣ₂, ಹಾರಿಯಾಳ, ಹಾರಿವಾಣ, ಹಾರಿವಾಳ, ಹಾರುವಾಣ, ಹಾಲಿವಾಣ, ಹಾಲುವಾಣ₂ (ನಾ). ಒಂದು ಬಗೆಯ ಮರ ; ಪಾರಿಭದ್ರ : “ ಪಾರಿಭದ್ರಃ, ನಿಂಬತರುಃ, ಮಂದಾರಃ, ಪಾರಿಜಾತಃ —ಈ ೪ ಪಾರಿವಾಳದ ಮರ ” (ನಾಜರಾ. ೦೦೬) ; ಪಾರಿವಾಳದಾ ತದಕಿನ...ಇಪ್ಪೆಯ ಪಾತಂಗಳ ಕೊಂಬುಗಳಂಬರಂಬರಂ ಪುದಿದು ಪೊದಟ್ಟು ಸುರ್ಬಡರೆ ಪರ್ಬಿರೆ (ಅಜಾವ. ೬-೨೨); ಆವರಿಕೆಸೊಪ್ಪು, ಕರಿಹತ್ತಿ ಸೊಪ್ಪು, ಪಾರಿವಾಳದ ಸೊಪ್ಪು . . . ರಸವ ಹಿಂಡಿ ಬೆರಣೆ ಬೂದಿಯ ಕಲಸಿ ನೆತ್ತಿಬಾಯಿಗೆ ಒತ್ತಿದಾಕ್ಷಣವೇ ರಕ್ತವಾಂತಿ ನಿಲ್ಲುವದು (ಸಕವ. ೦೬೬). **ಪಾರಿವಾಣ₂** : “ ನಿಂಬತರುಃ — ಬೇವು, ಪಾರಿವಾ(ಳ)ಣ ” (೬ಕಂ. ೬೭); ಆ ತೈಲದಿಂ ಕೈಯಂ ಪೂಸಿ ಪಾರಿವಾಣದ ಕಾಯಂ ಒತ್ತಲು ಒಡೆಯುವುದು (ಖಪ್ಮಿ. ೩೩) ; ಪಾರಿವಾಣದ ಸೊಪ್ಪಿನ ರಸ, ಒಂದೆಲಗನ ರಸ . . . ಇವಿಷ್ಟನೂ ಪ್ರತ್ಯೇಕ ಒಂದು ಹಲವ ಹನಿಸಿ, ಮರ್ದಿಸಿ . . . ಕೊಡಿಸುವುದು (ವೈದ್ಯಸಾ. I. ೯೪). **ಪಾರುವಾಣ₂** : “ಪಾರುವಾಣ (ಹಾಲಿವಾಣ) — ಪಾರಿಭದ್ರ = ವೃಕ್ಷವಿಶೇಷ” (ತದ್ಭಕೋ. ೨೬). **ಹರಿವಾಣ₂** : ಹರಿವಾಣ :—ಈ ಬಿತ್ತ ಮೂಜನ್ನು ನೀರಲ್ಲಿ ಅರೆದು ಕುಡಿಯೆ ಮೂಜುದಿನದಲ್ಲಿ ಋತುವಾಗುವಳು (ಖಪ್ಮಿ. ೭). **ಹರಿವಾಳ₁** : ಈ ನಮ್ಮ ಊರ ಮುಂದಿನ ಹರಿವಾಳದ ಮರಗಳು (ಮುಂಬಯು. ೬-೨೯೯), **ಹಾರವಾಣ₂** : (೪). **ಹಾರಿಯಾಳ** : “ ಹಾರಿಯಾಳದ ಮರ = ಪಾರಿಜಾತಕ, ಪಾರಿಭದ್ರ, ಮಂದಾರ, ನಿಂಬತರು ” (ನಾಜರಾ. ೪). **ಹಾರಿವಾಣ** : “ ಪಸಿರಃ — ಉತ್ತರಣೆ, ಚೆನ್ನಗ್ಗಲು, ಗಜಹಿಪ್ಪಲಿ, ಹಾರಿವಾಣದ ಮರ ” (೬ಕಂ. ೦೪೬); ಅಸರಿಯ ಮೂಳಮುಮಂ ತುಪ್ಪವುಮಂ ಮೇಣ್ ಹಾರಿವಾಳ(ಣ)ದೆಲೆಯುಂ ತಿಳತೈಳವುಮಂ ಮೇಣಿಡು ಮಾಜ್ಯವುಮನೆಜಿಯೆ ××× ಪೋಕುಂ ಕ್ರಿಮಿಗಳ್ (ಲೋಕೋಪ. ೯-೨೩೦). **ಹಾರಿವಾಳ** : ಅರುಟಾಳಂ ಹಾರಿವಾಳಂ ತುಡು ತಡಸೊಡಮಂ ಲೊಕ್ಕಿಗೊಟ್ಟುಕ್ಕಿ . . . ತಱಿಯುದಿಂಮೊಪ್ಪುತಿರ್ದತ್ತರಣ್ಯಂ (ಗಂಕ. ೦-೬೨) ; ಕುರುಟಿಗೆ ಹಾರಿವಾಳ[ಪಾಠಾಂ. ಣ]ದ ರಸಂಗಳೊಳಾಲದ ಪಾಲನಿಂಬಿನಿಂ ಬೆರಸಿಡು (ಖಮತ. ೦೩-೩೮) ; ಹಾರಿವಾಳ (ಪಾಂಗಾರಾ)—ಮಧ್ಯಮ ಆಕಾರದ ವೃಕ್ಷವು, ಕಟ್ಟಿಗೆ ಕೊರೆದು ಹಲಿಗೆಗಳನ್ನು ಮಾಡುವರು (ಕಪಾಗ.೩೦). **ಹಾರುವಾಣ** : (೪). **ಹಾಲಿವಾಣ** : ಹಾವಿನ ಹೆರೆ, ಹಾಲಿವಾಣದ ಎಲೆ, ಬಿಳಿಯ ಸಾಸುವೆಯುಮಂ ಸಮಂಗೊಂಡು ಶಿಶುವಿಂಗೆ ಧೂಪವಿಕ್ಕುವುದು (ಬಾಲಚಿ. ೦೨೩-೭); ಸುರದುಂಬೆಯೆಕ್ಕೆಯೆಲೆ ನಾಗರಮುಂ ಬಜೆಯುಳ್ಳಿ ಹಾಲಿವಾಣದ ಕೊನರುಂ ಮರಿಚಂಬೆರಸರೆ ನಸ್ಯಂ ಪರವಿದುದಂ ಸ್ರಪಮೂತ್ರದಿಂ ವಿಷಘ್ನಮೆನಿಕ್ಕುಂ (ಖಮತ. ೭-೩೬); ಹಾಲಿವಾಣದ ಮರದಲ್ಲಿ . . . ಕಾಜಾಣವೊಂದು ಆಲಾಪನೆಗೆ ತೊಡಗಿತು (ಮರವು. ೪೦). **ಹಾಲುವಾಣ₂** : ವೀಳೆಯದೆಲೆ ಹಂಬು ಹಬ್ಬುವುದಕ್ಕೆ ಅನುಕೂಲವಾದ ಗಿಡಗಳನ್ನು ಪಕ್ಕದಲ್ಲಿ ಬೆಳೆಸಬೇಕು. ಇವು ಸಾಮಾನ್ಯವಾಗಿ ಅಗಸೆ ಮತ್ತು ಹಾಲುವಾಣ (ವ್ಯವು. ೩೩). [ <ಸಂ. ಪಾರಿಭದ್ರ ]

**ಪಾರಿವೂಳಿಗ** (ನಾ). ಕಾವಲು ಕಾಯುವ ಕೆಲಸ ; ಪಹರೆ ಊಳಿಗ : ತಿಮ್ಮದಾಸನ ಮಗ ಲೋವಿದಾಸಗೆ ಶ್ರಿ ಸ್ವಾಮಿಯವರ ಪಾರಿವೂಳಿಗ ಶಂಖು ಜಾಗಟೆ ಗುಡಿಕಾವಲು ಅದ್ಭುತ ಮುದ್ರೆ ಸಹ ಅಪ್ಪಣೆ ಪಾಲಿಸಿ ಧರ್ಮ ಕೊಟ . . . ಪೊಲ ೮ (ಮೈಆಂ. ೦೯೨೯, ೭-೦೩ ; 1673).
[ ಪಾರಿ₆ (<ಪಹರಿ)+ಊಳಿಗ (<ಊಳಿಗ) ]

**ಪಾರಿವೇಂಟೆ, ಪಾರುವೇಟೆ** (ನಾ). ೧. ದೇವಸ್ಥಾನದಲ್ಲಿ ನಡೆಯುವ ಒಂದು ಉತ್ಸವ ವಿಶೇಷ : ಮಕರಸಂಕ್ರಮಣದ ಮರುದಿನ ಪಾರಿವೇಂಟೆಯಾಗಿ ಗಿರಿಪ್ರದಕ್ಷಿಣ ಮಾಡುವಾಗ . . . ಅವಧರಿಸುವ ಮಹಾನೈವೇದ್ಯದ ಹರಿವಾಣ ೨೦ (ಶಾಇ. IX — II, ೩೩೦-೩ . 1532). **ಪಾರುವೇಟೆ** : ೨. ಬೇಟೆ ; ಶಿಕಾರಿ : ಕೋಟೆಯ ಮುಂದಿನ ಪಾರುವೇಟೆಯು ಬಯಲಲ್ಲಿ ಬೋನನ್ನು ಇಳಿಸಿದಾಗ, ಸುತ್ತ ನೆರೆದಿದ್ದ ಜನರನ್ನು ಕಂಡು. . . ಹುಲಿರಾಯನಿಗೆ ದಿಗ್ಭ್ರಮೆಯಾಯಿತು (ಕೋಟೆಜಾ. ೪).
[ದೇ.॥ ತಮಿ. ಪಾರಿವೇಟ್ಟೈ ; ತೆಲು. ಪಾರುವೇಟ, ಪಾಱುವೇಂಟ]

**ಪಾರಿವ್ರಾಜ** (ನಾ). = ಪಾರಿವ್ರಾಜಕ ೨ : ''ಭಿಕ್ಷು ಕರ್ಮಂದಿಯುಮೆಂಪೀನಂ ಪಾರಿವ್ರಾಜಂ ತಾನಕ್ಕುಂ '' (ಚನ್ನಕೋ. ೩೬-೩೪). [ಸಂ.]

**ಪಾರಿವ್ರಾಜಕ** (ನಾ). ೧. ವಿರಕ್ತಿ ; ಸಂನ್ಯಾಸ : ಪಾರಿವ್ರಾಜಕ (ಪಾರಿವ್ರಾಜ್ಯ)ಮೆಂಬುದು ಗೃಹಸ್ಥಧರ್ಮಮಂ ಪ್ರತಿಪಾಳಿಸಿ ವಿರಕ್ತಚಿತ್ತಂ ದೀಕ್ಷೋದ್ಯುಕ್ತನಾಗಿ . . . ನಿರ್ಗ್ರಂಥಾಚಾರ್ಯರ ಪಕ್ಕದೆ . . . ದೀಕ್ಷೆಗೊಳ್ವುದು (ಚಾವುಂಪು. ೨೨೪). **೨. ಒಂದೆಡೆ ನಿಲ್ಲದೆ ಬೇರೆ ಬೇರೆ ಕಡೆಗಳಲ್ಲಿ** ಸುಳಿದಾಡುವ ತಪಸ್ವಿ : '' ಪರಾಶರೀ, ಬ್ರತೀ, ಭಿಕ್ಷುಃ . . . ಪಾರಿವ್ರಾಜಕಃ, ತಪಸ್ವೀ, ಕರ್ಮಂದೀ, ತಾಪಸಃ —ಈ ೯ ತಪಸ್ವಿ'' (ಹಲಾಯು. ೬೮-೨೩೩). [ಸಂ.]

**ಪಾರಿವ್ರಾಜ್ಯ** (ನಾ). [ಜೈನ] ಶ್ರಾವಕನು ನಿರ್ವಾಣದೀಕ್ಷೆಯನ್ನು ತೆಗೆದುಕೊಳ್ಳುವುದು : ಸಜ್ಜಾತಿ ಸದ್ಗೃಹಿತ್ವಪಾರಿವ್ರಾಜ್ಯ ಸುರೇಂದ್ರತ್ವ ಸಾಮ್ರಾಜ್ಯಪರಮಾರ್ಹಂತ್ಯಪರಿನಿರ್ವಾಣಮೆಂಬೇಟುಂ ಪರಮಸ್ಥಾನನಾಮ ಕರ್ತ್ರನ್ವಯಕ್ರಿಯೆಗಳಂ (ಆದಿಪು. ೦೩-೦೬ ವ) ; ತಪದೊಳ್ ನೆಗಟ್ದೊಡೆ ದಿವ್ಯವಿಜಯಪರಮನಿರ್ವಾಣಸುಖಭಾಜನರಪ್ಪರಿದು ಪಾರಿವ್ರಾಜ್ಯಕ್ರಿಯೆ (ಚಾವುಂಪು. ೨೬೦). [ಸಂ.]

**ಪಾರಿಶುದ್ಧತೆ** (ನಾ). ಅತ್ಯಂತ ಶುದ್ಧವಾಗಿರುವುದು ; ಪರಿಶುದ್ಧತೆ : ನಡೆ ನುಡಿ ಎರಡರಲ್ಲೂ ಪಾರಿಶುದ್ಧತೆ ಈ ಸೌಂದರ್ಯದ ಲಕ್ಷಣ (ಕಂಹಿ. ೩೬); ನಮ್ಮ ಮಕ್ಕಳು . . . ಅಂತರಂಗದ ಪಾರಿಶುದ್ಧತೆಗೂ ನೆರವಾಗತಕ್ಕ ಶಿಕ್ಷಣವನ್ನೂ ಪಡೆಯಬೇಕು (ಶಿಕ್ಷದ. ೬೨೪).
[ಸಂ. ಪಾರಿಶುದ್ಧತಾ]

**ಪಾರಿಶೇಷಕ** (ನಾ). ಉಳಿದ ಅಂಶ ; ಪರಿಶೇಷ : ಮಹೀಭಾರಾಂತರವ ನಿಶ್ಚಯಿಸಿ ಭಾರತಪಾರಿಶೇಷಕವ ಅಂತಕಾಂತಕ . . . ಹೊಕ್ಕನು ದೋರಕಾಪುರಿಯ (ಕುವ್ಯಾಅ. ೨-೩೩). [ಸಂ.]

**ಪಾರಿಶೇಷನ್ಯಾಯ** (ನಾ). ಒಂದು ಬಗೆಯ ನ್ಯಾಯ ; ೫ ನಾಲ್ಕಾರು ವ್ಯಕ್ತಿಗಳಲ್ಲಿ ಒಬ್ಬ ವ್ಯಕ್ತಿಯನ್ನು ಅಥವಾ ನಾಲ್ಕಾರು ವಸ್ತುಗಳಲ್ಲಿ ಒಂದು ವಸ್ತುವನ್ನು ಗುರುತಿಸಬೇಕಾದಾಗ ಜೊತೆಗಿರುವ ಇತರ ವ್ಯಕ್ತಿ ಅಥವಾ ವಸ್ತುಗಳನ್ನು ಅಲ್ಲಗಳೆದು ಕೊನೆಗೆ ಉಳಿಯುವ ನಿರ್ದಿಷ್ಟ ವ್ಯಕ್ತಿ ಅಥವಾ ವಸ್ತುವನ್ನು ಒಪ್ಪಿಕೊಳ್ಳುವಿಕೆ : ಪಾರಿಶೇಷನ್ಯಾಯದಿಂ ಪರಮೇಶ್ವರನೇ ಜಗತ್ಕರ್ತೃವೆಂದು ನಿಶ್ಚಿತಮಕ್ಕುಂ (ಖವೀಕ. ೨). [ಸಂ.]

ಪಾರಿಷದ (ಗು). ೧. ಪರಿಷತ್ತಿಗೆ ಸಂಬಂಧಿಸಿದ ; ಸಭೆಗೆ ಸಂಬಂಧಿಸಿದ. (ನಾ). ೨. ಸಭಾಸದ ; ಸಭಿಕ : ಹೊಸಹೊಸ ಕವಿಗಳು ತಮ್ಮ ಹೊಸ ಹೊಸ ಕೃತಿಗಳಿಂದ ಪಾರಿಷದರಿಗೆ ಪರಿಚಿತರಾದರು (ಕಚಾಕ್ರ. ೩೩); ತಮ್ಮಂತಹ ದೊಡ್ಡವರು, ರಸಿಕ ಪಾರಿಷದರು ಮಾಡುವ ಪ್ರಯತ್ನದಿಂದ ರಸಿಕಜೀವನವು ಪುನರುದ್ಧಾರವಾಗಬೇಕಾಗಿದೆ (ಸಾಹಿಕ. ೭೪). ೩. ರಾಜ, ದೇವತೆ ಮುಂತಾದವರ ಸೇವಕವರ್ಗ. ೪. [ಜೈನ] ಇಂದ್ರನ ಸಭೆಯಲ್ಲಿ ಸದಸ್ಯರಾಗಿರುವ ದೇವತಾವರ್ಗ : ಸಾಮಾನಿಕತ್ರಾಯಸ್ತ್ರಿಂಶತ್ಪಾರಿಷದಾತ್ಮರಕ್ಷಲೋಕಪಾಲಾಭಿಯೋಗ್ಯಕಿಲ್ಬಿಷರೊಡನೆ ಗಡ

ತುರಗ ರಥ ವೃಷಭಗಂಧರ್ವನರ್ತಕೀಪದಾತ್ಯನೀಕಂಬೆರಸು ಬಂದು ಮುಂದೆ ನಿಲ್ವುದುಂ (ಆದಿಪು. ೬-೯೨ ವ) ; ಅನೇಕ ಪ್ರಕಾರಪಾರಿಷದ ಪ್ರಕೀರ್ಣಕಾಭಿಯೋಗ್ಯ ಕಿಲ್ಬಿಷಿಕರುಮಂತವರ್ಧ್ಯಬಾಹ್ಯಾಭ್ಯಂತರಗಳಪ್ಪ ಮೂಱುಂಪರಿಷೆಯುಮಾತ್ಮೀಯಪರಮೈಶ್ವರ್ಯದ್ ಪ್ರಕಾಶಕವಾಗೆ (ಪರ್ವಮ. ೦೦-೬೦ ವ). ೫. [ವೀಶೈ] ಚಂಡೀಶ್ವರ ಮುಂತಾದ ಶಿವ ಗಣ ; ಪ್ರಮಥಗಣ : ಕಲ್ಯಾಣ ಮುಮುರಪಾರಿಷದಗಣಸಂಕುಲಕೆ (ಬಸವಪು. ೦೬।೦೩). [ಸಂ.]

**ಪಾರಿಪ್ಲವ** (ನಾ). ಗದಾಯುದ್ಧದಲ್ಲಿ ಒಂದು ವರಸೆ(?) : ಬವರಿ ಮತ್ಪ್ರೋತ್ಪ್ಲುತಿ ವಿಲಂಘನ . . . ಸಂಪ್ಲವನ ಪಾರಿಪ್ಲವ ಗದಾಪರಿರಂಭ ವಿಕ್ಷೇಪ . . . ಲಘುವಿನ್ಯಸ್ತವೆಂಬೀ ವಿವರದಲಿ ಕಾದಿದರು (ಕುವ್ಯಾಗ. ೬-೨೫). [?]

**ಪಾರಿಸಿ, ಪಾರ್ಸಿ** (ನಾ). ೧. ಪರ್ಷಿಯಾದೇಶ ; ಇರಾಣ : ಪಶ್ಚಿಮದಲ್ಲಿ ಸುಮಾರು ಒಂದು ಲಕ್ಷ ಪಾರಿಸೀಜನರೂ . . . ವಾಸವಾಗಿದ್ದಾರೆ (ಭೂಗೋಳ. ೬೦). 'ಪಾರಿಸಿಲಿಪಿ' ಪರಾ. **ಪಾರ್ಸಿ** : ೨. ಪರ್ಷಿಯಾ ದೇಶದ ಜನ : ಹಿಂದೂದೇಶದವರಲ್ಲದ ಆಸ್ಯಾಖಂಡದ ವಂಶೀಯರು ... ಚೀನೀಯರು, ಮೊಗಲರು, ಪಾರ್ಸಿ ಪಠಾಣರು (ತುಳುನಾ. ೦೬೪). [<ಸಂ. ಪಾರಸೀ]

**ಪಾರಿಸಿಲಿಪಿ** (ನಾ). ಪರ್ಷಿಯಾದೇಶದ ಭಾಷೆಯ ಲಿಪಿ : ದ್ರಾವಿಳ ಲಿಪಿಯುಂ ಪಾರಿಸಿ[ಪಾಠಾಂ. ರಸ, ರಿಸ]ಲಿಪಿಯುಂ ಲಾಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ ಬಿಜ್ಜಳಮಹೀಪತಿಯಾಗ ತಾ ಹಿಡಿದಿರ್ದ ಲೇಖೆಯನು ಅವರ ಕೈಯೊಳು ಕೊಟ್ಟು (ಬಸಪು. ೫-೫೩). [ಪಾರಿಸಿ+ಲಿಪಿ]

**ಪಾರಿಸು** (ಕ್ರಿ). ಉಪವಾಸ ಮುಗಿಸಿದ ನಂತರ ಆಹಾರವನ್ನು ಸೇವಿಸು ; ಪಾರಣೆ ಮಾಡು : ಎನ್ನ ಮಹಾಮಹಿಮೆಯೊಳೆಂತುಣ್ಬೆ ನೆಂದು ಪಾರಿಸದೆ ಮತ್ತಮಷ್ಟೋಪವಾಸಂಗೆಯ್ದು (ಪಂಪಾರಾ. ೦೦೬-೦೬); ಅಪರಾಜಿತಂ ವಿಮಳವಾಹನ ಜಿನಪತಿಯಂ[ ಅರ್ಹದ್ದಾಸನಂ ] ಕಂಡಲ್ಲದುಣ್ಣೆನೆಂದೆಂಟುದಿವಸಮುಪವಾಸಂಗೆಯ್ದು ಪಾರಿಸಲೊಲ್ಲದಿರೆ ಸುರರಾಜನಱಿದು . . . ವಿಮಳವಾಹನನ [ಅರ್ಹದ್ದಾಸನ] ಪ್ರತಿ ಬಿಂಬಮಂ ತೋಱಿಸೆ ಕೃತಾರ್ಥನಾಗಿ ನಮಸ್ಕಾರಂಗೆಯ್ದು ಪಾರಿಸೆ (ಕಾವ್ಯಾವ ೩೨೫); ಮುನಿಪಂ ಮಾಸೋಪವಾಸಾಂತರದೊಳನುನಯಂ ಪಾರಿ ಸಲ್ಕೆಂದು ಪೊಕ್ಕಯ್ಯನೆ ಚರ್ಯಾಮಾರ್ಗದಿಂದಂ ಬರೆ(ಬಾಹುಂ. ೫-೩೪). [ಪಾರಣೆ$_1$ + — ಇಸು$_3$]

**ಪಾರಿಸೋಜ** (ನಾ). ಒಬ್ಬಾತನ ಹೆಸರು : ಹಿಟ್ಟಿನ ಅಕ್ಕಸಾಲೆ ಪಾರಿ ಸೋಜಂಗೆ ಮತ್ತರು ೪ (ಕೊಲ್ಹಾಶಾ. ೩೬-೩೬ ; 1049). [ಪಾರಿಸ$_?$ +ಓಜ$_1$ (<ಒವಜ್ಝ)]

**ಪಾರಿಹಾರಿಕ** (ನಾ). ಮಾಲೆಯನ್ನು ಕಟ್ಟುವವನು ; ಮಾಲೆಗಾರ : "ಮಾಲಾಕಾರಃ, ಮಾಲಿಕಃ, ಪಾರಿಹಾರಿಕಃ—ಈ ೩ ಮಾಲೆಗಾಱಂ" (ಹಲಾಯು. ೯೬-೪೩೫). [ಸಂ.]

**ಪಾರಿಹಾರ್ಯ** (ನಾ). ಬಳೆ ; ಕಂಕಣ ; ಕಡಗ : "ಆವಾಪಃ, ಪಾರಿ ಹಾರ್ಯಃ, ಕಟಕಃ, ವಳಯಃ—ಈ ೪ ಕಂಕಣಂ" (ಹಲಾಯು. ೯೦-೪೦೩) ; ಮೇಖಲೆಯ ಪಾರಿಹಾರ್ಯದ ಮಣಿನೂಪುರದ ಮಧುರಸ್ವನಂ ಮುಪ್ಪುರಿ ಗೂಡಿದ ಮದನಪಾಶಮೆನೆ ನಡೆತಂದಳ್ (ಶಂರಾಜಾ. ೩-೬೪) ; ಮಣಿಕಾಂಚೀ ಮಣಿಪಾರಿಹಾರ್ಯಮಣಿಮಂಜೀರಸ್ವನಂ ಪೊಣ್ಮಲ್ . . . ಗಣಿಕಾಶ್ರೇಣಿ ಯುಮೊಱೆ ನಿಂದುದು ತವಂಗಶ್ರೇಣಿಯಂ ಲೀಲೆಯಿಂ (ಜಗಿಂ. ೬-೪೪). [ಸಂ.]

**ಪಾರೀಕತ್ತು** 'ಫಾರೀಕತ್ತು' ನೋ.

**ಪಾರೀಖತ್ತು** 'ಫಾರೀಕತ್ತು' ನೋ.

**ಪಾರೀಣ** (ನಾ). ೧. ದಾಟುವುದು. ೨. ಎಲ್ಲಾ ವಿಷಯಗಳಲ್ಲಿ ಸಂಪೂರ್ಣಪರಿಚಯವನ್ನು ಪಡೆದಿರುವುದು ; ಪಾಂಡಿತ್ಯ. ೩. ಎಲ್ಲಾ ವಿಷಯಗಳಲ್ಲಿ ಸಂಪೂರ್ಣಪಾಂಡಿತ್ಯವನ್ನು ಪಡೆದಿರು ವವನು ; ಪಂಡಿತ ; ನಿಷ್ಣಾತ : ದ್ವಾದಶಗಣಸರಸ್ಸರೋಜವಿದಳನ ಶೋಭಾಪ್ರಭಾವಪ್ರಸವಪಾರೀಣದಿವ್ಯವಚನಮರೀಚಿಮಾಲಿರೊ ಚಿರ್ನಿಚಯ ತ್ರಿಜಗಚ್ಚೂಡಾಮಣಿಯುಂ . . . ಪೊಡೆವಟ್ಟು (ಶಾಂತಿಪು. ೯-೬೯ ವ); ನಿಜ ಗುರುಭಜನಪಾರಿ[ಪಾಠಾಂ. ರಿ]ಣನ . . . ನೋಡಿ (ಬಸಪು ೩೯-೫೬). [ಸಂ.]

**ಪಾರು$_1$** 'ಪಾರ್$_1$' ನೋ.

**ಪಾರು$_2$** 'ಪಾಱು$_1$' ನೋ.

**ಪಾರು$_3$** (ಕ್ರಿ). ೧. ಬೆಳೆ ; ವೃದ್ಧಿಯಾಗು : (ಶ). ೨. ಉಂಟಾಗು ; ಸಂಭವಿಸು : (ಶ). [ ದೇ. ॥ ತಮಿ. ಪಾರಿ ; ತೆಲು. ಪಾಱು ]

**ಪಾರು$_4$** 'ಪಾಱು$_2$' ನೋ.

**ಪಾರು$_5$**, **ಹಾರು$_3$** (ನಾ). ೧. ಆಚೆಯ ದಡ ; ಪಾರ : "ಪಾರು–ಪಾರ=ಆಚೆವಡ" (ಶದ್ಯಕೋ. ೨೬); ಹಿರಿಯ ಪೊಸ ತವರೂರು ಪವಳರನ್ನದ ಪಾರು ಸುರರ್ಕೈಹಿರಿಯ ನಾಡು . . . ಕಾನೆಸುತ್ತಿಂಗಡಲ್ ಕಂಗೊಂಡುದು (ಕವಿಚ. III, ೨೦೫ ಪ್ರಭಾವತೀಪರಿಣಯ). ೨. ಕೊನೆ ; ಅಂಚು : (ಶ). ೩. ಮನೆಯ ಮಾಡಿನ ಇಳಿಜಾರು ; ಸೂರಿನ ಇಳಿಜಾರು ಭಾಗ : (ಶ). ೪. ನೊಗದ ಎರಡು ಪಕ್ಕ, —ಕಡೆ : 'ಪಾರುವಿಳಿ' ಪರಾ. ೫. ಅಪಾಯದಿಂದ ತಪ್ಪುವಿಕೆ ; ಬಚಾವು : ಮೃಗಗಳಂ ನೋಡಾರ್ಯ ! ಬಲೆಗೆ ಬಲಿಯಾಗಿ, ಪಾರು ಬೇರಿಲ್ಲದಿರೆ, ರೋಸಿ, ಹಿಂದಿರುಗಿ, ಕುರುಡುಧೈರ್ಯದ ನೆಮ್ಮಿ, ಬೇಂಟೆಯನನೆದು ರಿಸವೆ? (ಶಕಾರ. ೬೦–೬). **ಹಾರು$_3$** : ೩. ಈ ಗುಬ್ಬಚ್ಚಿಗಳಿಗೆ ಮನೆಯ ಹಾರಿನ ಸಂದಿಗಳಲ್ಲಿ ಗೂಡು ಕಟ್ಟುವ ಅಭ್ಯಾಸವಿಲ್ಲದಿದ್ದರೆ ಚೆನ್ನಾಗಿರುತ್ತಿತ್ತು (ಈಚಕೆ. ೫೦).

**ಪಾರಾಗು**=ಬಿಡುಗಡೆ ಹೊಂದು ; ಬಚಾವಾಗು : ಇವನ ಕೈಯಿಂದ ಪಾರಾಗಲು ಗಾಂಧೀಜಿ ಮಾಡಿಕೊಂಡ ಯೋಜನೆ ನನ್ನ ತಲೆಯನ್ನು ತುಂಬಿತು (ದೀಕನ್ಯ. ೩೮) ; ಆತ್ಮಸತ್ತ್ವವಿದ್ದ ಒಂದೇ ಒಂದು ಜೀವವೆಂದರೆ ಸತ್ತು ಪಾರಾಗಿ ಹೋದ ತಮ್ಮನ ಹೆಂಡತಿ (ಹೊಸಕ್ಷಿ. ೨೯೪). **ಪಾರು ಮಾಡು** = ಕಾಪಾಡು : ರಕ್ಷಿಸು : ನೀನು ನನ್ನನ್ನು ಪಾರು ಮಾಡಬೇಕು ರಂಗಣ್ಣ (ರಂಗರೋ. ೨೩) ; ಜೀವನದಲ್ಲಿ ದುರಾತ್ಮರಿಂದ ಕಷ್ಟಕ್ಕೆ ಸಿಕ್ಕಿದಾಗ ನಮ್ಮನ್ನು ಪಾರು ಮಾಡಿದವಳು ಅವಳು (ವಸಭಾ. ೦೬೫). [ <ಸಂ. ಪಾರ ]

**ಪಾರುಂಬಳೆ** 'ಪಾಱುಂಬಳೆ' ನೋ.

**ಪಾರುಖಾಣ** 'ಪಾರುಖಾಣೆಯ' ನೋ.

**ಪಾರುಖಾಣಯ** 'ಪಾರುಖಾಣೆಯ' ನೋ.

**ಪಾರುಖಾಣೆ** 'ಪಾರುಖಾಣೆಯ' ನೋ.

**ಪಾರುಖಾಣೆಯ**, ಪಾರುಖಾಣ, ಪಾರುಖಾಣಯ, ಪಾರುಖಾಣೆ (ನಾ). ೧. ಬಹುಮಾನ ; ಉಡುಗೊರೆ : "ಎಸೆದುಂ ಕೊಡುವುಚಿತ ಪಾರುಖಾಣೆಯುಮಕ್ಕುಂ" (ಕವಿಕಾ. ೨೫೫) ; ಪಾರುಖಾಣೆಯ ಮಿತ್ತನಾ ಜಂಭಾರಿಯೂರ್ವಶಿ ರಂಭೆ ಮೇನಕೆ ಗೌರಿ ಮೊದಲಾದಖಿಳಪಾತ್ರಕೆ (ಕುವ್ಯಾಆ. ೬-೯೬). ೨. ಕರಣಿಕರು ಇಡುವ ಲೆಕ್ಕಾಚಾರ : ತೀರ ದಿಬ್ಬರ ಸತ್ತ್ವಪವನಿಯ ಸಾರದಿಬ್ಬರ ಬಲುಹುಗಾಣಿಸಿ ಪಾರುಖಾಣೆ ಯುವದಟರಿಬ್ಬರ ಭುಜಬಲಾಟೋಪ ಸಾರಿಳಿಯದು (ಕುವ್ಯಾಸ. ೨-೦೦೬). **ಪಾರುಖಾಣ** : (ಶ). **ಪಾರುಖಾಣಯ** : ೧. "ಪಾರುಖಾಣಯ

ಮೆಂದು ಉಚಿತವಚಿತು ಕುಡುವ ವಸ್ತು" (ಕಲಾ. ೬೬-೬೬೪)

**ಪಾರುಖಾಣೆ** : ೧. ತುಂಬುರ ರಂಭೆ ಭೃಂಗಿಯುಂ ಪರಿಕಿಸಿ ಪಸಾಯಮಂ ಪಾರುಖಾಣೆಯ ಕೊಡಲು ನೆರೆದಿರ್ದ ಹರನ ಸಭೆ ಸುಖದ ಸೊಗಸಿನ ಜೊಮ್ಮುವಿಡಿದು ಮೆಚಿದಿರಲು (ಸಿದ್ಧರಾ. ೦-೩೩) ; ತಿರಿ ಶಡವಿಯು ಕಡಿತ ಗಿರಿಗಳ ಹೋರಟಿಗೆ ಹೊಗಬೇಕು ಸೇನೆಗೆ ಪಾರುಖಾಣೆಯು ಕೊಟ್ಟವಾಗಳೆ (ಕುಮಾ.ಕ. ೪-೩೩). ೨. ಧಾರುಣೀಪತಿ ಕೇಳು ನಿನ್ನ ಕುಮಾರರಲಿ ತೊಂಬತ್ತೆಯೆಂಟಜು ಪಾರುಖಾಣೆಯ ಲೆಕ್ಕ ಸುಮುದು ನಿಮ್ಮ ಚಿತ್ತದಲಿ (ಕುಮ್ಮಾ.ಕ. ೦೪-೨೬). ೩. ನಾಶ ; ಕೊನೆ ; ಮಂಕಿನ್ನಾಯಂ : ಕಂಡುದು ಪಾರುಖಾಣೆಯುನಸುರನಸು ಬಲು ಭಾರಿಯೊಡಲೊರ್ಗುಡಿಸಿ ಕೆಡೆದುದು ಬಿರಿದ ಗಿರಿಯಂತೆ (ಕುಮಾ.ದ್ರೋ. ೦೬-೩೪). ೪. ವಿರಹತಾಪ (?): "ಕರಣಿಕರ ಲೆಕ್ಕ ಸಜ್ಜೆಯೊಳೆರಸು ವಿಬುಧಾಳಿಗೀಯುವ ಪರ್ವಂಗಳೊಳುಂ ಮಾರಣದೊಳು ಮದನತಾಪದಿ ಪರಿವರ್ತಿಸು ಪಾರುಖಾಣೆಯೆಂದಟೀಗೆ" (ಭಾಕಿ. ೩೩). 'ಪಾರುಖಾವೆಣೆ' ಪರಾ. [?. / ಮರಾ. ಪಾರುಖೀಣೇ = ನಾಶವಾಗು, ನಷ್ಟವಾಗು]

**ಪಾರುಗಟ್ಟಿಗೆ, ಹಾರಕಟ್ಟಿಗೆ, ಹಾರಗಟ್ಟಿಗೆ, ಹಾರಂಗಟ್ಟಿಗೆ, ಹಾರೆಗಟ್ಟಿಗೆ** (ನಾ). ಚೂಪಾದ ಆಯಂಧವನ್ನು ತುದಿಗೆ ಅಳವಡಿಸಿದ ಕೋಲು ; ಅಂಕುಶ : ಪಾರುಗಟ್ಟಿಗೆಯುವನುರ್ಬಿನೊಳೆಜಗುವ ಸೊರ್ಕಾನೆಯ ನಿಗ್ಗಜಕ್ಕೆ ಎರ್ದೆಯೊಡ್ಡಿ ಸೋಂಕದ ಮುನ್ನಮೆ ಒರ್ಮೆಯ್ಯೊಳೊಲೆದು ತಪ್ಪಿಸಿ ಎಡೆಗೆಡವುವಂತೆ ಕೆಡಪಿ (ಚಳಕಂ. ೦೬೩-೦). **ಹಾರಕಟ್ಟಿಗೆ** : ಕೊರಳ ಜೊತ್ತಿಗೆ ಹಾರಕಟ್ಟಿಗೆ ಸುರಳಿತದ ಮೊಗರಂಬ ಸಾವಿರ ಕರಿಗಳಡಬಲಕೊಲವುತ್ತಿದಿದುಪದ್ಧತಿಯಲಿ (ಸಂಕಶ. ೨೦-೯೦). **ಹಾರಗಟ್ಟಿಗೆ** : ನೀಲದ ಹಾರಗಟ್ಟಿಗೆಯೆಸುಸಿರ್ದುದು ಬಾಲೆಯ ಬಾಸ (ತ್ರಿಕುಶ. ೨೦-೪೪). **ಹಾರುಗಟ್ಟಿಗೆ. ಹಾರೆಗಟ್ಟಿಗೆ** : "ಒತ್ತುವ ಹಾರೆಗಟ್ಟಿಗೆ ಅಯೋಮುಖಂ" (ಕುಂಗರಾ. ೪೬-೬) ; ಹಾಕಿದ ಅಂಟಿಕೆ ಸೂನಂಗಿ ಕೈಗತ್ತಿ ನೂಕುವ ಹಾರೆಗಟ್ಟಿಗೆಯು (ಅಕುಪಾಶಂ. ೨-೩೩).

**ಹಾರುಗಟ್ಟಿಗೆವಿದ್ಯೆ** = ಅಂಕುಶವನ್ನು ಬಳಸುವ ವಿದ್ಯೆ : ಆನೆಯೊಂದಿಗೆ ಕಾದುವ ಹಾರುಗಟ್ಟಿಗೆವಿದ್ಯೆ . . . ನಾನಾಸಂಜ್ಞೆಗಳನು ಅರಿತು (ವಕಳ. ೬). 'ಅರೆಗಟ್ಟಿಗೆ' ಪರಾ. [ < ಪಾರ್ಯ + ಕಟ್ಟಿಗೆ ]

**ಪಾರುಗಡೆ** (ನಾ). ಬಿಡುಗಡೆ ; ಪಾರಾಗುವುದು : ತಂದೆಯು ಪ್ರೇತವಾಗಿ ಎಲ್ಲೊ ವೈತರಣಿ ದಾಟಲಾರದೆ ಅಲೆಯುತ್ತಿರಬೇಕು. ಈ ಪಿಂಡ ಸಲಿಸಿದ ಮೇಲೆಯೂ ಅವರ ಪಾರುಗಡೆಯಾಗುತ್ತದೋ ಇಲ್ಲವೋ (ಕುಗಿಡು. ೪೬). [ಪಾರ್ಯ + ಕಡೆ]

**ಪಾರುಗಾಣಿಸು** (ಕ್ರಿ). ೧. ದಡವನ್ನು ಸೇರಿಸು ; ದಡ ಮುಟ್ಟಿಸು ; ದುಃಖಸಾಗರದಲ್ಲಿ ತೇಲುತ್ತಿರುವ ನಮ್ಮ ಜೀವನನೌಕೆಯನ್ನು ಪಾರುಗಾಣಿಸಮ್ಮ (ಶ್ಯಾಪಂ. ೪). ೨. ರಕ್ಷಿಸು : ನೀವೇ ನನ್ನ ಮಾನವನ್ನು ಕಾಪಾಡಿ ಪಾರುಗಾಣಿಸಬೇಕು (ಚಳಕೊ. ೨೩). ೩. ಕೊನೆಮುಟ್ಟಿಸಂ ; ಮುಗಿಸಂ : ನಿನ್ನ ಕಾರ್ಯವನ್ನು ನೀನೇ ಪಾರುಗಾಣಿಸು ತಾಯಿ! (ಕುಂಹಂ. ೦೬೦). ೪. ಪರಿಹರಿಸಂ; ಹೋಗಲಾಡಿಸಂ : ಶನಿಮಹಾರಾಯನು ಹೆಗಲೇರಿದರೆ ಅದರ ಪರಿಣಾಮವನ್ನು ಪಾರುಗಾಣಿಸುವುದಕ್ಕೆ ತ್ರಿಮೂರ್ತಿಗಳಿಗೂ ಅಸಾಧ್ಯ (ಕುಂಗ್ರಾ. ೦೩೬).

[ಪಾರುಗಾಣು + – ಇಸು]

**ಪಾರುಗಾಣು** (ಕ್ರಿ). ೧. ಪಾರಾಗು ; ಬಚಾವಾಗು : ಟಳಕರು ನನ್ನ ನಾಡಿ ಹಿಡಿದು ಕುಳಿತಿದ್ದರು. ಬೆಳಗ್ಗೆ ನಾನು ಪಾರುಗಂಡೆ (ಸ್ವ.ಶ. ೦೦೬) ೨. ಕೊನೆಮುಟ್ಟು : ನೀವು ಮಾಡಿದ ಲಗ್ನ ನಗೆನಗುತ ಪಾರುಗಂಡಿದ್ದರೆ ಅವನಿಗೆ ಎಷ್ಟೋ ಆನಂದವೆನಿಸಬಹುದಿತ್ತು (ಕುಪಕ. ೩೨). [ಪಾರ್ಯ + ಕಾಣು ( < ಕಾಣ್)]

**ಪಾರುಗೆಯ್ತು** 'ಪಾಱುಗೆಯ್ತು' ನೋ.

**ಪಾರುಧಿ** 'ಪಾರದಿ' ನೋ.

**ಪಾರುಪತ** 'ಪಾರುಪತ್ಯ' ನೋ.

**ಪಾರುಪತಿಗಾರ** 'ಪಾರುಪತ್ಯಗಾಱ' ನೋ.

**ಪಾರುಪತ್ತೆ** 'ಪಾರಂಪತ' ನೋ.

**ಪಾರುಪತ್ಯಗಾರ** 'ಪಾರುಪತ್ಯಗಾಱ' ನೋ.

**ಪಾರುಪತ್ಯ, ಪಾರಪತ್ಯ, ಪಾರಿಪತ್ಯ, ಪಾರಂಪತ, ಪಾರುಪತ್ತೆ, ಪಾರ್ಪತ್ಯ** (ನಾ). ೧. ಮೇಲ್ವಿಚಾರಣೆ ; ಉಸ್ತುವಾರಿ ; ಯಜಮಾನ್ಯ : ಇಳೆಯಾಣ್ಮಂ ತನಗಲ್ತೆ ವೆಗ್ಗಳೆನೆಸುತ್ತಂ ಪಾರುಪತ್ಯಂಗಳುಮಿಳೆಗೀಯಲ್ (ಸೋಮೇಶ. ೬೪) ; ಛತ್ರದ ಯೆಲ್ಲಾ ಪಾರುಪತ್ಯವನೂ ಮಾಡಿಕೊಂಡಿಹ ಸಂಕರವಪ್ಪರಿಗೆ ೪೦ ಸಲಗೆ ಭತ್ತ (ಎಕ. VIII, ತೀರ್ಥಹ. ೨-೪೪ ; ೧೩೩೬) ; ಹಿಂದಕ್ಕೆ ಬೇಲೂರ ಚೆನ್ನಕೇಶವನ ಗುಡಿಯಲ್ಲಿ ಸೂರಯ್ಯನೆಂಬ ಒಬ್ಬ ಬ್ರಾಹ್ಮಣನು ಪಾರುಪತ್ಯವನ್ನು ಮಾಡಿಕೊಂಡಿದ್ದನು (ಶೀಶಿಶಂ. II, ೫೪) ; ನೀರು ಹೊರುವ ಬಡ್ಡಿಗೆ ಊರ ಪಾರುಪತ್ಯವೇಕೆ? (ಗಾದೆ). ೨. ಆಳಿಕೆ ; ಅಧಿಕಾರ : ಮನೆಯಲ್ಲೆಲ್ಲಾ ನಿನ್ನದೇ ಪಾರುಪತ್ಯವಾಗಿದೆಯಲ್ಲ (ಕಾರಶು. ೦೦೩) ; ಅವನು ನಮ್ಮ ಕಡೆಗೆ ತಿರುಗಿಬಿಟ್ಟರೆ ಆವಳದೇನು ಪಾರುಪತ್ಯ ನಡೆಯುತ್ತದೆ ? (ಕುಹಾಗ. ೦೩೪): ಚೇಳಿಗೆ ಪಾರುಪತ್ಯ ಕೊಟ್ಟರೆ ಜಾವ ಕೊಂದು ಸರ್ತಿ ಮುಟ್ಟಿಸಿತು (ಗಾದೆ). ೩. (ಅಲಂ) ದೊಡ್ಡಸ್ತಿಕೆ ; ಪ್ರತಿಷ್ಠೆ : ಅವಳು ಮಾಡುವ ಪಾರುಪತ್ಯಕ್ಕೆ ಕೊನೆಯೇ ಇಲ್ಲ (ಕೂಕಿ).

**ಪಾರಪತ್ಯ** : ೧. ಮಾಡಿದವು ಗುರುಭಾರವನು ಮುರಗೇಡಿಯಲಿ ರಣಪಾರಪತ್ಯವ ಮಾಡುವಾತನು ಕೃಷ್ಣನು (ಕುಮಾ.ಕ. ೦-೬೦) ; ಯಿಮಾ ಛತ್ರದ ಪಾರಪತ್ಯ ×× ಬಿಟ್ಟದು ಕಾಲೆಯ ಬೀಜವರಿ ಖ ೨ ॥ (ಎಕ. VIII, ತೀರ್ಥಹ. ೦೬೪-೦೦; 1440); ಏನೂ ಚಿಂತೆಯಿಲ್ಲ. ಹಿಂದುಗಡೆ ಅವನ ಪಾರಪತ್ಯವನ್ನು ಮಾಡಲಿಕ್ಕೆ ಬಂದೀತು (ಕೂಜುಕ. ೦೨೩). ೨. ಇಷ್ಟಕ್ಕೂ ಅವಳ ಪಾರಪತ್ಯವೆಲ್ಲಾ ಎರಡೇ ತಿಂಗಳು (ಕಂಕಕ. ೨೬). **ಪಾರಿಪತ್ಯ** : ೧. ಚೆಂನಪ್ಪಅಯ್ಯನವರು ಪಾರಿಪತ್ಯವ ಮಾಡಿ ನಡಸಿಕೊಂಡಿಹರು (ಸೌಇಂ. ೦೬೩೨, ಉಡುಪಿ. ೩೦೬-೪೦; 1397): ಆವಳ ಪತಿಯುಂ ಗ್ರಾಮಮಂ ನಾಡ ಪಾರಿಪತ್ಯವನೆಸಗುವಾತನುಂ (ಶೀಕೃಕೃ. ೬-೨-೨೩). **ಪಾರುಪತ** : ೪. ಮೇಲ್ವಿಚಾರಕ ; ಪಾರುಪತ್ಯಗಾರ : ಆಚಾರ್ಯರಿಗೆ ಗ ೬ ಪಾರುಪತರ ಸತ್ರಕ್ಕೆ ಗ ೭೨ . . . ಶ್ರೀ ವಿಶ್ವೇಶ್ವರದೇವರ ಅಮೃತಪಡಿ ಮೊದಲಾದ ಎಲ್ಲಾ ಧರ್ಮಕ್ಕಂ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಎಕ. XV, ಕೀಲಾಪು. ೨೪೯-೬೬ ; 1279). **ಪಾರುಪತ್ತೆ** : ೧. ಮಗನೆ ರಾಜ್ಯದ ಪಾರುಪತ್ತೆಗೆ ದಾರೂ ಇಲ್ಲ (ಕಾಕ್ಕ.ಪ. ೬೩-೦). **ಪಾರ್ಪತ್ಯ** : ೧. ಕಳಿಚಿದಂ ಮಣಿಮಯದ ಮಕುಟಮಂ ದಂತರಗಳಂ ಮುರಿಯುಲೊದ್ದು ನಿಲಿಸಿದಂ ಪಗೆ ಪಾರ್ವತ್ಯಮಂ (ಕುಕಂಗ. ೬೩-೩೨).

[ದೇ.॥ ತಮಿ. ಪಾರುಪತ್ತಿಯ, ಪಾರಪತ್ತಿಯ ; ತುಲ. ಪಾರ್ವತ್ಯ ; ತುಳು. ಪಾರುಪತ್ಯ, ಪಾರುಪತ್ಯೊ ; ತೆಲು. ಪಾರುಪತ್ತೆ, ಪಾರ್ಪತ್ತೆ]

**ಪಾರುಪತ್ಯಗಾತಿ** (ನಾ). ಮೇಲ್ವಿಚಾರಣೆ ನಡೆಸುವವಳು ; ಉಸ್ತುವಾರಿ ಮಾಡುವವಳು : ಅಗ್ರಭೇನಾಪತಿಶ್ರೀವಿನ್ನ . . . ಯಜಮಾನಿಯ ಮಗನ ಬಳಿ ಪಾರುಪತ್ಯಗಾತಿಯಾಗಿದ್ದಳು (ಕೃಷ್ಣಂ. ೦೩).

[ಪಾರುಪತ್ಯ + – ಕಾತಿ]

**ಪಾರುಪತ್ಯಗಾರ** 'ಪಾರುಪತ್ಯಗಾಱ' ನೋ.

**ಪಾರುಪತ್ಯಗಾರಿಕೆ** (ನಾ). ಆಳ್ವಿಕೆ ; ಪ್ರಭುತ್ವ : ಹಿಂದಿಯ ಪಾರುಪತ್ಯಗಾರಿಕೆಗಿರುವ ಹಕ್ಕನ್ನು ಪ್ರಶ್ನಿಸಿ ಹಲವಾರು ಪ್ರಾಂತ್ಯಗಳು ಪ್ರತಿಭಟಿಸಿದುವು (ತಿಳ್ದ. ೬೬೦). [ಪಾರುಪತ್ಯಗಾರ ( < ಪಾರುಪತ್ಯಗಾಱ) + – ಇಕೆ]

**ಪಾರುಪತ್ಯಗಾಱ**, ಪಾರಪತೆಗಾರ, ಪಾರಪತ್ತ್ಯಗಾಱ, ಪಾರಪತ್ಯಗಾರ, ಪಾರುಪತಿಗಾರ, ಪಾರುಪತ್ತ್ಯಗಾರ, ಪಾರುಪತ್ಯಗಾರ, ಪಾರುಪತ್ಯಕಾಱ, ಪಾರ್ಪತ್ತ್ಯಗಾರ, ಪಾರ್ಪತ್ಯಗಾರ (ನಾ). ಮೇಲ್ವಿಚಾರಣೆ ನಡೆಸುವವನು ; ಉಸ್ತುವಾರಿ ಮಾಡುವವನು : ಆವಾವ ಪಾರುಪತ್ಯಗಾಱ ಬಂದ ಅವ ಯಿದ ಅಳುಹಿದರೆ ಯಿಾ ಶ್ಲೋಕಾರ್ಥದ ಪಾಪಕ್ಕೆ ಹೋಹರೂ (ಎಕ. III (R), ಗುಂಡ್ಲುಪೇ. ೧೪೫-೪೬ : 1492) ; ನಮ್ಮ ಬೂದಿಹಾಳಸೀಮೆಯ ಪಾರುಪತ್ಯಗಾಱ ಲಖರಾಜನ ತಿಮ್ಮಪಯನ ಕಳುಹಿಸಿದ ಶಾಸನದ ಕೊಡಗಿಯ ಕಲ್ಲನು × × × ನೆಟ್ಟಿಸಿ ಕೊಟ್ಟೆವು (ಎಕ. VI, ಕಡೂರು. ೦೨೬-೦೦ : 1532). **ಪಾರಪತೆಗಾರ :** ರಾಜೇಶ್ರೀದೊರೆಗಳು ತಮ್ಮ ಹುಜೂರು ಸಾಮದೀಱರು ಪಾರಪತೆಗಾರ ಕಸಬೆ ಗವುಡ ಗ್ರಾಮಾನುಗ್ರಾಮಗಳ ಗವುಡರು (ಎಕ. XI. ಹೊಳಲ್ಕೆ. ೨೫-೬೦ ; 1666). **ಪಾರಪತ್ತ್ಯಗಾಱ :** ಪಾರಪತ್ತ್ಯಗಾಱ ಸಹ ವರುಸ ೧೬ ಮೂಱಗಱಿಯ ಮರ್ದನೆಯ × × ತಿಂಗಳು ೧೬ಕ್ಕೆ . . . ಆಚಂದ್ರಾರ್ಕವಾಗಿ ನಡೆಉದು (ಎಕ. VI (R), ಶಾಂತಿವ. ೦೬೨-೨೮ ; 1526). **ಪಾರಪತ್ಯಗಾರ :** ಮಹಾಮಾತ್ರರು ಎಂಬ ಹೆಸರುಳ್ಳ ಅಧಿಕಾರಿಗಳು . . . ಪಾರಪತ್ಯಗಾರರ, ಲೆಕ್ಕಪತ್ರಗಳ ಸಂರಕ್ಷಕರ ಮತ್ತು ನಾಣ್ಯನಿರ್ಮಾಪಕರ ಕೆಲಸಗಳನ್ನೂ ಸಹ ನೋಡಿಕೊಳ್ಳುತ್ತಿದ್ದರು (ಹುಳುಪಾ. ೮೫). **ಪಾರುಪತಿಗಾರ :** (೪). **ಪಾರುಪತ್ತ್ಯಗಾರ :** ಮಹಾರಾಜೇಶ್ರೀಯವರ ಅಪ್ಪಣೇ ಪ್ರಕಾರಕ್ಕೆ ಜಿಗಣಿಸ್ಥಳದ ಅಧಿಕಾರ್‍ರು ಪಾರುಪತ್ತೇಗಾರ್‍ರು ಶಾನುಭಾಗರು ಗವುಡ ಜಿಗಣಿ ಪಂಚಾನನದವರು ಸಹ ಮಾನ್ಯದ ಭೂಮಿ × × × (ಎಕ. IX, ಆನೇಕ. ೪೦-೬; 1765); ಹೊಳೆಯ ದಡದಲ್ಲಿ ಇರುವುದು ನರಸಿಂಹಸ್ವಾಮಿಯ ದೇವಸ್ಥಾನ. ಇದರ ಪಾರುಪತ್ತೇಗಾರರು ಒಳ್ಳೆ ವಯಸ್ಸಾದವರು (ಗರುಡ. ೦೬೫). **ಪಾರುಪತ್ಯಗಾರ :** ತರೀಕೆರೆಯ ಚಾವಡಿಗೆ ಚಿಕ್ಕ ಪಾರುಪತ್ಯಗಾರರು ಈ ಲೇಖ್ಯದಲ್ಲಿ ಕಳವಾಸಿಯಕ್ಕೆ ಕೊಟ್ಟು ಆಳ್ವಾರದೇವರ ರಥೋತ್ಸವನು ಆಚಂದ್ರಾರ್ಕಸ್ಥಾಯಿಯಾಗಿ ನಡಿಸಿ ಬಹಿರಿ ಎಂದು ಬಿಡಿಸಿ ಕೊಟ್ಟ ಧರ್ಮಶಿಲಾಶಾಸನ (ಎಕ. XIV, ಗುಂಡ್ಲುಪೇ. ೬-೦೫; 1620) : ಪಾರುಪತ್ಯಗಾರನಾಗಲಿ ... ಸುಂಕದ ಮಣೇಗಾರನಾಗಲಿ ಆರು ಇದಕ್ಕೆ ವಿಗಡ ಆಚರಿಸಿದರು ಅವರು ತಂದೆ ತಾಯಗಳ ವಾರನಾಸಿಯಲಿ ಕೊಂದ ಪಾಪಕೆ ಹೋಹರು (ಎಕ. IX, ದೊಡ್ಡಬ. ೫-೨೦ ; 1696) ; ನೀನು ಅಡಿಗೆಮನೆಯ ಪಾರುಪತ್ಯಗಾರರಿಗೆ ಅಧ್ಯಕ್ಷನಾಗಿ . . . ಸುಖವಾಗಿ ಇರು (ಕೃಪಾಶಿ. ೦೬) ; ಅವರು ದೇವಸ್ಥಾನದ ಪಾರುಪತ್ಯಗಾರರಾಗಿದ್ದರು (ಬಕಕಂ. ೦೦೪). **ಪಾರುಪತ್ಯಕಾಱ :** ಕಾಳಮಲ್ಲಿಕಾರ್ಜುನ ದೇವರು ಪಾರುಪತ್ಯಕಾಱ ಕೆಂಪಿನ ಲಿಂಗಣೊಡೆಯರು ದೇವರು ಕೂಡಿ ಕಟ್ಟಿದ ಭಾವಿಯ ಜೀರ್ಣೋದ್ಧಾರವನು ಮಾಡಿದರೂ (ಎಕ. IV (R), ಕಾಮುಗ. ೨೬೨-೪ ; 1640). **ಪಾರ್ಪತ್ತ್ಯಗಾರ :** ನಾನೂ ಅಯ್ನೋರೂ ಮತ್ತು ಪಾರ್‌ಪತ್ತೇಗಾರ್‍ರೂ ಮೂವರೂ ದೀವಟಿಗೆ ಹಿಡ್ಕೊಂಡು ಗುಡಿ ಮೂರು ಸುತ್ತ ಬಳಸಿ ನೋಡಿ (ಇಬದು. ೪೫). **ಪಾರ್ಪತ್ಯಗಾರ :** (ಮೈಗೆಜ. IV, ೬೮೨).

[ ಪಾರುಪತ್ಯ + — ಕಾಱ ]

**ಪಾಠುಪತ್ಯಕಾಱ** ' ಪಾರುಪತ್ಯಗಾಱ ' ನೋ.

**ಪಾರುಪ** ' ಪಾರ್ವ ' ನೋ.

**ಪಾರುಪಾಣ$_1$** ' ಪಾರಿವಾಳ$_1$ ' ನೋ.

**ಪಾರುವಾಣ$_2$** ' ಪಾರಿವಾಳ$_2$ ' ನೋ.

**ಪಾರುವಿಳಿ** (ನಾ). ನೊಗದ ಆ ಕಡೆ, ಈ ಕಡೆಗಳಲ್ಲಿರುವ ಹಗ್ಗ : ಪಾರುವಿಳಿಯ ಹೆಗಲೊಳು ಹೂಡಿ ನೊಗನನು ಸಾರಥಿಗಳನು ಸತ್ಕರಿಸಿ . . . ಪೊಱಮಟ್ಟರಂದಾ ರಥಿಗಳು ರಥವೇಱಿ (ಶ್ರೀಚಾಂ. ೦೩-೬೪).

[ ಪಾರು$_2$ + ವಿಳಿ$_2$ ]

**ಪಾರುವೀಳೆಯ** (ನಾ). (ದೇವರು, ಅರಸರು ಹಾಗೂ ಅಧಿಕಾರಿಗಳ) ದರ್ಶನವನ್ನು ಮಾಡಿದವರಿಗೆ ಕೊಡುವ ಗೌರವತಾಂಬೂಲ ; ಬೆಳ್ಳಿಬಟ್ಟದಂತೆಸೆವ ಒಪ್ಪದ ಪಾರುವೀಳೆಯ[ಪಾಠಾಂ. ಳ್ಯ]ಗಳನು ಬಾದುರಗೆ ಡಿಳ್ಳೀಶ್ವರನೀಯೆ ಮಲ್ಲುಖಾನರು ತಳ್ಳಂಗೊಂಡರೆದೆಯೊಳು (ಕುಮಾರಾಮ. ೦೬-೯೬). [ ಪಾರು$_1$ (<ಪಾರ್$_1$) + ವೀಳೆಯ ]

**ಪಾರುವೇಟೆ** ' ಪಾರಿವೇಂಟೆ ' ನೋ.

**ಪಾರುಶದ** (ನಾ). ರಾಜ, ದೇವತೆ ಮುಂತಾದವರ ಸೇವಕವರ್ಗ,–ಪರಿವಾರ : ನಾರದಾದಿ ಮುನೀಶ್ವರರ ಪರಿವಾರವೊಂದೆಸೆಗೊಂದೆಸೆಗೆ ನಿಜ ಪಾರುಶದ ಪರಿವಾರವಾ ಸುರವರರ ಪರಿವಾರ . . . ಪರಿವರಿಸಿರಲು (ಶಿಭಾಗ. ೬-೪-೩೨). [ <ಸಂ. ಪಾರಿಷದ ]

**ಪಾರುಷ್ಯ** (ನಾ). ೧. ಒರಟುತನ ; ಕಾಠಿಣ್ಯ. ೨. ನಿಷ್ಠುರತ್ವ : ಪಾರುಷ್ಯ ಎಂದರೆ ನಿಷ್ಠುರತ್ವ (ಭಾತತ್ತ್ವ. ೦೪೦). ೩. ಕಠಿಣವಾದ ಮಾತು ; ಬಿರುಸಂನುಡಿ : "ಪಾರುಷ್ಯ, ಅಶಿವಾದಃ – ೨ ಅಪ್ರಿಯವಾಗಿ ನುಡಿಯುವಿಕೆ" (ಸಿದ್ಧಾಂತಿ. ೫೩). ೪. ಬೃಹಸ್ಪತಿ. [ಸಂ.]

**ಪಾರೆ$_1$**, ಆರೆ$_1$, ಹಾರೆ (ನಾ). ನೆಲವನ್ನು ಅಗೆಯುವುದು, ಕುಟ್ಟುವುದು ಮುಂತಾದ ಕೆಲಸಗಳಿಗೆ ಉಪಯೋಗಿಸುವ ಕಬ್ಬಿಣದ ಒಂದು ಉಪಕರಣ ; ಗಡಾರಿ : ಕಡುಗಾಯ್ದ ಪಾರೆಯೊಂತುಂ ಸುಡಲರಿಯದು ಸತ್ಯಮುಳ್ಳನಂ ಪುಸಿವವನಂ ಸುಡುವುದು (ಧರ್ಮಾಮೃ. ೬-೦೪೦) ; ಆಕೆ ತನ್ನ ಶುಚಿತನಕ್ಕೆ ದಿವ್ಯಮಂ ಪಿಡಿವೆನೆಂದು ಪಾರೆಯಂ[ಪಾಠಾಂ. ಪಾಳವಂ] ಕಾಸುವ ಸಮಯದೊಳ್ (ಪುಣ್ಯಾಸ್ರ. ೩-೭೮ ಪ) ; ದೋಣೆಕ್ಕೆ ಡೆಗ್ಗೆಪರ ಪಾರೆ ನೆಲಗುಮ್ಮ ಡೋಂಣೆ ಸಬಳ ಶರಗಳ ಸಂಕುಳವೆಯ್ದಿತು ಕೊಲ್ಲಾರದೊಳಾ ಬಿಂಕಕಾರ್ತಿಯ ದಂಡಿನೊಳಗೆ (ಕುಮಾರಾಮ. ೪೦-೫೦). **ಆರೆ$_1$ :** ಚರಿತದಿಂದೊಂದುದ್ದವಾ[ಪಾಠಾಂ. ಬಾ]ರೆಯಂ ಪಿಡಿತಂದು ಪರಮವೈರಾಗ್ಯಯುಕ್ತಂ ಹರುಷದಿಂ ಬಂದು (ಪಾಗೀರ. ದೇ. ೨೬೪-೫). **ಹಾರೆ :** "ಹಾರೆ ಭೇದಿಯುತ್ಕ್ಕಂ" (ಮುಂಗರಾ. ೦೦೪-೨); ಕೂರ್ಪುವೆತ್ತ ಧಾರೆ ತೋರ ಹಾರೆಗಾಸಿ ಗುದದೊಳಿಟ್ಟು . . . ಸುಡುವರು (ಸಾಪಂಚ. ೬-೦೪೩); ಹಾರೆಯಾಕಾರದ ಚಂಡವೇಗೆಂಬು ರಾಯ ವೀರಭುಜದಿ ತೂಗಿ ನೋಡಿ ಪಾರುವಾಣೆಯ ತೆಂಕಮುಖ ಮಾಡಿ ತೆಂಕಮುಖಾರವಿಂದಾಯತನಾದ (ಚಕ. ೨೪-೬೬); ಚಪ್ಪಡಿಕಲ್ಲನ್ನು . . . ಹಾರೆಯಿಂದ ಮೀಟಿ ಒಳಗೆ ಹೋಗಿ ನೋಡಲು ಒಂದು ಅಂಕಣದ ಚಿಕ್ಕ ಮನೆಯಾಗಿತ್ತು (ಹುಟ್ಟಿಹ. ೬೪).

[ದೇ.॥ ತಮಿ. ಪಾರೈ ; ಮಲ. ಕುವಿ. ಪಾರ ; ತುಳು. ಪಾರೆಂಗಿ ; ತೆಲು. ಪಾರ, ಪಾಱ; ಕೋತ, ತೊದ. ಪಾರ್]

**ಪಾರೆ$_2$** (ನಾ). ಬಂಡೆ : ಆ ಪಾರೆಯನ್ನು ಹಳ್ಳದಲ್ಲಿ ತಳ್ಳುವುದಕ್ಕೆ ಅದರ ಕೆಳಗೆ ಡೊಗರು ತೋಡುತ್ತಾನೆ (ಕಥಾಮು. IV, ೬); ಪಾರೆಯನ್ನು ಹತ್ತಿ ಅದರ ಮೇಲೆ ಹೋಗಿ ನಿಂತರೆ, ಎಷ್ಟು ಚನ್ನಾಗಿ ಕಾಣುತ್ತದೊ ಸುತ್ತಲೆಲ್ಲ (ಕುಡಿಕೂ. ೨೩). [ದೇ.॥ ತಮಿ. ಪಾಱೈ, ಪಾರ್; ಮಲ. ಪಾಱ; ತುಳು. ಪಾಡೆ; ಕೊಡ. ಪಾರೆ ; ಪರ್ಜಿ. ಪಾರ]

**ಪಾರೆ$_3$** 'ಪಹರೆ' ನೋ.

**ಪಾರೆ$_4$** (ನಾ). ಶರೀರದ ಒಂದು ಭಾಗ ; ಅವಯವ : ವೆತ್ತರಂ ಕುಡಿದು ಸೀನೆಣದೊರ್ಪಿಡಿಖಂಡಮಂ ಪತ್ತೆ ತೆಱಿದ್ದು ನೆಣದೊಟ್ಟಿದ ಪಾರೆಯುಮಾರೆಯುಮಂ ತುತ್ತಿ ನುಂಗಿ (ಕಾವ್ಯಾವ. ೮೨೫).

[?. / ತುಳು. ಪಾರೆ=ಭುಜ]

**ಪಾರೆಯಂಬು** (ನಾ). ಹಾರೆಯಾಕಾರದ ಬಾಣ : ಓರೊಂದೆ ಪಾರೆಯಂಬಿನೊಳೋರೊಂದೆ ಗಜೇಂದ್ರಮುರುಳೆ (ಶಂಪಾ. ೦೦-೬೦); ವಿಜಯನು ಅವರ ಮೇಲೆ ಕೆಂಗರಿಗಳ ಪಾರೆಯಂಬುಗಳನ್ನು ಕರೆದು . . . ಸುಶರ್ಮನ ತಲೆಯನ್ನು ಹಾರಿಸಿದನು (ಭಾಮುಚ. ೨೬). [ಪಾರೆ$_1$ + ಅಂಬು]

**ಪಾರೆವಾಯ್** (ನಾ). ಹಾರೆಯ ತುದಿ, — ಮೊನೆ: ವಂದಿಯ ಪಿಂದನೆಯ್ದಿ ಪಿಡಿವಿಟ್ಟಯ ನೆಟ್ಟಿಬ ಪುಲ್ಲೆಯಂ ತೆಱಂದಂದೆಸು ಪಾರೆವಾಯ ಸರಲಿಂ (ಮುಹಾಶೀ. ೨-೦೬). [ಪಾರೆ₁+ಬಾಯ್]

**ಪಾರ್ಯೆಸು** 'ಪಾರಯಿಸು' ನೋ.

**ಪಾರೋಕ್ಷ** (ನಾ). ಕಣ್ಣಿಗೆ ಕಾಣದಿರುವುದು; ರಹಸ್ಯವಾದುದು: ಪಾರೋಕ್ಷವೆಂಬುದು ತಿಳಿವುದದು ಅಪರೋಕ್ಷವೆಂಬದು ನೆಲೆಗೆ ಕಂಡದು ಬಳಿಕ ಪಾರೋಕ್ಷವದು ಅದು ಪಾರೆಯು (ತ್ಯಾಸಿಸಿ. ೩-೭೯). [ಸಂ.]

**ಪಾರೋಡು** 'ಪಾಱೋಡ' ನೋ.

**ಪಾರ್ಶ್ವ₁** (ನಾ). ಭುಜಾಗ್ರ; ಅಂಸ; ಹೆಗಲು: ಸೂಸಿದ ಖಂಡ ಮುರುಳ್ದ ತಲೆ ಪಱಿದು ಕರಂ ಪಸರಿಸಿದ ಪಾರ್ಶ್ವ ಕರುಳೊಕ್ಕುಮಿಟ್ಟ ದೆಣಂ ದಲೆತ್ತುವಾ ರಣರಂಗಂ (ನೇಮಿಪು. ೧೦-೦೩೪); ಬಾಣಘಾತದಿಂ ಪಾಱುವ ಪಾರ್ಶ್ವಗಳ್ ಪರೆದ ಪಣ್ಡಲೆಗಳ್ . . . ವಾಜಿ ವಾರಣ ವರೂಥವುಮಂಜಿಸಿದತ್ತು ಸುತ್ತಲುಂ (ಮುಹಾಶೀ. ೬-೦೦೯); ಅಲ್ಲಿ ಕಕುದ ಸಂಬಂಧಿಯಪ್ಪ ಪಾರ್ಶ್ವಗಳ್ಗೆ ಯೆಸಯ(ಅಂಸಮೆ)ಂಬ ಪೆಸರಕ್ಕುಂ (ಅಶ್ವಶಾ. ೬೬-೦೬). [<ಸಂ. ಪಾರ್ಶ್ವ]

**ಪಾರ್ಕ್₂** (ನಾ). ವಿಹಾರಪ್ರದೇಶ; ಉದ್ಯಾನ: ಅವರು . . . ಭೇಟಿ ಕೊಡದ ಪಾರ್ಕುಗಳಿರಲಿಲ್ಲ (ಸೋತುಗ. ೬೩). [←ಇಂ. Park]

**ಪಾರ್ಕೆ** (ನಾ). ಹಾರುವಿಕೆ; ನೆಗೆತ: ಲಂಘನಂ=ಒಣಗುಂ, ಪಾರ್ಕೆಯುಂ (ಶಾಶಕ್. ೦೦); ಜಳಪರಿಪೀತವಾರಿದಮನಾನೆಗಳೆಂದು ತುಡುಂಕು ವಾನೆಗಳ್ಗಳಚಳನಂಗಳಿಂದೊಗೆದ ವಾಃಕಣಮಂ ಸೊದೆಗೆತ್ತು ನುಂಗುವಾ ಜಳಚರದಾ ಪರಿಸ್ಫುರಣಮುಂ ಮಿಗೆ ಮುತ್ತಿನ ಪಾರ್ಕೆಯೆಂದು ಕೈದಳೆ ವಪುರೀಜನಂಗಳ ಬೆಡಂಗಿನೊಳೊಪ್ಪಿತು ಸಿಂಧುಬಂಧುರಂ (ಚಂಪ್ರಪು. ೦-೬೨). [ಪಾರ್₂ (<ಪಾಱು₁) + —ಕೆ]

**ಪಾರ್ಖವಣೆ** 'ಪಾರಖಾವಣೆ' ನೋ.

**ಪಾರ್ಗುಪ್ಪೆ** 'ಪಾಱುಂಗುಪ್ಪೆ' ನೋ.

**ಪಾರ್ಟಿ** (ನಾ). ೧. ಪಂಗಡ; ಪಕ್ಷ: ತಾನು ಕ್ರಾಂತಿಕಾರಿ ಪಾರ್ಟಿಗೆ ಸೇರಿದ್ದೇನೆ ಎಂದು ನಿನ್ನೆ ತಾನೇ ಆತ ಹೇಳಿದ (ಆತ್ಮಾಶ್. ೭೩); ನಮ್ಮ ಹಳ್ಳಿಯಲ್ಲಿ ಹಿಂದೆ ಪಾರ್ಟಿಯಾಗಿ ಆದರ ಕಷ್ಟ ನಿಷ್ಠೂರಗಳನ್ನು ಅನುಭವಿಸಿ ಇತ್ತೀಚೆಗೆ ಒಂದೇ ಗುಂಪಾಗಿದ್ದರು (ಹುಟ್ಟಿ ಹ. ೬೦). ೨. ಸಂತೋಷಕೂಟ: ಗೆಳೆಯರ ಒತ್ತಾಯಕ್ಕೆ ಅನಂತ ಊರು ಮುಂದಿನ ಗುಡ್ಡದ ಮೇಲೆ ಪಾರ್ಟೀ ಕೊಟ್ಟನು (ಹೇಮಾಸ.೨). [←ಇಂ. Party]

**ಪಾರ್ಟು** (ನಾ). ೧. ವಿಭಾಗ; ಖಂಡ; ಭಾಗ: ಈ ಪುಸ್ತಕವನ್ನು ಮೂರು ಪಾರ್ಟುಗಳನ್ನಾಗಿ ಮಾಡಿ ಪ್ರಕಟಿಸಲಾಯಿತು (ರೂಪಿ). ೨. ನಾಟಕ, ಸಿನಿಮಾಗಳಲ್ಲಿ ನಟನಟಿಯರಿಗೆ ವಹಿಸುವ ಪಾತ್ರ: ಅವಳು ಮರಾಠಿ ನಾಟಕದಲ್ಲಿ ಬಹಳ ಚೆನ್ನಾಗಿ ಪಾರ್ಟು ಮಾಡುತ್ತಾಳೆ! (ಸ್ವಕೃಹೂ. ೨೩೬); ರಾಧಾ ನಾಟಕದಾಗ ಕೃಷ್ಣನ ಪಾರ್ಟ ಇದ್ದಾಂಗ ಕಾಣ್ತದ ನಿಂದು? (ಕಮ್ಮಟ. ೦೭). [←ಇಂ. Part]

**ಪಾರ್ಥ** (ನಾ). ೧. ದೊರೆ; ರಾಜ. ೨. ಪೃಥೆಯ ಮಗ; ಅರ್ಜುನ: ಇಮ ಚಕ್ರವ್ಯೂಹಮಿಮಾ ವ್ಯೂಹಮನೊಡೆಸದಟಂ ಪಾರ್ಥಂ (ಶಂಪೂ. ೦೦-೬೭); ಉರಗೇಂದ್ರಲೋಕಮಂ ಪೊಕ್ಕುರಗರೊಳಿಱಿದುರಗಪತಿಯ ನಿಜಸುತೆಯೊಡನಾದರದಿಂ ಜಯಲಕ್ಷ್ಮಿಯೊಳೊಡವೆರೆದಂ ಕೀರ್ತಿಯೊಳೊಂದೆ ಪಸೆಯೊಳೆ ಪಾರ್ಥಂ (ಗದಾಯು. ೨-೯೨); ಸಂಹರಿಸು ಮುತ್ತರಿಭವವನೆಂದುರುತರದ ಭಕ್ತಿಯಲಂದು ಸೈಗೆಡೆದಿರ್ದನಾ ಪಾರ್ಥ (ಕುಮ್ಹಾರ. ೬-೯೭). ೩. ಒಂದು ನಕ್ಷತ್ರದ ಹೆಸರು: ಪಾರ್ಥನನ್ನು ಗುರುತಿಸಲು ಸಮತ್ರಿಕೋನಾಕಾರದ ಮೂರುನಕ್ಷತ್ರಗಳು ಸಹಾಯಕವಾಗುತ್ತವೆ (ಶಕ್ಷಕೃ. ೨೯). [ಸಂ.]

**ಪಾರ್ಥಕುಮಾರ** (ನಾ). ಅರ್ಜುನನ ಮಗ; ಅಭಿಮನ್ಯು: ಶಿವಶಿವ ನುಡಿವ ಠವಿ ಯಾರಿನ್ನು ಪಾರ್ಥಕುಮಾರನಾಹವವ (ಕುಮ್ಹಾದ್ರೋ. ೬-೬). [ಪಾರ್ಥ + ಕುಮಾರ]

**ಪಾರ್ಥಜ** (ನಾ). ೧. ಅರ್ಜುನನ ಮಗ. ೨. ಅಭಿಮನ್ಯು. ೩. ಬಭ್ರುವಾಹನ: ಪಾರ್ಥಜನ ಶರವರ್ಷದೊಳ್ನೆಯುದಱಿಲ್ಲ ಪಾಂಡವನ ಪರಿವಾರದೊಳ್ (ಜೈಮಿಭಾ. ೨೨-೬೦); ಚಿತ್ರಾಂಗದೆಯ ಕೇಳೀಬರವಿರ್ದ ಶಿಬಿಕೆಯೆಡೆ ಪಾರ್ಥ ಪಾರ್ಥಜರಿರ್ದರಂ ಕಾಲ್ನಡಗೆಯಿಂದೆ ಸಾರ್ದರ್ (ಶಶ್ಯಾಂಗ. ೯೯-೨೪೪೬). [ಸಂ.]

**ಪಾರ್ಥಿ** (ನಾ). ೧. ಅರ್ಜುನನ ಮಗ. ೨. ಅಭಿಮನ್ಯು: ಹರನ ನಯನಜ್ವಾಲೆ ಪಾರ್ಥಿಯ ಸರಳ ಕಿಡಿಯಲಿ ಪಲ್ಲಟಿಸೆ ಸಂಗರದೊಳಗೆ ಸ್ಮರಿವರಿದು ಸದೆದನು ಸಾಲಸೈನಿಕರ (ಕುಮ್ಹಾದ್ರೋ. ೫-೨). ೩. ಬಭ್ರುವಾಹನ: ಎನ್ನ ವಿಕ್ರಮವನೀಗ ನೋಡೆನುತೆದ್ದು ಕರೆಸಿದಂ ಪಾರ್ಥಿ ನಿಜಸೈನಿಕವನು (ಜೈಮಿಭಾ. ೨೯-೨೬). ೪. ಮತ್ತಿಯ ಮರ. [ಸಂ.]

**ಪಾರ್ಥಿವ** (ಗು). ೧. ಪೃಥ್ವೀ ಸಂಬಂಧವಾದ; ಭೌತಿಕವಾದ; ಭೂಮಿಗೆ ಸಂಬಂಧಿಸಿದ: ಈ ಅನಂತ-ಕೋಟಿ-ಬ್ರಹ್ಮಾಂಡದ ಅನಂತ ಅಸ್ತಿತ್ವದ ಹಿನ್ನೆಲೆಯಲ್ಲಿ ವಿಮರ್ಶಿಸಿದಾಗ ಹೊಳೆದೀತು ನಮ್ಮಾ ಕ್ಷಣಭಂಗುರವಾದ ಪಾರ್ಥಿವ ಜೀವನವನ್ನು ನೋಡುವ ದೃಷ್ಟಿ (ಮೂರುದಾ. ೨೦೬). ೨. ಭೂಮಿಯನ್ನು ಆಳುವ; ಅರಸುವಂಶದ: ಪಾರ್ಥಿವ ಚೂಡಾರತ್ನಂ ತೀರ್ಥಂಕರೇಂದ್ರೂದಯಯಾಚಳಂ ಪ್ರಾಪ್ತಾನೇಕಾರ್ಥಂ ಪರಿಪಾಳಿತಬುಧಸಾರ್ಥಂ ಸಿದ್ಧಾರ್ಥನೆಳೆಯೊಳಳ್ತೆ ಕೃತಾರ್ಥಂ (ವರ್ಧಪು. ೦೩-೩೯). ೩. ಇಹಲೋಕಕ್ಕೆ ಸಂಬಂಧಿಸಿದ; ಐಹಿಕವಾದ: ಪಾರ್ಥಿವ ಪರಿಮಿತಿಯಲ್ಲಿ ಮುಂದುಡಿ ಹೋಗದಂತೆ. . ಅನಂತತೆಯ ಚಿದಾನಂದದ ಆಸೆ ಹುಟ್ಟಿಸಿದ್ದು ಈ ಸ್ವಪ್ನಲೋಲತೆ (ದೀಕನ್ನ. ೨). (ನಾ). ೪. ಪೃಥ್ವಿಗೆ ಸಂಬಂಧಿಸಿದುದು; ಭೌತಿಕವಾದುದು: ನಾಟಕವು ನಾಟಕಕಾರನ ಸಂತಾನವು, ಅವನ ಭಿನ್ನತೆಯು ಪಾರ್ಥಿವವಾಗಿದೆ (ಶ್ರೀಂರ ೯೦). ೫. ಭೂಮಿಯನ್ನು ಆಳುವವನು; ರಾಜ: "ರಾಜಾ:, ರಾಜನ್ಯ: . . . ಪಾರ್ಥಿವ:, ನರದೇವ:, ಲೋಕಪಾಲ: —ಈ ೧೨ ಅರಸು" (ಹಲಾಯು. ೬೯-೨೬೭); ಅವಲೋಕಿಪುದುಂ ನವವನಜವಲ್ಲಿಗೆಱಗುವ ಝಷದ್ವಯಂಗಳಿವೆನೆ ಪಾರ್ಥಿವನ ನಯನಂಗಳೆಱಗಿದುವವಯವದಿಂ ನಿಂದ ಗಾಯಿಕಾಯುವತಿಯರೊಳ್ (ಶಾಂತಿಪು. ೬-೩೩); ಇಱಿಯದ ಬೇಡಿದೊಡೀಯದ ಬಱಿದೆ ಕುಲೀನತೆಗೆ ಬೆಸೆದು ಪಾರ್ಥಿವ ಶಬ್ದಕ್ಕೆಱಿವಟ್ಟನಿಸಿ ಧರಿತ್ರಿಗೆ ಪೊಱೆಯೆನಿಪಂ ರಾಜನಾಮಧಾರಕನಲ್ತೇ (ಶಂಶಾಸೂ. ೯-೪೦). ೬. ಶಿವ; ಈಶ್ವರ. ೭. ಮಣ್ಣಿನಲ್ಲಿ ಹುಟ್ಟಿದುದು; ಮರ, ಗಿಡ ಮೊದಲಾದುವು. ೮. ಆಕಾಶ: "ಶಿತಿಕಂಠ ಭೂಪ ನಭ ಪುರವಿಂತಿ ನಾಲ್ಕುಂ ಪಾರ್ಥಿವಾಖ್ಯೆಮೆಸಿಕುಂ ಜಗದೊಳ್" (ನಾನಾಕಂ. ೬೩). ೯. ಅರುವತ್ತು ಸಂವತ್ಸರಗಳಲ್ಲಿ ಹತ್ತೊಂಬತ್ತನೆಯ ಸಂವತ್ಸರದ ಹೆಸರು: ಆ ಪರುಷವೇ ಪ್ರಭವ ವಿಭವ . . . ಪಾರ್ಥಿವ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ಏಕೀಳ. ೩೨೦). ೧೦. ಮಣ್ಣಿನ ಪಾತ್ರೆ; ಗಡಿಗೆ. ೧೧. ದೇಹ; ಒಡಲು. [ಸಂ.]

**ಪಾರ್ಥಿವಕುಲ** (ನಾ). ರಾಜಮನೆತನ; ಅರಸುವಂಶ: ಮೂರ್ಧಾಭಿಷಿಕ್ತ ಪಾರ್ಥಿವಕುಲಪ್ರಸೂತರುಂ ವಿನಯೋಪಪನ್ನರುಂ ಕೋವಿದರುಂ . . . ಪೊಱಗೆ ತುರಗಾರೂಢರ್ ಪ್ರಣಾಮಲಾಲಸರಾಗಿ ಬಾಗಿಲೊಳ್ ಪಾರ್ದಿರ್ಪರ್ (ಕಾದಂಪೂ. ೯೫೦); ಸದ್ವಂಶಸಂಜಾತಂ ಪಾರ್ಥಿವಕುಲವರಿಷ್ಠಪಂಶಸಂಭವಶ್ರೇಷ್ಠಂ! (ಶಶ್ಯಾಂಗ. ೩೬-೯೯೦). [ಪಾರ್ಥಿವ + ಕುಲ]

**ಪಾರ್ಥಿವಗುಣ** (ಗು). ೧. ಪೃಥ್ವಿಯ ಸಂಬಂಧವುಳ್ಳ ; ಭೂಗುಣವುಳ್ಳ. ೨. ರಾಜಯೋಗ್ಯವಾದ ಗುಣದಿಂದ ಕೂಡಿದ ಕ್ಷತ್ರಿಯ ಗುಣದಿಂದ ಕೂಡಿದ : ಪ್ರಿಯಂಗಿಂದೊಂದೆಡೆಯಿರವಂ ಬಯಸಿದ ಶೌರ್ಯಾದಿಸಕಲಪಾರ್ಥಿವಗುಣಸಂಚಯದಭ್ಯರ್ಥನದಿಂದಾಶ್ರಯರೂಪನನಾವಹೀಶನು ಬಿದಿ ಪಡೆದಂ (ಕಾದ್ರಕ. ೩-೨೪). (ನಾ). ೩. ಪೃಥ್ವಿಯ ಸಂಬಂಧವುಳ್ಳದು ; ಭೂಗುಣದಿಂದ ಕೂಡಿದುದು. ೪. ರಾಜಯೋಗ್ಯಗುಣದಿಂದ ಕೂಡಿದವನು ; ಕ್ಷತ್ರಿಯಗುಣದಿಂದ ಕೂಡಿದವನು. ೩, ೪ : ಪಾರ್ಥಿವಗುಣಯುತನಾಗಿಯುಮರ್ಥಿತ ಫಲದಾಯಿಯಾಗಿಯುಂ ನಿನ್ನೊಳ್ ತಾಂ ಪ್ರಾರ್ಥತೆಯುಂ ಪಡೆಗುಂ ಪರಮಾರ್ಥಮಚೇತನತೆಯಿಂದೆ ಕಲ್ಪಕುಜಾತಂ (ಕಂದ. ೩-೪೪).

[ಪಾರ್ಥಿವ + ಗುಣ]

**ಪಾರ್ಥಿವತ್ವ** (ನಾ). ಮಣ್ಣಿನ ಗುಣದಿಂದ ಕೂಡಿದುದು : ಅರಸು ಗುಣಕ್ಕಾಗರವಾದರಸನೆ ಪಾರ್ಥಿವನದೊಂದುಮಿಲ್ಲದೆ ಬೆಸದಿರ್ಪರರಸನವಂ ವ್ಯಕ್ತಿಂದಸ್ವರೂಪದಿಂ ಪಾರ್ಥಿವತ್ವಮುಂ ಪ್ರಕಟಿಸುಗುಂ (ಕಾವ್ಯಂಕ. ೩೦೦).

[ಸಂ.]

**ಪಾರ್ಥಿವಪುತ್ರ** (ನಾ). ೧. ರಾಜಪುತ್ರ; ಕ್ಷತ್ರಿಯ ಕುಮಾರ : ಕುದುರೆಯ ಕವಣದೊಳ್ ಬರ್ಪ ಪಾರ್ಥಿವಪುತ್ರಸಾರ್ಥಮುಂ (ಚಂಪ್ರಕ. ೭-೮೦ ವ). ೨. ಸೂರ್ಯ. [ಪಾರ್ಥಿವ + ಪುತ್ರ]

**ಪಾರ್ಥಿವಶರೀರ** (ನಾ). ೧. ಜಡಶರೀರ ; ಭೌತಿಕವಾದ ದೇಹ : ಸತ್ಯಸಾಪ್ರೀತನಂ ಧನ್ಯನೆಯಿನಿಲ್ಲಗ್ಗೆಯ್ಯುಲ್ಕಳಸಿ ಸಂಹರಿಸಿ ಆ ಜರಾಜರ್ಜರಿತ ಪಾರ್ಥಿವಶರೀರಮಂ ಅನಾಯಾಸಂ ಘಾಸಿಸಿದರೇನಂತೆ ! (ಅಮಕಂ. ೧೮ ೮); ಅವರ ಆತ್ಮವು ಪಾರ್ಥಿವಶರೀರದ ಬಂಧನವನ್ನು ತೊರೆದು ಹೊರಟು . . . ಹೋಗಿರಬೇಕು (ಸಂಗೀತ. ೨೪). ೨. ಶವ ; ಹೆಣ : ಶ್ರೀಶರೀಫರ . . . ಪಾರ್ಥಿವಶರೀರವನ್ನು ಎಲ್ಲ ಸಮಾಜದವರು ತೇರು ಕಟ್ಟಿ . . . ಶರೀಫರ ತಂದೆಯ ಸಮಾಧಿಯ ಜೊತೆಗೆ ಅಂತ್ಯವಿಧಿಯನ್ನು ಒಳ್ಳೆ ವಿಜೃಂಭಣೆಯಿಂದ ಮುಗಿಸಿದರು (ಶರೀಫ. ೭೯ ಶರೀಫಾವ್ಯಸಂಗ್ರಹ).

[ಪಾರ್ಥಿವ + ಶರೀರ]

**ಪಾರ್ಥಿವಸಂವತ್ಸರ** (ನಾ). ಅರುವತ್ತು ಸಂವತ್ಸರಗಳಲ್ಲಿ ಹತ್ತೊಂಬತ್ತನೆಯದು : ಕಳಚುರಿಚಕ್ರವರ್ತಿ ಭುಜಬಳಮಲ್ಲದೇವ ವರ್ಷದ ಹತ್ತನೆಯ ಪಾರ್ಥಿವಸಂವತ್ಸರದ ಶ್ರಾವಣ ಬಹುಳ ದ್ವಾದಶೀ ಬೃ[ಬೃ]ಹಸ್ಪತಿವಾರದಂದಿನ ಬ್ಯತಿಪಾತ ಪರ್ಬ್ಬ ನಿಮಿತ್ತದಿಂ (ಕೊಲ್ಲಾಪ.೦೨-೦೪; 1165); ದಂಡನಾಯಕರುಂ ಸಮಸ್ತಕರಣಂಗಳುಂ ಪಾರ್ಥಿವಸಂವತ್ಸರದಾಷಾಢ ಬಹುಳನವಮಿ ಮಂದವಾರ ದಕ್ಷಿಣಾಯನಸಂಕ್ರಾಂತಿಯಲು . . . ಧಾರಾಪೂರ್ಬ್ಬಕಂ ಕೊಟ್ಟರು (ಕೊಲ್ಲಾಪ. ೦೩-೩೯; 1166).

[ಪ್ರಾರ್ಥಿವ + ಸಂವತ್ಸರ ]

**ಪ್ರಾರ್ಥೇನಿಯಂ** (ನಾ). (ಬೆಳೆಗಳಿಗೆ ಕಳೆಯಾಗಿರುವ) ಒಂದು ಕೀಳು ಬಗೆಯ ಸಸ್ಯ : ಈಚೀಚೆಗೆ ಕಂಡ ಕಡೆಯಲ್ಲೆಲ್ಲಾ ಪಾರ್ಥೇನಿಯಂ ಬೆಳೆ ಹೆಚ್ಚುತ್ತಿದೆ (ಪ್ರಜಾ). [← ಇಂ. Parthaneum]

**ಪಾರ್ದನ** 'ಪಾಡ್ದನ' ನೋ.

**ಪಾರ್ಪತ್ತೆಗಾರ** 'ಪಾರುಪತ್ಯಗಾರ' ನೋ.

**ಪಾರ್ಪತ್ಯ** 'ಪಾರುಪತ್ಯ' ನೋ.

**ಪಾರ್ಪತ್ಯಗಾರ** 'ಪಾರುಪತ್ಯಗಾರ' ನೋ.

**ಪಾರ್ಪಾಲಿ** (ನಾ). ಒಂದು ಬಗೆಯ ಸಸ್ಯ : ಪಾರ್ಪಾಲಿ, ಕೊಡಚಿ, ಗೊಟ್ಟಿ (ವ್ಯವಹಾ. ೭೯-೦೭೩೩). [ ? ]

**ಪಾರ್ಪು** (ನಾ). ನೋಟ ; ದರ್ಶನ : ಏನ್ ನೋಪ್ತ ನೋಪ್ಪಿಯೋ, ಏನ್ ಪಾರ್ತ ಪಾರ್ಪೋ (ತುಂಗಳು. ೩೯-೦೦). [ಪಾರ್₁ + — ಪು₂]

**ಪಾರ್ಬ** 'ಪಾರ್ವ' ನೋ.

**ಪಾರ್ಬಣ** (ನಾ). ಪರ್ವಕಾಲದಲ್ಲಿ ಪಿತೃಗಳಿಗೆ ತರ್ಪಣ ನೀಡುವ ಕ್ರಿಯೆ,—ವಿಧಿ ; ಅಮಾವಾಸ್ಯೆಯ ದಿನ ಮಾಡುವ ಶ್ರಾದ್ಧ ; ಪರ್ವಶ್ರಾದ್ಧ : ಕಳುಹಿ ಪಾರ್ಬಣಯೋಗ್ಯ ಮಾಂಸಂಗಳನು ರಾಜಾಲಯಕೆ ವನದಲಿ ಸುಳಿದು ಮೃಗಯಾವ್ಯಸನದಲಿ ವರನೃತ್ಯಗೀತದಲಿ ಬಳಲಿ ಬಸವಳಿವುತ್ತ ಹೋದನು ಫಲುಗುಣನು (ಕಿಶಾಗ. ೦೦-೩೮-೨೩).

[<ಸಂ. ಪಾರ್ವಣ]

**ಪಾರ್ಬಿಕೆ** 'ಪಾರ್ವಿಕೆ' ನೋ.

**ಪಾರ್ಲಿಮೆಂಟು** (ನಾ). ರಾಷ್ಟ್ರದ ಕೇಂದ್ರಸರ್ಕಾರಕ್ಕೆ ಸಂಬಂಧಿಸಿದ ಪ್ರಮುಖಪಟ್ಟಣಗಳ ಪ್ರಜಾಪ್ರತಿನಿಧಿಗಳನ್ನೊಳಗೊಂಡ ಪ್ರಧಾನ ಸಭೆ ; ಲೋಕಸಭೆ ; ಕೇಂದ್ರಸಂಸತ್ತಿನ ಉಭಯಸಭೆಗಳಲ್ಲಿ ಒಂದು : ಬ್ರಿಟಿಷ್ ಪಾರ್ಲಿಮೆಂಟಿನ ಉದ್ದೇಶ ನಮ್ಮನ್ನು ಹಿಂದಿನ ಅಂಧಕಾರದಲ್ಲೇ ತೊಳಲಿಸಬೇಕೆಂದು ಇರಲಿಕ್ಕಿಲ್ಲ (ಶಾರದ. ೪೨೭).

[← ಇಂ. Parliament]

**ಪಾರ್ವ, ಪಾರುವ, ಪಾರ್ಬ, ಹಾರವ₁, ಹಾರುವ₁, ಹಾರ್ವ** (ನಾ). ವೇದ ಮೊದಲಾದ ಧರ್ಮಗ್ರಂಥಗಳನ್ನು ಓದಿ ತಿಳಿದಿರುವವನು ; ಬ್ರಹ್ಮಜ್ಞಾನಿ ; ಬ್ರಾಹ್ಮಣ : "ಪಾರ್ವರೆನಲ್ ದ್ವಿಜರ್ಗಳ್" (ಕಶಾಗ. ೩೭) ; ಆ ಧರ್ಮ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಂಳ್ ಸಾಸಿರ್ವ[ರ್] ಪಾರ್ವ್ವರುಂ ಸಾಸಿರಂ ಕವಿಲೆಯುಂ ಕೊಂದ ಪಾತಕನಕ್ಕೆ (ಪ್ಯಆ. ೦೯೩೭, ೩೩-೩೩; ಸು. 550); ಪದಿನೆಂಟುಧರ್ಮಶಾಸ್ತ್ರಂಗಳುಮಂ ಬಲ್ಲೊಂ ಸೋಮಶರ್ಮನೆಂಬೊಂ ಪಾರ್ವಂ (ವಡ್ಡಾರಾ. ೭೩-೦೩); ಪರಮಾರ್ಥ ಪಾರ್ವ[ಪಾಠಾಂ. ಬ]ರ್ಗ್ಗದರಸರ್ಗ್ಗ ಕುಡಿಯರಪ್ಪ ನಾಲ್ವರ್ಗ್ಗಗಳ್ ಸ್ಥಿರಗೋಪಾಧ್ಯಾಯಕ್ಷ್ಮಾಪರಿಪಾಲ್ಯಕ್ಷೇತ್ರರ್ಷಣಂಗಳ್ಕ್ರಿಯೆಗಳ್ (ಕವಿರಾ. ೦.೬೪) ; ಪಾರ್ವನೆಂದೆನ್ನೊಳ್ ಪುಸಿದು ವಿದ್ದೆಯಂ ಕೈಕೊಂಡುದರ್ಕೆ ಮಂಡಂ ಪೆಜಿತಿಲ್ಲ (ಶಂಕಭಾ. ೦-೦೦೩೭) ; ಪರಿದಿಜಾದಂತಕನೊಳ್ ಪಾರ್ವರ ಪಿಳ್ಳೆಯ ಪೋದ ಜೀವಮಂ ತಂದಂ (ಗದಾಯು. ೨-೩೩). **ಪಾರುವ** : ಪುರದೊಳಗಣ ಪಾರುವರೆಲ್ಲರುಮಂ ಮಾತ್ರನ್ಯಸಮಯಿಗಳುಮಂ ಕಳ್ಳರ್ ಭರದಿಂದಂ ಕಂಡುಂ ಸುವರಮೋಘಂ ಸೀಳ್ದು ಕೊಲೆ ತಳಾರರ ಕೈಯೊಳ್ (ರವಾರ್ತಮ್ಮ. ೯-೮೩); ಕಾದಿ ಕಲು ಮರ ಮೊರಡಿಗಳ ಪುಡುಕಿ ತತ್ವಸಂಬೋಧೆಯಿಲ್ಲದೆ ಕೃಪಣ ಶಿಶ್ನೋದರಂಗಳಂ ಸಾಧನಂಗೈವ ಪಾರುವರೆಸೆವರಾ ಕಲಿಯೊಳು (ಪಂಕಾರಾ. ೩-೨೨-೦೨); ಆ ಪಾರುವಂ ಗುರಿಗಟ್ಟಿ ಸೂಸಿದ ಪುಣುಂಬುಗಳ್ವಾಮಂಗೆ ಕಪಿಗಳಂತೆ ಪೇರೊಲವನಾಂತು (ಕೀಶರಾ. ೦೪-೩೩). **ಪಾರ್ಬ** : ಕಯ್ಯ ಸಟ್ಟುಗದಿಂದ ಕಡೆಹೊಡೆದು ಕೊಂದು ಪಾರ್ಬನನೆಳೆದು ಹಾಯ್ಕಲು (ಬಸಪು. ೩೩-೪೦). **ಹಾರವ₁** : ಕೌರವರ ಪತ್ತಿರ ಯಾರಿದ್ದಾರೆ ? ಕೆಲವರು ಪಂಚಾಂಗದ ಹಾರವರು ; ಉಳಿದವರು ಮುಂದಾಕರು (ಸೀತಾಂ. III. ೩೦); ಅಭ್ಯಾಸವಿಲ್ಲದ ಪಾರವ ಅಗ್ನಿಕಾರ್ಯ ಮಾಡಿದರೆ ಗಡ್ಡ ಮೀಸೆ ಹೊತ್ತಿತು (ಗಾದೆ). **ಹಾರುವ₁** : ಅನಾಗತೋಕ್ತಿಕಾಲೂರದನೇಕವುಂ ದ್ವಿಜರ್ಗೆಗೊಟ್ಟುದಜಿಂದಮುವಗ್ರಹಾರವಾ ಹಾರುವರಿಂದ ಮಾಡಿ × × ದೆ (ಎಕ. VIII, ಸಾಗರ. ೦೦೯-೩೪; 1079) ; ಹಾಸನಿಕ್ಕಸಾಕಿಗನಾದ ವೇದಪನೋದಿ ಹಾರುವನಾದ (ಬಸವ. ೩೯೦ ); ತಿರಿವ ಹಾರುವರೊಡನೆ ಭೂಮಿಾಶ್ವರರಿಗೆತ್ತಣ ಮೈತ್ರಿ (ಸಂಕರ. ೦೭-೯೨); ಪಾರುವನು ಉಪಕಾರಿ ಹಾರುವನು ಅಪಕಾರಿ ಹಾರುವನು ತೋರ್ವ ಬಹುದಾರಿ ಮುನಿದರೆ ಹಾರುವನೆ ಮಾರಿ (ಸರ್ವಜ್ಞ. ೦೦೦೪). **ಹಾರ್ವ** : ನೀನು ಔಷಧಿಯನ್ನು ಕೊಟ್ಟು ಗುಣ ಮಾಡೆನುತ ಹೀನ ಹಾರ್ವಗೆ ಪೇಳಿ ಒಪ್ಪಿಸುತ ಪೋದ (ಕರಂ. ೪೦೦-೭) ; ಆ ಹಾರ್ವನು ಪಾವಡಿ ಹಸಾ ಕೊಟ್ಟವನು (ಕೂಪಂಗ. ೭೨).

ಪಾರ್ವರ ಬಲ್ಲಹ, ಪಾರ್ಬರ ಬಲ್ಲಹ–ಬ್ರಾಹ್ಮಣರ ಮುಖ್ಯಸ್ಥ: ಒಂದು ಬಿರುದು: ವೃತ್ತರಾಯಣಸಂಕ್ರಾಂತಿಪರ್ವನಿಮಿತ್ತಂ ಮಹಾಪ್ರಭು ಪಾರ್ವರ ಬಲ್ಲಹಂ ಬಸವರಸ ಮುಖ್ಯಪ್ರಹಾಜನಂಗಳ ಸಂನಿಧಾನದಲು ಸರ್ವನಮಸ್ಯವಾಗಿ ಧಾರಾಪೂರ್ವಕ ಮಾಡಿ . . . ಬಿಟ್ಟ ಮತ್ತರು ೧೨ (ಕಿ.ಹ್ಯಾ.ಶಾ. ೦೬-೩೩ ; 1235); ಸುಮಾರ್ಗ್ಗಯೊಮ ಮೇದಿನಿ ಪದಬಂದೆ ಬಣ್ಣಪುದು ಪಾರ್ಬರ ಬಲ್ಲಹ ಮಲ್ಲಿದೇವನಂ (ಕಿಹ್ಯಾ.ಶಾ. ೦೬–೩೩: 1235). ☞ ಕೆಲವು ಸ್ಥಳನಾಮಗಳಲ್ಲಿರುವ 'ಹಾರೋ' ಎಂಬ ಪೂರ್ವಪದವು 'ಹಾರುವರಿಗೆ ಸಂಬಂಧಪಟ್ಟ' ಎಂಬ ಅರ್ಥವನ್ನು ಸೂಚಿಸುತ್ತದೆ. ಉದಾಹರಣೆ–ಹಾರೋಗದ್ದೆ = ಹಾರುವರ ಗದ್ದೆ, ಹಾರೋಹಳ್ಳಿ = ಹಾರುವರ ಹಳ್ಳಿ.

[ <ಪಾರ್$_1$. / ತಮಿ. ಪಾರ್, ಪಾಪ್ಪನನ್, ಪಾಪ್ಪಾನ್; ಮಲ. ಪಾಪ್ಪಾನ್; ಕೊಡ. ಪಾರುವ; ತೆಲು. ಪಾಱುಂಡು, ಪಾಱುವಾಡು]

**ಪಾರ್ವಂತಿ, ಪಾರ್ವತಿ$_1$, ಪಾರ್ಪಿತಿ, ಹಾರವಿತ್ತಿ, ಹಾರುವಿತಿ, ಹಾರುವಿತ್ತಿ** (ನಾ). ಬ್ರಾಹ್ಮಣ ಹೆಂಗಸು; ಬ್ರಾಹ್ಮಣನ ಹೆಂಡತಿ: ಸೋಮಶರ್ಮನೆಂಬೊಂ ಭಟ್ಟನಾತನ ಪಾರ್ವಂತಿ ತ್ರಿವೇದಿಯೆಂಬೊಳ್ (ವಡ್ಡಾ.ರಾ. ೦೨–೦೦); ಆಗಳ್ ಸಾಹಸಭೀಮಂ . . . ಪಾರ್ವಂತಿಯುಂ ಪಾರ್ವನುಂ ಪರಸಿ ಸೇಸೆಯನಿಕ್ಕೆ ಲಲಿತ ಪೊಬಲಿ ಬಂದಿಯನಟ್ಟಿಕೊಂಡು ರಕ್ಷಸಾರ್ದೆಡೆಗೆಯ್ತಂದು (ಸಂಹಾ. ೬–೨೬ ವ); ಅಶೋಕದತ್ತನೆಂಬ ಪಾರ್ವನು ತಲಾಱರ್ ಪಿಡಿದು ಕೊಲ್ವುದುಂ ವಿನೋದಂ ತನ್ನ ಪಾರ್ವಂತಿಯ ದುಶ್ಚರಿತ್ರವನಱಿವನಪ್ಪುದಱಿನಾಕೆಯ ಬಳಿಯನೆ ಬಂದುಬಿದಿರ್ದ (ಸಂಲಾಪಾ. ೦೩–೪೯ ವ). **ಪಾರ್ವತಿ$_1$**: ಕೇಳೆನ್ನ ನುಡಿಯ ಪಾರ್ವತಿಯನಗ್ಗವರು ಬಾಲರುಂಟವರೊಳಗೋರ್ವ ಹಾಲೂಡಲಿನ ಭೀಮಂ (ಸುಬಸಂ. ೨೩–೦೨೯): ಅರಸಿ, ಪಾರ್ವತಿ, ಒಕ್ಕಲಿತಿ, ಸೆಟ್ಟಿತಿ (ಶಬ್ದಸು. ೨೦೨ ಪ್ರಯೋ). **ಪಾರ್ಪಿತಿ**: ಶುಕನಾಸ ಮಂತ್ರಿ ಸಂಭಾವಿತೆಯಪ್ಪ ಪಾರ್ಪಿತಿ ಮನೋರಮೆಗತ್ತ, ಭವತ್ಪ್ರಸಾದದಿಂದೀ ವರಲಗ್ನದೊಳ್ ತನಯನತ್ಯಧಿಕೋತ್ಸವವಾಗೆ ಪುಟ್ಟಿನಂ (ಕಾದಂಸಂ. ೯೨೩): ಭಾಂಡಿಲನೆಂಬ ಪುರೋಹಿತಂಗಮಾತನ ಪೆಂಡತಿ ಪುಷ್ಪವತಿಯೆಂಬ ಪಾರ್ಪಿತಿಗಂ ಪುಟ್ಟಿದ ಮಗಂ . . . ಪುಷ್ಪದಾದಃ (ರಮೋಕಸ್ಥ. ೬–೦೨೯): ಆತನ ಪಾರ್ಪಿತಿ ಪಾರ್ವತಿಯನ್ನಳಪ್ಪ ಚಿನ್ನೆಯೊಂದುದಿನಂ ಪಸದನಂಗೊಂಡು ಕನ್ನಡಿಯಂ ನೋಡುತ್ತಮಿರೆ (ಸುಬುಕ. ೦೯–೬೮). **ಹಾರವಿತ್ತಿ**: ಅತ್ತಲೊರ್ವ ಮುಂದೆ ಹಾರ[ಶಾಶಾಂ. ರು]ವಿತ್ತಿ ಬಸುಱಾಗಿ ಅಡವಿಯಲ್ಲಿ ಹೆಣ್ಣು ಹೆತ್ತು ಬಿಟ್ಟು ಹೋಗಲು (ಧ್ರುಕಸೂ. I, ೬೮). **ಹಾರುವಿತಿ**: ವರನ ಶರಿ ಹೊಸತಾಯ್ತು ಹೊತ್ತನು ಹರನ ಹಾಗೆ ಹಾರುವಿತಿಯನು ನಮ್ಮರಸಿ ನೆಱೆ ಹಾರುವಿತಿಯೆಂದರು ನಗುತ ಚಪಲೆಯರು (ಶಿವಾತ್ಮ. ೦೩–೩೬): ಗೋಡೆಯ ತೆಱಪಿನೊಳು ಬರೆದಕ್ಕರವ ನೋಡಿಕೊಂಡಿದಾರಱಪಿಯನೆ ಮುಂದೆ ಹಾರುವಿತಿಯೊಳು ಬಂದೊರ್ಬ ಕುಱುಕನಿದ ಬರವನನೆ (ಬೀಕ್ಕಶ. ೬–೪–೯೯). **ಹಾರುವಿತ್ತಿ**: ಹಾರುವಿತ್ತಿ[ಶಾಶಾಂ. ವಗಿತಿ]ಯೊಳು ಸೊಬಗುಮನೋರಂತ ಜುಸುವರು ನಾಡೆ ಗಾಪಿಲರಲ್ತೇ (ಕೃಷ್ಣಸ್ತ್ರ. ೫–೨೬).

[ಪಾರ್ವ + –ತಿ$_1$ (<–ಇತ್ತಿ)./ತಮಿ. ಪಾಪ್ಪಾತ್ತಿ]

**ಪಾರ್ವಗೊಲೆ** (ನಾ). ಬ್ರಾಹ್ಮಣಹತ್ಯೆ; ಬ್ರಹ್ಮಹತ್ಯೆ: ಅವನೆಮ್ಮ ಪಾಡೊಳ್ ದಾಟುತ್ತು ತುಭಾಸೆಜೆಯೊಡನನ್ನಣುಗರಂ ಪಿಡಿದು ಬಂದುಗೆಯ್ದು ಪಾರ್ವಗೊಲೆಗೆ ಪೇಸಿ ಬಿಟ್ಟು ಎನ್ನ ನಾಡೊಳ್ ತಲೆಯುೂರಸಿಪ ಬೂಕನಕೆರೆಯಂ ಕೊಂಡು . . . ತಿರುಕುಳಿ ಪಾರ್ವಗಿರ್ತ್ತಂ (ಶಾಸಂ. ೦೩–೯).

[ ಪಾರ್ವ + ಕೊಲೆ$_2$ ]

**ಪಾರ್ವಗೋಲು** (ನಾ). (ಬ್ರಾಹ್ಮಣಸಮುದಾಯವು ಸೇರಿ ನಿಷ್ಕರ್ಷಿಸಿದ) ಒಂದು ಅಳತೆಯ ಕೋಲು: ಮಹಾಪ್ರಭು ಪಾರ್ವರ ಬಲ್ಲಹಂ . . . ಹಂಚಿಗೆಪಟ್ಟಿಯಿಂ ಮೂಡಲು ಜಂಜಲವಾಡದ ಬಟ್ಟೆಯಿಂ ಪಡುವಲು ಪಾರ್ವಗೋಲಲು ಬಿಟ್ಟ ಮತ್ತರು ೧೨ (ಕ. II, ೩೬–೩೩; 1235).

[ ಪಾರ್ವ + ಕೋಲು$_1$ (<ಕೋಲ್$_1$) ]

**ಪಾರ್ವಣ** (ಗು). ೧. ಅಮಾವಾಸ್ಯೆಗೆ ಸಂಬಂಧಪಟ್ಟ. ೨. ಹುಣ್ಣಿಮೆಗೆ ಸಂಬಂಧಿಸಿದ: ಪ್ರಣುತಸುಧಾಗರ್ಭವು ಕಾರಣವಿಾ ಕೋಮಳೆಯ ಮುಖಸುಧಾರುಚಿಗುಟದಂತಣಿಗೊಂಡು ತೊಳಗುತ್ತಂ ಪಾರ್ವಣ ಶಶಿಬಿಂಬಕ್ಕೆ ಕೃತಕತೆಯೆತ್ತಣಿನಾಯ್ತೋ (ರಾಜಶೇ. ೦೯–೨೨): ಕನ್ನಡಿ ಪಾರ್ವಣ ಶಶಿಯನು . . . ನವಲತೆಯು ಸನ್ನುತಪಾರಿಜಾತನ ಪಡೆದಂತೆ ಸುಪನ್ನೆ ಪಡೆದಳು ಪುತ್ರನನು (ಸುತ್ರಸಾಂ. ೯–೩೩): ಕ್ಷಣರುಚಿ ರುಚಿರೇಕ್ಷಣೆ ಪಾರ್ವಣ ವಿಧುಮುಖಿ ಪಾಣ್ಬೆ ಪೋಗಲಳವಲ್ಲದೆ ತಲ್ಲಣಿಸಿ ಪಡಂಮೆಟ್ಟುತ್ತಂಗಣ ಕೈದುತೆ ಸುಯ್ದು ಬೈದಳಾ ಕಮಳಜನಂ (ರಾಜಶೇ. ೦೦–೨೩). (ನಾ). ೩. ಅಮಾವಾಸ್ಯೆಯಲ್ಲಿ ಪಿತೃಗಳಿಗೆ ಮಾಡುವ ಒಂದು ಶ್ರಾದ್ಧ ಕರ್ಮ. [ಸಂ.]

**ಪಾರ್ವಣಶ್ರಾದ್ಧ** (ನಾ). ಪರ್ವಕಾಲದಲ್ಲಿ ಮಾಡುವ ಶ್ರಾದ್ಧ: ಪುತ್ರ ಅನ್ನುವುದು ಕೆಳಗಿನ ಮೂರು ತಲೆಗಳನ್ನೂ ಒಳಗೊಳ್ಳುತ್ತದೆ. ಏಕೆಂದರೆ ಆ ಮೂವರೂ ಪಾರ್ವಣಶ್ರಾದ್ಧ ಮಾಡುವ ಅಧಿಕಾರಿಗಳು (ಮಂಕಪ್ಸ. ೨೩೦). [ ಪಾರ್ವಣ + ಶ್ರಾದ್ಧ ]

**ಪಾರ್ವತಿ$_1$** 'ಪಾರ್ವಂತಿ' ನೋ.

**ಪಾರ್ವತಿ$_2$** (ನಾ). ೧. ಪರ್ವತರಾಜನ ಮಗಳು; ಗಿರಿಜೆ: "ರುದ್ರಾಣೀ . . . ಪಾರ್ವತೀ, ಗೌರೀ . . . ಗಿರಿಜಾ, ಮೇನಕಾತ್ಮಜಾ — ಈ ೨೧ ಗೌರೀದೇವಿಯ ಪೆಸರ್" (ಕಲಾಯು. ೯–೦೩); ನಾಗೇಂದ್ರ ಘನವೆಂಬೆವೆ ಪಾರ್ವತಿಯ ಕಱುಕಣ್ಣಿಕೆಮಾಂದ್ರಿಕೆಯಾಯಿತ್ತು, ಅಂತಹ ಪಾರ್ವತಿ ಘನವೆಂಬೆನೆ ಪರಮೇಶ್ವರನ ಅರ್ಧಾಂಗಿಯಾದಳು (ಬಸವ. ೯೭೬): ಮಹಾಶ್ರಿಯೋಚನೆ ಮಹಾನಿಧಿ ತನ್ನ ವಿವಾಹವರ್ಣನಾಸಂಗತಿಯೊಂದು ಮಾತ್ಕೃತಿಗೆ ಪಾರ್ವತಿ ಮಾಳ್ಕೆ ಮಹೋತ್ಸವಂಗಳಂ (ಗಿರಿಜಾ. ೦–೪). ೨. ಮಂತ್ರಗಳಲ್ಲಿ ಒಂದು: ಗಾಯತ್ರಿ ಮೃತ್ಯುಂಜಯ ದಕ್ಷಿಣಾಮೂರ್ತಿ . . . ಪಾರ್ವತಿ ಕಾಮಧೇನು ಕಲ್ಪವೃಕ್ಷ . . . ಮಹಾಮಂತ್ರಂಗಳಂ (ಶಿವೇಶ. ೬೦). ೩. ತದುಕಿನ ಗಿಡ; ಆನೆಬೇಲ. ೪. ಗೊಲ್ಲರವಳು; ಗೋಪಿಕೆ. ೫. ದ್ರೌಪದಿಯ ಒಂದು ಹೆಸರು. ೬. ಸುಗಂಧದ ಮಣ್ಣು. [ಸಂ. ಪಾರ್ವತೀ]

**ಪಾರ್ವತಿತನಯ** (ನಾ). ೧. ಪಾರ್ವತಿಯ ಮಗ. ೨. ಕಾರ್ತಿಕೇಯ; ಷಣ್ಮುಖ. ೩. ಗಣಪತಿ; ಗಣನಾಥ: ಶರಣು ಪಾರ್ವತಿತನಯ ಮೂರುತಿ ಶರಣು ಮೂಷಿಕವಾಹನ (ಕುರಂದ. ೦–೩ ಪಲ್ಲ). [ಪಾರ್ವತಿ$_2$ + ತನಯ]

**ಪಾರ್ವತಿಯೆಱೆಯ** (ನಾ). ಗಿರಿಜೆಯ ಪತಿ; ಈಶ್ವರ: ಪಾರ್ವತಿಯೆಱೆಯನ ವರದಿಂ ಪುತ್ರಿ ಕರ್ಪಿಲ್ಲಂ ಸಮ್ಮೋಹನರೂಪದಿಂ ಸುರ್ಪಿಯ ವಿಟರೆಲ್ಲರ್ದೆಯೊಳ್ನೆಲಸಿದು (ಶಯಾಶಾ. ೦–೬೩). [ಪಾರ್ವತಿ$_2$ + ಎಱೆಯ]

**ಪಾರ್ವತೀಜಾನಿ** (ನಾ). = ಪಾರ್ವತಿಯೆಱೆಯ: ಆ ನರನಾಥನಾ ಕುಸುಮಭೂಷಣಮಂ ಪಡೆದಿತ್ತು ಪಾರ್ವತೀಜಾನಿಗೆ ತಾನುಮಾತ್ರ ರಮೆಯುಂ ಬಳಿಯಂ ತಳೆದಿರ್ಪನಂ (ರಾಜಶೇ. ೦೦–೬೦). [ಸಂ. (ಪಾರ್ವತೀ + ಜಾಯಾ + –)]

**ಪಾರ್ವತೀದಯಿತ** (ನಾ). = ಪಾರ್ವತಿಯೆಱೆಯ: ಶ್ರೀಯುಂ ಮಹಾಲಕ್ಷ್ಮಿ . . . ದೀರ್ಘಾಯುಷ್ಯಮಂ ಪಾರ್ವತೀದಯಿತಂ ಮಾಣದೆ ಬೌಡಿಸಟ್ಟಿಗೆ ಕುಡುತ್ತಿರ್ಕ್ಕಗಳುಂ (ಕಿಹ್ಯಾ.ಶಾ. ೦೩–೩; 1166). [ಸಂ.]

**ಪಾರ್ವತೀವಲ್ಲಭ** (ನಾ). = ಪಾರ್ವತಿಯೆಱೆಯ: ಪಾರ್ವತೀವಲ್ಲಭಚರಣ ಸರಸೀರುಹಭೃಂಗಂ ಮಹಾಮಹಿಮೋತ್ತುಂಗಂ ನಾಮಾದಿ ಸಮಸ್ತಪ್ರಶಸ್ತಿ ಸಹಿತಂ (ಎ.ಕ. XX, ೯೬–೪೩; 1078). [ಸಂ.]

**ಪಾರ್ವತೇಯ** (ನಾ). ಪರ್ವತಪ್ರದೇಶದಲ್ಲಿ ಜನಿಸಿದವನು; ಪರ್ವತವಾಸಿ: ಷಟ್ಕುಂಡಭೂವಲ್ಲಭನುಂ ಹಿಮವತ್ಕಟಂಬಿಡಿದು ಮೂಡವೊಗದೆ ಪಯಣಂಬರೆ ಪಾರ್ವತೇಯೋಪಾದಪ್ರಧಾನಪುರಸ್ಸರನಾಗಿ (ಆಪು. ೦೦-೩೩ ವ); ಈ ಜನಗಳ ಭೂಷಣಗಳು ಆಕಾರಗಳಂ ನೋಡಿದರೆ ಪಾರ್ವತೇಯರಂತೆ ಕಾಣುವರೆಂದು ನಿಶ್ಚೈಸಿ (ಮುದ್ರಾ. ಮಂ. ೨೬). [ಸಂ.]

**ಪಾರ್ವರ** (ನಾ). (?) : ಸ್ವಸ್ತಿಶ್ರೀವಿಕ್ರಮಮಹಾರಾಜನ್ಪೃಥಿವಿರಾಜ್ಯಕೆಯ್ಯೆ ಪಟ್ಟು ರಕ್ಷನಸೂರುಕೊಳ್ವಲ್ಲಿ ಪಾರ್ವರೊಡೊಳ್ ಸತ್ತಾನ್ ಪೆರಾನ್ಕ್ನೋವನ್ (ಎ. ಕ. X (೨). ಶ್ರೀಜಿವಾ. ೦೦೬-೯; ಶ. ೭೦೦) : ಪಾರ್ವರೊಡೊಳ್ ಸತ್ತಾನ್ (ಪ್ರಕಲ. ೦೪೦೭, ೦೦-೯; ೭ನೆಯ ಶತ) [?]

**ಪಾರ್ವಾಟ** (ನಾ). ಮೆರವಣಿಗೆ; ◆ ವರ್ಷದಲ್ಲಿ ಯಾವುದಾದರೂ ಹಬ್ಬದಲ್ಲಿ ಒಂದು ಪ್ರಾಣಿಯನ್ನು ಬೇಟೆಯಾಡಿ ಅದನ್ನು ಕೊಲ್ಲುವುದಕ್ಕೆ ಮುಂಚೆ ಮೆರವಣಿಗೆ ಮಾಡುವುದೂ ಕೆಲವು ಹಬ್ಬಗಳಲ್ಲಿ ಮೊಲ, ನರಿ ಇತ್ಯಾದಿ ಪ್ರಾಣಿಗಳನ್ನು ಬೇಟೆಯಲ್ಲಿ ಹಿಡಿದು ಮೆರವಣಿಗೆ ಮಾಡಿ ಮತ್ತೆ ಕಾಡಿಗೆ ಬಿಡುವುದೂ ಉಂಟು : ವರ್ಷಕ್ಕೆ ಒಂದು ಸಲ ಇವರು ಒಂದು ಚಿರತೆಯನ್ನು ಹಿಡಿದು ಪಾರ್ವಾಟ ಮಾಡಿ ಮುಗಿಸುವುದು (ಕ.ಜ.ಕ. VI. ೦೦೯). [<ಪರ್ವ ? +ಆಟ]

**ಪಾರ್ವಿಕೆ, ಪಾರ್ಬಿಕೆ** (ನಾ). ಬ್ರಾಹ್ಮಣಿಕೆ; ಹಾರುವತನ: ಪಾರ್ವಿಕೆಯೊಳ್ ಇರ್ದ ಪಾರ್ವಂಗೆ ಕೋಳನ್ ಒಯ್ವರ್ (ಪ್ರಾಕ್ತ. ೩೪೩); ಕಡೆಗೆ ವಂದಿಸದಿದ್ದನಾದವೆ ಕೆಡುಗು ಪಾರ್ವಿ[ಪಾಠಾಂ. ರ್ಬಿ]ಕೆ ಮುಂದೆ ವಂದಿಸಿದಡೆ ಕೆಡುಗು ಪ್ರೌಢಭಕ್ತಿಯುಂತಾಗಿಂತೆರಡಱಿಂದ ಕೆಡುವನಿಲೆಯೊಳು ಪಾರ್ಬನು (ಬಸ. ಪು. ೩-೬೯). ಪಾರ್ಬಿಕೆ : ಅಕುಲದಭವನ ಭಕ್ತಶಿಖಾವ ಕುಲವೆಂದಿದನೆಣಿಸಿ ನೀ ಪಾರ್ಬಿಕೆಗೆ ಸಲಿಸುವೆಯುಂತಿನಿತು ಮಾರ್ಗಂಗಳೆಂದು (ಬಸ. ಪು. ೩-೦೯) [ಪಾರ್ವ+—ಇಕೆ]

**ಪಾರ್ವಿತಿ** 'ಪಾರ್ವಂತಿ' ನೋ.

**ಪಾರ್ವಿಸು** (ಕ್ರಿ). ಹಾರಿಸು ; ನೆಗ್ಗಿಸು (?) : ತ (೦)ನ್ನ ಪಾರುಪಮಂ ಪೆ(೦)ನ್ನವಿತ್ತು ಮು(೦)ನ್ನ ಪಾರ್ವಿಸಿ ಮುರಾರಿಯೊಳು ದೆಬ್ಬಾದೆಬ್ಬಿ ಯೊಳು ಕಾದಿ ತಳ್ತಿಱಿದು ಗೆಲ್ದ (ಶಾಸಸ. IX-i. ೩೯೨-೨೦; 1148). [?]

**ಪಾರ್ವೆ** (ನಾ). = ಪಾರ್ವಂತಿ : ಪರಿಕಿಸದಾ ಪಾರ್ವೆ ನಡೆದು ಪರಮಾತ್ರ(ಥ)ರ್ಗಂ ಕೊನ್ದಳನ್ನು ಮುನ್ನಗ್ಗಿರಿಯಂ ತಾನೆರದಿಲ್ಲದೆಂಬ ನಾಳ್‌ನುಡಿ ಪೊರೆದು (ಪ್ರಕಲ. ೦೯೨೩, ೩೯-೩; 11ನೆಯ ಶತ). [ಪಾರ್ವ+—ಎ]

**ಪಾರ್ಶ್ವ** (ನಾ). ೧. ಪಕ್ಕ; ಮಗ್ಗುಲು; ಬದಿ : "ಕಲಂ ಪಾರ್ಶ್ವಸಂಜ್ಞಿಕಂ" (ಚನ್ನ.ಕೋ. ೬೬-೬) ; ಮಣಿವಿಚಿತ್ರಪಾರ್ಶ್ವಂಗಳುಮಧಸ್ಥಲೋಪರಿಮಾತ್ರಲಸಮಾನವಿಸ್ತಾರಂಗಳುಮಪ್ಪ ಹಿಮವನ್ಮಹಾಹಿಮವನ್ನಿಷಧನೀಲರುಗ್ಮಿಶಿಖರಿಗಳೆಂಬ ವರ್ಷಧರಮಹೀಧರಂಗಳಿಂದಂ . . . ಎಸೆವ (ಆಪು. ೦-೪೩ವ) ; ಆ ಮಹಾನುಭಾವನಾ ಮಹಾಕಾಳದೊಳ್ ಸುಪ್ರಾಸುಕಪ್ರದೇಶಮಂ ಕಂಡು . . . ವಿಶಾಗ್ರಚಿತ್ರದೊಳೇಕಪಾರ್ಶ್ವಮೊಳ್ ಮೆಯ್ಯನಿಕ್ಕಿ (ಸುಕುಮಾ. ೦೨-೦೬ ವ); ಕೆಳಗೆ ಪಶ್ಚಿಮಪಾರ್ಶ್ವದಲ್ಲಿ ಒಂದರೊಳಕ್ಕೆ ಒಂದಕ್ಕೆ ಪ್ರವೇಶವಿರುವ ಎರಡು ಕೊಠಡಿಗಳು (ಪಂಚತು. ೦೬). ೨. ಎದೆಯ ಕೆಳಗಿನ ಎರಡು ಮಗ್ಗುಲು ; ಪಕ್ಕೆ : "ಪಾರ್ಶ್ವಂ—೧ ಕಕ್ಷಯೋರಧಃ—ಕಂಕುಳ ಕೆಳಗಡೇ ಪಕ್ಕದ ಪೆಸರುಗಳು" (ಅಭಿಧಾ. ೦೯೨). ೩. ಸಮೀಪ; ಹತ್ತಿರ : "ಸವಿಧಮಂ . . . ಪಾರ್ಶ್ವಂ, ಉಪಾಂತಂ, ಅಪದಾಂತರಂ—ಈ ೧೮ ಸಮೀಪಂ" (ಕರ್ಣಾಟ. ೦೦೩-೩); ಪುರುಜಿನ ಪಾರ್ಶ್ವದೊಳ್ ವೃಷಭಸೇನಗಣಾಗ್ರಣಿ ತಜ್ಜ್ಞನೋಕ್ತಮಂ ಭರತನ್ನಮಗೆ . . . ಒಲವಿಂದೆ ಪೇಟ್ದುದಂ . . . ಪೇಟ್ದಿಂ (ಪಾರ್ಶ್ವಪು. ೦-೬೯). ೪. ವಂಚನೆಯ ಉಪಾಯ ; ಕುತಂತ್ರ : 'ಪಾರ್ಶ್ವಕ' ಪರಾ. ೫. ಒಂದು ವಸ್ತುವಿನ ಮೇಲ್ಮೈ. ೬. ಧಾರೆ ; ಅಂಚು ; ನೇಮಿ. ೭. ಕನ್ನಡದಲ್ಲಿ ಪಾರ್ಶ್ವನಾಥಪುರಾಣವನ್ನು ಬರೆದ ಒಬ್ಬ ಕವಿಯ ಹೆಸರು : ಲಲಿತಪದಾರ್ಥಾಲಂಕೃತಿಗಳಿನೊಸರ್ವ ರಸಂಗಳಿಂದೆ ಬುಧರೊಳ್ಕುಳಕಾವಳಿಸಸ್ಯಮೊಗೆಯು ಕವೀಂಳಶಿಳಕಂ ಶಾಸನಮನೊಲ್ದು ಪೇಟ್ದಂ ಪಾರ್ಶ್ವಂ (ಪಾರ್ಶ್ವಪು. ಆಶ್ವಾಸ. II. xii). ೮. ಒಂದು ದೇಶದ ಹೆಸರು : ಗೌಳ ಪಾರ್ಶ್ವ ಕರೂಷ ಕೋಸಲ ಚೇದಿ . . . ಹಮ್ಮೀರಾದಿ ಸಕಲದೇಶಾಧೀಶಸಮುದಯಸೈಕತಸೇತುಮಹಾಸಿಂಧುಪ್ರವಾಹ ಪರಾಕ (ಜಯಚಾಂ. ೩-೦ ವ). ೯. [ಜೈನ] ಇಪ್ಪತ್ತುಮೂರನೆಯ ತೀರ್ಥಂಕರನ ಹೆಸರು; ಪಾರ್ಶ್ವನಾಥ : ವೃಷಭ . . . ಪಾರ್ಶ್ವ ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಕರರ್ (ಶಾಪುಂಪು. ೯೦೩) ; ದಿವಿಜನಾಥಂ ಜನ್ಮಾಭಿಷೇಕಕಲ್ಯಾಣಾನಂತರಂ ಪಾರ್ಶ್ವನೆಂಬುದು ತ್ರಿಲೋಕಪೂಜಿತಮಪ್ಪ ಧರ್ಮಂ ಅದಱಾಶ್ರಯಮಪ್ಪುದಱಿಂ ಪಾರ್ಶ್ವನೆಂದು ಪೆಸರನಿಟ್ಟು ಪೋಗೆ (ಪಾರ್ಶ್ವಪು. ಆಶ್ವಾಸ. I. iii). [ಸಂ.]

**ಪಾರ್ಶ್ವಕ** (ನಾ). ೧. ಮೋಸದಿಂದ ಹಣವನ್ನು ಸಂಪಾದಿಸುವವನು. ೨. "(ಸೈನ್ಯದ ಪಕ್ಕವನ್ನು ರಕ್ಷಿಸುವ ಅಥವಾ ಅದನ್ನು ಅಪಾಯಕ್ಕೊಳಪಡಿಸುವ) ಸೈನಿಕರಕ್ಷಣೆಗಳು : ಪಾರ್ಶ್ವಕ" (Flank. ಇಂಕಪ). [ಸಂ.]

**ಪಾರ್ಶ್ವಕೋಣಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮುಖ್ಯವಾದ ಕೆಲವು ಆಸನಗಳು, ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೬೬. ಪಾರ್ಶ್ವಕೋಣಾಸನ (ಶಾಕವ. ೦೬೩). [ಸಂ.]

**ಪಾರ್ಶ್ವಕ್ರಾಂತ** (ನಾ). [ನಾಟ್ಯ] ಹದಿನಾರು ಬಗೆಯ ಮಾರ್ಗ ಆಕಾಶಚಾರಿಗಳಲ್ಲಿ ಒಂದು ◆ "(i) ಕುಂಚಿತಚರಣವನ್ನು ಮೇಲಕ್ಕೆತ್ತಿ ನೆಲವನ್ನು ಹಿಮ್ಮಡಿಯಿಂದ ಗಟ್ಟಿಸುವುದು. [ಇದನ್ನೇ ಪಾರ್ಶ್ವದಂಡಚಾರಿಯೆಂದೂ ಕರೆಯುತ್ತಾರೆ] (ii) ಕುಂಚಿತಚರಣವನ್ನು ಮತ್ತೊಂದು ತೊಡೆಯವರೆಗೂ ಎತ್ತಿ ಉದ್ವೃತ್ತಿತ ಮಾಡಬೇಕು" (ಶಾಸ್ತ್ರಂ. ೩೦೬ ಗದ್ಯಾನುವಾದ) ; ಒಂದು ಪದಂ ಕುಂಚಿತದಿಂದ[ದಂ] ಜಡೆದೆತ್ತಿ ತ[ನ್ನ] ಪಾರ್ಶ್ವದ ದೆಸೆಯಿಂ ಚಂದದೆ ಲಾಗಿಸಿ ಮಡದಿಂದೊಂದಿಸೆ ಭೂತಳಮನಿಂತು ಪಾರ್ಶ್ವಕ್ರಾಂತಂ (ಶಾಸ್ತ್ರಂ. ೬-೯೨) ; ಈ ಚಾರಿ ಪಾರ್ಶ್ವದಂಡಪಾದಮೆಂದು ಲೋಕಪ್ರಸಿದ್ಧಂ; ಮತ್ತೊಂದು ತೊಡೆಪರಿಯಂತರ ಎತ್ತಿ ಉದ್ವೃತ್ತಿತಪಾದಮಂ ಮಾಡಿದರೆ ಇದನ್ನೂ ಪಾರ್ಶ್ವಕ್ರಾಂತಮೆಂಬರು (ಶಾಸ್ತ್ರಂ. ೬-೯೨ಚ). [ಸಂ. ಪಾರ್ಶ್ವಕ್ರಾಂತಾ]

**ಪಾರ್ಶ್ವಗತ** (ನಾ). = ಪಾರ್ಶ್ವಾಗತ : ಋಜು ಋಜುಪರಾವೃತ್ತಿ ಅರ್ಧಋಜು ಅರ್ಧಋಜುಪರಾವೃತ್ತಿ ಸಾಚಿ ಸಾಚಿಪರಾವೃತ್ತಿ ದ್ವ್ಯರ್ಧಾಕ್ಷ ತತ್ಪರಾವೃತ್ತಿ ಪಾರ್ಶ್ವಗತವೆಂಬ ನವಸ್ಥಾನಕಂಗಳೊಳು . . . ಅಳವಡೆ (ಚಂದ್ರ.ಪು. ೦೩-೬೦). [ಸಂ.]

**ಪಾರ್ಶ್ವಚರ** (ನಾ). ೧. ಪಕ್ಕದಲ್ಲಿರುವವನು. ೨. ಸಮೀಪದಲ್ಲಿ ಸಂಚರಿಸುವವನು. ೩. ಸೇವಕ ; ಆಳು : ಅಭಿನವರೂಪಹಾವನವಭಾವಸಮನ್ವಿತೆ ಪುಟ್ಟಿದಳ್ ಸ್ವಯಂಪ್ರಭೆ ಮಗಳಾಕೆ ಪಾರ್ಶ್ವಚರಭೂಚರ ಖೇಚರ ನೇತ್ರಪುತ್ರಿಕಾನಿಭೆ . . . ನಯನೋತ್ಪಲೇಂದುಕಿರಣಪ್ರಭೆಯಪ್ಪುದು ತಪ್ಪದೊಪ್ಪುಗುಂ (ಶಾಂತಿಪು. ೩-೦೩). [ಪಾರ್ಶ್ವ+ಚರ]

**ಪಾರ್ಶ್ವಭೇದ** (ನಾ). [ನಾಟ್ಯ] ನರ್ತನದಲ್ಲಿ ಒಂದು ಬಗೆ ; ◆ "ವೃಶ್ಚಿಕಕುಟ್ಟಿತ, ಊರ್ಧ್ವಜಾನು, ಆಕ್ಷಿಪ್ತ, ಸ್ವಸ್ತಿಕ ಈ ನಾಲ್ಕು ಕರಣಗಳನ್ನೂ ಮಾಡಿ ಒಂದಾವರ್ತಿ ಸುತ್ತಿ ಉರೋಮಂಡಲ, ನಿತಂಬ, ಕರಿಹಸ್ತ, ಕಟೀಛಿನ್ನ ಈ ನಾಲ್ಕು ಕರಣಗಳನ್ನೂ ಕ್ರಮವಾಗಿ ಮಾಡುವುದು" (ಶಾಸ್ತ್ರಂ. ೩೦೦ ಗದ್ಯಾನುವಾದ): ವಿಮಲಪಾಚ್ಯುರಿತ ಪಾರ್ಶ್ವಭೇದ ಸರ್ಪಿತಂ ಜೂಡಿವೆತ್ತ ಮತ್ತಾಕ್ರೀಡಂ ಪಸರಿಪ ವಿನ್ಯಾಸ್ಯಾಂತಂ ಶಶಿಮುಖಿ ವಿಷ್ಕಂಭಕಾಪಸೃತಮೆಂಬಿನಿತುಂ (ಶಾಸ್ತ್ರಂ. ೩-೯). [<ಸಂ. ಪಾರ್ಶ್ವಚ್ಛೇದ ?]

**ಪಾರ್ಶ್ವಜಾನು** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; P "ಸಮಪಾದದಿಂದ ನಿಂತುಕೊಂಡು ಒಂದು ಕಾಲಿನಿಂದ ತೊಡೆಯ ಹಿಂಭಾಗವನ್ನು ತಾಗಿಸಿ, ಒಂದು ಕೈಯನ್ನು ಮುಷ್ಟಿಹಸ್ತದಿಂದ ಎದೆಯ ಹತ್ತಿರದಲ್ಲೂ ಇನ್ನೊಂದು ಕೈಯನ್ನು ಅರ್ಧಚಂದ್ರಹಸ್ತದಿಂದ ಸೊಂಟದ ಹತ್ತಿರದಲ್ಲೂ ಹಿಡಿಯುವುದು. ಹೀಗೆ ಎರಡು ಪಾರ್ಶ್ವಗಳಲ್ಲೂ ಮಾಡುವುದು. ಯುದ್ಧ, ನಿಯುದ್ಧ [ಜಟ್ಟಿಕಾಳಗ] ಇವೇ ಮೊದಲಾದುವನ್ನು ಅಭಿನಯಿಸುವಾಗ" (ಶಾಸ್ತ್ರರಂ. ೩೦೦ ಗದ್ಯಾನುವಾದ) : ತಲಪುಷ್ಪಪುಟ, ಲೀನ . . . ತಲಸಂಸ್ಫೋಟಿತ, ಪಾರ್ಶ್ವಜಾನು . . . ನಾಗಾಪಸರ್ಪಿತ, ಗಂಗಾವತರಣ— ಈ ನೂರೆಂಟು ಕರಣಂಗಳ್ (ಶಾಸ್ತ್ರರಂ. ೪-೧೨೫). [ಸಂ.]

**ಪಾರ್ಶ್ವದ್ವಯ** (ನಾ). [ನಾಟ್ಯ] ಹದಿಮೂರು ವಿಧವಾದ ಹಸ್ತಕ್ಷೇತ್ರಗಳಲ್ಲಿ ಒಂದು : ಪಾರ್ಶ್ವದ್ವಯ, ಪುರಸ್ತಾತ್, ಪಶ್ಚಾತ್ . . . ಕಟಿಶಿರ, ಊರುದ್ವಂದ್ವ— ಈ ಹದಿಮೂಱು ಹಸ್ತಕ್ಷೇತ್ರಂಗಳ್ (ಶಾಸ್ತ್ರರಂ. ೪-೦೫೭). [ಸಂ.]

**ಪಾರ್ಶ್ವನಾಥ** (ನಾ). ೧. = ಪಾರ್ಶ್ವ ೭ : ಕವಿಕುಳತಿಳಕಪ್ರಣೂತ ಪಾರ್ಶ್ವನಾಥಪ್ರಣೀತಮಪ್ಪ ಪಾರ್ಶ್ವನಾಥಚರಿತಪುರಾಣದೊಳ್ ಕಥಾವತಾರವರ್ಣನಂ (ಪಾರ್ಶ್ವಪು. ೦-೦೫೫ ಗದ್ಯ). ೨. = ಪಾರ್ಶ್ವ ೯ : ಸಂಪೂರ್ಣಮಾಯ್ತು ವಿಪ್ರಸ್ತುತಪಾರ್ಶ್ವನಾಥಚರಿತಂ ಪಾರ್ಶ್ವೋದಿತಂ (ಪಾರ್ಶ್ವಪು. ೦೬ ೦೫೬). [ಸಂ.]

**ಪಾರ್ಶ್ವನಿಕುಟ್ಟಕ** (ನಾ). [ನಾಟ್ಯ] ನೂರೆಂಟುಕರಣಗಳಲ್ಲಿ ಒಂದು; P "ಪತಾಕಹಸ್ತಗಳೆರಡನ್ನು ಸ್ವಸ್ತಿಕದಂತೆ ಹಿಡಿದು, ಒಂದು ಕೈಯನ್ನು ಮೇಲ್ಮುಖವಾಗಿಯೂ ಇನ್ನೊಂದನ್ನು ಕೆಳಮುಖವಾಗಿಯೂ ಮಾಡಿ, ಮೇಲ್ಮುಖವಾಗಿರುವ ಕೈಯನ್ನು ಪಾರ್ಶ್ವದಲ್ಲಿ [ಪಕ್ಕದಲ್ಲಿ] ನಿಲ್ಲಿಸಿ, ಕೆಳಮುಖವಾಗಿರುವ ಕೈಯನ್ನು ಪಾರ್ಶ್ವಕ್ಕೆ [ಪಕ್ಕಗೆ] ತರುವಾಗಲೇ ಆ ಪಾರ್ಶ್ವದ ಕಾಲನ್ನೂ ಅಂಗಾಲು ಮೇಲ್ಮುಖ ಮಾಡಿ ಪಕ್ಕದ ಹತ್ತಿರಕ್ಕೆ ತಂದು ಕೈಗೆ ಮುಟ್ಟಿಸುವುದಲ್ಲದೆ ಇನ್ನೊಂದು ಕೈಯನ್ನು ಮೇಲಕ್ಕೆ ಚಲಿಸುವುದು. ಹೀಗೆ ಎರಡು ಪಾರ್ಶ್ವಗಳಲ್ಲೂ ಪರ್ಯಾಯವಾಗಿ ಮಾಡುವುದು" (ಶಾಸ್ತ್ರರಂ. ೨೯೭ ಗದ್ಯಾನುವಾದ) : ತಲಪುಷ್ಪಪುಟ, ಲೀನ, ವಿವರ್ತಿತ . . . ಪಾರ್ಶ್ವನಿಕುಟ್ಟಕ, ಚಕ್ರಮಂಡಲ, ಉರೋಮಂಡಲ . . . ವೃಷಭಕ್ರೀಡಿತ, ನಾಗಾಪಸರ್ಪಿತ, ಗಂಗಾವತರಣ— ಈ ನೂಱೆಂಟು ಕರಣಂಗಳ್ (ಶಾಸ್ತ್ರರಂ. ೪ ೧೨ ವ). [ಪಾರ್ಶ್ವ+ನಿಕುಟ್ಟಕ]

**ಪಾರ್ಶ್ವಪಾದಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೬೩. ಪಾರ್ಶ್ವಪಾದಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಶಾರದ. ೦೬೭). [ಸಂ.]

**ಪಾರ್ಶ್ವಭಾಗಿನಿ** (ನಾ). ಮಗ್ಗುಲಲ್ಲಿರುವವಳು; ಪತ್ನಿ: ನಿನ್ನನ್ನು ಸೆರೆಯಲ್ಲಿಟ್ಟು ತನ್ನ ಪಾರ್ಶ್ವಭಾಗಿನಿಯನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವ ಆ ಅಧಮ ಕೇಶವರಾಯನೇ ನನ್ನ ಪತಿ (ಅಂಬಿಕೆ. ೫೭). [ಸಂ. ಪಾರ್ಶ್ವಭಾಗಿನೀ]

**ಪಾರ್ಶ್ವಮಂಡಲ** (ನಾ). [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು : ಚತುರಸ್ರ, ಉದ್ವೃತ್ತ, ತಲಮುಖ . . . ಪಾರ್ಶ್ವಮಂಡಲ, ಉರೋಮಂಡಲ . . . ಅಲಪದ್ಮ, ಉಲ್ಬಣ, ವಲಿತ, ಲಲಿತ— ಈ ಮೂವತ್ತು ನೃತ್ತಹಸ್ತಂಗಳ್ (ಶಾಸ್ತ್ರರಂ. ೨-೪೪ ವ) ; ಈ ಕೆಳಗೆ ಹೇಳುವ ಹಸ್ತಗಳು ನೃತ್ತಹಸ್ತಗಳು—೧. ಚತುರಸ್ರ, ೨. ಉದ್ವೃತ್ತ . . . ೨೨. ಪಾರ್ಶ್ವಮಂಡಲ (ಅಭಾಸ್ಕ. ೯೯). [ಸಂ.]

**ಪಾರ್ಶ್ವವರ್ತಿ** (ನಾ). ಸಹಾಯಕ ; ಸೇವಕ . [ಸಂ. ಪಾರ್ಶ್ವವರ್ತಿನ್]

**ಪಾರ್ಶ್ವವಾಯು** (ನಾ). ದೇಹದ ಅರ್ಧಭಾಗದ ಚಲನೆಯನ್ನು ಉಡುಗಿಸುವ ವಾತರೋಗ; ಲಕ್ವ: ಮಾತು ನಿಲ್ಲಬಹುದು, ಪಾರ್ಶ್ವವಾಯು ಬರಬಹುದು (೪೦೦ಹೋ. ೫೦) ; ಜಯಜಯಾದಿ ತಿರಾಗವು ಪಾರ್ಶ್ವವಾಯುವನ್ನು ಗುಣಪಡಿಸುವುದೆಂಬ ನಂಬಿಕೆಯಿದೆ (ಶಾರದ. ೫೪೪). 'ಅರ್ಧಾಂಗವಾಯು' ಪರಾ. [ಪಾರ್ಶ್ವ+ವಾಯು]

**ಪಾರ್ಶ್ವಶೂಲೆ** (ನಾ). ಪಕ್ಕೆಗಳಲ್ಲಿ ಉಂಟಾಗುವ ನೋವು; ಪಕ್ಕೆಶೂಲೆ : ಹೊಟ್ಟೆಶೂಲೆಗೆ, ಪಾರ್ಶ್ವಶೂಲೆಗೆ :—ಬಿಳಿತಾದ ಮೆಣಸು ಹೊನ್ನುತೂಕವನ್ನು ವೀಳ್ಯದೆಲೆಗೆ ತೊಡೆದು ಆ ಎಲೆ ಮೆಲ್ಲಲು ಹರ (ವೈದ್ಯಾಸಿ. ೦೨೫) ; ಗರುಗ, ಬಳ್ಳಿಸೊಂಡೆ . . . ವಾಯುವಿಳಂಗ – ಇಷ್ಟನ್ನು ಚೂರ್ಣಿಸಿ, ಕಲ್ಕವ ಮಾಡಿ ಕವಡಿ, ತೈಲಪಕ್ವದಲ್ಲಿಳುಹಿ ಪಾನವ ಮಾಡಲು . . . ಪಾರ್ಶ್ವಶೂಲೆ, ಗ್ರಹಣಿ, ಅಗ್ನಿಮಾಂದ್ಯ, ಇವಿಷ್ಟು ಪರಿಹರಿಸಹುದು (ಸಕವೈ. ೨೨೬). [ಪಾರ್ಶ್ವ+ಶೂಲೆ]

**ಪಾರ್ಶ್ವಸ್ಥ** (ನಾ). ೧. ವಿಟಪುರುಷರಲ್ಲಿ ಒಂದು ಬಗೆ ; ಹತ್ತಿರದ ಮನೆಯಲ್ಲಿ ವಾಸಿಸುವ ವಿಟ.—ಜಾರಃಸ್ತ್ರೀಯಿದ್ದ ಮನೆಯ ಬಿಟ್ಟು ಕೆಲದ ಮನೆಯೊಳಿರ್ಪನಂ ಪಾರ್ಶ್ವಸ್ಥನೆಂಬುದು (ಕಾಮಜಾ. ೨೫೨). ೨. ಸೂತ್ರಧಾರನ ಸಹಾಯಕ. [ಸಂ.]

**ಪಾರ್ಶ್ವಸ್ವಸ್ತಿಕ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು; P "ಒಂದು ಪಾರ್ಶ್ವದಲ್ಲಿ ದಿಕ್‌ಸ್ವಸ್ತಿಕವನ್ನೂ ಇನ್ನೊಂದು ಪಾರ್ಶ್ವದಲ್ಲಿ ಅರ್ಧನಿಕುಟ್ಟಕವನ್ನೂ ಪುನಃ ಪಾರ್ಶ್ವವ್ಯತ್ಯಾಸದಿಂದ ಅದೇ ಕರಣಗಳನ್ನು ಮಾಡಿ ಅಪವಿದ್ಧ, ಊರೂದ್ವೃತ್ತ, ಆಕ್ಷಿಪ್ತ, ನಿತಂಬ, ಕರಿಹಸ್ತ, ಕಟೀಛಿನ್ನ ಈ ಕರಣಗಳನ್ನು ಕ್ರಮವಾಗಿ ಮಾಡುವುದು" (ಶಾಸ್ತ್ರರಂ. ೩೦೬ ಗದ್ಯಾನುವಾದ) : ಸ್ಥಿರಹಸ್ತ, ಪರ್ಯಸ್ತ . . . ಪಾರ್ಶ್ವಸ್ವಸ್ತಿಕ, ಭ್ರಮರ . . . ಸ್ವಸ್ತಿಕರೇಚಿತ— ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಶಾಸ್ತ್ರರಂ. ೫-೭ ವ). [ಪಾರ್ಶ್ವ+ಸ್ವಸ್ತಿಕ]

**ಪಾರ್ಶ್ವಾಗತ** (ನಾ). [ಚಿತ್ರಶಾ] ಒಂದು ವಸ್ತುವಿನ ಮಗ್ಗುಲು ನೋಟ; ಋಜ್ವಾಗತ, ಅರ್ಧಋಜ್ವಾಗತ, ಪಾರ್ಶ್ವಾಗತ, ಸಾಚಿ ಮತ್ತು ದ್ವ್ಯರ್ಧಾಕ್ಷ ಎಂಬ ಪಂಚವಿಧ ಸ್ಥಾನಕಗಳಲ್ಲಿ ಒಂದು : ರಂಜಿಸುಗುಂ ಪಾರ್ಶ್ವಾಗತಂ . . . ತದ್ವಿದ್ಯರಂ ಮೆಚ್ಚಿಸುಗುಂ ದ್ವ್ಯರ್ಧಾಕ್ಷಮೆಂಬಂತಿರೆ ಸೊಗಯಿಸುತಿರ್ಪಂಗನಾಭಂಗಿಯಿಂ ಚಿತ್ರಿಸಿ ಚಿತ್ರಕ್ಕಾಯುವೊಯ್ದು ಮದನನೆನೆ ಮಹಾದೇವಿ ಕಣ್ಗೊಪ್ಪಿ ತೋರ್ಪಳ್ (ಅಶಪು. ೨-೯೩). 'ಪಾರ್ಶ್ವಗತ' ಪರಾ. [ಸಂ.]

**ಪಾರ್ಶ್ವೋತ್ತಾನಾಸನ** (ನಾ). [ಯೋಗ] ಒಂದು ಬಗೆಯ ಆಸನ: ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ, ೨. ಚತುರಂಗದಂಡಾಸನ . . . ೬೬. ಪಾರ್ಶ್ವಕೋಣಾಸನ, ೬೭. ಪಾರ್ಶ್ವೋತ್ತಾನಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಶಾರದ. ೦೬೭). [ಸಂ.]

**ಪಾರ್ಷದ** (ನಾ). ೧. ಸಭೆಯಲ್ಲಿರುವವನು; ಸಭಾಸದ : ಸಕಲಧನೇಶಮುಖ್ಯರು ಪಾರ್ಷದೋತ್ತಮರು (ಭಾಗ. ೦೦-೬೨-೨೬). ೨. ಪರಿಚಾರಕ : ಅವರನ್ನು ಜಯವಿಜಯರೆಂಬ ಪಾರ್ಷದರು ತಮ್ಮ ಕೈಯೊಳಗಿನ ವೇತ್ರಯಷ್ಟಿಯಿಂದ ಪ್ರತಿಬಂಧಿಸಿದರು (ಭಾಮ್ನ. ೦೦೦). [ಸಂ.]

**ಪಾರ್ಷ್ಣಿ** (ನಾ). ೧. ಪಾದದ ಹಿಂಭಾಗ; ಹಿಮ್ಮಡಿ : ಗೂ[ಢ]ಗುಲ್ಫಪಾರ್ಷ್ಣಿಗಳನೊಳಕೊಂಡ ಮನುಜಮಾಂಧಾತನ ಪೊಜಅಡಿಗಳ್ ವಿರೋಧಿಭೂಪಾಳರನಡಿಗೆಜಿಗಿಸಿದ ಸಂತೋಷದೊಲುನ್ನತಂಗಳಾದಂತೆ ಕೂರ್ಮೋನ್ನತಂಗಳಾದುವು (ಶಂಕಚ. ೨-೩೯ ವ) ; ವಿಸ್ತೀರ್ಣಪಾರ್ಷ್ಣಿಯುಂ ಪಾರ್ಷ್ಣಿನಿಧಿಯೊಳೆ ಬೆಸಬೆತ್ತು ಕಾಲ್ಗೊಳುವ ಉರಂಬಸದಿಂದುಂಗುಷ್ಟದಿಂ

ಪಾರ್ಷ್ಣಿಯನಳವಡಿಸುತ್ತುಂ . . . ಬಂಬಲ್ವರಿಯಿಸಿ (ಶಬ್ದಮ. ೯-೯೫) ; ಪರಿದುತ್ಕ್ಷಿಪ್ತಂ ಪತಿತಂ . . . ಅಂಗುಲಿ ಸಂಗತಮಾಯೆಂಬುಂ ಸಮಂತು ಪಾರ್ಷ್ಣಿಯ ಭೇದಂ (ಶಾಸ್ತ್ರ. ೩-೦೦೦). ೨. ಸೈನ್ಯದ ಹಿಂಭಾಗ. ೩. ಹಿಂಬದಿ ; ಹಿಂಭಾಗ : "ಪರಭಾಗಂ ಪಾರ್ಷ್ಣಿ ಮಡಂ" (ಶಬ್ದಕೋ. ೩೬-೨). ೪. ಹಿಂದಿನಿಂದ ಹಿಡಿಯುವುದು,—ಆಕ್ರಮಿಸುವುದು : "ಹಿಂದೆ ಹಿಡಿವಲ್ಲಿ ಮಡವಲ್ಲಿ ಪಾರ್ಷ್ಣಿಯೆಂದೆನಿಕುಂ" (ಮಂಗರಾ. ೦೯೨-೨೦). ೫. ಹಿಂದಿನಿಂದ ಹಿಡಿಯುವವನು,—ಆಕ್ರಮಿಸುವವನು ; ಪಾರ್ಷ್ಣಿಗ್ರಾಹಕ : "ಹಿಂದೆ ಸೆಳೆವನಲ್ಲಿಯುಂ, ಮಡದಲ್ಲಿಯುಂ — ಪಾರ್ಷ್ಣಿಯೆಂಬುದು" (ಹಲಾಯು. ೦೩೬-೩೬). ೬. ರಥದ ಅಚ್ಚಿನ ಮುಂಭಾಗ,—ತುದಿ. ೭. ಒದೆತ ; ತುಳಿತ. ೮. ಜಯವನ್ನು ಹೊಂದುವ ಅಪೇಕ್ಷೆ. ೯. ತನಿಖೆ ; ವಿಚಾರಣೆ. ೧೦. ಸ್ವೇಚ್ಛಾಚಾರದಿಂದಿರುವವಳು; ಸ್ವೈರಿಣಿ. ೧೧. ಕುಂತಿಯ ಒಂದು ಹೆಸರು. [ಸಂ.]

**ಪಾರ್ಷ್ಣಿಗಮನ** (ನಾ). [ನಾಟ್ಯ] ಹಿಮ್ಮಡಿಗಳನೂರಿ ಹಿಂದಕ್ಕೆ ನಡೆಯುವುದಂ; ನೃತ್ಯದಲ್ಲಿ ಒಂದು ಭಂಗಿ : ಪಿಂತಣ್ಗೆ ಮಡಗಳಿಂದಂ ಸಂತತ ನಡೆಯಲ್ಕೆ ಪಾರ್ಷ್ಣಿಗಮನಮೆನಿಕ್ಕುಂ (ಶಾಸ್ತ್ರ. ೨-೦೦೦).

[ ಪಾರ್ಷ್ಣಿ + ಗಮನ ]

**ಪಾರ್ಷ್ಣಿಗ್ರಾಹಕ** (ನಾ). ಹಿಂಭಾಗದಲ್ಲಿದ್ದು ಮೇಲೆ ಬೀಳುವ ಶತ್ರು : ಅದಂ ಕಂಡು ಕಪ್ಪಮಿಯದೆ ಚಪ್ಪರಿಸುವ ಮಂಡಳಿಕರುಮನಡಂಗದಾಟವಿಕರುಮಂ ಒತ್ತಿ ಬರ್ಪ ಪಾರ್ಷ್ಣಿಗ್ರಾಹಕರುಮನಱಿದು (ಆದಿಪು. ೪-೬೨ ವ).

[ ಪಾರ್ಷ್ಣಿ+ಗ್ರಾಹಕ ]

**ಪಾರ್ಷ್ಣಿಪಾರ್ಶ್ವಗತ** (ನಾ). [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು ; ☞ "ಒಂದು ಪಾದದ ಒಳಭಾಗದಲ್ಲಿ [ಕೀಲಿನಲ್ಲಿ] ಇನ್ನೊಂದು ಕಾಲಿನ ಹಿಮ್ಮಡಿಯನ್ನು ಅಡ್ಡವಾಗಿರಿಸುವುದು" (ಶಾಸ್ತ್ರ. ೩೩೦ ಗದ್ಯಾನುವಾದ) : ಪದದೊಳಪಾರ್ಶ್ವಮನಿತರದ ಪದಪಾರ್ಷ್ಣಿ[ಯುಮೊಂದೆ ಪಾರ್ಷ್ಣಿ]ಪಾರ್ಶ್ವಗತಾಖ್ಯಂ (ಶಾಸ್ತ್ರ. ೬-೪೦).

[ಸಂ.]

**ಪಾರ್ಷ್ಣಿರೇಚಿತ** (ನಾ). [ನಾಟ್ಯ] ಮೂವತ್ತೈದು ದೇಶೀಯ ಭೌಮಚಾರಿಗಳಲ್ಲಿ ಒಂದು ; ☞ "ಪಾರ್ಷ್ಣಿಪಾರ್ಶ್ವಗತಸ್ಥಾನಕದಲ್ಲಿ ಹಿಮ್ಮಡಿಯನ್ನು ರೇಚಿತ ಮಾಡುವುದು" (ಶಾಸ್ತ್ರ. ೩೨೨ ಗದ್ಯಾನುವಾದ) : ರಥಚಕ್ರ, ಪರಾವೃತ್ತತಲ, ನೂಪುರ . . . ವಿಶ್ಲಿಷ್ಟ, ಪಾರ್ಷ್ಣಿರೇಚಿತ, ಊರುತಾಡಿತ . . . ಅರ್ಧಸ್ಖಲಿತ, ಸಮಸ್ಖಲಿತ; ಈ ಮೂವತ್ತೈದು ದೇಶಿಯ ಸಂಬಂಧದ ಭೌಮಚಾರಿಗಳು (ಶಾಸ್ತ್ರ. ೬-೦೬ ವ).

[ ಪಾರ್ಷ್ಣಿ + ರೇಚಿತ ]

**ಪಾರ್ಷ್ಣಿವಿದ್ಧ** (ನಾ). [ನಾಟ್ಯ] ಇಪ್ಪತ್ತುಮೂರು ದೇಶೀಯಸ್ಥಾನಕಗಳಲ್ಲಿ ಒಂದು ; ☞ "ಒಂದು ಕಾಲಿನ ಹಿಮ್ಮಡಿಯ ಮೇಲೆ ಇನ್ನೊಂದು ಕಾಲಿನ ಹೆಬ್ಬೆಟ್ಟನ್ನು ಇಡುವುದು" (ಶಾಸ್ತ್ರ. ೩೩೦ ಗದ್ಯಾನುವಾದ) : ಚತುರಸ್ರ, ಪಾರ್ಷ್ಣಿವಿದ್ಧ . . . ಚರಣಂ ಮಡದೊಳಗನ್ಯದ ಚರಣದ ಪೆರ್ಬೆಟ್ಟನಿರಿಸೆ ಪಾರ್ಷ್ಣಿಯ ವಿದ್ಧಂ (ಶಾಸ್ತ್ರ. ೬-೩೯).

[ಸಂ.]

**ಪಾರ್ಸಲ್** 'ಪಾರ್ಸಲ್ಲು' ನೋ.

**ಪಾರ್ಸಲ್ಲು, ಪಾರ್ಸಲ್, ಪಾರ್ಸೆಲ್** (ನಾ). (ಸಾಮಾನ್ಯವಾಗಿ ಟಪಾಲು ಮೂಲಕ ಕಳಿಸುವ) ಕಟ್ಟಿದ ವಸ್ತು; ಭಾಂಗಿ : ಬುಟ್ಟಿಗಟ್ಟಲೆ ಹಣ್ಣುಗಳನ್ನು ಪಾರ್ಸಲ್ಲು ಮಾಡಿ ಊರಿಗೆ ಕಳಿಸಿದರು (ರೂಢಿ). **ಪಾರ್ಸಲ್** : ನೀವು ನಮ್ಮಿಬ್ಬರಿಗೂ ಪಾರ್ಸಲ್ ಮಾಡಿ ಕಳಿಸಬೇಕು (ಕಮಲ. ೫೨೫). **ಪಾರ್ಸೆಲ್** : "ಪಾರ್ಸೆಲ್ . . . ಒಂದು ಕಟ್ಟಾಗಿ ಕಟ್ಟಿದ ಸಾಮಾನು; ಮೂಟೆ; ಭಾಂಗಿ" (Parcel· ಇಂಕಾ). [← ಇಂ. Parcel]

**ಪಾರ್ಸಿ** 'ಪಾರಸಿ' ನೋ.

**ಪಾರ್ಸಿಕ** 'ಪಾರಶಿಕ' ನೋ.

**ಪಾರ್ಸೆಲ್** 'ಪಾರ್ಸಲ್ಲು' ನೋ.

**ಪಾಲ್$_1$, ಪಾಲು$_1$, ಹಾಲು$_1$** (ನಾ). ೧. ಸಸ್ತನಿಗಳು ತಮ್ಮ ಸಂತಾನ ಪೋಷಣೆಗಾಗಿ ಅವುಗಳಿಗೆ ಕುಡಿಸುವ, ಸ್ತನಗ್ರಂಥಿಗಳಿಂದ ಉತ್ಪತ್ತಿಯಾಗುವ ಬಿಳಿಯ ಬಣ್ಣದ ದ್ರವ; ಕ್ಷೀರ : "ಕ್ಷೀರಂ ದುಗ್ಧಂ ಪಾಲ್" (ಶಬ್ದಕೋ. ೯೨-೦); ಕಿಟ್ಟಾನೇಶ್ವರದಾ ದೇವರು ಪರಮರಿಯೆ ಭತ್ತಮುಂ ಕವಿಲೆಯ ಪಾಲುಂ ಎಟ್ಟುಂ × × × (ಎಇ. VI, ಕೊಪ್ಪ. ೩೬-೩; ಸು. 676?); ಮಾಱುಗುವ ಪಾಲ್ಗಳೆಯ ಪನಿಗಳಂ ಪೆರಸಿದವೋಲ್ (ಕಬಿರಾ. ೦-೫೯); ಬಡಿಗಂಡನಿಲ್ಲ ಪಾಲನೆ ಕಂಡಂ (ಶಬರ. ೬-೦೯). ೨. (ಕಳ್ಳಿ, ಎಕ್ಕ ಮುಂತಾದ) ಕೆಲವು ಸಸ್ಯಗಳು ಸ್ರವಿಸುವ ಬಿಳಿಯ ರಸ : ಒಳಮೊಂಡಿನ ಪಾಲ್ಗಳುಮಂ ಪೀರ್ದಿಂಗೊರಲ್ಗಳುವ ನೀರ್ವಕ್ಕಿಗಳ ಸುಸಿಲಮುಸಕದಿಂಚರಂಗಳುಮಂ . . . ನೆಗಱತ್ತುಮಿರ್ದಂ (ಕಾದಂಬ. ೫೨೬); ಪಾಲೆಂಬ ತೆಱದೆ ಪಶುವಿನ ಪಾಲಂ ಪೋಲುವುವೆ ನಾಯ ಕಳ್ಳಿಯ ಪಾಲ್ಗಳ್ (ಅಕ್ಕ. ೨-೬೬); ಪಾಲೆಂಬ ನಾಮಮಾವಿನ ಪಾಲಿಂಗಂ ನಾಯ ಮಟದ ಕಳ್ಳಿಯೊಳಾದಾ ಪಾಲಿಂಗಮಕ್ಕುಮಾದೊಡೆ ಪಾಲೊಳ್ಪುಂ ಸವಿಯುಮದಱೊಳೇಂ ಸಮನಿಕುಮೇ (ಧರ್ಮಾಮೃ. ೦-೦೯೨). ೩. ತೆಂಗಿನಕಾಯಿ, ಕಬ್ಬು ಮುಂತಾದುವುಗಳ ರಸ ; (*). ೪. ಸಿಡುಬು ಮೊದಲಾದುವುಗಳಿಗೆ ಮದ್ದಿನಂತೆ ಉಪಯೋಗಿಸುವ ಲಸಿಕೆ : (*). ೫. ಬಿಳಿಯ ಬಣ್ಣ ; ಬಿಳುಪು: 'ಪಾಲ್ವತ್ತ' ಪರಾ. ೬. ಸಾಮಾನ್ಯವಾಗಿ ಬತ್ತ, ಗೋಧಿ ಇತ್ಯಾದಿ ಏಕದಳಧಾನ್ಯದ ಬಲಿಯದೆ ಇರುವ ಎಳೆಯ ಕಾಳಿನಲ್ಲಿರುವ, ಪಿಷ್ಟಾಂಶದಿಂದ ಕೂಡಿರುವ ಬಿಳಿಯ ರಸ: 'ಪಾಲ್ದುಂಬು', 'ಪಾಲ್ದನೆ' ಪರಾ. **ಪಾಲು$_1$**: ೧. ಕಱೆಯುತ್ತೈ ಸುರಧೇನು ಪಾಲನು (ಸಂಕೇಶ. ೬-೬); ಚಿಲುಪಾಲು ತಂಬಾಲು ಕೆನೆವೆರಸಿದ ಪಾಲು ಸುಲಲಿತ ಬಟ್ಟವಾಲುಗಳ್ ಸಲೆ ಕಟ್ಟು ಮೊಸರುಗಳ್ ಗಟ್ಟಿಮಜ್ಜಿಗೆಗಳ ಲಲನೆಯರುಣಬಡಿಸಿದರು (ಶಬರ. ೯-೯೦); ಗೊಲ್ಲ ಕರೆದಾ ಧ್ವನಿಯ ಕೇಳಿ ಎಲ್ಲ ಪಶುಗಳು ಬಂದವಾಗ ಚೆಲ್ಲಿ ಸೂಸಿ ಪಾಲ ಕರೆದು ಅಲ್ಲಿ ತುಂಬಿತು ಬಿಂದಿಗೆ (ಗೋಹಾಡು. ೪೦). **ಹಾಲು$_1$** : ೧. "ಆ ವೃಥಸ್ಯಂ ಪಯಂ ದುಗ್ಧಮಾ ಕ್ಷೀರಮೆನಲಾವುಗಳು ಕಱೆವ ಹಾಲಕ್ಕು" (ಮಂಗರಾ. ೫೪-೫); ಕಲ್ಲ ನಾಗರ ಕಂಡರೆ ಹಾಲನೆಱೆಯೆಂಬರು (ಜನಪ. ೦೯೪); ಹಾಲ ಸಾಗರ ಮನೆಯ ಸೆಜ್ಜೆಯ ಮೇಲೆ ಶೇಷನ ಹಾಸು (ಸಂಕೇಶ. ೬-೦); ಹುಳಿಗಲಸಿದರೆ ಕೊಡನ ಹಾಲವೊಲಿವುದೇ ಕ್ಷೀರಾಂಬುನಿಧಿ (ಕುಮಾ. ೩-೬-೪೦). ೨. ಎಷ್ಟೆಲ್ಲ ಔಷಧ ಹಾಕಿಕೊಂಡವನಿಗೆ ಕಳ್ಳೀಹಾಲಿನ ಹೆದರಿಕೆಯೆ! (ಕಂಗಾ. ೦೯); ಎಕ್ಕದ ಹಾಲು, ಕೋಲುಗಳ್ಳಿಹಾಲು ಮತ್ತು ಕಣಗಿಲುಹಾಲು ಈ ಮೂರು ಸಸ್ಯಕ್ಷೀರಗಳನ್ನು ಒಂದೊಂದು ತೊಟ್ಟು ಸೇರಿಸಿ ರೊಟ್ಟಿ ಹಾಕಿಸಿಕೊಂಡು ತಿನ್ನು (ಶಪೂರು. ೦೬೫); ಈ ಗಿಡಗಳನ್ನು . . . ಮೈಸೂರ ನಾಡಿನಲ್ಲಿ ಬೆಳಸುತ್ತಾರೆ. ಇದರ ಹಾಲಿನಿಂದ ರಬ್ಬರನ್ನು ತಯಾರಿಸುತ್ತಾರೆ (ಸಸ್ಯಶಾ. ೦೩೩). ೩. ಮಾಘ ಫಾಲ್ಗುಣದಲ್ಲಿ ಗಾಣವನ್ನು ಹಾಕಿದರೆ ಅಷ್ಟರಲ್ಲಿ ಬಿಸಿಲು ಬಲಿತು ಕಬ್ಬಿನ ಹಾಲು ಸ್ವಲ್ಪ ಕಡಿಮೆ ಆಗುವದು (ಕೃಷಿಶ. ೦೬೫); ಕಬ್ಬಿನ ಗಣೆ ಡೊಂಕು, ಅದರ ಹಾಲದು ಡೊಂಕೆ ರಸಿಕಾ ಹೇಳೊ (ಗಂ. ೩೨-೦); ಗಾಣದ ಚಕ್ರಗಳಲ್ಲಿ ಕಬ್ಬು ಜಜ್ಜಿ ಹೋಗಿ ಅದರಿಂದ ಹಾಲು ಸುರಿಯುತ್ತಿತ್ತು (ಕಶಿಪು. ೩-೬೨). 'ಕಾಯಿಹಾಲು' ಪರಾ. ೫. 'ಹಾಲುಗಲ್ಲು', 'ಹಾಲುಗಾರೆ' ಪರಾ. ೬. ಧೊರೆ ಸನ್ನ ತಮ್ಮ ಬರುವಾಗ ಯಾಲಕ್ಕಿಗೊನಿ ಬಾಗಿ ಹಾಲ ಸುರಿದಾವ (ಗರತಿ. ೫೯). ೭. ಸುಕುಮಾರತೆ; ಕೋಮಲತೆ; ಮೃದುತ್ವ: 'ಹಾಲುಗಲ್ಲ', 'ಹಾಲುಗೆನ್ನೆ' ಪರಾ.

**ಪಾಲ ಪೊನಲ್**=ಹಾಲಿನ ಹೊಳೆ : ಪಾಲ ಪೊನಲ್ ಪೊದಟ್ಟೊದವಿ ಸೌಂದರಮಂದರಕಂದರಂಗಳಂ ಶೈಲದರೀಗೃಹಂಗಳುಮನೂರ್ಮಿಯ ತೆಕ್ಕನೆ ತೀವಿ . . . ಪರಿದತ್ತು ನಗೋಪಕಂಠದೊಳ್ (ಆಚಪು. ೪-೩೬). **ಪಾಲ ಮುನ್ನೀರ್** =ಹಾಲಿನ ಸಮುದ್ರ; ಕ್ಷೀರಸಾಗರ : ಪಾಲ ಮುನ್ನೀರ್ ತೆರೆಯಂತಿರ್ದುತ್ತರೀಯಂ ನೆಲದೊಳಲೆಯುತ್ತಿರ್ದ ಮೂ ಥಾ F ಛಡಿಕ್ತರ್ ಬೆರಸು . . . ಬಂದನಾ ಸಾರ್ವಭೌಮಂ (ಕಾದಂಉ. ೨೬೪); ಎನ್ನ ದೇಹದ ಬೆಮರ್ವನಿಯೊಳೊಗೆದರ್ ಪಾಲ ಮುನ್ನೀರ ಮಗಳಿಟ್ಯ ಬೊಮ್ಮರ್ (ಶಬ್ದಶಾ. ೧೦-೨೩). **ಪಾಲುರ್ಕು, ಹಾಲುಕ್ಕು**=ಹಾಲು ತುಂಬಿ ಕೊಂಡು ಹೊರಬರು; ಹಾಲು ಸೂಸು: ಭುವನಸಂಭ್ರಮದೊಡನೆ ತಾಯ್ದೆರ್ಗೆ ಪಾಲುರ್ಕೆ ಬರಲೊಂದಿರುಳ್, ಕನಸಿನೊಳ್, ದುಗ್ಧಾಬ್ಧಿಯಂ ಕಂಡು ನಲಿದಳ್ ದೇವಿ ಕೌಸಲ್ಯೆ (ಶ್ರೀರಾದ್ದೂ. ೧೩-೪೦೩); ಈ ಮನೆ ಹಾಲುಕ್ಕಿ ದಂತೆ ಬಳೆಯಲಿ (ಸತಿ. ೩೭). **ಪಾಲ್ಬೆಣ್ಣೆಯುಂಬಳಿ**=ಹಾಲು ಮತ್ತು ಬೆಣ್ಣೆಗಾಗಿ ಕೊಟ್ಟ ಕೊಡುಗೆ : ಸದಾಶಿವರಾಯನಾಯಕನ ಮೊಮ್ಮದಿ ರೆಂಬ ವಾತ್ಸಲ್ಯದಿಂದಾ ಕುಮಾರರ್ಗೆ ಪಾಲ್ಬೆಣ್ಣೆಯುಂಬಳಿಗೆಂದು ನಿಯಾಮಿಸಿ ಮಾಸೂರಂ ಮಲ್ಲೂರು . . . ಸಂಕಣಭೂಪಂಗಾ ಸಮಯದೊಳಿತ್ತು (ಕಕಕ್ಕ. ೩-೩). **ಹಾಲ ಕಾಗದ**=(ಹಾಲಿನಂತೆ) ಬೆಳ್ಳಗಿರುವ ಕಾಗದ; ಬಿಳುಪಾದ ಕಾಗದ : (ಕ). **ಹಾಲ ಕಾಜ**= ಗೋವಳಿಗ; ಕವಾಡಿಗ : ಹಾಲಕಾಜರ ಊರ ಚಿಕದೇವರು . . . ಯಿ ಶಾಸನದಲಾದ ಪ್ರಮಾಣಿನ ಭೂಮಿಯನೂ ಶ್ರೀನರ[ಸಿಂಹ]ಭಾರತೀಶ್ರೀಪಾದ ಒ[ಡೆ]ಯರು × × × (ಕೌ೨೨. IX-ii, ೯೪೦-೯೭; 1406 ). **ಹಾಲ ಕೆನೆ**=ಪಾಲ್ಗೆನೆ: ಹಾಲ ನೇಮ ಹಾಲ ಕೆನೆಯ ನೇಮ (ಬಸವ. ೨೪೨). **ಹಾಲಗಂಬ**=ಮದುವೆ ಯಲ್ಲಿ, ಧಾರೆಯ ಮಂಟಪಕ್ಕೆ ಸಮೀಪವಾಗಿ ನೆಡುವ (ಮುರಿದರೆ ಹಾಲು ಸುರಿಸುವ) ಮರದ ಕೊಂಬೆ : ಹಂದರಗಂಬಕ ಚಂದನ್ನ ಸಿಂಗಾರ ತಂದ ಕಟ್ಟಿದರ ಹಾಲಗಂಬ ಮಾವಯ್ಯ ಬಂದ ಹಂದರಕ ಬಣ್ಣ ದಾಗ (ಲೋಕಗೀ. ೯೭). **ಹಾಲಗಾಳು**=ಹಾಲು ತುಂಬಿದ ಕಾಳು; ಎಳೆಯ ಕಾಳು : ಉಳಿದ ಪಕ್ಷಿಗಳು ತಿನ್ನುವಾಗ ಬಿದ್ದಂಥ ಹಣ್ಣು ಹಂಪಲುಗಳನ್ನೂ ಹಾಲಗಾಳುಗಳನ್ನೂ ತಂದು ನನಗೆ ಗುಟುಕು ಕೊಟ್ಟು ಉಳಿದರೆ ತಾನು ತಿನ್ನುತ್ತಿತ್ತು (ಮುಂಬಯಿ. ೩-೪೦೨). **ಹಾಲಗೋಳಿ**=ಹಂಸಪಕ್ಷಿ : ಹಾಲ ಗೋಳಿಯ ಮ್ಯಾಲ ನೀರಗೋಳಿಯ ತಂದ ನೀರಾಗ ನಿರಗಿ ಒದೆಯೂವ ಹೆಣ್ಣೀನ ಹ್ಯಾಂಪಕ ತಂದ ಶಿವರಾಯ (ಕನ್ನಡಾ. ೧೦೬). **ಹಾಲ ತೊಟೆ**= ಪಾಲ್ದೊಟೆ : ಹಾಲ ತೊಟೆಗೆ ಬೆಲ್ಲದ ಕೆಸರು ಸಕ್ಕರೆಯ ಮಳಲು ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು (ಬಸವ. ೨೯೦). **ಹಾಲ ಧಾರೆ**=ಒಂದು ಬಗೆಯ ಪೂಜೆ ; ಕ್ಷೀರಾಭಿಷೇಕ: [ಮು]ನಿಚಂದ್ರದೇವರುಗಳ ಹೆಸರಿನಲು ನಡ[ವ] ಹಾಲ ಧಾರೆಗು ಸಹ ಅಕ್ಕಿ ಮೂಡೆ ೧೦ ( ಎ೩. XX, ೯೪-೯೮; 1556 ). **ಹಾಲ ಬಾನ**= ಹಾಲಿನೊಂದಿಗೆ ಕಲಸಿದ ಅನ್ನ : ಹಾಲ ಬಾನುಣಲೊ ಹವಳ ಕೇರಾಡಲೊ (ಗರತಿ. ೧೨೩); ಹರಿಯಾಗದ್ನಮ್ಮಗಳು ಹಾಲಾ ಬಾನುಣ್ಣಾಳು (ಲೋಕಗೀ. ೮೦). **ಹಾಲ ಮಣಿ**=(ಹಾಲಿನಂತೆ) ಬಿಳುಪಾದ ಗಾಜಿನ ಮಣಿ : (ಕ). **ಹಾಲ ಸಹಸ್ರ**=ಹಾಲ ಧಾರೆ : ಶ್ರೀಸ್ವಯಂಭು ರಾಮೇಶ್ವರದೇವರ್ಗ್ಗೆ [ಹಾ]ಲ ಸಹಸ್ರ ಗರ್ದುಗೆಯಂ ಕೊಟ್ಟು ರಕ್ಷಣೆಯಾಗಿ ಕಟ್ಟಿಸಿ ಕೆಯಿಂ ತೆ × × × ಬಟ್ಟಿಯಿಂ ಪಡುವಲು . . . ಬಿಟ್ಟ ಕೆಯಿ ಹಿರಿಯ ಕೋಲ ಮತ್ತರೇಳು (ಕ೩. II, ೨೪-೩೦; 1167). **ಹಾಲ ಹರವಿ**= ೧. ಹಾಲಿನ ಕೊಡ : ತಾಳಮರದ ಕೆಳಗೆ ಒಂದು ಹಾಲ ಹರವಿಯಿರ್ದೊಡೆ ಅದ ಹಾಲ ಹರವಿಯೆನ್ನರು ಸುರೆಯ ಹರವಿಯೆಂಬರು (ಬಸವ. ೯೦); ಹಾಲ ರವಿಯ ಸುತ್ತ ಯಾಲಕ್ಕಿ ನಾಶಾವ ಯಾರುಂಡರವ್ವ ಹಗಲೂಟ (ಗರತಿ. ೭೨). ೨. ಒಂದು ಊರಿನ ಹೆಸರು : ತಂಮ ಪ್ರವಿಷ್ಟದ ತುಜುಘಟಿಯ ಮೂಡಣ ಬೆಂಚೆಯಿಶಾನ್ಯದಲ್ಲಿ ಹಾಲ ಹರವಿಯ ದಾರಿಯಿ ನ್ತೆಂಕಲೂಪುರ್ಬ್ಬ್ಯಧ್ಯಕದೊಟೆಯಂ ಧಾರಾಪೂರ್ಬ್ಬಕಮ್ಮಾಡಿ ಕೊಟ್ಟ ಮತ್ತ ರಾಜು (ಕೌ೨೨. IX-i, ೨೯೩-೦೮; 1172). **ಹಾಲ ಹಸುಳೆ**=ಎಳೆಯ ಮಗು: ಆ ತರುಣಿಯು ವಯಸ್ಸಿನಲ್ಲಿ ದೊಡ್ಡವಳೇ ಆಗಿದ್ದರೂ ನಿರ್ದೋಷಿತ್ವದಲ್ಲಿ ಯಥಾರ್ಥವಾಗಿಯೂ ಹಾಲ ಹಸುಳೆಯಾಗಿದ್ದಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲ (ಕವಿಕ. ೩೨); ತನ್ನ ಭವಿತವ್ಯದ ಬಗ್ಗೆ ಏನೇನೂ ಅರಿಯದ ಹಾಲ ಹಸುಳೆ ಹಿಂದುಮುಂದಿನ ಯೋಚನೆಗೆ ಅವಕಾಶವಿಲ್ಲದೆ ಹಸೆಯನ್ನೇರುತ್ತಾಳೆ (ಅಲ್ಲಿ. ೯೨). **ಹಾಲ ಹೂರಣಗಡುಬು**=ಹಾಲಿನಲ್ಲಿ ನೆನೆಸಿ, ಸಿದ್ಧಮಾಡುವ ಒಂದು ಬಗೆಯ ಹೂರಣಗಡುಬು : ತಜುಪಿನೆಮ್ಮೆಯ ಹಾಲ ನಾಲ್ಕೊಂದೆನಿಸಿ ಕಾಸಿ ನೆಟಿ ಸಣ್ಣನಾದಕ್ಕಿಹಿಟ್ಟ ನಿನಿಸಂ ಹೊಯ್ದು . . . ಕರ್ಪುರಂ ಮೊದಲಾದ ನಜುಗಂಪ ಪೊರೆಯೊತ್ತಿ ಹಾಲ [ಹಾಂ.ಬು] ಹೂರಣಗಡುಬುವೆಸರಾಂತು ಸವಿವಡೆದುದು (ಸೂಶಾ. ೧-೩೮). **ಹಾಲಿಗೆ ಸಕ್ಕರೆ ಬೆರಸು**=ಒಂದಕ್ಕೊಂದು ಪೂರಕವಾಗುವಂತೆ ಚೆನ್ನುಮಾಡು—ಸೊಗಸುಗೊಳಿಸು; ಈ ಎರಡು ಸಂಸಾರಗಳ ವಿವಾಹ ಬಂಧನ ಹಾಲಿಗೆ ಸಕ್ಕರೆ ಬೆರಸಿದಂತಾಗಿದೆ (ರೂ). **ಹಾಲಿಗೆ ಹುಳಿ ಹಿಂಡು**= ಕೆಡಿಸು; ಕೆಟ್ಟುದನ್ನು ಮಾಡು; ಹಾಳುಮಾಡು. **ಹಾಲಿನೊಡೆ**= ಹಾಲಿನಲ್ಲಿ ಬೇಯಿಸಿ ಮಾಡುವ ಒಂದು ಬಗೆಯ ವಡೆ : ಶಿಳದುಪ್ಪದಿಂದ ಬೆಂದೊಡೆಯನೆಮ್ಮೆಯ ಹಾಲಿನೊಳಗೆ ಬೇಯಿಸೆ ಹಾಲಿನೊಡೆಯಾಯ್ತು (ಸೂಶಾ. ೧-೭೦). **ಹಾಲು ಕುಡಿದ ಹಾಗೆ ಆಗು**= ತೃಪ್ತಿಯಾಗು ; ತಣಿವನ್ನು ಹೊಂದು : ಈ ಸಂತೋಷದ ಸಂಗತಿಯನ್ನು ಕೇಳಿ ಹಾಲು ಕುಡಿದ ಹಾಗೆ ಆಯಿತು (ರೂ). **ಹಾಲುಕ್ಕಿಸು**=ಹೊಸ ಮನೆಯನ್ನು ಪ್ರವೇಶ ಮಾಡುವಾಗ (ಸಮೃದ್ಧಿಯ ಸಂಕೇತವಾಗಿ) ಹಾಲನ್ನು ಉಕ್ಕಿಸು : ಹೊಸಮನೆಗೆ ಹೋಗಿ ಹಾಲುಕ್ಕಿಸಿ ಬರಲು ಇಂದು ಒಳ್ಳೆಯ ಮುಹೂರ್ತವಿದೆ (ರೂ). **ಹಾಲುಜೇನು, ಹಾಲ್ಜೇನು**=ಜೇನು ಬೆರಸಿದ ಹಾಲು; ಜೇಂಬಾಲು : ರಸರಸವು ಹಾಲುಜೇನು (ಹೃದಸ. ೬೩-೨); ತನ್ನ ಒರಟುತುಟಿಗಳನ್ನು ಅವಳ ಹಾಲುಜೇನಿನಂತಹ ತುಟಿಗಳಿಗೆ ತಗುಲಿಸಿದ (ಹಾಡುಹು. ೩); ನಿನ್ನ ಬಾಯಲ್ಲಿ ಹಾಲ್ಜೇನು ಸುರಿಯಲಿ (ಶಾಂತಲಾ. ೬೪); ಹಾಲ್ಜೇನನ್ನೇ ತನ್ನ ಮೈಯಲ್ಲಿ ತುಂಬಿಟ್ಟುಕೊಂಡು ಬೆಳೆದಳು ಅವಳು (ಹೊಸಕ್ಕೆ. ೩). **ಹಾಲುತುಪ್ಪ**=ಸತ್ತವರ ಸಮಾಧಿಗೆ ಮೂರನೆಯ ದಿನ ಮಾಡುವ ಒಂದು ವಿಧಿ. **ಹಾಲು ತುಪ್ಪ ಅನ್ನು**=ಒಳ್ಳೆಯದಾಗಲೆಂದು ಹೇಳು ; ಶುಭವನ್ನು ಹಾರೈಸು : ಥೀ, ಹುಚ್ಚ ! ಹಾಲು ತುಪ್ಪ ಅನ್ನು (ದಾಕೂಟ. ೦೦೦). **ಹಾಲು ತುಪ್ಪದಲ್ಲಿ ಕೈತೊಳೆ**=ಸುಖ, ಸಮೃದ್ಧಿಯ ಜೀವನವನ್ನು ನಡೆಸು : ನನ್ನಗಳು ಹಾಲು ತುಪ್ಪದಲ್ಲಿ ಕೈ ತೊಳೀತಾಳೆ (ಪಕರಾ. II, ೧೧೬೦). **ಹಾಲು ತುಪ್ಪ ಬಿಡು**=ಸತ್ತವರ ಸಮಾಧಿಗೆ ಮೂರನೆಯ ದಿವಸ ಹಾಲು ಮತ್ತು ತುಪ್ಪವನ್ನು ಹಾಕು : ಸತ್ತ ದಿನ ದುಃಖದಲ್ಲಿ ಭಾಗಿಗಳಾಗಲು ಬಾರದಿದ್ದವರು . . . ಮೂರನೇ ದಿನ ಹಾಲೂ ತುಪ್ಪ ಬಿಡುವ ಹೊತ್ತಿಗೆ ಎಷ್ಟು ಕೆಲಸವಿದ್ದರೂ ಬಿಟ್ಟು ಬರುತ್ತಿದ್ದರು (ಹುಟ್ಟಿಹ. ೭೬). **ಹಾಲು ಬಿಡಿಸು**=ಶಿಶುವಿಗೆ ಸ್ತನ್ಯ ಪಾನದ ಅಭ್ಯಾಸವನ್ನು ಬಿಡಿಸು : ಹಾಲು ಬಿಡಿಸುವ ಹೊತ್ತಿಗೆ ಮಕ್ಕಳಿಗೆ ಬಹಳ ತೊಂದರೆಯಾಗುತ್ತದೆ (ರೂ).

[ದೇ.೩ ತಮಿ. ಪಾಲ, ಕೊಡ. ಕೋಲಾ. ಗದಬ. ಗೊಂಡಿ. ಪಾಲ್; ತುಳು. ಪೇರ್ ; ತೆಲು. ಪಾಲು, ಪಾಡಿ ; ಕುಇ. ಪಾಲು, ಪಾಡು; ಕುವಿ. ಪಾಲು ; ಬ್ರಾಹುಈ. ಪಾಲ್ಹ್]

**ಪಾಲ್₂**, ಪಾಲು₂ (ನಾ). ೧. ಹಂಚಿದ ಭಾಗ ; ಹಿಸ್ಸೆ : ಮಿಂದು ಪೂಜ್ಯರ್ಗೆ ಮುಂ ಪಾಲಂ ನೀಡದೇನನುಮುಣ್ಣನುಂ ಅಧರ್ಮದಿಂ ಪಾಲ್ಗೆ ಗೋವಂಬೊಲ್ ಗೋವಂ ಕರೆಯಂ ದಿಟಂ (ಶಾಚಂದ. ೨-೦೩).

**ಪಾಲು₁** : ೧. ಅತಿಬಳನ ನಿಮಗೀವೆನಾತನ ಗತಿಯು ಪರಿ ವಿಪರೀತ ಕಾನಾ ಸುತನ ನಿಲಿಸಲಿಕಾಟನೀವೆನು ನಿಮ್ಮ ಪಾಲಿಗೆಯು (ಸಂಕಥ. ೨೩-೩೬); ಶ್ರೀಹರಿಹರದೇವರ ಅವಸರಸತ್ರಕ್ಕೆ ಸಮರ್ಪ್ಪಿಸಿದ್ದ ಎರಡು ಪಾಲು (ಇಶಿ. IV, ೩೬೬-೯ ; 1580) ; ಧನವನೊದವಿಸುವುದೊಕ್ಕಲಿಗ್ಗೆದು ಪಾಲರಸಿಗೊಂದು ಪಾಲೀಕ್ರಮದೊಳು (ಕಂಕೃ. ೬-೧೦) ; ತಂನ ಪಾಲಿಗೆ ಬಂದ ಭೂಮಿಯ ವಳಗೆ ಕೊಟದು (ಎಕ. VII, ಶಿಕಮೊ. ೨೯-೨೦ ; 1712); ಪಾಲಿಗೆ ಬಂದದ್ದು ಪಂಚಾಮೃತ (ಗಾದೆ). ೨. ಬಣ ; ಪಂಗಡ : 'ಪಾಲುಮುಖಂಡ' ನೋ.

**ಪಾಲಾಗು**—೧. ಭಾಗಕ್ಕೆ ಬರು ; ಪಾಲಿಗೆ ಸೇರು : ಪಲಬರ ಪಾಲಾದರಮಾ ಕಲಹಂಸೋತ್ತುಂಗಗಮನಭಾಮಿನಿಯರನುಜ್ಜ್ವಲಗುಣ ರಾಜಿ ಪತಿವ್ರತಕಲಿತಾತುಳಕಾಂತ ಗೌರಿಗೆಣೆಯೆನಲಹುದೇ (ಹಮ್ಮಿರ. ೨-೩೩); ಹಣ್ಣು ಹಂಪಲಗಳು . . . ಪುಣ್ಯವಂತರ ಪಾಲಾಗುವವು (ಕಟ್ಟಿಪೊ. ೯೩) ; ನಮ್ಮ ರಹಸ್ಯವು ಪ್ರತಿಕಕ್ಷಿಗಳ ಪಾಲಾಯಿತು (ರಾಶಿ. ೧೫). ೨. (ಆಸ್ತಿಯಲ್ಲಿ) ತನ್ನ ಭಾಗವನ್ನು ತೆಗೆದುಕೊಂಡು ಹೋಗು ; ಹಿಸ್ಸೆಯಾಗು ; ಭಾಗವಾಗು : ಒಡೆದು ಪಾಲಾಗಿದ್ದ ಕಾನೂರಿನ ಆಸ್ತಿ ಮತ್ತೆ ಒಂದಾಯಿತು (ಕಾಹೆಂಡ. ೬೬೦). **ಪಾಲು ಮಾಡು**—೧. ವಿಭಾಗಿಸು ; ಭಾಗಮಾಡು : ತಿರುಗಿ ಹಣ್ಣುಗಳನ್ನು ಪಾಲು ಮಾಡಿ . . . ತಿನ್ನಿಸಿಯೇ ಬಿಟ್ಟಳು (ಮರಳು. ೩೦). ೨. ಹಿಸ್ಸೆಮಾಡು : ಚರಸ್ವತ್ತುಗಳನ್ನು ಪಾಲು ಮಾಡುವಾಗಲೂ ಕೂಡ ಅನೇಕ ಉಪಾಯಗಳಿಂದ ತಮಗೆ ಹೆಚ್ಚು ಪಾಲು ಬರುವಂತೆ ಮಾಡಿಕೊಂಡರು (ಕಾಹೆಂಡ. ೩೯೯).

[ದೇ.॥ ತಮಿ. ಮಲ. ತುಳು. ಕೊಡ. ಪಾಲ್ ; ತೆಲು. ಪಾಲು ; ಪರ್ಜಿ. ಪೇಲ]

**ಪಾಲು₂** 'ಪಾಳ್ಕ₂' ನೋ.

**ಪಾಲು₃**, ಪಾಳ್ಕ, ಹಾಲು₁ (ನಾ). ೧. ನೊಸಲು; ಹಣೆ : ಫಕಾರಕ್ಕೆ–ಪಕಾರಂ–ಕಫ–ಕಪ . . . ಫಾಲ—ಪಾಲ (ಶಮದ. ೨೩೭ ಪ್ರಯೋ). **ಪಾಳ₂** : ೧. "ಪಾಲ (ಪಾಳ)—ಫಾಲ=ಹಣೆ" (ಕರ್ಣಕೊ. ೨೬). ೨. ನೇಗಿಲಿನ ಗುಳ : "ಪಾಳಃ, ಕುಶೀರಃ—ಈ ೨ ಕುಟು (ಹಲಾಯು. ೯೯-೯೨೦) ; ಫಾಲ, ಪಾಳ ; ಫಣ, ಪಣ (ಶಬ್ದಮ. ೦೯೨ ಪ್ರಯೋ). **ಹಾಲು₁** : ೨. ಬೆಳಗಪ್ಪ ಜಾವದಲ್ಲಿ ಕೂರಿಗೆಯ ಹಾಲದ ಮೊಳಗಿಯಾಡುವುದು (ಅಟ್ಟಿಕು. ೯-೨೬ ಪ).  [< ಸಂ. ಫಾಲ]

**ಪಾಲು₄** (ನಾ). ೧. ರಕ್ಷಿಸುವವನು ; ಕಾಪಾಡುವವನು : ಕಾಯಬೇಕೆನ್ನ ಗೋಪಾಲ ಒಂದುಪಾಯವನರಿಯೆನು ಭಕುತರ ಪಾಲ (ಪುರಂದ. ೨-೦೩೯ ಕೀರ್ತ). ೨. ಒಬ್ಬಾತನ ಹೆಸರು : ಬನ್ನೂರ್ಬಾವರಿಯ ಮಗ ಪಾಲ ಒಲ್ಲದ ತುಱುಗೊಳೆ ಕಾದಿ ತುಱುವನಿಕ್ಕಿಸಿ ಸ್ವರ್ಗ್ಗಯಾದ (ಎಕ. X, ಮುಳಬಾ. ೯೯-೬ ; ಸು. 970). ೩. ಪೀಕದಾನಿ ; ಪಡಿಗ. ೪. ರಕ್ಷಣೆ : ಕಾಪಾಡುವುದು. [ಸಂ.]

**ಪಾಲಂಕಿ₁** 'ಪಲ್ಲಂಗ' ನೋ.

**ಪಾಲಂಕಿ₂** (ನಾ). ಒಂದು ಬಗೆಯ ಸುಗಂಧದ್ರವ್ಯ; ಕುಂದುರುಷ್ಕ.
[ಸಂ. ಪಾಲಂಕೀ]

**ಪಾಲಕ** (ನಾ). ೧. ಕಾಪಾಡುವ ವ್ಯಕ್ತಿ ; ರಕ್ಷಕ ; ಪೋಷಕ : "ಅಮ್ಮಿತಾ=ಪಾಲಕಂ" (ಕಾಶಬ್ದ. ೯೦) ; ಆ ದಿನ ಶಾಲೆಗೆ ಇಬ್ಬರು ಪಾಲಕರು ಹಿರಿಯ ಗುರುಗಳನ್ನು ಕಾಣಲು ಬಂದಿದ್ದರು (ಕಶಾ. ೯-೨೯) ; ಅವಳ ದೊಡ್ಡಮ್ಮನೇನೊ ಒಳ್ಳೆಯವಳಾಗಿದ್ದಳು. ಆದರೇನು ಅವಳು ಎಷ್ಟಾದರೂ ಪಾಲಕಳೇ ಹೊರತು ತಾಯಿಯಲ್ಲ (ಕೀಶಪಾ. ೦೯೩). ೨. ಆಳುವವನು; ರಾಜ. ೩. ರಕ್ಷಿಸುವುದು; ರಕ್ಷಣೆ. ೪. ಕುದುರೆ. ೫. ಅಶ್ವರಕ್ಷಕ. [ಸಂ.]

**ಪಾಲಕಾಪ್ಯ** (ನಾ). ೧. ಕರೇಣುಮಹರ್ಷಿಯ ಮಗ ; ಆನೆ, ಕುದುರೆ ಮುಂತಾದುವುಗಳ ಲಕ್ಷಣಗಳನ್ನು ತಿಳಿಸುವ ಗ್ರಂಥವನ್ನು ಬರೆದ ಒಬ್ಬ ಮುನಿ. ೨. ಈತನು ಬರೆದ ಗಜಾಶ್ವಾದಿ ಲಕ್ಷಣಗಳನ್ನೊಳಗೊಂಡ ಶಾಸ್ತ್ರಗ್ರಂಥ : 'ಇರ್ವರುಮನೋದಲಿಟ್ಟೊಡೇಟಿಯುವರುಮದೊಳಗೆ ವ್ಯಾಕರಣಂ . . . ಪಾಲಕಾಪ್ಯಂ ಚಾಣಕ್ಯಂ ವೈದ್ಯಂ ಮೊದಲಾಗೊಡೆಯ ಶಾಸ್ತ್ರಂಗಳನೆಲ್ಲಮನಿರ್ವರುಂ ಕಲ್ತು' (ವಡ್ಡಾರಾ. ೧೨೮-೨೨).
[ಸಂ.]

**ಪಾಲಕಿ** 'ಪಲ್ಲಂಗ' ನೋ.

**ಪ್ಲಾಲಕೆಟ್** 'ಪಾಲ್ಕೆಟ್' ನೋ.

**ಪಾಲಕ್ಕಿ** (ನಾ). ಒಂದು ಬಗೆಯ ತರಕಾರಿ ಸೊಪ್ಪು : ನಮ್ಮ ಮನೆಯ ಹಿತ್ತಲಿನಲ್ಲಿ ಪಾಲಕ್ಕಿಯ ಸೊಪ್ಪು ಹೇರಳವಾಗಿ ಬೆಳೆದಿದೆ (ರೂಢಿ).
[< ಸಂ. ಪಾಲಕ್ಯಾ. / ತೆಲು. ಪಾಲಾಕು. / ಹಿಂ. ಪಾಲಕ್]

**ಪಾಲಕ್ಯ** (ನಾ). ಒಂದು ಬಗೆಯ ತರಕಾರಿಸೊಪ್ಪು ; ಹರಿವೆ : "ಪಾಲಕ್ಯಮೆಂಬುದು ಹಱಿವೆ (ಹಲಾಯು. ೨೭-೧೧) ; ಪಾಲಿಕ್ಯವು (ಪಾನಕನ ಪಲ್ಲೆ) ಗುರು ಮತ್ತು ಸಾರಕವಿದೆ (ಅಮ್ಮಂಗ. ೧೩೬).
[ಸಂ. ಪಾಲಕ್ಯಾ]

**ಪಾಲಕ್ಯೆ** (ನಾ). = ಪಾಲಿಕ್ಯ. [ಸಂ. ಪಾಲಕ್ಯಾ]

**ಪಾಲಖಿ** 'ಪಲ್ಲಂಗ' ನೋ.

**ಪಾಲಘ್ನ** (ನಾ). ಅಣಬೆ ; ನಾಯಿಕೊಡೆ : "ಛತ್ರಾ, ಅತಿಛತ್ರಃ, ಪಾಲಘ್ನಃ — ೩ ಕೊಡೆಹುಲ್ಲಿನ ಹೆಸರುಗಳು. ಛತ್ರಾಕಾರವಾದ ಹುಲ್ಲು, ಛತ್ರಾತಿಛತ್ರವೆಂದು ಏಕಪದವಾಗಿ ಕೆಲವರು ಹೇಳಿದರು" (ಸಿದ್ಧಾಂಕಿ. ೧೫೧).
[ಸಂ.]

**ಪಾಲಡಕೆ**, ಹಾಲಡಕೆ (ನಾ). ಹಸಿಯ ಅಡಕೆ : ಮದನವೇದನೆಯ ವಿನ್ನಾಣಂಗಳಪ್ಪ ಪಸುರೆಸೆವ ಪಾಲಡ[ಪಾಠಾಂ. ಡ]ಕೆಯ ಗೊಂಚಲುಮಂ . . . ಕತ್ತುರಿಯ ಕಂಪಿನಿಂ ಸೊಂಪಂ ತಳೆದ ಮಲಯಜವಿಲೇಪನಮುಮನರಸಂಗೆ ತೋಱಿ (ಕಾದಂಬ. ೧೮೮). **ಹಾಲಡಕೆ** : ಹಾಲಡಕೆ ಬಹಳ ಮತ್ತು ಬರುವಂತೆ ಮಾಡುತ್ತದೆ (ರೂಢಿ). [ಪಾಲ್₁ + ಅಡಕೆ₁]

**ಪಾಲನ** (ಗು). ೧. ನಡೆಸುವ ; ಪಾಲಿಸುವ. ೨. ಕಾಪಾಡುವ ; ರಕ್ಷಿಸುವ. (ನಾ). ೩. ನಡೆಸುವುದು ; ಪಾಲಿಸುವುದು. ೪. ಕಾಪಾಡುವುದು ; ರಕ್ಷಣೆ. ೫. ಆಗ ತಾನೇ ಕರು ಹಾಕಿದ ಹಸುವಿನ ಹಾಲು. [ಸಂ.]

**ಪಾಲನೆ** (ನಾ). ೧. ಕಾಪಾಡುವುದು ; ರಕ್ಷಿಸುವುದು ; ರಕ್ಷಣೆ : ನಿರ್ವ್ಯಸನದೊಳು ಪಾಲನೆಯೊಳು ಧನದೊಳು . . . ಭೋಗಮುಕ್ತ್ಯ (ಮಂಗರಾ. ೧೫೦-೫೦) ; ಪಾಲನೆಯಿಲ್ಲದಿದ್ದರೆ ಲಾಲನೆಗೆ ಎಡೆಮೆಯೆ ? (ಗಾದೆ); ಮಕ್ಕಳ ಪಾಲನೆಯ ವಿಷಯದಲ್ಲಿ ತಾಯಿಯಾದವಳು ಹೆಚ್ಚು ಗಮನ ಕೊಡಬೇಕು (ರೂಢಿ). ೨. ಸಾಕುವುದು : ಈಗಿನ ಕಾಲದಲ್ಲಿ ಸೀಮೆದನಗಳನ್ನು ಪಾಲನೆ ಮಾಡುವುದು ತುಂಬಾ ದುಬಾರಿ (ರೂಢಿ). ೩. ನಡೆಸುವುದು ; ಪಾಲಿಸುವುದು : ಯಾವುದೇ ಕೆಲಸದಲ್ಲಿ ನಿಯಮದ ಪಾಲನೆ ತುಂಬಾ ಮುಖ್ಯ (ರೂಢಿ). [ಸಂ. ಪಾಲನ]

**ಪಾಲಶರ್ಮ** (ನಾ). ಒಬ್ಬಾತನ ಹೆಸರು : ಕಾಶ್ಯ(ಶ್ಯ)ಪಗೋತ್ರ ಪಾಲಶರ್ಮ್ಮಣಚತುರಿಅಂಶಃ (ಇಅ. VII, ೧೮೮-೯೦ ; 668).
[ಪಾಲ್₃+ಶರ್ಮ]

**ಪಾಲಾ** (ನಾ). ಜೊತೆ ; ಸಂಗ ; ಸಹವಾಸ : ನೀನೂ ಅವನನ್ನು ಏರಿಗಟ್ಟಿಕೊಂಡು ಬರುವಿಯಾ ? ನಿನ್ನ ಪಾಲಾನೂ ಫೂ (ಸರಾಶ. ೮೯).

**ಪಾಲಾ ಫೂ** = ಜೊತೆ ಬಿಡುವುದು ; ಸಂಗ ಬಿಡುವುದು ; ರೂ : ರಾಮಾನೂ 'ಪಾಲಾ ಫೂ' ಎಂದನು (ಸರಾಶ. ೮೯). ; ನಿನ್ನ 'ಪಾಲಾ

ಫೂ !!' ಎಂದು ಸಿಟಕೋಡು ಅತ್ತ ದೂರ ಹೋಗಿ ಒಂದು ಕಟಿಯ ಕಡೆಗೆ ಮೋರೆ ಮಾಡಿ ನಿಂತು ಅಳಹತ್ತಿದಳು (ರಾಸಹು. ೧೪). **ಪಾಲಾ ಫೂ ಬಿಡು** – ಜೊತೆ ಬಿಡು ; ಠೂ ಬಿಡಂ ; ಸಂಗ ಬಿಡಂ : ಮೊದಲಿನಿಂದಲೂ ಇಬ್ಬರೂ ಕೂಡೇ ಇರುತ್ತಿದ್ದೆವಲ್ಲ, ನೀನೇ ನನ್ನ ಪಾಲಾ ಫೂ ಬಿಟ್ಟೆ (ಕಿಚಿಡಿ. ೨೩). **ಪಾಲಾ ಬಿಡು** = ಪಾಲಾಫೂ ಬಿಡಂ : ಸಾಯಂಕಾಲವು ಗೆಳೆಯರು ಪಾಲಾ ಬಿಟ್ಟಿದ್ದರಿಂದ ಒಬ್ಬಂಟಿಗನಾಗಿ ಕೂತಿರುವ ಹುಡುಗನಂತೆ . . . ತೋರುತ್ತಿತ್ತು (ಕಿಡಾಕ. ೯೩) ; ನೀನು ರಂಗನ ಪಾಲಾ ಬಿಡು, ಅವನ ಸಂಗವನ್ನು ಮಾಡಬೇಡ (ರಂಗರೋ. ೭೪). **ಪಾಲಾ ಹಿಡಿ** = ಜೊತೆ ಸೇರು ; ಸಂಗ ಕಟ್ಟು : ತಾನಾಗಿ ಪಾಲಾ ಬಿಟ್ಟು ತಾನಾಗಿ ಪಾಲಾ ಹಿಡಿದಾನೆಂದು ಬಸವಂತನ ಕನಸುಮನಸಿನಲ್ಲಿಯೂ ಅನಿಸಿದ್ದಿಲ್ಲ(ಕಿಡಾಕ.೯೮).

[ ← ಮರಾ. ಪಾಲವ = ಸಂಬಂಧ ]

**ಪಾಲಾಶ** (ಗು). ೧. ಮುತ್ತುಗದ ಮರಕ್ಕೆ ಸಂಬಂಧಿಸಿದ ; ಪಲಾಶವೃಕ್ಷದ. (ನಾ). ೨. ಮುತ್ತುಗದ ಮರ ; ಪಲಾಶವೃಕ್ಷ : ನೆಂದುವ ಕಿಚ್ಚುಮನಸ್ಸುಮಯುಂಡೋಚುವ ಚಂದ್ರಸೂರ್ಯರೆಂಬರ ನಂಬದೆ ಸುಂದರವಿಧಿ ಕೆಡೆಗೆಗಂ ತಂದಿಟ್ಟವೊಲೆಯ್ದೆ ತೋಜಿತಾ ಪಾಲಾಶಂ (ಮಲ್ಲಿಕಾ. ೩-೩೭೬); ಪಾಲಾಶ ಕಲಧೌತಪುಷ್ಪಂಗಳುಂ ತುಳಸಿ ಮಾಲೂರ ಪತ್ರೆಯಿಾ ನಾಲ್ಕು ಲಿಂಗಕ್ಕೆ ಪ್ರಕ್ಷಾಲಿಸಿ ಪುನಃಪುನಃ ಧರಿಸಬೇಕಾದುದುಂ ನಿರ್ಮಾಲ್ಯವಲ್ಲ ಸತತಂ (ಗುರುಚಾ. ೬-೧೭). ೩. ಮುತ್ತುಗದ ಮರದಿಂದ ಮಾಡಿದುದು. ೪. ಹಸುರುಬಣ್ಣ ; ಮರಕತವರ್ಣ : "ಶ್ಯಾಮಂ, ಶ್ಯಾಮಳಂ, ರಾಮಂ, ಪಾಲಾಶಂ, ಹರಿತಂ, ಹರಿತ್—ಈ ೬ ಪ(ಹ)ಸುರ್" (ಹಲಾಯು. ೧೨೦-೪೯). [ ಸಂ. ]

**ಪಾಲಾಶದಂಡ** (ನಾ). ಮುತ್ತುಗದ ಕೋಲು : ಕೈಗಳವಡುವ ತತ್ ಪಾಲಾಶದಂಡವೆ ವಿಷ್ಣುಕಂಕಾಳ ಇಡುವ ಮೇಧಾವಿಯ ಭಸಿತವು (ಅಸಪು. ೩-೫೪). [ ಪಾಲಾಶ + ದಂಡ ]

**ಪಾಲಾಸ** (ನಾ). ಮುತ್ತುಗದ ಮರ ; ಪಲಾಶವೃಕ್ಷ : ಪಾಲಾಸ ಬದರಿಕ ಮಾಮರ ತಳಿರ್ತೆಗ್ಗೆ ಗೋಳಿಯಾಲವು (ದೇವಾಂಪು. ೬-೨೬೮).

[ < ಪ್ರಾ. ಪಾಲಾಸ./ಸಂ. ಪಾಲಾಶ ]

**ಪಾಲಿ**$_1$ (ನಾ). ಕಾಪಾಡುವವನು ; ರಕ್ಷಿಸುವವನು : ಸೂರ್ಯಲೋಚನ ಶರಣ ಪಾಲಿ ನಗಧರ್ಮ ಸೃಷ್ಟಿಸ್ಥಿತಿಪ್ರಹರಣವಿನೋದಿತಂ . . . ವಿರೂಪಾಕ್ಷ ನನವರತ ನಿಮ್ಮ ಸಲಹುಗೆಯೆನುತೆ ಪರಕೆಯಿತ್ತುಂ (ರಾಶಿಕ. ೩-೧೨).

[ ಸಂ. ಪಾಲಿನ್ ]

**ಪಾಳಿ**$_2$, **ಪಾಳಿ** (ನಾ). ೧. ಸಾಲು ; ಪಂಕ್ತಿ : ಬೆಳದಿಂಗಳಿನಲ್ಲಿ ಎಲ್ಲವೂ ಸ್ಪಷ್ಟವಾಗಿ ಕಾಣದಿದ್ದರೂ ಸುಗಂಧದಿಂದ ಬಕುಳಪುಷ್ಪವೆಲ್ಲಿದೆ, ಸಿಂಧುವಾರದ ಪಾಲಿ ಎಲ್ಲಿದೆ, ಸಂಪಿಗೆ ಎಲ್ಲಿದೆಯೆಂಬುವನ್ನರಿಯಬಹುದಾಗಿತ್ತು (ರಾಡಿಶಿ. ೩೭) ; ರಂಗಾದಲ್ಲೀ ಪಾಲೀ ತಿರುಗೋನೇ ಸೀಬೀಯ ರಂಗಾ ನಮ್ಮೇಲೇ ದಯಮಾಗೋ (ಹುಚ್ಚಿಹ. ೩೭). ೨. ಗುಂಪು ; ಸಮೂಹ. ೩. ಭಿತ್ತಿ ; ಗೋಡೆ : "(ಎರಡು ಭಾಗಗಳನ್ನು ಪ್ರತ್ಯೇಕಿಸುವ) ತಡಿಕೆ, ಪಾಲಿ; ಅಂತರಪಟ " (Dissepiment. ಇಂಕಶ). ೪. ಸೇತುವೆ: ಸಂಕ: "ಆಳಿ ಪಾಲಿ[ ಪಾಠಾಂ. ೪ ]ಯೆನಲೇರಿಯಕ್ಕುಂ" (ಶುಂಗರಾ. ೧೨೩-೧೪). ೫. ಸಂತ್ಸಲೂ ಬಿಗಿಯುವುದಂ,—ಕಟ್ಟುವುದಂ. ೬. ಆಸ್ಪದ ; ಅವಕಾಶ. ೭. ಜಾಗ ; ಪ್ರದೇಶ. ೮. ದಿಕ್ಕು. ೯. ಪಾಲು ; ಭಾಗ. ೧೦. ಕತ್ತಿಯ ಹಿಡಿಕೆ : "ಪಾಲಿ[ ಪಾಠಾಂ. ೪ ] ಪರಿಜು ಪೆಸಲು ಮೋಹಳಮಕ್ಕು " (ಶುಂಗರಾ. ೬೪-೩೭). ೧೧. ಆದಿ ; ಪೂರ್ವ. ೧೨. ಕಿವಿ. ೧೩. ಹಾಲೆ. ೧೪. ನಿತಂಬ. ೧೫. ದೇಹ ; ಶರೀರ. ೧೬. ಗುರುತು ; ಚಿಹ್ನೆ. ೧೭. ಬಾವುಟ. ೧೮. ದಾರ. ೧೯. ಖಡ್ಗ. ೨೦. ಬಾಣ ; ಸರಳು. ೨೧. ಬೆಂಕಿ. ೨೨. ವೇದವನ್ನು ಹೇಳುವ ಒಂದು ರೀತಿ ; ಸಂಹಿತಾಪಾಠ. ೨೩. ನಾಚಿಕೆ ; ಲಜ್ಜೆ. ೨೪. ತೇವ ; ಹಸಿ. ೨೫. ಹೇನಂ. "ಕ್ಷೇತ್ರದೊಳಾದಿಯೋಳ್ ಶರದೊಳಾರ್ದ್ರವದೊ[illegible] ಸ್ಮೃತಿಭೇದ ಭಿತ್ತಿಯೋಳ್ ಶ್ರೋತ್ರದೊಳಗ್ನಿಯೋಳ್ ಪರಜನೋಳ್ ಪರಮೇಶನೊಳುಂ ವಿಬಂಧದೋಳ್ ಗಾತ್ರದೊಳಾಸಿಯೋಳ್ ಧ್ವಜದೊಳಾಸ್ಪದದೋಳ್ ಲತೆಯೋಳ್ ವಿಭಾಗದೋಳ್ ಸೂತ್ರದೊಳ್ಪಿದೆ ಲಜ್ಜೆಯೋಳ್ ಸಂಚಯದೋಳ್ ಸಲೆ ಪಾಲಿ [ ಪಾಠಾಂ. ೪ ] ವಾಚಕಂ" (ನಾನಾರ.೩೨). **ಪಾಳ್ಯ**: ೧. ಸೂಳೆ ನಿಂಬೆಗೆ ಕರುಣಾಳು ದೇವರ ದೇವ ಪಾಳಿಯಿಂ ಪೊಮ್ಮುಳಿಗೆಗಟಿದನೇಳುದಿವಸ (ಭೈರಸೂ. ೧, ೧೭೭). ೨. ಚಿತ್ರಾಂಬುದಪಾಳೀಜಾಳದೊಳ್ಪೊಯ್ದೆಳವೆಜೆಯುಗೆಯುಬ್ಬು (ಅನಂಪು. ೨-೩೪) : ಗರುಡರ ಗಣಂ ಕಿನ್ನರರ ಕುಲಂ ವಿದ್ಯಾಧರರ ಪಾಳಿ ಸಿದ್ಧರ ಸಮೂಹ . . . ದಿಕ್ಪಾಲಕರು ಮುಖ್ಯರಾದ ಪರಿಪರಿಯ ನಿರ್ಜರರಿರ್ದೀಶನೊಡ್ಡೋಲಗದೊಳು (ಸಿದ್ದೇಪು. ೧-೩೯) ; ಚೂಳಿಯೊಳ್ ಪೈದೋಜಿದಂ ಮಂದಮಾರುತಂ ಪಾಳಿಯಿಂ ನಡೆಸಿದಂ ಸೇನೆಯುಂ ಸೇನಾನಿ (ಶಬಪು. ೩೫-೧೨). ೪. "ಆಳೀ, ಪಾಳೀ—ಈ ೨ ಏರಿ" (ಹಲಾಯು. ೧೧೧-೫೪); ಕಳಮಕಾನನದ ಮುಂದೆ ಮುಂದೈಸಿದ ಜಾದಿಯ ಮೆಳೆಗಳ ಬಳಸಿನಿಂ ಪೊಳೆವ ಪಾಳಿಯಿಂ ಮೆಟ್ಟಿ ನಿಂದು (ಆಂಆಪ. ೫-೬೮ ವ). ೭. ಪಾಂಡುಕುಮಾರರಟವಿಯ ಪಾಳಿಯಲಿ ಪರುಠವಿಸಿದರು ಪದಯುಗಪರಿಭ್ರಮಾವ (ಕುವ್ಯಾಅ. ೪-೧); ನದಿಯಿಂ ನಂದನದಿಂ ಲತಾಪ್ರತತಿಯಿಂ ಪುಷ್ಪಾಳಿಯಿಂ ಪಾಳಿಯಿಂ . . . ತದಿಳಾಮಂಡಳವೊಪ್ಪುಗುಂ (ರಾಚಕೀ. ೨-೨೮). ೧೨. ಪಾಳಿವರ್ಜಿತ ಪತಿವಿಭೂಷ ಸದ್ವೃತ್ತದುರಿತಾಳಿವರ್ಜನ್ಯಜಂರಘಾವಾತ ಗಿರಿಜಾಲೋಲ ಪಾಲಿಸುಗೆ ರಾಮೇಶ್ವರಾ (ನವರೋ. ೫-೧). ೧೭. ಮಕರಪಾಳಿಪವು ದುರ್ಗದಹ . . . ಭಾಸುರಚರಿತ್ರಾ (ನವರೋ. ೨೫-೦೩). ೧೯. ವಿಧಿ ಮಾಯಾಪಾಶಯುತಪಾಳಿವಿಭೇದಕಲವಿತ್ರ ಭವಸಾಗರಬಹಿತ್ರ (ನವರೋ. ೨೫-೦೩). ೨೨. ಋಗ್ಯಜುಸ್ಸಾಮಾಥರ್ವಣವೇದಂಗಳು ಸ್ವರವರ್ಣಭೇದದಿಂದಂ ಮಂತ್ರಸಹಿತ ಪಾಳಿಪದಕ್ರಮಜಟಿಭೇದದಿಂದಂ ಶತಸೂತ್ರಂ ಮೊದಲಾಗೆಲ್ಲಮಂ ಯಥಾಕ್ರಮದಿಂದುಚ್ಚರಿಸಿ (ಪಡ್ಕಾರಾ. ೨೫-೨೫) ; ಲೋಲಹರಿ ಮತ್ಸ್ಯಾವತಾರದಿ ತಮನನಟಿಯಟ್ಟಿ ಬೀಳಲಪ್ಪಳಿಸಿದನು ಪಾಲದಿ ಘೋಳಿನುತ ತಮ ಬಿಳೆ ವೇದದ ಪಾಳಿಗಳು ಕ್ರಮದಿಂದ ಹರಿಯನು ಹೊಗಳುತಿದಿರಾಗಿ (ಸಂಕಶ. ೪-೨೯); ಉದಾತ್ತ ಅನುದಾತ್ತ ಸ್ವರಿತ ಪ್ರಚಯ ಪಾಳಿ ಪದ ಕ್ರಮ ಜಟೆ ಚರ್ಚೆಯೆಂಬ ಋಗ್ಯಜುಸ್ಸಾಮಾಭಿಧಾನಮುಳ್ಳ ವೇದಶಾಸ್ತ್ರಂಗಳಂ ಪಚಿಸುವೆವು (ದಶಾಪ. ೨-೦೩ ವ). ೨೩. ಪಾಜಿತು ಪಾಳಿ ಪೈದೋಜಿತು ಮದನಾಗ್ನಿ ಜಾಜಿತು ಜಾಣ್ಮೆ (ಕುರಾಸಾಂ. ೨೨-೯); ಜಾಜಿತು ಜಾಣ್ಮೆ ಬಿಂಕ ಮಜಿಗೊಂಕಿತು ಬಿನ್ನನೆಯಾಯ್ತು ಬಿನ್ನಣಂ ಪಾಜಿತು ಪಾಳಿ (ಚಕಪಿ. ೬-೨೦೯). "ಕ್ಷೇತ್ರಶರಪೂರ್ವದಿಶಹರಗಾತ್ರಾನಲ ಶ್ರುತಿ ವಿಭಾಗ ಧ್ವಜ ಲತೆ ಕಿವಿ ಬಹುಸೂತ್ರಾಯುಧಬಂಧಪ್ರಿಯ ಚಿತ್ರಾಸ್ಪದ ಭೀತಿ ಮಾನವಿಂಶತಿ ಪಾಳೀ" (ನಾನಾಕಂ. ೬೨). ೨೬. ತುದಿ ; ಅಂಚು : ಮೇಲೆ ನಿಂತರು ಮಡದೆಡೆಗೆ ನಾಲ್ದೆರಳನುಕೂಲ ಗೇಣಾಗಲುಂ ಗುಟದ ಪಾಳಿಗೆ ಋಜುಕೂಲಮಾಳವಡಲಂಗದೊಳಾಲಿಗಳರೆಮುಗುಳ್ದಿರಲು (ವರ್ಧಕ. ೦೦-೬೯). ೨೭. ಸರದಿ ; ಬಾರಿ. ಇಂದುಮಾತಿಗೆ ಐದನೆಯ ವಾರ್ಡಿನಲ್ಲಿ ಸಹಾಯ ಮಾಡುವ ಪಾಳಿ ಬಂದಿತ್ತು (ಅಕನಾ. ೧೬೦); ಅಂಬೇಯ ಭಕ್ತರು ಪಾಳಿಯಿಂದ ಆ ವೆಚ್ಚವನ್ನು ಒದಗಿಸುತ್ತಿದ್ದರು (ಚಕತ. ೨೬೬) ; ನಾಲ್ಕು ಜನ ಸಿಪಾಯಿಗಳು ದಿವಸಾಗಲೂ ಪಾಳಿಯ ಪ್ರಕಾರ ಮನೆ ಕಾಯುತ್ತಿದ್ದರು (ಹಳ್ಳಿಪಾ. ೧೬). ೨೮. ಬೀಸುವ ಕಲ್ಲಿನ ಒಂದೊಂದು ಭಾಗ,—ಹೋಳು : ಈ ಬೀಸುವ ಕಲ್ಲು ಮಾತ್ರ ಪ್ರಕೃತಿ ಪುರುಷರಂತೆ ಅಚಲವಾದುದನ್ನು ನೋಡಿ ಬಾಬೂನಿಗೆ ಅಚ್ಚರಿಯಾಯಿತು. ಆ ಕಲ್ಲು, ಆ ಗೂಟ, ಆ ಮೊರ, ಆ ಬೀಸುವ ಪಾಳಿಗಳು, ಪಾಳಿಗಳೊಳಗಿಂದ ಹೊರಟ

ಶುಭ್ರನಾಮಾಂಕಿತವಾದ ಆ ಪಿಟ್ಟು ಎಲ್ಲವೂ ಬಾಬೂನಿಗೆ ಆತ್ಮೀಯವಾಗಿದ್ದುವು (ರಕ್ತರ. ೦೯೩).

**ಪಾಳಿ ಹಚ್ಚು** = ಸಾಲಾಗಿ ನಿಂತು ಸರದಿಗಾಗಿ ಕಾಯುತ್ತಿರು : ಒಂದು ಬಚ್ಚಲಾ, ಐವತ್ತುಮಂದಿ ಪಾಳೀ ಹಚ್ಚ್ಯಾರ ಮೈ ತೊಳಕೋಳಿಕ್ಕ (ಕೃಪಿ. ೦೪) ; ನಾವು ಸಲೂನಿನಲ್ಲಿ ಪಾಳಿ ಹಚ್ಚಿ ಕುಳಿತುಕೊಳ್ಳುತ್ತೇವೆ (ದೀಕನ್ನ. ೭೦). [ಸಂ.]

**ಪಾಲಿ₃, ಪಾಳಿ₆** (ನಾ). (ಬುದ್ಧನ ಉಪದೇಶಗಳ ಮೂಲಭಾಗವನ್ನು ಹೊಂದಿರುವ) ಪ್ರಾಕೃತಭಾಷೆಗಳಲ್ಲಿ ಒಂದು ; ❡ ಈ ಭಾಷೆಯ ಹೆಸರನ್ನು ತ್ರಿಪಿಟಕಗಳ ಟೀಕೆಗಳಲ್ಲಿ ಮಾತ್ರ ಬಳಸಲಾಗಿದೆ : ಪಾಲಿ ಸಾಹಿತ್ಯದ ಸಾಲಿನಲ್ಲಿ ಪ್ರಾಚೀನತೆಯ ಅಗ್ರಸ್ಥಾನವು 'ಬುದ್ಧವಚನ'ಕ್ಕೇ ಮೀಸಲಾಗಿರುವುದು (ಬುದ್ಧಕ. ೩ ಪ್ರವೇಶ). **ಪಾಳಿ₆** : ಈ ಬಹುವಚನ ಪ್ರತ್ಯಯ ಪ್ರಾಕೃತ—ಪಾಳಿಭಾಷೆಗಳಲ್ಲಿ . . . ಸೇರಿ ಹೋಗಿದೆ (ದ್ರಾ.ಅಅ. ೯೩೨).

**ಪಾಲಿಂಧಿ** (ನಾ). ಒಂದು ಬಗೆಯ ಸಸ್ಯ ; ಕರಿಯ ತಿಗಡೆ. [ಸಂ. ಪಾಲಿಂಧೀ]

**ಪಾಲಿಕೆ₁** 'ಪಲ್ಲಂಗ' ನೋ.

**ಪಾಲಿಕೆ₂** (ನಾ). ೧. ಕಾಪಾಡುವವಳು ; ಕಾಯುವವಳು : ಪೂರ್ಣ್ಯಾವಾ ಪುಳಕಂಗಳೆ ಸಸಿಗಳಾಗೆ ರತಿಸುಖಮೆಂಬ ಫಲವುಂ ವಿಲಾಸಿಯುವಜನಕಿತ್ತು ಮನ್ಮಥನ ಕಳಮವನಮೋಯೆನಲ್ ಕಳಮವನದೊಳ್ ಕಳಮವನಪಾಲಿಕೆಯರೊಪ್ಪುಗುಂ (ಕರ್ನಾ. ೬–೧೭). ೨. ಮದುವೆಯಲ್ಲಿ ಬ್ರಹ್ಮ, ಇಂದ್ರ, ಯಮ, ವರುಣ ಮತ್ತು ಸೋಮದೇವತೆಗಳಿಗೆ ಅರ್ಪಿಸಲು ದ್ವಿದಳ ಧಾನ್ಯಗಳನ್ನು ತುಂಬಿಡುವ ಐದು ಮಣ್ಣಿನ ಪಾತ್ರೆಗಳು : (೬). ೩. ಮಣ್ಣಿನ ಪಾತ್ರೆ : ಪ್ರತ್ಯೇಕಂ—ಬೇರೆಬೇರೆ, ಪಾಲಿಕಾದೀನಾಂ-ಬಯಸಿಕೆ, ಶ್ರಾವೆ, ಮೊದಲಾದವರ ಸಂಖ್ಯೆ, ದಶ-ಹತ್ತು (ಪ್ರತಿಪಾ. ೪–೦೭). [ಸಂ. ಪಾಲಿಕಾ]

**ಪಾಲಿಡಿ** (ಕ್ರಿ). ಹಾಲು ತುಂಬು : ಪೂಗೊಯ್ದು ಸರಸಿಜಾನನೆ ಪೋಗಲ್ ನೆರೆ ಮುಗಿದುದಿಲ್ಲ ಬಂಧನಕೋಶಂ ಕೈಗಳಿನುಡಿದೀ ತಳಿರ್ಗಳ ಪೂಗಂ ಪಾಲಿಡಿದು ನಾಡೆ ಕಾಣಿಪುದಿನ್ನುಂ (ಕಾಕಂತ. ೩೩–೩೭). [ಪಾಲ್$_1$+ಇಡಿ$_2$]

**ಪಾಲಿತ** (ಗು). ರಕ್ಷಿಸಲ್ಪಟ್ಟ ; ಕಾಪಾಡಲ್ಪಟ್ಟ : ಲೋಲಕಾರುಣ್ಯಾತ್ತ ಭಲರೇ ಪಾಲಿತಾರ್ಥಿನಿಕಾಯ ಭಲರೇ (ಜಕಪು. ೩೦–೨೩) ; ಅಭಿಮನ್ಯುವನ್ನು . . . ದ್ರೋಣಾಚಾರ್ಯನಿಂದ ಪಾಲಿತವಾದ ವಾಹಿನಿಯನ್ನು ಪ್ರವೇಶ ಮಾಡೆಂದು ಹೇಳಿ, ಕೊಲ್ಲಿಸಿದನು (ಶೀಕ್ಷ್ಯ. ೩೩೮). [ಸಂ.]

**ಪಾಲಿತಪುತ್ರಿ** (ನಾ). ಸಾಕುಮಗಳು : ನನ್ನ ಪಾಲಿತಪುತ್ರಿಯಾದ ನಿನ್ನ ಹಿತರಕ್ಷಣೆ ನನಗೆ ಸೇರಿದೆ (ರಾಕ್ಷೋ.ಅ. ೦೯೯). [ಪಾಲಿತ + ಪುತ್ರಿ$_2$]

**ಪಾಲಿಶ್** 'ಪಾಲಿಷ್' ನೋ.

**ಪಾಲಿಷ್, ಪಾಲಿಶ್** (ನಾ). ೧. ಉಜ್ಜುವುದರಿಂದ ಉಂಟಾಗುವ ಮೆರುಗು,-ಹೊಳಪು : ಮನುಷ್ಯರಲ್ಲದೆ ಪಕ್ಕಿಗಳಿಗೂ ಈ ಪಾಲಿಷ್ ಮಾಡಿದ ಅಕ್ಕಿಯನ್ನು ಕೊಟ್ಟರೆ ಬೆರಿಬೆರಿಯ ಮಾದರಿಯ ರೋಗ ಬರುತ್ತದೆ (ಗ್ರಹ. ೩೩) ; ಅಕ್ಕಿಯನ್ನು ವಿಶೇಷವಾಗಿ ಪಾಲಿಷ್ ಮಾಡಿದರೆ ಅದರಲ್ಲಿರುವ ತವುಡು ಮತ್ತು ಭ್ರೂಣ ಹೊರಟುಹೋಗಿ . . . ಜೀವಾತ್ರುಗಳ ಅಂಶಗಳು ನಷ್ಟವಾಗುವುವು (ಅಹಾ. ೭೪). ೨. ಪೋಲ್ಶಿಗೆ ಹೊಳಪು ಕೊಡಲು ಉಪಯೋಗಿಸುವ ಒಂದು ಬಗೆಯ ಮೆರುಗು ಪದಾರ್ಥ ಮತ್ತು ಅದರಿಂದಾದ ಹೊಳಪು : ಜವಾನನು ಬೂಟ್ಸುಗಳಿಗೆ ಪಾಲಿಷ್ ಕೊಟ್ಟು ಮೆರುಗು ಬರುವಂತೆ ಮಾಡಿಟ್ಟಿದ್ದನು (ರಂಗಳ. ೨೨). **ಪಾಲಿಶ್** : ೨. ಪಾಲಿಶ್ ಮಾಡಿಸೋಣವೇ ? (ಕೋಳಿಪ. ೬೪). [← ಇಂ. Polish]

**ಪಾಲಿಸಿ** (ನಾ). ವಿಮೆಯ ಕರಾರುಪತ್ರ : ನನ್ನ ಸ್ನೇಹಿತನು ಬಹು ಒತ್ತಾಯಪಡಿಸಿದುದರಿಂದ . . . ಇನ್ನೊಂದು ಕಂಪನಿಯಲ್ಲಿ ಒಂದು ಪಾಲಿಸಿಯನ್ನೂ ತೆಗೆದುಕೊಂಡೆನು (ಪಾಠಗೇ. ೦೦೦). [← ಇಂ. Policy]

**ಪಾಲಿಸು, ಪಾಳಿಸು$_1$** (ಕ್ರಿ). ೧. ಕಾಪಾಡು; ಸಲಹು: ವೈರಿಗಳ್ ತಳರ್ದಪರೆಂತು ತನ್ನ ಬಲವಿಲ್ಲದೆ ತಾಳ್ದುವೆನೊಪ್ಪುಗೊಳ್ಳಿ ತನ್ನಳಿಯುನನೆಯ್ದು ಪಾಲಿಸುಗೆ ಬಂದಿದನೀಗಳನಾಥಯೂಥನುಂ (ಅಜಿತ. ೪–೬೪) ; ಕರುಣಿಸು ದೈವಮೆ ಪಾಲಿಸು ಹರಾದ್ರಿ . . . ವನದೇವಿಯರಿರಾ ನೆರೆದೆಲ್ಲರುಮೆನಗೆ ಪುರುಷಭಿಕ್ಷೆಮನಿಕ್ಕಿಂ (ಶಾದಂಪು. ೯೨೩) ; ಪ್ರಜೆಯಂ ಪಾಲಿಸಬಲ್ಲೊಡಾತ ನರಸಂ (ಸೋಮೇಶ. ೯). ೨. ಆಡಳಿತ ನಡೆಸು ; ಆಳು : ತನ್ನ ವಿಕ್ರಮಮೆ ತನ್ನ ನೆಗಟ್ಟೆಯೆ ತನ್ನ ಮಾತೆ ತಾನೆಸೆವ ಜಗತ್ರಯಕ್ಕೆನಿಸಿ ಪಾಲಿಸಿದಂ ನೆಲನಂ ಗುಣಾರ್ಣವಂ (ಪಂಪಭಾ. ೦೪–೩೯) ; ಸಜ್ಜನನುತನಾಗಿ ಪಾಲಿಸು ಮಹಾವನಿಯಂ ರವಿಚಂದ್ರರುಳ್ಳಿನಂ (ರಘುಕಾವ್ಯ. ೦೩–೦೬೪) ; ಚಲದಂಕಕಂಠೀರವನರಸೇಂದ್ರ ಭೂತಳವ ಪಾಲಿಸುತಿರ್ದಯಲಿ (ಶಂಕಪ. ೬–೨). ೩. ನೆರವೇರಿಸು ; ನಡೆಸು ; ಈಡೇರಿಸು : ದುಷ್ಟರುಂ ತಿನ್ನದ ಸಿಂಹಂ ತನ್ನನೆ ನಂಬಿ ಬಂದಿರ್ದನ್ನನೆಂತುಂ ತಿಂಬುದಿಲ್ಲಮಾದೊಡಮಾನುಂ ನುಡಿದು ಮಾತಂ ಪಾಲಿಸುವೆನೆಂದು ಸಿಂಹದ ಸಮೀಪಕ್ಕೆ ಬಂದು . . . ಎನ್ನ ಶರೀರಮಂ ಕೈಕೊಳ್ಳಿಮೆನೆ (ಪಂಚತಂ. ೦೯೩–೦೫) ; ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ ಪಾಲಿಸೆನ್ನ ಬಿನ್ನಪವ (ಪುಹಾರೀ. ಬ. ೩೯–೬೦) ; ಪಾಲಿಸುವನೇತು ನಿಷ್ಠೆಯಂ ಭಾವರಾಗದ ಜೀವಿ ಸಹಜ ಸಂಚಲ ನರಂ ತಾಂ ? (ಕತ್ತಾಂಗ. ೩೯–೦೦೩೦). ೪. ದಯಪಾಲಿಸು ; ಕೊಡು ; ನೀಡು : ತಾಮಿರ್ವರುಂ ಪಟ್ಟಿಕೊಂಡು ಪೊಬ್ಬಲ್ಗೆವಂದು ಲಾಭದ ಪೆರ್ಚಿಂ ಬಸದಿಗೆ ಬಂದು ಪರಧರ್ಮಭಟ್ಟಾರಕರಂ ಕಂಡು . . . ಇನ್ನೊಂದು, ವ್ರತಮಂ ಪಾಲಿಸಿಮೆಂಬುದುಂ (ಧರ್ಮಾಮೃ. ೨–೦೬೯) ; ಸ್ವಾಮಿ ನವಗೆ ಅಮರನಾಯಕತನಕ್ಕೆ ಪಾಲಿಸಿದ ಕೊಟ್ಟೂರ ಚಾವಡಿಗ್ಗೆ(ಗೆ) ಸಲುವ . . . ಗ್ರಾಮವನು . . . ಶ್ರೀಹರಿಹರದೇವರ ಅವಸರಸತ್ರಕ್ಕೆ ಸಮರ್ಪ್ಪಿಸಿದ್ದು (ಇಅ. I , ೩೨೮.೬ ; 1530) ; ಪೂತನಿ ವಿಷದ ಮೊಲೆಯನಿತ್ತ ಹಂಗಿಗೆ ಮಾತಾಸ್ಪದವ ಪಾಲಿಸಿದ (ಮೋಹತ. ೩೪–೦). ೫. ಅನುಸರಿಸು ; ಆಚರಿಸು : ತಾನಿತರ ಕನ್ಯಕೆಯಂತೆ ನಾಣ್ಗೆಟ್ಟು ಸ್ವೈರಣಿಯಂ ಬಿಟ್ಟು . . . ನಿಜಾಚಾರಮಂ ಮಱೆದು ಶೀಲಮಂ ತೊಱೆದು ಕುಲಕ್ರಮಮಂ ಪಾಲಿಸದೆ ರಾಗಾಂಧೆಯೆನಾಗಿ (ಕಾದಂಪೂ. ೮೬೪) ; ಜಸಮಂ ಧರ್ಮಮುಮಂ ಪಾಲಿಸುವೊಡಂ . . . ಅರ್ದೆದು ಪರೀಕ್ಷಿಸುವುದು ಮನುಜಂ ಸಮಸ್ತಕಾರ್ಯಸ್ಥಿತಿಯಂ (ಪಂಚತಂ. ೦೯೯–೦೩) ; ನೀತಿಯ ಪಾಲಿಸದೆ ಕೊಲೆಗಡುಕತನದೊಳು ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ ಕೋಟಿ ಮೊನೆಯಲಿ ಕೊಂದು (ಕುವ್ಯಾ.ಉ. ೩–೯೨) ; ಪಿತೃವಾಕ್ಯವು ನ್ಯಾಯವಾಗಿದ್ದ ಪಕ್ಷದಲ್ಲಿ ಅದನ್ನು ಪಾಲಿಸುವುದು ಪುತ್ರನ ಕರ್ತವ್ಯ (ಪ್ರತಾಪ. ೯೧). ೬. ಮನ್ನಿಸು ; ಕ್ಷಮಿಸು: ಓಬಳಣ್ಣನಾಯಕನು . . . ನನ್ನ ತಪ್ಪನ್ನು ಪಾಲಿಸಬೇಕೆಂದು ಅವರ ಪಾದಕ್ಕೆ ಬಿದ್ದನು (ಚಿತ್ರಪಾ. ೧೭). **ಪಾಳಿಸು$_1$**: ೧. ಬೇಳಲೆ ಬಗೆವೊಡೆ ಹರಿಯೊಡನಾಳೋಚಿಪಮೆಂದು ಬಟಿಯನಟ್ಟಿದೆನೆಮ್ಮಂ ಪಾಳಿಸುವ್ಯೆ[ನೀಂ]ನಿನ್ನೊಡನಾಳೋಚಿಸದೆಮಗೆ ನೆಗಬಲೇಂ ನಿಜಿಪುಟೇ (ಶಂಖಭಾ. ೬–೨೨) ; ಮೂಳರಂ [ಮಂ] ಪಾಳಿಸಿಯುಂ ಕೋಶಮಂ ಪೋಷಿಸಿಯುಂ ಇಂತು ಸಾಮ್ರಾಜ್ಯಮಂ . . . ನಿಜಾಯತ್ತಮುಮೆಸಿಸಿದಂ (ಚಂದ್ರಪ್ರ. ೨–೬೧) ; ಮನಃಕ್ಷತಂ ಬಿಡದೆ ಪಾಳಿಸಿ ಮೇಳಿಸಿ ಪುತ್ರಮೋಹದಿಂ ನಡೆಪಿದ ಕೂರ್ಮೆಯಂ ಬಗೆವುದಿಲ್ಲಿ (ಪುಷ್ಪಪು. ೦೩–೯೬). ೨. ಧರೆಯಂ . . . ಸುರಪತಿವಿಭವಂ ಪಾಳಿಸುತ್ತಿರ್ದ್ದಂ (ಸೌರೆಇ. ೩–೪ ; 1047) ; ಭೂಪಾಳರ್ ಪಾಳಿಪರಿಳೆಯಂ (ಅಭಿಪು. ೬–೬೩). ೩. ರಾಮನರೇಂದ್ರನುಂ ನೆಗಳ್ದ ಪಾಂಡುನರೇಂದ್ರನ ಪುತ್ರರಯ್ವರುಂ ಪ್ರೇಮದಿನಾರ್ಹತಬ್ರತಮನೊಪ್ಪಿರೆ ಪಾಳಿಸಿ ಮುಕ್ತಿಕಾಮಿನೀಕಾಮರೆನಲೆ

ಸಂದರ್ (ಸಮಕ. ೨-೩೬) ; ಜಿನಧರ್ಮಮಂ ಬಿಸುಟರ್ತಿಯುಂ ಪಾಳಿ ಪಾತನುಮಿಂದ್ರಿಯಂಗಳ ಭೋಗಮಂ ಮರುಳಲ್ಲನೇ (ಧರ್ಮಾಮೃ. ೩-೦೯೩). ೫. ಪಾಳಿಯುಂ ಪಾ[ಹಾಳಾಂ. ಬಾ]ಳಿಸುವಂ ಬನ್ನಿಂ (ಶಂಕರಸಂ. ೦೪೪-೦೬). ೭. ನಡೆದುಕೊಳ್ಳು ; ಸಲ್ಲು : ಹರಿಸುತಂಗೆ ಗಿರಿದುರ್ಗಮಾಗಿ ಪಾಳಿಸದ ಕೃತ್ರಕಶೈಲವಿಲ್ಲ (ಕೃಷ್ಣಕೃ. ೯-೨೨).

**ಪಾಲಿಸಿ ಕೊಡು** = ದಯಪಾಲಿಸು ; ಕರುಣಿಸು : ಆ ಗ್ರಾಮವನು ಹುಗಿನು ಹೊಯಿಸಿ ಪಾಲಿಸಿ ಕೊಟ್ಟರು (ಎಕ. VII, ಶಿಮೊ. ೦೦೬-೩೭; 1558 ?). [ಪಾಲನ+ ಇಸು₃]

**ಪಾಲು₁** 'ಪಾಲ್₁' ನೋ.

**ಪಾಲು₂** 'ಪಾಲ್₂' ನೋ.

**ಪಾಲುಂಡೆ,** ಹಾಲುಂಡೆ (ನಾ). ಹಾಲಿನಿಂದ ತಯಾರಿಸಿದ ಒಂದು ಬಗೆಯ ಸಿಹಿಭಕ್ಷ್ಯ : "ಪೀಯೂಷಪಿಷ್ಟಮೆನೆ ಪಾ[ಹಾಳಾಂ. ಹಾ]ಲುಂಡೆಯೆನಿಸಿಕ್ಕು" (ಮಂಗರಾ. ೩೪-೨) ; ಅಮರ್ದಿನುಂಡಿಗೆಗಳೆನಿಸುವ ಪಾಲುಂಡೆಗಳುಮಂ . . . ಅರಸಂಗಂ ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದರ್ (ಸುಕುಮಾ. ೦೦-೨೯೫). **ಹಾಲುಂಡೆ :** ಹೂರಿಗೆಯ ಲಡ್ಡುಗೆಯ ಬೆಟ್ಟಂಗಳಲ್ಲಿ ಹಾಲುಂಡೆ ಘೃತಪೂರದಾಲಯಮದಲ್ಲಿ (ಜಸ. ೭-೦೦) ; ತುಪ್ಪದ ತೋರ ಹಾಲುಂಡೆಗಳ ಯೆಳ್ಳುಂಡಿಗೆಯ ಕೆನೆಮೊಸರ ಚಾರುಶಾಕಾವಳಿಯುಲಾ ವಿಸ್ತಾರ ಭಕ್ಷ್ಯಾವಳಿಯ ಪಾಕದೊಳೋರೆ ಹುಸಿಯುಂಟೆಂಬ ಯಂತ್ರವ ಕಳಚ ಬಲುಹುಂಟು (ಸಂಭಿಶ. ೩೦-೬) ; ಸಣ್ಣಸೇವಗೆ ಹಾಲುಂಡೆ . . . ಹೂರಣಗಡುಬು ಭೂಮಗೆ ಮುದ್ದು ವೆಣ್ಣುಗಳೆಡೆ ಮಾಡಿದರು (ಶಂಪಖ. ೯-೬೭). [ಪಾಲ್₁+ಉಂಡೆ]

**ಪಾಲುಗ** (ನಾ). ಹಾಲು ಮಾರುವವನು ; ಹಾಲಿನ ವ್ಯಾಪಾರಿ : ಪೊನ್ನುಗಂ, ನಾರುಗಂ, ಪಾಲುಗಂ, ಪರಲುಗಂ (ಶಬ್ದಾ ಮ. ೪೨೪ ಪ್ರಯೋ). [ಪಾಲ್₁+ –ಉಗ]

**ಪಾಲುಗಡಲು** 'ಪಾಲ್ಗಡಲ್' ನೋ.

**ಪಾಲುಗಾರ** 'ಪಾಲ್ಗಾಳ' ನೋ.

**ಪಾಲುಗಾರತಿ** 'ಪಾಲುಗಾರ್ತಿ' ನೋ.

**ಪಾಲುಗಾರಿಕೆ** (ನಾ). (ವಾಣಿಜ್ಯ ಮುಂತಾದ ವ್ಯಾಪಾರದಲ್ಲಿ) ಪಾಲು ಪಡೆದಿರುವುದು; ಭಾಗವನ್ನು ಹೊಂದಿರುವುದು: ಅದು . . . ಎಲ್ಲ ಕಲೆಗಳಲ್ಲಿಯೂ ಪಾಲುಗಾರಿಕೆ ; ಎಲ್ಲ ಸೌಜನ್ಯದಲ್ಲಿಯೂ ಎಲ್ಲ ಸಂಪನ್ನತೆಯಲ್ಲಿಯೂ ಪಾಲುಗಾರಿಕೆ (ರಾಜ್ಯಾಂಗ. ೨೦) ; ಇವರ ಆಚಾರ್ಯಪದವಿಯು ಹೆದರಿ ಕೊಟ್ಟದ್ದಲ್ಲ . . . ಕೋಮುವಾರು ಪ್ರಾಂತವಾರು ಪಾಲುಗಾರಿಕೆಯಲ್ಲಿ ಬಂದದ್ದಲ್ಲ (ಚಿಣಾಮಂ. ೯೯). [ಪಾಲುಗಾರ (<ಪಾಲ್ಗಾಳ)+ –ಇಕೆ]

**ಪಾಲುಗಾರ್ತಿ,** ಪಾಲುಗಾರತಿ (ನಾ). ಭಾಗವನ್ನು ಪಡೆಯುವ ಹಕ್ಕುಳ್ಳವಳು ; ಹಿಸ್ಸೆದಾರಳು : ಎಲ್ಯ, ನನ್ನ ದುಃಖದ ಪಾಲುಗಾರ್ತಿ, ಸುಮ್ಮನೆ ಅಳುವುದರಲ್ಲಿ ಏನೂ ಅರ್ಥವಿಲ್ಲ (ಮುಂಬಯಿ. ೪-೧೭೦); ಬಸವಣ್ಣನ ಕಷ್ಟ–ಸುಖಗಳಲ್ಲಿ ನಾಗಲಾಂಬಿಕೆ ಪಾಲುಗಾರ್ತಿಯಾಗಿದ್ದಾಳೆ (ಕರ್ಮಕ. ೦೨೯). **ಪಾಲುಗಾರತಿ :** ಅವರೆಲ್ಲರಿಗೂ ಬರುವ ಕಷ್ಟ ಸುಖಗಳಲ್ಲಿ ತಾನೂ ಪಾಲುಗಾರತಿಯಾಗಿದ್ದಾಳೆ (ಜನಸಿ. ೦೪) ; ತನು ಮನ ಧನದಲ್ಲಿ ಪಾಲುಗಾರತಿಯಲ್ಲ (ಸಪಲಗೀ. ೯-೪೩).
[ಪಾಲುಗಾರ (<ಪಾಲ್ಗಾಳ)+ –ತಿ₁ (< –ಇತ್ತಿ)]

**ಪಾಲುಗುಣ,** ಫಾಲ್ಗುಣ (ನಾ). ಚಾಂದ್ರಮಾನ ವರ್ಷದ ಹನ್ನೆರಡನೆಯ ತಿಂಗಳು : ಬದಿರೂರ ಬಿಟ್ಟಿಗಣ್ಣನ ಮಗ ಚಿಕ್ಕಬಮ್ಮಗಣ್ಣ ಪಾಲುಗುಣ ಮಂಗಳವಾರದಂದು ಸುರಲೋಕಪ್ರಾಪ್ತನಾದ (ಮೈಅಂ. ೦೯೩೨, ೩೩-೫; 1190) ; ಫಕಾರಕ್ಕೆ ಪಕಾರಂ . . . ಫಾಲ್ಗುಣ – ಪಾಲುಗುಣ (ಕಮುದ. ೨೫೫ ಪ್ರಯೋ); **ಫಾಲ್ಗುಣ :** ಫಾಲ್ಗುಣದ ಶುಕ್ಲಾಷ್ಟಮಿಯಂದು ನಂದೀಶ್ವರ ಪೂಜೆಗೆಂದು . . . ಪೋಗಿ (ಕೃಷ್ಣಕೃ. ೭-೫೫೫) : ಅಖಿಳಮಂತ್ರಗಳ ಜಪ . . . ಫಾಲ್ಗುಣದಲ್ಲಿ ಸಕಲಜಯ (ಗಗಶಾ. ೪-೭೭); ಫಾಲ್ಗುಣದ ಸುಮಾಸಿತ್ರವಾದ ಬಿಸಿಲುದಿನದಲ್ಲಿ . . . ಅವನು ಬರುತಲಿರುವನು (ಧರ್ಮಗಾ. ೬೪). [<ಸಂ. ಫಲ್ಗುನ]

**ಪಾಲುಗೂಡು** (ಕ್ರಿ). ಪಾಲನ್ನು ಹೊಂದು, –ಪಡೆ: ಇಬ್ಬರೂ ಕೂಡಿಯೆ ಹೊಸಧಾಟಿಯ ಆರತಿಹಾಡು ಹಾಡಿದೆವು. ಶೇಷಣ್ಣ ಬಿಂದಣ್ಣ ಒಂದೊಂದು ರೂಪಾಯಿ ಹಾಕಿದರು . . . ನಾನು ಅಕ್ಕ ಹಂಚಿಕೊಂಡೆವು. ಜಯಣ್ಣನೂ ಪಾಲುಗೂಡಲು ಬಂದ. ಅಕ್ಕ ಬೈದು ಕಳಿಸಿದಳು (ವೈಶಿ. ೦೯೩).
[ಪಾಲು₂ (< ಪಾಲ್₂)+ಕೂಡು₁]

**ಪಾಲುಗೊಳ್ಳು** 'ಪಾಲ್ಗೊಳ್' ನೋ.

**ಪಾಲುಣ** (ನಾ). ದೇವರಿಗೆ ಮಾಡುವ ಹಾಲಿನ ನೈವೇದ್ಯ : ಯಿಪ್ಪತುಎಂಟು ಹೊನ್ನನ್ನು ನಿಮ್ಮ ಸ್ಥಾನದ ಬಯಿರವದೇವರ ಪಾಲುಣ ಕೋಸರ ತಿರುನಾಳನು ಹೊಸ್ತಾಗಿ ರಥೋತ್ಸಹವನೂ ಮಾಡುವ (ಎಕ. X, ಕೋಲಾರ. ೩೪-೦೭; 1495). [ಪಾಲ್₁+?]

**ಪಾಲುದಾರ** 'ಪಾಲ್ದಾರ' ನೋ.

**ಪಾಲುಪಂಚಾಯ್ತಿ** (ನಾ). ಹಿಸ್ಸೆಯ ಬಗ್ಗೆ ನಡೆಯುವ ಪಂಚಾಯ್ತಿ : ಊರಿನಲ್ಲಿ ಏನು ಗಲಾಟೆಯಾಗಲಿ, ಪಾಲುಪಂಚಾಯ್ತಿ ನಡೆಯಲಿ, ಅಲ್ಲಿ ಶ್ಯಾಮಕಕ್ಕ ಇರಬೇಕು (ಹೊಸಕ್ಷಿ. ೨೪೪).
[ಪಾಲು₂ (< ಪಾಲ್₂)+ಪಂಚಾಯ್ತಿ (<ಪಂಚಾಯಿತಿ)]

**ಪಾಲುಪಟ್ಟಿ** (ನಾ). ಆಸ್ತಿ, ಕೆಲಸ ಮುಂತಾದುವುಗಳಲ್ಲಿ ಯಾರ ಪಾಲು ಎಷ್ಟು ಎಂಬುದನ್ನು ನಮೂದಿಸುವ ಕರಾರುಪತ್ರ, –ದಾಖಲೆ ಪತ್ರ : ತಮ್ಮನೊಡನೆ ಪಾಲುಪಟ್ಟಿಯಾದ ಕೆಲವೇ ದಿನಗಳಲ್ಲಿ ನಂಜುಂಡ ಶ್ರೋತ್ರಿಯರ ಆದಾಯ ಬೆಳೆಯಲು ಪ್ರಾರಂಭಿಸಿತು (ವಂಶವೃ. ೪೩೫).
[ಪಾಲು₂ (<ಪಾಲ್₂)+ ಪಟ್ಟಿ₂]

**ಪಾಲುಪೊಂಗಲು,** ಹಾಲುಪೊಂಗಲು (ನಾ). ಹಾಲಿನಿಂದ ಮಾಡುವ ಒಂದು ಬಗೆಯ ಪೊಂಗಲು : ಪಾಲುಪೊಂಗಲನಿಕ್ಕಸಯ್ಯ ಬಾಲಗೋಪ್ಗಳ ಕೂಡಿ ಸಾಗಲು ಲೋಲಕೃಷ್ಣನು ನಿಮಗೆ ಒಲಿವನು (ಗೋಪಾಜ. ೦೦೦). **ಹಾಲುಪೊಂಗಲು :** ತಣ್ಣೀರುಸ್ನಾನ, ದೇವಪೂಜೆ, ಯಜ್ಞ ಕರ್ಮಗಳು ಮುಗಿದ ನಂತರ ಹಾಲುಪೊಂಗಲ ಉಪಾಹಾರ (ಶಾಂಕಶಾ. ೭೭).
[ಪಾಲು₁ (<ಪಾಲ್₁) + ಪೊಂಗಲು₁ (<ಪೊಂಗಲ್₂)]

**ಪಾಲುಮಾರಿಕೆ** (ನಾ). ಸೋಮಾರಿತನ ; ಆಲಸ್ಯ : ಪಾಲುಮಾರಿಕೆ, ಜನ್ಮಭೂಮಿಯಲ್ಲಿ ಆಶೆ, ರೋಗಿಯಾಗುವಿಕೆ, ಭಯಶೀಲತೆ, ಅಸಂತೋಷ ಈ ಐದೂ ಪೂಜ್ಯತೆಗೆ ವಿಘ್ನಕಾರಣಗಳು (ಮುಂಬಯಿ. ೬-೩೭೭) ; ಅದೇನೋ ಕಾಗದ ಬರೆಯಬೇಕೆಂದರೇ ನನಗೆ ಕೆಟ್ಟ ಪಾಲುಮಾರಿಕೆ (ಅಪಕಂ. ೮); ಕೆಲಸವನ್ನು ಮಾಡುವುದರಲ್ಲಿ ಪ್ರಫುಲ್ಲಿಗೆ ಪಾಲುಮಾರಿಕೆಯಿಲ್ಲ (ದೇಜೀಶ. ೩೦).
[ಪಾಲುಮಾರು + – ಇಕೆ. / ತಮಿ. ಪಾಲ್ಮಾಱಿಕ್ಕೈ ; ತೆಲು. ಪಾಲುಮಾಲಿಕ, ಪಾಲ್ಮಾಲಿಕ]

**ಪಾಲುಮಾರು** (ಕ್ರಿ). ಆಲಸ್ಯಹೊಂದು ; ಸೋಮಾರಿಯಾಗು : ಪಾಲುಮಾರದೆ ಭಕ್ತಿಯಿಂದಲಿ ಮೂಲಮಂತ್ರಧ್ಯಾನದೊಳು ಪಗಲಿರುಳು ಸೀನಿರ್ದ (ಯಕ್ಷೋಕ. ೦೭) ; ತನ್ನ ಕೆಲಸದಲ್ಲಿ ಎಂದೂ ಪಾಲುಮಾರುತ್ತಿರಲಿಲ್ಲ. ಜೈಲಿನ ಕಾಯಿದೆ ಕಟ್ಟಲೆಯ ಪ್ರಕಾರ . . . ಒಂದನ್ನೂ ತಪ್ಪದೆ ನೋಡಿಕೊಳ್ಳುವನು (ಸತ್ಯಕ. IX, ೪೦) ; ಬೆಳಗಿನ ಝಾಮದ ಚಳಿಯಲ್ಲಿದ್ದು ಸ್ನಾನಾದಿಗಳನ್ನು ಮಾಡಲು ಪಾಲುಮಾರದ ಸ್ತ್ರೀಯರ ಹೊರತು ಮಿಕ್ಕವರೆಲ್ಲರಿಗೂ ಇದು ಬಾಧಕರವಾಗಿಯೇ ಇದ್ದಿತು (ಲಕ್ಷ್ಮೀಶ್ರ. ೯).
[ದೇ. ॥ ತಮಿ. ಪಾಲ್ಮಾಱು ; ತೆಲು. ಪಾಲುಮಾಲು, ಪಾಲ್ಮಾಱು, ಪ್ರಾಲುಮಾಲು, ಪ್ರಾಲ್ಮಾಲು]

**ಪಾಲುಮುಖಂಡ** (ನಾ). ಹಳ್ಳಿಗಳ ಬಣಗಳ ಮುಂಖ್ಯಸ್ಥ : ತಮ್ಮ ಮಗಳ ಮದುವೆಯ ಸಂದರ್ಭದಲ್ಲಿ ಪಾಲುಮುಖಂಡರಿಂದ ಬಹಿಷ್ಕಾರ ಗಿಹಿಷ್ಕಾರದ ಅವಮಾನದ ಗೊಂದಲಕ್ಕೆ ಅವಕಾಶ ಒದಗದಿರುವುದಕ್ಕಾಗಿಯೂ . . . ಮದ್ದು ತೆಗೆದುಕೊಳ್ಳುತ್ತಿದ್ದಾಳೆ (ಮರಿಮ. ೬೬೦).
[ಪಾಲು₃ (<ಪಾಲ್₁)+ಮುಖಂಡ]

**ಪಾಲುವಂತಿಗೆ** (ನಾ). ತನ್ನ ಪಾಲಿಗೆ ಸಲ್ಲಬೇಕಾದ ಹಣ ; ಪಾಲುಗಾರಿಕೆಯ ಹಣ : (೬). [ಪಾಲು₃ (< ಪಾಲ್₁)+ವಂತಿಗೆ]

**ಪಾಲಿ₁, ಹಾಲಿ₁** (ನಾ). ಒಂದು ಬಗೆಯ ಹಕ್ಕಿ ; ಹಂಗನ ಹಕ್ಕಿ ; ಶಕುನದ ಹಕ್ಕಿ : "ಚಾಷಃ, ಕಿಕೀದಿವಿಃ — ೨ ಹಂಗನ ಹಕ್ಕೀ ಹೆಸರು, ಶಕುನದ ಹಕ್ಕಿ, ಆಂಧ್ರದಲ್ಲಿ ಪಾಲಿಪಕ್ಷಿ" (ಸಿದ್ಧಾಂತಿ. ೧೫೮). **ಹಾಲಿ₁** : (೬).
[ದೇ.॥ ತಮಿ. ಪಾಲ್ಯ ; ತೆಲು. ಪಾಲ]

**ಪಾಲಿ₂, ಹಾಲಿ₂** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹಣ್ಣು : "ರಾಜಾದನಂ, ಫಲಾಧ್ಯಕ್ಷಂ, ಕ್ಷೀರಿಕಾ — ಈ ೩ ಪಾಲೆಯ ಮರ" (ಶಾಶಾ. ೦೦೬) ; ಜಳದಂ ಪಿಪ್ಪಲಿ ದೇವದಾರು ರುಜೆ ನಿಂಬಂ ಚಿತ್ರಕಂ ಪಾಲೆ . . . ಇಂತಿವಂ ಜಳದೊಳೆ ಮೂವಡಿಗೂಡಿ ಕಾಸಿ . . . ಕುಡಲೊಡಂ ಸರ್ವಜ್ವರಂ ಪಿಂಗುಗುಂ (ಲೋಕೋಪ. ೯–೨೩೫); ಅಂಬಟೆ ಪಾಲೆ ಬಿಲ್ಪಾಲೆ (ಚುಸ್ತಾಂಗ. ೦೦–೨). **ಹಾಲೆ₂** : ೧. ಹಾಲೆಯಂಕೋಲೆದಿಂಡಂ . . . ಹೆಜ್ಜಾಲ ಹೆದ್ದುಂಬರೌದುಂಬುರಂಗಾಲಯವದೆನಿಸಿ ನಾನಾ ಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಚ. ೩–೨); ಹಲಸು ಹಾಲೆಯರಳೆ ಚಿಲ್ಲ ಚೆನ್ನಿಗೆ ತೇಗು ತುಂಬುರವರಗಳಿಂ ನಿಲ್ಲದೆ ಮೆಚೆದುದಾ ವಿಪಿನ (ಚಂದ್ರಸಾಂ. ೨೬–೫೫) ; ಹಾಲೆ ಬದರಿಪ್ಪೆ ಹುಣಸಂಕೋಲೆಲಟಿಯ . . . ಬನ್ನಿ ಹೊನ್ನೆಯ ತರುಗಳ್ (ಹಮ್ಮಾರ. ೯–೬೯). ೨. ಒಂದು ಬಗೆಯ ಔಷಧಿ ಸಸ್ಯ : "ಅಮೃತಶಿಖಾ—ಚಿಟಿಕೆ, ಹಾಲೆ" (೬೩ಧಿ. ೮); "ಶೋಫ—ಚಿಟಿಕೆ, ಹಾಲೆ" (೬೩ಧಿ. ೦೬೨). ೩. ಪಡವಲದ ಬಳ್ಳಿ ಮತ್ತು ಅದರ ಕಾಯಿ : "ಹಾಲೆ ಕೋಶಾತಕಿ ಪಟೋಳಿಯುಕ್ಕು" (ಶಬ್ದಗರಾ. ೩೬–೨೦). ೪. (?) : "ಹಾಲೆ ಕಾಂಡಿಕೆ [ಪಾಠಾಂ. ಕಾಟಿಕೆ, ಕಾಡಗೆ]ಯುಕ್ಕು" (ಶಬ್ದಗರಾ. ೪೪–೪೬).
[ದೇ.॥ ತಮಿ. ಪಾಲೈ ; ಮಲ. ತೆಲು. ಪಾಲ; ತುಳು. ಪಾಲೆ]

**ಪಾಲಿ₃, ಆಲಿ₃, ಪಾಲು₁, ಹಲ್ಲೆ₁, ಹಾಲಿ₃** (ನಾ). ೧. ಕಿವಿಯ ಮೃದುವಾದ ಕೆಳಭಾಗ, –ಕೊಪ್ಪು : ನಸುನೇಲ್ವ ಕರ್ಣಾಟೀಕರ್ಣಪೂರನ ಪಾಲೆಗಳುಂ ಸರಸ್ವತಿಯಾಡುವ ಲೀಲಾಂದೋಳದಂತಾದುವು (ಪಂಪಭಾ. ೨–೩೮೮) : ತಾಚಿವಚಿದ ಕೇಶಮನುಗುರ್ಗೊನೆಯಿಂ ತೆಗೆದೊತ್ತಿ ಪಾಲೆಯಿಂ ವಿಡಾಚಿದ ಸುತ್ತಿನೋಲೆಗಳನೋವುತುಮಾಯತವಾಗೆ ತೊಟ್ಟು (ಲೀಲಾವ. ೫–೦೦೬) ; ಪೊಸಮುತ್ತಿನ ಪುಂಜದೆ ರಂಜಿಸುವೋಲೆಯನವರಿ ಪಾಲೆಯೊಳ್ ನಿಯಮಿಸಿದಳ್ (ಚಂದ್ರಶು. ೧೦–೧೬೨). ೨. ಸೇತುವೆ ; ಸಂಕ : ಕೋಟಿಚೆನ್ನಯರು ಬಲ್ಲಾಳನ ಆಳುಗಳೊಂದಿಗೆ ಪಾಲೆ ದಾಟಿ . . . ಬೆಳ್ಳಿಯ ಕಲಶದ ಬಿಳಿಯ ಉಪ್ಪರಿಗೆಯನ್ನು ಏರಿದರು (ಕೋಟಿಚ. ೦೪). **ಆಲೆ₃** : ೧. ಮಿರುಪ ತಳಿರಲೆ ಕೆಂಪಿನಾಲೆಯ ಜೋಲ್ವ ಕರ್ಣಗಳ (ಅಂಬಿಕಾ. ೫–೦೬);ಹಣೆ ಚಚ್ಚಿಕೊಳ್ಳುವಿಕೆ, ಕಿವಿಯ ಆಲೆಯನ್ನು ಅನಾವಶ್ಯಕವಾಗಿ ಉಜ್ಜಿಕೊಳ್ಳುವಿಕೆ (ಮರಿಮ. ೦೧೨). **ಪಾಲು₁** : ೨. ಎಳೆಸವಿಲಾಡಿಯೊಳಾಡುತಿರಲೊರ್ವ ಲಲನೆ ನೋಡಲು ಕೇಕರಾಂಶು ಪೊಳೆದೆಯ್ದಿತು ತತ್ಸ್ತ್ರೀಮನದಿಗಿಟ್ಟ ಪಳುಕಿನ ಪಾಲದಂದದೊಳು (ಶ್ರೀಪಾಂ. ೫–೩೬); ನೀರ ಮುಟ್ಟದೆ ಫೇಲಕೆತ್ತಿ ಪಾಲವ ಕಟ್ಟಿ ದಾರಿಯ ಮಾಡಬೇಕವಕೆ ಧಾರಿಣಿಚರರಾಗದಂಬರೇಚರರು ಕಠೋರವ್ಯಂತರರು ಬೇಕೆಂದ (ಭರತ. ೩೩–೬೯); ಕಾಡುಮೇಡುಗಳನ್ನು ಹಿಂದೆ ಹಾಕಿ ತೋಡುಗಳನ್ನೂ ಪಾಲಗಳನ್ನೂ ದಾಟಿದರು (ಕಾಂಚಿ. ೦೩ ಕಥಾಸಾರ). **ಹಲ್ಲೆ₁** : ೧. ಕಿವಿಗಳ ಹಲ್ಲೆಗಳ ಎಕವಜ್ರದ ಬೆಂಡೋಲೆಗಳು ಕಿರಣಗಳನ್ನು ಸೂಸುತ್ತಿದ್ದುವು (ಪಂಚ್ಚ.ಚ. ೨೦೩). **ಹಾಲೆ₃** : ೧. ವರಮುತ್ತಿನೋಲೆಗಳು ತೀವಿ ಹೊಳೆವುತ್ತಮಿರೆ ಲೆಂಕರಸನೆಂಬ ಭಕ್ತಂ ಕಂಡು ಸರಸರನೆ ಭೋಂಕನೋಲೆಯನಲ್ಲಿ ತೆಗೆವುತಿರೆ ಸರಸರನೆ ತೆಗೆದ ಸಂಭ್ರಮದೊಳಗೆ ಹಾಲೆ ಸೊಪ್ಪಾಗುತಿರೆ (ಬಸವ. ೦೩–೦೩) ; ಹಾಲೆಗಳೊಳು ಥಳಥಳಿಪ ಮುತ್ತಿನ ಹರಳೋಲೆಗಳನು ಧರಿಸಿಹರು (ಚಂದ್ರಸಾಂ. ೧೨–೧೦೬) ; ನಾ ತೂಗಿ ಬಾಗಿ ನೀರ ಮೊಗದೆ ಮಾವಯ್ಯ ಹಾಲೆ ಸವೆದು ವಾಲೆ ಬಿತ್ತು ಮಾವಯ್ಯ (ಹಳ್ಳಿಯು. ೦೬೪).
[<ಸಂ. ಪಾಲಿ, ಪಾಲೀ]

**ಪಾಲೆ₄** (ನಾ). ಒಂದು ಬಗೆಯ ತೆರಿಗೆ : ಮುಂದನಾಡ ಬಂಗೆಡಗ್ರಾಮವೊನ್ದಕೆ ಪಾಲೆಯ ಗಲುಹ ಅಯ್ಯೂಬು ವರಹ (ಎಕ. XIV, ಗುಂಡ್ಲುಪೇ. ೦೨೮–೬೫; ಸು. 1410). [?]

**ಪಾಲೆಗೊರವಿ** (ನಾ). ಒಂದು ಬಗೆಯ ಮರ : (ವೃಕ್ಷಶಿ. ೫೬–೦೦೬೪).
[ಪಾಲೆ₂+ಗೊರವಿ₂]

**ಪಾಲೆರೆ** 'ಪಾಲೆಱೆ' ನೋ.

**ಪಾಲೆಱೆ, ಪಾಲೆರೆ, ಹಾಲೆರೆ, ಹಾಲೆಱೆ** (ಕ್ರಿ). ೧. ಹಾಲನ್ನು ಹೊಯ್ಯು, –ಸುರಿ : ದೊರೆಯಕ್ಕುಮೆ ನಿನಗೆ ಯುಧಿಷ್ಠಿರನರ್ಘ್ಯಮನೆತ್ತ ಶಂಖದೊಳ್ ಪಾಲೆಱೆದಂತಿರೆ ಮಲಿನಮಿಲ್ಲದೊಳ್ಗುಲದರಸುಗಳಿರೆ ನೀನಂ ಮಗ್ರಪೂಜೆಯನಾಂಪಾ (ಪಂಪಭಾ. ೬–೩೦). ೨. ಹಾಲು ಕೊಡು ; ಹಾಲು ಕುಡಿಸು : ಪಾಸಿನ ಮೇಲೆ ಪಟ್ಟಿರಿಸಿ ಪಾಲೆಱೆದನ್ನೊಡಗೂಡಿ ಬಾಲಿಕಾಭ್ಯಾಸದಿನೆತ್ತಿ ಸತ್ತಿಗೆಯ ತಣ್ಣೆಳಲೊಳ್ ಬಳೆವಂತು ಮಾಡಿ . . . ಕೊಲ್ವುದೇ (೧೧೪. ೦–೦೦೬); ಕೆಱೆಯಂ ಕಟ್ಟಿಸು . . . ಶಿಷ್ಟರಂ ಪೊರೆಯೆನುತ್ತಿಂತೆಲ್ಲಮಂ ಪಿಂದೆ ತಾಂ ಯೆಱೆದಲ್ಪಾಲೆಱೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ (ಕಾಇಶ. IV, ೨೩೬–೪೫ ; 1380); ಪಾಲೆಱೆದೋವಿ ಚಣ್ಣನ ಪಕ್ಕೆಗ್ಗದಿದಳು (ಮೋಹತ. ೯–೭೫). **ಪಾಲೆರೆ** : ೧. ವಿಜಯವರ್ಮನರೇಂದ್ರ ಬೇಗದಿಂ ತನ್ನ ಸತಿಯು ಪಾಲೆರೆಯುತಿರಲು (ಕಾಗಂಧ. ೧೩೨–೧೧). ೨. ತೊಡೆಯ ತೊಟ್ಟಿಲೊಳಿಟ್ಟು ಪಾಲೆರೆದು . . . ಪಾಲಿಸಿದ ನಿನ್ನ ಮೆಯ್ಯಿದನೆಂತು ಪೇಳ್ ಕಾಂತಾರರಾಕ್ಷಸಿಗೆ ತುತ್ತುಗೊಳ್ ಕೊಡಲಿ? (ಶ್ರೀರಾಮ. ೬೯–೪೮). **ಹಾಲೆರೆ** : ೧. ಪುಷ್ಪಗಳ ಗೊಂಚಲುಗಳೆಂಬ ತೊಟ್ಟಿಲಿನೊಳ್ . . . ಮಕರಂದವೆನುವ ಹಾಲೆರೆದು (ಕಾಗಂ. ೪೭೦–೦); ಹಾವಿಗೆ ಹಾಲೆರೆದರೆ ತನ್ನ ವಿಷ ಬಿಟ್ಟೀತೇ? (ಗಾದೆ). **ಹಾಲೆಱೆ** : ೧. ಹಾವಿಗೆ ಹಾಲೆಱೆದೇನು ಫಲ (ಪುರಂದ. ೧–೬೧ ಪಲ್ಲವಿ). [ಪಾಲ್₁+ಎಱೆ₁]

**ಪಾಲೇಱು** (ಕ್ರಿ). ಹಾಲು ಹೆಚ್ಚಾಗು : ಆಲದ ಅತ್ತಿಯ ಬಸಿರಿಯ ಪಾಲೇಱಿದ ಕೊನೆಯನುಡಿದು ಮದಮಿಶ್ರಿತದಿಂದಾಲೋಚಿಸದಿಕ್ಕುವುದಾರೇಱುದಿನಂ ತರದೆ ಹಯಕೆ ಶ್ವಾಸವಿನಾಶಂ (ಅಶ್ವಶಾ. ೬–೩೮).
[ಪಾಲ್₁+ಏಱು₁ (<ಏಱ್₁)]

**ಪಾಲ್ಯೆಸು** (ಕ್ರಿ). (?) : ಭೋರೆಂದು ಸುರಿವ ಕೀಬ್ಬರದ ಪೂರದಿಂ ಕಾರ ಕಾವಣಮಂ ಜಂಝಾನಿಳನೊತ್ತುವಂತೆ ಕುಚುಕುಚುಂಮೆಟ್ಟಿ ನಡೆಯಿಸುತ್ತುಂ ಗಜಚುವ ಗಟಿಕಾಜಿರ ಚಪ್ಪರಿಸುವೊಪ್ಪಕಾಜಿರ ಕರೆವ ಪರಿಕಾಜಿರ ಪಾಲೈ[ಪಾಠಾಂ. ರೈ]ಸುವಾರೆಕಾಜಿರ ನೆರವಿಗಳಂ ಕೈಸನ್ನೆಯಿಂ ನಿವಾರಿಸುತ್ತುಂ (ಅನಂಪು. ೩–೨೮೪). [?]

**ಪಾಲೋಗರ, ಹಾಲೋಗರ** (ನಾ). ಹಾಲಿನಲ್ಲಿ ಮಾಡಿದ ಅನ್ನ : ಪಲತೆಱದ ಪಾಲೋಗರದ ಕಟ್ಟೋಗರದ ಸೊಗಸುವಡೆದ ನೀರೋಗರದ ಮಿಸುಗುವಂಬಲಿಯ ವಿಧಮುಂ ವಧೂಜನವಚಿವ ತೆಱದಿನೊರೆವೆಂ (ಸೂಪಶಾ. ೩ ಸೂಪಶಾ). **ಹಾಲೋಗರ** : ಹಾಲುಂಡೆ ಘೃತಪೂರದಾಲಯವದಲ್ಲಲ್ಲಿ ಹಾಲೋಗರದೊಡೆ ಶಣ್ಣ ಸೇವಗೆಗಳಲ್ಲಲ್ಲಿ . . . ಮೇಲೋಗರದ ಹಿರಿಯ ರಾಸಿ ಮಸಗಿದವಲ್ಲಿ (ಬಸವ. ೭–೦೫) ; ಹಾಲೋಗರವ

ಹುಂಡು ಬಾಲೆಯರ ತೋಳ ಮೇಲೆ ಒಟಿಗಿದರೆ ಬಾರದ ಭವದಲ್ಲಿ ಬಪ್ಪುದು ತಪ್ಪದು ರಾಣಿರಣ್ಣ (ಸಿದ್ಧೇಶ. ೯೯–೧೯೦): ಹಾಲವನು ಕೊಂಬಾಗ ಹಾಲೋಗರುಂಡಂತೆ [ಹಾಕಾಂ. ಹಾಲುಕೂಳುಂಬಂತೆ. ಹಾಲುಹಣ್ಣುಂಡಂತೆ] (ಸರ್ವಜ್ಞ. ೦೬೯೦). [ಪಾಲ್$_1$+ಓಗರ]

**ಹಾಲೌಗು**, ಹಾಲವುಗ (ನಾ). ಹಾಲು ಮತ್ತು ಅಕ್ಕಿ ಹಿಟ್ಟಿನಿಂದ ತಯಾರಿಸಿದ ಒಂದು ಬಗೆಯ ಖಾದ್ಯ : ಸೂಸಲುಂಡಲಿಗೆ ಪಾಲೌಗು ಪಾಯಸ ಬೆಣ್ಣೆಗಾಸಿದ ತುಪ್ಪ ಕೆಂಗೂಳ ರಾಸಿ ರಂಜಿಸಲು (ಕಂಠಾಣಾ. ೨೬-೨). **ಹಾಲವುಗ** : ಚಿಗುಳಿ ಚಕ್ಕುಲಿ ಹಾಲವುಗ (ಬಸಪು. ೧೪–೦೩). [ಪಾಲ್$_1$ + ಔಗು$_2$ (<ಅವುಗು)]

**ಹಾಲ್ಕಿ** 'ಪಲ್ಲಂಗ' ನೋ.

**ಹಾಲ್ಕೆ** 'ಪಲ್ಲಂಗ' ನೋ.

**ಹಾಲ್ಕೆಜಿ**, ಪಾಲಕೆಜಿ (ನಾ). ಒಂದು ಕೆರೆಯ ಹೆಸರು : ಅನ್ತೆ ಬರ ಪಾಲ್ಕೆಜಿಯ ತೆಜ್ಜಣ ಕಡೆಗೋಡಿ (ಮೈಕಂ. ೧೯೨೦, ೧೦–೧೬೦ ; 967). **ಪಾಲಕೆಜಿ** : ಅನ್ತೆ ಬನ್ದು ಪಾಲಕೆಜಿಗನೆ ಬಂ ಪುಣಸೆಯಿಂ ಅನ್ತೆ ಬನ್ದು ನಗರವಳ್ಳಿದಿ ಮೂಡಣ ಬೇಲಿಯಿಂ (ಎಕ. III. ನಂಜನ. ೦೬೯–೦೩ ; 915 ?). [ಪಾಲ್$_1$+ಕೆಜಿ]

**ಹಾಲ್ಗಂಚಿ** (ನಾ). ಒಂದು ಬಗೆಯ ಗಿಡ : (೬). [ಪಾಲ್$_1$+ಕಂಚಿ$_1$]

**ಹಾಲ್ಗಂದಲ್** (ನಾ). ಹಾಲಿನ ಮಡಕೆ: ಪಾಲ್ಗಂದಲಿಂ ಮಾಬುಂ ಬೋದುದು ಬೆಣ್ಣೆಯುಳ್ಳಿಯುಟೆ ಕೃಷ್ಣಾ ಸೀನೆ ತಿಂದಿರ್ಪೆ (ವತ್ಸಕಂ. ೨೦). [ಪಾಲ್$_1$+ಕಂದಲ್$_1$]

**ಹಾಲ್ಗಡಗ**, ಹಾಲ್ಗಡಗ (ನಾ). ಚಿಕ್ಕಮಕ್ಕಳ ಕಾಲಿಗೆ ತೊಡಿಸುವ ಒಂದು ಬಗೆಯ ಕಡಗ : ಅರಳೆಲೆಯು ಮಾಗಾಯು . . . ಪೊಕ್ಕಳು ಘಂಟೆ ಪಾಲ್ಗಡಗ ಗೆಜ್ಜೆ ಸಹ ಬಾಲದೊಡವಾ ಪರಿಪರಿಯ ರತ್ನಖಚಿತಾಭರಣಗಳನಿಟ್ಟು (ನವಮೋ. ೦೩–೩೦). **ಹಾಲ್ಗಡಗ** : ಹಸರಂಗಿ ತೊಡಸೀದ ಹಾಲ್ಗಡಗ ಇಡಸೀದ (ಗರತಿ. ೯೦). [ಪಾಲ್$_1$+ಕಡಗ$_1$]

**ಹಾಲ್ಗಡಲ್**, ಪಾಲುಗಡಲು, ಪಾಲ್ಗಡಲು, ಹಾಲುಗಡಲು, ಹಾಲ್ಗಡಲು (ನಾ). ಹಾಲಿನ ಸಮುದ್ರ ; ಕ್ಷೀರಸಾಗರ ; ☞ ಇದೊಂದು ಪೌರಾಣಿಕಕಲ್ಪನೆ. ಸಪ್ತಸಮುದ್ರಗಳಲ್ಲಿ ಒಂದು ; ವಿಷ್ಣುವಿನ ವಾಸಸ್ಥಾನ ; ಜೈನಧರ್ಮದಲ್ಲಿ ಅರ್ಹಂತನ ಜನ್ಮಾಭಿಷೇಕಕ್ಕೆ ಬಳಸುವ ಐದನೆಯ ಸಮುದ್ರ : "ಇಂಗಡಲೆಂದು ಪಾಲ್ಗಡಲೊಳ್" (ಕಜಾಗಿ. ೨೦) ; ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣೆ ಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೬ ಪೂರ್ವಕ) ; ಕಡೆಯುಕ್ಕಿದ ಬಿಡುಮುತ್ತಿನ ಪೊಡರ್ದುರ್ಣ್ಣಾವ ಬೆಳಗು ಪೊಳೆವ ದುಗುಲದ ಪಸೆಯೊಳ್ ತೊಡರ್ದಿರೆ ಪೆಜತಲ್ತಿದೆ ಪಾಲ್ಗಡಲೆನಿಸಿದುದಾ ವಿವಾಹವೇದಿವಿಲಾಸಂ (ಅಜಿಪು. ೯-೦೬) : ಜಗಮಿದು . . . ಪಾಲ್ಗಡಲಿಂದೊಗೆದುದೊ ಪೇಟಿಂಪಿನೆಗಂ ಸೊಗಯಿಸಿದುದು ಸಾಂದ್ರಚಂದ್ರಿಕಾವಿಸ್ತಾರಂ (ಕಾದಂಬ. ೦೯೩). **ಪಾಲುಗಡಲು** : ಪಾಲುಗಡಲಲಿ ಫಣಿಯ ಮಂಚದ ಮೇಲೆ ಪವಡಿಸಿ ಪರಮನೆನಿಸಿದ ಲೀಲೆಯೆತ್ತಲು ಮಾನುಜಭಾವದ ನಟನೆ ತಾನೆತ್ತ (ಕಾಶಿರಾ. ೯೩-೯೩): ಪಾಲುಗಡಲು ಮನೆಯಾಗಿರಲು ಬಂದಾಲದೆಲೆಯ ಮೇಲೆ ಮಲಗುವರೆ (ಪುರಂದರ. ೪–೦೦೯–೦). **ಪಾಲ್ಗಡಲು** : ಪಾಲ್ಗಡಲೊಸವೊಕ್ಕ ಶಶಿಯಂತೆ ಪೊಕ್ಕು ನೀರ್ಗಲ್ಲಿನ ರುಚಿಸರಸಿಯನು ಸಲ್ಗಿಯ ಸುರರೆಪ್ಪಿ ಮಿಂದು (ಭರತೇ. ೯-೯೯) ; ಕೊಡವಾಲು ಪುಳಿವೆರೆ ನಳಿವುದಲ್ಲದೆ ಪಾಲ್ಗಡಲು ನಾಶವನೈದುವುದೆ (ಮೋಹತ. ೦-೩೦). **ಹಾಲುಗಡಲು** : ಇದು ಹಾಲುಗಡಲಿನ ಸೀಮೆ ; ಚಂದ್ರಮನೆ ಸ್ವಾಮಿ (ಶಾದೇಶ. ೬೩-೦೬). **ಹಾಲ್ಗಡಲು** : ತುಳಿರಿಂದೆ ಹೆಪ್ಪಾದ ಹಾಲ್ಗಡಲಿನೈಕಿಲೊಳ್ಗಣ್ಣೆಯು ಕಡಿಕಡಿಯುತಿಟ್ಟಿಗೆಯನೊಟ್ಟಿ (ಕಶ್ಯಾಂಗ. ೯೦–೨೯೯೯): ಹಾಲ್ಗಡಲಿನ ತೆರೆತೆರೆಯ ಮೇಲೆ ಮಹಾವಿಷ್ಣು ನರ್ತಿಸಿದಾಗ ಲಾಸ್ಯಕಲೆ ಮೂಡಿ ಬಂದಿತು (ಸಾಂಪ್ರಸ. ೦೦೬).

**ಪಾಲ್ಗಡಲ ಕುವರಿ** = ಕ್ಷೀರಸಾಗರದಲ್ಲಿ ಜನಿಸಿದವಳು: ಲಕ್ಷ್ಮಿ : "ಸಿರಿ ಲಕುಮಿ ಮಾಲಕುಮಿ ಪಾಲ್ಗಡಲ ಕುವರಿ ಮಿಕ್ಕ ತಾವರೆವನೆಯಳೆಂಬ ಪೆಸರಿಂದಿರೆಗೆ" (ಕಬ್ಬಮಂ. ೬). **ಪಾಲ್ಗಡಲ ಮಗಳ್** = ಪಾಲ್ಗಡಲ ಕುವರಿ : ಪಾಲ್ಗಡಲ ಮಗಳನಿಯನೊಡನೆ ಬೊಮ್ಮಂ ಸರಿವಿಂಗಿಲ್ಲೆ ಕನಿಸಿಂ ಪೋರೆ (ಚಾವತಂ. ೩.೨೬). **ಪಾಲ್ಗಡಲೊಡೆಯ** = ಕ್ಷೀರಸಾಗರದ ಒಡೆಯ ವಿಷ್ಣು : ಕರಿಯ ವರನ ಚಕ್ರದಿ ಉದ್ಧರಿಸಿದ ಹರಿ ನಮ್ಮ ಪಾಲಿಪ ಪಾಲ್ಗಡಲೊಡೆಯನು (ಪುರಂದ. ೩–೦೩೩–೦) ; ಕರ್ಣಜ ಪಾರ್ಥರಾಸ್ಯಂಗಳ ಕಡುಚೆಲ್ವುಕಾಂತಿಕಲೆಗಳನಾಂತುವಾಗ ಪಾಲ್ಗಡಲೊಡೆಯನಂ ಮುಂದೆ ಕಂಡು (ಕೃಮಿಭಾ. ೨೯–೬೬). [ಪಾಲ್$_1$ + ಕಡಲ್$_2$]

**ಹಾಲ್ಗಡಲು** 'ಪಾಲ್ಗಡಲ್' ನೋ.

**ಹಾಲ್ಗಡೆ** (ಕ್ರಿ). ಹಾಲನ್ನು ಕಡೆ. — ಮಥಿಸು : ಒಂದೆ ಕೈಯೊಳ್ ಪಾಲ್ಗಡವೆನೆಂಬ . . . ಪೆರ್ಗಾವಿಲನಂ ಪೋಲ್ಯುಂ (ರಪರಾಪ್ತ. ೩-೦೦೬ ಅತಿಪದ್ಯ); ಘನಕುಚೆ ಗೋಪಿ ಪಾಲ್ಗಡೆಯುತುಂ ಮನೆವಾಟಿಗೆ ಪೋಗೆ (ಜಗಂ. ೩-೩೦). [ಪಾಲ್$_1$ + ಕಡೆ$_1$]

**ಹಾಲ್ಗಜಿ**, ಹಾಲುಕರೆ (ಕ್ರಿ). ಹಾಲನ್ನು ಕರೆ, – ಹಿಂಡು : ಇನಿತು ಪಾಲ್ಗಜಿದು ಹೊಂಬಟ್ಟಲೊಳಿರಿಸಿ ತಾಂ ನಿಲಿಸಿ ಬಂದಾ ಮಲಹರನ ಬಳಿಗದೆ ಯುವತಿ ಹೋದಹಳು (ಬಸಪು. ೩೦–೦೨) ; ಕಾಡುವ ಪಶುವಿನ ಬಾಲವ ಕಟ್ಟಿಸಿ ಕೂಡೆ ಪಾಲ್ಗಜಿಯಲು ಒದೆಯುವುದೆ (ಪುರಂದ. ಧಾ. ೨–೯೦–೨). **ಹಾಲುಕರೆ** : ಹಾಲುಕರೆದು ಮೊಸರು ಮಾಡಿ . . . ವ್ಯಾಪಾರ ಮಾಡುತ್ತೇವೆ (ಹಸುಹೊ. ೬೦) ; ಹೊಸದಾಗಿ ಬಂದು ಕೊಟ್ಟಿಗೆ ಸೇರಿರುವ ಕಾಳೆಮ್ಮೆಗೆ ಕರು ಬಿಟ್ಟು ಹಾಲುಕರೆದುಕೊಂಡಿದ್ದಾರೆ (ಜೀವಸು. ೯೦). [ಪಾಲ್$_1$ + ಕಜಿ$_1$]

**ಹಾಲ್ಗಾಜಿ**, ಪಾಲುಗಾರ (ನಾ). ೧. (ಆಸ್ತಿಯ) ಭಾಗಸ್ಥ ; ಹಿಸ್ಸೆದಾರ : ಪಾಲು ಬರಬೇಕಾದ ಹಕ್ಕುಳ್ಳವನು : ಪಾಲ್ಗಾಜಿರಣ್ಣಂದಿರ್ ! ಎಲ್ಲಮಂ ಪೇಟ್ವೆನ್ (ಅಕ್ಕತಾ. ೦೨–೨೯೯). **ಪಾಲುಗಾರ** : ೧. ಕರಾರು ಪತ್ರಕ್ಕೆ ಎಲ್ಲ ಪಾಲುಗಾರರ ಒಪ್ಪಿಗೆ ಮತ್ತು ಅಂಕಿತಗಳು ದೊರೆತ ಮೇಲೆ, ಪಾಲುಗಾರಿಕೆಯು ಪೂರ್ಣವಾಗುತ್ತದೆ (ತಕ್ಕಡಿ. ೯೬) ; ಪ್ರತಿಸ್ಪರ್ಧಿ ಎನ್ನುವುದಕ್ಕಿಂತಲೂ ಪಾಲುಗಾರ ಎನ್ನುವುದೇ ಸರಿ (ಮುಂಗಾಮು. ೩೯). ೨. ಪಾಲುಗೊಳ್ಳುವವನು : ಊರಲ್ಲಿಯ ಎಷ್ಟು ಜನರ ದುಃಖದಲ್ಲಿ ಅವನು ಈಗಾಗಲೇ ಪಾಲುಗಾರನಾಗಲಿಲ್ಲ ? (ಮೂರುದಾ. ೦೬೨). [ಪಾಲ್$_2$ + –ಕಾಜಿ]

**ಹಾಲ್ಗುಂಬಳ**, ಹಾಲಗುಂಬಳ, ಹಾಲುಕುಂಬಳ, ಹಾಲುಗುಂಬಳ, ಹಾಲ್ಗುಂಬಳ (ನಾ). ಒಂದು ಬಗೆಯ ಬಳ್ಳಿ ಮತ್ತು ತರಕಾರಿಯಾಗಿ ಬಳಸುವ ಅದರ ಕಾಯಿ ; ಸೋರೆ : ಮುಟಿಗಾಲದೊಳೆಲೆವಾಡಂ ಹುಟಿಯೆಳ್ಳಿಂ ಹಿಟಿದ ತೈಲಮಂ ಬಿಸತತಿಯಂ ಮೊಳೆಯುಳ್ಳುಮುಮಂ ಪಾಲ್ಗುಂಬಳಮಂ[ಪಾಕಾಂ. ಯುಲ್ಲಮನುಪ್ಪುಂಗಾಯ್ಗಳಂ]ಸೇವಿಸಲುಮಾಗದೆಂಬಂ ಜೈನಂ (ಸಮಸ. ೬-೯). **ಹಾಲಗುಂಬಳ** : "ಶ್ರಮಾಪ್ತೀ – ಹಾಲಗುಂಬಳ" (ಓಕಂ. ೦೬೨); ಕಹಿಸೋರೆಬಳ್ಳಿ, ಈಸುಗಾಯಿಬಳ್ಳಿ, ಹಾಲಗುಂಬಳ (ಪ್ರಹಿನ. ೯೯–೯೬೨). **ಹಾಲುಕುಂಬಳ** : "ಇಕ್ಷ್ವಾಕು __ ಹಾಲುಕುಂಬಳಕಾಯಿ. ೨. ರಾಜವಿಶೇಷ" (ಗಂಗಾಮು. ೩೩). **ಹಾಲುಗುಂಬಳ** : "ದೀರ್ಘವೃಂತ ಫಲಾ–ಹಾಲುಗುಂಬಳ" (ಓಕಧಿ. ೬೬) ; ಹಾಲುಗುಂಬಳ ಪನಸಫಲದ ಸಾರತರ ಶಾಕಭೇದವ ನಾನು ಬಲ್ಲನಿತ ಚಾರುಚಂದ್ರಾನನೆಯರಜೀವ ಮಾಳ್ಕೆಯೊಳನುರಾಗದಿಂದವೆ ನುಸುರ್ವೆನು (ಸೂಪಶಾ. ೩ ಸೂತಕ) ; ಹಾಲುಗುಂಬಳ . . . ಕಫವಾತಕರ (ಅಷ್ಟಾಂಗ. ೧೩೬–೯೬). **ಹಾಲ್ಗುಂಬಳ** : ಹಾಲ್ಗುಂಬಳ

ಕಾಯಿಯ ಪಲ್ಯ ತಿಂದು ಕೈ ಕಾಲೆಲ್ಲ ಪಾತ ಹಿಡಿದುಕೊಂಡಿದೆ (ಜಾಪ).
[ ಪಾಲ್$_1$ + ಕಾಯ್ ]

**ಪಾಲ್ಗುಡಿ.** ಹಾಲ್ಕುಡಿ. ಹಾಲ್ಗುಡಿ (ಕ್ರಿ). ೧. ಹಾಲನ್ನು ಕುಡಿ.–ಪಾನ ಮಾಡು: ಕಳ್ಗುಡಿವವರಂ ಪೊಲ್ಲರೆಂಬಂತೆ ಪಾಲ್ಗುಡಿವವರನೇಕೆ ಪೊಲ್ಲರೆನ್ನರ್ (ರಾಜಾಪು. ೭-೪೩) ; ನಂದಿನಿಯು ಪಾಲಿದ ನೀಂ ಕುಡಿಯಲ್ಕೆ ನಿನ್ನ ಚೆಂದಿಕೆ ಬಳೆವಪ್ಪುದೆಂಬುಬಲಿ ನಂಬಿಸಿ ಪಾಲ್ಗುಡಿದು (ಜಗ. ೩-೫೦) ; ಕಲ್ಲಿನಾಥನ ಕಂಡೆಜಗಿ ಮುಂದೆ ಪಾಲ್ವಟ್ಟಲನಿಟ್ಟು ದೇವ ಪಸಿದೆ ಪಾಲ್ಗುಡಿವುದೆಂದುಸುರ್ದು ಕೊಡಗೂಸು ಕಂಭವಂ ಮಱಗೊಂಡು ನಿಂದಿರ್ದು (ವೃಶಪ. ೯-೬೧ ವ). **ಹಾಲ್ಕುಡಿ :** ೨. ಎದೆಹಾಲು ಕುಡಿ : ಮೊಲೆಯುಣ್ಣು : ಹಾಲ್ಕುಡಿವ ಮಗುವನ್ನು . . . ಬಿಟ್ಟು. ಹೊಲಗೆಲಸಕ್ಕೋ ಗದ್ದೆಕೆಲಸಕ್ಕೋ ಹೋದ ತಾಯಿ ಮನೆಗೆ ಹಿಂದಿರುಗುತ್ತಾಳೆ (ಸಸ್ಯರು. ೧೭). **ಹಾಲ್ಗುಡಿ :** ೩. ರಸವನ್ನು ಕುಡಿ : ಗೌರಿಹುಣ್ಣಿವೆ ಹಾಲ್ಗುಡಿದು ಬೀಜೋಳ ಧ್ವಜವನ್ನೆತ್ತಿತು (ಕಿಂಶು. ೧೨-೧೧). [ ಪಾಲ್$_1$ + ಕುಡಿ$_1$ ]

**ಪಾಲ್ಗುಡಿಸು.** ಹಾಲುಕುಡಿಸು (ಕ್ರಿ). ೧. ಹಾಲನ್ನು ಪಾನಮಾಡಿಸು : ಹಂಸೆಗೆ ಪಾಲ್ಗುಡಿಸೆಂಬ . . . ಹಾವರಿಯ ನೆಳಲ್ಗೆ ಹರಿಣಂಗಳಂ ಹೊಡೆಯೆಂಬ ಕೆಲಸದ ನೆವದಿಂ ರತಿಮುಂಗಳೆ ಬಂದ ಕೆಳದಿಯರೆಲ್ಲರಂ ಮೆಲ್ಲಮೆಲ್ಲನೆ ಕಳುಪಿ (ಸಂಬಿರ. ೧೯-೩೪). **ಹಾಲುಕುಡಿಸು :** ೨. ಮೊಲೆಯೂಡು : ಸ್ತನ್ಯಪಾನ ಮಾಡಿಸು : ಎಷ್ಟು ಹೊತ್ತಿಗೆ ಹಾಲುಕುಡಿಸುವೆನೋ ಎಂದು ಹಾತೊರೆಯುತ್ತ ಬಂದ ತಾಯಿ . . . ಅಲ್ಲೊಂದು ಕಡೆ ಕುಳಿತು ಹಾಲೂಣಿಸುತ್ತಾಳೆ (ಸಸ್ಯರು. ೧೭).
[ ಪಾಲ್$_1$ + ಕುಡಿಸು$_1$ ( <ಕುಡಿಯಿಸು ) ]

**ಪಾಲ್ಗನೆ** (ನಾ). ಹಾಲನ್ನು ಕಾಯಿಸಿದಾಗ ಮೇಲೆ ನಿಲ್ಲುವ ತಿರುಳು.–ಸಾರವತ್ತಾದ ಭಾಗ: ಹಾಲಿನ ಕೆನೆ : ಪುಳಗಂಬು ತದಿಕನ ಕೆಂಪೆಳರಂ ಪಾಲ್ಗನೆಯುನೆಳೆಯ ಪುಲ್ಲಂ ಕಬ್ಬಂ ಬಲವಂತನಕ್ಕುಮೆಂಬುಜ್ಜ್ವಲಚಿತ್ತಂ ತಂದು ಪೊರೆವುದುಂ ಗಜಶಿಶುವಂ (ರಾಜಾಪು. ೧೨-೧೪೯).
[ ಪಾಲ್$_1$ + ಕೆನೆ$_3$ ]

**ಪಾಲ್ಗೊಂಬ** (ನಾ). (?) : ಮಲ್ಲಿಗೆವಾವಿ ಅಂತೆ ಬರೆ ಪಾಲ್ಗೊಮ್ಬ ಎಂಬ ಪುಣಸೆ ಅಂತೆ ಬರೆ (ಪ್ಯಆರ. ೧೯೨೦. ೧೦-೧೮೬ ; ೩೬೭). [ ? ]

**ಪಾಲ್ಗೊಡು** (ಕ್ರಿ). ಹಾಲನ್ನು ಕೊಡು.–ನೀಡು : ಪಸಿವಱತು ತಾಯ್ಪನ್ನ ಶಿಶುವಿಗೆ ಒಸೆದು ಪಾಲ್ಗೊಡು[ಪಾಠಾಂ. ಮೊಲೆಕೊಡು]ವಂತೆ ನೀ ಪೋಷಿಸದೆ ಬೇಱನ್ನಾರು ಪೋಷಕರಾಗಿ ಸಲಹುವರು ( ಹಂಶಾ. ೨೩).
[ ಪಾಲ್$_1$ + ಕೊಡು$_1$ ]

**ಪಾಲ್ಗೊಳ್.** ಪಾಲುಗೊಳ್ಳು (ಕ್ರಿ). ೧. ಭಾಗವನ್ನು ಹೊಂದು.–ಪಡೆ : ಬೇಡವೋ ಸ್ತ್ರೀಸರಸನೊಡನವನ ಶಯ್ಯೆಯುನ್ ಪಾಲ್ಗೊಳ್ವುದೆಂದುಂ ಬೇಡವೋ ಬಾಸಿಂದವಿಂಬಿದು ಬಂದವನೊಡನೆ ಪಾದುವೆ ತಾನೆಂದುಂ (ಚನ್ನಪ್ರ. ೧೭-೧೦೨೭). **ಪಾಲುಗೊಳ್ಳು :** ೧. ನಮಗೇ ಸಾಲದಿರುವ ಅನ್ನದಲ್ಲಿ ಇವು ಪಾಲುಗೊಳ್ಳುವುದರಿಂದ ಹಾಗೂ ನಮ್ಮ ಸಂಖ್ಯೆಯೂ ಬೆಳೆಯುತ್ತಿರುವುದರಿಂದ ಇಳಿಯ ಭವಿಷ್ಯಕ್ಕೆ ನಾವು ಕೈಯಿಕ್ಕಬೇಕಾಗಿದೆ (ದೇಶಸ್ಥ. ೪೫). ೨. ಭಾಗವಹಿಸು : ಪಾತ್ರವಹಿಸು : ಈ ಜನ ಸಹಜವಾಗಿಯೂ ಎಂಬಂತೆ ತಮ್ಮ ಜೀವನದರ್ಶನದಲ್ಲಿ ಪಾಲುಗೊಳ್ಳುವಂಥ ಮಿತ್ರಮೇಳವನ್ನೆ ಸದಾ ಆಶ್ರಯಿಸಿರುತ್ತಾರೆ (ಪುಸರು. ೧೯೭) : ಅಸಂಖ್ಯ ರೂಪಗಳು ಇದರಲ್ಲಿ ಪಾಲುಗೊಂಡರೂ ಇದು ಹೆಚ್ಚುವುದೂ ಇಲ್ಲ ಕುಂದುವುದೂ ಇಲ್ಲ . . . ಈ ಸೌಂದರ್ಯ ಸಂಪೂರ್ಣವಾದುದು (ಸೌಂದ. ೧೦೭).
[ ಪಾಲ್$_2$ + ಕೊಳ್$_1$ ]

**ಪಾಲ್ಗೋಡು** (ನಾ). (ಪ್ರಾಯಶಃ ಮೃದುವಾಗಿದ್ದು) ಅಲುಗಾಡುವ ಕೋಡು : ಈ ಕೋಡು ಅಲುಗಾಡುವ ಹಸುಗಳಿಗೆ ಹಾಲು ಹೆಚ್ಚು ಎಂಬ ನಂಬಿಕೆಯಿದೆ : ಸವಿಜೇನ ಸಜ್ಜನಿಂಬನಿಯುನೆಱದು ಪಾಲ್ಗೋಡಿನ ಜೋಲ್ಗಚ್ಚಲ ಕೋರವೊಲೆಯ ಎಳಗಂದಿ ಕರ್ದುಪಿನ ತೊರೆದ ತಂಬಾಲಂಬೆರೆದು ಹಸಿ (ಶಬರಶಂ. ೦೦೦-೩೦). [ ಪಾಲ್$_1$ + ಕೋಡು$_5$ ]

**ಪಾಲ್ತುತ್ತ.** ಹಾಲ್ತುತ್ತ (ನಾ). ಬಿಳಿಯ ಪಾಷಾಣ : ಮೈಲುತುತ್ತ : (ಶ). **ಹಾಲ್ತುತ್ತ :** (ಶ). [ ಪಾಲ್$_1$ + ತುತ್ತ. / ತವಿ. ಪಾಲುತ್ತ; ತೆಲು. ಪಾಲತುತ್ತ ]

**ಪಾಲ್ತೊಱೆ** 'ಪಾಲ್ದೊಱೆ' ನೋ.

**ಪಾಲ್ದಳಿ** (ಕ್ರಿ). ಹಾಲನ್ನು ಸಿಂಪಡಿಸು.–ಚಿಮುಕಿಸು : ಮಲ್ಲಿಗೆಯುರಳ್ಗುಡಿ ಪಾಲ್ದಳಿದಂದದಿ ಚಲ್ಲಿತು ಬೆಳುದಿಂಗಳಳಿಗೆ (ಪೋಚಕ. ೦೩-೦೦೨).
[ ಪಾಲ್$_1$ + ತಳಿ$_1$ ]

**ಪಾಲ್ದಾರ.** ಪಾಲುದಾರ (ನಾ). ಪಾಲುಗಾರ : ಭಾಗಸ್ಥ : (ಶ). **ಪಾಲುದಾರ :** ನಿನ್ನ ದುಃಖದಲ್ಲಿ ನಾನೂ ಪಾಲುದಾರ ಎಂದು ಹೇಳೋಣ ಅಂತ ಬಂದೆ (ಪೊಸಕ್ಕ. ೦೨೦). [ ಪಾಲ್$_2$ + – ದಾರ$_4$ ]

**ಪಾಲ್ದುಂಬು.** ಹಾಲುತುಂಬು. ಹಾಲ್ದುಂಬು (ಕ್ರಿ). ೧. ಹಾಲು ತುಂಬಿಕೊಳ್ಳು. – ಭರ್ತಿಯಾಗು : ಪಾಲ್ದುಂಬಿದ ಸಾಲ್ದನೆಗಳ ನೆಲ್ದುಱುಗಲನೊಲ್ದು ಸೀಳೆ ಗಿಳಿ (ಬಾಹಿಕ. ೨-೦೩). **ಹಾಲುತುಂಬು :** ೧. ಭತ್ತದ ಗದ್ದೆ ತುಂಬ ಪೈರು ಕದರು. ಕದರಿನಲ್ಲಿನ್ನೂ ಹಾಲು ತುಂಬಬೇಕು. ಹಾಲು ಗಟ್ಟಿಯಾಗಿ ಕಾಳು ಮೂಡಬೇಕು (ಮೂರುದಾ. ೨೦೭). ೨. ಹಾಲನ್ನು ತುಂಬಿಸು.–ಭರ್ತಿಮಾಡು : ಬಾಟ್ಲಿಯಲ್ಲಿ ಹಾಲುತುಂಬಿ ಕೊಡು (ಜಾಪ). **ಹಾಲ್ದುಂಬು :** ೧. ಚಿತ್ತದ ೪೦–೭೫ ದಿನಗಳಲ್ಲಿ ಹಾಲ್ದುಂಬಿ ಮೊದಗೆ ಬಂದು ಬಿಡುವುದು. ಹೀಗೆ ಹಾಲ್ದುಂಬುತ್ತಲೇ, ಕೊಯ್ದು ದನಕ್ಕೆ ಹಾಕಿದರೆ, ಅತ್ಯಂತ ಪೋಷಕಆಹಾರವಾಗುತ್ತದೆ (ನೋಣ್ಯಾ ಸ. ೭೦). [ ಪಾಲ್$_1$ + ತುಂಬು$_1$ ]

**ಪಾಲ್ದನೆ.** ಹಾಲ್ದನೆ (ನಾ). ಧಾನ್ಯದ ಎಳೆಯ ತೆನೆ ; ಹಾಲು ತುಂಬಿದ ತೆನೆ : ಸಸಿಯಂತೆ ಪೊಡೆಯಂತೆ ಪಾಲ್ದನೆಯಂತೆ ಕೊಯ್ಲಾದಂತೆ (ರಾಜಾಪು. ೦೨-೨೪) ; ಗಿಳಿ ಸೋವಂಗನೆಯರ ಕಣ್ಗಳ ರುಚಿ ದೆಸೆದೆಸೆಗೆ ಪಸರಿಸಿರೆ ಪಾಸಿನ ನಿರ್ಮಳಜಾಳಮೆಂದು ಪಾಲ್ದನೆಗಳ ದೆಸೆಗಂ ಸಾರವಂಚಿ ಕೆಲವರಗಿಳಿಗಳ್ (ಧನ್ಯಪು. ೨-೭೮) ; ಉರ್ವರೆಯ ಶಾಲಿಗಳ ಪಾಲ್ದನೆಗೆ ಸಭೆದಿಂ ಮುಸುರ್ವ ಗಿಳಿವಿಂಡುಗಳನುಲಿಯಿಂದ ಪಾಮರಿಯರೆರ್ವಿಸಿದೊಡೆ (ಕೃಮಿಶಾ. ೩-೫). **ಹಾಲ್ದನೆ :** ಸಂಜೆಯ ರಂಜಿಸುವ ಹೊಂಬಿಸಿಲಿನಲ್ಲಿ ಆ ಬಂಗಾರ ಬೆಳೆ ಬಂದ ಹಕ್ಕಿಗಳಿಗೆ ಹಾಲ್ದನೆಯ ಗುಟುಕು ಕೊಡುತ್ತ ಸೃಷ್ಟಿಯ ಅನಂತಕರುಣೆಗೆ ಉದಾಹರಣೆಯಾಗಿ ನಿಂತಿದೆ (ಕಠ. ೨೦೬).
[ ಪಾಲ್$_1$ + ತೆನೆ$_1$ ]

**ಪಾಲ್ದೊರೆ.** ಪಾಲ್ತೊರೆ (ಕ್ರಿ). ೧. (ಮೊಲೆಯಲ್ಲಿ) ಹಾಲು ತುಂಬಿಕೊಳ್ಳು.–ಕೂಡಿಕೊಳ್ಳು : (ಶ). ೨. (ಮೊಲೆಯಿಂದ) ಹಾಲು ಜಿನುಗು; ಹಾಲು ತೊಟ್ಟಿಕ್ಕು. – ಸ್ರವಿಸು : ಬಾಲಂಗೆ ಮೋಹದಿಂದೆ . . . ಪಾಲ್ದೊರೆದ ಮೊಲೆಯುಣಿಸಿ (ಕೃಮಿಶಾ. ೦೮-೨೦). **ಪಾಲ್ತೊರೆ :** ೨. ಕಣ್ಣೀರೆಯುದರ್ಭಕನಂ ನಡೆನೋಡಿನೋಡಿ ಪಾಲ್ತೊರೆದು ಕುಚಂಗಳಿಂ ಬಿಡದೆ ಸೂಸುವ ಸ್ನಪನಗೆಂದು ಸಾಗರ್ದಮೋ (ಮಲ್ಲಿಪು. ೩-೧೦೩).
[ ಪಾಲ್$_1$ + ತೊರೆ$_2$ ]

**ಪಾಲ್ದೊಱ್.** ಹಾಲ್ದೊರೆ (ನಾ). ಹಾಲಿನ ಪ್ರವಾಹ.–ಹೊಳೆ : ತೊಱೆಗಳೆಲ್ಲಂ ಪಾಲ್ದೊಱ[ಪಾಠಾಂ. ಪಾಂದೊಱ]ಯೆನಿಸಿಯುಂ (ಆಪು. ೪-೩೭೮) ಬಯಲ ಪಾಲ್ದೊಱೆಯ ಪೀರ್ವಂತೆ ಪೀರ್ದೊಂದಿಬ ಬಯಕೆಯಿಲ್ಲದೆ ತಣಿದಿಹನು (ಶಠ. ೦೮-೩೩). **ಹಾಲ್ತೊರೆ :** ಪೆರೆ ತುಂಬಿ ಮೂಡಿದನು. ಹಾಲ್ತೊರೆಯುದಾಸುನ ಬಾನಿಂದ ಬಂತು (ಸತಿದು. ೧. ೪೫೦).
[ ಪಾಲ್$_1$ + ತೊಱೆ$_2$ ]

**ಪಾಲ್ನೊರೆ** (ನಾ). ಹಾಲಿನ ನೊರೆ: ಪಾಲ್ನೊರೆವೆಳ್ಪಿನಂತೆ ... ಕಂಗಳ ಕಾಂತಿ ದೆಸೆದೆಸೆಗೆ ಪಸರಿಸಲ್ (ತಬಪು. ೩೭-೩೪). [ ಪಾಲ್$_1$ + ನೊರೆ$_2$]

**ಪಾಲ್ಪಡು** (ನಾ). ಒಂದು ಸ್ಥಳದ ಹೆಸರು: ಶ್ರೀ ಎರ್ಮ್ಮೆಯರ ಮಗ ಬೊಲ್ಲಗಂಗಗಾಮುಣ್ಡನಿಱಿದು ಬಿದ್ದನಾತಂಗೆ ಪಾಲ್ಪಡುವಿನುಳ್ಪಡುವಣ ಕೆಱೆಯುಳ್ ತಾವರೆ ಕಟ್ಟಿನ್ಕೆಱಗೆ ಮೂವತ್ತು ಗೊಳಂ ಕಬನಿ ಕಲ್ನಾಡು ಸರ್ವ್ವಪರಿಹಾರಪ್ರಸಾದಂಗೈದಾರ್ (ಎಕ. X, ಬಾಂಗ್. ೦೩-೫; ಸು. 890); ತುಱುವ ಮಗುೞ್ಚಿ ಮಣ್ಣೆಯಾಚರಿಯಱಿಯಂ ಪಾಲ್ಪಡುವಿನ ಚೋಲಾಚರಿ ಇಱಿದು ಸರ್ಗ್ಗಸ್ತನಾದಂ (ಎಕ. X, ಕೋಲಾರ. ೦೪-೬; 1036).

[ ? ]

**ಪಾಲ್ಪಸುಳೆ, ಹಾಲುಹಸುಳೆ** (ನಾ). ಹಾಲು ಕುಡಿಯುವ ಮಗು; ಹಸುಗೂಸು: ಸೃಷ್ಟಿಯಿದು ನಿನ್ನೆರ್ದೆಯ ಪಾಲ್ಪಸುಳೆ, ಓ ತಾಯೆ (ಶ್ರೀರಾಮಾ. ೦೩೩-೨೦೭). **ಹಾಲುಹಸುಳೆ**: ಆಕೆಗಿದ್ದುದು ಹಾಲುಹಸುಳೆಯಾಗಿದ್ದ ದಿನದಿಂದ ತನ್ನನ್ನು ಸಾಕಿ ಸಲಹಿದ ಅಜ್ಜಿಯ ಆವಶ್ಯಕತೆ (ಬಡಕೊ. ೦೦೭).

[ ಪಾಲ್$_1$ + ಪಸುಳೆ ]

**ಪಾಲ್ಬಟ್ಟಲ್** (ನಾ). ಹಾಲಿನ ಬಟ್ಟಲು: ನಾವಿದಂ ನೋಡುವೆವೆನುತ ಶಿವದೇವನಾ ಪಾ ಲು ವಿ ಪ ಸ ವ ಬ ಳೆ ಯನಾ ವಿಧದೊಳೊಬ್ಬಳವಳೆದು ಪಾಲ್ಬಟ್ಟಲಂ ಕೊಟ್ಟು ದೇವನಿಳಯಕೆ ಕಳುಹುತಂ (ಬಸಪು. ೦೪-೨೬); ಕಲ್ಲಿನಾಥನಂ ಕಂಡಱಗಿ ಮುಂದೆ ಪಾಲ್ಬಟ್ಟಲನಿಟ್ಟು ದೇವ ಪಸಿದೆ ಪಾಲ್ಗುಡಿವುದೆಂದುಸುರ್ದ (ವೃಶಕೊ. ೯-೭೦೫). [ಪಾಲ್$_1$ + ಬಟ್ಟಲ್ ]

**ಪಾಲ್ಬತ್ತು** (ಕ್ರಿ). ಹಾಲು ಇಲ್ಲದಂತಾಗು; ಹಾಲು ಇಂಗಿ ಹೋಗು: ಪಾಲ್ಬತ್ತಿದಾಕಳಂತೆ ಮಕ್ಕಳಿಲ್ಲದ ಸತಿಯಂತೆ (ರಸರ್ಜಾಮ್ಯ. ೯-೨೩ ಅಷಕದ್ಯ).

[ ಪಾಲ್$_1$ + ಬತ್ತು$_1$ ]

**ಪಾಲ್ಮರ, ಹಾಲ್ಮರ** (ನಾ). ಹಾಲು ಬರುವ ಆಲ, ಅತ್ತಿ, ಅರಳಿ, ಇಪ್ಪೆ, ಗೋಣಿ, ಬಸರಿ ಮುಂತಾದ ಮರ; ಕ್ಷೀರವೃಕ್ಷ: ಮಧುಮದ್ಯಮಾಂಸಂಗಳುಮಂ ಪಾಲ್ಮರದ ಪಣ್ಗಳುಮಾಳಂಬೆಯುಂ ಸಣಂಬಿನ ಪೂವುಮೆಂದಿವಂ ಸೇವಿಸುವರುಂ ... ಮಿಱು ನರಕಂಗಳೊಳ್ ಪುಟ್ಟಿ ದುಃಖಿಗಳಪ್ಪುದರ್ (ವಡ್ಡಾರಾ. ೦೨೩-೦೩); ಮರಂಗಳೆಲ್ಲಂ ಪಾಲ್ಮರಂಗಳೆನಿಸೆಯುಂ ಬಳ್ಳಿಗಳೆಲ್ಲಮಮೃತವಳ್ಳಿಗಳೆನಿಸೆಯುಂ (ಅಕಪು. ೪-೩೭ವ); ತ್ರಿಕತ ಪಾಲ್ಮರನೇಱ ಪಿಂಗಲಿ ಬಳಿದು ಬಾಯ್ಗೊಂಡವು ಸರಾಗದಿನೊಲಿದು ದಂಪತಿ ತಾಜನಿತ್ತವು ಕರಿಯ ಹಕ್ಕಿಗಳು (ಕುರಾ. ೦-೩-೩); ಪಾಲ್ಮರದ ಚಕ್ಕೆ ಪದನ್ನು ಅಂಬಿಲದಲ್ಲಿ ಅರೆದು ಮೈಗೆ ಪೂಸಲು ದಾಹಜ್ವರ ಪರಿಹಾರವಹುದು (ಕಕವ್ಯ. ೫೩). **ಹಾಲ್ಮರ**: ತುಪ್ಪಂ ಸಾಸಿವೆ ಹಾಲ್ಮರನ ಸಮಿತ್ತು ಈ ದ್ರವ್ಯಂಗಳಿಂದೆ ಅಗ್ನಿದೇವತಾರ್ಥವಾಗಿರ್ದ ಮಂತ್ರಂಗಳಿಂ ಹೋಮಮಂ ಮಾಡಿಸಿ (ದೊಡೆದೇವ. ೪-೪೭ ಟೀಕು).

[ ಪಾಲ್$_1$ + ಮರ$_1$ ]

**ಪಾಲ್ಮೞೆ** (ನಾ). ಹಾಲಿನ ಮಳೆ; ಕ್ಷೀರಧಾರೆ: ಬಸರ್ದಪುದಮರ್ದಿನ ಪಾಲ್ಮೞೆ ಪಸರಿಸಿತೆನೆ ಜಗಮನೊಡನೆ ಕರ್ಪೂರದ ರಜಂ ಮುಸುಕಿದುದೆನೆ ಪುದಿದೇಱಿದುಱಿಮಿಱಿದ ಪೊಳೆವ ಮೃತಕರಣಮೃತಕರಂಗಳ್ (ಅಪು.೦೨-೦೦).

[ಪಾಲ್$_1$ + ಮೞೆ]

**ಪಾಲ್ಮುನ್ನೀರ್** (ನಾ). ಹಾಲಿನ ಸಮುದ್ರ; ಕ್ಷೀರಸಾಗರ: ಪಾಲ್ಮುನ್ನೀರ್ ದೊಳೆನ್ಸುಳಿಕೆಲರಂಗಳ ಬಲ್ಪನೆಯ್ದೆ ಕ್ಷುಡಿಯುಟ್ಟಿಗಸದೊಱ ಮೇಲ್ಪಿನ ಪೊಳ್ಪುಱಿಯೊಳಗಾಳ್ವಿಲ್ಲಿಯ ಬೆಳ್ಪಾವರೆಗೆಯ್ದ (ಜನ್ನ. ೨-೩೩).

[ ಪಾಲ್$_1$ + ಮುನ್ನೀರ್ ]

**ಪಾಲ್ಮೊಲೆ** (ನಾ). ಹಾಲು ತುಂಬಿರುವ ಮೊಲೆ: ಕಿವಿದ ಪಾಲ್ಮೊಲೆಯುಂ ತಳರ್ವಾಯಿಂಮಾವರಿಸುತ ಕರ್ಪುರದ ಕಂದನ ಸರ್ವಾಂಗಮನೀಕ್ಷಿಸಿದಾಕೆಯ ಕಣ್ಗಳ್ ಪೀಲಿಯ ಕಣ್ಗಳೆ (ಜಯಾಶಾ. ೨-೩೭). [ ಪಾಲ್$_1$ + ಮೊಲೆ$_1$ ]

**ಪಾಲ್ಯ** (ಗು). ೧. ಕಾಪಾಡಬೇಕಾದ; ರಕ್ಷಿಸಬೇಕಾದ. (ನಾ). ೨. ಕಾಪಾಡಬೇಕಾದುದು; ರಕ್ಷಿಸಬೇಕಾದುದು: ಅಜಿತವಿಜಿತಕಲ್ಪಿಷ ನಿನಗಿಂ ತ್ಯಾಜ್ಯಂ ಪರಿಗ್ರಹಂ ದಲ್ ಪ್ರಾಜ್ಯಂ ತಪಮದುವೆ ಪಾಲ್ಯಮಾಕೈವಲ್ಯಂ (ಅಜಪು. ೬-೩೩). [ ಸಂ. ]

**ಪಾಲ್ಲಕಿ** ' ಪಲ್ಲಂಗ ' ನೋ.

**ಪಾಲ್ವಕ್ಕಿ, ಹಾಲಕ್ಕಿ, ಹಾಲವಕ್ಕಿ, ಹಾಲಹಕ್ಕಿ, ಹಾಲುವಕ್ಕಿ, ಹಾಲುಹಕ್ಕಿ, ಹಾಲ್ವಕ್ಕಿ** (ನಾ). ೧. ರಾತ್ರಿಯಲ್ಲಿ ಸಂಚರಿಸುವ ಗೂಬೆಯ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ; ಶಕುನದ ಹಕ್ಕಿ; ಪಿಂಗಲಿ: "ಎಸೆವ ಪಿಂಗಲಿ ಶಕುಂತಂ ಭಾಸಮೆನಲು ಪಾಲ್ವಕ್ಕಿ[ಪಾಠಾಂ. ಹಾಲುವಕ್ಕಿ] ಯೆಂದೆನಿಕ್ಕುಂ" (ಮಂಗರಾ. ೩೨-೬); ಪಾಲ್ವಕ್ಕಿ ಮೃಗಾಂಕ ಘೂಕ ದನುಜಂ ಪಾಠೀನಮಿಂತು ನಿಶಾಚರಮಕ್ಕುಂ (ನಾನಾ. ೨೪). **ಹಾಲಕ್ಕಿ**: ೧. ಚಿಲೀಪಿಲೀ ಚಿಲಿಪಿಲಿ ಎಂದೂ ಹಾಲಕ್ಕಿ ಉಲಿಯುತಲಿತ್ತ ಶುಭ ನುಡಿಯ (ನಾದಲೀ. ೩-೪); ಹಾಲಕ್ಕಿ ನೀಲಕ್ಕಿ ನೀಲವರ್ಣದಕ್ಕಿ ಬೇಲೂರ ಗದ್ದೆ ಗೊನೆಬತ್ತದ ನೆಲ್ಲಕ್ಕಿ ಸೇರಾವೆ ನಮ್ಮ ಅರಮನೆಗೆ (ಜಾಶದ.೧೦೫). **ಹಾಲವಕ್ಕಿ**: ೧. "ಪಿಂಗಲಃ — ಹಾಲವಕ್ಕಿ" (ಟಕಂ. ೯೭). **ಹಾಲಹಕ್ಕಿ**: ೧. ಹಾಲಹಕ್ಕಿಯನ್ನು ಹಿಂದುಗಡೆಯಲ್ಲಿ ಕಂಡರೆ ಬಹುಪುತ್ರಪ್ರಾಪ್ತಿ ಆಗುವುದು (ಶಾಗಂ. ೫೮೫-೭); ಹಾಲಹಕ್ಕಿಯು ಜಗದಾಹ್ಲಾದಕರವಾದ ಚಂದ್ರನ ಪ್ರಣಯಿಯನ್ನು ಉಚ್ಚಕಂಠದಿಂದ ಸಪ್ತಮತಾರದಲ್ಲಿ ಮಾತನಾಡಿಸುತ್ತಿದ್ದಿತು (ಕೋಟಿಶೂ. ೩); ಹಾಲಹಕ್ಕಿ ಆದರೆ ಹಾಲು ಕರೆದೀತೇ? (ಗಾದೆ). **ಹಾಲುವಕ್ಕಿ**: ೧. "ನೀಡೋದ್ಭವಃ — ಹಾಲುವಕ್ಕಿ, ಪಕ್ಷಿಸಮುದಾಯ" (ಟಕಂ. ೮೪); ಕೊಟ್ಟ ಕೂಗಿತ್ತು ಹಾಲುವಕ್ಕಿ ಬಳಿಯಿತ್ತು ಹಂಗ ಕಟ್ಟಿತ್ತು ಅವನ ಅವಳ ಮದುವೆ ನಿಂದಿತ್ತು (ಜಾಪಶಾ. ೪. ೦೪೩-೦೫೭); ಅಂದು ಮಧ್ಯಾಹ್ನ 'ಎಣ್ಣೆ ಜೋಗಿ' ಬಂದು ಹಾಲುವಕ್ಕಿಯ ಶಕುನವನ್ನು ಒಡೆಟಿ ಹೇಳುವಾಗ ... ಧೈರ್ಯ ಹೇಳಿ ಹೋಗಿದ್ದ (ಕಲುಮ. ೮೪). ೨. ಒಕ್ಕಲಿಗರಲ್ಲಿ ಒಂದು ಬಣ, – ಪಂಗಡ: ಬಾಲೋಲಿಕಾರ, ಬಂಟ, ದಬ್ಬಿ, ಗತ್ತಿ, ಗಂಡ, ಹಲದವ, ಹಾಲುವಕ್ಕಿ ... ಪಕ್ಕಲಿಗ, ವೆಲ್ಲಾಲ (ಕುಳುವಾ. ೦೭೦). **ಹಾಲುಹಕ್ಕಿ**: ೧. "ವಾಷ್ಟ್ಯಾಲೂಕಃ — ಹಾಲುಹಕ್ಕಿ" (ಟಕಂ. ೦೨೩); ಹಸುಬ ಹಂಗನು ಬಾವುಗೆ ಹಾಲುಹಕ್ಕಿಯು ಕುಶಲದಿಂದುಲಿವ ಮಣಿಯನು ಚಸನಾಗಿ ಶಕುನವ ಪೇಳ್ವ ಪಕ್ಷಿಗಳು ಪಾತ್ರೆಸೆದವು ಆ ಮಲೆಯೊಳಗೆ (ಋಷೀಶಾಂ. ೦-೬೦). **ಹಾಲ್ವಕ್ಕಿ**: ೧. ಖಗಾವಳಿಯ ಗೂಡುಗಳಲ್ಲಿ ಗಲಗು ಪಿರಿದಾಯ್ತು ಹಾಲ್ವಕ್ಕಿ ಹರಿದವು ಪಕ್ಕೆಗೆ (ಸಪ್ತಕಾ. ೦೦-೩೮); ಹಾಲ್ವಕ್ಕಿ ಕೋಗಿಲೆ ಕೋಟದೇವನ ಕುಕ್ಕುವಾಯಿಯ ಕೆಂಡವಕ್ಕಿಗಳವಱೊಳೊಪ್ಪಿದುದು (ಸಾಳ್ವಭಾ. ೫-೨೨).

**ಹಾಲಕ್ಕಿ ಒಕ್ಕಲರು**=ಒಕ್ಕಲಿಗರ ಒಂದು ಒಳಪಂಗಡ. ಕರಾವಳಿ ಪ್ರದೇಶದಲ್ಲಿ ವಾಸಿಸುವ ಜನರಲ್ಲಿ ನಾಡವರು. ಹಾಲಕ್ಕಿ ಒಕ್ಕಲರು, ನಾಮಧಾರಿಗಳು ಮುಖ್ಯವಾಗಿ ಒಕ್ಕಲತನದಿಂದ ಜೀವಿಸುವರು (ಕರಜೀ.೩).

[<ಪಾಲ್$_1$ + ಪಕ್ಕಿ]

**ಪಾಲ್ವಣ** ' ಪಾರಿವಾಳ$_1$' ನೋ.

**ಪಾಲ್ವಳ್ಳ, ಹಾಲುಹಳ್ಳ** (ನಾ). ಒಂದು ಹಳ್ಳದ ಹೆಸರು: ಸಾಜಿಕಿಯ ಸೀಮಾಸಂಬನ್ಧದಿಯನ್ತೆನ್ದೊಡೆ ತೆಂಕ ಪಾಲ್ವಳ್ಳಂ ನೈರಿತಿಯೊಳ್ಬರವುಲಿಗೆಱೆಯ ತೆಂಕಣ ಕೋಡಿಯಿಂ (ಕಾಇಶ, XI-i, ೫೨-೫೩; ಸು. 1007). **ಹಾಲುಹಳ್ಳ**: ನಮ್ಮೂರಂತೂ ಹಾಲುಹಳ್ಳದ ದಂಡೆಯ ಮೇಲಿದೆ. ಅದರಿಂದಲೇ ನಮ್ಮೂರಿಗೆ ಹಾಲುಹಳ್ಳ ಎಂದು ಹೆಸರು ಬಂದಿದೆ. ಹಾಲುಹಳ್ಳವು ಊರ ಪೂರ್ವಕ್ಕಿದ್ದು ಹನ್ನೆರಡುತಿಂಗಳೂ ಜುಳುಜುಳು ಎಂದು ಹರಿಯುತ್ತಿದೆ (ಕಕಪು. ೬-೧). [ ಪಾಲ್$_1$+ಪಳ್ಳ ]

**ಪಾಲ್ಪೊನಲ್** (ನಾ). ೧. ಹಾಲಿನ ಹೊಳೆ : ಆ ಕುಮುದಾಕರಂಗಳ ತನಿವೆಳಗಿನ ಬಳಗಮಂ ಪಾಲ್ಪೊನಲ ಪೂರಮೆಂದು ಒೀರ್ವಾಸೆಯಿಂ ಪರಿತರುತಿರ್ಪ ತರುಣಕಲಹಂಸಪ್ರಸರಮುಂ (ಕುಸುಚ. ೨-೭೧ ವ). ೨. ಕಬ್ಬಿನ ಹಾಲಿನ ಹೊಳೆ : ರಸದಾಳಿಯೊಸೆವ ಪಾಲ್ಪೊನಲೊ ಸೊಗಯಿಪ ಪೊಚ್ಚಪೊಸ ಜೇನ ಸೋನೆಯೋ (ಶಬ್ದರ. ೧-೩೦). ೩. ಎಳೆಯ ಧಾನ್ಯದ ರಸದ ಪ್ರವಾಹ : ಕೀರಕಿಶೋರಚಂಚುಹತಿಯಿಂದೆನಸುಂ ಕಣಿಶಾಗ್ರಭಾಗದಿಂ ಭೋರನೆ ಸೋರ್ವ ಪಾಲ್ಪೊನಲೆ ಕಾಲ್ಪೊನಲಾಗೆ (ಕುಸುಚ. ೨-೪೫). [ ಪಾಲ್$_1$ + ಪೊನಲ್ ]

**ಪಾಲ್ಪೊಸೆ** 'ಪಾಲ್ಪೊದೆ' ನೋ.

**ಪಾಲ್ಪೊದೆ, ಪಾಲ್ಪೊಸೆ** (ನಾ). ಬೆಳ್ಳಗಿರುವ ಸುಣ್ಣ : ಅರೆದೊಡೆ ಸೌಧಸಂತತಿಗೆ ಪಾಲ್ಪೊದೆಯುಪ್ಪ ಕಟಲ್ಗೆ ಕೂಡೆ ಕಪ್ಪುರವಳುಕಪ್ಪುಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ (ಜಗಿ. ೧೬-೧೦೯). **ಪಾಲ್ಪೊಸೆ** : ರೂಢಿವಡೆದ ನೃಪಾಲಕರ ನೆಲೆವಾಡ ಚಿನ್ನದ ಚಿನ್ನ ಕನ್ನಾವಾಡಮೊಪ್ಪುವವಾತ್ಮಮುಖ್ಯರ ಪಾಲ್ಪೊಸೆಯ ಮಾಡ (ಸಾಳ್ವಭಾ. ೨-೯). [ ಪಾಲ್$_1$ + ಸೊದೆ ]

**ಪಾವಕ** (ಗು). ೧. ಶುದ್ಧಗೊಳಿಸುವ ; ಪವಿತ್ರಗೊಳಿಸುವ. ೨. ಶುದ್ಧವಾದ. ೩. ಪ್ರಕಾಶಮಾನವಾದ. (ನಾ). ೪. ಶುದ್ಧಗೊಳಿಸುವಂತಹುದು : ಆವ ಜೀವದ ಪಾಕವಾವನುಭವದಿನಹುದೊ . . . ನೋವೆಲ್ಲ ಪಾವಕವೊ (ಮಂಕುಕ. ೩೦೯). ೫. ಬೆಂಕಿ ; ಅಗ್ನಿ: "ಸಪ್ತಾರ್ಚಿಃ . . . ಪಾವಕಃ . . . ಹುತಾಶನಃ—ಈ ೪೦ ಕಿಚ್ಚಿನ ಪೆಸರ್" (ಹಲಾಯು. ೧೨-೬೨); ಪಾವಕನಟ್ಟಿ ಖಾಂಡವಮನುಂಡಪನರ್ಜುನನೂಡಿದಪ್ಪಂ (ಶಂಶಭಾ. ೫-೭೮) ; ಪಾವಕನು ನಿಜರೂಪದಿಂದಾ ದೇವಿಯರನೊಡಗೊಂಡು ಬಂದನು (ತೊರಾ. ೪೩-೩೯). ೬. ಉತ್ತಮವಾದ ಆಚರಣೆ ; ಸದಾಚಾರ ; ಒಳ್ಳೆಯ ನಡತೆ. ೭. ದೀಪದ ಬತ್ತಿ. ೮. ಆಗ್ನೇಯಾಸ್ತ್ರ. ೯. ಮೇಲಕ್ಕೆ ಕಾಣುವಂತಹುದು ; ಸ್ಪಷ್ಟವಾದುದು. ೧೦. ಗೇರು ಮರ. ೧೧. ಒಂದು ಬಗೆಯ ಔಷಧಿಗಿಡ ಚಿತ್ರಮೂಲ. ೧೨. ವಾಯುವಿಳಂಗ. ೧೩. ಮಂಕಾಳ್ತಿಯ. ೧೪. ನೆಲ್ಲಿಗಿಡ. ೧೫. ವರುಣ. ೧೬. [ಛಂದ] ಅಕ್ಷರಗಣಗಳಲ್ಲಿ ಒಂದು; ನಡುವೆಲಘು ವಿರುವ ಗಣ; ರಗಣ (–U–): ಪಾವಕೋದ್ಭಾವದಿಂ ಶ್ರೀವಧೂಪಾವನಂ (ಛಂದೋಂಬು. ೨-೩೮); "ಉತ್ತಮಾಚಾರದೊಳು ಗೇರಿನೊಳು ನಜುಪಲೊಳು ಚಿತ್ರಮೂಲದೊಳಗ್ನಿಯೊಳು ಕಿಚ್ಚುಗೋಲೊಳುರಿವತ್ತಿಯೊಳು ಪಾವಕವೆನಿಸ್ಕು" (ಮಂಗರಾ. ೦೩೩-೬೨); "ವೀತಿಹೋತ್ರಂಗೆ ಸಲೆ ಭಲ್ಲಾತಕಿಗುಂ ಚಿತ್ರಮೂಲದೊಳು ತೀವ್ರದೊಳುಂ ಆತುರದಿ ಮುಗಿದ ವಸ್ತುಗಳೀ ತೆಱದಿಂ ಪಾವಕಾಖ್ಯವೆನಿಕುಂ" (ನಾನಾಳಂ. ೦೪೩). [ಸಂ.]

**ಪಾವಕದಿಕ್ಕು** (ನಾ). ಅಗ್ನಿಯ ದಿಕ್ಕು ; ಆಗ್ನೇಯ : ಪಾವಕದಿಕ್ಕಿನಂತೆ ವನದಂತೆ . . . ಕಾಮಿಜನದಂತೆ ಸಮುತ್ಕಳಿಕಾಕುಳಂ ಕೊಳಂ (ಶಿಕ್ಷಪು. ೨-೬೩). [ಪಾವಕ + ದಿಕ್ಕು]

**ಪಾವಕನಯನ** (ನಾ). ಬೆಂಕಿಗಣ್ಣ ; ಶಿವ : ಪಾವಕನಯನನಪರಾವತಾರನು : . . ಸುಖದಿಂದೆ ಸುರಗಿಯ ಚೌಡರಸನಿರ್ದ (ಬಸಪು. ೩೩-೨೦) ; ಸಕಲಜನರಾ ಜಲಪ್ರಳಯವಾಗಲ್ಕೆ ಪಾವಕನಯನಗಂದು ಮೊಱೆಯಿಡೆ (ಶೀಕ್ಷಪು. ೩-೧೧-೬). [ಪಾವಕ + ನಯನ]

**ಪಾವಕಪಾವನೆ** (ನಾ). ಅಗ್ನಿಪರೀಕ್ಷೆಯಿಂದ ಶುದ್ಧಳೆಂದು ತೀರ್ಮಾನಿಸಲ್ಪಟ್ಟವಳು; ಸೀತೆ : ಹಾ! ರಾಘವಾ! ಪಾವಕಪಾವನೆಯುಂ ತೊಱೆಯುಲ್ಕೆಂತು ಮನಂದಂದೆಯ್ ? (ರಾಮಾಶ್ವ. ೨೫-೧೭). [ಪಾವಕ+ಪಾವನೆ]

**ಪಾವಕಾಂಬಕ** (ನಾ). = ಪಾವಕನಯನ : ಪಾವಕಾಂಬಕಮೂರ್ತಿ ಸೊಡ್ಡಳದೇವ ಬಾಚರಸಯ್ಯನೆಸಲತಿಪಾವನಾತ್ಮನು (ಬಸಪು. ೫೩-೧) ; ಇಂತಪ್ಪ ಸತ್ಪುರುಷನಾವ ಕಾರ್ಯಕ್ಕೆ ಕಳುಹಲು ಮಾರುಪವನಲ್ಲ ಪಾವಕಾಂಬಕನೆಡೆಗೆ ಕಳುಹುವುದೆಯನುಚಿತಂ ಕಳುಹದಿರೆ ಸಕಲಸುರರ ಬಾಧೆ ಹಿಂಗದು (ಸಸವೋ. ೫-೭). [ಪಾವಕ + ಅಂಬಕ]

**ಪಾವಕಾಕ್ಷಿ** (ನಾ). (ಶಿವನ) ಬೆಂಕಿಯ ಕಣ್ಣು ; ಬೆಂಕಿಯನ್ನುಗುಳುವ ಕಣ್ಣು : ನೀನಖಿಳಮಂ ನಿನ್ನ ಭಾಳದ ಪಾವಕಾಕ್ಷಿಯಿಂ ತೆಗೆದು ಸುಡುವಲ್ಲಿ (ಶೀಕ್ಷಪು. ೨-೩-೫೬). [ ಪಾವಕ + ಅಕ್ಷಿ ]

**ಪಾವಕಾಸ್ತ್ರ** (ನಾ). ಮಂತ್ರಿಸಿ ಬಿಟ್ಟಾಗ ಬೆಂಕಿಯನ್ನು ಸುರಿಸುವುದೆಂದು ನಂಬಲಾದ ಒಂದು ಅಸ್ತ್ರ ; ಆಗ್ನೇಯಾಸ್ತ್ರ : ಪಾವಕಾಸ್ತ್ರವು ಮೊಱೆದು ಭುಗಿಭುಗಿಲೆಂದು ಹೊಗೆಯಾವರಿಸಿ ಕವಿತರಲು (ತೊರಾ. ೩೬-೫೭); ಪಾವರದೊಳೆವ್ವ ಪಡಬಾಗ್ನಿಯೋ ವಿಲಯರುದ್ರನ ಪಣೆಯ ಕಣ್ಗಿಚ್ಚದೋ ಭಾವಿಸುವೊಡರಿದೆಂಬೊಲಾಯುದು ಧನಂಜಯನ ಪಾವಕಾಸ್ತ್ರಂ (ಕೃಬಾ. ೦೩-೧೧). [ ಪಾವಕ + ಅಸ್ತ್ರ ]

**ಪಾವಕಿ$_1$** (ನಾ). ೧. ಅಗ್ನಿಯ ಮಗ. ೨. ನೀಲ : ಪಾವಕಿಯ ಪಟುತನವ ಬಣ್ಣಿಪನಾವನಿಂದ್ರಾರಿಯನು ಗೆಲುವನು . . . ಕಲಿಗಳ ದೇವನೀ ಕಪಿಯೆಂದು ಹೊಗಳಿದ ರಾವಣನ ಮಗ ಮತ್ಸರಂಗಳ ಬಿಟ್ಟು ಪರಿಣಮಿಸಿ (ತೊರಾ. ೩೪-೪೩). ೩. ಕಾರ್ತಿಕೇಯ ; ಸ್ಕಂದ. [ ಸಂ. ]

**ಪಾವಕಿ$_2$** (ನಾ). ಅಗ್ಗಿಷ್ಟಿಕೆ ; ಕುಮುಟಿ : "ಪಾವಕಿ(ಕೆ)ಯೆನಲ್ ಬೆಸಕಿಲಕ್ಕು" (ಮಂಗರಾ. ೬೧-೨೦). [ಪಾವಕ + —ಇ$_3$ ?]

**ಪಾವಟಣಿಗೆ** (ನಾ). ಮೆಟ್ಟಿಲು ; ಸೋಪಾನ : ನೀರು . . . ಮೊನ್ನೆ ನಾನು ಬಂದಾಗ ಎರಡು ಪಾವಟಣಿಗೆ ಕೆಳಗಿದ್ದವು (ಸಮುಶೀ. ೮೭): ಆಕೆ . . . ಪಾವಟಣಿಗೆಗಳನ್ನಿಳಿದು, ಕೆಳಗೆ ಬಂದಳು (ಕೂಖಿಕಾ. ೧೦೬).
[ ←ಮರಾ. ಪಾವಟಣೀ, ಪಾವಠಣೀ ]

**ಪಾವಟಿ** (ನಾ). = ಪಾವಟಣಿಗೆ : ಚೆಲುವ ಪಾವಟಿಗಳನು ರಚಿಸುವೆ (ಪ್ರಾಕಸಿಂ. ೧೭-೯) ; ನೆರೆವರಸುಗಳ ಮಧ್ಯದಲಿಯೇರಿದನಲ್ಲಿ ಪಾವಟಿಯ (ಜನಭಾ. ೨೭-೧೯) : ಯಶೋದೆ ಗಾಡಿಯಿಂದಿಳಿದಳು. ವಸುಧೆಯೊಂದಿಗೆ ತಿಂಗಳ ಹಿಂದೆ ಹತ್ತಿದ್ದ ಪಾವಟಿಗಳನ್ನೇ ಹತ್ತಿ ಮೇಲೆ ಬಂದಳು (ವಾತ್ಸಲ್ಯ. ೨೨೭).
[ ←ಮರಾ. ಪಾವಟೀ / ತುಳು. ಪಾವಟೆ ; ತೆಲು ಪಾವಟ ]

**ಪಾವಟಿಕೆ, ಪಾವಟಿಗೆ** (ನಾ). = ಪಾವಟಣಿಗೆ : ನೂರಾರು ಪಾವಟಿಕೆಗಳನ್ನು ಇಳಿದ ಬಳಿಕ, ಬಾವಿಯ ಎರಡೂ ಮಗ್ಗಲಿಗೆ ಬಂಕಗಳಿವೆ (ಹಬ್ಬಿ. ೯). **ಪಾವಟಿಗೆ** : ಮುತ್ತಿನ ಪಸೆಯ ಜಗುಲಿ ನೀಲದ ಪಾವಟಿಗೆ ಮಿಕ್ಕ ಮಣಿಮಿಸುನಿಕುಸುರಿಗೆಲಸಂಗಳಿಂದಲಂಕರಿಸಿ . . . ಇಂಬುವಡೆದುದ್ವಾಹಮಂದಿರಂ ಮೆಱೆದುದು (ಹಾಲಾಸ್ಯ. ೧-೬-೨೭ ವ); ರಾಜಮಾತೆಯ ಹಣೆಯ ಮೇಲೆ ಮುಪ್ಪು ಇಳಿಯಲೆಂದು ಪಾವಟಿಗೆಗಳನ್ನು ಇಟ್ಟಂತೆ ನಾಲ್ಕಾರು ಸುಕ್ಕುಗಳು ಇದ್ದುವು (ಸವತಿ. ೩೧).
[ ಪಾವಟ + — ಇಕೆ ]

**ಪಾವಟಿಗೆ** 'ಪಾವಟಿಕೆ' ನೋ.

**ಪಾವಟೆ** 'ಪಾಪಟ್ಟೆ$_2$' ನೋ.

**ಪಾವಡ$_1$** 'ಪಾವುಡ$_1$' ನೋ.

**ಪಾವಡ$_2$** 'ಪಾವುಡ$_2$' ನೋ.

**ಪಾವಡ$_3$** (ನಾ). ಕಣದಲ್ಲಿ ಧಾನ್ಯವನ್ನು ಒಂದೆಡೆಗೆ ಸೇರಿಸಿ ರಾಶಿ ಮಾಡಲು ಅಥವಾ ನೆಲವನ್ನು ಸಮಮಾಡಲು ಬಳಸುವ (ಕಬ್ಬಿಣದ) ಸಾಧನ ; ಗೋರೆ : ಒಬ್ಬ ಕಮ್ಮಾರನು ಒಂದು ಗುದ್ದಲಿಯನ್ನು ಕೊಟ್ಟು ಪಾವಡವನ್ನು ತಕ್ಕೊಳ್ಳಲಿಕ್ಕೆ ಅಪೇಕ್ಷಿಸುತ್ತಾನೆಂದು ಕಲ್ಪಿಸುವ (ಮುಂಬಯಿ. ೫-೨೬೧).
[ ←ಮರಾ. ಪಾವಡೇ, ಫಾವಡೇ ]

**ಹಾವಡ₄**, ಪಾವುಡ₄ (ನಾ). ರಿಕಾಪು ; ಅಂಕವಣೆ : ಪಾವಡಗಳ ಮೆಟ್ಟಿ ವಾಘೆಗೆ ಕೈನೀಡಿ ರಾವುತರೊಡೆಯನೊಪ್ಪಿದನು (ಚಿತ. ೨೯-೦೬). **ಪಾವುಡ₄** : ತಂಡತಂಡದೊಳು ನಡೆದು ಬಹ ಪೌಜನು ಕಂಡು ಪಾವು [ಪಾಠಾಂ. ವ]ಡಗಳ ಮೆಟ್ಟಿ ಮುಂಡೆಯ ನೆಗಹಿ ನೋಡುವ ರಾವುತರ ಗಂಡ ಗಿಂಡಿಯ ಲಕ್ಕನೆಯ್ದಿದನು (ಕುಮಾರಾಂ. ೧೧-೫೬). [ ? ]

**ಹಾವಡಜಲ** (ನಾ). ಬಟ್ಟೆಯಿಂದ ಮುಚ್ಚಿ ತಂದ (ಅಭಿಷೇಕದ) ನೀರು: ಭಾವವೊಂದಿಲ್ಲದೆ ಪಾವಡಜಲ ತಂದು ತೀವಿ ಲಿಂಗಾರ್ಚನೆಗಳನು ಮೂರೇಳೆಯೊಳು ಮಾಡಿ (ಶರಣ. ೨-೩೪).

[ ಪಾವಡ$_1$ (< ಪಾವುಡ$_1$) + ಜಲ$_2$ ]

**ಹಾವಡಿಗ**, ಹಾವಡಿಗ, ಹಾವಾಡಿಗ (ನಾ). ಹಾವುಗಳನ್ನು ಹಿಡಿದು ಆಡಿಸುವ ವೃತ್ತಿಯುವನು : ಹಾವಾಡಿಸುವವನು : ಪಾವಡಿಗಂ ಪಾವಿನ ಬಯ್ಗೊಳ್ . . . ಇರುಳ್ವಟ್ಟೆಗಾಜಿಂ ಕಳ್ಳನ ಕಯ್ಗೊಳ್ ಸಿಕ್ಕು ವಂತೆ (ರವಚಾಕ್ಷು. ೧೩-೦೫೫) ; ಪಾಪಂ ಪಿಡಿದನಿತಜೊಳೀಂ ಪಾವಡಿಗರ್ ಸುಭಟರಪ್ಪರೇ ಜಗುನೆಯು ನೀರ್ವಾವಂ ಪಿಡಿದನಿತಜೊಳುರ್ವೀಪಳಯುಂ ಸುಭಟನೆಂಗುಮೇ ಹರಿ ನಿನ್ನಂ (ಜಗಿಂ. ೧೭-೪೪) : ಅಡಿಗ ಪ್ರತ್ಯಯಕ್ಕೆ – ದೇವಡಿಗಂ, ಪಾವಡಿಗಂ, ಪೂಪಡಿಗಂ (ಶಮದ. ೨೦೩ ಕೃ.ಯೋ). **ಹಾವಡಿಗ** : "ವ್ಯಾಳಗ್ರಾಹೀ, ಅಹಿತುಂಡಿಕಃ–ಈ ೨ ಹಾವಡಿಗಂ" (ಹಲಾಯು.೧೧೦೦-೪೩೯) ; ನಾನಾವರ್ಣದ ಸಂಸಾರ ಹಾವು ಹಾವ[ ಪಾಠಾಂ. ವಾ ]ಡಿಗನ ಸ್ನೇಹದಂತೆ (ಬಸವ. ೧೨) : ವೈನತೇಯನ ವಿಗಡಿಸಿದ ವಿಷವೇನು ಸದರವೂ ಹಾವಡಿಗರಿಗೆ (ಕುವ್ಯಾಅ. ೦೫-೦೦) : ಹಾವ ಹರಿಕಟಕದಲಿ ಹರಹಿದ ಹಾವಡಿಗರೇ ನಾವು (ಕೊರವಾ. ೬-೦೬-೯). **ಹಾವಾಡಿಗ**: " ವ್ಯಾಳಗ್ರಾಹೀ, ಅಹಿತುಂಡಿಕಃ — ಈ ೨ ಹಾವಾಡಿಗನ ಹೆಸರು" (ನಾಚರಾ. ೯೯) ; ಕಳ್ಳ ಹಾದರಿಗ ಹಾವಾಡಿಗ ಅಪರಾಧದಡು ಶಿವಲಾಂಛನವ ತಾಳ್ದು ಬಂದಲ್ಲಿ ಶಿವನೆಂದೇ ಪ್ರಮಾಣಿಸು ವುದು (ಮೋಳಿಮಾ. ೪೨-೦೬೫) : ಭೋಗಭಂಗಂ ಹಾವಾ[ ಪಾಠಾಂ. ವ ] ಡಿಗರೊಳ್ . . . ಅರ್ಥವಾದಂ ಸ್ತೋತ್ರದೊಳಲ್ಲದೆ ತನ್ನೊಳಿಲ್ಲೆನಿಸಿರ್ಪುದು (ರಚಳು. ೦-೨೨ ವ) : ಹಾವಾಡಿಗರು, ಗೊಂಬೆಲಿಗರು . . . ಎಲ್ಲರೂ ಸಂಪಣಿಸಿ ಒಂದಾಗಿ ಇರುವವರ ತಾಳ್ಮೆಯ ಪರೀಕ್ಷೆಯನು ಮಾಡುವರೋ (ಅರಳು. ೩೪೯-೦೦). [ ಪಾವು$_1$ + – ಅಡಿಗ$_2$ ]

**ಹಾವಡಿಗಿತಿ** (ನಾ). ಹಾವಾಡಿಗರ ಜಾತಿಯವಳು ಅಥವಾ ಹಾವಾಡಿಗನ ಹೆಂಡತಿ : ಪಾವಡಿಗಿತಿ. ಪೂಪಡಿಗಿತಿ. ಪಾಲೆಪಡಿಗಿತಿ . . . ಪಟ್ಟಸಾಲಿಗಿತಿ. ಗಂದಿಗಿತಿ (ಶಬ್ದಾನು. ೧೯೨ ಕೃಯೋ).

[ ಪಾವಡಿಗ + – ಇತಿ$_1$ (< – ಇತ್ತಿ) ]

**ಹಾವಡೆ** 'ಪಾವುಡ$_1$' ನೋ.

**ಹಾವಣೆ**$_1$ 'ಪಾವುಣ' ನೋ.

**ಹಾವಣೆ**$_2$ 'ಪಾವುಣೆ' ನೋ.

**ಹಾವತಿ** (ನಾ). ತಲುಪಬೇಕಾದ ವಸ್ತು, ಹಣ ಮೊದಲಾದುವು ತಲುಪಿದುವೆಂದು ಬರೆದು ಕೊಡುವ ದಾಖಿಲೆಪತ್ರ : ರಸೀದಿ : ತಾನು ಪೋಲೀಸ ಅಧಿಕಾರಿಯಾದುದರಿಂದ ಪಾವತಿಯನ್ನು ನೀಲಲೋಚನೆಯ ಹೆಸಿನಿಂದಲೇ ಬರೆಯಬೇಕೆಂದು ಹೇಳಿದ (ಕೃಇಕ. ೨೩) : ಅನೇಕ ಪಾವತಿಗಳಿಲ್ಲ. ಕೆಲವಂತೂ ಸುಳ್ಳುಪಾವತಿಗಳು ಎನ್ನುವುದು ಸ್ಪಷ್ಟವಿದೆ (ಐಮಾ. ೧೫೦). [ ← ಹಿಂ. ಮರಾ. ಪಾವತೀ ]

**ಹಾವತಿದಾರ** (ನಾ). ಹಣವನ್ನು ಕಟ್ಟಬೇಕಾದವನಂ, – ಕೊಡಬೇಕಾದವನು : (Drawer. ಪಾರಿಸಿ. ೩೩). [ಪಾವತಿ + – ದಾರ$_4$]

**ಹಾವತಿಪುಸ್ತಕ** (ನಾ). ರಸೀದಿಗಳನ್ನು ಬರೆಯುವ ಪುಸ್ತಕ ; ರಸೀದಿ ಪುಸ್ತಕ : ಕಿಸೆದಾಗ ಅದ ಅಲ್ಲಾ ಪಾವತಿಪುಸ್ತಕ (ತಿಡಗು. ೧೨).

[ಪಾವತಿ + ಪುಸ್ತಕ]

**ಹಾವನ** (ಗು). ೧. ಹಸನಂಗೊಳಿಸುವ ; ಪವಿತ್ರಗೊಳಿಸುವ : ಸುರವಕಂ ಸುರವಕ್ತ್ರಪಾವನಸದಾಚಾರಂ . . . ನಂದನಂ ಪುಟ್ಟಿದಂ (ಪುಕ್ತಪು. ೦೩-೧೦). ೨. ಪರಿಶುದ್ಧವಾದ ; ಪವಿತ್ರವಾದ : ಪಾವನಕ್ಷೀರಮಂ ಕೊಡುವ ಕೆಚ್ಚಲ ಮಾಂಸವಾವ ಲೇಸು (ಕಸಕಾ. ೬-೦೭); ವರಧನುಷ್ಕೋಟಿಯಲಿ ಮಿಂದೀಶ್ವರಪದಾಂಬುಜಕೆಜಗಿ . . . ತತ್ತೀರ್ಥ ಸೇವಾಪರವುಪಾವನಕರಣನಾದನು (ಕುವ್ಯಾಅ. ೦೯-೦೫) ; ಕಳೇಬರವನರ್ಪಿಸುವೆ ಪಾವನ ಸರಿತ್ಪತಿಯ ವಿಸ್ಮೃತೌದಾರ್ಯಕ್ಕೆ ! (ಚಕ್ರಾಂಗ. ೩೬-೦೬೯೮). (ನಾ). ೩. ಶುದ್ಧವಾದುದು; ಪವಿತ್ರವಾದುದು: "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ — ಈ ೫ ಶುದ್ಧವಪ್ಪ ವಸ್ತು" (ಹಲಾಯು. ೨೨-೦೩೨) ; ಶರಣ ನಡೆದುದೆ ಪಾವನ ಕಾಣಿರೊ (ಬಸವ. ೮೬೨) ; ಪ್ರಚುರ ಕಾಳಿಂದೀವನಂ ಪಾವನಂ (ಜಗಿಂ. ೩-೬೬). ೪. ಪವಿತ್ರಗೊಳಿಸುವವನು : ದೇವನನರಿದು ಪೂಜಿಸಿದಾತ ಪಡುದರಂ ಶನಕ್ಕಧಿಕ ಜಗಕ್ಕೆ ಪಾವನ (ಬಸವ. ೬೦೭) : ರಾಜೀವಪೀಠನ ಪಿತನೆ ಜಗಕತಿ ಪಾವನನೆ . . . ಕಾವುದಾನತಜನವ (ಕುವ್ಯಾಅ. ೧-೧) ; ಅವ ವರ್ಣದಲು ದಿಸರಲು ಸದ್ಭಾವನನೆ ಪಾವನನು (ಗಗಕಾ. ೧೯-೩೮). ೫. ಬೆಂಕಿ ; ಅಗ್ನಿ. ೬. ಶುದ್ಧಗೊಳಿಸುವ ನೀರು, ಗೋಮಯ ಮೊದಲಾದ ವಸ್ತು. ೭. ತಪಸ್ಸು. ೮. [ ಛಂದ ] ಪ್ರತಿಯೊಂದು ಪಾದದಲ್ಲಿ ಮೂರು ಅಕ್ಷರಗಳಿರುವ ಒಂದು ಸಮಪಾದ ವೃತ್ತ : ಪಾವಕೋದ್ಭಾವದಿಂ ಶ್ರೀವಧೂಪಾವನಂ (ಛಂದೋಂಬು. ೨-೫೮). [ಸಂ.]

**ಹಾವನಗೊಳಿಸು** (ಕ್ರಿ). ಪವಿತ್ರಗೊಳಿಸು ; ಪುನೀತಗೊಳಿಸು : ಬಾದೊರೆಯೆ ! . . . ಕಡೆಗಣಿಸದಿರು ನಾನು ಬಡವನೆಂದು ಜೀವದಾಪ್ತೋಪಹಿಯನೆತ್ತಿ ಪಾವನಗೊಳಿಸು (ಬಿಪಾಸಿ. ೪೮-೩).

[ಪಾವನ + ಕೊಳ್$_1$ + – ಇಸು$_2$]

**ಹಾವನಚಾರಿತ್ರ** (ನಾ). ಒಳ್ಳೆಯ ಶೀಲ; ಶುದ್ಧವಾದ ನಡವಳಿಕೆ : ಪಾವನಚಾರಿತ್ರಾಪಥಸೇವೆಯೆ ದೋಷತ್ರಯಂಗಳಂ ಕಿಡಿಸೆ ತಪೋಭಾವನೆಯೊಳೆಸೆವನಾಮುಯನಾವನುಮಾ ಮುನಿಯೆ ಪರಮಾರ್ಥರ್ಮಕ್ಯಾರ್ಗಂ (ಅಜಿಪು. ೬-೬೦). [ ಪಾವನ + ಚಾರಿತ್ರ ]

**ಹಾವನತೆ** (ನಾ). ಪವಿತ್ರತೆ ; ಪಾವಿತ್ರ್ಯ ; ಪರಿಶುದ್ಧಿ : ಪಾವನತೆಗೆ ಬಯಸಿ ಜಗತ್ಪಾವನನಂ ಗಂಗೆ ಪೊರ್ದಿ ಪೊಗೆಟ್ಟಂದದಿನಿಂದೀವರಪರಿವಾಳರತ ಮಧುಪಾವಳಿರವದೆಸೆವುದವಾಳಪರಿಖಾವಳಯಂ (ಪಾರ್ಶ್ವಪು. ೦೬-೩೫) ; ಮುಸುಟಿ ಚೌಡಾರ್ಯ . . . ನಿಜಪಾವನತೆಯೊಪ್ಪಲು ನೋಡಿ ಶಿವ ಸಮಯಸ್ಥರಂ ಮಾಡಿ (ಬಸಪು. ೩೨-೬೩). [ಸಂ. ಪಾವನತಾ]

**ಹಾವನತ್ವ** (ನಾ). ಪಾವನತೆ ; ಪವಿತ್ರತೆ ; ಪರಿಶುದ್ಧಿ : ನೀವು ಬಿಜಯಂಗೆಯ್ದು ಕರುಣಾಭಾವಗುಣದಿಂ ನೋಡಿ ಮರ್ತ್ಯವನೋದಿ ಮನುಜರನೆಲ್ಲರಂ ನಿಜಭಕ್ತಿಯುಕ್ತಿಯಲಿ ಪಾವನತ್ವವನಿತ್ತು ಪಾಲಿಸಿ ಕಾವುದೆನ್ನಯ ಬಿನ್ನಪವನು (ಬಸಪು. ೦-೬೦) ; ಪಾವನತ್ವದಿ ನೋಡೆ ಅಮರಗಂಗಾಜನಕ ದೇವತ್ವದಲಿ ನೋಡೆ ದಿವಿಜರೊಡೆಯ (ಪುರಂದ. ೨-೦೬೪-೨).

[ಸಂ.]

**ಹಾವನಿ** (ನಾ). ೧. ವಾಯುದೇವನ ಮಗ. ೨. ಹನುಮಂತ ; ಆಂಜನೇಯ : ಪಾವನಿ ಜಾಂಬವಾಂಗದ . . . ಸುಗ್ರೀವ ವಿಯಚ್ಚರ ಪ್ರಮುಖರೇಟಿದ ರತ್ನವಿಮಾನಮಾಲೆ ಶೋಭಾವಹವಾಗಿ ಸುತ್ತಿ ಬರೆ (ಪಂಪಾಮಾ. ೧೨-೯೨) ; ಭಾನುಜನೆಂಬುದು ಬೇಟ್ಟವರ್ಗ್ಗೆ ಪಾವನಿ ಪರನಾರಿಗೆಂಬುದು ಧರಿತ್ರಿ ಸೆಗಟಿತ್ತಿಯ ತಂತ್ರಪಾಟನಾಮಾನಂ (ಎಕ. XII, ಪಾವುಗ. ೪೩-೩೦ ; 1161). ೩. ಭೀಮಸೇನ : ಪಾವನಿಯೊಳ್ ಪೊಣರ್ದಂ ಮಗಧಾವನಿಪಂ ಪೊಣರಲಂಜಿದಂ ನಿನಗೆ (ಜಗಿಂ. ೦೬-೩).

[ಸಂ.]

**ಪಾವನೆ** (ನಾ). ಪವಿತ್ರಳಾದವಳು ; ಪರಿಶುದ್ಧಳಾದವಳು : ವರ ರೂಪವತಿ ತಾನೆಂದು ವರಮಪಾವನೆಯೆಂದು ಬಱದೆ ಬೆಱಯದನು ಸರಿಸುವುದಾತ್ಮವಲ್ಲಭನ (ಹಂಂ. ೩-೩೦): ಬಲ್ಲನವಳಯೋನಿಜೆಯೆಂಬುದಂ ಪಾವನೆಯೆಂಬುದಂ ಪುಣ್ಯಶ್ಲೋಕೆಯೆಂಬುದಂ (ರಾಮಾಶ್ವ. ೨೫ ೨೬) ; ಪಾವನೆಯರಾ ಕೃಷ್ಣೆಭೀಮೆಯರ ತಾಯ್ನಾಡು ಕಾವೇರಿಗೋದೆಯರು ಮೈದೊಳೆವ ನಲುನಾಡು (ಕನ್ನಡಾ. ೧೧೦-೨೦). [ಸಂ. ಪಾವನಾ]

**ಪಾವನ್ನ** (ಗುಂ). ೧. ಪವಿತ್ರವಾದ : ಬಿನ್ನಪ ಲಾಲಿಸಯ್ಯಾ ಭಕುತವತ್ಸಲ ದೇವ ನಿನ್ನ ಸುರತರು ಪಾವನ್ನ ನೆಳಲು ಚೆನ್ನಾಗಿ ಸಂಬಿದವನೊ (ಪೋಳ್ವಂ. ೩-೧). (ನಾ). ೨. ಪುನೀತನಾದವನು: ದೇವಕೀಸುತಪೊಲಿದು ಕರೆತಂದು ಎನ್ನನು ಪಾವನ್ನ ಮಾಡಿದನು (ಏಹಾಕ್ಯ. ೧೫ ಅನುಪಲ್ಲವಿ). [<ಸಂ. ಪಾವನ]

**ಪಾವಮಾನಿ** (ನಾ). ೧. =ಪಾವನಿ ೨: ರಾಜೀವಲೋಚನ ನಿನ್ನೊಳೀ ಸರನೊಳೀ ಧ್ವಜದ ಪಾವಮಾನಿಯೊಳುಟಿ ಕಾದಿ ಮದ್ಭುಜದ ಕಂಡೂತಿಯಂ ಕಳೆಯ ವೇಳ್ಪುದೀಗ (ಕೃಮಿಷಾ. ೨೭-೩೫). ೨. =ಪಾವನಿ ೩ : ನಿನ್ನ ಕೊಂದಡೆ ಪಾವಮಾನಿಗೆ ಪಂಥ ತಪ್ಪುವುದೆನುತ ಖಾತಿಯಲಿ ತಾಪಕನ ಸಾರಥಿಯ ರಥ ತುರಗಾವಳಿಯನಾಯುಧವ ಖಂಡಿಸಿ ಜೀವಗಳ್ಳರ ದೇಪ ಪಸರಿಸಿದನು ಪಲಾಯನವ (ಕುವ್ಯಾಕ. ೪-೬). [ಸಂ.]

**ಪಾವರಣೆ,** ಪವರಣೆ, ಹಾವರಣಿ, ಹಾವರಣೆ, ಹಾವುರಾಣಿ (ನಾ). ಸರೀಸೃಪ ವರ್ಗಕ್ಕೆ ಸೇರಿದ ಒಂದು ಪ್ರಾಣಿ : ಬೇಳೆಯ ಪತ್ರುಂಗಳೊಳ್ ಬೇಳೆಯ ಗೆಡ್ಡೆಯನೆ ಕೂಡಿ ಮರ್ದಿಸಿ ಕುಡಲೇಂ ಪೇಟಲ ರಿದೆಂಬ ಕೊಟಕನ ಚೇಟಿನ ಪಾವರಣೆ[ಪಾಠಾಂ. ವಿರಣೆ]ಯುಗ್ರವಿಷ ಮನದಟಿಗುಂ (ಖಮದ. ೦೦-೬೪). **ಪವರಣೆ** : ಕೋಡು ಕೊಟಗೆಲ್ ತೊಗಲ್ . . . ಪಲ್ಲಿ ಪಾವು ಪವರಣೆ ನವಿಲಾರ್ಪೋಡೆಂಬಿವು ಕಷ್ಟಂ ಮನೆ ಮಾಡುವ ನೆಲನನಗುಟಿ ಕಾಣ್ಬೊಡೆ (ಲೋಕೋಪ. ೩-೦೫). ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಹಾವರಣಿ:** "ಉರಗಕರನೆನೆ ಹಾವರಣಿ [ಪಾಠಾಂ. ಹಾರವಣೆ]ಯಕ್ಕು" (ಮಂಗರಾ. ೪೯-೦೩) : ಸರೀಸೃಪಾಭಿಧಾನಮಂ ತಾಳ್ದಿದ ಉಡು ಓತಿ ಹಲ್ಲಿ ಹಾವರಣೆಯೆಂಬೀ ಜೀವಂಗಳಿಗೆ ಪವರ್ಪೂರ್ವಾಂಗ ಪರಿಸಂಖ್ಯೋತ್ಕೃಷ್ಟಾಯುಷ್ಯಮಕ್ಕುಂ (ಕಶಾರ. ೨೯೮). **ಹಾವರಣೆ** : "ದ್ವಿರಸಃ—ಉಡು, ಸರ್ಪ, ಹಾವರಣೆ" (೬೫ಧ. ೬೬): ಗೊದ್ದ ನೆಗವ ಹಾವರಣೆ ಕೆಂಜೇಳು . . . ಬುಸ್ಸೆಂಬ ಪಾವುಗಳಾಗ ವಿಗಡದೆ ಪರಿದಾಡುತಿಹುವು (ಕಂಸವ. ೦೬-೪೦). **ಹಾವುರಾಣಿ** : "ಸರಟಃ, ಕೃಕಲಾಸಃ—೨ ತೊಂಡೇ ಹೆಸರು ; ಹೆಂಟೇಗೊದ್ದ, ಓತಿಕ್ಯಾತ, ತೊಣ್ಣೇಕೇತ, ಹಾವುರಾಣಿಗೂ ಇದೇ ಹೆಸರೆಂದು ಕೆಲವರನ್ನುವರು" (ಸಿದ್ಧಾಂತಿ. ೬೩೬): ಈಗ ಹೋಗಿ ಬದುಕಿದ ಹಾವನ್ನೋ ಹಾವುರಾಣಿಯನ್ನೋ ತೆಗೆದು ಕೊಂಡು ಬರುವುದು ಬೇಡ (ತಸುಹೂ. ೯೦). [ಪಾವು$_1$+ಅರಣೆ]

**ಪಾವರಿ** (ನಾ). ಒಕ್ಕಲುಗಿತ್ತಿ ; ಪಾವರಿ : "ಪಾವರಿವೊಕ್ಕಲಗಿತ್ತಿ" (ತತೂ ೦೯೬). [< ಸಂ. ಪಾವುರೀ]

**ಪಾವಲಿ** (ನಾ). ಕಾಲುರೂಪಾಯಿಯ ನಾಣ್ಯ ; ನಾಲ್ಕಾಣೆ : ಖಿತಾಳರು ಆ ದಿನ ಪಾವಲಿ ಬಜೆ ತಿಂದವರು ಅದನ್ನು ಹೊಗಳದ್ದೆ ಹೊಗ ಳಿದ್ದು (ದೇವತಂ. ೬೫); ಮಾತೆಯು ವಿಶೇಷ ದಯಾಭಾವದಿಂದ ಎಳು ಪಾವಲಿ ತೆಗೆದು ಕೊಡುವಳು (ಕಮಳ. ೦೪).

[ ←ಹಿಂ. ಪಾವಲೀ ; ಮರಾ. ಪಾವಲಾ, ಪಾವಲೀ ]

**ಪಾವಸೆ,** ಪಾಂಶೆ, ಪಾಂಸೆ, ಪಾಚಿ$_1$, ಪಾಚೆ, ಪಾಮಾಜಿ, ಪಾಸಿ$_1$, ಪಾಸೆ$_1$, ಹಾಂಸೆ, ಹಾಚಿ, ಹಾವಂಚೆ, ಹಾವಚಿ, ಹಾವಚೆ, ಹಾವಸಿ, ಹಾವಸೆ, ಹಾವುಸೆ (ನಾ). ೧. ನೀರಿನ ಮೇಲೆ ಅಥವಾ ತೇವವಾದ ಬಂಡೆಗಳ ಮೇಲೆ ಬೆಳೆಯುವ ಒಂದು ಬಗೆಯ ಹಸುರು ಸಸ್ಯ : ಶೈವಾಲ : "ಶೈವಾಲಂ ಜಲನೀಲಿ ಶೈವಳವುದು ನೀರೊಳಾದ ಪಾವಸೆಯೆನಿಕುಂ" (ವಸ್ತುಕೋ. ೨೫-೦೬): ಎಳೆದನಿಸಿರ್ದ ಪಾವಸೆಯ ತಣ್ಣೆಲೆಟಿಯಿಂದಮೆ ನೆಯ್ದ ಸೀರೆ ಶೀತಳಿಕೆಯು ಬಾವರಂ ಪೊಸಪ್ರಸೂನಾಳಿದ ತೋಳ್ವಳೆ . . . ಸಿರಿಕಂಡದಿಂ ಕಣ್ಣೊಳೆ ನೆಲಸಿರ್ದರಲ್ಲಿ ಜಲದೇವಿಯರಂತೆ ವಿಳಾಸಿನೀಜನಂ (ಕಾದಂಉ. ೪೫೯): ಹರಿವ ವಾರಿ ನೆಟಿ ಪಾವಸೆ ಮುಸುಕುವುದೇ (ಪೋಶನಾ. ೯೦-೩೫೬) : ಇದು ಪರಿದಿರ್ದ ಪಾವಸೆ ಮುಗಿಲ್ಬಟಿಯೆಂಬನಮಿಂಬುಗೆಟ್ಟು ಕರದಿದ ಪಟಗಂಬುಗನ್ನಡಿ ಪೊಲೇನಿಳದಾದುದೊ ಚಂದ್ರಮಂಡಲಂ (ಸಂಪ್ರಕೃ. ೯-೫). **ಪಾಂಶೆ :** ೧. ನಿಂದ ವಾರಿಯಲ್ಲಿ ಪಾವಸೆ ತನ್ನಿಂದ ಒದಗಿದಂತೆ ಚರಿಸೆ ಪಾಂಶೆ [ಪಾಠಾಂ. ಪಾಸಿ, ಹಾವಸೆ] ಹಱದು ನಿರ್ಮಲವಾದಂತೆ (ಬಸ್ವಾಪು. ೪. ೬೫-೦೦೦). **ಪಾಂಸೆ:** ೧. ತ್ರಿವಿಧದ ಸತ್ವಯು ಸರ್ವೇಂದ್ರಿಯ ಬೆಳೆದ ಪಾಂಸೆ [ಪಾಠಾಂ. ಪಾಸೆ]ಯು ಮಱಯಲ್ಲಿ ತಪ್ಪಿಹೋಯಿತ್ತು ಮತ್ಸ್ಯ (ಸಶವ. III. ೫೯-೧೧೦; ಸವವ. ೬೦-೫೦೬ ನೋ : ನಿರ್ಮಳೋದಕದಿನಾ ಪಾಂಸೆ ಪರಮಾತ್ಮನಂ ಜೀವಭಾವಮಿವು ಮುಸುಕಿಕೊಂಡಿರ್ಪಂತೆ ಜಗದೊಳುಳ್ಳ ಅರಸುಗಳ ವೇಷ್ಟಿಸಿರ್ಪುದು ಕ್ಷಾತ್ರತಾಪಾಸಂ (ರಾಜ್ಯ. ೬-೨). **ಪಾಚಿ$_1$ :** ೧. ಸರಸಿಜಮೆಲ್ಲ ಬೇಯೆ ಕೆಸರುಂ ಜಲಮುಂ ತವೆ ಪಾಚಿ ಕರ್ಗಿ ಪಲ್ಗಿರಿವ ತೆರಂ ಸರಂ ಕರಮೆ ಬೀಡೆಗೆಳಾಗಿರೆ ಪಕ್ಷಿಸಂಘಮಾ ಸರಮಿರದಿಂದೆ ಪೋದುವು (ಶಂಪ್ರಕು. ೬-೦೧೭) : ರಾವು ತನ್ನ ಹಚ್ಚಗಿ ಹಾಸಿದ್ಧಾಂಗಲ್ಲಿ ನೀರ ಪಾಚಿ ಹೊಚ್ಚಿ ಹೋದವನು ಮೆಚ್ಚ ಮಾಡತಾವೊ ಕಂಡ ಕಣ್ಣುಗಳಿಗೆ ಪಾಚಿ ಸರಿಸಿದಾಗ ಕಪ್ಪುನೀರು ಕರಿತಾಪ ಒಳಗ ಒಳಗೆ (ಗಂಗಾತ. ೯೭-೬): 'ಶೈವಲಿನಿ' ಎಂದರೆ ಪಾಚಿ ಕಟ್ಟಿದ ಹೊಳೆ (ಖಂತವು. ೨೦೦). **ಪಾಚೆ :** ೧. ಒಂದು ಸಾಮಾನ್ಯ ಹುಲ್ಲು ಪಾಚೆಯ ವಿಚಾರವನ್ನು ಕೂಡ ನೋಮಾರಿಗಳಿಂದ ತಿಳಿಯಲು ಸಾಧ್ಯವಿಲ್ಲ (ಜೀವಾತ್ಮ. ೭). **ಪಾಮಾಜಿ :** ೧. ಕಲ್ಲಿನ ಮೇಲೆ ಕಾಲಿರಿಸಿದರೆ ಪಾಮಾಜಿಯಿಂದ ಜಾರಿ ಆತ ನೀರನ್ನು ಸೇರಬಾರದು (ಪ್ರಂಪಾ. ೨); ಅಮೇರಿಕಾ ದೇಶಕ್ಕೆ ಸಮೀಪದ ಶಾಂತಸಾಗರದಲ್ಲಿ ಒಂದು ಜಾತಿಯ ಸಮುದ್ರ ಪಾಮಾಜಿಯು ನೂರಾರು ಮೈಲಿಗಳ ತನಕ ಬೆಳೆದು ಹಬ್ಬಿರುತ್ತದೆ (ಪಾಂಕೃ. II. ೬೯೫). **ಪಾಸಿ$_1$ :** ೧. ಮತ್ತೊಂದು ಕಡೆಗೆ ಮೆಲ್ಲ ಎಲ್ಲಿನೆ ತಿರುಗಿ ನೋಡಲು ಒಂದು ಕಡೆ ಗೋಡೆಯು ಸಿಕ್ಕಿತು. ಅದೆಲ್ಲಾ ಪಾಸಿ ಹಿಡಿದು ಹೋಗಿದ್ದಿತು (ರಾತಾಮು. ೬೮). **ಪಾಸೆ$_1$ :** ೧. ಹೊಟ್ಟೆಗಿಲ್ಲದೆ ಒಂದು ಬಗೆ ಪಾಸೆಯನ್ನು ಜನರು ತಿಂದು ಜೀವಿಸುವರು. ಈ ಪಾಸೆಯು ಭೂಮಿಯ ಮೇಲೆ ಸಿಕ್ಕುವುದು (ಕುಮುತ. ೧೯೨). ೨. ಹಲ್ಲುಗಳಮೇಲಿನ ಕಿಟ್ಟ, ಕೊಳೆ : ಹಲ್ಲಳಗಲ್ಲ ಳಲುರ್ವಿರೆ ಮೆಲ್ಲದೆ ಬಾಯಲ್ಲಿ ಪಾಸೆದಳೆದು ರಥಾಂಗಂ ಪುಲ್ಲಶರನೆಸಗಿಗಾಱದೆ ಪುಲ್ಲಂ ಕರ್ಚಿದವೊಲಾಗಳೀ ನೊಪ್ಪಿದುದೊ (ರಾಜಶೇ. ೦೦-೦೫) : ಪುಲ್ಲಶರನು ರುಬೆಯಂ ತಾಳಲಮ್ಮದೆ ಕಾಮನಲ್ಲಿ ಚಕ್ರಗಳು ಭೂತ್ರಳಕೊರಗಿ ಭೀತಿಯಿಂಪುಲ್ಲ ಕಚ್ಚಿದುವೊಯೆನೆ ಪಲ್ಲೊಳಂತಿಹ ಪಾಸೆಯೇಂ ಚೋದ್ಯಕರ ಮೆನಿಪುದೊ (ವಂಕಾರಾ. ೫-೨-೨೪). **ಹಾಂಸೆ :** ೧. ಕಲ್ಲ ಮೇಲಿನ ಹಾಂಸೆ [ಪಾಠಾಂ. ಹಾಸೆ] ಮಲ್ಲಿಗೆಯರಳ ತನಿಗಂಪು ಹೊಸ ಮೋಹ ನಿಲ್ಲವಿವು ನೋಡ (ಸರ್ವಜ್ಞ. ೦೫೨೬) ; ಈ ಹಸುರು ಹಾಂಸೆಯು ಎಲ್ಲಕ್ಕೂ ನೀಚಜಾತಿಯ ಉದ್ಭಿಜ ವಿರುತ್ತದೆಂಬುದೊಂದು ಮುಖ್ಯ ಮಾತು (ಮುಂಬಯು. ೬ ೨೭೬).

**ಹಾಚಿ :** ೧. "ಪಾಂಶಾ=ಹಾಚಿ" (ಶಾಶಕ್ಯ. ೨೫೯) ; "ಜಲನೀಲೀ ಶೈವಾಲಂ, ಶೈವಲಂ—೩ ಹಾಚಿ ಹೆಸರುಗಳು. ನೀರು ಮೇಲೆ ಮುಚ್ಚಿಕೊಳ್ಳುವ ಕೊಳೆಯು ಹಾಚಿ" (ಸಿದ್ಧಾಂತಿ. ೪೯). **ಹಾವಂಚೆ :** ೧. ಕಡುಹೀಲಿಯ ಝಲ್ಲರಿಗಳ ಗಡಣಮನಾ ಸಡಿಲ ಕುದುರೆಗಳ ಕಲದೊಳ್ ಪಿಡಿಯಲ್ಕೆ ಸೈನ್ಯವಾರ್ಧಿಯೊಳಡಸಿದ ಹಾವಂಚೆಯಂತಿರದು ಕಣ್ಗೆಸೆಗುಂ (ಪಾರಪು. ೧೦-೪೪). **ಹಾವಚಿ :** ೧. ಮಂಡೆ ಕೂದಲುಗಳೆಂಬ

ಹಾವಚಿಗಳೂ ಭುಜದಂಡಗಳೆಂಬ ಸರ್ಪಗಳೂ (ಕೃಪಾಕ. ೧೮೨). **ಹಾವಚಿ :** ೨. ಎಲ್ಲವ ಬಿಟ್ಟು ಹಲ್ಲ ಸುಲಿಯ ಬಂದೆ ಮುನ್ನಿನಲ್ಲಿಯ ಹಾವಚಿ [ಜಾಕಾಂ.ಸೆ] ಹಲ್ಲ ಬಿಡದು ನೋಡಾ (ಸಕವ. III, ೬೫-೧೩೦). **ಹಾವಸಿ :** ೧. ಹಳ್ಳ ಹಾವಸಿ ಹಾವು ಹುಲಿ ಕಾಡಾನೆ ಕೋಣಗಳು . . . ಹೆಮ್ಮರಂಗಳು ಪಲ್ಲವಿಸಿ ಜೀರೆಂಬ ಕಾನನದಲ್ಲಿಯುಸುತ ಬರುತ್ತಲಿರ್ದಳು ಮಾಯೆಯಲ್ಲಮನ (ಶ್ರೀಖಂ. ೬-೪೩). **ಹಾವಸೆ :** ೧. "ಜಲನೀಲೀ. ಶೈವಾಲಂ. ಶೈವಲಂ— ಈ ೩ ಹಾವಸೆಯ ಪೆಸರು" (ನಾಚರಾ. ೦೦೦) : ಕುಜುಹೆಂಬೆನೆ ಕಲ್ಲಿನಲ್ಲಿ ಹತ್ತಿದ ಹಾವಸೆ (ಅಂಬವ. ೪. ೬೯೩-೫೬) : ಕಳಸದ ತಳಿರ್ : ನೀರ ಹಾವಸೆ (ಕವುದ. ೧೩೨ ಶ್ರೀಯೋ) : ಬಲ್ಲವರು ಹಾವಸೆಯ ಕಲ್ಲ ತಾ ಮೆಟ್ಟುವರೆ (ಸರ್ವಜ್ಞ. ೬೪೦). ೨. ನೊರೆವಾಯ ಹಾವಸೆವರಿದ ಪಲ್ಗಳ ಜೋಲ್ದುಟಿಯ ನಸುಮುರುಟುಗಿವಿಗಳ ಹಜೀಕಗಡ್ಡದ . . . ಕುಜುಬನು (ಬಸಪು. ೨೦-೧೧) ; ಮಸುಳಿಸಿದ್ದ ದುಕೂಲ ರದನದೊಳೆಸೆವ ಹಾವಸೆ (ಕುವ್ಯಾಲ. ೩-೫೭) : ಹಲ್ಲ ಹಾವಸೆಗಳಂ ಮಳಲಿಕ್ಕುತುದ್ದುದ್ದಿ ಮುಂಡಿಯ ಕಟ್ಟ . . . ಸಿಂಗಾರ ವಿದು ತಮಗೆಂದು ರಚಿಸಿದರು ಮುನಿಗಳು (ಚೀಕೃಪು. ೩-೧೧-೪೫). ೩. ಹಸುರುಬಣ್ಣ : ಕಮಲಕೇಸಿನ ಸೀರಿ ತುಂಬಿಗಳ ಕುಸುರುಗಳು ಹಾವಸೆಯ ರವಿಕೆ ಗಿಳಿಬಣ್ಣ (ಕನ್ನಜಾ. ೩೭೮). **ಹಾವ್ಪಸೆ :** ೧. ಹಾವ್ಪಸೆಯ ಅರೆಯನ್ನು ಹಾವಿನಾ ಮರಿಯನ್ನು ಹಾಡುತ್ತ ಬರುವ ಕೊರವೀಯ ಕಂಡರೆ ಹಾದೀಯ ಬಿಟ್ಟು ಮರೆಯಾಗು (ಹಳ್ಳಿಕ. ೬೩).

[ದೇ.॥ ತಮಿ. ಪಾಚ್ಚೈ. ಪಾಚ : ಮಲ. ಪಾಶಿ. ಪಾಶರ್, ಪಾಯಲ್. ಪಾಯಿ, ಪಾಯಿಲ್ : ತುಳು. ಪಾಚಿ. ಪಾಂಬಜ್ಜಿ. ಪಾಪುಜಿ, ಪಾಪುಜು, ಪಾಪಾಚಿ. ಪಾಪಾಜು ; ಕೊಡ. ಪಾಪಂಜಿ ; ತೆಲು. ಪಾಚಿ, ಪಾಸು. ಪ್ರಾಚಿ]

**ಪಾವಸೆಗಲ್**, ಹಾವಸೆಗಲ್ಲು (ನಾ). ಪಾಚಿ ಮೆತ್ತಿಕೊಂಡ ಕಲ್ಲು ; ಹಾವಸೆ ಹಿಡಿದ ಕಲ್ಲು : ಪಾವಸೆಗಲ್ಲಂ ಮೆಟ್ಟಿದಂತೆ ಸನ್ಮಾರ್ಗಮಂ ವಿಡಾಜಿ ಪರಿಯದೆ (ಧರ್ಮಾಮೃ. ೧೧-೧೧೯). **ಹಾವಸೆಗಲ್ಲು :** ಹಾವಸೆಗಲ್ಲ ಮೆಟ್ಟಿ ಹರಿದು ಗೊತ್ತ ಮುಟ್ಟಬಾರದಯ್ಯಾ ನುಡಿದಂತೆ ನಡೆಯಲು ಬಾರದಯ್ಯಾ (ಬಸವ. ೨೦೦) : ತನಗರಿಯದಂತೆಯೇ ಹಾವಸೆಗಲ್ಲಿನ ಮೇಲೆ ನಡೆದು ಅನಾಮತ್ತಾಗಿ ಅಂಗಾತನಾದ (ದೀಪಪ. II, ೩೯).

[ಪಾವಸೆ + ಕಲ್₃]

**ಪಾವಸೆಗಿಜು** (ಕ್ರಿ). ಪಾಚಿಯೆಂದು ಭ್ರಮಿಸು : ಬಳಗಜೀಯದೆ ಪಚ್ಚೆಯ ಸಿಲೆಗಳನಂಜಿಯ ಪಿಂಡು ಕಂಡು ಪಾವಸೆಗೆತ್ತಪ್ಪೞಿಸಿ ಕರ್ದುಕುತ್ತುಮೇಂ ತಳಮಳಗಪ್ಪುವೊ (ಶಾಂತಿಪು. ೨-೯೯) : ನವಕರ್ಣಪೂರದೊಂದಲೆದ ಶಿರೀಷ ಮಂಜರಿಯನೀಕ್ಷಿಸಿ ಪಾವಸೆಗೆತ್ತು ತೃಷ್ಣೆಯಿಂ ಬಲವರುತಿರ್ದುದಂಗನೆ ಯನುನ್ಮುಖಬಾಲಮರಾಳಮಂಡಳಂ (ಕಾದಂಬ. ೧೬೯).

[ಪಾವಸೆ + ಗಿಜು]

**ಪಾವಸೆಗೊಳ್** (ಕ್ರಿ). ಪಾಚಿಗಟ್ಟು ; ಹಾವಸೆ ಹಿಡಿ : ಪ್ರೌಢಪ್ಪ ಕಣ್ಬನಿಯ ಬಾಸಲ ತಣ್ಣಸದೊಳ್ ಪಗಲ್ತು ಪಾವಸೆಗೊಳೆ ಕಾರ ತಂದಲೊಳಗುಂದಲೆ ದೂಗಿರೆ ನಟ್ಟು ಸೋರ್ವ ಪಾಚ್ಚಸದಿಯ ಪೆಣ್ಣ ಜೋಹದವೊಲೊಪ್ಪಿದ ಳೊರ್ವಳನಂಗರಾಗದಿಂ (ಶಾಂತಿಪು. ೮-೮೯) : ಪಸರಿಸಿದ ಬಯಲ್ಮಡು ಪಾವಸೆ ಗೊಂಡಿರೆ ಗಡಣದಾಮವೆಳೆವೆಂಡಿರ್ ನುಣ್ಚಸಲೆಯೆಗೆತ್ತೆಯ್ಯುರೆ (ಲೀಲಾವ. ೫-೪೭) : ಮೇಗೆ ನೆಗೆದಿಸುವ ಪಾವಸೆಗೊಂಡ ಪೇರಾವೆಯಂ ತಾವರೆಯ ಕೊಡೆಯೆಲೆಗೆತ್ತಜೀಯದೆಜಿಗಿದೊಡದು ತೆಜಂಬೊಳೆಯೆ ಬೆಚ್ಚಿ ಬಿಚ್ಚುತು ಬಾಜಿ ಕಳವಳಿಪ ವಿಕಳಕುರವಕನಿಕರಂಗಳೊಳಂ (ಚಂದ್ರಪು. ೫-೪೦ ವ).

[ಪಾವಸೆ + ಕೊಳ್₁]

**ಪಾವಸೆವಲ್**, ಹಾವಸೆಹಲ್ಲು (ನಾ). ಕೀಟುಗಟ್ಟಿದ ಹಲ್ಲು; ಕೊಳೆಗಟ್ಟಿದ ಹಲ್ಲು : ಮುರುಂಟಿದ ಕರ್ಣಮುರ್ವಿ ಕೆಕ್ಕರಿಸಿದ ಕಣ್ಣಜೀಟುದಲೆ ಪಾವಸೆ ವಲ್ಕೆಗೆ ಗಂಟುವುರ್ಬುಗಳ್ (ವ್ಯಕಾ. ೧೧-೬೦). **ಹಾವಸೆಹಲ್ಲು :** ಮುಜಿದ ಹಾವಸೆಹಲ್ಲ ಹಜುವಾಯ ತುಜುಚಿಗಳು ಬತ್ತಲೆಯ ಬಾಳ್ವಣಂಗಳು ಸುತ್ತ ಮುತ್ತಿರಲು (ವಾಗೀಶ. ದೇ. ೨೫೪-೨೭). [ಪಾವಸೆ + ಪಲ್]

**ಪಾವಡೆ** 'ಪಾವುಡ₁' ನೋ.

**ಪಾವಾಣೆ** (ನಾ). ಕಾಲುಆಣೆ ಬೆಲೆಯ ತಾಮ್ರದ ಒಂದು ನಾಣ್ಯ ; ಮೂರು ಕಾಸಿನ ಬಿಲ್ಲೆ; ಕಾಲಾಣೆ: ಇಬ್ಬರಿಗೆ ಎರಡೆರಡಾಣೆಯಂತೆ ಲೆಕ್ಕ ಮಾಡಿ, ಹದಿನಾರು ಪಾವಾಣೆಗಳನ್ನು ಎಣಿಸಿಯೂ ಕೊಟ್ಟರು (ಸ್ವಕ್ನಹೂ. ೬೪); ಏನಿದ್ದರೂ ಪಾವಾಣೆ. ಆಣೆ ವ್ಯಾಪಾರ. ಅಷ್ಟರಲ್ಲೆ ತೃಪ್ತಿ ಅವರಿಗೆ (ದೇವಹಂ. ೬೦). [ಪಾವು₂ + ಆಣೆ₅]

**ಪಾವಿ** (ಗು). ಹೆಜ್ಜೆಗೆ ಸಂಬಂಧಿಸಿದ : ಕಾಲಮಾನದ ಹಾಗೆ ತಾಲಮಾನವ ಪಲ್ಲಟಿಸುತ್ತ ಹೆಜ್ಜೆಯ ಹಾಕುವೊಲು ಪಾವಿ ಪದ್ಧತಿಯಲ್ಲಿ ಪದ ಕೂಡಿ ಬರುವಾಗ ಯಾರಾರೆ ಗುರು—ಲಘು ಎಣಿಸುವರೆ ? (ಸಂಗೀ. ೨೫-೪೩೬). 'ಪಾವು₂' ಪರಾ. [← ಹಿಂ. ಪಾಂವ್]

**ಪಾವಿಟ್ಟಗೆ** (ನಾ). ಒಂದು ಊರಿನ ಹೆಸರು ; ೯ ಬಿಜಾಪುರಜಿಲ್ಲೆಯ ಇಂಡಿ ತಾಲ್ಲೂಕಿನಲ್ಲಿ ಇರುವ ಈಗಿನ ಸಾಲೋಟಗಿ ಎಂಬ ಊರು : ಪಾವಿಟ್ಟಗೆ ಇತಿ ಖ್ಯಾತನಾಮ ಗ್ರಾಮಃ (ಎಇ. IV, ೬೦-೧೪ ; 945) ; ಈ ಊರಿನ ನಿಜವಾದ ಹೆಸರು 'ಪಾವಿಟ್ಟಗೆ'. ಅಲ್ಲಿಯ ಶಾಲೆಯಿಂದಾಗಿ ಅದರ ಹೆಸರು 'ಶಾಲಾಪಾವಿಟ್ಟಗೆ' ಯಾಗಿ, ಇದೇ ಮುಂದೆ 'ಸಾಲೊಟಗಿ' ಎಂದಾಯಿತು (ಕಶಾಅ. ೨೦೯ ಅಡಿ). [ ? ]

**ಪಾವಿತ್ರ್ಯ** (ನಾ). ಶುದ್ಧತೆ ; ಪವಿತ್ರತೆ ; ಶುಚಿತ್ವ : ಸದ್ದಿರದೆ ತುಟಿ ಬೆರಳಿನೊಳು ಸುಳಿವ ಮಾರುತದ ಪಾವಿತ್ರ್ಯದೊಸಗೆಯನು ಕಳೆದು ಬಹ ನೆಲದ ನೆನೆದೊಡನೆ ನೆರೆಗೊಳುವ ನೇತ್ರಾಂಬುತೀರ್ಥಗಳ . . . ಸಂಘಟಿಸಿ ತಪ್ಪಥಾಭಿಸ್ನವಾದೀಶ್ವರಪ್ರಕೃತಿರೂಪಂ (ಮಲೆಮ. ೩೪-೪) : ವ್ಯಕ್ತಿಯ ಪಾವಿತ್ರ್ಯದಿಂದ ದೊಡ್ಡ ಹೆಸರು ಬಂದಿತ್ತು (ಕಂಬಹು. ೪೦). [ಸಂ.]

**ಪಾವು₁**, ಹಾವು (ನಾ). ೧. ನೆಲದ ಮೇಲೆ ಸರಿದುಕೊಂಡು ಹೋಗುವ ಪ್ರಾಣಿ ; ಸರೀಸೃಪವರ್ಗಕ್ಕೆ ಸೇರಿದ ಒಂದು ಜಂತು ; ಸರ್ಪ : ದಕ್ಷಿಣಭಾಗದಾ ಮದುರೆ ಉಯ್ಮನಿತಾಪ × × ಶಾಪದೆ ಪಾವು ಮುಟ್ಟಿ ದೊನ್ . . . ನೋನ್ತು ಭಕ್ತಿಯಿಮ್ ಅಕ್ಷಿಮಣಕ್ಕೆ ರಮ್ಯಸುರಲೋಕ ಸುಕಕ್ಕೆ ಭಾಗಿ ಆ × × (ಎಕ. II, ೨೦-೦ ; ಸು. 700) ; ಈಶ್ವರನಂತೆ ಪಾವಂ ತೊಟ್ಟರ್ದ ಬೇತಾಳರಿಂ . . . ಅತಿಭಯಂಕರಾಕಾರಮಪ್ಪುದು (ಕಾವ್ಯಾವ. ೫೨೯ ಊದ್ಧೃತ) ; ತಗುಳ್ದು ಪಾಲನೆಜಿವಿರ್ ಪಾವಿಂಗೆ ದಾಯಾದ್ಯರಂ ಪಿರಿಯ ಮರ್ಮಾಡಿದಿರ್ (ಕುಶಭಾ. ೨-೯೯). ೨. ರಾಹು : ನೆರೆಯ ಬೆಳ್ದಿಂಗಳನು ಪಾವು ಗಿಡಿದಂತೆ . . . ಎತ್ತಣಿಂದೆರಗಿತೋ ಮೃತ್ಯು ! (ಹೂಂಗಳು. ೨೬-೯). **ಹಾವು :** ೧. ಗರುಡನಂತೆ ಹಾವಿನ ಹಟವಿಗೆಯನಾರಯ್ದು ನೋಡಿಯುಂ (ಗರಾಯು. ೬-೨೮ ವ) ; ಹಾವಿನ ಬಾಯ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ (ಮಹಾದೇ. ಬ. ೬೪-೧೫೬) ; ಬೇವು ಬೆಲ್ಲ ದೊಳಿಡಲೇನು ಫಲ ಹಾವಿಗೆ ಹಾಲೆಜಿದೇನು ಫಲ (ಪುರಂದ. ೧-೬೦ ಪಲ್ಲವಿ); ಎಲೆ ಹಾವೆ ! ಹೊಟ್ಟೆ ಹೊಸೆಯುವ ಜಂತು ! ನಿನಗೆ ಕಿವಿಯಿಲ್ಲ ; ನಾಲಗೆ ಯೆರಡು ; ಹಲ್ಲೊಳಿದೆ ವಿಷವು (ಉಷ್ಯಾರ. ೩೨-೯). ೩. ಒಂದು ಬಗೆಯ ವಿಮಾನ ; ಹಾವುವಿಮಾನ : ಬಂಗಡೆ ಹಾವು . . . ಹಂದೆಗನಾನೆವೊಗ ನೆಂಬ ಪರಿಪರಿಯ ವಿಮಾನ್ಗಳಂ ಗುದಿಗೆಯ್ದರು (ಹಕಕಾ. ೫-೪೫).

[ದೇ.॥ ತಮಿ. ಪಾಮ್ಬು; ಮಲ. ಪಾಮ್ಬು; ತುಳು. ಹಾವು ; ಕೊಡ. ಪಾಂಬ್; ತೆಲು. ಪಾಮು ; ಕೋಲಾ. ನಾಯ್ಕಿ. ಪಾವ್ ; ಪರ್ಜಿ. ಬಾವ್; ಗಡಬ. ಬಾವ್, ಬಾಮು / ಪ್ರಾ. ಪಾವ]

**ಪಾವು₂** (ನಾ). ೧. ನಾಲ್ಕನೆಯ ಒಂದು ಭಾಗ ; ಕಾಲುಭಾಗ ; ಚತುರ್ಥಾಂಶ : ಪಾವು ಗೊಂಜಿ ತೂಕ (ಮುಂಬಯಿ. ೬. ೪-೧೪೪).

'ಪಾವುಸೇರು' ಪರಾ. ೨. ಕಾಲುಸೇರಿನ ಅಳತೆ ಮತ್ತು ಅದನ್ನು ಅಳೆಯುವ ಸಾಧನ : ಮುಂಡೆ ಸವಾಸೇರು ಮೂವತ್ತೆರಡು ಚತುಃಷಷ್ಟ್ಯರ್ಧ ಸೇರರ್ಧಪಾವು ಸಂಧಿಸಿದ ಸೇರು ನಾಲ್ವತ್ತು ಗದ್ಯಾಣವುಂ ದಾವಿಜದು (ಲಾಸ್ಯ. ೬೫-೯) : ತೊವೆಗೆ ಹೆಸರು ಜನ ೧ಕ್ಕೆ ಪಾವಿನಲ್ಲು ಕಾಲ ೧ಕ್ಕೆ ಮ ೪೦॥ ಗ ಗ ಳ ತುಪ್ಪ ದಿನ ೧ಕ್ಕೆ ಜನ ೧ಕ್ಕೆ ಪಾವು ಅರೆ (ಎಕ. VI. ಶೃಂಗೇರಿ. ೦೦- ಕ್ರಿ.ಶ. ೩೬೨ : 1652) : ಪಡಿಯಲ್ಲೇ ಹಿಡಿತ ಹಿಡಿಯುದವನು ಪಾವಲ್ಲಿ ಹಿಡಿಯೋ ಪಾಪವುಂಟೇ (ಹುಬ್ಬ. ೦೯೨). ೩. ಪಾದ : ಕಾಲು : 'ಪಾವುಗೊಜಿಡು' ಪರಾ.

[< ಪ್ರಾ. ಪಾಅ. / ಹಿಂ. ಮರಾ. ಪಾವ್. / ಸಂ. ಪಾದ]

**ಪಾವುಂಜೆ.** ಪಾವುಜ (ನಾ). ಒಂದು ಬಗೆಯ ವಾದ್ಯ : ಜೊಂಟೆಯ ಚಿನುಚಂಪೆ ಕುಕ್ಕುರು ತುಡುಮು ಪಾವುಂಚೆ[ಜೆ] ಕಿಂಕಿಣಿಗಳನೆತ್ತಿ ಜಂಜೆಂ ಕಳದಿಕ ತೋ ದಿಗಿದಿಮಿಕೆಂದು ರಂಜನೆ ಮಿಗೆ ಕೇಳಿಸಿದರು (ರಕ. ೦೩-೦೬) : ಕುಕ್ಕುರು ಡಮರುಡುಮು ಪಾವುಂಜೆಯ ಜೇನು ಡಕ್ಕೆ ನಾಟ್ಯಾನಕ ಚಂಪ (ರ್ಾ.ನತ. ೪೨-೦೦೩). **ಪಾವುಜ :** ತಾಳ ಮದ್ದಳೆ ಪಾವುಜ ಶ್ರುತಿ ಮುಖವೀಣೆ ಸಾಳಂಗ ಶುದ್ಧಗಾನೆಯರ . . . ಮನೆಗಳೊಪ್ಪಿದುವು (ಮೋಹತ. ೩-೩೨). [ ?. / ಪ್ರಾ. ಪಾವಯ ]

**ಪಾವುಕೊರಡು** 'ಪಾವುಗೊಜಿಡು' ನೋ.

**ಪಾವುಗಿಜು** (ಕ್ರಿ). ಹಾವೆಂದು ಭ್ರಮಿಸು : ಹಾವೆಂದು ಎಣಿಸು : ಧೂಪಧೂಮಯಷ್ಟಿಗೆ ನವಿಲೊಸೆದೆಜಿಗುವುದು ಪಾವ[ಪಾಠಾಂ. ವಿ.ವೆ]ಗೆತ್ತು ಪುರದೊಳ್ (ಅಜಿತ. ೨-೦೯). [ಪಾವು₁+ಗಿಜು]

**ಪಾವುಗುಲಿ** (ನಾ). ಹಾವನ್ನು ಕೊಲ್ಲುವಂತಹುದು : ನವಿಲು. ಮುಂಗುಸಿ ಮುಂತಾದುವು : ಪಾವುಗುಲಿ ನಕುಲೋ ಮಯೂರೋ ವಾ(ಶಬ್ದಾನು. ೫೪೭ ವ್ಯಾಖ್ಯಾ). [ಪಾವು₁ + –ಕುಲಿ₁]

**ಪಾವುಗೆ.** ಹಾವಿಗೆ. ಹಾವುಗೆ₁ (ನಾ). (ಮರ. ಚರ್ಮ ಇತ್ಯಾದಿಗಳಿಂದ ಮಾಡಿದ) ಮೆಟ್ಟು : ಪಾದುಕೆ ; ಪಾದರಕ್ಷೆ : P ಸಾಮಾನ್ಯವಾಗಿ ವಿರಕ್ತರು ಧರಿಸುವ ಪಾದುಕೆಗೆ ಈ ಹೆಸರನ್ನು ಹೇಳುತ್ತಾರೆ : ವಿಷಮೋಚಿಕೆಗಳೆಂಬ ಪಾವುಗೆಗಳುಮಭೇದ್ಯಮೆಂಬ ಕವಚಮುಂ . . . ಪದಿವೆಣ್ಸಾಸಿರ ಮ್ಲೇಚ್ಛರಾಜರುಮಾತ್ಮೀಯಸಾಮ್ರಾಜ್ಯಪರಿಚ್ಛೇದವಾಗೆ (ಆದಿಪು. ೧೫-೩ ವ) : ಅನಂಗಟಂಕೃತಿಸ್ವರಮೆನೆ ಪೊಣ್ಮೆ ಪಾವುಗೆಯ ಗೆಜ್ಜೆಯ ಮೆಲ್ಲುಲಿ ಬಂದಳಂದಳಂಕರಣಾಗ್ರಹಕ್ಕೆ . . . ದೇವಿ ಲೀಲೆಯಿಂ (ತಂತ್ರಕೃ. ೧೨-೬) : ನೆತ್ತರ ತಳ್ತ ಬಲ್ಲೆಲೆಯ ಬಂದಿಗೆ ಪಾವುಗೆ ಪಂಚಮುಸ್ತನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕ ಬತ್ತಳೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩). **ಹಾವಿಗೆ :** ಎನ್ನ ನಾಲಗೆಯು ನಿಮ್ಮಯ ಮನ್ನಣೆಯ ಮಹಾನುಭಾವಿಗಳ ಚರಣಕ್ಕಂ ಹೊನ್ನಹಾವಿಗೆಯು ಮಾಡಲಿ ಪನ್ನಗಕಟಕಾ (ಶಂಕರ. ೩) : ಎನ್ನ ಮನ ಪ್ರಾಣಗಳು ಹೊನ್ನ ಹಾವಿಗೆಯಾಗಿ ನಿನ್ನ ಚರಣಕೆ ಯೋಗ್ಯ ಮೆಟ್ಟಾಗಲಿ (ಸುಜಾರ. ೦೦-೫) : ಹಿತವಾಗಿ ಬಂದ ಭರತಗೆ ಹಾವಿಗೆ ಕೊಟ್ಟು ವ್ರತವ ಧರಿಸಿದ ಉನ್ನತಮಹಿಮಾ (ಬಸ್ತೋತ್ರ. ೬-೫). **ಹಾವುಗೆ₁ :** "ಪಾದುಕಾ. ಅನುಪದೀನಾ ... ಈ ೨ ಹಾವುಗೆ" (ಕರ್ಣಾಯು. ೫೨-೧೫೬) : ಹೊನ್ನ ಹಾವುಗೆಯ ಮೆಟ್ಟಿದವನ ಪಿಂಡಿ ಮುಟ್ಟಿದ ಕೆಂಜೆಡೆಯವನ . . . ಕೂಡಲಸಂಗಯ್ಯನೆಂಬವನ (ಬಸವ. ೫೦೩) : ಕೆಲದೊಳಿಕ್ಕಿದ ಹವಳದ ಹಾವುಗೆಯುಂ ಮೆಟ್ಟಿ ನಿಲುವುದುಂ (ಬಾಲಕೃ. ೦೨-೪೯ ವ) : ಹಾವುಗೆಯ ಸೀಗುರಿಯ . . . ಕನ್ನಡಿಯ ವಿವಿಧ ಸುವಿಲಾಸಿಯರ ಕದಂಬಕವ್ಯದಿ ತೊಗ್ಗಿಸಲಿ (ಶಂಬ್ಯಾ. ೧೩-೪೩). [< ಪ್ರಾ. ಪಾಉಆ. ಸಂ. ಪಾದುಕಾ]

**ಪಾವುಗೊಜಿಡು.** ಪಾವುಕೊರಡು (ನಾ). ಮರದ ಪಾದುಕೆ: ಕಡಾವಿಗೆ : ತ್ರಿವಿಧಲಿಂಗಸ್ನಾನವ ಮಾಡಿ ಪಾವುಗೊಜಿಡ ಮೆಟ್ಟಿ ಪಾವಡವಾಗಲಿ ಪರ್ಣಾಸನವಾಗಲಿ ದರ್ಭೆ ಬೆತ್ತ ಮೊದಲಾದಾಸನದಲ್ಲಿ ಮಂಡೂರ್ತವ ಮಾಡಿ (ಶಿವ್ಯಕ. ೪. ೫೩-೦೬೬). **ಪಾವುಕೊರಡು :** ಒಂದೇ ಮರದ ತುಂಡನ್ನು ಕೆತ್ತಿ ಮಾಡಿದ ಪಾದರಕ್ಷೆ : ಮರದ ಅರೆಜೋಡು ; ಪಾವುಕೊರಡು (ಸಿ.abot. ಇಂಳ೩). [ಪಾವು₂ + ಕೊಜಿಡು (< ಕೊಜಿಂಡು)]

**ಪಾವುಜ** 'ಪಾವುಂಜೆ' ನೋ.

**ಪಾವುಡ₁.** ಪವಡೆ, ಪವಾಡ₂, ಪಾಗುಡ₁. ಪಾವಡ₁. ಪಾವಡೆ, ಪಾವಾಡೆ, ಪಾವುಡೆ₁, ಪಾಹುಡ₁ (ನಾ). ೧. ಬಟ್ಟೆ ; ವಸ್ತ್ರ : ಆ ಗಾಂಧಾರಿ ವಲ್ಲಭನೀಳೆಯೊಳಾರುವ ಕಾಣನೆಂಬುದನಳುಕಿ ಕಂಡಳು ತನ್ನ ಕಣ್ಣಿಗೆ ಪಾವುಡವ ಕಟ್ಟಿ ನಳಿನಮುಖಿ ತನ್ನಾತ್ಮಧರ್ಮದ ಕಳೆಯ ಕೆಡಿಸದೆ ನಡೆವುತಿಪ್ಪಳು (ಸಂಕಕ. ೦೪-೨೪) : ವರಚಂದ್ರಿಕೆಯ ಪಾವುಡಕೆ ಶೋಭಿಸುವ ಪೊಂಬರಹದ ಶುಭ್ರ ದೂಮಟವ ಸ್ಮರಬಾಣಗಳಾಯಂತೆ ನಿಜವಿಡಿದುಡಿಸಿದರ್ ದರಹಾಸ ಮುಖಿಗೆ ಸಂಭ್ರಮದೆ (ಮೋಹತ. ೨೩-೦೩) : ಪಾವುಡ ಕುಂಚ ಕಾಳಂಜಿ ಕನ್ನಡಿ ವೆಟ್ ಹೂವಿನ ಬೀಸಣಿಗೆಗಳ ಭಾವಕಿಯರು ಪಿಡಿದಾಕ್ಷಣ ಶ್ರೀರಂಗದೇವನ ನೋಲೈಸುತಿಹರು (ಕಂಪಾ. ೩-೦೦೫) : ಮಹಾರಾಜರು ಕುಳಿತುಕೊಳ್ಳುವ ಉಚ್ಚಾಸನದ ಪಾವಟಿಗೆಯಿಂದ ಮೊದಲು ಮಾಡಿ ಓಲಗಸಾಲೆಯ ಮುಂಬಾಗಿಲವರೆಗೂ ದಾರಿಯನ್ನು ಗುರುತಿಸುವಂತೆ ಹಾಕಿದ್ದ ಕೆಂಪು ಮಖಮಲ್ಲಿನ ಪಾವುಡ (ರಾಜಯೋ. ೩೬). ೨. ತಲೆಗೆ ಸುತ್ತುವ ವಸ್ತ್ರ; ಪಟಗಾ : ರುಮಾಲು : ಪೇಟ : ತಿಳಿಗಾವಿಯಂಗಿಯಿಂ ಶಾಟ ಪಾವುಡಗಳಿಂ . . . ರಾಜಿಸಿ ಪೋಪ ಚೆಲುವ ಜರೆಯದ ಸತ್ಯಶೋಧಕನ ವೇಷಮುಂ ನೆಲದೊಳೀಕ್ಷಿಪರ ಕಂಗಳ್ತಣಿಯವೇ (ಕುಮಾಪು. ೪-೨೦) : ಈ ಪಾವುಡ ಹರಿದುಬಿಟ್ಟಿದೆ. ಎಂದು ಪಾವುಡವನ್ನು ತೋರಿಸಿದನು (ಜಯಂತ.೮೮). **ಪವಡೆ :** ೧. ಇವನೆಲ್ಲಾ ಸಮಾನಂ ಕೊಂಡು ಪುಡಿಮಾಡಿ . . . ಕಂಚಿನ ಹರಿವಾಣದಲ್ಲಿ ಹಾಕಿ ತಾಮ್ರದ ಚೊಂಬಿನಿಂದ ಮರ್ದಿಸಿ ಆಮೇಲೆ ಸಣ್ಣ ಪವಡೆಗೆ ಹಾಕಿ (ಗೌತುಶಂ. ೩೪-೬). **ಪವಾಡ₂ :** ೧. ಜೋಡಿಸಿದ ಜಾಂಬೂನದದ ಪರಿಪಾಡುಗಳ ಪಲ್ಲವದ ಫಳಿಯ ಪವಾಡಗಳ ಕೇತನ ನಿಕೇತನವೆಸೆದವಲ್ಲಲ್ಲಿ (ಕೊರಾ. ೫-೨-೨೫). **ಪಾಗುಡ₁ :** ೨. "ಮುಂಡಾಸ. ರುಮಾಲ. ಪಾಗು. ಪಾಗುಡ (ಪಾವುಡ). ಪಾಗೋಟೆ. ಪಗಡಿ" (ಕಂಮುಹು. ೪೦). **ಪಾವಡ₁ :** ೧. ಶಿವನ ಗೃಹಣಿಯುಂ ಶೋಧಿಸುವುದಿಲ್ಲವೊ ಪಾವಡವ[ಪಾಠಾಂ. ಡೆಯ]ನಿಕ್ಕಿ (ಬಸಪು. ೪೬-೧೫) : ಕುಂಭವೊಡೆವಡೆ ಮೇಲುಮುಸುಕಿರ್ದ ಪಾವಡದ ಅಂಬು ಗಟ್ಟಿಯುಮಾಗಿ ನೆಲಕೆ ಬೀಳದೆ ಇರಲು ಕುಂಭಿನೀಶಗೆ ಪೇಳಲು (ಶ್ರೀರಾ. ೦೦-೩೬) : ಪೊಳೆವ ದುಗುಲದ ಪಾವಡವನೆಡಬಲದೆ ಪಿಡಿದರು (ಕಾವೇಮ. ೬೫-೧೧). ೨. ಬೋಳುಮಂಡೆಯು ಬೊದಡೆ ಪುಸ್ತಕ ತೋಳ ನಲ್ಲಾಧಾರ ಕಾವಿಯ ಹೋಳು ಪಾವಡವಡ್ಡಜಾಡಿಯ ಅಧಿಕ ಷಟ್ಸ್ಥಲದ ಭಾಳಲೋಚನ ಬ್ರಹ್ಮರೆಂಬೊಲು . . . ಸುವಿರಕ್ತಮೂರ್ತಿಗಳೊದಗಿ ತಮ ಲಕ್ಷ (ಶರಶೀ. ೫೯೩-೩) ; ನೀರಲ್ಲಿ ನಿಂತಿರುವ ನೀಲಿಪಾವಡದಣ್ಣ ನೀರು ಕಟ್ಟಾವು ಬದಿಗಾಗೊ (ಹೇಬಾ. ೮೮). ೩. ಹೆಂಗಸರ ಒಳ ವಸ್ತ್ರ; ಒಳಲಂಗ : (*). ೪. (?) : ತಾನು ಜಂಗಮಾರ್ಚನೆಯ ಮಾಡುತ ಮಾನಿನಿಗೆ ಮೆಚ್ಚಿದೆಯೆನುತಲಿ ಆಸ್ಥಾನಕೆ ನಡೆವಾಗ ಪಾವಡವ ಮಾಡುತಲಿ (ನಂದೀ. ೪ ಸೂತ್ರ). **ಪಾವಡೆ :** ೧. ಭಾಜನದ ಕಂಠಕ್ಕೆ ಪಾವಡೆಯ ಬಿಗಿಸಲಾಗಿ ಪ್ರತಕ್ಕೆ ಬೀಜ ಮೊದಲಾಯಿತ್ತು (ಸರ್ವಪ. ೧೮೮-೮೬೫) : ಭಾವಿಪ್ಪುದಜಪಿತ್ರದೊಳಂ ಪಾವಡೆ[ಪಾಠಾಂ. ಟ]ಯೊಳ್ ಕಟ್ಟಿ ಪೊಗೆಯೊಳಿಟ್ಟುದನಿಂಬಿಂ ಪಾವಡದರ್ ಪಿಡಿಯೆ ದುಯ್ಯಳ್ ದಾಪಂಗಂ ಪುಟ್ಟಿದೊಂದು ಚೋದ್ಯಮುಂ (ಜಮುದ. ೯-೫೩) : ಮಡಿಕೆ ತುಂಬಿ ಪಾವಡೆಯ ಕಟ್ಟುವರಲ್ಲದೆ ಸರ್ವಾಂಗವ ಸದಾಚಾರದ ಪಾವಡದಲ್ಲಿ ಕಟ್ಟುವರನಾರನೂ ಕಾಣೆನಯ್ಯ (ಸಿದ್ಧೇವ. ೦೦೦-೩೦೭) : ಬಟ್ಟೆಗಳಸಿಗೆಗ ಸೀರ್ಪೊಯಿದು ಪಾವಡೆಯುಮಂ ಕಟ್ಟಿ . . . ಬೇಯಿಸಲು ಸೀರ್ವತ್ತಿಗೆಯ

ರುವ ಅವರ ಕಾಯಿ : ಇಂದ್ರವಾರುಣಿ : ☞ ಇದು ವಿಷಾಪಹಾರಿಯಾದುದು : ಪಾವುಮೆಕ್ಕೆಯು ಕಂಪಿನಂತೆ ತಿಪ್ಪೆಯು ನೀರಂತೆ ಬಡವನ ಮಹಿಮೆಯಂತೆ . . . ಪೂಜಿಗಣ್ಗೆ ರಂಜಿಸುವ ಬಹಿರಾಳಾಪದ ಮೋಹನೊಲ್ಲದೆ (ಶಿವಯೋಗಾ. ೬-೯೪). **ಹಾಮೆಕ್ಕೆ :** ಹಾಮೆಕ್ಕೆಯ ಹಣ್ಣೊಳಕಿಕ್ಷೇಪದೊಳಿರಿಸಿಟ್ಟ ಸುಂಟಿ ಹಿಪ್ಪಲಿ ಮೆಣಸೆಂಬೀ ಮೂರಿಂ . . . ನಸ್ಯಂಗೆಯ್ದಿಂ (ವಶಕ. ೯-೦೦೦): ☞ ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ. **ಹಾವುಮಕ್ಕಿ:** ದೊಡ್ಡಹಾಲ್ಮೆಕ್ಕೆ. ಹಾವುಮಕ್ಕಿಕಾಯಿ. ಇಂದ್ರಾವರುಣಿ (ವೃ ಶಿ. ೨೨-೪೦೦). **ಹಾವ್ಮೆಕ್ಕೆ:** "ವಿಶಾಲಾ, ಇಂದ್ರವಾರುಣೀ—ಈ ೨ ಹಾವ್ಮೆಕ್ಕೆ" (ಶಾಕರಾ. ೦೦೨); ಪವನಜೀಯ ಪುರಿದು ತಿಲತೈಲದೆ ನಿರೆ ಪೆಪೆಯಕ್ಕಿಯೆಂಬಿವಂ ಮೇಣ್ ಗೋಮೂತ್ರದೆ ಹಾವುಮೆಕ್ಕೆ[ಪಾಠಾಂ. ಹಾಮೆಕ್ಕೆ]ಯುಂ ಬ್ರಹ್ಮದಂಡೆಯುಂ ಮಸರೆದು ಪೂಸೆ ಪುಣ್ಬಳ್ ಕಿಡುಗುಂ (ಲೋಕೋಪ. ೯-೬೦): ಫಲವಾದರೇನು ಹಾವುಮೆಕ್ಕೆಯ ಕಾಯಿ (ಬಸವ. ೦೨೦): ಬೇವು ತಾ ಪರಿಪಕ್ವವಾದರೆ ಹಾವುಮೆಕ್ಕೆಗೆ ಸಾಕ್ಷಿ ಗಡ (ಕುವ್ಯಾ. ೦೭-೧೫): ಒಳಗೆ ಕಾಠಿಣ್ಯವು ಹೊರಗೆ ಸುಪಕ್ವವು ಹಾವುಮೆಕ್ಕೆಯ ಗಿಡದಂತೆ (ಇಂಪಾವ. ೧೮೮-೨೭). **ಹಾವ್ಮೆಕ್ಕೆ :** ಅದಜೀರ್ಣಳು ಹುಟ್ಟಿದನು ಕೊಳಿಗಡಿಗ ಹಾವಿನ ಹುತ್ತದಲಿ ಹಾವ್ಮೆಕ್ಕೆ ಬೆಳೆದಂತೆ (ಕುವ್ಯಾದ್ರೋ. ೦೪-೦೬). [ಪಾವು₁ + ಮೆಕ್ಕೆ₁]

**ಪಾವುಪೆಡಗೆ** (ನಾ). ಹಾವಿನ ಬುಟ್ಟಿ : ಹಾವಿನ ಪೇಳಿಗೆ : (ಕ). [ಪಾವು₁ + ಪೆಡಗೆ (<ಪೆಟ್ಟಿಗೆ)]

**ಪಾವುಸೇರು** (ನಾ). ಕಾಲು ಸೇರು : ಸೇರಿನ ಕಾಲುಭಾಗ : ಪಾವು : ಆ ಕನಸಿನಲ್ಲಿ ಅವರ ಸಮ್ಮುರುಗಳು ಕಾಣಿಸಿಕೊಂಡು ಅವರಿಗೆ 'ಊಟಕ್ಕಾಗಿ ಪಾವುಸೇರು ತುಪ್ಪವನ್ನು ಬೇಡಿದರಂತೆ' (ಪರಶ. ೦೪೮). [ಪಾವು₂ + ಸೇರು₃]

**ಪಾವುಳ,** ಪಾವುಡ₁(ನಾ). ದೇವಸ್ಥಾನದ ಪ್ರಾಕಾರದಲ್ಲಿಯೇ ವಾಸಿಸುವ ಕೆಳವರ್ಗದ ಸೇವಕರ ಗುಂಪು.—ವರ್ಗ : ದೇವರ ತ್ರಿಕಾಲಪೂಜೆಗಂ ತಪೋಧನರ ವಿದ್ಯಾರ್ಥಿಗಳಾಹಾರದಾನಕ್ಕಂ ಪಾವುಳಪರಿವಾರದ ಜೀವಿತಕ್ಕಂ ದೇಗುಲದ ಖಂಡಸ್ಫುಟಿತ ನವಕರ್ಮಕ್ಕವೆಂದು ಕೊಟ್ಟ ಅಲ್ಲಿಯ ಭೂಮಿಯ ಮತ್ತರು ೫೦ (ಸಾಂದೇಶ್. ೩-೨೨ ವ: 1047); ಜೀರ್ಣೋದ್ಧಾರ ನವಸುಧಾಕರ್ಮಕ್ಕಂ ಪಾವುಳವರ್ಗಕ್ಕಂ (ಇಐ. VIII, ೨೦-೨ನೆಯ ೪೮೮; 1077); ದೇವರಂಗಭೋಗಕ್ಕಂ ಪಾವುಳಕ್ಕಂ ಬಿಟ್ಟ ಪಿರಿಯ ಸೋಗೆಯ ಮೂರು (ಸೌಇಇ. IX-1, ೦೬೦-೬೯; 1092); ಬ್ರಹ್ಮಪುರಿಯ ಬ್ರಾಹ್ಮಣರಿಗೆ ಮತ್ತರು ಹ ೧೦ . . . ಪಾವುಳಕ್ಕೆ ಮತ್ತರು ಹ ೧೨ (ಸೌಇಇ. IX-1, ೨೪೦-೦೪: 1142). **ಪಾವುಡ₁ :** ಆಹಾರದಾನಕ್ಕಂ ಪಾವುಡಕ್ಕಂ . . . ಬಿಟ್ಟ ಕರಿಯ ನೆಲಂ (ಸೌಇಇ. IX-1. ೦೫೦-೨೯; 1081). [<ಪ್ರಾ. ಪಾವುಲ./ಸಂ. ಪಾಪಕುಲ]

**ಪಾವೆಜೀಯ** (ನಾ). ಹಾವುಗಳ ಒಡೆಯ : ಆದಿಶೇಷ : ವಾಸುಕಿ : ಭಾವಿಸೆ ಕನೆ ಬಲ್ಮೆಂತಿರೆ ಪಾವೆಜೀಯನ ಮೆಯ್ಯ ಹಾಸೆ ಪವಡಿಸಿ ಸೊಗದಿಂ ದೇವತೆಗಳ್ ಮೊರೆಯಾಲಿಪ ಠಾವೆನೆ ಪಾಲ್ಗಡಲದೊಂದು ಪರಮಸ್ಥಾನಂ (ಜಗದ. ೫-೦೪೩): ಅನಂತನೆಂದುಂ . . . ಶೇಷನೆಂದು ನೆಗಳ್ತೆವೆತ್ತ ಮಹೋರಗಚಕ್ರಿಯುಂ ಶಿವಿದ ಪಾವೆಜೀಯನೆಂಬ ಮೆಲ್ಪಾಸುಗೆಯುಮಂ ಭಾವಿಸದ (ಜಗದ. ೮೭-೧೫). [ಪಾವು₁ + ಅಜೀಯ]

**ಪಾಶ** (ನಾ). ೧. (ಕಟ್ಟಲು ಉಪಯೋಗಿಸುವ) ಹಗ್ಗ ; ನೇಣು : "ಬಂಧನೈ ದಾಮಪಾಶೌ" (ನಾನಾರ. ೩೪) : ಸುವಿದು ವಿಪಾಶದಿಂ ಜೀವರನು ಬಂಧಿಸುವ ನಾಂ ಭಾವಜಂ (ಚತ್ರಾಂಗ. ೨೭-೬೨೮). ೨. ಕೊರಳಿಗೆ ಹಾಕಿ ಎಳೆಯುವ ನೇಣಿನ ಕುಣಿಕೆ ; ಹಾಗೆ ಎಳೆಯುವುದಕ್ಕೆ ನಿರ್ಮಿಸಿಕೊಂಡ ನೇಣಿನ ಸಾಧನ : ಒಂದು ಆಯುಧ : ಸುರವನಗ್ನಿ ಯಮ ನಿರುತಿ ವರುಣ ಮರುತ ಧನದನೀಶಾನ್ಯರೆಂಬವರ ವವಿಶಿಷ್ಟದಂಡ ವರಕೊಂತ ಪಾಶ ಧ್ವಜಂ ಖಡ್ಗಶೂಲತತಿವೆರಸಿ . . . ಸೆಳೆದು ತಹನು ತತ್ತಡೆ ಹರಿಶ್ಚಂದ್ರನೃಪನು (ಹರಿಶ್ಚ. ೦-೪೩) ; ಖಡ್ಗ . . . ಪಾಶ . . . ಎಂಬ ಬತ್ತೀಸಾಯುಧಗಳಿಂ (ಶಿವತ. ೨೬೨). 'ಯಮಪಾಶ' ಪರಾ. ೩. ಬಂಧನ ; ಸೆರೆ : ಸಾಕು ಇನ್ನುಳಿದ ತ್ರಿವಿಧ ಪಾಶವ ಹಜುದೆ (ಅವಶಂ. ೦೫೭-೬೨೦): ಪಾಶವಹಿತು ಗುರುವಾಗಬೇಕು ವೇಶವಹಿತು ಚರವಾಗಬೇಕು (ಶರಗೂ. ೦೦೫-೫೦): ಈ ಪಾಶದಿಂದ ಮುಕ್ತವಾಗುವ ದಾರಿಯಿಲ್ಲವೆ? (ಧರ್ಮಸಾ. ೨೫೨). ೪. ಬಲೆ ; ಜಾಲ : "ಪಾಶಃ, ಬಂಧನಗ್ರಂಥಿಃ, ವಾಗುರಾ, ಮೃಗಜಾಲಿಕಾ-ಈ ೪ ಬೆಳ್ವಾರಂ" (ಹಲಾಯು. ೯೬-೪೯೩). ೫. ತಲೆಗೂದಲು ; ಮುಡಿ ; ತುರುಬು : "ಹಸ್ತಂ ಪಾಶಂ ಪಕ್ಷಂ ಶಸ್ತ್ರಕಚಪ್ರಚಯವಾಚಕಂ" (ವಸ್ತುಕೋ. ೬೦-೦೯); "ಹಸ್ತಃ, ಪಕ್ಷಃ, ಪಾಶಃ—ಈ ೩ ಹಿಮ್ಮುಡಿ" (ಹಲಾಯು. ೯೬-೪೬೬); "ಹಸ್ತಕಂ ತುರುಬು ಹಿಣಿಲು ಪಾಶಂ" (ಮಂಗರಾ. ೯೪-೬). ೬. ನಾಶಕ್ಕೆ ಸೆಳೆಯುವ ಆಕರ್ಷಣೆ : ಸಮುದ್ರತೀರದಲ್ಲಿ ಓಡಾಡುತ್ತಿದ್ದ ಅವನಿಗೆ ನೀರಿನ ಸೌಂದರ್ಯವು, ಈಜುವ ಆಸೆಯಿಂದ, ಪಾಶವಾಗಿ ಪರಿಣಮಿಸಿತು (ರೂಢಿ). ೭. ಲೆತ್ತದ ದಾಳ. ೮. (ಸಮಾಸಗಳ ಉತ್ತರಪದವಾದಾಗ) ಸೌಂದರ್ಯ, ಹೆಚ್ಚಳ, ತಿರಸ್ಕಾರ ಮೊದಲಾದುವನ್ನು ಸೂಚಿಸುವ ಶಬ್ದ : 'ಕರ್ಣಪಾಶ', 'ಕೇಶಪಾಶ' ಪರಾ. ೯. [ಶೈವ] ಶೈವಾಗಮದ ಪಶು, ಪಾಶ, ಪತಿಯೆಂಬ ಮೂರು ತತ್ತ್ವಗಳಲ್ಲಿ ಒಂದು ; ಸಂಸಾರಬಂಧನ : ಜೀವನೇ ಪಶುವು, ಅವನನ್ನು ಆವರಿಸಿರುವ ಸಂಸಾರಬಂಧನವೇ ಪಾಶ, ಜೀವನ ಸಂಸಾರಪಾಶವನ್ನು ಕಳೆದು ಉದ್ಧರಿಸುವವನೇ ಪತಿಯಾದ ಪರಮೇಶ್ವರ (ಶಾಕದ. ೬೩). ೧೦. ಷಟ್ಪದಾರ್ಥಗಳಲ್ಲಿ ಒಂದು : ಸಕಲಾಗಮಂಗಳಲ್ಲಿಯೂ ಪತಿ ಕುಂಡಲಿನಿ ಮಾಯೆ ಪಶು ಪಾಶ ಕಾಂಕ್ಷೆಯೆಂಬ ಷಟ್ಪದಾರ್ಥಂಗಳುಂ ಅಕ್ಕುಂ (ಶಿವತ. ೬೨). ೧೧. = ಪಾಶಯೋಗ : ನಿಲೆ ಸಪ್ತಗ್ರಹವೊಂದೆ ರಾಶಿಯೊಳ್ ಯೋಗಂ ಗೋಳನಾಮಂ . . . ಅವ್ವೆದು ಗೇಹದೊಳಿರಲ್ ಪಾಶಂ (ಜಾತಿಕ. ೦೭-೫). ೧೨. [ನಾಟ್ಯ] ಇಪ್ಪತ್ತುನಾಲ್ಕು ಬಗೆಯ ಸಂಯುತಹಸ್ತಗಳಲ್ಲಿ ಒಂದು : ೧. ಅಂಜಲಿ . . . ೧೫. ಪಾಶ . . . ೨೪. ಅವಹಿತ್ಥ (ಅಭಿನ. ೪೮). [ಸಂ.]

**ಪಾಶಕ** (ನಾ). ೧. ಲೆತ್ತದ ದಾಳ : "ಅಕ್ಷಃ, ದೇವಕಃ, ಪಾಶಕಃ—೩ ಪಾಚಿಕೆಗಳ ಹೆಸರುಗಳು, ಲೆತ್ತಗಳು" (ಸಿದ್ಧಾಂತ. ೬೨೦). ೨. ಲೆತ್ತದ ಆಟ ; ಪಗಡೆಯಾಟ : 'ಪಾಶಕಶಾರಿ' ಪರಾ. ೩. (ಸಮಾಸದಲ್ಲಿ ಉತ್ತರಪದವಾದಾಗ) ಬಲೆ ; ಜಾಲ. [ಸಂ.]

**ಪಾಶಕಶಾರಿ** (ನಾ). ಲೆತ್ತದಾಟದ ಕಾಯಿ ; ಪಗಡೆಕಾಯಿ : ಬಹು ನಾಯಿಗಳಿರುವೀ ಗ್ರಾಮದೊಳು ಬಾಲೆ ಪಾಶಕಶಾರಿಯವೋಲ್ ಏನಗಾಗಿ ಮನೆಮನೆಗಲೆವಂದು ಸುಕುಮಾರಿ ತಿಂಗಾವು ನಾಯಿಗಳೆಗರಿ (ಗಾಥಾಸ. ೩೫-೩೬). [ಪಾಶಕ + ಶಾರಿ]

**ಪಾಶಜ** (ನಾ). [ಜ್ಯೋತಿ] ಪಾಶಯೋಗದಲ್ಲಿ ಹುಟ್ಟಿದವನು : ಧನಸಂವರ್ಧನಶೀಲ ಭೃತ್ಯಸುಹೃದಾಢ್ಯಂ ಪಾಶಜಂ (ಜಾತಿಕ. ೦೭-೦೩). [ಸಂ.]

**ಪಾಶಪಾಣಿ** (ನಾ). ೧. ಪಾಶವನ್ನು ಆಯುಧವಾಗಿ ಹಿಡಿದಿರುವವನು ; ವರುಣ : "ವರುಣಂ ಪಶ್ಚಿಮದಿಕ್ಪತಿ ಶರನಿಧಿಪತಿ ಪಾಶಪಾಣಿ ಯಾದೋನಾಥಂ ವರುಣಾನೀರಮಣಂ [ವಾರಿರಾಶಿ]ನಿಳಯಂ ಪ್ರಚೇತಸಂ ಪೆಸರಿಂದಂ" (ವಸ್ತುಕೋ. ೬-೪೩). ೨. ಯಮ ; ಅಂತಕ : ನಿನ್ನುಮನಿರಿಸದೆ ಕುರುವಂಶಾನಿಮಿತ್ತರಿಪು ಪಾಶಪಾಣಿ ಸವಿ ನೋಡಿದನೇ (ಗದಾಯು. ೩-೩೮). [ಪಾಶ + ಪಾಣಿ]

**ಪಾಶಬಂಧ** (ನಾ). ನೇಣಿನಿಂದ ಕಟ್ಟುವುದು; ಹಗ್ಗದಿಂದ ಬಿಗಿಯುವುದು: ಅಂತು ಕೃತಾಂತಪಾಶಬಂಧಂಗಳಾದಂತೆತ್ತಲುಂ ತಳರದೆ ತೀವ್ರಪತತ್ರಿ ಭರವಮಂ ಪೇಟ (ಶಾಂತಿಪು. ೯-೧೬೭). [ಪಾಶ+ಬಂಧ]

**ಪಾಶಯೋಗ** (ನಾ). [ಜ್ಯೋತಿ] ಏಳುಗ್ರಹಗಳು ಐದುರಾಶಿಗಳಲ್ಲಿ ಹಂಚಿಕೊಂಡಿರುವ ಒಂದು ಯೋಗ; ಒಂದೇ ರಾಶಿಯಲ್ಲಿ ಇರುವ ಗ್ರಹಗಳ ಸಂಖ್ಯೆ ಬೇರೆಬೇರೆಯಾದಂತೆ ಆ ಸ್ಥಿತಿಗೆ ಬೇರೆಬೇರೆ ಹೆಸರುಗಳನ್ನು ಜ್ಯೋತಿಶ್ಶಾಸ್ತ್ರದಲ್ಲಿ ನಿರೂಪಿಸುತ್ತಾರೆ: ಪಾಶಯೋಗದಲ್ಲಿ ಹುಟ್ಟಿದವನು ಹಣವನ್ನು ಅಭಿವೃದ್ಧಿಪಡಿಸುವ ಸ್ವಭಾವವುಳ್ಳವನೂ, ಸೇವಕರು ಮತ್ತು ಸ್ನೇಹಿತರಿಂದ ಕೂಡಿರುವವನೂ ಆಗುತ್ತಾನೆ (ಜಾತಕ. ೧೬-೧೭ ಅಡಿ); ೫ ರಾಶಿಗಳಲ್ಲಿ ಗ್ರಹರಿರಲೂ ಪಾಶಯೋಗಂ (ಆಯುಃ. ೨೯.೩). [ಪಾಶ+ಯೋಗ]

**ಪಾಶವಾರ**, ಪಾಶವಾರು (ನಾ). ಒಂದು ಬಗೆಯ ತೆರಿಗೆ: ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು. (೧) ಮನೆದೆರಿಗೆ. (೨) ಹುಲ್ಲುಹಣ . . . (೧೬) ಪಾಶಾವಾರ. (೧೭) ಮದುವೆದೆರಿಗೆ, (೧೮) ಉಪ್ಪಿನ ಮೋಳಿ, (೧೯) ಕೌದಿಯ ತೆರಿಗೆ (ಮುಜಾಪಂ. ೧, ೧೨೪) ಪಾಶವಾರು: ಇವು ಪೂರ್ವಕಾಲದ ತೆರಿಗೆಗಳು: ಮನೆತೆರಿಗೆ . . . ಪಾಶವಾರು. ಗುಳುವಿನ ಪೊನ್ನು, ತೆರದ ಬಾಗಿನ ಹೊನ್ನು (ಎಮ್ಮು.ಸಂ. ೨೯೩). [?]

**ಪಾಶವಾರು** 'ಪಾಶವಾರ' ನೋ.

**ಪಾಶವಿಕ** (ಗು). ೧. ಪಶುವಿಗೆ ಸಂಬಂಧಿಸಿದ. ೨. ಪಶುವಿನಂತಹ; ಕಾಡುತನದ: ಒರಟುತನವುಳ್ಳ: ಆ ಪ್ರಾಯದಲ್ಲಿ ಎಂಥ ಪಾಶವಿಕ ಆನಂದಗಳನ್ನು ಜಾಗೃತಗೊಳಿಸಿದ್ದಳಲ್ಲ ಆ ವೇಶ್ಯೆ (ಅಶ್ವಮ. ೬). [ಸಂ.]

**ಪಾಶವೀಪ್ರವೃತ್ತಿ** (ನಾ). ಪಶುವಿನಂತಹ ಒರಟುಸ್ವಭಾವ; ವಿವೇಕದ ಹಿಡಿತವಿಲ್ಲದ, ಪ್ರಾಣಿಸಹಜವಾದ ವೃತ್ತಿ: ಸಂದಿಗ್ಧಜೀವನದ ಹಿಂಸಾ ಕೃತ್ಯದ ಪಾಶವೀಪ್ರವೃತ್ತಿಯು ಅವಳ ತಂದೆ (ಕೃಷಚ. ೧೫೦). [ಸಂ.]

**ಪಾಶವೀವೃತ್ತಿ** (ನಾ). ಪಶುಸಹಜವಾದ ಸ್ವಭಾವ,—ನಡವಳಿಕೆ: ನಿಯೋಗಿಯದು ಪಾಶವೀವೃತ್ತಿ; ಅದು ಶೀನೂನ ದೃಷ್ಟಿಯಲ್ಲಿ ಸುಖದ ಹಾದಿಯಲ್ಲ (ಸಮಜೀ. ೬೬೩). [ಸಂ.]

**ಪಾಶಹರ** (ಗು). ಬಂಧನವನ್ನು ಪರಿಹರಿಸುವ; ಕಟ್ಟನ್ನು ಬಿಚ್ಚಿ ಮುಕ್ತಗೊಳಿಸುವ: ಮಾರಿತವೋಚನಶಿವರು ಲೋಕೇಶ್ವರಶಿವರು ಶ್ರೀಕಂಠಶಿವರುಂ ಪಾಶ [ಶಾಕಾಂ. ಪ] ಹರಶಿವರು (ಬಸವು. ೫೬-೧೭). [ಸಂ.]

**ಪಾಶಹಸ್ತ** (ನಾ). ಪಶ್ಚಿಮದಿಕ್ಕಿನ ಅಧಿಪತಿ; ವರುಣ: ನಯನೌಘಜ್ಜಲದಿಂದೆ ನೈದಿಲೆಸಲಿಂ ಶಕ್ರಂ ಮುಸುಂಕಿಟ್ಟನೈದೆ ಯಮಂ ಛಾಯೆಯನೋಂದು ನಿತ್ತಗಲದಿರ್ಪಂ ಪಾಶಹಸ್ತಂ ಪಯೋಧಿಯನಾಶ್ರೈಸಿದಂ . . . ಆವರ್ತಿಸಿ ತಳ್ದು ನಾಲ್ದೆಸೆಯುಮಂ ಗ್ರೀಷ್ಮಪ್ರತಾಪೋದಯಂ (ಚಂದ್ರಶು. ೯-೬೭). 'ಪಾಶಪಾಣಿ' ಪರಾ. [ಪಾಶ + ಹಸ್ತ]

**ಪಾಶಂಡಿ** 'ಪಾಷಂಡಿ' ನೋ.

**ಪಾಶಾಣ** 'ಪಾಷಾಣ' ನೋ.

**ಪಾಶಾಣೆ** (ನಾ). (ಆಲಂ) ಕಲ್ಲಿನಂತಹ ಮನಸ್ಸಿನವನು; ಕ್ರೂರ ವ್ಯಕ್ತಿ: ನೀವಿಷ್ಟು ಹೃದಯಹೀನರು, ಚಾಂಡಾಲರು, ಪಾಶಾಣೆಗಳೆಂದು ನನಗೆ ತಿಳಿದಿರಲಿಲ್ಲ (ಕಾವೇಂ. ೨೦೬). [ಪಾಶಾಣ (< ಪಾಷಾಣ) + -ಇ$_3$]

**ಪಾಶಿ$_1$** (ನಾ). ೧. ವರುಣ; ಪಾಶಪಾಣಿ: "ಪ್ರಚೇತಸಂ ವಾರ್ಧಿವಿಭು ಪಾಶಿ ಪ್ರತ್ಯಗ್ದಿಶಾರಮಣನೆನೆ ವರುಣನಕ್ಕುಂ" (ಮಂಗರಾ. ೦೫ ೦೦); ಇಂದ್ರ ನಗ್ನಿ ಯಮನೈರುತಿ ಪಾಶಿಮರುತ್ತು ಕುಬೇರಪಂಮುಳಶಿಶಿರಂತನೆಂಬುಬಿಳದಿಕ್ಪತಿಗಳ್ ನಡೆದರ್ ನಿಜಾಶೆಯೊಳ್ (ಶಾಂತಪು. ೧೬-೩೨೭); ಒಂದೆಸೆಯಿಂದ್ರನ ದೊಂದೆಸೆಯನಲನು . . . ಒಂದೆಸೆ ಪಾಶಿಯುದೊಂದೆಸೆಯನಿಲನ ದೊಂದೆಸೆ ತ್ರ್ಯಂಬಕಸಖನು (ಶೈರವೇ. ೫-೨೮). ೨. ಯಮ. [ಸಂ. ಪಾಶಿನ್]

**ಪಾಶಿ$_2$** 'ಫಾಸಿ' ನೋ.

**ಪಾಶಿಸಜಾ** (ನಾ). ಗಲ್ಲಿನ ಶಿಕ್ಷೆ: (ಕಿ). [ಪಾಶಿ$_2$ (< ಫಾಸಿ) + ಸಜಾ]

**ಪಾಶುಪತ** (ಗು). ೧. ಶಿವನಿಗೆ ಸಂಬಂಧಿಸಿದ: ಶೈವಾಚಾರಕ್ಕೆ ಸಂಬಂಧಿಸಿದ: ಸಮುಚಿತಪಾಶುಪತಸುವ್ರತನಿರತನು ಪುಣ್ಯಚರಿತನನು . . . ಕೊಂಡಾಡಿ (ಬಸವು. ೧೭-೭೨); ಶ್ರೀಶಂ . . . ಪಾಶುಪತಸುವ್ರತದಿನೆರ್ಚಿ ಸುತೀಶನಂ ಭಜಿಸುವನು (ಬಸವು. ೫೯-೬೦). (ನಾ). ೨. ಶೈವಪಂಥಗಳಲ್ಲಿ ಒಂದು: ಕ್ರಮದಿಂ ಪರ್ತಿಸುವಾ ಕಾಳಾಮುಖಾಖ್ಯ ಕಪಾಳಿ ಪಾಶುಪತ ಶೈವರೊಳೋರ್ವ ಮಹಾಬ್ರತಿಗೊರವಂ ರುದ್ರಮಾರ್ಗದಿಂ ನಡೆವರುಟಾದ ಮಾರ್ಕಂಡೇಯರ್ (ಸಮಚ. ೧೯-೫೦): ಪಾಶುಪತಾದಿ ಶಾಸನಧಾರಕರು ಬಂದು . . . ತಮತಮಗೆ ಲಿಂಗೈಕ್ಯರುಗಳಾಗೆಯ್ದೆ (ಬಸವು. ೫೮-೦೫); ಪಾಶುಪತ ಕಾಪಾಲಿಕ ಮಹಾವ್ರತಂಗಳೆಂಬಿವೆ ಅತಿಮಾರ್ಗಿಕ ಶಾಸ್ತ್ರತ್ರಯ ಮಾಗಿರ್ಪುದು ಅವಱೊಳ್ ಪಾಶುಪತವು ಪಾಶುಪಾತಕರ್ಮನಾಮಕ ಪಾಶದ್ವಯಾದಿಗಳಂ ನಿರ್ವಹಿಸುವುದು (ಚಿಪೀಕ. ೧೦); ಶೈವಾಗಮಗಳು ಒಂದೊಂದು ಬಾರಿ ಶೈವಮತವನ್ನು . . . ಪಾಶುಪತ, ಕಾಪಾಲಿಕ ಮತ್ತು ಕಾಳಾಮುಖ ಎಂದೂ ವಿಂಗಡಿಸುತ್ತವೆ (ಶಕ್ತಿಬ. ೧೨೩). ೩. ಪಾಶುಪತ ಪಂಥವನ್ನು ಅನುಸರಿಸುವ ಶೈವ: ಅಲ್ಲಿ ಪಾಶುಪತರು ಧ್ಯಾನಮಾಡು ತ್ತಿದ್ದರೆಂದೂ ಹೇಳಿದೆ (ಕಶಾಅ. ೧೨೭). ೪. ಒಂದು ಬಾಣದ ಹೆಸರು: ಶಿವನು ಅರ್ಜುನನಿಗೆ ಅನುಗ್ರಹಿಸಿದ ಒಂದು ಮಂತ್ರಾಸ್ತ್ರ: ತಂಡು ಪಾಶುಪತವಾನೆನೆ ನರನೆಡೆಮಡಗದೆ ತಾಡೆ ವಿಶಾಳಿ ನಡುಗಿದುದು (ಶಂಕಶಾ. ೧೧-೧೫೩); ಮೃಡಸಮಾನರು ನೀವು ಪಕ್ಷಿಗೆ ತೊಡಬಲದೇತಕೆ ಪಾಶುಪತವಂ (ಬಸವು. ೨೨-೪೧); ಈತನೆಮ್ಮಯ ಪಾಶುಪತವಿಖ್ಯಾತ ಬಾಣವ ಬೇಡಿ ತಪದಲಿ ವೀತರಾಗದ್ವೇಷಿಯಾದನು (ಕುವ್ಯಾಅ. ೬-೨೬). ೫. ಒಂದು ಬಗೆಯ ಸಸ್ಯ; ಕೊಕ್ಕರೆಹೂವಿನ ಗಿಡ: "ಶಿವಮಲ್ಲಿ, ಪಾಶುಪತಃ, ಏಕಾಷ್ಠೀಲಃ, ಬುಕಃ, ವಸುಃ—೫ ಬಕಪುಷ್ಪದ ಹೆಸರು; ಕೊಕ್ಕರೇ ಹುವ್ವಿನ ಗಿಡ" (ಸಿದ್ಧಾಂತಿ. ೧೫೦). [ಸಂ.]

**ಪಾಶುಪತಾಸ್ತ್ರ** (ನಾ). =ಪಾಶುಪತ ೪: ಜಿತೇಂದ್ರಿಯನ ಸೊಲ್ಲಿನೆಸಗೆ ನಿಚ್ಚೂಡಿ ಪಾಶುಪತಾಸ್ತ್ರಮಂ ದಯೆಗೆಯ್ವುದು (ಶಂಕಶಾ. ೮-೨೫ ವ); ಸಲಿಸು ಪಾಶುಪತಾಸ್ತ್ರವನು ವೆಗ್ಗಳದ ಬೊಮ್ಮಶಿರೋಸ್ತ್ರವನು ಕೈಗೊಳಿಸುವುದು ಕೃಪೆಯುಳ್ಳೊಡೆ (ಕುವ್ಯಾಅ. ೬-೯೭). [ಪಾಶುಪತ+ಅಸ್ತ್ರ]

**ಪಾಶುಪತಿ** (ನಾ). ೧. ಪಶುಪತಿ: ಶಿವ: ಈಶತತ್ತ್ವ ಬ್ರಹ್ಮಮಯ ಪಶು ಪಾಶುಪತಿಗೆ ಸಮಾನವೇ ತತ್‌ಕೇಶವಂ ಬ್ರಹ್ಮಾದಿ ಪಶುಗಳು (ಬಸವು. ೫೯-೨೨): ನಿನಗೆ ಪತಿ ಪಾಶುಪತಿಯಿರೆ ತೊಟ್ಟನೆ ಪಶುಗಳಂ ಕೊಲುವ ಮೆಲುವ ಕುಮನದ ಪಶುಕರ್ಮಿಗಳ ದುಃಕರ್ಮಂಗಳೊಳಗಿರಲು ಮನಸಿಚಾಂತಕನೆಂತವನನುಸಿಕನೆ ಬಿಡುವನೆ (ಬಸವು. ೬೦-೯೦). ೨. = ಪಾಶುಪತ ೩: ಶೈವ ಸ್ವೈವಜಿಗಾದ ಪಾಶುಪತಿ ಪಥಪಟಿಯ ಕಾಳಾಮುಖಿ ಕಂಗೆಟ್ಟು (ತನ್ನವ. ೪. ೨೫೦-೫೯೫). [< ಸಂ. ಪಶುಪತಿ]

**ಪಾಶುಪಾಲ್ಯ** (ನಾ). ದನಕರುಗಳನ್ನು ಸಾಕುವಿಕೆ: ಪಶುಪಾಲನೆಯಂ ಉದ್ಯೋಗ: "ಪಾಶುಪಾಲ್ಯಂ—ಗೋಮಹಿಷ್ಯಾದಿಗಳನ್ನು ಪಾಲಿಸುವಿಕೆ" (ಸಿದ್ಧಾಂತಿ. ೨೭೩): ನಿಖಿಲಕ್ಷತ್ರಿಯಸಮೂಹಕ್ಕೆ ಶಸ್ತ್ರಕರ್ಮಮುಮಂ ವಣಿಗ್ವಂಶಕ್ಕೆ ಪಾಶುಪಾಲ್ಯ ಕೃಷಿ ಪಣ್ಯಕರ್ಮಂಗಳುಮಂ . . . ಉಪದೇಶಂಗೆಯ್ದು (ಆದಿಪು. ೮-೬೯ ವ); ಅರ್ಥಕಲ್ಪನೆಯ ಉದ್ಯೋಗಗಳು ಐದುವಿಧ: ೧) ಪಾಶುಪಾಲ್ಯ ಅಥವಾ ಗೋರಕ್ಷ . . . ೫) ಕುಸೀದ—ಲೇವಾದೇವಿ (ಶಾಕರ. ೩೫೭). [ಸಂ.]

**ಪಾಶುರ** (ನಾ). (ತಮಿಳುಭಾಷೆಯ) ಭಕ್ತಿಗೀತೆ : ಶ್ರೀವೈಷ್ಣವದೇವಸ್ಥಾನಗಳಲ್ಲಿ ವೇದಮಂತ್ರಗಳೊಡನೆ ಆಳ್ವಾರರ ಪಾಶುರಗಳನ್ನು ಹೇಳುವುದು ಅರ್ಚನಾವಿಧಿಯ ಮುಖ್ಯಭಾಗವಾಗಿದೆ (ಶಾರದ. ೩೯೯) ; ಈ ಪಾಶುರಗಳನ್ನು ನಮ್ಮ ಜ್ಞಾನವಿಷಯಗಳನ್ನಾಗಿ ಮಾಡಿಕೊಳ್ಳಬಾರದು ಎಂದಲ್ಲ (ಅಕಳ. ೮೭). [← ತಮಿ. ಪಾಚುರ]

**ಪಾಶ್ಚಾತ್ಯ** (ಗು). ೧. ಹಿಂಭಾಗದ ; ಹಿಂದುಗಡೆಯ. ೨. ಆಮೇಲೆ ಬರುವ ; ತರುವಾಯದ. ೩. ಪಡುವಣದ ; ಪಶ್ಚಿಮದಿಕ್ಕಿನ : ಪಶ್ಚಿಮದೇಶಗಳಿಗೆ ಸಂಬಂಧಿಸಿದ : ಪಾಶ್ಚಾತ್ಯ ನಾಗರಿಕತೆಗೂ ಏಷ್ಯಾ ಖಂಡದ ದೇಶಗಳ (ಪೌರಸ್ತ್ಯ) ನಾಗರಿಕತೆಗಳಿಗೂ ಮೂಲಭಾವನೆಗಳಲ್ಲಿ ಪರಸ್ಪರ ವ್ಯತ್ಯಾಸಗಳಿವೆ (ಕ್ರಿಯೂಕ. ೧೩೩). (ನಾ). ೪. ಪಶ್ಚಿಮದ ನಾಡಿನವನು ; ಪಶ್ಚಿಮದೇಶಸ್ಥ : ಸಮುದಾಂಥರಪ್ಪ ಪಾಶ್ಚಾತ್ಯರುವಶ್ವಸಾಧನದೊಳಾದುದು ವಲ್ ತುಮುಲಂ ಮಹಾಹವಂ (ಶಾಂತಿಕ. ೦೦-೨೩). [ಸಂ.]

**ಪಾಶ್ಯ** (ನಾ). ಬಲೆ ; ಜಾಲ : ಕೌಳಿಕೆಗ್ಗೊಳ್ಳುವುದು ಲೋಕಂ ಕೌಳಿಕೆಗ್ಗೊಳ್ಳುವುದು ಪಾಶ್ಯ ವಿಶಾಲಮೋಹಕೆಗ್ಗೊಳ್ಳುವುದು ತತ್ವವನು ಪೇಳ್ವರೆ ಕೇಳಲಾರದು (ಚವೀಳ. ೦೧-೭೦). [ಸಂ. ಪಾಶ್ಯ]

**ಪಾಶ್ಯ** (ನಾ). ೧. ಬಲೆ ; ಜಾಲ. ೨. ಪಾಶಗಳ ಸಮೂಹ : ನೇಣುಗಳ ಗುಂಪು. ೩. ಹೆಣೆದ ಕೂದಲು : ಜಡೆ : ವೇಣಿ. [ಸಂ. ಪಾಶ್ಯ]

**ಪಾಷ** ‘ಪಾತಶಹ’ ನೋ.

**ಪಾಷಂಡ** (ಗು). ೧. ವೈದಿಕಸಂಪ್ರದಾಯವಿರೋಧಿಯಾದ : ಧರ್ಮಲಂಡವಾದ. (ನಾ). ೨. ವೇದವಿರುದ್ಧವಾದ ಮತ ; ಧರ್ಮಲಂಡಮತ : ವೇದಶಾಸ್ತ್ರದ ಹೊಲಬನರಿಯದೆ ಭೇದವಾದ ಮಾಡಿ ಪಾಷಂಡಾದಿ ಮತದಲಿ ನಡೆದು ದಂಭಾಚಾರಪರನಾಗಿ . . . ಕುಮತ ಮೊಳಗೆ ಬೋಧೆಯೇತಕೆ (ಅಮ್ಮಕ. ೦-೩೦). ೩. ವೈದಿಕಸಂಪ್ರದಾಯವನ್ನು ಮೀರುವವನು ; ಪಾಷಂಡಮತದ ಅನುಯಾಯಿ : ಮ್ಲೇಚ್ಛ : ಮುಟ್ಟಾಳ–ಪಾಪಿ, ಪತಿತ–ಪಾಷಂಡರ ಅಂತ್ಯಗತಿಯೇ ಜ್ಞಾನಿ–ವಿಜ್ಞಾನಿ, ಪಂಡಿತ—ಪರೋಪಕಾರಿಗಳಿಗೂ ಉಂಟಾಗುತ್ತದೆ (ಕಾವ್ಯ. ೭) ; ಈ ಚಕ್ರೇಶ್ವರನು ಶುದ್ಧ ಪಾಷಂಡ (ಶ್ರೀರಾಯ. ೧೪೦). ‘ಪಾಖಂಡ’ ಪರ್ಯಾ. [ಸಂ.]

**ಪಾಷಂಡಮತ** (ನಾ). = ಪಾಷಂಡ ೨ : ಈ ಮಧ್ಯದೇಶದಲ್ಲಿ ಸನ್ಮಾರ್ಗಕ್ಕೆ ವಿರುದ್ಧವಾದ ತೊಂಬತ್ತಾರು ಪಾಷಂಡಮತಗಳಿವೆ (ಪ್ರವಾ. ೧-೦೭೦). [ಪಾಷಂಡ + ಮತ]

**ಪಾಷಂಡಿ** (ನಾ). ೧. = ಪಾಷಂಡ ೩ : ಸಂನ್ಯಾಸಿ ಪಾಷಂಡಿಯಾದ ಕಾಪಾಲಿ ಮರುಳಾಗಿ ತಿರುಗಿದ (ಚನ್ನಬ. ೪. ೨೩೦-೩೪೩) ; ಮೋಕ್ಷೋಪಾಯಮಾನಿಜಯದ ಭಿಕ್ಷುವ ಪಾಷಂಡಿ (ಕಸಾರ. ೪೭೩) ; ಚೋರಂ ಚಂದ್ರಹಾಸಂ. ಸೋಂಬಂ ಪಗಲಂ, ಪಾಷಂಡಿ ವೇದಂಗಳಂ ಪಟುಪಂಡಿತರಕ್ಕು (ರಾಮಾಶ್ವ. ೨೪-೩) ; ಧರ್ಮಸಮನ್ವಯದ ನಾಡಿನಲ್ಲಿ ಪಾಷಂಡಿಗಳ ಅವತಾರವಾಗಿತ್ತು (ರಾಕ್ಷೋರ. ೪೩). ೨. (?) : ಬೀದಿಬೀದಿಯೊಳೆಲ್ಲಮೋಕುಳಿಯ ಗಂಡಿಯು ಆದಮೊಪ್ಪಿದುದು ಪಲತೆಱದ ಪಾಷಂಡಿಯುಂ (ಅನಪು. ೪-೭೮೧೯). ‘ಪಾಖಂಡಿ’ ಪರ್ಯಾ. [ಸಂ. ಪಾಷಂಡಿನ್]

**ಪಾಷಾಂಡಿ** ‘ಪಾಸಂಡಿ’ ನೋ.

**ಪಾಷಾಣ** (ನಾ). ೧. ಕಲ್ಲು ; ಶಿಲೆ : “ ಶಿಲೆ ಪಾಷಾಣಂ ಗ್ರಾವೋಪಲಾಶ್ಮದೃಷದಾಖ್ಯಮಕ್ಕುಂ” (ಚಸ್ತ್ರಕೋ. ೨೮-೪) ; ಆ ವಾಕ್ಯಮುಂ ವಿಜ್ಞಾನಮುಂಟೆಯಪ್ಪೊಡೆ ಪೂರ್ವೋಕ್ತದೋಷಪಾಷಾಣಸಂಚೂರ್ಣಿತಮಕ್ಕಿಮ್ಮೆ (ಅನಪು. ೨-೦೦ ೮) ; ನೀಳಾದಿ ಪಾಷಾಣಸಂಕುಲದೊಳ್ ದುರ್ವಿದರಂತು ಪೋಲಿಸುವೆನೇ ರೂಪಂ ಯಶೋಭದ್ರೆಯಾ (ಸುಕುಮಾ. ೯-೯೪) ; ಪುಣ್ಯವಿಳ್ಳ ಕಾಲಕ್ಕೆ ಪಾಷಾಣ ಪರುಷವಪ್ಪುದು ನೋಡಯ್ಯ (ಅಸಕು. ೨೦೭-೯೩೨) ; ನಿರ್ಧನ ರಂಗೈತಳಕೆ ಬಂದರೆ ಪರುಷ ಪಾಷಾಣ (ಕುವ್ಯಾದ್ರೋ. ೦೪-೪೭) ; ಪರ್ವತಗಳ ಹೊಟ್ಟೆಯೊಳಗೆ ಕಬ್ಬಿಣ ಮುಂತಾದ ಲೋಹಗಳುಳ್ಳ ಪಾಷಾಣಗಳು (ಅದುರುಗಳು) ಇರುತ್ತವೆ (ಮುಂಬರು. ೬-೪೦). ೨. ಮಣಿ : ರತ್ನ : ಪಾಷಾಣಪರೀಕ್ಷೆವಂತನಂತೆ . . . ಗುರುವುಳ್ಳವರ ನಿಜವಿಂತುಟು (ಅಕವ. ೯೨೭). ೩. ಒಂದು ಬಗೆಯ ವಿಷ : ‘ಇಲಿಪಾಷಾಣ’ ಪರ್ಯಾ. [ಸಂ.]

**ಪಾಷಾಣದಾರಣ** (ನಾ). ಕಲ್ಲನ್ನು ಸೀಳುವ ಸಾಧನ : ಉಳಿ : ಟಂಕ : “ ಟಂಕಃ . ಪಾಷಾಣದಾರಣಃ —೨ ಕಲ್ಲು ಕಡಿಯುವ ಉಳಿಯ ಹೆಸರು ” (ಸಿದ್ಧಾಂತ. ೩೦೭). [ಪಾಷಾಣ + ದಾರಣ]

**ಪಾಷಾಣಬೇರು** (ನಾ). ಒಂದು ಬಗೆಯ ಸಸ್ಯ : “ಪಾಷಾಣಬೇರು, ಶಿಲಾಜಾತು” (ಸಸ್ಯಕ. ೭೪). [ಪಾಷಾಣ + ಬೇರು (< ಬೇರ್) ]

**ಪಾಷಾಣಭೇದಿ** (ನಾ). ಒಂದು ಬಗೆಯ ಸಸ್ಯ : ಕಲ್ಲುಕರಗ : ಚಕ್ಷು ರೋಗಕ್ಕೆ . . . ನೆಲ್ಲಿಯ ಚಟ್ಟು. ಪಾಷಾಣಭೇದಿ. ನೇಜಿಲ ತ್ರಿಕಟ್ಯ ಇವು ಕಷಾಯವು ಮಾಡಿ ತೊಳೆಯುವುದು (ವಿವೈವಿ. ೦೮೦) ; ಹಿಪ್ಪಲಿಕೆ ಬೇರು. ತಗ್ಗಿಬೇರು. ಪಾಷಾಣಭೇದಿ ಇವುಗಳನ್ನರೆದು ಮಜ್ಜಿಗೆಯಲ್ಲಿ ಕದಡಿ ಇಂಗಿನ್ಕೆ ಕಾಯಿಸಿ ಕುಡಿಯೆ ಶೀತಜ್ವರಂ ಶೀಘ್ರಂ (ಸಕವೈ. ೭೮). [ಸಂ. ಪಾಷಾಣಭೇದೀ]

**ಪಾಷಾಣಸಂಧಿ** (ನಾ). ೧. ಬಂಡೆಯಲ್ಲಿರುವ ಬಿರುಕು : (?). ೨. ಗವಿ ; ಗುಹೆ : “ ಗುಹಾ, ಪಾಷಾಣಸಂಧಿಃ —ಈ ೨ ಗುಹೆ ” (ಕರಾಮು. ೨೮-೦೩). [ಪಾಷಾಣ + ಸಂಧಿ]

**ಪಾಷಾಣಹೃದಯ** (ನಾ). ಕಲ್ಲುಮನಸ್ಸಿನವನು ; ಕಲ್ಲೆದೆಯವನು ; ಕಠಿಣಹೃದಯನಾದವನು : ಪಾಷಾಣಹೃದಯರಪ್ಪೊಡೆ ಮೂಢಸಿ ಮತ್ಸಾಪ್ಯಮಂ ಪರೀಕ್ಷಿಸುಗೆ ಗುಣಾನ್ವೇಷಿಗಳಪ್ಪೊಡೆ ಕನಕನಿಕಾಯದೊಳೇಂ ನಿಕಷಮ್ಮಪಮಾಜನರೊಳರೇ (ಲೀಲಾವ. ೧-೩೯). [ಪಾಷಾಣ + ಹೃದಯ]

**ಪಾಸ್** ‘ಪಾಸು$_4$’ ನೋ.

**ಪಾಸ$_1$**. ಪಾಸು$_3$. ಹಾಸ$_1$. ಹಾಸು$_4$ (ನಾ). ಹಗ್ಗ ; ನೇಣು : ನಾಯು ಬಿಡು ಸಡಿಲಿಸು ಬಿಗಿದಂಗಳಂ ಪಾಸಮುಂ ಪಾಗುರಿಯುಂ ಬೀಸು (ಚಗಂ. ೦೭-೧೭) ; ಬಿಸಲಿಸದೆ ಬಿಗಿದ ಪಾಸವಿಂದುಬಂತೆ ನೀಳ್ದ ಕೊಂಬೆಡೆಗಳೊಳು (ಕವ್ಯಕಾ. ೦೭೭) ; ಅವು ತಾಂ ಪಾಸದೊಳಿರ್ದ ಜಾಯಿಲನು ತೋಱಿಸಿ (ಪಟು. ೭-೦೦೭೪). **ಪಾಸು$_3$** : ಆ ಕುಕ್ಕುರಂಗಳಂ ಕಟ್ಟಿರ್ದ ಪಾಸಿನ ನೇಣು ಸಿಂಬಿ ಕರ್ಣಪ್ರಾದದೊಳ್ ಬಂಧಿಸಿಕೊಳ್ಳು (ಕಂತಕು. ೨೦-೩). **ಹಾಸ$_1$** : ಬಿಡುವಿಯನುತ್ತ ಬೇಡರು ನಾಯ ಹಾಸವಂ ಬಿಡಲು . . . ಬೆರಸುತಿದೆ ಬರು ಕಿಗ್ಗಣ್ಣಿಕ್ಕಿ ನೋಡುತಿತ್ತು ನಾಸ್ತಿಸಿಯನು (ಕುಕಶ. ೬-೮) ; ಹಾಸಗಳ ಬಿಡಿಸಲಿ ನಾಯ್ಗಳ ಬೀಸುವಲೆಗಳ ... ಬೀಸಿದರು ಬೇಂಟೆಗರು (ಕುವ್ಯಾಆ. ೩-೯) ; ಆ ಸಾರಂಗಮುಂಪ್ಯುಮ್ಯಗಪೋದಲು ನಾಯ ಹಾಸವ ಕಳಚಿದರು (ಬೋಜವ. ೦೯-೦೮) ; ಬಿಸಲ ಪುಳಿಂದ ತನ್ನ ಹೆಸರ ಪೇರುವಿಯ ಹಾಸವು ಕಳಚಿ ದ್ವೇಷದಪಿ ಕೈ ಚಿಟುಂಕಿಗೆಯ್ಯು ಪುಲ್ಲೆಯಂ ತೋಱಿ ಬಿಡಲು (ಬಾಹುಕ. ೫ ೮೩೨). **ಹಾಸು$_4$** : “ಕುಕ್ಕುರಗೊರಲ ಬಂಧನದೊಳಂ ತಳ್ತದೊಳು ಹಾಸು ” (ಶಬ್ದಮ. ೧೧೧) ; ಕೊರಳ ಹಾಸು ಬಿಡಲೊಡನೆ . . . ಕರಮುರಾವಣ್ಣನಾತು ಬಾಯಿಂಗಳು ಬಾಯುವೇಗದಲಿ ಪರಿದು ಕವಿದುವು (ಐಸಪು. ೩೪-೨೪) ; ಹೆಸರ ನಾಯ್ಗಳ ಹಾಸ ಹಱಿದುಬ್ಬಸದಲುಳಿಗದಪಲಿರ ಬಿಡಿಸಿದ್ಯಗ ಮೊಸಗಾವುದು ಮದವಿಲುಗಳೊದೆದವು ಹೆದೆಯ ಹರವಿನಲಿ (ಕುವ್ಯಾಆ. ೦೩-೩೦) ; ಕಾಲ ಕಣ್ಣಿಗಳ ಬಿಡಿಕೋಲು ಹೊರಳಿಗಳ ಸೊಪ್ಪು ನುಡುಗೆಯ ಹಾಸುಗಳನಾಂತು ಪರಿವ ಕನ್ನಿಗಳ ಶಬರಗಣಂ ಬಿಡದೆ ಪೊಱಮಟ್ಟುದಾಕ್ಷಣಂ (ತರಪು. ೩೩-೦೦). [< ಪ್ರಾ. ಪಾಸ./ಸಂ. ಪಾಶ]

**ಪಾಸ್₂** ‘ ಪೋಸ ’ ನೋ.

**ಪಾಸಂಗ** (ನಾ). ೧. ತಕ್ಕಡಿಯಲ್ಲಿ ಪೇರು ಕಟ್ಟುವ ಕಾಣಿ. ೨. ತೀರ ಅಲ್ಪವಾದುದು,—ಕಡಮೆಯಾದುದು : ಒಂದು ಜೀವಕ್ಕೆ ಇನ್ನೊಂದು ಜೀವವು ಕೊಡಬಹುದಾದ ಆನಂದದ ಪಾಸಂಗಕ್ಕೆ ನಿಖಿಲಕಲಾನಂದವೂ ಬಾರದು (ಶಾಹಿಸಂ. ೨೦) ; ನಮಗೆ ತಿಳಿದೆಲ್ಲ ಸಂಗತಿಗಳನ್ನು ಕೂಡಿ ಹಾಕಿದರೂ ತಿಳಿಯಬೇಕಾದುದರ ಪಾಸಂಗಕ್ಕೂ ಸರಿಹೋಗುವುದಿಲ್ಲ (ವಿಜಾಮಂ. ೩೦).

**ಪಾಸಂಗಕ್ಕೆ ಹತ್ತು** = ಸರಿಸಮಾನವಾದ ಯೋಗ್ಯತೆಯನ್ನು ಪಡೆ ; ಸದೃಶವಾಗು : ಅದರ ತಲೆಯೊಳಗಿನ ಮಿದುಳು ನಮ್ಮ ಮಿದುಳಿನ ಪಾಸಂಗಕ್ಕೆ ಹತ್ತುವ ಹಾಗಿಲ್ಲ (ಮುಂಬಯಿ. ೬-೩೦೦) ; ವಿಷ್ಣುವರ್ಧನನು ಪುಲಿಕೇಶಿಯ ಪಾಸಂಗಕ್ಕೆ ಹತ್ತುವಂತಹವನಿರಲಿಲ್ಲ (ಇಕಸಂ. ೯೦).

[← ಪಾರ. ಹಿಂ. ಮರಾ. ಪಾಸಂಗ್]

**ಪಾಸಂಗಿ** ‘ ಪಾಸಂಗೆ ’ ನೋ.

**ಪಾಸಂಗೆ**, ಪಾಚಿಕೆ, ಪಾಸಂಗಿ, ಪಾಸಗೆ₁, ಪಾಸುಂಗೆ₂, ಹಾಸಂಗಿ, ಹಾಸಗಿ (ನಾ). ೧. ಜೂಜಿನ ದಾಳ ; ಲೆತ್ತ ; ಪಗಡೆಯ ದಾಳ ; ಅಕ್ಷ : ದುರ್ಯೋಧನನೊಕ್ಕಲಂ ಪುಡಿಯೊಳ್ ಪೊರಳ್ವುವಂತೆ ಪಾಸಂಗೆಯುಂ ಪೊರಳ್ಚಿ . . . ದಾಯುಮನಾಡೆ (ಪಂಪಭಾ. ೬-೭೦ ವ). **ಪಾಚಿಕೆ** : ೧. “ಅಕ್ಷಃ, ದೇವಕಃ, ಪಾಶಕಃ—೩ ಪಾಚಿಕೆಗಳ ಹೆಸರು, ಲೆತ್ತಗಳು” (ಸಿದ್ಧಾಂತಿ. ೩೨೦). **ಪಾಸಂಗಿ** : ೧. ಸಾರಿಯನಿಡುತ ತಪ್ಪಿದೆನೆಂದೊ ಪಾಸಂಗಿಗಳ ನಾನಿಂತೊಂದನೊಂದಂ ಪಿಡಿದು ತಪ್ಪಿಸಿ ಹಾಯಿಕಿದೆನೆಂದೊ (ದಸಕೃ. ೯೩-೦೩); ಅಂತು ಲಜ್ಜಾನತಾನನೆ ನೆತ್ತದಾಟವನುಳಿದು ನೆತ್ತವಲಗೆಯ ಮೇಲೆ ಪಾಸಂಗಿಗಳನೊಯ್ಯನಿರಿಸಿ (ವೃಕಪು. ೨೯-೫೨ ವ). **ಪಾಸಗೆ₁** : ೧. “ದುಂದುಭಿ ಮೃದಂಗಮುಂ ಪಾಸಗೆಯುಂ” (ವಸ್ತುಕೋ. ೦೨೨-೨೬) ; ಭಯಮಱಿಯದ ಕಲಿಯುಂ ಟಾಗಿಯುಮೆನಿಸದೆ ನಾಡೆ ಲೋಭಿಯುಂ ಪಂದೆಯುಮಾಗಿಯೆ ಬಾಳ್ವಂಗಲ್ಲದೆ ಸೂಳೆಯ ಕಣ್ ಪಾಸಗೆಯ ಕಣ್ಣುಮೇನುಱುಗುಗುಮೇ (ಪಂಪಭಾ. ೬-೩೩) ; ಅಂಗುಲೀನಖಚಯಕಾಂತಿಗಳನವಗಯ್ಸಿ ಸಲೆ ಪಾಸಗೆಯ ದೆಸೆದೆಸೆಗೆ ಪೊರಳ್ಚಿದಂ ಪತ್ತೊರ್ವಂ (ಶಾಂತಿಪು. ೫-೦೦೫) ; ಆಡಲೊಸೆದು ಪೂಡಿ ಸಾರಿಯನೋಸರಿಸಿ ಪಾಸಗೆಯನಿಕ್ಕಲ್ (ನೇಮಿಪು. ೦೦-೨೮ ವ). **ಪಾಸುಂಗೆ₂** : ೧. ಒಯ್ಯನೆ ಪಾಸುಂಗೆಗಳನಂತಿರಿಸಿ . . . ನಗುವುಜ್ಜುಗವೇನದನುಸುರುಸುರೆಂದಾ ಸಜ್ಜನದಲೆವಣೆ ತನ್ನಿನಿಯನ ಸಿರಿವಜ್ಜೆಗಳಂ ಪಿಡಿದು (ಉದ್ಭಟದೇ. ೩-೦೬). **ಹಾಸಂಗಿ** : ೧. “ಅಕ್ಷಃ, ದೇವನಃ, ಪಾಶಕಃ—ಈ ೩ ಹಾಸಂಗಿ” (ನಾಚಿರಾ. ೬) ; ಹಾಸಂಗಿಯನಿಳಿಪುತೆ ಹೊರೆಯುಳಿದಳ್ ಲೇಸಾಯ್ತಾಟವೆನುತ್ತುಂ ನುಡಿದಳ್ (ಉದ್ಭಟ. ಹ. ೦೬೬-೨೩) ; ಹಲಗೆಯ್ಯ ಕುರುಭೂಮಿ ಕೌರವಕುಲದ ತಲೆ ಸಾರಿಗಳು ನೆಱೆಯುಲಿ ಗೆಲಲು ಬಂದೆನು ಕೊಳ್ಳು ಹಾಸಂಗಿಗಳನು (ಕುಮಾವ್ಯಾದ್ರೋ. ೦೦-೯೯); ಕರಗಿ ಕಂದುತ ಮನವಿಳಿದು ಲೆತ್ತದ ಹಾಸಂಗಿಯನಂತಿರಿಸಿ . . . ಇಂತೆಂದಳು (ಶೃಂಗಾರ. I, ೯೮) ೨. ಪಗಡೆಯ ಹಾಸು ; ಪಗಡೆಪಟ್ಟ : ಹರಹು ಹಾಸಂಗಿಗಳನಾಡುವೆವು (ನಳಚ. ೯-೨೬) ; ಲೋಕೇಶನಾ ಪುರಲಕ್ಷ್ಮಿಯಾಡಲ್ಕೆಂದು ಹಾಸಿದ ಹಾಸಂಗಿಯಂತೆ ನಾಕಲೋಕವ ಜಱೆವುತ ಸೊಬಗಿನಿಂದಾನೇಕ ಚವ್ವೀದಿ ರಾಜಿಪುದು (ಜ್ಞಾನಚ. ೦-೦೨೬) ; ಒಂದೆಡೆಯಲ್ಲಿ ಹಾಸಂಗಿಯಂ ಪಾಸಿದಂದದಿಂದೆ . . . ಒಪ್ಪಿದುವು ಪೂಗಿಡುಗಳು (ಕೇಶರಾ. ೭-೦೨) ; ಹಾಸಂಗಿಯನ್ನು ಹಾಸಿದರು. ಸಾರಿಯ ಸಾಲನ್ನು ಜೋಡಿಸಿದರು (ರಾಜಸೂ. ೯೬) ; ಹಗಲಿರುಳ ಹಾಸಂಗಿಯೊಡ್ಡಿ ಮಾನವರಂ ಬಿಸುಗೆಯಾಗಿಸಿ ನಿಯತಿಯಾಡಿಸುವುದವರಂ (ಗೀಶಂ. ೦೨೨-೩೫). **ಹಾಸಗಿ** : ೧. ಇಳೆಯಾಧಿಪರ ಮನವನರಿದಾ ನೆತ್ತವಲಗೆಯ ಶಕುನಿ ತಂದಿರಿಸಿ ನಿಲಿಸಿ ಸಾರಿಯನು ಹಾಸಗಿಯನೀಯಲು ಕೈಗೆ ಚಲದಂಕರಂದಾಡಿದರು (ಪೇಮಿಶಂ. ೨೯-೨೬).

[< ಪ್ರಾ. ಪಾಸಗ./ಸಂ. ಪಾಶಕ./ಪಾಲಿ. ಪಾಸಕ]

**ಪಾಸಂಡಿ**, ಪಾಶಾಂಡಿ, ಪಾಷಾಂಡಿ (ನಾ). ೧. ವ್ರತಿ : ಸಂನ್ಯಾಸಿ : ಲೇಸೆನಿಸಿದ ಮೂಱುಮನಾಶ್ಲೇಸೆಯೊಳಂ ಕಱೆಯುಲಿಱಗೆ ಸೀರ್ಗಮದುಚಿತಂ ಪಾಸಂಡಿಗೆ ಶಿಶುಗಳ್ ಸಂತೋಸದೆ ತಾನಿರ್ಕುಮೆಂದಪನೊಳ್ಪಿನ ಬಟ್ಟಂ (ಅಟ್ಮಮ ೬-೯೫). ೨. ಪಾಷಂಡ ೩ : ಪಾಷಂಡಿ ಪಾಸಂಡಿ (ಶಮದ. ೨೫೩ ಪ್ರಯೋ). **ಪಾಶಾಂಡಿ** : ೨. ಪಾಶಾಂಡಿಗೆ ಲೋಕವಿಲ್ಲ, ಪಾಷಾಣಕ್ಕೆ ರೋಗವಿಲ್ಲ (ಗಾದೆ). **ಪಾಷಾಂಡಿ** : ೨. ಪಾಷಾಂಡಿಗಳಪ್ಪ ಪಾಶದ ಪೊತ್ತು ತಿರುಗುವ ವೇಷಧಾರಿಗಳೆಲ್ಲರು ಜಂಗಮವಲ್ಲದೆ ಜ್ಞಾನ ಜಂಗಮವಲ್ಲ (ಪೋಟೆವಚ. ೦೫೫-೫೮೩). [< ಪ್ರಾ. ಪಾಸಂಡಿ / ಸಂ. ಪಾಷಂಡಿನ್]

**ಪಾಸಗೆ₁** ‘ ಪಾಸಂಗೆ ’ ನೋ.

**ಪಾಸಗೆ₂** (ನಾ). ಮಲ್ಲಯುದ್ಧದ ಒಂದು ಪಟ್ಟು,—ಹಿಡಿತ : ಪಾಸಗೆ ವನ್ನಿಪುಂಟ್ಟಿ ಚಟ್ಟು ಸಿರಣಪಟ್ಟಿ ಬಾಹುದಣೆ ಖಿಮ್ಮರಿ ಕತ್ತರಿ . . . ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಚಂದ್ರಪು. ೫-೭೮) ; ಕಮ್ಮರಿ ಮುಹುಡಂ ಜವತ್ಸವಡಿ ಪಾಸಗೆ ಕಕ್ಕವಡುಮ್ಮ . . . ಎನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಪು. ೨೬-೦೮). [?]

**ಪಾಸಟಿ** (ನಾ). ಸರಿ ; ಸಾಟಿ ; ಸಮ : “ಸರಿ, ದೊರೆ, ಪಡಿ, ಗೆಡೆ, ಪಾಟಿ, ಪಾಸಟಿ . . . ಸಂಗಡಂ—ಈ ೧೮ ಸಮಾನಕ್ಕೆ ಪೆಸರ್” (ಕಬಾ. ೫೯-೨೯) ; ಪವನಸುತಂಗೆ ಪಾಸಟಿಗಳೊರ್ವರುಮಿಲ್ಲ (ಪಂಪಭಾ. ೦೨ ೦೨೦) ; ಬಾಯಿಬಡಿಕರು ಬಗುಳಿದರೆ ಹರಿಯಾಯುಧಿಕೆ ಪಾಸಟಿಯೆ (ಕುಮಾವ್ಯಾಸ. ೯-೯೭) ; ರೂಹಿನಲಿ ನೀನತಿಚೆಲುವ ನಿನಗವಳು ಪಾಸಟಿ ಸತಿಗೆ ನೀನೇ ರಮಣನಲ್ಲದೆ ಕಾಣೆನಿತರರನು (ನಳಚ. ೨-೨೫).

**ಪಾಸಟಿಕೆ** (ನಾ). ಸಮಾನತೆ (?) : ಮೊದಲೊಳ್ ತಾಂ ಪಾಪಸನಾಗಿ ದೇಪಕ್ಕರ್ಗಳಂ ಭಕ್ತಿಯಿಂದಂ ಪದೆದು ತನಗಿಳಿಪಿಕೊಂಡಂತೆ ಪದಿಯಿಂದೆತ್ತಿಕೊಂಡುಂ ಕೀಳ್ಗುದಿವರನಾ ಕೀಳಿಲಿಂ ಬಳಿಕೆ ರೂಢಿಸುತೆ ಪಾಸಟಿಕೆಯುಂ ಪುದುವಿನಾ ನಣ್ಪನೆಲ್ಲರುಮಂ ಕವಿ ಸತ್ಯಲೋಕದೊಳಾಳ್ವಂ (ಪಂಸಕ. ೦೨-೩೦).

[ಪಾಸಟಿ + –ಇಕೆ]

**ಪಾಸಟಿಗಾಣು** (ಕ್ರಿ). ಸದೃಶವಾದುದನ್ನು ಕಾಣು ; ಸಮಾನವಾದುದನ್ನು ನೋಡು : ನರಸಟನೆ ತೋರಿದಿ ಲಕ್ಷ್ಮೀನಲ್ಲ ನಾ ಪಾಸಟಿಗಾಣೆ ಅಪ್ರತಿಮಲ್ಲ (ಜಗದಾ. ೩೯೦). [ಪಾಸಟಿ + ಕಾಣು (<ಕಾಣ್)]

**ಪಾಸರೆ** ‘ ಪಾಸಱೆ³ ’ ನೋ.

**ಪಾಸಲೆ** ‘ ಫಾಸಲೆ ’ ನೋ.

**ಪಾಸಱೆ³**, ಪಾಸರೆ, ಹಾಸರೆ, ಹಾಸಱೆ³ (ನಾ). ಅಗಲವಾದ ಕಲ್ಲು ; ಹಾಸಂಗಲ್ಲು ; ಹಾಸುಬಂಡೆ : ಪಾಸಱೆ ಸಿಂಹಪೀಠಮಾಳ್ವೀರುತಿ ಮಂಗಳಗೀತಿ ಭೂತಳರ ಪಾಸು (ಪಂಪಭಾ. ೭-೨೯) ; ಒಗೆವೆನೊ ಬೀಸಿ ಪಾಸಱೆಯೊಳ್ (ಪಂಪರಾಮ. ೯-೦೭) ; ಪರಲೆಲ್ಲಂ ಮುತ್ತು ಮಾಣಿಕಂ ಪಾಸಱೆಗಳ್ ಪರುಸಂಗಳ್ (ಶಮದ. ೬೯ ಪ್ರಯೋ) ; ಬಱಿಸಿಡಿಲೆಱಗೆ ಪಾಸಱೆ ಬಿರಿವಂತೆ ಪೊಚ್ಚರಿಸಿ ಸೀಳಾಯ್ತು ಮತ್ತೊಡನೆ . . . ತೆಱೆದುದಾ ವಜ್ರಕವಾಟ (ಧರ್ಮ. ೨೯-೭೫). **ಪಾಸರೆ** : ಹೊಳೆಯೊಳು ನೀರೊಳಗಿರುವ ಪಾಸರೆಯೊಳು ಮರೆಯಾಗಿ ಮೀನಿರುವಂತೆ . . . ಹಾಯಾಗಿ ನಾನಿಹೆನಲ್ಲ (ಇಂಚಾಶ. ೨೯೦-೯೫) ; ಅಷ್ಟರಲ್ಲಿ ಶಿಷ್ಯವೃಂದವು ಆ ಪಾಸರೆಯನ್ನು ಸಮೀಪಿಸಿತ್ತು (ಪೇಮಕೂ. ೭೮). **ಹಾಸರೆ** : ಆ ಹೆದ್ದಾರಿಯೇ ಮೇರೆಯಾಗಿ ನಡೆದು ಹಾಸರೆಯಲ್ಲಿ ನಿಂದು ಅಲ್ಲಿಂದ ಮೂಡ ಮುಂತಾಗಿ (ಎಕ. III, ಶ್ರೀರಂಗ. ೦೩೩-೭೫ ; 1458) ; ಸಮೀಪದ ಹೆದ್ದಾರಿಯ ಒತ್ತಿರಿಣ ಕರಿಯ ಕಲ್ಲ ಹಾಸರೆ (ಎಕ. VII, ಶಿವಮೊ. ೨೬-೨೫೭ ; 1524) ; ನೆಲದ ಹಾಸರೆಯೊಳಂ ತಳೆದ ಮಣಿಮಾವುಗೆಯ ಕುರುಹ ಲೇಸಿನಿಂ ವಸುನೀರಿನಿಂದೆ ಚಿತ್ರಿಸಿದರೆಂಬಂತೆ ಸಲೆ ರಾಜಿಸುತಿರೆ (ಪವಮೋ. ೨೯-೬೦) ; ಮಳೆ ಗಾಳಿಗಳ ನಿರಂತರ ಆಘಾತದಿಂದ ಹಾಸರೆಯಾದರೂ ಒಂದು ದಿವ ಬಿರಿಯುವುದು (ಶಾಹುತ್. ೯೯). **ಹಾಸಱೆ³** : ಒಡಗಣ

ಭಾಗದ ಹಾಸಱ$^3$ (ಶಾಇಾ. IX-1, ೨೫೦-೬೩ ; 1148) ; ಹಾಱುವ ಪೊರಡಿಗಳನೆದ್ದು ಹರಿದಿಡುವ ಹಾಸಱ$^3$ಗಳ . . . ಸಿದ್ಧರಾಮಂಗೆ ತೋಱುತ್ತ ನಡೆತಂದನಾ ದಿಗಂಬರವೀರನು (ಸಿದ್ಧರಾ. ೩-೨) ; ಸೂಸಕದ ಮುತ್ತುಗಳು ತಾರಾರಾಶಿಗಳ ಹಬ್ಬುಗೆಯು ನೀಲದ ಹಾಸಱ$^3$ಗಳು ಪೋಲುತಿಪ್ಪವು ಗಗನ ಮಂಡಲವ (ಕುಮಾ.ಹ. ೧೩-೩೦) ; ಕಾಳಕೂಟದ ಮಡುವಿನೊಳು ಮುಳುಗುವೆನೊ ಹಾಸಱ$^3$ಯೊಳಗೆ ಬೀಳುವೆನೊ (ವಳತ. ೫-೨೩). [ಪಾಸು$_1$+ಅಱ$^3_4$]

**ಪಾಸಱ$^3$ಗಲ್ಲು**, ಹಾಸರೆಗಲ್ಲು, ಹಾಸಱ$^3$ಗಲು, ಹಾಸಱ$^3$ಗಲ್ಲು (ನಾ). = ಪಾಸಱ$^3$ : ಅದಱ ಸೀಮೆ . . . ಮೂಡ ಪಾಸಱ$^3$ಗಲ್ಲು ತೆಂಕ ಅಪ್ಪೋಜ ವಾಸಿಗಟ್ಟು ಪಡುವ ನಟ್ಟ ಕಲ್ಲು (ಎಕ. VII. ಶಿಕಾ. ೦೨೦-೦೯ ; 1048) ; ಅರಿಯುಮನ್ನೆತಂದುದಯಾದ್ರಿಯು ಪಾಸಱ$^3$ಗಲ್ಲ ಮೇಲೆ ಮಂಡಿಸಿದ (ಕಂಪಾ. ೯-೨೦೯). **ಹಾಸರೆಗಲ್ಲು** : ಕರಸಿದರು ಹುಡಿಗಲ್ಲು ಸಿಡುಗಲ್ಲು ಬಡಿಗಲ್ಲು ಛರ ಹಾಸರೆಗಲ್ಲು ಬರಿಗಲ್ಲುಗಳನು (ನವಮೋ. ೩೨-೩೩). **ಹಾಸಱ$^3$ಗಲು** : ಕೆಱ$^3$ಯೇರಿಯು ಕೆಳಗಣೆರಡುಂ ಹಾಸಱ$^3$ಗಲುಗಳ ನಡುವಣ ಗದ್ದೆ[ಯು] ಮತ್ತೆರೆಡುಂ (ಕಇಅ. ೬೨-೦೫-೬೩ ; 1117). **ಹಾಸಱ$^3$ಗಲ್ಲು** : ಆ ಗದ್ದೆಯಿಂ ಮೂಡಲು ನಟ್ಟ ಕಲ್ಲು ಅಲ್ಲಿಂ ತೆಂಕ ಹಾಸಱ$^3$ಗಲ್ಲು (ಎಕ. II. ೩೩೪-೨೭ ; 1282) ; ನಿಡಿಗಲ್ಲು ನಿಶಿತ ಹಾಸಱ$^3$ಗಲ್ಲು ಚೌಕದ ಬಡಿಗಲ್ಲು ಬಟ್ಟುಗಲ್ಲು ಬೀಳೆ ತುಡುಕಿದ ವಜ್ರಮಾರ್ಗಣದಿಂದೆ ಶ್ರೀಕೃಷ್ಣ ಹುಡಿಯೋಳಲೆಚ್ಚು ಹಾಱಸಿದ (ಮೋಹತ. ೪೦-೭೩). [ ಪಾಸಱ$^3$ + ಕಲ್ಲು (< ಕಲ್$_3$) ]

**ಪಾಸಾಣ**, ಪಾಶಾಣ (ನಾ). ೧. ಕಲ್ಲು : ಶಿಲೆ : "ಪಾಸಾಣಂ ಶಿಲೆ" (ಕಣಾಗ. ೭೦) ; ಪಾಷಾಣ—ಪಾಸಾಣ (ಶಮದ. ೨೫೩ ಕೃಮೋ). ೨. ಅಶ್ಮರೀ ರೋಗದಿಂದ ಉಂಟಾಗುವ ಮೂತ್ರವಿಕಾರ ; ಮೂತ್ರದೊಳಗಿನ ಕಲ್ಲು: ನಿರುತಂ ಱಾಜಿಯು ಬೇರಂ ಕರಿಯಾಡಿನ ಪಾಲೊಳರೆದು ಮೂಱುದಿನಂ ಶರ್ಕರೆವೆರಸು ಕುಡಿಯೆ ಪಾಸಾ(ಸ)ಣದ ರೋಗಮುಂ ಮೂತ್ರಕೃಚ್ಛ್ರಮುಂ ಪ್ರಶಮಿಸುಗುಂ (ಲೋಕೋಪ. ೯-೦೩೫). **ಪಾಶಾಣ** : ೧. 'ಪಾಶಾಣ' ಪರಾ. [< ಪ್ರಾ. ಪಾಸಾಣ. / ಸಂ. ಪಾಷಾಣ]

**ಪಾಸಾಲೆ** (ನಾ). ಬಾಯಿ ಅಗಲವಾಗಿರುವ ಪಾತ್ರೆ : ಬಿಂದಿಗೆ ಪಾಸಾಲೆ ಅಷ್ಟಣಿಗೆಗಳನು ತಂದು ಮಂಟಪದೊಳಿರಿಸಿ (ಪಾರ್ಶ್ವ. ೩-೮೭) ; ಚಿನ್ನದ ಕೊಪ್ಪರಿಗೆ ಗಿಂಡಿ ಪಾಸಾಲೆ ತಟ್ಟೆ ಅನೇಕ ಬಟ್ಟಲುಗಳು (ಶಾಮಂ. ೩೦೨) ; ಬಳಿಕ ಕೊಂಡನು ಲಿಂಗಮುಖಮಂಡಗ್ಗಣೆಯುನಾಗ ಸೆಳೆದು ಪಾಸಾಲೆಯುಲಿ ದ್ರವ್ಯಗಳನಡಿಸಿ ತುಂಬಿದನು (ಶರಣ. ೨೨೯-೦೦).

[?. ತೆಲು. ಬಾಸನ. / ಸಂ. ಭಾಜನ ?]

**ಪಾಸಿ$_1$** 'ಪಾವಸೆ' ನೋ.

**ಪಾಸಿ$_2$** (ನಾ). =ಪಾಶಿ$_1$ ೧ : ಸಾಧುರೋಹಣ ಪಾಸಿಯಂತೆ ರತ್ನಾಧಿಕರು ಮಾಧುರ್ಯಯುಕ್ತ ಹರಿಶ್ಚಂದ್ರ ಚೋಳರುಮ್ಪೋಲುಂ ಸತ್ಕರಿಹರಾ ಪುರದೊಳು (ತ್ರಿಪುರ. ೩-೩೨). [< ಸಂ. ಪಾಶಿನ್]

**ಪಾಸಿ$_3$** 'ಫಾಸಿ' ನೋ.

**ಪಾಸಿ$_4$** 'ಫಾಸೆ' ನೋ.

**ಪಾಸಿಕೆ**, ಹಾಸಿಕೆ$_1$ (ನಾ). ಹಾಸುಗೆ : ಶಯ್ಯೆ : ಬಟ್ಟೆವೋಪರ್ ಬಱಲ್ಕೆಗಱೆದುದನಱಿಪುದ ಬಾಹುಂದಳರ ಪಾಸಿಕೆಗಳುಮಂ . . . ಬಳಕೆಯ್ದ ಬತ್ತಿದ ಪಳ್ಳಂಗಳೊಳಮತಿರಾದ್ರವಾದ ಪೇರಡವಿಯೊಳಗೆ ಬರ್ಪಗಳ್ (ಕಾದಂಬ. ೨೬೬) ; ಅಂಗಸಂಘಟನಳನಪ್ಪೊಲಪ್ಪ ಕೆಂದಳಿರ ಪಾಸಿಕೆಯುಮಂ ವಿಷಮಾಮುಷ್ಟಿ ಶೀತಳಜಳಮುಮಂ . . . ಅಕ್ಕ ಕೇವಳ ಮನಗಾಢಚಾರಪಚಾರಮಿದೇಂ ಪತಿರೋಪಚಾರಮೋ (ಜಗಾ. ೦೦-೪೪) ; ಕೌಶಿಕಂ . . . ಪವಡಿಸಿದ ತೃಣರಚಿತ ಪಾಸಿಕೆಯೊಳು (ವಂಕಾರಾ. ೦-೦೨-೫೩). **ಹಾಸಿಕೆ$_1$** : ಹಾಸಿಕೆ ಹೊರಸೇಕೆ ಲೇಸೇಕೆ ನಿಮ್ಮ ಭೃತ್ಯನಿಗೆ (ದೇವಾವ. ೩೦-೫೨) ; ಆ ಶಿಖಂಡಿಯು ತೋಱ ಸರಳಿಸ ಹಾಸಿಕೆಯುಲೊಬ್ಬನನು ಪಾತಿಸಿಯಿಂದೊಬ್ಬನನು ಮುನ್ನಿನ ಕುಲವನೆಚ್ಚಱಿಸಿ ಫಾಸಿ ಮಾಡಿದನೊಬ್ಬನನು (ಕುಮಾ.ಕ. ೦-೩೫) ; ಹಾಸಿಕಿಲ್ಲದೆ ಹಾವಿನ ಮೇಲೆ ಒಱಗಿದವ (ಪುರಂದ. ೨-೦೦-೦).

**ಹಾಸಿಕೆಪಥ್ಯ** = (ವೈದ್ಯಕೀಯ ಕಾರಣಗಳಿಂದ) ಸಂಭೋಗವನ್ನು ವರ್ಜಿಸುವಿಕೆ : ಹಾಸಿಗೆಪಥ್ಯ : ಹಾಸಿಕೆಪಥ್ಯ ಇಪ್ಪತ್ತನಾಲ್ಕು ದಿವಸ (ಕಾಮಶಾ. ೨೬೭). [ಪಾಸು$_1$ + —ಇಕೆ]

**ಪಾಸಿಕೆಗೆಯ್ಮೆ** (ನಾ). ರತಿಕ್ರೀಡೆ ; ಸುರತ : ಎಳೆವು ಪಾಸಿಕೆಗೆಯ್ಮೆಗಳಪ ಮೆಯ್ಯುಡದಂತೆ ತಳರಿಸಿ ಪೆಣ್ಮನದನುವ ಬಱೞಕವನೆಸಗುವ ಬಲ್ಮೆಗೆ ಬಱಸಂದೊಳಸರಿದೊಡಲನೊಪ್ಪಿಪುದು (ಶಕಾ. ೬-೫೦ ಶಾಂಗಕ).

[ಪಾಸಿಕೆ+ಗೆಯ್ಮೆ (<ಕೈಮೆ$_1$)]

**ಪಾಸಿಗೆ** 'ಪಾಸುಗೆ$_1$' ನೋ.

**ಪಾಸಿಸು** (ಕ್ರಿ). ಆವರಿಸು ; ವ್ಯಾಪಿಸು (?) : ಓಲೈಸಿಕೊಳುತ ನಿಜದೇಹ ಕಾಂತಿಯೊಳೆಸೆವುತಾಲಸಿತ ಹಾಟಕೇಶ್ವರರುದ್ರನಿರ್ಪರೊಡನೇಳು ಪಾತಾಳಂಗಳಂ ಪಾಸಿಸುತ್ತ ಭೂಪ್ರಪ್ರಾಂತವಾಗಿರುತಿಹ ಮೇಲುಗಡೆಯೊಂದು ಕೋಟಿಯುಂ ಯೋಜನಂ (ತತ್ವಶಿ. ೫-೦-೨೦). [ಪಾಸು$_1$? + —ಇಸು$_3$]

**ಪಾಸಿಱ$^3$** (ಕ್ರಿ). ಹರಡಿಕೊಂಡಿರು : ಪಸರಿಸು : ವ್ಯಾಪಿಸು : ತಳಿರ ತಾಗುವ ತೆರೆದುಱುಂಗಲಲೆಪದಿಂ ಸೂಸಿ ಪಾಸಿಱದು ಬಣ್ಣವುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯು ನೀರ್ವೂಗಳ ರಜಂಗಳುಮನೊಳದೊಂಡಿಪ ಪಾಲ್ಗಳುಮಂ ಪೀರ್ದು (ಕಾದಂಬ. ೫೨೬).

[ಪಾಸು$_1$+ಇಱ$^3_1$]

**ಪಾಸು$_1$**, ಹಾಸು$_1$ (ಕ್ರಿ). ೧. ಬಿಚ್ಚಿ ಹರಡು : ಅಗಲವಾಗಿ ಬಿಡಿಸು ; ಪಸರಿಸು: "ಪಾಸು—ಆಸ್ತರಣಕ್ರಿಯಾಯಾಂ, ತಲ್ಪೇ ಚ" (ಶಮಧಾ); ಅರಸರ್ ಬರ್ಪ ಬಟ್ಟೆಯೊಳೆಲ್ಲಂ ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರವಟ್ಟು ದುಕೂಲ ಚೀನಾದಿ ದಿವ್ಯವಸ್ತ್ರಂಗಳಂ ಪಾಸಿ (ವರ್ಧಮಾ. ೨೬-೩) ; ಕುಳಿರ್ವ ಶಿಳಿನೀರನುಡುಗದೆ ತಳಿ ತಳಿರಂ ಪಾಸು ಜಳದೆಯಿಂ ಬೀಸು (ಅಂಜ. ೨-೦೪) ; ಬಲೆಯುಂ ಪಾಸಿ ಬಲಿಹರಣಂಗೆಯ್ದಂತೆ ಕೂಱಂ ಸೂಸಿ ಪೋಪುದುಂ (ಶಂತತಂ. ೨೯೯-೦೪) ; ಪಾಸಿದ ದಳಂಬಮುಂಗುರ್ಗಳ ಕೇಸಡಿಗಳ ಚರಣಭೂಷಣಂಗಳ ರುಚಿಯುಂ ಬಾಸಣಿಸಿ ಚಿತ್ರಪಟಮಂ ಪಾಸಿದವೊಲಿರೆ ವಧೂವರರ್ ನಡೆತಂದರ್ (ಅಜಿತ. ೬-೫೪). ೨. ಒಡ್ಡು : ಎದುರಿಗೆ ಹಿಡಿ : ಮದುವೆಯಾಗಲೆವೇಱ್ಕುಮೆಂದು [ ಮೇಲುದಂ ಪಾಸಿ ] ಬೇಡುವುದುಂ (ಧರ್ಮಾಮೃ. ೩-೨೬೭). ೩. ನೀಡು ; ಚಾಚು : ತನುವಲ್ಲದತನು ತಾಪಂ ತನುವಂ ಸುಡೆ ನಿಲಿಸಲೆಂತುಮಾಱದೆ ತನುವಂ ತನುಮಧ್ಯೆಯರಲರ್ವಾಸಿನ ನನೆವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿ. ೩-೩೩) ; ಕರಡಿ ಪಿಪೀಲಿಕಾವಳಿಗೆ ನಾಲಗೆ ಪಾಸುವವೋಲ್ ಯಮಂ ಭಯಂಕರ ರಸನಾಗ್ರಮುಂ ಧರೆಗೆ ಪಾಸಿದಂ (ಶಮಚ. ೦೫-೯೭) ; ಪೊನ್ನ ಬಣ್ಣದ ನವಕರ್ಣಿಕಾರ ಕುಸುಮಕ್ಕೆಱಗಿರ್ದ ಮದಾಳಿ ಕಂಪುಗಾಣದೆ ಕಱವತ್ತು ಪೆಣ್ಣ ಪೊಸರೂಪಿನ ಪಾಪೆಗೆ ಪಾಸಿ ಬಿರ್ದ ಬಱ$^3$ಕ್ಕಾದವಿಸಿದಿಂಪುಗಾಣದಱಲಿಂ ಪೆಱಪಿಂಗುವ ಕೇಳಸಂದದಿಂ (ಅನಂತ. ೯-೦೦೯) ; ಬಲ್ಮೊಲೆಗೆ ಹೇಸಿದರ್ ಸುಧರಗಳ ದಿಬ್ಬಯೊಳ್ ಕೈಗಳಂ ಪಾಸಿದರ್ (ಶಂತಿ. ೪೨-೩೬). ೪. ಅಡ್ಡಲಾಗಿ ಚಾಚಿಕೊಂಡಿರು ; ಕೆಡೆ : ಬಿದ್ದಿರು : ನೆಲನಂ ಮಾಱುದ್ದ ಕಯ್ಯಂ ಧರಾತಳದೊಳ್ ಪಾಸಿದ ತನ್ನ ತೀವ್ರಗದೆಯುಂ ಕಂಡೆತ್ತಿಕೊಂಡು . . . ಮುಳಿದಿಟ್ಟಂ ಕಲಿಸತ್ತಿಗಂ (ಗದಾಯು. ೯-೩೭). **ಹಾಸು$_1$** : ೧. ಸಂಗಯ್ಯ ಒಲಿದಾನೊ ಒಲಿಯನೊ ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು (ಬಸವ. ೫೨೦) ; ಅಂದವರಿಗಿಲ್ಲರಸ ಹಾಸಲಿಕೊಂದು ವಸ್ತ್ರಗಳಿಲ್ಲ ಹೊದೆಯಲಿಕೆ (ಶಂಭರ. ೨೨-೬) ; ಹಾಸಿಗೆಯನು ತಂದು ಹಾಸುವೆನೆಂದರೆ ಶೇಷನ ಮೇಲೆ ನೀ ಪವಡಿಸಿರ್ಪೆ (ಪುರಂದ. ೨-೬೭-೪) ; ಹಾಸೀಗಿ ಹಾಸಂದ ಮಲ್ಲೀಗಿ

ದುಡಿಯೆಂದ (ಗಚಿ. ೭೭). ೨. ಆತನ ಪ್ರಸಾದಕ್ಕೆನ್ನ ಸೆಜಗ ಹಾಸಿ ಆರೋಗಿಸಿ ಸುಖಿಯಾದೆನು (ಸಿದ್ಧ.ವ.ಳ.೩೦೬-೦೦೩೭). ೫. ಹರಡಿಕೊಳ್ಳು : ಅರ್ಜುನಸಂಬಿನುಜುಬೆಗೆ ಹೆಣನ ದಾವಣಿ ಹಾಸಿದವು ಸೂಸಿದವು ಬೆಣ್ಣೆಗಳು (ಕುಮಾ.ದ್ರೌ. ೦೦-೫).

**ಹಾಸಿ ದುಡಿ**= ಮೈ ಒಡ್ಡಿ ದುಡಿ : ಕಷ್ಟಪಟ್ಟು ಕೆಲಸ ಮಾಡು : ಹಾಸಿ ದುಡಿದರೆ ತನಗುಂಟು ತನ್ನ ಪ್ರಪಂಚರಿಗುಂಟು (ಬಸವ. ೩೨೪). **ಹಾಸಿ ಹೊದೆ**= ಸಂಪೂರ್ಣವಾಗಿ ಒಂದರಲ್ಲಿಯೇ ಮಗ್ನವಾಗು, —ತನ್ಮಯವಾಗು : ಚನ್ನಮಲ್ಲಿಕಾರ್ಜುನ ನಿಮ್ಮ ಪ್ರಸಾದವ ಹಾಸಿ ಹೊದೆದುಕೊಂಡಿಪ್ಪೆ (ಮಹಾದೇ. ವ. ೧೦೨-೨೫೩).

[ದೇ.॥ ತಮಿ. ಪಾಯ್, ಪಾವು]

**ಪಾಸು₂**, ಹಾಸು₃ (ನಾ). ೧. ಹಾಸುಗೆ ; ಶಯ್ಯೆ : "ತಳ್ಪಂ, ತಳಿಮುಂ— ಈ ೨ ಪಾ(ಹಾ)ಸು" (ಹಲಾಯು ೫೦-೦೫೨) ; ಎರಡು ಘಟಿಗೆಯಿಂದೊಳಗೆ ಪಾಸಿನ ಪೊರೆಯೊಳ್ ಪುಟ್ಟಿ . . . ಮಹರ್ಧಿಕದೇವರಾಗಿ (ವಡ್ಡಾ.ಆ. ೯೯-೩): ತಳಿರ್ಗಳ ಕಂಡವಟಂಗಳಿ ತಳಿರ್ಗಳ ಪಾಸುಗಳೆ ತಳಿರ್ಗಳೋವರಿಗಳೆ (ಆದಿಪು. ೦೦-೭೭) : ಚಂದ್ರಾಪೀಡಂ . . . ಅಡಕಿಲ್ಗೊಂಡೊಪ್ಪುವ ಕೌಳುಡೆಯಿಂ ಸೊಗಯಿಸುವ ಪಾಸಿನೊಳ್ ಪಟ್ಟಿರ್ದಂ (ಕಾದಂಬ ೯೯) ; ಮಣೆಯೊಳ್ ಪಡುವುದರಿದೋ ಪಾಸಿನೊಳ್ ಪಡುವುದರಿದೋ (ಧರ್ಮಾಮೃ. ೭-೬೦). ೨. ಮಗ್ಗದಲ್ಲಿ ಉದ್ದಕ್ಕೆ ಹಾಕಿರುವ ಎಳೆಗಳ ಸಾಲು : ಪಟ್ಟಗಾಜಿನ ಪಾಸಂ ತವೆ ತೋಡುವಂತೆ ಕರುಳಂ ನೀಂ ತೋಡಿದೈ ದೈತ್ಯನಾ (ಕಾವ್ಯಾವ. ೩೫೫) ; ಆಸುರದೊಳಿಂದ್ರಜಾಲದ ಕೂಸುಗಳಂ ಕಂಸನೊಗೆದನಜಿಯೊಳ್ ನೆತ್ತರ್ ಸೂಸೆ ದೆಸೆದೆಸೆಗೆ ಕೆಂಪಿನ ಪಾಸಂ ಪಿಡಿದೊಗೆವ ಪಟ್ಟುಗಾಜಿನ ತೆಜದಿಂ (ಅರ್ಧನೇ. ೭-೩೦). 'ಪೊಕ್ಕು₂' ಪರಾ. **ಹಾಸು₃** : ೧. "ಶಯ್ಯೆ, ಶಯನೀಯ, ಶಯನ—ಹಾಸು" (ಪಾಶಬ್ದ. ೬) ; ಹಾಸನಟ್ಟಿದು ಕಂಥೆಯಂ ಪೊಲಿಸುವ ಮೆದೆಯುಂ ಸುಟ್ಟುರೆಳಂ ಕುಜುಕುವ ತುಪ್ಪವನೊಕ್ಕು ಸಗಣಮಂ ಕೊಳ್ವ . . . ಏಗ್ಗನಂ ಪೋಲ್ವೆಂ (ಧರ್ಮಾಮೃ. ೩-೨೦) : ಹಾಸಿನೊಳು ಪವಡಿಸುವಾತನೆಂತು ಕಲುನೆಲದೊಳೊಜಗುವೆ (ಹಪಾಶ. ೯-೬) ; ಹಾಲ ಸಾಗರ ಮನೆಯು ಸಜ್ಜೆಯು ಮೇಲೆ ಶೇಷನ ಹಾಸು (ತಂಬಿಶ. ೭-೦). ೨. ಕಾಸಿ ಕಮ್ಮಾಜನಾದ ಬೇಸಿ ಮಡಿವಾಳನಾದ ಹಾಸನಿಕ್ಕಿ ಸಾಲಿಗನಾದ (ಬಸವ. ೫೯೦). ೩. ಪಗಡೆಆಟದಲ್ಲಿ ಹಾಸುವ, ಮನೆಗಳುಳ್ಳ ಪಟ ; ಪಗಡೆಪಟ್ಟ : ಪಗಡೆಯು ಕಾಯಿ ಹಾಸನ್ನೆಲ್ಲ ಸುತ್ತಿ ಬಂದು ಹಣ್ಣಾಯಿತು! (ಬಂಕಿವು. ೨೯೯) ; ಆಟಕ್ಕೆ ಹಾಸು ಹಾಸಿದೆ ಬಾ ಆಡೋಣ (ಪ್ಯಾಕಶ. ೦೨೦). ಕೆಲವು ಸಾಮಂತರು ಪಗಡೆಯಾಡಲು ಹಾಸನ್ನು ಬಿಚ್ಚುತ್ತಿದ್ದರು (ಪಾಣಿಳ. ೨೫೪). ೪. ಚಾಪೆ, ಜಮಖಾನೆ ಮುಂತಾದ ಹಾಸುವ ಸಾಧನ : 'ನೆಲಹಾಸು' ಪರಾ.

**ಪಾಸುಪೊಕ್ಕು₁, ಪಾಸುವೊಕ್ಕು₁, ಹಾಸುಹೊಕ್ಕು**=೧. ಮಗ್ಗದಲ್ಲಿರುವ ಉದ್ದ ಎಳೆ ಹಾಗೂ ಅಡ್ಡ ಎಳೆ. ೨. ಮಗ್ಗದ ನೇಯ್ಗೆಯಲ್ಲಿ ಎಳೆಗಳು ಒಂದರಲ್ಲೊಂದು ಹೆಣೆದುಕೊಂಡಿರುವಿಕೆ. ೩. ಬಿಗಿಯಾದ ಹೊಂದಿಕೆ : ಸರ್ವರಾ ಸರ್ವಕರ್ಮಗಳ ಪಾಸುಪೊಕ್ಕಿನ ಜಟಿಲಜಾಲಮೆ ಕೃತಿಪ್ರದಲ್ತೆ ನಡೆವೀ ಜಗನ್ನಾಟ್ಯಮುಂ ! (ಶ್ರೀರಾಮಾ. ೫೨೦-೫೭೦) ; ಸೆಕೆಂಡು, ಮಿನಿಟು, ತಾಸುಗಳ ಹಾಸುಹೊಕ್ಕಿನಲಿ ಅಲ್ಲೊಂದು ಇಲ್ಲೊಂದು ಬಣ್ಣದ ನೂಲು (ನೆಲಮು. ೩೦-೨೪) ; ಭಾವದ ಒಂದೊಂದೂ ಸುಳಿವು ಎಳೆಎಳೆಯಾಗಿ ಬಿಡಿಸಿ ಬಂದು. ಹಾಸುಹೊಕ್ಕಾಗಿ ಹೆಣೆದು, ಹೊನ್ನ ಪೊರೆಯಾಗಿ ಕಣ್ಣನ್ನು, ಮನಸ್ಸನ್ನು ಮುತ್ತುತ್ತಿದ್ದಿತು (ಸಪಡ. ೫). ೪. ಸಮಗ್ರವಾದುದು : ಎನ್ನೊಳಿಂತಿದು ಪಾಸುಪೊಕ್ಕು (ರಾಮಾಶ್ವ. ೦೦೭-೨೭); ಬೀಡು ಕಾಣಿಕೆಯಿತ್ತು ಕಂಡುದು ನಾಡೆ ಕಾಣಿಸಿದನು ಪುರೋಚನ ಕೂಡೆ ಸಂದನು ಹಾಸು ಹೊಕ್ಕಾಗವರ ಮನವಜಿದು (ಕುಮಾ.ಆ. ೬-೮೪). **ಹಾಸಿನ ನುಲಿ**= ಸುರುಳಿಕೊಂಡಿರುವ ಮಗ್ಗದ ನೂಲು : (೯). **ಹಾಸುಹೊದ್ದು**— (ಸಂಪೂರ್ಣವಾಗಿ) ಹೊಂದಿರುವಿಕೆ ; ರೂಢಿಯಾಗಿರುವಿಕೆ. ಅಭ್ಯಾಸ : ಹುಡುಗತನದಿಂದಲೂ ಅದೇ ಹಾಸುಹೊದ್ದಾಗಿ ಹೋಗಿದೆ ನನಗೆ (ಮಹೋಶಂ. ೯೯). [<ಪಾಸು₁]

**ಪಾಸು₃** 'ಪಾಸ₁' ನೋ.

**ಪಾಸು₄**, ಪಾಸ್ (ನಾ). ೧. ತೇರ್ಗಡೆ ; ಉತ್ತೀರ್ಣವಾಗುವಿಕೆ ; ಸಫಲತೆ : ಅಷ್ಟೆಲ್ಲ ಓದಿಸಿ ಪಾಸಾಯಿತೆನುವಾಗ ಇಲ್ಲದೆ ಹೋದರು ತಂದೆ (ಇಂಪಾಶ. ೨೨-೯೭) ; ಗೋಪಾಲರಾಯ ಮೆಟ್ರಿಕ್ ಪಾಸಾದ ಅಧ್ಯಾಪಕ (ಮುಂಗಾಮು. ೨೪). ೨. ಒಪ್ಪಿಗೆ ; ಪಸಂದಾಗುವಿಕೆ ; ಮೆಚ್ಚಾಗುವಿಕೆ : ಯಾವ ಕನ್ಯೆಯೂ ಅವನಿಗೆ ಪಾಸು ಎನಿಸಲಿಲ್ಲ ; ಇನ್ನೂ 'ವರ'ನಾಗಿಯೆ ಉಳಿದಿದ್ದಾನೆ (ರೂಢಿ). ೩. ಅಪ್ಪಣೆಚೀಟಿ ; ಅನುಜ್ಞಾಪತ್ರ ; ಪರವಾನೆ ; ರಹದಾರಿ : ಸರ್ಕಾರಿನೌಕರನಾದುದರಿಂದ ಅವನಿಗೆ ಪ್ರವಾಸಕ್ಕೆ ಪಾಸು ಕೊಟ್ಟೇ ಕೊಡುತ್ತಾರೆ (ರೂಢಿ). ೪. ನಾಟಕ, ಸಿನಿಮಾ ಮೊದಲಾದಂವುಗಳಿಗೆ ವಿಶೇಷ ವ್ಯಕ್ತಿಗಳಿಗೆ ನೀಡುವ (ಶುಲ್ಕವಿಲ್ಲದ) ಪ್ರವೇಶಪತ್ರ : ಜೇಬಿನಿಂದ ಪಾಸುಗಳನ್ನು ತೆಗೆಯುತ್ತ . . . ಇವೇನು ಕಾಂಪ್ಲಿಮೆಂಟರಿ ಆಗೋದಿಲ್ಲ ಎನ್ನುತ್ತ ಪಾಸುಗಳನ್ನು ಕೊಡಬಂದ (ರಂಗಪಾ. ೯೩). **ಪಾಸ್** : ೧. ನಾನಾದರೂ ಪಾಸ್ ಆದವರಲ್ಲಿ ಒಂಬತ್ತನೆಯವನು (ಕೋಳಿಮು. ೨೨೭).

**ಪಾಸಾಗು**= ತೇರ್ಗಡೆಯನ್ನು ಹೊಂದು; ಉತ್ತೀರ್ಣತೆಯನ್ನು ಪಡೆ ; ಸಫಲವಾಗು : ಅವನು ಪರೀಕ್ಷೆಯಲ್ಲಿ ಪಾಸಾಗುವ ನಿರೀಕ್ಷೆ ಇಲ್ಲ (ರೂಢಿ). **ಪಾಸು ಬೀಳು**= ಮನಸ್ಸಿಗೆ ಬರು : ಅಂಗಡಿಕಾರನು ತೋರಿಸಿದ ಯಾವ ಸೀರೆಯೂ ಅವಳಿಗೆ ಪಾಸು ಬೀಳಲಿಲ್ಲ (ರೂಢಿ). **ಪಾಸು ಮಾಡು**=೧. ಒಪ್ಪು ; ಮೆಚ್ಚು : ವರ ಪಾಸು ಮಾಡುವ ಗುಂಗಿನಲ್ಲಿಯೇ ಇವನನ್ನು ತಮ್ಮ ಪಾಸಲಿಸ್ಟಿನೊಳಗೇರಿಸಿದರು (ಅಪಾಶ. ೦೦). ೨. ಮಂಜೂರು ಮಾಡು ; ನಿರ್ಣಯಿಸು ; ಠರಾಯಿಸು : ಕವಡ ಗಂಟಕರು ಕೂಡಿ ತಮಗೆ ಅನುಕೂಲವಾಗುವಂತೆ ಠರಾವು ಪಾಸು ಮಾಡಿಕೊಳ್ಳುವ ನಾಟಕವೂ ಅಲ್ಲ (ಅಪಾಶ. ೪). [←ಇಂ. Pass]

**ಪಾಸುಂದೊವಲ್** (ನಾ). ಹಾಸುವ ಚರ್ಮ ; ಕೃಷ್ಣಾಜಿನ : ಆ ಜೋಗವಟ್ಟಗೆಯುಮಾ ಬೆಳ್ಪಡೆಯುಮಾ ಬೆಂಬೂದಿಯ ಪೂಸುಂ . . . ಮೇಣಾ ಪಾಸುಂದೊವಲುಮೆನ್ನೀ ಎಸುಗೆಯ ಕೂರಂಬಿನ ವನೆಗೊಂದು ಕುತ್ತಿಸಳ ಜಾಲೆಗೆ ಸೀಕರಿವೋಗದೇಂ ಮಾಣ್ಗುಂ (ರಾಮಾಶ್ವ. ೫೭-೦೩).

[ಪಾಸು₁+ತೊವಲ್₃ (<ತೋಲ್₁)]

**ಪಾಸುಂಪೊಕ್ಕಂ, ಪಾಸುಪೊಕ್ಕು₂, ಪಾಸುಪೊಕ್ಕಂ, ಹಾಸುಹೊಕ್ಕು₂** (ಅ). ಅಡ್ಡಕ್ಕೂ ಹಾಗೂ ಉದ್ದಕ್ಕೂ ; ಓತಪ್ರೋತವಾಗಿ ; ಅತ್ತಲೂ ಇತ್ತಲೂ ; ಉದ್ದಗಲವಾಗಿ: ಆ ಸಭೆಯೊಳ್ ಹರಿಕರವಿನ್ಯಾಸಂಗಳ್ ನುಡಿಯನಡಕುವಂತಿರೆ ನುಡಿದಂ ಪಾಸುಂಪೊಕ್ಕಂ ಪರೆದು ಸಭಾಸದನಂ ತೊಳಗಿ ಬೆಳಗೆ ದಂತಪ್ರಭೆಗಳ್ (ಪಂಪಭಾ. ೯-೩೪) ; ಪಾಸುಂಪೊಕ್ಕಂ ಬರಿದು ನಿಚಿತವಚನಕದಂಬಕಮೆರ್ದೆಗೊಳಿಸೆ ಸಭೆಯ ವಿಬುಧಾವಳಿಯಂ (ಶಾಂತಿಪು.೬-೦೨೬) : ಅಂತಿದಿರಾಂ ಬಟಾಯುಂ ಪಾಸುಂಪೊಕ್ಕಂ . . . ಪರಿದು (ಗದಾಯು. ೭-೨೬ ವ). **ಪಾಸುಪೊಕ್ಕು₂** : ತೊಳಲಿದರ್ ತೊಳತೊಳಲಿ, ಬಗೆಯದೆ ಬಳಲ್ಕೆಯಂ ಬೆಮೆಗೊಂಡ ಪಾಂಗಿನಿಂ ಪಾಸುಪೊಕ್ಕಾಗಿ ಬನ ಬೆಟ್ಟಗಳಲೆಲ್ಲಲ್ಲಿಯುಂ (ಚಿತ್ರಾಂಗ. ೫೨-೦೪೨). **ಪಾಸುಪೊಕ್ಕಂ** ಪಾಯುಂ ಬಟಾಯುಂ, ಪಾಸುಪೊಕ್ಕಂ (ಕರ್ನಾ.ಕು. ೭೫ ವ್ಯಾಖ್ಯಾ). **ಹಾಸುಹೊಕ್ಕು₂** : ಎಡಹುತ್ತ ತಾಗುತ್ತಲೆಲುಗಳಂ ಮೆಟ್ಟಿ ತನ್ನಡಿಗಳಳುಕುತ್ತನಡೆಯದೆ ಹಾಸುಹೊಕ್ಕು ಹರಿದಾಡಿದಂ ಭೂಪಾಲನು (ಹಪಾಶ. ೦೦-೪೨) ; ದಿಕ್ಕು ದಿಕ್ಕಿಗೆ ಕದಲಿಸುವನಶ್ವವ ಹಾಸುಹೊಕ್ಕಾಗಿ ತಂಡುತಂಡಾಗಿ ಸಕ್ಕನೆ

'ಪಾಳಿದಪ್ಪು' ಪರಾ. ೨. ಸೂಳೆಗಂಗಣ್ಣಾಗದಿಂ ನವಿಸಿಕೊಡುವುವಿದು ಪಾಳಿಯೇ ತನಗೆ (ಶಬ್ದಸಾ. ೫-೪೯) ; ಕೇಳುವೆಗಳವು ಬೇಱೆ ಬೆರಿತವ ಪಾಳಿ ತಾನದು ಬಿಱೆಲಾ (ಕುಮಾ.ಶ. ೮-೧೭) ; ಪಳಿಗಂಜದೆ ಪಾಳಿಯನುಲ್ಲಂಘಿಪುದು . . . ಅರಸುಮಕ್ಕಳ ಮತವೇ (ಜಯಸಾ. ೬-೮). ೧೦. [ಸಂಗೀತ] (?): ಮಣಿಕಂಪಿತಂ ಹಳುವಾಯು ಚೋಕ್ಕಳಮನೊದ್ಗತ ಸೃತ್ರಿ ಪಾಳಿ ವಿಮೋಕ್ಷವಿಂಪು ಲಯಾಸ್ಪದಂ (ಶ್ರೀಕಾ. ೦೦-೯). ಹಾಳಿ₂ : ೧. ಹಾ[ಪಾಠಾಂ. ಪಾ] ಳಿಯಿಲ್ಲದೆ ಸುಮ್ಮನಿಹುದಿದು ಖೂಳತನವಲ್ಲ (ಶಸಪ್ಪ. ೨೬-೫೮); ಬಿಡಲು ಹೇಳುವೆ ನೀನು ಮಮಕಿಗೆ ನುಡಿವ ಹಾಳಿಗೆ ನೀನು ಚದುರನು ಬಿಡಿಸಿ ಕಳುಹಲು ನಾವು ಬಲ್ಲವು ನಮ್ಮ ಪಂಥಗಳ (ಕೌಶಿಕಾ. ೩೪-೪೭) ; ಕೇಳಿದ್ಯೆ ಸೌಮಿತ್ರಿ ಮಿತ್ರವಿಶಾಲವಂಶೋದ್ಭವನ ವಚನದ ಹಾಳಿಯನು (ಕೊರಡಾ. ೩-೯-೩).

ಪಾಟಿ ಮಾಡು = ೧. ಸರಿಗಟ್ಟು; ಸಮಾನವಾಗು : ಪಾಂಡು ಸ್ವೈನ್ಯದಲಿ ದ್ರೋಣನಂ ಪಾಟಿ ಮಾಡುವರಿಲ್ಲದಿರುತಿರಲ್ (ತುರಂಗ. ೪೯-೨೨). ೨. ಸಮಾನವೆಂದು ಭಾವಿಸು: ವಚನವ ... ಲಿಂಗನಿಷ್ಠಾಹೀನರು ಓದಿ ಹಾಡಿದರೆ ... ಏನೆಂದೂ ಪಾಟಿ ಮಾಡರಯ್ಯಾ (ಸಿದ್ಧೇಶ. ೬೫-೨೦೯); ಲಾಟ ದೇಶದ ರಾಯನಿವನೆಸಲೀಕ್ಷಿಸಿ ಪಾಟಿಮಾಡದೆ ಹೋದಳವಳು (ಶರಶ. ೫೫-೯೨). 'ಪಾಡು₃' ಪರಾ. [ದೇ.॥ ತೆಲು. ಪಾಟಿ, ಪಾಡಿ; ಕೋತ. ಪಾಟಿ]

ಪಾಟಿಕಾಱ (ನಾ). ನಿಯಮವನ್ನು ಪಾಲಿಸುವವನು; ಧರ್ಮದಂತೆ ನಡೆಯುವವನು: ಪಾಟಿಕಾಱಂ, ಒಳ್ನುಡಿಕಾಱಂ, ಪಗೆಕಾಱಂ (ಶಮದ. ೦೯೯ ಶ್ರಯೋ) : ಎಲೆ ಪಾಟಿಕಾಱಾ ಕೇಳ್ (ಶಂಕರ. ೦೯-೦೬ ವ). [ಪಾಟ್ಯ₂ + -ಕಾಱ]

ಪಾಟಿಗಿಡು 'ಪಾಟಿಗೆಡು' ನೋ.

ಪಾಟಿಗೆಡು, ಪಾಟಗೆಡು, ಪಾಳಿಗೆಡು, ಪಾಟಿಗಿಡು, ಹಾಳಿಗೆಡು (ಕ್ರಿ). ಕ್ರಮ ತಪ್ಪು : ರೀತಿಗೆಡು : ನಿಯಮವಿಲ್ಲದಾಗು : ಪಾಟಿಗೆಟ್ಟ ಬಸನಂಗಳಿವೆತ್ತಣಿನೊಳ್ಪು ತಪ್ಪುವಂ ಪಡೆಗುಮೊ (ಜೀವಸಂ. ೦೬-೨); ಆ ರಣಧೂಳಿ ಪಾಟಗೆಟ್ಟು ಪಾಡಳಿದು . . . ಬೆರ್ಚಿ ಬಿಗುರ್ತರ್ (ಜಳವ. ೨-೦೦೫). ಪಾಟಗೆಡು : ಕೇರಳ ಪಾಟಗೆಟ್ಟನು ಮಾಗಧನು ಹೊಡೆಗೆಡೆದನವನಿಯಲಿ (ಜೀಶಂತ. ೮೫-೨೯) ; ಅಹಿಪತಿ ಕೂರ್ಮರಗ್ಗಳಿಕೆ ಪಾಟಗಡೆ ತೋಱಿಸಿದರೀ ಪರಿಪಾಟಿಯಲಿ ಫಣಿಪತಿಗೆ ನಾಲಗೆ ನಾಟಿದಣಿಸಲು ಗಣನೆಯಿಲ್ಲದ ರಾಮಸ್ತವನ (ಕೊರಡಾ. ೯-೬-೨೫) ; ಪಾಟಗೆಟ್ಟೀಗ ಬೇಱುತ್ತ ಬೇಱೆಂದೆಂಬ ಪೋಟವುಳ್ಳಾತ್ಮಸಿದ್ಧರಿಗೆ ಕೋಟಿರಂಜನೆಗಳ ಹೊಱಗೆ ಕಾಣಿಸಲಿದೆ ಪಾಟದು ವಸ್ತುಶಕ್ತಿಯದು (ಶರಶ. ೩-೬೫). ಪಾಳಿಗೆಡು : ಪಾಳಿಗಡಿಂತು ಚಪ್ಪನ್ನದೇಶದ ಮಹೀಪಾಳರಂ ಕಾಣಿಸುವ . . . ಪಡಿಯಱರ ಕೋಳಾಹಳಂ ಪುಟ್ಟೆ (ಶಬ್ದಸಾ. ೫-೪). ಪಾಟಿಗಿಡು : ಒಸೆದಬರ್ ನಂಗೆ ಮುಂ ಕಳಶಸಂಭವಂ . . . ಬೆಸಗೆಗಿಡೆ ಪಾಟಿಗಿಡೆ ತನ್ನಸುವಂ ತೆಲ್ಲಟಿಗೆ ಗುಡುವ ತೆಱದೊಳ್ಕೊಟ್ಟಂ (ಗದಾಯು. ೨-೦೫). ಹಾಳಿಗೆಡು : ಕಾಲ ತಡಬಡಿಸುತ್ತ ನಿಲುತಂ ಹಾಳಿಗಡುತಂ ಭಕ್ತಭೀತಿಗೆ ಸೋಲುತಂ ವಾಲ್ಮೀಕಿವಿಧು ಸಂದಣಿಯೊಳೊಳಪೊಕ್ಕು (ಶಸಪ್ಪ. ೨೬-೨೮). [ಪಾಟ್ಯ₂ + ಕೆಡು₁]

ಪಾಟಿಡು, ಹಾಳಿಡು (ಕ್ರಿ). ಹಾಳುಮಾಡು; ನಾಶಮಾಡು: ಏನಾದೊಡೆ ಏನೆನ್ನನ್ ಪಾಟಿಡಲ್ಕೆ ಅಱಿನವನ್ (ಶಬ್ದಕ್ರ. ೫೬-೦೨೨). ಹಾಳಿಡು: ನಾಕದ ಏಳಯುವವನು ಹಾಳಿಟ್ಟು ಹರಿದು ಸುರರು ದೆಸೆದೆಸೆಗೆ ಅಳುಕಿದರು ನೃಪರಾದವರು . . . ದೈತ್ಯರುಱುಬೆಗೆ (ಶಭಾಗ. ೬-೨-೦೨). [ಪಾಟು₁ + ಇಡು₁]

ಪಾಟಿಯಕ್ಕ (ನಾ). ಒಬ್ಬಾಕೆಯ ಹೆಸರು : ಪಾಟಿಯಕ್ಕಂ ಬೋಲಿಯಕ್ಕಂ . . . ಇರ್ಕ್ಯಣ್ಣಾಗ ಬಿತ್ತುವುದಂ ಕೊಟ್ಟಳ್ (ಎ. ಕ. VIII. ಸಗರ. ೬೩-೦೦, ಹು. ೩೩೦). [ಪಾಟ್ಯ₂ + ಅಕ್ಕ₁]

ಪಾಟಿಲ್, ಪಾಳಿಲ್ (ನಾ). ಒಂದು ಬಗೆಯ ಮೀನು : ಪೀಠಿಕಾ — ಪೀಟಿಗೆ ; ಪಾಠೀನ — ಪಾಟಿಲ್ (ಶಬ್ದಮ. ೦೬೦ ವ್ಯಾಖ್ಯಾ). ಪಾಳಿಲ್ : "ಪಾಳಿಲ್ — ಪಾಠೀನ — ಮತ್ಸ್ಯಭೇದ" (ಶಬ್ದಕೋ. ೨೬). [<ಸಂ. ಪಾಠೀನ]

ಪಾಟಿವೇಟು (ಕ್ರಿ). ಸರಿಯಾದ ಧರ್ಮವನ್ನು ಹೇಳು, -ನೀತಿಯನ್ನು ತಿಳಿಸು : ಪುರ್ವಿಂದಪರಾಧಿಯನಱೆ ಜವ್ವನತೆ ಟಲಕಾಂಚಿಯಿಂದೆ ಬಂಧಿಸಿ ಕಾಯ್ಪಿಂದುರ್ವಿ ಬಯ್ದೊದೆದು ಸದೆವಳ್ ಸರ್ವರ್ ಕೆಳದಿಯರೆ ಪಾಟಿವೇಟ್ವನಮಿನಿಯಳ್ (ರಸರ. ೩-೦೫೦). [ಪಾಟ್ಯ₂ + ವೇಟು]

ಪಾಟು 'ಪಾಟು' ನೋ.

ಪಾಟುಗೃಹ (ನಾ). ಹಾಳುಬಿದ್ದ ಮನೆ : ತುರಿಪದೆ ಗೋಹಳಿಯೆಡೆಯೊಳ್ ಪೊರಳ್ವರುಂ ಪಾಟುಗೃಹಂಗಳೊಳ್ [ಪಾಠಾಂ. ಪಾಟ್ಟರಂಗಳೊಳ್] ಪೊರಳುವುದುಂ ಕರಮೊಪ್ಪಿರೆ ಪಾಣ್ಬಂ ತಾಂ ನರಕಂಗಳೊಳಂತೆ ಪೊರಳ್ವನೆಂಬುದನೀಗಳ್ (ಸಮುತ. ೫-೫೮). [ಪಾಟು (<ಪಾಟು) + ಗೃಹ]

ಪಾಟುಡು (ನಾ). ಹಾಳಾದ ಜಾಗದಲ್ಲಿರುವ ಉಡು : ಪವನಸೂನು ಪೆಕುಳಿನಾಯುಂ ಬಡಿವಂತಿರೆ ಪಾಟುಡುವಂ ಬಡಿವಂತಿರೆ ಬಡಿದನನಿಬರಂ ಕೌರವರಂ (ಗದಾಯು. ೩-೦೦). [ಪಾಟು + ಉಡು₂]

ಪಾಟುನಾಡು (ನಾ). ಹಾಳಾದ ದೇಶ : ಪಾಟುನಾಡಂ ನಂಬಿ ತೀವಿದ ನಾಡಂ ಕಿಡಿಸುವ ಭೂಪನುಮಂ . . . ಪೋಲ್ವಂ (ರಜಾಶಬ್ದ. ೪-೫೦). [ಪಾಟು (<ಪಾಟು) + ನಾಡು]

ಪಾಟುನೆಲ 'ಪಾಟ್ನೆಲ' ನೋ.

ಪಾಟುಪದ್ರವ (ನಾ). ಅನಿಷ್ಟದ ಕಾಟ, - ತೊಂದರೆ : ಎಂತು ಮೊದಲೆರಗಿತೋ ಈ ಪಾಟುಪದ್ರವಂ ? (ಅಕ್ಷರಾ. ೦೩-೨೪೬). [ಪಾಟು + ಉಪದ್ರವ]

ಪಾಟುಬಾವಿ 'ಪಾಟ್ಬಾವಿ' ನೋ.

ಪಾಟಿನಿಸು, ಪಾಳೆನಿಸು (ಕ್ರಿ). ೧. ಹಾಳಾದಂತೆ ತೋರು; ಹಾಳು ಎರಿ; ಭಣಗುಡು: ಪಾತಾಳಾನಿಧಂ ಮಹಾವನಸಮೂಹಂ ಸ್ವರ್ವಿಮಾನೋತ್ಕರಂ ಜ್ಯೋತಿರ್ಲೋಕವಿಮೆಯ್ದೆ ಪಾಟಿನಿಸೆ ಬಂದತ್ತಾವಗಂ ತತ್ಕ್ಷಣವ್ರಾತಂ (ಶಂತ್ರಕೃ. ೦೯ ೬೫) ಪಾಳೆನಿಸು: ೧. ಕುಶನಗರವದು ನೆಱೆ ಪಾ[ಪಾಠಾಂ. ಹಾ] ಳೆನಿಸಿದುವನಱಿನು ಕಡುಘಾತಕಿ ಗಂಡನ ತಱಿದು ನುಡಿದಳು ಜಡಿವ ರೋಷದಲಿ (ಕೊರಡಾ. ೨-೪-೦). ೨. ಹಾಳುಗೆಡಹು ; ನಿರ್ಜನವಾಗುವಂತೆ ಮಾಡು : ಅಸಘಾಸ್ತ್ರಾರಿಯ ಪೂಜೆಯ, ನೆಱೆ ಸಂತಸದಿಂ ಮಾಡಿಸಿ ಪಾಳೆನಿಸಿ ಕರಂ ಕಾರಾಗಾರವನುಪಸಥಕ್ಕೆಯ್ದು ಮಗನ ವದನವನೀಕ್ಷಿಸಿಯರೆಪರ್ಗಮರಪಹೀರುಹದಂತೊಸೆದಿತ್ತಂ ರಾಜಪ್ರಭರಾಜಂ (ಜಯುಜಾ ೨-೬೦). [ಪಾಟು + ಎನಿಸು₁]

△ಪಾಟಿಯ 'ಪಾಳೆಯ' ನೋ.

ಪಾಟೊಱಲೆ (ನಾ). ಹಾಳಾದ ಗೆದ್ದಲು : ಪಾಟೊಱಲೆಯಿಟ್ಟ ಪುತ್ತಿನ ಪೊಱಲ ಪಾವುರಱುಡರ್ ಪೆಗಲಿಂ ಜೋಲ್ದೊಂದೆಟಿಂಟಟಿತರೆ ಯತಿಪತಿ ಬೀಟಲ್ವರಿದಿರ್ ಕಲ್ಪಕುಜಮಂ ಪೋಲ್ತಂ (ಅನಂತ. ೪-೨೮). [ಪಾಟು + ಒಱಲೆ₁]

ಪಾಟ್ಗತೆ (ನಾ). ಕೆಟ್ಟ ಕತೆ ; ಹಾಳುಕತೆ ಎಂತೆಂತೊ ರಗಳೆಯ ಪಾಟ್ಗತೆ ಕಡೆಗಂಡುದು (ರಾಮಾಶ್ವ. ೦೬೩-೨೬). [ಪಾಟು + ಕತೆ]

ಪಾಟ್ಗಬ್ಬ (ನಾ). ಹಾಳಾದ ಕಾವ್ಯ ; ದುಷ್ಕಾವ್ಯ : ಪುರುಳಿಲ್ಲದ ಸಲ್ಲದ ಪೊಲ್ಲದನ್ನ ಬಱುವಣ್ಣನೆಯ ಬೇಸಱಿಕೆಯ ಪಾಟ್ಗಬ್ಬಮಂ ಪೊಳ್ಕೆಂದೆ ನುಡಿದಂ (ರಾಮಾಶ್ವ. ೦೬೪-೪). [ಪಾಟು + ಕಬ್ಬ₁]

ಪಾಟ್ಗುತ್ರ (ನಾ). ಕೆಟ್ಟ ರೋಗ: ಅವ ಮದರ್ ಪಾಟ್ಗುತ್ರವನ್ ಪರಿಹರಿಸಲಾರ್ದತ್ತು (ಶವ್ಯಶ್ರ. ೦೯-೨೯೪). [ಪಾಟು + ಕುತ್ರ₁].

**ಪಾಟ್ಗೆಡಪು**, ಹಾಳುಗೆಡವು, ಹಾಳುಗೆಡಹು (ಕ್ರಿ). ಹಾಳು ಮಾಡು ; ಕೆಡಿಸು : ನಾಶಗೊಳಿಸು : ನಿನತದಾವ ಪಾತಕಂ ಸೆಳೆದು ನೇಡುಗಾಳಿ ಯನ್ ಪಾಟ್ಗೆಡಪಿದೆ ಕಿಡಿಸಿದೆ ದೇವಸಪಾಕ್ಕೃತಿಯುಮನ್? (ಅನ್ನಕ್ರ. ೩೦-೬೩೩). **ಹಾಳುಗೆಡವು :** ಪರ್ಷಿಯನ್ನರು ಈ ಸುಂದರ ಮಂದಿರ ಗಳನ್ನು ಹಾಳುಗೆಡವಿದರು (ಕಹಕೋ. 1, ೦೩೦). **ಹಾಳುಗೆಡಹು :** ಹುಳುಗಳು ಹಾಳುಗೆಡಹಬಹುದಾದ್ದರಿಂದ ಒಮ್ಮೆಯೇ ಹೆಚ್ಚು ಕಾಳುಗಳನ್ನು ಕೊಂಡು ಇಡುವುದು ಹಿತವಲ್ಲ (ಅಡುಗೆ. ೫೩). [ಪಾಟ್+ಕೆಡಪು]

**ಪಾಟ್ಗೆಱೆ** (ನಾ). ಹಾಳಾದ ಕೆರೆ ; ಪಾಳುಬಿದ್ದ ಕೆರೆ : ಕುಕವಿಯ ಕಾವ್ಯಮಂ ಸುಕವಿ ಕೇಳ್ದು . . . ಕವಿತಾಗುಣಮಂ ಬೆದಕಲ್ಕೆ ರತ್ನಶುಕ್ತಿಕೆಯು ನೊಱಲ್ದು ಪಾಟ್ಗೆಱೆಯೊಳ್ಕೆಕ್ಕಿಸುವಂಗೆಣೆಯಾಗದಿರ್ಕುಮೇ (ಚಕಕು. ೦-೦೦). [ಪಾಟ್+ಕೆಱೆ]

**ಪಾಟ್ಗೋಡೆ**, ಹಾಳುಗೋಡೆ (ನಾ). ಹಾಳು ಬಿದ್ದ ಗೋಡೆ ; ಕಟ್ಟಡ ಬಿದ್ದು ಹೋಗಿ ಅವಶೇಷವಾಗಿ ನಿಂತ ಗೋಡೆ : ಅಂಗಡಿಯ ಸಂದಿಗಳೊಳುತ್ತುಂಗಾಲಯದ ಪಕ್ಕದಲಿ ಪಾಟ್ಗೋಡೆಗಳೊಳ್ ಪೊಂಗುತ್ತುಂ ಸೆರೆದರ್ ಕುಟಿಲಾಂಗನೆಯರ್ ಜಾರಕಾಂತರಂ ನಲವಿಂದಂ (ಉಪ್ಪಟಿ. ೦೦-೦೭೭). **ಹಾಳುಗೋಡೆ :** ಪಾದರಕ್ಕೆ ಹೋದರೆ ಕಳ್ಳದವ್ವ ಹಾಯಿತ್ತು, ಹಾಳುಗೋಡೆಗೆ ಹೋದರೆ ಚೇಳೂಱಿತ್ತು (ಜಕವ. ೦೦೦); ಕತ್ತೆ ತಪ್ಪಿಸಿಕೊಂಡರೆ ಹಾಳುಗೋಡೆ (ಗಾದೆ). [ಪಾಟ್+ಗೋಡೆ]

**ಪಾಟ್ದಿನ** (ನಾ). ಹಾಳಾದ ದಿವಸ; ವ್ಯರ್ಥವಾದ ದಿವಸ : ಪಾಟ್ದಿನಂ ಬೇಟವಪ್ಪೊಲಜಿನಿಸಗೆಯದೊರ್ವನ ಬಾಟ್ದಿನದ ಬಟ್ಟೆಗಡಚುಗಲ್ಲು (ಕುಬಳ್. ೦-೪-೯). [ಪಾಟ್+ದಿನ]

**ಪಾಟ್ದೇಗುಲ**, ಪಾಳ್ದೇಗುಲ, ಹಾಳುದೇಗುಲ (ನಾ). ಹಾಳು ಬಿದ್ದ ದೇವಸ್ಥಾನ; ಹಾಳಾದ ದೇವಾಲಯ : ಪಗಲೆಲ್ಲಂ ಪಾಟ್ದೇಗುಲ ದೊಳ್ಜನಮಂನೆಚ್ಚ ತಾಂ ತೊಸ್ಸನಾಗಿ . . . ಇರುಳಪ್ಪಾಗಳ್ ದಿವ್ಯಮಪ್ಪ ತನ್ನ ಸ್ವಾಭಾವಿಕಮಪ್ಪ ಮುನ್ನಿನ ರೂಪಂ ಕೈಕೊಂಡು (ವಡ್ಡಾರಾ. ೦೨೨-೨೦). **ಪಾಳ್ದೇಗುಲ :** ಬಾಹಿರದ ಪಾಳ್ದೇಗುಲದೊಳಗೆ ಸಾವಿರ ಸೊಡರುಗಳನೆತ್ತಿ ಭಜಿಸುವ ನೇಮವಾತಂಗೆ (ಬಸಪು. ೫೦-೫೪). **ಹಾಳುದೇಗುಲ :** ಶಿಯುಸಕ್ಕೆ ಹಾಳುದೇಗುಲವುಂಟು (ಪಹಾರೀ. ಬ. ೬೯-೦೯೯). [ಪಾಟ್+ದೇಗುಲ]

**ಪಾಟ್ನೆಲ**, ಪಾಳ್ನೆಲ, ಪಾಟುನೆಲ (ನಾ). ೧. ಕೇಡು ಮಾಡುವ ಭೂಮಿ : ಅಶುಭಕರವಾದ ಭೂಮಿ : ಈ ನೆಲನಿದು ಪಾಟ್ನೆಲನೆನಗೆ ದಿನಪಸುತನಂ ಕೊಲಿಸಿದ ನೆಲನೊಡನೆ ಮತ್ತೆ ಪುದುವಾಟ್ದಪನೇ (ಗದಾಯು. ೫-೧೭). **ಪಾಳ್ನೆಲ :** ೨. ಹಾಳುಬಿದ್ದ ಭೂಮಿ : ವಿಮಲ ಪುಣ್ಯಕ್ಷೇತ್ರಮುಮಂ ಕಾಡ ಪಾಳ್ನೆಲನುಮಂ . . . ಸಿಜ್ಜೈಕದೃಷ್ಟಿಗೆ ಸಮಂ (ರಶಕ. ೦೨೪-೨೦). **ಪಾಟುನೆಲ :** ೩. ನಿಸ್ಸಾರವಾದ ನೆಲ; ಸತ್ವರಹಿತವಾದ ಭೂಮಿ : ಗೆಲವೇನಿಲ್ಲದ ಯುದ್ಧ ಪಾಟುನೆಲದೊಳ್ ಬೇಸಾಯ . . . ಸಭದ ಭ್ರಾಂತಿಯ ತೋರ್ಪುವೈ (ಸೋಮೇಶ. ೨೩). [ಪಾಟ್+ನೆಲ]

**ಪಾಟ್ಬಸದಿ** (ನಾ). ಹಾಳು ಬಿದ್ದ ಜಿನದೇವಾಲಯ, ಬಸದಿ : ಪಾಟ್ಬಸದಿಯ ಪೆಣ್ಣ ಜೋಹದವೊಲೊಪ್ಪಿದಳೊರ್ವಳನಂಗರಾಗದಿಂ (ಶಾಂತಿಪು. ೯-೮೮). [ಪಾಟ್+ಬಸದಿ]

**ಪಾಟ್ಬಾವಿ** 'ಪಾಟ್ಬಾವಿ' ನೋ.

**ಪಾಟ್ಮನ** (ನಾ). ಕೆಟ್ಟ ಮನಸ್ಸು : ದುರ್ಬುದ್ಧಿ : ಕೋಟಲೆಗೊಳಗಪ್ಪ ಪಾಟ್ಮನದ ಮಾನಸರಂ ಸುಡು ಸಂದ ಗೊಡ್ಡರಂ (ಚಂದ್ರಶೃ. ೯-೯೦). [ಪಾಟ್+ಮನ]

**ಪಾಟ್ಮನೆ**, ಪಾಳುಮನೆ, ಪಾಳ್ಮನೆ, ಹಾಳುಮನೆ, ಹಾಳ್ಮನೆ, ಹಾಟ್ಮನೆ (ನಾ). ಬಿದ್ದು ಹಾಳಾದ ಮನೆ ; ಬಿದ್ದು ಹೋದ ಮನೆ : ಪುಟಿತ ನಾಯಂ ಕಂಡಂತೆ ಕಂಡಕಂಡರೆಲ್ಲಮೊರ್ವಟ್ಟೆ ಪಾಟ್ಮನೆಯಂ ಪೊಕ್ಕು (ಜಾಪುಂಪು. ೩೫೦); ಕೆಮ್ಮನೆ ಪಾಟ್ಮನೆಯೊಳ್ ಗುಜುಗುಮ್ಮನೆ ಸುಟಿದಿರದೆ ಪೋಪವಾಜಿತನ ಬಟಿಯಂ (ಅಜಪು. ೬-೧೨೩); ಕೆಮ್ಮನೆ ತೊನೆದು ಮಾಣದರಸಾಳ್ವಸದಿಂ ಪುಗುವಂತು ದೇವಗತಿ ಪಾಟ್ಮನೆಯೋ (ಧರ್ಮಾಮೃ. ೬-೦೭೨); ಆ ಲಕ್ಷ್ಮಿಯಾ ರೂಪುವಾ ಹರೆಯಂ ಬೇವಿನ ಸುಗ್ಗಿ ಪಾಟ್ಮನೆಯ ಚಿತ್ರಂ ಕಾಡ ಚಂದ್ರಾತಪಂ (ಅನಂಪು. ೯-೫೯). **ಪಾಳುಮನೆ :** ಆಸೆಯಿಲ್ಲದ ಬದುಕು ಬದುಕೆ . . . ಪಾಳುಮನೆಯಲಿ ಬೆಳಕು ಬೆಳಕೆ? (ಕಿಶಾಂ. ೯೩-೦೫). **ಪಾಳ್ಮನೆ :** 'ಪಾಳ್ಮನೆಹಾಳ' ಪರಾ. **ಹಾಳುಮನೆ :** ಹಾಳುಮನೆಯ ಹೊಕ್ಕು ಒಡಲು ಉರಿಯುತಿದೆ (ಪುರಂದ. ೨-೬೪-೦); ಮೌನವಾಗಿ ಅವರು ನಡೆದು ಹೋಗಲು ಸ್ವಲ್ಪ ಸಮಯದಲ್ಲಿ ಒಂದು ಹಾಳುಮನೆಯು ತೋರಿತು (ಮಚಿಸ. ೭). **ಹಾಳ್ಮನೆ :** ತೋಟದಲ್ಲಿ ಒಂದು ಹಾಳ್ಮನೆಯಿದೆ (ರೂಢಿ). **ಹಾಟ್ಮನೆ :** 'ಹಾಟ್ಮನೆಹಾಟ' ಪರಾ. [ಪಾಟ್+ಮನೆ]

**ಪಾಟ್ಮನೆಪಾಟ**, ಪಾಳ್ಮನೆಹಾಳ, ಹಾಟ್ಮನೆಹಾಟ (ನಾ). ೧. ತುಡುಗು ನಾಯಿ : ಕಳ್ಳನಾಯಿ : "ಪಾಟ್ಮನೆಪಾಟಂ ತುಡುಗುಣಿ" (ಕಹಪು. ೬೫). **ಪಾಳ್ಮನೆಹಾಳ :** ೧. ತೋಳ್ವಲಮಂ ರಣಾಂಗಣದೊಳೆಲ್ಲರ್ಗಂದು ನಾಂ ತೋಱುವೆಂ ಬಡಿವೆಂ ಪಾಳ್ಮನೆಹಾಳನುಂ ಬಡಿವೋಲ್ಮಿಕ್ಕಾದ ದೇವರ್ಕಳಂ (ಜಿಂಪಾ. ೦೦-೩೫). **ಹಾಟ್ಮನೆಹಾಟ :** ೧. "ಹಾಟ್ಮನೆಹಾಟಂ-ತುಡುಗುಣಿ ನಾಯ್" (ಕಮದ. ಶಂ. ೦). ೨. ನಾಯಿ ; ಶ್ವಾನ : "ಸೊಣಗ ಹಾಟ್ಮನೆ ಹಾಟ ಶ್ವಾನ ಕುಕ್ಕುರನೆಂಬಿವೆಸೆಸೆ ನಾಯ್ವೆಸರು" (ಕಬ್ಬಮಂ. ೩೨) [ಪಾಟ್ಮನೆ+ಪಾಟು+ ‒ ಅ$_1$]

**ಪಾಟ್ಮಸಗು** (ಕ್ರಿ). ಹಾಳಾದಂತೆ ತೋರು ; ಹಾಳುಸುರಿ ; ಶೂನ್ಯವೆನಿಸು : ದೆಸೆ ಪಾಟ್ಮಸಗಿರ್ದಪುದಂಥನಾದೆನಾರ್ ಶರಣೆನಗೆ (ಕಾದಂಬರಿ. ೯೦೨). [ಪಾಟು+ಮಸಗು$_3$]

**ಪಾಟ್ವಕ್ಕೆ** (ನಾ). ಹಾಳುಬಿದ್ದ ಮನೆ : 'ಪಾಟ್ವಕ್ಕೆವಡಂ' ಪರಾ. [ಪಾಟು+ಪಕ್ಕೆ$_1$(<ಪಟಕ್ಕಿ)]

**ಪಾಟ್ವಕ್ಕೆವಡು** (ಕ್ರಿ). ಹಾಳುಮನೆಯಲ್ಲಿ ವಾಸಿಸು : ಈ ಪಟಮಂ ಪ್ರಾಣಮನೆ ಕೈಯೆಡೆಗುಡುವಂತೆನ್ನ ಕೈಯೊಳ್ಕೊಟ್ಟು ಮದೀಯ ಪ್ರಾಣ ವಲ್ಲಭನಂ ... ಆಱಸಿಂದಟ್ಟಿದೊಡೆ ಬಂದಿದನಿಲ್ಲಿ ಪಸರಿಸಿ ಪಾಟ್ವ[ಟ್ವ]ಕ್ಕೆ ವಟ್ಟಿರ್ದೆಂ (ಅಜಿಪು. ೪-೨೦ ವ). [ಪಾಟ್ವಕ್ಕೆ+ಪಡು$_1$]

**ಪಾಟ್ವಸಿಱು**, ಪಾಳ್ವಸಿಱು (ನಾ). ಬರಿಹೊಟ್ಟೆ ; ಹಾಳುಹೊಟ್ಟೆ : ಪಾಟ್ವಸಿಱೊಳ್ ಸಾಸವೆಯಂ ಕುಡಿದರಂತೆ ಮಱುಗಿ (ಧರ್ಮಾಮೃ. ೦೦-೦೯೨). **ಪಾಳ್ವಸಿಱು :** ಕೆಕ್ಕಳಗಣ್ ಕದಱಿದ ಕೆಂಗೂದಲ್ ಮೊಕ್ಕ ನೊಸಲ್ ನಿಡುಕುಂಗೋಣ್ ಬಿಡುಬಾಯಕ್ಕುಳಿಸಿದ ಪಾಳ್ವಸಿಱು (ಜಗುಚಾ. ೭-೨೭). [ಪಾಟು+ಬಸಿಱು]

**ಪಾಟುಬಾವಿ**, ಪಾಟುಬಾವಿ, ಪಾಟ್ಬಾವಿ, ಹಾಳುಬಾವಿ, ಹಾಳುಭಾವಿ (ನಾ). ಬಳಕೆಯಿಲ್ಲದೆ ಹಾಳು ಬಿದ್ದ ಬಾವಿ ; ನಿರುಪಯುಕ್ತವಾದ ಬಾವಿ: ತದ್ದ್ವಿಜಂ ಜಳಕುಟಪ್ರಹಾರದಿಂ ಕಾಲ್ಮುಱಿದು ಪುಟಿತು ಪಾಟ್ಬಾವಿಯೊಳ್ ಪೊಕ್ಕು ಸತ್ತು (ಜಾಪುಂಪು. ೩೫೦). **ಪಾಟುಬಾವಿ :** ಸಲೆ ಸೋಲ್ತು ಪಾಟುಬಾವಿಯ ಜಲಮಂ ತೆಗೆಯಲ್ಕೆ ಮಕರಕೇತನನಿಂದಂಕುರಿ ಸಿಕ್ಕಿದ ನೀಲದ ಬಟ ಲನನುಕರಿಸಿತ್ತು ಕಾಂತೆಯೋರ್ವಳ ನಯನಂ (ಧರ್ಮಾಮೃ. ೭-೨೦೯). **ಪಾಟ್ಬಾವಿ :** ಬೇಯುದಂ ಭರದೆ ನೋಡು ತ್ತೊಂದು ಪಾಟ್ಬಾವಿಯೊಳ್ ಕೆಡೆದಾಗಳ್ ಮರವಟ್ಟು ಮೂರ್ಛೆ ವಡೆದಿರ್ದಂ (ರಶರ. ೪-೨೨೬). **ಹಾಳುಬಾವಿ :** ಮುಬಾರಕನು ಕಾಣದೆ ಒಂದು ಹಾಳುಬಾವಿಯಲ್ಲಿ ಬಿದ್ದನು (ಬಂಕಿಮ. ೨೨೦); ಹಳಿಯೇರಿ ಇಳು

ಕಲುಂ ಇಳಿದರೆ ತೀರಿತು, ಅಲ್ಲಿ ಹಾಳುಬಾವಿಯಿದೆ (ಹೊಸ್ತ. ೦೩೦).
**ಹಾಳುಭಾವಿ** : ಹುಟ್ಟುಕುರುಡ ಹಾಳುಭಾವೀಲಿ ಬಿದ್ದ (ಗಾದೆ).
[ ಪಾಟ್ + ಬಾವಿ ]

**–ಪಿ** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : ಕನ್ನಡದಲ್ಲಿ 'ಪಿ' ಪ್ರತ್ಯಯವೆಂದು ಹೇಳುವ ಶಬ್ದಗಳೆಂದರೆ ನೋಂಪಿ ಮತ್ತು ಕಲ್ಪಿ ಎಂಬುವು ಎರಡು ಮಾತ್ರ (ಸಂಶಾಶ. ೨೦೦). 'ಕಲ್ಪಿ'. 'ಕೇಳ್ಪಿ' ಪರಾ.
**ಪಿಂ** 'ಪಿನ್' ನೋ.
**ಪಿಂಕಣಿಸು** 'ಪೆಂಗಣಿಸು' ನೋ.
**ಪಿಂಕುಳಿ** 'ಪೆಂಕುಳಿ' ನೋ.
**ಪಿಂಗ** (ಗು). ೧. ಕಂದುಬಣ್ಣದಿಂದ ಕೂಡಿದ ; ಕಂದುಬಣ್ಣದ : ಪಿಂಗ ಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ (ಕಂಶಾ. ೬-೯). (ನಾ). ೨. ಕಂದುಬಣ್ಣ : ಕಪಿಲವರ್ಣ : "ಪಿಂಗಃ ಪಿಶಂಗಃ— ಈ ೨ ಕಪಿಲವರ್ಣಂ" (ಕಲಾಯು. ೦೨೦-೩೦). ೩. ಒಂದು ಬಗೆಯ ಪಕ್ಷಿ ; ಕಾಡುಪಾರಿವಾಳ : "ಪಿಂಗಂ ಬೆಳುಪವಮೆನಿಸಿಕ್ಕು" (ಮಂಗರಾ. ೫೨-೦೦). [ ಸಂ. ]
**ಪಿಂಗಚಕ್ಷು** (ನಾ). ೧. ಏಡಿ ; ನಳ್ಳಿ. ೨. ಕೆಂಗಣ್ಣುಳ್ಳವನು : ದುರ್ಯೋಧನ : ಕರ್ಣ ಭೀಷ್ಮಾದ್ಯುತಥ್ಯಾನಕಠೋರಂ ಪಿಂಗಚಕ್ಷುರ್ಬಲ ಮನಮಾಮ ಪೋಲ್ತೊಪ್ಪುತಿರ್ದತ್ತರಣ್ಯಂ (ಕಿರಾಂ. ೩-೨೯).
[ ಸಂ. ಪಿಂಗಚಕ್ಷುಸ್ ]
**ಪಿಂಗಟ** (ನಾ). = ಪಿಂಗ ೨. : ಕ್ರಮವಾಗಿ ಕಿತ್ತಳೇಬಣ್ಣ, ಅರಿಶಿಣ, ಹಸುರು ಪಿಂಗಟ, ನೀಲ . . . ಈ ಪ್ರಕಾರ ಬಣ್ಣಗಳ ಪಟ್ಟಿಗಳು ಕಾಣಿಸುವವು (ಋಂಶಯು. ೬-೯೯). [ ←ಮರಾ. ಪಿಂಗಟ ]
**ಪಿಂಗಡಲು** (ನಾ). ಪಶ್ಚಿಮದಿಕ್ಕಿಗೆ ಇರುವ ಸಮುದ್ರ : ಪಿನ್ನೇಸಜು ಪಿಂಗಡಲೊಳಗಗುಳದ ಮುನ್ನಂ . . . ಉತ್ತಮಾಂಗಮನಾಗಸದ ಅತ್ತ ಹಾಜುವ ತೆಜದಿಂದೆಚ್ಚನು (ಪೇಜುಸಂ. ೨೯-೦೬೬) ; ಪ್ರಿಯಮಿತ್ರಂ ಪಿಂಗಡಲ ಮಡುವಿನೊಳ್ ಲಯಮಾದುದನಜಿದುಂ ಸುಖಿಸುವುದಿದು ನಯಮೋ (ಜಯಾ. ೦೩-೬೦). [ ಪಿಂ (< ಪಿನ್) + ಕಡಲು (< ಕಡಲ್ಂ) ]
**ಪಿಂಗಡೆ.** ಹಿಂಗಡೆ$_1$ (ನಾ). ೧. ಹಿಂಭಾಗ ; ಹಿಂದುಗಡೆ : "ಪಿಂತಿಲ್ ಪೆಜಗು ಪೆಜಮೊನಲ್ ಪಿಂಗಡೆ" (ಅಭಿಧಾ. ೪೩) ; ಪಿಂಗಡೆಯೊಳಗೆ ಜತನವಿರು ಮಾಚಿಭಟ್ಟ (ಅರಾಶ. ೦-೩-೦೩). ೨. ಪೂರ್ವಕಾಲ ; ಹಿಂದಿನ ಕಾಲ : ಒಡೆಯ ಪೇಳ್ವಿನಗೇನು ದುಗುಡವೆಂದೆನಲು ಪಿಂಗಡೆಯ ಶುದ್ಧಿಯನುಸಿರಿದನು (ಪೋಹಸ. ೩೦-೦೭). ಹಿಂಗಡೆ$_1$ : ೧. "ಪೆಡಮಟ್ಟು, ಪೆಜಗು, ಪೆಜತು, ಪಿಂತಿಲ್— ಈ ೪ ಹಿಂ[ಶಾಕಾಂ. ಪಿಂ]ಗಡೆಗೆ ಪೆಸರ್" (ಕಶಾ. ೬೩-೯೩೩) ; ಸಂಗಡಿಸಿ ನಲಿನಲಿದು ನಡೆವ ತುರಂಗ ಕಂಫಟಗಳ ವಿಕೀರ್ಣದ ಹಿಂಗಡೆಯ ಬಿಜ್ಜಳಮಹೀಶನ ಮುಂಗಡೆಯೊಳೊಪ್ಪಿ (ಬಸತ. ೩-೯೯) ; ಭೂವರನ ಹಿಂಗಡೆಯ ಪರಮಸಂತೋಷದೆ ನಡೆದು ಬರುವ ಬಲುಸಿರಿಯ ಸಂಭ್ರಮಮನೇನೆಂಬೆ (ಕಂಪಾ. ೨೩-೩) ; ಕಳ್ಳನು ಅವರನ್ನು ಮನೆಯ ಹಿಂಗಡೆಯಿದ್ದ . . . ಹಳ್ಳಕ್ಕೆ ಕರೆದೊಯ್ದು ಅಲ್ಲಿದ್ದ ಒಂದು ಕಲ್ಲನ್ನೆತ್ತಿದನು (ಮಹಿಸ. ೦೦). 'ಮುಂಗಡೆ' ಪರಾ.
[ ಪಿಂ (< ಪಿನ್) + ಕಡೆ$_3$ ]
**ಪಿಂಗತೆ**, ಹಿಂಗತೆ (ನಾ). ಹಿಂದೆ ನಡೆದ ಕತೆ ; ಹಿಂದಿನ ಕತೆ : ಇಂತು ಪಿಂಗತೆಗಳಂ ಪೇಳ್ದುಮಜಾನೇನಾದುದು (ಆರಾಶ. ೦-೦೦-೨೦).
**ಹಿಂಗತೆ** : ಇದು ಮೂಲದಲ್ಲಿ ಆರಂಭದಲ್ಲಿಯೇ ಬಂದಿದೆ. ನಾಗಚಂದ್ರನಲ್ಲಿ ಒಂದು ಸಂದರ್ಭದಲ್ಲಿ ಹಿಂಗತೆಯಾಗಿ ಹೇಳಲಾಗಿದೆ (ಕಶಾಶ. ೦೨೭).
[ ಪಿಂ (< ಪಿನ್) + ಕತೆ ]

**ಪಿಂಗದಾಲ್ಚಿನ್ನಿ** (ನಾ). ದಾಲ್ಚಿನ್ನಿಯಲ್ಲಿ ಒಂದು ಬಗೆ : ಮಟ್ಟದಾಲ್ಚಿನ್ನಿ, ಪಿಂಗದಾಲ್ಚಿನ್ನಿ (ವ್ಯ ಶಿ. ೨೦-೩೯೦). [ಪಿಂಗ + ದಾಲ್ಚಿನ್ನಿ (< ದಾಲಚಿನ್ನಿ)]
**ಪಿಂಗಲ**, ಪಿಂಗಳ$_1$ (ಗು). ೧. ಕಂದುಬಣ್ಣದಿಂದ ಕೂಡಿದ ; ಕಂದುಬಣ್ಣದ : ಪಿಂಗಲ ಕಣ್ಣುಳ್ಳಾತನು ಧನಹೀನನು (ಸಾಮುಂ. ೭-೯) ; ಪಿಂಗಲ ಜಟಾಜೂಟಕೂಟಂ, ತ್ರಿನೇತ್ರಂ (ಶ್ರೀರಾಮಪ. ೯೭-೩೩೯). (ನಾ). ೨. ಕಂದುಬಣ್ಣ. ೩. ಸೂರ್ಯನ ಸೇವಕರಲ್ಲಿ ಒಬ್ಬ : ತಳೆಯ ಮುಚ್ಚಳಮಂ ಪುರೋಗತ ಫಲಿತ ದೃಶ್ಯವ ಕಾಣಿಸುತ ವಿಧಿಯುಂಳಿದು ಮಾಠರ ಪಿಂಗಲರೊಳಿಪ್ಪತೆಯನಾಡುವನೆ (ಶಿಕೇಶ. ೦೦-೩೦). ೪. ಸಂಸ್ಕೃತ ಛಂದಶ್ಶಾಸ್ತ್ರಕಾರರಲ್ಲಿ ಪ್ರಸಿದ್ಧನಾದ ಒಬ್ಬನು : ಇಂದುಧರನುಮಂಗೆ ಪೇಟ್ದಾ ಛಂದಂ ಪಿಂಗಲ[ಶಾಕಾಂ. ಳ]ನಿನಪನಿಯೊಳ್ ಪರಪಿದೊಡಾ ಛಂದೋಂಬುರಾಶಿಯೊಳ್ ಮೊಗೆತಂದದನಾತ್ಮೀಯಸತಿಗೆ ನಾಕಿಗನುಸಿರ್ದಂ (ಛಂದೋಂಬು. ೦-೩೦). ೫. ಒಂದು ಬಗೆಯ ಸಣ್ಣ ಜಾತಿಯ ಗೂಬೆ. ೬. ಅರುವತ್ತು ಸಂವತ್ಸರಗಳಲ್ಲಿ ಐವತ್ತೊಂದನೆಯದು. ೭. ಒಂದು ಬಗೆಯ ಹಾವು. ೮. [ಜೈನ] ನವನಿಧಿಗಳಲ್ಲಿ ಒಂದು ; ಇದು ಮಕುಟ, ಹಾರ, ಕೇಯೂರ, ಕುಂಡಲ ಮುಂತಾದ ಭೂಷಣಗಳನ್ನು ಕೊಡುತ್ತದೆ : ಸ್ತ್ರೀಪುರುಷಯೋಗ್ಯಮಪ್ಪ ನಾನಾವಿಧಾಭರಣಂಗಳಂ ಕುಡುವ ಪಿಂಗಲನಿಧಿಯುಂ (ಶಾಸ್ತ್ರಸಾ. ೦೯-೪). ಪಿಂಗಳ$_1$ : ೧. ನೀಲಾಂಬುದ ಶ್ಯಾಮನುಂ ಕನಕಪಿಂಗಳಜಟಾಬಂಧಕಳಾಪನುಂ . . . ವ್ಯಗತ್ವಕ್ಪರಿಧಾನನಿತಮಾಗಿ ವ್ಯಾಸಭಟ್ಟಾರಕಂ ಪುಟ್ಟುವುದುಂ (ಪಂಪಭಾ. ೦-೬೮ ವ) ; ಸೋಮ ಸೋಮವಿಭೂಷ . . . ಗುಣಗಾತ್ರಗಾತ್ರ ಪಿಂಗಳಜಟಾರಾಮರಾಮ (ಹರಿಶ. ೦-೩) ; ಶೋಭಾಕರಂ ದುರಿತಭೀಕರಂ ಪಿಂಗಳಜಟಾಭಾರನಹಿ ರಾಜಹಾರಂ (ಉದ್ಭಟ. ೭-೦೩) ; ಇಹುದತುಳಪಿಂಗಳಜಟಾಪಟಲನವಲಪದ ಪದ್ಮಸದ್ಭೃಂಗಕುಂತಳದೇಶವು (ರಾಘಶ. ೦-೩೦). ೬. ಪಿಂಗ್ಗಳ ಸಂವತ್ಸರದ ಭಾದ್ರಪದ [ಮಾಸ ಬ್ರಹ] ಸ್ಪತಿವಾರ ವ್ಯತಿಪಾತವದ್ಯಾಷ್ಟಮಿಯಲು (ಕೊಡ್ಗು. ೭-೯೯; 1137) ; ಸ್ವಸ್ತಿಶಕವರ್ಷಂ 1179ನೆಯ ಪಿಂಗಳ ಸಂವತ್ಸರದ ಚೈತ್ರಸು[ಶು]ದ್ಧ ೭ ಗುರುವಾರದಲು (ಕೊಡ್ಗು. ೨೨-೬೩; 1267). ೮. ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೦೩-೩ ವ) ; ಕಾಳ ಮಹಾಕಾಳ ಪಾಂಡುಕ ಪಿಂಗಳ ನೈಸರ್ಪ ಪದ್ಮ ಮಾಣವಕ ಶಂಖ ಸರ್ವರತ್ನ ನವನಿಧಿ ಪರಿಪೂರ್ಣಮುಂ (ಆದಿಪು. ೭-೨೦ ವ) ; ಹಾರ ಹೀರಾವಳಿ ಮಕುಟ ಕುಂಡಲ ಕೇಯೂರಾದಿಯ ಭೂಷಣಗಳ ಮೇರೆಯಿಲ್ಲದೆ ಕೊಡುತಿಹ ಪಿಂಗಳನಿಧಿ ರಾರಾಜಿಸುತಿಹುದು (ಪಂಕ್ತಿಸಾಂ. ೦೯-೮೭). ೯. ತಿಳಿಯಾದ ಕೆಂಪು ಬಣ್ಣ ; ನಸುಗೆಂಪು : "ಹರಿಃ (ಕ್ರಮಂ), ಕದ್ರುಃ, ಕಡಾರಃ ಪಿಂಗಳಃ — ಈ ೪ ನಸುಗೆಂಪು" (ಕಲಾಯು. ೦೨೦-೩೦). ೧೦. ಹಳದಿ ಬಣ್ಣ ; ಹೊಂಬಣ್ಣ : ಪಿಂಗಳವಾದ ನೆಲ್ಲ ತೆನೆಯಂ ನಸುಗರ್ಚಿದ ರಕ್ತ ಚಂಚು ಪಕ್ಷಂಗಳ ಶಾದ್ವಲಚ್ಛವಿ ಮನಂಗೊಳೆ ಪಾಜುವ ಕೀರಮಾಲೆ . . . ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ (ಜನಿ. ೪-೬೬).
[ ಸಂ. ]
**ಪಿಂಗಲಿ**, ಪಿಂಗಳಿ (ನಾ). ೧. ಒಂದು ಬಗೆಯ ಗೂಬೆ : "ಕಾಕಾರಿ ಕೌಶಿ ಕಾಖ್ಯಮುಲೂಕಂ ಪಿಂಗಲಿ ನಿಶಾಟನಂ ತಾನಕ್ಕುಂ" (ವಸ್ತುಕೋ. ೪೨-೦೩). ೨. ಶಕುನದ ಹಕ್ಕಿ ; ಹಾಲಕ್ಕಿ : "ಶಕುಂತಃ, ಭಾಸಃ— ಈ ೨ ಪಿಂಗಲಿ" (ಕಲಾಯು. ೪೦-೯೯) ; ಪಿಂಗಲಿ . . ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ವೊಡೆ ತಡೆಯದಾ ಗೃಹಂ ಪಾಟಕ್ಕುಂ (ಲೋಕೋಪ. ೪-೬೩) ; ಉಜ್ವಲ ಶಾಸ್ತ್ರಸಿದ್ಧ ಶುಭಸೂಚನೆಯಂ ತೋಜಿ ಪಿಂಗಲಿಗಳುಂ ತೋಜಿ ನಡೆದಾ ನೃಪಂ ಪೊಜಬೀಡ ಬಿಟ್ಟನಾ ಕಾಲಂ

ವಲ್ಲಿ (ಸೀಸು. ೦೦-೪). ಪಿಂಗಳಿ : ೧. "ಕಾಕಾರಿ ಪಿಂಗಳಿ ನಿಶಾಟನಂ ಕೌಶಿಕಮುಲೂಕಮೆನೆ ಗೂಗೆಯಕ್ಕುಂ" (ಮಂಗರಾ. ೩೦-೪).
[<ಸಂ. ಪಿಂಗಲಾ]

**ಪಿಂಗಲೆ**, ಪಿಂಗಳೆ (ನಾ). ೧. ಒಂದು ಬಗೆಯ ಗೂಬೆ. ೨. ದಕ್ಷಿಣ ದಿಕ್ಕಿನ ಹೆಣ್ಣಾನೆ; ಕುಮುದ ದಿಗ್ಗಜದ ಪತ್ನಿ. ೩. ಶರೀರದ ಒಂದು ನಾಡಿ. ಪಿಂಗಳೆ : ೨. "ದ್ವಿಪೆಗಳಭ್ರಮು ಕಪಿಲೆ ಪಿಂಗಳೆ ಸುತಾಮ್ರಪರ್ಣೆಪುರದಂತಿಯದಂಜನಾಂಜನಾವತಿ ಸಿತದ್ವಿಪೆಯೆನಲು ಕ್ರಮದಿ" (ಮಂಗರಾ. ೦೪-೨೦); ಅಭ್ರಮು ಕಪಿಲೆ ಪಿಂಗಳೆ . . . ಅಂಜನಾವತಿಯೆಂಬ ತಮ್ಮ ತಮ್ಮ ಸ್ತ್ರೀಗಜಗಳೊಡಗೂಡಿ ಕ್ರಮದಿಂ ಭೂಮಿಯಂ ಪಹಿಸಿರ್ಪವು (ಶಿವೇಶ. ೦೭೭). ೩. ಇಡಾ ಪಿಂಗಳಾ ಸುಷುಮ್ನಾನಾಳ ವಿಡಿದು ಅಜಪದಹೆನೆಂದರೆ ಕೂಡಲಸಂಗಮದೇವ ಮೂಗ ಕೊಯ್ಯದೆ ಮಾಣ್ಬನೆ (ಶಿವ. ೬೯೯); ಇಡೆ ಪಿಂಗಳೆಗಳೆನಿಪೆರಡು ನಾಡಿಯ ತುದಿ ಯೊಳಾಡುತ್ತಲಿರ್ದು (ಕೈವ. ೪-೨-೩); ನಟ್ಟನಿರುತ ಸುಷುಮ್ನಾ ಕಾಳಿಯ ಮುಟ್ಟಿ ಸವ್ಯದ ಭಾಗದೊಳು ತಾ ನಟ್ಟಿಹುದು ಈಡಾನಾಡಿ ದಕ್ಷಿಣದೊಳಗೆ ಪಿಂಗಳೆಯು (ಗಗತಾ. ೪-೦೪). ೪. ಒಂದು ಬಗೆಯ ಮೃಗ,—ಪ್ರಾಣಿ: ಪಿಂಗಳೆ ಗೋಣ ಭಲ್ಲ ಶಶ ಜಂಬುಕ ವಾನರ ಪುಂಡರೀಕ . . . ಮೃಗೇಂದ್ರಮುಖ್ಯಮೃಗಸಂಚಯದುಂಚುಗಾಡಿಯಿಂ ಕಂಗೆಸೆದತ್ತು ತುಂಗಬಹುಶೃಂಗವಿರಾಜಿತವಿಂಧ್ಯಭೂಧರಂ (ಅಧ್ಯಟಿ. ೨-೪೩).
[ಸಂ. ಪಿಂಗಲಾ]

**ಪಿಂಗಳ**$_1$ 'ಪಿಂಗಲ' ನೋ.

**ಪಿಂಗಳ**$_2$ (ನಾ). ಶರೀರದ ಒಂದು ನಾಡಿ : ಈಡಾ ಪಿಂಗಳ ಸುಷಮ್ನಾ ನಾಳ ಮಧ್ಯದ ಕೂಗ ಕಂಡು ಕೂಗಿದೆ (ಅಪಕಂ. ೦೩೨-೬೪೩); ನಾಸಿಕಾರಂಧ್ರದಿಂ ಇಡೆ ಪಿಂಗಳೆಂಬೆರಡುನಾಡಿಗಳಿಂದೊಡಗೂಡಿದೆರಡುನಾಳಗಳಿಹವು (ಶಿವೇಶ. ೦೪೭); ಈಡ ಪಿಂಗಳ ಎರಡು ಜೋಡಿಸಿ ಸುಷುಮ್ನೆ ನೋಡಿ ಅರಿದೆ ಶಿವಲು ಕೊಯ್ಯನು ಮೂಗು ಕೂಡಲಸಂಗಮದೇವಯ್ಯನು (ಸಿದ್ಧಶ್ರ. ೩೪-೩). 'ಪಿಂಗಲೆ' ಪರಾ. [ಸಂ. ಪಿಂಗಲಾ]

**ಪಿಂಗಳದೃಶ** (ನಾ). ಈಶ್ವರನಿಗೆ ಸಖನಾದವನು; ಕುಬೇರ : ಪಿಂಗಳದೃಶನ ವಿಧಿಗಳನು... ಕೊಂಡೊಯ್ದುಸವನು (ಶಿಭಾಗ. ೦೦-೬೪-೩).
[ಸಂ. ಪಿಂಗಲದೃಶ್]

**ಪಿಂಗಳನಾಡಿ** (ನಾ). = ಪಿಂಗಳ$_2$ : ದಕ್ಷಿಣಭಾಗದ ಪಿಂಗಳನಾಡಿಯೆಂಬ ಸೂರ್ಯನಾಡಿಯೆಂದು ಗಂಗಾನದಿಯೆಂದು ಪೇಳಲ್ಪಡುವುದು (ಅಶಿಂದೀ. ೨೦೪-೩೩); ಗಂಗಾನಾಡಿ, ಪಿಂಗಳನಾಡಿ, ಸೂರ್ಯನಾಡಿ ಈ ಮೂರು ಹೆಸರು ಬಲಮೂಗಿನ ಉಸಿರಿಗೆ ಒಪ್ಪುವಂಥಹವು (ಕಪ್ಪಿಕಾ. ೦೩೯).
[ಪಿಂಗಳ$_2$+ನಾಡಿ$_1$]

**ಪಿಂಗಳನೇತ್ರ** (ನಾ). ೧. ಕಂದುಬಣ್ಣದ ಕಣ್ಣು. ೨. "ಶಿವ" (ಕಮಕ.ಕೋಶ): ಪಿಂಗಳನೇತ್ರನನೆಂತುಂ ಪಿಂಗದೆ ಪೂಜಿಸುತಮಿರ್ಪ ಮಾಹೇಶ್ವರನಮಂ ಲಿಂಗಿಯುಮಂ ಶಿವಭಕ್ತನುಮಂ ಗಹನಂಗೆಯ್ಯರೆಮ್ಮ ಸಮಯಿಗಳೆಲ್ಲರ್ (ಕಮಕ. ೪-೬೮). [ಪಿಂಗಳ$_1$(=ಪಿಂಗಲ)+ನೇತ್ರ]

**ಪಿಂಗಳಾಕ್ಷ** (ನಾ). ೧. ಕೆಂಗಣ್ಣು ಉಳ್ಳದು : ಅಡೆಯಂ ಕೋದೆತ್ತುತಂ ಮಾರ್ದನಿಗೆ ಮಸಗುತುಂ . . . ಬಂದುದು ಮದವಿದಳಿತ್ಪಿಂಗಳಾಕ್ಷಂ ಮಹೋಕ್ಷಂ (೦೦ಅಶ. ೩-೩೩). ೨. ಶಿವ. [ಸಂ. ಪಿಂಗಲಾಕ್ಷ]

**ಪಿಂಗಳಿ** 'ಪಿಂಗಲಿ' ನೋ.

**ಪಿಂಗಳಿಕ** (ನಾ). ೧. ಒಂದು ಬಗೆಯ ಕೊಕ್ಕರೆ : ಕಳವಿಂಕ ಪಿಂಗಳಿಕ ಸಾಳ್ವವರಳಿಗ (ಕುಮ್ಮಂಗ. ೦೦-೩). ೨. ಒಂದು ಬಗೆಯ ಗೂಬೆ.
[ಸಂ. ಪಿಂಗಲಿಕಾ]

**ಪಿಂಗಳಿಸು** 'ಪೆಂಗಣಿಸು' ನೋ.

**ಪಿಂಗಳೆ** 'ಪಿಂಗಲೆ' ನೋ.

**ಪಿಂಗಾಕ್ಷ** (ಗು). ೧. ಕೆಂಪು ಬಣ್ಣದ ಕಣ್ಣುಳ್ಳ. (ನಾ). ೨. ಕೆಂಪು ಬಣ್ಣದ ಕಣ್ಣುಳ್ಳ ಒಂದು ಬಗೆಯ ಹಕ್ಕಿ : "ಪಿಂಗಾಕ್ಷಮೆನೆ ಕಣಜಂ" (ಮಂಗರಾ. ೩೨-೪). ೩. ಹುಲಿ : "ಪಿಂಗಾಕ್ಷ—ಬೆಕ್ಕಿನ ಕಣ್ಣಿನ ಹಾಗೆ ಕಣ್ಣುಳ್ಳದ್ದು ; ಹುಲಿ" (ಗಂಗಾಮ. ೨೦೩). ೪. ಕೋತಿ. ೫.=ಪಿಂಗ ಚಕ್ಷು ೨ : ಪೊಕ್ಕುಡಿಮೆಂ ಪಿಂಗಾಕ್ಷನೂರುದ್ವಯಮನುರುಗದಾಘಾತದಿಂ ನುಚ್ಚುನೂಱುಗೂಡೆಮೆ . . . ಮಕುಟಮಂ (ಶಂಕರಾ. ೭-೦೩); ಪಿಂಗಾಕ್ಷ ನತಿವಿಷಮಮಪರುಷವೇಷಾವೇಶಧರನಾಗಿ (ಗದಾಯು. ೩-೩೪೮). ೬. ಶಿವ : ಪಿಂಗಾಕ್ಷಂ ನಿಜಕಿಂಕರಾಗ್ನಿ ಬಲತ್ಕೇಱೋಭಂಗದಿಂ . . . ಕೋಪಾಟೋಪಮಂ ತಾಳ್ದಿದಂ (ಶಗು. ೦೪-೦೪). [ಸಂ.]

**ಪಿಂಗಾಣಿ** (ನಾ). ೧. ಒಂದು ಬಗೆಯ ಬಿಳಿಯ ಜೇಡಿಮಣ್ಣು ; ಚೀನಿ ಮಣ್ಣು (ಉಕ): ಚೀನರು ಪಿಂಗಾಣಿಯನ್ನು (Porcelain) ಸುಡಲು ಕಲ್ಲಿದ್ದಿಲನ್ನು ಉಪಯೋಗಿಸುತ್ತಿದ್ದರು (ತಿಂತಾ.೦೩೩); ಪಿಂಗಾಣಿಯ ಫಲಕಗಳ ಮೇಲೆ ಕೆತ್ತನೆಮಾಡಿ ವ್ಯವಹರಿಸುವುದು ಬಳಕೆಗೆ ಬಂದಿತು (ಮುದ್ರಿ. ೭). ೨. ಬಿಳಿಯ ಜೇಡಿಮಣ್ಣಿನಿಂದ ಮಾಡಿದ ಪಾತ್ರೆ ಮುಂತಾದ ವಸ್ತುಗಳು : ಗಂಗೋದಕ ಹೂಜೆ ಘನರತ್ನಕೀಲಿತ ಪಿಂಗಾಣಿ ಗಂಧಲರ್ದಟ್ಟೆ . . . ಹೊಳೆವ ಬಿಜ್ಜಣಿಗೆಯು ಹೆಂಗಳು ತಂದಿರಿಸಿದರು (ಮೋಹತ. ೦೭-೨೦); ಕೊಂಡು ಪಿಂಗಾಣಿಯನೆಸೆಯುತ್ತ ದೂರಕೆ ಮತ್ತೆ ಕೊಂಡುಕೊ ವಿಕ್ಕ ಹಣಕೆ (೩ಂಕಾಶ. ೨೩೨-೪೭); ರೇಶಿಮೆ, ಪಿಂಗಾಣಿ, ಚಾ ಈ ಮೂರು ವಸ್ತುಗಳ ಹೊರತು ಚೀನರ ಹತ್ತಿರ ವ್ಯಾಪಾರದ ಒಡವೆ ಬೇರಾವುದೂ ಇದ್ದಿರಲಿಲ್ಲ (ಚಿತಿಂ.೦೦). [← ಪಾರ. ಪಿಂಗಾಲ್, ಪಿಂಜಾನ್]

**ಪಿಂಗಾರ**, ಹಿಂಗಾರ (ನಾ). (ಕರಾ) ಅರ್ಧ ಬಿರಿದ ಅಡಕೆ ಹೂವಿನ ಕೋಶ ; ಹೊಂಬಾಳೆ : ಒಂದೆರಡು ಕಂಗುಗಳಲ್ಲಿ ಪಿಂಗಾರ ಒಡೆದು ಅಕ್ಕಿಯ ಕಣಗಳಂತೆ ಅದರ ಹುಸಿ ಹೂಗಳು ನೆಲಕ್ಕೆ ಬಿದ್ದಿದ್ದುವು (ಶಾಗಿ. ೦೩೩) ; ಅಲ್ಲಿನ ಗಡುಗಳು ಪಿಂಗಾರ, ಮೊಗಡ, ಕಾಯಡಕೆ, ಮಾಲೆಕಾಯಿ, ಪಣ್ಣಡಕೆ, ಗೋಟಡಕೆ, ಕರಿಗೋಟುಗಳನ್ನು ಉಳ್ಳವುಗಳಾಗಿದ್ದುವು (ಶಾಶಾಶಾ. ೨೩೭). ಹಿಂಗಾರ : ಅಡಕೆಯ ಹೂವಿನ ಹಿಂಗಾರದ ತೇರ್:- ತೆಂಗಿನ ಹೂವಿನ ಬಂಗಾರದ ತೇರ್ . . . ಸುತ್ತುತ್ತಿಳಿವಾ ಮುತ್ತಿನ ತೇರ್ ಬಂತದೊ, ಬಂತದೊ, ಬಂತದೊ, ಪಾರ್ ! (ಅಗ್ನಿಹಂ. ೩-೨೨) ; ಕೈಯಲ್ಲಿ ಅಡಕೆಯ ಹಿಂಗಾರ ಹಿಡಿದು ಅವಳು ನಿಮಿತ್ತ ಹೇಳುತ್ತಿದ್ದಳು (ಕೃಕ್ಕಿ. ೯೯) ; ಹಿಂಗಾರ ಇಲ್ಲದೆ ಶೃಂಗಾರ ಆಗದೋ ? (ಗಾದೆ).
[ದೇ.॥ ತುಳು. ಪಿಂಗರ, ಪಿಂಗರೆ, ಪಿಂಗಾರ]

**ಪಿಂಗಾಲ್**, ಹಿಂಗಾಲ್, ಹಿಂಗಾಲು (ನಾ). ೧. ಪಾದದ ಹಿಂಭಾಗ ; ಹಿಮ್ಮಡಿ : ಸೂತಿಕಾಸದನಮಂ ಪೊಕ್ಕು ದೇವಕಿಯ ಮುಂದೆ ಪಟ್ಟಿರ್ದ ಶಿಶುವಿನ ಪಿಂಗಾಲಂ ಪಿಡಿದುಕೊಂಡು ನಡೆತಂದು (ಶಗು. ೩-೦೨ ಪ). ೨. ನಾಲ್ಕುಕಾಲುಗಳುಳ್ಳ ಪ್ರಾಣಿಗಳ ಹಿಂಭಾಗದ ಕಾಲುಗಳು : ನಿಮಿರ್ದಂಗಂ ನೀಳ್ದ ಮುಂಗಾಲುಡುಗಿ ನಡೆವ ಪಿಂಗಾಲ್ ಚಲದ್ವಾಲ ದಂಡಂ . . . ಕೂಡೆ ತನ್ನೊಳ್ ಬಗೆದಳವಿಗೆ ಮುಂಕೊಂಡು ಧೀಂಕಿಟ್ಟು ಪಾಯುತ್ತುಮುರುತ್ತೋಡುತ್ತೆ ಪೀಱುತ್ತಡಸಿ ಕೆಡಪಿತೊಂದೇಣನಂ ಚಿತ್ರಕಾಯಂ (೧೦ಶ. ೦-೯೩) ; ಬಿಲ್ಲಂಬನೊಂದಾಗಿ ಪಿಡಿದೋಡಿ ಮೊಲನ ಪಿಂಗಾಲ್ವಿಡಿದು ತಿರುಪಿಟ್ಟು . . . ಕೆಡಪಿದನೋರ್ವ ಬಲವಂತ ಬೇಡನಾಗಳು (ರಾಶಶ. ೦೭-೭೩) ; ಪಿಂಗಾಲ್ಗಳಂ ಕೀಳ್ವ ದಾಂಟುವ ಪೂಱಕಾಲ್ಗೊಳ್ವ ಮರಳಿ ಮೆಟ್ಟುವ . . . ಸುತ್ತೇಱುವ ಬಿತ್ತರಂಬಡೆದ ವಾಹಳಿತನದೊಳ್ (ರಾಶಕೇ. ೩-೦೦ ಪ). ಹಿಂಗಾಲ್ : ೨. ಮುಂಗಾಲು ಮಡಿದು ಹಿಂಗಾಲ್ನೀಡಿ ರಥವ ತುರಂಗಮಾಲೆಗಳು ತೆಗೆದುವು (ಭರಶ. ೨೪-೨೯). ಹಿಂಗಾಲು : ೧. ಮೇಲುವಾಯ ರೋಹಕರ ಹಿಂಗಾಲ ಹಿಡಿದೀಡಾಡಿ ರಿಪುಗಜಕಾಲ

ದೊಳಗೊಂದಾನೆಯುಮ ತಾನೇಱಿ ಬೊಬ್ಬಿಱಿದು (ಶಬ್ದಾ.ಕ. ೨-೧೭); ತೋರದೊಡೆಗಳ . . . ಹೇರುರದ ಹಿಂಗಾಲ ಬಿರುದುಹಾಹೆಗಳಹುಂಕಾರ ದಬ್ಬಿನ ದಡಿಗರಕ್ಕಸರ್ ಕೋಟಾನುಕೋಟಿಗಳದೇನೆಂಬೆನು (ಕಬಪು. ೪೭-೧೪). ೨. ಸೀಳಿ ಹರಹಿತು ಕರಿಗಳನು ನೇಪಾಳಗುದುರೆಯು ಘಟ್ಟಗಳ ಹಿಂಗಾಲಲಣೆದುವು . . . ಸುಪ್ರತೀಕಗಜ (ಕುವ್ಯಾದ್ರೋ. ೩-೧೫); ಮುಗಿದ ಮುಂಗಾಲಗಳ ಮುಂದಕೆ ಹೋಗುವ ಹಿಂಗಾಲುಗಳ . . . ಚಂಗುವಾಱಿನ ಮೃಗಮೃಗೀನಿಕುರುಂಬದೊಳಗಡಹಾಯ್ದುದಗಲದಲಿ (ತೊರರಾ. ೩-೮-೪೫).

[ಪಿಂ (< ಪಿನ್) + ಕಾಲ್₁]

**ಪಿಂಗಿಸು, ಹಿಂಗಿಸು** (ಕ್ರಿ). ೧. ತೊಲಗಿಸು; ತೆಗೆ; ಸರಿಸು; ದೂರಮಾಡು: ಅಗ್ರಾಸನದಿಂ ಚಾಣಾಕ್ಯನಂ ಪಿಂಗಿಸೆಂದೊಡೆ (ವಡ್ಡಾರಾ. ೧೬೫-೨೪); ಪದ್ದರ್ಶನೋತ್ಪನ್ನಲಜ್ಜಾರಸದಿಂದಂ ಮೇಲುದಂ ಪೆರ್ಮೊಲೆಗೆ ತೆಗೆವ ಭೂಷಾಮೃಣಾಳಂಗಳು ಪಿಂಗಿಸಿ ತತ್ಕಾಲೋಪಜಾತ ಪ್ರಚುರ ಪುಲಕಮಂ ಭೂಷಣಶ್ರೀಗೆ ಪಕ್ಕಾಗಿಸುವೀ ವ್ಯಾಪಾರಸಾರಂ ಸಮನಿಸುಗುವೆ ಕಾದಂಬರೀದೇವಿಗಾಗಳ್ (ಕಾದಂಉ. ೫೦೭); ಸನೆಯುಂಬುಂ ಕಂತುವಿಂದಂ ಬಿಸುಡಿಸಿವಲರ್ಗಣ್ ಚಂದ್ರಬಿಂಬೋದಯಪ್ರಾರ್ಥನೆಯುಂ ಕರ್ನೆಯ್ದಲಿಂ ಪಿಂಗಿಸಿ ಕಳೆದ ಪೊಗಂ . . . ಆ ನಾಡ ಪೆಂಡಿರ್ಗೆ ಸಾಜಂ (ಶೃಶ್ಯು ೨-೨೭); ಅಂಗಜಘಣಿ ಪೆರೆಯಂ ಬಿಸುಟಂದದಿ ಪಿಂಗಿಸಿ ಮೆಯ್ಯ ಮುಸುಕನಾ ಕನಕಲತಾಂಗಿಪತಿಯ ನಿಜವದನವನೀಕ್ಷಿಸೆ (ಜಯುಕಾ. ೨-೪೩). ೨. ನಿವಾರಿಸು; ಹೋಗಲಾಡಿಸು; ಪರಿಹರಿಸು: ಮುಂತೆ ಪೇೞ್ವ ಕುಜಿಪಂ ಕುಜಿಗೊಂಡು ಕವೀಶರಾರ್ಪಂತು ಪಿಂಗಿಸುಗೆ ಕಾವ್ಯದಿನಾ ಲಘು ದೋಷಮಂ (ಕಂಐಾ. ೧-೨೫); ನಿಮಗರಮನೆಗೆ ಪೋಗಿ ಕೂಟಂ ತಂದಪೆನನ್ನೆವರಂ ನೀರಂ ಕುಡಿದು ತೃಷೆಯಂ ಪಿಂಗಿಸುವುದೆಂದೊಡೆ (ವಡ್ಡಾರಾ. ೧೧೪-೧); ಪಿಗಳದ್ವಾಷ್ಪಾಂಬುದೀನಾನನೆಯೆನಿಸಿದ ಲಕ್ಷ್ಮೀಮತೀ ದೇವಿಯುಂ ಮೆಲ್ಲಗೆ ಸಂತೈಸುತ್ತುಮಾತ್ಮಾನುಜೆಯ ಮನದ ನಿರ್ವೇಗಮಂ ಪಿಂಗಿಸುತ್ತುಂ (ಆದಿಪು. ೫-೨೦); ತರುಕಾಂಡಂ ದೆಸೆಯಾನೆಗಳ್ಗೆ ಕಟಕಂಡೂ ವ್ಯಾಪ್ತಿಯಂ ಪಿಂಗಿಸುತ್ತಿರೆ (ಜಗು. ೧೭-೩೫); ಈ ನೃಪತಿಗಂತಕನ ಬಾಧೆಯಂ ಪಿಂಗಿಸುವೆ ನಾನೆನುತ್ತ (ಚಂಪು. ೫೦-೧೨). ೩. ಬಿಡು; ತೊರೆ; ತ್ಯಜಿಸು: ಸಮ್ಯಕ್ತ್ವದತಿಚಾರಂಗಳ್ ಶಂಕಾದ್ಯಷ್ಟಮಳಂಗಳುಮೆಂಟು ಮದಂಗಳುಂ ಮೂಢಮೂಢಮೂಢಾಜನಾಯತನಸೇವೆಗಳುಮೆಂದಿಂತಿ ಪಿರ್ಪತ್ತಯ್ದುಕ್ಕುಮಂ ಪಿಂಗಿಸಿ ನಿಶ್ಯಂಕಾದ್ಯಷ್ಟಗುಣಂಗಳಿಂ ಕೂಡಿದ ಶುದ್ಧಮಪ್ಪ ಸಮ್ಯಕ್ತ್ವಪೂರ್ವಕಂ ವ್ರತಂಗಳನೇಱಿಸಿಕೊಂಡು (ವಡ್ಡಾರಾ. ೨೦೨೮-೧); ಅಂಗನೆಯರ್ಗಳ ಸವತಿ ಜರಾಂಗನೆ ತಾನವಳ ಸವತಿ ಸಂದಿರ್ದ ನಿಜಾಕ್ಯಂಗನೆಯಾ ಸವತಿಯುಮಂ ಪಿಂಗಿಸಿ ಪುದುವಾೞ್ವೆನಕ್ಕೆ ಮುಕ್ತ್ಯಂಗನೆಯೊಳ್ (ಅಜಪು. ೨-೭೫); ಕೃತಿಯ ಆಲಿಸಿ ಕೇಳ್ದಲ್ಲದುದು ಪಿಂಗಿಸಿ ಲೀಲೆಯಿನೊಳ್ಕೃತ್ತ್ರಂ ಪಿಡಿವಾ ಬುಧಜಾಲಂ (ಜಯುಕಾ. ೧-೨೨). ೪. (ಸಮಯವನ್ನು) ಕಳೆ; ತಳ್ಳು; ನೂಕು: ವನಿತಾನೂತನ ಗೀತನರ್ತನವಿಲೋಕವ್ಯಾಪ್ತಿಯೊಳ್ ಪಿಂಗಿಪರ್ ದಿನಮಂ ಮನ್ಮಥರೂಪರೂರ್ಜಿತಯಶರ್ ನಾನಾವಿನೋದಂಗಳಿಂ (ಪುಣ್ಯಾಸ್ರ. ೧-೭೨). **ಹಿಂಗಿಸು**: ೨. ಚಿತ್ರದ ಪ್ರವೃತ್ತಿಯ ಹಿಂಗಿಸಿ ಮುಕ್ತಿಪಥವ ತೋಱಿದನಲ್ಲಾ ಅಸಂಖ್ಯಾತರುಗಳಿಗೆ (ಮಹಾದೇ. ಬ. ೭೨-೦೫೩); ಹಿಂಗಿಸುವೆನೆಲ್ಲರ ಮನೋಮುದಂಗದೊಳಹೊಱಗಿಡಿದ ತಮದ ತರಂಗಗಳನೆಂದೆನುತ (ಶ್ರಕುಂ. ೧೦-೨); ತಾಪಸನು ಹಿಂಗಿಸುವಶೋಕೆಯ ತೋಪಿನಲಿ . . . ಇರಿಸಿದನು ತೊರವೆರಾಯನಂಗನೆಯು (ತೊರರಾ. ೩-೧೧-೪೪); ಅಂಗಡಿಯಿಂದ ಅವಲಕ್ಕಿ ಕೊಂಡು ತಿಂದು ನೀರು ಕುಡಿದು ಹಸಿವೆ ಹಿಂಗಿಸಿದರು (ಒಡ್ಡಉ. ೧೭). ೫. ಹಿಂದೆ ಹಾಕು; ಹಿಮ್ಮೆಟ್ಟಿಸು; ಸೋಲಿಸು: ಹೊಂಗರಾರಿಯ ಕೋಲುವಿಡಿದುಲ್ಲಂಘಿಸುತ ಜಡಿಜಡಿದು ಚಿಮ್ಮುತ ಹೊಂಗಿ . . . ಸಂಗಡಿಗರಂ ಹಿಂಗಿಸುತ ತನ್ನಂಗವಂ ತಾನೇಱಲಿಳಿಯಲು ನೋಡುತಾಡುತ್ತ (ಜಕಪು. ೨೬-೧೨); ಸರಳು ಮೂಱರಲೆಚ್ಚು ರಿಪುವನು ಧುರದಿ ಹಿಂಗಿಸಿ ಹಂಸಮುಖ ಮೋಹರದೊಳಗೆ ಮೊಳಗಿದನು (ಕುವ್ಯಾದ್ರೋ. ೧೧-೧೫). ೬. ಕಡಮೆಯಾಗಿಸು; ಮೊಟಕುಗೊಳಿಸು: ತೊರೆಯಾರೆರೆಯಾ: ಏಕೆ ನಿನ್ನ ಹೊತ್ತಿಗಲ್ಲದೆ ಬಾರೆ ಮಾನ್ನ? ಹೊತ್ತ ಹಿಂಗಿಸಿ ಹಾಯಿಸನ್ನ ಕಂಬನಿಯ ಕರೆ ಕೇಳದೆ? (ಗೀಜಂ. ೫೫-೩೬). ೭. ಬೇರೆ ಮಾಡು; ಬೇರ್ಪಡಿಸು (?): ಎರಡು ಭಾಗಿಸಿ ಹಿಂಗಿಸಿ ಸ್ಥಳ ಕದ್ದಳಗೆರೆ ಮು × × ಗುಳಿಯ ಕೆಱೆ ದೊಡ್ಡಗಟ್ಟ ಗವುಡಿಗೆರೆ . . . ಆ ಕದ್ದಳೆಗೆಱೆಯ ಲಕ್ಷುಮಿ ನಾರಾಯಣದೇವರ × × × ಯ ಮೂಲಸಿದ್ಧಾಯವನೂ ಆ ದೇವರಿಗೆ ಕೊಟ್ಟರು (ಎಕ. III, ಶ್ರೀರಂಗ. ೨೦೪-೩೪; ಕ್ರಿ. 1200); ಆ ಸೋಮನಾಥಪುರದ ಮಹಾಜನಂಗಳು ತತ್ತು ವಿಭಾಗವಲ್ತ್ತಿ ಹಿಂಗಿಸಿ ಕೊಟ್ಟ ಬಂಡೂರ ತತ್ತಿನ ವೃತ್ತಿಯಿಪ್ಪತ್ತೊಂದರೊಳಗೆ (ಎಕ. III, ತಿರುನ. ೬೪-೦೩; 1300).

[ಪಿಂಗು₁ + — ಇಸು₃]

**ಪಿಂಗು₁, ಹಿಂಗು₁** (ಕ್ರಿ). ೧. ಹಿಂದಕ್ಕೆ ಹೋಗು; ಹಿಂದೆ ಸರಿ; ಹಿಂದಿರುಗು: "ಪಿಂಗು–ಅಪಸರಣೇ (ಹಿಂದಿರುಗು)" (ಶಬ್ದಾ); ಲಲನೆಯ ಉದಮ್ರಗಳೊಳ್ ಮಾರ್ಮಲೆದೊಡಜಂ ಪಿಂಗವೇಱ್ದು[ಪಾಠಾಂ. ಪಿಳ್ಳುವೇೞ್] ಮೂಗರಿದುದಱಿಂದಲೆಗಳ ಲೋಕದೊಳೆಲ್ಲಿಯುಮೆಲೆಗಳ ಮೂಗಂವುವಾದುದಂದಿಂ ಬಱಿಯಿಂ (ಕಾವ್ಯಸಾ. ೩೨೬ ಕೂತ್ರಿ); ನಿನ್ನ ಬೇಗಿ ಬಗಿದಿರ್ದ ಕುಚದ್ವಯಮಾಧ್ಯದಲ್ಲಿ ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಟಲೆಂದನಾಗೆಯ್ದು ತೂಗಿದಂ (ಅದಿಪು. ೧೨-೦೩); ಎಳಸಿ ಪಿಪಾಸೆಯಿಂ ಮೃಗಚಯಂ ಪರಿತಂದೊಳಸಾರ್ದು . . . ಪಿಂಗುವುದು ಜಲಶೂನ್ಯವಿದೆಂದು (ಕುಸುಮ. ೧-೬೦); ಕಳಿಂಗ ಪಿಂಗು ಕಡೆ ನಿಲ್ ಕರ್ಣಾಟಕಾಧೀಶ ಬಂದೆಱಗ್ಗೆ ಕೇರಳ ಪಾಂಡ್ಯ ನೀಂ ಗಳಪದಿರ್ . . . ಎನುತ್ತಲ್ಲಿ ಕಂಚುಕಿಗಳಾಗ ಗರ್ಜಿಸುತ್ತೊಪ್ಪಿದರ್ (ರಾಜಶೇ. ೫-೨೦). ೨. ಕಡಮೆಯಾಗು; ತಗ್ಗು; ಕ್ಷಯಿಸು: ಪಿಂಗದೆ ಬೆಳಗುವ ಗುಣಮದು ಪಿಂಗಲೊಡಂ ಜ್ಯೋತಿರಂಗ ಭೂಜಂಗಳ ತೇಜಂಗಳ್ ಮಸುಳ್ದುವು (ಅದಿಪು. ೬-೫೦); ಅಡವಿ ಮೂಗು ಪಟ್ಟಿರ್ದುದು ಬೇಟೆಯೊಳಾದ ಕಳಕಳಂ ಪಿಂಗುವಿನಂ (ಕಾದಂಪೂ. ೩೩); ತುಂಗಪರಾಕ್ರಮಂ ಪಿಂಗದು ಮನದಿಂ ತ್ರಿಪುರಂಗಳನಿಚ್ಚಾತನಭಯವಕ್ಕೆ (ಕೌಇಇ. XX, ೨೪-೨೪; 1034); ಪಿಂಗದ ಬೆಳ್ದಿಂಗಳ್ ಕಣ್ಗೆಂಗೊಂತಿಂ ಶೋಭೆವಡೆದುದು (ರಮೂಮ. ೦೪-೦೪೦). ೩. ಕುಸಿ; ಕುಗ್ಗು: ಬಲ ಭಾರಕ್ಕಹಿನಾಥನಳ್ಕಿ ತಲೆದೂಗಲ್ ಪಿಂಗಲಲ್ಲಾಡೆ ಭೂಮಂಡಲಮಾ ಬಾಲದ ಮೇಲೆ ಬಿರ್ದು ಕಡುನೊಂದು (ಕಾವ್ಯಸಾ. ೨೫೪; ರಜೋಕಾ. ೩-೧೧ ನೋ). ೪. ಬಿಟ್ಟುಹೋಗು; ಹೊರಟುಹೋಗು: ತನ್ನಂ ಕಾಳಿಕೆ ಪಿಂಗಿದ ಪೊನ್ನಿನ ತೆಱದಂತೆ ಕಾಂತಿ ಕರಮೆಸೆದಿರ್ದಳ್ (ಗದಾಯು. ೬-೭೦); ನಿಜರಾಜ್ಯಭಾರದಿಂ ಪಿಂಗಿ . . . ಧರಾಧೀಶ್ವರಂ ಪುರದಿಂದಂ ಪೊಱಮಟ್ಟಂ (ವರ್ಧಪು. ೧-೧೮೩ ವ); ಗಗನದಿಂದಿಳಿವಂಗಧಾರವಾಗುತ್ತೆ ತಪ್ಪುವರೆ ಕಾಳ್ಕಿಚ್ಚಿನಿಂ ಬೇವಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ (ಬಸವ. ೪-೩೦); ಅವರ್ಗಂ ಪಿಂಗಿದಾ ಸ್ವರಂ ನಾಮಿಯೆಂದು ಪೇೞಲ್ಪಡುಗುಂ (ಛಂದ. ೯). ೫. ಕಾಣದಂತಾಗು; ಮರೆಯಾಗು: ಪಿಂಗಿ[ಪಾಠಾಂ. ಪೊಂಗಿ]ಪೋದುದು ಪಳಿತ್ರಯಂ . . . ಆನನಂ ಮಿಸುಗೆ ಬೆಳತರ್ಪ ಪೂರ್ಣಶಶಿಕಾಂತಿಯನಾಂತುದು ಗರ್ಭದೇೞ್ಗೆಯೊಳ್ (ಶಂಕಪಂ. ೧೬೪-೦೨); ಖ್ಯಾತಿ ಧರಿತ್ರಿಗಾಗೆ ಕುಮುತಾರ್ಕ್ಷಗಣಂಗಳಡಂಗಿ ಪಿಂಗೆ ತದ್ಭ್ಯಾತಿತಮಸ್ತಮಂ ಬೆವಱಿ ಪೋಗೆ (ಸುಕುಮಾ. ೬-೭೩). ೬. ತೊರೆ; ತ್ಯಜಿಸು: ತೆಂಗಿನ ಪೊಸನೇಣೊಂದಱುದಿಂಗಳ್ವರಮುಡಿಸಿ ಕಂಬಿಯಿಂ ಉಟ್ಟದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ

ಘಡಘಡೆಲವೊ ಭೀಮಸೇನನೆ ವ್ಯಡನ ವರ ಹಿಂಗುವುದೆ ವಿಗೆ ತನ್ನೊಡೆಯ ಮುನಿಪನ ಕರುಣ ಹಿರಿದುಂಟೆನುತಲಸುರಪತಿ . . . ಕಾದಿದನು ಹದಿನೆಂಟು ಸೂಳಿನಲಿ (ಕುಮ್ಮಾ.ಶ. ೬೦೭. ೨-೫೩೬) ; ಬಯಕೆಗಳು ಬಸಿರುಗಳು ಹಡೆದದ್ದು ಹಿಂಗಿದ್ದು ಮೂವತ್ತುಮೂರುಕೋಟಿ (ಗಂ. ೫೦-೯). ೧೯. ವ್ಯತ ವಾಗು ; ಸಾಯು ; ಮಡಿ : ಹಿರಿಯ ಮಗನ ಕಾಲ ಮುಚಿದು ನಡುವಳ ಮಗನ ಕಯ್ಯ ಮುಚಿದು . . . ಅವರು ಹಿಂಗಿ ನಾ ಬದುಕಿದೆನೆಂದು ತ್ರಿವಿಧದ ಸಂದ ಬಿಟ್ಟು ಸದಾಶಿವಮೂರ್ತಿಲಿಂಗದಲ್ಲಿಗೆ ಸಂದಿತು ಚಿತ್ತ (ಅಂಚಿ. ೯. ೧೯೬-೦೫೬) ; ಅಡಸಿದಾಪತ್ತಿನಲಿ ಧೈರ್ಯವ ಹಿಡಿವುದೆ ಸುಪೌರುಷ ಸಾಕಿನ್ನೊಡಲು ಕರಗಿದೊಡೇಕಲಜುವನೆ ಹಿಂಗಿದಭಿ ಮಾನ್ಯ (ಕುಮ್ಮಾದ್ರೋ. ೭-೨೩) ; ಸತ್ತು ಹುಟ್ಟುವ ಹುಟ್ಟಿ ಹಿಂಗುವ ಸುತ್ತ ತೊಡಕಿನ ಮಾಣಿಸಲೆ ಪುರುಷೋತ್ತಮನೆ (ಹರಿಕಾ. ೬೦).

[ದೇ.₂ ತಮಿ. ಪಿನ್ನು ; ತುಳು. ಹಿಂಗು]

**ಪಿಂಗು₂** (ನಾ). ಹಿಮ್ಮೆಟ್ಟುವಿಕೆ ; ಹಿಂಜರಿಯುವಿಕೆ : ಸಿಂಗದ ಮುಂಚುವುಂ ಮೇಷದ ಪಿಂಗುಂ ಪಯವಿದರ ವಿನಯಮಿಂತಿವು ಮೂಱುಂ ಭಂಗಮೆನಿಸಲ್ಕೆ ಪಡೆಯವು ಸಂಗಡಿಕಂ ಭರದಿನಹಿತರದಟಂ ಧುರದೊಳ್ (ಶಾಕಶಂ. ೨೬೮.೫) ; ಸಿಂಗದ ಹಳಿಗುಂ ಮೇಷದ ಪಿಂಗುಂ ಕೋವಿದರ ಭೀತಿಯೆಂಬೀ ಮೂರುಂ ಭಂಗವೆನಿಸಲ್ಕೆ ಪಡೆಯವು ಸಂಗಡಿಸಿಯೆ ಕೊಲ್ಲದಿರವು (ಶಾಕಶಂ. ೨೯೬). [< ಪಿಂಗು₁]

**ಪಿಂಗುಗೆ** (ನಾ). ತೊರೆಯುವಿಕೆ ; ತ್ಯಜಿಸುವಿಕೆ ; ವಿಸರ್ಜನೆ : ಅಂಗಾದಿ ದ್ವಿತಯಂಗಳ ಪಿಂಗುಗೆಯುಂ ಮಾಡದಾತನಜ್ಞಾನಿ ಗಡ (ಜಿವಾ ೦೬-೫೦). [ಪಿಂಗು₁ + - ಗೆ]

**ಪಿಂಗುಡಿ**, ಹಿಂಗುಡಿ (ನಾ). ಹಿಂದಿನ ಭಾಗ ; ಹಿಂಭಾಗ : ನಾರಾಚವಲಿ ಬಲನೆಡನ ಕೀಲಿಸಿ ಪಿಂಗುಡಿಯ ಮುಂಗುಡಿಯ ಕಟ್ಟಿದನಂಬಿನಲಿ (ಕುಮ್ಮಾಶ. ೨೦-೨೬) ; ಹಾಯೆನುತ ಭಟರೊಜಿಲಿದರು ಪಿಂಗುಡಿಗೆ ಬಿದ್ದುದು ಸಮರಸೌರಂಭ (೬ಕಾಗ. ೦೦-೫೬-೦೬). ಹಿಂಗುಡಿ : ಹರಿಯೊಡನೆಯಾಹವದ ಕೆಲಸಕೆ ತರಣೆನುತ ಹಿಂಗುಡಿಗೆ ಮಹಿಷನ ಮರಳಿಸಿದನೇನೆಂಬೆನಾಹವದುರು ವಿತಂಬನವ (೬ಕಾಗ. ೦೦-೬೦-೨೪). [ಪಿಂ (< ಪಿನ್) + ಕುಡಿ₂]

**ಪಿಂಗುರು** 'ಪೊಂಗುರು' ನೋ.

**ಪಿಂಗೊಳೆಯ** (ನಾ). ಹಿಂಭಾಗದಲ್ಲಿ ಇರುವ ಗುಂಪು : ಆರ್ತ ರೌದ್ರ ಧ್ಯಾನಮೆಂಬ ಮುಂಗೊಳೆಯದ ನಾಯಕರ್ವೆರಸು ದುರ್ಜನರ ಕೂಟ ಮೆಂಬ ಪಿಂಗೊಳೆಯದ ವೀರರ್ವೆರಸು . . . ನಿಲ್ಲದಲ್ಲಿಯುಂ ಬೆನ್ನಟ್ಟಿ (ರಚಾಮ್ಯ. ೦೦-೫೬). [ಪಿಂ (<ಪಿನ್) + ಗೊಳೆಯ]

**ಪಿಂಗೊಳಿಸು** (ಕ್ರಿ). ಹಿಂದಿರುಗುವಂತೆ ಮಾಡು; ಮರುಕಳಿಸು : ಅಂಗಜನ ಕೇಳಿಯಾಲಯನಿಕೇತನದಿ ದೀಪಂಗಳುರಿಮಾರಿದು ಭುಗಿಭುಗಿನುಂಡ ಕತ್ತಲೆಯ ಪಿಂಗೊಳಿಸಿ ಕಾರುವೊಲ್ ಕಜ್ಜಲವು ತೋರುತಿಹುದು (ಕಪಮು. ೫೦-೯). [ಪಿಂ (< ಪಿನ್) + ಕೊಳ್₁ + - ಇಸು₁]

**ಪಿಂಗೋಳ್** (ನಾ). ಹಿಂದುಗಡೆ ; ಹಿಂದಿನ ಭಾಗ ; ಹಿಂಭಾಗ : ಕೇಳಯ ವಿಷಯಾಧೀಶ್ವರರಪ್ಪ ಕ್ಕೆ[ಕ]ಯತಯ್ಯರುಮೊಂದಕ್ಷೋಹಿಣೀಬಲದೊಡನೆ ಸಿಡಿಲನುರುಳಿ ಮಾಡಿದಂತು ಪಿಂಗೋಳೊಳ್ ನಡೆಯೆ (ಶಂಕಾ. ೯-೯೫ ಶ). [ಪಿಂ (<ಪಿನ್) + ಕೋಳ್]

**ಪಿಂಛ** (ನಾ). = ಪಿಂಛ ೨ : ಪಿಂಛವ ಮಡಗಿ ಮಾಂಡೆಗೆ ವಿನುತಗುಣ ತನ್ನೊಳಗೆ ಸನ್ಯಾಸನವ ತಾಳಿಯು ಮುನಿಪನಂಘ್ರಿಯ ನೆನೆಯುತಿರ್ದ (೬ಂಚ. ೦೨-೮) ; ಮೈಮೇಲೆ ಚೆಲ್ಲಿದ್ದ ಕುರುಳನ್ನೆಲ್ಲ ಪಿಂಛದಿಂದ ಮೃದುವಾಗಿ ಜಾಡಿಸಿಕೊಂಡರು (ದಾಕಚಂ. ೦). [< ಸಂ. ಪಿಂಛ]

**ಪಿಂಚಣಿ** 'ಪೆನ್ಷನ್ನು' ನೋ.

**ಪಿಂಚಣಿದಾರ** 'ಪೆನ್ಷನ್‌ದಾರ' ನೋ.

**ಪಿಂಚನ್** 'ಪೆನ್ಷನ್ನು' ನೋ.

**ಪಿಂಚನಿ** 'ಪೆನ್ಷನ್ನು' ನೋ.

**ಪಿಂಚನೂರ್**, ಹಿಂಚನೂರು (ನಾ). ಒಂದು ಊರಿನ ಹೆಸರು ; ತುಮಕೂರು ಜಿಲ್ಲೆಯ ಶಿಪಟೂರು ತಾಲ್ಲೂಕಿನ ಈಗಿನ ಹೀಚನೂರು : ಸಿಯಗಲ್ಲರ್ ಮಜುಗೆರೆನಾಡು ಮೂನೂಱುಮಾಳೆ ಮೂಱುಕೊಡೆ ಅಣ್ಣೆಯರ್ಪಿಣ್ಚನೂರಾ ಏಱನುಳ್ಳೆಱಿದು ಬಿಟ್ಟಾರ್ (ಎಕ. XVI. ತುಮಕೂ. ೯೬-೯ ; ಸು. 750) ; ಪಿಣ್ಚನೂರುಳ್ಳನ್ನರ[ಸ]ರುಳೆಱಿದು ಸತ್ತನ್ (ಎಕ. XVI. ತುಮಕೂ. ೯೬-೩ ; ಸು. 750). ಹಿಂಚನೂರು : ಹಿಞ್ಚನೂರ ತೊಣ್ಡಗೌಡನ ಸುಪುತ್ರನೇಚಗೌಣ್ಡನಾತನ ಸುತ ಹೊನ್ನಗೌಣ್ಡನು ಹಿಞ್ಚನೂರ ಕಲಿದೇವರಿಗೆ . . . ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XII. ತಿಪಟೂ. ೫೬-೩೩ ; ಸು. 1120). [? + ಊರ್]

**ಪಿಂಚನ್ನು** 'ಪೆನ್ಷನ್ನು' ನೋ.

**ಪಿಂಚು₁**, ಹಿಂಚು₁ (ಕ್ರಿ). ೧. ಹಿಂದೆ ಉಳಿ ; ಹಿಂದೆ ಬೀಳು ; ಹಿಂದುಗು : "ಪಿಂಚು-ಪಶ್ಚಾದರ್ಥೇ: (ಹಿಂದುಳಿ)" (ಕವಿಜಾ) ; ಇಂಚಿಯ ಪಸವಿನ ಬಜದ ಕಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕಿಯ್ಪಿಡಿವೊಂದಾದುವಾ ನಾದರ್ಗಳ್ (ಶಂಕಾ. ೯-೫೦) ; ತೀರ್ಥಜಲಂಗಳ್ ಪಿಂಚಿದರ್ಗಿಲ್ಲೆಂಬ ತಿರೆ ಮುಂಚಿದರಲ್ಲಲ್ಲಿ ಮೊಗೆಯಲ್ಲಿ ವಿಜರ್ (೫ಸಂಕ್ರಿ. ೫ ೬೩) ; ಅನುಮಾನಿಸದೆ ಚಕ್ರದಿಂದಿಟ್ಟು ಕೊಲ್ಲೆಂಬ ದನಿ ಪಿಂಚಲವಳ ತಲೆ ಮುಂಚಿ ಬೀಳ್ವಿನಮಿಡಲ್ . . . ಖ್ಯಾತೆಯ ಜೀವನಂ ಪೋಯ್ತು ನಿಮಿಷದೊಳಗೆ (ಶಾಕ್ರಿ. ೨೦-೨೬) ; ಸೀತೆಗೆ ವೈಖಾನಸರ ಮುತ್ತೈದೆಯರನೇವೊಲ್ತಿಂಗೆ ಕಾಣ್ಸೆನೋ ಎಂಬೊಂದು ತವಕದಿಂ ನಡೆ ಮುಂಚಿದುದು ಲಕ್ಷ್ಮಣಂಗೆ . . . ಎಂತು ದೇವಿಯಂ ತೋಚಿವೆನೊ ಎಂಬೊಂದು ದುಗುಡದಿಂ ಪಿಂಚಿದುದು (ರಾಮಾಶ್ವ. ೫೬ ೩). ೨. ಮರಳು ; ಹಿಂದಿರುಗು : ಮುಂಚಿದ ಷಡ್ರುತು ಮತ್ತಂ ಪಿಂಚುವುದಸ್ತಕೆ ಪೋದಂ ಪಿಂಚುವನಿಂಗದಿರಂ ತಾಂ ಮತ್ತಂ ಮುಂಚಿದ ಪೊಳ್ತದ ನೀರಂ ಮಾನವನಾ ಯೌವನವುಂ ಪಿಂಚದು (ಶಾಕಂತ. ೯-೨೮). ೩. ಹಿಂದೆ ಸರಿ; ಹಿಮ್ಮೆಟ್ಟು : ರಣದಿಂದೆ ಪಿಂಚಿದತಿವೀರಕ್ಷತ್ರಿಯರ್ (ಶಿಪ್ಪುಕ್ರಿ. ೦ ೨-೩೫). ೪. "ತಡವಾಗು ; ತಡಮಾಡು" (ಕ್ರಕೃ). ಹಿಂಚು₁ : ೧. ಏನೆಂಬೆನೇನೆಂಬೆನೇನಾದಿನಾಥನು ಆನಱಿಯೆನಾನಱಿಯೆನುತವನಿವ ಧೀರನು ಸಾಟಿ ಹಿಂಚಿತು ಮುಂಚಿತವನ ತಲೆ ಕಳನೊಳಗೆ (ಶಾಕ. ೮. ೦೦೬-೩) ; ಹೋಗೆಂಬ ನುಡಿ ಹಿಂಚಿ ಮುಂಚಿ ಜೀವಂ ನೆಗೆದು ತಾಗಿ ನಡುನೆತ್ತಿಯಂ ಬಗಿದು ಬಾದಣದೆಗೆದು ವೇಗಡರ್ವ ಗಗನಕ್ಕೆ ದಂಡಾಯಮಾನದುರಿಯಾಗಿ ನೆಗೆಯಲ್ಕೆ (ಸಿದ್ಧರಾ. ೯-೩೮) ; ಮಾತು ಹಿಂಚಿತು ಮುಂಚಿ ಸುಭಟವ್ರಾತ ಹೊಕ್ಕುದು (ಕುಮ್ಮಾದ್ರೋ. ೫-೫೩). ೩. ಪಂಚಮಹಾಪಾತಕಿಯಂ ಸಂಗತದೊಳ್ ಹಿಂಚುವನು ಪುಟಗೊಂಡದ ಸಚಿದೊಲಿಕ್ಕಾವ ಕಾಲವೋಟದ ತೆಱದಿಂ (ರಕಾ. ೩-೦೬) ; ಭಳರೆ ಭಳರತಿಬಲರೆ ಹಿಂಚದಿರಿನ್ನು ಹೊಯ್ ಹೊಯ್ ಚೂಣೆಗರನೆನುತ ಬಲಜಲಧಿ ಮುಕ್ಕುಳಿಸಿ ವಿಗೆ ಹೆಕ್ಕಳಿಸಿ ಕವಿದುದು (ಕುಮ್ಮಾಶಲ. ೯-೩) ; ವೃಕ್ಷವ ಕಂಡ ಕರ್ಣನದನಲ್ಲಿಗಿಸೆ ಮಡಿಯ ದುರುಳುವುದೆಂದು ಬಗೆಗುಂದಿ ಹಿಂಚಲಿದೊ ಕಂಡ ಕಣ್ಣಿಗೆ ಪಾರ್ಥನದರ ಕಂಠದ ಮಣಿಯ ಕುರಿತೆಸೆಯೆ, ಕಣ್ಮಿಗಿದು ನೆಲಕೆ ಹೊರಳಿತು ಹಕ್ಕಿ ! (ಹಕ್ಕರಿ. ೯-೦೬). ೪. ಸಚಿವರ ಸತಿಯರ್ ನಾಲ್ವರ್ . . . ಪುತ್ರರನೆರಡೆರಡು ತಿಂಗಳಿಂ ಹಿಂಚಿ ಪಡೆದರನುನಯುಮೆಸೆಯಲ್ (ರಕಾ. ೨-೭) ; ಕೋಕಿಳನು ಪಂಚಸ್ವರದೆ ಕೂಗಲು ಹಿಂಚದೆ ಪಂಚಬಾಣನು ಬಂದೆಯ್ದಿದನು (೫೦೫೪. ೯-೦೯೩). ೫. ಬಿಡು; ಉಳಿ: ನೆಚಿ ಮಿಂಚುವ ಬೊಲ್ಲ ಬೋರನನು ಪಂಚಬಾಣನ ಪೆಸರಿನ ಮೇಘವರ್ಣನ ಹಿಂಚದೆ ನಡೆಸಿ ತೋಱದರು (೫೦೫೪. ೬-೬೫). 'ಮುಂಚು' ಪರಾ. [ಪಿಂ (<ಪಿನ್) + - ಚು₁]

**ಪಿಂಚು₂**, ಹಿಂಚು₂ (ನಾ). ೧. ಹಿಂದಕ್ಕೆ ಇರುವಂತಹುದು; ಹಿಂದಿನದು: (೩). **ಹಿಂಚು₂** : ೨. ತಡ ; ಸಾವಕಾಶ : ಏಟು ಮುಂಚು ಮಾತು ಹಿಂಚು, ಎಂದುಕೊಂಡು . . . ಇದ್ದ ಈ ಉಪಾಧ್ಯಾಯನ ಕೈಯಿಂದ ಯಾವಾಗಲಾದರೂ ಮಹಾದೇವನಿಗೆ ಒಂದೊಂದು ಪೆಟ್ಟು ಬೀಳುತಿತ್ತು (ಹುಯಿಲ. ೩೦) ; ಊಟಕ್ಕೆ ಮುಂಚು ದುಡಿಗೆ ಹಿಂಚು (ಗಾದೆ).

**ಪಿಂಚುಮುಂಚು**, ಹಿಂಚುಮುಂಚು = ಹಿಂದುಮುಂದು : ಕೂತಲ್ ಜುಮ್ಮನಿರದೊಸರಿ ತೆಗೆವತ್ತಲೊವಗಿ ತಳವೇಲಿವಿರ್ಗಳೊಳ್ ಪಿಂಚು ಮುಂಚೆನಿಸದೆ ಸರಿಯೆನಿಸಿ ಕೂಡಿ (ಕಂಠೀ. ೦೦-೬೦) ; ಆವ ಬೀಜವ ಬಿತ್ತಿದರೂ ಮೊಳೆಯು ಮುಖ ಹಿಂಚುಮುಂಚುಂಟೆ? (ಷಟ್ಪ್ರಸಂ. ೨೨೯-೩೨) ; ಹಿಂಚುಮುಂಚೇನಕ್ಕ ನಿನಗೆನಗಿಂದಳದೇ ಚಮರೆಯೊ ಪಟ್ಟವರಸಿ (ಶಿಶ. ೪೨-೭೦); ಶಿವನಯಿಪ್ಪತ್ತೈದು ಲೀಲಾಕಥಾಕ್ರಮಂ ವಿವರಿಸಲು ಹಿಂಚು ಮುಂಚೆನ್ನದಿರಿ ಕೋವಿದರು (ಗುರುಚಾ. ೪-೪೬) ; ಇವುಗಳ ಕಾಲ ಬಹುಶಃ . . . ಕ್ರಿ. ಶ. ೧೧-೨ನೆಯ ಶಕ ಅಥವಾ ಸ್ವಲ್ಪ ಹಿಂಚುಮುಂಚು ಇರಬಹುದೆಂದು ತಿಳಿಯಬಹುದು (ಪ್ರಾಚೀ. ೫೩). **ಹಿಂಚಾಗು** = ಹಿಂದೆ ಉಳಿ ; ಹಿಂದಾಗು : ಈ ಸಂಚಿತವನಜೀಯದೆ ಮುಂಚೆ ತಾನುಂಬ ಅಶನಕ್ಕೆ ನೀಡಿ ತಾ ಹಿಂಚಾಗಿ ಕೊಂಬ ಪ್ರಸಾದಿಯ ನೋಡಾ (ಶೋಲಿಮಾ. ೬೦-೨೭೮) ; ಹಿಂಚಾದುದಾಹವದೊಳು ನಿನ್ನ ಮಾತೆಂದು ಪಂಚಾಸ್ಯ ನಗುತೆ ಕೋಲ್ಗಟ್ಟಿದ (ಜೋಹಕ. ೩೯ ೩೨). **ಹಿಂಚು ಮಾಡು** = ಹಿಂದೆ ಸರಿಯುವಂತೆ ಮಾಡು ; ಹಿಂದೆಗೆಸು ; ಹಿಮ್ಮೆಟ್ಟಿಸು : ಮಿಂಚುಗಳ ಸಂಚಯವ ಹಿಂಚು ಮಾಳ್ಪ ಮಳತರ ಚಂಚಲದೃಗಂಚಲದ . . . ಚಪಳೆಯರಿರ್ದರ್ (ಸೌಂದ. ೦೭ ೩೫). **ಹಿಂಚುಮುಂಚಾಗು** = ಹಿಂದುಮುಂದಾಗು : ಉಂಚಯ . . . ಚಟ್ಟದಕಿಗಳಂ ಚದುರರು ತಂದಲ್ಲಿ ಹಿಂಚುಮುಂಚಾ[ಪಾಠಾಂ. ಚಿ]ಗೆ ಪಾಟಿಸುತಿಹರು (ಕುಮಾರಾಂ. ೪-೯೪) ; ನವಗ್ರಹಗಳೊಂದೊಂದು ಮೂಜು ನಕ್ಷತ್ರಂಗಳೊಡಗೂಡುತಾ ತಾಂ ಚಮತ್ಕೃತಿಯೊಳಿರ್ಪತ್ತೇಳನೊಳಕೊಂಡು ಹಿಂಚುಮುಂಚಾಗಿಹವು (ಜಿಕೃತ. ೪-೬ ೬೦); ನೂರರೊಳರಪತ್ತು ದೈವದ ಯತ್ನವು ಪುರುಷಯತ್ನವು ನಲವತ್ತು ಇದು ಹಿಂಚುಮುಂಚಾದರೆಮಗಾಗ ವಿಜಯವು ಕೇವಲ ಕನಸಿನ ಸೊತ್ತು (ಶಂತ್ರಬೀ. ೦೯೦-೬೪). [< ಪಿಂಚು₁]

**ಪಿಂಚು₃** 'ಪಿಂಚೆಯು' ನೋ.

**ಪಿಂಚೆಯು**, ಪಿಂಚು₃, ಪಿಂಜೆ₂, ಪೆಂಚೆ, ಪೆಂಚೆಯು (ನಾ). ೧. ನವಿಲುಗರಿ : ಪಿಂ[ಪಾಠಾಂ. ಪೆಂ]ಚೆಯುದ ದಂಡೆ ಸುತ್ತಿದ ಚಂಚತ್ಕಟಿಸೂತ್ರಮೊಪ್ಪೆ . . ಚುಚಿತಿಯಂ ವಿಪ್ರರಾಜಪಥು ಕಂಡಾಗಳ್ (ಕೃಷ್ಣಾಸ್ತ್ರ. ೦೨ ೩೨). **ಪಿಂಚು₃** : ೨. ಅನ್ನದ ಗಂಜಿ : ಪಂಚಪಾಯಸ ಪಕ್ವಫಲ ಚತುಷ್ಕಂ ಒಹುಳದಿಂ ಚಲ್ತ ಸವಿನೊಡುವ ನವರಸಾವಳಿಯುಮಳ ಪಿಂಚೊಗೆದು ರುಚಿ ಊಡುವ ರಾಜಾನ್ನ ತೊಗೆ ತುಪ್ಪಮಂ ಚದುರಿನಿಂದ ನೀಡಿ (ಉಂಗಿಕೃ. ೦೩-೦೩). **ಪಿಂಜೆ₂** : ೩. (ನವಿಲಿನ ಗರಿಯ) ಕುಂಚ ; ಪಿಂಛ : ಕಣ್ಣ ವರ್ಪಳೀ ಲಳಿತಲತಾಂಗಿಯಂಗಜನ ಬಿಜ್ಜೆಯ ಪೀಲಿಯ ಪಿಂಜೆಯೆಂಬಿನಂ (ಜಗಿ. ೬-೦೮೦). **ಪೆಂಚೆ** : ೧. ಕನ್ನಡಿ ಆಡುಗ ಪೆಂಚೆಯ ಕುಂಚ . . . ಹೊಂಗಟ್ಟುಬೆತ್ತಗಳ ಪಿಡಿದು ಸೇವಕಜನರು ಕಣ್ಣೆವೆಯಿಡದೆ ಹರಿಯ ನಿರೀಕ್ಷಿಸುತ ಬಂದು (ಅನಂತಾ. ೦-೩-೪೨). ೪. ನವಿಲು : ಅಂಚೆಗಳ್ಕೊಳ್ವರ್ಕಿಗಳ್ಕೊನ್ನವಕ್ಕಿಗಳ್ಪೆಂ[ಪಾಠಾಂ. ಲ್ಪಿಂ] ಚೆಗಳ್ಗಿಳಿಗಳೆಣೆವಕ್ಕಿಗಳ್ಪಜಮೆಗಳ್ಕೊಂಚೆಗಳ್ಕೋಗಿಲೆಗಳಲ್ಲಲ್ಲಿಗೊಪ್ಪಿದುವು ಸಜ್ಜೀವಭಾವದಿಂದೆ (ಕೃಜಿಚಾ. ೦೭-೨೫). **ಪೆಂಚೆಯು** : . ನಿಂಬಪಾಲೆಯ ಕಿಬುವೀಲಿಯ ಪೆಂಚೆಯುದ ಕೇಶಬಂಧದೊಳು . . . ಪಸದನಂಗೆಯ್ದು (ಜಾಗಿ. ೪-೮೦ ವ).

[< ಸಂ. ಪಿಚ್ಛ, ಪಿಚ್ಛಾ]

**ಪಿಂಛ** (ನಾ). ೧. ಹಕ್ಕಿಗಳ ರೆಕ್ಕೆ,–ಗರಿ : "ತನೂರುಹಃ . . . ಛದಃ, ಪಿಂಛಂ, ವಾಜಃ, ಪಕ್ಷಃ—ಈ ೯ ಎಲ(?)ಕ" (ಹಲಾಯು. ೪೦-೬೩) ; "ತನೂರುಹಃ, ಪಿಂಛ . . . ವಾಜಮೆನೆ ಪಕ್ಷಿಗಳ ಗಲಿಯುಕ್ಕು" (ಮಂಗರಾ. ೫೦-೨). ೨. ನವಿಲುಗರಿ ; ಪೀಲಿ : 'ಪಿಂಛಾತಪತ್ರ' ಪರಾ. ೩. ನವಿಲುಗರಿಯ ಕುಂಚ : ಪಿಂಛ ಕಮಂಡಲಾದಿ ವ್ಯವಹರಣ ವಿಲೋಕವುಮೆಂಬಿವು ಮೊದಲಾದ ಸತ್ಕಲ್ಪಮಂ ಕಲ್ಪಿಸಿಪೇಟ್ದ ಶ್ವೇತಪಟಯಾಪನೀಯ ಕಾಷ್ಠ ದ್ರಾವಿಡ . . . ಇಂದ್ರಸಮಯ ಸಮುಚ್ಚಯಮಪ್ಪ ಸಂಶಯಮಿಥ್ಯಾತ್ವಮುಂ (ಕಹಾರ. ೫). [ಸಂ.]

**ಪಿಂಛಚ್ಛತ್ರ** (ನಾ). ನವಿಲುಗರಿಯಿಂದ ಮಾಡಿದ ಕೊಡೆ,–ಛತ್ರಿ : ಧ್ವಜೋತ್ಕರಸಂದೋಹಮುಮಂ ಬಿಸುಟ್ಟುಡುಗಿ ಪಿಂಛಚ್ಛತ್ರಮುಮಂ . . . ಬಂದರ್ ಭಯಭ್ರಾಂತಿಯಿಂ (ಆದಿಪು. ೦೨-೬೬). [ಪಿಂಛ + ಛತ್ರ]

**ಪಿಂಛಧ್ವಜ** (ನಾ). ನವಿಲುಗರಿಯಿಂದ ಮಾಡಿದ ಧ್ವಜ,—ಬಾವುಟ : ಕುಂಡಲಾಲಪುರವರೆ ಶ್ವರೇ . . . ಭಗವದರ್ಹನ್ಮುಖಕ್ಕಂ ಪಿಂಛಧ್ವಜ ವಿಭೂಷಣಂ (ಇಕ. XVIII. ೩೦೦-೫ ; 11ನೆಯ ಶತ). [ಪಿಂಛ + ಧ್ವಜ]

**ಪಿಂಛನು** 'ಪೆನ್ಸನ್ನು' ನೋ.

**ಪಿಂಛಾತಪತ್ರ** (ನಾ). = ಪಿಂಛಚ್ಛತ್ರ : ಗಗನತಳದೊಳ್ ವಜ್ರಸಾರಮೆಂಬ ರಥಮನೇಱಿ ಛತ್ರಚಾಮರ ಪಿಂಛಾತಪತ್ರ ಪಾಳಿಧ್ವಜ ಪತಾಕಾದ್ಯನೇಕ ಮಹಾವಿಭೂತಿಯೊಳ್ ಕೂಡಿ (ಪಡ್ಮಾ. ೬೨-೭) ; ಇದಱೊಳ್ ಮೂರ್ಧಾಭಿಷೇಕಂ ತನಗೆ ಗತ ಸಮಂತಾಯ್ತು ಪಿಂಛಾತಪತ್ರಂ ಪುದಿದತ್ತಂ ತಣ್ಣಬಟ್ಟಾಡುವುದು ಗಡ (ಶಂಶಕಾ. ೦೩-೯೯) ; ಭವಿಸೆ ಪೋಲ್ಪುದು . . . ಜಲದೇವಿಯ ಪಿಂಛಾತಪತ್ರಮನೆ ಶತಪತ್ರಂ (ಗದಾಯು. ೬-೪೦) ; ಕುರುಳೊಳ್ಪೆಂಬಿದ ಪುಡಿಗತ್ತುರಿಯಂ ಸುಳಿಗಾಳಿ ಪೂಸಿ ಮೇಲಕೈತ್ತಲ್ ತರುಣಿಯ ಮುಖಲಕ್ಷ್ಮಿಗೆ ಪಿಡಿದುರುತರ ಪಿಂಛಾತಪತ್ರಮೆನೆ ಕಣ್ಗೆಸೆಗುಂ (ಶ್ರೀಕೃಷ್ಣ. ೩-೦೦೨). [ಪಿಂಛ + ಆತಪತ್ರ]

**ಪಿಂಜ** (ಗು). ೧. ದಿಗ್ಭ್ರಮೆಗೊಂಡ ; ಭ್ರಾಂತಿಗೊಂಡ ; ತಬ್ಬಿಬ್ಬಾದ. (ನಾ). ೨. ಮನಸ್ಸಿನ ಗೊಂದಲ ; ದಿಗ್ಭ್ರಮೆ. ೩. ಚಂದ್ರ. ೪. ಶಕ್ತಿ. ೫. ಒಂದು ಬಗೆಯ ಕರ್ಪೂರ. ೬. ಕೊಲ್ಲುವಿಕೆ. [ಸಂ.]

**ಪಿಂಜಡಿ** (ಕ್ರಿ). ಹಿಂದಕ್ಕೆ ತಗ್ಗು,—ಬಡಿ,—ಅಪ್ಪಳಿಸು : ವನಜಾಕ್ಷಿಯಳ ವದನಚಂದ್ರಮನ ರಾಹು ತಾಂ ಕಿನಿಸಿಂದೆ ಪಿಡಿದು ನಿಂದಿರ್ಪಂತೆ ನಿಡಿದಾದ ಪೆಣಲು ಪಿಂಜಡಿವುತಿರೆ (ನವಮೋ. ೦೫-೩೭). [ಪಿಂ (< ಪಿನ್) + ಜಡಿ₂]

**ಪಿಂಜಣಿಗ** (ನಾ). ಒಂದು ಬಗೆಯ ವೃತ್ತಿ ಮತ್ತು ಆ ವೃತ್ತಿಯನ್ನು ಕೈಗೊಂಡವನು : ಪಿಂಜಣಿಗರು ಅಸಗರು ಸಹ × × × ನಾಡ ದಳವಾಂಕೆ . . . ಸಮರ್ಪಿಸಿಯಿರಲಾಗಿ (ಎಕ. XI. ಮೊಳಕಾ. ೧-೦೪ ; 1557).

**ಪಿಂಜಣಿಗಂಗುತುಗೆ** = ಪಿಂಜಣಿಗ ವೃತ್ತಿಯವರ ಮೇಲೆ ಹಾಕುವ ತೆರಿಗೆ : ನಾಡ ತಳವಾಂಕೆ ವರ್ತನೆ ಪಿಂಜಣಿಗಂಗುತುಗೆ ಯಲೆಯ ಮಮೂ ಮಹರ್ನವಮಿ ಉಲುಪೆ . . . ಕಾಣಿಕೆ ಉಪ್ಪುಗಳು ಸಹವಾಗಿ ಯೆಂನ ಉಂಬಾವ ಯಾತಿಬಾಧೆಗಳನು ಬಿಟು (ಸೌಇಇ. IX—II, ೬೬೩-೦೮ ; 1556).

[ ? ]

**ಪಿಂಜರ** (ಗು). ೧. ಕಂದುಬಣ್ಣದಿಂದ ಕೂಡಿದ ; ಮಾಸಲುಕೆಂಪುಬಣ್ಣದ : ಪಿಂಜರತನುಗಳ್ ಕೊಳದಿಂ ಕೊಳಕ್ಕೆಮಾಯ್ವುಶಿತಿಗಳ್ ಮನ ಮೊಸದು . . . ಅನುಕರಿಸಿಕ್ಕುಂ (ಪರ್ವಮಾ. ೦-೫೪) ; ಮುಂದಿದ ಜಡೆಗಳ ರಜಃಪಿಂಜರದ ಸಂತತಂ ಸುರನರೋರಗ ಶಂಪಿಕಾಂಗಿಗಾಶ್ರಯಮಾದ ಪರಮಪುಮಾವಿರೂಪಾಕ್ಷ ಲ್ಪದ್ರುಮಂ ಪೊರೆಯಲಾಪತ್ರಜನರನು (ಕಿರಾತ. ೫ ೦). ೨. ಹಳದಿ ಬಣ್ಣದಿಂದ ಕೂಡಿದ ; ಹೊಂಬಣ್ಣದ : ಅಮೇಯ ಕನಕಾಬ್ಜಪಿಂಜರಪರಾಗಮಂ ಗಾತ್ರದೊಳ್ ತೆಮಟ್ಟಿ ಕೊಳದಿಂ ಕೊಳಕ್ಕೆ ಉಗುತಿರ್ಪ . . . ಭ್ರಮರಸಂಕುಳಂ (ಸುಕುಮಾ. ೯-೫೦). (ನಾ). ೩. ಕೆಂಪು ಮಿಶ್ರಿತವಾದ ಹಸುರು ; ಹಳದಿ ಬಣ್ಣ : "ಕಿಂಬಸುರೆಸೆದಿರೆ ಪಿಂಜರಮೆಂಬುದು" (ಪತ್ರಕೋ. ೦೦೯-೬೬). ೪. ಪಂಜರ ; ಬೋನು :

ಆ ಗಿಳಿಯು ಮೂಱುವುನೆಯು ಪಿಂಜರದಲ್ಲಿ ಕೂತು ಕುರುವ್ಮ ಲಿಂಗ ಪೂಜಾಂ ಲಿಂಗ ಪೂಜಾಂ ಎಂಬುತ್ತಿದೆ (ಸಿದ್ಧವ. ಕ. ೬೩-೨೦೦) : ಹೊನ್ನ ಮಾಣಿಕವ ನುಡಿ ಕಾಳಿ ತದಕಿನ ಪಿಂಜರದ ಮುನ್ನೆರಡು ಕಾಳಿ ನುಡಿದಾವ ಹೆಬ್ಬಾಗಿಲಕ (ಲೋಕಗೀ. ೧೯೯) : ಆದಿಮಧ್ಯಾಂತವಿಲ್ಲದವನನ್ನು ಸಣ್ಣದಾದೀ ನಮ್ಮ ಮನಸ್ಸೆಂಬ ಪಿಂಜರದಲ್ಲಿ ಹೊಗಿಸಲಾರೆವು (ದೇಜೀಕಾ. ೩೪). ೫. ಒಂದು ಬಗೆಯ ಹಕ್ಕಿ : ಗಳಿಗಳಂಟಿಗೆ ಸಿಲುಕಿದವು ಪಿಕ್ಕಾಳಿಗ ಪಿಂಜರ ಮಂಜರಿಗ ವಿಮಾನುಲಿಗ ಲಾವುಗೆ ಸರಲೆ ಬುಲುಲಿಗಳೆಚ್ಚ ಮಿಂಟಿಯಲಿ (ಕೂಚಾ. ೩-೩-೦೮). ೬. ಒಂದು ಬಗೆಯ ಕುದುರೆ. ೭. ಎಲುಬಿನ ಗೂಡು ; ಅಸ್ಥಿಪಂಜರ. ೮. ಬಂಗಾರ : ಚಿನ್ನ. ೯. ಹಳದಿಯ ಬಣ್ಣವಾಗಿ ಉಪಯೋಗಿಸುವ ಒಂದು ಬಗೆಯ ಖನಿಜ : ಹರಿದಾಳ. [ಸಂ.]

**ಪಿಂಜರಾಪೋಲು** 'ಪಾಂಜರಪೋಳ' ನೋ.

**ಪಿಂಜರಿ₁.** ಹಿಂಜರಿ (ಕ್ರಿ). ಹಿಂದಕ್ಕೆ ಸರಿ ; ಹಿಮ್ಮೆಟ್ಟು : ಒಡನೆಯೆ ಸುಧ್ವಜನುಂ ಪಿಂಜರಿದರಿಯ ಕೈಯುಂ ಕುಟ್ಟಿದಂ (ರಾಮಾಶ್ವ. ೯೩-೨೬) : ಪಿಂಜರಿದು ಸಾವಿನತ್ತಲೆ ಪೋಪ ಪಯಣ ? ತೆಗೆ. ತೆಗೆ. ಒಲ್ಲೆನ್ (ಅಕ್ಕಮ್ಮ. ೧೯-೪೦೦). **ಹಿಂಜರಿ :** ಮಾನಕೆ ಮಾನಿಷ್ಮರುಂಜಿ ಹಿಂಜರಿದರೆ . . . ತನಗೆಯೆ ಅಂಜಿ ಹಿಂಜರಿದರು ಭಾಪುರೆ ಎಂದುಬ್ಬಿ ಮೆರೆವನು ಜೋಡಿ (ಇಂಕಾಪ. ೯೪-೫೪) ; ಅವಳ ಧೈರ್ಯವೇ ಧೈರ್ಯ, ಯಾವುದಕ್ಕೂ ಹಿಂಜರಿಯುತ್ತಲೇ ಇರಲಿಲ್ಲ (ಅಂಹೂ. ೩೬) : ಚಣಚಣಕೆ ವೈರಿಯು ದಳ ಬಲ ಗುಂದುತಳಿದುಳಿದು ಹಿಂಜರಿಯುತೋಡುತಿದೆ ಲೆಕ್ಕಿಸದೆ ವೀರ ಪಾರ್ಥನ ವೀರವಾಣಿಯುಂ (ಚತ್ರಾಂಗ. ೯೩-೨೨೯೯).

[ ಪಿಂ (< ಪಿನ್) + ಜರಿ₁ (< ಸರಿ₁) ]

**ಪಿಂಜರಿ₂** (ನಾ). ಒಂದು ಬಗೆಯ ಸರ್ಪ : ಪಿಂಜರಿ ಕಂಧರಕೋಟ ಧನಂಜಯ ಪಾಂಡುರ ಕಿಶಾಲಿ ಪಿಂಡಾಂಶುಕ ಚಿತ್ರಾಂಜನ . . . ಮಣಿಂಜಯು ಸಮದಂಗಳಾದಿಯಾದಹಿನಿವಹಂ (ವೃಷಭ. ೩೦-೨೮).

[ ←ತೆಲು. ಪಿಂಜರ./ಸಂ. ಪಿಂಜರಕ ]

**ಪಿಂಜರಿ₃** (ನಾ). ೧. ಚಿನ್ನ ; ಬಂಗಾರ : ವಾಸವದಿಕ್ತಟಂ ಸಮೆದ ಮಾಣಿ . . . ಸಮಿೀರನೇರಣಗನಾಗೆ ನಿದಾಘದ ದೀಪವರ್ತಿಯೊಳ್ ಕಾಸೆ ತೆರಳ್ದ ಪಿಂಜರಿಯುಪೋಲ್ ಕಿಸುಸಂಜೆ ತೆರಳ್ದಿನಂ (ಅಕಪು. ೬-೭೦). ೨. ಬೆಳ್ಳಿ ; ರಜತ : "ಪಿಂಜರಿಯೆಂದು ಬೆಳ್ಳಿ" (ಕಶಸಾ. ೩೦-೬೨) ; ಪಿಂಜರಿಯ ನಗಮೊ . . . ಸುಧೆಯೊ ರಂಜಿಪ ರಾಶಿಯೊ ತಾನೆನೆ ನಂಜುಂಡನ ಸದನವೊಂದು ಸಲೆ ಶೋಭಿಸುಗುಂ (ಹಮ್ಮಿರ. ೬-೩೪) ; ಕಿಸುಪೊನ್ನ ಪಿಂಜರಿಯ ಚೆಂದವಗಲ್ಲ ಕೋಂಟೆಯ ಮಾಳವಳಿಸಿನಗಟ್ಟೀದೊಳಗೆ . . . ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಮಾಶ್ವ. ೩೪-೧೯). [<ಸಂ. ಪಿಂಜರ]

**ಪಿಂಜರಿ₄** (ನಾ). ಮೇಲ್ಕಟ್ಟು ; ವಿತಾನ : "ಪಿಂಜರೀ—ಮೇಲ್ಕಟ್ಟು" (ಕಾಶಕ್ಯ. ೨೬೦). [ಸಂ. ಪಿಂಜರೀ ?]

**ಪಿಂಜರಿತ** (ಗು). ೧. ಹೊಂಬಣ್ಣದಿಂದ ಕೂಡಿದ ; ಹಳದಿ ಮಿಶ್ರಿತ ಕೆಂಪುಬಣ್ಣದ : ಆಭರಣದ ಮಾಣಿಕಂಗಳ ಪೊದಟ್ಟಿರುಣಾಂಶುಗಳಿಂದ ಮುಂದು ಪಿಂಜರಿತಪಿಶಂಗಿತಾರುಣಿತದಿಙ್ಮುಖಮಾದುದು ತನ್ನ ಹೋತ್ಸವಂ (ಅಂಪು. ೭-೧೦೪) ; ಸುರಭಿಮುಲಯರುಹಪಂಕಪಿಂಜರಿತ ರಜತಶುಕ್ತಿಕಗಳಿಂ (ಶಂರಾಮಾ. ೧೨-೨ ವ) : ಕಿಂಜಲ್ಕಮಂಜರೀಪಿಂಜರಿತದಿಶಾವಲಯಂ (ಹಕಕಾ. ಶಂ. ೨೩೦). (ನಾ). ೨. ಹಳದಿಮಿಶ್ರಿತವಾದ ಕೆಂಪುಬಣ್ಣವುಳ್ಳದು; ಹೊಂಬಣ್ಣವುಳ್ಳದು : ವಿಯತ್ತಳಂ ಬಗೆದು ನೋಟಿಪ್ಪೊಡೆ ನಾಡೆ ಪತತ್ಪತತ್ರಿಜರ್ಝರಿತಮೆ ದಿಕ್ತಟಂ ರಿಪುನರಾಧಿಪರಕ್ತಧುನೀಪ್ರವಾಹಪಿಂಜರಿತಮೆ ಬೀರವುಂ ಪೊಗಟ್ಟನೇವೊಗಟ್ಟಂ ಕದನತ್ರಿಣೇತ್ರನಾ (ಶಂಕಶಾ. ೧೪-೪) ; ಮೇಣಲ್ಲಲ್ಲಿ ಪುಂಜುಮೆಯ್ ರವಿಕಿರಣರಾಗದಿಂ ಕಿಂಜಲ್ಕಪಿಂಜರಿತವಮಾಯ್ತು (ಶ್ರೀರಾಮಾ. ೨೯೮-೮೦). [ಸಂ.]

**ಪಿಂಜರಿವಟ್ಟಲ್** (ನಾ). ಬೆಳ್ಳಿಯ ಬಟ್ಟಲು : ಪಿಂಜರಿವಟ್ಟಲೊಳ್ಳಿಱಿತ ಸೀಧುವನೀಂಟುತೆ ನೋಡಲಲ್ಲಿ ಮೇಣ್ಮಂಜುವುಂಪೇಂದು ಬಿಂಬಿಸೆ ಸುಧಾರುಚಿ ಸಿಲ್ಕಿದನೆಂದು ನೋಟ್ಪ ತತ್ಕಂಜದಳಾಕ್ಷಿಯಂ (ಅಜ್ಜಿಪು. ೩-೩೮).

[ಪಿಂಜರಿ₃ + ಬಟ್ಟಲ್]

**ಪಿಂಜರಿವೆಟ್ಟು, ಪಿಂಜರಿವೆಟ್ಟು** (ನಾ). ಬೆಳ್ಳಿಯ ಬೆಟ್ಟ ; ರಜತಾದ್ರಿ : "ರಜತಾದ್ರಿಯಕ್ಕು ಪಿಂಜರಿವೆಟ್ಟುವೆನಲು" (ಕಶಿ. ೬೬). **ಪಿಂಜರಿವೆಟ್ಟು :** "ಪಿಂಜರಿವೆಟ್ಟೆಂದು ಬೆಳ್ಳಿವೆಟ್ಟಂ" (ಕಶಸಾ. ೪೯-೧೪); ಪಿಂದುಂ ರೂಪಿಪ ಲಿಂಗದೊಂದು ಪರಿಜಂ ತಾಳ್ದಿಲ್ಲರಂ ರಕ್ಷಿಸಲ್ ನಂಜು ಪಿಂಜರಿವೆಟ್ಟುವೇ ಮಱಿತದೇಂ ಕಂಗೊಳ್ವನೋ ಮೈಮೆಯಿಂ (ಪ್ರಸೂಕು. ೨-೦೩).

[ ಪಿಂಜರಿ₃ + ಬೆಟ್ಟು ]

**ಪಿಂಜರಿವೆಟ್ಟು** 'ಪಿಂಜರಿವೆಟ್ಟು' ನೋ.

**ಪಿಂಜರಿಸು** (ಕ್ರಿ). ಹೊಂಬಣ್ಣದಿಂದ ಆವರಿಸು,—ವ್ಯಾಪಿಸು : ಜಂಬೂದ್ವೀಪದ ಮೇರುವಿನ ಸಮುಕ್ಷದೊಳು ಸಂಜನಿಯಿಸಿದಾ ಜಂಬೂಫಲರುಚಿ ಪಿಂಜರಿಸಿದುದೋ ಭುವನತಳಮನೆನೆ ರಂಜಿಸಿದುದು ಕಳ್ತಲೆ (ಜಯಾ. ೦೩-೬೨).

[ಪಿಂಜರ + — ಇಸು]

**ಪಿಂಜಲ, ಪಿಂಜಳ** (ಗು). ೧. ಅತಿಯಾಗಿ ದಿಗ್ಭ್ರಮೆಗೊಂಡ; ಕಂಗೆಟ್ಟ; ತಬ್ಬಿಬ್ಬಾದ. **ಪಿಂಜಳ:** (ನಾ). ೨. ಧೂಳು ; ಹುಡಿ : ಅಂಜನ ಗಿರಿಯಂ ಚೂರ್ಣಿಸಿ ಪಿಂಜಳಮಪ್ಪಂತೆಯುದಂ ಮೆಯ್ಯುತ್ತರದವೋಲ್ ರಂಜಿಪ ಜಾಂಡಕರಂಡದೊಳಂಜನಮಂ ತುಂಬಿ ಬೊಮ್ಮನಿರಿಸಿದನೋ . . . ಎಂಬಂತೆ ದಿಕ್ಚಕ್ರದೊಳ್ ಕಳಾಭೀಳಮಹಾಂಧಕಾರಮೆಸಗುಂ (ಶಮ್ಮಿತ. ೩-೦೩). [ಸಂ.]

**ಪಿಂಜಳ** 'ಪಿಂಜಲ' ನೋ.

**ಪಿಂಜಳಕ** (ನಾ). ಧೂಳು ; ಹುಡಿ : "ಧರಣೀಸಮುತ್ಥಿತಂ ಪಾಂಸುರೇಣುಚೂರ್ಣಾಭಿಧಾನಕಂ ಕ್ಷೋದಂ ಧೂಳಿ ರಜಂ ಪರಾಗಮೆಂದಿವು ತೆರಳ್ದುಪುದಿದಿರ್ದುದಕ್ಕುಮದು ಪಿಂಜಳಕಂ" (ಶಸ್ತುಗೀ. ೪೦-೦೩).

[ಸಂ. ಪಿಂಜಲಕ]

**ಪಿಂಜಾರ, ಪಿಂಜಾರಿ** (ನಾ). ೧. ಹಿಂಜುವವನು ; ಹೆಕ್ಕುವವನು : "ಪಿಂಜಾರಃ = ಹಿಕ್ಕುವಂ" (ಕಾಶಕ್ಯ. ೨೬೦). ೨. ಅರಳೆಯನ್ನು ಬಿಡಿಸುವವನು,— ಹಿಂಜುವವನು: "ಪಿಂಜಾರಃ —ಅರಳೆಯನೆಕ್ಕುವಂ" (ಕಾಶಕ್ಯ. ೨೩೬); ಕುಂಬಾಱ ಹೊಟ್ಟೆಯುಳಿ ಪಿಂಜಾರ ತಾ ಹುಟ್ಟಿ ಕುಂಭಕುಂಥಿಗಳನಳಿಯುತ್ತ ಕುಂಭಿನಿಯೊಳಿಂಬುಗೊಂಡಾನು (ಸರ್ವಜ್ಞ. ೦೦೯೪); ಅವಹ ನಿದ್ದೆ ಹೋದಾಗ ತುರುಗಳು ಊರ ಪಿಂಜಾರನ ಹೊಲ ಹೊಕ್ಕು ಬೆಳೆ ತಿಂದುಬಿಡುವುವು (ಜನಪ. ೬೦೬); ನಮ್ಮ ದೇಶದಲ್ಲಿ ವಸ್ತ್ರವನ್ನು ಹುಟ್ಟಿಸುವ ಕೆಲಸದಲ್ಲಿ ಪಿಂಜಾರ ... ನೇಕಾರ ಮುಂತಾದ ಕೈಕೆಲಸದವರು ಬೇರೆಬೇರೆ ಭಾಗಗಳನ್ನು ವಹಿಸಿಕೊಂಡು ಅಷ್ಟೇ ಮುಗಿಸುತ್ತಾ ಹೋಗುತ್ತಾರೆ (ಮುಂಜಯ. ೩-೨೩೩). ೩. ಸೇವಕ ; ಗುಲಾಮ ; ಆಳು : ಸಾವಿರ ಕುದುರೆಯ ಸರದಾರ್ರ ಮನೆಯ ಹೆಂಡತಿಗೆ ಪಿಂಜಾರ (ಸಂಜಪ. ೦೩೩). **ಪಿಂಜಾರಿ:** ೨. ಪಿಂಜಾರಿಯರು ಪಸಾರಿಯರು . . . ಮೊದಲಾದ ನಾನಾ ಜಾತಿ (ಕಾಗಂಧ. ೦೨೩-೯). ೩. ಪಲ್ಲಕ್ಕಿಯ ಮೇಲ್ಮುಸುಕು,— ಆಚ್ಛಾದನೆ : "ಪಿಂಜಾರಿಃ = ದಂಡಿಕೋರ್ಧ್ವಾಚ್ಛಾದನಂ" (ಕಾಶಕ್ಯ. ೨೩೩).

[←ಹಿಂ. ಪಿಂಜಾರ; ಮರಾ. ಪಿಂಜಾರೀ]

**ಪಿಂಜಾರಿ** 'ಪಿಂಜಾರ' ನೋ.

**ಪಿಂಜಾರಿಕೆ** (ನಾ). ಅರಳೆಯನ್ನು ಹಿಂಜುವ ಕೆಲಸ ; ಹಾಸುಗೆ, ಗಾದಿ ಮೊದಲಾದುವುಗಳನ್ನು ಮಾಡುವ ಕೆಲಸ,—ಉದ್ಯೋಗ : ಸಂಯುಕ್ತ ಪ್ರಾಂತ್ಯದ ಹೊರತಾಗಿ ಉಳಿದ ಕಡೆಯಲ್ಲೆಲ್ಲ ಒಹುಶಃ ಪಿಂಜಾರನು ಮುಸಲ್ಮಾನನೇ ಇರುವುದರಿಂದ ಈ ಪಿಂಜಾರಿಕೆಯು ಉದ್ಯೋಗವು

ಮುಸಲ್ಮಾನರ ಆಳಿಕೆಯಲ್ಲಿ ಉದಯವಾಯಿತೆಂಬುದು ಸ್ಪಷ್ಟವಾಗುವುದು (ಜಾಶಿಜಾ. ೨೩). [ಹಿಂಜಾರ + –ಇಕೆ]

**ಹಿಂಜಾವಳಿ** (ನಾ). ಒಂದು ಬಗೆಯ ವಸ್ತ್ರ: ಮಲಯಜ ಶ್ರೀಗಂಧ ಗೆಸೆಯುಂ ... ಚಂದ್ರಾತಪಂ ಭೂತಿಳಿತವುಂ ಮಣಿವಟ್ಟು ಹಿಂಜಾವಳಿಯು ಸಂಧ್ಯಾರಾಗವುಂ ಕೈದೊಡಕುದಯರಾಗ (ಚಿತ್ರ. ೦೦–೨೮). [? + ಪಳಿ (<ಪಟ್ಟಿ)]

**ಹಿಂಜಿ$_1$** 'ಹಿಂಜು$_1$' ನೋ.

**ಹಿಂಜಿ$_2$**, ಹಿಂಜಿ (ನಾ). ಅರಳೆಯ ಸುರುಳಿ; ಹಂಜಿ: (೧). ಹಿಂಜಿ: ಹತ್ತಿಯ ಹಿಂಜಿ (Sliver)ಯಲ್ಲಿ ಎಳೆಗಳೆಲ್ಲವು ಅಸ್ತವ್ಯಸ್ತವಾಗಿ ಇದ್ದರೆ ಉಪಯೋಗವಿಲ್ಲ (ಜಾಂತ್ರ. I. ೪೧೭); ಹಾಸುಹೊಕ್ಕಿಗೆ ಪಕ್ಕಾದ, ಗಂಜಿಗೆ ಹಿಂಜಿಯಾದ, ನನ್ನೀ ಕೈಲಾಳಿಯ ಮಗ್ಗಕ್ಕೆ ಪಂಜಾದ ನಮ್ಮೂರಿನ ಹಿರಿಯ ರೆಲ್ಲರ ಕ್ಷಮಾಪಣೆ ಹಾಗೂ ಆಶೀರ್ವಾದ ಕೋರುತ್ತೇನೆ (ನಮ್ಮೂರು. ೩೮೬೩. ೦೩). [<ಸಂ. ಪಿಂಜಾ]

**ಹಿಂಜು$_1$**, ಹಿಂಜು (ಕ್ರಿ). ೧. ಬೇರೆ ಬೇರೆ ಮಾಡು; ವಿಭಾಗಿಸು: "ಪಿಂಜು–ಪೃಥಕ್ಕರಣೇ" (ಶಮಣಿ); ಹೊಂಜಾಳಿಗೆಯನಿತ್ತು ರಂಗಶೇಖರ ಗಾಗ ಪಿಂಜಿ ಮನ್ನಿಸಿದ ಮೇಳವನು ಸಿಂಜನಿ ಶಿಖರಿಣಿಯರಿಗೆ ಮತ್ತೊಲಿದ ಪರಂಜಿಯಾಭರಣವನಿತ್ತ (ಭರತ. ೦೩–೧೪೫). ೨. ಅರಳೆಯನ್ನು ಹೆಕ್ಕು,—ಬಿಡಿಸು,–ಚೊಕ್ಕಟ ಮಾಡು: "ಪಸುಗೆಯೊಳ್ ಕಾರ್ಪಾಸ ವಿವರಣದೊಳಂ ಪಿಂಜು" (ಶಬ್ದಮ. ೮೮). ೩. ಬೇರೆ ಬೇರೆ ಯಾಗು; ಬಿಡಿಬಿಡಿಯಾಗು; ವಿರಳವಾಗು; ದೂರವಾಗು: ಮಂಜು ಮುಸುಂಕಿ ಕೊಂಕುಗೊಸರಿಂ ಮಸುಳ್ದಿಂಡ ಬಿಸಪ್ರಸೂನವೋ ಪಿಂಜದೆ ಪೊಣ್ದು ಪೊಳ್ಕೆ ಪೊಗೆಸುತ್ತಿದ ಪುತ್ಥಳಿಯೋ . . . ಎನಲ್ (ಶಕಂ. ೩–೩೦). ಹಿಂಜು: ೧. ಮೋಡವ ಹಿಂಜಿ ಜನರಿಗೆ ಅಂಜಿ ರವಿ ಅಡಗಿದನೆಂದು (ಅರಳು. ೦೪೪–೦೩). ೨. ಹಿಂಜಿದರಳೆಯ ಹಿಂಡೊ? ಐರಾವತದ ದಂಡೊ? ಮಂಜೊ? . . . ಮಲೆಯ ಕಲೆಯಿಸಾ ಬಂಡೆಯಲ್ಲೀನ ನಾ ಕಂಡೆ? (ಅರುಣ. ೯–೦೩); ತೆರೆತೆರೆ ಯಾಗಿ ಹಿಂಜಿದ ಅರಳೆಯಂತೆ ಮೋಡಗಳು ತೇಲಿ ತೇಲಿ ಹೋಗುತ್ತಲಿ ದ್ದವು (ನಾಗು. ೦೩); ಶಾಂತಾಳು ಹಿಂಜಿದ ಹತ್ತಿಯಂತೆ . . . ಬಂಡೆಗಲ್ಲಿನೊಳಗಿಂದ ತಿಳಿನೀರು ಜುಳು–ಜುಳು ಹರಿದಂತೆ ನಕ್ಕದ್ದೂ ಕೂಡಿತು (ಆಶಾ. ೦೦೮); ಹಳತು–ಹೊಸತನು ಹಿಂಜಿ ಹೊಸೆದು ಹೊತ್ತಿಸಿ ಹಿಡಿದ ಶಾಂತಿ–ಪಣತಿ (ಸಂಕು. ೩೦–೧೧): ಹಿಂಜಿದ ಹತ್ತಿಯ ಚೂರುಗಳಂ ತಿರುವ ಮೋಡದ ಚುಕ್ಕಿಗಳು . . . ಕರಗಿಸಿಕೊಳ್ಳುತ್ತವೆ (ಹಕ್ಕಿಹಾ. ೨೩೩)' ೪. ತಿಳುವಾಗು; ಚೊಕ್ಕಟವಾಗು; ಶುದ್ಧವಾಗು: ಕಸರು ಕಳೆದ್ದ ತಮ ಹಿಂಜಿ ಬಂತು ರವಿಕಿರಣ ನೂಲುವಂತೆ (ಅರಳು. ೪೦೪–೮); ಹೊಗೆ ಮೋಡ ಹಿಂಜಿ ಕನ್ನಡಿಯಾಗುವಂತೆ ನೆನಸಿದ ರೂಪ ಹುಡಿಯಾಗುತಿದೆ (ಉದ್ಯಾನ. ೪–೦); ಮುತ್ತಿದ ಮೋಡ ಚದರಿ, ಹಿಂಜಿ ಹೋಗಿ ಸಾಂದ್ರ ಚಂದ್ರಿಕೆ ಚೆಲ್ಲಬಹು ನು (೦೬೭೮. II, ೨೦೪). ೫. ಬಟ್ಟೆಯ ಎಳೆ ಗಳು ದೂರವಾಗು; ಜಾಳಾಗು: ಮೊನ್ನೆ ತಾನೇ ತೆಗೆದುಕೊಂಡ ಸೀರೆ ನೀರಿಗೆ ಹಾಕಿದ ಕೂಡಲೆ ಹಿಂಜಿ ಹೋಯಿತು (ಲೂ). ೬. ವಿಸ್ತಾರ ಮಾಡು; ವಿಸ್ತರಿಸು: ಓಡುತ್ತಿರುವ ಕುದುರೆಯ ಒಂದು ನಿಮಿಷವನ್ನು ಹಿಂಜಿ ಹತ್ತು ಘಂಟೆಯ ಕಾಲವನ್ನಾಗಿ ಮಾಡಬಲ್ಲೆನಾದರೆ (ಹಿಂತ. I, ೨೩೭). ೭. ಸೂಕ್ಷ್ಮವಾಗಿ ಪರಿಶೀಲಿಸು; ಕೂಲಂಕಷ ವಾಗಿ ವಿಚಾರ ಮಾಡು: ಈ ಪ್ರಶ್ನೆಯನ್ನು ಇನ್ನೂ ಅಷ್ಟು ಹಿಂಜಿ ತೋರಿಸೋಣ (ಮಾಜಾದ. VI. ಎರಡು ಮಾತುಗಳು); ತನ್ನ ಚಿಂತೆಗಳ ಒಳಪದರ್ರು ಗಳನ್ನು ಹಿಂಜುವುದರಲ್ಲಿ ಒಂದಾದಳು (ಮೂರುದಾ. ೫೦); ವಸ್ನ ಬುದ್ಧಿ ಗೇನೋ ದೌರ್ಬಲ್ಯ ಬಂದು . . . ಸಣ್ಣಮಾತನ್ನೇ ಹಿಡಿದು ಹಿಂಜುತ್ತಿದೆ (ಶಿಶಂಜಾ. ೨೩): ಈ ಹಾಡನ್ನು ಹಿಂಜಿ ಅರ್ಥ ಮಾಡಿ ನೋಡಿದರೆ ಈ ತೊಡಕು ಬಗೆಹರಿದು ಹೋಗುವುದು (ಕನ್ನಜಾ. ೪೫). [ದೇ.॥ ಮಲ. ಪಿಚ್ಚು, ಪೀಚ್ಚು; ತೆಲು. ಪಿಂಜು]

**ಹಿಂಜು$_2$**, ಹಿಂಜಿ$_1$ (ನಾ). ಹೀಚುಗಾಯಿ: ಮಿಡಿ: (೧). ಹಿಂಜಿ$_1$: "ಪಿಂಜಿ ತೀರ = ಸಣ್ಣ ಕಾಯಿ" (ಶಾಸಕೋ. ೧೫). 'ಪೀಚು$_2$' ಪರಾ. [ದೇ.॥ ತಮಿ. ಪಿಞ್ಚು; ಮಲ. ಪಿಞ್ಚು; ತೆಲು. ಪಿಂದಿಯ, ಪಿಂದೆ]

**ಹಿಂಜೂಲ** (ನಾ). ದರ್ಭೆಗಳ ಕಟ್ಟು: ಮುತ್ತುಗದ ದೊನ್ನೆಗಳಲ್ಲಿ ನೀರು ತುಂಬಿಕೊಂಡು ದರ್ಭ ಪಿಂಜೂಲಗಳನ್ನು ಹಿಡಿದು ಮಂತ್ರಜಲವನ್ನು ಪ್ರೋಕ್ಷಿಸುತ್ತ ಬಂದರು (ಮಹಾಜ. ೪೮). [ಸಂ.]

**ಹಿಂಜೂಷ** (ನಾ). ಕಿವಿಯ ಮಲ; ಗುಗ್ಗೆ. [ಸಂ.]

**ಹಿಂಜೆ$_1$** (ನಾ). ನೆರಿಗೆ ಹಾಕಿ ಕಟ್ಟಿದ ಕಚ್ಚೆ. 'ಪಂಚಕಚ್ಚೆ' ಪರಾ. ಪಿಂಜೇ ಹಾಕಿ ಧೋತ್ರವನ್ನುಡು=ಒಳ ಅಂಗಿಯ ಮೇಲೆ ಬರುವಂತೆ ಮಡಿಕೆಗಳನ್ನು ಒಳಸೇರಿಸು,—ಸಿಕ್ಕಿಸು: (ಸ್ಯಾಂಡರ್). [← ತೆಲು. ಪಿಂಜೆ, ಪಿಂಜಿಯ]

**ಹಿಂಜೆ$_2$** 'ಹಿಂಚೆಯ' ನೋ.

**ಹಿಂಜೆ$_3$** (ನಾ). ೧. ಬಾಧೆ; ನೋವು. ೨. ಅರಿಸಿನದ ಪುಡಿ,—ಹುಡಿ. ೩. ಅರಿಸಿನದ ಬಣ್ಣ: ಮೆಯ್ಯ ಬಣ್ಣಮುಂ ಪಣ್ಣಮುಮರಿಸಿನದ ಪಿಂಜೆ[ಶಾಜಾಂ. ಜೆ]ಯಂತೆ ಪಾಟು ಪೋಕುಂ (ಅರ್ಥಸೀ. ೫–೪ ವ). ೪. ಅರಳೆ; ಹತ್ತಿ. ೫. ಬೆತ್ತ; ಸೆಳೆ. [ಸಂ. ಪಿಂಜಾ]

**ಹಿಂಜೆಟಿಂಗು** (ನಾ). ಹಿಂಭಾಗದ ಸೆರಗು: ಪೊಂಜೆಳೆ, ಪಿಂಜೆಟಿಂಗು (ಶಬ್ದಾಮ. ೪೩ ಪ್ರಯೋ). 'ಮುಂಜೆಟಿಂಗು' ಪರಾ. [ಪಿಂ (<ಪಿನ್) + ಸೆಟಿಂಗು]

**ಹಿಂಡ** (ನಾ). ೧. ಮುದ್ದೆ; ಉಂಡೆ: ಕುಂಡಲಿಯ ಕಂಡಾತ ಹೆಂಡತಿಗೆ ಒಲಿಯುವನೆ ಕಂಡಿತದೊಳಿಪ್ಪ ಶಿವಯೋಗಿ ಮಾಂಸದ ಪಿಂಡಕೊಲಿಯುವನೆ (ಸರ್ವಜ್ಞ. ೫೦೫). ೨. ಗುಂಪು; ಸಮೂಹ: "ಪಿಂಡಂ ಸಲೆ ಸಂತೆ ನೆರವಿ ಜಾಳಿಗೆ ತೆಪ್ಪಲ್" (ಶಬಕಂ. ೧೦೩); ಅದೇಂ ಕನ್ನೊಳಿಸಿ ದುದೊ ವಿನ[ಕ್ಷ]ತ್ರಕಚ್ಛತ್ರಪಿಂಡಂ[ಶಾಜಾಂ. ಸಿಂಧಂ] (ಶಂಶಚಾ. ೦೩–೩೮); ರವಿಹಯಲಾಲಾಪಿಂಡಂ ದಿವಿಜನದೀಫೇನಮಾಲೆ . . . ಎಂಬಿನಮಲ್ಲಿಗೆ ಧವಳಾಂಬುದಪಟಲಮೆಸೆದುದು (ಅನಂ. ೪–೩೧). ೩. ಆಹಾರ; ಉಣಿಸು: ರುಚಿಯಲ್ಲದ ಪಿಂಡಂ ಕುದಿರೆಗೆ ತಾಂ ಪೊಲ್ಲದೆನಿಪ ಕವಳಮನಿಷ್ಟಂ (ಅಕ್ಷತಾ. ೭–೮೧); ದಂಡ ತಪ್ಪಿಸುತ ಪಿಂಡ ಗಳಿಸಿ ಉಂಡಾಡಿಭಟ್ಟನಾಗಿ . . . ದಪ್ಪ ಅಕ್ಷರದ ಪದವಿ ಪಡೆದು ಇಹ ಮೇಲು ಸಾಲಿನಲ್ಲಿ (ಅರಳು. ೪೨೪–೫); ನಾವು ಹೀಗೆ ಮತ್ತೊಬ್ಬರು ಹಾಕಿದ ಪಿಂಡವನ್ನು ತಿಂದುಕೊಂಡು ಸದಾ ನರಕವನ್ನು ಅನುಭವಿಸದಂತೆ ಬೇಗ ಏನಾದರೂ ಏರ್ಪಾಡು ಮಾಡು (ವಜಾ. ೨೮). ೪. ಒಂದು ಸಲಕ್ಕೆ ನುಂಗುವಷ್ಟು ಆಹಾರ; ತುತ್ತು; ಕಬಳ: ಒಂದು ಅನ್ನದ ಪಿಂಡವನ್ನು ನನ್ನನ್ನು ಳಿಸಲು ನೀಡುವವರಿಲ್ಲದಾಗ ಅದೇ ಸುಖವಾದ ಸುಲಭ ಹಾದಿ ಎಂದು ಕೊಂಡಿದ್ದೆ (ಶೀನವಾ. ೩೦೧). ೫. (ದೇವತೆಗಳಿಗೆ, ಪಿತೃಗಳಿಗೆ ಅರ್ಪಿಸ ಲಾಗುವ) ಅನ್ನದ ಮುದ್ದೆ; ನೈವೇದ್ಯ: ಕುತ್ತಮುಂ ಕಿಡಿಸುವ ನಿಮಿತ್ತ ಚಂಡಿಕೆಗೆ ಪಿಂಡಮನಿಟ್ಟುಂ . . . ರೌದ್ರದೇವತೆಗಳಂ ಕೊಂಡಾಡಿ ದುಃಖದಿಂದಾಳುತ್ತಂ ಮುಳುಗುತ್ತಂ ಇಪ್ಪರು (ಶಾಸ್ತ್ರಸಾ. ೪೭–೮); ಇವನಿಂದ ಸತ್ತ ಮ್ಯಾಲ ಅಷ್ಟು ಪಿಂಡಾ ಕಂಡೇವು ಅನ್ನೋ ಒಂದು ಭರವಸೆ ಹುಟ್ಟಿತದ (ಗಂಡುಹುಡು. ೦೦೭). ೬. ಗರ್ಭದಲ್ಲಿರುವ ಭ್ರೂಣ: ಅಂಡಜವೆಂಬ ತತ್ತಿಯೊಡೆದು ಪಿಂ[ಶಾಜಾಂ. ಬಿಂ]ಡ ಪಲ್ಲಟವಾಗಿ ಗಂಡ ಗಂಡರೆನಿಸಿ ತೊಳಲಿ ಬಳಲುತ್ತಿದ್ದಾರೆ (ಅವಕಾ. ೯–೦೩): ಕ್ಷಯರೋಗದ ರೋಗಾಣುಗಳು ತಾಯಿಯಿಂದ ಪಿಂಡಕ್ಕೆ

(Foetus) ಹೋಗುವುದಿಲ್ಲ (ಕಂಠೀ. ೮ ಉಪೋದ್ಘಾತ); ಮನುಷ್ಯನೊಡನೆ ಮನುಷ್ಯ ಶಿಕ್ಕಾಡಿ ತೀರ ಒಂದು ಪಿಂಡವನ್ನು ಸೃಷ್ಟಿಸಿಡಲಿಲ್ಲ (ಪಿಬಂಧ. I, ೩೮). ೭. ಶಿಶು ; ಹಸುಳೆ ; ಮಗು : ಜಗಕೆ ಚೋದ್ಯದ ತನುಜೆ ಜನಿಸಲು ಬಗದು ನಮ್ಮಯ ಹೆಸರನಿಡುವುದು ಅಗಣಿತದ ಗಂಡೊಂದು ಪಿಂಡವು ಜನಿಸುವುದು ಬಳಿಕ (ಜೈಮಿ. ೪-೨೫); ಅವ ನಿನ್ನ ಕೊಲ್ಲದೆ ಮಾಣ ಶಿಶುವೆಂದುದಾಸೀಸ ಬ್ಯಾಡ ಮಾಯ ಮಂತ್ರದ ಪಿಂಡವು (ಪಪಮೋ. ೧೧-೨೫). ೮. ದೇಹ ; ಶರೀರ : "ತನುಃ, ತನೂಃ . . . ಪಿಂಡಂ, ಕ್ಷೇತ್ರಂ, ಗಾತ್ರಃ, ಅಪಘನಃ, ಮೂರ್ತಿಃ—ಈ ೧೭ ಶರೀರಂ" (ಹಲಾಯು. ೮೪-೩೫೬) ; ಆ ಗುಂಗುಬಿ ಬಾಯಲ್ಲಿ ಕತ್ತರಿವಾಣಿ ಕಾಲಿನಲ್ಲಿ ಕಂಡೆಹ ಅಂಡದಲ್ಲಿ ಕಾಳಕೂಟ ಪಿಂಡವೆಲ್ಲವೂ ಅಸಿಯ ಬಳಗ (ಅಜಾಪು. ೪. ೦೫೩-೦೦೮); ಪಿಂಡವೆಂದರೆ ಶರೀರವು (ಪ್ರಿಹ್ಯಶಾ. ೩೯೮ ಅಡಿ). ೯. (ಶರೀರದ) ಒಂದು ಭಾಗ ; ಅಂಗ : Brain (ಮೆದಳು) ಎಂಬುದು ಶರೀರದ ಒಂದು ಪಿಂಡ (ಜೀವಾತ್ಮ. ೦೦೮). ೧೦. ದಪ್ಪ ; ಗಾತ್ರ : ಗೋಡೆಯ ಯೆತ್ತರವು ೩೦ ರಿಂದ ೫೦ ಫೂಟಿನವರೆಗೆ ; ಪಿಂಡವು ಸರಾಸರೀ ಮಾನದಿಂದ ೨೦ ಫೂಟು ಇರುತ್ತದೆಂದು ಹೇಳಬಹುದು (ಶಭಾಗ. ೫೩). ೧೧. ಗಟ್ಟಿಯಾದುದು. ೧೨. ಒಂದು ಬಗೆಯ ಸುವಾಸನಾ ದ್ರವ್ಯ ; ಸಾಂಬ್ರಾಣಿ. ೧೩. ಕಬ್ಬಿಣ.

**ಪಿಂಡ ಒಗೆ**=ಶರೀರವನ್ನು ಬಿಡು ; ಸಾಯು : ದೂರದ ಊರಿನಿಂದ ಮಗ ಬರುವ ಹೊತ್ತಿಗೆ ತೀರಾ ಸುಸ್ತಾಗಿದ್ದ ಅವರು ಪಿಂಡ ಒಗೆದು ನಡೆದಿದ್ದರು (ಕೂ೩). [ ಸಂ. ]

**ಪಿಂಡಂಗೆಯ್** (ಕ್ರಿ). ಮುದ್ದೆ ಮಾಡು; ಉಂಡೆಯಾಗಿ ಮಾಡು : ಆಕಾಶದೊಳ್ಚಂದ್ರನಂ ಮುನ್ನಂ ನಾಲ್ಕೊಗನೊಪ್ಪವಿಟ್ಟ ಬಗೆಯೋ . . ಚೆನ್ನಂ ಪೊಂದಿದ ಬೆಣ್ಣೆಯಂ ತೆಗೆದು ಪಿಂಡಂಗೆಯ್ದು ಮೇಲಿಟ್ಟನೋ (ಹರಿಶ್ಚ. ೨-೫೮). [ ಪಿಂಡ + ಕೆಯ್$_1$ ]

**ಪಿಂಡಕ** (ನಾ). ಒಂದಂ ಬಗೆಯ ಸುಗಂಧವಸ್ತು ; ಲೋಬಾನ. [ಸಂ.]

**ಪಿಂಡಖರ್ಜೂರ** (ನಾ). ಒಂದು ಬಗೆಯ ಖರ್ಜೂರ ; ಮೆದುವಾಗಿ ಇರುವ, ಉತ್ತಮದರ್ಜೆಯ ಖರ್ಜೂರ : ಪಿಂಡಖರ್ಜೂರದಲ್ಲಿ ಬೇಸರಪಟ್ಟು ಹುಣಿಸೆಹಣ್ಣನ್ನು ತಿನ್ನಲು ಬಯಸಿದವನಂತೆ ರಾಣೀವಾಸದ ಉತ್ತಮಾಂಗನೆಯರನ್ನು ತಿರಸ್ಕರಿಸಿ ನೀನು ಮುನಿಪುತ್ರಿಯನ್ನು ಬಯಸುವವನಾದೆ ! (ಶಾಕುಂತ. ೨೪-೦೮). [ ಪಿಂಡ + ಖರ್ಜೂರ ]

**ಪಿಂಡಗಲ್** (ಕ್ರಿ). ಗುಂಪಿನಿಂದ ದೂರವಾಗು ; ಒಂಟಿಯಾಗು : ನೆಗಟಿ ಕಳಸ್ವನಂ ಕಳಮದಿಂ ಕಳಮಕ್ಕೆ ವನಾಳಿಯಿಂ ವನಾಳಿಗೆ . . . ಪಿಂಡಗಲದೆ ಪಾಱುತಿರ್ಪುವಿದಿರುಂಬಟಿಯುಂ ಶುಕಭೃಂಗಹಂಸಕೇಕಿಗಳ್ (ಜಗಪು. ೯-೮೭). [ ಪಿಂಡು$_2$ + ಅಗಲ್$_1$ ]

**ಪಿಂಡಗೊಳ್ಳು** (ಕ್ರಿ). ಒಟ್ಟಾಗಿ ಸೇರು ; ಒಂದಾಗು : 'ಕಾಮಾಕ್ಷಿ'ಯ ಮುನ್ನುಡಿಯಲ್ಲಿ ನಾನು ಹೇಳಿದ ಮಾತು ಇಂದೂ ಹೇಳಬಹುದು ; ಜಾತಿ ಅದೇ. ಆದರೆ ಒಗರು-ಪೊಗರು ಕಣ_ಕಣದಲ್ಲಿ ಪಿಂಡಗೊಂಡಿದೆ (ಪಿಂಮು. IV, ಹಾಲ್ಕು ಮಾತು); ನಿರ್ದುಷ್ಟಸತ್ತ್ವವು ನವನೀತದಂತೆ ಪಿಂಡಗೊಂಡು ಮೂರ್ತಿಯಾಗಿ ರಾಜಸಿಕದ 'ತಾನೇ ಈಶ್ವರ' ನೆಂಬ ಅಹಂಭಾವಕ್ಕೆ ಮದ್ದಾಗುವವರೆಗೆ ಮಲೆನಾಡಿನ ಕತೆಯೇನು ? (ಪಂಜಿಸಂ. ೭ ಮುನ್ನು೩). [ ಪಿಂಡ + ಕೊಳ್ಳು$_1$ (< ಕೊಳ್$_1$) ]

**ಪಿಂಡಚ್ಚನೆ** (ನಾ). (ಅರ್ಚನಾರೂಪವಾಗಿ ಮಾಡುವ) ಸಮೂಹ ನೃತ್ಯ ; ಮೇಳನರ್ತನ : ಮಂಡಿತಮನೇಜಮನಮಪಾರ್ತಂಡಂಗಾಲಂಬಿಹಾರ ಸುಮನೋಮಾಲಂ ಮೆಂಡಿರ ಕುಚಕೋಕಚಯಂ ಪಿಂಡಚ್ಚನೆಯಾಡುವಂತೆ ನರ್ತಿಸಿತಾಗಳ್ (ಲೀಲಾ. ೦೪-೦೦). 'ಗೊಂದಳವೆಕ್ಕಣ' ಪರಾ. [ ಪಿಂಡು$_2$ + ಅಚ್ಚನೆ$_1$ (< ಅರ್ಚನೆ) ]

**ಪಿಂಡಚ್ಛೇದ** (ನಾ). ಪಿತೃಗಳಿಗೆ ಪಿಂಡಪ್ರದಾನ ಮಾಡುವುದಕ್ಕೆ ಯಾರೂ ಇಲ್ಲದಂತಾಗುವುದು,–ಪಿಂಡ ಹಾಕುವುದು ನಿಂತುಹೋಗುವಿಕೆ : ಮಗಳನೀವೆನಪ್ಪೊಡೆ ಕೊಡಗೂಸೆಂಬುದು ಪೆಱರೊಡವೆ ಮಗನನೀವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಮಕ್ಕುಮದಱಿಂದೆನ್ನನೆ ಕುಡಲ್ವೇಟ್ಕುಂ (ಪಂಕಥಾ. ೩-೨೫ ವ). [ ಪಿಂಡ + ಛೇದ ]

**ಪಿಂಡಜ** (ನಾ). ಭ್ರೂಣದಿಂದ ಹುಟ್ಟಿ ಬರುವ ಮನುಷ್ಯ, ಪಶು ಮೊದಲಾದುವು : ಆಕಾಶ ಒಂದಂಡಜ ಪೃಥ್ವಿ ಒಂದು ಪಿಂಡಜ ಎರಡಱ ಮಧ್ಯದಲ್ಲಿ ಪಕ್ಷಿ ಮಱಿಗಳನಿಕ್ಕಿತ್ತ ಕಂಡೆ (ಅಪಪಂ. ೦೭೧-೭೬೪); ಅಂಡಜ ಇಪ್ಪತ್ತೊಂದು ಲಕ್ಷ ಪಿಂಡಜ ಇಪ್ಪತ್ತೊಂದು ಲಕ್ಷ . . . ಇಂತು ಎಂಬತ್ತು ನಾಲ್ಕು ಲಕ್ಷ ಜೀವರಾಸಿಗಳೊಳಗೆ (ಅಬಂತೀ. ೮-೭). [ಸಂ.]

**ಪಿಂಡಪಾತ** (ನಾ). ೧. ಪಿಂಡವನ್ನು ಕೊಡುವುದು. ೨. "ಭಿಕ್ಷಾಪಾತ್ರದಲ್ಲಿ ದೊರೆತ ಅ" (ವೈಶಾಖ. ಟಿಪ್ಪಣಿ. ೯೩) : ಆವ ಪಿಂಡವನ್ನುಂಡವನೆ ಸುಗತ ನಿರುಪಧಿಶೇಷ ನಿರ್ವಾಣವಡೆದಪನೊ. ಅರಿಯಿರ್ಬೆ ಆ ಪಿಂಡಪಾತದ್ವಯಂ ಪಿಂಡಪಾತಾಂತರದಿನೆನಿತೊ ಆಯುಷ್ಕರಂ. ಯಶಸ್ಕರತರಂ . . . ಮಹಾಫಲತರಂ ! (ವೈಶಾಖ. ೭೩-೨೫೪). [ಸಂ.]

**ಪಿಂಡಪಾದ** (ನಾ). ದಪ್ಪವಾದ ಕಾಲುಗಳನ್ನುಳ್ಳುದು; ಆನೆ. [ಸಂ.]

**ಪಿಂಡಪ್ರದಾನ** (ನಾ). ಶ್ರಾದ್ಧದಲ್ಲಿ ಪಿತೃಗಳಿಗೆ ಪಿಂಡವನ್ನು ಅರ್ಪಿಸುವುದು : "ನಿವಾಪಃ—೧ ಪಿತೃದಾನಂ—ಪಿತೃ ಪಿತೃತ್ವವನ್ನು ಹೊಂದಿದವರು, ತೃಪ್ತಿಪಡುವದಕ್ಕೋಸ್ಕರ ಮಾಡಲ್ಪಡುವ ದಾನಂ, ತಿಲೋದಕ ಪಿಂಡಪ್ರದಾನಗಳ ಹೆಸರು" (ಸಿದ್ಧಾಂತಿ. ೨೨೩); ಮುಂನ ತಂಮಡಿಯಕ್ಕ ಮೋಚಲಮಹಾದೇವಿಯರು ಸ್ವರ್ಗಸ್ತರಾದವರ ಪಿಂಡಪ್ರದಾನದಲು ನೀರ ದೇವಾಲ್ಯದಲು . . . ಧಾರೆ ಎರ [ದ] ೧೨ ಡು (ಶಾಶಾ. VII,೦೭೭-೮; 1302); ಈ ಸಖಿಸ ಕಳೇವರಮಂ ದಹಿಸಿ ಅಸ್ಥಿಯಂ ವಾರಣಾಸಿಯಲ್ಲಿ ಬಿಟ್ಟು ಗಯೆಯಲ್ಲಿ ಪಿಂಡಪ್ರದಾನಂ ಮಾಡಿ (ಪಪ್ನಕಾ. ೭-೧೫೯ ವ). [ ಪಿಂಡ + ಪ್ರದಾನ ]

**ಪಿಂಡಮರ್ದನ** (ನಾ). ಮುದ್ದೆಯಾಗುವಂತೆ ಬಡಿಯುವುದು,–ಚಚ್ಚುವುದು; ನಜ್ಜುಗುಜ್ಜು ಮಾಡುವುದು : ನಿನ್ನುಮಂ ಸಱಿಗೆಯಾತ ಕೊಂಡು ಪಿಂಡಮರ್ದನಂ ಮಾಡದೆ ಬಿಡುವೆನೆ, ನೋಡೆಂದು ಪೊಂಗಱಿಯ ಕೂರಂಬುಗಳನಾರ್ದೆಚ್ಚಂ (ರಾಮಾಶ್ವ. ೦೫೭-೨೪). [ ಪಿಂಡ + ಮರ್ದನ

**ಪಿಂಡಮೂಲ** (ನಾ). ಕೆಂಪುಮೂಲಂಗಿ ; ಕ್ಯಾರಟ್ಟು : "ಪಿಂಡೀತಕಂ–ಪಿಂಡಮೂಲ" (೭ಕಂ. ೯೭). [ಸಂ.]

**ಪಿಂಡರಂಗ** (ನಾ). ವಜ್ರದ ಹೊರಮೈ ಅಥವಾ ಹೊರಭಾಗದ ಕಾಂತಿ : ಲಾಲಿಸೈ ಬಾಹಿರದಿ ಪ್ರಜ್ವಲಿಪ ಪ್ರಭೆಯಿರಲು ಲೀಲೆಯಿಂ ತಿಳಿಯದನಾ ಪಿಂಡರಂಗವದೆಂದು ಬಾಲಾರ್ಕನಿದಿರಿನೊಳು ಪಿಡಿಯೆ ರತ್ನದ ಮಧ್ಯೆ ಛಾಯೆ ತಾ ತೋರುತಿರಲದು ಛಾಯರಂಗವುದೆಂದು (ರತ್ನಶಾ. ೧೦-೧೩). [ ಪಿಂಡ + ರಂಗ ]

**ಪಿಂಡರಿಕೆ** (ನಾ). ಮೊಳಕಾಲಿನ ಕೆಳಭಾಗ ; ಮೀನಖಂಡ : ಪ್ರತಿಹುಂಕಾರಕ್ಕೆ_ಪ್ರತಿಕ್ರಂದನದ ಸೆಳೆತಕ್ಕೆ ನಡುಗುವ ಕಾಲ ಪಿಂಡರಿಕೆಗಳು ಮೊದಲು ಅಧೀರವಾಗಿ ಬರುತ್ತ ನಿರ್ಧಾರವಾಗಿ ನಡೆಯಹತ್ತಿದವು (ಕಕ್ಕ್ರ. ೩೪೩); ಪಿಂಡರಿಕೆಗಳಿಗೆ ಬಿದ್ದ ಬಾರಕೋಲ ಹೊಡೆತ ಕಾಲುಗಳನು ತ್ವರಿತವಾಗಿ ಓಡಿಸುತ್ತಿದ್ದವು (ಶಾಂ. ೮೪). [ ←ಹಿಂ. ಪಿಂಡರೀ, ಪಿಂಡಲೀ ; ಮರಾ. ಪಿಂಡರೀ, ಪಿಂಢರೀ]

**ಪಿಂಡಲು**, ಪಿಂಡಿಲು, ಹಿಂಡಲು, ಹಿಂಡಿಲು (ನಾ). ೧. ಮೊತ್ತ; ರಾಶಿ : ತೊರೆದುಗುವ ಕೋರಮೊಲೆಗಳಿಂದು ಕಱು ಪಿಂಗೆ ಪಾಲ ಧಾರೆಗಳೊಕ್ಕು ಸೊರೆಯ ಪಿಂಡಲು ಪೊಂಗೆ (ಅಪಂ೩. ೯-೦೭ ಪಿಲಿ). **ಪಿಂಡಿಲು**: ೨. ಪೊದರು; ಮೆಳೆ: ಸಿಡಿಲಿನ ಕುಡಿವಾಲಿಗೆಯೊಲು ಮಿರುವ

ಬಿಡುಗ ಬರಲು ಕೈಕೊಂಡು . . . ಪೊಡೆದನಾ ಕಂಭುಕನಡಗಿರ್ದ ಬಿದಿರ ಪಿಂಡಿಲನು (ಅಂಜನ. ೧೩-೩೩). ಹಿಂಡಲು : ೨. ಬಿದಿರಿನ ಹಿಂಡಲಿನಲ್ಲಿ ಅಡಗಿ ಕುಳಿತರೆ, ಯಾರಿಗೆ ತಿಳಿದೀತು ? ಹಿಂಡಲಲ್ಲಿ ಹುಲಿಯ ಹೆದರಿಕೆಗೆ ಗಂಟೆ ಸಹ ಬರಲಾರದು (ಸ್ವಕ್ಕಹೊ. ೩೦) ; ಕೊಳದ ಮೂಡಿಗೆ ಕೇದಕೆಯ ಹಿಂಡಲು ಇಲ್ಲವೇನಮ್ಮ. ಆ ದಾರಿಯಲ್ಲಿ ನಡೆಯಿತು ನೋಡಿ ಎಂದಳು (ಹದ್ಯಕ. ೧೫); ಗಡಿಬೇಲಿಯ ಮುಂಡುಗದ ಹಿಂಡಲಿನಲ್ಲಿ ಕಣ್ಮರೆಯಾಗಿದ್ದ ಕಾಲುದಾರಿಯ ಸಮೆದ ನುಣ್ಪಿನ ಬೂದುಬಣ್ಣದ ರೇಖೆ (ಮರಳು. ೪೩). ಹಿಂಡಿಲು : ೧. ತನ್ನ ಮದುವೆಯ ಕೆಂಜಿಗೆ ಹಿಂಡಿಲನ್ನು ಕಡಿದು ನನ್ನ ಮೇಲೆ ತಳ್ಳುತ್ತಿದ್ದಾನಲ್ಲಾ ಎಂಬ ಸಿಡುಕೂ ಅವರ ಸಿಟ್ಟಿನ ನುಡಿಗಳಿಗೆ ಕಾರಣವಾಗಿತ್ತು (ಮರಳು. ೩೯೫). ೨. ಬಿದಿರ ಹಿಂಡಿಲ ಮುಳ್ಳು ಗುಜುಜು ನಿಟ್ಟಣದೊಳಗ್ಗದ ಕಾಲಗತ್ತಲೆಯೊಳಂ ಪೋಗಬೇಕಲಾ. . .ಪಾಪಿಗಳು (ಶೀಕೃಷ್ಣ. ೪-೦೬-೦೩) ; ಬಿದಿರ ಹಿಂಡಿಲುಗಳಾವರಿಸಿ ಬೆಳೆದಿಹ ಬಿಂಡಿಲುಗಳೊತ್ತೊತ್ತಿಲುಜುಬಿದ ತಂಡ ತಂಡದ ಬಳ್ಳಿ ಗಿಡು ಮೆಳೆ ಮೆಚ್ಚಿದುದೊಗ್ಗಿನಲಿ (ಶ್ರಹ್ಯಕ. ೪-೦೦); ಬೆತ್ತದ ಹಿಂಡಿಲು, ವಾಟೆಯ ಹಿಂಡಿಲು, ಬಿದಿರ ಹಿಂಡಿಲು, ಗುರಗಿ ಹಳು ಎಲ್ಲ ಕಿಕ್ಕಿರಿದು-ಬೆಳೆದಿದ್ದು, ಯಾವಾಗಲೂ ಸರಲು ನೀರು ಹರಿಯುತ್ತಿದ್ದ ತಾಣ (ಮಳಮ. ೬೫). [ ಪಿಂಡು₂ + -ಅಲು (<-ಅಲ್₂) ]

**ಪಿಂಡಸ್ಥ** (ನಾ). [ಜೈನ] ಧ್ಯಾನದ ಪದಸ್ಥ, ಪಿಂಡಸ್ಥ, ರೂಪಸ್ಥ ಮತ್ತು ರೂಪಾತೀತಗಳೆಂಬ ನಾಲ್ಕುವಿಧಗಳಲ್ಲಿ ಒಂದು ; ಆತ್ಮ ಚಿಂತನೆಯಿಂದ ಸಂಸಾರಬಂಧನವನ್ನು ನಷ್ಟಗೊಳಿಸುವುದು : ಪದಸ್ಥಂ ಪಿಂಡಸ್ಥಂ ರೂಪಸ್ಥಂ ರೂಪಾತೀತಂ ಎಂದು ಧ್ಯಾನಂ ಚತುರ್ವಿಧ ಮಕ್ಕುಂ (ಚಾರ. ೫೬೩). [ ಸಂ. ]

**ಪಿಂಡಳಿಗೆ** (ನಾ). ಒಂದು ಬಗೆಯ ತೆರಿಗೆ.—ಸಂಂಕ : ಪ್ರತಿವರುಷವು ಪಿಂಡಳಿಗೆಯಾಗಿ ತಿಬುವ ಗ ೧೮ (ಬೊಂಕಶಾ. ೦೯೩೩. ಶಾವೇಂ. ೮೨-೬; 1191). [ ? ]

**ಪಿಂಡಟ್** (ಕ್ರಿ). ಗುಂಪು ಚೆದರಿ ಹೋಗು,—ಚೆಲ್ಲಾಪಿಲ್ಲಿಯಾಗು ; ಹಿಂಡೊಡೆ : ದಿವಿಜಕುಜಂಗಳಾರವೆಗಳಾದುವು ಸಿದ್ಧರಸಂ ತಟಾಕಮಾದುವು ಸುರಧೇನು ಪಿಂಡಟ್ಯುದೊಂದೆಡೆಯೊಳ್ ನೆರೆದಿರ್ದುವು (ಶಂಕಾಪು.೩-೬೦೯). [ ಪಿಂಡು₂ + ಅಟು₁ ]

**ಪಿಂಡಾಂಡ** (ನಾ). ದೇಹ: ಶರೀರ : ಪಿಂಡಾಂಡವೆಸೆದುದು ಸ್ಥೂಲಕಾರಣ ಸೂಕ್ಷ್ಮ ತನುವಿನಲಿ (ಹಂಶಾ. ೯೬); ನಿಃಕಲ ಪರಶಿವನಿಗೆ ಮುನ್ನಿನಂತೆ ಜಗತ್ ಸೃಷ್ಟಿ ಮಾಡುವ ಲೀಲೆದೋರಲು ಆ ವೃಷಭೇಂದ್ರನಿಗೆ ನಿನ್ನ ಸದ್ಧರ್ಮದಿಂದ ಪಿಂಡಾಂಡಗಳ ನಿರ್ಮಿಸು ಎಂದು ಪೇಳಲು (ಶೈರಸೂ. I, ೬೨); ಎಂದು ಅಷ್ಟತನುಗಳು ನಿರ್ಮಿತವಾಗಿ ಪಿಂಡಾಂಡವಾದುವು ಅಂದು ಇಂದು ಪರಿಯಂತರ ಬಂದೆನಯ್ಯ ಬಹುಜನ್ಮಂಗಳಲ್ಲಿ (ಅಖಂಡೇ. ೬-೩).

[ಪಿಂಡ + ಅಂಡ₂]

**ಪಿಂಡಾಕ್ಷರ** (ನಾ). ಸಂಯುಕ್ತ ವ್ಯಂಜನಾಕ್ಷರ : ಉಳಿದ ಪಿಂಡಾಕ್ಷರಂಗಳು ಆಕರ್ಷಣಕರ್ಮದೊಳಂ ಅಹುದು ಐಂಕಾರದಿಂದಂ ಸಾರಸ್ವತಸಿದ್ಧಿಯಕ್ಕುಂ (ಶ್ರತಿಶಾ. ೦೦-೧೩). [ ಪಿಂಡ + ಅಕ್ಷರ ]

**ಪಿಂಡಾದಾನ** (ನಾ). ಆಹಾರವಸ್ತು, ಪಡಿ ಅಥವಾ ಕೂಲಿಯನ್ನು ಕೊಡುವುದು : ೫೦ ಗದ್ಯಾಣ ಪೊನ್ನಂ ಪಿಂಡಾದಾನದಿಂದಂ ಧರ್ಮ್ಮವತ್ತಳೆಯಿಂ ಶಿಬುವಂತಾಗಿ ಧಾರಾಪೂರ್ವಕಂ ಮಾಡಿ . . . ಕೊಟ್ಟರ್ (ಶಾಇ. XI-ii, ೦೫೪-೬೩; 1104); ಸರ್ವ್ವಬಾಧಾಪರಿಹಾರವಾಗಿ ಪಿಂಡಾದಾನವಾಗಿ ಕೊಟ್ಟರು (ಪ್ರಅಂ. ೦೯೩೭, ೪೦-೨೫; 1226); ನಿಯತಿ ಪಿಂಡಾದಾನ [ಕ್ರ]ಮದಿಂ ಸ್ಥಳವೃತ್ತಿ ಕ್ಷೇತ್ರನಿಳಯಂಗಳಂ . . . ಸರ್ವ್ವಬಾಧೆ ಪರಿಹಾರವೆನಿಸಿ . . . [ವಿಳ]ಸಜ್ಜಳಧಾರಾಪೂರ್ವ್ವಕಂ ಪುನರ್ದ್ದತ್ತಿ ಮಾಡಿ (ಶಾಇ. XX. ೨೦೫-೩೪; 1247); ಕಟ್ಟುಗುತ್ತಗೆ ಪಿಂಡಾದಾನಯು ಪಟ್ಟಣಕ್ಕೆ ಒಡಂಬಟ್ಟು ಕೊಟ್ಟರು (ಎಕ. XIV, ಮಳ. ೮೪೨-೨೨ ; ಶ. 1281).

[ಪಿಂಡ+ಆದಾನ]

**ಪಿಂಡಾನೆ, ಹಿಂಡಾನೆ** (ನಾ). ಹಿಂಡಿಗೆ ಸೇರಿದ ಆನೆ : ಕಾಳಿಯಿಲ್ಲದೆ ಬಂದು ಪಿಂಡಾನೆಗಳೊಂದುಗೂಡಿ ಶಿಕ್ಷೋಪಕರಣಂಬೆರಸು . . . ಎಲ ಗಜಂಗಳಂ ಪಣ್ಣಿ ಕೈಗೈದು ಪೂರ್ವ್ವಸವಮನವಷ್ಟಂಭಿಸಿ ಸಂಭ್ರಮೋದಿಗೆ ನೆರಪಿದಾಗಳ್ (ರಾಜಶೇ. ೬-೦೧ ವ). ಹಿಂಡಾನೆ : ಗಜಘಟಾಪ್ರತಿಮಾನದಲಿ ಕೋದಂಬುಗಳು ಹಿಂಡಾನೆಗಳನೇಳಂಟನೊದೆದೋಡಿಸುವ (ಕುಪ್ರಾಶ. ೩-೦೫). [ಪಿಂಡು₂+ಆನೆ₁]

**ಪಿಂಡಾಯು** (ನಾ). [ಜ್ಯೋತಿ] ಸೂರ್ಯಾದಿ ಗ್ರಹಗಳ ಬಲಾಬಲಗಳ ಮೇರೆಗೆ ನಿರ್ಣಯಿಸಿ ಲೆಕ್ಕ ಹಾಕುವ ಆಯುಸ್ಸಿನ ಪ್ರಮಾಣ,—ಪರಿಮಿತಿ : ಇರೆ ನೀಚದೊಳರ್ಧಮನಪಹರಿಸುಗುಮಾ ನೀಚರಾಶಿಯಿಂದಂ ಪೂರ್ವಾಪರದೊಳನುಪಾತದಿಂ ಪರಿಹರಿಸುಗುಮಖಿಳ ಗ್ರಹಾ[ಯು] ಪಿಂಡಾಯುವಿನೊಳ್ (ಜಾತಿ. ೬-೦೨). [ಪಿಂಡ+ಆಯು₂]

**ಪಿಂಡಾಯುಷ್ಯ** (ನಾ). = ಪಿಂಡಾಯು : ಧರಣೀಜಂ ಪದಿನೈದು ಘರ್ಮರುಚಿ ಪತ್ತೊಂಬತ್ತು ಶಾಶಾಂಕಿ ಪನ್ನೆರಡಿಪ್ಪತ್ತು ದಿನಾಧಿನಾಥಸುತಂ . . . ದೈತ್ಯಗುರುವಿಪ್ಪತ್ತೊಂದುಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡದು ಪಿಂಡಾಯುಷ್ಯಮಕ್ಕುಂ ಧ್ರುವಂ(ಜಾತಿ. ೬-೦೦).

[ಪಿಂಡ + ಆಯುಷ್ಯ]

**ಪಿಂಡಾರಿ, ಪೆಂಡಾರಿ** (ನಾ). ಹಾದಿ ತಡೆಯುವಂಥ ಕಳ್ಳರ ಗುಂಪು,—ಕುಡುಗರ ಸಮೂಹ : ಇಂಡಿಯಾದೇಶದ ಅಭಿವೃದ್ಧಿಯನ್ನು ಸಾಧಿಸಲು ಪಿಂಡಾರಿಗಳನ್ನು ಬಿಡಬೇಕೆಂದು ನಿನ್ನ ಹಂಚಿಕೆಯೇನು? (ರಾರಾಜ. ೦೩೯). ಪೆಂಡಾರಿ : ಪೆಂಡಾರಿಯರು ಬರುವಾಗ ಹೆಂಡಿರ ಗೊಡವೆಯೇನು ? (ಗಾದೆ). [←ಹಿಂ. ಪಿಂಡಾರಾ, ಪಿಂಡಾರೀ; ಮರಾ. ಪೆಂಢಾರಾ, ಪೆಂಢಾರೀ./ ತಮಿ. ಪಿಣ್ಡಾರಿ, ಪೆಣ್ಡಾರಿ; ತೆಲು. ಪಿಂಡಾರಿ]

**ಪಿಂಡಾಲು** (ನಾ). ಒಂದು ಸಸ್ಯ ಬಗೆಯ ಮತ್ತು ಅದರ ಗಡ್ಡೆ : "ಕಂದಗ್ರಂಥಿ—ಪಿಂಡಾಲು" (ಟಕಾ. ೨೫); "ರೋಮಾಲುಃ—ಪಿಂಡಾಲು" (ಟಕಾ. ೦೪೦). [ಸಂ.]

**ಪಿಂಡಿ₁, ಹಿಂಡಿ₁** (ನಾ). ೧. ಎಣ್ಣೆಯ ಕಾಳುಗಳಿಂದ ರಸ ತೆಗೆದ ಮೇಲೆ ಉಳಿಯುವ ಶೇಷ : ಬೂದಿಯಾದ ಪುಳ್ಳಿಯಂತೆ ಪಿಂಡಿಯಾದ ಎಳ್ಳಿನಂತೆ ಬಸಿಬಂ ಪೊಕ್ಕ ಕೊಟನಂತೆ (ರಮ್ಮಾಕು. ೯-೨೬); ಪಿಂಡಿಯಿಂದೆಮ್ಮೆಯ ಪಾಲ್ ಪೆರ್ಚುವಂತೆ ಪೊಲೆವಾಲಿಂ ಮಕ್ಕಳ್ ಪೆರ್ಚುವಂತೆ (ರಮ್ಮಾಕು. ೧೪-೦೦೪). ಹಿಂಡಿ₁ : ೧. "ತೈಲಕಂ ಹಿಂಡಿ" (ಮಂಗರಾ.೦೨೦-೫); ಹಿಂಡಿಯುಂ ನಂಬಿ ಎಣ್ಣೆಯನುಗುವ ತಿಲ್ಲಿಗನುಮಂ (ರಮ್ಮಾಕು. ೬-೫೦); ಚಂಡಿತನವೆಂಬ ಹಿಂಡಿ ಇಡಬೇಕು ದಿಂಡತನವೆಂಬ ಪೆಂಡೆ ಮೋವು . . . ಪಾಂಡುರಂಗ ಗುಂಡಿ ಒಳಗೆ ಹಿಂಡಿಕೋಬೇಕು (ಶ್ರೀರಂರ. ೨-೫೫-೨); ಮಿಂಡೆಯ ಗಂಡ ಬಾದಂಡಿಗೆ ಹೋಗಿಹರೆ ಹಿಂಡಿಯು ಹೆಡಿಗೆಗೆ ಕೋಣನ ತಂದು ಕಣುಗಂಡಾ ಹೊಡೆದಂತೆ (ಸರ್ವಜ್ಞ. ೦೯೬೫); ಹಿಂಡಿಯನ್ನೂ ಅಡಿನ ಹಾಲನ್ನೂ ಅಂಕೋಲೆ ಬೀಜಗಳೊಡನೆ ಅರೆದು (ಶಾಗಂಧ. ೪೩೮-೮); ಸಂತೆಗೆ ಹೋದಮ ಭೀಮಣ್ಣ ಹಿಂಡಿಯ ಕೊಂಡನು ಹತ್ತು ಮಣ (ಕಶಕ. ೩-೬೬). ೨. ನಂಜಿಕೊಳ್ಳಲು ಮಾಡುವ ಒಂದು ಬಗೆಯ ಖಾರವಾದ ವ್ಯಂಜನಪದಾರ್ಥ; "ಚಟ್ನಿ, ಖಾರ" (ಜಾತಕೋ. ೫೬) ; ಒಳ್ಳಿತೆನಿಸಿದ ತೈಲ ಕುಂಭಕೋಟಿಗಳ ತಂದರು ಹಿಂಡಿ ಕಚಡಿಗಾಗಿ (ಸಿದ್ಧರಾ. ೮-೫೦); ಹುಗ್ಗಿ ಕಿಚ್ಚಡಿಯುಚೆಯಪ್ಪ ಸೇಮಗೆ ಹಿಂಡಿ ಗುಗ್ಗರಿ . . . ದೋಸೆಯ ಸಬ್ಬಲಿಗ್ಗೆಯಹುತಿಯೊಪ್ಪಿತಲ್ಲಿ (ಕರಚ. ೨೦-೧೨೬); ಆ ಹುಡುಗಿ ಒಳಗಿನಿಂದ ರೊಟ್ಟಿ, ಬೇಳೆ, ಹಿಂಡಿ, ಎರಡು ಉಳ್ಳಾಗಡ್ಡಿ ತೆಗೆದುಕೊಂಡು ಬಂದಿತು (ಕಣಬಹು. ೨೦). ೩. ಒಂದು ಬಗೆಯ ಸಿಹಿಯಾದ ಖಾದ್ಯ : ಕಳಕಳಸೆ ಪೊಲೆವಾಲವರ್ಧಿಸಿ ಅಳುತಮಿಂಚೆ

ಬಾಲಕನ ಕೈಯಲಿ ಮೆಲುವ ಹಿಂಡಿಯ ಕರಣೆಯಂ ಕೊಟ್ಟಂತು ತಾಯ್ತನ್ನ ಮೊಲೆಯನುಣ್ ಮಾಜಿಬಿಟ್ಟು ಮೆಲ್ಲನೆ ತೊಲಗುವಂದದಿ (ಬಸಪು. ೨೯-೬೮).

ಹಿಂಡಿಯ **ಕಚ್ಚುರಿ** = ಒಂದು ಬಗೆಯ ಸಿಹಿಯಾದ ಖಾದ್ಯ: ಅದಕ್ಕೆ ಬಾಗಿದ ಕೂಳು ಸೇವಗೆಯ ಪಾಯಸ ಪುಳ್ಳಕೃಡಲೆಯ ಹುಗ್ಗಿ ಹಿಂಡಿಯ ಕಚ್ಚುರಿ ಅಲಸಂದೆಯ ಗುಗ್ಗರಿ ಜೇನುತುಪ್ಪ . . . ಮಂತ್ರ ಸಮನ್ವಿತವಾಗಿ . . . ನಿವಾಳಿಸಿ (ಶಾಂಣ. ೦೨೯-೨); ಸೊಸಲುಂಡಿಗೆ ಹಿಂಡಿಯ ಕಚ್ಚುರಿ ಜೇನತುಪ್ಪ ಬೆಲ್ಲ ಕಬ್ಬಿನ ಹಾಲು . . . ಇವಂ ಮಂತ್ರ ಸಮನ್ವಿತವಾಗಿ ಶಿಶುವಿಗೆ . . . ನಿವಾಳಿಸಿ (ಶಾಂಣ. ೦೩೦-೨೦).

[< ಪಿಂಡು$_1$. / ತಮಿ. ಮಲ. ಪಿಣ್ಣ; ತುಳು. ಪಿಂಡಿ, ಪುಂಡಿ, ಹಿಂಡಿ; ತೆಲು. ಪಿಂಡಿ]

**ಪಿಂಡಿ$_2$** ' ಪುಂಡಿ ' ನೋ.

**ಪಿಂಡಿ$_3$** (ನಾ). ೧. ಮುದ್ದೆ ; ಉಂಡೆ : ಮಂ(ಮುಂ)ಡುಗೆಯ ದಳಿಪಮಂ ತಂದರೆದು ತೊಳೆದು ಮಣ್ಣಿನ ಬಾಯೊಳ್ ನಿಲೆ ಪಿಂಡಿಯ ನಿಕ್ಕಲೊಡಂ ತೊಲಗೆ ವಿಷಂ ಸುಖದಿನಿರ್ದನಾ ದಷ್ಟನವಂ (ಖಮುದ. ೧೬-೧೦೦). ೨. ಗುಂಪು; ಸಮೂಹ : ಗುತ್ತಿ ನೋಡುತ್ತಾನೆ, ಇಂಬಳ ಗಳ ಪಿಂಡಿ! (ಮರಿಮ. ೧೮). ೩. ಕಟ್ಟು ; ಹೊರೆ : ಹುಲ್ಲ ಹೊರೆಯ ಮಾರುವ ಭಂಡಿಗಳಲಿ ಕಲ್ಲು ತರುವ ಸಾದೆಯ ಪಿಂಡಿಯ ಪುರದಲ್ಲಿಯೇ ತಿರುಗಿಪ (ಕಕ್ರಸ. IV, ೦೯-೫); ಅವನ ಮಿಾಸೆಯ ಕೂದಲು . . . ಹುಲ್ಲಿನ ಪಿಂಡಿ ಇಟ್ಟಾಗ ನೇತಾಡುವ ಹುಲ್ಲಿನಂತೆ ಇದ್ದವು (ಖುಶಾತಾ. ೧೯); ಕಮಲಪ್ಪನವರ ಯಜಮಾನರು ವೀಳೆಯದೆಲೆ ಸಾಹುಕಾರರು. ಪಿಂಡಿ ಗಳಲ್ಲಿ ಸೊಗಸಾಗಿರುವುದನ್ನು ಆರಿಸಿ ತಂದು ಹೆಂಡತಿಗೆ ಕೊಡುತ್ತಾರೆ (ತಾಯಿಳ. ೩೦). [ಸಂ.]

**ಪಿಂಡಿಕ** (ನಾ). ಊತ ; ಬಾವು : " ಕರ್ಮವಲಿಯೆಂದೆನಲು ಕಾಮಾಲೆ ಪಿಂಡಿ [ಪಾಠಾಂ. ಪಾಂಡು]ಕಂ" (ಮಂಗರಾ. ೦೦೯-೪). [ಸಂ. ಪಿಂಡಿಕಾ]

**ಪಿಂಡಿಕಾಯಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ : ಪಿಂಡಿಕಾಯಿ. ರಾಮಗೋಟು (ವೃಕಿಗ. ೫೫-೦೦೦೪).

[ಪಿಂಡಿ$_2$ (< ಪುಂಡಿ) + ಕಾಯಿ$_4$ (< ಕಾಯ್$_4$)]

**ಪಿಂಡಿಕೆ** (ನಾ). ೧. ಊತ : ಬಾವು. ೨. ಕಾಲಿನ ಮಿಾನಖಂಡ ; ಕಣಕಾಲು : ಪ್ರೋದ್ಬದ್ಧಪಿಂಡಿಕಾಃ . . . ಗಂಟುಕಟ್ಟಿದ ಮಣಿ ಕಾಲುಳ್ಳವರು (ವೃಶ್ವಸಾ. I. ೦೯). ೩. ಚಕ್ರದ ನಾಭಿ; ಗುಂಬ : " ನಾಭಿ ಪಿಂಡಿಕೆಯೆನಲು ಕೂಲುದುಂಬಕ್ಕು [ಪಾಠಾಂ. ಪಿಂಡಕ್ಕೆಯ್ಕೆನಲು ಕೂಡಲುಂಬಕ್ಕು] " (ಮಂಗರಾ. ೮೪-೨೪). ೪. ಪೀಠ ; ಆಸನ. ೫. (ದೇವರ ಪ್ರತಿಮೆ, ಲಿಂಗ ಮೊದಲಾದುವುಗಳ) ಆಧಾರಪೀಠ ; ಗದ್ದುಗೆ : ಇಷ್ಟಲಿಂಗವು ಅರ್ಥಾತ್ ಒಂದು ಭೌತಿಕ ಲಿಂಗವು. ಅದರ ಪೀಠ, ಪಿಂಡಿಕೆ ಹಾಗು ಗೋಮುಖಗಳು ಬಿಂದು–ನಾದ–ಕಲೆಗಳ ಪ್ರತಿನಿಧಿ ಗಳು (ಶರಶ. ೧೯೪); ಟಿಬೇಟದಲ್ಲಿ ಹಿಮಾಲಯದಂಥ ಶೈಲಶ್ರೇಣಿ ಯೊಂದು ಹಬ್ಬಿದೆ . . . ಇದರ ಆಕಾರವು ಮಹಾದೇವರ ಪಿಂಡಿಕೆಯಂತಿದೆ (ಕೈಲಾಸ. ೬೨); ನಕ್ಷತ್ರಾಕಾರದ ತಲವಿನ್ಯಾಸದ ಮೇಲೆ ಚತುರಸ್ರಾಕಾರ ವಾಗಿ ಗರ್ಭಗುಡಿ ಇರುತ್ತದೆ. ಇದರ ಮಧ್ಯದಲ್ಲಿ ಪಿಂಡಿಕೆಯನ್ನಿಟ್ಟು . . . ಮೂಲಬೇರವನ್ನು ಸ್ಥಾಪಿಸಿರುವರು (ಹೊಯ್ಸವಾ. ೧೯). [ಸಂ. ಪಿಂಡಿಕಾ]

**ಪಿಂಡಿಗೆ**, ಹಿಂಡಿಕೆ, ಹಿಂಡಿಗೆ (ನಾ). ೧. (ದೇವರ ಪ್ರತಿಮೆ, ಲಿಂಗ ಮೊದಲಾದುವುಗಳ) ಆಧಾರಪೀಠ ; ಗದ್ದುಗೆ : ಜಲವೆ ಪದಶಿಲೆ ಪೃಥ್ವಿಯೆ ಪಿಂಡಿಗೆ ಆಕಾಶವೆ ಲಿಂಗ (ಅವಕಂ. ೦೫೫-೭೦೦); ದೇಪ ಸಜ್ಜೆ ಯನು ಉಪ್ಪರಿಸಿಮೆಸೆ . . . ಬಸವ ಭಾವಂ ಬಲಿದು ಮುನ್ನವೇ ಸಜ್ಜೆಯೊಳು ಎಸೆವ ಲಿಂಗಂಗಳಾಗುತ್ತಮಿರೆ ಸಜ್ಜೆಯೊಳು ತೊಟ್ಟು ಪಿಂಡಿಗೆ [ಪಾಠಾಂ. ಪಿಡಿಕೆ] ಯಾಗೆ ಫಲವೆ ಲಿಂಗಮದಾಗೆ (ಬಸರ. ೯-೫೭) ; ಕಕಾರಕ್ಕೆ ಗಕಾರಂ . . . ಪಿಂಡಿಕಾ–ಪಿಂಡಿಗೆ (ಷಡ್ರ. ೨೫೫ ವೃಯೋ). ೨. ಗುಂಪು ; ರಾಶಿ ; ಸಮೂಹ : " ಪಿಂಡಿಗೆ—ಪಿಂಡಿಕಾ—ಉರುಳೆ, ಗುಂಪು ' (ಕರ್ನಕೋ. . ೨೬); ಮೇರುವಿನೊಳಚ್ಚೊತ್ತಿದ ಹೊಸ ಪೊನ್ನ ಪಿಂಡಿಗೆ ಯೊಡನೆ . . . ನವರತ್ನವೃಷ್ಟಿಯಂ ಶಿವಂ ಕಱೆದನೆಂಬಂತೆ (ಪಾಶ. ೦೨-೬೦). ೩. ಕಟ್ಟು ; ಪೆಂಡಿ : ಪಸಿಯರಿಸಿನದ ಪಿಡಿಯೆಲೆಯ ಪಿಂಡಿಗೆಯಿಂ ಕರ್ಪಾಳದ ಕಟ್ಟುಗಳಿಂ ಸುಬ್ಬಗೊಂಡ ಕರ್ಬಿನ ತಟ್ಟೆಗಳಿಂ . . . ತಿರುಳೆಲೆಯ ತೆರೆಸುತ್ತಿನೊಳಮೆಸೆವ ಪಸುರ್ವಂದರೊಳಗೆ (೦೬ಲಾತ. ೦೦-೫೫). ಹಿಂಡಿಕೆ: ೩. ತಲೆಯ ಮೇಲೆ ಹಂಡೆ, ಹೆಗಲ ಮೇಲೆ ಒಗೆದ ಬಟ್ಟೆಗಳ ಹಿಂಡಿಕೆ (ಸ್ವಹಿತ. ೪೨). ಹಿಂಡಿಗೆ: ೨. ಮಱುಗೊಂಡ ಕುತ್ತಮಡಂಗಿ ಪದುಳಮಿರ್ಪ ತೋಟಿಯ ಕೋಳ್ವಲನ ನರದ ಹಿಂಡಿಗೆಯ ಬಲ್ಪಿಂತ ಕೊಂದು ಬಲ್ಪಿಂ ಮೈವೆರ್ಚಿ . . . ಪೋಪೋಪ ಕುದುರೆಗೆ (ಪಾಶುಕ್ಕ. ೦೪೮-೨೮)

ಹಿಂಡಿಗೆ ಬಿಗಿ = ಒಟ್ಟಾಗಿ ಸೇರಿಸಂ ; ಒಂದುಗೂಡಿಸು : ಹೂಡಿ ದೆಲು ಮರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರವಿಂ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಶಾ. ೮೫).

[< ಸಂ. ಪಿಂಡಿಕಾ]

**ಪಿಂಡಿತ** (ಗು). ೧. ಮುದ್ದೆಯಾಗಿ ಮಾಡಿದ; ಉಂಡೆಯಾಗಿ ಮಾಡಿದ. ೨. ಗುಂಪುಗೂಡಿದ ; ಒಟ್ಟಾಗಿ ಸೇರಿದ. [ಸಂ.]

**ಪಿಂಡಿತಕ** (ನಾ). ಒಂದು ಬಗೆಯ ಸಸ್ಯ ; ಪಿಂಡೀತಕ : ಪಿಂಡಿತಕ ಮಂಗಾರವಲ್ಲರಿ ಪುಂಡ್ರ ಬಿಲ್ವಜ ವೀರನಾಳಿಯ ಖಂಡದರಾಶ್ಮಕುಷ್ಠ ಬರ್ಹದ ವೃಕ್ಷ ಗಂಧಚಯ. . .ಎಸೆದುವಾ ವನದಿ ? (ಶೋಗಯ. ೪-೪೦)

[< ಸಂ. ಪಿಂಡೀತಕ]

**ಪಿಂಡಿಲು** ' ಪಿಂಡಲು ' ನೋ.

**ಪಿಂಡಿವಳ** ' ಬಿಂಡಿವಾಳ ' ನೋ.

**ಪಿಂಡಿವಾಳ** ' ಬಿಂಡಿವಾಳ ' ನೋ.

**ಪಿಂಡಿಶೂರ** (ನಾ). ಮನೆಯಲ್ಲಿ ಮಾತ್ರ ಶೌರ್ಯ ತೋರಂವವನು; ಜಂಭ ಕೊಚ್ಚುವುದರಲ್ಲಿ ಶೂರನಾದವನು : " ಚೀಱ್ ಗೃಹದೊಳು ಗರ್ಜಿಪಂ ಪಿಂಡಿಶೂರನಕ್ಕು" (ಮಂಗರಾ. ೩೦-೦೫). [< ಸಂ. ಪಿಂಡೀಶೂರ]

**ಪಿಂಡಿಸು** (ಕ್ರಿ). ಕುಗ್ಗಿಸು ; ದುರ್ಬಲಗೊಳಿಸು : ಜರೆ ನಿಜಶಕ್ತಿಯಿಂ ಪಿಟಾದು ಪಿಂಡಿಸದನ್ನೆಗಂ. . . ನೆನೆವುದಿಂದ್ರನರೇಂದ್ರಫಣೀಂದ್ರವಂದ್ಯನಂ (ಸಮುಕ. ೧–೧೦೫). [ಪಿಂಡು$_1$ + –ಇಸು$_3$]

**ಪಿಂಡಿಸೊಪ್ಪು**, ಪಿಂಡೀಸೊಪ್ಪು, ಹಿಂಡಿಸೊಪ್ಪು (ನಾ). ಒಂದು ಬಗೆಯ ಸೊಪ್ಪು : (೬). **ಪಿಂಡೀಸೊಪ್ಪು** : ಮಣಿತುತ್ತೀಗಿಡ. ಪಿಂಡೀಸೊಪ್ಪು (ವೃಕಿಗ. ೪೩-೮೨). **ಹಿಂಡಿಸೊಪ್ಪು** : ನೆಗ್ಗಿಲ ಬೇರು, ಹಿಂಡಿಸೊಪ್ಪಿನ ಬೇರು ಸಹ ೧ ಪಡಿ ನೀರಲ್ಲಿ ಹಾಕಿ . . . ಶರ್ಕರೆವರೆಗೂ ತೆಗೆದುಕೊಳ್ಳಲು ಮೂತ್ರಕಟ್ಟು ಬಿಡುವುದು (ಸಕವೈ. ೩೬೪).

[ಪಿಂಡಿ$_2$ (< ಪುಂಡಿ) + ಸೊಪ್ಪು$_1$]

**ಪಿಂಡೀತಕ** (ನಾ). ಒಂದು ಬಗೆಯ ಸಸ್ಯ : "ಬೋನಗಾರೇ–ಪಿಂಡೀತಕ. ಮರುಪಕ, ಶ್ವಸನ, ಕರಹಾಟಕ, ಶಲ್ಯ, ಮದನ " (ಪಾಶಿರಾ. ೬): " ಪಿಂಡೀತಕಃ, ಮರುವಕಃ . . . ಮದನಃ—ಈ ೬ ಮಂಗಾರೆಗಿಡದ, ಬೋನಗಾರೆಮರದ ಹೆಸರುಗಳು" (ಸಿದ್ಧಾಂತಿ. ೦೨೪). [ಸಂ.]

**ಪಿಂಡೀಶೂರ** (ನಾ). ೧. ಮನೆಯಲ್ಲಿ ಮಾತ್ರ ಶೌರ್ಯ ತೋರು ವವನು,–ಜಂಬ ಕೊಚ್ಚುವುದರಲ್ಲಿ ಶೂರನಾದವನು: "ಗೇಹೇನರ್ದೀ, ಗೃಹೇಶೂರಃ, ಪಿಂಡೀಶೂರಃ—ಈ ೩ ಗೃಹಗರ್ಜನೆಗೆಯ್ವವಂ" (ಹಲಾಯು. ೬೯-೨೦೨). ೨. ಊಟದ ವಿಷಯದಲ್ಲಿ ಮಾತ್ರ ಶೌರ್ಯವುಳ್ಳವನು. [ಸಂ.]

**ಪಿಂಡೀಸೊಪ್ಪು** ' ಪಿಂಡಿಸೊಪ್ಪು ' ನೋ.

**ಹಿಂಡು₁, ಹಿಂಡ್ಕು₁** (ಕ್ರಿ). ೧. ರಸ ಒಸರುವಂತೆ ಗಟ್ಟಿಯಾಗಿ ಹಿಸುಕು,–ಅದುಮು; ನೀರು ಹೊರಬರುವಂತೆ ನುಲಿ: ಹಿಂಡುವ ನಿಂಬೆಯು ಪಣ್ ವಿಧುವುಂಡಲವೆಳಜೊನ್ನವೆಂಟಿವ ನೀರ್ವೊನಲೆನಿಕುಂ (ಶಶಿಂ. ೬–೨೩); ತೆಂಗಾಯಂ ಬಲುಹಿಂದ ಭಿನ್ನಿಸಲೆನೀರ ಸೇವಿಸಬೇಕು ರಸದಾಳಿ ಕೆತ್ತಬೇಕು ಒಲಿದು ಹಿಂಡಲಿಬೇಕು ಮಾವಣ್ಣ ಬಾಳೆವಣ್ಣಾಲಿಯು ಬೇಕೊಡೆಯುದೆ ಕೆತ್ತದೆ ಹಿಂಡದೇ ಸುಲಿಯದೇ ದ್ರಾಕ್ಷೆಫಳವನ್ನು ಸವಿದಂತಾಯ್ತು (ಶಶಶೋ. ೨೬–೩). ೨. ನುಲಿಚು; ತಿರುಚು: ವಿಭು ಸಾಯೆ ಪೊಯ್ದು ಕಿವಿಯಂ ಹಿಂಡಿ ದೂಡಲೊಡರ್ಚಿ ಬಂದನೇ (ಸಂಕುಪಾ. ೨–೬೬). ೩. ಸಂರಿ; ಎರೆ; ಹೊಯ್ಯು: ಕಲ್ಲಲ್ಲಿ ನಾರೆತ್ತುವರ್ ಮರುಳಂ ಪೋ ಪುರುಳಾಗಿಪರ್ ಕಿವಿಗಳೊಳ್ ಪೀಯೂಷವಂ ಹಿಂಡಬರ್ವರಿರಯೊಳ್ ಸಂದ ಕವಿಪ್ರವೇಕರ ಪಲಂ ಬಲ್ಲರ್ ಪೆಱರ್ ಬಲ್ಲರೇ (ಶೀಶಾಪ. ೧–೦೩); ಆ ಕಾಂತಾಕಟಾಕ್ಷಶ್ರೇಣಿಗೊಯ್ಯನೆ ಮುಂದಿಕ್ಕಿದ ಚಂದನಾಂಬುವನಲಂಪಂಬೆತ್ತು ತಾಂ ಹಿಂಡಿದಳ್ (ಉದ್ಭಟ. ೬–೨೦); ಪರಿಪರಿಯ ಸಿಂಗಾರದಲಿ ನೋಳ್ಪರ ಬಗೆಯನಿರ್ಕುಳಿಗೊಳಿಪ ಕೇಳ್ವರ ಕಿವಿಗೆ ವಾಕ್ಸುಧೆಯ ಹಿಂಡುತ ಬಂದರರವುನೆಗೆ (ಸಾಳ್ವಭಾ. ೩೨–೦೮). ೪. (ಆಲಂ) ನಿರ್ಬಲಗೊಳಿಸು; ನಿಸ್ಸತ್ವಗೊಳಿಸು: ಈ ತೆಱದಿಂದಂ ನಿನ್ನಂ ಘಾಶಿಸಿ ಬಿಡದಲೆದು ಪಿಟಿದು ಹಿಂಡಿದ ದುಃಖವ್ರಾತವಿದು ಮಗಳೆ (ಅಂಕು. ೩–೩೬). **ಹಿಂಡ್ಕು₁**: ೧. "ಹಿಂಡು–ನಿಷ್ಪೀಡನೇ, ಗೋಸಮೂಹೇ ಚ" (ಶಮಣಿ); ಮಳಲೊಳ್ ತೈಲಂಗಳಂ ಹಿಂಡಲಕ್ಕಡವೀಸಿಂಗವ ತಿದ್ದಲಕ್ಕು ಕಟಿಯಲ್ ಬಕ್ಕುಗ್ರದ ವ್ಯಾಘ್ರವುಂ ಕಡುಮೂರ್ಖಿಂ ಹಿತ ಕೇಳ್ವನೇ (ಸೋಮೇಶ. ೪೪); ಮೇಘಂ ಹಿಂಡಿ ಹರಹಿದಂತಿವೆ ನಭದೊಳ್ (೧೧೪. ೪–೬೨); ಹೊಸ ನಿಂಬೆಹಣ್ಣ ಹುಳಿಯಂ ಹಿಂಡಿಯರಿಸಿನವ ಬೆರಸಿ . . . ಬೋನದೊಳಿಕ್ಕಿ ಬಣ್ಣಿಸಿಯುದಂ ಕಲಸಿ ಬೆಳಿಯುಪ್ಪನಿಕ್ಕಲದು ಸಾಸುವೆಯು ಕಟ್ಟೋಗರ (ಸೂಪಶಾ. ೩–೨೦); ಸ್ಪಂಜಿನ ಕೆರದೊಳು ದೊಡ್ಡ ವರಿರುವರು . . . ತಮ್ಮೊಳಗಿರುವುದನೀಯರು ಹಿಡಿದೊತ್ತಿ ಹಿಂಡಿದ ಹೊರತು (ಬಂಜಾಕ. ೦೯೯–೯೯). ೨. ಕೆಲವರು . . . ಅವನ ಜುಟ್ಟನ್ನೆಳೆಯುತ್ತಲೂ, ಮತ್ತೆ ಕೆಲವರು ಕಿವಿಯನ್ನು ಹಿಂಡುತ್ತಲೂ ಹಿಂಸೆ ಮಾಡುತ್ತಿದ್ದರು (ರಾಜಕ. ೨೦). ೩. ಬೆಂಡಿನಂದದ ಲಘುಕಿನ್ನರಿಯೊಳು ಸ್ವರಮಂಡಲದೊಳು ಶ್ರುತಿಗೂಡಿ ಗಂಡುಗೋಗಿಲೆಯಂತೆ ಹೆಣ್ದುಂಬಿಯಂತಾಗ ಹಿಂಡಿದರಾತ್ಮಸಾರವನು (ಶಕಶ. ೦೯–೦೬೬). ೪. ಪಾಂಡುತನಯರ ನಂದನರು ತಾವ್ವೈಪರೀತನ ಹಿಂದುಳುಹಿ ಹಿಂಡಿದರು ಹೇರಾಳದ ಚತುರ್ಬಲವ (ಕುವ್ಯಾಕ. ೩–೦೬); ಕೊಳನ ಹೊಕ್ಕಿಭದಂತೆ . . ಬಲವನರಿ ಭಟ ಸುಳಿದು ತುಳಿದನು ಹಿಳಿದು ಹಿಂಡಿದನು (ಕೌಶಿರಾ. ೩೬–೦೭); ವಿರಕ್ತರ ಮನದ ಶಾಂತರಸದೊಬ್ಬುಳಿಯನು ಹಿಂಡಿ ಕೆಡಿಸುವ . . . ಮುಂಡಿಕೆಯ ರೂಪುಯೌವನವಿಲಾಸವನು ಬಣ್ಣಪರಾರು (ಸಪ್ಕುಕಾ. ೮–೦೦) ೫. (ಹಾಲನ್ನು) ಕರೆ: ನಿತ್ಯವೂ ಸ್ವಲ್ಪ ಸ್ವಲ್ಪ ಹಿಂಡಿಕೊಂಡು ಕುಡಿಯುತ್ತಾರೆ (ಕಿಂಕಶ. ೦೫); ಹಾಲನ್ನು ಹಿಂಡುವ ಅಥವಾ ಸರಬರಾಯಿ ಮಾಡುವ ಹೊಲಸು ವಿಧಾನಗಳಿಂದಾಗಿ ಹಾಲಿನೊಡನೆ ರೋಗಾಣುಗಳು . . . ಹೆಚ್ಚಾಗಿರುತ್ತದೆ (ಅಕುಶಾ. ೮೫); ಹಿತ್ತಲಿನಲ್ಲಿ, ಹಿಂಡುವ ಹೊತ್ತು ವಿಪಾರಿ . . . ಆಕಳ ಕರು ಒಂದೇ ಸಮನೆ ಒದರ ಹತ್ತಿತ್ತು (ಗಂಗಾಸಾ. ೨೦). ೬. (ಹಾಲನ್ನು) ಕೊಡು: ಅದು ಹಾಲು ಹಿಂಡುತ್ತದೆ (ಮುಂಬಯಿ. ೪–೨೪); ಅವರಿಗೆ ಆಗ ಉಳಿದ ಉಡುಗರೆಗಳೆಂದರೆ . . . ಎರಡು ಹಿಂಡುವ ಆಕಳು (ಹಕ್ಕಿಶ. ೨೬). ೭. ಒತ್ತು; ನೋವು ಮಾಡು: ತುರುಕರ ದಿಂಡುಗುಂಡಿಗೆಯು ಹಿಂಡಿದ ನಿನ್ನಯ ಬಾಹುದಂಡವಂ ಪೊಗಳ್ವೆನೆ? (ಗೀಹಿಂ. ೫೨–೯); ಎಲ್ಲಿಂದಲೋ ಒಳಸೇರಿದ ಕಸವಿಸಿಯು ಅವನ ಹೃದಯವನ್ನು ಹಿಂಡತೊಡಗುವುದು (ಕಟ್ಟಿಹೂ. ೫೫): ತನ್ನ ಗೆಳೆಯರೆಲ್ಲರೂ ದಸ್ತಗಿರಿಯಾದ ಸುದ್ದಿ ಅಜಯನ ಹೃದಯವನ್ನು ಹಿಂಡುತ್ತಲಿತ್ತು (ಅಕ್ಕಾಕ. ೦೬೫). ೮. ಕಾಡು; ಪೀಡಿಸು; ಹಿಂಸಿಸು; ನುಗ್ಗುಮಾಡು: ಉಂಡೆವ್ವೆ ಸವುಚಿತ್ತದಲಿ ನೀವ್ ಕೊಂಡಿರ್ಪೆ ಛಾಯಗಳನೆಡೆಯಲಿ ಹಿಂಡುವಿರಲ್ಲೆ ನಾವು ಸಹಿತೀ ಊರ ಹಾರುವರ (ಕುವ್ಯಾಅ. ೧೦–೩೫); ವ್ಯಸನಕ್ಕೆ ಪ್ರೌಢ ನೊಳೆಜಗದಿರೆಂದು ರಕ್ಕಿಸಿಮುಂಡೆ ಮಗಳ ಹಿಂಡಿದಳು (ಪೋಹಿಶ. ೦೮–೬೫). ೯. ಹೀರು: ಜೇನುಹುಳು . . . ನಾಲಗೆಯ ಮೇಲಿನ ಮಕರಂದ ಶೀರ್ಷಕಗಳಿಂದ ಹಿಂಡಿ ಜಿಪ್ಪೆಯ ಬುಡದಲ್ಲಿ ಒಂದು ಸಣ್ಣ ಕುಳಿಯೊಳಗೆ ಸಂಗ್ರಹಿಸುತ್ತದೆ (ಕೀಟಿಶ. ೯೦). ೧೦. ಇಲ್ಲವಾಗಿಸು; ಮುಗಿಸು; ನಾಶಪಡಿಸು; ಧ್ವಂಸ ಮಾಡು: ಕೊಂಡು ತಾಸುರಿಲಿಂಗವಾದಸಮಿಂಡತೇಜೋ ಮಾಯನು ನಿಮಿಷಕೆ ಹಿಂಡಿದನು ಹದಿನಾಲ್ಕು ಲೋಕವನುರುಹಿ ಘೋಳಿಡಿಸೆ (ಸಂಶಶ. ೬–೫); ಇವನು ಗಡ ಚಿಕ್ಕಂದು ಮೊಲೆಗೊಟ್ಟವಳ ಹಿಂಡಿದ ಗಂಡ ಬಂಡಿಯ ಜವಳಿಗಾಲಲಿ ಮುಱಿದನ್ನೆ ಮಾಮಾ ಸಮರ್ಥನಲೆ (ಕುವ್ಯಾಕ. ೧೧–೦೩).

**ಹಿಂಡಿ ಹಿಟು** = ೧. ಚೆನ್ನಾಗಿ ಹಿಂಡು. ೨. ಅತಿಯಾಗಿ ಹಿಂಸಿಸು: ಒಲ್ಲಣಿಗೆಯಂ ಪಿಟಿವಂತೆ ಹಿಂಡಿ ಪಿಟಿವ ಪಗೆಗೆ . . . ಈ ಪದದೊಳ್ ಕಡಿದೊಟ್ಟದಾಗಳ್ ಗೆಲಲಾಟಿ (ಶಂಶಥಾ. ೦೨–೨೦೬ ವ); ಶತಬಲಿಯೆಂಬಸುರ ಮಹೀಪತಿ ಸುರರಂ ಹಿಂಡಿ ಪಿಟಿ[ಪಾಠಾ. ಹಿಂಡಿ ಹಿಟಿ]ದು ತನ್ನಯ ಪದವಂ ಸುತ್ರನೆನಿಪ ಸಹಸ್ರಬಲಿಕ್ಕಿತಿಪತಿಗಿತ್ತೊಂದು ಗಿರಿಯೊಳಿರ್ದಂ ತಪದಿಂ (ರರ್ವಕ. ೪–೦೬). **ಹಿಂಡಿ ಹಿಪ್ಪಲಿ ಮಾಡು** = ಕುಗ್ಗುವಂತೆ ಮಾಡು: ಕುಗ್ಗಿಸು; ನಿಸ್ಸತ್ವಗೊಳಿಸು: ಅವನ ಹೃದಯವನ್ನು ಕಟುಕರು ಕರುಣೆಯಿಲ್ಲದೆ ಹಿಂಡಿ ಹಿಪ್ಪಲಿ ಮಾಡಿದಂತಾಗಿದ್ದಿತು (ಶಂದಕ. ೮). **ಹಿಂಡಿ ಹಿಪ್ಪೆ ಮಾಡು** = ಹಿಂಡಿ ಹಿಪ್ಪಲಿ ಮಾಡು: ರಾಜನೂ ರಾಜಪ್ರತಿನಿಧಿಗಳೂ ಆದಾವಾಗ . . . ಪ್ರಜೆಗಳನ್ನು ಹಿಂಡಿ ಹಿಪ್ಪೆ ಮಾಡಲು ಯತ್ನಿಸುವರೊ ಆಗ ರಾಜ್ಯಕ್ರಾಂತಿಯ ಕಾಲವು ಸಮೀಪಿಸಿತೆಂದು ತಿಳಿಯತಕ್ಕುದೆ! (ಎಜಾ. ೨೫). [ದೇ. ‖ ತುಳು. ಪಿಂಟು, ಪುಂಟು; ಕೊಡ. ಪುಂಡ್; ತೆಲು. ಪಿಂಡು; ಕೋಲಾ. ನಾಯ್ಕಿ. ಪಿಂಡ್]

**ಹಿಂಡು₂, ಹಿಂಡ್ಕು₂, ಹಿಂಡೆ** (ನಾ). ೧. ಗುಂಪು; ಸಮೂಹ; ರಾಶಿ: "ಬಂಬಲ್ . . . ಪಿಂಡು[ಪಾಠಾಂ. ಡಿ] ತೆರಳ್ಕೆ . . . ಈ ೪೦ ಸಪುಾಹಂ" (ಕಶಸಾ. ೫೬–೨೨೨); ಗೋವುಂಡಲದಂತಿರ್ದ ಕಡವಿನ ಕಾಡೆಮ್ಮೆಯ ಪಿಂಡುಗಳಿಂದಂ . . . ಅತಿಭಯಂಕರಾಕಾರವಪ್ಪ ದ್ವೈತವನಕ್ಕೆ ಬಂದು (ಶಂಶಥಾ. ೭–೨೯ ವ); ಪಂಚಾಗ್ನಿತಾಪತಪ್ತಮಾನಸರಪ್ಪ ತಪೋಧನಜನಕ್ಕೆ ತಪನತಾಪಮನಾಗಲೀಯದೆ ತಳಿರ್ಮಾಱುಗಲಂ ಪೊತ್ತು ನಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ (ಶಂಕಶಂ. ೦೦೯–೦೦); ಜವದಿಂ ಪಾಪದ ಪಿಂಡಿನಂತಳಿಕುಳಂ ಬಿಟ್ಟೋಡೆ (ಅರ್ಧನೇ. ೧–೮); ನೆಗೆದು ನಿಂದಂಚೆಯ ಪಿಂಡೆಂಬಂತಿರೆ ಬೆಳ್ಳುಗಿಲದಱಿಂ ಬೀಳ್ವ ತುಷಾರಮದಟ ಗಱಿವನಿಯೆನಿಕುಂ (ರಾಜಶೇ. ೬–೬). ೨. ಶ್ರಾದ್ಧದ ದಿನಗಳಲ್ಲಿ ಪಿತೃಗಳಿಗೆ ಅರ್ಪಿಸುವ ಅನ್ನದ ಮುದ್ದೆ: 'ಪಿಂಡುಗೊಟಿ' ಪರಾ. **ಹಿಂಡ್ಕು₂**: ೧. ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು ಕೂಡಿಯುಮಲ್ಲಿ ಸಹಸ್ರಮುಂ ನಿರಾಕುಳಮನುರಾಗದಿಂ . . . ಇರ್ಪುವು (ಕಾದಂಪೂ. ೦೨೬); ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ (ಮಹಾದೇ. ಐ. ೦೩೮–೩೦೩); ಕುಱಿಯ ಹಿಂಡಿನ ತೋಳನೈ ನಿನ್ನಾನೆ (ಕುವ್ಯಾದ್ರೋ. ೩–೨೭); ಹಾಲುಬತ್ತಿಕೆ ಕವಿವರಗಿಳಿಗಳ ಹಿಂಡ ಮೇಲಕಬ್ಬಿಸುವ ನಾರಿಯರ ಪೇಳಲಳವೆ (ಕಂಸವಿ. ೫–೬೪); ಘಾತನಾಡುವುದನ್ನೇ ಮರೆತು ಕಿಡಿಕಿಯ ಹೊರಗೆ ಒತ್ತಾಗಿ ಬೆಳೆದ ಬಾಳೆಯ ಹಿಂಡುಗಳಲ್ಲಿ ದೃಷ್ಟಿ ನೆಟ್ಟು ಕೂತ (ಮೂಕಿರುಜಾ. ೦೪೮). ೪. (ದನದ) ಮಂದೆ; (ಗೋ)

ಸಮೂಹ : “ತುಱು ಮಂದೆಯೊಳು ನಿಷ್ಪೀಡನದೊಳು ಹಿಂಡೆಂದೆನಿಕು” (ಶಬ್ದಮಂ. ೯೭) : ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ ಬಳಿದಪ್ಪಿದ ಪಶು ತನ್ನ ಹಿಂಡನಱಸುವಂತೆ ಬಯಸುತಿರ್ದೆನಯ್ಯ ನಿಮ್ಮ ಶರಣರ ಬರವನು (ಬಸವ. ೩೬೫) ; ಹಿಂಡ ಬಿಟ್ಟೊಂದೆಂದು ಹಿಂದಿನಿಂ ಬಹುವಲ್ಲ ಕಂಡವರ ಹೊಲಿಕಿಳಿವ ತೊಂಡುದನವುಲ್ಗು (ಕಾಂತೀರ. ೬೧-೧೫೨). **ಹಿಂಡೆ :** ೨. “ಹಿಂಡೆ — ಪಿಂಡ=ಪಿಂಡದ ಮುದ್ದೆ” (ಶಬ್ದಕೋ. ೪೪) ; ಬಯಕೆಗೆ ಪಶುವಂ ಕೊಲ್ವವರಯಸಕ್ಕಂಜುವರೆ ಕೊಂದು ಕೊಳ್ವಾತಂ ಹಿಂಡೆಯ ಕೊಟ್ಟಿಗೆ ಹೇಸುವನೆ (ಸಮಯ. ೧೪-೧೨೫) ; ಅಳಿದ ಕಲ್ಲಿಗೆ ಹೆಂಟೆ ಹಿಂಡೆಯ ಕೊಳಸಟ್ಟು ಉಂಬವರಿಲ್ಲದೆ ಅಳುತ್ತಿದ್ದಿತ್ತು (ಮಮಗುಂ. ೪. ೨೪೯-೧೩) : ಎನ್ನ ಮಕ್ಕಳು ಕೊಂದು ಹಿಂಡೆಯ ಕೊಳಸುಂಬರು ಹೇಸುವವರಲ್ಲ (ಸಂಕಶ. ೨೦-೭೮).

**ಹಿಂಡುಹಿಂಡು** (ದ್ವಿರುಕ್ತಿ): ಇಂದು ಮಾಡಿಸುವೆಂ ಮಹೋತ್ಸವದಿಂದೆ ಸಾವಿರ ಹೊಂಗಳಿಗೆ ಬಲಿತಂದು ಕುಱಿಗಳ ಹಿಂಡುಹಿಂಡಿನ ಥಂದದಲಿ ನೆರಹಿ (ಬಸವ. ೨೮-೨೨) ; ಹಿಂಡುಹಿಂಡಿನಲೇಣೆಯ ಮೇಲೇಱಿ ಮುಂಕೊಂಡುಱುಬುವ ರಿಪುಬಲವ ಖಂಡಿಸಿ ಸಿರಗಳ ಮುರುಳ್ಗಳ ಕೊರಳಿಗೆ ದಂಡೆಯ ಹಾಕಿದರಾಗ (ಕಂಕವ. ೧೪-೬೦) : ತಂಡುತಂಡು ದೊರೆಗಳು ಕೂಡಿ ಹಿಂಡುಹಿಂಡು ಸೈನ್ಯ ಕೂಡಿಸಿದರು (ಗಾದೆ). ಪಿಂಡಾಗು=ಗುಂಪಾಗು; ಗುಂಪುಗೂಡು: ಕಟ್ಟಾನೆ ಬೀದಿಯೊಳಟ್ಟಿಕೊಂಡು ಪೋಗಿ ನಟ್ಟಾರಣ್ಯಮಂ ಪೊಗುವುದುಂ ಪರಿಜನಂಗಳೆಲ್ಲಂ ವಿಸ್ಮಯಂಬಟ್ಟು ಪಿಂಡಾ[ಪಾಠಾಂ. ದಾ]ಗಿಪ್ಪುದುಂ (ಶೃಂಗಾರ. ೨-೩೮ ವ). ಹಿಂಡಾನುಹಿಂಡು = ಭಾರಿ ಸಮೂಹ,— ಗುಂಪು : ಹಿಂಡಾನುಹಿಂಡು ಬೌದ್ಧಭಿಕ್ಷುಗಳಲ್ಲಿ ಮಹಾತ್ಮರಾದ ಭಿಕ್ಷುಗಳು ಎಲ್ಲಿ ಅಡಗಿರುವರೋ ಯಾರಿಗೆ ಗೊತ್ತು (ಧರ್ಮರ. ೧೩೩).

[< ಸಂ. ಪಿಂಡ]

**ಪಿಂಡುಗಂಕಣ**, ಹಿಂಡುಗಂಕಣ (ನಾ). ೧. ಒಂದು ಬಗೆಯ ಬಳೆ,— ಕಂಕಣ : ಮಾಣಿಕದ ಮುತ್ತಿನ ಪಿಂಡುಗಂಕಣಮಂ ತೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ಕೀಲಿ ಭೈಕ್ಷಮಂ ಪಿಡಿಯೆಂದು ನೀಡಿದ ಕೈಯನಿತನೆ ಕಂಡು (ವಡ್ಡಾರಾ. ೬೯-೭) ; ಬಾಣಸಿಗೆಯರ್ ಪಿಂಡುಗಂಕಣಂಗಳಂ ನೂಂಕಿ ನೂಲ ತೊಂಗಲನೆತ್ತಿ . . . ಪಾಕ್ರಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೦-೨೯ ವ); ತನ್ನ ನಿದ್ರೆಯೊಡನೆ ಕಟ್ಟಲೆ ಪರೆಯುತ್ತುಂ ಕಣ್ಮಲರೊಡನೆ ಕಮಲದಳಮಲರೆ ತನ್ನ ಪಿಂಡುಗಂಕಣದೊಡನೆ ಕೊಳರ್ವಕ್ಕಿಗಳುಲಿಯೆ . . . ಸಜ್ಜೆಯಿನುಜ್ಜುಗದಿನೆರ್ದು ಶೃಂಗಾರಗೇಹದೊಳ್ ಶೃಂಗಾರಂಗೆಯ್ಯುತ್ತುಮಿರ್ದಳ್ (ಅರ್ಜವೇ. ೨-೧೮ ವ); ನಲ್ಪೊಡವುಗಳೊಳ್ ಎಕ್ಕಸರಂ ಶತ್ರುತಕೀರ್ತಿಗೆ ದುಕ್ಕಂಡದ ಪಿಂಡುಗಂಕಣಂ ಮಾಳವಿಗಾ ಜಕ್ಕಸರಂ ನಿನ್ನರಸಿಗೆ (ರಾಮಾಶ್ವ. ೩೯-೧೭). ೨. ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ: ಸಿರಿಸದ ಬಾಸಿಗಮಂ ಮಾಂಕರಿಸುವ ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರಮಂ ಚಪ್ಪರಿಸುವಿನಂ ಚೆನ್ನ ಪೊನ್ನೆಯರಲಂ ಕೊಯ್ದಳ್ (ಆದಿಪು. ೧೦-೯೯ ಅನಂತರ) ; ವಿನ್ನಂತಃಪುರದ ಕಾಂತಾಜನದ ಕದಂಬನೊಳ್ ಮೃಗಮದಪತ್ರಲೇಖೆಯಂ ಬರೆಯಲುಂ ಬಾಹುಲತೆಯೊಳ್ ಪಿಂಡುಗಂಕಣಮನೇಱಿಸಲುಂ (ಶಂಕಾಮಾ. ೧೪-೨೦೦ ವ). **ಹಿಂಡುಗಂಕಣ :** ೧. “ಗುಬ್ಬಿಗಂಕಣ ಹಿಂಡುಗಂಕಣಮುಮೆಂದು ಮಣಿಗಂಕಣಂ ಹಸ್ತಗಂಕಣವು” (ಕಬ್ಬಿಗ. ೯೭).

[ಪಿಂಡು₂ + ಕಂಕಣ]

**ಪಿಂಡುಗಜ್ಜೂರ** (ನಾ). = ಪಿಂಡಖರ್ಜೂರ : ಬಿತ್ತರಂಬಡೆದ ಪನಿನೀರೆಳನೀರ್ ಪಿಂಡುಗಜ್ಜೂರ ದ್ರಾಕ್ಷಿ ರಸವಾಳೆ ದಾಳಿಂಬ ಪಲಸಿಮ್ಮಾವರನೇಱಿಲ್ ಮೊದಲಾದ ಫಳಕುಳಂಗಳಿಂ (ಹಾಲಾಶ್ವ. ೧-೩-೨೭ ವ).

[ಪಿಂಡು₂ + ಕಜ್ಜೂರ (< ಕರ್ಜೂರ)]

**ಪಿಂಡುಗೂಡು**, ಹಿಂಡುಗೂಡು (ಕ್ರಿ). ಒಟ್ಟುಗೂಡು ; ಒಟ್ಟಾಗಿ ಸೇರು ; ಗುಂಪಾಗು : ನಿಜದಿಂದಂ ಪಿಂಡುಗೂಡಿರ್ದಲೆ ತೃಣಗಣಮುಮೊಂದು ಸತ್ಪಾನಮಂ ಪೀರ್ದಜಪೋತಂ ಲೀಲೆಯಿಂದಂ ನಲಿವಪೊಲ್ (ಧರ್ಮಶ. ೧೦-೧೪). **ಹಿಂಡುಗೂಡು :** ಕಂಡಕಂಡವರ ಮನೆಯಲ್ಲಿ ಕೊಂಡಾಡಬೇಕೆಂದು ಹಿಂಡುಗೂಡಿ ಕೂಳನಿಕ್ಕುವ ಭಂಡರಿಗೆಲ್ಲಿಯದೋ ಭಕ್ತಿ (ಮೋಹಮಾ. ೧೭-೩೯) ; ಆಗಾಗ್ಗೆ ಹಿಂಡುಗೂಡುತ್ತಿದ್ದ ಮೋಡಗಳಲ್ಲಿ ಸೂರ್ಯ ಮರೆಯಾಗುತ್ತಿದ್ದನು (ಪುಪರು. ೨೭೭). [ಪಿಂಡು₂ + ಕೂಡು₁]

**ಪಿಂಡುಗೂಟು**, ಹಿಂಡೆಕೂಳು, ಹಿಂಡೆಗೂಳು (ನಾ). ೧. ಮುದ್ದೆಯಾದ ಅನ್ನ : ಮಾಯದೆ ಮೆಯ್ಯೊಳ್ ಶ್ರೀಖಂಡಮಂ ಪೂಸುವೆನೆಂಬ ಪಿಂಡುಗೂಟುಳಗಗುಬನುಣ್ಬೆನೆಂಬ (ಧರ್ಮಾಮೃ. ೧೨-೨೪). **ಹಿಂಡೆಕೂಳು :** ೨. ಶ್ರಾದ್ಧದ ದಿನಗಳಲ್ಲಿ ಪಿತೃಗಳಿಗೆ ಇರಿಸಲಾಗುವ ಅನ್ನದ ಮುದ್ದೆ : “ಹಿಂಡೆಕೂಳು=ಪಿಂಡಾನ್ನ, ಶ್ರಾದ್ಧದ ಊಟ, ಹೀನವಾದ ಊಟ” (ಶಮಾಕಾಂ. ೬೪೯) ; ಹಿಂಡೆಕೂಳು ಮುಂಡೆಗೆ ಆದೀತೇ ? (ಗಾದೆ). **ಹಿಂಡೆಗೂಳು :** ೨. ಹಿಂಡೇಗೂಳಾ ಗುಂಡೀದಂಡೇಲುಂಡೂ ಕೈಯ್ಯಾ ಜೋಡೀಸೂವೆಂ (ಮ್ಮಸೂಮು. ೨-೯೪). [ಪಿಂಡು₂ + ಕೂಟು₁]

**ಪಿಂಡುಗೊಳ್**, ಹಿಂಡುಗೊಳ್ (ಕ್ರಿ). ಒಟ್ಟುಗೂಡು ; ಗುಂಪಾಗು : ಮೇಳದ ಕೆಳದಿಯರ್ ಪಿಂಡುಗೊಂಡು ತದ್ಯೋಗ್ಯ . . . ಮಂಗಳೋಪಕರಣಂಗಳಂ ಪಿಡಿದಾ ಸ್ಯಂದನದ ಸುತ್ತಲುಂ ಮಂದೈಸಿ ನಡೆಯೆ (ಚಾರಪು. ೧೦-೭೫ ವ) ; ಪಿಂಡುಗೊಂಡು ಜೊಂಡೇಳ್ದ ಕಾಳ್ಮದುಳ ಕೋಳ್ಗ ಸಱಿಂದರೆದೆಱಿದ ಕಣ್ಗಳಿಂ ... ಪಾಸಿ ಪಸರಿಸಿದಂತೆ ಬಿಳ್ದ ಪರ್ವಣಂಗಳಿಂದತಿಭಯಾವಹಮಾದ ಬಟ್ಟೆಯಂ ನಿಟ್ಟಿಸುತ್ತಿರೆ (ರಾಜಶೇ. ೫-೧೨೦ ವ). **ಹಿಂಡುಗೊಳ್ :** ಎನಿತು ಸುರರಾಗರೆನಿತಸುರರಾಗರಂ ನೆನೆಯೆ ಎನಿತು ದೇವರ ದೊಡ್ಡ ಹಿಂಡುಗೊಳ್ಳದು ನೆನೆಯೆ (ರುದ್ರರ. ರೇ. ೨೦೬-೦೪).

[ಪಿಂಡು₂ + ಕೊಳ್₁]

**ಪಿಂಡುಮಾತು**, ಹಿಂಡುಮಾತು (ನಾ). ಹೆಚ್ಚು ಮಾತು ; ಬಹಳವಾದ ಮಾತು : ಕೊಂಡಾಡುವಾಗಾನು ಭಟ್ಟನಲ್ಲೊಳ್ಳಿತ ಕಂಡು ಸೋಲದ ಸುಖಿ ಯಾರು ಪಿಂಡುಮಾತಿನ ಜೋಲಿಯೇನು ನೀನೊಬ್ಬನೆ ಮಂಡೆ ದೂಗಿಸದೆ ಮೂಜಗವ (ಕರಕ. ೬೦-೭೮). **ಹಿಂಡುಮಾತು :** ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ . . . ತಂಡತಂಡದ ವಾರ್ತೆ ಮಾರಿಜಾಕ್ಷನ ಕೀರ್ತಿ ಹಿಂಡುಮಾತುಗಳೆಲ್ಲ ಹರಿಯ ನಾಮ (ಶಿದಾಳ್ಮ. ೨೫-೦).

[ಪಿಂಡು₂ + ಮಾತು₁]

**ಪಿಂಡೋತ್ಪತ್ತಿ** (ನಾ). ಭ್ರೂಣದ ಉತ್ಪತ್ತಿ,— ಹುಟ್ಟು : ಪಿಂಡೋತ್ಪತ್ತಿ (ಶಿವೇಳ. ೨೫೫). [ಪಿಂಡ + ಉತ್ಪತ್ತಿ]

**ಪಿಂತಟ್ಟು**, ಹಿಂದಟ್ಟು (ಕ್ರಿ). ೧. ಹಿಂದಕ್ಕೆ ಕಳುಹಿಸು ; ಹಿಂದೆ ಹೋಗುವಂತೆ ಮಾಡು : ಇದು ಸಿದ ೦ ಬದ್ಧವೆಂದು ಪೊಣ್ದು ನುಡಿದು ಬಂದ ನಿಯೋಗಿಯಂ ಪಿಂತಟ್ಟಲೊಡಂ (ಶಾಮಾಶ್ವ. ೦೯೩-೦೪). **ಹಿಂದಟ್ಟು :** ೧. ಬೆಟ್ಟ ಬರುತಿದೆ ಮುಂದೆ ಹೊಯ್ ಹೊಯ್ ಹೆಟ್ಟು ಹಿಂದಟ್ಟಿದುದಲ ವೃಕುವ ಹೊಟ್ಟುಗಳ ಹೊಯ್ಯೆನುತ ರಣದೊಳಗಟ್ಟಿಯಾಡಿದರು (ಕೌರಾ. ೩೨-೨೨). ೨. ದಾಟಿ ಮುಂದೆ ಹೋಗು ; ಹಿಂದೆ ಹಾಕು : ಅಕ್ಕಪಕ್ಕದ ಮರಗಿಡಗಳನ್ನು ಹಿಂದಟ್ಟುತ್ತಾ ರೈಲು ಮುಂದಕ್ಕೋಡುತ್ತಿತ್ತು (ರೂಢಿ). [ಪಿಂತೆ₂ + ಅಟ್ಟು₂]

**ಪಿಂತಡಿ**, ಪಿಂದಡಿ (ನಾ). ಹಿಂದಕ್ಕೆ ಇಡುವ ಹೆಜ್ಜೆ : ‘ಪಿಂತಡಿಯಿಡು’ ಪರಾ. **ಪಿಂದಡಿ :** ‘ಪಿಂದಡಿಯಿಡು’ ಪರಾ. [ಪಿಂತು + ಅಡಿ]

**ಪಿಂತಡಿಯಿಡು**, ಪಿಂದಡಿಯಿಡು (ಕ್ರಿ). ಹಿಂದೆ ಸರಿ; ಹಿಮ್ಮೆಟ್ಟು : ನ[ಮ]ಗಾಜಿರಂಗದೊಳು ಪರಿಭವಮಾಗಿ ಮುಂತಡಿಯ ಪಿಂತಡಿಯಿಟ್ಟುದೆಮ್ಮ ಪೂರ್ವದಾ ಪುರುಷರು ನಾಕಮಾಸಿಗಳಧೋಗತಿಯೆಯ್ದುವರು

(ಕ್ವಾ. ೪. ೯೨-೩೩ : 1288) ; ವಿಸಸನದಲ್ಲಿ ಮುನ್ನಣಡಿಯಂ ಸಲೆ ಪಿನ್ನಡಿಯಿಟ್ಟು ಪೋಗದೊಂದೆಸಕಮನಾನ್ನವಂಗೆ ಪೆಸರಾವುದು (ಕ್ವಾ೨. XX, ೯೭-೯೮ ; ?). **ಪಿಂದಡಿಯಿಡು :** ಇಚಿುವಲ್ಲಿ ಮೆಯ್ಸೋಡದು ಪಿಂದಡಿಯಿಟ್ಟೊಡಮನ್ನಕಾಂತೆ ಬಂದೊಡಮಳಿಪಿಂದೆ ಸೋಲ್ತೊಡಮದಾಗದೆ ಅಂಬುಧಿ ಮೇರೆದಪ್ಪುಗುಂ (ಗದಾಯು. ೧೦-೬). [ಪಿಂತಡಿ+ಇಡು$_1$]

**ಪಿಂತನೆ** (ಅ). ೧. ಹಿಂದೆಯೇ : ನೆಗೞ್ದರಿಘೂರ್ಜರ ದ್ವಿಪಘಟಾಳಿಗೆ ತನ್ನಯ ಸೂಚಿಯಾನೆ ತೊಟ್ಟಗೆ ಸಮರಾಗ್ರದೊಳ್ ಪರಿಯೆ ಪಿಂತನೆ [ಪಾಠಾಂ. ಣೆ] ಸಂದುವು ರಾಜಪುತ್ರರಾ (ಗದಾಯು. ೧-೧೭) : ಒಡನೆಯ್ದು ಪೆರ್ಗಣ್ಗಳ್ ಬಿಡಿದು ಮನಂ ಪೋಯ್ತು ಮನದ ಪಿಂತನೆ [ಪಾಠಾಂ. ಣೆ] ಧೈರ್ಯಂ ನಡೆಗೊಂಡುದು (ಜಗ೦. ೫-೯೮). ೨. ತಡಮಾಡದೆ : ಸುಹೃತ್ಸ್ನೇಹದಿಂ ಮತ್ತೆಯುಂ ಪಿಂತನೆ ಬಂದೈ ನೀನೆನುತ್ತುಮ್ಮಚಿುಳಿ ಕೆಳೆಯನೊಳ್ ಮಾತನಾಡುತ್ತಮಿರ್ದಂ (ಕಾದಂಬ. ೭೯೩).

**ಪಿಂತಪಿಂತನೆ** (ದ್ವಿರುಕ್ತಿ) : ಈ ಚೋದ್ಯಮಂ ನೋಟ್ಪೆನೆಂದಾಸುಮಾಪಣ ಪಿಂತಪಿಂತನೆ ಪೋದೆಂ (ಶಂಕಶಂ. ೨೨೭-೯). [ಪಿಂತು+−ಅನೆ$_1$]

**ಪಿಂತರ್** (ಕ್ರಿ). ಹಿಂದಕ್ಕೆ ತರು : ಸುಗ್ರೀವಂ ವೀರರ ಸಾಸಕ ಪೊಗಟ್ದು ಒಡನೆಯ ಸೀತೆಯುಂ ಪಿಂತರ್ಪ ಕಜ್ಜಮನಣೆಗೆಯ್ದು ಪಲವೆಡೆಯ ವಾನರಂ ನೆರೆಯಿಸಿದಂ (ಅಭ್ಯುಕ. ೩೭-೭). [ಪಿಂ (< ಪಿನ್) + ತರ್]

**ಪಿಂತಿಕ್ಕು, ಪಿಂದಿಕ್ಕು, ಹಿಂತಿಕ್ಕು, ಹಿಂದಿಕ್ಕು$_1$** (ಕ್ರಿ). ೧. ಹಿಂದೆ ಸರಿಸು ; ಹಿಂದೆ ಹಾಕು. ೨. ಮರಳಿಸು ; ಹಿಂದಿರುಗಿಸು : ಕರಿಸಂಘಾತಮುಮಂ ಹಯವ್ರಜಮುಮಂ ಪಿಂತಿಕ್ಕಿ . . . ಧ್ವಜೋತ್ಕರ ಸಂದೋಹಮುಮಂ ಬಿಸುಟ್ಟುಡುಗಿ ಪಿಂಛಚ್ಛತ್ರಮಂ ಪುತ್ರಯಾಕರ ವೇಷೋಚಿತರಘ್ರ್ಯಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ (ಆದಿಪು. ೦೨-೬೮); ತುಱುವಂ ಪಿನ್ನಿಕ್ಕಿ ಪರಿಯಂ ಮಾರ್ಕೊಣ್ಡು ತಾಗಿ ತಳ್ತಿಱಿದು (ಎಕ. VIII, ಸೊರಬ. ೦೩-೫ ; 1015). ೩. ಕಡೆಗಣಿಸು ; ಅಲಕ್ಷ್ಯ ಮಾಡು : ಭಯಮುಂ ಲೋಭಮುಮೆಂಬ ತಮ್ಮುತೆರಡುಂ ಪಾಪಕ್ಕೆ ಪಕ್ಕಾಗೆ ಪಾಟಿಯನೊಕ್ಕಾಳ್ದನೆಗೆಯ್ದು ಸತ್ಯತಮುಮಂ ಪಿಂತಿಕ್ಕಿ ಜೋಳಕ್ಕೆ ತಪ್ಪಿಯುಮೀ ಬಾಟ್ದುದೆ (ಶಂಕಶಾ. ೯-೮೪). **ಪಿಂದಿಕ್ಕು :** ೧. ಪರಿದೈದಿ ಬಲವಮ್ಮನಮ್ಮೊದಲಿಸಿ ಮುನ್ನಣ ಪುಯ್ಯಲ ಪಿನ್ನಿಕ್ಕಿ ಮುನ್ನಾಗಿ ಸಿರಿವಿಪದ ಹಳವೆಗೆ ತುಱುವನಿಕ್ಕಿಸಿ ಮಂಗುಟ್ದು ಬಿರುಕಿಟ್ಟೊಡೆ (ಎಕ. XII, ತಿಪಟೂ. ೦೦-೮ ; ಸು. 930 ?); ಸಂಭ್ರಮಂಬೆರಸು ಮುನ್ನಿರ್ದ ಕುಸುಮಾಶಯನಮಂ ಪಿಂದಿಕ್ಕೆ ಕಂಪಿಸುತ್ತಮೆನಗಿದಿರೆಟ್ದು ಕಾದಂಬರೀದೇವಿಯುಂ ಕಣ್ಣಾರೆ ನೋಡಿ . . . ಸಾಫಲ್ಯಮಂ ಸಾಧಿಸುವೆಂ (ಕಾದಂಬ. ೫೦೯). ೪. ದಾಟು ; ಮುಂದೆ ಹೋಗು: ಗಾಡಿಪಡೆದ ಕಾಡಂ ಪಿಂದಿಕ್ಕಿ ಮೆಲ್ಲಮೆಲ್ಲನೆ ನಡೆವಾಗಳ್ (ಕರ್ಣಾ. ೨೦೯). **ಹಿಂತಿಕ್ಕು :** ೨. ವಂಕದೇವನಾಯಂಕನವರು ಮೆಡನಾಡ ಹಿಡನೆಯಂ ಹಾಯ್ದು ಸಟಿಯಂ ಜೀವಧನಮನುಂ ಕೊಣ್ಡು ಹೋಪಲ್ಲಿ . . . ತಮ್ಮ ಒಡೆಯ ಯೆಡಗಾವುಣ್ಡನು ಸಹಿತಂ ಹರಿದು ಸೆಱೆಯುಂ ಜೀವಧನಮುನುಂ ಹಿಂತಿಕ್ಕಿ ಹಲವು ಕುದುರೆ ಹಲಬರು ವೀರಭಟರಂ ಕೆಡಪಿ (ಎಕ. VIII, ಸೊರಬ. ೨೨೦-೦೩ ; 1231). **ಹಿಂದಿಕ್ಕು$_1$ :** ೧. ಪಾಂಡ್ಯ ಕೈಕೆಯ ಕೇರಳರ ಹಿಂದಿಕ್ಕಿ ಪಡಿಬಲವಾದನಾ ಭೀಮ (ಕುಮ್ಯಾಕ. ೩-೦೫) ; ಹಂಸಾರೂಢ ನಾರದನ ಹಿಂದಿಕ್ಕಿ ನೋಡಲಾಕ್ಷಣ ಪುಷ್ಪಕವೀದುಂ ದೇವಚೂಡಾಮಣಿಯ ಪಟ್ಟಣಕೆ (ಪ್ರೋತಶ. ೦೩-೦೯). ೫. ಸೋಲಿಸು : ಹಿಮ್ಮೆಟ್ಟಿಸು: ತರ್ಕಶಾಸ್ತ್ರದಲೆಸೆವ ವಾಕ್ಯಗಳಕ್ಕಜಗಳಿಂನನ್ಯರನು ಹಿಂದಿಕ್ಕಿ . . . ಸೊಕ್ಕಿನಲಿ ಬೆರತಿಹರಿಗೆಂದಿಗು ಪಕ್ಷಮುಪ್ಪುದೆ ಮನವು (ಗಗಶಾ. ೦೩-೦೯). ೬. (ಅಲಂ) ಬೆನ್ನಿಗೆ ಇಟ್ಟುಕೊಳ್ಳು : ಕಾಪಾಡು : ರಕ್ಷಿಸು : ವಿನ್ನ ಬಾಂಧವಜನಸಹಿತ ಹಿಂಡುಮನೆನು ಹಿಂದಿಕ್ಕುವನ ತೋಱು (ಕುಮ್ಯಾಕ. ೯-೦೮).

**ಹಿಂದಿಕ್ಕಿಕೊಳ್ಳು**=೧. ಕಾಪಾಡು ; ರಕ್ಷಿಸು : ಮಿಕ್ಕ ಮಾತೇಕಿನ್ನು ನೀ ಹಿಂದಿಕ್ಕಿಕೊಂಬರೆ ಕೊಲುವನಾವನು (ಕುಮ್ಯಾಕೀ. ೧-೨೨) ; ಸಿಕ್ಕದಿನ್ನೆಲ್ಲಿಗೆ ಪೋದಪನವನ ಹಿಂದಿಕ್ಕಿಕೊಂಬರಸುಗಳುಂಟೆ (ಕುರಾತಾಂ. ೦೮-೦೩೦) ; ಎಕ್ಕತುಳದಲಿ ತನ್ನನೇ ಮುಟಿಯೊಕ್ಕು ನೀನಿರು ಸಾಕು ತಾ ಹಿಂದಿಕ್ಕಿಕೊಂಬೆನು ತಾಯೆ (ಶಿಪಾಗ. ೩-೦೫-೦೭). ೨. ಕಾಣದಂತೆ ಬಚ್ಚಿಡು : ತನುಮನಧನವ ಹಿಂದಿಕ್ಕಿಕೊಂಡು ಪಾತಿನ ಬಣಬೆಯ ಒಳಲೊಟ್ಟೆಯ ನುಡಿವರು ನೀವೆಲ್ಲ ಕೇಳಿರೆ (ಶಿಸವ. ೨೦೨). [ಪಿಂತ್ಕೆ+ಇಕ್ಕು]

**ಪಿಂತಿರಿಸು,** ಪಿಂದಿರಿಸು. ಹಿಂದಿರಿಸು (ಕ್ರಿ). ೧. ಹಿಂದುಗಡೆಯಲ್ಲಿ ಇರುವಂತೆ ಮಾಡು ; ಹಿಂಭಾಗದಲ್ಲಿ ಇರಿಸು : ನೂರ್ವರ್ ತಮ್ಮಿಂದಿರುಮಂ ಪಿಂತಿರಿಸಿ ಲಕ್ಕಣಂ ಮೊದಲಾಗ ನೂರ್ವರ್ ಮಕ್ಕಳುಮಂ ಮುಂತಿರಿಸಿ (ಶಂಕಶಾ. ೯-೧೮ ವ) ; ತನಗಾಗಳ್ತೊಡವಟ್ಟಳಂ ಪದಪಿನಿಂ ಪೊಣ್ಮುತ್ತ ಬಾಯಿತ್ತ ಬಾಯೆನುತಂ ತನ್ನ ಕೆಲಕ್ಕೆ ಕಾಂತೆ ಕರೆದಾದಂ ಭ್ರಾಂತಿಯಿಂದಂ ಸಖೀಜನಮೆಲ್ಲಂ ನಡೆನೋಡೆ ಪಿಂತಿರಿಸಿಕೊಂಡು (ಕಾದಂಬ. ೨೪೦). ೨. ಹಿಂದೆ ಬಿಟ್ಟು ಹೋಗು : ಬಟಿಕಿಂತಿಳೇಶ ಪಿಂತಿರಿಸುವೆ ಮೆಯ್ಯ ಪಿಂತೆ ನೆಟಲಿರ್ಪುದೆ ಬಾರದೆ ಮಾಣೆಮೆಂದು ಪೊಣ್ದರಸಿಯರೇಱಿದರ್ ನೃಪನ ಕೂಡೆ ಪಲರ್ ಪರಿಯುಂದಣಂಗಳಂ (ಆಶಂಕು. ೯-೨). **ಪಿಂದಿರಿಸು :** ೨. ಇರಿಸಲ್ವೇಡಿರ್ದರಂ ಪಿಂದಿರಿಸಿ . . . ಎಲ್ಲಿಯುಂ ನಿಲ್ಲದೆ ಕೆಲದಿವಸಕ್ಕೆಯ್ದಿದಂ ಪದ್ಮಪತ್ರೋತ್ಕರಕಾಂತಿಪ್ರಚ್ಛದಾಚ್ಛಾದಿತಜಲ ಮೆಸಿಪಚ್ಛೋದಮಂ ಸಾರ್ವಭೌಮಂ (ಕಾದಂಬ. ೬೬೦). **ಹಿಂದಿರಿಸು :** ೨. ತನ್ನೊಡತಣ ಶಬರರಂ ಹಿಂ[ಪಾಠಾಂ. ಪಿಂ]ದಿರಿಸಿಯೊರ್ವನೆ ಬರುತ (ಶಿಸಪು. ೧೮-೫). [ಪಿಂತ್ಕೆ+ಇರಿಸು]

**ಪಿಂತಿರುಗು** 'ಪಿಂದಿರುಗು' ನೋ.

**ಪಿಂತಿಲ್,** ಪಿತ್ತಲ್. ಪಿತ್ತಿಲ್, ಹಿತ್ತಲ್, ಹಿತ್ತಲು, ಹಿತ್ತಿಲ್. ಹಿತ್ತಿಲು (ನಾ). ೧. ಹಿಂದುಗಡೆ ; ಹಿಂಭಾಗ : "ಪೆಡಮೆಟ್ಟು, ಪೆಱಗು. ಪೆಱತು. ಪಿಂತಿಲ್—ಈ ೪ ಪಿಂಗಡೆಗೆ ಪೆಸರ್" (ಕಶಶಾ. ೬೫-೯೫೫); "ಪೆಱತು ಪಿಂಗಡೆ ಪೆಡಂಮೆಟ್ಟುಱೆ ಪೆಱಗುಂ ಪಿಂತೆ ಪಿಂತಿಲೆನೆ ಹಿಂದೆನಿಕುಂ" (ಕಟಕೆಂ. ೦೯೭). **ಪಿತ್ತಲ್:** ೧. ಬಲಿನಗರಕ್ಕೆ ಮಾೞ್ಗನಿಸಿದಾ ತ್ರಿಪುರಾಂತಕ ದೇವತಾಲಯಮಾವಳಿ ಮತಿಸಿವ . . . ಪಿತ್ತಲೆಸೆತೆಯಿಲ್ಲದಲ್ಲುಗುತಮಿಱ್ದುದ ನೀಕ್ಷಿಸಿ (ಕ್ವಾ೨. IX-i, ೦೬೦-೫೭ ; 1092). ೨. (ತರಕಾರಿ, ಹೂಗಿಡಗಳು ಮುಂತಾದುವನ್ನು ಬೆಳೆಸುವ) ಮನೆಯ ಹಿಂದಿನ ಜಾಗ : ಮನೆಯ ಹಿಂಭಾಗದ ಸ್ಥಳ : ಮುನಿಪನ ಬರವಂ ದೂರದೊಳನುಸಯದಿ ಕಂಡು . . . ನಿಲಿಸನೆ ವನಜಾನನೆ ಪಿತ್ತಲತ್ತಲೋಡಿದಾಗಳ್ (ರಮಾಸ್ವ. ೪-೦೦೦) ; ಶಿವಲಿಂಗಯಾಜನಕೊಪ್ಪುವ ಪೊಸ ಕಪ್ಪುರಲಿಂ ತಿಱಿಯಲ್ಪಿತ್ತ [ಪಾಠಾಂ. ತ್ತಿ]ಲನಿರದೆಯ್ದಿ ವಿನೋದದಿಂದೆ ಪೂಗೊಯ್ದುಪನೆಱೆ. (ವೃಶಂ. ೩೩-೨೮). **ಪಿತ್ತಿಲ್ :** ೨. ಪದಿಂಬರ್ ದೇವಡಿತಿಯರ್ಗ್ಗಂ ತಮಗಂ ಮನೆಗಂ ಅಂಗಣಕ್ಕಂ ಪಿತ್ತಿಲ ಬಟ್ಟೆಗಂ . . . ಕೂಚಿಭಟ್ಟಾರರ ಕಾಲಂ ಕಟ್ಚಿ ಧಾರೆಮಸೆಱೆದು ಬಿಟ್ಟು ಕೊಟ್ಟರ್ (ಎಕ. IV, ಚಾಮರಾ. ೦೮-೯ ; ಸು. 1000?) ; ಮನೆಯ ಪಿತ್ತಿಲೊಳೇತನಂ ಪಿಡಿದೊಯ್ದು ಭೋಂಕನೆ ಕೊಂದು . . . ಪುಟ್ದುದೆಂಬು ಕಪಾಯದಿಂ ಬರೆದೋಲೆಯಂ (ರಮಾಸ್ವ. ೧೦-೦೬೨) ; ಎಳೆಯಳ್ ಪಿತ್ತಿಲ ಬಾಟೆಗಳಲೆಯೊಳ್ . . . ಅಗ್ರಂ ತಳಿರೆಸೆಯುತಿರ್ಪ ಕದಳೀದಳಮಂ ಮೆಲ್ಲನೆಯ ಚಿವುಟಿ ತಂದಳ್ ಬೇಗಂ (ರಕಸು. ೦೨-೦೨೦). **ಹಿತ್ತಲ್ :** ೨. "ಹಿತ್ತ[ಪಾಠಾಂ. ತ್ತಿ]ಲಿಂ ನಿಷ್ಪುಟಮಂದೆಂಬುದು" (ಮಂಗರಾ. ೧೪೦-೦೭) ; ಹಿತ್ತಲ ದೆಸೆಯೊಳ್ ಬಿಸದೋಡುವಾಕೆ ಕೋಣ್ಣದೆ ಕೆಡೆದಳ್ (ರಮಾಸ್ವ. ೨೨೪). **ಹಿತ್ತಲು :** ೨. ಮನೆಮನೆಯ ಹಿತ್ತ[ಪಾಠಾಂ. ತ್ತಿ]ಲುಗಳಡುಮುಂಡುಕಿನೊಳಗೊಬ್ಬನೆ ಸಾರ್ದು (ಶಿಸಪು. ೩೦-೫) : ಗಂಗಾಸಾನಿ ಸುಭಗೆಯನ್ನು ಜುಲುಮೆಯಿಂದ

ಹಿತ್ತಲಿಗೆ ಕರೆದುಕೊಂಡು ಹೋದಳು (ಗಂಗಾಕಾ. ೨೨) ; ನಮ್ಮದೇ ಆದ ಮನೆಯಿದೆ, ಹಿತ್ತಲಿದೆ, ತೋಟವಿದೆ (ಮೂರುದಾ. ೧೨೩) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿದ (ಗಾದೆ) ; ಹಿತ್ತಲ ಗಿಡ ಮದ್ದಲ್ಲ, ಮನೆಹೆಂಡತಿ ಮುದ್ದಲ್ಲ (ಗಾದೆ). **ಹಿತ್ತಿಲ್** : ೧. ಬಡಗಣ ಕೊಪ್ಪಲ ಹಿತ್ತಿಲಲು ... ಹಿರಣ್ಯಪೂರ್ವ್ವಕವಾಗಾಧಿಸಿ ಸರ್ವ್ವನಮಸ್ಯವಾಗಿರೆ ಪಡೆದು ಬಿಟ್ಟರ್ (ಕೌಶಿ. V, ೬೫೦-೪೩ ; 1162). ೨. "ಹಿತ್ತಿಲಲ್ಲಿಯುಂ ನಿಷ್ಕುಟಮೆಂಬುದು" (ಹಲಾಯು. ೧೩೬-೩೦) ; ಪತ್ತಿದ ಗಂಡರ ಚಿತ್ತವ ಕಿಡಲೀಯದಿತ್ತುದೇ ಕೋಟಿ ಕನಗೆಂಬ ಸೂಳೆಯು ಹಿತ್ತಿಲಲ್ಲಿರದೆ ಸುರಭೂಜ (ಬೇಲಾಪ. ೨-೩೫). **ಹಿತ್ತಿಲು** : ೨. ನಿನಗೆ ಕರವೆತ್ತಿ ಪೊಡೆವಡುವ ಭಕ್ತ ಮನೆಯ ಹಿತ್ತಿಲ ಬೇಲಿಯಾಗಿಪ್ಪೆನ್ನೈ ರಾಮನಾಥಾ (ದೇರಾವ. ೨೯-೪೯) ಹಿತ್ತಿಲೊಳ್ಸಂಜೀವನೌಷಧಿ ಬೆಳೆದು ರಂಜಿಸುತ್ತಿರಲು (ಸೌಂದಪು. ೦೫-೬೭) ; ಮನೆಯೊಳ್ ಸುರಧೇನು ಕಟ್ಟಿಯುತಿರ್ಪುದು... ದಿವಿಜಾನೋಕಹಮೋವದೆ ಕಾಡುವುದು ಬೇಡಿದುದಂ ಹಿತ್ತಿಲೊಳು (ಜಯುಕಾ. ೦೨-೩೬) ; ಹಿತ್ತಿಲಲಿ ಮರ ಹಾರುವನು ಅಳಲಿನಂತೆ (ಕಪು. ೧೧-೯).

**ಹಿತ್ತಿಲ ವನ, ಹಿತ್ತಿಲ ಬನ, ಹಿತ್ತಿಲ ವನ** = ಮನೆಯ ಹಿಂಭಾಗದಲ್ಲಿರುವ ತೋಟ ; ಕೈದೋಟ : ಶ್ರೀವೀರಜಿನೇಂದ್ರಸಮವಸರಣಂ ಬಂದೀ ಆವಾಸದ ಹಿತ್ತಿಲ ವನದೋವರಿಯೊಳ್ ನೆಲಕಿತಖಿಲಸುರಗಣಸಹಿತಂ (ಕಥಾಕು. ೫೦ ಪ್ರಯೋ) ; ಕೃಷ್ಣನವನ ಕಳಕೊಂಡು ಹಿತ್ತಿಲ ಬನಕೆಯ್ದೆ ತೊಂಡುಗೆಡೆವ ಗಿಳಿಯಿಲ್ಲದ ಠಾವಲಿ ಮಂಡಿಸಿದನು ರಾಯಕುವರ (ಹರಿಕ. ೫-೩) ; ಆ ತರಳಾಕ್ಷಿ ಹಿತ್ತಿ[ಪಾಠಾಂ. ತ್ತ]ಲ ವನಕವಳನಂದು ತುರದಿಂದೆಯ್ದಿಸಿದಳು (ಕುಮಾರಾಂ. ೨೩-೬೮). **ಹಿತ್ತಲ ಕಾಯಿ** = ಮನೆಯ ಹಿಂಭಾಗವನ್ನು ಕಾಯುವವನು : ಎಂದಿನಂತೆ ಅವನಿಗೆ 'ಹಿತ್ತಲ ಕಾಯಿ' ಪದವಿ ಕಾದಿರುತಿತ್ತು (ರಾಮಾಪ. ೨೬). **ಹಿತ್ತಲ ಬಾಗಿಲ್** = ಮನೆಯ ಹಿಂಭಾಗಕ್ಕೆ ಇರುವ ಬಾಗಿಲು; ಹಿತ್ತಲಿಗೆ ಇರುವ ಬಾಗಿಲು ; ಹಿಂಬಾಗಿಲು : ತನ್ನರಮನೆಯ ಹಿತ್ತ[ಪಾಠಾಂ. ತ್ತಿ]ಲ ಬಾಗಿಲಲಿ ಲಿಂಗಪ್ರಸಾದವನು ಜನನಿ ತಂದವನಿಯಲಿ ಸುರಿಯಲು (ಚಪು. ೬೦-೨೦). **ಹಿತ್ತಲ ಮನೆ** = ಮನೆಯ ಹಿಂಭಾಗದ ಅಂಗಳದಲ್ಲಿ ಕಟ್ಟಿರುವ ಮನೆ : ಸಿಲುಕಿತಲ್ಲಾ ನೀರೆನುತ ಕೋಮಳೆ ತವಕದಿಂ ತನ್ನ ಕೈಗೊಟ್ಟಳಲುತಂ ಹಿತ್ತ[ಪಾಠಾಂ. ತ್ತಿ]ಲ ಮನೆಗಮೊಡಗೊಂಡು ಕಾನೆಯ್ದಿ (ಜಿಸಪು. ೪೨-೩೧) ; ಅಂಗಳದಿಂದ ಹಿತ್ತಲ ಮನೆಯವರೆಗೂ ಗಡಿಬಿಡಿ ಆರಂಭವಾಗಿಬಿಟ್ಟಿತ್ತು (ವೈಶಿ. ೯) ; ತಾಯಿಯೂ ಮಗಳೂ ಆಗ ಕರೆದ ಎರಡು ದೊಡ್ಡ ಮಡಿಕೆ ಹಾಲನ್ನು ಹೊತ್ತುಕೊಂಡು ಹಿತ್ತಲ ಮನೆಗೆ ಹೋಗುತ್ತಾರೆ (ಮರಳಿಮಣ್ಣಾ. ೨೬). **ಹಿತ್ತಲು ಗುಡಿಸು** = ನಿಂದಿಸು ; ದೂಷಿಸು : ನಿಮ್ಮ ನಿಮ್ಮ ಭಾವನ ಜಗಳದಲ್ಲಿ ನೀವು ನಮ್ಮ ತಂದೇ ತಾಯಿಯ ಹೆಸರು ಹಿಡಿದು ಹಿತ್ತಲು ಗುಡಿಸಬೇಡಿ (ಜಕರಾ. ೨೧೩). **ಹಿತ್ತಿಲು ಮನೆಯ ಊಳಿಗ** = ಹಿತ್ತಲ ಮನೆಯನ್ನು ಕಾಯುವ ಕೆಲಸ : ಅರಮನೆಯಲ್ಲಿ ಪಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು . . . ರಜದ ಊಳಿಗ, ಹಿತ್ತಿಲು ಮನೆಯ ಊಳಿಗ (ಮಹಾಮಂ. I, ೪೩).

[ಪಿಂತು + – ಇಲ್₂. / ತುಳು. ಪಿತ್ತಿಲ್, ಬಿತ್ತಿಲ್]

**ಪಿಂತು**, ಪಿಂದು, ಹಿಂದು₁ (ನಾ). ೧. ಹಿಂಭಾಗ ; ಹಿಂಬದಿ : "ಬೆಂಗಡೆಗೆ ಪಿಂತೆನಿಕ್ಕುಂ" (ಕಕರ. ೬೫) ; ಕಿಚ್ಚಿನುರಿಯುಂ ಪೊಗೆಯುಂ ದುಷ್ಪಾಪ್ಯದ ಮುಂತುಂ ಪಿಂತುಂ ಬೆಟ್ಟಮನೇಱುವುದುಮಿೞಿವುದುಂ (ಧರ್ಮಾಮೃ. ೯-೧೩೨) ; ತುಕಾರಕ್ಕೆ – ಮುಂದು, ಮುಂತು ; ಪಿಂದು, ಪಿಂತು (ಕಮುದ. ೧೨೦ ಪ್ರಯೋ). ೨. ಹಿಂಜರಿಯುವಿಕೆ: ವೀರದಿನೊದ್ದಿಪ್ಪುವ ಸಾಮಂತ ಜಗದಾಳ ಮಲೆಯ ತೊತ್ತಳೆದುಳಿವ ಯತ್ತಿದ ಮೊನೆಗೆ ಮುನ್ನು ಕಡಿಕಾಳಗಕ್ಕೆ ಪಿನ್ನು (ಎಕ. XII, ತಿಕಟೂ. ೧೦೯-೨೪ ; 1130). **ಪಿಂದು** : ೧. ಎಚಿಗಲಱಿಯದೆ ಜೆಣ್ಪುಕಮ್ಮಗುಬ್ಬಂ ಬರಲಣಮಱಿಯದೆ ತಪ್ಪಂ ಪಿನ್ದಂ ತೆಱಸನಱಿಯದೆ . . . ಪೊಯಿಸಿದನು (ಎಕ. II. ೦೩೩-೧೩೮ ; 982) ಒಂದಱ ಪಿಂದೊಂದಡಸಿ ಗುಡುಗುಡನೆ ಸುರಿವಾನಂದಜಲಬಿಂದುಗಳಿನ; ನಿರತಿಶಯಹರ್ಷಮಂ ಪ್ರಕಟಿಸುತ್ತಿರಲ್ (ಕಾವಂಪು. ೮೬೫) ; ಪಾದರ್ಪ ಸರುಪಂ ಕಟ್ಟೆಂಬ ಮುಟ್ಟೆಂಬ ಪಿಂ[ಪಾಠಾಂ. ಬಿಂ]ದಡಸೆಂಬೊತ್ತರಿಸೆಂಬ . . . ಪುಳಿಂದವೃಂದನಿನದಂ ಪೊಣ್ಮಿತ್ತು ಕಾಂತಾರದೊಳ್ (೧೦೪. ೧-೮೨). **ಹಿಂದು₁** : ೧. ಜೆಡೆ ಗಂಗೆಯ ಸ್ಥಾನ ನೊಸಲು ಚಂದ್ರನ ಸ್ಥಾನ ಹಿಂದು ಸೂರ್ಯನ ಸ್ಥಾನ (ಬಸವ. ೮೪೪) ; ಹಿಂತ ಬಿಟ್ಟೆಂದೆಂದು ಹಿಂದಿನಿಂ ಬಹುವಲ್ಲ ಕಂಡವರ ಮೊಲಿಕೆಳವ ತೊಂಡುದನಮುಲ್ಲು (ಕಾಲೂರ. ೮೦-೦೫೨). ೨. ಕಡ್ಲೆಗೆ ಮುಂದು ಕಡಿವಾಣಕ್ಕೆ ಹಿಂದು (ಗಾದೆ). ೩. ಕೊನೆಯದು ; ಅಂತ್ಯ : ನೀರ ಕ್ಷೀರದಂತೆ ನೀನಿಪ್ಪೆಯಾಗಿ ಆವುದು ಮುಂದು ಆವುದು ಹಿಂದು ಎಂದಱಿಯೆನು (ಮಹಾದೇ. ಐ. ೦೩-೧೦) ; ಮುಂದನಱಿಯದ ಗುರುವು ಹಿಂದನಱಿಯದ ಶಿಷ್ಯ (ಸರ್ವಜ್ಞ. ೮೯). ೪. ಹಿಂದೆ ನಡೆದುದು : ಹಿಂದ ನೆನೆಯಾ ಖೂಳ . . . ಎನುತ ಹೆಱೆಯಂಬಿಂದ ಕಡಿದಿಳುಹಿದನು ಪಾಂಚಾಲಾಧಿಪನ ಶಿರವ (ಕುಮಾದ್ರೋ. ೦೬-೩೮).

**ಪಿಂತಣ್, ಹಿಂದಣ್** = ಹಿಂಭಾಗ ; ಹಿಂಬದಿ :– ಅಕ್ಕುಳಿಸಿತೆಂದುಂ . . . ಪಿಂತಣ್ಗೆ ಪಂದುದೆಂದುಂ . . . ಪಾರಿಗೆಯ್ಕೆಂದುಂ — ಈ ೧೩ ಅಪಸರಣಕ್ಕೆ ಪೆಸರ್ (ಕಕಾ. ೬೨-೬೪೯); ಒಳಸೋರ್ದುದು . . . ಮೆಯ್ದಿಗೆದುದು ಘಟ್ಟಿಲೆನೆ ಪಿಂತಣ್ಗೆವಂದುದುಂ ಜಗುಟಿದುದುಂ (ಕವಿಕಂ. ೨೫೨); ಬೆಱಗಡರಿ ಮುಖದಿರುಹಿ ಹಿಂದಣಿನೆಱೆದ ಕರ್ಣನ ನೋಡಿ ಮುಖದಲಿ ಕಿಱುನಗೆಯ ಕೇವಣಿಸಿ (ಕುಮಾದ್ರೋ. ೬-೩೩) ; ಕರ್ಣ ಹಿಂದಣಲೆಚ್ಚ ಕೂರಂಬಿನೊಳ್ಗನುವ ಖಂಡಿಸಿದನು (ಕುರಂಗ. ೫೨-೩೦). **ಪಿಂತಣ, ಪಿಂತಳ, ಪಿಂದಣ, ಹಿಂದಣ, ಹಿಂದಳ** = ೧. ಹಿಂಭಾಗಕ್ಕೆ ಇರುವ ; ಹಿಂಬದಿಯ : ತನ್ನರಸಿ ಚಿಕ್ಕಬ್ಬೆಗೆ ಬಡಗನ್ನಿಕೆಱೆಯ ಬಡಗಣ ಬದರಿಯ ಪಿನ್ತಣಕೆಱೆಯುಮಿಪ್ಪಟ್ಟ (ಎಕ. VII, ಶಿವಮೊ. ೯೬-೨೨ ; ಸು. 915); ಇರ್ಕ್ಕೆಲದ ಮುಂದ್ದಣ ಪಿನ್ದಣಮಣ್ಣಾಳಕ್ಕೆ ಭೀಷಣಮತಿರೌದ್ರಮುದ್ಭುತಮುಗುವ್ವಿನ ತೇಜದಳುರ್ಕ್ಕೆ ಧಲ್ಲನ (ಕೌಶಿ. XI-i, ೫೨-೯ , 1007) ; ಹಿಂದಣೊಡ್ಡನು ರಘಾಡಿಸಿದವೀಕ್ಷೇಮಧೂರ್ತಿನೃಪಾಲನಾನೆಗಳು (ಕುಪ್ಪಾಕ. ೨-೦೨) ; ನೀದನ್ನೆ ಬಳಿಕೀತನಾ ಹೆಬ್ಬಂದಿಯಿದಿರಲಿ ಮೆಲ್ಲಮೆಲ್ಲನೆ ಹಿಂದಣಡಿಗಳಲಂಡುಗೊಂಡುದು ಶಂಭುಕಾಸುರನ (ತೊರರಾ. ೩-೩-೨೦). ೨. ಹಿಂದಿನ ; ಮೊದಲಿನ : ಪಿಂತಣ ಭವದೊಳಾನೆಸಗಿದ ಪಾತಕಸಂತತಿಯೊರ್ಮೊದಲೊಳಗೆ ಭ್ರಾಂತಿ ಪಡೆದು ಕೆಡಲೆಂದೆಱಗುವೆ (ಅಂಜತ. ೦-೯) ; ಖಚರೇಶನ ಪಿಂತಣ ಪುಣ್ಯದ ಫಲದಿಂ . . . ವಿಮಲಚಾರಣರೆಯ್ತರಲು (ಶಾಂತೀತ. ೨-೯೮) ; ಪಿಂತಣ ಕಾಲದಲ್ಲಿ ಭೂಮಿಯುಂ ಪರಿಪಾಲನೆಗೆಯ್ದ ಭೂಪೋತ್ತಮರ ಮಹಾತ್ಮ್ಯಮಂ ಚೆನ್ನಾಗಿ ಕಿವಿಗೊಳಿಸು (ಭಾರತಾಂ. ೦೯೯) ; ನೂಂಕುವುದೊಮ್ಮೆಮ್ಮೆ ನರಕಕ್ಕೆ . . . ಒಮ್ಮೆ ಮಾನುಷಕೆ ಪಿಂತಳ ಪಾಪಪಂಕದ ತೀವ್ರಮದೆಂತೊ (ವರ್ಧಕ. ೩-೫೦); ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋಱಿದನೆನ್ನ ತಂದೆ (ಮಹಾದೇ. ಬ. ೨೯-೯೯) ; ಆ ಜಾಗ, ಹಿಂದಣ ವರ್ಷ ಕುಮಾರಿ ಬೆಳೆದ ತಾವಿನಿಂದ ಮೈಲು ದೂರದ ಇನ್ನೊಂದು ಬೆಟ್ಟದಲ್ಲಿದೆ (ಕುಡಿಕೂ. ೧೦). ೩. ಮೊದಲು ; ಪೂರ್ವ : ಅಲ್ಲಿಗೆ ಮತ್ತೊಂದು ಕಡೆಯಿಂದ ಇನ್ನೂ ಹಿಂದಣದಲ್ಲಿ ಬಂದವರು (ಯಕ್ಷಪ. ೨); ಹಿಂದಳ ಸುಖ ಮುಂದಳ ದುಃಖಂಗಳು ಮುಂದಳ ಸುಖ ಹಿಂದಳ ದುಃಖಂಗಳು ಇವ ತಾ ಸಂಧಿಸಿ ಅನುಭವಿಸಿದಲ್ಲಿ (ಶಾಬೊಮ್ಮ. ಕ. ೫೫೮-೨೦). **ಪಿಂತಣಂ** = ೧. ಹಿಂಭಾಗದಲ್ಲಿರುವವನು; ಹಿಂದಿನವನು : (೯). ೨. ಪೂರ್ವ ಕಾಲದವನು : ಅಕಾರಕ್ಕೆ . . . ಪಿಂತಣಂ, ಅತ್ತಣಂ, ಇತ್ತಣಂ (ಕಮುದ. ೨೦೦ ಪ್ರಯೋ). **ಪಿಂತಣರ್** = ಹಿಂದಿನವರು; ಪೂರ್ವ

ದವರು : ಪಿಂತಣರ ಕಬ್ಬಗಳ್ ಸೇವ್ಯಮವೆ ಪನ್ನ್ಯಂ (ಸಂಸ. ೩-೦). **ಪಿಂತಾಗು, ಹಿಂತಾಗು, ಹಿಂದಾಗು**=೧. ಹಿಂದೆ ನಡೆದಿರು,— ಘಟಿಸಿರು : ಪಿಂತಾದ ದುಸ್ಸಹಾವಸ್ಥಾಂತರ ಸಂತತಿಯನಾಗಳನುಭವಿಸುತ ಮಿರ್ಪಂತಿರ್ದಳ್ ಚೈತನ್ಯಮನಂತಾಗಳ್ ಹರಿಯಿಸಿತ್ತು ಮಹೂರ್ಧಾವೇಗಂ (ಕಾದಂಪೂ. ೯೨೬). ೨. ಹಿಂದೆ ಉಳಿ : ಹಿಂದೆ ಬೀಳು : ಅದು ಪಿಂತಾಗಿರೆ ಪತ್ರಮೊಂದು ಶರಮೊಯ್ದತ್ತಂತದಂ ಪಿಂದುಗೆಯ್ದೊದ ಬಿತ್ತಂ ಪೆಱತೊಂದು ಮಾರ್ಗಣಮಳುಂಬಂ ಪಾಯ್ವುದು (ಪಂಪ. ೬-೯೦) ; ಲಿಂಗ ಮುಂತಾಗಿ ಮನ ಹಿಂತಾಗಿ ಅಂಗಭಾವಮಳಿದು ಅರ್ಪಿಸಿಕೊಳಬಲ್ಲ ಪ್ರಸಾದಿಯು ಪರಮಪರಿಣಾಮವೆ ಪ್ರಸಾದ (ಅದಪ. ೨೩-೩೩); ಷಡುರಥರುರವಣಿಯು ಹಿಂದಾಯ್ತು ರಾಯರ ಗುರುವ ಕಂಡವರಿಲ್ಲನುತ ಕುರುರಾಯ ಚಿಂತಿಸಿದ (ಕುಮಾವ್ಯಾ. ೩-೫೬). **ಪಿಂದುಮುಂದು, ಹಿಂದುಮುಂದು**=೧. ಹಿಂದಿನ ಭಾಗ ಮತ್ತು ಮುಂದಿನ ಭಾಗ : ಪಿಂದುಮುಂದು [ ಪಾಠಾಂ. ಪಿಂತುಮುಂತು ]ಮನೆಡ ಬಲನುಮಂ ಬೆರ್ಚಿದಂತೆ ನೋಟ್ಟುಮಪ್ಪೊಡಾಗಳ್ ನಿಮಗೆ ತಪ್ಪಲ್ಪಗೆದು ಬಂದನೆಂದಱಿಯಿಮೆಂದು ಪೇಳ್ದುದುಂ (ಪಂಚತಂ. ೦೩೨-೩); ಹಿಂದುಮುಂದ ಮಗಡಿಸಿದಾ ಮಾದ್ರೇಯ ರವಿಸುತರೊಡಲೊಳಂಬನು ಹೂಳಿದನು (ಕುಮಾವ್ಯಾ. ೬-೦೬). ೨. ಆಗುಹೋಗು : ಶಿವಶಿವ ಪಿಂದುಮುಂದೆಣಿಸದೆ ಇನಿತುಬ್ಬುವರೆ (ಶಂಪ. ೯೭-೨೩); ಮನೆಗೆಲಸಮಂ ಮಾಣ್ದು ಮೇಣ್ ಮಾಳ್ಪಳವಳು ಕೊನೆಮುಳ್ಗಳಂತಾಗೆ ಹಿಂದುಮುಂಧುಗಳೆಲ್ಲ ಕೊನೆದು ಬಾಡಿದ ನಿರತೆಯಂ ಮಾಲಿಸುವಳು (ಶಾಬೂಶ. ೦೦೩-೨೩೫). ೩. ಹಿಂಭಾಗವು ಮುಂಭಾಗಕ್ಕೂ ಮುಂಭಾಗವು ಹಿಂಭಾಗಕ್ಕೂ ಬದಲಾದ ಸ್ಥಿತಿ ; ಏರುಪೇರು ; ಹೆಚ್ಚು ಕಡಮೆ ; ವಿಪರೀತ : ಬಂದ ಶರಣರ ನಿಲವನಱಿದು ಸಂದು ಸಂಶಯಮಳಿದು ನಂಬದಿದ್ದರೆ ಹಿಂದು ಮುಂದಾಗಿ ಹೋಹನು ಕಾಣಾ ನಮ್ಮ ಗುಹೇಶ್ವರಲಿಂಗವು (ಅಪಶಂ. ೨೦೬-೯೭೯); **ಹಿಂದಕ ಮುಂದಕ ಮಾಡಿಕೊಳ್ಳು** = ಪಾಂತಿ ಹಾಗೂ ಭೇದಿಯನ್ನು ಮಾಡಿಕೊಳ್ಳು : ಈ ಕಾಳಿನ ಹಿಟ್ಟಲೇ ಮಾಡಿದ ರೊಟ್ಟಿತಿಂದು ಮಕ್ಕಳೆಲ್ಲಾ ಹಿಂದಕ ಮುಂದಕ ಮಾಡಿಕೊಂಡ ನೆಲಪಟ್ಟು ಬಿದ್ದಾವರಿ (ಗ್ರಾಮಾಯ. ೦೯೬). **ಹಿಂದಲಿನವರು**=ಹಿಂದಿನ ಕಾಲದವರು ; ಪೂರ್ವಕಾಲದವರು : ಹಿಂದಲಿನವರು ಮಾಡಿರುವ ಕವನಗಳು ಮುಗಿದು ಹೋದರೆ ತಾವೇ ಹೊಸಹೊಸದಾಗಿ ಅಲ್ಲೇ ಕವನಗಳನ್ನು ಗತ್ತಿಗೆ ಸರಿಯಾಗಿ ಹೆಣೆಯುತ್ತಿದ್ದರು (ಹುಟ್ಟಿಹ. ೨೨). **ಹಿಂದಲು**=೧. ಹಿಂಭಾಗ ; ಹಿಂಬದಿ : ತಂದೆ ಹೊಡೆಯುವರೆಂದು ಹೆದರಿ ಮನೆಯ ಹಿಂದಲಿಂದ ಒಳಗೆ ಬಂದು ರೂಮು ಸೇರಿದ್ದನು (ರೂಢಿ). ೨. ಬಳಿಕ ; ತರುವಾಯ : ವೃದ್ಧನು ಆ ಸಮಾಚಾರವನ್ನು ಅವನ ಊರಿಂದ ಬಂದಿದ್ದ ಪ್ರಯಾಣಿಕರಿಂದ ಹಿಂದಲಿಂದ ತಿಳಿದುಕೊಂಡಿದ್ದನು (ಕಥಾಕುಂ. ೨). **ಹಿಂದಲೇಟು ಹೊಡೆ**=ಹಿಂಜರಿ ; ಹಿಮ್ಮೆಟ್ಟು : ಮಂಜಯ್ಯನ ಕರೆಗೆಹಿಂದಲೇಟು ಹೊಡೆಯುವುದರಿಂದ ತನ್ನ ಹೇಡಿತನ ಸ್ಥಾಪಿತವಾಗುವುದೆಂದು ಹೆದರಿದ (ಕಪಸಂ. ೨೦೯). **ಹಿಂದುಮುಂದುಗಾಣು**=ದಿಕ್ಕುತೋಚು ; ದಾರಿಗಾಣು: ಸಮುದ್ರಯಾನದಲ್ಲಿ ದಾರಿ ತಪ್ಪಿ ಹಿಂದುಮುಂದುಗಾಣದೆ ಪೇಚಾಡುವ ನಾವಿಕರಿಗೆ ಇದೇ ದೈವ (ಕಣ್ಮರೆ. ೨೬) ; **ಹಿಂದುಮಾಂದು ನೋಡು, ಹಿಂದುಮುಂದೆ ನೋಡು**=೧. "ಅನಿಶ್ಚಯದಿಂದಿರು : ಅರೆಮನಸ್ಸಾಗಿರು; ಶಂಕಿಸು ; ಹಿಂಜರಿ ; ಹಿಂದುಮುಂದು ನೋಡು" (Hesitate. ಇಂಕಕ). ೨. ಎಚ್ಚರಿಕೆಯಿಂದಿರು : ಜಾಗರೂಕನಾಗಿರು : (ಕ). [<ಪಿನ್]

**ಪಿಂತೆ$_1$** (ನಾ). ೧. ಹಿಂದುಗಡೆ ; ಹಿಂಬದಿ ; ಹಿಂಭಾಗ : "ಪೆಱತು ಪಿಂಗಡೆ ಪೆಡಂಮೆಟ್ಟುಱೆ ಪೆಱಗುಂ ಪಿಂತೆ ಪಿಂತಿಲೆನೆ ಹಿಂದೆನಿಕುಂ" (ಶಬ್ದಮಂ. ೦೯೩). [ <ಪಿಂತು ]

**ಪಿಂತೆ$_2$, ಪಿಂದೆ, ಹಿಂತೆ, ಹಿಂದೆ** (ಅ). ೧., ಹಿಂಬದಿಯಲ್ಲಿ; ಹಿಂಭಾಗದಲ್ಲಿ ; ಹಿಂದುಗಡೆಯಲ್ಲಿ : ಸಿಂಧುರದ ಹಾರದ ಮಾಲೆಯ ಕಾಂತಿ ತಳ್ತು ಪಜ್ಜಳಿಸುವ ಕುಂಭಮಂ ತಳೆದು ಪಿಂತೆಸೆದಿರ್ದುದು ಗಂಧಸಿಂಧುರಂ (ಕಾದಂಪೂ. ೫೯೩); ಇವರ್ಗೆ ತಕ್ಕುದು ಮಾಟ್ಪೆನೆಂದಾಗಳೆ ಪೋಗಿ ಚಿಂತಾಸಿದ್ಧಿವಿನಾಯಕನ ಪಿಂತೆ ಕುಳ್ಳಿರ್ಪುದುಂ (ಹಂಪಾಪು. ೫೩೨-೦೦); ಇಂತು ನೆರೆದುದು ಚಾತುರಂಗಬಲ ಬಲಿದಿಕ್ಕಿ ಪಿಂತೆ ಪರಿಹಿತಪೆ ಸಹಿತಂ ಬರುತ ಭವನತ್ತ (ಇಂಪ. ಪ. ೩೯-೩). ೨. ಮೊದಲಲ್ಲಿ ; ಪೂರ್ವದಲ್ಲಿ ; ಮುಂಚೆ : ಪಿಂತೆ ಕಲಕಾಲದೊಳಗೊಂದುದಿವಸಂ ನಂದಿ ಭೃಂಗಿ . . . ಗಿರಿಜಾತೆಸಹಿತೀ ಕ್ರಮದೊಳು ಓಲಗಂಗೊಟ್ಟಿರ್ಪ ಸಮಯದೊಳ್ (ಶಂಪು. ೩-೬); ರಾಘವಂ ಪಿಂತೆ ರಾವಣನಂ ಮಥಿಸಿ ವಾಜಿಮೇಧದೊಳ್ಪೂರ್ವರಂ ತಣಿಪಿದಂ (ಕೃಜಾ. ೨-೨೫); ಬಲಿಯು ದಾನವ ಗೈದ ಚರಿತೆಯನು ಪಿಂತೆ ಕಲಿಯಲಿಲ್ಲವೆ ನೀವು ? (ಕುಪ್ಪ. ೦೬-೯). ೩. ಪರೋಕ್ಷದಲ್ಲಿ : ಪಿಂತೊರ್ವರು ದಾಣನಾಸ್ಥಾನದೆ ಬುದ್ಧಿವಂತರಿಲ್ಲೆಂದಾಡುವರು ಮುಂತಣ ರಾಜಕಾರ್ಯವನುಸಿರುವೆ ಭೂಕಾಂತ ಕೇಳೆಂದು ಕೈಮುಗಿದ (ಕೋಕಕ. ೩೭-೩೬). **ಪಿಂದೆ** : ೧. ಅಱಿಯೆ ಚಂದ್ರನೆ ನಾಂ ಕಪಿಂಜಲಕ ನೀನೀ ಪುಂಡರೀಕಾರ್ಥವಿಾ ತೆಱದಿಂ ಪಿಂದೆಯುದೇಕೆ ಬಂದೆ ಗಡ (ಕಾದಂಉ. ೬೦೯); ಪುಟಿಲ ತಣ್ಪಿಂ ಸಾರುತುಂ ಪಿಂದೆ ನಿಂದಳಿವೃಂದಂ ಬರೆ ಪಾರುತುಂ (ಶೃಶ್ಛಿ. ೨-೩೯). ೨. ತಪ್ಪನೆಸಗಿದ ಪಿಂದೆ ಜಡಭರಿತನಾಗಿ (ಶ್ರೀಣಾಕು. ೩-೦೯); ಕಾಳೆಗಕ್ಕೆ ಬೆದರಿ ತನ್ನಡಿ ಶರಣ್ಬೊಕ್ಕರೊತಾಂ ಪಿಂದೆ ಕಂಡಂತೆ ಕಂಡುದಾಸೀನದಿಂ ಮರ್ಪಿಸೆ (ಶಬ್ರಿಂಗ. ೭೬-೨೦೯೬). ೩. ಗುರುವಂ ಮುಂದೆ ಪೊಗಟ್ದುದು ಮಿತ್ರರಂ ಬಂಧುಗಳಂ ಪಿಂದೆ ಪೊಗಟ್ದುದು (ಪಂಚತಂ. ೫೭-೦೬). **ಹಿಂತೆ** : ೧. "ಪಿಂತೆ=ಹಿಂತೆ [ ಪಾಠಾಂ. ದೆ ] " (ಕಮದ. ೨೯೦ ೫೯೯). ೪. ಅನಂತರ ; ತರುವಾಯ ; ಆಮೇಲೆ : ಅಂತಪ್ಪನಂತಕೋಟಿಗಣಂಗಳೆಲ್ಲರಂ ಮುಂತೆ ಸೃಷ್ಟಿಸಿದರು ಮನಂತದೇವತೆಗಳಂ ಹಿಂತೆಯು (ಪಶ್ಚಿ. ೬-೨೦-೩೩). **ಹಿಂದೆ** : ೧. ಮರ್ವಮನಱಿತು ಮಾಡದ ಭಕ್ತಿ ಸೊಣಗನ ಹಿಂದೆ ಸೊಣಗ ಹರಿದಂತಾಯಿತ್ತಯ್ಯ (ಅದಪ. ೦೦-೦೯); ಯಾವಗಹುದಿದು ಹಿಂದೆ ಬಂದೆಸುವೀ ವಿಗಡತನ ನಿನಗೆ ಮೆಱೆವುದು ಕರ್ಣ (ಕುಮಾವ್ಯಾ. ೬-೩೯): ದಕ್ಷಿಣಕೆ ನಡೆದುದು ವಾಜಿ ಚಂಪಕಾಪುರಕಂದು ಹಿಂದೆ ಬಹ ಪಡೆ ಸಹಿತ ಮಹಿಲದಿಂದೆ (ಕೃಜಾ. ೦೦-೩೩). ೨. ಇನ್ನು ಮಾನೆತ್ತ ಮಗನಂ ಹಡೆವುದೆತ್ತಲು . . . ಲೋಕಂ ನಗುವ ಮಾತನಾಡಿದಿರಿ ಹುಟ್ಟುವಡೆ ಹುಟ್ಟನೆ ಹಿಂದೆ ಹೇಳೆಂದಳು (ಸಿದ್ಧರಾ. ೦-೯೦); ಹಿಂದೆ ಪರಸತಿಗಾಗಿ ಹಿಡಿವಡೆದ್ದುದು ಭಂಗಿಸುವಲ್ಲಿ ದೃಗುಜಲಬಿಂದುವೊಂದುಂ ಹೊಱಮಡದು . . . ಇಂದದೇನು ನಿಮಿತ್ತ ಸಲಿಲಂ ನಿನ್ನ ನಯನದಲಿ(ಜಪ್ಪ. ೦೯-೫೩); ಎಲವೊ ಕೌರವ ಹಿಂದೆ ವಂಚಿಸಿ ಕಳವಿನಲಿ ಜೂಜಾಡಿ ರಾಜ್ಯವ ಗೆಲಿದ ಗರ್ವವನುಗುಳು (ಕುಮಾವ್ಯಾ. ೦೦-೯೯). ೩. ಹಿಂದೆ ಗಳಹುವನಿವನು ಬಾಯಿಗೆ ಬಂದ ಪರಿಯಲಿ (ಕುಮಾಭೀ. ೦-೦೦); ಹಿಂದೆ ಬಯ್ಯಬಾರದು, ಮುಂದೆ ಹೊಗಳಬಾರದು (ಗಾದೆ). ೪. ಹೊಸ್ಸದೇವರು ಬೆಸಸಲು ಕಾದಿ ಸುರಲೋಕಪ್ರಾಪ್ತನಾದ ಹಿಂನ್ದಾದನ್ತಹವರಂ ಲೇಸಾಗಿ ನಡಹುವರು (ಮೈಆರಿ. ೦೯೩೨, ೩೦-೪; ಸು. 1125); **ಪಾರ್ಷ್ಣಿಗ್ರಾಹ**—ತಾನು ಹಗೆಯ ಮೇಲೆ ಎತ್ತಿ ಹೋಹಲ್ಲಿ ಹಿಂದೆ ರಾಜ್ಯವಂ ಉಪದ್ರವ ಮಾಡುವವನು (ಶಾಶಬ. ೪) ; ಆ ಬಾಳೇಎಲೆಗಳ ನಡುವೆ ಗಿಡದೊಳಗಿಂದ ಒಂದರ ಹಿಂದೆ ಒಂದು ಹೊಸ ಸುಳಿ ಏಳುತ್ತವೆ (ಮುಂಬಯಿ.೨-೩೭).

**ಹಿಂದೆ ಕಳುಹು** = ಹಿಂದಕ್ಕೆ ಕಳುಹಿಸು : ವಾಪಸು ಕಳುಹಿಸು : ಬರೆದು ಕೊಡುವೆನು ಸ್ಥಿರ ಚರಾಸ್ತಿಯ ಉಂಬಳಿ. ಎಂದುಸುರಿ ಮನತಂದು ಬಿರುಮುನ ಕಂದನಹ ಕಡೆಕಂಜಿಯಾ ಒಂದವಳು

ಹಿದ ಹಿಂದೆ ಕಳುಹಿದ ಇಂದುನಾಥಾಧೀಶನು (ಕುಚ. ೨೦-೯೨). ಹಿಂದೆ ಬೀಳು = ೧. ಹಿಂದೆ ಉಳಿ,—ಆಗು : ಜಗದ ಜೀವನರಥವು ಮುಂದಿರೆ ಹಿಂದೆ ಬೀಳದು ಭಾರತ (ಪಂಚಸು. ೫೨-೦೫). ೨. ಹಿಂಬಾಲಿಸು ; ಅನುಸರಿಸು : ಈ ನರಸ ಬಹಳ ದಿನದಿಂದಲೂ ಆಕೆಯು ಹಿಂದೆ ಬಿದ್ದಿರುವುದು ನನಗೆ ಗೊತ್ತಿದ್ದರೂ ವಿಷಯ ಹೀಗೆ ವಿಕೋಪಕ್ಕೆ ಹೋಗುತ್ತದೆ ಎಂದು ಭಾವಿಸಿರಲಿಲ್ಲ (ದೀಪಹಂ. ೯೭). ೩. ಕೆಳಮಟ್ಟದಲ್ಲಿಯೇ ಇರು : ಓದಿನಲ್ಲಿ ಈ ಹುಡುಗ ಬಹಳ ಹಿಂದೆ ಬಿದ್ದಿದ್ದಾನೆ (ರೂಢಿ). ಹಿಂದೆ ಮುಂದೆ = ೧. ಹಿಂಭಾಗಕ್ಕೆ ಮತ್ತು ಮುಂಭಾಗಕ್ಕೆ : ಹಿಂದೆ ಮುಂದೆ ಮರಳಿ ಮರಳಿ ಬೆಗಡೊಂದಿ ನಡೆವುತ ಗಾಳಿಯುದು . . . ಪೌಳಿಯ ಕಡೆಗೆ ನಸುಸಾರ್ದುದು (ಜಕಥೆ. ೨೬-೩೦). ೨. ಆಗುಹೋಗುಗಳನ್ನು ಕುರಿತು: ಈ ಜನ . . . ಅಧಿಕಾರಿಗಳಾಗಿದ್ದ ಪಕ್ಷಕ್ಕೆ ಇಪ್ಪೊಂದು ದಗೆಯಲ್ಲಿ ದೊಡ್ಡ ಗುಂಪನ್ನು ಹೊರಗಟ್ಟುವುದಕ್ಕೆ ಮುಂಚೆ ಇಪ್ಪತ್ತು ಸಾರಿಯಾದರೂ ಹಿಂದೆ ಮುಂದೆ ಯೋಚಿಸುತ್ತಿದ್ದರು (ಕೃಪಚು. ೯೬೫). ಹಿಂದೆಮುಂದೆ ನೋಡು = ಹಿಂದೆಗೆ ; ಹಿಂಜರಿ ; ಅನುಮಾನಿಸು : ಅವರೂ ಉಳ್ಳವರಲ್ಲ. ಅದರಲ್ಲೂ ಹರೆಯದ ಅವಿವಾಹಿತ ಅಬಲೆಯೊಬ್ಬಳನ್ನು ಸಲಹಲು ಹಿಂದೆ ಮುಂದೆ ನೋಡಿದರು (ಜೊಬಜೀ. ೫೭) ; ನಮ್ಮನ್ನು ಆಜ್ಞಾಪಿಸಲು ಪ್ರಭುಗಳು ಹಿಂದೆ ಮುಂದೆ ನೋಡಬಾರದು (ಹುಳಿಸೀ. ೦೫೦). ಹಿಂದೆ ಹತ್ತು = ಹಿಂದೆ ಬರು ; ಹಿಂಬಾಲಿಸು; ಬೆನ್ನಟ್ಟು : ಕುಚಿಯುಂರವಣಿಸಿ . . . ಅಚ್ಯುತಭವನ ಭವನವಂ ಪುಗಲುಜಿದ ಮಿಂಡನು ಹಿಂದೆ ಹತ್ತಲು ಮಜುಗುತ್ತಾಗಳು ಕಿನ್ನರಯ್ಯಂ ಕರುಣದಲಿ ನೋಡಿ (ಜಕಥೆ. ೨೮-೦೦) ; ಕರೂಪದ ಕೊಬ್ಬಿನವದಿರು ಹಿಂದೆ ಹತ್ತಿದರೆ ಮರಳಬಲ್ಲನೆ ಭೀಮನು (ಕುಮ್ಯಾಕ. ೬-೨); ತಂದೆಯನು ಕೊಂದವಗೆ ಮೋಹಿಸಿ ಹಿಂದೆ ಹತ್ತಿದಳೆಂದು ಹೆಣ್ಣು ಕೊಡೆಂದು ನಮ್ಮಯ ತಂಗಿಯಿಂದಟ್ಟುವುದುಚಿತವಹುದು (ಶಾಕ್ಯತಾ. ೩೦-೦೦). ಹಿಂದೆ ಹಾಕು = ಹಿಂದೆ ಉಳಿಯುವಂತೆ ಮಾಡಂ ; ದಾಟು ; ಕ್ರಮಿಸು: ಕಾಡುಮೇಡುಗಳನ್ನು ಹಿಂದೆ ಹಾಕಿ ತೋಡುಗಳನ್ನೂ ಪಾಲಗಳನ್ನೂ ದಾಟಿದರು (ಕಾಯಿಜ. ೦೩ ಕಥಾಸಾರ). ಹಿಂದೆ ಹೋಗು = ೧. ಹಿಂದಕ್ಕೆ ಹೋಗು ; ಮರಳು : ಬೋಳನು ದಾರಿ ತಪ್ಪಿ ನಡೆದಿದ್ದನು . . . ಹಿಂದೆ ಹೋಗುವುದೇಕೆ ? ಈ ದಾರಿಯನ್ನೂ ಬಲ್ಲೆನಲ್ಲವೆ! ಎಂದು ಒಂದು ಪಾಲದೆಡೆಗೆ ಬಂದನು (ಕಾಯಿಜ. ೦೦ ಕಥಾಸಾರ). ೨. ಹಿಂಬಾಲಿಸು ; ಅನುಸರಿಸು : ಅಂದು ವೈಗೆಟ್ಟವನಿಸುರನಿರುಳೊಂದು ಪಶುವಿನ ಹಿಂದೆ ಹೋಗುತ (ಜಕಥೆ. ೫೭-೫೨). ಹಿಂದೇಟು ಹಾಕು = ಹಿಂಜರಿ; ಅನುಮಾನಿಸು: ಅಷ್ಟೊಂದು ಬಂಡವಾಳವನ್ನು ತಾನೊಬ್ಬನೇ ಸುರಿದು ಸಾಹಸ ಮಾಡಲು ಸ್ವಲ್ಪ ಹಿಂದೇಟು ಹಾಕುತ್ತಿದ್ದನು (ಸಿತಿಲು. ೭೭). ಹಿಂದೇಟು ಹೊಡೆ = ಹಿಂದೇಟು ಹಾಕು : ನಾನು ಕೊಂಚವಾದರೂ ಹಿಂದೇಟು ಹೊಡೆಯದೆ ಎಲ್ಲ ಕಾರ್ಯವನ್ನೂ ಮಾಡುತ್ತಿದ್ದೆ (ಅಂಕೂ. ೬೪). [ <ಪಿಂತೆ$_1$ ]

**ಪಿಂತೆಗೆ** ' ಪಿಂದೆಗೆ ' ನೋ.

**ಪಿಂತೊಲೆ** (ನಾ). ಒಲೆಯ ಹಿಂಭಾಗ : ಅಂಗಯಲ್ . . . ಪಿಂತಿಲ್, ಪಿಂತೊಲೆ (ಚಮಿದ. ೦೬೩ ಪ್ರಣೀ). [ ಪಿಂತು+ಒಲೆ$_4$ ]

**ಪಿಂದಡಿ** ' ಪಿಂತಡಿ ' ನೋ.

**ಪಿಂದಡಿಯಿಡು** ' ಪಿಂತಡಿಯಿಡು ' ನೋ.

**ಪಿಂದಯ್ದು**, ಪಿಂದೈದು (ಕ್ರಿ). ಹಿಂದೆ ಹೋಗು ; ಹಿಂಬಾಲಿಸು : ಬಟಸಲ್—ಪಿಂದಯ್ದಿ ಪೋಪುದು (ಕಶಜ. ೯. ೧. ೮೫). ಪಿಂದೈದು : ಊರುವೇಗದೊಳುದ್ಬಿ ಮುಂದೈದಲಾ ಗಿರಿಯ ಸಾರವತ್ತಾದ ವೃಕ್ಷಗಳೆಲ್ಲಾ ಪಿಂದೈದುತೋರಂತೆ ನಿಜಬಂಧುಗಳನು ಬೀಳ್ಕೊಡುವಂತೆ ಮುಹೂರ್ತ ಮನುಸರಿಸಲು (ಪಂಚಾಶಾ. ೫-೦-೨೦).

[ ಪಿಂದು (<ಪಿಂತು) + ಅಯ್ಯು$_4$ (<ಎಯ್ದು) ]

**ಪಿಂದಲೆ**, ಹಿಂತಲೆ, ಹಿಂದಲೆ (ನಾ). ೧. ತಲೆಯ ಹಿಂಭಾಗ ; ಹೆಡತಲೆ : ರಾಹುವದನ ಶಶಿಬಿಂಬದ ಪಿಂದಲೆಯೊಳೆನೆ ತೋರಮುತ್ತಿನ ತಲೆದುಡುಗೆಯಿನೆಸೆದುದಲರ ಸೋರ್ಮುಡಿ ಸಶಿಯಾ (ಕೃಕ್ಷಚ. ೩-೫೭) ; ತಲೆಯ ಪಿಂದು, ಪಿಂದಲೆ (ಕಬ್ಬಾಸ. ೩೯೯ ಶ್ರಯೋ). ಹಿಂತಲೆ : ೧. ಯಶೋದೆಯು ಹಿಂತಲೆಗೆ ಬಲವಾದ ಏಟು ಬಿತ್ತು (ವಾತ್ಸಲ್ಯ. ೨೬೩). ಹಿಂದಲೆ : ೧. ಹಿಂದಲೆಯನ್ನು ಸರಿಯಾಗಿ ಬಾಚಿಕೊಂಡಿಲ್ಲ (ರೂಢಿ). ೨. ಹಿಂಭಾಗದಲ್ಲಿರುವಂತಹುದು : ಹಿಂಬದಿಯಲ್ಲಿರುವುದು : ಬಲಗಡೆಗಿದ್ದ ಹಿಂದಲೆ ಹಟ್ಟಿಯ ಬಾಗಿಲಿಂದ ಬಂಡಿಗಾರರ ಗುಟುರುಗೊರಕೆ ತೂರಿ ಬರುತ್ತಿತು (ಕೃಪಸು. ೫೯೯). ' ಮುಂದಲೆ ' ಪರಾ.

[ ಪಿಂ (<ಪಿನ್) + ತಲೆ$_1$ ]

**ಪಿಂದಳೆ** (ಕ್ರಿ). ಅನುಸರಿಸು ; ಹಿಂಬಾಲಿಸು : ತಂದೆಯ ಕೆಳೆಯನ ಕಂದಂ ಪಿಂದಳೆದೆಡೆವಿಡದೆ ದೂಳಿಯಾಟಂ ಮೊದಲೆನ್ನಿಂದವು ಏಟಿಗೆ ವಂದಪ ನೆಂದಿಪನಂ ಪೆಂಪುವಡಿಕುಮಾಪ್ರತಿಮಾಂಕಂ (ಜಕಿಂ. ೫-೯೬).

[ ಪಿಂ (<ಪಿನ್) + ತಳೆ$_1$ ]

**ಪಿಂದಿಕ್ಕು** ' ಪಿಂತಿಕ್ಕು ' ನೋ.

**ಪಿಂದಿರಿಸು** ' ಪಿಂತಿರಿಸು ' ನೋ.

**ಪಿಂದಿರುಗು**, ಪಿಂತಿರುಗು, ಹಿಂತಿರುಗು, ಹಿಂದಿರುಗು (ಕ್ರಿ). ೧. ಹಿಂದಕ್ಕೆ ತಿರುಗು ; ಹಿಮ್ಮುಖವಾಗು : (*). ೨. ಹಿಂದಕ್ಕೆ ತೆರಳು ; ವಾಪಸ್ಸಾಗು ; ಮರಳು : ಮುಂಥ ಪಿಂದಿರುಗಿ ಪೋಗಿ ಸಲಹಿಕೊ ಶರೀರವಂ (ಪಂಚಾರಾ. ೫-೩-೦೦). ೩. ಹಿಂದೆಗೆ ; ಹಿಂಜರಿ : " ಪೆಚಿತೆಗೆದುದಕೆ ಪಿಂದಿರುಗಿತೆಂದಕ್ಕು " (ಕಬ್ಬಾಕ್ಕ. ೭೦). ಪಿಂತಿರುಗು : ೧. ಪಿಂತಿರುಗಿ ನೋಡಲೊ ವಿಶಾಲಾಕ್ಷ ಮೋಹರಸವಂ ತುಳ್ಕಿ ನುಡಿಸೊ ಸವಿನುಡಿಜಾಣ (ಕಚಿಟ. ೦೯-೬೭). ೨. ರೋಷದುಃಖದ್ವಂದ್ವದಲಿ ಬೆಂದು ಮಣಿಪುರಕೆ ಪಿಂತಿರುಗಿ ಬಂದಳತಿಭೀಷಣವಮನಃಸ್ಥಿತಿಯಲಿ ! (ಜಕ್ವಾಂಗ. ೯೯-೦೬೫೭). ಹಿಂತಿರುಗು : ೨. ಇನ್ನು ಮೇಲೆ ನನಗೂ ನನ್ನ ದೊಡ್ಡಿಗೂ ಗತಿ ಯಾರು! ಎಂದು ಅಳುತಾ ತನ್ನ ಊರಿಗೆ ಹಿಂತಿರುಗಿದನು (ಶೀತಿಕಂ. VII, ೪). ಹಿಂದಿರುಗು : ೧. ಗಣಪತಿ ಹಿಂದಿರುಗಿ ನೋಡಲಾಗಿ (ಮುಂಬಯಿ. ೪-೬೯). ೨. ಅರ್ಜುನಂ ನೋಡುತಿರಲಾ ಭಾಮೆ ಬಂದಪೊಳೆ ಹಿಂದಿರುಗಿ ನಿಬಿಡಕಾಂತಾರದಲಿ ತರುಗುಲ್ಮಪರ್ಣಗರ್ಭಂಬೊಕ್ಕು . . . ಮರೆಯಾದಳಿರದೆ (ಜಕ್ವಾಂಗ. ೬೪-೧೦೯) ; ಜಯಸೇನನು ತಡಮಾಡದೆ ಬೇಕಾದಷ್ಟು ಹೊಂಗೂದಲನ್ನು ಖಡ್ಗದಿಂದ ಕತ್ತರಿಸಿ ತೆಗೆದುಕೊಂಡು ಹಿಂದಿರುಗಿದನು (ಮುಕಿಕ. ೯೬). [ ಪಿಂ (<ಪಿನ್) + ತಿರುಗು$_1$ ]

**ಪಿಂದು** ' ಪಿಂತು ' ನೋ.

**ಪಿಂದುಗಡೆ**, ಹಿಂದುಗಡೆ$_1$ (ನಾ). ಹಿಂಭಾಗದ ಸ್ಥಳ ; ಹಿಂದಿನ ಭಾಗ : ಪೆಜಗೆ = ಅತ್ವದ ಪಿಂದುಗಡೆಯಲ್ಲಿ, ಇತ್ವಂ = ಇಕಾರಂ ಹುಟ್ಟುವುದು (ಕಮಿದ. ೦೬೯ ಟೀಕೆ). ಹಿಂದುಗಡೆ$_1$ : ಪಿಂತೆ = ಹಿಂದುಗಡೆಯಲ್ಲಿ (ಕಮಿದ. ೪೨ ಟೀಕೆ) ; ತರಕಾರಿ ಬೆಳೆಯಲು . . . ಸ್ಥಳ ಮನೆಯ ಹಿಂದುಗಡೆ ಆದರೆ ಒಳ್ಳೆಯದು (ಅಡುಕ್. ೦೨೬) ; ನಿಮ್ಮನ್ನೆಲ್ಲಾ ನೋಡಿಕೊಂಡು ಹಿಂದುಗಡೆ ಬರುತ್ತೇನೆಂದು ಬೆಕ್ಕು ಹಿಂದೆ ಹೋಗುತಾ, ಶಾನೇ ಹಿಂದೆ ನಿಂತ ಒಂದು ಇಲಿಯನ್ನು ಬಕ್ಕನೆ ಬಾಯಿಗೆ ಹಾಕಿಕೊಳ್ಳುತಾ ಬಂತು (ಶೀತಿಕಂ. IV, ೫೭).

[ ಪಿಂದು (<ಪಿಂತು) + ಕಡೆ$_3$ ]

**ಪಿಂದುಗಳೆ**, ಹಿಂದುಗಳೆ (ಕ್ರಿ). ೧. ಹಿಂಜರಿ; ಹಿಂದೆಗೆ; ಹಿಮ್ಮೆಟ್ಟು. ೨. ತಿರಸ್ಕರಿಸು; ಜರೆ ; ಹೀಯಾಳಿಸು : ಕಂದರ್ಪನಂ ಪಿಂದುಗಳೆವಂದವಂ ತಳೆದು ನಿಂದ ರಾಜಪುತ್ರರಿಂದೆ (ರಾಜಕೀ. ೫-೦೯ ವ). ಹಿಂದುಗಳೆ: ೧. ನೊಂದವರು ನಿಲಿ ಸ್ವಾಮಿಕಾರ್ಯಕೆ ಹಿಂದುಗಳೆದರು ಮರಳಿ (ಕುಮ್ಯಾಕ. ೬-೨೯) ; ಈಗಳಾನೆಂತು ರಣಕೆ ಹಿಂದುಗಳೆದಪೆನು (ಕೃಬಜಾ. ೨೩-೬೬).

೨. ಕೋವಿದರು ಪೇಳಿಂದೆನಲವರ ನುಡಿಯನು ಹಿಂದುಗಳೆಯಲವ್ಮ್ಯಾದೀ ರಾಮನಾಥನ ಸಂದ ಕಥೆಯನುಸುರಿದೆನು (ಕುಲಾಶಾಂ. ೦-೬೬); ಬುದ್ಧಿಯನು ಹೇಳಿದರೆ . . . ಹಿಂದುಗಳೆಯದಿರು ಮಗನೆ (ಹಂಶಾಂ. ೦-೬೬): ಹಿಂದುಗಳೆಯದಿರೆನ್ನ ಮಾತನು (ಕೃಷಿಖಾ. ೨೭-೩೦). ೩. ಅತಿಕ್ರಮಿಸಂ; ಮೀರು: ತರಣಿಯ ತೇರ ತೇಜಿಯ ಹಿಂದುಗಳೆವ ಸಾಸಿರಘೋಟಕಾನ್ವಿತರಥವ ಭರವಸದಿಂದೇಱ ತೆರಳಿದ ಶೋಣಿತಪುರಪತಿ ವಾದ್ಯಘೋಷದಲಿ (ಮೋಹಚ. ೯೦-೩). ೪. ಮುಗಿದು ಹೋಗು; ತೀರು: ತನಗಿಂದು ಮೂವತ್ತಾಱುವತ್ಸರ ಹಿಂದುಗಳೆದವು (ಸಂಶಕ. ೩-೨೨). ೫. (ಸಮಯವನ್ನು) ದಾಟು; ಕ್ರಮಿಸು: ಒಂದೊಂದುದಿನವನೊಂದೊಂದುವರುಷವಾಗಿ ಹಿಂದುಗಳೆದು ರಾಯ ತನ್ನ ಇಂದುಮುಖಿಯ ನೋಡುವ ಕಡುಕಾತುರದಿಂದ ದುರ್ಗಕೆ ತೆರಳಿದನು (ಕುಲಾಶಾಂ. ೬೯-೩); ಹಿಂದುಗಳೆದಳು ಬಾಲ್ಯವನು ಪಿತೃಮಂದಿರದಲಿರಲು ಯವ್ವನ ಕಂದೆಱದುದು (ಸಿಹಾಗ. ೪-೩-೦೦). [ ಹಿಂದು (<ಪಿಂತು) + ಕಳೆ$_1$ ]

**ಪಿಂದುಗೆಯ್** (ಕ್ರಿ). ಹಿಂದೆ ಉಳಿಯುವಂತೆ ಮಾಡು; ಹಿಂದೆ ಹಾಕು: ಬಳನಂ ರಾಜ್ಯೋಚಿತಸುಖದೊಳ್ಲಿಲ್ಲಿಯುಂ ಪಿಂದುಗೆಯ್ಯಲಱಯದನೆಯ ದೇಂ ಗಳ ಪರಲೋಕದ ಸುಖಮಂ ಗ್ಗಳಮೇಂ ಬಲುಪಿಂದೆ ಪಿಂದುಗೆಯ್ವುದು ಗುಣಮೇ (ಶರಕ್ಕೆ. ೯-೬೬); ಅದು ಪಿಂತಾಗಿರೆ ಮತ್ತಮೊಂದು ಶರವೆಯ್ದಿತ್ತಂತದಂ ಪಿಂದುಗೆಯ್ದೊದಱುತ್ತುಂ ಪೆಱತೊಂದು ಮಾರ್ಗಣ ಮಳುಂಬಂ ಪಾಯ್ವುದು (ಕಶಿಂ. ೪-೯೦). [ಪಿಂದು (<ಪಿಂತು) + ಕೆಯ್$_1$]

**ಪಿಂದುಗೊಳ್**, ಹಿಂದುಗೊಳ್ (ಕ್ರಿ). ಹಿಂಬಾಲಿಸು; ಅನುಸರಿಸು: ಎಯ್ದಿದತ್ತು ತತ್ತರುಣಿಯ ಪಿಂದುಗೊಂಡಖಿಳಬಂಧುಜನಂ ಪಿತೃಮಾತೃ ಸೋದರರ್ (ದಶಕು. ೬-೦೦); ಕಾವರ್ಱುಗಿಲ್ಗೆ ಕರ್ಱುವಿಲ್ಲಂ ಕೈವೀಸಿ ಕರೆದು ಕಳುಪಲೊಡನೆ ತಾನುಂ ಸಂಗಡಮಾಗಿ ಪೋಗಿ ಪೊತ್ತೆತ್ತುವ ಗಂಧವಹನ ಪಿಂದುಗೊಂಡು ಮಂಡಳಿಸಿ ಮಱಿಮುಗಿಲಂತೆ ಪಾರ್ವ ಮದಮಧುಕರ ಪ್ರಕರದಿಂ (ರಾಶಕೀ. ೦-೦೬೩ ವ). **ಹಿಂದುಗೊಳ್**: ಹಿಂದುಗೊಂಡೇ ಬಪ್ಪೆನೆನ್ನ ಸುಕೃತದ ಸುಧೆಯ (ಜಶರ. ೩-೩೨); ಬಂದುದೀ ಮೃಗಪೋತ ಭೀತಿಯ ಮಂದಗತಿಯಿಂ ಲಿ ಮೃಗಸುನೇತ್ರೆಯ ಹಿಂದುಗೊಂಡು[ಪಾಶಾಂ. ಹಿಂದನೊಂದು] (ಕೊಶರಾ. ೩-೬-೨೬); ಒಡೆಯನ ಲಲಿತಮೂರ್ತಿಯನಗಲಲಾಱದೆ ಹಿಂದುಗೊಂಡಳುತ್ತ ತೊಳಲಿ ಬರುತ (ಸಿಹಾಗ. ೩-೨-೩೦); ಗೀರ್ವಾಣಪತಿನಂದನಂ ಬಹಳದೇಶವನಪರ್ವತನದೀನದಂಗಳನುತ್ತರಿಸಿ ಕುದುರೆಗಳ ಹಿಂದುಗೊಂಡು ಬರಲು (ಕೃಷಿಖಾ. ೨೬-೬).

[ ಪಿಂದು (<ಪಿಂತು) + ಕೊಳ್$_1$ ]

**ಪಿಂದುಱ್**, ಹಿಂದುಳಿ (ಕ್ರಿ). ಹಿಂದೆ ಉಳಿ, —ನಿಲ್ಲು; ಹಿಂದಾಗು: ಮುಂದಾಗಿ ದಿನಪನುದಯಾನಂದದೊಳಸ್ತಮಯಸಮಯದೊಳ್ ಸಂಜೆ ಕರಂ ಪಿಂದುಱದುದಂತೆ ಕೆಲರೊಡಮಂದಾದುದಯದೊಳ್ ಸಾರ್ವರೆಡಱೊಳಗಲ್ವರ್ (ಶಾಕ್ಯಶಾ. ೬೬೬ ಪೂದ್ರಕ); ಬಗೆವರ ಬಗೆ ಪಿಂದುಱಯೆ . . . ಮುಗಿಲ ಪೊಱೆಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗಲಿಂಗೈಸುವ ಚಾದಗೆಯ ಮಱಗಳುಮಂ (ಕಶ್ಯಶಾ. ೨೩೪). **ಹಿಂದುಳಿ**: ಸಕಲೇಂದ್ರಿಯಗಳುಬ್ಬಟೆ ಬಲಿದ ವಿವರುಮಚಾರದಲಿ ಹಿಂದುಳಿದುದುಗ್ರತಪಃಪ್ರಭಾವದ ಬೆಳಗು ನಿಮಿಷದಲಿ (ಕೊಶಾ. ೦-೩-೩೩); ನಾವು ನಾಳೆ ಹಿಂದುಳಿಯಬಾರದು ಕದನಕನುವಾಗಿರಲಿ ಪಾಯದಳವೆಂದು ನುಡಿದಂ(ಕೃಷಿಖಾ. ೧೭-೩೦): ಸಭೆಯೊಳು ಮೇಲೆದ್ದು ಕಣಿವನು ಬಹುಭಾಷಿ ಹಿಂದುಳಿವನು ಮಿತಭಾಷಿ (ಅಂಶಾಕ. ೨೦೩-೬೩).

**ಹಿಂದುಳಿದ ಪಂಗಡ—ಪ್ರಗತಿಗೆ** ಸಹಾಯಹೊಂದದಿರುವ ಗುಂಪು: ಮಿಡಲ್‌ಸ್ಕೂಲಿನಲ್ಲಿ ಸ್ಕಾಲರ್‌ಷಿಪ್ಪುಗಳ ಹಂಚಿಕೆ ಹಿಂದುಳಿದ ಪಂಗಡಗಳಿಗೆ ಇವೆಯಲ್ಲ (ಕಂಗಳ. ೧೦೪). **ಹಿಂದುಳಿದ ಪ್ರದೇಶ—ಪ್ರಗತಿ**ಯಾಗದಿರುವ ಪ್ರಾಂತ, —ಸ್ಥಳ; ಕೆಳಮಟ್ಟದ ಅಥವಾ ಹೀನಸ್ಥಿತಿಯಲ್ಲಿರುವ ಪ್ರದೇಶ: ಹಿಂದುಳಿದ ಪ್ರದೇಶಗಳಲ್ಲಿ ಅಡುಗೆಮನೆಯ ಹೊಗೆಯು ಒಂದು ಜಾಗತಿಕ ಸಮಸ್ಯೆಯಾಗಿರುವುದರಿಂದ . . . "ರಾಜೂಚೂಲಾ" ಅನೇಕ ದೇಶಗಳಲ್ಲಿ ಜನಪ್ರಿಯವಾಗುತ್ತಿದೆ (ಅಜು೯. ೨೨).

[ಪಿಂದೆ (<ಪಿಂತ್ಕೆ) + ಉಱ$_1$]

**ಪಿಂದೆ** 'ಪಿಂತ್ಕೆ' ನೋ.

**ಪಿಂದೆಗೆ**, ಪಿಂತೆಗೆ, ಹಿಂದೆಗೆ (ಕ್ರಿ). ೧. ಹಿಂದಕ್ಕೆ ಸರಿ; ಹಿಂಜರಿ; ಹಿಮ್ಮೆಟ್ಟು: ಪೊಗುವ ಕೊಡಂಕುಮೆತ್ತುವ ಬಿದಿರ್ಚುವದಿರ್ಚುವ ಪಾಯ್ವುಪೊಯ್ವ ಪಿಂದೆಗೆವ ಮರಲ್ವ ಮೇಲ್ವರಿವ . . . ಬಿನ್ನಣಮೊಪ್ಪೆ ಪಗಲ್ತು ಕಾದಿದರ್ (ಕಶಿಂ. ೪-೭೪); ರಾಯನ ನುಡಿಗಾನು ವಿನಯಗೂಡಿ ಪಿಂದೆಗೆದಿರೆ ಪಟ್ಟದರಸಿ . . . ಕಟ್ಟಾಣಿ ಪೆಣ್ಮಣಿಯ ಬಾರೆಂದು ಮಱಂದಕೆ ಬರಿಸಿದಳು (ಹರಿಂ. ೦-೨೭). **ಪಿಂತೆಗೆ**: ೧. ಯುಕ್ತಾಯುಕ್ತವಿವೇಕಕ್ಕೆ ಪಿಂತೆಗೆದು ಉನ್ಮತ್ತನಂತಚ್ಚಬೆಳ್ದಿಂಗಳೊಳೊಯ್ಯನೊಯ್ಯನೆ ಬರುತಿರ್ದನನಾಂ ದೂರದೊಳ್ ಕಂಡು (ಕಾದಂಅ. ೫೬೩); ಅತಿಭೀತಿಯಿಂದನುಗೆಟ್ಟು ಪಿಂತೆಗೆಯದೆ ಮಿತಿಮಿಱ ಮೇಲುಮರಿಯದೆ . . . ಪತಿಸೇವೆಗೈದು ಬಾಳುವುದು (ಹರಿಂ. ೩-೩೦). ೨. ಹಿಂದಕ್ಕೆ ತೆಗೆದುಕೊಳ್ಳು: ಆ ಕ್ರೋಧನುರುತರಕ್ರೋಧವಿಹ್ವಲನಾಗಿ ಮುಂಗಾಲ್ಗಳಂ ಪಿಂತೆ[ಪಾಶಾಂ. ದೆ] ಗೆಯದಿರ್ದೆ (ಮಹಾಶಾ. ೭-೨೪). **ಹಿಂದೆಗೆ**: ೧. ಶ್ರೀಮಂತರಾದ ಪಾಂಡವರು . . . ಹಿಂದೆಗೆಯದೇ ಯುದ್ಧವನ್ನು ಮಾಡುವರು (ಕೃಷಿಖಾ. ೦೦೪); ಚೋಳರಾಜಾಧಿರಾಜನು ಯುದ್ಧದಲ್ಲಿ ಗಾಯಗೊಂಡು ಹಿಂದೆಗೆದನು (ಸೊಳಂಅ. ೫೮); ಹಾದಿಯಲಿ ಹಳ್ಳವಿದೆ ಮುಳ್ಳಿಡಿದ ಕೊಳ್ಳವಿದೆ ಎಂದಳುಕಿ ಹಿಂದೆಗೆಯದಿರು (ಶಾಂಕಶ. ೪೬-೦೩); ವಿಜಯ ದುರ್ದೈವದ ದಂಡು ಹಿಂದೆಗೆಯಿತು (ಅಂಶಾಕ. ೩೨-೪೭). [ಪಿಂ (<ಪಿನ್) + ತೆಗೆ$_1$]

**ಪಿಂದೆಸೆ**, ಹಿಂದೆಸೆ (ನಾ). ಹಿಂದಿನ ಭಾಗ; ಹಿಂಭಾಗ: ಮುಗ್ಗುರಿಸಿ ನಿಲ್ಲುತುಂ ಪಿಂದೆಸೆಗೆ ನೋಡುತುಂ . . . ಮುಂಬರಿದನೆಂತಾನುಮೆದೆಯ ಚಾಂಚಲ್ಯಮಂ ನಿಗ್ರಹಿಸಿ ವ್ಯಗ್ರಮನದಿಂ (ಜಕ್ಕಾಂಗ. ೫೦-೦೭೮೫); ಮುಂದಕೆ ಪೋಪುದು ತನುವಿದು ಪಿಂದೆಸೆಗೋಡುವುದು ಬಳಕೆಗೈದದ ಮನವೇನೆಂದಪೆನೊ (ಶಾಕುಂತ. ೧೮-೩೪). **ಹಿಂದೆಸೆ**: ಪೂರ್ವ ಆದಿಯ ಇಪ್ಪದಲ್ಲಿ ಮಧ್ಯಭಾವ ಆತ್ಮನಲ್ಲಿ ಉತ್ತರ ತುತ್ತತುದಿಯಲ್ಲಿ ಮೆಟ್ಟಿ ನೋಡಲಾಗಿ ಹಿಂದೆಸೆಯಲ್ಲಿ ಕಂಡೆ (ಶೋಶೆವಸಾ. ೧೪೯-೫೬೬); ತತ್ ಸರಸಿಜಾನನೆ ವಲ್ಲಭನ ಹಿಂದೆಸೆಯೊಳಿರುತಿರಲು (ಬಸವು. ೪೨-೬೬).

[ಪಿಂ (<ಪಿನ್) + ದೆಸೆ$_1$]

**ಪಿಂದ್ಯೆದು** 'ಪಿಂದಯ್ದು' ನೋ.

**ಪಿಂದೊಡೆ**, ಹಿಂತೊಡೆ (ನಾ). ತೊಡೆಯ ಹಿಂಭಾಗ, —ಹಿಂಬದಿ: ಮೋದೆ ಸಿತಾಸಿಯಿಂ ಪೞಯೆ ಕೈ ಕೆಲವಂದು ಮಹಾವರಾಹನಂತಾದುವು ಕೂಡೆ ಕುಕ್ಕುಱಸಿ ಪಿಂದೊಡೆಗಳ್ ಕೆಲವೇಕದಂತನಂತಾದುವು (ಜಂದ್ರಪ್ರ. ೧೦-೯೭). **ಹಿಂತೊಡೆ**: "ತೊಡೆಯ ಹಿಂಭಾಗ; ಹಿಂತೊಡೆ; ಹಿಂತೊಡೆ ಮತ್ತು ಪಿರ್ರೆ" (Ham. ಅಂಕಅ). [ಪಿಂ (<ಪಿನ್) + ತೊಡೆ$_1$]

**ಪಿಂಪಿಣೆ** (ನಾ). ಹಿಂಭಾಗದಲ್ಲಿರುವ ಜಡೆ: ಮುಗುದೆಯಮಿಂದುಮವದನೆ ಪಿಂಪಿಣೆಯಿಂದೊಗೆದಿಳಿದಾ ಮುತ್ತಿನ ಬಟ್ಟೊಪ್ಪಿತ್ತಗಲದೆ ಪಿಂತಣ ದೆಸೆಯಿಂ ತಾಳಿದ ರಾಹುವಿನ ನಾಲಿಗೆಯಂತೆ (ಕ್ಯಾಸಕಂ. ೬-೬೪).

[ಪಿಂ (<ಪಿನ್) + ಪಿಣ್ಕೆ. / ತೆಲು. ಪಿಂಪಿಣೀ=ನಾಲ್ಕು ಕಾಲಿನ ಜಡೆ]

**ಪಿಂಬಕ್ಕ** (ನಾ). ಹಿಂಬದಿ; ಹಿಂಭಾಗ: ಪೊಂಬೆಸದ ಬೆಸುಗೆಯ ಪಿಂಬಕ್ಕ [ಪಾಶಾಂ. ಪೆಂಪಿಂ ಚಬುಕ]ದೊಳೆ ನಿಗುಂಬಿಸಿದ ಕರಿಯ ಬಿಳಿಯ ರಷ್ಮಿಲ್ಲರಿಯ ಪುಲ್ಲಿಯ ಕದಳಿಕೆಯ ಕಡುಪಿನಿಂ (ಅಶಂಪು. ೦೪-೬ ವ).

[ಪಿಂ (<ಪಿನ್) + ಪಕ್ಕ$_1$]

**ಪಿಂಬಗಲ್**, ಪಿಂಬಗಲಂ, ಹಿಂಬಗಲಂ (ನಾ). ಹಗಲಿನ ಕಡೆಯ ಭಾಗ ; ಸಂಜೆ : ಬಳೆದ ವಿಮೋಹದಿಂ . . . ಕರುಣಂ ಪಿರಿದಾಗಿ ಪಿಂಬಗಲ್ ಕಳೆ ಪಿನವಿರ್ದನಾ ಪರಮಯೋಗಿಗಮಂತಟು ಮೋಹವಾಗದೇ (ಸುಕುಮಾ. ೪-೬೩) ; ಜಾಂಬವನಂ ಪಿಂಬಗಲಾದಿತ್ಯನಂತೆ ತೇಜಂಗಿಡಿಸಿ (ರಮಾಭ್ಯು. ೬-೯೩) ; ಮುಂಬಗಲ್ ಪಿಂಬಗಲ್ ಸುಳಿಸುಳಿವ ತಂಬೆಲರ್ ಚೆಂಬಾನೆ ಕುಂಬಿಡುವ ಬೆಟ್ಟಗಳ ಸಾಲು (ಹಾಡಾರ. ೫೫-೦೨). **ಪಿಂಬಗಲು** : '' ಪಿಂಬಗಲೆನಲ್ ಸಾಯಾಹ್ನೇಭಿಧಾನವು '' (ಕಕಕ. ೬೩). **ಹಿಂಬಗಲು** : ಉದಯಾದಿ ಸಾಧನೆ ಹಿಂಬಗಲೋದು ನಕ್ತದೊಳೋದಿದೋದಿನ ಚಿಂತೆ ವ್ಯದುಮ್ಯದುವಾಗಿ ನಡೆವುದು (ಶರಕ. ೨೬-೯೧) ; ನಾಳೆ ಹಿಂಬಗಲವರೆಗೆ ಹರಿಬಕ್ಕ ನನ್ನತ್ತ ಉಸಿರೆತ್ತುವುದಿಲ್ಲವೆಂದು ನೀವು ಪ್ರತಿಜ್ಞೆ ಮಾಡಿ ಕೊಟ್ಟರೆ ಮಾತ್ರ ಈಗ ನನ್ನ ಮರುನುಡಿಯುಂಟು (ಬಂಕ್ರಿಕ. ೩೮-೩). 'ಮುಂಬಗಲ್' ಪರಾ. [ಪಿಂ (<ಪಿನ್) + ಪಗಲ್]

**ಪಿಂಬಗಲು** 'ಪಿಂಬಗಲ್' ನೋ.

**ಪಿಂಬಡು**₁ (ಕ್ರಿ). ಹಿಂದೆ ಹೋಗು ; ಹಿಂಬಾಲಿಸು ; ಅನುಸರಿಸು : ತನ್ನಿಚ್ಚೆಯಿಂ ಮುಂತೆಮುಂತೆ ಪೋಪೋಪ ಕುದುರೆಗೆ ತಿಂಗಳೆಂಟಾಗಲೊಡಂ ಅಂಗವಂಗಾದಿ ದೇಶಂಗಳ್ ಕಂಗಿಟ್ಟು ಕಪ್ಪಂಗೊಟ್ಟು ಪಿಂಬಟ್ಟೋಲಯಿಸುತ್ತೆ ಬರುತವಿರ್ಪುದುಂ (ರಾಮಾಶ್ವ. ೧೩೯-೧).

[ಪಿಂ (<ಪಿನ್) + ಪಡು₁]

**ಪಿಂಬಡು**₂ (ನಾ). ಅನಂತರ ; ತರುವಾಯ : ಎನ್ನ ಪಿಂಬಡಿನೊಳೆ [ನಣ್ಪಿ]ನಯ್ಯ ನಿಮಗಂ ಮಗನಲ್ಲನೆ ಧರ್ಮನಂದನಂ (ಪಂಪಭಾ. ೦೩-೦೮); ಕಾಸನರ ಭೀಮಂ . . . ತಳ್ತಿಱಿದು ಸುರಲೋಕಕ್ಕೆ ಸಂದನಾತನ ಪಿಂಬಡಿನೊಳಾತನ ಮಗಂ ಕಚ್ಚವರ ಕರವಣ್ಣ ಕಲ್ಲ ನಿಱಿದಮ್ಮಂಗಳ (ಎಕ. VIII (೩). ಸೊರಬ. ೩೬೩-೩ ; 981) : ಬರಲವರ್ ಪಿಂಬಡಿಂ ಮುನ್ನಮಾನ್ಯದುವೆನ್ (ಶ್ರೀಣಾಪು. ೦೨೬-೨೯). [<ಪಿಂಬಡು₁]

**ಪಿಂಬರೆಯ** (ನಾ). ಕಳೆದು ಹೋದ ತಾರುಣ್ಯ ; ಹಿಂದಕ್ಕೆ ಸರಿದ ಯೌವನ,-ಪ್ರಾಯ : ತರುವಲಿ ಬೇಡ ಪಿಂಬಗೆಯದಂಗನೆಯಾದೊಡೆ ಬೇಡ ಜವ್ವನಂ ಗರಗರನಪ್ಪ ಸೊಂಪುತನವುಳ್ಳವಳಾದೊಡೆ ಬಂದು ಮುಂದೆ ಸಂಚರಿಸುಗೆ (ಸೂಕ್ತಿಸು. ೮-೪೦೭).

[ಪಿಂ (<ಪಿನ್) + ಪರೆಯ₂ (<ಪರಯ)]

**ಪಿಂಬವಣೆ** (ನಾ). ಹಿಂದೆ ಅನುಭವಿಸಿದ ಕಷ್ಟ,-ಬವಣೆ : ಶಂಬರ ಶರನಿಧಿಯೊಳು ತನ್ನ ಕಿಡಹಿದ ಪಿಂಬವಣೆಯನು ತೋಱುವರೇ ಚೆಂಬಣ್ಣ ಗಂಧೋದಕದಲ್ಲಿ ಸ್ಮರ ತನ್ನ ಕುಂಭಕುಚೆಯನು ನೂಂಕಿದನು (ಮೋಹಕ. ೦೪-೬೬). [ಪಿಂ (<ಪಿನ್) + ಬವಣೆ]

**ಪಿಂಬಳಿ**, ಹಿಂಬಳಿ₁, ಹಿಂಬಟಿ (ನಾ). ೧. ಹಿಂದಿನ ಸ್ಥಳ ; ಹಿಂಬದಿ ; ಹಿಂಭಾಗ : ಅರಲಂಬುಗಳಿನಾದಮಿಡಿದ ಬತ್ತಳಿಕೆ ಭುಜಶಿರದ ಪಿಂಬಳಿಯಲ್ಲಿ ಕಣ್ಗೊಳಿಸಲಾ . . . ಸುಮದ ರಾಜನ ಮೇಳೆ ದಾಳಿಟ್ಟನು (ಕೀಕರಾ. ೬-೨೬). **ಹಿಂಬಳಿ**₁ : ೧. ಕಱು ಕಾಯ ಹಿಂಬಳಿಯನಱಿವಂತಿರಱಿದು ಸೌಂದರಗಣಾಧೀಶ್ವರಂ ಬೆಂಬಿಡಿದು ಬಂದು (ಶೌಂದಪು. ೧೧-೦೨). **ಹಿಂಬಟಿ** : ೨. ಪರೋಕ್ಷ : ಪರೋಕ್ಷೇ=ಹಿಂಬಟಿಯೊಳ್ (ಏಕಶಾ. ೫೦-೪). [ಪಿಂ (<ಪಿನ್) + ಬಳಿ₃ (<ಬಟಿ₃)]

**ಪಿಂಬಱಿಗೇಸ** (ನಾ). ಹಿಂಭಾಗದ ಹರುಕು ಹರುಕಾದ ಕೂದಲು : ಕೊಱೆವಲ್ ಬತ್ತಿದ ಕಾಲ್ ಪಿಂಬ[ಹಾಹಾಂ. ಸಿಂಪಿ]ಱಿಗೇಸಂ ನೆಕ್ಕ ಕದಪು ಪೊಕ್ಕಿರ್ದ ಬಸಿಱ್ ಕೆಱಿದ ಮುಖಕುಹರವರ್ಬಿಸೆ ಪಿಱಿತಿನಿಗಳ ಬಳಗ ಮೆಯ್ದ ತಂದುದು ಮುನಿಯಂ (ಕಾವ್ಯಾವ. ೪೫೦).

[ಪಿಂ (<ಪಿನ್) + ಪಱಿ₁ + ಕೇಸ₂]

**ಪಿಂದಾಲಿಯು** 'ಹಿಂಬಾಲಿಸು' ನೋ.

**ಪಿಂಬೂಣಿಸು** (ಕ್ರಿ). ಹಿಂದಿನಿಂದ ಬಾಣ ಬಿಡು : ಏಣನ ಮುನಿನಾಥ ಕಾಣುತ ಬಂದು ಪಂ[ಪಿಂ]ಬೂಣಿಸಿ ನಿಂದ ಪೇಟಕನ ಕಾಣುತ (ಕೃಕಾ. ೩-೦೪೪). [ಪಿಂ (<ಪಿನ್) + ಪೂಣಿಸು]

**ಪಿಂಬೆದೆ**, ಹಿಂಬೆದೆ (ನಾ). ಬಿತ್ತನೆ ಮಾಡಬೇಕಾದ ತರುವಾಯದ ಕಾಲ ; ಬಿತ್ತನೆ ವೇಳೆ ಮೀರಿದ ಕಾಲ : ಪಿಂಬೆದೆ, ಪಿಂಬೊಟ್ಟು (ಕಮಕ. ೦೬೬ ಕ್ರಿಯೋ). **ಹಿಂಬೆದೆ** : ಹಿಂಬೆದೆಯೊಳಗೆ ಬಿತ್ತಿದ್ದರಿಂದ ಸರಿಯಾದ ಬೆಳೆಯಾಗಲಿಲ್ಲ (ಜಾ೩). [ಪಿಂ (<ಪಿನ್) + ಬೆದೆ]

**ಪಿಂಬೊಟ್ಟು**, ಹಿಂಬೊತ್ತು (ನಾ). ೧. ಮುಳುಗುತ್ತಿರುವ ಸೂರ್ಯ ; ಸಂಜೆಯ ಸೂರ್ಯ : "ಪಿಂಬೊಟ್ಟೆಂದು ಪಡುನೇಸಱ್ " (ಕಕಕಾ. ೩೬-೨೫೩) ; ಅಂಗಯಱ್, ಅಂಗಾಲ್ . . . ಪಿಂಬೆದೆ, ಪಿಂಬೊಟ್ಟು (ಕಮಕ. ೦೬೬ ಕ್ರಿಯೋ). ೨. ಹಿಂದಿನ ಕಾಲ ; ಪೂರ್ವ ಕಾಲ : ಕುರುರಾಯಂ ಬಹುವಿತ್ತಮಂ ಕುಡುವನಾ ಕರ್ಣಂಗೆ ಮತ್ತಾ ಸಹೋದರರ್ಗಾ ಪಾಂಡವರ್ಗೇನುಮಂ ಕುಡನದೇಂ ಪಿಂಬೊಟ್ಟಿನೊಳ್ಕರ್ಣನುರ್ವರೆದಾರಿದ್ರನೆನಲ್ಕೆ ಸಂದಂ (ರಕ್ಕಾಕ. ೪೮). **ಹಿಂಬೊತ್ತು** : ೩. ಸಂಜೆ ; ಸಾಯಂಕಾಲ : ಉಪ್ಪರಿಗೆಯನೇಱಿ ಹಿಂಬೊತ್ತಿಗಾನಂದದಿಂದಬ್ಬಿಯ ನೋಳ್ಪ . . . ಏಳರಿಂದೆದ್ದನಬಲೆಯರ್ವೆರಸಿ (ಶರಕ. ೨೩-೮೩).

[ಪಿಂ (<ಪಿನ್) + ಪೊಟ್ಟು]

**ಪಿಕ್‌ನಿಕ್** 'ಪಿಕನಿಕ್ಕು' ನೋ.

**ಪಿಕ್‌ಪಾಕೆಟ್ಟು** (ನಾ). ಜೇಬಿನಲ್ಲಿರುವ ಹಣ ಅಥವಾ ಹಣದ ಪಾಕೆಟ್ಟನ್ನು ಅಪಹರಿಸುವಿಕೆ ; ಜೇಬುಗಳ್ಳತನ : ಬಸ್ಸಿನಲ್ಲಿ ಬರುವಾಗ ಅಂಗಿಯ ಒಳಜೇಬನ್ನೇ ಕತ್ತರಿಸಿ ಪಿಕ್‌ಪಾಕೆಟ್ಟು ಮಾಡಿದ್ದರು (ಜಾ೩).

[←ಇಂ. Pick Pocket]

**ಪಿಕ** (ನಾ). ಕೋಗಿಲೆ ; ಕಳಕಂಠ : '' ಅನ್ಯಭೃತಃ, ಪರಪುಷ್ಟ, ಕಳಕಂಠಃ, ಕೋಕಿಳಃ, ಪಿಕಃ—ಈ ೫ ಕೋಗಿಲೆ '' (ಅಭಿಧಾಯು. ೪೦-೯೮) ; ತನಿಮಾಲನುಂಡು ಬಳೆವರಗಿಳಿಗಳುರ್ಕಿನಿಂ ಕೊನರಂ ಕರ್ದುಂಕಿ ಕೂಗುವ ಪಿಕದ ಸೊರ್ಕಿನಿಂ (ಪಿಸುಕ. ೭೬. ೨-೦೨) ; ಪಿಕ ಶುಕ ಕೋಕ ಸಾರಸ . . . ಕುರರೀಪ್ರಮುಖಕರದಿಂದ ವಿರಾಜಿಕುಮುನ್ನತಂ ವನಂ (ಚಿತ್ರಾಕ. ೪-೬೨); ಶುಕ ಪಿಕ ವಿಹಂಗ ಗೀತಾಂಜಲಿಯನರ್ಪಿಸುತೆ . . . ಪ್ರಕೃತಿದೇವಿಯೆ ತಾನು ರತಿಯ ರೂಪದಿ ನಿನ್ನ ಪೂಜಿಸುವಳನುದಿನಂ ! (ಚಿತ್ರಾಂಗ. ೩೬-೪೪೦).

[ಸಂ.]

**ಪಿಕನಿಕ್ಕು**, ಪಿಕ್‌ನಿಕ್ (ನಾ). ವನಭೋಜನ ; ಬಯಲೂಟ : ಮಕ್ಕಳು ಸ್ಕೂಲಿನಿಂದ ಪಿಕನಿಕ್ಕಿಗೆ ಹೋಗಿದ್ದಾರೆ (ಜಾ೩). **ಪಿಕ್‌ನಿಕ್** : ಬಹುದಿನಗಳ ಹಿಂದೆ ಹಾವೆಲ್ಲ ಪಿಕ್‌ನಿಕ್ ಹೋಗಿದ್ದಾಗ . . . ಗೋವಿಂದ ತನ್ನ ಫೋಟೋ ತೆಗೆದಿದ್ದುದು ಅವಳ ಜ್ಞಾಪಕಕ್ಕೆ ಬಂತು (ಪಿಕಾ. ೪೩).

[←ಇಂ. Picnic]

**ಪಿಕನಿಸ್ವನೆ** (ನಾ). ಕೋಗಿಲೆಯಂಥ ಇಂಪಾದ ಸ್ವರವನ್ನುಳ್ಳವಳು : ಪಿಕನಿಸ್ವನೆ ವಧು ತಳ್ತಿದದ ಕೆಲದೊರೆ . . . ನೃಪನೊಂದೆ ಕೊಂಬು ಕೆಯ್ಯಿಂದ ಚೂತಶಾಖೆವೊಲಿರ್ದಂ (ಪರಕಿ. ೬-೦೮). [ಸಂ. ಪಿಕನಿಸ್ವನಾ]

**ಪಿಕಲಾಟ** 'ಪೀಕಲಾಟ' ನೋ.

**ಪಿಕಲಾರಿ**, ಪಿಕಳಾರ, ಪಿಕಳಾರಿ (ನಾ). ಒಂದು ಬಗೆಯ ಹಕ್ಕಿ : (೩). **ಪಿಕಳಾರ** : ಕಾಮಳ್ಳಿ ಕಾಜಾಣ ಪಿಕಳಾರ ಗಿಳಿ ಚೋರೆ ಕೋಗಿಲೆಗಳುಲಿಹಕ್ಕಿ ನಲಿಯುತುಂ (ಚಿತ್ರಾಂಗ. ೬೨-೦೦೬೦) ; ಕೋಗಿಲೆ ಕಾಜಾಣ ಪಿಕಳಾರ ಕಾಮಳ್ಳಿಗಳ ದನಿಗಡಲಿನ ನಡುವೆ ದೀವಿಯವೋಲಿಹುದೀ ನಮ್ಮ ಹೊಸ ಹಳ್ಳಿ (ಚಂದ್ರವೀ. ೦೮೦-೪೦). **ಪಿಕಳಾರಿ** : ಇತರ ಕವನಗಳಲ್ಲಿ ಆಗಾಗ ಕೇನೆ, ಕಾಜಾಣ, ಗಿಳಿ, ಕಾಮಳ್ಳಿ, ಪಿಕಳಾರಿ, ಕೋಗಿಲೆ, ಮಲೆವಕ್ಕಿಗಳ ಉಲ್ಲೇಖ ಬರುತ್ತಿದೆ (ಜಾತಪ. ೯೩). [<ಪಿಕಳ ? ]

**ಪಿಕಳ, ಪಿಕ್ಕಳ** (ನಾ). ಒಂದು ಬಗೆಯ ಹಕ್ಕಿ : ಗರುಡಂ . . . ಪಿಕಳಂ ಬಕಂ ಶಿಖಿ ಶುಕಂ ಬಾನಾಡಿ ಪೆರ್ಬಕ್ಕಿ ಹೆಂಗುರು ಕಾಕಂ ಚಿಲುಕೂಲಿ ರತ್ನ ಖಗನಿಕರ್ಗಂ ತದ್ವನಾಗ್ಛಿಪದೊಳ್ (ರಾಜಶೇ. ೩-೩೯); "ಕಾಗೆ" (ರಾಜಶೇ. ಕೋಶ); ಗರುಡಂ ಗೀಜಗನಂಚೆ ಸೋರೆ ಪಿಕಳಂ [ಪಾಠಾಂ. ಳಕಂ] ಕಾಕಂ ಬಕಂ . . . ಚಿಲುಕೂಲಿ ಚಾತಕವಾವಿಕರ್ಗಂ ತತ್ತ್ರರುವ್ರಾತದೊಳ್ (ಸೂದಶಂ. ೪-೯೬). **ಪಿಕ್ಕಳ :** ಪಿಕ್ಕಳದ್ವಿತಯ ಲಾವುಗೆ ತೋರ ಗಿರುಜೆಯು ಕುಕ್ಕುಟ ತಗಟು ಕೋಣಗಳ ಸೊಕ್ಕಾನೆಗಳ ಕಾದಿಸುತಿರ್ದ ದೊರೆಗಳ ಮಕ್ಕಳ ಕೂಡೆ ಬೀದಿಯಲಿ (ಪೋಷಕ. ೦೭-೪೨); ಶುಕ ಪಿಕ ಕೇಕಿ ಕಾರಂಡ ಕಂಬೂತ ಕಾಗೆ . . . ಕಾಡ್ಗೋಳಿ ಪಿಕ್ಕಳಂ ಕಬ್ಬಕ್ಕಿಗಳ್ ಮೆಱೆದವು (ಶಕುಕ್ತಿ. ೨-೦-೦೭). [←ತೆಲು. ಪಿಕಿಲಿ, ಪಿಕ್ಕಿಲಿ]

**ಪಿಕಳಾರ** 'ಪಿಕಲಾರಿ' ನೋ.

**ಪಿಕಳಾರಿ** 'ಪಿಕಲಾರಿ' ನೋ.

**ಪಿಕಾಸಿ, ಪಿಕ್ಕಾಸ್, ಪಿಕ್ಕಾಸು** (ನಾ). ಒಂದು ಕಡೆಯಲ್ಲಿ ಚುಚ್ಚುವ, ಮತ್ತೊಂದು ಕಡೆಯಲ್ಲಿ ಕೆದಕುವ ಮೊನೆಗಳಿಂದ ಕೂಡಿದ, ನೆಲವನ್ನು ಅಗೆಯುವ ಒಂದು ಬಗೆಯ ಸಾಧನ : ಆ ಬಳಿಕ ಮಹಮ್ಮದನು ಪಿಕಾಸಿಯನ್ನು ಹಿಡಿದು ಕಲ್ಲನ್ನೊಡೆಯಲು ಪ್ರಯತ್ನಿಸಿದನು (ಕೈಗಂಬ. ೬೯); ಒಂದು ಪಿಕಾಸಿ, ಗುದ್ದಲಿ ತರಿಸಿರಿ ಎಂದನು (ಶಾಲೀಮು. ೨೯), ಹಾರೆ, ಗುದ್ದಲಿ, ಪಿಕಾಸಿ . . . ರೈತನ ಸಾಧನಗಳೂ ಹೌದು (ಕಿಶೋ. I. ೬೪೯). **ಪಿಕ್ಕಾಸ್ :** ಅವರು ಹಾರೆ ಪಿಕ್ಕಾಸ್ ಹಿಡಿದು ಹೊರಟಾಗ ಬೀಜಗಳ ಗಂಟನ್ನಿಟ್ಟು ಬುಟ್ಟಿಯನ್ನು ಮೋಹನ ಹೊತ್ತು ತರುತ್ತಾನೆ (ಶಾಳಿ. ೩೬). **ಪಿಕ್ಕಾಸು :** ತೋಟದ ಮಣ್ಣನ್ನು ಆಳವಾಗಿ ಉಳುವ ನೇಗಿಲುಗಳಿಂದಾಗಲಿ, ಪಿಕ್ಕಾಸುಗಳಿಂದಾಗಲಿ . . . ಉತ್ತು ನೆಲದಲ್ಲಿ ಗೊಬ್ಬರವನ್ನು ಬೆರೆಯಿಸಬೇಕು (ಶಾಂಕ್ರ. I. ೨೯೬); ತೋಟದಲ್ಲಿ ಕೆಲಸ ಮಾಡುವ ಹಾರೆ ಪಿಕ್ಕಾಸು ಇತ್ಯಾದಿ ಸಾಮಗ್ರಿಗಳ ಕಳವು ಹೆಚ್ಚಾಗತೊಡಗಿತು (ರಕ್ತರೂ. ೯೯). [←ಇಂ. Pickaxe]

**ಪಿಕಾಳಿ** (ನಾ). ಕೋಗಿಲೆಗಳ ಗುಂಪು—ಸಮೂಹ : ಇದು ಬನಮಿದು ನೃಪಗೃಹಮೆಂಬುದು . . . ಷಟ್ಪದ ಶುಕ ಪಿಕಾಳಿಗೆನೆ ನೃಪಸದನಂ ಸೊಗಯಿಪುದು (ಜಗಪ. ೨-೩೬); ತಮಾಳವನಂ ಜಳಬುದ್ಬುದಪ್ರಘೋಷಮನೊಳಕೊಂಡು ಕಟ್ಟಲಿಸೆ ಕಂಡು ಘನಾಗಮಮಾದುದೆಂದು ಸಂಭ್ರಮಿಸಿ ಪಿಕಾಳಿ ಮೂಗುವಡೆ (ಧರ್ಮಕ್ತಿ. ೬-೦೯). [ಪಿಕ+ಆಳಿ (=ಆಲಿ)]

**ಪಿಕಿ** (ನಾ). ಜೋಗಿಗಳ ಹತ್ತಿರವಿರುವ ಒಂದು ಬಗೆಯ ಕೊಂಬಿನ ವಾದ್ಯ (?) : ಕೊರಲ ಶಂಕಿನ ಸರವೆರಲೆಗೊಂಬಿನ ಪಿಕಿ [ಪಾಠಾಂ. ಕೆ] ಸೋರೆಯೋಜು ಕೆಲದಜಾವಾಗಿ ಕರದ ತ್ರಿಶೂಲದ ಕಿಱುಜಡೆವೊತ್ತ ಜೋಗಿಗಳರಲೊಪ್ಪಿತಾ ರುದ್ರಭೂಮಿ (ಶ್ರೀಪಾಂ. ೬-೦೯). [?]

**ಪಿಕೀರು** 'ಫಕೀರು' ನೋ.

**ಪಿಕೆಟ್** (ನಾ). ಕಾವಲಿಗಿರುವ ಸಣ್ಣ ಸೈನ್ಯ ; ಕಾವಲುದಳ : "ಕಾವಲುಪಡೆ, ಗಸ್ತುಪಡೆ ; ತಡೆಕಾವಲುಗಾರರು, ಪಿಕೆಟ್" (Picket. ಶಬ್ದಾ. ೬೨).

**ಪಿಕೆಟ್ ಮಾಡು**=ಕಾವಲಿರುವಂತೆ ಮಾಡು : "ಕಾವಲುಹಾಕು, ಪಿಕೆಟ್ ಮಾಡು" (Picket. ಶಬ್ದಾ. ೬೨). [←ಇಂ. Picket]

**ಪಿಕೆಟಿಂಗ್** (ನಾ). ಒಳಗೆ ಹೋಗದಂತೆ ಅಥವಾ ಹೊರಗೆ ಬರದಂತೆ ತಡೆಯುವುದು : ಆಂದಿನಿಂದಲೇ ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹ, ಪಿಕೆಟಿಂಗ್‌ಗಳು . . . ಆರಂಭವಾಗಬೇಕೆಂದು ಗಾಂಧೀಜಿ ತಿಳಿಸಿದರು (ಆತ್ಮಾಕ. ೦೩೬); ಮದ್ಯನಿಷೇಧದ ಪಿಕೆಟಿಂಗ್ ನಡೆಸುವಾಗಲೂ ಸಭೆ ಮೆರವಣಿಗೆಗಳನ್ನು ಮಾಡುವಾಗಲೂ ಆತಂಕಗಳನ್ನು ತಂದೊಡ್ಡತೊಡಗಿದರು (ಕುರುಕಾ. ೦೩೨). [←ಇಂ. Picketting]

**ಪಿಕ್ಕ** 'ಪಿಕ್ಕಾ' ನೋ.

**ಪಿಕ್ಕಮಾತು** (ನಾ). ಹುರುಳಿಲ್ಲದ ಮಾತು,—ನುಡಿ : ಹಿರಿಯರಾಗಲಿ ಕಿರಿಯರಾಗಲಿ ಯಜಮಾನನೊಡನೆ . . . ಪಿಕ್ಕಮಾತುಗಳನ್ನು ಸರ್ವಥಾ ಆಡಬಾರದು, ವಾದಿಸಬಾರದು (ಕುಬುಂಂ. ೩೯).

[ಪಿಕ್ಕ (<ಪಿಕ್ಕಾ)+ಮಾತು]

**ಪಿಕ್ಕಳ** 'ಪಿಕಳ' ನೋ.

**ಪಿಕ್ಕಳಿ** (ನಾ). (?) : ಕಟ್ಟುಗಳ ಮಱಿ ಸಮ್ಮದೆಕ್ಕಡದ ಪೊಸಪೀಲಿಯುಟ್ಟಿಗೆಯ ಪಿಕ್ಕಳಿಯ ಪೂಮುಡಿಯ ಜವ್ವನದ ದಿಟ್ಟವೇಡತಿಯರಾಣ್ಮರ ಪಿಂದೆ ನಡೆದರಟ್ಟಟ್ಟಿ ಮಿಗಗಳ ಕಡಪುತ (ಪುದೀಕ್ತಿ. ೩೨-೨೪). [?]

**ಪಿಕ್ಕಾ, ಪಿಕ್ಕ** (ಗು). ೧. ಕಾಂತಿಹೀನವಾದ ; ದುರ್ಬಲವಾದ; ಅಶಕ್ತವಾದ : (೪). ೨. ಹುರುಳಿಲ್ಲದ ; ನಿಸ್ಸತ್ವವಾದ : (೪). **ಪಿಕ್ಕ : ೨.** 'ಪಿಕ್ಕಮಾತು' ಪರಾ. [←ಮರಾ. ಫಿಕ್ಕಾ]

**ಪಿಕ್ಕಾಸ್** 'ಪಿಕಾಸಿ' ನೋ.

**ಪಿಕ್ಕಾಸು** 'ಪಿಕಾಸಿ' ನೋ.

**ಪಿಕ್ಕು, ಪಿರ್ಕು, ಹಿಕ್ಕು$_1$, ಹೆಕ್ಕು$_1$** (ಕ್ರಿ). ೧. ಬೇರ್ಪಡಿಸು; ಪ್ರತ್ಯೇಕಿಸು; ಬಿಡಿಸು; ವಿಭಾಗ ಮಾಡು : "ಪಿಕ್ಕು—ವಿವರಣೇ (ಬಿಡಿಸು)" (ಶಮಣಿ); ಪುದಿದೊದವಿದ ಜನ್ಮಾಂತರಸ್ನೇಹಮೊಂದೇ ನುಡಿಯೊಳ್ ಪಿಕ್ಕಲ್ಕದೊಂದಲ್ತೆ [ಪಾಠಾಂ. ವೈಕಲ್ಪದಂತಲ್ತೆ]ನಲಿದ ಪೆರ್ಚಿಗಿನ್ನಿಲ್ಲ (ಅಂಕ್ತಿ. ೪-೨೬); ಮಿದುಟ ಕೋಟಿಗ್ಗಿಸಱಿಯೊಳ್ಪೊಕ್ಕು ಕರುಳ ಮಿದೆಯಂ ಪಿಕ್ಕಿ ಪರಸಿ ನೋಡಿದಾಗಂ (ಗದಾಯು. ೬-೨೬ ಪ); ಈಟ್ಟುಂ ಪಟ್ಟಿಯ ಮೊತ್ತಮಂ ಕಳಿ ಕಸಂ ನೂಂಕುತ್ತೆಯೆಕ್ಕುತ್ತೆ ಮೇಣ್ ನೋಟ್ಟು ಬೀಜವನೆತ್ತಿ ಪಿಕ್ಕಿ ಕಳೆದುಂ ನೂಲ್ಗೊಳ್ವ ಜಂತ್ರಗಳುಂ . . . ಮೈಸೂರಿನಲ್ಲೊಪ್ಪುಗುಂ (ಮೈಸೂಮು. ೩-೬೬). ೨. (ಕೂದಲನ್ನು) ಸಿಕ್ಕು ಬಿಡಿಸು; ಬಾಚು : ತಲೆಯನಿರುಳ್ಪಿಕ್ಕಿದೊಡೆತ್ತ ಲಾನುಮೊಂದಲ್ಲಿ ಭಾಗ್ಯಮುಳ್ಳಾ ರೋಮಂ ತಲೆಯಿಂದುದಿದೊಡೆ ಬೞಿಯಂ ನಿಬಲರಿಯದು ಭಾಗ್ಯಮೆಂಬರಱಿವಿಲ್ಲದವರ್ (ಕಮಕ. ಆನುಶಂಕ. I. ೩೩೩—೯೩) ; ತದ್ರಮಣಿಯ ಕಚಮಂ ಪಿಕ್ಕಿದಳಮಳಿನನಖನಿಕರದಿಂ ವಧೂಮಣಿಯೊರ್ವಳ್ (ಅನ್ನಟಿ.೬-೨೩) ; ಸೋಮರ್ಗಾಡಿಯನಾಗಳ್ ಪಿಕ್ಕಿ ಪೂದೊಡಂಬೆಯಂ ಮುಡಿಯಿಸುವರಾರ್ (ರಾಜಕ್ತಿ. ೬೬-೨೨). ೩. ಕಿತ್ತು ಹೊರಕ್ಕೆ ತೆಗೆ ; ಕೀಳು ; ಸೆಳೆ : ಪೆಣದೆರಗೆ ಅಲೆತರ್ಪ ರಣಮದರ್ ಕರೆಯದೆಯೆ ಬರ್ಪತಿಥಿ . . . ವಿನತಂಗಪುತ್ರಂಗಗಳ ಪಿರಿಯ ಅವಶೇಷಂಗಳನೆ ಪಿಕ್ಕಿ ಪಱಿದಿಕ್ಕುವುದು (ಶಿವಕ್ರ. ೩೪-೧೦೬); ಎಲ್ಲಮುಮರ್ ಪೊಲೆಗೆಲಸಿಯಿರ್ದತ್ತು. . .ಮಗನ ಪೆಣದಿನ್ ಪರ್ದುಗಳ್ ನಾಯ್ಗಳುಮರ್ ಪಿಕ್ಕಿದರೆಯಿನ್ (ಅಂತಿಗೊ. ೪೩–೯೬೪). ೪. ತೆರೆದು ನೋಡು ; ಬಿಡಿಸಿ ನೋಡು ; ಬಗೆದು ನೋಡು : ಮುನ್ನೇೞಿದ ಕೋಡಂ ನೋಡಿ ಪಲ್ಲಂ ಕಿರಿದಗಿದುರವಂ ಪಿಕ್ಕಿ ಪೇನಿಂದೆ ತಿನ್ನುರ್ವಿದ ಮೆಯ್ಯಂ ಕಯ್ಯೊಳೆತ್ತಂ ತುೞಿಸಿ . . . ಕುಳ್ಳಿರ್ದುದು ಕೋಡಂ (ಸೂಕ್ತಿಸು. ೩-೦೯೩). ೫. (ಭೇದವನ್ನು) ಎದ್ದು ಕಾಣುವಂತೆ ಮಾಡು ; ಎತ್ತಿ ತೋರಿಸು ; ಕೆದಕು ; ಬೆದಕು : ಕುಲಮೆಂಬುದುಂಟೆ ಬೀರಮೆ ಕುಲಮಲ್ಲದ ಕುಲಮಾನಿಂತು ಪಿಕ್ಕದಿರಿಂ (ಶಂಶಶಾ. ೨-೬೩) ; ಇಂದಿನವರಂದಿನವರ್ ಕೆಲರೆಂದು ಪಿಕ್ಕು [ಪಾಠಾಂ. ರ್ಕು]ವೀ ದಂದುಗದಿಂದಮೇ ನವಾಗನಿಂದ್ಯಕವೀಂದ್ರರೆ ಮಂದ್ಯರಾಪಗಂ (ಶರ್ಮಪಾ. ೦-೪೨). ೬. ದೂರವಾಗು ; ಪ್ರತ್ಯೇಕವಾಗು : ಅಸ್ತ್ರಾಘವಾತನ ಮೆಯ್ಯಿಂ ಕಿಡಿ ಸೂಸೆ ತಾಗಿ ಸಿಡಿದುಂ ಪಿಮ್ಮೆಟ್ಟಿಯುಂ ಪಿಕ್ಕಿ ಪಿಂತನೆ ಬಂದು ಕಿಱುವಾಯ್ಗೆ ಪೊರ್ದಿಯುಂ ಮಂಗುರ್ವಾದತ್ತು (ಜಗಪ. ೬-೩೮). ೭. ಸೂಸು (?) : ಆದಂ ಗೀತದ ಬಣ್ಣಂ ನಾದದೊಳಕ್ಕರಮುಮೆಯ್ದೆ ಶಬ್ದದೊಳಱಿಯಲ್ಕಾದಪುದೆನೆ ಬಾಜಿಸುವರ್ ವಾದಕರುಂ ಪಿಕ್ಕಿ ಗೀತಸಮಯುಮವದಿಂಪಂ (ಶಂಕ್ರಕ್ತಿ.

೦೫-೭೪). ಪಿರ್ಕು: ೧. ಅರ್ಕಂಗಾರಕ ಧಾತುಂ ಶುಕ್ರಂ ಬುಧ ಸೋಮ ನಿಂದಾ ಬೆಳ್ಳಿಯುಮಕ್ಕುಂ ಪಿರ್ಕಿದ ಲೋಹಂ ಶನಿಯೊಳಗಕ್ಕುಮಿದೆಂದರಿದು ವೇಳು (ಜಾಹಿಂ. ೬೫). ೨. ನಿಳಯಂಗುಡುವ ಮೇಲುದಂ ಪಿಡಿ ವಣ್ಪಿಕ್ಕುವ ತಲೆಯಂ ಪಿರ್ಕುವ ನೆಲನನುಗ್ಗುಡಿಸುತಂ ಬರ್ಪ ಚಮರಜದ ನಿಕ್ಕುತಿರ್ಪ ಮೇಳದಿಂ (ಶಾಕ್ತೇಪು. ೧೨-೬ ೪); ಮುಡಿಯನೊಯ್ಯನೆ ಪಿರ್ಕಿಯಲುರ್ವುಡಿಗಳ ತಳೆದು . . . ಬಿಂಕಕಾರ್ತಿಯರಲ್ಲಿ ಕಡುಗಾಡಿವೆತ್ತಿರು ತಿಹರು (ಕುಮಾರಾ. ೩-೩೫). ಹಿಕ್ಕು$_1$: ೧. ಕಾಸು ಚುಚ್ಚು ಸುಡು ಹಿಂಡಿ ಹಿಳಿ ಹಿಕ್ಕು ಹರಹೆಂದೆಂಬ ಫಲ್ಲಣೆಗಳ . . . ನಾನಾರವಂಗಳಿಂ ನರಕವದ್ಭುತ ವಾದುದು (ಸಿದ್ಧರಾ. ೬-೨೭); ಹಱಿವ ಹಿಕ್ಕುವ ಮುಕ್ಕುವೊಕ್ಕುವ ಮುಱಿವ . .. ಧ್ವನಿಗಳವನಿಗೆ ಭಯಾಪನೀವುತಿರೆ (ಜಾತಿಂತ. ೬-೦೨): ಸೊಕ್ಕಿದೀ ಭೀಮಾರ್ಜುನರ ಕೌರವರ ಕೈಯಿಂದ ಹಿಕ್ಕಿ ಕೊಲಿಸುವೆನೆಂಬ ಭೀಷ್ಮಕೆ ತಕ್ಕುದಾಯಿತೆನುತ್ತ . . . ಕುಣಿದನು ಶಕುನಿ ಮನದೊಳಗೆ (ಕುಮ್ಯಾಸ. ೬೦೨. ೧೭-೯೬); ಹೊಕ್ಕು ಲೀಲಾಸರಸಿಗಳನಿರದೆ ಕಯ್ಯಿಕ್ಕಿ ಹೊದಱುಗಳೆಡೆಯುನು ಹಿಕ್ಕಿ ಹೆಮ್ಮೆಳಿಗಳನಱಸಿ ನೋಡಿದೆವು (ಕುರಾಜಾಂ. ೩೨-೨೪). ೨. ಪರಿಪರಿಯ ನೀಳ್ದ ಕಂಜೆಡೆಗಳನಲಂಲರಿಸಿ ಎಳೆಯ ಶಶಿಕಳೆ ನೋಯದಂತೆ ಮೆಲ್ಲನೆ ಹಿ[ಜಾತಾಂ. ಪಿ]ಕ್ಕಿ (ಕೃಷ್ಣರ. ಜ. ೩೨೬-೧೨); ಆ ಸುದೇಷ್ಣಾದೇವಿಯರರೆ ನಿಡುಕೇಶವನು ಹಿಕ್ಕುವಳು (ಕುಮ್ಯಾಹಿ. ೬೦೨. ೨-೩); ಮಂಡೆಯ ಕುರುಳ ಹಿಕ್ಕುವರೊಂದು ಕೆಲರು ಪೂವಂಡೆಯ ಮುಡಿಸುವರ್ ಕೆಲರು (ಸೋತಸ. ೨೭-೩೪); ಬಲಗಡೆಗೆ ಬೈತಲೆ ತೆಗೆದು ಹಿಕ್ಕಿದ್ದರೂ ಗಾಳಿಗೆ ಸ್ವಲ್ಪ ಹಾರಾಡುತ್ತಿದ್ದ ಕ್ರಾಪು (ಕೂಪಾಪಿ. ೩೭). ೩. ಬೆಕ್ಕಿನ ದೃಕ್ಕನು ಕುಕ್ಕಬೇಕು ಹಕ್ಕಿಯ ಪಕ್ಕವ ಹಿಕ್ಕಬೇಕು (ಮುಹಾದೇ. ಪಿ. ೧೭೬-೩). ೫. ಅಕ್ಕಟೀ ಕುಲಪಿಡಿದು ಸತ್ಕುಲಕೆ ಹೋರುಪರೆ ಹಿಕ್ಕಿದಡೆ [ಜಾಹಿಂ. ಹೆಕ್ಕಿದರೆ] ಶುದ್ಧಹೊರೆಗಿಕ್ಕಿ ಮಾತಾಡುವರೆ (ಬಿತ್ತಾಕೋ. ೯೨-೨೪); ಆ ಸವತಿಯರೇನು ಜಾಣೆಯರೊ ಅವರಾ ತಂತ್ರವ ಬಲ್ಲರಹುದದ ಹಿಕ್ಕದೆ ಸುವಿನಯ ಮಿಗೆ ಕಳುಹಿದರು (ಕರಾಜ. ೬-೭೭). ೮. ತೆರೆ; ಬಿಚ್ಚು: ರಾಮನ ರೂಪಲ್ಲದೆ ಮಿಕ್ಕ ಚೆಲ್ವುಡರ್ದ ರೂಪುಗಳ ಲೆಕ್ಕಿಸದೆನ್ನ ಕಣ್ಣಿಂದಂತ ರಂಗವ ಹಿಕ್ಕಿ ಕೆಳದಿಯೊಳಾಡಿದಳು (ಕುರಾಜಾಂ. ೨೩-೧೧). ೯. ಕೆರೆ; ಶುರಿಸು: ಪಕ್ಕದ್ವಂದ್ವಂಗಳು ಝಾಡಿಸಿ ಕೆಲಕೆ ನಿವಿಡೊರ್ತಿ ಮೂಗಿಂದೆ ಗೋಣಂ ಹಿಕ್ಕುತ್ತಂ ಬಂದು ಗೇಹಂಗಳನಡರಿ . . . ಕೂಗಿತಾ ತಾಮ್ರ ಚೂಡಂ (ಸೂಕ್ತಿಸು. ೯-೪೦). ಹೆಕ್ಕು$_1$: ೧. ಸರಳು ಹೊಕ್ಕವು ಹೆಕ್ಕಿದವು ಹೇಚರಬಲಪನೊಕ್ಕಿದವು ತೂಱಿದಪರಿಘಟನ ಚುಚ್ಚಿದವು ಹೆಚ್ಚಿದವೇಟು ದೆಸೆಗಳಲಿ (ಕುಮ್ಯಾಪ. ೨೦-೨೨).

ಪಿಕ್ಕಿ ನೋಡು, ಹಿಕ್ಕಿ ನೋಡು = ೧. ಬಗೆದು ನೋಡು; ವಿಂಗಡಿಸಿ ಪರೀಕ್ಷಿಸು; ವಿವೇಚಿಸು: ಎಂತೆಂತು ಪಿಕ್ಕಿ ನೋಟಿಸ್ಪಾಡಮಂತಂತೆ ವಿಚಾರಸಹಮಾನಾ x x x ದ್ಯಂತಂ ಜೈನಾಗಮಮನದಂತಿಂತುಂತೆಂದೆ ನಲ್ಮದೇಂ ಬಂದವುದೇ (ಸಮುಜ. ೩-೨೯); ಕೆಲವರು ಮಾತ್ರ ಎಲ್ಲವನ್ನೂ ಪಿಕ್ಕಿ ನೋಡುವ, ಯಾವುದನ್ನಾದರೂ ತೂಕ ಮಾಡಲು ತವಕಿಸುವ . . . ನಿಷ್ಪಕ್ಷಪಾತಪ್ರಕೃತಿಯವರು (ಕೃಜಾ. IV. ೩೦೬೪); ತನ್ನ ಸಮಕಾಲೀನ ವಾದ ಸಮಯ ಅಥವಾ ಮತಗಳನ್ನು ಹಿಕ್ಕಿ ನೋಡುವುದು . . . ಅವನ ಗ್ರಂಥದ ಮುಖ್ಯೋದ್ದೇಶ (ಸಂಕೋತ. ೬೦). ೨. ಬಿಡಿಸಿ ನೋಡು; ವಿಭಾಗ ಮಾಡಿ ನೋಡು; ಸೀಳಿ ನೋಡು: ಒದವಿ ಕೊಯ್ಯುಂ ಕೊಱಿದುವು: ಹಿಕ್ಕಿ ನೋಡಿದೊಡೆ ಸದಮಲಾಮೃತವನೇ ಕಾಣಿಸುತ ಪಲಸುಗಳ್ ಎದಿಕಸಜ್ಜನರಂತೆ ಮೆಱಿದುವು (ಕದ್ವಾಗ. ೬-೨೯).

[ದೇ. ೫ ಕೊಡ. ಪಿರ್, ಪಿಗ್]

ಪಿಕ್ಕುಳಿಕೆ, ಪಿಕ್ಕುಳಿಕೆ, ಪಿಕ್ಕುಳಿಗ, ಪೆಕ್ಕಳಿಗ (ನಾ). ಒಂದು ಬಗೆಯ ಹಕ್ಕಿ; ಪಿಕಳ: ಗಳಿಗಳಂಟಿಗೆ ಸಿಲುಕಿದವು ಪಿಕ್ಕುಳಿಕೆ[ಜಾಹಿಂ. ಗ] ಪಂಜರ ಮಂಜರಿಗ ಮಿನ್ನುಲಿಗ ಲಾವುಗೆ ಸರಲೆ ಬುಲುಲೆಗಳೆಚ್ಚ ಮಿಂಚೆಯಾಳಿ (ಪುರಾ. ೩-೩-೦೮); ಪಿಕ್ಕುಳಿಕ ಚಿಂದೋತ ಗೀಜಗ ಕುಕ್ಕುಕೋಗಿಲೆ . . . ಕೆಂಡವಕ್ಕಿಗಳವಟಿಕೊಳೊಪ್ಪಿದುದು (ಜಾಕ್ತರಾ. ೩-೨೨). ಪಿಕ್ಕುಳಿಕೆ: "ರಕ್ತ ಚ್ಛದಂ ಪಿಕ್ಕುಳಿಕೆ" (ಮಂಗರಾ. ೩೨-೬). ಪಿಕ್ಕುಳಿಗ: ಮೇಲಿನ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ. ಪೆಕ್ಕಳಿಗ: ಪೆಕ್ಕಳಿಗ ಗಿಳಿ ಗುಬ್ಬಿ ಸಾಳುವ (ಉತ್ತರಾ. ೧೦-೨೩). [ <ಪಿಕಳ]

ಪಿಕ್ಕುಳಿಕೆ 'ಪಿಕ್ಕುಳಿಕ' ನೋ.

ಪಿಕ್ಕುಳಿಗ 'ಪಿಕ್ಕುಳಿಕ' ನೋ.

ಪಿಕ್ಕೆ$_1$ 'ಪಿಳ್ಕೆ' ನೋ.

ಪಿಕ್ಕೆ$_2$ (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ಉತ್ಪನ್ನವಾಗುವ ಸುಗಂಧದ್ರವ್ಯ: "ಜಾತಿಮಾಲತಿ ವಾಸಂತಿ ಮಾಧವಿ ಮಲ್ಲಿಗೆ ವಿಚಕಿಳಂ . . . ಮತ್ತದು ವಿಳಕ್ಕಿಳಿಕೆ ಪಿಕ್ಕೆಯುಕ್ಕುಂ" (ಚುಸ್ಕೋ. ೩೯-೩೪); ಅರೆದಾಸವದಿಂದಂ ಬೋಟಿರಸಂ ಲಘು ಪಿಕ್ಕೆಯೆಂಬಿವಂ ಬೆರಸಿ ಮನೋ ಹರಮಾಗಿ ಧೂಪಮಂ ಕುಡೆ (ಲೋಕೋಪ. ೭-೫೬). [ <ಸಂ. ಸ್ಪೃಕ್ಕಾ]

ಪಿಕ್ಚರ್ 'ಪಿಕ್ಚರು' ನೋ.

ಪಿಕ್ಚರು, ಪಿಕ್ಚರ್ (ನಾ). ಚಲನಚಿತ್ರ; ಸಿನಿಮಾ: ನನ್ನ ಮಗಳು ಅವಳ ಸ್ನೇಹಿತೆಯರೊಡನೆ ಪಿಕ್ಚರಿಗೆ ಹೋಗಿದ್ದಾಳೆ (ಜಾ). ಪಿಕ್ಚರ್: ಪಿಕ್ಚರ್ ಶುರುವಾಗುವುದು ಆರೂವರೆಗೆ (ದುಃಕಟ್ಟಿ. ೨೨೬). [ ←ಇಂ. Picture ]

ಪಿಗಳ (ನಾ). ಒಬ್ಬಾತನ ಹೆಸರು: ಕುನ್ದತೂರ ತುಱುಗೊಳೊಳಾ ನ್ತಿಱಿದು ಸತ್ತೊ ತಾಮ್ಮಯ ಪಿಗಳಂ (ಎಚ್. X. ಮುಳಬಾ. ೨೯೯-೫; ಸು. 890). [ ? ]

ಪಿಗ್ಗು 'ಪಿಳ್ಗು' ನೋ.

ಪಿಚ್$_1$ (ನಾ). ಒಂದು ಅನುಕರಣ ಶಬ್ದ: 'ಪಿಚ್ಚೆನ್ನು' ಪರಾ.

ಪಿಚ್$_2$ (ನಾ). (ಕ್ರಿಕೆಟ್ ಆಟದಲ್ಲಿ) ಗುರಿಕೋಲುಗಳ ಮಧ್ಯದ ಸ್ಥಳ: ಮಳೆ ಬಂದು ಪಿಚ್ ಬಹಳ ಕೆಟ್ಟದ್ದರಿಂದ ಇಂಗ್ಲೀಷ್ ಆಟಗಾರರಲ್ಲಿ ಐದು ಮಂದಿ . . . ಔಟಾದರು (ಪಾಠಗೇ. ೧೫೦). [ ←ಇಂ. Pitch]

ಪಿಚಂಡ (ನಾ). ೧. ಹೊಟ್ಟೆ; ಉದರ: ಶ್ರೀಮತ್ಕಾಂಡಜಜಾಂಡಮಂಡಲ ಪಿಚಂಡಾಪ್ನಾಯ ಪಾಜಿಸ್ಥಿರಂ (ಹಮ್ಮಾರ. ೧-೧); ಪಾಹಿ ಭುವನತ್ರಯ ಪಿಚಂಡಚಿದಖಂಡಾ (ಜಾತಾಕ್ಷ. ೧-೨-೬೫). ೨. ಸ್ಥೂಲವಾದ ತೊಡೆ: "ಊರುಃ, ಸಕ್ಥಿ, ಪಿಚಂಡಂ ?— ಈ ೩ ಹೆರ್ದೊಡೆ" (ಹಲಾಯು. ೬೫-೩೬೧). [ಸಂ.]

ಪಿಚಂಡಿ$_1$ (ನಾ). = ಪಿಚಂಡ ೨: "ಊರುಗಳು ಪಿಚಂಡಿಗಳೆನಲು ಪೆರ್ದೊಡೆಗೆ ನಾಮಮುಕ್ಕುಂ" (ಮಂಗರಾ. ೯೪-೧೭). [ ಸಂ. ಪಿಚಂಡಿನ್ ]

ಪಿಚಂಡಿ$_2$ 'ಪಿಚಾಡಿ' ನೋ.

ಪಿಚಂಡಿಲ, ಪಿಚಂಡಿಳ (ಗು). ೧. ಸ್ಥೂಲವಾದ; ದಪ್ಪ; ತೋರ. ಪಿಚಂಡಿಳ: (ನಾ). ೨. ಸ್ಥೂಲವಾದ ಹೊಟ್ಟೆಯುಳ್ಳವನು; ಡೊಳ್ಳುಹೊಟ್ಟೆಯವನು: "ಪಿಚಂಡಿಳಃ, ಬೃಹತ್ಕುಕ್ಷಿಃ, ತುಂದಿಲಃ, ಉದರಿಳಃ —ಈ ೪ ಹೊಟ್ಟೆಗಂ" (ಹಲಾಯು. ೯೯-೪೩೪). [ಸಂ.].

ಪಿಚಂಡಿಳ 'ಪಿಚಂಡಿಲ' ನೋ.

ಪಿಚಕ್ (ನಾ). ಒಂದು ಅನುಕರಣ ಶಬ್ದ: "ಪಿಚಕ್ ಜಗಿಸುವುದು (ಪಿಚಕಾಳಿ, ಜೀಕಳಿ)" (ಜಾತಕೋ. ೧೭); ಪಿಚಕ್ ಪಿಚಿಕ್ಕೆಂದು . . . ಹಾರುತ್ತಿದ್ದ ಕೆಸರಿನಲ್ಲಿ, ಎಚ್ಚರಿಕೆಯಿಂದ, ಆದರೂ ಆದಷ್ಟು ಬೇಗಬೇಗನೆ, ಕಾಲು ಹಾಕಿದಳು (ಮುಳಿಪು. ೬೩೮). 'ಪಿಚಕ್ಕನೆ' ಪರಾ.

ಪಿಚಕಾರಿ (ನಾ). ೧. ನೀರು, ಓಕುಳಿ ಮುಂತಾದುವನ್ನು ಎರಚುವುದ ಕ್ಕಾಗಿ ಬಳಸುವ ಒಂದು ಬಗೆಯ ಸಾಧನ; ಜೀರ್ಕೊಳವಿ; ಜೀಕಳಿ: ನೀರು ನಿಂತ ಪಕ್ಷದಲ್ಲಿ ಡಿ.ಡಿ.ಟಿ. ಅಥವಾ ಸೀಮೆಯೆಣ್ಣೆಗಳನ್ನು ಈ ಸ್ಥಳ

ಗಳಲ್ಲಿ ಪಿಚಕಾರಿ ಹೊಡೆಸಬೇಕು (ಗೃಹವೈ. ೧೯೬); ಈ ಬಣ್ಣಗಳ ಕೀರ್ಥವನ್ನು ನಿತ್ಯವೂ ನೆತ್ತಿಗೆ ಪಿಚಕಾರಿಯಿಂದ ಹೊಡೆಯಬೇಕು (ಅದೇ. ೧೩). ೨. ಮಲಬದ್ಧತೆಯ ಪರಿಹಾರಕ್ಕಾಗಿ ಗುದಪ್ರದೇಶಕ್ಕೆ ನೀರು ಪ್ರವೇಶಿಸುವಂತೆ ಮಾಡುವ ಸಾಧನ : ಪಿಚಕಾರಿ ಹೊಡೆದು ಮಲ ವಿಸರ್ಜನೆ ಮಾಡಿಸಬೇಕು (ಗ್ರಾಮಶಿ. ೧೨೪). ೩. (ಆಲಂ) (ಬಾಯಿಯಿಂದ) ಚಿಮ್ಮಿಸಿದುದು: ಕಾರ್ಚಿಯ ಹಿಮ್ಮಗ್ಗಲು ಇರುವ ಕಿಟಕಿಯಲ್ಲಿ ತಂಬುಲದ ಪಿಚಕಾರಿಯನ್ನು ಬಿಡುತ್ತಿದ್ದರು (ರಂಗರೋ. ೧); ಪಾನಪಟ್ಟಿಯ ಪಿಚಕಾರಿಯನ್ನು ಹೊಡೆದು, ಸಿಗರೇಟಿನ ಒಂದು ಝುರುಕಿಯನ್ನು ಎಳೆದು . . . ಕೇಳಿದ (ದೀಪಹ. II. ೨೦೩). [←ಹಿಂ. ಮರಾ. ಪಿಚಕಾರೀ./ತುಳು. ಪಿಚ್ಕಾರಿ, ಪಿಸ್ಕಾರಿ ; ತೆಲು. ಪಿಚಿಕಾರು. ಪಿಚ್ಚಿಕಾರು]

**ಪಿಚಕ್ಕನೆ** (ಅ). ಪಿಚಕ್ ಎಂದು ಶಬ್ದವಾಗುವ ಹಾಗೆ : ಅಂಗಾತನಾಗಿ ಬಿದ್ದ. ಮೈ ಆಳದ ಗೊಜ್ಜಿಯಲ್ಲಿ ಬಿದ್ದಾಗ ಪಿಚಕ್ಕನೆ ಗೊಜ್ಜು ಚಿಮ್ಮಿ . . . ಅಲ್ಲಿಂದ ಎದ್ದು ಕಾಲೆತ್ತಿ ಎಳೆದು ದಾಟುವುದರಲ್ಲಿ ಹೋದ ಪ್ರಾಣ ಕೈಗೆ ಬಂತು (ಕಹಾ. II. ೧೨೩೩); ಬಾಯಲ್ಲಿಯ ತಂಬಾಕನ್ನು ಪಿಚಕ್ಕನೆ ಉಗುಳಿ . . . ಕುದುರೆಯ ವೇಗವನ್ನು ಹೆಚ್ಚಿಸಿದನು (ಅಂಗಾಹ. ೫೪). [ಪಿಚಕ್+—ಅನೆ₁]

**ಪಿಚವ್ಯ** (ನಾ). ೧. ಹತ್ತಿಯ ಗಿಡ; ಅರಳೆಯ ಗಿಡ. ೨. ಹತ್ತಿ; ಅರಳೆ : "ಪಿಚವ್ಯಃ, ಬಾದರಃ, ಕಾರ್ಪಾಸಃ—ಈ ೩ ಪಟ್ಟು (ಹತ್ತಿ)" (ಹಲಾಯು. ೩೪-೪೪). [ಸಂ.]

**ಪಿಚಾಡಿ**, **ಪಿಚಂಡಿ₂**, **ಪೀಚಾಡಿ** (ನಾ). ೧. ಹಿಂಭಾಗ; ಹಿಂಬದಿ : ಫಾಜಲ್‌ಖಾನನು ತನ್ನ ದಂಡು ತೆಗೆದುಕೊಂಡು ಅಗಾಡಿಗೆ ಆಗಿಕೊಂಡು ಪಿಚಾಡಿಗೆ ಜಾನ್ ಕಸ್ತೂರಿ ಆಗಿಕೊಂಡು ಪಥ್ಯಗುನುಗು ಹಾಕಿಕೊಂಡು . . . ಹೋಗುತ್ತಾ ಇದ್ದಲ್ಲಿ (ರಾಜೇಂದ್ರ. ೪೦). ೨. ಕುದುರೆಯ ಹಿಂದಿನ ಕಾಲು,—ಹಿಂಗಾಲು : (*). ೩. ಕುದುರೆಯ ಹಿಂಗಾಲುಗಳನ್ನು ಕಟ್ಟುವ ಹಗ್ಗ : ಪೇಟೆಗೆ ಹೋಗಿ . . . ಕುದುರೆಯ ಮುಂಗಾಲು ಹಿಂಗಾಲುಗಳಿಗೆ ಕಟ್ಟುವ ಅಗಾಡಿ ಪಿಚಾಡಿ ಹಗ್ಗಗಳನ್ನು ತೆಗೆದುಕೊಂಡು ಬಂದರು (ಹಗಗ. ೩೧) ; ಸಾಳೋನರಸಿಂಗರಾಯನ ಖಾಸಾಕುದುರೆಯನ್ನು ಕಟ್ಟಿದ್ದ ಕಡೆಗೆ ಹೋಗಿ ಸ್ವಲ್ಪವೂ ಗದ್ದಲವಾಗದಂತೆ ಅವರ ಅಗಾಡಿಯನ್ನೂ ಪಿಚಾಡಿಯನ್ನೂ ಬಿಚ್ಚುತ್ತಾ ಇದ್ದನು (ಚಕ್ರಾ. ೧೧). ಪಿಚಂಡಿ₂ : (*). **ಪೀಚಾಡಿ** : ೧. ಮೆಟ್ಟಿ ಸೌಧಾಗ್ರತರುತುದಿಗಳಂ ಸಾರೆ ಹಯದೊಟ್ಟು ಪೀಚಾಡಿಯಾ ಗಾಡಿಯಂ ಕಿತ್ತು ಷುರಕೇರಿದವು (ಜಪವು. ೫-೯) ; ಬೇಗೆ ನಿರ್ವಸನ ರಕ್ತಾಂಘ್ರಿಯೋಳ್ ವತ್ತಲಾಗಾಡಿ ಪೀಚಾಡಿ ಕಿತ್ತು (ಜಪವು. ೧೨-೧೪).

**ಪಿಚಂಡಿ ಬಿಗಿ**=ಹಿಂದಿನಿಂದ ಕೈಗಳನ್ನು ಕಟ್ಟು : ಹಿಮ್ಮುಖವಾಗಿ ಕಟ್ಟು : "ಹೆಡೆಮುರಿ ಕಟ್ಟು" (ಜಾಪಕೋ. ೦೬).

[← ಹಿಂ. ಪಿಛಾಡೀ, ಪೀಛವಾಡೀ; ಮರಾ. ಪಿಛಾಡೀ]

**ಪಿಚಿ** (ನಾ). ಒಂದು ಅನುಕರಣ ಶಬ್ದ : (*).

ಪಿಚಿಪಿಚಿ (ದ್ವಿರುಕ್ತಿ) : ಮಾತುಮಾತಿಗೊಮ್ಮೆ ಪಿಚಿಪಿಚಿ ಉಗುಳುವ ಈ ಮಹಾಪುರುಷರ ಸಹವಾಸ ಬೇಡ (ಗಾಳಿಗು. ೩೨) ; ಮಳೆ ಬಂದು ನೆಲವೆಲ್ಲ ಪಿಚಿಪಿಚಿಯಾಗಿದೆ (ರೂಢಿ).

**ಪಿಚಂಡ** (ನಾ). ಹೊಟ್ಟೆ ; ಉದರ : "ಪಿಚಂಡಃ, ಕುಕ್ಷಿಃ, ಜಠರಂ, ಉದರಂ, ತುಂದಂ ೫ ಹೊಟ್ಟೆ, ಬೊಜ್ಜು" (ಸಿದ್ಧಾಂತಿ. ೧೯೧). [ಸಂ.]

**ಪಿಚಂಡಿಲ** (ಗು). ಸ್ಥೂಲವಾದ ಹೊಟ್ಟೆಯನ್ನು ಉಳ್ಳ ; ಡೊಳ್ಳು ಹೊಟ್ಟೆಯಿಂದ ಕೂಡಿದ. [ಸಂ.]

**ಪಿಟಿಕೆ**, **ಪಿಟ್ಟಿಕೆ**, **ಹಿಚಿಕೆ** (ನಾ). ಪಕ್ಷಿ ಅಥವಾ ಪ್ರಾಣಿಗಳ ಹಿಕ್ಕೆ,—ಮಲ : ಈ ಹಕ್ಕಿ . . . ತನ್ನ ಪಿಚಿಕೆ ಯಾರಿಗೂ ಸಿಕ್ಕದಿರಲೆಂದು ಅದನ್ನು ನೆಲವಲ್ಲಿ ಹೂಳುತ್ತದೆ (ಕ್ರಪಾತ. I, ೨೦) : ಅಕಸ್ಮಾತ್ ಮಾಂಸದ ಚೂರುಗಳನ್ನು ಹದ್ದುಗಳು ನುಂಗಿಬಿಟ್ಟರೆ . . . ಬೆಳಗಾದ ಮೇಲೆ ಅವುಗಳ ಪಿಚಿಕೆಯನ್ನು ಹುಡುಕಿ ವಜ್ರಗಳನ್ನು ಆಯ್ದುಕೊಳ್ಳುತ್ತಾರೆ (ಕ್ರಪಾತ. II. ೩೪). **ಪಿಚ್ಚಿಕೆ** : (ರಘುಕಾಂ. ೩೪೩). **ಹಿಚಿಕೆ** : ಏರೆಯ ಗದ್ದೆಗೆ ಗೊಬ್ಬರವಾದೀತೆ ಗುಬ್ಬಿಯ ಸಾವಿರ ಹಿಚಿಕೆ (ಇಂಜಾಪ. ೧೯೬-೭೯) ; ಎಷ್ಟೋ ಸಾರಿ ಅದು ಎಲೆಯ ಮೇಲೆ ಹಕ್ಕಿಗಳ ಹಿಚಿಕೆಯಂತೆ ಬಿದ್ದಿರುವುದು (ಜಾಂಕ್ರ. II. ೧೦೨೩) ; ಅರ್ಧ ಬೆಂದ ಅನ್ನ . . . ಪ್ರಾಣಿಗಳ ಹಿಚಿಕೆ, ಜಿರಳೆ, ಕೂದಲುಗಳಿಂದ ತುಂಬಿದ ಆಹಾರ (ಅಕ್ಕಾಪ. ೭). [< ಪಿಳ್ಕೆ]

**ಪಿಚಿಗುಟ್ಟು** (ಕ್ರಿ). ಕೆಸರಿನಿಂದ ಗಲೀಜಾಗು,–ಕೊಳಕಾಗು : ಹೆಚ್ಚಾದ ಮಳೆ ಬಿದ್ದು ನೆಲವೆಲ್ಲ ಪಿಚಿಗುಟ್ಟುತ್ತಿತ್ತು (ರೂಢಿ). [ಪಿಚಿ + ಕುಟ್ಟು₁]

**ಪಿಚು** (ನಾ). ೧. ಅರಳೆ ; ಹತ್ತಿ : "ತೂಲಕಂ, ಪಿಚುಃ — ಈ ೨ ಅರಳೆ" (ಹಲಾಯು. ೩೪-೪೪). ೨. ಹತ್ತಿಯ ಗಿಡ. ೩. ಎರಡು ತೊಲೆಗಳ ತೂಕ. [ಸಂ.]

**ಪಿಚುತೂಲ** (ನಾ).=ಪಿಚು ೧. [ಸಂ.]

**ಪಿಚುತೂಳಕ** (ನಾ).=ಪಿಚು ೧ : "ಹತ್ತಿ ಕಾರ್ಪಾಸಂ ಪಿಚವ್ಯಮಾ ಬಾದರಂ ಅರಳೆ ಪಿಚುತೂಳಕಾಖ್ಯಂ" (ಚುಂಗಹಾ. ೩೬-೨೭). [ಸಂ. ಪಿಚುತೂಲಕ]

**ಪಿಚುಮಂದ** (ನಾ). ಬೇವಿನ ಮರ : "ಅರಿಷ್ಟಃ, ಪಿಚುಮಂದಃ — ಈ ೨ ಬೇವು" (ಹಲಾಯು. ೩೩-೪೩); ಚುಂಚುರ ಪಿಚುಮಂದಪಲ್ಲವಸಮುಲ್ಲಸಿತಂ ಮುಸಲೋರುಸೀರಡಂಬರಯುತಮೇಂ ಮನಕ್ಕೊಲವನಿತ್ತುದೊ ಬಾಗಿಲರಿಷ್ಟಸದ್ಮದಾ (ಕುದ್ರಪು. ೩-೯೭); ಪರಿಪರಿ ರಸಾಲ ಪಿಚುಮಂದ . . ಮರುಗ ಪಚ್ಚೆಯ ದವನ ಬಿಲ್ವ ಬೆಳವಲ ನಿಂಬೆ ಹೀರಳೆಯು (ಕೋರಪ. ೦-೦೭); ಪಿಚುಮಂದಪತ್ರವ ಲವಿತ್ರಮನೊಲಿದು ಬಿನ್ನವಿಲ್ಲದೆ ಪಿಡಿಸಿ (ವಠವೋ. ೧೩-೨೦). [ಸಂ.]

**ಪಿಚುಮರ್ದ** (ನಾ).=ಪಿಚುಮಂದ : "ಅರಿಷ್ಟಃ, ಸರ್ವತೋಭದ್ರಃ, ಹಿಂಗುನಿರ್ಯಾಸಃ, ಮಾಲಕಃ, ಪಿಚುಮರ್ದಃ, ನಿಂಬಃ — ೬ ಬೇವಿನ ಗಿಡದ ಹೆಸರುಗಳು" (ಸಿದ್ಧಾಂತಿ. ೧೨೭). [ಸಂ.]

**ಪಿಚುಲ**, **ಪಿಚುಳ** (ನಾ). ೧. ಅರಳೆ; ಹತ್ತಿ. ೨. ಹುಣಿಸೆಮರ. ೩. ಒಂದು ಬಗೆಯ ಸಸ್ಯ ; ನೀರುಕಣಗಿಲೆ. ೪. ಒಂದು ಬಗೆಯ ಸಸ್ಯ; ಕಕ್ಕೆಗಿಡ : "ಝಾವುಕಃ, ಪಿಚುಲಃ-ಈ ೨ ಪಿಚುಲಂ?" (ಹಲಾಯು. ೩೨-೪೨); "ಪಿಚುಲಃ, ಝಾಬುಕಃ—೨ ಕಕ್ಕೆಗಿಡದ ಹೆಸರುಗಳು" (ಸಿದ್ಧಾಂತಿ. ೦೨೦). ೫. ಒಂದು ಬಗೆಯ ಕಾಗೆ; ಸಂಬಾರ ಕಾಗೆ. **ಪಿಚುಳ** : ೩. "ತೊಜಗಣಿಗಿಲಾ ಲೋಮಕಂ ಪಿಚುಳಮುದು" (ಚುಂಗಹಾ. ೩೪-೧೦). [ಸಂ.]

**ಪಿಚುಸೋದ** (ನಾ). ಹತ್ತಿಯನ್ನು ಎಕ್ಕುವ ಕೋಲು ; ಕುಡುಹು : "ಪಿಚುಸೋದಮೆನೆ ಕುಡುಹು" (ಚುಂಗಹಾ. ೬೦-೪೯). [ಪಿಚು + ಸೋದ]

**ಪಿಚುಳ** 'ಪಿಚುಲ' ನೋ.

**ಪಿಚ್ಚ₁** (ನಾ). ೧. ಬುದ್ಧಿಕೆಟ್ಟವನು ; ಹುಚ್ಚ : ಎಲೆಲೆ ಪಿಚ್ಚ ಬ್ರಾಹ್ಮಣ ನಾನೆ ನಿನಗೆ ತೊತ್ತಿನ ಮಗ ನಾನೆ ನಾನೆಯೆನೆ (ಶಂಐಪ. ೬-೦೩೨). ೨. ಶಿವ : ಪರಮನೇ ಪಿಚ್ಚನೇ ಪಚಿದಾಳ್ದ ಪಶುಪತಿಯೆ . . . ಎಂದು ನಾಂದೀ ಪದವ ಪಾಡಿದನು ನಂಬಿ ಶಂಭುವಿನಿದಿರೊಳು (ಶೌಂದಪು. ೫-೨೬). [ದೇ.॥ ತಮಿ. ಮಲ. ಪಿಚ್ಚನ್; ತೆಲು. ಪಿಚ್ಚ, ಪಿಚ್ಚಿ=ಉನ್ಮಾದ]

**ಪಿಚ್ಚ₂** 'ಪಿಸಿತ್ತ' ನೋ.

**ಪಿಚ್ಚಂಬಕ** (ನಾ). ೧. ಗೀಜು ತುಂಬಿದ ಕಣ್ಣು ; ಪಿಸರುಗಣ್ಣು. ೨. ಪಿಸರುಗಣ್ಣಿನವನು ; ಗೀಜುಗಣ್ಣನ್ನು ಹೊಂದಿರುವವನು : ನಂಬಿ ಕೋಪದೊಳು ಪಿಚ್ಚಂಬಕನ ನೋಡಿದು ಪೇಳೆ (ತ್ರಿಶಾ. ೦೩-೨೨). [ಪಿಚ್ಚು + ಅಂಬಕ]

**ಪಿಚ್ಚಕಾಯಿ** (ನಾ). ಒಂದು ಬಗೆಯ ಮಾವು : ಮಾವಿನ ಜಾತಿಗಳು : ಗೋಳಿಕಾಯಿ, ಬಾದಾಮಿ, ರಸಪುರಿ, ಜೀರಿಗೆ, ಪಿಚ್ಚಕಾಯಿ, ಕರೀಕಾಯಿ (ಪಶ್ಚುಕು. ೨೩೬). [ ಪಿಚ್ಚ ? + ಕಾಯಿ$_{1}$ (< ಕಾಯ್$_{1}$) ]

**ಪಿಚ್ಚಟ** (ಗು). ೧. (ಒತ್ತಿದುದರಿಂದ) ಚಪ್ಪಟೆಯಾದ ; ಅಗಲವಾದ. (ನಾ). ೨. (ಒತ್ತುವಿಕೆಯಿಂದ) ಚಪ್ಪಟೆಯಾದ ವಸ್ತು. ೩. ಕಣ್ಣಿನ ಒಂದು ಬಗೆಯ ರೋಗ. ೪. ತವರ. [ಸಂ.]

**ಪಿಚ್ಚುಣಿಗ** (ನಾ). ೧. ಮಾಂಸವನ್ನು ತಿನ್ನುವವನು. ೨. ದೈತ್ಯ ; ರಾಕ್ಷಸ : " ಪಿಚ್ಚುಣಿಗನೆಂದೊಡೆ ನಿರುತಿವೆಸರಕ್ಕು " (ಶಬ್ದ. ೧೪).
[ ಪಿಚ್ಚ$_{2}$ (< ಪಿಶಿತ$_{1}$) + – ಉಣಿಗ ]

**ಪಿಚ್ಚಿ$_{1}$** (ನಾ). ಒಂದು ಅನುಕರಣ ಶಬ್ದ.
**ಪಿಚ್ಚಿಯಾಗು** = (ಕರಾ) ತೆಳ್ಳಗಾಗು ; ತೆಳುವಾಗು : ಹಿಟ್ಟು ಸ್ವಲ್ಪ ಹೆಚ್ಚಾಗಿದ್ದಿರಬೇಕು. ಹಿಟ್ಟೆಲ್ಲ ಪಿಚ್ಚಿಯಾಗಿದೆ. ರೊಟ್ಟಿ ತಟ್ಟಲು ಬಾರದು (ಕೊಕ).

**ಪಿಚ್ಚಿ$_{2}$** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: "ರಕ್ತಪುಷ್ಪೀ —ಪಿಚ್ಚಿ, ಉತ್ಪಲಕರ್ಣಿ, ದಾಸಾಳ " (ಚಿಕಂ. ೧೩೪); ಜಡೆಗೆ ಪಿಚ್ಚಿದ [ಪಾಠಾಂ. ಪೀಚಿದ]ಲಬಾಯನೆಂದೊ ಪಿಡಿದ ದಂಡವನುಡಿದನೆಂದೊ ಮುಡಿದನೆಂದೊ ಮಾಸಲಾದ ಪ್ರಸೂನ ಪತ್ರಗಳ (ಜಯಿಕೃ. ೩-೭೦).
[ ದೇ. ‖ ತಮಿ. ಪಿಚ್ಚಿ=ದೊಡ್ಡಗಾತ್ರದ ಮಲ್ಲಿಗೆ ]

**ಪಿಚ್ಚಿ$_{3}$** (ನಾ). ವೃಷಣ ; ತರಡು : ಅವನು ಬರಲಿ. ಪಿಚ್ಚಿಗಳು ಎಗರುಸ್ತೀನಿ—ಸುಮ್ಮನೆ ಬಿಡ್ತೀನಿ ಅಂತ ತಿಳಿದಿದ್ದೀರಾ ? (ಉಕನೀ. ೧೪೩).
[ ದೇ. ‖ ತುಳು. ಪಿಚ್ಚಿ ; ತೆಲು. ಪಿಚ್ಚ ]

**ಪಿಚ್ಚಿ$_{4}$** (ನಾ). (ವೀಳೆಯದೆಲೆಯ) ಕಟ್ಟು : ತುಪ್ಪ ಏನು ಮಾಡೀತರ್ರೋ ಒಂದು ಪಿಚ್ಚಿ ವೀಳೆದೆಲೆ ಒಗದರ . . . ಎಂದನು ರಾಮರಾಯ (ಜನಪದು. ೧೪೬). [ ? ]

**ಪಿಚ್ಚಿಕೆ** ' ಪಿಚಿಕೆ ' ನೋ.

**ಪಿಚ್ಚಿಹೂ** (ನಾ). ಒಂದು ಬಗೆಯ ಹೂವು : " ರಾಭಕಃ, ರಾಹಕಃ—ಈಯೆರಡುಂ ಪಿಚ್ಚಿಹೂ " (ಚಿಕಂ. ೧೪೭). [ ಪಿಚ್ಚಿ$_{2}$ + ಹೂ$_{2}$ (< ಪೂ$_{2}$) ]

**ಪಿಚ್ಚು** (ನಾ). ಕಣ್ಣಿನ ಕೊಳೆ, — ಹೊಲಸು ; ಪಿಸರು : ಅಂಗವೆಲ್ಲವು ನೆತ್ತರೊಸರಿ ನಾರುತ್ತಿಹುದು ಕಂಗಳಲಿ ಪಿಚ್ಚು ಸುರಿವುತ ಸುಗಿದ ಮೈಯ ಮಯುವಂಗಳೊಳು ಕೀವು ಸೋರುವ ಬೇನೆಯನ್ನು ತಾನಂಗೈಸಿಕೊಂಡಿರುತಿರೆ (ತ್ರಿಕಾ. ೨೦-೫೬); ಈ ನೀರು ಕಣ್ಣಿಗೆ ದೊರೆಯದಿದ್ದರೆ ಕ್ಷಣಮಾತ್ರದೊಳಗೆ ಪಿಚ್ಚಿನ ತರವು ಕಣ್ಣಿನ ಮೇಲೆ ಕೂತು ಅದು ಕೆಟ್ಟುಹೋಗಿರುತ್ತಿತ್ತು (ಕುಂಬಾರು. ೪-೩೬): ಆ ಮುದುಕ ವಿಧವೆಯಾದ ರೇಣಮ್ಮನಂತೆ ಕಣ್ಣಿನಲ್ಲಿ ಪಿಚ್ಚು ಇಟ್ಟು ಬಾಯಲ್ಲಿ ಜೊಲ್ಲು ಸೋರಿಸುವುದಿಲ್ಲ (ಕೋಟಿಚೆ. ೫೬). ' ಪಿಳಿಚು ' ಪರಾ.
[ ದೇ. ‖ ತಮಿ. ಪೀಳ್ಚೈ : ತುಳು. ಪೇಂಚಿ=ಕೊಳೆ, ಹೊಲಸು : ಬ್ರಾಹುಈ. ಪಿಚ್ ]

**ಪಿಚ್ಚುಗಣ್ಣು** (ನಾ). ಪಿಸರಿನಿಂದ ಕೂಡಿದ ಕಣ್ಣು : ಗೀಜು ತುಂಬಿರುವ ಕಣ್ಣು : ಶಿಶುವಿನಾಳಧೀಶನ ಮುಂದೆ ಕೊಸರಿ ಕೊಸರಿ ಹೋಗದಿರು ಹಸನವಿಲ್ಲ ಹರೆಯುವ ವಿಕಾರಿದ ಪಿಸುರು ಪಿಚ್ಚುಗಣ್ಣಿನ ಮುದಕೀ (ಕಂಟಿ. ೩೩-೩). [ ಪಿಚ್ಚು+ಕಣ್ಣು (<ಕಣ್) ]

**ಪಿಚ್ಚಿ$_{5}$** (ನಾ). ೧. ಅಳತೆ ಅಥವಾ ತೂಕದಲ್ಲಿ ಕಡಮೆಯಿರುವುದು : (ಕ). ೨. ನಾಣ್ಯವು ತೂಕ, ಬಣ್ಣ ಇವುಗಳಲ್ಲಿ ಕಡಮೆ ತರಗತಿಯಾಗಿರುವುದರಿಂದ ಅದನ್ನು ಮುರಿಸಬೇಕಾದಾಗ, ಕೊಡಬೇಕಾದ ಶುಲ್ಕ,—ವಟ್ಟ : ವ್ಯಾಗೀಶರವರು ಕೊಡುವ ಮೊಹರೀ ಪಿಚ್ಚಿಯಿಲ್ಲದೇ ಮಾರುತ್ತದೆ. ತಾವು ಕೊಡುವುದು ಪಿಚ್ಚಿ ಕೊಟ್ಟು ಮುರಿಸಿಕೊಳ್ಳಬೇಕಾಗಿರುವುದರಿಂದ ಒಂದೇ ಕಡೆಯಲ್ಲದೆ ಹತ್ತುಕಡೆ ತಿರುಗಿ ಮುರಿಸಿ ಪದಾರ್ಥಂಗಳನ್ನು ತರಬೇಕಾಗಿರುವುದು (ಪುಕಾ. ೧೩೩).
**ಪಿಚ್ಚಿಸೇರು** = ಕಡಮೆ ಅಳತೆಯ ಸೇರು : (ಕ).
[ ದೇ. ‖ ತೆಲು. ಪಿಚ್ಚ, ಪಿಚ್ಚಿ ]

**ಪಿಚ್ಚೆನ್ನಿಸು** (ಕ್ರಿ). ಏನೂ ಇಲ್ಲದಂತೆ ಭಾಸವಾಗು ; ಖಾಲಿಯಾದಂತೆ ತೋರು,—ಕಾಣಿಸು : ಜೋಗದ ಜಲಪಾತವನ್ನು ತಳದಲ್ಲಿ ನಿಂತು ಘಂಟೆಗಟ್ಟಳೆ ನೋಡಿದ ಕಣ್ಣುಗಳಿಗೆ ನಯಾಗರದ ನೋಟ ಪಿಚ್ಚೆನ್ನಿಸಿತು (ಸಂಚರು. ೧೨೪). [ ಪಿಚ್$_{1}$+ಎನ್ನಿಸು (<ಎನಿಸು$_{1}$) ]

**ಪಿಚ್ಚೆನ್ನು** (ಕ್ರಿ). = ಪಿಚ್ಚೆನ್ನಿಸು : ಅದನ್ನು ನೋಡಿ ದೈವಭಕ್ತನಾದ ಸಣ್ಣಪ್ಪನ ಮನಸ್ಸು ಪಿಚ್ಚೆಂದಿತು (ಕೃಸಹ. ೧೨೭).
[ ಪಿಚ್$_{1}$ + ಎನ್ನು (< ಎನ್$_{1}$) ]

**ಪಿಚ್ಛ** (ನಾ). ೧. (ಹಕ್ಕಿಗಳ) ರೆಕ್ಕೆ ; ಗರಿ. ೨. ನವಿಲಿನ ಪುಚ್ಛ, — ಬಾಲ. ೩. ಬಾಣದ ಗರಿ. [ ಸಂ. ]

**ಪಿಚ್ಛಂದ** (ನಾ). ಅರಸರ ಮನೆ ; ಅರಮನೆ. [ಸಂ.]

**ಪಿಚ್ಛಂದಕ** (ನಾ). = ಪಿಚ್ಛಂದ : ಈಶ್ವರಸದ್ಮನಾಂ ಪಿಚ್ಛಂದಕ ಪ್ರಭೇದಾಃ ಭವಂತಿ—ಅರಸುಗಳ ಮನೆಗಳಲ್ಲಿಯೂ ದೇವಸ್ಥಾನ ಮುಂತಾದವುಗಳಲ್ಲಿ ಅಲಂಕಾರವಾಗಿಯೂ ಚಿತ್ರವಾಗಿಯೂ ರಚಿಸಲ್ಪಟ್ಟಿರುವ ಬಾಗಿಲು, ಲೋವೆ ಮುಂತಾದ ತರಹಾಗಳ ವಿಶೇಷಗಳ ಹೆಸರುಗಳು (ಶಿಲ್ಪಂತಿ. ೧೦೦).
[ ಸಂ. ]

**ಪಿಚ್ಛಲ** (ಗು). ೧. ಜಾರುವ ; ಜಾರಿಕೆಯುಳ್ಳ. ೨. ಗಟ್ಟಿಯಾದ : ಗಡ್ಡೆಗಡ್ಡೆಯಾಗಿರುವ. (ನಾ). ೩. ಕೆಸರುನೀರು; ರಾಡಿ : ಬಗ್ಗಡ : "ಪಿಚ್ಛಲ[ ಪಾಠಾಂ. ಪಿಲ ]ಮೆನಲ್ಕೆಸಜಿನೀರೆಂದೆನಿಕ್ಕುಂ" (ಜಂಗಮ. ೧೨೪-೦೫).
[ ಸಂ. ]

**ಪಿಚ್ಛಿಲ**(ಗು). ೧. = ಪಿಚ್ಛಲ ೧. (ನಾ). ೨. = ಪಿಚ್ಛಲ ೩. ಕೆಸರಿನಿಂದ ಕೂಡಿದ ಎಡೆ,—ಜಾಗ : "ಪಿಚ್ಛಿಲಂ, ವಿಜಲಕಂ—ಈ ೨ ಕೆಸಱುಳ್ಳೆಡೆ" (ಹಲಾಯು. ೧೦೨-೩೬). ೪. ಗಟ್ಟಿಯಾದ ಅಥವಾ ಗಡ್ಡೆಗಡ್ಡೆಯಾಗಿರುವ ಮೊಸರು : ಭೋಜ್ಯ ಭಕ್ಷ್ಯಂ ಪೇಯ ಲಲಿತ ಲೇಹ್ಯಂ ಚೋಷ್ಯ ಪಿಚ್ಛಿಲ ಷಡ್ರಸಗಳಂ ವಿಳಸವನುಗುಣದ ರುಚಿಯಂ ಮೇಲಿಯಾಱುವವರ ಚರಣಾಂಬುಜಕ್ಕೆ ಶರಣು (ಚಿಶಂ. ೩೯-೨೮). [ ಸಂ. ]

**ಪಿಚ್ಛಿಲೆ** (ನಾ). ೧. ಒಂದು ಬಗೆಯ ಮರ : ಬೂರುಗದ ಮರ. ೨. ಅನ್ನದ ಗಂಜಿ. ೩. ಒಂದು ಬಗೆಯ ಮರ ; ಕರೀಮರ : (ಕ).
[ಸಂ. ಪಿಚ್ಛಿಲಾ]

**ಪಿಚ್ಛೆ** (ನಾ). ೧. ಅನ್ನದ ಗಂಜಿ. ೨. ಬೂರುಗದ ಮರದ ಅಂಟು ; ಎಲವದ ಮೇಣ : "ಪಿಚ್ಛಾ, ಶಾಲ್ಮಲೀವೇಷ್ಟಃ —೨ ಬೂರಗೆಯಂಟೆ ಹೆಸರು, ಎಲವದ ಮ್ಯಾಣ" (ಶಿಲ್ಪಂತಿ. ೦೩೩). ೩. ಹಾವಿನ ವಿಷಪೂರಿತವಾದ ಜೊಲ್ಲು. [ಸಂ. ಪಿಚ್ಛಾ]

**ಪಿಜ** (ನಾ). ದೊಡ್ಡಗಾತ್ರದ ಹಲಸು : ಹೆಬ್ಬಲಸು : ಪಿಲ (ಹಲಸು), ಪಿಜ (ಹೆಬ್ಬಲಸು) . . . ಉರೇ (ಜೇಂಕೆ) ಇತ್ಯಾದಿಗಳನ್ನು ಸಂಕೇತವಾಗಿರಿಸಿಕೊಂಡವರೆಂಬ ಅರ್ಥದಿಂದಲೋ . . . ಬಂದ ಕುಲನಾಮಗಳು, ಪಿಲತ್ತಾಯ, ಪಿಜತ್ತಾಯ . . . ಇತ್ಯಾದಿ (ತುಉಜಾ. ೮೩೩).
[ ←ತುಳು. ಪಿಜ, ಪೆಜ=ಕಾಡುಹಲಸು]

**ಪಿಜ್ಜ** 'ಪಜ್ಜ' ನೋ.

**ಪಿಟ$_{1}$** (ನಾ). ಒಂದು ಅನುಕರಣಶಬ್ದ : 'ಪಿಟಿಗುಟ್ಟು' ಪರಾ.
**ಪಿಟಪಿಟ** (ದ್ವಿರುಕ್ತಿ) : ಬಾಯಿ ಪಿಟಪಿಟ ಎನ್ನುತ್ತಿದೆ (ಕೂ).

**ಪಿಟ$_{2}$** (ನಾ). ೧. ಧಾನ್ಯಗಳನ್ನು ತುಂಬಲು ಉಪಯೋಗಿಸುವ ಬಿದಿರಿನ ಬುಟ್ಟಿ ; ಗಳಿಗೆ. ೨. ಛಾವಣಿ ; ಮಾಡು. ೩. ಮನೆ : ಗೃಹ. [ಸಂ.]

**ಪಿಟಿಕ್** (ನಾ). ಒಂದು ಅನುಕರಣ ಶಬ್ದ : ಊರ್ವಿಳೆಯನ್ನು ಯಾರೂ ಪಿಟಿಕ್ ಎಂದು ಮಾತನಾಡಿಸಲಿಲ್ಲ (ಪಿಂಗು. ೯೯).

**ಪಿಟಕ$_1$** (ನಾ). ೧. ಬುಟ್ಟಿ ; ಪೆಟಾರಿ : ಮುಂತೈದುವಂ ಭೃತ್ಯನಂತೆ ಪಂಥಾನಮಂ ಸಂತಸದಿ ತೋರುತ ಖನಿತ್ರ ಪಿಟಕಂಗಳಂ ತಾಂ ತಳೆದು ಫಲಮೂಲಪುಷ್ಪೋಪಹಾರಂಗಳನ್ನರ್ಪಿಸುತ್ತಲಡಿಗೆ (ಜಂಗಾ. ೨-೦೦-೩೯); ಮಾಯಲ್ಕೈದಲ್ಕೆವರ್ಗರುಂ ಕೊಳಕೆ, ಮುದುಕಿ ಕೌತುಕವಾಗಿ ಮುಟ್ಟಿ ನೋಡಿದಳವರ ಪಿಟಕನುಂ (ಶ್ರೀಚೂಡಾ. ೨೬೦-೨೦೩); ಪಿಟಕವೆಂದರೆ, ಪೇಟಕಾ, ಪೆಟ್ಟಿಗೆ (ಹಂಡಾ. ೨೪); ರಜನಿಯೊಳ್ ಭದ್ರವಾಗಿಹ ಪಿಟಕದೊಳಗೆ (ಸಂಕಿಸ. ೦೬೬). ೨. ಗುಳ್ಳೆ ; ಬೊಕ್ಕೆ : "ಪಿಟಕಃ, ಸ್ಫೋಟಕಃ, ಗಂಡಃ-ಈ ೩ ಪು(ಹು) [ಪುಗು] ಟು" (ಕಪಿಸು. ೯೯-೯೩೦); ಜ್ವರದಾಹ ಶ್ವಾಸಕಾಸ ಬ್ರಣ ಪಿಟಕ ಶಿರೋರೋಗ ಸರ್ವಾಂಗಶೂಲಾದಿ ರುಜಾಸಂದೋಹ ಪಿಂಡಾಭರದಿನೊಳಜುಕುಂ (ಶಕ್ಷ. ೦೦-೨೯). ೩. [ಬೌದ್ಧ]ಬೌದ್ಧಮತದ ಪವಿತ್ರ ಗ್ರಂಥ ; ☞ ಸೂತ್ರಪಿಟಕ, ವಿನಯಪಿಟಕ ಮತ್ತು ಅಭಿಧರ್ಮಪಿಟಕಗಳೆಂಬುವು ಮೂರು ಪ್ರಸಿದ್ಧವಾದ ಪಿಟಕಗಳು : ಬೀಣಾಭುಕ್ತಿಯಲ್ಲಿ ವಿನಿತಪ್ರಭಾ ಎಂಬ ಹೆಸರಾಂತ ಪಂಡಿತನಿದ್ದ. ಮೂರು ಪಿಟಕಗಳನ್ನೂ ಕರಗತ ಮಾಡಿಕೊಂಡಿದ್ದ (ಶ್ರಪಾಕ. I, ೨೦೬) : ಪಿಟಕಗಳಿಗೂ ಅಟ್ಟಕಥೆಗಳಿಗೂ ನಡುವೆ ಸೃಷ್ಟಿಯಾದ ಈ ಸಾಹಿತ್ಯದಲ್ಲಿ ಕೆಲವೇ ಗ್ರಂಥಗಳು ಉಳಿದಿವೆ (ಬುಕ್ಕತ. ಪಿಂಡ. ೩ ಪ್ರಕೀ೯) ; ಪ್ರಾಚೀನಕಾಲದ ಬೌದ್ಧವನ್ನು ತಿಳಿಯಲು ನಮಗೆ ಪಿಟಕಗಳೆ ಆಧಾರ (ತೀಜಳ. ೦೦೦). 'ತ್ರಿಪಿಟಕ' ಪರಾ. [ ಸಂ. ]

**ಪಿಟಕ$_2$** (ನಾ). ಒಂದು ಬಗೆಯ ಹಕ್ಕಿ ; ಗೀಜಗ : (೯). [?]

**ಪಿಟಕಾರ್ಬುದ** (ನಾ). ಒಂದು ಬಗೆಯ ವ್ರಣದಿಂದ ಕೂಡಿದ, ಗಂಟಲಿನ ಕ್ಯಾನ್ಸರ್ ರೋಗ : ಕಟವಾಯು ನಡುವಿನ ಪ್ರದೇಶದಲ್ಲಿ ಬಾವು ತೋಚಿ . . . ಅನ್ನ ಪಾನಗಳ ಹೋಗಲೀಸದೇ ಕೊರಳ ಬಂಧಿಸಿಕೊಂಡು ಇಹುದು. ಈ ಪ್ರಕಾರದಲ್ಲಿದ್ದರೆ ಪಿಟಕಾರ್ಬುದ ಎನಿಸಿಕೊಂಬುದು (ಶ್ರದ್ಧಾ. II, ೦೦೩). [ ಸಂ. ]

**ಪಿಟಗುಟ್ಟು** (ಕ್ರಿ). ಪಿಟಪಿಟ ಎಂದು ಶಬ್ದ ಮಾಡು ; ಗುಣುಗುಟ್ಟು : ದೈಸಿ . . . ಪಿಟಗುಟ್ಟುತ್ತಿದ್ದಳು (ಹಸುಹೂ. ೯೩). [ ಪಿಟ್ಟು + ಕುಟ್ಟು$_1$ ]

**ಪಿಟಾರಿ, ಪಿಠಾರಿ, ಪೆಟಾರಿ, ಪೆಟಾರಿಗೆ, ಪೆಟ್ಟಾರಿ, ಪೆಠಾರಿ** (ನಾ). ೧. (ವಸ್ತುಗಳನ್ನು ತುಂಬಿಡಲು ಮಾಡಿದ ಲೋಹದ ಅಥವಾ ಮರದ) ಪೆಟ್ಟಿಗೆ,-ಸಂದೂಕ : ತನ್ನ ಬಳಿ ಅದನ್ನೆಲ್ಲ ಭದ್ರವಾಗಿ ಇಡಲು ಪಿಟಾರಿ ಇಲ್ಲ ಎಂಬ ನೆವ ಹೇಳಿ . . . ಅವಳ ಕೈಗೇ ಕೊಟ್ಟಿದ್ದಳು (ಪುರಿಕು. ೨೦೯) ; ಪಡಸಾಲೆಯಲ್ಲಿ ಪಿಟಾರಿಯ ಬಾಗಿಲು ತೆಗೆದುಕೊಂಡು ಅದರ ಮುಂದೆ ಕುಳಿತಿದ್ದಳು (ಶಧ್ಯಸ. ೦೬೭) : 'ಉಲನ್'ಕೋಟುಗಳು ಆಗ ತಾನೆ ಪಿಟಾರಿಯಿಂದ ಹೊರಬಿದ್ದು ಕೋರುಹುಡುಗರನ್ನು ಅಲಂಕರಿಸಿದ್ದುವು (ಸುಪಸಂ. ೪೩) ; ಮೂರು ವರ್ಷ ಸಂದರೂ ಅವರ ಪಿಟಾರಿಯಲ್ಲಿ ಇನ್ನೂ ಹತ್ತು ರೂಪಾಯಿನ ನೋಟೇ ಬರುವುದಕ್ಕೆ ನಿರಾಕರಿಸಿತ್ತು (ರೇಖಹುಂ. ೬೦). **ಪಿಠಾರಿ** : ೧. ಪಿಠಾರಿಯನ್ನು ತೆಗೆದು ಹುಡುಕಿ ಒಂದು ಜತೆ ಚಿನ್ನದ ಬುಗುಡಿಗಳನ್ನೂ ಸ್ವಲ್ಪ ಹುಡಿಚಿನ್ನವನ್ನೂ ತಂದು ಅವನ ಕೈಗೆ ಕೊಟ್ಟು (ಕಂಗಾಳ್. ೦೩೦). **ಪೆಟಾರಿ** : ೧. ಹಜಾರದ 'ಪೆಟಾರಿ'ಯ ಮೇಲೆ ರಗ್ಗು ಹಾಸಿ ಮಲಗಿ ಬಿಟ್ಟನು (ಶಾಂಪ್ರಕು. ೦೫೯) ; ಮನೆತನದ ವ್ಯವಹಾರಕ್ಕೆ ಸಂಬಂಧಿಸಿದ ಕಾಗದಪತ್ರಗಳನ್ನು ಕ್ರಮವಾಗಿ ಜೋಡಿಸಿ ಮರದ ಪೆಟಾರಿಯಲ್ಲಿಟ್ಟು (ವಂಜ್ಯ. ೦೦೯). **ಪೆಟಾರಿಗೆ** : ೨. ಬಿದಿರಿನಿಂದ ಮಾಡಿದ ಪೆಟ್ಟಿಗೆ,-ಬುಟ್ಟಿ : ಶಿವಾಜಿಯು ಹಣ್ಣುಗಳ ಪೆಟಾರಿಗೆಯೊಳಗೆ ಕೂತು ಯುಕ್ತಿಯಿಂದ ಪಾರಾಗಿ ಬಂದನು (೯ಕಾಗ. ೩೩೩). **ಪೆಟ್ಟಾರಿ** : ೧. 'ಪೆಟ್ಟಾರಿ'ಯಿಂದ . . . ಪೆಟ್ಟಿಯ ವಸ್ತ್ರವನ್ನೂ ಶಾಲನ್ನೂ ತಂದು ತುಂಬಿದ ಸಭೆಯಲ್ಲಿ ಆ ವಿದ್ವಾಂಸನಿಗೆ ಹೊದಿಸುತಿದ್ದವರು ! (ಗಾತ೯. ೨). **ಪೆಠಾರಿ** : ೧. ಅನರ್ಘ್ಯ ವಸ್ತ್ರಾಭರಣಗಳು ರಾಯರ ಪೆಠಾರಿಗಳನ್ನು ಸೇರಿದವು (೯ಕಂ. ೨೯೦) ; ಅವರು ಯಾವ ಪೆಠಾರಿ ತೆಗೆದು ನೋಡಲಿ ಅದು ಕೆದರಿ ಗೂರಾಡಿರಬಾರದು (೯ಕ್ಕಕು. ೯೯) : ನಸ್ರೋದ್ದೀನನು ಆತುರಗಾರತನದ ಕಂಬಳಿಯನ್ನು ಸುತ್ತಿ ನಿರೀಕ್ಷಣೆಯ ಪೆಠಾರಿಯಲ್ಲಿಸದು ಮುಚ್ಚಿಟ್ಟನು (ಕಗಹೊ. ೦೫೯) ; ಮನುಷ್ಯನ ಪರವಾದ ಅದೇ ಶ್ರದ್ಧೆಯನ್ನು ಸಾಂಪ್ರದಾಯಿಕ ಪೆಠಾರಿಗಳಲ್ಲಿ ಬೀಗ ಹಾಕಿದ್ದೇವೆ (೩೩ಂಡ. I, ೯).
[ ←ಹಿಂ. ಪಿಟಾರೀ, ಪೆಟಾರೀ ; ಮರಾ. ಪೆಠಾರೀ ]

**ಪಿಟಿಕೆ** (ನಾ). (ಮುಖದ ಮೇಲೆ ಏಳುವ) ಗುಳ್ಳೆ; ಮೊಡವೆ : ಹಿರೇಮದ್ದು ಜಟಾಮಾಂಸಿ . . . ಹಾಣಸೇಬೀಜದ ಸಿಪ್ಪೆ ಇವುಗಳ ಸಮಭಾಗ ಚೂರ್ಣ ಮಾಡಿ ಸೇವಿಸಲು . . . ಪಿಟಿಕೆ; ಮೇಹ ಮೊದಲಾದ ರೋಗಗಳು ಗುಣವಾಗಿ ಶುಕ್ರವೃದ್ಧಿಯುಂಟಾಗುವುದು (ಶಕಶ್ಯ. ಶಂ. ೯೮೯); ಮುಖದ ತುಂಬ ಪಿಟಿಕೆಗಳಿದ್ದ ಉರುಟುತಲೆಯ ವ್ಯಕ್ತಿ (ಕಾಯಿ. ೩೨೦); ಮುಖದ ಮೇಲೆ ಹೇರಳವಾಗಿ ಮೂಡಿದ ತಾರುಣ್ಯಪಿಟಿಕೆಗಳು ಅವನ ಸೌಂದರ್ಯದಿಂದ ಹುಡುಗಿತನವನ್ನು ಕಸಿದುಕೊಂಡುವು (ರಜತ. ೦೨೩).
[ < ಸಂ. ಪಿಟಕ ]

**ಪಿಟಿಪಿಟಿ** (ನಾ). ೧. ಒಂದು ಅನುಕರಣ ಶಬ್ದ. ೨. (ಆಲಂ) ದಡ್ಡ; ತಿಳಿಗೇಡಿ : ಇವನು ಶುದ್ಧ ಪಿಟಿಪಿಟಿ (ಜಾ೩).

**ಪಿಟೀಲು** (ನಾ). ಕಮಾನಿನಿಂದ ನುಡಿಸಲಾಗುವ ಒಂದು ಬಗೆಯ ತಂತಿವಾದ್ಯ : ಚುದದಿಂ ಮುಖವೀಣೆ ಮೋರ್ಚಿಂಗ್ ಪಿಟೀಲುಗಳ ಒಂದೆ ನುಡಿ ಒಮ್ಮೇಳದವರೊಡನೆಯೊಲಪಿಂ ನಿಂದು ಕುಣಿಯುತ್ತಿರುವ ವಾರಕಾಂತಾವೃಂದಮಂ ನೋಡು (ಅಜೀಂ. ೨೯-೩೦); ಧನುರ್ವೀಣೆ ಅಥವಾ ಪಿಟೀಲಿನ ಪೂರ್ವಮಾದರಿಯಾದ ರಾವಣಾಸ್ತ್ರವು ಇಂದಿನ ಪಾಶ್ಚಾತ್ಯ ಪಿಟೀಲು ರೂಪಿತವಾದುದರಲ್ಲಿ ಬಹುಪ್ರಭಾವವನ್ನು ಬೀರಿದೆ (ಶಾರದ. ೫೯೩): ಕರೀಮನ ಹತ್ತಿರ ಒಂದು ಪಿಟೀಲು ಇದೆ (ಕಣಿಸಂ. ೩೨).
[←ಇಂ. Fiddle]

**ಪಿಟೀಲುವಾದಕ** (ನಾ). ಪಿಟೀಲನ್ನು ನುಡಿಸುವವನು : ಹಲವಾರು ಬಾರಿ ಇವರ ಕಚೇರಿಗಳಿಗೆ ಸುಪ್ರಸಿದ್ಧ ಪಿಟೀಲುವಾದಕರಾದ ತಿರುಕ್ಕೋಡಿಕಾವಲ್ ಕೃಷ್ಣಅಯ್ಯರ್ ಅವರೂ ಪಿಟೀಲು ನುಡಿಸುತ್ತಿದ್ದರು (ಸಂಗೀತ. ೩೩).
[ ಪಿಟೀಲು+ವಾದಕ ]

**ಪಿಟೀಲುವಾದನ** (ನಾ). ಪಿಟೀಲನ್ನು ನುಡಿಸುವಿಕೆ ; ಪಿಟೀಲು ಕಚೇರಿ : ಕರೀಮನ ಪಿಟೀಲುವಾದನವೆಂದರೆ . . . ಒಂದು ಸಲವಲ್ಲ, ನೂರೆಂಟು ಸಲ ಆ ಪಿಟೀಲುವಾದನ ಕೇಳಬೇಕೆನ್ನುತ್ತಾರೆ (ಕಣಿಸಂ. ೩೨) ; ಪರಮೇಶ್ವರ ಭಾಗವತರು ವೀಣಾವಾದನ, ಪಿಟೀಲುವಾದನ ಮತ್ತು ಸ್ವರಬತ್‌ನ ವಾದನಗಳಲ್ಲಿ ಬಹಳ ಪರಿಶ್ರಮ ಪಡೆದಿದ್ದರು (ಸಂಗೀತ. ೯೩).
[ಪಿಟೀಲು+ವಾದನ]

**ಪಿಟುಗುಟ್ಟು** (ಕ್ರಿ). ಪಿಟಿಪಿಟಿ ಎಂದು ಶಬ್ದ ಮಾಡು ; ಗುಣುಗುಟ್ಟು : ಅಪ್ಪಾಜಿಯು ಇನ್ನೂ ಕಣ್ಣು ಮುಚ್ಚಿಕೊಂಡೆ ಬಾಯಿನಲ್ಲಿ ಪಿಟುಗುಟ್ಟುತ್ತಾ ಪೂಜೆಯಲ್ಲಿ ಮಗ್ನರಾಗಿದ್ದರು (ಕಂಗಾಳ್. ೦೫೯).
[ ಪಿಟ್ಟು+ಕುಟ್ಟು$_1$ ]

**ಪಿಟ್ಟು$_1$** 'ಪಿಟ್ಟು' ನೋ.

**ಪಿಟ್ಟು$_2$** (ನಾ). ಒಬ್ಬಾತನ ಹೆಸರು : ಚಿತ್ರಭಾನುಸಂವತ್ಸರದಾಧಿಕಾಷಾಢ ಬಹುಳದಶವಿಾದಿನದೊಳ್ ಗುರುಚರಣಮೂಳದೊಳ್ ಸುಭಪರಿಣಾಮದೆ ಪಿಟ್ಟನಿನ್ದ್ರಲೋಕಕ್ಕೊಗದವ್ (ಎ೯. II, ೦೬೯-೬೨; ಜು. ೨೮೭). [ ? ]

**ಪಿಟ್ಟುಗ** (ನಾ). ಒಬ್ಬಾತನ ಹೆಸರು : ಪಿಟ್ಟುಗಂ ಕಲಿ ನೆಗರ್ದಂ (ಜುಂಆ. X, ೨೦೩-೦೨; ೨೮೩). 'ಪಿಟ್ಟುಗ' ಪರಾ. [ಪಿಟ್ಟು$_2$+ -ಗ$_2$]

**ಓಟ್ಟಗೆಱೆ³** (ನಾ). ಒಂದು ಊರಿನ ಹೆಸರು : ಓಟ್ಟಗೆಱೆ³ ಪನ್ನೆರಡು ಗಾಮುಣ್ಡ ಪ್ರಜೆರ್ಸಕ್ಷಿ (ಎಕ. XI, ಹಿಕ್ರದು. ೨೪–೦; ಸು. 500 ?).
[ಓಟ್ಟು₁? + ಕೆಱೆ³]

**ಓಟ್ಟಬೆ** (ನಾ). ಒಬ್ಬಾಕೆಯ ಹೆಸರು : ಅಪ್ಪಣಗಾವುಣ್ಡನುಂ ಪೆಣ್ಡತಿ ಓಟ್ಟಬೆಗಾವುಣ್ಡಿಯುಂ ಲಿಂಗಪ್ರತಿಷ್ಟೆಯುಂ ದೇಗುಲಮಂ ಮಾಡಿಸಿ ಸಾಸನಮಂ ನಿಱಿಸಿದಂ (ಎಕ. VIII, ಸೊರಬ. ೯೬೦–೦೦; 1012).
[ಓಟ್ಟು₂ + ಅಬೆ (<ಅಬ್ಬೆ₁)]

**ಓಟ್ಟಯ್ಯ** (ನಾ). ಒಬ್ಬಾತನ ಹೆಸರು : ಊರೊಡೆಯ ಓಟ್ಟಯ್ಯಂ ಕಾಲ್ಗೞ್ಚಿ . . . ಪನ್ನಿಮ್ಮತ್ತರ್ಕೆಯ್ಯಂ ಕೊಟ್ಟರ್ (ಇಇ. XII, ೨೫೬–೦೦ ; 951). [ಓಟ್ಟು₂ + ಅಯ್ಯ₁]

**ಓಟ್ಟಿ** 'ಓಟ್ಟು' ನೋ.

**ಓಟ್ಟಿವ** (ನಾ). ಒಂದು ಬಗೆಯ ಬಣ್ಣ : ಅರ್ಜುನನ ಮಾವ ಚಿತ್ರರಥನು ಕೊಟ್ಟ ಓಟ್ಟಿವ ಬಣ್ಣದ ಕುದುರೆಗಳನು ಹತ್ತುಸಾವಿರವನು . . . ಧರ್ಮಸೋತನು (ಕೃಮಾ. I, ೧೦೧). [ ? ]

**ಓಟ್ಟು, ಓಟ್ಟು₁, ಓಟ್ಟಿ, ಓಟ್ಟಿ₂, ಹಿಟು, ಹಿಟ್ಟು** (ನಾ). ೧. (ಧಾನ್ಯದ) ನಯವಾದ ಪುಡಿ ; ಪಿಷ್ಟ : "ಓಟ್ಟದು ಪಿಷ್ಟಂ ಚೂರ್ಣಿತಂ" (ಚನ್ನಕೋ. ೯೫–೨೦) : ದಿವ್ಯೌಷಧಿಗಳಿಂದಂ ಮಾಡಿದುಂಡೆಗಳಂ ಓಟ್ಟನೊಳ್[ಶಾಶಾಂ. ಪದಿನಾಱು] ಸಾಸಿರ್ವರರಸಿಯರ್ಕಳ ಮನೆಗಳೊಳ್ ಪ್ರಯೋಗಿಸಿ (ಪಶಾ. ೫೬೦–೨೪) : ಕರಿಹಸ್ತಚರ್ಮಮಂ ಮೇಣ್ ಕರಿದಂತವನರೆದು ಬಟ್ಟಗಡಲೆಯ ಓಟ್ಟಂ ಬೆರಸಿಕ್ಕುಗೆ (ಕೋಕೋಶ. ೬–೫೨) ; ಓಟ್ಟನ ಕೋಟೆಯಾದೊಡಮಿಂದೊಂದನಿಕ್ಕಮೇಟ್ಟುದು (ಧುಕೋಶ. ೩–೨೦). ೨. ಜೀವಿಕೆ ; ವೃತ್ತಿ : ಸ್ಥಾನಂ ಮಾನ್ಯಂ ಓಟ್ಟುಂ ಭೂನುತರಪ್ಪಱುವತೊಕ್ಕಲುಂ ಬಂಮರಸು . . . ಮೂಲಿಗರುಂ ಪ್ರಭುಗಳೆಂಟು ಹಿಟ್ಟುಂ ಮಾನ್ಯಂ (ಕೊಪ್ಪಶಾ. ೦೬–೩೯ : 1196). ೩. ಆಯಾ ವೃತ್ತಿಗೆ ಸಂಬಂಧಿಸಿದ ಮುಖ್ಯಸ್ಥ : ನಾಗರಸಂ ಪಗುಡಿಯತಳವು[ಂ]ತಾಯಂಗಳು ಅಱುವತೊಕ್ಕಲು ಎಂಟುಓಟ್ಟು ಕಾರಣಂಗಳು ಮುಖ್ಯವಾಗಿಯುಪರನುಪತದ . . . ಮಾಡಿಸಿದ ಬಸದಿ (ಕಇ. V, ೩೩–೨೨; 1176). **ಓಟ್ಟು₁** : ೪. (ಕಲಸಿದ) ಹಿಟ್ಟಿನ ಉಂಡೆ ; ಪಿಡಿಚೆ : ದೀಪಂಗಳಂ ವಿರಚಿಸಿಯನಂತಫಲಮಧಿಕಮಿವು ಪೂರ್ಣಾರತಿಯನೆಂದು ಓಟ್ಟಿ[ಶಾಶಾಂ. ಷ್ಟ]ದಿಂದಂ ಸರಳ ನೀರಾಜನಂಗೆಯ್ದು ಪಾತ್ರಿಯೊಳಿರಿಸಿ (ಅರಾಶ. ೦–೦೦–೦೧). **ಓಟ್ಟಿ** : ೪. ಆ ಕಲ್ಕಕೆಂಡದ ಅಂಗರೋಳಗೆಯ . . . ಕೆಂಡದ ಮೇಲೆಯಿಟ್ಟು ಓಟ್ಟಿ ಸೀವ ಹಾಗೆ ಸುಡುವುದು (ಶಿವತಸೂ. ೦೬) ; ಸಕ್ಕರೆಯಸಿಕ್ಕಿ ಉಂಡೆಯ ಮಾಡಿ, ಕಣಕದ ಓಟ್ಟಿಯಲಿ ಮುಚ್ಚುವುದು (ಶಿವತಸೂ. ೨೬). **ಓಟ್ಟಿ₂** : ೪. ಓಟ್ಟಿಯಂ ತೆಗೆದು ತಱಿವಳಲು ರವೆಯುದ ವಸ್ತ್ರ ಬಟ್ಟಮುತ್ತಿನ ಹರಳು ನುಚ್ಚುಕ್ಕಿಯಿಂದದಿಂ ಕಟ್ಟಾಣಿಯುಪ್ಪ ತರುಣಿಯರು ಸೊಜ್ಜಿಗೆದೆಗೆದು ಕಜ್ಜಾಯವುಮಂ ಮಾಳ್ಪುದು (ಸೂಶಾ. ೦–೯) : ಹಪ್ಪಳವ ಸವನಾಗಿ ಪೊತ್ತಿಯಿಮ್ಮಯ್ಗೆ ಬೆಣ್ಣೆಯ ತೊಡೆದು ನಾಲ್ಕೈದನಡು ಕಲಿಕ್ಕಿ ಅವಱಿರಡು ಮೆಯ್ಗೆ ಓಟ್ಟಿಯ ಬಟ್ಟಲಂ ಕವಿಸಿ ಹವಣಱಿದು ಹಂಚಿನೊಳು ಸುಟ್ಟು ಓಟ್ಟಿಯನು ತೆಗೆದು (ಸೂಶಾ. ೧–೦೨) ; ಮೂಲವ್ಯಾಧಿಗೆ . . . ಅರಿಸಿನಮಂ ಚೂರ್ಣಮಂ ಮಾಡಿ ಕಳ್ಳಿಹಾಲಲ್ಲಿ ಕಲಸಿ ಓಟ್ಟಿಯಂ ಮಾಡಿ ಮೊಳೆಗೆ ಉಣ್ಣೆಯುಂ ತೊಡೆದು ಆ ಓಟ್ಟಿಯಂ ತೊಡೆಯಲು ಎಲ್ಲಾ ಮೊಳೆಗಳುಂ ಕೆಡುಗುಂ (ಖಗೇಂ. ೦೬೬) ; ನೇರಿಲ ಚಕ್ಕೆ, ಬಾಳೆಯ ಹೂವನು ಸಹ ತುಪ್ಪ ಬಟ್ಟು ಕಟ್ಟಿ ಮುದ್ದೆಯ ಮಾಡಿ ಓಟ್ಟಿಯ ಕಟ್ಟಿ ಬೇಯಿಸಿ ಜೇನುತುಪ್ಪಮಂ ಕಲಸಿ ಸೇವಿಸೆ ಅತಿಸಾರಂ ಕೆಡುಗುಂ (ಕಕೆವೈ. ೩೨೩). **ಹಿಟು** : ೩. [ಮೂ]ಲಸ್ಥಾನ ದೇ[ವ]ಗ್ಗೆಯಂಗಭೋಗ ನಿವ ದ್ಯಕ್ಕಂ ಎ[ಂ]ಟುಹಿಟು (ಕಇ. XV. ೩೦–೨೪; 1145) ; ಹುನೆರಡು ಹಿಟು ಸಹಿತ (ಕೊಳಶಾ. ೦೯೩೩, ಶಾಸೇಂ. ೦೯೫–೩೬; ?) ; ಗೋವಗಉಡ ಹುನೆರಡು ಹಿಟು ಮುಂದಿಟ್ಟು ಕೊಟ್ಟರು (ಎಕ. VII, ಶಿಕಾ ೯೪–೯; ?). **ಹಿಟ್ಟು** : ೧. ಪಿಷ್ಟ–ಹಿಟ್ಟು (ಕಸಾಪ ೨೩೯ ಕೃಜವಾ) ; ಬೇಳೆ ಗಕ್ಕಿಯ ಸಣ್ಣ ಹಿಟ್ಟ ಸೋದಿಸಿ ಹುರಿದು ಕೊಳುತ (ಸೂಶಾ. ೦–೨೪) ; ಹಡಗೆ ಹೇಱಿನಲಕ್ಕಿ ಹುಡಿ ಹಿಟ್ಟುಗಳ ತುಂಬಿ ಕೊಡಗು ಮಾಱಿಸ ಸಾರಿದರು (ಕಂಪಿ. ೦೦–೯೩) ; ಹಿಟ್ಟುಗಳನ್ನು ಮಿಶ್ರ ಮಾಡುವುದು. ತರಕಾರಿಗಳನ್ನು ತುಂಡು ಮಾಡುವುದು. . . ಈ ಕೇಂದ್ರದಲ್ಲಿಯೇ (ಅತಸ. ೧೪). ೨. ಎಂಟುಹಿಟ್ಟು ಪಂಚಮಠ ಉಂಟು ಧರೆಯ ಮೇಲೆ (ಅವತ. ೯೯–೩೯೪) ; ಶ್ರೀಸೋಮನಾಥ ದೇವರ ನನ್ದಾದೀವಿಗೆಗೆ ಮಾರೋಜ ತನ್ನ ಅಕ್ಕಸಾಲಿಕೆಯ ಹಿಟ್ಟಿನ ಭೂಮಿಯ ಒಳಗೆ ಕಾನೂರ ದಾರಿಯ ಮೂಡಣ ಕೆಯ್ಯ ದಕ್ಷಿಣವಾಗಿ ಬಿಟ್ಟ (ಎಕ. VI, ಕಡೂರು ೦೦೩–೦೨೩; ?). ೩. ಸೇನಗೌಡನಮಗ ಚಿಕ್ಕಗೌಡನು ತಮ್ಮ ಮಾವ ನೇಮಗೌಡನುಂ ಅಱುವತೊಕ್ಕಲು ಹನ್ನೆರಡು ಹಿಟ್ಟು ಸಹಿತಂ ಪೂಜಾರಿ ನಾಗಯ್ಯನ ಕರೆದು . . . ಕೊಟ್ಟರು (ಕಇ. IX-II, ೬೩–೪; ಸು. 1093) ; ಮಸಣಗಾವುಂಡ ಈಚಗಾವುಂಡ ಮುಖ್ಯವಾದ ಹಂನೆರಡು ಹಿಟ್ಟು ಸಹಿತ ಬಿಟ್ಟ ಧರ್ಮ್ಮ (ಎಇ. XIX, ೦೯೫–೩೩ ; 1210). ೫. ಆಹಾರ : ಉಣಿಸು : ಊಟ : ನರಸಿಂಹಾದಿಗಳೆಲ್ಲ ಸಭೆಯ ಹೊತ್ತು ಬಾದ್ಯೆದಾರೆ ಹಿಟ್ಟು ನಷ್ಟ ಮಠ ಹಾಳು ಊರಿಗುಪಟಳ (ಅಥಶಂ. ೪೯–೩೯೮) ; ಹೊಟ್ಟೆಗೆ ಹಿಟ್ಟು ಸಿಕ್ಕದ ಇಂಥಾ ದಿನಗಳಲ್ಲಿ ಪರ್ವಕ್ಕೊಂದು ಬಾಣಂತನವು ಬೇರೆ ! (ಕೃಪಕ. ೫) ; ಹೊಟ್ಟೆಗೆ ಹಿಟ್ಟಿಲ್ಲ ಜುಟ್ಟಿಗೆ ಮಲ್ಲಿಗೆ ಹೂವು (ಗಾದೆ). ೬. (ರಾಗಿ, ಜೋಳ ಇತ್ಯಾದಿ ಧಾನ್ಯಗಳ) ಹಿಟ್ಟಿನಿಂದ ಮಾಡುವ ಒಂದು ಬಗೆಯ ಆಹಾರ ; ಮುದ್ದೆ : ಬಾಣಲಿ . . . ಹಿಟ್ಟು ತೊಳಸುವ ಬಾನೆ (ಸಿದ್ಧಂತಿ. ೨೯೩) ; ಆಗ ರೈತನು ಒಹೋ ಸುತೋಷಪಟ್ಟು 'ಹಿಟ್ಟಂ ತಿಂದು ಬಿಟ್ಟಂ ಕಿತ್ತಿಟ್ಟಂ, ಹಿಟ್ಟಂ ಬಿಟ್ಟಂ ಕಿಟ್ಟಂ' ಎಂದು ಹೇಳಿದನು (ಕಂಕಥ. ೦೬೩) ; ಮನೆಗೆ ಬಂದ ಮೇಲೆ ಹಿಟ್ಟುಂಡು ಕೆಲವರು ಯಕ್ಷಗಾನದ ಆಟ ಕಲಿಯುವ ಮನೆಗೆ ಹೋಗುತ್ತಿದ್ದರು (ಹುಬ್ಬಹ. ೬೯). ೭. ಒಂದು ಬಗೆಯ ತೆರಿಗೆ : ಪುರವನು ಕಟ್ಟಿಸಿ ದೇವರ ಹಿಟ್ಟು ಹುಗ್ಗಿ ತೆಱಿಗೆನು ಬಿಟ್ಟು (ಎಕ. VI, ಹಕ್ಕಿ. ೪೮–೦೪; 1649) ; ಬಿರಾಡ ಹಿಟ್ಟು ಹುಗ್ಗಿ ಬೀಜವರಿ ಇವೆಲ್ಲವನು . . .ಸರ್ವ್ವಮಾನ್ಯವಾಗಿ ಶಾಸನವನು ಪ್ರತಿಷ್ಠೆಯನು ಮಾಡಿವರು (ಎಕ. V. ಹಾಸನ. ೨–೨೯; 1663).

ಓಟ್ಟುಂಓಟ್ಟು, ಓಟ್ಟುಓಟ್ಟು, ಹಿಟ್ಟುಹಿಟ್ಟು (ದ್ವಿರುಕ್ತಿ) : ಕಟ್ಟೋಡಿ ಪಾಡಿಯೆಲ್ಲಂ ಓಟ್ಟುಂಓಟ್ಟಾಗಿ ಪೋದೊಡಂ . . . ಪೆಱದೆಗೆಯದೀಸನೊರ್ವನೆ ನಿಂದು (ಕಾವ್ಯಶಾ. ೨೯೫) ; ಪೊಯ್ಯನೆ ಬಿಟ್ಟಂ ಓಟ್ಟು ಓಟ್ಟಾಗಿರೆ ಸಮರದೊಳೇ ವೀರಪೆಮ್ಮಾಡಿದೇವಂ (ಎಕ. VII, ಶಿವಮೊ. ೪–೯೪ : 1122) ; ಬೆಟ್ಟೆಲ್ಲಿಯುಂ ಕುಟ್ಟಿದ ತೆಱಗೆ ಕರಂ ಓಟ್ಟುಓಟ್ಟಾಗಿ ಪಾಱಿಟ್ಟುದು . . . ಪಟುತರಾನೂನಸೇನಾಪ್ರತಾನಂ (ಶಾಂತೀಶ. ೧೨–೧೧) ; ಅವಳು ಹಾಕುವ ಒಂದು ಒನಕೆಯ ಏಟಿಗೇ ಕಾಳುಗಳು ಹಿಟ್ಟುಹಿಟ್ಟಾಗುತ್ತವೆ (ಜಾ). ಓಟ್ಟಾಗು = ೧. ಪುಡಿಯಾಗು. ೨. (ಆಲಂ) ನಾಶವಾಗು : ಓಟ್ಟಾಪ ಪೀಱಾದ ಸಿಂಧುರದಿಂ ತಱಿಗಿದ ಮುಱಿದಿನ್ನರಥದಿಂ ಕಣ್ಗೆ ಮನಕ್ಕಂ ಭಯಂಕರಮಾದಾಜಿಯೊಳ್ (ಶಾಂತಿಪು. ೯–೧೨೪). ಓಟ್ಟುಪೀಱಾಗು = ಹಾಳಾಗು ; ನಾಶವಾಗು : ಪಂಡಿತೆ ಬಟ್ಟಯ್ಯ ಪುಗುವುದುಂ ದಾರಪಟ್ಟಗಂ ದಟ್ಟಿಸಿ ಕೊರಳಂ ಪಿಡಿದು ನೂಂಕೆ ಪಂಡಿತೆ ಬಿದರ್ದ ಪೆಗಲ ಪೇಗಣ ರೂಪು ಓಟ್ಟುಪೀಱಾಗೆ (ಶುಕಾಸ್ತ್ರೀ. ೫–೨೯ ವ). ಓಟ್ಟಿ ಹಿಟ್ಟು = ಓಟ್ಟಿನಿಂದ ಕಲಸಿದ ಮುದ್ದೆ : ಅಂದಿನಿಂದ ಬೇಗತ ಹಾಡುಗಳ ಹೊಡೆದಾಟ, ಓಟ್ಟಿಹಿಟ್ಟಿನ ಪೆಟ್ಟಾಟ, ಹಪ್ಪಳದ ಹುಡಿಯಾಟಗಳೆಲ್ಲಾ ನಿಂತೇ ಹೋದವು (ಸಂಧ್ಯಾರಾ. ೬೪). ಓಟ್ಟಿನ ಹಾದಿ = ಜೀವನೋಪಾಯ : ಓಟ್ಟಿನ ಹಾದಿಯ ಹುಡುಕಿದ ಪೇಳೆಯೆ ಹೆಣ್ಣಿನ

ಬರಪನು ನೋಡು (ಖಂಡಾಕ. ೨೦೪-೨೬). **ಹಿಟ್ಟಿನಾರತಿ** = (ಅಕ್ಕಿಯ) ಹಿಟ್ಟಿನಿಂದ ಮಾಡಿದ ಸೊಡಲುಗಳ ಆರತಿ : ರಂಗವಾಲೆ ಹಿಟ್ಟಿನಾರತಿಗೆ ಪೋಲಗ ಸಾಲ್ಯಕ್ಕಂ ಗದ್ಯಾಣಂ ಹದಿನಾಱು (ಎಕ. III, ತಿರುಮ. ೯೬-೯೯ : 1276). **ಪಿಟ್ಟುಬಿಟ್ಟು** = ಊಟವನ್ನು ಹಾಕಿ ಅದರ ಬದಲಾಗಿ ಮಾಡಿಸಿಕೊಳ್ಳುವ ಕೆಲಸ: (ಕಿ). **ಹಿಟ್ಟು ಹಿಡಿಬೂದಿಯಾಗು** = ಹಾಳಾಗು : ಇದರಿಂದ ಭಾರತೀಯಸಂಸ್ಕೃತಿಗೆ ಬಲವಾದ ಪೆಟ್ಟು ಬಿದ್ದಿತಲ್ಲದೆ ಹೆಣ್ಣಿನ ಜೀವನವು ಹಿಟ್ಟು ಹಿಡಿ ಬೂದಿಯಾಯಿತು (ಅಲ್ಪ. ೨೪). **ಹಿಟ್ಟೆತ್ತು** = ೧. ಭಿಕ್ಷೆ ಎತ್ತು ; ತಿರುಪೆ ಬೇಡು. ೨. ಕಂಡವರ ಮನೆಯಲ್ಲಿ ಬಿಟ್ಟಿ ಊಟ ಮಾಡಿಕೊಂಡು ಇರು : ಅವರಿವರ ಮನೆ ಹಿಟ್ಟೆತ್ತಿಕೊಂಡು ಹಂಗಿನ ಕೂಳು ತಿಂದುಕೊಂಡು ವಿದ್ಯಾಭ್ಯಾಸ ಮಾಡದಿದ್ದರೂ ಆಗ್ತದೆ (ಕಂಗಾಳ. ೬).

[< ಸಂ. ಪಿಷ್ಟ./ಪ್ರಾ. ಪಿಟ್ಠ]

**ಪಿಟ್ಟುಕಾರ, ಹಿಟುಕಾಱ, ಹಿಟ್ಟುಕಾರ, ಹಿಟ್ಟುಕಾಱ** (ನಾ). (ಎಂಟು ಅಥವಾ ಹನ್ನೆರಡು ಬಗೆಯ ಕಸಬುಗಳ) ಕಸಬುದಾರರ ಗುಂಪಿನ ಸದಸ್ಯ : ಅಂದಣಿಗೆಯ ಕಲ್ಲಗೌಂಡನುಂ ನಿಡುಗುಂದಿಯ ಸಮಸ್ತಪ್ರಜೆ ಪಿ(ಹಿ?)ಟ್ಟುಕಾರರುಂ ಅನೆವಾಳ ಪ್ರಜೆ ಪಿ(ಹಿ?)ಟ್ಟುಕಾರರುಂ ಇನ್ನಿವರ ಸಮಕ್ಷದಲ್ಲಿ . . . ಬೊಮ್ಮಗೌಂಡನು ಪಡೆದನು (ಕಕಂ೦. ೪೩೩-೦೬ ; ಸು. 1050). **ಹಿಟುಕಾಱ:** ಶ್ರೀಮನ್ಮಹಾಪ್ರಭು ಬಾಳೂರ ಕೇಸಪಗೌಡನು ಸಮಸ್ತ ಪ್ರಜೆಗಳು ಹನ್ನೆರಡು ಹಿಟುಕಾಱರ ಸಮಕ್ಷದಲಿ . . . ಕಾದಿ ಸುರಲೋಕ ಪ್ರಾಪ್ತನಾದ (ಕಇ. V. ೬೩-೪ ; 1269). **ಹಿಟ್ಟುಕಾರ :** ಹಾಗ ಎಂಟು ಹಿಟ್ಟುಕಾರ ನಾಡೊಕ್ಕಲಿಂಗೆ (ಇಎ. ೦೯೪೬, ಬ್ಯಾಡ್‌ಹಾವೆಗಲ್. ೩೯೯-೪೬ ; 1086). **ಹಿಟ್ಟುಕಾಱ :** ಬಡಗಿತಸಕ್ಕಾರು ನಿಂನ್ನವರು ಹಿಟ್ಟುಕಾಱ ಬಡಗಿ ಕಲ್ಲೋಜ ಬಿಟ್ಟ ಧರ್ಮಮಂ ... ಪ್ರತಿಪಾಲಿಸುವನು (ಸೌಇ. XV, ೬೯-೮; 1186) ; ಸೋದರ ಸೋಮಗೌಡ ಹಿಟ್ಟುಕಾಱರಿಗೆ ಅಱುವಣ ಮತ್ತರಿಂಗೆ ಹಂನೆರಡು ಹೊಂನ ಮರಿಯಾದೆ ಕೋಲು ಕೊಳಗ ದೇವರಿಗೆ . . . (ಮಾನ್ಯ)ವಾಗಿ ಕೊಟ್ಟರು (ಎಇ. XXIII. ೦೯೩-೬೨ ; 1265) ; ಸಮಸ್ತ ಪ್ರಜೆ ಹಿಟ್ಟುಕಾಱರುಂ (ಇಎ. ೦೯೪೬, ಹಾವಗಲ್. ೨೨೬-೦೯ ; ?).

[ಪಿಟ್ಟು + - ಕಾರ₁ (< — ಕಾಱ)]

**ಪಿಟ್ಟುಗ** (ನಾ). ಒಬ್ಬಾತನ ಹೆಸರು : ನಿಜ್ಜಿತವೈರಿಪ್ರಜನೆನಿಸಿ ಪಿಟ್ಟುಗಂ ಸಲೆ ನೆಗಳ್ದಂ (ಸೌಇ. XX. ೦೪-೦೨; 980) ; ನೆಗಳ್ದ ಪಿಟ್ಟುಗಂ ಬೀಡಿನ ಸಾಚೀರನೊ ಪ್ರಚಣ್ಡಭುಜದಣ್ಡಂ ಮಾವನ ಗನ್ಧಹಸ್ತಿ ಕವಿಜನವಿನುತಂ ಮೊನೆ ಮುಟ್ಟೆ ಗಣ್ಡನಾಹವಸೌಣ್ಡ (ಎಕ. II. ೦೩೪-೬೬ ; ಸು. 982). 'ಪಿಟ್ಟಿಗ' ಪರಾ. [ಪಿಟ್ಟು ? + - ಗ₂]

**ಪಿಟ್ಟುಗುಟ್ಟು, ಹಿಟ್ಟುಂಗುಟ್ಟು, ಹಿಟ್ಟುಗುಟ್ಟು** (ಕ್ರಿ). ೧. ಪುಡಿಯಾಗುವಂತೆ ಕುಟ್ಟು ; ಹಿಟ್ಟಾಗಿ ಮಾಡು : ನಂದಶ್ರೀಯುಮಂ ಕೊಂಡು ಪಿಟ್ಟುಗುಟ್ಟಿ[ಪಾಠಾಂ. ಪಿಟ್ಟಂ ಕುಟ್ಟಿ]ಅವುಗಳನಟ್ಟು (ವಡ್ಡಾಸ್ರ. ೩-೦೮ ವ). **ಹಿಟ್ಟುಂಗುಟ್ಟು :** ೧. ಹಿಟ್ಟುಂಗುಟ್ಟುತ್ತೆಳುಂ ಬೆಟ್ಟಗಳಂ ಕಡಲ್ಗಳೆಳರೊಳ್ಕಲಸುತ್ತುಂ ಬೊಟ್ಟಿಟ್ಟುಕೊಳ್ವ ಮಗನಂ ನಿಟ್ಟಿಸಿ ಗಿರಿವರತನೂಜೆ ಹಿಗ್ಗಿತಿರ್ಪಳ್ (ಶಿರಂ. ೮-೪೬). **ಹಿಟ್ಟುಗುಟ್ಟು :** ೧. ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಹಿಟ್ಟುಗುಟ್ಟಿ ಬೊಟ್ಟಿಡುವುದು (ಅವಂಶಿ. ೮-೩೬); ಅಹಿತಬಲದೊಳಗಾನೆವರಿವರಿದು ಹಿಟ್ಟುಗುಟ್ಟುತ . . . ಕಳನ ಚೌಕದಲಟ್ಟಿಯಾಡಿಸಬಲ್ಲವನೆ ರಾವುತನು (ಕುವ್ಯಾಸ. ೦-೬೬) ; ವಜ್ರದ ಕದವಾ ಹಿಟ್ಟುಗುಟ್ಟುವೆನೆಂಬ ನುಡಿ ಬೆವಱಿಸಿತ್ತು (ಕರಶ. ೨೪-೬೩). ೨. (ಅಲಂ). ನಾಶಮಾಡು ; ಧ್ವಂಸಮಾಡು : ಅಷ್ಟಮದಂಗಳ ಹಿಟ್ಟುಗುಟ್ಟಿ ವಸ್ತುವ ಕಾಣಬೇಕೆಂಬುದು (ಷೋಶಮಾ. ೦೦೦-೪೩೯).

[ಪಿಟ್ಟು + ಕುಟ್ಟು₁]

**ಪಿಟ್ಟುಗೆಯ್** (ಕ್ರಿ). ಪುಡಿ ಮಾಡು ; ಹಿಟ್ಟು ಮಾಡು : ಸಿಡಿಲೆಂದೀ ಹಸ್ತದಿಂ ನೀನಡಸಿ ಪೊಡೆದು ಕಲ್ಕಂಬಮಂ ಪಿಟ್ಟುಗೆಯ್ದಾ ಕಡುಬಲ್ಪೇನೆತ್ತ ಪೋಯ್ತೋ (ಶಾಂತೀಶ. ೬-೩೩). [ಪಿಟ್ಟು + ಕೆಯ್₁]

**ಪಿಟ್ಟುಪಿಡುಗು** (ನಾ). ಹೆಚ್ಚಿನ ಕೇಡು ; ದೊಡ್ಡ ತೊಂದರೆ. **ಪಿಟ್ಟು ಪಿಡುಗನೆ ಸಾಯು** = (ಸಿಡಿಲಿಗೆ ಸಿಕ್ಕ ಹಾಗೆ) ಇದ್ದಕ್ಕಿದ್ದಂತೆ ಸಾಯು ; ಅನಿರೀಕ್ಷಿತವಾಗಿ ಮರಣ ಹೊಂದು : (ಕಿ). **ಪಿಟ್ಟು ಪಿಡುಗಾಗಿ ಸಾಯು**=ಪಿಟ್ಟು ಪಿಡುಗನೆ ಸಾಯು : (ಕಿ).

[ ← ತೆಲು. ಪಿಟ್ಟಪಿಡುಗು ]

**ಪಿಟ್ಟೆ₁** 'ಪೆಂಟೆ₁' ನೋ.

**ಪಿಟ್ಟೆ₂** 'ಪಿಟ್ಟು' ನೋ.

**ಪಿಟ್ಟೆನ್, ಪಿಟ್ಟೆನ್ನು** (ಕ್ರಿ). ಏನನ್ನಾದರೂ ಹೇಳು ; ಸ್ವಲ್ಪವಾದರೂ ಮಾತನಾಡು : ನೃಪಸಭಾಮಧ್ಯದೊಳ್ ಪೆರ್ಚಿ ವಾಗ್ಗುಂಫದೊಳಾಗಳ್ ಬೆಟ್ಟಿನಲ್ಪಿಟ್ಟೆನಲೆಡೆಗುಡದಾಶ್ಚರ್ಯಮಂ ತಾಳ್ದಿ ನಿಂದು (ಸುಕುಮಾ. ೨-೦೩) **ಪಿಟ್ಟೆನ್ನು :** ಆದರೂ ಅವಳು ಅವನಿಗೆ ಪಿಟ್ಟೆನ್ನಲಿಲ್ಲ (ಕೇರುಂಶ. ೦೯೩) ; ಗೋವರ್ಧನ ಪಿಟ್ಟೆನ್ನಲಿಲ್ಲ (ಮುಗಿಮು. ೦೦೬); ಅವರು . . . ಪಿಟ್ಟೆನ್ನದೆ ಹೋದರು (ಶುಗಿಯು. ೨೩೩).

**ಪಿಟ್ಟೆನ್ನಗೊಡು** = ಏನಾದರೂ ಹೇಳಲು ಅವಕಾಶ ಕೊಡು ; ಮಾತನಾಡಗೊಡು: ಅವರಿಗೆ ಪಿಟ್ಟೆನ್ನಗೊಡುವುದಿಲ್ಲ ಅವಳು (ಕಕಿ. ೨).

[ಪಿಟ್₀ + ಎನ್₁]

**ಪಿಟ್ಟೆನ್ನು** 'ಪಿಟ್ಟೆನ್' ನೋ.

**ಪಿಟ್ಲೆ₁** (ನಾ). (ಉಕ) (ಹಾಗಲಕಾಯಿಯ) ಮೇಲೋಗರ : ಹಬ್ಬ ಗಟ್ಟಲೆಯ ಅಡಿಗೆಯಲ್ಲಿ ಹಾಗಲಕಾಯಿಯ ಪಿಟ್ಲೆಯೂ ಸೇರಿತ್ತು (ಕೂಕಿ).

[← ಮರಾ. ಪಿಠಲೇ = ಕಾಳಿನ ಮೇಲೋಗರ]

**ಪಿಟ್ಲೆ₂** (ನಾ). (ಕರಾ) ಸಣ್ಣಕಾಯಿ : ಹೀಚು : ಈ ವರ್ಷ ಮರಕ್ಕೆ ತುಂಬ ಕಾಯಿಯಾಗಿತ್ತು. ಆದರೆ ಎಲ್ಲ ಪಿಟ್ಲೆ. ರೂಪಾಯಿಗೆ ಇಪ್ಪತ್ತೈದು ಕೊಟ್ಟರೂ ಖರ್ಚಾಗುವ ಹಾಗಿಲ್ಲ (ಕೂಕಿ). [?]

**ಪಿಠರ** (ನಾ). ೧. ಮಡಕೆ ; ಕುಂಭ : "ಉಖಾ, ಸ್ಥಾಲೀ, ಚರುಃ, ಕುಂಭೀ, ಪಿಠರಂ, ಕುಂಡಂ—ಈ ೬ ಮಡಕೆ" (ಹಲಾಯು. ೩೨-೦೩೯) ; "ಚರು ಕುಂಭ ಕುಂಡಮುಖೆ ಪಿಠರ[ಪಾಠಾಂ. ಠಾರ]ಮಾ ಸ್ಥಾಲಿ ಭಾಂಡಂ ಮಡಕೆಯೆಂದೆನಿಕ್ಕುಂ" (ಮಂಗರಾ. ೬೨-೨೨). ೨. ಕಡೆಗೋಲು; ಮಂತು. ೩. ಒಂದು ಬಗೆಯ ಮೂಲಿಕೆ ; ಕೊನ್ನಾರಿಗಡ್ಡೆ : ಭದ್ರಮುಸ್ತೆಯ ಬೇರು. [ಸಂ.]

**ಪಿಠಾರಿ** 'ಪಿಟಾರಿ' ನೋ.

**ಪಿಡಿ₁, ಹಿಡಿ₁** (ಕ್ರಿ). ೧. (ಕೈಯಲ್ಲಿ) ಹಿಡಿದುಕೊಳ್ಳು ; ಗ್ರಹಿಸು ; ತಳೆ ; ಧರಿಸು : "ಪಿಡಿ–ಗ್ರಹಣೇ, ಕರಿಣ್ಯಾಂಚ (ಹೆಣ್ಣಾನೆ)" (ಶಮುಧಾ) : ಆಜಿಯೊಳುರ್ಚಿ ಕೈದುವಂ ಪಿಡಿವವರೆಲ್ಲಮಣ್ಮುವೊಡಮಾ ಯುಗಮೇಕೆ ಕನಿಷ್ಟಮಪ್ಪುದೋ (ಕಾವ್ಯಸಾ. ೪೨೩ ಕೂಪ್ರ೪) ; ಮರಂಗಳಂ ಪೋಲ್ವಂತೆ ಕರಗಸಂಗಳಿಂದಮುದ್ದಂ ಪಿಡಿದು[ಪಾಠಾಂ. ಬರಿಯೆ]ಪೋಟ್ಟುದುಂ (ಕಡ್ಡಾರಾ. ೯೬-೦) ; ಪಿರಿದು ನಚ್ಚಿನೊಳ್ ಪಿಡಿದು ದಂಡರತ್ನಮನಾಗಳ್ (ಆದಿಪು. ೦೩-೩೪); ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಬು ಗೊಂಬಾತನ ತುಱುಂಬಂ ಪಿಡಿದು ತಡೆಯೆ (ಧರ್ಮಾಮೃ. ೨-೩೬). ೨. ತೆಗೆದುಕೊಳ್ಳು ; ಕೈಕೊಳ್ಳು ; ಸ್ವೀಕರಿಸು : ಭೈಕ್ಷಮ ಪಿಡಿಯೆಂದು ನೀಡಿದ ಕೈಯನಿತನೆ ಕಂಡು (ಕಡ್ಡಾರಾ. ೯೯-೮); ಪುರೋಹಿತಂ ವಿವಿಧಾಗಮ ವಿದನಿದುವೆ ಭಾವಿಪುತ್ರಾವಾಪ್ತಿಶ್ರೀಗೆ ನಿಮಿತ್ತಂ ಪಿಡಿ ನೀಂ ಥಾಗ ದೊಳಿಂದೆನ್ನ ಕೆಯ್ಗೆ ಪರಸುತ್ತಿತ್ತಂ (ಶಿಶುಕಿ. ೩-೧೦೪). ೩. ಸ್ವಾಧೀನ ಪಡಿಸಿಕೊಳ್ಳು ; ವಶಪಡಿಸಿಕೊಳ್ಳು : ತನ್ನಿಚ್ಚೆಕಾರ್ತಿ ಗಡ ಕಡುಚೆನ್ನೆ

ಗಡಂ ಪಿಡಿದೊಡೆಳಸಿ ತಾಂ ಪೇಟ್ದುದುಗೆಯ್ದುನ್ನಳ್ಗಡ ದೊರೆಕೊಂಡೊಡೆ ಪನ್ನಿಸದಿರ್ಪನೆ ವಿಚಿತ್ರದೂರಾ ಚಾರಂ (ಸಮಪ. ೫-೫೬). ೪. ಆಶ್ರಯಿಸು ; ಅವಲಂಬಿಸು ; ತಾಳು : ಚಲಂಬಿಡಿವುದನೆಯ್ದೆ ಮುಂ ಪಿಡಿದುದು ಪಿಡಿದುಂ (ಶಂಕಪ್ರಾ. ೦೩-೪೬); ಸ್ತ್ರೀಯರ್ಕಳ್ ಆವನೊರ್ವಂ ಕೆಲದೊಳಿರ್ವಪನವನನೇ ಪಿಡಿಪರ್ ಲತೆಗಳ್ ಸಮೀಪದಲಾವ ಮರನಿರ್ಪುದವನೇ ಪಿಡಿವುವು (ಶಂಕಶಂ. ೩೨-೨೦); ತೊಟಿಯೊಳ್ಪೇಮ ತೆಪ್ಪಮೆಗೆತ್ತುಹಿಯುನೆಯ್ದೆ ಪಿಡಿವಂತಕ್ಕುಂ (ಸಮಪ. ೩-೮೪); ಮುನಿಗಳಂತೆ ಮೌನ ಪಿಡಿದನೆ ಘನಗೋವು ಕಾಯ್ದಾಗ ಗಾಳಿ ಸೋಕಿತೇನೆ (ತುರಂತ. ೨-೫೪-೨). ೫. ಸೆರೆಹಿಡಿ : ಬಂಧಿಸು : ಸ್ವಸ್ತಿಶ್ರೀಬಾಲಾದಿತ್ಯರಾಳು ಶ್ರೀ ಮುಂಞ್ಜನೆಮ್ಮೊನ್ನಿಲಸಿನ್ದ ಮನಸಿಜರಾನಿಟಿದು ಪಿಡಿದು ತಾನೊಪ್ಪಿದ್ದಾನ್ (ಶ್ಕಿಂ. ೦೪೫೦, ೨-೪ ; ಶಾ. ೮ನೆಯ ಶತ); ಅರಸನ ಕೋಪಾಗಾರದ ಕರಣಂಗಳ ಕಾಪನೆಯ್ದೆ ಬಂಚಿಸಿ ಕಳ್ದಂ ಕರೆದುಮೊಳಗೊಳಗೆ ಸುಟಿಯುತ್ತಿರೆ ನೃಪನವನನಟಿದು ಪಿಡಿದು ತರವೇಟ್ದಾಗಳ್ (ಅಚ್ಚು. ೫-೦೫); ಮುನ್ನಮಾ ನಿನ್ನನೆನ್ನಳಿಂದಟಿಯದೆ ಪೊಲ್ಲಮಾನಸಯೆಂದೆ ಬಗೆದು ಪಿಡಿದೆಂ (ಸುಕುಮಾ. ೬-೨೪ ವ); ಪಿಡಿದು ಪ್ರತಾಪತಪನು ಬಾವುಂಡಭೂಪಾಳಕಂ (ಎಇ. XX. ೦೦೬-೨೩; 1167). ೬. ಅನುಸರಿಸು : ಸಟೆ ದಿಟವೆಂಬು ವೆರಡುವಿಡಿದು ನಡೆವುದೀ ಲೋಕವೆಲ್ಲವು ಸಟೆದಿಟವೆಂಬುವೆರಡುವಿಡಿದು ನಡೆವನೇ ಲೋಕದೊಡನೆ ಶರಣನು (ಬಸವ. ಬ ೫೬-೦೪೦); ಕಪಿಲೇಶ್ವರನ ಬಲ ಪಿಡಿದುದು ಬಂದ ದಾರಿಯನು (ಶಂಕರಾ. ೦೬೬೦-). ೭. ರಕ್ಷಿಸು; ಸಲಹು ; ಕಾಪಾಡು : ಎಂತಾದೊಡಮೆನ್ನ ಕೆಳೆಯನಪಂ ಪಿಡಿವುದು ಸೆಜಗೊಡ್ಡಿ ಬೇಡಿದೆಂ ಮೃಗನಯನೇ (ಶಬ್ದಂ. ೬೬೪). ೮. (ಹಾವು) ಕಚ್ಚು ; ಕಡಿ : ಒಯ್ಯನೆ ಬಂದು ಬಾಗಿಲಂ ನುಗುಳ್ದಳ ನೆತ್ತಿಯಂ ಪಿಡಿದುದಾಕ್ಷಣದೊಳ್ಮಳಸಿಂ ಮಹೋರಗಂ (ಸುಕುಮಾ. ೬-೪); ಇಂದು ಧರನಾಜ್ಞೆಯಿಂದುರಗಂ ಪಿಡಿಯಲಲ್ಲಿ . . . ಪಿಡಿದುರಗನಂ ಮಡಿದ ಮಗನನೀಕ್ಷಿಸುತ್ತುದು (ಇಳಿಕೆ. ದೇ. ೫೪-೦೬). ೯. ಅಮರು; ಮೈಮೇಲೆ ಬರು ; ಮೆಟ್ಟಿಕೊಳ್ಳು : ಬಂದಿಕಾಜನಂತೆ ತೆಟವುವಾದರ್ ಪಿಡಿವ ಶಾಕಿನಿಯರಿಂ (ಕಾವ್ಯಸಾ. ೫೨೪ ಕಂದ್ರ೪); ಪಿಶಾಚು ಪೀಡಿಸಿತ್ತು ಭೂತಂ ಪಿಡಿದುದು (ಶಬ್ದಸು. ೦೦೪ ಪ್ರಯೋ). ೧೦. ಊದು ; ಧ್ವನಿ ಮಾಡು : ನಿಶಾವಸಾನಸಮಯದೊಳ್ ಪಮಣದ ಸೂಟಗಾಳೆಗಳಂ ಪಿಡಿದು ಪೀಡೆತ್ತಲುದ್ಯೋಗಂಗೆಯ್ದುದಂ ೬೦ಡು (ಶಂಕಶಂ. ೦೨೬-೧೨). ೧೧. ಪ್ರಾರಂಭವಾಗು ; ಮೊದಲುಗೊಳ್ಳು : ಒಡನೆ ಕಪ್ಪಿನ ಕೌಂಡಿನ ಹೇಮಾಟಿವಿಡಿದು ಸಮಸ್ತ ನದಿಗಳ ಸದಗರದೊಳಗೊಳಕೊಂಡು ಮುಕ್ತಿ ಸ್ನಾನಕಡೆಯಾಗಿಹಳು ಕಾವೇರಿ (ಕಂಶವ. ೨-೩೪). ೧೨. ಕಂಡುಹಿಡಿ ; ಗುರುತಿಸು ; ತಿಳಿ : ಶಕುನವುನೊಳ್ಕಿತ್ತುಪಾಯಮುಂ ಪಿಡಿಪಂದೀತನೆ ಮಂದಿ (ಶಂಕಭಾ. ೫-೪೬). ‘ತಪ್ಪುವಿಡಿ’ ಪರಾ. ಹಿಡಿ₁ : ೧. ಹಿಡಿದ ಹೆಜ್ಜೊಡರನಿಂದುಬಿಂಬಂ ಪೊಲ್ಮುದು (ಸಿದ್ಧರಾ. ೦-೫೪); ಹಲಗೆ ಬಳಪದ ಹಿ[ಡಾಕಾ. ಪಿ]ಡಿಪುದೊಂದಗ್ಗಳಿಕೆ (ಶುಬ್ಬಾಳ. ೧-೦೫); ಹಿಡಿದ ಕನ್ನಡಿ ಕಳಸಗಳ ಕೆಲಕಡೆಂತ . . . ಬಂದಳು ಕೌಸಲಾದೇವಿ (ತೊರರಾ. ೨-೩-೨). ೨. ಊರಬ ಜಂಗಮ ಬಂದರೆ ನಡೆಮೆಂಬರು ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ (ಬಸವ. ೦೪೪); ಹಿಡಿಯೆನ್ನ ಪರ ವ್ಯರ್ಥವಾಗದು (ಮೋಹತ. ೩೬-೪೬). ೩. ಹಿಡಿದು ಹೆಣ್ಣುಗಳ ದೇವರ ಶಿಲೆಗಳ ತಲೆಯೊಡೆದು ಪುರವೆ ಸೂಜಿ ಮಾಡಿ (ಕಂಶವ. ೦೦-೬); ಕುಮಾರೆಯು ಓಡಿ ಹೋದವರೆ ಅವನ್ನು ಹಿಡಿಯುವ ಕ್ರಮ (ಮುಂಡಮಾ. ೪-೬೪). ೪. ಸಂಗವೆರಡುಂಟು ಒಂದ ಬಿಡು ಒಂದ ಹಿಡಿ (ಬಸವ. ೦೩೪); ಅಡಸಿದಾ ಪತ್ತಿನಲಿ ಧೈರ್ಯ ಹಿಡಿವುದೇ ಸಂಪ್ರೀತಿ (ಶುಬ್ಬಾದ್ರೋ. ೬-೨೬); ಹರಿ ಹೋಗಿ ಹಾವಿನ ಹಾಸಿಗೆ ಹಿಡಿವನು ಶಿವ ಹಿಮಗಿರಿಯ ಹತ್ತಿದನು (ಇಂಡಾಕ. ೦೦೪-೬೪). ೫. ದ್ರೋಣಾದಿಗಳು ಹೊಕ್ಕುದು ಧರ್ಮಪುತ್ರನ ಹಿಡಿವ ತವಕದಲಿ (ಶುಬ್ಬಾದ್ರೋ. ೩-೪೨); ತರುಪಲಿಯು ಕೊಡಿಪಿಡಿದಲ್ಲ ಯೆನುತ (ಶುಬ್ಬಾದ್ರೋ. ೬-೬). ೬. ಇಲ್ಲಿಯುವರೆಗೂ ಬಂದು ಲಾಭವನ್ನೇನೂ ಪಡೆಯದೆ ಬಂದ ದಾರಿಯನ್ನು ಹಿಡಿದು ಸಾಗಬೇಕಾಯಿತು (ಕೂಡಿ). ೮. ಘಟಸರ್ಪನಲ್ಲಿ ಕೈದುಡುಕಿದರೆ ಹಿಡಿವುದ ಮಾಣ್ಬುದೆ (ಬಸವ. ೨೧೨); ಹಿಡಿವ ಘಣೆಯನು ಹೊಡೆವ ಸಿಡಿಲನು . . . ಸುಖದುಃಖದುದಯದ ಕಡೆಮೊದಲ ಕಾಣಿಸುವನಾವನೆಂದನಾ ಶಕುನಿ (ಶುಬ್ಬಾಳ. ೬-೩೦). ೯. ನಾನೇನು ಮಾಡಿದ್ದೆ ಎಂದು ಜಕಣ ನನ್ನನ್ನು ಹಿಡಿಯಿತು ? (ಕವ್ಯಸ. ೦೫೨). ೧೧. ೧೩ನೆಯ ಶತಮಾನದಿಂದ ಹಿಡಿದು ೧೭ನೆಯ ಶತಮಾನದ ಕೊನೆಯವರೆಗೆ . . . ನಿರೂಪಿಸಲಾಗಿದೆ (ಕ್ರಶಾಇ. II. ೬ ಕ್ರಶಾಪ). ೧೩. ತೊಡಗು ; ಆರಂಭಿಸು : ಉದಯವಾಗದ ಮುನ್ನ ಬವರವ ಹಿಡಿಯಬೇಹುದು (ಶುಬ್ಬಾದ್ರೋ. ೦-೩೪); ಕರ್ಣನು ಭೀಮಸೇನನ ರಥವನಟಿಸುತ ಬಂದು ಪುನರಪಿ ಕಾಳೆಗವ ಹಿಡಿದ (ಶುಬ್ಬಾದ್ರೋ. ೦೬-೪೦). ೧೪. (ಕರಾರಿಗೆ ಒಳಪಟ್ಟು) ಪಡೆ ; ಹೊಂದು : ಹಿಡಿದ ಹೊಲಕ್ಕೆ ಒಡವೆಯ ಕೊಡೆನೆಂದಡೆ ಬಿಡುವರೇ ಪೊಡವಿಯೊಡೆಯರು (ವೋಲಿಶಾ. ೦೦೬-೪೩೦). ೧೫. ಆವರಿಸು ; ಕವಿ : ಹಿಡಿದ ದುಗುಡದಲರ್ಜುನನು ಮನ ಮಿಡುಕಿದನು (ಶುಬ್ಬಾದ್ರೋ. ೦೪-೨೪). ೧೬. ತಡೆ; ನಿರೋಧಿಸು; ನಿಯಂತ್ರಿಸು : ತುಟಿ ಕಚ್ಚಿ ಹಿಡಿಯದಿರು ಬಿಕ್ಕ (ಪಾದಶೀ. ೫೬-೨೨); ಪಾಂಡವರ ಸಹಕಾರದೊಡನೆ ನೀನು ಧರ್ಮಾರ್ಥಗಳಿಂದ ರಾಜ್ಯವಾಳುವುದಕ್ಕೆ ಮೊದಲು ಮಾಡಿದರೆ ನಿನ್ನನ್ನು ಹಿಡಿಯುವವರಾರು? (ಶಕಪಾ. ೨೫೨). ೧೭. ಮಿತಿಗೊಳಿಸು : ಕೈಗೆರಡು ಕಾಸು ಬಂದಿತೆಂದು ಮಿತಿ ಮೀರಿದ ಖರ್ಚಿಗಿಳಿಯಬೇಡ, ಸ್ವಲ್ಪ ಹಿಡಿದು ಖರ್ಚು ಮಾಡುವುದನ್ನು ಕಲಿ (ಕೂಡಿ). ೧೮. ಸಾಕಾಗು ; ಒಳಕೊಳ್ಳು ; ಹಿಡಿಸು : ಅಡಕಿ ಗಿರಿಗಳ ನುಂಗುವನ ಬಾಯ್ ಹಿಡಿಯದಿಹುದೇ ಹಣ್ಣುಹಂಪಲ (ಶುಬ್ಬಾದ್ರೋ. ೦೬-೪೦); ಒಗರವ ತಾ ತೋಯೆಯನಿಕ್ಕು ಹಸನಾಯ್ತು ಮೇಲೋಗರವ ಬಡಿಸು ದೊನ್ನೆಗಳು ಹಿಡಿವಂತೆ (ಕಪ್ಯಕ. ೬-೨೬); ಒಳಪುಗುವುದಕೆ ಗುದ್ದಾಡಿದರು ಬಾಗಿಲು ಹಿಡಿಯದೆ ಪೊಕ್ಕು ಗದ್ದುಗೆ ಎಡಿಪರಿಕ್ಕೆಲದಿ (ಕೋಹತ. ೩-೪೪). ೧೯. ಬೇಕಾಗು; ಅವಶ್ಯಕವಾಗು : ಈ ಕೆಲಸ ಮುಗಿಯಲು ಕಡೆಯ ಪಕ್ಷ ಎಂಟು ದಿನಗಳಾದರೂ ಹಿಡಿಯುತ್ತದೆ (ಕೂಡಿ). ೨೦. ಒಪ್ಪು ; ಪುರಸ್ಕರಿಸು : ಪರದೇಶದವರು ಈ ನಾಣ್ಯಗಳನ್ನು ಹಿಡಿಯಲಿಲ್ಲ (ಹಿಂಕುಚ. ೬೫). ೨೧. ಒಗ್ಗು ; ಸರಿಬೀಳು: ಆ ಊರಿನ ನೀರು ನನಗೆ ಹಿಡಿಯುವುದಿಲ್ಲ (ಕೂಡಿ); ಈ ಔಷಧಿ ನನಗೆ ಹಿಡಿಯಲಿಲ್ಲ (ಕೂಡಿ). ೨೨. ಕಾಯು; ಹೊಂಚು; ಎದುರುನೋಡು: ಸಮಯವನ್ನು ಹಿಡಿದು ಬೆಟ್ಟದ ಒಡೆಯರ ಮೇಲೆ ಬಿದ್ದು ಅವರನ್ನು ಬಂಧಿಸಿ ರಾಜಒಡೆಯರ ಎದುರಿಗೆ ಕರೆದೊಯ್ದರು (೬ಕೆ೪. ೨೫). ೨೩. ಎಡೆಬಿಡದಿರು ; ಸತತವಾಗಿರು : ದಿನ ಪೂರ್ತಿ ಹಿಡಿದ ಮಳೆ ಬಿಟ್ಟಿಲ್ಲ (ಕೂಡಿ); ಸುಮಾರು ಹೊತ್ತು ಹಿಡಿದಿದ್ದ ರಚ್ಚೆಯನ್ನು ಮಗು ಬಿಡಲಿಲ್ಲ (ಕೂಡಿ).

**ಪಿಡಿವಿಡಿ, ಪಿಡಿಪಿಡಿ, ಹಿಡಿಹಿಡಿ₁** (ದ್ವಿರುಕ್ತಿ): ಪಿ[ಕಾಕಾ. ಹಿ]ಡಿವಿಡಿದು ಕರಗುವುದು ಬಯ್ತೂಡೆ ಮಾಸಿದಾಗಿರ್ಪುದು . . . ಧನವೆ ಜಗತ್ಕಟುಃಖಸಾಧನಪಾಲ್ಗೇ (ಸಂಪ್ರತಿ. ೪-೦೨) ; ದಜದಬನೆಟೆಯೆಬೆ ಪಿಡಿಪಿಡಿ ತಜಿತಜಿ (ಅಪ್ಪು. ೦೦-೯); ಎಲೆಲೆ ಹಿಡಿಹಿಡಿ ಭೀಮನನು ತೆಗೆ ಕೆಲಕೆ ದುರ್ಯೋಧನನ (ಶುಬ್ಬಾಳ. ೬-೩೬) ; ಗುರುಗಳ ಚರಣವ ಹಿಡಿಹಿಡಿ (ಪುರಂದ. ೧-೦೫೪-೦); ಚಿತ್ರದ ತಿಮಿರಾಸ್ತ್ರವೆನವೇಡ ಬೇಡ ಮುನ್ಯಾತ್ರಕೋ ಹಿಡಿಹಿಡಿಯೆನುತ . . . ಇಕ್ಕಿದನು (ಮೋಹತ. ೪೦-೯೪); ಹಿಗ ಓಡೀಲೆ ರೊಕ್ಕಾ ತಗವು ಹಿಡಿಹಿಡಿ ಅನ್ನಾಂವಾ ಖರೇ . . . ಕೈ ಮಾಡಿದರ ಹಿಡದ ಬಿಡಾಂವಾ (ಸಂಗ್ಯಾ. ೪೨-೦೩) **ಪಿಡಿದುಕೊಳ್**

ಮಾಡುವನೆಗ್ಗ (ಶಬರಶ. ೩೬-೩೦೭); ಜಗವಿದೆಲ್ಲವು ನನ್ನ ಮಾಯೆಯೊಳೊಗೆದು ತೋರ್ಪಿಸಿ ಸಂಗಿಸೆ ಸುಳಿವುದು ಹಿಡಿಯಲಡಗುವುದು (ಶಬ್ದಾಶೀ. ೩-೫೭); ಹಿಡಿಹಿಡಿಯೆಂದರೆ ಹಿಡಿಯಲಿ ಸಿಗುವನೆ ಬ್ರಹ್ಮಾಂಡವೇ ಆತ (ಸಂಮು. ೫೯-೬); ಹಿಡಿ ತುಂಬ ಹಣ ಕೊಟ್ಟರೂ ನುಡಿ ಚೆನ್ನಾಗಿರಬೇಕು (ಗಾದೆ). ೬. 'ಹಿಡಿವಡೆ' ಪರಾ. ೭. "ಹಿಡಿ=ಕಸಬರಿಗೆ" (ಶಾಸಕೋ. ೩೬); ಮರದ ಹಸಿ ಅಡರುಗಳಿಂದ ಒಂದು ಗುಡಿಸುವ ಹಿಡಿ ಮಾಡಿ, ತರಗೆಲೆ ಗುಡಿಸಿದಳು (ಮಕಕು. ೫೬). ೮. 'ಹಿಡಿಗಲ್ಲು' ಪರಾ. ೧೦. ಮಾಸಲು; ಮುಡಿವು: ಹಿಡಿಯೆಂಬ ನುಡಿ ಮಾಸಲಲ್ಲುಂಟು ನಿಚ್ಚಲು ಜಡಿಯುಂಬ ಶಬ್ದ ಮಳೆಯೊಳು (ಕೃಷ್ಣ ಕ. ೯-೫೩). 'ಹಿಡಿಮಂದಿ' ಪರಾ.

ಹಿಡಿಹಿಡಿ₃ (ದ್ವಿರುಕ್ತಿ): ಇನ್ನೂ ಯಾಕ ಬರಲಿಲ್ಲವ್ವಾ . . . ಹಿಡಿಹಿಡೀಲಿ ರೊಕ್ಕಾ ತಗದು ಹಿಡಿಹಿಡಿ ಅನ್ನಾಂವಾ ಖರೇ ಅಂತ ಕೈಮಾಡಿದರ ಹಿಡದ ಬಿಡಾಂವಾ (ಸಣ್ಣಗ. ೬೨-೦೫); ಕೆಲವು ನಿದರ್ಶನಗಳು ಬಿಡಿಬಿಡಿಯಾಗಿ ಸಿಗುತ್ತವೆ; ಗ್ರಂಥರೂಪದಲ್ಲಿ ಹಿಡಿಹಿಡಿಯಾಗಿ ಏನು ಸಿಗುತ್ತಿಲ್ಲ (ದ್ರಾಶಿಶಿ. ೫೦).

[<ಪಿಡಿ₁ /ತಮಿ. ಪಿಟಿ ; ಮಲ. ಪಿಡಿ ; ತುಳು. ಪುಡ, ಪುಡಿ, ಹಿಡಿ; ಕೊಡ. ಪುಡಿ ; ತೆಲು. ಪಿಡಿ]

**ಪಿಡಿ₃**, ಹಿಡಿ₃ (ನಾ). ೧. ಹೆಣ್ಣಾನೆ ; ಕರಿಣಿ : "ಪಿಡಿಯೆಂದು ಪೆಣ್ಣಾನೆ" (ಶಬ್ದಾ. ೩೦-೯೬); ಕುಬೇರಕಾಂತಂ . . . ಎನ್ನ ಪೆಂಡತಿ ಮಲಯಾಪತಿಯಪ್ಪ ಪಿಡಿ ಪುರುಡಿನಿಂದಂ ಚಂದನಮಲಯಮೆಂಬ ಪರ್ವತದ ಶಿಖರದಿಂದಂ ತನ್ನನಿಕ್ಕಿ ಸತ್ತಳೆಂತೆ ನಿನ್ನ ಪೆಂಡತಿಯುಂ ಸತ್ತಳೆಂದು ಪೇಳ್ದು (ಶಬ್ದಾರಾ. ೫೯-೦೦); ತಲೆವರಿದೋಡೆಯ ಪಿಡಿಯನೇಱೆ ಪೆಂಡವಾಸದೊಳ್ಳೆಂಡಿರ್ ಬಳಸಿ ಬರೆ (ಪಂಪಭಾ. ೩-೯೬ ವ) ; ಪೊಡೆಯೆಂಬಿದು ಬೆಳೆಗೆಯ್ವಿಡಿಯೆಂಬಿದು ಕರಿಣಿಯೊಳ್ . . . ಅಲ್ಲದಿಲ್ಲಾ ನಾಡೊಳ್ (ದಾರಕ). ೦-೯೫) ; ೨. ಯಾವುದೇ ಪ್ರಾಣಿಯ ಜಾತಿಯಲ್ಲಿ ಹೆಣ್ಣನ್ನು ಸೂಚಿಸಲು ಉಪಯೋಗಿಸುವ ಪದ; ಪ 'ಪಿಡಿ' ಎಂಬುದರ ಮೂಲಾರ್ಥ 'ಹೆಣ್ಣಾನೆ' ಎಂದಿದ್ದರೂ ಕ್ರಮೇಣ ಈ ಪದವನ್ನು ಇತರ ಪ್ರಾಣಿಗಳ ಹೆಣ್ಣುಗಳನ್ನು ಸೂಚಿಸುವಾಗ ಉಪಯೋಗಿಸಿರುವ ಉದಾಹರಣೆಗಳು ಅನೇಕವಾಗಿವೆ. ಮಲಯಾಳ, ತೆಲುಗುಭಾಷೆಗಳಲ್ಲಿಯೂ ಇದನ್ನು ಕಾಣಬಹುದು : 'ಪಿಡಿ' ಎಂಬುದು ಮೃಗಗಳೊಳಗಿನ ಸ್ತ್ರೀತ್ವಸೂಚಕವಾಗಿ ಪೂರ್ವಕಾಲದಲ್ಲಿ ರೂಢವಾಗಿದ್ದ ಹೆಸರೆಂದು ಭಾವಿಸಬಹುದು (ಶಾಕೋಶ. ೪೦೭). 'ಪಿಡಿಗುದುರೆ' ಪರಾ. ಹಿಡಿ₃ : ೨. 'ಹಿಡಿಗುದುರೆ', 'ಹಿಡಿಯಾನೆ' ಪರಾ.

[ದೇ. ॥ ತಮಿ. ಪಿಟಿ ; ಮಲ. ತೆಲು. ಪಿಡಿ ]

**ಪಿಡಿಕಟ್ಟು** 'ಪಿಡಿಗಟ್ಟು' ನೋ.

**ಪಿಡಿಕಲ್** 'ಪಿಡಿಗಲ್' ನೋ.

**ಪಿಡಿಕಿಸು** 'ಪಿಡಿಕೆಯ್ಸು' ನೋ.

**ಪಿಡಿಕುತ್ತು₁** (ನಾ). ೧. ಹಿಡಿಯುಳ್ಳ ಒಂದು ಬಗೆಯ ಚುಚ್ಚುವ ಆಯುಧ: ಇದುವಿಟ್ಟಿಯ ಪಿಡಿಕುತ್ತಿನ ಕಕ್ಕಡೆಯ ಕೋಲ್ಗಿ ಮರ ಮಟಲುಂ ಪಾಯ್ದು (ಪಂಪಭಾ. ೦೨-೬೦ ). ೨. ಚುಚ್ಚುವಿಕೆ ; ತಿವಿತ : ಎಡಗಯ್ಯೊಳ್ ಮುಂದಲೆಯುಂ ಪಿಡಿದಿಱಿದು ಮರಲ್ಚಿಯೊತ್ತಿ ಸುರಿಗೆಯೊಳುರಮಂ ಪಿಡಿಕುತ್ತುಗುತ್ತಿ ನೆತ್ತರನುಡುಪಾನನೆ ಕುಡಿದು ತಣಿವು ಮಾರ್ಗೆಗೆ ಸಂದಳ್ (ಬಂಹಂ. ೩-೯೦). [ಪಿಡಿ₁ + ಕುತ್ತು₁]

**ಪಿಡಿಕುತ್ತು₂** (ನಾ). (ಆನೆಗೆ ಸಂಬಂಧಿಸಿದಂತೆ) ಬೆದೆ (?): ದುವಾಜಿಗಳೊಳೆ ತೊಡರ್ವ ಸಿರ್ಕಬ್ ನೆಗಟ್ದ ಕರಿಗಳೊಳ್ ಪಿಡಿಕುತ್ತು ಪರಭೂಷಣಂಗಳೊಳ್ ಮುತ್ತು (ಬಂಹಂ. ೦-೦೯ ಕಗಳ).

[ ಪಿಡಿ₃ + ಕುತ್ತು₂ (< ಕುತ್ತು) ]

**ಪಿಡಿಕೆ**, ಹಿಡಿಕೆ (ನಾ). ೧. ಹಿಡಿತ ; ಬಂಧನ ; ಸೆರೆ : 'ಪಿಡಿಕೆವೆಯ' ಪರಾ. ಹಿಡಿಕೆ : ೨. ಹಿಡಿದುಕೊಳ್ಳುವ ಸಾಧನ ; ಕಾವು ; ಹಿಡಿ : ಹೋಕಿನ ಕೋಡುಗಳು ಚೂರೀ ಹಿಡಿಕೆಗೆ ಬರುತ್ತವೆ (ಮುಂಂಬಯ. ೩-೦೨); ಆ ವ್ಯಕ್ತಿ ವಿನವಿನನೆ ಮಿಂಚುತ್ತಿದ್ದ ಹಿಡಿಕೆಯನ್ನುಳ್ಳ ನಡಗೋಲನ್ನು . . . ಊರುತ್ತ ಹಳ್ಳಿಯ ಬೀದಿಯಲ್ಲಿ ನಡೆದು ಬರುತ್ತಿದ್ದನು (ಪ್ರಕಕು. ೫೬). ೩. ಹಿಡಿ ; ಮುಷ್ಟಿ : ಬದ್ದಯಾ ಮುಷ್ಟ್ಯ—ಹಿಡಿಕೆಯಲ್ಲಿ ಹಿಡಿದು ಅಳೆವ ಮೊಬ (ಶಾಶಶಾ. ೦೨೨); ಅಡಕೆಯಷ್ಟು ಆಗಳ್ಣಾ ಹಿಡಿಕೆಯಷ್ಟು ಕೆಚ್ಚಲಣ್ಣಾ ಕಬದಾರ ಕಱೆತ್ತಿತಿ ರಂಜಣಗಿ ಹಾಲಣ್ಣಾ (ಕಶಕ. ೨೨೦-೩). ೪. ಮುಷ್ಟಿಯಲ್ಲಿ ಹಿಡಿಯಬಹುದಾದಷ್ಟು ಪ್ರಮಾಣ ; ಒಂದು ಹಿಡಿಯಷ್ಟು ಪ್ರಮಾಣ : ವಡಿದ ಕಿವಿ ಸಣ್ಣರೋಮಂ ಹಿಡಿಕೆಯ ನಡು . . . ಅಡಿ ಮುಂಚುವ ನಾಯ್ಗಳಂ ನೃಪಾಲಂ ಕಂಡಂ (ಶಕಶಂ. ೬೨).

[ ಪಿಡಿ₁ + — ಕೆ ]

**ಪಿಡಿಕೆಯ್**, ಹಿಡಿಗಯ್, ಹಿಡಿಗೆಯ್₂ (ನಾ). ೧. ಹಿಡಿ ; ಮುಷ್ಟಿ ; ಮುಟ್ಟಿಗೆ : ಪಿಡಿಕೆಯ್ ತೀವಿದ ಬೂಗಣೆ . . . ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್ (ಪಂಪಭಾ. ೦೦-೬೦). ಹಿಡಿಗಯ್ : ೨. (ಅಲಂ) ಅಧೀನ; ವಶ: ಹಿಡಿಗ[ಶಾಶಂ. ಗೆ] ಯ್ಯೊಳಿರ್ದಸುರರಿಪು ಪಾರ್ಥನಂ ಕರೆದು . . . ನೇಮಿಸಲು (ಕೃಬಿಶಾ. ೫೫-೩೪). ಹಿಡಿಗೆಯ್₂: (೬).

[ಪಿಡಿ₁ + ಕೆಯ್₁]

**ಪಿಡಿಕೆಯ್ಸು**, ಪಿಡಿಕಿಸು, ಪಿಡಿಕೈಸು, ಹಿಡಿಕಿಸು, ಹಿಡಿಕೆಯ್ಸು, ಹಿಡಿಕೈಸು (ಕ್ರಿ). ೧. ಹಿಡಿದುಕೊಳ್ಳುವಂತೆ ಮಾಡು : (೬). ೨. ಕೈಯಲ್ಲಿ ಹಿಡಿದುಕೊಳ್ಳು, —ತೆಗೆದುಕೊಳ್ಳು : ಕಡುಕಂಪಂ ಪಿಡಿಕೆಯ್ಸುಬರ್ಕುಮೆ ಬಟಲ್ದೆೈತಂದ ತಂಗಾಳಿಯುಂ ಪಿಡಿಯಲ್ ಬರ್ಕುಮೆ (ಅರ್ಧನೇ. ೦-೩೬). ೩. ಮುಷ್ಟಿಯನ್ನು ಗಟ್ಟಿಯಾಗಿ ಹಿಡಿ, —ಬಿಗಿಮಾಡು : ಪಿಡಿದಡಸಿ . . . ಒದೆದೊದೆದು ಗುದ್ದಿಗುದ್ದಿಯ ಕೊಲಲೆಂದಡಹಡಿಸು ಮಂತಿರಿರ್ದುವು ಪಿಡಿಕೆಯ್ಸು[ಶಾಶಂ. ಕಿಯಿಸು]ದ ಕೆಯ್ಯುಮೊದೆವ ಕಾಲುಂ ಹರಿಯಾ (ಅರ್ಧನೇ. ೬-೫೬). ಪಿಡಿಕಿಸು : ೨. ಬಿಸದ ಸುಚರಿತ್ರದಿಂದಂ ನಡೆದು ಶುದ್ಧಾತ್ಮನಪ್ಪನದನೊಲ್ಲದೆ ಮಿಂದಡೆ ಶುದ್ಧನಲ್ಲ ಮಲವಂ ಪಿಡಿಕಿಸಿ ಪೊಱಗಯ್ಯನೊರಸಿ ಕಚ್ಚಿದ ತೆಱದಿಂ (ಸಮಕ. ಅಮುಬಶಶ. ೬. ೩೩೬-೩). ೩. ಎರಡುಗಯ್ಯಂ ಪಿಡಿಕಿಸಿ ನಿಲ್ವುದುಂ ತಲೆಯಂ ತೂಗುತ್ತೆ ನಿಲ್ವುದುಂ . . . ಇಂತಿವೆಲ್ಲಮಂ ಪರಿಹರಿಸಿ ಜಿನಪ್ರತಿಮೆಯಂತೆ ನಿಲ್ವುದು ತೃತೀಯಸಾಮಾಯಿಕನೆಂಬ ಶ್ರಾವಕನ ಸ್ವರೂಪಂ (ಶಶಕ. ೩೬೨) ; ಚರಣದಂದುಗೆಕಿಂಕಿಣಿಗಳಂ ಚರಣದೊಂದೆರಡಡಿಯನಿಡುತಂ ತರುಣಿಯರು ಪಾವಲ್ಕೆ ತೋಳಾಡುತ್ತೆ ಪಿಡಿಕಿಸುತೆ ಶಿರವೊಲೆಯುತ್ತ ನರ್ತಿಸುತಲಿ (ಕುಕಶಾ. ೦೬-೩೨). ೪. ಒತ್ತು; ಅದುಮು : ಅಡಿಯಂ ಬಲ್ಪಿಡಿದುವು ನುಣ್ಣೊಡೆಯಂ ಪಿಡಿಕಿಸಿದುವಡರ್ದು ಕಾವನ ತೋಳಂ ಬಿಡದಪ್ಪಿದುವು . . . ಪೊಳೆವ ತುಱುಗೆಮೆಗಣ್ಗಳ್ (ಕಶ್ಯಶಾ. ೩೨೬). ಪಿಡಿಕೈಸು : ೨. ಕೂಡೆ ಪುಸುಱುವ ಮಱಿದುಂಬಿಯ ಬಲಿಂಲತೆಗಳು ಕರಿಯ ದಡ್ಡಿಯಂ ಕವಿದುತೆಯಾಮಪಾಗೆ ಪಿಡಿಕೈಸಲಪ್ಪ ಪಂಪಿ ತೀವಿದಂತಾಗಿ (ಕಾರಂಉ. ೩೦೯) ; ಅಂತು ಪುಡಿಗತ್ತುರಿಯೆಂದು ಪಿಡಿಕೈಸಿ ಪೂಸಲುಂ ಪಾಸಿ ಮೊಟ್ಟೆಗಟ್ಟಲುಂ ಬಹಿರಂಗಮಿಂದುಗಂ ಗುದ್ದಲಿ ಗೊಡಗುಟ್ಟಿ ಪೊಱಗಾಗಲುಮಪ್ಪ ಕಾಳದ ಕಟ್ಟಲೆಯೊಳ್ (ಅರ್ಧನೇ. ೩-೦೬ ವ). ೪. ಮಣಿಮಯಪಾದ ಪೀಠದ ಬೆಟ್ಟತೆಂಬಂತಿರಗಲೆ ನೂಂಕಿ ಮೆಲ್ಲಿದುಮಪ್ಪ ತನ್ನ ನುಣ್ಣೊಡೆಗಳನರಸನ ಪಾದಪಲ್ಲವಕ್ಕೆ ಸಾರ್ಚಿ ಪಾಣಿಪಲ್ಲವಂಗಳಿಂ ಪಿಡಿಕೈಸುತ್ತುಮಿರ್ಪುದುಂ (ಅರ್ಧನೇ. ೦-೦೦೦ ವ); ಲಕ್ಷ್ಮೀ ಲಲನೆಯ ತೆಱದಿಂ ಲೀಲೆಯಿಂ ತನ್ನ ಕಾಲಂ ಪಿಡಿಕೈಸುತ್ತಿರ್ದಳಂ ಕನ್ನೆಯನೆ ಕನಸಿನೊಳ್ ಕಂಡಂ (ಅರ್ಧನೇ. ೩-೫೯). ಪಿಡಿಕಿಸು : ೪.

ಅರ್ಜುನನ ಯಮಳರ ಪದವನೆಚ್ಚುಬದಂತೆ ಹಿಡಿಕಿಸುತ . . . ಘನಕಾನನದ ಮಧ್ಯದಲೀತನಿದ್ದನು (ಕುಮ್ಯಾಭ. ೯-೬) ; ಅರ್ಜುನ ನಕುಲ ಸಹದೇವ ರೆಚ್ಚರಾಗದ ತೆರದಿ ಹಿಡಿಕಿಸುತ್ತ (ರಕ್ಷ್ಮಾ. ೩೯-೦೦). ೫. ಹಿಂಡು ; ಹಿಸುಕು : ಕೊಡು ಬೆಸನನಹಿಪತಿಯು ತುಡುಕುವೆ ತಡೆವೆರ್ನನ ಕಾಲನಸುವನು ಹಿಡಿಕಿ[ಪಾಠಾಂ. ಸಡಿಲಿ]ಸುವೆ (ಕೊರಾ. ೩೦. ೬೦೯).

**ಹಿಡಿಕೆಯ್ಸು :** ೨. ಅತುಳಶಿವಸುಖಸುಧೆಯನಾತ್ಮಸ್ಥಿತಿಗೆ ಕೈಕೈಯಿಂದೆ ಹಿಡಿಕೆಯ್ಸು [ಪಾಠಾಂ. ಕೈಸು]ತವೆ ಸವಿಯಂ ನೋಳ್ಪವೊಲು ಹಸ್ತಂಗಳಂ ಪೀರ್ವ ವಿತತ ಲಿಂಗಧ್ಯಾನಿ (ಬಸಪು. ೩-೩೫). ೩. ಹಿಡಿಕೆಯ್ಸದ ದೊಟನಂ ರಕ್ಷಿಯೆಂಬುದು (ಹರಿಹು. ೯೮-೩೬೨) ; ಪ(ಹಿ)ಡಿಕೆಯ್ಸದ ಕೆಯ್ಯ ಕುಡಿಕೆಯುಂ ಮುಷ್ಟಿಯೆಂಬುದು (ಹರಿಹು. ೯೯-೩೯೩). **ಹಿಡಿಕೈಸು :** ೧. ಮೇಲಿನ 'ಹಿಡಿಕೆಯ್ಸು' ಉಲ್ಲೇಖದ 'ಬಸವು' ಪ್ರಯೋಗದ ಪಾಠಾಂತರವನ್ನು ನೋಡಿ. [ಪಡಿ₁ + ಕೆಯ್ಸು]

**ಪಡಿಕೆವೊಕ್ಕು** (ಕ್ರಿ). ಹಿಡಿತಕ್ಕೆ ಒಳಗಾಗು ; ಬಂದಿಯಾಗು : ಅತ್ಯಾಸಕ್ತಿಯಿಂ ಮರವಟ್ಟರಂತೆಯುಂ ಚಿತ್ರಿಸಿದರಂತೆಯುಂ ಮೂರ್ಛೆವೋದರಂತೆಯುಂ ಆರಾನುಂ ಪಡಿಕವೆತ್ತರಂತೆಯುಂ ಮಿಡುಕದೆ ನೋಡುತಿರ್ದಂ (ಗದಾಯು. ೬೯೬). [ಪಡಿಕೆ + ಪೊಕ್ಕು₁]

**ಪಡಿಕೈಸು** 'ಪಡಿಕೆಯ್ಸು' ನೋ.

**ಪಡಿಖಂಡ,** ಹಿಡಿಖಂಡ (ನಾ). ೧. ಸಣ್ಣ ಚೂರು,-ತುಂಡು : 'ಪಡಿಖಂಡಂಗೊಯ್' ಪರಾ. ೨. ಮಾಂಸದ ಸಣ್ಣ ಚೂರು,-ತುಣುಕು : 'ಪಡಿಖಂಡಂಗೊಳ್' ಪರಾ. **ಹಿಡಿಖಂಡ :** ೨. ಕೈ ಇಲ್ಲದ ಮೋಟ ಹಿಡಿಖಂಡವ ಕೊಯ್ದ ನಾಲಿಗೆ ಇಲ್ಲದ ಬಾಯಲ್ಲಿ ಮೆದ್ದ (ಸೋಇಶು. ೨೦೫-೬೬೦). [ಪಡಿ₂ + ಖಂಡ]

**ಪಡಿಖಂಡಂಗೊಯ್,** ಹಿಡಿಖಂಡಂಗೊಯ್ಯು, ಹಿಡಿಖಂಡಗೊಯ್ಯು (ಕ್ರಿ). ಸಣ್ಣ ಸಣ್ಣ ಚೂರುಗಳಾಗಿ ಕತ್ತರಿಸು ; ತುಂಡುತುಂಡಾಗಿ ಮಾಡು : ಜೀವ ಪೆಣಮರಿವ ಬಾಯ್ಗೊಂಡದೊಳ್ ತಮ್ಮ ತನುವಂ ಪಡಿಖಂಡಂಗೊಯ್ದು ಬೀಟ್ವ ಸಾಧಕರುಮಂ (ಅರ್ಧನೇ. ೫-೯೦ ವ). **ಹಿಡಿಖಂಡಂಗೊಯ್ಯು :** ಇನ್ನೆನ್ನಂಗದ ಮೇಲೆ ಬರಲಿ ಹಿಡಿಖಂ[ಪಾಠಾಂ. ಗಂ]ಡಂಗೊಯ್ಯಲಿ . . . ಮತ್ತೆಯೂ ಲಿಂಗಾರಾಧನೆಯ ಮಾಡುವೆ (ಬಸವ. ೬೦೬). **ಹಿಡಿಖಂಡಗೊಯ್ಯು :** ಪರಧನಕ್ಕಳುಪಿದವರ ಹಿಡಿಖಂ[ಪಾಠಾಂ. ಕಂ]ಡಗೊಯ್ಯನೆ (ಬಸವ. ೫೬೬); ಕಂಡು ಸೈರಿಸಿ ಬಿಡುವುದೇ ಭಂಡತನ ಬಲುವೀರರಿಗೆ ಹಿಡಿ[ಪಾಠಾಂ. ಕಡಿ]ಖಂಡಗೊಯ್ಯಲುಬೇಕು ಬಲ್ಲಡೆ ಶಾಸ್ತ್ರಸಿದ್ಧವಿದು (ಕೊರಾ. ೫-೬-೩೫).

[ಪಡಿಖಂಡ + ಕೊಯ್]

**ಪಡಿಖಂಡಂಗೊಳ್** (ಕ್ರಿ). ೧. ಸಣ್ಣ ಸಣ್ಣ ಚೂರುಗಳಾಗಿ ಕತ್ತರಿಸು,-ತುಂಡರಿಸು : ಪಡಿಖಂಡಂಗೊಳೆ ಮನದೊಳ್ ಪೊಡರ್ಪುಗೆಟ್ಟುಗಿದು ಬೆಗಡುಗೊಂಡವಧಾನಕ್ಕೊಡರಿಸೆ ಭಂಗಪಂದಂದವರೊಡವುಟ್ಟರೆ ಪುಟ್ಟುಗುಂ ವಿಭಂಗಜ್ಞಾನಂ (ಶಾಂತಿಪು. ೬-೯೦); ಅಡಗಿನ ಕಡುವೆಸನಿಗ ತಿನ್ನಡಗಂ ನಿನ್ನಡಗನೆಂದು ಪೇಸೇಟ್ವೆಸೆಗಂ ಪ[ಪಿ]ಡಿಖಂಡಂಗೊಂಡುಗಿಬಗಿದಿಡ[ದ]ಡದಡಿಡದೆ ಕೂಚುಗೊಳ್ವರ್ ಬಾಯೊಳ್ (ಸುಕುಮಾ. ೦೧-೯೨). ೨. ಮಾಂಸದ ಸಣ್ಣಚೂರನ್ನು ತೆಗೆದುಕೊಳ್ಳು : ದೆಪಸದೊಳೆಯ್ದೆ ಅರಸನಂ ಜಾಮಿಸಿ ನುಂಪುತ್ತಿಟ್ಟುದಂ ಕಣ್ಣ ಕೀಟ್ಗುಣ್ಕೆಯಾಗಲ್ಕ[ಡ]ಡುವವಂ ಕಾಡುವೆನೆನ್ದು ಪಡಿಖಣ್ಡ[ಂ]ಗೊಣ್ಡು ದೆಸೆವಲಿಗೆಬಪೊಟ್ದು (ಎಪಿಗ್ರ. XI-1, ೦೦-೨೦ ; 866). [ಪಡಿಖಂಡ + ಕೊಳ್₁]

**ಪಡಿಗಟ್ಟು,** ಪಡಿಕಟ್ಟು, ಹಿಡಿಕಟ್ಟು (ನಾ). ೧. ಹಿಡಿತ ; ಸೆರೆ ; ಬಂಧನ : ಪಾರ್ಥನವನ ನೋಡಿ ಪಡಿಗಟ್ಟಂಗೊಳಗಾಗವಪನಿವನ ವಧ್ಯನೆಂದು . . . ಟಳಿಪುವುದುಂ (ಪಂಪಾಭಾ. ೦೦-೩೬ ವ). **ಪಡಿಕಟ್ಟು :** ೧. 'ಈ ಪ್ರಸೂನಂಗಳನೂನಸೌರಭಕ್ಕಂ ಸುಕುಮಾರತೆಗು ಸೈರಿಸದೆ ನಿಚ್ಚಂ ಮಚ್ಚರಿಸುವುವೆಂದು ಪಡಿಕ[ಪಾಠಾಂ. ಗ]ಟ್ಟಂಗೊಳಗುಮಾಡಿದು ದೇಬಂತೆ ಪುಷ್ಪಲಾವೀಕದಂಬಂ ಪುಷ್ಪಮಾಲೆಗಳಂ ಪಿಡಿದಿರ್ದಪುದೆಂದು ತ್ರೇಕ್ಷಿಸುತ್ತುಂ (ಪಾರ್ಶ್ವಪು. ೦೦-೯೩ ವ) ; ಬಟಿಸಿಲ್ಲಾಟಡಿಯಿಲ್ಲ ಕಳ್ಳರ ಭಯಂ ಮುನ್ನಿಲ್ಲ . . . ನಿರೋಧಮಿಲ್ಲ ಪಡಿಕಟ್ಟಿಲ್ಲುದ್ಯಸಂಪತ್ತಿಯಿಂ ಮೆಜಿಪಾ ಪೂರ್ವವಿದೇಹದೊಳ್ (ಶಾಂತಿಪು. ೯-೭). **ಹಿಡಿಕಟ್ಟು :** ೨. ಕಟ್ಟುಪಾಡು ; ಕಟ್ಟಳೆ ; ವ್ಯವಸ್ಥೆ : ನಮ್ಮೂರಿನ ಹಿಡಿಕಟ್ಟು ಯಾವೂರಲ್ಲೂ ಇರಲಿಲ್ಲ (ಹುಟ್ಟಿಹ. ೦೫೩); ಆರ್ಥಿಕ ಅನುಕೂಲತೆಗೋಸ್ಕರ ಮಾಡಿಕೊಂಡ ಆಡಳಿತದ ಹಿಡಿಕಟ್ಟು ಎನ್ನುವ ಸಂಕುಚಿತ ನೋಟದಿಂದ ನೋಡುವುದನ್ನು ಬಿಟ್ಟು ಸಮಗ್ರರೀತಿಯಲ್ಲಿ ನೋಡು (ರತ್ನಶ್ರೀ. ೬೮). [ಪಡಿ₂ + ಕಟ್ಟು₂]

**ಪಡಿಗಲ್,** ಪಿಡಿಕಲ್, ಹಿಡಿಗಲ್ಲು (ನಾ). ೧. ಸಣ್ಣಕಲ್ಲು : ಕಾಲಿಂದ ನೆಲನ ಪೊಯ್ವಾಡೆ ಪಡಿಗಲ್ಗಳಂ ಮಾಲೆಯಾಡಿದ ತೆಜದಿಂದ ಮೇಲೆಸೆದಿಹ ಮಂಬರದೊಳೆನಲದಟ ತರಾಳತನಮನೇನನೆಂಬೆ (ಶಬರಶಂ. ೯-೯೯). **ಪಿಡಿಕಲ್ :** ೨. ಕುಂಬಾರನು ಮಡಕೆಯನ್ನು ಮಾಡಲು ಉಪಯೋಗಿಸುವ ಕಲ್ಲು ; ಮಣ್ಣು ತಟ್ಟುವ ಕಲ್ಲು : ಅಸಿ ಮಷಿ ಕುಶಿ(ಷಿ) ಪಿಡಿ ಪಿಡಿಕಲ್ ಕುಸಿಯಿಂ ಪುರಿಯೋಡು ಕೋಡು ಕಾವಲಿ ನುಲಿಯಿಂ ಬೆಸಗೊಂಬರ್ ಪಿಡಿದಿರೆಯುಂ ಪುಸಿವರ ಶೂಲಂ ಜಗಕ್ಕೆ ಮಟ್ಟೆಯಿಲ್ಲೆಂದಂ (ಜಟ್ಟಿಕು. ೦-೯೯). **ಹಿಡಿಗಲ್ಲು :** ೧. ಮುಂಡದ ಹಲಗೆ ಹೆಣದ ಎಲುವಿನ ಕತ್ತಿ . . . ಖಂಡದ ಹಿಡಿಗಲ್ಲು ನರದ ಚಬುಕುಗಳ ಗಂಡುಭೂತಗಳೆದ್ದವಾಗ (ಹರಿಶಾಂ. ೩-೫೬); ಆರಿಸಿ ತೆಗೆದ ಹಿಡಿಗಲ್ಲುಗಳದೇ ಎರಡೆಗೊಂದು ರಾಸಿಯಾಯಿತು (ಕೆಳುಮ ೬೫) ; ಆಕೆ ಹೊರಗೆ ಬಂದು ನಾಲ್ಕಾರು 'ಹಿಡಿಗಲ್ಲು'ಗಳನ್ನು ಎತ್ತಿಕೊಂಡಳು (ಬರಿಹಾ. ೦೦೦).

[ಪಡಿ₂ + ಕಲ್₃./ ತಮಿ. ಪಿಟಿಕಲ್]

**ಪಡಿಗುಂಡು** (ನಾ). = ಪಡಿಗಲ್ ೧ : ಪಡಿಗುಂಡಿಟ್ಟು ಕವಣೆಯಾಂತ ಸತಿಯರ ನಿಡುತೋಳ್ಗಳೆಸೆದುವು (ತ್ರಿಷಾಂ. ೦-೫೩) ; ಪಡಿಗುಂಡು ಬಡಿಗುಂಡು ಜಡಿದು ಪೊಯಿವ ಗುಂಡು ಒಡನೆತ್ತಿ ಹಾಕುವ ಗುಂಡು (ಅಸಂಪ. ೦೮-೯೬) ; ಕನಕಾದ್ರಿಯಂ ಪಡಿಗುಂಡ ಮಾಳ್ಪ . . . ಸೂರ್ಯಮಂಡಲವ ನೊಡೆವ ಘುಡುಘುಡಿವ ಸಿಡಿಲಂ ಸೀಳ್ವ ರುದ್ರಗಣಮೆಜಿವಿಡದೆ ಟಣ್ಗೆಸೆದುದು (ಕಬಪು. ೨-೨೯) ; ಪಿ[ಪಾಠಾಂ. ಸಿ]ಡಿಗುಂಡು ಬಡಿಕೋಲ್ಗಳುಜಿಬೆಯಿಂದಿಜಿಬೆಯಿಂ . . . ಜಡಿದಾರ್ದು (ಕೈಬಶಾ. ೨೮-೯೬). [ಪಡಿ₂ + ಗುಂಡು]

**ಪಡಿಗುದುರೆ,** ಹಿಡಿಗುದುರೆ (ನಾ). ಹೆಣ್ಣುಕುದುರೆ : ಪಡಿಗಳನೇಜಿ ಕೆಲಂಬರ್ . . . ಕೆಲರ್ಪಡಿಗುದುರೆಗಳೊಳ್ ಪೆಜಿಪರ್ಡಿಡಮಿಯೊಳಡಿಯಿಟ್ಟು ತಳರ್ದರ್ (ರಾಜಶೇ. ೦೦-೦೩). **ಹಿಡಿಗುದುರೆ :** ಎಕ್ಕಟಿಗರೇಜಿ ಹಿಡಿಗುದುರೆಗಳನು ಎಣಿಕೆ ಮಾಡದೆ ಹಿಡಿವ ರಾಯರಾವುತರು . . . ಹೊತ್ತುಜಿಯದೆಟ್ಟಿಡುವ ಮಹಾರಥಿಕರೆಸೆದರಲ್ಲಿ (ಸಮ್ಯಭಾ. ೬-೯೯); ಹಿಡಿವರು ಹಿಡಿಗುದುರೆಯ [ಪಾಠಾಂ. ಬಲುಜಾನರ] ರಾವುತರನು ಕೆಡಹಿದರು (ಕುಮಾಶಾಂ. ೯೨-೬೬). [ಪಡಿ₃ + ಕುದುರೆ]

**ಪಡಿಗುದ್ದು** (ನಾ). ಮುಷ್ಟಿಯನ್ನು ಬಿಗಿದು ಕೊಡುವ ಪೆಟ್ಟು,-ಹೊಡೆತ : ಈ ಬಸಪ್ಪನನ್ನು ಹಿಡಿಸಿ ಚೆನ್ನಾಗಿ ಪಡಿಗುದ್ದಿನ ಸೇವೆಯನ್ನು ಮಾಡಿಸಲೇಬೇಕೆಂದು ನಿಷ್ಕರ್ಷೆ ಮಾಡಿಕೊಂಡು (ಕುಮುಗ. ೬೩).

[ಪಡಿ₂+ಗುದ್ದು₂(< ಗುರ್ದು₄). / ತೆಲು. ಪಿಡಿಗುದ್ದು, ಪಿಡಿಗ್ರುದ್ದು]

**ಪಡಿಗೋಲ್,** ಪಡಿಗೋಲು, ಹಿಡಿಕೋಲು, ಹಿಡಿಗೋಲು (ನಾ). ಹಿಡಿದುಕೊಳ್ಳುವ (ಸಣ್ಣ)-ಕೋಲು, ದೊಣ್ಣೆ : ದಟ್ಟರೊಳ್ಸುತ್ತಿರ್ದ ನಾಗರ ಮರಿಯಂಬ ಟೂರಸಿಯಂ ಕೋಡು ಪಡಿಗೋಲ್ಗೊಳಿಸಿ ಘಲ್ಲಸುತ್ತಂ ಕುಶಖಾನಂಗಿದಿರ್ಚ ಸಿಲಲ್ (ಕಳಶ. ೩-೨೮). **ಪಡಿಗೋಲು:** ಶಾಂತಲಾದೇವಿ

. . . ಪಕ್ಕದ ದಂತದ ಪಿಡಿಗೋಲನ್ನು ಮೆಲ್ಲಗೆ ತೆಗೆದುಕೊಂಡು ಜೇಗಟೆಯ ಮೇಲೆ ಮೃದುವಾಗಿ ಬಡಿದಳು (ಸವತಿ. ೨೦೦). **ಪಿಡಿಕೋಲು :** ನಾಲು: ಸಿಂಹದ ಮಾರಿ ಹಿಡಿಕೋಲು. ಐದು: ಒಂದು ಭಾರಿ ಛತ್ರಿ (ಹೊಸಂಶಾ. ೦೦೩). **ಪಿಡಿಗೋಲು :** ಒಡೆಯರ ಪ್ರಾಣಕ್ಕೆ ಇದ್ದಿತ್ತು ಯಜ್ಞೋಪವೀತ ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ ಹಿಡಿಗೋಲ (ರೇವಾಶ. ೯೬-೯೭). [ಪಿಡಿ$_1$ + ಕೋಲ್$^1_1$]

**ಪಿಡಿಗೋಲು** 'ಪಿಡಿಗೋಲ್' ನೋ.

**ಪಿಡಿಚೆ** ' ಪಿಡಿತೆ ' ನೋ.

**ಪಿಡಿಚೆಂಡುವೊಯ್** (ಕ್ರಿ). ತಲೆಯನ್ನು ಹಿಡಿದುಕೊಂಡು ಕತ್ತರಿಸು : ದುರ್ಜನರೆಲ್ಲಂ ಉರವಣಿಸಿ ಬಂದಿರಪ್ಪಡೆ ತಲೆಯಂ ಪಿಡಿಚೆಣ್ಡುವೊಯ್ವ ನರ್ಜುನನನುಜಂ (ಎಕ. VI, ೪ಡೂರು. ೩೯-೯೭; 1191).

[ಪಿಡಿ$_1$+ಚೆಂಡು (<ಸೆಂಡು) + ಪೊಯ್$^1_1$]

**ಪಿಡಿತ,** ಹಿಡಿತ (ನಾ). ೧. ಹಿಡಿದುಕೊಳ್ಳುವಿಕೆ : 'ಕಾಲ್ವಿಡಿತ' ಪರಾ. **ಹಿಡಿತ :** ೨. ಅಂಕೆ ; ಹತೋಟಿ ; ಅಧೀನ : ಆತ್ಮನಾಪೆಡೆ ಯಲ್ಲಿದ್ದಿತ್ತು ಷಡುವರ್ಣದೊಳಗಲ್ಲ ನಡೆ ನುಡಿ ಚೈತನ್ಯವಲ್ಲ ಹಿಡಿತಕ್ಕೆ ಬರಲಿಲ್ಲ ಇನ್ನೆಂತಿಪ್ಪುದೋ (ಅರವ. ಮು. ೨೦೮-೩೩); ಸ್ಫುಟದಿ ಹಿಡಿಯೆ ಹಿಡಿತಕೆ ಸಿಕ್ಕದಿಹ ಹಸ್ತಪುಟದೊಳಿತ್ತಿತ್ತು ರಕ್ಷಿಸುವ (ಶರಕ. ೦೬-೩೫). ೩. ಕಟ್ಟುಪಾಡು ; ವ್ಯವಸ್ಥೆ : ಒಟ್ಟಿನಲ್ಲಿ ನಮ್ಮೂರ ರೈತರು ಒಂದು ಹಿಡಿತದಿಂದ ಊರನ್ನು ಆಳುತ್ತಿದ್ದರು(ಹುಳ್ಳಿ ಹ. ೧೭). ೪. ಕುಸ್ತಿವರಸೆಯ ಒಂದು ಪಟ್ಟು : ಸುಗ್ರೀವನು ಅನೇಕ ಹಿಡಿತಗಳಿಂದ ತನ್ನ ಸಾಮರ್ಥ್ಯ ವನ್ನು ತೋರಿಸಿದರೂ ಕಡೆಗೆ ವಾಲಿಗೆ ಅಂಜಿ ಆತನು ಹಿಂದಕ್ಕೆ ಸರಿಯ ಹತ್ತಿದನು (ತುಳಸೀ. ೨೫೦). [ಪಿಡಿ$_1$+ – ತ$_2$]

**ಪಿಡಿತರ್,** ಹಿಡಿತರ್, ಹಿಡಿತರು (ಕ್ರಿ). ೧. (ಕೈಯಲ್ಲಿ) ಹಿಡಿದು ಕೊಂಡು ಬರು : ಎಮ್ಮ ಭಕ್ತರು ಕೊಟ್ಟ ಪಾತ್ರೆಯಂ ಪಿಡಿತಂದು . . . ಬಯ್ಚಿಟ್ಟು ಕೊಡಿಯೆಂದು (ತಿರುರ. ದೇ. ೦೬-೩). ೨. ಸೆರೆ ಹಿಡಿದು ತರು ; ಬಲಾತ್ಕಾರದಿಂದ ಕರೆತರು : ಎನ್ನಣುಗದಮ್ಮನ ನಿಕ್ಕಿದನು ಪೊತ್ತಳ್ತಿ ಕೊಂಡಂದಣಿಯಟ್ಟಿ ಮುಟ್ಟಿ ಪಿಡಿತಂದು (ಸಿರಾಮು. ೦-೧೯); ರುದ್ರಸಖಮುಖ್ಯಸುರರಂ ಬಡಿದು ಪಿಡಿತಂದು (ಶಿಶಕ್ಕು. ೦-೯); ನರರಕ್ಕಸರನಿಜಾದೋಡಿಸಿ ಪಿಡಿತೇದ ವರವಮದಗಜದ ಶಾಲೆಗಳು ಮೆಚಿ ದುವು (ಕಂಪರ. ೬-೨೮). **ಹಿಡಿತರ್ :** ೨. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ (ಬಸವರೇ. ೫. ೭೦-೦೭೪). **ಹಿಡಿತರು :** ೧. ಆ ಬಟಿಯ ಬಟ್ಟಲನಬಳೆ ಹಿಡಿತರಲು (ಜೈಕೃ. ೦೪-೨೩). ೨. ನಾವು ಹಿಡಿತಂದುದು ಮೊದಲು ನೀರ್ಗುಡಿಯಲೊಲ್ಲವು (ಜೈಕೃ. ೬೦-೨೪); ಪಾಂಡವವಿಭುವ ಹಿಡಿತಹೆನೆಂದು ಕೌರವಸಭೆಗೆ ಭಾಷೆಯ ಕೊಟ್ಟು (ಕುಮ್ಮಾರ್ವ್ಯಾ. ೨ ಸೋಶಪ). [ಪಿಡಿ$_1$+ತರ್$^1$]

**ಪಿಡಿತರಿಸು,** ಹಿಡಿತರಿಸು (ಕ್ರಿ). ಸೆರೆಹಿಡಿದುಕೊಂಡು ಬರುವಂತೆ ಮಾಡು ; ಸೆರೆ ಹಿಡಿಸು : ಕೊಟ್ಟಾರದ ಕರಣಂ(ಣೆ)ಗಳಂ ಬಂಚಿಸಿ ಕಳ್ದು ದ್ರವ್ಯಮಂ ಸೂಳೆಗೆ ಕೊಟ್ಟೊಡರಸಂ ಪಿಡಿತರಿಸಿ ಹತಿಯಿಸೆ (ಚಾವುಂ. ೨೬); ಜಿನಮುನಿಗಳಂ ಪಿಡಿತರಿಸಿ ಕಬ್ಬುನದ ಶೂಲಂಗಳಲಿ ತೆಗೆಸಿದನು (ಬಿಕಪು. ೫೦-೫೦). **ಹಿಡಿತರಿಸು :** ಒಡೆಯರು ವೀರಾಜಯ್ಯ ನನ್ನು ಶಿಕ್ಷಿಸಬೇಕೆಂದು ನಿಶ್ಚಯ ಮಾಡಿ ಅವನನ್ನು ಹಿಡಿತರಿಸಿ (ಒಕಳ.೦೬).

[ಪಿಡಿತರ್+ – ಇಸು$_1$]

**ಪಿಡಿತೆ,** ಪಿಡಿಚೆ, ಹಿಡಿತೆ (ನಾ). ೧. ಹಿಡಿದುಕೊಳ್ಳುವಿಕೆ ; ವಶಪಡಿಸಿ ಕೊಳ್ಳುವಿಕೆ ; ಸ್ವಾಧೀನ ಮಾಡಿಕೊಳ್ಳುವಿಕೆ : (ಕಿ). **ಪಿಡಿಚೆ :** ೨. ಒಂದು ಹಿಡಿಯಷ್ಟು ಪ್ರಮಾಣದ ಮದ್ದು,—ಉಂಡೆ : ಕಾಡು ಮಾರದ ಸೊಪ್ಪು ನೆರಳ ಕಟ್ಟೆಯೆಡೆಯ ನೀರ ತಂದು ಮಾಡಿ ಮಣ್ಣ ಪಿಡಿಚೆಯಲಿ ಕೂಡಿ ನಿನ್ನ ಪೂಜಿಸೆ (ಶಿಸ. II. ೩೦-೦); ಪಿಡಿಚೆಯನು ಮಾಡುತಲಿ ಶಿವೆಗಳ ಪಿಡಿದು ತೂಗುತ ಹತ್ತುಮೊಗಗಳ ವಿಂಡಿತೆ ನೀನಾರೆಂದು ಕೇಳಿದಳವಳು ದಶಗಳನ (ಉತ್ತ್ಕ. ೩೬-೩೩). **ಹಿಡಿತೆ :** ೧. ಚಿವುಟಗೆಯಲಿ ಮುಳ್ಳನುಪೊತ್ತಿ ಅವುರಿಸಿದಂತೆ ಪೊನೆಗಾವಿಂದ ವಸ್ತು ವನು ಮತ್ತೆ ಹಿಡಿದಂದದಲಿ ಮೊಳೆಗಳನೊತ್ತಿಯಿಕ್ಕಳದಿಂದ ಹಿಡಿದಂತೊತ್ತಿ ಬೆಳಗಲಿ ಚಿತ್ತು ಹಿಡಿವುದೆ ಹಿಡಿತಿ[ತೆ]ಕೇಳು (ಪ್ರಾಬಸಿಂ. ೦೪-೪೩) ; ಲಕ್ಷ್ಯದ ಹಿಡಿತಿ[ತೆ]ಯನರಿಯುವಳ ಲಕ್ಷ ನಿಂತ ನೀನೆ ಬ್ರಹ್ಮಾಗಿ ಹೊಳೆಯು (ಶಿರಾವ. ೫೬-೩). ೩. ಹಿಡಿಕೆ ; ಕಾವು ; ಹಿಡಿ : ಹಿಡಿತೆಯ ಹಿಡಿದು ಇಜಿಯಬೇಕಲ್ಲದೆ ಮೊನೆಯ ಹಿಡಿದು ಇಜಿದವರುಂಟೇ (ಸೋಳಪು. ೦೨೭-೯೯೪). ೪. ಬಂಧನ ; ಹಿಡಿತ : ಇವನ ಕಾದಲೆ ಯೊಡನೆಯಿವಂ ಪರನ್ನಪರ ಹಿಡಿತೆಗೊಳಗಾದನು (ಶಾಸೊಲ್ಪು. ೦೩-೬).

**ಪಿಡಿತೆಬಡಿತೆ**=ಸೆರೆ ಹಿಡಿಯುವಿಕೆ ಮತ್ತು ದಂಡಿಸುವಿಕೆ : ಜನ ನಾಥನೇ ನೊಂದನಾದರುಂ ಪಿಡಿತೆಬಡಿತೆಗಳಿಂದ ಜನವಸೀಕೃತಗೈವುದು (ಶಂಣಾ. ೬-೦೩-೬). **ಹಿಡಿತೆಬಿಡಿತೆ**=ಹಿಡಿಯುವಿಕೆ ಮತ್ತು ಬಿಡುವಿಕೆ : ಹಿಡಿತೆಬಿಡಿತೆ ಕೊಳುಕೊಡೆಯು . . . ಜಡಿಮುಂದಿ ಗಾಡಿವೋದಿಗಳು ಕ್ಷತ್ರಿಯಗೆ ಸಂಗಡಿಸಿರಬೇಕು (ಜಕ. ೩೯-೦೦೫); ಬಲ್ಲ ಸೊಲ್ಲಿನ ಹಿಡಿತೆ ಬಿಡಿತೆಗಳೆಲ್ಲ ತ್ರೈಜಗದೊಡೆಯ ತಾ ಬಲ್ಲ (ಗಗಶಾ. ೨-೮೪).

[ಪಿಡಿ$_1$+ – ತೆ$_2$]

**ಪಿಡಿನಡು** (ನಾ). ಹಿಡಿಯಲ್ಲಿ ಹಿಡಿಯಬಹುದಾದಷ್ಟು ತೆಳುವಾದ ಸೊಂಟ ; ತೆಳುನಡು : ಉಡುಮಧ್ಯದ ರೋಹಿಣಿಗೆ ಪಡಿಯೆನಿಸಿದ ಕೆಳದಿಯರ ನಡುವೆ ಪಿಡಿನಡುವಿನ ನೀಜಿಯ ಕಂಡು (ಚಂದ್ರಸಾಂ. ೨-೬೩); ತರುಣಭ್ರುಮರಸವಿತಿಯ ಬೆಡಂಗು ಪಿರಿದುಂ ಗೆಲೆವಂದುದು ಪಿಡಿನಡುವಿನ ಕುವರಿಯ ಕುರುಳೋಳಿ (ಜಯಸಾ. ೩-೫೦); ಬಾಯ್ಮುಡುವ ವೆಣ್ಣೀನ ತಂದವಳು ಪಿಡಿನಡುವಿನ ಮಾಯಾಂಗನೆಗಿತ್ತು ಬೇಗಡಿಗೆಯ ಮಾತ ಹೇಳಿದಳು (ಸೋಹಕ. ೦೦-೩೬); ಕೊಬ್ಬಿದ ಪೊಜಮೊಲೆ ಪಿಡಿನಡು ಕೊಂಕಿದ ಹುಬ್ಬಿನ ಪೆಣ್ಣು (ಜಕ. ೨-೪೮). [ಪಿಡಿ$_1$+ನಡು$_1$]

**ಪಿಡಿನಡೆ** (ನಾ). ಆನೆಯ ಗಂಭೀರವಾದ ನಡಿಗೆ,—ಮಂದಗಮನ : ಅಣುಗಿ ಎನಸುಂ ನಾಣ್ಚಿ ಏರೆದೊಳ್ ಪೂಮಾಲೆಗೊಂಡು ಪಿಡಿನಡೆಯಂತೆ ಸಹಚರಿಯರ್ವೆರಸು ಮೆಲ್ಲನವರಿರ್ವರ ಸನಿಯಮಂ ಸಾರ್ದು (ಅದ್ಭುತ. ೦೦-೦೦). [ಪಿಡಿ$_1$+ನಡೆ$_2$]

**ಪಿಡಿಪಡು** 'ಪಿಡಿವಡು' ನೋ.

**ಪಿಡಿಪೀ** (ಕ್ರಿ). ಅಧೀನಪಡಿಸು ; ವಶಕ್ಕೆ ಕೊಡು : ಕಾದುವ ಕೂರ್ಪುದೋರ್ಪ ಬೆಸನಂ ರಘುಜಂ ಬೆಸವೇಟ್ಟನಿಲ್ಲ . . . ಆನೀ ದನು ಜಾತ್ಮಜಂಗೆ ಪಿಡಿಪಿತ್ತು ದಶಾನನನಳ್ಕಿ ಬಳ್ಕಿ ಲಂಕಾದಹನಕ್ಕೊಡರ್ಚಿವೆಂ (ಹಂಪಾಮಾ. ೦೦-೦೩೩); ಬಗೆಯದೆ ದಾಸವಾಧಿಪನ ದೋರ್ಬಲಮಂ ಖಚರಪ್ರವೀರರಂ ಬಗೆಯದೆ ನಟ್ಟ ತನ್ನಳವನಿಂದಗಿಗಾಂ ಪಿಡಿಪೀವೆ ನೆಂಬುದಂ ಬಗೆದಂ (ಹಂಪಾಮಾ. ೦೦-೦೩೪). [ಪಿಡಿಪು+ಈ$_1$]

**ಪಿಡಿಪು,** ಹಿಡಿಹು, ಹಿಡುಹ (ನಾ). ೧. ಹಿಡಿದುಕೊಳ್ಳುವಿಕೆ ; ಹಿಡಿತ : ಪತಿಯಾಣತಿಗೆ ಪ್ರತಿನುಡಿಯುಲಾರದೆ ಪತಿವ್ರತೆ ಮಹಾಸ್ತ್ರದಿಂ ಸಡಿಲಿಸನಿಯವನ ಮುಷ್ಟಿಯಂ, ಪಿಡಿಪನೋಸರಿಸಿ (ಕ್ರೀರಾಮಾ. ೮೦೩-೫೫). **ಹಿಡಿಹು :** ೧. ತೊಡೆಯ ಹಿಡಿಹಿನ ವಾಜಿ ತೊಂಡಿಯನೊಗಡಿ ಲಂಘಿಪ ತೇಜಿ (ಕೃಷ್ಣಾ. ೦೩-೦೦). ೨. ಹಿಡಿ ; ಮುಷ್ಟಿ : ಕಂಗಳು ಹೊಳೆಯೆ ಮಜಿಮಿನೆಂದು ಹೆಕ್ಕಳಿಸಿದರು ಹಿಡಿ[ಪಾಠಾಂ.ಡು]ಹಿನಲಿ ಅಲರಿದಂಬುಜವೆಂದು ವದನಕೆ ನಿಲುಕಿ ತುಂಬಿಗಳೆಂದು ಕುರುಳಿಂಗಳುತಿ ಕೈಗಳ ತೆಜಿದರತಿ ಮುಗುದೆಯರು (ಕುಮ್ಮಾಕ. ೦೦-೫೪). ೩. ಹತೋಟಿ ; ಅಂಕೆ : ಬಲುಕಣೆಯ ಹಿಡಿ[ಪಾಠಾಂ.ಡು]ಹಿಂಗೆ ಲಾಗಿಸು

ತಿರ್ದುದಾ ನಂತಿ (ಕುವ್ಯಾದ್ರೋ. ೩-೩೭); ಅವಗು ಕೈಯಲ್ಲಿ ಪಡಿಯೆ ಹಿಡಿ ಹಿಗೆ ಸಿಕ್ಕದು (ಶಂಕ್ರೈಶ್ರೆ. ೬-೩-೩೯). ೪. ಸೆರೆ ; ಬಂಧನ : ಎಸುತ ನಡೆದಿಟ್ಟಳಿಸಿ ಪಡಿಹಿಂಗೊಳಗುವಮಾಡಿ ವಿಘಾತಿಯಲಿ ತಡೆಯೆ (ಕುವ್ಯಾದ್ರೋ. ೨-೩). ಹಿಡುಹು : ೨. ಮೇಲಿನ ಉಲ್ಲೇಖದ 'ಕುವ್ಯಾಆ. ೧೧-೨೮' ರ ಪ್ರಯೋಗದ ಪಾಠಾಂತರವನ್ನು ನೋಡಿ. ೩. ಮೇಲಿನ ಉಲ್ಲೇಖದ 'ಕುವ್ಯಾದ್ರೋ. ೩-೩೭' ರ ಪ್ರಯೋಗದ ಪಾಠಾಂತರವನ್ನು ನೋಡಿ. [ಪಡಿ$_1$+ – ವು$_1$]

**ಪಡಿಪೆಱು** 'ಪಡಿವೆಱು' ನೋ.

**ಪಡಿಪೊನ್.** ಹಿಡಿಹೊನ್ನು (ನಾ). ಹಿಡಿ ತುಂಬುವಷ್ಟು ಚಿನ್ನದ ನಾಣ್ಯ : ನಿಲ್ಲೆಂದ ಪಡಿಯಱಂಗೆ ಪಡಿಪೊನ್ನ [ಪಾಠಾಂ ಹೋಗ]ಳ ಚೆಲ್ಲುತ ಚತುರಭೂಮಿವರು ನಿಲ್ಲದೆಯ್ತಂದರು (ಶಬಾಸಾ. ೦೬-೪೦). **ಹಿಡಿಹೊನ್ನು :** ಬಡವನಾದರು ಚಿಂತೆ ಬಲಿದನಾದರು ಚಿಂತೆ ಪಿಡಿಹೊನ್ನು ಕೈಯೊಳಾದರು ಚಿಂತೆಯು (ಶೂಅಂ. ೦-೯೩-೩); ಪಾಳೆಯಪಾಳೆಯದೊಳಗೆ ಚೆಲ್ಲಿತು ಸೂಜಿ ವೀಳೆಯ ಹಿಡಿಹೊನ್ನು ವರಹ (ಪೋಚತ. ೦೬-೩೬); ದೀನದಲಿತರಿಗೀಗತೂ ಹಿಡಿಹೊನ್ನು, ಬೊಗಸೆಹೊನ್ನು ದೊರೆತುವು (ಕೇತುಕು. ೬): ಕಡೆಗಣ್ಣ ಭಾವಕ್ಕೆ ಹಿಡಿಹೊನ್ನ ಕೊಟ್ಟೇನು (ಹಳ್ಳಿಪಾ. ೬೦). [ಪಡಿ$_1$+ಪೊನ್]

**ಪಡಿಯಂಬು, ಹಿಡಿಯಂಬು** (ನಾ). ೧. ಹಿಡಿದಿರುವ ಬಾಣ : ಪಡಿಯಿಂದಿಱಿದಲ್ . . . ವಧು ಮದನನ ಕೈಪಡಿಯಂಕಸೆದೀಕ್ಷಿಪರಂ ಪಡಿಯಂಬಿಂ ಕಾಮನಾರ್ದು ಸಾರ್ದಿಸುವಿನೆಗಂ (ಶಗಪು. ೦೮-೩೩). ಹಿಡಿಯಂಬು : ೧. ಕತ್ತಿ ಬಳಹು...ಕತ್ತರಿ ಮಳಲು ಚಂಡವೇದಿಯು ಕಿತ್ತ ಹಿಡಿಯಂ ಬಿಡುವ ಕಲ್ಲುಂ ಮತ್ತೆ ಮುಖ ಮಾಯದತಿಲಕವುಂ ಕರ್ಕಟಿಯು ರಜ್ಜು (ಚಕಪು. ೪೦-೩). ೨. ಹಿಡಿ ತುಂಬುವಷ್ಟು ಬಾಣ: ಹಿಡಿಯಂಬಂ ಕಟ್ಟಿ ಬಾರಿಂದುಡೆದೊವಲೆಡೆಯೊಳ್ ಬಿಲ್ಲುಮಂ ಕೌಂಕುಳ್ಳಿಂದಡಸಿಟ್ಟಿಯೊತ್ತಿ ಯಂಬಂ ತಿರುಪುತೆ . . . ಎಡಬಲನಂ ನೋಡುತುಂ ಪೋದನೊರ್ವಂ ಕಡುಪಿಂದಂ ಬೇಂಟೆಯ ಕ್ರೀಡೆಗೆ ದರವಿಳಸತ್ಕಿಂಕಿರಾತಂ ಕಿರಾತಂ (ಚಾಧಪು. ೦೦-೦೦೩). [ಪಡಿ$_1$+ಅಂಬು$_1$]

**ಪಡಿಯಚ್ಚುವಿಡಿ** (ಕ್ರಿ). ಹಿಡಿದುದನ್ನೇ ಬಲವಾಗಿ ಹಿಡಿ,—ದೃಢವಾಗಿ ನಂಬು : ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಯಶಿಕಯೋಗಾ ಚಾರವಾಧ್ಯಮಿಕಮತವಿತಥಾಭಿದಾಯಿಗಳ್ ಜೀವಾಭಾವಮನೆ ಪಡಿಯಚ್ಚು ವಿಡಿದು (ಆದಿಪು. ೨-೭ ವ); ಪುರಜನಂಗಳೆಲ್ಲಮೋರೊರ್ವರನೆ ಪಡಿಯಚ್ಚು ವಿಡಿದು ನುಡಿಯೆ (ಕಂಕಥಾ. ೨-೮೬ ವ); ಎಂದೊಡದನೆ ಪಡಿಯಚ್ಚುವಿಡಿ ದುಂಟುಮಾಡಿ ದಂಡಂಗೊಂಡು ತೀಳದೊಳಂ ಕಂಡು ಯುವರಾಜಪ್ರಭೃತಿ ಗಳೆತ್ತ ಮೆಟ್ಟಿತ್ತ ಚಪ್ಪಟೆಯೆಂದು ನಗುತಂ ಪೋಗಿ (ಶಾಂತಿಪು. ೯-೬೯ ವ); ಪಾಪಹೇತುವಪ್ಪ ದುರ್ವಾರ್ಗಮಂ ಪಡಿಯಚ್ಚುವಿಡಿಯದೆ . . . ಸುಖ ಹೇತುವಪ್ಪ ಸನ್ಮಾರ್ಗದೊಳ್ನಿಗಟ್ಟುದು (ಧರ್ಮಾಮೃ. ೪-೩೬). [ಪಡಿ$_1$+ಅಚ್ಚು$_3$+ಪಿಡಿ$_1$]

**ಪಡಿಯಾನೆ, ಹಿಡಿಯಾನೆ** (ನಾ). ಹೆಣ್ಣುಆನೆ ; ಪಿಡಿ ; ಕರಿಣಿ : ಪಿಡಿಯಾನೆಯಲ್ಲಿಯುಂ ಧೇನುಕಾ, ಗಣಿಕಾ ಎಂಬುದು (ಶಬ್ದಾನು. ೦೩೩-೦೩). ಇಕ್ಷುಚಾಪನ ಪರಿವಾರದೇವತೆಯರಂತೆಸೆದಿರ್ಪ ವಿಳಾಸಿನೀಜನಂ ತನತನ ಗಾಗಳೆಯ್ದೆ ಪಡಿಯಾನೆಗಳಂ ಪಗೆಪಿಂದಮೇಱಿದರ್ (ಕುಸುಮಾ. ೩-೬೩). **ಹಿಡಿಯಾನೆ :** "ಹಸ್ತಿನೀ, ವಶಾ__ಈ ೨ ಹಿಡಿಯಾನೆ" (ಶಬ್ದಾನು. ೩೯-೬೨). [ಪಿಡಿ$_3$ + ಆನೆ$_1$]

**ಪಡಿಯಾಳ್, ಪಡಿಯಾಳು, ಹಿಡಿಯಾಳು** (ನಾ). ಬಂದಿ ; ಸೆರೆಯಾಳು: 'ಪಡಿಯಾಳ್ಗೆಯ್ಸು' ಪರಾ. **ಪಡಿಯಾಳು :** ಪಡಿಯಾಳಾಗಿ ಪೋಪೆನು (ಅಂಜಚ. ೦೯-೦೩೩): ಅಂಜದ ಪಡಿಯಾಳಾಗಿ ಹಿಡಿದು ನಿಮ್ಮಡಿ[ಗೊಪ್ಪಿಪ] ಸಡಗರ ವೆನಗಿರುತಿರಲ್ (ಕ್ರಿಕೃಶಾ. ೦೯-೦೩೩); ತರಣಿಯಂ ಬೆನ್ನಟ್ಟಲೊಡನೆ ಪಡಿಯಾಳಾದ ಕಿರಣಂಗಳಂ ಸೆಱೆಯಿನಲ್ಲಿಟ್ಟುದೋ ತಮಂ (ಚಂಶಿಪು ೯-೬). **ಹಿಡಿಯಾಳು :** ಚಂದ್ರಸೂರ್ಯರನಡ್ಡವಿಸಿ ಹಿಡಿಯಾಳ ಹಿಡಿದವು ಮುಗಿಲ ಚೂಣಿಗಳು (ಕುವ್ಯಾಕ. ೦೯-೦೬); ರಾಮನ ಹಿಡಿಯಾಳ ಹಿಡಿವೆವು (ಕುರಾಶಾಂ. ೦೯-೦೨೩); ಹಿಡಿಯಾಳಾಗಿ ಸಿಕ್ಕಿದ ಚಿಕ್ಕದೈವನ ಕಡಿದಡೆ ಕಳಹವಿಲ್ಲನುತ (ಪೋಚತ. ೩೬-೦೯). [ಪಿಡಿ$_3$+ಆಳ್$_3$]

**ಪಿಡಿಯಾಳು** ಪಿಡಿಯಾಳ್' ನೋ.

**ಪಡಿಯಾಳ್ಗೆಯ್ಸು** (ಕ್ರಿ). ಸೆರೆಯಾಳನ್ನಾಗಿ ಮಾಡು ; ಬಂಧಿಸು ; ಸೆರೆಹಿಡಿ : ಪಡಿಯಾಳ್ಗೆಯ್ಸುವೆಂ ನೆರೆದ ನಿನ್ನ ತತ್ತಿಗರನೆನುತಾ ಖಳಂ ಕೋಲ್ಗಱೆದನು (ಚಂಶಿಪು. ೪೯-೨೦). [ ಪಡಿಯಾಳ್+ಕೈಸು (< ಕೆಯ್ಯು) ]

**ಪಡಿಯಿಸು, ಪಿಡಿಸು, ಹಿಡಿಸು** (ಕ್ರಿ). ೧. ಹಿಡಿದುಕೊಳ್ಳುವಂತೆ ಮಾಡು ; ಹಿಡಿಯುವಂತೆ ಮಾಡು : ಪಡಿಯೆಂ ಚಕ್ರಮನೆಂಬ ಚಕ್ರಿಯನಿಳಾಚಕ್ರಂ ಭಯಂಗೊಳ್ವಿನಂ ಪಡಿಯಿಪ್ಪೆಂ ಕರಚಕ್ರಮಂ (ಕಂಕಥಾ. ೦೦-೨೩); ಪರಲೋಕಾಲೋಕನಮಂ ಪರಿಹರಿಸಿದೆವಲ್ತೆ ನೋಡಿ ಮೆಂದೀಗಳುದಾಹರಿಸುವ ತೆಱದಿಂ ಪಿಡಿಯಿಪರರಸುಗಳೆಡೆವಿಡದೆ ಮೇಘ ಡಂಬರತತಿಯಂ (ಶಾದಂಪು. ೩೩೩); ಗಂಡಿಗಂ ಶಾವಸನವರನೊಡಗೊಂಡು ಬಂದತಿಪೂತಜಲದಲಿ ದಂಡಮಂ ಪಡಿಯಿಸಿ ಮುಳುಂಕಿಸಲು (ಚಕಪು. ೨೬-೬೩). ೨. ಬಳಿ ; ಲೇಪಿಸು ; ಸವರು : ನಾಗರಮನರೆದು ಕರಮಿಂಬಾಗಿರೆ ಗಾಳಿಸಿ ಬಟ್ಟಿಕ್ಕೆ ನಸ್ಯಾಂಜನಮಂ ಬೇಗಂ ಮಾಱ್ಪುದು ನೀರೊಳಗಾಗಳೆ ಪಡಿಯಿಸುಗೆ ಮೂತ್ರಕೃಚ್ಛ್ರಾಪಹರಂ (ಅಶ್ವಶಾ. ೦೦-೨೨). **ಪಿಡಿಸು :** ೧. ತನ್ನುಡೆಗಚ್ಚೆಯನು ಬಲುಹಾಗಿ ಪಿಡಿಸುತ್ತಾತನಂ ತಲೆವಾಗಿಸುತ್ತುಂ (ಚಕಪು. ೨೬-೨೩); ಪೊಯ್ ತ್ರಿವಿ ಪಿಡಿಸು ಬಸುರ್ಗಳಂ ಬಗಿ ಕರುಳನುಗಿ . . . ಎನುತ್ತೆ ಕವಿದುದು ಸುರಪದಾತಿ ಮಸಗಿ (ಚಂಶಿಪು. ೩೯-೩). ೩. ಸೆರೆ ಹಿಡಿಯುವಂತೆ ಮಾಡು ; ಸೆರೆಹಿಡಿಸು : ಬೇಡಿದರ್ಗಿಲ್ಲೆಂಬುದುಂ ಕಾದಿ ಸೋಲ್ಪುದುಂ ಪೆಱವೆಣ್ಣಂ ಪಿಡಿಸುವುದುಂ ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೬ ವ). ೪. ಒಳಗೊಳ್ಳಲು ಸಮರ್ಥವಾಗು ; ಸಾಕಷ್ಟು ಅವಕಾಶವನ್ನು ಹೊಂದಿರು ; ಸಾಕಾಗು : ಕಿಡೆದುದೊ ಮುಂದರಂ ಧರೆಗೆ ಬಿಟ್ಟುದೊ ಭಾನುರಥಂ ನಭಸ್ಥಲಂ ಪಿಡಿಸಿ[ಪಾಠಾಂ. ೧] ದುದೋ . . . ಎನಲ್ ನಭಮಂ ಪುದಿದತ್ತು ನೀವಿ ಜೇವೊಡೆಯ ಬಲಾಚ್ಯುತರ್ ತ್ರಿಭುವನೈಕಭಯಂಕೃತಚಾಪಟಂಕೃತಂ (ಕಂಚಾವ. ೬-೯೬). **ಹಿಡಿಸು :** ೧. ಜಡವಿರಹಿತಂ ನಿಷ್ಪ್ರಪಂಚದ ಬೆಡಗಿನೊಳ್ಪಿನ ಮತಿಯ ಕೀಲಂ ಹಿ[ಪಾಠಾಂ. ಪಿ]ಡಿಸಿ ಲಿಂಗಪ್ರಾಣಮಥನ ಸವನುಭವಪನಜಾಹಿ (ಬಸಪು. ೨೯-೩೩); ದಂಡಿಗೆ ಬೆತ್ತ ಹಿಡಿಯುವುವಕ್ಕೆ ಮುಂಡೆ ಮಾಟ ನಾಚುತಿದ್ದೆ ಹೆಂಡತಿ ಸಂತತಿ ಸಾವಿರವಾಗಲು ದಂಡಿಗೆ ಬೆತ್ತ ಹಿಡಿಸಿದಳಯ್ಯ (ಶೂಅಂ. ೦-೯೩-೦). ೪. ದೋಣಿಯಲ್ಲಿ ಅದು ಹಿಡಿಸುವುದಕ್ಕಿಂತಲೂ ಹೆಚ್ಚಾಗಿ ಜನ ತುಂಬಿದ್ದರು (ಕಂಗಾಳ್ತ ೯೯೯). ೫. ಒಳಹೊಗಲು ಸಮರ್ಥ ವಾಗು ; ಅಳವಡು ; ಹೊಂದಿಕೆಯಾಗು ; ಆ ಪಾತ್ರದೊಳಗೆ ನದಿಯ ಬೋರೆ ಹಿಡಿಸಲಿಲ್ಲ (ಪುಸಂಶಯ. ೩-೯೩); ಈ ಡಬ್ಬದಲ್ಲಿ ಹತ್ತು ಸೇರು ಅಕ್ಕಿ ಹಿಡಿಸುತ್ತದೆ (ರೂಢಿ). ೬. ಬೇಕಾಗು ; ಅವಶ್ಯವಾಗು ; ಅಗತ್ಯವಾಗು : ಈ ಕೆಲಸಕ್ಕೆ ನಾಲ್ಕುದಿನ ಹಿಡಿಸುತ್ತದೆ (ರೂಢಿ) ; ಈ ಭಕ್ಷ್ಯಕ್ಕೆ ಎರಡು ಸೇರು ಸಕ್ಕರೆ ಹಿಡಿಸುತ್ತದೆ (ರೂಢಿ). ೭. ಒಪ್ಪಿಗೆ ಯಾಗು ; ಮನಸ್ಸಿಗೆ ಬರು : ಅವರಿಗೆ ನಾನು ಹೇಳಿದ್ದು ಹಿಡಿಸಿತು (ಅಮಾಶಿ. ೩ ಹಿಕ್ಕರೆ).

**ಪಡಿಯಿಸಿಕೊಳ್, ಪಿಡಿಸಿಕೊಳ್, ಹಿಡಿಸಿಕೊಳ್ಳು**=ಹಿಡಿದುಕೊಳ್ಳುವಂತೆ **ಮಾಡು :** ಅನ್ನೆಗಂ ಭೀಮಸೇನನುಂ ಬೋನವೇಳೆಗೆಯುಂ ಸಟ್ಟುಗಮು

ಮನೊರ್ವ ಪರಿಚಾರಕನಿಂ ಪಿಡಿಯಿಸಿಕೊಂಡು ಬಂದು ನಿಂದವಂ ಕಂಡು (ಶಂಕಶಾ. ೮-೫೭ ವ) ;ಮಂಡಲಿಕರ ಕೈಯ ಹಡಪ ಹಾವುಗೆ ಕುಂಚ ಗಿಂಡಿಯು ಪಿಡಿಸಿಕೊಂಬವನು . . ನಡೆದನು ಗುರುವಿಗೆ ಗಿಂಡಿಯುಳಿಗವವನಾಗಿ (ಶಿಶಿ. ೩-೯) ; ತತ್ಕಾಲಪ್ರೇಮಪನಟ್ಟಿಯದೆ ವಿಭವಕ್ಕೆ ಮಾಡಿದವನ ಭಕ್ತಿ ಇರುಳು ಸತ್ತಿಗೆಯ ಹಿಡಿಸಿಕೊಂಡಂತೆ (ಬಸವ. ೨೨೬) ; ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡ (ಗಾದೆ).

[ ಪಿಡಿ$_1$ + – ಇಸು$_3$ ]

**ಪಿಡಿವಗೆ** (ನಾ). ಕಡುವೈರಿ ; ಪ್ರಬಲವಿರೋಧಿ : ಪೊರ್ಕುಳ್ ಸುಳಿಯನಟ್ಟಹಾಸಂಗೆಯ್ಯೆ ಕಿಱುದೆಱೆಯ ಮುಱುಕಮುಂ ತ್ರಿವಳಿ ಸಂದೇಹ ಮಧ್ಯಂ ನೆಟ್ಟನೊರ್ಪಡಿಯೆಂಬ ನುಡಿಗೆ ಪಿಡಿವಗೆಯಾಗೆ (ಕವ್ಯಾ. ೩-೨೮).

[ ಪಿಡಿ$_1$+ ವಗೆ$_2$ ]

**ಪಿಡಿವಡು, ಪಿಡಿಪಡು** (ಕ್ರಿ). ಸೆರೆಗೆ ಸಿಗು ; ಬಂಧನಕ್ಕೊಳಗಾಗು : ಎಮ್ಮಂ ಪಿಡಿದೆೞೆವಂದಿನ ನಿಮ್ಮದಟುಗಳೀಗಳೆತ್ತವೋದುವೊ ಪಿಡಿವಟ್ಟಮ್ಮ ಬಟಲ್ದಿರೆ ಕಂಡಿರೆ ನಿಮ್ಮೞವಂ ನಿಮಗವಿಾಗಳೀಯೆಡರಾಯ್ತೇ (ಶಂಕಶಾ. ೬-೩೯) ; ರಣಲೋಳನಿಳಾತಳಕೆ ಪಾಯ್ದು ರಥದಿಂದೊರೆಯಿಂ ಬಾಳಂ ಕಿೞ್ತಿಯ್ದುವಿನಂ ಬಾಳಂ ಪಿಡಿವಡೆವ ಮಾಣ್ಕೆಯಿಂ ಪಿಡಿವಟ್ಟಂ[ಪಾಠಾಂ. ವೆತ್ತಂ] (ಜಗ. ೧೧-೯೯). **ಪಿಡಿಪಡು** : ಒಟ್ಟಜೆಗೆಟ್ಟು ಕಾರ್ಯವಶದಿಂ ಖಚರಂ ಪಿಡಿಪಟ್ಟು ಪಲ್ಲಣಂಗಟ್ಟಿಸಿಕೊಂಡುಂ (ಶಂಲಾಪು. ೯-೧೧೫); ತೊಡಕು ತಿದ್ದುವುದೇಳಿಯೋಳಿಯೊಂದೆನಲುದು ಪಿಡಿವಟ್ಟ[ಪಾಠಾಂ. ವೆತ್ತ] ತೆಱದೆ ತಿರು ನೀಲಕಂಠರು ನೊಂದು (ತಿರುಕ. ರೀ. ೨೦-೧೯); ಕದನಕ್ಷೇತ್ರದೊಳಾಂತ ಶತ್ರು ಪಿಡಿವಟ್ಟಂ (ಶುಕ್ರಪು. ೩-೧೮). [ಪಿಡಿ$_2$ + ಪಡು$_1$]

**ಪಿಡಿವಡೆ, ಹಿಡಿವಡೆ, ಹಿಡಿಹಡೆ** (ಕ್ರಿ). ಬಂಧನವನ್ನು ಹೊಂದು ; ಸೆರೆಗೆ ಒಳಗಾಗು : ರಣಲೋಳನಿಳಾತಳಕೆ ಪಾಯ್ದು ರಥದಿಂದೊರೆಯಿಂ ಬಾಳಂ ಕಿೞ್ತಿಯ್ದುವಿನಂ ಬಾಳಂ ಪಿಡಿವಡೆವ ಮಾಣ್ಕೆಯಿಂ ಪಿಡಿವಟ್ಟಂ (ಜಗ. ೧೧-೯೯) ; ಪಿಡಿವಡೆದ ಸುರರಿಂದಸುರರಿಂದೆ ನರರಿಂದೆ . . . ಆ ರಣಾಂಕಣವೆಸೆದುದು (ಶಂಪು. ೩೨-೧೬). **ಹಿಡಿವಡೆ** : ಬಿಟ್ಟ ಕಣ್ಣು ಬಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯ ಕೂಡಲಸಂಗಮದೇವ ಹಿಡಿವಡೆದ (ಬಸವ. ೮೦೯); ಹಿಂದನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯಾ (ಬಾಹಾದೇ. ೪. ೦೩೮-೩೦೩) ; ಬಟ್ಟೆಯೊಳು ಕಳ್ಳರಿಂ ಹಿಡಿವಡೆದನೋ (ಸಿದ್ಧರಾ. ೨-೯೫); ಭೂಪನಿಂ ಹಿಡಿವಡೆವಂದದಿಂ ಬೆದಱಿ ನಿಂದುದು ಹಂಸೆ ಸರೋಜಷಂಡದೊಳ್ (ನಳಚಂ. ೯೯). **ಹಿಡಿಹಡೆ** : ಪಶಿ ಹಿಡಿಹಡೆಯ ಬಪ್ಪ ಪಡೆಯಂತೆ ಕಱುಗಳು ಹಾದಿಯೆಡೆವಱಿದು ತಮಗೆ ತಾವೇ ಬಪ್ಪುದು ಕಂಡು (ಸಿದ್ಧರಾ. ೨-೯೯). [ ಪಿಡಿ$_2$+ಪಡೆ$_1$ ]

**ಪಿಡಿವಲೆ** (ನಾ). ಒಂದು ಬಗೆಯ ಬಲೆ : ಪಿಡಿವಲೆ ಸೆಳೆವಲೆ . . . ಬಡಿವಲೆ ಬಲುವಲೆಗಾಱರು ಕೂಗಿ ಬೊಬ್ಬಿಡುತಲೈದಿದರು (ಪೋಹಕ. ೦೯-೦೬).

[ ಪಿಡಿ$_1$+ಬಲೆ$_1$ ]

**ಪಿಡಿವಿಡಿ** (ಕ್ರಿ). ಮುಷ್ಟಿಯನ್ನು ಬಿಗಿ ಹಿಡಿ : ಪಿಡಿವಿಡಿದು ಗುರ್ದಿದ ರವನ ಬೆನ್ನುರಿಯುವಂತೆ (ಶಾಂತೀಶ. ೦೬೩-೩೬೨) ; ತಡೆಯೆನಲ್ ಕೇಳ್ವನೇಂ ದಡಿಗ ಪಿಡಿವಿಡಿದು (ಶಾಂತೀಶ. ೦೬೦-೩೬೦). [ಪಿಡಿ$_2$ + ಪಿಡಿ$_1$]

**ಪಿಡಿವೆಱು, ಪಿಡಿಪೆಱು** (ಕ್ರಿ). ೧. ಸೆರೆ ಸಿಗು ; ಬಂದಿಯಾಗು ; ವಶವಾಗು : ಪಿಡಿವೆತ್ತ ಕಳ್ಳನಂತೆ ಸಿಡಿಮಿಡಿಗೊಳ್ಳುತ್ತಿರ್ದು (ಶಂಕಕಂ. ೦೯-೨೦) ; ಪಿಡಿವೆತ್ತ ಕಳ್ಳನಂತೆ ತಲ್ಲಣಿಸಿ (ರಮಾಣಿಮ್ಮ. ೦-೦೬೮). ೨. ಪಡೆ ; ಹೊಂದು : ಆಪತ್ತಂ ಪಿಡಿವೆತ್ತ ಕುಂಭಕರ್ಣಾದಿಗಳೊಳ್ ಮಾತ್ರೇನೊಡರಿಸುವರ್ (ಶಂಲಾಪು. ೦೯-೬೮). **ಪಿಡಿಪೆಱು** : ೧. ಪಮ್ಮರಸನಂ ಕೊಂದ ಪನು ನೀಸಱಿವೆಯುಂಜದೆ ಪೇೞಲ್ಲದಿರ್ದೊಡೆ ನಿನ್ನಂ ಕೊಲಿಸುವಪ್ಪೆನೆಂದೊಡೆ ಭಯದಿಂ ಪಿಡಿವೆತ್ತುಮಾತನಿಂತೆಂದು ಪೇೞ್ದಂ (ವಡ್ಡಾರಾ. ೦೬೨-೦) ; ಗುಣಹತ ಕರಯುಗ ಕಾಳಿಮಾಕಿಣಂಗಳೆಸೆದೀತನೊಳ್ ರಿಪುಶ್ರೀ ಪಿಡಿವೆತ್ತಣೆಯುರವುಬಲೆ ಪನಿತಶೋಣಸಾಂಜನದಿಂದುವೆಂಬ ಬಗೆಯುಂ ಪಡೆಗುಂ (ಶಾಂತಿಪು. ೩-೦೩೯) ; ರಾಜ್ಯಕಾಲಂ ಸಲೆ ಬಾರಿಯೊಳ್ಪಿಡಿಪೆತ್ತ ಗಜವ್ಯತಿಕರವಂ ಕೇಳ್ದು (ಶಾಪುಂಪು. ೦೦೨). [ಪಿಡಿ$_2$ + ಪೆಱು$_1$]

**ಪಿಡಿಸು** ' ಪಿಡಿಯಿಸು ' ನೋ.

**ಪಿಡಿಹ, ಹಿಡಿಹ** (ನಾ). ಹಿಡಿಯುವಿಕೆ ; ನಿಗ್ರಹ ; ಬಂಧನ : ' ಬಂದಿವಿಡಿಹ ' ಪರಾ. **ಹಿಡಿಹ** : " ನಿಗ್ರಹಂ ಪೀಡನಂ ಸ್ಪರ್ಶನಂ ಗ್ರಹಣಮೆನಲು ಹಿಡಿಹಂ " (ಶಬ್ದಗರಾ. ೦೩೦-೦೬). [ಪಿಡಿ$_1$ + – ಹ$_2$(< – ಪ$_2$)]

**ಪಿಡಿಹಾರ, ಹಿಡಿಹಾರ** (ನಾ). ತುಂಬಿದ ಹಿಡಿ,—ಕೈ ; ಭರ್ತಿಯಾದ ಮುಷ್ಟಿ : ಆರತಿಯನೆತ್ತಿದ ಮಹಾಸತೀಜನಕೆ ಪಿಡಿಹಾರದಿಂ ಪೊಂಗಳಂ ವಸ್ತ್ರಂಗಳಂ . . . ಮಹಾಭೂಷಣಪ್ರತತಿಗಳನು ಆರಯ್ದು ಕೊಡಿಸಿ (ಶಂಪು. ೩-೦೬). **ಹಿಡಿಹಾರ** : ನಲಿವು ಸಖೀಸಖಿವ್ರಜಕೆ . . . ಎತ್ತಿ ಪೊನ್ನ ಬಟ್ಟಲೊಳೆಱೆದೀವ ಕುಂಕುಮರಸಂ ಹಿಡಿಹಾರದಿನೀವ ಚೊಕ್ಕದಂಬುಲವೊಸೆವನ್ನೆಗಂ ನುಡಿದಳಂದು ವಿಲಾಸಿನಿ ತದ್ವಿಲಾಸವಂ (ಶಂದ್ರಪು. ೮-೯೬). [< ಪಿಡಿ$_2$]

**ಪಿಡುಕು** (ಕ್ರಿ). ಚಿಮ್ಮು ; ಮಿಡುಕು ; ಚಡಪಡಿಸು (?) : ಬಿಜ್ಜೋದರಿ . . . ಬರೆ ಕಂಡು ಕಂದರ್ಪಂ ನೆಲಮಿಂಚು ಮಿಂಚಿತಮಮಾ ಗೋಲೆನೂಂಕಿದು ಮಿಂದು ಸ್ಮೈವುಗೌಂಗುಗಳಮಮಾ ಪೊಲವಿಡಿದುದು ಬಗೆಯುಮಮಾ ಬಲೆಯೊಳ್ ಕಣ್ಬಾಳಿ ತೊಡರೆ ಪಿಡುಕುವುದಮಮಾ ಎಂದು ನಿರವಿಸಿ (ಅಳಂ. ೬-೦೬೯). ' ಪಿಡುಗು$_1$ ' ಪರಾ. [ ? ]

**ಪಿಡುಗು$_1$** (ಕ್ರಿ). ೧. ಸಿಡಿಲಿನ ಹಾಗೆ ಸಿಡಿ,—ಆಸ್ಫೋಟಗೊಳ್ಳು : ಅಂತು ನುಡಿದು ಕಾಯ್ಪಿನೊಳ್ ಪಿಡುಗಿ ನಡನಡನಡುಗಿ . . . ಉಗುಟ್ದ ನಸುರನುರಿವ ಪಟಗಳಂ (ಶಂಕಶಾ. ೬-೫೮ ವ). ೨. ಸೀಳು; ಬಿರಿ ; ಒಡೆ : ಉರ್ವರೆ ನಡುಗಿತ್ತಜಾಂಡಮೊಡೆದತ್ತು ನೆಲಂ ಪಿಡುಗಿತ್ತು ಸಪ್ತಸಾಗರ ಮುಡುಗಿತ್ತು (ಶಂಕಶಾ. ೬೨-೨೦೨) ; ಈ ಶಂಖಮನಿನ್ನುಂ ಪಿಡಿದೊಡೆ ಜಗಂ ಪಿಡುಗಿ ಕೆಡುಗು[ಪಾಠಾಂ. ಪಿಡಿಗಿ ಕೆಡುಗು, ಪಿಡಿಗಿಡುಗು] ವೆಂದು . . . ಶಾರ್ಙ್ಗಶಂಖಮನಿೞಿಪಿ ನಾಗಶಯ್ಯೆಯಿಂದಿೞಿದು ಪೋಪುದಂ ಕಂಡು (ಅರ್ಹನಾ. ೮-೩೮ ವ).

**ಪಿಡುಗು$_2$** (ನಾ). ೧. ಸಿಡಿಲು : ಗುಡುಗು ಜನರೆದೆ ನಡುಗು ಮೃಗಪತಿಯುಡುಗು ಬೀಳುವ ಪಿಡುಗು ಮಿಂಚಿನ ಕಡುಗು ಕತ್ತಿಯ ಬೆಡಗು ಮಳೆನೀರ್ ಕರಿಕರಾಯತದಿ (ಕೃಶಾರ್. ೨-೬೮); ಅವರೇ . . . ಬಂದರೆ ಶತ್ರುಗಳ ಪಾಲಿಗೆ ಪಿಡುಗು ಬಿದ್ದಂತೆಯೆ (ಶಾಂಕಶಾ. ೫೬). ೨. ಕೇಡು ; ತೊಂದರೆ; ಹಿಂಸೆ : ನಿನ್ನ ಸಂಪದಕೇ ಪಿಡುಗ ತಂದೊಡ್ಡುವನು ಪಾತಕರೊಡೆಯನು (ಕಷಾ. ೩೬-೨೫) : ನಮ್ಮೂರೊಳಗ ಪ್ಲೇಗು ಅಂತ ಈ ಊರಿಗೆ ಬಂದರ . . . ಇಲ್ಲೇ ತಿರುಕರ ಪಿಡುಗು (ಪಿಡುಗು. ೦೫) ; ಅರ್ಚಕರು ಇದೇನೋ ಪಿಡುಗು ಬಂತೆಂದು ನಡುಗುತ್ತ (ಶದೇಶ. ೦೯೫). ೩. ಪ್ಲೇಗು, ಸಿಡುಬು, ಕಾಲರಾ ಮುಂತಾದ ಘೋರವಾದ ಸಾಂಕ್ರಾಮಿಕರೋಗ,—ಅಂಟು ಜಾಡ್ಯ : ನಾರಣಪ್ಪ ಪ್ಲೇಗನ್ನು ತಂದ. ಅದು ಕಾಳ್ಗಿಚ್ಚಿನಂತೆ ಹರಡುವ ಪಿಡುಗು (ಸಂಸ್ಕಾರ. ೧೦೯) ; ಈ ಬರದೊಡನೆ ಅನೇಕ ಪಿಡುಗುಗಳೂ ಪ್ರಾರಂಭವಾದವು (ಆಳಹು. ೦೦೦) : ಮೊನ್ನೆ ಮೊನ್ನೆ ನಮ್ಮಲ್ಲಿ ಟಾಯಿಫಾಯಿಡ್ ಪಿಡುಗಾಗಿ ಎಷ್ಟು ಜನ ವೃಥಾ ಸಾಯಲಿಲ್ಲ ? (ಅಕಮಾ. ೦).

[ದೇ. ॥ ತಮಿ. ಪಿಟುಕು ; ತೆಲು. ಪಿಡುಗು]

**ಪಿಡುಗುಬೇನೆ** (ನಾ). = ಪಿಡುಗು$_2$ ೩ : ಆತನ ತಂದೆ ಪಿಡುಗುಬೇನೆಯಿಂದ ಕಾಲವಾದರು (ಪಾಋಹು. ೬೯). [ಪಿಡುಗು$_2$ + ಬೇನೆ]

**ಪಿಡ್ಡ** (ನಾ). (ಉಕ) ಧಾನ್ಯವನ್ನು ಕೂರಿಗೆಯಿಂದ ಬಿತ್ತುವಾಗ ಬೇರೆ ಎಡೆಗೆ ಬೀಳದಂತೆ ನಾಳದ ಬಾಯಿಯನ್ನು ಮುಚ್ಚುವ ಬೆಣೆ :

ಕೂರಿಗೆಯ ಬಾಯಿಗೆ ಪಿಡ್ಡ ಹಾಕಿ ಬಿತ್ತದಿದ್ದರೆ ರಾಗಿ ಅಕ್ಕಡಿ ಸಾಲಿ ನಲ್ಲಿಯೂ ಬೆಳೆಯುತ್ತದೆ (ಕೂಕಿ.. [ ? ]

**ಪಿಣ** (ನಾ). ಒಂದು ಬಗೆಯ ಲೋಹ ; ಕಬ್ಬಿಣ : (ೞ).
[< ಸಂ. ಪಿಂಡ ? ]

**ಪಿಣಕುಟಿ, ಪಿಣಕುಟೆ** (ನಾ). (ಕರಾ) ಸಣ್ಣದು ; ಚಿಕ್ಕದು ; ಎಳೆಯದಾಗಿ ಪೀಚುಪೀಚಾಗಿರುವುದು : ಅದು ಸಣ್ಣ ಪಿಣಕುಟಿಯಾಗಿರುವಾಗ ಕಂಡ ನೆನಪು, ಅದಕ್ಕೆ ಮದುವೆಯಂತೆ! (ಕುಠಕು. ೩೩). **ಪಿಣಕುಟೆ :** ಪಿಣಕುಟೆ ಎಂದೂ ಇರಲಿಕ್ಕಿಲ್ಲ . . . ಅದೂ ಚೊಚ್ಚಲು ಮಗು. ಎಂದೂ ಪಿಣಕುಟೆಯಂತೆ ಇರಲಿಕ್ಕಿಲ್ಲ (ಕುಠಕು. ೦೦೪). - [ ← ತುಳು. ಪುಣಕಟ್ ]

**ಪಿಣಕುಟೆ** ' ಪಿಣಕುಟಿ ' ನೋ.

**ಪಿಣಿ₁** (ಕ್ರಿ). ಕಟ್ಟು ; ಬಂಧಿಸು : ಅರಿಸಿನದಂತೆ ಮೆಯ್ಯಕ್ಕಿ ಪಿಣಿವರ್ ಕಾಜಿಯಂತೆ ಕೊರಲಂ ಪತ್ತಿ ಕೊಯ್ಯರ್ ಗರಗಸದಂತೆ ಮೆಯ್ಯಂ ಕೊಱೆವರ್ (ಶಬ್ದಮ. ೩-೩೩) ; ಶೀತಮಯೂಖಮಾಲಿ ತಾಂ ಸನ್ನಿಹಿತಂ ನಭಸ್ಥಳದೊಳಿರ್ದ್ದುಂ ಪಗಲುಂ ನಿರಂತರಂ ತನ್ನ ಕುರಂಗಮಂ ಪಿಣಿದು ನಿಲ್ಲದೆ ಸುತ್ತಿ ಬರುತ್ತಮಿರ್ಕುಮ (ಪಾರಪು. ೦-೦೩೬).
[ ದೇ. ‖ ತಮಿ. ಪಿಣಿ ]

**ಪಿಣಿ₂** (ನಾ). ಜಡೆ ; ಹೆರಳು : " ಪಿಣಿ ಬಟ್ಟಲ್ಮುಡಿಯೊಳ್ " (ಕರ್ಣಾಟ. ೩೩). ' ಪಿಣಿಲ್₂ ' ಪರಾ. [ ದೇ. ‖ ತಮಿ. ಪಿಣಿ ]

**ಪಿಣಿ₃** ' ಪಿಣಿಲ್₃ ' ನೋ.

**ಪಿಣಿಲ್₁** (ಕ್ರಿ). ಜಡೆ ಹಾಗು,–**ಹೆಣೆ** : ಸರಿದ ನೀಲಮಯೂಖಾಸುರಕುಂತಳಂಗಳಂ ಒತ್ತಿ ಪಿಣಿಲ್ದು ಪೂಸಿ ಪುನಾಗಂ . . . ಚಿತ್ರಜತಾಪಮಂ ಕಳೆವರೆಂದೊಡೆ ಕಾಂತೆಯರೇಂ ವಿಚಿತ್ರಮೋ (ಲೀಲಾಮ. ೨-೩೪). ' ಪೆಣೆ₁ ' ಪರಾ.

**ಪಿಣಿಲ್₂**, ಪಿಣಿಲು₁, ಹಿಣಿಲ್₁, ಹಿಣಿಲು₁ (ನಾ). ೧. ಒಂದಕ್ಕೊಂದು ಹೆಣೆದುಕೊಂಡಿರುವಂತಹುದು,—ತೊಡಕಿಕೊಂಡಿರುವುದು : ಮುಡಿಯಂ ಪಿಡಿದೆಳೆದಪನಂ ಮಡಿಯಿಸಿ ಮತ್ತವನ ಕರುಳ ಪಿಣಿಲಿಂ ದೆನ್ನಂ ಮುಡಿಯಿಸುವಿನೆಗಂ ಮುಡಿಯಂ ಮುಡಿಯೆಂ ಗಡ (ಪಂಪಭಾ. ೩-೦೮) ; ಕರುಳ ಪಿಣಿಲಂ ತೆಗೆವ ಪದ್ದುಗಳುಮಂ (ಗದಾಯು. ೫ ೩ ಪ) ; ಬಸಿಱಂ ಪೊಯ್ದುಂ ಕರುಳ ಪಿಣಿಲ್ಗಳನುರ್ಚಿಯುಂ (ಪಾರ್ಶ್ವ. ೦೩೦). ೨. ಹೆರಳು ; ಹೆಳಲು ; ಜಡೆ : ಬಿಡೆ ಪಿಣಿಲಂ ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದೆಂದು (ಪಂಪಭಾ. ೬-೦೦೦) ; ಉಗುರಿಸಿ ಬೆಂಗೆ ಬಿಟ್ಟ ಪಿಣಿಲೊತ್ತಿದ ಬೈತಲ ಸಣ್ಣ ಪುರ್ಬು (ಲೀಲಾಪ. ೪-೩೬) ; ಬಲಿಸಿ ಕಂಡು ಮನಂಗೊಂಡು ಕಯ್ಕೊಂಡು ಜಡೆಗೊಂಡ ಪಿಣಿಲಂ ತಾನೆ ಬಿಡಿಸಿ . . . ಸುಖವಿರಿಸಿ (ಅಂಶಾಂ. ೪-೪೩ ಪ) ; ಸಿಂಜಿನಿಯಂ ತೆಗೆದಿಟ್ಟು ಪುಷ್ಪಮಾರ್ಗಣನ ಧನುಃಶಲಾಪ . . . ನಭೋಮಣಿರುಚಿಯು ತೆಱಬೊಳೆವ ಪದ್ಮಿನಿ ತಾನೆನಿಸುತ್ತೆ ತಾಳ್ದ ಸನ್ಮಣಿ ಪಿಣಿಲಚ್ಚಮುತ್ತು ಕನಕಾಂಬರದಿಂ ಕಮಲಾಕ್ಷಿ ತೋಱಿದಳ್ (ರಾಜಶೇ. ೦೦-೦೬). **ಪಿಣಿಲು₁ :** ೧. ಸೂರ್ಯೋದಯವಾಗಿ ಹೊಂಬಿಸಿಲು . . . ಪಿಣಿಲಾಗಿ ಹೆಣೆದುಕೊಂಡಿದ್ದ ಬಳ್ಳಿ ಹೊದರುಗಳ ಮೇಲೆಯೂ ಶುಷ್ಕಪರ್ಣಾವೃತ್ತವಾಗಿದ್ದ ನೆಲದ ಮೇಲೆಯೂ ಬಿದ್ದಿತು (ಶಾಸೂರು. ೪೩). **ಹಿಣಿಲ್₁ :** ೧. ಕರುಳ ಹಿಣಿಲಂ ಹಿಕ್ಕಿ ತಿಂದು ತೊಡೆಯಡಗನವುಡಿ ಬೆಸೆದು (ಹರಿಶ. ೬-೦೬ ). ೨. ಹೂದುಱುಬಿನ ಹಿಣಿಲ್ಗಳ ದಂಡೆಗಳ ಮುಮ್ಮೊನೆಯ ಮುಂಜೆಱಗುಗಳ . . . ವನಿತೆಯರು ಬಳಸಿದರು (ಕೂಶಾ. ೦-೦೬-೩೨). **ಹಿಣಿಲು₁ :** ೨. ಏತಕೀ ಬಳೆಗೈಗೆ ಬಿಲು ಹಿಣಿಲೇತಕೀ ಜೊಲ್ಲೆಹಕೆ ಚಲ್ಲಣವೇತಕೀ ಹೆಣ್ಣುಡಿಗೆಗೆ (ಕುಪ್ಪಾ. ೨೨-೨೩) ; ಬೆಡಗಿನಿಂ ಹಿಣಿಲ ಹೊಸಮಾಯಿಂದ ಶೃಂಗರಿಸಿ (ಕುರಂಗ. ೩೩-೩೦) ; ಹಿಣಿಲು ಪವಣಿಸದೆ ಬರಿ ಮುಡಿಯನ್ನೆ ಕಟ್ಟಿಕೊಂಡು (ಶಾಂಚಾ. ೩). ೩. ಬಿಗಿದು ಸುತ್ತಿದ ತಲೆಗೂದಲು ; ಮುಡಿ ; ತುರುಬು : ಕಱಿದ ತೊಡರಿನ ಪೆಂಡೆಯದ ಡೊಂಗಿಣಿಯ ಬಿರುದರ ನೂಕುನೂಕಿನೆ ಹಿಣಿಲ ಬಾವುಲಿಗಾಱರು . . . ಸಾರಿದರು (ಕುಪ್ಪಾ. ೦೧. ೪-೩೯). ೪. ಹೆಣೆದಿರುವುದು ; ಜಡೆಯಂತಿರುವುದು : ಪಕ್ಕಗುಱಿಗಳ ತುಳುಕಿನುಗ್ಗಡಣೆಗಳ ಹಿಣಿಲಿನ ಬಲುಮೊಗಜೆಗಳ ಬಾರಸಲೆಗಳನು ಬಿಗಿದರು ಜೋಡಿಸಿದರುಬ್ಬರದ ಪಾದಗಜವ (ಕುಪ್ಪಾದ್ರೋ. ೩-೨). ೫. (ನವಿಲಿನ) ಗರಿ ; ಪುಚ್ಛ ; ಸೋಗೆ : ಬಿಗಿದ ಹುಬ್ಬುಗಳ ಪೆಱೆನೊಸಲ ತಿಲಕದ ನವಿಲ ಹಿಣಿಲ ಕಾಂತಿಯಿಂದೆ . . . ತೋಳಗುಂದ ಸಂಧನ್ನನ . . . ಶಿರದ ಪಿಡಿದೆತ್ತಿಕೊಂಡು (ಕೃಷಿಶಾ. ೦೩-೩೦). ' ಪೆಣಲ್ ' ಪರಾ.
[ < ಪಿಣಿಲ್₁ / ತಮಿ. ಪಿನ್ನಲ್ ]

**ಪಿಣಿಲ್₃**, ಪಿಣಿ₃, ಪಿಣಿಲು₂, ಪಿಳಿಲು₁, ಹಿಣಿ, ಹಿಣಿಲ್₂, ಹಿಣಿಲು₂, ಹಿಳಲು, ಹಿಳಿಲ್, ಹಿಳಿಲು₁, ಹೆಣಲು₂, ಹೆರಳು₂ (ನಾ). ೧. ಎತ್ತು, ಒಂಟೆ ಮೊದಲಾದ ಪ್ರಾಣಿಗಳ ಬೆನ್ನಿನ ಮೇಲಿನ ಡುಬ್ಬ,- ಇಣಿ : ಎತ್ತಿಂಗೆ ಪಿಣಿಲೊಪ್ಪುಗುಮಲ್ಲದೆ ಕೆಚ್ಚಲೊಪ್ಪದಾವಿಂಗೆ ಕೆಚ್ಚಲೊಪ್ಪುಗುಮಲ್ಲದೆ ಪಿಣಿಲೊಪ್ಪದು (ಶಬ್ದಮ. ೬-೨೨೩) ; ವೇದಾಂತಂ ಪಿಣಿಲ್ ತೀರ್ಥಸ್ಮೃತಿ ಸುಮಂತ್ರಂಗಳೇ ರೋಮಂ ಶಿವಾಗಮವೆ ಪ್ರಾಣಮಿಂತಾದಿ ವೃಷಭಂ ಮೆಱೆದನು (ಶಿಂಪು. ೦೩-೨೨). **ಪಿಣಿ₃:** ೧. ' ಪಿಂಪಿಣಿ ' ಪರಾ. **ಪಿಣಿಲು₂ :** ೧. ಸಿಂಗರಮಾದ ಪಿಣಿಲಿನಿಂದೆಸೆವ ವೃಷಪುಂಗವನೆಯ್ತಂದುದೊಂದು (ಶಂಕ್ರಸಾಂ. ೨-೩೩). ೨. ಬೆನ್ನು : ಸೊಕ್ಕಾನೆಯ ಪಿಣಿಲಿಂದಿಳಿದರಾ ಚಿಕ್ಕಜವ್ವನದ ಚೆನ್ನಿಗನಾ (ಕ್ರಿಶಂಕ. ೨-೩೯) ; ಅನುರಾಗದಿಂದಾ ಖಗನು ಮನುಜೇಶನ ತನ್ನಯ ಪಿಣಿಲೊಳಗಿಟ್ಟಾ ಘನಮಾರ್ಗಕೆ ಲಂಘಿಸಿದನು (ಶ್ರೀಪಾಂ. ೬-೦೪೪). **ಪಿಳಿಲು₁ :** ೧. ಪೆಗಲಂರಮಚಕ ಖಾತ ಕೋಡು ಕಾಲ್ಗಣ್ಣೊಗ ಪಣೆ ಪಚ್ಚಳ ಪಿಳಿಲು ಸೊಗಯಿಸೆ ಮೆಱೆದಪಂದಲ್ಲಿ ಬಲಾಯಗಳಗಲದೆ ಕಾಡೆಮ್ಮೆವಿಂದು (ಕುಪಾಶಾ. ೨೩-೩೦). **ಹಿಣಿ :** ೧. " ಅಂಸಕೂಟಃ, ಕಕುತ್—ಈ ೨ ಹಿಣಿ[ಶಾಶಾಂ. ಹಿಣಿಲು] " (ಹಲಾಯು. ೪೪-೦೦೦). ' ಇಣಿ ' ಪರಾ. **ಹಿಣಿಲ್₂ :** ೧. "ಹಿಣಿ[ಲದು] ಕಕುದು" (ಪಟ್ಟಕೋ. ೬೯-೦). **ಹಿಣಿಲು₂ :** ೧. "ಅಂಸಕೂಟಃ, ಕಕುತ್—ಈ ೨ ಹಿಣಿಲು [ಶಾಶಾಂ. ಹಿಣಿ]" (ಹಲಾಯು ೪೪-೦೦೦) ; " ಹಿಣಿಲು ಕಕುದು " (ಸೂಂಗಶಾ. ೩೩-೨) ; ಗೂಳಿಯ ಹಿಣಿಲಾತಿರೆ ಹೆಗಲುಮಂಗೆ, ಮುಡಿಯ ಮುಟ್ಟುವ ತೋಳ್‍ದಿಂದು (ಅಹಕ್ಕ. ೬೬-೦೬). **ಹಿಳಲು :** ೧. " ಪಹಃ, ಅಸ್ಸಸ್ಕಂಧಪ್ರದೇಶಃ —ಈ ೨ ಎತ್ತಿನ ಹೆಗಲ ಹೆಸರು, ಎತ್ತಿನ ಭುಜಶಿರಸ್ಸು, ಹೆಗ್ಗತ್ತು, ಹಿಳಲು " (ಸಿದ್ಧಾಂತಿ. ೨೪೩). ೩. ಮಣ್ಣಿನ ದಿಬ್ಬ, —ಗುಡ್ಡ (?) : ಪೊಡವಿಪ ಹಿಳಲ ಮೇಲೆ ಮಾಳ್ಲುನಾಯಕನ ಮಾಳುಲವಾಗಿ ಆಳುತಿದ ಹಿತಿಲ ಮೇಲೆ ಕಾಯಕನಿಯ ಶ್ರೀಪಾರಿ[ವ]ದೇವರಿಗೆ ದೇಪಪೂಜೆಗೆ ಶ್ರೀಗಂಧಕ್ಕೆ . . . ೪ ಹಣವ ಆಚಂದ್ರಾರ್ಕಸ್ಥಾಯಿಯಾಗಿ ನಡೆಸಿ [ಹೋ] ಹೆನೆಂದು ಮಯಿಲುನಾಯಕ ಮಾಡಿದ ಧರ್ಮ್ಮ (ಶಾ. I, ೩೦-೪೯ ; 1432 ?). **ಹಿಳಿಲ್:** (ೞ). **ಹಿಳಿಲು₁ :** ೧. ಅತೀತವಪ್ಪ ಪರಶಿವನು ಬಸವಣ್ಣನ ಹಿಳಿಲ ಕೆಳಗೆ ಸೂಕ್ಷ್ಮರೂಪಾಗಿರ್ಪನು ನೋಡಾ (ಅಪಶಂ. ೦೪೪-೪೦೦) ; ಅತ್ಯುನ್ನತವಾದ ಹಿಳಿಲಿನಿಂದ ಒಪ್ಪುತಲಿರುವ ಮಹಾವೃಷಭದೊಡನೆ (ಕೃಪಾಕ. ೪೬). **ಹೆಣಲು₂ :** ೧. ಸಹಸ್ರ ಕವಿಲೆಯಂ ಕೊಡುವಂ ಕೊಳಗುವಂ ಹೊಲಬು ಬೆಳ್ಳಿಯ(೦)ಲುಂ (ಕೋಲಶಾ. ೦೪೩೦, ಮುದ್ದೆಬಿಹಾಳ್. ೬೯-೦೪ ; 1033). **ಹೆರಳು₂ :** ೪. ವೀಣೆ ಮುಂತಾದ ತಂತೀವಾದ್ಯಗಳಲ್ಲಿ ನಾದವನ್ನು ಹೆಚ್ಚಿಸುವುದಕ್ಕಾಗಿ ಅಳವಡಿಸಿರುವ ಬುರುಡೆ: " ಕಲಭಃ, ಪ್ರಸೇವಕಃ —೨ ವೀಣೆಯ ಹೆರಳಿನ ಹೆಸರುಗಳು " (ಸಿದ್ಧಾಂತಿ. ೩೪). ☞ ಇಲ್ಲಿ ಕುಳಸಹಿತವಾದ ಶಬ್ದ ಸ್ವತಂತ್ರವಾಗಿ ಸಿಕ್ಕುವುದು ಇತ್ತೀಚಿನದಾದುದರಿಂದ ' ಣ ' ಸಹಿತವಾದ ಶಬ್ದವನ್ನೇ ಪ್ರಧಾನಉಲ್ಲೇಖವಾಗಿ ಪರಿಗಣಿಸಲಾಗಿದೆ.

**ಪಿಣಿಲಿಱು**, ಪಿಣಿಲಿಱು (ಕ್ರಿ). ೧. ಒಂದಕ್ಕೊಂದು ಹೆಣೆದುಕೊಳ್ಳು : ಮಲ್ಲಿಕಾಲತೆಯ ಮುಗುಳ್ಗುಡಿಗಳೊಳಂ ಚಂಪಕಲತೆಯಲರ್ಗುಡಿಗಳೊಳಂ ಪಿಣಿಲಿಱಿದು ಪೆಣೆದು ಪರ್ವಿ ಪಸರಿಸಿದ ಪೊಂಬಾಳೆಯ ಕಂಬಂಗಳ ತುಱುಂಬಿನೊಳ್ ಬಳ್ಳಿ ಬೆಳೆದ ಮೃದ್ವೀಕಾಲತೆಯ ಕಾಯಮಾನಂ ಕಾಮನ ರತಿಯ ವಿವಾಹಕ್ಕೆ ಚೈತ್ರನೆಂಬ ಚಿತ್ರಕಂ ಬಣ್ಣವಿಟ್ಟು ಕಿಣ್ಣಂ ಸಮೆದ ಪಸುರ್ವಣಂನರಂದದಂತಿರೆ (ಅಸಂಪೆ. ೭-೦೦ ವ). ೨. ಜಡೆಹಾಕಂ; ಹೆಣಲು ಹಾಕು : ನೀಲಪಟದಿಂದೊಲಿದು ಚಲ್ಲಣಮನುಟ್ಟಲ್ಲಿ ಲೀಲೆಯಿಂ ಕೇಶಮುಂ ಪಿಣಿಲಿಱಿದುಕೊಂಡಲ್ಲಿ (ಶಿವಸಂ. ೩೬-೪); ರಸಪರ್ಣನಂಗಳಿಂ ಬಿಸುಟಸುಪಟೆ ಪಿಣಿಲಿಱಿದು ಕೇಶಮುಂ ಕಾಸೆಯನುಟ್ಟು (ಶಿಂಶಂ. ೪-೪೦). **ಪಿಣಿಲಿಱು** : ೧. ಹೆಣಗಿ ಪಿಣಿಲಿಱಿದಭ್ರನಲಿ ಸಂದಣಿಸಿ ಕಣೆ ಕೈಕೊಂಡ ವಂಬರವಣಿಗೆ ನಡೆದುದೊ ಶಿವಿರರಾಜನ ದುಡು ಮಂಡಳಿಸಿ (ಕುಬ್ಜಾಕೆ. ೪-೦೬). ೨. ನಿರ್ಮಳಬ್ರಹ್ಮಚಾರಿಗಳ ಬಿಗಿದ ಪಾಶವೋ ನಾರಿ ಪಿಣಿಲಿಱಿದ ಕೇಶವೋ (ಸೌಂದಪು. ೩೩) ; ಧರಿಸಿ ದಿವ್ಯಾಂಬರವ . . . ನಿಡುಕೇಶವಂ ಪಿಣಿಲಿಱಿದು (ಸೌಂದಪು. ೬-೩೩). [ಪಿಣಿಲ್$_2$+ಇಱು$_1$]

**ಪಿಣಿಲು$_1$** 'ಪಿಣಿಲ್$_1$' ನೋ.

**ಪಿಣಿಲು$_2$** 'ಪಿಣಿಲ್$_2$' ನೋ.

**ಪಿಣಿಲೇಱು$_1$** (ಕ್ರಿ). = ಪಿಣಿಲಿಱು ೧: ಪಂಚಾಯುಧದ ಮಲ್ಲಿಗೆಯ ತೋಂಗಲ ಸೆಱಂಗು ನಾಂದು ಪಿಣಿಲೇಱಿದೆಲರ್ದ ವೇಣಿಯೊಳ್ಪೆಣೆದು ಮಿಂಚಿನಂಚಿ ವೆರಸು ಕಾರ್ಮುಗಿಲ ಬಿಟಲು ಕಾಲೂಱಿದಂತೆ ಮೇಲೆ ಮೆಱೆಯೆಯುಂ (ಅಸಂಪೆ. ೨-೨೮ ವ). [ಪಿಣಿಲ್$_2$ + ಏಱು$_1$ (< ಏಱು$_1$)]

**ಪಿಣಿಲೇಱು$_2$** (ಕ್ರಿ). ಡುಬ್ಬದವರೆಗೂ ಏರು,—ಬೆಳೆ : ಬರಿಗುಡಂ ಪಿಣಿಲೇಱೆ ರೋಮಮುಡಿದಿರ್ದೆನ್ನಾಗೆ ಮುಂಗಾಲುಗಲ್ಪುರೆ . . . ಕೋಟುಮುಟ್ಟಿ ಪೆರ್ನೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ತೇಕರಂ ಸೂಕರಂ (ಶಂಪ್ರಪು. -೬೦). [ಪಿಣಿಲ್$_3$ + ಏಱು$_1$ (< ಏಱು$_1$)]

**ಪಿಣಿಲ್ಗಂಡ** (ನಾ). ಹಿಣಿಲಿನ ಮಾಂಸಖಂಡ ; ಹೆಗಲಿನ ಮಾಂಸ : ನೊರೆವೀಟಲ್ ದಾಡೆಗುಟ್ಟುತ್ತರಡುಬರಿ ಪಿಣಿಲ್ಗಂಡಮುಂ ಪೇಱಿ ಕೊರ್ವಿಂ ಬಿರಿಯುತ್ತುಂ ಲೋಹಸೂಚೀಸಮುಸಮುಚಿತರೋಮೋತ್ಕರ ಸ್ಕಂಧಭಾರೋದ್ದುರನಪ್ಪ್ರಾಸ್ಯಂ . . . ಪಿರಿದಾಶ್ಚರ್ಯಕ್ಕೆ ಪಕ್ಕಾಗಿರೆ ನೆರೆದು ಸಮುತ್ತೇಸಂ ಸೂಕರೌಘಂ (ಶಾಂತೀಶ್ವ. ೩-೬೩). [ಪಿಣಿಲ್ + ಗಂಡ$_1$]

**ಪಿಣೆ** (ಕ್ರಿ). (?) : ನೆಗಬ್ದ ಪಾರ್ಗ್ಗದೆ ಗೆಲ್ಲುಮೆ ಪಿಣೆದಲ್ಲಿ ಕೀರ್ತಿ ನಾರಾಯಣನಂ (ಎಕ. II. ೦೩೩-೦೪೪ ; 982).

[ಈ ಇದು 'ಪೆಣೆ' ಎಂಬುದರ ಅಪಲಿಖಿತವಿರಬಹುದು]

**ಪಿಣ್ಣ** (ಗು). ತೋರವಾದ ; ದೊಡ್ಡ ಗಾತ್ರದ : ಬಣ್ಣವಣ್ಣಿಗೆ ಯಚಿವೆಯ ತೊಟ್ಟಿಲೊಳಿಟ್ಟು ಬಣ್ಣ ಸವಿಯ ಸೂಱೆಗೊಂಡು ಪಿಣ್ಣ ಕುಚೆಯುರು ಜೋಗುಳವಾಡಿ ತೂಗುವ ಬಣ್ಣಗೆ ಬಯಲಾದಂದಕಟ (ಪರ್ವತೀ. ೦೦-೩೪). [< ಪ್ರಾ. ಪೀಣ. / ಸಂ. ಪೀನ]

**ಪಿಣ್ಯಾಕ** (ನಾ). ೧. (ಎಣ್ಣೆ ತೆಗೆದ ಮೇಲೆ ಉಳಿಯುವ) ಹಿಂಡಿ : ಚರಟ ; ನಿಸ್ಸಾರವಾದ ವಸ್ತು : ವಿವಿಧಸರಸಾನ್ನವನು ಪಿಣ್ಯಾಕವನು ಸರಿಯೆಂದುಂಡು . . . ನಷವೆನಿಪ ಚೀನಾಂಬರವನೊತ್ತುವ ಕಠಿಸವಲ್ಕಲವ ಸರಿಯೆಂದಪ್ಪನಜಗರವ್ರತಿಯಹನು (ಶಿವ್ಯಕಾಂ. ೩-೬೦) ; ತಿಲಪ ಮಥಿಸಿಸೆ ತೈಲ ಪಿಣ್ಯಾಕ ಬೇಱಾದವೊಲು ಸ್ಮೃತಿಯಮಾಥನದಿಂ ಲೌಕಿಕಾಚಾರ ತೊಲಗಿ ಲಿಂಗಾಚಾರವಂಗಕ್ಕೆ ಪ್ರತ್ಯಕ್ಷವಪ್ಪುದಱಿವಿನ ಮಥನದಿಂ (ಸಶಿಂ. ೦೬ ೬) ; ಸಾವಿ ಪಡಮನು ಬಳಿಕ ವನದೊಳಗಾರಯಿದು ತಂದೆಲೆಚಿಹ್ಣನು ಸೇರಿಸು ತ್ತಿಂಗುದಿಯ ಪಿಣ್ಯಾಕವನು ಜತೆಗದರ (ರಾಮಾಸಂ. ೨-೩-೦೦). ೨. ಹಾಲು ಮಡ್ಡಿ ಮುಂತಾದ ಸುಗಂಧದ್ರವ್ಯ. [ಸಂ.]

**ಪಿತ** (ನಾ). ತಂದೆ ; ಅಪ್ಪ : ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ ಅಧರ್ಮದಲ್ಲಿ ಕೆಡಿಸುವ ಸುತನಂತೆ (ಐಪ. ೨೦೩) ; ಶ್ರೀಮಂತೆಯರಸನೆ ವಿಮಲರಾಜೀವಪೀಠನ ಪಿತನೆ . . . ಕಾವುದಾನತಜನವ ಗರುಡಗಮನ ವೀರ ನಾರಯಣ (ಕುಬ್ಜಾಕೆ. ೦-೦) ; ಪಿತನಂ ಕೋಪಕೃತಾಪರಾಧಯುತನಂ ಕೊಂದಿಕ್ಕಲೆಂದಾ ಮಹಾಮತಿ ಕೈಕೊಂಡು ಕುಠಾರಮಂ ಜಡಿಯೆ (ಪ್ರಶಪ. ೬-೦೬). [< ಸಂ. ಪಿತೃ]

**ಪಿತರ** (ನಾ). ಸ್ವರ್ಗಸ್ಥನಾದ ಹಿರಿಯ ; ಪಿತೃ : ನೆಗಟ್ಟಿಯ ಬೀರರೆಲ್ಲಂ ಬಡಪರ ಪಿತರರಂತೆ ಮಿಳ್ಳಿಳ ನೋಡುತ್ತಿರೆ (ಕಂಪಪಾ. ೬-೩೩ ವ) ; ಮುನ್ನಿನ ಭವದೊಳ್ ಕುಡದರ್ ಕಣ್ಬಡಿನೊಳ್ ಧೃತಿಗಿಡೆ ಬಡವರ ಪಿತರರಂತೆ ಮಱು ಗುತ್ತಿರ್ದಂ (ಶಾಬ್ದಾಪ. ೦೮೦) ; ಮಾತರರುಂ ಪಿತರರುಮಾ ಭ್ರಾತರರುಂ . . . ಎಲ್ಲರುಂ ಸಲೆ ಸೈತಿರ್ಪರ್ ಜಪನನಾರುಮೇಂ ಬಾರಿಪರೇ (ಶಬ್ದಾಶು. ೦೨೨ ಪ್ರಯೋ). [ಸಂ. ಪಿತೃ]

**ಪಿತಲಾಟ** 'ಪಿತ್ತಲಾಟ' ನೋ.

**ಪಿತಾಜಿ** (ನಾ). (ಗೌರವಾರ್ಥದಲ್ಲಿ) ತಂದೆ : ವಿಜಯದಾಸ ಹೊರಗಿನಿಂದ ಬಂದವನೆ ಪಿತಾಜಿಯ ವಿಚಿತ್ರರೂಪವನ್ನು ನೋಡಿ—ನೀನು ಅತ್ರೆಯಾ . . . ಎಂದು ಕೇಳಿದನು (ಕಂಬಕು. ೯೩). 'ಅಪ್ಪಾಜಿ' ಪರಾ.

[< ಪಿತ + —ಜಿ]

**ಪಿತಾಮಹ** (ನಾ). ೧. ತಂದೆಯ ತಂದೆ ; ಅಜ್ಜ ; ತಾತ : "ತಂದೆಯ ಪಿತ ಪಿತಾಮಹಂ" (ಕುಂಗರಾ. ೯೩-೦೪) ; ನೆಗಟ್ಟಿಯ ಪುರುಷೋತ್ತಮನ ಪಿತಾಮಹಂಗೆ ಶೂರಂಗೆ ಪಂಗಳ್ ಮತ್ತಗಜಗಮನೆ ಯದುವಂಶೋತ್ತಮೆ ಯೆನೆ ಕುಂತಿ ಕುಂತೀಭೋಜನ ಮನೆಯೊಳ್ ಬಳೆಯುತ್ತಿರ್ಪನ್ನೆಗಂ (ಕಂಪಪಾ. ೦-೬೬) ; ಧೀರನಿಧಿ ಬಿಟ್ಟಿದೇವನೊಳೋರಗೆ ಬಲ್ಲಾಳನಿಂತು ನರಸಿಂಹಸುತಂಗಾರೆಣೆ ಗಗನಂ ಗಗನಾಕಾರಮೆನಲ್ಕುಮ್ಮೊಳೆಣೆ ಪಿತಾಮಹ ಪೌತ್ರರ್ (ಜಕೋಚ. ೦-೦೩) ; ಎಲೆ ಭೂಪ ನಿನ್ನ ಪಿತಾಮಹರು ಹಿಂದಕೆ ಮುನಿಶಾಪದಿಂದಳಿದು ಭೂತಂಗಳಾಗಿರ್ಪರೆನಲು (ಶ್ರೀಕರಾ. ೮-೪೩). ೨. ಬ್ರಹ್ಮ : "ಬ್ರಹ್ಮಾ, ಸ್ರಷ್ಟಾ, ಧಾತಾ, ಪರಮೇಷ್ಠೀ, ಪದ್ಮಭೂಃ . . . ಪಿತಾಮಹಃ, ಜಗತ್ಕರ್ತಾ, ವಿಶ್ವಾತ್ಮಾ, ಕಮಲಾಸನಃ—ಈ ೨೦ ಬ್ರಹ್ಮನ ಪೆಸರ್" (ಹಲಾಯು. ೨-೩) ; ಬಣ್ಣಿಸುವ ಪಿತಾಮಹಂಗವುರಿದೆಗ್ಗ ಮೊಗ್ಗೆ ನಿನಗಮದೆನಗು (ಶಾಂತಪು. ೦-೬೦) ; ಚಕ್ರಧರತ್ವಮುಂ ಸಫಲಂ . . . ಆ ವಿಕ್ರಮಸಾಲ್ವನಂ ನವಿಸಿದಂದಿದ ನಾನಱಿದೆಂ ಪಿತಾಮಹಾ (ಜಗಪ. ೦-೬೩) ; ಶ್ರೀಮಂನಗಜಾನಯನಕ್ಕಿರವ . . . ಪಿತಾಮಹಾದಿ ಸುಪರ್ಣಸಂಕುಳಸವಿತ್ರಪಾದಾಬ್ಜ . . . ಕೃಪಾಪದನಂ (ಕಂಕೆರಾ. ೦ ೦). ೩. ರಾಜ ; ಅರಸ. ೪. ಬೇರೆಯವರ ಮನಸ್ಸಿನ ಲ್ಲಿರುವುದನ್ನು ತಿಳಿಯುವವನು : "ಧಾತೃ ಭೂನಾಥ ತಾತ ಮನೋಜ್ಞಾನಿ ಪಿತಾಮಹಾಹ್ವಯಂ" (ನಾನಾರ. ೨೩). [ಸಂ.]

**ಪಿತುಮ** (ನಾ). ಒಳಸಂಚು ; ಕುತಂತ್ರ ; ಪಿತೂರಿ : ನಿಜಸಂಸ್ಥಾನ ದೊಳಿರ್ಪ ಕುಹಕಿಸಿಯೋಗಿಗಳೊಡರ್ಚಿದ ಪಿತುಮೆ[ಪಾಠಾಂ. ತೂರಿ]ಯಿಂ ವಿಜಯಪುರವರ್ತಿಯೆನಿಸುವ ಮುಜಬರಖಾನಂ ತೆರಳ್ದ (ಕೆಳನೃ. ೬-೩೩) ; ಜಾನಂತರಾಯಿಂ ಪಿತುಮೆಯ ಮೇಲೆ ವಿವಾಸಖಾನನು ಕೊಲಿಸಿ ತಾನೇ ಮುಖ್ಯನಾಗಿ ಪಾತುಶಾಹಿಯ ಬದಂಕುಗಳಂ ನಡೆಸಿದು (ಕೆಳನೃ. ೯-೩೯). [← ಮರಾ. ಫಿತವಾ, ಫಿತಾವಾ]

**ಪಿತೂರಿ** 'ಫಿತೂರಿ' ನೋ.

**ಪಿತೂರಿಗಾರ** (ನಾ). ಒಳಸಂಚನ್ನು ಹೂಡುವವನು ; ಸಂಚುಗಾರ ; ಮೋಸಗಾರ : ಇಂದಿನ ಫ್ರೆಂಚ್ ಜನಾಂಗದವರಷ್ಟು . . . ಪಿತೂರಿಗಾರ ಜನ ಈವರೆಗೆ ಯಾವ ರಾಷ್ಟ್ರದಲ್ಲಿಯೂ ಹುಟ್ಟಿಲ್ಲ (ಕೃಕೃಕಥಾ. ೬೩).

[ಪಿತೂರಿ (< ಫಿತೂರಿ) + —ಗಾರ (< —ಕಾಱ)]

**ಪಿತೂರಿವ್ಯಾಪಾರ** (ನಾ). ಒಳಸಂಚಿನ ವ್ಯವಹಾರ : ಇದೆಲ್ಲ ಪಿತೂರಿ ವ್ಯಾಪಾರವಾಗಿಯಿದೆ (ಹ್ಯದಿ. ೩೮).

[ಪಿತೂರಿ (< ಫಿತೂರಿ) + ವ್ಯಾಪಾರ]

**ಪಿತೃ** (ನಾ). ೧. ತಂದೆ ; **ಪಿತ** : "ಜನಕನಾ ಪಿತೃ ವಪ್ಪ ತಾತನೆನೆ ತಂದೆ" (ಚುಂಗಣಾ. ೯೦-೯) ; ಪಿತೃಮರಣಜಾತದುಃಖಮನೀಗಳ್ ಮಱೆದು ಮನಂ ನೀಗುರ್ಱಿಯಲ್ ಮಱುಗಿದಪುದು (ಕಾದಂಪೂ. ೦೯೩) ; ಪಿತೃ ಪವನಂಜಯಂ ಖಚರವಲ್ಲಭನಂಜನೆ ಪೆತ್ತ ತಾಯ್ ಮಹಾಸತಿ ಹನುಮಂತನೆಂ ಪೆಸರೊಳಾಂ (ಶಂರಾವು. ೧೦-೯೩) ; ಪಿತೃ ಕೃತಕೃತ್ಯನಾಗೆ ಪಸವಂ ಜನಸಂತತಿ ನೀಗೆ ಶತ್ರುಸಂತತಿ ತಲೆವಾಗೆ . . . ತಳೆದಂ ಭುವನ ಪ್ರಭು ರಾಜ್ಯಲಕ್ಷ್ಮಿಯಂ (ಶಿಕ್ಯಶ. ೦೩-೨) ; ಪಿತೃಸಮೋಭ್ರಾತ ಎನಿಪ್ಪುದು ಶ್ರುತಿವಚನವು (ಕುವ್ಯಾಕ. ೦೬-೨೦). ೨. ಹಿಂದಿನವನು ; **ಪೂರ್ವಜ** : ಪಿತೃಗಳುಪಾರ್ಜಿಸಿಟ್ಟ ಸಿರಿ ಜವ್ವನದೇಟಿಗೆ ಪೆಱಗಿಲ್ಲನಿಪ್ಪತಿಶಯರೂಪು ಶಕ್ತಿಗಳಿವಲ್ಲವೆ ಹಾನಿಯ ಬಳ್ಳಿವಳ್ಳಿ (ಕಾದಂಪೂ. ೫೩೯). ೩. ಸ್ವರ್ಗಸ್ಥನಾದ **ಹಿರಿಯ** : ಪಿತೃ ಪಿತಾಮಹ ಪ್ರಪಿತಾಮಹರೆಂಬ ಮೂರುವಿಧ ಪಿತೃಗಳಿಗೆ ಅಧಿಪತಿಗಳು ವಸುಗಣ, ರುದ್ರಗಣ, ಆದಿತ್ಯಗಣ ಎಂಬ ಮೂರು ಗಣಗಳು (ಹಹಾರೆ. ೦೯-೦ ತಾತ್ಪರ್ಯ) ; ಪಿತೃಭಕ್ತಿವಿಹೀನರಾದ ಸಂಕರಸಂತಾನದಿಂದ ಪಿತೃಲೋಕದಲ್ಲಿರುವ ಪಿತೃಗಳು ಲುಪ್ತಪಿಂಡೋದಕರಾಗಿ ನರಕಗತರಾಗುತ್ತಾರೆ (ಕಾರದ. ೦೦೨) ; ಮುಕ್ತಿಯೋಗ್ಯರಲ್ಲಿ ದೇವ, ಮನುಷ್ಯ, ಪಿತೃ, ಚಕ್ರವರ್ತಿ, ಮನುಷ್ಯೋತ್ತಮ ಎಂದು ಐದು ವಿಧಗಳು (ಹಿಂದಮಾ. ೨೯೩). ೪. [ಜ್ಯೋತಿ] ಮಘಾನಕ್ಷತ್ರದ ಅಧಿದೇವತೆ. ೫. **ಮಘಾನಕ್ಷತ್ರ** : ಪಿತೃ ಮೂಲಂ ಪೂರ್ವೆ ವೈವಸ್ವತಮಿನಿತುಮವುಗ್ರಂ (ಲೋಕೋಪ. ೦-೯).

[ಸಂ.]

**ಪಿತೃಋಣ** (ನಾ). ದೇವಋಣ, ಋಷಿಋಣ, ಪಿತೃಋಣಗಳೆಂಬ ಋಣತ್ರಯಗಳಲ್ಲಿ ಒಂದು ; ಮನುಷ್ಯನು ಸಂತಾನವನ್ನು ಪಡೆದು ತನ್ನ ಪಿತೃಗಳಿಗೆ ಸಲ್ಲಿಸಬೇಕಾದ ಋಣ : ಪಿತೃಋಣ ಗುರುಋಣ ದೇವಋಣ ಇತ್ಯಾದಿ ಎಲ್ಲ ಋಣದ ಭಾರವನ್ನು ನಿಮ್ಮೊಬ್ಬರ ತಲೆಯ ಮೇಲೆ ಹೊರಿಸಬೇಕಾಗುತ್ತದೆ (ಹೂಕ್ಕ. ೨೩೨). 'ಋಣತ್ರಯ' ನೋಡಿ.

[ಸಂ.]

**ಪಿತೃಕರ್ಮ** (ನಾ). ಸ್ವರ್ಗಸ್ಥರಾದ ಹಿರಿಯರಿಗೆ ಪಿಂಡ ಮುಂತಾದುವನ್ನು ಅರ್ಪಿಸುವಿಕೆ; **ಶ್ರಾದ್ಧ** : ಪರಂಪರಾನುಗತವಾದ ಸತ್ಸಂತಾನದಿಂದಲೇ ಪಿತೃಕರ್ಮಗಳು ನಡೆಯಬೇಕು (ಕಾರದ. ೦೦೨).

[ಸಂ. ಪಿತೃಕರ್ಮನ್]

**ಪಿತೃಕಾನನ** (ನಾ). ಸುಡುಗಾಡು; **ಶ್ಮಶಾನ** : ಪಿತೃಕಾನನಗಳಲಿ ದೇವಾಲಯಗಳಲಿ ಜನಿಸಿದುದ್ಭವರಾಜಿಗಳು ಸಲ್ಲವು ವಿವಾಹಕ್ಕೆ (ಶಿವ್ಯಶ. ೯-೫೩).

[ಸಂ.]

**ಪಿತೃಕಾರ್ಯ** (ನಾ). = **ಪಿತೃಕರ್ಮ** : ಅಂಧನೃಪಾಲ ವಿದುರಗೆ ತಿಳುಹಿದನು . . . ಕೊಳುಗುಳಕೆ ಪೋದವೆಯಲ್ಲಿ ಮೃತಮಕ್ಕಳಿಗೆ ಪಿತೃಕಾರ್ಯಗಳ ಮಾಡುವುದೆಂದು ನಿಯಮಿಸಿದ (ಶಿವ್ಯಸ್ತ್ರೀ. ೧-೯೦). [ಸಂ.]

**ಪಿತೃಗ್ರಹ** (ನಾ). ಸ್ವರ್ಗಸ್ಥರಾದ ಪಿತೃಗಳಿಂದ ಉಂಟಾಗುವುದೆಂದು ನಂಬಲಾದ **ಪೀಡೆ** : ಎಳ್ಳು, ಉದ್ದು, ಬೆಲ್ಲ ಇವುಗಳಲ್ಲಿ ಪ್ರೀತಿ, ಅಪರಕೃತ್ಯದ ವ್ಯಾಪಾರದಲ್ಲಿ ಪ್ರೀತಿ, ಶಾಂತನಾಗಿಹನು. ಪೂರ್ವಾಹ್ಣದಲ್ಲಿ ಸುಮ್ಮನಿದ್ದು ಅಪರಾಹ್ಣದಲ್ಲಿಯೇ ಸಂಚಾರದ ಮಾಡುವನು ಈ ಲಕ್ಷಣಗಳುಂಟಾಗಿಹುದು ಪಿತೃಗ್ರಹವೆಂದರಿವುದು (ವೈದ್ಯಸಾ. II. ೩೩). 'ದೇವಗ್ರಹ' ನೋಡಿ.

[ಸಂ.]

**ಪಿತೃತರ್ಪಣ** (ನಾ). ಸ್ವರ್ಗಸ್ಥರಾದ ಹಿರಿಯರಿಗೆ ಕೊಡುವ ತರ್ಪಣ,- ಎಳ್ಳು ನೀರು : "ನಿವಾಪಃ, ಪಿತೃತರ್ಪಣಂ—ಈ ೨ ನೀರ್ಗುಡುವುದು" (ಹಲಾಯು. ೦೦೫-೦೬); ಬಸುಱಿನ ಬಿಸಿಯ ರಕುತವನು ಎಱೆದು ಪಿತೃತರ್ಪಣವ ನೀಡುವೆ (ಕೌಶಿರಾ. ೩೫-೨೦) ; ಸಸಿನೆ ಸಂಧ್ಯಾನ ಜಪ ಹೋಮಸ್ವಾಧ್ಯಾಯಮಂ ಪಿತೃತರ್ಪಣಮಂ ರೀತ್ಯಾ . . . ಸದಾಚಾರ ತಪ್ಪದೆ ಮಾಡುತಿಹರು ಸದ್ಧರ್ಮದೊಡನೆ (ಸವಮೋ. ೨-೩೬).

[ಸಂ.]

**ಪಿತೃದಾನ** (ನಾ). ಸ್ವರ್ಗಸ್ಥರಾದ ಹಿರಿಯರಿಗೆ ಸಲ್ಲಿಸುವ ತಿಲೋದಕ, ಪಿಂಡಪ್ರದಾನ ಇತ್ಯಾದಿಗಳು : "ನಿವಾಪಃ—ಪಿತೃದಾನ—ಪಿತೃ ಪಿತೃತ್ವವನ್ನು ಹೊಂದಿದವರು, ತೃಪ್ತಿಪಡುವುದಕ್ಕೋಸ್ಕರ ಮಾಡಲ್ಪಡುವ ದಾನ, ತಿಲೋದಕ ಪಿಂಡಪ್ರದಾನಗಳ ಹೆಸರು" (ಸಿದ್ಧಾಂತಿ. ೨೨೨). [ಸಂ.]

**ಪಿತೃದಿನ** (ನಾ). ಶ್ರಾದ್ಧದ ದಿನ ; **ತದ್ದಿನ** : ಇಂದು ಪಿತೃದಿನವಿಂದು ಸಂಕ್ರಮಣವಿಂದು ಸೂರ್ಯಗ್ರಹಣ ಹರಿದಿನವಿಂದು ಯಜ್ಞಾರಂಭದಿನ ಪಡ್ಡಂತಿ ಲೇಸೆಂದು . . . ತಿಂದು ಕೊಬ್ಬಿದ ನಿಮಗೆ ಸುಭಟರ ಮಾತದೇಕೆ (ಕುವ್ಯಾವಿ. ೬-೦೩). [ಸಂ.]

**ಪಿತೃದ್ವಂದ್ವ** (ನಾ). ತಂದೆ ಮತ್ತು ತಾಯಿ ; **ಮಾತಾಪಿತೃಗಳು** : ನವಮಾಸಾವಶೇಷಾಯುಷ್ಯರಾಗಿ ನೆಲಸಿರ್ದ ಗರ್ಭಂ ತದವಸಾನದೊಳ್ ಪುಟ್ಟಲೊಡಂ ಪಿತೃದ್ವಂದ್ವಂ ಕ್ಷುತಜೃಂಭಣವ್ಯಾಜದಿಂ ಪರಾಸುಗಳಕ್ಕುಮೆಂದು ಪೇೞ್ (ಶಂದ್ರಶ. ೩-೩೮ ವ) ; ಇದು ಸರ್ವೋರ್ವಿಗಮುತ್ತ ಪೂರ್ವಮೆನೆ. . . ಪೂಜಿಸಿದನಿಂದ್ರಂ ತತ್ಪಿತೃದ್ವಂದ್ವಮಂ (ಶುಶ್ಯಶ. ೦೨-೦೩).

[ಸಂ.]

**ಪಿತೃಧನ** (ನಾ). ತಂದೆಯಿಂದ ಅಥವಾ ಪೂರ್ವಜರಿಂದ ಪಡೆಯುವ ಆಸ್ತಿ; **ಪಿತ್ರಾರ್ಜಿತ ಸ್ವತ್ತು**: ಸುತಂ ಪಿತೃಧನಮುದಮುತ್ತಂ ಮೂರ್ಖನೆಂದೊಡೇನಱಿಸುವುದೋ (ಕಾವ್ಯಾವ. ೦೬೨). [ಸಂ.]

**ಪಿತೃಪಕ್ಷ** (ನಾ). ೧. ತಂದೆಯ ಕಡೆಯ ಬಂಧು : ಪಕ್ಷವೆರಡೇ ಲೋಕದೊಳ್ ಪಿತೃಪಕ್ಷ ಮೇಣಾ ಮಾತೃಪಕ್ಷ ವಿಪಕ್ಷ ತಂದೆಯ ದೆಸೆ ಸಪಕ್ಷವು ತಾಯ ದೆಸೆಯವರು (ಕುವ್ಯಾಅ. ೮-೦೬). ೨. ಭಾದ್ರಪದಮಾಸದ ಕೃಷ್ಣಪಕ್ಷ ; ಹಿರಿಯರಿಗೆ ತರ್ಪಣ ಕೊಡುವ **ಕಾಲ** : ಪಿತೃಪಕ್ಷ, ಮಹಾಲಯಅಮಾವಾಸ್ಯೆಗಳಲ್ಲಿ ನಾವು ಮಾಡುವ ಪಿತೃಪಕ್ಷ ಶ್ರಾದ್ಧಗಳ ಮೂಲದಲ್ಲಿ ಈ ಕೃತಜ್ಞತಾದರ್ಶನವೇ ಇದೆ ಎಂಬುದನ್ನು ಮರೆಯುವಂತಿಲ್ಲ (ಕಾಹಮ್ಮ. ೦೨೯) ; ಪಿತೃಪಕ್ಷ, ಯುಗಾದಿಹಬ್ಬಗಳಲ್ಲಿ ಅವನ್ನು ತಿಂದ ಮಾರನೆಯ ದಿನ ಮಾವಯ್ಯ ಕಾಲುವೇ ಮರೀ ಮೇಲೇ ಇರುತ್ತಿದ್ದ (ನಮ್ಮೂರು. ೨೨೦). [ಸಂ.]

**ಪಿತೃಪತಿ** (ನಾ). ಪಿತೃಗಳ ಒಡೆಯ ; **ಯಮ** : "ಶಮನಃ, ಸಮವರ್ತೀ ಪ್ರೇತಪತಿಃ, ಪಿತೃಪತಿಃ . . . ಈ ೧೬ ಯಮನ ಪೆಸರ್" (ಹಲಾಯು. ೦೩-೭೦): ನುತ ಸುರಪತಿಯುಂ ಸ್ವಾಹಾಪತಿಯುಂ ಪಿತೃಪತಿಯುಂ . . . ಪಶುಪತಿಯುಮೆನಿಸಿದಾಶಾಪತಿಗಳ್ (ಶುಶ್ಯಶು. ೦೬-೮೦) : ಬಿದ್ದವರನೊಡೆತುಳಿದು ಮೇಲುಬ್ಬೆದ್ದು ಕವಿವ ವಿದಾಳುಕುದುರೆಯ ಬಿದ್ದಿನಲಿ ಬೇಸಱಿಸಿದನು ಪಿತೃಪತಿಯ ಪರಿಜನವ (ಕುವ್ಯಾಕ. ೦೦-೩೮) : ಅಡರಿದನು ಪಿತೃಪತಿ ಮಹಾರಥವ (ಉತ್ತರಾ. ೬-೨೬). [ಸಂ.]

**ಪಿತೃಪದೇಶ** (ನಾ). ಯಮನ ದೇಶ ; **ಯಮಲೋಕ** : ಸಂದೇಹಿಗಳಿಗೆ ಪಲ್ಗಿರಿಪವರ ಶರಣರಂ ನಿಂದಿಸಿ ಪಿತೃಪದೇಶಕೊಕ್ಕಲಾದವರ ಮಾಯಾಂಧಕಾರದೊಳು ಕಂಗಾಣದರ ಸಂಗವಿಱಿಕಿನೊಳು ಸಿಕ್ಕದೊಲು (ಷಟ್ಪ. ೦೩-೨೦).

[ಸಂ.]

**ಪಿತೃಪ್ರಸು** (ನಾ). ೧. ತಂದೆಯ ತಾಯಿ ; **ಪಿತಾಮಹಿ** ; **ಅಜ್ಜಿ**. ೨. ಸೂರ್ಯಾಸ್ತದ ಸಮಯ; **ಮುಸ್ಸಂಜೆ**: "ಸಂಧ್ಯಾ, ಪಿತೃಪ್ರಸೂಃ—೨ ಸಂಧ್ಯಾಕಾಲದ ಹೆಸರುಗಳು. ಅಂದರೆ ಸಂಜೆ" (ಸಿದ್ಧಾಂತಿ. ೩೫).

[ಸಂ. ಪಿತೃಪ್ರಸೂ]

**ಪಿತೃಪ್ರಿಯ** (ನಾ). ಪಿತೃಗಳಿಗೆ ಪ್ರಿಯನಾದವನು; ಪಿತೃಪತಿ; ಯಮ: "ಪ್ರೇತಪತಿ ಸಮವರ್ತಿ . . . ಶಮನನಿನಜಾತಂ ಪಿತೃಪ್ರಿಯಂ ಹರಿ ದಂಡಪಾಣಿ ಕೀನಾಶಂ ಕೃತಾಂತನಕ್ಕುಂ" (ಮಂಗರಾ. ೦೩-೦೦). [ಸಂ.]

**ಪಿತೃಭಕ್ತತೆ** (ನಾ). ತಂದೆಯಲ್ಲಿ ಇಟ್ಟಿರುವ ಭಕ್ತಿ,—ಪೂಜ್ಯಭಾವ: ಸಂದ ದಾನಚಿಂತಾಮಣಿ ತನ್ನದೊಂದು ಪಿತೃಭಕ್ತತೆಯಂ ಮೆಚ್ಚಿಯಲ್ ಪುರಾಣಚೂಡಾಮಣಿಯಂ ನಿರ್ಮಿರ್ಚಿದಳ್ (ಶಾಂತಿಪು. ಶಂ. ೦-೦). [ಸಂ. ಪಿತೃಭಕ್ತತಾ]

**ಪಿತೃಭಕ್ತಿ** (ನಾ). = ಪಿತೃಭಕ್ತತೆ: ಉದಾತ್ತನೀ ಮಲ್ಲಪಯ್ಯನೊಳೊಪ್ಪುಗುಂ ಪಿತೃಭಕ್ತಿಯುಂ ವಿನಯೋಕ್ತಿಯುಂ (ಶಾಂತಿಪು. ೦-೧೦); ಪಿತೃಭಕ್ತಿವಿಹೀನರಾದ ಸಂಕರಸಂತಾನದಿಂದ . . . ಪಿತೃಗಳು ಲುಪ್ತಪಿಂಡೋದಕರಾಗಿ ನರಕಗತರಾಗುತ್ತಾರೆ (ಭಾರರ. ೦೦೨). [ಸಂ.]

**ಪಿತೃಭೂಮಿ** (ನಾ). ಸುಡುಗಾಡು; ಶ್ಮಶಾನ: ಆ ನಡುರಾತ್ರಿಯಲ್ಲಿ ರಾಜಮಾತೆಯ ಚಿತಾದರ್ಶನಕ್ಕೆಂದು ರಾಜಕುಲದ ಪಿತೃಭೂಮಿಗೆ ನಡೆದು ಹೋದನು (ಶಾಂತಲಾ. ೦೬೯). [ಸಂ.]

**ಪಿತೃಮೇಧ** (ನಾ). ೧.=ಪಿತೃಯಜ್ಞ ೧: ಇಂದು ದೇವತೆಗಳನ್ನು ಪ್ರಾರ್ಥಿಸುವ ಪಿತೃಮೇಧ ಎಂಬ ಯಜ್ಞವು ಕಲ್ಯಾಣಕಾರಕವಾಗಿ ಅಗಲಿ (ಪುಣ್ಯಾರ. ೩೨೭). ೨. = ಪಿತೃಯಜ್ಞ ೨: ವಿವಿಧಭಕ್ತಿಯಲಿಂತು ಪಿತೃಮೇಧವನು ವಿಹಿತವಿದೆನಲನುಷ್ಠಿಸಿಯವರು . . . ಅಮರನದೀತಟಾಕಗಳಿಗೈದಿದರು (ತಿಮ್ಮಭಾ. ೦೦-೩೪). [ಸಂ.]

**ಪಿತೃಯಜ್ಞ** (ನಾ). ೧. ಗೃಹಸ್ಥನು ಮಾಡಬೇಕಾದ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ ಮತ್ತು ಬ್ರಹ್ಮಯಜ್ಞಗಳೆಂಬ ಪಂಚಮಹಾಯಜ್ಞಗಳಲ್ಲಿ ಒಂದು; ಸ್ವರ್ಗಸ್ಥರಾದ ಹಿರಿಯರಿಗೆ ನೀಡುವ ತರ್ಪಣ: ದೇವಯಜ್ಞ, ಪಿತೃಯಜ್ಞ . . . ಬ್ರಹ್ಮಯಜ್ಞಾದಿಗಳಂ ಮಹಾಪ್ರೀತನಾಗಿ (ಪಿವೀಕ. ೦೩೪); ಬ್ರಹ್ಮಯಜ್ಞ, ಪಿತೃಯಜ್ಞ ... ಮನುಷ್ಯಯಜ್ಞ—ಈ ಐದು ಮಹಾಯಜ್ಞಗಳು ... ಪಿತೃತರ್ಪಣವು ಪಿತೃಯಜ್ಞವು (ಆರ್ಯಧ. ೦೬೭); ಭೂತಯಜ್ಞ, ಮನುಷ್ಯಯಜ್ಞ, ಪಿತೃಯಜ್ಞ . . . ಎಂಬ ದೈನಂದಿನದ ಕರ್ತವ್ಯನಿರ್ವಹಣದಿಂದ ಗೃಹಸ್ಥನು ಲೋಕಸಂಗ್ರಹನಿರತನಾಗಿರಬೇಕು (ಪುಣ್ಯಾರ. ೯೦ ಟೀಕೆ). ೨. ಸತ್ತವರಿಗೆ ಮಾಡುವ ಕರ್ಮ; ಅಪರಕರ್ಮ; ಅಂತ್ಯಕ್ರಿಯೆ: ವಿಧ್ಯುಕ್ತವಾಗಿ ಪಿತೃಯಜ್ಞ ನಡೆಯಿತು. ಹೀಗೆ ಅಗ್ನಿಸಂಸ್ಕಾರವಾದ ಮೇಲೆ ಎಲ್ಲರೂ ಗಂಗಾತೀರಕ್ಕೆ ಹೋಗಿ ತರ್ಪಣ ಕೊಟ್ಟರು (ವಚಕಾ. ೩೩೪). [ಸಂ.]

**ಪಿತೃಯಾಣ** (ನಾ.) = ಪಿತೃಯಾನ ೨: ಇಷ್ಟಾಪೂರ್ತಗಳನ್ನು ಮಾಡಿದವರ ಪಿತೃಯಾಣ (ಇದಕ್ಕೆ ಕೃಷ್ಣಮಾರ್ಗವೆಂದೂ ಧೂಮಮಾರ್ಗವೆಂದೂ ಹೆಸರು) (ಅಮೃತ. ೭-೨೨ ಟೀಕು); ಬ್ರಹ್ಮದೊಂದಿಗೆ ಐಕ್ಯವನ್ನು ಪಡೆದ ಜೀವಾತ್ಮನು ಪಿತೃಯಾಣಕ್ಕಿಂತ ಭಿನ್ನವಾದ ದೇವಯಾನದಲ್ಲಿ ಹೋಗುತ್ತಾನೆಂದು ಹೇಳಿದೆ; ಪಿತೃಯಾಣವು ಪುನರ್ಜನ್ಮಕ್ಕೆ ಒಳಗಾಗಿರುವ ಬದ್ಧ-ಜೀವನಿಗೆ ಸೇರಿದ್ದು (ತತ್ತ್ವಪ್ರಾ, ೬೩). [ಸಂ.]

**ಪಿತೃಯಾನ** (ನಾ). ೧. ಪಿತೃಗಳು ಸಂಚರಿಸುವ ವಾಹನ. ೨. [ವೇದಾಂತ] ಪುನರ್ಜನ್ಮಕ್ಕೆ ಒಳಗಾಗುವ ಬದ್ಧಜೀವನು ಪಡೆಯುವ ಒಂದು ಗತಿ; ಪಿತೃಗಳು ಹೋಗುವ ಮಾರ್ಗ; ಕೃಷ್ಣಗತಿ: ಹುಟ್ಟಿದ ಪ್ರಜೆಗಳು ಸತ್ತ ಬಳಿಕ ಬೇರೆಬೇರೆಯಾಗಿ ಹೋಗುವರೆಂಬುದನ್ನು ಬಲ್ಲೆಯಾ . . . ದೇವಯಾನ ಪಿತೃಯಾನಮಾರ್ಗಗಳ (ಮರಣಾನಂತರ ಆತ್ಮನ ಗತಿಗಳು) ಸಾಧನಗಳೇನೆಂಬುದನ್ನು ಬಲ್ಲೆಯಾ? (ಭಾರರ. ೪೦). 'ದೇವಯಾನ' ಪರಾ. [ಸಂ.]

**ಪಿತೃರೇಖೆ** (ನಾ). [ಸಾಮುದ್ರಿ] ಹಸ್ತರೇಖೆಗಳಲ್ಲಿ ಒಂದು: ಮಧ್ಯಮದ ಆದಿಯಲ್ಲಿ ಪಿತೃರೇಖೆಯಿರುವದು (ಸಾಮುಂ. ೯೭-೦೩). [ಸಂ. ಪಿತೃರೇಖಾ]

**ಪಿತೃಲೋಕ** (ನಾ). ಮೃತರಾದ ಪಿತೃಗಳು ಇರುವ ಲೋಕ; ಚಂದ್ರಲೋಕಕ್ಕಿಂತ ಮೇಲಿರುವುದೆನ್ನಲಾದ ಒಂದು ಲೋಕ: ಮುಂದೆ ಪಿತೃಲೋಕಮಾರ್ಗಂ ದೂರಮಪ್ಪುದೆನಗೆಂದು ಬಗೆಯದೆ . . . ಸಲೆ ಸಂದ ಸತ್ಕುಲಕುಜಕೆ ಕೊಡಲಿಯಾದಳ್ ಭಾವಿಸೆ (ಅರಾತ. ೦-೭-೨೪); ಶ್ರೋತ್ರಂಗಳಲಿ ಪ್ರಾಣವು ಪೋಗೆ ಪಿತೃಲೋಕದಲಿ ಸಂಚರಿಸುವರು (ಗಗಶಾ. ೬-೩೯); ಪಿತೃಭಕ್ತಿವಿಹೀನರಾದ ಸಂಕರಸಂತಾನದಿಂದ ಪಿತೃಲೋಕದಲ್ಲಿರುವ ಪಿತೃಗಳು ಲುಪ್ತಪಿಂಡೋದಕರಾಗಿ ನರಕಗತರಾಗುತ್ತಾರೆ (ಭಾರರ. ೦೦೨). [ಸಂ.]

**ಪಿತೃವಂಚಿತ** (ನಾ). ೧. ತಂದೆಯಿಂದ ವಂಚಿತನಾದವನು. ೨. ತಂದೆಯನ್ನು ಕಳೆದುಕೊಂಡವನು: ಅವನ ತೀಕ್ಷ್ಣಬುದ್ಧಿ ಮತ್ತು ಪ್ರತಿಭೆಗಳಿಗಾಗಿ ಎಷ್ಟು ಪ್ರೀತಿಸುತ್ತಿದ್ದರೋ ಅಷ್ಟೇ ಪಿತೃವಂಚಿತನಾದ ಅವನ ಬಡತನದ ಬಾಳಿಗಾಗಿ ಮರುಕಪಡುತ್ತಿದ್ದರು (ಬಾಪಿಬಿ. ೨೦). [ಸಂ.]

**ಪಿತೃವನ** (ನಾ). ಶ್ಮಶಾನ; ಪಿತೃಭೂಮಿ: "ಶ್ಮಶಾನಂ, ಪಿತೃವನಂ—ಈ ೨ ಮಸಣಗಾಡು" (ಹಲಾಯು. ೦೦೩-೦೬); ಗಿರಿಗುಹೋದರ ಕಂದರ ವಿಟಪಿ . . . ಪಿತೃವನ ಜೀರ್ಣದ್ವಾರ ಶೂನ್ಯಗೃಹಾದಿಗಳೊಳ್ (ಅಪಕ್ಷು. ೬-೨೬ ಪ); ಪಿತೃವನಮುದಾ[ಪಾಶಾಂ. ಪರೇತವನಮಾ ಪರಿಭವನಮಾ]ಯ್ತುಂಬುಜವನಂ (೦೬೦೫೬. ೬-೬೩); ಲಲನೆನಂದನರನು ಮಹೀಸುರನಿಲಯದಲಿ ಮಾಜಿದನು ತಾನೇ ಹೊಲೆಯಗಾಳಾಗಿದ್ದನಾ ಪಿತೃವನಪತಿತ್ವದಲಿ (ಕೂರರಾ. ೩-೨-೨೪). [ಸಂ.]

**ಪಿತೃವಾಕ್ಯ** (ನಾ). ತಂದೆಯ ಮಾತು,—ನುಡಿ: ಪಿತೃವಾಕ್ಯಮನುಲ್ಲಂಘಿಪ ಸುತನೆ ಮಹಾಜ್ಞಾನಿಯಾದೊಡಂ ವಿಬುಧರ ಸಮ್ಮತಮಲ್ಲವಂಗೆ ನರಕದ ಗತಿ ತಪ್ಪದು (ಪಿಮ್ಮಪು. ೦-೫-೨೩೭).

**ಪಿತೃವಾಕ್ಯಪರಿಪಾಲನೆ** = ತಂದೆಯ ಮಾತನ್ನು ನಡೆಸುವಿಕೆ; ತಂದೆಯ ಆಜ್ಞೆಯನ್ನು ಪಾಲಿಸುವಿಕೆ: ರಾಮನ ಪಿತೃವಾಕ್ಯಪರಿಪಾಲನೆಯು ರಾಮಾಯಣಕ್ಕೆ ನಾಂದಿಯಾಯಿತು (ರೂಢಿ). [ಸಂ.]

**ಪಿತೃವಿತ್ತ** (ನಾ). ಪಿತ್ರಾರ್ಜಿತವಾಗಿ ಬಂದ ಹಣ,—ಸಂಪತ್ತು: ತಾಂ ಪಿತೃವಿತ್ತಮದೋನ್ಮತ್ತಧರ್ಮದೊಳ್ ಬಹಿರ್ಮುಖನುಂ . . . ಮೋಕ್ಷದೊಳ್ ನಿರಪೇಕ್ಷಕನುಮಾಗಿ (ಶಂಕತಂ. ೨೯-೫); ಪಿತೃವಿತ್ತಭೋಗಿ ಕುನಖಿಂ ಮೆಲ್ಪಿಂದೆ ಬಲ್ಪಿಂದೆ ಸಾಧಿಸೆ ಸಾಧ್ಯಂ ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗೇಹಜಂ (ಜಾತಪಿ. ೦೬-೯). [ಸಂ.]

**ಪಿತೃವಿಯೋಗ** (ನಾ). ತಂದೆಯನ್ನು ಕಳೆದುಕೊಳ್ಳುವಿಕೆ; ತಂದೆಯ ಮರಣ, — ಸಾವು: ಗುರುವಿರಪಜನಿತಚಿಂತಾತರಂಗಿಣೀರಯಮುನಾತ್ಮಕುಲವೃದ್ಧವಚಸ್ತರಣಿಯಿನೆಂತಾನುಮಧಃಕರಿಯಿಸಿದಂ ಪಿತೃವಿಯೋಗಮೇಂ ದುಸ್ತರಮೋ (ಚಂದ್ರಪ್ರಪು. ೨-೬೦). [ಸಂ.]

**ಪಿತೃವ್ಯ** (ನಾ). ತಂದೆಯ ಸಹೋದರ; ಚಿಕ್ಕಪ್ಪ ಅಥವಾ ದೊಡ್ಡಪ್ಪ: "ತಾತನೊಡಹುಟ್ಟಿದಾತಂ ಪಿತೃವ್ಯನೆನಿಕ್ಕುಂ (ಮಂಗರಾ. ೯೨-೦೩); ಅಂಕುಶನೊಳ್ ನಿರಂಕುಶಂ ಲಕ್ಷ್ಮಣಂ ಪಿತೃವ್ಯಂ ದಶಕಂಧರನೊಳ್ ನೆರೆವಂತಿರೆ . . . ಮೊಜೆದು ಕಾದುತ್ತಿರ್ದಂ (ಶಂರಾಪಪಾ. ೦೬-೦೩); ಚರಣಾಂಭೋಜಾತಮಂ ಪೂಜಿಸಿದ ತನಯನಂ ತತ್ಪಿತೃವ್ಯಂ ಧರಾಧೀಶ್ವರನಾಶೀರ್ವಾಕ್ಯಮೋತಂ ತೆಗೆದು ಬಿಗಿದು ತಟಕ್ಕೈಸಿದಂ ಪ್ರೀತಿಯಿಂದಂ (ವರ್ಧಪು. ೨-೪೪); ನೀನಲಾ ಗುರುಮಂದ್ಯನೆವಗತಿಮಾನನೀಯನಲಾ ಪಿತೃವ್ಯನದೇನ ಹೇಳಿದೆ ತಂದೆ ಲಾಲನಪೋಷಣಾರ್ಹರಿಗೆ (ಕಿಭಾಗ. ೦೦-೪೫-೩೩). [ಸಂ.]

**ಪಿತೃಶೇಷ** (ನಾ). ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಪಿಸಿದ ನೈವೇದ್ಯ. [ಸಂ.]

**ಪಿತ್ತ** (ನಾ). ೧. ಶರೀರದ (ವಾತ, ಪಿತ್ತ, ಶ್ಲೇಷ್ಮಗಳೆಂಬ) ಮೂರು ಬಗೆಯ ಧಾತುಗಳಲ್ಲಿ ಒಂದು: "ವಾಯುಃ, ಪಿತ್ತಂ – ಈ ೨ ಪಿತ್ತಂ" (ಹಲಾಯು. ೯೯-೯೭೦). ೨. ಪಿತ್ತಾಧಿಕ್ಯದಿಂದ ಉಂಟಾಗುವ ಬೇನೆ,–ರೋಗ: ಪಿತ್ತವಿಕಾರ : ಸಿತಮಂ ದ್ರಾಕ್ಷೆಯುಮಂ ಮಧುಯುಕ್ತಮಾಗಿರೆ ತಿಂದು ಬಱಿಕೆ ತಣ್ಣೀರ್ಗುಡಿಯಲ್ ಪತಿಯಿಸುಗುಮಧಿಕಪಿತ್ತಮಂ (ಲೋಕೋಪ. ೯-೦೦); ವಾತಂ ಪಿತ್ತಂ ಕಫವೆಂಬೀ ತೆಱದಿಂ ಮೂಱು ದೋಷಮಾದ್ಯಂತ ಸಮಾಖ್ಯಾತಂಗಳವುಷ್ಣದಿನತಿಶೀತದಿನುಪಶಮಿಕುಮಲ್ಲಿ ಮಧ್ಯಮದೊಂದುಂ (ಕಾವ್ಯಾವ. ೪೬೦); ತೊಂಡೆಯ ಹೂವು . . . ಈ ಎಲೆರಸ ಸಕ್ಕರೆ ಸಹ ಹಾಲಲ್ಲಿ ಕುಡಿಯೆ ಪಿತ್ತ ಪೋಣ್ಗುಂ (ಪಿವ್ಯೌ. ೫). ೩. ಕೋಪ ; ಸಿಟ್ಟು : ಬಿಟ್ಟ ಬಿಟ್ಟಂತಾಯ್ತು ಕಿವಿ ಥಟ್ಟುಬಿಟ್ಟು ಹೋಯಿತು ಘೋರರಭಸಕೆ ಹೆಚ್ಚಿ ಪಿತ್ತವು ತಲೆಯನೇಱಿದವೋಲ್ಲು ಶಿರುಗಿದರು (ಕೌಶಿರಾ. ೦೯-೦೨); ಪುಂಡರ ಪುಂಡತನ ಇವುಗಳ ನಿರ್ಭೀತಚಿತ್ರ ಧಾರ್ಮಿಕರೆಂಬವರ ಪಿತ್ತವನ್ನು ಹೆಚ್ಚಿಸಿದೆ (ಕಾಸವೂ. ೦೨); ಬರೆದ ಉತ್ತರವು ಆಚಾರ್ಯರ ಪಿತ್ತವನ್ನು ಕೆರಳಿಸಿತು (ಮನೆಪಿ. ೪೫). ೪. ಮರುಳುತನ ; ಹುಚ್ಚು : ಇದೇನು, ನಿಮಗೆ ಕ್ಷಣಚಿತ್ತ ಕ್ಷಣಪಿತ್ತ? (ನಾಳೀಕಂ. ೫೬). ೫. ಹುಚ್ಚು ತಲೆಗೇರಿದವನು ; ಹುಚ್ಚ : ನಂಜುಣಪುರದ ವನದಲ್ಲಿ ಕೋಪದಿಂ ಪಿತ್ತನೆಯೆಂದು ಬೈದಂತೆ ಪಾಡು (ತ್ರಿಶಂ. ೨-೦೦೯ ಪ). 'ಪಿಚ್ಚ[1]' ಪರಾ.

**ಪಿತ್ತ ತಲೆಗೇಱು, ಪಿತ್ತ ತಲೆಗೇರು**=೧. ಹುಚ್ಚು ಹಿಡಿ : ವಿಷಯದ ಪಿತ್ತ ತಲೆಗೇಱಿದಲ್ಲಿ ವಿವೇಕವೆಂಬ ದೃಷ್ಟಿ ನಷ್ಟವಾಗಿ ಪಶುಪತಿಯ ನೆನೆಹು ಕೆಟ್ಟು ಮತಿ ಮಂದವಾದಲ್ಲಿ (ದೇದಾವ. ೨೬-೪೬). ೨. ಸಿಟ್ಟು ಹೆಚ್ಚಾಗು ; ಅತಿಶಯವಾಗಿ ಕೋಪ ಬರು : ಪಿತ್ತ ತಲೆಗೇರಿದವನಿಗೆ ಶಂಖ ಕರ್‍ರಗೆ ಕಂಡರೆ ಅದರ ಬಣ್ಣ ಕೆಟ್ಟೀತೇ? (ಗಾದೆ). **ಪಿತ್ತದ ಗಂದೆ**=ಪಿತ್ತಾಧಿಕ್ಯದಿಂದ ಮೈಮೇಲೆ ಏಳುವ ಬೊಕ್ಕೆ,–ಗುಳ್ಳೆ : ಅವನ ಮೈಮೇಲೆಲ್ಲಾ ಪಿತ್ತದ ಗಂದೆಗಳೆದ್ದಿವೆ (ರೂಢಿ). **ಪಿತ್ತ ನೆತ್ತಿಗೇರು**=ಪಿತ್ತ ತಲೆಗೇಱು ೨ : ನನಗಂತೂ ಪಿತ್ತ ನೆತ್ತಿಗೇರಿಬಿಡುತ್ತದೆ (ಸುವಸಂ. ೦೪) ; ಬಸಗೊಂಡನ ಹೆಂಡತಿ, ಬಸವಂತಿಯ ಈ ನಿತ್ಯಸ್ನಾನ, ಮಾಸಾಂತಿಯ ಬದಲಾವಣೆ, ಪಿತ್ತ ನೆತ್ತಿಗೇರಲು ಕಾರಣವಾಗಿದ್ದವು (ಬೀಚಪ. II, ೦೪೨). [ಸಂ.]

**ಪಿತ್ತಕ** (ನಾ). ಒಂದು ಬಗೆಯ ಕೀಳುತರದ ರತ್ನ : ಪಿತ್ತಕವೆಂಬುವದ ಗಿಣಿಯ ರೆಕ್ಕೆಯಂತೆಯಿರುವುದು (ಸೌಗಂಧಿ. ೩೬-೦೫). [ಸಂ.]

**ಪಿತ್ತಕಲ್ಲು** (ನಾ). ಪಿತ್ತಕೋಶದಲ್ಲಿ ಬೆಳೆಯುವ ಒಂದು ಬಗೆಯ ಕಲ್ಲಿನಂತಹ ವಸ್ತು ಮತ್ತು ಅದಕ್ಕೆ ಸಂಬಂಧಪಟ್ಟ ರೋಗ : ಇಂತಹವರು ಟೈಫಾಯ್ಡ್ ವಾಹಕರಾಗುವುದಲ್ಲದೆ, ಕೆಲವು ವೇಳೆ ಪಿತ್ತಕಲ್ಲು (Gall Stone)ಗಳಿಂದ ನರಳುತ್ತಾರೆ (ಕಂರೋ. ೬೦).
[ಪಿತ್ತ+ಕಲ್ಲು (<ಕಲ್[3])]

**ಪಿತ್ತಕೋಶ** (ನಾ). (ಕಶೇರುಕಪ್ರಾಣಿಗಳ) ಜಠರದ ಬಲಭಾಗದಲ್ಲಿ ಇರುವ, ಪಿತ್ತರಸವನ್ನು ಉತ್ಪತ್ತಿ ಮಾಡುವ, ಆಹಾರವು ಜೀರ್ಣವಾಗುವುದಕ್ಕೆ ಸಹಾಯಕವಾದ ಒಂದು ಮುಖ್ಯಾಂಗ ; ಪಿತ್ತಜನಕಾಂಗ : ಒಂದು ಯಕೃತ್ತಿನಿಂದ (Liver) ಪಿತ್ತಕೋಶವನ್ನು ಸೇರಿ (Gall-bladder) ಅಲ್ಲಿಂದ ಹರಿದು ಬರುವ ಪಿತ್ತರಸ (ಶಾಲಕ್ರ. I. ೨೫೦) ; ಪಿತ್ತದಲ್ಲಿ ಈ ರೋಗಾಣುಗಳು ಬಹು ಬೇಗ ಬೆಳೆದು ಪಿತ್ತಕೋಶದಲ್ಲಿ ಆಶ್ರಯವನ್ನು ಪಡೆಯುತ್ತವೆ (ಕಂರೋ. ೬೦). [ಸಂ.]

**ಪಿತ್ತಕ್ಷೋಭ** (ನಾ). ಪಿತ್ತದ ಉದ್ರೇಕ ; ಪಿತ್ತಪ್ರಕೋಪ : ಮಲಮೂತ್ರಗಳ ದುರ್ಗಂಧದಿಂದ ನಮಗೆ ಪಿತ್ತಕ್ಷೋಭವಾಗಿ ಓಕರಿಕೆ ಬರುತ್ತದೆ (ಮುಂಬಯಿ. ೫-೦೫೯). [ಸಂ.]

**ಪಿತ್ತಗ್ರಹಣಿ** (ನಾ). ಪಿತ್ತದಿಂದ ಉಂಟಾಗುವ ಅತಿಸಾರ,–ಆಮಶಂಕೆ ; ಪಿತ್ತಾತಿಸಾರ: ಬೆಲ್ಲವತ್ತದ ತಿರುಳು, ಕೊಡಸಿಗೆಬೀಜ, ಕೊಡಸಿಗೆ ತಿಗುಡು, ಧಾತಕೀಕುಸುಮ, ಕಟುಕರೋಹಿಣಿ, ಶುಂಠಿ ಇವಂ ಚೂರ್ಣಿಸಿ ಅಕ್ಕಿ ಗಚ್ಚಿನಲ್ಲಿ ಕಲಸಿ ಜೇನುತುಪ್ಪವೆರಸಿ ಕುಡಿಯೆ ಪಿತ್ತಗ್ರಹಣಿ, ಮೂಲರೋಗ, ಪ್ರವಾಹವಾದ ಅತಿಸಾರ, ಹೊಟ್ಟೆಬೇನೆ ಸಹ ಪರಿಹರಮಕ್ಕುಂ (ಸಕವೈ. ೩೪೯). [ಸಂ.]

**ಪಿತ್ತಘ್ನ** (ನಾ). ಒಂದು ಬಗೆಯ ಸಸ್ಯ ; ಗುಡೂಚಿ. [ಸಂ. ಪಿತ್ತಘ್ನೀ]

**ಪಿತ್ತಜನಕಾಂಗ** (ನಾ). ಪಿತ್ತರಸವನ್ನು ಉತ್ಪತ್ತಿ ಮಾಡುವ ಒಂದು ಜೀರ್ಣಾಂಗ ; ಪಿತ್ತಕೋಶ : ವಿಷವುತೆ ದೇಹದಲ್ಲಿ ಹೆಚ್ಚಾದಾಗ ಹೃದಯಕ್ರಿಯೆ ನಿಲ್ಲುತ್ತದೆ . . . ಪಿತ್ತಜನಕಾಂಗ ಊದಿಕೊಳ್ಳುತ್ತದೆ (ಕಂರೋ. ೨೨) ; ಆಹಾರದಲ್ಲಿ ಪ್ರೋಟೀನು ಅಭಾವವಾದರೆ . . . ಪಿತ್ತಜನಕಾಂಗ, ರಕ್ತ, ಚರ್ಮ ದುರ್ಬಲವಾಗುತ್ತವೆ (ಗೃಹಶಾ. ೦೦) ; ದೇಹದಲ್ಲಿ ಪಿತ್ತಜನಕಾಂಗವೂ ಈ ಕೆರೋಟಿನ್ ವಸ್ತುವನ್ನು Vitamin 'A' ರೂಪಕ್ಕೆ ಮಾರ್ಪಡಿಸುತ್ತದೆ (ಪಿವ್ಯುದ್ಯ. ೦೨೦). [ಸಂ.]

**ಪಿತ್ತಜಿಹ್ವೆ** (ನಾ). ಪಿತ್ತಾಧಿಕ್ಯದಿಂದ ನಾಲಿಗೆಯ ರುಚಿ ಕೆಡುವ ಒಂದು ಬಗೆಯ ರೋಗ : ಜಿಹ್ವಾಲಸವೆಂದು, ಅಧಿಜಿಹ್ವೆ ಎಂದು, ಉಪಜಿಹ್ವೆ ಎಂದು, ವಾತಜಿಹ್ವೆ, ಪಿತ್ತಜಿಹ್ವೆ, ಶ್ಲೇಷ್ಮಜಿಹ್ವೆ ಎಂದು ಆಱು ತೆಱ (ವೈದ್ಯಶಾ. II. ೦೦೬) ; ಪಿತ್ತಜಿಹ್ವೆ ಎಂಬುದು ಹಳದಿವರ್ಣವಾಗಿ ಬೆಂದ ಹಾಗೆ ಇಹುದು (ವೈದ್ಯಶಾ. II. ೦೦೬). [ಸಂ. ಪಿತ್ತಜಿಹ್ವಾ]

**ಪಿತ್ತಜ್ಜ** (ನಾ). (ಕರಾ). ತಂದೆಯ ಅಜ್ಜ ; ಮುತ್ತಜ್ಜ : ಹೆಗಡೆಯ ಪಿತ್ತಜ್ಜನ ಜನ್ಮಸ್ಥಳ ಗುಳ್ವಾಡಿ (ದೀವಹಂ. ೦೬೯). 'ಪಿಜ್ಜ' ಪರಾ.
[<ಪಿತ+ಅಜ್ಜ[1]]

**ಪಿತ್ತಜ್ವರ** (ನಾ). ಪಿತ್ತದಿಂದ ಉಂಟಾಗುವ ಜ್ವರ : ಸಿರಿಕಂಡಂ ದೊಡ್ಡಿಪತ್ರೆ . . . ಕೊತ್ತುಂಬರಿ ಈ ಔಷಧಂಗಳಂ ಸಮಭಾಗಿಯಾಗೆ ಕೊಂಡು ಅಷ್ಟಾವಶೇಷ ಕಷಾಯಮಂ ಮಾಡಿ ಕುಡಿಯೆ ಪಿತ್ತಜ್ವರಂ ಕಿಡುವುದು (ಲೋಕೋಪ. ೯-೦೬ ಟೀಕೆ); ಪಿತ್ತಜ್ವರಂಬಡೆದವರ್ಗೆ ಪಾಲೋಗರದ ತುತ್ತು ಕಹಿಯಾದಂತೆ (ಸಮ್ಯಕೌ. ೯-೫೬) ; ವಾತಜ್ವರ, ಪಿತ್ತಜ್ವರ, ಶ್ಲೇಷ್ಮಜ್ವರ . . . ಆಗಂತುಕಜ್ವರವೆಂದು ಎಂಟು ಪ್ರಕಾರವಾಗಿರುವುದು (ಸಕವೈ. ೬೨). [ಸಂ.]

**ಪಿತ್ತದೋಷ** (ನಾ). (ವಾತ, ಪಿತ್ತ, ಶ್ಲೇಷ್ಮಗಳೆಂಬ) ತ್ರಿದೋಷಗಳಲ್ಲಿ ಒಂದು: ಪಿತ್ತದೋಷಂ ಗೋಮೂತ್ರವರ್ಣವಾಗಿರುವುದು (ಸಕವೈ. ೦೬೨). [ಸಂ.]

**ಪಿತ್ತನಾಡಿ** (ನಾ). ಶರೀರದ ನಾಡಿಗಳಲ್ಲಿ ಒಂದು : ಪಿತ್ತಾಧಿಕವಾದ ಕಾಲದಲ್ಲಿ ಮಧ್ಯನಾಡಿಯೂ ಪಿತ್ತನಾಡಿಯೂ ಪ್ರಬಳವಾಗಿ ನಡೆವುದು (ಸಕವೈ. ೦೦) ; ಮಧ್ಯಾಹ್ನದಲ್ಲಿ ಪಿತ್ತನಾಡಿ ಅಧಿಕವಾಗಿ ಆಡುವುದು (ಸಕವೈ ೦೩). [ಸಂ.]

**ಪಿತ್ತಪಾಪಟ** 'ಪಿತ್ತಪಾಪಡಾ' ನೋ.

**ಪಿತ್ತಪಾಪಡಾ, ಪಿತ್ತಪಾಪಟ** (ನಾ). ಪಿತ್ತವನ್ನು ಶಮನ ಮಾಡುವ ಒಂದು ಬಗೆಯ ವನಸ್ಪತಿ, –ಮೂಲಿಕೆ : ಸೂರ್ತಿ ಚವಾಳಾಮಣದ ಮೇಲೆ ಕಿಮ್ಮತ್ತು ಇರತಕ್ಕ ಜಿನಸಗಳು . . . ೧೨೬. ಪಾದೆಲೋಣ ; ೧೨೭. ಪಿತ್ತಪಾಪಡಾ (ಮುಂಬವ್ಯಾ. ೦೨೬). **ಪಿತ್ತಪಾಪಟ** : ಅಮೃತಬಳ್ಳಿ ಕಿರಾತಕಡ್ಡಿ, ಪಿತ್ತಪಾಪಟ, ನಾಗರಮೋಥ, ಶುಂಠಿ ಇವನ್ನು ಮುಕ್ಕಾಲು ತೊಲೆಯಂತೆ ಜಜ್ಜಿಹಾಕಿ . . . ಜೇನು ಕೂಡಿಸಿ ಮೂರುಸಲಕ್ಕೆ ಉಪಯೋಗಿಸುವುದು (ಮನೆವು. ೨೫).
[→ ಹಿಂ. ಪಿತಪಾಪಡಾ ; ಮರಾ. ಪಿತ್ತಪಾಪಡಾ]

ಶರದನು ನೆಲಸಿ (ಶಾಗಂಕ. ೬-೨೩) ; ಎರಡನೆಯದರಲ್ಲಿ . . . ಹಿತ್ತಾಳೆ ಮಾತ್ರ ಮಿಶ್ರಲೋಹವಾದ್ದರಿಂದ ಆ ವರ್ಗಕ್ಕೆ ಅದು ಸೇರುವಂತಿಲ್ಲ (ಶಿಲ್ಪಕ. ೩೩೬).

ಹಿತ್ತಾಳೆಕಿವಿಯುವನು (ಆಲಂ) = ಚಾಡಿಮಾತುಗಳನ್ನು ಕೇಳುವವನು: ಹಿತ್ತಾಳೆಕಿವಿಯುವನೆಂಬ ನಾಮಾಂಕಿತವೂ . . . ಹೆದ್ದನಿಗೆ ಸಜ್ಜನರು ಕೊಟ್ಟ ಹೆಸರು (ಗೋಡೂಶ್ರ. ೩೩). ಹಿತ್ತಾಳೆಯ ಕಿವಿ = (ಆಲಂ) ಚಾಡಿಯ ಮಾತುಗಳಿಗೆ ಬಗ್ಗುವ ಕಿವಿ : ಚಾಡಿಯ ಮಾತನ್ನು ಕೇಳುವ ಸ್ವಭಾವ : ನನ್ನದು ಪೂರಾ "ಹಿತ್ತಾಳೆಯ ಕಿವಿ"ಯಾಯಿತು (ಕೇಪೋಕ. ೬೩). [<ಸಂ. ಪಿತ್ತಲ]

**ಪಿತ್ತಾತಿಸಾರ** (ನಾ). ಪಿತ್ತದಿಂದ ಉಂಟಾಗುವ ಅತಿಸಾರ ; ಪಿತ್ತಗ್ರಹಣಿ : ಮತ್ತಂ ರಕ್ತ ಕೂಡಿಕೊಂಡು ಕಪ್ಪುವರ್ಣ ಹಳದಿವರ್ಣವಾಗಿಯೂ . . . ಬೆವರು ಬಾಯಾರಿಕೆಯೂ ಉಂಟಾಗಿ ತೋರ್ಪುದೆ ಪಿತ್ತಾತಿಸಾರವೆನಿಸಿಕೊಳ್ಳುವುದು (ಸಕವೈ. ೩೦೬). [ಸಂ.]

**ಪಿತ್ತಾಧಿಕ** (ನಾ). ೧. ಪಿತ್ತಾಧಿಕ್ಯದಿಂದ ಕೂಡಿದುದು ; ಪಿತ್ತವಿಕಾರವುಳ್ಳುದು : ಪಿತ್ತಾಧಿಕವಾದ ನಾಡಿಯು ಕಪ್ಪೆಯು ಹಾರ್ಯಾದೆಯಲ್ಲೂ ನವಿಲಿಂತೆಯೂ ತೀವ್ರವಾಗಿ ಉಷ್ಣವಾಗಿ ನಡೆವುದು (ಸಕವೈ. ೦೬). ೨. ಪಿತ್ತವು ತಲೆಗೇರಿದವನು ; ಹುಚ್ಚು ಹಿಡಿದವನು ; ಹುಚ್ಚ : ಪಿತ್ತಾಧಿಕನು ತಿರುಗುತ ಲೋಕ ತಿರುಗುವುದೆಂಬ ತೆಜನಂತೆ (ಕುಮಾ. ೮೯. ೩ ೩೩). [ಸಂ.]

**ಪಿತ್ತಾಧಿಕ್ಯ** (ನಾ). ಪಿತ್ತವು ಹೆಚ್ಚಾಗಿ ಇರುವಿಕೆ ; ಪಿತ್ತದ ಹೆಚ್ಚಳ : ಬಲದ ಕೈಯ ಹೆಬ್ಬೆರಳಿನ ಮೂಲದಲ್ಲಿರ್ದ ನಾಡಿಯನ್ನು ಪರೀಕ್ಷಿಸಲಾಗಿ (ಆ ನಾಡಿಯು) . . . ಪಿತ್ತಾಧಿಕ್ಯವಾದೊಡೆ ಅತಿವೇಗದಿಂ ಚಂಚಲವಾಗಿ ನಡೆವುದು (ಸಕವೈ. ೦೦) ; ಪಿತ್ತಾಧಿಕ್ಯದಿಂದ ದೇಹ ಮಧ್ಯಸ್ಥ, ಶ್ಲೇಷ್ಮಾಧಿಕ್ಯದಿಂದ ದೇಹವು ಸ್ಥೂಲವಾಗಿರುವುದು (ಸಕವೈ. ೦೯). [ಸಂ.]

**ಪಿತ್ತಾವರಣ** (ನಾ). ಪಿತ್ತದಿಂದ ಉಂಟಾಗುವ ಒಂದು ಬಗೆಯ ರೋಗ: ದ್ರಾಕ್ಷಿ ಯಷ್ಟಿಮಧುಕ . . . ಸಮರಸವ ಮಾಡಿ, ಉದಯಕಾಲದಲ್ಲಿ ಆ ಲೇಹ್ಯವನ್ನು ಸೇವಿಸೆ ಪಿತ್ತಾವರಣ ಸಕಲವಾದಾವರಣರೋಗ ರಕ್ತಪಿತ್ತ ಸಹ ಗುಣಮಕ್ಕುಂ (ಸಕವೈ. ೦೯೬). [ಸಂ.]

**ಪಿತ್ತಾವಿಳ** (ನಾ). ಪಿತ್ತದಿಂದ ಕೂಡಿದವನು ; ಪಿತ್ತರೋಗಿ : ತೊಳಗುವ ನಭದೊಳ್ ಪಿತ್ತಾವಿಳದೃಷ್ಟಿಗವಿದ್ಯಮಾನವೇಚಕರುಚಿಯೊಂದೆಳಸಿ ಪಿಗೆ ತೋರ್ಪ ತೆಜದಿಂ ಖಳಂಗೆ ಪೊಲಸಲ್ತೆ ಕೃತಿಯೊಳಿಲ್ಲದ ದೋಷಂ (ಕೃಕೃತಿ. ೦-೯೬). [ಸಂ. ಪಿತಾವಿಲ]

**ಪಿತ್ತಾಶಯ** (ನಾ). ಪಿತ್ತಜನಕಾಂಗ ; ಪಿತ್ತಕೋಶ : ಬಿ ಜೀವಸತ್ವ . . . ಇದು ಹಾಲು, ಹಣ್ಣು, ಪಿತ್ತಾಶಯ (Liver), ಮೊಟ್ಟೆಗಳು, ಪಾಲಿಶ್ ಮಾಡದೆ ಇದ್ದ ಅಕ್ಕಿ ಮತ್ತು ಇತರ ಧಾನ್ಯಗಳಲ್ಲಿ ಸಿಕ್ಕುತ್ತದೆ (ಶಿಆಶಾ. ೨೬). [ಸಂ.]

**ಪಿತ್ತಾಳೆ** ‘ಪಿತ್ತಳೆ’ ನೋ.

**ಪಿತ್ತಿಲ್** ‘ಪಿಂತಿಲ್’ ನೋ.

**ಪಿತ್ತಿಲ್ದೋಂಟ** (ನಾ). ಪಿತ್ತಲಿನ ತೋಟ,-ಉದ್ಯಾನ: ಬಸದಿಯ ಪೂಜಿಗಾ ಪಿತ್ತಿಲ್ದೋಣ್ಪೆಯುಂ ತೆವಸ್ಥಾಳದೊಳು . . . ಕೊಟ್ಟ ಮಣ್ಣು (ಎಕ. X. ಕೋಲಾರ. ೯೦-೯೦; 903).
[ಪಿತ್ತಿಲ್ (<ಪಿಂತಿಲ್) + ತೋಂಟ]

**ಪಿತ್ತು.** **ಪಿತ್ಥ** (ನಾ). ೧. = ಪಿತ್ತ ೧. ೨. = ಪಿತ್ತ ೩ : ಪಿತ್ತು ನೆತ್ತಿಗೇನಾದರೂ ಹತ್ತಿದೆಯೋ (ಮುಹಮೂ. ೨) : ಒಂದುಗಳಿ ಕೂಡಿ ಒಂಬತ್ತರವರೆಗೆ ಏರಿದುವು ; ಪಿತ್ತಿನಂತೆ. ಅವಕ್ಕೊಂದು ಸೊಕ್ಕೆ ಬಂದು ಸೇರಿ ಹತ್ತಾಯಿತು. ಕಿಫದ ಕೆಮ್ಮಿನಂತೆ (ಕಕದಾ I. ೪೩೯). ಪಿತ್ಥ : ೧. ಪಿತ್ಥ ಹೆಚ್ಚಾದಾಗ ಹೊಟ್ಟೆ ತೊಳಸುತ್ತದೆ (ರಂತಿ). ೨. ಸುಳ್ಳೇ ನನ್ನ ಪಿತ್ಥ ಕೆಣಕಬೇಡಾ . . . ಎಂದವರೇ ಬಳಿತಲ್ಲಿಂದ ಎದ್ದು ಹೊರಗೆ ಹೋಗುವ ಉಡುಪನ್ನು ಧರಿಸ ಹತ್ತಿದರು (ಮೂರುದಾ. ೯೦). ೩. = ಪಿತ್ತ ೫ : ಕುಲಕೋಟಿಯೊಂದಲು ತಿಂಬವ ಪಿತ್ಥನೊ (ದಾಸ್ತರಾ. ೬-೩೦೬). ೪. ಕೊಬ್ಬು ; ಸೊಕ್ಕು : ಗರ್ವ : ಆಯಿತು. ಬರುವುದಾದರೆ ಬಾ. ನಿನ್ನ ಪಿತ್ಥ ಇಳಿಸದೆ ಬಿಡಲಾರೆ (ರಕ್ತರಾ. ೬೪) ; ಈವತ್ತು ಇವರು ಸರಿಯಾಗಿ ಪಿತ್ಥ ಇಳಿಸಿದ್ದಾರೆ (ಮೂರುದಾ. ೬೪). [<ಸಂ. ಪಿತ್ತ]

**ಪಿತ್ತೋದರ** (ನಾ). ಪಿತ್ತದಿಂದ ಉಂಟಾಗುವ ಒಂದು ಬಗೆಯ ಹೊಟ್ಟೆಯ ರೋಗ, – ಉದರಬೇನೆ : ತಾರೇಕಾಯಿ, ಹುಣಸೇಬೀಜದ ಸಿಪ್ಪೆ, ಇವುಗಳ ಸಮಭಾಗ ಚೂರ್ಣ ಮಾಡಿ ಸೇವಿಸಲು ಸರ್ವಾಂಗದಾಹ, ಕೈಕಾಲು ಮತ್ತು ಕಣ್ಣುಗಳ ಉರಿ, ಪಿತ್ತೋದರ . . . ಮೊದಲಾದ ರೋಗಗಳು ಗುಣವಾಗಿ ಶುಕ್ಲವೃದ್ಧಿಯುಂಟಾಗುವುದು (ಸಕವೈ. ಶಾ. ೯೦೬).
[ಸಂ.]

**ಪಿತ್ತೋದ್ರೇಕ** (ನಾ). ೧. ಪಿತ್ತವು ಹೆಚ್ಚಾಗುವಿಕೆ ; ಪಿತ್ತಪ್ರಕೋಪ : ಪಿತ್ತೋದ್ರೇಕವುಳ್ಳವನಾಗಿ ತೀವ್ರವಾದ ತೃಷ್ಣೆಯೂ ಹಸಿವೂ ಉಂಟಾದವನಾಗಿ . . . ಕೆಂಪಾಗುವ ಕಣ್ಣುಗಳುಳ್ಳವನಾಗಿ ಇರುವವನೇ ಪಿತ್ತಪ್ರಕೃತಿಯುಳ್ಳವನೆಂದರಿವುದು (ಸಕವೈ. ೦೬). ೨. ಪಿತ್ತವು ತಲೆಗೇರುವಿಕೆ ; ಮತಿವಿಕಾರ ; ಬುದ್ಧಿಭ್ರಮಣೆ : ಪಿತ್ತೋದ್ರೇಕಂ ಪುಗುಬುಂ ಚಿತ್ತಭ್ರಮೆಯುಂಬಿವಕ್ಕುಂ (ಏಮರ. ೦೩-೩) ; ಏರೆ ಕರ ಬೇಗಗಾಕೀರ್ತಿಯನೆಂದದಾ ತರುಣ ಬಂದೊಡನೆ ಕೈಮುಗಿಯೆ ಹಂದಾಡಿ ಬಳಲಿದೆ ಮಗನೆ ಪಿತ್ತೋದ್ರೇಕ ತಿರುಗಿಸಿದುದೆ ನಿನ್ನನೆಂದ (ಶರಶ. ೩೦-೦೦೦). [ಸಂ.]

**ಪಿತ್ಥ** ‘ಪಿತ್ತು’ ನೋ.

**ಪಿತ್ರಾರ್ಜಿತ** (ಗು). ೧. ತಂದೆಯು ಗಳಿಸಿದ, – ಸಂಪಾದಿಸಿದ. ೨. ವಂಶದ ಪೂರ್ವಿಕರು ಗಳಿಸಿದ : ಈ ದಿನ ನಾವು ನಮ್ಮ ಪಿತ್ರಾರ್ಜಿತ ಭೂಮಿಗಾಗಿಯೂ ನಮ್ಮ ನಮ್ಮ ಮಡದಿ ಮಕ್ಕಳ ಸಂರಕ್ಷಣಾರ್ಥವಾಗಿಯೂ ಪ್ರಾಣಗಳನ್ನು ಮುಡುಪಿಟ್ಟು ಯುದ್ಧಕ್ಕೆ ಹೋಗುತ್ತಿರುವೆವು (ಚಾಂತಲಾ. ೦೬೪); ಒಂದಿಷ್ಟು ಪಿತ್ರಾರ್ಜಿತ ಹೊಲಗದ್ದೆಗಳೂ ಬಂದಿದ್ದವು (ಕಂಡತು. ೨೩). (ನಾ). ೩. ತಂದೆಯು ಸಂಪಾದಿಸಿದುದು ; ತಂದೆಯ ಆಸ್ತಿ. ೪. ವಂಶದ ಪೂರ್ವಿಕರು ಆರ್ಜಿಸಿದ ಸಂಪತ್ತು : ಪಿತ್ರಾರ್ಜಿತವನ್ನು ಅನುಭವಿಸುತ್ತಿರುವ ಅವನು ಆಸ್ತಿಸಂಪಾದನೆಗೆ ಬವಣೆಪಡಬೇಕಾದುದೇನೂ ಇಲ್ಲ (ಲೂಠಾ). [ಸಂ.]

**ಪಿತ್ರುಧನ** (ನಾ). ಪಿತ್ರಾರ್ಜಿತವಾಗಿ ಬಂದ ಹಣ, - ಸ್ವತ್ತು : ಸೋಮೇಶ್ವರಭಟ್ಟರು ತಮ್ಮ ಪಿತ್ರುಧನಂ ಶುಕ್ಲದ್ರವ್ಯಮಪ್ಪ ದಸವಂಧದ ಸರ್ವಬಾಧಾಪರಿಹಾರಂ ಮಾನ್ಯದ ಏಳುಸ್ಥಳದ ಭೂಮಿಯುಂ . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಕಇಆ. ೭೯-1088).
[<ಸಂ. ಪಿತೃಧನ]

**ಪಿತ್ರ್ಯ** (ಗು). ೧. ಪಿತೃಸಂಬಂಧವಾದ : ಪಿತ್ರಾರ್ಜಿತವಾಗಿ ಬಂದ. (ನಾ). ೨. ಪಿತೃಗಳಿಗೆ ಮಾಡಬೇಕಾದುದು : ಶ್ರಾದ್ಧ ; ತಿಥಿ.
[ಸಂ.]

**ಪಿದರ** (ನಾ). “ತೀರುಗಳನ್ನು ಬಿಗಿದು ಹಿಡಿಯುವ ಅಡ್ಡಮರ ; ಬಿಗಿಮರ ; ದೂಲ; ಅಡ್ಡಕೋಲು” (ಅನಂನಾ).
[←ತುಳು. ಪಿತ್ತರ, ಪಿದರ, ಪಿದಾರ]

**ಪಿದೆಗ** (ನಾ). ಒಂದು ಬಗೆಯ ಪಕ್ಷಿ : ಕುರ್ಗಿಯ್ಯ ಕೊಳರ್ವಕ್ಕಿ ಕಾಪ ಪಿದೆಗು ಬಿಸಿಲ್ವಕ್ಕಿಯಿವು ಮೊದಲಾಗಿ ಪಾಪನಂ ವನದೊಳಂ ಪಾಪನತ್ವವ ಸ್ಸೆದಿ ಜೀವಿಪುವು ಭಯುವನುಳಿದು (ಶ್ರಕುಥಿ. ೬-೦೪). [?]

**ಪಿಧಾನ** (ನಾ). ೧. ಮುಚ್ಚುವಿಕೆ; ಹೊದಿಸುವಿಕೆ. ೨. ಮುಚ್ಚುವಂತಹ ಸಾಧನ; ಮುಚ್ಚಳ: "ಪಿಧಾನಂ, ಉದಂಚನಂ — ಈ ೨ ಎಸಮುಚ್ಚಳ" (ಕರಾಯು. ೩೩-೦೬೦); ಈ ಭುಕ್ತ್ರಾನ್ನಕ್ಕೆ ಅಮೃತವು ಪಿಧಾನವಾಗಲಿ (ಕುಹಾಶ. ೩೦೨). [ಸಂ.]

**ಪಿನ್**, ಪಿಂ, ಹಿಂ, ಹಿನ್ (ಗು). ೧. ಹಿಂಬದಿಯ; ಹಿಂಭಾಗದ: 'ಪಿನ್ನಲೆ' ಪರಾ. (ನಾ). ೨. ಹಿಂಬದಿ; ಹಿಂಭಾಗ. ೩. ಮೊದಲು; ಮುಂಚೆ: ಪಿನ್ ಪಾಱುವೋಗೀಶ್ವರನುಳ್ಳಿ ಕದಿ ತಣಿದ ನಾಗನ್ನನ' (ಶಾಶಿ. IX-1, ೩೯೨-೪; ೩ನೆಯ ಶ೩). ೪. ಮೊದಲಿನದು; ಮುಂಚಿನದು; ಹಿಂದಿನದು: 'ಪಿನ್ನೀಕ್ಷಿಸು', 'ಪಿನ್ನೋ' ಪರಾ. ಪಿಂ: ೧. 'ಪಿಂಗಡೆ', 'ಪಿಂಗಾಲ್' ಪರಾ. ೨. ನುಡಿಸಲ್ ಕೇಳಿ ಶುಕಾಳಿಯೊಳ್ ನುಡಿವ ಸೋಂಕಲ್ ಪಿಂಗೆ ಸಾರ್ದಿರ್ದ ಕೌಳುಡೆಯಂ ಸೋಂಕುವ ... ಓವಳದೊಂದು ಭಾವರಸ ಗರ್ಭಕ್ರೀಡೆಯುಂ ವ್ರೀಡೆಯುಂ ಪಡೆವನ್ನಂ ಮುದಮಂ ಮುಕುಂದನತಿರಾಗೋದ್ರೇಕಮಂ ತಾಳ್ದಿದಂ (ಜಗ. ೦೦-೦೩೬). ಹಿಂ: ೧. 'ಹಿಂಗಚ್ಚೆ', 'ಹಿಂಗಟ್ಟು' ಪರಾ. ೩. ಹಿಂ ಭವನನೊಲಿಸಿದರ ಮೂಜಗದೊಳನಿಂದಭವನ ಕೃಪೆ ಪಡೆವವರ ಮುಂ ಭವನ ಮೆಚ್ಚಿ ಪದಪಾದಾಬ್ಜಕೆ ವಂದಿಪೆನಾನತಿಮುದದಿಂದೆ (ತ್ರಿಕುಶ. ೦-೦೩). ಹಿನ್: ೧. 'ಹಿನ್ನಲೆ' ಪರಾ.

ಪಿನ್ನ — ಮೊದಲಿನ; ಮುಂಚಿನ; ಹಿಂದಿನ: ನೀರಿಲ್ಲದ ಕೆಱೆಯ ನಡುವಂ ಕಂಡುದಱಿಂ ತೀರ್ಥಂಕರಚಕ್ರವರ್ತಿಗಳ ಪುಟ್ಟಿದ ಮಧ್ಯ ದೇಶದೊಳ್ ಪಿನ್ನ[ಹಕಾಂ. ಧರ್ಮದ]ನೆಗಟ್ತಿಯಾಗದು (ಶಬ್ದಾ.ರಾ. ೬೬-೦೯).

[ದೇ. ॥ ತವಿ. ಮಲ. ಕೋತ. ತೊದ. ಪಿನ್]

**ಪಿನದ್ಧ** (ಗು). ೧. ಕಟ್ಟಿರುವ; ಬಂಧಿಸಿರುವ: ಪಿನದ್ಧ ವಿವಿಧ ಮಣಿದರ್ಪಣಾಧ್ವಜಂಗಳುಂ . . . ಆಮೋದಕುಸುಮದಾಮನಿಕಾಮಕಮ ನೀಯಂಗಳುಮಪ್ಪ ತೋರಣಂಗಳನೆ ನುಗುಳುತ್ತುಂ (ಆದಿಪು. ೪-೩೬ ವ); ಪರಿಚಿತಭೂತಿರೇಖಮುಖದರ್ಶಿತ ಸರ್ಪಪುಂಜಮಂಜನೋಪರಚಿತಖಡ್ಗ ಖೇಟಕಸಮುದ್ಘಟವಿದ್ಧಪಿನದ್ಧಭಿತ್ತಿ . . . ವಿಂ ಪಾಸಕ್ಕೊಲಪನಿತ್ತುದೊ ಬಾಗಿಲರಿಷ್ಟಸದ್ಮದಾ (ಚಂದ್ರಪು. ೩-೯೭). ೨. ಕೂಡಿದ; ಸೇರಿದ: ಆಗಳಾತನುಂ . . . ಅಶೋಕ ಪುನ್ನಾಗ ವಕುಲ ಚಂಪಕ ಸಹಕಾರ ಲವಂಗ ಕ್ರಮುಕ ನಾಳಿಕೇರ ನಾಗವಲ್ಲೀ ಪಿನದ್ಧದ್ರುಮ ಷಂಡ ಮಂಡಿತಮನಿಂದ್ರವನದೊಳೋರಂತ ಪ್ಪುದಂ ನೋಡುತುಂ (ಶಬ್ದಾ.ರಾ. ೫೪-೨೫). ೩. ಹದಿಸಿದ; ಮೆಟ್ಟಿದ; ತೆತ್ತಿಸಿದ: ಸುರತರುನಂದನಂಗಳಿರ ರತ್ನಪಿನದ್ಧವಿಮಾನಕುಟ್ಟಿಮಾಂತರಸುರಶಾಲೆಯು ಗಳಿರ . . . ಕಡುಕೆಯ್ದು ಕೃತಾಂತನಿಂತು ನಿರ್ನೆರಮೆಟ್ಟಿದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ (ಆದಿಪು. ೩-೪); ಸುರುಚಿರಚಂದ್ರಕಾಂತದ ಪಿನದ್ಧತಳಂ ವಿಕಸದ್ವಿನೀಳನೀರರುಹದಳಾವಭಾಸಿ ತಟರೂಢತಮಾಳಲತಾ ಮನೋಹರಂ (ಹರಿಶು. ೨-೦೫). ೪. ಆವರಣವನ್ನು ಹೊಂದಿದ; ಮುಚ್ಚಿದ. ೫. ಚುಚ್ಚಿದ; ನಾಟಿದ. ೬. ಅಡಗಿದ; ಗುಪ್ತವಾದ. ೭. ಬಟ್ಟೆ, ಕವಚ ಮುಂತಾದುವನ್ನು ಧರಿಸಿದ. (ನಾ). ೮. ಕಟ್ಟುವಿಕೆಗೆ ಒಳಗಾದುದು: "ಬದ್ಧಂ, ಪಿನದ್ಧಂ, ಆಮುಕ್ತಂ, ಅಪಿನದ್ಧಂ—ಈ ೪ ಕಟ್ಟಲ್ಪಟ್ಟುದು" (ಕರಾಯು. ೦೨೩-೬೨). ೯. ಕಟ್ಟು; ಬಂಧನ: "ಅಪಿನದ್ಧಮೆನೆ ಪಿನದ್ಧಂ ಬದ್ಧಮೆನೆ ಕಟ್ಟು" (ಶಂಗರಾ. ೦೩೪-೩೫). ೧೦. ಬಟ್ಟೆ, ಕವಚ ಮುಂತಾದುವನ್ನು ಧರಿಸಿದವನು: "ಆಮುಕ್ತಃ, ಪತಿಮುಕ್ತಃ ಪಿನದ್ಧಃ, ಅಪಿನದ್ಧಃ—೪ ಬಟ್ಟೆಗಳನ್ನು ತೊಟ್ಟುಟ್ಟು ಕಟ್ಟಿಕೊಂಡವನ ಹೆಸರುಗಳು" (ಸಿದ್ಧಾಂತಿ. ೨೫೬). 'ಅಪಿನದ್ಧ' ಪರಾ. [ಸಂ.]

**ಪಿನಪಾಲ** 'ಪಿನಿವಾಲ' ನೋ.

**ಪಿನಾಕ** (ನಾ). ೧. ಶಿವನ ಒಂದು ಆಯುಧ; ತ್ರಿಶೂಲ. ೨. ಶಿವನ ಧನುಸ್ಸು, — ಬಿಲ್ಲು: "ಪಿನಾಕಂ, ಅಜಗವಂ (ಸ್ತ್ರೀತ್) — ಈ ೨ ಮಹಾದೇವರ ಬಿಲ್(ಲ್ಲು)" (ಕರಾಯು. ೪-೦೯): ವರಶು ತ್ರಿಶೂಲ ಡಮರುಗ ತರವಾರಿ ಪಿನಾಕಬಾಣ ಖಟ್ವಾಂಗ ಕಪಾಲ ರಥಾಂಗ ವಜ್ರ ಧರನಪ್ಪುರುತರ ದಶಬಾಹು ಲಸಿತ ಜಯ ಶಿವಲಿಂಗಾ (ತ್ರಿಶಿಂ. ೩೩-೦೬೬): ಅಭವಂ ಪಿನಾಕಮಂ ನೆಗಪಿ ಜೇವೊಡೆದೊಂದು ಬಾಣಮಂ ಪೂಡಿ ತೆಗೆದೆಸಲ್ (ಶಿಂಶು. ೫೦-೪೦). [ಸಂ.]

**ಪಿನಾಕಧರ** (ನಾ). ಪಿನಾಕವನ್ನು ಧರಿಸಿರುವವನು: ಶಿವ: ತಾನುದ್ರೇಕಿಸಿಯೆ ಸಮರದಲಿ ನಿಲಲು ಪಿನಾಕಧರನಿಗೆ ನೂಕದೆಂದನು ಸತಿಯರಿದಿರಿನಲಿ (ಕುವ್ಯಾಶ. ೫-೦೩); ದರ್ವೀಕರೇಶೋರುಪರ್ವಪಿನಾಕಧರ . . . ಸುಸರ್ವ ಜಯಸಿದ್ಧನಂಜ (ಗುರುಚಿ. ೦೪-೦). [ಸಂ.]

**ಪಿನಾಕಪಾಣಿ** (ನಾ). = ಪಿನಾಕಧರ: ಅಜಯುಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ ನೆಱೆಯನಿದಿರ್ಚಿ ನಿಮ್ಮೊಡನೆ ಕಾದಿ ಗೆಲಲ್ಕೆ (ಗದಾಯು. ೪-೪೪). [ಸಂ.]

**ಪಿನಾಕಾಯುಧ** (ನಾ). ಪಿನಾಕವೆಂಬ ಆಯುಧವನ್ನು ಉಳ್ಳವನು: ಶಿವ: ಬಿಲ್ಲೋಳ್ ಮುನ್ನಂ ಪಿನಾಕಾಯುಧನೆ ಸಲೆ ಚಕ್ರಾಯುಧಂ ಜಾಮದಗ್ನ್ಯಂ ಬಲ್ಲಂ . . . ಇಂದ್ರಾತ್ಮಜಾತಂ ಬಲ್ಲಂ ಕೇಳ್ಗ ಬಲ್ಲಾಳನೆ ಕಲಿಗಳ ದೇವಂ(ಎಕ VI. ೩೪ಮು. ೬೭-೬೩; 1180). [ಸಂ.]

**ಪಿನಾಕಿ**[1] (ನಾ). = ಪಿನಾಕಾಯುಧ: ಲೋಕವೀರರೆಳಕೆ ನೆಱೆ ಬಲ್ಲಿದನು ಪಿನಾಕಿಯೆಂಬರು ಕಥೆಯೊಳಗೆ (ತ್ರಿಶಾಂ. ೩-೨೯); ನೀನೆನಗೋವಳಾದರೆ ಸಾಕು ಮಲೆತಡೆಯೂ ಪಿನಾಕಿಗೆ ತೆರಳುವೆನೆ ಬಳಿಲ್ಲಿ ನೋಡೆಂದ (ಕುವ್ಯಾಶ. ೨-೨೯); ತೃಣಮಟೀರದ ಮಧ್ಯೆ ಬೇಡುತಿರ್ದಳ್ ಬಿಡದೆ ಫಣಿಧರ ಪಿನಾಕಿಯುಂ ತನ್ನಭೀಷ್ಟ ಸಫಲಮಕ್ಕೆಂದು (ಶಶ್ಯಂಗ. ೬೨-೨೨೬೦).

[ಸಂ. ಪಿನಾಕಿನ್]

**ಪಿನಾಕಿ**[2] (ನಾ). ೧. ಒಂದು ಬಗೆಯ ವಾದ್ಯ: ಚಿನ್ನ ತಿತ್ತಿರಿ ಜಂಟಿ ಮಂಜು ತಾವು ಹೆಗ್ಗಾಳೆ ಮನ್ನೆಯಂಗಹಳೆ ಪಿನಾಕಿ ಉನ್ನತಮಹ ಶಂಖಪಟಹ ಡಿಂಡಿಮ ಮದ್ದು ಸನ್ನಾಹಭೇರಿ ಮೊಳಗಲು (ರಾಷು. ೬-೭೦); ಕೊಂಬು ತಿತ್ತಿರಿ ಕಾಳೆ ತುಡುಮು ಪಿನಾಕಿಯಾಡಂಬರದೊಳು ಪೊಕ್ಕ ಪುರವ (ಭರತ. ೫೬.೯೬); ಜೋಕೆವಿಡಿದು ಸೇನೆ ನಾಲ್ಕುದಿಕ್ಕಿನಲಿ ವಿವೇಕವಿಲ್ಲದೆ ಪರಿತರಲು ಸೂಕುತ ಕನಲಿ ಪಿನಾಕಿಗಱೆವ ವಾದ್ಯದಾ ಕೂಗು ಬೊಬ್ಬೆ ರಂಜಿಸಿತು (ಪಿಶಸಾಂ. ೪-೬೦). ೨. ಒಂದು ಬಗೆಯ ವೀಣೆ: ಪ್ರಾಚೀನ ಗ್ರಂಥಗಳು, ಕಿನ್ನರಿ, ಪಿನಾಕಿ, ರುದ್ರವೀಣೆ . . . ಭುಜಂಗವೀಣೆ, ರಾವಣಹಸ್ತ ಮುಂತಾಗಿ ನಾನಾರೀತಿಯ ವೀಣೆಗಳನ್ನು ನಮೂದಿಸುತ್ತವೆ (ಸಂಗೀಶಂ. ೩೦೦). [ಸಂ. ಪಿನಾಕೀ]

**ಪಿನಾಕಿವೀಣೆ** (ನಾ). ಒಂದು ಬಗೆಯ ವೀಣೆ: ತಂತ್ರೀವಾದ್ಯಕಳಾಮಹಿತ ನಾದ ಮಾಧುರಸ ರಾವಣವೀಣೆ, ರುದ್ರವೀಣೆ . . . ಕಿನ್ನರವೀಣೆ, ಪಿನಾಕಿ ವೀಣೆ ಮೊದಲಾದ ಮಹಾವತ್ತೆರಡು ವೀಣೆಗಳನ್ನೂ ವೇಣುಸ್ವರಮಂಡಲ ಗಳನ್ನೂ ಶ್ರುತಿಗೊಳಿಸಿ (ಚತು. ೨೬೫). [ಪಿನಾಕಿ[2]+ವೀಣೆ[1]]

**ಪಿನಾಶಿ** 'ಪೀನಾಶಿ' ನೋ.

**ಪಿನಾಸಿ** 'ಪೀನಾಶಿ' ನೋ.

**ಪಿನಿಕ್ಷೀರ** (ನಾ). ಒಂದು ಬಗೆಯ ಸಸ್ಯ: ಪಯಸ್ವಿನೀ...ಕ್ಷೀರಕಂದ. ಬೆಳ್ಳಿ (ಬಿಳಿ?)ಯ ಸೂರಣ, ದುಗ್ಧಿ, ಪಿನಿಕ್ಷೀರ, ಕಾಕೋಳಿ, ಹಾಲುಗುಂಬಳ, ಎಮ್ಮೆ, ಆಡು, ಆಡುಮ ಹಾಲೆ" (೬ಕಧಿ. ೪೦). [ಪಿನಿ ? + ಕ್ಷೀರ]

**ಪಿನಿವಾಲ**, ಪಿನಪಾಲ, ಪಿನ್ನಿವಾಲ (ನಾ). ಒಂದು ಬಗೆಯ ಮರ: ಪಿನಿವಾಲ . . . ನಿಬಿಡವಾದ ಛಾಯೆಯುಳ್ಳದ್ದಾಗಿ ಬಹುಮನೋಹರ ವಿರುತ್ತದೆ. ಕಟ್ಟಿಗೆ ಮಿದು, ಕೆಲಸಕ್ಕೆ ಬಾರದ್ದು (ಕಣಸ. ೪೩).

ಪಿನಪಾಲ : ಪಿಲಾಲದ ಮರ, ಕಿರುಗೋಳಿ, ಜೀವಿ, ಪಿನಪಾಲ ( ವ್ಯ. ಕಿ. ೬೬-೬೨೪). ಪಿನ್ನಿವಾಲ : (೬). [ ? ]

**ಪಿನಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡುಗಸಗಸೆಹುಲ್ಲು, ಪಿನಿಹುಲ್ಲು (ವ್ಯ. ಕಿ. ೩೪-೬೩೬). [ ಪಿನಿ ? +ಹುಲ್ಲು (<ಪುಲ್)]

**ಪಿನ್ನಲ್‌ಕೋಲಾಟ** (ನಾ). ಒಂದು ಬಗೆಯ ಕೋಲಾಟ ; ಜಡೆ ಕೋಲಾಟ ; ₱ "ಕಲಾವಿದರು ಒಂದು ಕೈಯಲ್ಲಿ ದಾರವನ್ನು ಮತ್ತೊಂದು ಕೈಯಲ್ಲಿ ಒಂದು ಜತೆ ಕೋಲುಗಳನ್ನು ಹಿಡಿದು ನರ್ತಿಸುತ್ತಾರೆ. ಎತ್ತರದ ಪ್ರದೇಶಕ್ಕೆ ಅಥವಾ ಅಟ್ಟಕ್ಕೆ ವಿವಿಧ ಬಣ್ಣಗಳ ದಾರಗಳನ್ನು ತೂಗು ಹಾಕಿ ನರ್ತಕರು ತಮ್ಮ ತಾಳಬದ್ಧ ಚಲನೆಯಿಂದ ಆ ದಾರಗಳನ್ನು ಜಡೆ ನೇದಂತೆ ನೇಯುವ ಹಾಗೂ ಜಡೆ ಬಿಡಿಸುವ ಚಲನೆಗಳು ಪಿನ್ನಲ್‌ಕೋಲಾಟದಲ್ಲಿವೆ" (ಜಾಕಜಾ. ೧೨೬): ಹಾಡಿಗೆ ಅನುಗುಣವಾಗಿ ಅಭಿನಯಿಸಲ್ಪಡುವ ಪಿನ್ನಲ್‌ಕೋಲಾಟದಲ್ಲಿ ಹಲವು ರೂಪದವುಗಳಿವೆ (ಜಾಕಜಾ. ೧೨೬).

[ ←ತಮಿ. ಪಿನ್ನಕ್ಕೋಲಾಟ್ಟಮ್ ]

**ಪಿನ್ನಿ, ಪಿನ್ನೆ**₂ (ನಾ). ಮಣ್ಣಿನ ಪಾತ್ರೆ : ಹನ್ನೆರಡುವರ್ಷದ ತಂಗಳ ಕೂಳನು ಪಿನ್ನಿದೊಳಜಿದು ನಾಲಗೆಲಿ ಕುನ್ನಿಯಂದದಿ ನೆಕ್ಕಿ ಮೈಗೂರಿಸಿ ಕೊಂಬೋದು ಮುನ್ನ ಮಾಡಿದ ಪಾಪವೈಸೆ (ಜ್ಞಾ. ೬.೬೨); ಮುನ್ನ ಉಂಬ ಶರಣರು ಮ್ಯಾಳಮ್ಯಾಳಕೆ ಚಿನ್ನ ಬೆಳ್ಳಿ ಪಾತ್ರದೊಳಗೆ ಇನ್ನು ಹಂಚಿ ಲುಂಬಂತಾಯ್ತು ಬನ್ನಿಯೆಂದು ಪಿನ್ನಿಯೊಳಂಬಲಿಯೆಱೆಯೆ (ಜ್ಞಾ. ೦೦-೨೩). ಪಿನ್ನೆ₂ : ನಾಯಿ ಮಣ್ಣಪಿನ್ನೆಯಲ್ಲಿ ಅಂಬಲಿಯನ್ನು ಕುಡಿಯುತ್ತಿದೆ (ಜಾಶಿ) [ ? ]

**ಪಿನ್ನಿವಾಲ** ' ಪಿನಿವಾಲ ' ನೋ.

**ಪಿನ್ನೀಕ್ಷಿಸು** (ಕ್ರಿ). ಮತ್ತೆ ನೋಡು ; ಮರಳಿ ನೋಡು : ಜನಪನಾದ ವಿರಾಟನೆದುರೊಳಗನುವು ಸಾಗದು ನಿಮ್ಮ ನೃಪಗನುಮಾನದಿ ಪಿನ್ನೀಕ್ಷಿಸುತಲೈದುವುದೆನಲು ಗೋವಳರು (ಜಪಥಾ. ೩೬-೧೯). [ಪಿನ್+ಈಕ್ಷಿಸು]

**ಪಿನ್ನು** (ನಾ). (ಉಡುಪಿನ ಭಾಗಗಳು, ಕಾಗದಗಳು, ತಲೆಯ ಕೂದಲು ಇತ್ಯಾದಿಗಳನ್ನು ಚುಚ್ಚಿ ಸೇರಿಸಲು ಉಪಯೋಗಿಸುವ) ಒಂದು ಬಗೆಯ ಸೂಜಿಯಂತಹ ಲೋಹದ ವಸ್ತು ; ಗುಂಡುಸೂಜಿ ಇತ್ಯಾದಿ : ತಲೆಗೆ ಕೆಂಪುರಿಬ್ಬನ್ ಕಟ್ಟಿಕೊಂಡು, ತಲೆಯಲ್ಲಿ ಹತ್ತೆಂಟು ಕಡೆಗೆ ಅಡ್ಡಿಸಿಡ್ಡ ಪಿನ್ನು ಚುಚ್ಚಿಕೊಂಡಿದ್ದಳು (ಗಂಷೂಯು. ೮೩); ಬ್ಲೌಸಿನ ಮಧ್ಯದ ಗುಬ್ಬಿ ಕಳಚಿ ಹೋಗಿದ್ದಕ್ಕೆ, ಕೊರಳಲ್ಲಿಯ ಬೆಳ್ಳಿ ಎಳೆಯಲ್ಲಿದ್ದ ' ಪಿನ್ನ'ನ್ನು ಹಾಕಿ ' ಫಿಟ್ ' ಮಾಡಿದಳು (ಹೊಸಕ್ಕ. ೪೬) ; ಪಿನ್ನು ಕಳಚಿ ಹೋಗಿ ಪುಸ್ತಕದ ಹಾಳೆಗಳೆಲ್ಲ ಅದಲುಬದಲಾದುವು (ಜಾಶಿ).

[ ← ಇಂ. Pin ]

**ಪಿನ್ನೆ**₁, **ಹಿನ್ನಿ, ಹಿನ್ನೆ** (ನಾ). ೧. ಸೂಜಿಯ ಹಿಂಭಾಗ,—ರಂಧ್ರವಿರುವ ಭಾಗ : ಸೂಜಿಯ ಪಿನ್ನೆಯೊಳಂ ಮಣಿಯ ದ್ವಾರದೊಳು ನುಸುಳ್ದಪರ್ಪರಿರ್ದಡೆಯೊಳೊರ್ಪರಂ ಕಳ್ಳಂತಪ್ಪ ಕಳ್ಳರ ಕಳ್ಳನಿವಂ (ರಮೂಕ್ತು. ೬-೦೯). ಹಿನ್ನಿ : ೧. ಸೂಜಿಯ ಮೊನೆಯಲ್ಲಿ ದಾರ ವೇಱಿ ಹಿನ್ನಿ[ ಪಾಠಾಂ. ನ್ನೆ ]ಯ ಹಂಗ ಬಿಡಿಸಿತ್ತು ನೋಡಾ (ಅಬಸೂ.೪. ೧೩೬-೫೨೪); ಸೂಜಿಯ ಹಿನ್ನಿಯಲ್ಲಿ ಮುಗಿಲ ತೋರದ ದಾರ ಹಿಡಿಯಿತ್ತು (ಸುಂಕಬಂ. ೪. ೬೬೦-೮೫); ದೊನೆ ಮೂಱು ಹಿನ್ನಿಯೊಂದು ಆ ಸೂಜಿಯಲ್ಲಿ ಹೊಲಿದಿಹೆನೆಂದಡೆ ಕುಪ್ಪಸಕ್ಕೆ ಬಿಪ್ಪು ಒಡಗೂಡವು ನೋಡಾ (ಸರ್ವಪ. ೧೨೩-೬೩೦). ೨. (ಬಾಣದ) ಹಿಂಭಾಗ ; ಗರಿ ; "ಕರ್ತರಿ, ಪುಂಖ" (ಪಾಜಶ. ೬). ಹಿನ್ನೆ : ೩. ಹಿಂಬದಿ ; ಹಿಂಭಾಗ : ಕೂಳ್ಳಿಯ ಹಿನ್ನೆಯಿಂದ ಸೊಸೆಯ ತಲೇ ಮೇಲೆ ಕುಕ್ಕಿದಳು (ಜಾಜಾ. ೮೯).

[ ದೇ. ॥ ಮಲ. ತುಳು. ಪಿನ್ನೆ ]

**ಪಿನ್ನೆ**₂ ' ಪಿನ್ನಿ ' ನೋ.

**ಪಿನ್ನೆಣಿಕೆ** (ನಾ). ಹಿಂದಾದುದನ್ನು ಕುರಿತು ಯೋಚಿಸುವುದು ; ಪಶ್ಚಿಮಬುದ್ಧಿ : ಪಿನ್ನೆಣಿಕೆ ಮುನ್ ಬಗೆಯುನೊತ್ತು ಪುಸಿ ಮಾಡ್ಪುದು (ಅಂತಗೂ. ೧೯-೩೬೬). [ ಪಿನ್+ಎಣಿಕೆ ]

**ಪಿನ್ನೆತ್ತಿ** (ನಾ). ನೆತ್ತಿಯ ಹಿಂಭಾಗ : ಪಿನ್ನೆತ್ತಿಯೊಳ್ ತುಱುಬನಿಕ್ಕಿದಳು (ಪೋಹಕ. ೬-೨೬). [ ಪಿನ್+ನೆತ್ತಿ ]

**ಪಿನ್ನೆಲೆ, ಹಿನ್ನೆಲೆ** (ನಾ) ೧. ಹಿಂದಿನ ನೆಲೆ,—ಸ್ಥಳ : ಹಿಂಬದಿ ; ಹಿಂಭಾಗ : ಪೋರ್ದರಿಱಿದರ್ ನೂಂಕಿದರ್ ಮರಳೆ ಪಿನ್ನೆಲೆಗೆ ಸಾರ್ದರ್ ಪೋಯೆಂದುಱುಬಿ ತಮತಮಗೆ ಪೊಯ್ದಾಡುತಿರ್ದರ್ (ಪಂಪ. ೪೯-೨೫); ಪ್ರವೀರನು ತೆಗೆಸಿದರ್ಪಿನ್ನೆಲೆಗೆ (ಕುಬಶಾ. ೬-೩೦). ಹಿನ್ನೆಲೆ : ೧. ಕರಿಘಟೆಯ ಮುಱಿಪೊಕ್ಕು ನಿಂದರು ನರರು ತೇಜಿಗಳೋಡಿ ತೇರಿನ ಮುಱಿಯ ಸಾರ್ದವು ತೇರು ಹಾಯ್ದವು ದೊರೆಯ ಹಿನ್ನೆಲೆಗೆ (ಕುಮ್ಯಾ.೪. ೧೫-೩೬) ; ಮದಗಜಗಮನೆಯೊರ್ವಳು ಕರಿಮಧ್ಯೆಯೊಳೊದಗಿ ಸರಸಕೈತಂದು ಬೆದಱಿ ಹಿನ್ನೆಲೆಗೈದೆ (ಕಂಜು. ೨೫-೧೨೩) ; ಘಟನೆಗಳ ನಿರೂಪಣೆ ಮತ್ತು ಪಾತ್ರಸೃಷ್ಟಿಗಳೇ ಅಲ್ಲಿನ ಮುಖ್ಯೋದ್ದೇಶ. ಇವುಗಳನ್ನು ಅತ್ಯಂತ ಸ್ಪಷ್ಟವಾಗಿ ನಮ್ಮ ಕಲ್ಪನೆಗೆ ದೊರಕುವಂತೆ ಮಾಡಿ ಕವಿ ಹಿನ್ನೆಲೆಗೆ ಸರಿಯುತ್ತಾನೆ (ಶಾಕಗೀ. ೫). ೨. ಯುದ್ಧಭೂಮಿಯ ಹಿಂಭಾಗಕ್ಕೆ ಇರುವ ಸ್ಥಳ : ಮುಱಿದ ಚೂಣಿಯ ಭಟರು ತಂದರು ಬಿಱುಸಿನರೆನೆಲಿಗಿದು ನಿಹಾರದೊಳಱುವ ನೆಱೆ ಸೊಪ್ಪಾಗಿ ಸಾರಿತು ಸರಿದು ಹಿನ್ನೆಲೆಗೆ (ಕುಪಾ ೪. ೧೯-೧೨); ಲಗ್ಗೆಯೊಳಗೆ ನೊಂದು ರಿಪು ಭೂಪರ ಸೇನೆಯೊಗ್ಗೊಡೆದೋಡಿ ಹಿನ್ನೆಲೆಗೆ ಹಿಗ್ಗುದೆಗೆವ ದೂರ ಚೌದಿಕ್ಕಿನೊಳಾಗ ಬೊಗ್ಗನೆ ಪಾಳ್ಯವಿಳಿದರು (ಕಂಪಶ. ೩-೬೦). ೩. "ಮುಂದುಗಡೆ ಇರುವ ಮುಖ್ಯವ್ಯಕ್ತಿಗಳಿಗೆ ಅಥವಾ ವಸ್ತುಗಳಿಗೆ ಪ್ರಾಧಾನ್ಯ ಕೊಡುವಂಥ ದೃಶ್ಯ ಚಿತ್ರ ಅಥವಾ ವರ್ಣನೆ" (Back-ground. ಇಂಕಸ) : ಶುದ್ಧವಾದ ಅಂತರಿಕ್ಷದ ಹಿನ್ನೆಲೆಯಲ್ಲಿ ಅವು ಮರಳ ರೆಕ್ಕೆಗಳಂತೆ ಕೊಂಬೆಗಳಂತೆ ತೋರುತ್ತಿದ್ದುವು (ಕುಲಶಾ. ೪೨). ೪. ಭೂಮಿಕೆ ; ತಳಹದಿ ; ಬುನಾದಿ ; ಸನ್ನಿವೇಶ : ಈ ಗ್ರಂಥದ ಸ್ವರೂಪವನ್ನು ಅರಿಯಬೇಕಾದರೆ ಅದು ಹುಟ್ಟಿದ ಹಿನ್ನೆಲೆಯನ್ನು ಅರಿಯಬೇಕಾದುದು ಅತ್ಯಗತ್ಯ (ಹೊಸ್ಕ್ಯ. ೦) ; ಗೊಬೆಲ್ ಯಾವ ಒಂದು ವಿಷಯ ಪ್ರತಿಪಾದನೆ ಮಾಡುವಾಗಲೂ ಅದರ ಚಾರಿತ್ರ್ಯ ಮತ್ತು ಹಿನ್ನೆಲೆಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದನು (ಸಸ್ಕೃ. ೪೬) : ಕನ್ನಡದಲ್ಲಿ ಪ >ಹ ಆದುದಕ್ಕೆ ಒಂದು ಐತಿಹಾಸಿಕ ಹಿನ್ನೆಲೆ, ಬೆಳವಣಿಗೆ ಇದೆ (ದ್ರಾಕಿ. ೩೬೬); ಶಂಕರ ರಾಮಾನುಜರಿಗೆ ಅವರವರ ಮತಸ್ಥಾಪನೆಗೆ ಹಿನ್ನೆಲೆ ಏರ್ಪಡಾಗಿತ್ತು (ಶಾರದ. ೨೯೬); ಇಂದು ಈ ಹಣ ಯಶೋದೆಗಾಗಿರಬಹುದು ಎಂಬ ಸಂದೇಹದ ಹಿನ್ನೆಲೆಯಲ್ಲಿ ಈ ಮಾತು (ಪಾಶ್ಯ. ೯೯).

[ ಪಿನ್+ನೆಲ₁ ]

**ಪಿನ್ನೇಕಾಯಿ** (ನಾ). ಒಂದು ಬಗೆಯ ಮರ : ಸುರಹೊನ್ನೆ, ಪಿನ್ನೇಕಾಯಿ, ಪುನ್ನಾಗ, ಸುಡಿಬು, ಹೂಹೊಮ್ಮೆ (ವ್ಯ. ಕಿ. ೦೬-೨೯೬) ; ಕಲ್‌ಹೊನ್ನೆ, ಕಿರಿಹೊನ್ನೆ . . . ಪಿನ್ನೇಕಾಯಿ, ಪುನ್ನಾಗ, ಬೊಬ್ಬಿ, ಶ್ರೀಹೊನ್ನೆ, ನಾಮೇರು, ಸುಡಿಬು, ಇರ್ರೈ (ಸಸ್ಯ. ೨೬).

[ ಪಿನ್ನೆ₀ ( ₱←ತಮಿ ಪಿನ್ನೈ ) +ಕಾಯಿ₄ (<ಕಾಯ್₄) ]

**ಪಿನ್ನೇಸಱು** (ನಾ). ಪಶ್ಚಿಮಕ್ಕೆ ಇರುವ ಸೂರ್ಯ ; ಮುಳುಗುತ್ತಿರುವ ಸೂರ್ಯ: ಇನ್ನೊಮ್ಮೆ ಶರವ ತಿರುವಿಗಿಟ್ಟು ನೋಡೆಂದು ತನ್ನ ದಿವ್ಯಾಸ್ತ್ರದಿನವನ ಪಿನ್ನೇಸಱು ಪಿಂಗಡಲೊಳಗಗುಳದ ಮುನ್ನ . . . ಅವನುತ್ತಮಾಂಗವನಾಗಸದ ಅತ್ತ ಹಾಱುವ ತೆಱದಿಂದೆಚ್ಚನು (ನೇಮಿಜಿ. ೨೯-೧೯೯).

[ಪಿನ್ + ನೇಸಱು (<ನೇಸಱ್)]

**ಪಿನ್ನೋ** (ಕ್ರಿ). ಹಿಂದೆ ಆದುದಕ್ಕಾಗಿ ವ್ಯಥೆಯನ್ನು ಹೊಂದು; ಪಶ್ಚಾತ್ತಾಪ ಪಡು: ಎಂತು ನೀನ್ ಪಿನ್ನೋಯದೆಯೆ ಪೋಪೆ? (ಅಂಶಿಗೂ. ೧೦-೨೦೨). [ಪಿನ್ + ನೋ]

**ಪಿನ್ನೋಡು** (ಕ್ರಿ). ಹಿಂದಕ್ಕೆ ಹೊರಳಿ ನೋಡು; ಹಿಂದಿರುಗಿ ನೋಡು: ಎನಗೆ ಅಂಜಿಕೆಯೆಂಬುದಿಲ್ಲ. ಅದಱಿಂದೆ ನೀನ್ ಬಂದ ದಾರಿಯೊಳೆ ಪಿನ್ನೋಡದೋಡು! (ಅದ್ಭ್ರಶ್ರ. ೩೦-೦೦೦೪). [ಪಿನ್ + ನೋಡು]

**ಪಿಪಾಸ** (ನಾ). ನೀರಡಿಕೆ; ಬಾಯಾರಿಕೆ; ದಾಹ: "ನೀರಡಿಕೆ ತರ್ಷಂ ಪಿಪಾಸವೆನಿಸಿಕ್ಕುಂ" (ಮಂಗರಾ. ೬೦-೦೪); ಸತ್ಯಗುಪ್ತನು ಆ ಜಲವನ್ನು ಹಿಂಗಿ ಪಿಪಾಸವನ್ನು ಸ್ವಲ್ಪ ಶಮನ ಮಾಡಿಕೊಂಡು ಸುತ್ತಲೂ ನೋಡುತಾ ಕೂತುಕೊಂಡನು (ಸೀಚಿಮು. ೫). [ಸಂ. ಪಿಪಾಸಾ]

**ಪಿಪಾಸಿತ** (ಗು). ೧. ಬಾಯಾರಿದ; ನೀರಡಿಸಿದ. (ನಾ). ೨. ಬಾಯಾರಿದವನು; ನೀರಡಿಸಿದವನು: "ತೃಷಿತಃ, ತರ್ಷಿತಃ, ಪಿಪಾ(ಸುಃ), ಪಿಪಾಸಿತಃ—ಈ ೪ ನೀರಡಿಸಿದಾತಂ" (ಹಲಾಯು. ೫೯-೨೦೭). [ಸಂ.]

**ಪಿಪಾಸು** (ಗು). ೧. = ಪಿಪಾಸಿತ ೧. (ನಾ). ೨. = ಪಿಪಾಸಿತ ೨: "ತೃಷಿತಃ, ತರ್ಷಿತಃ, ಪಿಪಾ(ಸುಃ), ಪಿಪಾಸಿತಃ—ಈ ೪ ನೀರಡಿಸಿದಾತಂ" (ಹಲಾಯು. ೫೯-೨೦೭). [ಸಂ.]

**ಪಿಪಾಸೆ** (ನಾ). ೧. ನೀರಡಿಕೆ; ಬಾಯಾರಿಕೆ; ತೃಷೆ: "ಉದನ್ಯಾ, ತರ್ಷಃ . . . ಪಿಪಾಸಾ—ಈ ೫ ನೀರಟ್ಟಿ" (ಹಲಾಯು. ೬೦-೨೦೬); ಅಂತಳವಿಗಟಿದ ಪಿಪಾಸೆಯುಂ ಪಸಿವುಮಸವಮುಯಂಬಡೆದು . . . ನೀರ್ಗೆ ಟಲನಟಿಸಿ . . . ನಡೆವಾಗಳ್ (ಲೀಲಾವ. ೬-೯೨ ವ). ೨. (ಅಲಂ) ತಿಳಿದುಕೊಳ್ಳಬೇಕೆಂಬ ಇಚ್ಛೆ,—ಬಯಕೆ: ಅಂತೆಯೆ ಮುಂದೆ ಅದು ಶಾಶ್ವತವಾದ ಆನಂದದ ಬಗೆಗೆ ಪಿಪಾಸೆಯನ್ನು ಹುಟ್ಟಿಸುತ್ತದೆ (ಮಹಾಪೋ. ೦೬೩). [ಸಂ. ಪಿಪಾಸಾ]

**ಪಿಪಿಲೆ, ಪಿಪ್ಪಿಲ** (ನಾ). ಇರುವೆ; ಪಿಪೀಲಿಕೆ: ತರುಗಿರಿಯನೆಲ್ಲ ತಱಗೆಲೆಯುಂತೆ ಹಾಱಿಸುವ ಪುರುತರದ ಪ್ರಳಯಮಾರುತನೊಳುಂ ಪಿಪಿಲೆಗಳು ಹರುಷದಿಂದಿದಿರೊಡ್ಡಿ ನಿಲ್ವ ಸತ್ವವದುಂಟೆ (ಪ್ರಭುಲಿ. ೬-೦೨). ಪಿಪ್ಪಿಲ: ಉನ್ನತದ ಪಿಪ್ಪಿ [ಪಾಠಾಂ. ಪ್ಪಿ]ಲ ಪ್ರಸಾದದಗುಳು ಕಚ್ಚಿ ಬರೆ ಕಾಣುತದಕೆ ಬಸವಂ ಮನ್ನಣೆಯೊಳುಂ ಸಕ್ಕರೆಯ ತಳಿಯೆ (ಪ್ರಭುಲಿ. ೭-೩೪). [< ಸಂ. ಪಿಪೀಲ]

**ಪಿಪೀಲಕ** (ನಾ). ೧. ದೊಡ್ಡ ಕಪ್ಪುಇರುವೆ; ಗೊದ್ದ. ೨. (ಅಲಂ) ಅಲ್ಪವ್ಯಕ್ತಿ; ಕ್ಷುದ್ರಜೀವಿ: ಈ ಸುಶರ್ಮಕ ಶಕುನಿ ಸಲೆ ದುಶ್ಶಾಸನಾದಿ ಪಿಪೀಲಕರು ತಮಗೇಸು ಬಲುಹುಂಟೈಸನೊದಗಲಿ ಎಂದರವರು (ಕುಮ್ಮಾ. ೦೫-೦೫). [ಸಂ.]

**ಪಿಪೀಲಿಕ** (ನಾ). ೧. (ಹೆಣ್ಣು) ಇರುವೆ: "ಪಿಪೀಲಿಕಂ ಕ್ಷುದ್ರದೊಂದೆ ನಲ್ಕಿಱುಹೆಯುಕ್ಕುಂ" (ಮಂಗರಾ. ೯೯-೦೬); ಅಲ್ಲಿಗೆ ಮರ್ಕಟನಂತಾಗದೆ ಇಲ್ಲಿಗೆ ವಿಹಂಗನಂತಾಗದೆ ಈಚಿಯಲ್ಲಿಗೆ ಪಿಪೀಲಿಕನಂತಾಗದೆ (ಷೋಳಪು. ೦೦೦-೪೩೬); ಬೆಲ್ಲದ ರಸವಂ ದಾರವಂ ಪೂಸಿ ಪವಳದ ಛಿದ್ರ ಮೊದಲೊಳಿಟ್ಟು ಇಱುಂಪೆಗಳುಳ್ಳ ಠಾವಿನೊಳಿರಿಸಲ್ ಪಿಪೀಲಿಕಂಗಳು ದಾರವಂ ಪೆಱಗಣ ಛಿದ್ರಕ್ಕೆ ತೆಗೆತಪ್ಪುದುಂ (ಧರ್ಮಾಮೃ. ೩-೨೦ ವ); ಆ ಲಿಂಗದ ಮೇಲೊಂದು ಪಿಪೀಲಿನಿರೆ ಕಂಡು ಬೆದಱಿ . . . ಶೂಲಿ ಕರಂ ನೊಂದನೆಂದು ಬಳಲುತ್ತಿರ್ದಂ (ಪ್ರಭುಲಿ. ೦೬-೭). ೨. (ಇರುವೆಗಳು ಸಂಗ್ರಹಿಸುವುವೆಂದು ಭಾವಿಸಲಾದ) ಒಂದು ಬಗೆಯ ಚಿನ್ನ. [ಸಂ.]

**ಪಿಪೀಲಿಕಾನ್ಯಾಯ** (ನಾ). ಇರುವೆಯಂತೆ ಸಾವಧಾನವಾಗಿ, ನಿರಂತರವಾಗಿ ಕೆಲಸವನ್ನು ಪೂರೈಸುವಿಕೆ: ಎನಿತೂ ಸೋಜಿಗದ ಬಿಲ್ಗಾರಿಕೆಯ ಕೆಯ್ತಗಳ ಕಂಡಗೆ ಪಿಪೀಲಿಕಾನ್ಯಾಯದಿಂ ತಾನುಮಂತೆಸಗಬೇಕೆಂಬುದು ಸ್ಫೂರ್ತಿಯಾದರೆ ತಪ್ಪೊ ಅಚ್ಚರಿಯೊ ಏನಂತೆ? (ಹಳ್ಳಿಕ. ೦೭-೦೦). [ಸಂ.]

**ಪಿಪೀಲಿಕಾಸ್ತ್ರ** (ನಾ). ಇರುವೆಗಳನ್ನು ಉತ್ಪತ್ತಿ ಮಾಡುವ ಒಂದು ಬಗೆಯ ಅಸ್ತ್ರ: ಕೊಟ್ಟು ತೆಗೆದೆಚ್ಚಂ ಪಿಪೀಲಿಕಾಸ್ತ್ರವನೊಡನೆ ಟಟ್ಟಿಱುಹೆ ಮುತ್ತಿದುವು ಘನೆಗಳ (ಕೈಮಿಥಾ. ೨೯-೩೪). [ಸಂ.]

**ಪಿಪೀಲಿಕೆ** (ನಾ). ಇರುವೆ: ಕ್ರಿಮಿಪಿಪೀಲಿಕಾಭ್ರಮರಮನುಷ್ಯಾದಿ ವಿಭೇದಮಾಗಿ ದ್ವೀಂದ್ರಿಯಾದಿ ತ್ರಸಂಗಳ್ (ಸುಕುಮಾ. ೬-೬ ವ); ಯಮದಂಡಪದೇಂ ಮಾಣ್ಬುದೆ ಪಿಪೀಲಿಕಾಪಥವಿಧಿಯುಂ (ಜಗಂ. ೨-೩೪); ಧಾರುಣಿಯೊಳು ಪಿಪೀಲಿಕೆಯು ವಿಸ್ತಾರದಲಿ ಮಾಡಿದ ಮನೆಯ ಕಾಳೋರಗನು ಹೊಗುವಂತೆ ರಿಪುಕುಂತೀಕುಮಾರಕರು ವೈರದಲಿ ಸಪ್ತಾಂಗವನು ಕೈಸೂಱಿಗೊಂಬರು (ಕುಮ್ಮಾ. ೬-೦೪). [ಸಂ. ಪಿಪೀಲಿಕಾ]

**ಪಿಪ್ಪರಗೆ** (ನಾ). ಒಂದು ಊರಿನ ಹೆಸರು; P ಬಿಜಾಪುರಜಿಲ್ಲೆಯ ಈಗಿನ ಹೂವಿನ ಹಿಪ್ಪರಿಗೆ: ಬಾಸುರಿಕೋಡು ಇಂಗಳಿಸರ ಬಾಗೆವಾಡಿ ಸಾಮಳವಾಡಿಗೆ ಒಡ್ಡವೊಡಿಗೆ ಮಧ್ಯವರ್ತಿ [F] ಪಿಪ್ಪರಗೆ ನಾಮಗ್ರಮೋ (ಶಾಇ. XI-1, ೬-೨೦; 862); [ಪೊ]ಲದ ಸಾಳವಾಡಿಗೆಯ × × ಯಿಂ ಪಡುವ ಪಿಪ್ಪರ[ಗೆ]ಯ ಸೀಮೆಯಿಂ ತೆಂಕ ಸರ್ವ್ವ[ನಮ]ಶ್ಯಂ ಬಿಟ್ಟ ಟರಿಯ ನೆಲ ಮತ್ತರ್ ೫೫ (ಶಾಇ. XI-1, ೬೯-೩೭; ಸು. 1062). [?]

**ಪಿಪ್ಪಲ, ಪಿಪ್ಪಳ** (ನಾ). ೧. ಒಂದು ಬಗೆಯ ಮರ; ಅರಳಿ; ಅಶ್ವತ್ಥ: "ಶ್ರೀವೃಕ್ಷಃ, ಪಿಪ್ಪಲಃ, ಅಶ್ವತ್ಥಃ, ಬೋಧಿಃ—ಈ ೪ ಅರಳಿ" (ಹಲಾಯು. ೩೩-೪೩); "ಪಿಪ್ಪಲಂ ಬೋಧಿಯಶ್ವತ್ಥಮೆನಲರಳಿಯಕ್ಕುಂ" (ಮಂಗರಾ. ೩೪-೦೦); ಉರುಪಯೋಧರಬಿಲ್ವವನು ಹೊಯ್ದೊರಸಿ ಕದಳಿಯ ನುಣ್ದೊಡೆಯನಿಟ್ಟೊರಸಿ ರಮಿಸಿತು ವನಸಿರಿಯ ಪಿಪ್ಪಲದಳಂಗದಲಿ (ಕುಮ್ಮಾ. ೨೦-೩೦); ಜಾಲಿ ಜೇನೊಡವಿಪ್ಪೆ ಪಿಪ್ಪಲ ಮಾಲೆಯುವ ನೋಡಬಲೆ (ತೊರರಾ. ೩-೦-೨೮); ಖದಿರು ಬಿಲ್ವ ತಮಾಲ ತಂಡಸಿ ಬಿದಿರು ಬೆತ್ತ ಪಲಾಶ ಪಿಪ್ಪಲ ಮಧುಕ ಹೊನ್ನ ಕದಂಬ ಗುಗ್ಗುಳ ನಾಗ ಪುನ್ನಾಗ (ಉತ್ತ. ೦೦-೪). ೨. ನೀರು; ಜಲ. ೩. ಜವುಗಿನ ನೆಲ,—ಭೂಮಿ. ೪. ಮೈಲಿಗೆ. ೫. ಯತಿ; ಸಂನ್ಯಾಸಿ: "ಕುಜಭೇದಂ ಶ್ಲಕ್ಷ್ಣ ಯೋಗೀಶ್ವರ ಜಲ ಮಲಿನಂ ಪಿಪ್ಪಲಾಖ್ಯಾನಂ" (ನಾನಾರ. ೩೩). ಪಿಪ್ಪಳ: ೧. ನನೆವೊತ್ತಿತ್ತದಿರ್ಗಂತೆ ಪಲ್ಲವಿಸಿದತ್ತುದ್ಯತ್ತಮಾಳಂ ಕರಂ ಕೊನರೇಱತ್ತುರು ಪಿಪ್ಪಳಂ . . . ಘನತಾರಾಂಕುರಭಾರಮಂ ಬಂರವಕಂ ಪೆತ್ತತ್ತು ಟಿನ್ನೊಪ್ಪದಿಂ (ಬಾರ. ೦೪-೨೮); ಸಾಳ ರಸಾಳ ತಾಳ ತಿಲಕಾಮಳ ಪಿಪ್ಪಳ[ಪಾಠಾಂ. ಲ] . . . ತರುಸಂತತಿಯಿಂ ವನಬ್ಯಂದವೆಪ್ಪುಗುಂ (ಧರ್ಮ. ೧-೩೫). ೬. ಒಂದು ಊರಿನ ಹೆಸರು: ಪಿಪ್ಪಳಗ್ರಾಮನಾಮಾಗ್ರಹಾರಸಮುತ್ಪನ್ನಃ (ವೃಶಂ. ೦೪೨೦, ೦೦-೦೯೫, 947). [ಸಂ.]

**ಪಿಪ್ಪಲಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು; ಹಿಪ್ಪಲಿ; ಬಾಲಮೆಣಸು: "ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಪಿಪ್ಪಲೀ, ಕಣಾ—ಈ ೬ ಪಿಪ್ಪಲಿ" (ಹಲಾಯು. ೦೦೦-೪೬೦); ಚಕೋರಪಂಜರಂಗಳೊಳ್ ಪಿಪ್ಪ[ಪಾಠಾಂ. ಪ್ಪಿ]ಲೀತಂಡುಲಂಗಳ ಬಂಬಂ ಸೂಸಲುಂ (ಕಾದಂಪೂ. ೦೦೦೬); ಪಿಪ್ಪಲಿ ಚಲ್ಲಗಾಯ್ಗ್ ಮೆಣಸು ಮಾಗುಳಿವೇರ್ಮೊಳೆಯಲ್ಲವೇಲೆ . . . ಅರೆಸಾಮುಫಲಂಗಳಾವಿಯಾದುಪ್ಪಿನ ಕಾಯ್ಗಳಂ ಮಂಗುಸಗಿಪ್ಪವಸಿಕ್ಕಿದನಟ್ಟಪತ್ರದೊಳ್ (ಲೀಲಾವ. ೫-೩೩); ಜ್ವರಮೇಱುದು ಮಾಣ್ಗುಂ ಪಿಪ್ಪಲಿಗೂಡಿದ ಪಾಲ್ ಕಾವಾಱಿಕೆಂಡಿಗೆ ಶರ್ಕರೆಯಿಂದಂ (ಕಲ್ಯಾ. ೪-೯೨). [ಸಂ.]

**ಪಿಪ್ಪಲಿಗ** (ನಾ). ಹಿಪ್ಪಲಿಯನ್ನು ಮಾರುವವನು; ಬಾಲಮೆಣಸಿನ ವ್ಯಾಪಾರಿ: ತಂಬುಲಮಂ ಕೊಳ್ವಂ ಮಾಱುಮಂ ಮೋಣ್, ತಂಬುಲಿಗಂ, ಏವಂ ದವಸಿಗಂ, ಗಂದಿಗಂ, ಮೆಣಸಿಗಂ, ಪಿಪ್ಪಲಿಗಂ (ಶಬ್ದಾನು. ೪೦೯ ಪ್ರಯೋ). [ಪಿಪ್ಪಲಿ + –ಗ]

**ಪಿಪ್ಪಲಿಗಾಯಿ** (ನಾ). ಹಿಪ್ಪಲಿಕಾಯಿ : ಸುಂಟಿ ಕೂಗಲಿ ಪಿಪ್ಪಲ[ಲಿ] ಗಾಯು ಕೊಯ್ದಾರು ನಂಬೆಯು ಕಳವಣ್ಗಳೊಡನೆ (ಮೋಹತ. ೯-೬೦). [ ಪಿಪ್ಪಲಿ+ಕಾಯಿ₄ ( ಕ ಾಯ್₄) ]

**ಪಿಪ್ಪಲೀಪತ್ರ** (ನಾ). ಅರಳಿಯ ಎಲೆ, -ಪತ್ರ ; **ಪಿಪ್ಪಲದಳ** : ಅಯಃಪಿಪ್ಪಲೀಪತ್ರಮಾಲಾಂಚಿತಮುದ್ಯತ್ಪಾದಪೀಠಾನ್ವಿತವತಿಧವಳ ಪ್ರಚ್ಛದಾಚ್ಛಾದಿತಂ ವಿ[ಸ್ತೃ]ತಮಾದುತ್ತುಂಗಗರ್ಭೋಚಿತಶಯನ]ದೊಳಾ ಕಾಂತೆ ಕಣ್ಗೆಡ್ದಮಾದಳ್ (ಕಾದಂಪೂ. ೩೯೯). [ಸಂ.]

**ಪಿಪ್ಪಲೆ** (ನಾ). = ಪಿಪ್ಪಲ ೧ : ಪಿಪ್ಪಲೆ ಅರಳೀಮರು ಫಲಾಸೇನ ಮುತ್ತುಗ ಮೇರು (ಪ್ರತಿಕಾ. ೬-೬). [ ಸಂ. ಪಿಪ್ಪಲ ]

**ಪಿಪ್ಪಳ** ' ಪಿಪ್ಪಲ ' ನೋ.

**ಪಿಪ್ಪಿಲ** ' ಪಿಪಿಲೆ ' ನೋ.

**ಪಿಪ್ಲು** (ನಾ). ಮಚ್ಚೆ ; ಗುರುತು : " ಜಟುಲಃ . . . ಪಿಪ್ಲುಃ, ತಿಲಕಃ, ತಿಲಕಾಲಕಃ — ಈ ತಿಲಕಾಕಾರಗಳಾದ ಕರೀಮಚ್ಚೆಗಳ ಹೆಸರುಗಳು, ಸಂಗಾತೀಮಚ್ಚೆ, ಹುಟ್ಟುಮಚ್ಚೆ "(ಸಿದ್ಧಾಂತಿ. ೦೬). [ಸಂ.]

**ಪಿಮ್ಮಡ**, ಪಿಮ್ಮಡಿ, ಹಿಂಬಡ, ಹಿಮ್ಮಡ, ಹಿಮ್ಮಡಿ, ಹಿಮ್ಮಡಂ (ನಾ). ೧. ಅಡಿಯ ಹಿಂಭಾಗ ; ಪಾದದ ಹಿಂಬದಿ : ಧತಿ ಕೆಡದೆ ಮನದ ಬಲ್ಪುಡುಗದೇ ಪಿಮ್ಮಡದೊಳತಿಧೈರ್ಯದಿಂ ನಡೆದು ಪೋಪಂ (ಕರಾಶ. ೨-೯-೫೭); ಪಿಮ್ಮಡದಿಂದೆ ಕೆಲವು ದೂರಂ ನಡೆದು ತುದಿಗಾಲೊಳಿನಿತು ದೂರಂ ಬರುತೆ ಕಾಲೋರೆಯಿಂದಡಿಯಿಡುತ ನಡೆವುತಿರೆ (ಶಾಸೋಪು. ೭-೫೭); ಚೆಂದದ ಪಿಮ್ಮಡ ಸೊಬಗಾಂತ ಬೆರಳುಗಳಿಂದೆಸೆವುವು ಪಚ್ಚ ಯವನ (ಶಾಗಳು. ೨೫-೪೫). **ಪಿಮ್ಮಡಿ** : ೧. ತಲೆಕೆಟಗಾಗಿ ಕಟ್ಟಿದಲಗೊಟುಯನರ್ಚೆ ಬೀಟ ಪಿಮ್ಮಡಿಯುಂ ಪಡೆಯೆ ಪೆಣಗಂ ನೋಡುತ್ತುಂ ಪರಿವ ಪೆರ್ಬಂಟುಮಂ . . . ಕಂಡು (ರೀಶಾಪ. ೫-೧೧೯ ಪ). **ಹಿಂಬಡ** : ೧. ಮೊದಲು ನಾವು ಸ್ಥಿರಾಸನದಲ್ಲಿ ಕೂಡಲು ಪ್ರಾರಂಭಿಸಬೇಕೆಂದು ಹೇಳಲಾಗಿದೆ . . . ಇದರಲ್ಲಿ ಎರಡು ರೀತಿಗಳಿರುವುವು ; ನಾವು ಬೇಕಾದರೆ ಎಡದ ಹಿಂಬಡವನ್ನು ಒತ್ತಬಹುದು ಇಲ್ಲವೇ ಬಲದ ಹಿಂಬಡವನ್ನು ಒತ್ತಬಹುದು (ಶರಶ. ೯೪) ಅಂಗುಷ್ಟ ಎಂಬುದಕ ಮುಂದ ಪಾದವ ಬರಿ ಹಿಂಬಡಕ ಕಾಲು ಛೇದಾದ ನಡ ಧಡ . . . ಹತ್ತು ಶಿರಗಳ ಬರೆದಾಳು ಮುಂದೆರಡು ಪಾವ ಬರೆವಳು (ಕವಾಳ. ೨೬೦). **ಹಿಮ್ಮಡ** : ೧. ತವೆ ಹಿಮ್ಮಡಂಗಳು ಮಿಗುವ ಘನವೇಣಿಲತೆ (ಕಂಶ. ೬-೧೩); ಅಣೆಯರವೆತ್ತ ಹಿಮ್ಮಡದ ಎಣೆತೊಣೆಯಿಲ್ಲದಡಿಯ ರಂಗಾಯೆಂಬ [ರ]ಮಣಿ ಮೈದೋರ್ವಳಿನ್ನೆಂದೊ (ಶತಸಾಂ. ೨೨-೧೧); ನೀಲ ಆಡಿನನು ತನ್ನ ಹಿಮ್ಮಡದಿಂದ ಸಾವಕಾಶವಾಗಿ ಎದುರಿಗೆ ತಿವಿದನು (ಬಂಗಾಹ. ೨). ೨. ಚಪ್ಪಲಿಯ ಹಿಂಭಾಗದ ಅಟ್ಟೆ : ಆ ಚಪ್ಪಲಿಗಳು ಕೊಂಚ ಅವನತಿಯನ್ನು ಹೊಂದಿದ್ದುದರಿಂದ, ಮತ್ತೆ ಅವಕ್ಕೆ ಹಿಮ್ಮಡ ಕಟ್ಟಿಸಿ ಹೊಳಪು ಕೊಡಿಸಿದ್ದೆ (ಮುಂಗಾರು. ೦೦); ಒಕ್ಕಲಿಗನು ಬಾಗಿಲಲ್ಲಿ ಎತ್ತರವಾದ ಹಿಮ್ಮಡದ ತನ್ನ ಮೆಟ್ಟುಗಳನ್ನು ಬಿಟ್ಟು ಒಳಕ್ಕೆ ಹೋದನು (ರಕ್ತರ್. ೦). **ಹಿಮ್ಮಡಿ** : ೧. ಅಟ್ಟೆ ಹರಿದು ಹರಿಯ ಹಿಮ್ಮಡಿಯ ಹಿಡಿದು ಕೊಂಡು ಬಿಟ್ಟೆನು ಕಟ್ಟಿಯಾಳಿದೆ ರುದ್ರನೆಂಬವನ (ಸಳವ. II, ೨೯೬-೨೭); ವೇಣೀವಲ್ಲರಿ ತುಡುಕೆ ಹಿಮ್ಮಡಿಯ (ಕಂನಪ. ೯-೬೬); ಹಿಮ್ಮಡಿಗಳಲ್ಲಿರುವ ಸುಳಿಗಳೆರಡು ಸ್ವಾಮಿಗೆ ನಾಶಕರಗಳಾಗುವುವು (ಸಾಗಂಧಿ. ೩೦೭-೨೦). ೨. ರಬ್ಬರಿನ ಹಿಮ್ಮಡಿಯುಳ್ಳ ಮೆಟ್ಟು . . . ಪಾದರಕ್ಷೆಗೆ ಬೇಕಾಗುವ ಹಾಳೆ, ಹಿಮ್ಮಡಿ, ಬಾರು-ಎಲ್ಲವನ್ನೂ ರಬ್ಬರಿನಿಂದ ಮಾಡಲು ಬರುತ್ತದೆ (ಬಾಲಶ್ರ. I, ೫೯); ಕೂಲಿಂಗ್ ಗ್ಲಾಸ್, ಹಿಮ್ಮಡಿ ಎತ್ತಿದ ಎಕ್ಕಡ . . . ಇನಾಕುಹಾಕುತ್ತವೆ (ವನ್ನೂರು. ೩೦೫). **ಹಿಮ್ಮಡು** : ೧. ವಿಪಾದಿಕೆ—ಕಾಲ ಹಿಮ್ಮಡು ಒಡೆಯುವ ರೋಗ (ಗಂಗಾಶು. ೨೯೧). [ಪಿಂ (<ಪಿನ್) + ಮಡ್ಡ]

**ಪಿಮ್ಮಡಿ** ' ಪಿಮ್ಮಡ ' ನೋ.

**ಪಿಮ್ಮೆಟ್ಟು**, ಹಿಮ್ಮೆಟ್ಟು (ಕ್ರಿ). (ಹೆದರಿ) ಹಿಂದಕ್ಕೆ ಸರಿ ; **ಹಿಂಜರಿ** : ವಸುಧಾಚಕ್ರಂ ಪದಾಕ್ರಾಂತಿಯಿನದಿರೆ ಭುಜಾಕ್ರಾಂತಿಯಿಂ ದಿಗ್ಗಜಂಗಳ್ ದೆಸೆಯಿಂ ಪಿಮ್ಮೆಟ್ಟೆ (ಜಗಪ. ೯-೭೬); ತೇರೊಳ್ ಪೂಡಿದ ತೇಜಿಗಳ್ ಸರಲ ಕೂರ್ಪಿಂಗಳ್ಕೆ ಪಿಮ್ಮೆಟ್ಟೆ (ಕಬ್ಬಿಗಾ. ೨೬೬); ಇಟ್ಟಡಿಯು ನೆಟ್ಟನಿನಿಸಂ ಪಿಮ್ಮೆಟ್ಟೆ ದಟವಟ್ಟಡರೆಯುಟ್ಟಳಿವರಂ ಕೈಗೊಟ್ಟು ಪೊಯಿಲಿಟ್ಟರ್ (ಶಕಪ. ೨-೪೩). **ಹಿಮ್ಮೆಟ್ಟು** : " ಹಿಮ್ಮೆಟ್ಟಿತಕ್ಕೆ ಪೆಡಮೆಟ್ಟಿತೆಂದಕ್ಕು " (ಕಬ್ಬಿಕೈ. ೬೯); ಇಂತಿಜಿದು ಕೈವಿಟ್ಟು ಪಾತಕಂ ಹಿಮ್ಮೆಟ್ಟೆ ಮುಂತೆ ಹೂಮಳೆನೆರಸಿ ಶಂಕರಂ ನಿಜ ಪುಟ್ಟೆ(ಬಸಾರ. ದೇ. ೧೨೩-೧೫); ದುರ್ಬಲನೊಡನೆ ಭಂಗವ್ಯಾಪ್ತಿ ತನ್ನನು ಸುಗಲೆನುತ ಹಿಮ್ಮೆಟ್ಟೆ ಮಮ್ಮಲಮರುಗಿದನು ಭೀಮ (ಕುಮಾರ. ೪೦-೨೦); ಹಣ ಬಾಯಿ ಬಡಿಯಿತು ಸೋತು ಹಿಮ್ಮೆಟ್ಟಿತು ಗುಣವು (ಜಂಜಾಶ. ೨೦೩-೨). [ ಪಿಂ (<ಪಿನ್)+ಮೆಟ್ಟು₁ ]

**ಪಿಮ್ಮೆಯ್**, ಹಿಮ್ಮೆಯ್ (ನಾ). ೧. ದೇಹದ ಹಿಂಭಾಗ. ೨. ಹಿಂದಿನ ಜನ್ಮ ; **ಪೂರ್ವಜನ್ಮ** : ವಿಷ್ಣುದೂತರಾ ತುಂಬುರನಂ ಕೆಯ್ವಿಡಿದು ಕರೆದುಯ್ಯೆ, ಪಿಮ್ಮೆಯ್ಯೊಳೇಂ ನೋಂತನೋ ! ಎನುತೆ ಬಲ್ಮೆಗೆಯೊಳ್ ಮಂಬಲಿಸಿ (ಅದ್ಭುತ. ೨೦-೧೧). **ಹಿಮ್ಮೆಯ್** : ೧. ಹಿಮ್ಮೆಯ್ಯ ಮುಮ್ಮೆಯ್ಯ ಶೋಧಿಪೆಯಲ್ತೆ ನೀನೊಮ್ಮೆ ಮೈದೋಜಿಂಬರು (ಶರಕ. ೪೨-೧೭೮). [ ಪಿಂ (<ಪಿನ್) + ಮೆಯ್₂ ]

**ಪಿಮ್ಮೊನೆದೋಱು** (ಕ್ರಿ). ಹಿಂಭಾಗದಲ್ಲಿ ಮೊನೆದೋರು ; ಹಿಂದುಗಡೆಯಲ್ಲಿ ತುದಿ ಕಾಣಿಸು : ಬಿಮ್ಮನೆ ಬಿಗುಪೇಱಿ ಮಿಱಿ ಪೊಣ್ಮುವ ಮೊಲೆಗಳ್ ಪಿಮ್ಮೊನೆದೋರ್ಪಿನೆಗಂ ಮನದುಮ್ಮಹದಿಂ ಬಿಗಿದು ಬಿಗಿದು ಬೆಂಡೇಱಿಪೆನೋ (ಶಕಪ. ೬-೨೦೯). [ ಪಿಂ (<ಪಿನ್) + ಮೊನೆದೋಱು ]

**ಪಿಮ್ಮೋರೆ** (ನಾ). ೧. ಹಿಂದಕ್ಕೆ ತಿರುಗಿದ ಮುಖ. ೨. ಹಿಂದಕ್ಕೆ ಮುಖ ಮಾಡಿದವನು.

**ಪಿಮ್ಮೋರೆಯರ್** = ಹಿಂಜರಿಯುವವರು : ಪಿಮ್ಮೋರೆಯರ್ ಸ್ವಾರ್ಥದಲ್ಲಿಯುತ್ಕಾಸಕ್ತರನರ್ಥದೊಳ್ ಭಯದೊಳ್ ತಲ್ಲಣಿಸರ್ (ಸೌಖಂದ. ೦೯-೯೦). [ಪಿಂ (<ಪಿನ್)+ಮೋರೆ (<ಮೋಱೆ) ]

**ಪಿಯಣ** (ನಾ). ಒಬ್ಬಾತನ ಹೆಸರು : ಪಿಯಣನಾಳುತ್ತಿರೆ ತ್ರೈಲಪದೇವಂ ರಾಜ್ಯಂಗೆಯೆ . . . ಬನೂರಮ್ಮ ಮಾಡಿಸಿದ ಕಮ್ಮ (ಎಕ. VIII, ಸೊರಬ. ೫೨೯-೫ : 985). [?]

**ಪಿಯಾನೊ** (ನಾ). ಹಾರ್ಮೋನಿಯಂನಂತೆ ನುಡಿಸುವ ಒಂದು ಬಗೆಯ ವಾದ್ಯ ; P " ಹಲಗೆಯ ಮೇಲೆ ಅಳವಡಿಸಿರುವ ಕೀಲಿಕೈಗಳನ್ನು ಒತ್ತುವುದರಿಂದ ಆಯಾ ಸನ್ನೆಗಳು ಮಿಟಲ್ಪಟ್ಟು ಅವಕ್ಕೆ ಹೊಂದಿಸಿರುವ ಸುತ್ತಿಗೆಗಳು ತಂತಿಗಳನ್ನು ಬಡಿದು ನಾದವುಂಟುಮಾಡುವ (ಮತ್ತು ತಂತಿಗಳ ಸ್ಪಂದನವನ್ನು ನಿಲ್ಲಿಸಲು ತಕ್ಕ ತಡೆಗಳನ್ನು ಅಳವಡಿಸಿರುವ) ಮತ್ತು ಸಾ., ಧ್ವನಿಗುಂಫನವನ್ನು ತಕ್ಕಂತೆ ಅನುಗೊಳಿಸಲು ಕಾಲೊತ್ತುಗಳಿರುವ, ಒಂದು ವಾದ್ಯ " (Piano. ಇಂಕನಿ) : ಮಧ್ಯವಯಸ್ಸಿನ ತೋರವಾದ ಹೆಂಗಸು ಮಿರುಗುವ ಬಿಗಿಯಾದ ಬಟ್ಟೆಯನ್ನು ತೊಟ್ಟು ಪಿಯಾನೊ ಬಾರಿಸುತ್ತಿದ್ದಳು (ಹೊಸಕ್ಷಿ. ೨೪೦); ಶ್ರುತಿ ತಪ್ಪಿದ ಪಿಯಾನೊ, ಗೋಡೆಯನ್ನಲಂಕರಿಸಿದ್ದ ಹಡಗಿನ ಹಳದಿ ತಿರುಗಿದ ಚಿತ್ರಗಳು ಎಲ್ಲದರ ಬಗೆಗೂ ಒಂದು ಅಭಿಮಾನ ಮನೆ ಮಾಡಿತ್ತು (ಬಳಿಕ. ೬೯) ; ಭಾರತದ ವಾಪ್ಯದ ಅನುಕರಣ ಮಾಡಿರುವ ಈಗಿನ ಪರದೇಶವಾದ್ಯವಾದ ಪಿಯಾನೋ (ಕಂಗೀತಂ. ೦೨೦). [ ←ಇಂ. Piano ]

**ಪಿಯಾಲ** (ನಾ). ಒಂದು ಬಗೆಯ ಸಸ್ಯ ; ಪ್ರಿಯಾಲ : " ಮೊಱಲೆ— ರಾಜಾದನಂ, ಪಿಯಾಲಃ, ಸನ್ನಕದ್ರುಃ, ಧನುಃಪಟಃ " (ನಾಶರಾ. ೯). ಪ್ರಿಯಾಲ ' ಪರಾ. [ ಸಂ. ]

**ಪಿರಂಗಿ** 'ಫಿರಂಗಿ' ನೋ.

**ಪಿರಂಗಿಗೆಲಸ** (ನಾ). ಪಾಶ್ಚಿಮಾತ್ಯರ ಕೌಶಲ,—ಕುಶಲಕೆಲಸ : ಕರುಮಾಡದ ಮೊತ್ತಮೊದಲ ನೆಲೆಯೋಜೆಯಲ್ಲಿ ರಂಗುವಡೆದ ಪಿರಂಗಿಗೆಲಸದ ಚಾಲಾಂತರದೊಳಮರಿಸಿದ ಸವಡಿಗನ್ನಡಿಗೊಟವಿಯೆಡೆಯಂ ನೋಡಿ (ಚಿಕೆಪ. ೬-೦೯೯ ಪ). [ ಪಿರಂಗಿ (<ಫಿರಂಗಿ)+ಕೆಲಸ ]

**ಪಿರಕಣೆ, ಪಿರುಕಣೆ** (ನಾ). ಒತ್ತಾಯವನ್ನು ನಿರೀಕ್ಷಿಸಿ ಆಡುವ ಮಾತು; ಬಲವಂತದ ನಿರೀಕ್ಷೆಯಿಂದ ಕೂಡಿದ ನಡವಳಿಕೆ : ಈ ಹೆಂಗಸರ ಬಲವಂತದ ಮಾತುಗಳೂ ಪಿರಕಣೆಗಳೂ ರಾಮಯ್ಯನವರ ಕಿವಿಗೆ ಬಿತ್ತು (ಇಖಿದು. ೦೦೫). **ಪಿರುಕಣೆ** : ಏನೂ ಬರದೆ ನಾಟಕದಲ್ಲಿ ಪಾರ್ಟು ಮಾಡೋದಕ್ಕೆ ಹೊರಟಿದ್ದೀಯಾ—ಹಾಡು. ಇರಲಿ ಈ ಪಿರುಕಣೆ (ಕಟೀಣಾ. ೨೩). [ ? ]

**ಪಿರಚಲು** (ನಾ). (ಮೇಲೆ ಮೇಲೆ ಬರುವ ರೋಗದಿಂದ ಉಂಟಾದ) ತೊಂದರೆ; ಕಾಟ; ಹಿಂಸೆ : ಮಧ್ಯೆ ಮಧ್ಯೆ ಕಾಹಿಲೆ ಬೇರೆ ಬೀಳುತ್ತಿದ್ದರು. ಕಾಹಿಲೆಯ 'ಪಿರಚಲು' ಬೇರೆ ಗಂಟುಬಿತ್ತು (ಕಾಯಿಳ. ೦೬೨); ನನಗೆ ಕೆಟ್ಟ ಪಿರಚಲು ಬಂದು ಬಿಟ್ಟಿದೆ (ಗೃಹಂ. ೨೯೫). [ ? ]

**ಪಿರದು** (ನಾ) ಪಿರ್ರೆ; ನಿತಂಬ : ಆವನ ಸ್ತ್ರೀಯು ಕೃಶವಾದ ನಡುವುಳ್ಳವಳು. ದೊಡ್ಡದಾದ ಪಿರದುಗಳುಳ್ಳವಳು (ಚುಳಸ. ೬).

[ ದೇ. ॥ ತೆಲು. ಪಿರುದು, ಪಿಱುಂದು ]

**ಪಿರಮಿಡ್ಡು** (ನಾ). "(ಮು. ಪುರಾತನ ಈಜಿಪ್ಟಿನಲ್ಲಿ) ಬಹುಭುಜಾಕೃತಿಯ ಅಥವಾ (ಸಾ.) ಚೌಕನೆಯ ತಳಹದಿಯ ಮೇಲೆ ಪಕ್ಕಗೋಡೆಗಳು ಇಳಿಜಾರಾಗಿರುವಂತೆಯೂ ಮೇಲಕ್ಕೆ ಹೋಗುತ್ತ ಹೋಗುತ್ತ ಕೊನೆಗೆ ಸೂಚ್ಯಗ್ರವಾಗಿ ಮುಗಿಯುವಂತೆಯೂ ಕಲ್ಲು ಮೊ.ಗಳಿಂದ ರಾಜರ ಸಮಾಧಿಗಳಾಗಿ ಕಟ್ಟಿದ ಸ್ಮಾರಕ ಕಟ್ಟಡ : ಗೋಪುರಾಕೃತಿಯ ಕಟ್ಟಡ" (Pyramid- ಇಂಕಿಂ) ; p ಇದು ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ : ಸುಮಾರು ಕ್ರಿ.ಪೂ. ೨೮೦೦ರಲ್ಲಿ ಜಗದ್ವಿಖ್ಯಾತವಾದ ಈಜಿಪ್ಟಿನ ಪಿರಮಿಡ್ಡುಗಳಲ್ಲಿ ಒಂದಾದ ಗಿಸೆಯ ಪಿರಮಿಡ್ಡು . . . ಕಟ್ಟಲ್ಪಟ್ಟಿತು (ಗಕಕ. ೧); ದ್ರಾವಿಡನಮೂನೆಯ ಶಿಖರವು ಅಡ್ಡಡ್ಡವಾದ ಹಂತಗಳಿಂದ ಕೂಡಿ, ಪಿರಮಿಡ್ಡಿನ ಆಕಾರವನ್ನು ಹೊಂದಿದೆ (ಕಾರಿದ. ೯೯೨).

[ ←ಇಂ. Pyramid ]

**ಪಿರಿ₁, ಹಿರಿ₁** (ಕ್ರಿ). ೧. ತರಿ; ಕೀಳು; ತರಚು : ಪಿರಿದ [ ಪಾಠಾಂ. ತಱಿದು, ಬಿರಿತ, ಬಿರಿದ ] ತುಪ್ಪುಳಿನ ಕೊರಳ ಮಿಡುಕಿನ . . . ಪತಿಯ ಸುತ್ತಲು ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ಕೊರಕಾ. ೦-೨-೦೯). ೨. ಹೊರಕ್ಕೆ ಎಳೆ; ಸೆಳೆ; ಕಿತ್ತು ತೆಗೆ : ಸೂರಾಂಬಿಕೆಯ ಮನೆಯ ಕೀರಂ ಕೆಡಪಿ . . . ಕೊನೆದು ಸೂರಂ ಸೇರಿ ಪಿರಿಯುತ್ತುಮಂತ್ಯಜನನುನಯದೆ ಪಿಡಿದು ಪೆಡಗುಡಿಗಟ್ಟಿ ತನ್ನಿಮೆಂದೆನಸುಮಿರದಿಂತು ನುಡಿಯುತ್ತಿರ್ಪ ಪೇಳಿಯೊಳ್ (ಅರಾಕ. ೦-೭-೨೫); ಒಱೆಯಿಂದ ಮಿರ್ಬಾಯ ಖಡ್ಗಮನ್ ಪಿರಿದು (ಅಕ್ಕಕಾ. ೨-೬೬). ೩. ಹಾಳಾಗು; ನಾಶವಾಗು; ಇಲ್ಲವಾಗು : ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ ಮಂಜುವೋಲ್ಸ್ವೋಱ್ ಬೇಗಂ ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾತಿಗಳ್ನಿಲ್ಲವಾಗ್ಗಂ (ಎಕ. II, ೮೮-೦; ಸು. ೭೦೧); ತಾಂ ಬಱಿದೆಂತು ಬಂದನೀ ಬಿಸಿಲೊಳಿದೇಕೆ ಮೆಯ್ಯುರಿಸಿನಂ ಪಿರಿದಕ್ಕಟ ತಳ್ಬಾಸುಟುಂ ಪಳಿಯುವು ನೊಂದನೆಂದು ನುಡಿದಳ್ ತಡೆದೊಯ್ಯನೆ ಬಂದ ನಲ್ಲನಂ (೦೯ಲಾಪ. ೨-೫೭); ಆ ಸುಖಾನುಭಾವಸಮುಂ ಪಿರಿಗುಂ (ಮುಂಚುಚಾ. ೦೫೭-೦೨೩೬). **ಹಿರಿ₁** : ೨. ಉರುಗದೆಯಿಂದ ಕೌರವನ ತೊಡೆಗಳನು ಮುಱಿದೆ ದುರುಳ ದುಶ್ಶಾಸನನ ಕರುಳುಗಳ ನೀ ಹಿರಿದೆ (ವಾಂ೬೯. ೫೦-೨); ಹಿಂದ ಕತ್ತಿಯೊಡನೆ ಅರಸನೂ ಪ್ರಚ್ಛನ್ನವಾಗಿ ಅವಳ "ಬೆನ್ನೊಳೆ ಪೋದಂ ದೋಷದ ಬೆನ್ನೊಳೆ ಸಂಧಿಸುವ ದಂಡದಂತೆ" (ಗಾವ್ಯಕ. ೬೦); ತಗ್ಗಿನ ಸಲುವಾಗಿ ನೀರಿನ ಕುದಿಯನು ತಣ್ಣೀರು ಸುರಿಯುವ ಬದಲು ಒಲೆಯೊಳಗುರಿಯುವ ಸೌದೆಯೊಳೆರಡನು ಬೇಗನೆ ಹಿರಿವುದೆ ಮೇಲು (ಇಂಕಾಪ. ೨೦೪-೫೫). ೪. ಕತ್ತರಿಸು; ತುಂಡುಮಾಡು : ಬಾಳೆಯ ಹೊಡೆಯ ಹಿರಿದು ಹಸನಾಗಿ ಪಾಕಂ ಮಾಡಿಯದುದಿಬಡಕೆದಾಳಿಲವೆಸರ ಕರೆವುದು (ಸೂಪಶಾ. ೫-೨೨). ೫. ಒಡೆ; ಬಿರಿ; ಸೀಳು : ಎರಡು ಮೋಟಕರಂಗಳಿಂ . . . ಹೊಡೆವುತ್ತ ಬಡಿವುತ್ತ ಮಂರಿ ಮತ್ತೆಯು ಕುಟ್ಟುತಿರೆ ತಲೆ ಹಿರಿದು ಬುಗುಟಿಗಳೆದ್ದೊಡೆದು ನೆತ್ತರು ಬಿಡದೆ ಜೋರನೆ ಸುರಿಯೆ (ಬಸಪು. ೩೬-೨೬). ೬. ಲೂಟಿಮಾಡು; ಕಿತ್ತುಕೊಳ್ಳು : ಎನ್ನ ಸತಿಯು ಎನ್ನ ಸುತರು ಎನ್ನ ಬಂಧು ಬಳಗವು ಇನ್ನು ಸಾಕಿ ಸಲಹು ಎಂದು ಎನ್ನ ಹಿ [ ಪಾಠಾಂ. ಹ] ರಿದು ತಿಂಬರು (ಪುರಂದ. ೦-೦೬೬-೪); ನಿಂತರೆ ಕುಳಿತರೆ ದುಡ್ಡು ಹಿರಿಯ್ತಾರೆ (ಗೃಹಂ. ೦೬೯); ಬೆಂದ ಮನೆಯಲ್ಲಿ ಹಿರಿದದ್ದೇ ಲಾಭ (ಗಾದೆ). ೭. (ಸಂತೆ, ಜಾತ್ರೆ ಮುಂತಾದುವು) ಚೆದರು; ಮುಕ್ತಾಯವಾಗು : ಜಾತ್ರೆಯು ಹಿರಿದ ಮೇಲೆ, ಚೋಮನ ಮನೆಯವರು ಕುಕ್ಕರಳ್ಳಿಗೆ ಬಂದು, ನಾಲ್ಕು ದಿನ ಇದ್ದು ಹೋದರು (ಕುಂಜಿಕೊ. ೪೯೨); ಕೊಳ್ಳಲಿ ಹುದನು ಕೊಂಡೆನೆಲ್ಲ ಹಿರಿವುದೆಂದೀ ಸಂತೆ ಬಲ್ಲರಾರು ನೆರಸಿದನಲ್ಲದೆ ? (ಗೀಪ೦೦. ೫೯-೪).

ಪಿರಿದಿಡು. ಹಿರಿದಿಡು—ಬೇರೆ ಮಾಡಿ ಇಡು; ಕಿತ್ತಿಡು; ಪ್ರತ್ಯೇಕಿಸು : ಬೆಳಕಲ್ಲ ತಳಕಲ್ಲ ಕಳೆಯಲ್ಲ ಕಲೆಯಲ್ಲ—ನಷ್ಟವಹುದಾಯಿಲ್ಲಿ ಪ್ರಕೃತಿಯಿಂ ಪುರುಷನಿವ ತನ್ನ ತಾಂ ಪಿರಿದಿಡುವ ಶ್ರೀಮೂರ್ತಿ ತಂತ್ರದಲ್ಲಿ (ಕುಲೆದೀ. ೨೮-೦೦); ನಿನ್ನ ದುರಹಂಕಾರವನ್ನೆಲ್ಲ ಅಡಗಿಸಿ ಆಡವೀಪಾಲು ಮಾಡ್ದೇ ಇದ್ರೆ ನನ್ನ ನಾಲಿಗೆ ಹಿರಿದಿಟ್ಟುಬಿಡ್ತೀನಿ (ಅಶಿಸ. ೦೬೨).

[ದೇ. ॥ ತಮಿ. ಮಲ. ಪಿರಿ]

**ಪಿರಿ₂** 'ಪಿಱಿ' ನೋ.

**ಪಿರಿ₃** (ನಾ) ನವಿಲುಗರಿ; ಪೀಲಿ : ಅಂತು ಬರ್ಪಂತಃಪುರಕಾಂತೆಯರ ನಡುವೆ ಪಿರಿ [ ಪಾಠಾಂ. ಪೀಲಿದಟ್ಟಿ]ಯ ತುಱುಂಗಲೊಳುದ್ಯಾನವಂಡಂ ಬೆರಸು ವನದೇವತೆಯೆ ಬರ್ಪಂತೆ . . . ಬಂದಳ್ (ಪರಣ್ಣ. ೫-೯೯ ಪ); ಪಣ್ಣಿದ ರಣದೊಳ್ನಿನ್ನಯ ಕಣ್ಣೆಲ್ಲಮನೊಂದುನಿಮಿಷಮಾತ್ರದೆ ಪಿರಿಯಾ ಕಣ್ಣನಿಸಿ ತೋಱಿದೊಡೆ ಮುಕ್ಕಣ್ಣಂ ನಾನಲ್ಲು (ಶೀಚಾ. ೦೦-೬೬).

[ದೇ. ॥ ತೆಲು. ಪಿರಿ]

**ಪಿರಿ₄, ಪೆರ್, ಪೆರ್ರು₂, ಪೇರ್₁, ಹಿರಿ₂, ಹೆರ್, ಹೇರ್₁** (ಸಪೂರೂ). 'ಪಿರಿದು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪಿರಿತನ', 'ಪಿರಿಯಕ್ಕರ' ಪರಾ. **ಪೆರ್** : 'ಪೆರ್ಗರಡಿ' 'ಪೆರ್ಗಿಚ್ಚು' ಪರಾ. **ಪೆರ್ರು₂** : 'ಪೆರಂದಟ್ಟಾರ' ಪರಾ. **ಪೇರ್₁** : 'ಪೇರಡವಿ', 'ಪೇರಡಿ' ಪರಾ. **ಹಿರಿ₂** : 'ಹಿರಿಗನಸು', 'ಹಿರಿಗೆಯ್ಮೆ' ಪರಾ. **ಹೆರ್** : 'ಹೆರ್ಗಂಬ' ಪರಾ. **ಹೇರ್₁** : 'ಹೇರಂಬು', 'ಹೇರಿಟ್ಟಿ' ಪರಾ. [ <ಪಿರಿದು₁ ]

**ಪಿರಿಕಿ₁, ಬಿರಿಕಿ** (ನಾ). ೧. ತಿರುಗಣೆ; ಮರಸುತ್ತು : ಬಾಗಿಲುಗಳಿಗೆ ಇನ್ನೂ ಪಿರಿಕಿ ಹಾಕಿಲ್ಲ (ಬಂಕಿ). **ಬಿರಿಕಿ** : ೨. ನೂಲು ತೆಗೆಯುವ ಸಾಧನ; ತಕಲಿ : ಸಣ್ಣೆಳೆಗಳಂ ತೆಗೆದು ಸುತ್ತುತ್ತ ಬಿರಿಕಿಯಂ ತಿಣ್ಣನೇ ತಿರುಹುತಿರೆ (ಮುಕಪು. ೬-೦೨).

[ದೇ. ॥ ತುಳು. ಪಿರಿಕಿ, ಪಿರಿಕಿ—ತಿರಿಚುವಿಕೆ, ತಿರುಗಿಸುವಿಕೆ]

**ಪಿರಿಕ್ಕೆ₂, ಪಿರ್ಕಿ** (ನಾ). ೧. ಭಯ; ದಿಗಿಲು : 'ಪಿರಿಕಿತನ' ಪರಾ. ೨. ಭಯಪಡುವವನು; ಅಂಜುವ ಸ್ವಭಾವದವನು; **ಪುಕ್ಕಲ** : "ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ— ೪ ಹೆದರುವವನ ಹೆಸರು.

ಭಯಪಡುವ ಪಿರಿಕಿ" (ವಿದ್ಯಾಂಕಿ. ೪೦೯) ; ಪಿರಿಕಿ. ಪುರುಕಿ: ತಮಿಳಿನಲ್ಲಿ ಉ ಬಹುವೇಳೆ ಇ ಆಗಿ ಉಚ್ಚಾರವಾಗುತ್ತವೆ. ಪುಲಿ ಪಿಲಿ; ಇದರಂತೆ ಪುರುಕಿ ಪಿರಿಕಿ ಆಗಿದೆ. ಅರ್ಥ ಪುಕ್ಕಲುಮನುಷ್ಯ (ಪದ್ಮಾಕು. ೧೦೭). **ಪಿರ್ಕಿ:** ೩. ಹುಚ್ಚು; ಮರುಳು: ಅವರಿಗೆ ಪಿರ್ಕಿಯೆಂದು (ಹುಚ್ಚೆಂದು) ನನಗೂ ಪಿರ್ಕಿಯೇ ? (ಗಂಗಾವ. ೧೬೩). ೪. ಹುಚ್ಚ ; ಮರುಳ : ಆತ ಏನಾದರೂ ಪಿರ್ಕಿಯ ಹಾಗೆ ಮಾತಾಡಲಿಕ್ಕೆ ಹತ್ತಿದನೆಂದರೆ ಕೂಡಲೇ . . . ಕುಂಕುಮವನ್ನು ಸ್ವಲ್ಪ ಅವನ ಮೇಲೆ ಹಾರಿಸಿಬಿಡಿ (ಕೃಷ್ಣಾಂಕ. ೨೬); ಸಾಣೆಕರ್‌ನಂತಹ ಮಿತ್ರರೇ "ಅದೊಂದು ಪಿರ್ಕಿ ಅಲ್ಲವೇ" ಎಂದು ಅನ್ನುವುದೂ ಉಂಟು (ತಿದಾಉ. ೨೬).

[ ದೇ. ॥ ತಮಿ. ಪಿಱಿಕ್ಕ ; ತೆಲು. ಪಿರಿಕಿ, ಪಿಱಿಕಿ ]

**ಪಿರಿಕಿತನ** (ನಾ). ಭಯ ; ಅಂಜಿಕೆ : ಇಷ್ಟಾದ ಮೇಲೂ ನಮ್ಮ ಕಷ್ಟ ನಿವಾರಣೆಯಾಗಲಿಲ್ಲ ; ನಮ್ಮ ಪಿರಿಕಿತನ ದೂರವಾಗಲಿಲ್ಲ (ಕಾಡುಕ್ರ. ೩).

[ಪಿರಿಕಿ$_2$+—ತನ]

**ಪಿರಿಕಿಸ್ವಭಾವ** (ನಾ). ಅಂಜುವ ಸ್ವಭಾವ ; ಪುಕ್ಕಲುತನ : "ಪಿರಿಕಿ ಸ್ವಭಾವದ ; ದಿಗಿಲು ಬೀಳುವ ; ರೇಗುವ" (Jumpy. ೩೦೪೩).

[ ಪಿರಿಕಿ$_2$+ಸ್ವಭಾವ ]

**ಪಿರಿಕೆಱೆ** (ನಾ). ಒಂದು ಊರಿನ ಹೆಸರು : ಅವಿನೀತಮಹಾಧಿರಾಜೇನ ದತ್ತೇನ ಪಡಿಯೇಟಱೊಳಂ ಊರೂರೊಳ್ಪನ್ನಿರ್ಕ್ಕಣ್ಡುಗಱ್ಗೆಯ್ದು ಅಮ್ಬಲಿಮಣ್ಣಂ ತಳವನಪುರದೊಳ್ಪಳಮಿತ್ತಿಯ ಮಣ್ಪೊಗರಿಗೆಱೆಯೊಳ್ಪನ್ನಿರ್ಕ್ಕಣ್ಡುಗಂ ಪಿರಿಕೆಱೆಯೊಳಂ ರಾಜಮಾನಂ . . . ದತ್ತಂ (ಎಕ. I, ೧-೨೦ ; ೪೬೬). [ ಪಿರಿ$_4$(<ಪಿರಿದು$_1$)+ಕೆಱೆ ]

**ಪಿರಿಚು, ಪಿರುಚು, ಪಿಱಿಚು, ಪಿಱುಚು** (ಕ್ರಿ). ೧. ಬೇರೆ ಮಾಡು ; ಪ್ರತ್ಯೇಕಿಸು : ಪೊಱಗೇನನಾದೊಡಂ ಕುಱಿತು ತದ್ರೂಪಮಂ ಪಿರಿಚುತದಸ್ತಿಭಾತಿಗಳನಾತ್ಮನೆಂದಱಿಯಲೊಂದನೆಯ ಸವಿಕಲ್ಪ (ಅಪಾಅ. ೬-೪-೧೧); ಬಱಿದೆ ಹೋಗದಿರು ಬಾ ಬಾರೆಂದು ಕರೆದೊಂದು ಮಿಱುಗುವ ಪದಕವ ಕೊಟ್ಟು ಪಿರಿಚಿ ಮಾತ್ರವಳೊಡನಿದ್ದರ ಮನ್ನಿಸಿ ನೆಱೆಜಾಣ ಬೀಳ್ಕೊಟ್ಟನೊಡನೆ (ಭರತ. ೩೪-೬೬). ೨. ಬೇರೆಯಾಗು ; ಅಗಲು ; ಬಿಟ್ಟುಹೋಗು : ಮಱಸಿದೆ ತಾಯಿತಂದೆಯ ನಿಜದೇಶವ ತೊಱಸಿದೆ ಸಕಲಸುಖಗಳಿಂದ ನೆಱೆ ನಿನ್ನ ನಲ್ಗುಣಗಳ ಮೆಚ್ಚಿದೆನಿನ್ನು ಪಿರಿಚಿ ಸೈರಿಪೆನೆಂತೊ (ಸೊಬಸೋ. ೯-೬೨); ನೆಱೆಯದಿರಕ್ಕ ಬೇಗದಿ ನೆಱೆದಾಗಮ್ಮ ಪಿರಿಚಿ ಹೋಹಿರಿ (ಭರತ. ೪೬-೪೩). P ಮೇಲಿನ ಎಲ್ಲ ಪ್ರಯೋಗಗಳಲ್ಲಿ ಶಕಟರೇಫದ ಪ್ರಾಸವಿರುವುದು ವಿಮರ್ಶಾರ್ಹವಾಗಿದೆ. **ಪಿರುಚು** : ೧. ಪೊರಗಣ ಘಟಾದಿ ವಿಷಯದ ನಾಮರೂಪಗಳ ಪಿರುಚುತುಳಿದಸ್ತಿಭಾತಿಪ್ರಿಯಗಳ ಸ್ಮರಿಸುವುದೆ . . . ಸವಿಕಲ್ಪಕಸಮಾಧಿಯಹುದು (ಕೈವಲ್ಯ. ೩-೬೬-೧). Δ **ಪಿಱಿಚು** : ೧. ಕಟುಗೊಡಗೆಯನೂ ಪಿಱಿಚಿ (ಶಾಶಾ. ೧೯೩೪, ಶೃಂಗಪುರು. ೧೫೬-೧೧ ; 1419). Δ **ಪಿಱುಚು** : ೧. ಅರಸಣ್ಣ ಹೆಗ್ಗಡೆ ತಾನು ತೆಱುವ ಭಂಡಾರಸ್ಥಳದ ನೆಲುವಾಗಿಲಿಗೆ ಒಕ್ಕಲನು ವಿಂಗಡಿಸಿ ಕೊಂಡು ಧರ್ಮಸ್ಥಳವಾದ ತುಂಬುರವಳ್ಳಿಗೆ ಒಕ್ಕಲ ಪಿಱುಚಿ ಕೊಟ್ಟು (ಮ್ಯಾಅಂ. ೧೯೬೨, ೪೨-೩೦; 1418); ಪಟ್ಟದ ಗ್ರಾಮಕ್ಕೆ ಬಾರಕೂರ ರಾಜ್ಯದೊಳಗೆ ಯಿಂನೂಱ ಅಯಿವತ್ತು ವರಹನ ಹುಟ್ಟುವಳಿಯ ಗ್ರಾಮವನೂ ಪಿಱುಚಿ ಕೊಡ ಹೇಳಿ (ಮ್ಯಾಅಂ. ೧೯೬೪, ೩೦-೭ ; 1451). [ಪಿರಿ$_1$+—ಚು$_1$]

**ಪಿರಿತನ**, ಹಿರಿತನ (ನಾ). ೧. ಹಿರಿಮೆ; ಮೇಲ್ಮೆ; ಶ್ರೇಷ್ಠತೆ : ವಯಸ್ಸಿಗೇಂ ಪಿರಿತನಮೆ ? ನಿನ್ನ ಪರ್ಮೆಗೆ ವಂದಿ ನಿನ್ನಾತ್ಮದೋಜೆ ; ಮೇಣ್ ನಿನ್ನ ತೇಜಕ್ಕೆ ಸಾಕ್ಷಿ ನಿನ್ನಕ್ಷಿ ಕಮಲಾಕ್ಷ ! (ಶ್ರೀರಾಮಾ. ೧೬೩-೨೩೯). **ಹಿರಿತನ** : ೧. ಅಪಕಾರಿಗುಪಕಾರವೆಸಗುವುದಾದರೆ ಅದರೊಳು ಹಿರಿತನವುಂಟು (ಆಂಜನೇ. ೨೨-೯೯) ; ಹಿರಿತನಕ್ಕೂ ಕಿರಿತನವೇ ಮಿಗಿಲು ಇದರೊಳಿಲ್ಲ ಔಚಿತ್ಯದ ದಿಗಿಲು (ಗಣೇಕ. ೨-೨೬). ೨. ಒಡೆತನ ; ಯಜಮಾನಿಕೆ : ಹಿರಿತನಕ್ಕೋಗುತ್ತಿ ಗರುವಿಕೆ ಮಾಡುತ್ತಿ ನೆರೆಹೊರೆಯರ ಕೂಡ ಬಡಿದಾಡುತ್ತಿ (ಪುರಂದ. ೪-೧೩-೩) ; ತೊತ್ತಿಗೇತಕೆ ಮನೆಯ ಹಿರಿತನ (ಸ್ವಾಕಾಂ. ೧-೩೦). ೩. ಪ್ರಾಚೀನತೆ : ಈ ಕಾವು ಶಬ್ದದ ಹಿರಿತನವು (ಪ್ರಾಚೀನತೆಯು) ಕಾವೂರು, ಕಾವಾಡಿ . . . ಇತ್ಯಾದಿ ಊರ ಹೆಸರುಗಳ ಮೂಲಕವೂ, ಕಾವಕ್ಕ, ಕಾವಮ್ಮ, ಕಾವು ಎಂಬ ಹೆಂಗಸರಲ್ಲಿ ಬರುವ ಹೆಸರುಗಳ ಮೂಲಕವೂ ಉಳಿದು ಬಂದಿದೆ (ಕುಳುಕಾ. ೨೪೪).

[ಪಿರಿ$_4$ (<ಪಿರಿದು$_1$) +—ತನ]

**ಪಿರಿತಿನಿ** 'ಪಿಱಿತಿನಿ' ನೋ.

**ಪಿರಿತಿನಿಸು** (ನಾ). ಮಾಂಸಾಹಾರ : ನಂಗೇನು ಪಿರಿತಿನಿಸೂ ಕಾಯಿಣಿಸೂ ಬೇಕಿರದು (ಕಾಂಚಿ. ೩೬-೯೦). [ಪಿರಿ$_2$ (<ಪಿಱ್)+ತಿನಿಸು$_2$]

**ಪಿರಿದೀ** (ಕ್ರಿ). ಹೇರಳವಾಗಿ ಕೊಡು ; ಹೆಚ್ಚಾಗಿ ಕೊಡು ; ಅಧಿಕವಾಗಿ ನೀಡು : ಅವಂದಿರ್ಗೆ ಪಿರಿದಿತ್ತು ಕಳಿಪುತೆ (ಜಿರಾಪು. ೧೨-೧೪೬) ; ಧನಮಂ ಪಿರಿದಿತ್ತಪೆನೆಂಬ ಮಾಳ್ಕೆಯಂ ಮನದೊಳಮರ್ಚಿ (ಶಾಂತೀ. ೧೧-೧೬೩). [ ಪಿರಿದು$_2$ (<ಪಿರಿದುಂ)+ಈ$_2$ ]

**ಪಿರಿದು$_1$, ಹಿರಿದು$_1$** (ನಾ). ೧. ದೊಡ್ಡದು ; ಗಾತ್ರವಾದುದು ; ಘನವಾದುದು : ಎಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯಂ ತಂದು ತಲೆಯುತ್ತಿಟ್ಟು ಪಟ್ಟದರ್ಪದಿಂ . . . ಕಂಡು (ವಡ್ಡಾರಾ. ೬೩-೨೬) ; ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇೞ್ದ [ಕವೀಶ್ವರರಿ]ಲ್ಲ (ಪಂಪಭಾ. ೧-೧೧); ಪಿರಿದೊಂದು ವಸ್ತು ದೊರೆಕೊಂಡುದು ಬಾರ್ಪರೆ ಬರ್ಪನೆಂದು ರಕ್ಕಸನಿದಿರೆರ್ದು ಕೊಲ್ವ ಪದದೊಳ್ (ಕುಸುಮಾ. ೬-೧೭). ೨. ಮಿಗಿಲಾದುದು ; ಹೆಚ್ಚಾದುದು ; ಅತಿಶಯಂಮಾದುದುಂ : ಇಂತಪ್ಪ ಕ್ಷತ್ರಿಯಪುತ್ರಾದಿಗಳೆಲ್ಲಮೆನಗೆಱಗಿ ಪೊಡೆಮಟ್ಟು ಕಿಂಕರ್ಮಾರ್ಣಂಗೆಯ್ದಪ್ಪರುಣ್ಬದರ್ಕೇವೀಗಳ್ ಸಂಕಟವಿಪ್ಪ ತಪದ ಫಲಮಿನ್ನುಂ ಮುಂದೆ ಪಿರಿದುಂಟೆಂದು ಬಗೆದಿಂದುಪವಾಸಂಗೆಯ್ದಪ (ವಡ್ಡಾರಾ. ೬೨-೧೭) ; ಮುಳಿಸೆಂಬುದೆನಗೆ ಕೌರವರೊಳೆ ಪಿರಿದು (ಪಂಪಭಾ. ೯-೬೨) ; ಪಿರಿದಪ್ಪ ಸಂತಸಮನೆಯ್ದೆ ಬಸಂತಂ . . . ನಿಸ್ಸಾಳಮಂ ಸೂಱೆಸಮೇಟಲ್ (ಅಸ್ಮಾಕ. ೩೨೦); ಬೆಟ್ಟಗಳ ಕಪಿನಿಕರ ತಂದೊಡೆ ಕಟ್ಟಿದನು ನಳ ರಾಮ ಶರಧಿಯ ಕಟ್ಟಿದುದು ಪಿರಿದಲ್ಲ (ಸಂಕಕ. ೨೦-೬೬). ೩. ಶ್ರೇಷ್ಠವಾದುದು ; ಮೇಲಾದುದು : ಕತೆ ಕಿಱಿದಾದೊಡಂ ಕತೆಯ ನಾಯಕನುನ್ನತವಂಶವೀರ್ಯವಿಶ್ರುತ ಮಹಿಮಪ್ರಪಂಚಿತಗುಣಂ ಪಿರಿದು (ತಕ್ಕಕ್ಕು. ೧-೪೬). (ಗು). ೪. ಹೆಚ್ಚಾದ ; ಅಧಿಕವಾದ ; ಬಹಳವಾದ : ಕುದಿಸುತಿದತ್ಮಣಂ ಕುದುರೆ ನೂಱಱೊಳಾ ಬಲದಾನೆ ಪತ್ತು ತಾಗಿದುವೆನೆ ದೋಷಮಾ ಪಿರಿದುಸಂಖ್ಯೆಯೊಳೇಕಬಹುತ್ವಸಂಗದಿಂ (ಕಬಿರಾ. ೧-೦೨೦); ಪಿರಿದು ಮಾತೇಕೆ ಸಿಲುಕಿದವೆಮಗೊಡೆಯರಿಲ್ಲ (ಕಿರುರ. ದೇ. ೧೭-೧೧); ಪಿರಿದು ಭಂಗವನಾಂತೆನೆನುತಬ್ಧಿ ತಗ್ಗಿ ತಾಂ ಹೆಚ್ಚುಕುಂದಿನೊಳೆಸೆದುದು (ಕಂಠೀ. ೨-೩). ೫. ಶ್ರೇಷ್ಠವಾದ ; ಮೇಲಾದ : ಪಿರಿದೈರಾವತವನು ಪೂರ್ಣಚಂದ್ರನ . . . ಕಂಡು ನೆಱೆ ಕಣ್ದೆಱೆದಳು (ಕಂಪಾಪು. ೪-೫೨). ೬. ಅತಿಶಯವಾದ; ಮಿಗಿಲಾದ; ವಿಶೇಷವಾದ : ಕಿಱಿದಱೊಳೆ ಪಿರಿದುಮರ್ಥಮನಱಿಪಲ್ ನೆಱೆವಾತನಾತನಿಂದಂ ನಿಪುಣಂ (ಕಬಿರಾ. ೧-೦೫) ; ನೀಲ ನಿಷಧಮುಮನೆಯ್ದಪ ನೀಲದ ಗಜದಂತಗಿರಿಗಳಾಳ್ವ ಪಿರಿದುಂ ಲೀಲೆಯಂ (ಆದಿಪು. ೨-೨೮); ತಪದ ಪಿರಿದಬ್ಬುಯಿಂದಿದನಮರಿರ್ವರುಮಱಿಯೆ ನೆಱೆಯೆ ಪೇೞೆಸಿ (ಶಾಂತಿಪು. ೧-೩೩). **ಹಿರಿದು$_1$** : ೧. "ವಚಸ್ಥೌಲ್ಯೇ, ಹಿರಿದರೊಳಂ, ಕಿರಿದರೊಳಂ" (ಶಾಶಕ್ಕ. ೨೦); ಅಲ್ಪವೊ ಭೂಮವೊ ಹಿರಿದೋ ಕಿರಿದೋ . . . ರಸಪ್ರಯೋಜನ ಭುವನಂ

ಕವಿಸಂ : ಭಗವಂತನೆ ಕವಿ, ಸಹೃದಯನಾಂ! (ಆಶೀ. ೩೦-೦) ೨. ಹಿರಿದಪ್ಪ ಸ್ನೇಹಂ ಸಿಂಹಕ್ಕಂ ವೃಷಭಕ್ಕಂ ಕಾಂತಾರದೊಳಾಗಿರಲ್ (ಶಂಕಶಂ. ೨೦.೦೦); ಹಾನಿ ಹಿರಿದುಂಟಱಿವೆನಂಗಸ್ಪಂದಶಕುನದಲಿ (ಸಂಕಶ. ೦೬-೦೯): ಪರಿಕಿಸಲು ಕೋಡಗದ ಮಾಂಸವು ನರಪತಿಗಳಿಗೆ ಯೋಗ್ಯವೇ ಹೇಳರಸ ಹಿರಿದಹ ಹೇಸಿಕೆಯ ಕೈಕೊಂಡೆ (ಕೊರಾ. ೪-೪-೩೬). ೪. ಹಿರಿದು ದುಃಖವಹ ಧನದಿಂ ಕಪಟಿಯಾದ ಮಿತ್ರನಿಂದೇಂ ಪ್ರಯೋಜನಂ (ಶಂಕಶಂ. ೦೦೦-೦೫); ಲಸತ್ಕೃತಿಯಿದನಾಂ ಪುಣ್ಯನಿಮಿತ್ತಂ ಹಿರಿದುಂ ಹರಿಸದೊಳುಸಿರಿದೆನು (ಅಜಿತಾ. ೦-೨೬). ೫. ಪಂಚಭೂತಮಯವಾದ ಬ್ರಹ್ಮಾಂಡ ಶರಣ ಸಂಗದಲ್ಲಿ ಪಂಚಬ್ರಹ್ಮಮಯವಾಯಿತ್ತಾಗಿ ಇಷ್ಟಖಂಡಿತವಾಗಿ ಸೌರಾಷ್ಟ್ರ ಸೋಮೇಶ್ವರನ ಶರಣರಿಗೆ ಹಿರಿದೊಂದು ಘನವಿಲ್ಲ (ಆದಶ. ೪೩-೦೦೦). 'ಕಿಱಿದು' ಪರಾ.

**ಪಿರಿಪಿರಿದು, ಹಿರಿಹಿರಿದು** (ದ್ವಿರುಕ್ತಿ) : ಪಿರಿಪಿರಿದಾಗಿ ಗಡಣಿಸಿ ದನುತ . . . ಒಳಗಿಹ ಕೊಪ್ಪರಿಗೆಗಳನಿತುಮಂ ತರಹೇಳು ಬೇಗ ದೊಳೆನುತ (ಜಸಕ್ಕಿ. ೫೪-೦೯): ಗುಹೇಶ್ವರಲಿಂಗವ ಕಿಱಿಕಿಱಿದಾಗಿ ನೆನೆದರೆ ಹಿರಿಹಿರಿದಾಗಿ ಕಾಡುವದು ನೋಡಾ ಮಱಹು (ಶೂನ್ಯಸಂ. ೦೩೩-೪). **ಪಿರಿದಾಗು, ಹಿರಿದಾಗು**=ಹೆಚ್ಚಾಗು; ವೃದ್ಧಿಯಾಗು; ಬೆಳೆ : ರಾಗಂ ಪಿರಿದಾಯ್ತು ವಸಂತಾಗಮದೊಳ್ (ಪುಣ್ಯಕ. ೫-೮); ಒರ್ವ ಬಾಲೆ ಮುಗ್ಧೆ ಹರೆಯಂ ಕಿಱಿದು ಯೌವನಂ ಪಿರಿದಾಗಿ ಮುಖವೆಲ್ಲಂ ಕಣ್ಣಾ . . . ನೋಟವೆಲ್ಲಂ ಬೇಟವೆನಿಸಿ (ಶಂಬರ. ೪-೫೬); ಎನಿತೆನಿತು ಭೂಮಿ ಕ್ರಮದಿಂ ಮಾಱ್ ಕಿಱಿದಾಗೆ ಅನಿತನಿತು ತನ್ನಯ ಮನಂ ಹೆಚ್ಚಿ ಹಿರಿದಾಗೆ (ಶ್ರೀಕ. ದೀ. ೫೦-೨); ಇತ್ತ ದಿನ ಹಿರಿದಾದವೀಗಳು ಹೊತ್ತ ಕಾರ್ಯದ ಹೊಱಗೆ ಯಾವುದೊ ಹದನ ಹರಿ ಬಲ್ಲ (ಸಂಭಶ. ೫-೮೩). **ಪಿರಿದು ಮಾಡು** – ಹೆಚ್ಚು ಮಾಡು ; ವಿಸ್ತರಿಸು; ದೊಡ್ಡದಂ ಮಾಡು : ಮಹಾದ್ಭುತಭಯರೌದ್ರ ಭಯಾನಕವೀರರಸಂಗಳನೆ ಕಪಟಕ್ರಿಯೆಯಿಂ ಪಿರಿದು ಮಾಡಿ ಪೇೞ್ವುದುಂ (ಶಂಕಶಂ. ೪೬-೦೪). **ಪಿರಿಯ, ಹಿರಿಯ**=೧. (ವಯಸ್ಸು, ಪ್ರಭಾವ, ವಂಶ, ಗುಣ ಮೊದಲಾದುವುಗಳಲ್ಲಿ) ದೊಡ್ಡವನು; ಶ್ರೇಷ್ಠ : ಏಂ ಪಿರಿಯನೋ ಖಗೇಂದ್ರಾಧೀಶಂ (ಶಾಂತಿಪು. ೩-೯೩); ಕುಲಗೊಳು ಕಿಱಿಯಂ ಮನದೊಳು ಪಿರಿಯಂ (ಕಿರುನಾ. ದೀ. ೨೦೫-೦೫); ಧರ್ಮಶಾಸ್ತ್ರದೊಳು ಭೇದಿಸಿ ಪಿರಿಯರು ಪೇಳಿದುದನೆ ಕೃತಿಗೈದಾನು ಕವಿಗೋಳಿಸಿದೆನು (ಹರಿಶ. ೦-೫೦); ಮನಸು ಹೇಸದೆ ಕೂಡಿಕೊಂಡಿಪ್ಪನುವ ನೋಡಾ ಹರಹರಾ ತನಗನುಮತವೆಯಿದು ತಾವು ಸರ್ಬಕೆ ಹಿರಿಯರಾಗಿರ್ದು (ಜಸಕ್ಕಿ. ೫೬-೮) ; ಅರಸನಾಗಲಿ ಧನಿಕನಾಗಲಿ ಹಿರಿಯನಾಗಲಿ ಬಡವನಾಗಲಿ ಮರಣ ಜನಿಸಿದ ಬಳಿಕ ತಪ್ಪದು (ಕುಮಾರವ್ಯಾ. ೬-೨೪); ವಿಜಯದಾಸರು ಮನೆಯ ಹಿರಿಯರಿದ್ದಂತೆ ಊರಿನ ಹಿರಿಯರೂ ಆಗಿದ್ದರು (ಶಂಕಸು. ೦). ೨. ಮೊದಲನೆಯ ಮಗ; ಜ್ಯೇಷ್ಠಪುತ್ರ : ಹಿರಿಯನಲಿ ಜನಕಂಗೆ ಮೋಹವು ಕಿಱಿಯನಲಿ ಕಡುಮೋಹ ಜನನಿಗೆ (ಸಂಕಶ. ಶಂ. ೦-೩೪). ೩. ಪತಿ; ಯಜಮಾನ : "ಹಿರಿಯ . . . ಹಿರಿಯ" ಅವಳ ನಾಲಗೆ ಆ ಅಕ್ಷರಗಳನ್ನು ಉಚ್ಚರಿಸಬೇಕಾದರೆ ಏಕೋ ತೊದಲಿದ ಹಾಗೆನ್ನಿಸಿತು (ಗೂನಾಗ. ೦೩೦); ನಮ್ಮ ಹಿರಿಯಾ ಮೊದಲಿನ ಗುಣಾ ಬಿಟ್ಟು ಸಂಭಾಯತ ಆಗಿದ್ದ. ಈಗ ಗೌಡರು ಬರಾಣಾ ಮತ್ತ ಕುಡಿಯೂದು, ನನ್ನ ಹೊಡಿಯೂದು, ನಡಿಸ್ಯಾನ (ಗ್ರಾಮಾಯ. ೫೨೦). ೪. ಬ್ರಾಹ್ಮಣ; ದ್ವಿಜ : "ದಿಮ್ಮಿದರುಮೆನಲ್ ಸ್ಯೆದರೆನೆ ಗನಹರೆನೆ ಪೇರಿದರ್ ಪಾರ್ವರೆನೆ ಪಿರಿಯರೆನೆ ದ್ವಿಜರ ನಾಮಂ" (ಶಬ್ದಮಂ. ೫೩). **ಪಿರಿಯ ಕೋಲ್, ಹಿರಿಯ ಕೋಲ್** = ೧. ದೊಡ್ಡ ಕೋಲು ; ಬಲವಾದ ದೊಣ್ಣೆ. ೨. ಭೂಮಿಯನ್ನು ಅಳೆಯಲು ಉಪಯೋಗಿಸುವ ಒಂದು ಬಗೆಯ ಅಳತೆಗೋಲು : ಸುಗನ್ಧವರ್ತಿ ಸೀಮೆಯಿನ್ದ ಪಡುವಲು ಪಿರಿಯ ಕೋಲಲು ಮತ್ತರು ೬ (ಸೌಇಇ. XX. ೦೩-೪ ; 875) ; ಸರ್ವ್ವನಮಸ್ಯ ಸರ್ವ್ವಬಾಧಾಪರಿಹಾರವಾಗಿ ಬಿಟ್ಟ ಕೆಯಿ ಹಿರಿಯ ಕೋಲ ಮತ್ತರೇಳು (ಇಇ. II. ೨೪-೩೨; 1167). **ಪಿರಿಯ ಪಾಲಾಳ್** – ದೊಡ್ಡ ವಂಶಕ್ಕೆ ಸೇರಿದ ವ್ಯಕ್ತಿ; ಉತ್ತಮಕುಲಕ್ಕೆ ಸೇರಿದವನು : ನೀನ್ ಕಂಡಪಯ್ ! ಪಿರಿಯ ಪಾಲ್ ಆಳ್ಗಳ್ ಕೀೞ್ವಱಿಯ ಕೊಳ್ಗಿಯನ್ ತಾಮೆಂದುಮುಱಿಯರ್. ಪಿರಿದಱಿವರೆಂದು (ವಡ್ಡಾರಾ. ೦೫-೨೪೦). **ಪಿರಿಯ ಮಗ, ಹಿರಿಯ ಮಗ, ಹಿರೀಮಗ, ಹಿರೇಮಗ**– ದೊಡ್ಡ ಮಗ; ಮೊದಲನೆಯ ಮಗ; ಜ್ಯೇಷ್ಠಪುತ್ರ : ಹರಿಶ್ಚಂದ್ರನೆಂಬ ತನ್ನ ಪಿರಿಯ ಮಗನಂ ಕರೆದು ... ಪೇೞ್ದೊಡೆ (ಆರಾ. ೨-೦೪ ಪ); ಅರಸನ ಪಿರಿಯ ಮಗನನೀಗಳೆ ಪೋಗಿ ಕೊಂದಪೆಂ (ಶಂಕಶಂ. ೦೦೩-೩); ಧುರವಿಶಾರದನಹೆ ವಿರಾಟನ ಹಿರಿಯ ಮಗ ನೀನೆಂದು ಗೋಕುಲಹರಣದಲಿ ಕಲಿಯಾಗಿ ಕಾದಿದಯೆನುತ ತೆಗೆದೆಚ್ಚ (ಕುಮಾರವ್ಯಾ. ೫-೨೫); ನೃಪೋತ್ತಮನ ಹಿರಿಯ ಮಗ ತಾನೀಗ ತನ್ನಂತರದಲಾ ಭರತಂಗೆ ಸೇರಿತು ಧರಣಿ (ಕೊರಾ. ೪-೨-೨) ; ಅವರ ಹಿರೀಮಗ ದೊಡ್ಡ ಕೆಲಸದಲ್ಲಿದ್ದಾನೆ (ಕೂ೦); ಹಿರೇಮಗ ಮಹಮದಶಾಬಾಸಾಹೇಬರು . . . ಈ ವರ್ತಮಾನವೆಲ್ಲ ಹೇಳಿದರು (ಕೃದಕ. ೨೯). **ಪಿರಿಯವು (ಬಹುವ)** = (ವಯಸ್ಸು, ಆಕಾರ, ಗಾತ್ರ, ನೀಳತೆ ಮೊದಲಾದುವುಗಳಲ್ಲಿ) ದೊಡ್ಡದಾದವು : ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪವಾ ಪುರವರದೊಳ್ (ಕಾವ್ಯಸಾ. ೦೬೮ ಚೂಡ್ರ೪) ; ವಾಯುಭೂತಿಯುಂ . . . ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ ಪಿರಿಯವಪ್ಪ ಪೊಱಗಳಂ ಪೊತ್ತು ಪೋಗಿ (ವಡ್ಡಾರಾ. ೯-೦). **ಪಿರಿಯಾಕೆ, ಹಿರಿಯಾಕೆ**=ದೊಡ್ಡವಳು; ಜ್ಯೇಷ್ಠಳು : ಎಲ್ಲರಿಂ ಪಿರಿಯಾಕೆ ನಿನ್ನನಲ್ಲದೆ ಪೆಱರನೊಲ್ಲೆನೆಂದಿರ್ದೊಡೆ ಮತ್ತಿನರ್ವರುಮಂ ಮದುವೆಯಂ ಮಾಡಿ (ಶಂಕಶಾ. ೦-೬೪ ಪ); ಆಕೆಯೇ ಆ ಮನೆಗೆಲ್ಲಾ ಹಿರಿಯಾಕೆ (ಕೂ೦). **ಪಿರಿಯಾತ** = ದೊಡ್ಡವನು ; ಜ್ಯೇಷ್ಠ : ಪಿರಿಯಾತಂ ಸ್ವಭಾವದಿಂ ಋಜುಮಾರ್ಗವೃತ್ತಿಯಿಂ ತಳೆದು ವಿನಯವಿಭೂಷಣನಾದಂ (ಸುಕುಮಾ. ೨-೫೭ ವ). **ಪಿರಿಯೊಟ್ಟು, ಪಿರಿಯೊಬವೆ, ಹಿರಿಯೊಬ್ಬೆ** = ದೊಡ್ಡ ಮಂಳಂ ಪೊದರು,—ಬೇಲಿ(?) : ಪೆರ್ಬಳದೊಳಗಣ ಬಾದುಪೊಲದಿನ್ದ ಪಿರಿಯೊಟ್ಟಿಯ ಕೈವರದೊಳ್ ಒನ್ದು ಮಾನ್ಯಂ (ಎಕ. X (೩), ಶಿಕ್ಕಬ. ೦೦೬-೬೨ ; 850) ; ಪೆರ್ಬಳದೊಳಗಣ ಬಾದುಪೊಲದಿಂದೆ ಪಿರಿಯೊಬವೆಯ ಕೈಪರದೊಳೊಂದು ಮಾನ್ಯಮ್ (ಶಿಮೊ. ೦೯೦೪, ೦೩-೬೨ ; 806) : ಅಲ್ಲಿಂ ತೆಂಕ ಹಿರಿಯೊಬ್ಬೆಯಿಂ ಪೋಗಲು ಬಿಂಬಿಸೆಟ್ಟಿಯ ಕೆಱೆಯ ಕೋಡಿಯ ಕೀಳ್ಬಯಲು . . . ಅಲ್ಲಿಂ ಹಡವಲು ಹಿರಿಯೊಬ್ಬೆಯ ಸೆಳ್ಳಮೊಱಡಿಯ ಹಡುವಣ ಬಳ್ಳಿಯ ಕೆಱೆಯ ತೆಂಕಣ ಕೋಡಿಯ ಬಳರಿಯ ಬನ (ಎಕ. II. ೩೪೫-೬೦; ಶ್ರ. 1159). **ಪೆರ್ಗಾಪಂ**– ಅತಿಶಯವಾಗಿ ಕಾಪಾಡುವವನು ; ವಿಷ್ಣು : ಸೃಷ್ಟಿಸುವ ಸಮರ್ಥ ಪೆರ್ಗಾಪನೈಶ್ವರ್ಯಕರ್ತಳೀತನ ರಾಣಿ ನಿಖಿಳಮೈಭೋಗವು ವ್ಯರ್ಥ ದ್ವಾರಕಿ ದೊಡ್ಡಿತಹುದೆ (ಮೋಹಶ. ೨೯-೨೬). **ಹಿರಿದಾಗಿ** = ಹೆಚ್ಚಾಗಿ ; ಬಹಳವಾಗಿ : ಹೆಮ್ಮೆಯಲಿ ಹಿರಿದಾಗಿ ಕೆಡುವರು (ಸಂಕಶ. ೩-೦೨) ; ವಿಪ್ರರಿಳೆಯನು ಮಂದಮತಿ ಕೈಕೊಂಡು ಕವರಿದನವರ ಹಿರಿದಾಗಿ (ಸಂಕಶ. ೨೬-೫೭). **ಹಿರಿದು ಕಿಱಿದು** = ಮೇಲು ಕೀಳು : ಕಿಱಿಯರಾದಡೇನು ಹಿರಿಯರಾದಡೇನು ಅಱಿವಿಂಗೆ ಹಿರಿದು ಕಿಱಿದುಂಟೆ (ಶೂನ್ಯಸಂ. ೦೬೦-೬೨). **ಹಿರಿಯ ಗಡಿಂಬ** = ಭೂಮಿಯ ಒಂದು ಅಳತೆ : [ಹಿ]ರಿಯ ಗಡಿಂಬದ ಕೋಲೊಳ್ ಬಿಟ್ಟ ಮತ್ತ ೬೦ (ಸೌಇಇ. XX. ೩೯-೪೦; 1064) **ಹಿರಿಯ ಗಳೆ** = ೧. ದೊಡ್ಡ ಕೋಲು. ೨. = ಪಿರಿಯ ಕೋಲ್ ೨ : ಹಿರಿಯ ಗಳೆಯಲು ಗದ್ದೆ ಕಮ್ಮ (ಎಕ. ೦೯೪೬.

ಕಾಸಗಲ್. ೨೨೯-೨೪; ೯). ಹಿರಿಯಾತನ, ಹಿರೇತನ = ೧. ದೊಡ್ಡತನ ; ಘನತೆ: ಹೆಚ್ಚುಗಾರಿಕೆ : ನಿಮ್ಮ ಹಿರಿಯಾತನಕೆ ಪಡಿಯುಂಟೆ (ತಿರುಕ. ದೇ. ೦೪-೨) ; ತಿರುಗಿ ನೋಡಿದಡೀಗ ಸಿನ್ನಯ ಹಿರಿಯಾತನವಳಿವುದೆ (ಶಸಪ. ೩೯-೨೨); ಹಿರಿಯಾತನದಲಿ ನೋಡೆ ಸರಸಿಜೋದ್ಭವನಯ್ಯ ಗುರುವುತನದಲಿ ನೋಡೆ ಜಗದಾದಿಗುರುವು (ತೊರಡ. ೨-೦೬೪-೦). ೨. ದೊಡ್ಡಸ್ತಿಕೆ ; ಅಹಂಕಾರ : ಈ ಕಾಂಗ್ರೆಸ ಚಂಡಾಲರು ಹಿರೇತನ ಮಾಡಿ ಯಾರಿಗೂ ಬಿರುದುಗಳು ಇರಬಾರದು ಅಂದ್ರು (ಹಕ್ಕೊಂಡ. ೨೬). ಹಿರಿಯ ಮಗಳು, ಹಿರೀ ಮಗಳು = ದೊಡ್ಡ ಮಗಳು ; ಜ್ಯೇಷ್ಠಪುತ್ರಿ: ಅವರ ಹಿರಿಯ ಮಗಳು ಊರಿಗೆ ಬಂದಿದ್ದಾಳೆ (ಕೂಡಿ) ; ನಾಳೆ ಅವರ ಹಿರೀಮಗಳ ಮದುವೆ (ಕೂಡಿ). ಹಿರಿಯ ಮಾಣಿ, ಹಿರಿಯ ಮಣಿ, ಹಿರೇ ಮಣಿ—"ಪಾಠಶಾಲೆಯಲ್ಲಿ ತರಗತಿಯ ಶಿಸ್ತು ನೋಡಿಕೊಳ್ಳುವ ಹಿರಿಯ ವಿದ್ಯಾರ್ಥಿ: ಹಿರೇಮಣಿ (ಹಿರಿಯ ಮಾಣಿ)" (Monitor. ೩೦೪೩): (ಪಾಠಶಾಲೆಯ) ಹಿರಿಯ ಮಣಿ (Captain. ೩೦೪೩) ; ಎರಡು ಮೂರು ವರುಷಗಳ ಕಾಲದಲ್ಲಿಯೇ ಈ ಹುಡುಗನು . . . ಪಾಠಶಾಲೆಯಲ್ಲಿ 'ಹಿರೇಮಣಿ'ಯಾದವನು (ಗುಣಶಾ. ೬). ಹಿರಿಯ ಸೊಳಸ = ಒಂದು ಅಳತೆಯ ಪ್ರಮಾಣ : ಮೂಲೆವತ್ತಂ ಹೇಱಿಂಗೆ ಹಿರಿಯ ಸೊಳಸ-೨ . . . ಮೆಳಸು ಹೇಱಿಂಗೆ ಹಿರಿಯ ಸೊಳಸ ೨ ಜೀರಗೆ ಹೇಱಿಂಗೆ ಹಿರಿಯ ಸೊಳಸ ೨ (ಸೌಇಇ. IX—1, ೦೬೨-೩೦; 1106). ಹಿರೆ ಹುದ್ದರಿ = ದೊಡ್ಡ ಎದುರಾಳಿ,—ಪ್ರತಿಸ್ಪರ್ಧಿ; ಹಿರಿಯುದ್ದರಿ: ರಾಮನೂ ಶೀನನೂ ಹಿರೆ ಹುದ್ದರಿಯಾಗಿ ತಿಳ್ಳಿಯಾಟವನ್ನು ಹೂಡಿರುವರು (ತಿರಾಕ. ೯೬). ಹಿರೇ ರೋಗ = ೧. ದನಗಳಿಗೆ ಬರುವ ಒಂದು ಬಗೆಯ ಸಾಂಕ್ರಾಮಿಕ ಕರುಳುಬೇನೆ : (೬). ೨. ಒಂದು ಬಗೆಯ ಕಂಪ್ಪರೋಗ : (೬).

[ದೇ.॥ ತಮಿ. ಪೆರಿತು; ಮಲ. ಪೆರು ; ತುಳು. ಪೆರಿ ; ತೆಲು . ಪೇರು]

**ಪಿರಿದು$_2$** 'ಪಿರಿದುಂ' ನೋ.

**ಪಿರಿದುಂ, ಪಿರಿದು$_2$, ಹಿರಿದು$_2$** (ಅ). ೧. ಹೆಚ್ಚಾಗಿ ; ಅಧಿಕವಾಗಿ; ಬಹಳವಾಗಿ : ಕರಂ ಪಿರಿದುಂ ಗಟಪುತ್ತ್ರವಿರ್ಪಳಂ ಸಾರಿಕೆಯೆಂಬರಲ್ಲದಭಿಸಾರಿಕೆಯೆಂಬರೆ ಬುದ್ಧಿಯುಳ್ಳವರ್ (ಶಂಶಕಾ. ೪-೬೩); ಘನತೆಃಜೋಗರ್ಭದುರ್ಬಿಂದಱಿಯದೆ ಪಿರಿದುಂ ತನ್ನ ಪಾದಂಗಳಿಂ ಸನ್ಮನಿನ್ನಂದಾಗಣ್ಯಪುಣ್ಯಮಾಳತನುತತಿಯುಂ ಮುಟ್ಟಿಯುಂ (ಶಾಸುಶಾ. ೦-೪೦) : ೬ಡೆ ಮೊದಲಳಿದ ಗಗನದ ನಡುವೆ ಪಿರಿದುಂ ಬಳಸಿದಾ ವಾಯುತ್ರಿತಯದೊಳ್ (ಸಾಳ್ಳಶಾ. ೦-೩೦). **ಪಿರಿದು$_2$** : ೧. ಅಪನೀತಾರಾದೊಡಂ ಪಲ್ಗಿಱಿದು ಪಿ[ಶಾಕಂ.ಬಿ]ರಿದು ಬಾಯಿಂದೆ ದೈನ್ಯಾಕ್ಷರಂ ಸಂಭವಿಸುತ್ತೆನ್ನಾಳ್ದ ಸಂದೇಶಮನೆ ಕರುಣಿಸೆಂದಲ್ಲಿ (ರಕ್ಷಾಶ. ೨೦) ; ಪಿರಿಯಂ ಅಃ ಪಿರಿದೀವನಿತ್ತ್ರಾದಂ ನೆನೆವನೆ ಚೀ ಅದಂ ನೆನೆಯಂ (ಶಮುದ. ೦೩೨ ಶ್ರಿಯೊ) ; ಸರಳ ಹತಿಯಲಿ ನಕುಲ ಸಾತ್ಯಕಿ ಬಿರುದ ಸಹದೇವಾದಿ ವೀರರು ಪಿರಿದು ನೊಂದರು (ಶುಡಾ೪. ೦೩-೪೨). ೨. ಅತಿಶಯವಾಗಿ ; ವಿಶೇಷವಾಗಿ ; ಮಿಂಗಿಲಾಗಿ : ಅಂತು ಪಿರಿದೋಲಗಂಗೊಟ್ಟಿರ್ಪನ್ನೆಗಂ (ಶಂಶಕಾ. ೯-೨೯ ಪ). **ಹಿರಿದು$_2$** : ೧. ಆಳು ಹಿರಿದಿದ್ದೇನು ಫಲ ಹೀಹಾಳಿದೈವಕೆ ಬೇಱೆ ಪರಿಯ ವಿತಾಳವಿಲ್ಲ ವಿಪಕ್ಷದೊಳು (ಶುಪ್ರಾ೪. ೦೩-೬); ನೊಂದಿರಿ ಪಿರಿದು ನಿಃಪದಱಿಂದ (ಕೊರಶಾ. ೦-೮-೬೩). [< ಪಿರಿದು$_1$]

**ಪಿರಿಪಿರಿ** (ನಾ). ಒಂದು ಅನುಕರಣಶಬ್ದ : ಆತರು ಯಾವಾಗಲೂ ಪಿರಿಪಿರಿ ಎನ್ನುತ್ತಾರೆ (ತ್ಯಾಗಮ. ೦೯೬): ನೀವು ಇತ್ತಿತ್ತಲಾಗಿ ಎಂತದೋ ಪಿರಿಪಿರಿ ಮಾತಾಡುತ್ತೀರಪ್ಪ (ಹೊಸಕ್ಷಿ. ೬೬). 'ಕಿಱಿಕಿಱಿ' ಪರಾ.

ಪಿರಿಪಿರಿ ತಿರುಗು = ಸುಮ್ಮನೆ ತಿರುಗಾಡು ; ಅತ್ತಿಂದಿತ್ತ ಅಲೆ : ದಿನದ ಇಪ್ಪತ್ನಾಲ್ಕು ತಾಸು ಪಿರಿಪಿರಿ ತಿರುಗಿ ದೇಶದುದ್ಧಾರಕ್ಕೆ ದೇಹವನು ತೇಯ ಬಲ್ಲ (ಕಂಶು. ೨೮-೨೩) ; ಯಾವುದರ ಸಂಧಾನದಲ್ಲಿ ಎಷ್ಟೋ ವರ್ಷ ಅವಿಶ್ರಾಂತವಾಗಿ ಪಿರಿಪಿರಿ ತಿರುಗಿದ್ದೆನೋ ಅದರ ಸುಳಿವು ಈಗ ಹತ್ತುತ್ತಿದೆ (ಇಶ್ವ೪. ೩೪೬). ಪಿರಿಪಿರಿ ಮಾಡು = ತೊಂದರೆ ಕೊಡು ; ಪೀಡಿಸು ; ಕಿರಿಕಿರಿ ಮಾಡು : ಯಾವಾಗಲೂ ಏನೋ ಪಿರಿಪಿರಿ ಮಾಡುತ್ತ ಕಾಡುತ್ತಾಳೆ (ಹಳ್ಳಶಾ. ೦೦೮) ; ಬಸ್ಸಿನಲ್ಲಿ ಹೋಗೋಣ ಎಂದರೆ ಕಂಡಕ್ಟ್ರು ಮಿಾನು ಬಸ್ಸಿನಲ್ಲಿಡಲು ಪಿರಿಪಿರಿ ಮಾಡೋದು ಬೇರೆ (ಹೊಸಕ್ಷಿ. ೩೬) ; ನೆಂಟಸ್ತಿಕೆ ವಿಷಯ ಇನ್ನು ಪಿರಿಪಿರಿ ಮಾಡಬೇಡ (ಸರತ. ೬೩).

**ಪಿರಿಯಕ್ಕರ** (ನಾ). [ಛಂದ] ದೇಸಿಛಂದಸ್ಸಿನ ಅಕ್ಷರವೃತ್ತದ ಐದುಂಪ್ರಕಾರಗಳಲ್ಲಿ ಒಂದು ; ಪ್ರತಿಪಾದದಲ್ಲಿಯೂ ಮೊದಲು ಒಂದು ಬ್ರಹ್ಮಗಣ, ನಂತರ ಐದು ವಿಷ್ಣುಗಣ, ಕೊನೆಯಲ್ಲಿ ಒಂದು ರುದ್ರಗಣ—ಹೀಗೆ ಒಟ್ಟು ಏಳು ಗಣಗಳಿಂದ ಕೂಡಿದ, ನಾಲ್ಕು ಪಾದಗಳನ್ನುಳ್ಳ ವೃತ್ತ : ಮೊದಲೊಳಜಗಣಂ ಕುಂದದೆ ಬಳಿಕ್ಕೆತ್ತಮಯ್ದುಗಣಂಗಳೆ ವಿಷ್ಣುವಕ್ಕುಂ ತುದಿಯೊಳೊಂದು ತಾಣದೊಳಲ್ಲಿಯುಂ ಕಂದರ್ಪರಿಪುಗಣಂ ನೆಲೆನೆಲಸಿ ನಿಲೆ . . . ಪಿರಿಯಕ್ಕರಂ (ಛಂದೋಂಬು. ೫-೨೪೨) ; ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು :- ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿಱಿಯಕ್ಕರ (ಕೃಶಿಶಿ. ೦೨೩) 'ಕಿಱಿಯಕ್ಕರ' ಪರಾ. [ಪಿರಿ$_4$ (< ಪಿರಿದು$_1$) + ಅಕ್ಕರ$_2$]

**ಪಿರಿಯಣ್ಣ, ಹಿರಿಯಣ್ಣ** (ನಾ). ೧. ಹಿರಿಯ ಸಹೋದರ ; ದೊಡ್ಡ ಅಣ್ಣ : ಪಿರಿಯಣ್ಣಂಗೆಱಗುವುದೇಂ ಪರಿಭವವೇ (ಅಜಿತ. ೦೪-೬೩) ; ಪಿರಿಯಣ್ಣನ ನನ್ನಿಯನಾದರದಿಂ ಕಾಯಲ್ಕೆ ಪೆಱರ್ಗೆ ಬಾಣಸುಗೆಯ್ದಂ (ಗದಾಯು. ೬-೩೮) ; ಧರಣೀಶಾ ಕೇಳ್ಮುನ್ನಿನ ಭವದೊಳ್ ಪಿರಿಯಣ್ಣಂ ನಾಂ ನಿನಗೆ (ಶಿಯುಶಾ. ೩-೬೮). **ಹಿರಿಯಣ್ಣ** : ೧. ಅವನು ಹಿರಿಯಣ್ಣನ ಮಾತಿಗೆ ಎಂದೂ ಎದುರಾಡಿದವನಲ್ಲ (ಕೂಡಿ). ೨. ಒಂದು ಕ್ಷುದ್ರದೇವತೆಯ ಹೆಸರು : ಎಲ್ಲಾಯಿ ಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಿಂಗ . . . ಕಲ್ಲದ ಚವಡಿಕ ಮಾರಿ ಮಸಣೆ ಜಕ್ಕಿ ಸಲ್ಲದ ಹಿರಿಯಣ್ಣಗುರುವ ಜಲದೇವಿ (ಶಿಶಾಸು. ೩೮-೨). [ಪಿರಿ$_4$ (< ಪಿರಿದು$_1$) + ಅಣ್ಣ$_1$]

**ಪಿರಿಯಪಸುಂಡಿ** (ನಾ). ಒಂದು ಊರಿನ ಹೆಸರು : ವಿಜಯಬ್ಬರಸಿ ತನ್ನ ಮಗಂ ಶಾನ್ತಿವರ್ಮ್ಮರಸು ಮಾಡಿಸಿ[ದ] ಪಿರಿಯ ಬಸದಿಗೆ ತನ್ನ ಸೀವಟಂ ಪಿರಿಯ ಪಸುಣ್ಡಿಗೆ ಪೋದ ಬಟ್ಟೆಯಿಂ ತೆಂಕ ಕಾಡಿಯೂರ ಪೊಲ[ದ] × × × ನೂಱಯ್ವತ್ತು ಮ[ತ್ತ]ರ್ಕೆಯ್ಯಂ ನಮಸ್ಯವಾಗಿ ಬಿಟ್ಟಳ್ (ಸೌಇಇ. XX. ೦೮-೪೦ ; 980). [< ಪಿರಿದು$_1$ + ಪಸುಂಡಿ]

**ಪಿರಿಯಬಾಣಗೆಱೆ** (ನಾ). ಒಂದು ಊರಿನ ಹೆಸರು : ಪಿರಿಯ ಬಾಣಗೆಱೆ ಮಹನ್ನುತ್ತರಾಯಣಸಂಕ್ರಾನ್ತಿಯೊಳ್ವಕ್ರಾಣಭಟಾರರ ಶಿಷ್ಯರ್ ಚೆಲ್ಲಾಕಭಟಾರರ ಕಾಲು ಕರ್ಚಿ ಕೊಟ್ಟ ಮರ್ಯಾದೆಯೊಳಗೆ (ಎಕ. XII. ತಿಪ. ೨೮-೩೬ ; 943). [< ಪಿರಿದು$_1$ + ಬಾಣಗೆಱೆ ?]

**ಪಿರಿಯಬಿದಿರೂರ್** (ನಾ). ಒಂದು ಊರಿನ ಹೆಸರು : ಬೀರನೊಳಂಬ ನೊಟ್ಟಿ ಕಿಱ್ಕನಾಡ ಪಿರಿಯಬಿದಿರೂರ ಕಲ್ನಡುಗೊಟ್ಟು (ಎಕ. X. ಗೌರಿಬಿ. ೪-೨೨ ; ಸು. 920). [< ಪಿರಿದು$_1$ + ಬಿದಿರೂರ್]

**ಪಿರಿಯಬ್ಬೆ** (ನಾ). ದೊಡ್ಡ ತಾಯಿ ; ದೊಡ್ಡಮ್ಮ : ಆತನ ಪೂರ್ವಭವದ ಪಿರಿಯಬ್ಬೆ ದೇವಶ್ರೀಯೆಂಬಳ್ ಯಕ್ಷಿಯಾಗಿರ್ದಾಕೆ ಬಂದು (ಶಾಂತಿಪು. ೬೮). 'ಕಿಱಿಯಬ್ಬೆ' ಪರಾ. [ಪಿರಿ$_4$ (< ಪಿರಿದು$_1$) + ಅಬ್ಬೆ$_1$]

**ಪಿರಿಯಮಾಗುಂಡೆ** (ನಾ). ಒಂದು ಊರಿನ ಹೆಸರು ; ಶಿವಮೊಗ್ಗ ಜಿಲ್ಲೆಯ ಸೊರಬತಾಲ್ಲೂಕಿನ ಈಗಿನ ಹಿರೇಮಾಗಡಿ : ಅಯ್ಯಣ ಪುತ್ರ ನಾಗರಮಣ್ಣ ಎಟ್ಟಿತ್ತು ಆಳುತಿರ್ದ್ದು ಪಿರಿಯಮಾಗುಣ್ಡೆಯ ಪೊಲಿಗ ಊರ್ಗ್ಗಾವುಣ್ಡುಗೆಯ್ಯುತ್ತಿರೆ (ಎಕ. VIII. ಸೊರಬ. ೪೦೩-೦೩ ; ೯೮೦). [< ಪಿರಿದು$_1$ + ಮಾಗುಂಡೆ$_0$ (< ಮಾಗುಂಡಿ) ]

**ಪಿರಿಯಮುಗುಳಿ** (ನಾ). ಒಂದು ಊರಿನ ಹೆಸರು : ᑭ ಈಗಿನ **ಚಿಕ್ಕಮಗಳೂರು ಜಿಲ್ಲೆಯ ಹಿರೇಮಗಳೂರು** : ಪಿರಿಯಮುಗುಳಿಯ [ಕೊ] ಮರಯ್ಯನು [೦] (ಎಕ. VIII, ೫೬-೦೩ ; ಸು. 1000) 'ಕಿಱುಯ ಮುಗುಳಿ' ಪರಾ. [ < ಪಿರಿದು$_1$ + ಮುಗುಳಿ$_1$ ]

**ಪಿರಿಯಮೆಟಪಿ** (ನಾ). ಒಂದು ಊರಿನ ಹೆಸರು : ಶ್ರೀಮತ್‌ ಮೆಟ್ಟ(೦)ಮಹಾಧಿರಾಜರ್ ಪಿರಿಯಮೆಟಪಿಯ ಬಾಳಕಶೋಮಭಟರ್ಗ್ಗೆ ಕೊಟ್ಟ ಸ್ಥಿತಿ ಎನ್ಸನೆಂದ್ದೊಡೆ (ಕಾಇಇ. IX-1, ೬೨-೬; ಸು. 10ನೆಯ ಶತ).

[ < ಪಿರಿದು$_1$ + ಮೆಟಪಿ$_4$ ]

**ಪಿರಿಯಯ್ಯ, ಹಿರಿಯಯ್ಯ** (ನಾ). ೧. ದೊಡ್ಡಪ್ಪ : ನಮ್ಮ ಪಿರಿಯಯ್ಯ ತಳೆದ ನಮ್ಮಯ್ಯನ ವಸುಧೆಯನು ಸೆಳೆದುಕೊಂಡನು ತನ್ನ ವಿದ್ಯಾಬಲದಿನಾತಂಗಳುಳಿ ಮತ್ತಿತನೀ ಪುರದೊಳಿಹನು (ಸಾಳ್ವಭಾ. ೦೩-೨೬) ; ಭೀಮಂ ನಿನಗೆ ಪಿರಿಯಯ್ಯನಹನೆ (ಅರುಊ. ೦೯-೦೬). ೨. ಒಬ್ಬಾತನ ಹೆಸರು : ಮಚ್ಛಿಕೆಱೆಯ ತೆಂಕಣ ಕಡೆಯಿಂ ಪಿರಿಯಯ್ಯ ಪುಣುಸೆವರಂ ನಟ್ಟ ಒಳಗಲ್ಲಿಂ ಪಡುವಣ ತೆವರಿಂದೊಳಗೆ ಆಯ್ದು ಕೊಳಗ ಬೆದೆ ಪೊಂಬೊಲನುಮಿದು ಚನ್ದ್ರಾರ್ಕತಾರಂಬರಂ ಸಲ್ವುದು (ಎಕ. IV, ಹಗ್ನ. ೦೬-೦೯ ; 1021) ; ಶ್ರೀಮತ್ಪಂಚಲಮಹಾದೇವಿಯರು ಶ್ರೀಮತ್ಪಿರಿಯಯ್ಯಂಗಳ್ ಮೊದಲಾಗಿ ಸಮಸ್ತಪ್ರಧಾನರುಂ . . . ಪುನರ್ದ್ದತ್ತಿ ಮಾಡಿ (ಸಾಇಇ. XX, ೪೬-೭೯ ; 1072). ಹಿರಿಯಯ್ಯ : ೧. ಕೆಲಬರೊಡಹುಟ್ಟಿದರು ಗುರುಗಳು ಕೆಲರು ಕೆಲಬರು ಮಾವ ಮೈದುನ ನಳಿಯ ಮಗ ಹಿರಿಯಯ್ಯ ಮುತ್ತಯ್ಯ ಮೊಮ್ಮನೆನಿಸುವರು (ಕುಮಾಕೀ. ೩-೨೬) ; ತಾತ ಕೇಳ್ಳೆ ಪಾರ್ಥ ನಿನಗೆ ಹಿರಿಯಯ್ಯನಹನೀತ ಕಣಾ ಧರ್ಮರಾಜನೀ ನೃಪನ ಜಾಮಾತನಾಗಿರ್ದಪ (ಕೈಬಭಾ. ೨೬-೦೦).

[ ಪಿ$_4$ ( < ಪಿರಿದು$_1$ ) + ಅಯ್ಯ$_{41}$ ]

**ಪಿರಿಯರ** (ನಾ). ದೇವಸ್ಥಾನ ಮುಂತಾದ ಪವಿತ್ರಸ್ಥಳಗಳಲ್ಲಿಯ ಹಿರಿಯ ಅಧಿಕಾರಿ,—ಧರ್ಮಾಧಿಕಾರಿ : ಪುರದ ಪೆರ್ಗ್ಗಡೆಗೆ ಮತ್ತ ರಾಜು ಪಿರಿಯರಂಗೆ ಮತ್ತರಾಜು (ಎಕ. XIII, ೦೬೨-೪೬ ; 1055).

**ಪಿರಿಯರಮಾಳಸೂಳೆ** = ಧರ್ಮಾಧಿಕಾರಿಗಳ ಪಾಲನೆಯಲ್ಲಿರುವ, ದೇವರ ಹೆಸರಿನಲ್ಲಿ ಬಿಟ್ಟ ವೇಶ್ಯೆ,—ಸೂಳೆ : ದೇವರ ಭೋಗಕ್ಕೆ ನಡೆವ ಪಿರಿಯರಮಾಳ ಸೂಳೆಗೆ ಮತ್ತರ್ಪ್ಪತ್ತು (ಎಕ. XV. ೯೯-೪೪ ; 1060).

[ಪಿ$_4$ (< ಪಿರಿದು$_1$) + ಅರ$_2$ (< ಅಱ$_2$)]

**ಪಿರಿಯರವಣ** (ನಾ). ಒಂದು ಬಗೆಯ ತೆರಿಗೆ ; ಹಿರಿಯ ಧರ್ಮಾಧಿಕಾರಿಗಳಿಗೆ ಕೊಡುವ ತೆರಿಗೆ (?) : ಅಲ್ಲಿ ಮನ್ನೆಯ ನಿಬನ್ಧದ ಕಿಱುದೆಱೆಗಳಮಾವುವೆನ್ದೆಡೆ ಮನೆವಣಂ ಪಿರಿಯರವಣಂ ಧನಬಳಂ . . . ಇನ್ನೀ ನಡೆವ ತೆಱೆಗಳ್ಮಂ . . . ಸರ್ವ್ವಬಾಧಾಪರಿಹಾರಮಾಗೆ ಬಿಟ್ಟು ನಡೆಯಿಸಿದ (ಸಾಇಇ. XX, ೪೭-೩೩, 1074). [ ಪಿರಿಯರ + ವಣ$_3$ ]

**ಪಿರಿಯರಸಿ, ಹಿರಿಯರಸಿ** (ನಾ). ದೊಡ್ಡ ರಾಣಿ : ಪಟ್ಟದ ರಾಣಿ ; **ಅಗ್ರಮಹಿಷಿ** : ಪಿರಿಯರಸಿಯ ಪಟವೇಟದ ಪರಿವಿಡಿ ಮುಗುಟ್ಟಿಂ ಕೊನರ್ತುದು (ಶಾಂತಿಪು. ೬-೫೨) ; ಪಡಿಯಱ ದೊರಪಯ್ಯನ ಪಿರಿಯರಸಿ ಪಾಂಬಬ್ಬೆ ತರಿವೆಱದು ಮೂವತ್ತು ವರಿಸಂ ತಪಂಗೆಯ್ದ್ದು ಂ ನೋನ್ತುಚ್ಚಮಂ ಸಮಾಧಿಮರಣ(ಮೆಯ್ದಿದರ್) (ಎಕ. VI, ಕಡೂರು. ೦-೦೯ : 971) ; ಮದನಂ ಪಿರಿಯರಸಿಯ ಪೆರ್ಗಡೆಗಳ ಬರವಿನ ಕಾರಣಮನಱಿದು (ಜಂಹಂ. ೯-೩೬). **ಹಿರಿಯರಸಿ** : ಅಕ್ಕತಂಗಿಯರ್ಕ್ಕವರು ಒಬ್ಬನ ಅರಸಿಯರು ಕಿಱಿಯಕ್ಕನ ಕರೆಯುವರೆ ಹಿರಿಯರಸಿ ಕುಂಟಣಿ ಪಿರಿಯರಸಿಯು ಕೂಡುವರೆ ಕಿಱಿಯರಸಿ ಕುಂಟಣಿ (ಕನಸಂ. ೨೨೨—೫೬) ; ಸೇರಿದವು ಪೂರ್ಣಾಂಶ ಭಾಗಗಳು ಹಿರಿಯರಸಿ ಕಿಱಿಯರಸಿಯುಪರಿಬ್ಬರಿಗೆ (ಕೊರಾಇ. ೦-೬-೫೬). 'ಕಿಱಿಯರಸಿ' ಪರಾ. [ ಪಿ$_4$ (< ಪಿರಿದು$_1$) + ಅರಸಿ ]

**ಪಿರಿಯರಾಜಾನ್ನ** (ನಾ). ಒಂದು ಬಗೆಯ ಬತ್ತ : ಪಿರಿಯರಾಜಾನ್ನ ಜೀರಿಗೆರಾಜಾನ್ನವ ಪುರುತರ ಸೊಗಸು ರಾಜಾನ್ನ ಪರಿಶೋಭಿಸುವ ಕಸ್ತೂರಿ ರಾಜಾನ್ನದ ವರಶಾಲಿಯ ಗದ್ದೆಯಿಹುವು (ಕಂಸಾ. ೫-೬೬).

[< ಪಿರಿದು$_1$ + ರಾಜಾನ್ನ$_1$]

**ಪಿರಿಯಹೊಟ್ಟ** (ನಾ). ಒಂದು ಊರಿನ ಹೆಸರು; ᑭ ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಈಗಿನ ದೊಡ್ಡಹೊಮ್ಮ : ಎಡೆನಾಡ ಪಿರಿಯ ಹೊಟ್ಟದ ಪನ್ನಿರ್ಬ್ಬರುಂ . . . ಕೂಚಿಭಟರ್ಗೆ . . . ಕಾಲಂ ಕರ್ಚ್ಚಿ ಧಾರೆಯೆಱೆದು ಕೊಟ್ಟರ್ (ಎಕ. III, ನಂಜನ. ೦೮೩-೫; 977).

[< ಪಿರಿದು$_1$ + ಹೊಟ್ಟ$_0$ (< ಪೊಟ್ಟ) ]

**ಪಿರಿಯಾದಿ** 'ಪಿರ್ಯಾದು' ನೋ.

**ಪಿರಿಯಾಯ್ಚ** (ನಾ). ಒಬ್ಬಾತನ ಹೆಸರು : ನಯಮುಂ ಮೇಱೆವಂ ಶತ್ರುಸತಯನಾಯ [೦] ಪರನೆನಿಸಿ ನೆಗಟ್ದ ಪಿರಿಯಾಯ್ಚನನಾಶ್ರಯಣೀಯ ನಾದನಾ ಕ್ಷತ್ರಿಯಾದಿಗಂ ಸಕಳ ಸಮಯಿ[ಗಂ ಬು ] ಧಜನಕಂ (ಸಾಇಇ. XI-1, ೪೫-೦೦; 980).

[ಪಿ$_4$ (< ಪಿರಿದು$_1$) + ಆಯ್ಚ$_0$ (ᑭ ← ಸಂ. ಆದಿತ್ಯ)]

**ಪಿರಿಯಿಂಡಿ** (ನಾ). ಒಂದು ಊರಿನ ಹೆಸರು; ᑭ ಈಗಿನ ಬಿಜಾಪುರ ಜಿಲ್ಲೆಯ ಇಂಡಿ : ಅಲಂಪೂರ ಬಟ್ಟೆಯಿಂ ಪಡುವ ಕಿಱಿಯಣ್ಡಿಯ ಬಟ್ಟೆಯಿಂ ಪಿರಿಯಣ್ಡಿಯ ಸೀಮೆಯಿಂ ಮೂಡಲನ್ತೆರಡುಂ ಬಟ್ಟೆಯಿಂ ದೊಳಗೆ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ (ಸಾಇಇ. XX. ೨೦-೬೦ : 1019). [ ಪಿ$_4$ (< ಪಿರಿದು$_1$) + ಇಂಡಿ$_0$ ]

**ಪಿರಿಯಾಚಲ್, ಹಿರಿಯಾಚಲು, ಹಿರೀಚಲು** (ನಾ). ಒಂದು ಬಗೆಯ ಈಚಲುಮರ; ದೊಡ್ಡ ಈಚಲು : ಪಿರಿಯಾಚಲ ವಣ್ಣಂ ಸರಿಕನ ಬಿತ್ತಮುರ್ದವಳ್ಳಿ ಮೂಲಂಗಿಯ ಬೇರರಿಸಿನ ಮಡುವಾಗಲ್ ವಿಷಹರ ಮಕ್ಕುಂ (ಅಕುದ. ೫-೦೦೬). **ಹಿರಿಯಾಚಲು** : "ಇಂದ್ರಾಸಂ—ಹಿರಿಯಾಚಲು" (೬ಕಿಂ. ೦೩). **ಹಿರೀಚಲು** : "ಅಶೋಕಃ—ಅರೆ, ಅಶೋಕೆ, ಹಿರೀಚಲು" (೬ಕಿಂ. ೩). 'ಕಿಱೀಚಲ್' ಪರಾ.

[ಪಿ$_4$ (< ಪಿರಿದು$_1$) + ಈಚಲ್ (< ಈಂಚಲ್)]

**ಪಿರಿಯುಬ್ಬಣ, ಹಿರಿಯುಬ್ಬಣ** (ನಾ). ಒಂದು ಬಗೆಯ ದೊಡ್ಡ ಮೊನಚಾದ ಆಯುಧ (?) : ಪಿರಿಯ [ಯು]ಬ್ಬಣ ಕಠಾರಿಯಿಂ ಕಿವಿದಾಡಿ ಗದೆಗಳಿಂದ ಧುರದೊಳ್ಪರು ಹೆಣಗಿ ಬಹುಲಾಗುವೇಗದಿಂ . . . ಕಾದಿದರು ಖಾತಿಯಿಂದುಭಯಭಟರು (ಕಶಂಗ. ೬೬-೨೪). **ಹಿರಿಯುಬ್ಬಣ** : ಹಿರಿಯುಬ್ಬಣದ ಸಬಳದ ಶೂಲ ಸುರಗಿಯ ಕಣೆಯ ಹೊಱೆ ಚಾಚಿದವು ಕಟಕಾಚಾರ್ಯನಿದಿರಿನಲಿ (ಕುಮಾದ್ರೋ. ೦೫-೦೯); ಹಿರಿಯುಬ್ಬಣವ ಜಡಿವುತ ಕುದುರೆಯ ಮೇಲೆ ಹರುಷದಿಂ ಬಹನಾರಿವನು (ಕುಶಾಪಾಂ. ೨೦-೪೦) ; ಹಿರಿಯುಬ್ಬಣವ ಜಳಿಪಿಸಿ ವಿಸಾಸಿಯ ಮೇಲೆ ಬೆರಳಿಡುತತುಳಪೌರುಷದ ಬಿರುದಿನಗ್ಗಳಿಕೆಗಳನು ಪೊಗಳಿಸಿಕೊಳ್ಳ ದೊರೆ ಯಾವನುಸಿರು (ಕಂಸಾ. ೦೩-೩೮).

[ಪಿ$_4$ (< ಪಿರಿದು$_1$) + ಉಬ್ಬಣ$_1$]

**ಪಿರಿಸಂದಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಅಣುಮಶ × × × ಯಲೋಕನೆಮ್ಬುದು ಎಟ್ಟತ್ತೈದು ಪಸ್ದಿಯಂ ಕೊನ್ದತ್ತು ಇದುವೆರಸಿ ಯಾ ನಾಯಕಳಗನೆಮ್ಬುದು ಪಿರಿಸನ್ದಿ ಮಗ ಯಿಪ್ಪತ್ತಾಱು ಪನ್ದಿಯಂ ಕೊನ್ದನ್ (ಎಕ. X, ಮುಳಬಾ. ೬೫-೨; ಸು. 975). [ಪಿ$_4$ (< ಪಿರಿದು$_1$) + ಸಂದಿ?]

**ಪಿರುಕಣೆ** 'ಪಿರಕಣೆ' ನೋ.

**ಪಿರುಚು** 'ಪಿರಿಚು' ನೋ.

**ಪಿರ್ಕಿ** 'ಪಿರಿಕ್ಕಿ$_2$' ನೋ.

Δ **ಪಿರ್ಕು** 'ಪಿರ್ಕ್ಕು' ನೋ.

**ಪಿರ್ಗುರ್$_1$** 'ಪಿಳ್ಗು' ನೋ.

**ಪಿರ್ಗು₂**, ಹಿಗ್ಗು₂, ಹಿರ್ಗು, ಹಿಳ್ಗು₂ (ನಾ). ಸಂತೋಷ ; ಆನಂದ : ಇಂತಪ್ಪ ಪಿರ್ಗಿಂದಮೋ ಪೆರ್ಚುಗೆನ್ನಲ್ಲ ಪಗೆಗಳುಂ ಮೇಣ್ ನೀನುಮುವ ರೊಳಗೆ ಒರ್ವನ್! (ಆದ್ಯಕ್ರ. ೫೦-೧೧೨೦). ಹಿಗ್ಗು₂ : ಹಿಗ್ಗು ಬಡವಗೆ ಹೊಲ್ಲ ಸಿಗ್ಗು ಸೂಳೆಗೆ ಹೊಲ್ಲ ನುಗ್ಗಿಯು ಹೂಗೆ ಮಳೆ ಹೊಲ್ಲ (ಸರ್ವಜ್ಞ.೬೨೮); ಆನಂದ ಅಲೆಯಾದಾಗ ಹಿಗ್ಗಾಗಿಯೂ ಘನೀಭೂತವಾದಾಗ ಸೌಂದರ್ಯವಾಗಿಯೂ ಪರಿಣಮಿಸುತ್ತದೆ (ಸೌಂದಸ. ೧೬); ನಿಸರ್ಗವನ್ನುಂಡ ಅವನ ಸರಳ ಹೃದಯವು ಅದನ್ನು ಬಣ್ಣಿಸುವುದರಲ್ಲಿ ಹಿಗ್ಗಿನ ಬುಗ್ಗೆಯಾಗಿದೆ (ಕನ್ನಕಾ. ೨೦೦). ಹಿರ್ಗು : ತನುಜಾತೆರೊರ್ಗಿಸುತ ವೈವಾಹ ಪಿರ್ಗಿನನುಸುರ್ಗಿ ಸಂಪರ್ಗಳಿಂದೈದಿ ಬರುತ (ಜನಮು. ೩೨-೪). ಹಿಳ್ಗು₂ : "ಹರ್ಷಃ . . . ಹೃಷ್ಟಂ, ಹೃಷ್ಟಿಃ — ಈ ೭ ಹಿಳ್ಗು" (ಶಾಶಕ್ಕ. ೧೯೫). [<ಪಿಳ್ಗು]

**ಪಿರ್ರಿ** (ನಾ). ಅಂಡು ; ಕುಂಡಿ ; ನಿತಂಬ : ಕಟಿಃ. "ಕಟೀ, ಶ್ರೋಣಿಃ, ಶ್ರೋಣೀ, ಕಕುದ್ಮತೀ—ಅಂಡುಗಳ ಹೆಸರುಗಳು, ಪಿರ್ರಿಗಳು" (ನಿಘಂ.೦೮. ೧೯೦). [ ದೇ. ‖ ತೆಲು. ಪಿಱ್ಱ ; ಕೋಲಾ. ನಾಯ್ಕಿ. ಪಿರ್ರ ]

**ಪಿಲ** (ನಾ). ಹಲಸಿನ ಮರ : ಪಿಲ (ಹಲಸು), ಪಿಜ (ಹೆಬ್ಬಲಸು) . . . ಇತ್ಯಾದಿಗಳನ್ನು ಸಂಕೇತವಾಗಿರಿಸಿಕೊಂಡವರೆಂಬ ಅರ್ಥದಿಂದಲೋ . . . ಅಥವಾ ಅವುಗಳನ್ನು ವಿಶೇಷವಾಗಿ ಪೋಷಿಸುತ್ತಿದ್ದವೆಂಬರ್ಥದಿಂದಲೋ ಬಂದ ಕುಲನಾಮಗಳು, ಪಿಲತ್ತಾಯ, ಪಿಜತ್ತಾಯ (ತುಳುವಾ. ೦೫೪).
[ ದೇ. ‖ ಮಲ. ಪಿಲಾವು ; ತುಳು. ಪಿಲ, ಪೆಲ ]

**ಪಿಲಿಕಂದೋಡಿ** (ನಾ). ಒಂದು ಬಗೆಯ ಮಂಡಲದ ಹಾವು ; ದೊಡ್ಡ ಜಾತಿಯ ಕನ್ನಡಿ ಹಾವು : ನಾಗರ ಹಾವಲ್ಲ. ಚಿಟ್ಟೆಹುಲಿಯಂತೆ ಅದರ ಮೈಮೇಲೆ ಪಟ್ಟೆಮುದ್ರೆ . . , ಅಯ್ಯೊ ಇದು ಪಿಲಿಕಂದೋಡಿ (ಚಾಳಿಗ. ೬೦). [ ದೇ. ‖ ತುಳು. ಪಿಲಿಕಂದೊಡಿ ]

**ಪಿಲಿಚಾಮುಂಡಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಈತನ ಮನೆಯೊಳಗೆ ಕೆಂಪುವರ್ಣದ ಪಿಲಿಚಾಮುಂಡಿ ಬಂದು ಗಡಬಡಗುಟ್ಟುತ್ತಾ ಹೋಗುತ್ತದೆ (ಹಾಸ್ಯಪುಂ. ೨೪).
[ ಪಿಲಿ?(? ← ತುಳು. ಪಿಲಿ=ಹುಲಿ) + ಚಾಮುಂಡಿ ]

**ಪಿಲು** (ನಾ). ೧. ಒಂದು ಬಗೆಯ ಮರ ; ಉಗುನಿ ; ಪೀಲು : "ಪಿಲು ಸಹಸ್ರಾಂಶುಮೆನಲುಗಿನಿ" (ಶುಂಗರಾ. ೪೮-೪೪). ೨. ಹುಲ್ಲು ; ತೃಣ. ೩. ಕಲ್ಲು ; ಶಿಲೆ : "ಕುಜಾತಂ ತೃಣಂ ಅಶ್ಮಂಗಳ್ ಪಿಲುವಕ್ಕುಂ" (ಚಾವಾರ. ೦೫೬). 'ಪೀಲು₁' ಪರಾ. [ ಸಂ. ]

**ಪಿಲ್ಲ** (ನಾ). ರೋಗದಿಂದ ನೀರು ಸುರಿಯುವ ಕಣ್ಣನವನು ; ಸೋರು ಗಣ್ಣನವನು : "ಪಿಲ್ಲಃ, ಚಿಲ್ಲಃ, ಚುಲ್ಲಃ — ಈ ೩ ಅಟಿಗಣ್ಣವಂ" (ಹಲಾಯು. ೪೯-೪೫೩). [ ಸಂ. ]

**ಪಿಲ್ಲಕೆ** (ನಾ). ಹೆಣ್ಣಾನೆ; ಪಿಡಿ. [ ಸಂ. ಪಿಲ್ಲಕಾ ]

**ಪಿಲ್ಲಣೆ** (ನಾ). ಒಂದು ಬಗೆಯ ಆಯುಧ ; ಪರಿಘ : ನನೆಯಂಬನೆಂಬ ಮಲ್ಲನ ಕನಕದ ಪಿಲ್ಲಣೆಗಳುಪಮೆಗೆಮಯ್ಯಿದುವೆಂದೆನಿಸಿ ನಸುವಾಗಿ ಜಂಪು ಗಳನಸುಂ ಕಣ್ಗೊಳಿಪುವು (ಶಾಂತೀಶ್ವ. ೦೩-೦೬೬); ಮಲ್ಲರ ಸದನದ ಕೈಗಳ ಪಿಲ್ಲಣೆಗಳ ಕಾಯಬಲದ ಕಳನಂ ಪುಗುತಪ್ಪಲ್ಲಿಯಭಿನಯದಗುರ್ವುಗಳೆಲ್ಲರ ಬಗೆಗೀಯೆ ಬಹಳ ನಯಮುಂ ಭಯಮುಂ (ಮುಹಾಪೀ. ೬-೬೫). [ ? ]

**ಪಿಲ್ಲಣೆಗೆ** (ನಾ). = ಪಿಲ್ಲಣೆ : "ಪರಿಘಮೆನೆ ಪಿಲ್ಲಣೆಗೆ" (ಶುಂಗರಾ. ೬೯-೩೭); ಸೋಕ್ಕಾನೆಯ ಕೆಯ್ಯ ಕರಿಯ ಪಿಲ್ಲಣೆಗೆಯುಮಗುರ್ವುಮದ್ಭುತವಾಗೆ (ಅರ್ಜನೀ. ೬-೬೬ ಪ); ಪಿಲ್ಲಣೆಗೆ ಹರಿಗೆ ಚಕ್ರಂ ಭಲ್ಲೆಯಮುಸಿತಾದ್ರಿಮುದ್ಗರಂ ಕ್ಷುರಿಕೆಗಳೆಂಬೆಲ್ಲಾ ಶಸ್ತ್ರಮನಾಂತತಿಭುಲ್ಲವದಿಂ ವೀರರದಟನಿಂ ಪರಿಯಿಟ್ಟರ್ (ತ್ರಿಪು. ೬-೬). [ಪಿಲ್ಲಣೆ + —ಗೆ]

**ಪಿಲ್ಲಿ₁**, ಪಿಲ್ಲೆ (ನಾ). (ಹೆಂಗಸರು) ಕಾಲಿನ ಬೆರಳಿಗೆ ತೊಡುವ (ಉಂಗುರ ದಂತಹ) ಒಂದು ಆಭರಣ : ಮುತ್ತಿನ ದಂಡೆ . . . ಮುತ್ತಿನುಂಗುರಂ ಮುತ್ತಿನ ಪಿಲ್ಲಿಯೆಂಬ ಸದಲಂಕರಣಂಗಳನೆಯ್ದೆ ತೊಟ್ಟು ತಾಂ ಮುತ್ತಿನ ಬೊಂಬೆಯೆಂಬ ಬಗೆಯಂ ನೆಱೆ ಪುಟ್ಟಿಸುತಿರ್ದಳಾಕ್ಷಣಂ (ಚಾರಿತ್ರ. ೬-೦೦೪); ವರ ಹಸ್ತಕಡಗ ಮಂಟಿಗೆ ಪಿಲ್ಲಿ ಕಾಲುಂಗುರಗಳಿಂ ಕುವರಿಯೊಪ್ಪಿದಳು (ಶಂಕ್ರಶಾಂ. ೯-೦೨); ಪಿಲ್ಲಿ ಕಾಲಿನೋಳೆ ಚೆಲ್ಲಿದ ನೆರಿಗ್ಯೋಳೆ ಕಲ್ಮೇಲೆ ಕಾಲ ತೊಳೆಯೋಳೆ ಲಕ್ಕವ್ವ ಪಿಲ್ಲಿ ಹೊಳೆದವು ಬಿಸಿಲಿಗೆ (ಜಾನಪ. ೨೩). ಪಿಲ್ಲೆ : ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು . . . ಕಾಂಚಿದಾಮ ರಾಳಿಯಾಯಂದಿಗೆ ಪಿಲ್ಲೆ ಮೆಂಟಿಕೆಗಳು (ಜಮೋ. ೦೦-೨೫); ಕಾಲ ಕಡಗ ಪಿಲ್ಲೆ ಕಿವಿಯಾಗ್ಬಿತ್ತಾಳಿ ವಾಲಿ . . . ಜಾಣೆ ನೀ ಯಾ ನಾಡದ ಕೊರವೇ (ಜಲ್ಲಗ. ೦೬); "ವಜ್ಜರ ಹಚ್ಚಿದ ವಾಲೆ ಗೆಜ್ಜೆ ಹಚ್ಚಿದ ಪಿಲ್ಲೆ ಹೆಜ್ಜೆ ಹೆಜ್ಜೆಗೆ ನಗಿಸುವ ರಾಯರೊಡನೆ ಮಾಡಿದ ಬಾಳು" ನಿತ್ಯನಿತ್ಯ ಜ್ಞಾಪಕ ಬಂದು ವಿಧವೆಗೆ ಜೀವನದಲ್ಲಿ ಬೇಸರಿಕೆಯನ್ನು ಹುಟ್ಟಿಸುವುದು (ಜಕ್ಕಾ. ೬೪).: 'ಕಿಬುಪಿಲ್ಲಿ' ಪರಾ.
[ದೇ. ‖ ತಮಿ. ಪಿಲ್ಲಾಣಿ ಬೀಲ; ಮಲ. ಪೀಲಿ; ತುಳು. ಪಿಲ್ಲಿ, ಪಿಲ್ಲೆ ತೆಲು. ಪಿಲ್ಲಾಡಿ, ಪಿಲ್ಲಾಣಿ]

**ಪಿಲ್ಲಿ₂** (ನಾ). ಬೆಕ್ಕು : ಮಾನವ ಮುಱಿದು ರಣದಲ್ಲಿ ಪಿಲ್ಲಿಸನ್ನಿಭನಿವನ ಮಾಳ್ಪನು (ಕಜಿನ. ೪-೩೫). [ದೇ. ‖. ತಮಿ. ತೆಲು. ಕೋಲಾ. ನಾಯ್ಕಿ. ಪಿಲ್ಲಿ; ಪರ್ಜಿ. ಬಿಲೆಯ್./ಹಿಂ. ಬಿಲ್ಲಾ, ಬಿಲ್ಲೀ./ಸಂ. ಬಿಡಾಲ]

**ಪಿಲ್ಲಿಪೆಸರ**, ಪಿಲ್ಲಿಹೆಸರಂ (ನಾ). ಒಂದು ಬಗೆಯ ಸಸ್ಯ ; ಕಾಡುಹೆಸರು ; ಮುಂದ್ಗಪರ್ಣಿ : ನರಿಹೆಸರು, ಪಿಲ್ಲಿಪೆಸರ (ಪ್ರಶಾಂ ೬೦-೦೨೩೬). ಪಿಲ್ಲಿಹೆಸರು: "ನರಿಹೆಸರು, ಪಿಲ್ಲಿಹೆಸರು, ವನಮುದ್ಗ" (ಪತ್ರಿ. ೦೦೪).
[ ←ತೆಲು. ಪಿಲ್ಲಿಪೆಸರ ]

**ಪಿಲ್ಲಿಯುಂಗುರ** (ನಾ). = ಪಿಲ್ಲಿ₁ : ಪಿಲ್ಲಿಯುಂಗುರವು ಜಕ್ಕಸೆಯ ಸಲ್ಲಲಿ ತಾಂಗಿಯ ಕೆಂಬಚ್ಚೆ ಮೆಱೆದುವು ಚೆಲ್ಲುವಂತನುರಾಗರಸವ (ಕಜಿನ. ೪೦-೬೨).
[ ಪಿಲ್ಲಿ₁ + ಉಂಗುರ ]

**ಪಿಲ್ಲಿಹೆಸರು** 'ಪಿಲ್ಲಿಪೆಸರ' ನೋ.

**ಪಿಲ್ಲೆ** 'ಪಿಲ್ಲಿ₁' ನೋ.

**ಪಿಶಂಗ** (ಗು). ೧. ಕೆಂಪು ಮಿಶ್ರಿತವಾದ ಕಂದುಬಣ್ಣದ : ಭಾಸ್ಕರ ತನೂಜೆಯನುಭಯತಟನಿಕಟ ಕುಸುಮನಿವಹ ತತ್ಪರಾಗಪಟಳಪಿಶಂಗತರತ್ತ ರಂಗಸರೋಜೆಯಂ ಮೆಚ್ಚಿ (ಶಂಕಭಾ. ೫-೫೯ ಪ). ೨. ನಸುಕೆಂಪಾದ : ಹರಿನೀಲಾಚಲದಿಂ . . . ಪಿಶಂಗಕಮಳಶ್ರೀಲೀಲೆಯಿಂ ಪಂಚರತ್ನರುಚಿ ವ್ಯಾಪ್ತಿ ನಿರಂತರಂ ನೆಗಟ್ಟನು (ಕಜಿತ. ೦೦-೨೨). 'ಪಿಶಂಗತಲ' ಪರಾ. (ನಾ). ೩. ಕಂದುಬಣ್ಣ ; ಕಪಿಲವರ್ಣ : "ಪಿಂಗಃ, ಪಿಶಂಗಃ—ಈ ೨ ಕಪಿಲವರ್ಣಂ" (ಹಲಾಯು. ೦೨೦-೫೦); "ಪಿಂಗಳಂ ಕದ್ರು ಕಡಾರ ಚಂಡುಮಂ ನಸುಗೆಂಪು ಪಿಂಗಂ ಪಿಶಂಗಂ ಕಪಿಲು ಶ್ಯಾಮವೆನೆ ಹಸುರುಗೆಂಪದು" (ಶುಂಗರಾ. ೦೩೦-೨೦). ೪. ಕೆಂಪು ಬೆರೆತ ಹಳದಿಯ ಬಣ್ಣ ; ಹೊಂಬಣ್ಣ : ನೀರಾಜನದೀಪಕಳಿಕಾಶ್ರೇಣೀಶೋಣಾಂಶುಬಾಲಾತಪ ಪ್ರಸರಪಿಶಂಗಮುಂ . . . ಎನಿಸಿ ಗೋವರ್ಧನನಗಂ ಸೊಗಯಿಸೆ (ಜಗಂ. ೪-೬೨ ವ) ; ಒಂದೆಡೆಯಲ್ಲಿ ಮಜ್ಜದಿಛದಾಸದ ಕೊಟ್ರದಿನೆಯ್ದೆ ಕೃಷ್ಣಮಾಯ್ತೊಂದೆಡೆಯಲ್ಲಿ ವಾರಿಜರಜೋವ್ರಜದಿಂದ ಪಿಶಂಗಮಾಯ್ತು . . . ಖಾತಿಕಾವಳಯಮೊಪ್ಪಿ ಮನೋಹರಮಾದುದೆತ್ತಲುಂ (ಚಾರಿತ್ರ. ೦-೦೦೬) ; ಇಂದುಬಿಂಬಂ ಸಾಲಾಗಿಯರುಣಂ ಪಿಶಂಗಮಾಸಿತರುಚಿಗಳೋ ಲೈಸಿ ಪೂರ್ವಾದ್ರಿಯೆಂಬ ದೇವಗೃಹದ ಮೇಲಿಟ್ಟ ಮಣಿಗಳಸ ಪೊಂಗಳಸ ರಜತಕಳಶಂಗಳೆನೆ ಚೆಲ್ವಾದುದು (ಕಜಿತ. ೯-೦೬). [ಸಂ.]

**ಪಿಶಂಗತಲ** (ನಾ). ನಸುಕೆಂಪುಬಣ್ಣದ ಅಂಗಾಲು : ಬಾಲಕನ ಪಿಶಂಗತಲಂ ಬಾಲಕನ ಸ್ಖಲಿತಚಲನವಿನ್ಯಾಸದ ಲೀಲಾಲಸಮುಂ ಕಾಣದ ದುರ್ಲೀಲಮೆನಿಪ್ಪೊಂದು ಜೀವನಂ ಜೀವನಮೇ (ಜಜ್ಜಿತ. ೬-೦೦೬). [ಸಂ.]

**ಪಿಶಂಗತೆ** (ನಾ). = ಪಿಶಂಗ ೪ : ತುಂಗತೆಯಿಂ ಕನಕಾಂಶು ಪಿಶಂಗತೆ ಯಿಂದಱಿಯಲಾದುದಿಲ್ಲಖಿಳ ಮರುತ್ತುಂಗವನ ನೆಗೆದ ಭುಜಶಿಖರಂ ಗಳುಮಂ ಮೇರುಶಿಖರಿಶಿಖರಂಗಳುಮಂ (ಆದಿಪು. ೪-೪೯). [ಸಂ. ಪಿಶಂಗತಾ]

**ಪಿಶಂಗಾಶ್ಮ** (ನಾ). ಒಂದು ಬಗೆಯ ರತ್ನ ; ಗೋಮೇದಕ : "ಬಂಧುರ ಪಿಶಂಗಾಶ್ಮವೆನೆ ಗೋಮೇಧಿಕಂ" (ಶಬ್ದಮ. ೩೦-೬). [ಸಂ. ಪಿಶಂಗಾಶ್ಮನ್]

**ಪಿಶಂಗಿತ** (ಗು). ಹೊಂಬಣ್ಣದಿಂದ ಕೂಡಿದ : ಕುಸುಮಕಿಸಲಯಪರಾಗ ಪಿಶಂಗಿತರಂಗತ್ತರಂಗವಾದಂತೆ (ಆದಿಪು. ೬-೦೦೦ ವ); ಸ್ವಸ್ತಿ ಸಮಸ್ತಮಂಡಳಿಕ ಮಸ್ತಕಪುಷ್ಪರಜಃಪಿಶಂಗಿತಾಂಘ್ರಿಸ್ತಬಕದ್ವಯಂ (ಶಾಂತಿಪು. ೦೦-೬೪) ; ದಳಿತಾಂಭೋಜರಜಃಪಿಶಂಗಿತಲಸದ್ಗಂಧಾದಿ ತೀರ್ಥೋದಕಂ (ಚಂದ್ರಪ್ರ. ೦೨-೦೦೬). [ಸಂ.]

**ಪಿಶನಾರಿ** 'ಪಿಸನಾರಿ' ನೋ.

**ಪಿಶವಿ** 'ಪಿಸಿವಿ' ನೋ.

**ಪಿಶಾಚ** (ನಾ). ೧. (ಸ್ವಂತವಾದ ಭೌತಿಕಶರೀರವಿಲ್ಲದೆ, ಇತರ ಭೌತಿಕ ಶರೀರಗಳ ಮೂಲಕ ತನ್ನ ಪ್ರಭಾವವನ್ನು ವ್ಯಕ್ತಪಡಿಸುವುದೆಂದು ನಂಬಲಾದ) ಒಂದು ಬಗೆಯ ಅಮಾನುಷಶಕ್ತಿ ; ದೆವ್ವ ; ಭೂತ : ಪಿಶಾಚವೇಷಮಂ ಕೈಕೊಂಡರಮನೆಯಂಗಣದೊಳಿರ್ದು (ವಡ್ಡಾರಾ. ೪೯-೨೩); ನಿಜಜೀವಂ ಪರಲೋಕದೊಳ್ ನಿಜಮಹಾಮಾಂಸಂ ಪಿಶಾಚಾಸ್ಯದೊಳ್ . . . ನಿಜಕಾಯಂ ಕುರುಭೂಮಿಯೊಳ್ ನೆಲಸೆ (ಗದಾಯು. ೫-೫); ಆರ್ವ ಪಿಶಾಚರಬ್ಬರಿಪ ಜಟ್ಟಿಗರುಬ್ಬುವ ಚಂಡಿ ರಕ್ತಮಂ ಪೀರ್ವ ಕರಾಳಿ (ತ್ರಿಪುರ. ೨೪-೩೬೬) ; ಪಿಶಾಚ ಬಿಟ್ಟರೂ ನಿಶಾಚರ ಬಿಡ (ಗಾದೆ). ೨. (ಶ್ಮಶಾನವಾಸಿಗಳಾದ) ಈಶ್ವರನ ಭೂತಗಣ : ಮಿಯನ್ನದಿಯೊಳ್ ಮುಟುಂಗೆ ಮುಂದಲೆ ಜಡೆಗಟ್ಟಿ . . . ವಾಮತನು ಪೆಣ್ಗಡೆಯಾಗಿ ಪಿಶಾಚಸಂಗಮುಗ್ಗಳಿಸಿರೆ ಪುಟ್ಟುಪೊಂದಿಗೆಡೆಯಲ್ಲದೆ ತೋರ್ಪರಿದಲ್ತೆ ವಿಸ್ಮಯಂ (ರಕಳು. ೯-೬). ೩. ದೇವಯೋನಿಗಳಲ್ಲಿ ಒಂದು ವರ್ಗ : "ಕಿನ್ನರರು ಗಂಧರ್ವರಪ್ಸರರು . . . ಪಿಶಾಚರು . . . ಭೂತನಾಮಿಗಳು ದೇವ ಯೋನಿಗಳೆನಿಕ್ಕುಂ" (ಶಬ್ದಮ. ೦೬-೦೬); ಹರಿ ನುಡಿದನಂದು ಪಿಶಾಚ ಗುತ್ತರವ (ಐಭಾಗ. ೦೦-೬೦-೨೬); ತಮೋಯೋಗ್ಯರಲ್ಲಿ ದೈತ್ಯ, ರಾಕ್ಷಸ, ಪಿಶಾಚ, ಮನುಷ್ಯಾಧಮ ಎಂದು ನಾಲ್ಕು ಪ್ರಕಾರಗಳು (ಹಂದಸಾ. ೨೬೬). ೪. ಒಂದು ಜನಾಂಗದ ಹೆಸರು : ಆರ್ಯರು ವಾಯುವ್ಯಪ್ರಾಂತದಲ್ಲಿ ಪಿಶಾಚರೆಂಬ ಜನರೊಡನೆ ಕಾದಾಡಬೇಕಾಯಿತು (ಭಾಇತ್ರ. ೩೩). [ಸಂ.]

**ಪಿಶಾಚಕೋಶಾತಕಿ** (ನಾ). ಒಂದು ಬಗೆಯ ಸಸ್ಯ ; ಕಹಿಹೀರೆ : "ಪಿಶಾಚಕೋಶಾತಕೀ-ಕಹಿಹೀರೆ" (ಓಷಂ. ೯೯). [ಸಂ. ಪಿಶಾಚಕೋಶಾತಕೀ]

**ಪಿಶಾಚಗ್ರಹ** (ನಾ). ದೆವ್ವದ ತೊಂದರೆ ; ಭೂತದ ಕಾಟ : ಪ್ರಲಾಪ ಉಂಟಾಗಿಹಣ, ನಿಷ್ಠುರಭಾಷೆಯನಾಡುವಣ, ಭಯಂಕರವಾಗಿಹಣ . . . ಮಲಿನವಾಗಿಹಣ, ಜಿತೇಂದ್ರಿಯನಾಗಿಹಣ, ಹೀಗಿದ್ದರೆ ಪಿಶಾಚಗ್ರಹ ವೆಂದಱಿವುದು (ವೈದ್ಯಸಾ. II. ೬೬). 'ದೇವಗ್ರಹ' ಪರಾ.
[ಸಂ.]

**ಪಿಶಾಚಪ್ರಾಪ್ತ** (ನಾ). ಪಿಶಾಚಿ ಹಿಡಿದವನು ; ದೆವ್ವ ಮೆಟ್ಟಿಕೊಂಡ ವನು : ಗುರು ಲಗ್ನಸ್ಥಿತನಾಗೆ . . . ಮೇಣ್ ತ್ರಿಕೋಣಾಗೃಹದೊಳ್ ಪಾಪಗ್ರಹಂಗಳ್ ಸುಧಾಕಿರಣಂ ಕರ್ಕಿ ವಿಲಗ್ನದೊಳ್ ನಿಲೆ ಪಿಶಾಚಪ್ರಾಪ್ತ ನಕ್ಕುಂ ನರಂ (ಜಾತಕ. ೨೦-೦೩). [ಸಂ.]

**ಪಿಶಾಚಬಾಧೆ** (ನಾ). = ಪಿಶಾಚಗ್ರಹ : ಜನನಕಾಲದಲ್ಲಿ ಗುರು ಲಗ್ನದಲ್ಲೂ ಏಳನೆಯ ಸ್ಥಾನದಲ್ಲಿ ಅಂಗಾರಕನೂ ಇದ್ದರೆ . . . ಜಾತಕನಿಗೆ ಪಿಶಾಚಬಾಧೆ ಇರುತ್ತದೆ (ಜಾತಕ. ೨೦-೦೩ ಟೀಕು). [ಸಂ. ಪಿಶಾಚಬಾಧ]

**ಪಿಶಾಚಲಿಪಿ** (ನಾ). ಒಂದು ಬಗೆಯ ಲಿಪಿ : ಜಲಲಿಪಿ ಪಿಶಾಚಲಿಪಿ . . . ಈ ಅಗಣಿತಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳ ಗೊಳುತಿದ್ದರು ವಿದ್ವಾಂಸರುಗಳೆಲ್ಲ (ಬಸವಪು. ೬೬-೪). [ಸಂ.]

**ಪಿಶಾಚಶೈಲ** (ನಾ). ಶೈಲೇಂದ್ರ, ದ್ವಿಶಿಖರ, ಮಹಾಶೈಲ, ಗಜಶೈಲ, ಪಿನಾಕಶೈಲ, ಪಿಶಾಚಶೈಲ, ಪಂಚಶೈಲ, ಕೈಲಾಸ, ವಾಸೋತ್ತರ ಮತ್ತು ಹಿಮಾದ್ರಿ ಎಂಬ ಹತ್ತು ಕುಲಪರ್ವತಗಳಲ್ಲಿ ಒಂದು ; ೞ ಕುಲಪರ್ವತಗಳ ಸಂಖ್ಯೆ ಮತ್ತು ಹೆಸರುಗಳ ಬಗ್ಗೆ ಪ್ರಾಚೀನಕವಿ ಗಳಲ್ಲಿ ಭಿನ್ನಾಭಿಪ್ರಾಯಗಳಿವೆ : ಶೈಲೇಂದ್ರ . . . ಪಿಶಾಚಶೈಲ . . . ಹಿಮಾದ್ರಿಗಳೆಂಬ ದಶಕುಲಪರ್ವತಂಗಳೇ ಪೂರ್ವೋಕ್ತ ಗಂಧಮಾದನ ವೆಂಬ ಕೀಲಕಪರ್ವತಕ್ಕೆ ತೆಂಕಣದಿಕ್ಕಿನಲ್ಲಿಹವು (ಪಶೀಳ. ೨೦೩).
[ಸಂ.]

**ಪಿಶಾಚಸತ್ವ** (ನಾ). [ಕಾಮಶಾ] (ಸ್ತ್ರೀಯರ) ಹನ್ನೆರಡು ಬಗೆಯ ಸ್ವಭಾವಗಳಲ್ಲಿ ಒಂದು ; ತಮೋಗುಣಪ್ರಧಾನವಾದ ಸ್ವಭಾವ : ಅಸಿಯ ನಡುವಿನ ಮಿಸುಗುವೆಸಳ್ಗಣ್ಣ ಪಿರಿದುಂಬ ಬಿಸುಮೆಯ್ಯ ಮದ ಮಾಂಸ ಪ್ರೀತಿಯ ಪುಸಿಗೇಳ್ಬರುಳ್ ತೊಳಲ್ವ ಸುನಿರದೆ ಲಜ್ಜೆಯುಳಿದೆಸೆವಳೆ ಪಿಶಾಚಸತ್ವದವಳ್ (ಐಪಟ. ೫-೩೪); ದೇವಸತ್ವ ಯಕ್ಷಸತ್ವ . . . ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖಚರಸತ್ವವೆಂಬ ದ್ವಾದಶಸತ್ವಸತಿಯರಿಂ (ಪಶೀಳ. ೦೪೩). 'ದ್ವಾದಶಸತ್ವ' ಪರಾ. [ಸಂ.]

**ಪಿಶಾಚಸ್ತ್ರೀ** (ನಾ). ೧. ಹೆಣ್ಣು ಪಿಶಾಚಿ. ೨. [ಕಾಮಶಾ] ಸ್ತ್ರೀಯರಲ್ಲಿ ಒಂದು ಬಗೆ ; ತಮೋಗುಣಪ್ರಧಾನವಾದ ಸ್ವಭಾವವುಳ್ಳವಳು : ಲಜ್ಜೆಗೆಟ್ಟವಳು ಹಿರಿದನುಂಬುವಳು ದೇಹವುಂ ಬಿಸುಪಾದವಳು ಮದ್ಯ ಮಾಂಸವನುಂಬಳು ಇವಳು ಪಿಶಾಚಸ್ತ್ರೀ (ಕಾಮಶಾ. ೨೦೬). [ಸಂ.]

**ಪಿಶಾಚಿ**$_1$ (ನಾ). ಹೆಣ್ಣು ದೆವ್ವ : "ಪಿಶಾಚೀ, ಪಿಶಾಚಿಕಾ, ಈ ೨ ಹೆಣ್ದೆವ್ವ" (ಕಾಶಕ್ಕ. ೨೦೪); ರಕ್ಕಸಿಯರಾಶಾಪಿಶಾಚಿಯರಿಂಚ್ಚಿಗಾತಿಯರು (ಐಶಪು. ೪೦-೫೨).
[ಸಂ. ಪಿಶಾಚೀ]

**ಪಿಶಾಚಿ**$_2$ (ನಾ). = ಪಿಶಾಚ ೧ : ಆರ್ವ ಪಿಶಾಚಿಯರ್ಕಳನಸುಂಗೊಳೆ ಬೇವ ಪೆಣಕ್ಕೆ ಕೋಪದಿಂ ಪೋರ್ವ ಮರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೫೩೪); ಬೆನ್ನು ಬಿಡದ ಪಿಶಾಚಿ ಹೊನ್ನು ಕೊಟ್ಟರೆ ನಿಂತೀತೇ? (ಗಾದೆ). [ಸಂ.]

**ಪಿಶಾಚಿಕೆ**$_1$ (ನಾ). (ಅಲಂ) ದುಷ್ಟತನ ; ಕ್ರೌರ್ಯ : ನಾವನಾರ್ಯರು ಮಸಗದೀ ಪಿಶಾಚಿಕೆಯನಕಟೆಸಗಿದಿರೆ? (ಹಮ್ಮಿರ. ೩೩-೦೪).
[ಪಿಶಾಚ + -ಇಕೆ]

**ಪಿಶಾಚಿಕೆ**$_2$ (ನಾ). ೧. ಹೆಣ್ಣುದೆವ್ವ : "ಪಿಶಾಚೀ, ಪಿಶಾಚಿಕಾ, ಈ ೨ ಹೆಣ್ದೆವ್ವ" (ಕಾಶಕ್ಕ. ೨೦೪). ೨. ಒಂದು ಬಗೆಯ ಸಸ್ಯ ; ಕಾಸರಿಕೆ : "ಪಿಶಾಚಿಕಾ-ಕಾಸರಿಕೆ, ನಸುಗುನ್ನಿ, ಮರುಳ್" (ಓಷಂ. ೯೯).
[ಸಂ. ಪಿಶಾಚಿಕಾ]

**ಪಿಶಿತ** (ನಾ). ೧. ಮಾಂಸ ; ಬಾಡು ; ಅಡಗು : "ಪಲಲಂ, ಜಾಂಗಲಂ . . . ಪಿಶಿತಂ, ಆಮಿಷಂ, ಕ್ರವ್ಯಂ, ತರಸಂ, ಈ ೮ ಮಾಂಸಂ" (ಹಲಾಯು. ೦೦೪-೯) ; ಆತನುಂ ನಾಲಗೆಯಿಂದಂ ಪಿಶಿತದ ಖಂಡಮಂ ಬಾಯೊಳಿಡೆ (ವಡ್ಡಾರಾ. ೨೦-೦) ; ಸೀಳ್ದೊಟ್ಟಿಂ ವೈರಿಯನೊಡ್ಡಿ ತತ್ಪಿಶಿತದಿಂದಾತಂಗೆ ನೀಂ ಕೂರ್ಪುಡೇಗೆಟ್ಟಿತ್ತಿನ್ನಡೆ ಮಾಡು ತದ್ದ್ವಿಜಗಣಕ್ಕಾಹಾರಮಂ ಭೂಪತೀ (ಶಂಕಠಾ. ೦೩-೬೦) ; ಧುರದೆಡೆ . . . ಕರುಳ್ಗಳೆ ತೋರಣಂ ಪಿಶಿತದೊಬ್ಬುಳಿಗಳ್ ನೆರಪಿರ್ದ ಬುತ್ತಿ ನೆತ್ತರೆ ಜಳಮಾಗಲಿಂತು . . . ಉಣುತಿರ್ದುವು ಭೂತಸಂಕುಳಂ (ತ್ರಿಪುರ. ೨೪-೩೬೪). ೨. ಮಾಂಸದ ಅಡುಗೆ ; ಪಾಕ : ನಡುವಿರುಳ್ಪೋಗಿ ವಣಿಜರನೊಟ್ಟಯಿಸ್ಸಿ ವಂಚಿಸಿ ಕುಱಿದಂದೆನೆಂದನೊರ್ವಂ ಪಿಡಿದು ತಂದಿತ್ತ ಕುಱಿಯನಾನುಱಿ ಕೊಂದು ಪಿಶಿತಮಂ ಮಾಡಿದೆನೆಂದ ನೊರ್ವಂ (ಸುಕುಮಾ. ೬-೦೩).
[ಸಂ.]

**ಪಿಶಿತಖಂಡ** (ನಾ). ಮಾಂಸದ ಚೂರು : ಬಸುನೆತ್ತರುಮಂ ಕಂಡ ದಿಂಡೆಯುಮಂ ಕಂಡು ಕ್ಷುಧಾರ್ತನಪ್ಪದೊಂದು ಮೃಗಧೂರ್ತಂ ಪಿಶಿತ ಖಂಡಕ್ಕೆ ಸಾರ್ದು (ಶಂಕಕಂ. ೬೨-೦೬). [ಸಂ.]

**ಪಿಶಿತಭೋಜನ** (ನಾ). ಮಾಂಸದ ಊಟ : ಪಿಶಿತಭೋಜನದಲ್ಲಿಗೆ ನಿಲ್ಲದೆಕ್ಕೆಯಿಂ ಸಾರ್ವ ನಿಶಾಚರೀಜನಮಂ . . . ಈಕ್ಷಿಸಿದಂ ಪ್ರತಿರೂಪ ಶೂದ್ರಕಂ (ಕಾವ್ಯಸಾ. ೩೪೪). [ಸಂ.]

**ಪಿಶಿತಾಶ** (ನಾ). ೧. ಮಾಂಸವನ್ನು ಭಕ್ಷಿಸುವವನು ; ಮಾಂಸಭಕ್ಷಕ : ಕಡುಭಕ್ತರ್ಪಿಶಿತಾಶರಪ್ಪರಸುಗಳ್ ಮರ್ತ್ಯರ್ಕಲಮಾಂಸದಿಂದೊಡಗೂಡಿರ್ದ ನಿವೇದ್ಯಮಂ . . . ಕುಡರೇ (ಕಸಾರ. ೨೯೩). ೨. ರಾಕ್ಷಸ ; ನಿಶಾಚರ : ಯಮಪಾಶದಿಂ ಪಾಪಕರ್ಮಂ ಮೊದಲೆ ಬಿಗಿದ ಪಿಶಿತಾಶರಂ ತೇಜಪ್ಪ ರಾವಣನ್ . . . ಸಂಹರಿಸಿ ಧರ್ಮಲಾಭಕೆ ಯಶೋದೀಪ್ತಿಯಂ ಮೆರೆವನಯ್ (ಶ್ರೀರಾಪಟ್ಟಾ. ೨೮-೨೦): ಕೇಸಿದಾ ಕೂರಂಬುಗಳಿಗೊಂದಿನಿತ ಘಾಸಿಯಾಗುತ್ತೆ ಪಿಶಿತಾಶನುರಿದೆದ್ದನ್ (ಶ್ರೀರಾಪಟ್ಟಾ. ೦೯೧-೦೩೦). [ಸಂ.]

**ಪಿಶಿತಾಶನ** (ನಾ). ೧. ಮಾಂಸವನ್ನು ತಿನ್ನುವುದು. ೨. ಪಿಶಾಚಿ. ೩. ರಾಕ್ಷಸ : ಪಿಶಿತಾಶನನು ಕಂಗಳ ಮುಚ್ಚಿ . . . ವಿವರಿಸಿದ (ಪಿಭಾಗ. ೧೧-೬೧-೨೯). [ಸಂ.]

**ಪಿಶಿತಾಶಿ** (ನಾ). ೧. = ಪಿಶಿತಾಶ ೧ : ವಸುಧಾಜನಂಗಳೆಲ್ಲಂ ಮಸಣಮದೆಂದೊಡೆ ಭಯಸ್ಥರಪ್ಪರದೇಂ ಪೇಟ್ ಪಿಶಿತಾಶಿಯು ತನುಮಂತ್ರದ ಮಸಣಂ ಮಸಣಕ್ಕೆ ಬೇಱ್ ಕೋಡೆರಡೊಳವೇ (ಕಸಾರ. ೨೯೬). ೨. ರಾಕ್ಷಸ. ೩. ನೈಋತ್ಯದಿಕ್ಕಿನ ಅಧಿಪತಿ ; ನಿರುತಿ : ಇಂದ್ರನ ಮುಂದುಗೆಡಿಸಿ . . . ಪಂದೆಯೆನಿಸಿ ಯಮನನು ಪಿಶಿತಾಶಿಯು ತಂದನು ಪಿಡಿಯಾಳಾಗಿ (ಶ್ರೀಕೃಸಾಂ. ೬೬೩). ೨, ೩ : ಎನಗೆ ವಿಜಾತಿ ಕೌಶಿಕನುಮಾತೃಣಕಾಷ್ಠಸಮೂಹಭೋಜಿಯಾಯನಲನನಾರತಂ ಕೊಲುವ ನಿರ್ಘೃಣ (ನ:) ಪಿಶಿತಾಶಿ ದೈತ್ಯನೀ ವನಧಿಯೊಳಿರ್ಪ ಜಂಬುಕನುಮಾ ಸಲೆ ಚಂಚಳನಪ್ಪ ವಾಯುವೀ ಧನಪತಿಯಪ್ಪ ತದ್ಧನದನೀ ಬಡಭೌತಿಕನುಂ ಸಮಾನರೇ (ಕೇಟಿಪು. ೨-೧೧೪). [ಸಂ. ಪಿಶಿತಾಶಿನ್]

**ಪಿಶಿತಾಹಾರ** (ನಾ). = ಪಿಶಿತಭೋಜನ: ಮೃದುಪಿಶಿತಾಹಾರಮಂ ಪಡೆದುಂ ಮೆಚ್ಚಿ ಕರುಣಿಸಿ ತಿನಲೊಲ್ಲದೆ ಕಾದು ಕಟ್ಟಿಪಿದ ರಕ್ಕಸಂಗೆ ಮಿಕ್ಕವರುಳ್ಳೊಡೆ ಪೇಟ್ವೆಂದಂ (ಸುಕುಮಾ. ೬-೨೬ ವ). [ಸಂ.]

**ಪಿಶಿತೆ** (ನಾ). ಒಂದು ಬಗೆಯ ಔಷಧೀದ್ರವ್ಯ ; ಜಟಾಮಾಂಸಿ : "ಜಟಾಮಾಂಸಿ ಪಿಶಿತೆಯೆನಿಕ್ಕು" (ಮಂಗರಾ. ೪೩-೪೦). [ಸಂ. ಪಿಶಿತಾ]

**ಪಿಶುನ** (ನಾ). ೧. ತಿಳಿಯುವಂತೆ ಮಾಡುವುದು ; ಸೂಚಿಸುವಿಕೆ ; ಸ್ಪಷ್ಟಗೊಳಿಸುವುದು. ೨. ಸೂಚನೆ ; ಚಿಹ್ನೆ : 'ಸಂಗರಪಿಶುನ' ಪರಾ. ೩. ಚಾಡಿ ಹೇಳುವಿಕೆ ; ದೂರುವಿಕೆ : ಇದು ಅತಿಶಯೋಕ್ತಿ ಎಂದು ಕೆಲವು ಪಿಶುನಪ್ರವೀಣರು ಹೇಳಿ ಹಾಸ್ಯ ಮಾಡಿದಾಗ್ಯೂ . . . ಚಿಂತೆ ಇಲ್ಲ (ಮುಸುಗ. ೩೬). ೪. ಚಾಡಿ ಹೇಳುವವನು; ಚಾಡಿಕೋರ : "ಕರ್ಣೇಜಪಃ, ಸೂಚಕಃ, ಪಿಶುನಃ – ೩ ಚಾಡೀ ಹೇಳುವವನು, ಕ್ಷುದ್ರಗಾರ" (ಸಿದ್ಧಾಂತಿ. ೩೯೬) : ನಿಶ್ಚಿತವಿದೆನಗೆ ಸಕಲವಚಶ್ಚತುರ ಜನೋಪದೇಶದಿಂ ಪಿಶುನವಚೋವೃಶ್ಚಿಕವಿಷಹರಮುಖಿಳವಿಪಶ್ಚಿನ್ನುತಿಮಂತ್ರಮೆಂಬುದಿನ್ನುಂ ಮುನ್ನುಂ (ರೇರಾವ.೧-೧೪); ಕೊಂಡೆಯಮಂ ಕೇಳಲ್ ಮನಂದರಲ್ ಪಿಶುನರ್ ಪೊರ್ದಿಯುಂತೆಂದರ್ (ದಕಕು. ೪-೬೩ ವ). ೫. ನೀಚ ; ದುಷ್ಟ ; ಕ್ರೂರಿ : "ಪಿಶುನಃ—೧ ದುರ್ಜನ, ಚಾಡೀಕೋರ" (ಸಿದ್ಧಾಂತಿ. ೪೧೪); ಸತ್ತುಂ ಪಿಶುನಂ ಪೆಜಿಗರ್ಪತ್ತುಂ ಮಾಡದಿರನೆಂದು ಮಱಗಿದವುದು ಮಚ್ಚಿತ್ತಂ (ರೇರಾವ. ೧-೩೬); ನಿಷ್ಠುರಿಗಳಿಗೆ ಪಿಶುನ[ಶಾಕಂ.ಣ]ರಿಗಯೋಗ್ಯರಿಗಿದನು ಪೇಳದಲೆ . . . ಪರಮ ಭಗವದ್ದಾಸರಿಗೆ ತಿಳಿಸುವುದು ಈ ರಹಸ್ಯ (ಹಸಾರ. ೧೩-೩೨) ; ತಂದೆ-ತಾಯಿ, ಬಂಧು, ಗುರು ಇವರನ್ನು ದ್ವೇಷಿಸುವವರೂ ಆದ ಪಿಶುನರು ಶೋಚನೀಯರಾಗಿರುವರು (ಕುಳಸಿ. ೧೬೨). ೬. ಕುಂಕುಮಕೇಸರಿ ; ಕೇಶರ : "ಪಿಶುನ–ಕುಂಕುಮ, ಕೊಂಡೆಯನು" (ಪಿಸಂ. ೪೬). [ಸಂ.]

**ಪಿಶುನತ್ವ** (ನಾ). ಚಾಡಿ ಹೇಳುವುದು; ದೂರು ಹೇಳುವಿಕೆ. [ಸಂ.]

**ಪಿಶುನೆ** (ನಾ). ಒಂದು ಬಗೆಯ ಸಸ್ಯ; ಸಂಕೇಬೇರು : "ಮರುನ್ಮಾಲಾ . . . ಪಿಶುನಾ, ಸ್ಪೃಕ್ಕಾ . . . ಕೋಟಿವರ್ಷಾ, ಲಂಕೋಯಿಕಾ . . . ೧೦ ಸ್ಪೃಕ್ಕೆಯೆಂಬ ಗ್ರಂಥದ್ರವ್ಯ, ಸಂಕೇಬೇರು" (ಸಿದ್ಧಾಂತಿ. ೦೪೩). [ಸಂ. ಪಿಶುನಾ]

**ಪಿಷ್ಟ** (ನಾ). ೧. (ಧಾನ್ಯ ಮೊದಲಾದುವುಗಳ) ಹಿಟ್ಟು ; ಪುಡಿ : "ಪಿಟ್ಟದು ಪಿಷ್ಟಂ ಚೂರ್ಣತು" (ವಸ್ತುಕೋ. ೯೩-೨೦) ; ಅಂತು ಧರ್ಮತೀರ್ಥಪ್ರವರ್ಧನಂಗೆ ಸುಗಂಧಶುಷ್ಕಚೂರ್ಣ ಪಿಷ್ಟದಿನುದ್ವರ್ತನವಿಧಿಯಂ ನಿರ್ವರ್ತಿಸಿ (ಆಕಪು. ೪-೬೮ ವ) ; ಪಿಸ್ಟ – ಹಿಟ್ಟು (ಶಮದ. ೨೬೮ ಪ್ರಯೋ). ೨. ಅಕ್ಕಿ, ಗೋಧಿ, ರಾಗಿ ಮೊದಲಾದ ಧಾನ್ಯಗಳ ಹಿಟ್ಟಿನಿಂದ ತಯಾರಿಸಿದ ಆಹಾರಪದಾರ್ಥ. ೩. ಒಂದು ಬಗೆಯ ಲೋಹ ; ಸೀಸ. ೪. ರಾಸಾಯನಿಕವಾಗಿ 'ಕಾರ್ಬೋಹೈಡ್ರೇಟ್' ಎಂದು ನಿರ್ದೇಶಿಸುವ ವಸ್ತು,—ಅಂಶ: ಧಾನ್ಯಗಳು ಮತ್ತು ಆಲೂಗಡ್ಡೆ, ಮರಗೆಣಸು, ಗೆಣಸು ಮೊದಲಾದ ಗೆಡ್ಡೆಗೆಣಸುಗಳಲ್ಲಿ ಬಹಳ ಪ್ರಮಾಣದಲ್ಲಿ ಪಿಷ್ಟವಿದೆ (ಅಡುಗೆ. ೩೮). [ಸಂ.]

**ಪಿಷ್ಟಕುಟ್ಟ** (ನಾ). [ನಾಟ್ಯ] ಭ್ರಮರ, ಆಸ್ಕಂದಿತ, ಆವರ್ತ, ಶಕಟಾಸ್ಯ, ಅಡ್ಡಿತ, ಸಮೋಸರಿತ, ಅಧ್ಯರ್ಧಿಕ, ಏಲಕಾಕ್ರೀಡಿತ, ಪಿಷ್ಟಕುಟ್ಟ ಮತ್ತು ಚಾಪಗತಿ ಎಂಬ ಹತ್ತುಬಗೆಯ ಭೌಮ ಮಂಡಲಗಳಲ್ಲಿ ಒಂದು ; ಪ ಸೂಚಿ, ಅಪಕ್ರಾಂತ, ಭುಜಂಗತ್ರಾಸಿತಗಳೆಂಬ ಚಾರಿಗಳನ್ನು ಕ್ರಮವಾಗಿ ಮಾಡಿ, ಮಂಡಲಾಕಾರವಾಗಿ ಸಂತ್ತುವುದು : ಬಲ[ಪದ]ದೊಳ್ ಸೂಚಿಯುನೆಡಗಲದೊಳಪಕ್ರಾಂತಚಾರಿಯಂ ಬಲನೆಡದೊಳ್ ಸಲೆ ಭುಜಗತ್ರಾಸಿತಮಂ ವಿಲಸಿತದಿಂದೆಸೆವ ಮಂಡಲಭ್ರಾಂತಿಯುಮಂ ಕಡೆಯೊಳ್ ಸಮೆಯಲ್ ಕೇಳಿದು ಬಡದೆಸೆವೀ ಪಿಷ್ಟಕುಟ್ಟಮಂಡಲಮೆನಿಕುಂ (ಲಾಸ್ಯರಂ. ೮-೩೦). [ಸಂ.]

**ಪಿಷ್ಟಚರ್ಚೆ** (ನಾ). ಹಿಟ್ಟಿನ ರಂಗವಲ್ಲಿ,—ರಂಗೋಲೆ : ಮುನಿಕುಮಾರಿಯರಿಕ್ಕಿದ ಪಿಷ್ಟಚರ್ಚೆಯಿಂ ...ಎಸೆದು ತೋಱುದುದಾಗಳಶೋಕಭೂರುಹಂ (ಕಾದಂಪೂ. ೨೨೬). [ಸಂ. ಪಿಷ್ಟಚರ್ಚಾ]

**ಪಿಷ್ಟಪಚನ** (ನಾ). (ಧಾನ್ಯದ) ಹಿಟ್ಟನ್ನು ಬೇಯಿಸಲು ಉಪಯೋಗಿಸುವ ಪಾತ್ರೆ : "ಋಜೀಷಂ, ಪಿಷ್ಟಪಚನಂ—೨ ಬಾಣಲಿ, ಗಾದಿಗೇ ಮುಚ್ಚಳ, ಕಡುಬುಮುಚ್ಚಳ, ಹಿಟ್ಟು ತೊಳಸುವ ಬಾನ". (ಸಿದ್ಧಾಂತಿ. ೨೮೩) [ಸಂ.]

**ಪಿಷ್ಟಪದಾರ್ಥ** (ನಾ). 'ಕಾರ್ಬೋಹೈಡ್ರೇಟ್'ನ ಅಂಶವು ಹೆಚ್ಚಾಗಿರುವ ಪದಾರ್ಥ : ಜೀರ್ಣಶಕ್ತಿ ಕಡಿಮೆಯಾಗಿರುವವರಿಗೆ ಪಿಷ್ಟಪದಾರ್ಥಗಳು ಅನಾರೋಗ್ಯಕಾರಿ (ಶರಚಿ. ೬೦). [ಸಂ.]

**ಪಿಷ್ಟಪೇಷಣ** (ನಾ). ೧. ಹಿಟ್ಟನ್ನು ಪುನಃ ಪುಡಿ ಮಾಡುವುದು. ೨. (ಅಲಂ) ಮಾಡಿದುದನ್ನೇ ಮಾಡುವಿಕೆ : ಉಪಯೋಗವಿಲ್ಲದ ಕೆಲಸಮಾಡುವುದು ; ವ್ಯರ್ಥವಾದ ಪುನರಾವೃತ್ತಿ : ನಿಚ್ಚಮೀ ಪಿಷ್ಟಪೇಷಣಮೀ ಚರ್ವಿತಚರ್ವಣಂ ಸುಮಿಮಿಂದೇಂ ನಿನ್ನಂ ಮಾರುಳ್ ಮಾಡಿತೋ (ಆದಿಪು. ೩-೬೯) ; ಉಣಿಸಿಂ ತಂಬುಲದಿಂ ಭೂಷಣ ಗಣಿಕಾಗಾನ ವಸ್ತ್ರಮಾಲ್ಯಾದಿಗಳಿಂ ತಣಿಯೆನಣಂ ಚರ್ವಿತಚರ್ವಣಮಾ ಪಿಷ್ಟಪೇಷಣಕ್ಕಂ ಮಾಣ್ದಂ (ಸಮುಶ. ೬-೩೦); ಇವನ ಕವನಗಳಲ್ಲಿ ಪಿಷ್ಟಪೇಷಣವಿರಲಿಲ್ಲ (ಉರ್ದುಶಾ. ೧೧೩); ದೇವಸುತರಿಗೆ ನರರ ಬಾಂಧವ್ಯವೆಂತಹುದು ? ಪಿಷ್ಟಪೇಷಣವೇಕೆ ? (ಭಾಸನಾ. ೪೪). 'ಚರ್ವಿತ ಚರ್ವಣ' 'ತವಡುಕುಟ್ಟು' ಪರಾ. [ಸಂ.]

**ಪಿಷ್ಟಾತ** (ನಾ). (ಆಭರಣ, ವಸ್ತ್ರ ಮೊದಲಾದುವುಗಳನ್ನು ಸುವಾಸನೆಯಿಂದ ಕೂಡಿರುವಂತೆ ಮಾಡಲು ಬಳಸುವ) ಸುಗಂಧಯುಕ್ತವಾದ ಪುಡಿ; ಬುಕ್ಕಿಹಿಟ್ಟು: "ಪಿಷ್ಟಾತಃ, ಪಟವಾಸಕಃ — ೨ ಬಟ್ಟೆಗಳಿಗೆ ಹಾಕುವುದಕ್ಕೆ ಕಟ್ಟುವ ಗಂಧದ್ರವ್ಯದ ಹೆಸರು" (ನಿಘಂ. ೨೦೦). 'ಪಟವಾಸ' ಪರಾ. [ಸಂ].

**ಪಿಷ್ಟಾತಕ** (ನಾ). =ಪಿಷ್ಟಾತ: ಜಗತ್ಕುಶೇಶಯನಿವಾಸಿನೀಪ್ರಮದ ಮುಷ್ಟಿಪಿಷ್ಟಾತಕಂ ವಿಶಾಲತರತುಂಗಸೌಧತಳಸಂಗಿಪೌರಾಂಗನಾವಶೀಕರಣ ಚೂರ್ಣವಾದುದು ಬಳಾಘಧೂಳೀಚಯಂ (ಆದಿಪು. ೧೧-೦೩): ಕೆದಱಿದ ಪಿಷ್ಟಾತಕದಿಂದೊದವಿದ ಪಟವಾಸಚೂರ್ಣದಿಂ . . . ಪದೆಪಂ ಪುಟ್ಟಿಸಿದುದಿಟ್ಟಳಂ ನೃಪಸದನಂ (ಶಂಖಾಭ್ಯು. ೯-೨೬); ಪಿಂಜರಿತಪಿಷ್ಟಾತಕಂ ದೆಸೆದೆಸೆಗೆ ಪಸರಿಸೆಯುಂ (ಶಂದ್ರಪ್ರ. ೦೨-೩೩ ವ). [ಸಂ.]

**ಪಿಷ್ಟಾತಕಕೇಳಿ** (ನಾ). (ಉತ್ಸವಸಂದರ್ಭಗಳಲ್ಲಿ) ಸುವಾಸನೆಯ ಪುಡಿಯನ್ನು ಪರಸ್ಪರ ಎರಚುವಿಕೆ: ದಿವಿಜೇಂದ್ರವೃಂದಂಬೆರಸಿಂದ್ರನೊಸಗೆ ಮರುಳ್ಗೊಂಡು ಪಿಷ್ಟಾತಕಕೇಳೀವಿಧಾನಾನಂತರಂ (ಶಾಂತಿಪು. ೦೦-೬೯ ವ). [ಸಂ. ಪಿಷ್ಟಾತಕಕೇಳಿ]

**ಪಿಷ್ಟಾತಕಚೂರ್ಣ** (ನಾ). = ಪಿಷ್ಟಾತ: ದಿಕ್ಪಾಲಕರ ಕೆದಱುವ ಪಿಷ್ಟಾತಕ ಚೂರ್ಣಮೆನಿಸುವ ರಜಃಪುಂಜಮುಮಂ . . . ನೋಡುತ್ತುಂ ನಡೆಯೆ (ಆದಿಪು. ೦೩-೯೯ ವ); ಕಾಮಸಾಮ್ರಾಜ್ಯದೊಸಗೆಯೊಳ್ ಪಸರಿಸಿದ ಪಿಷ್ಟಾತಕ ಚೂರ್ಣದಂತೆ ಮಂದವಾದ ಪೊಂದಾವರೆಯ ರಜದೊಳಂ (ಮಲ್ಲಿಪು. ೨-೩೨ ವ); ಕೆದಱಿದ ಪಿಷ್ಟಾತಕಚೂರ್ಣದೊಳ ಪಟವಾಸಚೂರ್ಣದೊಳಮಪ್ಪುದಿಶಾವದನಮುಮಮಾ ನಭಮುಂ ಪಡೆದುದು ನಾನಾವರ್ಣರುಚಿರರಚನಾಟ್ಟವಿಯಂ (ಕೃಷ್ಣಪು. ೯-೩೨). [ಸಂ.]

**ಪಿಷ್ಟ** (ನಾ). ಪುಡಿ; ಹಿಂಡಿ; ಚೂರ್ಣ: ಕ್ರಿಮಿ ಮೇಣ್ ಭಸ್ಮಂ ಮೇಣ್ಪಿಷ್ಟ ಮೇಣ್ ಶರೀರಕ್ಕೆ ನಿಟ್ಟೆಯಿಾ ದೊರೆಯಿದಱೊಳ್ ಕಮನೀಯ ಮೊಂದುಮಿಲ್ಲ (ಆಪು. ೨-೩೩). [ಸಂ.]

**ಪಿಷ್ಟೋದಕ** (ನಾ). ಹಿಟ್ಟಿನೊಡನೆ ಬೆರಸಿದ ನೀರು: ಪಿಷ್ಟೋದಕ ಗುಡಧಾತಕೀಸಂಯೋಗದಿಂದಮೆಂತು ಮದವಿಕಾರಮೆಸೆದಪ್ಪುದು (ಆದಿಪು. ೨-೯ ವ); ಪಿಷ್ಟೋದಕಗುಡಧಾತಕ್ಯಾದಿಯತ್ನಣಂ ಮದಶಕ್ತಿ ಪುಟ್ಟುವಂತೆ (ಶಾಂತಿಪು. ೬-೦೨ವ). [ಸಂ.]

**ಪಿಸನಾರಿ, ಪಿಶನಾರಿ** (ನಾ). ಜಿಪುಣ; ಲೋಭಿ: ಎಂಥಾ ಪಿಸನಾರೀನಪ್ಪಾ ಇವನು ಅಂತ ಅಂದುಕೊಳ್ತಾರೆ (ಪಮ್ಮಿ. ೨೦). ಪಿಶನಾರಿ: ಜುಗ್ಗ, ಜಿಪುಣ; ಪಿಶನಾರಿ (skinflint. ಇಂಕಿಕ); ಇತರರೆಲ್ಲರೂ ಪಿಶನಾರಿಗಳೆಂದು ಹೇಳಬೇಕಾಗಿ ಬರುತ್ತದೆ (ಶಾಹಿಸು. ೬೬). 'ಪೀನಾರಿ2' ಪರಾ.
[ದೇ. ‖ ತಮಿ. ಪಿಚಿನಾಱಿ, ಪಿಚಿನೇಱಿ, ಪಿಚುನಾಱಿ; ತೆಲು. ಪಿಸಿನಾರಿ]

**ಪಿಸರು1, ಪಿಸರಂ1** (ನಾ). ೧. ದೇಹದ ಕೊಳೆ,—ಕಶ್ಮಲ; "ಶರೀರದ ಹೊಲಸು" (ಶಾಪಕೋ. ೦೬). ೨. ಕಣ್ಣು, ಮೂಗುಗಳ ಕೊಳೆ,—ಮಲ; ಗೀಜು: (ಕ). 'ಪಿಚ್ಚು1' ಪರಾ. ಪಿಸುರು1: ೧. ಹಸನವಿಲ್ಲ ಹರೆಯವು ಪಾರಿದ ಪಿಸುರು ಪಿಚ್ಚುಗಣ್ಣಿನ ಮುದುಕಿ (ಕಥೀಶ. ೩೩-೦೬). ೨. ಸಾಮಾನ್ಯಜನರು ಮಕ್ಕಳು ಹುಟ್ಟಿದ ಕೆಲವು ದಿನಗಳಲ್ಲಿ ಕಣ್ಣಿನಲ್ಲಿ ಪಿಸುರು ಮತ್ತು ಕೆಂಪು ಕಂಡರೂ ಕೂಡಾ . . . ಕಣ್ಕಪ್ಪು ನೇತ್ರಾಂಜನಗಳನ್ನು ಕಣ್ಣಿಗೆ ಹಚ್ಚಿ ಕಣ್ಣು ಪೂರ್ತಿ ಇಂಗಿ ಹೋದ ಮೇಲೆ ವೈದ್ಯರಲ್ಲಿಗೆ ಚಿಕಿತ್ಸೆಗೆ ಕರೆದುಕೊಂಡು ಬಂದಿರುವ ಪ್ರಸಂಗಗಳು ಎಷ್ಟೋ ಉಂಟು (ಪಿಪ್ಪುದ್ಯ. ೦೩). 'ಕಿಸುರ್2' ಪರಾ.
[ದೇ. ‖ ತೆಲು. ಪಿಸರು]

**ಪಿಸರು2, ಪಿಸುರು2** (ನಾ). ೧. ಆವೇಶ; ಉನ್ಮತ್ತತೆ: (ಕ). ೨. ಸೊಕ್ಕು; "ಪಿಸರು — ಪಿಶಾಚ ಸೊಕ್ಕು; ಉಪದ್ರ್ಯಾಪಿಶನ; ತುಂಟತನ" (ಶಾಪಕೋ. ೦೬). ೩. ಹಟಮಾರಿತನ; ಮೊಂಡುತನ: (ಕ). ಪಿಸುರು2: ೨. ಪಿಸುರು ಇದ್ದವರ ಹತ್ತಿರ ಉಸುರಬಾರದು (ಗಾದೆ).
**ಪಿಸರು ತೆಗೆ** = (ಅಲಂ) ನಿಂದಿಸು; ತೆಗಳು; ಬಯ್ಯು: ಪಿಸರು ತೆಗೆದರೂ ಪಿಶಾಚ ಬಿಡುವುದಿಲ್ಲ (ಗಾದೆ).
[?. / ತುಳು. ಪಿಸ್ರ್, ಪಿಸುರ್]

**ಪಿಸರುಗಣ್ಣು** (ನಾ). ಹೆಚ್ಚು ಪಿಸರು ಬರುವ ಕಣ್ಣಿನ ಒಂದು ಬಗೆಯ ರೋಗ: ಅವನು ಪಿಸರುಗಣ್ಣಿನ ಬಾಧೆಯಿಂದ ನೇತ್ರವೈದ್ಯರಲ್ಲಿಗೆ ಹೋಗಿದ್ದಾನೆ (ಕೂಂ). 'ಪಿಳಿಚಲುಕಣ್ಣು' ಪರಾ.
[ ಪಿಸರು1 + ಕಣ್ಣು ( < ಕಣ್ ) ]

**ಪಿಸಾಂಟಿ, ಪಿಸಾಂಟು, ಪಿಸಾಡಿ, ಪಿಸಾಳಿ** (ನಾ). (ಉಕ) ತಲೆ ಕೆಟ್ಟ ವ್ಯಕ್ತಿ; ಹುಚ್ಚ: ಯಾರೋ ಹುಡುಗಿ ಹೆಚ್ಚಾದ ಅಪ್ಪನೊಬ್ಬ ಈ ಪಿಸಾಂಟನ ಕೊರಳಿಗೆ ತನ್ನ ಮಗಳನ್ನು ಕಟ್ಟುವ ಧೈರ್ಯ ಮಾಡಿದ (ಕೂರುದಾ. ೦೩೨). ಪಿಸಾಂಟು: ಬಸ್ಸೇ ತಪ್ಪಿದು ಅಂತ ತಿಳ್ಕೊಂಡಿದ್ದೊ ಪಿಸಾಂಟುಗಳು (ಹೊಸಕ್ಕ. ೩೩). ಪಿಸಾಡಿ: ಈ ಪಿಸಾಡಿನ್ನ ಯಾರು ಕೇಳತಾರ್ರೀ? (ಪುಕೊ. ೩೬). ಪಿಸಾಳಿ: ಈ ದಾಂಡಿಗ ಜವಾನ ಪಿಸಾಳಿಗಳ ಕಯ್ಯಲ್ಲಿ ಸಿಕ್ಕು ನಾನು ಒದ್ದಾಡಲಾರೆನಪ್ಪಾ (ಶಿಕಲ. ೦೨೯).
[←ತುಳು. ಪಿಸಂಟೆ, ಪಿಸಿಂಟೆ=ಮುಂಗೋಪಿ. /ಮರಾ. ಪಿಸಾಟ್=ಹುಚ್ಚು]

**ಪಿಸಾಂಟು** 'ಪಿಸಾಂಟಿ' ನೋ.

**ಪಿಸಾಡಿ** 'ಪಿಸಾಂಟಿ' ನೋ.

**ಪಿಸಾಳಿ** 'ಪಿಸಾಂಟಿ' ನೋ.

**ಪಿಸಿ1, ಹಿಸಿ** (ಕ್ರಿ). ೧. ಸಿಗಿ; ಕಿತ್ತು ತೆಗೆ; ಹರಿದು ಹಾಕು: "ಹರಿ, ಮುರಿ, ಒಡೆ, ಪಿಸಿ [ಹಿಸಿ]" (ಕಂಸುಹು. ೯೦). ೨. (ಬಟ್ಟೆ, ಮೊದಲಾದುವು) ಹಿಂಜು; ಹರಿದುಹೋಗು; ಕಿತ್ತುಹೋಗು: ಒಣಲು ಉಡಿಗೆಗಳಂತೆ ಮಾಸಿ ಪಿಸಿವುದು (ಉದ್ಭಟಕಾ. ೩೩-೯). 'ಪಿಸುಂಕು' ಪರಾ. ಹಿಸಿ: ೧. ಶಿಶುವ ಸಲಹಿದು ಸುರವಿರೋಧಿಯ ಬಸುಱ ಬಗಿದೆಳೆಗರುಳ ನುಗುರಲಿ ಹಿಸಿ [ಪಾಠಾಂ. ನಸಿ, ಸಸಿ]ದು ಕೊರಳಲಿ ಹಾಯ್ಕಿದನು ನರಹರಿಯ ರೂಪಿನಲಿ (ಕೊರಶಾ. ೬-೨-೪೦); ಅವರ ಬಾಯಿಂದ ಆ ಮಾತು ಬರುವ ಮುಂಚೆ ಅವರ ಕಟವಾಯ್ಗಳನ್ನು ಹಿಸಿದಲ್ಲದೆ ನನಗೆ ನಿದ್ರೆ ಬಾರದು (ಅಗ್ನಿಹ. ೪೦); ವಿತ್ತು . . . ಶಿಶುವನು ಕಿತ್ತು ಹಿಸಿದು ತಿಂಬುವ ಕಂಡು (ಶಾಂಕಜ. ೨೯-೦೩). ೨. "ಹಿಂಜು, ಹಿಕ್ಕು, ಬಾಚು, ಹಿಸಿ [ಪಿಸಿ]" (ಕಂಸುಹು. ೯೨); ಕುಪ್ಪಸ ಹಿಸಿದಂತೆ ಮೈಯುಬ್ಬಿ ಕೈ ಮುಗಿದೊಪ್ಪದಿ ಸಾಗಿದರವರು (ಶರಕ. ೩೮-೦೦೦); ಸುಲಭವಾಗಿ ಹಿಸಿಯುವ ದಾರಗಳಿಂದ ಮಾಡಿದ ಬಟ್ಟೆ ಬಾಳಿಕೆ ಬರುವುದಿಲ್ಲ (ಗೃಹಪ. ೬೯). ೩. (ಹಣ್ಣು ಮೊದಲಾದುವು) ಸೀಳಿಕೊಳ್ಳು; ಬಿರಿ; ಒಡೆ: ಅಸಿದಾದ ಬವನೆಯೆಳೆವದದ ಕಾಯ್ಗಳನು ನಾಲ್ಕೆಸಳಾಗಿ ಕುಯಿದು ತುಪದೊಳಗುಕ್ಕರಿಸಿಯವು ಹಿಸಿಯದಂದದಿ ಹಿಕ್ಕಿ (ಸೂಪಶಾ. ೯-೯); ಮೆಱೆವ ಪೋಗೊಡಮೊಲೆಯನವನ ವಕ್ಷಃಸ್ಥಳದೊಳಿಟ್ಟೊತ್ತಿದೊಡೆ ಹಿಸಿದೊಳಗಣ ಘನಿಸಾಂಧ್ರೆಯೊಸರ್ದು ತೊಟ್ಟಿಡುವ ಬಿಂದುಗಳ ಸಾಲಿದೆನಲು ಕಡಿಕಿ ಪಱಿದು ಗುವ ಹಾರದ ಮುತ್ತುಗಳ ಮಣಿಗಳಿಡೆವಿಡದೆ ಸೂಸುತಿರೆ (ಕೈವಲ್ಯಭಾ. ೦೦-೦೬); ಕಾಲೊಂದನಾ ದಾರಿಗಿನ್ನೊಂದನೀ ದಾರಿಗೆಂದೇಕಕಾಲದೊಳೂರಿ ನಡೆಯುವುದಾದರೆ ಎರಡಡಿ ಹೋದೀರಿ ಸೊಂಟವು ಹಿಸಿದು ಬಿದ್ದೀರಿ (ಇಂಶಿಶ. ೨೩೬-೬೯). ೪. ಬಿರಿಯುವಂತೆ ಮಾಡು; ಎರಡಾಗಿ ಸೀಳು: ಹಿರಿದಾಗಿಯದ ಹಿಸಿದು ನಾರುವದನು ಮಾಡಿ ಅರಗಿನಂದದೊಳು ಸರಿಗೆಯ ಮಾಡಿಕೊಂಡು ಕತ್ತರಿಸುವುದು (ಸೂಪಶಾ. ೦-೯೦); ತುಂಬಿದಕ್ಕರಿನೆದೆಯ ಹಿಸಿಯುತ ಹಿಂಡಿ ಬಾಳನು ಬಸಿವರು (ದ್ರಾಕ್ಷಿಪಾ. ೩೩-೦೬); ಹಲಸಿನ ಹಣ್ಣಿನ ತೆರನಿರೆ ನಿನ್ನನು ಹಿಸಿವರು ಬಂಧುಬಾಂಧವರು (ಇಂಶಿಶ. ೨೨೯-೩೩).

೫. ಅಮುಕು ; ಒತ್ತು ; ಹಿಂಡು : ಕಕ್ಕಸದಿಂದ ಕಡಿವ ಚಿವುಟುವವನು ಗುರಿಕ್ಕುವ ಹಿಸಿವ ಹೆಟ್ಟುವನು ಚಿಕ್ಕವರುಗಳನೆಲ್ಲರನು (ಶೀಬಸಂ. ೦೩-೦೦೯).

ಹಿಸಿಹಿಸಿ (ದ್ವಿರುಕ್ತಿ) : ಆಶೆಯೆಂಬ ಪಾಪಿಯು ಕೂಸು ಹಿಸಿಹಿಸಿದು ತಿನುತ್ತಿರ್ಪುದು (ಅವಶಂ. ೨೩೬-೦೦೬೬). ಹಿಸಿದು ಬೀಳು = ಬಿರಿದು ಬೀಳು; ಒಡೆದು ಬೀಳು : ಮಳೆಯು ಮುಗಿಲೇ ಹಿಸಿದು ಬೀಳುವಂತೆ ಸುರಿಯುತ್ತಿತ್ತು (ಮಲೆಮ. ೬೨೯). ಹಿಸಿದು ಹೋಗು = ಸೀಳಿಹೋಗು ; ಬಿರಿ : ಅವರನ್ನು ನೋಡುವುದಕ್ಕೆ ಜನವು ಊರೇ ಹಿಸಿದು ಹೋಗುವಂತೆ ಕಿಕ್ಕಿರಿದು ಬಿಟ್ಟಿತು (ವಕಥಾ. ೬೬).

**ಪಿಸಿ₂** (ನಾ). ಒಂದು ಬಗೆಯ ಔಷಧದ್ರವ್ಯ; ಜಟಾಮಾಂಸಿ: "ಪಿಸಿ:— ಜಟಾಮಾಂಸಿ" (ಓಷಂ. ೯೭). [< ಸಂ. ಪಿಶೀ]

**ಪಿಸಿ₃** (ನಾ). ತಲೆ ಕೆಟ್ಟವನು ; ಹುಚ್ಚ : ಹೀಗೇಕೆ ತಲೆ ಕೆಟ್ಟವರಂತೆ ಮಾಡಿದರೊ ಏನೋ. ಮಹಾ ಪಿಸಿ ಇರಬೇಕು ಈ ಪೋಲೀಸ ಅಧಿಕಾರಿ (ವೃತಿ. ೯೪೨). [← ಮರಾ. ಪಿಸಾ = ತಲೆ ಕೆಟ್ಟಿರುವ]

**ಪಿಸಿತ₁, ಪಿಚ್ಚ₂** (ನಾ). ಮಾಂಸ ; ಅಡಗು ; ಪಿಶಿತ : ಗಗನದೊಳ್ಯಲ್ಲಿ ತಿರುಗುವ ಖಗರಾಜಂ ಕಂಡು ಪಿಸಿತಮೆಂದದ ಮನದೊಳ್ ಬಗೆದೆತ್ತಿ ಕೊಂಡು ಪೋಪುದು ಮೃಗಶಾಬೇಕ್ಷಣೆಯ ವಾಮಚರಣದ ಮೆಟ್ಟಂ (ಕುಹ್ಯಸ್ತ್ರ. ೬-೬೯); ಪಿಸಿತದ ಮಧುರಮೆಂತಹುದೊ (ಕಕುಪು. ೯-೦೨-೬೦). ಪಿಚ್ಚ₂ : "ಪಿಚ್ಚ — (ಪಿಸಿತ) — ಪಿಶಿತ = ಮಾಂಸ" (ಕರ್ಣಕೋ. ೨೬). 'ಪಿಚ್ಚವೂಣಿಗ' ಪರಾ. [< ಸಂ. ಪಿಶಿತ]

**ಪಿಸಿತ₂** (ನಾ). ಕೆಟ್ಟ ನಡತೆ (?) : ಹುಸಿ ಕೊಲೆ ಕಳವು ಪಾರದಾರ ಇಂತೀ ಪಿಸಿತವ ಹಚಿಯೊ ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿವಚ. ೬೩-೨೬೩). [ ? ]

**ಪಿಸಿತಾಂಗ** (ನಾ). ಮಾಂಸಮಯವಾದ ದೇಹ ; ಭೌತಿಕಶರೀರ : ಜ್ಞಾನಾಗ್ನಿ[ಗ್ನಿ]ಯೋಳ್ದಹನವಾದ ಪಿಸಿತಾಂಗ ವಿಗೆ ಮಾನಿತ ಸುಮಂತ್ರವಾಗೆ ಗುರುಕರುಣದಿ (ಬಕೋಪು. ೬-೬೩). [ಪಿಸಿತ₁ + ಅಂಗ₂]

**ಪಿಸಿಪಿಸಿ** (ನಾ). ಒಂದು ಅನುಕರಣಶಬ್ದ : ಉಲಿಯೆ ಡೊಂಬನು, ಕೆಲರ ಪಿಸಿಪಿಸಿ, ಕೆಲರ ಗುಜುಗುಜು, ಕೆಲವರು ಗಲಭೆ ಕಳಕಳ ಆಟದಾ ಕಳದಲಿ ವಿಶಾಲಕೆ ತುಂಬಿತು (ಕಂಪು. ೬೯-೨೩); ಗುಜುಗುಜು ಮಾತಾಡಿ ಪಿಸಿಪಿಸಿ ನಗುವುತ ಸೆರಗ ತಮ್ಮುಸಕ ಎಳೆದಾರ (ಕನ್ನಜಾ. ೬೬೨).

ಪಿಸಿಪಿಸಿ ಮಾತಾಡು = ತುಂಬ ಮೆಲ್ಲಗೆ ಮಾತಾಡು ; ಪಿಸುಗುಟ್ಟು: (೯). ಪಿಸಿಪಿಸಿವಾತು, ಪಿಸಿಪಿಸಿಮಾತು = ತುಂಬ ಮೆಲ್ಲಗೆ ಆಡುವ ಮಾತು ; ಪಿಸುಮಾತು : ಅಯ್ಯಾ ನಿನ್ನ ಬಿನ್ನಣದ ಪಿಸಿಪಿಸಿವಾತಂತಿರ್ಕೆ (ಶಕಂ. ೬-೦೩೯ ಶ); ಕಿಸಿಕಿಸಿನಗು, ಪಿಸಿಪಿಸಿಮಾತು . . . ಅವಳ ಜೀವನಕ್ಕೆ ಚಿಟುಕುಮುಳ್ಳಾಗಿದ್ದವು (ದೀಕಹ. II, ೧೯೦).

**ಪಿಸಿವಿ, ಪಿಶವಿ** (ನಾ). (ಉಕ) ಕೈಚೀಲ : ಪಿಸಿವಿಯಲ್ಲಿ ಅಕ್ಕಿ ತಂದೆ (ಲೂಕ). ಪಿಶವಿ : ಪಿಶವಿಯೊಳಗಿನ ಪುಸ್ತಕಗಳನ್ನೂ ಪಾಟಿಯನ್ನೂ ಹೊರತೆಗೆದು ಚಾಪೆಯ ಮೇಲೆ ಹರವಿ . . . ನೋಡತೊಡಗಿದ (ಕ್ಷಿತಿಜ. ೯೩).

[← ಮರಾ. ಪಿಸವೀ, ಪಿಶವೀ]

**ಪಿಸು** (ನಾ). ಒಂದು ಅನುಕರಣ ಶಬ್ದ : 'ಪಿಸುಗುಟ್ಟು' ಪರಾ.

**ಪಿಸುಂಕು,** ಪಿಸುಕು, ಪಿಸುಗು, ಹಿಚಕು, ಹಿಚಿಕು, ಹಿಚಿಗು, ಹಿಚುಕು, ಹಿಜಿಗು, ಹಿಸಕು, ಹಿಸಿಕು, ಹಿಸುಕು₁, ಹಿಸುಗು (ಕ್ರಿ). ೧. ನೀವು ; ಕೀಡು ; ಮರ್ದಿಸು : ರುಂಬತೀತಿ ಪಿಸುಂಕಿದಪುದೆಂಬುದು (ಶಾಲ್ಮ. ೬೦). ೨. ಅಲಕ್ಷ್ಯ ಮಾಡು ; ಅನಾದರದಿಂದ ಕಾಣು ; ಅವಮಾನಿಸು ; ತಿರಸ್ಕರಿಸು : "ಪಿಸುಕು, ಪಿಸುಂಕು— ಅವಜ್ಞಾಶಿಶಯೋ (ಅಪಮಾನ ಮಾಡು)" (ಕಮಥಾ); ಪಿಸುಂಕಿ ಕಳೆದಟ್ಟಿ ಚೈತ್ರಋತುರಾಜನಂ ಭೂತಳಂ ಬಸುಬಡೆ ನಿದಾಘ ಭೂರಮಣನೇಳ್ಗೆಯಂ ತಾಳ್ದಿದಂ (ಶಂಪ್ರಕು. ೬-೦೦೬). 'ಪಿಸಿ₁' ಪರಾ. ಪಿಸುಕು : ೨. ಮೇಲಿನ 'ಪಿಸುಂಕು' ಉಲ್ಲೇಖದ 'ಶಮಂಥಾ' ಪ್ರಯೋಗವನ್ನು ನೋಡಿ. ೩. (ಹಣ್ಣನಂತೆ) ಕಿವುಚು ; ಹಿಂಡು : (೯). ೪. ಅದುಮು ; ಒತ್ತು : (೯). ೫. ಹರಿದು ಹಾಕು : (೯). ಪಿಸುಗು : ೧. ತಳಿಹರ್ಷಿಸಿಗೆ ಮಾಡಿ ಮಲಗಿಸಿ ಬಳಿಕದಿ ನೀ ಪಾದ ಪಿಸುಗೆ ನಿದ್ರೆಯ ಗೈವೆ (ಹಮುಕ. ೩೯). ಹಿಚಕು : ೩. "ಹಿಚಕು—ಹಿಂಡು" (ಜಾವಕೋ. ೩೬) ; ಹಿಡಿದ ವಿಷಯವನ್ನು ಅವರು ಹೇಗೋ ಎತ್ತಿತ್ತೂ ಹಾರಿಸಬಲ್ಲರು, ಎಲ್ಲೆಲ್ಲೋ ಹಿಚಕಬಲ್ಲರು (ಗಾಳಿಪ. vii, ಮಣ್ಣಿಗೆಯ ಮಾತು). ಹಿಚಿಕು : ೩. ಸ್ವಲ್ಪ ಅರಳಿ ಮುಷ್ಟಿಯಲ್ಲಿ ತಕ್ಕೊಂಡು ಕಿವಿಯ ಹತ್ತಿರ ವೈದು ಹಿಚಿಕಿ ನೋಡಬೇಕು (ಮುಂಬಿಪ್ರ. ೯೦). ೪. ಕರಡಿಗಳು ಅವರ ಕುತ್ತಿಗೆ ಹಿಚಿಕಿ (ಮುಂಬಿಯ. ೯. ೬-೦೦೯). ಹಿಚಿಗು : ೪. ಮುಂದ ಅವರು ಕುತಗೀ ಹಿಚಿಗಿ-ಪತಗೀ ಹಿಚಿಗಿ ಮಾಡಬಾರದೂ ಅಂತ ನಿಮ್ಮ ಮನಸಿನಾಗ ಇದ್ರ, ಈಗ ಆ ಹುಡಿಗೀ ಕಡಿಯಿಂದ . . . ಜವಾಬು ತಗೊಂಡು ಬಿಡೋಣ (ಗಂಗಾಸಾ. ೦೬೨). ಹಿಚುಕು : ೪. ಹಿರಿಯರಿರೆ ಕಿಜ್ಯಾಯಂಗೆ ಪಟ್ಟವೆ ಕೊಚಿಸಿದಳೆಂಬ ಹಿಚುಕಿ ಕೊರಳನು . . . ಎಂದು ಭರತನು ಹಿರಿದು ಹಲುಬಿದನು (ಕೌಶಿರಾ. ೯-೦೯) ; ಆ ವ್ಯಕ್ತಿ, ಆಗ ನನ್ನ ಕುತ್ತಿಗೆ ಯನ್ನು ಹಿಚುಕಬಹುದೆನಿಸಿತು (ಶಂಮುಬಿ. ೦೦೬); ರಾಮಣ್ಣನ ಕೈಯನ್ನು ಹಿಚುಕಿ ಕೇಳಿದಳು (ಕವಳೆ. ೬೨). ಹಿಜಿಗು : ೪. ಕುತ್ತಿಗೆಯನ್ನು ಹಿಜಿಗಿ ಪ್ರಾಣ ತೆಗೆಯುತ್ತೇನೆ (ದಾಂಪತ್. ೯೦೬). ಹಿಸಕು : ೩. "ಹಿಸಕು—ಹಿಚಕು, ಹಿಂಡು" (ಜಾವಕೋ. ೩೬). ಹಿಸಿಕು : ೪. ಹೆದರದೆ ಕೊಟ್ಟಿಹ ಹಣವನು ಕೇಳ ಬಂದ ಭಕ್ತನ ಕೊರಳು ಹಿಸಿಕಿ ಯಮುನೆಯ ಹಿಂದೆ ಸಮಾಧಿಯ ತೆಗೆದು (ಕೊಲ್ಲಮಾ. ೦೨೦-೦). ೬. ಪರಿಶೀಲಿಸಿ ನೋಡು ; ಪರೀಕ್ಷಿಸು : ಭೂಮಿಪಾಲೋತ್ತಂಸರೊಳಗೆ ಹಿಂದು ಹಿಸಿಕಿ ನೋಳ್ಪರೇ ಬಲ್ಲವರ್ಧರಣಿಪಾಲ (ಸಮ್ಯಕೌ. ೮-೦೬). ಹಿಸುಕು₁ : ೩. ಬೆರಳು ತಾಳ ಹಣ್ಣ ಹಿಸುಕಿದಡೆ[ಪಾಠಾಂ. ಹಿಸಿದಡೆ, ಹಿಸಿಕಿದಡೆ]ಮೆಲಲುಂಟೆ (ಶುಹಾರೇ, ೯. ೦೨-೨೮) ; ಅಸಮಾಸ್ತ್ರ ನಾಣ್ಚಿ ಜನನ ಮುಂದೆ ಸಿಹಿವಿಲ್ಲ ಹಿಸುಕಿ ಬೀಸಾಡಿ ಸಾವರ್ಂತೆ ರಸದಾಳಿಗಬ್ಬಿನ ರಸದೊಳಾ ನೃಪತಿ ವಿಸಾಯಿಸುವಂದ ದೊಚಿ ದುದು ಜಿನನ (ಖರಪ. ೦೬-೭೬) ; ಕಂದಯ್ಯ ಹಣ್ಣನ್ನು ಒಡೆದು ತಿರುಳನ್ನು ಹಿಸುಕಿ ತೋರಿಸಿದರು (ಹಸುಹೊ. ೩೮). ೪. ಎನಿತೋ ಕೋಗಿಲೆಗಳ ನುಣ್ಗೊರಳನು ಹಿಸುಕಲು ತಳುಹದ ಕಲಿಘಟನಿವನು ! (ಕುವೆಂ. ೯೨-೬) ; ದೈತ್ಯಬಾಹು ಮುಗ್ಧತೆಯನು ಹಿಸುಕಲು ಚಾಚಿತು ಹಲಬಾರಿ (ಪಲಮು. ೬೯-೦೬); ರಾಣಿ ಸಂಗಾಮಿಯು ಕೈ ಹಿಡಿದು ಹಿಸುಕಿ, ಕೃಪಾಕಟಾಕ್ಷವನ್ನು ಬೀರಿದಳು (ಪಕಥಾ. II, ೯೬೮). ಹಿಸುಗು : ೪. ಯಾರನ್ನು ಕಂಡರೆ ಕತ್ತು ಹಿಸುಗಬೇಕೆನಿಸುತ್ತದೆ ನಿಮಗೆ ? (ಹುಚ್ಚುಹು. ೬೬). 'ಹಿದುಕು' ಪರಾ.

[ ದೇ. ॥ ತಮಿ. ಪಿಚಕ್ಕು ; ತುಳು. ಪಿಸ್ಕು ; ತೆಲು. ಪಿಸುಕು ; ಗದಬ. ಪಿಸ್ಕೊಲ್ಪ ; ಗೊಂಡಿ. ಪಿಸ್ಕಾನಾ ; ಕುರುಖ್. ಪಿಚ್ನಾನಾ ]

**ಪಿಸುಕ** (ನಾ). ಒಂದು ಬಗೆಯ ಕೀಟ : ತುಂಬಿ ಪತಂಗ . . . ಪಿಸುಕ ವಿಳಂಬಿ . . . ಕೊಟ್ಟಾರಿಗಂ ಯೆಡೆವುಟುಯೆಂದಿತ್ಯೇಪಮಾದಿಗಳೊಳು ಸ್ಪರ್ಶರಸಗಂಧರೂಪಶಬ್ದಂಗಳೆಂಬೀಯಯ್ದು ಮನಜಾಪ (ಕಹಾರ. ೯೯).

[ < ಪ್ರಾ. ಪಿಸುಅ. / ಸಂ. ಪಿಶುಕ ]

**ಪಿಸುಕು** 'ಪಿಸುಂಕು' ನೋ.

**ಪಿಸುಗು** 'ಪಿಸುಂಕು' ನೋ.

**ಪಿಸುಗುಟ್ಟು** (ಕ್ರಿ). (ಕಿವಿಯಲ್ಲಿ) ಮೆಲ್ಲಗೆ ಹೇಳು : ಪಿಸಂದನಿಯಲ್ಲಿ ಗುಟ್ಟಾಗಿ ಹೇಳು, ಪಿಸುಮಾತನ್ನಾಡು: "ಮಿನುಕು—ಅಂತರ್ಗತಸ್ವನೇ (ಪಿಸುಗುಟ್ಟು). ಕಾಂತೌ ಚ (ಪ್ರಕಾಶಿಸು)" (ಕಮಥಾ) ; ಆ ಎಲೆಗಳು

ಗಾಳಿಯು ಕಿವಿಯಲ್ಲಿ ಹೀಗೆ ಪಿಸುಗುಟ್ಟಿದುವಂತೆ (ಶಾಮರಾ. ೪೫); ಪಿಸುಗುಟ್ಟಿದರೂ ಕೇಳುವಷ್ಟು ಹತ್ತಿರ ಇದ್ದರು (ಶ್ಯಾಮಸ್ನೇ. ೨೦); ಅರ್ಚಕನ ಅನಾಚಾರ ಕುರಿತು ಹೊಸೂರಿನ ಜನರು ಪಿಸುಗುಟ್ಟುತ್ತಿದ್ದರು (ಹೊಸೂಹ. ೨೪). 'ಗೊಣಗುಟ್ಟು' ಪರಾ. [ಪಿಸು+ಕುಟ್ಟು$_1$]

**ಪಿಸುಗುಡು** (ಕ್ರಿ). = ಪಿಸುಗುಟ್ಟು : 'ಅದು ಸರಿಯಲ್ಲ' ವೆಂದು ಅವನ ಸಮಸ್ತಚೇತನವೂ ಪಿಸುಗುಡುತ್ತಿತ್ತು (ಕೃವರು. ೪೬೪); ಇನ್ನೊಬ್ಬರ ಕಿವಿಯಲ್ಲಿ ಗುಟ್ಟಾಗಿ ಪಿಸುಗುಡುವಾಗ ... ಹಠಾತ್ತಾಗಿ ಆಸ್ಫೋಟವಾಗುವ ಸೀನಿನಿಂದ ಏನು ಅವಾಂತರವಾದೀತು (ದೇಶಸ್ವ. ೦೨). 'ಗೊಣಗುಡು' ಪರಾ. [ಪಿಸು+ಕುಡು$_1$ (< ಕೊಡು$_1$)]

**ಪಿಸುಣ್**, ಪಿಸುಣ$_1$, ಪಿಸುಣಂ, ಹಿಸುಣ$_1$, ಹಿಸುಣು (ನಾ). ಚಾಡಿ; ಚಾಡಿಯ ಮಾತು; ಕುತ್ಸಿತ : "ಪಿಸುಣೆಂದು ಕುತ್ಸಿತಂ" (ಶಬ್ದಾ. ೬೨-೬೪೬); ಆಳ್ವೆಸಕಗಿಯೆ ನುಡಿದನೆಂಬೀ ಪಿಸುಣನಣಂ ಕೇಳ್ದಿನಿಲ್ಲ ಬೀಡಿನೊಳವನಾ (ಹಂಶಭಾ. ೬-೪೨); ಪುಸಿಗೆ ಪಿಸುಣ್ಗೆ ಪೋರಟೆಗೆ ಮಾಯೆಗೆ ಹಿಂಸೆಗೆ . . . ಬಸಗಡಿದೀಟ್ಟ ಕಾಟ್ಪಿಸನದಟ್ಟುಳಿಗಂ ಪುಗದಂತಿರಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಂಬಡೆದಂ ದೊಡದೇವಭೂವರಂ (ಶಶಿ. ೩-೦೫); ಸವತಿಯೊಂದು ಪಿಸುಣ್ಗೆ ಎಚ್ಚಿಯುಂ ಮಾಜುವೋದನೆಂಬೊಂದುಬ್ಬೆಗದಿಂ ಕೊರಗಿದಳೆನೆ ಪದ್ಮಿನಿ ನಾಡೆ ಬಾಡೆ (ರಾಮಾಶ್ವ. ೨೨-೯). ಪಿಸುಣ$_1$ : ಪಿಸುಣಂ ಪರಾಭವಂ ಕಲಹಮುಂ ಕಪಟಮುಳಿಜಸಮತಿಕ್ರೂರಮನ್ಯಾಯಮಿವು ಪೆರ್ಚೆ ತದ್ವಸುಮತೀವನಿತೆ ತಾಳದೆ ಕಂಪಿಸುತ್ತಿರ್ದಳು (ಚಿಪಪು. -೦೦). **ಪಿಸುಣು** : ಪಿಸುಣಂಗೆ ಮುಳಿವಂ ಮಾದ್ಯವಿದ್ಯಾಧರಂ . . . ಸಿಂಗನ ಗರುಡ ನಾ[ಮಾ]ದಿ ಸಮಸ್ತಪ್ರಶಸ್ತಿಸಹಿತಂ (ಎಕ. XIX. ೦೬೪-೦೨; 1040); ವಿಕಾಳಿಸಿತೆ ಕೌರವನ ಬುದ್ಧಿ ವಿಟಾಳಸಂಗತಿಯಾಯ್ತಲಾ ಪಿಸುಣಾರ ಕರಳಿಜಿದು (ಕುವ್ಯಾಸ. ೦೨-೪೭); ಕಲಹಿಸದಿರಾರೊಡನೆ ಪಿಸುಣನುಳಿ ಪರಧನಕ್ಕಳುಪದಿರು ಶಪವಸಗು (ಕೈಶವ. ೩-೨-೩). ಹಿಸುಣ : ಎಂಗಳು ಹಿಸುಣವ ಹೇಳಿಹವೆಂದು ನೋಡಲವ್ಸೆನವ್ವಾ (ಸರ್ವಶಿ. ೭೦-೩೮೦); ಹಿಸುಣವನು ಹೇಳುವ ಕೇಳುವರಿಗನ್ನಾವುದ್ಯ ಪ್ರಾಯಶ್ಚಿತ್ತವಿಧಿಯೆಂದ (ಸಂಶಶ. ೦೩-೭೦). ಹಿಸುಣು: ಹಿಸುಣು ಧರ್ಮದ್ರೋಹ ರುಜೆ ಕೈಮಸಕ ವಳಿಪನ್ಯಾಯಮೆಂಬಿವರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ಕೊರಾ. ೦-೩-೨೬). [< ಸಂ. ಪಿಶುನ]

**ಪಿಸುಣ$_1$** 'ಪಿಸುಣ್' ನೋ.

**ಪಿಸುಣ$_2$**, ಹಿಸುಣ$_2$ (ನಾ). ೧. ಚಾಡಿ ಹೇಳುವವನು; ಚಾಡಿಕೋರ: "ಪಿಸುಣನೆನಲ್ ಪೈಶೂನ್ಯಂ" (ಶಬ್ದ. ೨೦೬); ಪಿಸುಣರ ಪೊಸೆವೊ ಕುಂ(ಟ)ಲಂ ವೊ× ×ವ ಈಯುದೆ ಈಚ(ಇಚ)ಯು[ದೆ] ನನ್ನಿ ನುಡಿಯುದೆ ನಣ್ಪ(ನ್ಪಿ)ದೇವಂಗಟಿಸ್ಸಿಮುಯ್ಯುಮ್ಪಡೆದೊಂಗರ ಅಲೆದೊಂ ಮೂದಲಿಪೊಂ (ಎಕ. XXIV. ೧೯೩-೦೨; ಸು. 885); ದೈವ ಗುರು ದ್ವಿಜರ ಚರಣಸೇವೆಯಲಾರ್ತತೆಯು ಪಿಸುಣರ ನುಡಿಗಳಲಿ ಮೂರ್ಖತೆಯು ನೀ ವಿರಚಿಪೆಯೊ ಬೇಸಟುವೆಯೋ (ಕುವ್ಯಾಸ. ೦-೫೬); ಪುದಿದಿರ್ಪುದು ತೇಟಿಗೆ ವಿಷಂ ತುದಿವಾಲದೊಳ್ಕಿದೆ ಘಣೆಗೆ ತುದಿದಾಡೆಗಳೊಳ್ ತುದಿನಾಲಗೆಯೊಳ್ಪಿಸುಣಂಗಿದು ಸರಿಯವು ಸೋಂಕೆ ಕೊಲ್ವುವಿಮು ಸೋಂಕದೊಡಂ (ಶಶಿ. ೦-೪೫); ಪಿಸುಣನ ಹತ್ತಿರ ಉಸುರಭಾರದು (ಗಾದೆ). ೨. ನೀಚ; ದುಷ್ಟ : "ದುರ್ಜನಃ, ಪಿಶುನಃ, ಕ್ಷುದ್ರಃ. ನೀಚಃ, ಕರ್ಣೇಜಪಃ, ಖಳಃ—ಈ ೬ ಪಿಸುಣಂ" (ಹಲಾಯು. ೫೬-೦೯೧); ಪಿಸುಣನೆ ಪಾತಕ ಪರಸತಿಯರಿಗೆ ಮೋಹಿಸುವನಧಮ ದುರ್ಮಡಿಯ ಉಸುರುವನೇ ಕ್ರೂರ ಚಾರಿತ್ರಭ್ರಷ್ಟನೆ ವಸುಧೆಗೆ ಪಾಪಿಯೆನಿಸುವ (ಜೀವಂಸಾಂ. ೬-೫೬); ಬಂಜೆ ಪ್ರಸವದ ನೋಪಱಿವಳೆ ಪಿಸುಣಂ ಸಿರಿಗಳಿಂ ಜಸದೊಳಿಪ್ಪವನ ಸೈರಿಪನೆ (ಕುಶ್ಯಾಂಗ. ೦-೦೬); ಪಿಸುಣನ ದ್ರವ್ಯ ಲೋಭಿ ಬಯಸಿದ ಹಾಗೆ (ಗಾದೆ). ೩. ಶಕುನವನ್ನು ಸೂಚಿಸುವುದೆನ್ನಲಾದ ಒಂದು ಬಗೆಯ ಹಕ್ಕಿ; ಹಂಗನ ಹಕ್ಕಿ : ಗೊರವ ಗಿಳಿ ಜಾಗರಿಗ ಹರಡೆ ಹಸುಬಂ ಪಿ[ಶಾಚಂ ಹಿ]ಸುಣ ಹೆಬ್ಬಕ್ಕಿ ಗಿಡುಗ . . . ಹಕ್ಕಿಗಳ ಮೊಳೆ ಕಚಿದುದಡವಿಯೊಳಗೆ (ಸೋಮಚ. ೩-೯). ಹಿಸುಣ$_2$ : ೧. "ಹಿಸುಣ—ಪಿಶುನ=ಪಿಸುಣ" (ಕರ್ಣಕೋ. ೯೯); ಸಸಿನವೇ ನಿನ್ನಚಿತಖಳರಿಗೆ ಹಿಸುಣರಿಗೆ ವಂಚಕರಿಗಜ್ಞರಿಗುಸುರಿಯೆಲೆ ನಿನ್ನಂತರಂಗವನೆಂದನಾ ಮುನಿಪ (ಕುವ್ಯಾಸ. ೬೦೩. ೦-೪೯); ಹಿಸುಣರ ಜಾಳಿಗರ ಚದುರೋಕ್ತಿ ಸಮಗೇಕೆಂದಳವರೊಡನೆ (ಕೊರಾ. ೨-೦-೨೬). ೨. ಚೋರನನು ಕಂಟಕನ ಹಿಸುಣನ ಜಾರನನು ಷಂಡನನು ಸಮಯ ವಿಕಾರಭೇದಿಯನಿಂತಿವರನು ಕಂಡು ಮನ್ನಿಸದೆ ದೂರದಲಿ ವರ್ಜಿಸುವುದು (ಕುವ್ಯಾಅ. ೯-೯೭). ೩. ಮೇಲಿನ 'ಸೋಮಚ. ೩-೯' ರ ಪ್ರಯೋಗದ ಪಾಠಾಂತರವನ್ನು ನೋಡಿ. [ಪಿಸುಣ್ + — ಅ$_7$]

**ಪಿಸುಣತನ** (ನಾ). ಚಾಡಿಕೋರತನ; ಪಿಶುನತ್ವ : ನಿಜಬಂಧುಗಳು ಅಳಿಯೆ, ಪಿಸುಣತನ ಅಡಗಿತೇ ? (ಕಂಪು. ೫೦); ಸಂಗೀತದಲ್ಲಿ ಓಡದಿದ್ದ ಅವರ ಬುದ್ಧಿ ಪಿಸುಣತನದಲ್ಲಿ ಚುರುಕಾಯಿತು (ರೂಶಸ. ೦೫೪). [ಪಿಸುಣ$_1$ (<ಪಿಸುಣ್) + — ತನ]

**ಪಿಸುಣತೆ**, ಹಿಸುಣತೆ (ನಾ). (ಒಬ್ಬರ ಬಗ್ಗೆ) ಆಡಿಕೊಳ್ಳುವುದು,—ದೂರುವುದಂ ; ಚಾಡಿ ಹೇಳುವುದು : ಇಳೆಯೊಳು . . . ಸಂಚಲಚಿತ್ತವಂಧತ್ವ ಮುಳಿಸು ಹೊಲೆ ಮೃಷೆ ರೌದ್ರವವು ದುರ್ಬಲವೆ ಜೀವನ್ಮೃತವು ಪಿಸುಣತೆ ಕೊಲೆಯದೆಲೆ ಸುಕುಮಾರ ಕೇಳೆಂದಱುಹಿದನು ಮುನಿಪ (ಜೀವಂಶ. ೫-೬೦); ರಾಮಂಗೆ ಪಟ್ಟಗಟ್ಟುವ ಪ್ರೇಮದೆ ದಶರಥನೃಪಾಲನನುವಮಾಡಿಸುತಿರಲಾ ಮಂಥರೆ ಪಿಸುಣತೆಯಿಂ ಕಾಮಿನಿ ಕೈಕಯಿಗೆ ಪೇಳಲಾಕ್ಷಣದೊಳಗೆ (ದಶಾವ. ೬-೦೯೯). ಹಿಸುಣತೆ : ಹಿಸುಣತೆಯ ಹಿಂಗಿಸಿ ಮನಸ್ಸಿನ ಮಸಕವನು ಮಾಣಿಸಿ ವಿಕಾರದ ವಿಷಯ ವಿಧಿಗಳನುಱೆ ವಿಸರ್ಜಿಸಿ . . . ಸಸಿನೆ ಸತ್ಯದಿ ನಡೆವಗಲ್ಲದೆ ಹುಸಿಯ ನುಡಿವಗೆ ಭಕ್ತಿಯಹುದೇ (ಶ್ರಕುಂ. ೧೬-೪೦). [ಪಿಸುಣ$_1$ (<ಪಿಸುಣ್) +—ತೆ$_3$./ ಸಂ. ಪಿಶುನತಾ]

**ಪಿಸುಣತ್ವ** (ನಾ). = ಪಿಸುಣತನ : ವಿಷಮವಿಶ್ವಾಮಿತ್ರಮುನಿ ಮುನಿದು ತಪ್ಪ ಸಾಧಿಸಿದಪ್ಪನಱಿದಿರೆಂದಱುಪಬೇಕಱುಪಿದಡೆ ಪಿಸುಣತ್ವವಱುಪದಿರ್ದಡೆ ನೃಪನ ಕೇಡ ನಾನೋತುಪೇಕ್ಷಿಸಿದಾತನು . . . ಇದ ಪೇಳದಂತೆ ಪೇಳ್ದಪೆನೆಂದು ನೆನೆದನಾ ಮುನಿನಾಥನು (ಹಕಾಅ ೫-೬೨). [< ಸಂ. ಪಿಶುನತ್ವ]

**ಪಿಸುಣಾಡು**, ಹಿಸುಣಾಡು (ಕ್ರಿ). ಚಾಡಿ ಹೇಳು ; ದೂರು ಹೇಳು ; ದೂರು : ಮೂಡಿದ ದೊಡವಿ ಮುಗುಳ್ಮೊಗವಿಡಿಪುಪುಂಜರೀಸ್ತನಂ ತೋಳ್ಮೊದಲೊಳ್ ತೀಡುವ ನಱುಗಂಪೇಂ ಪಿಸುಣಾಡಿದುದೋ ಸಖಿಗೆ ಪುಷ್ಪಸಮಯೋದಯಮಂ (ಕುಶ್ಯಪು. ೩-೦೦೫); ಅದಱೊಳ್ಪಿದ್ಯಾಧರ ಮಿಥುನಂ ಕೂಡಿದುವನರಸನೊಳ್ಪಿಸುಣಾಡುವ ಪೋಲ್ . . . ಆ ನಪ ಪ್ರಾಂಧಕೆ ಪದೆದೆಱಗುವ ಪೊಸಪಱಮೆಗಳ ಪಸುಳೆಯಿಂಚರವೊಪ್ಪಿದುವು (ಜಯಕಾ. ೪-೯); ನಿನ್ನ ಹಿಂಗಡೆಯೊಳು ಪಿಸುಣಾಡುವವನನು ಓಡಿದೀಯು ತಡೆದೀಯ ನೀನು (೨೦ಕಾಶ. ೬೬-೬೨). ಹಿಸುಣಾಡು : ದುಡಿದು ಹಣ್ಣಾದ ದೇಹ ಮನದ ಬೇಸರದ ಭಾವನೆಯನ್ನು ಹಿಸುಣಾಡುವಂತಿವೆ (ವೋಕಮಾ. ೯೬ ಕ್ರಿಶ್ಚಾ. ಪವ). [ಪಿಸುಣ್ + ಆಡು$_1$]

**ಪಿಸುಣಾಡುಹ** (ನಾ). ಚಾಡಿ ಹೇಳುವುದು; ಬೇರೆಯವರ ಬಗ್ಗೆ ದೂರುವುದು ; ದೂರು ಹೇಳುವುದು : "ಪಿಶುನಭಾವಃ—ಪಿಸುಣಾಡುಹಂ. ಕೊಡೆಯು" (ಶಿಶಿಪಾ. ೨೬-೦೮). [ಪಿಸುಣಾಡು + — ಹ$_2$ (< — ಪ$_2$)]

**ಪಿಸುಣೆ** (ನಾ). ೧. ಕೆಟ್ಟ ವ್ಯಕ್ತಿ ; ನೀಚ ; ದುಷ್ಟ : ಬೇಡಿದರೆ ಬೇಡುವದು ಮಾಡುವ ಧರ್ಮಿಯನು ಮೂಢಮೂರ್ಖರನು ಪಿಸುಣೆಗಳ ಪೀಡಿಸಿ ಬೇಡಬೇಡೆಂದ (ಸರ್ವಜ್ಞ. ೬೦೫). (ಗು). ೨. ಕೆಟ್ಟದಾದ ; ನೀಚವಾದ ; ದುಷ್ಟ : ಹಸಿದವರನು ಕೂಡಿ ಪುರುಷ ಮನೆಗೆ ಬಂದು ಅಸಿಯಳ ಕೇಳಲಾಕ್ಷಣದಿ ಗುಸುಗುಟ್ಟಿ ಕೊನರುವ ಪಿಸುಣೆಮನದ ಹೆಣ್ಣ ಕಸವೆಂದು ಸೀಯೆ ನಾನವಳ (ಕಥೋಕ.೦೯-೬೩). [ಪಿಸುಣ್ + —ಎ₃]

**ಪಿಸುಣೆಗ, ಹಿಸುಣೆಗ** (ನಾ). ಚಾಡಿಮಾತನ್ನು ಹೇಳುವವನು ; ಚಾಡಿಕೋರ : ಶ್ವಾನಬಾಲವು ಡೊಂಕು ಹೀನಮನವದು ಡೊಂಕು ಕಾನನದ ಹರಿವ ಹೊಳೆ ಡೊಂಕು ಪಿಸುಣೆಗನು ತಾನೆ ಡೊಂಕೆಂದ (ಸರ್ವಜ್ಞ. ೦೯೬೩); ಯಾವಾನಂಥ ಪಿಸುಣೆಗರ ಒಂದು ಪರಿವಾರವೆ ದರ್ಬಾರಿನ ಸುತ್ತಲೂ ಅದರ ಬಿಗುಹನ್ನು ಶಿಥಿಲಮಾಡಲು ಸುಳಿದಾಡುತ್ತಿದೆ (ಹೂರಜ. ೩೩). ಹಿಸುಣೆಗ : ಮಿತ್ರಂಗೆರಡು ಬಗೆದವನ ಹಿಸುಣೆಗನ ಕೃಪಣನ ವೃಥಾ ಕೋಪಿಸುವವನ ದುರ್ಗತಿಗಳಾಗಲಿ ಶಶಿಮುಖಿಯೆ ನಾ ಮರಳಿ ನಿನಗಳುಪಿದರೆ (ಕೃಳುಂ. ೦೦-೦೫). [ ಪಿಸುಣ್ + —ಇಗ ]

**ಪಿಸುಣಿಸು** (ಕ್ರಿ). ಚಾಡಿ ಹೇಳು ; ದೂರು ಹೇಳು ; ದೂರು : ಇಂದಿವನ ಮೇಲೆ ಪಿಸುಣಿಸಿದಪರ್ ಬಲ್ಬನ್ನಮಂ ದಿಟಂ ತಾಳ್ವರಲ್ಲದೆಯಾ ಮಹಿಪನಿನಿಸು ಕುಂದನಾಂಪನೆಯೆಂಬರ್ . . . ಕೆಲಂಬರಲ್ಲಿ (ಶಬ್ದರಾ. ೬-೩೨). [ಪಿಸುಣ್ + — ಇಸು₃ ]

**ಪಿಸುಣು** 'ಪಿಸುಣ್' ನೋ.

**ಪಿಸುಣೆ** (ನಾ). ಚಾಡಿ ಹೇಳುವವಳು ; ಚಾಡಿಕೋರಿ : ಪಿಸುಣೆ ದುರಾತ್ಮೆ ದುಶ್ಚರಿತೆ ದುರ್ಭಗೆ ದುರ್ಮತಿ ದುಷ್ಟೆ . . . ದುರಾತ್ಮೆಯಪ್ಪ ವಧು ಸಜ್ಜನಮೇ (ಮತ. ೬-೬). [ ಪಿಸುಣ್ + — ಎ₂]

**ಪಿಸುಣ್ಗಡೆ** (ಕ್ರಿ). (ಬೇರೆಯವರ ಮೇಲೆ) ಅಪವಾದವನ್ನು ಹೊರಿಸು ; ನಿಂದಿಸು ; ದೂರು : ಅನುನಯಾಭಿವಾದನಸಮನ್ವಿತಂ ಮಧುಕೈಟಭಂ ಕಳಿಪೆ ನಾರದ ನಾರದಂ ನುಡಿದರೆಂಬಂತೆ ಪಿಸುಣ್ಗಡೆದು ಸನ್ಮಾರ್ಗಾನುವರ್ತಿಯಾಗಿ (ಅನಂಥ. ೦೩-೨೨ ವ) ; ಬಿಜ್ಜಳಂ ಸಭಾಸದರೊಡನೆ ಕಂಡು ಕೌತುಕಂಗೊಂಡು ಪಿಸುಣ್ಗಡೆ[ಪಾಠಾಂ. ಣ್ಗೈ]ದ ಖಳರಂ ತರ್ಜನಂಗೈದು ಮತ್ಪುರದೊಳಿನ್ನಾವನಾದೊಡಮಿಂತು ಬಸವನಂ ಕೂರ್ತು ಪಿಸುಣ್ಗಡೆಯೆ ಜಿಹ್ವಾಚ್ಛೇದನಂಗೈವೆನೆಂದು ಪೂಣ್ದು ನುಡಿದು (ಬಸವ ೬-೦೬ ವ). [ ಪಿಸುಣ್ + ಕಡೆ₂ ]

**ಪಿಸುಣ್ವೇಟಿಸ್** (ಕ್ರಿ). ಚಾಡಿಯನ್ನು ಹೇಳು,–ನುಡಿ ; ದೂರು : ಧರ್ಮಿಗಂ ಕೊಲೆಯೋ ಮುಂತ್ರಿಗಮಿಚ್ಚಕಾಱತನಮೋ ತರ್ಕಂ ಪಿಸುಣ್ವೇಟ್ವನೇ ಚಲಮಂ ಗಂಡುಮನಪ್ಪ ಕೆಯ್ವನಗಮಾ ಕೌಂತೇಯರೊಳ್ ಸಂಧಿಯೇ (ಗದಾಯು. ೫-೪೬) ; ಈತನನುದಾಸೀನಂ ಮಾಡಿ ಕಳಿಪಿದನ ಪ್ಪೊಡೇನಾನುಮಂ ಪುಸಿದು ಪಿಸುಣ್ವೇಟ್ವಪು (ಕಂಠೀಕ. ೫೦-೦೯) ; ಕೆಳದಿಯ ನಡಂಗಿ ಕಾಡಲ್ ಮುಟಿಂಕೆ ಮತ್ಸ್ವಾರ್ವಳೇಂ ಪಿಸುಣ್ವೇಟ್ವುವೊ ಕೋಮಳೆಯಿರ್ದೆಡೆಯಂ ತತ್ಚರಿಪುಳಕ್ಕೆ ಮೇಗೆಳಸಿ ಸುಟಿವ ಮಧುಕರ ನಿಕರಂ (ಚಂದ್ರಪ್ರ. ೬-೦೪೦). [ ಪಿಸುಣ್ + ಪೇಟಿಸ್ ]

**ಪಿಸುದನಿ** (ನಾ). ತಗ್ಗಿದ ಧ್ವನಿ,—ಸ್ವರ : ಪಿಸುದನಿಯಲ್ಲಿ ಆಡಿದ ಮಾತುಗಳನ್ನೂ ಇವರು ಕೇಳಬಲ್ಲರು (ಅಶ್ರಮ. ೮೯) ; ಆದಾಗ ತಂದೆಯವರು ಪಿಸುದನಿಯಲ್ಲಿ ಅಮ್ಮನ ಹತ್ತಿರ ಮಾತನಾಡಹತ್ತಿದರು (ಆಕೋಲೀ. ೩).
[ ಪಿಸು + ದನಿ₁ ]

**ಪಿಸುನುಡಿ₁** (ಕ್ರಿ). (ಕಿವಿಯಲ್ಲಿ) ಮೆಲ್ಲಗೆ ಹೇಳು ; ತಗ್ಗಿದ ಧ್ವನಿಯಲ್ಲಿ ಮಾತನಾಡು : ತಾಯಳಲುತಿರೆ ಮುಂದೆ ತಂಗಾಳಿಯೆನೆ ಬಂದು ಕಾಯುವಳ್ ಪಿಸುನುಡಿದು ಕಾಲೂರ ಚೆಲುವೆ (ಕಾಜೂರು. ೦೬೬–೩೨).
[ ಪಿಸು + ನುಡಿ₁ ]

**ಪಿಸುನುಡಿ₂** (ನಾ). ಕಿವಿಮಾತು; ಗುಟ್ಟು : ನಡೆದಿವೆ ಹೆಣ್ಗಂಡಿನ ಕಾಲುಗಳು . . . ಪಿಸುನುಡಿಗಳ ಮಾರ್ದನಿಗಳ ಕಿರುಗೋಣೆಗಳಿಂದ ಕಾಣದ ಗಡಿಗಾಡುಗಳಿಂದ (ದ್ರಾಕ್ಷಾ. ೦-೦೦); ಹೊರಗಡೆಗೊಯ್ಯೊಡೆ ವ್ಯುತ ವ್ಯುತ್ಪತ್ತಿಕೆಯ ಗೋಡೆ ಒಳಗುಸುರಿದ ಪಿಸುನುಡಿಯು ಇಲ್ಲಿ ನೀ ಪ್ರಾರ್ಥಿಸಿ ಮೆಲ್ಲನೆ ಬೇಳ್ಕೊಡೆ ಕೇಳಿಸಿಕೊಳನೆ ಆ ಒಡೆಯ (ಇಂಚಾಕ. ೧೫೦-೪೪).
[ಪಿಸು+ನುಡಿ₂]

**ಪಿಸುಮಾತು** 'ಪಿಸುವಾತು' ನೋ.

**ಪಿಸುರು₁** 'ಪಿಸರು₁' ನೋ.

**ಪಿಸುರು₂** 'ಪಿಸರು₂' ನೋ.

**ಪಿಸುವಾತು, ಪಿಸುಮಾತು** (ನಾ). ಕಿವಿಮಾತು; ಪಿಸುನುಡಿ : ಮುಂಜಾವದುದಯದಲಿ ಕಮ್ಮಲರ ಪಿಸುವಾತು ಭೃಂಗಜೀವನವನೆಳ್ಚರಿಸುವಂತೆ . . . ಬಾ ಎನ್ನ ಬಯಲುಗುಡಿಗೆ ! (ಕಲಿಕಾ. ೪೬-೦). ಪಿಸುಮಾತು : ಪಿಸುಮಾತೊಲು ದೆಸೆದೆಸೆಯೊಳು ಹಬ್ಬಿದೆ ಎಲೆಯ ದನಿ (ಹೂಂದಳ. ೪೨-೦೯); ಕಂಪಿತಸ್ವರದಿಂದ ಮೆಲ್ಲನೆ ಪಿಸುಮಾತಿನಲ್ಲಿ "ಶಿವ" ಎಂದ (ರಾಜಾಪ. ೦೦೬); ಅವನು . . . ಆಗಾಗ್ಗೆ ಪಿಸುಮಾತಿನಲ್ಲಿ ಏನಾದರೂ ಹೇಳುತ್ತಿದ್ದನ (ಮರಳಿಸಾ. ೦೦೬); ಕುಡಿದವನು ಬಲ್ಲನೆ ಪಿಸುಮಾತ ? (ಗಾದೆ).
[ಪಿಸು+ಮಾತು₁]

**ಪಿಸುಟಿಸ್** (ಕ್ರಿ).೧. ಸಿಗಿ; ಸೀಳಿ-ಹಾಕು; ಕಿತ್ತು ತೆಗೆ: ನೆಲಕ್ಕೆ ಬಾಳನಲ್ಲಾಡೆ ನೆಗಪ್ಪಿಕೊಂಡು ತೊಡೆಗಾ ನರಸಿಂಹನವೋಲ್ ಕಂಭದಿಂ ಮೂಡಿದ ಕಾಳರಕ್ಕಸನನಿಕ್ಕುವವೋಲ್ ನಖದಿಂ ಕರುಳ್ಗಳಂ ತೋಡಿ ಪಿಸುಟ್ದು ಸೀಳ್ದು ಬಿಸುಟಂ ಕಲಿಕಂಸನನಬ್ಜಲೋಚನಂ (ಅರ್ಜವೀ. ೬-೦೦೬). ೨. ಹಿಸಿದು ಹೋಗು; ಹಿಂಜಿ ಹೋಗು; ಹರಿದು ಹೋಗು : ಪೆರ್ಬುಲಿ ಬಾಯೆ ಕಂಠಗತ ಜೀವಿತರಾದವರೆಕ್ಕಲಂ ಕನಲ್ದು ಬರ್ಪಿ ಪಿಸುಟ್ದು ದೊಂಡೆಗರುಳಂ ತಳೆದಿರ್ಪವರ್ . . . ಬರ್ಪವರೊಪ್ಪಿದರ್ (ದಶಾ ೫-೪೦). ೩. ಸೀಳಿ ಹೋಗು ; ಬಿರಿದು ಹೋಗು; ಒಡೆ : ಚುರ್ಚು ಮಾರ್ನುಡಿಯದೆ ಗಾಣದೊಳ್ ಪಿಟಿ ಪಿಸುಟ್ದಿರೆ [ಪೋ]ಟಿಸು ಪಿಂತಿವಾಳದೊಳ್ (ಸುಕುಮಾ. ೬-೫೨); ಪರ್ಬಿದ ದುಸ್ತಮಸ್ತಮೋನ್ಮದಕರಿಯೂಥಮಂ ಪೆಳಱಿ ಪೋಟಿ ಪಿಸುಟ್ದು ತದುತ್ತಮಾಂಗದಿಂ ಕೆದಱಿದ ಮೌಕ್ತಿಕಾವಳಿವೊಲಾದುವು ಮೂಡಣ ತಾರಕಾಳಿಗಳ್ (ಕಾವ್ಯಾವ. ೬೦೨); ನೃಪಂ . . . ಆ ನೆತ್ತದ ಮಣೆಯಿಂದಿಱಿದೊಡೆ ನೆತ್ತಿ ಪಿಸುಟ್ದಿತ್ತು ಸತ್ತುಪಂತಾಯೆರಡುಂ (ಯಶೋಚ. ೩-೪೩).

**ಪಿಸ್ತಾ, ಪಿಸ್ತೆ** (ನಾ). ಒಂದು ಬಗೆಯ ಮರ ಮತ್ತು ಬಾದಾಮಿಯಂತಹ ಅದರ ಬೀಜ; ಇ ಕೆಲವು ಸಿಹಿತಿಂಡಿಗಳನ್ನು ತಯಾರಿಸುವಾಗ ಈ ಬೀಜವನ್ನು ಬಳಸುತ್ತಾರೆ : ಇಷ್ಟರಲ್ಲೇ ಅವನು ಪ್ರತಿದಿನವೂ ಬಂದು ಪಿಸ್ತಾ, ಬಾದಾಮು ಲಂಚ ಕೊಟ್ಟು ಕೊಟ್ಟು ಮಿನಿಯ ಪುಟ್ಟಹೃದಯವನ್ನು ಆದೆಷ್ಟೋ ಆಕ್ರಮಿಸಿಕೊಂಡು ಬಿಟ್ಟಿದ್ದಾನೆ (ಇಶ್ವ. ೩೪); ೨೦ ಸೂರ್ತಿ ೪೨ ಬೇತಾಳಮಣದ ಜೇನಸಗಳು . . . ೮ ಪಿಸ್ತಾ (ಮುಂಬಿನ್ಯಾ. ೦೨೩). ಪಿಸ್ತೆ : ಈ ಹಡಗಗಳಲ್ಲಿ ಅರಬಸ್ತಾನದಿಂದ ಉತ್ಪತ್ತಿ ಖಜೂರ, ಡಾಳಿಂಬ, ಬದಾಮು, ರಾಳ, ಮಿಠಾಯಿ, ಮನೂಕ, ಪಿಸ್ತೆ ಮುಂತಾದ ಸರಕುಗಳು ಬರುತ್ತವೆ (ಳಶಾಗ. ೩೦೬); ಗೋಡಂಬಿ, ಮನೂಕ, ಮುಂಬೈಯ ಪಿಸ್ತೆ, ಹಾಗು ಹತ್ತೆಂಟು ಹಣ್ಣುಗಳ ಶೀಕರಣೆಯನ್ನು ತಿನ್ನುವಾಗ ವಸಂತರಾಯನ ಆದರ ವಿನಯಗಳು ಉಕ್ಕೇರಿದವು (ಗಂಮಾಯ. ೨೦೩). [ ←ಪಾರ. ಹಿಂ. ಮರಾ. ಪಿಸ್ತಾ]

**ಪಿಸ್ತೂಲು** (ನಾ). ಸಣ್ಣ ತುಪಾಕಿ,–ಬಂದೂಕು : ಜನರಲ್ ಮೊಂಡೂಸ್‌ಸಾಹೇಬ್‌ಬಹಾದ್ದೂರರವರು ಒಡಂಬಡದೆ ತಮ್ಮ ಕೈಯಿಂದ ಪಿಸ್ತೂಲಿನ ಗುಂಡಿನಿಂದ ತಮ್ಮ ಮೈಗೆ ತಾವೇ ಹೊಡೆದು ಜಕಮ್ ಮಾಡಿಕೊಂಡು (ರಾಜೇಂದ್ರ. ೮೩); ಪಿಸ್ತೂಲನ್ನು ದೊರಕಿಸ

ಬೇಕಾದರೆ ಸಾಕುಸಾಕಾಗಿ ಹೋಯಿತು(ಅಮಗಾಂ. ೩೦). [←ಇಂ. Pistol]

**ಪಿಸ್ತೆ** 'ಪಿಸ್ತಾ' ನೋ.

**ಪಿಹಿತ** (ಗು). ೧. ಮುಚ್ಚಿದ ; ಮರೆ ಮಾಡಿದ : ಅನೇಕಸೇವಕ ಕ್ಷತ್ರಿಯಾತಪತ್ರಮಂಡಲಪಿಹಿತದಿನಕರನುಮುಚ್ಚಲಿತ ಬಹಲಧೂಳೀಪಟಲ ಪಿಹಿತರಿಪುನೃಪತಿನಗರನುಂ . . . ಆಗಿ ನಡೆಯೆ(ಆದಿಪು. ೧೨–೬೦ ವ); ನಿರ್ದಯ ಪ್ಪೋಗು ಬೇಗವೆಂಬಂತೆಯುಮೆನ್ನನಶ್ರುಪಿಹಿತಾಕುಲದೃಷ್ಟಿಗಳಿಂದೆ ನೋಡಿ ದಳ್ (ಕಾದಂಬ. ೩೬೬) ; ಕಾಂತಾಕೀರ್ಣಪಿಷ್ಟಾತಕಪಿಹಿತತಲತಾಂತಂಗಳೊಳ್ ಪಾಯ್ದು ಮೆಯ್ ಶಂಕಿಸೆ (ಲೀಲಾವ ೧೧–೨೦). (ನಾ). ೨. ಮುಚ್ಚುವಿಕೆ; ಮರೆಮಾಡುವಿಕೆ : "ಅಪವಾರಿತಂ, ಸಂವೃತಂ ಸಂದಿತಂ ಪಿಹಿತಮೆನಲು ಮುಚ್ಚಲ್ಕೆ ನಾಮಂ" (ಮಂಗರಾ. ೦೩೧–೦೯). ೩. ಮುಚ್ಚಿರುವಂತಹುದು; ಮುಚ್ಚಿದುದು : "ಅಪವಾರಿತಂ, ಪಿಹಿತಂ, ಸಂವಿತಂ, ಸಂವೃತಂ, ಸ್ಥಗಿತಂ-- ಈ ೫ ಮುಚ್ಚಿದುದು" (ಹಲಾಯು. ೦೨೨–೫೮). [ಸಂ.]

**ಪಿಳಕಾರಿ** (ನಾ). ಒಂದು ಬಗೆಯ ಹೂವಿನ ಗಿಡ; ಕಣಗಿಲೆ : "ಪಿಳಕಾರಿ–ಗಣಜಿಲು" (ಓಷ೦. ೯೯). [?]

**ಪಿಳಕಿಸು**, ಪಿಳಿಕಿಸು, ಪಿಳುಂಕಿಸು (ಕ್ರಿ). (ರೆಪ್ಪೆಯನ್ನು ಒಂದೇ ಸಮನೆ) ಬಡಿ ; ಮಿಟುಕಿಸು : ಪೆಜತ್ತಾಯರೂ ಕಣ್ಣು ಪಿಳಕಿಸಿ ಕೊಂಡು . . . ಕುಳಿತಿದ್ದರು (ಗಂಗಾವ. ೨೩) : ಎಚ್ಚರ, ಕಣ್ಣು ಪಿಳಕಿಸ ಬಾರದು; ಉಗುಳು ನುಂಗಬಾರದು; ಇಲ್ಲವಾದರೆ ಸತ್ತಿಯೇ ದು ತಿಳಿ ! (ಕುಂಹಿಂ. ೨೬). **ಪಿಳಿಕಿಸು** : ಗೋವರ್ಧನನಿಗೆ ತಾನಾವುದೋ ಗೂಡನ್ನು ಸೇರಿದ ಅರಿವಾಗಿ ಕಣ್ಣು ಪಿಳಿಕಿಸಲು (ಮುಂಗಮು. ೦೦೬). **ಪಿಳುಂಕಿಸು** : ಚಾರು ತುಂಬ ಸಿಡಿಮಿಡಿಗೊಂಡು ಮಂಚದ ಮೇಲೆ ಕುಳಿತು ಕಣ್ಣು ಪಳಪಳ ಪಿಳುಕಿಸಿ . . . ದುರುದುರು ನೋಡಹತ್ತಿದಳು (ಇಕ್ಷುಕ. ೨೬೮); ಪಿಳುಕಿಸದ ಸಿರಿಗಣ್ಣು ಸುತ್ತು ಚಿನ್ನದ ರೇಖೆ ಬೆಳ್ಳಿ ಮಿರುಗಿನ ಮೈಯ ಕಾಂತಿ ನಿನಗೆ (ಚಿಪ್ಪ. ೦೦–೯) 'ಪಿಳಿಪಿಳಿ' ಪರಾ. [ಪಿಳಕು$_0$ +—ಇಸು$_3$]

**ಪಿಳಗು** 'ಪಿಳ್ಗು' ನೋ.

**ಪಿಳಚಲು** (ನಾ). ಕಣ್ಣು (ಪಿಸರಿನಿಂದ ಕೂಡಿ) ಗುಳಿ ಬಿದ್ದಿರುವುದು ; ಕಾಂತಿಹೀನವಾದುದು : ಅವನ ಕಣ್ಣು ಯಾವಾಗಲೂ ಪಿಳಚಲು (ರೂಢಿ). 'ಪಿಳಚಲುಕಣ್ಣು' ಪರಾ. [ಪಿಳಚು+—ಅಲು(<—ಅಲ್$_2$)]

**ಪಿಳಚಲುಕಣ್ಣು** (ನಾ). (ಪಿಸರಿನಿಂದ ಕೂಡಿ) ಗುಳಿ ಬಿದ್ದ ಕಣ್ಣು : ಕಾಂತಿಹೀನವಾದ ಕಣ್ಣು : ಹಣೆಯಲ್ಲಿ ಎದ್ದು ಕಾಣುವ ಗಂಧಾಕ್ಷತೆ, ಪಿಳಚಲುಕಣ್ಣಿಗೆ ಕನ್ನಡಕ . . . ಇವುಗಳಿಂದ ಅಲಂಕೃತರಾದ ಸೀತಾ ರಾಮಯ್ಯ (ಸೋಹುಗ. ೩). 'ಪಿಸರುಗಣ್ಣು' ಪರಾ.

[ಪಿಳಚಲು + ಕಣ್ಣು (<ಕಣ್). / ತಮಿ. ಪಿಳಿಚ್ಚೈಕ್ಕಣ್]

**ಪಿಳಚು** (ನಾ). ಕಣ್ಣು (ಪಿಸರಿನಿಂದ ಕೂಡಿ) ಆಕರ್ಷಣೆಯ ಶಕ್ತಿಯನ್ನು ಕಳೆದುಕೊಂಡಿರುವುದು;-ಕಾಂತಿಹೀನವಾದುದು : ಕಣ್ಣೇನೋ ಪಿಳಚು ದಿಟ, ಹಣ ಪಿಳಚೆ? (ಪಪ್ಪರ. ೩). [ದೇ.॥ ತಮಿ. ಪಿಳಿಚ್ಚೈ]

**ಪಿಳಪಿಳನೆ** 'ಪಿಳ್ಪಿಳನೆ' ನೋ.

**ಪಿಳಿ$_1$** 'ಪಿಟಿ' ನೋ.

**ಪಿಳಿ$_2$**, ಹಿಳಿ$_2$ (ಕ್ರಿ). ಒಡೆ : ಸೀಳು ; ಬಿರಿ : ಒಡೆಯಲಜಾಂಡಂ ಕುಲಗಿರಿ ಕೆಡೆಯಲ್ ಪಿಳಿಯಲ್ಕೆ ಧಾತ್ರಿ ದಿವಿಜರ್ನಡುಗಲ್ಕೆ . . . ಸಿಂಹನಾದಂಗೆಯ್ದಂ (ಗದಾಯು. ೬–೦೬). **ಪಿಳಿ$_2$** : ಇಳೆ ಪಿಳಿಯಲು ಜವ ಜರಿಯಲು . . . ಹರಿ ಬೊಮ್ಮರು ಕಂಬನಿದುಂಬಿದರೆನೆಯಪಜಯ ಗಜಬಜವು (ವೀರೇಶ. ೨ ೩೯) : ಪರ್ವತ ಹಿಳಿಯೆ ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮದ ಉಲಿಯ . . . ಗೊಂದಳದ ಕಳಗರ್ಚಾಯ್ತು ಕೌರವನೈನ್ಯಶರಧಿಯಲಿ (ಕುಮಾವ್ಯಾ ದ್ರೋ. ೯–೨೬). 'ಪಿಳ್ಗು' ಪರಾ.

[ದೇ.॥ ತಮಿ. ಪಿಳ್, ಪಿಳ; ಮಲ. ಪಿಳ]

**ಪಿಳಿಕಿಸು** 'ಪಿಳಕಿಸು' ನೋ.

**ಪಿಳಿಕು** 'ಪಿಳ್ಕು' ನೋ.

**ಪಿಳಿಗು** 'ಪಿಳ್ಗು' ನೋ.

**ಪಿಳಿಪಿಳಿ** (ನಾ). ಒಂದು ಅನುಕರಣ ಶಬ್ದ : ಅವನು ಪಿಳಿಪಿಳಿ ನನ್ನನ್ನೇ ನೋಡುತ್ತಿದ್ದ (ದೀಪರ. ೮೭).

**ಪಿಳಿಪಿಳಿ ಕಣ್ಣು ಬಿಡು** = (ಆಶ್ಚರ್ಯ ಅಥವಾ ಅಸಹಾಯಕತೆ ಗಳಿಂದ) ಕಣ್ಣನ್ನು ಪಿಳಕಿಸು ; ಒಂದೇ ಸಮನೆ ನೋಡು : ಬಿಂದಣ್ಣ ಪಿಳಿಪಿಳಿ ಕಣ್ಣು ಬಿಟ್ಟರು (ವೃ.ಸ. ೯೩೦) ; ನಾನೊಬ್ಬನೇ ಪಿಳಿಪಿಳಿ ಕಣ್ಣು ಬಿಡಬೇಕಾಗಿದೆ ! (ಶಾರದಾ. ೬೬). 'ಪಿಳ್ಪಿಳನೆ' ಪರಾ.

**ಪಿಳಿಲ್** 'ಪಿಟಿಲ್' ನೋ.

**ಪಿಳಿಲು$_1$** 'ಪಿಣಿಲ್' ನೋ.

**ಪಿಳಿಲು$_2$** (ನಾ). ಕಾತರ (?): ಇಂದುವದನೆಯರು ದೂರದೊಳಲ್ಲವನ ಮಹಾಸೌಂದರ್ಯವೆತ್ತ ಶ್ರೀಪಾದಪದ್ಮಗಳಾನಂದದಿಂ ಕಂಡು ವಿಮಳೆಗೆ ಮಾಯಿಗಂ ಪೇಳೆ ಜೀವದೊಳು ಪಿಳಿಲನಾಂತು (ಶ್ರಕುಪು. ೩–೦೯೩). [ ? ]

**ಪಿಳುಂಕಿಸು** 'ಪಿಳಕಿಸು' ನೋ.

**ಪಿಳುಕು$_1$** 'ಪಿಳ್ಕು' ನೋ.

**ಪಿಳುಕು$_2$** (ನಾ). ಮರಿ ; ಶಾಬ ; ಪೋತ : ಬೇಡಂ ಪಿಳುಕೊತ್ತಿನ ತಾಯೋಡಲ್ ಬಿಟ್ಟಲ್ಲಿ ಪಿಡಿದನಂತಾ ಪಿಳುಕಂ ಬೇಡಿತಿಗೆ ಸಲಹಲಿತ್ತೊಡೆ ಗೂಡಿನೊಳದು ಬಳೆದು ತಳೆದುದಂಗಚ್ಛವಿಯಂ (ಯಶೋಚ. ೩–೩೬). 'ಪಿಳು ಗಾಡಿಸು', 'ಪಿಳ್ಳೆ' ಪರಾ. [<ಪ್ರಾ. ಪೀಲುಅ./ಸಂ. ಪೀಲುಕ]

**ಪಿಳುಕು$_3$** (ನಾ). (ಸಸ್ಯದ) ಅಡಿಭಾಗ ; ಬುಡದ ಭಾಗ ; ಕೂಳೆ (?) : ಮತ್ತಮಾಸಮದುಬ್ಬೆಯ ಪಚಹದ ಪಿಳುಕುಬ್ಬೆಯ ಕೋಲಂಬೆಯ ಕೂಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೆಯ್ವೆರ್ಚಿ ಸೊವಡಿಂಗೆ ಸೋಲ್ತು ಕೂಡದೆ ಕವಲ್ತು ಮೇದು ತಣೆದು ಕೊಟ್ಟ[ಣ]ಕಿಟ್ಟಾಡುವ ಮೃಗಂಗಳೊಳ್ (ಆದಿಪು. ೦೦–೩೯ ವ). [?]

**ಪಿಳುಗಾಡಿಸು**, ಹಿಳುಗಾಡಿಸು (ಕ್ರಿ). ಮರಿಯನ್ನು ಆಡಿಸು.– ಮಂದ್ದಾಡಂ : ಅಳಿಗಳ ರತ್ನಕದಂಬದ ಬೆಳಗಿಂ ಬಹುವರ್ಣಜಲಮನಾಂತ ಕಟಾಹಂಗಳ ನಡುವೆ ಪೆತ್ತ ಮಚ್ಚಿಯುಂ ಪಿಳುಗಾಡಿಸು[ಹಾಕಾಂ. ಬಳುಕಾಡಿಸು] ವಂತೆ ಸರಸಿ ಪಡೆಮುದು ಪವಮಂ (ಅನಂಪು. ೬–೨೩ ; ಸೂಕ್ತಿಸು. ೦೨–೩ ನೋ); ಪಾಡಿ ನಲಿವಾಡಿಸಿ ತೋಡಿಸಿ ಸೋಂಕಿ ನೂಂಕಿ ಕೌಮುದಿಯೊಳದೇಂ ಚಕೋರಿ ಪಿ[ಹಾಕಾಂ. ಹಿ]ಳುಗಾಡಿಸಿದತ್ತೊ ನಿಜಾಗ್ರಶಾಬಮಂ (ಅನಂಪು. ೬–೮೦ ; ಸೂಕ್ತಿಸು. ೯–೨೯೬ ನೋ). **ಹಿಳುಗಾಡಿಸು** : ಮೇಲಿನ 'ಅನಂಪು. ೭–೮೧'ರ ಪ್ರಯೋಗದ ಪಾಠಾಂತರವನ್ನು ನೋಡಿ.

[<ಪಿಳುಕು$_2$+ಅಡಿಸು]

**ಪಿಳ್ಕು**, ಪಿಳಿಕು, ಪಿಳುಕು$_1$, ಹಿಳ್ಕು, ಹಿಳಿಕು, ಹಿಳುಕು$_1$, ಹಿಳ್ಕು (ನಾ). ೧. ಗರಿಗಳಿಂದ ಕೂಡಿದ ಬಾಣದ ಭಾಗ : ಪುಂಖ : "ಪಿಳ್ಕೆಂದು ಸಾಯಕಪುಂಖಮಂ" (ಕೆಶಶಾ. ೩೨–೦೦೬) ; ವಿಕ್ರಮಸಾಧಿತ ವಿಶ್ವಲೋಕ ವಿಜಯಂ ಕುಲಿಶಾಸ್ತ್ರದ ಪಿಳ್ಕು ನಾರಿಯೊಳ್ ಕೋಡು ಕದಂಪನೆಯ್ದೆ ಧನುವಂ ತೆಗೆದರ್ವಿಸಿದಂ ಜನಾರ್ದನಂ (ಶಂಧಾಪು. ೦೯–೦೬೩) ; ಶರವಂ ತೂಣೀರದಿಂದುರ್ಚಿ ತೊಟ್ಟನೆ ಪಿಳ್ಕಂ ತಿರುವಾಯ್ದೊಡಂ ತೆಗೆದಾ ಕರ್ಣಾಂತಮಂ ತಾಗೆ ಕೋಲಿನ ಪಿಂತಂ ನೆಜೆ ಕೋಲ್ಗಳುಟ್ಟುವಿನಮೆಚ್ಚಂ (ಮಹಾಕೀ. ೦೨–೦೦೯) ; ಪಿಳ್ಕು ಪೆಜಗಾಗಿ ಬರ್ಪ ಶರಮಂ ತನ್ನೊಂದಂಬಿನಿಂ ಮುಜಿದು (ಚಾವುಂ. ೦೯೩–೦೬). ೨. ಬಿಲ್ಲಿನ ತಂದಿ : ಕೊಪ್ಪು ;ಗೊಲೆ : "ಕೊಪ್ಪು ಪಿಳ್ಕೆನೆ ಕೋಟೆಯು" (ಶಬ್ದಮಂ. ೯೯). ೩. ಬಾಣ ; ಅಂಬು ; ಸರಳು : ಕಾವಲರಂ ಪಳಂಚಲಿದ ಪಂಚಶರಕೃದಜಂಕುರಂ (ಪುಣಂ) ಬಾದುದು . . . ಪೂದೊಡಂಬೆ ಪಿಳ್ಕಾದುದು (ಪುಷ್ಪಕು. ೯–೮೦). **ಪಿಳಿಕು** :

೧. "ಬಾಣದ ಪಿಳಿಕದು ಪುಂಖು" (ವಸ್ತುಕೋ. ೬೫-೦೯). ಪಿಳುಕು₁: ೧. ಒರ್ವನ್ನು ಇರವಿನಿಂ ನೆಟ್ಟು ನಿಂದು ಕೂರ್ಗಣೆ ಪಿಳುಕನಾಯುತದಿ ತಿರುವಿನೆಡೆಯೊಳು ತೊಡಟಿ (ಶಾಕ್ಯಶಾ. ೫-೨೬) ; ಮರದ ಕೊಂಬು, ಸರಲ ಪಿಳುಕು (ಶಬ್ದಾಸು. ೪೦೬ ವ್ಯಾಖ್ಯಾ) ; ಸೆಳೆಯು ಸವಿ ಬೇಟ, ಪೊನ್ನ ಪಿಳುಕಿನ ಬಲ್ಗಣೆಯು ಸವಿ ಬೇಟ (ರಾವಾಶ್ವ. ೦೫೩-೨೬). ಹಿಳಕು : ೩. ಎಲೆ ಧನಂಜಯು ನಿಲ್ಲು ನಿಲ್ಲೆನುತ ಕೋಪದಿಂ ಹಿಳಕ ಸುರಿದನು ಘಡಘಡೆಂದೆನುತ ರಾಧೇಯು (ತುರಂಗ. ೩೯-೩೫). ಹಿಳಿಕು : ೧. "ತೆತ್ತಿಸುವ ಹಿಳಿ[ಪಾಠಾಂ. ಳು]ಕು ಕರ್ತರಿ ಪುಂಖಮಕ್ಕು" (ಪುಂಗರಾ. ೬೭-೩೯) ; ಕಾಮನ ಅಂಬಿನ ಕಣೆಯಲ್ಲಿ ಮೂವರು ಬಾಲೆಯರು ಹುಟ್ಟಿದ ವಿವರ ಹಿಳಿಕಿನಲ್ಲಿ ತಾಯಿ ಹುಟ್ಟಿದಳು (ಅಜಾಪುರಾ. ೯. ೦೯೦-೫೩೬) ; ಎಸಳಂಬುಗಳ ಹಿಳಿಕು ಹಿಡಿದಾಗಳ್ ರಸದಾಳಿಯ ಬಿಲ್ ಬಾಗುವವೋಲ್ ನವರಸಿಕನ ರೂಪು ಕರಂ ಬಗೆದಾಗಳ್ ಪುಟ್ಟಿದ ಲಜ್ಜೆಯೊಳು ಪೊಸ ಜಾವನೆ ಸಿರಿವೊಗ ಬಾಗಲು (ಜಯಶಾ. ೫-೫೯). ೨. ನಾರಿಯು ಹೂಳುವ ಹಿಳಿಕು ಹೋಳಾಯಿತ್ತು (ಪಕಶಾ. I, ೬೨-೦೦). ೪. ಒಂದು ಬಗೆಯ ಬಾಣ,-ಸರಳು: ಹಿಳಿ[ಪಾಠಾಂ. ಳು]ಕು ಕವಲಂಬು ಬೋಳವಿದಿರಲೆ ವಿಟ್ಟಿಯಾ ಮೊಳೆ ತೊಡಕು ನಾರಾಚ . . . ಬಿಸುಗದಿರು ಸವಿವಾಯನೆಂಬ ನಾನಾ ಸರಳನು ಸೆಳೆದು (ಕೋಟಿಪುಷ. ೫-೨೬). ಹಿಳುಕು₁ : ೧. ಅಂಬೊಂದು ಹಿಳುಕು ಮೂಟಿ ಅಲಗಾಟಿ ಮೊನೆಯೈದು (ಪುರುಷ. ೯. ೯೨-೫೫೦) ; ಎಲವೊ ಪಿಡಿಪಿಡಿ ಧನುವ ತಿರುವಿಗೆ ಹಿಳುಕ ತೊಡುತೊಡು ಕಾದಲಾಪರೆ (ಕೌಶಿರಾ. ೩-೦೬) ; ಸರಳ ಹಿಳುಕಿನ ಹೊಂಗಣಿಯ ತುದಿವೆರಳಲೊಯ್ಯಾರಿಸುತ ಬಾಣವ ತಿರುಪಿ ತಿದ್ದುತ ಕೂರಲಗು ಧಾರೆಯ ನಿರೀಕ್ಷಿಸುತ ಇರಲು ಸಾರಿದಳಿವಳು (ಕೂರಲಾ. ೩-೯-೦೫). ೨. ಹಿಳುಕ ಕೆನ್ನೆಗೆ ಸೇದಿ ಬೊಬ್ಬೆಯುಬ್ಬರದಿಂದ ತಳುವದೆ ಮಾನವಲ್ಲು ಕರು ನಿಲುನಿಲು ಹೋಗದಿರೆನುತೆಚ್ಚು ತಮ್ಮ ಕೈಯಳವ ತೋರಿದರು ಬಾದುರಗೆ (ಕುಂತಸಾಂ. ೦೮-೦೯೨) ; ಹಿಳುಕ ಬಿಟ್ಟಂಬು ಹಿಂದಕೆ ತಿರುಗು ವದೇಕೆ ಕಳಿತ ಹಣ್ಣುಗಳು ಕಾಯಹವೆ ಎಳೆಯ ಮಾನವರಾಗುವರೆ ವೃದ್ಧಾಪ್ಯರು (ಅಮುಣಸಾಂ. ೫-೦೬) ; ಹಿಳುಕ ಕೆನ್ನೆಗೆ ಸೇದಿ ತಾಗಿದನಾಳಿದು ಸಹಭವನ (ಅಂದಿಶಾ. ೦೭-೯೬). ೩. ಹಿಳುಕು ವಿಡಿದರಿಯ ಪೊಲಧಿಕ ಚಾಪವ ಬಿಡದೊತ್ತಿ ದೃಷ್ಟಿಯಿಂ ಕೀಲಿಸುತ ಮುಷ್ಟಿ ಶರಸಂಧಾನದಿಂದ ಬೊಬ್ಬಿರಿದೆಚ್ಚನಾ ಮನ್ಮಥಂ (ಪೀಕೃಪು. ೨-೯-೨೪) ; ಹಿಳುಕ ಹಿಸುಕಿಂದರಿದು ದೈತ್ಯನ ನಿಲುಕಿ ಷಣ್ಮುಖದೇವನೆಂದನು (ಅಂಶಿಕಾ. ೨೬-೯೬) ; ಪಾರ್ಥ ಭಾನುಜನ ಹಿಳುಕಿನೋಳ್ಕಡುನೊಂದು ವ್ಯಮರೆತು ಮೂರ್ಛೆಯೊಳ್ಮಲಗಿದನು (ತುರಂಗ. ೩೯-೦). ಹಿಳ್ಕು: ೧. ಕದಿರೊಡೆದ ಬೆಳೆದ ಕಟವೆಯು ಕದಿರ್ಗಾಪಿಂಗೆಟಗಿ ಪಟವೇಗಳ್ಮಟೆಯಿಸುಗುಂ ಮದನಂ ಮಡದಿ[ಲಿ]ಟಾದಿಟಾಪಿದ ಹೊದೆಯಂಬಿನ ಸರಲ ಗಟಿಯ ಹಿಳ್ಕಿನ ತೆಟನಂ (ಅಸಂಪು. ೦-೯೦).

ಹಿಳುಕುಹಿಳುಕು (ದ್ವಿರುಕ್ತಿ) : ಹಿಳುಕುಹಿಳುಕುಗಳಡಸಿ ದೆಸೆ ಕತ್ತಲಿಸಿ ಕೈಕೊಂಡವು ಪತತ್ರಾವಳಿಯು ಪವನನ ಹೊಯ್ಲಿನಲಿ ಬಾಯ್ದಾರೆ ಕಿಡಿ ಯೊಳಿ ಬಳಸರಳ ಬಿಲ್ಲಾಳ ದಡ್ಡಿಯ ಬಲುಹು ತಟುಬಿತು ಪಡಿಮುಖದ ಮಂಡಳಿಕರೆಸುಗೆಯನವುವು ಸುತ್ತಳಿಸಿತ್ತು ರಣಕೇಳಿ (ಕುಷ್ಣಾರಿ. ೬-೯೨); ಹಿಳುಕುಹಿಳುಕುಗಳೊರಸೊರಸು ಮುಂಕೊಳಿಸೆ ಹಿಂದಣೆಸಂಬನಂಬುಚ್ಚಳಿಸ ಲೆಚ್ಚನು ಭೀಮ ರವಿ ನಂದನನ ನಂದನನ (ಕುಷ್ಣಾಶ. ೨೦-೮). ಹಿಳುಕಿ ನೋಲೆ = ಬಾಣಕ್ಕೆ ಸಿಕ್ಕಿಸಿ ಕಳುಹಿಸುವ ಪತ್ರ ; ಬಾಣಕ್ಕೆ ಸಿಕ್ಕಿಸಿ ಕಳುಹಿಸುವ ಕಾಗದ : ಹಿಳುಕಿನೋಲೆಯ ತನ್ನಿರೆಂದಾ ಅಳುಕುತಳುಕುತೊಬ್ಬನದಟಿಕೊತ್ತಿಗೆಯ್ಮೊಂಡನೆಳಸಿ ಕೊಟ್ಟನು ಕರಣಿಕಗೆ (ಶರಶ. ೨೪-೯೦).

ಪಿಳ್ಕುಗೊಯ್ (ಕ್ರಿ). ಬಾಣದ ಗರಿಯನ್ನು ಕತ್ತರಿಸು : ಬಿಲ್ಲನೊರೆವ ಸರಳ ತಿದ್ದುವ ಪಿಳ್ಕುಗೊಯ್ವ ಸಂದಣಿ ಕೂಡೆ ಕರಮೆಸೆದುದು ದುರ್ಗ ದೊಳಗೆ (ಕುರುಶಾಂ. ೩೭-೫೭). [ ಪಿಳ್ಕು + ಕೊಯ್ ]

ಪಿಳ್ಕೆ, ಪಿಕ್ಕೆ₁, ಹಿಕ್ಕೆ₁ (ನಾ). (ಕುರಿ, ಆಡು, ಜಿಂಕೆ, ಇಲಿ ಮೊದಲಾದ) ಪ್ರಾಣಿಗಳ ಮಲ ; ಪಿಚಿಕೆ : ಕಾಡಿಯ ಪಿಳ್ಕೆ [ಪಾಠಾಂ. ಕ್ಕೆ, ಳ್ಳೆ] ಯನಿಂತು ಭಾವಿಸಿ ಲಿಂಗಮಂ ಪಿಂಗೆ ಮಾಡಿದಂ (ವೃಷಭ. ೬-೦೯). ಪಿಕ್ಕೆ₁: ಹಡಪವಳನ ಹಡಪದೊಳಿರ್ದಡಕೆಗಳಂ ಮಾಡಿಯಾಡ ಪಿಕ್ಕೆಗಳಂ (ಪುಷ್ಪಾಸ್ತ್ರ. ೮-೩೬). ಹಿಕ್ಕೆ₁: ಹಿಕ್ಕೆಯ ಹಿಡಿಗೆಯ ಬಿಟ್ಟು ಕಿಂದಲ ಹೊತ್ತು ಚಕ್ಕನೆ ಮುಂದಕೆ ನಡೆತರಲು (ಅವಶಂ. ೩೦೦-೦೩೦೭) ; ಕಾಟಕೋಟನೆನಿಪ್ಪ ಗೊಲ್ಲರ ಮೇಟಿ ಆಡಿನ ಹಿಕ್ಕೆಯಂ ಶಶಿಜೂಟನೀಶ್ವರನೆಂದು ಪಾಲಂ ತಾನದಟ ಮೇಲೆ . . . ಎಟಿದು (ಬಸಪು. ೯-೦೨) ; ನೀರಿನಲ್ಲಿ ತೌದು ಹೊಟ್ಟು ಕೋಳಿ ಹಿಕ್ಕೆಗಳನ್ನು ಕದಡಿ ಆ ನೀರನ್ನು ದ್ರಾಕ್ಷಿಗಿಡದ ಬೇರಿಗೆ ಹಾಕಿದರೆ ವೃದ್ಧಿಯು ಹೊಂದುವದು (ಸೌಗಂಧಿ. ೯೩೯-೦೭); ಏನು ಅಂದದ್ದಕ್ಕೆ ಹುಲಿ ಹಾಕಿದ ಹಿಕ್ಕೆ ಎಂದರು (ಪ್ರಕೈ. ೯೩).

[ದೇ.॥ ತಮಿ. ಪಿಟುಕ್ಕೈ₁; ಮಲ. ಪಿಟುಕ; ತೆಲು. ಪಿಡಕ, ಪಿಡುಕ]

ಪಿಳ್ಗಿಸು, ಹಿಗ್ಗಿಸು (ಕ್ರಿ). ೧. ದೊಡ್ಡದನ್ನಾಗಿ ಮಾಡು ; ವಿಶಾಲ ವಾಗಿಸು : ದೆಸೆಯಿಂಟುಂ ಪಿಳ್ಗಿಸುತ್ತಗ್ಗಳಮನೆ ಪರದಿರ್ಪಳ್ಕೆಗೊಂಬೇಟಗ್ಗಿ ಯಿಂದಾಗಸಮಂ ಪೊತ್ತಿರ್ಪ ಮೇಲ್ಗೊಂಬು (ಚಕಳು. ೨-೯೬). ಹಿಗ್ಗಿಸು : ೧. ಹಲವು ಪದಗಳು ಬಳಕೆಯಾಗುತ್ತಿದ್ದ ಅರ್ಥವನ್ನು ಕ್ರಮೇಣ ಹಿಗ್ಗಿಸಿ ಕೊಂಡು ವಿಶಾಲಾರ್ಥವನ್ನು ಪಡೆಯಬಹುದು (ಶಾಂದಶ. ೯೨). ೨. (ಆಲಂ) ಹಿಗ್ಗುವಂತೆ ಮಾಡು ; ಸಂತೋಷಪಡಿಸು : ಪುತ್ರಲಾಭದ ಫಲವಿಶೇಷಿತ ಶಕುನ ಹಿಗ್ಗಿಸಿತವನಿಪನ ಮನವ (ಕೂರಲಾ. ೦-೩-೬). ೩. (ಎರಡು ಹಲಗೆ ಗಳ ನಡುವೆ ಉಳಿಯನ್ನಿಟ್ಟು ಬೇರ್ಪಡಿಸುವಂತೆ) ಬೇರ್ಪಡಿಸು; ಪ್ರತ್ಯೇಕಿಸು : (*). ೪. (ಕಟ್ಟಿಗೆಯ ಹೊರೆಯ ಕಟ್ಟನ್ನು ಸಡಿಲ ಗೊಳಿಸುವಂತೆ) ಸಡಿಲಗೊಳಿಸು : (*). [ ಪಿಳ್ಗು + —ಇಸು₁ ]

ಪಿಳ್ಗು, ಪಿಗ್ಗು, ಪಿರ್ಗು₁, ಪಿಳಗು, ಪಿಳಿಗು, ಹಿಗ್ಗು₁, ಹಿಳಗು, ಹಿಳ್ಗು₁ (ಕ್ರಿ). ೧. ಬಿರಿ ; ಸೀಳು ; ಹಿಸಿ ; ಒಡೆ : ಫಳರಸಂಗಳನೆ ತೆಗೆವಲ್ಲಿ ಹಿಟಿಯೆನೆ ಬಟಂ ಪಿಳ್ಗಿ ಬಿರಿವೆಡೆಯೊಳ್ ಕಾಳಂ (ಸಂಜೀವ. ೨೪). ೨. ದೊಡ್ಡದಾಗು ; ಅಗಲವಾಗು : ಎರಡಳ್ಳೆ ಪಿಳ್ಗಿ ತೇಗುಬ್ಬರಿಸಲ್ ಕಾರ್ಶಿರ್ವಮಳಜಲಮನೀಂಟಿದೆಂ (ದಕಳು. ೯-೩೪); ನಿರಂತರಂ ಸುರಿವ ಸುಣ್ಣೆನೆಮಾಲ್ಗಳ ಧಾರೆಗೊಡ್ಡಿ ಚಂಚುರ ನಿಜಚಂಚುವಿಂ ಸವಿದು ಸಂತಸ ದಿಂದೆರಡಳ್ಳೆ ಪಿಳ್ಗಿ[ಪಾಠಾಂ. ಗ್ಗಿ]ಮಂದರಗತಿಯಿಂ ಮರಳ್ದು ಸುಟಾ ದಾಡುಗುಮಲ್ಲಿ ಮರಾಳಮಂಡಲಂ (ಕಾವ್ಯಸಾ. ೦೦೯ ; ರಸರತ್ನಾ. ೨-೩೦ ನೋ). ೩. (ಆಲಂ) ಸಂತೋಷದಿಂದ ಉಬ್ಬು ; ಆನಂದಿಸು ; ಬೀಗು : ಪ್ರೌಢಿಗೆ ಪಿಳ್ಗುತ್ತರಸಂ ಗಾಢೋತ್ಸುಕನಾದನಾತ್ಮಜಾಲೋಕನದೊಳ್ (ಕಳಾ. ೯-೫೯); ಸುಮ್ಮನೆದೊಳೆ ಪಿಳ್ಗಿ ನಲ್ಮೆಗಡಲೊಳ್ ಮುಂಬುಗಾಡಿ ವಿಚಿಂತನಾಗಿ ಕೆಮ್ಮನೆ ಸತಿಗೂಡಿಯಾಟಿಸ್ವಿ (ಶಸ್ತ್ರಪಂ. ೩-೨೪). ಪಿಗ್ಗು : ೨. ಸರ್ಜನಂ ಬೆದಟಿ ಮನಂ ಮಟುಗುತಕಟದೇನಾಯ್ತೆನಲಕ್ಕದೆ ಸೇದಿರಾಜನಾನಂದದ ಸಲಗಂ ನೋಡಿ ಮೆಚ್ಚಿ ಪಿಗ್ಗುತ್ತಿರ್ದಂ (ಶ್ರೀಪುರಿ. ೨೫-೩೩). ಪಿರ್ಗು₁: ೨. ಬಲಿನಗರಕ್ಕೆ ಮೂಗಿನಿಸಿದಾ ತ್ರಿಪುರಾಂತಕದೇವತಾಲಯಾವಳಿ ಮುನಿವ ತ್ರಿಲೋಚನನ ಭೂಪತಿರಾಜಿಯ ಪಿಂದೆ ಪಿರ್ಗಿ ಪತ್ತಲಸೆತಯಿಲ್ಲ ದಲ್ಲುಗುತಮಿಟ್ದುದನೀಕ್ಷಿಸಿ ಬಿಚ್ಚಿ ಮಾಡೆ ಮಂಡಲಿಕಲಲಾಮನೀಂ ನಿಲಿಸೆ ನಿನ್ನದೊ ಬೆಳ್ಳಿಯ ಬೆಟ್ಟ ನಿಲ್ವವೋಲ್ (ಶಾಇಪ್ತ. IX-i, ೦೭೦-೫೬; 1092). ೩. ಗೆಯ್ದ ಗೆಯ್ಮೆಗೆ ಪಿರ್ಗಿ, ಬಾಯ್ ಕೊರ್ಚಿ ನಲಿಪಳ್ (ಅಂತಿಗೊ. ೨೨-೦೬೩); ನಗುಗೆ, ಪಿರ್ಗುಗೆ, ನಲಿಗೆ, ಅಣಕಿಸುಗೆ, ಇವನಟಲ್ಗೆ ಆ ಪಿರಿಯ ಸಜ್ಜನರ್ ! (ಅಕ್ಷಕಾ. ೩೯-೦); ನಿನ್ನ ಈಗಳಿನ ದೆಸೆಗೆ ನೀನ್ ಪಿರ್ಗುವೋಲ್ ಕಂಡಪುದು

(ಶಬ್ದಶ. ೩೦-೦೦೦೯). **ಪಿಳಿಗು :** ೧. ಒಡೆದುದೊ ಪದ್ಮಜಾಂಡಮವನೀ ವಳಯಂ ಪಿಳ [ಪಾಠಾಂ.ಳಿ]ಗಿತ್ತೊ, ಮೇರು ಮೇಣ್ ಕಿಡೆದುದೊ ವಾರ್ಧಿಯುರ್ಕಿದುದೊ (ಚಂದ್ರಪ್ರ. ೬-೩೦). ಪಿಳಿಗು : ೧. ಗೋತ್ರನಗಂ ಪಿಳಿಗಿತ್ತೊ ಸಾಗರಂ ತಳೆದುರ್ದುದೊ ಮೇರೆಯಿಂದಂ. . .ಎನಲ್ ವಿಘೂರ್ಣಿಸಿದುದಿರ್ಬಲದೊಳ್ ಸಮರಾನಕಸ್ವನಂ (ಶಂಖಪು. ೦೩-೩೫); ಕುಳಿಕಣ್ ಕುರ್ಗಿದ ನಾಸಿಕಂ . . .ಪಿಳಿಗಿರ್ದಂಭ್ರೂತಲಂ ಕೊರಂಟಾದಲೆ ಕೊಕ್ಕೋಡಿರ್ದ ಗೋಣಿನ್ನನೊಳ್ ಕಟಿಯಾಲ್ ಪಾಪಮನರ್ಚಿಸಿರ್ದಬಲೆಯುಕ್ಕುಂ ಮಿಕ್ಕಳೀನಕ್ಕುಮೇ(ಪುಣ್ಯಾಶ್ರ. ೩-೦೫೩). **ಹಿಗ್ಗು₁ :** ೧. ತಗ್ಗಿದುದು ದಿಗ್ದಂತಿ ಭೋಗಿರಾಜನ ಕೊರಲ್ಕುಗ್ಗಿದುದು ಧರಣಿತಲಮಿಟ್ಟಾಗವಾಗಿ ಸಲೆ ಹಿಗ್ಗಿದುದು ಪೋಗೆನಲ್ಪೊಯ್ದನುರುಗದೆಯಿಂದ ಪರಸೈನ್ಯವಂ ಭೀಮಂ (ಕೃಭಾಭಾ. ೬-೪೬). ೨. ಬಾಗುತೆ ಬಲಿಯುತೆ ಪೊಳೆದಿನಿದಾಗುತೆ ದಳವೇಱುತಿಡಿದಿಡಿದು ಹಿಗ್ಗುತೆ ಪಣ್ಣಾಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿರಿಜಾ. ೨-೩೦); ಕೊರಳ ಸೆರೆ ಹಿಗ್ಗಿದವು ಕಂಬನಿದುಱುಗಿದವು . . . ಅಕಸ್ಮಿಕದ ಭಯವಾಯ್ತು ಪಾರ್ಥಂಗೆ (ಕುಮಾವ್ಯಾದ್ರೋ. ೮-೬); ಹೃದಯ ಹಿಗ್ಗಿಕೊಂಡು, ರೋಗ ಪ್ರಬಲವಾದರೆ ಹೃತ್ಕ್ರಿಯೆ ನಿಂತು ಹೋಗುತ್ತದೆ (ಗೃಹವೈ. ೩೪). ೩. ಅಯ್ಯ ನೀ ನೋಡಿದರೆ ನೋಡು ನೋಡದಿದ್ದರೆ ಮಾಣು ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾಱೆನಯ್ಯ (ಪುರಾತರ. ೮.೩೪-೯೩); ಭೀಮಸೇನನ ವಿಕಟಸಿಂಹಧ್ವನಿಯನಾಲಿಸಿ ಹಿಗ್ಗಿದನು ಪಾರ್ಥ (ಕುಮಾವ್ಯಾದ್ರೋ. ೦೩-೦೮); ಹಿಗ್ಗುವೆ ಯಾಕೋ ಈ ದೇಹಕ್ಕೆ ಹಿಗ್ಗುವೆ ಯಾಕೋ . . . ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂದ. ೦-೦೨೨ ಕಲ್ಲಿಪ). **ಹಿಳಗು :** ೧. ಬಲಿತ ಕೇಗಿನಕಾಯಿ ಬಿಸಿಲಿನ ಝಳಕ್ಕೆ ಹಿಳಗಿದೆ (ರೂಢಿ). **ಹಿಳ್ಗು₁ :** ೩. ಹೃಷ್ಯತಿ=ಹಿಳ್ಗಿದಪಂ; ಹೃಷ್ಟಃ, ಹೃಷ್ಟವಾನ್, ಹರ್ಷಕಃ , ಹರ್ಷಾಳ್, ಹರ್ಷನ್—ಈ ೫ ಹಿಳ್ಗಿದಂ (ಶಾಕಳ್ಯ. ೦೯೫).

ಹಿಗ್ಗಿ ನುಗ್ಗೆಕಾಯಿಯಾಗು = (ಅಲಂ) ಅತಿಶಯವಾಗಿ ಆನಂದಿಸು ; ಆನಂದದಿಂದ ಉಬ್ಬು : ಸಣ್ಣದುರುಗಪ್ಪನು ಹಿಗ್ಗಿ ನುಗ್ಗೆಕಾಯಿಯಾದ (ಶಂಡಪ. ೦೦೮). **ಹಿಗ್ಗಿ ಹತ್ತಾಗು** = ಹಿಗ್ಗಿ ನುಗ್ಗೆಕಾಯಿಯಾಗು : ಈ ಇಬ್ಬರು ಸ್ನೇಹಜೀವಿಗಳ ನಡುವಿನ ಅದೇ ಆ ಹಳೆಯ ನಗೆಯಾಟ ನಡೆದಾಗ ನನ್ನ ಹೃದಯ ಹಿಗ್ಗಿ ಹತ್ತಾಗುತ್ತದೆ (ಇಪ್ಪಳ. ೩೬); ಭೂಪತಿಯು ಹಿಗ್ಗಿ ಹತ್ತಾಗಿ, ತನ್ನ ಉತ್ತರೀಯದ ಮುಸುಕಿನಿಂದ ತನ್ನ ಸ್ವಂತರಚನೆಯ ಪುಸ್ತಕ ಹೊರದೆಗೆದು ... ಎಂದನು (ಇಪ್ಪಳ. ೨೮೮). **ಹಿಗ್ಗಿ ಹೀರೇಕಾಯಾಗು**, ಹಿಗ್ಗಿ ಹೀರೇಕಾಯಿ ಆಗು, ಹಿಗ್ಗಿ ಹೀರೇಕಾಯಿಯಾಗು = ಹಿಗ್ಗಿ ನುಗ್ಗೆಕಾಯಿಯಾಗು : ಪೋರ್ಚುಗೀಸ್ ರಾಜ ತನಗೆ ಬಂದ ವರದಿಗಳಿಂದ ಹಿಗ್ಗಿ ಹೀರೇಕಾಯಾದ(ಕ್ಷಪಾ೩.II, ೨೦೦); ನೆಕ್ಲದೋವನ ಎದೆ ಹಿಗ್ಗಿ ಹೀರೇಕಾಯಿ ಆಯಿತು (ಪುಪಕು. ೩೦೦); ಕಾಮಾಕ್ಷಮ್ಮನ ಮುಖ 'ಹಿಗ್ಗಿ ಹೀರೇಕಾಯಿ' ಯಾಯಿತು (ಶಂಡಪ. ೩೮). **ಹಿಗ್ಗಿ ಹೆಬ್ಬಾಗಿಲಾಗು** = (ಅಲಂ) ಅತಿಶಯವಾಗಿ ಆನಂದಿಸು ; ಆನಂದದಿಂದ ಉಬ್ಬು : ದ್ಯಾವೇಗೌಡರು ಚಿನ್ನಪ್ಪಗೌಡರ ಮಾತನ್ನು ನಂಬಿ ಹಿಗ್ಗಿ ಹೆಬ್ಬಾಗಿಲಾಗಿದ್ದರು (ಶಂಪಪಂ. ೫೯).

[ < ಪಿಳ್₂ ]

**ಪಿಳ್ಗೋಟೆ** (ನಾ). ಸಣ್ಣ ಕೋಟೆ ; ಕಿರಿದಾದ ದುರ್ಗ : ರಕ್ಕಸರೊಳ ಪೊಗದಂತೆ ಪಿಳ್ಗೋಟೆಗೆ ಉಕ್ಕಿನ ತೆನೆ ಪೆಟಲಂಬು ಸಿಕ್ಕಿನ ಕತ್ತರಿ ದೆಸೆಗೆ ಕುಸಿಯ ಶೂಲ ಸೊಕ್ಕಿದರಿಯ ಗೆಲ್ವ ತೆರದಿ (ಸೌಂದಕಾ. ೫-೩೯).

[ < ಪಿಳ್ + ಕೋಟೆ₁ ( < ಕೋಂಟೆ ) ]

**ಪಿಳ್ಜುಟ್ಟು, ಪಿಳ್ಳಂಜುಟ್ಟು, ಪಿಳ್ಳುಜುಟ್ಟು** (ನಾ). (ಗಂಡಸರು) ತಲೆಯ ಹಿಂದೆ ಮೇಲ್ಭಾಗದಲ್ಲಿ ಬಿಡುವ ಸಣ್ಣ ಜುಟ್ಟು : ಅವರ ಪಿಳ್ಜುಟ್ಟು ಗಾಳಿಗೆ ಹಾರಾಡುತ್ತಿದೆ (ರೂಢಿ). **ಪಿಳ್ಳಂಜುಟ್ಟು :** ವಿಶಾಲವಾದ ಹಣೆ, ಮುಖದ ಅಂದವಾದ ನಿಲುವಿಗೆ ಒಪ್ಪುತ್ತಿದ್ದ ಪಿಳ್ಳಂಜುಟ್ಟು (ಬಸಕಂ. ೦೨೮). **ಪಿಳ್ಳುಜುಟ್ಟು :** ತಬಲಾ ಬಾರಿಸುವವನ ಪಿಳ್ಳುಜುಟ್ಟು ಹೇಗೆ ಹಾರಾಡುತ್ತಿದೆ ಎಂಬುದನ್ನು ನೋಡಲು ಬಂದಿದ್ದಾರೆ (ಪಾತಿಗೇ. ೦೩೬) ; ವಜ್ರಮುಷ್ಟಿಗಳ ಮೊನೆಯಿಂದ ಪಿಳ್ಳುಜುಟ್ಟುಗಳು ಕುಣಿದಾಡುವ ಬೋಳುತಲೆಗಳ ಮೇಲೆ ಹೊಡೆದು (ಕಥಾಕುಂ. IV. ೨).

[< ಪಿಳ್ + ಜುಟ್ಟು]

**ಪಿಳ್ಳಿಳನೆ, ಪಿಳಪಿಳನೆ** (ಅ). (ಆಶ್ಚರ್ಯ ಅಥವಾ ಅಸಹಾಯಕತೆಗಳಿಂದ) ಕಣ್ಣನ್ನು ಪಿಳಕಿಸುತ್ತ ; ಒಂದೇ ಸಮನೆ ರೆಪ್ಪೆಯನ್ನು ಬಡಿಯುತ್ತ : ಜನರು ಪಿಳ್ಳಿಳನೆ ನೋಡುತ್ತಿರುವರು (ತುಂಗಳ. ೦೩೬). **ಪಿಳಪಿಳನೆ :** ಕ್ಷಣಕಾಲ ಆಕೆ ಪಿಳಪಿಳನೆ ನನ್ನನ್ನೇ ನೋಡುತ್ತಿದ್ದುಬಿಟ್ಟಳು (ಬರಲಾ. ೦೪೬). [< ಪಿಳಿಪಿಳಿ + – ಅನ್₁]

**ಪಿಳ್ಳಂಗೋವಿ** (ನಾ). ಒಂದು ಬಗೆಯ ಚಿಕ್ಕ ಊದುವ ವಾದ್ಯ ; ಕೊಳಲು : ಪಿಳ್ಳಂಗೋವಿಯ ಚೆಲ್ವ ಕೃಷ್ಣನ ಎಲ್ಲಿ ನೋಡಿದಿರಿ (ಪುರಂದ. ೦-೦೩೬ ಕಲ್ಲಿಪ) ; ಗೊಲ್ಲನ ಪಿಳ್ಳಂಗೋವಿಯಿಂದ ಆರಂಭವಾದ ಪುಟ್ಟಪ್ಪನವರ ಕವಿತಾವಿಲಾಸ . . . 'ಸೋವಿಯಟ್ ರಶಿಯಾ'ದ ವರೆಗೂ ಕೈ ಚಾಚಿದೆ (ಸಾಸಮಾ. ೮೬) ; ಕೊಳಲಿಗೆ ಪಿಳ್ಳಂಗೋವಿಯೆಂದೂ ಹೆಸರು (ಸಂಗೀತಂ. ೦೦೬).
[< ಪಿಳ್+ಕೋವಿ₁. / ತಮಿ. ಪಿಳ್ಳಾಂಕುಟಲ್; ತೆಲು. ಪಿಲ್ಲಂಗ್ರೋವಿ. ಪಿಲ್ಲಗ್ರೋವಿ, ಪಿಲ್ಲನಗ್ರೋವಿ]

**ಪಿಳ್ಳಂಜುಟ್ಟು** 'ಪಿಳ್ಜುಟ್ಟು' ನೋ.

**ಪಿಳ್ಳಗುಸೆ** (ನಾ). ಕೋಟೆಯ ದೊಡ್ಡ ಬಾಗಿಲಿನಲ್ಲಿರುವ ಚಿಕ್ಕ ಬಾಗಿಲು : ಸಮಸ್ತಕಾರ್ಯಕುಶಲರಿಂ ಕೋಟೆ . . . ಪಿಳ್ಳಗುಸೆ ದಿಡ್ಡಿಮೊಳೆಗದಂಗಳ್ ನಿರ್ಮಿತವಾಗಲು (ಹಾಲಾಸ್ಯ. ೦-೪-೬೫ ಪ). [ಪಿಳ್ + ಅಗುಸೆ]

**ಪಿಳ್ಳಯ** (ನಾ). ಒಬ್ಬಾತನ ಹೆಸರು : ಜೂಮಡಿಯ ತಳಾಱ ಮಿಣ್ಣಪೋದಿಯ ಪಿಳ್ಳಯ (ಎಕ. X. ಗೌರಿಬಿ. ೬೩-೪ ; ಸು. ೧೦೦).

[ಪಿಳ್ + ಅಯ₁ (< ಅಯ್ಯ₁) ]

**ಪಿಳ್ಳಾರಿ** (ನಾ). ೧. ಚಿಕ್ಕದು ; ಸಣ್ಣದು. ೨. ಗಣೇಶ ; ಬೆನಕ : 'ಪಿಳ್ಳಾರಿಗೀತ' ಪರಾ.

ಪಿಳ್ಳಾರಿ ಜುಟ್ಟು = ಪಿಳ್ಜುಟ್ಟು : ಅವನ ಪಿಳ್ಳಾರಿ ಜುಟ್ಟನ್ನು ನೋಡಿ ಮಕ್ಕಳು ಗೇಲಿ ಮಾಡಿದರು (ರೂಢಿ).
[< ಪಿಳ್. / ತಮಿ. ಪಿಳ್ಳೈಯಾರ್; ಮಲ. ಪಿಳ್ಳಯಾರ್; ತುಳು. ಪಿಳ್ಳಾರಿ; ತೆಲು. ಪಿಳ್ಲಾರಿ]

**ಪಿಳ್ಳಾರಿಗೀತ** (ನಾ). ಕರ್ನಾಟಕಸಂಗೀತದಲ್ಲಿ ಪುರಂದರದಾಸರು ರಚಿಸಿದ (ಗಣಪತಿಯನ್ನು ಕುರಿತ) ಚಿಕ್ಕ ಗೀತೆ : ಪುರಂದರದಾಸರು ಸಂಗೀತಾಭ್ಯಾಸಕ್ರಮ ವ್ಯವಸ್ಥೆಗೊಳಿಸಿ, 'ಪಿಳ್ಳಾರಿಗೀತಗಳು' ಎಂಬ ಅಭಿಧಾನದಿಂದ ಕೆಲವಾರು ಗೀತಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ (ಸಂಗೀತಂ.೬೦); ಕರ್ನಾಟಕಸಂಗೀತಸಂಪ್ರದಾಯಕ್ಕೆ ಪಿಳ್ಳಾರಿಗೀತೆಗಳನ್ನು ಮಾತ್ರವಲ್ಲ ಪುರಂದರದಾಸನು ಸಾವಿರಾರು ರಸಾನುಗುಣವಾದ ತಾಲಭೇದವುಳ್ಳ ಪ್ರಬಂಧಗಳನ್ನು ಒದಗಿಸಿಕೊಟ್ಟನು (ಕಸಾಕ. ೨೯೮). [ಪಿಳ್ಳಾರಿ + ಗೀತ]

**ಪಿಳ್ಳಾರಿಗೀತೆ** (ನಾ). = ಪಿಳ್ಳಾರಿಗೀತ : ಕರ್ಣಾಟಕಸಂಗೀತ ಒಂದು ವೈಶಿಷ್ಟ್ಯಪೂರ್ಣವಾದ ರೂಪ. ಇದರಲ್ಲಿ ಪ್ರಮುಖವಾಗಿ ಕೀರ್ತನೆಗಳು, ಉಗಾಭೋಗ, ಸುಳಾದಿ, ಪಿಳ್ಳಾರಿಗೀತೆಗಳು ಎಂದು ನಾಲ್ಕು ರೂಪಗಳು ಕಾಣಿಸುತ್ತವೆ (ಹೇಪುಕೂ. ೦೦೪) ; ದಾಸರ ಗೀತೆಗಳಲ್ಲಿ ಪಿಳ್ಳಾರಿಗೀತೆ ಮೊದಲಾದ ಕೆಲವು ಗೀತೆಗಳು ಮಾತ್ರವಲ್ಲದೆ ತಾನವರ್ಣಗಳಾಗಲೀ ದಾಸರ ತಿಲ್ಲಾನಗಳಾಗಲೀ ಈಗ ಉಪಲಬ್ಧವಿಲ್ಲ (ಕಶಂ. ೨೩೦). [ ಪಿಳ್ಳಾರಿ + ಗೀತೆ ]

**ಪಿಳ್ಳಮಯ್ಯ** (ನಾ). ಒಬ್ಬಾತನ ಹೆಸರು : ಆ ವಿಭುಗಾತ್ಮಜಂ ನೆಱಿಯ ಪಟ್ಟದೆ ಪುಟ್ಟಿದ ಪಿಳ್ಳಮಯ್ಯಂ (ಎಕ. XI. ಚಿತ್ರದು. ೬೪-೬; ೧೦೫).

[ < ಪಿಳ್ + ಅಮ (< ಅಮ್ಮ₁ ) + ಅಯ್ಯ₁ ]

**ಪಿಳ್ಳು** 'ಪಿಳ್ಳೆ' ನೋ.

**ಪಿಳ್ಳುಜುಟ್ಟು** 'ಪಿಳ್ಳುಟ್ಟು' ನೋ.

**ಪಿಳ್ಳೆ, ಪಿಳ್ಳು, ಹಿಳ್ಳು, ಹಿಳ್ಳೆ**$_1$ (ನಾ). ೧. ಚಿಕ್ಕದಾಗಿರುವಂತಹುದು; ಸಣ್ಣದು : (•). ೨. (ಯಾವುದಾದರೂ ಪ್ರಾಣಿಯ) ಮರಿ; ಶಾಬ; ಪೋತ : ಕರಮೊಟ್ಟೆಯುಳ್ಳ ಪಿಳ್ಳೆಗಳೆರಡುಮನೋಲಗಿಸುವಂ ನೃಪಂಗಲ್ಲಿಯ ಮಾದರನಿತ್ತ ಚಂಡಕರ್ಮಂಗರಸನವಂಗೆ ನೋಡಿ ಸಲಹು ನೀನೆಂದಿತ್ತಂ (ಧುಚೋಕ. ೩-೬೬) ; ನೀಡುಂ ನೀಡದ ಪಕ್ಕಿಯುಮೆನ್ನಂ ಬಂಜೆಯೆನುತೀಡಿಪಂತಿರೆನ್ನಿದಿರೊಳ್ ಪಿಳ್ಳೆಯಂ ಮುದ್ದುಗೆಯ್ಯುಂ (ಶಾಂತಾಪ್ತ. ೦೫-೬); ಕಳ್ಳನಿಗೆ ಒಂದು ಪಿಳ್ಳೆ ನೆವ (ಗಾದೆ). ೩. ಕೂಸು ; ಮಗಂ ; ಶಿಶು : ಜವನೊಳ್ ಸೆಣಗಿಲ್ಲದ ಪೋಗಿ ತಾಗಿ ತಂದಂ ಗಡ ವಿಶ್ರುಮಾರ್ಜುನನೆ ಪಾರ್ವರ ಪಿಳ್ಳೆಯು ಪೋದ ಜೀವಮಂ (ಕಂತಿಟಾ. ೬-೨) ; ಪರಿದಿಟ್ಟಂತಕನೊಳ್ ಪಾರ್ವರ ಪಿಳ್ಳೆಯ ಪೋದ ಜೀವಮಂ ತಂದಂ (ಗದಾಯು. ೨-೩೫) ; ನೀವು ಬೇಕಿದ್ದರೆ ಹೋಗಿ ಬನ್ನಿ . . . ಈ ಪಿಳ್ಳೆಗಳನ್ನು ಕಟ್ಟಿಕೊಂಡು ನಾನು ಎಲ್ಲಿಗೂ ಹೊರಡುವುದಿಲ್ಲ(ದೇವಹಂ ೨೫೩). ೪. ಗಣಪತಿ; ವಿನಾಯಕ : ಇಂದುಮೌಳಿಯ ಹಿರಿಯ ಪುತ್ರನಾ ವಿಘ್ನೇಶ್ವರಂ ಗಜಾನನ ಸದ್ಗುಣ ಸೌಂದರ್ಯನಿಧಿಯಾತನಂ ಭಜಿಸಿ ಸು ತನನಾನಂದದಿಂ ಪಡೆಯುವೇಳ್ಕೆನುತ ದಂಪತಿಗಳುಚಿ ಬಂದರಶಿವೈಭವದೆ ಬಂದು ವಿಪ್ರರು ಸಹಿತಲಾ ಪಿಳ್ಳೆಯರ ಭವನಕೆ (ಶೀಕೃಕಿ. ೩-೦೫-೯). ೫. ಭೈರವ : (•). ೬. ತೋಟಗಳಲ್ಲಿ ನೀರು ಹರಿಯಲು ಅನುಕೂಲವಾಗುವಂತೆ ತೋಡಿರುವ ಸಣ್ಣ ನಾಲೆ : ಪಿಳ್ಳೆ ದಾಟುವಾಗ ಜೋಪಾನ, ತುಂಬ ಜಾರುತ್ತದೆ (ಕೂಶ). **ಪಿಳ್ಳು** : ೨. ಬಲೆಯಿಂ ತಪ್ಪಿದ ಮೊಲದಂತೆಯುಂ ಬಾಲಂ ಪಱಿದ ಪಿಳ್ಳನಂತೆಯುಂ . . . ಪಿಂದಿರುಗಿ ನೋಡದೆ ಓಡಿ ತನ್ನ ಬೀಡಂ ಸಾರ್ದಂ (ಶಕವಂ. ೫೯-೬). (ಗು). ೭. ಚಿಕ್ಕದಾದ ; ಸಣ್ಣ : 'ಪಿಳ್ಳುಜುಟ್ಟು' ಪರಾ. **ಹಿಳ್ಳು** : ೨. ಹದ್ದಿನ ಬರವ ಕಾಣುತ ಕೋಳಿಗಳ ಹಿಳ್ಳೆದ್ದೋಡುವಂತೆ[ಪಾಠಾಂ. ಕುಕ್ಕುಟಸರ್ಪಯೆದ್ದೋಡುವಂತೆ] ಭೂಭುಜರು ಬಿದ್ದ ಬಂಗಾರವ ಬಿಟ್ಟು ತೆರಳಿದರು (ರಾಪುಂ ೬-೦೬೬) ೮. ಒಂದು ಬಗೆಯ ಆಟ ; ಚಿಣ್ಣಿಕೋಲಾಟ : ಗೋಪನಂದನರನು ಕೂಡಿ ಹಿಡಿಗವಡಿಕೆ ಹಿಳ್ಳು ಲಗ್ಗೆ ಸಡುಗುಡು ಮೊದಲಾದ ಮಕ್ಕಳಾಟವ ಕಡುಸಡಗರದಿಂದಾಡುತಿಹನು (ನೇಮಿಸಂ. ೦೫-೦೦೬) **ಹಿಳ್ಳೆ**$_1$ : ೨. ಒಂದು ಹಸ್ತದೊಳು ಮುಷ್ಟಿಗನ ಹಿಡಿದು ಮತ್ತೊಂದು ಕೈಯೊಳು ಮೊತ್ತಮೊದಲು ಅಂದದಿ ಹಿಡಿದ ಕೇಸರಿಯು ಹಿಳ್ಳೆಯ ಹೊಡೆವಂದದಿ ಹೊಡೆದಿಡಲಾಗ (ನೇಮಿಸಂ. ೦೬-೦೩೦) ; ಗುಹೆವುಗುವ ಸಿಂಗ . . . ಹಸಿದು ಬಾಯಂ ಬಿಡುವ ಹಿಳ್ಳೆಗಳ ಬಳಿಗೆ ಹಾಯುವ ಸಾಳುವ . . . ತದ್ವನಾಂತದೊಳ್ ಸೊಗಯಿಸಿದುವು (ಸಮ್ಯಕೌ. ೦೦-೨೫).; ತಗರ ಪೊಯ್ಯಾಟ ಹಿಳ್ಳೆಗಳೋಟ ಸಿಪಿಲೆಗಚ್ಚುಗಳ ಸರಸಾಟ ಜಾಣಾಂಕಿಗಳ ಕೋಳಿಗಳೆಗ (ರಿಕ್ಷ ಮ. ೨೯-೩). ೯. ಮಕ್ಕಳು ಆಟಕ್ಕೆ ಬಳಸುವ ಮರದ ಸಣ್ಣ ತುಂಡು ; ಚಿಣ್ಣಿ : ನಿಮ್ಮ ಧನುರ್ವಿದ್ಯಾಕೌಶಲವು ಈ ಭಾವಿಯಲ್ಲಿ ಬಿದ್ದಿರುವ ಹಿಳ್ಳೆಯನ್ನೂ ಉಂಗುರವನ್ನೂ ಎತ್ತದೆ ಇರುವುದರಿಂದ ವ್ಯರ್ಥವಾಗಿ ತೋರುತ್ತಲಿದೆ (ಕೃವಾಅ. ೨೪೩).

**ಪಿಳ್ಳನೆ** = ಚಿಕ್ಕದಾದ ; ಪುಟ್ಟ ; ಸಣ್ಣ : ಟೋಪಿ ಪೇಟವ ತೊರೆದು ಪಿಳ್ಳನೆ ಜುಟ್ಟು ತೋರುವ ಊರೊಳು (ಗಕೇಕ. ೬೨-೬). **ಪಿಳ್ಳೆ ಪೆಸರಿಲ್ಲದಂತು** = ಹೆಸರು ಹೇಳಲೂ ಒಂದು ಮಗುವೂ ಉಳಿಯದಂತೆ ; ನಿರ್ವಂಶವಾಗುವಂತೆ : ಮುನ್ನಂ ಪರಶುರಾಮನೀ ನೆಲದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದು ಸೂಳ್ವರೆಗಂ ಪಿಳ್ಳೆ ಪೆಸರಿಲ್ಲದಂತು ಕೊಂದು (ಗದಾಯು. ೬-೨೯ ವ). **ಪಿಳ್ಳೆ ಪೆಸರಿಲ್ಲಾಗು**=ಹೆಸರು ಹೇಳಲು ಒಂದು ಮಗುವೂ ಉಳಿಯದಾಗು; ನಿರ್ವಂಶವಾಗು : ಪಿಳ್ಳೆ ಪೆಸರಿಲ್ಲಾಯ್ತು ಕೌರವಕುಲಶ್ರೀ! (ಅಶ್ವಕ್ರಾ. ೩೯-೬೫೫).

[ದೇ.॥ ತಮಿ. ಪಿಳ್ಳೈ; ಮಲ. ಪಿಳ್ಳ; ತುಳು. ಪಿಳ್ಳೆ; ತೆಲು. ಕೋಲಾ. ನಾಯ್ಕಿ. ಪಿಲ್ಲ ; ಗೊಂಡಿ. ಪಿಲಾ; ಕುರುಖ್. ಪೆಲ್ಲೋ ; ಬ್ರಾಹುಈ. ಪಿಲ್ಲೋಟ ; ಪರ್ಜಿ. ಪಿಲ್ಲಕ, ಪಿಲ್ಲಿಕ]

**ಪಿಳ್ಳೆಕಾಲು, ಹಿಳ್ಳೆಗಾಲ್, ಹಿಳ್ಳೆಗಾಲು** (ನಾ). ೧. ಮನೆಯ ಮೇಲ್ಛಾವಣಿಗೆ ಆಧಾರವಾಗಿ ಕೊಡುವ ತೊಲೆಯ ಮೇಲ್ಭಾಗದ ಸಣ್ಣ ಕಂಭ : ಈ ಭಾವಣಿಗೆ ನಾಲ್ಕು ಪಿಳ್ಳೆಕಾಲು ಕೊಡಬೇಕು (ಕೂಶ). **ಹಿಳ್ಳೆಗಾಲ್** : ೨. ಸಣ್ಣಗಿರುವ ಕಾಲು ; ಬಡಕಲಾದ ಕಾಲು : 'ಹಿಳ್ಳೆಗಾಲ' ಪರಾ. **ಹಿಳ್ಳೆಗಾಲು** : ೨. ಬತ್ತಿದ ಬಡ ಪೊಟ್ಟೆಮಾಟ ಬಲ್ಸೆರ ಸುತ್ತಿ ಹತ್ತಿದ ಹಿಳ್ಳೆಗಾಲುಗಳ . . . ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ನೇಮಿಸಂ. ೬-೦೦೪).

[ಪಿಳ್ಳೆ+ಕಾಲು$_1$ (<ಕಾಲ್$_1$)]

**ಪಿಟ್, ಪಿರಿ**$_2$ (ನಾ). (ಹೆಣದ) ಬಾಡಂ; ಮಾಂಸ: ಪೊಯ್ದಾಡಿ ಮಡಿದ ಕಲಿಗಳ ಶರೀರಂಗಳಂ ಪೊಯ್ದೆಳೆದು ಪಿಟ್ಟಿಂಬ ಮರುಳ್ಗಳಂ . . . ಕಾಣುತೆ (ಕೃಖಿಪು. ೯-೩೩). **ಪಿರಿ**$_2$ : 'ಪಿರಿತಿನಿ' ಪರಾ.

△ **ಪಿಟ್ಟು** 'ಪಿರಿಚು' ನೋ.

**ಪಿಟ್ತಿನಿ, ಪಿರಿತಿನಿ** (ನಾ). (ಹೆಣದ ಮಾಂಸವನ್ನು ತಿನ್ನುವ) ಮರುಳು; ದೆವ್ವ : "ಪಿಟ್ತಿನಿಯೆಂದು ಮರುಳ್" (ಶಶಿಸ. ೬೫-೪೩೦); ಪಸಿದ ಪುಲ್ಮರುಳ್ ಪಿಟ್ತಿನಿಗಳ್ ಬೇಯುತ್ತುಮಿರ್ದ ಪೆಣನಂ ನಾಯುಗಿವಂತುಗಿದು ತಿಂದುಪೋರೊಂದೆಡೆಯೊಳ್ (ಕಾವ್ಯಸಾ. ೫೪೬ ಚೂಡ್ರಕ); ಎಲೆ ಪಿಟ್ತಿನಿ ಪೋ ಮುಟ್ಟದೆ ತೊಲಗು (ಸಂಕಲ. ೯-೯೩) ; ನೀಂ ಪಿಟ್ತಿನಿಯಂ ಪಾಂಗಿನಿಂ ಎಲ್ಲವಂ ತಿಂದು ಸಾವುದೆಂದು ಬೈದಂ (ರಾಜಶಾಕ್ಕ. ೬೫-೮). **ಪಿರಿತಿನಿ** : "ಪಿರಿತಿನಿಯೆನಲ್ ಪಿಶಾಚಿಯ ನಾಮಮಕ್ಕು" (ಶಕಸ. ೬೬) ; ಪಿರಿತಿನಿ ಖಗಪಕ್ಷವೀಜಿತಂಗಳನಾಗಳ್ ವರಚಂದನವಾರಿಗಳಿಂ ಸುರುಚಿರ ಸುರವೃಕ್ಷವಲ್ಕವೀಜಿತದೇಹರ್ . . . ಸುಂದರಿಯರ್ ತೋರಿಸೆ ಬೆರಳಿಂದಂ ಕಂಡರ್ ಸ್ವದೇಹಮಂ ಕೊಳುಗುಳದೊಳ್ (ಧರ್ಮಾಮೃ. ೦೮೪) ; ಪಿರಿತಿನಿಯ ನಾಲಗೆಗೆಲ್ಲಿ ಕೊನೆಗಂಡ ಮಚ್ಚು (ಕಾಲೂಕ. ೦೫೫-೪೨೦).

**ಪಿಟ್ತಿನಿಯಾಳ್ವ, ಪಿರಿತಿನಿಯಾಣ್ಮ, ಪಿಟ್ತಿನಿಯಾಣ್ಮ**=೧. ಮರುಳುಗಳ ಒಡೆಯ ; ಶಿವ : "ಗನಹ ಮಾದೇವ ಕಣ್ಣಡಿಯ ಕಟಿಗೊರಲ ಪಿಟ್ತಿನಿಯಾಳ್ವ[ಪಾಠಾಂ. ಣ್ಮ]ದಪ್ಪಕವಗೆಯ . . . ಎಂದೆಂಬಿವೀಶ್ವರನ ನಾಮಂ" (ಅಭಿಮಂ. ೪) ; ಪಿರಿತಿನಿಯಾಣ್ಮನೆಂದರೆ ಚಂದ್ರಶೇಖರನಾದ ಚಂದ್ರನುಳ್ಳ ಈಶ್ವರನೆಂದು ಇರಬೇಕು (ಶಾಹಿಸಂ. ೦೪೨); "ಪಿಟ್ತಿನಿಯಾಣ್ಮ . . . ಬೆಳ್ಪಡಿಯುನೆನೆ ಶಿವಗೆ ಪೆಸರ್" (ಕಬ್ಬಿಗ. ೩). ೨. ಗಣಪತಿ ; ವಿನಾಯಕ : "ಪಿರಿತಿನಿಯಾಣ್ಮನೆಂದೆನಲದುಂ ಗಜಾನನಗೆ ಪೆಸರಕ್ಕು" (ಕಕಸ. ೬೫). **ಪಿಟ್ತಿನಿಯೊಡೆಯ**=ಪಿಟ್ತಿನಿಯಾಳ್ವ ೧ : ಕೊಟಿತೆಗಳನಿಂತು ತಾಳ್ದಚ್ಯುತನಡಿಯ ನೀರ ಪಿಟ್ತಿನಿಯೊಡೆಯನೇ ಪಱಿಯೊಳು ಧರಿಸುವನೆ ತಾಂ (ಸಿದ್ಧೇಪು. ೬-೬೫). [ಪಿಟ್+‒ತಿನಿ$_2$]

△ **ಪಿಟುಚು** 'ಪಿರಿಚು' ನೋ.

**ಪಿಟಿ, ಪಿಳಿ**$_1$, **ಹಿಳಿ**$_1$, **ಹಿಟಿ** (ಕ್ರಿ). ೧. ಹಿಸುಕಿ ರಸವನ್ನು ತೆಗೆ; ಹಿಂಡು : ಎಳ್ಳ ಗಾಣಂಗಳೊಳಿಟ್ಟಯ್ಯೂರ್ವರ್ ಖಾಟಿಯರ್ಕಳಂ ಪಿಟಿ[ಪಾಠಾಂ. ರಿ]ದು ಕೊಂದಂ (ಪದ್ಮರಾ. ೦೬೮-೬) ;ಒಲ್ಲಣಿಗೆಯಂ ಪಿಟಿವಂತೆ ಪಿಂಡಿ ಪಿಟಿದ ಪಗೆಗೆ ರಥಚಕ್ರಮಂ ನುಂಗುವುದುಂ (ಸಂಕಲ. ೦೨-೨೦೬ ವ); ಮಾಮರನೆಳದಳಿರ ರಸಮಂ ಪಿಟಿದು ಕಳಕಂಠನ ಕಂಠನಾಳಕ್ಕೆಚಿದುಬ್ಬಸಮಂ ಕಳೆದು (ರಾಜಶಾಕ್ಕ. ೦೬-೦೫). **ಪಿಳಿ**$_1$ : ೧. ಕಿವಿಯುಗಿದುಂ ಬೈರಂದಟಿದು ಗಾಣದೊಳ್ ಪಿಳಿದು (ರತ್ನಕ. ೨-೪ ವ); ಬೆಳೆದ ಕಮ್ಮಂಗಳವೊಲದಿಂ ಪಿಳಿದರೊಮ್ಮನೆ ರಸವೊಗುವ ಕಡು ಬೆಳೆದ ಕಬ್ಬಿನ ಕೆಯಿಗಳಂ

ಸೊಗಯಿಸುವುದಾ ವಿಷಯು (ಕಾಕ್ಯಪ. ೦-೫೬). ೨. ಕರೆ : ಸುರಿಸು; ವರ್ಷಿಸಂ : ಕೊಳದಂಬು ಬತ್ತೆ ಬುಯ್ಯೆಂದೊಳಗಣ ನಳಿನಾಳಿ ೬ರಿಕುವರಿಗು ವೆನುತ್ತಂ ಜಳಜಸಖು ಜಳಕಿರಣಾವಳಿಯು ಪಿಳಿದಂತೆವೋಲ್ ಮರೀಚಿಕೆ ಮೆಱೆಗುಂ (ರಾಜಶೇ. ೫-೩೮). ಹಿಳಿ$_1$. ೧. ಪರಸ್ತ್ರೀಗಳುಪ ದವರ ಗಾಣದಲ್ಲಿಕ್ಕಿ ಪಿಳಿಯನೆ (ಬಸವ. ೫೬೬) ; ಬಿಸಿಲುಂ ಹಿಳಿಯಲ್ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ (ಗಂಶ. ೯-೦೬); ಕಳಿದ ಹಲಸಿನ ಹಣ್ಣ ತೊಳೆಗಳಂ ಸಲೆ ಕಿವುಚಿ ಹಿಳಿದ ರಸದಲ್ಲಿ ಮತ್ತಾ ತೊಳೆಯು ಹಾಕ್ಕಿ ಪರಿಮಳಿಸುವುದು (ಸೂಶಾ. ೫-೫೬). ೨. ಸಾಹಸ್ರಕೋಟಿಶುಭ್ರಾಂಶು ಗಳ ರುಚಿರಸಮನಾ ಹರಂ ಹಿಳಿದು ತನ್ನಯ ಕಳೆಯು ಕೂಡಿ ಕಣ್ಗಿನಿಂ ಘಟ್ಟಿಗೊಳಿಸಿದ ಪುಣ್ಯಘಟಿಕೆಯೋ .... ಎನಲ್ ಕೈಲಾಸಪರ್ವತಂ ರಾಮಣೀಯಕಮಾದುದು (ಕಬಕ್ಕ. ೨-೦೦). ೩. (ಆಲಂ) ನಾಶಪಡಿಸು ; ಧ್ವಂಸಮಾಡು ; ಹಾಳುಮಾಡು : ಧರಣಿಯನೊಕ್ಕಲಿಕ್ಕಿ ದಿಗಧೀಶರ ಗಂಟಲನೊತ್ತಿ ಮೆಟ್ಟಿ ಭೀಕರಘಣಿಲೋಕಮಂ ಹಿಳಿದು ನಾಕಮನೋಡಿಸಿ . . . ನೆಗಳ್ದನಕ್ರಮಕಾರಿ ಜಿತಾರಿ ತಾರಕಂ (ಗಂಶ. ೬-೫) ; ಎಲೆ ಶಕುತ್ಸ್ಥ ಕೇಳು ಲೋಕವ ಹಿಳಿವಳಿಪಳಂದದಲಿ ಹಿಂದಣ ಬಲಿಯು ತಂಗಿ . . . ಕಡುಗಲಿಯೆ ಗೆಲಿದನು ಶಕ್ರನವಳನು (ತೊರಶಾ. ೦-೦೦-೦೦); ಈ ಪರಿಯು ಲವನಖಿಳಪರವನು ತಾ ಪಡೆದು ಸಂತಸದಿ ಸದ್ವೀರ್ಯೋಪಲಾಲಿತನಾಗಿ ಸಕಲಾವನಿಗಳನು ಹಿಳಿಯೆ (ಕೋಗಯು. ೯-೨೦). ೪. ನಾಶವಾಗು ; ಹಾಳಾಗು : ಮಳೆಗೆ ಹೆಚ್ಚಿದ ಧೂಳಿನಬ್ಬರವಳಿವವೊಲು ವಿಜಯಾಸ್ತ್ರಹತಿ ಯಲಿ ಹಿಳಿದ ಕರಿನರತುರಗದೊಡಲರುಣಾಂಬುಧಾರೆಯಲಿ ಕಳಚಿತೀ ಕಂಧೂಳಿ (ಕುಪ್ರಾಕ. ೨೪-೩೯). ೫. ಹೋಗಲಾಡಿಸು; ನಿವಾರಿಸು: ತುಳಿದನಃ ಭವಂಗಳಂ ತೊಳದನು ತಮಂಗಳಂ ಹಿಳಿದ ಸಂಶಯಂಗಳಂ ತಳೆದ ಮೋಕ್ಷಂಗಳಂ (ದೀಕ್ಷಾಬೋ. ೦೨೬-೦೪). ೬. ಕೊಲ್ಲು ; ಸಂಹರಿಸು: ಮೊಲೆಯನುಂಬುದೊಬ್ಬ ದನುಜೆಯು ಹಿಳಿದವೊದೆದವು ಶಕಟನನು (ಕುಪ್ರಾಉ. ೦-೩೬); ಅಳಿವೆನೋ ಹದಿನಾಲ್ಕುಲೋಕವ ಹಿಳಿವೆನೋ ಹರಿ ಯಜಭವಾದ್ಯರ . . . ಎನುತುರಿಗೊಳುವ ಕಡುಗೋಪದಲಿ ಕಿಡಿಕಿಡಿ ಯೋದನಸುರೇಂದ್ರ (ತೊರಶಾ. ೩-೭-೦೪). ೭. ಕುಗ್ಗು; ನಿಸ್ಸತ್ವಗೊಳ್ಳು: ಹಿಳಿದ ಭಲದ ವಿಷಾಯಿ ಧೈರ್ಯದ ತಳಿದ ಭೀತಿಗೆ ಕಾಲುವೊಳಿಯಾದಳಿ ಪನದ ಭೂಪಾಲನಿರವನು ಕಂಡನಾ ಪಾರ್ಥ (ಕುಪ್ರಾದ್ರೋ. ೦೪-೯). ಹಿಟ್: ೧. "ಹಿಟ್—ನಿರ್ದಳಿಕರಣೇ (ಹಿಂಡು), ದಲನಾರ್ಥೇ ('ಸೀಳು' ಎಂಬರ್ಥದಲ್ಲಿ) ತುಳಂ" (ಕಧಾ) ; ತಮಾಲಪಾದಪದಪಲ್ಲವಮಂ ಹಿಟ್ದೊಂದು ನಿರ್ಮಲೋಪಲತಲದಲ್ಲಿ ತದ್ರಸದಿನಾಗಳೆ ನೋಡಿ ನಿಜೋತ್ತರೀಯುವಲ್ಕಲವಸನೈಕದೇಶಮನೆ ಸೀಳ್ದದಱೊಳ್ ಬರೆದಂ (ಕಾದಂಪೂ. ೬೯೬) ; ಕೂತಸಿಗಳಿಂದೆತ್ತಿ ಕುತ್ತುವುದುಂ ಪಿರಿಯ ಗಾಣಂ ಕೊಳಿಕ್ಕಿ ಹಿಟ್ವುದುಂ . . . ಉಕ್ಕಿನ ಬಡಿಗೆಗಳಿಂ ಪೊಡೆಸೆಂಡನಾಡು ವುದುಂ (ಕಾಂಶೀಕ. ೯-೦೦೦ ಪ).

ಪಿಟ್ದು ಪಿಂಡಿಸು = ಕುಗ್ಗಿಸು ; ದುರ್ಬಲಗೊಳಿಸು : ಜರೆ ನಿಜ ಶಕ್ತಿಯಿಂ ಪಿಟ್ನು ಪಿಂ[ಪಾಠಾಂ.ಹಿಂ]ಡಿಸದನ್ನೆಗಮಾತ್ಮ ದೇಹದೊಳ್ನರೆ ತೆರೆದೋಱದನ್ನೆಗಂ . . . ಅರ್ಚಿಪುದರ್ಥಿಯಿಂ ಜಿನೇಶ್ವರನಂ (ಸಪುಶ. ೦-೦೦೫). ಪಿಟ್ದು ಪಿಂಡು, ಹಿಳಿದು ಹಿಂಡು = ೧. ಅತಿಯಾಗಿ ಹಿಂಸಿಸು, – ನೋವುಂಟುಮಾಡು : ಈ ತೆಱದಿಂದಂ ನಿನ್ನಂ ಘಾತಿಸಿ ಬಿಡದಲೆದು ಪಿಟ್ದು ಪಿಂಡಿದ ದುಃಖವ್ರಾತಮಿದು ಮಗಳೆ ನಿನ್ನ ಪುರಾತನದುಷ್ಕರ್ಮವಿಟಪಿಕಟುಕಫಲಂಗಳ್ (ಅಂಕ್ಕ. ೩-೩೮) ; ಬಲವನರಿ ಭಟ ಸುಳಿದು ತುಳಿದನು ಹಿಳಿದು ಹಿಂಡಿದನು (ಕೌಶಾ. ೩೬-೦೬). ೨. ಬಲವಾಗಿ ಹಿಂಡು ; ಚೆನ್ನಾಗಿ ನುಲಿ; ಶಿರಿಚಿ ಹಿಂಡು: ಒಗೆದ ನಾದ ಮೆಯ್ದುದವರ ಪಾಪ ಓಡಿಹೋಗಲೊಗೆದ ಏಕನಿಷ್ಠೆಯಿಂದ ಶಿರಿಚಿ ಮುರಿಚಿ ಹಿಳಿದು ಹಿಂಡಿ ಮಾತ್ತೆ ಏಕನಭವನೆಂಬ ದಿಟದ ಬಿಸಿಲೊಳೊಣಗಿಸುತ್ತೆ ಮಾಕ್ತೆ (ಶಿಶುಕೋ. ದೀ. ೨೩೩-೦೦) ; ತಳಿತ ತಲೆಯೋಡಿನೊಳು ಶೋಣಿತಜಲವ ಕಾಸಿದರಳೆಯು ಕರುಳನು ಹಿಳಿದು ಹಿಂಡಿದರು (ಕುಪ್ರಾಶ. ೫-೩೦). ಹಿಳಿದುಕೊಳ್ =(ರಸವನ್ನು) ಹಿಂಡಿಕೊಳ್ಳು : ದೋಸೆವದದಿ ಸೊಗಯಿ ಸುವ ಸಕ್ಕರೆಗಳೆಳನೀರ ಕುಯಿದಿಳುಪಿ ತಣ್ಣಸವಾದ ಶಾಣದೋಳಗಿರಿಸಿ ಮಱುದಿನ ಮೊಗಳ ಕಳೆದು ನಿಂಬೆಯ ಹಣ್ಣನಾ ಹೊಸ ಹುಳಿಯು ಹಿಳಿದುಕೊಂಬುದು (ಸೂಶಾ. ೨-೩೦). [ದೇ.॥ ತಮಿ.ಮಲ. ಪಿಟ್]

**ಪಿಟ್ನೀರು** (ನಾ). ಹಿಂಡಿದ ನೀರು : ಮಿಂದೊಲ್ಲಣಿಗೆಯ ಪಿಟ್ [ಪಾಠಾಂ. ಹಿಟ್] ನೀರಿಂದಂ ಕಾಲ್ಗಟ್ಟಿ ನೆಲದೊಳಿರ್ದಾ ಕೊಟ್ನೀರಿಂದಂ ಪಾರ್ವರ ಮಡಗೂಟಿಂದಂ ಪಿತೃತುಷ್ಟಿಯಕ್ಕುಮೆಂಬಪಾರ್ವರ್ (ಸಪುಶ. ೦೦-೦೨೬). [ಪಿಟ್ + ನೀರು$_1$ (<ನೀರ್)]

**ಪಿಟ್ಯಿಸು, ಪಿಟ್ಸು, ಹಿಳಿಸು** (ಕ್ರಿ). ಹಿಂಡುವಂತೆ ಮಾಡು ; ಹಿಂಡಿಸು : ಇಕ್ಷುಯಂತ್ರಂಗಳೊಳು ಕಡಿದು ಪಿಟ್ಯಿಸಿಯುಂ (ಜಜಜ. ೩೦೬). ಪಿಟ್ಸು : ದಿನಂತರಸಂತಪ್ರಕಾಕರಿಗಳಪ್ಪ ಇಕ್ಷುಯಂತ್ರದೊಳಿಕ್ಕಿ ಪಿಟ್ಸುತ್ತುಂ (ಅಶ್ಮ. ೦೦-೦೦ ಪ). ಹಿಳಿಸು : ಕೊಳಲಿನ ಸರಗಳು . . . ಹೃದಯದಲ್ಲಿ ನರ್ತಿಸುತ್ತಾ ಬಗೆಬಗೆಯ ರಸವನ್ನು ಹಿಳಿಸುತ್ತಿವೆ (ನೋಕ. vi ಮುನ್ನುಡಿ). [ಪಿಟ್ + –ಇಸು$_2$]

**ಪಿಟಿಲ್, ಪಿಳಿಲ್** (ಕ್ರಿ). ಕೈಯಿಂದ ಬಿಡು,—ಎಸೆ : "ಬ(ಪಿ)ಟಿಲ್— ಹಸ್ತೋನ್ಮುಕ್ತೌ" (ಕಮಧಾ. ಮ). ಪಿಳಿಲ್ : "ಪಿಳಿಲ್—ಹಸ್ತೋನ್ಮುಕ್ತೌ (ಕೈಯಿಂದ ಬಿಡು)" (ಕಧಾ) ₽ ಇಲ್ಲಿ ಶಬ್ದರೂಪ ನಿರ್ಧಾರವಿಲ್ಲದು ದರಿಂದ ಎರಡು ರೂಪಗಳನ್ನೂ ಸೂಚಿಸಿದೆ. [?]

**ಪಿಟ್ಸು** 'ಪಿಟ್ಯಿಸು' ನೋ.

**ಪಿಟ್ಕಿಕುಱುಕ್ಕಿ** 'ಪಿಟ್ಕಿಕುಱುಕ್ಕಿ' ನೋ.

**ಪಿಟ್ಕಿಕುಱುಕ್ಕಿ, ಪಿಟ್ಕಿಕುಱುಕ್ಕಿ** (ನಾ). ಒಂದು ಸ್ಥಳದ ಹೆಸರು : ಅರಕೆಱೆಯ ಪಿಟ್ಕಿಕುಱುಕ್ಕಿಯ . . . ಪೊಲ ಮೇರೆ (ಪ್ರ್ಯಾಅ. ೫೯೦೪, ೦೩-೬೬ ; ೩೦೮). ಪಿಟ್ಕಿಕುಱುಕ್ಕಿ : ಸೀಯಮಂಗಲದ ಪೊಲ ಮೇರೆ ಇಸಾನದ ದೆಸೆ ನಡುಗಲ್ಲೆ ಅಮ್ಬಲತಿಣ್ಣಯಿನ್ತೆಂಕಾಯ್ ವೇರೊಟ್ಟೆಯ ಅರಕೆಱೆಯ ಪಿಟ್ಕಿಕುಱುಕ್ಕಿಯ (ಎಕ. X(S). ಶ್ರೀಪ. ೦೦೬-೬೬ ; ೩೬೦). 'ಪುಲಿಕುಱುಕಿ' ಪಠಾ. [ಪಿಟ್ಕಿ? + ಕುಱುಕ್ಕಿ (<ಕುಱುಕಿ)]

Δ **ಪಿಟ್ಟುವಿ** 'ಪೃಥುವಿ' ನೋ.

**ಪಿಟ್ಟುವಿರಾಜ್ಯಂಗೆಯ್** (ಕ್ರಿ). ಭೂಮಿಯನ್ನು ಆಳು ; ರಾಜ್ಯಭಾರ ಮಾಡು : ಸ್ವಸ್ತಿಶ್ರೀಚತ್ತವಾಕ್ಯಪೆರ್ಮ್ಮಾಡಿ ಪಿಟ್ಟುವಿರಾಜ್ಯಂಗೆಯೆ (ಎಕ. V (R), ಹಿರುಬು. ೩೦೩ ; ಸು. ೮ನೆಯ ಶಕ).

[ಪಿಟ್ಟುವಿ (<ಪೃಥುವಿ) + ರಾಜ್ಯಂಗೆಯ್]

**ಪಿಟ್ಟುವಬ್ಬೆ** (ನಾ). ಒಬ್ಬಾಕೆಯ ಹೆಸರು : ಕೋಸಿಗವಳ್ಳಿಯ ಕಣ್ಣಮ್ಮಂಗ ಪಿಟ್ಟುವಬ್ಬೆಗಂ ಪುಟ್ಟಿದ ಕನ್ನಯ್ಯನ್ (ಎಕ. VIII, ಸೊರಬ. ೯೯-೬ ; ೨೭೧). [ಪಿಟ್ಟುವಿ (<ಪೃಥುವಿ) + ಅಬ್ಬೆ$_1$]

Δ **ಪಿಟ್ಟುವಿ** 'ಪೃಥುವಿ' ನೋ.

**ಪಿಟ್ಟುವಿಗಂಗ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಅಸಗ ಗಂಗಯುನ ಮಗಂ ಪಿಟ್ಟುವಿಗಙ್ಗಂ ಭಟ ಸ್ವಸ್ತಿ (ಎಕ.III(R), ತಂಜನ. ೨೦೫-೨; ೨ನೆಯ ಶಕ).

[ಪಿಟ್ಟುವಿ (<ಪೃಥುವಿ) + ಗಂಗ]

**ಪಿಟ್ಟುವಿಗಾವುಂಡ** (ನಾ). ಒಬ್ಬಾತನ ಹೆಸರು : ಸಂಗಮದ ಪೆಂಮರ್ಾನಡಿಗಾವುಣ್ಡರುಂ ರಣವಿಕ್ರಮಗಾವುಣ್ಡರುಂ . . . ಪಿಟ್ಟುವಿಗಾವುಣ್ಡರುಂ ಪೆರ್ಮ್ಮಯ್ಯ ಕೆಟರುಂ ತನನ್ನಾಕರುಂ ಕೊಳನೆಲ್ಲೂರ ಸಾಲತ್ತರುಂ ಮಾರದಗುಂ ಎನೆಪ್ಪರ್ ನರಸಾಕ್ಷಿ (ಎಕ. IV, ಎಡತೊ. ೬೦-೩೦; ಸು. ೨೨೦). [ಪಿಟ್ಟುವಿ (<ಪೃಥುವಿ) + ಗಾವುಂಡ]

**ಪಿಟ್ಟುವಿಪತಿ** 'ಪೊಡವಿಪತಿ' ನೋ.

**ಪಿಟ್ಟುವೆಯ್ಯ** (ನಾ). ಒಬ್ಬಾತನ ಹೆಸರು : ಚೋಟರ ಪಿಟ್ಟುವೆಯ್ಯಂ ಪೆರ್ವ್ವಳ್ಳಿಯ ತುಱುಗೊಳೊಳ್ ಸ್ವರ್ಗಸ್ಥನಾದಂದು (ಎಕ. XI, ಹೊಳ್ಕೆ. ೯೩-೬; 977). [ಪಿಟ್ಟುವಿ (<ಪೃಥುವಿ) + <ಅಯ್ಯ₁]

**ಪೀ** (ನಾ). ಹೇಲು; ಮಲ : (೬).
[ದೇ.॥ ತಮಿ. ಮಲ. ತುಳು. ನಾಯ್ಕಿ. ಪರ್ಜಿ. ಗದಬ. ಪೀ; ತೆಲು. ಪೀಯಿ, ಪೀಯ್ಯಿ; ಕೋಲಾ. ಪಿಯಾ]

**ಪೀಕಜಾಲಿ** (ನಾ). ಒಂದು ಬಗೆಯ ಜಾಲಿ: ಪೀಕಜಾಲಿ, ತಂಬಟಿಜಾಲಿ (ಪ್ರಕೃತಿ. ೦-೦೨). [ಪೀಕ + ಜಾಲಿ₁]

**ಪೀಕದಾಣಿ** 'ಪೀಕದಾನಿ' ನೋ.

**ಪೀಕದಾನಿ, ಪೀಕದಾಣಿ, ಪೀಕುದಾನಿ** (ನಾ). ಉಗುಳುವ ಪಾತ್ರೆ; ಥೂಕದಾನಿ; ಪಡಿಗ: ಹಾಸಿಗೆಯ ಕಾಲ್ದೆಸೆಯಲ್ಲಿ ಬೆಳ್ಳಿಯ ಪತದ್ಗ್ರಹ (ಪೀಕದಾನಿ) ಇಡಲ್ಪಟ್ಟಿತ್ತು (ರಾಜಕ. ೯೦); ರಾಜನ ಎಡಗೈಯಲ್ಲಿ ಚಿನ್ನದ ಪೀಕದಾನಿ ಇತ್ತು . . . ತಾಂಬೂಲವನ್ನು ರಾಜ ಅದರಲ್ಲಿ ಉಗಿಯುತ್ತಿದ್ದ (ಕೃರಾ. II. ೨೦೨). **ಪೀಕದಾಣಿ:** ಪಚ್ಚಿರ—ದಾಣಿ, ಗುಲಾಬ—ದಾಣಿ, ಪೀಕ—ದಾಣಿ, ಅತ್ತರ—ದಾಣಿ, ತಬಲ್—ಜಿ—ದಾಣಿ ಈ ಮೊದಲಾದವುಗಳಲ್ಲಿ ಕಂಡುಬರುವ ಪ್ರತ್ಯಯಗಳೂ 'ಪಾರಸಿ' ಆಗಿವೆ (ಕಾಶಾಶಾ. ೦೬೬). **ಪೀಕುದಾನಿ** : ಮಗ್ಗುಲಲ್ಲಿರುವ ಪೀಕುದಾನಿಯೊಳಕ್ಕೆ ಉಗಿಯುತ್ತಾ (ಪಿಶಮು. ೦).
[← ಹಿಂ. ಪೀಕದಾನ್; ಮರಾ. ಪೀಕದಾನೀ, ಪೀಕದಾಣೀ]

**ಪೀಕಲಾಟ, ಪಿಕಲಾಟ** (ನಾ). ೧. ಪೇಚು ; ತೊಂದರೆ ; ಪೇಚಾಟ ; ಒದ್ದಾಟ : ಕಾಕತಾಳದಂತೆ ನಿನ್ನ ಮಾತು ತಾಂ ಲೋಕದಲ್ಲಿ ಸಿದ್ಧವೋದು ವೇಳೆಯ್ಯೆ ಪೀಕಲಾಟಮೆಯ್ದೆ ಬರ್ಕುಮಿಾಗಳೀ ಪೋಕು ನಿನ್ನವಲ್ತೆ ಸರ್ವಭೂಮಿಯೊಳ್ (ಹಾಲಾಸ್ಯ. ೯-೦೩-೯೦); ಇವರಿಗೇನು ಬಂದಿತಪ್ಪ ಅಂತಹ ಪೀಕಲಾಟ! (ಮುಂಗಾಳಿ. ೬೩). ೨. ಜಗಳ : (೬). **ಪಿಕಲಾಟ** : ೧. ಹೊಟ್ಟೆಗಿಲ್ಲದಿದ್ದರೂ ನಿಮ್ಮ 'ಪಿಕಲಾಟ' ಇದ್ದೇ ಇದೆ (ಜಗುಬ. ೦೦); ಇದು ನಾನು ಕಂಡ ಪಿಕಲಾಟ ! (ಕೈಲಾಕ. ೦೪).
**ಪೀಕಲಾಟಕ್ಕಿಟ್ಟುಕೊಳ್ಳು**=ತುಂಬ ಇಕ್ಕಟ್ಟಿನ ಪ್ರಸಂಗವಾಗು : ಅಧಿಕಾರಿಗಳಿಗೆ ಪೀಕಲಾಟಕ್ಕಿಟ್ಟುಕೊಂಡಿತು (ಅರ್ಕ್. ೦೬); ತರಗತಿಯಲ್ಲಿ ಪ್ರಶ್ನೆ ಕೇಳಿದಾಗ ಪೀಕಲಾಟಕ್ಕಿಟ್ಟುಕೊಳ್ಳುತ್ತದೆ (ಶಾರಮ. ೯೬).
[<ಪೀಕು₁ / ತೆಲು. ಪೀಕಲಾಟ]

**ಪೀಕಿಸು** (ಕ್ರಿ) (ಹಣ ಮೊದಲಾದುವನ್ನು) ಬಲಾತ್ಕಾರದಿಂದ ಕೊಡುವಂತೆ ಮಾಡು,–ತೆರುವಂತೆ ಮಾಡು : ಈ ದಿವಸ ಸಿನಿಮಾಕ್ಕೆ ಅವನ ಕೈಯಿಂದಲೇ ದುಡ್ಡು ಪೀಕಿಸುತ್ತೇನೆ (ಕೂಶಿ). [ಪೀಕು₁+–ಇಸು₃]

**ಪೀಕು₁** (ಕ್ರಿ). ೧. ಹೊರಕೆ ಎಳೆ,–ಜಗ್ಗು : ಚತುಷ್ಪಾದಿಗಳನ್ನೆದೆ ಬಿಡೆ ಸಿಡಿಲ ಬಳಗದಂತಾರ್ದು ತಾಕಿದವು ಘುಡುಘುಡಿಸಿ ಪೀಕಿದವು ಕಟಿನಿಕರವ (ಕಕು. ೨೦-೩೦). ೨. (ಕೂದಲು ಮೇಂತಾದುವನ್ನು ಎಳೆಯುವುದರಿಂದ) ನೋವಾಗು,—ಅಳುಕು : ಕೂದಲಿನ ಸಿಕ್ಕು ಬಿಡಿಸುವಾಗ ಪೀಕುತ್ತದೆ (ಕೂಶಿ). ೩. ಆವರಿಸು ; ಆಕ್ರಮಿಸು : ಭುವರಲೋಕವ ತಾಕಿ ನಾಲ್ದೆಸೆ ಸುವರಲೋಕವ ಪೀಕಿ ಖತಿಯಿಂ ಕವರಿ ಮಹಲೋಕವನು ಥಟ್ಟಿಸಿ ಜನರ ಲೋಕವನು ಕವಿದು ತಪಲೋಕಕ್ಕೆ ನಿಲುಕಿತು ಕಪಕವಿಸಿ ನೆರೆ ಸತ್ಯಲೋಕಕೆ ಶಿವಮಹಾದೇವೆಂದು ಶೋಣಿತಬೀಜಸಂತಾನ (ಅಂದಿಕಾ. ೯೨-೯೩). ೪. ಹೊರದೂಡು; ಬಹಿಷ್ಕರಿಸು : (೬). ೫. ಕಷ್ಟಪಡು; ಹೆಣಗು : ಸಾಕು ರಣಸುಖವೆಂದು ಮಿಕ್ಕಿನ ಲೋಕಪಾಲರು ಹರಿಭಯಾದ್ಯರು ಪೀಕಿ ರಂಗದ ಕುರಿಗಳಾದರು ಎಳರ ತೋಟಿಯಲಿ (ಅಂದಿಕಾ. ೯೨-೩೯). ೬. (ಹಣ ಮೊದಲಾದುವನ್ನು) ಬಲವಂತದಿಂದ ಕೊಡು,–ತೆರು : ಅವನು ಪಂದ್ಯದಲ್ಲಿ ಸೋತುದರಿಂದ ಹತ್ತು ರೂಪಾಯಿಗಳನ್ನು ಪೀಕಬೇಕಾಯಿತು (ಕೂಶಿ). ' ಪೀಕಿಸು ' ಪರಾ.
[ದೇ.॥ ತೆಲು. ಪೀಕು ; ನಾಯ್ಕಿ. ಪೀಕ್]

**ಪೀಕು₂** (ನಾ). ಬೆಳೆ ; ಪೈರು : ಮೊನ್ನೆ ರೈತರು ಪೀಕನ್ನು ಮನೆಗೆ ತಂದು ಹಚ್ಚಿದರು (ಅರಿಯು. ೬೦) ; ನನ್ನ ಮಗನಿಗೆ ಮಠದ ಭೂಮಿಯಲ್ಲಿ ಬೆಳೆದ ಎಲ್ಲ ಪೀಕು ಸಲ್ಲತಕ್ಕದ್ದು (ಮಠಪ. ೬೩).
[← ಹಿಂ. ಪೀಕಾ = ಚಿಗುರು : ಮರಾ. ಪೀಕ್]

**ಪೀಕುದಾನಿ** ' ಪೀಕದಾನಿ ' ನೋ.

**ಪೀಕೆ** (ನಾ). ಬಾಣದ ಗರಿ : ಇಱುಬಿನೊಳು ಸಿಕ್ಕಿತಿದೆ ಬಲುಗಣಂ ನೋಡೆನುತ ಪೀಕೆಯಿಂ ಸನ್ನೆಗೆಯ್ದು . . . ಪರಿಚರರು ನುಡಿವುತಿರ್ದರ್ (ಲಕಾ. ೨೩-೦೬). [<ಪಿಳ್ಳು]

**ಪೀಚ** (ನಾ). (ಆಲಂ) ಸಣ್ಣ ಮನುಷ್ಯ ; ಅಲ್ಪನಾದವನು ; ಕ್ಷುದ್ರ : ಭೂಚರರ ಗೋಚರರಗೊಳಿಸದಸುರಾನ್ವಯದ ಪೀಚನಲ್ಲ (ಶಬಮು. ೩೫-೦). [ಪೀಚು₂ + – ಅ₂]

**ಪೀಚಕತ್ತಿ** (ನಾ). ಚಿಕ್ಕ ಕಠಾರಿ ; ಕಿರುಗತ್ತಿ : ನೀನು . . . ನಡುವಿಗೆ ದಟ್ಟಿಯನ್ನು ಬಿಗಿದು ಪೀಚಕತ್ತಿಯನ್ನು ಸಿಕ್ಕಿಸಿಕೊಂಡು ಬಾದೆ (ಕರದಾ. II. ೦೦೩); ದಟ್ಟಿಗೆ ಪೀಚಕತ್ತಿಯನ್ನು ಸಿಕ್ಕಿಸಿರಲಿಲ್ಲ (ಮುಂಕಾ. ೩).
[< ಪೀಚು₂ + ಕತ್ತಿ / ತಮಿ. ಪೀಚ್ಚಾಙ್ಕತ್ತಿ, ಪೀಚ್ಚಾಕ್ಕತ್ತಿ ; ಮಲ. ಪೀಚ್ಚಾಙ್ಕತ್ತಿ]

**ಪೀಚಲು** (ನಾ). ಚೆನ್ನಾಗಿ ಬೆಳೆಯದಿರುವುದು ; ಬಡಕಲು : ಪೀಚಲಾದ ಸರಳವಾದ ಉಡುಪಿನ ಚಿಕ್ಕ ಮನುಷ್ಯನೊಬ್ಬನು . . . ಬಳಲಿದ ಕಣ್ಣುಗಳಿಂದ ನೋಡುತ್ತಿದ್ದಾನೆ (ಮಲಿನಾ. ೦).
[ ಪೀಚು₂ + – ಅಲು (< – ಅಲ್₂) ]

**ಪೀಚಾಡಿ** ' ಪಿಚಾಡಿ ' ನೋ.

**ಪೀಚಾಳು** (ನಾ). ಸರಿಯಾಗಿ ಬೆಳೆಯದ ವ್ಯಕ್ತಿ ; ಸಣಕಲು ಮೈಕಟ್ಟಿನವನು : ಪೀಚಾಳೊಬ್ಬ ತನ್ನ ಕವಲುತೋಳೆಯ ಅಂಗಿಯನ್ನು ಕಳಚಿ ಬಿಸಾಡಿ ಬಿಕ್ಕುತ್ತ ಬಂದು ಅವಳನ್ನು ಬಿಗಿದಪ್ಪಿಕೊಂಡನು (ಕೃಪಮು. ೩೨೩).
[ಪೀಚು₂ + ಆಳು₂ (< ಆಳ್₃)]

**ಪೀಚು₁** (ಕ್ರಿ). (ದ್ರವ ಪದಾರ್ಥಗಳನ್ನು) ಪಿಚಕಾರಿ, ಜೀಕಳಿ ಮೊದಲಾದುವುಗಳಿಂದ ಚಿಮ್ಮು,—ಚಿಮುಕಿ ಬಿಡು : ' ಪೀಚುಗೊಳವಿ ' ಪರಾ. [ದೇ. ॥ ತಮಿ. ಪೀಚ್ಚು, ಪೀಚ್ಚುರ್ ; ಮಲ. ಪೀಚ್ಚು]

**ಪೀಚು₂, ಪೀಚೆ, ಹೀಚು** (ನಾ). ೧. ಸಣ್ಣದಾಗಿರುವಿಕೆ ; ಸರಿಯಾಗಿ ಬೆಳೆಯದಿರುವಿಕೆ : (೬). ೨. ಬಡಕಲು ; ಸಣಕಲು : ಅವರ ಮಗು ತುಂಬ ಪೀಚು (ಕೂಶಿ). ೩. ಕಿರ ಎಳೆಯ ಕಾಯಿ ; ಮಿಡಿ : " ಪೀಚಿನಲ್ಲೆರಕವುದು ಮಿಡಿಗೆ " (ಕಕಕ. ೬೬) ; ಚಿಗುರೆಲೆ ಪೀಚು ಕಾಯ್ ಬಲಿತ ದೋರೆಗಳುಂ ಕಳಿವಣ್ಗಳಾಗಳುಂ ಸೊಗಯಿಸೆ (ಹಾಲಾಸ್ಯ. ೩-೦-೯). (ಗು). ೪. ಸಣಕಲಾದ; ಬಡಕಲಾದ : ಮಗುವಿಗೆ ರಿಕೆಟ್ಸ್ ತರಹ ಆಗಿರುವಂತಿದೆ ; ತುಂಬಾ ಪೀಚುಮಗು (ಶಿಂದಿನ. ೦೨); ಆ ಜಾಲಿ ಪೀಚು ಮನುಷ್ಯನೊಬ್ಬ . . . ತವುಗೆಲ್ಲ ನಿಷ್ಕಾರಣವಾಗಿ ಕಠಿಣಹಿಂಸೆಯಾಗುತ್ತಿತ್ತೆಂದು ಹೇಳಲಾರಂಭಿಸಿದನು (ಕೃಪಮು. ೨೩೩). **ಪೀಚೆ** : ೨. "ಅದೇನೂ ಪೀಚೆಯಲ್ಲ; ಸರಿಯಾದ ಎತ್ತರವೆ " ಎಂದು ವರ್ತಕ ಉತ್ಸಾಹದಿಂದ ನೆಕ್ಲು ದೋಷ್‌ಪ ಕಿವಿಯಲ್ಲುಸುರಿದನು (ಕೃಪಮು. ೬೬). ೪. ಆ ಪೀಚೆ ಮನುಷ್ಯ ನಿರಾಶೆಯಿಂದ ಚೀರಿದನು (ಕೃಪಮು ೨೩೩). **ಹೀಚು** : ೩. "ಎಳೆಗಾಯಿ ಮಿಡಿ ಹದಿರು ಹೀಚು" (ಕಬ್ಬಮು. ೨೩) ; ಬೀಜಕೆ ಬಿಡುವುದ ಹೀಚಿನೊಳಡಿಯಿಂಬುದಿ ಜಗದೊಳಗುಳ್ಳಗಾದೆ (ಶರಕ. ೨೩-೯೬); ವೃಕ್ಷದ ಬುಡಕ್ಕೆ ನೀರನೆರೆದಲ್ಲಿ ಆ ಉದಕಸಾರವು ಎಲೆ, ಹೀಚು, ಕಾಯಿ ಹಣ್ಣುಗಳೊಳಗೆಲ್ಲ ವೇಧಿಸಿಕೊಂಡಿರುವ

ಹಾಗೆ (ಮೋಕ್ಷಾ. ೦೩೦-೯೬೪ ಅರ್ಥ): ಹಣ್ಣಿನ ಗುಣವೆಲ್ಲ ಹೀಚಿನಲ್ಲಿ (ಶಾಬಾಶ. ೦೪). (ನಾ). ೫. ಸಣಕಲು ವ್ಯಕ್ತಿ; ನರಪೇತಲ: ನಿನ್ನ ತಪ್ಪು ಹೀಚೇನೂ ಅಲ್ಲ. ನೋಡುವುದಕ್ಕೆ ಇಪ್ಪತ್ತೈದು ವರ್ಷದ ಆಳು (ಶಾಂಕಲಾ. ೦೯೦). ೬. (ಅಲಂ) ಅನುಭವವಿಲ್ಲದ ವ್ಯಕ್ತಿ: ಇದಕ್ಕೆಲ್ಲ ಕತೆ ಬರೆದ ಹೀಚುಗಳ ಅಮೋಘವಾದ ಅಪರಿಮಿತ ಅಜ್ಞಾನವೇ ಕಾರಣ (ಮಹೋಸಂ. ೦೩೬). [ದೇ.॥ ಮಲ. ಪೀಚ್ಚ್]

**ಪೀಚುಗಡ್ಡೆ** (ನಾ). ಸರಿಯಾಗಿ ಬೆಳೆಯದ ಗಡ್ಡೆ; ಕಂರುಚಲುದಾಡಿ: (೪). [ಪೀಚು₁ + ಗಡ್ಡೆ₁]

**ಪೀಚುಗೊಳವಿ** (ನಾ). ಪಿಚಕಾರಿ; ಜೀಕಳಿ; ಜೀರ್ಕೊಳವೆ: (೪). [ಪೀಚು₁ + ಕೊಳವಿ (< ಕೊಟವಿ)]

**ಪೀಚೆ** 'ಪೀಚು₁' ನೋ.

**ಪೀಠ** (ನಾ). ೧. (ಕುಳಿತುಕೊಳ್ಳಲು ಮಾಡಿದ) ಮಣೆ; ಆಸನ: "ವಿಷ್ಟರಂ, ಪೀಠಂ, ಆಸನಂ—ಈ ೩ ಮಣೆ" (ಪಠಾಯು. ೩೨-೦೩೩); "ಆಸಂದಿ ವಿಷ್ಟರಂ ವೇತ್ರಾಸನಕಂ ಪೀಠಮಾಸನಂ ಪೆಸರಿಂ" (ಶಬ್ದಮಣಿ. ೯೯-೨೩). ೨. ದೇವರ ಪ್ರತಿಮೆಯನ್ನು ಇಡುವ ವೇದಿಕೆ: ಎಸೆವ ಪೀಠವನಿಳಿದು ರುದ್ರಾಣಿ ಚಿಚ್ಚರದೊಳ್ಕೆತಂದು ಕಯ್ಯ ಬಾಳಂ ಪಿಡಿದು . . . ಎರಡು ವರವನಿತ್ತಪೆನೆಂದಳು (ಕೈಪುಚಾ. ೩೦-೬೬). ೩. ದೇವರ ಮುಂದೆ ನೈವೇದ್ಯ, ಬಲಿ ಮೊದಲಾದುವುಗಳನ್ನು ಇಡುವ ವರ್ತುಲಾಕಾರದ ವೇದಿಕೆ: 'ಬಲಿಪೀಠ' ಪರಾ. ೪. ತಳಪಾಯ; ಬುನಾದಿ; ಅಡಿಪಾಯಂ. ೫. ಗುರುಗಳು, ಸ್ವಾಮಿಗಳು, ಅರಸರು ಮೊದಲಾದವರ ಗದ್ದುಗೆ,—ಅಧಿಕಾರಸ್ಥಾನ: ಪೀಠ ಮೂಢಗೆ ಹೊಲ್ಲ ಕೀಟ ನಿದ್ದೆಗೆ ಹೊಲ್ಲ (ಸರ್ವಜ್ಞ. ೯೩೦); ಪೀಠ ಸಿಕ್ಕಿದರೂ ಕಾಟಕತನ ಬಿಟ್ಟಾನೆಯೇ? (ಗಾದೆ). ೬. ವಿದ್ಯಾಕೇಂದ್ರ; ವಿದ್ಯಾಕ್ಷೇತ್ರ: ಮಯೂರಶರ್ಮನು ವ್ಯಾಸಂಗ ಮಾಡುತ್ತಿದ್ದುದು ಈ ಪೀಠದಲ್ಲಿಯೇ (ಕರ್ನಾಇ. ೩). 'ವಿದ್ಯಾಪೀಠ' ಪರಾ. ೭. ವಿಶೇಷ ಅಧ್ಯಯನಕ್ಕಾಗಿ ಗೊತ್ತುಮಾಡಿರುವ ಒಂದು ಅಧಿಕಾರ,—ಪ್ರಾಧ್ಯಾಪಕಸ್ಥಾನ: ಜೈನ ಶಾಸ್ತ್ರಾಭ್ಯಾಸಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಒಂದು ಪೀಠವಿದೆ (ರೂಢಿ). [ಸಂ.]

**ಪೀಠಕ** (ನಾ). ೧. ಆಸನ; ಮಣೆ. ೨. "ಸ್ಥಾನ" (ಅಠಾಕ. ಕೋಶ): ಅಂತೆ ಜನನೀಜಠರಪೀಠಕ[ಪಾಠಾಂ. ಪಿಠರ]ಮನೆಯ್ದುನೋರಂತಿದುಂ ಪರಮಾರ್ಥಮಕ್ಕುಂ (ಆಠಾಕ. ೯-೯-೭೦). ೩. [ನಾಟ್ಯ] ನೃತ್ಯದಲ್ಲಿಯ ಒಂದು ಭಂಗಿ: ಕಾಲುಗಳು ಪೀಠಕದಲ್ಲೇ ನಿಂತಿರಬೇಕು . . . ಅವು ನೇರಾಗ ಕೂಡದು (ಬಿಜ್ಜಿಶಾ. ೦೩೭). [ಸಂ.]

**ಪೀಠಮರ್ದ** (ನಾ). [ಕಾವ್ಯಮೀ] ಶೃಂಗಾರವಿಷಯಗಳಲ್ಲಿ ನಾಯಕನಿಗೆ ಸಹಾಯಕರಾಗಿ ಬರುವ ನಾಗರಕ, ವಿಟ, ವಿದೂಷಕ ಮತ್ತು ಪೀಠಮರ್ದ ಎಂಬ ನಾಲ್ವರಲ್ಲಿ ಒಬ್ಬ; ೫ ಕೋಪಗೊಂಡ ನಾಯಿಕೆಯನ್ನು ಸಂತೈಸುವುದರಲ್ಲಿ ನಿಪುಣನಾದವನು: ಒಡನೊಡನೆ ಪೊರೆದು ಕುಳ್ಳಿರ್ದಡೆಯೊಳ್ಳುಂದೇಜಲಿಕ್ಕಿ ಕಾಲ ಪಿಡಿದೋಗಡಿಸದೆ ಮಿದಿಮಿದಿದಟ್ಟಿಯನೊಡರಿಸುತಿರ್ಪವನೆ ಪೀಠಮರ್ದನೆನಿಕ್ಕುಂ (ಶೃಂಗಾರ. ೯-೦೨); ಮಗುಳ್ದು ಸರಸೋಕ್ತಿಗಳ ವಿರಚಿಪಂ ನಾಗರಿಕನಂತೆ ಪೀಠಮರ್ದನ ಪಾಂಗಿನಿಂ (ಅಠಾಕ. ೯-೬-೩೬). [ಸಂ.]

**ಪೀಠಮರ್ದಕ** (ನಾ). = ಪೀಠಮರ್ದ: ತನ್ನಂ ಕಾಣಲೊಡಮಾಜಿದು ನುಡಿಯಿಸಿ ಮೆಚ್ಚಿ ಮೇಳದ ನಾಗರಿಕವಿಟವಿದೂಷಕಪೀಠಮರ್ದಕರ್ಕಳ್ವೆರಸು . . . ಸೂಳೆಗೇರಿಯೊಳಗನೆ ಬರ್ಪುದುಂ (ಕೂಶಚಾ. ೯-೬೯ ವ); ದೀನಜನಕಾಲ್ಪಾಂಘ್ರಿಪಂ ನಾಗರಕವಿಟವಿದೂಷಕ ಪೀಠಮರ್ದಕರ್ಕಳ್ವೆರಸು . . . ಬರ್ಪುದುಂ (ಶಾಂತಿಪು. ೯-೬೨ ವ); ಪೀಠಮರ್ದಕ ವಿಟ ಚೇಟ ವಿದೂಷಕರೆಂದು ಮಯಂ ಪೇಟ್ಟುವರಲ್ಲಿ ರಾಜನಿಂದಣಮಿ ಕಿಱಿದಾದ ಗುಣವಂತಂ ತನ್ನೃಪನ ಪೀಠಮನಣಿವುತ್ತೊತ್ತಿ ಕುಳ್ಳಿರ್ಪುದಱಿಂ ಪೀಠಮರ್ದಕಂ (ಶಕಕ. ೩-೬೩ ವ). [ಸಂ.]

**ಪೀಠಮರ್ದನ** (ನಾ). = ಪೀಠಮರ್ದ: ಎಸೆವ ನಾಗರಿಕ ವಿಟ ವಿದೂಷಕ ಪೀಠಮರ್ದನ ನಟ ಗಮಕಿ ಗಾಯಕರು ಮಿಗೆ ಸಂಕಟಿಸಿ ಬೆಱಿದರು ಚಪ್ಪರದೊಳು (ಜೀವಂಕ. ೭-೩೭); ಮೂಢಲಿದು ವಿಟನಿಂಗೆ ಬಡಗಲದು ವಿದೂಷಕಗೆ ಪಡುವಲದು ನಾಗರಿಕಗಂ ತೆಂಕಲದು ಪೀಠಮರ್ದನಗೆ (ಸರ್ವಜ್ಞ. ೦೩೩೦). [ಸಂ.]

**ಪೀಠವರ್ಧನ** (ನಾ). = ಪೀಠಮರ್ದ: ಪೀನಸ್ತನ ರಕ್ತಕರ್ದಮಪೂರಿತ ಸುಗಂಧಾಧಿಕಾರಮರ್ದನಕುಶಲಂ ತಾನಿಂಗಿತಜ್ಞನುಂ ವಿಜ್ಞಾನಿಹಿತಂ ಶಾಟಿ ಪೀಠವರ್ಧನನೆನಿಕುಂ (ಮಲ್ಲಿ. ೦೦-೪೦); ಮನುಮಾರ್ಗಿ ಪರಹಿತಾವನಿ ಸತ್ಯವಾಣಿ . . . ಸಜ್ಜನನೆನಿಪ ಪೀಠವರ್ಧನನೊರ್ವ ಕೆಳೆಯಂ (ಜಕಕ. ೯-೯); ವಿಟವಿದೂಷಕಪೀಠವರ್ಧನರೆಂದೆಂಬ ನಟನೆಯ ನಾಗರಿಕರಿಗೆ ಘಟಿಕ ಕಾಮನು ಕಾವಲಿರಿಸಿದನೆಂಬಂತೆ ಕುಟಿಲಾಕ್ಷಿಯರ ಮೊತ್ತವೆಸೆಯೆ (ಅಕ್ಕಿ೬.೩. ೩-೬೯). [< ಪೀಠಮರ್ದನ]

**ಪೀಠಾಧಿಪತಿ** (ನಾ). ಮಠದ ಅಧಿಕಾರವನ್ನು ವಹಿಸಿಕೊಂಡ ವ್ಯಕ್ತಿ; ಪೀಠಾಧಿಕಾರಿ; ಜಗದ್ಗುರು: ಮೊನ್ನೆ ಶಿವಗಂಗೆಯ ಪೀಠಾಧಿಪತಿಗಳ ಉಪನ್ಯಾಸವಿತ್ತು (ರೂಢಿ). [ಸಂ.]

**ಪೀಠಿಕಾಪ್ರಕರಣ** (ನಾ). ಆರಂಭದ ಘಟನೆ: ಧರೆಗವತರಿಸುವ ಲಕ್ಷ್ಮೀವರನವತಾರಕ್ಕೆ ಪೀಠಿಕಾಪ್ರಕರಣದಂತಿರೆ ಬಂದನಂತಭೋಗೀಶ್ವರನಾ ದೇವಕಿಯ ಗರ್ಭದೊಳ್ ಜನಿಯಿಸಿದಂ (ಜಗಂ. ೨-೬೦). [ಸಂ.]

**ಪೀಠಿಕಾಸಂಧಿ** (ನಾ). (ಕಾವ್ಯದಲ್ಲಿ) ಆರಂಭದ ಸಂಧಿ; ಮೊದಲನೆಯ ಸಂಧಿ: ಪ್ರಾಚೀನಕವಿಗಳೆಲ್ಲ ತಮ್ಮ ಕಾವ್ಯದ ಪೀಠಿಕಾಸಂಧಿಯಲ್ಲಿ ತಮ್ಮ ಇಷ್ಟದೇವತೆಗಳನ್ನು ಸ್ಮರಿಸಿದ್ದಾರೆ (ರೂಢಿ). [ಸಂ.]

**ಪೀಠಿಕೆ** (ನಾ). ೧. ಆಸನ; ಪೀಠ: ಪ್ರತಿನಂದಿ . . . ಪೊಂದಾವರೆಯ ಪೂಗಳಿಂ ಪೀಠಿಕೆಯಂ ಸಮೆದು ಜಿನಪ್ರತಿಮೆಯನಲ್ಲಿ ನಿಲಿಸಿಯರ್ಚಿಸುತ್ತಿರ್ಪನ್ನೆಗಂ (ಶಂಶಾಪು. ೦೩-೬೩ ವ). ೨. ಶಿವಲಿಂಗದ ಪಾಣಿವಟ್ಟಲು; ಪಾಣಿಪೀಠ; ಪಿಂಡಿಗೆ: ದೇಹವೇ ಪೀಠಿಕೆ [ಪಾಠಾಂ. ಪಿಂಡಿಗೆ, ಪೀಠಕ್ಕೆ, ಪೀಠಿಗೆ] ಜೀವವೇ ಲಿಂಗ (ಶವಸಂ. ೯೩-೦೯೬). ೩. ಯಾವುದಾದರೊಂದು ವಿಷಯದ ಸಮಗ್ರವಿವರದ ಸಂಗ್ರಹ,– ಸಮಸ್ತವಿವರದ ಸಾರ. ೪. ಮುನ್ನುಡಿ; ಉಪೋದ್ಘಾತ: ಈ ಗ್ರಂಥದ ಪೀಠಿಕೆಯನ್ನು ಬರೆದವರು ದೊಡ್ಡ ವಿದ್ವಾಂಸರು (ರೂಢಿ).

**ಪೀಠಿಕೆ ಹಾಕು**=ಮುಂದಿನ ಕಾರ್ಯಕ್ಕೆ ಅನುಕೂಲವಾದ ಹಿನ್ನೆಲೆಯನ್ನು ರಚಿಸು; ಪೂರ್ವರಂಗವನ್ನು ನಿರ್ಮಿಸು: ಆ ಮನೆಯನ್ನು ಅವರ ತಲೆಗೆ ಕಟ್ಟುವುದಕ್ಕೆ ಏಜೆಂಟ್ . . . ಪೀಠಿಕೆ ಹಾಕಿದ್ದನು (ಮೋರಪ. ೨೩); ಅವರೇ ಜವಾಬುದಾರಿ ಹೊತ್ತು ಇವಳನ್ನು ಈ ಊರಿಗೆ ತಂದದ್ದಲ್ಲವೆ? ಎಂದು ಪೀಠಿಕೆ ಹಾಕಿ ಕತೆ ಹೇಳಿದ್ದ (ಮೂಕಜ್ಜಿ. ೬೪). [ಸಂ. ಪೀಠಿಕಾ]

**ಪೀಠೋಪಕರಣ** (ನಾ). ಮಣೆ, ಕುರ್ಚಿ, ಮೇಜು ಮೊದಲಾದ ವಸ್ತುಗಳು: (ಮನೆಯ, ಕೊಠಡಿಯ,—ಕುರ್ಚಿ, ಮೇಜು, ಮೊ. ದ) ಪೀಠೋಪಕರಣ (Furniture. ಇಂಕಣ); ಅನಂತರ ಜವಾಹಿನಗಳನ್ನೂ ಪೀಠೋಪಕರಣಗಳನ್ನೂ ಹೊರಗೆ ತರಲಾಯಿತು (ಕುಕಸು. ೨೬೦). [ಸಂ.]

**ಪೀಡ** (ನಾ). ಒಂದು ಬಗೆಯ ಮರ; ಸರಳವೃಕ್ಷ: "ಪೀತಂಬದಾಹಾ ಅಂದಳ, ಸುರಹೊನ್ನೆ, ಜೀರಗೆ, ಪೀಡ, ಅಕ್ಷಿ" (ಚಿಕಪ್ರ. ೯೯). [ಸಂ. ಪೀಡಾ]

**ಪೀಡನ** (ನಾ). ೧. ಹಿಸುಕುವುದು ; ಹಿಂಡುವುದು ; ಒತ್ತುವುದು : ವೃಷಭಗೆ ಹರಣ ಹಿಂಡಿದುದವನ ಬಾಹುಪೀಡನದಿ (ಶ್ರೀಶಾಖ. ೬೮೬–೨೨೦). ೨. ನೋಯಿಸುವುದು ; ಹಿಂಸಿಸುವುದು ; ಕಾಡುವುದು : "ನಿಗ್ರಹಂ ಪೀಡನಂ" (ಚುಂಗಂ. ೧೩೦–೧೭). ೩. ಹಿಡಿಯುವುದು : 'ಪಾಣಿಪೀಡನ' ಪರಾ. ೪. [ಕಾಮಶಾ] ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಒಂದು : ಸಹಜಮೆಂಬ ತೆಱದಿ ನಡೆದು ಬರ್ಪಮಿನಿಪ ಪುಂದಿಯೆಡೆಯ ಮಹಿಳೆಯೊಡಲನೊಲ್ದು ಸೋಂಕೆ ತೆಕ್ಕೆಗಾನಿಸಿ ಅಹ ಇದಾರೆನಲ್ಕೆ ಬಿಡುವ ಬಹುವಿದಗ್ಧಪುರುಷನಿಂದ ಮಹಿಗೆ ಕಾಣಿಸಿದುದು ಪೀಡನಂ (ಜನವ. ೭–೫); ಪುಷ್ಕರ ವಿವಿಧಕ ಧೃಷ್ಟಕ ಪೀಡನ ವೃಕ್ಷಾರೋಹಣ ಲತಾವೇಷ್ಟನ ತಿಲತಂಡುಲಾಖ್ಯ ಕ್ಷೀರನೀರ ಊರೂಪಗೂಢ ಜಘನೋಪಗೂಢ ಸ್ತನಾಶ್ಲೇಷ ಲಲಾಟಕಮೆಂಬ ದ್ವಾದಶಾಲಿಂಗನಾಲಿಂಗಿಗಳಿಂ (ವಿವೇಕ. ೧೮೩); ಅಲ್ಲಿರ್ದ ಕಾಮಿನೀ ಸ್ತ್ರೀಪುರುಷರೋರೊರ್ವರನೊತ್ತಿಕೊಂಡು ಹೋಗಿ ಆ ಬಾಧೆಗೆ ಆಲಿಂಗನಂಗೈವುದಂ ಪೀಡನಮೆಂಬರು (ಕಾಮಶಾ. ೨೨೦). ೫. ದಂತಕ್ಷತದ ಭೇದಗಳಲ್ಲಿ ಒಂದು : ಎಡಗಲ್ಲದಲ್ಲಿ ಅಡಿಗಡಿಗೆ ದಂತಕ್ಷತಗೈವುದು ಪೀಡನಮೆಂಬುದು (ಕಾಮಶಾ. ೨೨೬). ೬. ಸುರತದ ಆಸನಗಳಲ್ಲಿ ಒಂದು : ಅವಳ್ಗೆ ದಣಿವಿಲ್ಲದೊಡೆ ಅವಳು ಮೇಲಪ್ಪುದು. ತಾಂ ಕೆಳಗಪ್ಪುದು. ಆ ಧ್ವಜಾಧಿಪ ಮೆಲ್ಲನವುಕೆ ಪೀಡನಂ (ಕಾಮಶಾ. ೨೩೬). [ಸಂ.]

**ಪೀಡನಕ** (ನಾ). ೧. = ಪೀಡನ ೪ : ನೆರವಿಯೊಳ್ ಪೊರ್ದಿ ಪೆಣ್ಣಂ ಸರಸಾಟದಿ ಭಿತ್ತಿಗೌಂಕಿಯುಹಹಮೆನುತ್ತಾದರದಿಂ ಬಿಗಿಬಿಗಿದಪ್ಪುತ್ತಿರಲದೆ ಪೀಡನಕಮೆಂದೆನಿಪ್ಪಾಶ್ಲೇಷಂ (ಮನ್ಮಥ. ೧೦–೭). ೨. = ಪೀಡನ ೫ : ಎಡದ ಗಲ್ಲಮನೊತ್ತಿ ಪಿಡಿಯೆ ಪೀಡನಕಮದು (ಜನವ. ೭–೩೦). [ಸಂ.]

**ಪೀಡನೆ** (ನಾ). ಕಾಟ ; ಹಿಂಸೆ ; ಪೀಡೆ : ಯುರೋಪಿಯನರ ಪೀಡನೆಗೊಳಗಾಗಿರುವ ರಾಷ್ಟ್ರಗಳಲ್ಲಿ ತಮ್ಮ ಶಕ್ತಿಯ ವಿಚಾರದಲ್ಲಿ ಒಂದು ಬಗೆಯ ನವೀನವಿಶ್ವಾಸವು ಹುಟ್ಟುವುದು (ಜಗಸಂ. ೩೭). [ಸಂ. ಪೀಡನ]

**ಪೀಡಿ, ಪೀಢಿ** (ನಾ). ಪೀಳಿಗೆ ; ಪರಂಪರೆ ; ತಲೆಮಾರು : ನೀವು ಪೀಡಿದರಪೀಡಿಯಿಂದ ಈವೂರಲ್ಲಿದ್ದವರು (ಚಿತ್ರಾ. ೬೦). **ಪೀಢಿ**: ಹಳೆ ಹೆಂಗಸರಿಗೆ ಈ ತರುಣಪೀಢಿಯ ನಡತೆ ತಿಳಿಯೂದಿಲ್ಲ (ಗಂಪಾಹು. ೨೦).

[ ← ಮರಾ. ಪೀಢೀ ]

**ಪೀಡಿತ** (ಗು). ೧. ನೋಯಿಸಲ್ಪಟ್ಟ; ಬಾಧೆಗೊಳಗಾದ ; ಹಿಂಸೆಗೆ ಗುರಿಯಾದ : ನಿಜವಕ್ತ್ರೋಜನಿಕ್ಷಿಪ್ತಕ್ಷ್ವೇಡಪೀಡಿತಲೋಕಘಾತಿನಿಯಪ್ಪ ಪೂತನಿಯುಮಂ . . . ಕರೆದು (ಜಗಂ. ೩–೨೨). (ನಾ). ೨. ಪೀಡೆಗೊಳಗಾದವನು ; ನೊಂದವನು : ವಿದ್ಯಾಗರ್ವಗ್ರಹಪೀಡಿತರ್ ಸ್ವಪರಬಾಧಾಹೇತುವಂ ದುಸ್ತರೋದ್ಯೋಗಕ್ಲೇಶಿತರಾಗಿ ಬಿತ್ತಿ ಬೆಳೆವಂತಕ್ಕುಂ ವಿಷೋದ್ಯಾನಮಂ (ಶಂರಾಪ. ೦–೩೪) ; ಅವನುರುದೀಪ್ತಿಗೆ ಕೀರ್ತಿಗೆ ರವಿರಾಜರ್ ಕಂದಿ ಬರ್ಕಜುಂಬಿದ ದೆಸೆಯಿಂದವಧಿಯನೆಂದುಂ ಕಾಣದೆ ತವೆ ರಾಹುಗ್ರಹಣಗಾಢಪೀಡಿತರಾದರ್ (ಹಮ್ಮಿ. ೨–೫೩). ೩. ನೋಯಿಸಲ್ಪಟ್ಟುದು : "ತಾನ್ನಂ, ಪೀಡಿತಂ—ಈ ೨ ನೋಯಿಸಲ್ಪಟ್ಟುದು" (ಹಲಾಯು. ೦೩೭–೮೨); ಅತ್ಯಂತ ಪೀಡಿತವಾದ, ಅಶಾಂತವಾದ ಗುರುಚರಣರ ಹೃದಯದ ಮೇಲೆ ಗಿರೀಂದ್ರನ ಮಾತುಗಳು ಚೆನ್ನಾಗಿ ಮುದ್ರೆಯನ್ನು ಹಾಕುತ್ತಿದ್ದವು (ಶಂಕೀ. ೩೫). ೪. ನೋವು; ಬಾಧೆ; ಹಿಂಸೆ : "ಪೀಡಿತಂ ತಾನ್ನಮೆನೆ ನೋವಕ್ಕು" (ಮಂಗರಾ. ೦೩೨–೨೭). ೫. [ಕಾಮಶಾ] ಚುಂಬನದ ಹನ್ನೆರಡು ಬಗೆಗಳಲ್ಲಿ ಒಂದು ; ☞ ಇದರ ಸಂಖ್ಯೆ ಮತ್ತು ಹೆಸರುಗಳಲ್ಲಿ ಭಿನ್ನಾಭಿಪ್ರಾಯಗಳಿವೆ : ಸ್ತ್ರೀಯೆರಡು ತುಟಿಯುಂ ತನ್ನೆರಡುತುಟಿಯಿಂದೊತ್ತಿ ಪೀರ್ವುದು ತೋರ್ಪುದು ಬಲ್ಪಿಡಿವುದು ಚುಂಬಿಸುವುದು ಇದು ಪೀಡಿತಮೆಂಬ ಚುಂಬನ (ಕಾಮಶಾ. ೫೫೫). 'ಜಿಹ್ವಕ' ಪರಾ. ೬. ರತಿಬಂಧಗಳಲ್ಲಿ ಒಂದು : ಪೀನಸ್ತನದ್ವಯದೊಳಾನೆ ನಿನ್ನೆದೆಯನನುಮಾನವಿಲ್ಲದೆ ತಿವಿವೆನೆಂದೊಱಗಿದ ಮಾನಿನಿಯ ತೊಡೆಯನವಧಾನದಿಂ ಮೆಟ್ಟಿ ನೆರೆವಾ ನಿಪುಣನಿಂದೆ ಪೀಡಿತವದಂ (ಜನವ. ೯–೩೭); ಮೆಲ್ಲನೆ ಮಲಗಿರ್ದವಳು ಪುರುಷಂ ತನ್ನೆಡಗಾಲಿಂ ಮೆಟ್ಟಿ ರಮಿಸೆ ಪೀಡಿತಮೆಂಬ ಕರಣಂ (ಕಾಮಶಾ. ೨೩೭). [ಸಂ.]

**ಪೀಡಿತಕ** (ನಾ). = ಪೀಡಿತ ೫ : ಸವಡಿದುಟವಿಡಿದು ನಲ್ಲಂ ತವಕದಿನಂಗುಷ್ಠ ತರ್ಜನಿಗಳಿಂ ಸೊಗಸುಣ್ಮುವಿನಂ ತೊಡರ್ದೊತ್ತುಂಬದೆ ಸವಿಯಲ್ ಪೀಡಿತಕಚುಂಬನಂ ತಾನೆನಿಕುಂ (ಮನ್ಮಥ. ೦೨–೦೦). [ಸಂ].

**ಪೀಡಿಸು** (ಕ್ರಿ). ೧. ನೋಯಿಸು; ಬಾಧೆಗೊಳಿಸು : ಅಪಥ್ಯದಲುಂಬವನ ವ್ಯಾಧಿಗಳ್ ಪೀಡಿಸುವುವು (ಶಂಕಸಂ. ೦೬೯–೦೦); ಸರಸಿಜಾಕ್ಷನೆ ಸರಸ ನೀನಾದರೆ ದುರಿತಗಳೆನ್ನನು ಪೀಡಿಪುದುಂಟೆ (ಪುರಂದ. ೨–೭೦–೨); ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ ಪೀಡಿಸಲು (ಮೋಹತ. ೫–೦೯) ೨. ಕಾಡು; ಕಾಟ ಕೊಡು : ಮನುಷ್ಯರ ಪಿಡಿದು ಪೀಡಿಸಿ . . . ಈಡಾಡಿದ ಕೂಳಂಬಲಿಯನಾಯ್ದು ಕುಟುಕುವ ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥಕ ಕೆಡಬೇಡ ಎಲವೋ (ಬಸವ. ೫೫೭); ಪುರುಷಪರಮೇಶ್ವರನ ಕಾಲಂ ಪಿಡಿದು ಬಿಡದೆಲ್ಲರ್ಗೆ ಪಲವು ದೇಶಂಗಳಂ ಕೊಟ್ಟರಿ ನಮಗೆ ಕಿಱಿದು ನಾಡಂ ಕುಡಿಮೆಂದು ಬೇಡಿ ಪೀಡಿಸುತ್ತಿರಲು (ಶುಕ್ರಾಸ್ರ. ೦೦–೨೦೪) ; ಪುಟ್ಟಿಸಬೇಡೆಲೊ ದೇವ . . . ಪರರ ಪೀಡಿಸಿ ತಿಂಬ ಪಾಪಿಜೀವನವ (ಪುರಂದ. ೦-೦೬೪–೦). ೩. ಹಿಸುಕು ; ಹಿಂಡು ; ಒತ್ತು: ನೆಟ್ಟನೆ ಮೊಗ ನೋಡಿ ಮುದ್ದಿಪ ತರಳನ . . . ಬಾಯೊಳ ಬಾಯನಿಟ್ಟು ಗಲ್ಲವ ಪೀಡಿವಳು (ಮೋಹತ. ೦೦–೫೭); ತೆಕ್ಕೆಗೊಂಡೆನ ಪೀಡಿಸಬೇಡ ಕಡುಶೈತ್ಯವಕ್ಕೆಯೊಳಿರಿಸಿ (ಮೋಹತ. ೨೭–೫೯).

[ಪೀಡನ+—ಇಸು]

**ಪೀಡಿಸುಹ** (ನಾ). ಕಾಡುವಿಕೆ; ಪೀಡನೆ : "ಅಭಿಯೋಗಃ–ಪೀಡಿಸುಹಂ" (ಅಭಿಧಾ. ೦೭–೫೭). [ಪೀಡಿಸು +—ಹ (<—ವ)]

**ಪೀಡೆ** (ನಾ). ೧. ನೋವು; ಬಾಧೆ : "ಆಬಾಧಾ, ವೇದನಾ, ದುಃಖಂ, ಆರ್ತಿಃ, ಪೀಡಾ, ವ್ಯಥಾ—ಈ ೬ ದುಃಖಂ" (ಹಲಾಯು. ೦೦೩–೪) ಜ್ಞಾನಮಯಂ ತೇಜೋನಿಧಿ ತಾನಿರ್ದುಂ ತಾಯ ಗರ್ಭದೊಳ್ ಪೀಡೆಯ; ನಂತೇನಂ ಮಾಡಿದನಿಲ್ಲ (ಆದಿಪು. ೭–೩೨); ಇಂದು ಪಿಂಗಿದುವೆಮ್ಮ ಪೀಡೆ [ಪಾಠಾಂ. ದೇಸೆ, ಸೇದೆ]ಗಳಿಂದು ಸಾರ್ದುವು ಸಯ್ಪು (ಕಾವ್ಯಾವ. ೩೬೫). ೨. ಕಾಟ ; ತೊಂದರೆ : ಪುಣ್ಣನಂತೆ ನೋವಂ ಮಾಟ್ಪುದು ಗ್ರಹದಂತೆ ಪೀಡೆಯಂ ಮಾಟ್ಪುದು (ಧರ್ಮಾಮೃ. ೪–೦೬೫) ; ಸದಾಶಿವನಿಗೆ ಅಣ್ಣನ ಪೀಡೆಯೆ ಅಧಿಕ (ತ್ಯಾಗಮ. ೦೮೫) ; ಸದ್ಯಕ್ಕಂತೂ ಪೀಡೆ ತಪ್ಪಿತಲ್ಲ! (ಕಟ್ಟಹೂ. ೬೩). ೩. ಅರಿಷ್ಟ ; ಅನಿಷ್ಟ : ವೆಂಕಮ್ಮ . . . ಪೀಡೆ ತಪ್ಪಿತು ಎಂದು ಬಾಯಿ ಬಿಟ್ಟು ಹೇಳಿದ್ದರು. ಆದರೆ ಪೀಡೆ ಅಷ್ಟು ಸುಲಭವಾಗಿ ತೊಲಗಿರಲಿಲ್ಲ (ಕಥ್ಯಸ. ೫೦) ; ತನ್ನ ತಂದೆ ತಾಯಿಗಳನ್ನು ಕಳೆದುಕೊಂಡ ಈ ಘೋರ ಅನಿಷ್ಟವಾಗಿಯೇ ಅವಳಿಗೆ ಕಾಣುತ್ತಿದ್ದ. ಆದರಿಂದ ಇದೊಂದು ಪೀಡೆ ಎಂದೇ ಅವಳ ಭಾವನೆ (ಹೊಸಕ್ಷಿ. ೨೮). ೪. ಕಾಡುವ ವ್ಯಕ್ತಿ ; ಗೋಳಂ ಹೊಯ್ದುಕೊಳ್ಳುವ ವ್ಯಕ್ತಿ : ಕೋಡಿಗಾಱಿಸಿ ಕಾಡಿ ಬೇಡುವ ಪೀಡೆ ವೇಶ್ಯಾಮಾತೆ ದಿಟ್ಟಿಸಿ ನೋಡಿ ಅಳಿಯನ ಕೂಡೆ ತಾನಿಂತೆಂದಳಣಕದಲಿ (ಬಸಪು. ೪೨–೬) ; ನಾವು ಇಂತಹ ಪೀಡೆಯನ್ನು ಎಂದೂ ನೋಡಲಿಲ್ಲ (ಮರಿನಾ. ೫೮); ೫. ಪಿಶಾಚಿ ; ಭೂತ. ೬. ಹಾಳು; ನಾಶ ; ಧ್ವಂಸ. ೭. ಅಡ್ಡಿ ; ತಡೆ. ೮. ಒಂದು ಬಗೆಯ ಮರ; ಸರಳದೇವದಾರು.

**ಪೀಡೆ ಕೊಡು** = ತೊಂದರೆಯನ್ನು ಕೊಡು ; ಬಾಧೆಯನ್ನುಂಟು ಮಾಡು : ನೋಡಲಿಕ್ಕೆ ಬೈರಾಗಿಗಳ ಹಾಗೆಯೇ ಇದ್ದವರು . . . ಹಾಗೇತ ಜನರಿಗೆ ಪೀಡೆ ಕೊಟ್ಟವರಲ್ಲ (ಮೂಳಕ್ಕ. ೨೦೯). **ಪೀಡೆ ಮಾಡು** =

ಪೀಡಿಸು ; ತೊಂದರೆ ಕೊಡು : ಎರಡನೆಯವರಿಗಾದರೂ ನೀನು ಪೀಡೆ ಮಾಡಬಾರದು (ಮುಂಬಯು. ೨-೪೪). [ಸಂ. ಪೀಡಾ]

**ಪೀಡೆಗೆಯ್** (ಕ್ರಿ). ತೊಂದರೆಗೊಳಿಸು ; ಬಾಧಿಸು ; ಪೀಡಿಸು : ಆಶ್ವಯುಜಕಾರ್ತಿಕದೊಳ್ ಪಿತ್ತಂ ಪೆರ್ಚುಗುಮಂತದು ಕುತ್ತಕ್ಕೆಡೆಯಾಗಿ ಪೀಡೆಗೆಯ್ಗುಂ ಹಯಮಂ (ಅಶ್ವಶಾ. ೬-೨೩). [ಪೀಡೆ + ಕೆಯ್$_1$]

**ಪೀಡೆಗೊಳ್** (ಕ್ರಿ). ತೊಂದರೆಯನ್ನು ಅನುಭವಿಸು ; ಬಾಧೆಪಡು : ಅಪ್ರಸ್ತುತವಾದ (ಅಚೇತನ) ಕಬ್ಬಿನ ಪರವಾಗಿ ಅರ್ಥಮಾಡುವಾಗ 'ಪೀಡೆಗೊಂಡು' ಎಂಬ ಲಕ್ಷ್ಯಾರ್ಥ ಸ್ಫುರಿಸುತ್ತದೆ (ಧ್ವನ್ಯಾಲೋ. ೪೪ ಅಡಿ).
[ಪೀಡೆ + ಕೊಳ್$_1$]

**ಪೀಢೆ** 'ಪೀಡೆ' ನೋ.

**ಪೀತ$_1$** (ನಾ). ೧. ಅರಿಸಿನದ ಬಣ್ಣ ; ಹಳದಿ : "ಪೀತಂ, ಹಾರಿದ್ರಂ— ಈ ೨ ಅರಿಸಿನದ ಬಣ್ಣಂ" (ಹಲಾಯು. ೦೨೦-೩೦); ಶುಕ್ಲ ರಕ್ತ ಪೀತ ಕೃಷ್ಣ ಎಂಬ ನಾಲ್ಕು ಬಣ್ಣಗಳಿಂದ ಜಾತಿವಿಭಾಗವೆಂದು ಮಹಾಭಾಷ್ಯದಿಂದ ತಿಳಿದುಬರುತ್ತದೆ (ಹಿಂದಸಾ. ೦೫೬). ೨. ನವರತ್ನಗಳಲ್ಲಿ ಒಂದು ; ಗೋಮೇದಕ. ೩. ಗೋರೋಚನ. ೪. ಚಿನ್ನ ; ಬಂಗಾರ. ೫. ಒಂದು ಬಗೆಯ ಸಸ್ಯ ; ಹಳದಿಗೋರಂಟೆ : "ಪೀತಮಾ ಸಹಚರಿಯು ಕೆಂಪುಗೋರಟೆ" (ಮುಂಗರಾ. ೩೬-೨೨). 'ಪೀತೆ' ಮರಾ.
[ಸಂ. ಪೀತಾ]

**ಪೀತ$_2$** (ಗು). ಕುಡಿದ ; ಹೀರಿಕೊಂಡ : ಚಳಚ್ಚಾಮರವಾತಪೀತನಿಜಘರ್ಮಾಂಭಃಕಣಂ . . . ಇರ್ದನೆಂದು ಸುಖದಿಂ ವಿದ್ವಿಷ್ಟವಿದ್ರಾವಣಂ (ಶಂಕರಾ. ೩-೪೫). [ಸಂ.]

**ಪೀತಕ** (ಗು). ೧. ಅರಿಸಿನದ ಬಣ್ಣವುಳ್ಳ ; ಹಳದಿ ಬಣ್ಣದ. (ನಾ). ೨. ಜವೆಗೋಧಿ ; ಯವಧಾನ್ಯ : "ಯವಮದು ಪೀತಕಂ" (ವಸ್ತುಕೋ. ೬೪-೦೬). [ಸಂ.]

**ಪೀತಕಾಂತ** (ನಾ). ನವರತ್ನಗಳಲ್ಲಿ ಒಂದು ; ಪುಷ್ಯರಾಗ : "ಪೀತಕಾಂತಮೆನೆ ಪುಷ್ಯರಾಗಂ" (ಮುಂಗರಾ. ೩೦-೬). [ಸಂ.]

**ಪೀತಗಂಧ** (ನಾ). ಹಳದಿಬಣ್ಣದ ಚಂದನ : "ಮಾಧವಪ್ರಿಯಂ— ಪೀತಗಂಧ" (೬೫೦. ೦೨೫). [ಸಂ.]

**ಪೀತದಾರು** (ನಾ). ಒಂದು ಬಗೆಯ ಮರ ; ದೇವದಾರು : "ಚಕ್ರಪಾದಪಃ . . . ಪೀತದಾರು, ದಾರು, ಪೂತಿಕಾಷ್ಠಂ — ೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತಿ. ೦೨೪); ಪರ್ವತಗಳಲ್ಲಿ ಸಿಕ್ಕುವ ಪೈನ್ ಎಂಬ ಪೀತದಾರುವಿನಿಂದ ಸೊಗಸಾದ, ಮೃದುವಾದ ಮರ, ದಿಮ್ಮಿ, ರಾಳ (Resin) ಸಿಕ್ಕುತ್ತವೆ (ಭೂವಿಜ. ೨೬೩). [ಸಂ.]

**ಪೀತದ್ರು** (ನಾ). ೧. ಒಂದು ಬಗೆಯ ಮರ ; ಸರಳವೃಕ್ಷ : "ಸರಳಂ ಪೀತದ್ರು ಮಹಾತರುಮಕ್ಕುಂ" (ವಸ್ತುಕೋ. ೩೬-೨೦). ೨. ಒಂದು ಬಗೆಯ ಮರ ; ಹರಿದ್ರ : "ಪೀತದ್ರುಃ . . . ಪರ್ಜನೀ — ೭ ಮರದರಿಸಿನ . . . ಕಾಡುಅರಿಸಿನ" (ಸಿದ್ಧಾಂತಿ. ೦೩೫). [ಸಂ.]

**ಪೀತನ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಕಾಯಿ ; ಅಮಟೆ : "ಪೀತನಃ, ಕಪೀತನಃ, ಆಮ್ರಾತಕಃ—೩ ಅಂಬಟೇಗಿಡದ ಹೆಸರು" (ಸಿದ್ಧಾಂತಿ. ೦೦೮). ೨. ಕುಂಕುಮಕೇಸರಿ ; ಕೇಶರ. [ಸಂ.]

**ಪೀತನಕ** (ನಾ). = ಪೀತನ ೧ : "ಆಮ್ರಾತಕ ಪೀತನಕಂ" (ವಸ್ತುಕೋ. ೩೩-೩). [ಸಂ.]

**ಪೀತಪುಷ್ಪ** (ನಾ). ಹಾಗಲ ಬಳ್ಳಿ : "ಹಾಗಲು ಪೀತಪುಷ್ಪ" (ಮುಂಗರಾ. ೪೪-೪೪). [ಸಂ.]

**ಪೀತಫೇನ** (ನಾ). ಅರಿಟಾಳದ ಮರ ; ಅಂಟುವಾಳ : "ಅರಿಟಾಳ ಮದರಿಷ್ಟಕಂ ಪೀತಫೇನಮೆನಿಕ್ಕು" (ಮುಂಗರಾ. ೪೨-೩೪). [ಸಂ.]

**ಪೀತಲ, ಪೀತಳ** (ನಾ). ೧. ಅರಿಸಿನದ ಬಣ್ಣ ; ಹಳದಿ : ಹೊಸ ಮಳೆಯಲ್ಲಿ ಮಿಂದ ಪ್ರಕೃತಿ . . . ಪೀತಲ ಪೀತಲತರವಾಗಿ ಶೋಭಾಯಮಾನವಾಗಿತ್ತು (ಕುಹಕು. ೪೬೬). ೨. ಒಂದು ಬಗೆಯ ಲೋಹ ; ಹಿತ್ತಾಳೆ. ಪೀತಳ : ೧. ಬರೆವುದಂತೆ ಕರ್ಣಿಕೆಯಂ ಪೀತಳಸಿತರಸದಿಂ (ಹಾಲಾಸ್ಯ. ೪-೦೬-೦೪). [ಸಂ.]

**ಪೀತವಸನ** (ನಾ). ೧. ಪೀತಾಂಬರ ; ಪಟ್ಟೆವಸ್ತ್ರ : ಉಟ್ಟು ಮಲ್ಲಗಚ್ಚೆಯ ಪೀತವಸನಮಂ, ಶಿರಾಗುತಿರೆ ಚಿತ್ರಾಂಗಿ, ಕಾನನದ ರಾಣಿ ತಾನೆಂಬವೊಲ್ (ಚಿತ್ರಾಂಗ. ೩-೬೪). ೨. ಪೀತಾಂಬರವನ್ನುಟ್ಟವನು; ಪೀತಾಂಬರಧಾರಿ: ಪೀತವಸನಂ . . . ಉಪೇಂದ್ರಂ ದುರ್ಜಯಂ ರಾಮಚಂದ್ರನ ಪಿಂದಂ ನಡೆತಂದನಾಯತಸಿತಾಂಭೋಜೇಕ್ಷಣಂ ಲಕ್ಷ್ಮಣಂ (ಶಂಕರಸಾ. ೬-೬೬).
[ಸಂ.]

**ಪೀತವಾಸ** (ನಾ). ೧. ಹಳದಿಯ ರೇಷ್ಮೆಬಟ್ಟೆ ; ಪೀತಾಂಬರ. ೨. ಪೀತಾಂಬರಧಾರಿ ; ವಿಷ್ಣು : "ವಿಷ್ಣುಃ . . . ಪೀತವಾಸಾಃ . . . ಗದಾಧರಃ — ಈ ೪೫ ನಾರಾಯಣನ ಪೆಸರ್" (ಹಲಾಯು. ೩-೨೨); ಪೀತವಾಸಂ ಕೃಷ್ಣನಾಗಿ ಕಿರಾತನೆಚ್ಚ ನಿಶಾತಶರನಿರ್ಘಾತಪಾತದಿ ಮಡಿದನಲ್ಲಾ ಭೂತಳಾಗ್ರದೊಳು (ಬಸವು. ೫೪-೬೪) ; ಧೃತಕೌಸ್ತುಭೋದ್ಭಾಸನಂ ಪೀತವಾಸನಂ ನುತಸಮಸ್ತಾಭರಣನಂ ಪುಣ್ಯಚರಣನಂ ಕಲಿಸುಧನ್ವಂ ಕಂಡನು (ಕೃಷ್ಣಜಾ. ೦೩-೨೬). [ಸಂ. ಪೀತವಾಸಸ್]

**ಪೀತಸಾರ** (ನಾ). ೧. ಹೊನ್ನೆಮರ : "ಪೀತಸಾ(ಲ)ರಃ, ಅಸನಃ—ಈ ೨ ಹೊನ್ನೆ" (ಹಲಾಯು. ೩೩-೪೬). ೨. = ಪೀತಗಂಧ. ೩. ಗೋಮೇದಕ. [ಸಂ.]

**ಪೀತಸಾಲ** (ನಾ). = ಪೀತಸಾರ ೧ : "ಪೀತಸಾ(ಲ)ರಃ, ಅಸನಃ — ಈ ೨ ಹೊನ್ನೆ" (ಹಲಾಯು. ೩೩-೪೬). [ಸಂ.]

**ಪೀತಸಾಲಕ** (ನಾ). = ಪೀತಸಾರ ೧ : "ಪೀತಸಾಲಕಃ, ಸರ್ಜಕಃ . . . ಜೀವಕಃ—೬ ಹೊನ್ನೇಮರದ ಹೆಸರುಗಳು" (ಸಿದ್ಧಾಂತಿ. ೦೨೨). [ಸಂ.]

**ಪೀತಳ** 'ಪೀತಲ' ನೋ.

**ಪೀತಾಂಬರ** (ನಾ). ೧. ಹಳದಿಬಣ್ಣದ ಬಟ್ಟೆ. ೨. ಪಟ್ಟೆವಸ್ತ್ರ : ರೇಷ್ಮೆಯ ಬಟ್ಟೆ : ನವನೀಲೋತ್ಪಲಸನ್ನಿಭಾಂಗರುಚಿಯಿಂ ಸಕ್ಷಿಂಕಿರಾತೋದ್ಗಮಚ್ಛವಿಪೀತಾಂಬರಕಾಂತಿಯಿಂ . . . ಚೆಲ್ವಾದನಬ್ಜೋದರಂ (ಜಗಂ. ೦-೪೪); ಕಂಸಾಂತಕಂ . . . ಜಗುಳ್ದ ಪೀತಾಂಬರವನು ಅಂಸದೊಳ್ ಸಾರ್ಚುತ್ತೆ ವರೂಥಮನಿಳಿದು . . . ಐತಂದನು (ಕೃಷ್ಣಜಾ. ೦೪-೨೩). ೩. (ಬೆಲೆ ಬಾಳುವ) ರೇಷ್ಮೆಯ ಸೀರೆ : ಬಣ್ಣಬಣ್ಣದ ಪಟ್ಟುವಸ್ತ್ರ ಪೀತಾಂಬರಗಳೂ, ಕುದುರೆ ಒಂಟೆ ಆನೆಗಳ ಮೇಲೆ ಹೇರಿ ಹೇರಿ ಬಂದುವು (ಶಾಂತಲಾ. ೦೦೦). ೪. (ಹಳದಿಯ) ಪಟ್ಟೆವಸ್ತ್ರವನ್ನು ಧರಿಸಿದವನು ; ವಿಷ್ಣು : "ಶ್ರೀವತ್ಸಂ . . . ಪೀತಾಂಬರಂ ಚಕ್ರಭೃದ್ಗೋವಿಂದಂ" (ವಸ್ತುಕೋ. ೪-೨೨) ; ಸ್ಫುರಿತೋದ್ಯತ್ಕನಕಪ್ರಭಾಪ್ರಸರದಿಂ ಪೀತಾಂಬರಂ ಪದ್ಮವಿಷ್ಟರದಿಂ ಪಂಕಜವಿಷ್ಟರಂ ನತವಿನೇಯವ್ರಾತಚೇತಸ್ಸಮೋಹರನಾಗಿ ದುರ್ದದಟಿಂ ಹರಂ ಭವಹರಂ (ಆದಿಪು. ೦೬-೬) ; ಮಧುರಾಪುರದ ಪೊಱವೊಟಲೊಳ್ ಪೀತಾಂಬರನಿರ್ದಂ (ಜಗಂ. ೯-೨೬). ೫. [ಜೈನ] ವಾಸುದೇವ : ಪರಾಭವಿಸಿದಂ . . . ಸುರೇಂದ್ರಧನು ಮೂಡಿದಂಬರಮನಂದು ಪೀತಾಂಬರಂ (ಶಂಕರಸಾ. ೫-೦೦೦). [ಸಂ.]

**ಪೀತಾಂಬರಧರ** (ನಾ). = ಪೀತಾಂಬರ ೪ : ಪೀತಾಂಬರಧರನಂ ಪುರುಹೂತಶಿಲೀಮುಖನಿಕಾಯಮೆಱಗಿದುದು (ಜಗಂ. ೦೩-೪೦). [ಸಂ.]

**ಪೀತಾಂಬ್ರ** (ನಾ). = ಪೀತಾಂಬರ ೩ : ಪೀತಾಂಬ್ರ ೧೮ಕ್ಕೆ. ತಟ್ಟು ಸೆಱುಗು ಲತೆ ಹೂಗಳು ಸಹಾ ತೂಂಕ ೧೧೯ಕ್ಕೆ ವಿವರ (ಶಾಇಸಂ. IX-ii, ೫೪೬-೩ ; 1682). [ <ಪೀತಾಂಬರ ]

**ಪೀತಾಂಶುಕ** (ನಾ). ೧.=ಪೀತಾಂಬರ ೪. ೨. ಹೊಂಬಣ್ಣದ ಕಿರಣಗಳುಳ್ಳವನು; ಅಗ್ನಿ. ೧, ೨: ದಂತವಕ್ರಂ ನಿಸರ್ಗವೈರದಿಂದ ಸುರವೈರಿಯು ಪೆಸರ್ಗಳೆ ತನಗಸಹ್ಯಂಗಳಾಗೆ ಹರಿನಾಮಯುಕ್ತನೆಂದು ಶಕ್ರನನಾಗ್ರವಿಸಿಯುಂ ಪೀತಾಂಶುಕನೆಂದು ಪಾವಕನಂ ಮೂವೀದಿವಡಿಸಿಯುಂ . . . ಕಾಳಿಯಸರ್ಪದರ್ಪದಳನನದಿರದಿದಿರೊಳ್ ಕಂಡು (ಜಗಂ. ೯-೩೩ ವ).
[ಸಂ.]

**ಪೀತೆ** (ನಾ). ೧. ಅರಿಸಿನ: "ಪೀತಾಭಿಖ್ಯಂ ಹಂದ್ರಿ" (ವಸ್ತುಕೋ. ೩೬-೨೫). ೨. ಒಂದು ಬಗೆಯ ಗಿಡ; ಹಳದಿಗೋರಂಟೆ: "ಪೀತಾ. ಸಹಚರೀ—ಈ ೨ ಹೊಂಬಣ್ಣದ ಗೋರಂಟೆ" (ಹಲಾಯು. ೩೯-೩೨). [ಸಂ. ಪೀತಾ]

**ಪೀನ** (ಗು). ೧. ದಪ್ಪವಾದ; ಪುಷ್ಟವಾದ; ಸ್ಥೂಲವಾದ: ಉತ್ತುಂಗಪೀನನಿಜಾಂಸಾರ್ಪಿತಲಂಬಹಾರನವನಾ ಪಾಂಡ್ಯಂ (ಸಂಕರಾ. ೩-೩೯); ಆ ನೃಪವೀರನುರಸ್ಥಳಕ್ಕೆ ಲಕ್ಷ್ಮೀವಧು ಪೀನಬಾಹುಯುಗಳಕ್ಕೆ ಜಯಾಂಗನೆ ತನ್ಮುಖಕ್ಕೆ ವಾಕ್ಶ್ರೀವಧುವಾಗಿ ರಂಜಿಸಿ ಮಹೋನ್ನತಿಯಂ ಪಡೆದುದ್ಧಕೀರ್ತಿಲೀಲಾವತಿಯೆಂದು ಬಣ್ಣಿಪುದು ಲಚ್ಚಲದೇವಿಯನೀ ಜಗಜ್ಜನ (ಎಕ. XIII, ೦೨೦-೨೩; 1055); ಈ ಸುದೃಢಪೀನಪಯೋಧರಂಗಳ್ಗೀ ತೆಜನ ಕಂಪನಮೇತರ್ಕಾಯ್ತು? (ಲಾಕಾತ್ತ್ರ. ೦೯-೪೦). ೨. ದೊಡ್ಡ; ಘನವಾದ; ಮಹತ್ತಾದ: ಶಿವದಾಸಿಯರು ವಕ್ತ್ರಪದಂಗೆ ನೇಮಿಸಲು . . . ಕರೆದು ತಂದವನು ಪೀನ[ಪಾಠಾಂ. ದಾನಿ]ಶಿವಶರಣವ್ರಜವನನುಮಾನಿಸದೆ ಗಂಗೆಯನು ಭಗಿರಥ ಕೋಡು ಬಂದಂತೆ (ಸಂಕೀದಾ. ೬-೨೯). (ನಾ). ೩. ದೊಡ್ಡದು; ಸ್ಥೂಲವಾದುದು: "ಬಹುಳಃ, ಸ್ಥೂಳಃ, ಪೀನಃ, ಪೀವಾ. ಪೀವರಃ—ಈ ೫ ದೊಡ್ಡಿ(ತು)" (ಹಲಾಯು. ೫೭-೦೧೭); ಆ ನಗಚರಯುಗವಳ್ಳಿಯುಮಾ ನಗದೊಳೆ ಕಲ್ಲೋಳಿರ್ದ ಸಲಿಲನಿಮಿತ್ತಂ ಪೀನಂಗಳ್ ಕಾದಲ್ ಸಲೆ ಕೀನಾಶನಿವಾಸಮೆಯ್ದಿತೊಂದಾಕ್ಷಣದೊಳ್ (ಸೇವಾಕು. ೩-೭೯). ೪. ದಪ್ಪವಾಗಿರುವವನು; ಸ್ಥೂಲಕಾಯ: "ಪೀವರನೆನಲ್ ಸ್ಥೂಲನೆನೆ ಬಹುಲನೆನೆ(ಪೀನನೆನೆ) ದೊಡ್ಡಿತಪ್ಪುವನೆನಿಕ್ಕುಂ" (ಪುಂಗರಾ. ೬೯-೦೦).
[ಸಂ.]

**ಪೀನಂ** (ಅ). ಅಧಿಕವಾಗಿ; ವಿಶೇಷವಾಗಿ; ಹೆಚ್ಚಾಗಿ: ಪೀನಂ ಲಲಾಟಾಗ್ರದೊಳ್ ನೆಲೆಗೊಂಡೊಪ್ಪುವ ವೀರಪಟ್ಟಪಾದಯುಂಗೆಯ್ವುಂದುಮಂ . . . ಗೆಲೆ ಪೋಲ್ತುತ್ತ ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ. ೩೨೫ ಹೂವ್ರತ); ಅಲಸದೆ ಪೀನಂ ಪದೆಯದೆ ಪಾಂಗಟದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇಟ್ವುದು (ಕಬಿರಾ. ೦-೯೯); ಲಯಮಂ ಕರ್ಮತಮಸ್ಸಮಕ್ಕೆ ಜಯಮಂ ಧರ್ಮಕ್ಕೆ ಪೀನಂ ಪರಾಜಯಮಂ ದೋಷಗಣಕ್ಕೆ ಲಕ್ಕತೆಜದಿಂ ಮುಂ ಮಾಡಿ ಸರ್ವಾರ್ಥಸಿದ್ಧಿಯನೀಯಲ್ಕೆ . . . ಬಗೆದಂ ಸಂಸಾರಸಾರೋತಯಂ (ಅದಪು. ೬-೦೦೯); ಮಾನಸದ ನಲ್ಮೆಯಾಗಂ ಮಾನಸರ್ಗಪವರ್ಗಸುಖಮನದಟಿವ ಗುಣಂ ಪೀನಂ ಪೆರ್ಚುಗುಮಮಲಗುಣಾನೀಕವಿಭೂಷರೊಳ್ ಸಮಾಗಮದಿಂದಂ (ಸೇತಿವಂ. II. ೩೦೯).
[<ಪೀನ]

**ಪೀನಕ್ಷು** (ನಾ). ೧. ಡೊಳ್ಳುಹೊಟ್ಟೆ. ೨. ದೊಡ್ಡಹೊಟ್ಟೆಯುವನು; ಮಹೋದರ: ಪೀನಕ್ಷು . . . ತಾನಿಂಗಿತಜ್ಞನುಂ ವಿಜ್ಞಾನಹಿತಂ ಶೌಚ . . . ಪೀಠವರ್ಧನನೆನಿಕುಂ (ಸುರತಿ. ೦೦-೯೦). [ಸಂ.]

**ಪೀನಸ** (ನಾ). ೧. ಶೀತಬಾಧೆ; ನೆಗಡಿ: "ಪೀನಸಮೆನೆ ನೆಗಡಿ ತಾಂ ಪ್ರತಿಶ್ಯಾಯಂ" (ವಸ್ತುಕೋ. ೬೬-೩೫); ನಲ್ಲಲರ ಕಂಪು ಪೀನಸದಲ್ಲೊಂದಿದವಂಗೆ ಸೊಗಸದಿರೆ ಕೆಟ್ಟಪುದೇ (ಅಧ್ಯಟ. ೧-೦೭); ಗಂಧಕ, ಹೂಲಿಯುಗುರು . . . ಅಜಮೂತ್ರದಲ್ಲಿ ಬೆರಸಿ ಅಟ್ಟು ನಸ್ಯಂಗೆಯ್ಯೆ ಪೀನಸ ಮಾಣ್ಗು(ಂ) (ಅಶ್ವಶಾ. ೬೬); ಚೆಂಡಿಕೆಯು ಕೊಯ್ದುಡಾ ಶಿರಬೇನೆ ಬಿಡುವುದೆ ಪೀನಸದ ವ್ಯಾಧಿ ಮೂಗರಿದಡಂ ಬಿಡುವುದೆ (ಹರಿಂ. ೦೩-೨೬). ೨. ಮೂಗು ಕೊಳೆತು ಹೋಗುವ ಒಂದು ಬಗೆಯ ರೋಗ: ಹೂವುಗಳನ್ನು ಮೂಗಿಗೆ ತುಂಬಾ ಹತ್ತಿರದಲ್ಲಿಟ್ಟುಕೊಂಡು ಮೂಸಿ ನೋಡಿದರೆ ಪೀನಸ ಬರುತ್ತದೆಂದು ಹೇಳುತ್ತಾರೆ (ರೂಢಿ). [ಸಂ.]

**ಪೀನಸರೋಗ** (ನಾ).=ಪೀನಸ ೨: ಪ್ರೀತಿಭೇದಗಳು ಮಾತು ತಪ್ಪಿದವಗೆ ಪೀನಸರೋಗ (ಕವಳ. ೦೯೨-೨); ಪೀನಸರೋಗದವರು . . . ವಿಷದರೋಗದವರು ಇವರಿಷ್ಟು ವಮನಯೋಗ್ಯರೆಂದರಿವುದು (ಸಕವ್ಯ. ೨೫).
[ಸಂ.]

**ಪೀನಸಿ** (ನಾ). ೧. ನೆಗಡಿ ಬಂದವನು: ಗಂಧಕ ಪೀನಸಿಯು ಸಂಪದವನೊಂದಿಸಿ ರಸದ ಬಳಕೆಗೆ ಹವುಳದಿಂದವೆ ಕಾಷ್ಠಜಿಹ್ವೆಯು ತೆರನನನುವಿಡಿದು (ಗಗಹಾ. ೦೬-೦೦). ೨. ಪೀನಸರೋಗದಿಂದ ಬಳಲುವವನು.
[ಸಂ. ಪೀನಸಿನ್]

**ಪೀನಾರಿ**[1], ಪೇನಾರಿ (ನಾ). ಒಂದು ಬಗೆಯ ಮರ: ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕದಕನ ಮರ, ಭಾತಾಳ (ವೃಕ್ಷಿಗಿ. ೬೨-೦೯೬೨). **ಪೇನಾರಿ:** ಪೇನಾರಿಮರ . . . ತೊಕದಕನ ಮರ, ಭಾತಾಳ (ವೃಕ್ಷಿಗಿ. ೬೨-೦೯೬೨).
[ದೇ.॥ ತಮಿ. ಪೀನಾಱು; ಮಲ. ತುಳು. ಪೀನಾರಿ]

**ಪೀನಾರಿ**[2] (ನಾ). ಜಿಪುಣ; ಜೀನ; ಕೃಪಣ: ನನ್ನ ಭಾವ ಆಸೆಯ ಪೀನಾರಿಯಲ್ಲ. ಅವನು ಮಡಕೇರಿಯಲ್ಲಿ ದೊರೆಯುವ ಏಳ್ಗೆನ್ನೆಲ್ಲ ತಂದು ಗುಡಾಣಗಳಲ್ಲಿ ತುಂಬಿಸಿಟ್ಟಿದ್ದಾನೆ (ಹುಂಹಾ. ೨೨೫). 'ಪಿಸನಾರಿ' ಪಠಾ.
[←ತುಳು. ಪೀನಾರಿ]

**ಪೀನಾಶಿ**, ಪಿನಾಶಿ, ಪಿನಾಸಿ (ನಾ). ಮೂಗು ಕೊಳೆತು ಹೋಗುವ ಒಂದು ಬಗೆಯ ರೋಗ: ಪೂಜೆಗೆಯ್ಯುವ ಪುಷ್ಪಗಳನು ಸೋಜಿಗದಿ ತಾ ಮೂಸಿ ನೋಡಿದ ಮೂಜಗದಿ ಪೀನಾಶಿವೊಂದುವನು (ಶಾಸಂಗ. ೨೦). **ಪಿನಾಶಿ:** ವಾಸನೆಯುಳ್ಳ ಹೂವುಗಳನ್ನು ಮೂಸಬೇಡ. ಪಿನಾಶಿ ಬರುತ್ತದೆ (ರೂಢಿ). **ಪಿನಾಸಿ:** ಪೀನಸ ಎಂಬುದನ್ನೇ ಕೆಲವರು ಪಿನಾಸಿ ಎಂದು ಹೇಳುತ್ತಾರೆ (ರೂಢಿ). [<ಪೀನಸ]

**ಪೀನಾಸಿ** (ನಾ). ೧. ದುರಾಸೆಯುಳ್ಳ ವ್ಯಕ್ತಿ: ಏನೇನ ತಂದರು ಸಾಲದೆ ಮಂಗಳೊಳು ಪೀನಾಸಿಯರಗೊಡಳೆಂದು ಆನೆಯ ಮುಂದಕೆ ಮುದಿಸೂಳೆಯ ನೆತ್ತಿ ತಾನಿಟ್ಟು ಸುಖದೊಳಗಿಹನು (ಬ್ರಹ್ಮಕ. ೦೯-೬೬). ೨. ಅತಿಯಾಗಿ ಕಾಡುವ ವ್ಯಕ್ತಿ: ಆ ಪೀನಾಸಿ ತನಗೆ ಬರಬೇಕಾದ ಹಣ ವಸೂಲು ಮಾಡುವುದರಲ್ಲಿ ತುಂಬಾ ಗಟ್ಟಿಗ (ರೂಢಿ). 'ಪೀನಾರಿ[2]' ಪಠಾ. [?]

**ಪೀನೋದರ** (ನಾ). ೧. ದೊಡ್ಡ ಹೊಟ್ಟೆ; ಡೊಳ್ಳುಹೊಟ್ಟೆ. ೨. ದೊಡ್ಡ ಹೊಟ್ಟೆಯುಳ್ಳವನು; ಡೊಳ್ಳುಹೊಟ್ಟೆಯವನು: ದ್ರುತಯಾನೋತ್ಕಂಪಿಪೀನೋದರನಪನಿಪನೊಡ್ಡೋಲಗಕ್ಕೈದೆ ಮಂದಂ ಪ್ರತಿಹಾರಂ (ಸಂಕ್ರಪು. ೨-೬೯); ಚಂಚತ್ಕುಂಡಲಮಂಡಿತಂ ಗತಿಚಲಶ್ಚೀನೋದರಂ ದೀರ್ಘದೇಹಂ . . . ಬಂದಂ ಪ್ರತೀಹಾರಕಂ (ರಾಜಶೇ. ೫-೨೩).
[ಸಂ.]

**ಪೀನೋಧ್ನಿ** (ನಾ). ದೊಡ್ಡ ಕೆಚ್ಚಲುಳ್ಳ ಹಸು,-ಆಕಳು: "ಪೀನೋಧ್ನೀ, ಪೀವರಸ್ತನೀ—ಈ ೨ ಹೆಗ್ಗೆಚ್ಚಲಾವು" (ಹಲಾಯು. ೪೫-೧೦೦).
[ಸಂ. ಪೀನೋಧ್ನೀ]

**ಪೀಪ**, ಪೀಪಾಯಿ, ಪೀಪು, ಪೀಪೆ (ನಾ). ಮದ್ಯ, ಎಣ್ಣೆ ಮೊದಲಾದ ದ್ರವಪದಾರ್ಥಗಳನ್ನು ತುಂಬಿಡಲು ಬಳಸುವ, ಮರ ಅಥವಾ ಲೋಹದಿಂದ ಮಾಡಿದ ದೊಡ್ಡ ಆಕಾರದ ಸಾಧನ; ಡ್ರಮ್ಮು: ಹೇಸರಗತ್ತೆಯ ಮೇಲೆ ಬಂಗಿಯ ಹೇರು ಸಾಸಿರ ಗಂಗಸಾರಗಳ ಸೂಸುವ ಸಾರಾಯದ ಪೀಪಗಳ ಲೆಕ್ಕವೀಸೆಂದು ಪೇಳ್ವರಾರದನು (ಕಂಪಂ. ೦೦-೩೮); ಕೆಲಕೆಲವದರ ಬೆಲೆಯು ಸಹ ಪೀಪಗಳ ಮೇಲೆ ಇಲ್ಲವೆ ಪೆಟ್ಟಿಗೆಗಳ ಮೇಲೆ

ಇರುತ್ತದೆ (ಮುಂಬಾ. ೨೫೬). **ಪೀಪಾಯಿ** : ಒಂದು ದೊಡ್ಡ ಪೀಪಾಯಿಯೊಳಗೆ . . . ನೀರು . . . ತುಂಬುತ್ತಾರೆ (ಮುಂಬಯಿ. ೪-೩೩); ಒಂದೊಂದು ಅಲೆಯೂ ಇವಳನ್ನು ಪೀಪಾಯಿಯಂತೆ ಎತ್ತಿ ಹಾಕುತ್ತಿದ್ದಿತು (ಹಸುಹೂ. ೩೮೪). **ಪೀಪು** : ನೀರು ತುಂಬಿದ್ದೊಂದು ಪೀಪಿನೊಳಗೆ ಇಳಿದು ಕೂಡ್ರಬೇಕಾಗಿ (ಮುಂಬಯಿ. ೫-೬೬). **ಪೀಪೆ** : ಭೋಜನಸಮಾರಂಭವು ಮುಗಿಯಿತು. ಬೆಲೆಯುಳ್ಳ ಸಾರಾಯಿಗಳ ಪೀಪೆಗಳು ಹಾರಿ ಹೋದವು (ಪೀರಬ. ೫೬). [ ← ಹಿಂ. ಪೀಪಾ; ಮರಾ. ಪೀಪ. / **ಪೋರ್ಚು.** pipa ]

**ಪೀಪರಿ** (ನಾ). = ಪೀಪಿ ೧ : ನಿನ್ನೆ ಸಂಜೆ ನಿನ್ನ ಓಟೆ ಪೀಪಂ ಸಮನಾಗಿ ಕೇಳಿಸಿತ್ತು ನನಗೆ (ಸ್ವಸ್ವಹೂ. ೧೪). [ < ಪೀಪಿ ]

**ಪೀಪಾಯಿ** 'ಪೀಪ' ನೋ.

**ಪೀಪಿ** (ನಾ). ೧. ಪೀ ಪೀ ಎಂದು ಶಬ್ದ ಹೊರಡಿಸುವ, ಸೀಟಿಯಂತೆ ಊದುವ ಒಂದು ಸಾಧನ : ನಾರಾಯಣಸ್ವಾಮಿ ಆ ಕೊಳಲನ್ನು ಕೈಯಲ್ಲಿ ತೆಗೆದುಕೊಂಡು ಪರೀಕ್ಷೆ ಮಾಡುತ್ತ "ಇದು ಏನು ? ಪೀಪಿ ಅಲ್ಲವೇ ?" ಎಂದು ಕೇಳಿದ (ಇಬರು. ೦೦೪). ೨. ನಾಗಸ್ವರ, ಶಹನಾಯಿ ಮುಂತಾದ ಊದುವ ವಾದ್ಯಗಳ ತುದಿಯಲ್ಲಿ, ನಾದವನ್ನು ಹೊಮ್ಮಿಸಲು ಸಿಕ್ಕಿಸುವ ಎರಡು ಚಪ್ಪಟೆಯಾದ ಬಿದಿರಿನ ಪಟ್ಟಿಗಳು : ಈ ವಾದ್ಯ ಸುಮಾರು ಎರಡು ಅಡಿಗಳಿಂದ ಎರಡೂವರೆ ಅಡಿಗಳ ಉದ್ದವಿದ್ದು...ಚೂಪು ಕೊನೆಯಲ್ಲಿ ಈ ವಾದ್ಯಕ್ಕೆ ಪೀಪಿ (reed) ಸೇರಿಸಿರುತ್ತದೆ (ಸಂಗೀಶಂ. ೦೦೬). ೩. ಬಾಳೆ ಎಲೆ, ತೆಂಗಿನ ಗರಿಗಳನ್ನು ಸುತ್ತಿ, ನಾದ ಹೊಮ್ಮುವಂತೆ ಮಾಡಿದ ಸಂರುಳಿ : ನಸ್ಯದ ಡಬ್ಬಿ, ಬಾಳೆಎಲೆ ಪೀಪಿ ಇವುಗಳಿಂದ . . . ಅಳುವ ಮಕ್ಕಳನ್ನು ಸಮಾಧಾನ ಪಡಿಸುವ ಕೆಲಸ ಇವರ ಮೇಲೆ ಬಿದ್ದಿರುತ್ತಿ (ನಾಡಗೀ. ೦೩೬). ೪. (ಆಲಂ) ಗಂಟಲು : ಆ ಸಂಗೀತಗಾರನ ಪೀಪಿ ಕಟ್ಟಿಹೋಗಿದೆ (ರೂಢಿ). [ ← **ತುಳು.** ಪೀಪಿ./ಹಿಂ. ಪೀಪಿಯಾ ]

**ಪೀಪು** 'ಪೀಪ' ನೋ.

**ಪೀಪೆ** 'ಪೀಪ' ನೋ.

**ಪೀಯೂಷ** (ನಾ). ೧. ಅಮೃತ ; ಸುಧೆ : "ಅಮೃತಂ, ತ್ರಿದಶಾಹಾರಃ, ಸುಧಾ, ಪೀಯೂಷಂ—ಈ ೪ ಅಮರ್ದಿನ ಪೆಸರ್" (ದಣಾಯು. ೨೨-೦೩೩); ಆ ತ್ರಿದಶಂಜಯಮಹೀಭುಜಂ . . . ಮುಕ್ತ್ಯಂಗನಾಭುಜಪಾಶಕ್ಕೊಳಗಾಗಿ ಪೀರ್ದನೊಲವಿಂ ತದ್ವಕ್ತ್ರಪೀಯೂಷಮಂ (ಶಂಖಾಪು. ೦೦-೬೨); ಶಿವಕಥಾಪೀಯೂಷಮಂ ಕರ್ಣದಿಂ ಸವಿವೃತ್ತಂ . . . ಮಧೂವಲ್ಲಭರಿರ್ದ ರುತ್ಸವಯುತರ್ (ರಾಜಶೇ. ೪-೯); ಮಿಾಯಿಸಿದರವನಂ ದಿವ್ಯೋಧುನಿಯ ಪೀಯೂಷತೀರ್ಥದಿಂ (ಶ್ರೀರಾಮಾ. ೦೮-೪೮೦). ೨. ಹಾಲು ; ಕ್ಷೀರ : ಜಗಮೆಲ್ಲಂ ... ಪೀಯೂಷದೆ ತಣಿದುದೊ ಬೆಳ್ದಿಂಗಳೊಳ್ ಸಂದುದೋ ಸಂದೆಗಮೇನೆಂಬಂತದೇಂ ಪರ್ಬಿದುದೊ ಸ್ವವನಶಿಸ್ಫೂರ್ತಿಕೀರ್ತಿಪ್ರತಾನಂ (ಶುಕ್ರಶು. ೩-೦೪); ಭೈರವಾಂಕ . . . ಪೀಯೂಷದಲ್ಲೀಶಗಭಿಷೇಕವೆಚಿದ (ಕೈರವೀ. ೪-೮೮). ೩. ಕರು ಹಾಕಿದ ಏಳಂ ದಿವಸಗಳೊಳಗಿನ ಆಕಳ ಹಾಲು ; ಗಿಣ್ಣುಹಾಲಂ : " ಪೀಯೂಷಃ, ಅಭಿನವಂಪಯಃ— ಈದ ೭ ದಿನಗಳ ಒಳಗಾಗಿ ಹಸುವಿನ ಗಿಣ್ಣುಹಾಲು " (ಸಿದ್ಧಾಂತಿ. ೨೯೦).

[ ಸಂ. ]

**ಪೀಯೂಷಪಿಂಡ** (ನಾ). ಒಂದು ಬಗೆಯ **ಭಕ್ಷ್ಯ** ; ಹಾಲುಂಡೆ : " ಪೀಯೂಷಪಿಂಡ[ಶಾತಾಂ.ಪಿಷ್ಟ]ಮೆನೆ ಹಾಲುಂಡೆಯೆನಿಸಿಕ್ಕು " (ಮಂಗರಾ. ೬೪-೨). [ ಸಂ. ]

**ಪೀಯೂಷಹಸ್ತ** (ನಾ). ಅಮೃತಕಿರಣ ; ಚಂದ್ರ : ಈ ದೈತ್ಯಶತ್ರು ಮಹೀಭೃನ್ಮುತ್ತರ್ಣಕಾಕುವಳಯಕ್ಕಾ ತನ್ನ ಪೀಯೂಷಹಸ್ತಮೆ ತಾನಾಶ್ರಯಮೆಂದೊಡೇಪೊಗಟ್ಬುದೋ ಶ್ರೀವೀರಬಲ್ಲಾಳನಂ (ಶಾಕಮಂ. ೦೬೪-೪೪೬ ; 1189). [ಸಂ.]

**ಪೀರ್**, **ಪೀರಂ**$_1$, **ಹೀರ್**$_1$, **ಹೀರು**$_1$ (ಕ್ರಿ). ೧. ಹಾಲು, ನೀರು ಮೊದಲಾದ ದ್ರವಪದಾರ್ಥಗಳನ್ನು (ಬಾಯಿಯಿಂದ) **ಸೇದಿಕೊಳ್ಳು**,—ಎಳೆದಂಕೊಳ್ಳು : ಪೀರೆ ತವಮುಣ್ಮುವ ಸೌರಭಮೆಂದು ಪೀರ್ದು ಪೀರ್ದಪಟಿಬಿದೇಂ ತೆಜಂದಿರಿದು ಪಾಯ್ದುದೊ ಕೇತಕಿಯೊಳ್ ಮದಾಳಿಗಳ್ (ಆದಿಪು. ೦೦-೦೦೬); ರಕ್ತವರ್ಣದಿಂ ಕೂಡಿದ ಕಣ್ಗಳಿಂ ಶುಕನಿಕಾಯದ ಜೀವಮನೆಯ್ದೆ ಪೀರ್ವವೊಲ್ . . . ನೋಡಿದನಾ ಜರಚ್ಛಬರನಾಯಕಂ (ಕಾದಂಪೂ. ೦೬೬); ಹಜಿಗಟ್ಟಲೆಯುಂ ತವೆ ಪೀರುತುಂ . . . ಬಂದ್ಯದಯಾದ್ರಿಯಸರ್ಕನೇಜಿದಂ (ಕುಸುಮಾ. ೦೪-೨೦). ೨. ಆಸ್ವಾದಿಸು; ಚಪ್ಪರಿಸು ಸವಿ : ಪಾಲ್ಗೊರೆದ ನುಣ್ಬರಲಂ ಮೊಲೆಗಿತ್ತು ಪೀರ್ದು ಕಣ್ದೆಜಿಯದ ಕಂದನೆಂದೆನಗೆ ಕಣ್ದೆಜಿಯಪ್ಪನೊ ಮಂದಹಾಸಮಂ (ಅರ್ಧನೇ. ೦-೦೦೦); ಪಥಿಕನೊರ್ವ ತರುಣಿಯ ಲಾವಣ್ಯರಸಮನಕ್ಷಿಗಳಿಂದಂ ಬರೆ ಪೀರ್ದು ದಣಿದು ಬಟ್ಟೆಯ ಪರಿಶ್ರಮವ್ಯಥೆಯನಜಿಯದಿರ್ದಂ ಸುಖದೊಳ್ (೧೦೪. ೨-೨೩); ಪೊಸಗಂಪೇಜಿದ ಬಿಂಬಫಲವ ಗಿಳಿ ಮಸಗಿ ಸುತಸದಿ ಪೀರ್ವಂತೆ (ಕಂಪಬಿ. ೦೦-೪೦). ೩. ಕುಡಿ ; **ಈಂಟು** : ಜಿಗುಟಿಯಂತೆ ನೆತ್ತರನೆ ಪೀರ್ವ ಡಾಕಿನಿಯರಿಂ . . . ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೫೨೪ ಕೂದ್ರ೪); ಯುವರಾಜನ ನೆತ್ತರಂ ಕುರುಧ್ವಜಿನಿಯೆ ನೋಡೆ ಪೀರ್ದು (ಶಂಕಥಾ. ೯-೫೨) ; ಹಂಸನಂತು ಪಾಲುಂ ನೀರುಂಮೆರಸಿದಲ್ಲಿ ನೀರಿರೆ ಪಾಲನೆ ಪೀರ್ಗುಂ (ಕಾವ್ಯಂಶು. ೬). ಪೀರು$_1$ : ೧. ನೀರಧಿಯ ಪೀರುವವೊಲ್ಕೆತಪ್ಪ ಮಾರುತಿಯನಿಟ್ಟಿಸುತ ನಕ್ರಕೂರ್ಮಂಗಳೆಲ್ಲ ತೋರಭಯದಿಂದೊಂದನೊಂದೊರಸಿ ವಿತಳವಂ ಸಾರುತಿರಲು (ವೆಂಕಾರಾ. ೫-೦-೨೬). ೩. ಅಂಬುಹಾರಗಳನೊಂದೆ ಗುಟುಕಿನೊಳ್ಪೀರಬೇಕು (ಕಶುಭ. ೪-೦೫-೨೦). ಹೀರ್$_1$ : ೨. "ಹೀರ್ (ಪೀರ್)— ರಸಾಸ್ವಾದನೇ, (ಭೂಷಣೇ ಚ)" (ಶಮಧಾ). ಹೀರು$_1$ : ೧. ತನ್ನನುದರದೊಳು ಗರ್ಭೀಕರಿಸಿಕೊಂಡಿರ್ದ ಮುನ್ನೀರನಾ ವಡಬಶಿಖಿ ಹೀರುವಂದದಿಂ . . . ಸನ್ನುತಗುಣಾಭರಣಭೂಷಿತಂಗಾ ದುಷ್ಯಮಾನಸಂ ಕೇಡನೆಣಿಸಿ (ಸಮ್ಯಕ್ತ್. ೦೦-೫೪) ; ಬಣ್ಣದ ಚಿಟ್ಟೆ ಪುಷ್ಪದಿ ಪುಷ್ಪಕ್ಕೆ ಹಾರಿ ಬಂಡನು ಹೀರಿ ಕಂಗೊಳಿಸುತಿರೆ (ಜತ್ರಾಂಗ. ೪-೮೪) ; ಹತ್ತಿನಾರು ತಕ್ಕ ಮಟ್ಟಿಗೆ ಬೇಗ ನೀರನ್ನು ಹೀರುತ್ತದೆ . . . ಬಣ್ಣಗಳನ್ನು ಚೆನ್ನಾಗಿ ಹೀರುತ್ತದೆ (ಗೃಹಉ. ೬೨). ೨. ಕರಡಿ ತಣಿದಾಡಿ ಹೋದುದಿಲ್ಲಿ ನೆರೆದಿಬಾಹೆಗಳ ಹೀರಲೊಡೆದ ಹುತ್ತವಿದೆ (ಕೋಮಾಶ. ೨-೫). ೩. ಘೋರ ಪಾತಕಿ ದುಃಶಾಸನನ ರಕುತವ ಹೀರಿ ಮುದದಿ ಮಾರವೈರಿಯ ಭಜಿಸಿದ (ತ್ರೈಲಂದ. ೦-೨೦೬-೨); ಮೊಲೆಯುಂಬಂದದಲಿ ಕೆನ್ನೆತ್ತರನು ಹರಿ ಹೀರೆ... ಬೆದಜಿ ಪೂತನಿ ಪೋಯ್ತದೃಶ್ಯದಲಿ (ಹಾಳ್ಯಭಾ. ೨೦-೪೦); ಕಾಲಕೂಟವ; ನಿನ್ನ ತುಟಿಗೊತ್ತೆ ಕಾಲಂ, ಜುಣುಗದಲೆ ಹೀರದಂ (ಗೀಜಂ. ೦೨೨-೪೩).

**ಹೀರಿ ಹಿಪ್ಪೆ ಮಾಡು**, **ಹೀರಿ ಹಿಪ್ಪೆಯ ಮಾಡು**=ನಿಸ್ಸಾರಗೊಳಿಸು ; ಸತ್ತ್ವಹೀನವಾಗಿಸು : ಗೂಢಚಾರರು...ನಮ್ಮ ದೇಶದ ಸಾರವನ್ನು ಹೀರಿ ಹಿಪ್ಪೆ ಮಾಡುತ್ತಿರುವರು ( ಶಿಶಾಶ. ೬೪ ) ; ಅರಿರಾಯರುಗಳೆಂಬ ನವಧವಳೇಕ್ಷುದಂಡವನು ತವಕದೆ ಹೀರಿ ಹಿಪ್ಪೆಯ ಮಾಡಿ (ಕಂಶಂ. ೨೨-೦೨); ಮಾಯೆಯೆಂಬ ರಕ್ಕಸಿ ಸಕಲಪ್ರಾಣಿಗಳ ಸಾರವ ಹೀರಿ ಹಿಪ್ಪೆಯ ಮಾಡಿ (ಅಜಂಡೀ. ೦೫-೨೦).

[ದೇ.॥ ತುಳು. ಹೀರು; ತೆಲು. ಪೀರುಚು, ಪೀರ್ಚು, ಪೀಲುಚು]

**ಪೀರಖಾನಿ** (ನಾ). ಪೂರ್ವಕಾಲದಲ್ಲಿ ಬಳಕೆಯಲ್ಲಿದ್ದ ಹದಿನಾರು ಬಗೆಯ ರೂಪಾಯಿಗಳಲ್ಲಿ ಒಂದು ಬಗೆ : ಸನ್ ೧೮೪೦ರ ವರೆಗೆ ಹದಿನಾರುಪ್ರಕಾರದ ರೂಪಾಯಿಗಳು ನಡಿಯುತ್ತಿದ್ದವು. ಅವು— ಔರಂಗಾಬಾದಿ...೧೫. ಗೋವಿಂದ ಬಕ್ಷಿ, ೧೬. ಪೀರಖಾನಿ (ಕಥಾಗ. ೨೯೦).

[?]

**ಪೀರಿಯಡ್ಡು** (ನಾ). ಶಾಲೆ, ಕಾಲೇಜುಗಳ ದೈನಂದಿನ ಪಾಠಕ್ರಮಕ್ಕಾಗಿ ವಿಭಾಗಿಸಿಕೊಂಡ (ಮುಕ್ಕಾಲುಗಂಟೆ, ಒಂದು ಗಂಟೆ ಮುಂತಾಗಿ ಅಧಿಕಾರ ವರ್ಗದವರು ತಮ್ಮ ತಮ್ಮ ಅನುಕೂಲತೆಯ ಮೇರೆಗೆ ನಿಗದಿಪಡಿಸಿಕೊಂಡ) ಪಾಠಕಾಲ : ಬುದ್ಧಪೂರ್ವಕಾಲದ ವಿವರವನ್ನು ೨-೩ ಪೀರಿಯಡ್ಡುಗಳಲ್ಲಿ ಮುಗಿಸಿಬಿಡುವುದು ಘೋರವಾದ ದೋಷವೆನಿಸುತ್ತದೆ (ಬಾಇಶ್ರ. ೫). [ ←ಇಂ. period ]

**ಪೀರು₁** 'ಪೀರ್' ನೋ.

**ಪೀರು₂** 'ಪೀಱು₁' ನೋ.

**ಪೀರೆ, ಹೀರೆ₁** (ನಾ). ಒಂದು ಬಗೆಯ ತರಕಾರಿಬಳ್ಳಿ, ಹಾಗೂ ಅದರ ಕಾಯಿ : " ಪೀರೆ ಜಾಲಿನಿ " (ವಸ್ತುಕೋ. ೩೬-೨೦) ; ನೆಲ್ಲಿಯ ಸೆಟ್ಟು...ಪೊಸಪೀರೆಯು ಬಿತ್ತಿನೊಳಾನ ಬೂದಿಯಂ ನಿಲ್ಲದೆ ಬಾವಿಯೊಳ್ ಕಲಸಲುಚ್ಚಿನ ಕೈವೆಯು ಕಾ(ಖಾ)ರನಾಳಿಯೊ(ದೊ)ಳ್ ಪೊಲ್ಲವಿಮೆಂಬ ಬಾವಿಗಳ ನೀರಮೃತೋಪಮಮಪ್ಪುದೆಂಗೆ (ಅಭ್ರಮ. ೦೦-೬೪). 'ಕಾಟ್ಪೀರೆ', 'ಕೈಪೀರೆ' ಪರಾ. **ಹೀರೆ₁** : ಆ ರಾಜಗೃಹಾಂಗಣದೊಳ್ ಹೀರೆಯ ಹೂವಿಂದೆ ಸಮೆದ ಪೊಸಪೂವಲಿಯೊಳ್ ಕಾರಿಲ್ಲದೆಯುಂ ಒಱಿದುವು ನೇರಾಣಿಯ ಹೊನ್ನ ಮಟಿ³ (ಅನಂತ. ೪-೬೮) ; ಹೀರೆಯೆಳೆಗಾಯು ಕಾಯಿದಾಕ್ಷಣದಿ ತಂದದಟ ಧಾರೆಯಂ ಕೆತ್ತಿ ಸಂಬಳಿಸಿ (ನಾಪಕಾ. ೫-೦) ; ಹೀರೆ ಸೌತೆ ಕೂಷ್ಮಾಂಡಗಳಗೂಗುರಿ...ಸಂಭಾರಂಬೆರದುಪ್ಪಿನಕಾಯಿಗಳಡೆ ಮಾಡಿದಳು (ಪಾದೇವ. ೨೬-೬). [ದೇ.॥ ತಮಿ. ಪೀರ್ಕ್ಕೈ, ಪಿರ್, ಪೀರೆ; ಮಲ. ಪೀರ, ಪೀರಮ್; ತುಳು. ಪೀರೆ ; ತೆಲು. ಬೀರ ; **ಕೋಲಾ.** ಬೀರಾ; **ಪರ್ಜಿ.** ಬೀರ]

**ಪೀರ್ತರ್** (ಕ್ರಿ). ಹೀರಲ್ಪಡು ; ಬರಿದಾಗು : ಮದನಾಗ್ನಿಜ್ವಾಲೆಯಿಂ ಮುಗ್ಗಿದುದೊ...ಸುಯ್ಗೆಚ್ಚಿಂದ ಭೃಂಗಾವಳಿಯಿನಿರದೆ ಪೀರ್ತಂದುದೋ ಪೇೞೆಮೆಂಬಂದದೆ ಲಜ್ಜಾಮಂಗ್ಗೇನುಂ ನುಡಿ ಪೊಱಮಡದಾಯ್ತು (ಕಾದಂಉ. ೨೯೦). [ ಪೀರ್ + ತರ್ ]

**ಪೀಲಕ** (ನಾ). ಕರಿಯ ಬಣ್ಣದ ದೊಡ್ಡ ಇರುವೆ ; ಕಟ್ಟಿರುವೆ. [ಸಂ.]

**ಪೀಲಿ, ಹೀಲಿ** (ನಾ). ೧. ನವಿಲುಗರಿ : ಎಮೆಯಿಕ್ಕದೆ ನೋಟ್ಟ ಕಣ್ಗಳ್ ಪೀಲಿವೊಲಾಗೆ ಬಂದು ಪೆಱತೊಂದು ಮನಂಬುಗೆ ಪತ್ರಿ ಚಿತ್ರದೊಳ್ ಕೀಲಿಸೆ ಕಾವನಂಬು (ಶಂಪಟಾ. ೪-೪೬); ಸೋಗೆಯ ಚೆಲ್ವು ಕಣ್ದೆಱೆದುದೋ ಪೇೞೆಂಬಿನಂ ಪೀಲಿಗಳ್ಬರದಿಂ ಕಣ್ಗೊಳಿಸಲ್ಕೆ ನರ್ತಿಸುಗು ಮುದ್ಯಾನಂಗಳೊಳ್ ಸೋಗೆಗಳ್ (ಕಾದಂಪೂ. ೨೯೬) ; ವನಲಕ್ಷ್ಮಿಗೆತ್ತಿದ ಪೀಲಿಯ ಸತ್ತಿಗೆಯೋ...ಎನೆ ಚೂತವೊಪ್ಪುಗುಂ (ಗಂಗೆ. ೨-೩೪). ೨. ನವಿಲಿನ ಸೋಗೆ,— ತೋಕೆ : ನೀಲಮುತ್ತಿನ ಸರಿಪಳಿಯೊಳು ಕೇಕಿಗಳ್ ಪೀಲಿಯನೆತ್ತಿ ಸಂತಸದಿ ಲೀಲೆಯಿಂ ಕುಣಿದುವು (ಅನಂತ. ೫-೨೦); ನವಿಲ್ ನೀಳ್ದ ಪೀಲಿಯ ಚಮರಿಯಿಂದಮದೊ ಗುಡಿಸುತಿದೆ (ಶ್ರೀರಾಮಾ. ೦೬೨-೦೬೬). ೩. ನವಿಲುಗರಿಯಲ್ಲಿರುವ ಕಣ್ಣಿನಂತಿರುವ ನಡುವಿನ ಭಾಗ ; ಚಂದ್ರಕ : (೯). **ಹೀಲಿ** : ೧. ಶಿವ ನಿಮ್ಮ ನೋಡದವನ ಕಣ್ಣು ಹೀಲಿಯ ಕಣ್ಣು (ಸರ್ವಜ್ಞ. ೦೬೫-೬೯೩); ಬರುದಿನ ಕತ್ತರಿಯ ಹೀಲಿಗಳ ಝಲ್ಲರಿ ಮುಸುಕಿದವು ಗಜವ (ಕುಮಾರವ್ಯಾ. ೩-೬); ಸುತ್ತಿ ಸುಳಿದು ತುಂಬಿಗಳು ಮೇಲೆ ಹೀಲಿಯ ಸತ್ತಿಗೆಯಂತೆ ರಾಜಿಸಲು (ಶರಶ. ೫-೪೪). ೨. ಹೀಲಿಯನಡ್ಡಗಟ್ಟಿ ಬಿಡದಾಡುವ ಪೆಣ್ಣವಿಲೆಂದು ಕೇಕಿ ಬಂದಾ ಲಲಿತೋಲ್ಲಸತ್ಕಬರಿಗೊಯ್ಯನೆ ಜೋಡಿಸೆ (ಉದ್ಭಟ. ೨-೬೮).

[ದೇ.॥ ತಮಿ. ಮಲ. ತುಳು. ಕೊಡ. ತೆಲು. ಪೀಲಿ]

**ಪೀಲಿಕಣ್** (ನಾ). ನವಿಲುಗರಿಯ ಮಧ್ಯದಲ್ಲಿರುವ ಕಪ್ಪುಬಿಂಬ : ಅಲರ್ದ ತಾವರೆಯ ತನಿವಂಡಿನ ಪನಿಗಳಿಂ ಪಸರಿಸುವ ಪೀಲಿಗಣ್ಗಳೊಳಂ . . ರಂಜಿಸುವುದು (ಕಾದಂಪೂ. ೦೦೬). [ ಪೀಲಿ+ಕಣ್ ]

**ಪೀಲಿಗರಗ, ಹೀಲಿಕರಗ** (ನಾ). ನವಿಲುಗರಿಗಳಿಂದ ಅಲಂಕರಿಸಿದ ಕುಂಭ; ಪರಿಜನಂಗಳ್ ತಳಿವ ಪೀಲಿಗರಗದಾಲಿಗುಡುವ ನೀರ ತೋರವನಿಯ ತಂದಲೊಂದುಗೆಯೊಳಮೆಂತಾನುಂ ಹಮ್ಮುದದಿನಗಲ್ದು (ಶಂಶ್ರತ್ರಿ. ೫-೦೯ ಪ). **ಹೀಲಿಕರಗ** : ಖಜ್ಜಯದ ಹೀಲಿಕರಗದ ಬೋನದ ಪರಿಯಣದ . . . ನೆಲನನುಗ್ಗಡಿಪ ಪಲವುಂ ನಿಯೋಗದನ್ವಯಾಗತೆಯರುಂ (ಶಂಶ್ರತ್ರಿ. ೬-೬೫ ಪ).

[ ಪೀಲಿ + ಕರಗ ]

**ಪೀಲಿಗೊಡೆ, ಹೀಲಿಗೊಡೆ** (ನಾ). ನವಿಲುಗರಿಗಳಿಂದ ಮಾಡಿದ ಕೊಡೆ,—ಛತ್ರಿ : ಕಂಪಿಂಗೆಳಸಿ ಮುಡಿಗೆ ಮುಸುಱುವ ಭೃಂಗಂಗಳ್ ನೆಗೆದ ಪೀಲಿಗೊಡೆಯನೆ ತೋರ್ಕುಂ (ರಸಿ. ೨-೯೬). **ಹೀಲಿಗೊಡೆ** : ಮುಡಿಯು ಬಾಸಿಗಂಪಿಗೆಳೆದುಂಬಿಯಾಡೆ ಬೆಳ್ಗೊಡೆ ಮೇಲೆ ಮೆಱೆಯೆ ಭಾವಜನು ಅಡಕಟ್ಟ ಬೆಳುಗೊಡೆ ಹೀಲಿಗೊಡೆಯು ನೆಳಲಡಿಯೊಳಿರ್ದ ನೊಯೆನಲೆಸೆದ (ಶರಶ. ೫೦-೬೫) [ಪೀಲಿ+ಕೊಡೆ₂]

**ಪೀಲಿದಲೆ** (ನಾ). ನವಿಲಿನ ಸೋಗೆಯಾಕಾರದ ಮುಡಿ,—ಕೂದಲು : ಬಂಡುಣಿಗಂರುಳ್ಗಳ ಪರಪಿಕಾಲಾಪದ ಪೀಲಿದಲೆಯ ಲಲನೆಯನೀಕ್ಷಿಸಿದನು (ಶ್ರರಂಪ. ೪-೦೯). [ಪೀಲಿ+ತಲೆ₁]

**ಪೀಲಿದಳೆ** 'ಪೀಲಿದಟೆ³' ನೋ.

**ಪೀಲಿದಳೆವಿಡಿ** (ಕ್ರಿ). ನವಿಲುಗರಿಗಳ ಕೊಡೆಯನ್ನು ಹಿಡಿ : ಪೀಲಿದಳೆ ವಿಡಿವಂತೆ ಮೃಗಂಪಿಗಳಿಕುಳಂ ಮೇಲೆತ್ತಿ ಬರೆ...ಒಂದು ಲೀಲಾಬ್ಜಮಂ ಪಿಡಿದು ಬರ್ಪಳೊಪ್ಪಿರ್ದಳು (ಶಬಪು. ೦೯-೨೩).

[ ಪೀಲಿದಳೆ (<ಪೀಲಿದಟೆ³)+ಪಿಡಿ₁ ]

**ಪೀಲಿದಟೆ³, ಪೀಲಿವಳೆ, ಹೀಲಿದಳೆ** (ನಾ). ನವಿಲುಗರಿಗಳ ಕೊಡೆ ಪಿಂಛಾತಪತ್ರ : ಆ ಪುರದುಪವನದೊಳ್ . . . ವನದೇವತೆಗೆ ಪೀಲಿದಟೆಯನೆತ್ತನ ಸೋಗೆಸವಿಲ್ಲಲ್ಲ (ಶಂರಾಮಾ. ೦-೦೦೬ ಪ); ಮುಱಿದುಂಬಿಯ ಬಂಬಲ್ ಎತ್ತಿ ಪಿಡಿದ ಪೀಲಿದಟೆಯಾಗೆ (ಕಬ್ಬಿಗ. ೯೬). **ಪೀಲಿದಳೆ** : ನೆಗೆದು ಸುತ್ತುಂ ಪರಿಮಳಿಸುವ ಗಂಧಂಗಳೊಳು ಮುಡಿ ಗೆಱಗುವಳಿಕುಳಂಗಳ ಪೀಲಿದಳೆಯೊಳಗೆ . . . ಮೆಱೆವುತಿರೆ (ಪಂಚರ. ದೇ. ೬೨-೦೯). **ಹೀಲಿದಳೆ** : ನೂತನೋದ್ಗತನರ್ತನಕ್ಕೆ ಮುಯ್ಯಾನುತುಂ ಗೊಡೆ ಹೀಲಿದಳೆಯಣಾಕುಗಳ ನಡುವೆ ಮೆಱೆವುತಾಂ (ಶಂಬರ. ೩-೬೩) ತಳತ ಬೆಳುಗೊಡೆಯ ತುಱುಗಿದ ಹೀಲಿದಳೆಯ ಮಂಡಲಿಸಿದಣಾಕುಗಳ ನೆಳಲೊಳು . . . ನಡೆವನಪ್ರತಿಮನಚಳಿತಸಿದ್ಧನು (ಸಿದ್ಧರಾ. ೬-೨೦)

[ ಪೀಲಿ+ತಟೆ³ ]

**ಪೀಲಿದುಱುಬು** (ನಾ). = ಪೀಲಿದಲೆ : ನಿಡುಗಣ್ಗಳ ನಿಬಿಡಸ್ತನಗಳ ಪಿಡಿ ನಡುವಿನ ಪೀಲಿದುಱುಬಿನ ಕಡುಚೆಲ್ವುವಡೆದ ಸೊಬಗುಗಾತಿ ಮೆಲ್ಲನೆ ನಡೆತಂದಳಾ ನೃಪನೆಡೆಗೆ (ನೇಮಿನಂ. ೦೨-೫೦).

[ ಪೀಲಿ+ತುಱುಬು₂ (<ತುಱುಂಬು₂) ]

**ಪೀಲಿಬಿಜ್ಜಣಿಗೆ** 'ಪೀಲಿವಿಜ್ಜಣಿಗೆ' ನೋ.

**ಪೀಲಿವಿಜ್ಜಣಿಗೆ, ಪೀಲಿಬಿಜ್ಜಣಿಗೆ** (ನಾ). ನವಿಲುಗರಿಗಳಿಂದ ಮಾಡಿದ ಬೀಸಣಿಗೆ : ಪೀಲಿವಿಜ್ಜಣಿಗೆ ತಣ್ಪಿನ ನೀರ ಸಱಿಯಾದ ಪೊಂಗಳಂತಿಗೆಯಿರೆ ಸಜ್ಜೆಯೋವರಿಯಿಂದೋಱಿ ಮಾಡಿತ್ತು ಕಂತುಗೆಮ್ಮುಗಂ (ಶಂಶ್ರತ್ರಿ. ೬-೬೦). **ಪೀಲಿಬಿಜ್ಜಣಿಗೆ** : ಅನುನಯದಿಂ ವಾರವಿಲಾಸಿನಿಯರ್ ಮೆಲ್ಲಲರ ಪೀಲಿಬಿಜ್ಜಣಿಗೆಯನೊಯ್ಯನೆ ಬೀಸುತ್ತಿರೆ ನೃಪನಂದನನಿನಿಸಿನಿಸಂ ಬಚಿಲ್ಕೆಗೆಟ್ಟಿಯುತ್ತಿರ್ದಂ (ಕಾದಂಉ. ೪೫೫). [ ಪೀಲಿ + ಬಿಜ್ಜಣಿಗೆ ]

**ಪೀಲಿವೊಱೆ³** (ನಾ). ನವಿಲುಗರಿಗಳ ಹೊರೆ,—ಪೆಂಡೆ : ಕರಿದಂತಂಗಳ ನಾಂತು ಪೀಲಿವೊಱೆಯಂ ತಟಕ್ಕೈಸಿ ಗಂಧೇಭಮುಕ್ತಾಫಳಭಾರಮಂ ತಳೆದು . . . ಬಂದರನೇಕರ್ ಬಟಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ (ಕಾದಂಪೂ. ೦೬೯). [ ಪೀಲಿ + ಪೊಱೆ³ ]

**ಪೀಲು₁** (ನಾ). ೧. ಒಂದು ಬಗೆಯ ಮರ ; ಅಕ್ಷೋಟವೃಕ್ಷ; ಉಗುನಿ: "ಪೀಲುವೆನಲ್ ಗುಡಫಲಂ" (ಶಬ್ದಮಣಿ. ೩೯-೮). ೨. ಹೂವು. ೩. ಬಾಣ. ೪. ಆನೆ : "ಪೀಲು ಪಿನದ್ದಿರದಾಂಕಂ" (ಶಬ್ದಮಣಿ. ೧೩೦-೬೩); "ಪೀಲುಃ — ಪುಂಡೀಗಿಡ, ಆನೆ, ಸರಳು, ಹುವ್ವು" (ಸಿದ್ಧಾಂತ. ೪೦೬). ೫. ಹುಳು; ಕ್ರಿಮಿ. ೬. ಕಣ; ಅಣು : ಸರೆವುನೆ ಎನುವುದು ಏತಕೊ ಒಡಲಿಗೆ ಕಾಂಬುದು ಅರವುನೆ ತುಣುಕು ಅದು ಕೀಲುಕೀಲದಲಿ ಪೀಲುಪೀಲಿನಲಿ ರನ್ನದ ಕಣಕಣ ವಿಣುಕುವದು (ಅಕಳು. ೦೯೩-೪). ೭. ಹುಲ್ಲು : "ಹುಲ್ಲಿನಲ್ಲಿ ಮರದಲಿ ಪೀಲು" (ಮಂಗಣಾ. ೦೯೩-೨೩). [ಸಂ.]

**ಪೀಲು₂** (ನಾ). [ಸಂಗೀತ] ಒಂದು ರಾಗದ ಹೆಸರು : ಬರಖತ್ತುಲ್ಲಾ ಖಾನರು ಇವರ ಮನೆಯಲ್ಲಿ 'ಪೀಲು'ರಾಗವನ್ನು ನುಡಿಸಿದಾಗ (ಗಾಚಕ. ೨); ಅವನು ಪೀಲುರಾಗದಲ್ಲಿ ಕಟ್ಟಿದ ಪದವು ಹಳ್ಳಿಗಳಲ್ಲಿ ಎಷ್ಟೋ ದಿನ ಲೋಕಪ್ರಿಯವಾಗಿತ್ತು (ಗಂಡುಗಾಡು. ೨೩೨). [←ಹಿಂ. ಮರಾ. ಪೀಲು]

**ಪೀಲುಕ** (ನಾ). ೧. ಒಂದು ಬಗೆಯ ಮರ : 'ಕಾಕಪೀಲುಕ' ಪರಾ. ೨. ಇರುವೆ. [ಸಂ.]

**ಪೀಲುಪರ್ಣಿ** (ನಾ). ೧. ಒಂದು ಬಗೆಯ ಸಸ್ಯ; ಹೆಗ್ಗುರುಟಿಕೆ : "ಮೂರ್ವಾ, ದೇವೀ . . . ಗೋಕರ್ಣೀ, ಪೀಲುಪರ್ಣೀ—೧೧ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂತ. ೦೩೦). ೨. ತೊಂಡೆ ಗಿಡ: "ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ—೪ ದೊಂಡೇಗಿಡದ ಹೆಸರು" (ಸಿದ್ಧಾಂತ. ೦೪೪). [ಸಂ. ಪೀಲುಪರ್ಣೀ]

**ಪೀವ** (ನಾ). ದೊಡ್ಡದು ; ಸ್ಥೂಲವಾದುದು : "ಬಹುಳಃ . . . ಪೀವಾ, ಪೀವರಃ—ಈ ೫ ದೊಡ್ಡ(ತು)" (ಹಲಾಯು. ೬-೦೬೬). [ಸಂ.]

**ಪೀವಡಿ**, **ಪೆವಡಿ** (ನಾ). ೧. ಅರಿಸಿನಬಣ್ಣದ ಮಣ್ಣು ; ಹಳದಿ ಮಣ್ಣು : ಘಟಕ, ಮುಶಿಯ ಮಣ್ಣು, ಕುಂಬಾರರ ಮಣ್ಣು, ಕಾವಿ, ಪೀವಡಿ ಮುಂತಾದ ವ್ಯುತ್ಪತ್ತಿಗಳು ಈ ಧಾತುವಿನಿಂದ (aluminium) ಹುಟ್ಟುತ್ತವೆ (ಮುಂಬಯಿ. ೬-೦೬). **ಪೆವಡಿ** : ೨. ಹಳದಿಬಣ್ಣ : ರತಲಿನ ಮೇಲೆ ಕಿವ್ಮುತ್ತು ಲಗತಕ್ಕ ಜಿನಸಗಳು. ೧, ಅಗರ . . . ೫೧, ಹಿತ್ತಾಳಿ ತಂತಿ; ೫೨. ಪೆವಡಿಬಣ್ಣ (ಹಳದಿಬಣ್ಣ) (ಮುಂಬಯಿ. ೦೨೪). [←ಮರಾ. ಪಿವಡೀ, ಪೇವಡೀ]

**ಪೀವರ** (ಗು). ೧. ಕೊಬ್ಬಿದ ; ಸ್ಥೂಲವಾದ ; ತೋರವಾದ : ಆಕೆಗಳ ಪೀವರತುಂಗನಿತಂಬಬಿಂಬದೊಂದಗಲದ ವೃದ್ಧಿ ಪೆರ್ಚಿ ನೆಲೆವೆರ್ಚಿದುದೀ ಕೊಳಂ (ಶಾಂತಿಪು. ೬-೨೮). 'ಪೀವರಸ್ತನಿ' ಪರಾ. (ನಾ). ೨. ದೊಡ್ಡದು ; ಸ್ಥೂಲವಾದುದು : "ಬಹುಳಃ, ಸ್ಥೂಳಃ . . . ಪೀವರಃ —ಈ ೫ ದೊಡ್ಡ (ತು)" (ಹಲಾಯು. ೩೩-೦೬೬); ಅತಿನಿಬಿಡಂಗಳ್ ವೃತ್ತೋನ್ನತಂಗಳತಿಪೀವರಂಗಳತಿಕಠಿನಂಗಳ್ . . . ಅವಳ ಕುಚಂಗಳ್ (ಗದಾಯು. ೬-೩೬). ೩. ಸ್ಥೂಲನಾದವನು ; ದಪ್ಪನಾದವನು : "ಪೀವರನೆನಲ್ ಸ್ಥೂಲನೆನೆ ಬಹುಲನೆನೆ (ಪೀನನೆನೆ) ದೊಡ್ಡಿತಪ್ಪವನೆನಿಕ್ಕುಂ" (ಮಂಗಣಾ. ೬೯-೦೦). [ಸಂ.]

**ಪೀವರಸ್ತನಿ** (ನಾ). ೧. ಪುಷ್ಟವಾದ ಮೊಲೆಗಳುಳ್ಳವಳು. ೨. ದೊಡ್ಡ ಕೆಚ್ಚಲುಳ್ಳ ಹಸು : "ಪೀನೋಧ್ನೀ, ಪೀವರಸ್ತನೀ—ಈ ೨ ಹೆಗ್ಗೆಚ್ಚಲಾವು" (ಹಲಾಯು. ೪೩-೦೦೬). [ಸಂ. ಪೀವರಸ್ತನೀ]

**ಪೀವರೋಧ್ನಿ** (ನಾ). = ಪೀವರಸ್ತನಿ ೨ : "ಪೀವರಸ್ತನಿ ಪೀವರೋಧ್ನಿಯೆನೆ ಹೆಗ್ಗೆಚ್ಚಲಾವು" (ಮಂಗಣಾ. ೫೪-೫). [ಸಂ. ಪೀವರೋಧ್ನೀ]

**ಪೀಳಿಗೆ** (ನಾ). ೧. ವಂಶ ; ಕುಲ : ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪಟ್ಟವ ಕಟ್ಟುವಂದಿದಿಲ್ಲದೊಡತಸುತನ ಸಲ್ಲವು (ತೊರವೆ. ೬-೦೦) ದೇವಕೀಸುತನೇನು ಬಂಡಿಯ ಬೋವಗುಲದಲಿ ಜನಿಸಿದನೆ ಪೇಳಾ ವಿರಿಂಚಿಯದಾವ ಸಾರಥಿಕುಲದ ಪೀಳಿಗೆಯೊ (ಕುಮಾರವ್ಯಾ. ೫-೩೪); ತೆಗೆಸಿದನು ಬಳಿಕಿನಕುಲದ ಪೀಳಿಗೆಯ ನೃಪರಾರ್ಜಿಸಿದ ನಾನಾಯುಗ ಯುಗಂಗಳ . . . ನಾಣೆಯಂಗಳನಖಿಳವಸ್ತುಗಳ (ತೊರವೆ ೦-೬-೪). ೨. ತಲೆಮಾರು : ತಲೆಯಿಂದ ತಲೆಗೆ, ಪೀಳಿಗೆಯಿಂದ ಪೀಳಿಗೆಗೆ . . . ಇಳಿಯುತಿದೆ ಯುಗದಿಂದ ಯುಗಕೆ ಮಾನವಧರ್ಮನಿಲದವ್ಯುತಧಾರೆಯದು (ಪಾಂಚಜ. ೪೦೬) ; ಹಿಂದಿನವರ ಆದರ್ಶಗಳು ಬರುವ ಪೀಳಿಗೆಗೆ ಮೇಲ್ಪಂಗ್ತಿಯಾಗುತ್ತವೆ (ಶಿಕ್ಷಣ. ೩೦). ೩. ವಂಶಕ್ಕೆ ಸೇರಿದವನು ; ವಂಶಜ : ನಿರೀಕ್ಷಿಸುತನಿಬರಿಂಗಿತವ ಮೇಲುವೊಗದ ಗಭೀರಗತಿಯ ಭಡಾಳವನು ಕಂಡಿವರು ರಾಯರ ಪೀಳಿಗೆಗಳಹುದೆಂದು ನಿಶ್ಚೈಸಿದನು ಮನದೊಳಗೆ (ಕುಮಾರವ್ಯಾ. ೦೬-೨೬). 'ಪೀಟಿಗೆ' ಪರಾ.

**ಪೀಳ್ಕುದುರೆ** (ನಾ). [ಸಂಗೀತ] ಪಿಟೀಲಿನ ಧ್ವನಿಪೆಟ್ಟಿಗೆಯ ಮಧ್ಯಭಾಗಕ್ಕಿಂತ ಸ್ವಲ್ಪ ಮೇಲುಗಡೆಯಲ್ಲಿ ತಂತಿಗಳು ಹಾದು ಹೋಗಲು ಅಂಬವಾಗಿ ಅಳವಡಿಸಿರುವ ಕುದುರೆಗೆ ಸಿಕ್ಕಿಸುವ ಒಂದು ಉಪಕುದುರೆ ; ನಾದವನ್ನು ಕಡಮೆ ಮಾಡುವುದಕ್ಕಾಗಿ ಈ ಉಪಕುದುರೆಯನ್ನು ಸಿಕ್ಕಿಸುತ್ತಾರೆ : ಅವರ ಸಾಧಕ ಅತಿ ಗೋಪ್ಯ. ಪಿಟೀಲಿಗೆ ಪೀಳ್‌ಕುದುರೆಯನ್ನು ಸಿಕ್ಕಿಸಿ ಸಣ್ಣನಾದದಲ್ಲಿ ಅಭ್ಯಾಸಮಾಡುತ್ತಿದ್ದರು (ಗಾಚಕ. ೨೦). [ < ಪಿಳ್ಳೆ + ಕುದುರೆ ]

**ಪೀಱು₁**, **ಪೀರು₁** (ಕ್ರಿ). ಕೆದರು ; ಚೆದರು ; ಚೆಲ್ಲಾಪಿಲ್ಲಿಯಾಗು ; ಅಸ್ತವ್ಯಸ್ತವಾಗು : "ಪೀಱು—ವಿಕೀರ್ಣೇ" (ಕವಿರಾ.೫) ; ತೊಡಂಕಿ ಪೀಱಿದ ಕುರುಳ್ಗಳೆ ಚಿತ್ತದೊಳಾದ ಬೇಸಱಂ ನುಡಿವವೊಲಾಗೆ ಬರ್ಪ ಕಮಳಾಯತನೇತ್ರೆಯನಿಂದುವಕ್ತ್ರೆಯುಂ ಕಂಡು (ಕಂಕಳಾ. ೦೩-೯೯) ; ಸುರ್ಬುಗೊಂಡ ಗಡ್ಡಮುಮಂ ಮಿಸೆಯುಮನಗಲೆ ನೂಂಕಿ ಪೀಱಿದ ತಲೆಯೇಱಿಂತಿರ್ದ ಬಾಯೊಳಡ್ಡಗೈಯನಿಡುವುದುಂ (ಲೀಲಾವ. ೬-೫೬ ವ). **ಪೀರು₁** : ಕಪ್ಪುಕುರುಳುಗಳಿಂದ ತಲೆಯ ಪೀರಿದರು ಒಪ್ಪವೊಲು ತಾರೆಗಳ ನಡುವೆ ತರೀಹಳು ರಾತ್ರಿಯೆಂಬಿವಳಾವ ಧಾತ್ರಿ ? (ದಾಸಿಗ. ೩೫-೪) [ ದೇ.॥ ತಮಿ. ಪೀಱು = ಬಿರಿ, ಸೀಳು ; ಮಲ. ಪೀರು = ಹರಿ ]

**ಪೀಱು₂** (ನಾ). ೧. ಚೆದರುವಿಕೆ ; ಚೆಲ್ಲಾಪಿಲ್ಲಿಯಾಗುವಿಕೆ ; ಅಸ್ತವ್ಯಸ್ತವಾಗುವಿಕೆ : ಪಿಟ್ಟಾದ ಪೀಱಾದ ಸಿಂಧುರದಿಂ ತಟ್ಟಿದ ಮುಟ್ಟಿದಸ್ತ್ರರಥದಿಂ ಕಣ್ಗಂ ಮನಕ್ಕಂ ಭಯಂಕರಮಾದಾಜಿಯೊಳೆಟ್ಟಿ ತಿಂಬ ಜವನೆಂಬಂತಿರ್ದನಬ್ಜೋದರಂ (ಕಂಗಾಪು. ೪-೦೨೪). ೨. ಇರಚಲು ; ಇರಿಸಲು : ಪಾಱುವ ವಿಮಾನದೊಂದಳ್ಕೇಱಿಂ ಪಱದುಗುವ ಮುಗಿಲ ನೀರ್ಗಳ ಪಲವುಂ ಪೀ[ ಪಾಠಾಂ. ಜೀ, ಬೀ ]ಱುಗಳೊಳಳಿ ಖಚರರನಾಱಿಸಿದುದು ಗಗನದೊಳ್ ವಿಯತ್ತಳಪವನಂ (ಆದಿಪು. ४-೬೬). [ < ಪೀಱು₁ ]

**ಪೀಟಿಗೆ** (ನಾ). ಸಿಂಹಾಸನ ; ಪೀಠ : "ಪೀಠಿಕೆಗೆ ಪೀಟಿಗೆಯೆನಿಕ್ಕುಂ" (ಸಂಕೀವ. ೦೪) ; ನೀನುಳ್ಳೊಡುಂಟು ರಾಜ್ಯಂ . . . ನೀನುಳ್ಳೊಡುಂಟು ಪೀಟಿಗೆ ನೀನಿಲ್ಲದಿದೆಲ್ಲವೊಳವೆ (ಗದಾಯು. ೫-೨೦) ; ಬೇಡಿದೊಡೀಯ ನಾಂತಡಿಱಿಯಂ ಮಱಿವೊಕ್ಕೊಡೆ ಕಾಯನೆಂತವಂ ನಾಡರಸಾಗಿ ಪೀಟಿಗೆಯ ನೇಱಿದೊಡೇನವನಗ್ರಗಣ್ಯನೇ (ಸೂಕ್ತಿಸು. ೦೬-೨೩) ; ಪೀಠಿಕಾ—ಪೀಟಿಗೆ (ಕಕುದ. ೨೩೬ ಕ್ರಮಾಂ). 'ಪೀಳಿಗೆ' ಪರಾ. [ < ಸಂ. ಪೀಠಿಕಾ ]

**—ಪು₁**, **—ಹು₁** (ಪ್ರ). ಪ್ರೇರಣಾರ್ಥದಲ್ಲಿ ಧಾತುಗಳ ಮೇಲೆ ಹತ್ತುವ ಒಂದು ಪ್ರತ್ಯಯ : 'ಅಱಿಪು', 'ತಿಳಿಪು₁', 'ನಡಪು₁' ಪರಾ. — ಹು₁ : 'ಕಳಂಹು', 'ತಿಳುಹು₁' ಪರಾ.

**—ಪು₂**, **—ಹು₂** (ಪ್ರ). ಒಂದು ಭಾವನಾಮವಾಚಕಪ್ರತ್ಯಯ : 'ಒಳ್ಪು', 'ತೆಳ್ಪು', 'ನಣ್ಪು' ಪರಾ. —ಹು₂ : 'ತೆಗಹು', 'ತೊಡಹು₂' ಪರಾ.

**ಪುಂ** (ನಾ). ೧. ಗಂಡಸು ; ಪುರುಷ : ಪುಂ ಪೆಂಗಳಿಂದ (ಪುಂ ಪೆಣ್ಗಳಿಂದ) ಪುಟ್ಟಿದ ದೇಹವನು ತಿಳಿ . . . ಇಂಪಾಗಿದೆಯೆಂದು ಹಿಗ್ಗದಿರೆಲವೊ ಹೊಲೆಗಂಪು ನಾರುವುದು ತೊಳೆಯದೆ ಇರಲು (ವಿದಾಕ್ಕ. ೪-೧). ೨. ಗಂಡುಸಂತಾನವಿಲ್ಲದವರಿಗೆ ಪ್ರಾಪ್ತವಾಗುವುದೆಂದು ಹೇಳಲಾದ ಒಂದು ನರಕ. ೩. [ವ್ಯಾಕ] ಪುಲ್ಲಿಂಗ : ನೀನಱಿ ಕರ್ಣಾಟಕದೊಳ್. ಪೀನಂ ಸ್ತ್ರೀ ಪುಂ ನಪುಂಸಕೋಭಯ ಪುಂಸ್ತ್ರೀ ಸ್ತ್ರೀನಪುಂಸಕಪುಂಸ್ತ್ರೀವಾಚ್ಯಾನ್ಯೂನಾರ್ಥ್ಯಯವೆಂದು ಲಿಂಗವೊಂಬತ್ತು ತೆಱಂ (ಶಮದ. ೯೮).

[ಸಂ. ಪುಂಸ್]

**ಪುಂಕಿಸು** (ಕ್ರಿ). ಧ್ವನಿ ಮಾಡು ; ಸ್ವರವನ್ನು ಹೊರಡಿಸು : ಸುಷಿರವಾದ್ಯವಾದನವಿಶಾರದನಪ್ಪ ಕಿನ್ನರಂ ತನ್ನಯ ಸೊಳಹೆಯೆಂಬ ವಾಸಮಂ ಕೊಂಡು ಹೆಲ್ಲಣೆಯಂ ಸುದ್ದವಾಗಿ ಪುಂಕಿಸಿ ಬಿಂಕಂಬಡೆಯೆ ಮುಹಚಾರೆಯುಮಂ ಮಾಡಿ ರೂಢಿವಡೆದ ಮಧ್ಯಮಾದಿಯೆಂಬಾದಿರಾಗಮಂ ರೂಹುಗೊಳಿಪುದುಂ (ಶಾಂತೀಶ್ವ. ೧೬-೬೬ ವ); ಪುಂಕಿಸಿದ ಮಾಂಸ [ ವಾಂಶ ] ಕಾರನ ಪುಂಕೃತಿಯುಂ ಶ್ರುತಿಯುಮೆಂದು ಭೇದಿಸಲಿನ್ನಾರ್ಗಂ ಕರಮರಿದೆನೆ ಭಾರತಿಯಿಂ ಕಿಱಿಯಳಿವಳ್ದಿರೆನಿಸಿ ಸಮಗಾಯಿನಿಯರ್ ತಾರಯ್ಸುವುದುಂ (ಮಹಾಪು. ೪-೩೪).

[< ಪುಂಖಿಸು]

**ಪುಂಕೃತಿ** (ನಾ). ಸ್ವರ; ನಾದ: ಪುಂಕಿಸಿದ ಮಾಂಸ [ ವಾಂಶ ] ಕಾರನ ಪುಂಕೃತಿಯುಂ ಶ್ರುತಿಯುಮೆಂದು ಭೇದಿಸಲಿನ್ನಾರ್ಗಂ ಕರಮರಿದೆನೆ ಭಾರತಿಯಿಂ ಕಿಱಿಯಳಿವಳ್ದಿರೆನಿಸಿ ಸಮಗಾಯಿನಿಯರ್ ತಾರಯ್ಸುವುದುಂ (ಮಹಾಪು. ೪-೩೪). 'ಹುಂಕೃತಿ' ಪಠಾ. [ಪುಂ$_0$ + ಕೃತಿ$_1$]

**ಪುಂಖ** (ನಾ). ೧. ಬಾಣದ ಹಿಂಭಾಗ ; ಹಿಳಿಕು : "ಬಾಣದ ಪಿಳಿಕದು ಪುಂಖಂ" (ವಸ್ತುಕೋ. ೬೩-೧೯) ; ವಿರಹಜ್ವರದಿಂ ಪುಳಕೋತ್ಕರಮೊಗೆದುವು ರೋಮಕೂಪಮೆನಿತನಿತಱೊಳಂ ಸ್ಮರನ ಸರಲ್ಗಳ್ ನಾಂಟಲ್ ಶರೀರಮಂ ಪತ್ತಿ ನಿಂದ ಪುಂಖಂಗಳವೋಲ್ (ಕಾದಂಪೂ. ೯೬೪) ; ಮಿಸುಪ ಕಲಧೌತ ಪುಂಖಪ್ರಸರಂ ಖದ್ಯೋತತತಿವೊಲಾದುದು ನಭದೊಳ್ (ಜಗಚ. ೦೨-೦೨). ೨. ಗಿಡುಗ. ೩. ಮಂಗಳಕಾರ್ಯ. ೪. [ಸಂಗೀತ] ನಾದ ; ಸ್ವರ : ಪುಂಖಶುದ್ಧಮೆನೆ ಭೋಂಕನೆ ಪುಂಖಿಸಿ ಮಧ್ಯಮಾದಿಯಂ ಚಾಳಿಸಿ . . . ಮೃದುಸ್ವರಂ ಪಾಳಿಯನೊಪ್ಪಪಂತೆಸೆಯೆ ಬಾಜಿಸಿದಳ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೩-೦೯). [ಸಂ.]

**ಪುಂಖಾನುಪುಂಖ** (ನಾ). ಒಂದರ ಹಿಂದೆ ಒಂದರಂತೆ ಎಡೆಬಿಡದೆ ಬರುವ ಬಾಣಪರಂಪರೆ,—ಬಾಣಗಳ ಸಾಲು : ನೈಷ್ಠಿಕವೆಂಬ ಮುಷ್ಟಿಯೊಳಂ ಪುಂಖಾನುಪುಂಖವೆಂಬ ಶರಸಂಧಾನದೊಳವಯವದೊಳ್ ತೆಗೆದೊಡೆ (ಸಂಕಥಾ.೨-೩೨ ವ) ; ಏನ ಹೇಳುವೆ ಭಟನ ಶರಸಂಧಾನವನು ಪುಂಖಾನುಪುಂಖವಿಧಾನವನು ಝೇಂಕಾರಶರಜಾಳಪ್ರಸಾರಣವ (ಕುವ್ಯಾಕ. ೬-೪೬).

**ಪುಂಖಾನುಪುಂಖವಾಗಿ** = ಒಂದರ ಹಿಂದೆ ಒಂದರಂತೆ ; ಎಡೆಬಿಡದೆ ; ನಿರಂತರವಾಗಿ : ವಿಚಾರಗಳು ಪುಂಖಾನುಪುಂಖವಾಗಿ ಏಳುತ್ತಿದ್ದವು (ಕಾಮಕಾಂ. ೪೬) ; ಇದರ ಅರ್ಥವಿವರಣೆಗೆ ತೊಡಗಿದರೆ ಪುಂಖಾನುಪುಂಖವಾಗಿ ಜಿಜ್ಞಾಸೆಯೇಳುವುದು ಸಹಜ (ಕಾವ್ಯಕು. ೦೮).

[ಸಂ.]

**ಪುಂಖಾನುಪುಂಖಂ** (ಅ). ಒಂದರ ಹಿಂದೊಂದು ಎಡೆಬಿಡದೆ ಬಾಣಗಳು ಬರುವಂತೆ : ಬಟಿಯಂ ಮೆಯ್ಗೊಂಡು ಪುಂಖಾನುಪುಂಖಮಿಸುತ್ತಿರ್ಪೆಡೆಯೊಳ್ ತೆರಳ್ಚಿದುವಗುರ್ವಿಂ ಪರ್ವಿ ಬಂದಿರ್ದ ಮೇಘಮುಖಾಹೀಂದ್ರರ ಪೊಂಕಮಂ ಜಯಕುಮಾರೋನ್ಮುಕ್ತಬಾಣಾಳಿಗಳ್ (ಅಂಜ್ಞ. ೦೬ ೩೦) ; ಅಂತು ಪುಂಖಾನುಪುಂಖಮಿಸುವುದುಂ (ಶಂಖಪು. ೦೪-೦೬೪ ವ).

[< ಪುಂಖಾನುಪುಂಖ]

**ಪುಂಖಾನುಪುಂಖಿತೆ** (ನಾ). ಎಡೆಬಿಡದಂತಿರುವ ಬಾಣಪ್ರಯೋಗ : ಏಕ್ಕಟಿಗ ಪುಂಖಾನುಪುಂಖಿತೆಯಿಕ್ಕಿ ಹಾಕಿದನೈದಿದಂಬುಗಳಿಕ್ಕಡಿಗೆ ತುಂಡಾಗುತಿರ್ದವು ಪಾರ್ಥನೆಸುಗೆಯಲಿ (ಜಭಾ. ೪೬-೩೩).

[ಸಂ. ಪುಂಖಾನುಪುಂಖಿತಾ]

**ಪುಂಖಿ, ಪುಂಗ** (ನಾ). ಒಂದು ಬಗೆಯ ಮರ : "ಪುಂಡ್ರಃ—ತಿಲಕವೃಕ್ಷ, ಗೋಳಿಯ ಮರ, ಪುಂಖಿ, ಕೊಗ್ಗ" (ಬಿಶಂ. ೦೦೦). ಪುಂಗ : ಪುಂಗ— Pongamia glabra (ಹೊಂಗೆ) (ಶಾಸಗ.೯). 'ಹೊಂಗೆ$_1$' ಪಠಾ.

[← ತಮಿ. ಪುಙ್ಙ]

**ಪುಂಖಿತೆ** (ನಾ). (ಬಾಣವನ್ನು ಬಿಡುವ) ಕೌಶಲ ; ಕೈಚಳಕ : ತೊಡುವ ಚಿತ್ಕಾರವನು ಬಾಣವ ಬಿಡುವ ಪುಂಖಿತೆಗಳನು ಕಣ್ಣಿವೆಯಿಡದೆ ನೋಡಿದರ ಮರಸಭೆಯೊಳಗೆಲ್ಲ ಕಾಣದಲೆ (ಜಭಾ. ೪೬-೩೪).

[ಸಂ. ಪುಂಖಿತ = ಬಾಣದಂತೆ ಗರಿಗಳಿಂದ ಕೂಡಿದುದು]

**ಪುಂಖಿಸು** (ಕ್ರಿ). = ಪುಂಕಿಸು : ಕಳೆಪ ಮಯಣಮಂ ನುಣ್ಪಾಗೆ ತಿರ್ದಿ ಪುಂಖಿಸಿ ಹೊ [ ಹೆ ] ಲ್ಲಣೆಯ ಶುದ್ಧವಾಗಿ ಮುಹಚಾಳಿಯುಮುಮಾಡಿ . . . ಸಮಯೋಚಿತರಾಗಮಂ ಸುವ್ಯಕ್ತಿವೆತ್ತು ನಿಡೆ ತೋರ್ಕೆಗೊಳಿಸುವುದುಂ (ಶಾಂತೀಶ್ವ. ೭-೯೬ ವ) ; ಪುಂಖಶುದ್ಧಮೆನೆ ಭೋಂಕನೆ ಪುಂಖಿಸಿ ಮಧ್ಯಮಾದಿಯಂ ಚಾಳಿಸಿ . . . ಬಾಜಿಸಿದಳ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೩-೦೯). [ಪುಂಖ + — ಇಸು$_3$]

**ಪುಂಗ** 'ಪುಂಖಿ' ನೋ.

**ಪುಂಗವ** (ನಾ). ೧. ಗೂಳಿ ; ಹೋರಿ ; ವೃಷಭ : ವೃಷಾಂಕಪುಂಗವ ವಿಘಟ್ಟಿತೋತ್ತೀರಮಂತದೊಂದೆಡೆ (ಕಾದಂಪೂ. ೬೪೦) ; ಒಮ್ಮೆಯೆ ಪುಟ್ಟಿ ವಂದುದು . . . ಪುಂಗವಂ (ಜಗಚ. ೩-೩೬). ೨. (ಸಮಾಸದ ಕೊನೆಯ ಅಂಗವಾದಾಗ) ಒಡೆಯ ; ನಾಯಕ : "ಸ್ವಕುಲಪ್ರಧಾನ ಗಜವಾಜಿ ಕುಂಜರಂ ವಿಭು ವೃಷಾಖ್ಯ ಪುಂಗವಮಕ್ಕುಂ" (ವಸ್ತುಕೋ. ೮೨೦-೧೮). 'ಮುನಿಪುಂಗವ' ಪಠಾ. ೩. ನಂದಿವೃಕ್ಷ : "ಪುಂಗವಮೆನಲ್ ನಂದಿ" (ಮಂಗರಾ. ೩೬-೦೯). [ಸಂ.]

**ಪುಂಗವಧ್ವಜ** (ನಾ). ೧. ನಂದಿಯ ಚಿಹ್ನೆಯುಳ್ಳ ಬಾವುಟ : ಮುಂಗಡೆಯ ನಪನೆಲೆಯ ಗೋಪುರ ಪುಂಗವಧ್ವಜಗುಡಿಗಳಿಂದಂ ರಂಗೊಳಿಪ ಶಿವಭವನವಂ ನಲವಿಂದ ನೋಡಿದರು (ಕಂಳದಾ. ೨-೩೦). ೨. ನಂದಿಧ್ವಜವುಳ್ಳವನು ; ಶಿವ : ಪುರುಷಪುಂಗವಂ ಪುಂಗವಧ್ವಜಂ ಗಾತ್ರಾರ್ಧಾಂಗೆಯ್ದಿನಿಸಾನುಂ ಪೊಳ್ತನಿಮಿಷಾಕ್ಷಿಯಿಂ ನಿರೀಕ್ಷಿಸಿ (ಕಾಶಕೀ. ೦೬-೩೪ ವ). [ಸಂ.]

**ಪುಂಗಳಿ** (ನಾ). ಒಂದು ಬಗೆಯ ಸಸ್ಯ (?) : "ಬೇಳ ಪುಂಗ [ ಪಾಠಾಂ. ಡ ] ಳಿ ಶಿಳುವನಿಯೆನಿಸ್ಕ" (ಮಂಗರಾ. ೪೦-೩೦). [?]

**ಪುಂಗಿ** (ನಾ). ೧. (ಸಾಮಾನ್ಯವಾಗಿ ಹಾವಾಡಿಗರು ಊದುವ) ಸೋರೆಬುರುಡೆಯಿಂದ ಮಾಡಿದ ಒಂದು ಬಗೆಯ ವಾದ್ಯ : ವಿಷ್ಣುನ ಮಾತನ್ನು ಕೇಳುತ್ತ ಶೀನು ಸ್ತಂಭಿತನಾಗಿ ಕುಳಿತ. ಹಾವಾಡಿಗ ನೋರ್ವ ಪುಂಗಿಯನ್ನೂದಿದಂತಿತ್ತು (ಸಮುಕ. ೪೮೦) ; ಪುಂಗಿ ನಾದಕ ನಾಗ ಹಿಂಗ ಹೆಡೆಯೆತ್ತಿದಂಗ (ಕನ್ನಕಾ. ೩೬೨). ೨. (ಆಲಂ) ಪ್ರಭಾವ ಬೀರಿ, ಮೋಹಗೊಳಿಸುವ ಯುಕ್ತಿ : ಮೊನ್ನೆ ಸಂಜೆಯಿಂದ ನಿಂತಿದೆ ಅವಳ ನಾಲಿಗೆಯ ಅಲೆದಾಟ, ಅವಳ ಮಾತಿನ ಪುಂಗಿ (ಕ್ಷಿತಿಜ. ೩೦). ೩. ಸೊನ್ನೆ ; ಶೂನ್ಯ : ಬೇಕುಬೇಕಾದವರಿಗೆ ದುಂದು, ಮನೀಮಂದಿಗೆ ಮಾತ್ರ ಪುಂಗಿ (ಗಂಪಜಾಯ. ೪೭). [← ಮರಾ. ಪುಂಗೀ. / ಪ್ರಾ. ಪುಗ್ಗ]

**ಪುಂಗಿಸೊಗೆ** (ನಾ). ಒಂದು ಊರಿನ ಹೆಸರು : ಕುದುಗೂನಾಡೊಳ್ ಪೂರ್ವಮಧ್ಯದೇಶೇ ಪುಂಗಿಸೊಗೆನಾಮಗ್ರಾಮಂ(ಮಃ) (ಇಇ. XVIII. ೩೬೭-೦೬ : ೩ನೆಯ ೫೫). [?]

**ಪುಂಚ** (ನಾ). (ಕರಾ) ಹುತ್ತ ; ವಲ್ಮೀಕ : ಅಲ್ಲಲ್ಲಿ ದೊಡ್ಡ ದೊಡ್ಡ ಪುಂಚ (ಹುತ್ತ) ಗಳನ್ನು ನೋಡಿದರೆ ಅರಿಯದವರಿಗೆ ಮೈ ನಡುಗು ಹುಟ್ಟುವುದುಂಟು (ದಂಬಿನಾ. ೧೬) ; ತೆಂಕಲಲ್ಲಿ ಒಂದು ಪುಂಚವಿತ್ತಂತೆ (ಒಡ್ಡಿಲ. ೧೩೫). 'ಪುತ್ತು$_1$' ಪರಾ. [ ← ತುಳು. ಪುಂಚ ]

**ಪುಂಚೈ**, ಪುಂಜ$_1$, ಪುಂಜೆ$_1$, ಪುಣಜ, ಪುಣಜೆ, ಪುಣುಜೆ (ನಾ). ಒಣ ಭೂಮಿ ; ಖುಷ್ಕಿ ಜಮೀನು : ಚತುಸ್ಸೀಮೆಗೆ ಸಲುವ ನಂಚೈ ಪುಂಚೈ ವಾನ್‌ಪಯಿರು ಪುಂಪೈರು . . . ಮುಂತಾದ ಸಕಲಸುವರ್ಣಾದಾಯ ಸಕಲಭತ್ತಾದಾಯ . . . ಸೇರಿಸಿ (ಎಕ. XVII, ೦೦೫–೬೦; 1428). P 'ಪುಂಚೈ' ಎಂಬ ಪದಪ್ರಯೋಗವು ತಮಿಳುನಾಡಿನ ಸಾಮೀಪ್ಯದ ಪ್ರಭಾವದಿಂದ ಆಗಿರಬಹುದು. **ಪುಂಜ$_1$** : ಎಲ್ಲ ನಂಜವಾ ? ಪುಂಜವಾ ? ಬೈಲುಗದ್ದೆ, ಬೆಟ್ಟುಗದ್ದೆ, ಕಾಡು, ಬೀಡು ಎಲ್ಲ ಕೂಡಿ ಅಷ್ಟಾಗುತ್ತದೆಯೊ ? (ಬಾಳಿಗೆ. ೦೫). **ಪುಂಜೆ$_1$**: ನಂಚೈ (ಜೈ) ಪುಂಜೆ (ಜೈ) ಕಮುಕು ತೆಂಗ್ನ ವೈಪ್ಪು . . . ನಿಧಿನಿಕ್ಷೇಪ ಜಲಪಾಷಾಣ ಅಕ್ಷೀಣಿ ಆಗಾಮಿ ಸಿದ್ಧಸಾಧ್ಯಂಗಳುಂ (ಎಕ. XVIII, ೦೯೨–೯೮ ; 1434); ಯಿಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ **ಪುಂಜೆ** ವಾನ್‌ಪಯಿರು ಪುನ್‌ಪಯಿರು ವಾಸಿಲುವರಿ . . . ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವು (ಸೌಇಇ. IX–ii, ೯೬೩–೭ ; 1470) ; ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು . . . ಮೊದಲಾದ ಹಲ ಉಪಾಧಿಗಳು ಸಹ . . . ಅನುಭವಿಸಿಕೊಂಡು (ಸೌಇಇ. IX–ii, ೯೬೬–೫; 1472). **ಪುಣಜ** : ಪೆರಿಯ ಪುಂಗಿಯ ಪೇರೊಬ್ಬೆಯ ಮುರಿದು ಕಿಡಿವ ಗುಣ್ಡಿಯ ಬಬ್ಬಗಿಲ ದ್ವಿಸನ್ದಿಯ ಪುಣಜ ಪರಳನ್ದಿಯ ನಾಡ . . . ಕೂಡಿತ್ತು (ಎಕ. III (R), ನಂಜನ. ೨೬೨–೨೯; 969). **ಪುಣಜೆ** : (ಕ). **ಪುಣುಜೆ** : (ಕ). 'ನಂಜೆ' ಪರಾ.

[ ದೇ. ‖ ತಮಿ. ಪುಞ್ಚೈ, ಪುನ್‌ಚೆಯ್; ಮಲ. ಪುಞ್ಜ ; ತುಳು. ಪುಂಜೊ ]

**ಪುಂಜ$_1$** 'ಪುಂಚೈ' ನೋ.

**ಪುಂಜ$_2$**, ಹುಂಜ$_1$ (ನಾ). ೧. ಗಂಡುಕೋಳಿ : ಸುಪಕ್ಷದಿಂದೆ ರಂಜಿಪುದು ಪುಂಜನಗ್ಗದ ಸುವಸ್ತುವಿನಂತಿರೆ ತಟ್ಟಿ ಹೇಂಟೆಯೊಳ್ (ಹುಕೋಕ. ೩–೭೮). ೨. (ಆಲಂ) ಸಮರ್ಥ ; ಗಟ್ಟಿಗ : ಆಗ, ಇವ ಪುಂಜ. ಇವನ ಮೇಲೆ ಬಿದ್ದರೆ ಸಣ್ಣಕಲ್ಲು ದೊಡ್ಡ ಕಲ್ಲ ಮೇಗೆ ಬಿದ್ದಾಗೆ (ಶಾಟೀಮು. ೬೦) ; ಅವ ಪುಂಜ, ಅವನ್ಗೇನು, ನನ್ನ ಬಯ್ದ. ಹೊಡೆದ (ಶಾಟೀಮು. ೬೫). **ಹುಂಜ$_1$** : ೧. ಅಂತು ಗಂಡು ತೊಂಡೇಟಿದ ಹುಂಜನಂ ಕೊಂಡು ಪೋಗಿ ಶ್ರೇಣಿಕನ ಮುಂದೆ ಅಭಯಕುಮಾರೋಪದೇಶದಿಂ ಬಿಟ್ಟು (ಕುಶ್ಯಾಸ್ತ್ರ. ೩–೩೦ ವ) ; ಸಂಜೋಗದಶ್ವಗಳತ್ತಿತ್ತ ಕೋಳಿಯ ಹುಂಜ ನಂದದಿ ಪಾಟ್ ಹರಿಯೆ (ಭರಕ. ೨೨–೨೦) ; ನಾನೊಂದು . . . . ಕುದುರೆಯನ್ನು ಕಂಡೆ. ಅದು . . . ಹುಂಜದಂತೆ ತಲೆಯೆತ್ತಿಕೊಂಡು ಹೇಗೆ ನಡೆಯುತ್ತಿತ್ತು, ಅಂತೀರಿ ! (ಅಕ್ರಮ. ೯೦).

[ದೇ. ‖ ತುಳು. ಪೂಂಜೆ ; ತೆಲು. ಪುಂಜು ; ಕೋತ. ಬೂಜ್ಞ್]

**ಪುಂಜ$_3$** (ನಾ). ೧. ಗುಂಪು ; ರಾಶಿ ; ಸಮೂಹ : "ನಿಕರಃ . . . ಪುಂಜಃ . . . ಸ್ತೋಮಃ—ಈ ೩೯ ಸಮೂಹಂ" (ಹಲಾಯು. ೧೧೯–೦) ; ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಶಂಶಭಾ. ೦–೫೮ ರಗಳೆ) ; ಈ ಪುಣ್ಯದ ಪುಂಜವನೆನಗೆ ಕೊಟ್ಟೊಡೆ ನಿಮ್ಮ ಬಡತನಂ ತೀರ್ವುದೆನ್ನ ಮನೋರಥಮಪ್ಪುದು (ನಂಬಿರ. ೨–೬೯) ; ಭೂವನಿತೆಯ ಪುಣ್ಯದ ಪುಂಜ ಮಾನುಷಭಾವವ ಪಡೆದುದೆಂಬಂತೆ . . . ಎಸೆದನು ಚಿಕ್ಕದೇವರಾಜನು ತೇಜದೊಳು (ಹರಿಬ. ೦–೦೦). ೨. ಮಗ್ಗದ ಹಾಸಿನಲ್ಲಿರುವ ರೇಷ್ಮೆಯ ಅಥವಾ ನೂಲಿನ ಲಡಿ, – ಎಪ್ಪತ್ತರಿಂದ ಎಂಬತ್ತು ಎಳೆಗಳ ಸಮೂಹ : 'ಪುಂಜಣಿಗ' ಪರಾ. [ಸಂ.]

**ಪುಂಜಗೊಳ್** (ಕ್ರಿ). ಒಟ್ಟಾಗು ; ಒಂದಾಗಿ ಸೇರು ; ಒಗ್ಗೂಡು : ಕಣ್ಗೆ ಮುತ್ತಿಟ್ಟುದಿಕ್ಕೆಲದಲ್ಲಿ ತಾಯಕ್ಕರೆಯ ಸಕ್ಕರೆಯ ಪುಂಜಗೊಂಡಂತೆ ಪೋಲ್ ಚಿತ್ರಮಯಧವಳಿಮಪುಳಿನರಾಶಿ (ಶ್ರೀರಾಮಪ. ೦೫೦–೨೦೯).

[ಪುಂಜ$_3$ + ಕೊಳ್$_1$]

**ಪುಂಜಣಿಗ** (ನಾ). ರೇಷ್ಮೆಯನ್ನು ಮಾರುವವನು ; ರೇಷ್ಮೆ ವ್ಯಾಪಾರಿ: ಪಿಂಜಾರ ಕರ್ಪಾಸ ಮಾರುವ ಪುಂಜಣಿಗ ರೇಶಿಮೆಯ ಮಾರುವ ರಂಜಿಸಿ ಜರತಾರ ಮಾಡುವ ಥಾಲು ಆಯುಧವ (ಸಂಬಿಲೀ. ೯–೦೩).

[ಪುಂಜ$_3$ + < ಪಣಿಗ$_1$]

**ಪುಂಜೆ** (ನಾ). ಉಂಡೆ ; ಮುದ್ದೆ ; ಪಿಂಡ : ಪದುಂಗಾಸಿದ ಪೊನ್ನ ಪುಂಜೆಯ ಪೋಲಿರ್ದುದು ಕಣ್ಗೆ ಹಿಮಾಂಶುಮಂಡಲಂ (ಶಂಶಭಾ. ೩–೯೦). [ಸಂ.]

**ಪುಂಜಿಕೆ** (ನಾ). ೧. ಒಟ್ಟಿಲು ; ರಾಶಿ : ದೆಸೆಗಳ್ ನಿಜಾಂಶುವಿಂ ರಂಜಿಸುತಿರೆ ಪುಂಜಿಸಿದ ಪೊನ್ನ ಪುಂಜಿಕೆಯಿಂದಂ ಕೊಸಗಿನ ಮರದುಜಗಲರಲ್ದೆಸೆವಂತೆಸೆದಿರ್ಪುದಲ್ಲಿ ಬಜ್ಜರವಸರಂ (ಜಗಚ. ೯–೧೦೬). ೨. ಗೊಂಚಲು ; ಕುಚ್ಚು : ತ್ರಿದಶಾಂಗನೆ ಜನಜನನಿಗೆ ಪದೆಪಿಂ ತಾರಾವತಂಸಮಂ ಭೂಷಿಸೆ ತಪ್ಪದ ನೇಂದುಮಂಡಲದ ಜೊನ್ನದ ಪುಂಜಿಕೆಯಂತಿರೆಸೆದುವೆರಡುಂ ಕೆಲದೊಳ್ (ಶಾಂತೀಶ್ವ. ೦೩–೨೦೮). [ಸಂ. ಪುಂಜಿಕಾ]

**ಪುಂಜಿಗೆ**, ಹುಂಜಿಕೆ (ನಾ). = ಪುಂಜಿಕೆ ೧ : ದಳ್ಳುರಿಯುಗ್ಗಡಂ ಪೊಗೆಯ ಕತ್ತಲೆ ಬೂದಿಯ ತೋರ್ಕೆವೆಟ್ಟು . . . ತಲೆಯ ಪುಂಜಿಗೆ ಕುಂದವು ತತ್ಪ್ರದೇಶದೊಳ್ (ಕಾವ್ಯಸಾ. ೫೩೦ ಶೂದ್ರ೯) ; ಆಗ್ನೇಯಕ್ಕೆ ಕಲ್ಲ ಪುಂಜಿಗೆ ತೆಂಕಲು ಲಿಂಗದ ಕಲ್ಲು . . . ಪಡುವ ಜಾಲಗಟ್ಟದ ಕೆಱೆಯುಂ ಶೀ(ಸೀ)ಮೆ (ಎಕ. XIII, ೦೭೨–೯೨ : 1055). **ಹುಂಜಿಕೆ** : ಅಲ್ಲಿಂ ಮುಂತೆ ಹೆರಹಿನ ಕೋಡಿಯ ಕಲ್ಲ ಹುಂಜಿಕೆಯ ಮೇಲ್ ನಟ್ಟ ಕಲ್ (ಎಕ. XIII, ೩೦–೯೯ : 1204). [ < ಸಂ. ಪುಂಜಿಕಾ ]

**ಪುಂಜಿಸು** (ಕ್ರಿ). ೧. ಒಗ್ಗೂಡಿಸು; ಒಟ್ಟು; ರಾಶಿ ಹಾಕು : "ಪುಂಜಿಸು—ರಾಶಿ" (ಶಮದ); ನಿತ್ಯದಾನಕ್ಕೆಂದು ನಿಯೋಗಿಗಳ್ ತಂದು ಪುಂಜಿಸಿದ ಪಂಚರತ್ನದ ಪೊನ್ನ ರಾಶಿಗಳನರ್ಥಿಜನಕ್ಕೆ ಗೋಸನೆಯಿಟ್ಟು ಸೂಡವೇಟ್ಟು (ಶಂಶಭಾ. ೦೨–೫೨ ವ); ತರವೇಟ್ ಮಾಣಿಕ್ಯಭಂಡಾರದ ಪುಡಿಕೆಗಳಂ ಪುಂಜಿಸವೇಟ್ ಸುವರ್ಣೋತ್ಕರಮಂ (ಕಾವ್ಯಾವ. ೨೯೯) ; ಬೆಳೆಯ ಮುಗಿಲ್ಗಳ್ ಪಟ್ಟಿಯ ತೊಳೆಯಂ ಪುಂಜಿಸಿದ ಮಾಟಕ್ಕೆಯಿಂದಂಬರದೊಳ್ ತೊಳತೊಳಗುವ ಮಿಂಚಿಂದಂದಿಳೆಯೊಳ್ ಜಲಪ್ರಳಯಮಪ್ಪಿನಂ ಮಟಿ ಕೊಳ್ಗುಂ (ಅಬ್ಬಮ. ೯–೦೫). ೨. ಒಟ್ಟುಗೂಡಿಸು : ಸಂಗ್ರಹಿಸು : ಅತ್ಯುತ್ಸವದಿಂದಂ ಮರ್ತ್ಯಭೋಗಂಗಳನನುಭವಿಸಲ್ ನೋಂತರಿಂತೀಗಳಿಂತುಂತವರಂತೇಂ ಪುಣ್ಯಮಂ ಪುಂಜಿಸಿದರೊ ಪಿರಿದುಂ ಶ್ರೀಮತೀ ವಜ್ರಜಂಘರ್ (ಆದಿಪು. ೯–೬೦). ೩. ಒತ್ತಿ ತುಂಬು ; ತುರುಕು ; ಗಿಡಿ : ಮಸಿಯಂ ಪುಂಜಿಸಿದಂತುಟಪ್ಪ ತನು ನೀಲಾಂಭೋಧರಂ ದಾಡೆಗಳ್ ಪೊಸಮಿಂಚುಗ್ರವಿಲೋಚನಂ ದಿವಿಜಗೋಪಂ ಕಾರೊಮೇಣ್ ಕಾಳರಕ್ಕಸನೋ ಪೇಟಿನೆ ಬಂದು ತಾಗೆ ಗದೆಯಂ ಕೊಂಡೆಚ್ಚು ಭೀಮಂ . . . ಪೊಯ್ದು ನೆಳೆಯೊಳ್ ಕಿಮ್ಮೀರನಂ (ಕುಶಭಾ. ೭–೨೬); ಕಂಜಭವಂ ಕರಂ ಕಮಲವೈರಿಗೆ ಕಾಯ್ದು ತದೀಯತೇಜಮಂ ಭಂಜಿಸಲೆಂದು ಕತ್ತಲೆಯನಂಜನದಿಂ ಮಿದಿದೆಯ್ದೆ ಲೋಕದೊಳ್ ಪುಂಜಿಸಿದಂತಿರರ್ಪಿಸುವ ದುಸ್ತಮದೊಳ್ ಪೊಲಗೆಟ್ಟು ನಿಂದ ದಿಕ್ಕುಂಜರದುಗ್ರದಂತೆ ಬಳನುಂ ವಸುದೇವನುಮಿರ್ದರ್ (ನೇಮಿಪು. ೬–೭೦); ಕಂಜಗರ್ಭನು ತಮೋಗುಣವನೀ ಲೋಕದೊಳು ಪುಂಜಿಸಿದನೋ ತಥ್ಯಮೆನಲಂಧಕಾರದಿ ಬ್ರಹ್ಮಾಂಡಲೋಕವೆಸೆಯೆ (ಸೌಂದಪು. ೦೬–೦೬). [ ಪುಂಜ$_3$ + –ಇಸು$_3$ ]

**ಪುಂಜೀಕರಣ** (ನಾ). ಒಟ್ಟುವಿಕೆ; ಒಗ್ಗೂಡಿಸುವಿಕೆ ; ರಾಶಿ ಮಾಡುವಿಕೆ: 'ಪುಂಜೀಕರಿಸು' ಪರಾ. [ಸಂ.]

**ಪುಂಜೀಕರಿಸು** (ಕ್ರಿ). ಒಗ್ಗೂಡಿಸು; ಶೇಖರಿಸು: ಅಲ್ಲೊಂದು ಇಲ್ಲೊಂದು ಕಡೆ ನೋಡಿ ಮೆಚ್ಚಿ, ಶ್ಲಾಘಿಸಿದ ಅಂಶಗಳನ್ನೆಲ್ಲಾ ಪುಂಜೀಕರಿಸಿ ನಿರ್ಮಿಸಿದ ಸುಖನಿಕೇತನ ಅದು (ಹೂಬಿಸು. ೧೯).
[ ಪುಂಜೀಕರಣ + —ಇಸು₂ ]

**ಪುಂಜೆ₁** 'ಪುಂಚೆ₁' ನೋ.

**ಪುಂಜೆ₂** (ನಾ). ಒಂದು ಬಗೆಯ ಮರ: ಪುಂಜೆ (ಪೂಯಿ)—ಇಪ್ಪತ್ತು ಘೂಟಿಗಿಂತ ಎತ್ತರವಾಗುವದಿಲ್ಲ . . . ಕಟ್ಟಿಗೆಸಾಮಾನುಗಳನ್ನು ನಿಣುಪು ಮಾಡುವುದಕ್ಕೋಸ್ಕರ ಇದರ ಎಲೆಗಳಿಂದ ತಿಕ್ಕುವರು (ಕಟಾಗೆ. ೪೩). [ ? ]

**ಪುಂಡ** (ನಾ). ೧. ತುಂಟ; ದುಷ್ಟ: ವೇದವೆಂಬುದು ಓದಿನ ಮಾತು ಶಾಸ್ತ್ರವೆಂಬುದು ಸಂತೆಯ ಸುದ್ದಿ ಪುರಾಣವೆಂಬುದು ಪುಂಡರ ಗೋಷ್ಠಿ (ಶವಸಂ. ೦೦೩-೪೬೫); ಇವನ ಹಿಡಕೊಂಡು ಹೋಗೆಲೊ ಜೋಗಿ ಇವ ನಮ್ಮ ಮಾತ ಕೇಳದೆ ಪುಂಡನಾದ (ಪುರಂದ. ೩-೦೯ ಅಮುಕಲ್ಲು); ಅವನ ಗೆಳೆಯರೆಲ್ಲಾ ಮನೆಮಾರಿನ ಯೋಚನೆ ಬಿಟ್ಟ ಹಳ್ಳಿಯ ಪುಂಡರು (ತ್ಯಾಗಮು. ೨೯). ೨. ನೀತಿಗೆಟ್ಟವನು; ನಿಯಮಬಾಹಿರ: (ಕ). (ಗು). ೩. ತುಂಟತನದ; ಪೋಕರಿಸ್ವಭಾವದ: ಭೀಮಪ್ಪ ತೋಟದ ಕಬಜಾ ತಗೊಳ್ಳುವ ಬಗ್ಗೆ ಪುಂಡ ಜನರನ್ನು ಕೂಡಿಸ ತೊಡಗಿದನು (ಮುಕಕ. ೮); ದಾರಿಯಲ್ಲಿ ಪುಂಡಜನರ ಹಾವಳಿ (ಹೇಮುಂಕ. ೨೪೫).
[ ದೇ.₂ ತುಳು. ಪುಂಡೆ; ಕೊಡ. ಪುಂಡ. / ಮರಾ. ಪುಂಡ ]

**ಪುಂಡಗಂಡಾಯ** 'ಪುಂಡಂಗಂಡಾಯ' ನೋ.

**ಪುಂಡಗಾತಿ** (ನಾ). ಹಾದರಗಿತ್ತಿ; ಜಾರೆ: (ಕ). [ಪುಂಡ + —ಗಾತಿ₁]

**ಪುಂಡಗಾರ** 'ಪುಂಡುಗಾರ' ನೋ.

**ಪುಂಡಗಾರ್ತಿ** (ನಾ). = ಪುಂಡಗಾತಿ: (ಕ).
[ಪುಂಡಗಾರ (<ಪುಂಡುಗಾರ) + —ತಿ₁ (< —ಇತ್ತಿ)]

**ಪುಂಡತನ** 'ಪುಂಡುತನ' ನೋ.

**ಪುಂಡರೀಕ** (ನಾ). ೧. ಬಿಳಿಯ ತಾವರೆ; ಬಿಳಿಯ ಬಣ್ಣದ ಕಮಲ: "ಪುಂಡರೀಕಮೆನಿಕುಂ ಸಿತಾಂಬುಜಂ" (ಪತ್ತು ಕೋ. ೨೫-೨೦). ೨. ಬಿಳಿಯ ಕೊಡೆ; ಬೆಳ್ಗೊಡೆ: ಕನತ್ಕನಕದಂಡಮಂಡಿತಪುಂಡರೀಕನಿಕರವಾವರಿಸಿ ತಳರ್ದತ್ತಲುಂ (ಶಬರಿತ. ೮-೦೦೫ ವ). ೩. ಹುಲಿ; ವ್ಯಾಘ್ರ: "ವ್ಯಾಘ್ರಃ, ದ್ವೀಪೀ, ಪುಂಡರೀಕಃ . . . ಮೃಗಾರಿಃ—ಈ ೭ ಹುಲಿ" (ಕರಾಮು. ೩೯-೭೩); ಲಲಾಟದ ಪುಂಡರೀಕಂಗಳಿಗಂ ತಕ್ಕದಿರುತಿರ್ಪ ದೀವಸ ಮಿಕ್ಕ ಮೃಗಂಗಳಲಿ ಭಯಮದಿನಿತಿಲ್ಲವನೊಳ್ (ಪವ್ಯಕಾ. ೩-೬೩). ೨, ೩: ರಿಪುನಗರಂ ಕರಂ ವಿಜನವಾಗಿಯುಮಿವಜ್ಜನರಾಜರಾಜಿತಂ . . . ಚಪಳಭುಜಂಗಭೀಮನಕುಳಾಶ್ರಯಮುದ್ಧತಪುಂಡರೀಕಮಿನ್ನುಪಮೆಗೆ ಚಿತ್ರವಾಯ್ತೆನಿಪುದೀ ವಿಭು ಕಾವಣದಂಡನಾಥನ (ಎಕ. XI, ದಾವಣ. ೪೯-೩೮; ಸು. 1180). ೪. ಹಣೆಯ ಮೇಲೆ ಇಟ್ಟುಕೊಳ್ಳುವ ಮಣ್ಣಿಯ ಗುರುತು; ಪುಂಡ್ರ. ೫. ಕಪ್ಪೆ. ೬. ಕಲ್ಪವೃಕ್ಷ. ೧, ೨, ೩, ೬: ಹರಿಸಂದೋಹವಿರಾಜಿತಂ ವಿವಿಧಪದ್ಮಾಲಂಕೃತಂ ಹಂಸಸಂಚರಣ ಪ್ರಉಡ ಉದಾತ್ತವಿಕ್ರಮಗುಣೋದ್ಧತ್ಪುಂಡರೀಕಾಂಕ(೦) ಸೌಂದರವಾಗಿರ್ಪ್ಪುದ ಱಂದೆ ಪದ್ಮವನವಂದು ಭಾವಿಸಲ್ ವಿಷ್ಣುಭೂಮರರಿರ್ಪ್ಪಾ ಪುರಮುಂ ಸುರೇಂದ್ರಪುರಮುಂ ವಿದ್ವಿಟ್ಪುರಾನೀಕಮುಂ(ಎಕ. V, ಅರಸೀ.೩೯-೩; 1186). ೭. ಆಗ್ನೇಯ ದಿಕ್ಕಿನ ದಿಗ್ಗಜ: "ಐರಾವತಃ, ಪುಂಡರೀಕಃ 'ಕುಮುದಃ, ಸಾರ್ವಭೌಮಃ . . . ಸುಪ್ರತೀಕಃ—ಈ ೮ ಮೂಡಣಿಂ ಕ್ರಮದಿನಿರ್ದ ದೆಸೆಯಾನೆಗಳ್" (ಕರಾಮು. ೦೯-೦೦೯); ಬೆದಱದುದಭ್ರಮುಮೂರಮಣ ನೊಟ್ಟಜೆಗೆಟ್ಟುದು ಪುಂಡರೀಕಮುಬ್ಬುದು ಕುಮುದಂ . . . ಅದಿರ್ದುದು ಸುಪ್ರತೀಕಮಿರದಾಲಿಸಿ ತತ್ಪಟಹಪ್ರಣಾದಮುಂ (ತಿಕ್ಕಛಿ. ೩-೬); ಇಂದ್ರಾದಿ ದಿಕ್ಕೆಂಟಱಲ್ಲಿ ಕ್ರಮದಿಂದ್ಯೆರಾವತ ಪುಂಡರೀಕ . . . ಸುಪ್ರತೀಕ ಮೆಂದೆಂಟು ದಿಗ್ಗಜಗಳಾದೊಡೆ . . . ಭೂಮಿಯಂ ವಹಿಸಿರ್ಪವು (ಶಿವೀಕ. ೦೯೯). ೩, ೭: ಆ ವನಂ . . . ದಾನಧಾರೆಯಿಂತೆ ಪುಂಡರೀಕಗಂಡಕ ಮಂಡಿತಮುಂ . . . ಎನಿಸಿರ್ದುದು (ರಾಶಚ. ೩-೬೪ ವ). ೮. ಬಾವುಟ; ಧ್ವಜ. ೯. ಬ್ರಹ್ಮ. ೧೦. ಕಂದುರೆಯ ಕೆನೆತ; ಹೇಷಾರವ. ೧೧. ಒಂದು ಬಗೆಯ ಸಸ್ಯ. ೧೨. ಹುತ್ತ; ವಲ್ಮೀಕ: "ದಿಗ್ಗಜದೊಳು ಮುನೀಂದ್ರನೊಳು ಪುಲಿಯೊಳು ಸಿತಾಬ್ಜದೊಳು ಛತ್ರದೊಳು ಭೇಕದೊಳು ಸಲೆ ಪುಂಡರೀಕಮಕ್ಕು" (ಶಬ್ದಗಚಾ. ೦೯೩-೪೦); "ಹುತ್ತ ಹುಲಿ ಕಪ್ಪೆ ಕಮಲಂ ಸತ್ತಿಗೆ ಮುನಿ ವಿಷ್ಣು ಬ್ರಹ್ಮ ಸುರಕುಜ ಸುರಪಂ ಉತ್ತಮ ಕರಿ ಧ್ವಜ ಕಬ್ಬು ತತ್ತೇಜಿಧ್ವನಿ ಪುಂಡರೀಕ- ತ್ರಿಪಂಚಂ" (ನಾನಾರ್ಥ. ೬). [ಸಂ.]

**ಪುಂಡರೀಕೋದ್ಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ ಖಂಡಪರಶುವು ರುದ್ರ ಭೂಮಿಯೊಳಿಂಡಲೆದು ತಿರುಗುವವನು (ಹಂಸಾ. ೬೨). [ಸಂ.]

**ಪುಂಡರ್ಯ** (ನಾ). ಒಂದು ಬಗೆಯ ಸಸ್ಯ ಮತ್ತು ಕಣ್ಣಿನ ರೋಗಗಳಿಗೆ ಔಷಧಿಯಾಗಿ ಬಳಸುವ ಅದರ ಗಡ್ಡೆ: "ಪೌಂಡರೀಕಂ, ಪುಂಡರ್ಯಂ— ೨ ಪುಂಡರೀಕವೆಂಬುವ ಗಂಧದ್ರವ್ಯದ ಹೆಸರುಗಳು" (ಸಿದ್ಧಾಂತ. ೦೯೦). [ಸಂ.]

**ಪುಂಡಾಟ** (ನಾ). ಪುಂಡುತನ; ತುಂಟತನ: ಇವನು ಅರಮನೆಯೊಳರಘಳಿಗೆಯಿರದೆ ಸ್ತ್ರೀಚೇಟಿಯೊಳು ಮೆರೆವುತಿಹ ಪುಂಡಾಟಗಳನು (ಕಂಠೀ್ರವ. ೩೦); ಇನ್ನು ಪುಂಡಾಟ ಮಾಡಕೂಡದು (ಕಮಲ. ೦೬೯).
[ ಪುಂಡು₁ + ಆಟ ]

**ಪುಂಡಾಟಿಕೆ** (ನಾ). ೧. = ಪುಂಡಾಟ: ಅವಳ ಚಿಕ್ಕಂದಿನ ಪುಂಡಾಟಿಕೆ ನೆನೆದರೆ ಬಾಳಿನಲ್ಲಿ ತುಂಬ ಆಸ್ಥೆ ಇರಬೇಕಾದವಳು (ಮೂರುದಾ. ೦೨೦); ಇವನ ಪುಂಡಾಟಿಕೆಗೆ ಹೆದರಿಕೊಂಡರೆ ಈ ಊರಲ್ಲಿ ಬದುಕುವುದೇ ಕಷ್ಟ (ದೇಪಹ. ೦೨೨). ೨. ಬಂಡಾಯ; ದಂಗೆ: ಪಿತೂರಿ ಪುಂಡಾಟಿಕೆಗಳು ತಲೆಯೆತ್ತುವ ಲಕ್ಷಣಗಳು ಕಾಣಬರುತ್ತಿದೆ (ಕೂಲೀಆ. ೦೯೩).
[ಪುಂಡಾಟ + —ಇಕೆ]

**ಪುಂಡಿ₁, ಹಿಂಡಿ₁, ಪೂಂಡಿ, ಹಿಂಡಿ₂** (ನಾ). ೧. ಸಾಮಾನ್ಯವಾಗಿ ಹೊಲಗಳಲ್ಲಿ ಬೆಳೆದುಕೊಳ್ಳುವ ಸೆಣಬಿನಂತಹ ಒಂದು ಸಸ್ಯ: ಇದರ ಸೊಪ್ಪನ್ನು ತರಕಾರಿಯಾಗಿಯೂ ಇದರ ಕಾಂಡವನ್ನು ನಾರಿಗಾಗಿಯೂ ಬಳಸಲಾಗುತ್ತದೆ: ಲೋಲತರ ಕಿರುಕಸಾಲೆಯ ಪುಂಡಿ ತುಂಬಿ ಬಸಳೆಯ ಭಂಗಿಸೊಪ್ಪುಗಳನು . . . ಬಿಟ್ಟನಾ ಗುರುವರಂ (ಮಹಾಶಿ. ೦೦-೩೩); ಪುಂಡಿ ಬೆಳೆದ ಭೂಮಿಯಲ್ಲಿ ಗೋದಿಯು ಎಂದಿಗೂ ಬೆಳೆಯಲಿಕ್ಕಿಲ್ಲ (ಮುಂಬಯಿ. ೬-೨೬೦); ಕಿವಿಯ ಹತ್ತಿರ ಏನೋ ನಾಲ್ಕಾರು ಕೂದಲು ಪುಂಡಿಯ ನಾರಿನಂತೆ ಸುರುಳಿ ಸುತ್ತಿವೆ (ಕಂಠಹಿ. ೦೦೦). ೨. ಒಂದು ಬಗೆಯ ಸಸ್ಯ: (ಕ). ೩. ಒಂದು ಬಗೆಯ ಮರ: "ಪೀಲುಃ—ಪುಂಡೀಗಿಡ" (ಸಿದ್ಧಾಂತ. ೪೦೬). **ಹಿಂಡಿ₁: ೨.** (ವೈಶಿಸ. ೪೦-೬೦೪). 'ಹಿಂಡಿಸೊಪ್ಪು' ಪರಾ. **ಪೂಂಡಿ: ೨.** ಅಮಟೆ, **ಪುಂಡಿ** (ವೈಶಿಸ. ೭೦-೦೪೬೬); ಸೊಪ್ಪುಗಳು: ಅಗಸೆ. . . ಕೊತ್ತಂಬರಿ, **ಪುಂಡಿ** (ಪುಂಡ ರೀಕ), ಕೆಂಪು, ಸುಗ್ಗಿ, ತುಂಬೆ (ಪಮ್ಮುಮ. ೨೩೬). **ಹಿಂಡಿ₂:** ೧. 'ದೊಡ್ಡಹಿಂಡಿಗಿಡ', 'ಹಿಂಡಿಸೊಪ್ಪು' ಪರಾ.

**ಹಿಂಡಿಯ ಸೊಪ್ಪು** = ಪುಂಡಿಸೊಪ್ಪಿನಿಂದ ತಯಾರಿಸುವ ಒಂದು ಬಗೆಯ ವ್ಯಂಜನಪದಾರ್ಥ: ಹಾಲು ಮೊಸರು ತುಪ್ಪ ಉದ್ದಿನ ಕಡುಬು ಹಿಂಡಿಯ ಸೊಪ್ಪು . . . ಇವಂ ಮಂತ್ರಸಹಿತಂ ಶಿಶುವಿಂಗೆ ಮೂಱುಸೂಳು ನಿವಾಳಿಸಿ (ಬಾಲಗ್ರ. ೦೩೫-೯); ಅಪ್ಪ ಕೊಳ್ಳಲೊ

ಅಗ್ರಜ ಕೊಳ್ಳೊ ಹಿಂದಿಯ ಸೊಪ್ಪು ಕೋ ಸುಲಿವಣ್ಣಗಿವೆ ಕೋ (ಹೋಚಿ. ೧೮–೬೮).

**ಪುಂಡಿನಾರು** (ನಾ). ಪುಂಡಿಗಿಡದ ಕಾಂಡದಿಂದ ತೆಗೆದ ನಾರು : ನಾಡಿಯೊಂದರೆ ಪುಂಡಿನಾರಿನಂತಿಪ್ಪುದು (ಅಭ್ಯೋಕ್ತ. ೩-೨೬-೦೬); ಕೂಡಲೆ ಪುಂಡಿನಾರಿನಂಥ ತಲೆ ರಂತಸೇವಳ ಹಿಂದೆ ಇಣುಕಿತು (ಕೃಕಟು. ೩೩೬). [ ಪುಂಡಿ + ನಾರು₁ (<ನಾರ್) ]

**ಪುಂಡು₁** (ನಾ). ೧. ಪುಂಡತನ ; ತುಂಟಾಟ : ಬೆಕ್ಕಿನಂವದಿ ಪೋಗಿ ಮನೆಮನೆ ಪೊಕ್ಕು ಲೂಟಿಯ ಗೈವ ಸಮುಯದಿ ತಕ್ಕ ಮಾಡದೆ ನೀವು ಪುಂಡಿಗೆಯಿಕ್ಕಿದಿರಿ ಪಥವ (ಕಂಪ್ರಾ.ವ. ೬) ; ಈ ಊರಲ್ಲಿ ಈ ದೊಡ್ಡ ಮನುಷ್ಯರ ಪುಂಡು ಅಡಗಬೇಕು (ಪುಕಿ. ೦೬೩). ೨. ಬಂಡಾಯ; ದಂಗೆ : ಅದೇ ಸಮಯದಲ್ಲಿ ಕೊಡಗರು ಯಾವತ್ತೂ ಪುಂಡುಎದ್ದು . . . ಸೀಮೆಯನ್ನು ಕಟ್ಟಿಕೊಂಡು ಇರುತಿರುವಲ್ಲಿ (ರಾಜೇಂದ್ರ. ೨೬); ಕೂಡಲೇ ರಾಯನು ಸೈನ್ಯವನ್ನು ಕಳುಹಿಸಿ ಅವನ ಪುಂಡನ್ನಡಗಿಸಿದನು (ಶ್ರೀರಂ. ೦೬). (ಗು). ೩. ಪುಂಡಾಟಿಕೆಯುಳ್ಳ ; ಗೂಂಡಾಗಿರಿಯ ಸ್ವಭಾವದ : ಇಂಥ ಪುಂಡು ಉಪಾಧ್ಯಾಯರನ್ನು ಹತೋಟಿಗೆ ತಂದುಕೊಳ್ಳುವುದು ಹೇಗೆ ? (ಕಂಗಳ. ೩೬). [ಪುಂಡ + –ಉ₁]

**ಪುಂಡು₂** 'ಪುಣ್' ನೋ.

**ಪುಂಡುಗಂದಾಯ**, ಪುಂಡಗಂದಾಯ (ನಾ). ತುಂಟಾಟದಿಂದ ಶಾಂತಿಗೆ ಭಂಗ ತಂದವರ ಊರಿನ ಮೇಲೆ ಸರಕಾರದವರು ಹೇರುವ ಒತ್ತಾಯದ ತೆರಿಗೆ : ಪುಂಡುಗಂದಾಯ ಹೊರಿಸಿ ಕಾಂಗ್ರೆಸ್ಸಿನ ಸಂಪರ್ಕವಿರುವವರನ್ನು ಸಹ ಗತಿಹೀನರಾಗುವಂತೆ ಮಾಡದಿರಲಾರೆ (ಕನಕು. ೧೨೨). **ಪುಂಡಗಂದಾಯ :** ೩೫೦೦೦ ರೂಪಾಯಿ ಪುಂಡಗಂದಾಯ (ಪ್ಯುನಿಟಿವ್ ಟ್ಯಾಕ್ಸ್) ಅವರಿಂದ ವಸೂಲ ಮಾಡಲಾಯಿತು (ಕಕಪ. ೨೬೦). [ಪುಂಡು₁ + ಕಂದಾಯ]

**ಪುಂಡುಗರಡಿ**, ಹುಂಡಗರಡಿ (ನಾ). ೧. ತುಂಟ ಕರಡಿ; ದುಷ್ಟಸ್ವಭಾವದ ಕರಡಿ : ವ್ಯೆದೋಚಿಪ್ಪುವು ಪುಂಡುಗರಡಿ ಶೈಲಾಂತರದೊಳ್ (ಸೌತ್ರ. ಸು. ೩–೦೫೦). **ಹುಂಡಗರಡಿ :** ೨. ಸ್ವೇಚ್ಛೆಯಾದ ಕರಡಿ : ನೀಲತನುಗಳ ಪುಂಡಗರಡಿಗಳೊಳಗಿಸಿ ಬರೆ ರಾಘವೇಶ್ವರನೋಲಗಕೆ ಜಾಂಬವರು ಬಂದರು (ಅಕ್ತರಾ. ೨೬–೩೩). [ಪುಂಡು₁+ಕರಡಿ₁]

**ಪುಂಡುಗಾರ** 'ಪುಂಡುಗಾಜಿ' ನೋ.

**ಪುಂಡುಗಾಜಿ**, ಪುಂಡಗಾರ, ಪುಂಡುಗಾರ (ನಾ). ತುಂಟ; ದುಷ್ಟ : ಪುಂಡುಗಾಜಿರು ನಮಗಲ್ಲೆಂದು ಸಗ್ಗದ ಪುಂಡರೀಕಾಯತಾಕ್ಷಿಯರ ಮಂಡೆಯೆಣಿಸಿ ಕೊಟ್ಟನು ರಣದೊಳು ಕಡಿಖಂಡವಡೆದು ಬಂದಪರಿಗೆ (ಕುಮಾರಾ. ೦೨–೬೬). **ಪುಂಡಗಾರ :** (೯). **ಪುಂಡುಗಾರ :** ಪುಂಡುಗಾರನಾದ ಜಯಂತನಂ ಕೂಡಿ ನಲಕೂಬರನು ದೇವವೇಶಿಯರೊಡನೆ ಮನಸ್ಸು ಬಂದಂತೆ ಯೆಲ್ಲಿಗೊ ಪೊರಟುಪೋದರು (ಶ್ರೀಗಂಂ. ೩೬೨–೨೦); ಪುಂಡುಗಾರನವ ಭಂಡನ ಸುದ್ದಿಯ ಬಿಡುಬಿಡು ಪ್ರಿಯತಮ (ಪಕರಾ. I,೪೦೬). [ಪುಂಡು₁ + – ಕಾಜಿ]

**ಪುಂಡುತನ**, ಪುಂಡತನ (ನಾ). ತುಂಟತನ ; ಗೂಂಡಾಗಿರಿ : ಪರಸತಿಯ ಬೇಟೆಯ ಪುಂಡು[ಶಾಕಾಂ. ದ್ಯೂತನದಲಿ ಹೆಂಡಿರನು ಬಿಟ್ಟಪರ ಪೋಟರಿಗೆ . . . ಹೇಳದಿರು ಮುಚಿದೀ ಅನುಭವಾಮೃತವ (ಅಮೃ.ತ. ೨–೨); ಹೆಂಡತಿಗೆ ನೀನಳುಪಿ ಅಳುಪದ ಪುಂಡುತನವನು ತೋರಿಬಿದ್ದೆ (ಕೃಷ್ಣಾ.೩೩. ೨-೨-೬); ಮಾಲೀಕನನ್ನು . . . ಪುಂಡುತನ ಮಾಡುವುದರಿಂದ ರೊಚ್ಚಿಗೆಬ್ಬಿಸಿದ್ದರು (ಅಪುಕ್ಕ. ೪೬). **ಪುಂಡತನ :** ಚಂಡಿತನವೆಂಬ ಹಿಂಡಿ ಇಡಬೇಕು . . . ಪುಂಡತನವೆಂಬೊ ಹಿಂಡಿ ರುಬ್ಬಿಡಬೇಕು (ಪುರಂದ. ೨–೩೩–೨); ಪುಂಡತನವಮ್ಮೊಡನೆ ಮಾಡ್ದಪಂ ಫಲವನುಣಲಿ (ಸುರಂಗ. ೩–೯೬); ಇದು ಸಾಹುಕಾರ ಮಾಡಿಸುವ ಪುಂಡತನವೆಂದು ರಾಜಮ್ಮನಿಗೆ ತಿಳಿಯುವುದು ತಡವಾಗಲಿಲ್ಲ (ಕೀಮುಕು. ೨೦೬); ಪುಂಡತನ ಮಾಡಿದವ ಭಂಡತನ ಬಿಟ್ಟಾನೇ ? (ಗಾದೆ). [ಪುಂಡು₁ + – ತನ]

**ಪುಂಡುಪೋಕರಿ** (ನಾ). ನೀತಿನಿಯಮಗಳಿಲ್ಲದವನು : ಪುಂಡುಪೋಕರಿ ಗುಂಟು ಹೆಂಡತಿಮಕ್ಕಳಿಗಿಲ್ಲೀ ಕಾಲ (ಪುರಂದ. ೦–೦೨೦–೦); ನೀನು ಮಾತ್ರ ಪುಂಡುಪೋಲಿಯಾಗಿ ಸೋದರಿಯೊಬ್ಬಳನ್ನು ಛಲಿಸಲು ಮುಂದಾಗಬೇಕೆ ? (ರಂಗರೋ. ೦೦೯). [ಪುಂಡು₁+ ಪೋಕರಿ]

**ಪುಂಡೆ** (ನಾ). ಪುಂಡಾಟವಾಡುವ ಹೆಣ್ಣು : ಹೆಂಡತಿಯಿಲ್ಲದ ಪುಂಡ ಬಂದು ಅವನಂಗವ ಹೊಯ್ಕಲಾಗಿ ಕಂಡರು ಗರ್ವದ ಪುಂಡೆ[ಶಾಕಾಂ. ೮] ಯರೆಲ್ಲರೂ ಕೂಡಿ (ಮನುಗಂ. ೪. ೨೩೬–೨೯). [ಪುಂಡ+ – ಎ₂]

**ಪುಂಡೇಳ್** (ಕ್ರಿ). ದಂಗೆಯೇಳು ; ಬಂಡಾಯ ಹೂಡು : ಮೂಡದಿಕ್ಕಿನೊಳ್ ಶಬರರುಂ ಮತ್ತಂ ಕಿಲುಂಬರ್ ತುಂಡುಮನ್ನೆಯರುಮೊಂದಾಗಿ ಪುಂಡೆದ್ದು ದಾಳಿವರಿದಾರವಂ ಬಗೆಯದೆ ರಾಜ್ಯಮಂ ಬಾಧಿಸುತ್ತುಮಿರಲ್ (ಕೀಸ್ತ. ೦–೬೨). [ಪುಂಡು₁+ಏಳ್₁ (<ಎೞು₁)]

**ಪುಂಡ್ರ** (ನಾ). ೧. ಬಿಳಿಯಪಟ್ಟೆಗಳುಳ್ಳ ಒಂದು ಬಗೆಯ ಕೆಂಪುಬಣ್ಣದ ಕಬ್ಬು : 'ಪುಂಡ್ರೇಕ್ಷು' ಪರಾ. ೨. ಹಣೆಗೆ ಇಟ್ಟುಕೊಳ್ಳುವ ಗಂಧ, ವಿಭೂತಿ, ತಿಲಕ ಮೊದಲಾದ ಲಾಂಛನ : "ತಿಲಕಂ, ತಮಾಳಪತ್ರಂ, ಚಿತ್ರಕಂ, ವಿಶೇಷಕಂ ,ಪುಂಡ್ರಂ, ಲಲಾಟಿಕಾ—ಈ ೬ ಬೊಟ್ಟು" (ಶಬ್ದಾಯು. ೬೯–೬೩೬); ನೊಸಲಲಿ ಅಸ್ಥ ಪುಂಡ್ರವ ಪಟ್ಟಿಕೊಂಡವ ಹೊಲೆಯು (ಚಿಸೋಸಾ. ೬೦–೩) ; ಮುಖದೊಳ್ ಪುಂಡ್ರಮನಿಟ್ಟು (ಶ್ರೀಗಂಂ. ೦೯೯–೦೬). ೩. (ಕಪ್ಪು, ಕಂದು ಮೊದಲಾದ ಬಣ್ಣದ) ಕುದುರೆಯ ಮೈ ಮೇಲಿರುವ ಬಿಳಿಯ ಪಟ್ಟೆ : ಕಟಿ ಶಂಖಕರ್ಣಮಸ್ತಕನಿಟಿಲತಟೀಪುಟದೊಳ್ ಶಶಾಂಕದ್ಯುತಿಯಿಂ ಘಟಿಯಿಸಿದ ಪುಂಡ್ರವೊಳ್ಪಂ ಘಟಿಯಿಸುಗುಂ (ಅಶ್ವಶಾ. ೩–೬). ೪. ಒಂದು ದೇಶದ ಹೆಸರು ; ☞ ಇದು ಈಗಿನ ಬಂಗಾಳ, ಬಿಹಾರ ಪ್ರದೇಶ. ೫. ಚಿತ್ರ : "ಜನಪದದೊಳುಂ ಶಿಲೆದೊಳಂ ಚಿತ್ರದೊಳಂ ಪುಂಡ್ರಮಕ್ಕು" (ಶಬ್ದಾಗರಾ. ೦೫೨–೫೬). ೬. ಹುಳು. ೭. ತಾವರೆ. ೮. ಬಿಳಿಯ ಕಮಲ : 'ಪುಂಡ್ರಾಂಬುಜ' ಪರಾ. ೯. ಹೊಳೆ ; ನದಿ : (೯). ೧೦. ಒಡವೆ : (೯). [ಸಂ.]

**ಪುಂಡ್ರಕ** (ನಾ). ೧. ಕೆಂಪು ಕಬ್ಬು. ೨. ಹಣೆಯ ಮೇಲಿಟ್ಟುಕೊಳ್ಳುವ ತಿಲಕ ಮೊದಲಾದುವು. ೩. ಪುಂಡ್ರವೆಂಬ ದೇಶ ಹಾಗೂ ಅಲ್ಲಿಯ ಜನ. ೪. ಒಂದು ಬಗೆಯ ಬಳ್ಳಿ : "ಅತಿಮುಕ್ತಃ ಪುಂಡ್ರಕಃ ವಾಸಂತೀ, ಮಾಧವೀ, ಲತಾ—೫ ಕಾಡುಯಿರುವಂತಿಗೆ ಹೆಸರುಗಳು" (ಸಿದ್ಧಾಂತಿ. ೦೨೬); ಪವಕ್ಷೀರ, ಪುಂಡ್ರಕ, ಪದ್ಮಕ . . . ಇವಂ ಚೂರ್ಣಮಂ ಮಾಡಿ ಹಾಕಿ ಹದನಲ್ಲಿಳುಹಿಕೊಂಡು ಆ ತುಪ್ಪಮಂ ಪ್ರತಿದಿನವೂ ಸೇವಿಸೆ ಕ್ಷಯವ್ಯಾಧಿ . . . ಗುಣಮಕ್ಕುಂ (ಸಕಪ್ಪ. ೨೫೦). ೫. = ಪುಂಡ್ರ ೩ : ಆನನಮಲ್ಲದೆ ಧವಳಸ್ಥಾನಂ ತಾನಾದೊಡಕ್ಕುಮಾವ ಕಂಠತೆಯುಂ ಸ್ಥಾನದೊಳಂಗದೆ ವಿರ(ವು)ಳಸ್ಥಾನಂ ಪುಟ್ಟಿದೊಡೆ ಲಲಿತ ಪುಂಡ್ರಕ ನಾಮಂ (ಅಶ್ವಶಾ. ೩–೩). [ಸಂ.]

**ಪುಂಡ್ರಲಕ್ಷ್ಮ** (ನಾ). ಕುದುರೆಯ ಮೈಮೇಲೆ ಇರುವ ಬಿಳಿಯಂ ಪಟ್ಟೆಯ ಚಿಹ್ನೆ : ಚಾಪಂ ಶ್ರೀವೃಕ್ಷಂ ಸ್ರುವೆಯೂಪಂ ಸ್ವಸ್ತಿಮುದಗ್ರವಜ್ರ ಮುಂದೊದೀ ರೂಪಕದ ಪುಂಡ್ರಲಕ್ಷ್ಮನಿರೂಪಕಮಾ ವಾಜಿ (ಅಶ್ವಶಾ. ೩–೫). [ಸಂ. ಪುಂಡ್ರಲಕ್ಷ್ಮನ್]

**ಪುಂಡ್ರಾಂಬುಜ** (ನಾ). ಬಿಳಿಯ ತಾವರೆ : ಶರನ್ನೀರದಸ್ತೋಮಂ ಪೋಬರುತಿರ್ಪುದೀಗಳೆನಲುದ್ಯನ್ಮಾನಸಸ್ಥಾನದಿಂ ತಾಮೆಯ್ತಂದು ಮರಾಳಜಾಲಮೆನಸುಂ ಪೊರ್ದಿತ್ತು ಪುಂಡ್ರಾಂಬುಜೋದ್ದಾಮಶ್ರೀಯ ವಿಳಾಸಮಂ ದ್ವಿಗುಣಿಸುತ್ತುಬ್ಬಾಕರತ್ರೇಣಿಯೊಳ್ (ಕುಸುಮಾ. ೬–೯೬). [ಸಂ.]

**ಪುಂಡ್ರಿಕೆ** (ನಾ). = ಪುಂಡಿ ೧ : ಹೊಲದ ಪುಂಡ್ರಿಕೆ, ಪುಂಡ್ರಿಕ, ಗೋಗು, ಪುಂಡಿ (ವ್ಯ.ಕಿ. ೪೩-೬೫೦). [<ಸಂ. ಪುಂಡ್ರಕ?]

**ಪುಂಡ್ರೇಕ್ಷು** (ನಾ). = ಪುಂಡ್ರ ೧ : ಉಗುವೆಳನೀರಿಂದಂ ಕದಳಿಗಳ ಕದಳಿಗಳ ವಣ್ಣ ರಸದಿಂ ಪುಂಡ್ರೇಕ್ಷುಗಳ್ . . . ಬಳೆಗುಂ (೧೧೪. ೨-೧೪.) [ಸಂ.]

**ಪುಂಡ್ರೇಕ್ಷುಚಾಪ** (ನಾ). ಮನ್ಮಥ ; ಕಾಮ : ಪುಂಡ್ರೇಕ್ಷುಚಾಪನ ಮರ್ದಪ್ಪ . . . ಮುಂಗುರುಳ್ದಿದ್ದಿ (ನವಮೋ. ೫-೨೫). [ಸಂ.]

**ಪುಂಡ್ರೇಕ್ಷುದಂಡ** (ನಾ). ಪಟ್ಟೆಕಬ್ಬಿನ ಜಲ್ಲೆ : ಪುಂಡ್ರೇಕ್ಷು[ಪಾಕಾಂ. ರಸದಿಕ್ಷು]ದುಡದಿ ವಣ್ಣನಜಿಸುವರೆ (ಸಂಜಿರ. ೦೩-೫) ; ಸೋಗೆವೆರಸಿದ ಪುಂಡ್ರೇಕ್ಷುದಂಡಗಳನವರ್ಚಿ ಬಾಳವೇರ್ಗಳಿಂ ಬಿಗಿದು . . . ಆಳವಡಿಸಿದ ಸುರಯಿಯರಲ ಪರಾಗದ ಪೊಂಜಗಲಿಯ ಮೇಲಣಸುಗೆದಳಿರಲರ್ವಾಸಿ ನೊಳರಸಿವೆರಸಿ ಕುಳ್ಳಿರ್ದು (ರಾಜಶೇ. ೧೦-೩೦ ವ). [ಸಂ.]

**ಪುಂನಪುಂಸಕಲಿಂಗ** (ನಾ). [ವ್ಯಾಕ] ಪುಲ್ಲಿಂಗ ಹಾಗೂ ನಪುಂಸಕ ಲಿಂಗ : ಪುಂನಪುಂಸಕಲಿಂಗಕ್ಕೆ—ರವಿ ಮೂಡಿದಂ, ರವಿ ಮೂಡಿದುದು (ಶಮದ. ೬೬ ಪ್ರಯೋ). [ಸಂ.]

**ಪುಂನಪ್ಪು** (ನಾ). = ಪುಂನಪುಂಸಕಲಿಂಗ : ಪುದಿಗುಮದಂತಕೆ ಪುಲ್ಲಿಂಗದ ಪೋಲ್ ಕಿಜುದೆಡೆಗಳಲ್ಲಿಯಲ್ಲಂ ಸ್ತ್ರೀಲಿಂಗದೊಳಂ ಪುಂನಪ್ಪಿನೊಳಂ ಪುದಿಗುಂ ಕಿಳ (ಶಮದ. ೦೨೦ ೩). [ಪುಂ+ನಪ್ಪು]

**ಪುಂಬುಟ್ಟ** 'ಪೊಂಬುಟ್ಟ' ನೋ.

**ಪುಂಭಾವ** (ನಾ). ೧. ತಾನು ಪುರುಷನಾಗಿರಬೇಕಾಗಿತ್ತು ಎಂಬ ಭಾವನೆ; ಗಂಡಸಿನ ಮನೋವೃತ್ತಿ : ನಾಂದವರೆ ಪತ್ತಿದಂಬರದಿಂ ದೆಸೆವರಸಿಯು ನಿತಂಬಬಿಂಬಮನಬಳಾವ್ಯಂದವದೀಕ್ಷಿಸಿ ಹೃದಯ ದೊಳಂದೇಂ ಪುಂಭಾವಮಂ ಪುದುಂಗೊಳಿಸಿದುದೋ (ಚಂದ್ರಪ್ರ. ೬-೦೩೦). ೨. [ಕಾಮಶಾ] ಪುರುಷಾಯತವೆಂಬ ಸುರತಬಂಧ : ಒರ್ವ ಗುರು ಕುಚೆ ವೃದ್ಧವಿಪ್ರನೊಳ್ ಪುಂಭಾವದಿ ಸುರತದೊಳಿರೆ (ಪ್ರಾಸಕ. ೩೪-೯೬). [ಸಂ.]

**ಪುಂವೇದ** (ನಾ). [ಜೈನ] ಗಂಡಂಜೀವಕ್ಕೆ ಹೆಣ್ಣಿನ ಮೋಹವುಂಟು ಮಾಡುವ ಕರ್ಮ; ಚಾರಿತ್ರಮೋಹನೀಯದ ಭೇದವಾದ ವೇದನೋಕಷಾಯದ ಉದಯದಿಂದ ಕಾಮಭಾವ ಹುಟ್ಟುತ್ತದೆ. ಪುಂವೇದ ಅಥವಾ ಪುರುಷವೇದದ ಉದಯದಿಂದ ಸ್ತ್ರೀಯ ಬಯಕೆಯೂ ಸ್ತ್ರೀವೇದದ ಉದಯದಿಂದ ಪುರುಷನ ಬಯಕೆಯೂ ಉಂಟಾಗುತ್ತದೆ : ಕಿಡಿಸಿದುದು ಬೇಗದಿಂ ಕ್ರಮಕ್ರಮದೊಳೆ ನಪುಂಸಕ ವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ . . . ಘಾತಿಸಿ (ಆದಿಪು. ೧೦-೧೪ ವ) ; ಸಮನಂತರದೊಳ್ ಪುಂವೇದಪೂರ್ವಸತ್ಕರ್ಮಪರಂ ಪರಮೋಜಿಸಿ ಕಿಡಿಸಿದಂ ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳಾಜಿ (ಚಂದ್ರಪ್ರ. ೧೪-೬೦). [ಸಂ.]

**ಪುಂಶಿಲೆ** (ನಾ). [ಶಿಲ್ಪಶಾ] ವಿಗ್ರಹನಿರ್ಮಾಣಕ್ಕಾಗಿ ಆಯ್ದುಕೊಳ್ಳುವ ಕಲ್ಲುಗಳಲ್ಲಿ ಒಂದು ಪ್ರಕಾರ ; ಗಟ್ಟಿಕಲ್ಲು : ಶಿಲೆಯಲ್ಲಿ ಪುಂಶಿಲೆ, ಸ್ತ್ರೀಶಿಲೆ, ನಪುಂಸಕಶಿಲೆಯೆಂದು ಮೂರುವಿಧ; ಕಂಚಿನ ತಾಳದ ನಾದ ದಂತೆ ಧ್ವನಿ ಕೊಡುವ ಶಿಲೆಯು 'ಪುಂಶಿಲೆ'ಯೆಂದೂ, ಘಂಟಾನಾದದಂತೆ ಧ್ವನಿತವಾಗುವ ಶಿಲೆಯು 'ಸ್ತ್ರೀಶಿಲೆ'ಯೆಂದೂ, ತಾಳವಿಹೀನವಾದ ಶಿಲೆಯು 'ನಪುಂಸಕಶಿಲೆ' ಯೆಂದೂ ಉಕ್ತಿಯಿದೆ. ಪುರುಷದೇವತಾವಿಗ್ರಹಗಳನ್ನು ಪುಂಶಿಲೆಯಿಂದಲೂ ಸ್ತ್ರೀದೇವತಾವಿಗ್ರಹಗಳನ್ನು ಸ್ತ್ರೀಶಿಲೆಯಿಂದಲೂ ಆಧಾರಪೀಠಾದಿಗಳನ್ನು ನಪುಂಸಕಶಿಲೆಯಿಂದಲೂ ಮಾಡಬೇಕೆಂದು ವಿಧಿಸಿದೆ (ಶಾರದ. ೬೬). [ಸಂ. ಪುಂಶಿಲಾ]

**ಪುಂಶ್ಚಲಿ, ಪುಂಶ್ಚಳಿ** (ನಾ). ಹಾದರಗಿತ್ತಿ ; ಜಾರೆ : "ಪುಂಶ್ಚಲಿ ಕುಲಟೆಯಸತಿ ಕುಲಪಾಂಸುಳೆ ಬಂಧಕಿ ಜಾರೆ ಪಾಣ್ಬೆಯಿತ್ವರಿಕೆಯಪಳ್" (ವಸ್ತುಕೋ. ೩೨-೪); ಉಡಿಯಂ ಸಡಿಲಿಸಿಯುಡುವಡೆ ನಡೆ ನೋಟ್ಪಡೆ ತನ್ನ ಕಿವಿಯುಮಂ ತಲೆಯುಮನಂತಡಿಗಡಿಗೆ ತುಜುಕಿಕೊಳ್ವಡೆ ಪಡಿಮಾತೇಂ ನಿರ್ವಿಚಾರ ಪುಂಶ್ಚಲಿಯಾಕ್ಕುಂ (ಪಂಚತ. ೯-೧೦); ಭಾವಕನಖಿ ಸೋಲ್ತು ಕಣ್ಣಾಜುದು ಪುಂಶ್ಚಲಿಯಂ ಜಡಿದಳ್ ರಹಸ್ಯದೊಳ್ (ಕಸ್ತೂರಿ. ೫-೩೪). **ಪುಂಶ್ಚಳಿ** : "ಪಾಂಸುಳಾ, ಬಂಧಕೀ, ಸ್ವೈರಿಣೀ, ಅಸತೀ, ಪುಂಶ್ಚಳೀ... ಅಭಿಸಾರಿಕಾ—ಈ ೧೦ ಹಾದರಗಿತ್ತಿ" (ಕಣಾಯು. ೬೦-೩೪೨) ; ಪುಂಶ್ಚಳಿ ಯಂತೆ ನೀನೆಲ್ಲಿಗೆ ಪೋಗಿ ಬರ್ಪೆ (ಶಾಪುಂಡಿ. ೪೦೬) ; ಪುಂಶ್ಚಳಿಯರ್ ಬಂದುಪಕಾಂತಸೂಚಿತನಿಶಾಂತಾಂತಂಗಳಂ ಪೊದ್ದಿದರ್ (ರಾಜಶೇ. ೦೦-೨೪). [ಸಂ. ಪುಂಶ್ಚಲೀ]

**ಪುಂಶ್ಚಳಿ** 'ಪುಂಶ್ಚಲಿ' ನೋ.

**ಪುಂಶ್ಚಾಂಕ** (ನಾ). ಲಿಂಗರೂಪಿಯಾದವನು : ಪುಂಶ್ಚಾಂಕ ಸದ್ಭಕ್ತ ವಾತ್ಸಲ್ಯ ಭಜಕ ಜನರಿಚ್ಛಾಸುಫಲದಾಯಿ ಸಚ್ಚಿದಾನಂದರೂಪ . . . ಪೊರೆಗೆ (ಗುರುರಾಜ. ೦-೫). [ಸಂ.]

**ಪುಂಸ** (ನಾ). ೧. ಗಂಡಸು ; ಪುರುಷ : ಹಿಂಸಾನಂದ ಅಸ್ತೇಯಾನಂದ ಮೃಷೆ ಮತ್ತೆ ವಿಷಯಸಂರಕ್ಷಣಾನಂದ ಸಂಶಯವಿಲ್ಲದೆ ನಾಲ್ಕು ರೌದ್ರ ಧ್ಯಾನ ಪುಂಸರೆಯ್ದುವರು ನರಕಕೆ (ರತ್ನಾಕರ. ೬-೬೪) ; ಆಸೆಯನು ನಿಜದಾಸಗೈದಿಹ ಪುಂಸರೆಲ್ಲರು ದಾಸರೆನಿಸುವರು (ಹರಿದಾ. ೫೬). ೨. ಗಂಡಸುತನ ; ಪುರುಷತ್ವ ; ಪುಂಸ್ತ್ವ : ಆ ಹೆಣ್ಣಾಜನ್ಮದೊಳು ಪಡೆದತಿಶಯವಾಕೆ ಪುಂಸವ ಪಡೆದುದಾಗಿರೆ ನಿಮ್ಮ ಸಂತರವರಡಿಯ ಕಾಯ್ದುವರು (ಹರಿಭಕ್ತ. ೦೩೫-೬೬). [ಸಂ. ಪುಂಸ್]

**ಪುಂಸತ್ವ** (ನಾ). ಪುರುಷತ್ವ ; ಗಂಡುತನ : ಅವುಗಳು ತಂತವನ್ನು ಕೆಲಸ ವನ್ನು ಮಾಡದೆ ಹೋದರೆ . . . ಪುಂಸತ್ವ ಇಲ್ಲದಾಗುವುದು (ಪ್ರಾಂಶಪ್ರ. I, ೪೬೨). [<ಸಂ. ಪುಂಸ್ತ್ವ]

**ಪುಂಸವನ** (ನಾ). ೧. ಷೋಡಶಸಂಸ್ಕಾರಗಳಲ್ಲಿ ಒಂದು ; ಗರ್ಭಿಣಿ ಯಾದವಳಿಗೆ ಗಂಡುಮಗಂ ಆಗಲೆಂದು ಮಾಡುವ ಒಂದು ಶುಭ ಸಂಸ್ಕಾರ ; ಸೀಮಂತ : ಅವನೀಶ್ವರನಾಗಳ್ ಪುಂಸವನಂ ಮೊದ ಲಾದ ಸಕಲಮಾಂಗಲ್ಯಮಹೋತ್ಸವಮಂ ಮೆಜೆದಂ (ಶಂಕರಾಪು. ೩-೦೦೩); ಇನಕುಲಾಧೀಶ್ವರಂ . . . ಪುಂಸವನಸೀಮಂತಮಂ ತಾಂ ಚಾರುಲೋಚನೆಗೆ ವಿಸ್ತರಿಸಿದಂ (ಕೈಪಿಯತ. ೦೬-೩೭) ; "ಪುಂಸವನ" ವೆಂದರೆ ಗಂಡು ಮಗುವು ಆಗಬೇಕೆಂದು ಮಾಡುವ ಸಂಸ್ಕಾರವು (ಆರ್ಯಾರ. ೦೨೨). ೨. ಗಂಡಸಿನ ಸ್ನಾನ. ೧. ೨. ಸುವಿದಿತಮಿನಿತುದಿನಂ ಸ್ತ್ರೀಸವನಂ ನಿನಗೆಂದು ಕಾಂತೆ ಪುಂಸವನಂ ಮಾಡುವುದೆಂದರ್ಥಾಂತರದಿಂದ ವನೀಶಂ ಸರಸವಾಡಿ ಕಾಡುಗುಮೆಂದೋ (ಕಸ್ತೂರಿ. ೩-೬೬). [ಸಂ.]

**ಪುಂಸ್ಕೋಕಿಲ, ಪುಂಸ್ಕೋಕಿಳ** (ನಾ). ಗಂಡುಕೋಗಿಲೆ : ಉನ್ಮದ ಮಧುಕರರಝಂಕಾರಮಂ ಕೌಮುದೀಸಂಪದಮಂ ಪುಂಸ್ಕೋಕಿಲಾಲಾಪ ಮನಲೆವಲರಂ ಬಾರ್ತಗೆಯ್ಯಂ ಮನೋಜಂ (ಬುದ್ಧಚ. ೩-೨೪); ತಿಳಿವಲರ್ ವಾಸಂತಿಯಂ ಸಂದಿಸಿ ಪುಗಲೆನೆ ಪುಂಸ್ಕೋಕಿಲಂ . . . ತಿಳಿಪಿದಂ ಪ್ರೇಮ ಕಾಂತಂ ವಸಂತಂ (ಅನಂತಪು. ೬-೬೪). **ಪುಂಸ್ಕೋಕಿಳ** : ಮಧುಕರ ನಿಕ ರಮುಂ ಪುಂಸ್ಕೋಕಿಳಕಳಾಪಮುಂ ರಾಜಕೀರಕದಂಬಕಮುಂ ಮುಂದೆ ನಡೆಯಜುದೋಲಗಿಸುತ್ತುಂ ಬರೆ (ಶಾಂತಿಪು. ೬-೦೨೬ ವ). [ಸಂ.]

**ಪುಂಸ್ಕೋಕಿಳ** 'ಪುಂಸ್ಕೋಕಿಲ' ನೋ.

**ಪುಂಸ್ತ್ರೀಲಿಂಗ** (ನಾ). [ವ್ಯಾಕ] ಪುಲ್ಲಿಂಗ ಹಾಗೂ ಸ್ತ್ರೀಲಿಂಗ : ಪುಂಸ್ತ್ರೀ ಲಿಂಗಕ್ಕೆ—ಇವರ್ ಪುರುಷರ್, ಇವರ್ ಸ್ತ್ರೀಯರ್ (ಶಮದ. ೬೬ ಪ್ರಯೋ). [ಸಂ.]

**ಪುಂಸ್ತ್ವ** (ನಾ). ೧. ಪುರುಷತ್ವ ; ಗಂಡುತನ. ೨. ವೀರ್ಯ; ರೇತಸ್ಸು. ೩. [ವ್ಯಾಕ] ಪುಲ್ಲಿಂಗ. [ಸಂ.]

**ಪುಕಪುಕ** (ನಾ). ಹೆದರಿಕೆಯಿಂದ ಎದೆ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣಪದ : ಧೈರ್ಯ ಮಾಡಿ ಹೊರಟಿದ್ದೇನೋ ಸರಿ ; ಆದರೆ ಒಳಗೆ ಪುಕಪುಕ ಎನ್ನುತ್ತಲೇ ಇದೆ (ಕೂಕಿ).

**ಪುಕಸಟ್ಟೆ** 'ಪುಕ್ಕಟೆ' ನೋ.

**ಪುಕಸಾಟೆ** 'ಪುಕ್ಕಟೆ' ನೋ.

**ಪುಕಳಿ** 'ಪುಕುಳಿ' ನೋ.

**ಪುಕಾರಿಸು** (ಕ್ರಿ). ೧. ಕೂಗು ; **ಚೀರು** ; **ಕಿರುಚು** : ಆ ಪದಕವಂ . . . ಪ್ರೀತಿಯಿಂ ಧರಿಸಲದು ಸಪಾಶಕ್ತಿಯಾಗಿ ಪೂತ್ಕರಂಗೈಯಲದಂ ಬಿಸುಟೋಡಿ ಪುಕಾರಿಸಲ್ ಅರಸನರಿದು ಬೆರಗಾಗಿ (ರವಿಶ್ಯಾ. ೨೨೨-೧೯). ೨. ಸಾರು ; ಕೂಗಿ ಹೇಳು : ದುಡ್ಡಿನ ಚೀಲ ಹೊತ್ತುಕೊಂಡು ಸಾಲ ಬೇಕೆ ಎಂದು ಸವಾಲು ಪುಕಾರಿಸುತ್ತ ತಿರುಗುತ್ತಿದ್ದರೆ ? (ದೀಹಹ. I, ೦೦). [ಪುಕಾರು + — ಇಸು$_3$]

**ಪುಕಾರು, ಪುಕಾರೆ** (ನಾ). ೧. ಗದ್ದಲ ; ಗಲಾಟೆ : ಕಿಲ್ಲೆದಾರರುಂ ಕೊತ್ವಾಲರುಂ ನಾಳೆ ಬರುವ ಬಳ್ಳಾರಿ ಲಷ್ಕರ ಸರಬರಾಯಿಯಂ ತುಸ ಪುಕಾರಿಲ್ಲದಂತೆಸಗ ಪೇಳು (ಅಶಾರಿ. ೩೦-೩೯). ೨. ಆಕ್ಷೇಪಣೆ ; ತಕರಾರು ; ದೂರು : ಅವರ ಗೈರ್‌ಹಾಜರಿ ಕಾಲದಲ್ಲಿ ಪುಕಾರಿಲ್ಲದೆ ಕೆಲಸ ನಡೆಯಲು ತಮ್ಮ ಬಂಧುಮಿತ್ರರನ್ನು ತಮ್ಮ ಜವಾಬ್ದಾರಿಯ ಮೇಲೆ ನೇಮಿಸಬೇಕು (ಗ್ರಾಮಾಕ. ೬) ; ನಾಳೆಯ ದಿನ ಇಲ್ಲದ ಪುಕಾರುಗಳಿಗೆ ಅವಕಾಶವಾಗುತ್ತೆ (ಮರೆ೯. ೦೦) ; ಪ್ರತಿದಿನವೂ ಇವನ ಮೇಲೆ ಒಂದಲ್ಲ ಒಂದು ಪುಕಾರು ಇದ್ದೇ ಇರುತ್ತದೆ (ಕಲ್ಲಕಾ. ೬೯). ೩. ಅಪವಾದ ; ಆಡಿಕೆ : ಇನ್ನೂ ಏನೋ ಇರಬೇಕು, ಇಲ್ಲದಿದ್ದರೆ ಇಷ್ಟು ಪುಕಾರು ಹೇಗೆ ಹುಟ್ಟೀತು ? (ಅನಾಕೆ. ೩೯) : ಪುಕಾರು ಇಲ್ಲದಂತೆ ನೋಡಿಕೊಳ್ಳಿ (ಸಾಂತ್ರಿ. ೫೬). **ಪುಕಾರೆ** : ೧. ಕಳ್ಳರು ಬಂದಂತೆ ಏನಾದರೂ ಪುಕಾರೇ ಯುಂಟಾದ ಕೂಡ್ಲೆ . . . ತಾಕೀದ್ ಮಾಡುವದು ಸಹ ಪೋಲೀಸ್ ಪಟೀಲನ ಕಾರ್ಯವಾಗಿರತಕ್ಕದ್ದು (ಗ್ರಾಮಾಕ. ೪ ಖಿ೮೦೯). ೩. ನೀವೇ ಅವರಾಗಿ ಇದ್ದಿದ್ದರೆ ಈ ಏಲು ದೇಶದಲ್ಲೆಲ್ಲ ಪುಕಾರೆ ಎಬ್ಬಿಸುತ್ತಿತ್ತಲ್ಲ ! (ಕಷ್ಯಾಮು. ೦೯೬).

**ಪುಕಾರಾಗು, ಪುಕಾರು ಆಗು** = ಗಲಾಟೆಯಾಗು ; ವಿಷಯವು ಬಯಲಾಗಿ ಎಲ್ಲರ ಕಿವಿಗೂ ಬೀಳು : ಈರ ಒಂದು ದಿನ. . .ಹೆಂಡತಿಯನ್ನು ಚೆನ್ನಾಗಿ ಬಡಿದ. ಅದು ಊರಲ್ಲೆಲ್ಲಾ ಪುಕಾರಾಯಿತು (ಶಿವರಾ. ೬೯) ; ಕಳಲೆಯ ನಂಜರಾಜನು ಮಾತ್ರ ಕೊಂಚವೂ ಪುಕಾರಾಗದಂತೆ ಹತ್ತುಸಹಸ್ರ ಸೈನ್ಯವನ್ನು ಸಿದ್ಧಗೊಳಿಸಿಬಿಟ್ಟನು (ಶ್ರೀರಾಯ. ೦೦೬) : ಪುಕಾರು ಆಗದೆ ಇದ್ದ ಹಾಂಗೆ ಅವನ್ನ ಸುಟ್ಟು ಹಾಕಿ ಬಿಟ್ರಂತೆ ಕಾಡಿನಾಗೆ (ಮಲೆಮ. ೩೦೩). **ಪುಕಾರು ಮಾಡು** = ಗಲಾಟೆ ಮಾಡು ; ಕೂಗೆಬ್ಬಿಸು : ಗರಡಿಮನೆ ಹೊರಸೂರಿನಲ್ಲಿ ಬೆಂಕಿ ಉರಿ ಎದ್ದದ್ದು ಕಂಡು, ಪುಕಾರು ಮಾಡಿದ್ದರಿಂದ, ಬೆಂಕಿ ಹಾಕಿದವನು ಕಾಡೊಳಗೆ ಓಡಿಹೋದ (ರಾಜೇಂದ್ರ. ೨೬೩) ; ಉಣಲಿಕ್ಕೆಂದು ಕಾಡಿದೊಡೆ ಶಂಕೆಯಿಂದವರು ರಾಕ್ಷಸರುದಿಸಿದರೆಂದು ಪೋಡಿ ಪೋಗಿ ಪುಕಾರು ಮಾಡುವುದಂ ಜನರೆಲ್ಲಾ ನೆರೆದು ವಿಚಾರಿಸಿ (ರವಿಶ್ಯಾ. ೭-೧೩೮) : ಮಾವನೂ ನೀನೂ ಸೇರಿಕೊಂಡು ಏನೇನೊ ಪುಕಾರು ಮಾಡ್ತಿದ್ದೀರಂತೆ ? (ಮಲೆಮ. ೩೩೦). [← ಹಿಂ. ಮರಾ. ಪುಕಾರ್]

**ಪುಕಾರೆ** 'ಪುಕಾರು' ನೋ.

**ಪುಕುಳಿ, ಪುಕಳಿ** (ನಾ). ೧. ಸ್ತ್ರೀಯ ಜನನೇಂದ್ರಿಯ ; ಯೋನಿ : (೬). ೨. ಮಲದ್ವಾರ : (೬). **ಪುಕಳಿ** : (೬). 'ಪೂಕು', 'ಮುಕುಳಿ' ಪರಾ. [ದೇ. ॥ ತುಳು. ಪುಕುಳಿ]

**ಪುಕ್ಕ$_1$** (ನಾ). ೧. ಹೇಡಿ ; ಅಂಜುಬುರುಕ : ಪಕ್ಕನೆ ಸಕ್ಕರದಂ ಕಂಡಕ್ಕಜ ಮಿಗೆ ಗೊಳ್ಳನೆಲ್ಲರುಂ ಕೈಪೊಯ್ದುಂ ಪುಕ್ಕಮಹ ಜೈನಪತ್ರಿಕೆದಕ್ಕಂ ನೀಡಿದುದು ನಗ್ನಕುಲಕಂ ಚಿತ್ರಂ (ಹಾಲಾಸ್ಯ. ೪-೦೫-೬೦) ; ನಾನು ಅವರ ಜೊತೆಗೆ ಹೋಗುತ್ತೇನೆ. ಅವರೇನೂ ನಿಮ್ಮಂತೆ ಪುಕ್ಕರಲ್ಲ (೬೬ಶ್ರೀ. ೦೦೯) ; ಅಷ್ಟು ಪುಕ್ಕನಾಗಿದ್ದರೆ ಉಮೇದಿನಿಂದ ಹೊರಟದ್ದು ಯಾಕೆ ನೀನು ? (ಮೂಕಜ್ಜಿ. ೬೦). (ಗು). ೨. ಅಂಜುವ ; ಹೆದರುವ : ಈ ಜನಸ್ಥಾನವು ನಮ್ಮಂಥ ಪುಕ್ಕಜನರಾದರೂ ನಿರ್ಭೀತಿಯಿಂದ ಸಂಚಾರ ಮಾಡಲಿಕ್ಕೆ ಯೋಗ್ಯವಾಗಿರುತ್ತದೆ (ಉರಾಹ. ೫೦) ; ನಿನ್ನ ಜಾತಿಯೋ ಪುಕ್ಕ ಜಾತಿ (ಬಾಪಿ. ೦೦೦). [ಪುಕು$_1$ + — ಅ$_7$]

**ಪುಕ್ಕ$_2$** 'ಪುಚ್ಛ$_2$' ನೋ.

**ಪುಕ್ಕಟೆ, ಪುಕಸಟ್ಟೆ, ಪುಕಸಾಟೆ, ಪುಕ್ಕಟ್ಟೆ, ಪುಕ್ಕಸಾಟೆ, ಪುಗಸಟ್ಟೆ, ಪುಗಸಾಟೆ, ಪುಕ್ಕಟೆ** (ಅ). ೧. ಬಿಟ್ಟಿಯಾಗಿ; ಉಚಿತವಾಗಿ; ಧರ್ಮಾರ್ಥವಾಗಿ : ಇಕ್ಕದೆಜೆಯದೆ ಬಿತ್ತಿ ಬೆಳೆಯದೆ ಪುಕ್ಕಟೆಯೆ ಸ್ವರ್ಗಾದಿ ಭೋಗವು ಸಿಕ್ಕಲರಿವುದೆ (ಸಂಪ್ಯಾಉ. ೪-೯೬) : ಪಕ್ಕಕೋದುಪವಾಸ ಪುಕ್ಕಟೆ ಶ್ರೀತೊಲಸಿ ಸಿಕ್ಕಸಿಕ್ಕದಲಿ ಹರಿನಾಮ ಭವಭವದಿ ಸಿಕ್ಕಿ ಸಾಯುವದು (ಸರ್ವಜ್ಞ. ೯೦೯) ; ನಾನು ಔಷಧಿಗೆ ಬಂದೆ . . . ನೀವೂ ಪುಕ್ಕಟೆ ಕೊಡ ಬೇಕಾಗಿಲ್ಲ (ಕಂಸಸಂ. ೮೦). ೨. ವ್ಯರ್ಥವಾಗಿ ; ಸುಮ್ಮಸುಮ್ಮನೆ ; ನಿಷ್ಪ್ರಯೋಜಕವಾಗಿ : ನೀವು—ನಿಮ್ಮ ಮಗ, ಮನಸಿನಿಂದ ಪ್ರೇಮದಿಂದ ಕಲಿಸುತ್ತೀರಿ, ಇತರರು ಏಕೆ ಪುಕ್ಕಟೆ ತಲೆಯೊಡಕೊಳ್ಳಬೇಕು (ಕ್ರೀಮೂಶ್ರ. ೨೪೬) ; ಇಲ್ಲಿಗೆ ಬಂದು ನಾನು ಪುಕ್ಕಟೆ ಮೆಯ್ಯುತ್ತಿರಲಿಲ್ಲ (ದೀಹಹ. II, ೨೭). **ಪುಕಸಟ್ಟೆ** : ೧. ಪಂಚಾಯ್ತಿಮೆಂಬರುಗಳಿಗೆಲ್ಲ ಪುಕಸಟ್ಟೆ ಕ್ಷೌರ ಮಾಡುತ್ತೇನೆ (ರಂಗೆಳ. ೬೩). **ಪುಕಸಾಟೆ** : (೬). **ಪುಕ್ಕಟ್ಟೆ** : ೧. ಸ್ವಾಮಿ, ಇವರು ಪುಕ್ಕಟ್ಟೆ ಕೆಲಸ ಮಾಡುತ್ತಿದ್ದಾರೆ (ಮೂಹಾಹ. ೦೬೦) ; ಸಿಪಾಯಿಗಳಾದವರಿಗೆ ಪುಕ್ಕಟ್ಟೆ ಪ್ರಯಾಣದ ಸೌಕರ್ಯವಲ್ಲದೆ ಮತ್ತಾವ ಸೌಕರ್ಯವನ್ನೂ ಒದಗಿಸುವುದಿಲ್ಲ (ಶ್ರವಾಜ. II, ೯೯೦). **ಪುಕ್ಕಸಾಟೆ** : ೧. ಅದೇನು ಪುಕ್ಕಸಾಟೆ ಬಂದು ಬಿಡುತ್ತೇನು ? (ಕೂಕಿ). **ಪುಗಸಟ್ಟೆ** : ೧. ರಾಜಶ್ರೀಮಿಲ್ಲಿನ ಷೇರುಗಳನ್ನು ಪುಗಸಟ್ಟೆ ಕೊಟ್ಟರೂ ಕೊಳ್ಳುವವರಿರಲಿಲ್ಲ (ಸಾಲಿಹ. ೨) ; ಸುಮ್ಮನೆ ಪುಗಸಟ್ಟೆ ಅನ್ನ ಹಾಕುತಾ ಇರಲಿಲ್ಲ (ಸಾಹೇಬ್. ೬೩). **ಪುಗಸಾಟೆ** : ೧. ಇನ್ನೊಂದು ಸಾರಿ ಹುಟ್ಟಿ ಬರಬೇಕು ಪುಗಸಾಟೆ (ದುಂಬಿಕ. ೧೦೩). **ಪುಕ್ಕಟೆ** : ೨. ಪುಕ್ಕಟೆ ಕಳೆದ ಕಾಲೇಜದಲ್ಲಿ ಸಮಯವನ್ನು (ಸ್ವಪ್ನಕ. ೦೦೯) ; ಬಂಜೆಯಾಗಿ ಬಂದ ಗಿರಿಜಾ ಸಪ್ತ ಅಪತ್ಯದ ಪುಕ್ಕಟೆ ಅಭಿಧಾನದಿಂದ ಖುಷಿಯಾಗುತ್ತಿದ್ದಳು (ದೀಹಹ. II, ೯೯೬).

**ಪುಕ್ಕಟೆ ಬಸವ** = (ಆಲಂ) ಬಿಟ್ಟಿಯಾಗಿ ಕೆಲಸ ಮಾಡುವ ವ್ಯಕ್ತಿ : ಬಿಟ್ಟಿ ಕೆಲಸವನ್ನು ಮಾಡಿಸಿಕೊಳ್ಳುವವರು ಈ 'ಪುಕ್ಕಟೆಬಸವ' ನಿಗಾಗಿ ಅಲೆದಲೆದು ಹುಡುಕಬೇಕಾಗಿರಲಿಲ್ಲ (ಕೆಲಸಮ. ೩).

[ ← ಮರಾ. ಪುಕಟ್, ಫುಕಾಸಾಠೀ. / ತುಳು. ಪೊಕ್ಕಡೆ ]

**ಪುಕ್ಕಟ್ಟೆ** 'ಪುಕ್ಕಟೆ' ನೋ.

**ಪುಕ್ಕತನ** (ನಾ). ಅಂಜುಗುಳಿತನ ; ಪುಕ್ಕಲು : ಅತಿಸೂಕ್ಷ್ಮತನವು ಪುಕ್ಕತನಕ್ಕೆಳಸುತ್ತದಲ್ಲವೆ ? (ಗಾಳಿಗು. ೬೮) : ಮೊದಲಿನ ಪುಕ್ಕತನ ಈಗ ಅವನಲ್ಲಿ ಉಳಿದಿರಲಿಲ್ಲ (ಮಬೆಕೆ. ೧೩೬). [ಪುಕ್ಕ$_1$ + — ತನ]

**ಪುಕ್ಕಲ** (ನಾ). ಹೇಡಿ ; **ಪುಕ್ಕ** : ಮೊದಲು ಧೈರ್ಯದಿಂದಿದ್ದ ಕೆಲವರು ಈ ಗೋಳಾಟವನ್ನು ಕೇಳಿ ಪುಕ್ಕಲರಾಗುತ್ತಿದ್ದರು (ರಾಬಿಜ. ೦೬೬).

[ಪುಕ್ಕಲು + — ಅ$_7$]

**ಪುಕ್ಕಲತನ** 'ಪುಕ್ಕಲುತನ' ನೋ.

**ಪುಕ್ಕಲಿ** (ನಾ). ಹೆದರುವ ಸ್ವಭಾವದವಳು; ಅಂಜುಬುರುಕಿ : ಅಯ್ಯೋ ಪುಕ್ಕಲಿ, ಕೆನ್ನೆಗೆ ಅರಿಶಿನ ಹಚ್ಚಿಕೊಂಡು ಅಡಿಗೆಮನೇಲಿ ಬಿದ್ದಿರೋಕೆ ಸರಿ ನೀನು (ಕಂಠಾಣ. ೦೯೯). [ಪುಕ್ಕಲು + — ಇ$_4$]

**ಪುಕ್ಕಲು** (ನಾ). ೧. ಅಂಜಿಕೆ ; ಭಯ ; ಭೀತಿ : ಭರಮ್ಯಾಹೆಗ್ಗಡೆಯವರು ಶ್ರೀಮಂತರಾಗಿದ್ದರೂ ಸರಕಾರ, ಪೋಲೀಸು ಎಂದರೆ ಅವರಿಗೆ ತುಂಬ ಪುಕ್ಕಲು (ಮಲೆಮ. ೫೩೮). (ಗ್ರಾ). ೨. ಅಂಜಿಕೆಯುಳ್ಳ; ಹೆದರುವ : ಅಪರಾಧಿಗಳು ಯಾವಾಗಲೂ ಪುಕ್ಕಲು ಸ್ವಭಾವದವರು (ಚಿನ್ನಬೇ. ೦೮೪); ಈ ಪುಕ್ಕಲುಮಾತುಗಳು ನಿನಗೆ ಸಲ್ಲವು (ಶಾಂತಲಾ. ೨೮); ಮೊದಲೇ ಅವಳದ್ದು ಪುಕ್ಕಲು ಜೀವ. ಅದೂ ಆ ಹೊತ್ತಿನಲ್ಲಿ ಬಂದರೆ ಹೆದರುವುದು ಸ್ವಾಭಾವಿಕ (ದೇವಹಂ. ೨೧೩).

[ಪುಕ್ಕು$_1$ + – ಅಲು (< – ಅಲ್$_2$). /ತುಳು. ಪುಕ್ಕಲೆ; ಕೊಡ. ಪುಕ್ಕೀಲೇ]

**ಪುಕ್ಕಲುತನ, ಪುಕ್ಕಲತನ** (ನಾ). = ಪುಕ್ಕತನ : ಛೆ! ಎಲ್ಲಾ ಪುಕ್ಕಲುತನ (ಮುಣಿಮಾ. ೦೯೬); ವಾರ್ತಾಪತ್ರಿಕೆಗಳ ಪುಕ್ಕಲುತನವನ್ನೂ ಮುಂದಾಳುಗಳ ಡೋಲಾಯಮಾನವಾದ ನೀತಿಯನ್ನೂ ಕಂಡು, ಸ್ವತಂತ್ರವಾದ ಮತ್ತು ಧೈರ್ಯದಿಂದ ಕೂಡಿದ ಪತ್ರಿಕೆಯ ಅಗತ್ಯದ ವಿಷಯದಲ್ಲಿ ಅವನಿಗೆ ಸಂಶಯ ಉಳಿಯಲಿಲ್ಲ (ದಾದಾಸ. ೩೦). **ಪುಕ್ಕಲತನ :** ಅವಳ ಪುಕ್ಕಲತನಕ್ಕೆ ಚಪ್ಪಾಳೆ ತಟ್ಟಿ ನಗಬೇಕು! (ಮರುಜ. ೦೦೨); ಅವಳ ತೌರುಮನೆಯವರೂ ಕೂಡ ಅವಳ ಈ ಅತಿಯಾದ ಪುಕ್ಕಲತನಕ್ಕೆ ಹಾಸ್ಯ ಮಾಡಿದ್ದುಂಟು (ಕಾಗಳ. ೦೦೧). [ಪುಕ್ಕಲು + – ತನ]

**ಪುಕ್ಕಸಾಟೆ** 'ಪುಕ್ಕಟೆ' ನೋ.

**ಪುಕ್ಕಿ** (ನಾ). = ಪುಕ್ಕಲಿ : ಕುಮುದಿನಿಯು ಎಷ್ಟಾದರೂ ಹೆಂಗಸು, ಆಕೆಯು ಪ್ರಸಂಗವಿಶೇಷದಲ್ಲಿ ಪುಕ್ಕಿಯಾದಳೆಂದೂ ಅನ್ನಬಹುದು (ಕುಮುದಿ. ೧೬೧)

[ ಪುಕ್ಕ$_1$ + – ಇ$_2$ ]

**ಪುಕ್ಕು$_1$** (ನಾ). ಅಂಜಿಕೆ; ಹೆದರಿಕೆ; ಭಯ : "ಭೀರುತ್ವದೊಳ್ ಯೋನಿಯೊಳ್ ಪುಕ್ಕು" (ಶಬ್ದಮಂ. ೬೯); ಇನ್ನು ತಾನೊಬ್ಬಳೇ ಹೋಗಬೇಕು. ಕೆಮ್ಮಣ್ಣು ಕಳಿಯುವವರೆಗೆ ಮಾತ್ರ ಸ್ವಲ್ಪ ಪುಕ್ಕು (ಹೊಸಕ್ಷ. ೪೯); ಜನ ರಸಿಕರೆಂದೆನಿಸಿದರೂ ಅವರಲ್ಲಿ ಬೇಗನೆ ಪುಕ್ಕು, ಹೇಡಿತನಗಳು ಮೆಲ್ಲನೆ ಸೇರಿಕೊಳ್ಳುವುವು (ಯುಕ್ಷತ್ರ. ೩೦).

**ಪುಕ್ಕಾಗು** = ಹೆದರು ; ಅಂಜು : ಬ್ರಾಹ್ಮಣರೆಲ್ಲ ಅದಕ್ಕೆ ಪುಕ್ಕಾಗಿ . . . ನಾರಣಪ್ಪನ ಮನೆಯೆದುರು ಬಂದು ನಿಂತು ತೆರೆದ ಹೆಬ್ಬಾಗಿಲನ್ನು ನೋಡಿ ಭಯಗ್ರಸ್ತರಾದರು (ಸಂಸ್ಕಾರ. ೫೬).

[ ದೇ.॥ ತುಳು. ಪುಕ್ಕು, ಪುಕ್ಕ್; ಪರ್ಜಿ. ಪುರ್ಕಿ ]

**ಪುಕ್ಕು$_2$** 'ಪೂಕು' ನೋ.

**ಪುಕ್ಕೊಳ್ಳಿ** (ನಾ). ಒಂದು ಬಗೆಯ ಭೂಮಿ : ಸ್ವಸ್ತಿಶ್ರೀವಸಿತಾಲಪುರ ಆಟ್ಟರಾನಾರದಿಗೆ ಕಕ್ಕಿಪಳ್ಳಿಯೋನ್ ಪುಕ್ಕೊಳ್ಳಿ ಕೊಟ್ಟು ಸರ್ವ್ವಪರಿಹಾರಮ್ ಕೊಮ್ಬರ್ (ಎಕ. VI, ಮೂಡಗೆ. ೨೬–೪; ಸು. 950 ?). [?]

**ಪುಗಡಿ** 'ಫುಗಡಿ' ನೋ.

**ಪುಗರಿ** (ನಾ). (?) : ಈಶಾನ್ಯಗೆ ಸೀಮೆ ನೆಡುಮೊಜಿಡಿಯಾ ಪುಣುಸೆ ಪುಗರಿಯಾ ಎಡೆಯೆ ಬೀಟ್ಟಿನ್ಸ ಪಳ್ಳಮು (ಎಕ. IX (೩), ಬೆಂಗಳೂ. ೧೫೧–೪೯; ೪28). [ ? ]

**ಪುಗಲ್** 'ಪುಗಿಲ್$_2$' ನೋ.

**ಪುಗಸಟ್ಟೆ** 'ಪುಕ್ಕಟೆ' ನೋ.

**ಪುಗಸಾಟೆ** 'ಪುಕ್ಕಟೆ' ನೋ.

**ಪುಗಿಯಿಸು** 'ಪೊಗಿಸು' ನೋ.

**ಪುಗಿಲ್$_1$**, ಪುಗಿಲು$_1$, ಹುಗಲು, ಹುಗಿಲು, ಹುಗುಲು, ಹೊಗುಳು (ನಾ). ೧. ಪ್ರವೇಶ : ರಾಜಪುರುಷರ್ಗೆ ಪುಗಿಲಿಲ್ಲ (ಇಕ. X, ೧೬೬-೫ ; 7ನೆಯ ೩೩) ; ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಜಲ್ಲಿಗಳ್ ಪೊಸವೆ. . . ಎನೆ ಪೊಸಯಿಸಿದಳಾಕೆ ನಾಟ್ಯಾಗಮುಮಂ (ಆದಿಪು. ೯–೨೫); ರಸಭಾವದ ಕೊಪ್ಪುರದೊನೆ ಪೊಸದೆಸೆಯ[ು]ಪೊಕ್ಕ ಪುಗಿಲಿದೆನೆ ಚಿತ್ರಮಿದಂ ಪೊಸಯಿಸಿ ನರ್ತಿಸಿದಳ್ (ವರ್ಧಮಾ. ೧೦-೪೯) ; ಪುದಿದ ನೆತ್ತರ ಕೆಂಪಾಗಸದೊಳ್ ತೋಱುವುದಿನ್ನುಂ ಕಿಸುಸಂಜೆಯು ನೆಪದೆ ದಿನದ ರಾತ್ರಿಯು ಪುಗಿಲೊಳ್ (ಜಗಃ. ೯-೪೪). ೨. ಬಾಗಿಲು ; ಪ್ರವೇಶದ್ವಾರ : ಆ ವ್ಯೂಹದ್ವಾರದೊಳ್ ಗುಹೆಯ ಪುಗಿಲೊಳ್ ಮಹೋಗ್ರಜರತ್ಸಿಂಹಮಿರ್ಪಂತಿರ್ದ ಭಾರದ್ವಾಜನಾಜಿವೀರನಭಿಮನ್ಯುಕುಮಾರನನೆಟ್ಟಿರಮ್ಪುಗಂಡಾಗಳ್ (ನೇ ಐ ಪು. ೧೨-೩೪ ವ). ೩. ಆರಂಭ ; ಉಪಕ್ರಮ ; ಪ್ರಾರಂಭ : ಯಾತ್ರೆಗವನೀತಲಪತಿಯಂ ಪ್ರೇರಿಸಿತರ್ಧಪುಗಿಲೊಳ್ ಶರದಂ (ಶಾಂತಿಪು. ೦೧-೦೪೦); ಪೋದುದು ಸುಣ್ಣನಿ ಮಲ್ಲಿಂಶರದದ ಪುಗಿಲೋಳ್ (ಕಮುದ. ೨೪೨ ಕ್ರಯೋ); ಹೇಮಳಂಬಿಸಂವತ್ಸರ(ದೊಳ್)ದಾ ಪುಗಿಲೊಳ್ ಮಟಿ ಕೊಳ್ಗಂ (ಅಟ್ಟಿಮ. ೬–೦೪). ೪. ಮುಂಭಾಗ ; ಮುಂದೆಸೆ : ಪುಗಿಲ ಪುಲ್ಲೆಯ ಮೊದಲುರಮುಮಂ ಪೆಱಗಣ ಪುಲ್ಲೆಯ ನಡುವುಮನಯ್ದುಱೋಳ್ ಮೂಱುಮಂ ಮೂಱೋಳೆರಡುಮನೆರಡಱೋಳೊಂದುಮನೆಚ್ಚು ಬಿಲ್ಲಬಲ್ಮೆಯಂ ಮೆಱೆದು (ಶಂಕರಾ. ೫–೪೬ ವ). ೫. ಸಂದರ್ಭ ; ಸಮಯ ; ಹೊತ್ತು : ನಡುವಗಲ ಪುಗಿಲ ಬಿಸಿಲೊಳ್ ಬಿಡೆ ನಾಲಗೆಗಿಟ್ಟು ತೇಂಕಿ ತನ್ನಯ ನೆಟಿಲಂ ಕಡುಗಪ್ಪಲೆಂದು ಪೊರಳಲ್ಕೊಡರಿಸಿ ಮೆಯ್ಯಿಕ್ಕಲಿರ್ದ ವನ್ಯಲುಲಾಯಂ (ಪುಷ್ಪಕ. ೯–೬೬) ; ಇಂದಿರೆ ಪದ್ಮಮಂದಿರದೊಳಿರ್ದ ಮಹಾಪ್ರಣಯಪ್ರಕೋಪದಿಂದೊಂದಿರುಳಿಕ್ಕೆ ಮುಚ್ಚಳವನಾ ಪುಗಿಲೊಳ್ ತೆಱವಾಗೆ ಸೂಟಿಗೆ ಕೃಷ್ಣಂ ದಯೆಯಿಂದೆ ಬಂದು ಬಿಗಿಯಪ್ಪೆ ಧರಾಂಗನೆಯಂ ತದಂಗಕಾರ್ಷ್ಣ್ಯಂ ದಿಟದಿಂ ಕವಲ್ತುದೆನೆ ಪರ್ವಿದುದುರ್ವಿಯ ಚಿತ್ರಮಂ ತಮಂ (ದಶಕು. ೫–೩೪). ೬. ಖಡ್ಗಯುದ್ಧದ ಒಂದು ವರಸೆ : ರೂಪುಗೊಂಡುದೆನೆ ಚಾರಿ ಪುಗಿಲ್ ನೆಲೆ ನೋರ್ಪು ದಂಡೆ ಸೂಟು ನಿಱಿಸು ನಿಘಾತಮಾಂಕೆ ಬಗೆ ಬಗ್ಗಣೆ ವಂಚನೆ ಬಂಧಮೆಂಬಿವಂ ಮೆಱೆ ವೋಪಜರ್ಕಳೇಂ ಕಲಿಸುತಿರ್ಪರೊ ಚಿಟ್ಟರನಟ್ಟಿಮಟ್ಟರಂ (ಪುಷ್ಪಕ. ೨–೬೦). **ಪುಗಿಲು$_1$** : ೨. ಮಕ್ಕೊಂದಿನಂ ಪುಗಿಲಿನೊಳೆ ಕುಳಿತು ಧ್ಯಾನಾರೂಢನಾಗಿ . . . ಪ್ರಾಣ ನಿರ್ವಯಲಾಯಿತು (ಕ್ರಕುಪು. ೬–೦೬೮). ೭. ಆಶ್ರಯ ; ನೆಲೆ : ವಾರಣಾಸಿಗೆಯು ಏಗಿಲಾದ ಪಂಪಾಪುರಂ ಮಾರಾರಿಗಂತು ಪುಗಿಲಾದ ಪಂಪಾಪುರಂ (ಶರಷ. ೫೨೧–೯). ೮. ಕಾಂತಿ ; ಶೋಭೆ : ನೃದಿಲ ಸುಮಾಲಂಕೃತದಿ ಪುಗಿಲಿಂದೆ ಚಿತ್ರವರ್ಣದ ವಿಷ್ಟರಾಗ್ರಹದೊಳಗಿಹಂ (ಕ್ರಕುಪು. ೦–೪೦). 'ಪುಗಿಲುಮೆಱು' ಪರಾ. **ಹುಗಲು :** ೯. ರಂಧ್ರ ; ತೂತು ; ಕಂಡಿ : ಹಸಿಯ ಜಾಲಿಯ ಕಟ್ಟಿಗೆಗಳನ್ನಾಗಲಿ ಬಸರಿಯ ಕಟ್ಟಿಗೆಗಳನ್ನಾಗಲಿ ತಂದು ಅವುಗಳಿಗೆ ಹುಗಲನ್ನು ಹೊಡೆದು (ಕೃಷಿಕ್ರ. ೪೦). **ಹುಗಿಲು** : ೭. ನಿಗಳದೊಳು ಸಿಕ್ಕಿದಗೆ ಕೊಳನ ಹುಗಿಲಿನೊಳು ಪೊಕ್ಕವಗೆ (ಸ್ವರೂಪಾ. ೩–೪); ಭಾಗವತಾಭಿಮಾನದ ಹುಗಿಲು ಪರಮಾನಂದರಸ ವಿಶ್ರಮದ ತನಿಮುಗಿಲು . . . ತಾನೆನಲೆಸವ ವೈಕುಂಠವನು ನೆಱೆ ಕಂಡ (ಖಭಾಗ. ೧೦–೩೫–೧೬). ೯. ಹೊಗಿಸಿದರು ಕಾಡೆಮ್ಮೆ . . . ದೊದ್ದೆಗಳ ವಿಗಡರಕ್ಕಸಭಟನ ಮೂಗಿನ ಹುಗಿಲಿನಲಿ (ಕೊರರಾ. ೬–೨೬–೩೮) ; ಕಾವ್ಯಾರ್ಥವೆಂಬೆರಡು ನೊಗನ ಹುಗಿಲಾದವ್ವೆ (ಪೀಶ್ವಕು. ೨-೧೦-೧೧). ೧೦. ಸೀಳಿರುವ ಸ್ಥಿತಿ ; ಬಿರುಕು ; ಹೋಳು : 'ಹುಗಿಲುಗಳಿ' ಪರಾ. **ಹುಗುಲು :** ೯. ಹಸಿಯ ಬಸರೀಕಟ್ಟಿಗೆಗಳಿಗೆ ದೊಡ್ಡ ಹುಗುಲು ಹೊಡೆದು ಹಾಗು ಹಿಂದೆ ಮುಂದೆ ಗೂಟಗಳನ್ನು ಹೊಡೆದು (ಕೃಷಿಕ್ರ. ೦೦೬) ; [ಹಲಗೆ, ಮೊ.ಗಳ . . . ಬೆಣೆ, ಮೊ.ನ್ನು ಕೂರಿಸುವುದಕ್ಕಾಗಿ ಒಂದು ಚೌಕಟ್ಟಿನಲ್ಲಿ ಮಾಡಿರುವ] ವೆಜ್ಜ, ಉಗಿಲು, ಹುಗುಲು (Mortise. ಇಂಕಂ). **ಹೊಗುಳು:** ೯. ತೋಡಿಗೆ ಹಾಕಿದ ಕಟ್ಟೆಯಲ್ಲಿ ಹೊಗುಳು ತಲೆದೋರಿದಾಗ, ಚಿಮ್ಮಿ ಹಾರುವ ಅವಿರತಜಲಧಾರೆಯಂತೆ, ದುರುಳರ ಸಮೂಹ ನೆಲ್ಲಕ್ಕಿ ಬಾಡೆಯೊಳಗೆ ನುಗ್ಗಿತು (ಹುಲಿಪಾ. ೯೦).

[ಪುಗು (< ಪೊಗು) + ಇಲ್$_2$. / ತಮಿ. ಪುಕ್ಕಿಲ್, ಪುಕಲ್]

**ಪುಗಿಲ್₂, ಪುಗಲ್ (ನಾ).** ೧. ಧ್ವನಿ ; ಸದ್ದು : 'ಪುಗಿಲ್ಗರೆ' ಪರಾ. ೨. ಕೋಗಿಲೆಯ ಧ್ವನಿ : "ಕಂಕಿಲ್ಲುರೆಂದುಂ ಪುಗಿಲ್ ಪುಗಿಲೆಂದುಂ ಕೋಕಿಲಾಲಾಪಂ" (ಕಚಾ. ೩೩-೨೦೩) ; ತದಾಶ್ರಮದ ತರುಗಳ ಮೇಗಿರ್ದು ಪುಗಿಲ್ ಪುಗಿಲೆಂದಿತ್ತ ಬನ್ನಿಮಿರಿಮೆಂಬ ಪೊಂಬಣ್ಣದ ಕೋಗಿಲೆಗಳುಮಂ . . . ನೋಡಿ (ಶಂಕರಾ. ೦-೦೦೫ ಪ) ; ಪುಗಿಲ್ ಪುಗಿಲೆಂಬ ಪಿಕಸ್ವನಂಗಳಂ ಮನಸಿಜನೊಲ್ದು ಕೇಳ್ದು (ರಾಜಶೇ. ೯-೭೮). **ಪುಗಲ್:** ೨. ಪೋ ಪು[ಗ][ಪಾಠಾಂ. ಗಿ]ಲ್ ಪು[ಗ]ಲೆನುತಿರ್ಪ ಪಕ್ಕಿ ಮನವಂ ಕವರುತ್ತಿರೆ (ಶಂಕರಾ. ೩-೪೩) ; ಭೋರ್ಗರೆದೆತ್ತಂ ಪುಗಲೆಂಬ ಕೋಕಿಲೆ . . . ಸುಸ್ವರದಿಂದೋದುವ ಕೀರಮಾರ ಬಗೆಗಂ ಸಮ್ಮೋಹಮಂ ಮಾಡಮೇ (ಸುಕುಮಾ. ೦-೭೩); ಬನದಲ್ಲಿ ಪುಗಲ್ ಪುಗಲೆಂಬ ಗಂಡುಗೋಗಿಲೆ (ಶಬರ. ೨೩೯ ಕೃಷ್ಣೋ). [ದೇ.॥ ತಮಿ. ಪುಕಲ್ ; ಮಲ. ಪುಕಲು = ಹೇಳು]

**ಪುಗಿಲ ? (ನಾ).** (?) : ಪುಗಿಲಂ ಕ್ರೀಡನಶೀಲನಕ್ಕರಿಗನಾದಂ ಪಲ್ಲವ ಗ್ರಾಹಿ ಮಾಸುಗಿ ನಮ್ಮಾದುದನಾಗಲುಂ ನವೆಯಲುಂ ಮೆಯ್ದಿರ್ಪಮೇ ಕಾರಣೆಂಬೆ ಗಡಾ (ಕಾವ್ಯಾ.ಕ. ೦೩೯). [ ? ]

**ಪುಗಿಲು₁** 'ಪುಗಿಲ್₁' ನೋ.

**ಪುಗಿಲು₂ (ನಾ).** (?) : ಪೆನನಿರಕ್ಕಂ ಪುಗಿಲುಮದಟ ಪವಣ (ಅ. ೦೧೪೭, ಪಾಠಸಗ್. ೨೨೯-೨೦ ; ೧). [ ? ]

**ಪುಗಿಲುವೆಱು (ಕ್ರಿ).** ಶೋಭಿಸು ; ಹೆಸರಾಗು ; ಪ್ರಸಿದ್ಧವಾಗು : ಅಗುಳಂತಿರೆ ಕಾಮಾಟದವರುಮವರೊತ್ತಿನೊಳು ಪುಗಿಲುವೆತ್ತತಿಮಂತ್ರ ವಾದಿಗಳು ಮಂತ್ರಿಸಲುವಗಿದವರಿಗೆಯು ಮಹಾಭೂತ ಪೊಯ್ಯಲು (ಕೃ.ಕುಪು. ೬-೨೩). [ಪುಗಿಲು₁ (< ಪುಗಿಲ್₁) + ವೆಱು₁]

**ಪುಗಿಲ್ಗರೆ (ಕ್ರಿ).** ಧ್ವನಿ ಮಾಡು; ಸದ್ದು ಮಾಡು : ಮೆಯ್ಯ ಮಸಿ ಕೊರಲ ಬಕ್ಕಳೆ ಪೊಯ್ಯ ಪುಗಿಲ್ಗರೆವ[ಪಾಠಾಂ. ಕನಲ್ಗರೆವ, ಘರಿಲ್ಗರೆವ]ಕೆಯ್ಯ ಕಂಕರಿಕ ಕರಂ ರಯ್ಯಮೆ (ಕಾವ್ಯಾ.ಕ. ೩೦೯). [ಪುಗಿಲ್₂ + ಕರೆ₁]

**ಪುಗಿಲ್ಬಟ್ಟೆ (ನಾ).** ಪ್ರವೇಶದ್ವಾರ ; ಕಂಡಿ : ಬಲಸಗ್ಗಂ ಗವಿಸಂದಿ ಡೋಣೆ ಪರಿಚಾರೇರುಂ ಪುಗಿಲ್ಬಟ್ಟೆ ಮೇಖಳೆ ಕಾಳ್ಗಾಸಱ ಗಂಡಶೈಲಮಡಕಿಲ್ಗೂಟಂ ಹರಲ್ಗಟ್ಟು . . . ಅಜಸ್ರಂ ರಯ್ಯಮಾ ಬೆಟ್ಟದೊಳ್ (ಸೂಕ್ತಿಸು. ೩-೨). [ಪುಗಿಲ್₁ + ಬಟ್ಟೆ₁]

**ಪುಗಿಲ್ವಿಡು (ಕ್ರಿ).** ಎಡೆ ಬಿಡು ; ಅವಕಾಶ ಕೊಡು : ಸಿಡಿಲ್ಪನಿಪೊಯ್ಲನಿಂ ಪುಗಿ[ಪಾಠಾಂ. ಪೊಯ್ಲನಿಂಪುನಿ]ಲ್ವಿಡದೊಡೆದತ್ತು ತಟ್ಟ ಘನಮಂಡಲ ಮೆಂದೆನೆ ವಾರಿಧಾರೆಗಳ್ . . . ಸುರಿಯುತ್ತುಮಿರ್ದುದು (ಕುಸುಮಾ. ೬-೨೭). [ಪುಗಿಲ್₁ + ಬಿಡು₁]

**ಪುಗಿಸು** 'ಪೊಗಿಸು' ನೋ.

**ಪುಗು** 'ಪೊಗು' ನೋ.

**ಪುಗುಡಿ** 'ಪುಗಡಿ' ನೋ.

**ಪುಗುತರ್** 'ಪೊಗುತರ್' ನೋ.

**ಪುಗುತೆ** 'ಪೊಗುತೆ' ನೋ.

**ಪುಗುದೆಸೆ, ಹೊಗದೆಸೆ (ನಾ).** ಹೋಗಬೇಕಾದ ದಿಕ್ಕು ; ಪಾರಾಗುವ ಹಾದಿ : ಮುಱಿದುದೆಮ್ಮಯ ಸೇನೆ ಸಮರದೊಳ್ ಪೊಕ್ಕು ಮೈಗುಱುಹ ಕಾಣಿಸಿಕೊಂಬರಂ ಕಾಣೆವಗ್ನಿಜನ ಬಱಿದೆ ಕರೆತಂದೆಪಕಟಕಟ ಪುಗುದೆಸೆ ಯಾವುದೆಮಗೆ (ಕಅ. ೩೯-೯). **ಹೊಗದೆಸೆ :** ಜಗವೆಲ್ಲವನೂರ ಮಾಡಿ ಊರೆಲ್ಲವ ಮನೆಯ ಮಾಡಿ ಹೊ[ಪಾಠಾಂ. ಹೋ]ಗದೆಸೆಯಿಲ್ಲದ ಸುಳುಹು ನೋಡಾ (ಅಕ್ಕ. ೨೩೯-೧೩೦೦) ; ಹೊಗದೆಸೆಯುನು ಕಾಣದುಬ್ಬಿಲ್ಲಬಾನ ಬಹುಬಗೆಯಲಿ ಕಂಗೆಟ್ಟಾಗ ಮಿಗ ಹುಲಿಯೂರ ಬಳಿಯ ಬಿಟ್ಟು ಪಾಳೆಯ ದೆಗೆದೋಡಿದನು (ಕಂಠೀ. ೦೭-೩೭). [ಪುಗು (< ಪೊಗು) + ದೆಸೆ₂]

**ಪುಗುಳ್₁ (ಕ್ರಿ).** ಗುಳ್ಳೆಯೇಳು ; ಬೊಕ್ಕೆಯಾಗು : ಒರೊರ್ವರ್ ಕುಳಿರ್ವ ಕಪ್ಪುರದ ಪಟ್ಟಮನಮರ್ಚೆ ಮನ್ಮಥಜ್ವಲನಪಾತದಿಂ ಮೆಯ್ ಮಿಗೆ ಪುಗುಳ್ತುದೆಂಬ ಸಂಕೆಯಂ ಕೆಳದಿಯರ್ಗೆ ಬಳಯಿಸುವಳ್ (ಪಂಪಕ. ೯-೩೪ ವ) ; ಮುಱಿದುಱಿದೋಪರಳ್ಕಿರ್ದ ಪುಗುಳ್ತುರಿವಂತೆ ಮುಗುಳ್ತು ಸಂದ ನಾಣೊಳಗು ಸಡಿಲ್ದಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ಬಾಡಿ ಪೊಟ್ಟೆಳಿಸಿ ಬೆಳರ್ತು ಮುದ್ರಿಸಿದ ಬಾಯ್ತಗ್ಗಲರ್ವಿರಿವಂತು ಕಂಪು ಕೈಕೊಳೆ ಬಿರಿದತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಂತೆಯಂತೆಪೊಲ್ (ಆಪಂಪ. ೬-೩೯). [ದೇ.॥ ತಮಿ. ಮಲ. ಪೊಕ್ಕುಳ]

**ಪುಗುಳ್₂, ಪುಗುಳು, ಪೊಕ್ಕ, ಹುಗುಳು (ನಾ).** ಉಷ್ಣತೆಯಿಂದ ಅಥವಾ ಘರ್ಷಣೆಯಿಂದ ಮೈಮೇಲೆ ಹಾಗೂ ಬಾಯಲ್ಲಿ ಏಳುವ ಗುಳ್ಳೆ,—ಬೊಕ್ಕೆ : ಬಿರಿದಪ್ಪ ನಂಜುಪುಗುಳುರ್ಬಿದಮಂಗಸಿತಾಹಿದಂಶ ಮಾದುದು ದಿಟಂ (ಶಾಂತಿಪು. ೩೩೩) ; ನಡೆದಡಿಗಳ್ ಪುಗುಳ್ಗೆದುವುಗ್ಗಡ ಮಾಯ್ತು ನಿದಾಘಂ (ಅನಾಥ. ೧-೯೭) ; ತಂಬುಲದ ಚೂರ್ಣದಧಿಕತೆಯಿಂ ಬಾಯ್ ನೆಱ ಬೆಂದು ಪುಗುಳ್ಗಳಾದೊಡೆ . . . ತೈಲದೊಂದಱಿಂದಂ ಕಿಡುಗುಂ (ಜಪುರ. ೨-೦೩೭). **ಪುಗುಳು :** ಪವನನ ಮೆಯ್ಯೊಳ್ ಪುಗುಳುಗಳ ಪವಿಸೆ ಪಾವಕನ ತನುವಿನೊಳ್ ಮಹಾಸ್ಫೋಟಕವಾತಪದ ಕಡುಪಿಂದೆ ನೆಗೆತಂದವುವೆನೆ ಬೇಸಗೆಯ ಬಿಸಿಲನದನೇನೆಂಬಂ (ಗಿರಿಜಾ. ೯-೨೩) ; ಅಂಬು ಜಾಕ್ಷಿಯರುಗಳಧರಚುಂಬನಕ್ಕೆ ಎನ್ನ ಜಿಹ್ವೆ ಹಂಬಲಿಸದ ಹಾಗೆ ಸೀಳಿ ಪುಗುಳವೇಳಲ್ಕೆ (ಸುಭಾಷ. ೧೦-೯). **ಪೊಕ್ಕ :** ಗುಳಿ ಸೇರಿದ್ದ ಕಣ್ಣುಗಳೂ ಉಬ್ಬಿದ್ದುವು—ಕೆಂಡ ಬಿದ್ದು ಬಂದ ಪೊಕ್ಕದಂತೆ (ಚಾಕಿ. ೦೦೩). **ಹುಗುಳು:** "ವಿಸ್ಫೋಟಃ, ಪಿಟಕಃ—ಈ ೨ ಹುಗುಳು" (ಪಾಕರಾ. ೦೨೦) : ಕಿಚ್ಚಿಗೆ ಮೈಯಿ ಹುಗುಳುವುಟ್ಟಿತ್ತು ಉದಕಕ್ಕೆ ಧಳಿಯಾಗಿ ಸ್ಫಟಿಕಗಿರಿಯಲ್ಲಿ ಹಣ್ಣು ಹುಟ್ಟಿತ್ತು (ಅಪಕಂ. ೦೭೯-೫೦೩) ; ಕರ್ಪುರದ ಮಣಿಗಳನನುಕರಿಪ ಹುಗುಳು ಗಳು ಮೊಳೆಯೆ (ಬಸಪು. ೦೩-೨೦) ; ತೀಂಟೆಯಿಂತಪ್ಪ ತುಱಿಯ ಹುಗುಳು ಗಳೊಡೆಯೆ (ಬಸವಪು. ೯-೨೩-೭).

[< ಪುಗುಳ್₁ /ತಮಿ. ಪೊಕ್ಕುಳ ; ಮಲ. ಪೊಕ್ಕುಳ, ಪೊಕ್ಕಿಳ ; ಕೊಡ. ಪೊಕ್ಕುಳ ; ಕೋತ. ಪೊಗ್ಳ್]

**ಪುಗುಳು** 'ಪುಗುಳ್₂' ನೋ.

**ಪುಗುಳೇಳ್** 'ಪುಗುಳೇೞ್' ನೋ.

**ಪುಗುಳೇೞ್, ಪುಗುಳೇಳ್, ಹುಗುಳೇಳು (ಕ್ರಿ).** =ಪುಗುಳ್₁: ತದ್ವಿಷಾ ಗ್ನಿಯ ಕಿಡಿಯಿಂದೊಡನೆಯ ಗೋಪರ್ ತಂತಮ್ಮೊಡಲೊಳ್ ಪುಗುಳೇೞ್ ಪೋಗಿ ಪುಯ್ಯಲ್ಬುವುದುಂ (ಜಗನ್ನಾ. ೩-೮೭). **ಪುಗುಳೇಳ್ :** ನೆಗೆದ ತಂತು ವರ್ಣಿಗಳೇ ಮುಗಿಲ ಮೆಯ್ ಪುಗುಳೇಳೆ ಪುಷ್ಕರದಿಂ ಪೂತ್ಕರಿಸುವ . . . ಕಟ್ಟಣಕದ ದುಷ್ಟಗಜಮಂ (ಗಿರಿಜಾ. ೨-೦೦೫ ವ). **ಹುಗುಳೇಳು :** ಇನ್ನುಬರ ಹುಗುಳೆದ್ದು ನೋವುತಿರ್ಪುದೊ ತಳಂ (ಕಂಠೀ. ದೇ. ೩೦೦-೪); ಶಿವಶಿವೇಗುವೆ ನಿನ್ನು ಹುಗುಳೇಳುವವಲಾ ಶಿವನಂಗವೆನುತಂ ಶಿವನ ತನುವಂ ನೋಡಿ ತಟತಟ ಎಂದು ತಟಿಱಿದ (ಬಸಪು. ೦೩-೨೦). [ಪುಗುಳ್₂ + ಏೞ್₁]

**ಪುಗುಳೊಡೆ (ಕ್ರಿ).** = ಪುಗುಳ್₁ : ಕಠಿನಭೂಮಿಯೊಳ್ ನಡೆದೊಡೆ ಕಿಱುಗಲ್ಗಳುಂ ಪೆಟ್ಟಿಗಳುಮುಗುಟ್ಟು ಪುಗುಳೊಡೆದು (ಪದ್ಮಾರಾ. ೨೯-೦೦). [ಪುಗುಳ್₂ + ಒಡೆ₁]

**ಪುಗುಳ್ಗುತ್ತ (ನಾ).** ಮೈಮೇಲೆ ಬೊಕ್ಕೆಯಾಗುವ ಒಂದು ಬಗೆಯ ರೋಗ : ಗುರು ಮಂದ ಶುಕ್ರರೊ(ನೊ)ಡನಿರೆ ಸುರನದಿ ಹೃ(ಹಿ)ಮಾದ್ರಿಯೆಡೆಯ ನಾಡೊಳಗೆಲ್ಲಂ ಪಿರಿದು ಭಯಮಕ್ಕುಮಲ್ಲಿಯ ನರರ್ಗಂ ಪುಟುಗು(ಪುಗುಳ್ಗು)ತ್ತಮಕ್ಕುಮಿದು ಪರಮಾರ್ಥಂ (ಅಲ್ಪಿತು. ೭-೩೩). [ಪುಗುಳ್₂ + ಕುತ್ತ]

**ಪುಗ್ಗಾಯಿಲ, ಪುಗ್ಗಾಯ್ಲ (ನಾ).** ಸೊಕ್ಕಿದವನು ; ಅಹಂಕಾರಿ ; ಗರ್ವಿಷ್ಠ : ಮನ್ನೆಯರ್ಕುಱುಂಬರ್ ಪುಗ್ಗಾಯಿಲರೆನಿಸುವ[ರ]ಸುಮಕ್ಕಳ್

ಪಲರುಂ ಬಂದಿರ್ದರಾ ನೃಪಾಸ್ಥಾನಿಕೆಯೊಳ್ (ವರ್ಧಮಾ. ೩-೫೨); ಆಯಿಲ ಪುತ್ರ್ನಯಕ್ಕೆ—ಗೋಬಾಯಿಲು, ಪುಗ್ಗಾಯಿಲು (ಕಮುದ. ೨೦೫ ಕ್ರಿಯೋ); ತಾಯುಂ ನಾಗನಿಂ ಕೊಲಿಸದೆ . . . ಬಾಯಿಂ ಸ್ವೈವರ ಪೊಸ ಪುಗ್ಗಾಯಿಲನಂ ಕೊಂದು ಕೂಗಿಸದೆ ಬಿದಿ ಸತತಂ (ಶಬಶಂ. ೬೪೨). ಪುಗ್ಗಾಯ್ಲ್ಲ: "ಪುಗ್ಗಾಯ್ಲಂ—ಗರ್ವಿತಂ" (ಕಮುದ. ಶಂ. ೨); "ಗರ್ವಿತನಲ್ಲಿ ಪುಗ್ಗಾಯ್ಲ ನೆಂದಕ್ಕುಂ" (ಶಬ್ದ್ನಕ್ಕೆ. ೬೬). [ ಪುಗ್ಗು₂ + ಆಯಿಲು₂ ]

**ಪುಗ್ಗಾಯಿಲತನ** (ನಾ). ಸೊಕ್ಕು ; ಗರ್ವ ; ಉದ್ಧಟತನ : ಇನಿತೇಕೀ ಪುಗ್ಗಾಯಿಲತನಮಿವಜಂದಸ್ಸದಾಕ್ಷಿಯಂ ಮಾಜದೆ ನೀಂ (ಏಕ್ಕ್ನು ಕ. ೩-೦-೦೫೫). [ ಪುಗ್ಗಾಯಿಲ + — ತನ ]

**ಪುಗ್ಗಾಯ್ಲ** 'ಪುಗ್ಗಾಯಿಲ' ನೋ.

**ಪುಗ್ಗಿ** 'ಪುಟಿಗ' ನೋ.

**ಪುಗ್ಗಿಡು** ? (ಕ್ರಿ). (?) : ಪುಡುಕುನೀರೊಳರ್ದೆಯುಂ ಪುಟಪಾಕಂ ಸುಡೆಯುಂ ಮಡು ಪುಗ್ಗಿಡೆಯುಯುಂ ಬಾಳಿತ್ತಿ ಸೀಳೆಯುಂ ಗುಗ್ಗುಳಂ ಬೊತ್ತಿಸೆಯುಂ (ಅಜಿತ. ೧೦-೧೯ ವ). [ ? ]

**ಪುಗ್ಗು₁** 'ಪುಟಿಗ' ನೋ.

**ಪುಗ್ಗು₂**, ಹುಗ್ಗು₂ (ನಾ). ಸೊಕ್ಕು ; ಗರ್ವ ; ಅಹಂಕಾರ : "ಉಕ್ಕಿವಂ, ಬಿಂಕಂ, ಪುಗ್ಗು, ಪಂತ, ಹಮ್ಮು, ಗಬ್ಬ, ಅದಟು — ಈ ೭ ಗರ್ವಂ" (ಕರಿಸಾ. ೫೬-೨೩೦) ; "ಹಮ್ಮದಟು . . . ಪುಗ್ಗುಪಾಂಕ್ಕೆಪವೆಂಬ್ನಲ್ ಗಮ್ಮನೆ ಗರ್ವಮಿವದಕ್ಕುಂ" (ಕಬಕ್ಕಂ ೧೧೩); ಅಗ್ಗದ ಪುಗ್ಗಿನ ಚಂಪಕನನಜಸಿ ನಾಜಾಂತು . . . ಬಲ್ಗೋಲ್ಗಳಂ ತಿಜಿವಾಯ್ಕೆ ಸಂಧಿಸುತೆಚ್ಚಂ (ರಾಜಶೇಖ. ೧೯೫-೦೦). 'ಪುಗ್ಗಾಯಿಲ' ಪರಾ. ಹುಗ್ಗು₂: 'ಹುಗ್ಗಿಗ' ಪರಾ. [ ದೇ. ॥ ತಮಿ. ಪೊಲ್ಲು ]

**ಪುಗ್ಗೆ** (ನಾ). ೧. (ಉಕ) ಕಡಲೆಹಿಟ್ಟಿಗೆ ಉಪ್ಪು, ಕಾರ ಮೊದಲಾದು ವನ್ನು ಬೆರೆಸಿ ದುಂಡಗೆ ಉಬ್ಬುವಂತೆ ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ಖಾದ್ಯ ; ಬುರುಬುರಿ : ಹಸಿವಾಗಿದೆಯೆಂದು ಪುಗ್ಗೆ ಕೊಳ್ಳಲು ಗಂಗೆ ಕಳಗಿಳಿದು ಹೋಗಿದ್ದಾಳೆ (ಗಂಗಾಗಿ. ೦೦೯); ನಾಲ್ಕಾಣೆಯ ಪುಗ್ಗೆ ತಿಂದು ಮುಗಿಸುವಷ್ಟರಲ್ಲಿ ಶಾಲೆ ಬಿಟ್ಟಿತು (ಗಾಕಕ. ೧೬೬). ೨. ಗಾಳಿ ತುಂಬಿ ಉಬ್ಬಿಸಿದ ರಬ್ಬರುಚೀಲ ; ಬಲೂನು : ಒಂದೇ ಒಂದಾದರೂ ಅಂತಹ ರಬ್ಬರ್ ಚೆಂಡೋ ಪ್ಲಾಸ್ಟಿಕ್ ಹಕ್ಕಿಯೋ, ಬಣ್ಣದ ಪುಗ್ಗೆಯೋ ತನಗೆ ದೊರೆಯುಬಾರದೆ (ಮುಂಗಾಮು. ೨೬). ೩. (ಆಲಂ) ಉಬ್ಬು ; ಉತ್ಸಾಹ : ಪುಗ್ಗೆಯನ್ನಿತ್ತಿದೆಗೆ ಲಗ್ಗೆಯನು ಹಾಕಿದೆನು ; ಸಗ್ಗದಲ್ಲಿಹ ನೀನು ಬಗ್ಗಲಿಲ್ಲ ! (ಕಲಂಬಿ. ೫೩). [ ← ಮರಾ. ಫುಗಾ ]

**ಪುಚ್ಚ₁**, ಹುಚ್ಚ₁ (ನಾ). ೧. ಬುದ್ಧಿಭ್ರಮಣೆಯಾದವನು ; ಉನ್ಮಾದ ರೋಗಿ : ಓರೊರ್ಮೆ ಪುಚ್ಚನಂತಚ್ಚರಿಯೊಳಾಡುಪನದೋರೊರ್ಮೆ ಮಾತ್ರನಂತೊತ್ತರಿಸಿ ಮೇಲ್ವರಿಸನು (ಕೊಟ್ಟೂರು. ೬.೩೬). ಹುಚ್ಚ₁ : ೧. "ಮ್ರೋಡೀರಃ = ಹುಚ್ಚಂ" (ಕಾಶಕ್ಕೆ. ೦೫). ೨. ತಿಳಿಗೇಡಿ ; ಮರುಳ ; ದಡ್ಡ : ಹೆಚ್ಚಿನ ಸತಿಯರ ಕಚ್ಚೆಯು ಬಿಚ್ಚಿಗ ಹುಚ್ಚನೇನೆ (ಭೂರಂದ. ೨-೪೩-೦) ; ಹುಚ್ಚರಿರ ಚಂದನವಿರೆ ಬಿದಿರ ಸಾರುವರೆ (ಕ್ರಿಡ್ಡಾಕ್ಷಿ ೬.೦೦) ; ಹೀಗೆ ಹುಚ್ಚನಂತೆ ತಿರುಗಾಡುವುದು ತರವಲ್ಲ (ಮುಂಜಿಯು. ೩-೦೨೫). ೩. ಮರುಳುಗೊಂಡವನು ; ಮೋಹಿತನಾದವನು : ವಿವೇಕಾ ನಂದರು . . . ಸಂಬೋಧಿಸಿದ ರೀತಿ ಅಮೇರಿಕೆಯ ಜನರನ್ನು ಹುಚ್ಚರನ್ನಾಗಿ ಮಾಡಿತು (ಧರ್ಮಸಾ. ೯೯). (ಗು). ೪. ಅರಿವಿಲ್ಲದ ; ಬುದ್ಧಿಗೇಡಿಯಾದ : ಅಷ್ಟ ಸತ್ತ ಆರುತಿಂಗಳಿಗೆ ಹುಚ್ಚಮಾವ ಬಂದು ಕೊರಳು ಕಟ್ಟಿಕೊಂಡು ಅತ್ತ (ಗಾದೆ). [ ಪುಚ್ಚು₁ (<ಪುರ್ಚು) + — ಅ₇ ]

**ಪುಚ್ಚ₂**, ಪುಕ್ಕ₂, ಪುಚ್ಚು₂ (ನಾ). ೧. ಹಕ್ಕಿಯ ಗರಿ : ತುಪ್ಪುಳು : ಹಾರುಹಕ್ಕಿಯು ಪುಚ್ಚವಣಿಸಲೆಳಸಿದ ಬೆಡಗಿ ! (ಉಡಾನ್ನಾರಿ. ೦೨-೫) ; ಸೀಗೆ ಹುಣ್ಣಿಮೆಗಾ ಮಸೂರಿಯು ಹಸುರುಪುಚ್ಚವ ತೆರೆಯಿತು (ಕಿಂಚು. ೦೨-೦೩); ಅದರಲ್ಲೊಬ್ಬಳ ಮೈ ತುಂಬ ಪುಚ್ಚ ಹತ್ತಿದ್ದನ್ನು ಕಂಡೆ (ಕ್ಕ್ಷ ತಿಜ. ೨೫೩). ೨. (ಪಕ್ಷಿಗಳ) ಬಾಲದ ತುದಿ : "ಪುಚ್ಚ (ಕ್ಕ) — ಪುಚ್ಛ = ಬಾಲ" (ಶಬ್ದಕೋ. ೨೬); ಹೀಗಡೆ ಬಣ್ಣದ ಪುಚ್ಚವ ಹಚ್ಚು (ಕವಕ್ಕೆ. ೦, ೯೫). ಪುಕ್ಕ₂ : ೧. ದೈವ್ಯಪೆಯಿಂದ ಆ ಮಹಾಪರ್ವತವು ಈಗ ತನ್ನಪ್ಪಕ್ಕೆ ಹಕ್ಕಿಯು ಪುಕ್ಕದಷ್ಟು ಹಗುರವೂ ಮೃದುವೂ ಆಯಿತಲ್ಲವೆ! (ಶಾಂಕಕಾ. ೯೯) ; ಭವಿತವ್ಯತೆಯನುಂತೆ ಓಡಿ ತಪ್ಪಿಸಿಕೊಳ್ಳಲಿರದು ಹಕ್ಕಿಯು ಪುಕ್ಕಕೆ ಹತ್ತಿದ ಉರಿಯಂತೆ ಅದು ನಿನ್ನ ಬೆನ್ನಟ್ಟಿ ಬಹುದು (೨ಂಕಾಕ. ೦೦೬-೦೬). ೨. ಒಂದು ಆಶ್ಚರ್ಯಕರವಾದ ಪಕ್ಷಿಯಿದೆ: ಇದು ಕಾಡುಪಾರಿವಾಳದಷ್ಟಿದೆ . . . ಪುಕ್ಕ ಉದ್ದವಾಗಿರುತ್ತದೆ (ಕ್ರಿಡಾಶ. II. ೦೩೨); ನವಿಲು ಆಡಿದರೆ ಕೆಂಬೋತ ಪುಕ್ಕ ತೆರಕೊಂಡಿತು (ಗಾದೆ). ಪುಚ್ಚು₂.

ಪುಚ್ಚ ಎಣಿಸು = ಸಂಪೂರ್ಣವಾಗಿ ತಿಳಿ : ನಿನ್ನ ಪುಚ್ಚು ಎಣಿಸೂದು . . . ಶಕ್ಯ ಆಗತಿತ್ತೇನು ? (೦ಜಿಜ. II. ೬೦೩). ಪುಚ್ಚ ಬಲಿ, ಪುಚ್ಚು ಬಲಿ = ೧. ಹಕ್ಕಿಯು ಗರಿಯಂ ಬೆಳೆ : ಇನ್ನೂ ಪುಚ್ಚ ಬಲಿಯದ ಆ ಗುಬ್ಬಚ್ಚಿ ಹಾರಲಾಗದೆ ಒದ್ದಾಡುತ್ತಿದೆ (ದೂತಿ); ಅದಕ್ಕೆ ಇನ್ನೂ ಪುಚ್ಚು ಬಲಿತಿಲ್ಲ (ಮುಂಬಯು. ೫-೩೦೦). ೨. (ಆಲಂ) ಸಾಮರ್ಥ್ಯ ಹೆಚ್ಚಾಗು ; ಶಕ್ತಿ ವರ್ಧಿಸು : ಅವನಿಗೆ ಮುಗಿಲು ಮೂರೇ ಗೇಣು ಉಳಿದಂತೆ ಭಾಸವಾಯಿತು. ಅವನ ಪುಚ್ಚ ಬಲಿತಿತು (ಕ್ಕ ತಿಜ. ೩೬೦). [ ಸಂ. < ಪುಚ್ಛ ]

**ಪುಚ್ಚಣೆ** 'ಪುಚ್ಚಟಿ₂' ನೋ.

**ಪುಚ್ಚವಣ**, ಪಚ್ಚವಣ, ಪುಚ್ಚವಣೆ (ನಾ). ೧. ಪರೀಕ್ಷಿಸುವಿಕೆ ; ಪರೀಕ್ಷೆ : "ಪುಚ್ಚವಣಂ = ಪರೀಕ್ಷೆ ; ಅಣ್ಕು" (ಕಮುದ. ಶಂ. ೨): ಪು[ಪಾಠಾಂ. ಪ]ಚ್ಚವಣಂ ನೋಡುವೆನೆನ್ನಿಚ್ಚೆಯೊಳೀ ಮುನಿಯು ವರದ ಮಹಿಮೆಯುಂ (೭೩ಕರಾ. ೮-೯೦); ಆಗಳ್ ಪುಚ್ಚವಣವಾಗೆ ನೆರೆದ ಪಡಿಯು ಜತಿಯರ್—ಇನಂಗಿನ್ನೆಪರಂ ಸ್ವರಜ್ಞಾನಮೇ ಪುಟ್ಟಿತಿಲ್ಲವೆಂದು ತಳ್ವಿದರ್ (ಅದ್ಭುತ. ೨೬-೨೫) ; ದೈವವೆ ನೋಡೆ ಪುಚ್ಚವಣವುಂ ಗೆಯ್ವನ್ನವಂ ಕಾಣಿರೇ (ವ್ಯಸೂಪು. ೯-೩೯). ೨. ಪೌರುಷ ; ಶಕ್ತಿ ; ಸಾಮರ್ಥ್ಯ : "ಪುಚ್ಚವಣ=ಪರೀಕ್ಷೆ ; ಅಣ್ಕು" (ಕಮುದ. ಶಂ. ೨): "ಪುಚ್ಚವಣ—ಪೌರುಷ =ಪೌರುಷ" (ಶಬ್ದಕೋ. ೨೬). ಪಚ್ಚವಣ : ೧. "ಪುಚ್ಚವಣ (ಪಚ್ಚವಣ)—ಪರೀಕ್ಷಣ" (ಶಬ್ದಕೋ. ೨೬). ೨. "ಪೌರುಷಂ ಪಚ್ಚವಣಂ" (ಕಣಾರಂ. ೫೫) ; ಏರಿವದಂ ಪಚ್ಚವಣಮಂ ನೋಡಲಾ ಸಿದ್ಧಂ . . . ಪರಿತುಷ್ಟನಾಗುತ್ತೆ (ಅರಾತ. ೨-೦೩-೨೦). ಪುಚ್ಚವಣೆ : ೧. "ಪುಚ್ಚವಣೆಯು ಪರೀಕ್ಷೆಯು" (ಕಕಾ. ೦೯೨). [ < ಪ್ರಾ. ಪುಚ್ಛಣ. / ಸಂ. ಪ್ರಚ್ಛನ ]

**ಪುಚ್ಚವಣಿಸು** (ಕ್ರಿ). ಪರೀಕ್ಷಿಸು : ತಚ್ಛ್ಯಲದಲಘುತರಮಹಿಮೆಯಂ ಪುಚ್ಚವಣಿಸಲ್ ಶಕ್ಯಮೋ ಸೂರಸಚಿವಾಗ್ರಣಿ (ಶಾಸೋಕ್ಕು. ೫-೯೨). [ ಪುಚ್ಚವಣ + — ಇಸು₃ ]

**ಪುಚ್ಚವಣೆ** 'ಪುಚ್ಚವಣ' ನೋ.

**ಪುಚ್ಚಳಿ₁** 'ಪುಚ್ಚಟಿ₁' ನೋ.

**ಪುಚ್ಚಳಿ₂** 'ಪುಚ್ಚಟಿ₂' ನೋ.

**ಪುಚ್ಚಳಿಸು** 'ಪುಚ್ಚಟಿಸು' ನೋ.

**ಪುಚ್ಚಟಿ₁**, ಪುಚ್ಚಳಿ₁ (ಕ್ರಿ). ೧. ಹಾಳಾಗು ; ಕೆಡು ; ಭಂಗವಾಗು : ಶರದದ ಬಿಸಿಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚಟಿದರೆ ಪೊರೆನಾದ ಕುಂಕುಮಪತ್ರಭಂಗದ ಕೊರಗಿದ ನಗೆಮೊಗಂಗಳುಂ . . . ಅಡಿಗಡಿಗೆ ತಡವಡಪಪ್ಪ ನಡೆಗಳುಂ ಬೆರಸು (ಅಂಪು. ೦೦-೬೮ವ) ; ಕಟಿ ಪೂವಾಗಲೊಡಂ ಪುಚ್ಚಟಿದೊರ್ಮೆಯೆ ಪಾಱಿ ಪೋಪ ಕಂಪಿನ ತೆಱದಿಂ ಟಟಕುಟಮಾದೊಡಲಿಂ ಪಾಂಗುಟಿಯದೆ ಪಱಿಪಟ್ಟು ಪೋದುದಸು

ಮುನಿಪತಿ[ಯಾ] (ಧರ್ಮಾ. ೧೦-೫೯) ; ಕುತ್ತವಿಲ್ಲದೆ ಬೇನೆಯಿಲ್ಲದೊಂದು ಕಣ್ಣ ನೀಸರ್ಗರಿಗುಂಪೃವತ್ತವಿರ್ದಡೆಯುಂ ಪುಚ್ಚಟಿದು ಬಿರ್ದರ್ದಂತೆ ಗೆಯ್ದು ಕವಿಗಳಪ್ಪೊಡಂ . . . ಒಂದು ತಿಂಗಳಾಯು (ಕಹಾರ. ೩೩೩). ೨. ಪ್ರತಿಜ್ಞೆ ಮೊದಲಾದುವನ್ನು ಮುರಿ,–ಕೆಡಿಸು,–ಭಂಗಿಸು: ಪೊಲ್ಲದು ಪೂಣ್ದು ಪುಚ್ಚಟಿಯಾದುರ್ಕಿದ ಕೌರವರಂ ಪೊರಳ್ಚಿ ಕೊಂದು … ಎಲ್ಲವುಂ ನೆಱೆಪಿದೆಂ (ಕಂಕಾ. ೦೨-೦೬೦); ಶೀಲವತಿ ಸೀತೆ ಪೂಣ್ದುದನೆಂತುಂ ಪುಚ್ಚಟಿಯರ್ (ಕಂರಾಮಾ. ೦೬-೩೫). ಪುಚ್ಚಳಿ$_1$ : ೨. ಬಾಹರಲಕ್ಷ್ಮ ಚಾಗೋಪರನೊಬ್ಬ ಮಾಳ್ಕೆಯುಂ ಭಾಸೆಯನಿತ್ತು ಪುಚ್ಚಳಿವರಲ್ಲದ ಭಾಸೆಯುಮುದ್ಧರಿಪ್ಪರೇ (ಎಕ. V. ಶಿಂಮೊರು. ೧೦೨–೧೦೪; 1220).
[ಪುಚ್ಚು$_2$ (P ← ತೆಲು. ಪುಚ್ಚು = ಕೊಳೆತುಹೋಗು) + ಅಟಿ$_1$]

ಪುಚ್ಚಟಿ$_2$, ಪುಚ್ಚಣೆ, ಪುಚ್ಚಳಿ$_2$ (ನಾ). ಕೇಡು; ಹಾನಿ; ನಾಶ : "ಪುಚ್ಚಟಿಯೊಂದ ಕೇಡು" (ಕಶಬ್ದ. ೬೩-೪೪೪); ಎಲೆಲೆ ಸಮ್ಯಗ್ದುಂದಿದ ಪುಚ್ಚಟಿಯು ಬಾಚ್ಚುಬದೆ ! (ರಾಮಾಶ್ವ. ೧೦೨–೦೫); ಅಬಲು ಪೆಜಗೆ ದೊರೆಕೊಳಪಟಿಗೆಯ್ತುವನೆಸಗಬೆಣಸವೇದಣಪೊಡೆ ಕೇಳಬಲು ನಿನಗೊದ ವಿಪ್ರ ಪುಚ್ಚಟಿಯನೊದರ್ಚಲ್ಕೆ ನೆನೆಗುವಾಗಳೆ ಧರ್ಮಂ (ಶೀಶಿವಂ. II, ೦೬೪). ಪುಚ್ಚಣೆ : ನಚ್ಚಣಿಗರ ನಟನೆಗೆ ಮೋಹಿಸಿದೊಡೆ ಪುಚ್ಚಣಿಯುಹು ಮೆನುತೆರ್ದಳ್ ಮುಗ್ಧೆಯುಸಿರಿದಳು ವಿದಗ್ಧೆ (ಜಯುಕಾ. ೦೪–೫೦). ಪುಚ್ಚಳಿ$_2$ : ಇಚ್ಚೆಗಳನುಗಿದೊಡೀಗಳ್ ಪುಚ್ಚಳಿ ನಿನಗಪ್ಪುದು (ವಿರಪ. ೬–೬೩); ಭೂಪನು . . . ಪುಚ್ಚಳಿಗಳವು ತೊಲಗೆ ಸುಖದಿಂದಿರ್ದನು (ಕೀಕಠ. ೪–೨೨); ಅಂತು ಸಮನಿಸಿರ್ದ ಪುಚ್ಚಳಿ ಕಳೆಯಲೆಲ್ಲರುಂ . . . ಸಮಾಧಾನಸ್ಥಿತಿಯೊಳಿರ್ದನು (ಮರಾಜ. ೬-೫೭). [<ಪುಚ್ಚಟಿ$_1$]

ಪುಚ್ಚಟಿಸು, ಪುಚ್ಚಳಿಸು (ಕ್ರಿ). ೧. ಹಾಳಾಗು; ನಾಶವಾಗು : "ಪುಚ್ಚಟಿಸು — ಲಯೇ (ಕರಗಿ ಹೋಗು, ನಾಶವಾಗು)" (ಶಮದ). ಪುಚ್ಚಳಿಸು : ೧. ಆತ್ಮಂ ನಲೆ ಸೂಕ್ಷ್ಮತನುವಂ ತಳೆದು ಶುಭಾಶುಭ ಕರ್ಮಗಳ ಫಲಮನುಣುತೆ ತತ್ಸೂಕ್ಷ್ಮಾಂಗಮುಮೆಯ್ದೆ ಪುಚ್ಚಳಿಸೆ ಮೋಕ್ಷದ ನೆಯ್ದು[ಯ್ದು]ತಿರ್ಪನು (ವಾಸೂಚ. ೪–೯೫); ಕಬ್ಬಿಗಂ ಕೊರಗಿರೆ ಪುಚ್ಚಳಿಸೆ ಭಾವಿಕಾಲಮೇ ಬರಿದಕ್ಕುಂ (ಕಂಶಕ. ೬–೧೧). ೨. ನಾಶಗೊಳಿಸು; ಧ್ವಂಸಮಾಡು; ಭಂಗಿಸು : ಅವಿಳಬಾಪಮುಂ ಪುಚ್ಚಳಿಪುದು ಸರ್ಗಕ್ಕೆ ತಾಂ ನಲೆ ಕಾರಣಮದೆನಿಸಿ . . . ಒಪ್ಪುವುರ್ದು ತಿಳಿ ವಿಭೂತಿಯು ಘನಮನು (ವಾಸೂಚ. ೦೩–೧೧೧); ಹಸಿವೆಗೆ ನಾಡ ಹುಲಿ ಪುಚ್ಚಳಿಸಿತು (ಕಾಲದ. ೬೪–೦೪೬). [ಪುಚ್ಚಟಿ$_2$ + —ಇಸು$_3$]

ಪುಚ್ಚಿ, ಪುಚ್ಚೆ, ಹುಚ್ಚಿ$_2$ (ನಾ). ೧. ಯೋನಿ : (ಕ). ೨. ಕುಂಡೆ : (ಕ). ೩. ಗೋಲಿಯಾಟದಲ್ಲಿ ಗೋಲಿಯನ್ನು ತಳ್ಳುವ ಕುಳಿ ; ಬದ್ದು. ೪. ಚಿಣ್ಣಿಕೋಲಾಟದಲ್ಲಿ ಚಿಣ್ಣಿಯನ್ನು ಇಟ್ಟು ಚಿಮ್ಮು ವುದಕ್ಕಾಗಿ ನೆಲದಲ್ಲಿ ಮಾಡಿದ ಕುಳಿ. ಪುಚ್ಚೆ : (ಕ). ಹುಚ್ಚಿ$_2$ : ೫. ಪಶುಗಳ ಯೋನಿ. [ದೇ.॥ ತಮಿ. ಪೊಚ್ಚು; ಮಲ. ಪೂಚ್ಚಿ, ಪೂಚ್ಚ; ಕೋತ. ಪೊಚ್; ಬ್ರಾಹುಈ. ಪೋಸ್]

ಪುಚ್ಚು$_1$ 'ಪುಚ್ಚರ್' ನೋ.

ಪುಚ್ಚು$_2$ 'ಪುಚ್ಚಟಿ'$_2$ ನೋ.

ಪುಚ್ಚುಂಗೊಳಿಸು$_2$, ಪುಚ್ಚುಗೊಳಿಸು, ಹುಚ್ಚುಗೊಳಿಸು (ಕ್ರಿ). ಬುದ್ಧಿ ಭ್ರಮಣೆಯಾಗುವಂತೆ ಮಾಡು : ನಚ್ಚಿನ ಮಂತ್ರೀಶ್ವರನಂ ಪುಚ್ಚುಂಗೊಳಿಸುವುದಿದಾವ ಮತಂ (ಲೀಲಾ. ೬-೬೩). ಪುಚ್ಚುಗೊಳಿಸು : ಅಡವಿಯು ಹೊಗಿಸಿತ್ತು, ಹುಮಾಲೀನೀರಲದ್ದಿತ್ತು, ಜಡೆಗಟ್ಟಿ ಭಸ್ಮವ ತೊಡಿಸಿತ್ತು ಎವೆ ಪುಚ್ಚುಗೊಳಿಸಿತ್ತು (ವಚನ. I, ೨೫೬-೦೬). ಹುಚ್ಚುಗೊಳಿಸು : ಬಿಡಿವೊತ್ತಿ ಕೇಶವ ಕೀಳಿಸಿತ್ತು, ಹುಡಿ ಹುಚ್ಚುಗೊಳಿಸಿತ್ತು, (ವಚನ. I, ೨೫೬-೦೬). [ಪುಚ್ಚು$_1$ (< ಪುಚರ್) + ಕೊಳ್$_1$ + —ಇಸು$_3$]

ಪುಚ್ಚುಗುನ್ನಿ, ಹುಚ್ಚುಕುನ್ನಿ (ನಾ). (ಆಲಂ) ತಿಳಿಗೇಡಿ; ಅವಿವೇಕಿ : ಪೊಗರಿಂಪು ನುಣ್ಪು ಪೆಂಪಿನ . . . ಸದಲಂಕಾರಾದಿಗೆ ಸಲ್ವ ಚೆಲ್ವ ಕಾವ್ಯದ ಬಗೆಯಱಿಯದ ಪುಚ್ಚುಗುನ್ನಿ ಕೂಗಿದೊಡಳ್ಕೆಂ (ಹಮ್ಮೀರ. ೦–೦೪). ಹುಚ್ಚುಕುನ್ನಿ : ಆ ಹುಚ್ಚುಕುನ್ನಿ ಮಾತು ಅಂದರೆ ಯಾರಿಗೆ ತಾನೆ ಲಕ್ಷ್ಯವಿರುತ್ತೆ? (ಜನ). [ಪುಚ್ಚು$_1$ (< ಪುಚರ್) + ಕುನ್ನಿ$_1$]

ಪುಚ್ಚುಗೊಳ್ 'ಪುಚರ್ಗೊಳ್' ನೋ.

ಪುಚ್ಚುಗೊಳಿಸು 'ಪುಚ್ಚುಂಗೊಳಿಸು' ನೋ.

ಪುಚ್ಚುತನ, ಹುಚ್ಚುತನ (ನಾ). ದಡ್ಡತನ; ಅವಿವೇಕ : ಇಚ್ಛೆಯಿಂ ಬಾಯ್ಗೆ ಬಂದಂತೆ ಗಳಪುವುದು ತಾಂ ಪುಚ್ಚ[ಚ್ಚು]ತನಂ (ಮಹಾಭಿ. ೦೪–೩೪). ಹುಚ್ಚುತನ : ನಿನ್ನ ಹುಚ್ಚುತನದಿಂದ ನೀನು ಹಾಳಾಗಬೇಡ (ಕವನ. ೦೫೬); ಅವನು...ತನ್ನ ಹುಚ್ಚುತನವನ್ನು ಆಲೋಚಿಸಿ ಕಣ್ಣೀರು ಸುರಿಸಲಾರಂಭಿಸಿದನು (ಬಂಕಿಕ. ೨೪). [ಪುಚ್ಚು$_1$(<ಪುಚರ್) + —ತನ]

ಪುಚ್ಚಿ 'ಪುಚ್ಚಿ' ನೋ.

ಪುಚ್ಛ (ನಾ). ೧. ಬಾಲ; ಲಾಂಗೂಲ : "ಪುಚ್ಛಃ...ವಾಲಧಿಃ — ೫ ಕುದುರೆ ಮುಂತಾದ ಜಂತುಗಳ ಬಾಲದ ಹೆಸರುಗಳು" (ಸಿದ್ಧಾಂತಿ ೨೫೦). ೨. ಪಕ್ಷಿಗಳ ಪುಕ್ಕ. ೩. ಹಿಂಭಾಗ. ೪. ತುದಿ ; ಕೊನೆ. ೫. ಅನುಬಂಧ : (Appendage. ಪಾರಿಭಾ). [ಸಂ.]

ಪುಚ್ಛದಂಡ (ನಾ). ಬಾಲ : ಜಘನದಿಂದೆ ಕಟಿಗು ಬಗೆ ಬಾಲು ಪುಚ್ಛದಂಡ ಮೆಂಬೀ ಪೆಸರಿಂ (ಅಶ್ವಶಾ. ೯–೪೫). [ಸಂ.]

ಪುಟ$_1$ (ನಾ). ಪುಟಿಗೆ; ನೆಗೆತ; ಪುಟಿದೇಳುವಿಕೆ : ಕುರುವಂಶಾಗ್ರಣಿ ಪೊಯ್ದು ಪೊಯ್ಲ್ಗೆ ಕೆಡೆದಂ ಭೀಮಂ ರಣೋರ್ವೀತಳಂ ಬಿರಿಯಲ್ ಪಾಱಿದನಂತರಕ್ಕೆ ಪು[ಪಾಠಾಂ. ಪು]ಟಮುಂ ದುರ್ಯೋಧನಂ (ಮಹಾಪಲೀ. ೦೩-೨೪); ಪುಟದ ಕಂತುಕದಂತೆ ಘಃ ಬಟಕಟಸಲೌಕಿತು (ಕುಮಾವ್ಯಾ. ಸಿಂಹ. ೦೪-೩೭). 'ಪುಟಂನೆಗೆ' ಪರಾ. [<ಪುಟಿ$_1$]

ಪುಟ$_2$ (ನಾ). ಬರೆಯುವ ಅಥವಾ ಅಚ್ಚಿನ ಹಾಳೆಯ ಒಂದು ಮಗ್ಗುಲು,—ಪಕ್ಕ : ಗೀತೆಯ ಪುಟಗಳನ್ನು ಪುನಃ ಪುನಃ ತಿರುವಿದಾಗ ಮುಖ್ಯಸಂದೇಶ 'ಕರ್ಮಯೋಗ' ಎಂಬುದು ಸ್ಫುಟವಾಗುತ್ತದೆ (ರಮಗೀ. ೧೦೩); ಪುಟದಡಿಯ ಟಿಪ್ಪಣಿಗಳಲ್ಲಿ ಸಹ ಇವರು ಉಲ್ಲೇಖಿಸ ಬ್ಬದರು (ಭಾರತ. ೫೩೩). [<ಪ್ರಾ. ಪುಟ್ಠ./ಸಂ. ಪೃಷ್ಠ./ತಮಿ. ಪುಟ, ಪುಟ್ಟ; ಮಲ. ಪುಟ; ತುಳು. ಪುಡೆ; ತೆಲು. ಪೆಡ]

ಪುಟ$_3$ (ನಾ). ೧. ಮಡಿಕೆ; ಪದರ. ೨. ತಗ್ಗಾದುದು; ಹಳ್ಳ. ೩. ಎಲೆಯಿಂದ ಮಾಡಿದ ಬಟ್ಟಲು; ದೊನ್ನೆ : ನಳಿನದಳಪುಟದೆ ನೀರಂ ನಳಿನಿಗಳಿತ್ತ ರೂಪುಗೊಂಡು ಸುರಿಪವು (ಶಾರದಾ. ೩೩). ೪. ಎಲೆಯಿಂದ ಮಾಡಿದ ಪೊಟ್ಟಣ. ೫. ಆಳವಿಲ್ಲದ ಬಟ್ಟಲಂತಹ ಪಾತ್ರೆ. ೬. ಕೈಗಳಂತೆ ಜೋಡಿಸಿ ಮಾಡಿದ ರಚನೆ : 'ಕರಪುಟ' ಪರಾ. ೭. ಮುಚ್ಚಳ; ಪಿಧಾನ : 'ಕವಾಟಪುಟ' ಪರಾ. ೮. ಗುಪ್ತಾಂಗವನ್ನು ಮುಚ್ಚುವ ಬಟ್ಟೆ; ಕಟಿವಸ್ತ್ರ; ಕೌಪೀನ : 'ಪುಟಗೋಸಿ' ಪರಾ. ೯. ಕಣ್ಣವೆ. ೧೦. ಸಸ್ಯಗಳ ಹೊಟ್ಟೆ. ೧೧. ಕರಂಡಕ; ಭರಣಿ; ಸಂಪುಟ. ೧೨. ಕುದುರೆಯ ಗೊರಸು; ಕೊಳಗು : 'ಖುರಪುಟ' ಪರಾ. ೧೩. ಜಾಜಿಕಾಯಿ. ೧೪. ಮೂಗಿನ ಹೊರಳೆ,—ಹೊಳ್ಳೆ : 'ನಾಸಾಪುಟ' ಹೋ. ೧೫. ಲೋಹಗಳನ್ನು ಕರಗಿಸಲು ಬಳಸುವ ಪಾತ್ರೆ; ಮೂಸೆ : ಪುಟಂಗಳೊ[ಪಾಠಾಂ. ಮುಟ್ಟಿಗೆಯೊ]ಳಿಟ್ಟು ತೆಗೆವುದುಂ (ವಡ್ಡಾರಾ. ೯೬-೨೭). ೧೬. ಔಷಧಗಳ ಸಿದ್ಧತೆಯಲ್ಲಿ ಒಂದು ಸಲ ಕುದಿಸುವುದು,—ಭಟ್ಟಿಯಿಳಿಸುವುದು : ಮಾತುಳಂಗಮುಂ ನೆಱೆ ಮುಗುಟ್ಟಿ ಪುಟದಿಂ ಮಂದಾನಳನಿಂದೆ ಸುಟ್ಟು ಮುಖದೊಳ್ ತಳೆದೊಡೆ ಮುಖವಾಸಮುಂ ತಿದತಿಶಯಮಕ್ಕುಂ

(ಲೋಕೋಪ. ೭-೯). ೧೭. ಗೋಡೆ ಕಟ್ಟುವಾಗ ಒಂದು ಸಲಕ್ಕೆ ಹಾಕುವ ಮಣ್ಣಿನ ಸ್ತರ: (ಕ). ೧೮. ಚಿನ್ನವನ್ನು ಬೆಂಕಿಯಲ್ಲಿಟ್ಟು ಶುದ್ಧಗೊಳಿಸಿ ಹೊಳಪುಕೊಡುವಿಕೆ ಮತ್ತು ಅದರಿಂದುಂಟಾಗುವ ಹೊಳಪು : "ಪುಟಂ=ಬಣ್ಣಂ" (ಶಾಶಕ್ಕೆ. ೨೬೯) ; ದೇಹವು ಮಿಸುನಿಯಂದದಿ ಪುಟವನಿಟ್ಟುದು (ಶಾಕುಂ. ೨೨-೬೯) ; ತೋಱಿದನು ತಾ ಬಳಿಕವಗೆ ಹದಿನಾಱುಬಣ್ಣದ ಪುಟದ ಚಿನ್ನಕೆ ನೂಱುಮಡಿಯನೆ ಹೊಳೆಹೊಳೆವ ಹೊಮ್ಮುಱಿಯ ರೂಪಕವ (ಕುರಾ. ೩-೯-೦೪) ; ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ ಉತ್ಕೃಷ್ಟ ಬಂಗಾರದೊಳು ಎನ್ನ ಸೇರಿಸೊ (ಪುರಂದ. ೨-೨೩-೩). ೧೯. [ನಾಟ್ಯ] ಕಾಲಿನ ಒಂದು ಭಂಗಿ : "ಪುಟವದೊತ್ತಿ ತೋಱುವ ಹಜ್ಜೆಯೆನಿಕ್ಕು" (ಸಂಗರಾ. ೨೩-೯). ೨೦. [ಛಂದ] ಪ್ರತಿಯೊಂದು ಚರಣದಲ್ಲಿ ಹನ್ನೆರಡು ಅಕ್ಷರಗಳಿರುವ ಸಮಪಾದವೃತ್ತಗಳಲ್ಲಿ ಒಂದು : ನನಮಯ ಗಣಮಿಂತೀ ನಾಲ್ಕು ಮೆತ್ತಂ ಜನಿಯಿಸೆ ಯತಿ ಸಪ್ತಸ್ಥಾನದಿಂದಂ...ಈ ಪಾಂಗಿನೊಳ್ ಕಾಮಿನಿ ಬಗೆ ಪು[ಪಾಠಾಂ. ಪು]ಟಂ (ಛಂದೋಂಬು. ೨-೦೩೬). ೨೧. (?) : ಶ್ರೀರತೀಶ್ವರನಶೋಕೆಯ ತಳಿರ ಸರಳ್ಗಳಿಗೆವೋಲಂತೆ ಮಿರುಗುವ ಸಿಪಾಗಪಂ ತೊಡಿಪಂತೆ ತಾರಾಳಿಯ ಮೊಗ್ಗೆ ಕಂಚುಕಿಯಮ ತೊಡಿಸಿ ಪುಟವಂ ಬಿಗಿದು ಬಂಧಿಸಿದರು (ಪಪರೋ. ೨೩-೩೨).

**ಪುಟ ಇಳಿಸು**=ಭಟ್ಟಿ ಇಳಿಸು : ಅಷ್ಟುಮಿಯ ರಾತ್ರಿ ಇಬ್ಬರು ಕುಳಿತು ಏನೋ ಪುಟ ಇಳಿಸುತ್ತಿದ್ದರು. ಮಡಕೆಯೊಂದಕ್ಕೆ ಮುಚ್ಚಳ ಹಾಕಿ . . . ಬೆಂಕಿಯ ಗುಳಿಯಲ್ಲಿ ಪುಟಕ್ಕೆ ಇಟ್ಟಿದ್ದರು (ಪದೇಪ. ೦೨೪). **ಪುಟಕ್ಕೆ ಹಾಕು**= ೧. ಚಿನ್ನ ಮೊದಲಾದುವನ್ನು ಬೆಂಕಿಯಲ್ಲಿಟ್ಟು ಹೊಳಪು ಕೊಡು : ಅವಳ ಸೌಂದರ್ಯವು ಪುಟಕ್ಕೆ ಹಾಕಿದ ಚಿನ್ನದಂತೆ ಹೆಚ್ಚಿತು (ಮುಂಪಮೂ. ೮೯) ; ಬಂಗಾರ ಬೆಳ್ಳಿ ಮೊದಲಾದ ಪಂಚಲೋಹಗಳು ಪುಟಕ್ಕೆ ಹಾಕಿ ತೆಗೆಯದಿದ್ದರೆ ಅವುಗಳಿಗೆ ಕಾಂತಿ ಬರುತ್ತದೆಯೆ ? (ಕ್ರಶಾಪ. ೩). ೨. ಮೂಸೆಯಲ್ಲಿಟ್ಟು ಸುಡು : ಒಬ್ಬಿಣದ ಕಿಟ್ಟ ತಂದು ಪುಟಕ್ಕೆ ಹಾಕಿ ಲೋಹಭಸ್ಮ ಮಾಡುವರು (ಮುಂಬಯ. ೯-೦೪೫). **ಪುಟ ಮಾಡು** = ಹೊತ್ತಿದ ಬೆಂಕಿಯಲ್ಲಿ ಉಜ್ವಲಗೊಳಿಸು : ಜಾಂಬವಾದಿಗಳ್ ಕುಂಡಮನಗುಬ್ಬಿ ಕಾಳಾಗರುಚಂದನಾದಿಯಿಂಧನಂಗಳಂ ಒಟ್ಟಿಯಗ್ನಿಯಂ ಪುಟ ಮಾಡಿ (ಪುಣ್ಯಾಸ್ರ. ೭-೨೯ ಪ) ; ಅವರು . . . ಸಡಗರದಿ ಪಂಜುಗಳ ಪುಟ ಮಾಡುತ್ತಂ (ಕ್ರಪುಪು. ೯-೨೦೨). [ಸಂ.]

**ಪುಟಂನೆಗೆ, ಪುಟನೆಗೆ** (ಕ್ರಿ). ಪುಟಚೆಂಡಿನಂತೆ ನೆಗೆ ; ಟಣ್ಣನೆ ಹಾರು : ತನ್ನ ಮುಂ ನೆರಪಿದ ಪಾಪಮೆ ಕೋಪದಿಂ ಪೊಡೆಸೆಂಡುವೊಡೆಯುತಿರ್ದುದೆಂಬಂತೆ ಪೊಡರದೆ ಪುಟನೆಗೆದು ಮಗುಟೆ ಮಗುಟೂ ಶಿಲೆಯ ಮೇಲೆ ನುಚ್ಚುನೂಱಾಗಿ ಬಿಟ್ಟಂ (ಪಾರ್ಶ್ವಪು. ೬-೯೯ ಪ) ; ಒದೆದಿಳೆಯಂ ಪುಟಂನೆಗೆದು . . . ಅಪ್ಪಳಿಪ ಬಗ್ಗದ ಗಂಡಿಕೆಗಂಡು ನೆತ್ತಿಯಗ್ರದೆ ಮೊನೆಯುರ್ಚೆ ಕೆಯ್ಸುರಿಗೆಯಿಂದಿರದಿಕ್ಕಿದನಾ ವನೇಚರಂ (ಕಬಕಂ. ೩-೫೪). **ಪುಟನೆಗೆ:** ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತಾಯಿತ್ತು (ದೇವಾಪ. ೨೦-೩೪); ಪುಟನೆಗೆದೆದ್ದು ವಳಿಯುವ ಕೊಡಹಿ ನಿಂದವು ವೇದವಾಜಿಗಳು (ಕುಮ್ಯಾಕ. ೭-೨೨) ; ನೆಲಕತ್ತಿ ಹೊಡೆದರು ಮೇಲಕೆ ಪುಟನೆಗೆದೇಳುವ ಕಂದುಕದಂತೆ (ಇಂಶಾಕ. ೨೨೦-೯೩). [ಪುಟ$_1$+ನೆಗೆ$_1$]

**ಪುಟಕ** (ನಾ). ೧. ಮಡಿಕೆ ; ಪದರ. ೨. ಹಳ್ಳವಾಗಿರುವಂಥದು. ೩. ದೊನ್ನೆ. ೪. ಎಲೆಯ ಪೊಟ್ಟಣ. ೫. ಕರಂಡ ; ಸಂಪುಟ. ೬. ತಾವರೆ ; ಕಮಲ. ೭. ಜಾಜಿಕಾಯಿ. [ಸಂ.]

**ಪುಟಕೊಡು** 'ಪುಟಗೊಡು' ನೋ.

**ಪುಟಕೋಸಿ** 'ಪುಟಗೋಸಿ' ನೋ.

**ಪುಟಕ್ಕನೆ** (ಅ). ತಟ್ಟನೆ ; ಕೂಡಲೆ : ಮಲ್ಲಿ ಬೆಂಕಿಪೆಟ್ಟಿಗೆ ಹೊರಗೆ ಒಗೆದು ಮತ್ತೆ ಪುಟಕ್ಕನೆ ಒಳಗೆ ಹೋದಳು (ಜೀವರು. ೨೩).

[ ಪುಟಕ್$_0$ + — ಅನೆ$_1$ ]

**ಪುಟಗೈ** (ಕ್ರಿ). ಬೆಂಕಿಯನ್ನು ಉಜ್ವಲಗೊಳಿಸು,—ಪ್ರಕಾಶಮಯವಾಗುವಂತೆ ಮಾಡು : ದೀಪಗಳನತಿಪುಟಗೈದು ನರವರಕುಮಾರಕರ ಚಿತ್ರಪನುವೊಂದೊಂದ ತರುಣಿ ತೋರಲು ನೋಡಿ ನೋಡಿ ಬೇಸತ್ತುಂ (ಪಪರೋ. ೨೬-೩೪). [ ಪುಟ$_3$ + ಗೈ (<ಕೆಯ್$_1$) ]

**ಪುಟಗೊಡು, ಪುಟಕೊಡು** (ಕ್ರಿ). ೧. (ಆಲಂ) ಬೆಂಬಲವಾಗು ; ಪುಷ್ಟಿಕೊಡು : ಅವಳು ತನ್ನ ಮನೆಗಿಂತ ಹೊರಗಿನವಳಲ್ಲ ಎಂಬ ಭಾವನೆಗೆ ಇದು ಮತ್ತಷ್ಟು ಪುಟಗೊಟ್ಟಿತು (ತ್ಯಾಗಪು. ೦೬೬) ; ವಾರ್ತಾಸಂಗ್ರಹದ ಪುಟವು ಮಾತ್ರ ಅವನಿಗೆ ಪುಟಗೊಡುತ್ತಿತ್ತು (ಕೂಪಾಪ. ೬೯) ; ರಾಯರ ಈ ದೊಡ್ಡ ನಡತೆಗೆ ಅವರ ಮನೆಯವರೆಲ್ಲ ಪುಟಗೊಟ್ಟು . . . ಕೂಡಿಕೊಳ್ಳುತ್ತಿದ್ದರು (ಕಂಬಹು. ೦೨೦). **ಪುಟಕೊಡು :** ೧. ಭಾವಕೃಷ್ಣರಾಯ ಈ ಯೋಚನೆಗೆ ಪುಟಕೊಟ್ಟ, ಅರ್ಧಾಂಗಿ ತಿದಿಯೂದಿದಳು (ಕುರುಕಾ. ೦೫೨) ; ಅವರು ಅವನಿಗೆ ಕಲಿಸುತ್ತಿದ್ದ ರೀತಿಯೂ ಅವನ ಉತ್ಸಾಹಕ್ಕೆ ಪುಟಕೊಡುವಂತಿತ್ತು (ಚಕಂಪಾ. ೦೦೭). ೨. **ಲೋಹಗಳನ್ನು ಬೆಂಕಿಯಲ್ಲಿಟ್ಟು ಶುದ್ಧಗೊಳಿಸಿ ಹೊಳಪು ಕೊಡು : ಪರಾಕ್ರಮಶಾಲಿ**ಗಳಿಗೆ ಯುದ್ಧವು ಸಂಭವಿಸಿದರೆ ಅಗ್ನಿಯಲ್ಲಿ ಚಿನ್ನಕ್ಕೆ **ಪುಟಕೊಟ್ಟಂತಾಗುತ್ತದೆ** (ಶ್ರೀರಾಮ. ೩೦೪). ೩. (ಬೆಂಕಿಯನ್ನು) **ಪಟುಮಾಡು; ಉತ್ತೇಜಿಸು :** ಫಕೀರಪ್ಪನು ಇಸ್ತ್ರಿಯ ಬೆಂಕಿಗೆ ಗಾಳಿ ಹಾಕಿ ಪುಟ ಕೊಡುತ್ತಿದ್ದನು (ರಾಶಪು. ೨೨). [ಪುಟ$_3$ + ಕೊಡು$_1$]

**ಪುಟಗೊಳಿಸು** (ಕ್ರಿ). ೧. ಬೆಂಕಿಯನ್ನು ಹೊತ್ತಿಸು ; **ಪಟುಮಾಡು :** ಬರುಹಿಯಿಧ್ಮಸ್ರುವಗಳಿಂ ಸತ್ಕರಿಸಿ ವಿಧಿಪೂರ್ವಕದಿ ಮಖಬಂಧುರತರೇಂಧನದಿಂದ ಪುಟ [ಪಾಠಾಂ. ಪಟು] ಗೊಳಿಸಿದರು ಹುತವಹನ (ಕುರಾ. ೦-೬-೪೩) ; ಅವನು ಆ ಒಲೆಯನ್ನು ಪುಟಗೊಳಿಸುತ್ತಿದ್ದನು (ಕುಪಪು. ೫೨೦). ೨. (ಆಲಂ) ಏರಿಸು ; ವೃದ್ಧಿಗೊಳಿಸು : ಸ್ಥಳಮಹಿಮೆಗೆ ಸಂಬಂಧಿಸಿದ ದೇಶಪ್ರೇಮವನ್ನು ಪುಟಗೊಳಿಸಿ ಪರಿಪೋಷಿಸುವ ಹಲವು ಯಕ್ಷಗಾನಗಳನ್ನು ಈ ಪಂಗಡಕ್ಕೆ ಸೇರಿಸಬಹುದು (ಯಕ್ಷಗಾ. ೦೪); ಆ ಆವರಣ ಅವನ ಮನಸ್ಸಿನ ವೇದನೆಯನ್ನು ಪುಟಗೊಳಿಸೀತು (ಕೂಪಸ. ೬೦).

[ಪುಟ$_3$ + ಕೊಳ್$_1$ +— ಇಸು$_3$]

**ಪುಟಗೋಸಿ, ಪುಟಕೋಸಿ** (ನಾ). ೧. ಲಂಗೋಟಿ ; ಕೌಪೀನ : ಪುಟಗೋಸಿಗಿಂತ ದರಿದ್ರವಿಲ್ಲ, ಮರಣಕ್ಕಿಂತ ಶಿಕ್ಷೆ ಇಲ್ಲ (ಗಾದೆ). (ಗ್ರಾಂ). ೨. ಚಿಕ್ಕವಯಸ್ಸಿನ : ಹತ್ತು ವರುಷದ ಪುಟಗೋಸಿ ಬ್ರಹ್ಮಚಾರಿ ದೇಶೀಲು ಶ್ರೀವೈಷ್ಣವರಿಗೆಲ್ಲರಿಗೂ ತೀರ್ಥಪ್ರಸಾದ ವಿನಿಯೋಗವಾದ ಮೇಲೆ ಬಾಕಿಯವರ ಮಾತು (ಕಲಪ. ೩೯೦). ೩. (ಆಲಂ) ಕೆಲಸಕ್ಕೆ ಬಾರದ ; ಬೆಲೆಯಿಲ್ಲದ ; ಕ್ಷುದ್ರವಾದ : ಈ ಪುಟಗೋಸಿ ವಿಷಯಕ್ಕೆ ಯಾಕೆ ತಲೆ ಕೆಡಿಸಿಕೊಳ್ಳುತ್ತಿದ್ದಿ ? (ಕೂ). **ಪುಟಕೋಸಿ :** ೧. ಪುಟಕೋಸಿಗೂ ಗತಿಯಿಲ್ಲದವನು ಮಹಾಮಹಾ ಮಾತನಾಡುತ್ತಾನೆ (ಕೂ).

[ ಪುಟ$_3$+ಗೋಸಿ (< ಗೋಚಿ)./ತೆಲು. ಪುಟ್ಟಗೊಂಚಿ ]

**ಪುಟದೋಷ** (ನಾ). ರತ್ನದ ಒಂದು ದೋಷ, –ಅವಗುಣ : ಕರ್ಕರಂ ಕೋಮಲಂ ಮಂದದೀಪ್ತಿ ಹೊಗೆಯಂ ನಕ್ಕಲಿನ ಬಣ್ಣಮದು ಮೂರು ರತ್ನಂಗಳೊಳು ಪೊಕ್ಕು ಮಿಶ್ರಿತಮಾಗಿ ದೋಷಮಮ್ಮೆಸಗಿತಾ ಮೂರರೊಳ್ ಬೇರೆ ಬೇರೆ ಅಕ್ಕರಿಂ ಧರಿಸಿದವರಿಗೆ ಫಲಪ ಪೇಳುವೆಂ ಕರ್ಕರಕೆ ಭಿನ್ನವೆಂದೊಡದು ಹುಟಿದುದೆಂದು ಅಕ್ಕಜದ ಮೊರಬು ಬಳಿಯಾಣ ಸಸುನಗಳೆಂದು ಪುಟದೋಷವೆಂದಿರ್ಪುದು (ರತ್ನಶಾ. ೯-೩). [ ಸಂ. ]

**ಪುಟದೋಱು** (ಕ್ರಿ). (ಆಲಂ) ವ್ಯಕ್ತವಾಗು ; ಪ್ರಕಟಗೊಳ್ಳು : ಸುಗುಣಿ ನಿನ್ನಯ ಕೆಂಬಲ್ಲ ಕೆಂಡ ಮುಗುಳ್ನಗೆಯಿಂದವೆ ಪರಿಪರಿಮಳ ಪುಟದೋಱೆ

ವಿಂಗೆ ಉರದೊಳು ಉರ ಒತ್ತಿಕೋ ಬಾ ಬಾ (ಶಠಗೀ. ೦೬೯-೬೨೩).

[ ಪುಟ್ಟ$_3$ + ತೋಱು ]

**ಪುಟನೆಗೆ** 'ಪುಟಂನೆಗೆ' ನೋ.

**ಪುಟಪಡು** (ಕ್ರಿ). ಪುಟಕ್ಕೆ ಬೀಳು ; ಪುಟಕ್ಕೆ ಹಾಕಲ್ಪಡು : ಚಳಕ ಚಳವಾಗೆ ಪಾಱಂ ಸೆಳೆವೆಳವೇ ಪಟ್ಟಸಂಡಿ ಪುಟಪಟ್ಟರೆ ಕಟ್ಟಳುರ್ದಟೀಲೋಹದವೋಲ್ ಕಂಕಳಕಲೋಹಂ ಕರಗಿ ಕೊರಗಿದಂ ಚಾಣೂರಂ (ಅರ್ಧನೇ. ೮-೧೦೯).

[ ಪುಟ್ಟ$_3$ + ಪಡು$_1$ ]

**ಪುಟಪಾಕ** (ನಾ). ೧. ಬೇರೆ ಬೇರೆ ಔಷಧದ್ರವ್ಯಗಳನ್ನು ಎಲೆಗಳಿಂದ ಸುತ್ತಿ, ಮಣ್ಣು ಮೆತ್ತಿ ಬೆಂಕಿಯಲ್ಲಿ ಇಟ್ಟು ಬೇಯಿಸುವ ಒಂದು ಕ್ರಮ,–ವಿಧಾನ : ಪಸಿಯ ತೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವವರುಂ (ಅದಿಪು. ೫-೬೫ ವ) ; ಕೆಂಗಲಿಸುವ ಕೆಂಡದೊಳ್ ಪೂಱು ಪುಟಪಾಕಂ ಸುಡೆಯುತುಂ (ಪಾರ್ಶ್ವಪು. ೫ ೩೯ ವ); ಕಾಯ್ದಣ್ಣೆಯೊಳದ್ದುವರು ಲೋಹರಸದೊಳು ತೊಯ್ದಿಕ್ಕಿ ಪುಟಪಾಕದಿಂದೆ ಒಯ್ದು ತಾಳಿಪರು ಕಾವಲಿಯೊಳು (ಕರ್ಣಕ. ೬-೬೯). ೨. (ಅಲಂ) ಒಳಗೊಳಗೇ ಬೇಯುವುದು : ಕಣ್ವಋಷಿಯ ಕರುಳಿನಲ್ಲಿ ಎಂತಹ ಪುಟಪಾಕ ನಡೆದಿತ್ತೆಂಬುದನ್ನು ಹೆಣ್ಣು ಹೆಡೆದವರೆಲ್ಲರೂ ಬಲ್ಲರು (ಗಾಳಕ.೦೫೬). [ಸಂ.]

**ಪುಟಪಾಕಂಗೈ** (ಕ್ರಿ). ಪುಟಪಾಕ ಮಾಡು : ತಾಳೀಸಪತ್ರ, ಮೆಣಸು . . . ಸಮಸಕ್ಕರೆವೆರೆಸಿ ಪುಟಪಾಕಂಗೈದು (ಕಳವೈ. ೨೬೯).

[ಪುಟಪಾಕ + ಗೈ (<ಕೆಯ್$_1$)]

**ಪುಟಪಾಕವಾನು** (ಕ್ರಿ). (ಅಲಂ) ಬೇಯು ; ಶುದ್ಧಗೊಳ್ಳು : ಹೊಸ ಹೊಸಬನಾಗುವನನುಕ್ಷಣಂ ಮೊನವನು ವಸುಧೆಯಾ ಮೂಸೆಯಲಿ ಪುಟಪಾಕವಾಂತು ರಸಮೂರ್ತಿಯಾಗುವನು ಜಗದಾತ್ಮಮಾತಿ ಬೆಳೆಯೆ (ಜುಂಕೆಾಳ. ೬೦೯).  [ಪುಟಪಾಕ + ಆನು$_1$ (<ಆನ್$_1$)]

**ಪುಟಪುಟ** (ನಾ). ಒಂದು ಅನುಕರಣ ಪದ ; ಪುಟಪುಟನೆ' ಪರಾ.

**ಪುಟಪುಟನೆ** (ಅ). ಪುಟಪುಟ ಎಂದು : ರತ್ನದ ರಸದಾ ಕಾರಂಜೀಯೂ ಪುಟಪುಟನೆ ಪುಟಿದು (ಗಂ. ೦-೯).  [ಪುಟಪುಟ + –ಅನೆ$_1$]

**ಪುಟಪುಟಿಸು** 'ಪುಟುಪುಟಿಸು' ನೋ.

**ಪುಟಬಾಳೆ** 'ಪುಟ್ಟಬಾಳೆ' ನೋ.

**ಪುಟಬೀಜ** (ನಾ). ಒಂದು ಬಗೆಯ ಸಸ್ಯ : "ಪುಟಬೀಜಂ—ಹರಳು ವೀರೆ" (೬ಕಧ. ೦೦೦).  [?]

**ಪುಟಭೇದ** (ನಾ). ೧. ನದಿ ಮೊದಲಾದ ಜಲಾಶಯಗಳಲ್ಲಿರುವ ತಿರುವು,—ಸುಳಿ,–ಚಕ್ರ : "ಚಕ್ರಾದಿ, ಪುಟಭೇದಃ–ಈ ೨ ತೋಯದ ಮುರಿವು" (ಹಲಾಯು. ೦೧೦-೯೯). ೨. ನಗರ; ಪಟ್ಟಣ. ೩. ಒಂದು ಬಗೆಯ ವಾದ್ಯ.  [ಸಂ.]

**ಪುಟಭೇದನ** (ನಾ). = ಪುಟಭೇದ ೨ : "ಪತ್ತನಂ ಪುಟಭೇದನಂ . . . ಪುರೀ—ಈ ೧೧ ಪಟ್ಟಣಂ" (ಹಲಾಯು. ೯೬-೦೩೦); ತನ್ನ ಪುಟಭೇದನಕೆ ಪೋದನು ಮೇಘಸಂಧಿಧರಾಧಿನಾಯಕನು (ತಿಪ್ಪುೀ. ೭-೦೦).  [ಸಂ.]

**ಪುಟವಿಕ್ಕು**, ಪುಟವಿಕ್ಕು (ಕ್ರಿ). ಪುಟಕ್ಕೆ ಹಾಕು; ಹೊಳಪುಗೊಡು : ಪುಟವಿಕ್ಕಿ ಮಿಱುಗುವ ಕಡೆಯಾಣೆಯ ಮಿಸುನಿಯಿಂ ಸಮದು ಥಳಥಳಿಸಿ ಪೊಳೆವ ನೆಲೆಮಾಡದ ಮೇಲೆ . . . ಒಡ್ಡೋಲಗಂಗೊಟ್ಟು ಲೀಲೆಯಿಂದಿರ್ಪುದುಂ (ಜಾರಶಿ. ೦೦-೦ ವ). ಪುಟವಿಕ್ಕು : ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ (ಬಸವ. ೨೫೦).  [ಪುಟ್ಟ$_3$ + ಇಕ್ಕು]

**ಪುಟವಿಂಗು** (ಕ್ರಿ). (ಅಲಂ) ಅಧಿಕವಾಗು; ಹೆಚ್ಚಾಗು; ಅತಿಶಯಿಸು : ಬೆಱಗಾಗಿ ಪುಟವಿಂಗೆ ಡೆಂಡಣಿಸಿ ತೊದಲಿಸುತೆ ಭಕ್ತಿಕರಂತ ಪೂಗಳದ ಪಾಡಿದಂ ಶ್ರೀ ಜಡೆಯ ಶಂಕರನ (ಶಂಕರಾ. ೫-೩).  [ಪುಟ್ಟ$_3$ + ಇಂಗು]

**ಪುಟಬಾಳೆ** 'ಪುಟ್ಟಬಾಳೆ' ನೋ.

**ಪುಟವಿಕ್ಕು** 'ಪುಟವಿಂಕ್ಕು' ನೋ.

**ಪುಟವಿಡು** (ಕ್ರಿ). ೧. = ಪುಟವಿಕ್ಕು : ಪುಟವಿಟ್ಟಳೆವಟ್ಟ ಮಿಸುನಿವೋಲ್ ಮಂಗಳನಿರ್ಮಳರುಚಿರರೂಪ ಕಣ್ಗೆಸೆದಿರ್ದಳ್ (೧೦೯. ೩-೨೯); ನೆನೆದ ಮಾತವನು ತನ್ನ ತಂದೆಯ ಮನದ ಮಚ್ಚದೊಳೂರದು ಕರ್ಣನ ನೆನಹಿಸಲ ಪುಟವಿಟ್ಟು ಶಕುನಿಯ ನೀತಿಯಲಿ ನಿಗುಚಿ . . . ಮೈದುನನ ನುಡಿಯಲಿ ಬಣ್ಣವಿಟ್ಟನು (ಕುಮಾ. ಉ. ೨-೨೨): ನಡೆ ಪುಟವಿಟ್ಟ ಮಿಸುನಿಯ ಗುಬ್ಬಿಗಳ ಕಟ್ಟಿದ ಹೊಕ್ಕುಳ ಗಂಟೆಯ ತೇಱುಗಳಟ್ಟಣೆಸು ತಲ್ಯೆದಿದುವು (ಕಂಸಧಿ. ೨೩-೯೯); ಕಾಳಿದಾಸನು ಜೀವಕಳೆ ತುಂಬಿ ನಿರ್ಮಿಸಿದ ಶಕುಂತಲೆ ಪುಟವಿಟ್ಟ ಸ್ವರ್ಣಪ್ರತಿಮೆ (ಕಾರದ. ೯೬೬). ೨. (ಅಲಂ) ಉತ್ತೇಜನಗೊಳಿಸು; ಪ್ರೋತ್ಸಾಹಿಸು : ರಾಮಚಂದ್ರಗೆ ವನಿತೆಯನು ಕೊಡದೇತೆ ಮನದಲಿ ಖತಿಯ ಪುಟವಿಟ್ಟು ದಿನದಿನಂಪ್ರತಿ ವೈರಭಾವವನೆನಗೆ ಹುಟ್ಟಿಸಿ ಸಂಹರಿಸುವನು (ಕಾತಿಣ: ೨೩-೦೬); ನಾರಾಯಣಮಾಸ್ತರೊಡನೆ ವ್ಯತಿರಿಕ್ತವಾಗಿ ಕೂಡಿಕೊಂಡು ನಕ್ಕು, ಸಡಗರದಿಂದ ಮಾತನಾಡುವುದು ದಿನದಿಂದ ದಿನಕ್ಕೆ ಪುಟವಿಟ್ಟಂತಾಯ್ತು (ಗಾಳಿಂ. ೬೬).

[ಪುಟ್ಟ$_3$ + ಇಡು$_1$]

**ಪುಟವಿಳಿ** (ಕ್ರಿ). ಬೆಂಕಿಯಿಂದ ಕಾಂತಿ ಪಡೆದು ಹೊರಬರು: ಬಿನ್ನಣದಿ ಪುಟವಿಳಿದ ಸೊನ್ನೆಯ ತಿರಸ್ಕರಿಪ ಚೆನ್ನೆಯರ್ . . . ನಡೆತಂದರು (ಸಂಬಿಪು. ೯-೯).  [ಪುಟ್ಟ$_3$ + ಇಳಿ$_1$ (<ಇೞ್$_1$)]

**ಪುಟವೇರಿಸು** (ಕ್ರಿ). ೧. ಬೆಂಕಿಯಲ್ಲಿ ಹಾಕು ; ಸುಡು ; ದಹಿಸು : ಅವರನ್ನು ಹಿಡಿದು ಪುಟವೇರಿಸೋಣ ! (ಬಿಗಡ. ೩೨-೨೨). ೨. (ಅಲಂ) ಉತ್ಸಾಹಗೊಳಿಸು ; ಚೇತರಿಸು : ಸಾರಿ ನೀವೀಗಲು ಪರೀಕ್ಷಿತನ ಮನವ ಕಲಿಯೇರಿಸಿಯೆ ನೀತಿವಚನಂಗಳಿಂದಲವನ ಪುಟವೇರಿಸಿಯೆ ದುಗುಡವಂ ಬಿಡಿಸಿ (ತುರಂಗ. ೯೩-೨೨).  [ಪುಟ್ಟ$_3$ + ಏರಿಸು (<ಏಱಿಸು)]

**ಪುಟವೇಳ್$_1$**, ಪುಟವೇಳು (ಕ್ರಿ). ಪುಟಿದು ಏಳು ; ಮೇಲಕ್ಕೆ ಹಾರು : ಘಟಶತಘ್ನಗಳ ಗುಂಡುಗಳುಱೆ ಮೇಲಕ್ಕೆ ಪುಟವೆದ್ದು ನಡೆದುವು (ಕಂಕು. ೦೨-೦೮). ಪುಟವೇಳು : ಚೆಂಡು ತೂತಾಗಿರುವುದರಿಂದ ಪುಟವೇಳುತ್ತಿಲ್ಲ (ರೂಢಿ).  [ಪುಟ್ಟ$_1$ + ಏಳ್$_1$ (<ಏೞ್$_1$)]

**ಪುಟವೇಳ್$_2$** 'ಪುಟವೇಱು' ನೋ.

**ಪುಟವೇಳು** 'ಪುಟವೇಳ್$_1$' ನೋ.

**ಪುಟವೇಱು** (ಕ್ರಿ) ೧. (ಅಲಂ) ಕಾಂತಿಯನ್ನು ಹೊಂದು ; ಶೋಭೆಯನ್ನು ಪಡೆ : ಇನಿಸಿನಿಸಾ ಗರ್ಭಂ ಪ್ರತಿದಿನಮೊಯ್ಯನೆ ಬಳೆಯೆ ನಯದೆ ಪುಟವೇಱಿ ನಿತಂಬಿನಿ ಕಾರೊಳೆಸೆಪ ಕಾದಂಬಿನಿಯಂದದೆ ಮಂದಮಂದಗಮನದೆ ನಡೆದಳ್ (ಕಾದಂಪೂ. ೩೮೦). ೨. ಹೆಚ್ಚಾಗು ; ವೃದ್ಧಿಯಾಗು : ಪುಳಕಂ ಪುಟವೇಱೆ ಭೋಂಕನೆದ್ದುನ್ನತಾಸನವೇಱೆ (ಬಸರ. ೦೦-೫).  [ಪುಟ್ಟ$_3$ + ಏಱು$_1$ (<ಏಱ್$_1$)]

**ಪುಟವೇಱ್**, ಪುಟವೇಳ್$_2$ (ಕ್ರಿ). (ಅಲಂ) ಉಬ್ಬು; ಉತ್ಸಾಹ ಪಡು: ಪರ್ಚುವನಪ್ಪಿಪಂ ನಲಿವಂ . . . ಪುಟವೇಱ್ವನತಿಪ್ರಮೋದವಾಂತರ್ಚಿಪನುದ್ಭಟಕ್ಷಿತಿಪಂ (ಉದ್ಭಟ. ೦೧-೨). ಪುಟವೇಳ್$_2$ : ಗಿರಿರಾಜನೊಡಂಬಟ್ಟಾವರದೀದಂ ಪುಳಕಿಸುತ್ತೆ ಪುಟವೇಳುತ್ತುಂ ಪರಿಚಾರಪಟುಗಳೆನಿಸುವ ತರುಣಿಯರುಂ ಕೂಡಿ ಕೊಟ್ಟು ಸಂತಸದಿಂದಂ (೧೦೯. ೩-೯); ಪೂಜೆಯುಮಾಡಿ ಪುಟವೆದ್ದಾಡುವರ್ ಕೆಲರ್ (ಬಸರ. ೭-೬೭).  [ಪುಟ್ಟ$_3$ + ಏಱ್$_1$]

**ಪುಟಸಂಸ್ಕಾರ** (ನಾ). ಲೋಹಾದಿಗಳನ್ನು ಬೆಂಕಿಯಲ್ಲಿಟ್ಟು ಕಾಯಿಸಿ ಶುದ್ಧಗೊಳಿಸುವಿಕೆ ; ಪುಟಕ್ಕೆ ಹಾಕುವಿಕೆ : ನಿನಗುಳಿದ ಜಗವ ಮುಟ್ಟಿಪ ಸೇತು ಸಂಸಾರ ಮನಕೆ ಪುಟಸಂಸ್ಕಾರ (ಜುಂಕೆಾಳ. ೬೦೦). [ಸಂ.]

**ಪುಟಸನ್ನೆಗೈ** (ಕ್ರಿ). ಕೈಯಿಂದ ಚಪ್ಪರಿಸಿ ಸನ್ನೆ ಮಾಡು : ವಾಯುವೇಗದ ತುರಂಗಗಳನಡರ್ದು ಸಲ ವೈಯಾರದಿಂದೆ ಪುಟಸನ್ನೆಗೈದೊಲವಿ

ನಿಂದಾಯೆನುತೆ ಕಂದವಂ ತಟ್ಟುತ್ತೆ (ಕುಂಉಸು. ೧೨-೬).
[ಪುಟ್ಟ₃ + ಸನ್ನೆಗ್ಗೆ (< ಸನ್ನೆಗೆಯ್))]

**ಪುಟಾಣಿ₂** 'ಪುಟ್ಟಾಣಿ' ನೋ.

**ಪುಟಾಣಿ₃** 'ಪುಠಾಣಿ' ನೋ.

**ಪುಟಿ₁** (ಕ್ರಿ). ಮೇಲಕ್ಕೆ ಚಿಮ್ಮು; ನೆಗೆ ; ಹಾರು : ಕುಂದ ಮಂದರ ಇಳಿದು . . . ಗಂಧಮಾದನಗಿರಿಗೆ ಹಿಂಗದೆ ಪುಟಿದು ವಾರಿನಿಧಿಯು ನೆರೆದ ಗಂಗಾಗಾರುತಿಯು ಬೆಳಗಿರೇ (ಏಕಕೀ. ೦೭-೬); ಹಾಸ್ಯ ಅಂದರೆ ಬುಗ್ಗೆಯಾಗಿ ಪುಟಿಯುತ್ತದೆ (ಅಹೋಲೀ. ೦೫೭); ನೀರಿನ ಕಾರಂಜಿ ಪುಟಿಯುವುದನ್ನು ಈಕ್ಷಿಸುತ್ತ ರೇಣು ಕೇಳಿದಳು (ಹೇಮಂತ. ೨೪೬).

**ಪುಟಿಪುಟಿ** (ದ್ವಿರುಕ್ತಿ) : ಭರದೆ ವಾರಿಧಿಯಲ್ಲಿ ಹಾರಲು ಶಿರದ ಛಿದ್ರ ದ್ವಾರದಿಂದೆತ್ತರದೆ ನೀರ್ಪುಟಿಪುಟಿದು ಕಣ್ಣಿಗೆ ಚಂದಗಾಣುವದು (ಕಶುಪಂ. ೦೧೦-೧೦).

**ಪುಟಿ₂** (ನಾ). ಚಕ್ರದ ಆರೆಕಾಲು : ಜನಪದಸಾಹಿತ್ಯವೆನ್ನುವುದು ಜಾನಪದಚಕ್ರದ ಒಂದು ಪುಟಿ . . . ಹಲವು ಪುಟಿಗಳು ಕೂಡಿ ತಾನೆ ಒಂದು ರಥದ ಚಕ್ರ ? (ಜುವರ್ಣ. ೨೨). [?]

**ಪುಟಿಕೆ** (ನಾ). ೧. ಕರಂಡ; ಭರಣಿ; ಡಬ್ಬಿ: ಮದನನ ಸುಗಂಧಭಂಡಾರದ ಪುಟಿಕೆಗಳೆನಿಸಿ ಕಂಪು ಮಗಮಗಿಸಿಪಲರ್ವಟ್ಟಿದ ಪಡಲಿಗೆಗಳನೊಟ್ಟೈಸಿದನ ವನಚ್ಯುತನ ಮುಂದೆ ಮಾಲಾಕಾರಂ (ಜಗಪ. ೬-೧೬) : ತರವೇಟ್ಬಾಣಿಕ್ಯ ಭಂಡಾರದ ಪುಟಿಕೆಗಳಂ (ಕಮುದ. ೨೪೯ ಕೃಯೋ). ೨. ದೊನ್ನೆ ; ಎಲೆಯ ಬಟ್ಟಲು : ಪೂವಿಗೆ ಪು [ಶಾಂತಾಂ. ಘುಟಿಕೆಯು ಮಾಳ್ಪೆನೆಂದಾಗ ಜಯಾವತಿಯುಶಿಹರುಷದೊಳು ಆ ವನರುಹದೊಂದೆಲೆಗೊಯ್ಕೆ ಬೆಳ್ಳೊಡೆಯಾ ವಸುಧಾವಶಿಗಾಯ್ತು (ಕ್ರಿಶಾಂ. ೦೨-೪೮). 'ಪತ್ರಪುಟಿಕೆ' ಪರಾ. ೩. ಜಾಕಾಯಿ; ಜಾಯಿಕಾಯಿ : ಎಕ್ಕೆಹಾಲಿನಲ್ಲಿ ಚತುಷ್ಕಕ ಟಂಕಣವನ್ನಾಗಲೀ ಪುಟಿಕೆಯನ್ನಾಗಲೀ ಹಾಕಿ ಮರ್ದಿಸಿ ಗಜಪುಟವನ್ನು ೨೦ ಕೊಟ್ಟರೆ ಭಸ್ಮವಹುದು (ಚಿಕ್ರ. ೨೨). ೪. ಏಲಕ್ಕಿ. [ಸಂ. ಪುಟಿಕಾ]

**ಪುಟಿಗಾಲು** (ನಾ). ನೆಗೆಯುವ ಕಾಲು ; ಪುಟಿದೇಳುವ ಕಾಲು : ನಿನ್ನ ಪುಟಿಗಾಲಿನಲಿ ಹರ್ಷ ದುಃಖಿದ ಖುತು (ವೆಂಶು. ೮೧-೩).
[ ಪುಟಿ₁ + ಕಾಲು₁ (<ಕಾಲ್₁) ]

**ಪುಟಿಗೆ** (ನಾ). ೧. ಪುಟಿಯುವಿಕೆ ; ನೆಗೆತ. ೨. ವಿನಾಟ ; ಜೀಕು : ಕಮಲಾಬಾಯಿಯರ ಕೈಗೆ ಪುಟಿಗೆ ಕೊಟ್ಟು ಉಷೆಯು ಸುಶೀಲೆಯೆಡೆಗೆ ಸಾಗರವರಿದಳು (ಸಪುಜ. ೬೨೪). 'ಮುಂಗಾಲ್ಪುಟಿಗೆ' ಪರಾ.
[ಪುಟಿ₁ + – ಗೆ]

**ಪುಟಿತ** (ಗು). ೧. ಹೆಣೆದ ; ಜೋಡಿಸಿದ. ೨. ಮಡಿಚಿದ. ೩. ಹೊಲಿದ ; ಕೂಡಿಸಿ ಕಟ್ಟಿದ. ೪. ಉಜ್ಜಿ ಪುಡಿ ಮಾಡಿದ; ಹುಡಿಗೊಳಿಸಿದ. ೫. ಸಂಕುಚಿತವಾದ ; ಸಂಕೋಚಗೊಳಿಸಿದ. ೬. ಪ್ರಕಟಿಸಿದ ; ವ್ಯಕ್ತಪಡಿಸಿದ. ೭. ಹೇಳಿದ; ನುಡಿದ. [ಸಂ.]

**ಪುಟಿಯಿಸು,** **ಪುಟಿಸು** (ಕ್ರಿ). ಚಿಮ್ಮಿಸು; ನೆಗೆಸು : ನಾಲ್ವತ್ತು ಗೆಳೆಯರ ಕೈ ಉಬ್ಬಿಸಿದವನ ತಲೆಯಿಂದ ನೆತ್ತರು ಪುಟಿಯಿಸದಿದ್ದರೆ ನಾನು ಜಾತಿವಂತ ಅಂಬಿಗನಲ್ಲ (ರಂಗಕೂ. ೧೨). **ಪುಟಿಸು :** ನಮ್ಮ ಹಳ್ಳಿಗರು ಆಗಾಗ ಹಾಸ್ಯದ ಬುಗ್ಗೆಯಾಗಿ ಬೆಡಗುಗಳನ್ನೊಳಗೊಂಡ ಹಾಡುಗಳ ಕಾರಂಜಿಯನ್ನು . . . ರಸಕವಿಗಳಾಗಿ ಪುಟಿಸಿದ್ದಾರೆ (ಕನ್ನಜಾ. ೪೯) [ ಪುಟಿ₁ + – ಇಸು₃ ]

**ಪುಟಿಸು** 'ಪುಟಿಯಿಸು' ನೋ.

**ಪುಟೀಪು** (ನಾ). ಗೋಡೆ ಅಥವಾ ಹಲಗೆಯ ಮೇಲೆ (ಚಿತ್ರ, ಸುಳುಹಂ ಮೊದಲಾದಂವುಗಳ ರಚನೆಗಾಗಿ) ಸುತ್ತಣ ಮಟ್ಟಕ್ಕಿಂತ ಉಬ್ಬಾಗಿ ಅಥವಾ ತಗ್ಗಾಗಿ ಮಾಡಿದ ವಿಭಾಗ,—ಅಂಕಣ : ಇದನ್ನು ಮುಹಡಿಯ ಮೆಟ್ಟಿಲುಗಳ ಪುಟೀಪುಗಳು (Panels) ಮತ್ತು ತೆಳುಗೋಡೆಗಳಲ್ಲಿಯೂ ಉಪಯೋಗಿಸುತ್ತಾರೆ (೩೦ಸಾ. ೩೨೪) ; ಎರಡು ಪಟ್ಟಿಕೆ ಅಥವಾ ಪುಟೀಪುಗಳಲ್ಲಿ (Panels) ನಟರಾಜನ ನಾಟ್ಯಭಂಗಿಗಳು ಶಿಲ್ಪಿತವಾಗಿವೆ (ಸೋಂಂಂ. ೯೬). [ ? ]

**ಪುಟು** (ನಾ). ಒಂದು ಅನುಕರಣಪದ : 'ಪುಟಂಗುಟ್ಟು' ಪರಾ.

**ಪುಟುಗುಟ್ಟು** (ಕ್ರಿ). ಪುಟುಪುಟು ಎಂದು ಬಡಿದುಕೊಳ್ಳು : ಪುಟುಗುಟ್ಟುತ್ತಿರಲೆದೆ ತುಟಿ ಕಚ್ಚಿ ಹಿಡಿದಿದ್ದೆ ನನ್ನಲ್ಲೆ ನಾನಿಲ್ಲ ಎಂಬಂತಿರೆ (ಸಣೀಗೀ. ೨೯-೫೪೫). [ಪುಟು + ಕುಟ್ಟು₁]

**ಪುಟುಪುಟಿಸು,** ಪುಟಪುಟಿಸು (ಕ್ರಿ). ವಟಗುಡು ; ಗೊಣಗು : ಮೂರ್ತಿ ಮೆಲ್ಲಗೆ ನೆಲಕ್ಕೆ ಹಣೆ ಹಚ್ಚಿ ನಮಸ್ಕಾರ ಮಾಡಿ ಮನಸ್ಸಿನಲ್ಲಿಯೇ ಪುಟುಪುಟಿಸಿದ (ಏರೋಣಿ. ೨೦) ; ಭೀಮಪ್ಪ . . . ಬಾಯಲ್ಲಿಯೇ ಏನೇನೋ ಪುಟುಪುಟಿಸಿದ (ಮಣ್ಣು.ಹ. ೧). **ಪುಟಪುಟಿಸು :** ಬಾಯಲ್ಲೇ ಏನೋ ಪುಟಪುಟಿಸುತ್ತ ಅಂಗಡಿಯತ್ತ ನಡೆದೇ ಬಿಟ್ಟರು (ಪುರುಣ. ೨೫೬).
[ < ಪುಟು + – ಇಸು₃ ]

**ಪುಟುವು** (ನಾ). (ಆಲಂ) ಪ್ರೋತ್ಸಾಹ; ಬೆಂಬಲ: ಅವನ ಮದುವೆ ಮಾಡಬೇಕೆಂದು ರಾಯರ ಹಂಬಲ ; ಆಚಾರ್ಯರ ಪುಟುವು (ಕ್ರಿರಂಣ. ೦೯); ಅವರೇ ಶ್ಯಾಮರಾಯನಿಗೆ ಪುಟುವು ಕೊಡುತ್ತಿದ್ದ ವಾರ್ತೆ ಗೌಡರಿಗೂ ಹತ್ತಿತ್ತು (ದೀಪಹ. II. ೦೦೦). [ < ಪುಟ್ಟ₃ + – ವು ]

**ಪುಟಿಗಳ್ಳ** (ನಾ). ಒಬ್ಬಾತನ ಹೆಸರು : ಅಯ್ಯಣಯ್ಯನ ಮಗಂ ಪುಟಿಗಳ್ಳನ್ಯಾಗೆದೊಡೆ (ಶಾಇಇ. IX-I. ೬೫-೧೦; 947). [ ? ]

**ಪುಟ್ಟ₁₁** (ನಾ). ೧. ಚಿಕ್ಕವನು ; ಸಣ್ಣವನು : ಹೊಟ್ಟೆಯ ಕರುಳ ಹಾರವ ಮಾಡಿ ಪುಟ್ಟಗೆ ವರವ ಕೊಟ್ಟಾನ್ಯಾ (ಕಪಳ. ೭೭-೪) ; ರತಿಯು ಪರಿಪಾಲಿಸುವ ಪುಟ್ಟನನ್ನು ಕರೆತರ್ಪುದು (ಶಪಪೋ. ೦೨-೩೦) ; ಹೋದ ಪುಟ್ಟ ಬಂದ ಪುಟ್ಟ, ಪುಟ್ಟನ ಹೆಜ್ಜೆ ಕಂಡೋರಿಲ್ಲ (ಗಾದೆ). ೨. ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಬಳಸುವ ಒಂದು ಪದ : ಊಟ ಮಾಡು ಬಾ ಪುಟ್ಟ (ಊರು). (ಗು). ೩. ಚಿಕ್ಕ ; ಸಣ್ಣ : ತರಳನ ಪುಟ್ಟ ಪಾದದೊಳಿರ್ದ ತಾವರೆಯರಲನು ನೊಸಲಿಗೊತ್ತುವಳು (ಬೋಹಕ. ೦೬-೬೪) ; ಅರ್ಭಕನ ಕಣ್ಗೆ ಪುಟ್ಟ ಸಾಲಗ್ರಾಮದೊಂದು ರಮಣೀಯ ಶಿಲೆ ಕಟ್ಟಿಸಕದಿಂದೆ ಕಾಣಿಸಲದಂ ತಾನೆತ್ತಿಕೊಂಡು . . . ಬೈಚಿಟ್ಟುಕೊಂಬಂ ಬಾಯೊಳನವರತಂ (ಕೈಪಿಶಾ. ೨೯-೨೩) ; ನಂಜಮ್ಮ . . . ಮಗುವಿನ ಕೈಕಾಲುಗಳಿಗೆ ಪುಟ್ಟ ಹೊನ್ನ ಬಳೆಗಳನ್ನು ತೊಡಿಸಿದಳು (ಹಾಪುತ್ತ. ೪೦).

**ಪುಟ್ಟದು**=ಚಿಕ್ಕದು ; ಸಣ್ಣದು : ಮಕ್ಕಳ ಕೈ ಪುಟ್ಟದು. ಅದರ ಗ್ರಹಣ ಶಕ್ತಿ ಅದಕ್ಕೆ ತಕ್ಕಂತೆ ಅಲ್ಪ (ಕಾಪಾಕ್ಕ. ೦೭೩) ; ಬಿಲ್ಲಿನಂತೆ ಬಾಗಿದ್ದ ತುಟಿ; ಪುಟ್ಟದಾದ ಬಾಯಿ (ಕಳಹು. ೨).

[ದೇ.॥ ತುಳು. ಪುಟ್ಟ ; ತೆಲು. ಪೊಟ್ಟಿ, ಪೊಟಿ./ಸಂ. ಪುಟ್ = ಚಿಕ್ಕದಾಗು]

**ಪುಟ್ಟ₂** (ಗು). ೧. ಪೋಷಿತ ; ಪುಷ್ಟ : "ಪುಟ್ಟ – ಪುಷ್ಟ = ಪುಷ್ಟಿಯಾದ" (ಶಬ್ದಕೋ. ೨೬). (ನಾ). ೨. ಪೋಷಣೆ ಹೊಂದಿದುದು : 'ಪರಪುಟ್ಟ' ಹೋ. [< ಸಂ. ಪುಷ್ಟ./ಪ್ರಾ. ಪುಟ್ಟ]

**ಪುಟ್ಟಂಪುರಳೆ** (ನಾ). ಒಂದು ಬಗೆಯ ತರಕಾರಿ ಸಸ್ಯ ; **ಪುಳ್ಳಂಪುರಚಿ :** ಉಪ್ಪು, ಉಪ್ಪಿನ ಸೊಪ್ಪು, ಪುಟ್ಟಂಪುರಳೆ, ಪುಳ್ಳಂಪುರಚಿಸೊಪ್ಪು, ಹುಳಿಚಿಕ್ಕ (ಬೃಕಿಶಿ. ೫೯-೦೧೬೭). [ ? ]

**ಪುಟ್ಟಗಾವುಂಡ** (ನಾ). ಒಬ್ಬಾತನ ಹೆಸರು : ತೊಟ್ಟಿಲ ಪುಟ್ಟಗಾವುಣ್ಣನುಂ ಎಚಿಯಣ್ಣ ಪೆಮ್ಮಾರ್ಡಿ ಕೆಜಿಯ ಕಟ್ಟಿ ಕಲ್ಲ ತುಂಬನಿಕಿಸಿದ (ಬ್ಯಾಅಂ. ೦೯೬೨. ೧೧-೪ ; ಸು. ೧೫೭೮ ಶಕ). [ಪುಟ್ಟ₁₁ + ಗಾವುಂಡ (< ಗಾಮುಂಡ)]

**ಪುಟ್ಟಗೆ** 'ಪುಟ್ಟಗೆಗ್ಗೆ' ನೋ.

**ಪುಟ್ಟಜ,** ಹುಟ್ಟಜೆ (ನಾ). ಹುಟ್ಟಿದ ಸ್ಥಳ; ತವರುಮನೆ; ಜನ್ಮಸ್ಥಾನ: ಮದನನ ಕೈದುವೆಲ್ಲಿದು . . . ಚದುರ ಪುಟ್ಟಿದನೆ [ಟ್ಟಜವೆ] ಲ್ಲಿದಂ (ಆದಿಪು. ೩-೦೫); ಸಿರಿಯ ತವರ್ಮನೆ ಹವಳದ ಹರವರಿ ಮೌಕ್ತಿಕದ ಪುಟ್ಟಜಂ ಶಶಿಯಯ್ಯಂ ಹರಿಯಪ್ಪ ಸೆಜ್ಜೆವನೆ . . . ಎನಿಪಂಭೋನಿಧಿ ಸುತ್ತುವೊಪ್ಪೆ(ಪ್ಪ)ತ್ತಿರೆ ಜಂಬೂದ್ವೀಪವೊಪ್ಪಿಪ್ಪುದು (ಕಇ. I. ೨೫-೯: 1180): ಜಗತೀಕಾಂತನ ಮಾದೇವಿ ಲಕ್ಷ್ಮಣಾದೇವಿ . . . ಚದುರ ಘಟ್ಟಜ [ಪುಟ್ಟಜ] ವೆನಿಪಳ್ (ಚಂದ್ರಪು. ೦೦-೯೦). **ಹುಟ್ಟಜೆ:** ಸಿರಿಯ ತವರ್ಮನೆ ಹವಳದ ಹರವರಿ ಮುತ್ತುಗಳ ಹುಟ್ಟಜೆ ಚಂದ್ರನ ತಾಯಿ ಹರಿಯಿರ್ಪ ಸೆಜ್ಜೆವ[ನೆ] ರತ್ನರಾಶಿಯುಮರ್ದಿನ ನಿಧಾನಂ . . . ಎನೆ ಚೆಲ್ವಿಂ ಜಳರಾಶಿ ಸುತ್ತುವಿರೆ ಜಂಬೂದ್ವೀಪವೊಪ್ಪಿಪ್ಪುದು (ಸೌಇಇ. XV. ೨೪೦-೫; 1174).

**ಪುಟ್ಟಣೆ** 'ಪುರಾಣಿ' ನೋ.

**ಪುಟ್ಟಬಾಳೆ,** ಪುಟಬಾಳೆ, ಪುಟವಾಳೆ (ನಾ). ಸಣ್ಣಗಾತ್ರದ ಹಣ್ಣುಗಳನ್ನು ಬಿಡುವ ಒಂದು ಜಾತಿಯ ಬಾಳೆ: ಬಾಳೆಯಲ್ಲಿ ಅನೇಕ ಜಾತಿಗಳಿವೆ—ರಸಬಾಳೆ, ಚಂದ್ರಬಾಳೆ, ರಾಜಬಾಳೆ, ಪುಟ್ಟಬಾಳೆ, ಏಲಕ್ಕಿಬಾಳೆ, ಮಧುರಂಗಬಾಳೆ, ಸೇಲಂಬಾಳೆ ಇವೇ ಮೊದಲಾದವು (ಕೃಷಮು. ೩೭); ಹಟ್ಟೀ ಕಲ್ಲೊಳ್ಳಿಗೆ ಬಟ್ಟುಗಂಧವನಿಟ್ಟು ಪುಟ್ಟಬಾಳೆ ಹಣ್ಣ ಸುಲಿದಿಟ್ಟು (ಜಾಪದ. ೧೨೪). **ಪುಟಬಾಳೆ:** ಹಟ್ಟಿ ಕಲ್ಲಿಗೆ ಪುಟ್ಟು ಗಂಧಾವನಿಕ್ಕಿ ಪುಟಬಾಳೇ ಹಣ್ಣಾ ಸುಲಿದಿಕ್ಕಿ ಒಳಗೀರೋ ನಿಸ್ಸೆ ಬಂದಕ್ಕೀ ತೊಳೆಸಾರೊ. (ಹುಟ್ಟಿಹ ೩೦). **ಪುಟವಾಳೆ:** ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯಸೆವಾದೇವಾಳೆ ಬಾಳೆ ಹಸುರುಗುಂದದ ಪಚ್ಚೆಬಾಡವು ಮಧುರಂಗ ಪಸರಿಸಿ ಮೆಱೆವುಪರ್ತಿಯಲಿ (ಕಂಪರಿ. ೩-೮೬).

[ಪುಟ್ಟ₁ + ಬಾಳೆ₁ (< ಬಾೞೆ³). / ತಮಿ. ಪುಟ್ಟುವಾೞೈ]

**ಪುಟ್ಟವಳ** (ನಾ). ಹುಟ್ಟುವಳಿ; ಆದಾಯಂ; ಉತ್ಪನ್ನ: ಧಾರಾಪೂರ್ವಕ ಮ್ಮಾಡಿಕೊಟ್ಟು ಕೊಣ್ಡ ಪೊಂಗದ್ಯಾಣ ನೂಱ ಮೂಱು ಇಂತಿ ಪುಟ್ಟವಳದಲು ನಿಚ್ಚಂ ನಾಲ್ವರ್ಗ್ಗೆ ಸತ್ರವಂ ನಡೆಸಂತಾಗಿ ಬಿಟ್ಟುಕೊಟ್ಟನು (ಸೌಇಇ. IX-I. ೮೯-೨೦; 1035): ಮಾಲಗಾಱ ಬವರ್ಯ್ಯಮೊನ್ದು ಪಸದನದ ಪುಟ್ಟವಳಮುಂ ಬಿಟ್ಟ (ಎಇ. XVI. ೩೩೧-೨೫: 1077).

[?·/ ಪುಟ್ಟು₁ + < ಪಣ₃]

**ಪುಟ್ಟಱಿವು,** ಹುಟ್ಟರಿವು (ನಾ). ಹುಟ್ಟಿನಿಂದ ಬಂದ ತಿಳಿವಳಿಕೆ; ನೈಸರ್ಗಿಕವಾದ ಬುದ್ಧಿ: ಕೇಡಡಸೆ ಪುಟ್ಟಱಿವುಪುಟ್ಟಱಿಯುದೆಯೆ ನೆಲೆ ತಪ್ಪಿ ಪೋಕುಮದ್ (ಅಂತಿಗೂ. ೨೬-೩೪೦). **ಹುಟ್ಟರಿವು:** ಪ್ರತಿ ದೇಶಬಂಧುಗಳ ಹೃದಯದಲ್ಲಿ ಹುಟ್ಟರಿವಾಗಿ ಬಂದು, ಅವರ ಜೀವನಕ್ರಮವನ್ನೇ ವ್ಯಾಪಿಸಿ ನಿಯಂತ್ರಿಸುವ ನಂಬಿಕೆಗಳು—ದೇವರು . . . ಪರಲೋಕ ಇವುಗಳೆಂದು ಒಟ್ಟಿನಲ್ಲಿ ಹೇಳಬಹುದು (ಭಾರತ. ೪); ಹಾವುಗಳು ಸ್ವಪ್ರದೇಶಪ್ರೇಮಿಗಳು. ಆಗಂತುಕರನ್ನು ಶತ್ರುಗಳೆಂದೇ ಭಾವಿಸುವ ಹುಟ್ಟರಿವು ಇವುಗಳ ಸಹಜಸ್ವಭಾವ (ಹಸುಕೂ. ೬೬).

[ಪುಟ್ಟು₂ + ಅಱಿವು]

**ಪುಟಾಣಿ,** ಪುಟಾಣಿ₁ (ನಾ). ೧. ಚಿಕ್ಕವನು; ಸಣ್ಣವನು: ಪುಟ್ಟಾಣಿ, ನಿನ್ನ ಹೆಸರೇನು? (ರೂಢಿ). (ಗ್ರಾ). ೨. ಎಳೆಯ; ಚಿಕ್ಕವಯಸ್ಸಿನ: ಅಳಿಯನನ್ನೇ ಮನೆಯಲ್ಲಿ ನಿಲ್ಲಿಸಿಕೊಳ್ಳುವೆ, ಈ ಪುಟ್ಟಾಣಿ ಮಗಳನ್ನು ಕಳಿಸುವುದಿಲ್ಲ (ಕನ್ನಹು. ೫೯); ನೀನಿನ್ನೂ ಸಣ್ಣವನು. ನಿನ್ನ ಪುಟ್ಟಾಣಿ ಕೈಲಿ ಇಂಥಾ ಕೆಲಸ ಆಗುಲ್ಲ (ಪುಟ್ಟಿರ. ೨೦). **ಪುಟಾಣಿ₁:** ೧. ಗಿಡ್ಡಪುಟಾಣಿ ಮಜ್ಜಿಗೆ ದೋಣಿ (ಗಾದೆ). [< ಪುಟ್ಟ₁]

**ಪುಟ್ಟಾರಿ** (ನಾ). ಚಿಕ್ಕ ಮಗು: ಪುಟ್ಟಾರಿಗೆ ಎಳೆದುಕೊಂಡು ಆಡುವುದಕ್ಕೆ ಅವನ ತಂದೆ ಒಂದು ಕೈಬಂಡಿಯನ್ನು ತಂದುಕೊಟ್ಟಿದ್ದರು (ಕಂಕಪ. ೦೯೬). 'ಚಿನ್ನಾರಿ' ಹೋ. [< ಪುಟ್ಟ₁]

**ಪುಟ್ಟಿ₁,** ಬುಟ್ಟಿ (ನಾ). ೧. ತೆಂಗು, ತಾಳೆಗಳ ಗರಿ ಅಥವಾ ಬಿದಿರಿನಿಂದ ಹೆಣೆದು ಮಾಡಿದ ಗೂಡೆ, ಮಂಕರಿ ಮುಂತಾದುವು. ಅನೇಕ ಸುರಭಿಕುಸುಮಂಗಳಂ ಸಜ್ಜುಗೆಮಪ್ಪುವಂ ಪುಟ್ಟಿಯೊಳ್ ತೀವಿಕೊಂಡು (ಕಂಕಕಂ. ೦೦೬-೬); ನೆತ್ತರ ಮಡು ನಾಡಿಗಳ ಸುತ್ತುವಳಿ ನರವಿನ ನೆಣಜಂತ್ರ ಮಾಂಸದ ಪುಟ್ಟಿಯ ತೆಪ್ಪ . . . ಮೋಹದ ಬಲೆ ತೋಱುಕೆಡುವ ತನುವಿದು (ಪಕಸಂ. ೪೫-೬೨); ಹೊಟ್ಟೆಯಿಂದಸ ಪುಟ್ಟಿಸಿಂಗನ ಮುಟ್ಟುವಿನೆ ಕೊರಳಾಣೆ ಪುಟ್ಟಿಯ ಮೇಲಾಣೆ ಕಟ್ಟಿದ ತಾಯಿತ್ರದಾಣೆ (ತ್ರೀಕೃಪಾ. ೬೫): ಪುಟ್ಟಿ ಕಿರಿದೇನು ಹಡಗೆ ಹೆಚ್ಚೇನು? (ಗಾದೆ). **ಬುಟ್ಟಿ:** ೧. ಈಕೆಯ ತಲೆ ನೋಡು ಹೇಗೆ ಬುಟ್ಟಿ ಆಗಿದೆ! (ಮುಬಿಯ. ೧·೦೩); ಅನ್ನದ ರಾಶಿಗಾಗಿ ದೊಡ್ಡ ಬುಟ್ಟಿ ಬಾಯಿ ತೆರೆದು ನಿಂತಿತ್ತು (ಹಬ್ಬಿ. ೫); ಕೆಲವರು ಹೆಂಗಸರು ತಲೆಯ ಮೇಲೆ ಬುಟ್ಟಿಗಳನ್ನು ಹೊತ್ತುಕೊಂಡು ಬರುತ್ತಿದ್ದರು (ರಂಗಳ. ೨೭). ೨. ಬಿದಿರಿನ ಬುಟ್ಟಿಯಾಕಾರದ ನಾವೆ: ಬುಟ್ಟಿಯು ದೊಡ್ಡ ಸೆಳವಿನ ಸುಳಿಯನ್ನು ದಾಟಿ ಆಚೆಯ ದಡೆಯ ಸಮೀಪಕ್ಕೆ ಬಂದಿತ್ತು (ರಮಣಸ. ೧೦೨).

ಬುಟ್ಟಿಗೆ **ಹಾಕಿಕೊಳ್ಳು**=(ಆಲಂ) ಉಪಾಯವಾಗಿ ಸ್ವಾಧೀನ ಪಡಿಸಿಕೊಳ್ಳು: ಯುಕ್ತಿಯಿಂದ ವಶಪಡಿಸಿಕೊಳ್ಳು: ಅವನು ವ್ಯವಹಾರಕುಶಲ . . . ಹೇಗೋ ಅವಳನ್ನು ತನ್ನ ಬುಟ್ಟಿಗೆ ಹಾಕಿಕೊಂಡನು (ಪುಪರು. ೯); ಬಿಲ್ಲಪ್ಪನ ಬೇಳೆ ನ್ಯಾಯಾಧೀಶರ ಬಳಿ ಬೇಯುವ ಹಾಗಿದ್ದರೆ ಅವರನ್ನು ತನ್ನ ಬುಟ್ಟಿಗೆ ಹಾಕಿಕೊಳ್ಳುತ್ತಿದ್ದನು (ಕಂಖಕಂ. ೨೦೪).

[ದೇ.॥ ತಮಿ. ಪುಟ್ಟಿಲ್; ತುಳು. ಪುಟ್ಟಿ. ಬುಟ್ಟಿ; ತೆಲು. ಪುಟಿ, ಪುಟ್ಟಿ, ಬುಟ್ಟ, ಬುಟ್ಟಿ; ಕೊಡ. ಪುಟ]

**ಪುಟ್ಟಿ₂** (ನಾ). ೧. ಚಿಕ್ಕವಳು; ಚಿಕ್ಕವಯಸ್ಸಿನವಳು. ೨. ಹೆಣ್ಣು ಮಗು: ಗಂಡುಮಕ್ಕಳಿಗೆ "ಪಾಣಿ". ಹೆಣ್ಣುಮಕ್ಕಳಿಗೆ "ಪುಟ್ಟಿ" ಯೆಂದೆನ್ನುವರು (ಕರಾಗ. ೮೫). [ಪುಟ್ಟ₁ + -ಇ₂]

**ಪುಟ್ಟಿ₃** (ನಾ). ಒಂದು ಅಳತೆಯ ಪ್ರಮಾಣ: ಒಸಗೆ ಉತ್ಸಾಹಂಗಳ್ಗೆ ಒನ್ದೊಕ್ಕಲೊನ್ದು ಪುಟ್ಟಿಗೆ (ಎಇ. XIV. ೭೯೧ ೦೮; 765): ಸಜ್ಜುರಕ್ಕೆ [ಪು]ಟ್ಟಿಗೆ ಒನ್ದರೆ ಮಳವೆಗೆ ಪತ್ತು ಪಱಿನಾಱುಪಲಂ (ಎಇ. IX. ೨೨-೬; ಸು. 800). [ದೇ.॥ ತಮಿ. ತೆಲು. ಪುಟ್ಟಿ]

**ಪುಟ್ಟಿ₄,** ಪುಟ್ಟು₄, ಹುಟ್ಟಿ, ಹುಟ್ಟು₄ (ನಾ). ೧. (ವಿಶೇಷವಾಗಿ) ಜೇನಿನ ಗೂಡು: ಪೊಮ್ಮು ಪೊಯ್ಗಳು ನೆಗೆದು ಮುಗಿಲ್ಗಳಿಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದ ಜೇನ ಪುಟ್ಟಿಗಳನೆ ಪೋಲ್ತುವು (ಕಂಪಚ. ೦೦-೯೦); ಪಂದಲೆಗಳೆ ಜೇನ ಪುಟ್ಟಿಯೆನೆ ಕೊರ್ವಿದ ಕೊಂಬುಗಳಲ್ಲಿ ಪಕ್ಕಿವೋಲ್ ಚಿಲಿಮಿಲಿಯೆಂದುವರ್ದ ಕೋಲೆಗಳ್ಗುಣಪಾಲಯದಾಲದೋಳ್ ಯೊಳ್ (ಅರ್ಗವೆ. ೫-೩೭); ತಲೆ ಕೆಱಗಾಗಿ(ರ್ದ) ಪೆರ್ಜೇನ ಪುಟ್ಟಿಗಳಂತಿರ್ದ ಪುಟ್ಟಿ(ಅಟ್ಟು)ಗಳೊಳ್ ಪುಟ್ಟಿ (ಶಮಸಂ. ೯೪-೦೦). **ಪುಟ್ಟು₄:** ೧. ಕಲ್ಲ ಪೊಗಱೆಯೊಳಿಟ್ಟ ಕಾಮುರ್ಗಿಲ ಮೊಟ್ಟೆಗಳ್ ತಾಮೆನಿಸಿ ಪಱಿದುವು ಪೆರ್ಜೇನ ಪುಟ್ಟುಗಳ್ (ಅಶಂಪು. ೯-೨೭). **ಹುಟ್ಟಿ:** ೧. ಬಡುಮುಱ ಹುಟ್ಟಿಯು ಕೆಣಕಿದಂತೆಯುಂ (ಎಕ. VIII. ಸೊರಬ. ೦೬೫-೬; 1156); ಪನ್ನಫಲಂಗಳ ನಾಯ್ದುಕೊಂಡು . . . ಜೇನ ಹುಟ್ಟಿ [ಪಾಠಾಂ. ಟ್ಟು]ಗಳನ್ನಿಟ್ಟಿಟ್ಟಿಲಸದೆ. ಕಲಸಿ ತಣಿವಿನಂ ತಿಂದು ತೇಗಿ (ಗಿರಿಜಾ. ೧-೧೨೮ ವ). ೨. ಗೂಡು: ವಿಷದ ಹುಟ್ಟಿಯೊಳೆಱಗಿ ನೊಣ ಜೀವಿಸುವುದೆ (ಕುಮಾರರಾ. ೬-೪೦). **ಹುಟ್ಟು₄:** ೧. ಜೇನ ಹುಟ್ಟಿನ ಹುಳುವ ಬಡಿದ ಸಗುಣತನ ತಾನೇನು ಬೂಣೆಯ ಸೇನೆ ಗೀನೆಯ ಸಹಜಲಾಯಿತ ಶೌರ್ಯಸಿರಿ ನಿಮಗೆ (ಕುಮಾರವೆ. ೯-೩೪); ಕೆಟ್ಟಮ್ಮ ಹೆಂಗಸನು ಬಟ್ಟೆಯಲಿ ತುಱುಚಿಯನು ಅಟ್ಟಟ್ಟ ಕಡಿವ ಕಡವನ ಹುಟ್ಟನ್ನು ಮುಟ್ಟಬೇಡ (ಸರ್ವಜ್ಞ. ೮೫೫೦); ಆ . . . ಟೊಂಗೆಯನ್ನು ಕಡಿಯುವಾಗ ತಪ್ಪಿ ನನ್ನ ಕಾಲಿಗೆ ಕುಡುಗೋಲು ತಾಕಿತು (ಹುಬ್ಬಳ್ಳಿ ೦-೦೮).

**ಪುಟ್ಟಿ₆** (ನಾ). ಬಟ್ಟೆ; ವಸ್ತ್ರ : ಅಲ್ಲಿ ಮಹೇಶ್ವರಾಲಯದಂತೆ ಗೊರವು ... ಭೂಮಿ ಪರ್ವಿದಂತೆ ಸೀಗೆ ಪುಟ್ಟಿಯನಳೆವನಂತೆ ಮೊಳಗೆ ಕುರುಕಲ್ಕಿಕ್ಕುವ ವಯಣದಂತಿರ್ದಿಡು (ಜಂಹಂ. ೨-೩೬ ವ); ಮೂಲಾತ್ಪಾರಭ್ಯ-ಧ್ವಜದ ಮೂಲಂ ಮೊದಲುಗೊಂಡು ತತ್ಪಾರ್ಶ್ವೇ—ಆ ಶಿಖೆಯಿಕ್ಕೆಲದೊಳ್ ಕ್ರಮಹೀನಃ-ಕ್ರಮದಿಂ ಕುಂದುತ್ತಂ ಬಂದು ಅಗ್ರಪೌಷ್ಟಿಕಾತ್-ಕಡೆಯ ಪುಟ್ಟಿಯತ್ತಣಿಂದ (ಶ್ರೀಶಟೀ. ೦೯-೦೯). [<ಪುಟ್ಟಿಗೆ₁]

**ಪುಟ್ಟಿಕೆ** 'ಪುಡಿಕೆ' ನೋ.

**ಪುಟ್ಟಿಗೆ₁** 'ಪುಡಿಕೆ' ನೋ.

**ಪುಟ್ಟಿಗೆ₂**, ಪುಟ್ಟುಗೆ, ಹುಟ್ಟಗೆ, ಹುಟ್ಟಿಗೆ, ಹುಟ್ಟುಗೆ (ನಾ). ೧. ಬಟ್ಟೆ; ಉಡುವ ವಸ್ತ್ರ : ವಿದ್ಯುಚ್ಚೋರಂ . . . ಸ್ವಾಭಾವಿಕವಪ್ಪ ಮುನ್ನಿನ ರೂಪು ಕೈಕೊಂಡು ಪುಟ್ಟಿಗೆಯನುಟ್ಟು ಮೆಯ್ಯುಂ ಪೂಸಿ ಪೂವಂ ಮುಡಿದು (ವಡ್ಡಾರಾ. ೧೨೩.೧); ಇಂತುಟಪ್ಪ ಮೆಯ್ವಣ್ಣಕ್ಕಂತೀ ಪೂವಿನೊಳೀ ತುಡುಗೆಯೊಳೀ ಪುಟ್ಟಗೆಯೊಳ್ ಬೆಡಂಗುವಡೆದೆಸೆದಿರ್ಕುಂ (ಶಂಕರಾ. ೩-೯೫)' ಪುಟ್ಟಗೆಯುಮಂ ಪೂವುಮಂ ತಳಿಗೆಯೊಳಿಟ್ಟುಕೊಂಡು ಪೋಪುದು ಕಂಡು (ಜೀವಸಂ. ೨೨೬-೧೬). **ಪುಟ್ಟುಗೆ** : ೧. ಆದರದಿಂದಂ ಭೂಮಿ ಪೊಂ ಪುಟ್ಟುಗೆ ವಸು ಧನಮಂ ನೀಡುತ್ತೇ . . . ಧರೆಯೆಲ್ಲಂ ಮೆಚ್ಚಿ ನಿಚ್ಚಂ ಪೊಗಳೆ ನೆಗಟುತಂ ದೇವಲೋಕಕ್ಕೆ ಪೋದಳ್ (ಎಕ. IV, ಹೆಗ್ಗಡ. ೧೮-೨೬ ; 1057). **ಹುಟ್ಟಗೆ** : ೧. ಈಕೆ ಹುಟ್ಟುಗೆಟ್ಟ ಹುಟ್ಟಗೆಯಂತೆ ಹಡಣಂ (ಶೀಲಾವ. ೨-೧೧೬ ವ). **ಹುಟ್ಟಿಗೆ** : ೧. " ಹುಟ್ಟಿಗೆ, ದುಗುಲಂ, ಪಟ್ಟಣಗೆ, ಉಳ್ಳುಡಿಗೆ—ಈ ೪ ವಸನಕ್ಕೆ ಪೆಸರ್ " (ಕಕಶಾ ೩೩-೩೯೨); ನಿನ್ನಯ ನಣ್ಪೆ ದಲೆುದು ತಂದ ಹುಟ್ಟಿಗೆಯಿಟೀದೇಟ್ಟೊಟಂಗಟೀದು ಸೇದೆಯು ಬಾವಿಯೊ ಬಂದ ದಾವೆಯೋ (ಶೀಲಾವ. ೨-೦೦೦) ; ಹುಟ್ಟಿಗೆಯ ನಿದ್ದಂತೆ ಕೊಡು ಕೊಡು ಹುಟ್ಟಿಗೆಯನಯ್ಯಂಗೆ ಕೊಟ್ಟೊಡೆ ಹುಟ್ಟಿ ವಿನ್ನಾವು (ಚಕಪು. ೧೧-೩೩). ೨. ದೇವತೆಯ ಹರಕೆಗಾಗಿ ಉಡುಗೆಯಂತೆ ಧರಿಸಿಂವ ಬೇವಿನ ಸೊಪ್ಪು : ದೇವತೆಗೆ ಹರಿಕೆ ಹೊತ್ತವರು, ಮುಖ್ಯವಾಗಿ ಹೆಂಗಸರು, ಗಂಧದ ಇಲ್ಲವೆ ಬೇವಿನ ಹುಟ್ಟಿಗೆಯ ಉಟ್ಟು ಕೊಂಡು ದರ್ಶನಕ್ಕೆ ಹೋಗುತ್ತಾರೆ (ಕಹಾಗ. ೫೦೬) ; ಪೂಜೆಯ ಕಾಲಕ್ಕೆ ಹುಟ್ಟಿಗೆ ಕಟ್ಟಿಕೊಳ್ಳುವ ವಾಡಿಕೆ ಅನೇಕ ಮನೆತನಗಳಲ್ಲಿವೆ (ಕಹಾಟ. ೪೯). ೩. ಬೇವಿನ ಸೊಪ್ಪಿನ ಉಡುಗೆಯನ್ನು ಧರಿಸುವ ಹಬ್ಬ : ಮನೆಯಲ್ಲಿ ಹುಟ್ಟಿಗೆ ಮಾಡುವುದರಿಂದ ತಮ್ಮೆಲ್ಲರನ್ನು ಕರೆದುಕೊಂಡು ಬರಬೇಕೆಂದು ಹಿರಿಯರು ಕಳಿಸಿಕೊಟ್ಟಿರುವರು (ಗ್ರಾಮಜಸಂ. ೩೬). **ಹುಟ್ಟುಗೆ** : ೧. " ಹುಟ್ಟುಗೆ ವಸ್ತ್ರದೊಳ್ " (ಕಶಾಕಾ. ೨೮) ; " ಹುಟ್ಟುಗೆಯೆನೆ ಸೀರೆ " (ಕಶಂಶ. ೭೯).

[ < ಸಂ.ಪುಟ್ಟಿಕಾ, ಪುಟ್ಟಕ./ತಮಿ. ಪುಟ್ಟಕ ]

**ಪುಟ್ಟಿಗೆ₃** (ನಾ). ಆದಾಯ ; ಉತ್ಪನ್ನ (?) : ಎರಡು ಗದ್ಯಾಣಂ ಪೊನ್ನು ಇರ್ಪತ್ತುಗಣ್ಣುಗು ಭಕ್ತಮುಂ ಇಕರ್ೞದಿ ಕಟಿಗೋಡು ಪುಟ್ಟಗೆಯುಂ ತಸ್ಯ ಸೀಮಾನ್ತರಂ (ಎಕ. XVI, ಗುಬ್ಬಿ. ೭೫-೯೯ ; 733).

[<ಪುಟ್ಟು₁ ? + — ಗೆ]

**ಪುಟ್ಟಿಗೋಲ್** (ನಾ). ಸಣ್ಣ ಕೋಲು,—ದಂಡ : ಮಣಿಯದೆ ನಮಃ ಶಿವಾ ಎಂಬುದೆಂದೆನುತಲಟ್ಟಟುಸಿ ಭಸಿತದ ಪುಟ್ಟಿಗೋಲ ಕಿಂದಡಿಗಡಿಗೆ ಶಿವಿಪರ್ವರು ಚೋಳನ (ಚಾವಶಂ. ೭-೬) ; ಮಿಸುನಿವೆಸದ ಪುಟ್ಟಿಗೋಲ್ಗಳಂ ಪಿಡಿದು ಜಡಿದೊಟ್ಟಜೆಯಿಂದಿಟ್ಟಣಿಸಿ (ರಾಜಶೇ. ೧೩-೬೩ ವ).

[ಪುಟ್ಟಿ₀ (p ←ತೆಲು. ಪೊಟ್ಟಿ = ಸಣ್ಣದು) + ಕೋಲ್₁]

**ಪುಟ್ಟಿಸು**, ಹುಟ್ಟಿಸು (ಕ್ರಿ). ೧. ಹುಟ್ಟುವಂತೆ ಮಾಡು; ಸೃಷ್ಟಿಸು ; ಜನ್ಮ ಕೊಡು : ನಿನ್ನಂ ಪುಟ್ಟಿಸಿದ ಬಿದಿ ನೆಗಟಿಸ್ತಿಯ ಜೆಟ್ಟಿಗನೊಳ್ ನೆರಪುಗೀಗಳರಿಕೇಸರಿಯೊಳ್ (ಶಂಶಭಾ. ೩-೯೮) ; ನಿನ್ನನಿಂತು ಮಗುಟ್ಟುಂ ಮಗುಟ್ಟುಂ ಕೊಲವೇಟ್ಟುದೆಂದು ಪೇಟನ್ನನಿದಿಂತು ಪುಟ್ಟಿಸಿದನೇ ವಿಧಿ ರಕ್ಕಸಿಯಂ (ಕಾದಂಉ. ೬೨೦) ; ಬಸನದ ಬಸದಿಂದ ಪುಟ್ಟಿಸಿದಂ ಜನಕನೆ ...ಅಜನಂ ತಿಳಿಪುವಾ ಮಹಾತ್ಮಂ ಜನಕಂ (ಕಶುಕ. ೪-೯೨). ೨. ಉಂಟು ಮಾಡು ; ಬರಿಸು ; ಒದಗಿಸು : ಉಪಚಾರದ ನುಡಿ ಸಂದೇಹ ಬುದ್ಧಿಯಂ ಪುಟ್ಟಿಸದೇ (ಕಾದಂಉ. ೧೫೭), ಎನಿತು ಶಕ್ತಿಯು ಳ್ಳೊಡವಮೌಷಧಂ ತಚಿಂಟುದಲೆಯೊಳ್ ರೋಮಮಂ ಪುಟ್ಟಿಸಲಾಱದು (ಕರ್ಮಾಕಾ. ೭-೬೬) ; ಬುಧಗ್ರುರ್ಗತ್ಸವಮಂ ಪುಟ್ಟಿಸಿದಂ (ಎಕ. VII, ಶಿಕಪು. ೯-೪೦ ; 1122) ; ಪರಿತಾಪವ ಪುಟ್ಟಿಸಿ ಪೋಗಬಂದೆಯ (ಶೋಕಕ. ೯-೮೨). ೩. ರಚಿಸು ; ನಿರ್ಮಿಸು: ಚೌಪಳಿಗಳ್ ಪಲವಂ ಸಮೆದಲ್ಲಿ ರತ್ನದಿಂ ಬೆರಸಿದ ಬಣ್ಣದೊಳ್ ಮಾಣಿಯ ಕಟ್ಟಿಸಿ ಪುಟ್ಟಿಸಿ ರಂಗ ಭೂಮಿಯಂ (ಶಂಶಭಾ. ೩-೯೦). **ಹುಟ್ಟಿಸು** : ೧. ಏಕೆ ಹುಟ್ಟಿಸಿದೆ ಇಹಲೋಕದುಃಖಿಯ ಪರಲೋಕದೂರನ ಏಕೆ ಹುಟ್ಟಿಸಿದೆ (ಬಸವ. ೬೪); ದೇವ ಇಂತಹ ಬಸುಱೊಳೆನ್ನುವನು ನೀವು ಹುಟ್ಟಿಸಲಹುದೆ (ಬಸಪು. ೫೦-೬೯). ಆ ಮಹಾಮೃತ್ಯುವನು ಹುಟ್ಟಿಸಿದಾ ಮಹಾದೇವಾದಿದೇವರು ಕಾಮಿನಿಯು ಕಳುಹಲ್ಕೆ ಬಾರದೆನುತ್ತೆ ಬೋಧಿಸಲು (ಕುಮಾರರಾಮ. ೭-೫೬); ಹುಟ್ಟಿಸಿದ ದೇವ ತಾ ಹೊಣೆಗಾಱನಾಗಿರಲು ಗಟ್ಟಾಗಿ ರಕ್ಷಿಪನು ಇದಕ್ಕೆ ಸಂಶಯವಿಲ್ಲ (ಕಸಕ.೬೦-೦); ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ? (ಗಾದೆ). ೨. ನಾಸಿಕೇಂದ್ರಿಯ ನಿನ್ನ ತನುಗಂಧಕಳಸಿ ಮೇಲ್ಲಾಸಿದ ಪುಣಗು ಕಸ್ತೂರಿಯ ವಾಸನೆವಿಡಿಯದು ನೀನಗಲದೆ ಸಂತೋಷವ ನೆಱೆ ಹುಟ್ಟಿಸಿದಕೆ (ಕಂಶಪ. ೯-೦೪೨) ; ಆ ಕಲ್ಲುಗಳು ನನಗೆ ಒಂದು ತೆರನಾದ... ಅಸಹ್ಯವನ್ನು ಹುಟ್ಟಿಸಿದುವು (ಕಂಗಾಳ್ಯ. ೯೦).

**ಪುಟ್ಟಿಸಿದರ್** = ಹೆತ್ತವರು ; ಜನ್ಮವಿತ್ತವರು: ಪುಟ್ಟಿಸಿದರ್ ತಾವೆಂದು ಬಗೆದು ಮುದ್ದಾಡುವ ತಾಯ್ವಂದೆಗಳ ಮೊಗಮಂ ನೋಡಿ ನಗುವುತೆ ಮುಗುಳ್ನಗೆ ನಗುತ್ತುಂ (ಸಂಶಶ. ೨-೮). **ಹುಟ್ಟಿಸಿಕೊಳ್ಳು** = ೧. ನಿರ್ಮಿಸಿ ಕೊಳ್ಳು; ಹುಟ್ಟುವಂತೆ ಮಾಡಿಕೊಳ್ಳು : ಉತ್ಪತ್ತಿಕಾರಣದ ಒಡೆಯ ನಾದಡೆ ಶಿರಸುವಂ ತಾನೊಡನೆ ಹುಟ್ಟಿಸಿಕೊಳ್ಳನೇ (ಬಸಪು. ೫೯-೬). ೨. ಇಲ್ಲದುದನ್ನು ಸೃಷ್ಟಿಸು ; ಕಲ್ಪಿಸು ; ಬನಾವಟಿ ಮಾಡು : ಅವನು ಹೇಳುವುದನ್ನು ನಂಬುವಿರಾ ? ಎಲ್ಲ ಹುಟ್ಟಿಸಿಕೊಂಡು ಹೇಳು ತ್ತಾನೆ (ರೂಢಿ).

[ಪುಟ್ಟು₁ + — ಇಸು₁]

**ಪುಟ್ಟಿಹಣ್ಣು** (ನಾ). ಸವುತೆ ಜಾತಿಗೆ ಸೇರಿದ ಒಂದು ಬಗೆಯ ಹಣ್ಣು ; ಕೆಕ್ಕರ ಹಣ್ಣು ; ಕೆಕ್ಕರಿಕೆ : (?). [ಪುಟ್ಟಿ₀+ಹಣ್ಣು₃ (<ಪಣ್₃)]

**ಪುಟ್ಟು₁**, ಹುಟ್ಟು₁ (ಕ್ರಿ). ೧. ಜನ್ಮ ತಾಳು ; ಜನಿಸು ; ಜನ್ಮಿಸು : "ಪುಟ್ಟು—ಉತ್ಪತೌ, ದಾರುಹಸ್ತೇ (ಚ ದೋಣಿ ನಡೆಯಿಸುವ ಮರಗೈ)" (ಶಮದ); ಇದೊನ್ ಕೆಡಿಸಿದೊನ್ ಪೇಱ್ಮಹಾಪಾತಕನಕ್ಕು ಕನೊಕ್ಕಲು ಳ್ ಪೊತ್ತಿ ಮಕ್ಕಳ್ಪುಟ್ಟದೆ ಕೆಡುಗ (ಎಕ. III, ಮೈಕಜು.೫೫-೨೦; ಸು.740); ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾನಟ್ಟು ಬಡಿಸು ನಾಮುಱಿಯ ದೆನಸುಂ ಸವಿಯಂ ಪುಟ್ಟದಾರುಮುಱಿಯದದಱ ಪೆಸರೊಳುಟ್ಟುದಂ ಪೇಱಿ ಕೇಳ್ದೆನೆಂದಱಿಯೆಂ (ಕಮಾ. ೨-೧೯೭); ಟಿಃ ಸತ್ತರೇಂ ಪುಟ್ಟರೆ ಪೊಱಮಡು ನೀಂ ಕೈದುಗೊಳ್ (ಗದಾಯು.೬-೦೩). ೨. ಬೆಳೆ ; ಮೂಡು : ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ಶೀವಿದಾ ಮರಗಳ್ ಪುಟ್ಟವೆ (ಸೋಮೇಶ. ೨೬). ೩. ಉಂಟಾಗು; ಒದಗು; ಉತ್ಪನ್ನವಾಗು: ಶಂಕೆ ಪುಟ್ಟದುದೀಗಳ್ (ಕಾದಂಪೂ. ೯೬೦); ಎರಡು ಪದಂಗಳ ನಡುವೆ ಬೇಱೊಂದು ದುಷ್ಟಶೀತಿ ಪುಟ್ಟುವೊಡೆ ಸಂಧಿಯಂ ಮಾಡಲಾಗದು (ಶಶುಕ. ೬೨-ವೃತ್ತಿ); ನಿಟ್ಟಿಸಲು...ಪುಟ್ಟಿತು ಗದ್ಗದ ಮೆಯ್ಯ್ ಝುಮ್ಮು ಝುಮ್ಮೆಂದು ತಟ್ಟಿತು ಮನೆ ಮೂರ್ಛೆ ರಶಿಗೆ (ಮೋಹತ. ೦೦-೯೨). **ಹುಟ್ಟು₁** : ೧. ಹೆಂಡಿರೊಳ್ ಮನೆಗೊರ್ಮ್ವರುದಾರೆಯರಣ್ಣ ಹುಟ್ಟರೇ (ಎಕ. VII, ಶಿಕಪು.

೬೮–೯೪; 1112 ?); ಮುತ್ತು ನೀರಲಿ ಹುಟ್ಟಿ ಮತ್ತೆ ನೀರಪ್ಪುದೆ (ಬಸವ. ೬೬೬); ರಾಜಕುಲದಲಿ ಹುಟ್ಟಿದರೆ ಕಲಿಸೀಸು ಚಪಳತೆ ಯಾರಿಗುಂಟು (ಕುಮಾ.ವ್ಯಾ. ೩-೬೯); ಹುಟ್ಟಿತ್ತು ತಮ್ಮ, ಬೆಳೆದಂತೆ ದಾಯಾದಿ (ಗಾದೆ). ೩. ಉತ್ಪಾದಲು ಹುಟ್ಟಿದ ಫಲವೆಲ್ಲವು ಸಕಳಾಯ ಸಹಿತ ತ್ರಿಭಾಗಮಾಡಿದ ಲ್ಲಿಯ ದೇವಗೊಂದು ಭಾಗ . . . ನಡೆಯಿಸುವರು (ಶಾಸ. IX–i, ೨೪೯–೫೯; 1148); ನಿಟ್ಟಿಸಿ ನೋಡಿದ ಮೇಲೆ ದಶಾವಸ್ಥೆ ಹುಟ್ಟುವುದು (ಶಂಪು. ೯–೯೯); ಲವಲವಿಕೆ ಅವನಲ್ಲಿ ಹುಟ್ಟಿತು (ಜುಂಜಯ. ೪–೩೦).

**ಹುಟ್ಟಿಲ್ಲದನ್ನಿಸು**=ಕೊಲ್ಲು; ಸಾಯಿಸು : ನೀನು ಹೀಗೆ ತೊಂದರೆ ಕೊಡುತ್ತಿದ್ದರೆ ನಿನ್ನನ್ನು ಹುಟ್ಟಿಲ್ಲವೆನ್ನಿಸಿಬಿಡುತ್ತೇನೆ (ಆಡು). **ಹುಟ್ಟಿದ ದಿನ**=೧. ಜನ್ಮದಿನ : ಶ್ರಾವಣಬಹುಳಅಷ್ಟಮಿ ಶ್ರೀಕೃಷ್ಣನ ಹುಟ್ಟಿದ ದಿನ (ಆಡು). ೨. (ಅಲಂ) ಅತ್ಯಂತ ಕಷ್ಟದ ಸಂದರ್ಭ; ಇಕ್ಕಟ್ಟು: ಮುಂದೆ ಮಡು ಹಿಂದೆ ತಗರಾಯೆರಡಱಿಡೆಯಲ್ಲಿ ನಿಂದು ನಿಸ್ತರಿಸ ಬಹುದೇ ಅದು ನಿಮಿತ್ತವೆಮಗಿಂದು ಹುಟ್ಟಿದ ದಿನಂ ಬಂದಿತೆಂದಾ ಜನಂ ತಳ್ಳಂಕಗೊಂಡುದು (ಹಮ್ಮೀ. ೩–೨೦). **ಹುಟ್ಟಿದ ಹಬ್ಬ**=೧. ಜನ್ಮದಿನ : ಮಗುವಿನ ಹುಟ್ಟಿದ ಹಬ್ಬವನ್ನು ಅವರು ಸಡಗರದಿಂದ ಮಾಡಿದರು (ಆಡು). ೨. (ಅಲಂ) ಶಾಸ್ತಿ: ಅವನಿಗೆ ಹೇಳು ನಿನಗೆ ಹುಟ್ಟಿದ ಹಬ್ಬ ಮಾಡಿಸು ತ್ತೇನೆ (ಆಡು).

[ದೇ. ॥ ತಮಿ. ಪುಟು; ಮಲ. ಪೊಡಿ; ತುಳು. ತೆಲು. ಪುಟ್ಟು; ಕೊಡ. ಕೋಲಾ. ನಾಯ್ಕಿ. ಗೊಂಡಿ. ಪುಟ್; ಕೊಡ. ಪುಟ್]

**ಪುಟ್ಟು₂**, ಹುಟ್ಟು₂ (ನಾ). ೧. ಹುಟ್ಟುವಿಕೆ; ಉದ್ಭವ ; ಜನನ: ಸಾವುಂ ಪುಟ್ಟುಮದಿಲ್ಲದನಾದನವಂ ದೇವನಾತನೆಂದುದೆ ತತ್ತ್ವಂ (ಹಂಕಹ. ೧೨೦–೩); ದೇವಿ ತ್ವತ್ಪಾದಪಂಕೇಜಮನನವರತಂ ಧ್ಯಾನಿಸುತ್ತಿರ್ಪ ಭಕ್ತರ್ ಸಾವುಂ ಪುಟ್ಟುಂಬ ವಿದ್ಯುದ್ವಯಮನಱಿಯದಿರ್ಪರ್ (ಉದ್ಭಟ. ೩-೯೬); ಸಿರಿ ಬಡತನಕ್ಕೆ ಪುಟ್ಟುಂ ಮರಣಕ್ಕೆ . . . ಯೌವನಮದು ಮುಪ್ಪಿಂಗುರು ಕಾರಣಾ (ಚಾರಿತ್ರ. ೫–೯೨). ೨. ಬದುಕು; ಜೀವನ : ಕಾದಂಬರೀ ದೇವಿಯಾ ಚರಣೋಪಾಸನಸೌಖ್ಯಮಾದೊಡನಾದತ್ತಿಲ್ಲಮೀ ಪುಟ್ಟಿನೊಳ್ (ಕಾದಂಬ. ೩೬೭); ಪುಟ್ಟಿಂದು ಸಫಲಮಾದುದು (ಚಾಶಿ. ೩–೩೯). ೩. ಹುಟ್ಟುವ ಸ್ಥಳ,—ನೆಲೆ; ತವರು : ನರಕದ ನೆಲೆ ವೇಸಿಕೆಗಳ ಕರು ಮಂಸಣದ ಪುಟ್ಟು ಪಾಪದೇಱ ಪಾತಕದಾಗರಮದು ನೆನೆವರ್ಗೆ ಭಯಂಕರ ಪತಿಪಾಪಕರಮಾದುದುದ್ವೇಗಕರಂ (ಕಾದಂಬ. ೬೯೩). **ಹುಟ್ಟು₂** : ೧. ಮುಂದೆ ಬೋಳಾದೊಡೇನೊ ಹುಟ್ಟು ಬೋಳಾಗದಸ್ಪೃಶ್ಯರ (ಅಮ. ೯–೦೩); ಸಿವಾತಕವಚರ ಘಟ್ಟು ಹುಡಿಹುಡಿಯಾಯ್ತು ದನುಜರ ಹುಟ್ಟುವೆಂದುದು (ಕುಮಾ.ಭಾ. ೧೨–೫೪); ಅವ್ಯಕ್ತವಾಗಿದ್ದ ಆತ್ಮ ದೇಹಸ್ಥವಾಗಿ ವ್ಯಕ್ತವಾಗು ವುದು ಹುಟ್ಟು (ಹರಿದ. ೧೦೪). ೪. ವೇಷ; ಇರಸರಿಕೆ : ನಿನ್ನ ಹುಟ್ಟು ನೋಡಲಾರೆ (ಆಡು). ೫. ಹುಟ್ಟುವಳಿ; ಆದಾಯ; ಉತ್ಪನ್ನ : ಗಡಿ ನಿಡಿ ಹುಟ್ಟು ಕಟ್ಟಳೆಯ ವಿವರ (ಶಾಸ. IX—ii, ೪೨೭–೧೦ ; 1455); ಅದರಲ್ಲಿ ಒಂದು ಸರವನ್ನು ಇಟ್ಟುಕೊಳ್ಳುವ. ಉಳಿದವುಗಳನ್ನು ಮಾರಿ ಹಣ ಬಡ್ಡಿಗೆ ಕೊಟ್ಟರೆ ಅಷ್ಟಾದರೂ ಹುಟ್ಟು ಬಂದೀತು (ಮುಂಗಾರು. ೬೦).

**ಪುಟ್ಟುವುಟ್ಟು** (ದ್ವಿರುಕ್ತಿ) : ಮುಂಬರಿದನನುಸರಿಸುತಾ . . . ಪುಟ್ಟುವುಟ್ಟುಂ ಬಿಡದೆ ಬೆಂಬತ್ತುವಾ ದಿವ್ಯಸಂಶಯದ ಭಾಯಾಶಕುನ ಸುಚ್ಛಿಯೊಳ್ (ಶ್ರೀಪಾಪ. ೪೨೩–೯೯). **ಹುಟ್ಟು ಇಲ್ಲದಂತೆ ಮಾಡು**= ಸಾಯಿಸು : ಉಗ್ರಬಾಹುವಿನ ಹುಟ್ಟು ಇಲ್ಲದಂತೆ ಮಾಡಿ ಬಂದ ಮಹಾನುಭಾವ ನೀನಲ್ಲವೇ (ಶಾಗಂಧ. ೩೯೬–೦೩).

[ <ಪುಟ್ಟು₁/ತೆಲು. ಪುಟ್ಟು; ಕೊಡ. ಪುಟ್; ಕೊಡ. ಉಟ್ ]

**ಪುಟ್ಟು₃**, ಹುಟ್ಟು₃ (ನಾ). ೧. ಮರದ ಸವುಟು ; ದಾರು : ಪುಟ್ಟುಗಳಂತೆ ಕಯರ್ ಬೇಗುಮೋ (ಜಗನ್ನಾಥ. ೬–೩೩); ಪುಟ್ಟುಂ ಸಟ್ಟುಗಮುಂ ಕೊಂಡಟ್ಟು ಱುಸಿ ಬೋನವಿಟ್ಟು ಬಂದೆಯೊ (ಗಜಾಷ್ಟ. ೬–೩೬); ಪುಟ್ಟಿರ್ದಂತೆ ಕೆಯ್ ಬೇಯಬೇಕೆಯೊ (ಜಾತ್ಯಾರ್ಥ. ೩–೮). ೨. ನಾವೆಯನ್ನು ನಡೆಸುವ ಕೋಲು : "ಪುಟ್ಟು–ಉತ್ಪತ್ತಿ, ದಾರುಹಸ್ತೇ ಚ (ದೋಣಿ ನಡೆಯಿ ಸುವ ಮರಗೈ)" (ಶಬ್ದ); ನೆರೆದು ನಿಶಾಚರರೆಲ್ಲುಱಿಯೆ ತಿಂದ ಗಜಂ ಗಳೆ ನಾವೆಯಾಗೆ ಪುಲ್ಪುರುಳ ಕುಟುಂಬಮಂ ಪೆಣದ ಕೈಗಳೆ ಪುಟ್ಟುಗಳಾಗೆ . . . ನೆತ್ತರ ತೊಱೆಯಂ ಮರುಳ್ವಿಂಡು ಪಾಯಿಸುತ್ತಿರ್ದುವು ಯುದ್ಧ ಘೂಮಿಯೊಳ್ (ಹಂಪಾಪು. ೦೩–೬೬); ಗುಡಿಲಂತೆ ಬಾಗಿದ ಬೆನ್ನುಂ ಪುಟ್ಟಿ ನಂತೆ ಬೆರಲ್ಗಳಿಲ್ಲದ ತಳಮುಂ (ರಾಜಶೇಖ. ೯–೬೩); ಓರ್ವಳಿಬಿಗಪುತ್ರಿ ಕನ್ನಿಕೆ ಯಿರಲ್ ಕಂಡಾಕೆಯಂ ಬೇಗದಿಂ ಕರೆದೀ ನಾವೆಗೆ ಪುಟ್ಟನಿಕ್ಕುವುದೆನಲ್ಕೆ (ರಾಜಶೇ. ೬–೨೩). 'ನೀರ್ವುಟ್ಟು' ಪರಾ. **ಹುಟ್ಟು₃** : ೧. ಅಡಗನಾಯಿಂದು ಕಿದಱ ರಕುತವ ತುಡುಕಿ ಚೆಲ್ಲುವ ಕರಿಯ ಬರಿಕ್ಕೆ ಬಿಡಿಸಿದವು ಹುಟ್ಟಾಗಿ ಯಮರಾಜನ ಪರಿಗ್ರಹಕೆ (ಕುಮಾ.ಭಾ. ೯–೬೨); ಶಿವನು ಜಂಗಮವಾಗಿ ಭಿಕ್ಷಕ್ಕೆ ಬಂದು ಹರಿ ಎನ್ನಲೊಡನೆ ಹರನ ಬಾಯ ಹುಟ್ಟಿನಲ್ಲಿ ತಿವಿದಳು (ಶಿಶಕ. ೦೮–೧೬); ಹುಟ್ಟು ಇರುವಾಗ ಕೈ ಸುಟ್ಟುಕೊಳ್ಳಬೇಕೆ ? (ಗಾದೆ). ೨. "ಅರಿತ್ರಂ. ಕೇನಿಪಾತಕಃ_ಈ ೨ ನಾವೆ ನಡಸುವ ಹುಟ್ಟಿನ ಹೆಸರು" (ಚಾಕಶಾ. ೦೦೦); ಹಱಿಗೋಲನೆ ಹಱಿದು ಹುಟ್ಟು ಮುಱಿದು . . . ಕಱ ಬತ್ತಿ ಮೆಯ್ಯಱಿದಲ್ಲದೆ ಆ ಮಹಾಘನವ ಕಾಣಬಾರದು (ಅಂಗಚ. ೪. ೬೩–೩೩); ರತ್ನದಿಂ ನಿರ್ಮಿತವಾದ ನೀರು ತೆಗೆಯುವ ಹುಟ್ಟುಗಳಂ ಪಿಡಿದು (ಶಾಗಂಧ. ೦೦೦–೦೬); ಗಾಳಿಗೆಷ್ಟು ಹರಿದೀತು ಹಾಹೆ ಹುಟ್ಟಿಲ್ಲದಾಗೆ ಹಡಗ ? (ಅರಳು. ೪೦೯–೨).

**ಪುಟ್ಟು₄** 'ಪುಟ್ಟಿ₄' ನೋ.

**ಪುಟ್ಟುಂಗವಿ**, ಹುಟ್ಟುಕವಿ (ನಾ). ಹುಟ್ಟಿನಿಂದಲೇ ಕವಿಯಾದವನು; ಆಜನ್ಮಕವಿ : ನರನ ತೊಡರ ಕಲೆಗಳೆಲ್ಲಂ ಬಳಿಯಮಿಾ ಭುವನಂ ಪಡೆಯು ತ್ತಿರ್ಪುದು ಪುಟ್ಟುಂಗವಿಗಳಸೇ ಆಯೆಡೆ ಕವಿತಾಸ್ವರ್ಗಮಾಗಲೆವೇಳ್ಕುಂ (ಹಂಸಚ. ೩–೮). **ಹುಟ್ಟುಕವಿ** : ಆ ಹುಟ್ಟುಕವಿ ... ಸರಸ್ವತೀಪ್ರಸಾದದ ಪೂರ್ಣರಮಣೀಯತೆಯನ್ನು ಸಹೃದಯರಿಗೆ ಅನುಭವ ಮಾಡಿಸಿ ಬಿಟ್ಟಿರುವರು (೪೬ಜಾ. XX ೩೯೦೪). [ ಪುಟ್ಟು₃ + ಕವಿ₁ ]

**ಪುಟ್ಟುಂಗುರುಡ**, ಪುಟ್ಟುಗುರುಡ, ಹುಟ್ಟುಕುರುಡ, ಹುಟ್ಟುಗುರುಡ (ನಾ). ಹುಟ್ಟಿನಿಂದಲೇ ಕುರುಡನಾದವನು; ಜಾತ್ಯಂಧ : ಪುಟ್ಟುಂಗುರುಡಂ ಕಾಣ್ಬನೆ ಬಟ್ಟೆಯನವಲಾಕ್ಷನಂತೆ (ಅರ್ಥಶೀ. ೪–೩೩); ಪುಟ್ಟುಂಗುರುಡನಂಧಕಾರದ ಸಟ್ಟಿರುಳು ನೆಟ್ಟನೆ ಕಂಡನೆಂಬಂತೆ (ಹಪಾರ. ೯೬೪); ಆ ಸುದತಿಗೆ ಪತಿಯಾದಂ ... ಧೃತರಾಷ್ಟ್ರನೆಂಬ ಪುಟ್ಟುಂಗುರುಡಂ (ಚಪುರಾ. ೬–೦೩). **ಪುಟ್ಟುಗುರುಡ** : ಪುಟ್ಟುಗುರುಡನಂತೇನುವಂ ಕಾಣದೆ (ರಾಜಶೇಖ. ೨–೦೩೩) ; ರಕ್ಷಿಸೈ ಕಂಡು ಕಾಣದ ಪುಟ್ಟುಗುರುಡರಂ ರಕ್ಷಿಸೈ ಕೇಳ್ದು ಕೇಳದ ಮೂರ್ಖಬಧಿರರಂ (ಕೆಂಪು. ೨೦–೩೩). **ಹುಟ್ಟು ಕುರುಡ** : ಶಿವಶಿವಾ ದತ್ತಾಪಹಾರದ ತವಕದಲಿ ನಿಜಬಂಧುವರ್ಗವ ಸವಱ ಸೆಳೆದವು ಹುಟ್ಟುಕುರುಡನ ಕೈಯ ಕೋಲುಗಳ (ಕುಮಾ.ಭಾ. ೧–೭) ; ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟುಕುರುಡನೋ (ಕಿಶಾ. ೦೦೬). **ಹುಟ್ಟುಗುರುಡ** : ಹುಟ್ಟುಗುರುಡನ ಕಯ್ಗೆ ಕೋಲ ಕೊಟ್ಟು ನಡೆಸು ವಂತೆ ನಡೆಸಯ್ಯಾ ಎನ್ನ (ಬಸವ. ೨೬೩); ಈಗ ನಿಮ್ಮ ಕೃಪಾವಲೋಕದಿ ಹುಟ್ಟುಗುರುಡಂಗೆ ಆಗಲರವೆ ದೃಷ್ಟಿಗಳು (ಜಸತ್ತಾ. ೪೬–೬೩).

[ಪುಟ್ಟು₂+ಕುರುಡ]

**ಪುಟ್ಟುಂಗುರುಡಿ**, ಹುಟ್ಟುಕುರುಡಿ (ನಾ). ಹುಟ್ಟಿನಿಂದಲೇ ಕುರುಡಿ ಯಾದವಳು ; ಜನ್ಮಾಂಧೆ : ಮಗಳ್ ದುರೂಪೆ ದುರ್ವರ್ಣೆ . . . ಪುಟ್ಟುಂಗುರುಡಿ ಪೊಲತಿಯಾಗಿ ಪುಟ್ಟಿ (ಚಾತ್ಯಾಶ. ೬–೭). **ಹುಟ್ಟುಕುರುಡಿ** :

ಅವಳೊಬ್ಬಳು ಹುಟ್ಟುಕುರುಡಿ (ರೂಢಿ). [ಪುಟ್ಟು₂+ಕುರುಡಿ]

**ಪುಟ್ಟುಗಣೆ** (ನಾ). ಮೂಲನೆಲೆ,–ಸ್ಥಾನ: ಕನ್ನಡದ ಪುಟ್ಟುಗಣೆ [ಪಾಠಾಂ. ಪುಟ್ಟಗುಣಿ, ಪುಟ್ಟುಗುಣಿ] . . . ಎನ್ನದೀ ಕೃತಿಯನಿಳಿವನ್ನರನೆ ಬಿದಿ ಮುನ್ನ ಬೆನ್ನೊಳಿರ್ದಲೆಯದಿರನು (ಜವವ. ೧–೨೩). [ಪುಟ್ಟು₂+ಕಣ್₆]

**ಪುಟ್ಟುಗುರುಡ** 'ಪುಟ್ಟುಂಗುರುಡ' ನೋ.

**ಪುಟ್ಟುಗೆ** (ನಾ). ಹುಟ್ಟುವಿಕೆ ; ಜನನ : ದೋಷಸಂಭವಃ—ದೋಷದ ಪುಟ್ಟುಗೆ (ಶೀತಿವಾ. ೯-೧೧೭) ; ಸ್ಮರಪರಿತಾಪದಿಂ ನೆಱೆ ಮರುಳ್ಸಿಸದಿಂದಜ ತಾತನೆನ್ನೊಳಂ ಬೆರಸಿದನಿ: ವಧೂಭವದ ಪುಟ್ಟುಗೆ ಪೊಲ್ಲೆನುತಿಲ್ಲಿ ರಾಗದೊಳ್ ನಿರುಪಮನಪ್ಪ ಮಂಗವಿಭುವಾದಿಟೊ ಭಾರತಿ (ಖಮದ. ೦೫–೨).

[ಪುಟ್ಟು₁ + –ಗೆ]

**ಪುಟ್ಟುವೆಟ್ಟು** (ನಾ). ಸೂರ್ಯನು ಮೂಡುವ ಪರ್ವತ ; ಉದಯಾದ್ರಿ : ಕಟ್ಟನಿಯುಳ ಮುದ್ದುಸುಂತಂತೆಲರ್ವಟ್ಟೆಯನೆಯ್ದಲ್ ಪುಟ್ಟುವೆಟ್ಟನಡರ್ವನಿಗದಿರೆಂತಂತೆ . . . ಈ ಕೃತಿ ಚತುರರ ಬಗೆಗೀಗೊಗು ವಿಗೆಯುಂ (ಉದ್ಭದೀ. ೦-೨೯). [ಪುಟ್ಟು₁+ಬೆಟ್ಟು₂ (<ಬೆಟ್ಟ)]

**ಪುಟ್ಟುಹ, ಹುಟ್ಟುಹ** (ನಾ). ಜನನ; ಜನ್ಮ: (ನಾಜರಾ. ೬). **ಹುಟ್ಟುಹ** : ಮರಳಿಮರಳಿ ಹುಟ್ಟುಹ (ತಾನಾರ. ೬. ೦೦೪ ಟೀಕು).

[ಪುಟ್ಟು₁ + –ಹ₂ (< –ಪ₂)]

**ಪುಠಾಣಿ, ಪುಟಾಣಿ₂, ಪುಟ್ಟಣಿ** (ನಾ). ೧. ನೀರಿನಲ್ಲಿ ನೆನೆಸಿ ಹುರಿದ ಕಡಲೆ ; ಹುರಿಗಡಲೆ : ಪಸೀಕಡ್ಲಿ ಫಕ್ತ ಪುಠಾಣಿ ಮಾಡುವದರ ಸಲುವಾಗಿ ಜಾತ್ರಿ ಹಂಗಾಮಿನಲ್ಲಿ ಸ್ವಲ್ಪ ಖರ್ಚ ಆಗುತ್ತಿರುತ್ತದೆ (ಮುಂಬವ್ಯಾ. ೨೮೫) ; ಕೊನೆಗೆ ಮಂಡಕ್ಕಿ ಪುಠಾಣಿಗಳಿಂದ ಮಧ್ಯಾಹ್ನ ನೀಗಿಸುತ್ತಾ ಕಟ್ಟಕಡೆಗೆ ಅಖಂಡನಿರಾಹಾರವ್ರತವೇ . . . ಘಟಿಸಹತ್ತಿತ್ತು (ವೋಟೀವ. ೫). **ಪುಟಾಣಿ₂** : ೧. ತೆಂಗಿನಕಾಯಿ ಚಟ್ನಿ ಮಾಡುವಾಗ ಸ್ವಲ್ಪ ಪುಟಾಣಿಯನ್ನು ಹಾಕಿದರೆ ಚೆನ್ನಾಗಿರುತ್ತದೆ (ರೂಢಿ). ೨. ಬಟ್ಟೆಯ ಮೇಲೆ ಕಡಲೆಯಾಕಾರದಲ್ಲಿ ನೇಯ್ದಿರುವ ನೇಯ್ಗೆ : ಅವಳು ಪುಟಾಣಿ ಸೀರೆ ಉಟ್ಟಿದ್ದಾಳೆ (ರೂಢಿ). **ಪುಟ್ಟಣಿ**: ೨. ಬಟ್ಟಕುಚೆಯೊರ್ವ ಸತಿ ಪುಟ್ಟಣಿಯ ರವಿಕೆಯನು ತೊಟ್ಟು ಕಾಲಿನೊಳವಳು ಪಟ್ಟೆಸೀರೆಯನು ಪೊದೆದು ಬೆನ್ನೊಳು ನೃಪನ ಮುದವ ನೋಡುವ ಭರದಿ ಪದಗಿ ಮಾರ್ಗದಿ ಬರಲು (ಹಮಚ. ೨೪೫).

**ಪುಠಾಣಿ ತಿಂದು ಬಿಡು** = (ಆಲಂ) ಆಸೆಯನ್ನು ಬಿಡು : ಊರು ಬಿಟ್ಟು ಹೋದ ಉಡಾಳ ತಮ್ಮನು ತಮ್ಮ ಪಾಲಿಗೆ ಸತ್ತನೆಂದು ಅವರಿಬ್ಬರೂ ದಂಪತಿಗಳು ಪುಠಾಣಿ ತಿಂದು ಬಿಟ್ಟಿದ್ದರು (ಬಟ್ಟಹೊ. ೪೫).

[←ಮರಾ. ಫುಟಾಣಾ]

**ಪುಡಪುಡ** (ನಾ). ಸುಡುವುದನ್ನು ಸೂಚಿಸುವ ಒಂದು ಅನುಕರಣಪದ: 'ಪುಡಪುಡನೆ' ಪರಾ.

**ಪುಡಪುಡನೆ** (ಅ). ಪುಡಪುಡ ಎಂದು : ಸಂಗತಧೂಮಾವಳಿಯನಿಭಂಗಳೆ ಗೆತ್ತೊಳಱಿ ಪಾಯ್ದು ಪೊಗೆ ಪುಗೆ ಕಣ್ಣಂ ಸಿಂಗಂಗಳಳುರೆ ಗರ್ಜಿಸಿ ಲಂಗಿಸಿ ಪುಡಪುಡನೆ ಪುಟ್ಟಿ ಸತ್ತುವು ಪಲವುಂ (ಶಂಶಪಾ. ೫-೯೨).

[ಪುಡಪುಡ + –ಅನೆ₁]

**ಪುಡವಿ** 'ಪೃಥುವಿ' ನೋ.

**ಪುಡವಿಪ** 'ಪೊಡವಿಪ' ನೋ.

**ಪುಡಾರಿ** 'ಪುಢಾರಿ' ನೋ.

**ಪುಡಿ, ಹುಡಿ** (ನಾ). ೧. ಹಿಟ್ಟು ; ಚೂರ್ಣ : ಬದ್ದವಣದ ಪುಡಿಪೊಲ್ ಬೆನ್ನೊಳ್ ಬಿಡದಲುಗೆ ಕುಸುಮಕುಳರಜಂ (ಆದಿಪು. ೭-೭೩) ; ಪುಡಿಯ ಕತ್ತುರಿ ಕುಂಕುಮಕಪ್ಪುರವುಡಿ ಬಿಡುಮುತ್ತು ಪಾಣಿಕದೊಡನೆ ಒಡಿಪೊನ್ನ ಸ್ಸಱೆಯ ಬಿಟ್ಟುರಿಕ್ಕಲಮಂಗಡಿಗರತಿಃಪಮೋಪದಲಿ (ವೋಹತ. ೯೨–೨೮); ಡಿ.ಡಿ.ಟಿ. ಡಬ್ಬಿಯಿಂದ ಪುಡಿಯನ್ನು ಸುತ್ತಲೂ ಚಿಮುಕಿಸಿ. . . ಮೈಯನ್ನು ಚಾಚಿದೆನು (ಪಂಟಿರು. ೪೮). ೨. ರವೆಯಂತೆ ತರಿತರಿಯಾದ ಹಿಟ್ಟು; ತರಿ: ಕುಡಿಬಿದಿರ ಕುಡಿಯ ಮಾವಿನ ಮಿಡಿಯ ಮಾತುಡಿನ ಮೆಣಸುಗಡಲೆಯ ಪುಡಿ[ಪಾಠಾಂ.ಳಿ]ಯೊಳಡಸಿದಲ್ಲವಲ್ಲಣಿಗೆಯ ಚಕ್ಕಣಂಗಳಂ ಸವಿಸವಿದು (ಶಂಶಪಾ. ४–೬೭ವ); ಕುಂಕುಮದ ಕತ್ತುರಿಯ ಪುಡಿಯಂ ಕನಕದ ಪುಡಿಯಿನಾಗ ಪಿಷ್ಟಾತಕಮಂ ಬಿಂಕದೆ ಕೆದಱಿಸುತಂ ನಡೆವಂ ಕಮಠಂ (ಪಾರ್ಶ್ವಪು. ३-೫೦); ಘಟ್ಟಮೆಣಸುಳ್ಳಿ ಮೊದಲಾದ ಸಂಭಾರಗಳನಿಟ್ಟು ತಾಳಿಸಿದ ಪುಡಿಗಳನದ[ಱೊ]ಳು ತುಂಬಲಿಟ್ಟು (ಸೂಶಾ. ೯-೧೯). ೩. ಸಣ್ಣ ಮರಳಿನಂತೆ (ಉದುರಾಗಿರುವ) ಮಣ್ಣು : ಏಗೆಯ್ದುಂ ಪರೆದ ಪುಡಿಯೆಲ್ಲಮಂ ನೀರ್ ನೆರೆದು ಕೆಸರ್ಮಾಡದನ್ನೆಗಂ ನೆಲಸುಗುಮೇ (ಕಬಿರಾ. ३-೧೫೦); ಆ ಬಾಲೆ ಕಾಯ್ದ ಪುಡಿಯೊಳಗೆ ಬಿಸುಟ್ಟೆಳಮಾಱಿಯಂತೆ . . . ಬೇಟದೊಳ್ ಮಮ್ಮಲಮಱುಗುತ್ತಿರ್ದಳ್ (ಶಂಶಪಾ. ೫-೧೦೨); ದ್ರುಪದಾತ್ಮಜಾತನೋವದೆ ಪುಡಿಯೊಳ್ ಪೊರಳ್ಚಿ ತಲೆಯಂ ತೆಗೆವಲ್ಲಿ ಪಿನಾಕವೆತ್ತವೋದುದೊ (ಗದಾಯು. ४-೫೦); ಪುಡಿಯೊಳಗೆ ಪುಡಿಯ ಪುಡಿಯಾದೆನ್ ನಾಣ ನುಡಿಯಾದೆನ್ (ಅಶ್ವಶಾ. ೧೭-३೬೭). ೪. ನಸ್ಯ : ಬೀಡಿ ಕಟ್ಟುವವನೂ ಪುಡಿ (ನಸ್ಯ) ಸೇದುವವನು (ಮೂವಾದ. ೧೦೭). ೫. ಹೊಗೆಸೊಪ್ಪು : ಪುಡಿ ಕುಟ್ಟುವವನೂ ಬೀಡಿ ಬೇಡುವನು (ಮೂವಾದ. ೧೦೭). **ಹುಡಿ**: ೧. ಕರಿಬೇವು ಬಡಗಸಂಡಗೆಯಿಂಗು ಕಡಲೆವಿಟ್ಟುರಿಸಿನದ ಹುಡಿ . . . ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಶಾ. ೯-೧). ೩. ಎನ್ನಿಂದಲೆ ಆಯಿತ್ತು ಎನ್ನಿಂದಲೆ ಹೋಯಿತ್ತು ಎಂಬವನ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ (ಬಸವ. ३३५); ಇಟ್ಟೊರೆಸಿ ಹುಡಿಯಲಿ ಹೂಳಿದನು ಕಿಮ್ಮೀರದಾನವನ (ಕುವ್ಯಾಅ. ೧-३४); ಹುಡಿಯಲ್ಲಿ ಕಮಲ ಬೆಳೆದಂದು ಹೆಣ್ಣಿನ ನುಡಿಯ ನಂಬುವದು (ಸರ್ವಜ್ಞ ೦೭೭೦) ೪. " ಹುಡಿ . . . ನಸ್ಯ, ನಾಸೀಪುಡಿ " (ಸಿರಿಕೋ. ೫೫೦) ; ಕಲಾವಳಿಯ ಜನ ನಶ್ಯವನ್ನು ಹುಡಿ ಎಂದು ಹೇಳುತ್ತಾರೆ (ರೂಢಿ).

**ಪುಡಿವುಡಿ, ಪುಡಿಪುಡಿ, ಹುಡಿಹುಡಿ** (ದ್ವಿರುಕ್ತಿ) : ಅಂಕಾತಂ . . . ನಡೆವ ತಳರ್ನಡೆಯೊಳ್ ಪುಡಿವುಡಿಯಾದುವು ಶಿಲೆಗಳೊಡೆದು (ಶುಶಪಾ. ३-೫) ; ಕೆಡೆವ ಭಟಬರ್ಬಟಾಂತ್ರವೃತ್ತದಿಂದಮುರುಳ್ವ ಹಯಂ ಹಯಾಳಿಯಿಂ ಪುಡಿವುಡಿಯಾಗೆ ಮೆಟ್ಟುವ ಗಜಂ( ಎಕ. VIII, ಸೊರಬ. ೦೪४–೯ ; 1033) ; ಬಸ್ಸಿನ ನುಗ್ಗಾಟದಲ್ಲಿ ಬಳೆಗಳೆಲ್ಲಾ ಪುಡಿಪುಡಿಯಾದುವು (ರೂಢಿ) ; ಕಾಯವನುರುಹಿ ಹುಡಿಹುಡಿ ಮಾಡಿ ಬಿಱು ಗಾಳಿಯಲಿ ಚೆಲ್ಲು (ಬಸಪು. ४५-३೧) ; ರಥಕುಳವೆಲ್ಲ ಹುಡಿಹುಡಿ ಪಾಯದಳ ನಿರ್ನಾಮವಾಯ್ತು (ಕುವ್ಯಾಭೀ. ೭-२). **ಪುಡಿ ಮಾಡು, ಹುಡಿ ಮಾಡು** = ೧. ಹಿಟ್ಟಾಗುವಂತೆ ನುರಿಸು : ಪುಡಿ ಮಾಡಿದ ಉಪ್ಪು ಪ್ಯಾಕೆಟ್ಟುಗಳಲ್ಲಿ ದೊರೆಯುತ್ತದೆ (ರೂಢಿ). ೨. ಧ್ವಂಸಮಾಡು : ಪುಷ್ಪಶರನಂ ಹುಡಿ ಮಾಡಿದ ವಿರೂಪಾಕ್ಷ (ಮುಡಿಗ. ೬) ; ಹುಡಿ ಮಾಡಿದನು ರಥವ (ಕುವ್ಯಾಭೀ. ೮-४೬). **ಪುಡಿಯಾಗು, ಹುಡಿಯಾಗು** = ನುರಿದು ಹಿಟ್ಟಾಗು : ಒತ್ತಿ ಮೆಟ್ಟಿ ಪುಡಿಯಾಗಿರೆ ತಿನ್ನದೆ ಪೋಗಲೀವರೇ (ರವರಾಮ್ಸು. ೭–೧೫४) ; ಮುನಿಗಳ ಧೈರ್ಯಭೂಮಿ ರಜಮುಪ್ಪಿನೆಗಂ ಮನುಚೇತನಾದ್ರಿ ಭೋಂಕನೆ ಪುಡಿಯುಪ್ಪಿನಂ . . . ರತೀಶನ ಚತುರಂಗಸೇನೆ ನಡೆದತ್ತು (ಗಿರಿಕ. ೮-೭) ; ಪಡೆಯ ಕಾಲ್ದುಳಿದಾಗ ಗಿಡು ಬಳ್ಳಿ ಪೆಮ್ಮರ ಪುಡಿಯಾಗೆ . . . ಚೆನ್ನಪಟ್ಟಣದ ಮುಂಗಡೆ ಬೀಡಿಳಿವನು (ಕಂಪವಿ. ೧३-೬) ; ಹುಡಿಯಾಗಲುರ್ವಿ ಪರ್ವತ ಸಪ್ತಶರಧಿಗಳಡಿಮಳಲಾಗೆ . . . ಮಹೇಶ್ವರ ಒಡಿದನು ಪರತ್ರಿಶೂಲವ (ವೋಹತ. ३೯-३೮). **ಪುಡಿಯಾಳು** = ಕೆಲಸಕ್ಕೆ ಬಾರದವನು ; **ಅಪ್ರಯೋಜಕ** : ಅವನೊಬ್ಬ **ಪುಡಿಯಾಳು** (ರೂಢಿ). **ಹುಡಿಯ ಮುಕ್ಕು** = ೧. ಮಣ್ಣು ತಿನ್ನು. ೨. (ಆಲಂ) ಹಾಳಾಗು ;

ಕಂಸನು ಪುಡಿಯು ಮುಕ್ಕುವನೆಂಬ ತೆಱದಿಂ ಮಾತದಿ ದೇವಕಿ ಬಯಸಿ ಮಣ್ಣೆಂಬಳು (ಶಾಕ್ತಶಾ. ೨೧-೬). ಪುಡಿ ಹಾರಿಸು ೧. ಧೂಳೆಬ್ಬಿಸು. ೨. (ಆಲಂ) ಧನವ್ಯಯ ಮಾಡಿ ಆಡಂಬರದಿಂದ ಕಾರ್ಯವನ್ನು ನಡೆಸು : ಗವ್ಮಿತ್ತಿನಲ್ಲಿ ಮಾಮಾವ ಪುಡಿ ಹಾರಿಸಿ ನಮ್ಮ ಬಿಡಾರದಿಂದ ನರಹುಳುವೂ ಬರಲಾರದು (ಹೊಸಕ್ಷ. ೬೮). ೩. ಪೃಥಾಖರ್ಚು ಮಾಡು ; ಧಾಂದುವೆಚ್ಚ ಮಾಡು : ಅಚ್ಯುತನ ಕೈಯಲ್ಲಿ ಬಹಳ ದಮ್ಮಡಿಗಳು ಕುಣಿದಾಡುತ್ತಿರಲಿಲ್ಲ . . . ನಾಗರಾಜನಂತೆ ಬೀಡಾ ಸಿಗರೇಟುಗಳನ್ನು ಪುಡಿ ಹಾರಿಸಬೇಕೆಂಬ ಹಂಬಲವಿರಲಿಲ್ಲ (ಮುಗಿಯು. ೩).

[ ದೇ.॥ ತಮಿ. ಮಲ. ಪೊಟಿ ; ತುಳು. ಕೊಡ. ತೆಲು. ಪೊಡಿ ]

**ಪುಡಿಕಾಸು** 'ಪುಡಿಗಾಸು' ನೋ.

**ಪುಡಿಕೆ**, ಪುಟ್ಟಿಕೆ, ಪುಟ್ಟಿಗೆ$_1$, ಪುಡುಕೆ, ಬುಂಡಿಗೆ, ಬುಡುಕೆ, ಹುಡುಕೆ (ನಾ). ೧. ಕರಂಡ ; ಭರಣಿ ; ಡಬ್ಬಿ : ತಲೆದೆಸೆಯೊಳಿರ್ಸಿರ್ದ ಪುಡಿಕೆಯಂ ತೆಱೆದು ಹಾರಮಂ ಕೊಂಡರಮನೆಯಿಂ ಪೊಱಮಟ್ಟು ಪೋಗಿ (ವಡ್ಡಾರಾ. ೧೨೩-೧೨) ; ಆ ಕಳ್ಳರ್ . . . ಪೊನ್ನ ಪುಡಿಕೆಯುಮನುಳಿಯುಮಂ ಬಚಿಪಮುಮಂ ಅಲ್ಲಿ ಪಟ್ಟಿರ್ದ ಭಟ್ಟನ ಮುಂದೆ ತಂದಿಕ್ಕಿ (ಶುಕಶಂ. ೨೩೨ ೬) ; ತರವೇಟ್ಟಾಣಿಕ್ಯಭಂಡಾರದ ಪುಡಿಕೆಗಳಂ (ಕಾವ್ಯಾವ. ೨೮೪). ೨. ಪೊಟ್ಟಣ : ಪುಷ್ಪದಾಭರಣವ ಪುಡಿಕೆಯೊಳಗೆ ತಂದು ಒಪ್ಪಿಸಿದರು ಜಿನಗವರು (ಅನಂತ. ೪-೬೩) ; ರಾಜೇಶ . . . ಪುಡಿಕೆಯನ್ನು ಬಿಚ್ಚಿ ಅಪಳೆಪೆಗೆ ಓಡಿದ (ಸ್ವಪ್ನದ. ೧೪೪) ; ಖಾದರನು ಕೈಚೀಲವಲ್ಲಿ ಘೇಡೇದ ಪುಡಿಕೆಗಳನ್ನು ತಂದಿಟ್ಟನು (ಮುಕ್ತ್ಯದ. ೧೬೬). ೩. ಕಂತೆ ; ಸಿವುಡು; ಪಿಂಡಿ : ಪರತಪಮಂ ಕಸವೆಂದಾ ಪುರಾಣಮಂ ಪುಸಿಯ ಪುಡಿಕೆಯೆಂದಂ ದವರಾಪ್ತರಿ ಠಕ್ಕರೆಂದು ಬಗೆವನೆ ನಿರುತಂ ದರ್ಶನಿಕನಪ್ಪನಲ್ಲದನಲ್ಲಂ (ಸಮಪ. ೪-೧೨೮) ; ೨೫೦ ಸೂಜಿಗಳಿಗೊಂದರಂತೆ ಪುಡಿಕೆಗಳನ್ನು ಕಟ್ಟುವನು (ಮುಂಬಯಿ. ೧-೦೩೩) ; ಅವನ ಪೆಟ್ಟಿಗೆಯಲ್ಲಿ ಎರಡು ಪುಡಿಕೆ ಪತ್ರಗಳಿದ್ದವು (ಇಶ್ಪೀ. ೩೮೭). **ಪುಟ್ಟಿಕೆ** : ೧. ಹೊಸ ಪುಟ್ಟಿಕೆಯಲ್ಲಿ ಒಂದು ವಡೆ ಮಾತ್ರ ಮಿಗಿಸಿ ಮುಚ್ಚಿಟ್ಟು (ಕಥಾಮಂ. IV, ೮೩). **ಪುಟ್ಟಿಗೆ$_1$** : ೧. 'ಪೂಪುಟ್ಟಿಗೆ' ಪರಾ. ೪. ದೊನ್ನೆ ; ಎಲೆವಟ್ಟಲು : 'ಪತ್ರಪುಟ್ಟಿಗೆ' ಪರಾ. **ಪುಡುಕೆ** : ೧. ದೇಹಮುಂ ಧಾತುಗಳ ಪುಡುಕೆ ವಿದ್ಯುಲ್ಲತಾಸಂಚಳಂ ಜೀವನು (ಮಲ್ಲಿಶು. ೪-೬೭) ; ಮರಕತದ ಪುಡುಕೆಯಲಸರ್ಘ್ಯದ ಸಿರಿರತುನಗಳಿ ಶಿ ಪಿ (ಶಾಕ್ತಶಾ. ೩೧-೧೪). ೩. ಅವನ ಜೇಬಿನಲ್ಲಿ ಯಾವಾಗಲೂ ನೋಟಿನ ಪುಡುಕೆಗಳಿರುತ್ತಿದ್ದವು (ರಕ್ತರ್ಕ. ೯೩). ೫. ಪೆಟ್ಟಿಗೆ ; ಸಂದೂಕ : ಭಂಡಾರದ ಮನೆಯೊಳ್ ಕನ್ನಮಿಕ್ಕಿಸಿ ಭಂಡಾರದ ಪುಡುಕೆಗಳಂ ಪೋಟ್ದು [ದ್ರ]ವ್ಯಮುಮಂ ಪೊನ್ನುಂ ತುಡುಗೆಗಳುಮಂ . . . ಕೊಂಡು ಪೋಗಿ (ವಡ್ಡಾರಾ. ೧೬೬-೪); ಪುಡುಕೆಯು ಪೊಂಗಳಾರೊಡನೆ ಭೂತಳಮಾರೊಡನೆ . . . ವಿಭೂಷಿಯಾರೊಡನೆ ಪೋದುವು (ಅಜಪು. ೨-೧೦೩). ೬. ಬುಟ್ಟಿ ; ಹೇಳಿಗೆ : ಉಡಿಯದ ಪಾಟ್ವನೆಯಿಲ್ಲಂ ಪಿಡಿದುರ್ಚುವ ಕೆಱದಿನುರ್ಚಿ ರಿಪುಗಜರದಮಂ ಸಿಡಿಲಡಸಿ ಪೊಡೆದ ಜಂತ್ರದ ಪುಡುಕೆವೊಲಿರೆ ಪೊಡೆವೆಸಹಿತರಥಸಂಕುಳಮಂ (ಪರ್ಶು. ೭-೩೦). **ಬುಡಿಗೆ** : ೭. ಕುಡಿಕೆ : ಮಡಿಕೆಗಳನ್ನೆಲ್ಲಾ ಮಾರಿಕೊಂಡು ಬುಡಿಗೆ ತುಂಬಿಸಬೇಕೆಂದು ಎಣಿಸಿಕೊಂಡೆಯೋ (ಕಥಾಮಂ. IV, 22). **ಬುಡುಕೆ. ಹುಡುಕೆ** : ೮. ನೆಲೆ ; ಆಶ್ರಯ : ಹಲವು ಹಡಿಕೆಯ ಹುಡುಕೆ ಕೇಳಿದು ಹೊಲಸಿನಾಲಯ (ಕವಿಚ. III, ೨೪೪ ಸುಜ್ಞಾನಜಂತಾವುತಿ).

· **ಪುಡುಕೆಯ ಮೊಲ, ಬುಡುಕೆಯ ಮೊಲ**=ಅತ್ತಿತ್ತ ಹೋಗಲಾಗದೆ ಬುಟ್ಟಿಯಲ್ಲೇ ತೊಳಲುತ್ತಿರುವ ಮೊಲ : ಪುಡು[ಪಾಠಾಂ. ಡಿ]ಕೆಯ ಮೊಲನಂತೆ ಕುಂಬುತಿರ್ಪರ್ಪರ್ಗವರ್ (ಶಾಪುಂಪು. ೪) ; ನಿನ್ನ ಕೂರಸಿಯೆಂಬೀ ಪಡೆಮಾತುಗೇಳ್ದು ಗೋಣುಗ ಪುಡುಕೆಯ ಮೊಲದಂತೆ . . . ಇರ್ಪರ್ ಮುತಿಪರ್ (ಎಕ. VIII, ಸಾಗರ. ೧೦೯-೨೯ 1042) ; ತೊಡರಲ್ಕಣ್ಮದೆ ಕಿಮ್ಮನೆ ಬುಡುಕೆಯ ಮೊಲದಂತೆ [ ಮೊಲದಂತೆ ] ಕುಂಬುತಿರ್ಪರನೇಕುಂಟೊಡೆತಾಗಿ ಮಾಟ್ಟರಯ್ಯರುಮೊಡನೆನ್ನಯ್ಯಂ ಬೆರಗ್ಗೆ ನೆರೆದೊಡೆ ಸಾಲ್ಗುಂ (ಬುಹಂ. ೦೦-೨೧). [ <ಸಂ. ಪುಟಕಾ./ತೆಲು. ಬುಡಿಗ, ಬುಡಿಗೆ ]

**ಪುಡಿಖರ್ಚು** (ನಾ). ಚಿಲ್ಲರೆವೆಚ್ಚ ; ಚಿಕ್ಕಪುಟ್ಟ ಮೇಲುಂಖರ್ಚು : ಪುಡಿಖರ್ಚಿಗಾಗಿ ಇಪ್ಪತ್ತುರೂಪಾಯಿಗಳನ್ನೂ ಹತ್ತಿರವಿಟ್ಟುಕೊಂಡನು (ಮುಸಿವಜ. ೪೮). [ ಪುಡಿ + ಖರ್ಚು (<ಕರ್ಚ್ಯ) ]

**ಪುಡಿಗತ್ತುರಿ** (ನಾ). ಕಸ್ತೂರಿಯ ಹುಡಿ ; ಕಸ್ತೂರೀಚೂರ್ಣ : ಪುಡಿಗತ್ತುರಿಯಂ ತಲೆಯೊಳ್ ತೀವೆ ಪೊಯ್ದು... ನೆಱೆಯ ಕೆಯ್ಗೆಯ್ದು ಬಂದು (ಶಂಕಪು. ೧೨-೧೦೮ ವ); ಕಚಾವಳಿಗಳಂ ಬಗಿಬಗಿದು ಪುಡಿಗತ್ತುರಿಯ ನೆಯ್ದಿ ತಳಿವು . . . ಬಲ್ದುಱುಂಬಂ ನಿವಿರ್ಚಿ (ಶಬ್ದರಾ. ೩-೪೪).

[ ಪುಡಿ + ಕತ್ತುರಿ ]

**ಪುಡಿಗಪ್ಪುರ**, ಪುಡಿಗರ್ಪೂರ (ನಾ). ಕರ್ಪೂರದ ಹುಡಿ,–ಚೂರ್ಣ : ಒಸಕೆ ವಾಡಿನ ತಾಳಕ್ಕೆ ಕುಣುಕಿದ ಪುಡಿಗಪ್ಪುರದ ಕೈರದುಂಬುಲವನ್ನು...ಆ ನಿನ್ನ ಬೋಡಬಾಯ್ಗೆ ಮೆಲ್ಲಮೆಲ್ಲಗೆ ಊಡಿ (ಮುಂತ್ರಕ. ೬೧-೧೭). **ಪುಡಿಗರ್ಪೂರ** : ಪುಡಿಗರ್ಪೂರಂಬೊರೆದ ಚೆಂದುಟಿಯ ಕುಂಕುಮಂದೊಡೆದ ಪೆರ್ದೊಲೆಯ . . . ವಿಲಾಸಿನಿಯರೇಳ್ತಂದರು (ಸೌಂದಪು. ೬-೪೧).

[ ಪುಡಿ + ಕಪ್ಪುರ ]

**ಪುಡಿಗರ್ಪೂರ** 'ಪುಡಿಗಪ್ಪುರ' ನೋ.

**ಪುಡಿಗಾಸು, ಪುಡಿಕಾಸು** (ನಾ). ಚಿಲ್ಲರೆ ನಾಣ್ಯ : ತನ್ನ ಹತ್ತಿರ ಪುಡಿಗಾಸೂ ಇಲ್ಲವಲ್ಲಾ (ಸ್ವಾತಂತ್ರ್ಯ. ೭೯); ಕಷ್ಟಪಟ್ಟು ಸಂಪಾದಿಸಿದ್ದ ಪುಡಿಗಾಸನ್ನು ಖರ್ಚುಮಾಡಿಯಾಗಿತ್ತು (ಕಾರ್ಗಿಲ. ೨). **ಪುಡಿಕಾಸು** : ನಾಲ್ಕಾರು ತಿಂಗಳು ಕೈಯಲ್ಲಿ ಪುಡಿಕಾಸು ಓಡಾಡಿದಾಕ್ಷಣ 'ನಾನು ಪ್ರಬುದ್ಧೆ' ... ಎಂದು ನೀನು ಭಾವಿಸಿದೆಯೇನು ? (ವಾತ್ಸಲ್ಯ. ೩೦೦) ; ಆದರೆ ಎಲ್ಲ ಯತ್ನಗಳೂ ಪರಿಚಯವಿದ್ದವರಿಂದೆಲ್ಲಾ ಪುಡಿಕಾಸು ಸಾಲ ಪಡೆಯುವುದರಲ್ಲೇ ಮುಕ್ತಾಯವಾಗುತ್ತಿದ್ದುವು (ರಂಗವ. ೩೭).

[ ಪುಡಿ + ಕಾಸು$_2$ ]

**ಪುಡಿಗಿರಾಕಿ** (ನಾ). ಚಿಲ್ಲರೆ ಗಿರಾಕಿ; ಚಿಲ್ಲರೆಗ್ರಾಹಕ : ಈ ಅಂಗಡಿಕಾರನು ತನ್ನ ಸರಕುಗಳನ್ನು ದೊರಕಿಸುವುದು—ಇಡಿಯ ದರದ ಅಂಗಡಿಗಳಿಂದ ; ಆದರೆ ಅವುಗಳನ್ನು ಪೂರೈಸುವುದು ಪುಡಿಗಿರಾಕಿಗಳಿಗೆ (ಶಕ್ತಿ. ೨೨).

[ ಪುಡಿ + ಗಿರಾಕಿ ]

**ಪುಡಿಗುಟ್ಟಿಸು** (ಕ್ರಿ). ಹಿಟ್ಟುಹಿಟ್ಟಾಗುವಂತೆ ಹೊಡೆಯಿಸು,— ಅರೆಯಿಸು : ಕಡಿದು ಕಿಱುಕಿಱಿದನೆಲುವಂ ಪುಡಿಗುಟ್ಟಿಸಿ ತೊವಲಸುಗಿದು ಕರುಳ ತೊಡಂಕಂ ಬಿಡಿಸಿ ನಡೆನೋಟಿಪ್ಪಂ (ಯಶೋಚ. ೪-೧೪).

[ ಪುಡಿಗುಟ್ಟು + —ಇಸು$_3$ ]

**ಪುಡಿಗುಟ್ಟು**, ಹುಡಿಗುಟ್ಟು (ಕ್ರಿ). ೧. ಕುಟ್ಟಿ ಪುಡಿಮಾಡು : ಆ ಚಿತ್ರರಥನಂದನೆಯ ಮದನಾನಲಂ . . . ಎಡವಱಿಯದೆ ಪುಡಿಗುಟ್ಟಿದ ಮುತ್ತಿನ ಮಳಲ್ಗೆ ದಱಿದ ಮಣಿಕುಟ್ಟಿಮದೊಳಂ ಮಾಣದೆ(ಕಾದಂಬ. ೩೨೬); ಕಾಳಂ ಜಜ್ಜುತೆ. . . ಪುಡಿಗುಟ್ಟಿ ಕಾಸಿ ಪಿಱಿದಂ ಶ್ರೀಖಂಡಖಂಡಂಗಳಂ ನೋಳುಂ ತೈಲವನೀವ ಜಂತ್ರಗಡಣಂ ಲೆಕ್ಕಕ್ಕೆ ಲಕ್ಕಂಗಳೇ (ವ್ಯಸೂವ. ೩-೩೮). ೨. ನಾಶಗೊಳಿಸು ; ಧ್ವಂಸಮಾಡು : ಅನನ್ತಪಾಳಂ . . . ಅಱಿಯಟ್ಟಿ ಕಟ್ಟಿದಿರೊಳಿಯ್ದ ಕಂಟಕದನ್ತ × × ತಾವಿಮ್ಮಡಿ[ಜಾ]ಳಯೆಲ್ಲಮಂ ನಿಜಭುಜಾಗ್ರಾಳದಿಂ ಪುಡಿಗುಟ್ಟಿ ತೂಱಿದ (ಕಇ. V, ೦೪-೦೦; 1099); ಕೃಷ್ಣನು ತಾನಾಗಿ ಬಂದು ಬಾಣನ ಕೋಟೆಯನ್ನು ಪುಡಿಗುಟ್ಟುವನೆಂದು ತಿಳಿಸು! (ಗುರುಚ. ೦೦೩). **ಹುಡಿಗುಟ್ಟು** : ೧. ಮಾರನ ಗರ್ವವೆಂಬ ವರಪರ್ವತಮಂ ಹು[ಪಾಠಾಂ. ಪು]ಡಿಗುಟ್ಟಿ ರಾಜಿತಾಚಾರವಿಶೇಷವೆಂಬ ಕುಲಿಶಾಯುಧದಿಂದೆತಪಃಪ್ರಭಾವಮಂ ಧಾರಿಣಿಯೊಳ್ ಕರಂ ತಳೆದನುತ್ತಮ

ಘೋರಿಗುಣಾತಿಶೋಭಿತಂ (ಜಾರಕ. ೧-೩೦) ; ನಿಜಗದೆಯಿಂದಾತನ ರಥವ ಹುಡಿಗುಟ್ಟಿದನು (ಉತ್ತರಕ್ರೋ. ೦೨-೧೮). ೨. ಧರೆಯು ಬೇಸಟಿನಳಿದು ದೋಷಮಂ ಹುಡಿಗುಟ್ಟಲೆಂದು ಪುಟ್ಟಿದ ನಿನ್ನ ನಾನಿಲ್ಲಿ ಮಡಗುವೆನೆ ಮಗನೆ (ಸಿದ್ಧರಾ. ೩-೦೬) ; ಹುಟ್ಟಿದ ದಿನಪೇಳಟಿಳಗೆ ಷಣ್ಮುಖ ಹುಡಿಗುಟ್ಟಿದು ತಾರಕಾಸುರನ ನೆಟ್ಟನೆ ಮುಟಿದು ನಿರ್ಜರರಿಗೆ ಪಟ್ಟವ ಕಟ್ಟಿದ ಕತೆಯು ಕೇಳ್ದಱಿಯಾ (ಪೋಹಕ. ೦೨-೦೬). [ಪುಡಿ+ಕುಟ್ಟು$_{1}$]

**ಪುಡಿಗೂಡಿಸು**, ಹುಡಿಗೂಡಿಸು (ಕ್ರಿ). ನಾಶಗೊಳಿಸು ; ಧ್ವಂಸ ಮಾಡು : ಆ ಗುಡ್ಡವನ್ನು ತಮ್ಮ ಸ್ವಾಧೀನ ಮಾಡಿಕೊಂಡರೆ ಮೈಸೂರು ಸೇನೆಯನ್ನು ಪುಡಿಗೂಡಿಸುವುದು ಸುಲಭ (ಜದೇಪ. ೦೮೦). **ಹುಡಿಗೂಡಿಸು** : ಕೈಯಲ್ಲಿ ಕಾಸಿದ್ದರೆ ಹುಡುಗರು ಕೋತಿಯಂತೆ ಕಟ್ಟಾಣಿಯನ್ನೂ ಹುಡಿಗೂಡಿಸುವರು (ಮಧುಮ. ೨೦) ; ತನ್ನ ಬಾಳು ಹುಡಿಗೂಡಿಸಲು ಅವಳನ್ನು ಪ್ರೇರೇಪಿಸಿದ್ದು ಇಂದಿನ ಸಮಾಜವಲ್ಲವೆ? (ಕಣ್ಣಿ. ೦೮). [ಪುಡಿ+ಕೂಡಿಸು]

**ಪುಡಿಗೆಯ್**, ಪುಡಿಗೈ, ಹುಡಿಗೆಯ್, ಹಂಡಿಗೈ (ಕ್ರಿ). ೧. = ಪುಡಿಗುಟ್ಟು ೧: ಕಲ್ಪವೃಕ್ಷಮಂ ಕಡಿದರೇ . . . ಮಾಣಿಕವನು ಪುಡಿಗೆಯ್ದರೇ (ಶಂಕ. ೩೫-೨೪). **ಪುಡಿಗೈ** : ೨. = ಪುಡಿಗುಟ್ಟು ೨ : ವೀರಲಕ್ಷ್ಮಣನಿಸುವ ಕೂರಂಬನೆಲ್ಲಮಂ . . . ಧೀರಸಹ ಸೀತಾಕುಮಾರಕಂ ಸಾಯಕದ ಸಾರದಿಂ ಪುಡಿಗೈದನು (ಜೈಮಿಭಾ. ೩೦-೫೯) ; ಗರುವ ತರುವರಕುಲಂ ಮೂಲಮಂ ಕಿರಿಪಿ ಪಿಂಟಿದವೋಲ್ ನೆಲಕ್ಕುರುಳಿದವು, ಪೊದರ್ ಗಿಡುಗಳಂ ಪುಡಿಗೈದು (ಚತ್ರಾಂಗ. ೯೮-೦೩೧೫). **ಹುಡಿಗೆಯ್** : ೨. ಹೆಚ್ಚಿನ ಮರುಳಾಟದ ಮುಱಿವ ಲೋಕಂಗಳನು ಹುಡಿಗೆಯ್ಯುತ್ತಿಹ ನರಸಿಂಹನ ಹಣೆಯಾ ಲಿಪಿ ತೊಡೆದಾ ವೀರೇಶನ ಲೀಲಾಕಥನವ ಪದವಿಡುವೆನು (ಪಾರೇಶ. ೧-೬). **ಹುಡಿಗೈ** : ೨. ವಿರಾಗಿಯರ್ಜುನನೆದೆಯ ಕೋಂಟೆಯಂ ಹುಡಿಗೈದ ಶೃಂಗಾರವೈತರಲಿ (ಚತ್ರಾಂಗ. ೨೯-೬೯೩). [ಪುಡಿ+ಕೆಯ್$_{1}$]

**ಪುಡಿಗೈ** 'ಪುಡಿಗೆಯ್' ನೋ.

**ಪುಡಿಚಂಡಿಕೆ** (ನಾ). ಕುರುಚಲುಕೂದಲು : ಚಿಕ್ಕ ಚಂಡಿಕೆ : ಅವನ ಪುಡಿಚಂಡಿಕೆಗಳು ತಲೆಯ ಮೇಲೆ ಹೋತಿನ ಗಡ್ಡದಂತೆ ಹಾರಾಡುತ್ತಿದ್ದವು (ಸಮಾಜ. ೩೯೯). [ಪುಡಿ+ಚಂಡಿಕೆ$_{1}$ (<ಚಂಡಿಕೆ)]

**ಪುಡಿಚಟ್ನಿ** (ನಾ). ಕಡಲೆಬೇಳೆ, ಉದ್ದಿನ ಬೇಳೆ, ಮೆಣಸಿನಕಾಯಿ ಮೊದಲಾದುವನ್ನು ಹುರಿದು, ಕುಟ್ಟಿ, ವ್ಯಂಜನವಾಗಿ ಉಪಯೋಗಿಸುವ ಪುಡಿ : 'ಚಟ್ನಿಪುಡಿ' ಪರಾ. [ಪುಡಿ+ಚಟ್ನಿ (<ಚಟ್ನಣಿ)]

**ಪುಡಿದುಡ್ಡು** (ನಾ). = ಪುಡಿಗಾಸು : ಗೋಲಕದ ಪುಡಿದುಡ್ಡು ಇದೆಲ್ಲಾ ಸೂರಯ್ಯನಿಗೆ ದೊರೆಯುತ್ತಿತ್ತು (ಪೀತಾಂಬ. II, ೨೪); ಕೆಲವರು ತಮ್ಮಲ್ಲಿದ್ದ ಪುಡಿದುಡ್ಡುಗಳಿಗೆ ಎಣ್ಣೆಯನ್ನು ಕೊಂಡು ತಂದರು (ರಾಜಾ. ೨೨). [ಪುಡಿ+ದುಡ್ಡು$_{1}$]

**ಪುಡಿಯಾಟ**, ಹುಡಿಯಾಟ (ನಾ). ೧. ಧೂಳೆಬ್ಬಿಸುವ ಆಟ ; ಧೂಳಾಟ : ಪುಡಿಯಾಟಮನಾಡಿ ಚರಾಚರಂಗಳಂ ಕರಿಮುರಿಯಪ್ಪಿನಂ ಹುರಿವ ಹಂಚುವೊಲಿರ್ದೆಳೆಯೊಳ್ ಕೃತಾಂತನಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪನಿದಾಘಜಾನಿಳಂ (?) (ಅರ್ಜನೀ. ೪-೬೪). **ಹುಡಿಯಾಟ** : ೨. ಧೂಳಿನಲ್ಲಿ ಆಡುವ ಆಟ ; ಮಣ್ಣಾಟ : ಮೊಲೆಹಾಲು ಕುಡಿದು ದಿನವೇಸು ತಂಗೆವ್ವ ಹುಡಿಯಾಟವಾಡಿ ದಿನವೇಸ (ಮೂಕೀರ್ತಿ. ೪೧-೮). [ಪುಡಿ + ಆಟ]

**ಪುಡಿಯಾಡು** (ಕ್ರಿ). ಧೂಳಿನಲ್ಲಿ ಆಡು ; ಮಣ್ಣಾಟವಾಡು : ಪುಡಿಯಾಡುವ ತೊದಳೊದವೆ ನುಡಿವ ನಗಿಸುವ ಬಾಲಕ್ರೀಡೆ ಮುರಾರಿಯ ಬಾಲಕ್ರೀಡೆಯನನುಕರಿಪುದಾದುದರಿಕೇಸರಿಯಾ (ಹಂಪಿಕಾ. ೨-೬). [ಪುಡಿ + ಆಡು$_{1}$]

**ಪುಡಿಯಿಡು** (ಕ್ರಿ). ಹೊಟ್ಟು ಹಾರು; ಹಾರುವು ಏಳು : ಪುಡಿಯಿಡುತ್ತುಂ ವರಾಂಗಂ ಸುರುಳ್ದಿಕ್ಕುಂ . . . ಮುಖಂ ಕಂದಿ ಕುಂದಿಕ್ಕುಂ (ಧರ್ಮಾ. ೧೧-೩). [ಪುಡಿ + ಇಡು$_{1}$]

**ಪುಡಿಯೇಳು**, ಹುಡಿಯೇಳು (ಕ್ರಿ). ೧. ನಾಶವಾಗು ; ಧ್ವಂಸಗೊಳ್ಳು : ತಲೆ ಸೀಳಾಗಿ ಮುಡಿಸಿ ಸಿಂಗಾಡಿ ದೊಣೆಯುಂಬು ಪುಡಿಯೆದ್ದು ದಿಂಡುರುಳಿತು ಮಾನರಾಜಿ (ಕುಪಾ. ೦೪-೬೪). **ಹುಡಿಯೇಳು** : ೨. ಪುಡಿಯಾಗು : ನಿಡಿಗಲ್ಲು ನಿಶಿತ ಹಾಸಱೆಗಲ್ಲು ಚೌಕದ ಬಡಿಗಲ್ಲು ಬಟುಗಲ್ಲು ಬೀಳೆ ತುಡುಕಿದ ವಜ್ರಮಾರ್ಗಣದಿಂದೆ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಱಿಸಿದ (ಮೋಹಕ. ೪೦-೬೩). [ಪುಡಿ + ಏಳು$_{1}$ (< ಏೞು$_{1}$)]

**ಪುಡಿವಡು** (ಕ್ರಿ). = ಪುಡಿಯೇಳು ೨ : ಕರ್ಪೂರದ ಬಿಡುವೀಳೆಯ ದಂಬುಲ ವಿರಹಾಗ್ನಿಗೆ ಪುಡಿವಟ್ಟುದೇನ ಬಣ್ಣಿಸುವೆ (ಕಂಸಾ. ೯-೦೬೨). [ಪುಡಿ + ಪಡು$_{1}$]

**ಪುಡಿವಡೆ** (ಕ್ರಿ). ೧. = ಪುಡಿಯೇಳು ೧: ಅಮನ ಮಾಯೆಯುಂ ತಡೆವರಿಲ್ಲಾ ಬಲಂ ಪುಡಿವಡೆದುದು (ಜೈಮಿಭಾ. ೪-೨೩). ೨. = ಪುಡಿಯೇಳು ೨ : ವೈಗಳಂ ಸೋಂಕಿ ಪುಡಿವಡೆದ ಕುಂಕುಮಸುಗಂಧಾನುಲೇಪನದ ಚೂರ್ಣಂಗಳೋ . . . ಎಂಬಿನಂ . . . ಕೆಂಧೂಳಿ ಮುಸಗಿತಾಗ (ಜೈಮಿಭಾ. ೦೨-೬). [ಪುಡಿ + ಪಡೆ$_{1}$]

**ಪುಡಿವಿಟ್ಟು** (ನಾ). ನುಣ್ಣಗಿರುವ ಹಿಟ್ಟು : ಪಸಿವಾಗೆ ಮುನ್ನಿನ ತೆಱದೊಳಮೃತಾನ್ನವನು ಬೇಡಿ ಕಾಡಲಾ ವನಿತೆ ಪುಡಿವಿಟ್ಟನೊಳು ಪಸಿದನಿಗೆ ನೀರ್ವೆರಸಿ ಪಾಲಿದೆಯೆನುತ್ತಿತ್ತಳು (ಸೌಂದರ. ೪-೫೮). [ಪುಡಿ + ಪಿಟ್ಟು]

**ಪುಡಿವಿಡು** (ಕ್ರಿ). ೧. = ಪುಡಿಯೇಳು ೧: ಕದಡಿ ಪದಾತಿಘಟ್ಟನದ ಕೋಟಿಕ್ಕಿಸಱಾಗಿ ತುರಂಗಮಾಂಘ್ರಿಪಾತದೆ ಪುಡಿವಿಟ್ಟು ಕೂಡೆ ರಥಘಾತದೆ ತೀವಿ ಬಟಕ್ಕೆ ದಂತಿದಾನದೆ ಕರಿದಾದುದಿಂತು ಯಮುನಾನದಿ ಕೆಮ್ಮನೆ ದೇಸೆಗಾಯ್ತು ಕರ್ಪಿದಱಿೊಳ್ (ಜಗ. ೦೬-೬೦). ೨. ನಿರ್ದ್ರವವಾಗು ; ಒಣಗು : ಕಡುವಿಸಿಲೊಳಿರ್ದು ತಾಳುಗೆ ಪುಡಿವಿಡೆ ಮುಖಮೊಣಗೆ . . . ತುರಗಕೆ ತಾಳುರೋಗಂ ತೋರ್ಕುಂ (ಅಶ್ವಶಾ. ೦೪-೦). [ಪುಡಿ + ಬಿಡು$_{1}$]

**ಪುಡಿಸಕ್ಕರೆ** (ನಾ). ಹಿಟ್ಟಿನಂತೆ ನಯವಾದ ಸಕ್ಕರೆ : (೬). [ಪುಡಿ + ಸಕ್ಕರೆ]

**ಪುಡಿಹಣ** (ನಾ). = ಪುಡಿಗಾಸು : ಅವನು ಕೇಳಿದ ಪುಡಿಹಣಕ್ಕೆ ಅವಳೆಂದೂ ಅಡ್ಡಿಯಾಡಿರಲಿಲ್ಲ (ಸಿಡಿಲು. ೫೪). [ಪುಡಿ + ಹಣ (< ಪಣವು$_{1}$)]

**ಪುಡುಂಕು**, ಪುಡುಕು, ಹುಡುಕು$_{1}$ (ಕ್ರಿ). ೧. ಕೈಯಿಂದ ತಡಕಾಡು ; ತಡವರಿಸು : "ಪುಡುಕು, ಪುಡುಂಕು—ಕರಾನ್ವೇಷಣೇ" (ಶಮದ). ೨. ಅರಸು ; ಶೋಧಿಸು : "ಪುಡುಂಕೆನಲ್ಪುಡುಕುವುದಕಪ್ಪುದು" (ಶಬ. ೬೬); ಚಕ್ಕಸವೇಡನೋರ್ವನುಱೆ ಬೇಂಟೆಯನಾಡಲೊಡಂ ಪುಡುಂಕಿ ಬಲ್ಪಕ್ಕಿಗಳಂದು ಸಿಲ್ಕಿದುವು (ಹಮ್ಮೀರ. ೪-೬೨) ; ಭೂಮಿಯೊಳುಂಟಾದ ಪಾರ್ಥಿವರೆಲ್ಲರಂ ಮೂಱೇಳ್ವೇಳೆ ಪುಡುಕಿ ಪುಡುಂಕಿ ಸಂಹಾರಂಗೆಯ್ದನೋ ಆ ಬಗೆಯ ಕ್ರೋಧಾತ್ಮಂಗೆ ಸಾಷ್ಟಾಂಗವಾಗಿ ನಮಸ್ಕಾರಂಗೆಯ್ದನು (ಧಾರಕಾಂ. ೩೨೪-೪೬). **ಪುಡುಕು** : ೨. "ಪುಡುಕೆಂದು ಅಱಸುವುದು" (ಶಶಾ. ೬೮-೫೪೬); ತಡವಡಿಸಿ ಪುಡುಕಿ ಪಂಜಿನ ನಡುಬೀದಿಯೊಳಿರ್ದು ಮಱುಗುತಿರೆ ಕಂಡು (ಸುಕುಮಾ. ೯-೫೮) ; ಮತ್ತೊಮ್ಮೆ ತೊಳಲಿ ನೋಡುವೆನೆನುತ ಪುಡುಕಲುಜ್ಜುಗಗೊಂಡನು (ಪಂಕಾರಾ. ೫-೫-೦೮) ; ಮಡದಿ ಬಂದೆ ನಿನ್ನಂ ಪುಡುಕಿವರೆ ತೊಡಕಿ ಬಿಲ ಸಾರ್ದು ಸಂದೆಗಂಬಡೆ ಸಾರಿ ಪುತ್ರಿಮಂದಿರಕ್ಕೆದಿ . . . ಬಂದೆ (ತ್ರೀರಾಮ. ೩-೩೬). **ಹುಡುಕು$_{1}$** : ೧. ತಾನೊಡನೆ ಕರಯುಗದಿಂದೆ ಹುಡುಕುತ ಲಿಂಗಮೂರ್ತಿಯನಱಸುತವೆ ಮುನ್ನ

(ಶಸಪ್ರ. ೩೦-೬೮). ೨. "ಮೃಗಯತೇ = ಹುಡುಕಿದಪುದು" (ಕಾಕ್ಕ. ೨೮೬); ಇರುವೆಗಳು ಯಾವಾಗಲೂ ಆಹಾರ ಹುಡುಕುತ್ತಿರುತ್ತವೆ(ಹುಂಬಯ. ೨-೮); ಅಜ್ಜರಿಯ ಬಚ್ಚಿಟ್ಟು ಹುಡುಕ ಹಚ್ಚಿದ ಬಾಳ ನೀಳಪಯಣದ ಹಾದಿ (ಹಂಡು. ೬೬-೯).

[ದೇ. ತೆಲು. ಪುಡುಕು,' ಪುಣುಕು ; ಕೋಲಾ. ಪುಡ್ಕ್ = ಮುಟ್ಟು : ನಾಯ್ಕ. ಪುರ್ಕ್ = ಮುಟ್ಟು]

**ಪುಡುಂಕುನೀರ್** 'ಪುಡುಂಕುನೀರ್' ನೋ.

**ಪುಡುಕು** 'ಪುಡುಂಕು' ನೋ.

**ಪುಡುಕುನೀರ್**, ಪುಡುಂಕುನೀರ್, ಹುಡುಂಕುನೀರ್ (ನಾ). ಕುದಿಯುವ ನೀರು; ಸುಡುನೀರು: 'ಪುಡುಕುನೀರಟ್ಟು' ಪರಾ. **ಪುಡುಂಕುನೀರ್**: ಒದೆದು ಕಲಂಕಿ ಪಾಯ್ವ ಪದದೊಳ್ ಪದವೆತ್ತು ಪುಡುಂಕುನೀರನರ್ದಿ ದಳುಚಿ ಮೋದಿ ಮುಂದಲೆಗೆ ಪಾಯ್ದು ಪೊರಳ್ಚಿದಳ್ (ಲೀಲಾವ. ೦೩-೨೨). **ಹುಡುಕುನೀರ್** : ಅಡವಿಯ ಹೊಗಿಸಿತ್ತು ಹುಡುಕುನೀರಲದ್ದಿತ್ತು... ಊರೊಳಗೆಲ್ಲ ಈ ಬೆಡಗಿನ ಮಾಯೆಯ ಬಡಿಹೋರಿಸಮಯಿಗಳ ನುಡಿಗೆ ನಾಚುವೆನು (ಬಸಕಾ. I. ೨೩೮-೦೬) ; ಮೂಡೆಗಟ್ಟುಂ ಕಟ್ಟಿ ಹುಡುಕು ನೀರೊಳ್ ಮೆಟ್ಟಿ ಕಾಡುತಿಹ ಪಾಮರರ ಕೈವಿಡಿತೆಗೊಳಗಾಗಿ ... ಪುಲ್ಲಿರ್ಚಿ ಕಂಟಕಂಬಡೆದವು (ಕಾವಣಂ. ೨-೮) ; ನಮ್ಮ ನಿಮ್ಮಂದಖಿಳಶುಭಪ್ರಯೋಜನ ವಿರಲು ನಿಮ್ಮುವಂ ಸೀಳಿ ಪೋಳ್ಗೈದು ಕುದಿಸುತ್ತಿಹರು ತಮ್ಮ ಮೂಗರಿದು ಮುಡಿಗಟ್ಟುತ್ತ ಹುಡುಕುನೀರೊಳಗದ್ದಿ ಬಳಲಿಸುತಿರೆ ಹೆಮ್ಮೆಯುಳಿದೀ ಲೋಕದೊಳಗಿಹುದೆ ಕಷ್ಟವೆಂದುಂ ಮುಳಿದು ಸ್ವರ್ಗಕೆ ಪರಿದು ಪೋಗುವ ತೆರದಿ ನೆಮ್ಮಿ ಗಗನವ ತುಡುಕಿ ಪುನ್ನಾಗ ನಾಗವಳ್ಳಿಯ ಪೊಲಂ ಕಂಗೆಸೆದುವು (ಪಪಪೋ. ೪-೩೦). ₱ "ಪಂಪನ ಪದ್ಯದಲ್ಲಿರುವ 'ಪುಡಪುಡನೆ' ಎಂಬ ಶಬ್ದ ಪುಡು ಎಂಬ ಮೂಲಧಾತುವಿದ್ದಿರ ಬೇಕೆಂಬುದನ್ನು ವಿಶದಗೊಳಿಸುತ್ತದೆ. ಇದರಿಂದಲೇ 'ಪುಡಂಕು' ಎಂಬ ಧಾತು ಬಂದು ಕದಿ, ಬೇಯು ಎಂಬರ್ಥವನ್ನು ಪಡೆದಿರ ಬೇಕೆಂದು ಅರಿವಾಗುತ್ತದೆ. ಪುಡುಂಕುನೀರ್ ಎಂದರೆ ಕುದಿನೀರು, ಬಿಸಿನೀರು, ಸುಡುನೀರು ಎಂದರ್ಥ" (ಶಬ್ದವಿ. ೦೩).

[< ಪುಟು + ನೀರ್ ]

**ಪುಡುಕುನೀರರ್ದು** 'ಪುಡುಕುನೀರಟ್ಟು' ನೋ.

**ಪುಡುಕುನೀರಟ್ಟು**, ಪುಡುಕುನೀರರ್ದು, ಹುಡುಂಕುನೀರದ್ದು (ಕ್ರಿ). ಕುದಿಯುವ ನೀರಿನಲ್ಲಿ ಮುಳುಗಿಸು; ಬಿಸಿನೀರಿನಲ್ಲಿ ಅದ್ದು : ಸಮುದ್ರದೊಳ್ ಮಹಾಪಾತಕದ ಪೊದಲೊಳಿಕ್ಕಿ ಪುಡುಕುನೀರಟ್ಟು [ಪಾಠಾಂ. ದರ್ದು] ತ್ತುಂ ಪಿರಿದುಂ ಬೇಗಂ ದುಃಖಮನೆಯ್ದಿಸಿ ಕಾಡಿ ಕೊಲೆ (ವಡ್ಡಾರಾ. ೦೯೩-೦೨) ; ಮುಳಿಸಾಗೆ ಪಾಳವೇಶನ ಒಳಪೊಲ್ಲಮನುಯ್ದು ಪುಡುಕುನೀರಟ್ಟುವೆಂ (ರಪೂರ್ಣಮ್ಮ. ೪-೨೯೩). **ಪುಡುಕುನೀರರ್ದು** : ಪುಡುಕುನೀರರ್ದೆ [ಪಾಠಾಂ. ನೀರೊಳರ್ದೆ] ಯುಂ ಪುಟಪಾಕಂ ಸುಡೆಯುಂ (ಅಕಪು. ೦೦-೦೦ ವ): ಕಡುಸೀಟಿ ಜಂತ್ರದಂಚಿಯುನಡಿಗಡಿಗಾ ನೀರೊಳರ್ದಿದಳ್ ನಡವೆಡೆಯೊಳ್ ಗಡ ನಾಣ್ಚದೆ ಪುರುಡಿಪುದೆನ್ನೊಡನೆಂದುಯ್ದಲ್ಲಿ ಪುಡುಕು ನೀರರ್ದುವಪೊಲ್ (ಮಲ್ಲಿಪು. ೬-೦೦೦) ; ಕೇಸರಿಗಳಂ ಪಿಡಿದು ಪುಡುಕು [ಪಾಠಾಂ. ಡಿತೆ]ನೀರರ್ದು[ಪಾಠಾಂ. ನೀರೊಳಟ್ಟು]ವಂತೆ . . . ಸುಟಿ ಗೊಂಡರ್ದುವ ಸುಟಿಗಳೊಳಂ (ಲೀಲಾವ. ೮-೪೮ ವ). **ಹುಡುಕುನೀರದ್ದು** : ಶಿವನಂ ನೆನೆಯುತೆಡೆಯೊಳನ್ಯಾಯುವುಂ ಮಾಡಿ ಮತ್ತಂ ನೆನೆಯುತಿರ್ದೊಡಾ ಶಿವನ ನಾಮಂ ಹುಡುಕುನೀರದ್ದಿದಪುದೇ (ಸಿದ್ಧರಾ. ೮-೦೮) : ಸುಡುವೆ ಲಂಕೆಯ ಸಚಿತ್ರವೆಲ್ಲರ ಹುಡುಕುನೀರದ್ದುವೆನು (ಕೌಶರಾ. ೯-೬೦); ಗಂಗೆಯ ನಡುಗಡಲಲೀಕ್ಷಣವೆ ಖಳರನು ಹುಡುಕುನೀರದ್ದುವೆನು ಕೌರವ ಕುನ್ನಿಗಳನು (ನಿಭಾಗ. ೦೦-೮೬-೩೭). [ಪುಡುಕುನೀರ್ + ಅಟ್ಟು]

**ಪುಡುಕೆ** 'ಪುಡಿಕೆ' ನೋ.

**ಪುಡುಕೆಗಟ್ಟಿಸು** (ಕ್ರಿ). (ಆಲಂ) ಗಂಟು ಕಟ್ಟಿಕೊಂಡು ಓಡಿ ಹೋಗು ವಂತೆ ಮಾಡು ; ಎತ್ತಂಗಡಿ ಮಾಡಿಸು : ಮಾಳವಮೇಳುವುಂ ಪುಡುಕೆಗಟ್ಟಿಸಿದತ್ತಣಿಯಟ್ಟಿ ಚೇರನುಂ ಚೋಳನುಮಂ ಸಮುದ್ರ ದೊಳಗದ್ದಿರ್ದುದು . . . ತೇಜದುಬ್ಬರ್ (ಎಕ. VII, ಶಿಕಾ. ೦೨೩-೦೬ : 1019). [ ಪುಡುಕೆ (< ಪುಡಿಕೆ) + ಕಟ್ಟಿಸು ]

Δ **ಪುಡುಗ** 'ಹುಡುಗ' ನೋ.

**ಪುಡುತಕೇಶ**, ಪುಡ್ತಕೇಶ (ನಾ). ಪೋರ್ಚುಗಲ್ಲು ದೇಶದವನು : ತಾವು ಪರಾಯ ತಾಲ್ಲೂಕು ಪುಡುತಕೇಶನ ಆಶ್ರಯದಲ್ಲಿ ಇದ್ದೀರಿ(ರಾಜೇಂದ್ರ. ೨೦೦). **ಪುಡ್ತಕೇಶ** : ಗೋವೆ ಪುಡ್ತಕೇಶ ಖಾವಂದ ಗವರ್ನರ ಹೆಸರಿಗೆ ಒಂದು ತಾಕೀತಿ ಆದರೆ ಆ ಅರಸುಗಳು ಇಲ್ಲಿಗೆ ಬಂದು ತಲಪ್ಯಾರು (ರಾಜೇಂದ್ರ. ೨೦೩). 'ಪೋರ್ಚುಗೀಸ್' ಪರಾ.

[← ಇಂ. Portuguese /ತೆಲು. ಬುಡುತಕೀಚು]

**ಪುಡುಪುಡನೆ** (ಅ). ಪುಡುಪುಡು ಎಂದು : ಸಿಂಧುನಂದನನ ಕೋಪಶಿಖಿ ಶಿಖಾಕಳಾಪಂಗಳೊಳ್ ಪುಡುಪುಡನಟ್ಟಿ ಸಾಯಲೆಂದು ಪಾಯ್ವ ಪತಂಗಂಗಳಂತೆ ಸೋಮಕ ಶ್ರೀಜಯಪ್ರಮುಖನಾಯಕರೊಂದಕ್ಷೋಹಿಣೀ ಬಲಂಬೆರಸು ಭರಂಗೆಯ್ದಾಂತೊಡೆ (ಪಂಪಭಾ. ೧೦-೩೯ ವ); ಎನ್ನ ಮಕ್ಕಳು ಮಾನುಂ ದುಃಖಾಗ್ನಿಯೊಳ್ ಪುಡುಪುಡನೆ ಪುರ್ಗಿ ನವೆವ ಪಾಪದ ಫಲಮಂ ನೀನವೊಲ್ಫುಮುಣ್ಬೆ (ಸುಕುಮಾ. ೩-೭ ವ). [ಪುಡುಪುಡು + — ಅನೆ$_1$]

**ಪುಡುಪುಡು** (ನಾ). ಒಂದು ಅನುಕರಣಪದ : ನಡನಡನಡುಗಿ ಮಿಡು ಮಿಡುಮಿಡುಕಿ ಪುಡುಪುಡು ಪುಗ್ಗಿ . . . ಪುಯ್ಯಲಿಡುತ್ತುಂ (ಅಜಿಪು. ೦೦-೦೦ ವ).

**ಪುಡೆ** (ಅ). ಸ್ಪಷ್ಟವಾಗಿ ; ನಿಶ್ಚಿತವಾಗಿ : ಚಂಡಿಮಯ್ಯಂಗೆ ಶ್ರೀವನಿತೆಗೆ ತಾನಾಗಿ ಶ್ರೀವಿಶಾಲನೆ ಪುಟ್ಟುವಂತೆ ಪುಡೆ ಪುಟ್ಟಿದಂ ಬಾವ[ಂ]ಡ (ಕಇಅ. ೦೦-೪-೪೭ ; ಸು. 1093).

[< ಪ್ರಾ. ಪುಡ./ಸಂ. ಸ್ಫುಟ./ತಮಿ. ಪುಟೈ = ವ್ಯಕ್ತವಾಗು]

**ಪುಡೆಯ** 'ಪುಡೆಹ' ನೋ.

**ಪುಡೆಹ**, ಪುಡೆಯ (ನಾ). ಹಲಸು, ಕುಂಬಳ, ನೆಲ್ಲಿಕಾಯಿ ಮೊದಲಾದುವುಗಳಿಂದ ತಯಾರಿಸುವ ಒಂದು ಬಗೆಯ ಮೇಲೋಗರ : ಕಡುಮೆತ್ತನುಕ್ಕರಿಸಿಕೊಂಡ ಹಲಸಿನ ಕಾಯಿ ಕಡಲೆ ಯಂದದೊಳು ಕತ್ತರಿಸಿಯುಪ್ಪಿಂಗು ಹುಳಿಯೊಡನೆ ತುಪ್ಪವನೆಚಿದು ತಾಳಿಸಿಯವರೆಯಂತೆ ಕತ್ತರಿಸಿ ಬಲಿದ ಹಾಲ ಬಡಗಸುಂಡಗೆಯುಳ್ಳ ತೆಂಗಾಯಿ ಶುಂಠಿಗಳ ಹುಡಿಯಿವೆಲ್ಲವನು ತುಪ್ಪದಿ ಹುರಿದು ಹದಮೆಣಸ ಜಿಡಿದ ಮೊಸರು ಕಲಸಿ ತುಪ್ಪದೊಳಗಟ್ಟುವೊಗ್ಗರಿಸಿ ಪುಡೆಹ[ಪಾಠಾ. ಡಿಯ]ವ ಮಾಳ್ಪುದು (ಸೂಪಶಾ. ೩-೪೨). **ಪುಡೆಯ** : ನೆಟಿ ಸಣ್ಣನಾಗಿ ಕುಂಬಳಕಾಯನುತ್ತರಿಸಿ . . . ಸಂಭಾರವುಂ ತಳಿದುವೊಗ್ಗರಿಸಿ ಪುಡೆಯುವ ಮಾಳ್ಪುದು (ಸೂಪಶಾ. ೩-೨೯) ; ಎಳೆಯ ಹಲಸಿನ ಕಾಯ ಸಿಪ್ಪೆಯಂ ತೆಗೆದು ಸುಬಳಿಸಿ . . . ಬೇಯಿಸಿಕೊಂಡು ಬಳಿಕ ತಾಳಿಲ ಕೊಣಬು ಪುಡೆಯಂ ಮುಂತಾದ ಮೇಲೋಗರವನು ಮಾಳ್ಪುದು (ಸೂಪಶಾ. ೩-೩೭).

[ ? ]

**ಪುಡ್ತಕೇಶ** 'ಪುಡುತಕೇಶ' ನೋ.

**ಪುಢಾಕಾರ** (ನಾ). ಮುಂದಾಳುತನ ; ನೇತೃತ್ವ : ಈ ಎಲ್ಲ ಮಾತುಕತೆ ಗಳಲ್ಲಿ ತುಂಗಕ್ಕನದೇ ಪುಢಾಕಾರವಿತ್ತು (ಮೂರುದಾ. ೧೪೦) ; ನಾಲ್ವತ್ತು ವರ್ಷ ವಯಸ್ಸಾಗುವವರೆಗೆ ಹೋಳೀಹುಣ್ಣಿಮೆಯ ಚಟುವಟಿಕೆಗಳಲ್ಲಿ ಅವನ ಪುಢಾಕಾರವಿರುತ್ತಿತ್ತು (ಗಂಮಾಯ. ೩೪).

[ ← ಮರಾ. ಪುಢಾಕಾರ ]

**ಪುಢಾರಿ** ಪುಡಾರಿ (ನಾ). ಮುಂದಾಳು ; ನೇತಾರ ; ಮುಖಂಡ : ಹಳ್ಳಿಯ ಪುಢಾರಿಗಳು—ಹಿರಿಯರು—ಹುಂಬರು ಎಲ್ಲಾ ಸೇರಿದ ಬ್ರಹ್ಮ ಸಭೆ ಅದು (ಶಂಬಹು. ೬೮) ; 'ಬರಾಕು'ಗಳ 'ಪುಢಾರಿ'ಗಳಲ್ಲಿ ಒಬ್ಬೊಬ್ಬ ರಾಗಿ ಮುಂದೆ ಬಂದು ಜಿಗಿಜಿಗಿದು ಭಾಷಣ ಮಾಡಿದುದಾಯಿತು (ಅಗಸ್ತ್ಯ. ೩೩). **ಪುಡಾರಿ** : ದೇಶದ ಮುಖಂಡರೂ ಅವನಿಗೆ ಗೊತ್ತು ; ನಾಡಿನ ಪುಡಾರಿಗಳೂ ಅವನಿಗೆ ಗೊತ್ತು (ಅಳಿ. ೨೯) ; ಹೋಹಾಗ ಬರಂ ವಂತೆ ಬರುವಾಗ ಹೋಹಂತೆ ತೋರ್ಪವರೀ ಮೂರು ನೋಡಿ ಒಬ್ಬ ಪುಡಾರಿ ಮತ್ತೊಬ್ಬಳು ವಯ್ಯಾರಿ ಮತ್ತಿನದಿನ್ನೊಂದು ಏಡಿ (ತಂಜಾ ಕ. ೧೯೬-೦೬). [ ← ಮರಾ. ಪುಢಾರೀ, ಪುಢಾಕಾರೀ ]

**ಪುಢಾರಿಕೆ** (ನಾ). ಮುಂದಾಳುತನ ; ಮುಖಂಡತ್ವ : ಅವನಿಗೆ ಜನತೆ ಯಲ್ಲಿ ಗಣ್ಯವಾದ ಸ್ಥಾನ ದೊರಕಿತ್ತು ; ದೇಶದಲ್ಲಿ ಪುಢಾರಿಕೆ ಬಂದಿತು (ಸ್ವಯಂವ. ೧೦). [ಪುಢಾರಿ + –ಇಕೆ]

**ಪುಢಾರಿತನ** (ನಾ). = ಪುಢಾರಿಕೆ : ಮಧ್ಯಮರು ಪುಢಾರಿತನದ ಯಜ್ಞ ದಲ್ಲಿ ಯಾರನ್ನೋ ದೂಗಿಸಿ . . . ಅವರು ಮೈಮರೆಸಿ ಕೊಳ್ಳುವುದು . . . ವಾಡಿಕೆಯದೇ ಆಗಿದೆ (ಶಂಕಸಂ. ೬ ಮುಮ್ಮುಖ). [ಪುಢಾರಿ+–ತನ]

**ಪುಣ್**, ಪುಂಡು₂, ಪುಣ್ಣು, ಹುಣ್, ಹುಣ್ಣು (ನಾ). ೧. ವ್ರಣ : "ಅರುಃ, ವ್ರಣಃ —ಈ ೨ ಪುಣ್ (ಹುಣ್ಣು)" (ಹಲಾಯು. ೦೦೯-೯); ಒಳ್ಳನುರಿವ ಪುಣ್ಗಳೊಳ್ ಕ್ಷಾರವಾರಿಗಳನೆಱೆದೊರಸಿ ಕರ್ಚುವರುಂ (ಆಂಧ್ರ. ೩-೯೩ ವ); ಪುಣ್ಣೊಳ್ ನೊಣಂ ಪುಷ್ಪದೊಳ್ ಪ್ರಣಯಂ ಮಾಟ್ಪುದು ತುಂಬಿ (ಸೂಕ್ತಿಸು. ೧-೬೩) ; ಮನದೊಳ್ ದಯವಿಲ್ಲದವನ ಕಣ್ಣೀಂ ಪುಣ್ಣೀಂ (ಕವಿಮ. ೬೯ ಪ್ರಯೋ). ೨. ಗಾಯಂ ; ಏರುಂ ; ಕ್ಷತ : ಶಾಗದೆ ಪಲ್ಗಳ ತುದಿ ಪು[ಶಾಕಾಂ.ಹು]ಣ್ಣಾಗದೆ ನಡುಕಂದದೊಳಗು ನೋಯದೆ ಸವಿಗಿಂಬಾಗಿ ರತಿರಾಗದುರುಳಿವೊಲಾಗೆ ಕರಂ ಬೇಗ ಬಾಯ್ಗಳಂ ಚುಂಬಿಸಿದರ್ (ಕಾವ್ಯಸಾ. ೬೭೭ ಕೂರ್ಧ್ರಕ); ಚತುರ್ಬಲಂಗಳ ಮೊಯ್ಗಳೊಳ್ ಬಗಿದಸುಂಗೊಳೆ ಸುಯ್ದು ಕೆತ್ತುವ ಪುಣ್ಣ ಬಾಯ್ಗಳೆ ಬೀರಮಂ ಪೊಗಟ್ವ ಬಾಯ್ಗಳೆನಿಪ್ಪುವು (ಕಾವ್ಯಾವ. ೩೩). **ಪುಂಡು₂** : ೩. (ಆಲಂ) ವ್ಯರ್ಥ ; ವಿಫಲ : ಪದುಳಿದನಲ್ಲದನಂ ಕಲಿಸಿದೊಡಂ ತಿಳಿಪಿದೊಡಮೇಂ ನಿಲಲ್ಕಱು ಗುಮೆ ಚಿತ್ರದೊಳಪ್ಪನ ವಚನಮದು ಪುಸಿದೊಡಂ ಪುಂಡಾಗಲೆಂತು ಮಱುಯದ ತೆಱದಿಂ (ಸಮತ. ೦೦-೦೩೯). **ಪುಣ್ಣು** : ೧. ಪುಣ್ಣನಂತೆ ನೋವಂ ಮಾಟ್ಪುದು (ರಮೂರ್ಮ್ಮ. ೯-೦೬೩). ೨. ಕಾಸಿದೆಣ್ಣೆಯ ಪೊಯಿಲ್ಗೆ ಪಟುಭಟರ ಮೈದೊಗಲ್ ಕೀಸಿದುದು ಮಳಲ ಮಳೆಯಿಂದೆ ಪುಣ್ಣಾದುವು (ಜಂಕ್ರಿ. ೯೨-೩೯). **ಹುಣ್** : ೧. "ವ್ರಣಂ–ಹುಣ್" (ಕಾಶಕ್ಯ. ೨೯೦). ೨. ಸುಱುದು ಕೆತ್ತುವ ಹುಣ್ಬೆರಸಾಡುವಟ್ಟೆಯಿಂ ಚರಮೊಸೆಯಲ್ಕೆ (ಎಕ. XVIII, ೨೦೩-೩೩;1162). **ಹುಣ್ಣು** : ೧. "ವ್ರಣಃ, ಈರ್ಮಂ, ಅರುಃ—ಈ ೩ ಹುಣ್ಣು" (ವಾಕಾಶ. ೩೨೦); ಅಂಬುಳುವಾದಡೆ ಷಣ್ಮುಖನೆಂಬರು ಸೀವಳಿಗೆಯಾಗೆ ಸಲೆ ಮಾರಿಯ ಹುಣ್ಣೆಂಬರು ತುಱುಯಾದಡೆ ಘಣಿಯೆಂಬರ್ ಮತಿಹೀನಜನರದೇನಂ ಮಾಡರ್ (ಸಮಕ. ೯-೨೬); ಬೆಂದ ಹುಣ್ಣ ಕಂಬಿಯಲ್ಲಿ ಕೀಸುವರೆ (ಬಸವ. ೩೦೬); ಬೆಂದ ಹುಣ್ಣಲಿ ಸಾಸಿವೆಯ ಬಳಿಯದಿರು ಸಂಜಯ (ಕುಮ್ಮಾದ್ರೋ. ೦-೮); ಅಂಗೈ ಹುಣ್ಣಿಗೆ ಕನ್ನಡಿ ಯಾಕೆ ? (ಗಾದೆ).

[ದೇ. ॥ ತಮಿ. ಮಲ. ಕೋತ. ಪುಣ್ ; ತುಳು. ಪುಡಿ ; ಕೊಡ. ಪುಣ್ಣ್. ಪುಣ್ಣೀ ; ತೆಲು. ಪುಂಡು ; ಕೋಲಾ. ನಾಯ್ಕಿ. ಪುನ್ ; ಮಾಲ್ತೊ. ಪುನು]

**ಪುಣಂಬು** 'ಪುಳುಂಬು' ನೋ.

**ಪುಣಗು** 'ಪುಣುಗು' ನೋ.

**ಪುಣಜ** 'ಪುಂಚ್ಚೆ' ನೋ.

**ಪುಣಜಿ** 'ಪುಂಚ್ಚೆ' ನೋ.

**ಪುಣಪುಣನೆ** (ಅ). ಪುಣಪುಣ ಎಂದು : ಅಳಿಲು ಪುಣಪುಣನೆ ಮರ ಹತ್ತಿ ಬಾದಾಮಿ ಮತ್ತು ಖರ್ಜೂರಗಳನ್ನೆಲ್ಲ ಪಟಪಟ ಉದುರಿಸಿತು (ಕುಟ್ಯಕ. ೨೯).

[ ಪುಣಪುಣ₀ + –ಅನೆ₁ ]

**ಪುಣಸುಗ** (ನಾ). ಒಬ್ಬಾತನ ಹೆಸರು : ಅವಚವಾಡಿಯ ಪೆರ್ಮ್ಮಡಿ ಗಾವುಣ್ಡನ ಲಕೊಳಾದಿತ್ಯನ ಮೊಳೆಯ ಪುಣಸುಗ ಸತ್ತಂ (ಎಕ. IV. ಕಾಮರಾ. ೦೩೯-೦೦; 893). [ ? ]

**ಪುಣಸೆ** 'ಪುಳಿಸೆ' ನೋ.

**ಪುಣಿ**, ಹುಣಿ (ನಾ). (ಕರಾ) ಹೊಲಗದ್ದೆಗಳ ಬದು; ಒಡ್ಡು; ಏರಿ : ಜಾರಪ್ಪ, ಆ ದೃಶ್ಯವನ್ನು ನೋಡಲಾರದೆ ಗದ್ದೆಯ ಪುಣಿಯ ಮೇಲೆ ಕುಸಿದು ಬಿದ್ದನು (ಕರಾವ. ೭೮) ; ಮೇಲಾಳುಗಳು ಒಬ್ಬೊಬ್ಬರಾಗಿ ಬಂದು ಗದ್ದೆಯ ಪುಣಿಯಲ್ಲಿ ನಿಂತರು (ಹುಂಚಾ. ೨೯). **ಹುಣಿ** : ನೀನು ಗಳಿಸುವುದು ಎಲ್ಲಿಂದ ? ಬಂದರಿನಲ್ಲಿ ಹೊರೆ ಹೊತ್ತೋ ? ಗದ್ದೆಯ ಹುಣಿ (ಏರಿ) ಕಡಿದೋ ? (ಸೋಲು. ೫೭) ; ಕೆಲವರು ಗದ್ದೆಯ ಹುಣಿಯಲ್ಲಿ, ಕೆಸರಲ್ಲಿ ಹೊರಳಾಡುತ್ತಲಿರುವರು (ತಗುಬ. ೭). [ ← ತುಳು. ಪುಣಿ ]

**ಪುಣಿಚು** 'ಪುಳಿಂಚು' ನೋ.

**ಪುಣಿಚೇಟು** 'ಪುಳಿಚೇಟು' ನೋ.

**ಪುಣಿಜ** (ನಾ). ಒಂದು ಬಗೆಯ ಕೀಟ : 'ಪಟ್ಟಪುಣಿಜ' ಪರಾ.

[ ದೇ. ॥ ತೆಲು. ಪುಣುಜು. ಪುಣುದು ]

**ಪುಣಿಜೆ** 'ಪುಳಿಂಚೆ' ನೋ.

**ಪುಣಿಲ್** 'ಪುಱುಲ್₂' ನೋ.

**ಪುಣಿವುಲ್** (ನಾ). ಒಂದು ಬಗೆಯ ಪಕ್ಷಿ : ಪರ್ದು ಮರವಂ ಮರ ಕುಟಿಗಂ ಪುಱುಲೆ ಬುಱುಗಿ ಹಸುಬಂ ಪುಣಿವುಲ್ (ಸೂಕ್ತಿಸು. ೩-೧೯೩). [?]

**ಪುಣಿಸೂರ್** (ನಾ). ಒಂದು ಊರಿನ ಹೆಸರು : ಪುಣಿಸೂರ್ಪೊಲನೆಲ್ಲು ಪಾಣ್ಡಿಯುಮವಳೆವದು ಸರ್ವಪರಿಹಾರ (ಮೈಆರ; ೧೯೩೦. ೩೬-೭; 8ನೆಯ ಶ).

[ ಪುಣಿಸೆ (< ಪುಳಿಸೆ ) + ಊರ್ ]

**ಪುಣಿಸೆ** 'ಪುಳಿಸೆ' ನೋ.

**ಪುಣಿಸೆಯಮ್ಮ** (ನಾ). ಒಬ್ಬಾತನ ಹೆಸರು : ಸತ್ತಿಮಂಗಲದ ಸಾಮಿಯ ಸಮ್ಮನ್ದಂ ಮಾರಯ್ಯನುಂ ಪುಣಿಸೆಯಮ್ಮನುವಿಟ್ಟು ತಮ್ಮಲೋಪಾದಿ ಗೊಟ್ಟರ್ (ಎಕ. IX. ಹೊಸಕೋ. ೦೦೦-೭;997).

[ ಪುಣಿಸೆ (<ಪುಳಿಸೆ) + ಅಮ್ಮ₁ ]

**ಪುಣಿಸೆವಣ್**, ಹುಣಸೆಹಣ್ಣು, ಹುಣಿಸೆವಣ್ಣು, ಹುಣಿಸೆಹಣ್ಣು (ನಾ). ೧. ಹುಣಿಸೆಮರದ ಹಣ್ಣು ; ತಿಂತ್ರಿಣೀಫಲ ; ಅಡುಗೆಯಲ್ಲಿ ಇದನ್ನು ವಿಶೇಷವಾಗಿ ಬಳಸುತ್ತಾರೆ : ಜೇನ್ಪುಣಿಸೆವಣ್ಪೊಸನಾರ್ . . . ಪೀಲಿ ಯೆಂಬಿವಂ ತುಂಬಿದ ಕಂಬಿಯಂ ತಳೆದದೇಂ ತಳರ್ದತ್ತೊ ಪುಳಿಂದಸಂಕುಳಂ (ರಾಜಶೇ. ೫-೦೦೯). **ಹುಣಸೆಹಣ್ಣು** : ೧. ಈಗ ಹುಣಸೆಹಣ್ಣು ತುಟ್ಟಿಯಾಗಿದೆ (ರೂಢಿ). **ಹುಣಿಸೆವಣ್ಣು** : ೧. ಒಂದು ಮಾನೆಣ್ಣೆಯೊಳು ಹುಣಿಸೆವಣ್ಣಿನ ಹುಳಿಯನೊಂದಿಸಿಯದನುವೊಲೆಯೊಳಿಂಗುಸಹಿತಂ ಕಾಸಿ (ಸೂಶಾ. ೩-೦೯). **ಹುಣಿಸೆಹಣ್ಣು** : ೧. ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದ ಹಾಗೆ (ಗಾದೆ). ೨. (ಆಲಂ) ಗರ್ವ ; ಸೊಕ್ಕು : ಅವನ ತಲೆಯಲ್ಲಿ ತುಂಬಿದ್ದ ಹುಣಿಸೆ ಹಣ್ಣು ಸ್ವಲ್ಪವೇ ? (ಸ್ವಕ್ಕಹೂ. ೧೭೮). [ಪುಣಿಸೆ (<ಪುಳಿಸೆ) + ಪಣ್₃]

**ಪುಣುಂಬು** 'ಪುಳುಂಬು' ನೋ.

**ಪುಣುಗು**, ಪುಣಗು, ಪುನಗು, ಪುನುಗು, ಪುಳಗು, ಪುಳುಗು (ನಾ). ಒಂದು ಬಗೆಯ ಕಾಡುಬೆಕ್ಕಿನ ಗಂದಗ್ರಂಥಿಯಿಂದ ಪಡೆಯುವ ಸಂಗಂಧದ್ರವ್ಯ ; ಜವಾದಿ : "ಪುಣುಗು ಮಾರ್ಜಾಲಿಯೆನೆ ಜವಾದಿಯೆನಿಕ್ಕು" (ಮಂಗರಾ. ೯೯-೨೨); ಪುರದೊಳಗೆ ಉಳ್ಳ ಪುಣುಗೆಲ್ಲವಂ

ತರಿಸುತಂ ಪುರಹರಗೆ ಸಹಸ್ರಾಭಿಷೇಕಮಂ ಮಾಡುತಂ (ಶಿವತಂ. ೨೫೬-೧೦); ಕರ್ಪೂರ ಕಸ್ತೂರಿ ಜೀರ್ಣ ಜವಾಜಿ ಪುಣುಗು ಬಹುತೈಲ ಸೋಜಿಗವಡೆದ ಸುಗಂಧದಂಗಡಿಗಳು [ರಾಜಿಸುತಿರ್ದುವಿಕ್ಕೆಲದಿ] (ಮೋಹತ. ೩-೧೮). **ಪುಣಾಗು :** ನಾಸಿಕೇಂದ್ರಿಯ ಸಿನ್ನ ತನುಗಂಧಕೆಳಸಿ ಮೇಲೆ ಸೂಸಿದ ಪುಣಾಗು ಕಸ್ತೂರಿಯ ವಾಸವಿಡಿಯದು (ಕಂವಿ. ೯-೧೮೨); ಮೆಯ್ಯ ಮೇಲೆಯಾಲಿಯ ಆಕಾರದ್ದು ಗಂಟುಗಳು ಯೋಳುವವು. ವೆೃಯಲ್ಲಿ ಪುಣಾಗಿನ ಗಂಧವು ವುಂಟಾಗಿಯಿಹುದು (ಪಿಕತ. ೨೦ ೨). **ಪುನಗು :** ಪಿನುತಕತ್ತುರಿ ಸಾದಿಸಿಂದ ತಿದ್ದಿದ ಪಟ್ಟೆ ಪುನಗಿನಗ್ಗಣಿ ಚಳಿಗಳಂ ಮಿನುಗುತಿಹ . . . ರಂಗವಲ್ಲಿಯಿಂ (ಶಶಮೋ. ೧೭ ೫೪); ಪುನಗಿದ್ದರೆ ಪಿತ್ತಲಾಗಾದರೂ ಹಚ್ಚಿಕೊಳ್ಳಬಹುದು (ಹುಟ್ಟಿಹ. ೦೪೨). **ಪುನುಗು :** ಕಸ್ತೂರಿ. ಪುನುಗು . . . ಪನ್ನೀರು ಮುಂತಾದ ಸಹಜ ಸುಗಂಧದ್ರವ್ಯಗಳಲ್ಲಿ ಮುಳುಗಿ ತೇಲಿದವರು ಆ ಕಾಲದವರು (ಸಾಹಿಚ. ೫೨); ಹಚ್ಚಿಕೊಳ್ಳಿ ಪರಿಮಳಗಳಂ ಗಂಧ ಅತ್ತರು ಪುನುಗು ಕಸ್ತೂರಿ ಇತ್ಯಾದಿ ತರತರದ ಭೋಗವಂ! (ಕೋಗಿಲೆ. ೦೮ ೨). **ಪುಳಗು :** 'ಪುಳಗುಕಾಪು' ಪರಾ. **ಪುಳುಗು :** 'ಪುಳುಗುಗಾಪು' ಪರಾ.

**ಪುಣಾಗಿನ ಚಟ್ಟು, ಪುಣಾಗಿನ ಚಿಟ್ಟು** ಪುಣಾಗಿನ ಲೇಪನದ್ರವ್ಯ : ಪುಣಾಗಿನ ಚಟ್ಟಿನ ಗುಣ . . . ತ್ರಿವಿಧ ವಿಷರೋಗಗಳೇ ಮೊದಲಾದವು ಗಳನ್ನು ಹೋಗಲಾಡಿಸುವುದರಲ್ಲಿ ಬಹಳ ಪರಿಶ್ರಮವುಳ್ಳದ್ದು ಪುಣಾಗು (ಸಕವ್ಯ ೪೦) ; ಕತ್ತುರಿಯೆೀಣ ಪುಣಾಗಿನ ಚಿಟ್ಟು ಹರಿಣಗೋರೋಜನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಮೋಹತ. ೧೯ ೬೫). **ಪುಣಾಗಿನ ಚೆಕ್ಕು**=ಪುಣಾಗನ್ನು ಒದಗಿಸುವ ಒಂದು ಬಗೆಯ ಚೆಕ್ಕು : ಕಸ್ತೂರಿಚೆಕ್ಕು : "ಗಂಧಮಾರ್ಜಾಲಃ—ಕಸ್ತೂರಿಚೆಕ್ಕು, ಪುಣಾಗಿನ ಚೆಕ್ಕು" (ಓಸಂ. ೪೬).

[ ದೇ.॥ ತಮಿ. ಪುನುಕು. ಪುಟುಕು ; ಮಲ. ಪುಟುಕು. ಪುಟು : ತುಳು. ಪುಣಾಂಗು, ಪುಣಾಗು, ಪುನುಗು ; ತೆಲು. ಪುನುಂಗು ]

**ಪುಣುಗುಕಾಪು,** ಪುಳಗುಕಾಪು, ಪುಳುಗುಗಾಪು (ನಾ). (ದೇವರಿಗೆ ಮಾಡುವ) ಪುಣಾಗಿನ ಲೇಪನ : ತಿರುನಕ್ಷತ್ರ ೧ಳಕ್ಕೆ ಸಲ್ಲುವ ಗ ೬೦ ಶ್ರೀ ಏಕಾದಶಿಯ ಪುಣುಗುಕಾಪು ವರುಷವೊಂದಕೆ ೧೨೭ (ಎಕ. XIV. ಶ್ರೀರಂಗ. ೨೫೭-೬; 1564). **ಪುಳಗುಕಾಪು :** ಶ್ರೀಕಾಳಹಸ್ತಿಯೀಶ್ವರದೇವರಿಗೆ ಪುಳಗುಕಾಪುಗೂ . . . ಸಮರ್ಪಿಸ್ತ (ಸೌಇಇ. IX-ii. ೫೫೦-೩; 1562). **ಪುಳುಗುಗಾಪು :** ಪುಳುಗುಗಾಪಿಗೆ ತಿಂಗಳುತಿಂಗಳಿಗೆ ಮೃಗಶಿರಾನಕ್ಷತ್ರದಲ್ಲಿ ಅಭಿಷೇಕಕ್ಕೆ ಜೇನುತುಪ್ಪ ಪಡಿ ॥ (ಸೌಇಇ. IX-ii. ೫೫೦-೬; 1562).

[ ಪುಣುಗು + ಕಾಪು ]

**ಪುಣುಜಿ** 'ಪುಂಚೈ' ನೋ.

**ಪುಣುಬು** 'ಪುಳುಂಬು' ನೋ.

**ಪುಣುಶೆಪಡಿ** (ನಾ). ಒಂದು ಸ್ಥಳದ ಹೆಸರು : ಅಸ್ತೆ ಬನ್ನ ಕೊಟ್ಟಲಿ ವಳ್ಳದ ಅಲಕಿಜುಕೆಯ . . . ಕಗ್ಗಲೊಟ್ಟಿಯ ಪುಣುಶೆಪಡಿಯ ಪೊರಪಡಿಯ ಬಳಿಪುಣುಶೆಯ . . . ಬಂಡಿತ್ತು (ಎಕ. XVI, ತಿಪಟೂ. ೦೪೦-೬೨; 900). [?]

**ಪುಣುಸಿ** 'ಪುಳಿಸೆ' ನೋ.

**ಪುಣುಸೆ** 'ಪುಳಿಸೆ' ನೋ.

**ಪುಣುಸೆಪಟ್ಟಿ** (ನಾ). ಒಂದು ಊರಿನ ಹೆಸರು : ಪುಣುಸೆಪಟ್ಟಿಸಹಿತಂ ಪಲ್ಲವತಟಾಕಮಿತಿ ಗ್ರಾಮಸ್ಯ ನಾಮಧೇಯಂ ಕೃತ್ವಾ . . . ಉದಕ ಪೂರ್ವ್ವನ್ದತ್ತಃ (ಎಕ. III, ಮುಂಡ್ಯ. ೦೦೩-೩೬; 713).

[ಪುಣುಸೆ (<ಪುಳಿಸೆ) + ಪಟ್ಟಿ$_1$]

**ಪುಣ್ಗಲೆ** (ನಾ). ಗಾಯದ ಗುರುತು : ಬಿರುದಿನ ಬೀರದ ಪೆಸರಕ್ಕರಮುಂ ಪರಸ್ಪರ ಮೆಯ್ಯ ಪುಣ್ಗಲೆಗಳ್ ಪೋಲ್ತಿರೆ ತೋಳ್ವಲಕ್ಕೆ ಪಡೆದಂ ನರಶಾಸನಮಂ ನರೇಂದ್ರಚೂಡಾರತ್ನಂ (ಮಲ್ಲಿಪು. ೩-೦೪) ; ಕವಿಲ ಬಿಸಿಲ್ಗಳೇಂ ಮಂಜಸಲಾತ್ಯರ್ಣವೊ ತೀವ್ರಕರಾಭಿಘಾತದಿಂದವನಿಯ ದೇದ ಪುಣ್ಗಲೆಗಳೊಯ್ಯನೆ ಕೆಂಗಲೆಗಟ್ಟಿದಂದದಮಂ (ಅನಂಪು. ೬-೩೦).

[ ಪುಣ್ + ಕಲೆ$_2$ ]

**ಪುಣ್ಣು** (ಕ್ರಿ). ಗಾಯಗೊಳಿಸು : ಜಾಣ್ಣುದುರನೊದವಿಸುತ್ತಿರೆ ನಾಣ್ಣು ಲಮಂ ಪಡೆಯ ನೆಗಟ್ಟ ಗಂಡರನೆ ಕರಂ ಪುಣ್ಣುವುವುಟುದವರಂ ಕಡೆ ಗಣ್ಣುವುವು (ಬಂಪಂ. ೧೧-೪೫). [ ಪುಣ್ + – ಚು$_1$ ]

**ಪುಣ್ಣಮಿ** 'ಪುಣ್ಣಮೆ' ನೋ.

**ಪುಣ್ಣಮಿವೆಜ್** 'ಪುಣ್ಣಮೆವೆಜ್' ನೋ.

**ಪುಣ್ಣಮೆ,** ಪುಣ್ಣಮಿ. ಪುಣ್ಣವೆ, ಪುಣ್ಣೆಮೆ, ಪುಣ್ಣೆವೆ. ಪುಣ್ಣುಮೆ, ಪುಣ್ಣುವೆ. ಪುಣ್ಯಮೆ. ಪುನ್ನಮಿ, ಪೂರ್ಣಮಿ. ಹುಣಮೆ. ಹುಣವೆ, ಹುಣುಮೆ. ಹುಣ್ಣಮಿ. ಹುಣ್ಣಮೆ. ಹುಣ್ಣವೆ. ಹುಣ್ಣೆಮೆ. ಹುಣ್ಣೆವೆ. ಹುಣ್ಣುಮೆ. ಹುಣ್ಣುವೆ. ಹೂಣ್ಣವೆ (ನಾ). **ಪೂರ್ಣ** ಚಂದ್ರನು ಉದಯವಾಗುವ ದಿವಸ : ಪೌರ್ಣಮೆ : ಪ್ರಥಮ ವಿಜಯಸಮ್ವತ್ಸರಂ ಕಾರ್ತ್ತಿಗೆ ಪುಣ್ಣಮೆ ಅಸ್ದು (ಎಕ. III, ತಿರುಮ. ೦-೪ ; ೯೨೦) ; ಕಾರ್ತಿಕದ ಪುಣ್ಣಮೆಯ ಮೃಗಶಿರನಕ್ಷತ್ರಮುಂ ಸೌಮ್ಯಯೋಗ ಮುಮಾಗೆ (ಜಾಪುಂಪು. ೯೮) ; ಪುಣ್ಣಮೆಯಾದುದು ಮುಖಚಂದ್ರ ಮಂಡಲ (ಮೋಹತ. ೦೩-೨೫). **ಪುಣ್ಣಮಿ :** ಸುಕುಮಾರಸ್ವಾಮಿಯುಂ . . . ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದೆ ಲುಂದಿರ್ದಂ (ವಡ್ಡಾರಾ. ೨೫-೬) ; ಹೆಪ್ಪುರ್ಗ್ಗಿಯ ಪುಣ್ಣಮಿ ಸೋಮ ವಾರದನ್ದಿನ ಶುಭಲಗ್ನದೊಳ್ (ಇಇ. X, ೨೫೨-೩೯ : 1108) ; ಪಾಡಿವದೆಳೆವೆಜ್ ಪುಣ್ಣಮಿವರೆಗು ರೂಡಿಸಿ . . . ಬಳೆದು ಕುವಲಯಾನಂದ ನಂದಮಾಸೀಪಂದದೊಳು ನಾಡೆಜ್ಯಾನ ಸುಕುಮಾರಂ . . . ವಿರಾಜಿಸಿದಂ (ಜಯಕಾ. ೨.೬೫). **ಪುಣ್ಣವೆ :** ರಮಣಿಯ ಮುಖಕ್ಕೆ ಮಣಿಮುಕುರ ಮನೊಪ್ಪಿರೆ ತೋರ್ಪ ದಿವಿಜವಧುಸಮ್ಮುಖಮಂ ಹಿಮಕಿರಣಂಗಂ ರವಿಗಂ ಸಮನಿಪ ಪುಣ್ಣವೆಯ ಸಂಜೆವೆಣ್ಣಂ ಪೋಲ್ತಳ್ (ಚಂದ್ರಪ್ರ. ೧೦-೦೩೪) ; ಸಸಿಯಂ ಪುಣ್ಣವೆ ಪೊಂಗುವ ಪೊಸನೇಸಜನಾಂತು ಮೂಡದೆಸೆ ಮಸಗುವ ಪೊಲ್ ಬಸಿರ್ವಾಗಿ ಬಣ್ಣವೆಜಾವ ಬಿಸಜಾಕ್ಷನಿನಮೃತಮಾಂಬೆ ಪೆಂಪಿಡಿ ದೆಸೆದಳ್ (ಶಕಪ. ೪-೫). **ಪುಣ್ಣೆಮೆ :** ಕೈಳಾಸಕ್ಕೆ ಬಂದು ಸಿದ್ಧಶಿಖರತಳ ದೊಳು ಪೌಷ್ಯಮಾಸದ ಪುಣ್ಣೆಮೆ [ಪಾಠಾಂ. ಣ್ಣಮಿ]ಯೊಳು ಅಪಗತವಿಹರಣ ನಾಗಿರ್ದು (ಜಾಪುಂಪು. ೮೩) : ಪುಣ್ಣೆಮೆಯಂತಿರೆ ಶಶಿಮುಖಿ ನಡೆತಂದ ಳೊರ್ವಳ್ (ಧರ್ಮಾಮ್ಯ. ೭-೦೯೧). **ಪುಣ್ಣೆವೆ :** ಆಶ್ವಯುಜದ ಪುಣ್ಣೆವೆ ಸೋಮಗ್ರಹಣದಂದು (ಎಇ. XVI, ೬೦-೯ ; 1074) ; ದಿನದಿನದೊಳ್ವ ರ್ಧಿಸ್ತಿಹ ಜನಪ ಶ್ರೀಕೃಷ್ಣವಿಭುವ ಜಸಮುಸದಂ ಕಂಡನುಸರಿಸದ ಚಿಂತೆ ಯೊಳೇ ಮಿನುಗುವ ಪುಣ್ಣೆವೆಯ ಬಿದು ಕೃಶತ್ವಮನಾಂಪಂ (ನರಕ. ೩೦-೫೬). **ಪುಣ್ಣುಮೆ:** ಕಾರ್ತಿಕದ ಪುಣ್ಣುಮೆ[ಪಾಠಾಂ. ಣ್ಣಮಿ]ಯೊಳಾ ನರುಪವರುಷಕ್ಕೆ ವರ್ತಿಸುವ ಕೌಮುದೀಪರ್ವ ಬರಲು (ಸಮ್ಯಕೌ. ೦-೩೨). **ಪುಣ್ಣುವೆ :** ಪುಣ್ಣುವೆಯ ಸಂಪೂರ್ಣ ಜೊನ್ನೊಡಲನುದಿಸಿ ಸಂಪನ್ನತೆಯೊಳು ಕ್ಷೀರಶರಧಿ ಪರ್ದೆರೆ ಪಚ್ಚಿ ಸಂತೋಷಿಸುವೊಲು (ಶಶಮೋ. ೦-೩). **ಪುಣ್ಯಮೆ :** ಪೌಷ್ಯ ಸುದ್ಧ ಪುಣ್ಯಮೆ ಸೋಮವಾರ ಸೋಮಗ್ರಹಣ ಸಂಕ್ರಾಂತಿ ನಿಮಿತ್ಯದಂದು (ಕಇಇ. ೩೩-೪೬-೦೯ : 1097). **ಪುನ್ನಮಿ :** ಪುಷ್ಯಶುದ್ಧ ಪುನ್ನಮಿ ಸೋಮವಾರ ಪುತ್ತರಾಯಣಸಂಕ್ರಮಣದಂದು (ಶಾಸಪ.೩೩-೩೦;?). **ಪೂರ್ಣಮಿ :** ವೈಶಾಖಪೂರ್ಣಮಿಗೆ ಜನಿಸಿ ಮೇಣೊಂದಿಗ್ಗದೆ ವೈಶಾಖ ಪೂರ್ಣಮಿಯೊಳಿರುಳು ಪರಿನಿರ್ವಾಣ ಹೊಂದುವೆನ್ನಾತನನ್ನಿರುಳಿದ್ದ ಕೊನೆಗೊಮ್ಮೆ ಕಣ್ದೆರೆವೆ ಕಾಂಬೆನಿಂದು (ವ್ಯಶಾಬ. ೭೯-೪೨೫). **ಹುಣಮೆ :** (೪).

**ಹುಣವೆ :** "ರಾಕಾ=ಹುಣವೆ" (ಶಾಕಸ್ಯ. ೨೬೩). **ಹುಣುವೆ :** ಮಗನೆ ಕೇಳ್ ಚೈತ್ರಮಾಸದ ಹುಣುಮೆಗೆಲ್ಲರನ್ನೊಡಗೊಂಡು ಬಹುದು ಗಜಪುರಿಗೆ (ಕುರಂಗ. ೬೨-೪೩). **ಹುಣ್ಣಮಿ :** ಪೊಳೆವ ಪೊಂಗುಂಟೆಗಳಿಂ ದೊಪ್ಪುವಾನೆ ಲಂಗೊಳಿಸುತಿರ್ದುದು ಹುಣ್ಣಮಿಯು ಮುಳುಗುವ ನೇಸಱಿಂ ಮೂಡುವ ತಿಂಗಳಿಂ ಚೆಲುವನಾಂತಾಗಸದಂತೆ (ಕಂಶ್ರಕಾಂ. ೨೦-೩೩). **ಹುಣ್ಣಮೆ :** ಗಗನದೊಳಗೆ ಹುಣ್ಣಮೆ ಹೋದ ಮಱುದಿನ ಪಗಲೆಸೆದಿರ ಲಾತನೊಡಲ ಮೃಗಮೊಲಗುಡು ಮೊಗ್ಗಿಸುವೊಂದಂದದಿ ಮೊಗವೆತ್ತಿ ಗಳಹುತಿಯ್ದುದಾವು (ಮೋಹತ. ೧೪-೦೩) ; ಹುಣ್ಣಮೆ[ಪಾಠಾಂ. ವೆ]ಯ ಶಶಿಯಂತೆ ಚೆಲುಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಶಾಶ್ವಶಾ. ೦೮-೯೭). **ಹುಣ್ಣವೆ :** ಹು[ಪಾಠಾಂ. ಪು]ಣ್ಣವೆಯಲ್ಲಿ ಚಂದ್ರ ಮುಖಿಯರ್ ನೆಲೆಮಾಡದ ಚೂಳಿಕಾಗ್ರದೊಳ್ ತಣ್ಣೆಲರಾಸೆಯಿಂದಿರೆ ನಿಶೀಥಿನಿಯೊಳ್ ಖಳರಾಹು ಬಂದು . . . ತನ್ಮುಖೇಂದುಗಳನೀಕ್ಷಿಸಿ ಶಂಕೆಯನೆಯ್ದಿದಂ ಕ್ಷಣಂ (ಪಾರಿಳ. ೮-೩೪); ಮುನ್ನ ಸಂರತೆತ್ತೀಸಪ್ಪಂದಮ ಹುಣ್ಣವೆಯು ಪ್ರತಿಮಾಸಪೂಜೆಗೆ ಭಿನ್ನವಿಲ್ಲದೆ ಲೋಕ ಹೋಗಲು ದೈತ್ಯ ನೊಬ್ಬವನು ಬೆನ್ನ ಬಂದಪನು (ಕಂಶಚ. ೧೩-೪೪); ಸಮೆಯದ ಕರ್ಗತ್ತಲೆಯು ತುಂಬಿದಳು ಹುಣ್ಣವೆಯು ಬೆಳ್ದಿಂಗಳ ಕಿಡಿಸಿ (ಮೋಹತ. ೨೯-೮). **ಹುಣ್ಣಿಮೆ :** ಎಸೆದಿರೆ ನಂದೀಶ್ವರವುಂ ಬಸಂತದೊಳ್ ಮಾಡಿ ಬಟೀಕ ಹುಣ್ಣಿಮೆ[ಪಾಠಾಂ. ಪುಣ್ಣಮಿ, ಪೌರ್ಣಮಿ]ಯೊಳ್ ದೇವಸಮಾಜ ಮೋಕಳಿಯನಾಡೆ ಸಿಂಪಿಣಿಯುದೊದು ಮಾಡುವರ್ ತದ್ದಿನದೊಳ್ (ಸಪುಕ. ೨-೪೩); ನುಣ್ಮುತ್ತಿನಕ್ಷತೆಯ ತಿಲಕ ಹುಣ್ಣಿಮೆಯ ಸಂಧ್ಯಾಲಕ್ಷ್ಮಿ ಚಂದ್ರ ಮಂಡಲ ಸೂರ್ಯಮಂಡಲವನು ತಳೆದಂತೆ (ಸೌಂದಚ. ೭-೨೩). **ಹುಣ್ಣಿವೆ :** ಚೈತ್ರಶುದ್ಧಹುಣ್ಣಿವೆ ಹನುಮಂತದೇವರ ಜನ್ಮದಿವಸ (ಪಾಹಕ್ಕ. ೬೬). **ಹುಣ್ಣುಮೆ :** "ಪೂರ್ಣಿಮಾ–ಹುಣ್ಣುಮೆ" (ಶಾಕಸ್ಯ. ೩೩); ಸೂರ್ಯನು ತನ್ನ ಸುಷುಮ್ನೆಯೆಂಬ ಕಿರಣಸೂತ್ರದಿಂದಾ ಚಂದ್ರನಂ ಶುಕ್ಲ ಪಕ್ಷದ ಪಾಡ್ಯಂ ಮೊದಲು ಹುಣ್ಣುಮೆಯು ಪರ್ಯಂತರಂ ದಿನದಿನಕ್ಕೆ ವರ್ಧಿಸುತ್ತಿರ್ಪಂ (ಶಿವೇಶ. ೨೧೪); ಕಾಮನ ಹುಣ್ಣುಮೆಗೆ ಕಲಕುನೀರು (ಗಾದೆ). **ಹುಣ್ಣುವೆ :** ಹಾಲಂತೆ ಹೞಹೞಚನೆ ಹೊಳೆವ ಹುಣ್ಣುವೆ ಪಾಠಾಂ. ಣ್ಣಮೆ]ಯ ತಿಂಗಳ ಬೆಳಗಿನೊಳ್ ... ನಡೆತಂದರಾ ಮಹೀವಲ್ಲಭ ನುಮಾ ಸಚಿವನು (ಸಪ್ತಶೀ. ೨-೧೦೨) ; ಹುಣ್ಣುವೆ ಅಮಾವಾಸಿಯಲ್ಲಿ ಯೆರಡಷ್ಟಮಿಗಳಲ್ಲಿ ಪಾಡ್ಯದಲ್ಲಿ ಸಾಧನೆಯು ... ಮಾಡಲು ತಕ್ಕಂಥಾದ್ದಲ್ಲ (ಐಶ್ವಟೀ. ೩-೬೦). **ಹೂಣ್ಣವೆ :** ರಕ್ತಾಕ್ಷಿಸಂವಛರದ ಪ್ರಥಮ ಷಡ ಶ್ರಾವಣದ ಹೂಣ್ಣವೆ ಸೋಮಗ್ರಹಣ ವ × ಹರಿಹರದೇವರ × × × ವಲು (ಶಾಇಪ. IX-i, ೨೬೪-೩ ; 1144).

ಹುಣ್ಣಮೆಯಾಳ್ದ=ಪೌರ್ಣಮೆಯ ಅಧಿಪತಿ ; ಚಂದ್ರ : ಹುಣ್ಣಮೆ ಯಾಳ್ದ ತನ್ನೆಸಕವನವರೆಸಳ್ಗಣ್ಣೊಳು ಸಾರ್ಚಿದಂತಿಹುದು (ಮೋಹತ. ೦೪ ೬೨). [< ಸಂ. ಪೂರ್ಣಮಾ, ಪೂರ್ಣಿಮಾ]

**ಪುಣ್ಣಮೆವೆಱ್[3].** ಪುಣ್ಣಮಿವೆಱ್[3] (ನಾ). ಹುಣ್ಣಿಮೆಯ ಚಂದ್ರ ; ಪೂರ್ಣಚಂದ್ರ : ತಳತ್ತಳಿಸುವ ಪುಣ್ಣಮೆವೆಱ್ವೊಗದ ಮಿಸುಪ ಚೆನ್ನೇಸಱಿದಿರ ಕುಂದಣದಾಮರೆಮೊಗದ . . . ಕಡುಮುಗುದೆಯರಾ ಶುಕವಚನೆ ಸುಲೋಚನೆಯೊಡನೊಪ್ಪಿಯ್ದುದರು (ಜಯನೃ. ೩-೩೩). **ಪುಣ್ಣಮಿವೆಱ್[3]:** ಬಣ್ಣಿಗೆಗಾಲ ಪುಣ್ಣಮಿವೆಱ್ವೊಗದೆಳವೆಣ್ಣುಗಳೆಯ್ತಂದ ರೊಡನೆ (ಪಂಶ್ರಕಾ. ೧೨-೦೯೦). [ಪುಣ್ಣಮೆ + ವೆಱ್[3]]

**ಪುಣ್ಣವೆ** 'ಪುಣ್ಣಮೆ' ನೋ.

**ಪುಣಿಮೆ** 'ಪುಣ್ಣಮೆ' ನೋ.

**ಪುಣ್ಣಿವೆ** 'ಪುಣ್ಣಮೆ' ನೋ.

**ಪುಣ್ಣು** 'ಪುಣ್' ನೋ.

**ಪುಣ್ಣುಮೆ** 'ಪುಣ್ಣಮೆ' ನೋ.

**ಪುಣ್ಣುವೆ** 'ಪುಣ್ಣಮೆ' ನೋ.

**ಪುಣ್ಬಡಿಸು** (ಕ್ರಿ). ಗಾಯಗೊಳಿಸು : ವಿಜಗೀಷು ಬಲ್ಪಿನಿಂ ಖುಕ್ಷಜನಂ ಸೆಱೆವಿಡಿಯೆ ಕಂಡು ಕಾಯ್ದೆಱಗಿದ ಸೂರ್ಯಜನಂ ಪುಣ್ಬಡಿಸಿದಂ (ಕಂರಾಕಥಾ. ೦೦-೦೬೦). [ಪುಣ್ಬಡು + –ಇಸು[3]]

**ಪುಣ್ಬಡು** (ಕ್ರಿ). ಗಾಯಗೊಳ್ಳು : × ಮುಟ್ಟೆ ವಕ್ಕದೊಡ್ಡು ಪುಣ್ಬಡುವಿನ ವಿಟ್ಟು ಸನ್ನು ಸವಕಟ್ಟಱದಲ್ಲಿಗೆ ನೂಂಕಿ ಬೀರಮಚ್ಚಟರ್ವಿನಮಾಮೆ ತಳ್ತಱದು ಗೆಲ್ದೆವರಾತಿಯನೆನ್ದು ಪೊಚ್ಚಱ ನುಡಿವಟಗಣ್ಡರಂ ನಗುವ ದೊಟ್ಟಜಿ ಮಾವನ ಗನ್ಧಹಸ್ತಿಯುಂ (ಎಕ. II, ೦೩೪-೪೪ ; ಕು. 982); ಕಿಱಿದು ಸಮಯದಿನಾ ವಿರಾಟನ ಬಲಂ ಪುಣ್ಬಟ್ಟು ಚಲಂಗೆಟ್ಟು ತೊಲಗುವುದುಂ (ಪೇಟಚ. ೦೦-೦೪೮ ಪ) ; ನುಣ್ಬಣ ಮೆಲ್ಗದಪು ಮರಲ್ಗಣ್ ಬಾಯ್ದೆಱ ತುಂಬುಗಂದಮಿಂಬಿಡಿದೆರ್ದೆಗಳ್ ಪುಣ್ಬಡುವಿನೆಗಂ ಬಿಗಿದು (ಕಳಂ. ೬-೨೦೩). [ಪುಣ್ + ಪಡು[1]]

**ಪುಣ್ಬಡೆ** (ಕ್ರಿ). = ಪುಣ್ಬಡು: ಪೂತಲವಕ್ಕೆ ಪೌರವನಭೂರುಹಂ . . . ಸಂಧ್ಯಾತಪನಂಗೆ ತೋರಣಕನನ್ಮಕುರಂ ದೊರೆಯಾಗಿ ತೋಱದತ್ತಾತ ನೊಳಾಂತು ಪುಣ್ಬಡೆದ ಖೇಚರಸೇನೆಯ ರಕ್ತಸೇಕದಿಂ (ಕಂಪ್ರಚ. ೬-೩೬). [ಪುಣ್ + ಪಡೆ[1]]

**ಪುಣ್ಬು** 'ಪುಳುಂಬು' ನೋ.

**ಪುಣ್ಪೆಱು** (ಕ್ರಿ). =ಪುಣ್ಬಡು : ಇಸೆ ಲಕ್ಷ್ಮಣಂ ವಿಯಚ್ಚರಸೈನ್ಯಂ ಸತ್ತುದು ಪುಣ್ಪೆತ್ತುದು ಬೆನ್ನಿತ್ತುದು (ಕಂರಾಕಥಾ. ೯-೩೪). [ಪುಣ್ + ಪೆಱು[1]]

**ಪುಣ್ಪೊಲಸು** (ನಾ). ಹುಣ್ಣಿನ ಕೊಳೆ,–ಹೊಲಸು : ಎಱಗುತ್ತುಮಿರ್ಪ ನೊಬಮುಣ್ಮುವ ಪುಣ್ಪೊಲಸೆಂಬಿಮೆಯ್ದೆ ಕೊಕ್ಕರಿಕೆಯನೀಯೆ (ಕಂಪ್ರಚ. ೦೦-೦೦೪). [ಪುಣ್ + ಪೊಲಸು]

**ಪುಣ್ಮವೇಣ** (ನಾ). (?) : ಸಾಹಸಭೀಮ . . . ನಿಜಭುಜಾಗ್ರಗದಾಪರಿಘ ಪ್ರಹಾರದಿಂ ಪಱಪಱಯಾಗಿ ಪುಣ್ಮ[ಪಾಠಾಂ. ಣ್ಣು]ವೇಣನಾಗಿ ಮರುಳ್ಗಣೆ ಸಾಗಿ ಯುದ್ಧದೊಳ್ ಕಱದಱಯಾಗಿ ಬಿಟ್ಟಿರಿಬಲಂಗಳ್ ಪೇಱವೆ ನಿನ್ನ ಬೀರಮಂ (ಗದಾಯು. ೨-೩). ☞ ಇಲ್ಲಿ ಪಾಠಕ್ಲೇಶವಿದೆ. 'ಪುಣ್ಣುವೇಣ' ಎಂಬುದು ಹೆಚ್ಚು ಸ್ವೀಕಾರಾರ್ಹವಾದ ಪಾಠವೆನ್ನಬಹುದು. [?]

**ಪುಣ್ಯ** (ಗು). ೧. ಚೆಲುವಾದ ; ಸುಂದರವಾದ ; ಮೋಹಕವಾದ : ಏಕಕಾಲಕಳಿತ ಚಕ್ರಧರತೀರ್ಥಕರಕುಸುಮಶರಾಗ್ರಗಣ್ಯಪುಣ್ಯತನುವಪ್ಪ ಶಾಂತೀಶ್ವರಂ . . . ದ್ವಾದಶಗಣವಿನೇಯಜನಂಗಳಂ ನರನಾಕನಾಗಲೋಕ ಗಮನಕ್ಕೆ ಪರಸಿ ವಿಸರ್ಜಿಸಿ (ಶಾಂತಿಪು. ೧೨-೨೪ ಪ). ೨. ಒಳ್ಳೆಯ ; ಶ್ರೇಷ್ಠವಾದ ; ಉತ್ಕೃಷ್ಟವಾದ : ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವಮಾಲೆಯ ಭರವು ತಪ್ಪದು (ಬಸವ. ೦೨೮) : ಅರ್ಜುನನ ಮುಖವನ್ನು ಇಂದ್ರನು ಪ್ರೇಮದಿಂದ ತನ್ನ ಪುಣ್ಯಗಂಧವುಳ್ಳ ಕೈಯಿಂದ ತಡವುತ್ತಾ . . . ಇದ್ದನು (ರಶಾ. ೦೨೭). ೩. ಪವಿತ್ರವಾದ ; ಪಾವನವಾದ ; ಶುದ್ಧವಾದ : ನಿಸ್ಪೃಹತೆಯನಾ ಮಹೀಪತಿಗೆ ತಂದುದು ಭವ್ಯತೆ ಪುಣ್ಯಜೀವವುಂ ಸಹಜಸುಖಾಸ್ಪದಂ ಜಿನಗಮುಯ್ವುನಮಲ್ಲಿ ತೊಡಂಕಲೀಗಮೋ (ಅಭಿಚ. ೬-೨೩) ; ಬಸವನ ಪುಣ್ಯಕೀರ್ತಿಲತೆ ಬೇರ್ವರಿಯುತ್ತುರಗೇಂದ್ರಲೋಕದೊಳ್ ದೆಸೆಗಳನಗ್ಗಳಂ ಮುಸುಂಕಿ ಪರ್ವಿಮುದಾಗಳೆ ಮರ್ತ್ಯಲೋಕದೊಳ್ (ಬಸವ. ೧೨ ಸೂಚಕ). ೪. ಧರ್ಮಿಷ್ಠವಾದ; ಸದ್ಗುಣಯುಕ್ತವಾದ. ೫. ಮಂಗಳಕರವಾದ; ಶುಭಕರವಾದ. ೬. ಸಂತೋಷಮಯವಾದ. (ನಾ). ೭. ಸದಾಚಾರ, ಪರೋಪಕಾರ ಮೊದಲಾದುವುಗಳಿಂದ ಆತ್ಮನಿಗೆ ದೊರೆಯುವ ಫಲ ; ಸ್ವೈಪು ; ಸುಕೃತ : "ಧರ್ಮಃ, ಪುಣ್ಯಂ, ವೃಷಃ, ಶ್ರೇಯಃ

ಸುಕೃತಂ—ಈ ೫ ಪುಣ್ಯದ ಪೆಸರ್" (ಹಲಾಯು. ೨೦–೧೨೫); ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ . . . ಎಂಬೀ ಲೋಕಯಾತ್ರೆ ಕಿಡದೆ ಮಹಾತ್ಮಾ (ಶಾಂತಿಪು. ೯–೧೯೦); ನೀನೊಲಿಯುತ್ತೀ ಪುಣ್ಯ ನೀನೊಲ್ಲದುದೇ ಪಾಪ ಕಂಡಯ್ಯಾ (ಬಸವ. ೫೦೬); ಒರ್ವನ ಪುಣ್ಯದ ಫಲವಂ ಪಲರನುಭವಿಸುವರ್ (ಪಾರ್ಶ್ವಪು. ೧೫–೯೯). ೮. ಪವಿತ್ರವಾದುದು; ಪಾವನವಾದುದು: "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ—ಈ ೫ ಶುದ್ಧಮಪ್ಪ ವಸ್ತು" (ಹಲಾಯು. ೨೨–೧೬೨); ಪುಣ್ಯಮಹುದೆಮ್ಮ ಧರೆ ವಲ್ಲಭನ ಪದಧೂಳಿಯಿಂ (ಜಕ್ಕಾಂಗ. ೬೦–೦೬೪೨). ೯. ಒಳ್ಳೆಯ ಕರ್ಮದ ಫಲವಾಗಿ ಬರುವ ಸುಖ; ಭಾಗ್ಯ: ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ (ಜಕ್ಕಣ. ೯–೧೧); ಅಂದಿನಾನಂದದೊಂದೊದವಿಂಗಂದಿವ ಪುಣ್ಯಕಂದಿನೆಸಕಕ್ಕಂತಾವಳುಂ ನೋಂತಳೇ (ಕೃಷ್ಣಪು. ೧೧–೬೧); ಒಳ್ಳೆಯ ಕಾರ್ಯ ಮತ್ತು ಅದರ ಫಲವಾದ ಸುಖ—ಇವುಗಳ ಸಂಕೀರ್ಣಸಂಬಂಧಕ್ಕೆ ಪುಣ್ಯವೆಂದೂ . . . ಹೆಸರು (ಶಿಕಲು. ೨೪೬). ೧೦. ಧರ್ಮ; ದಾನ: ಪುಣ್ಯಕ್ಕೆ ಸೀರೆ ಉಡಿಸಿದರೆ ಹನ್ನೆರಡು ಮೊಳ ಅಂದಳು (ಗಾದೆ). ೧೧. ಭಾಗ್ಯವಂತ; ಅದೃಷ್ಟಶಾಲಿ: ಪಾಡುವರು ಕೆಲರಲ್ಲಿ ಹರಿಯನು ನೋಡುವರು ನಿಜದೃಷ್ಟಿ ದಣಿಯಲು ಆಡುವರು ತಮ್ಮೊಂದ ಪುಣ್ಯರದಾರು ಲೋಕದಲಿ (ಕೌಶಿಕಾ. ೪೪–೦೬). ೧೨. ಸಜ್ಜನ; ಪುಣ್ಯಪುರುಷ: ತರುಣಿಯರ ಬಾಯಿಗೆಂಪಂ ಸರಿಮಾಟ್ಪರ್ ಕವಿಗಳಾಗೆ ಪುಣ್ಯರನುತ್ತಂ ಪರಿಹಾಸ್ಯ ಮಾಟ್ಪ ವಿಕಸಿತಸರಸಪ್ರಸವಂಗಳಿಂದೆ ಬಂದುಗೆಯೆಸೆಗುಂ (ಮಲ್ಲಿನಾ. ೪–೪೯೯). ೧೩. ಶುಚಿ; ನೈರ್ಮಲ್ಯ. ೧೪. ಶುಭ; ಮಂಗಳ. ೧೫. ಚೆಲುವು; ಸೌಂದರ್ಯ. ೧೬. ಪ್ರಖ್ಯಾತಿ; ಪ್ರಸಿದ್ಧಿ. ೧೭. ಮನೆ; ಆವಾಸ. ೧೮. [ಜೈನ] ನವಪದಾರ್ಥಗಳಲ್ಲಿ ಒಂದು: ಜೀವಾಜೀವಪುಣ್ಯಪಾಪಾಸ್ರವಸಂವರನಿರ್ಜರಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಂ (ಶಬ್ದಾಗ. ೬–೦೯); "ಅಕಳಂಕ ಯುದ್ಧದೊಳು ಸೌಮ್ಯದೊಳು ಧರ್ಮದೊಳು ಸುಕೃತದೊಳು ಪುಣ್ಯಮಕ್ಕಂ" (ಮಂಗರಾ. ೦೫೨–೫೬): "ಧರ್ಮ ಸುಕೃತಂ ಪ್ರಖ್ಯಾತ ನೈರ್ಮಲ್ಯ ಚೆಲ್ವಾವಾಸಂಗಳು ಪುಣ್ಯಮಕ್ಕು" (ಪಾಪಾರ. ೬೯).

**ಪುಣ್ಯ ಕಟ್ಟಿಕೊಳ್ಳು** = ಉಪಕಾರ ಮಾಡಿ ಪುಣ್ಯವನ್ನು ಗಳಿಸಿಕೊಳ್ಳು: ವಿದ್ಯಾಭ್ಯಾಸಕ್ಕೆ . . . ಪ್ರತಿವರ್ಷವೂ ಎರಡುಸಾವಿರರೂಪಾಯಿಗಳನ್ನು ಕೊಡಲು ಕೋರ್ಟಿನವರು ಒಪ್ಪುವಂತೆ ಮಾಡಿ ಆ ಲಾಯರ್ ಪುಣ್ಯ ಕಟ್ಟಿಕೊಂಡರು (ದೂರದ. ೪೩). [ಸಂ.]

**ಪುಣ್ಯಂಗೆಯ್**, ಪುಣ್ಯಂಗೆಯ್ (ಕ್ರಿ). ಸತ್ಕಾರ್ಯವನ್ನು ಮಾಡು; ಪುಣ್ಯ ಬರುವ ಕೆಲಸವನ್ನು ಮಾಡು: ಎನಿತು ಪುಣ್ಯಂಗೆಯ್ದವೋ ಮಜ್ಜನನಸಾಫಲ್ಯತ್ವಮಾಯ್ತು (ಬಸವಪು. ೫–೫೦). **ಪುಣ್ಯಂಗೈ**: ಸುಂದರಿಯ. ಪೇಳಾವ ಪುಣ್ಯಂಗೈದುದಾ ಬಯಕೆ (ಜಕ್ಕಾಂಗ. ೩೬–೯೭೬).

[ಪುಣ್ಯ+ಕೆಯ್$_1$]

**ಪುಣ್ಯಂಗೈ** 'ಪುಣ್ಯಂಗೆಯ್' ನೋ.

**ಪುಣ್ಯಂಗೊಳ್** (ಕ್ರಿ). ಸುಕೃತವನ್ನು ಹೊಂದು,—ಪಡೆ: ಅಹ, ಧೃಷ್ಟದ್ಯುಮ್ನ. ಗುರುವನಿಂತಲ್ತೆ ಕೊಱೆದು ಪುಣ್ಯಂಗೊಂಡೆ! (ಅಶ್ವತ್ಥಾ. ೩–೫೦). [ಪುಣ್ಯ+ಕೊಳ್$_1$]

**ಪುಣ್ಯಕರ್ಮ** (ನಾ). ಶ್ರೇಯಸ್ಸನ್ನುಂಟುಮಾಡುವ ಕೆಲಸ; ಸಂಕೃತ: ಮುಂ ಪುಣ್ಯಕರ್ಮಮುನಂತಾಗಿರೆ ಮಾಡದೀಗಳಬಲಿಂ ಪೇಟಿಂತಯುಕ್ತಿ ವರ್ಗಳಕ್ಕುಮೆ (ಕಾದಂಪೂ. ೩೪೬); ಸಚಿಂತೆಯಿಂದೂ ಸವಿಶೇಷಚಿಂತೆಯಿಂದೂ . . . ಭಕ್ತಿಜ್ಞಾನವೈರಾಗ್ಯಚಿಂತೆಯಿಂದೂ — ಇವು ಮನಸ್ಸಿನಿಂದ ಮಾಡಲ್ಪಟ್ಟಂಥ ಪುಣ್ಯಕರ್ಮವೆನಿಸುವುದು (ವೇದಾರ. ೨೦).

[ಸಂ. ಪುಣ್ಯಕರ್ಮನ್]

**ಪುಣ್ಯಕಾರಿ** (ನಾ). ಒಳ್ಳೆಯ ಕಾರ್ಯ ಮಾಡುವವನು: ಅಕ್ಕ ಧಾರುಣಿಯೊಳವ ಪುಣ್ಯಕಾರಿ (ಕಂಠೀ. ೩೦–೩); ಪುಣ್ಯಕೋಟಿಯು ನಲಿದು ಕರುವಿಗೆ ಪುಣ್ಯಕಾರಿ ಎನುತ ಬೇಗದಿ ಚೆನ್ನಗೌಡನ ಕಂಡು ತಾನು ಉನ್ನತಾದಿಂದೆಂದಿತು (ಗೋಹಾಡು. ೧೧೮). [ಸಂ. ಪುಣ್ಯಕಾರಿನ್]

**ಪುಣ್ಯಕಾಲ** (ನಾ). ಪವಿತ್ರವಾದ ಸಮಯ: ಪುಣ್ಯಕಾರ್ಯಕ್ಕೆ ಪ್ರಶಸ್ತವಾದ ಕಾಲ: 'ದಕ್ಷಿಣಾಯನಪುಣ್ಯಕಾಲ' ಪರಾ. [ಸಂ.]

**ಪುಣ್ಯಕ್ಷಯ** (ನಾ). ಗಳಿಸಿದ ಪುಣ್ಯ ತೀರಿಹೋಗುವಿಕೆ: ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ತನಗೆ ಬೆಸಕೆಯ್ಯದಿರೆ (ಆದಿಪು. ೨–೧೪ ವ). [ಸಂ.]

**ಪುಣ್ಯಕ್ಷೇತ್ರ** (ನಾ). ಪವಿತ್ರಸ್ಥಳ: ಪಾವನವಾದ ಯಾತ್ರಾಸ್ಥಳ: ಇದು ಪುಣ್ಯಕ್ಷೇತ್ರಮಿಾ ಇರ್ದುದೆ ದುರಿತಹರಕ್ಷೇತ್ರಮಿಾ ಮೆಯ್ಯೊಳೀ ತೋರ್ಪುದೆ ಸಿದ್ಧಕ್ಷೇತ್ರಂ (ಸುಕುಮಾ. ೪–೪೬). [ಸಂ.]

**ಪುಣ್ಯಚರಿತೆ** (ನಾ). ೧. ಪಾವನಗೊಳಿಸುವ ಕಥೆ: ಪುಣ್ಯಕಥೆ: ಮೇದಿನಿಯೊಳೀ ಪುಣ್ಯಚರಿತೆಯನಾದರಿಸಿ ಬರೆದೋದಿ ಕೇಳುವ ಸಾಧುಸಜ್ಜನರಾದವರಿಗಹುದಖಿಳಕೈವಲ್ಯ (ಸಳಿಕ. ೯–೬೨). ೨. ಉತ್ತಮವಾದ ನಡವಳಿಕೆಯುಳ್ಳವಳು; ಶುದ್ಧವಾದ ಜೀವನವನ್ನು ನಡೆಸುವವಳು: ಆ ಪುಣ್ಯಚರಿತೆಯು ಭುವನಮಾತೆಯನುಪಚರಿಸಿಕೊಂಡಿರ್ದನೊಲವಿನಲಿ (ಕಪಿರಾ. ೦–೩–೬). [ಪುಣ್ಯ + ಚರಿತೆ]

**ಪುಣ್ಯಜನ** (ನಾ). ೧. ಒಳ್ಳೆಯ ಮನುಷ್ಯ; ಸಜ್ಜನ. ೨. ಕುಬೇರನ ಸೇವಕ: ಯಕ್ಷ: 'ಪುಣ್ಯಜನೇಶ್ವರ' ಪರಾ. ೩. ನೈಋುತಿ: "ರಾಕ್ಷಸಃ, ಕೋಣಪಃ . . . ಪುಣ್ಯಜನಃ, ನೈರ್ಋತಃ, ಯಾತು, ರಕ್ಷಃ—೧೫ ನೈಋುತಿ ಹೆಸರುಗಳು" (ಸಿದ್ಧಾಂತಿ. ೬೪). ೪. ರಾಕ್ಷಸ: "ರಕ್ಕಸರಲ್ಲಿಯುಂ ಪುಣ್ಯಜನಮೆಂಬುದು" (ಹಲಾಯು. ೧೩೦–೪). [ಸಂ.]

**ಪುಣ್ಯಜನೇಶ್ವರ** (ನಾ). ಯಕ್ಷರಾಜನಾದ ಕುಬೇರ: "ಐಳಬಿಲಃ . . . ಪುಣ್ಯಜನೇಶ್ವರಃ—ಈ ೧೭ ಕುಬೇರನ ಪೆಸರ್" (ಹಲಾಯು. ೧೪–೭೯): ಶಿವಾನುಬಂಧಸಯುಕ್ತನಾಗಿಯುಂ ದಶಾನನಾಸ್ತಂಗತಪ್ರಾಭವನಲ್ಲದ ಪುಣ್ಯಜನೇಶ್ವರನುಮೆನಿಸಿ ದೇವತಾಸ್ವರೂಪನಾದಂ (ಕೃಷ್ಣಪು. ೩–೨೦ ವ). [ಸಂ.]

**ಪುಣ್ಯಜಲ** (ನಾ). ಪವಿತ್ರವಾದ ನೀರು: ತೀರ್ಥ: ಉದ್ದಾಮಮುನಿಜನರಚಿತ ಮಂತ್ರಸ್ತೋಮಪುಷ್ಕಲಪೂತಪುಣ್ಯಜಲಾಭಿಷೇಚನದ ಶ್ರೀಮುಡಿಗೆ ಕೈಯಿಕ್ಕಿದನು (ಕುಮಾರವ್ಯಾಸ. ೧೪–೬೬). [ಸಂ.]

**ಪುಣ್ಯತಿಥಿ** (ನಾ). ಶ್ರಾದ್ಧದ ದಿನ: ಹಿರಿಯರ ಪುಣ್ಯತಿಥಿಯಂದು ಮಕ್ಕಳಿಗೆ ಸಿಹಿಯನ್ನು ಹಂಚಿದರು (ರೂಢಿ). [ಸಂ.]

**ಪುಣ್ಯದಿನ** (ನಾ). ೧. ಶುಭದಿವಸ; ಮಂಗಳಕರವಾದ ದಿವಸ: ಅಕ್ಷಯತೃತೀಯೆಯೆಂದಖಿಳಕ್ಷಿತಿಗಂ ನೆಗಟ್ದುದಲ್ತೆ ತತ್ಪುಣ್ಯದಿನಂ (ಆದಿಪು. ೧೧–೬); ಪುಶ್ಯದಮಾಸೆ ಸೂರ್ಯಗ್ರಹಣ ಸಂಕ್ರಾಂತಿ ವ್ಯತೀಪಾತಗಳೆಂಬ ಸಕಳ ಪುಣ್ಯದಿನಂ ದೊರೆಕೊಣ್ಡಂದು (ಎಕ. XII, ಗುಬ್ಬಿ. ೧೧–೪೩; 1226). ೨. ಆಚಾರ್ಯಪುರುಷನು ಅವಸಾನ ಹೊಂದಿದ ದಿನದ ನೆನಪಿಗಾಗಿ ಮತೀಯ ಆಚರಣೆಯನ್ನು ಮಾಡುವ ದಿನ: ಇಂದು ಟೀಕಾಚಾರ್ಯರ ಪುಣ್ಯದಿನ (ರೂಢಿ). [ಸಂ.]

**ಪುಣ್ಯದೇವತೆ** (ನಾ). ಪುಣ್ಯದ ಅಧಿದೇವತೆ: ಇರೆ ಹರಿಯ ಪುಣ್ಯದೇವತೆಯಿರಲೆಡೆಯಂ ಪೇಟ್ದು ತಾನೆ ಮಾಡುಗುಮೆನೆ ತನ್ನಿರವದ್ಯನ ಸೂಕ್ತಿಯನಾದರದಿಂದಾಂತರ್ ಮಹತ್ತರರ್ ಭೂಕಾಂತರ್ (ಶಾಂತಿಪು. ೭–೨೪).

[ಸಂ. ಪುಣ್ಯದೇವತಾ]

**ಪುಣ್ಯನದಿ** (ನಾ). ಪವಿತ್ರವಾದ ಹೊಳೆ: ಪಾವನವಾದ ನದಿ: ಪುಣ್ಯನದೀನದನಗ[ರಾ]ವಣ್ಯವಿಭೂಷಣೆಯನೊಲ್ದು ನೋಡುತ್ತುಮಿಳಾಪುಣ್ಯಸ್ತ್ರೀಯಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಶಂಪಭಾ. ೩–೩೬). [ಸಂ. ಪುಣ್ಯನದೀ]

**ಪುಣ್ಯಪದಾರ್ಥ** (ನಾ). [ಜೈನ] ನವಪದಾರ್ಥಗಳಲ್ಲಿ ಒಂದು : ಜೀವಪದಾರ್ಥಮಜೀವಪದಾರ್ಥಂ . . . . ಪುಣ್ಯಪದಾರ್ಥಂ ಪಾಪಪದಾರ್ಥಮೆಂಬ ನವಪದಾರ್ಥಮುಮಂ . . . ಕೈಕೊಂಡು (ಸುಕುಮಾ. ೩-೩೯ ವ). [ಸಂ.]

**ಪುಣ್ಯಪಾಠಕ** (ನಾ). ಶುಭವನ್ನು ಕೋರುವವನು ; ಮಂಗಳಪಾಠಕ ; ಸ್ತೋತ್ರಪಾಠಕ ; ವಂದಿ : ಕುಬ್ಜವಾಮನಬಧಿರಮೂಕಕಿರಾತೋನ್ಮತ್ತಜಡಜನಂಗಳುಮಂ ಗಾಯಕವಾದಕನರ್ತಕಕಥಕಪುಣ್ಯಪಾಠಕವೈತಾಳಿಕನಿಕರಮುಮಂ ಕೊಟ್ಟು (ಆದಿಪು. ೪-೩೪ವ) ; ಭಜಿಯಿಸುವ ಪುಣ್ಯಪಾಠಕರ ಪರಕೆಗಳೊಳಗೆ . . . . ಬರುತಿರ್ದನಪ್ರತಿಮಸುಕುಮಾರಶೇಖರಂ (ನಂಬಿರ. ೩-೬೦). [ಸಂ.]

**ಪುಣ್ಯಪ್ರವರ** (ನಾ). ೧. ಮಹಾಪುಣ್ಯಶಾಲಿ : ಶಿವನ ಕರುಣಾಲಾಭಪುಣ್ಯಪ್ರವರಪಾರ್ಥನ ಮುನ್ನಿನಂದದಲವನಿಳುಹಿದ ನಿಖಿಳದಿವ್ಯಾಯುಧದ ವೇದಿಕೆಗೆ (ಕುಮ್ಮಾದ್ರೋ. ೯-೬). ೨. ಅತ್ಯಂತ ಪವಿತ್ರನಾದವನು : ಪಾಂಡವರಿಗಾವುದು ಕೊಱತೆ ಪುಣ್ಯಪ್ರವರ ಗದುಗಿನ ವೀರನಾರಾಯಣನ ಕರುಣದಲಿ (ಕುಮ್ಮಾಗ. ೮-೬೦). [ಸಂ.]

**ಪುಣ್ಯಫಲ** (ನಾ). ಒಳ್ಳೆಯ ಕಾರ್ಯಾಚರಣೆಯಿಂದ ಬರುವ ಫಲ : ಶರನಿಧಿಯು ವಡಬಾನಳನ ದಳ್ಳುರಿಯು ವರ್ಮವ ತಿವಿವ ತಂಬಿಗೆ ಮರಳುದಲೆಯುಂಟಾದಡದು ಭವಭವದ ಪುಣ್ಯಫಲ (ಕುಮ್ಮಾದ್ರೋ. ೪-೧೬) ; ಅನ್ನಪಾನವ ನೀಡಿ ವಿಪ್ರರಿಗೊಲಿಯುತಿಷ್ಟಾಪೂರ್ತಗಳ ಮುಗಿಸಿ ಖೋಡಿಯಲ್ಲದ ಪುಣ್ಯಫಲ ಕೈಗೂಡೆ (ಅಮೃ.ಶ. ೨-೦೦೦). [ಸಂ.]

**ಪುಣ್ಯಭೂಮಿ** (ನಾ). ಪವಿತ್ರವಾದ ಭೂಮಿ ; ಆರ್ಯಾವರ್ತ : "ಆರ್ಯಾವರ್ತಃ = ಪುಣ್ಯಭೂಮಿ" (ಕಾಕಕ್ಕ. ೦೬೭) ; "ಆರ್ಯಾವರ್ತಃ, ಪುಣ್ಯಭೂಮಿಃ_೨ . . . ವಿಂಧ್ಯಪರ್ವತಕ್ಕೂ ಹಿಮಗಿರಿಗೂ ಮೂಡಲು ಪಡುವಲು ಕಡಲುಗಳಿಗೂ ನಡುವೆಯಿರುವ ಭೂಮಿ" (ಸಿದ್ಧಾಂತಿ. ೯೪). [ಸಂ.]

**ಪುಣ್ಯಮೆ** 'ಪುಣ್ಣಮೆ' ನೋ.

**ಪುಣ್ಯಯಜ್ಞ** (ನಾ). [ಜೈನ] ದೀಕ್ಷೆಗೊಂಡವನು ಮಾಡುವ ಚತುರ್ದಶ ಪೂರ್ವಗಳ ಪಠಣ ಹಾಗೂ ಶ್ರವಣ ; ದೀಕ್ಷಾನ್ವಯಕ್ರಿಯೆಗಳಲ್ಲಿ ಆರನೆಯದು : ಅವತಾರವೃತ್ತಿಲಾಭ ಸ್ಥಾನಲಾಭಗಣಗ್ರಹಣಪೂಜಾರಾಧ್ಯಪುಣ್ಯಯಜ್ಞದೃಢಚರ್ಯೋಪಯೋಗತ್ವಮೆಂಬೆಂಟುಂಬೆರಸು . . . ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ (ಆದಿಪು. ೦೩-೦೬ ವ) ; ಪೂಜೋಪವಾಸಪೂರ್ವಕಂ ಬ್ರಹ್ಮಚಾರಿಯಾಗಿ ಪೂರ್ವಂಗಳಂ ಕೇಳ್ವುದು ಪುಣ್ಯಯಜ್ಞಕ್ರಿಯೆ (ಚಾವುಂಪು. ೨೨೩). [ಸಂ.]

**ಪುಣ್ಯಲೋಕ** (ನಾ). ಪುಣ್ಯವಂತನು ಸೇರುವ ಲೋಕ ; ದೇವಲೋಕ ; ಸ್ವರ್ಗ : ಭಕ್ತಿಬಲಮೇ ಪುಣ್ಯಲೋಕವ್ಯಕ್ತಿಯಂ ತೋರುವುದು (ಗಗಶಾ. ೧೦-೧೬). [ಸಂ.]

**ಪುಣ್ಯವಂತ** (ನಾ). ಪುಣ್ಯಸಂಪಾದನೆ ಮಾಡಿದವನು ; ಪುಣ್ಯಶಾಲಿ : ಭರತಂ ಶ್ರೇಯಾಂಸನಂ ನೀನೆ ಪುಣ್ಯವಂತನೆಯೆಂದು ಪೊಗಟ್ಟು ಪೂಜಿಸಿ ಪೋದಂ (ಚಾವುಂಪು. ೪೦) ; ನಯವಿದರೆಲ್ಲಮಲ್ಲಿಯೆ ಕಳಾನ್ವಿತರಲ್ಲಿಯೆ ಪುಣ್ಯವಂತರಲ್ಲಿಯೆ . . . ಎಂಬಿನೆಗಮಾ ಮಹಿ ಪೋಲ್ವುದು ಭೋಗಭೂಮಿಯಂ (ಪುಷ್ಪಪು. ೯-೦೬). ೨. ಅದೃಷ್ಟಶಾಲಿ ; ಭಾಗ್ಯವಂತ ; ಸಂದೈವಿ : ಅವರು ಗತಿ ಇಲ್ಲದ ಜನ, ತಾವು ಪುಣ್ಯವಂತರು (ಸಣ್ಣಕ. ೧, ೯೩) : ಈಗಿನ ಕಾಲದಲ್ಲಿ ಹೆಣ್ಣು ಹೆತ್ತೋರೇ ಪುಣ್ಯವಂತರು (ಕಂಕಕೂ. ೬). [ಸಂ. ಪುಣ್ಯವತ್]

**ಪುಣ್ಯವಂತೆ** (ನಾ). ೧. ಸಜ್ಜನೆ ; ಒಳ್ಳೆಯ ನಡತೆಯುಳ್ಳವಳು. ೨. ಅದೃಷ್ಟವಂತೆ ; ಭಾಗ್ಯವಂತೆ : ಒಂದು ವಿಷಯದಲ್ಲಿ ನನಗಿಂತಲೂ ನೀನು ಪುಣ್ಯವಂತೆ (ಆರ್ಯ್ಯಕ. ೪೦). [ಪುಣ್ಯವಂತ + —ಎ]

**ಪುಣ್ಯವತಿ** (ನಾ). = ಪುಣ್ಯವಂತೆ ೧ : ಆ ಪುಣ್ಯವತಿಯರಿರ್ವರುಮಾ ಪರಮೇಶ್ವರನ ಮನಮನಿರ್ಕುಟಿಗೊಳೆ ಮತ್ತಾ ಪೀನವೃಷಸ್ಕಂಧನುಮಾ ಪದ್ಮಾಸ್ಯೆಯರ ಮನಮನಿರ್ಕುಟಿಗೊಂಡಂ (ಆದಿಪು. ೬-೨೩) ; ಪುಣ್ಯವತಿ ನೃಪೇಂದ್ರಕಾಂತೆ ನವಕಲ್ಪಲತಾಕೃತಿಯಿಂದಮೊಪ್ಪಿದಳ್ (ಶಾಂತಿಪು. ೯-೨೦೦). [ಸಂ. ಪುಣ್ಯವತೀ]

**ಪುಣ್ಯವಾಸರ** (ನಾ). = ಪುಣ್ಯದಿನ ೧ : ತತ್ಪೂಜಕರಣಪುಣ್ಯವಾಸರಂಗಳೊಳುಪವಾಸನಿರತಂ . . . ಅಭಿಷೇಕಂಗೆಯ್ದು (ಆದಿಪು. ೦೬-೦ ವ) ; ಒಂದು ಪುಣ್ಯವಾಸರಪ್ರಥಮಪ್ರಹರದೊಳ್ . . . ತಾನಿರ್ದನಾಸ್ಥಾನಿಯೊಳಮಳ ಸರಃಕಲ್ಪದೊಳ್ ರಾಜಹಂಸಂ (ಚಂದ್ರಪ್ರ. ೨-೭೨). [ಸಂ.]

**ಪುಣ್ಯಶ್ಲೋಕ** (ನಾ). ೧. ಯಾರ ಸ್ತುತಿಯಿಂದ ಪುಣ್ಯ ಬರುವುದೋ ಅಂತಹವನು ; ಸತ್ಕೃತಿಗಳಿಂದ ಪ್ರಸಿದ್ಧನಾದವನು : ಪರಮಪುಣ್ಯಶ್ಲೋಕ ಜಯ ಜಗಭರಿತ ನಿರ್ಮಳರೂಪ ಜಯ ಜಯ ಕರುಣಿ ರಕ್ಷಿಸು (ಕುಮ್ಮಾಅ. ೨೩-೩೩). ೨. ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಸಗರ ಮತ್ತು ಕಾರ್ತವೀರ್ಯ ಎಂಬ ಆರು ಜನ ಚಕ್ರವರ್ತಿಗಳಲ್ಲಿ ಪ್ರತಿಯೊಬ್ಬನಿಗೂ ಇರುವ ಹೆಸರು : "ವಿವರಿಸೆ ಹರಿಶ್ಚಂದ್ರ ನಳ . . . ಕಾರ್ತವೀರ್ಯರೆನಿಪ್ಪ ರಜಪವರತ್ಯವಿರಳದ ಚಕ್ರವರ್ತಿಗಳಕ್ಕವರ್ಗೆ ಪುಣ್ಯಶ್ಲೋಕರೆಂಬ ನಾಮಂ" (ಮಂಗರಾ. ೭೯-೨) ; ಸೋಕಿತೇ ಕಡುನಿಂದೆ ಪುಣ್ಯಶ್ಲೋಕನಿ[ಹಾಕಾಂ. ೧]ಗೆ (ಕೊರಟಾ. ೩-೨-೦೯). P 'ಪುಣ್ಯಶ್ಲೋಕ' ಎಂದು ಧರ್ಮರಾಜನಿಗೂ ಜನಾರ್ದನನಿಗೂ ಹೇಳಲಾಗುತ್ತದೆ. [ಸಂ.]

**ಪುಣ್ಯಶ್ಲೋಕೆ** (ನಾ). ಪವಿತ್ರವಾದ ನಡವಳಿಕೆಯಿಂದ ಖ್ಯಾತಳಾದವಳು ; ಸದಾಚಾರಸಂಪನ್ನೆ : ಬಲ್ಲಿಂ ಬಲ್ಲೆನವಳಯೋನಿಜೆಯೆಂಬುದಂ ಪಾವನೆಯೆಂಬುದಂ ಪುಣ್ಯಶ್ಲೋಕೆಯೆಂಬುದಂ (ರಾಮಾಶ್ವ. ೨೩-೨೬). P ಇದು ಸೀತೆ ಹಾಗೂ ದ್ರೌಪದಿ – ಈ ಇಬ್ಬರಿಗೂ ಅನ್ವಯಿಸುತ್ತದೆ. [ಸಂ. ಪುಣ್ಯಶ್ಲೋಕಾ]

**ಪುಣ್ಯಸ್ತ್ರೀ** (ನಾ). ಮಡದಿ ; ಹೆಂಡತಿ : ಖತಿಯ ಹಿಡಿದವ ಬಳಿಕಲಾ ರಸಾಪತಿಯ ಪುಣ್ಯಸ್ತ್ರೀಯ ಕೊಲುವಾಯತದಲ್ಯೆದಿದನವನು ಬನವನು ಜನಕಸಂಪನೆಯ (ಕೊರಟಾ. ೭-೪೩-೨೯) ; ಮೋಳಿಗೆಮಾರಯ್ಯಗಳ ಪುಣ್ಯಸ್ತ್ರೀ ವಚನ (ಸರ್ವವ. ೦೯೪). [ಸಂ.]

**ಪುಣ್ಯಾಂಗನೆ** (ನಾ). ಸಚ್ಚರಿತೆ ; ಸಜ್ಜನೆ : ಮುಪ್ಪುರ ಪಡಿಬರಿಸಿ ಪೋರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಚ್ಚರಿತದ ಸಲಿಗೆಯಿಂದೈಸೆ (ಹರಿಬ. ೨-೪೯). [ಸಂ. ಪುಣ್ಯಾಂಗನಾ]

**ಪುಣ್ಯಾತಗಿತ್ತಿ, ಪುಣ್ಯಾತ್ಗಿತ್ತಿ** (ನಾ). = ಪುಣ್ಯಾಂಗನೆ : ನಮ್ಮ ಗೆಣೆಕಾತಿ ಹೊನ್ನೂರ ಬಣಜಿಗಿತಿ ಪುಣ್ಯಾತಗಿತ್ತಿ ಪುರುಷರ ತೊಡೆ ಮ್ಯಾಲೆ ನಮ ಹಂಬಲವ ಮರತಳೆ (ಜಾಪದ. ೭೯) ; ಪುಣ್ಯಾತಗಿತ್ತಿ ಎರಡು ಹೆಜ್ಜೆ ಒಂದು ಕಡೆ ಇಟ್ಟು ನಿಂತಿದ್ದರೆ ತಾನೇ ಕೇಳುವುದು (ರೂಪಕ. ೩೩೬). ಪುಣ್ಯಾತ್ಗಿತ್ತಿ : ನನಗೆ ಬಂದ ತೊಂದರೆಯೆಲ್ಲಾ ಆ ಪುಣ್ಯಾತ್ಗಿತ್ತಿಯಿಂದ ಪರಿಹಾರವಾಯಿತು (ರೂಢಿ). [<ಪುಣ್ಯಾತ್ಮ + —ಗಿತ್ತಿ]

**ಪುಣ್ಯಾತ್ಗಿತ್ತಿ** 'ಪುಣ್ಯಾತಗಿತ್ತಿ' ನೋ.

**ಪುಣ್ಯಾತ್ಮ** (ನಾ). = ಪುಣ್ಯವಂತ : ಆ ಪುಣ್ಯಾತ್ಮನನ್ನು ತಂಪುಹೊತ್ತಿನಲ್ಲಿ ನೆನೆಯಬೇಕು (ರೂಢಿ). [ಸಂ. ಪುಣ್ಯಾತ್ಮನ್]

**ಪುಣ್ಯಾರ್ಥ** (ನಾ). ಪುಣ್ಯವನ್ನು ಗಳಿಸಬೇಕೆಂಬ ಗುರಿ, – ಉದ್ದೇಶ : ಎಳಸಿ ಪುಣ್ಯಾರ್ಥದಿಂ ವಂದನೆ ನಿಮಿತ್ತ ಗುರುನಿಳಯಕ್ಕೆ ಶಿಷ್ಯನೆಯ್ದುಪ್ಪುದಕೆ ಸಾಹಸದ ಬಲವೇಕೆ ತಂದೆ (ಹಕಶಾ. ೬-೬). [ಸಂ.]

**ಪುಣ್ಯಾಸ್ರವ** (ನಾ). ೧. ನಾಗರಾಜಕವಿಯು ರಚಿಸಿದ ಒಂದು ಕನ್ನಡ ಕಾವ್ಯದ ಹೆಸರು : ವಿನಯನಿಧಿ ನಾಗರಾಜಂಗನುಪಮಗುಣನಿಧಿಯನಂತ

ವೀರ್ಯಬ್ರತಿಪಂ ಮನವೊಲಿದು ಪೇಟ್ದ ತೆಱದಿಂ ಜನಹಿತವಮಂ ಪೇಟ್ದ ನೊಲಿದು ಪುಣ್ಯಾಸ್ರವಮಂ (ಪುಣ್ಯಾಸ್ರ. ೦-೩೯). ೨. [ಜೈನ] ಪುಣ್ಯವು ಜೀವನಲ್ಲಿ ಕೂಡಿಕೊಳ್ಳುವಿಕೆ ; ಪುಣ್ಯಸಂಪಾದನೆ: ಆಸ್ರವಮೆರಡು ತೆಱಂ ಪುಣ್ಯಾಸ್ರವವೊಂದದಱ ವೈಪರೀತ್ಯಭವಂ ಪಾಪಾಸ್ರವಂ (ಶಾಂತಿಪು. ೦೨-೯); ಜಿನಸ್ತವಂಗಳೊಳಗೊಂಡಂ . . . ಒಱಲ್ದು ಚಿಂತಿಸಿದವಂಗಂ ಸಾರ್ವ ಪುಣ್ಯಾಸ್ರವಂ ಪವಣಿಲ್ಲ (ಸುಕುಮಾ. ೦-೩೪). [ಸಂ.]

**ಪುಣ್ಯಾಹ** (ನಾ). ೧.=ಪುಣ್ಯದಿನ : ಮಾಘಶುದ್ಧದಶಮೀಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು ರೋಹಿಣಿಯೊಳ್ . . . ಆದುದಂದಜಿತ ತೀರ್ಥೇಶಾಬ್ಜಮಿತ್ರೋದಯಂ (ಅಜಿಪು. ೩-೨೨). ೨.=ಪುಣ್ಯಾಹವಾಚನ : ಗಣಕಗಣ ಪುನಃಪುನರುಚ್ಚರಿತ ಪುಣ್ಯಾಹಪ್ರಶಸ್ತರವದೊಡನೆ . . . ಪುಣ್ಯಾಂಗನಾಜನದಾಶೀರ್ವಾದನಾದಮೊದವೆಯುಂ (ಶಂರಾಪು. ೫-೦೨೬ವ); ಚೈತ್ರಸಿತಪಂಚಮಿಯಲುತ್ತರಪೂರ್ವವೇದಿಯ ವಿಮಲಪುಣ್ಯಾಹದ ಮಹಾವಾಚನೆಯ ವಿಸ್ತರಿಸಿ (ಕೊರರಾ. ೦-೭-೪೦). [ಸಂ.]

**ಪುಣ್ಯಾಹವಾಚನ** (ನಾ). ಮದುವೆ ಮೊದಲಾದ ಮಂಗಳಕಾರ್ಯಗಳ ಆರಂಭದಲ್ಲಿ ಮಾಡುವ ಒಂದು ಶುಭಕರವಾದ ಧಾರ್ಮಿಕವಿಧಿ ; ಸ್ವಸ್ತಿವಾಚನ : ಪುಣ್ಯಾಹವಾಚನಕ್ಕೆ ಕುಳಿತ ಮನೆಯ ಯಜಮಾನನಂತೆ ಅವನು 'ಮಮ' ಎನ್ನುವುದನ್ನು ಅಷ್ಟೇ ರೂಢಿಸಿಕೊಂಡಿದ್ದ (ದೀಪಹ. I, ೯೩). [ಸಂ.]

**ಪುಣ್ಸೆ** 'ಪುಳಿಸೆ' ನೋ.

**ಪುತಪುತನೆ** (ಅ). ಒಂದು ಅನುಕರಣಾವ್ಯಯ : ಭೀಮಸೇನನು . . . ಮರವನ್ನು ಒದ್ದು ಅಲ್ಲಾಡಿಸುವನು ; ಹಣ್ಣುಗಳು ಪುತಪುತನೆ ಉದುರುವುವು (ಪಕಥಾ. ೦೬). [ಪುತಪುತ₀+—ಅನೆ₁]

**ಪುತಲಿ** 'ಪುತ್ಥಳಿ' ನೋ.

**ಪುತಳಿ** 'ಪುತ್ಥಳಿ' ನೋ.

**ಪುತುಗು** (ಕ್ರಿ). ಚಡಪಡಿಸು ; ಕಳವಳಿಸು : ಮನದಲಿಬ್ಬಾಶೆಯಲಿ ಬಾಡಿದ ವದನಕಮಲದಲಿ ಮನದೊಳಗೆ ಪುತುಗುತ್ತ ನಿಲ್ಲದೆ ಮನಕತದಿ ಬಾಗಿಲಿಗೆ ಬರುತಾ ವನಿತೆ ಬಳಲಿದಳು (ಶಿಭಾಗ. ೦೦-೦೫-೨). [ ? ]

**ಪುತ್ತ** 'ಪುತ್ತು₁' ನೋ.

**ಪುತ್ತರಿ**, ಹುತ್ತರಿ (ನಾ). ೧. ಹೊಸ ಅಕ್ಕಿ : ಹುತ್ತರಿ ಅಥವಾ ಪುತ್ತರಿ ಎಂದರೆ ಹೊಸ ಅಕ್ಕಿ ಎಂದು ಅರ್ಥ (ಕಪಕು. ೯-೬೩). ೨. ಕೊಡಗರು ಹೊಸ ಅಕ್ಕಿಯನ್ನು ಮನೆಗೆ ತರುವಾಗ ಆಚರಿಸುವ ಹಬ್ಬ ; ಸುಗ್ಗಿ : ಪುತ್ತರಿಯ ದಿನ ಮುಂಜಾನೆಯೇ ಗ್ರಾಮದೇವಾಲಯದ ಅರ್ಚಕ ಮನೆಯೊಳಗೆ ತೀರ್ಥಜಲವನ್ನು ಪ್ರೋಕ್ಷಿಸಿ ಶುದ್ಧಿಗೊಳಿಸಿ ಹೋಗಿದ್ದ (ಹುಲಿಕಾ. ೦೬೬). **ಹುತ್ತರಿ :** ೧. ಹುತ್ತರಿ . . . ಎಂದರೆ ಹೊಸ ಅಕ್ಕಿ (ಕಪಕು. ೯-೬೩). ೨. ಹುತ್ತರಿ ಹತ್ತಿರ ಬಂದಂತೆ ಮನೆಯಲ್ಲಿ ತಿಂಗಳುಗಟ್ಟಲೆ ಅಕ್ಕಿಯ ದರ್ಶನವಾಗುತ್ತಿರಲಿಲ್ಲ (ಮನಕೊ. ೦೬) ; ಹುತ್ತರಿಹಬ್ಬವು ಕೊಡಗರ ಸುಗ್ಗಿಯ ಹಬ್ಬ (ಕಪಕು. ೯-೬೩).

[ದೇ.॥ ಮಲ. ಪುತ್ತರಿ ; ಕೊಡ. ಪುತ್ತರಿ, ಪುತ್ತೇರಿ]

**ಪುತ್ತಲಿ,** ಪುತ್ತಳಿ (ನಾ). ೧. ಬೊಂಬೆ ; ವಿಗ್ರಹ ; ಮೂರ್ತಿ : ನವಕುಮಾರನು ಯಂತ್ರದ ಪುತ್ತಲಿಯಂತೆ ಅವಳ ಸಂಗಡ ನಡೆದನು (ಕಪಾಕಮ. ೨೦). **ಪುತ್ತಳಿ :** ೧. "ಪುತ್ತಳಿಯೆನೆ ಪುತ್ರಿಕೆ" (ಕಬಿಕಂ. ೦೯೩) ; ಹೊಗೆ ಹತ್ತಿದ ಪುತ್ತಳಿಯಂತೆ ಬಂದನುದ್ಯಾನವನವೊಪ್ಪದಿಂ ಕಳೆದು ರಾಜಕುಮಾರನಪಾರಚಿಂತೆಯಿಂ (ಶಂಬಿಕ. ೬ ಸೂಕಪ); ಪುತ್ತಳಿಯನೊಯ್ಯಂತೆ ಯಾನದಿಯೆತ್ತಿ ತಂದರು ಖಳರು ಮೂದಲಿಸುತ್ತ ತೋಱಿದರಿರಿಳು ರಣರೌರವವನವನಿಜೆಗೆ (ಕಾಶಿರಾ. ೨೯-೦) ; ಹುಡುಗಿ ಬೆಳೆದಳು ; ಯೌವನ ಬಂದು ಬಂಗಾರದ ಪುತ್ತಳಿಯಂತೆ ಶೋಭಿಸುವ ಹಾಗಾದಳು (ಪಕಥಾ. ೦೬೬). ೨. ಬಂಗಾರ ; ಚಿನ್ನ : ಪರುಷದ ಪುತ್ತಳಿಯು ಇರವಿನಂತೆ . . . ಅನಲನ ನುಂಗಿದ ಶಿಲೆಯಂತೆ ಅರುಣನ ಕಿರಣವ ಕೊಂಡ ದ್ರವ್ಯದಂತೆ ಇನ್ನೇನುಪಮಿಸುವೆ (ವೀರೇಶಮಾ. ೬-೨೨).

[ಸಂ. ಪುತ್ತಲೀ./ ತುಳು. ಪುತ್ಥೊಳಿ ; ತೆಲು. ಪುತ್ತಳಿ, ಪುತ್ತಡಿ]

**ಪುತ್ತಲಿಕೆ** (ನಾ). ಬೊಂಬೆ ; ಪುತ್ಥಳಿ. [ಸಂ. ಪುತ್ತಲಿಕಾ]

**ಪುತ್ತಲಿಗೊಂಬೆ,** ಪುತ್ತಳಿಗೊಂಬೆ (ನಾ). ಲೋಹ, ಮರ ಮೊದಲಾದುವುಗಳಿಂದ ಮಾಡಿದ ಗೊಂಬೆ : ನಮ್ಮೂರಿಗೆ ಹೆಣ್ಣು ವೇಷದವರು, ಪುತ್ತಲೀಗೊಂಬೆ ಆಟದವರು, ಚಕ್ಕಳಗೊಂಬೇ ಆಟದವರು ಮುಂತಾದವರು ಬರುತ್ತಿದ್ದರು (ಹುಟ್ಟಿಹ. ೬೦). **ಪುತ್ತಳಿಗೊಂಬೆ :** (೬). 'ಪುತ್ಥಳಿಬೊಂಬೆ' ಪರಾ. [ಪುತ್ತಲಿ+ಗೊಂಬೆ₁]

**ಪುತ್ತವುಗು** 'ಪುತ್ತುವೊಗು' ನೋ.

**ಪುತ್ತಳಿ** 'ಪುತ್ತಲಿ' ನೋ.

**ಪುತ್ತಳಿಗೆ** 'ಪುತ್ಥಳಿಕೆ' ನೋ.

**ಪುತ್ತಳಿಗೆಲಸ** (ನಾ). ಬೊಂಬೆಯಾಕಾರದ ಸುಳಿವುಗಳನ್ನು ಕಂಡರಿಸುವಿಕೆ: ಪುತ್ತಳಿಗೆಲಸದ ಬಾಗಿಲು ಕಾಂಚನಭಿತ್ತಿ ಮಾಣಿಕದ ಕಂಬಗಳು (ಭರತ. ೪೭-೩೬).

[ಪುತ್ತಳಿ (=ಪುತ್ತಲಿ) + ಕೆಲಸ]

**ಪುತ್ತಳಿಗೊಂಬೆ** 'ಪುತ್ತಲಿಗೊಂಬೆ' ನೋ.

**ಪುತ್ತಳಿಬಣ್ಣ** (ನಾ). ಚಿನ್ನದ ವರ್ಣ ; ಹೊಂಬಣ್ಣ : ಪುತ್ತಳಿಬಣ್ಣದ ಚಿತ್ರಶಾಲಿಯನುಟ್ಟು ಹಸ್ತಕಂಕಣ ಸಲಿವುತ ಮದುವಳಿಗೆ ಮುತ್ತಿನಾರುತಿ ಬೆಳಗಿರೆ (ಲೋಕಗೀ. ೦೩). [ಪುತ್ತಳಿ (=ಪುತ್ತಲಿ) + ಬಣ್ಣ]

**ಪುತ್ತಳಿಬೊಂಬೆ** (ನಾ). ಚಿನ್ನದ ವಿಗ್ರಹ : ಕೌಶಿಕಾದೇವೀ ಪುತ್ತಳಿಬೊಂಬೆ ಯಂದದಿ ತೊಳಗಿದಳು ತಾನತ್ಯಂತಲಾವಣ್ಯದಿಂದ (ದೇವೀಕ್ಷ. ೪೬).

[ಪುತ್ತಳಿ (=ಪುತ್ತಲಿ) + ಬೊಂಬೆ]

Δ **ಪುತ್ತಟಿ** 'ಪುತ್ಥಳಿ' ನೋ.

Δ **ಪುತ್ತಟಿಗೆ** 'ಪುತ್ಥಳಿಕೆ' ನೋ.

**ಪುತ್ತಾರು** (ನಾ). ಗೌರವಸೂಚಕವಾದ ಒಂದು ವಸ್ತು ; ಸಾಧಾರಣ ಬಿರುದುಗಳು . . . ಪಂಚದೀವಟಿಗೆ, ಪೆಂಡ್ಯ, ಪಾದುಕೆ, ಪುತ್ತಾರು, ಅಂಬುಲಾಕುಳ, ಹಡಪ (ಗುರುದ. ೦೦). [ ? ]

**ಪುತ್ತಿಕೆ** (ನಾ). ೧. ಒಂದು ಬಗೆಯ ದುಂಬಿ : "ಪತಂಗಿಕಾ, ಪುತ್ತಿಕಾ-೨ ಹೆಣ್ಣುಪತಂಗದ ಹುಳುವಿಗೂ, ಈಚಲುಹುಳಕ್ಕೂ, ದೊಡ್ಡ ಜೇನು ನೊಣಕ್ಕೂ ಹೆಸರು" (ಸಿದ್ಧಾಂತಿ. ೦೬೦). ೨. ಬಿಳಿಇರುವೆ ; ಗೆದ್ದಲು ; ಒರಲೆ. ೩.=ಪುತ್ತಿಗೆ. [ಸಂ. ಪುತ್ತಿಕಾ]

**ಪುತ್ತಿಗೆ** (ನಾ). ಬೊಂಬೆ ; ವಿಗ್ರಹ : "ಪುತ್ತಿಗೆನೆ ಪುತ್ರಿಕೆಯೊ" (ಕಶಾಗಾ. ೩೮); ಪುತ್ರಿಕಾ — ಪುತ್ತಿಗೆ (ಕಮದ. ೨೬೦ ಕ್ರಿಯೋ). [< ಸಂ. ಪುತ್ರಿಕಾ]

**ಪುತ್ತಿಡು,** ಹುತ್ತಿಡು (ಕ್ರಿ). ಹುತ್ತವನ್ನು ಕಟ್ಟು : ಮೆಯ್ಯ ಮೇಣ್ ಕೊರಲ್ಗೆ ಪುತ್ತಿಡೆ ಪರ್ಬಿದ ಬಳ್ಳಿ ಸುತ್ತಲುಂ ಸೊಗಯಿಸೆ . . . ಜಾನಿಸುತ್ತಗಲದೆ ನಿಂದನೊರ್ವ ಸವಣಂ (ಕಲ್ಯಾಣ. ೨೨೬); ಒಱಲೆ ತಗುಳ್ದು ಪುತ್ತಿಡುವುದೆಯ್ದೆ . . . ಮುನೀಂದ್ರನ ನಿಶ್ಚಲಾಂಗದೊಳ್ (ಚಿರಿ. ೨-೦೨೨). **ಹುತ್ತಿಡು :** ಗುಡುಗು ಬಿಡದಲೆ ಮೊಳಗೆ ಹುತ್ತಿಡಲೊಱಲೆ ಮಾಳದ ಬೆಕ್ಕು ಪೊಱಲುತಿರೆ (ಕಾಶಿರಾ. ೦೯-೫). [ಪುತ್ತು₁+ಇಡು₁]

**ಪುತ್ತು₁**, ಪುತ್ತ, ಹುತ್ತ, ಹುತ್ತು (ನಾ). ೧. ಗೆದ್ದಲುಗಳು ಕಟ್ಟುವ ಮಣ್ಣಿನ ಗೂಡು ; ಹಾವು ವಾಸಿಸುವ ಗೂಡು : ಕೊಲ್ಲೆಂ ಬಿಸುಡಾಯುಧಮಂ ಪುಲ್ಲುಂ ಕರ್ಚೇಱು ಪುತ್ತುಂ (ಕಬಿರಾ. ೩-೨೦೦) ; ಮಡಗಿಡಲೆಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯನಾಗಳಾಗಳೆ . . . ಮಹೋರಗನೆಯ್ದೆ ಪಲ್ಗಳೆರ್ದೊಡೆ ಕಿಡಿಮೀಟ್ ನೆತ್ತರೊಟ್ದುರ್ಗೆ ಕೊಡುದು ತತ್ಪುಪ್ಪಿಯಂ (ಆಪು. ೨-೪೦) ; ಬೆರಲಂ ಕರ್ಚುವ ಪುತ್ತುಂ

**ಪೊಂಗುಪ್ಪೆ** (ನಾ). ಚಿನ್ನದ ಜಾಡಿ ; ಬಂಗಾರದ ಹೂಜಿ : ಪರಿಮಳಿಪ ಸೀತಳೋದಕವ ಪೊಂಗುಪ್ಪೆಯೊಳು ತುಂಬಿಡುತ್ತೆ (ಶಶಪೋ. ೧೪-೧೭).
[ಪೊಂ (< ಪೊನ್) + ಕುಪ್ಪೆ₃ (< ಕುಪ್ಪಿ₁)]

**ಪೊಂಗುಬ್ಬಿ** (ನಾ). ಚಿನ್ನದ ಗುಬುಟು,—ಗುಮಟ : ಅಂಗದೊಳ ಗಮರ್ದ ಬಣ್ಣಬಗೆಗಳ ಬೆಳ್ಪೊಂಗುಬ್ಬಿವರಿಗೆಯುಂ ತೊಡೆ ಚಾಟು ಗೊಳುತೆ (ಕಂಪು. ೯೬-೫೦). [ಪೊಂ (< ಪೊನ್) + ಗುಬ್ಬಿ₁]

**ಪೊಂಗುರು**, ಪಿಂಗುರು, ಪೆಂಗುರು, ಹೆಂಗುರು, ಹೊಂಗರಿ₂, ಹೊಂಗುರು (ನಾ). ಕೊಕ್ಕರೆಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ : ಕೋಗಿಲೆ ಚಾದಗೆ ಪೋದಗೆ . . . ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕೆ ಲಾವುಗೆ ಸೇನಂ (ಕಾವ್ಯಸಾ. ೧೧೪೪ ಕೊಡ್ರ್ಯ). **ಪಿಂಗುರು** : ಪೊಣರ್ವಕ್ಕಿ ಪಿಂಗುರು[ಪಾಠಾಂ. ರಿ] ಗೂಗೆ ಮುಕುಂದ ಬಳಾಹಕ (ಸೂಕ್ತಿಸು. ೩-೧೪೪). **ಪೆಂಗುರು** : ಗಿಳಿ ಪುರುಳಿ ಪೆಂಗುರು[ಪಾಠಾಂ. ಪಿಂಗುರಿ] ಕಾರಂಡವಾಂದೆ ಮೊದಲಾಗೊಡೆಯ ಗಗನಚರಂ ಪಂಚೇಂದ್ರಿಯಂ ಗಳುಮಾಗಿ (ಪಮ್ಯಾಭಾ. ೯೭-೯). **ಹೆಂಗುರು** : ಬಾನಾಡಿ ಪರ್ಬಕ್ಕಿ ಹೆಂ[ಪಾಠಾಂ. ಹಿಂ]ಗುರು ಕಾಕಂ . . . ಇರ್ಕರ್ಗಂ ತದ್ವನಾಗೌಘದೊಳ್ (ರಾಜಶೇ. ೫-೫೯); ಕಾಕಂ ಬಕಂ ಕೊಂಚೆ ಹೆಂಗುರು . . . ಚಾತಕಮುವಿರ್ಕರ್ಗಂ ತತ್ಸರು ವ್ರಾತದೊಳ್ (ಹರಿಶಚಂ. ೪-೯೭); ಪಾರಾವತಂ ಹೆಂಗುರು ಟೀವಂ ಟಿಟ್ಟಿಭಂ . . . ತದ್ವನಾಂತಸ್ಥಮಿರ್ಕರ್ಗಂ (ಕಂಠೀ. ೩-೩೩). **ಹೊಂಗರಿ₂** : ಹೊಂಗರಿ ಚರಣಾಯುಧಂ ಗಿಡುಗ ಗೀಜಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಪದ್ಮಣಾ. ೬-೨೦೩). **ಹೊಂಗುರು** : ಹೊಂ[ಪಾಠಾಂ. ಹೆಂ]ಗುರು ಚರಣಾ ಯುಧಂ ಶಕುನಿ . . . ತಿತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯ ಮೊಪ್ಪುಗುಂ (ಗಿರಿಜಾ. ೧-೭೪ ; ಪುಲ್ಲಕಾ. ೩-೧೪೦ ನೋ); ಹರಡೆ ಹಸುಬ . . . ಹೊಂಗುರುವಕ್ಕಿಯೆಸೆದವಂದಲ್ಲಿ (ಶ್ರೀಪಾಂ. ೭-೧೮).
[< ಪ್ರಾ. ಪೋಕ್ಖರ./ಸಂ. ಪುಷ್ಕರ./ತೆಲು. ಪೆಗ್ಗುರು, ಬೆಗ್ಗುರು]

**ಪೊಂಗುರುಜು** (ನಾ). ಬಂಗಾರದ ಮಂಟಪ : ಕೇರಿಕೇರಿಯಲಿ ಪನ್ನೀರ ಚಳಯ ರನ್ನದೋರಣ ಪೊಂಗುರುಜುಗಳು ಮೇರೆಯಿಲ್ಲದೆ ಕಾಂತಿ ವಿಡಿದುವು (ಕಂಪಹ. ೨೩-೨೬). [ಪೊಂ (< ಪೊನ್) + ಕುರುಜು]

**ಪೊಂಗುಲ** (ನಾ). ೧. ಚಿನ್ನದ ಕೆಲಸ ಮಾಡುವವರ ಕುಲಕ್ಕೆ ಸೇರಿದವನು ; ಅಕ್ಕಸಾಲಿಗ : ಕಡೆಕೊಳಂದ ಮಣ್ಣಿಗಪ್ಪೊಂಗುಲಂ ಕೊಡಲಿಯುಂ ಬಲ್ಲಸಿಯು ಕಮ್ಮಟಿಉ ಮುಟ್ಟಿಗೆರಿಯೊಡೆಯೊಂ ಓದಲಪೋಲೆಯುಂ ಮುಬ್ಬಳಂ (ಪ್ಯಆಂ. ೧೯೩೪, ೩೮-೨೨ ; ಸು. 11ನೆಯ ಶಶ). ೨. ಒಬ್ಬಾತನ ಹೆಸರು : ಸಾಕ್ಷಿ ಕೂಡಲೂರ್ ಪೊಜ್ಗುಲರು ಎಳ್ಳಡಿಯರು ಬದರಿಯರುಮ್ (ಪ್ಯಆಂ. ೧೯೦೬, ೦೩-೯ ; 726). [ಪೊಂ (< ಪೊನ್) + ಕುಲ]

**ಪೊಂಗುಲ್ವಟ್ಟಿ** (ನಾ). ಒಂದು ಪ್ರದೇಶದ ಹೆಸರು (?) : ತೆನ್ನಣ ಕೊನೆದು ಪೊನ್ಗುಲ್ವಟ್ಟಿಯ ತೆನ್ನೊಳ್ಪೆ ತೆನ್ನಣಸೀಮೆ (ಪ್ಯಆಂ. ೦೯೨೭, ೦೨೨-೬೦ ; 808 ?). [ ? ]

**ಪೊಂಗುಳ** (ನಾ). ಚಿನ್ನದ ಕುಳ,–ಗುಳ : ಪೊಂಗುಳಂಗಳಂ ಕಬ್ಬಿಣದ ಗುಳವೆಂದು ಕೈಯಲೀಯೆ (ಶಕುಪು. ೬-೫-೨).
[ ಪೊಂ (< ಪೊನ್) + ಕುಳ₁ (< ಕುಟು) ]

**ಪೊಂಗುಳಿಗೆ** (ನಾ). ಚಿನ್ನದ ಗುಳಿಗೆ : ಪೊಂಗುಳಿಗೆಗಳ ಪರಿಯೊಳಂಗುಷ್ಠಂಗಳೊಪ್ಪುಗು ನಿಮಿರ್ದ ಕೋಮಳದಂಗುಳಂಗಳು ಮೆಱೆವವುಡುಗಣದೊಲು ಪದನಖಾಳಿ (ಅಕಪು. ೪-೦೭). [ ಪೊಂ (< ಪೊನ್) + ಗುಳಿಗೆ₁]

**ಪೊಂಗುಱುವ** (ನಾ). ಚಿನ್ನದ ದ್ವೀಪ : ಪಾಲ್ಗಡಲೊಳಗಣ ಪೊಂಗುಱುವಂ ಗಡಮೆನಿಸಿದುದಮರನಗಮಿದೇನಚ್ಚರಿಯೋ (ವರ್ಧಮಾ. ೦೨-೩೫).
[ ಪೊಂ (< ಪೊನ್) + ಕುಱುವ₁ ]

**ಪೊಂಗೆಜ್ಜೆ**, **ಹೊಂಗೆಜ್ಜೆ** (ನಾ). ಚಿನ್ನದ ಗೆಜ್ಜೆ : ಮಧುಪಾನದಿಂ ಸೊಕ್ಕಿದ ಮುತ್ತುಂಬಿಯ ಧ್ವನಿಗಳಂತೆ ಜರ್ಝರವಾದ ಪೊಂಗೆಜ್ಜೆಗಳ ಮೊಲ್ಲುಲಿಯೊಳಂ (ಶಾಂತೀಪು. ೬೭) ; ಪೊಂಗೆಜ್ಜೆಯುಲಿಪು ನೆಲಸುಗ್ಗಡಿಸುತ್ತುಂದಸೆಯು . . . ನಡೆತರುತಿರ್ದಳ್ (ಗಿರಿಜಾ. ೩-೧೧೬) ; ಮೊಱೆಯಲೊಡ್ಡಾಣದ ಪೊಂಗೆಜ್ಜೆಗಳ ದನಿ . . . ಬಾತುತ ಪಿರಿದು ಸಂಭ್ರಮದ ಬೀಱದರು (ಕಂಪಹ. ೨೧-೧೧೧). **ಹೊಂಗೆಜ್ಜೆ** : ಹೊಂಗೆಜ್ಜೆಗಳ ಮುಕುರದ ಘಂಟೆಗಳ . . . ವಜ್ರಮಯಧಾರೆಗಳಲೆಸೆದುದು ಭದ್ರಮಂಟಪ (ಕುಮಾ್ಯಆ. ೦೨-೦೨); ಪುಟ್ಟಪಾದಗಳ ಹೊಂಗೆಜ್ಜೆಗಳ್ ಘಲಿರೆನೆ ದಟ್ಟಡಿಯಿಡತೊಡಗಿದನು (ಕೋಟಶ. ೦೭-೬೨); ಸುಗತಿಗುಲಿವ ಹೊಂಗೆಜ್ಜೆಗಳ ರಭಸದಿಂದೆಸೆವ ನಿರ್ಮಲ ವಾಜಿಯಂ ಸುವೇಗಂ ತುದು ನಿಲಿಸಿದಂ (ಕೃಷ್ಣಾ. ೫-೧೧).
[ ಪೊಂ (< ಪೊನ್) + ಗೆಜ್ಜೆ₁ ]

**ಪೊಂಗೆಲಸ**, ಹೊಂಗೆಲಸ (ನಾ). ಚಿನ್ನದ ರೇಕಿನ ಕೆಲಸ : ಪೊಸಪೊಂಗೆಲಸದ ಯೂಪಸ್ತಂಭಂಗಳ ಭಂಗಿಯನನುಕರಿಸಿದುವುಳ್ಳೊಡೆಯಾ ಕಮಲ ದಳಾಂಬಕಿಗೆ (ಜಯುಸಾ. ೩-೬೦). **ಹೊಂಗೆಲಸ** : ತೀವಿದವು ಹೊಂಗೆಲಸ ಗತಿಯಲಿ ಲೋವೆಗಳು (ಕುಮಾ್ಯಆ. ೦೨-೯) ; ಹೊಂಗೆಲಸದ ಪೊಚ್ಚ:ಪದುಮ ವಿಟ್ಟರದೊಳು ಮಂಗಲಮಜ್ಜನಗೆಯ್ದು (ಕೋಟಶ. ೨೦-೩).
[ ಪೊಂ (< ಪೊನ್) + ಕೆಲಸ ]

**ಪೊಂಗೇದಗೆ**, ಹೊಂಗೇದಗೆ (ನಾ). ಒಂದು ಬಗೆಯ ಕೇದಗೆ ; ಹೊಂಬಣ್ಣದ ತಾಳೆಹೂವು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆ ಯೆಂಬ ಪಲವು ಪೂಮಾಲೆಗಳಂ ಬಗೆಯಱದೋಲಗಿಪುದು ಮಾಲೆಗಾಱನಂ ಪೋಲ್ತುದಗ್ರಮಾಲ್ಯಮಹೀಜಂ (ಅದಿಪು. ೫-೩೬). ಸೋಮರ್ಗಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱ (ಕಂಠಾಪಚ. ೨-೦೩ ಪ) ; ವನಮನಾಱೆ ಬಳಸಿ ಕಂಗೊಳಿಪ ಪೊಂಗೇದಗೆಗಳೊಪ್ಪಿದುವು (ಕಂಪು. ೯೫-೦೮). **ಹೊಂಗೇದಗೆ** : ಕುರವಕದ ಮಕುಳದೆಳೆಗೌಂಗಿನ ಹೊಂಗೇದಗೆಯ ಬಳಸಿನೊಳಂ . . . ಲತಾಮಂಟಪಂಗಳ್ ಮನಂಗೊಳಿಪುವು (ಕಾದಂಪು. ೯೭) ; ಈಳೆ ಹೊಂಗೇದಗೆಯ ಕಂಚಿಯ . . . ಕಿತ್ತೊರಸಿ ಹುಡಿಹುಡಿ ಮಾಡಿದನು (ಕಾಶಿಕಾ. ೧೧-೨೦) ; ಹೊಂಗೇದಗೆಯೆಸಳಂ ಮುಸಿಸಿ (ಜಯುಸಾ. ೨-೦೪).
[ಪೊಂ (< ಪೊನ್) + ಕೇದಗೆ]

**ಪೊಂಗೊಡ**, ಹೊಂಗೊಡ (ನಾ). ಚಿನ್ನದ ಕೊಡ ; ಸ್ವರ್ಣಕುಂಭ : ಪೊಂಗೊಡಂ ತಮಾಳಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕ ಮಾಂತುದು ಕರ್ಪನಾಕೆಯಾ(ಕಂಕಥಾ. ೧-೦೨೫) ; ಬೆಳಿಯ ಸಾಸವೆ ಪೊಂಗೊಡ ನಷ್ಟಶೋಭೆ ಕನ್ನಡಿ . . . ಎಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನುರಾಗಮಂ (ಕಾವ್ಯಸ. ೬೩೨) ; ಕೀಲಾಲಮನಾಱೆ ಸಾಸಿರಸೂಳ್ಪೊಂಗೊಡದಿಂ ತಂದು . . . ಅಭಿಷೇಕಂಗೆಯ್ದಂ (ಉದ್ಯಡೀ. ೩-೯೫). **ಹೊಂಗೊಡ** : ತೊಳೆದ ಹೊಂಗೊಡದೊಳಗ್ಗಣಿಗಳಂ ತುಂಬಿ ತಂದಿಳುಹಿದರು ಕಾಮಿನಿಯರು (ಹಕಾ. ೩-೫೭) ; ಹೊಂಗೊಡನ ಹಿಡಿದ್ಯೆತರಲಿ ನಾರಿಯರು (ಕುಮಾದ್ರೋ. ೧-೩೭) ; ಮಜ್ಜನಕುಷ್ಣಜಲ ಹೊಂಗೊಡದಲಿಳುಹಿದವು (ಕೊರಠಾ. ೫-೩-೩೪). [ಪೊಂ (< ಪೊನ್) + ಕೊಡ₂]

**ಪೊಂಗೊಡೆ** (ನಾ). ಚಿನ್ನದ ಛತ್ರಿ ; ಬಂಗಾರದ ಸತ್ತಿಗೆ : ಶಕ್ರಂಗೆತ್ತಿದ ಮಾಣಿಕಗೊಡೆ ಪೊಂಗೊಡೆ ಬೆಳ್ಗೊಡೆಯೆನಿಸಿದುದು ಶಶಿಬಿಂಬಂ (ಜಗಪು. ೦೭-೧೧೭) ; ಚೈತ್ರನೆತ್ತಿದ ಪಲವುಂ ಪೊಂಗೊಡೆಗಳೆನಿಸಿ ಪೂತು ಮನಂಗೊಳಿಸಿದುವೆಸೆವ ಕರ್ಣಿಕಾರಕುಜಂಗಳ್ (ಕುಸುಮಚ. ೫-೪೮).
[ಪೊಂ (< ಪೊನ್) + ಕೊಡೆ₂]

**ಪೊಂಗೊಳಗು** (ನಾ). ಪಶುಗಳ ಗೊರಸಿಗೆ ತೊಡಿಸುವ ಚಿನ್ನದ ಆಭರಣ : ಪೊಂಗೋಡು ಪೊಂಗೊಳಗು ಪೊಂಗೆಜ್ಜೆ ಘಂಟೆಗಳು ಪೊಂಗಲಶ ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗರಾ. ೫-೦೫).
[ಪೊಂ (< ಪೊನ್) + ಕೊಳಗು]

ಬೆಲೆವೆಣ್ಣಳಿಸೆದರ್ (ಚುರಾಶಾಂ. ೨೬-೬೬). 'ಪುತ್ತುರಿ' ಪರಾ. [ ? ]

**ಪುತ್ತೂರ್** (ನಾ). ಒಂದು ಊರಿನ ಹೆಸರು : ಪುತ್ತೂರಾ ಚೆಟ್ಟಿಮು ಗೊಳುತ್ತಿಬ್ದ ಪುತ್ತೂರತ್ತಾಣೆಗೆ ಅಯ್ಯೂದ್ದುವುಬ್ಬ ಕಟನಿಯುಂ ಅಯ್ಯೂದ್ದುವುಬ್ಬ ತೊಟ್ಟಪ್ಪಟ್ಟುಂ ಕೊಟ್ಟರ್ (ಎಕ. X. ಕೋಲಾರ. ೨೨೯-೩; ಸು. 750); ಪುತ್ತೂರುಡೆ ಶಿವವಾರವ್ಮುಂ . . . ಬಾಳೆ ತೊಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೊದು (ಎಕ. X. ಕೋಲಾರ. ೨೩೦-೨; ಸು. 800 ?). 'ಹುತ್ತೂರು' ಪರಾ. [ ? + ಊರ್ ]

**ಪುತ್ತೇಱು** (ಕ್ರಿ). (ಯುದ್ಧದಲ್ಲಿ ಸೋತು) ಶರಣಾಗುವುದನ್ನು ಸೂಚಿಸುವುದಕ್ಕಾಗಿ ಹುತ್ತದ ಮೇಲೆ ನಿಲ್ಲು : ಪುತ್ತೇಱಿದನಂ ಕೈದುವನಿತ್ತನನೇರ್ಪೆತ್ತನಂ ರಣಾಂಗಣದೊಳ್ ಬೆನ್ನಿತ್ತನನಿಱಿಯರ ವೋಘಂ ಮತ್ತೆನಿಸದೆ ತುಱಿಲ ಸಂದ ಜನವುಂ ಜಗದೊಳ್ (ಕಂಕಕಂ. ೨೯೯-೦೩). [ಪುತ್ತು$_1$ + ಏಱು$_1$ (<ಏಱುಗ್$_1$)]

**ಪುತ್ಥಳಿ**, ಪುತಲಿ, ಪುತಳಿ, ಪುತ್ತಳಿ (ನಾ). ೧. ಬೊಂಬೆ; ವಿಗ್ರಹ; ಮೂರ್ತಿ: ಅರಗಿನ ಪುತ್ಥ[ಶಾಕಾಂ. ತ್ತ]ಳಿಯನುರಿಯು ನಾಲಗೆ ಹೊಯಿದು ಮಾತಾಡುವ ಸರಸ ಬೇಡ (ಏಕವ. ೬೬೦ ೮); ಅಱಿವು ಮಯಣಾಮಯದ ಭಕ್ತಿಯೊಳೆಱಗಿಸಿದ ಪುತ್ಥಳಿಯವೊಲು ಕಡುಬೆಱಗ ಕೇಣಿಯು ಕೊಂಡು ಮೌನದೊಳಿದ್ದನಾ ವಿದುರ (ಕುವ್ಯಾ.ಉ. ೯-೦೩); ವಾರಿಕಲ್ಲು ಪುತ್ಥಳಿ ಅಪ್ಪುವನೊಡಗೂಡಿದಂತೆ ಮಾಡಿತ್ತೆನ್ನ . . . ನಿಮ್ಮ ವಚನೋಪದೇಶ (ಅಂಬಡೇ. ೨೦-೧೦). **ಪುತಲಿ :** ೨. ಹಳೆಯ ಕಾಲದ ಒಂದು ಚಿನ್ನದ ನಾಣ್ಯ; ವರಹ : ಇನ್ನೂ ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದುವು. ಯಾವುವೆಂದರೆ—೧ ಗಬರು . . . ೧ ಪುತಲಿ (ಚಕ್ರಶಾ. ೧೦೯). **ಪುತಳಿ :** ೧. ನೂಲಿನ ನಂಬರ ೪೦. ಬಿಳೇದು . . . ಗೌಳಿಗಿತ್ತಿ ಛಾಪ, ಪುತಳಿಛಾಪ, ಚಕ್ರಛಾಪ (ಮುಂಬವ್ಯಾ. ೦೦೦). ೨. ನಾನು ನಿನಗೆ ಎರಡು ಪುತಳಿಗಳನ್ನು ಕೊಡುತ್ತೇನೆ . . . ವೆಚ್ಚ ಮಾಡಿಕೋ (ಮುಂಬಯು. ೫-೨೬೦). ೩. ಚಿನ್ನದ ನಾಣ್ಯಗಳಿಂದ ಮಾಡಿದ ಸರ: ಬಂಗಾರ ಬಂಗಾರ ಅನಲಿಕ್ಕೇನಂ ? ನಾಲ್ಕು ತೊಲೆ ಪುತಳಿ ಅವ. ಆರ ತೊಲೆ ಪಾಟಲಿ ಅವ (ಅಟೋಕ. ೧೦೯). Δ **ಪುತ್ತಳಿ :** ೧. "ಪುತ್ತಳಿಗೆಯೆಂದು ಪುತ್ತಳಿ" (ಕಶಾ. ೬೬-೯೬೮); ಸಿರಿಕಂಡದ ಕೋಟ್ಟಿಸಱಿಂ ಪುದಿದು ಜಂತದಿಂ ಕಡೆದು ಕಂಡರಿಸಿದ ಪುತ್ತಳಿಯಂತಿರ್ಪಳ್ (ಕಬ್ಬಿಕಾ. ೩೦೩); ಲೆಪ್ಪದ ಬೋಱಬೆಯನೆರಕಂಬೊಯ್ದೊಪ್ಪಂಬೂಸಿದ ಪುತ್ತಳಿಯಂ ಬೇಱಾಗಿ ತೋಱುಗುಮಲ್ತೆ (ರಾಮಾಶ್ವ. ೦೦-೨೦).

ಪುತ್ಥಳಿ ಬೊಂಬೆ=ಸುಂದರವಾದ ವಿಗ್ರಹ : ಸಾಧುಸಜ್ಜನರ ಚಿತ್ತದಿ ಹೊಳೆವ ಪುತ್ಥಳಿಬೊಂಬೆ (ಪುರಂದ. ೧-೨೦೦-೩) . ಪುತ್ಥಳಿಯ ಸರ=ಚಿನ್ನದ ನಾಣ್ಯಗಳಿಂದ ಮಾಡಿದ ಸರ : ಅದರಲ್ಲಿನ ವಸ್ತು ಒಡವೆಗಳು . . . ಬಂಗಾರದ ಕೈಬಳೆ, ಪುತ್ಥಳಿಯ ಸರ, ಗುಂಡಿನ ಟಿಕ್ಕಿ, ತೋಳಬಂದಿ, ಚಿಂತಾಕು (ಮಣ್ಣುಹ. ೨೦). [<ಸಂ. ಪುತ್ತಲೀ]

**ಪುತ್ಥಳಿಕೆ**, ಪುತ್ತಳಿಗೆ, ಪುತ್ತಟಿಗೆ (ನಾ). = ಪುತ್ತಲಿಕೆ : ತಳತಳಿಸಿ ತೊಳಗುವ ಪಳುಕಿನ ಪುತ್ಥಳಿಕೆಯಂತೆ ಕರಮೆಸೆದಿರ್ದಳ್ (ಕಾದಂಪೂ. ೬೬೯). **ಪುತ್ತಳಿಗೆ :** "ಪುತ್ತಳಿಗೆಯೆಂದು ಪುತ್ತಟಿ" (ಕಶಾ. ೬೬-೯೬೮); ದೂಳಿಗೊಂಡ ಪುತ್ತಳಿಗೆ ಮಂಜುಗೊಂಡಬ್ಜಿನಿ ಕಾರ್ಮುಗಿಲೊಳಕೊಂಡೆಳವೆಱೆಯೆನೆ ಮೃಗಲೋಚನೆ ಸೀತೆ ನಾಡೆ ಪಾಡೞಿದಿರ್ದಳ್ (ಪಂರಾಮಾ. ೧೦-೯೩); ಕತ್ತುರಿಯ ಬೊಟ್ಟೆ ಮೋಣೆದು ಪುತ್ತಳಿಗೆಯೊ ನೀಳಮಣಿಯ ತೋಳ್ಗವ್ಪುದೊಳೀ ತೆತ್ತಿಸಿದುದೆನಿಸಿ ಧರೆಯುಂ ಪೊತ್ತುದು ಭುಜವಪ್ರಕೋಟಿ ಸಿರಿವಲ್ಲಹನಾ (ಎಕ. VIII. ನಗರ. ೩೬-೯೬; 1147 ; ಶಾಶಮುಂ. ೫೦೦ ನೋ). Δ **ಪುತ್ತಟಿಗೆ :** "ಪಾಂಚಾಲಿಕಾ, ಪುತ್ರಿಕಾ—ಈ ೨ ಪುತ್ತಟಿಗೆ" (ಹಲಾಯು. ೬೦-೩೩೯). [<ಸಂ. ಪುತ್ತಲಿಕಾ]

**ಪುತ್ರ** (ನಾ). ೧. ಮಗ; ಕುಮಾರ : "ನಂದನ ತನುಜನ್ಮ ತೋಕ ಸುತ ಪುತ್ರ ತನೂಭವ ಸೂನುನಾಮಕಂ ತನಯಂ" (ಪದ್ಮಕೋ. ೩೯-೦೭); ಇಳಾಪ್ರಭುವೊಗೆದನುದಿತ ಕಾಯಪ್ರಭೆಯೊಗೆದಿರೆ ದಳಿತಶತ್ರುಗೋತ್ರಂ ಪುತ್ರಂ (ಶಂಕಶಾ.೦-೦೨೭); ಪುತ್ರಕಳತ್ರ ಪರಿಗ್ರಹಗಾತ್ರಧನೈಶ್ವರ್ಯವೆಂದಿವಾರ್ಗಮನಿತ್ಯಂ (ತ್ರಿಕ್ಷತ್ರಿ. ೦೩-೨೭). ೨. (ಪ್ರಾಣಿಗಳ) ಮರಿ; **ಪೋತ.** ೩. ಚಿಕ್ಕವರನ್ನು ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಶಬ್ದ. ೪. (ಸಮಾಸದ ಕೊನೆಯಲ್ಲಿದ್ದಾಗ) ಚಿಕ್ಕದು, ಸಣ್ಣದು ಎಂಬರ್ಥದಲ್ಲಿ ಬರುವ ಶಬ್ದ. ೫. [ಜ್ಯೋತಿ] ಜನ್ಮಕುಂಡಲಿಯಲ್ಲಿ ಐದನೆಯ ಸ್ಥಾನ : 'ಪುತ್ರಮಂದಿರ' ಪರಾ. [ಸಂ.]

**ಪುತ್ರಂಜಿ** 'ಪುತ್ರಂಜೀವಿ' ನೋ.

**ಪುತ್ರಂಜೀವ** (ನಾ). ಒಂದು ಬಗೆಯ ಸಸ್ಯ; P ಇದರ ಹೂವು ಅಥವಾ ಬೀಜಗಳಿಂದ ಮಾಡಿದ ಹಾರವನ್ನು ಧರಿಸುವುದರಿಂದ ಮಕ್ಕಳು ಆರೋಗ್ಯವಂತರಾಗಿ ಬದುಕುವರೆಂಬ ಭಾವನೆ ಇದೆ : ಪುತ್ರನಿಗೆ ಜೀವದಾನ ಮಾಡುವ ಗುಣ ಇದರ ಬೀಜಗಳಿಗಿವೆಯೆಂಬ ನಂಬಿಕೆ ಅವರಲ್ಲಿ ಊರಿತ್ತು. ಆದ್ದರಿಂದ ಮರಕ್ಕೆ ಪುತ್ರಂಜೀವ ಎಂದು ನಾಮಕರಣ ಮಾಡಿದರು (ಹಸುಹೂ. ೩೦). [ಸಂ.]

**ಪುತ್ರಂಜೀವಿ**, ಪುತ್ರಂಜಿ, ಪುತ್ರಜೀವಿ (ನಾ). = ಪುತ್ರಂಜೀವ : "ಪುತ್ರಂಜೀವಿ, ಮೆಣಸಿನ ಕಾಳೆ" (ಸಸ್ಯಪ. ೦೦೦) ; (ವೃಕ್ಷಗ. ೬೫-೦೩೩೬). **ಪುತ್ರಂಜಿ :** ಪುತ್ರಂಜಿ—ಮಧ್ಯಮ ಆಕಾರದ್ದು...ಇದರ ಕಾಯಿಗಳನ್ನು ಹುಡುಗರ ಕೊರಳಲ್ಲಿ ಕಟ್ಟಿದರೆ ಬೇನೆ ಬರುವುದಿಲ್ಲವಂತೆ. ಆದರಿಂದ "ಪುತ್ರಜೀವಿ" ಎಂಬ ಹೆಸರು ಬಂದಿದೆ (ಕಾಗ. ೯೩). **ಪುತ್ರಜೀವಿ :** "ಪುತ್ರಜೀವಕಂ–ಪುತ್ರಜೀವಿ" (೬ಕಥ. ೦೦೦) ; ಪುತ್ರಜೀವಿಯ ಮಣೆಯಂ ಸೀಗೆಕಾಯ ರಸದಲ್ಲಿ ಅರೆದು ಅಲ್ಪ ಕಾಸಿ ಕುಡಿಯಿಸಲು ಗುರುಗಂಜಿಯ ವಿಷ ಮಾಣ್ಗುಂ (ಏವೈಪ. ೬೦) ; ಪುತ್ರಜೀವಿ ಬೀಜದ ತಿರುಳು ತಣ್ಣೀರಿನಲ್ಲಿ ಅರೆದು ನಸ್ಯ, ಅಂಜನ, ಪಾನ, ಲೇಪನಗಳಂ ಮಾಡಿಸಲು ಸಕಲವಿಷದೋಷಂಗಳು ಪರಿಹರವಹವು (ವೈದ್ಯಸಾ. II, ೦೬೭).

[<ಸಂ. ಪುತ್ರಂಜೀವ]

**ಪುತ್ರಂಬಡೆ** (ಕ್ರಿ). ಮಗನನ್ನು ಪಡೆ; ಪುತ್ರನನ್ನು ಹೊಂದು : ಪುತ್ರಂಬಡೆದೆನೆ ಪರಮಪವಿತ್ರೀಕೃತಭವಸುಖಾಮೃತಕ್ಕಾನೀಗಳ್ ಪಾತ್ರಂಬಡೆದೆಂ (ಸುಕುಮಾ. ೦೦-೨೯). [ಪುತ್ರ + ಪಡೆ$_1$]

**ಪುತ್ರಕ** (ನಾ). ಮಗ : ಕೌರವರು ತಾಮಸರು ಸುತರಲ್ಲವವರೆನಗೆ... ಅತಿಪ್ರೇಮದಿಂ ಪುತ್ರಕನು ನೀನೆನಗೆ (ತಿಮ್ಮಸ್ತ್ರೀ. ೨-೪೪). [ಸಂ.]

**ಪುತ್ರಕಾಮೇಷ್ಟಿ** (ನಾ). ಮಗನನ್ನು ಪಡೆಯಬೇಕೆಂಬ ಉದ್ದೇಶದಿಂದ ಮಾಡುವ ಯಜ್ಞ : ಸಂತತಿಯ ಸೌಭಾಗ್ಯಸಿರಿಯ ನಿಶಾಂತಕಿದೆಲಾ ನಿನಗೆ ಸಪ್ತಸುತಂತು ನಿರುಪಮ ಪುತ್ರಕಾಮೇಷ್ಟಿ ಪ್ರಸಿದ್ಧಕದ (ತೊರೆರಾ. ೧-೪-೦೦); ಅಯೋಧ್ಯಾಪುರದೊಳವತರಿಸಿದಂ ಮಹಾವಿಷ್ಣು ಸುತರೂಪದಿಂ ರಾಮಾಭಿಧಾನದೊಳ್ ಪುತ್ರಕಾಮೇಷ್ಟಿಯಿಂ ದಶರಥಂಗೆ (ಕೈಬಾಕಾ. ೦೪-೦); ಗುರುವಸಿಷ್ಠಂ ಪುತ್ರಕಾಮೇಷ್ಟಿಯಂ ಪೇಳ್ದು...ಯಜ್ಞಶಾಲೆಗೆ ನಡೆದನಲ್ಲಿಂದೆ (ಶ್ರೀರಾಮಾ. ೯-೨೩೪). [ಸಂ.]

**ಪುತ್ರಕಾಮ್ಯ** (ನಾ). ಮಗನನ್ನು ಪಡೆಯಬೇಕೆಂಬ ಅಪೇಕ್ಷೆ,—ಆಸೆ : ನಿನ್ನನುಗ್ರಹವಾದುದಾದರೆ ತದ್ವಿಧಾನದಲಾದರಿಸುವೆನು ಪುತ್ರಕಾಮ್ಯವನು (ಕುವ್ಯಾಆ. ೪-೩೪). [ಸಂ. ಪುತ್ರಕಾಮ್ಯಾ]

**ಪುತ್ರಘಾತಿನಿ** (ನಾ). ಮಗನನ್ನು ಕೊಲ್ಲುವವಳು ; ಶಿಶುಹತ್ಯ ಮಾಡುವವಳು : ತಡೆ, ಪುತ್ರಘಾತಿನಿ! ಅದನ್ನು ಕೊಲ್ಲಬೇಡ! (ತಿಶರಾ. ೨).

[ ಸಂ. ಪುತ್ರಘಾತಿನೀ ]

**ಪುತ್ರಜೀವಿ** 'ಪುತ್ರಂಜೀವಿ' ನೋ.

**ಪುತ್ರದಾತ್ರಿ** (ನಾ). (ಬಂಜೆತನವನ್ನು ನಿವಾರಿಸುವುದೆಂದು ನಂಬಲಾದ) ಒಂದು ಬಗೆಯ ಔಷಧೀ ಸಸ್ಯ ; ಶ್ವೇತಪುಷ್ಪಿಕೆ : "ವಾತಾರಿಃ—ಗಂಟು ಭಾರಂಗಿ, ಸೂರಣ, ಬಿಳಿಯಾಡಲ, ಪುತ್ರಧಾ[ದಾ]ತ್ರೀ" (೬೩೦. ೦೩೦); "ವೇಶೀಜಾತ–ಪುತ್ರಧಾ[ದಾ]ತ್ರಿ" (೬೩೧. ೦೩೭). [ಸಂ. ಪುತ್ರದಾತ್ರೀ]

**ಪುತ್ರದೆ** (ನಾ). ಒಂದು ಬಗೆಯ ಔಷಧೀಸಸ್ಯ; ವಂಧ್ಯಾಕರ್ಕೋಟಕಿ : "ದೃಷ್ಟಿಪ್ರಭಾ—ಪುತ್ರದೆ" (೬೩೧. ೭೯). [ಸಂ. ಪುತ್ರದಾ]

**ಪುತ್ರದೋಹದ** (ನಾ). ಗಂಡುಮಗುವನ್ನು ಪಡೆಯಬೇಕೆಂಬ ಬಯಕೆ ; ಗಂಡುಮಗುವು ಹುಟ್ಟಬೇಕೆಂದು ಉಂಟಾಗುವ ಹಂಬಲ : ಹರಿಹರದೇವಿಗೆ ಪುತ್ರದೋಹದ [ಪಾಠಾಂ. ಮೋಹವು]ಬಂದು ಭರದಿಂದ ಪುಟ್ಟಿತೆದೆಯೊಳು (ಕುಣಸಾಂ. ೭ ಸೂತನಿ). [ಸಂ.]

**ಪುತ್ರದೋಹಳ** (ನಾ). =ಪುತ್ರದೋಹದ : ತಮ್ಮ ಮೆಯ್ಯುಟಿವಿನ ನಿರ್ಬರಮಂ ನಮೆದರೇನವರ್ಗಾದುದೊ ಪುತ್ರದೋಹಳಂ (ಶಂಕಥಾ. ೦–೦೩೫); ತಾನುಂ ಪುತ್ರದೋಹಳಕುತೂಹಳೆಯುಮಾಗೆ (ಮಲ್ಲಿಪು. ೩–೦೦೫). [ಸಂ. ಪುತ್ರದೋಹಲ]

**ಪುತ್ರದೌಹೃದ** (ನಾ). = ಪುತ್ರದೋಹದ : ಇವು ಮೊದಲಾಗೆ ಪಲವುಂ ಪುತ್ರದೌಹೃದಂಗಳಂ ಪಂಬಲಿಸುತ್ತುಮಿರ್ದಳ್ (ಪುಷ್ಪಪು. ೩–೯೯ ವ). [ಸಂ.]

**ಪುತ್ರಮಂದಿರ** (ನಾ). [ಜ್ಯೋತಿ] ಜನನಕುಂಡಲಿಯಲ್ಲಿ ಐದನೆಯ ಸ್ಥಾನ ; ಜಾತಕನಿಗೆ ಪುತ್ರಪ್ರಾಪ್ತಿಯನ್ನು ಸೂಚಿಸುತ್ತದೆಂದು ನಂಬಲಾದ ಸ್ಥಾನ : ಮೇಣ್ ಬರೆ ತದ್ವಿತೀಯಮೆನಿಪಾ ದ್ರೇಕ್ಕಾಣಮಾ ಪುತ್ರಮಂದಿರದೊಳ್ ಮೇಣ್ ಬರೆ ತತ್ತೃತೀಯಮೆನಿಪಾ ದ್ರೇಕ್ಕಾಣಮಾ ಧರ್ಮಮಂದಿರದೊಳ್ ವಾಕ್ಪತಿಯಿರ್ದನೆಂದಱಿಗೆ (ಜಾತಕ. ೨೯–೨). [ಸಂ.]

**ಪುತ್ರವಂತ** (ನಾ). ಗಂಡುಸಂತತಿಯುಳ್ಳವನು. [ಸಂ. ಪುತ್ರವತ್]

**ಪುತ್ರವತಿ** (ನಾ). ಮಗನನ್ನು ಪಡೆದವಳು : ಪುತ್ರವತಿಯಹುದು ಜನ್ಮಾಂತರದ ಪುಣ್ಯಮ್ಮೆಸಲೆ ಪೆಣ್ಗೆ (ಶೈಮಿಶಾ. ೦೬–೦೯); ಪುತ್ರವತಿಯಾದ ಶಕುಂತಳೆಯನ್ನು . . . ದುಷ್ಯಂತನು ಪರಿಗ್ರಹಿಸಿದನು (ಶಾಕುಂತ. ೦೦೫–೦೨). [ಸಂ. ಪುತ್ರವತೀ]

**ಪುತ್ರವಧು** (ನಾ). ಮಗನ ಹೆಂಡತಿ ; ಸೊಸೆ : "ಸ್ನುಷಾ, ಜನೀ, ಪುತ್ರವಧೂಃ, ವಧೂಃ—ಈ ೪ ಸೊಸೆ" (ಕಠಾಯು. ೬೩–೩೫೦). [ಸಂ. ಪುತ್ರವಧೂ]

**ಪುತ್ರವಾತ್ಸಲ್ಯ** (ನಾ). (ಹಿರಿಯರಿಗೆ) ಮಕ್ಕಳ ಮೇಲಿರುವ ಪ್ರೇಮ,–ಅಕ್ಕರೆ : ಎಲ್ಲ ಮಿತ್ರನೆ, ಮಾತೃಶ್ರೀಯವರಿಗೆ ನಿನ್ನಲ್ಲಿ ಪುತ್ರವಾತ್ಸಲ್ಯವಿರುವುದು (ಶಾಕುಂತ. ೨೯–೦೫); ಮುಪ್ಪಿನ ತಂದೆಯು . . . ಪುತ್ರವಾತ್ಸಲ್ಯದಿಂದ ಆ ದುಃಖವನ್ನು ಮರೆತು ನನ್ನನ್ನು ಸಾಕಿಕೊಂಡಿರಲಾಗಿ (ವಚಕಾ. ೩). [ಸಂ.]

**ಪುತ್ರವಿಹೀನ** (ನಾ). ಮಗನಿಲ್ಲದವನು ; ಗಂಡುಸಂತಾನವಿಲ್ಲದವನು : ಕುಂಬಿನಿಯೊಳೆಮ್ಮ ಕುಲದ ತಿಲಾಂಬುವ ಮುಂದಕಟ ಕುಡುವನಾವನೆ ನುತ್ತುಂ ನಾಂ ಬಿಡೆ ಪುತ್ರವಿಹೀನಂ ಕಂಬನಿದೊಳೆದುಳಿದ ಜಲವ ಪಿತೃಗಳ್ ಪೀರ್ವರ್ (ಶಾಕುಂತ. ೯೮–೦೫೭). [ಸಂ.]

**ಪುತ್ರಸಂತತಿ** (ನಾ). ಗಂಡುಸಂತಾನ ; ಗಂಡುಮಕ್ಕಳ ಜನನ : ಗಾಂಧಾರಿ ಗಾಮದು ಪುತ್ರಸಂತತಿ (ಕುಪ್ರಾ. ೮. ೮–೩೦). [ಸಂ.]

**ಪುತ್ರಸಂತಾನ** (ನಾ). ಪುತ್ರಸಂತತಿ : ಗುರು ವಸಿಷ್ಠಂ . . . ಪುತ್ರಸಂತಾನವಹುದೆಂದು ನಂಬಿಗೆಗೊಟ್ಟು ಸಂತೈಸಿ ಯಜ್ಞಶಾಲೆಗೆ ನಡೆದನಲ್ಲಿಂದೆ (ಶ್ರೀರಾಮಾ. ೯–೨೫೫) ; ಸ್ಕಂದವರ್ಮನಿಗೆ ಪುತ್ರಸಂತಾನವಿದ್ದಿಲ್ಲ (ಕನಾಂ೮. ೦೪೦). [ಸಂ.]

**ಪುತ್ರಸ್ವೀಕಾರ** (ನಾ). ಬೇರೆಯವರ ಮಗನನ್ನು ತನ್ನ ಮಗನೆಂದು ಸ್ವೀಕರಿಸುವುದು,–ದತ್ತು ತೆಗೆದುಕೊಳ್ಳುವುದು : ನಾಲ್ವಡಿ ಕೃಷ್ಣರಾಜ ಒಡೆಯರು ಜಯಚಾಮರಾಜರನ್ನು ಪುತ್ರಸ್ವೀಕಾರ ಮಾಡಿಕೊಂಡು ಯುವರಾಜನನ್ನಾಗಿ ಮಾಡಿದರು (೮೫೨). [ಸಂ.]

**ಪುತ್ರಾಂತರಾಯ** (ನಾ). ಮಕ್ಕಳಾಗುವುದಕ್ಕೆ ಇರುವ ವಿಘ್ನ : ಈ ಪುತ್ರಾಂತರಾಯಂ ಪುರಾತನ ದುಷ್ಕರ್ಮವಿಪಾಕವೋ ಬೆಸಸಿಂ (ಸುಕುಮಾ.೯–೦೦೯). [ಸಂ.]

**ಪುತ್ರಿ**[1] (ನಾ). ಮಗನನ್ನುಳ್ಳವನು ; ಪುತ್ರವಂತ : ಸುವಿನೀತರ್ಕವಿತಾಪ್ರವೀಣರಭಿರೂಪರ್ಸರ್ವಶಾಸ್ತ್ರಜ್ಞರಿಂತಿವರಿಂದೈಸೆ ಜಗಕ್ಕೆ ಸೌಮ್ಯನರಸಿಂಹಾರ್ಯೋತ್ತಮರ್ ಪುತ್ರಿಗಳ್ (ಚಿತ್ರಗೂೀ. ೫–೪). [ಸಂ. ಪುತ್ರಿನ್]

**ಪುತ್ರಿ**[2] (ನಾ). ೧. ಮಗಳು ; ಕುವರಿ : "ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ತಾನೆನಿಕ್ಕುಂ" (ವಸ್ತುಕೋ. ೫೪–೦೭); ವರಪುತ್ರೀಸ್ಥಿರಭಾವಕಾಮ್ಯವಿಲಸತ್ಸನ್ಮಾನ್ಯೆಯಂ ಯಾನೆಯಂ . . . ಗಿರಿರಾಜಂ ಕಳಿಪುತ್ತುಮಿರ್ದನತಿಯೋಗಧ್ಯಾನೆಯಂ ಮೇನೆಯಂ (ಗಿರಿಕ. ೩–೦೦). ೨. (ಸಮಾಸದ ಕೊನೆಯಲ್ಲಿ ಬಂದಾಗ) ಚಿಕ್ಕದು ಎಂಬರ್ಥದ ಶಬ್ದ : 'ಅಸಿಪುತ್ರಿ' ಪರಾ. [ಸಂ. ಪುತ್ರೀ]

**ಪುತ್ರಿಕೆ** (ನಾ). ೧. ಪುತ್ರಿ; ಮಗಳು : ದುರ್ವಿನೀತನ ತಾಯಿಯಾದ ಜ್ಯೇಷ್ಠಾದೇವಿಯು ಪುನ್ನಾಡ ಸ್ಕಂದವರ್ಮನ 'ಪುತ್ರಿಕೆ' (ಕನಾಂ೮. ೦೪೦). ೨. ಬೊಂಬೆ ; ವಿಗ್ರಹ : "ಪಾಂಚಾಲಿಕಾ, ಪುತ್ರಿಕಾ – ಈ ೨ ಪುತ್ಥಳಿಗೆ" (ಕಠಾಯು. ೮೦–೩೩೯); ಮೆಲ್ಲನೆ ನಡೆತರ್ಪ ನೀಲಮಣಿಪುತ್ರಿಕೆಯಂದದಿನಾದ ಮೊಪ್ಪಿದಳ್ (ಕಾದಂಪೂ. ೩೪); ನೀಂ ಪರವಣ್ಗಳನಪ್ಪುವುದನೆ ಬಯಸುತಿರ್ಪೆಯಪ್ಪೆಂದು ಕರಂ ಚಪ್ಪರಿಸಿ ನಾರಕರ್ ತಂದಪ್ಪಿಸುವರ್ ಕಾಯ್ದ ಲೋಹಮಯಪುತ್ರಿಕೆಯಂ (ಸುಕುಮಾ. ೦೦–೪೭); ಪೊಳೆವ ಮುತ್ತಿನ ಬೊಂಬೆಯೋ ತಿಂಗಳ ತಿರುಳ ಪುತ್ರಿಕೆಯೊ ಕಪ್ಪುರವಳುಕಿನಲಿ ಬಿದಿ ಕಡೆದು ತಿದ್ದಿದ ಸಾಲಭಂಜಿಕೆಯೋ (ಶಾಕ್ಯಶಾ. ೩೨–೪೫). ೩. ನಕಲು ; ಪ್ರತಿರೂಪ; ಪಡಿಯಚ್ಚು : ಇದು ಕೂಡ ಪಂಪನ ಮಾತ್ರಕೆಗೆ ಪುತ್ರಿಕೆಯಂತಿದೆ (ಸಾಹಿಸಂ. ೪೭) ; ನಮ್ಮ ಛಂದಸ್ಸು . . . ಆ ಲಲಿತರಗಳೆಯದೇ ನೆಟ್ಟನೆಯ ಪುತ್ರಿಕೆಯಲ್ಲದೆ ಸರ್ವಥಾ ಆಂಗ್ಲ ಸರಳರಗಳೆಯ ಅನುಕರಣೆಯಲ್ಲ (ಗೂಲ್ಬೊಥಾ. ೩೫ ಮುನ್ನುಡಿ). ೪. (ಸಮಾಸದ ಕೊನೆಯಲ್ಲಿ ಬಂದಾಗ) ಚಿಕ್ಕದು ಎಂಬರ್ಥದ ಶಬ್ದ. [ಸಂ. ಪುತ್ರಿಕಾ]

**ಪುತ್ರೀಧರ್ಮ** (ನಾ). ಮಗಳು ಪಾಲಿಸಬೇಕಾದ ಧರ್ಮಾಚರಣೆ : ತಂದೆಯನ್ನು ಪ್ರೀತಿಸುವುದು ಪುತ್ರೀಧರ್ಮ (ಕಬಿಕ. ೯೦). [ಸಂ.]

**ಪುತ್ರೈಷಣ** (ನಾ). ಮಗನಾಗಬೇಕೆಂಬ ಹಂಬಲ : ಪುತ್ರೈಷಣ ವಿತ್ತೈಷಣ ದಾರೇಷಣಂಗಳೆಂಬ ಈಷಣತ್ರಯವನುಳಿದು (ಆದವ. ಮು. ೯೦–೦೫೦) : ದಾರೇಷಣ, ಪುತ್ರೈಷಣ, ವಿತ್ತೈಷಣವೆಂಬ ಈಷಣತ್ರಯದಲ್ಲಿ ಆತ್ಮ, ಅಂತರಾತ್ಮ, ಪರಮಾತ್ಮನೆಂಬ ರೂಪತ್ರಯಗಳಿಂದ ವಾಸ ಮಾಡುವನು (ಹಸಾರ. ೨೪–೦೦ ತಾತ್ಪರ್ಯ). 'ಈಷಣತ್ರಯ' ಪರಾ. [ಪುತ್ರ + ಈಷಣ[1]]

**ಪುತ್ರೇಪ್ಸುತೆ** (ನಾ). ಪುತ್ರಲಾಭದ ಅಪೇಕ್ಷೆ : ಸಾವಧಾನದಲಿ ದುಃಖಾಶ್ರುವಂ ತೊಡೆದು ಪುತ್ರೇಪ್ಸುತೆಯ ಭಾವವರಿದುಯಿಂತೆಂದನು (ನವಪೂ. ೦೦–೦೨). [ಸಂ. ಪುತ್ರೇಪ್ಸುತಾ]

**ಪುತ್ರೋತ್ಸವ** (ನಾ). ೧. ಮಗನು ಹುಟ್ಟಿದ ಸಂತೋಷದಿಂದ ಆಚರಿಸುವ ಉತ್ಸವ : ರಂಗರಸರ ಮನೆಯ ಪುತ್ರೋತ್ಸವದಲಿ ಕಲುರೆಟಿಯ ಮಹಾಜನಂಗಳು ಕೂರ್ತು ಅನಂತತೀರ್ಥದೇವರಿಗೆ ಕೊಟ್ಟ . . . ತೋಟ ೧ (ಸೌಇಇ. XX, ೨೦೬–೩; 1250); ಪುತ್ರೋತ್ಸವಂ ಮಾಡಿ ಕೆಲವು ದಿನಮಿರೆ . . . ಧರಿತ್ರೀಶ್ವರನ ರಾಜ್ಯಮಂ

ತೆಗೆದುಕೊಂಡಪಿತರಾಳ್ದರು (ಕೃಬಿಭಾ. ೨೬-೦೫). ೨. ಮಗನ ಜನನ ; ಗಂಡುಮಗುವಿನ ಜನನ : ಪುತ್ರೋತ್ಸವಂ ಸೂತ್ಸವಂ ಕೆಳೆಯೋ ಸರ್ವರೊಳುತ್ತಮಂ (ಸೋಮೇಶ. ೦೪); ಹರಿದು ಪುತ್ರೋತ್ಸವದ ನುಡಿ ಗಜಪುರದೊಳ್ಬರವಾಯ್ತು ಪಾಂಡುವಿನರಸಿಯಲಿ ಸಂತಾನ ಜನಿಸಿದು ದೆಂದು ಜನಜನಿತ (ಕುವ್ಯಾ.ಆ.೪-೪೦); ಪಂಪಿಗೆ ಪುತ್ರೋತ್ಸವವಾಗಲು ಮೊದಮೊದಲು ಅವನ ಮನಸ್ಸಿನೊಳಗೆ ತುಸು ಈರ್ಷೆಯ ವೇದನೆ ಹುಟ್ಟಿತ್ತು (ಇಶ್ಯಕ. ೪೦೭). [ಸಂ.]

**ಪುದಳ್ನಾಡು** (ನಾ). ಒಂದಂ ಸ್ಥಳದ ಹೆಸರು : ಪುದಳ್ನಾಡ ರಾಷ್ಟ್ರೇ ಕೋಳಿನ್ನೂರ್ನ್ನಾಮ ಗ್ರಾಮ (ಮ್ಯಆಂ. ೧೯೧೭, ೧೨-೩೦ : ೧೧ನೆಯ ಶತ).
[ ಪುದಳ್₀ + ನಾಡು ]

**ಪುದಾರು** (ನಾ). ಒಂದು ಬಗೆಯ ಭೂಮಿ : ಕುಪ್ಪುಸೆಯಾ ಸಾಸಿರ್ವ್ವರ ಮಾಗತಿನ್ ಕೋಸಿಗರಾ ಜಯಮಲ್ಲ ಎಮ್ಮೋನ್ ಗೋಸಾಸಿ ಪುದಾರುಂ ಬೆದೆಮತ್ತಲುಂ ಪದಲ್ಪಾಣಮುವುನ್ ಕೊಟ್ಟೋನ್ (ಎಕ. VIII, ಸೊರಬ. ೪೦-೩ ; ಸು. 910). [ ? ]

**ಪುದಿ₁**, ಹುದಿ₁ (ಕ್ರಿ). ೧. ಒಳಸೇರು ; ಒಳಗೊಂಡಿರು : ಪುದಿದ ತಾವರೆವಳ್ಳಿಯ ತಳ್ಪಿಸಿಂ ಪಸುರ್ಪಾಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗಟಿಗಳ್ ನಿರಂತರಂ (ಪದ್ಮಸಾ. 11, ೬೬). ೨. ಅಂಟಿಕೊಳ್ಳು ; ಹತ್ತು : ಮೊಲೆಯುಂಬ ಕುಮಾರನ ಕಣ್ಣ ಕಜ್ಜಳಂ ಪುದಿಯದುದುರೋಜ ಮೇಕೆ (ಅನಂಪು. ೧೨-೯೯). ೩. ತಾಕು ; ತಗಲು : ದಿಗುವಸನರಡಿಗಳ್ ನೆಲನನ್ಮೊ[ನೊ]ಯ್ಯಗೆ ಪುದಿವುತಿರೆ ಚಂದ್ರಗತಿಯಿಂ ಸಂಗುಣಭೂಷಣ ಕುಕ್ಕುಟಾಸನ ದೇವನೇಳ್ವಂದ (ಸಾಳ್ವಭಾ. ೩-೪). ೪. ಕೂಡಿಕೊಂಡಿರು; ಬೆರೆತುಕೊಂಡಿರು ; ಸೇರಿರು : ಕ್ರಿಯಾಕಾರಕದೊಳ್ ಪುದಿದರ್ಥವ್ಯಕ್ತಿಯ ನೀವುದು ಗದ್ಯಮನೇಕರೂಪಭೇದವಿವಿಕ್ತಂ (ಶಬ್ದಾ. ೦-೨೫) ; ಮಲೆವ ಪೊಸಗಂಪಿನೊಳ್ ಪುದಿದಲೆವೆಲರಾಟಿಪುದು ಖಚರದಂಪತಿಶತಮಂ (ಅಂಪು. ೦-೬೮) ; ಪೆರ್ಬುಸಿಯೊಳ್ ಪುದಿದಿರ್ದಧರ್ಮನಂದನನನೆ ಧರ್ಮ ನಂದನನೆನಲ್ದೊರೆ (ಗದಾಯು. ೩-೩೨) ; ಅನೇಕಾಕ್ಷರದೊಳ್ ಪುದಿಯೆ ಲಘೂಪದೆ ಕೆಲಕೆಲವೊದವಿರ್ಕುಂ . . . ಶಿಥಿಲತೆಯಂ (ಶಮದ. ೪೩). ೫. ಆಗು ; ಒದಗು ; ಉದ್ಭವಿಸು : ಪುದಿದ ಪುಳಕಂಗಳಡ್ಡೈಸದಿ ರವೆನುತ್ತಂಜಿದಂತೆ . . . ಕಾಂತೆ ಹೃದಯದಿಂದಪ್ಪಿದಳುತ್ಸುಕೆಯಾಗಿ (ಕಾದಂಉ. ೬೭) ; ತುದಿಯೊಳ್ ದೀರ್ಘಾದೇಶಂ ಪೊದಟ್ದು ಷಷ್ಠೀವಿಭಕ್ತಿ ಗರೆಬರ ಮತದಿಂ ಪುದಿದಿರ್ಕುಂ (ಶಾವ್ಯಾ.ಪ. ೦೩೭) ; ಪುದಿದ ರೋಮಾಂಚ ದದ್ಭುತದ ಸೊಗಸಿನ ಮೋಹನದ . . . ನವರಸವನುಟಿ ಸವಿದು ಸೊಕ್ಕಿ ಮಟಿದರನ್ಯೋನ್ಯಭಾವವನವರ್ಗಳು (ಕೃಬಿಭಾ. ೦೦-೨೩). ೬. ಹೊದಿಸು; ಆಚ್ಛಾದಿಸು : “ಪುದ-ಆಚ್ಛಾದನೇ, ದ್ವಾರಪಾರ್ಶ್ವೇ ಚ” (ಶಮಧಾ) ; ಕರಡಿಯ ತೊವಲೊಳ್ ಪುದಿದ ಕರ್ಬೊನ್ನ ರಥಮುಂ (ಶಂಶಭಾ. ೦೨-೭ ವ) ; ಲಲಿತಚಂಪಕದಳಕೆ ಬೆಳುದಿಂಗಳ ತಗಡ ಪುದಿದಂತೆ (ಜೀವಂಶ. ೮-೩). ೭. ವ್ಯಾಪಿಸು ; ಆವರಿಸು : ನಿಜಕೀರ್ತಿ ಲೋಕಮಂ ಪುದಿದಿರೆ ಪೊಕ್ಕ ನಂದು ನಿಜಮಂದಿರಮಂ ಪರಸೈನ್ಯಭೈರವಂ (ಶಂಶಭಾ. ೫-೦೦೫) ; ಗದೆ ಗದೆಯಂ ಘಟ್ಟಿಸೆ ಪುಟ್ಟಿದ ಕೆಂಡದ ಕಿಡಿಯ ಕುಂಡಮೇಟಂದೆಸೆಯಂ ಪುದಿಯೆ (ಗದಾಯು. ೮-೦೩) ; ಉತ್ಕಟಕೋಪಹೂಂಕೃತಂ ವನಜ ಭವಾಂಡಮಂ ಪುದಿಯೆ (ಜಗಪು. ೦೫-೫). ೮. ಆವೃತವಾಗು ; ವ್ಯಾಪ್ತ ವಾಗು : ನಟ್ಟು ಕೊರ್ಗಣೆಯ ಬಿಣ್ಪೊಟಿಯಿಂದೆ ಬಟಬ್ದನುರ್ವಿ ಪೆರ್ವಿ ದಿರ ಸಿಡಿಂಬಿನೊಳ್ ಪುದಿದದೊಂದು ಕುಳಾಚಳದಂತೆ ಸಿಂಧುಜಂ (ಶಂಶಭಾ. ೦೦-೪೫); ಸ್ಮರರಿಪುಲಲಾಟನೇತ್ರಸ್ಫುರದುರುಹುತವಹನಿನೆಯ್ದೆ ಬೇವುತ್ತಿರ್ದಾ ಸ್ಮರನ ಪೊಗೆಯಿಂದೆ ಪುದಿದಿರ್ದ ರತಿಯಪೊಲ್ಕಾಂತೆ . . . ಎಸೆದಿರ್ದಳ್ (ಕಾದಂಪೂ. ೪೩) ; ಕಾಮಿನಿ ತನ್ನ ತುಂಗಕುಚತಟದ ಕಸ್ತೂರಿಯೊಳ್ ಪುದಿದ ಪ್ರಿಯನಂಗವಮಂ ಕಂಡಿದೇತಕೆ ಕೃಷ್ಣರೂಪಾದೆ ನೀನೆಂದು ಬೆಸಗೊಳಲ್ಕೆ (ಕೃಬಿಭಾ. ೨೭-೨೦). ೯. ಹುದುಗಿಸು ; ಮುಚ್ಚು : ತನ್ನ ಪಟಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಲ್ಚಿ ಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದು ಯ್ವಂತಿರಮ್ಮು (ಆಂಪು. ೨-೩೯ ವ) ; ಇಂದ್ರಿಯಕ್ಷರಣೆಯಾದ್ವೊಡದನೊಂದು ಕದಳೀಪತ್ರದೊಳ್ ಪುದಿದು . . . ಓಪಳಲ್ಲಿಗಟ್ಟಿದೊಡೆ (ಶಂಶಭಾ. ೧-೬೮ ವ). ೧೦. ಅವಿತುಕೊಳ್ಳು ; ಅಡಗು ; ಬಚ್ಚಿಟ್ಟುಕೊಳ್ಳು : ರಸಾತಳಂಬರಂ ಬೆದಕಿಯುಮೆಂತುಮುಪ್ಪಳಿಸಿ ಕೊಂದಪೆನೆಟ್ಟು[ಪಾಠಾಂ. ಟ್ಟು] ದಿದೇಂ ಸುಯೋಧನಾ (ಶಂಶಭಾ. ೦೩-೮೦) ; ಕರುಪಿಟ್ಟರೆ ತಾ ಟಿಟವಲ್ಲ ತನ್ನೊಳ್ಪುದಿ ದಿರೆ ಅದು ನಿಜವಲ್ಲ ಪುನರಪಿಯೊಳಂತಿರೆ ಅದು ಸಹಜವಲ್ಲ (ಸರ್ವಪ. ೭೯-೪೭೯); ಚಂದ್ರವದನೆಯರಂತರಂಗದೊಳ್ ಪುದಿದ ಕೆಚ್ಚಂ ನ್ನಮಿಸುವಂತೆ ರಂಜಿಸಿ ರಮಿಸುತಿಹ ಪುರುಷರಾ ಪುರದೊಳೆಸೆದಿರ್ದರು (ಕೃಬಿಭಾ. ೨೭-೦೭). ೧೧. ಹೊಂದು : ತಾಳು ; ಪಡೆ : ಮಂದಿರಾ ರಸದಿಂದಂ ಬಾರ್ಚಿದರೋ ಪೇಟಿಸಿಸಿ ಪೊಳೆವ ತಲೆದುಡಿಗೆಯ ರನ್ನದಿ ನೊಸರ್ವ ರಾಗರುಚಿಯಿಂ ಪುದಿದೆಸೆದುದು ಕೇಶಪಾಶವಾ ಕಾಮಿನಿಯಾ (ಕಾದಂಉ. ೨೦). ೧೨. ತುಂಬು; ಇಡುಗು : ನೆಟಿದಟ್ಟು ಭಕ್ತಿ ದಯೆ ಪುದಿದಟಿವೌದಾರ್ಯಂ ಕ್ಷಮಾಗುಣಂ ಶಕ್ತಿಯುಮೆಂಬಟಿಕೆಯ ಗುಣ ಮೇಟಟಿಕೊಳಂ ನೆಟಿದಿತ್ತರ್ ಮುನಿಯಂಗಕ್ಕೆ ದಾನಿಮನವರ್ಗಳ್ (ಆದಿಪು. ೪-೭೭); ಪುದಿದಟ್ಟಿಯಿಂದೆ ಪೊಡೆಮಡುವುದು ದಯೆಗೆಯ್ ಮಹಾಪ್ರಸಾದಮೆಂಬುದು (ಸುಕುಮಾ. ೦೦-೩); ಮದನಯಶಃಪಟಹಧ್ವನಿ ಪುದಿಯೆ ವಿಯಚ್ಚರನ ಕರ್ಣಮಂ ಹೃದಯಕ್ಕೆಯ್ದಿದುದಿಲ್ಲ ದಿವ್ಯವಚನಂ (ಶಂರಾಮಾ. ೯-೮೪); ಅಂಗಲತೆಯೊಳ್ ಪುದಿದ ಸಕಲಪರಿಮಳಕೆಱಗುವಳಿಮಾಲೆ ಮೇಲೆ ಮಂಡಳಿಸಿ ನಿಲೆ (ಜಂಪು. ೬-೪). ೧೩. ಹೆಚ್ಚಾಗು; ಅಧಿಕವಾಗು; ಅತಿಶಯವಾಗು: ಆ ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರೆ ಸುಯ್ ಪೊದಟ್ದು ಬಿಸಿದುಂ ಕಮ್ಮಿತ್ತುಮಾಯ್ತೋಪಳಾ (ಶಾವ್ಯಸಾ. ೫೪೮ ಕೂದ್ರಶ); ಪುದಿದವ್ವಳಿಪೆನ್ನ ಕಾಯ್ಪು ಪೋಪಿನಮಿರದೀಗಳೀಂಟುವೆನೊ ದಾಂಟುವೆನೋ ಲವಣಾಂಬುರಾಶಿಯಂ (ಆದಿಪು. ೦೨-೭೦); ಪುದಿದ ಸುತಮೋಹದಿಂದೆ . . . ಅಟಿಯದೆ ದುಷ್ಟಕಷ್ಟರೊಡನಾಡಿಸಿದೆಂ (ಧರ್ಮಾಮೃ. ೨-೮೦). ೧೪. ತುಂಬಿಸು ; ತುಂಬಿಕೊಳ್ಳುವಂತೆ ಮಾಡು : ಅಖಂಡಲಸುತನೆಯ್ದೆ ನಭೋಮಂಡಲಮಂ ಪುದಿದನೆಯ್ದೆ ಶರಪಂಜರದಿಂ (ಜಗಪು. ೦೫-೩); ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೧-೩೭). ೧೫. ಹೊದೆ ; ತೊಡು : ಅಸ್ಥಿ ಚರ್ಮದ ಪುದಿದ ಮಟಿಯ ಹರಿಗೆಯೊಳು ಅಸುಭಟನೆಂಬ ಬಂಟ (ಸುಂಕಬಿಂ. ೪. ೬೬೬-೬೭). ೧೬. ಒದಗಿಸು ; ಪೂರೈಸು : ಕಿನ್ನರ ಪನ್ನಗ ಖೇಚರಾಮರಪ್ರಮದೆಯರೀಕ್ಷ ಣಾಳಿನಿಕರಕ್ಕೆ [ನವೀನಸುಮ]ಪ್ರತಾನದಿಂ ಪ್ರಮದಮನಾವಗಂ ಪುದಿಪ ಪಾವನವೃಕ್ಷಸಮಾವೃತೋಲ್ಲಸತ್ಪ್ರಮದವನಂಗಳೋಳಿ ಪೊಳೆದೊಪ್ಪುವು ದಲ್ಲಿಯ ಚೈತ್ಯಧಾತ್ರಿಯೊಳ್ (ಶಾಂತೀಶ್ವ. ೦೬-೩೭). ೧೭. ಮೂಡು ; ಕೆತ್ತನೆಯಾಗು : ಸಿರಿಗಾವುಣ್ಣನ ಎಟ್ಟು ಪುಡಿ[ ದಿ ? ]ದುದು (ಇಅ. XII. ೨೦೯-೨೩ ; 814). **ಹುದಿ₁** : ೧. ಸುಬುದ್ಧಿಯ ರಸವು ಹಾಱಿತು ಹುದಿದ ರಾಗದ್ವೇಷವಹ್ನಿಯಲಿ (ಕುವ್ಯಾಸ. ೦೩-೪೪) ೮. ಕೆದಱುಗೇಶದ ಕಾಂತೆ ಹುದಿದಳು ಹರುಷಪುಳಕದಲಿ (ಕುವ್ಯಾಸ. ೦೫-೩೨). ೧೦. ಹಿಮಗಿರಿಯ ಕುಕ್ಷಿಯಲಿ ಹು[ಪಾಠಾಂ. ಪು]ದಿದ ನಾನಾದ್ರೋಣಿಗಳ ಮಧ್ಯದ ಕಿರಾತಪುಳಿಂದನಿಚಯವ ಸದೆದು ಹಸ್ತಿದನಗ್ರಶಿಖರಕೆ ಪಾರ್ವತೀ ಪಿತನ (ಕುವ್ಯಾಸ. ೩-೨೯) ; ಈ ಪರದಕರಮೆ ಮುನಿಹೃದಯಾವರಣದೆ ಹುದಿದು ನಿಂದು . . . ನಲಿಯಿಂಕುಮೆಮ್ಮಂ (ಪಸ್ಪವಂ. ೬). ೧೩. ಹುದಿದ ಮಱುಭೂಮಿಯಲಿ ಮಹಾನ್ಯನು ಖದಿರನಲ್ಲಿಗೆ ಗೂಗೆ ಕೋಗಿಲೆ (ಕುವ್ಯಾಸ.

೦೦-೩೯). ೧೪. ಕೀಳಿ, ಎದೆಯಲಿ ಹದಿಯರಿ–ಹೊಸ ಆಳ ಬಾಳಲಿ ಹುದಿಯಿರಿ (ಹೊಂಗಳು. ೨-೦೨). ೧೫. ರಾಯನ ಹುದಿದ ಕವಚವ ಭೇದಿಸಿದವೊಳಬಿದ್ದವಂಬುಗಳು (ಕುವ್ಯಾಳ. ೦೦-೩೪). ೧೬. ಕೆಚ್ಚು; ಮೆಟ್ಟು; ಕೂರಿಸು: ಈ ಉಂಗುರಕ್ಕೆ ಅನೇಕ ವಜ್ರಗಳನ್ನು ಹುದಿದಿದ್ದಾರೆ (ರೂಢಿ). 'ಪುದುಗು₁', 'ಪೊದೆ₁' ಪರಾ.

[ದೇ. ॥ ತಮಿ. ಪುತ್ಯ; ಮಲ. ಪುದಯು]

**ಪುದಿ₂**, ಹುದಿ₂, ಹೊದಿ₂ (ನಾ). ೧. ಬಾಗಿಲಿನ ಪಕ್ಕ; ದ್ವಾರಪಾರ್ಶ್ವ: "ಪುದಿ-ಆಚ್ಛಾದನೇ, ದ್ವಾರಪಾರ್ಶ್ವೇಚ" (ಶಮಧ); ಮಂದಿರದೊಳು ಮಣಿವಾಡದೊಳು ಪೊಂಬಾಗಿಲ ಪು[ಪಾಠಾಂ. ತು]ದಿಯೊಳು ಪಟ್ಟಶಾಲೆಯೊಳು ಮದನನ ಪೆಂಡವಾಸವೆನಲಾ ಪುರಸುದತಿಯರವನ ನೋಡಿದರು (ಶ್ರೀಪಾ. ೦೩-೩೯); ಮರಳಿ ಗೂಡಂ ಸಾರ್ದು ತಿರುಗಿ ಪುದಿಯಲ್ಲಿ ನಿಂದು ಮತ್ತೆ ನೋಡುವುದೊಮ್ಮೆ (ಕೆಂಪು. ೪೭-೬); ಆತಪತ್ರವನ್ನು ದೇಹಳಿಯ ಹೊರಗೆ ಕೊಡಕೊಡಹಿ, ಪುದಿಗೆ ಒರಗಿಸಿ ನಿಲಿಸಿ (ಮಂಕ್ರಶ. ೩೦-೫). **ಹುದಿ₂**: ೧. ಸುಗ್ಗವ್ವೆ ಮಗನ ಬರವಂ ಪಾರ್ದು ಹೊಱಗೆ ಬಾಗಿಲ ಹುದಿಯನು ಹತ್ತಿ ನಿಂದಿರ್ದು . . . ಮಱುಗುತ್ತಮಿರಲು (ಸಿದ್ಧರಾ. ೨-೪೩); ಬಾಗಿಲ ಹುಡಿ[ದಿ]ಯಲ್ಲಿ ಭಂಗಿ ವಡೆದಂಗನೆ ನಿಂದು . . . ಒಪ್ಪಿದಳ್ (ಶಾಂತೀಶ್ವ. ೦೦-೬೪). ೨. ನೆಲೆ; ಆಶ್ರಯಂ; ಬೀಡು: ಹುರುಡಿನ ಹುತ್ತು ಹುಸಿಯ ಹುದಿ ಗದುಕಿ [ಪಾಠಾಂ. ೧]ನ ಗರುಡಿ ಗನ್ನದ ಗಡಿ . . . ಎನೆ ಕಣ್ಗಲ್ಲಿ ಕರಮೆಸೆದುದು ಸೂಳೆಗೇರಿ (ಕುರಾಸಾಂ. ೪-೧೦೨). ೩. (ಮಣ್ಣಿನ) ದಂಡೆ; ಕಟ್ಟೆ; ದಿಂಡು: ಮೆಣಸಿನ ಗಿಡಕ್ಕೆ ಹುದಿ ಏರಿಸುವುದಕ್ಕೆ ಹೋದವಳು . . . ಅಗಸೇ ಬಾಗಲಾಗೆ ಹಾದು ಬರಬೇಕೋ? (ಬೆಳುಮ. ೨೫). **ಹೊದಿ₂**: ೪. ಪಕ್ಕ; ಪಾರ್ಶ್ವ: ಭೋಗದೇವರಿಗೆ ಆ ತಿರುವಿಡಯಾತದೆ ಮೂಡಣ ಹೊದಿಯಲು ಗದ್ದೆ ಕಂ ೯೦೦ . . . ಸಲುಉದು (ಎಕ. XIV. ಎಳಂದೂ. ೧೭೦-೮; ಕ್ರ. 1376). [< ಪುದಿ₁ /ತಮಿ. ಪುದವು, ಪುದ = ಬಾಗಿಲು]

**ಪುದಿನ** 'ಪುದೀನ' ನೋ.

**ಪುದಿಯಣ್ಣ** (ನಾ). ಒಬ್ಬಾತನ ಹೆಸರು: ಮಾಚರಸರ ಮಗಂ ಪುದಿಯಣ್ಣ ಗಂಗೇಶ್ವರಕ್ಕೆ ಬಿಟ್ಟ ದೇವಭೋಗದ ಗಟ್ಡಿ ಮೂಗಣ್ಡುಗಂ (ಎಕ. X. ಶ್ರೀನಿವಾ. ೦೭-೦೩; ಕ್ರ. 1015). [ಪುದಿ₀ + ಅಣ್ಣ₁]

**ಪುದಿವಟು** 'ಪುದಿವಟ್ಟು' ನೋ.

**ಪುದಿವಟ್ಟು**, ಪುದಿವಟು, ಪುದಿವೆಟು, ಪುದಿವೊಟ್ಟು, ಪುದುವಟ್ಟು (ನಾ). ದೇವಾಲಯ, ಕೆರೆ, ಕಟ್ಟೆ ಮೊದಲಾದುವುಗಳ ಜೀರ್ಣೋದ್ಧಾರ ಇತ್ಯಾದಿ ಸಾರ್ವಜನಿಕಕಾರ್ಯಗಳಿಗಾಗಿ, ಉದಾರಿಗಳಿಂದ ದತ್ತಿಯಾಗಿ ಬಂದ (ಬಡ್ಡಿಯ ಉತ್ಪನ್ನವನ್ನು ಉಪಯೋಗಿಸಿ ಕೊಳ್ಳಬಹುದಾದ) ಕೂಡಿಟ್ಟ ನಿಧಿ, – ಸಂಪತ್ತು, – ಠೇವಣಾತಿ: ನಂಜಪ್ಪಯ್ಯನ ಪುತ್ರನಾದ ಕಪ್ಪಯ್ಯನು ಬರಕೊಟ್ಟ ಪುದಿವಟ್ಟಿನ ಬಿನ್ನವತ್ತಳೆ (ಎಕ. V. ಬೇಲೂರು. ೨೯-೯; 1717); ನಂಜುಂಡೇಶ್ವರನಿಗೆ ಮುತ್ಯಾಲಸೆಟ್ಟಿಯ ಹೆಸರಿನಲ್ಲಿ ಒಂದು ಸೇವೆ ನಡೆಯುವಂತೆ . . . ಮುನ್ನೂರುವರಹಗಳನ್ನು ಅದಕ್ಕೆ ಪುದಿವಟ್ಟಾಗಿಡುತ್ತೇನೆ (ಸೌತಿಇಂ. XI. ೧೬). **ಪುದಿವಟು**: ಮುದ್ದ ರಾಜಅಯ್ಯನವರು ಕೊಟ್ಟ ಪುದಿವಟು ಕಂ ಗ ೩೦ ಮುವ್ವತ್ತುವರಹಾ (ಎಕ. IV. ಎಳಂದೂ. ೦೭-೦೯; 1667). **ಪುದಿವೆಟು**: ವಿಠಲದೇವರ ಅಮ್ರುತಪಡಿ ಪುದಿವೆಟು ನೈವೇದ್ಯಕೆ (ಸೌಇಇ. IX–II. ೬೩೩-೦; 1554). **ಪುದಿವೊಟ್ಟು**: ಲಕ್ಷ್ಮೀನರಸಿಂಹಸ್ವಾಮಿಯವರ ಶ್ರೀಭಂಡಾರಕೆ ಧಾರಾದತ್ತವಾಗಿ ಸಮರ್ಪಣೆ ಮಾಡಿದ ಪುದಿವೊಟ್ಟಿನ ದ್ರುವ್ಯದಲಿ ದೇವಸ್ಥಾನಕೆ ಕ್ರಯಲಬ್ಧವಾಗಿ ತೆಗೆದುಕೊಂಡ ವೃತ್ತಿಗಳ ವಿವರಕೆ ಬರಸಿದ ಶಾಸನ (ಎಕ. XII. ತುಮಕೂ. ೪೭-೬೯; 1719). **ಪುದುವಟ್ಟು**: ಪುಟ್ಟದೇವರಾಜ್ಯೆಅರಸಿನವರು ೧೦೦ ವರಹ ಹಾಕಿರುವ ಪುದುವಟ್ಟಿನ ಸೇವೆಗೆ ಭದ್ರಂ ಭೂಯಾದ್ (ಎಕ. II. ೨೨೩-೨೪; 1827); ಸಾವಿರರೂಪಾಯಿ ಪುದುವಟ್ಟು ನಮ್ಮಪ್ಪನ ಹೆಸರಿನಲ್ಲಿ ಮಂಜುನಾಥನಿಗೆ ಕೊಟ್ಟುಬಿಡೋದು (ಒಡೆಮು. ೯೨); ಒಂದು ದೇವಸ್ಥಾನವನ್ನೂ ಒಂದು ಸತ್ರವನ್ನೂ ಕಟ್ಟಿಸಿ ಅವಕ್ಕೂ ತಕ್ಕಷ್ಟು ವರಮಾನ ದೊರೆಯುವಂತೆ ಪುದುವಟ್ಟು ಹಾಕಿ ಸಮಿತಿಗಳನ್ನೇರ್ಪಡಿಸಿದನು (ಗುಹಾಸಾ. ೮೩). 'ಪುಲಿವೆಟ್ಟು' ಪರಾ. [ಪುದಿ₁ + ಪಟ್ಟು₄]

**ಪುದಿವು** (ನಾ). ೧. ಹೊಂದಿಕೆ; ಕೂಡಿಕೆ; ಸೇರುವಿಕೆ: ಕವಚನವರತ್ನದೀಧಿತಿನಿವಹಾರುಣಧವಳಕಿರಣಮಪರಾಜಿತನುತ್ತವಳನಿಸೆ ದೂರಪಾತೇಷುವೇಧದೊಳ್ ಪುಣ್ಣ ಸರಲ ಪುದಿವಂ ಪೋಲ್ಗುಂ (ಶಾಂತಿಪು. ೩-೦೦೦). ೨. ಗುಂಪು; ಸಮೂಹ: ಮಾಕಂದನಂದನದ ಬಳಸಿನೊಳಮಶೋಕವನದ ಪುದಿವಿನೊಳಂ ನಾಗಚಂಪಕವನದ ಸುತ್ತಿನೊಳಮತಿರಮಣೀಯಮಾಗಿ (ಶಂರಾಚ. ೪-೦೨೮ ವ); ಸಂಜನಿತಮುದರಲ್ಲಿ ಸುತ್ತಿದ ಘನಸಾರದ ಪುದಿವನಡರ್ದ ಲತೆಗಳ ಮನೆಯೊಳ್ ಪೊಕ್ಕಿರೆ (ಶೇಖಪು. ೫-೩೧); ಪಂದಳಿರ ತೋರಣಂ ತಳ್ತೊಂದಿದ ಕಂಗುಡಿಯ ಪುದಿವು ಮುತ್ತಿನ ಕಡೆ ಚೆಲ್ವಿಂದೆಸೆವ ಮಂಗಳಾನಕದೊಂದು ರವಂ ಬಗೆಗೆವಂದು ದಂದರಮನೆಯೊಳ್ (ಕಾವ್ಯಾವ. ೨೩೯). ೩. ಮುಚ್ಚುವಿಕೆ; ಹೊದಿಸುವಿಕೆ; ಆಚ್ಛಾದನೆ: ಉದಿರ್ದ ಘನಸಾರನಿಚಯದ ಪುದಿವುವಮನಲ್ಲೊಕ್ಕ ಮಲ್ಲಿಕಾಕುಟ್ಮಳದೊಂದೊದವುವಮನುದಾತ್ತಮೃಗಮದದುದಿತ ಸುಸೌರಭದ ಭಾರವಮಂ ತಳೆದುದುವಮಂ ಕಂಡು (ವೇಮಾಪು. ೪-೨೯). ೪. ಸಂತೈಸಿಕೊಳ್ಳುವಿಕೆ; ಹೆಣೆದುಕೊಳ್ಳುವಿಕೆ: ಚದುರ ಸಲ್ಲರ ಬಂಧ ಘಣಿಗಳ ಪುದಿವು (ಶಾಶ್ವತಾ. ೨೨-೭೦). [ಪುದಿ₁ + – ವು]

**ಪುದಿವೆಟು** 'ಪುದಿವಟ್ಟು' ನೋ.

**ಪುದಿವೊಟ್ಟು** 'ಪುದಿವಟ್ಟು' ನೋ.

**ಪುದೀನ**, ಪುದಿನ (ನಾ). ಔಷಧಿ, ಅಡುಗೆ ಮುಂತಾದುವಕ್ಕೆ ಬಳಸುವ, ವಾಸನೆಯುಳ್ಳ ಒಂದು ಬಗೆಯ ಸಸ್ಯ: ಪುದೀನ, ಚಟ್ನಿಸೊಪ್ಪು (ಮೈಶಿ. ೫೩-೦೦೬೦). **ಪುದಿನ**: (೩).

[← ಪಾರ. ಪೂದಿನ; ಹಿಂ. ಪುದೀನಾ, ಪೂದನಾ, ಪೋದೀನಾ; ಮರಾ. ಪುದಿನಾ, ಪುದಾನಾ, ಪುದಾಣಾ]

**ಪುದು** 'ಪುದುವು' ನೋ.

Δ **ಪುದುಂಗಿಸು** 'ಪುದುಗಿಸಂ' ನೋ.

Δ **ಪುದುಂಗು** 'ಪುದುಗಂ₁' ನೋ.

**ಪುದುಂಗುಳಿಸು** 'ಪುದುಂಗೊಳಿಸು' ನೋ.

**ಪುದುಂಗೊಳ್**, ಪುದುಗೊಳ್ (ಕ್ರಿ). ಹೊಂದಿಕೊಳ್ಳು; ಕೂಡಿಕೊಳ್ಳು; ಬೆರೆತುಕೊಳ್ಳು: ಪಟಗನ್ನಡಂ ಪುದುಂಗೊಳೆ ಕೊಟಿಸಕ್ಕದಮಂ ತಗುಳ್ಚಿ ಜಾಣ್ಕಡೆ ಮುತ್ತಂ ಮೆಟಿಸಂ ಕೋದಂತಿರೆ ಪೇಟ್ವಟಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೋ (ಕಾವ್ಯಾವ. ೫೫); ಯಮುನಾಪ್ಲವಮಂ ಗಂಗೆಯ ವಿಮಲಪ್ಲವಮೊಂದಿದಂತೆ ಸಭೆಯಂ ಪುದಿದಂಗಮರೀಚಿಯನುಜ್ಜ್ವಲದಂತಮರೀಚಿ ಪುದುಂಗೊಳಲ್ಕೆ ಕೃಷ್ಣಂ ನುಡಿದಂ (ಜಗವು. ೦೫-೫೭); ಬಗೆಯೆಂತಂತು ಪಾಡು ಪಾಡೆಂತಂತು ಹಾವಂ ಹಾವಮೆಂತಂತು ಭಾವಂ ಪುದುಂಗೊಳೆ . . . ಆಡುವ ನಟ್ಟವಿಗರ ಕೂಟದಿಂ (ರಾಮಾಶ್ವ. ೨೩-೦೬). **ಪುದುಗೊಳ್**: ಕೊಲಿಸುವ ಕೊಲ್ವ ಶಾಠ್ಯಪರವಾಗಿಸುವಾಗುವ ಕಳ್ವ ಕಳ್ವರೊಳ್ ಸಲೆ ಪುದುಗೊಳ್ವ ಪಾದರವನಾಡಿಸುವಾಡುವ ಕಾಂಕ್ಷೆಯೊಳ್ ಮನಂ ಸಲಿಸುವ ಸ್ವಲ್ಪಪಾಪಪರನುಂ ಶಠನುಂ ಖಳನುಂ ಕೃತಘ್ನನುಂ ಕಲುಷಿಯುಮಟ್ಟುಮುಗ್ರನರಕಾಬ್ಧಿಗಭೀರಮನೆಯ್ದುವನ್ನೆಗಂ (ಸುಕುಮಾ. ೫-೪೪). [ಪುದು (<ಪುದುವು) + ಕೊಳ್₁]

**ಪುದುಂಗೊಳಿಸು**, ಪುದುಂಗುಳಿಸು, ಪುದುಗೊಳಿಸು (ಕ್ರಿ). ೧. ಕೂಡಿಸು; ಸೇರಿಸು; ಹೊಂದಿಸು: ಪಂಚರತ್ನಂಗಳುಮಂ ಪುದುಂ

ಗೊಳಿಸಿ ಪೊಂಗಳಸಂಗಳೊಳಿರ್ದ ಪುಣ್ಯತೋಯಂಗಳೊಳ್ಬ್ಬೞಿಂ ಮಿಸಿಸಿ ಕಟ್ಟಿದನಾ ವಿಘು ವೀರಪಟ್ಟಮಂ (ಶಂಕಭಾ. ೧೦-೨೫) ; ಅಜನಂ ಪಾಳಿಯುಮಂ ಪುದುಂಗೊಳಿಸಿಕೊಂಡೀ ಭೂಮಿಯುಂ ಭೂಮಿಪರ್ ನೆಱೆಯಾಳ್ಗೆಂದುಮಿಳಾತಳಂ ಬೆಳೆಯುತಿರ್ಕೆ (ಸಂದೋಂಬು. ೬-೨೬೮). ೨. ಬೆರೆತುಹೋಗು ; ಕೂಡಿಕೊಳ್ಳು ; ಒಂದಾಗು : ಮಲಯ ಸಮೀರಣೇರಣಚಲತ್ತರುಶಾಖೆಗಳೊರ್ಮೆಗೊರ್ಮೆ ನೀರೊಳಗೆ ಬೞಲ್ದು ಹೇಮಸರಸೀಜರಜಾರುಣವಾರಿಯಂ ಪುದುಂಗೊಳಿಸಿ . . . ತಣ್ಪು ವೆಸಕೆಯ್ವುವು ತೀರವನಾಂತರಾಳದೊಳ್ (ಆದಿಪು. ೦೦-೬೪) ; ಕನ್ನಡಿಯ ಕಲಶದ ಬಣ್ಣಪುರದಾರತಿಗಳೆಡೆಗೆಡೆಗಿಡಿಸಿದ ಪಂಚರತ್ನದ ಕದಿರ ಪೊದಱೊಳ್ ಪುದುಂಗೊಳಿಸಿ ನೆಗೆವ ಜಾಗದ ಪಡಲಿಗೆಗಳ ಆಗೆಯ ತುಱುಗಲಿಂ (ಅನಂಪು. ೬-೪೦ ವ). ೩. ಒತ್ತಾಗು ; ದಟ್ಟವಾಗು : ಅಳಿಪಿಗೞಿಯ ಬಳೆದು ಪುದುಂಗೊಳಿಸಿದ ಬದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಱನಂತೆ (ಶಂಕಭಾ. ೧೨-೧೬೬ ವ) ; ಬಳಿಯಲರ್ಗಣ್ಗಳ್ ಬೆಳ್ಪಂ ಲಲನಾಜನದಧರ ಮಣಿಗೆ ಕೊಟ್ಟದಱ ಪುದುಂಗೊಳಿಸಿದ ಕೆಂಪಂ ನೀಪೋರ್ಕುಳಿಯೊಳ್ ಪಱಪಾಡಿ ಕೊಂಡ ತೆಱದಿಂ ತೋರ್ಕುಂ (ಕಾವ್ಯಾವ. ೬೦೮). ೪. ಮುಸುಕು; ಮುಚ್ಚು ; ಆವರಿಸು : ವಜ್ರದಂತನ ವಜ್ರದಂತೆ ಪೊಳೆವ ದಂತ ಪಂಕ್ತಿಗಳ ಕಾಂತಿಯಾ ಕಾಂತೆಯಂ ಪುದಿದು ಪುದುಂಗೊಳಿಸೆ ವಜ್ರದಂತನೆಂಬ ಪೆಸರಂ ನನ್ನಿ ಮಾಡಿ (ಆದಿಪು. ೩-೯೯ ವ). ೫. ತುಂಬು : ಬೞಲ್ಮುಡಿಯಂ ಸಡಿಲಿಸಿ ವನಮಂ ತನಿಗಂಪಿನಿಂ ಪುದುಂಗೊಳಿಸುತುಂ (ಶಾಂತೀಶ. ೦೫-೧೦೧ ವ). ೬. ಆಶ್ರಯ ಕೊಡು : ನಾಗಪಾಶಮನಶ್ರಮದೊಳ್ ಪಱಿದು ಬಲದ ಕೆಯ್ಯೊಳ್ ನಿಜಪ್ರಾಣವಲ್ಲಭೆಯುರಂ ಪುದುಂಗೊಳಿಸಿ (ಶಾಂತಿಪು. ೮-೫೦ ವ) ; ಉಲಿವ ತಳಿರೆಲೆಯ ದನಿಗೆ ಬೆರ್ಚುವ ಶಿಶುವನಾತ್ಮಪಕ್ಷಪುಟದೊಳ್ ಪುದುಂಗೊಳಿಸಿಯುಂ (ಪುಷ್ಪಪು. ೩-೧೦೫). ೭. ಉಂಟುಮಾಡು ; ಹುಟ್ಟಿಸು : ಮರುಳ್ಗಳಾಟಮಂ ಪಳಪಳನೆವೆಯಿಕ್ಕದೆ ನೋಡಿ ಮುಗುಳ್ನಗೆ ನಗುವ ವೀರಭಟರ ಪಂದಲೆಗಳುಂ . . . ರೌದ್ರರಸಂಗಳಂ ಪುದುಂಗೊಳಿಸೆ (ಶಂಕಭಾ. ೧-೧೦೬ ವ) ; ರೂಪು ನೋಟಕರ ಕಣ್ಗಮೃತಾಂಜನಪುಂಜಮಂ ಪುದುಂಗೊಳಿಸೆ ನೃಪೇಂದ್ರನೋಲಗದೊಳಿರ್ದುದು ಪಾಪವಿರಾಸಿನೀಜನಂ (ಅನಂಪು. ೩-೨೧). ೮. ಪಡೆ ; ಹೊಂದು ; ತಾಳು : ತೊಂಬತ್ತೊಂಬ್ಬೈ ಸಾಸಿರ ಯೋಜನಮಂ ನೆಗೆದೀ ಸುರಗಿರಿ ಪೆಂಪನೇಂ ಪುದುಂಗೊಳಿಸಿದುದೊ (ಆದಿಪು. ೭-೬೪) ; ಆರೋಗ್ಯಂ ಮಾಣ್ಬಮೃತಾಹಾರಮನಂಬಿಕೆಗೆ ಬೋನಮೆತ್ತುವ ದಿವಿಜಸ್ತ್ರೀರುಚಿರಭೋಜನಾಂಗಲತಾರಮಣೀಯತೆಯನೇಂ ಪುದುಂಗೊಳಿಸಿದಳೋ (ಶಾಂತಿಪು. ೯-೦೯೯) ; ನಾಂದಮರೆ ಪತ್ರಿದಂಬರದಿಂದೆಸೆ ವರಸಿಯ ನಿತಂಬಬಿಂಬಮನಬಳಾವೃಂದಮದಿೞ್ಕ್ಷಿಸಿ ಹೃದಯದೊಳಂದೇಂ ಪುಂಭಾವಮಂ ಪುದುಂಗೊಳಿಸಿದುದೋ (ಚಂದ್ರಪು. ೭-೧೩೦). **ಪುದುಂಗುಳಿಸು:** ೮. ತನು ರುಚಿಯಂ ಪುದುಂಗುಳಿಸೆ ಸಂಸ್ಕೃತಿಭೋಗಮಸಾರಮೆನ್ದು ನಿಚ್ಚನಿಸಿ (ಎಕ. VII, ೬೫೦. ೭೦೯-೨೨; 918). **ಪುದುಗೊಳಿಸು** : ೧. ಕರಸ್ಥಳದಲ್ಲಿಪ್ಪ ಇಷ್ಟಲಿಂಗಲಕ್ಷಣವೆಂಬ ಕುಮಾರಮೂರ್ತಿಯಲ್ಲಿ ಪುದುಗೊಳಿಸಿ ಆ ಚಿತ್ಕಲಾ ಲಿಂಗವನ್ನು ಕೊಟ್ಟು ಸಂಬಂಧವ ಮಾಡಿತ್ತು (ವಚಶಾ. II. ೫೬) ; ಪುದುಂಗೊಳಿಸಿದಂ, ಪುದುಗೊಳಿಸಿದಂ (ಶಮದ. ೦೬೭ ಪ್ರಯೋ).

[ ಪುದುಂಗೊಳ್ + — ಇಸು$_3$ ]

**ಪುದುಕುಱ್** (ಕ್ರಿ). ಕೂಡಿ ಯೋಚಿಸು ; ಜೊತೆಯಾಗಿ ವಿಚಾರ ಮಾಡು : ನಾಮಿರ್ವರ್ ಪುದುವಾಱಿವಮ್ ನಾಮಿರ್ವರ್ ಪುದುಕುಱಿಯೆಮ್ (ಅಂತಿಗೊ. ೦೮-೩೬೪). [ ಪುದು (<ಪುದುವು) + ಕುಱ್$_1$ ]

**ಪುದುಗಳ್ಳ** (ನಾ). ಜೊತೆಯ ಕಳ್ಳ : ವನಿತೆಯ ಮೋಹದಿಂ ಸುತರ ಮೋಹದಿನಿಷ್ಟರೊಳಾದ ಮೋಹದಿಂ ಧನಮನುಪಾರ್ಜಿಸಲ್ಮಱುಗುವಂ ಕಳವಿಂ ಧನಲಾಭಮಾದೊಡಾ ವನಿತೆಯುಮಿಷ್ಟರುಂ ಸುತರುಮುಣ್ಬೆಡೆಯೊಳ್ ಪುದುಗಳ್ಳನೆಂದು ಭೋಂಕನೆ ಕಡಿದಿಕ್ಕೆ ಪೆರ್ದೆಸೆಯೊಳಲ್ಲಿದ [ ಯ ] ಪರ್ವಿದು ಮಾಗಳಾ [ ಲಾ ] ವರ್ದರೇ (ರಮಾಮು. ೬-೦೩೮).

[ ಪುದು (<ಪುದುವು) + ಕಳ್ಳ$_1$ ]

**ಪುದುಗಿಸು,** ಪುದುಂಗಿಸು, ಹುದುಗಿಸು (ಕ್ರಿ). ೧. ಬೆರಸು ; ಕೂಡಿಸು ; ಸೇರಿಸು : ಅದಕೆ ಸಕ್ಕರೆಯಿಕ್ಕಿ ಯಾಲಕ್ಕಿಪುಡಿಯುಮಂ ಪುದುಗಿಸುವುದು (ಸೂಪಶಾ. ೨-೩೭). ೨. ಮುಚ್ಚು ; ಅಡಗಿಸು : ಮರೆಮಾಡು : ತೊಟ್ಟಿಲೆಳವಕ್ಕಳನೊಂಕಿ ಚಿಪ್ಪಂಟಿ ಪತ್ತಮಂ ಪುದುಗಿಸಿ ತಾಯೊಳಾ ತೊರೆದ ಬೀಳ್ಕೊಲಿಯುಂ ಸವಿದುರ್ಬಿ ಕೊಬ್ಬುಗುಂ (ಜಕವ. ೩-೫೮); ಒಂದು ಚಿಟಿಕೆ ನಿಡದೊಳಿರ್ದುಂ ಕಿಱುಮಱೆಯುಂ ಕುಟುಂಕಿತ್ತು ಜಂಕೆಯೊಳ್ ಪುದುಗಿಸಿಯುಂ (ರಾಮಾಶ್ವ. ೦೮-೨). Δ **ಪುದುಂಗಿಸು** : ೩. ಇರಿಸು : ಇವಂ . . . ಭಕ್ತಿಯುಂ ಪುರುಷೋತ್ತಮನೊಳ್ ಪುದುಂಗಿಸಿ ಪದುಳದೊಳಿರ್ಪ (ಜಕವ. ೩-೧೧). **ಹುದುಗಿಸು** : ೨. ಪದುಮಕುಟ್ಮಲದೊಳಗೊಂದು ಲೆಕ್ಕವ ಹುದುಗಿಸಿ ಬರೆದವನಾರೊ ಚದುರೆ ನೀ ಪೇಳು (ಕಂಪವಿ. ೬-೧೬೨); ಬೂದಿಯೊಳು ಹುದುಗಿಸುತ ವೇದಿಸುತ ಮಱೆ ಮಾಡಿ ಕಾದಿರ್ದ ಚಿನ್ನದೊಳು ಬೆರಸಿ ಒರೆ ಹಚ್ಚಿ ಊದುತಲೆ ಛೋಪಿಸುವ (ಸರ್ವಜ್ಞ. ೦೯೦೯) ; ಒಲೆಯ ಬದಿಯಲಿ ತಲೆಯ ಹುದುಗಿಸಿ ಮಲಗಿಕೊಂಡಿಹ ಬೆಕ್ಕಿಗೆ ಕನಸಿನಲ್ಲಿಯು ಇಲಿಯು ಬಾರದು (ವೀಮು. ೧೩-೧). ೪. ಕುಂದಣಿಸು ; ಕೆಚ್ಚು ; ಕೀಲಿಸು : ಗದಗಡಿಪ ನವರತ್ನನಿಚಯವ ಹುದುಗಿಸಿದ ಸೌವರ್ಣ ಕಲಶದಿ ಮದನನಾ ನೆಲೆಯೆನಿಸಿ ಮೆಱೆದುದು ಪರಪರೂಥವದು (ವಳಶ. ೯-೦೯). [ ಪುದುಗು$_1$ + — ಇಸು$_3$ ]

**ಪುದುಗು$_1$,** ಪುದುಂಗು, ಹುದುಂಗು, ಹುದುಗು$_1$ (ಕ್ರಿ). ೧. ಸೇರು ; ಕೂಡು : ಒಳಗೆ ಪುದುಗಿರ್ದ ಪರಿಮಳದೊಳೊಪ್ಪುವ ಲತಾಂತ್ರಕುಟ್ಮಲದಂತೆ ವರಗರ್ಭಲಾಂಛನದ ಕಾಂತಿಯುಂ ತಳೆವುದು (ತ್ರೈಬಿಭಾ. ೦೮-೦೯) ; ಸವಿರಸ ಪುದುಗಿದ ಕಡುಫಲ ಸಹ ಪಲಸಿಹುವು (ಕಂಪವಿ. ೫-೮೫). ೨. ಅಡಗು; ಮರೆಯಾಗು : ಕುತುಬಲಾಂಭೋರಾಶಿಯೊಳ್ ಸೈಂಧವಂ ಪುದುಗಲ್ ಬಾಟ್ದನೆ (ಸೋಮೇಶ. ೩೭); ಎತ್ತ ಬಲ್ಲರ್ ಸುಜನರೆಲೆ ಪಾರ್ಥ ಕಪಟಿಗಳ ಚಿತ್ತದೊಳ್ ಪುದುಗಿರ್ದ ಪಾಟವಂ (ತ್ರೈಬಿಭಾ. ೨೯-೩೭); ಬೆದಱಿಯಾ ಮಾಧವಿ ಕುಶಲವತಿಯರ್ ಪೊನ್ನಂ ಕೊಂಡೋಡಿ ಕಡೆಗೋಣೆಯೊಳ್ ಪುದುಗಿದರ್ (ಜಕವ. ೬-೨೬೨ ವ). ೩. ತುಂಬಿಕೊಂಡಿರು; ಹೆಚ್ಚಾಗಿ ಸೇರಿರು : ಪದಕಚಪರಿಯಂತ ಕಟ್ಟಾಣಿಮುತ್ತುಗಳ ಪುದುಗಿದಾಭರಣಗಳಿಟ್ಟು ವಿಧುಮುಖಿಯೊರ್ವಳೊಪ್ಪಿದಳಾಗ ಬೆಳುದಿಂಗಳಧಿದೇವತೆಯಂದದಲಿ (ಕಂಪವಿ. ೬-೭೦೦). ೪. ಉಂಟಾಗು ; ಒದಗು ; ಹುಟ್ಟು : ಇದು ಗಿಳಿದೇರನ ದಾಳಿಯ ಭೀತಿಗೆ ಪುದುಗಿದ ನಡುಕವೊ (ಶಯುಕಾ. ೯-೦೯). ೫. ಒಳಸೇರಿಸು ; ತುಂಬಿಸು ; ಕೂಡಿಸಿ ಇಡು : ರಕ್ತಾರ್ದ್ರಮುಕ್ತೋತ್ಕರಮಂ ಮುತ್ತಾಯ್ದು ಪುಣ್ಣಿತ್ರಿಯೊಳ್ ಪು[ ಪಾಠಾಂ. ಹು]ದುಗಿ . . . ದುಃಖೋದ್ರೇಕದಿಂದಂ ಬಿಸೆ ಪರಪಸೆ ಬೀಸಿತ್ತು ಕರ್ಣಾಗ್ರದಿಂದಂ (೮೯೦ -೨೦); ತಲೆಯೊಳು ಬಿಲ್ವದಳಗಳಂ ಪುದುಗಿ ಬಾಯಲ್ಲಿಯುದಕವನು ಮುಕ್ಕುಳಿಸಿ ಕೊಂಡೆಯ್ತಂದು (ಪಾಕೋಶ. ೯-೯೦). ೬. ಅಡಗಿಸು ; ಮುಚ್ಚು ; ಮರೆಮಾಡು : ಒಡಿವಿಗವಕ್ಕಿಯ ತುಂಡುತುಂಡುಗಳನು ಸಡಿಲದೆ ಸೊಪ್ಪಿನೊಳ್ ಪುದುಗಿ ದಡಿಗಿಕ್ಕೆ ಹೊತ್ತವರನಿಶಿನಿತೆಂಬುದ ಪಡಿಗಾಣ್ಬೊಡೆ ಶಕ್ಯವಲ್ಲ (ಮೋಹತ. ೦೯-೮೭); ವಾಯಸಪ್ರತತಿ ಗಱಿಗಳಂ ಪೊದಿಸಿ ಮಗ್ಗುಲೊಳಿಟ್ಟು ಕೋಗಿಲೆಯ ಮಱಿಗಳಂ ಮೈಯೊಳ್ ಪುದುಗಿಕೊಂಡು ಮಱುಕದಿಂದೈದೆ ಪಾಲಿಸುತಿರ್ದುವು (ತ್ರೈಬಿಭಾ. ೨೮-೯). Δ **ಪುದುಂಗು** : ೧. ನೀಸವನ ಗಂಟಲೊಳು ಸಿಕ್ಕ ಕೇಱಿಸಿಯುಗುಳಲ್ ಶ್ಲೇಷ್ಮದೊಳ್ ಪುದುಂಗಿ ನಾನಾನಿರೋಧದಿಂ ಪೊರಳುತಿರೆ (ಬೀಕ್ಕಪು. ೩ ೬-೫); ಪೊರೆದರ್ ಕೊಂಗಣಿವರ್ಮರಾ ಬಟಿಕೆ ಬಲ್ಲಾಳರ್ ಕುಱುಂಬರ್ ತೆಲುಂಗರು

ಮಾಂದಿಗವರೊಳ್ ಪುದುಂಗದೆರವೆಂಬಾತೆರ್ದು ಸಾದರದಿಂ ಕನ್ನಡರಾಯ ರಾಳ್ವನೆಗವಿಾ ಕರ್ಣಾಟದೇಶಂ ಕರಂ ಹರಿಸಂಬೆತ್ತುದು (ಅಪ್ರ್ತಿ. ೯೯ ೨೨). ೨. ಇದಕಿನ್ನುಪಾಯವಾವುದು ನಮ್ಮ ಯಂತ್ರಮಂತ್ರದ ಬಲ್ಪು ಮೆಲ್ಪಾಯ್ತು ತಂತ್ರವೆಲ್ಲಂ ಪುದುಂಗಿದುದು (ಶಾಂಪು. ೦೨-೮೫); ಮಾಮಣ ದೊಳ್ ಪುದುಂಗಿದ ಚಿನ್ನದೊರೆವುದಿಯಂತೆ ರೂಪಟುದಿರ್ಪ ಬದ್ಧಾತ್ಮ ವರ್ಗದ ದುರ್ಗತಿಯುಂ ಕಳೆಯಲೆಂದು . . . ಎಳಸಿ (ಜಿನಾ. ೦-೬೦). ಹುದುಂಗು : ೨. ಪುಲ್ಲೆಯ ಹಿಂಡನೊಂದು ಪುಲಿ ಗೊಟಟುಗೊಳೊಯ್ಯನೆ ಕಂಡು ಪಜ್ಜೆಯುಂ ಮೆಲ್ಲನೆ ಮೆಟ್ಟಿ ಪುಲ್ಲೊಳೆ ಹುದುಂಗಿ ಹುದುಂಗಿ . . . ಕೊರಲ್ಗೆ ಪಾಯ್ದು . . . ಎಂಟುದಿಕ್ಕುದುದಿಕ್ಕದಾಣದೊಳ್ (ರಕಾ. ೨-೧೮೩).
ಹುದುಗು₁ : ೧. ತಂಟಿನಗ್ಗಳಿಕೆಯ ವಿಘಾತಿಯ ರ್ಝೊಂಪಿನಲಿ ಹುದುಗಿದ ಮಹೇಶನ ಕಂಡನಾ ಪಾರ್ಥ (ಕುವ್ಯಾ.ಕ. ೧೬-೫). ೨. ಬ್ರಹ್ಮನ ಕರಕಮಂಡಲದೊಳಗೆ ಹುದುಗಲಿ ರವಿಯ ಮರೆಹೊಗಲಿ . . . ಕೊಲುವೆನು ವೈರಿ ಸೈಂಧವನ (ಕುವ್ಯಾ.ದ್ರೋ. ೮-೩೫) ; ಹರಿಗಂಡ ಕರಿಯಂತೆ ಹುದುಗುತಿರಲು (ಕೃಕುಪು. ೩-೬೨) ; ಹೃದಯದಲ್ಲಿ ಹುದುಗಿದ್ದ ಗರ್ವ ತಲೆಯೆತ್ತಿ ನಿಂತಿತು (ಶಾಶಾ. ೬೨). ೩. ಕದಡಿತೆನ್ನಯ ಹೃದಯ ಹೃದಯದ ಹುದುಗಿತಘ (ಕೃರಾ. ೨ ೫-೧೩) ; ಕದನಕರ್ಕಶಕರಿತುರಂಗಮಾಹುರೊಡನೆ ಹುದುಗಿ ಬರೆ ನೆಲನೀದ ತೆಱದಿ (ಸವ್ಯಕಾ. ೮ ೨೫). ೫. ಕುಂಭಗಳ ಹುದುಗಿಕ್ಕಿದ ಕಿಚ್ಚು ಆ ಕುಂಭಗಳಗೆ ಒಳಗೆ ಮುಟ್ಟಿದವೂ ಹೊಱಗೆ ಮುಟ್ಟಿದಡೂ ಪಾಕಪ್ರಯತ್ನ ತಪ್ಪದು (ಸಿರೀವ. ೨೬೬-೨೬) ; ಹುತವಹ ನೆಡೆಯೊಳು ಹುದುಗಿರ್ದ ಚಿನ್ನಕ್ಕೆ ಹಿತವಾಗಿ ಬಣ್ಣ ಬಂದಂತೆ ಚಿತಭಸ್ಮಲಿಪ್ತ ದೇಹವಿರ್ದುದು ಪೂರಿತ ಹೇಮಕುಂಡಲದಂತೆ (ಮೋಹತ. ೮-೨೦) ; ಕಂಜಜೆಯ ದಿವ್ಯಸೌರಭ್ಯವನಪಂಜಿಯೊಳಗೆ ಮಿಗೆ ಹುದುಗಿ ಕಂಜಜ ಕೈಗೈದ ಜೀವಪುತ್ಥಳಿಯೊಲು ರಂಜಿಸಿವರು ಕೋಮಲೆಯರು (ಕಂಪು. ೨೯-೬). ೬. "ಹುದುಗು—ಗೋಪನೇ (ಮುಚ್ಚು)" (ಕಮರಾ) ; ಪೃಥ್ವಿಗೆ ಅಪ್ಪುವಿನ ಅಧಿಕವ ಮಾಡಿದರು ಅಗ್ನಿಯ ಹುದುಗಿದರು ವಾಯುವ ಬೀಱಿದರು ಆಕಾಶದಲ್ಲಿ (೬೦ಗವ. ೪. ೬೯-೩೯). ೭. ತಡೆದು ನಿಲ್ಲಿಸು ; ಸ್ತಂಭಿಸು: ಪ್ರಾಣಾಪಾನವಾಯುವ ಹುದುಗುವನು . . . ಅವನಿಗದರಿಂದೆ (ಛರಿ. ೬೫-೬೩).

ಹುದುಂಗಿಕೊಳ್ಳು, ಹುದುಗಿಕೊಳ್ಳು = ೧. ಅವಿತುಕೊಳ್ಳು; ಮರೆ ಯಾಗು : ಅಂತು ಪಾರಸಿಗಂ ಪೇಟ್ದುಪಾಯದಿಂ ಪೊಕ್ಕು ಹುದುಂಗಿ ಕೊಂಡಿರ್ಪುದುಂ (ಮುಶಾಪಿ. ೯-೧೬೨ ವ); ನೀನೆಲ್ಲಿ ಹುದುಗಿಕೊಳ್ವೆ (ಕೀಶಾ. ೨೦-೨೮) ; ನನಗೆ ಭೂಮಿಯೊಳಗೆ ಹುದುಗಿಕೊಂಡುಬಿಡುವಷ್ಟು ನಾಚಿಕೆ ಯಾಯಿತು (ಶಾರ್ವಾ. ೦೬೯). ೨. ಸೇರಿಕೊಳ್ಳು ; ಕೂಡಿಕೊಳ್ಳು : ಈ ವಿಶಾಲವಾದ ಪ್ರೇಮಭಾವನೆಯಲ್ಲಿಯೇ ದಯೆ, ಮಮತೆ, ಸಹನೆ, ಸಹಾನುಭೂತಿ, ಸಮತೆ, ಸಹಿಷ್ಣುತೆ—ಇವೆಲ್ಲ ಹುದುಗಿಕೊಂಡಿವೆ (ರರ್ಮಣಾ. ೬). ಹುದುಗಿರಿಸು = ಅಡಗಿಸಿಕೊಳ್ಳು ; ತಾಳಿಕೊಳ್ಳು ; ಸಹಿಸು : ಮುಕ್ತಾಯಿ ಹುದುಗಲಾರದ ವಿರಹದುಃಖವನ್ನು ಹುದುಗಿರಿಸುತ್ತ ಗಂಡನ ಮನೆಗೆ ಹೊರಟುಹೋದಳು (ಕಶಾಕ. ೦೯೫). ಹುದುಗಿಸಿ ಕೊಳ್ಳು=ಹುದುಗಿರಿಸು : ತಾಯಿಯ ಎದೆಗೆ ಮುಖವನ್ನಿಟ್ಟು ತನ್ನ ದುಃಖವನ್ನು ಹುದುಗಿಸಿಕೊಂಡಳು (ಚಿಮುಣ. ೨೬೦). [ ದೇ.॥ ತಮಿ. ಪೊತುಕ್ಕು ; ಮಲ. ಪೊದಿಯು, ಪೊದಿಕ್ಕ ; ತೆಲು. ಪೊದುಗು, ಪೊದುವು]

ಪುದುಗು₂, ಹುದುಗು₂ (ನಾ). ೧. ಅಧಿಕವಾದುದು ; ಹೆಚ್ಚಾದುದು : ಸೂಳೆಯರ್ಗೆ ಬೊಜಗಂ ಪೊನ್ನಂ ಸೊಗಮುಂ ಬರ್ಕುಂ ಅದಱಿಂ ಸೊಗಮಿವರ್ಗಂ ಪುದುಗಾದುದಱಿಂದದರ್ಕಿರ್ವರುಂ ಪೂಣ್ದಪರ್ (ಕಶ. ೬-೧೫೪ ಕ್ರಿಕಾರಗಳ ಪಂಕರದ ವಚನ). ಹುದುಗು₂: ೨. ಹೊಂದಿಕೆ; ಜೋಡಿ; ಸಾಮರಸ್ಯ : ಇವರೆಲ್ಲರು ಹುದುಗಿನ ಗಂಡರಿರು ಭೀಮಗೆ ಹೇಳ ಕಂಡುದ ಕಾಣೆನು (ಕೃರಸೂ. I. ೧೦೫). ೩. ಕೂಟ ; ಸಂಬಂಧ ; ಸ್ನೇಹ : ಪದವನಱಿಯದ ವಾಚಕ ಘಾತಕನ ಇರವು . . . ಈ ಅಱಿವಿನ ಒಳಗನಱಿಯದ ಜೂಜಿನ ಹುದುಗಿಂಗೆ ಬಂದು ಸುರಿಗಾಯ ಸುರಿವವನ ವಿಧಿಯಂತೆ (ಮುಪುಗುಂ. ೪. ೨೬೫-೬೩); ಕುಜನರ ಹುದುಗು ಮಾಳ್ಪುದಱಿಂದ ಭಾವಿಪಡದು ಮಹಾಸಜ್ಜನವಿರೋಧವದೊಳ್ಪಿತು (ಜಕಪು. ೩೨-೬೩). ೪. ಬಯಕೆ ; ಆಸೆ ; ಬಂದ ಬಂದವರೆಲ್ಲರೂ ಅವಳ ಕಂಡು ಮನಸೋತು ಗಂಡನ ಕೊಂದು ಅವಳ ಕೊಂಡುಹೋಹಾಗ ಹುದುಗು ಹಿಂಗದೆ ಇವರೆಲ್ಲರೂ ಕೊಂದಾಡಿ ಸತ್ತರು (ಪ್ರುಮುಗುಂ. ೪. ೨೯೮-೦೨). ೫. ಇಡ್ಡಲಿ, ದೋಸೆ ಇತ್ಯಾದಿಗಳು ಮೃದುವಾಗಲು ಹುಳಿ ಬರುವಂತೆ ಬಳಸುವ (ನೀರಿನಲ್ಲಿ ನೆನೆಸಿದ) ಉದ್ದು, ಮೆಂತ್ಯ ಮುಂತಾದ ಪದಾರ್ಥ ಗಳನ್ನು ರುಬ್ಬಿದಾಗ ಉಕ್ಕುವ ವಸ್ತು ; ಸರಿ. 'ಒದಗು₃' ಪರಾ.

ಹುದುಗು ಬರು = ಇಡ್ಡಲಿ, ದೋಸೆ ಇತ್ಯಾದಿಗಳನ್ನು ತಯಾರಿಸು ವಾಗ ಉದ್ದು, ಮೆಂತ್ಯ ಮುಂತಾದ ಪದಾರ್ಥಗಳನ್ನು ಸೇರಿಸಿ ರುಬ್ಬಿದಾಗ, ಹಿಟ್ಟು ಹುಳಿ ಬರು,—ಉಕ್ಕಿ ಬರು: ಹದವಾಗಿ ಹುದುಗು ಬಂದರೆ ಇಡ್ಲಿ, ದೋಸೆ ಮೃದುವಾಗಿರುತ್ತದೆ (ಲೂ). ಹುದುಗು ಹಾಕು = ಇಡ್ಡಲಿ, ದೋಸೆ ಇತ್ಯಾದಿಯನ್ನು ತಯಾರಿಸುವಾಗ ಹಿಟ್ಟು ಹುಳಿ ಬರಲು ಉದ್ದು, ಮೆಂತ್ಯ ಮುಂತಾದ ಪದಾರ್ಥ ಗಳನ್ನು ಸೇರಿಸು,—ಹಾಕು : ಹುದುಗು ಹಾಕುವಾಗ ಹೆಚ್ಚು ಕಡಿಮೆ ಯಾದರೆ ಕಾವಲಿಯಿಂದ ದೋಸೆ ಏಳುವುದೇ ಇಲ್ಲ (ಲೂ). [<ಪುದುವು]

ಪುದುಗುಡು (ಕ್ರಿ). ಪಾಲು ಕೊಡು ; ಭಾಗವನ್ನು ಕೊಡು : ಪುದುಗುಡ ದಾಗ್ಗವೀ ಧರೆಯನೊರ್ವನೆ ದೋರ್ವಲದಿಂದೆ ಪಾಳಿಪೊಂದ ದಟನಳುರ್ಕೆಯಿಂ . . . ಪುರೂರವನೆಂಬುದು ರಾಮಚಂದ್ರನೆಂಬುದು ಪೆಱತೊಂದನೆಂಬುದೆ ನೆಗರ್ತೆಯ ವಿಕ್ರಮಚಕ್ರವರ್ತಿಯ (ಉಲ್ಲಾಕಾ. ೩-೬ : 1128). [ಪುದು (<ಪುದುವು) + ಕುಡು₁(<ಕೊಡು₁)]

ಪುದುಗೂಡು (ಕ್ರಿ). ಜೊತೆಗೂಡು : ಒಂದರೊಡನೊಂದು ಹೊಂದಿ ಕೊಳ್ಳು : ಮೃದುನುಡಿಗಳ ರಾಜಕೀರ ಕೋಕಿಲಸ್ವರ ಪುದುಗೂಡಿದಂತೆ ಗಾನೆಯರ ಮಧುರಾಳಾಪಗೀತವ ಕೇಳ್ದು ಖಳರಾಯ ಚಮರ ಮೆಯ್ಮುರಿದೆದ್ದ ನೊಲಿದು (ಮೋಹತ. ೨೨-೬೬).
[ಪುದು (<ಪುದುವು) + ಕೂಡು₁]

ಪುದುಗೊಳ್ 'ಪುದುಂಗೊಳ್' ನೋ.
ಪುದುಗೊಳಿಸು 'ಪುದುಂಗೊಳಿಸು' ನೋ.

ಪುದುಮನೆ, ಹುದುಮನೆ (ನಾ). ಬಚ್ಚಿಟ್ಟುಕೊಳ್ಳುವ ಜಾಗ ; ಮರೆ ಯಾಗುವ ಸ್ಥಳ : ಬನಕೆ ಮರಳೈ ನಾರುಳೆ ನೀ ಪುದುಮನೆಯ ಹಾವನು ಹದ್ದು ಹಿಡಿವರೆ ಮನಕತವ ಮಾಡುವರೆ (ಕುವ್ಯಾ.ಕ. ೨೦-೩೩). ಹುದುಮನೆ : ಬಗೆಯ ಮಡಿ ಮಾಸಳಿಸಿತು ವಿರಕೆ [ ಪಾಠಾಂ. ಚಿತ್ತಕೆ, ಬೆರಕೆಯ ] ಬೆಗಡು ಹುದುಮನೆಯಾಯ್ತು (ಕುವ್ಯಾ.ಗ. ೨-೦೩). [<ಪುದುಗು₁ + ಮನೆ]

ಪುದುಮಾಡ (ನಾ). ಜೊತೆಜೊತೆಯಾಗಿರುವ ಮಹಡಿಯ ಮನೆ ; ಸಾಲುಪ್ಪರಿಗೆ : ಇಲ್ಲಿ ದಿಕ್ಪತಿಗಳಿಲ್ಲಂ ಬಂದು . . . ಆಡುವ ಪಾಡು ವಗ್ಗಳಿಕೆಯೊಳ್ ಚೂಡಾಮಣೀಜ್ಯೋತ್ಸ್ನೆಯೊಳ್ ಪುದುಮಾಡಂಗಳ ಮೇಲೆ ಚುಂಚುಲೋವೆಯೊಳ್ ವಿದ್ಯುಲ್ಲತಾಲಾಸ್ಯಮುಂ (ಅಪಂಪು. ೦೦-೨೯).
[ಪುದು (<ಪುದುವು) + ಮಾಡ₁]

ಪುದುಪಟ್ಟು 'ಪುದಿಪಟ್ಟು' ನೋ.

ಪುದುವಯಕೆ (ನಾ). ಒಳಗಿನ ಆಸೆ ; ಅಂತರಂಗದ ಅಪೇಕ್ಷೆ ; ಮನಕೆ ಪುದುವಯಕೆ ಪುದುಂಗೊಳೆ ಸೀತೆ ಬಸಿಱಾದಳ್ (ರಾಮಾಶ್ವ. ೨೨-೦೦).
[<ಪುದುಗು₁ + ಬಯಕೆ₁]

ಪುದುವರ್ (ಕ್ರಿ). ಹೊಂದು; ಕೂಡು : ಮಸಕಂಬೆತ್ತ ಮತಿಪ್ರಕಾಶ

ಮಸಲಂಪಿಂದಿತ್ತು ಮತ್ತಾವ ದುರ್ವ್ಯಸನಂಗಳ್ ಪುಗದಂತೆ ಪೊಣ್ದು ಪುದುವಂದೇಕಾಂಗದಿಂ ತಾನೆ ಮಹಾಸದೊಳ್ ನಿಂದು ಜಿತಾರಿಪಕ್ಷನದಜಂ ಯಕ್ಷೋತ್ಸವಮಂ ಕೂರ್ತು ರಕ್ಷಿಸುಗೆ (ರರ್ವಜ್ಞಾ. ೧-೯); ಪುದುವಂದುದೆಂದು ನೆಲೆವೆರ್ಚಿರೆ ಭಾವರಸಂ ರಸಜ್ಞೆಯೊಳ್ ಮೃದುಪದವಿಟ್ಟಳಕ್ಕುಮೆನೆ ಭಾರತಿ ಬಂದು ಕಳಾವಿಳಾಸನಾ (ರರ್ವಜ್ಞಾ.೦ ೬೨).

[ಪುದು (<ಪುದುವು) + ವರ್]

**ಪುದುವಾಳ್₁** 'ಪುದುವಾಟ್' ನೋ.

**ಪುದುವಾಳ್₂** ಪುದುವಾಳಂ (ನಾ). ಕೂಡಿಕೊಂಡು ಬಾಳಂವಿಕೆ; ಹೊಂದಿಕೊಂಡು ಬದುಕುವಿಕೆ: ಭವವೇಕಾನೇಕಸತ್ವಾದಿಗುಣದ ಪುದುವಾಳೇಕದಾನೇಕೆ ಕಾಮೋತ್ಸವವೇಕಾನೇಕೆ (ರಕ್ಷಾಶ. ೩೭); ಪುದುವಾಳ್ಗಣದವರ್ಗೆ ತುಂಬಿಸಿಲೆನಿಪ ಬಾಲವೆಣ್ಗಳ್ ಗಮಕದಿಂ ತಳರ್ದರು (ಉದ್ಭರೇ. ೩-೨೦). **ಪುದುವಾಳು:** ತರುಚರರ ಪುದುವಾಳು ಲೇಸೇ (ಕೌಶಿಾ. ೧೯-೩೩); ಆ ಮಿಳಲನ ಕೊರಲ ಕೊಯ್ದುದೊಡೆ ಹೇಳಲೇನವ ನೊಳಗೆನಗೆ ಬಳಿಕ ಪುದುವಾಳೆ (ಕುರಾಣಾಂ. ೩೩ ೭೬).

[ಪುದು (< ಪುದುವು) + ಬಾಳ್₂ (< ಬಾಟ್₃)]

**ಪುದುವಾಳು** 'ಪುದುವಾಳ್₂' ನೋ.

**ಪುದುವಾಳ್ಕೆ** 'ಪುದುವಾಟ್ಕೆ' ನೋ.

**ಪುದುವಾಳ್ತನ** (ನಾ). = ಪುದುವಾಳ್₂: ಪುದುವಾಳ್ತನಂ ಗಡ ಸಖಿಗೆಂತಾದೊಡಂ ಮಿತ್ರರೊಳ್ (ರಾಜಶೇ. ೧೩-೨೭).

[ಪುದುವಾಳ್₂ + — ತನ]

**ಪುದುವಾಟ್**, ಪುದುವಾಳ್₁, ಹುದುವಾಳ್ (ಕ್ರಿ). ೧. ಕೂಡಿ ಬಾಳು; ಸಹಜೀವನ ನಡೆಸು: ಆ ಪಣ್ಣಿಮಹಾಪಾತಕನ ಊರಿ[೦] ಕಳೆವುದು ಊರಾತನೆಂದಾತಂ ಪುದುವಾಟಿ ಸಲ್ಲಂ (ಶಾಶಾ. IX - i, ೨೯-೫೬; 936); ಉಡಿಸಿಯುಮುಡಿಸಿಯುಮಟ್ಟಿಯನೆಡೆಯಾಡುಗದೆ ಸಲಿಸಿ ಪಲವುಕಾಲಂ ಪುದುವಾಟ್ಗೊಡಲಾತ್ಮನೊಡನೆ ಪೋಗದೆ ಕಡೆಗಣಿಸುವುದೆಂದೊಡುಟಿದರಂ ನಂಬುವುದೇ (ಆದಿಪು. ೩-೬೦); ಸಾದಿಸುವೆಂ ಫಲ್ಗುಣನಂ ಸಾದಿಸುವೆಂ ಪವನಸುತನ ಬಸಿಱಂ ಹಾ ಕರ್ಣಾ ಮಶ್ಮಾಸನ ತೆಗೆವೆಂ ನಿರ್ದೋಷಿಗಳಿಕ್ಕಿ ಯುಮಜನೊಳ್ ಪುದುವಾಟಿಂ (ಗದಾಯು. ೯-೨೦); ರಾವಣನೊಳ್ ಪುದುವಾಟ್ದ ದೋಷ ಹರಣಕ್ಕೆ ವಿಭೀಷಣನಮರನದಿಯೊಳಘಮರ್ಷಣಮಿರ್ದವೊಲಿರ್ದಸಥಿಪನಂಗ ಪ್ರಭೆಯಿಂ (ಶಂರಾಷಾ. ೦೨-೬೯). ೨. ದಾಂಪತ್ಯ ನಡೆಸು; ಸಂಸಾರ ಮಾಡು: ಪಿರಿಯರರಸಿಯ ಪಟವೇಟದ ಪರಿವಿಡಿ ಮಗುಟ್ದಿಂ ಕೊನರ್ತುದಾ ಸತಿಯೊಡನಿಂ ನರಪತಿ ನಿನ್ನಂಗಾಲೊಳ್ ನರೆ ಬರ್ಪಿನಮುತ್ತರೋತ್ತರಂ ಪುದುವಾಟಿಾ (ಶಾಂತಿಪು. ೯-೫೨); ಪುದುವಾಟ್ವಿನಿಕ್ಕೆ ಮುಕ್ತ್ಯಂಗನೆಯೊಳ್ (ಆದಿಪು. ೨-೬೩); ಆತಂಗೆ ಪರಸೆಯೆಂಬಳ್ ಪಾತಕಿ ಕುಲವನಿತೆ ಬೆನಿಸಿ ಕಿಯನೆಂಬ ಮಹಾಪಾತಕನೊಳ್ ಪುದುವಾಟ್ದಳ್ (ಶಂರಾಷಾ. ೬ ೩೩); ನಾಲ್ವರೊಳ್ ಮಱಿವಾಟ್ದು ಕೊಂತಿ ಪಾಂಡುರಾಜಂಗೆ ಕುಲಸ್ತ್ರೀಯೆಂದು ಮನ್ನಿಸಿಕೊಂಬುದೆತ್ತ . . . ದ್ರೌಪದಿ ಪಾಂಡವರಯ್ವರೊಳ್ ಪುದುವಾಟ್ದಳೆಂಬುದೆತ್ತ (ಶಂಕಾಂ. ೦-೨೯ವ). **ಪುದುವಾಳ್₁:** ೧. ಚೀ ಸವತಿಯೊಳ್ಪುದುವಾಳ್ವುದು ಕಷ್ಟಂ (ಎಪಿ. XVI, ೬೦-೩೨; 1081); ಸದಮಲಮಪ್ಪ ಭೂಚರರೊಳು ಮುದದಿಂ ಪುದುವಾಳ್ವನು (ಶೇಬುಸು. ೩-೩೭). ೨. ಒರ್ವಳೊಳ್ ಪುದುವಾಳಲಱಿಯದೆಕ್ಕತುಳಗೆಯ್ದೊರ್ವಳಂ ತರಲ್ (ಉದ್ಭರೇ. ೯-೨); ದೇವ ನಿನ್ನೊಳು ಪುದುವಾಳ್ದು ಮೆಱಿವವರ್ಗೆ ಶಿಪುಣ್ಯ ಬೇಕು (ಶರತ. ೨೦-೦೦೩). **ಹುದುವಾಳ್:** ೧. ಅದು ಇದು ಎಂಬುದೆಲ್ಲ ಹದಪರಿತಿಲ್ಲಿ ಹುದುವಾಳ್ಗೆ! (ನಂಬು. ೭೦-೪).

[ಪುದು (< ಪುದುವು) + ಬಾಟ್₁]

**ಪುದುವಾಟ್ಕೆ**, ಪುದುವಾಳ್ಕೆ, ಹುದುವಾಳಿಕೆ, ಹುದುವಾಳಿಗೆ (ನಾ). ೧. = ಪುದುವಾಳ್₂: ಪುದುವಾಟ್ಕೆಗೊಡಂಬಡಲೊಲ್ಲದಿನ್ನುಮವ್ವಳಿ ಸುವನೀಗಳಾತನನೆ ನೀಂ ಬೆಸಗೊಳ್ ಪುಸಿಯಂ ಸುಯೋಧನಂ (ಶಂಕಾ. ೦೩-೮೯); ನಾಂ ಗತ ಮಧ್ಯಸ್ಥಂ ನುಡಿವಂ ಗಡ ಪುದುವಾಟ್ಕೆಯೆನಗಮ ಪರ್ಗಂ ಸಂಧಾನಂ ಗಡ (ಗದಾಯು. ೭-೯೯). ೨. ದಾಂಪತ್ಯ ಜೀವನ; ಗಂಡ ಹೆಂಡಿರಾಗಿ ಬಾಳಂವಿಕೆ: ಅವಳೆನ್ನಂ ಪರಿಗ್ರಹಿಸಿ ಧನಮಿತ್ರನ ನುದಾಸೀನಂಗೆಯ್ದು ದಱಿನಾನವಳೊಳ್ ಪ್ರೀತಿಯಿಂ ಪುದುವಾಟ್ಕೆ ಯಿಂದಿತಲ್ (ವಡ್ಡಾ. ೬ ೯೫ ವ). **ಪುದುವಾಳ್ಕೆ:** ೧. ಬನ್ನಿಮೆನ್ನೊಡನೀಗ ಬೇರೊಂದು ಪುದುವಾಳ್ಕೆಗೆ (ಕಾಂಚರ. ೫೭-೮೯). **ಹುದುವಾಳಿಕೆ:** ೧. ಹೀಗೆ ಹುದುವಾಳಿಕೆಯಲ್ಲಿದ್ದ ಮಾಚಯ್ಯನಿಗೆ ಅಂತರಂಗದಲ್ಲಿ ಅವುದೋ ಅತೃಪ್ತಿ (ಕರಿಶ. ೪೦೩). **ಹುದುವಾಳಿಗೆ:** ೧. ಮನಸವೇ ಸರ್ವತನುವೇ ಹೇಳಿಗೆ ಹಾವಿನೊಡತಣ ಹುದುವಾಳಿಗೆ (ಕರಿಶ. ೧೬೦). [ಪುದುವಾಟ್ + —ಕೆ]

**ಪುದುವಿರ್** (ಕ್ರಿ). = ಪುದುವಾಟ್ ೨: ಆಕೆ ಗಾಳಿಯೊಳ್ ಪುದುವಿರ್ದಳಿಂ ಬುದೆತ್ತ ಗಾಳಿಗವಾಕೆಗಂ ಭೀಮಂ ಪುಟ್ಟಿದನೆಂಬುದೆತ್ತ (ಶಂಕಾಂ. ೦-೨೯ ವ).

[ಪುದು (<ಪುದುವು) + ಇರ್₁]

**ಪುದುವೀ** (ಕ್ರಿ). ಹಂಚಿ ಕೊಡು; ಪಾಲು ಮಾಡಿಕೊಡು: ಧರೆಯಂ . . . ಕೈತವದಿಂದೈವರ ಕೆಯ್ಯೊಳೆಟಿದುಕೊಂಡುಂ ಕುರುರಾಜಂ ಮತ್ತಮವರ್ಗೆ ಪುದುವಿತ್ತಪನೇ [ಟಿಪ್ಪಣಿ. ಪುದು ಮಾಡುವನೇ] (ಗದಾಯು. ೪-೦೦).

[ಪುದು (<ಪುದುವು) + ಈ₂]

**ಪುದುವು**, ಪುದು, ಹುದು₁, ಹುದುವು₁ (ನಾ). ೧. ಗುಂಪು; ರಾಶಿ; ಸಮೂಹ: ಅರಮೆ ಅರಲ್ದ ಬಯಲ್ದಾವರೆಗಳ ಪುದುವುಗಳೊಳರಮೆ ಎಳದಳಿರ ಲತಾಂತರದೊಳುಬಿದುಬಿದು ಕಾಡುಗುಮಿರು ಳೆಪ್ಪಿನಮಱಸುವಿನಿಯಳಂ ಚಕ್ರಾಹ್ವಂ (ಕಾವ್ಯಾವ. ೯೭). **ಪುದು:** ೧. ಜಳದೇವತೆಗೆತ್ತಿದ ಪಚ್ಚೆಯ ಸತ್ತಿಗೆಗಳ ಪುದುವೆನಿಪುದು ವನಜವನದ ಕೊಡೆಯೆಲೆ ಪಲವು (ಆದಿಪು. ೦೦-೬೩); ಮುನಿಪತಿಯ ತೋರ್ಪ ಬರಿಯೆಲ್ವಿನ ಪುದುವಿಂ ಬೂದಿವಾಟುತ್ತಿರ್ಪಿರವಿಂ ಕಾಮನ ಸುಟ್ಟ ಕಾಡಿದೆನೆ ಕರ್ಗನೆ ಕನಿತುದು ಮಲದ ಮಸಿಯ ಮಸಕದಿನಂಗಂ (ಅರ್ಧನೇ. ೦-೮೬); ನನೆಗಳ ಪೊಸ ಪೂಗಳ ಕಾಯ್ಗಳ ಪುದುವಿಂದೆಸೆದುದಾ ವಿನೂತಂ ಚೂತಂ (ಶಾಂತೀಶ್ವ. ೦೦-೦೦೯). ೨. ಕೂಡುವಿಕೆ; ಸೇರುವೆ; ಹೊಂದಿಕೆ: ಉಱಿದ ಮೂಱವತ್ತುಗಳೊಳಮ್ಪುದುವಿನೊಳೆ ಪತ್ತೊನ್ದಿಯನಿಕ್ಕಿ ಊಗ್ಗ್ ಅಳವಿಯನಿಕ್ಕಿ ಉಣ್ಪೊ (ಎಕ. III, ಮುಂತ. ೦೯-೮; 907); ಉದಯಿಸುಗುಂ ಶೂಲಂ ವಾತದಿಂ . . . ಆ ತ್ರಿದೋಷದ ಪುದುವಿಂದಾಮಿಶ್ರಮಾಗಿ ತೋರ್ಕುಂ ಶಮ್ಮೊಳ್ (ಲೋಕೋಪ. ೯-೩); ಮೆಯ್ಯಿವಿರ ಕುಱುಗಲೊಳ್ ತೊಡರ್ದೊಗೆದ ಬೆಮರ ಬಿಂದುಗಳ ಪುದುವಿಂ ಪನಿಪುಲ್ಬೊರೆದ ಶಾದ್ವಲ ಸ್ಥಳಿಯನಿಱಿಕೆಯ್ವಳ್ (ವರ್ಧಪು. ೪-೫೮ ವ). ೩. ಸಹವಾಸ; ಸಂಬಂಧ; ನಂಟು: ಈ ದುರಾತ್ಮನೊಳ್ ಪುದುವೆನಗೇವುದೆಂದು ಬರುತಿರ್ದಪನಲ್ತೆ ಶರಣ್ಬುಗಲ್ . . . ಆ ವಿಭೀಷಣಂ (ಶಂರಾಷಾ. ೦೨-೭೭); ಆ ದುರ್ಮದನಶ್ವಗ್ರೀವನಾ ಕೋಟಲೆಯ ಪುದುವದೇತರ್ಕೆ (ಶಾಂತೀಶ್ವ. ೨-೦೦೬); ಪಾವಿನ ಪುದುವೊಳ್ಕೆತು ಮದಕಳದಂತಾವಳನೊಳು ಕೂಟ ಪತಿಲೇಸು . . . ಕುಲಟೆಯೊಳೋವಿ ಬಾಳ್ವ ಬಲ್ಲಿದನಾರೊ (ಸೊಬಗೋ. ೦೬-೬೯); ಮೊದಲು ಸಿಕ್ಕಿದುದೆ ಸಾಕೆಮಗಧಿಕರೊಳೇಕೆ ಪುದು (ಕರಿಶ. ೪೩ ೪೫). ೪. ಒಂಟಿ ಒಡೆತನ ಅಥವಾ ಸಾಮೂಹಿಕ ಸ್ವಾಮಿತ್ವಕ್ಕೆ ಒಳಪಟ್ಟುದು,–ಅಳಪಟ್ಟುದು: ಪೊಲ್ಲಮೆಯುಂ ಗುಣಮುಂ ತಮಗಲ್ಲದೆ ಪುದುವಲ್ಲ ಮತ್ತೆ ತನಗುಂ ಪೆಱರ್ಗಂ (ಕಬಿರಾ. ೩-೦೬೯); ಇರ್ವರ್ ವಣಿಕ್ಪುತ್ರರ್ ಪುದುವಿನೊಳ್ ಪರದುವೋಗಿ ಪಿರಿದಪ್ಪ ಪೊನ್ನಂ ಪಡೆದು ಮಗುಟ್ದು ಬಂದು (ಶಂತತು. ೦೭೦-೪); ಪುದುವೇಕನ್ನಗ್ರ್ಗಮಾನೊರ್ಬ್ಬನೆ

ಕಳೆಯಲದಂ ಸಾಲ್ವೆನೆಸ್ಟು . . . ಅಖಿಳಧರಾಭಾರವಮಂ ತನ್ನ ವಿಕ್ರಾನ್ತದ ಬಲ್ಪಿಂ ತನ್ನ ತೋಳೊಳ್ಪುದುಳವಿರಿಸಿದಂ ವಿಕ್ರಮಾದಿತ್ಯದೇವಂ (ಎಕ. VII, ಶಿಕಾರಿ. ೧೨೪-೮ ; 1077); ತೇಜಂ ಪುದುವಿಲ್ಲೆನಿಸಿ ವಿರಾಜಿಸೆ ವರರಾಜಮಂಡಲಂ ತನ್ನಿಂ ನಿಸ್ತೇಜಂಬೆತ್ತಿರೆ ಬೆಳಗಿದನೀ ಜಗಮಂ ಭಾನುವೆಂಬಿನಂ ಭಾನುರಥಂ (ಕಂರಾಮಾ. ೨ ೬೬). ೫. = ಪುದಿಪಟ್ಟು : ಮುದದಿಂದಯ್ದೂರ್ವ್ವರ್ಪ್ಪದು ಮೊದಲತ್ಥರ್ಮನಿತ್ತರೊಲ್ಪು ಸೋಮೇಶಂಗೆ (ಸೌಇಇ. IX-1, ೧೬೫ ೬೧ ; 1099). ೬. ಸಾಟಿ ; ಸಮ ; ಸದೃಶವಾದುದು : ಶಿಳೆಗೊಳದೊಳಗಡೆಯಾಡುವ ಕಳಹಂಸನ ಬಾಳಕೇಳಿ ಪುದುವೆನೆ ಮಧುಪಾಳನೇತ್ರಂ ಧವಳಾಂಗಂ ಪಳಿಕಿನ ಕಟ್ಟಿಮದ ಮೇಲೆ ಬಟ್ಟಡಿಯಿಟ್ಟಂ (ಕಂರಾಮಾ. ೩-೧೨೮) ; ಕರಿ ಕೊರೆಯೊಳ್ ಜವಂಗೆ ಪುದು ಕಾಯ್ಪನೊಳಗ್ನಿಗೆ ದಾಯಿಗಂ ಸಹೋದರಮಳವಿಂ ಸಿಡಿಲ್ಗೆ ಮದದೊಳ್ ಕಳಿ ಕಾಳಗೆ (ಅರ್ಜನೇ. ೬-೫೬) ; ವೀರತೆಯುಂ ಶೂರತೆಯುಂ ರುಚಿರೋದಾರತೆಯುಂ ಗುಣಗಂಭೀರತೆಯುಂ ಧೀರತೆಯುಂ ಪುದುವಿಲ್ಲೆನೆ ತನ್ನೊಳು ಕೌಸಲ್ಯೆಯ ತನಯಂ ರಾರಾಜಿಸಿ[ಸೆ] (ಕುಮುರಾ. ೪-೨೮). ೭. ಹೊಂದಿಕೊಳ್ಳುವ ವ್ಯಕ್ತಿ : ಎನಗೆಕ್ಕಬಾಗೆ ನೋಡೀಗಳಿಳಾಲತಾಂಗಿ ಪುದುವಲ್ಲಳ್ (ಕಂಕಶಾ. ೯-೪೬). ೮. (ಸುಖ, ರಾಜ್ಯ ಮುಂತಾದುವುಗಳ) ಪಾಲು ; ವಿಭಾಗ ; ಹಿಸ್ಸೆ : ‘ ಪುದುಗುಡು ’ ಪರಾ. ೯. ಪ್ರಭಾವ ; ವರ್ಚಸ್ಸು : ನಿನ್ನ ದಂಡನೀತಿಯ ಪುದುವೆ ಪಲಂ ದಂಡರತ್ನಮೆಂಬುದು ಬೆಚಿತ್ತೇ (ಆದಿಪು. ೧೩ ೨೬). **ಹುದು₁** : ೨. ಹುದು ನಡೆಯದಿವರೊಡನೆ ನಮ್ಮಲಿ ಕದನವೇ ಕೈಗಟ್ಟುವುದು (ಕುವ್ಯಾಆ. ೬-೬); ಬಾಳ ಬೆಲೆ ಹುದುವೆಂದು ಕಲಿತು, ೯ಲಿತು (ಹೊಂಗಳು. ೫-೧೬). ೩. ಮಾಸಲು ಮುರಿಯದ ಒಲವಿಗೆ ಬಾಯ್ಬಿಡದೆ ಕಣ್ಣೊಡ್ಡಿ ಹುದುವಿನ ಸವಿ ಬೇಡಿದೆ (ಕಬಿಗೀ. ೧೦-೧೦೪). ೪. ಕೌರವನೊಳಿಮಗೀ ವಸುಧೆ ಹುದುವಲ್ಲ ನೆಲನೇಕಾಧಿಪತ್ಯವಲೆ (ಕುವ್ಯಾಕ. ೨-೫೫). ೬. ಹೆಣ್ಮಕ್ಕಳಿಬ್ಬರೆನ್ನಿದಿರಿನಲಿ . . . ಇಬ್ಬರೂ ಹುದುವಲ್ಲದಾಕಾರ (ಶಾರಸಿ. ೯-೨೦೨). ೮. ಎಲವೊ ಮಾರುತಿ ನಿಮ್ಮೊಳಗೆ ಕೋಮಳೆಯ ಹುದುವನು ಮೆಚ್ಚಿ ನಮ್ಮೊಳಗಿಳೆಯ ಹುದುವನು ಬಯಸಿದ್ದೆ (ಕುವ್ಯಾಶೀ. ೫-೧೨). **ಹುದುವು₁** : ೨. ಧರೆ ಸಿರಿಗಳಿರ್ಪ್ಪರಂ ನರರ್ಗೆ ಹುದುವಾಗಲೆಲೆ ಹರಿ ನಿನ್ನ ಭಕ್ತರಕ್ಷಣೆಗೆ ಬಲವು ನೆರೆಯದಿರಲೆಂದತ್ರಿ ವರಸೂನು ಹರಿಗಿತ್ತಿವೆರಡುಶಾಪವನೊರೆದ (ಶಾಸಂಕ. ೨-೬೯). ೪. ನಡುವಣ ಹುದುವಿನ ಹೊರದ ಮಣ್ಣು (ಮೈಆರ್. ೧೯೩೩, ೩-೧೩ ; 1160); ಹೆಣ್ಣು ಹೊನ್ನು ಮಣ್ಣೆಂಬ ಜಗದ ಹುದುವಿನ ಒಡವೆಗೆ ಹೊಡೆದಾಡಲೇಕೆ (ಮೋಹಶಾ. ೧೬೭-೬೨೪) ; ಹುದುವಿನ ಗಂಡುತನವಿದನು ಶಶಿವದನೆ ನುಡು (ಕುವ್ಯಾಬಿ. ೩-೯೩).

**ಪುದು ಮಾಡು, ಹುದು ಮಾಡು** = ಹೊಂದಿಸು ; ಕೂಡಿಸು : ಸಂಬಂಧ ಮಾಡು : ದಮ್ಮಯ್ಯ ಎಂದು ಪುದು ಮಾಡಬೇಕಾದ ನೆಂಟಸ್ತಿಕೆ ಸೆಟ್ಟರೇ (ದೇಹಮ. ೧೧೨) ; ಸಹೃದಯನ ತಂದು ನಿನ್ನ ವಯವದಲ್ಲಿ ಹುದು ಮಾಡಿದವನು (ಮೋಹಕ. ೨೫ ೩೭). **ಪುದುವಾಗು** = ೧. ಅತಿಶಯವಾಗು; ಹೇರಳವಾಗು : ಪುನುವಾದ ರಾಗಸಂಪದವು ಹೃದಯದೊಳೆಸೆಯೆ (ಅರುಣ. ೫೪-೨). ೨. ಸೇರು ; ಈಡಾಗು : ಮದದಿ ತ್ರಿದಶದ್ವೇಷದಿಂದಳಿದಧೋಗತಿಗೆ ಪುದುವಾದರು (ಪಪಮೋ. ೦೮-೭). **ಹುದು ಹಾಕು** = ಜೊತೆ ಮಾಡು ; ಕೂಡಿಸು : ಇದಕ್ಕೆ ಮತ್ತೆ ಬೇರೆ ಮಾತುಗಳನ್ನು ಹುದು ಹಾಕಬಹುದು (ಶಾಸಂ. ೦೨೪).

[ ದೇ.೫ ತಮಿ. ಪೊತ್ತು ; ಮಲ. ತುಳು. ಪೊದು ; ತೆಲು. ಪೊತ್ತು ]

**ಪುದುವುಗು** (ಕ್ರಿ). ಕೂಡಿಕೊಳ್ಳು ; ಹೊಂದಿಕೊಳ್ಳು : ಸಜ್ಜನಸುಭಾಷಿತದೊಳ್ ಪುದುವೊಕ್ಕು ಸೇಸೆಯಂ ಮನಮೊಸೆದಾಂತು . . . ವಿದೇಹಿಯುಂ ಜನಕನುಮೇಱಿದರ್ ಮಣಿವಿತಾನವಿರಾಜಿತಮಂ ವಿಮಾನಮಂ (ಕಂರಾಮಾ. ೬-೪೫) ; ನಳಿನವಿಕಸನದೊಳ್ ಸೂರ್ಯೋದಯಕೆ ಸಹಾಯತ್ವಮನೊದವುವ ತಣ್ಣೆಲರುಮಲಸದೇಂ ಪುದುವುಗದೇ (ಅರಾವ. ೪-೩೫).

[ ಪುದು (< ಪುದುವು) + ಪುಗು (< ಪೊಗು) ]

**ಪುದುವೆನಿಸು** (ಕ್ರಿ). ಸಮಾನವೆಂದು ತೋರು; ಸದೃಶವಾಗಿ ಕಾಣು: ತಾರಾವಳಿಯುಂ ತಳೆದ ನಭೋರಂಗದ ಭಂಗಿ ತನಗೆ ಪುದುವೆನಿಸಿದುದಂ ಪೇರುರಮನದೇಂ ಮೆಱೆದನೊ ಹಾರಮನೋಸರಿಸುವಂತೆ ನೃಪಸುತನೊರ್ವಂ (ಕಂರಾಮಾ. ೫ ೫೫). [ಪುದು (<ಪುದುವು) + ಎನಿಸು₁]

**ಪುದುವೆಱು** (ಕ್ರಿ). ಸಮಾನವಾಗು ; ಸರಿಜೋಡಿಯಾಗು : ಪುದುವೆತ್ತೆಕ್ಕಟಿಗಾಳೆಗಂ ಸಮನಿಸಿತ್ತಿಮ್ಮ ಗದಾಯುದ್ಧಮಂ ತ್ರಿದಶರ್ ನೋಡಲೆ ಕೌತುಕಂಬೆರಸಿ ಬಂದಿರ್ದರ್ (ಗದಾಯು. ೬-೬೮).

[ ಪುದು (< ಪುದುವು) + ಪೆಱು₁ ]

**ಪುದುವೋಗು** (ಕ್ರಿ). ಹೊಂದಿಕೊಂಡು ಹೋಗು; ಜೊತೆಯಲ್ಲಿ ಬಾಳು: ಪೇರೂರ ಪೆಂಗೂಸು ಭವಿಗೆ ಸತಿಯಾಗಳೆ ಎಲೆ ವೈಜಕ್ಕವ್ವೆ ತಾಂ ಭವಿಗೆ ಪುದುವೋಗಳೇ ಎಲೆಲೆ ಮಂಗಕ್ಕರಸಿ ಪಾಂಡ್ಯನೊಳು ಕೂಡಳೇ (ಪುಂದಿಂರ. ೩-೧೬೯). [ಪುದು (<ಪುದುವು) + ಪೋಗು₁ (<ಪೋ₁)]

**ಪುದ್ಗಲ, ಪುದ್ಗಳ** (ಗು). ೧. ಸುಂದರವಾದ ; ರಮಣೀಯವಾದ. (ನಾ). ೨. ಅಣುವಿನ ತೀರ ಚಿಕ್ಕಭಾಗ; ಪರಮಾಣು. ೩. ದೇಹ; ಜಡಸತ್ತ್ವ : ಭಿಕ್ಷುವು ತನ್ನ ಚಿತ್ತದಿಂದ ಇತರ ಸತ್ತ್ವಗಳ, ಪುದ್ಗಲಗಳ ಚಿತ್ತಗಳನ್ನು ಹೊಕ್ಕು ತಿಳಿಯುವನು (ಬುದ್ಧಕ. ೧೯೯). ೪. ಜೀವಾತ್ಮ; ಸಂಸಾರಿಯಾದ ಆತ್ಮ :“ ಪುದ್ಗಲಃ–ಜೀವನು, ಪರಮಾಣುವು ” (ಸಿದ್ಧಾಂತಿ. ೪೫೦). ೫. [ಜೈನ] ಪರಮಾಣುಗಳ ಸಂಯೋಗದಿಂದ ಉಂಟಾದ ಹಾಗೂ ಸ್ಪರ್ಶ, ರಸ, ಗಂಧ ಮತ್ತು ವರ್ಣಗಳನ್ನು ಹೊಂದಿದ ಅಜೀವತತ್ತ್ವ : ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹಶರೀರಾದಿವರ್ತನಾಹೇತು ಧರ್ಮಾಧರ್ಮಾಕಾಶಪುದ್ಗಲಕಾಲಭೇದದಿಂ ಪಂಚವಿಧಂ (ಆದಿಪು. ೦೨-೬೩ ವ); ಅನಂತವರ್ಗಸ್ಥಾನಂ ಪೋದಲ್ಲಿ ಪುದ್ಗಲರಾಶಿ (ಎಂಬುದು) ಪುಟ್ಟುಗುಂ (ಶಾಪುಂಪು. ೨೬೦); ಬಲಿ ಕೊಡದೊಳು ತುಂಬಿಮುದಕದಂದದೊಳು ಪುದ್ಗಲ ವಸ್ತುಲೋಕ ತುಂಬಿ ಹುದು (ಕರಜ. ೬೮-೩೮); ಅಜೀವವು ಪುದ್ಗಲ . . . (ವಿಶ್ರಾಂತಿಯನ್ನುಂಟು ಮಾಡುವ ವಸ್ತು), ಆಕಾಶ ಮತ್ತು ಕಾಲ ಎಂದು ಐದು ವಿಧ (ಭಾತತ್ತ್ವ. ೨೫೬). **ಪುದ್ಗಳ** : ೫. ನೆಲಸದ ಯೋನಿ ಮುಟ್ಟದೆಡೆ ಕಾಣದ ಕಾಲಮತತ್ತ್ವದೊಳ್ ಮನಂ ನಿಲಿಸದ ಭಾವಮುಳ್ಳಿಸದ ಪುದ್ಗಳವಿಲ್ಲೆನೆ ಕರ್ಮಬಂಧದಿಂ . . . ತಿರಿತಪ್ಪುವು ಜೀವರಾಶಿಗಳ್ (ಸುಕುಮಾ. ೫-೩೨). [ಸಂ.]

**ಪುದ್ಗಲದ್ರವ್ಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲಗಳೆಂಬ ಆರು ಬಗೆಯ ದ್ರವ್ಯಗಳಲ್ಲಿ ಒಂದು : ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಮೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಮಂ . . . ವ್ಯಾಖ್ಯಾನಂಗೆಯ್ಯಲ್ (ಸುಕುಮಾ. ೩-೩೯ ವ); ಅಣುಗಳ ಪುಂಜವೇ ಪುದ್ಗಲ ದ್ರವ್ಯವು (ಹಿಂದಸಾ. ೯೨). ‘ಷಡ್ದ್ರವ್ಯ’ ಪರಾ. [ಸಂ.]

**ಪುದ್ಗಲಪುಂಜ** (ನಾ). [ಜೈನ] ಪುದ್ಗಲಪರಮಾಣುಗಳು ಸೇರಿ ಉಂಟಾದ ದ್ರವ್ಯ : ಪುದ್ಗಲ ಪರಮಾಣುಗಳು ಒಂದಕ್ಕೊಂದು ಸೇರಿದರೆ, ಪುದ್ಗಲಪುಂಜಗಳೆನಿಸುವುವು. ಇವುಗಳಿಗೆ ಪುದ್ಗಲಸ್ಕಂದಗಳೆಂದೂ ಕರೆಯುವರು (ಜೈನಕ. ೪೨೦). [ಸಂ.]

**ಪುದ್ಗಲವಿಪಾಕಿ** (ನಾ). [ಜೈನ] ಮೂರು ಬಗೆಯ ನಾಮಕರ್ಮಗಳಲ್ಲಿ ಒಂದು ಪ್ರಕಾರ : ಜೀವವಿಪಾಕಿಯುಂ ಪುದ್ಗಲವಿಪಾಕಿಯುಂ ಕ್ಷೇತ್ರವಿಪಾಕಿಯುಮೆಂದಿಂತು ನಾಮಕರ್ಮಂ ತ್ರಿವಿಧಮಕ್ಕುಂ (ಗೊಮ್ಮಸಾ. ೨-೭).

[ಸಂ. ಪುದ್ಗಲವಿಪಾಕಿನ್ ?]

**ಪುದ್ಗಲಾಸ್ತಿಕಾಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಆಕಾಶ ಎಂಬ ಐದು ಬಗೆಯ ಅಸ್ತಿಕಾಯಗಳಲ್ಲಿ ಒಂದು : ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯನಿಕಾಯ ಮುಮಂ . . . ವ್ಯಾಖ್ಯಾನಂಗೆಯ್ಯಲ್ (ಸುಕುಮಾ. ೩-೩೯ಪ). 'ಪಂಚಾಸ್ತಿಕಾಯ' ಪರಾ. [ಸಂ.]

**ಪುದ್ಗಳ** 'ಪುದ್ಗಲ' ನೋ.

**ಪುನಃ** (ಅ). ಮತ್ತೆ ; ಮರಳಿ : ನೀನು ಪುನಃ ಇಲ್ಲಿಗೆ ಬಂದು ಹೋಗು (ಕೂಶಿ).

**ಪುನಃಪುನಃ** (ದ್ವಿರುಕ್ತಿ) : ಗೀತೆಯ ಪುಟಗಳನ್ನು ಪುನಃಪುನಃ ತಿರುವಿದಾಗ ಮುಖ್ಯಸಂದೇಶ 'ಕರ್ಮಯೋಗ' ಎಂಬುದು ಸ್ಫುಟವಾಗುತ್ತದೆ (ಧರ್ಮಸಾ. ೦೦೩). [ಸಂ. ಪುನರ್]

**ಪುನಃಶ್ರವಣ** (ನಾ). ಮತ್ತೆ ಕೇಳುವುದು ; ಇನ್ನೊಂದು ಸಾರಿ ಕೇಳುವುದು : ಹಿಂದೆ ಹೇಳಿದ ಎಷ್ಟೋ ಕತೆಗಳ ಪುನಃಶ್ರವಣವಾಯಿತು (ಮೂರುದಾ. ೦೧೦). [ಸಂ.]

**ಪುನಃಸಮಾಗಮ** (ನಾ). ಮರಳಿ ಕೂಡುವಿಕೆ ; ಪುನರ್ಮಿಲನ : ಹೇಮಕೂಟದ ದಿವ್ಯಾಶ್ರಮದಲ್ಲಿ ದಂಪತಿಗಳ ಪುನಃಸಮಾಗಮ (ಕಾವ್ಯಸ. ೩೦). [ಸಂ.]

**ಪುನಃಸ್ವಯಂವರ** (ನಾ). ಒಮ್ಮೆ ಸ್ವಯಂವರವಾಗಿ ಮದುವೆಯಾದವಳಿಗೆ ಮತ್ತೊಮ್ಮೆ ನಡೆಸುವ ಸ್ವಯಂವರ : ಸೃಜಿಸಿದನು ಸುದ್ದಿಯನು ನೃಪಭೂಭುಜರ ನಗರಂಗಳಲಿ ನಿಷಧನ ನಿಜಪನಿತೆಗೆ ಪುನಃಸ್ವಯಂವರವೆಂದು (ತೊರಿಶಾ. ೩-೨-೦೬). [ಸಂ.]

**ಪುನಕಾಲ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಜಗನಜ × × ಬಟಯ ಪುನಕಾಲರ ಮಗಂ ಜೂರಿನಿವನ ತಮ್ಮಂ ಚೋಟಪೆರ್ಮ್ಮಡಿಯರ ಮಜಲಾರದ ಗಣ್ಣ × × ಸಾವಿತರದೇವ (ಎ.ಕ. II, ೩೭೮-೨ ; ಸು. 1015). [?]

**ಪುನಗು** 'ಪುಣುಗು' ನೋ.

**ಪುನರಪಿ₁** (ನಾ). ೧. ಮತ್ತೊಂದಾವರ್ತಿ ; ಇನ್ನೊಂದು ಸಲ,— ಬಾರಿ : ಬಟ್ಟೆಯ ಮೆಟ್ಟಿ ಹೋಗಿ ಪುನರಪಿಯಾಗಿ ತಿರಿಗಿದಲ್ಲಿ ಊರ ಬಾಗಿಲ ಬಟ್ಟೆಯೊಂದಬಲ್ಲಿಯೇ ಹೋಗಬೇಕು (ಮದೀವ. ೨೮೭-೩೩); ಹಿತ್ತಲ ಸೊಪ್ಪಿಂಗೆ ನೀರ ಹೊಯಿದು ಮತ್ತೆ ಪುನರಪಿಯಾಗಿ ಕೊಯಿವವನಂತೆ ಭಕ್ತರಿಗೆ ಬೋಧೆಯ ಹೇಳಿ ಚಿತ್ತವೃತ್ತಿಯನಜಿದು ಬೇಡುವಂಗೆ ಇನ್ನೆತ್ತಣ ಮುಕ್ತಿ (ಅಂಬವ. ಕ. ೩೬೪-೦೮). ೨. ಮತ್ತೆ ಮಾಡುವ ಪರಾಮರ್ಶೆ ; ಪುನರ್ವಿಮರ್ಶೆ : ಕುಜುಹಿನಿಂದ ಅಜಿದಿಹೆನೆಂದಡೆ ಆ ಅಜಿವು ಪುನರಪಿಗೊಳಗಾಯಿತ್ತು (ಪೋಲವಶಾ. ೭೩-೨೮೭). [< ಪುನರಪಿ₂]

**ಪುನರಪಿ₂** (ಅ). ಮರಳಿ ; ಮತ್ತೆ ; ಪುನಃ : ಜನಮೇಜಯನು ಮುನ್ನಿತ್ತ ಅಗ್ರಹಾರವಿದಂ ಪುನರಪಿ ಸಮಗ್ರದಲ್ಲುಧ್ದರಿಸಿ (ಐತಿಶು. ೫೭-೯೩) ; ಕರ್ಣನು ಭೀಮಸೇನನ ರಥವನಜಿಸುತ ಬಂದು ಪುನರಪಿ ಕಾಳಗವ ಹಿಡಿದ (ಕುಮಾದ್ರೋ. ೦೩-೯೦) ; ನಾನು ಪುನರಪಿ ಅಲ್ಲಿಗೆ ಹೋದರೆ ಫಲವೇನು? (ಮುಂಜಾಕ. ೨೬). [ಸಂ.]

**ಪುನರಾಗಮನ** (ನಾ). ಮರಳಿ ಬರುವಿಕೆ : ಬೇಸಗಿನ ಮಳೆಗಾಲ ಪಂಕ್ತಿರ್ಮಳಾ ಲಲನೆ ನರನ ಪುನರಾಗಮನದ ಶರತ್ತ ಸನ್ನತೆಗೆ ತಪಮಿರ್ದ ನೆಲಮೆಣ್ಣನಂತೆ (ಕನ್ನಾಂಗ. ೫೯-೦೬೦೬). [ಸಂ.]

**ಪುನರಾವರ್ತನೆ** (ನಾ). ಮತ್ತೊಂದು ಸಲ ಮಾಡುವುದು ಅಥವಾ ಆಗುವುದು : ಪಾಠದ ಪುನರಾವರ್ತನೆಯನ್ನು ಪ್ರಶ್ನೋತ್ತರಗಳ ಮೂಲಕವಾದರೂ ಮಾಡಿಸಬಹುದು (ಶಿಕ್ಷದ. ೨೨೬). [ಸಂ. ಪುನರಾವರ್ತನ]

**ಪುನರಾವರ್ತಿಸು** (ಕ್ರಿ). ಮಾಡಿದುದನ್ನೇ ಮತ್ತೆ ಮಾಡು ಅಥವಾ ಆದುದೇ ಪುನಃ ಆಗು : ಆ ಅಂಶಗಳನ್ನೆಲ್ಲಾ ಇಂದಿನವರೂ ಪುನರಾವರ್ತಿಸುವುದು ವ್ಯರ್ಥ (ಶಿಕ್ಷದ. ೦೨೩). [ಪುನರಾವರ್ತನೆ+—ಇಸು₃]

**ಪುನರಾವೃತ್ತಿ** (ನಾ). ಮತ್ತೊಂದು ಸಲ ಮೊದಲಿನಂತೆ ಆಗುವಿಕೆ ಅಥವಾ ಮಾಡುವಿಕೆ : ಸಾಗರದ ಸಂಪರಿಪೂರ್ಣಜಲದೊಳ್ಪರೆದ ನದಿಗಳಿಗಿನ್ನು ಪುನರಾವೃತ್ತಿದೋರದ ತೆರದಿ (ಗಗಶಾ. ೦೭-೩೭) ; ಇಂತಹವರ ಪುನರಾವೃತ್ತಿಯಾಗದಂತೆ ಎಚ್ಚರ ತೆಗೆದುಕೊಳ್ಳಿರಿ (ರಂಗರೋ. ೬೦). [ಸಂ.]

**ಪುನರುಕ್ತ** (ಗು). ೧. ಮತ್ತೆ ಹೇಳಿದ ; ಪುನಃ ನುಡಿದ. (ನಾ). ೨. ಇನ್ನೊಮ್ಮೆ ಹೇಳಿದಂದು ; ಮತ್ತೆ ನುಡಿದುದು : ಮರನಲ್ಲದೆ ತಿಲಕಂ ಪೋಚರರ್ಗಂ ನೃಪನದಟ ಪೋಗೆ ಚಕ್ರಂ ಪುಟ್ಟಿರ್ದಿರೆ ಮೊದಲಗಣ್ಯ ಪುಣ್ಯಾಂತರಕ್ಕೆ ಪುನರುಕ್ತಮಾದುದೇಂ ವಿಸ್ಮಯಮೋ (ಶಾಂತಿಪು. ೨-೩೮) ; ಪೋಗೆ ಸಿರಿ ಬಂಧುಪಥೂತತಿ ವೃದ್ಧರಾಜ್ಯಮೆಂದೆಳಸದೆ ಕೂಡೆ ಬೇರ್ಪಡೆ ಬಟಿಕ್ಕಿವನಾನುಟಿವೊಂದು ಮಾತು ಭೂತಳಭರಧಾರಣಕ್ಷಮಭುಜಾಬಳ ಪೇಟಿಲ್ ಪುನರುಕ್ತಮಲ್ಲವೇ (ಚಂದ್ರಶ. ೨-೩೦). ೩. = ಪುನರುಕ್ತಿ ೨ : ಪುನರುಕ್ತಂ ಸಂಧಿದೋಷಂ ಸ್ವರತತಿ ಪದಪೂರ್ಣೋಕ್ತಿದೋಷಂಗಳೆಂದೆಂಬಿನಿತುಂ ದೋಷಂಗಳು ಬಿಟ್ಟು (ಸೂಕ್ತಿಸು. ೦೭-೩೯). [ಸಂ.]

**ಪುನರುಕ್ತಿ** (ನಾ). ೧. ಹೇಳಿದುದನ್ನೇ ಮತ್ತೆ ಹೇಳುವುದು. ೨. [ಕಾವ್ಯವಿಮಾ] ಒಂದು ವಾಕ್ಯದೋಷ; ಅನಗತ್ಯವಾದ ಶಬ್ದಾರ್ಥಗಳ ಪುನರುಚ್ಚರಣೆ : ಪುನರುಕ್ತಿ—ವಿಶೇಷ ಪ್ರಯೋಜನವೇನೂ ಇಲ್ಲದೆ ಒಂದೇ ಅರ್ಥವುಳ್ಳ ಒಂದೇ ಪದವನ್ನು ಅನೇಕ ಸಾರಿ ಉಪಯೋಗಿಸಿರುವುದು (ಕೃಬಿತಾ. ೨೨೬). ೩. (ಆಲಂ) ಬೇರೆ ಮಾತು : ನಾಲಿಗೆಗೆ ಪುನರುಕ್ತಿಯಾಗೆ ಪುರುಧ್ರಿ ನಗುವಳೆಲೆ ಮೌಲೆ ನಾವ್ ನುಡಿದೆಡಹವೆಂಬುದು ಮೇಲು ಮಾತಾಗಿಹುದು (ತೊರಶಾ. ೩-೬-೪೦). [ಸಂ.]

**ಪುನರುಚ್ಚರಿಸು** (ಕ್ರಿ). ಹೇಳಿದುದನ್ನು ಹೇಳಿದಂತೆಯೇ ಮತ್ತೆ ಹೇಳು : ಪರದೇಶದವರೂ ಅಪರ ಅಭಿಪ್ರಾಯವನ್ನು ಮಕ್ಕೀಕಾಮಕ್ಕಿ ಪುನರುಚ್ಚರಿಸುವ ನಮ್ಮ ದೇಶದವರೂ ಹೇಳುವ ಮಾತುಗಳನ್ನು ನಾವು ನಂಬಬೇಕಾಗಿಲ್ಲ (ದೇಶನ್ನ. ೪೨); ಒಲೆನಿನ್ ಸಂತೋಷದಿಂದ ಆ ಮಾತುಗಳನ್ನೆಲ್ಲಾ ತನ್ನಷ್ಟಕ್ಕೆ ತಾನು ಪುನರುಚ್ಚರಿಸಿಕೊಂಡನು (ಮಲಿಶಾ. ೨೦೦). [ಸಂ. ಪುನರುಚ್ಚರಣ + — ಇಸು₃]

**ಪುನರುಜ್ಜೀವನ** (ನಾ). ಮತ್ತೆ ಏಳಿಗೆಯಾಗುವಂತೆ ಮಾಡುವಿಕೆ ; ಪುನರುದ್ಧಾರ : ಕೋರಿಯದಲ್ಲಿ ಲೋಕಮತಾನುಸಾರವಾಗಿ ಕೋರಿಯದ ರಾಜಮನೆತನದ ಪುನರುಜ್ಜೀವನಕ್ಕೊಪ್ಪಬೇಕಾಯಿತು (ಜಗಮಂ. ೬೦). [ಸಂ.]

**ಪುನರುಜ್ಜೀವಿತ** (ನಾ). ಪುನರುದ್ಧಾರ ಹೊಂದಿದುದು ; ಏಳಿಗೆಯನ್ನು ಪಡೆದುದು : ಆರ್ಯಸಂಸ್ಕೃತಿಯು ಪುನರುಜ್ಜೀವಿತವಾಗಿ . . . ಪುರುಷರತ್ನಗಳು ಎಲ್ಲಾ ವಿಧವಾದ ಕಾರ್ಯಗಳಲ್ಲೂ ಪ್ರವರ್ತಿಸತೊಡಗಿದರು (ರಾಜ್ಯೋದ. IV ಪ್ರಸ್ತಾವನೆ). [ಸಂ.]

**ಪುನರುಜ್ಜೀವಿಸು** (ಕ್ರಿ). ಮತ್ತೆ ಪ್ರಚಾರಕ್ಕೆ ತರು ; ಪುನಶ್ಚೇತನಗೊಳಿಸು : ಜ ಮತ್ತು ಟ ಕಾರಗಳನ್ನು ಪುನರುಜ್ಜೀವಿಸುವ ವಿನಮ್ರ ಪ್ರಯತ್ನಗಳು . . . ಪಾಂಡಿತ್ಯಪ್ರಿಯಮಂಡಿತಮಂಡಳಿಯಿಂದ ನಡೆದಿವೆ (ಬ್ರಾಶಿಶಿ. ೩೩೭). [ಪುನರುಜ್ಜೀವನ + — ಇಸು₃]

**ಪುನರುತ್ಥಾನ** (ನಾ). ಚೈತನ್ಯವನ್ನು ಹೊಂದುವಿಕೆ ; ಅಭಿವೃದ್ಧಿಗೆ ಬರುವಿಕೆ : ಧಾರ್ಮಿಕಕ್ಷೇತ್ರದಲ್ಲಿ ದಕ್ಷಿಣಹಿಂದುಸ್ಥಾನದಲ್ಲಿ ಹಿಂದೂಧರ್ಮದ ಪುನರುತ್ಥಾನವು ಜೋರಿನಿಂದ ನಡೆದಿತ್ತು (ಶಾಟಸ. ೦೩೪) ; ಹಿಂದೂಧರ್ಮವು ಪುನರುತ್ಥಾನವಾದ ಮೇಲೆ ಅಲ್ಲಿಗೆ ವೈದಿಕಮತವೂ ಹೋಗಿ, ಅಲ್ಲಿ ಹಿಂದೂರಾಜರು ರಾಜ್ಯ ಕಟ್ಟಿದರು (ಬಿಳ್ಳತ. ೨೯). [ಸಂ.]

**ಪುನರ್ಘಟನೆ** (ನಾ). ಮರಳಿ ವ್ಯವಸ್ಥೆ ಮಾಡುವಿಕೆ : ಹೊಸ ಸಾಧಾರಣ ಚುನಾವಣೆ ನಡೆದು ಪರಿಷತ್ತಿನ ಪುನರ್ಘಟನೆಯಾಗುವವರೆಗೆ ರಾಜ್ಯಪಾಲರು . . . ನಿರ್ದಿಷ್ಟವಾಗಿರುವ ಕಾರ್ಯಕ್ರಮವನ್ನು ಕೈಕೊಳ್ಳಬಹುದು (ಭಾರಾಪ. ೨೬೪); ಆರ್ಥಿಕ, ಸಾಮಾಜಿಕ ಹಾಗು ರಾಜಕೀಯ ಪುನರ್ಘಟನೆಯಾಗದೆ ಹೋದರೆ ನಮ್ಮ ಜೀವನಸಾಹಿತ್ಯಗಳ ವಿಕಾಸ ಬರಿ ಒಂದು ಮಧುರಸ್ವಪ್ನ. ಆದರೆ ಈ ಪುನರ್ಘಟನೆಯ ರೀತಿ ಯಾವುದು ? (ಕವ್ಯಕಾ. ೧೬).

[ ಸಂ. ಪುನರ್ಘಟನಾ ]

**ಪುನರ್ಜನ್ಮ** (ನಾ). ಮರುಹುಟ್ಟು ; ಮತ್ತೊಂದು ಜನ್ಮ : ಮುನಿ ದೀಶಂ ತವೆ ಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ ನಿನಗೆ (ಶಂಸಪ. ೯-೩೧) ; ನಿರ್ಜರೇಂದ್ರನ ಸೂನು . . . ವ್ಯೆಮುಚಿದು ಬಿದ್ದನಿಳೆ ಯೊಳ್ ಪುನರ್ಜನ್ಮಮೆನೆ ಕೂಡೆ ಚೇತರಿಸಿ ನರನೆಚ್ಚು ಕಡಿದನಾತನ ಧನು ವನು (ಕೈಶಿಃಭಾ. ೨೩-೩೩) ; ಪುನರ್ಜನ್ಮ ಪಡೆಯಿತು ! ಹರಿದು ಹಂಚಿ ಹೋದ ನಾಡು ಮತ್ತೆ ಒಂದಾಯಿತು ! (ಏಕದ. ೬೯-೦).

[ ಸಂ. ಪುನರ್ಜನ್ಮನ್ ]

**ಪುನರ್ಜಾತ** (ಗು). ೧. ಮರಳಿ ಹುಟ್ಟಿದ ; ಹೊಸಜನ್ಮವನ್ನು ಪಡೆದ. 'ಅಪುನರ್ಜಾತ' ಹೋ. (ನಾ). ೨. ಸಂಸ್ಕಾರದಿಂದ ಹೊಸ ಜೀವನವನ್ನು ಪಡೆದವನು : "ಪುನರ್ಜಾತಃ—ಶಿವದೀಕ್ಷೆ ಹೊಂದಿದ ವನು, ಗುರುಕೃಪೆ ಪಡೆದವನು" (ಕರಶಾ. ೨೪-೭) ; ಪೂರ್ವಪಳಿದು ಪುನರ್ಜಾತರೆ ಮಾಡಿದೆವೆಂಬರಿ ಪೂರ್ವಪಳಿದುದಕ್ಕೆ ಭವ ಹಿಂಗಬೇಕು (ಮೋಳಿಮಾ. ೬೯-೧೬೩) ; ನರ ಪಶು ಪ್ರಾಣಿಗಳಿಗೆ ಸುಜ್ಞಾನದೀಕ್ಷೆಯನಿತ್ತು ಪೂರ್ವಗುಣವಳಿದು ಪುನರ್ಜಾತರೆನಿಪ (ಪವಮೋ. ೦೮-೧೬). [ ಸಂ. ]

**ಪುನರ್ದತ್ತಿ** (ನಾ). ಮರಳಿ ಮಾಡುವ ದಾನ ; ಪುನಃ ಕೊಡುವ ದಾನ : ಆನೆಸೆಜ್ಜೆಯ ಬಸದಿಗೆ ತಾಂಬ್ರಶಾಸನಮರ್ಯ್ಯಾದೆಯಿಂದಾಳ್ದ ಗುಡಿಗೆಜ್ಜೆಯ ಕಮ್ಮತಪಳಗಾಗಿಯಿಜ್ಜ ಪೊಲನುಳ್ಳನಿತುಮನಿನ್ನಿರಿಂ ಮೇರೆ ಯುಮ್ಮ ಧರ್ಮ್ಮವಾಗಿ ಪುನರ್ದ್ದತ್ತಿ ಮಾಡಿ ಶ್ರೀನನ್ದಿಪಣ್ಡಿತದೇವರ್ಗ್ಗೆ ಹಸ್ತೋದಕಂಗೆಯ್ದು ಕೊಟ್ಟವು (ಸೌಇಇ. XX, ೯೬-೪೦ ; 1073); ಪುನರ್ದ್ದತ್ತಿಯಾಗಿ ನಾಲ್ಕುಂ ಸುಂಕದೊಳಪೆರಡೊಲ್ದೆಜ್ಜ ಕೊಡವೀಸವ ಸಹಿತವಾಗಿ ಬಿಟ್ಟ ಉಪ್ಪಿನ ಪೆ[ಂಟೆ] ಅಖಾವತ್ತು (ಸೌಇಇ. XX, ೩೦-೨೪ ; 1088). [ ಸಂ. ]

**ಪುನರ್ದರ್ಶನ** (ನಾ). ಮತ್ತೆ ಕಾಣುವಿಕೆ ; ಪುನಃ ಮಾಡುವ ಭೇಟಿ : ಪುನರ್ದರ್ಶನಮಕ್ಕೆಂದುಂ ಯಶಮಕ್ಕೆ ವಿಜಯಮಕ್ಕೆಂದೊಲ್ಪಕ್ಕೆಂದು . . . ಅಚ್ಯುತಕಲ್ಪಕಚ್ಯುತೇಂದ್ರಂ ಪೋದಂ (ಶಾಂತಿಪು. ೭-೧೦೬). [ ಸಂ. ]

**ಪುನರ್ಧಾರೆ** (ನಾ). ಮರಳಿ ಧಾರೆಯೆರೆದು ಕೊಡುವಿಕೆ ; ಪುನರ್ದತ್ತಿ : ಶ್ರೀಮೂಲಸ್ಥಾನಭೋಗೇಶ್ವರದೇವರಿಗೆ ಸರ್ವ್ವನಮಸ್ಯವಾಗಿ ಪುನರ್ಧಾರೆಯ ಮಾಡಿದರು (ಸೌಇಇ. XX, ೧೯೩-೮ ; 1215).

[ ಸಂ. ಪುನರ್ಧಾರಾ ]

**ಪುನರ್ನವ** (ಗು). ೧. ಮತ್ತೆ ಹೊಸತಾಗುವ. (ನಾ). ೨. ಮರಳಿ ಹೊಸತಾದುದು ; ಪುನಃ ಹುಟ್ಟಿ ಬೆಳೆದುದಂ : ಉಡಿದೀ ನವ್ಮೃರ್ವರ ತೊಡರ್ಪುದಂ ನೀಂ ಪುನರ್ನವಂ ಮಾಡಿನ್ನುಂ (ಶಾಂತಿಪು. ೭-೦೦೪). ೩. ಹೊಸ ಚೈತನ್ಯವನ್ನು ಪಡೆದವನು : ದಿನದಿನದ ಜಾಡ್ಯದಲ್ಲಿ ಹೊಸತೇನೊ ಒಂದು ಚೈತನ್ಯ ಚಿಗುರಿ ಪುನರ್ನವನಾಗಿ ಅವನು ಕೆಲಸಕ್ಕೆ ಮರಳಿದರೆ ಶ್ರೇಯಪ್ಪಲ್ಲವೆ ? (ಗಾಳಿಶ. ೩೬). ೪. ಉಗುರು ; ನಖ : "ಕಾಮಾಂಕುಶಾಃ, ಕರರುಹಾಃ (ಪುನರ್ನವಾಃ) . . . ನಖರಾಃ—ಈ ೫ (೬?) ಉಗುರ್" (ಕರಾಯು. ೯೪-೩೩೭). [ ಸಂ. ]

**ಪುನರ್ನವಿ** (ನಾ). ಒಂದು ಬಗೆಯ ಸಸ್ಯ ; ಬಿಳಿಯ ಗಣಜಿಲೆ ; ಕೊಮ್ಮೆಗಿಡ: "ಗಣಜಿಲೆ ಪುನರ್ನವಿ ಶಿವಾಟಿಕೆಯೆನಿಕ್ಕು" (ಮಂಗರಾ ೪೦-೩೦); ಕನಕದ ಕಾಯನೊಂದುದೆವಸಂ ತಿಜಿದಟ್ಟುಜಿ ಸುಣ್ಣದೊಜಿಲೊಳ್ ದಿನಮಿರಿಸಿಟ್ಟು ಕರ್ಚೆ ಗುರುಗುಂಜಿ ಪುನರ್ನವಿ ಪದ್ಮಪತ್ರಪೊಂಬಿನಿತುಮನಿಕ್ಕಿ ಸುಣ್ಣದೊಳವಂ ಪದಪಿಂ ತೆಗೆಪುತ್ತ . . . ಅಡುಗಾವ ಜಾಡಮಂ (ಲೋಕೋಪ. ೬-೩೦). [< ಸಂ. ಪುನರ್ನವಾ]

**ಪುನರ್ನವೆ** (ನಾ). = ಪುನರ್ನವಿ : "ಪುನರ್ನವಾ, ಶೋಥಘ್ನೀ—೨ ಕೊಮ್ಮೆಗಿಡ" (ಸಿದ್ಧಾಂತಿ. ೦೪೬). [ಸಂ. ಪುನರ್ನವಾ]

**ಪುನರ್ಧರಣ** (ನಾ). ಮರಳಿ ನೆಲೆಗೊಳಿಸುವಿಕೆ ; ನವೀಕರಣ ; ಜೀರ್ಣೋದ್ಧಾರ : ಪ್ರಘಟ್ಟದಿಂ ಕೆಟ್ಟ ಸಮ್ಮನ್ದಿಯಂ ಪುನರ್ಬ್ಭರಣಂ ಮಾಡಿ (ಎಇ. XV, ೭೯-೦೬; 1060) ; ಪುರಿಗೆಜ್ಜೆಯೊಳ್ಪೆರ್ಮ್ಮಾಡಿಯ ಪುರವರಮಳಿದಿಜ್ದುದಂ ಗಜಾರಿಧ್ವಜನಾದರದಿನ್ದಮೆ ನೋಡಿ ಪುನರ್ಬ್ಭರಣಂ ಮಾಡಲ್ಕೆವೇಡಿ ಜಯಕೇಶಿನೃಪಂ . . . ಮಾಡಿದಂ ತತ್ಪುರಮಂ (ಸೌಇಇ. XX, ೯೭-೩೩ ; 1074); ರಾಯಮುರಾರಿ ಸೋವಿದೇವ . . . ಮಣಿಯೂರು ಪುನರ್ಬ್ಭರಣಂ ಮಾಡಿ ಮುತ್ತಗೆಯ ನಡುವಣ ದಕ್ಷಿಣ ಮುಖ ಶ್ರೀಚೆನ್ನಕೇಶವರ್ಗೆ ಧಾರಾಪೂರ್ವ್ವಕಂ ಕೊಟ್ಟಂ (ಕೊಲ್ಹಾಶಾ. ೯-೪೩ ; 1170). [ಸಂ.]

**ಪುನರ್ಭವ** (ನಾ). ೧. ಮರುಹುಟ್ಟು : ಪುನರ್ಜನ್ಮ : ಜಾನಿಸುತ ಪರಪದದಲ್ಲಿ ಕೂಡಿರ್ದನಾದೊಡೀ ರಸೆಯೊಳಾತಂಗಂ ಪುನರ್ಭವಮದಿಲ್ಲಂ (ಜಕ್ಕೈಪು. ೬೩-೭೨). ೨. ಉಗುರು ; ನಖ : "ಪುನರ್ಭವಃ, ಕರರುಹಃ, ನಖಃ, ನಖರಃ . . . ೪ ಉಗುರುಗಳ ಹೆಸರುಗಳು" (ಸಿದ್ಧಾಂತಿ. ೦೯೩). ೩. ಕೂದಲು.

**ಪುನರ್ಭವನಾಗು**=ಮರಳಿ ಹುಟ್ಟುವವನಾಗು; ಸಾಯು : ದಿವಸಕರ ಚಂದ್ರಯುತ ಭಾರ್ಗವನಂ ಜನ್ಮಾವಸರದೊಳೀಕ್ಷಿಸುವಡೆ ದೇವವಿನೂತಂ ಪುಟ್ಟಿದ ಮಾನವನಿರದೆ ನವಾಬ್ದದಿಂ ಪುನರ್ಭವನಕ್ಕುಂ (ಜಾತಿಪ. ೬-೨೯).

**ಪುನರ್ಭವನೆನಿಸು**=ಪುನರ್ಭವನಾಗು : ನಿಲೆ ತದುಶಾಧೀಶ್ವರಂ ಷಷ್ಠಗೇಹದೊಳಾ ಲಗ್ನಭವಂ ಪುನರ್ಭವನೆನಿಕ್ಕುಂ ತತ್ಕ್ಷಮಾಣಾಹದಿಂ (ಜಾತಿಪ. ೬-೩೭).

[ಸಂ.]

**ಪುನರ್ಭವಿಸು** (ಕ್ರಿ). ಮತ್ತೆ ಹುಟ್ಟಿ ಬರು : ನಿನ್ನ ಪತಿ . . . ದಹನ ವಾದಾ ನೀನು ಬಂದೆತಗಲಾವಿತ್ತಯಾಶೀರ್ವಚನವೇನು ಪುಸಿಯದು ಪುನರ್ಭವಿಸಿ ಬಾದಪನು (ಪಪಮೋ. ೭-೪೩). [ಪುನರ್ಭವ + — ಇಸು]

**ಪುನರ್ಭೂ** (ನಾ). ೧. ಮರಳಿ ಹುಟ್ಟಿ ಬಂದುದು ; ಪುನರ್ಜನ್ಮ ಹೊಂದಿದುದು. ೨. ಮರುಹುಟ್ಟು ; ಪುನರ್ಜನ್ಮ. ೩. ಮರು ಮದುವೆಯಾದವಳು ; ಎರಡನೆಯ ಸಲ ಮದುವೆಯಾದವಳು : "ಪುನರ್ಭೂಃ, ದಿಧಿಷೂಃ—ಈ ೨ ಮರುಮಾಜಿವಳ್" (ಕರಾಯು.೬೦-೩೩೦) ; ಪುನರ್ಭೂ ಎಂದರೆ ಮೊದಲು ಒಬ್ಬನನ್ನು ಮದುವೆಯಾಗಿ ಆಮೇಲೆ ಮತ್ತೊಬ್ಬನನ್ನು ಮದುವೆ ಮಾಡಿಕೊಂಡವಳು (ಆರ್ಯೇಧ. ೦೩೦). [ಸಂ.]

**ಪುನರ್ಮಿಲನ** (ನಾ). ಪುನಃ ಭೇಟಿಯಾಗುವಿಕೆ ; ಪುನಃಸಮಾಗಮ : ದುಷ್ಯಂತ . . . ತಮ್ಮ ಪುನರ್‌ಮಿಲನದ ಗುರುತಾಗಿ ಅದನ್ನು ತೊಡಿಸಲು ಬರುತ್ತಾನೆ (ಧರ್ಮಶಾ. ೬೩). [ಸಂ.]

**ಪುನರ್ರಚನೆ** (ನಾ). ಇದ್ದುದನ್ನು ನವೀಕರಿಸಿ ಪುನಃ ನಿರ್ಮಿಸುವಿಕೆ ; ಪುನರ್ನಿರ್ಮಾಣ : ಶಿಕ್ಷಣದ ಪುನರ್ರಚನೆಯಲ್ಲಿ ರಾಷ್ಟ್ರ ಈಗ ಎರಡು ಮುಖ್ಯ ಮುಂಬಾಗಗಳಲ್ಲಿ ಹೆಜ್ಜೆಯಿಡುತ್ತಿದೆ (ಶಿಕ್ಷದ. VIII ಸಂಪುಟ).

[ ☞ 'ಪುನಾರಚನೆ' ಎಂಬುದು ಇದರ ಶುದ್ಧರೂಪ]

**ಪುನರ್ರಚಿಸು** (ಕ್ರಿ). ಮರಳಿ ನಿರ್ಮಿಸು ; ಪುನಃ ರಚಿಸು : ಪದಗಳ ಧ್ವನಿರೂಪವನ್ನು ಪುನರ್ರಚಿಸಲು ಈ ಎಲ್ಲ ದ್ರಾವಿಡಭಾಷೆಗಳ ರೂಪಗಳನ್ನು ತುಲನೆ ಮಾಡಿ ನೋಡಬೇಕು (ದ್ರಾಭಾಪ. ೦೦ ಹಿನ್ನೆಲೆ).

☞ ವ್ಯಾಕರಣದ ಪ್ರಕಾರ ಇದು ಅಸಾಧುರೂಪವಾದರೂ ಈಚೆಗೆ

ಇಂತಹ ಶಬ್ದಗಳು ಅಧಿಕವಾಗಿ ಪ್ರಯೋಗಗೊಳ್ಳುತ್ತಿವೆ. ಉದಾ ಹರಣೆಗೆ 'ಅಂತರ್ರಾಷ್ಟ್ರೀಯ' ಇತ್ಯಾದಿ. [ಪುನರ್ರಚನೆ + -ಇಸು₁]

**ಪುನರ್ದರಣ** (ನಾ). = ಪುನರ್ಭರಣ : ರುದ್ರುಶಕ್ತಿಪಣ್ಡಿತರ್ಗ್ಗೆ ಧಾರಾ ಪೂರ್ವ್ವಕಂ ಸರ್ವ್ವನಮಶ್ಯಂ ಪುನರ್ವ್ವರಣವಮ್ಮಾಡಿ ಕೊಟ್ಟು ಪೂರ್ವ್ವವೃತ್ತಿಯು ಗರ್ದ್ದೆ ಮತ್ತರೆರಡು (ಎ.ಕ. ೧೧೫೪, ೬೩-೩೪ ; 1025).

[ಈ ಇದು 'ಪುನರ್ಭರಣ' ಎಂಬುದರ ಅಪಲಿಖಿತವಿರಬಹುದು]

**ಪುನರ್ವಸತಿ** (ನಾ). (ಪುನಶ್ಚೈತನ್ಯವನ್ನು ಪಡೆಯಲು ಒದಗಿಸುವ) ಮರುವಸತಿ : ಕಾಯಿಲೆಯಿಂದ ನರಳಿದ ರೋಗಿಗಳಿಗೆ ಪುನರ್ವಸತಿ ಯನ್ನು ಮಾಡಿಕೊಡಬೇಕು (ಆಂರಿಕೋ. ೯೭). [ಸಂ.]

**ಪುನರ್ವಸು** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಏಳನೆ ಯದು ಮತ್ತು ಆ ರಾಶಿಯಲ್ಲಿ ಬರುವ ಮಳೆ : ಪುನರ್ವಸುಃ, ಅದಿತಿಃ, ಅದಿತ್ಯಂ, ಅಧಿದೈವತಂ ಈ ೪ ಪುನರ್ವಸು ನಕ್ಷತ್ರಕೆ ಪೆಸರು (ಶಾಸ್ತ್ರ. ೬೨-೪). [ಸಂ.]

**ಪುನರ್ವಿಮರ್ಶೆ** (ನಾ). ಮರಳಿ ಪರಾಮರ್ಶಿಸುವುದು : "ಪರಿಷ್ಕರಣ, ಪುನರ್ವಿಮರ್ಶೆ" (Revision. ಶಬ್ದ. ೬೦). [ಸಂ. ಪುನರ್ವಿಮರ್ಶ]

**ಪುನರ್ವಿವಾಹ** (ನಾ). ಮರುಮದುವೆ: ಕೆಲವು ಸಂದರ್ಭಗಳಲ್ಲಿ ಪುನರ್ವಿವಾಹವು ಯುಕ್ತವೆಂದು ಹೇಳಲ್ಪಟ್ಟಿದೆ (ಶಾರ. ೩೩). [ಸಂ.]

**ಪುನರ್ವ್ಯವಸ್ಥೆ** (ನಾ). ಮೊದಲಿದ್ದುದನ್ನು ಬದಲಿಸಿ ಮರಳಿ ಮಾಡಿದ ಏರ್ಪಾಟು : ಮುಂದಿನ ನಮ್ಮ ಶಾಲೆಗಳು ಪುನರ್ವ್ಯವಸ್ಥೆಯಾಗಬೇಕಾ ಗಿದೆ (ಶಿಕ್ಷರ. ೦೬೨) ; ತನ್ನ ಬಾಹ್ಯಜೀವನವನ್ನೆಲ್ಲ ಪುನರ್ವ್ಯವಸ್ಥೆಗೊಳಿಸ ಬೇಕೆಂದು ನೆಕ್ಲುದೋವ್ ಉದ್ದೇಶಿಸಿದ್ದನು (ಪುನರು. ೧೯೯).

[ಸಂ. ಪುನರ್ವ್ಯವಸ್ಥಾ]

**ಪುನಶ್ಚರಣೆ** (ನಾ). ಮಂತ್ರವನ್ನು ಪುನಃಪುನಃ ಉಚ್ಚರಿಸುವಿಕೆ ; ಜಪಿಸುವಿಕೆ : ಮಂತ್ರ ಕಲಿತಡೇನು ಪುನಶ್ಚರಣೆ ಮಾಡಿದಲ್ಲದೆ ಸಿದ್ಧಿಸದು (ಅಪಶಂ. ೧೯೩-೮೬೬) ; ವಸುರಜತಸ್ಫಟಿಕಮ್ರೃತ್ತಿಕಾಶಿಲಾಮಯಲಿಂಗಮಂ ಸು ವಿಟ್ಟು ಪೂಜಿಸುತೆ ತೇಜಪುನಶ್ಚರಣೆಯಿಂ ಪರಿಶುದ್ಧಿಯೊಡೆದು (ಶಪಪೋ. ೨-೩೬). [< ಸಂ. ಪುರಶ್ಚರಣ]

**ಪುನಶ್ಚೇತನ** (ನಾ). ಮರಳಿ ಚೈತನ್ಯವನ್ನು ಹೊಂದುವಿಕೆ : ಶ್ರೀಮತಿ ರುಕ್ಮಿಣಿದೇವಿ ಮುಂತಾದವರು ಕಲಾಸಂಪ್ರದಾಯಗಳನ್ನು ಪುನಶ್ಚೇತನಗೊಳಿಸಿ ಬೆಳಿಸಲು ಪ್ರಶಂಸನೀಯವಾದ ಸೇವೆಯನ್ನು ಸಲ್ಲಿಸಿದರು (ಶಾರದ. ೫೫೨). [ಸಂ.]

**ಪುನಶ್ಚೇತನಗೊಳ್ಳು** (ಕ್ರಿ). ಮರಳಿ ಚೈತನ್ಯವನ್ನು ಪಡೆ,-ಉತ್ಸಾಹ ವನ್ನು ಹೊಂದು : ಮಳೆಯಿಂದ ಪುನಶ್ಚೇತನಗೊಂಡ ತೋಟ ಹೊಲ ಗಳ ದೃಶ್ಯದಿಂದ ಅವನು ಆನಂದಪುಲಕಿತನಾದನು (ಕೃಷಿಪು. ೪೬೬).

[ಪುನಶ್ಚೇತನ + ಕೊಳ್ಳು₁ (< ಕೊಳ್₁)]

**ಪುನಸ್ಸ್ವಯಂವರ** (ನಾ). ≡ ಪುನಃಸ್ವಯಂವರ : ಎನಗೆಯುನ್ನು ಪುನಸ್ಸ್ವಯಂವರ ಮನದೊಳುಂಟೇ ನೀವು ಬರಬೇಕೆನುತ ವಾರ್ತೆಯ ಕಲ್ಪಿಸಿದೆ (ನಳಚ. ೯-೫೬). [ಸಂ.]

**ಪುನಹ** (ಅ). ಮತ್ತೆ ; ಪುನಃ ; ಮರಳಿ : ಮನಸ್ಸು ತೃಪ್ತಿಗೊಳ್ಳದೆ ಪುನಹ ಅದೇ ಪ್ರಶ್ನೆಯನ್ನು ಹಾಕುತ್ತಿತ್ತು (ಕಠಿದಾ. II, ೪೪೮). [< ಪುನಃ]

**ಪುನಾರಚನೆ** (ನಾ). ಮರಳಿ ರಚಿಸುವುದು ; ಪುನರ್ನಿರ್ಮಾಣ : ಶರೀರದ ಬೆಳವಣಿಗೆ ಮತ್ತು ಪುನಾರಚನೆಗೆ ಅವಶ್ಯವಾದ ಕಚ್ಚಾಮಾಲ ನ್ನೊದಗಿಸುವುವು—ಮುಖ್ಯವಾಗಿ ಸಸಾರಜನಕಗಳು ಮತ್ತು ವಿವಿಧ ಜಾತಿಯ ಲವಣಗಳು—ಈ ಕೆಲಸವನ್ನು ಮಾಡುತ್ತವೆ (ಆರೋಗ್. ೫೬).

[ಸಂ. ಪುನಾರಚನ]

**ಪುನಾಲಿ** (ನಾ). ಒಂದು ಬಗೆಯ ಔಷಧೀಸಸ್ಯ : ಚೀನಾಬಿಳಿಮರ, ಪುನಾಲಿ, ಹುದಿಬಳ್ಳಿ (ವೈ.ಶಿ. ೫೯-೫೬೪). [?]

**ಪುನೀತ** (ಗು). ೧. ಪವಿತ್ರವಾದ : ಶುದ್ಧವಾದ : ಆತನಂ ನೋಡಿದೊಡೆ ಸಾಕು ಪುನೀತಭಕ್ತಿ ಗುಣತತ್ವಪಹುದು (ಬಸವ. ೬-೦೩) ; ಆ ಪ್ರೇಮವೆಂಬ ಪುನೀತವಸ್ತುವಿಗೆ ಪಕ್ಷಪಾತವಿಲ್ಲ, ತಾರತಮ್ಯವಿಲ್ಲ (ಸುಂದರ. ೦೪). (ನಾ). ೨. ಪರಿಶುದ್ಧವಾದುದು : ಪಾವನ : ಸದ್ಗುಣಚರಿತ್ರನಾಮಾಳಿಯಿಂ ಜಗಮಂ ಪುನೀತಮಂ ಮಾಳ್ಪ ನಿನ್ನೇಳಿಗೆಯನವನಿತ್ತ ಬಲ್ಲು (ಕ್ಕಬಾ. ೦೬-೪೩). ೩. ಪರಿಶುದ್ಧನಾದವನು : ಉತ್ತಮಕುಲದೊಳೊಗೆದು ಪುನೀತ ನಾಗಿ . . . ಬಾಳ್ದು (ಬಸವ. ೩-೫೬) ; ಮಂದಬುದ್ಧಿಯವರೂ ಶಿಕ್ಷಣ ದಿಂದ ಪುನೀತರಾಗುವಂತಾಯಿತು (ಶಿಕ್ಷಕ. ೬೪೪). [ಸಂ.]

**ಪುನೀತೆ** (ನಾ). ಪರಿಶುದ್ಧಳಾದವಳು ; ಪಾವನೆ : ಆತನುತ್ತಮಸತಿ ವಿಶೇಷಪುನೀತೆ ಮೂದಾಂಬಿಕೆ ಸವಿನಯಾನ್ವಿತೆ ಸತ್ಕುಲಜಾತೆ (ಬಸವ. ೨-೪೬).

[ಸಂ. ಪುನೀತಾ]

**ಪುನುಗು** 'ಪುಣುಗು' ನೋ.

**ಪುನುವಲವಳ್ಳಿ** (ನಾ). ಒಂದು ಊರಿನ ಹೆಸರು ; ಈ ಸೊರಬ ತಾಲ್ಲೂಕಿನ ಈಗಿನ ಹುನವಳ್ಳಿ : ಬಳಗಾಜಿರ ಕೋಕರಂ ಪುನುವಲವಳ್ಳಿ ಯಲ್ಲಿಟ್ಟು ಪುಯ್ಯಲಂ ಪರಿದು ಮಾರ್ಬ್ಬಲವಂ ತಳ್ತಿರಿದು ಸ್ವರ್ಗಾ ಲಯಕ್ಕೆ ಸನ್ದಂ (ಎ.ಕ. VIII, ಸೊರಬ. ೩೩೦-೬ ; 979).

[ಪುನುವಲ್₀ + ಪಳ್ಳಿ₁]

**ಪುನೆ** (ನಾ). ಒಂದು ಬಗೆಯ ಸಸ್ಯ : ಸುರಗಿ, ಗರ್ದುಂಡಿ, ಪುನ್ನಾಗ, ಪುನೆ (ವೈ.ಶಿ. ೩೬-೦೦೯೩). [?]

**ಪುನ್ನಮಿ** 'ಪುಣ್ಣಮೆ' ನೋ.

**ಪುನ್ನಾಗ** (ನಾ). ೧. ಪುರುಷರಲ್ಲಿ ಶ್ರೇಷ್ಠನಾದವನು. ೨. ಗಂಡು ಆನೆ. ೩. ಬಿಳಿಯ ಆನೆ. ೪. ಪಟ್ಟದ ಆನೆ. ೫. ಕೋಣ. ೬. ಹಾವು. ೭. ಒಂದು ಬಗೆಯ ಮರ ಮತ್ತು ಅದರ ಹೂವು ; ಸುರಹೊನ್ನೆ : "ಪುನ್ನಾಗಃ, ಸುರಪರ್ಣಿಕಾ—ಈ ೨ ಸುರಹೊನ್ನೆ" (ಹಲಾಯು. ೬೩-೩೩); ಅಪೂರ್ವಮಪ್ಪ ಪುನ್ನಾಗದ ಬಾಸಿಗಂ ಬಿಗಿದ ಬಣ್ಣದ ಪುಟ್ಟಿಗೆ ನಾಗಜಾಲವೆಂದಾಗಡೆ . . . ನಾಗಿಣಿ ನಾಗಬಂಧದೊಳೆ ತಳ್ತು ಗುಹಾರ್ಣ ವನಂ ಮರುಳ್ಚಿದಳ್ (ಶಂಖಾ. ೪-೦೭) ; ಮುಳಿದು ಸ್ವರ್ಗಕೆ ಪರಿದು ಪೋಗುವ ತೆರದಿ ನೆವಿಸ್ಕೆ ಗಗನವ ತುಡುಕಿ ಪುನ್ನಾಗ ನಾಗವಳ್ಳಿಯ ವೊಲಂ ಕಂಗೆಸೆದುವು (ಶಪಪೋ. ೪-೩೦). ೧, ೩, ೭ : ಮಿಗುವ ದ್ವಿಜಪರಿವಾರ ತಮಗಣಿತ ಪುನ್ನಾಗಸೇವ್ಯಮಾನಂ ವಂಶೋಪಗತಮೆನಿಸಿರ್ದ ಬೆಟ್ಟಂ ಸೊಗಯಿಸಿದುದು ರಾಜನಂತೆ ಲಕ್ಷ್ಮಿಯ ಪೆರ್ಚಿಂ (ಬಾರತಕೃ. ೦೦-೦೯೩). ೨, ೬, ೭ : ಪುನ್ನಾಗವಿರಾಜಿತಮಿದು ಪನ್ನಗವಧುಮಂ ಕರೇಣುಮಂ . . . ನೆನೆಯಿಪುದಖಿಳಮೃಗಶರಣ್ಯಮರಣ್ಯಂ (ಪುಷ್ಪಕೃ. ೩-೬೬) ; "ನರಶ್ರೇಷ್ಠಾ ಪನೀಜಾತಭೇದ ಉಲ್ಪಾಯಂ ಫಣಿ ಪಟ್ಟವರ್ಧನಗಜಂ ಪುನ್ನಾಗಮುಕ್ಕೆಂ" (ನಾನಾರ. ೬೨). [ಸಂ.]

**ಪುನ್ನಾಗತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ಪುನ್ನಾಗತೋಡಿ, ಆದಿತಾಳ (ಹಸುಸು. ೭೪). [ಸಂ. ಪುನ್ನಾಗತೋಡೀ]

**ಪುನ್ನಾಗವರಾಲಿ, ಪುನ್ನಾಗವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪುನ್ನಾಗವರಾಲಿಯಾದರೋ (೨) ಷಡ್ಜಗ್ರಹಸಹಿತವಾದುದು, ಸರ್ವಕಾಲವೂ (ಗಾನಯೋಗ್ಯವಾದುದು) (ಶಕುಶ್ರ. ೦೩೪). **ಪುನ್ನಾಗವರಾಳಿ :** ಪುನ್ನಾಗವರಾಳಿ : ಇನೇ ವಾಳಕರ್ತ ಹನುಮತೋಡಿಯಲ್ಲಿ ಜನ್ಯ (ಸಂಗೀತಂ. ೦೫೨); ಇವರು ಪುನ್ನಾಗವರಾಳಿರಾಗವನ್ನು ನುಡಿಸಿ, ಹುತ್ತ ಗಳಲ್ಲಿ ಮಲಗಿದ್ದ ಹಾವುಗಳನ್ನು ಮೇಲಕ್ಕೆ ಸೆಳೆದು, ತಮ್ಮ ಮುಂದೆ ಹೆಡೆ ಯಾಡಿಸಿ ನರ್ತನ ಮಾಡುವಂತೆ ಮಾಡಿದ್ದಾರೆ (ಸಂಗೀತ. ೯೨).

[ಸಂ. ಪುನ್ನಾಗವರಾಲೀ]

**ಪುನ್ನಾಗವರಾಳಿ** 'ಪುನ್ನಾಗವರಾಲಿ' ನೋ.

**ಪುನ್ನಾಟ** (ನಾ). ಒಂದು ನಾಡಿನ ಹೆಸರು: ಶ್ರೀಮತ್ಕೊಙ್ಗಣಿ ಮಹಾಧಿರಾಜಸ್ಯಾವಿನೀತನಾಮ್ನ[ಃ ಪುತ್ರೇಣ ಪುನ್ನಾಟರಾ[ಜ]ಸ್ಕನ್ದವರ್ಮ್ಮಪ್ರಿಯಪುತ್ರಿಕಾಜನ್ಮನಾ . . . ಸಮಸ್ತ ಮಣ್ಣಾಟ ಪುನ್ನಾಟಾಧಿಪತಿನಾ (ಶ್ಮಿಂ. ೦೯೧೦, ೦ ೨೪; 788). [< ಪುನ್ನಾಡು]

**ಪುನ್ನಾಡಿ** (ನಾ). ದೇಹದಲ್ಲಿರುವ ಹನ್ನೆರಡು ನಾಡಿಗಳಲ್ಲಿ ಒಂದು: ೧. ಇಡಾನಾಡಿಯಲ್ಲಿ ಮಂದಾಕಿನೀ ... ೭. ಪುನ್ನಾಡಿನಾಡಿಯಲ್ಲಿ ಗಂಡಿಕೆ ... ೧೧. ವಾರುಣಿ–ಗೋದಾವರಿ, ೧೨. ಪೂಷಾ –ಪಯಸ್ವಿನೀ (ಹಠಾರ. ೮–೦೯ ಟಾತ್ಪರ್ಯ). [ಸಂ.]

**ಪುನ್ನಾಡು**, ಪೂನಾಡು (ನಾ). ಒಂದು ನಾಡಿನ ಹೆಸರು; ೨ ಕಾವೇರಿ ಮತ್ತು ಕಪಿನಿ ನದಿಗಳ ನಡುವೆ ಇರುವ, ನಂಜನಗೂಡು, ಹೆಗ್ಗಡದೇವನಕೋಟೆ ತಾಲ್ಲೂಕುಗಳ ಸುತ್ತಮುತ್ತಲಿರುವ ಜಾಗ: ಶ್ರೀಮತ್ಕೊಂಗಣಿ ಮಹಾಧಿರಾಜಸ್ಯ ಅವಿನೀತನಾಮ್ನಪುತ್ರೇಣ ಪುನ್ನಾಡರಾಜ ಸ್ಕನ್ದವರ್ಮ್ಮಪ್ರಿಯಪುತ್ರಿಕಾಜನ್ಮನಾ . . . ಬೆಮ್ಬರೀಶ್ವರಸ್ಥಾನಮುದಳ ಪೂರ್ಬ್ಬ ದತ್ತ (ಇಅ. V, ೧೩೯–೫; 513); ಸ್ವಸ್ತಿಶ್ರೀ ಶಿವಮಾರ ಪೃಥುವೀರಾಜ್ಯಂಕೆಯೆ ಪುನ್ನಾಡಬಸಾಸಿರಕ್ಕೆ ಎಱೆಯರ್ . . . ಸ್ತ್ರೀಱೆಯ ಮರಿಯಾದೆ ಕೊಟ್ಟರ್ (ಎಕ. III, ನಂಜನ. ೨೬–೨; ಸು. 810); ಪುನ್ನಾಡರಸರಾ ಮಗನ್ದಿರ್ ಸೀಮರಸ × × × (ಎಕ. IX, ದೇವನ. ೪೦ ೨; ಸು. 900 ?). **ಪೂನಾಡು**: ತಳವನನಗರ ಶ್ರೀವಿಜಯಜಿನಾಲಯಕ್ಕೆ ಪೂನಾಡು ಛಾಸಹಶ್ರ ಎಡೆನಾಡು ಸಪ್ತರಿ ಮಧ್ಯೆ ಬದಣೆಗುಪ್ಪೆ ನಾಮ ಮಹಾಧಿರಾಜೇನ ದತ್ತೇನ ಪಡಿಯೋಲಱೆಯೊಳಂ (ಎಕ. I (R), ೦–೦೮; 466 ಕ್ರಿಶ); ಬೂತರಸ ಯುವರಾಜ ಪಥದುಳ್ ನಿನ್ದು ಕೊಙ್ಗಳ್ನಾಡು ಪೂನಾಡವುನಾಳುತಿಬ್ದು (ಎಕ. III, ನಂಜನ. ೭೫–೬; 870).

[ದೇ.॥ ತಮಿ. ಪುನನಾಟು; ಮಲ. ಪುನ್ನಾಡು]

**ಪುನ್ನಾಹ** (ನಾ). ಒಂದು ಬಗೆಯ ಕುದುರೆ: ಇಂದಿರನಕ್ಕು ಮೂಷಕವೃಂದಚ್ಛಾಯಾವಿರಾಜಿತಂ ಕರ್ಗಲ್ಬಣ್ಣಂದದ ಕೇಸರಮಾ ನೊರೆಯಂದಮನನುಕರಿಸಿ ತೋರ್ಪುದು ಪುನ್ನಾಹ (ಅಶ್ವಶಾ. ೨–೨೯). [?]

**ಪುನ್ನಿ** (ನಾ). ಒಬ್ಬಾತನ ಹೆಸರು: ಕೊಟೆಯಮ್ಮನ ಅಳಿಯಂ ಚಪ್ಪಯ್ಯನ ಮಗಂ ಪುನ್ನಿ ಗೋಸಾಸಿ ಕೆಱೆಯಂಮಾಡಿಸಿ ಕೊನಲ್ಲಿಯ ಮಹಾಜನಕೆ ಗೋಸಾಸಮಿಟ್ಟು (ಎಕ. VIII, ಸಾಗರ. ೦೦೦–೭; 986). [?]

**ಪುನ್ಪಯಿರು** (ನಾ). ಒಣಭೂಮಿ ಮತ್ತು ಅದರ ಮೇಲಿನ ಕಂದಾಯ; ಖುಷ್ಕಿಬೆಳೆ ಮತ್ತು ಅದರ ಮೇಲಿನ ಸುಂಕ: ಯಿ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾನ್ಪಯಿರು ಪುನ್ಪಯಿರು . . . ಉಂಟಾದ ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವು (ಶಾಇ. IX–ii, ೪೬೩–೭; 1470); ನಂಜೆ ಪುಂಜೆ ವಾನ್ಪಯಿರು ಪುನ್ಪಯಿರು . . . ಮೊದಲಾದ ಹಲ ಉಪಾಧಿಗಳು ಸಹ (ಶಾಇ. IX–ii, ೪೬೬–೫; 1472). [← ತಮಿ. ಪುನ್ಪಯಿರ್]

**ಪುನ್ಪುಲ** 'ಪುನ್ಪೊಲ' ನೋ.

**ಪುನ್ಪೊಲ**, ಪುನ್ಪುಲ (ನಾ). ಒಣಭೂಮಿ; ನೀರಾವರಿಯಿಲ್ಲದೆ ಬೆಳೆಯುವ ಭೂಮಿ: ಕೊಟ್ಟೊದು ಬರನೂರಾಯು ತೆಱೆಯುಂ ಪುನ್ಪೊಲಮು ×ನ್ನ × × (ಎಕ. X (8), ಮುಳಬಾ. ೦೮೯–೩; 9ನೆಯ ಶ). **ಪುನ್ಪುಲ**: ಕಿಱುಪೆನ್ನಿವ್ವಕ್ಕರ್ವುಪುನ್ಪುಲಮೆಲ ಪತ್ತೊನ್ದಿವಿ × (ಎಕ. XIV, ತಿರುಮ. ೨೫೨–೫; ?). [← ತಮಿ. ಪುನ್ಪುಲ]

**ಪುಪ್ಪ**, ಪುಟ್ಪ, ಪುಟ್ಟಿ (ನಾ). ಹೂವು; ಪುಷ್ಪ: 'ಪುಪ್ಪಸರ', 'ಪುಪ್ಪುಡಿ' ಪರಾ. **ಪುಟ್ಪ**: ಪುಟ್ಪಕ್ಕೆ ಕೊಟ್ಟ ಗದ್ಯಾಣ ೧ (ಎಕ. II, ೬–೨೭; 1075); ಶ್ರೀನಂದನಾದೀಮಿಗೆಗಂ ಶ್ರೀಪದಪುಟ್ಪಕ್ಕಂ ನಂದನವನಕಂ . . . ಸಮಸ್ತವಸ್ತುಸುಂಕವನಾಚಂದ್ರಾರ್ಕತಾರಂಬರಂ ಸಧರ್ಮ್ಮಮುಂ ಪ್ರತಿಪಾಲಿಸಿದವಂ (ಎಕ. XIV, ಶ್ರೀರಂಗ. ೨೩೩ ೫; ಸು. 1177). **ಪುಟ್ಟಿ**: ಆ ದೇವರ ಪೂಜೆಯು ಪುಟ್ಟಿಕ್ಕೆಂದು . . . ಹೂದೋಟಂ ಮತ್ತರು ೧ (ಸೌಇ. XX, ೦೦೯–೨೬; 1148).

[<ಪ್ರಾ. ಪುಪ್ಪ. / ಸಂ. ಪುಷ್ಪ]

**ಪುಪ್ಪಸರ** (ನಾ). ಹೂವಿನ ಬಾಣವನ್ನು ಹೊಂದಿದವನು; ಮನ್ಮಥ: ಪುಪ್ಪಸರನ ರಾಣಿಗೆ ಮೆಯ್ಯೊಡವನುವೊಪ್ಪಿಸಿ ತುತಿಯ ಮಾಡಿದರು (ಪೋಹತ. ೦೭–೯೩). [ಪುಪ್ಪ+ಸರ$_3$]

**ಪುಪ್ಪುಟ** (ನಾ). ಬಾಯಲ್ಲಿ ಆಗುವ ಒಂದು ಬಗೆಯ ಹುಣ್ಣು; 'ತಾಲುಪುಪ್ಪುಟ', 'ದಂತಪುಪ್ಪುಟ' ಪರಾ. [<ಸಂ. ಪುಪ್ಪುಟ]

**ಪುಪ್ಪುಡಿ** (ನಾ). ಹೂವಿನ ಹುಡಿ; ಪುಷ್ಪರಜ: ಕರಿಯ ಮಲ್ಲಿಗೆಯ ಪಾವನಕುಸುಮಪರಿಮಳವನುಂಡು ತನ್ಮಕರಂದದೊಳ್ ಮಿಂದು ಪುಪ್ಪುಡಿಯೊಳು ಮನವೊಲ್ದು ಪೊರಳ್ದುದಿನಿಂದ ಕಪ್ಪಾಗಿ . . . ಸಂಚರಿಪ ಪಟ್ಪದಿಗಳನುರಾಗಿಸುತ್ತಿರ್ದುವಾ ಪರವನಾಂತದೊಳ್ (ನಂದಿಪು. ೩–೨೪); ತೆಂಬೆಲರಿಂದಲ್ಲಾಡುವ ತಳಿರ್ತೆಳವಮಾವಿನ ಪೂಗೊಂಚಲ ಪುಪ್ಪುಡಿಯ ಮೊತ್ತದಿಂ ತಟ್ಟಿ ಕಾಲ್ಬಾರಿಗಳಿಂ . . . ಕಣ್ಗೊಳಿಕುಂ (ಮಿತ್ರಗೋ. ೦೨–೦೩).

[< ಪುಪ್ಪ + ಪುಡಿ]

**ಪುಪ್ಪುಸ** 'ಫುಪ್ಪುಸ' ನೋ.

**ಪುಪ್ಪುಸರೋಗ** (ನಾ). ಶ್ವಾಸಕೋಶದ ರೋಗ; ಉಬ್ಬಸ: ಅವಕ್ಕೆ ಬರುವ ಸಾಮಾನ್ಯರೋಗಗಳಲ್ಲಿ . . . ಶ್ವಾಸಕಾಂಗಗಳಿಗೆ ಸಂಬಂಧಪಟ್ಟ ಕೆಮ್ಮು, ಪುಪ್ಪುಸರೋಗಗಳೂ ಮುಖ್ಯವಾದುವು (ಕಪಕೋ. I, ೭೨೯).

[ಪುಪ್ಪುಸ (< ಫುಪ್ಪುಸ) + ರೋಗ]

**ಪುಪ್ಪುಸರೋಗಿ** (ನಾ). ಪುಪ್ಪುಸದ ರೋಗವುಳ್ಳ ವ್ಯಕ್ತಿ: ಪುಪ್ಪುಸರೋಗಿಗಳ ಉಗುಳಲ್ಲೂ ಎಲ್ಲರ ಕರುಳುಗಳಲ್ಲೂ ಈ ಅಣಬೆಗಳು ಸಾಮಾನ್ಯವಾಗಿ ಇದ್ದೇ ಇರುವುವು (ಕಪಕೋ. I, ೨೨೭).

[< ಸಂ. ಪುಪ್ಪುಸರೋಗಿನ್]

**ಪುಪ್ಪುಸ** (ನಾ). ೧. ಶ್ವಾಸಕೋಶ. ೨. ಕಮಲದ ಹೂವಿನ ಬೀಜಕೋಶ. [ಸಂ.]

**ಪುಬ್ಬ** 'ಪುಬ್ಬೆ' ನೋ.

**ಪುಬ್ಬಾಮಿಗ** (ನಾ). ಒಬ್ಬಾತನ ಹೆಸರು: ತೆಂಕಣಪಳ್ಳಿಯ ಗುಡ್ಡದ ಪುಬ್ಬಾಮಿಗಂಗೆ ಮಾಳಿಂಗಿಗಾಮಿಗಿತ್ತಿಯಾಗೆ ಪುಟ್ಟಿದ ಶ್ರೀಮಾರಂ (ಎಕ. VII, ಶಿಕಾರಿ. ೨೮೩–೪; ಸು. 830). [?]

**ಪುಬ್ಬು** 'ಪುರ್ವು' ನೋ.

**ಪುಬ್ಬೆ**, ಉಬ್ಬೆ$_3$, ಪುಬ್ಬ, ಪುರ್ಬ, ಪೂರುವ, ಹುಬ್ಬೆ (ನಾ). ೧. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೊಂದನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ; ಪೂರ್ವಫಲ್ಗುಣಿ: ಪೂರ್ವೆ-ಪುಬ್ಬೆ (ಶಮದ. ತು. ೨೮೪ ತ್ರಯೋ); ಪುಬ್ಬೆ ೨ ವುತ್ತರೆ ಮಂಚದ ಪಾದದ ಹಾಗೆ (ಭಾಸ್ಕರ. ೬೦–೪); ಪುಬ್ಬೆ ಮಳೆ ಉಬ್ಬುಬ್ಬಿ ಹುಯ್ದರೂ ಗುಬ್ಬಿ ಪುಕ್ಕ ನೆನೆಯದು (ಗಾದೆ). **ಉಬ್ಬೆ$_3$**: ೧. ಉಬ್ಬೆಮಳೆ ಅಬ್ಬೇ ಹಾಲು (ಗಾದೆ). **ಪುಬ್ಬ**: ೧. ತ್ರಿಕೋಣದ ಕರ್ಣದ ಮೇಲಿನ ನಕ್ಷತ್ರ ಪುಬ್ಬ, ಕೆಳಗಿನದು ಉತ್ತರಾ (ಪಕ್ಷಕ್ರ. ೬೯). ೨. [ಜೈನ] ಒಂದು ದೊಡ್ಡ ಕಾಲಮಾನ; ಎಪ್ಪತ್ತುಲಕ್ಷ ಐವತ್ತಾರುಸಾವಿರಕೋಟಿ ವರ್ಷಗಳ ಅವಧಿ: ತೊಲಗದು ಪುಬ್ಬಕೋಟಿಪರಿಸಂಖ್ಯೆವರಂ ಪರಮಾಯು (ಆದಿಪು. ೧–೫೨); ನೀನುಮೊಂದು ಪುಬ್ಬಕೋಟಿಕಾಲಮರಸುಗೆಯ್ದು . . . ದೇವನಾದೆ (ಶಂರಾಪು. ೬–೫೭ ವ); ಮೂವತ್ತಾಱುಲಕ್ಷಪುಬ್ಬಂ ರಾಜ್ಯಂಗೆಯ್ದು (ಶಾಂತಿಪು. ೦೭). **ಪುರ್ಬ**: ೧. ಸರಟಪುರದ ಅಯ್ವದಿಮ್ಬಗ್ಗ್ರ ×

ಯಾಸು ಪುಬ್ಬಿದಿನ್ದ ತಪ್ಪದೆ[ಟಿ]ನುಟಿಯೋನ್ (ಶಾಶಾ. XI-1, ೦೨-೦೩ ; ೩೮೭). ೨. ಮಹಾಬಲಖಚರೇಂದ್ರಂ . . . ಮೂವತ್ತಾಱುಲಕ್ಕೆಪುರ್ಬಂ [ಪಾಠಾಂ. ಬ್ಬಂ] ರಾಜ್ಯಂಗೆಯ್ಯೆ (ಆಪು. ೨-೨೩ ವ). **ಪೂರುವ :** ೩. ಹಿಂದಿನ ಕಾಲ ; ಪೂರ್ವಕಾಲ : ಆರು ನಿನ್ನಂದದಲಿ ತಪವನು ಪೂರುವದಲಾಚರಿಸಿದವರು (ಶಿವಾಗ. ೭ ೨ ೩೭). **ಹುಬ್ಬೆ :** ೧. ಪೂರ್ವ—ಹುಬ್ಬೆ (ಶಬ್ದ. ೨೭೦ ಕೃದೋ); ಅಬ್ಬುವದು ರಕ್ತಾಕ್ಷಿಯಪರದ ಹುಬ್ಬೆಯಲಿ ರವಿಯಿರಲಿಕಾಶನ ಸರ್ಬಸೈನ್ಯದ ರಕ್ತದಿಂದವೆ ಹುಟ್ಟಿತಾ ನದಿಯು (ಸಂಭಶ. ೨೬-೩೭).

[<ಸಂ. ಪೂರ್ವ]

**ಪುಮಪತ್ಯ** (ನಾ). ಗಂಡುಮಗು. [ಸಂ.]

**ಪುಮಾಂಸ** (ನಾ). ಗಂಡಸು ; ಪುರುಷ : ಕುಶಲರಾ ಗತಿಗಿಂದ ಕಿಂಚಿತ್ಕುಶಲವಿಲ್ಲೆಣಿಸಲ್ಕೆ ವಿಷಯಾಪಶರ ಸಂಗತಿಯೆಂದಿಗಾಗುವದೊ ಪುಮಾಂಸರಿಗೆ (ಚವೇಶ. ೦೨-೦೦). [<ಸಂ. ಪುಮಾನ್]

**ಪುಮ್ಮೆ** (ನಾ). ಒಂದು ಬಗೆಯ ಆಟ : "ಚಿಟ್ಟುಮುಱಿ ಪುಮ್ಮೆಯೊಳಕ್ಕುಂ" (ಶವಿಕಾಂ. ೨೨೬). [?]

**ಪುಯ್,** ಪುಯ್ಯಿ (ನಾ). ಹುಸಿ ; ಮಾಯೆ : ವಸುಧೆಯ ಭಾರವಮಿಳಿಪದೆ ಸಿಸುತನದಿಂ ಪೊಟ್ಟುಗಳೆವ ಪುಯ್ಯಂ ಕಂಡೆಟ್ಟಿಸಿ ಬಿಸರುಹನಾಭನೊಳಿಂತು ಸಿರ್ದರ್ ಬಿಡುಗಣ್ಣರುಚಿತಕಾರ್ಯೋದಯಮಂ (ಗಿಕಗೋ. ೬-೦೬).

**ಪುಯ್ಯಿ :** 'ಪುಯಿನಡು' ಪರಾ. 'ಪುಸ್ಸಿ' ನೋ.

[ದೇ.ll ತಮಿ. ಮಲ. ಕೋತ. ಪೊಯ್]

**ಪುಯಲ್** 'ಪೊಯಲ್' ನೋ.

**ಪುಯಲ್ಚು** 'ಪುಯ್ಯಲ್ಚು' ನೋ.

**ಪುಯಲ್ದೋರು** (ಕ್ರಿ). ಕೂಗೆಬ್ಬಿಸು ; ಹುಯ್ಯಲಿಡು : ಬೊಬ್ಬಿರಿದು ಬಹುರವದಿ ಪುಯಲ್ದೋರುತಿರಲಶಿಕಶೋರಧ್ವಾನ ಕರ್ಣಯುಗದಲಿ ಪೊಕ್ಕು ಹೃದಯ ಕಂಡ ಕಡೆಗೆ ಪರಿದೋಡುತಿರೆ ಶಬರಾಳಿ ರಭಸದಿಂ ದೆ (ಪಪಪೋ. ೧೬-೨೦). [ಪುಯಲ್ (<ಪೊಯಲ್) + ತೋರು (<ತೋಱು)]

**ಪುಯಿ₁** 'ಪೊಯ್₁' ನೋ.

**ಪುಯಿ₂** 'ಪುಯ್' ನೋ.

**ಪುಯಿನಡು** (ನಾ). ಊಹೆ ಮಾಡಿಕೊಳ್ಳಬೇಕಾಗಿರುವಷ್ಟು ತೆಳ್ಳಗಿರುವ ನಡು : ಪುಸಿನಡುವಿನ ಪುಯಿನಡುವಿನ ಕಣ್ಗೆ ಕಾಣಿಸದ ನಡುವಿನ ಮೋಹಿಸುವ ಅಸಿಯ ನಡುವಿನುಂಗುರವಿಡಿನಡುವಿನ ಪೊಸಜವ್ವನೆಯರೆಯ್ದಿದರು (ಕುರಾಸಾಂ. ೨೧-೯೩). [ಪುಯ್ಯಿ₂ (<ಪುಯ್) + ನಡು₂]

**ಪುಯಿಲ್** 'ಪೊಯಿಲ್' ನೋ.

**ಪುಯಿಲಿಡು,** ಹುಯಿಲಿಡು (ಕ್ರಿ). ೧. ಗರ್ಜಿಸು ; ವೀರಾವೇಶದಿಂದ ಕೂಗು : ಇಟ್ಟಡಿಯು ನೆಟ್ಟನಿನಿಸಂ ಪಿಮ್ಮೆಟ್ಟಿ ಪಟಪಟ್ಟಡರೆಯುಟ್ಟಳಿವರಂ ಕೈಗೊಟ್ಟು ಪುಯಿಲಿಟ್ಟರೆನೆ ದಿಟ್ಟತನಮೆಂತೋ (ಜಕಪ. ೨-೯೩). **ಹುಯಿಲಿಡು :** ೨. (ರಕ್ಷಣೆಗಾಗಿ) ಮೊರೆಯಿಡು : ಸೆರೆ ಬದ್ದಿಹ ಕಾಲ ಹುಯಿಲಿಡುವುದೊ ಎನೆ ಜಿನ್ನನೆ ಜೀರುಂಡೆಮು ಮೇಳ ! (ಗಕೀಕ. ೨೭-೬).

[ಪುಯಿಲ್ (<ಪೊಯಿಲ್) + ಇಡು₁]

**ಪುಯಿಲ್ಚು** (ಕ್ರಿ). ೧. = ಪುಯಿಲಿಡು ೧ : ರಾಘವರಿರ್ವರಿಂದಿವರ್ ಬೇಸಱಿದಾಂಧ್ರಪಸಿಪಾಲವೂಲಸೈನ್ಯಂ ಬಱಿದಪ್ಪಂತೆ ಪುಯಿಲ್ಚಿ ಪೊಯ್ದುಗೆಲ್ವರ್ (ಜಕಪ. ೨-೩೦). ೨. (ರಕ್ಷಣೆಗಾಗಿ) ಮೊರೆಯಿಡು : ಇದು ವಸಂತಕನ ದನಿಯುಂತಿರ್ಪುದು . . . ಸಾಸಿಗನಿಂ ಮೋಸಂ ಬಂದುದರ್ಕೆ ಪುಯಿಲ್ಚುವನಾಗವೇಟ್ಟುದು (ತಕಪ. ೬-೭೦ ವ).

[ಪುಯಿಲ್ (<ಪೊಯಿಲ್) + —ಚು₁]

**ಪುಯ್ಯಲ್** 'ಪೊಯಲ್' ನೋ.

**ಪುಯ್ಯಲಿಕ್ಕು,** ಪುಯ್ಲಿಕ್ಕು, ಹುಯ್ಯಲಿಕ್ಕು (ಕ್ರಿ). ೧. (ರಕ್ಷಣೆಗಾಗಿ) ಮೊರೆಯಿಡು ; **ಗೋಳಿಡು :** ನಾಗನಿಕರಮುಂ ಮರ್ತ್ಯನಿಕರಮುಂ ತರದಿಂ ದೇವನಿಕರಮುಂ ನಿಮ್ಮೊಳಿಗಮನೆ ಭರದಿಂ ಪುಯ್ಯಲಿಕ್ಕೆ ಕಳುಪಿದರೆನ್ನಂ (ಗಂಶ. ೬-೨೩) ; ಅಱುದಿಂಗಳು ಮೊದಲೀ ತಾಣದೊಳು ಬಂದು ಮಱೆಯದೆ ಪುಯ್ಯಲಿಕ್ಕುವೆನು (ನಾಗಕು. ೦೩-೯೨). **ಪುಯ್ಲಿಕ್ಕು :** ೧. ಕುಕ್ಕುಟೋರಗ ಕೊಂದುದೆಂದು ಸುತಾರೆಯುಂ ಪುಯ್ಲಿಕ್ಕುವಂದದಿ ವೈತಾಳಿಯೊಳು ಅಕ್ಕಟ ಪ್ರಾಣಕಂಟಕವಾದುದೆಂಬಂತೆ ಠಕ್ಕ ಮಾಡಿರಿಸಿರಲಾಗ (ಶಾಂತೀಶ. ೦-೯೭). **ಹುಯ್ಯಲಿಕ್ಕು :** ೨. ಗದ್ದಲ ಮಾಡು ; ಹುಯ್ಯಲೆಬ್ಬಿಸು : ಕಳ್ಳಗೆ ಸುದು ಕೊಟ್ಟು ಒಡವೆಗೆ ಹುಯ್ಯಲಿಕ್ಕಿದ (ಗಾದೆ). [ಪುಯ್ಯಲ್ (<ಪೊಯಲ್) + ಇಕ್ಕು]

**ಪುಯ್ಯಲಿಗ** (ನಾ). ಮೊರೆಯಿಡುವವನು ; ಗೋಳಿಡುವವನು : ಧರ್ಮಜಂ ಮೆಚ್ಚಿ ನರನ ಕಜ್ಜಮನೆ ಕೆಯ್ಕೊಂಡು ಬೇಗಮೆರ್ದು ತಂತವನ್ನಾಯುಧಂಗಳಂ ಕೊಂಡು ನಡೆಗೊಂಡು ಪುಯ್ಯಲಿಗರೊಡನೆ ಪೊಱಮಟ್ಟು ವಿರಾಟನ ಪೆಱಗಂ ಬರೆ (ಬಂಶಾಂ. ೦೨-೯೨ ವ).

[ಪುಯ್ಯಲ್ (<ಪೊಯಲ್) + —ಇಗ]

**ಪುಯ್ಯಲಿಡು,** ಪುಯ್ಲಿಡಂ, ಹುಯ್ಯಲಿಡು, ಹೊಯ್ಲಿಡು (ಕ್ರಿ). ೧. = ಪುಯ್ಯಲಿಕ್ಕು ೧ : ಬ[ರ್ದಿ] ಮನೆಯು ಮೇಗೇಱಿ ಕಳ್ಳರೆಂದು ಪುಯ್ಯಲಿಟ್ಟಾಗಳನಿಬರುಂ ತ್ರಸ್ತಾಭಿಭೂತರಾಗಿ ಪಟ್ಟನೆ ಪಾಱಿಯೋಡಿ . . . ಪಗೆಸಾಱಿರ್ದರ್ (ವಡ್ಡಾರಾ. ೦೯-೨೩) ; ಸುಯೋಧನನ ಮಹಾದೇವಿ ಭಾನುಮತಿ ಬಾಯೞಿದು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು (ಶಂಶಶಾ. ೬-೩೩ ವ); ತನ್ನ ಮೂಗನಕಾರಣಂ ಕೊಯ್ದನೆಂದು . . . ಹಾಹಾಕ್ರಂದನರವದಿಂ ಪುಯ್ಯಲಿಡುವ ಕರುಣಾರವಮಂ ಶಳವಾಱಿಂ ಕೇಳ್ದು (ಶಂಶಶಂ. ೭೯ ೨೨). ೨. ಒದರು ; ಅರಚು ; ಕಿರಿಚು : ತೊಲತೊಲಗಿ ವಿರಹಿಗಳ್ಗೆಚ್ಚರದೊಳೆಂದೆತ್ತಲುಂ ಪುಯ್ಯಲಿಡುವಂತೆ ಕೂಗುತಿವೆ ಕೋಗಿಲೆಗಳು (ಕೃಬಭಾ. ೩-೨೦). **ಪುಯ್ಲಿಡು :** ೧. ದುಷ್ಟಬುದ್ಧಿ ಮುನ್ನಮೆ ಹಾಹಾ ಕೆಟ್ಟೆನೆಂದು ಬಾಯುಂ ಬಸಿಱುಂ ಪೊಯ್ದುಕೊಂಡು ಪುಯ್ಲಿಟ್ಟು . . . ಕಾತರಿಸಿ ನುಡಿಯೆ (ಶಂಶಶಂ. ೧೭೦-೬). **ಹುಯ್ಯಲಿಡು:** ೧. ಕೆಟ್ಟೆನಿನ್ನೇವೆನೆನ್ನಣುಗನಡವಿಯೊಳು ಹೊಲಗೆಟ್ಟನೋ . . . ಬಟ್ಟೆಯೊಳು ಕಳ್ಳರಿಂ ಹಿಡಿವಡೆದನೋ ಹುಯ್ಯಲಿಟ್ಟಾರ್ಗಿದಂ ಪೇಳ್ವೆನು (ಸಿದ್ಧರಾ. ೨-೯೫) ; ಹುಯ್ಯಲಿಟ್ಟಳುವೊಡೆ ಕೇಳು ವರಿಲ್ಲೆಂದು ಬಾಯ ಬಿಟ್ಟಿತು ಕಪೋತಕನು (ಕಪೋತ. ೦೨-೯೨) ; ಚಳಿಗಾಲ ಕೊಣಗಿ ಬರಡಾದ ಗಿಡಗಂಟೆಯಲಿ ಹುಯ್ಯಲಿಟ್ಟಿತು ಗಾಳಿ ಈಸು ದಿವಸ (ಪವಮು. ೯೬-೦೦). **ಹೊಯ್ಲಿಡು :** ೧. ಹೊಯ್ಲಿಟ್ಟ ಖುಷಿಗಳ ಮಾತ ಕೇಳ್ದು ರಘುನಂದನನು ನಸುನಗುತ ಬೆದರದಿರಿ . . . ಎಂದೊಡಂಬಡಿಸಿ (ವಾಲಕಾ. ೩). [ಪುಯ್ಯಲ್ (<ಪೊಯಲ್) + ಇಡು₁]

**ಪುಯ್ಯಲಿಸು** (ಕ್ರಿ). = ಪುಯ್ಯಲಿಕ್ಕು ೧ : ನೆಗಟ್ದಿನ್ನ ಗುಣಮಲಂಘ್ಯಂ ಜಗದೊಳವಂ ಕಿಡಿಸಿದಪ್ಪನೀ ನೃಪನೆಂದಚ್ಚಿಗದೊಳೆ ಪುಯ್ಯಲಿಪಂತೆ ಪೊಲೊಗೆದುದು ಚಲದನಿಲಹತಪಯೋನಿಧಿನಾದಂ (ಆದಿಪು. ೦೨-೬೬) ; ಲೋಕಕೋಟರಮಂ ಶೀವಿದುದೆಂದು ಪುಯ್ಯಲಿಪಪೋಲ್ ಮೂಲೋಕದೊಳ್ ಚಕ್ರಿಗೀ ಧುರದೊಳ್ ನೆಟ್ಟನೆ ಕೇಡು ತಪ್ಪದೆನುತುಂ ಗಂಭೀರ ಭೇರೀರವಂ (ನೇಮಿಪು. ೦೨-೯೯).

[ಪುಯ್ಯಲ್ (<ಪೊಯಲ್) + —ಇಸು₃]

**ಪುಯ್ಯಲ್ಚು,** ಪುಯಲ್ಚು (ಕ್ರಿ). = ಪುಯ್ಯಲಿಕ್ಕು ೧ : ಶ್ರೀವಿಜಯನ ಪೆಸರ್ಗೊಂಡು ಪುಯ್ಯಲ್ಚುವ ವನಿತಾಕ್ರಂದನಮಂ ಕೇಳ್ದು (ಶಾಪುಶಾ. ೩೬); ಎಮಗಿನ್ನಾರ್ ಶರಣೆಂದು ಮಾಂಡಲಿಕರುಂ . . . ವಿಲಾಸಿನಿಯರುಂ ಬಾಯ್ವಿಟ್ಟು ಪುಯ್ಯಲ್ಚೆ (ಶಂಶಶಾ. ೨-೯೯) ; ಗಿರಿಜೆಯು ಪದಯುಗದೊಳ್ ರಶಿ ಪೊರಳ್ದು ಪುಯ್ಯಲ್ಚಿ ಪೆರ್ಚಿದಳಲಿರ್ಮಡಿಸುತ್ತಿರೆ ಪಳಯಿ

ಸುತುಂ (ಗಿಂಶ. ೬-೭೯). **ಪುಯಲ್ಚು** : "ಪುಯಲ್ಚು-ಆಕ್ರೋಶಧ್ವನೌ" (ಶಬ್ದ). [ಪುಯ್ಯಲ್ (< ಪೊಯಲ್) + –ಚು$_1$]

**ಪುಯ್ಯಲ್ವರಿ** (ಕ್ರಿ). ದಾಳಿಗೆ ನುಗ್ಗು ; ಕಾಳಗಕ್ಕೆ ನಡೆ : ಪೆರ್ವ್ವಯಲ ಕೊಜ್ಜುಗೆ ಪುಯ್ಯಲ್ವರಿದು ಬಯಲ್ಕಾಡಿನಾಳ್ಕಾದಿ ತುಱುವನಿಕ್ಕಿಸಿ . . . ಪೆರ್ಮ್ಮಾನಡಿಗಾವುಂಣ್ಡನ ಮಗಂ ರಾಮನಲ್ಲಿ ಸತ್ತೊಡೆ (ಎಕ. IV. ಹೆಗ್ಗ.ಕ. ೦೦೩-೬; ಸು. 910); ಸಱಿಕ್ಕನೂರ ಎರ್ಮ್ಮೆ ತುಱು ಪರಿದಟ್ಟಿ ಪುಯ್ಯಲ್ವರಿದು ಪಗರೆಯಲ್ದಟ್ಟಿ ಕಾದಿ ತುಱುವಂ ಮಱ್ಚಿ (ಎಕ. IX. ಹೊಸಕೋ. ೦೦-೦೦; 1041). [ಪುಯ್ಯಲ್ (<ಪೊಯಲ್) + ಪರಿ$_2$]

**ಪುಯ್ಯಲ್ಪೋಗು** (ಕ್ರಿ). = ಪುಯ್ಯಲ್ವರಿ : ಗಂಗೆಸಟ್ಟಿ ಕಳಸ್ಸಜ್ ಪನಟಿಯ ತುಱುಗೊಳಿಒಳ್ಕೊಂಡು ಪುಯ್ಯಲ್ಪೋಗಿ ಆನ್ತಿಱಿದು ಸಗ್ಗಮೇಱಿದವರ್ (ಎಕ. X. ಕೋಲಾರ. ೨೬೫-೩; ೯೬೬); ಪುಯ್ಯಲ್ಗೆ ಪೋದಂ — ಪುಯ್ಯಲ್ಪೋದಂ [ಪಾಠಾಂ. ಪುಯಲ್ಗೆ ಪೋದಂ—ಪುಯಲ್ಪೋದಂ] (ಶಬ್ದ. ೦೬೨ ಕ್ರಿಯೋ). [ಪುಯ್ಯಲ್ (<ಪೊಯಲ್) + ಪೋಗು$_1$ (<ಪೋ$_1$)]

**ಪುಯ್ಯನಿಸು** (ಕ್ರಿ). ಸಿಳ್ಳೆನಿಸಂ ; ಹುಸಿಗೊಳಿಸು ; ವ್ಯರ್ಥಗೊಳಿಸು : ಪತ್ತ ಗೆಲ್ಲವುಂ ಪೆಱಸಾರ್ಚಿದಂ ಪೊತ್ತ ಜಸಮುಂ ಪು[ಪಾಠಾಂ. ಪು]ಯ್ಯನಿಸಿದಂ ಪಕ್ಷಿದೇಟ್ಟಿಗಿಯುಂ ಬಯಲ್ಗೆಯ್ದಂ (ಚಳಶಂ. ೩೬-೭). [ಪುಯ್$_2$ + ಎನಿಸು$_1$]

**ಪುಯ್ಯೇಟಿಸು** (ಕ್ರಿ). ಗೋಳಾಡಿಸು ; ಗೋಳು ಹೊಯ್ದುಕೊಳ್ಳು : ಅನಿತಱಿಂ ಬಳಿ ಬಾಜಿಪ ಕೈಗಳಂ ಪಿಡಿದು ನಿಲಿಸಿ ಈ ಪೆಣಗುವ ಕಂಠಾಶ್ಲೇಷ ಪ್ರಣಯಿಯುಮನೀ ತೆಱದೆ ಪೊಯ್ದು ಪುಯ್ಯೇಟಿಪರೇ ಎಂದೆನಿಬರುಂ ನಗಿಸಿ ಕುಳ್ಳಿರಿಸಿ (ಚಳಶ. ೬-೦೩೩). [<ಪುಯ್ಯಲ್ + ಏಟಿಸು]

**ಪುಯ್ಯೋಲಗ** (ನಾ). ಕಪಟದ ಓಲಗ : ಪೊಸಯಿಸಿ ಪುಯ್ಯೋಲಗಮುಂ ಪೊಸಕುದುರೆಯುಮರ್ ಪೂಣರ್ಚಿ ಮಹಿಶೂರರುಮಂ ಮಸುಧಾರೆಱಿಪಾಟ್ಟರೆಂದೇ ಬಸವಟೆದಂ ಬೆರ್ಚಿ ಬೆದಱಿ ಬದಿರೂರ್ತ್ಸವಂ (ಅಕ್ರ.ಕಿ. ೩೬-೭). [ಪುಯ್$_2$ + ಓಲಗ$_1$]

**ಪುಯ್ಲಿಕ್ಕು** 'ಪುಯ್ಯಲಿಕ್ಕು' ನೋ.

**ಪುಯ್ಲಿಡು** 'ಪುಯ್ಯಲಿಡು' ನೋ.

**ಪುಯ್ವಗೆ** (ನಾ). ಕಪಟದ ಮನಸ್ಸು ; ಕುಟಿಲಬುದ್ಧಿ : ನಗೆಮೊಗ ಸವಿನುಡಿ ಸಿರಿಮೆಯ್ಯೊಸಗೆಗಳಿಂ ಮೋಸಗೊಳಿಪ ಗೋಪಾಲನ ಪುಯ್ವಗೆಯುಂ ಬಯಲೆನಿಸುತೆ ಪಡಿಮೊಗದೊಳ್ ಮೂಡಲೆಯ ಮುಂದುಗೆಯ್ದರ್ ಮತ್ತಂ (ಗೀತಗೋ. ೨೫-೯೩) ; ವ್ಯರ್ಥವಾಗಿ ವನಮಂ ದಹಿಸಿದವರುಂ ಪುಯ್ವಗೆಯಿಂದು ಬಿಜ್ಜೆಗಳು ಕಲ್ತವರುಂ (ಶಾರಿಕಾ. ೨೯೫-೪೯). [ಪುಯ್$_2$ + ಬಗೆ$_2$]

**ಪುರ$_1$**, ಪುರ$_1$, ಹೂರ$_1$ (ನಾ). ಹೊನಲು ; ಪ್ರವಾಹ ; ನೆರೆ : "ಪುರ [ಪಾಠಾಂ. ಹೂರಂ]ಹೊನಲ್" (ಕಬ್ಬಿಗ. ೦೨) ; "ಪುರ ಹೊನಲ್" (ಕಬ್ಬಿಗಾಂ. ೩೬) 'ಕಾಲ್ಪೂರ' ಪರಾ. **ಪುರ$_1$** : ದಿವಿಜಾವಳಿಯ ದುಂದುಭಿರವದಲುಬ್ಬಿದ ಸಾಧುವಾದಗಳ ಕಳಕಳದ ಕೊಲ್ಲಣೆಗೆಯುಲಿ ಹೂಮಳೆಯ ಪುರದ ಹೊನಲಿನಲಿ[ಪಾಠಾಂ. ಪೂಮಳೆಯ ಪೂರದ ಹರಹಿನಲಿ]ಜನವಾಳುಗಿತು (ಕುಮಾ.ಕ. ೧೫-೩೦) ; ಉರಿಗಣ್ಣ ಜ್ವಾಲೆ ದಳ್ಳಿಸೆ ನಿಜ್ಜಪಜ್ಜದ ಪಂದಲೆ ತೋಗಲಾಡೆ ಶಿರದ ಪುರಂ ಸೀಱುಂಬುಳ್ಗಾಡೆ . . . ಮಾರುತಿಗ್ಯೊಗಂ ಮುಮ್ಮೊಗನಾಗಿ ಜಡಿದಂ (ರಾಮಾಶ್ವ. ೦೬೨-೮). **ಹೂರ$_1$** : "ಹೂರಮೊಂದು ಹೊನಲ್" (ಶಬ್ದ. ೭೦-೩೬೪) ; ತಕ್ಕ ಸನ್ಮಾನವನು ಕೈಕೊಂಡೆಕ್ಕತುಳದಲಿ ಬಂದನಮರರ ಹೆಕ್ಕಳದ ಹೂಮಳೆಯ ಹೊನಲಿನ ಹೂ[ಪಾಠಾಂ. ಪೂ]ರದಲಿ ಹನುಮ (ತೊರವೆ. ೩ ೯-೩) ; ಪೊಸನೀರ ಹೂರದೊಳಗೆ ಮುಱಿವಿಮಾನ್ಗಳು ಮಸಗಿ ಮುಂ ಪೊಳೆದಾಡುಮಂತೆ ಮಿಸುಗುವ ವರರಂವಣ್ಣಾಂಬುವಲಿ ಟಣ್ಣೆಸೆದುವು ಪೊಳಪೇಱಿ ಪಗುತ

(ಶಂಕರ. ೦೨-೩೮). [<ಸಂ. ಪೂರ]

**ಪುರ$_2$** (ನಾ). ೧. ಕೋಟೆ ; ದುರ್ಗ. ೨. ಪಟ್ಟಣ ; ನಗರ : "ಪತ್ತನನಿಗಮ ನಗರ ಪುಟಭೇದನ ನಗರೀ ಪೂಃ ಸಮಾಹ್ವಯಂ ಪುರಮುಕ್ಕಂ" (ಶಬ್ದಮ. ೯೭-೫) ; ಪುಣ್ಯದ ಬೀಡೆನಿಪುದು ಪುರಮಿದಂಬರೇಚರಪತಿಯಾ (ಶಾಂತಿಪು. ೩-೯) ; ಹತನ ಸಾಹಸಕಂಜದೆ ಪಲವಗಲು ಮುಪ್ಪುರ ಪಡಿಬರಿಪೋರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಚ್ಚರಿತದ ಸಲಿಗೆಯಿಂದೆಸೆ (ಹರಿಬ. ೨-೯೬). ೩. ಮನೆ ; ಬೀಡು. ೪. ದೇಹ ; ಶರೀರ : "ತನುಃ . . . ಪುರಂ, ಪಿಂಡಂ . . . ಮೂರ್ತಿಃ—ಈ ೧೭ ಶರೀರಂ" (ಕರ್ಣಾಮು. ೯೯-೩೭೭). ೫. ಲಿಂಗಭೇದ : ಲಿಂಗ ವಿವರ : (?). ೬. ಗುಗ್ಗುಳ : "ಪುರಾಖ್ಯಂ . . . ಫಲಂಕಷಃ—ಈ ೪ ಗುಗ್ಗುಳಂ" (ಕರ್ಣಾಮು. ೦೦೦-೬೭೭). 'ಪುರಮಂತ' ಪರಾ. ೭. ನಾಗರಮುಸ್ತೆ : ಪೊ(ಪೂ)ರಕೆಯ ಬೂದಿಯಂ . . . ಕೋಡಸಾಲೆಯುತ್ತರಣೆ ಪುರಂಗಳೆಂಬಿನಿತುಮಂ ತಿಲತೈಲದೊಳಟ್ಟು ಪೂಸುಗೆ (ಲೋಕೋಪ. ೯-೨೦೭). ೮. ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಎಂಬ ಮೂರು ಜನ ದೈತ್ಯರು ಕಟ್ಟಿಕೊಂಡ ಚಿನ್ನ, ಬೆಳ್ಳಿ ಮತ್ತು ಕಬ್ಬಿಣದ ಮೂರು ಪಟ್ಟಣಗಳು ; ತ್ರಿಪುರ : 'ಪುರವಿಜಯ', 'ಪುರಹರ' ಪರಾ. ೯. ದಾನವಾಗಿ ಕೊಟ್ಟ ಗ್ರಾಮ : ಅನ್ತೆರಡುಂ [ಪುರದ] ಸಾಸಿರ್ವ್ವರುಂ ಪುರಸ್ಸರರಾಗಿ ನಡೆದು (ಎಪಿ.ಇ. XI-1. ೩೯-೦೯; 1028) ; ಆ ಚವಡಿಸೆಟ್ಟಿಯರ ನಿಯಾಮದಿಂ ನಾಗರಸರು ಪುರದಿಂ ಪಡುವಲು . . . ಕೊಟ್ಟ ಸಾಸನ (ಎಪಿ. XXI. ೨-೬೭ ; 1260). ೧೦. ಪಟ್ಟಣದಲ್ಲಿ ನಿರ್ಮಿಸಿದ ವಿಸ್ತರಣ, ಬಡಾವಣೆ ಎಂಬ ಅರ್ಥದಲ್ಲಿ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ೧೧. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : "ಪುರ ವಹ್ನಿ ತ್ರಯ ಮೂಱು" (ಶುಂಗಣಾ. ೦೦೩-೯). 'ಪುರನಯನ' ಪರಾ. [ಸಂ.]

**ಪುರಂ** (ಅ). ೧. ಮೊದಲು ; ಪೂರ್ವದಲ್ಲಿ : "ಆದಿಃ, ಅಗ್ರಂ, ಪು(ರಾ)ರಂ . . . ಪುರಃ — ಈ ೭ ಮುನ್ನಂ" (ಕರ್ಣಾಮು. ೦೦೭-೨೨) ; "ಅಗ್ರಂ ಪುರಂ ಪ್ರಥಮಮಪಾದಿ ಪ್ರಾಕ್ ಪುರೆಮೆಂದನುಗ್ರಹಿಸೆ ಪೂರ್ವಕ್ಕೆ ಪೆಸರಕ್ಕು" (ಶುಂಗಣಾ. ೦೨೭-೪). ೨. ಪೂರ್ವ ದಿಕ್ಕಿನಲ್ಲಿ. [ಸಂ. ಪುರಸ್]

**ಪುರಂತ$_1$** (ನಾ). ಪ್ರಾಚೀನ ಶಿವಶರಣ : ಆತು ಪರಾನಿನದೊಳಿಹುದುಚಿತವೆ ಪುರಂತರಾಚಿಣ್ಣನಿಗೆ (ಬಸವಪು. ೭೦-೩೬). 'ಪುರಾತ' ಪರಾ. [<ಪುರಾತನ]

**ಪುರಂತ$_2$** (ನಾ). [ವೀರಶೈ] ವರ್ತಮಾನ್ಯಗಳನ್ನು ಹೊಂದಿ ಒಂದು ಸ್ಥಾನದಲ್ಲಿ ನೆಲಸಿರುವ ಜಂಗಮ : ಆ ಪುರಂತರು ಒಡವ ಹೇಳೂತ ನಡೆದಾರ (ಓ.ಕಾ. ೩೬); ಪುರಂತರು ಪ್ರೀತಿಯಿಂದ ಹೇಳುವ ವಚನಗಳಿವು (ಕಿರಶ. ೭೭೯). [<ಪುರವಂತ]

**ಪುರಂದರ** (ನಾ). ೧. ಶತ್ರುಗಳ ನಗರಗಳನ್ನು ನಾಶ ಮಾಡಿದವನು ; ಇಂದ್ರ : ಉಜ್ಜ್ವಲಮಂಚರತ್ನಭಾಸುರಸದನಂಗಳಿಂ ನೆಱೆದುದಂ ಸಮೆದಂ ಪುರಮಂ ಪುರಂದರಂ (ಆದಿಪು. ೬-೯೯) ; ಕರಮೊಪ್ಪಿದುದಂದು ಪುರಂದರನೀಯೆ ಪುಳೋಮಸುತೆಯ ಕಟ್ಟಿದ ಕಂಠಾಭರಣಕ್ಕೆ ತಗುಳ್ಚಿದ ಪದ್ಮರಾಗ ನಾಯಕಮಿದೆಂಬಿನಂ ರವಿಬಿಂಬಂ (ಶಾಂತಿಪು. ೯-೦೦೪) ; ವಿಂದು ಪಡುಕಟಿಯಾಗಿ . . . ಪುರಂದರನ ನೆನೆದಳು ಮುನೀಂದ್ರನ ಮಂತ್ರಶಕ್ತಿಯಲಿ (ಕ.ಭಾ.ಕ. ೪ ೩೯). ೨. ಶಿವ. [ಸಂ.]

**ಪುರಂದರಚಾಪ** (ನಾ). ಇಂದ್ರಚಾಪ ; ಕಾಮನ ಬಿಲ್ಲು : ಅಂಬರಮಹಾಂಬುಧಿಪಾರದಪಾರರತ್ನರುಗ್ಗಿಸರಮೊ ಭಾವಿಪಂದಿದು ವಿಯಚ್ಚುಕಕಂಠದ ವರ್ಣರಾಜಿಯೊಂದೆಸೆಕಮೊ ಶಾನಿದೆಂದೆನಿಸಿತಂದು ಪುರಂಪರಚಾಪವಿಭ್ರಮಂ (ಶಂಪ್ರಪು. ೪-೩೦). [ಸಂ.]

**ಪುರಂದರಮಹ** (ನಾ). ಇಂದ್ರನ ಆರಾಧನೆಗಾಗಿ ಮಾಡುವ ಉತ್ಸವ;

ಇಂದ್ರಪೂಜೆ : ನಂದಾದಿಗೋಪರಿಂದು ಪುರಂದರಮಹಮೆಂದು ಹರ್ಷದಿಂ ಸಂಭ್ರಮಿಸಲ್ (ಜಗಂ. ೪-೭೬). [ಸಂ.]

**ಪುರಂದರವಂದ್ಯ** (ನಾ). ೧. ಇಂದ್ರನಿಂದ ವಂದನೆಯನ್ನು ಪಡೆಯುತ್ತವನು. ೨. ಗುರು ; ಬೃಹಸ್ಪತಿ : ಪುರಂದರವಂದ್ಯಂ ಪದಿನೈದು ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡಮು ಪೂರ್ಣಾಯುಷ್ಯಮಕ್ಕುಂ ಧ್ರುವಂ (ಜಾತಿ. ೬.೦೧). [ಸಂ.]

**ಪುರಂದರಾರ್ಚಿತ** (ನಾ). ೧. ಇಂದ್ರನಿಂದ ಪೂಜೆಗೊಂಡವನು : ಅರವಿಂದನಾಭ ಪುರಂದರಾರ್ಚಿತ ನಂದನಂದ . . . ರಕ್ಷಿಸು ನಮ್ಮನನವರತ (ಹಂಶಾ. ೦೨). ೨. ಗುರು ; ಬೃಹಸ್ಪತಿ : "ಪುರಂದರಾರ್ಚಿತ—ಗುರು" (ಜಾತಿ. ಶಂ. ೩೪೦). [ಸಂ.]

**ಪುರಂಧ್ರಿ** (ನಾ). ೧. (ಗಂಡನೂ ಮಕ್ಕಳೂ ಉಳ್ಳ) ಹಿರಿಯ ಮುತ್ತೈದೆ : ಪೂರ್ಣಕಳಶಕಳಮಾವ್ಯತಕರಪಲ್ಲವೆಯರಪ್ಪ ಪುರಂಧ್ರಿಯರುಂ ಬದ್ಧವಣದ ಪಣಿಗಳುಂಬೆರಸಿದಿರ್ವಂದು ಪೊಟಲಂ ಪುಗಿಸೆ (ಶಂಕಥಾ. ೩-೨೮); ಪುರಪುರಂಧ್ರಿಯರುಂ ಪುರೋಹಿತಪುರಸ್ಸರಂ ಧರಾಮರರುಂ ಪರಸಿ ಸೇಸೆಯನಿಕ್ಕೆ (ಪುಷ್ಪ. ೬-೩೨೮); ಪುರಂಧ್ರಿಯರು ಮಂಗಳಾರತಿಯನ್ನು ಮಾಡತೊಡಗಿದರು (ತುಳಸೀ. ೭೪). ೨. ಹೆಂಗಸು ; ಸ್ತ್ರೀ : "ಭಾಮಿನಿ ನಿತಂಬಿನಿ . . . ಪುರಂಧ್ರಿ ವಧು ಯುವತಿಯಂಗನೆ . . . ಮಹಿಳೆಯ ಬಳಿ ರಾಮೆ ವರವರ್ಣಿನಿಯೆನಲ್ಕೆ ಹೆಂಗೂಸನಿಕ್ಕು" (ಶುಂಗಾ. ೪೪-೧); ಮಕರಕೇತನರಾಜ್ಯಾಧಿದೇವತೆಯರುಮಪ್ಪ ನಿಜಾಂತಃಪುರಪುರಂಧ್ರಿಯವೆರಸು ಪೋಗಿ ಜಲಕ್ರೀಡೆಯಾಡುತಿರ್ಪುದುಂ (ಶಂತಂ. ೧೨೪-೬); ನಿಜಾಂತಃಪುರಪುರಂಧ್ರಿಯರ ಅಗಣ್ಯಲಾವಣ್ಯರಸವಿಸರದೆಳು (ಮಲ್ಲಿ. ೬-೪೫). ೩. ಹೆಂಡತಿ; ಪತ್ನಿ : "ಸಹಚರಿ ಭಾರ್ಯೆ . . . ಪುರಂಧ್ರಿ ಕಳತ್ರಂ ಗೃಹಿಣಿ ಗೃಹಂ ಸಜ್ಜನಕ್ಕೆ ಪೆಸರಿಂತಿನಿಸುಂ" (ಮನುಕೋ. ೫೨-೩); ರಕ್ಷಿಸಿದ ಧನದಿಂ ಪುರಂಧ್ರಿಯ ರಕ್ಷಿಸುವುದು ಪುರಂಧ್ರಿಯಿಂದವೆ ರಕ್ಷಿಸುವುದಾತ್ಮನನು (ಕುವ್ಯಾಉ. ೩-೩೦); ನಮ್ಮಯ ಲೋಲಲೋಚನೆಗಾಡದುಕ್ತಿಯ ನಾಲಗೆಗೆ ಪುನರುಕ್ತಿಯಾಗೆ ಪುರಂಧ್ರಿ ನಗುವಳಲೆ (ಕೊರಚಾ. ೩-೬-೪೦). [ಸಂ. ಪುರಂಧ್ರೀ]

**ಪುರಃಪ್ರದರ್ಶಿತ** (ಗು). ಮುಂದಾಗಿ ತೋರಿಸಿದ ; ಮುಂದೆ ಬಂದು ವಿವರಿಸಿದ : ವನಪಾಲಪುರಃಪ್ರದರ್ಶಿತಾನಂತತರುಲತಾಸಂದೋಹಸಂದರ್ಶನಾನಂದಕಂದಳಿತಹೃದಯಾರವಿಂದನುಂ . . . ಆಗಿ ನಡೆತರ್ಪಾಗಳ್ (ರಾಜಶೇ. ೦೦-೧೫ ಠ). [ಸಂ.]

**ಪುರಃಸರ** (ಗು). ೧. ಮುಂದಾಗಿ ನಡೆಯುವ,–ಹೋಗುವ ; ಮುಂಭಾಗದಲ್ಲಿ ಚರಿಸುವ. (ನಾ). ೨. ಮುಂದಾಗಿ ಬಂದು ತಿಳಿಸುವ ಆಳು ; ವಾರ್ತಾಹರ ; ಸಂದೇಶವಾಹಕ. ೩. ತಾನೇ ಮುಂದಾಗಿ ನಡೆದು ಇತರರಿಗೆ ಮಾರ್ಗದರ್ಶನ ಮಾಡುವವನು; ಮುಂದಾಳು ; ಮುಖಂಡ: 'ಪುರಸ್ಸರ' ಪರಾ. [ಸಂ.]

—**ಪುರಕ** '—ಪುರುಕ' ನೋ.

**ಪುರಕ್ಷಯ** (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ಇಕ್ಷುಕೋದಂಡಕ್ಷಯಾಯ ಪುರಕ್ಷಯಾಯ ಸಮಕ್ಷಗತ ಮದ್ರಕ್ಷಣಾಯ ನಮೋ ನಮೋ ಗುರು ಸಂಗಮೇಶಾಯ (ಬಸಪು. ೬೧-೪೬). [ಸಂ.]

**ಪುರಗಣ** (ನಾ). ದೇವಾಲಯದ ಸೇವಾವರ್ಗ ಮತ್ತು ಅವರಿಗಾಗಿ (ದೇವಾಲಯದ ಸುತ್ತಣ ಪೌಳಿಯ ಗೋಡೆಯ ಒಳಗೆ ಇರುವ ಬಯಲುಪ್ರದೇಶದಲ್ಲಿ) ನಿರ್ಮಿಸಿದ ವಸತಿಸ್ಥಾನ,–ಬಡಾವಣೆ ; ಪುರವರ್ಗ (?) : ಪಂಡಿತಯ್ಯ ಗೋಪರಸ ಬಿಟ್ಟ ಕೆಯಿ ಹುಳಿಯರೆ ಮತ್ತ ೧ ಮೊದಲೇರಿಯ ಆಲದ ಗದೆ ಕಂಬ ೫೦ ದೇವರ ಸುತಲು ಪುರಗಣಯಿಂತೀ ಬಿಟ್ಟ ಧರ್ಮ್ಮವಂ ಪ್ರತಿಪಾಳಿಸುವರು (ಕ್ರಾಇ. IX–i, ೨೬೪-೪೪ ; 1154). [ಸಂ.]

**ಪುರಜನ** (ನಾ). ಪಟ್ಟಣದ ಜನ ; ನಾಗರಿಕರ ವರ್ಗ : ಜನಪತಿಗೆ ಒಸಗೆಯಂ ಪುರಜನಮೆಲ್ಲಂ ಬೀಱುತ್ತಿರ್ಪರ್ (ಕಂಚಾ. ೧-೯೬) ; ಪುರಜನ ಮಟ್ಟಿಯಿಂ ಮುಡಿವ ಕೂಡೆ ತುಱುಂಬುವ ಕಿಂಕಿರಾತಶೇಖರರಜದಿಂದಮಾದ ಪಟವಾಸದ ಧೂಳಿಯ ಪರ್ಮಿನಿಂದಮಾಭರಣದ ಮಾಣಿಕಂಗಳ ಪೊದಟ್ಟರುಣಾಂಶುಗಳಿಂದಮಂದು ಪಿಂಜರಿತಪಿಶಂಗಿತಾರುಣಿತದಿಙ್ಮುಖಮಾದುದು ತನ್ಮಹೋತ್ಸವಂ (ಆದಿಪು. ೭-೦೦೪); ಪುರಜನಮುಂ ಪರಿಜನಮುಂ ನೆರೆದು ಮನಂಗೊಂಡು ಕೂರ್ತು ಕೀರ್ತಿಸೆ ಧರಣೀಶ್ವರರಯ್ನೂರ್ವರ್ . . . ದೀಕ್ಷೆಯಂ ಕೈಕೊಂಡರ್ (ಸುಕುಮಾ. ೬-೩೪). [ಸಂ.]

**ಪುರಟ** (ನಾ). ಚಿನ್ನ ; ಬಂಗಾರ : ಹರೆಯದ ಸುಖಮುಹೂರ್ತ ಮೀಶಗಬುಹಲ್ ಪಂಚಶರನಂಗಲಾವಣ್ಯಜಲಭಾಂಡದಲ್ಲಿಟ್ಟ ಪುರಟನಿರ್ಮಿತಮಾದ ಗಳಿಗೆವಟ್ಟಲೊ ಪಯೋಧರಗಿರಿಗಳು ನೋಳ್ಪರ ಉರುದಿಟ್ಟಜಱಿದು ಬೀಳುವ ಗುಳಿಯೊ . . . ಎನಲ್ ಕಣ್ಗೆವಂದುದು ನಿಮ್ನತರ ನಾಭಿ ಶ್ರೀಪಾರ್ವತೀದೇವಿಯಾ (ಪಂಬಪು. ೬-೨೨). [ಸಂ.]

**ಪುರಟಪುರಾಣ** (ನಾ). ಸುಳ್ಳುಕಥೆ ; ಹುಟ್ಟಿಸಿಕೊಂಡು ಹೇಳುವ ಕಥೆ : ಅವನಪ್ಪ ಸತ್ತದ್ದು, ಜವಾಬ್ದಾರಿ ಹೊರಿಸಿದ್ದು—ಈ ಪುರಟಪುರಾಣ ಎಲ್ಲ ಯಾರಿಗೆ ಬೇಕು ? (ಮಹಾಗ. ೧೩೪).

[ಪುರಟ್ಟು (? ←ತಮಿ. ಪುರಟ್ಟು = ಮೋಸ, ವಂಚನೆ) + ಪುರಾಣ]

**ಪುರಟವಸನ** (ನಾ). ಚಿನ್ನದ ಎಳೆಯುಳ್ಳ ಬಟ್ಟೆ ; ಜರತಾರಿವಸ್ತ್ರ : ಪುರಟವಸನದ ಮಧ್ಯ ಹೊಳೆವ ನಾನಾಭರಣ ಕರಕಂಜ ಕಂಬುಕಂಠ ಸರಸಮುಖಚಂದ್ರಶೋಭನಮೂರ್ತಿ ಹಯವದನ (ವಾದಿಕೀ. ೪೪-೩). [ಸಂ.]

**ಪುರಡಿ** (ನಾ). ಒಂದು ಬಗೆಯ ಪಕ್ಷಿ : ಭೇರುಂಡ ಬೆಳುವ ಸಾಳುವ ಹದ್ದು . . . ಸೋಗೆನವಿಲು ಪುರಡಿ [ಪಾಠಾಂ. ಪೂರುಡಿ] ಗವುಜ ಕರ್ಕರ ಲಾವುಗೆ ಗುಬ್ಬಿ ಆರಣ್ಯದೊಳಗವರಾಟ (ಚಿಣಾಂ. ೦-೫೯). 'ಪುರುಳಿ' ಪರಾ. [?]

**ಪುರತ್ರಯ** (ನಾ). = ಪುರ್ [?] ೮ : ತಿರುಗುವ ಪುರತ್ರಯಮನಹಿಕಾಂತಕಟಕನು ಬೇಗೆಯಿಂ ಸುಡುವಂತೆ ಸುಟ್ಟನಲಾ (ಬಸಪು. ೫೪ ೫೯). [ಸಂ.]

**ಪುರತ್ರಯದಾಹ** (ನಾ). ತ್ರಿಪುರಗಳನ್ನು ಸುಟ್ಟವನು ; ಶಿವ : ಮದನಾಂತಕ ಪುರತ್ರಯದಾಹ ಹರಶಂಕರ ಮಹೇಶ ತ್ರಾಹಿ (ಕುವ್ಯಾ. ೬-೪೫). [ಸಂ.]

**ಪುರದರ್ಮ** (ನಾ). ಒಂದು ಬಗೆಯ ಸುಂಕ : ಪರಿಕಿಸದೀ ಧರ್ಮ್ಮದೊಳರಸರ ಕಾಣಿಕೆ ಕೊಳ್ಳಿಯರುವಣ ಕಿಱುಸುಂಕಂ ಪುರದ[ಧ]ರ್ಮ್ಮಂ ಬಣ್ಣಿಗೆಯುಂದರೆಮೀಸಮನಳಿಪಿ ಕೊಣ್ಡವಂ ಚಾಣ್ಡಾಳ (ಎಇ. XXVII, ೬೪-೫೯; 1114). [? ಇದು 'ಪುರದ್ರಮ್ಮ' ಎಂಬುದರ ತಪ್ಪುರೂಪ]

**ಪುರದಾನಿಕೆ** (ನಾ). ಒಂದು ಬಗೆಯ ತೆರಿಗೆ : ಸ್ಮರರೂಪ ಪೆರ್ಮ್ಮಾಡಿಯ ಪುರವರದೊಳ್ ನಡೆವ ಮನ್ನೆಯದ ಕಿಱುದೆಱೆಯಂ ಪುರದಾನಿಕೆಯುಳ್ಳ ದೀಪ ಪರಿಹಾರಂ ಬಿಟ್ಟು ಮಾಡಿದ ತತ್ಪುರಮಂ (ಕ್ರಾಇ. XX, ೪೬-೩೪ ; 1074). [?]

**ಪುರದೇವತೆ** (ನಾ). ಊರಿನ ದೇವತೆ ; ಗ್ರಾಮದೇವತೆ : ಪುರದೇವತೆಗಳ್ ಮುನಿಸಿಂ ಪರಿತಂದು ದುರಾತ್ಮನೆರಡುಕಣ್ಗಳುಮಂ ನಿಷ್ಠುರಮಾಗಿ ಪೊಯ್ಯೆ ತೊಟ್ಟನೆ ಕುರುಡಾದಂ (ಧರ್ಮಾಮೃ. ೧೦-೦೬೫). [ಸಂ. ಪುರದೇವತಾ]

**ಪುರದ್ರಮ್ಮ** (ನಾ). = ಪುರದರ್ಮ : ಆನೆಗೋಸನೆ ಸಲ್ವನ್ನೆಗಂ ಹಲವಣವುಂ ಪುರದ್ರಮ್ಮಮುಂ ಕೊಳ್ಳ ಸಲ್ಲ[ದು] (ಕಇಆ. ೪೭-೬-೦೫ ; ಕ್ರಿ. 1151). [ಪುರ್ + ದ್ರಮ್ಮ]

**ಪುರದ್ವಾರ** (ನಾ). (ಪಟ್ಟಣದ) ಹೆಬ್ಬಾಗಿಲು ; ಗೋಪುರ

"ಗೋಪುರಂ, ಪುರದ್ವಾರಂ—ಈ ೨ ಬಾಗಿಲುವಾಡಂ" (ಹರಾಯು. ೯೬-೧೩೩); ಅಡಿ ಮುಗುಚಿ ಬಿದ್ದಳು ಪುರದ್ವಾರದ ಮಹಾಸೌಧ ಹುಡಿಗೆದಟಿ (ಕೋಶಾ. ೩-೨-೧೦). [ಸಂ.]

**ಪುರಧ್ವಂಸಿ** (ನಾ). ತ್ರಿಪುರಗಳನ್ನು ನಾಶಮಾಡಿದವನು; ಶಿವ. [ಸಂ. ಪುರಧ್ವಂಸಿನ್]

**ಪುರನಯನ** (ನಾ). ಮೂರು ಕಣ್ಣುಗಳುಳ್ಳವನು; ಶಿವ: ಪುರನಯನ . . . ಪೊರೆವುದೀಕ್ಷಣವೆನ್ನ (ಶ್ರೀಕೃಕೋ. ೧-೩೦). [ಸಂ.]

**ಪುರಭೃತ್ತು** (ನಾ). ಪುರದ ಒಡೆಯ, – ದೊರೆ: ಖೇಚರಸೈನ್ಯಂ ವಿಜಯಾರ್ಧಾಚಲತಟಧಾತುರೇಣುರಕ್ತಂ ಪುರಭೃದ್ಗೋಚರಕೋಪಾಗ್ನಿಶಿಖಾರೋಚಿಃಪಟಳೋಪಲಿಪ್ತಮೆನಿಸಿದುದಾಗಳ್ (ಶಾಂತಿಪು. ೯-೬). [ಸಂ. ಪುರಭೃತ್]

**ಪುರಮಥನ** (ನಾ). ೧. ತ್ರಿಪುರಗಳನ್ನು ನಾಶ ಮಾಡಿದವನು; ಶಿವ: ಪುರಮಥನರೂಪದಿಂ ನೀಂ ಮರುಳ್ಗಳೊಡನಾಡಿದೈ (ಜಗಪ. ೯-೧೦೯); ಪುರಮಥನನ ಮರಕೀಳ್ಕಂಕುರಮಾ ಗಿರಿಸುತೆಯ ವದನದೊಳ್ ಪೊಳೆತುದು ಸಾದರದಿಂ ತಾನೆಂಬಂತಿರೆ ಕರಮೆಸೆದುದು ವಿಮಳಮೌಕ್ತಿಕಂ ನಾಸಿಕದೊಳ್ (ಗಿರ. ೩-೮೩). ೨. [ಛಂದ] 'ಗುರು' ಎಂಬುದರ ಸಂಕೇತ (—): ಸ್ವರರ ಪಡೆ ನೆರೆದಿರಲು . . . ಪದಾಂತಂ ಪುರಮಥನ ವಿಡೆ ಬಟುಕ ನೆರೆದು ಯತಿ ದಶಮದೊಳೆ (ಛಂದೋಂಬು. ೩-೨೦೩). [ಸಂ.]

**ಪುರಮರ್ದನ** (ನಾ). = ಪುರಮಥನ ೧: ಪುರಮರ್ದನಾಗೇಂದ್ರನಂ ನಿಂದು ಬೆಳಗಾಗಿಸಿತ್ತಮಲ ಧರ್ಮಜನ ಕೀರ್ತಿ (ಕೈಮಿಶಾ. ೨-೦೨). [ಸಂ.]

**ಪುರರಿಪು** (ನಾ). ತ್ರಿಪುರಗಳ ವೈರಿ; ಶಿವ: ಪುರರಿಪು ಸಾಮವೇದಿಯ ಪೊಳಲ್ವರಸೊಯ್ಯನೆ ತನ್ನ ಲೋಕಕಚ್ಚರಿಯೆನೆ ಘಂಟೆಗೂಡಿ ವಿಸುಪೋಹಿಲನಂ ರಜತಾಚಲಕ್ಕೆ ಬಿತ್ತರದೊಳ್ ಕೊಂಡುಪೋಗನೆ (ವೃಕಶ. ೩೬-೦೨೩). [ಸಂ.]

**ಪುರಲಿ** 'ಪುಚಲೆ' ನೋ.

**ಪುರಲು** 'ಪುರುಳ್' ನೋ.

**ಪುರಲೆ, ಪುರುಳೆ** (ನಾ). ೧. ಒಣಗಿದ ಹುಲ್ಲು, ಸೌದೆಯ ಚಿಕ್ಕ ತುಂಡು ಮೊದಲಾದ ಉರುವಲು: ಗಿಡದಿಂದ ಅಡಿಗೆಗೆ ಬೇಕಾದ ಸೌದೆಯನ್ನೂ ಪುರಲೆಯನ್ನೂ ಆಯ್ದುಕೊಂಡು ಬರುವುದು (ಬೈಸರ್ಪ. ೧೬); ಅವಳು ನೀರಿನ ಒಲೆಗೆ ಪುರಲೆಯನ್ನು ಹಾಕುತ್ತಿದ್ದಳು (ಸಮ್ಮೂರ. ೩); ಮನೆಯ ಕಡೆ ತರಲೆ, ಹೊಲದ ಕಡೆ ಪುರಲೆ (ಗಾದೆ). ೨. (ಆಲಂ) ಒಣಮಾತು; ಜಳ್ಳುನುಡಿ: ಸಂಗೀತದಲ್ಲಿ ಓಡದಿದ್ದ ಅವರ ಬುದ್ಧಿ ಪಿಸುಣತನದಲ್ಲಿ ಚುರುಕಾಯಿತು. ಅವರು ದಿನಕ್ಕೊಂದು ಪುರಲೆ ಹಾರಿಸತೊಡಗಿದರು (ರೂಪಚ. ೦೩೯). **ಪುರುಳೆ**: ೧. ಪುರುಳೇ ಸೌದೆ ಇಲ್ಲದೆ ದೊಡ್ಡ ಸೌದೆ ಉರಿಯುತ್ತದೆಯೇ (ಹುಬ್ಬಹ. ೦೯೨). 'ಪುಳ್ಳಿ' ಪರಾ.

**ಪುರುಳೆ ಹಚ್ಚುದು** = (ಆಲಂ) ಮನಸ್ತಾಪವನ್ನು ಉಂಟುಮಾಡು; ಜಗಳ ಹಚ್ಚಿಸು: ಆ ಈರಿಸ್‌ದೇವತೆಗೋ ಮೊದಲೇ ಅನ್ಯೋನ್ಯವಾಗಿದ್ದವರ ಮಧ್ಯೆ ಪುರುಳೆ ಹಚ್ಚಿಡುವ ಸ್ವಭಾವ (ಕಲ್ಲಶಾ. ೧೬೯).

**ಪುರವಂತ** (ನಾ). ೧. ಗುಗ್ಗುಳದ ಉತ್ಸವದ ಸಂದರ್ಭದಲ್ಲಿ ಮಾಡುವ ವೀರಭದ್ರನೃತ್ಯ: ಒಡ್ಡಿ ಬಾಜಿತ್ರೀಲಿ ಪುರವಂತನಾಡಸ್ತ ಐಸೀರಿಲ್ಲೊಂಟಾರಲ್ಲ (ಮಲ್ಲಗಿ. ೩೬). ೨. ವೀರಭದ್ರನೃತ್ಯವನ್ನು ಮಾಡುವವನು; ಕುಣಿತದ ಮಧ್ಯೆ ಮಧ್ಯೆ ಒಡಪುಗಳನ್ನು ಹೇಳುವುದು ಈತನ ಸಂಪ್ರದಾಯ. ವಚನಗಳನ್ನೂ ಹಾಡುವುದುಂಟು: ಪುರವಂತರು ವೀರಭದ್ರನ ಅವತಾರವೆಂಬ ನಂಬಿಕೆಯಿದೆ (ಕಶಿಳ. ೦೦೨). [ಪುರ್ + — ವಂತ]

**ಪುರವಂತಿಕೆ** (ನಾ). ಶಿವಭಕ್ತನಾದ ಪುರವಂತನಿಂದ ನಡೆಯುವ ಒಂದು ಬಗೆಯ ನಾಟ್ಯಕಲೆ: ಉತ್ತರಕರ್ನಾಟಕದಲ್ಲಿ ಪ್ರಚಲಿತವಿರುವ ಶೈವ ಪರಂಪರೆಯ ವಿಶಿಷ್ಟವಾದ ಧಾರ್ಮಿಕ ಕಲೆ 'ಪುರವಂತಿಕೆ' (ಕಶಿಳ. ೦೦೨). [ಪುರವಂತ + — ಇಕೆ]

**ಪುರವಟಿ** 'ಪುರವಠೆ' ನೋ.

**ಪುರವಠೆ, ಪುರವಟ್ಟೆ, ಪುರೋಠೆ, ಪೂರೋಟಿ** (ನಾ). ೧. (ಉಕ) ಪೂರೈಕೆ; ಸರಬರಾಜು; ಒದಗಿಸುವಿಕೆ: ಬೇಕಾದಾಗ ಹಣದ ಪುರವಠೆಯನ್ನು ತಮಗೆ ಮಾಡಬೇಕೆಂದು ಅವರು ಬರೆದಿರುವರು (ಐಧಿಸ್ಮ. ೩೬); ಅವನ ನಿತ್ಯಾವಳೀ ಮನೆಯ ಗಂಡುಪಾಗಾಕ್ಕೆ ಜೋಡಿ ಒಂಟಿ ಲೆಕ್ಕದಿಂದ ಯಜ್ಞೋಪವೀತದ ವಾರ್ಷಿಕ ಪುರವಠೆಯಾಗಬೇಕು (ದೀಪಹ. II, ೯೬). ೨. ಸಮೃದ್ಧವಾಗಿರುವಿಕೆ; ವಿಪುಲವಾಗಿರುವಿಕೆ; ಸುಗ್ಗಿ: ನೀರು ಪುರವಠೆ ಆದ್ರ ಒಂದು ಮಗಿ ಎಲಿಬಳ್ಳಿ ಬೆಳೆಸೋಣ (ಬಾಬಲ. ೬); ಕಮಲಜ್ಜಿಗೆ ಈಗ ಎಂಬತ್ನಾಲ್ಕು ವರುಷಗಳು. ಆಕೆಯು ನಿದ್ದೆಯ ಪುರವಠೆಯಲ್ಲಿ ಈಗ ಒಣಗಿದ್ದರೂ ನೆನಪಿನ ಶಕ್ತಿಯು ಮಾತ್ರ ಹಚ್ಚ ಹಸುರಾಗಿತ್ತು (ಕವ್ನಳ. ೩೩). **ಪುರವಟೆ**: ೧. ವಿದೇಶೀಬಟ್ಟೆಯನ್ನು ಸಂಪೂರ್ಣವಾಗಿ ಬಹಿಷ್ಕರಿಬೇಕಾದರೆ ಪ್ರತಿವರ್ಷ ೧,೫೦೦ ದಶಲಕ್ಷಯಾರ್ಡು ಬಟ್ಟೆಯು ಪುರವಟೆಯಾಗಬೇಕು (ಖಾದಿಶಾ. ೯೬). **ಪುರೋಠೆ**: ೧. ಲೋಕಲ್ ಫಂಡು . . . ಇದರ ಹಣದಿಂದ ಶಿಕ್ಷಣ, ಹೊಸಮಾರ್ಗಗಳು, ನೀರಿನ ಪುರೋಠೆ, ಕಾವಲಿಗಳು, ಧರ್ಮಶಾಲೆ, ವೈದ್ಯಶಾಲೆಗಳು ಮುಂತಾದ ಸಾರ್ವಜನಿಕಹಿತದ ಕೆಲಸಗಳಾಗುತ್ತಿರುತ್ತವೆ (ಕಶಾಗ. ೩೯೩). **ಪೂರೋಟಿ**: ೨. ಒಂದು ಬಾರಿ ನೀರು ಎಲ್ಲಾ ಕಡೆ ಪೂರೋಟಿ ಆಗಬೇಕಲ್ಲರಿ (ಬಾಬಲ. ೦೩). [← ಮರಾ. ಪುರವಟಾ, ಪುರವಠಾ]

**ಪುರವಣಿ** (ನಾ). ಪೂರಕಪತ್ರ; ಅನುಬಂಧ; ಪರಿಶಿಷ್ಟ: ಅವಕ್ಕೆ ಎರಡು ನೂರು ಪುಟದ ಪುರವಣಿಯನ್ನು ಜೋಡಿಸಬೇಕಾಗಿದೆ (ಮುಶಾಹ. ೯); ಹೊಸ ಉಲ್ಲೇಖಗಳ ಪುರವಣಿಗಳನ್ನು (Supplements) ಕಾಲಕಾಲಕ್ಕೆ ಮುದ್ರಿಸಿ ಸೂಚಿಯ ನವೀನತೆಯನ್ನು ಕಾಯ್ದುಕೊಳ್ಳಹತ್ತಿದವು (ಗ್ರಂಥಾಲ. ೯೨); ಪಾರ್ಸೀ ಪತ್ರಿಕೆಯಲ್ಲಿ ಒಂದು ಇಂಗ್ಲೀಷ್ ಪುರವಣಿ ಭಾಗವೂ ಇರುತ್ತಿತ್ತು (ಪತ್ರಿಕಾ. ೨೬). [← ಮರಾ. ಪುರವಣೀ]

**ಪುರವರ** (ನಾ). ಶ್ರೇಷ್ಠವಾದ ಪಟ್ಟಣ, —ನಗರ: ನಿಡಿಯುಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಜದೆ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಸಾ. ೦೬೯ ಕೂಪ್ರಕ); ಆ ಕೋಟೆಯೊಳಗೆ . . . ಏಕದ್ವಿತ್ರಿಚತುಶ್ಶಾಲಾಕೀರ್ಣಂ ಪುರವರಂ ಕರಂ ಸೊಗಯಿಸುಗುಂ (ಶಾಂತಿಪು. ೯-೦೯೬). [ಸಂ.]

**ಪುರವರ್ಗ** (ನಾ). ದೇವಾಲಯದ ಸೇವಾವರ್ಗ ಮತ್ತು ಅವರಿಗಾಗಿ ನಿರ್ಮಿಸಿದ ವಸತಿಸ್ಥಾನ, — ಬಡಾವಣೆ: ಮನ್ನೆಯದೊಳಗೆರಡು ಪೊನ್ನುಮಂ ದೇವರ ಪುರವರ್ಗ್ಗಫಳಿಯ ಭತ್ತಮುಮಂ . . . ಹನ್ನೆರ ಹಣಮುಮಂ ಬಿಟ್ಟರು (ಕಇ. IV, ೩೯-೨೬; 1111); ಜನನಿಗೆ ಚಂದಲೇಶ್ವರಮನೆತ್ತಿಸಿದಂ ಪುರವರ್ಗ್ಗಮಂ ಜಗಜ್ಜನನುತಮಾಗೆ ಕಾಮನೆಟ್ಟಿನೆ ಮಾಡಿಸಿದಂ . . . ಕಾಮಿನಿಯರನಾಯ್ದು ತಂದು ಪುರವರ್ಗ್ಗದ ಸೂಳೆಯರಾಗೆ ಮಾಡಿದಂ (ಎಇ. XIII, ೯೬-೬೩; 1112); ಗುಂಮ್ಮಣ್ಣನ ಹೆಸರಲಿ ಪುರವರ್ಗ್ಗವಾಗಿ ಸಂಭುದೇವರ ಮುಂದೆ ಅಯ್ದುಮನೆಯ ಕೊಟ್ಟು (ಮೈಆ. ೦೯೯೩, ೦೯-೦೦; 1318). [ಸಂ.]

**ಪುರವಾಸಿ** (ನಾ). ಪಟ್ಟಣದ ನಿವಾಸಿ; ಪಟ್ಟಣಿಗ; ನಗರವಾಸಿ: ಕರೆತಂದರ್ ಪುರವಾಸಿಗಳ್ ದೊರೆಯನುದ್ಯತ್ಸಾರಸೌರಂಭದಿಂ (ಹಾಶಾಸ್ತ್ರ. ೦-೩-೦೯). [ಸಂ. ಪುರವಾಸಿನ್]

**ಪುರವಿಜಯ** (ನಾ). ತ್ರಿಪುರಗಳನ್ನು ಗೆದ್ದವನು; ಶಿವ: ಪುರವಿಜಯಂಗೆ ತನ್ನ ಸುತೆಯಪ್ಪುವೆಯುಂ ನಲಮಿಪಮಿತ್ತು ಭೂಧರಪತಿ ಮಾವ

ನೆಂದೆನಿಸಿದಂದದಿನೆನ್ನಯ ಕನ್ನೆಯಂ . . . ನಿಮ್ಮಡಿಗೆ ಕೊಟ್ಟು ವಿವಾಹ ಮನೊಪ್ಪ ಮಾಳ್ಪೆಂ (ತ್ರಿಷ. ೩೩-೦೩೯). [ಸಂ.]

**ಪುರವೈರಿ** (ನಾ). ತ್ರಿಪುರಗಳ ಶತ್ರು ; ಶಿವ : ಪುರವೈರಿ ಪೇಳದರ್ಗೆ ನಿಜ ಮಂದಿರದ ಕವಾಟದೊಳೆ ತಳ್ತ ಬೀಯಗವಮನದಂ ಪರಿಹರಿಸಿ ತೆಗೆದು ಫುಲಿನ ಸರಭಸವಾ ಜವಳಿಪಡಿಯನೇಂ ಬರ್ಚಿದನೊ (ಕೃಷಿ. ೦೭-೪೦). [ಸಂ. ಪುರವೈರಿನ್]

**ಪುರಶಾಸನ** (ನಾ). ತ್ರಿಪುರಗಳನ್ನು ದಂಡಿಸಿದವನು ; ಶಿವ. [ಸಂ.]

**ಪುರಶ್ಚರಣ** (ನಾ). ದೇವರ ಹೆಸರನ್ನು ಅಥವಾ ಮಂತ್ರವನ್ನು ಜಪಿಸುವುದು : ಪುರಶ್ಚರಣಂಗೈಯದೆ ಸಂಖ್ಯಾನಿಯುತವಾಗಿ ದೇಹಾಂತ ಪರ್ಯಂತ ಮಾಳ್ಪುದೇ ನಿತ್ಯಜಪವಹುದು ಕನಿಷ್ಠವೆನಿಸುವುದು ಪುರಶ್ಚರಣಂ ಮಾಡಿ ಬಿಡುವುದೇ ಪುರಶ್ಚರಣಜಪವದು ಮಧ್ಯಮವೆನಿಸುವುದು ಪುರಶ್ಚರಣಂಗೈದು ಮೇಲೆ ಸಂಖ್ಯಾನಿಯಮದಿಂ ಪ್ರಾಣಾವಧಿ ಮಾಳ್ಪುದೇ ಪುರಶ್ಚರಣ ಪೂರ್ವಕ ನಿತ್ಯಜಪವದುತ್ತಮವೆನಿಸುವುದು (ಶಿವೇಕ. ೯೭). [ಸಂ.]

**ಪುರಶ್ಚರಣೆ** (ನಾ). ಮತ್ತೆ ಮತ್ತೆ ಜಪಿಸುವುದು,-ಹೇಳುವುದು : ನಿಶ್ಚಲಹೃದಯನಾಗಿ ವಿಷ್ಣುನಾಮಂಗಳ ಪುರಶ್ಚರಣೆಯಿಂದಮ ಸುಖದೊಳಿರುತಿರೆ (ಕೃಬಿಚಾ. ೦೦-೩೯); ಅವನು ಆಕೆಯ ಕನ್ಯಾವಸ್ಥೆಯಲ್ಲಿ . . . ಸೂರ್ಯನ ಮಂತ್ರದ ಪುರಶ್ಚರಣೆಯ ಪ್ರಭಾವದಿಂದ ಹುಟ್ಟಿದವನು (ಶಿಗಟ್ಟು. ೨೦). [ಸಂ. ಪುರಶ್ಚರಣ]

**ಪುರಸತ್ತು**, ಪುರಸೊತ್ತು, ಪುರುಸತ್ತು, ಪುರುಸೊತ್ತು (ನಾ). ಬಿಡುವು ; ವಿರಾಮ : ವೀರರಾಜೇಂದ್ರಪೇಟೆ ಉಗ್ರಾಣಕ್ಕೆ ದಿವಾರಾತ್ರಿಯಲ್ಲೂ ಪುರಸತ್ತು ಇಲ್ಲದೆ, ಅಕ್ಕಿ ಹೊರುತ್ತಾರೆ (ರಾಕೇಂದ್ರ. ೦೩೭) ; ಪುರಸತ್ತಾದರೆ ಮಧ್ಯಾಹ್ನ ಅಕ್ಕನ ಮನೆಗೆ ಬರುತ್ತೇನೆ (ಮೂರುದಾ. ೦೩೯); ಅವನಿಗೆ ಯೋಚನೆ ಮಾಡಲು ಆಗ ಪುರಸತ್ತಿರದು (ರಾಜ್ಯಾಂಗ. ೦೨೩). **ಪುರಸೊತ್ತು** : ವರ್ಷಕ್ಕೆ ಆರು ತಿಂಗಳು ರೈತರಿಗೆ ಕೆಲಸ. ಮಿಕ್ಕ ಸಮಯ ಪುರಸೊತ್ತಿನಿಂದಿರುತ್ತಾರೆ (ಗಂಗಾಳ. ೦೨) ; ರಸ್ತೆಯಲ್ಲೋ ಮಸ್ತು ಜನ, ಇಲ್ಲ ಪುರಸೊತ್ತು (ಕಂಠಮ. ೩೨-೦೨) : ನಾವು ಪುರಸೊತ್ತೇ ಇಲ್ಲದೆ ಕೆಲಸ ಮಾಡುತ್ತಾ ಇದೀವಿ (ಮಂಶಿಮಾ. ೧೧೩). **ಪುರುಸತ್ತು** : ಹೆಂಗಸರಿಗೂ ಪುರುಸತ್ತಿಲ್ಲ, ಗಂಡಸರಿಗೂ ವಿರಾಮವಿಲ್ಲ (ಹುಟ್ಟಿಹ. ೭೦): ಚಹವನ್ನು ಕುಡಿದುಕೊಂಡು ಹೋಗುವುದಕ್ಕೂ ಬಾಳುವಿಗೆ ಪುರುಸತ್ತಿರಲಿಲ್ಲ (ಚಿಂದು. ೩೯); ಅವಳು ಚೆಲುವೆಯೋ ಅಲ್ಲವೇ ಎಂದು ನಿಂತು ನೋಡುವುದಕ್ಕೆ ಪುರುಸತ್ತಿಲ್ಲ (ರಾಮಾನಿ. ೦೦೨). **ಪುರುಸೊತ್ತು** : ನನಗೆ ಮಧ್ಯಾಹ್ನ ಹನ್ನೆರಡು ಗಂಟೆಯವರೆಗೆ ಪುರುಸೊತ್ತೇ ಇಲ್ಲ (ಬಾರಿ. ೪) ; ನಿನ್ನ ಜೊತೆ ಮಾತಾಡೋಕೆ ಪುರುಸೊತ್ತಿಲ್ಲ (ಶಾಶುಕಿ. ೩) : ಉಸಿರಾಡಿಕೊಳ್ಳಲಿಕ್ಕೆ ಸ್ವಲ್ಪ ಪುರುಸೊತ್ತು ಕೊಡು (ಮುಹಾಂ. ೪೭).

[← ಅರ. ಹಿಂ. ಪುರಸತ್, ಫುರ್ಸತ್; ಮರಾ. ಪುರಸತ್, ಫುರ್ಸತ್, ಪುರಸೂತ್, ಫುರ್ಸತೀ ]

**ಪುರಸಭೆ** (ನಾ). ಸ್ಥಳೀಯ ಅಧಿಕಾರವುಳ್ಳ, ಚುನಾಯಿತ ಸದಸ್ಯರನ್ನು ಹೊಂದಿದ ಪಟ್ಟಣದ ಸಂಸ್ಥೆ ; ನಗರಸಭೆ ; ಪೌರಸಭೆ : ಪುರಸಭೆಯಟ್ಟಿದ ನಾಯಿಗಾಡಿಯ ನೋಡಿ ಶುನಿ ಗಲ್ಲಿ ಬಿದ್ದೋಡುವಂತೆ ತನ್ನನ್ನು ಬೆನ್ನಟ್ಟಿ ಬಂದರೆಂದೀ ಖೋಡಿ ಅವಿತು ಕದ್ದೋಡುವನಲ್ತೆ (ಕಂದ್ರ. ೦೩೯-೭೪). [ಸಂ. ಪುರಸಭಾ]

**ಪುರಸೊತ್ತು** 'ಪುರಸತ್ತು' ನೋ.

**ಪುರಸ್ಕರಿಸು** (ಕ್ರಿ). ೧. ಮನ್ನಿಸು ; ಗೌರವಿಸು ; ಆದರಿಸು : ಪಾಂಡುಪುತ್ರರ ಸುಗುಣಗಳನ್ನು ಕಂಡು ಪ್ರಜೆಗಳು ಅವರನ್ನು ಅಖಂಡವಾಗಿ ಪ್ರೀತಿಸಿ ಪುರಸ್ಕರಿಸುತ್ತಿದ್ದರು (ಹಿಂಕಿರು. ೨); ನನ್ನನ್ನು ಪುರಸ್ಕರಿಸಲು ಸಾವಿರ ಜನರು ಮುಂದೆ ಬಂದಾರು (ರಂಗಕೋ. ೦೦೨); ಆ ಬ್ರಾಹ್ಮಣ . . . ನಾನು ದೇವಸ್ಥಾನಕ್ಕೆ ಬರಬೇಕೆಂದೂ, ಸಕಲಮರ್ಯಾದೆಗಳೊಡನೆ ಪುರಸ್ಕರಿಸುವನೆಂದೂ ಹೇಳಿದನು (ಕಂಗಾಳ್ಳ. ೫೦೨). ೨. ಬೆಂಬಲಿಸು ; ಪ್ರೋತ್ಸಾಹಿಸು : ಈ ಪತ್ರಿಕೆಯು ಪುರಸ್ಕರಿಸುತ್ತಿದ್ದ ಐರ್ಲೆಂಡಿನ ಸ್ವಾತಂತ್ರ್ಯಚಳುವಳಿಯ ಬಗ್ಗೆ ಭಾರತದಲ್ಲಿಯ ಆಂಗ್ಲರಿಗೆ ಒಳ್ಳೇ ಅಭಿಪ್ರಾಯವಿರಲಿಲ್ಲ (ಪ್ರಿಕಾ. ೨೫).

[ಪುರಸ್ಕರಣ + – ಇಸು]

**ಪುರಸ್ಕರ್ತ** (ನಾ). ಬೆಂಬಲಿಸುವವನು ; ಸಮರ್ಥಿಸುವವನು ; ಅನುಯಾಯಿ : ಆಧುನಿಕಕಾಲದೊಳಗಿನ ಸಮತೆಯ ಪುರಸ್ಕರ್ತರೂ ತಿಳಿದೂ ತಿಳಿಯದೆಯೂ ಇದೇ ಶ್ರದ್ಧೆಯ ಸ್ವೀಕಾರವನ್ನು ಮಾಡುತ್ತಿರುವರು (ಶ್ರಿಂಧ. ೦೦೪) ; ಆಕ್ಸ್‌ಫರ್ಡಿಗೆ ಬಂದ ತಿಂಗಳೆರಡು ತಿಂಗಳಲ್ಲಿಯೇ ನಿಯೋಗಿಯು ಒಂದು ವಿಶಿಷ್ಟ ಧೋರಣದ ಪುರಸ್ಕರ್ತನಾದ (ಸಮುಜ. ೩೭೯). [ < ಸಂ. ಪುರಸ್ಕರ್ತೃ ]

**ಪುರಸ್ಕಾರ** (ನಾ). ೧. ಗೌರವ ; ಸನ್ಮಾನ ; ಮರ್ಯಾದೆ : ಹಳ್ಳಿಗೆ ಒಳ್ಳೆಯ ಪುರಸ್ಕಾರ ದೊರೆತ ಹಾಗಾಯಿತು (ಕೂಶಂ. ೫೩); ನಿಸರ್ಗ ವಿಜ್ಞಾನಕ್ಕೆ ಹೆಚ್ಚಿನ ಪುರಸ್ಕಾರ ದೊರೆಯಿತು (ಶಿಕ್ಷದ. ೨೯). ೨. ಸ್ವೀಕಾರ : ವ್ಯಕ್ತಿತ್ವದ ವರ್ಗೀಕರಣವಿಧಾನಯತ್ನ ಅಷ್ಟಾಗಿ ಪುರಸ್ಕಾರ ಪಡೆದಿಲ್ಲ (ಶಿಕ್ಷದ. ೩೩೪). ೩. ಬಹುಮಾನ ; ಇನಾಮು : ರವಿಯ ಹಣವನ್ನು ಕಳವು ಮಾಡಿದ ವ್ಯಕ್ತಿಯೇ ಆ ಮಗುವಿನ ಕೊರಗನ್ನು ಕಂಡು ಮನಕರಗಿ ಬಾಲಕಿಗೆ ಪುರಸ್ಕಾರವಾಗಿ ಇವನ್ನು ಕಳುಹಿಸಿರಬಹುದೇ ? (ಕೂಗು. ೦೩); ಮೋಹಿಯು ಕಾಗದವನ್ನು ತಂದವನಿಗೆ ಸ್ವಲ್ಪ ಪುರಸ್ಕಾರ ಮಾಡಿ ಕಳುಹಿಸಿಕೊಟ್ಟು . . . ಕಾಗದವನ್ನೋದಿ ಹೇಳಿದಳು (ಕಾಳುಂ. ೭೦). [ಸಂ.]

**ಪುರಸ್ಕೃತ** (ಗು). ೧. ಮುಂದೆ ಇಟ್ಟ ; ಮುಂದು ಮಾಡಿದ. ೨. ಗೌರವವನ್ನು ಪಡೆದ ; ಸನ್ಮಾನಿತ ; ಪೂಜಿತ. (ನಾ). ೩. ಶತ್ರುಗಳಿಂದ ಆಕ್ರಮಿಸಲ್ಪಟ್ಟವನು. ೨, ೩ : ನಾಡಿಗರೊಳೆಲ್ಲರುಂ . . . ಪುರಸ್ಕೃತರಭಿಪನ್ನರಲ್ತು (ರಾಮೂಶ್ಚ. ೭-೨೩). [ಸಂ].

**ಪುರಸ್ಸರ** (ಗು). ೧. ಮುಂದೆ ಬರುವ ; ಅಗ್ರೇಸರವಾದ ; ಶ್ರೇಷ್ಠವಾದ : ವಿಜಯಾರಂಭಪುರಸ್ಸರವಿಜಯಗಜಂಗಳನೆ ಪಿಡಿದು ಘೂರ್ಜರರಾಜಧ್ವಜಿನಿಯನಿಱಿದೋಡಿಸಿ (ಶಂಶಬಾ. ೦-೩೩). (ನಾ). ೨. ಸಹಿತವಾದುದು ; ಸಮೇತವಾದುದು : ವಿಶ್ರುತಶ್ರುತಕೀರ್ತ್ಯಾಚಾರ್ಯಪುರಸ್ಸರಮಪ್ಪಾಚಾರ್ಯಪರಂಪರೆಯೆ ಕುಡುಗೆ ಭವ್ಯೋತ್ಸವಮಂ (ಅಂಶು. ೧-೧೨). 'ಪುರಃಸರ' ಪರಾ.

**ಪುರಸ್ಸರವಾಗಿ** = ಕೂಡಿಕೊಂಡು ; ಸಮೇತವಾಗಿ ; ಸಹಿತವಾಗಿ: ಬಾಚಿಮಯ್ಯನುಂ ಮಗ ಮಲ್ಲಿಯಣನುಂ ಪುರಸ್ಸರವಾಗಿ ಮಲ್ಲಿಕಾರ್ಜುನದೇವರ್ಗ್ಗೆ . . . ಬಿಟ್ಟ ಗದ್ದೆ (ಸೌಇಇ. IX-I, ೨೯೦.೨೭, 12ನೆಯ ಶತ) ; ವಾತ್ಸಲ್ಯದಿಂದಲೂ ಅಧ್ಯವಸಾಯ ಪುರಸ್ಸರವಾಗಿಯೂ ಯುಧಿಷ್ಠಿರಾದಿ ಕುಮಾರರನ್ನು ಲಾಲಿಸಿ ಪಾಲಿಸಿದುದನ್ನೂ ನೆನೆನೆನೆದು ಅವನು ಕಣ್ಣೀರ ತುಂಬಿದನು (ಶೀಕ್ಕಕ. ೭೨). [ಸಂ.]

**ಪುರಸ್ಸರಂ** (ಅ). ಸಹಿತವಾಗಿ ; ಸಮೇತವಾಗಿ ; ಪೂರ್ವಕ : ಪರಸ್ಪರ ಕ್ಷೇಮಕುಶಲಭಾಷಾಪುರಸ್ಸರಂ ಅಮರ್ದಪ್ಪಿ (ಕಂರಾಮು. ೦೦-೫೫ ವ): ಸುಶ್ರುತನಂ ತಾಂಬೂಲದಾನಪುರಸ್ಸರಂ ವಿಸರ್ಜಿಸಿ (ಸುದ್ರಶು. ೩-೩೮ ವ). [< ಪುರಸ್ಸರ]

**ಪುರಸ್ಸರತೆ** (ನಾ). ಕೂಡಿಕೊಂಡಿರುವಿಕೆ; ಸಹಿತವಾಗಿರುವಿಕೆ : ಚತುರ್ವಿಧಾರಾಧನಾಪುರಸ್ಸರತೆಯಿಂ ಸಮಾಧಿವಿಧಿಗೇಂ ಮಸಂದಂದಳೋ (ಸುಕುಮಾ. ೯-೦೫). [ಸಂ. ಪುರಸ್ಸರತಾ]

**ಪುರಹರ** (ನಾ). ತ್ರಿಪುರಗಳನ್ನು ನಾಶ ಮಾಡಿದವನು; ಶಿವ : ಪುರಹರ

ಸೂಡೆ ಮುನ್ ತ್ರಿಪುರಮಂ ಪಲಕಾಲಮುಪೋಷಿತ ವ್ರತಾಚರಣ ದೊಳ್ದರ್ಸಿಗಳುಪವಾಸದ ಪಾರಣೆ ವಾಯುಪುತ್ರನಿಂ ದೊರೆಕೊಳೆ ಲಂಕೆಯುಂ ಶಿಖಿ ಶಿಖಾಧಿಯಪ್ಪಿನಮುಂಡು ತೇಗುವಂತಿರೆ ಪೊಡಿಪೊಣ್ಮಿದತ್ತು ಧಗಿಲೆಂಬ ಧಗದ್ಧಗಿಲೆಂಬ ನಿಸ್ವನಂ (ಶಂರಾಮಾ. ೧೧–೧೪೯); ಪುರಹರನಿರ್ದಪಂ ನಿರುಪಮಾನತಪೋಮಯನಾಗಿ (ಗಿರಿ. ೬–೧೩). 'ತ್ರಿಪುರಹರ' ಪರಾ.

**ಪುರಹರನಯನಮಣಿ**=ರುದ್ರಾಕ್ಷಿ : ನಿರವಭಸಿತ ಪುರಹರನಯನಮಣಿ ವಿಸರಮಂ . . . ಶರಣನೆಸೆದಂ (ಹಾರಾಸ್ತ. ೦-೪-೩). [ಸಂ.]

**ಪುರಹರಸುತ** (ನಾ). ೧. ಶಿವನ ಮಗ ; ಸ್ಕಂದ. ೨. ಸ್ಕಂದನ ಅವತಾರವೆನಿಸಿದ ತಿರುಜ್ಞಾನಸಂಬಂಧ ಎಂಬ ಪುರಾತನ ಶಿವಶರಣ : ಪುರಹರಸುತ ನೀನೆರೆದರ್ಗಿರದಿಷ್ಟವನೀವುದುಳ್ಳೊಡಿಂದೆನ ಗೊಲವಿಂದೆರೆದುದನೀವುದು (ಶ್ರುಶಂ. ೩೩–೧೩೯). [ಸಂ.]

**ಪುರಹರವಕ್ತ್ರ** (ನಾ). ೧. ಶಿವನ ಮುಖ. ೨. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಪುರಹರವಕ್ತ್ರಂ ಪಂಚಂ . . . ಪುರವೈರಿಮುಖಂ ಗಳ್ಗಿದಱ ನಾಮಂ (ವ್ಯವಹಾ. ೯-೩). [ಸಂ.]

**ಪುರಳಿಮರ** (ನಾ). ಒಂದು ಬಗೆಯ ಸಸ್ಯ : ಪಾದರಿ,ಕೆಲಾದ್ರಿ, ಪುರಳಿ ಮರ, ಕಲಿಹುಟ್ಟು, ಕಲ್ಲುಉದಿ (ಮೈಶಿ. ೬೨-೧೪೬೬). [ಪುರಳ್ಳಿ$_0$+ಮರ$_1$]

**ಪುರಾಂಗನೆ** (ನಾ). ಪುರದಲ್ಲಿಯ ಹೆಂಗಸು ; ಪುರಸ್ತ್ರೀ : ಒಲಗಶಾಲೆ ಪೂಗಿಡುಗಳೊಳಗೆ ನಾಟ್ಯಶಾಲೆ ಕುಸುಮಾಪಚಯಪ್ರಚಳತ್ಪುರಾಂಗನಾ ಲೋಲಲೋಚನಕಟಾಕ್ಷಲಕ್ಷಿಗನಲೊಪ್ಪುವುವಲ್ಲಿಯ ಪುಷ್ಪವಾಟಿಗಳ್ (ಶ್ರುಕ್ಷ್ಮ. ೦೨-೩೦). [ಸಂ. ಪುರಾಂಗನಾ]

**ಪುರಾಂತಕ** (ನಾ). = ಪುರಹರ : ಪುರಾಂತಕಧ್ಯಾನದಲಿ ವಿಮಲಸ್ವಾಂತ ನೇಕಾಗ್ರದಲಿ ಭಜಿಸಿದನಿಂದುಶೇಖರನ (ಕುವ್ಯಾ. ೨೨-೯೩). [ಸಂ.]

**ಪುರಾಕೃತ** (ಗು). ೧. ಹಿಂದೆ ಮಾಡಿದ ; ಪೂರ್ವಜನ್ಮಗಳಲ್ಲಿ ಮಾಡಿದ : ವಾಂಛೆಯಿಲ್ಲದ ಜೀವಿತಮುಂ ಮುನ್ನೆಂಬುದಿಲ್ಲದ ವಿಕ್ರಮಮುಂ ಒಗಡಿಸಿದನುಭವಮುಂ ಪಗೆಯುಂ ಪೊಗಳಿಸುವ ಧೈರ್ಯಮುಂ ಪುರಾಕೃತ ಸುಕೃತ ಫಲಂಗಳ್ (ಚಾಂಶಿಪು. ೪-೭೯ ವ) ; ತನ್ನನಿಂದ್ರನಾಗಿ ಬಗೆದು . . . ಪುರಾಕೃತ ಪುಣ್ಯದಿಂ ಸುಖಮನನುಭವಿಸುತ್ತಿರೆ (ಶಂರಾಮಾ. ೦೭-೦೩೪ ವ); ಹಗೆಯೊಳೆಮ್ಮವರೊಳಗೆ ಎದೆಗಿಚ್ಚುಗಳ ಮಿಲ್ಲಕುಠಾರರಪಸಂಬುಗೆಯ ಬಳಸಿದರಮು ಪುರಾಕೃತಕರ್ಮದವಶೇಷ (ಕುವ್ಯಾ. ೬-೧೦). (ನಾ). ೨. ಪೂರ್ವಜನ್ಮದಲ್ಲಿ ಮಾಡಿದ ಕರ್ಮ : ಒಳ್ಳಿತ್ತ ಕೆಯ್ಯೊಳಾಪ್ಪೂರ್ಬ್ಬಲ್ಲದುಮದ ಱಂತೆ ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತಮಿಲ್ಲಿ ಸಂಧಿಕ್ಕುಂ (ಇಳಿ. X, ೩೦-೫; ಶು. ೭೦೦); ಪುರಾಕೃತ ತಪ್ಪದೇನಾದುದಾಗಲಿ (ನವಮೋ. ೫-೧೧) ; ಅನುಬಂಧ ಜೀವಜೀವಕೆ ಪುರಾಕೃತದಿಂದ (ಮಂಕಳ. ೧೬೮). [ಸಂ.]

**ಪುರಾಟಕ** (ನಾ). [ನಾಟ್ಯ] ಮೂವತ್ತೈದು ದೇಶೀಯಭೌಮಚಾರಿಗಳಲ್ಲಿ ಒಂದು ; ▸ "ಕಾಲುಗಳನ್ನು ಮೇಲಕ್ಕೆತ್ತಿ ಒಂದನ್ನೊಂದು ತಟ್ಟುತ್ತಿರುವುದು" (ಲಾಸ್ಯರಂ. ೩೨೩ ಗದ್ಯಾನುವಾದ) : ರಥಚಕ್ರ, ಪರಾವೃತ್ತ ತಲ . . . ಪುರಾಟಕ, ಅರ್ಧಪುರಾಟಕ . . . ಸಮಸ್ಖಲಿತ; ಈ ಮೂವತ್ತೈದು ದೇಶೀಯಸಂಬಂಧದ ಭೌಮಚಾರಿಗಳು (ಲಾಸ್ಯರಂ. ೬-೦೭ ವ). [ಸಂ.]

**ಪುರಾಣ** (ಗು). ೧. ಹಳೆಯ ಕಾಲದ ; ಪ್ರಾಚೀನಕಾಲಕ್ಕೆ ಸಂಬಂಧಿಸಿದ; ಪುರಾತನವಾದ : ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯ ಪ್ರಯೋಗದೊಳ್ತಕ್ಕಲದ ವಿರಸಂ ಕರಮವು ದೇಸಿಗೆ ಜರದ್ವಧೂವಿಷಯ ಸುರತರಸರಸಿಕತೆವೊಲ್ (ಕಾವಿ. ೦-೩೦) ; ನೆರೆದಿಸುತಿರೆ ತೋಲ್ವುಲ್ಲೆಯ ನಿರದದು ಬಿಟಿಸ್ಸೊಡೆ ಪುರಾಣಕೂಪದೊಳ್ (ಶಂಶಭಾ. ೨-೩೦); ಕತೆಯೊಳಗಱಿಯದ ವಿಪರೀತತೆಯಿಂದಂ ಪೇೞ್ದ ಕೃತಿಗಳಿರ್ಕೆ ಪುರಾಣಸ್ಥಿತಿಯೊಳೆ ಕವಿರತ್ನನಿನ್ನವಿತಪಮಾದುದು ಸಗರಚಕ್ರವರ್ತಿಯ ಚರಿತಂ (ಅಜಪು. ೦೨–೨೮). ೨. ಉದ್ದವಾದ ; ದೀರ್ಘವಾದ : "ಆದಿಕಥೆಯೊಳು ದೀರ್ಘದೊಳು ಜೀವದೊಳು ಪುರಾಣಂ" (ಮಂಗರಾ. ೦೩೦–೫೫). ೩. ಜರ್ಜರಿತವಾದ; ಜೀರ್ಣವಾದ. (ನಾ). ೪. ಹಳೆಯದು : ಪುರಾತನವಾದುದು: "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ,ಪ್ರತನಂ, ಪುರಾತನಂ-ಈ ೬ ವ(ಹ)ೞದು" (ಹಲಾಯು. ೦೦೯-೨೬); "ಜೀರ್ಣಮಾ ಜರತ್ಪ್ರತನಮರ್ಣವ ಮನವ್ಮಂ ಪುರಾಣಂ ಪುರಾತನಮೆನಲು ಹೞತಿಂಗೆ ನಾಮಮಕ್ಕುಂ" (ಮಂಗರಾ. ೦೨೯-೦೩). ೫. ಪೂರ್ವಕಾಲದಲ್ಲಿ ನಡೆದು ಹೋದ ಕಥೆ ; ಪ್ರಾಚೀನವಾದ ಚರಿತ್ರೆಯನ್ನು ಹೊಂದಿದ ಕಾವ್ಯಪ್ರಕಾರ : ಅಸಮ ಬಸವಪುರಾಣಮಂ ಪಸರಿಸುವಮಂ ಪಾಪಂಗಳಂ ಪ್ರಹರಿಸುವಂ (ಬಸಪು. ೬೦-೭೯); ಇಂದಿನ ಬಾಳು ನಾಳೆಗೆ ಚರಿತ್ರೆ, ನಾಡಿದ್ದಿಗೆ ಪುರಾಣ (ಸಾಹಿಜೀ. ೩೩). ೬. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ ಎಂಬ ಪಂಚಲಕ್ಷಣಗಳನ್ನು (ಅಥವಾ ಇನ್ನು ಕೆಲವರು ತಿಳಿಸುವಂತೆ ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಅಂತರ, ವಂಶ, ವಂಶಾನುಚರಿತ, ಸಂಸ್ಥೆ, ಹೇತು ಮತ್ತು ಅಪಾಶ್ರಯವೆಂಬ ದಶಲಕ್ಷಣಗಳನ್ನು) ಉಳ್ಳ ಪ್ರಸಿದ್ಧವಾದ, ವ್ಯಾಸಪ್ರಣೀತವೆಂದು ತಿಳಿಯಲಾದ ಹದಿನೆಂಟು ಮಹಾಪ್ರಬಂಧ : "ಜಗತ್ತಿನ ಉತ್ಪತ್ತಿಯನ್ನೂ ನಾಶವನ್ನೂ ವಂಶವನ್ನೂ ವಂಶಾನುಚರಿತವನ್ನೂ ಮನ್ವಂತರಗಳನ್ನೂ ಹೇಳುವ ಪ್ರಬಂಧವು ಪುರಾಣವೆನಿಸುಗು" (ಶಬ್ದಾ. ೯೪) ; ಪುರಾಣದ ಭಟ್ಟವೃತ್ತಿಗೆ ಸಬ್ಬನಮಸ್ಯವಾಗಿ ಪಡೆದ ರೇವದಾಸಭಟ್ಟರ ಕೆಯ್ಯಿಂ ಬಡಗ ಬಿಟ್ಟ ಪಿರಿಯ ಕೋಲ ಮತ್ತ[ರ] (ಸೌಇಇ. XX, ೬೨–೧೧ ; 1111); ಶಾಸ್ತ್ರ ಪುರಾಣವ ಕೇಳಿದೊಡೇನು . . . ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ (ಬಸವ. ೧೯೮) ; ಹಲವು ವೇದ ಪುರಾಣ ಶಾಸ್ತ್ರವ ತಿಳಿದು ನೀ ಮರುಳಾದೆ (ಕೌಶಿರಾ. ೩೭-೦೮). 'ಅಷ್ಟಾದಶ ಪುರಾಣ' ಪರಾ. ೭. (ಆಲಂ) ವೈಯಕ್ತಿಕವಾದ ದೀರ್ಘಕಥೆ : ನಿನ್ನ ಪುರಾಣ ಇರಲಿ, ಮೂರ್ತಿ. ಚಹಾ ಎಂದೋ ಆರಿಹೋಗಿದೆ. ಮೊದಲು ಕುಡಿದು ಮಾತನಾಡು (ಜರೋಟಿ. ೩); ಶ್ರೋತಾವಂದಳಿ ಬಸವಂಶಿಯ ಪುರಾಣವನ್ನು ಖಾಸಗೀ ಆಗಿ ನಡೆಸಿತ್ತು (ದೀಪಹ. II, ೦೪೮). ೮. ಹರಟೆ; ರಗಳೆ. ೯. [ಜೈನ]ಲೋಕಾಕಾರಕಥನ, ದೇಶನಿವೇಶ ವರ್ಣನ, ನಗರವರ್ಣನ, ರಾಜ್ಯವರ್ಣನ, ತೀರ್ಥಮಹಿಮೆ, ಚತುರ್ಗತಿ ಸ್ವರೂಪವಿವರಣೆ, ತಪೋದಾನವಿಧಾನ, ತಪಃಫಲವರ್ಣನೆ—ಎಂಬ ಎಂಟು ಅಂಗಗಳನ್ನು ಒಳಗೊಂಡ, ಅರ್ಹಂತನೇ ಮೊದಲಾದ ತ್ರಿಷಷ್ಟಿಶಲಾಕಾಪುರುಷರ ಕಥೆ : ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿವರ್ಣನಮುಂ ರಾಜ್ಯ ರಾಮಣೀಯಕಾಖ್ಯಾನಮುಂ ತೀರ್ಥಮಹಿಮಾಸಮರ್ಥನಮುಂ ಚತುರ್ಗತಿಸ್ವರೂಪ ನಿರೂಪಣಮುಂ ತಪೋದಾನವಿಧಾನವರ್ಣನಮುಂ ತತ್ಫಳಪ್ರಾಪ್ತಿಪ್ರಕಟನ ಮುಮೆಂದಿಂತಪಯವಗಳೆಂಟಕ್ಕುಂ (ಆದಿಪು. ೧-೪೨ ವ); ಸದ್ಧರ್ಮಕಥಾಘನನಿಬದ್ಧಗ್ರಂಥಂ ಪುರಾಣಮಿತಿಹಾಸಾಖ್ಯಂ (ಪಂಪಶೀ. ೨-೯). [ಸಂ.]

**ಪುರಾಣಕವಿ** (ನಾ). ೧. ಹಿಂದೆ ಆಗಿ ಹೋದ ಕವಿ ; ಪೂರ್ವಕಾಲದ ಕವಿ : ಪುರಾಣಕವಿ ಪ್ರಭು ಪ್ರಯೋಗಾವಿಳ ಸದ್ಗುಣೋದಯಮನಾಯ್ದು ಪೞಂ ಸಮೆದೊಂದು ಕಾವ್ಯದಿಂ . . . ಮುದಮಂ ತನಗಾಗಿಸಿದು ಕವೀಶ್ವರರ್ (ಕಾವಿ. ೨-೦೫೩) ; ಕವಿಗಳೊಳಾ ಪುರಾಣಕವಿಪುಂಗವರೊಳ್ಗಿದರೀಗಳಿಲ್ಲ (ಗದಾಯು. ೧-೪೭). ೨. ಪುರಾಣವನ್ನು ರಚಿಸಿದ ಕವಿ : ವಾಕ್‌ಶ್ರೀಸುಭಗಂ ಪುರಾಣಕವಿಯುಂ ಧರೆಗಾಗಿರೆಯುಣ್ಮಿ ಪೊಣ್ಮುವೀ ದೇಸಿಗಳಂತೆ ನಾಡೊಮಜನಾದನೊ ಪೇೞ್ ಕವಿತಾಗುಣಾರ್ಣವಂ (ಶಂಶಭಾ. ೦೪-೬೨). [ಸಂ.]

**ಪುರಾಣಚೂಡಾಮಣಿ** (ನಾ). ಪುರಾಣಗಳಲ್ಲಿ ಅತ್ಯುತ್ತಮವಾದುದು ; ಶ್ರೇಷ್ಠವಾದ ಪುರಾಣ : ಶಾಂತಿಜಿನಜನ್ಮಜಲಧಿಗೆ ಶಾಂತಿಪುರಾಣಮೆ

ಪುರುಷಾರ್ಥರತ್ನಮಿದಂ ಪೇೞ್ವಂತು ಕವಿಚಕ್ರವರ್ತಿಯೆ ನೋಂತಂ ಪೆಸರಿಂ ಪುರಾಣಚೂಡಾಮಣಿಯುಂ (ಶಾಂತಿಪು. ೧-೧೨). [ಸಂ.]

**ಪುರಾಣಜ್ವರ** (ನಾ). ಬಹಳ ದಿನಗಳಿಂದ ಇರುವ ಜ್ವರ; ಹಳೆಯ ಜ್ವರ: ಏಳು ರಾತ್ರಿ ಪರ್ಯಂತರ ತರುಣಜ್ವರವೆನಿಸಿಕೊಂಬುದು. ಹತ್ತು ರಾತ್ರಿ ಪರ್ಯಂತರ ಮಧ್ಯಮಜ್ವರವೆನಿಸಿಕೊಂಬುದು. ಅದಱ ಮೇಲೆ ಪುರಾಣ[ಪಾಠಾಂ. ಹಳೇ]ಜ್ವರವೆನಿಸಿಕೊಂಬುದು (ವೈದ್ಯಸಾ. I. ೫೩); ಈ ಮಾತ್ರೆಗಳನ್ನು ಕೊಬ್ಬರಿರಸದಲ್ಲಿ ಕೊಡಲು ಜ್ವರಾತಿಸಾರ, ಪುರಾಣ ಜ್ವರಗಳು ಸಹ ನಿಲ್ಲುವುವು (ಸಕವೈ. ಶಂ. ೪೭೧). [ಸಂ.]

**ಪುರಾಣಪುರುಷ** (ನಾ). ೧. ಮುದುಕ; ವೃದ್ಧ: ಗಂಭೀರಸ್ವರದೊಳಂ ಭವ್ಯಾಕಾರದೊಳಮಾತಂ ಕಾರಣಪುರುಷನಾಗಲೆವೇೞ್ಕುಮೆಂದು ನಿಶ್ಚಯಿಸಿ ಪುರಾಣಪುರುಷನೊರ್ವನಿಂತೆಂದು (ಶಂಕಾವಿಜ. ೮-೩೬ವ). ೨. ಆದಿಪುರುಷ; ವಿಷ್ಣು: ತಪನಕುಲಜಾತರ್ ಪುರಾಣಪುರುಷೋತ್ತಮನ ವಿಪುಲಸಂತತಿ ಳವರ್ (ಕೃಷ್ಣಭಾ. ೨೧-೨೯); ನಾರದನುಂ ಪರ್ವತನುಂ ಪುರಾಣಪುರುಷನು ಕಂಡೆಱಗುತ (ಅಧ್ಯಾ. ೧೩-೯); ಶ್ರೀಕೃಷ್ಣನು ಪುರಾಣಪುರುಷನೂ ನಿಜ; ಐತಿಹಾಸಿಕವ್ಯಕ್ತಿಯೂ ನಿಜ (ಭಾರದ. ೧೦೯). ೩. ಶಿವ; ಈಶ್ವರ. [ಸಂ.]

**ಪುರಾಣಮಾರ್ಗ** (ನಾ). ಪ್ರಾಚೀನಕಾಲದಿಂದ ನಡೆದು ಬಂದ ರೀತಿ, ಸಂಪ್ರದಾಯ: ಉಚಿತಪುರಾಣಮಾರ್ಗಪದಪದ್ಧತಿಬಂಧುರಬಂಧಮೆಂಬಿನಂ ರಚಿಯಿಸೆ . . . ಕಾಳಿದಾಸನುಮನೇಳಿಸಿತೀ ಕೃತಿ ನಾಗವರ್ಮನಾ (ಛಂದೋಂಬು. ೧-೭). [ಸಂ.]

**ಪುರಾಣವಾಕ್ಯ** (ನಾ). ೧. ಬಹುಕಾಲದಿಂದ ಬಂದಿರುವ ಮಾತು; ಗಾದೆ: ಶರೀರಮಾದ್ಯಂ ಖಲುಧರ್ಮಸಾಧನಂ ಎಂಬ ಪುರಾಣವಾಕ್ಯ ಮುಂಟು (ಶಂಕಶಂ. ೧೧೩-೧೩); ಕೇನಾಪ್ಯುಪಾಯೇನ ಫಳಂ ಹಿ ಸಾಧ್ಯಂ ತಾನೆಂಬುದುಂಟಲ್ತೆ ಪುರಾಣವಾಕ್ಯಂ (ಸುಕುಮಾ. ೩-೩೨). ೨. ಪುರಾಣದಲ್ಲಿರುವ ಮಾತು: ಬಿಸರುಹಾಕ್ಷನ ಹರನಿಱಿದನೆಂದುಸುರಲೊಲ್ಲನು ಸಹಜವಾದ ಪುರಾಣವಾಕ್ಯವನು (ಬಸಪು. ೫೭-೨೨). [ಸಂ.]

**ಪುರಾಣಶ್ರವಣ** (ನಾ). ಪುರಾಣವನ್ನು ಕೇಳುವಿಕೆ: ಮಠದಲ್ಲಿ ಶ್ರಾವಣಮಾಸದಲ್ಲಿ ಪುರಾಣಶ್ರವಣ ನಡೆಯುತ್ತದೆ (ರೂಢಿ). [ಸಂ.]

**ಪುರಾಣಿ** (ನಾ). ಪುರಾಣ ಹೇಳುವವನು; ಪುರಾಣಿಕ: ಯಥಾರ್ಥವ ನೊರೆಯಲೊಲ್ಲನು ಪಕ್ಷಪಾತಿ ಪುರಾಣಿ [ಪಾಠಾಂ. ಣ]ಭಟ್ಟನಲಾ (ಬಸಪು. ೫೭-೨೮); ಪೇಳಿದ ಪರಮ ಪುರಾಣಿ ರಾಯಂಗೆ ಶರಣಾಳಿಯ ಮಲ್ಗತೆಗಳನು (ಮೋಳಿಪು. ೨-೭೩). [<ಪುರಾಣ]

**ಪುರಾಣಿಕ** (ನಾ). ೧. ಪುರಾಣಗಳನ್ನು ಚೆನ್ನಾಗಿ ಓದಿ ತಿಳಿದವನು. ೨. ಪುರಾಣಗಳನ್ನು ವಿವರಿಸಿ ಹೇಳುವವನು: ಪೌರಾಣಿಕ: ಅವನಿಪನ ನಗರಾಗ್ರದಲಿ ಪೊಂದಿವಸವೋದುತ ಸತ್ಯವ ಹೇಳುವ ಪುರಾಣಿಕ ನಂತೆ ಕೆಲಬರು ಕೇಳುತಿರಲಾಗಿ (ಬಸಪು. ೫೭-೩೦); ಇಂದ್ರಲೋಕವು ಪುರಾಣಿಕರ ವರ್ಣನೆಯಂತೆ ಇರುವುದಾದರೆ ಅದು ಎಂದೋ ಸಿಗುವುದು (ನಿಕ್ಕಾಮ. ೪). [<ಸಂ. ಪೌರಾಣಿಕ]

**ಪುರಾತ** (ನಾ). = ಪುರಾತನ ೪: ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು (ಬಸವ. ೩೪೯); ಪುರಾತರೊಳಗೊಲವಿಂ ಮಹಿಳೆ ಯರನಾತ್ಮಭವರಂ ತಮ್ಮುಮಂ ಕೊಟ್ಟವರೊಳರು ಶತಕೋಟಿಕೋಟಿಗಳು (ಬಸಪು. ೨೫-೭೭). 'ಪುರಂತ್ರ$_1$' ನೋಡಿ.

**ಪುರಾತಭಕ್ತರು** = ಪ್ರಾಚೀನ ಶರಣರು: ಮುನ್ನೆ ಪುರಾತಭಕ್ತರು ಪರಂಬಡೆದೀ ಸ್ಥಳಮೆಂದು ಕೀರ್ತಿಯಂ ಬಿನ್ನವಿಸಲ್ಕೆ (ಸೌಇಇ. XX. ೧೭೮-೦೭; 1192). [<ಸಂ. ಪುರಾತನ]

**ಪುರಾತನ** (ಗು). ೧. ಹಳೆಯ ಕಾಲದ; ಪ್ರಾಚೀನ; ಪೂರ್ವಕಾಲದ: ಉನ್ನಮೆ ಪುರಾತನ ಭವಸಂಬಂಧವೇದಿನಿ (ಶಾಂತಿಪು. ೬-೦೨ವ); ಬುಧರಿದರ್ ನೋೞ್ಪುದು ಪುರಾತನ ನೂತನ ಕಾವ್ಯರೇಖೆಯುಂ (ಗದಾಯು. ೧-೪೭); ನಮ್ಮ ಜನರಲ್ಲಿ ಬಹು ಪುರಾತನ ನಡತೆಗಳೆಷ್ಟೋ ಉಂಟು (ಕುಂಬಾಪು. ೪-೧೯೩). (ನಾ). ೨. ಹಳೆಯದು; ಪೂರ್ವಕಾಲಕ್ಕೆ ಸಂಬಂಧಿಸಿದುದು; ಪ್ರಾಚೀನವಾದುದು: "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ, ಪ್ರತನಂ, ಪುರಾತನಂ—ಈ ೬ ಪ(ಹ)ೞದು" (ಹಲಾಯು. ೧೧೮-೨೬); "ಜೀರ್ಣಮಾ ಜರತ್ಪ್ರತನಮುರ್ವಮನವ್ಯಂ ಪುರಾಣಂ ಪುರಾತನಮೆನಲು ಹೞತಿಂಗೆ ನಾಮಮುಕ್ಕುಂ" (ಕುಂಗರಾ. ೧೨೯-೧೩); ಪುರಾತನದ ೪ಥೆ ಕಿರಾತ ಏನು ಬಲ್ಲ? (ಗಾದೆ). ೩. ಪೂರ್ವಕಾಲದವನು; ಹಿಂದಿನವನು; ಪೂರ್ವಿಕ: ರಸವತ್ಕಾವ್ಯವಿದರ್ ಪುರಾತನರೊಳಾದುಂ ಪೂಣ್ಕೆಯಿಂ ಪೇೞ್ದು ಜೋಯಿಸೆಗಬ್ಬಂಗಳನೆತ್ತಿ ರುಜಿಸಿದರಾರ್ (ಜಾತಕ. ೨೪-೪೦); ಪೂರ್ವದ ಪುರಾತನರ ವಿಧಿಯು ವಿಸ್ಮರಿಸುವೆವು ಕೇಳ್ಕೆ (ಗಗತಾ. ೧೮ ೪೩); ಈ ಕಥೆಗಳ ಮೂಲಕವಾಗಿ ಮಗು ಪುರಾತನರೊಡನೆ ಪ್ರೀತಿಯ ಸಂಬಂಧವನ್ನು ಬೆಳೆಸಿಕೊಳ್ಳುವನು (ಕಥಕ. ೩೭). ೪. [ವೀಶೈ] ಪೂರ್ವಕಾಲದಲ್ಲಿ ಆಗಿ ಹೋದ, 'ಅರುವತ್ತುಮೂವರು ಪುರಾತನ' ರೆಂದು ಪ್ರಸಿದ್ಧಿ ಪಡೆದ ಶಿವಭಕ್ತರ ಗಣಕ್ಕೆ ಸೇರಿದವನು; ಪ್ರಾಚೀನ ಶಿವಶರಣ: ಮೃಡನೇ ನಿಮ್ಮ ಪುರಾತನರ ಕಾಣುತ್ತ ತಡೆಯದೆ ಇದಿರೆದ್ದು ಪೊಡಮಡೆನಾಗಿ ಬಿಡದು ನಾಚಿಕೆ (ಅವಶಂ. ೧೭೨-೭೩೪); ಬಂದಹರಯ್ಯಾ ಪುರಾತನರೆನ್ನ ಮನೆಗೆ ಬಂದಹರಯ್ಯಾ ಶರಣರೆನ್ನ ಮನೆಗೆ (ಬಸವ. ೩೭೦); ಶಿವಭಕ್ತಿಮಾರ್ಗವು . . . ತಮಿಳುನಾಡಿನಲ್ಲಿ ೬೩ ಮಂದಿ ಪುರಾತನರಿಂದ ಪ್ರಾರಂಭವಾಗುತ್ತದೆ (ಭಾರದ. ೩೦೭). [ಸಂ.]

**ಪುರಾತನಜ್ವರ** (ನಾ). = ಪುರಾಣಜ್ವರ: ಅರಳಿಮರದ ಒಳನಾರನ್ನು ಕಷಾಯಮಿಕ್ಕಿ ಕೊಡಲು ದಾಹಸಹಿತವಾದ ವಿಷಮಜ್ವರ, ಪುರಾತನಜ್ವರ, ಜ್ವರಾತಿಸಾರ ಸಹ ಶಮನವಹುದು (ಸಕವೈ. ೦೦೩). [ಸಂ.]

**ಪುರಾತನಪುರುಷ** (ನಾ). = ಪುರಾಣಪುರುಷ ೨: ಪುರಾತನಪುರುಷ ಪುಂಡರೀಕಾಕ್ಷನೆ ಪುರಂದರವಿಠಲನೆ ದಯಮಾಡೊ (ಪುರಂದ. ೨-೦೫೨-೩). [ಸಂ.]

**ಪುರಾತನಮತ** (ನಾ). ಪ್ರಾಚೀನರ ಅಭಿಪ್ರಾಯ,—ಮಾರ್ಗ,— ಸಂಪ್ರದಾಯ; ಆದಿಮಾರ್ಗ: ವ್ಯವಹರಿಪುವೆರಡು ರೂಪಿಂದಕ್ಕರಂ ಶ್ರಾವಣಂ ಸ್ವನೈಕಾಕಾರಂ ವಿವಿಧಾಕಾರಂ ಲಿಪಿಭೇದವೃತ್ತಿಯಿಂ ಚಾಕ್ಷುಷಂ ಪುರಾತನಮತ್ರದಿಂ (ಶಮದ. ೩). [ಸಂ.]

**ಪುರಾತವಳಿ** (ನಾ). ಪುರಾತನ ಶರಣರ ಪರಂಪರೆ: ಗುರುಲಿಂಗ ಜಂಗಮಕೆ ಪರೀಕ್ಷೆ ಉಂಟಾಗಿಯೆ ಆತ ಮಾಹೇಶ್ವರ ಪುರಾತವಳಿ ಎಂಬ ಪರಮಬಂಧುಗಳಾತನ ನೆನೆದು ಬದುಕುವರು (ಬಸವ. ೩೭೮). [ಪುರಾತ + ಬಳಿ$_3$ (< ಬಟ್ಟಿ$_3$)]

**ಪುರಾಧೀಶ** (ನಾ). ಊರಿನ ಒಡೆಯ; ಪಟ್ಟಣಾಧಿಪತಿ: ತತ್ಪುರಾಧೀಶಂ ದೃಢ(ಧೃತ)ಸೇನಂ ನಿಲಿಸಿ (ನಿಱಿಸಿ) ಭಕ್ತಿಪೂರ್ವಕದಿಂದ ಮಾಹಾರಂಗುಡೆ ಕೊಂಡು ಭಟ್ಟಾರಕನುಮಾತ್ರನಂ ಪರಸಿ ಬಿಜಯಂಗೆಯ್ವುದುಂ (ಶಾಂತಿಪು. ೯-೨೦ವ). [ಸಂ.]

**ಪುರಾಭವ** (ನಾ). ಹಿಂದಿನ ಜನ್ಮ; ಪೂರ್ವಜನ್ಮ; ಜನ್ಮಾಂತರ: ಅಬೋಧಪೂರ್ವಕಂ ನೆನೆವಮನಂತು ಭಾವದೊಳೆ ನಟ್ಟ ಪುರಾಭವ ಸೌಹೃದಂಗಳಂ (ಶಾಕುಂತ. ೩೦-೧೦೨). [ಸಂ.]

**ಪುರಾರಿ** (ನಾ). ೧. ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಯೆಂಬ ಮೂವರು ರಾಕ್ಷಸರ ಶತ್ರು; ತ್ರಿಪುರಾರಿ; ಶಿವ: ಸಿರಿವಿರಿಂಚಿ ಮರುತ್ಸುಪರ್ಣ ಪುರಾರಿವಂದಿತ ಚರಣಸರಸಿಜ (ಪುರಂದ.ರಾ. ೩-೨೧೬ ಅನುಕಲ್ಪ). ೨. ವಿಷ್ಣು. ೩. [ಛಂದ] ನಡುವೆ ಗುರುವಿರುವ

ನಾಲ್ಕು ಮಾತ್ರೆಗಳ ಗಣ ; ಜಗಣ (υ–υ) : ಶಶಿಪುರವಿಷಯಾದ್ರಿ ಯೋಳರದರ್ಕೆ ಪುರಾರಿಯೆಂಬ ಗಣಮುಬ್ಬುಮುಖೀ (ಛಂದೋಂಬು. ೪-೨೨೬). [ಸಂ.]

**ಪುರಾರ್ದನ** (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ಕಾಲವೈರಿಪುರಾರ್ದನಾ . . . ಚಂದ್ರಶೇಖರ ಪಾಲಯ (ಹರಿಶ್ಚಂ. ೬-೪೭). [ಸಂ.]

**ಪುರಾವೃತ್ತ** (ನಾ). ೧. ಹಿಂದಿನ ನಡತೆ ; ಪೂರ್ವಪದ ತಿ : (ಶ). ೨. ಪೂರ್ವಕಾಲದಲ್ಲಿ ನಡೆದು ಹೋದ ಸಂಗತಿ ; ಪುರಾಣ : ಪರಮಾತ್ಮನೇ ವ್ಯಾಸರೂಪಿಯಾಗಿ ಅವತರಿಸಿ ಭಾರತ ಪುರಾಣಾದಿಗಳನ್ನು, ಬ್ರಹ್ಮಸೂತ್ರಗ್ರಂಥವನ್ನು ರಚಿಸಿದನೆಂದು ಪುರಾವೃತ್ತಗಳು ತಿಳಿಸುತ್ತವೆ (ಶಾರದ. ೨೬೯). [ಸಂ.]

**ಪುರಾವೆ** (ನಾ). ಪ್ರಮಾಣ ; ಆಧಾರ; ನ್ಯಾಯನಿರ್ಣಯಕ್ಕೆ ಸಹಾಯಕ ವಾದ ಸಾಕ್ಷಿ ಮೊದಲಾದ ಸಹಾಯಕಸಾಮಗ್ರಿ : ಸರಿಯಾಗಿ ಪುರಾವೆ ಯಾದರೆ . . . ದಂಡವನ್ನು ಮಾಡಲಿಕ್ಕೂ ಮಾಜಿಸ್ಟ್ರೇಟನಿಗೆ ಅಧಿಕಾರ ವಿರುತ್ತದೆ (ಕಳಾಗಿ. ಶಂ. ೦೯); ಸಂಶಯವನ್ನು ಸಿದ್ಧಪಡಿಸಿ ಕೊಡುವ ಯಾವ ಪುರಾವೆಯೂ ಸಿಗಲಿಲ್ಲ (ರಂಗಣ. ೨೬೨); ಏನೂ ಪುರಾವೆ ಇಲ್ಲದೇ ತುಂಗಕ್ಕ ಅಷ್ಟು ಧೈರ್ಯದಿಂದ . . . ಮಾತನಾಡಬಹುದೆಂದು ನನಗಂತೂ ಅನಿಸುವುದಿಲ್ಲ (ಮೂರುದಾ. ೦೬೦). [←ಮರಾ. ಪುರಾವ್, ಪುರಾವಾ]

**ಪುರಿ₁**, ಹುರಿ₁ (ಕ್ರಿ). ೧. ಬಾಣಲೆ, ಓಡು ಅಥವಾ ಹಂಚಿನ ಮೇಲಾಗಲಿ, ಕಾಯಿಸಿದ ಮರಳಿನಲ್ಲಾಗಲಿ, ಕಾಳು, ಬೇಳೆ, ಬತ್ತ ಮೊದಲಾದುವನ್ನು ಕಾಯಿಸಿ ಹದಗೊಳಿಸು ; ಅರಳು ಮಾಡು : ನೆಲ್ಲಂ ಪುರಿದು ಮಾಱದೆ ಕಾಣದಂತಿರಿಸಂಗಡಿಯೊಳ್ (ಕಬಿರಾ. ೨-೦೩೭); ಪುರಿದಂತಾದುವು ಪೂವಿನಂಬುವಿನಿವಿಲ್ ನಿಸ್ಸಾರಮಾದತ್ತು (ಪಂಪಾಭಾ. ೦-೦೬); ಎಕ್ಕಸರಂಗಳ ತೋರಮುತ್ತುಗಳ್ ಪುರಿದಪೂಳಾದುವು (ಕಬ್ಬಿಗಾ. ೩೦೩). ೨. ಕಾಯಿಸು ; ತಪ್ತಗೊಳಿಸು : ಸರೋವರದ ಮಳಲ್ ಪುರಿಗಡಲೆಗೆ ಪುರಿದ ಮಳಲ್ಕಾಯ್ವು ತೆಱದೆ ಕಾಯ್ದತ್ತೆತ್ತಂ (ಗದಾಯು. ೭-೦೬); ಪುರಿದ ಮಣಲೊಳಂ ಪೂಣಸಿದ ಗಾಣದೊಳಂ ಬಿರ್ಚಿದ ಬೇರ್ಕೆಯೊಳಂ . . . ನೋಡಲರಿದೆನಿಸಿದ ಮಕರಮುಖದಾಡಾಯುಗ್ಗದಗ್ಗಳಿಕೆಯುಂ ಕಂಡು (ಅನಂತಪು. ೦೦-೮೨ ವ); ಸುಣ್ಣವನೊರಸಿ ಮಿಗೆ ಪು[ಪಾಠಾಂ. ಹು]ರಿದ ಬಿಸಿಯ ಮಳಲಂ ತರಿಸಿ ಬಾಯ್ದುಂಬಿಸಿದಪೆಂ (ಬಸವಪು. ೦೦-೦೯). ೩. ಸೀದು ಹೋಗು ; ಕರಿಕಾಗು ; ಸುಟ್ಟುಹೋಗು : ಒಕ್ಕಲುಂಳ್ಪೊತ್ತಿನ್ಮಕ್ಕಳ್ಪು ಟ್ಟಿಲ್ಕಂ ಪುಟ್ಟಿದೊಂದು ಪುರಿಗ (ಎಕ. IV, ಹೆಗ್ಗಡ. ೬೭-೦೩ ; ಸು. 700). ೪. ಜಿಡ್ಡನ್ನು ಸವರಿ ತಾಳಿಸು,—ಬಾಡಿಸು : ತುಪ್ಪದೊಳ್ಪುರಿದಚ್ಚ ಗಂಪಮುರಲ್ . . . ಅಟ್ಟಿ ತಂದು ಮಡಂಗಿದಕ್ಷುಣ್ಣಮಾಂಸನಿಚಯ ವೊಪ್ಪಿದುದು (ಉದ್ಭಟ. ೫-೬೭). ೫. (ಹಪ್ಪಳ ಮೊದಲಾದುವುಗಳನ್ನು) ಕೆಂಡದ ಮೇಲಿಟ್ಟು ಸುಡು : (ಶ). ೬. ಎಣ್ಣೆ ಅಥವಾ ತುಪ್ಪದಲ್ಲಿ ಕರಿ: 'ಪುರಿಗಡುಬು' ಪರಾ. ಹುರಿ₁: ೧. "ಹುರಿ–ನಿರ್ದ್ರವಕರಣೇ" (ಕವಿಮಾ) ; ಚರಾಚರಂಗಳಂ ಗರಿಮುರಿಯುಪ್ಪಿನಂ ಹುರಿವ ಹಂಚು ವೊಲಿರ್ದೆಳೆಯೊಳ್ ಕೃತಾಂತನೆಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪ ನಿದಾಘಜಾನಿಳಂ (ಅರ್ಜುನೇ. ೪-೬೪); ಹುರಿದು ಬಿತ್ತಿದ ಬೀಜ ಮೊಳೆವುದೆ (ಕರಕ. ೨-೩೩); ಉದ್ಯೋಗವಿಲ್ಲದ ತೊತ್ತು ಉದ್ದು ಹುರಿದು ತಿಂದಳು (ಗಾದೆ). ೨. ಕೆಲಬರು ಹುರಿದ ಮರಳನು ಮೇಲೆ ಚೆಲ್ಲಲು ಹರಹಿ ಸಾಸಿವೆ ರಸಗಳನುಪ್ಪು ಮೆಣಸುಗಳ ಹಿರಿಯ ಮೂಗಿನ ಹೋರು ತುಂಬಲು (ಕೌಶಿಕಾ. ೨೪-೩); ಹುರಿವ ಮಳಲಂ ಹುಯ್ದು ಹುಲ್ಲ ಕಿಚ್ಚಂ ಹಿಡಿದು ಹರಿವ ಹಾವಂ ಹಾಕಿ ಕಾಸಿದಂಬಲಿಯೆಱೆದು . . . ಹತ್ತುವಾಳ್ಗಳಂ ಧರೆಗುರುಳ್ವ ತೆಱದಿ ಕೊಂದಿಕ್ಕಿದರ್ (ಸಪ್ತಾಕ್ಷ. ೬-೩೩); ಹುರಿವ ಮಳಲಿನ ಕಾಸುವಂಬಲಿಯ ಬಿಸಿಯೆಣ್ಣೆವರವಿಗಳ ಪುದಿದ ಪುರ್ಬ್ದೊಂದೆಗಳ . . . ಮೊತ್ತಂಗಳುಳ್ಳೇರಿಯೊಳ್ ಪಸರಿಸಿದುವು (ಶಬಪು. ೪೨-೦೦). ೩. ಎಷ್ಟು ಭಾಗ್ಯದ ಬಿತ್ತು ಹುರಿದರೆ ಬರುದ ಭಟರಿದ್ದೇನ ಮಾಡುವರು (ಕುಮಾವ್ಯಾ. ೦-೨೦); ಹುರಿದುದು ಭವಬೀಜದುಷ್ಕರ್ಮದಂಕುರ ಹಱಿದುದು ಕಪಟದ ಬೇರು ಸುರಿದುದಾನಂದಾಶ್ರು (ಪೋಹತ. ೪೨-೩೦). ೪. ಉಳ್ಳಿ ಶುಂಠಿ ಕೇದಗೆಯ ಹೂ ಹುರಿದ ಕರಿಬೇವು ಮಾದಲದ ಸೊಪ್ಪಿಕ್ಕಿ (ಸೂಪಶಾ. ೩-೨೮). ೬. 'ಹುರಿಗಡುಬು' ಪರಾ. ೭. (ಆಲಂ) ನಾಶಪಡಿಸು; ನಿವಾರಿಸು : ಕಂಗಳ ಕರುಳ ಕೊಯ್ದುವತ ಮನದ ತಿರುಳ ಹುರಿದವರ ಮಾತಿನ ಮೊದಲ ಬಲ್ಲವರನೆನಗೊಮ್ಮೆ ತೋಱಿಬಾ (ಅಪಕಂ. ೦೨೦-೪೩೦). ೮. ನಾಶವಾಗು ; ಇಲ್ಲವಾಗು : ಹುರಿದ ಧೈರ್ಯದ ತಳ್ಳವಾಱುವ ತರಳಹೃದಯದ ದೇವರಿಂದ್ರನನಱಸಿ ಕಂಡರು (ಕುಮಾವ್ಯಾ. ೭-೦೨).

**ಹುರಿದುಕೊಂಡು ತಿನ್ನು**=(ಆಲಂ) ಪೀಡಿಸು ; ಗೋಳಾಡಿಸು ; ಹಿಂಸಿಸು; ಗೋಳಂ ಹುಯ್ಯುಕೊಳ್ಳು: ಮಲಮಗಳು ಇದ್ದಷ್ಟು ದಿನವೂ ಹುರಿದುಕೊಂಡು ತಿನ್ನುತ್ತಿದ್ದಳು (ರೂಢಿ). **ಹುರಿದು ತಿನ್ನು**=ಹುರಿದು ಕೊಂಡು ತಿನ್ನು : ರಾಜೇಶ್ವರಮ್ಮನು ಪ್ರತಿದಿನವೂ ಮಾತು ಮಾತಿಗೂ ಸೊಸೆಯ ದೋಷಗಳನ್ನು ಎಣಿಸಿ ಹುರಿದು ತಿನ್ನುತ್ತಿದ್ದಳು (ಲಕ್ಷ್ಮೀಕೃ. ೪೩). ಸಮಾಜವನ್ನು ಆಕ್ರಮಿಸಿ ಹುರಿದು ತಿನ್ನುತ್ತಿದ್ದ ಸಹಸ್ರರಾವಣರ ಸಂಹಾರ ಮಾಡಬಲ್ಲ ರಾಮನೊಬ್ಬನನ್ನು ಸೃಷ್ಟಿಸಬೇಕೆಂದು ನಿರ್ಧರಿಸಿದ (ಶಾರದ. ೪೬೦). **ಹುರಿದು ಮುಕ್ಕು**=ಹುರಿದುಕೊಂಡು ತಿನ್ನು : ಹುರಿದು ಮುಕ್ಕುವಂತಹ ಹವೆಯು ವಿಸ್ಫೋಟಿಸುತ್ತಿದ್ದಿತು (ರೂಪಾಂತ. ೩೬೯).

[ದೇ.॥ ತಮಿ. ಪೊರಿ ; ಮಲ. ಪೊರಿಯು ; ತುಳು. ಪೊರಿ, ಪೊರಿಪು, ಪೊರಿಯು]

**ಪುರಿ₂**, ಪೊರಿ (ನಾ). ೧. ಹಂಚಿನಲ್ಲಿ ಅಥವಾ ಮರಳಲ್ಲಿಟ್ಟು ಕಾಯಿಸು ವಿಕೆ, –ಹುರಿಯುವಿಕೆ : (ಶ). ೨. ಮಂಡಕ್ಕಿ; ಚುರುಮುರಿ : ನಿಮಗೆ ಹಾಲೂ, ಹಣ್ಣೂ, ಕಡಲೆಕಾಯಿ, ಪುರಿ_ಮೊದಲಾದುವನ್ನು ಕೊಡಿಸುತ್ತೇನೆ (ರಂಗಣ. ೯೭). **ಪೊರಿ** : ೨. ಎಳ್ಳ ಪೆಱಿಂಗೆ ಬ ೧॥ ಮಾಱುವ ಪೊರಿಗಳ್ಗೆ ವಿ ೧ (ಕಇಅ. ೦೭೫-೦೯-೩೭; 1057).

[< ಪುರಿ₁./ ತಮಿ. ಮಲ. ತುಳು. ಕೊಡ. ಪೊರಿ]

**ಪುರಿ₃**, ಹುರಿ₂ (ನಾ). ೧. (ದಾರ ಅಥವಾ ಹಗ್ಗದಂತೆ) ಹೊಸೆಯು ವಿಕೆ ; ನುಲಿಯುವಿಕೆ : 'ಮುಪ್ಪುರಿ'₁ ಪರಾ. ೨. ಹೊಸೆದು ಮಾಡಿದ ನೇಣು,–ಹಗ್ಗ,–ರಜ್ಜು : ಅಸಗಟ್ಟುವೊ ಪುರಿ ಹೆರೆಯೆಣ್ಣೆ ತೀದುದೊ ಅಸಮಾಶ್ವಗಳು ಬಾಂದೊಱಿಯ ಕೆಸಱೊಳು ಬಿದ್ದೇಳಲಾ ಱದಾದುವೊ ಎಂದು ಬಿಸಜಾಕ್ಷಿ ರವಿಯ ನೋಡಿದಳು (ಮೋಹತ. ೨೭-೦೯); ಹೊಸೆದ ಕಾಲ್ಗಣ್ಣವಲೆ ತಳ್ಳುವಲೆ ಪುರಿಯೊಕ್ಕಣ್ಣವಲೆ (ತಾಳ್ಕಾಶಾ. ೫-೦೬). ೩. ಕೆಚ್ಚು; ಬಲ; ಗಟ್ಟಿತನ : 'ಪುರಿಗಣೆ', 'ಪುರಿಯೇಱು' ಪರಾ. ೪. ಪ್ರೋತ್ಸಾಹ ; ಮೆಚ್ಚಿಕೆಯು ಕೊಂಡಾಟ : 'ಪುರಿಯಿಡು', 'ಪುರೆ'₁ ಪರಾ. **ಹುರಿ₂** : ೧. ಹರಿತಂದು ಬಂಡಿಯ ಶಿರದ ಹಲಗೆಯ ನಡರಿದನು ಬಲುಹುರಿಯ ಹಗ್ಗವ ಹಿಡಿದು ಜಡಿದನು ಪೂಡಿದೆತ್ತುಗಳ (ಕುಮಾವ್ಯಾಆ. ೦೦-೨೭); ಹಗ್ಗ ಸುಟ್ಟರೆ ಹುರಿ ಹೋದೀತೇ? (ಗಾದೆ). ೨. "ಹುರಿ –ನಿರ್ದ್ರವಕರಣೇ, ರಜ್ಜುಭ್ರಮಣಕ್ರಿಯಾಯಾಂ" (ಕವಿಮಾ. ವ); ಕಾಳರಕ್ಕಸಿಯ ಮಗುವು ಚಂದ್ರ ಸೂರ್ಯರ ಜೂಟಿಳದ ಹುರಿಯೊಳಗೆ ತಿರುಗಿತ್ತು (ಅರವ. ೦೫-೬೨); ಚಳಹಯಂಗಳು ಹುರಿಯ ವಾಘೆಯನಳವಡಿಸೆ ಬಲನೆಡಕ ವಾಜಿಯ ಸುಳಿಸಿ ಸಾರಥಿತನವ ತೋಱಿದನೆಂದು ಕಲಿ ಶಲ್ಯ (ಕುಮಾವ್ಯಾಕ. ೮-೨೩); ತೆಗೆದು ಡೊಂಬನು ಹುರಿಯ ಸುಂಬನು ಬಿಗಿದು ಬಟ್ಟಲನೇರಿಸಿ . . . ನೆಗೆದು ಕುಣಿದನು ಧಿಮಿಧಿಮಿ (ಕುಪತ್ತಿ. ೩೬-೮). 'ಬೆನ್ನುಹುರಿ' ಪರಾ. ೩. ಹೂಣಿಗರು ಹುರಿ ಬಲಿದು ಹಾಣಾಹಾಣಿಯಲಿ

ಹೊಯ್ದಾಡಿದರು (ಕುಮ್ಮಾ. ೧೬. ೮-೦೫); ಹೇವದ ಹುರಿ ಬಲಿದುದೀತಂಗೆ ಹರಿಬದ ಸೂಳೆಬಂಟಿಕೆಯು ಧುರಕೆ ನಿಂದವು (ಕೊರಡಾ. ೯-೨-೨೫). ೫. ಹೊಸೆದು ಮಾಡಿದ ನಾರು, ಸೆಣಬು, ಕಾತಿ ಮೊದಲಾದುವುಗಳ ದಾರ : ಗುಂಡನು ಅದಕ್ಕೆ ಒಂದು ಹುರಿ ಕಟ್ಟಿ ಚೀಲವನ್ನು ಎಳೆಯುತ್ತ ಮನೆಗೆ ಹೋದನು (ಕಕಪು. ೩ ೯೫); ಹೂ ಮಾರಿದ ಊರಲ್ಲಿ ಹುರಿ ಮಾರಬಾರದು (ಗಾದೆ). ೬. (ಮೋಸದ) ಕಟ್ಟು; ಪಾಶ; ಬಲೆ: ಸಿಮ್ಮರಸುಗಳು ಭೀಮಂಗೆ ಮಾಡಿದ ಹುರಿಯನಾ ಹರಿ ಹಜಿದ ಪರಿಯನು ಮತ್ತೆ ಕೇಳು (ಸಂಕಶ. ೦೬ ೩೯). ೭. (ಹಗ್ಗದ ಎಳೆಗಳಂತೆ ಒತ್ತಾಗಿ) ಸೇರಿದುದು ; ಹೆಣೆದುಕೊಂಡುದು : ಮೊಜೆದೆದ್ದು ಸಕಲರಾಣಾವ ಯೊಂದು ಹುರಿಯಾಗಿ[ಪಾಠಾಂ.ಗೂಡಿ] ಪುರವರದೊಳೆತ್ತಿ ಹದಿಕೆಯನು ತದ್ವಿತ್ತದಿಂ ನರರೂಪನೊಂದನನುಗೆಯ್ದು ಮಣಿದೊಡವಿಟ್ಟು ಬಳಿಕೊಂದು ರಥದ ಮೇಲೆ ಇರಿಸಿ (ಸಮ್ಮಕೌ. ೨ ೩೯); ನಿನ್ನಯ ಮನೋವಾಕ್ಕಾಯವೊಂದು ಹುರಿಯಾಯ್ತು (೧೮ಗಕ್ಕೆ. ೫-೦೦); ಮದಿವಿ ಆಗದಿದ್ರು ಇಬ್ಬರೂ ಕೂಡಿ ಬೆಂಕೀ ವಳಗ ಹಾರಿಕೊಳ್ಳೋಣ ಅಂತ ಹೊಂಟಿದ್ದೂವು ಅವೆರಡೂ. ಆಟು ಒಂದೇ ಹುರಿ ಜೀವನ (ಸಕಡಾ. I, ೩೨೨). ೮. ಬಿಗಿವು; ಬಿಗುವು; ಅರ್ತ ಕದಂಪು ಒತ್ತಿದ ಕಾಲುಂ ಹುರಿಯಟಿದಬಿಮಿಳಿಯಸವ [ಯಸಕದ] ಸೆರೆಯುಂ (ಕಸುದ. ೨೪೦ ಕ್ರ ಹೋ); ಎಸೆವ ದಾಡೆಯು ಹುರಿಯ ಹುಬ್ಬುಗಳ ಇಡಿದ ಹೊಗರಿನ ಜವ್ವನದ . . . ರಕ್ಕಸರಾಯನೆಸೆದಿರ್ದ (ಕೊರಡಾ. ೩-೬ ೩). ೯. ಬಲವುಳ್ಳುದು : ಸತ್ತ್ವಶಾಲಿಯಾದುದು ; ದೃಢವಾದುದು : ಸ್ನಾಯುಗಳು ಹುರಿಯಾಗಿ, ಶರೀರವು ಅಂದವಾಗಿಯೂ, ಬಲಾಢ್ಯವಾಗಿಯೂ ಕಾಣುವುದು (ಕಕ್ಷಪ್ರ. ೩೫). 'ಹುರಿಕಟ್ಟು' ಪರಾ. ೧೦. ಉತ್ಸಾಹ ; ಹುರುಪು : 'ಹುರಿಗಟ್ಟು' ಪರಾ.

ಹುರಿ ಮಾಡು=ಹೊಸೆ ; ನುಲಿ ; ತೀಡು : ಕಮ್ಮಾಶಿಗಳ ಹುರಿ ಮಾಡಿ (ಶಾಗಂಂ. ೩೦-೦೯); ದೇಸಾಯಿಗೂ ಅಷ್ಟು ಗೊತ್ತಾಗಲಿ ಎಂದು ಮಿಸಾಸಿಯನ್ನು ಹುರಿ ಮಾಡಿಕೊಂಡನು (ಗಂಡುಗಡು. ೦೯೬). ಹುರಿಯಾಗು =ಉತ್ಸಾಹಗೊಳ್ಳು ; ಹುರುಪುಗೊಳ್ಳು : ವಿಶ್ರಾಂತಿ ಪಡೆದು ಹುರಿಯಾಗುವಷ್ಟರಲ್ಲಿ ಜೂಸತೀಗಳು ಬಂದಿತ್ತು (ಶ್ರೀರಂಗ. ೧೬೦); ಬಿಸಿಬಿಸಿ ಟೀ ಕುಡಿದ ನಂತರ ಅವರ ರಕ್ತ ಕಾವೇರಿ ಮೈ ಹುರಿಯಾಯಿತು (ಪುಸರು. ೫೬೦); ಪ್ರತಿಭಾ ಹುರಿಯಾದಳು (ಮಾರಿ. ೦೯).

[ದೇ.॥ ತಮಿ. ಮಲ. ತುಳು. ತೆಲು. ಪುರಿ, ಒರಿ]

**ಪುರಿ₄** (ನಾ). ಪುರ ; ಪಟ್ಟಣ; ನಗರ : "ಪತ್ತನಂ . . . ಪುರಂ, ಪುರೀ—ಈ ೧೧ ಪಟ್ಟಣಂ" (ಹಲಾಯು. ೯೬-೨೬೦) ; ಗುರುಕುಲಾದ್ವರ ಪುರಿಗಳಿಂ ಘನಕವೀಶರ ರಾಜಧಾನಿಗಳಿಂ . . . ದೇಶಂ ಸವಗ್ರಹಾತ್ಮಕವೆನಿಸಿತು (ಶಾಪಕಂ. ೨-೩). [ಸಂ.]

**ಪುರಿ₅** 'ಪೂರಿ' ನೋ.

**ಪುರಿಕರನಗರ** 'ಪುಲಿಕರನಗರ' ನೋ.

**ಪುರಿಗಡಲೆ**, ಹುರಿಗಡಲೆ (ನಾ). ನೀರಿನಲ್ಲಿ ನೆನೆಯಿಟ್ಟು, ಕಾದ ಮರಳಿನಲ್ಲಿ ಅರಳುವಂತೆ ಹುರಿದ ಕಡಲೆ ; ಪುಟಾಣಿ : ಭೀಮಕೋಪಶಿಖಿ ಮುಟ್ಟಿ ಸರೋವರದ ಮಳಲ್ ಪುರಿಗಡಲೆಗೆ ಪುರಿದ ಮಳಲ್ಗಾಯ್ದು ತೆಜದೆ ಕಾಯ್ದುತ್ತಿತ್ತು (ಗದಾಯು. ೬-೦೯). ಹುರಿಗಡಲೆ : ಹುರಿಗಡಲೆ ಬಂಚಿಕಾಸಂ ಕಾಯ್ದಾಜದೋಡಿಸ ಜೋಳದೊಳ್ಕರಬಲರುಮಂತಾಸಂ . . . ಪೊಯ್ಚ್ ಬರ್ಬರ್ಬರ್ಬನೆ ನಿಬ್ಬರಂ ಬಿರಿದೊಳಜುಗುಂ (ಶಾಂತಿಪು. ೬-೯೨) ; ಹಂಚಿನ ಹುರಿಗಡಲೆಪೊಯೊಡೆದು ಪಾಜಿದುವು ಬೆಟ್ಟಂಗಳ್ (ಪ್ರಶ. ೦೬-೬೨); ಬದಿಯಲ್ಲಿಯೇ ಮಂಡಕ್ಕಿ ಹುರಿಗಡಲೆಯ ರಾಶಿಗಳು ಇದ್ದವು (ಕಕಪು. ೩-೨೫). [ಪುರಿ₁+ಕಡಲೆ]

**ಪುರಿಗಡುಬು**, ಹುರಿಗಡುಬು (ನಾ). ತುಪ್ಪ ಅಥವಾ ಎಣ್ಣೆಯಲ್ಲಿ ಕರಿದ ಕಡುಬು : ಪುರಿಗಡುಬು ತಜಗು ಚಕ್ಕುಲಿ ಕರಂಜಿಗಾಯುತಿರಸಂ ಚಿಗುಳಿ ಲಡ್ಡುಗೆ . . . ನೀಂ ಬಯಸೆ ಪೋಗಿ ತಂದಪೆನೀಗಳ್ (ಶೃಶಕ. ೯-೬೮); ಸಕ್ಕರೆ, ಜೇನು, ಬಾಳೆಹಣ್ಣು, ಪುರಿಗಡುಬು . . . ಸೀಕರಣೆ —ಏನು ಬೇಕು ಹೇಳು ತಂದೆ (ಪಕ. ೨೨). ಹುರಿಗಡುಬು : ಹಬ್ಬಕ್ಕೆ ಹುರಿಗಡುಬು ಮಾಡಬೇಕು (ರೂಢಿ). 'ಕರಿಗಡುಬು' ಪರಾ.

[ಪುರಿ₁+ಕಡುಬು (< ಕಡುಂಬು)]

**ಪುರಿಗಣೆ** (ನಾ). ಅತಿಶಯವಾದ ಶಕ್ತಿಯಿಂದ ಕೂಡಿದ ಬಾಣ ; ವಿಶೇಷ ಶಕ್ತಿಯಿಂದ ಕೂಡಿದ ಬಾಣ : ಪುರಿಗಣೆಯು ದೊಣೆಗೆ ಕಯ್ಯಂ ನೀಡದೆ ರೌದ್ರಶರವ ದೊಣೆಗೆ ಕಯ್ಯಂ ನೀಡಿದಾಗಳ್ (ಶಂಕಶಾ. ೦೨-೦೯೦ ಪ); ಪುರಿಗಣೆಯುಪ್ಪ ಕಾರಣದಿನಂತದು ತಪ್ಪಿದೆನೆಂದು ನೊಂದು ಪಲ್ಮೊರೆದಹಿರೂಪದಿಂ ಮಗುಟ್ದು ಬಂದು (ಶಂಕಶಾ. ೦೨-೨೦೩); ಕೊಂತಿ ಬೇಡೆ ಬೆಚ್ಚದೆ ಕೊಟ್ಟಿಯ್ ಪು[ಪಾಠಾಂ. ಹು]ರಿಗಣೆಯುಂ (ಗದಾಯು. ೫-೨೬); "ಪುರಿಗಣೆಯುಪ್ಪ=ದಿವ್ಯಾಸ್ತ್ರವಾಗಿರುವ (?)" (ಶಂಕಶಂ. ೫೦೨); "ಪುರಿಗಣೆ—ಸುಡುವ ಬಾಣ (?), ಒಂದು ಬಗೆಯ ದಿವ್ಯಾಸ್ತ್ರ" (ಗದಾಶಂ. ಟಿಪ್ಪಣಿ. ೦೯೬).

[ಪುರ್₃ + ಕಣೆ₁]

**ಪುರಿಗೆಯ್**, ಹುರಿಗೈ (ಕ್ರಿ). ೧. ಹೊಸೆ ; ತಿರುವು ; ಹುರಿಮಾಡು : ಮಿಸೆಗಳಂ ಪುರಿಗೆಯ್ದು ಕಣ್ಗಳಿಂದೆ ಭುಗಿಲಿಡುತ್ತ, ಸೂಸಿ ಕಿಡಿಗಳ್ . . . ಅಭಿಮುಖರಾಗಿ ಸಿಂದರತಿಮಮುಷ್ಕರದಿಂದೆ ತುರುಷ್ಕರಲ್ಲದಾರ್ (ಶಾವ. ೨-೦೦೬). ಹುರಿಗೈ : ೧. ಅವನ . . . ಚಾಟಿಯಂತೆ ಹುರಿಗೈದ ಕುಡಿಮಿಸೆಯು ತೇಜಃಪುಂಜಮುಖದ ಅಧಿಕಾರಿಯೊಬ್ಬನನ್ನು ನೋಡಿದನು (ಪುಸರು. ೩೦೨). ೨. ಉತ್ಸಾಹಗೊಳಿಸು ; ಹುರಿದುಂಬಿಸು : ಓಡುವ ಸುರಾಳಿಯುಂ ಕೂಡಿ ಹುರಿಗೈದನಂದು (ಶಕಪು. ೩೦-೨೪).

[ಪುರಿ₃ + ಕೆಯ್₁]

**ಪುರಿಗೇಟಿ³** 'ಪುಲಿಗೇಟಿ' ನೋ.

**ಪುರಿಗೊಳ್**, ಹುರಿಗೊಳ್, ಹುರಿಗೊಳ್ಳು (ಕ್ರಿ). ೧. (ಹುರಿಯಂತೆ ಹೊಸೆದು) ಕೂಡಿಸು ; ಹೊಂದಿಸು ; ಸೇರಿಸು : ಬಸವನು ಪಿರಿದು ಭಯಮುಮನತಿಸುಭಕ್ತಿಯುಮಂ ಚಿತ್ತದೊಳು ಪುರಿಗೊಂಡು . . . ನಮಿಸಿ (ಬಸಪು. ೯-೩೬). ೨. ಕೂಡಿಕೊಳ್ಳು ; ಹೊಂದಿಕೊಳ್ಳು; ಸಮನ್ವಯವಾಗು : ಕೊರಲ ನುಣ್ಣನಿ ಬೀಣೆಯಿಂಚರಂ ಪುರಿಗೊಳೆ, ಮರ್ದಳೆಯ ತಾಳದ ಲಯಂ ಜತಿಗೂಡೆ (ರಾಮಾಶ್ವ. ೨೩-೯). ಹುರಿಗೊಳ್: ೨. ಹೊರಯಿಲ್ಲದೆ ಮರುತೇಂದ್ರಿಯ ಸಂಶಯ ಕರಣಂಗಳು ತಮ್ಮೊಳಗೆ ಪರಃಪುರ ಹುರಿಗೊಂಡೇಕತ್ವದ ಸಮರಸದಿಂದಿಹವಶ್ರಾಂತದೊಳು (ಯೋಗಾಂಪ. ೨-೦೬). ೩. ಉತ್ಸಾಹಗೊಳ್ಳು; ಹುರುಪನ್ನು ಪಡೆ : ಸದ್ವೀರರನೆಯ್ದೆ ಕೊಂದೆಸೆವ ಮಿಸೆಗಳಿಂ ಹುರಿಗೊಂಡ ಗಂಡಪೆಂಡಾರವ ನಾಳ್ದ ಸಿಂವಕುಳವುಂಡನನೊಳ್ಪಡಿಯುಪ್ಪ ಗಂಡರಾರ್ (ಎಇ. XX. ೦೬-೨೪; 1167); ವಿಘಾತಿಯುಲಿಲಿದು ಹುರಿಗೊಂಡೊದಗಿ ಹಾಹಾಹಾಣೆಯಲಿ ಹೊಯ್ದಾಡಿತುಭಯಬಲ (ಕುಮ್ಮಾರ್‍ರ್ಬಿ. ೨-೨೫). ೪. ಬಲವಾಗು ; ಶಕ್ತಿಗೂಡು : ಹುರಿಗೊಂಡುದಾತನ ಸತ್ವವಾತನ ದಂಡಿಯಲಿ ಬಹರಾರು (ಕುಮ್ಮಾಗ. ೪-೩). ಹುರಿಗೊಳ್ಳು : ೨. ಜ್ಞಾನದೇವನ ಮನೆತನದಲ್ಲಿ ವಿಠ್ಠಲಭಕ್ತಿಯೂ ನಾಥದೀಕ್ಷೆಯೂ ಮೊದಲೇ ಹುರಿಗೊಂಡು ಬಂದಿದ್ದವು (ಮಹಾಹಿ. ೦೩). ೩. ಅವರೆಲ್ಲರೂ ಮತ್ತಷ್ಟು ಹುರಿಗೊಂಡರು (ಕೃಮುಹ. ೬೫).

[ಪುರಿ₃ + ಕೊಳ್₁]

**ಪುರಿಗೊಳಿಸು**, ಹುರಿಕೊಳಿಸು, ಹುರಿಗೊಳಿಸು (ಕ್ರಿ). ೧. ಗಟ್ಟಿಗೊಳಿಸು; ದೃಢಗೊಳಿಸು ; ಬಲಪಡಿಸು : ಭಿತ್ತಿಯಿಲ್ಲದೆ ಬರೆವಂತೆ ಚಿತ್ರವ ಬಗೆವೆತ್ತು ಪುಸಿಯ ಪುರಿಗೊಳಿಸಿ ಬಿತ್ತರಿಸಿದಳು ರಾಯನ ಮುಂದಾಕೆಯ ಪೆತ್ತಜಾಣಾವನೆಂದಜಿಯೆ (ಕುಶಾಂ. ೩೯-೬೬). ಹುರಿಕೊಳಿಸು : ೨.

ಹುರಿದುಂಬು ; ಉತ್ಸಾಹಿಸು : ಮತಳಿಯೊಂಭತ್ತನೆಯ ಮನು ತಾ ಹುರಿಕೊಳಿಸಿ ವರಯಜನ ಮೊದಲಾದುರುತರದ ಷಟ್ಕರ್ಮವೆಲ್ಲವ ಧರಣಿ ಸುರರಿಂದ ರೂಢಿ ಮಾಡಿಸ (ಸಂಶಕ. ೪-೩೩) ; ರಿಪುಂದಮರು ಹತ್ತಿದರು ಹರಪರ್ವತವ ಹುರಿಕೊಳಿಸಿ [ಪಾಠಾಂ. ಹುರಿಕಟಿಸಿ, ಹುರಿಗೊಳಿಸಿ, ಸರಕಟಿಸಿ] (ಕುಂರಾ. ೪-೯-೨೭). **ಹುರಿಗೊಳಿಸು :** ೧. ಪರಿಪಿಡಿಗಳಿಂ ತನ್ನ ನೂಲಿಂ ಕೆರೆಯುವೊಲು ದೋಲ್ಕಟ್ಟಿನಂದದಿ ಪರಿವೃತ್ತೋನ್ನತವೃಕ್ಷಗುಲ್ಮಲತಾ ತೃಣಂಗಳಲಿ ಹುರಿಗೊಳಿಸಿ ಮೇಲಕೆ ಕಪೋತವನಿರೆ ರಚಿಸಿ ಕರುವಿಟ್ಟು . . . ಶಿಖರವಂ ನಿಲಿಸಿ (ಬಸಪು. ೧೮-೩೯); ಲಲಾಟೇಕ್ಷಣಾಗ್ನಿಯಂ ಹುರಿ ಗೊಳಿಸಿ ಪಾಶುಪತಬಾಣವಂ ಬಿಡೆ . . . ಉರಿಹಿದುದು ತತ್ಪುರಂಗಳ ಪರಿಕರಂಗಳು (ಬಸಪು. ೪೪-೪೯). ೨. ಹೊಸೆದು ಬಿಗಿಮಾಡು ; ಹುರಿ ಹಾಕು : ಕಣ್ಣಿದ್ದವರು ಮುತ್ತು ಹುಡುಕಿ, ಹುಸುವಿದ್ದವರು ಹೊಸ ಎಳೆಯ ಹುರಿಗೊಳಿಸಿ, ನೋಡಿ ಗಾತ್ರ (ನವಿಶು. ೨೩-೦೨). ೪. ಹೊಂದಿಸು; ಅಳವಡಿಸು : ಸಕಳವಂ ಹುರಿಗೊಳಿಸಿ ಲೀಲಾಸುಕರ ದಿಚ್ಛಾಮಾತ್ರದಿಂದಂ ವಿಕೃತಿಗಳನೆಯ್ದಿಸುವ ಮಹಿತಮಹಾಮಹಿಮಾನಿತ (ಬಸಪು. ೫೦-೪೫) ; ಅಲ್ಲಮಪ್ರಭು ಲಿಂಗಸಂಗವನು ಹೃದಯದೊಳು ಹುರಿ ಗೊಳಿಸುವೊಡೆ ಬಳಿದಡೆ ಮಹಿಮೆಯನೇನ ಹೇಳುವೆ (ಪ್ರಭುಲಿ. ೩-೨೦). ೫. ಹುರಿದುಂಬಿಸು ; ಉತ್ಸಾಹಗೊಳಿಸು ; ಹುರುಪು ಕೊಡು : ಸಾತ್ಯಕಿಯು ಅವರನ್ನು ಹುರಿಗೊಳಿಸಲು ದ್ರುಪಿದಾಂಧ್ರಸಿಮಾಸಿಗಳಾದ ಬಲಗಳು ಒಮ್ಮಡಿಯಾಗಿ ಆ ಕರ್ಣನನ್ನು ಸುತ್ತ ಮುತ್ತಿಕೊಂಡಿರಲು (ಕೃವಾಳ. ೬೦); ಅರ್ಜುನನು ಶಿಖಂಡಿಯನ್ನು ಹುರಿಗೊಳಿಸುತ್ತ . . . ಎಂದನು (ವಕಶಾ. ೨೬೫) ; ರಣರಂಗದಲ್ಲಿ ವೀರಾಗ್ರೇಸರರನ್ನುದ್ರೇಕಿಸಿ ಹುರಿಗೊಳಿಸುವುದು ಸಂಗೀತವೇ ಅಲ್ಲವೇ? (ಬಗವಾ. ೬೨).

[ಪುರಿಗೊಳ್ + -ಇಸು$_3$]

**ಪುರಿನೇಣ್,** ಹುರಿನೇಣು (ನಾ). ಹೊಸೆದ ಹಗ್ಗ; ಹುರಿ ಮಾಡಿದ ಹಗ್ಗ : ನೆನೆಯ ಮತ್ತವನ ತಾಯ್‌-ಪೆಂಡತಿಯನ್‌!_ಇರ್ಮೊಜೆಯ ಪಸರನ್‌! – ಪುರಿನೇಣನುಸಿರ್ದಿರಿಚಿ ಪೊಲೆಗೆಯ್ದು ಬಾಟನೀಡಾಡಿದಳ್ (ಅಂಶಿಗೂ. ೩-೯೫). **ಹುರಿನೇಣು :** ತರಿಸಿ ಹುರಿನೇಣುಗಳನೀತನ ಕರಮೆರಡ ನೊಡೆಬಿಗಿದಡವದಿರು ಕೆರಳಿ ಮಾಡುವುದಾವುದು (ಕುವ್ಯಾಉ. ೯-೪೦).

[ಪುರಿ$_3$ + ನೇಣ್$_1$]

**ಪುರಿಯಿಡು** (ಕ್ರಿ). ಹುರಿದುಂಬಿಸು ; ಪ್ರೋತ್ಸಾಹಿಸು : (ಮೆಚ್ಚಿ) ಕೊಂಡಾಡು : ಭೃಂಗೀಶಮುಖ್ಯರಂ ಪುರಿಯಿಟ್ಟು ಸತ್ಕೃಪಾಪಾಂಗದಿಂ ನಿಜಕುಮಾರನ ಗುಹನನೀಕ್ಷಿಸುತ್ತಂಗಜಾರಾತಿ ಬೊಮ್ಮನ ನೋಡಲೆದ್ದು ಕರಕಮಲವಂ ಮುಗಿದು ನಿಂದ (ಶಾಪಶಂ. ೧ ೩೭); ನಾಟಕವ ಹರುಷದಿಂ ನೋಡಿ ಪುರಿಯಿಟ್ಟಂಗಚಿತ್ತವಂ ಕರುಣಿಸಿದನಂದಿನೊಡ್ಡೋಲಗದೊಳು ಶೂಲಿ (ಸಂದಶು. ೫-೪೫). 'ಪುರೆಯಿಡು' ಪರಾ. [ಪುರಿ$_3$ + ಇಡು$_1$]

**ಪುರಿಯೇಱು,** ಹುರಿಯೇರು, ಹುರಿಯೇಱು (ಕ್ರಿ). ೧. ಬಲವಾಗು ; ದೃಢವಾಗು ; ಗಟ್ಟಿಗೊಳ್ಳು : ನೆವವಿಲ್ಲದಿರ್ಪ ಹರಿಕೃಪೆ ಪವಣಿಲ್ಲದೆ ಪಾಯ್ದು ಕವಿಯೆ ಪರಿಹರಿಸುವರಾರ್ ಭುವನದ ಪುಣ್ಯದ ಪುಂಜಂ ಸವನಿಸಿ ಪುರಿಯೇಱೆ ಬರ್ಚಿ ಸಡಿಲಿಸುವರದಾರ್ (ಜಕಖ. ೩-೧೦೫). **ಹುರಿಯೇರು :** ೧. ಅಂತಃಕಲಹವು ಹುರಿಯೇರುತ್ತಿತ್ತು (ನಾಶೊೀಜ. ೩೨೮). ೨. ಹುರಿ ದುಂಬು ; ಉತ್ಸಾಹಗೊಳ್ಳು ; ಉಬ್ಬು : ಬೊಗರಿ ಚಂಡಾಟ ಗುರಿ ಸುಗ್ಗಿಯಾಗಿಲು ಚಿಣಿಫಣೀ ಚದುರಂಗ ಪಗಡೆಗಳ ವಿರಾಗೊಳಿಸಿ ಹುರಿಯೇರು ತಾಡುತ್ತೆ ಗೆಲ್ದವಂ ಮುಂದಿರಕ್ಕೈತಪ್ಪನು (ಶರಶು. ೪-೯). **ಹುರಿಯೇಱು :** ೧. ಕೆರಳಿದರೆ ಕಾಳಹುದು ಭೀಮನ ದುರುಳತನವೀ ಕೌರವೇಂದ್ರನ ಹುರುಡು [ಪಾಠಾಂ. ಳು] ಹುರಿಯೇಱುವುದು ಮತಪಲ್ಲಿಂದನಂಧನೃಪ (ಕುವ್ಯಾಭೀ. ೦೬-೨೨). ೨. ತವತವಗೆ ಧುರತೋರಹತ್ತರು ತವಕಿಸುತ ಹುರಿಯೇಱಿವರು ಕೌರವರು ಕರ್ಣನ ಹರಿಬದಾಹವವೆಮಗೆ ತಮಗೆನುತ (ಕುವ್ಯಾಕ. ೦೯-೪೩); ಹರಿಕರಾಬ್ಜಸ್ಪರುಶಸುಖದಲಿ ಕರಗಿ ಮನ ಹುಂಕರಿಸಿ ಪುಳಕದ ಹರಹಿನಲಿ ಹುರಿಯೇಱಿ ಹೊಂಪುಳಿಯೋಗಿ ಬೆಱಗಾಗಿ . . . ಭಕ್ತಾಭರಣನಿದ್ದನು ಪರಮಭಕ್ತಿಯ ಪಾರವಶ್ಯದಲಿ (ಶಿಭಾಗ. ೬-೮-೪೪).

[ಪುರಿ$_3$+ಏಱು$_1$ (< ಏಱ್$_1$) ]

**ಪುರಿಯೋಡು,** ಹುರಿಯೋಡು (ನಾ). ಹುರಿಯುವುದಕ್ಕಾಗಿ ಬಳಸುವ ಲೋಹದ ಅಥವಾ ಮಣ್ಣಿನ ಬಾಣಲೆ : "ಸಿರಿವಂತಿಗೆಯೆಂದೆನಲ್ಕೆ ಪುರಿಯೋಡಕ್ಕುಂ" (ಕಶಾರ. ೩೨) : ಬಱುಗೊಡಸೆಣ್ಣೆ ಮೆಟ್ಟಿ ನಾರಿ ನೇಣ್ ಬಡಿಕೋಲ್ ಬಲೆಯಿರ್ದಿಲಿಲ್ವು ಸಾಮೆಱೆ ಪುರಿಯೋಡು ಸುಟ್ಟಡಗು . . . ಇದಿರೊಳ್ ಬರೆ ಕಾಣಲುಮಾಗದು (ಲೋಕೋಪ. ೧೨ ೦೦); ದೇವಂ ದಿಟದಿ ನಿರುತ್ತಮಿವನೆಂದು ಬಣ್ಣಿಸುತಿರೆ ಗುಣವಂ ಬಿಟ್ಟು ಕೆಟ್ಟು ಪುರಿ ಯೋಡಾದ್ಯೆ (ರಮೂಮ. ೬ ೧೨೭). **ಹುರಿಯೋಡು :** "ಸಿರಿವಂತಿಗೆಯೆಂದೆ [ನ]ಲ್ಕೆ ಹುರಿಯೋಡಕ್ಕು" (ರನ್ನಕಂ. ೨); ಮುಸಿಯೆಂಬುದು ಹುರಿ ಯೋಡಿಂಗೆ ಪಣೆಕಟ್ಟೆಂಬುದು ಮೆಟವಲೆಟ್ಟಿಂಗೆ (ಅನುಭ ೨-೨೫ ವ); ಹುರಿ ಯೋಡಿನಂತಾದುದು ನೆಲನಾ ಗಿರಿವರನೊಳೇಳುವ ಕಿಚ್ಚಿನಿಂದ (ನೇಮಿಸ. ೧೧-೪೦).

[ಪುರಿ$_1$ + ಓಡು$_2$]

**ಪುರಿವರಲ್** (ನಾ). ಕಾದ ಕಲ್ಲು ; ಸುಡುವ ಕಲ್ಲು : ನಾನಲುಮಂ ಬಾನಲುಮಂ ಸಡಿಂಬಮುಸಿಡಿಂಬಮುಂ ಪರಲುಮಂ ಪುರಿವರಲುಮಂ ಕಿಸು ಗಾಡುಮಂ ನೆಗ್ಗಿಲ್ಗಡುಮಂ . . . ಕಳಿದು ಪೋಗಿ (ಲೀಲಾವ. ೬ ೦೬ ವ).

[ಪುರಿ$_1$ + ಪರಲ್]

**ಪುರಿವಳಲ್,** ಹುರಿಮರಳು, ಹುರಿಮಳಲು (ನಾ). ಚೆನ್ನಾಗಿ ಕಾದ ಮರಳು ; ಸುಡುವ ಮರಳು : ಸಱೆವಳೆಯಿಂ ಬಿಸದುರಿಯಿಂ ಬಿಡದು ಗುಳ್ವುರಗಗಳಿಂ ಸೂಸುವ ಪುರಿವಳಲಿಂ ಮಸೆದಸಿಯಿಂ . . . ಆ ಬಿಜ್ಜೋದರಿ ಮಸಗಿ ಕರಂ ದಾರುಣತರಮಪ್ಪುಪಸರ್ಗಂ ಮಾಡಿದಳು (ಜಿನುಶಾ. ೦೬-೦೪). **ಹುರಿಮರಳು:** ಕರಿಯ ಮದ್ದಿನ ಪೊಟ್ಟಣ ಕಟ್ಟಿದಂಬಿನ ಹೊಱೆ ಹುರಿಮರಳಿನ ರಾಶಿ ಅರೆದ ನಾಸವೆಗೊಡ ಕಾದಡವಿಯ ಬಹು ಹರವಿಗಳೊಪ್ಪಿದುವಾಗ (ಕಂಪವಿ. ೦೧-೦೯೩) **ಹುರಿಮಳಲು :** ಕಾಸು ವೆಣ್ಣೆ ಹುರಿಮಳಲು ಕವಣೆದಸಿ ಸಾಸಿರಮುಖವಾಗಿಹವು (ಅಂಶಶ. ೩-೦೫).

[ಪುರಿ$_1$+ ಮಳಲ್$_2$ (< ಮಣಲ್)]

**ಪುರಿವಿಳಂಗಾಯಿ** (ನಾ). ೧. ತುಪ್ಪದಲ್ಲಿ ಕರಿದು ತಯಾರಿಸುವ ಒಂದು ಬಗೆಯ ಸಿಹಿ ಭಕ್ಷ್ಯ : ಹೆಸರುಬೇಳೆಯ ಹುರಿದು ಬೇಯಿಸಿಕೊಂಬುದು, ದೊಡ್ಡ ಸಜ್ಜಿಗೆಯ ಬೇಯಿಸಿಕೊಂಬುದು, ತೆಂಗಿನ ಕಾಯ ಹೆಸರ ತೋರ ದಲಿ ಕೊಯಿದು ಹಾಕಿ ಸಕ್ಕರೆಯ ಹಾಕಿ, ಮೆಣಸು ಏಲಕ್ಕಿ ಕರ್ಪೂರವ ತಳಿದು ಕಲಸುವುದು, ಅಡಕೆಯ ತೋರ ಉಂಡೆಯ ಮಾಡಿ, ಅಕ್ಕಿಯ ಹಿಟ್ಟ ಸಣ್ಣವಾಗಿ ಅರೆದು, ಗಟ್ಟಿಯಾಗಿ ಕಲಸಿ, ಈ ಉಂಡೆಗಳ ಆ ಹಿಟ್ಟಿ ನೊಳಗೆ ಅದ್ದಿ, ಕಾದ ತುಪ್ಪದಲ್ಲಿ ಹಾಕಿ ತೆಗೆವುದು. ಇದು ಪುರಿವಿಳಂಗಾಯಿ ಯೆನಿಸಿಕೊಂಬುದು (ಭೀಮಸೂ. ೨೪). ೨. ಹೆಸರುಹಿಟ್ಟಿನಿಂದ ತಯಾ ರಿಸುವ ಒಂದು ಬಗೆಯ ಸಿಹಿಭಕ್ಷ್ಯ,-ಉಂಡೆ. 'ಪುಳ್ಳಂಗಾಯಿ ಉಂಡೆ' ಪರಾ. [ದೇ.॥ ತಮಿ. ಪೊರಿವಿಳಙ್ಗಾಯ್, ಪೊರಿವಿಳಾಙ್ಗಾಯ್; ತೆಲು. ಪೊರಿವಿಳಂಗಾಯಲು]

**ಪುರಿಸ** (ನಾ). ಅಮೇಧ್ಯ; ಮಲ : ಮುನಿರಾಯ ಕೇಳೆನ್ನ ತನು ಪೊಲಸು ಪುರಿಸವೇ ವಿನಯದಿ ನೋಡೆಂದುರವ ಬಗೆದು ತೋಱೆ ಘನ ತನಿವಾಲು ಸೂಸೆ (ಪ್ರಭುಶಿ. ೨-೪೦). [< ಸಂ. ಪುರೀಷ]

**ಪುರಿಸಂಡಗೆ,** ಹುರಿಸಂಡಗೆ (ನಾ). ಒಂದು ಬಗೆಯ ಸಂಡಗೆ ; ಎಣ್ಣೆ ಯಲ್ಲಿ ಹುರಿಯುವ ಬತ್ತದ ಅರಳಿನ ಸಂಡಿಗೆ : ತೆಗೆ ತಿಲವನೌಪಾಸನದ ಕೊಳವಿಗಳ . . . ಹಪ್ಪಳವ ಪುರಿ[ಪಾಠಾಂ. ಪಿರಿ]ಸಂಡ[ಪಾಠಾಂ. ಡಿ]

ಗೆಯು ಹೂರಿಗೆಯು (ಕೊರಿಂ. ೩-೬-೭೦). **ಹುರಿಸಂಡಗೆ :** ನೊರೆಸಂಡಗೆಯನು ಹುರಿಸಂಡಗೆಯು ಬಾಳಕವನು ತಪ್ಪದೆಲ್ಲಾ ಸಾಧನವನು ಸಂವರಿಸಿ ತಂದೊಪ್ಪಿಸಿದದೆ (ಸಿದ್ಧರಾ. ೬-೩೨). [ಪುರಿ$_1$ + ಸಂಡಗೆ]

**ಪುರೀತತ್ತು** (ನಾ). ಕರುಳು : "ಅಂತ್ರಂ, ಪುರೀತತ್—ಈ ೨ ಕರುಳ್" (ಹಲಾಯು. ೦೦೯-೦೩). [ಸಂ. ಪುರೀತತ್]

**ಪುರೀಷ** (ನಾ). ೧. ಹೇಲು ; ಮಲ : "ವರ್ಚಃ . . . ಪುರೀಷಂ, ಶಮಲಂ, ಮಲಂ—ಈ ೧೩ ವಿಷ್ಠೆ" (ಹಲಾಯು. ೧೦೩-೦೫) ; ಆರಯೆ ಮೂತ್ರಪುರೀಷಾಗಾರಂ ಸಂಪ್ರಾಪ್ತಸಪ್ತಧಾತುವಿಕಾರಂ ಚಾರುಗುಣವೂರಮತಿವಿಷದಾರು ಶರೀರಂ ದುರಂತದುಃಖಾಧಾರಂ (ಅಜಪು. ೨-೩೦). **೨. ಕೊಳೆ ; ಹೊಲಸು :** ಸಿಂಬುಳು ಕೀವು ಕೆರಂಕಿಸ್ಸಗಂಬು ಮಲಂ ಮೂತ್ರಮಾಪುರೀಷಂ ಜೀವಂ ಬೆಂಬಿಡದೀ ಪಂದೊವಲ ಪಸುಂಬೆಯೊಳೀಯೊಡಲೊಳಾವ ಸುಖಕ್ಕಿರ್ದಪುದೋ (ಅಜಪು. ೬-೫೫) ; ಕೀವಿನ ರುಧಿರ ಪುರೀಷದ ಬಾವಿಯೊಳಾವಾಸವಾಗಿ ನೆಲಸಿಹ ನಾನಾಜೀವಿಗಳ ನೋವ ನೋಡುತ್ತಾ ವಿಭು ಸಾವಂದತಂದೆ ಮಱುಗುತ್ತಿರ್ದಂ (ವಸ್ತುಕಾ. ೩-೦೩೦). [ಸಂ. ]

**ಪುರು** (ಗು). ೧. ಹೇರಳವಾದ ; ವಿಪುಲವಾದ ; ಅಧಿಕವಾದ : ಪುರುಪುಣ್ಯಂ ವಿಮಳೋರುಕೀರ್ತಿ . . . ನಾಕಿಗಂ (ವರ್ಧಮಾ. ೦-೫೦) ; ಪರಮಾರ್ಥಂ ಪುರುಧರ್ಮದಾನಫಲದಿಂ ಸ್ವರ್ಗಾಪವರ್ಗಕ್ಕಮಿಾಶ್ವರನಪ್ಪಂ ವರಪಾತ್ರಸಂತತಿಗೆ ದಾನಂಗೆಯ್ವುದಾನಂದದಿಂ (ಚಾ:ಶೀಕ್ಷ. ೬-೦೦೮). ೨. ಮಹತ್ತಾದ ; ವಿಶಾಲವಾದ : ಪ್ರತ್ಯಹಮೊಪ್ಪುಗುಂ . . . ಆದಿತ್ಯಪುರಂ ಪುರಂದರಪುರಪ್ರತಿಮಂ ಪುರುರತ್ನಗೋಪುರಂ (ಚಂದ್ರಪ್ರ. ೬-೫). (ನಾ). **೩. ಹಿರಿದು ; ದೊಡ್ಡದು :** "ಬೃಹತ್, ಉರು, ಗುರು, ವಿಸ್ತೀರ್ಣ, ಪುರು . . . ವರಿಷ್ಠಂ—ಈ ೧೨ ಹಿರಿದು" (ಹಲಾಯು. ೦೦೬-೦೯) ; "ಬೃಹದುರು ಪುರು ಪೃಥುಳ ಪೃಥು ವಿಶಾಲಮುಮಾ ಗುರು ಮಹದತಿವ್ಯೂಢಮೆನೆ ವಿಸ್ತೀರ್ಣವೆಂದೆನಿಕು" (ಮಂಗರಾ. ೧೨೮-೮). **೪.** ಚಂದ್ರವಂಶದ ಒಬ್ಬ ಪ್ರಸಿದ್ಧನಾದ ಅರಸು ; ಯಯಾತಿಯು ಮಗ ; ಕೌರವ, ಪಾಂಡವರ ವಂಶದ ಮೂಲಪುರುಷ : ಸರಿಯೆ ಪೇಳ್ವನಗಿದು ಭೂಪ ಓಹೋ ಪುರುವಂಶದೀಪ (ಜಾಕುಂತ. ೬೮ ಅಡಿ). 'ಪುರುಕುಲ' ಪರಾ. **೫.** [ಜೈನ] ಮೊದಲನೆಯ ತೀರ್ಥಂಕರನಾದ ವೃಷಭನಾಥ; ಆದಿತೀರ್ಥಂಕರ : ಪುರುಪರಮೇಶ್ವರನಿಳೆಗವತರಿಸಿದಂ (ಆದಿಪು. ೬-೩೭) ; ಪುರುವಂಶದ ಕುರುವಂಶದ ಹರಿವಂಶದ ನಾಥವಂಶದುಗ್ರಾನ್ವಯದುರ್ವರೆಯೊಡೆಯರಾದಿಯಾಗಿರೆ ನರನಾಥಸುತರ್ಕಳಿನಿಬರಾನುಂ ಬಂದರ್ (ಶಾಂತಿಪು. ೩-೩೭) ; ಪುರುವಂಶಾಭರಣಂ ತ್ರಿಪಿಷ್ಟನೃಪನಾ ವಿದ್ಯಾಧರೇಂದ್ರಂಗೆ ಸಾದರದಿಂ ತಾನಿದಿರ್ವಂದು (ಶಾಂತೀಶ್ವ. ೪-೨೦೩). [ಸಂ.]

**-ಪುರುಕ,-ಪುರಕ** (ಪ್ರ). ಭಾವನಾಮವಾಚಕವಾದ ಒಂದು ತದ್ಧಿತ ಪ್ರತ್ಯಯ : 'ಅಂಜುಪುರುಕ', 'ಅಳಂಬುರುಕ' ಪರಾ.—**ಪುರಕ :** 'ಅಳಂಬುರಕ', 'ಆಸೆಬುರಕ' ಪರಾ.

**-ಪುರುಕಿ** (ಪ್ರ). ಭಾವನಾಮವಾಚಿಯಾದ ಒಂದು ತದ್ಧಿತಪ್ರತ್ಯಯ : ಕುಳಿ ಪ್ರತ್ಯಯವು ಯಾವ ಅರ್ಥದಲ್ಲಿ ಬರುತ್ತದೆಯೋ ಅದೇ ಅರ್ಥದಲ್ಲಿ ಪುರುಕಿ ಪ್ರತ್ಯಯ ಬರುತ್ತದೆ (ಹೊಸಗ. ೭೪). 'ಅಂಜುಪುರುಕಿ' ಪರಾ. [-ಪುರುಕ + — ಇ$_2$]

**ಪುರುಕುಲ** (ನಾ). ಪುರುಮಹಾರಾಜನ ವಂಶ : ಎಲೆ ಪುರುಕುಲೋತ್ಪನ್ನನೆ . . . ಇಂಥ ಕಠಿನೋಕ್ತಿಗಳಿಂದ ತಿರಸ್ಕರಿಸುವುದು ನಿನಗೆ ಯುಕ್ತವಲ್ಲವಲ್ಲಾ ? (ಶಾಕುಂತ. ೬೬-೦೩). [ಸಂ.]

**ಪುರುಚಲಿಗಿಡ** (ನಾ). ಒಂದು ಬಗೆಯ ಸಸ್ಯ : ಹೇನುಕುರುವಿನ ಗಿಡ, ಪುರುಚಲಿಗಿಡ, ಪುಲ್ಲಾರೆ (ಮೈಶಿ. ೩೩-೦೦೦೬). [ಪುರುಚಲಿ$_1$+ಗಿಡ (< ಗಿಡು)]

**ಪುರುಚಲು** (ನಾ). ಕೆದರಿದುದು : ಕೂದಲು ಪುರುಚಲು ಪುರುಚಲಾಗಿದೆ (ರೂಢಿ). [ಪುರುಚು ? + — ಅಲು (< — ಅಲ್$_1$)]

**ಪುರುಜ** (ಗು). ಅಧಿಕವಾದ ; ಅನೇಕವಾದ. [ಸಂ.]

**ಪುರುಡಿ$_1$** (ನಾ). ಮತ್ಸರವುಳ್ಳವಳು ; ಅಸೂಯೆಪಡುವವಳು ; ಈರ್ಷ್ಯೆಯುಳ್ಳವಳು : ಅವನ ಸತಿ ಪುರುಡಿ ನೆವದಿಂ ಬವರವುನೆ ಪೊಣರ್ಚಿ ಮಾರಿದತ್ತಾಖ್ಯೆ ಮಹಾಹವಶೀಲೆ ತನ್ನ ಮನೆಯಿಂದವೆ ಪೊಱಮಡಿಸಿದಳ್ ಕನಲ್ದು ಪದ್ಮಾವತಿಯಂ (ಪುಣ್ಯಾಸ್ರ. ೨-೪೩). [ಪುರುಡು$_1$ + — ಇ$_2$]

**ಪುರುಡಿ$_2$ ?** (ನಾ).(?): ಕರ ಚರಣವನು ವಿಸುಕಲವ್ವುದೆ ಗರುಡಿಯೋಜನು ಪು [ಪಾಠಾಂ. ಪ]ರುಡಿಯನು ಮರವಂತೆ ನಿಂದಿರ್ದ (ಸಾಳ್ವಭಾ. ೩೦-೬೨). [ ? ]

**ಪುರುಡಿಗ,** ಹುರುಡಿಗ (ನಾ). ಹೊಟ್ಟೆಕಿಚ್ಚಿನವನು; ಈರ್ಷ್ಯೆಪಡುವವನು ; ಮತ್ಸರಬುದ್ಧಿಯುವನು : ಆಗಮಾರ್ಥಮನೇನೆಂದಱಿಯದರೊಳ್ ಪುರುಡಿಗರೊಳ್ ಬಱುದಲೆಯೆಂದೆಳಸಿ ಕೇಳಲಾಗದು ಪುರುಷಂ (ರಪರ್ಮಾಮೃ. ೬-೨೦೩); ಪಾಱುವ ಪುರುಡಿಗನಂ ಪೂಣ್ದು ಬೇರ್ಕೆಯ್ದು ಲೋಭೋಜ್ವಳನಂ ಱೊಡಾಡಿ ಪೋಗಾಡುವ . . . ಚಾತುರ್ಯದ ಪೊಸಬಗೆಯೆನ್ನೊಳ್ ನಿತಾಂತಂ ನಿಸರ್ಗಂ (ಪ್ರಭು. ೨೪-೨೮). **ಹುರುಡಿಗ :** "ಈರ್ಷ್ಯಾಳುಃ, ಕುಹಕಃ—ಈ ೨ ಹುರುಡಿಗಂ" (ಹಲಾಯು. ೬೩-೨೨೯) ; ಹುರುಡಿಗರನೇಕಾಂತದೊಳಗಾದರಿಸುವರು ಭೇದಕರ ಬುದ್ಧಿಗೆ ತೆಱಹುಗೊಡುವರು . . . ಈ ಧರೆಯರಸುಗಳಿಗಿದು ಸಹಜ (ಕುಮಾ್ವ್ಯಾಸ. ೦-೩೩). [ಪುರುಡು$_1$ + — ಇಗ]

**ಪುರುಡಿಸು,** ಹುರುಡಿಸು (ಕ್ರಿ). ೧. ಸ್ಪರ್ಧಿಸು; ಪೈಪೋಟಿ ನಡೆಸು : ಸ್ಥಿರನೇ ಮೇರುಗಿರೀಂದ್ರದೊಳ್ಪಣಸುವಂ ಗಂಭೀರನೇ ವಾರ್ಧಿಯೊಳ್ ಪುರುಡಿಪ್ಪಂ (ಎಕ. VII, ಶಿಕಮೊ. ೦೦-೨೬ ; 1085 ?) ; ಉದಾರಗುಣದೊಳ್ ಪುರುಡಿಸುವಂ ಕಲ್ಪವೃಕ್ಷದೊಳ್ವದ್ವಣಿಜಂ (ಧರ್ಮಾಮೃ. ೦-೯೦); ಹರಿಚಂದನ ಪಾರಿಜಾತ ಮಂದಾರದ ತರುಚಯದಿಂ ಸಿದ್ಧರಸದ ಸರಸಿಗಳಿಂದಾ ಗಿರಿ ಗೀರ್ವಾಣರ ಪುರದೊಡನದು ಪುರುಡಿಪುದು (ಸುಕುಮಾರ. ೨-೦೯). ೨. ಹೊಟ್ಟೆಕಿಚ್ಚು ಪಡು ; ಮತ್ಸರಿಸು ; ಅಸೂಯೆ ಪಡು : ವಜ್ರದಾಡಂ ಕೇಳ್ದು ಮನದೊಳ್ ಮುಳಿದು ಪುರುಡಿಸಿ . . . ಬಾವಿಯ ಬಾಗಿಲೆಲ್ಲಮಂ ನಿಶ್ಚಿದ್ರಮಾಗಿ ಮುಚ್ಚಿ ಕವಿದಿಕ್ಕಿ ಪೋದಂ (ವಡ್ಡಾರಾ. ೧೩೭-೨೩); ನರನಂದನನಂ ಕಂಡು ವಿಕ್ರಮಕ್ಕಂ ಕ್ರಮಕ್ಕಂ ಪುರುಡಿಸುವ ಸುಯೋಧನನ ಮಕ್ಕಳ್ . . . ಸೂರ್ವರುಮೊಂದಾಗೆ ಬಂದು ತಾಗಿದಾಗಳ್ (ಪಂಪಭಾ. ೦೦-೯೯ ವ); ಸವತಿಗೆ ಸವತಿ ಪುರುಡಿಪಳ್ (ಕವಿತ. ೦೩೦ ಕ್ರಿಯೋ); ಗುಣಕೆ ಪುರುಡಿಪರೊಳರೆ (ರಕಠ. ೦-೬). **ಹುರುಡಿಸು :** ೧. ಕೈಲಾಸವದಕೆ ಹುರುಡಿಸುತಲಿರ್ಪುದು ನೋಡ ಮೇಲೆನಿಪ ಮೇರುಸೆಣಸುತ್ತಿರ್ಪುದಂ ನೋಡ (ತಿರುಕ. ದೀ. ೩-೨೦); ಎಳೆಯ ಮಿಂಚಿಫ ಕುಡಿಯ ಸೂಸುವ ನಳಿನದೃಶೆಯರು ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು ಕೋಮಲಾಂಗಿಯರು . . . ಕುರುರಾಯ ನೆಡವಂಕವಲಿ ಮೋಹಿವರು (ಕುಮಾ್ವ್ಯಾಉ. ೬-೪೪); ಚಕ್ರವರ್ತಿಯ ಸೇವೆಯೆಂದು ಪುಷ್ಪ ಪುಷ್ಪವೂ ಹುರುಡಿಸುತ್ತಿದೆಯೋ ಎಂಬಂತೆ ಪಾರಿಜಾತ, ಜಾಜಿ . . . ಜಲಜಗಳು ತಮ್ಮ ತಮ್ಮ ಸುಗಂಧವನ್ನು ಸೂರೆಗೊಡುತ್ತಿವೆ (ನಡಿಪಾ. II, ೦೯೭೪). ೨. ಒಸೆದು ಕಮಲಿನಿ ನಗಲು ಮಿಗೆ ಹುರುಡಿಸುತ ಪೂರ್ವದಿಶಾನಿತಂಬಿನಿ ನಿಶಿತಕೋಪದ ಕಿಡಿಯನುಗುಳಿದಳೆನಲು ರವಿ ಮೆಱೆದ (ಕುಮಾ್ವ್ಯಾದ್ರೋ. ೨-೦೩). [ಪುರುಡು$_1$ + — ಇಸು$_1$]

**ಪುರುಡು$_1$,** ಹುರುಡು$_1$ (ನಾ). ೧. ಸ್ಪರ್ಧೆ ; ಪೈಪೋಟಿ; ಮೇಲಾಟ : ಪೊಚರನುಂ ಕುಮಾರನಂ ಕಂಡು ಪುರುಡಿಂ ಮುಳಿಸು ಪೆರ್ಚಿ . . .

ಕೊಲ್ವೆನೆಂದು ಕಿಚ್ಚು ಬಾಳ್ವೆರಸು ಬಂದೆಱಗಿ ಇಱಿದು (ವಡ್ಡಾ. ೫೯-೩೬); ಎಸಿತಾನುಂ ತೆಜದೊಳಳಿಪಿನ ಲಲ್ಲಿಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಮಚಳಿತಧೈರ್ಯನ ಮಾನಮುಂ ಚಳಿಯಿಸಲಾಜದೆ (ಶಂಕರಾ. ೭-೧೧೪) ; ನಿನಗಂ ಮದನಂಗಂ ರೂಪಿನ ಪುರುಡುಂಟು (ಅನಂತ. ೯-೩೭). ೨. ಹೊಟ್ಟೆಕಿಚ್ಚು ; ಈರ್ಷ್ಯೆ ; ಮತ್ಸರ: ಆತನ ಪ್ರಾಣೇಶ್ವರಿ ಪವ್ರಮಾಳಿನಿ ಕಂಡು ಪುರುಡುಮುಬಲುವೊಡವಳೆಯ ನಿಶಿತಾಸಿ ಧೇನುವಂ ಕಿಚ್ಚು ಬೆನ್ನಟ್ಟಿ ಮುಟ್ಟಿ ಬೆಱಗಿಲ್ಲದಾತನ ಬೆನ್ನಂ ಜಸ್ನಿವರವಿಕ್ಕಿದಂ ತಿರೆ ಪೊಯ್ಯೆ (ಶಾಂತಿಪು. ೪-೯೬ ವ): ಪುರುಡಿಂ ಭಾರತೀಶನಂ ಸೋಂಕಲ್ . . . ವಿನೀತನಂ ದೂರದಿಂ ನೋಡಿ ಪಾತಕನಿವನೆಂದು ತಿಳಿದು ಪೋಗಳಿಂದಿರೆ ನಂಬದಿರ್ (ಕಾದಂಪೂ. ೩೯೯) ; ಉರ್ವಿಯೊಳ್ ನಿಖಿಲಪುಣ್ಯಾಂಭೋಧಿ ಯಪ್ಪಾತನಂ ಪುರುಡಿಂದಂ ಕೊಲಲೆಂದು ಕಾಯ್ದು ನರನುಂ ಗಾಂಪಂ ಪೆಱರ್ ಗಾಂಪರೇ (ಧರ್ಮಾಮೃ. ೧೦-೨೦೬). ೩. ಹಟ ; ಛಲ : ಎರೆದಾಗ ಕೊಡ ದಿಹುದು ನೆಲದ ಕಟ್ಟಳೆಗೇನು ಮರುಳೊ ಕರೆಯದೆ ಕೊಡುವ ಪುರುಡೇಕೆ ಬಿಡದು ? (ಅಂಬಿಗ. ೩೭-೪೦). **ಹುರುಡು₁** : ೧. ಕಮಳಪ್ರಭೆಗಂ ತನಗಂ ಹುರುಡಿಂದವೋ ಪರಸ್ಪರಾನುರಾಗವುಳವಿಗಟಿಯೆ (ಅರ್ಜುನ. ೩-೧೦೫ ವ); ಹುರುಡು ಜಾಣುಮೆ ಚಳಬಳಿಕೆ ಚಪ್ಪರಣೆ ವಂಚನೆ ನೇಹವೇಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರವೆ. ೧-೫-೩೩); ಒಂದೊಂದು ಸಲ ಹೆಣ್ಣಾಳುಗಳಿಗೂ ಗಂಡಾಳುಗಳಿಗೂ ಹುರುಡು ಬಂದು ಬಿಡುತ್ತಿತ್ತು (ನಮ್ಮೂರ. ೧೯೨). ೨. ಹುಸಿಯಿಲ್ಲ ಹುರುಡಿಲ್ಲ . . . ಮತ್ಸರವಿಲ್ಲ ನೆರವಿಲ್ಲ ವಸುಧೆಯೊಳು ಸಿದ್ಧರಾಮಂಗೆಂಬ ಕೀರ್ತಿ ಪಸರಿಸಿತು ಮೂಲೋಕದೊಳಗೆ (ಸಿದ್ಧರಾ. ೭-೨೫) ; ಹುರುಡೇಕೆ ಗುಣದೊಳಗೆ (ಕುವ್ಯಾ. ೧-೨೫); ಹುರುಡು ಹುಟ್ಟಿದವೊಲು ಸಕಲಕಾಂತೆಯರೊಳು ಮಣಿವಿಸಿರುತಿಹನಾಗಿ ಪುರುಷರೊಳುತ್ತಮನೀತನೆಂದಾತಗೆ ಪುರುಷೋತ್ತಮನೆಂಬ ನಾಮ (ಭರತ. ೧೫-೧೭). ೩. ಗುರುಗಳಿಂದ ಬಹುಭಾಸಗಿರಿ ಪಡೆಯಬೇಕೆಂಬ ಹುರುಡು ಸಂಜೀವಯ್ಯನಿಗೆ ಹತ್ತಿತ್ತು (ರಾಗಿಣಿ. ೫೫). ೪. ಆಸೆ ; ಬಯಕೆ ; ಇಚ್ಛೆ : ಇಂತಪ್ಪ ಸಿರಿಯನಾಂ ಪಡೆದೊಸೆದು ಸತ್ಪಾತ್ರಸಂತತಿಗೆ ದಾನವಂ ಕೊಡುವೆನೆಂದೆಂಬ ಹುರುಡಂತರಂಗದೊಳು ಸಂಜನಿಯಿಸಲ್ (ಸಮ್ಯಕ್ತ್ವ. ೧೧-೬). ೫. ಲವಲವಿಕೆ ; ಉತ್ಸಾಹ: ಎನ್ನನ್ನು ಮನ್ನಿಸುವ ದೊರೆಯಿಲ್ಲ ಹರಣವಲ್ಲಿ ಹುರುಡಿಲ್ಲ ಕರಣದಲ್ಲಿ ದೃಢವಿಲ್ಲ (ಶರಶ. ೨೪).

**ಹುರುಡು ಮಾಡು** = ೧. ಸ್ಪರ್ಧಿಸು ; ಪೈಪೋಟಿ ಮಾಡು : ಸ್ವಯಂವರಮಂದಿರದೊಳಗೆ . . . ಒಬ್ಬರೊಡನೆ ಒಬ್ಬರು ಹುರುಡು ಮಾಡುತ್ತಾ ಎಲ್ಲ ರಾಜರೂ ಕುಳಿತಿದ್ದರು (ಪಶ್ಚಾ. ೫೦) ; ಇಬ್ಬಣದವರೂ . . . ಹುರುಡು ಮಾಡುತ್ತಿರುವುದೂ ಈ ಕಾಲದ ವಿಶೇಷ ಲಕ್ಷಣ (ಬಿಕಸು. V, ಹೊಂಬೆಳಕು ಮಾತು). ೨. ಉತ್ಸಾಹಗೊಳಿಸು; ಹುರಿದುಂಬಿಸು ; ಚುರುಕುಗೊಳಿಸು ; ಪ್ರಚೋದಿಸು : ಯುಧಿಷ್ಠಿರನು . . . ತಮ್ಮ ಸೈನಿಕರನ್ನು ಕರೆದು ಭೀಷ್ಮನನ್ನು ಸುತ್ತ ಮುತ್ತಿಕೊಂಡು ಸಂಹರಿಸುವುದಕ್ಕಾಗಿ ಹುರುಡು ಮಾಡಿದನು (ಕೃಷ್ಣಾರ. ೦೩೩).

[ದೇ. ॥ ಕೊಡ. ಪುಡ್ರ್; ತೆಲು. ಪುರುಡು ]

**ಪುರುಡು₂** (ನಾ). ೧. ಮಗುವಿನ ಜನನಸಂಬಂಧವಾದ ಮೈಲಿಗೆ ; ಹುಟ್ಟುಸೂತಕ; ಜಾತಾಶೌಚ; ವೃದ್ಧಿ : ದೇಯಿಯು . . . ಅವಳಿ ಜವಳಿ ಗಂಡುಮಕ್ಕಳನ್ನು ಹೆತ್ತಳು. ಪುರುಡಿನ ದಿವಸಗಳು ಕಳೆದ ನಂತರ ಮಕ್ಕಳಿಗೆ ನಾಮಕರಣವಾಯಿತು (ಕೋಟಿಚೆ. ೫). ೨. ಮರಣಕ್ಕೆ ಸಂಬಂಧಪಟ್ಟ ಮೈಲಿಗೆ ; ಮೃತಾಶೌಚ ; ಸೂತಕ : ಹತ್ತುದಿವಸದವರೆಗೆ ಪುರುಡು. ಹತ್ತನೇ ದಿವಸ ಶುದ್ಧಕರ್ಮಾಂತರಗಳು (ಕೊಡಗಿನ್ಯ. ೨೦೬) ; ಬಿಗಿದುಡೆಯ ಬಿಡಲದಕೊ ಹುಟ್ಟು ಸಾವುಗಳಿಂದ ಆಗಳುಂ ಪುರುಡಾಗಿ ನೆಲೆವೆಣ್ಗೆ ಮಿಾಹು (ಶಾಂಭವ. ೪೭ ೬೩).

[ದೇ. ॥ ತಮಿ. ಪುರುಟು ; ತೆಲು. ಪುರುಡು]

**ಪುರುಡುಗೆಯ್** (ಕ್ರಿ). ಅಸೂಯೆಗೊಳ್ಳು ; ಮತ್ಸರಿಸು : ವಂಚಿಸದೆ ಪುಸಿಯದವಳುವದೆ ಸಂಚಲಸದೆ ಪುರುಡುಗೆಯ್ಯದಿರದಿರದೆ ೯ರಂ ಬಂಚಿಸ ದಳಲಿಸದುಂಟುಗಿಸುವಂ ಚದುರಂ ಸಜ್ಜನಂಗಳು (ಪುರಾ. ೮-೧೨).

[ಪುರುಡು₁ + ಕೆಯ್₁]

**ಪುರುಡುದೋಱು** (ಕ್ರಿ). ಹೊಟ್ಟೆಯುರಿಯನ್ನು ವ್ಯಕ್ತಪಡಿಸು ; ಮಾತ್ಸರ್ಯವನ್ನು ತೋರಿಸು : ಇಂತು ಪಲ್ದಿಂದು ಗಜಱಿ ಗರ್ಜಿಸಿ ಪುರುಡುದೋಱಿ ಬಾಯ್ಗೆ ಬಂದಂತೆ ಗಳಪಿ ಮಾನಸಿಧಿಯಾದ ಮಲ್ಲಣನ ಮಲ್ಲಣಿಯ ಮಾತೆ ಮನೆಯಿಂ ಪೊಱಮಡಿಸಿ (ವೃಷಭ. ೨೯-೨೫ ವ).

[ಪುರುಡು₁ + ತೋಱು]

**ಪುರುಡುಮಾತು** (ನಾ). ಸ್ಪರ್ಧೆಯ ಮಾತು ; ಪೈಪೋಟಿಯ ನುಡಿ : ಸಾರ್ದೆಳಸುತ್ತುಂ ಪೋರ್ವ ಬಿಂಕಂ ಪದಯುಗದೊಳಮಿಾ ವಿಶ್ವತಃಪಾದನೊಳ್ ಸಂಗಳಿಸಿ ವಿಶ್ವತೋವಕ್ತ್ರನೊಳ್ ಪುರುಡುಮಾತೆನ್ನದೋ ಮದ್ವಿಮೋಹಂ (ಕರಶ. ೪-೧೭೦). [ಪುರುಡು₁ + ಮಾತು₁]

**ಪುರುಪಕ್ಷ** (ನಾ). ದೊಡ್ಡ ರೆಕ್ಕೆಯುನ್ನುಳ್ಳುದು; ನವಿಲು : "ಚಕ್ಷುಶ್ಶ್ರವಾಶಂ ಕಳಾಪಿ ಶಿಖಿ ಕೇಕಿ ಪುರುಪಕ್ಷಂ ಮಯೂರಂ ಶಿಖಂಡಿ ಹರಿಕಂಠಂ ಶಿಖಾವಳಂ ಸವಿಲೆನಿಕ್ಕುಂ" (ಮಂಗರಾ. ೫೦-೨). [ಸಂ.]

**ಪುರುಪಾತ್ರ** (ನಾ). ಅಗಲವಾದ ಪಾತ್ರೆ ; ಹರಿವಾಣ : "ಪುರುಪಾತ್ರ ಮೆನೆ ಪರಿಯಾಣಮಕ್ಕು" (ಮಂಗರಾ. ೬೩-೨೫). [ಸಂ.]

**ಪುರುಪೃಷ್ಠ** (ನಾ). ಹಾವು ; ಸರ್ಪ : "ಭುಜಂಗಮಂ ಪುರುಪೃಷ್ಠನಹಿ ಚಕ್ರಿ . . . ಎನಲು ಸರ್ಪಂಗೆ ನಾಮಂ" (ಮಂಗರಾ. ೧೦೮-೦). 'ದೀರ್ಘಪೃಷ್ಠ' ಪರಾ. [ಸಂ.]

**ಪುರುಲೆ₁** 'ಪುಜಲೆ' ನೋ.

**ಪುರುಲೆ₂** (ನಾ). ಒಂದು ಬಗೆಯ ಹುಲ್ಲು : 'ಅಂಟುಪುರುಲೆ' ಪರಾ. [?]

**ಪುರುವಳ್ಳಿ, ಪುರುಳಿ₁, ಹುರುವಲ್ಲಿ, ಹುರುವಳ್ಳಿ, ಹುರುಳಿ** (ನಾ). ಒಂದು ಬಗೆಯ ದ್ವಿದಳಧಾನ್ಯ ; ಕುಲತ್ಥ : ಜ್ವರದೇಟಿಗೆಯೊಳ್ ಕವುಡೆಯ ರಸಮಕ್ಕಿ ಲೊಕ್ಕಿಯನರಿಷ್ಟಫಲಂಗಳನಕ್ಕಿ ಪಂದಿಗಡ್ಡೆಯ ಪುರುವಳ್ಳಿಯೂಷ ಜಳಮಕ್ಕುಪಯೋಗಿಸಿದಂದು ಮಟ್ಟುಗುಂ (ಲೋಕೋಪ. ೯-೨೦೫); ಮೋಟ ಪುರುವಳ್ಳಿ ಎಲೆಯುತ್ಪಾಟಿಸಂಗುಂ ನಸ್ಯಕರ್ಮದೊಳ್ ವಿಷಮಂ (ಖಗೇಂದ್ರ. ೬-೮೯). **ಪುರುಳಿ₁** : "ಶುಕ ಕುಳುತ್ಥಗಳೊಳಂ ಪುರುಳಿ" (ಶಬ್ದಮಂ. ೦೦೪); ಪೆಸಱುಂ ಕಡಲೆಯುಂದ್ದು ನೆಲ್ ಗೋದುವೆ ಜವೆ ತಕ್ಕವರೆ ತೊಗರಿ ಪುರುಳಿ ಯುಮಿಕ್ಕಲಿಪಂ ಸವಿದು ಸವಿದು ನುಂಗಿದನಾಗಳ್ (ಹಾಲಕ್ಕ. ೦-೯-೨೦). **ಹುರುವಲ್ಲಿ** : . ಗೋಧಿ . . . ಉದ್ದು ತೊಗರಿ ಹುರುವಲ್ಲಿ ಮುಂತಾದ ಧಾನ್ಯಕ್ಕೆ (ಎಕ. ೪. ಬೇಲೂರು. ೬೩-೬೩; 1382). **ಹುರುವಳ್ಳಿ** : ಯವ-ಯವೆ, ಸರ್ಷಪ—ಸಾಸವೆ . . . ಕುಲತ್ಥ-ಹುರುವಳ್ಳಿ (ಕೃಷಿಶಾ. ೪-೩೬); ಬಿತ್ತುಗೆ ಹೆ(ಪ)ಸಱು ಹಸ್ತ(ದಿ)ದೆ ಮತ್ತಂ ಸಲೆ ಪೂರ್ವಷಾಢ(ದ)ಲಸಂದೆಗಳಂ ಸತ್ತ ಮನುರಾಧೆಯೊಳೆ ತಾಂ ಬಿತ್ತುಗೆ ಹುರುವಳ್ಳಿಯುಗಸೆಗಳ್ಪಿನಿಯಕ್ಕುಂ (ಅಷ್ಟಮ. ೯-೪೭) ; ಹುರುಳಿಯ ವಿಷಕ್ಕೆ_ಹುರುವಳ್ಳಿ [ಶಾಲಂ. ಹುರಿವಳ, ಹುರುಳಿ]ಯ ಸೊರ್ಕಿಂಗಂ ಹರೀತಕೀಯುಕ್ತಮೋಘನಾದಿಯುಮುಂ ಮೋಱ್ ವರ ಓಗು ವಿಳಂಗಮನಿರದರೆದೀಂಟಲ್ ಪಾಲೊಳುಪವಿಷಂ ತಾಂ ಧರೆಯೊಳ್ (ಲಕುಪ. ೨-೦೭೦). **ಹುರುಳಿ** : ಕರಿಬೇವು ಬಡಗಸಂಡಗೆಯೊಂಗು . . . ಹುರುಳಿ ಸಾಸುವೆ ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಪಶಾ. ೪-೦); ಹುರುಳಿ ಗುಗ್ಗುರಿ ಮುಕ್ಕಿ ಮೇಲೆ ಮಜ್ಜಿಗೆ ಕುಡಿದು ಹಿರಿಯ ಹೆಬ್ಬುಲಿಯಂತೆ ನಿದ್ರಿಪ ಪೋಡಿ (ಪುರಾಹ. ೨-೩೯-೪) ; ಕುದುರೆ ಕುದುರೆಗೆ ಹುರಿದ ಹುರುಳಿ (ಗಾದೆ).

**ಪುರುಷ** (ನಾ). ೧. ನರ ; ಮನುಷ್ಯ ; ಮಾನವ : "ಮನುಷ್ಯಃ, ಮಾನುಷಃ . . . ಪುರುಷಃ, ಪೂರುಷಃ, ವಿಟ್—ಈ ೧೨ ಮಾನಸರ್" (ಕರ್ಣಾಟ. ೩೩–೦೭೬); ಪುರುಷಂ ಧನಮೆನಗುಂಟೆಂದಿರಲಾಗದು ದ್ರವ್ಯಮುಳ್ಳೊಡಂ ದ್ರವ್ಯಮನಾರ್ಜಿಪುದು (ಧರ್ಮಾಮೃ. ೦–೯೩). ೨. ಮನುಷ್ಯಜಾತಿ; ಮಾನವಕುಲ. ೩. ಗಂಡಸು : " ಮಾನವಂ . . . ಪುರುಷನಾ ಪಂಚಜನಮಾ ನೃ ಮನುಜಂ ಗಂಡುಗೂಸಕ್ಕು " (ಶಬ್ದಮ. ೬೬–೦) ; ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು ನೋಡಾ (ಬಸವಾದಿ. ೩. ೫೯–೦೯೭) ; ಪುರುಷರ್ ಮಧುಗಳ್ಗೆ ಮಧೂತ್ಕರಮಾ ಪುರುಷರ್ಗೆ ಸೋಲ್ವುದುಚಿತವದು (೧೦೪. ೭–೨೫). ೪. ಗಂಡ; ಪತಿ: ಸಂಸ್ಕಾರಿಸಲೀ ಮಾತೆಯರ್ಗೆ ವರವರ ಪುರುಷರಂ ಕುಡವೇಟ್ಟುಂ (ಶಂಕರಾ. ೦೯–೮); ಅರಸನ ಕಂಡು ತನ್ನ ಪುರುಷನ ಮಾಱಿವಡೆ ಮರನನೇಱಿ ಕೈ ಬಿಟ್ಟಂತಾದೆನಯ್ಯಾ (ಬಸವ. ೯೨೫) ; ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ದೇವಾಂಗವನ್ನುಟ್ಟು ಪುರುಷ ಬಾರಾ (ಹ.ಶಿ. ೩. ೦೯೦–೩೨೦); ಪುರುಷನುಳ್ಳವಳು ನಾ ಪುರುಷರು ಕೇಳ್ಕಾರು ಗುಱುತು ಕಂಡರೆ ಕೊಲೆಯ ಕೊಂಡಾರು (ಪುರಂದ. ೩–೬೯–೨). ೫. ಒಬ್ಬ ಮನುಷ್ಯನ ಎತ್ತರದಷ್ಟು ಪ್ರಮಾಣ ; ಸುಮಾರು ಆರು ಅಡಿ ; ಆಳುದ್ದ : ಕಂಟಕಕುಜ ವನದೊಳ್ ನಿಷ್ಕಂಟಕಕುಜವಾಗೆ ಪೋಣ್ ವಿಕಂಟಕವನದೊಳ್ ಕಂಟಕಮಹೀಜಮಾದೊಡಮುಂಟೊಂದಱಿ ಪಡುವಲಯ್ದು ಪುರುಷದೊಳುದಕಂ (ಲೋಕೋಪ. ೫–೦೬); ಅತ್ತಿಯ ಪಡುವಲ್ ಮೂಗಯ್ಯತ್ತಲ್ ನೀನಗುಱಿಸಿರದೆ ಪುರುಷದೆ ನೀರುಂ ಮಾತೊಂದು ಪುರುಷದೊಳ್ ಭುಜಗೋತ್ತಮನಂತಪ್ಪ ಕರಿಯ-ಕಲ್ ಪಡುವ ಜಲಂ (ಜ್ಯೋತಿಷ. ೦೦–೯) ; ೧೦/೩ "ಪುರುಷ"ಗಳ ಆಳತೆಯುಳ್ಳ ಹಗ್ಗದಿಂದ ೨೦/೪ ಚದರ ಪುರುಷಗಳೂ (ಚಕ್ರಾಂಕದ ಸೆಲೆ); ೨೦/೩ ಪುರುಷಗಳ ಆಳತೆಯುಳ್ಳ ಹಗ್ಗದಿಂದ ೬೦/೪ ಚದರ ಪುರುಷಗಳೂ ಉಂಟಾಗುತ್ತವೆ (ಗಣಿತ. ೦೯೯). 'ಪುರುಷಪ್ರಮಾಣ' ನೋಡಿ. ೬. ಪರಾಕ್ರಮಿ; ಗಂಡುಗಲಿ: ಪುರುಷರ ಪುರುಷನಲ್ಲಾ ಭೀಮ ಕನ್ನಯ ಪರಮಸುಕೃತೋದಯವಲಾ ನೀನೊಬ್ಬನು (ಕುಮಾರವ್ಯಾಸ. ೩–೭೩). ೭. ಗಂಡುತನ ; ಪೌರುಷ ; ಪುರುಷಶಕ್ತಿ : ಪುರುಷಮಂ ಸಮಕಟ್ಟುವವಪ್ಪೊಡೆ ಪೂರ್ಕೆಱಿಯಲಣ್ಮುವರಿಲ್ಲ (ಶಂಕರಾ. ೬–೭೭ ೩). ೮. ಆತ್ಮ; ಜೀವಾತ್ಮ: "ಆ ವಸ್ತು ಸಂಸಾರಿ ಚೇತನಂ ಕ್ಷೇತ್ರಜ್ಞ ಪುರುಷನೆಂದಿಲಾತ್ಮನಕ್ಕುಂ" (ಶಬ್ದಮ. ೯–೨೯); ಸೂಜಿಕಲ್ಲಿನ ಸನ್ನಿಧಿಯಲೀ ಸೂಜಿ ಚಲಿಸಿದಂತೆ ಪುರುಷನ ತೇಜದಿಂದಲಿ ಪ್ರಕೃತಿ ಚರಿಸುತ್ತಿಹುದು (ಜ್ಞಾನಸಿಂ. ೨೭–೨೨). ೯. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ಪ್ರತಿಯೊಬ್ಬ: ಪುರುಷಮೂರ್ವರೊಳೊರ್ಬನೆಂಬರ ಸುರಪ್ರಧ್ವಂಸಿಯೆಂಬರ್ಜಗದ್ಗುರುವೆಂಬರ್ಪರ್ಗೆ ತೆರನೆಸಪಂ (ಗದಾಯು. ೩–೯೩). ೧೦. ಪರಮಾತ್ಮ : ಅನಂತನಾದುದರಿಂದಲೂ ಪೂರ್ಣನಾದುದರಿಂದಲೂ ಪುರುಷನೆಂದು ಪರಮಾತ್ಮನಿಗೆ ಹೆಸರು (ಹರಿ. ೬–೫ ಟೀಕೆ). 'ಪುರುಷಸೂಕ್ತ' ನೋಡಿ. ೧೧. ಸುರಗಿ ಮರ ; ಪುನ್ನಾಗವೃಕ್ಷ: "ಪುನ್ನಾಗಃ, ಪುರುಷಃ, ತುಂಗಃ, ಕೇಸರಃ, ದೇವವಲ್ಲಭಃ—೫ ಸುರಗೀಮರ, ಸುರಹೊನ್ನೆ ಮರಕ್ಕೂ ಹೆಸರುಗಳು" (ಬಿಬ್ಯಾ.ಚಿ. ೦೦೭). ೧೨. ಗಂಡಸಿನ ಜನನಾಂಗ : 'ಪುರುಷವ್ಯಾಧಿ' ನೋಡಿ. ೧೩. [ಸಾಂಖ್ಯ] ಇಪ್ಪತ್ತೈದು ತತ್ತ್ವಗಳಲ್ಲಿ ಒಂದು : ಹೋದುತಿಹರಾ ಪುರುಷತತ್ತ್ವದಿ ನಿಂದು ತೋರುತಲಿರ್ಪ ಭುವನವ . . . ಪಾಶುಪತರಾದಿಯರು (ಗಣಿತಾ. ೬–೬೩) ; ಪಂಚವಿಂಶತಿತತ್ತ್ವಗಳು—೧ ಪ್ರಧಾನ, ೧ ಮಹತ್ತತ್ತ್ವ, ೧ ಅಹಂಕಾರತತ್ತ್ವ, ೫ ಭೂತತನ್ಮಾತ್ರೆಗಳು, ೫ ಮಹಾಭೂತಗಳು, ೧೧ ಇಂದ್ರಿಯಗಳು, ೧ ಪುರುಷ (ತತ್ತ್ವಕ. ೩–೦೩೦ ಟೀಕೆ). ೧೪. [ವ್ಯಾಕ] ಪುರುಷವಾಚಕ ಲಿಂಗ ; ಪುಲ್ಲಿಂಗ: ಪುರುಷ ಪರಮಾದೊಡತ್ವಂ ದೊರೆಕೊಳ್ಗುಂ (ಶಬ್ದ. ೦೦೦). ೧೫. ಸರ್ವನಾಮಗಳಲ್ಲಿ ಒಂದು ಪ್ರಕಾರ ; ಪುರುಷವಾಚಕ ಸರ್ವನಾಮ ; ಇದು ಉತ್ತಮ, ಮಧ್ಯಮ ಮತ್ತು ಪ್ರಥಮ ಎಂದು ಮೂರು ಬಗೆ. ನಾನು, ನಾವು—ಇವೆರಡು ಉತ್ತಮಪುರುಷ. ನೀನು, ನೀವು—ಇವೆರಡು ಮಧ್ಯಮಪುರುಷ. ಉಳಿದುವೆಲ್ಲ ಪ್ರಥಮಪುರುಷ : ಅವಱೊಳಗೆ ನಪುಂಸಕಲಿಂಗವಿಷಯಮಾದಲ್ಲಿ ಮೊದಲ ಪುರುಷಂಗುದುಮೆಂಬುವೆ ದಲ್ ಸಮನಿಸುಗುಂ (ಕಾವ್ಯಾ.ಶ. ೩೯೦) ; ತಿಳಿ ತಾಂ ನೀನಾನೆಂಬರ್ಥಗಳೆಂಬಿಗಳ್ ಪ್ರಥಮ ಮಧ್ಯಮೋತ್ತಮ ಪುರುಷಂಗಳ್ (ಶಬ್ದ.೨೨೪). 'ಪುರುಷತ್ರಯ' ನೋಡಿ. [ಸಂ.]

**ಪುರುಷಕಾರ** (ನಾ). ೧. ಮನುಷ್ಯಪ್ರಯತ್ನ : ಪುರುಷನ ಸಾಹಸ : ಪುರುಷಕಾರದ ಪೆಂಪಂ ಚಿಂತಿಸಿ ತರಿಸಿ ಮಹೇಶನನೆತಪ್ಪೊಡಂ (ಶಂಕರಾ. ೭–೩೯) ; ದೈವವಿಸೂತ್ರಮಂ ಪುರುಷಕಾರಂ ಮೀಱಿಪೇನಕ್ಕುಮೇ (ಶಗಾ. ೩–೦೯) ; ಪುರುಷಕಾರಮೆ ಬಿದಿಗೆ ಬಾಳುಸಿರ್ (ಶ್ರೀರಾಮಾ. ೮೨–೦೦೯). ೨. ಪೌರುಷ ; ಪರಾಕ್ರಮ : ನಿಮ್ಮೊಳಗೆ ನೀಂ ಮುಳಿಯಲ್ವೇಡ ನಿಮ್ಮ ಪುರುಷಕಾರಮನೆ ಬಗೆದು ನೆಗಟ್ವುದು (ಶಂಕರಾ. ೦೨–೯೬ ೩); ಪುರುಷಾಕಾರಮದಿಲ್ಲ್ಯ ಹರಿ ನಿನ್ನೊಳ್ ಪುರುಷಕಾರಮಂ ಕುಱಿಂ (ಗದಾಯು. ೬–೩೦) ; ಪುರುಷಕಾರದ ತಾಯ್ಗರು ಪೆಂಪಿನಾಗರಂ . . . ನೆಗಳ್ದ ಜಕ್ಕಣನೆಂದಡದಾರೊ ಪೋಲ್ಪವರು (ಶಾ. IV, ೦೦–೩೫; 1121). [ಸಂ.]

**ಪುರುಷಗುಣ** (ನಾ). ಗಂಡುತನ ; ಗಂಡಸಿಗೆ ಯೋಗ್ಯವಾದ ಗುಣ ; ಪೌರುಷ : ಅಬಲೆಯರಳ್ಕಿರ್ದಗಳ್ ಪುರುಷಗುಣಮನಱಿದೆಱಗುಗುವೇ (ಆದಿಪು. ೮೨–೦೭) ; ಪುಟ್ಟಿದುದು ಪುಂಗನೂರೊಡಪುಟ್ಟಿದುದಪರಿಮಿತ ಪುರುಷಗುಣಗಣಮರ್ದೆಯೊಳ್ ಪುಟ್ಟಿದುದು ಜಿನಮತಂ ಗುಡಿಗಟ್ಟಿದುದಿಳೆ ಪುಟ್ಟಿ ನಾಗಮಯ್ಯನಜಯ್ಯಂ (ಶಾಂತಿಪು. ೦–೯೫) ; ಪುರುಷಗುಣಾಭರಣಂ ಕುಡಲಾರ್ಪ್ಪನಧಿಕವ × × × ಯೆನ್ದು ಪೊಗಳ್ದು ಧರೆ ಕಾಳಿಗನೆಸವನಾರ್ಪ್ಪನೊಳ್ಪ ಗುಣಮಂ (ಶಾಇ. XX, ೨೯–೦೮; 1034). [ಸಂ.]

**ಪುರುಷತನ** (ನಾ). ೧. ಗಂಡುತನ ; ಗಂಡಸುತನ ; ಪುರುಷತ್ವ : ಕೆಟ್ಟುದು ಪುರುಷತನವಿಂದ್ರಂಗಹಲ್ಯಾದೇವಿ ಶಿಲೆಯಾಗಿ ಧರಿಸಿದಳು ನಿಜತನುವನು (ಕೊರಟಾ. ೬–೦೨–೦೮). ೨. ಗಂಡಸಿನ ರೂಪ ; ಪುರುಷಾಕೃತಿ: ಹರನ ಹಣೆಗಣ್ಣಿನ ಮಹಾನಲನುರಿಯ ಹೊಯ್ಲಲಿ ಸಾಯಲಾಱದೆ ಪುರುಷತನವನು ಬಿಸುಟು ಮಂಡೋದರಿಯ ರೂಪಕವ ಧರಿಸಿದನೊ ಕಂದರ್ಪನೆನೆ . . . ಮೆಱೆದಿರ್ದಳು ಕಾಂತೆ (ಕೊರಟಾ. ೫–೨–೭೬). ೩. ಮನುಷ್ಯತ್ವ ; ಸಜ್ಜನಿಕೆ : ಪರಮಮಾಹೇಶ್ವರರು ನೀವೆಂದಾ ನಮಿಸೆ ಲೇಸಾಗಲೀ ಎಂದು ಹರಸಲೊಲ್ಲದೆ ಸುಮ್ಮನಿಹುದಿದು ಪುರುಷತನವೇ ಗುಣವೆ ಪೇಪೇ (ಬಸವ. ೯೬–೦೦). [ಪುರುಷ + —ತನ]

**ಪುರುಷತ್ರಯ** (ನಾ). ೧. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಂ : ದೇವ ಪುರುಷತ್ರಯಾಕಾರಪ್ರಧಾನ ಜಯ (ಶಗಾ. ೫–೦೦೭ ರಗಳೆ). ೨. ಉತ್ತಮ, ಮಧ್ಯಮ ಮತ್ತು ಅಧಮ ಎಂಬ ಮೂರು ವರ್ಗಗಳ ಮನುಷ್ಯರು: ಕ್ಷಿತಿಯೊಳುತ್ತಮ ಮಧ್ಯಮಾಧಮಗತಿಯ ಪುರುಷತ್ರಯಪರಿವರಿಂಗಿತಪನವರಾಯತವನಱಿವೈ ಭೂಪ (ಕುಮಾರವ್ಯಾಸ. ೩–೨೭). ೩. [ವ್ಯಾಕ] ಉತ್ತಮ, ಮಧ್ಯಮ ಮತ್ತು ಪ್ರಥಮ ಎಂಬ ಮೂರು ಬಗೆಯ ಪುರುಷವಾಚಕ ಸರ್ವನಾಮ : ಅವುರಯಿರನೆವುಗಳಕ್ಕುಂ . . . ಆಖ್ಯಾತವರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ (ಶಬ್ದ. ೨೦೭). [ಸಂ.]

**ಪುರುಷತ್ವ** (ನಾ). ೧. ಗಂಡುತನ ; ಪುಂಭಾವ : ಭ್ರಮರಕೀಟನ್ಯಾಯ

ಭಾವದಿ ರಮಣಿಯೊಬ್ಬಳು ತನ್ನನಿಯನು ಕ್ರಮದಿ ನೆನೆಯಲು ನೆನೆಯಲಾ ಪುರುಷತ್ವವಳವಟ್ಟು ನಿಮಿರ್ದ ರತಿಕೇಳೀವಿನೋದದಿನಮರ್ದದಕ್ಕೆನ್ನಂತ ರಾಯತ್ತವುಪಹುದೊ ತನಗೆನುತ . . . ಇನಿಯನಂ ತಾ ನೆನೆಯಲಂಜುತ ನೆನೆವುತಂಜುತಲಿನಿಯಳಿದ್ದಳು (ಬಸವು. ೩೩-೨೩). ೨. ಶಕ್ತಿ ; ಪೌರುಷ : ಹೆಗಡೆಯ ಹತ್ತಿರ ಹೋರಾಡುವುದಕ್ಕೆ ನಿಂತ ಮೇಲೆ ನಾವು ಗೆಲ್ಲಬೇಕು. ಇಲ್ಲವಾದರೆ ಪುರುಷತ್ವಕ್ಕೆ ಏನು ಬಂತು ಗೌರವ ? (ದೇವಹು. ೨೦೪).
[ಸಂ.]

**ಪುರುಷದೋಷ** (ನಾ). ಮನುಷ್ಯನಿಂದ ಆಗುವ ತಪ್ಪು ; ಮನುಷ್ಯನ ಕೈವಾಡದಿಂದ ಉಂಟಾಗುವ ದೋಷ : ವೇದವು ಅನಾದಿಕಾಲದಿಂದ ಏಕರೀತಿಯಾಗಿಯೇ ಇರುವುದರಿಂದ ಪುರುಷಸಂಬಂಧವಿಲ್ಲ, ಪುರುಷದೋಷವೂ ಇಲ್ಲ (ಹಿಂದೂಶಾ. ೦೩೭). [ಸಂ.]

**ಪುರುಷದ್ವೇಷಿ** (ನಾ). ಗಂಡಸರನ್ನು ಕಂಡರಾಗದವಳು ; ಗಂಡಸರನ್ನು ದ್ವೇಷಿಸುವವಳು : ಬಾಲ್ಯದಲ್ಲಿ ನಡೆದ ಘಟನೆಗಳ ಪರಿಣಾಮವಾಗಿ ಅವಳು ಪುರುಷದ್ವೇಷಿಯಾಗಿಯೇ ಬೆಳೆದಳು (ರೂಢಿ). 'ಸ್ತ್ರೀದ್ವೇಷಿ' ಪರಾ.
[ <ಸಂ. ಪುರುಷದ್ವೇಷಿನೀ ]

**ಪುರುಷದ್ವೇಷಿಣಿ** (ನಾ). = ಪುರುಷದ್ವೇಷಿ : ಸುಧ್ಯಾನಗರಪುರಾಧಿಪತಿ ಸಿಂಹೋದರನೆಂಬೊನೀತನ ಮಗಳ್ ಹಿಡಿಂಬೆಯೆಂಬೆನಾಂ ಪುರುಷ ದ್ವೇಷಿಣಿಯೆಂ (ಬಂಹಂ. ೦೦-೭ ವ). [ ಸಂ. ಪುರುಷದ್ವೇಷಿಣೀ ]

**ಪುರುಷಧರ್ಮ** (ನಾ). ೧. ಮನುಷ್ಯಧರ್ಮ : ಆಕೆಯ ಅಂತಸ್ತಿನ ಭವಿಷ್ಯವೆಲ್ಲ ನನ್ನ ಕೈಯೊಳಗಿರುವಾಗ್ಗೆ ನಾನೀಗ ಆಕೆಯನ್ನು ನಡುನೀರಲ್ಲಿ ಕೈಬಿಡುವುದೆ ? ಅದು ಪುರುಷಧರ್ಮವಲ್ಲ (ಪಡಿಕಾ. II, ೯೭೦). ೨. ಗಂಡನಾದವನು ಪಾಲಿಸಬೇಕಾದ ವ್ರತ ; ಪತಿಧರ್ಮ : ಪರಪರಿಗ್ರಹೀತೆಗಳಪಂ ತರೆ ಪುರುಷಂ ಪುರುಷಧರ್ಮಮಟಿಗುಂ ಪಟಿಗುಂ ಧರೆ ದುರ್ಗತಿ ಸಮನಿಸುಗುಂ (ಶಂರಾಮಾ. ೯-೦೯೨). [ಸಂ.]

**ಪುರುಷನಾಡಿ** (ನಾ). ದೇಹದ ಬಲಭಾಗದಲ್ಲಿರುವ ನಾಡಿ : ಎಡಭಾಗದ ನಾಡಿಗಳು ಸ್ತ್ರೀನಾಡಿಗಳೆಂತಲೂ, ಬಲಭಾಗದ ನಾಡಿಗಳಿಗೆ ಪುರುಷನಾಡಿಗಳೆಂತಲೂ ಹೆಸರು (ಹಸಾರ. ೪-೩ ತಾತ್ಪರ್ಯ). [ಸಂ.]

**ಪುರುಷನಿಧಿ** (ನಾ). ಪರಾಕ್ರಮದ ನೆಲೆ ; ಪೌರುಷದ ಆಕರ : ಪುರುಷನಿಧಿಯೆನಿಪನನ್ನಂ ಧರೆ ನಿಲ್ವಿನವಿಾ ಸ್ವಯಂಭುಸೋಮೇಶ್ವರದೇವರ ಮುಂದೆ ಭಕ್ತಿಯಿಂದಚ್ಚರಿಯಾಗಿರೆ ಸೂಳೆಕೇರಿಯಂ ಮಾಡಿಸಿದ (ಶಾಇಇ. XX, ೭೪.೨೭ ; 1112). [ಸಂ.]

**ಪುರುಷನಿರ್ವಾಣ** (ನಾ). ಗಂಡನ ಸಾವು ; ಪತಿಯ ಮರಣ : ಮುನ್ನಿನ ಪುರುಷವ್ರತಿಯರು ಒಲಿಸಿದ ಆಯತದ ಪರಿಪರಿಯಲಿ ಬಣ್ಣಿಸಲು ಬಹುದಲ್ಲದೆ ಪುರುಷನಿರ್ವಾಣಕ್ಕುರಿವಗ್ನಿಯ ಬಂದು ಹೊಕ್ಕು ತೋಱಲು ಬಾರದು (ಬಸವ. ೭೭೮). [ಸಂ.]

**ಪುರುಷಪಕ್ಷಿಗ್ರಹ** (ನಾ). ಬಾಲಗ್ರಹದಲ್ಲಿಯ ನಾಲ್ಕು ಬಗೆಯ ಪಕ್ಷಿ ಗ್ರಹದೋಷಗಳಲ್ಲಿ ಒಂದು : ಕಣ್ಣುಗಳು ಗುಳಿ ಬೀಳುವವು. ಮೈ ತಾಱುವದು. ತಾಪ ಉಂಟಾಗಿಹವು. ಹಸುರಾಗಿ ಉಚ್ಚುವದು. ಬಾಯಾಱಿಕೆ ಉಂಟಾಗಿಹುದು. ನಾಲಿಗೆ ನೀಡಿಕೊಂಬುದು . . . ಇದು ಪುರುಷಪಕ್ಷಿ ಗ್ರಹಶಂಕೆ ಎಂದಱಿವುದು (ವೈದ್ಯಶಾ. II, ೦೩). 'ಪಕ್ಷಿಗ್ರಹ' ಪರಾ.
[ಸಂ.]

**ಪುರುಷಪ್ರಮಾಣ** (ನಾ). ಒಂದಾಳು ಎತ್ತರದಷ್ಟು ಅಳತೆ ; ಸುಮಾರು ಆರುಅಡಿ: ಪುರುಷಪ್ರಮಾಣಮೆಂತೆನೆ ಪುರುಷಂ ತನ್ನೆರಡು ಕೆಯ್ಯ ಮೇಲುಕೈತ್ತಲ್ ಪುರುಷಪ್ರಮಾಣಮೆನಿಸುಗು (ವ್ಯವಹಾ. ಅನುಬಂಧ. ೯) ; ಮಂದಿರದ ಮಧ್ಯದಲ್ಲಿ ಪುರುಷಪ್ರಮಾಣಕ್ಕಿಂತಲೂ ದೊಡ್ಡದಾದೊಂದು ಕರಾಳ ಕಾಳಿಕಾಮೂರ್ತಿಯು ಪ್ರತಿಷ್ಠಿತವಾಗಿದ್ದಿತು (ಕಪಾಕುಂ. ೩೦). [ಸಂ.]

**ಪುರುಷಪ್ರಯತ್ನ** (ನಾ). ಮನುಷ್ಯನ ಯತ್ನ,–ಸಾಹಸ ; ಪೌರುಷ : ಶತ್ರುಜಯಕ್ಕೆ ಪುರುಷಪ್ರಯತ್ನವೇ ಕಾರಣವಾಗಿರುವುದು (ಕೃವಾಸ. ೨೭); ಪುರುಷಪ್ರಯತ್ನಮಂ ಬರ್ದುಕುವಾಸೆಯ ಕೂಡೆ ನೀಗಿ, ಕೈಮುಗಿವೆನಾ ವ್ಯೋಮಕ್ಕೆ ದೇವರಂ ಬೇಡಿ (ಶ್ರೀರಾಮಾ. ೭೭-೭೨೩). [ಸಂ.]

**ಪುರುಷಬ್ರತ** (ನಾ). ೧. ಬ್ರಹ್ಮಚರ್ಯವ್ರತ : ರಾವಣನು ಕೊಂದು ಜಯಶ್ರೀವಧುವಂ ತಾಳ್ದಿ ಮುಯ್ಪಿನೊಳ್ ವರಸೀತಾದೇವತೆಯಂ ತರ್ಪನ್ನೆಗಮೋವದೆ ಪುರುಷಬ್ರತೋಚಿತಂ ವಿರರಸಂ (ಕಬಿರಾ. ೩-೦೯೦). ೨. ಪತಿವ್ರತೆಯ ಆಚಾರ ; ಪತಿವ್ರತಾಧರ್ಮ (?): ಆತನ ಸತಿ ದೇವಿಯಕ್ಕಂ ಪುರುಷಬ್ರತಮಂ ಕೈಕೊಂಡು ಮಂಡಲಿ ಸಾಸಿರದ ಎಡತೊಱೆನಾಡ ಉತ್ತಮದ ಗ್ರಾಮದಲು ಸುರಲೋಕಪ್ರಾಪ್ತಳಾದಳ್ (ಎಕ. VII, ಶಿವಮೊ. ೩೨-೮ ; 1134 ?). 'ಪುರುಷವ್ರತಿ' ಪರಾ.
[ <ಸಂ. ಪುರುಷವ್ರತ]

**ಪುರುಷಭಾಷೆ** (ನಾ). ಪೌರುಷದ ವಾಣಿ; ಪುರುಷಪ್ರಯತ್ನದ ಮಾತು: ಸತ್ಯದನ್ನವನೆ ಉಂಡು ಬಾಳಿ ಎನ್ನುವುದು ಪುರುಷಭಾಷೆ (ಸೂರ್ಯಶಾ. ೦೭-೦೫). [ಸಂ. ಪುರುಷಭಾಷಾ]

**ಪುರುಷಭಿಕ್ಷ** (ನಾ) ಗಂಡನನ್ನು ಉಳಿಸಿ ಕೊಡುವುದು ; ಪತಿಭಿಕ್ಷೆ : ಪುರುಷಕಾರದ ಪೆಂಪು ಚಿಂತಿಸಿ ತರಿಸಿ ಮಹೀಶನನೆಂತಪ್ಪೊಡಮೆನಗೆ ಪುರುಷಭಿಕ್ಷಮನಿಕ್ಕಿಂ (ಶಂಶಶಾ. ೭.೩೪); ವನದೇವಿಯರಿರಾ ನೆರೆದೆಲ್ಲರು ಮೆನಗೆ ಪುರುಷಭಿಕ್ಷಮನಿಕ್ಕಿಂ (ಕಾದಂಪೂ. ೯೨೩); ಮುಳಿಸಂ ಪಿಡಿಕ್ಕಿಯುಂಮಿಾ ಫಣಿಯಂ ಕೊಂದಿಕ್ಕದಿರಿಕ್ಕೆಮಗೆ ಪುರುಷಭಿಕ್ಷಮಂ (ಜಗವಿ. ೩-೦೦೦).
[ಸಂ. ಪುರುಷಭಿಕ್ಷಾ]

**ಪುರುಷಭೈಕ್ಷ** (ನಾ). = ಪುರುಷಭಿಕ್ಷ : ಎನಗಿಬ್ಬಱಿಂ ಪುರುಷಭೈಕ್ಷಮನಿಕ್ಕು (ಅರ್ಜವೇ. ೦-೯೦). [ಸಂ.]

**ಪುರುಷಭೈಕ್ಷೆ** (ನಾ). = ಪುರುಷಭಿಕ್ಷ: ಪ್ರಿಯಮಿತ್ರೆಯುಕಳಂಕಾಚಾರಸಾರನಪ್ಪ ಮೇಘರಥನರೇಂದ್ರಂಗೆ . . . ನಿಮ್ಮಡಿಗಂ ಕೈಯನೊಡ್ಡಿ ಪುರುಷ ಭೈಕ್ಷೆಯೆಂ ಬೇಡಿ ದೀಕ್ಷೆಯುಮಂ ನಿಸರ್ಗಸ್ನೇಹಿತೆಯಾದ ಕಾರಣಮುಮನಿದ ನಱಿಯೆ ಬೆಸಸುವುದೆನೆ (ಶಾಂತಿಪು. ೯-೯೩ ವ). [ಸಂ. ಪುರುಷಭೈಕ್ಷ]

**ಪುರುಷಮಿಗ** (ನಾ). = ಪುರುಷಾಮೃಗ : ಕಳಕಳಿಸಿ ನಗುತೆ ಕುಕ್ಕಿಲಿಲೆಯೊಂದುಯಿರದೆ ಕೂಗುತ್ತಡವಿಶಬರಿಯರು ಪುರುಷ ಮಿಗಮರೆಯಟ್ಟಿ ಸರಳ್ಗರೆವ ಮಾಳ್ಕೆಯಿಂ ತರುಣಿಯರು ತವಕದಿಂ ನೀರ್ಗರೆವುತೆ ಬರುತಿರಲು (ನವಮೋ. ೦೦-೭೨). [ <ಸಂ. ಪುರುಷಮೃಗ]

**ಪುರುಷಮೃಗ** (ನಾ). ೧. ಒಂದು ಬಗೆಯ ಜಿಂಕೆ. ೨. ಗಂಡು ಜಿಂಕೆ. ೩. = ಪುರುಷಾಮೃಗ : ಪುರುಷಮೃಗಂಗಳಲ್ಲಮಿವರಪ್ಪೊಡೆ ದಿವ್ಯ ಮುನೀಂದ್ರರೆಚ್ಚೊಡರೆ ಶರವಿದು ತಾಗಲಣ್ಮದಿವರಂ (ಅರ್ಜವೇ. ೩-೭೮); ನರಿ ಶಶಕಂ ವೃಕಂ . . . ಸೈರಿಭಂ ಪುರುಷಮೃಗಂ ಗಜಂ ಶರಭ ಸಿಂಹದಿ ನೊಪ್ಪುವುದಲ್ಲಿ ಕಾನನಂ (ಮಲ್ಲಿಕಾ. ೩-೦೩೯); ಅಲ್ಲಿ ಕಸ್ತೂರಿಮೃಗ ಚಮರೀ ಮೃಗ ಪುರುಷಮೃಗ ಸುವರ್ಣಮೃಗ . . . ಸಿದ್ಧಿಮೃಗಾದಿ ದೇವಾರ್ಹ ರಾಜಾರ್ಹ ಶಾಸ್ತ್ರೀಯಸಾಧುಪವಿತ್ರಮೃಗಜಾತಿಗಳಂ (ವಿವೇಕ. ೨೦೨).
[ಸಂ.]

**ಪುರುಷಮೇಧ** (ನಾ). ಮನುಷ್ಯನನ್ನು ಬಲಿ ಕೊಡುವ ಯಜ್ಞ ; ನರಬಲಿಯನ್ನು ಕೊಡುವ ಯಾಗ. [ಸಂ.]

**ಪುರುಷಯುಕ್ತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ; ಸ್ತ್ರೀಯು ಪುಂಭಾವದಿಂದ ರಮಿಸುವಿಕೆ ; ಪುರುಷಾಯಿತ : ನಿದ್ದೆಗೈವಳು ತಾನು ಅವನ ನಿದ್ರೆಗೈಯಲೀಸಳು. ತಾಡನಂಗೈವಳು ರೇತಃಪತನವಂ ನಿಲ್ಲಿಸಲರಿಯದೆ ಕೋಪವಂ ಸ್ಥಿರಿಸಲಾರದೆ ಅಂತರವಂ ಮಾಡಿದರ್ದೊನಾದೊಡೆ ಅವನ ಮೇಲೆ ರಮಿಸುವಳು. ಇದು

ಪುರುಷಯುಕ್ತಂ (ಕಾವ್ಯಾ. ೩೩೮). [ಸಂ.]

**ಪುರುಷಯುಗಕರಣ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ : ಓರ್ವಂ ಮೆಲ್ಲನೆ ಮಲಗಿರೆ ಆತನ ಮೇಲೇರಿ ರವಿಸುತ ನಿಂದಿರ್ದ ಮತ್ತೋರ್ವ ಪುರುಷನ ಲಿಂಗಮಂ ತನ್ನ ಬಾಯೊಳಗಿಕ್ಕಿ ಮುಖಸುರತಗೈಯುತ್ತಿರೆ ಪುರುಷಯುಗಕರಣಂ (ಕಾಮಶಾ. ೨೩೭). [ಸಂ.]

**ಪುರುಷರತುನ** (ನಾ). = ಪುರುಷರತ್ನ ೧ : ಪುರುಷರತುನಂ ಪುರಾತನ ಚರಿತಂ ಜಿನಚರಣಕಮಲಭೃಂಗಂ ಸತ್ಯಾಭರಣಂ ದಯಾಂಬುನಿಧಿ (ರಕ್ಷಾಶು. ೪-೨೩೪). [<ಸಂ. ಪುರುಷರತ್ನ]

**ಪುರುಷರತ್ನ** (ನಾ). ೧. ಶ್ರೇಷ್ಠನಾದ ಮನುಷ್ಯ ; ನರೋತ್ತಮ ; ಪುರುಷಾಗ್ರಣಿ : ಸ್ತ್ರೀರತ್ನಮಿಾಗಳೀಕೆಯೆ ಧಾರಿಣಿಯೊಳ್ ಪುರುಷರತ್ನಮಿಾತನೆ ಸದೃಶಾಕಾರರ್ (ಆದಿಪು. ೪-೨೯); ಪುರುಷರತ್ನಕ್ಕೆ ಸ್ತ್ರೀರತ್ನಮಲ್ಲದೆ ಸಾಮಾನ್ಯಮಣಿಯುಂ ಮಸುವರ್ಣಿಯುಂ ದೊರೆಯಲ್ಲಂ (ಶಾಂತಿಪು. ೪-೪೪ ವ). ೨. ಒಂದು ಬಗೆಯ ಸಸ್ಯ : (ವೃಕ್ಷಿಗ. ೪೭-೯೦೭). [ಸಂ.]

**ಪುರುಷರಾಗ** (ನಾ). [ಸಂಗೀತ] ರಾಗಗಳಲ್ಲಿ ಒಂದು ವರ್ಗ ; ಭೂಪಾಲಿ, ಭೈರವಿ, ಶ್ರೀರಾಗ, ಫಲಮಂಜರಿ, ವಸಂತ, ಮಾಲವ, ಬಂಗಾಲ ಮತ್ತು ನಾಟಿ ಎಂಬುವು ಎಂಟು ಪುರುಷರಾಗಗಳು : ಸ್ತ್ರೀರಾಗಚತುರ್ವಿಂಶತಿಸೌರಾಷ್ಟ್ರಗಭೀರಪುರುಷರಾಗಂಗಳವಂ ಮಾರಿಜಮುಖಿಯರ್ ಪಾಡಿದರ್ (ಹರಿಶ್ಚ. ೨-೯೩). [ಸಂ.]

**ಪುರುಷರಾಶಿ** (ನಾ). [ಜ್ಯೋತಿ] ಜ್ಯೋತಿಶ್ಶಾಸ್ತ್ರದಲ್ಲಿರುವ ಹನ್ನೆರಡು ರಾಶಿಗಳಲ್ಲಿ ಆರು ರಾಶಿಗಳ ಒಂದು ವಿಭಾಗ; ಜ್ಯೋತಿಶ್ಶಾಸ್ತ್ರದಲ್ಲಿ ಹನ್ನೆರಡುರಾಶಿಗಳನ್ನು ಪುರುಷರಾಶಿ ಮತ್ತು ಸ್ತ್ರೀರಾಶಿ ಎಂದು ಎರಡು ವಿಭಾಗ ಮಾಡುತ್ತಾರೆ. ಮೇಷ, ಮಿಥುನ, ಸಿಂಹ, ತುಲಾ, ಧನುಸ್ಸು, ಕುಂಭ ಈ ಆರೂ ಪುರುಷರಾಶಿಗಳು. ವೃಷಭ ಕರ್ಕಾಟಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಆರೂ ಸ್ತ್ರೀರಾಶಿಗಳು. ಜಾತಕನಿಗೆ ಪುರುಷರಾಶಿಗಳು ಕ್ರೂರವೆಂದೂ ಸ್ತ್ರೀರಾಶಿಗಳು ಸೌಮ್ಯವೆಂದೂ ನಂಬಲಾಗುತ್ತದೆ : ಹರಿ ಮಿಥುನ ತುಲಾಜ ಧನುರ್ಧರ ಘಟಮಿವು ಪುರುಷರಾಶಿಗಳ್ ಕ್ರೂರಂಗಳ್ (ಜಾತಕ. ೦-೨೨). [ಸಂ.]

**ಪುರುಷರೂಪು** (ನಾ). ಪುರುಷಾಕಾರ; ಪುರುಷಾಕೃತಿ : ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ (ಹಕಲಾ. ೯-೦೦). [ಪುರುಷ + ರೂಪು]

**ಪುರುಷವಶ್ಯ** (ನಾ). ಗಂಡಸನ್ನು ವಶಮಾಡಿಕೊಳ್ಳುವುದು ; ಪುರುಷವಶೀಕರಣ : ವೃತ್ತಕುಚಿ ಮುಟ್ಟವೆಯು [ಕಾಕಾಂ, ಲಿನ] ನೇತ್ರರಿಂ ಭಾವನೆಯಸತ್ತ ಗೋರೋಚನಮನದಲ್ ತೇದು ಚಿತ್ರಕ್ಕೆ ಬರ್ಪನಂ ಚಿತ್ರದೊಳ್ ನಿಲಿಸಿ ನೆನೆವುತ್ತಮಿಾ ತಿಲಕಮಿಡೆ ಪುರುಷವಶ್ಯಂ (ಜಿನವ. ೦೩-೬೩); ಕೆಜು ನೆಲ್ಲಿಯ ಅರ್ಚನೆ ಮಾಡಿ ತಂದು ಚೂರ್ಣಿಸಿ . . . ಅದನ್ನು ಬೆಣ್ಣೆಯಲ್ಲಿ ಕಲಸಿ ತುಪ್ಪವ ಕಾಸಿ ಊಟದಲ್ಲಿ ಆ ತುಪ್ಪವನಿಕ್ಕಲು ಹೆಂಡತಿಯನೊಲ್ಲದ ಪುರುಷನೊಲಿವನು. ಪುರುಷವಶ್ಯ ತಪ್ಪದು (ವಿವ್ಯಕಿ. ೨೦೦). [ಸಂ.]

**ಪುರುಷವಾಚಕ** (ನಾ). ೧. [ವ್ಯಾಕ] ಪುಲ್ಲಿಂಗಸೂಚಕವಾದ ಪದ : ಸಮುಚ್ಚಯದಿಂ ಅಪತ್ಯ, ಕಳತ್ರ—ಎಂಬ ಶಬ್ದಂಗಳ್ ಸ್ತ್ರೀವಾಚಕಮಾಗಿಯುಂ, ಜನಶಬ್ದ ಲೋಕಶಬ್ದಂಗಳ್ ಪುರುಷವಾಚಕಂಗಳಾಗಿಯುಂ ನಪುಂಸಕಂ (ಶಮಾದ. ೦೫೫ ಪ್ರಯೋ). ೨. ಉತ್ತಮ, ಮಧ್ಯಮ ಮತ್ತು ಪ್ರಥಮ ಎಂಬ ಮೂರು ಸರ್ವನಾಮಗಳಿಗೆ ಅನುಕ್ರಮವಾಗಿ ಸೇರುವ ಆಖ್ಯಾತಪ್ರತ್ಯಯಗಳು : ಪುರುಷವಾಚಕಪ್ರತ್ಯಯಗಳು ವಚನವನ್ನೂ (ಪ್ರಥಮಪುರುಷದಲ್ಲಿ) ಲಿಂಗವನ್ನೂ ತಿಳಿಸುತ್ತವೆ (ಕೈಪಿಡಿ. ೪೩). ೩. ಉತ್ತಮ, ಮಧ್ಯಮ ಹಾಗೂ ಪ್ರಥಮಪುರುಷದ ಸರ್ವನಾಮ : ಈ ಮೂರು ಬಗೆಯ ಸರ್ವನಾಮಗಳನ್ನೂ ಒಟ್ಟಿಗೆ ಪುರುಷವಾಚಕಸರ್ವನಾಮಗಳೆಂದು ಕರೆಯುತ್ತಾರೆ (ಮಧ್ಯಮ. ೩೦). [ಸಂ.]

**ಪುರುಷವೇದ** (ನಾ). [ಜೈನ] ಮೋಹನೀಯಕರ್ಮದ ಇಪ್ಪತ್ತೆಂಟು ಪ್ರಕಾರಗಳಲ್ಲಿ ಒಂದು ; ಗಂಡಿಗೆ ಹೆಣ್ಣಿನ ಮೋಹವನ್ನುಂಟು ಮಾಡುವ ಕರ್ಮ : ಪುರುಷವೇದಮಂ ಸಂಜ್ವಳನಚತುಃಕ್ರೋಧ ಮಾನಮಾಯಾಲೋಭಂಗಳನೊರ್ಮೆಯೆ ನಿರ್ಮೂಳಿಸಿ ತಳೆದನಜೇಯಂ ಜಯಾಂಗನಾಲಿಂಗನಮಂ (ಮಲ್ಲಿಪು. ೦೪-೬೩); ಸ್ತ್ರೀವೇದಂ ಪುರುಷಾಭಿಲಾಷೆಯಂ ಮಾಳ್ಪುದು ಪುರುಷವೇದಂ ಸ್ತ್ರೀಯಾಭಿಲಾಷೆಯಂ ಮಾಳ್ಪುದು ನಪುಂಸಕವೇದಮುಭಯಾಭಿಲಾಷೆಯುಂ ಮಾಳ್ಪುದು (ಕಸಾರ. ೧೨). [ಸಂ.]

**ಪುರುಷವ್ಯಾಧಿ** (ನಾ). ಗಂಡಸರಿಗೆ ತಗುಲುವ ಗುಹ್ಯರೋಗ,—ಲೈಂಗಿಕ ರೋಗ : ಪುರುಷವ್ಯಾಧಿಗೆ . . . ರಸ, ಹೊನ್ನೇತೊಕ್ಕು, ತುತ್ತ, ಪಟಿಕ ಮೂರು ವರಹ ತೂಕ, ಮುಸ್ತಕಿ ಐದು ವರಹ ತೂಕ, ಧೂಪದ ಹಳುಕು ಮೂರು ವರಹ ತೂಕ . . . ಇಷ್ಟನ್ನೂ ಒಳ್ಳೇಎಣ್ಣೆಯಲ್ಲಿ ಮರ್ದಿಸಿ, ಅಲ್ಲ, ಬಿಸಿನೀರ ಬಿಟ್ಟು ಕೊಬುದು. ಇದು ಪುರುಷವ್ಯಾಧಿಗೆ ಸಿದ್ಧ ಪ್ರಯೋಗ (ವಿವ್ಯಕಿ. ೭೦). [ಸಂ.]

**ಪುರುಷವ್ರತ** (ನಾ). ೧. ಬ್ರಹ್ಮಚರ್ಯ : ಅಂಗಜೋತ್ಪತ್ತಿಸುಖಕ್ಕೆ ಸೋಲಬಟಿಗುಂ ಪುರುಷವ್ರತಂ (ಶಂಕಭಾ. ೦ ೭೩); ಬಿಸುಡೆಂ ಮದೀಯ ಪುರುಷವ್ರತಮೊಂದುಮಂ (ಶಂಕಭಾ. ೦-೬೩). ೨. ಇಂದ್ರಿಯನಿಗ್ರಹ : ಪುರುಷವ್ರತಕ್ಕೆ ಭಂಗಂ ಪರವಧುವಂ ನೋಡಿದಂದುಮುಳಿಬಾ ಪರಸುಂದರಿ ನೀನೆಂಬುದನೀ ಕಾತರತೆಯೆ ಪೇಳ್ದಪುದು ಪೋಗು ಪಾತಕಿ ಬೇಗಂ (ಅನಾವ. ೦೪-೧೦೭). ೩. ಪಾತಿವ್ರತ್ಯ ; ಪತಿನಿಷ್ಠೆ : ಗಿರಿಜೆಯ ಪಾದಪದ್ಮವಿಗಳ ಜ್ವಳದಿಂದಮೆ ಕೊರ್ಬಿ ನೀತಿ ವಿಸ್ತರಿಸಿರೆ ಸೊಂಪುವೆತ್ತು ಪುರುಷವ್ರತದಿಂ ದಳಮೇಱಿ ಭಾಗ್ಯಮಂಜರಿಗಳನಾನ್ತು ರಂಜಿಸುವ ಶಾಂತಲದೇವಿಯ ರೂಪು ಕಲ್ಪಪಲ್ಲರಿಯಡರ್ದತ್ತು ವಿಷ್ಣುನೃಪನೆಂಬ ಸಮುನ್ನತಕಲ್ಪವೃಕ್ಷಮಂ (ಎಕ. V, ಹಾಸನ. ೦೦೭-೩೦ ; 1123). [ಸಂ.]

**ಪುರುಷವ್ರತಿ** (ನಾ). ಪತಿವ್ರತಾಧರ್ಮವನ್ನು ಪಾಲಿಸುವವಳು ; ಪತಿವ್ರತೆ : ಮುನ್ನಿನ ಪುರುಷವ್ರತಿಯರು ಒಲಿಸಿದ ಆಯತದ ಪರಿಪರಿಯಲಿ ಬಣ್ಣಿಸಲು ಬಹುದಲ್ಲದೆ ಪುರುಷನಿರ್ವಾಣಕ್ಕುರಿವಗ್ನಿಯ ಬಂದು ಹೊಕ್ಕು ತೋಱಲು ಬಾರದು . . . ಇಂತೀ ಅರೆಬಿರುದಿನ ಬಂಟರು ಪುರುಷವ್ರತಿಯರು ಪುರಾತನರು ಬಱಿಯ ಮಾತನಾಡಿ ಹೊಱಗೆ ಮೆಱೆವರಲ್ಲ (ಬಸವ. ೭೭೮). [< ಪುರುಷವ್ರತ]

**ಪುರುಷಶೀಲೆ** (ನಾ). ಗಂಡಸಿನ ಸ್ವಭಾವವುಳ್ಳವಳು ; ಗಂಡುಬೀರಿ : ಜಲಜಸಖಸೂನು ಮಧ್ಯಮಬಲನೆನೆ ಬಲರಹಿತರೆನೆ ಸಿತೇಂದುಜಶಶಿಗಳ್ ಬಲಯುಕ್ತರನ್ಯರೆನೆ ವಿಷಮಲಗ್ನಮೆನೆ ವನಿತೆ ಪುರುಷಶೀಲೆಯೆನಿಕ್ಕುಂ (ಜಾತಕ. ೨೨-೨೨). [ಸಂ. ಪುರುಷಶೀಲಾ]

**ಪುರುಷಸೂಕ್ತ** (ನಾ). ಪರಮಾತ್ಮನ ವಿರಾಟ್‌ಸ್ವರೂಪವನ್ನು ವಿವರಿಸುವ ಒಂದು ವೇದಭಾಗ : ಸಾಹಸ್ರಶೀರ್ಷಾ ಪುರುಷನೆಂದೇ ಪುರುಷಸೂಕ್ತಂ (ಗಗಕಾ. ೦೭-೨೦); 'ಪುರುಷಸೂಕ್ತ'ದಲ್ಲಿ ದೇವತಾಭಾವನೆ ಇನ್ನೊಂದು ರೂಪದಲ್ಲಿದೆ. ವಿಶ್ವವನ್ನೇ ಒಬ್ಬ ಪುರುಷನೆಂದು ಭಾವಿಸಿ, ಅವನನ್ನೇ ದೇವತೆಗಳು ಪಶುವನ್ನಾಗಿ ಮಾಡಿ ಒಂದು ಮಹಾಯಜ್ಞವನ್ನು ನಡೆಸಿದ್ದರಿಂದ ಈ ವಿಶ್ವವು ಸೃಷ್ಟಿಯಾಯಿತು ಎಂಬ ಒಂದು ಅದ್ಭುತಕಲ್ಪನೆ ಇದೆ (ಶಾರದ. ೨೭). [ಸಂ.]

**ಪುರುಷಾಂಗ** (ನಾ). ಪೌರುಷ ; ಪುರುಷತನ : ಹೆಂಗುಸುಗಳಾವ್ ಬಲ್ಲೆವೇ ಪುರುಷಾಂಗ ನಿಮ್ಮದು ಪೌರುಷಾಂಗದ ತುಂಗಬಲದಿಂದೆ ನಿಮ್ಮ ಬಳಿಯಲಿ ಲಕ್ಕಸಂಖ್ಯೆಯಲಿ (ತೊರಲಾ. ೪-೦೦-೨೭). [ಸಂ.]

**ಪುರುಷಾಂತರ** (ನಾ). ೧. ಇನ್ನೊಬ್ಬ ಗಂಡಸು ; ಪರಪುರುಷ : ಪುರುಷಾಂತರಕ್ಕೆಳಸಿ ಪುಷ್ಪಶರತಾಪದಿಂ ಕರಗಿ ಕಾತರಿಸಿ ಮೆಲ್ಲನೆ ದೂತಿಯೊರ್ವಳಂ

ಕರೆದೊಡಂಬಡಿಸಿ . . . ಮದನಕೇಳಿಗೆ ಸಂದು ಮರಳಿ ಮಾನಿನಿಯರಂತಿರ ಬಲ್ಲರಪರೆ ಜಾರೆಯರ್ (ಕೈಪಿಭಾ. ೩-೩೯). ೨. (ಯೋಗ್ಯ ಮತ್ತು ಅಯೋಗ್ಯರಾದ) ಪುರುಷರ ನಡುವಣ ಭೇದ,—ತಾರತಮ್ಯ: ಅಗ್ಗಳದ ವಿವೇಕವಿಲ್ಲ ನಿನಗೆತ್ತಬಾ ಪುರುಷಾಂತರಂಗಳಾ (ಗದಾಯು. ೯-೩); ಮರುಳೆ ಮದಾಂಧತೆಯೊಳುಲಿವೆ ಪುರುಷಾಂತರವನರಿಯದೆಯ್ದಿದ ಧರಣಿಪನ ನೆರೆಯದಾದಳ್ ತರುಣಿಯೆಂದೆನುತೆ ನಿನ್ನಂ ನಗರೇ ಸರಿಯ ಸೂಳೆಯರೆಲ್ಲರ್ (ಉಪಶಾಪು. ೩-೭೯). [ಸಂ.]

**ಪುರುಷಾಂತರಸಂಧಿ** (ನಾ). [ರಾಜನೀ] ಸಂಪ್ರದಾನ, ಕಪಾಲ, ಉಪಹಾಸನ, ಸಂತಾನ, ಸಂಗತ, ಉಪನ್ಯಾಸ, ಪ್ರತೀಕಾರ, ಸಂಯೋಗ, ಪುರುಷಾಂತರ, ಅದೃಷ್ಟಪುರುಷ, ಆದಿಷ್ಟ, ಆತ್ಮಾಮಿಷ, ಉಪಗ್ರಹ, ಪರಿಕ್ರಮ, ಅರಿಪರದೂಷಣ ಮತ್ತು ಸ್ಕಂಧೋಪನಯ ಎಂಬ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು: ನಿನ್ನ ಸೇನಾನಾಯಕರಿಂದೆನ್ನ ಕಾರ್ಯಮಂ ಸಾಧಿಸಿದೊಡೆ ನುಡಿದ ಪಣಮಂ ಕುಡುವೆನೆಂಬುದು ಪುರುಷಾಂತರಸಂಧಿಯೆಂಬುದಕ್ಕುಂ (ಪಂಚತಂ. ೨೨-೦೩). [ಸಂ.]

**ಪುರುಷಾಕಾರ** (ನಾ). ಗಂಡಸಿನ ರೂಪ; ಗಂಡುರೂಪು: ಪುರುಷಾಕಾರಮದಿಲ್ಲ್ಯ ಹರಿ ನಿನ್ನೊಳ್ ಪುರುಷಕಾರವಂ ಕಾಣೆಂ (ಗದಾಯು. ೭-೩೦); ನಿನ್ನ ಪುರುಷಾಕಾರಮುಂ ಮನೋಹರಾಕಾರಮುಂ ವಾರ್ಯವೀರ್ಯಮುಮಿನ್ನೆವರಂ ಶ್ರವಣಭೂಷಣವಾಗಿರ್ದುವೀಗಳೆಮಗೆ ಪ್ರತ್ಯಕ್ಷಮಾದುವು (ಪಂಚಾಮಾ. ೦೨-೩೩ ಪ); ಪುರುಷಾಕಾರದೊಳ್ ಪುರುಷಕಾರದೊಳಾರುಂ ನೆಗೞ್ದೀಶ್ವರಾರ್ಯ್ಯನಂ ಪೋಲ್ವಪರೇ (ಎಕ. VII, ಶಿಕಾ. ೦೩೨-೩೩; 1104). [ಸಂ.]

**ಪುರುಷಾಕೃತಿ** (ನಾ). ೧. = ಪುರುಷಾಕಾರ: ತಮ್ಮ ದಿವ್ಯಾಯುಧಂಗಳನೆಲ್ಲಮಂ...ಶಮೀವೃಕ್ಷದ ಮೇಲೆ ಪುರುಷಾಕೃತಿಯಾಗಿ ನೇಲ್ಗಟ್ಟಿ (ಪಂಪಭಾ. ೮-೩೨ ಪ); ಪೋಪುಬ್ಬೋಯುತ್ತು ದೀಪ್ರತಪಮೆಂಬಿನಮರ್ಕಕರಂಗಳತ್ತ ಮಿತ್ತಂ ಪುದಿದುಪ್ಪರಶ್ಮಿ ಪುರುಷಾಕೃತಿಯಂತಿರೆ ನಿತ್ಯಯೋಗನಿಷ್ಠಂ ಪಂ (ಶಾಂತಿಪು. ೯-೦೦೬); ಪುರುಷಾಕೃತಿಯಿಂ ತಾನವತರಿಸಿದ ಶಶಿಯೆಂದು ಬಂದು ಬಳಸಿದ ತಾರಾಪರಿಕರಮೆನೆ ಕಣ್ಗೆಸೆದುದು ಪಿರಿದುಂ ಬಾಲಕನ ಮೌಕ್ತಿಕದ ಕಟಿಸೂತ್ರಂ (ಶಾಂತೀಶ್ವ. ೮-೭೬). ೨. ಗಂಡಸಿನಂತೆ ಆಕಾರವುಳ್ಳವಳು: ಪುರುಷಾಬೊಲೀಕೆ ಕರಂ ಪುರುಷಾಕೃತಿಯೆಂಬುದಿಂತು ನಾನಾಲಿಂಗಂ (ಶಬ್ದಾ. ೩-೮೯). [ಸಂ.]

**ಪುರುಷಾಣು** (ನಾ). ವೀರ್ಯದ ಅಣು; ಶುಕ್ಲಾಣು: ತಾಯಿ ಗರ್ಭ ಧರಿಸಿದಾಗ ತಾಯಿಯ ಗರ್ಭಕೋಶದಲ್ಲಿರುವ ತತ್ತಿಯು ತಂದೆಯಿಂದ ಬಂದು ಸೇರಿದ ಪುರುಷಾಣುವಿನೊಡನೆ ಸಂಯೋಗ ಹೊಂದುವುದು (ಗೃಹ. ೧೦೭); ಪುರುಷಾಣುವಿನ ಸಂಬಂಧವಿಲ್ಲದೆಯೆ...ಸಂತಾನೋತ್ಪತ್ತಿಯನ್ನು ಮಾಡುವುದು ಎಷ್ಟೋ ಕೀಟಗಳಲ್ಲಿ ಕಂಡುಬರುತ್ತದೆ (ಕೀಟಪ. ೭). [ಸಂ.]

**ಪುರುಷಾದ** (ನಾ). ಮನುಷ್ಯಭಕ್ಷಕ; ನರಮಾಂಸಭಕ್ಷಕ. [ಸಂ.]

**ಪುರುಷಾದಕ** (ನಾ). =ಪುರುಷಾದ: ರಕ್ಕಸರನಿಬರೆಲ್ಲರುಂ ದೀರ್ಘದೇಹಿಗಳ್ ಪೆಕ್ಕಸದ ಕೋಪಿಗಳ್ ಮೇಲೆ ಪುರುಷಾದಕರ್ (ಕೈಪಿಭಾ. ೦೩-೨೨). [ಸಂ.]

**ಪುರುಷಾಧಮ** (ನಾ). ನೀಚಮನುಷ್ಯ; ಕೀಳಾದ ವ್ಯಕ್ತಿ: ನಿಮಗೆ ಪೌರುಷವಿಲ್ಲ ನಳನಾಕ್ರಮಿಸಿಕೊಂಡನು ಸತಿಯ ಪುರುಷಾಧಮರು ನಿಮಗಿನ್ನೇಕೆ ಕೊಡಿ ಪಟ್ಟುವೇಷವನು ನಮಗೆ ಕಮಲಮುಖಿಯನು ನಿಮಗೆ ಪಟ್ಟದ ರಮಣಿಯನು ಮಾಡುವೆನು (ನಳಚ. ೯-೦೦). [ಸಂ.]

**ಪುರುಷಾಮೃಗ** (ನಾ). ಅರ್ಧ ಮನುಷ್ಯನಂತೆಯೂ ಅರ್ಧ ಮೃಗದಂತೆಯೂ ದೇಹವಿರುವುದೆಂದು ನಂಬಲಾದ ಒಂದು ಬಗೆಯ (ಪೌರಾಣಿಕ) ಪ್ರಾಣಿ: ಎಂಜಲಿನ ಶುದ್ಧತೆಗೆ ಹೇಳಿದಕೆ ಬುದ್ಧಿಯೆನೆ ತದ್ವನಮಾಲಿ ಪುರುಷಾಮೃಗವನಿಲ್ಲಿಗೆ ನಾಳೆ ಭೀಮನ ಕಳುಹಿ ತರಿಸೆನಲು (ಕುಮಾವ್ಯಾ ಸ. ೬೦೩. ೭-೬); ಇದಿರ ಮೃಗವೇನಾನುವವೆ ಕೆರಳಿದರೆ ಪುರುಷಾಮೃಗದ ಗಾವಳಿಗೆ (ಜೈಮಿ. ೬-೩೦-೯೪); ಪರಿವ ಪುರುಷಾಮೃಗಂಗಳಿಂ ನೆರೆದು ಪರಿವ ಕರಿಗಳಿಂ ... ಸರ್ವಪರ್ವತಸಾರ್ವಭೌಮನಖರ್ವಸಂಪದಮಿಗೆ ಮೆಱೆವುತಿರ್ದುದು (ರಾಜಶೇ. ೦-೦೩೩ ಪ). [ < ಪುರುಷ+ಮೃಗ ]

**ಪುರುಷಾಮೃಕ** (ನಾ).=ಪುರುಷಾಮೃಗ: ಹಿರಿಯ ಆರತಿ ೮ ಪುರುಷಾಮೃಕದ ಆರತಿ ೩ ನಾಗಾರತಿ ೧ ಧೂಪಾರತಿ [೧] . . . ಅಂತು ಆರತಿ ೨೫ (ಸೌಇಇ. IV, ೨೭೩-೪೦; 1518).
[ < ತಮಿ. ಪುರುಷಾಮಿರುಕಮ್./ ಸಂ. ಪುರುಷಮೃಗ ]

**ಪುರುಷಾಯಿತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ; ಸ್ತ್ರೀಯು ಪುರುಷನ ಸ್ಥಾನವನ್ನು ವಹಿಸಿ ನಡೆಸುವ ಸಂಭೋಗ; ವಿಪರೀತರತಿ: ಪೊದಟ್ಟಿ ಕಬರೀಭರಂ ಪರೆದು ಪರ್ವೆ ತುಂಗಸ್ತನಂ ಕದಕ್ಕದಿಸೆ ಕಣ್ಮಲರ್ ಪೊಳೆಯೆ ಕಾಂತನು ಮೆಚ್ಚಿಸಲ್ ವಿದಗ್ಧೆ ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆ ಸವಿಲಾಸಿಮಂ ತೋಱಿಪಲ್ (ಅಂಪು. ೦೨-೦೯); ಪೆರ್ಮೊಲೆಗಳ್ ಕದಕ್ಕದಿಸೆ ನರ್ತಿಸೆ ಕುಂಡಲಂ . . . ತನ್ವಿ ಪುರುಷಾಯಿತದೊಳ್ ಪ್ರಿಯನಂ ಮಂಗುಬ್ಬಿದಳ್ (ಸೂಕ್ತಿಸು. ೦೯-೩೦); ಪುರುಷಾಯಿತದೊಳಾರು ತೊಡಗು ವರಪರಿಗೆ ಜಘನಭಾರದ ಸೇದೆಯಾದುದು (ರಾಘಾಸ. ೪೯-೯೬). [ಸಂ.]

**ಪುರುಷಾರ್ಥ** (ನಾ). ೧. ಮನುಷ್ಯನು ಸಾಧಿಸಬೇಕಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪರಮಧ್ಯೇಯ: ಪುರುಷಾರ್ಥನಿಧಿ ಪುರಂದರಪರಮಪ್ರಿಯಮಿತ್ರನೊರ್ವನುದಯಿಸಿದಂ . . . ಹಂಸಂ (ಶಾದಂಪು. ೬೦೦); ಸುರಧೇನುಸ್ಪರ್ಶಾಸಾರದಂತೆ ಪುರುಷಾರ್ಥಂ ಮೂರ್ತಿಗೊಂಡಂತೆ ನಾಲ್ವರುಮೋದಾಗಿರೆ ನಂದನರ್ ದಶರಥಂ . . . ಉತ್ಸಾಹಮುಂ ತಾಳ್ದಿದಂ (ಪಂಚಾಮಾ. ೩-೦೯೩); ಸ್ನೇಹಪೂರ್ವಕದಿಂದ ಮನದೊಳಗಾಹಿಸಲು ಲಕ್ಷ್ಮೀಶನವರಿಗೆ ಬೇಹ ಪುರುಷಾರ್ಥಂಗಳಹವೆಲ್ಲಿದ್ದರಲ್ಲಲ್ಲಿ (ಕುಮಾವ್ಯಾ ಶಾ. ೩-೦೨೦). ೨. ಮೋಕ್ಷಮಾರ್ಗ; ಮುಕ್ತಿಪಥ: ಕುಲಿಶಾಸ್ತ್ರೋತ್ತಂಸಿತಪದನಲಿನಂಗೆ ತನುಜರಾಗಿ ಪುರುಷಾರ್ಥಮನುಜ್ಜಿಸದೆ ಮಾಣ್ಬವೆ (ಅಂಪು. ೦೯-೩೩); ರಾಜ್ಯಲೋಭವಶದಿಂ ಪುರುಷಾರ್ಥಮನೊಕ್ಕು ಪಾರ್ಥಿವಾಗ್ರಣಿಗಳನೇಕರುಂ ಜವನ ದಾಡೆಯೊಳಟ್ಟಿದರ್ (ಧರ್ಮಪು. ೦೩-೬೯); ಬ್ರಹ್ಮದ ಅರಿವೇ ಪುರುಷಾರ್ಥವು (ಬ್ರಹ್ಮಸೂ. ೦೯). ೩. ಯೋಗ್ಯವಾದುದು; ಸಾರ್ಥಕವಾದುದು: ಮತ್ಸರಮಹೋರಗಕ್ಕಮಾಗ್ರಹಮಹಾಗ್ರಹಕ್ಕಂ ಕೋಪಮದಾನೇಕಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು (ಶಾಂತಿಪು. ೩-೭೩ ಪ); ಪುರುಷಾರ್ಥಮಲ್ತು ಪರನಿಂದೆಯುಮಾತ್ಮಗುಣಪ್ರಶಂಸೆಯುಂ (ಪಂಚಾಮಾ. ೩-೨೪); ದಿವೌಕಸರ ಸಮ್ಮೇಳವೇ ಪುರುಷಾರ್ಥತನಗೆ (ಕುಮಾವ್ಯಾ ದ್ರೋ. ೭-೦೬). ೪. ಮನುಷ್ಯಪ್ರಯತ್ನ: ಪುರುಷಾರ್ಥಂ ತನಗುಳ್ಳ ಮಾನವನವಂ ತಾನೆಂತುಮಿರ್ಕುಂ (ಪೇಬಾಪು. ೭-೦೩೭). ೫. ಸಂಪತ್ತು; ಧನ; ಹಣ: ಖಳರ ಪುರುಷಾರ್ಥಮುಂ ಕಾಮಿಸುವ ಯಾಚಕಾವಳಿಯಂತೆ ಪೊಳಲಿಂದೆ ಪೊಱಮಟ್ಟು ಸರಸಿಯೊಳ್ ಮುಳುಗುತಿರ್ಪಾನೆಗಳ ದಾನಾಭಿಲಾಷೆಯಂ ಬಿಟ್ಟಳಿಕುಳಂ ತೊಳಗಲು (ಕೈಪಿಭಾ. ೩-೩೯). ೬. ಉಪಕಾರ; ಸಹಾಯ: ಇದ್ದಪರೆ ಮಱೆದು ಪುರುಷಾರ್ಥಮಂ ಮಾಡಿದರನುದ್ದಾಮಗುಣಮುಳ್ಳ ಜೀವಿಗಳ್ (ಕೈಪಿಭಾ. ೩-೩೦). ೭. ವಿಶೇಷವಾದ ಫಲ; ಹೆಚ್ಚಿನ ಪ್ರಯೋಜನ: ಗೋವಿಂದಭಟ್ಟನ ಅಪಲಕ್ಷಣತನ . . . ತಿಳಿದ ಬಗ್ಗೆ ಸಾಕ್ಷಿ ಸಾರುವುದರಲ್ಲಿ ಈಗ ಪುರುಷಾರ್ಥವೇ ಇರಲಿಲ್ಲ (ರಂಚ. II, ೭); ಪುಣ್ಯವಿಲ್ಲ, ಪುರುಷಾರ್ಥವಿಲ್ಲ (ಹರಿಹೂ. ೩೪೦). [ಸಂ.]

**ಪುರುಷಾರ್ಥಿ** (ನಾ). ೧. ಉತ್ತಮವಾದ ಧ್ಯೇಯಗಳಿಗಾಗಿ ಶ್ರಮಿಸು ವವನು; ಸತ್ಪುರುಷ; ಸಜ್ಜನ : ದುರ್ಜನರು ಪುರುಷಾರ್ಥಿಗಳೆ ಹಾವಿಂಗ ನಿಲಸೇ ಆಹಾರವಾದಡೆ ಬಿಟ್ಟುದೇ ವಿಷವ (ಕುಮ್ಮಾ.ಕ. ೬ ೪); ಮೊಲೆಗೊಟ್ಟಳಸು ಗುಡಿದವಂ ಪುರುಷಾರ್ಥಿಯಾವವನೆ (ಕೈ.ಖಿಖಾ. ೬-೩೩). ೨. ಬಲಶಾಲಿ ; ಸತ್ತ್ವಶಾಲಿ : ನೀವು ಪುರುಷಾರ್ಥಿಗಳೂ ಮತ್ತು ಸ್ವತಂತ್ರರೂ ಆಗಬೇಕೆಂದು ಇಚ್ಛಿಸುವಿರೇನು ? (ಭ್ರಕ್ಷ.ಜೀ. ೮). [ಸಂ. ಪುರುಷಾರ್ಥಿನ್]

**ಪುರುಷೋತ್ತಮ** (ನಾ). ೧. ಮನುಷ್ಯರಲ್ಲಿ ಶ್ರೇಷ್ಠನಾದವನು ; ನರಶ್ರೇಷ್ಠ; ಮಹಾಪುರುಷ : ಆ ಪುರುಷೋತ್ತಮಂ ತಿಳಿಪಿದಂ ಒನಸಂ ನೆನೆಸಾಗೆ ರಾಗದಿಂ (ಶಾಂತಿಪು. ೯-೨೦೪) ; ಪುರುಷೋತ್ತಮನಾದರದಿಂ ಪರೋ ಪಕಾರಾರ್ಥಮಿತ್ತನಾತ್ಮೀಯಕಳೇಬರವಂ ಸುತರಕ್ಷಾರ್ಥಂ ಶರೀರಮಂ ಜನಕ ನೀವುದಾವುದು ಚೋದ್ಯಂ (ಶಂತಕಂ.೦೭೬-೩). ೨. ವಿಷ್ಣು ; ನಾರಾಯಣ : "ವನಜಾಕ್ಷಂ ಪುರುಷೋತ್ತಮಂ ನಗಧರಂ . . . ವೈಕುಂಠನಬ್ಜೋದರಂ" (ಪಮ್ಮ.ಕೋ. ೪-೨೦) ; ನೆಗಟ್ತೆಯ ಪುರುಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್ . . . ಕುಂತಿ (ಕಂಪಭಾ. ೦-೬೮) ; ಆ ಮಹಾರ್ಣವಂ . . . ಪುರುಷೋತ್ತಮನಂತೆ ಶಂಖಚಕ್ರಾಂಕಿತಮುಂ (ಜಗಪು. ೦-೪೪ ವ) ; ಪುರುಷೋತ್ತಮಂಗೆ ಕಮಲಂ ಕಣ್ (ಸೂಕ್ತಿಸು. ೬೬). ೧, ೨ : ಅಬ್ಜಾಯತ ನೇತ್ರನಾದಿಪುರುಷಂ ಪುರುಷೋತ್ತಮನೀ ಚಳುಕ್ಯನಾರಾಯಣದೇವ ನೀಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೦-೦). ೩. [ಜೈನ] ವಾಸುದೇವ ; ಲಕ್ಷ್ಮಣ : ಪುರುಷೋತ್ತಮನಿಸೆ ದಶಕಂಧರನಂ ಕೂರ್ಗಣೆ ಗಳುರ್ಚಲಾಬಿವೆ (ಕಂರಾಮಪು. ೦೪-೦೩೪). [ಸಂ.]

**ಪುರುಸ** (ನಾ). ೧. ಮಾನವ ; ಮನುಷ್ಯ : ಇದೇಂ ಗುಣವಂತನಿದೇಂ ಪುರುಸರನ್ನನೋ ಗಡ ಪುನ್ನಂ (ಶಾಂತಿಪು. ೦-೬೪); ಇದು ಮೇರುವಿಗಣೆ ಪುರುಸರೆಲ್ಲ ಸಾಜದ ಕಾರಣ ಧಾರುಣಿಯೊಳಗಣ ಜಂಗಮದಾರಾಧನೆ ಇಂದಯೆ ಸಾಕೀ ಜಗಕೆಲ್ಲಂ (ಎಕ. XI, ದಾವಣ. ೦೭೦-೪; 1266). ೨. ಗಂಡ ; ಪತಿ : ಮಾದಮ್ಮ ಪುರುಸಾಗೆ ಹೇಳು ತರುತಾನೆ (ಹಳ್ಳಿ.ಹ. ೧೦೩). [<ಪ್ರಾ. ಪುರುಸ./ಸಂ. ಪುರುಷ]

**ಪುರುಸತ್ತು** 'ಪುರಸತ್ತು' ನೋ.

**ಪುರುಸೊತ್ತು** 'ಪುರಸತ್ತು' ನೋ.

**ಪುರುಹ** (ನಾ). ಅಧಿಕವಾದುದು ; ವಿಪುಲವಾದುದು : "ಪ್ರಭೂತಂ, ಪ್ರಚುರಂ . . . ಪುರುಹಂ, ಪುರು, ಭೂಯಿಷ್ಠಂ, ಸ್ಫಾರಂ, ಭೂಯಂ, ಭೂರಿ — ೧೨ ಅಧಿಕವಾದದ್ದರ ಹೆಸರುಗಳು, ಬಹಳವಾದ್ದು" (ಸಿದ್ಧಾಂತಿ. ೩೪೦). [ಸಂ.]

**ಪುರುಹೂತ** (ನಾ). ಅನೇಕರಿಂದ ವಿಶೇಷವಾಗಿ ಪ್ರಾರ್ಥಿಸಲ್ಪಟ್ಟವನು ; ಇಂದ್ರ : "ಪುರುಹೂತಂ ಮಘವಂ ದಿವಸ್ಪತಿ . . . ವಾಸವಂ" (ಶಮ್ಮ.ಕೋ. ೬-೩೩) ; ಉತ್ಪತ್ಸ್ಯಮಾನ ಭಾವಿತೀರ್ಥಕರಪುಣ್ಯದೂತಾಹೂತಂ ಪುರುಹೂತಂ ಬಂದು (ಆದಿಪು. ೬-೮೮ ವ); ಮರುದೇವಿಗೆ ಪುಟ್ಟಿದಪಂ ಪುರುದೇವಂ ಬಂದು ದಿವದಿನೆಂಬಪಧಿಯಿನಾ ಪುರುಹೂತನಜದಯೋಧ್ಯಾ ಪುರಮಂ ನಾಡಾಡಿಯಲ್ಲದಂತಿರೆ ಪಡೆದಂ (ಕಂರಾಮಪು. ೦-೪೬). [ಸಂ.]

**ಪುರುಹೂತಗಣ** (ನಾ). [ಛಂದ] ಮೂರು ಅಂಶಗಳ ಗಣ; ವಿಷ್ಣು ಗಣಕ್ಕೆ ಸಮಾನವಾದ ಗಣ ; P ತೆಲುಗಿನಲ್ಲಿ ಇದನ್ನು 'ಇಂದ್ರಗಣ' ವೆಂದು ಕರೆಯುತ್ತಾರೆ : ಪುರುಹೂತಗಣಗಳಾಱುಂ ಸರಸಿಜಸಖಗಣ ಗಳೆರಡು ಸಂಧಿಸಿ ಬಕರ್ಂ ಚರಣಕ್ಕೆ ಸೀಸದಂತೆದೊಳೊರಗಿಂತಹ ಸರಳ ತನ್ನೊಳೊಪ್ಪುವ ತೆಱದಿಂ (?) (ಕ್ರಿ.ಬಿ. ೦೫೦). [ಸಂ.]

**ಪುರುಹೂತಜಾತ** (ನಾ). ೧. ಇಂದ್ರನ ಮಗ. ೨. ವಾಲಿ : ಸಂಭ್ರಮ ವಾರೆ ನೋಡಿದರ್ ಪುರುಹೂತಜಾತನಂ . . . ಇಳೆಗುರುಳ್ದು ಬಿಳ್ದಾತನಂ (ತ್ರಿ.ರಾಮಾ. ೩೦೨-೨೯೩). [ಸಂ.]

**ಪುರುಳ್**, ಪುರಲು, ಪುರುಳು, ಪೊರಳ್ಳು, ಪೊರುಳ್, ಹುರುಡ್ಡು, ಹುರುಳ್, ಹುರುಳು (ನಾ). ೧. ವಸ್ತು ; ಪದಾರ್ಥ : ನಾಣನೆಳ್ಳ ನಿತುಂ ಕಾದೆನೆ ಬೇಡಿದೊಂದು ಪುರುಳಂ [ಪಾಠಾಂ. ಬೇಡಿದೊಂದೊಡ ಮೆಯ್ಯಂ] ಮಾರ್ಕೊಂಡೆನೇ . . . ಆನೆರೆದಟ್ಟಿಯುಂ ಬಗೆಯನೇ ಗಂಡಂ ಮಾನಂಗೊಂಡನೋ (ಆದಿಪು. ೧೨-೩೬) ; ಮನವಿಚ್ಛೆಪಟ್ಟ ಪುರುಳಂ ಬೇಡಿ ಪೊಚ್ಚಮಿಲ್ಲದ ರಾಗರಸದಿಂ ಉಳಿಕೊಂಡಿ . . . ಪೊಟ್ಟುಗಳೆವುದು ನೃಪನ ಪೆಂಡವಾಸಂ ಕೂಡಿ (ಪುಷ್ಪ.ಕ. ೨-೪೪); ಮುನಿಗಳೊಂದು ಜಪದ ತಪದ ಮಂತ್ರದ ಬಲ್ಮೆಯೇಂ ಕಿಱಿದೆ! ಬೇಡಿದ ಪುರುಳನಱದಿಂ ತಂದೀಗುಂ (ರಾಮಾಶ್ವ. ೦೦೩-೨೯). ೨. ಸತ್ತ್ವ ; ಸಾರ ; ತಿರುಳು : ದೊರೆಯಲ್ಲದಂಗೆ ನುಡಿವುದು ಪುರುಳಿಲ್ಲದ ಮಾತನೆಮ್ಮೊಳಂ ನುಡಿವುದೆ (ಆದಿಪು. ೦೪-೮೦) ; ಮರುಳ ಮಾತಿನೊಳ್ಪುರುಳೇನೆಂದರಸಂ ಪೋಗೆವೋಗೆ (ಗದಾಯು. ೪-೪೩ ವ); ಆನುಂ ನೋಟಿಟ್ಟಿಂ ಕತೆಯ ಪುರುಳಿಂತಿರ್ಕುಮೆಂದು (ರಾಮಾಶ್ವ. ೩-೨೮). ೩. ಕೆಚ್ಚು; ಶಕ್ತಿ; ಚೈತನ್ಯ : ಅದಟನ ಪುರುಳಂ ಪೊಣರ್ದಾ ಗಳಜವೆನುಗ್ರಾಹವದೊಳ್ (ಆದಿಪು. ೧೨-೯೯); ತೆರಳ್ದ ಮೊಗಂ ಕರ್ಗಿದ ಬಾಯ್ ಪುರುಳಿಲ್ಲದ ಮಿಳ್ಳಿಗಾಲ್ (ಧರ್ಮಾಮೃ. ೬-೨೩೪). ೪. ಬೆಲೆ ; ಮೌಲ್ಯ. ೨, ೪: ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತಿಸೆಯೆ ಪೇಟ್ದ ಕಬ್ಬಮದೆಂತುಂ ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತಿಸೆವ ರನ್ನದಂತೆರ್ದೆವುಗದೇ (ಕಬ್ಬಿಗಕಾ. ೬). ೫. ಧನ ; ದ್ರವ್ಯ ; ಹಣ : ಪರಪಥುಗೆ ಸೋಲ್ತು ತಮ್ಮಯ ಪುರುಳೆಲ್ಲಮನಿತ್ತು ರಾಗದಿಂದಂ ದವರೊಳ್ ನೆರೆದು (ಸಮುಕ. ೩-೬೬) ; ಪುರುಳನಲ್ಲದೆ ಪುರುಷನನನುಭವಿಸ ಬಲ್ಲರೇ ಬೆಲೆವೆಣ್ಣಳ್ (ಅನಂಪು. ೮-೨೩) ; ಪುರುಳಂ ಪಡೆದೊಳ್ಗೆಯ್ಮೆಯೊಳೆ ರೆವರ್ಗಿತ್ತುಟ್ಟು ತೊಟ್ಟು ಪೆಂಡಿರ್ ಮಕ್ಕಳ್ವೆರಸು . . . ಪದುಳ ದೊಳಿರ್ಕುಂ (ಜಕಪ. ೩-೭೯೦). ೬. ಸಂಪತ್ತು ; ಐಶ್ವರ್ಯ : ನೆಲನಿದು ನೆಲಸಂ ಪಾಲಿಸು ನೆಲದಿಂ ಪುರುಳಕ್ಕುಮಾರ್ ನೆಲಕ್ಕೆಜಗದಪರ್ (ಕಾವ್ಯಾವ. ೬೬) ; ತಮ್ಮ ಪುರುಳೆಂಬರ್ ತಮ್ಮಕ್ಕಳನ್ (ಕುಱಳ್. ೦-೬-೩). ೭. ಒಳಿತು ; ಲೇಸು : "ಪುರುಳೆನಲೊಳ್ಳಿತು" (ಶಾಕು. ೦೪) ; ಪುರುಳಿಲ್ಲದಂಗೆ ಜೈನಂ ದೊರೆಕೊಂಡುಂ ದುಶ್ಚರಿತ್ರಮಂ ಬಿಡದುದಱಂ ಚಿರಕಾಲಂ ನಿಲಲ ರಿಯದು ಪರಿಕಿಸುವೊಡದಂತೆ ನಾಯ್ಗೆ ನೆಯ್ಯಕ್ಕುಗುವೇ (ಸಮುಕ. ೪-೩೪) ; ಸುಜನರ್ಬ್ಬ್ರಪ್ಯರೆ ತನಗಪರಜಸ್ರಮುತ್ತಂಸಮಪ್ಪ ಪುರುಳಿಂ ಚೊಪ್ಪಂ ಸುಜ ನೋತ್ತಂಸನೆನಿಪ್ಪಂ ಸುಜನಗ್ಗುಗ್ಗ್ಗತ್ತಂಸಮೆಂಬ ಪುರುಳಿಂದೆನಿಸಂ (ಎಕ. II, ೨೩೪-೬೬ ; ಸು. 1180). ೮. ಚೆಲುವು ; ಚಂದ : "ಪುರುಳೆನೆ ಚಂದ ಮಕ್ಕು" (ಶಶರ. ೦೩೭). ೯. ಫಲ ; ಪ್ರಯೋಜನ : ತನುಗೆ ಪೊಜಿ ತ್ತುಡುಗೆ ನವಲೇಪನಮೆ ಮಾಳಂ . . . ಇಂತಿನಿತಱೊಳವೊಂದಱೊಳ್ ಪುರುಳುಂಟೇ (ಆದಿಪು. ೯-೩೩) ; ನಾಲಗೆಯುಂ ಪಲ್ಲುಂ ತವುವನ್ನೆಗಮೋದಿ ದೊಡಂ ಕುತತ್ವದೊಳ್ ಪುರುಳುಂಟೆ (ಸಂಸಾರಸಾ. ೩-೪೪) ; ಈ ಪುರುಳಿಲ್ಲದ ನಾಯೊಡಲಂ ಮರುಳೇ ಕರವೊಲ್ದು ಕೂರ್ಪ ಮಾನಿಸರೊಳರೇ (ಧರ್ಮಾಮೃ. ೬-೦೪೨). ೧೦. ಬುದ್ಧಿವಂತಿಕೆ ; ಜ್ಞಾನ : ಪುರುಳಂ ಮರುಳಂ ಮಾಟ್ಟಂ ಶರನಿಧಿಯಂ ಬೆಂಚಿ ಮಾಡುವಂ ಕೇಸರಿಯುಂ ನರಿ ಮಾಟ್ಟಂ . . . ಕುಸುಮಪತಾಕಂ (ಲೀಲಾವ. ೪-೨೩). ೧೧. ಜ್ಞಾನಿ ; ತಿಳಿವಳಿಕೆಯುಳ್ಳ ವನು : ಪುರುಳಾಗು, ಮರುಳಾಗು, ಕಲಿಯಾಗು, ಪೇಡಿಯಾಗಣ್ಣ, ನೀನೆರೂರ್ವನಿರ್ದಪುದು (ಅಕ್ಕಾತ್ಮಾ. ೨೦-೪೦೪). **ಪುರಲು** : ೧೨. ಶೋಭೆ ; ಕಾಂತಿ : ಎರಡು ತಿಂಗಳ ಹರೆಯ ಮಂಗಳ ಬರಲು—ತುಂಬಿತು ವತ್ಸಗೇ ಬಿರುಮನಂಗಳ ಸಿರಿಯು , ಕಂಗಳ ಪುರಲಿದೇ ಕಡೆಕಂಜಿಯು (ಕೂಪು. ೨೦-೬೪). **ಪುರುಳು** : ೧. ನಿನ್ನ ಪುರುಳೆಲ್ಲವನು ಬೇದಿಗಿಡು ಮಾರಿಬಿಡು ನಿನ್ನ ಸಿರಿಯೆಲ್ಲವನು ಬಡಪರಿಂಗೆರೆದು ಬಿಡು (ಕಗದ್ಯ. ೬೨). ೨. ನೀನುಪಜೀವಿನ ತಿರುಳು ನಾನು

ಮಾಱಿವೆಯು ಪುರುಳು (ಪ್ರಭುಪು. ೬-೧೯೨) ; ಎನ್ನ ಪ್ರಾಣದ ಪುರುಳನೆನ್ನ ಜೀವನರುಚಿಯುನೆನ್ನ ಗರಿಮೆಯು ತೆನೆಯು ಕಾಣುತಿಹೆ ಸುಖವ (ಏಸೀಗೀ. ೪೦-೫). ೮. ಪರಿಪರಿಯಾಗಿ ಸಿಂಗರಿಸಲೇಕಹುದೊದು ಪುರುಳಾಗಿ ಸಿಂಗರಿಸಿದರು (ಶರಪ. ೩೧-೪೯) ; ಪಪಣಿಗೆಯೊಪ್ಪೆ ಪುರುಳು ಪೊಗರೇಱಿಯುಂಗವಿಸೆಯಲಂಕಾರಗಳು ಕವಿದು ಪರಿಯೆ ರಸದೊಳ್ಗಂಪು [ಕ]ವ್ಮನೆ ಕವಿತೆಯೊಂದನು ಪೇಳಿಸಿಂದು (ಹದಿಬ. ೧-೨೬). ೧೩. ಆಶಯ ; ಅಪೇಕ್ಷೆ ; ಉದ್ದೇಶ : ಒಳ್‌ಬಗೆಯೊಳು, ಮಂಗಸ, ನನ್ನ, ಮನೆಯು, ಹರಸಿ ನುಡಿದಿರಿ. ನಿಮ್ಮ ಪುರುಳು ನಡೆಯಲಣ್ಣ. ಹರಕೆಯಿಡಲು ತೆರಳುವೆ (ಶಾರಸಿ. ೧೧-೨೪೦). ೧೪. ಶಬ್ದದ ಅಭಿಪ್ರಾಯ ; ಅರ್ಥ : “ ಅನೇಕಾರ್ಥಾಃ — ಪಲವು ಪುರುಳುಳ್ಳವಾಗಿ ” (ಕಾಶಕ್. ೧) ; ಪುರುಳೊಂದೆಡೆ ಪದವೊಂದೆಡೆ ಸಂಬಂಧದಿರವೊಂದೆಡೆಯೆನೆ ಕೃತಿಯು ವಿರಚಿಸಿ ಕುಕವಿಜನಗಳೇಕೆ ಮಾಳ್ಪರೊ ಶಿರಕೆ ಬೇನೆಯು ಸುಕವಿಗಳ (ಕುರಾಸಾಂ. ೧-೮೨). **ಪೊರಳು₂ :** ೬. ಅಲಪಣವ್ವಂ ಅಪುತ್ರಕ ಪೊರಳುವಾನ್ ವಿಟ್ಟಾರ್ (ಇಆ. XIX, ೧೪೪-೬; 680). **ಪೊರುಳ್ :** ೫. ನೆಲ್ಲಿಗೆಱೆಯು ಕೆಱೆಗು ಕೊಟ್ಟ . . . ನಾಲ್ವತ್ತೆರಡು ಪೊರುಳುಂ ಬ್ರಾಹ್ಮಣರ್ಗ್ಗಂ ತಪಸಿಯರ್ಗ್ಗಂ ಕೊಟ್ಟ ಪೊರುಳು ಮೂವತ್ತೇಳುಂ (ಎಕ. IX, ಹೊಸಕೋ. ೧೧-೧೪ ; 1023). **ಹುರುಡು₂ :** ೨. ಇದಱೊಳು ಹೊಕ್ಕು ವಿಚಾರಿಸಿದೊಡೆ ಹುರುಡಿನಿತುಂಟೇ (ಕೃಕಪ. ೨-೬ ಶಲ್ಲಿವಿ) ; ಈ ಗರುಡನ ಹುರುಡು ಗೊತ್ತಿಲ್ಲವೆಂದು ಕಾಣುತ್ತದೆ ಈ ಜನರಿಗೆ (ಜನಪ. ೫). **ಹುರುಳ್ :** ೨. ನೀತಿಯೆಂಬುದು ನೀರ ಮೇಲೆ ತೇಲುವ ತೆಪ್ಪ ಮಾತ ಬಲ್ಲವರೆತ್ತ ತೆಗೆದಂತೆ ಬಹುದದು ಕೇಳಿದರೆ ಹುರುಳಾಗದು (ಸರ್ವಜ್ಞಕಾ. ೮-೧೮). ೬. ಗಂಡುಳಿವ ಸಿತಗರೆಲ್ಲಂ ಪೆಂಡಿರವೊಲು ಕರುಳ ಬೆರಳ ಹುರುಳಂ ಕೊಟ್ಟುಂ ಕಂಡುಂ ನಡೆವರು ಸಿತಗರ ಗಂಡಂ ಶ್ರೀಮಾಚಿ ಜಡಿಪನಸಿಯುನೆನುತ್ತಂ (ಎಕ. VII, ಶಿಕಾಂ. ೨೩೬-೭ ; 1174 ; ಶಾಶವುಂ. ೮೪೬ ನೋ). ೭. ಸನ್ನಿಂವಂ ಸಕಳಜಗಂ ಸುಖದಿಂದಿರ್ಪೊಡೆ ಹರಣದೊಂದು ಹುರುಳಱಿಸುವರೇ (೧೦ಕ. ೭-೩೨) ; ತರುಣನೆನ್ನೊಳು ತರಳನೆನ್ನೊಳು ದುರುಳನೆನ್ನೊಳು ಮರುಳನೆನ್ನೊಳು ಹುರುಳದೇನುಂಟೈ ಪರೀಕ್ಷಿಸೆ (ಶಾಪುಚ. ೯-೧೦೬). **ಹುರುಳು :** ೧. ಧರಧುರದೊಳಭಿಮಾನಹಾನಿಯು ಹುರುಳಹುದು ಬಿಲುಹೋರಟೆಗೆ ನಿಲಲರಿದೆನುತ್ತಂ ಗವಣೆಗುಂದಿತು ನೆರೆದ ನೃಪನಿಕರ (ಕುವ್ಯಾಅ. ೧೪-೧೬). ೨. ಗಱಿ ತೋಱಿ ಗಂಡರೆಂಬವರ ಕಾಣೆ ನಿಱು ಸೋಂಕಲು ಮುನಿಯಿಲ್ಲ ನೋಡಯ್ಯಾ . . . ಹುಲ್ಲ ಕಿಚ್ಚು ಹೊಲೆಯುನ ಮೇಳಾಪ ಅಲ್ಲಿ ಹುರುಳಿಲ್ಲ (ಬಸವ. ೧೧೨) ; ಸತ್ಯದ ಹುರುಳನಱಿಯದೆ ಆಳುಗೆಡೆದರೆ ಕಾರ್ಯವೆಂತಹುದು (ಕುವ್ಯಾಕ. ೧೬-೧೬) ; ಆ ಮಹಾತ್ಮನ ಹುರುಳ ನಾನೆಂತಱಿವೆನೆನುತಲಿ ಬಸವ ಚಿಂತಿಸಿದ (ಪ್ರಭುಲೀ. ೨೦-೬). ೩. ಹುರುಳು ಬಲ್ಲೆವು ಸಾಕು ಹೋಗು (ಕೌಶಿರಾ. ೨೦-೨೦) ; ದಿಗ್ವಿಜಯದ ಪರಾಕ್ರಮದ ಹುರುಳು ನಿನಗುಂಟೆಂಬುದದ ಕೆಲಕಿರಿಸು (ಕೊರರಾ. ೧-೯-೩೦) ; ಪುರುಷರಲಿ ಹುರುಳಿಲ್ಲ ಸಲಹೆಂದೊರಲಲಕ್ಷಿಯುವೆಂದು ವಸ್ತ್ರವ ಕರುಣಿಸಿದ (ಕೋಗಯು. ೧೫-೩೦). ೭. ತುದಿಗೊನೆಯು ಚೆಂದೊಗು ಖರ್ಜೂರದಲಿ ಕಾಣೆನು ಹುರುಳ ನಾರಂಗದ ವಿರಾಮವನೇನನೆಂಬೆನು ನಿವಿಂಷಮಾತ್ರದಲಿ (ಕವ್ಯಾಅ. ೧೮-೩೬) ; ಬಿಚ್ಚಿ ಹೇಳಲು ಹುರುಳ ಕಾಣೆನು ತುಚ್ಛತನುವಿದನು (ಅಮ್ಮಕ. ೨-೮೯). ೮. ಧಿಗಿಲೆಂದುದು ಧರಾಧೀಶ್ವರನ ತೇದೆಯು ಹೃದಯುವಲಿ ಹುರುಳೇನು ಬಳಿಕುಳಿದವರ ಮೋಱೆಗಳ (ಕುವ್ಯಾಕ. ೧-೨). ೯. ಓಂದಿನ ಹಳೆಯ ಕತೆಯನ್ನು ಕೆದರುವುದರಲ್ಲಿ ಹುರುಳಿಲ್ಲ (ಹಾತುತ್. ೪೦). ೧೩. ಮರುಳಲಾ ಮಱುಮಾತು ಕಡುವೃದ್ಧರಿಗದೇಕೆಂಬಂತೆ ಚಿತ್ರದ ಹುರುಳ ಬಲ್ಲೆನು ಮಥನ ಬಿಡಿ ಕೆಲಸಾರಿ ಸಾಕು (ಕುವ್ಯಾದ್ರೋ. ೧೭-೨೫). ೧೫. ನೆಲೆ ; ಬೀಡಂ ; ಆಶ್ರಯ : ಈ ಚರಾಚರ ನೆರೆದು ನಿಮ್ಮಯ ರೋಮಕೂಪದ ಹೊಱೆಯೊಳಗೆ ಹೊಳೆದಾಡುತಿಹುದೆಂಬಗ್ಗಳಿಕೆಗಳಿಗೆ ಹುರುಳೆನಿಪ ಹೇರಾಳದಂಗದ ಸಿರಿಯು ಶೋಭಿಸ್ಯ ಕೃಷ್ಣ (ಕುವ್ಯಾಭೀ. ೩-೬೨). ೧೬. ಮರ್ಮ ; ರಹಸ್ಯ : ಶ್ರೀಕಂಠಶಾಸ್ತ್ರಿಗಳು ಸುಭಗೆಯೊಡನೆ ಅಧಿಕಪ್ರಾಸಂಗಿಕವಾಗಿ ವರ್ತಿಸಿದುದಕ್ಕಾಗಿ ತಮ್ಮ ಹುರುಳನ್ನು ಅವಳು ಬೈಲಿಗೆಲ್ಲಿ ಎಳೆಯುವಳೋ ಎಂಬ ಭಯದಿಂದ ರಾತ್ರಿಯೆಲ್ಲ ನಿದ್ರೆ ಮಾಡಿದ್ದಿಲ್ಲ (ಗಂಗಾಸಾ. ೯೯). ೧೭. ನಾಯಕ ; ಒಡೆಯ ; ಮುಂದಾಳು : ಎಲೆಲೆ ವಿಲಯಕೃತಾಂತನೋ ನಮ್ಮಳವು ಕೊಳ್ಳದಾ ಬೆಂಗೊಡಲಿ ಮುಂಕೊಳಿಸದಿರಿ ಮರುಳಾಗದಿರಿ ಹುರುಳಾಗಿ ಹೆಂಡಿರಿಗೆ (ಕುವ್ಯಾಭೀ. ೫-೧೧) ; ವ್ಯಾಸಸ್ಫೂರ್ತಿಗೆ ನಡೆಕೋಲಾದನೆ ಮರುಳ್ಗಳ ಹುರುಳೇ ಎಡರಾಳುವನೇ ಏ ಬಿನದಕೆ ನನ್ನೆಡೆಗೈತಂದೆ (ಗಹೀಕ. ೨-೪೮). ೧೮. ಸತ್ವಶಾಲಿಯಾದವನಂ (?) : ಧರೆಯೊಳು ಮೈಸೂರವರ ಕೂಡೆ ವೈರವ ಬೆರಸಿದವರು ಹುರುಳಹರೆ (ಕಂಠವಿ. ೩-೪೬).

[ದೇ.॥ ತಮಿ. ಮಲ. ಪೊರುಳ್ ; ತುಳು. ಪೊಲರ್ಳ್; ತೆಲು. ಪುರುಲು; ಕೋತ. ಪೊಲ್ರ್]

**ಪುರುಳಿ₁** ‘ ಪುರುವಳ್ಳಿ ’ ನೋ.

**ಪುರುಳಿ₂** (ನಾ). ೧. ಹೆಣ್ಣು ಗಿಳಿ ; ಸಾರಿಕೆ : “ ಪುರುಳಿಯೆಂದುಂ ಸಾರಿಕೆಯೆಂದುಂ ಪೆಣ್ಗಿಳಿ ” (ಕಶಸಾ. ೫೫-೨೦೩) ; ಕಲ್ತೊಡನೋದುವುದಲ್ತೆ ಗಿಳಿಗಳುಂ ಪುರುಳಿಗಳುಂ (ಕವಿರಾ. ೧-೧೧) ; ತುಂಬಿ ಗಿಳಿ ಪುರುಳಿ ಕೋಗಿಲೆಯೆಂಬಿವುವೆರಸಖಿಲತರುಗಳಿಂದ್ರನ ಬೆಸದಿಂದಂ ಬಂದುವೆಂದೊಡುಪವನವಂ ಬಣ್ಣಿಸಲೆನಗೆ ನಾಡೆಯುಂ ಕುಱಿಪಲ್ತೇ (ಆದಿಪು. ೬-೯೨) ; ಕೂರ್ತ ಧೂರ್ತ ಸುರಮಿಥುನಂಗಳ್ ನೆರೆದಳಸುಗಲಿಸೆ ಗಿಳಿಯುಂ ಪುರುಳಿಯುಮಳಸುವುವು ದೇವಭಾಷೆಗಳಳಸಂ (ಕಾವ್ಯಾವ. ೮೩೦). ೨. ಗಿಳಿ ; ಶುಕ : “ಕನ್ನಡವಕ್ಕಿ ಪುರುಳಿ ಪಂಡಿತವಕ್ಕಿಯೆನಲು ಗಿಳಿ ” (ಕಬ್ಬಿಕ್. ೨೩); “ಕನ್ನಡವಕ್ಕಿ ಪುರುಳಿ ಪಂಡಿತವಕ್ಕಿ ಗಿಳಿಯಕ್ಕು” (ಕಬ್ಬಮಂ. ೨೯). ೩. ಗಿಳಿಯ ಮರಿ ; ಮರಿಗಿಳಿ ; “ ಗಿಳಿಮಱಿ ” (ಚತುನಿ. ೬. I, ೨೦).

**ಪುರುಳಿ₃** (ನಾ). ಹಸು : ಪರವತ್ಸಂಗಳ ಬೞಿಯಂ ಪರಿಗೊಳುತುಂ ತೊಱೆದ ಗೊಂತಮಂ ಬಿಡುತುಂ ಹೂಂಕರಿಸುತ್ತುಂ ಪೋಪಗ್ಗದ ಪು[ಶಾಕಾಂ. ಮ] ರುಳಿಗಳಂ ಮಿಗೆ ಮರಲ್ದು ನೋಡಿದನರಸಂ (೦ಲಾವ. ೫-೯೦). [?]

**ಪುರುಳು** ‘ಪುರುಳ್’ ನೋ.,

**ಪುರುಳುಗಾಣು** ‘ಪುರುಳ್ಗಾಣ್’ ನೋ.

**ಪುರುಳುಗೆಡಿಸು,** ಹುರುಳುಗೆಡಿಸು (ಕ್ರಿ). ೧. ಬಲಗುಂದಿಸು ; ನಿಸ್ತೇಜಗೊಳಿಸು ; ನಿಶ್ಶಕ್ತಗೊಳಿಸು ; ನಿಸ್ಸಾರವೆನ್ನುವಂತೆ ಮಾಡು : ವರುಣನ ಪುರುಳುಗೆಡಿಸಿ ವಾಯುವ್ಯನ ಮರುಳುಮಾಡುತ ಧನದನನು ದೂರೆಗೆಡಿಸಿದನು (ಶ್ರೀಕೃಸಾಂ. ೬-೩೩). ೨. ಹೀಯಾಳಿಸು ; ಧಿಕ್ಕರಿಸು : ಪುರುಳಿಯ ಪುರುಳುಗೆಡಿಪ ನುಡಿ ಕದಳೀಸ್ತಂಭವನೇಳಿಸುವೂರುಗಳೊಪ್ಪಿದುವಾ ಸತಿಗೆ (ಜಯುಕಾ. ೨-೮). **ಹುರುಳುಗೆಡಿಸು :** ೧. ಬಾಹ್ಲಿಕ ದುರುಳ ಸೌಬಲ ಸೋಮದತ್ತರ ಹುರುಳುಗೆಡಿಸಿದನೊಬ್ಬ ಶಿಶು ಗೆಲಿದನು ಮಹಾರಥರ (ಕುವ್ಯಾದ್ರೋ. ೫-೨೬); ವಿವಿಧ ವಿಟರನು ಹುರುಳುಗೆಡಿಸುವ ನವಯವ್ವನಭರದ ವನಿತೆಯರೊಪ್ಪಿದರು (ಕೊರಾ. ೧-೫-೨೬); ಆ ಸುರಾಧಿಪನ ಹುರುಳುಗೆಡಿಸುವೆನು (ಉತ್ತರಾ. ೬-೯). ೨. ಹುರುಳುಗೆ[ಶಾಕಾಂ. ೧]ಡಿಸು ವಿರಾವು ನುಡಿದೊಡೆ ಕರಗಿ ಕುಂತೀಮಕ್ಕಳೆಂದೊಡೆ ಹರಹಿಕೊಂಬಿರಿ (ಕುವ್ಯಾಉ. ೫-೧೮); ಹರುಹುಗೆಟ್ಟುದು ತೇರು ಸಾರಥಿ ಹುರುಳುಗೆಡಿಸಿಯೆ ನುಡಿದ ನಂಬಿನ ಕೊಱತೆ ತಾ ಮುನ್ನಾಯ್ತು ದೈವದ್ರೋಹಿಗಳು ನಿಮಗೆ ಅರಿವಿಜಯವೆಲ್ಲಿಯದು (ಕುವ್ಯಾಕ. ೧-೧೫). ೩. ಮನಸೋಲಿಸು : ಹರಿ ಹರ ಬ್ರಹ್ಮಾದಿ ದೇವರು . . . ಸುಮನಸರೆಲ್ಲರನು ಬಿಡದೆ ಹುರುಳುಗೆಡಿಸುವೆ ಸಾಕು ನಳಭೂವರನ ಮಾತೇನಿನ್ನು (ನಳಚ. ೪-೯). ೪. ಪೋಲುಮಾಡು; ಹಾಳುಮಾಡು ; ವ್ಯರ್ಥಗೊಳಿಸು : ಆತನೆಚ್ಚದು ಪಾಶುಪತ್ರವದ

ನಾತುಕೊಂಬವರಾರು ಬಜಿದೆ ಭಟಾತಿಶಯವನು ಹುರುಳುಗೆಡಿಸುವಿರಿ (ಕುಮಾ.ರ್ದ್ರೋ. ೦೫-೦೪). [ ಪುರುಳುಗೆಡು + — ಇಸ್ಸು$_{3}$ ]

**ಪುರುಳುಗೆಡು,** ಹುರುಳುಗೆಡು (ಕ್ರಿ). ೧. ಶಕ್ತಿಗುಂದು; ನಿಃಸತ್ತ್ವವಾಗು; ಬಲಹೀನವಾಗು : 'ಪುರುಳುಗೆಡಿಸು' ಪರಾ. **ಹುರುಳುಗೆಡು:** ೧. ಅಭಿಮನ್ಯುವಿನ ಹೊಯ್ಲಲಿ ಹುರುಳುಗೆಟ್ಟುದು ಹೆಸರ ನಾಯಕವಾಡಿ (ಕುಮಾ.ದ್ರೋ. ೫-೩೫); ಮಹಾಮುನಿಯ ಪರಮಶಾಪವದೆಂತು ನೃಪನಲಿ ಹುರುಳುಗೆಟ್ಟುದು (ಚಾಗ. ೯-೩-೩). ೨. ಅವಹೇಳನವಾಗು; ಅವಮಾನವಾಗು : ದುರುಳತನದಿಂದಣ್ಣದೇವನ ಹುರುಳುಗೆಡೆ ನುಡಿದನು (ಕುಮಾ.ಕ. ೧೨-೩೦). [ ಪುರುಳು (< ಪುರುಳ್) + ಕೆಡು$_{1}$ ]

**ಪುರುಳುಗೊಳ್** 'ಪುರುಳ್ಗೊಳ್' ನೋ.

**ಪುರುಳುಗೊಳಿಸು** (ಕ್ರಿ). ಅರ್ಥಪೂರ್ಣವಾಗುವಂತೆ ಮಾಡು; ಸಾರವತ್ತಾಗಿ ಮಾಡು : ಅರಸಿಯರನಿಬರುಮಾದರದಿಂದೆನ್ನ ಸರಸಕಾವ್ಯವ ಸವಿವಂತೆ ಪರಮಪತಿವ್ರತೆಯರ ನಡತೆಯನಿಲ್ಲಿ ಪುರುಳುಗೊಳಿಸಿ ಪೊಗಳುವೆನು (ಹರಿಬ. ೦-೪೭). [ಪುರುಳುಗೊಳ್ (< ಪುರುಳ್ಗೊಳ್) + —ಇಸ್ಸು$_{3}$]

**ಪುರುಳೆ** 'ಪುರಲೆ' ನೋ.

**ಪುರುಳ್ಗಾಣ್,** ಪುರುಳುಗಾಣು (ಕ್ರಿ). ೧. ಪ್ರಯೋಜನವನ್ನು ಕಾಣು; ಫಲವನ್ನು ಪಡೆ : ನಾಡಿಗರೆ ದಿನದಿನಂ ಬೇಳ್ಪೊಂದು ಹವ್ಯಮನುಂಡು ಸವಿಗೊಂಡ ಬೋಟಿಯರಕ್ಕಾನುಮೊರ್ವನೀ ನಿಚ್ಚವಲಿಯಿಡೆಯುಂ ಪುರುಳ್ಗಾಣದೆ ಪಚ್ಚೆವಿಟ್ಟು ಶಿರುಳಂ ಸಮಂತು ಪುರುಳಂ ತೋಱುವ ಜೋಗವೆಣ್ಗೆ ಸಂಚುಗೈಯಲೊಡಂ ಕಟುಂಬಿ ನಿರ್ನಿರಮಿಾವುಜ್ಜುಗಕ್ಕೆ ತಡೆವರ್ಪರ್ (ರಾಪುಪ. ೫೭-೩೦). **ಪುರುಳುಗಾಣು :** ೨. ಧನವನ್ನು ಕಾಣು; ಐಶ್ವರ್ಯವನ್ನು ಪಡೆ : ಪುಟ್ಟಿದಂದಿಂದ ಪುರುಳುಗಾಣದವರು ನೆಟ್ಟನೆ ನಿಧಿಯ ಕಂಡಂತೆ ಕಟ್ಟೆಜಕದೊಳಿನಿಯನ ಕಾಣುತ ಮರವಟ್ಟು ಮೈಮಱೆತು ನಿಟ್ಟಿಪಳು (ಹರಿಬ. ೭-೪೦).

[ ಪುರುಳ್ + ಕಾಣ್ ]

**ಪುರುಳ್ಗೊಳ್,** ಪುರುಳುಗೊಳ್, ಹುರುಳುಗೊಳ್ಳು (ಕ್ರಿ). ೧. ಸತ್ತ್ವಯುತವಾಗು; ಹುರಿಯೇರು; ಕೆಚ್ಚುಗಟ್ಟು : ಮಹಾಸ್ವಾಮಿಯವರ ಸೊಮ್ಮಿನ ಸಯ್ಪಿನ ಬಿರುದು ಕುಬೇರನನ್ನೂ ಕಲ್ಪವೃಕ್ಷ ಕಾಮಧೇನು ಚಿನ್ತಾಮಣಿಗಳನ್ನೂ ನಾಚಿಸುತ್ತ ಪುರುಳ್ಗೊಂಡಿರುವುದು ವಿಶ್ವವಿದಿತವಾಗಿದೆ (ಚಿಟ್ಟಿಕ. ೭೨-೬). ೨. ಧನವನ್ನು ಪಡೆ; ಹಣವನ್ನು ಗಳಿಸು : ಪುಯುಬನೆಸಗುವಲ್ಲಿಯುಂ ಪೊಡವಿಯುಂ ಪೊರೆವಲ್ಲಿಯುಂ ಪುರುಳ್ಗೊಂಬಲ್ಲಿಯುಂ ಪುಸಿವುಗದೆ ಧರ್ಮಮನಾರಯ್ದು ನಡೆವುದು (ಚಕಮಂ. ೫೨-೦೦). **ಪುರುಳುಗೊಳ್ :** ೧. 'ಪುರುಳುಗೊಳಿಸು' ಪರಾ. ೨. ಪುಟ್ಟಿದ ಮನೆಯೊಳು ಪೋರಿ ಪುರುಳುಗೊಂಬ ದಿಟ್ಟ ಗಂಡುಗಳಂತಿರಲಿ ಕೊಟ್ಟುದಱಿಂದ ತಣಿವ ಕುವರಿಗೆ ಮನವುಟ್ಟಿ ಕೊಡುವುದು ಕೋವಿದರು (ಹರಿಬ. ೫-೦೦). **ಹುರುಳುಗೊಳ್ಳು :** ೧. ಹುರುಳುಗೊಂಡ ತಿರುಳಿನಲ್ಲಿ ನನ್ನ ರುಚಿಯ ನೀನು ಕಂಡು ನಿನ್ನ ಸವಿಯ ನಾನು ಉಂಡು (ಅರಳು. ೪೪೬-೦೩). [ ಪುರುಳ್ + ಕೊಳ್$_{1}$ ]

**ಪುರುಳ್ದೊಡವು** (ನಾ). ಅರ್ಥಾಲಂಕಾರ : ನೂಱುಪುರುಳ್ದೊಡವುಗಳಂ ಬೇಱನೆ ಬಣ್ಣಿಸಿದನವಱ ಭೇದಂಗಳುಮಂ (ಅಕ್ರಸ್ತ. ೦-೦೭).

[ ಪುರುಳ್ + ತೊಡವು ]

**ಪುರೆ$_{1}$** (ನಾ). ಭಲೆ, ಶಹಬ್ಬಾಸ್ ಎಂಬರ್ಥದ ಒಂದು ಹೊಗಳಿಕೆಯ ನುಡಿ,—ಮೆಚ್ಚುಗೆಯ ಮಾತು : "ಅರರೇ ಭಾಪುರೆ ಮಝು . . . ಧಿರುರೇ ಪುರೆಯನೆ ಕೊಂಡಾಟಂ" (ಚತುಬಿ. ೫೫); ಪುರೆ ಮಝು ದಾನವೆ ದಾತೃವೆ ಪಾತ್ರವೆ ಸರಿಯುಂಟೆ ನಿನಗೆ (ಶಠಕ. ೩-೦೦೦); ಹರ ಮೆಚ್ಚಿ ಹೋಹೊ ಭಾಪುರೆ ಪುರೆ ಪುರೆಯೆನೆ ಸುರಿದವರ್ಪುಮಳೆಯ ನಿರ್ಜರರು (ಕೈರಸಂ. I. ೨೫೯). 'ಪುರ್ಕಿ$_{3}$', 'ಪುರೆಯಿಡು' ಪರಾ.

[ ದೇ.॥ ತಮಿ. ಪುರೈ = ತಕ್ಕುದಾಗು, ಒಪ್ಪು; ತೆಲು. ಪುರೆ, ಪುರೇ ]

**ಪುರೆ$_{2}$** (ನಾ). (ಕರಾ) ಛಾವಣಿ; ಸೂರು : ಮಳೆಗಾಲ ಆರಂಭವಾಗಲು ಹಡಗಸಂಚಾರ ನಿಂತು ಹೋಯಿತು. ಮಂಜಿ ಪತ್ತೆಮಾರುಗಳನ್ನು ದಡಕ್ಕೆ ಎಳೆದು ಮಳೆಯಿಂದ ಒದ್ದೆಯಾಗದಂತೆ ಪುರೆ ಕಟ್ಟಿದರು (ಹೋಲು. ೭).

[ ← ತುಳು. ಪುರೆ, ಪೊರೆ ]

**ಪುರೆ$_{3}$** 'ಪೂರಿ' ನೋ.

**ಪುರೆ$_{4}$,** ಪುರೇ (ಅ). ಸಾಕು, ಇನ್ನು ಬೇಡ ಎಂಬರ್ಥದ ಮಾತು : ಶ್ರೀಕಂಠ ಹೋ ಪುರೆ ಸಾಕು ನಿಲ್ಲು ಎನುತ (ಕೈರಚೇ. ೦-೨೬೫); ಪುರೆ ಸಾರು ನಿಲ್ಲು ಕುಳ್ಳಿರು ತೊಲಗೆಂದು ನಿರ್ಜರವೇತ್ರಧರರು ತಿದ್ದಿದರು (ಶಠಕ. ೫೪-೦೩). **ಪುರೇ :** ಹೋಹೋ ಪುರೇ ಪುರೇ ಸಾಕುಸಾಕೈ ನಿನ್ನ ಸಾಹಸದ ಭಕ್ತಿಗೆಮ್ಮಯ ಮನಂ ಮುಚ್ಚಿತು (ಚಂಬಪು. ೦೪-೦೬).

[ ← ಮರಾ. ಪುರೇ ]

**ಪುರೆಕಾಮ** (ನಾ). ಒಬ್ಬಾತನ ಹೆಸರು : ಬಾಣಸಾಮಿ ಮಗನ್ ಪುರೆಕಾಮನ್ . . . ಅಱಿದಿಯೊಳ್ಪತ್ರನ್ (ಎಕ. X, ಕೋಲಾರ್. ೪೫-೬; ಸು. ೮೮೦?). [ ? + ಕಾಮ ]

**ಪುರೆಯಿಡು** (ಕ್ರಿ). ಭಲೆಯೆನ್ನು; ಕೊಂಡಾಡು : ನಿಮ್ಮ ದೊರೆಯೆಂತೆಂ ನಡೆವನಂತವನೆ ಪುರೆಯಿಟ್ಟು ಪೊಗಳ್ವಿರಿ (ಶಠಕ. ೪೭-೯೦); ಕೆದಱಿ ಜಂತ್ರದ ಪುಷ್ಪವೃಷ್ಟಿಗಳಾಸವ ಸುದತಿರನ್ನಳು ಪುರೆಯಿಟ್ಟು ಮದನಮಂಜರಿಯತ್ತ ಕೈನೀಡೆ ಕೊಟ್ಟಳಾ ಚದುರೆ ಮಂದಾರಮಾಲೆಯನು (ಶಾಗಸು. ೨೨-೦೦೬). 'ಪುರಿಯಿಡು' ಪರಾ. [ ಪುರೆ$_{1}$ + ಇಡು$_{1}$ ]

**ಪುರೇ** 'ಪುರೆ$_{4}$' ನೋ.

**ಪುರೋಖ್ತಿ,** ಪುರೋಖ್ತಾ, ಪ್ರೋಖ್ತಾ (ನಾ). ಮಾರಾಟ; ಬಿಕರಿ; ವಿಕ್ರಯ : ಅಮಾನೀ ದವಸ . . . ಜತನದಿಂದ ಇರಿಸಿ ಗಿರಾಕಿ ಬಂದ ಬಂದ ಪ್ರಕಾರ ಸರಕಾರಕ್ಕೆ ನಿರಖು ಜಾಸ್ತಿ ಕೂಡಿ ಬರುವ ಮೇರೆ ಪುರೋಖ್ತಿ ಮಾಡಬೇಕು (ಮಹಾಮಂ. II, ೭೩). **ಪುರೋಖ್ತಾ :** (೬). **ಪ್ರೋಖ್ತಾ :** (೬).

[ ← ಪಾರ. ಹಿಂ. ಫರೋಖ್ತ್ ]

**ಪುರೋಖ್ತಾನಿ** (ನಾ). ಎರಡನೆಯ ಸಲ ಆಗುವ ಮಾರಾಟ,—ಬಿಕರಿ : ಪುರೋಖ್ತಾನಿ ಆದ ದವಸ ಹೋಗಲಾಗಿ ಬಾಕಿ ನಿಂತ . . . ದವಸಕ್ಕೆ . . . ಬಂದೋಬಸ್ತು ಮಾಡಬೇಕು (ಪ.ಹಾಮಂ. II. ೭೩).

[ ← ಪಾರ. ಫರೋಖ್ತಾನೀ ]

**ಪುರೋಗ** (ಗು). ೧. ಮುಂದಿರುವ; ಅಗ್ರೇಸರ; ಮುಖ್ಯವಾದ. (ನಾ). ೨. ಮುಂದಾಳು; ನೇತಾರ; ಪ್ರಮುಖನಾದವನು : "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ . . . ಅಗ್ರಣೀಃ — ಈ ೧೩ ಮುಖ್ಯಂ" (ಕಠಾಪು. ೦೦೫-೫). [ ಸಂ. ]

**ಪುರೋಗಮ** (ನಾ). ಮುಂದಾಳು; ಮೇಖಂಡ; ಪ್ರಮುಖ : "ಅಗ್ರೇಸರಂ ಪುರಸ್ಸರನಗ್ರಣಿ ಮುಖ್ಯಂ ಪುರೋಗಮಂ" (ಪತ್ನುಕೋ. ೮೩-೯); ಮುಕುಂದಂ . . . ಮುಂದೆ ನಿಂದಿರ್ದ ನಂದಗೋಪ ಪುರೋಗಮರನನುರಾಗದಿಂ ನೋಡಿ (ಜಗಪು. ೪-೮೦ ವ). [ಸಂ.]

**ಪುರೋಗಾಮಿ** (ನಾ). ೧. ಮುಂದೆ ಹೋಗುವವನು; ಅಗ್ರಗಾಮಿ : ಕೈಲಾಸದಲ್ಲಿ ಕಮ್ಯುನಿಷ್ಟರನ್ನು ಕಂಡು ಪುರೋಗಾಮಿಗಳಂತೆಯೇ ಪ್ರತಿಗಾಮಿಗಳೂ ಹೌಹಾರಬಹುದು (ಕೈಲಾಕ. ೧ ಮುಮ್ಮುನ್ನುಡಿ). ೨. ಮುಖಂಡ; ಮುಂದಾಳು. ೩. ಮುಂಭಾಗದಲ್ಲಿ ನಡೆಯುವ ಸೇವಕ : "ಪುರೋಗಃ, ಅಗ್ರೇಸರಃ . . . ಪುರೋಗಮಃ, ಪುರೋಗಾಮೀ—೭ ಮುಂದುಗಡೆ ನಡೆಯುವ ಊಳಿಗದವನು" (ಸಿದ್ಧಾಂತಿ. ೨೫೯). ೪. ಮೊದಲು ಬಂದುದು; ಪೂರ್ವಭಾವಿಯಾದುದು : ಡಾ॥ ವ್ಹಿಟ್ನೆ ಅವರ ಪ್ರಕಾರವಂತೂ ಕ್ರಿಯಾ

ರೂಪಗಳೇ ಭಾವಿಯ ಪುರೋಗಾವಿಗಳು (ಶಾಶಾಶಾ. ೨೬೩).
[ ಸಂ. ಪುರೋಗಾಮಿನ್ ]

**ಪುರೋಚಿ** (ನಾ). ೧. (ಉಕ) (ಕಲಿಯಬೇಕಾದ ಮಗ್ಗಿ, ಕೋಷ್ಟಕ ಮೊದಲಾದುವುಗಳನ್ನು ಕಂಠಪಾಠ ಮಾಡುವ ಉದ್ದೇಶದಿಂದ ಬೆಳಗಿನಲ್ಲಿ ಹಾಗೂ ಸಾಯಂಕಾಲದಲ್ಲಿ) ಪುನಃ ಪುನಃ ಸಾಮೂಹಿಕ ವಾಗಿ ಹೇಳುವುದು; ಸಂತೆ ಹೇಳುವುದು; ಪುರಶ್ಚರಣ: ಎಲ್ಲ ವಿದ್ಯಾರ್ಥಿಗಳನ್ನು ಸಾಲಾಗಿ ನಿಲ್ಲಿಸಿ "**ಪುರೋಚಿ**" **ಹೇಳಿಸು**ವಾಗ ನನಗಂತಹ ಉಬ್ಬು! (ಗಾಳಿಕ. ೩೬). ೨. ನಡೆದು ಹೋದ (ದುಃಖದ) ಸಂಗತಿ ಯನ್ನು ಪುನಃ ಹೇಳುವುದು; ಪುನರಾವರ್ತನೆ: ಅಣ್ಣ ತಂದೆ ತಾಯಿಗೆ ತಾರು ಕೊಟ್ಟ. ಅವರೂ ಬಂದರು. ಹೈದ್ರಾಬಾದಿನ ಕತೆಯ ಪುರೋಚಿ ಯಾಯಿತು (ಬೀಕು. ೦೩೬); ಎಲ್ಲವನ್ನೂ ಮುಂಚಿನಿಂದ ನಾನು ಮತ್ತೆ ಪುರೋಚಿ ಪಾಡಿದೆ (ಬೀಕು. II. ೦೬೫).
[ ← ಮರಾ. ಪರವಚಾ, ಪರವಾಚಾ, ಪರೋಚಾ ]

**ಪುರೋಚೆ** 'ಪುರವಚೆ' ನೋ.

**ಪುರೋಡಾಶ** (ನಾ). ೧. ಯಜ್ಞಯಾಗಾದಿ ಶ್ರೌತಕರ್ಮಗಳಲ್ಲಿ ದೇವತಾ ಪ್ರೀತ್ಯರ್ಥವಾಗಿ ಕೊಡುವ ಹವಿಸ್ಸು; ತುಪ್ಪದಲ್ಲಿ ಹುರಿದು ನೀರಲ್ಲಿ ನೆನಸಿದ ಹಿಟ್ಟು: ಆದರಿಸಿ ಪರಿಚಾರಕರು ಸಂಪಾದಿಸಿದ ಘೃತ ಚರು ಪುರೋಡಾಶಾದಿ ಸಂಭಾರಾಘವನಸುವಾಯಿತ್ತು ನಿಮಿಷದಲಿ (ಕುಮ್ಮಾ.ಕ. ೬ ೨೨); ಚರು ಪುರೋಡಾಶ ತಂಡುಲ ತಿಲ ವ್ರೀಹಿ ಘೃತದುರು ಹವಿರ್ಧಮದಿಂದರುಣಲೋಚನನಾಗಿ . . . ಯಜ್ಞಶಾಲೆಯೊಳಧ್ವರದೀಕ್ಷೆ ಯಿಂದೆ ಕುಳ್ಳಿರ್ದೆಸೆವ ರಾಮನಂ ಕಂಡು ಚರರಿಂತೆಂದರು (ಕೃಜಾ. ೨೦-೩೩). ೨. ಹೋಮಂ ಮಾಡಿ ಉಳಿದ ಹವಿಸ್ಸು; ಹುತಶೇಷ: ಅಂತು ಪುರೋಡಾಶಪವಿತ್ರೀದರನುಂ ಸೋಮಪಾನಕಷಾಯಿತೋದರನುಮಾಗಿ ಮೂವತ್ತೆರಡುದಿವಸದೊಳ್ ಕ್ರತುವಂ ನಿರ್ವರ್ತಿಸಿ (ಶಂಕಥಾ. ೬-೩೬ ಪ); ಪುರೋಡಾಶಭೋಜನಪವಿತ್ರೀಕೃತಗಾತ್ರನುಂ . . . ದೇವಶರ್ಮನೆಂಬ ಪಾರ್ವನಿರ್ಪಂ (ಶುಕಸಂ. ೦೮೯-೬). [ ಸಂ. ]

**ಪುರೋದ್ಯಾನ** (ನಾ). ನಗರದ ಉಪವನ; ನಗರೋದ್ಯಾನ: ಪಾಳೆಯಂ ಬಿಟ್ಟುದು ಪುರೋದ್ಯಾನವೀಥಿಗಳೊಳ್ (ಕೃಜಾ. ೦೭-೦೦); ಪುರೋದ್ಯಾನ ವೀಥಿಯೊಳ್ ಪಾಳೆಯಂ ಬಿಟ್ಟುದರ್ಜುನನ ಸೇನೆ! (ಜೈಮಿ. ೭೨-೦೯೬).
[ ಸಂ. ]

**ಪುರೋಧ** (ನಾ). ಪುರೋಹಿತ: "ಸೌವಸ್ತಿಕಂ ಪುರೋಧಂ ಪುರೋಹಿತ ನಪ್ಪು" (ಮಂಗರಾ. ೬೯-೩). [ ಸಂ. ಪುರೋಧಸ್ ]

**ಪುರೋಧಸ** (ನಾ). ೧. ರಾಜಪುರೋಹಿತ. ೨. ಪುರೋಹಿತ: ಅಂತು ಬಿನ್ನವಿಸಿದ ಪುರೋಧಸಪುರಸ್ಸರಂ . . . ರಾಜ್ಯಾಭಿಷವಣಮಂಡಪದೊಳ್ ಮಂಗಳವಿಧಾನಮನವ್ಯವಧಾನಂ ಮಾಡಿಮೆಂದು ಬೆಸಸಿದಾಗಳ್ (ಅಜಿತಪು. ೩-೯೨ ವ); ಶರ್ಯಾತಿರಾಜಂ . . . ಜನ್ನಕ್ಕೆ ತನ್ನಳಿಯನನೆ ಪುರೋಧಸ ನಾಗೆ ಬರವೇಟ್ಟು (ರಾಮಾಶ್ವ. ೬೯-೨೩). [ ಸಂ. ಪುರೋಧಸ್ ]

**ಪುರೋಪಕಂಠ** (ನಾ). ಪಟ್ಟಣದ ಹತ್ತಿರದ ಪ್ರದೇಶ: ದನುಜಪುರೋಪ ಕಂಠದ ಕೂಲವತಿಗಳ ತೀರದಲಿ ಬಿಡಿಸಿದನು ಪಾಳೆಯವ (ಕುಮ್ಮಾ.ಶ. ೧೨-೦೩); ರಾಜಶಿರೋಮಣಿಯು ಬಿಟಕಾಯ ಬಿಟ್ಟುದು ಬಳಿಕ . . . ಪುರೋಪಕಂಠವಲಿ (ಕೂರರಾ. ೦-೩-೧೨). [ ಸಂ. ]

**ಪುರೋಭಾಗ** (ನಾ). ೧. ಮುಂಭಾಗ; ಮುಂದಣ ಪ್ರದೇಶ: ಅನಿಂದ್ಯರಾಜಭವನಪುರೋಭಾಗದೊಳಿರ್ಮ ನಡೆದೆರೆದರ(ವ)ನರೆಸಿಸಿ ಲೋಭ ಕ್ಕಸರಪಸರವಿಲ್ಲದಿರ್ದ ಬಚ್ಚರ ಪಸರಂಗಳುಮಂ . . . ತೋಱುತ್ತುಂ ಬಂದು (ಶಾಂತಿಪು. ೩-೭೫ ವ); ಭಗವದಿಂದುಮಾಳಿಯ ಪುರೋಭಾಗ ದೊಳ್ ನಿಂದು ಪೊಡಮಟ್ಟು (ಶಾಬಂಪು. ೬೬೩); ಚಂದ್ರಾರ್ಕರಂ ಗೆಲೆ ವಂದಾ ಬರುತಿರ್ಪವರ್ ಭರತ ಶತ್ರುಘ್ನರ್ ಪುರೋಭಾಗದೊಳ್ (ಶಂರಾಮಾ. ೫-೧೦೦). ೨. ಮುಂಭಾಗದ ಸೈನ್ಯ; ಮುಂಚೂಣಿ: ಕಲಿಭೀಮನೆಡದಲಿ ಕಲಿಕಿದನು ಬಲವಂಕದಲಿ ಕೈವಳಿಸಿ ಕೊಂದನು ವರ ಪುರೋಭಾಗವ ವಿಭಾಡಿಸಿದ (ಕುಮ್ಮಾ.ಕ. ೧೩-೦೯). ೩. (ತನಗೆ) ಸಂಬಂಧ ವಿಲ್ಲದ ವಿಷಯದಲ್ಲಿ ಬಾಯಿ ಹಾಕುವಿಕೆ; ಅಧಿಕಪ್ರಸಂಗತನ. ೪. ಹೊಟ್ಟೆಕಿಚ್ಚು; ಮತ್ಸರ. [ಸಂ.]

**ಪುರೋಭಾಗಿ** (ಗುಂ). ೧. ಅಧಿಕಪ್ರಸಂಗ ಮಾಡುವ. ೨. ಕುಹಕ ಬುದ್ಧಿಯುಳ್ಳ; ರಂಧ್ರಾನ್ವೇಷಿಯಾದ; ಹುಳುಕುಗಳನ್ನು ಹುಡುಕುವ ಸ್ವಭಾವದ. (ನಾ). ೩. ಮತ್ಸರಬುದ್ಧಿಯುಳ್ಳ ವನು; ದೋಷೈಕದೃಷ್ಟಿಯವನು; ಛಿದ್ರಾನ್ವೇಷಿ: "ದೋಷಗ್ರಾಹಿ ಪುರೋಭಾಗಿ" (ಚತು.ಕೋ. ೦೦೦-೦೭). ೪. ಎರಡುನಾಲಗೆಯವನು; ಸುಳ್ಳುಗಾರ: "ಎರಡು ನುಡಿವವ ಪುರೋ[ಶಾಶಾಂ. ಪರೋ]ಭಾಗಿ ದ್ವಿಜಿಹ್ವಕಂ" (ಮಂಗರಾ. ೬೮-೯). [ಸಂ. ಪುರೋಭಾಗಿನ್]

**ಪುರೋಭಿವೃದ್ಧಿ** (ನಾ). ಮುಂದಿನ ಏಳಿಗೆ; ಉತ್ತರೋತ್ತರ ಉನ್ನತಿ,— ಶ್ರೇಯಸ್ಸು: ಅವನು ಎಷ್ಟರ ಮಟ್ಟಿಗೆ ಪುರೋಭಿವೃದ್ಧಿ ಹೊಂದುವುದು ಸಾಧ್ಯವೋ ಅಷ್ಟು ಮಟ್ಟಿಗೆ ಪುರೋಭಿವೃದ್ಧಿ ಹೊಂದುವುದಕ್ಕಾಗುವುದಿಲ್ಲ (ಕ್ರಿಯಾಶ. ೦೫೯); ವ್ಯಕ್ತಿಯ ಪುರೋಭಿವೃದ್ಧಿ . . . ರಾಷ್ಟ್ರದ ಅಖಂಡ ಹಿತ (ಶಿಕ್ಷಣ. ೨೭). [ಸಂ.]

**ಪುರೋಹಿತ** (ಗು). ೧. ಮುಂದೆ ಇರಿಸಿದ,–ಇಟ್ಟ. ೨. ನೇಮಕ ಮಾಡಿದ; ನಿಯಮಿಸಿದ. (ನಾ). ೩. ಕಾರ್ಯನಿರ್ವಹಣೆಗಾಗಿ ನಿಯಮಿತನಾದವನು. ೪. (ಒಂದು ಮನೆತನದ) ಎಲ್ಲ ಧಾರ್ಮಿಕ ವ್ರತಾದಿಗಳನ್ನು ತಾನೇ ಮುಂದಾಗಿ ನಿಂತು ಮಾಡಿಸುವವನು: "ಪ್ರಶಾಂತಿಹಿತಾನುಷ್ಠಾನರತಂ ಕೃತಶಾಂತಿವಿಧಾನಂ ಸೌವಸ್ತಿಕಂ ಪುರೋಹಿತ ನಾತಂ" (ಚತು.ಕೋ. ೬೦-೩೯); ಪುರೋಹಿತಂ . . . ಅಟ್ಟಲೆವೇಟ್ಟನವರ್ಗೆ ಶಾಸನಹರರಂ (ಆದಿಪು. ೦೯-೩೦); ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ . . . ಪರಸಿ ಪೋಪುದುಮಂ (ಜಗ. ೩-೨೭ ವ); ಪೊಡವಿಯೊಳಗೆ ಪುರೋಹಿತರನವಗಡಿಸಿ ಧರ್ಮದ ಬಲದಿ ನಾಕಕೆ ನಡೆವ ರಾಯರ ಹೊಯಿದಿಳಿಯಲಿಕ್ಕುವರಭೋಗತಿಗೆ . . . ನಿರ್ಜರರು (ಕುಮ್ಮಾ.ಉ. ೯-೭೭). [ಸಂ.]

**ಪುರೋಹಿತಪ್ರಭುತ್ವ** (ನಾ). ಧರ್ಮಾಧಿಕಾರಿಗಳ ಅಧಿಕಾರ: "(ಧರ್ಮ ವಿಷಯಗಳಲ್ಲಿ) ಪುರೋಹಿತಪ್ರಭುತ್ವ" (Hierarchy. ೩೦೫೦). [ಸಂ.]

**ಪುರೋಹಿತರತ್ನ** (ನಾ). [ಜೈನ] ಚಕ್ರವರ್ತಿಗೆ ಒದಗುವ ಏಳು ಜೀವರತ್ನಗಳಲ್ಲಿ ಒಂದು; ಉತ್ತಮನಾದ ಪುರೋಹಿತ: ಶಾಂತಿಕಪೌಷ್ಟಿಕಕ್ರಿಯಾಕುಶಲನುಂ ಧರ್ಮಕಾರ್ಯಾದಿಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ . . . ಮನೋಹರಮಪ್ಪ ಸ್ತ್ರೀರತ್ನಮುಮೆಂದಿಂತು ಜೀವಾಜೀವರತ್ನಂಗಳಂ . . . ಪೂಜಿಸಿ (ಅಂಪು. ೦೦-೩ ವ); ಚಕ್ರವರ್ತಿಯನೆಯ್ದಲೀಯದೆ ರಾಜ್ಯತಂತ್ರವೆಲ್ಲಮಂ ಸಂತಯ್ಸಿ ನಡೆಯಿಸುವ ಪುರೋಹಿತರತ್ನಮುಂ (ಜೀವಸಂ. ೦೭-೨೬). [ಸಂ.]

**ಪುರ್ಗಿ** 'ಪುಟ್ಗಿ' ನೋ.

**ಪುರ್ಗು** 'ಪುಟ್ಗು' ನೋ.

**ಪುರ್ಚು,** ಪುಚ್ಚು₁, ಹುಚ್ಚು (ನಾ). ೧. ಮರುಳು; ಬುದ್ಧಿಭ್ರಂಶ; ಮತಿಭ್ರಮಣೆ: ಸಂಭವಿಸಲ್ ವಾರುಣಿಯುಂದೆ ಪುರ್ಚು ದಿನಪಂ ತಾಂ ಬಿಳ್ದನಸ್ತಾದ್ರಿಯೊಳ್ (ಚಂದ್ರಶ್ರ. ೦೦-೩); ಇಂತೆಮಗೆ ಪೆರ್ಕೊರಗು —ಅ ಪುರ್ಚು ಪಱಿದೊಡಂ (ಅಕ್ಷಶಾ. ೦೦-೨೩೫). 'ಪುರ್ಚುಗೊಳ್' ಪರಾ. ೨. ಮರುಳಂ ಹಿಡಿದ ವ್ಯಕ್ತಿ; ಬುದ್ಧಿಭ್ರಂಶವಾದವನು: ಅಕಟಾ, ಮನವೇ, ನೀಂ ಪುರ್ಚಲಾ! (ಕುಸೋಟ. ೦-೯ ಟೀಕು).

೩. ಹುಚ್ಚಳ; ಆಧಿಕ್ಯ : 'ಪುರ್ಚುವೊಳೆ' ಪರಾ. ಪುಚ್ಚು₁ : ೧. ಎಲ್ಲಿಯ ಗಂಗೆ ನೀನಾರು ವಿಚಾರವೇನಿಲ್ಲವೆ ಗಿರಿಜೆಯ ಮಾಸಲ ಪುಲ್ಲಾಳಿಯು ಪೊಚ್ಚಿಸಿ ಪುಚ್ಚು ಪೆಚ್ಚಿತೆ (ಸೊಬಗಿನ. ೦೨-೬೮); ಕಚ್ಚಿದುದಾ ಪರೀಕ್ಷಿತನ ತಕ್ಷಕನಂತದು ಪೋಗೆ ಚಿತ್ರದೊಳ್ ಪುಚ್ಚಿಡಗೊಂಡ ಮಾಳ್ಕೆಯೊಳು ಭೂಮಿಯೊಳಿಪ್ಪುರಗಂಗಳೆಲ್ಲ ಕಣ್ಮುಚ್ಚಿಕೊಳ್ಳುತ್ತಲಂದು ಜನಮೇಜಯನಿಂ ಹತವಾದುದಿಲ್ಲವೇ ಕಿಚ್ಚಲಿ (ಕಜೆಕೆ. ೨೯). ೪. ಆಸಕ್ತಿಯನ್ನುಂಟು ಮಾಡುವಂತಹುದು ; ಮೋಹಕವಾದುದು : ಬುಧಜನರಿಗೆ ಪೆಚ್ಚು ದುರಿತವನಕೆ ಕಾಳ್ಕಿಚ್ಚು ವಿರಹಿಗಳಿಗೆ ಪುಚ್ಚು ವೀರರ್ಗೆ ನುಚ್ಚು ಕೇಳ್ವರಿಗಿದು ಕಾಣಬಲ್ಲದಚ್ಚು (ಸೋಹಶ. ೦-೬೯). ಹುಚ್ಚು : ೧. ಶರಧಿಗೆ ಮಿಗೆ ಪೆಚ್ಚಂ ರಥಾಂಗಕ್ಕೆ ಹುಚ್ಚಂ ಪಿರಿದ[ದಿ]ತ್ತುದ್ಭಾವಿಸಿತ್ತು ... ಸುಧಾಸೂತಿಬಿಂಬಂ (ತ್ರಿಶೂ. ೨೪-೦೩೪); ರಚ್ಚೆನಿಂ ಕನಕಕಶ್ಯಪ ರಕ್ತಗುಡಿಯುಲುರೆ ಹುಚ್ಚು ಪರಿವೇಷ್ಟಿಸಿತು ಜಾಣ್ಮೆಯು ಗತವಾಗಿ ತಿರ್ಯಕ್ಕು ಮೃಗವಾದೆಲಾ (ಹರಿ. ೩-೦೭). ೨. ಮಾನಿನಿಯರಾತನ ರೂಪ ಕಂಡುದುಂಟಾದಡೆ ತಮ್ಮ ಗಂಡರ ಮಱೆದು ಹುಚ್ಚುಹರು (ಸೋಹಶ. ೨೮-೨೭). ೩. ಪೆಚ್ಚು ಮಾತು ; ಬುದ್ಧಿವಂತಿಕೆಯಿಲ್ಲದ ಬಾಲಿಶವಾದ ನುಡಿ : ಮೆಚ್ಚಿದ ನಿಯಳೊಂದು ಹುಚ್ಚು ನುಡಿದರೆ ನೊಚ್ಚಗಾಗಿಹುದು ನಲ್ಲರಿಗೆ (ಶರಶ. ೦೦-೩೯). ೬. ಗೀಳು ; ಅತ್ಯಾಸಕ್ತಿ ; ವ್ಯಾಮೋಹ : ಅನುಗಾಲ ಕಿಚ್ಚು ಭವದೊಳಗ್ಗುಚ್ಚು ಅನುಭವದ ಕಿಚ್ಚು ಸವಿ ನೋಡೋ ಹುಚ್ಚು (ಪುರಂದ. ೨ ೩೩-೩); ವಿಜಯದಾಸರ ತಾತ ಮುತ್ತಾತಂದಿರಿಗಿದ್ದ ಈ ಹುಚ್ಚು ಅಚ್ಚಳಿಯದೆ ಇವರಿಗೂ ಅಂಟಿಕೊಂಡಿತ್ತು (ಕಂಬಹು. ೦). 'ಪಿಚ್ಚು₁', 'ಪೆಚ್ಚು₄' ಪರಾ.

ಹುಚ್ಚುಹುಚ್ಚು, ಹುಚ್ಚುಚ್ಚು (ದ್ವಿರುಕ್ತಿ) : ಅವನು ಯಾವಾಗಲೂ ಹೀಗೇ, ಹುಚ್ಚುಹುಚ್ಚು (ರೂಢಿ); ಹುಚ್ಚುಚ್ಚಾಗಿ ಮಾತಾಡಬೇಡ (ರೂಢಿ). ಹುಚ್ಚಾಗು = ಬುದ್ಧಿಗೇಡಿಯಾಗು ; ವಿಚಾರಶಕ್ತಿಯನ್ನು ಕಳೆದುಕೊಳ್ಳು : ಹುಚ್ಚಾಗಬೇಡ ಕಾಳಗದೊಳು ನೀನೆಂದಚ್ಚರಿಯಾಗಿ ನುಡಿದನು (ಅಪಂಶ. ೨೫-೩೭); ಅವರಿವರನು ಕಂಡು ಹುಚ್ಚಾಗದಿರು ಜೋಕೆ (ಇಂಚಾಶ. ೦೦೭-೨೩). ಹುಚ್ಚುಚ್ಚಾರ = ಮನಸ್ಸಿಗೆ ಬಂದಂತೆ ನಡೆದುಕೊಳ್ಳುವುದು; ಹತೋಟಿಯಿಲ್ಲದಂತೆ ಇರುವುದು : ಇಲ್ಲಿ ನಿಮ್ಮ ಹುಚ್ಚುಚ್ಚಾರವನ್ನು ಕಟ್ಟಿಡಿರಿ (ಅಂಬಕ. ೪೪); ನನಗೆ ಈಗಿನ ಹುಚ್ಚುಚ್ಚಾರ ಎಷ್ಟೂ ಸೇರಿಕೆ ಬರುವುದಿಲ್ಲ (ಅಶಪಾ. ೨೪೭). ಹುಚ್ಚು ಮಾಡು = ಬುದ್ಧಿಭ್ರಮಣೆಯಾಗುವಂತೆ ಮಾಡು ; ದಿಕ್ಕುಗೆಡಿಸು : ಪೆಣಗಳು ಪೆಚ್ಚಿದರ್ ಭೂತವೇತಾಳಸಂಕಾಲಕೆ ಪೇೞ್ ಹುಚ್ಚು ಮಾಡಿದರೊಂದು ನಿಮಿಷದೊಳ್ ದಿವಿಜರಂ ಖಳಭಟರ್ (ತಂಶು. ೪೨-೩೩). ಹುಚ್ಚುಹುಚ್ಚಾಗು = ಕಳೆಗುಂದು; ವಿವರ್ಣವಾಗು : ಎನ್ನ ಮುಖವೇಕೆ ಹೀಗೆ ಹುಚ್ಚುಹುಚ್ಚಾಗಿದೆ (ಅಹುಳ. ೪೫).

[ದೇ. ತಮಿ. ಮಲ. ಪಿಚ್ಚು ; ತೆಲು. ಪಿಚ್ಚಿ; ಕೋತ. ಪುಚ್]

ಪುರ್ಚುಕುಣಿತ, ಹುಚ್ಚುಕುಣಿತ (ನಾ). ಆವೇಶದ ಕುಣಿತ ; ಮನಸ್ಸು ಬಂದಂತೆ ಕುಣಿಯುವಿಕೆ : ಮುಂಗಾರ ಭೈರವಂ . . . ಧಿಮ್ಮೆಂದು ಧೀಂಕಿಟ್ಟು ಪದಮೆತ್ತಿ ಪದಮಿಟ್ಟು ಪುರ್ಚುಕುಣಿತಂ ಕುಣಿದನಾ ತಲ್ಲಣಿಸೆ ಲಂಕೆ ! (ಶ್ರೀರಾಮಾ. ೩೭೯-೨೦೨). ಹುಚ್ಚುಕುಣಿತ : ಏ ರಘು, ಏನೋ ಅದು ಹುಚ್ಚುಕುಣಿತ ! (ತುಂಗಳ. ೨). [ಪುರ್ಚು + ಕುಣಿತ]

ಪುರ್ಚುಗೊಳ್, ಪುಚ್ಚುಗೊಳ್, ಹುಚ್ಚುಗೊಳ್ (ಕ್ರಿ). ೧. ಹುಚ್ಚು ಹಿಡಿ ; ಮತಿಭ್ರಂಶವಾಗು : ನೀಲಿಯ ಕನಕದ ಬೇರಂಕೋಲೆಯ ಬೇರೆಯಿವಂ ಸಮಂಗೊಂಡರೆ ನೀಂ ಪಾಲಿಂದೆ ಕುಡಿಸಲಂತದು ಸೋಲಿಸುಗುಂ ಪುರ್ಚು[ಪಾಠಾಂ. ಚ್ಚು]ಗೊಂಡ ನಾಯ್ಗಳ ವಿಷಮಂ (ಜಶುದ. ೦೩-೨೯); ಬಲ್ಲನೆ ಗಾನವಮಂ ಬಧಿರಂ . . . ಪುರ್ಚುಗೊಂಡ ಮನುಜಂ ಶಿವತತ್ವಸದರ್ಥಸಾರಮಂ ಬಲ್ಲನೆ (ಶೃತಂ. ೯೦-೩೯). ಪುಚ್ಚುಗೊಳ್ : ೧. ಪುಚ್ಚುಗೊಂಡ ನಾಯಿ ಬಲ್ಲುದೇ ಸಾಕಿದೊಡೆಯನ (ಬುಶಶಾ. ೦೩-೦೬). ಹುಚ್ಚುಗೊಳ್ : ೧. ಬಚ್ಚಿವಿಲ್ಲಣ್ಣನೇನಾದ ಹುಚ್ಚುಗೊಂಡಂತೆಮ್ಮ ಬಿಸುಟು ಹೋದನೆ (ಜಶ. ೩೨-೩೬). ೨. ಗೀಳು ಹಿಡಿ ; ಮೋಹವುಂಟಾಗು : ಮಚ್ಚ ಜಿಹ್ವಾಲಂಪಟದಿ ಗಜ ಕಚ್ಚೆಯಲಿ ನೇತ್ರದಲಿ ಶಲಭ ಶ್ರುತೇಚ್ಛೆಯಲಿ ದರ್ವೀಕರನು ಘ್ರಾಣೇಚ್ಛೆಯಲಿ ಭ್ರಮರ ಹುಚ್ಚುಗೊಂಡೊಂದೊಂದು ವಿಷಯಕೆ ಮೆಚ್ಚಿ ಕೆಟ್ಟವು ಪಂಚವಿಧವಿಷಯೇಚ್ಛೆಯಲಿ ತಗಲಿರ್ಪ ಮನುಜನು ಕೆಡುವುದೇನರಿದು (ಅಚ್ಯುಕ. ೨-೮೯). ೩. ಮೋಹಗೊಳ್ಳು ; ಮನಸೋಲು ; ಮರುಳಾಗು : ಹುಚ್ಚುಗೊಂಡುದು ನೃಪರ ತಿಂಥಿಣಿ ಅಚ್ಚರಿಯ ಗಂಧರ್ವದತ್ತೆಯ ವೀಣೆಯನು ಕೇಳಿ (ಸಾಳ್ವಭಾ. ೦೮-೯).

[ ಪುರ್ಚು + ಕೊಳ್₁ ]

ಪುರ್ಚುವೊಳೆ, ಹುಚ್ಚುಹೊಳೆ (ನಾ). (ಒಮ್ಮೆಂದೊಮ್ಮೆಲೆ) ಮಹಾಪೂರ ಬಂದ ಹೊಳೆ; ಉಕ್ಕಿ ಹರಿಯುವ ತೊರೆ : ಬಿದ್ದುದೆ ತಡಂ ಪೊಡೆಗೆ ಮುದ್ದು ನೆಗೆದುದು, ನನ್ನಿ ಪೊರಗೆ ! ಪರಿದುದು ಪುರ್ಚುವೊಳೆಯಂತೆ (ಶ್ರೀರಾಮಾ. ೩೭೩-೩೦೪). ಹುಚ್ಚುಹೊಳೆ : ಹುಚ್ಚುಹೊಳೆ ಮತ್ತತ್ತಣಿಂದಕಟ ನೂಕಿದುದು (ಜಕು. ೦೩-೨೩); ಎಲ್ಲವನ್ನೂ ಕೊಚ್ಚುತ್ತೇನೆಂದು ಹೊರಟ ಈ ಹುಚ್ಚುಹೊಳೆಯನ್ನು ಲೋಕೋಪಕಾರಿಯಾಗುವಂತೆ ಮಾಡುವ ಮಾರ್ಗವೇನಾದರೂ ಇದೆಯೇ ? (ಶಿಕಂಚಾ. ೦೩೭).

[ ಪುರ್ಚು + ಪೊಳೆ₄ (< ಪೊಱೆ₁) ]

ಪುರ್ಚೇಱ್, ಹುಚ್ಚೇಳು (ಕ್ರಿ). ೧. ಮರುಳು ಹಿಡಿ ; ಬುದ್ಧಿ ಕೆಟ್ಟುಹೋಗು : ತಣಿವೆಂಬುದೇ ಇದರ ತೊನಸಿಯಾ ಲೂರ್ಮೆನೆಯು ಕುಟುಕಿಂದೆ ಪುರ್ಚುಪುರ್ಚೆಟ್ಟು ನೆಗನೆಗೆದು ಓಡಿದೆನ್ ಸೆನ್‌ಕ್ರಿಯುದ ತಣ್ಪೆಱೆವ ಪೊನಲೆಡೆಗೆ (ಬಿಧ್ಯಕ್ರ. ೩೭-೭೭೨). ಹುಚ್ಚೇಳು : ೧. ಕೃಷ್ಣನು ಹೇಳಿದ ಗೀತೆಯು ಪಾರ್ಥನು ಕೇಳಿದನಾಕಾಲ ನೀಗಿ ಅಭಿಮನ್ಯು ಮಡಿದಾಗ ಮಾತ್ರ ಹುಚ್ಚೆದ್ದನು (ಇಂಚಾಶ. ೦೪೮-೩೦). ೨. ಆವೇಶವು ಹೆಚ್ಚಾಗು; ಉದ್ರಿಕ್ತವಾಗು : ಕ್ರಾಂತಿ ಎಂಬುವ ಭೂತ ತಲೆಗೆದರಿ ಹುಚ್ಚೆದ್ದು ಸುತ್ತುತ್ತಿದೆ ಭೀಮಾಭಾಯೆಯ ಚಿಲ್ಲಿ (ಶಾಂತಶ. ೫೨-೮); ಕೊಲೆ ಮಾಡಿದ ಆರೋಪಿಗಳಿಗೆ ಶಿಕ್ಷೆಯಾದ ಸುದ್ದಿ ಕೇಳಿ ಲಕ್ಷ್ಮಣ ಹುಚ್ಚೆದ್ದು . . . ಕುಣಿದಾಡಹತ್ತಿದನೆಂದು ಕೇಳಿದೆ (ಮುಕಶ. ೨೪). [ ಪುರ್ಚು + ಏಱ್₁ ]

ಪುರ್ತಿಯ (ನಾ). ಒಬ್ಬಾತನ ಹೆಸರು : ನೋನ್ತು ತಾಮ್ ತಮಗೆ ಮೃತ್ಯುವರವಾನಱಿದಂ ಶ್ರೀ ಪುರ್ತಿಯ (ಎಕ II, ೦೦೫-೩ ; ಸು. 700).

[ ? ]

ಪುರ್ಪಾಲಿ (ನಾ). ಒಂದು ಬಗೆಯ ಸಸ್ಯ : ಪುರ್ಪಾಲಿ, ಮುಳ್ಳುಹಣ್ಣು (ವೈಶಿಗ. ೭೯-೦೬೨೮). [ ? ]

ಪುರ್ಬ 'ಪುಬ್ಬೆ' ನೋ.

ಪುರ್ಬಿಕ್ಕು 'ಪುರ್ವಿಕ್ಕು' ನೋ.

ಪುರ್ಬು 'ಪುರ್ವು' ನೋ.

ಪುರ್ಬೇಱಿಸು, ಹುಬ್ಬೇರಿಸು (ಕ್ರಿ). (ಆಶ್ಚರ್ಯ, ಗರ್ವ, ಕೋಪ ಇತ್ಯಾದಿಗಳಿಂದ) ಹುಬ್ಬನ್ನು ಎತ್ತರಿಸು : ಸಿರಿಮೊಗಮಂ ನಸು ಬಾಗಿ ಕರಂ ಭೂಮಿವರನಂ ಪುರ್ಬೇಱಿಸಿ ನಡೆ ನೋಡುವ ತರುಣಿಯ ನಡುಗಣ್ಮೆಳಗು . . . ಕರಮೆಸೆದುದು (ಶಿಮಾಶಾ. ೪-೦೩). ಹುಬ್ಬೇರಿಸು : ಅವಳು ಹುಬ್ಬೇರಿಸಿ, ಏಕೆ, ಯಾರದೇನು ಹೆದರಿಕೆ ? ... ಎಂದಳು (ಶ್ರೀಮಾತ್ರ. ೨೨).

[ ಪುರ್ಬು (< ಪುರ್ವು) + ಏಱಿಸು ]

ಪುರ್ರನೆ (ಅ). ಒಂದು ಅನುಕರಣ ಪದ : ಪುರ್ರನೆ ಹಾರುತ ಕಿರ್ರನೆ ಕಿರುಚುತ . . . ಚಿರ್ರನೆ ಚೀರುತಲಿ (ಹಮಾಶ. ೦೯). [ ಪುರ್₆ + -ಅನೆ₁ ]

ಪುರ್ವಸಿದ್ಧಾಯ (ನಾ). ಪೂರ್ವಕಾಲದಿಂದ ಕೊಡುವ ತೆರಿಗೆ : ಕೊಪ್ಪದ ಗೆಱೆಯ ಗವುಣ್ಡ ಏಳ್ಪಜ್ಜನ್ತನ್ನ × [ಮ]ಡಿಸಿದ ದೇಗುಲಕೆ ಬಿಟ್ಟ ಕೆಯಂ

ಪುರ್ವ್ವಸಿ[ದ್ಧಾ]ಯು ಕಟಿದು[ಕೊ]ಣ್ಡರಪ್ಪಡೆ . . . ಲೋಕಕೆ ಸಲ್ಗ (ಕೌಶಿ. XI-i, ೩೩-೯; 933). [ <ಪೂರ್ವ + ಸಿದ್ಧಾಯ ]

**ಪುರ್ವಿಕ್ಕು,** ಪುರ್ಬಿಕ್ಕು, ಹುಬ್ಬಿಕ್ಕು (ಕ್ರಿ). ೧. ಹುಬ್ಬು ಹಾರಿಸು ; ಹುಬ್ಬಿನಿಂದ ಸನ್ನೆ ಮಾಡು : ತನ್ನೊಳೋತಿರ್ದವರ್ ಕಟಿದಂದಾಕ್ಷಣದೊಳ್ ಧರಾರಮಣ ಮತ್ತೊರ್ವಂಗೆ ಪುರ್ವಿಕ್ಕುವಳ್ (ಶಂಶಾಮಾ. ೬-೬೯). ೨. ಹುಬ್ಬುಗಳನ್ನು ಎತ್ತರಿಸು ; ಹುಬ್ಬುಗಳ ಚಲನೆ ಮಾಡು ; ಹುಬ್ಬೇರಿಸು : ಬೆಟ್ಟುವನೇಡಿಸುತುಂ ಪುರ್ವಿಕ್ಕುವೊಡಂ ಕಣ್ಮುಟಲಿಯಂತದಾಗಳೆ ಮೂಣ್ಗುಂ (ಲೀಳೋಶ. ೯-೩೫) : ಬೆರಲನಾಡಿಸುತ್ತುಂ ಪುರ್ವಿಕ್ಕುತ್ತುಂ ಸೊಕ್ಕಿದರಂತೆ ಮರಳ್ಗೊಂಡವರಂತೆ ದೆಸೆಯಂ ನೋಡುತ್ತುಂ (ಧರ್ಮಾಮೃ. ೩-೦೩೭). **ಪುರ್ಬಿಕ್ಕು :** ೨. ಪುರ್ಬಿಕ್ಕಿ ಪಲ್ಗಿರಿದು ಹುಟ್ಟಿಂದು ಕಿರಾತಕಾಂತೆಯರಂ ಮಿಗೆ ನಗಿಸುತಿರ್ದ ಮರ್ಕಟಪ್ರಕರದಿಂ (೧೦೪. ೦-೦೩೬ ವ); ಪುರ್ಬಿಕ್ಕಿ ಪಲ್ಗಳಂ ಕಿರಿದು . . . ಬಿಸಿಲ್ ಪರ್ವಿರೆ ಕಾಯುತ್ತಿರ್ದುದು ಕೊರ್ಬಿದ ವೃಕ್ಷಾಗ್ರದಲ್ಲಿ ಮರ್ಕಟರಾಜಂ (ದಶಕು. ೨-೬೭); ಕೊಂಬನೇಱಿ ಪುರ್ಬಿಕ್ಕುವ ಮರ್ಕಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಕಾವ್ಯಸಾ. ೦೦೦೬). **ಹುಬ್ಬಿಕ್ಕು :** ೨. ನೆಗೆನೆಗೆದು ನಭಕುಪ್ಪರಿಸಿ ತಾರೆಗಳ ತಿಱಿದಂಭೋಜಮಿತ್ರನ ಮೊಗಕೆ ಹುಬ್ಬಿಕ್ಕುವವು (ಕೊರಂ. ೬-೬-೩೪). [ಪುರ್ವು+ಇಕ್ಕು]

**ಪುರ್ವು,** ಪುಬ್ಬು, ಪುರ್ಬು, ಹುಬ್ಬು, ಹುರ್ವು (ನಾ). ಎರಡೂ ಕಣ್ಣುಗಳ ಮೇಲ್ಭಾಗದಲ್ಲಿ ಹಣೆಗೆ ಹೊಂದಿದಂತೆ ಇರುವ ಕಿರುಗೂದಲಿನ ಸಾಲು ; ಭ್ರೂ : "ಪುರ್ವೆನೆ ಭ್ರೂಲತಾಹ್ವಯಂ" (ಶಬ್ದಾರ್ಣ. ೩೭); ಕುಡುಪುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ ಪುರ್ವದೆ ಕುಡುವೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್ (ಅಂಕು. ೯-೩೨) ; ಪುರ್ವಿನ ಗಂಟುಂ ಕಣ್ಣೊಳ್ ಪರ್ವಿದ ಕಿಸುಸೆರೆಗಳುಂ...ಕರಮರ್ವಿಸೆ ಮುನಿಸಿಂ ಕುಮಾರನಂದಿಂತೆಂದಂ (ಶಂಶಾಮಾ. ೭೦-೦೨); ಪುರ್ವಿನ ಕೊರ್ವು ಕರ್ವುವಿಲ್ಲಂ ಕೀಳ್ಮಾಡೆ (೧೭೪. ೨-೦೦೫ ವ). **ಪುಬ್ಬು :** ಬಲದ ಕಣ್ಪುಬ್ಬು ಮೆಯ್ವೆಚ್ಚಿ ಕೆತ್ತುತ್ತಮಿರೆ (ಕನ್ನ.ರ. ದೇ. ೦೨೬-೦೯). **ಪುರ್ಬು :** "ಪುರ್ಬುವಲ್ಲಿ ತಾಂ ಭ್ರೂಸಾಮಂ" (ವಸ್ತುಕೋ. ೭೦-೦೬); ಜರೆಯಿಂದಂ ಪುರ್ಬು ಜೋಲಲ್ (ಕಾದಂಪೂ. ೦೭೩); ಕರ್ಬಿನ ಬಿಲ್ಲಂ ಗೆಲೆ ಪುರ್ಬು . . . ದೇಸೆ ಪೊಚ್ಚ ಪೊಸತಾಯ್ತು (ಗದಾಯು. ೦-೬); ನೋಟದಲಿ ಮಾತಾಡಿ ಪುರ್ಬಿನ ಬೇಟದಲಿ ಬೆಳ್ಮಾಡಿ . . . ಬೇಟಕಾತಿಯರೊಪ್ಪಿದರು ನರನಾಥನಿದಿರಿನಲಿ (ಕೊಶಾ. ೦-೫-೩೦). **ಹುಬ್ಬು :** ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯ ಕೂಡಲಸಂಗಮದೇವ ಹಿಡಿವಡೆದ (ಬಸವ. ೬೦೯) ; ಕೆಂಪ ಕಾಱಿದಮಾಲಿಗಳು . . . ಗಂಟಿಕ್ಕಿದನು ಹುಬ್ಬುಗಳ (ಕುಮಾ.ಭಿ. ೩-೨೭) ; ನೋಟದಲಿ ಮದನಾಸ್ತ್ರವೆದೆಯಲಿ ನಾಟವವು ವಿಟರುಗಳ ಹುಬ್ಬಿನ ಬೇಟದಲಿ ಬೆಂಡಾದರಗ್ಗದ ನಿರ್ಜಿತೇಂದ್ರಿಯರು (ಕೊರಂ. ೦-೦೯-೨೯). **ಹುರ್ವು :** ಹುರ್ವ್ವಿನ ಜರ್ವ್ವ ವಿಶಿಷ್ಟರ ಹರ್ವ್ವಿದ ಬಡತನದ ಕೊರ್ವ್ವನುಡುಗಿಸು ಮದಱಿಂ ಹುರ್ವ್ವಿನವರೆಂಬ ನಾಮದಗುರ್ವ್ವಿನ ಗೋವರ್ದ್ಧನಂಗೆ ನಂದನನೆನಿಪ . . . ನಾಗದೇವಂ (ಎಇ. V, ೦೭ ೨೫ ; 1142).

**ಪುರ್ವು ಗಂಟಿಕ್ಕು,** ಪುರ್ಬು ಗಂಟಿಕ್ಕು, ಹುಬ್ಬು ಗಂಟಿಕ್ಕು=ಕೋಪದಿಂದ ಮುಖವನ್ನು ಸಿಂಡರಿಸು : "ಭ್ರುಕುಟೀಃ, ಭ್ರೂಕುಟೀಃ—ಈ ೨ ಹುಬ್ಬು (ಪುರ್ವು) ಗಂಟಿಕ್ಕುವುದು" (ಕಲಾಡು. ೦೨೯-೯೯) ; ಬಳಿಕೊರ್ವಳಪರಾಧರಮಣನಂ ಕಂಡು ನೆಲೆವೊಲೆ ನಡುಗೆ ಪುರ್ಬು ಗಂಟಿಕ್ಕಿ . . . ಶಿಳಿಪಲೆಂದೆಱಗಿದಿನಿಯನನೊದೆಯೆ (ಶಿಶು. ೦೦-೩೯) ; ಪೋರದೆ ಪುರ್ಬು ಗಂಟಿಕ್ಕದೆ ಪುಸಿಯದೆ ಸೇರಿ ಸೇವೆಯನೆಸಗುವುದು (ಹರಿ. ೦-೨೩) ; ಹುಬ್ಬು ಗಂಟಿಕ್ಕಿದ ಮುಖ ಪುನಃ ಅರಳಿಕೊಂಡಿತು (ಶೇಖೋಸ. ೦೦೦);

ಮೋಡಂ ಮತ್ತೆ ಹುಬ್ಬು ಗಂಟಿಕ್ಕಿ ನುಡಿದರು (ಜೂಟಿಬ್ಬ. ೦೬). **ಹುಬ್ಬಾಡು** = ಹುಬ್ಬನ್ನು ಅಲುಗಾಡಿಸು : ಆಡಿಂಗೆ ಆಕೋಟಿ ಕೋಡಗಕ್ಕೊಂದು ದಿನ ಕೋಡಗವು ಕೋಟಿ ಮಡಿದಲ್ಲಿ ಬಳ್ಳು ಹುಬ್ಬಾಡ ಹೊತ್ತಿಲ್ಲ (ಸರ್ವಜ್ಞ. ೨೩೬). **ಹುಬ್ಬು ಕುಣಿಸು**=ಹುಬ್ಬನ್ನು ಎತ್ತರಿಸು ; ಹುಬ್ಬು ಹಾರಿಸು. **ಹುಬ್ಬುಗಂಟು ಹಾಕು**=ಪುರ್ವುಗಂಟಿಕ್ಕು : ಆಗ ಆವನು ಹುಬ್ಬುಗಂಟುಹಾಕಿಕೊಂಡು ನನಗೆ ಬಹಳ ಕೆಲಸವದೆ . . . ಎಂದು ಓಡ ಹತ್ತಿದನು (ಮುಂಬಯಿ. ೯-೩೭); ಆ ರಾಕ್ಷಸನು . . . ಹುಬ್ಬುಗಂಟುಹಾಕಿಕೊಂಡು ಅವುಡು ಕಚ್ಚಿ ಇದು ಯಾರು ಎಂದು ಗರ್ಜಿಸಿದನು (ವಚಪಾ. ೯೭). **ಹುಬ್ಬುಗೈಹಚ್ಚು** = (ದೂರದ ವಸ್ತುವು ಚೆನ್ನಾಗಿ ಕಾಣದಾದಾಗ) ಹುಬ್ಬಿನ ಬಳಿ ಅಂಗೈಯನ್ನಿಟ್ಟು ನೆರಳು ಮಾಡು : ದೂರದಲಿ ಯಾರೋ ಮುಬ್ಬುಗತ್ತಲಲಿ ಹುಬ್ಬುಗೈಹಚ್ಚಿ ನೋಡುತಿದ್ದಾರೆ ಹೊರಳಿ ಹೊರಳಿ (ನಂಮು. ೦೭-೨೦). **ಹುಬ್ಬು ಹಾಱಿಸು, ಹುಬ್ಬು ಹಾರಿಸು** = ಹುಬ್ಬನ್ನು ಕುಣಿಸು : ಮೋಱೆಯೊಲೆದು ನೋಡಿ ನೃಪಸುತರಿಗೆ ಹುಬ್ಬು ಹಾಱಿಸುವಳು ನಸುನಗುತ (ಭರತ. ೦೨-೬೦); ಚೆಲುವಾದ ಪೋರಿ ಎಂದೊಬ್ಬ ಹುಬ್ಬು ಹಾರಿಸಿದನು (ಪುನರು. ೦೩೬)

[ದೇ. ‖ ತಮಿ. ಪುರುವಮ್, ಪುರೂರ ; ಮಲ. ಪುರಿಗ; ತುಳು. ಪುರುಬು, ಪುಬುರ್. / ಸಂ. ಭ್ರೂ]

**ಪುಲ್,** ಪುಲು, ಪುಲ್ಲು, ಹುಲು, ಹುಲ್ಲು (ನಾ). ೧. ಗರಿಕೆ; ತೃಣ; ● ಸಾಮಾನ್ಯವಾಗಿ ದನ, ಕರು ಮುಂತಾದುವುಗಳ ಆಹಾರ : ಬೆಳೆಯೊಳ್ ಪುಲ್ಗಳ್ ಪಲವಕ್ಕುಂ (ವಡ್ಡಾರಾ. ೯೬-೦೯); ಶತಬಿಂದುವಿನ ಮಕ್ಕಳಪ್ಪಯ್ವರು ಗಾಳಿಗೊಡ್ಡಿದ ಪುಲ್ಲ ಬಿಂದುಗಳಂತೆ ನಕುಲಂ ನೆಲಕ್ಕೆ ಸೋವತಂ ಮಾಡಿದಂ (ಶಂಪಶಾ. ೦೩-೯೦ ವ); ಪಲ್ಲಂ ಸುಲಿವೊಡಂ ಕಿವಿ ತೀಂಬೊಡೆ ತುಱಿಸುವೊಡಂ ಪುಲ್ಲಿಂದೆನಿತುಂ ಪ್ರಯೋಜನಮುಂಟು(ಶಂಪಶಂ. ೩೯-೦೯). ೨. (ಅಲಂ) ಬೆಲೆಯಿಲ್ಲದ ವಸ್ತು; ನಿಕೃಷ್ಟವಾದುದು; ಕ್ಷುದ್ರವಾದುದು ; ಅಲ್ಪವಾದುದು : ಅವನಂ ಪುಲ್ಲಂ ತಿಳಿದಂ . . . ಸ್ಮರಂ ಹರನಂ ಪುಲ್ಗೆ ಬಗೆದಂ (ಶಬ್ದಾನು. ೨೦೯ ಪ್ರಯೋ). **ಪುಲು :** ೧. ಕ್ಷೀರಶರಧಿಯೊಳಿಪ್ಪ ಹಂಸಂ ಕ್ಷಾರನೀರಂ ಸೇವಿಪುದೆ ಕಂಠೀರವಂ ಪುಲು[ಶಾಂ. ಲ್] ಮೇವುದೇ (ಬಸವ. ೦೦-೦೦); ಸುತನ ಸಾವಂ ಲೋಗರಱಿಯದ ಗತಿಯೊಳಾ ಗೋದಣದೊಳಗದಂ ಹಾಯ್ಕಿ ಪು[ಶಾಂ.ಹು]ಲು ಮುಚ್ಚಿ (ಬಸವು. ೨೯-೩೭). ೨. 'ಪುಲುಬೂತು' ಪರಾ. **ಪುಲ್ಲು :** ೧. ವ್ಯಳಕಟ್ಟುವಡರ ತಟ್ಗಿಯೂರಾಳ ಅವುಕ್ಕ ಇಯೂರೆ ಪಣ ಪುಲ್ಲು (ಎಕ. IV, ಗುಂಡ್ಲು.ಪೇ. ೯೭-೮; ಸು. 750); ಪಶುಗಳು ಬೆಳೆದ ಹೊಲದತ್ತ ತೆಗೆಯಲು ಸರಸಿಗಳು ತುಂಬಿರ್ದ ಬೆಂಚೆಗಳ ಒತ್ತಿನಲಿ ನಿಲಿಸಿದಡೆ ಬಾಯ್ದೆಱೆಯುತ್ತೆ ಪುಲ್ಲಿಗೆ ಮೋಱೆಯಂ ನೀಡಿತ್ತೆ ನೀರಿಂಗೆ (ಬಸವು. ೭೦-೨೩). **ಹುಲು :** ೧. ಎಂದಿನಂತುದಯಕಾಲದೊಳೆದ್ದು ಹುಲು ಹುಳ್ಳಿಗೆಂದರಣ್ಯಕ್ಕೆ ನಡೆದು (ಹರಿಶ್ಚ. ೦೨-೭). ೨. ಘಾಸಿಯಾದನು ದೈತ್ಯ ಲಜ್ಜೆಯ ನೀಗಿ ಹುಲುವಾಗಿ . . . ನಾಚಿ ಲಂಕೆಯ ಹೊಕ್ಕ ರಾವಣನು (ಕೌಶಿರಾ. ೨೨-೩೩); ನಂಟತನ ಕೂಡಿ ಬರುವ ಹುಲು ಆಸೆ ನಿನಗಿನ್ನು ಬೇಡ (ಕುರುಕು. ೦೬). 'ಹುಲುಮನುಜ' ಪರಾ. **ಹುಲ್ಲು :** ೧. ಹುಲ್ಲ ಕಿಚ್ಚು ಹೊಲೆಯನ ಮೇಳಾಪ ಅಲ್ಲಿ ಹುರುಳಿಲ್ಲ (ಬಸವ. ೦೦೨); ಹಳೆಯಮ್ಮ ಗೊಜವ ಸುಟ್ಟೊದಾಸರಕೆತ್ತಿ ನಡೆವ ಬೀಡ ನಡೆಯಲೀಯದೆ ಕಾದುತ್ತಿರಲು . . . ಹುತ್ತಮೇಱಿ ಹುಲ್ಲಂ ಕಚ್ಚಿದರ ಕೊಲಲೊಲ್ಲದೆ ಕಾಯ್ದು ಕಳಿಹಿ ಸತ್ತು ಸುರಲೋಕಪ್ರಾಪ್ತನಾದ (ಮ್ಯಆಂ. ೦೯೩೦, ೭೭-೯; 1164); ಹೂವ ತರುವರ ಮನೆಗೆ ಹುಲ್ಲ ತರುವ ಅವ್ವೆ ಲಕುಮಿರಮಣ ಇವಗಿಲ್ಲ ಗರುವ (ಪುರಂದ. ೦-೦೯೭ ಕಲ್ಲಿ); ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು (ಮಂಕುತ. ೭೬೯); ಹುಟ್ಟಿಸಿದ ದೇವರು ಹುಲ್ಲು ಮೇಯಿಸಿಯಾನೆ ?

(ಗಾದೆ). ೨. ನಿಮ್ಮ ಮಂಡೆಗೆ ಹೂವ ತಹೆನಲ್ಲದೆ ಹುಲ್ಲ ತಾರೆನು (ಮಹಾದೇ. ಬಿ. ೬೦-೧೪೮).

**ಪುಲ್ಲಂ ಕರ್ಚು**= (ಶರಣಾಗತಿಯನ್ನು ಸೂಚಿಸುವ ಸಲುವಾಗಿ) ಬಾಯಲ್ಲಿ ಹುಲ್ಲನ್ನು ಕಚ್ಚಿ ಹಿಡಿ : ಪುಲ್ಲಂ ಕರ್ಚೀಱು ಪುತ್ತನಡಿಗೆಱಗು (ಕವಿರಾ. ೩-೧೪೪); ಕೆಲರ್ ಶರಣೆಂದು ಕುಮಾರನ ಕಾಲ್ಗೆಱಗಿ ಪುಲ್ಲಂ ಕರ್ಚಿ ಪೊಡೆವಟ್ಟರ್ (ವಡ್ಡಾರಾ. ೬೨-೦೫). **ಪುಲ್ಲ ನೀರ್**=ಹುಲ್ಲಿನಲ್ಲಿ ನಿಂತಿರುವ (ಮಂಜು, ಮಳೆಹನಿ ಮೊದಲಾದುವುಗಳ) ನೀರು : ಪನಿವ ಪುಲ್ಲ ನೀರ್ಗಳ್ವೆರಸಲರುದುರುತ್ತಮಿರ್ದುವಂತಾ ಕ್ಷಣದೊಳ್ (ಕಾದಂಪೂ. ೦೯೪). 'ಪನಿನೀರ್' ಪರಾ. **ಪುಲ್ಲ ಬೆಂಟೆ**=ಹುಲ್ಲಿನ ಹಗ್ಗ : ಪುಲ್ಲ ಬೆಂ[ಪಾಠಾಂ. ಪುಲ್ಲ ಬೆರ, ಪೊಲ್ಲ ಬೆಂ]ಟೆಯಂ ಪೊಸೆದು ಕಿಚ್ಚುವೊಣ್ಣಿಯ ಕೊಡನುಂ ಬೆಂಟೆಯುಮಂ ಕೊಂಡು ಪೋಗಿ (ವಡ್ಡಾರಾ. ೦೫೩-೦೦). **ಪುಲ್ಲ ಮುಱಿ**=ಹುಲ್ಲಿನ ತುಂಡು ; ಗರುಕೆಯ ತುಂಡು : ಪುರಹರನಿಟ್ಟ ಪುಲ್ಲ ಮುಱಿಯಂ ಮುರವೈರಿ ವಿರಿಂಚಿಮುಖ್ಯನಿರ್ಜರರದನೆತ್ತಲಾಱದೆ ಪಲು ಧೃತಿಗುಂದಿದರ್ (ರಾಜಶೇ. ೦೩-೨೪).

[ದೇ. ॥ ತಮಿ. ಮಲ. ಕೋತ. ತೊದ. ಪುಲ್; ತುಳು. ಪುಲ್ಲು ;ಕೊಡ. ಪಿಲ್ಲ್; ತೆಲು. ಪುಲು, ಪುಲ್ಲು, ಪಿಲ್ಲು]

**ಪುಲ**, ಪುಳ$_2$ (ಗು). ೧. ದೊಡ್ಡ; ಬೃಹತ್ತಾದ. (ನಾ). ೨. ಗಾತ್ರ ; ಆಕಾರ. ೩. ನವಿರೇಳುವಿಕೆ ; ಪುಳಕ. **ಪುಳ**$_2$: ೩. ಕಸ್ತೂರಿಗೆ 'ತಾಯಿ' ಎಂಬ ಶಬ್ದ ಪುಳವನ್ನುಂಟುಮಾಡಿತು (ಚಿಂದಶಿ. ೦೨೬). [ಸಂ.]

**ಪುಲಕ**, ಪುಳಕ$_1$ (ನಾ). ೧. ಮೈನವಿರೇಳುವಿಕೆ ; ರೋಮಾಂಚನ : ಪುಲಕಂ ಜಾನಕಿಗುತ್ಸವಂ ಜನಕರಾಜಂಗೆ . . . ಆಯ್ತೀಱಿಸಿ ನೀವಿ ಜೇವೊಡೆಯೆ ವಜ್ರಾವರ್ತಮಾ ರಾಘವಂ (ಕಂರಾಮಾ. ೫-೮೯) ; ತೃಣರಾಶಿ ಮೈದೋರೆ ಪಚ್ಚೆಯ ಪುಲಕದಂತೆ (ಚತ್ರಾಂಗ. ೬೦-೦೬೭೫). ೨. (ಪ್ರಾಣಿಗಳ ಮೈಗೆ ಅಂಟಿಕೊಳ್ಳುವ) ಕ್ರಿಮಿ. ೩. ಅನ್ನದ ಉಂಡೆ. ೪. ಹಾರಕ ಮೊದಲಾದ ತೃಣಧಾನ್ಯ. **ಪುಳಕ**$_1$ : ೧. "ಪೊಂಪುೞಿಯೆನೆ ಪುಳಕಾಖ್ಯಂ" (ಚತುನಿ. ೯); ತಿಳಿಪಲಡಿಗೆಱಗಿದೋಪನ ತಳಂಗಳಾ ತೀಟದಿಂ ಪವಂಗಳೊಳೊಗೆದಾ ಪುಳಕಚಯಂಗಳ್ ಕಳೆದುವು ಮುಳಿಸು ನಲ್ಲಳ್ಗೆ (ಕವಿರಾ. ೩-೦೦೨); ಪುಳಕಂ ಪುದಿದಿರೆ ರಾಗಂ ಪೊಳೆಪು ತನುರುಚಿಗೆ ಮಾಡೆ . . . ಕಳಿಕೆಯೊಳಿ ತುಱುಗಿ ತಳಿರೊಳೆ ತಳತಳಿಸಿದದೊಂದಶೋಕಲತೆಯನೆ ಪೋಲ್ತಳ್ (ಆದಿಪು. ೮-೨೯); ಮನ ಮನ ಬೆರಸಿದಲ್ಲಿ ತನು ಕರಗದಿದ್ದರೆ ಸೋಂಕಿನಲ್ಲಿ ಪುಳಕಂಗಳು ಹೊಱಹೊಮ್ಮದಿದ್ದರೆ . . . ಎನ್ನಲ್ಲಿವಿಲ್ಲವಾಗಿ ಆನು ಡಂಭಕ ಕಾಣಿರೇ (ಬಸವ. ೩೭೮). "ಅನ್ನದಗುಟಲ್ಲಿ ಧಾನ್ಯದಲಿ ಪುಳ[ಪಾಠಾಂ. ಳು]ಕವೆಂದೆನಿಕ್ಕು" (ಮಂಗರಾ. ೦೪೩-೨೨). ೫. ಅಕ್ಕರೆ; ಕಕುಲಾತಿ: ಈವತ್ತು ಒಮ್ಮಿಂದೊಮ್ಮೆಲೆ ಆ ಚಂದ್ರಭಾಗಕ್ಕನ ಬಗ್ಗೆ ಇಷ್ಟೊಂದು ಪುಳಕವೇಕೆ ? (ಮೂರುದಾ. ೫೦); ಆ ಹುಡುಗಿಯ ಬಗ್ಗೆ ಇಷ್ಟೇಕೆ ಪುಳಕವೋ (ಮೂರುದಾ. ೦೪೫). ೬. ಒಂದು ಬಗೆಯ ರತ್ನ. "ಪುಳಕಮೆನಿಕ್ಕುಂ ರತುನೋಪಳಮುಂ . . . ಕೀಟಕಮುಂ" (ವಸ್ತುಕೋ. ೦೨೯-೬೮). [ಸಂ.]

**ಪುಲಕಂಗೂಡು** (ಕ್ರಿ). ನವಿರೇಳು ; ರೋಮಾಂಚಿತವಾಗು : ನಿಮಿರ್ದತ್ತಿದೊಂದು ಪುರ್ವಿಂ ಮೆರೆವಿ ವದನಂ ಪುಲಕಂಗೂಡಿದ ಕದಪಿಂ ಕನ್ನಡಿಪುದೆನ್ನೊಳಿಪಣಭಿರತಿಯಂ (ಶಾಕುಂತ. ೩೮-೬೬). [ಪುಲಕ + ಕೂಡು$_1$]

**ಪುಲಕವೇರು** (ಕ್ರಿ). ೧. ರೋಮಾಂಚನ ಹೊಂದು. ೨. (ಅಲಂ) ಚಿಗುರು ; ಮೊಳಕೆಯೊಡೆ : ನನ್ನ ಶರೀರ, ಮನಸ್ಸು ವಸಂತದ ಮಲಯ ಪವನಕ್ಕೆ ಪುಲಕವೇರುವ ಬಕುಲವನದ ನವಪಲ್ಲವರಾಶಿಯ ಹಾಗೆ ಕಂಪಿಸಿ ಕಂಪಿಸಿ ತತ್ತರಿಸಿ ಹೋಯ್ತು (ಇಷ್ಟಕ. ೪೪೮).

[ ಪುಲಕ + ಏರು$_1$ (< ಏಱು$_1$) ]

**ಪುಲಕಾಂಕುರ**, ಪುಳಕಾಂಕುರ (ನಾ). = ಪುಲಕ ೧ : ಪುಲಕಾಂಕುರ ಮೊಗೆತರೆ ಕೋಮಲೆಯುಪ್ಪಿದ ಕಾಂತಕುರವಕಂ ಕಣ್ದೆಱೆದಾ ಕುಲಟೆಯ ತಳ್ತೆಳೆ ಗೆತ್ತುಮ್ಮಳಿಸಿದನಿಂತಪ್ಪ ಪಾಪಭೀರುಗಳೊಳರೇ (ಲೀಲಾವ. ೦೪-೦೩೦). **ಪುಳಕಾಂಕುರ** : ಒದವೆ ಪುಳಕಾಂಕುರಂಗಳ್ . . . ಇದಿರೆಟ್ಟಿಳ್ ತರಳನಯನೆ ಸಂಭ್ರಮದಿಂದಂ (ಕಾದಂಅ. ೩೫); ಕೈಗನ್ನಡಿಯವೊಲೆಲ್ಲರ ಕೈಗೊಪ್ಪುವ ಮಗನನೆತ್ತಿ ಪುಳಕಾಂಕುರಮಂ ಮೈಗಗ್ಗಳಿಸವ ಕಾಂತೆಯ ಕೈಗಮದೇಂ ಭೇದಮುಂಟೆ ಸೀರೆಯ ಕೈಗು (ಮಲ್ಲಿಪು. ೩-೧೦೫) ; ನೆಗೆದ ಪುಳಕಾಂಕುರದ ನೆಱೆ ಮುಗುಳ್ದಕ್ಷಿಯ ಮಿಡುಕದಂಗದಿಳಿದೇಱದೆ ನೆಟ್ಟಗೆ ನಿಂದ ಸುಯ್ಯ ಸುಳಿಯದ ಬಗೆಯ ಪೊಡರ್ಪಸೆಯೆ ತಾಪಸಂ ತಪಮಿರ್ದಂ (ಶಬಶಂ. ೨-೯೪). [ಸಂ.]

**ಪುಲಕಿತ**, ಪುಳಕಿತ (ಗು). ೧. ರೋಮಾಂಚನ ಹೊಂದಿದ ; ರೋಮಾಂಚಿತವಾದ : ದಶರಥಮಹೀನಾಥ ಸುತಮುಖನಿರೀಕ್ಷಣಾಭರದಿಂ ಪಾರಿಜಾತಂ ಕೋರಕಿತಮಾದಂತೆ ಪುಲಕಿತಶರೀರನಾಗಿ (ಕಂರಾಮಾ. ೩-೧೦೭ವ). (ನಾ). ೨. ರೋಮಾಂಚನಗೊಂಡ ವ್ಯಕ್ತಿ : ಅತ್ತಿಮಬ್ಬೆ ಪುಲಕಿತಳಾಗಿ ನುಡಿದಳು (ದಾನಚಿಂ. ೦೭೭); ತುಂಗಕ್ಕ . . . ತುಸು ಸಮಯದ ಮೇಲೆ ಥಟ್ಟನೆ ಹೊಳೆದ ಒಂದು ಹೊಸ ವಿಚಾರದಿಂದ ಪುಲಕಿತಳಾದಂತೆ ತ್ರಾಟ ಕಚ್ಚಿಕೊಂಡಳು (ಮೂರುದಾ. ೫೦). **ಪುಳಕಿತ** : ೧. ಪುಳಕಿತಕಪೋಳಫಳಕಂ ವಿಳಸಿತಮದಿರಾರುಣೇಕ್ಷಣಂ ಸ್ಫುರಿತೋಷ್ಠಂ ಕೆಳದೀ ನಿನ್ನ ಮುಖಂ ತಳಮಳಗೊಳಿಸುಗುಮಿಂತು ನಿಭೃತಶೃಂಗಾರರಸಂ (ಕವಿರಾ. ೩-೦೯೨); ಮುನಿಕಾಂತಾದರ್ಶನೋತ್ಕಂಠೆ ಪುಳಕಿತಸರ್ವಾಂಗಿ ಇಂತಾತುರದೊಳಿರ್ದಳ್ (ರಾಮಾಶ್ವ. ೨೮-೪). ೩. ರೋಮಾಂಚಿತವಾದುದು: ಆಲಿಕಲ್ಲ ರೂಹಿನಂತೆ ಅರಗಿನ ಪುತ್ಥಳಿಯಂತೆ ತನು ಪುಳಕಿತವಾದ ಬೆಮರುಬಿಂದುಗಳೆಲ್ಲಾ . . . ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ (ಬಸವ. ೪೯೩) ; ಇಳೆಯೊಳ್ ಪಾರ್ವತಿಯುಮದಯಿಸೆ . . . ಪುಳಕಿತಮಾಯ್ತಿಂದುಧರನ ವರಮಾಮಾಗು (ಗಿಂಕ. ೩-೪೩). [ಸಂ.]

**ಪುಲಕಿತಗೊಳ್ಳು** (ಕ್ರಿ). ರೋಮಾಂಚನ ಹೊಂದು ; ಜುಮ್ಮೆನ್ನು : ಹದಿನಾರನೆಯ ಶತಮಾನದ ಉತ್ತರಾರ್ಧ ಮತ್ತು ಹದಿನೇಳನೆಯ ಶತಮಾನದ ಪೂರ್ವಾರ್ಧಗಳು ನೂತನ ಕಾವ್ಯಪ್ರವಾಹದಿಂದ ಪುಲಕಿತಗೊಂಡವು (ಶಾವಗೀ. ೫೩). [ ಪುಲಕಿತ + ಕೊಳ್ಳು$_1$ (<ಕೊಳ್$_1$) ]

**ಪುಲಕಿಸು**, ಪುಳಕಿಸು (ಕ್ರಿ). ೧. ಪುಲಕಿತಗೊಳ್ಳು ; ರೋಮಾಂಚಿತವಾಗು : ಅಲ್ಲಿ ಕುಳಿತನು ಮೆಲ್ಲನೆಯು ತನುವೆಲ್ಲ ಪುಲಕಿಸಲು (ಗಗತಾ. ೨-೨೨). **ಪುಳಕಿಸು** : ೧. ಗಿರಿರಾಜನೊಡಂಬಟ್ಟಾದರದಿಂದಂ ಪುಳಕಿಸುತ್ತೆ ಪುಟವೇಳುತ್ತುಂ ಪುಚಾರಪಟುಗಳೆನಿಸುವ ತರುಣಿಯುತಂ ಕೂಡಿಕೊಟ್ಟು ಸಂತಸದಿಂದಂ (ಗಿಂಕ. ೩-೯). ೨. ಸಂತೋಷಪಡು ; ಉತ್ಸಾಹಿಸು : ಹರನ ಕೃಪೆಯಾಯಿತೆಂದೆನುತೆ ಪುಳಕಿಸುತಿರಲು (ಬಸರ. ೦-೩೨); ಚಿಲುವಲರಿ ಪೋಪಂತೆ ಭಕ್ತರು ಪುಳಕಿಸುತ ಕೇಳಿಕೆಗಳಿಂ ತಾವಳವಡಿಸುತಾಡುತ್ತ ಪಾಡುತ ಹೋಗುತಿರಲು(ಬಸಪು. ೫೭-೪೬) ; ಗಂಗಾತನುಜನುಚಿತೋಕ್ತಿಗಳ ನೆನೆವಡಿಗಡಿಗೆ ಪುಳಕಿಸುತ ವಿನುತಮತಿ ನಡೆತರಲು (ಕುವ್ಯಾಭೀ. ೨-೨೯).

[ ಪುಲಕ + – ಇಸು$_3$ ]

**ಪುಲಕೇಶಿ** 'ಪುಲಿಕೇಶಿ' ನೋ.

**ಪುಲವಡು** (ನಾ). ಹುಲ್ಲುಗಾವಲು ; ಗೋಮಾಳ : ದೇವಗ್ಗೆ ಸಾಸಿರ ಬಳ್ಳಿಯ ತೋಂಟ ದೇವರ ಸುತ್ತಣ ಬೆದ್ದಲೆ ತೋಟಗಟ್ಟು ಪುಲವಡು ಕೆಂಗಾಡು (ಸೌಇಇ. IX-1. ೨೦೬-೨೩ ; 1122). 'ಪುಲ್ಪಡಿ' ಪರಾ.

[ ?. / ತುಳು. ಪುಲವಾಡೆ, ಪುಲಾಡಿ ]

**ಪುಲಾಕ** (ನಾ). ೧. ಜೊಳ್ಳಾದ ಕಾಳು. ೨. ಅನ್ನದ ಮುದ್ದೆ.—ಓಡ : "ಫಳದುರ್ವಿವ ತುಷ ಧಾನ್ಯಾವಳಿ ಭಕ್ತಸಿಕ್ಥಕವಿವೆ ಪುಲಾ

ಕಾವ್ಯಂಗಳ್" (ವಸ್ತುಕೋ. ೧೨೯-೩೮). ೩. ಸಂಕ್ಷೇಪ; ಸಂಗ್ರಹಗೊಳಿಸಿದುದು. ೪. ಅಕ್ಕಿಯ ಗಂಜಿ. ೫. [ಜೈನ]ಐದು ಬಗೆಯ ಮುನಿವರ್ಗಗಳಲ್ಲಿ ಒಂದು; ₱ ಉತ್ತರಗುಣಭಾವನಾರಹಿತರೂ ವ್ರತಗಳಲ್ಲಿ ಪರಿಪೂರ್ಣತೆಯನ್ನು ಹೊಂದದೆ ಇರುವವರೂ ಆದ ಮುನಿಗಳು ಅಶುದ್ಧವಾದ ಪುಲಾಕ(=ಅನ್ನದ ಮುದ್ದೆ)ದಂತೆ ಇರುವುದರಿಂದ ಈ ಹೆಸರನ್ನು ಪಡೆದಿದ್ದಾರೆ: ಎತ್ತಾನುಂ ಅಪರಿಪೂರ್ಣವ್ರತರುಂ ಉತ್ತರಗುಣಭಾವನಾರಹಿತರುಂ ಅಪ್ಪ ಪುಲಾಕರುಂ (ತತ್ತ್ವಶ್ರ. ೩೩೬); ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಐದು ಪ್ರಕಾರಗಳು (ಜೈಪಶ. ೯೯). [ಸಂ.]

**ಪುಲಾವು** 'ಪಲಾವ್' ನೋ.

**ಪುಲಿ**, ಹುಲಿ[1] (ನಾ). ೧. (ಅರಣ್ಯದಲ್ಲಿ ಬೇಟೆಯಾಡಿ ಜೀವಿಸುವ, ಮೈ ಮೇಲೆ ಕರಿಯ ಪಟ್ಟೆಗಳುಳ್ಳ ಹಳದಿಬಣ್ಣದ) ಒಂದು ಬಗೆಯ ಕ್ರೂರಮೃಗ; ವ್ಯಾಘ್ರ: ಪುಲಿ ಪುಲಿ ಪರಿವುದು ಪೋ ಪೋ ಗೆಲೆ ಎಲೆ ಪೆಜಿಪಂಗು (ಕವಿರಾ.೨-೨೬); ತಪ್ಪುಗವುಣ್ಣಾನು ಪುಲಿಯನ್ ಇಱಿದು × × × ಸತ್ತೊಡೆ (ಪ್ರಕ. ೦೯೭೮. ೪೪ ೩; 855); ಪೊಯ್ವ ಸಿಡಿಲ್ ತಿಂಬರೆವಾವು ಪಾಯ್ವ ಪುಲಿಯೆಂಬೀ ಬಾಧೆಯೊಳ್ ಮಯ್ಮನೊಡ್ಡಿಸ (ಆದಿಪು. ೬-೩೪); ಈದ ಪುಲಿಯಾ ಪೋಲಿರ್ದಳ್ (ಕಮುದ. ೦೦೮ ಶ್ರಯೋ). ೨. ಒಬ್ಬಾತನ ಹೆಸರು: ಪೆರ್ಗಡೆಗೌಡ ಶ್ರೀ ಪುಲಿ ಅಗಳ ಪನ್ನೆರಡುಮೂಳೆ ಪಾಳುಕೋಡ ಕೆಱೆಯುಂ ಅಯ್ವೊನ್ದಿ ಕಾಡು ಪತ್ತೊನ್ದಿ ಪ್ರಸಾದಂಗೆಯ್ದೊರ್ (ಪ್ರಕಲ. ೧೯೨೬, ೦೦೦ ೩; ೨ನೆಯ ೭೩). (ಗ್ರಾ). ೩. (ಆಲಂ) ದೊಡ್ಡದಾದ; ದೊಡ್ಡ: 'ಪುಲಿವಲೆ' ಪರಾ. ಹುಲಿ[1]: ೧. "ವ್ಯಾಘ್ರಃ, ದ್ವೀಪೀ . . . ಮೃಗಾರಿಃ—ಈ ೭ ಹುಲಿ" (ಹಲಾಯು. ೯೩-೭೩); ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲೆಗೆ ಉಣಬಾರದು (ಬಸವ. ೬೬೩) ಹುಲಿಯ ಐಚುಱೊತ್ತಿದೊಡೆ ಪರುಸಂಜಲಕೆ ಸಂಚಪ್ಪೇನು (ಕುಮಾ.ಭ. ೨೦-೩೦). ೪. ಒಂದು ಬಗೆಯ ಸಸ್ಯ: ಹುಲಿಯ ಬೀಜ, ಕರ್ಕಾಟಕ ಶೃಂಗಿ, ರಕ್ತಗಂಧಕ (ವಿಸ್ಮವಿ. ೯೨).

**ಪುಲಿಯ ಬಾಲ**=ಒಂದು ಬಗೆಯ ಆಭರಣ: ಕುಜುಹಿನ ಪಟ ಕಿಜು ಘಂಟೆ ಪುಲಿಯ ಬಾಲ ಮೆಜುಗಿಯೆ ಗಡಯುರೆಯ್ಯಂದು . . . ಇಱಿದಾಡಿದರು ರಣದೊಳಗೆ (ಕುರಾಸಾಂ. ೦೨-೬೩). **ಹುಲಿಕುರಿ ಆಟ**=ನಾಲ್ಕು ಕಲ್ಲುಗಳನ್ನು ಹುಲಿಗಳಾಗಿಯೂ ಹದಿನೆಂಟು (ಹುಣಿಸೆ) ಬೀಜಗಳನ್ನು ಕುರಿಗಳಾಗಿಯೂ ಇಟ್ಟುಕೊಂಡು ಆಡುವ ಒಂದು ಬಗೆಯ ಆಟ: ಹಳ್ಳಿಗರು ಚೌಕಾಬಾರ, ಹುಲಿಕುರಿ ಆಟ ಮೊದಲಾದ ಆಟಗಳನ್ನು ಆಡುತ್ತಾರೆ (ರೂಢಿ). **ಹುಲಿಮನೆಯಾಟ**=ಹುಲಿಕುರಿಯಾಟ: (೬). **ಹುಲಿಯ ಜಂಗುಳಿ, ಹುಲಿಯ ಜ್ಯಗುಳಿ**=ಒಂದು ಬಿರುದು: ಸೊರಬದ ಹುಲಿಯ ಜಂಗುಳಿ ಬೀರಣನ ಮಗ (ಎಕ. VIII, ಸೊರಬ. ೯೬-೪; 1018?); ಭಾಸೆಗೆ ತಪ್ಪುವ ಲೆಂಕರ ಗಂಡ ಹುಲಿಯ ಜ್ಯಗುಳಿಯ ಮೊತ್ತದ ಸೇನಾನಾಯಕಂ (ಎಕ. III, ಮಂಡ್ಯ. ೯೩-೨೬; 1305?).

[ದೇ. ॥ ತಮಿ. ಪುಲಿ, ಪುಲ್; ಮಲ. ಕೊಡ. ತೆಲು. ಪುಲಿ; ತುಳು. ಪಿಲಿ; ಕೋತ. ಪುಜ್; ಕೋಲಾ. ನಾಯ್ಕಿ. ಪುಲ್; ಗೊಂಡಿ. ಪುರ್ಲ್]

△**ಪುಲಿಂಗಿಲ್** 'ಪುಲಿಗಿಲ್' ನೋ.

**ಪುಲಿಂದ**, ಪುಳಿಂದ (ನಾ). ೧. ಕಾಡಿನಲ್ಲಿ ವಾಸಿಸುವ ಒಂದು ಜನಾಂಗ; ಭಿಲ್ಲಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು; ಬೇಡ; ಶಬರ: 'ಪುಲಿಂದಿನಿ' ಪರಾ. **ಪುಳಿಂದ**: ೧. "ಕಿರಾತಃ, ಶಬರಃ, ನಿಷ್ಪ್ಯಃ, ಪುಳಿಂದಃ, ನಾಹಳಃ, ಭಟಃ, ಮಾಳಾ, ಮ್ಲೇಚ್ಛಃ—ಈ ೮ ಬೇಡರ್ ಮೊದಲಾಗುಳ್ಳಂತ್ಯಜಾತಿಗಳ್" (ಹಲಾಯು ೯೮-೪೯೩); ಅವಯುವದೆರ್ದೆಗೊಳ್ಳುದಿದಾರುವನೇದೊಡೆ ಬಾಣಕೃತಿ ಪುಳಿಂದನ ಸಂಧಾನವನೆಯ್ದಿದತ್ತು ಪಾತ್ರಿನ ಕವಿಕುಳದೆರ್ದೆಗೊಳ್ವುದೆಂಬುದೊಂದಚ್ಚರಿಯೇ (ಕಾದಂಪೂ. ೪); ಆ ಮರದೊಳಿರ್ಪ ಕಪೋತಶಿಖಾಮಣಿ ಕಂಡು ಕರುಣಾರಸಾರ್ದ್ರಹೃದಯನಾಗಿ . . . ಚಂಚೂಪುಟದಿನೊಂದು ಕೊಳ್ಳಿಯಂ ಕರ್ಚಿ ತಂದು ಪುಳಿಂದನ ಮುಂದಿಟ್ಟು (ಕಂತಕಂ. ೨೪೩-೮೭). ೨. ನಾವೆಯ ಒಂದು ಭಾಗ; ನೌಕಾಶಿರ: "ಪುಳಿಂದಃ, ಮಂಗಃ— ಈ ೨ ನಾವೆಯ ಬಿಸಾಜು" (ಹಲಾಯು. ೦೦೧-೫೦); "ಹಡಗಿನಿದ್ದಸೆ ಪುಳಿಂದ[ಶಾಕಾಂ. ಪುಳಿಂಗಂ, ಪುಳಿನಂ] ಮಂಗವುಕ್ಕು" (ಮಂಗರಾ.೦೨೦-೩).

[ಸಂ.]

**ಪುಲಿಂದಿನಿ**, ಪುಳಿಂದಿನಿ (ನಾ). ೧. ಬೇಡರವಳು; ಬೇಡಿತಿ; ಶಬರಿ: ಉಳಿದು ಪುಲಿಂ[ಶಾಕಾಂ. ಳಿಂ]ದಿನೀವಿಹಿತವಿಭ್ರಮಮಂ ಸುರಕಾಮಿನೀಜನಂ ಬಳಸಿರೆ ತಾನುಮಂತೆ ನಗನಂದನೆ . . . ನೆಲಸಿರ್ದಳುದಾರಶೋಭೆಯಿಂ (ಶಬಶಂ. ೫-೦೩). **ಪುಳಿಂದಿನಿ**: ೧. ಗಂಡನಂ ತೊಲಗದೆ ಪಿಂದೆ ಬಿಲ್ವಿಡಿದು ಬರ್ಪ ಪುಳಿಂದಿನಿಯೊರ್ವಳೊಪ್ಪಿದಳ್ (ಪಾರ್ಶ್ವಪು. ೧೦-೦೦೬); ಅಚಲೇಂದ್ರ ಮೆಸೆದಿರ್ದುದು ಪುಳಿಂದೀನಿತನುಗಂಧಬಂಧುರದೊಳು (ಜೈಮಿಭಾ. ೧೦-೪). ೨. [ಸಂಗೀತ] ಒಂದು ರಾಗದ ಹೆಸರು: ಕೌಶಿಕಿ ವೇಳಾವಳಿ . . . ಪುಳಿಂದಿನಿ . . . ಎಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದುವು (ವಿವೇಕ. ೨೩೪). [< ಸಂ. ಪುಲಿಂದೀ]

**ಪುಲಿಕದ್ದ** (ನಾ). ಒಬ್ಬಾತನ ಹೆಸರು: ಕಿತ್ತರಸಂ ವಟಿಗಟ್ಟನ ಮಗ ಪುಲಿಕದ್ದಅರಸರ್ ಸಿಯಗಲ್ಲಕ್ಕಾಗಿ ಕೊಮಾರನ್ ಕಿಕ್ಕೊಳತ್ತುಬಗ ಬಳ್ಳಿಯುಳಿಱಿದು ವಿಟ್ಟೊಂ (ಎಕ. XVI, ಶಿಮುಶಿಕಾ. ೯೦-೯; ಸು. 775).

[?]

**ಪುಲಿಕರನಗರ**, ಪುರಿಕರನಗರ (ನಾ). ಒಂದು ಊರಿನ ಹೆಸರು; ₱ ಧಾರವಾಡಜಿಲ್ಲೆಯ ಈಗಿನ ಲಕ್ಷ್ಮೇಶ್ವರ: ಪುಲಿಕರನಗರಸ್ಯ ಶಂಖಿಕಿತೀರ್ಥವಸತೇಃ (ಇಆ. VII, ೦೦೭-೦೪; 10ನೆಯ ೭೩); ಪುಲಿಕರನಗರ ಶ್ರಿಶಂಖಗ್ರಾಮಾಂತರ್ವರ್ತ್ತಿ ಹುಲ್ಲುಂಗೂರು ಮುಖ್ಯ ಬಹುವಿಷಯಂ ಸಿಂಹಣರಾಯಾಲ್ಲಬಧ್ವಾ (ಕಇ. IV, ೫೪-೨೪; 1245). **ಪುರಿಕರನಗರ**: ಶ್ರೀ ಬಿಕ್ಕಿರಾಣಕೇನ ಪುರಿಕರನಗರೇ . . . ಸಂಬೊಳಲ ನಾಮ ಗ್ರಾಮಂ ಸರ್ವ್ವಬಾಧಾಪರಿಹಾರಂ ದದೌ (ಸೌಇಇ. XX, ೫ ೨೬; 723); ಶ್ರೀಮತ್ ಪುರಿಕರನಗರ ಪ್ರಖ್ಯಾತ ಶ್ರೀಶಂಖಜಿನೇಂದ್ರ ನಿತ್ಯನೈಮಿತ್ತಿಕ ಪೂಜಾನಿಮಿತ್ತಂ . . . ಕದ್ದಮಗ್ರಾಮಂ ದತ್ತವಾನ್ (ಸೌಇಇ. XX, ೬-೦೯; 730). 'ಪುಲಿಗೆಱೆ' ಪರಾ.

[₱ ಇದು 'ಪುಲಿಗೆಱೆ' ಎಂಬ ಶಬ್ದದ ಸಂಸ್ಕೃತೀಕರಣ]

**ಪುಲಿಕಲ್ಲದಿ** (ನಾ). ಒಬ್ಬಾತನ ಹೆಸರು: ಕೊಜ್ಜಂಗಣಿಮುತ್ತರಸರ್ಕ್ಕೆ ಇರ್ಪ್ಪತ್ತಾಮಿಬೀಸನ ವರ್ಷದುಳ್ ಪುಲಿಕಲ್ಲದಿ ಅಪ್ಪದ ವಾರ್ಕ್ಕೆಉಳ್ ನೆಗುಣ್ಣನೊಳ್ ಎಱಿದು ವಿಟ್ಟೊ (ಎಕ. X (೪), ಕೋಲಾರ. ೬೮-೨; ಸು. 752).

[?]

**ಪುಲಿಕಲ್ಲು**, ಹುಲಿಕಲ್ಲು (ನಾ). ಎರಡು ಅಥವಾ ಮೂರು ಕಲ್ಲುಗಳನ್ನು ಹುಲಿಗಳಾಗಿಯೂ ಅವುಗಳಿಗಿಂತ ಚಿಕ್ಕದಾದ ಹನ್ನೆರಡು ಅಥವಾ ಹದಿನೈದು ಕಲ್ಲುಗಳನ್ನು ಕುರಿಗಳಾಗಿ ಅಥವಾ ಬೇಟೆಗಾರರಾಗಿಯೂ ಇಟ್ಟುಕೊಂಡು ಆಡುವ ಒಂದು ಬಗೆಯ ಆಟ; ಹುಲಿಘಟ್ಟದ ಆಟ; ಹುಲಿಮನೆ ಆಟ: (೬). **ಹುಲಿಕಲ್ಲು**: ಹುಲಿಕಲ್ಲೋ, ಚೌಕಾಬಾರವೋ ಯಾವುದು ಆಡೋಣ? (ರೂಢಿ). [ಪುಲಿ+ಕಲ್ಲು(<ಕಲ್[3])]

**ಪುಲಿಕುಜುಕಿ, ಪುಲಿಕುಜುಕ್ಕಿ** (ನಾ). ಒಂದು ಊರಿನ ಹೆಸರು: ಕಾಳೆಗದುಳ್ ಗಾರವರಾಳ್ ಅಪಧೀರರಾ ಮಗನ್ ಚಾತಗುದ್ದಿಯಾರುವರ್ ಪುಲಿಕುಜುಕಿಯುರಾ ದುಗ್ಗಮಾರನ್ . . . ಅನ್ನಿಱಿದು ಸತ್ತರ್ (ಎಕ. X, ಶ್ರೀನಿವಾ. ೪೦-೩; ಸು. ೪೦೦). **ಪುಲಿಕುಜುಕ್ಕಿ**: ಬಾಣರಸರಾ ದಣ್ಣು

ಪುಲಿಕಂಚುಕ್ಕಿಯುಳ್ಳಿ ಎರಡು ದಣ್ಣು ಕಟ್ಟಿ ಎಚಿಯುತ್ತಿರೆ (ಎಕ. X, ಕೋಲಾರ. ೨೦೦-೬ ; ಸು. 890 ?). [ಪುಲಿ+ಕಂಚುಕಿ ]

**ಪುಲಿಕಂಚುಕ್ಕಿ** 'ಪುಲಿಕಂಚುಕಿ' ನೋ.

**ಪುಲಿಕೇಶಿ,** ಪುಲಕೇಶಿ, ಪುಲೆಕೇಶಿ, ಪೊಲಕೇಶಿ, ಪೊಲಿಕೇಶಿ, ಪೊಲೆಕೇಶಿ, ಪೊಲೆಕೇಸಿ (ನಾ). ಕನ್ನಡನಾಡನ್ನು ಆಳಿದ ಸುಪ್ರಸಿದ್ಧನಾದ ಒಬ್ಬ ಅರಸನ ಹೆಸರು; ❡ ಇದು ಇಬ್ಬರು ಅರಸುಗಳ ಹೆಸರು. ಬಾದಾಮಿ ಚಾಳುಕ್ಯವಂಶದ ದೊರೆಗಳಲ್ಲಿ ಒಬ್ಬನಾದ ಒಂದನೆಯ ಜಯಸಿಂಹನ ಮಗ ಒಂದನೆಯ ಪುಲಿಕೇಶಿ (ಕ್ರಿ. ಶ. ೫೫೦) ; ಈತನ ಮೊಮ್ಮಗ ಅಂದರೆ ಒಂದನೆಯ ಕೀರ್ತಿವರ್ಮನ ಮಗ ಎರಡನೆಯ ಪುಲಿಕೇಶಿ (ಕ್ರಿ. ಶ. ೬೧೦–೬೪೨) : ಪುಲಿಕೇಶಿವಲ್ಲಭಮಹಾರಾಜಸ್ಯ ಪುತ್ರಃ (ಎಇ. XXVII. ೩೯-೬ ; 552). **ಪುಲಕೇಶಿ :** ಶ್ರೀಪುಲಕೇಶಿವಲ್ಲಭಮಹಾರಾಜಸ್ಯ ಪ್ರಪೌತ್ರಃ (ಎಇ. XXVII. ೧೦೭-೬; 597); ವಾತಾಪಿಪುರವರೇಶ್ವರನುಂ . . . ದ್ವೀಪಾಂತರಪ್ರಕಟಪ್ರಭುವನುಮೆನಿಸಿದ ಪುಲಕೇಶಿದೇವನಿಂ (ಗದಾಯು. ೨-೭೭). **ಪುಲೆಕೇಶಿ:** ಶ್ರೀಮಾಂ ಸತ್ಯಾಶ್ರಯ ಪುಲೆಕೇಶಿವಲ್ಲಭಮಹಾರಾಜರಾಜ್ಯೇ ವರ್ತ್ತಮಾನೇ ಲಿಖಿತಮಿತಿ (ಎಇ. V, ೯-೩; ಸು. 650). **ಪೊಲಕೇಶಿ :** ಧರಾಚಕ್ರಮೆ ಮೆಚ್ಚಿ ಬಣ್ಣಿಸೆ ಜಸಂಬಡೆದಂ ಪೊಲಕೇಶಿವಲ್ಲಭಂ (ಕಾವ್ಯಾವ ೯೬೬). **ಪೊಲಿಕೇಶಿ :** ಶ್ರೀಪೊಲಿಕೇಶಿವಲ್ಲಭ ಮಹಾರಾಜಸ್ಯ ಪ್ರಿಯಸೂನು (ಇಆ. VII, ೧೦೬ ೩೯ ; 10ನೆಯ ೫೩). **ಪೊಲೆಕೇಶಿ :** ತನೂಜಃ ಪೊಲೆಕೇಶಿ (ಎಇ. VI, ೫-೩; 634). **ಪೊಲೆಕೇಸಿ :** ಪೊಲೆಕೇಸಿಅರಸರ × × × (ಎಕ. VII, ಶಿಕಾ. ೧೦-೨; ಸು. 640 ?); ಪೊಲೆಕೇಸಿಯ ಮೇಲೆ ಪೋಗಿ ಪುಲಿಮಟ್ಟಿಯಲ್ ಕಾದಿ (ಕ್ಕಶಾ. ೦೯೨೬, ೩೦-೮೦ ; 1056). [ ? ]

**ಪುಲಿಕ್ಕಲಯ್ಯ** (ನಾ). ಒಬ್ಬಾತನ ಹೆಸರು : ಶ್ರೀಪುಲಿಕ್ಕಲಯ್ಯ (ಎಕ. II, ೯೬೯, ಸು. 1000). [ ?+ಅಯ್ಯ$_{1}$ ]

**ಪುಲಿಗಾರ** (ನಾ). ಒಂದು ಸ್ಥಳದ ಹೆಸರು : ಪುಲ್ಪದಿಯೇ ಎಬಗಲ್ಲೇ ಪುಲಿಗಾರದ ಗೆಜಿ ಮುಂಗೂಡಲ್ (ಇಆ. XII. ೦೩-೨೦; 813). [?]

**ಪುಲಿಗಿಲ್,** ಪುಲಿಂಗಿಲ್, ಪುಲಿಗಿಲು, ಪುಲಿಗಿಲೆ, ಹುಲಗಲಿ, ಹುಲಗಿಲ್, ಹುಲಗಿಲು, ಹುಲಿಗಿಲ್, ಹುಲಿಗಿಲಿ, ಹುಲಿಗಿಲು, ಹುಲುಗಲ; ಹುಲುಗಿಲು (ನಾ). ಹೊಂಗೆಮರ; ತಮಾಲವೃಕ್ಷ: ಪುಲಿಗಿಲ ಕಿಲದೊಳ್ ಪನ್ನಗ ನಿಲಯಂ ಸಮನಿಸಿದೊಡದು ತೆಂಕಣದೆಸೆಯೊಳ್ ಜಲಮಕ್ಕುಂ (ಲೋಕೋಪ. ೫-೨೨) ; ಸಮನಾಗಿರೆ ಪೂಸುಗೆ ಪುಲಿಗಿಲೆಣ್ಣೆಯುಂ ಸುಣ್ಣಮುಮಂ (ಅಕ್ಕ್ಷಣ. ೦೩-೨೦). **Δಪುಲಿಂಗಿಲ್:** ಹೊನ್ನೆ ಚೆನ್ನೆ ಕವಳಂ ಕಾರಾಚಮಾಚುಪುಲಿಂಗಿಲೆರಂ ಗುಗ್ಗುಳಮುತ್ತಿ ಮತ್ತಿ ಮಧುಕಂ (ರಾಜಶೇ. ೫-೫೩). **ಪುಲಿಗಿಲು :** ನೆಗಟ್ದ ಪುಲಿಗಿಲೀಶಾನ್ಯದೊಳೆ (ದಲ್ಲು) ಬಿಳಿಯ ಕಲ್ ಕೂಡೆ ಪುತ್ತಿರ್ದಾಗಳ್ (ಬಗೆಯೆ) ನಡುವೊಪ್ಪುರುಷಪ್ರಮಾಣದೊಳ್ ಪಡುವ ಕಾಸುಮುದಂತೆ ಮಣ್ಣಿರ್ಕು (ಅಭಿಮ. ೦೦-೦೩). **ಪುಲಿಗಿಲೆ :** ಪುಲಿಗಿಲೆ ಮಾವು ಬೇವು ಬೆಳಲಜಟೆ ನಿಂಬೆ . . . ಎತ್ತಲುಂ ಕಲಸಿರೆ ಕಾಡು ಕಳ್ತಲಿಸಿ ಕಂಗಳಸಪ್ಪಿದುದು (ಶಾಲಾಕ್ಯ. ೦ ೯-೯). **ಹುಲಗಲಿ :** ಹುಲಗಲಿ (ಕರಂಜ) –ಎತ್ತರವಾಗಿ ಬೆಳೆಯುತ್ತದೆ. ಕಟ್ಟಿಗೆ ಹಗುರು (ಕಜಾಗ. ೫೦); ಮೈಸೂರು ಸೀಮೆಯಲ್ಲಿ ಹುಲಗಲಿಯ ಹಿಂಡಿಯನ್ನು ಹೊಲಗಳಿಗೆ ಹಾಕುತ್ತಾರೆ (ಮುಂಬಯಿ. ೩-೨೯೨). **ಹುಲಗಿಲ್ :** ಕಂಚಿಮಾಲದ ಗಡಣಂ ಕೊಸಗಿಡೆ ಬಸಿಱೇ ಹುಲಗಿಲ್ಲೊರವಿ . . . ಹೊನ್ನೆಯ ತರುಗಳ್ (ಹಮ್ಮಿರ. ೯-೩೬). **ಹುಲಗಿಲು :** ಹುಲಗಿಲ ಬೇರ್ ತವಸದ ತಿಗುಡು ಲಕ್ಕಿ ಕಡಸಿಗೆಯ ಬೇರ್ ಮರುಂಗುಳಿಯೊಳಗಗ್ಗಲಿಸಿರೆ . . . ಬಲವರ್ಧನಮಕ್ಕುಮೆಗ್ನಿದೀಪನಮಕ್ಕುಂ (ಕಲ್ಯಾಣ. ೯-೨೨) ; ಕೊಟ್ಟುಚ್ಚುತ ಕೊಟ್ಟಿಡುಕಿದೆ ಪೊಗ್ಗನು ಹೂ ಹಾಸಿ ಹುಲಗಿಲು ಗಾನನಿಮಗ್ನಧ್ಯಾನವ ಹೊಸ ದಾಸಿ (ಅರಳು. ೦೬೨-೦೦). **ಹುಲಿಗಿಲ್:** ಹುಲಿಗಿಲ್ ಕಂಡಸು ನುಗ್ಗಿ . . . ಉತ್ತರಣೆಯಂ ಚೂರ್ಣಂಗಳಂ ಮಾಡಿ (ಖಮದ. ೦೩-೫೯); ಬರಿವದಣೆ ಲೊಕ್ಕಿಲೋಯಿ (ಓ) ಸರವುಣಿಲೆ ಗುಳಓಚಿ ಪಿಪ್ಪಲಿ ಹುಲಿಗಿಲ್ ವಿಷನಾಗರ ಲಶುನಂ ಗಳೊಳುಪ್ಪಂ ಬೆರಸುಗೆ ಪವಣಱಿಗೆ ಪಿಂಡಮಾರೋಗ್ಯಕರಂ (ಅಕ್ಷಣ. ೭-೩೩). **ಹುಲಿಗಿಲಿ :** "ಚಿರಿಬಿಲ್ವ, ನಕ್ತಮಾಲಃ, ಕರಜಃ, ಕರಂಜಕಃ– ಳ ಹುಲಿಗಿಲಿಮರದ ಹೆಸರು" (ಸಿದ್ಧಾಂತಿ. ೦೨೩) ; ಹೊಂಗೆ, ಕರಂಜ, ಹುಲಿಗಿಲಿ ಮರ (ಕ್ಕಶಿಗ. ೬೯-೦೨೯೯). **ಹುಲಿಗಿಲು :** ಹುಲಿಗಿಲ ಸೊಪ್ಪು ಗುಗ್ಗುಳಯುಮಂ ಧೂಪವಿಕ್ಕುವುದು (ಖಾಂಡ. ೦೨೬-೦೨). **ಹುಲುಗಲ :** ಚಿಗುರಿತು ಈ ಹುಲುಗಲ (ಕಿಂದಮು. ೯-೦). **ಹುಲುಗಿಲು :** 'ಬಿಳಿ ಹುಲುಗಿಲು' ಪರಾ.

**ಪುಲಿಗಿಲು** 'ಪುಲಿಗಿಲ್' ನೋ.

**ಪುಲಿಗಿಲೆ** 'ಪುಲಿಗಿಲ್' ನೋ.

**ಪುಲಿಗೆಱೆ,** ಪುರಿಗೆಱೆ, ಪೊರಿಗೆಱೆ, ಹುಲಿಗೆಱೆ (ನಾ). ಒಂದು ಊರಿನ ಹೆಸರು ; ❡ ಧಾರವಾಡಜಿಲ್ಲೆಯ ಈಗಿನ ಲಕ್ಷ್ಮೇಶ್ವರ : ಗಜ್ಜವೂರ್ ಪುಲಿಗೆಱೆ ಗಣ್ಣಪಗ್ರಾಮ(ಮಾ) ಇತಿ ಅಸ್ಮಭುಕ್ತಿ( ಕ್ತಿಃ ) (ಇಆ. VIII, ೨೯೩-೦೬ ; ೬೮೪) ; ಅದಱೊಳಗಂ ಕಿಸುವೊಬಲಾ ವಿದಿತ ಮಹಾಕೂಪಣ ನಗರದಾ ಪುಲಿ[ಕಾಕಾಂ. ರಿ]ಗೆಱೆಯಾ ಸದಭಿಸ್ತುತಮಪ್ಪೊಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೦-೩೭); ಪುಲಿಗೆಱೆನಗರಾತ್ ಪೂರ್ವಸ್ಯಾಂ ದಿಶಿ (ಇಆ. VII, ೧೦೫-೨೫ ; 10ನೆಯ ೫೩). **ಪುರಿಗೆಱೆ :** ಪುರಿಗೆಱೆಯಾ ಮಂಜಾಜಜ್ಜೇರಿಯಾ (ಎಇ. VI. ೦೩೩-೩; ಸು. 763) ; ಪುರಿಗೆಱೆಯಂ ಬನ್ದ ಪೊರೆಯಣ್ಣನ ಶಿಲಾಕಮ್ಮ್ಮ (ಸೌಇಇ. XI–i. ೦೦-೨೩; 865); ಶ್ರೀಮತ್ ಕುಂಕುಮಮಹಾದೇವಿ ಪುರಿಗೆಱೆಯಲು ಮಾಡಿಸಿದ (ಇಆ. VII, ೩೯-೨೦; 999). **ಪೊರಿಗೆಱೆ :** ಪೊರಿಗೆಱೆಯಾ ಮಹಾಜನಕ್ಕಂ (ಎಇ. XIV, ೦೯೦-೨; 725). **ಹುಲಿಗೆಱೆ :** ಹುಲಿಗೆಱೆಯ ಸೋಮನಾಥ ದೇವರ ಕ್ಷೇತ್ರ(ಎಕ. VII, ಹನ್ನಗಿ. ೩೨-೦೩೫; ಸು. 1050?). 'ಪುಲಿಕರನಗರ' ಪರಾ.

**ಪುಲಿಗೆಱೆಮುನೂಱು, ಹುಲಿಗೆಱೆಮುನೂಱು** = ಹುಲಿಗೆರೆಯೇ ಮುಖ್ಯವಾದ ಮುನ್ನೂರು ಹಳ್ಳಿಗಳ ನಾಡು : ಪೆರ್ಮ್ಮಾಡಿ ಬೂತಾಯ್ಯಂ ಗಂಗವಾಡಿ ತೊಂಭತ್ತಱುಸಾಸಿರಂ ಬೆಳ್ವೊಲಮೂನೂಱುಮ (ನಾಳು) ಪುಲಿಗೆಱೆಮೂನೂಱುಮನಾಳುತ್ತಿರೆ (ಸೌಇಇ. XI–i, ೩೬-೫; 942); ಶ್ರೀಸೋಭನರಸರು ಹುಲಿಗೆಱೆಮೂನೂಱ ಬೆಳುವಲ ಮೂನೂಱುಂ ಹಲಸಿಗೆ ಪನ್ನಿಚ್ಛಾಸಿರಮುಮನಾಳುತ್ತಮಿರೆ (ಸೌಇಇ. XI–i, ೫೦-೦೨; 1050). [ಪುಲಿ + ಕೆಱೆ]

**ಪುಲಿಗೋಣ** (ನಾ). (ಹುಲಿಯಂತೆ) ಬಲಿಷ್ಠವಾದ ಕೋಣ : ಆಯೆಯತ್ ಪಾಪಂ ಪಗೆ ಮಿಗೆ ತಿಂದುದು ಮೇಪಂಕಿರೆ ಪುಲ್ಲ ಸರವಿಯುಂ ಪುಲಿ[ಕಾಕಾಂ. ಬಲ್]ಗೋಣಂ (ಧರ್ಮಾಂತ. ೩-೯೫). [ಪುಲಿ + ಕೋಣ$_{1}$]

**ಪುಲಿಚರ್ಮ, ಹುಲಿಚರ್ಮ** (ನಾ). ಹುಲಿಯ ತೊಗಲು ; ವ್ಯಾಘ್ರಚರ್ಮ : ಕೆಂಜೆಡೆಯ ಚಂದ್ರಕಳೆಯರಸನೊಪ್ಪುತ್ತಿರಲು ರಂಜಿಸುವ ಪುಲಿಚರ್ಮದಭವನೊಪ್ಪುತ್ತಿರಲು (ಐಕರ. ೦-೬); ಹರಿಣ ಗೋರೋಜನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಪೋಹಕ. ೦೯-೭೫). **ಹುಲಿಚರ್ಮ:** ದಕ್ಷಿಣದವರಲ್ಲಿ ಕಂಬಳಿಯ ಕೋರೆ, ನಿಲುವಂಗಿ, ಕೊರಳಲ್ಲಿ ಭಂಡಾರ ಇಡುವ ಹುಲಿಚರ್ಮದ ಚೀಲ . . . ಕೈಯಲ್ಲಿ ಡಮರುಗ, ತ್ರಿಶೂಲ—ಇವು ಮುಖ್ಯವಾದುವು (ಕಜಕ. ೬೮). [ಪುಲಿ+ಚರ್ಮ]

**ಪುಲಿದೊಗಲ್** 'ಪುಲಿದೋಲ್' ನೋ.

**ಪುಲಿದೊಗಲು** 'ಪುಲಿದೋಲ್' ನೋ.

**ಪುಲಿದೊಡೆಯ** (ನಾ). ವ್ಯಾಘ್ರಾಸುರನನ್ನು ನಾಶಮಾಡಿದವನು; ಶಿವ ·

ಜನಿಸಿದನಾಗಂಗವ್ಯುತಶರನಿಧಿಯನೆಱೆದರ್ಗೆ ತವನಿಧಿಯ ಮೆಚ್ಚಿತ್ತಿ ಮೆಱೆದ ಪುಲಿದೊಡೆಯ[ಪಾಠಾಂ. ಮೆಱೆದ್ದ ಪುಲಿತ್ತೊಡೆಯ]ಶರಣಾ (ಚಾವಚಾಂ. ೬-೭). [ಪುಲಿ + ತೊಡೆ$_1$ + —ಅ$_7$]

**ಪುಲಿದೊವಲ್** 'ಪುಲಿದೋಲ್' ನೋ.

**ಪುಲಿದೊವಲು** 'ಪುಲಿದೋಲ್' ನೋ.

**ಪುಲಿದೋಲ್**, **ಪುಲಿದೊಗಲ್**, **ಪುಲಿದೊಗಲಂ**, **ಪುಲಿದೊವಲ್**, ಪುಲಿದೊವಲು, ಹುಲಿದೊಗಲು, ಹುಲಿದೊವಲು (ನಾ). = ಪುಲಿಚರ್ಮ : ಪುರುಳಿೊಡನಾಡುವಂ ಮುಸಣದೊಳ್ಪಡುವಂ ಪುಲಿದೋಲನುಟ್ಟು ಭೀಕರಕರಿಚರ್ಮಮಂ ಪೊದೆವಂ (ಸಮಕ. ೧-೬೨). **ಪುಲಿದೊಗಲ್** : ಪ್ರಭುಮುಕೂಲದಂಕಿರ್ವ ಪುಲಿದೊಗಲಿಂದೊಪ್ಪಿ ಪಶುಪತಿ ಬಸವನ ಬನದ ಮೊನೆಯೊಳೊಪ್ಪೆ ಮೂರ್ತಿಗೊಂಡು (ಬಸರ. ೪-೨೦). **ಪುಲಿದೊಗಲು** : ಪುಲಿದೊಗಲ ಕೆಂಜೆಡೆಯ ಕೇವಣದಿಂದುಫಣಿಪತಿಯ . . . ಅಭಯದ ವರದಕರಪರಿಕಲಿತನೆಸೆದನು ಶಂಭು ಸದ್ಯೋಜಾತ ಪ್ರದಲಿ (ಶುವ್ಯಾಕ. ೬-೬೪); ಕಳಿದರೀ ಚಂಡಾಂಶುವಂಶೋಜ್ವಲರು ಬಳಿಕಾ ಹಿಮುಸಮಯುವನು ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಿಕೆಯಲಿ (ಕೊರಾ. ೩-೨-೫). **ಪುಲಿದೊವಲ್** : ಉಡುವೊಡೆ ಸಂತತಂ ಪುಲಿದೊವಲ್ ನಿಮಗಲ್ಲದೊಡಾ ದಿಗಂಬರಂ ಪಡುವೊಡೆ ರುದ್ರಭೂಮಿ ನಿಮಗಲ್ಲದೊಡಾ ನಿಗಮೋತ್ತಮಾಂಗಂ (ಶಂಪಾಶ. ೨೦); ಪುಲಿದೊವಲ ಜೋಗವಟ್ಟಿಗೆ . . . ಮಾಯುವ ಕುಂಚಂ ನೆಲನನಲೆವುತಿಗೆ ರಂಜಿಸೆ ನಲವಿಂ ಮಾಮಾವಿಯೆಯ್ದಿದಂ ನೃಪಸಭೆಯಂ (ದಶಕು. ೬-೦೩೦); ಪುಲಿದೊವಲಂ ಗಜದಜಿನಮನೆಲೆ ನೀನುಡದಿರ್ಪೆಂದು ಬಿಡಿಸುತೆ ಮೃಡನಂ ಸುಲಲಿತದಿವ್ಯಾಂಬರಮಂ ನಲಿದುಡಿಸುವ ದೂಸಿಗರ್ ಕರಂ ನೆಲಸಿರ್ಪರ್ (ರಾಶಕೇ. ೨-೯೬). **ಪುಲಿದೊವಲು** : ಪೂಸಿದ ವಿಭೂತಿ ಕಯ್ಯೊಳು ಪಾತ್ರಯೋಜೆಡೆ ಭಾಸುರದ ಪುಲಿದೊವಲು ಲಾಕುಳಂ ಚಿಲುವ ನಡೆ ಎಸೆವ ಭಿಕ್ಷುಕ ನೇಷಮುಮಾನೊಪ್ಪೆ ಕೈಕೊಂಡು (ಶರಕ. ದೇ. ೦೦-೦೦); ತೊಟ್ಟ ಬಿಳಿಯ ಜೋಡು ಮೆಯ್ವಣ್ಣ ಬರಹದೊಳುಟ್ಟ ಕಾಸೆಯ ಪುಲಿದೊವಲು ಮುಟ್ಟಿ ಗಜಾಸುರನೊಳು ಕಾದಿ ಕೆಡವುತ ಕಟ್ಟಾಳು ಹರನಂತೆ ಮೆಱೆದ (ಬರ್ಗಕ. ೬-೦೦೩). **ಹುಲಿದೊಗಲು** : ಸನ್ಯಾಸಿಯು . . . ನೆಲದ ಮೇಲೆ ತನ್ನ ಹುಲಿದೊಗಲು ಹಾಸಿ ಗಂಟು ತಲೆದಿಂಬಿಗೆ ಇಟ್ಟುಕೊಂಡು . . . ಅಡ್ಡಾದನು (ಮು.ಖು ೪-೦೩೦). **ಹುಲಿದೊವಲು** : ಹುಲಿದೊವಲನುಟ್ಟು ಮುಡಿಗೆದರಿದ ಉನ್ಮಾದಮೂರ್ತಿ ಅರೆವುಬ್ಬಿನಲ್ಲಿ ಮೂಡಿ ಅಭಿನಯಿಸುತ್ತಾನೆ (ಶಾಂಶಾ. ೦೫-೦).

**ಪುಲಿದೊವಲುಡೆ**=ಹುಲಿಚರ್ಮದ ಉಡುಗೆ : ಪುಲಿದೊವಲುಡೆ ಭಸಿತಂ ಕುಂಡಲಿಮುಗ್ರತ್ರಿಶೂಲ ಡಮರುಗಂ ಕಿಱುಜೆಡೆಗಳ್ ಸಲೆ ಮೆಱೆವ ರುದ್ರಸಂ ಲಿಂಡೂಲವ್ವ ವಿಗಲ್ ಚರಣಕೆಱಗಿದಂ ಸಿರಿಯಾಳಂ (ತ್ರಿಷ. ೦೦-೪೫). **ಪುಲಿದೊವಲುಡೆಯ**=ಹುಲಿಯ ಚರ್ಮವನ್ನು ಉಟ್ಟಿರುವವನು ; ಶಿವ : ಪುಲಿದೊವಲುಡೆಯಂಗೆ ಪುನರಪಿ ರತ್ನಪ್ರಜ್ವಲ ದಾರತಿಗಳ ಬೆಳಗಿ ಸಲಿಲಜ ಮಂದಾರ ಮಲ್ಲಿಗೆ ಪುಷ್ಪಾಂಜಲಿಯ ಮಾಡಿದ ಮಹೋತ್ಸವದಿ (ಮೋಹಕ. ೨೦-೯೩). [ ಪುಲಿ + ತೋಲ್$_1$ ]

**ಪುಲಿನ**, ಪುಳಿನ (ನಾ). ೧. ಮರಳಿನಿಂದ ಕೂಡಿದ ನದಿ, ಸಮುದ್ರ ಮುಂತಾದುವುಗಳ ತಟ, —ದಂಡೆ. ೨. ನೀರು ಕಡಮೆಯಾದಾಗ ನದಿಯ ಒಡಲಲ್ಲಿ ಅಥವಾ ದಂಡೆಯಲ್ಲಿ ಉಂಟಾಗುವ ಮಣ್ಣಿನ ದ್ವೀಪ ; ಸೈಕತದ್ವೀಪ. ೩. ನದೀತಟ; ನದೀತೀರ. ೪. ಮರಳು. **ಪುಳಿನ** : ೧. "ಸೈಕತಂ ಪುಳಿನಂ ದ್ವೀಪಂ (ಸಿಕತಾ)—ಈ ೩ ಮಳಲ ದೀಣೆ (ದಿಣ್ಣೆ)" (ಹಲಾಯು. ೦೦೦-೯೬); ಕಳಿರ್ವ ಪುಳಿನಂಗಳೊಳಂ ಕೋಡುವ ಧಾಗ್ಗಹಂಗಳೊಳಂ ವಿಶ್ರಮಿಸಿ ಶಾತವಾತಪಪರಿಶ್ರಮಮಂ ಕಳೆಯೆ (ಆದಿಪು. ೦೦-೬೨ ವ). ೨. ನೀರೆಂಬ ಸೀರೆಯಂ ಪೆಱಸಾರಿಸುತ್ತುಂ ಪುಳಿನವೆಂಬ ಜಘನಸ್ಥಳದಿಂ ನಾರಿಯವೊಲ್ ನದಿ ಮೆಱೆಗುಂ ಶಾರದಸಮಯಂ ದಲೆಂಬ ವಿಟಸನ್ನಿಧಿಯೊಳ್ (ಬಾಭಪು. ೪-೬೪). ೩. ಗಂಗಾನದೀಪುಳಿನ ಪರಿಸರಪ್ರದೇಶದೊಳ್ ಮಱೆದೊಱಗುವೈರಾವತದಂತೆ ಪವಡಿಸಿ (ಶಂಕಪು. ೪-೦೦೦ ವ). ೪. ಪಶ್ಚಿಮಾಂಭೋಧಿಯ ಪುಳಿನಚಯಂ ಬೆಳ್ಪನಾಳ್ದಿದ್ದರ್ಪಮಾಗಳ್ (ಕಾಸಂಪು. ೦೪೨) ; ಕಣ್ಗೆ ಮುತ್ತಿಟ್ಟುದಿರ್ಕೆಲದಲ್ಲಿ . . . ಧವಳಿಮ ಪುಳಿನರಾಶಿ (ಶ್ರೀರಾಮಪ. ೦೩೦-೨೨೦). [ಸಂ.]

**ಪುಲಿನಖ**, ಹುಲಿನಖ (ನಾ). ೧. ಹುಲಿಯ ಉಗುರು. ೨. (ಮಕ್ಕಳಿಗೆ ತೊಡಿಸುವ) ಹುಲಿಯುಗುರಿನಿಂದ ಮಾಡಿದ ಅಥವಾ ಹುಲಿಯುಗುರಿನಾಕಾರದ ಒಂದು ಆಭರಣ : ಬಿಂದಿಲರಳೆಲೆ ಗೆಜ್ಜೆಯನ್ನು ಪಾಲ್ಗಡಗ ಪೊಕ್ಕುಳ ಘಂಟೆ ಪುಲಿನಖಮನೂನಕಟಿಸೂತ್ರ ಮಾಗಾಯಿ ಮಣಿಮಯಮುದ್ರೆಗಳ ಬೆರಳ್ಗಳಿಗಮರ್ಚಿ (ನವಮೋ. ೦೨-೦೬). **ಹುಲಿನಖ** : ೩. ಒಂದು ಬಗೆಯ ಔಷಧೀಸಸ್ಯ ; ಗರುಡಮೂಗಂ : ಹುಲಿನಖ, ಗರುಡಮೂಗು (ಪ್ಮಜಿನಿ. ೫೨-೦೦೫೩). [ಪುಲಿ + ನಖ ]

**ಪುಲಿನಾಡು** (ನಾ). ಒಂದು ಊರಿನ ಹೆಸರು : ದೊಸಿ ಅರಸರಾ ಕಳಿ ಪುಲಿನಾಡಱುವತ್ತುಂ ಪಡೆದು ಕೊಟ್ಟೊಡುಂ (ಎಕ. X, ಮುಳಬಾ. ೨೪೪-೬; ಸು. ೮೨೦); ಪುಲಿನಾಡು ರಾಸಮಯ್ಯ ಹಱಿಯೂರರರಸರಂ ದಣ್ಣು ಮೆಟ್ಟಿದ್ದೊಡೆ (ಎಕ. X, ಶ್ರೀನಿವಾ. ೮೫-೪; ಸು. ೯೦೦೪). [ಪುಲಿ+ನಾಡು]

**ಪುಲಿಪಟು** 'ಪುಲಿವೆಟ್ಟು' ನೋ.

**ಪುಲಿಮುಖ**, ಹುಲಿಮುಖ (ನಾ). ಕೋಟೆಯ ಹೆಬ್ಬಾಗಿಲು,—ಪ್ರವೇಶದ್ವಾರ ; ಈ ಕೋಟೆಯ ಹೆಬ್ಬಾಗಿಲಿನಲ್ಲಿ ಸಾಮಾನ್ಯವಾಗಿ ಹುಲಿಯ ಮುಖದ ಆಕಾರದಲ್ಲಿರುವ ಒಂದು ಶಿಲ್ಪದ ಮಾದರಿ : ಪುಲಿಮುಖ ಚೋರ್ಕಂಡಿ ದಿಡ್ಡಿಗಳಿಂದ ಪೊಳಲ ನಾಲ್ದೆಸೆಯೊಳಲೆವುತ ಲಲಿತಗೋಪುರ ತೋರಣಗಳಿಹವು (ಜೀವಂಸಾಂ. ೦-೪೦); ಗಜದ ಭಾರಿಯಂ ಮಾವುತರ್ ಪುಲಿಮುಖ[ಪಾಠಾಂ. ಮೊಗ]ಕೆ ನೂಂಕಿದರ್ (ಕಪು. ೪೨-೨೬); ಆಗಸವ ಸೋಂಕಿ ಸನ್ನುತಂ ಪಬ್ಬುವ ಪತಾಕೆ ಮುರಿಮುರಿದ ಕೊತ್ತಳ ಪುಲಿಮುಖಗಳಿಂದ (ರುಕ್ಮಾಂಗ. ೩—೫). **ಹುಲಿಮುಖ** : ದುರ್ಗದ ಹಿರಿಯ ಹುಲಿಮುಖದೊಳಗೆ ಹೊಯ್ದರು ಬೇಹ ಬೇಹವರ (ಕುವ್ಯಾಕ. ೭ ೩೦); ಬಲಿದುದನಿತಕೆ ಕೋಟೆ ಪರಿಘಾವಳಿಯ ರಚನೆಯಲಾಳುವೇರಿಯ ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ (ಕೊರಾ. ೦-೦೩-೨); ಮಲೆತೀ ಪುರಕೃತಹ ರಿಪುನೃಪಪಶುಕುಲಸಮೂಹವನಗಿದುಗುಳ್ದ ಸಲೆ ಶಾರ್ದೂಲವದನವೆನೆ ಹುಲಿಮುಖ ಬಲುಭಯಾಂಕುರವ ಬೀಱುವುವು (ಕುವಪ. ೨-೬೪). [ಪುಲಿ + ಮುಖ]

**ಪುಲಿಮೊಗ**, ಹುಲಿಮೊಗ (ನಾ). ೧. ಹುಲಿಯ ಬಾಯಿ : ಆ ಪುರದ ಮಿಸುಪ ಹುಲಿಮೊಗಮೊಪ್ಪಿದುದರಿಧರಣೀಪಾಲಪಶುಗಳಂ ನುಂಗುವ ಪುಲಿಮೊಗವೆಂಬಂತೆ (ಜಯಕಾ. ೦-೫೪). ೨. =ಪುಲಿಮುಖ : ಗೊಂಟು ಗೊಂಟನೊಳ್ ಬಳಸಿದ ಕೊತ್ತಳಂ ಸೊಗಯಿಪಾಳ್ವೇರಿ ಡಂಕಣಿ ಸಾರಮಾರಿಯಂಗ್ಗಳಿಸುವ ಗೋಪುರಂ ಪುಲಿಮೊಗಂ ಮೆಱೆಗುಂ ಪುರದೊಳ್ ನಿರಂತರಂ (೧೦೪. ೨-೭೪); ಅಗಳಾಳ್ವೇರಿ ಕೋಟೆಕೊತ್ತಳ ನೆಲದಿಡ್ಡಿ . . . ಪಲ ಪುಲಿಮೊಗಗಳನನುಮಾಡಿಸಿದನು (ಕುರಾಸಾಂ. ೩೭-೫೦); ಸಮಸ್ತಕಾರ್ಯಕುಶಲರಿಂ ಕೋಟೆ ಕೊತ್ತಳ ಮುಗಿಲಟ್ಟಣೆ ಬುರುಜು ಪುಲಿಮೊಗ ಡೆಂಕಣಿಯಗಳಾಳ್ವೇರಿ ಪಿಳ್ಳಗುಸೆ ದಿಡ್ಡಿಮೊಳಗದುಗಳ್ ನಿರ್ಮಿತಮಾಗಲೊಡನೆ (ಹಾಲಸ್ಕ. ೦-೪-೬೫ವ). **ಹುಲಿಮೊಗ** : ೨. ಕೋಟೆ ಹೋಯ್ತೋಳೀಯೆನುತಿರದೆ ಕುಲಿಲಿಯೆಂದಾರಿ ಕೊಬ್ಬಿಱಿದು ಹುಲಿಮೊಗದೊಳಗೆ ಹೊಗಲೊಡನೆ ಸೂತ್ರವಿಡಿದು (ಸಮ್ಯಕ್. ೬-೩೬) ; ತನ್ನಿದಿರ್ವರೆ ಪಿಡಿದು ಉಳಿದು ಹೊಯಂ ಮೆನೆಂಬ ರೌದ್ರದಿಂ ಕೋಟೆಯ ಹುಲಿಮೊಗ

ಕಣ್ಗೆ ತನ್ನಿದಿರ್ವರೆ ರಂಜಿಸಿತು (ಪೋಜಕ. ೩-೯). [ಪುಲಿ+ಮೊಗ]

**ಪುಲಿಯಣ್ಣ** (ನಾ). ಒಬ್ಬಾತನ ಹೆಸರು : ಕವುಳನ್ವೆಯಾರುಂ ಕಳ್ಳಿ ಕುಳ್ಳಿಯುಂ ಪಾಣದರುಂ ಅಕ್ಕಸಾಲೆಯರುಂ ಪುಲಿಯಣ್ಣಂಗಳು ಎರೆಕಾಡನಳ ದೊರ್ (ಕ್ರಾಇ. IX–i, ೪೭-೧೫; ಸು. ೧೫ಯು ೩೪). [ಪುಲಿ + ಅಣ್ಣ$_1$]

**ಪುಲಿಯುಂಡಿಗೆ** (ನಾ). ಹುಲಿಯ ಚಿತ್ರವುಳ್ಳ ಮುದ್ರೆ : ಅವನಿನ್ದ್ರಿತೃಣತತ್ಕುಲದವನೀಶಗ್ಗ್ರಯ್ತು ಹೊಯ್ಸಳಕ್ಕಿಂ ಮತ್ತಂತವರ್ಗೆ ಪುಲಿಯುಣ್ಡಿಗೆಯುಮಾದಿ(ರ)ವಿಜಾಚ್ಛಿತೆಯೆಸಿಪ ಶಶಪುರಂಬಿಕೆಯೊಲವಿಂ (ಎಕ. XI, ಚನ್ನ. ೬೯-೦೦; 1214 ?). [ಪುಲಿ+ಉಂಡಿಗೆ$_1$]

**ಪುಲಿಯುಗುರ್**, ಪುಲಿಯುಗುರು, ಹುಲಿಯುಗುರ್, ಹುಲಿಯುಗುರು (ನಾ). ೧. ಹುಲಿಯ ಪಂಜದ ಉಗುರು ; ವ್ಯಾಘ್ರನಖ : ಪುಲಿಯುಗುರೆಯ್ದೆ ನಾಂಟಲುರವಂ ಪುಳಿದೆಯ್ದೆ ಪುಳಿಂದನೊತ್ತೆ ಗಂಟಲನದುಪಾಯೆ (ಪಂಪಭಾ. ೩-೬೦೯). ೨. (ಮಕ್ಕಳಿಗೆ ತೊಡಿಸುವ) ಹುಲಿಯ ಉಗುರಿನಿಂದ ಮಾಡಿದ ಅಥವಾ ಹುಲಿಯ ಉಗುರಿನಾಕಾರದ ಒಂದು ಆಭರಣ : ಅರಳೆಲೆ ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿ ಗೆಜ್ಜೆ . . . ಮನಂಗೊಳೆ ಭುವನೈಕಮಂಡನನೊಳೇನೆಸೆದಿರ್ದುದೊ ಬಾಲಮಂಡನಂ (ಆಪು. ೩-೬೨); ಅರಳೆಲೆ ಮತ್ತಿಗಾಯ್ ಪುಲಿಯುಗುರ್ ನವರತ್ನದ ಕಂಕಣಂಗಳ್ . . . ಒಪ್ಪಿರೆ ಚಿತ್ರಪಾತ್ರಗಳ್ಗೆ ಪಡೆದರ್ ತನಯರ್ ನಯನೋತ್ಸವಂಗಳಂ (ಶಂಖವಾ. ೩-೦೯೦); ಒಡವುಟ್ಟಿದ ಕೌಸ್ತುಭಮಿರ್ಪೆಡೆಗಂ ದಾಯಾದನಪ್ಪೆನೆನ್ನಗಮೆಂದಂದುದು ಪಕ್ಕಿಳೆ ನೆಲೆಸಿತ್ತೆನೆ ಪೊಡೆಯರಲನ ಕೊರಲ ಪುಲಿಯುಗುರ್ ಕರಮೆಸೆಗುಂ (ಜಗಪು. ೩-೪೪). **ಪುಲಿಯುಗುರು : ೨.** ಬಾಲಶಶಾಂಕನಂದದ ಪುಲಿಯುಗುರನು ತಾಳಿಪ ಬಂದಿ ರಂಜಿಸಿತು (ಅಂಚಚ. ೪-೪೪); ಅರಳೆಲೆ ಪಾಗಾಯ್ಪುಲಿಯುಗುರೊಲಿಯುಂತ ಚರಣದಂದುಗೆ ಗೆಜ್ಜೆಗಳು ಕರದ ಕಂಕಣಗಳು ಘಲಿಘಲಿರೆನಲಾಡಿ ಬರುವಳು ತಂದೆಯ ಬಳಿಗೆ (ಕರ್ಣಾಕ. ೨೦೬). **ಹುಲಿಯುಗುರ್ : ೨.** ಬಳೆದೋಳ ಭಾಗ್ಯಸಿಧಿ ಹುಲಿಯುಗುರ ಸುಲಭಗಂ ಸಳಸಳಿಪ ಲಾವಣ್ಯದಿಂದೆಸೆವ ಬಣ್ಣಗಂ (ಬಸವ. ೦-೦೫೦) **ಹುಲಿಯುಗುರು : ೧.** ನಮ್ಮ ದೇಶದ ಜನರು . . . ಹುಲಿಯುಗುರಿನ ಆಭರಣ ಮಾಡಿಸಿ ಮಕ್ಕಳ ಕೊರಳೊಳಗೆ ಹಾಕುತ್ತಾರೆ (ಮುಂಬಯಿ. ೪-೩೬); ತನ್ನ ಮೈಯೆಲ್ಲ ಹುಲಿಯುಗುರುಗಳ ಗಾಯದಿಂದ ಕೆಂಪಾಗಿದೆ (ಕಾಪೂರ. ೨೪೩). ೨. ಕರದಲ್ಲಿ ಕಂಕಣ ಬೆರಳಲ್ಲಿ ಉಂಗುರ ಕೊರಳಲ್ಲಿ ಹಾಕಿದ ಹುಲಿಯುಗುರವು ಅರಳೆಲೆ ಕನಕಕುಂಡಲ ಕಾಲಲಂದುಗೆ ಉರಗಶಯನ ಬಂದ ಕಾಣಿರೇನೆ (ಭಕಂದ. ೦-೦೧೦-೨); ಶಿಕ್ಷಿನಲ್ಲಿ ಅಡ್ಡಿಕೆ . . . ಹನುಮಾನ ತಾಳಿ, ಹುಲಿಯುಗುರು (ಮಲ್ಲ. ೪೦). ೩. ಸುಗಂಧವುಳ್ಳ ಒಂದು ಬಗೆಯ ಔಷಧೀ ಸಸ್ಯ : ಗಂಧಕ, ಹುಲಿಯುಗುರು, ಬಜೆ . . . ಪದಕ, ಎಣ್ಣೆ, ಅಜಮೂತ್ರದಲ್ಲಿ ಬೆರಸಿ ಅಟ್ಟು ನಸ್ಯಂಗೈಯೆ ಪೀನಸ ಮಾಣ್ಗುಂ (ಶಿಶು. ೬೬).

**ಪುಲಿಯುಗುರ ಪಟ್ಟು** = ಒಂದು ಬಗೆಯ ರೇಷ್ಮೆ ವಸ್ತ್ರ : ನೇತ್ರಾವಳಿಯು . . . ಗಜದಾಳ ಪುಲಿಯುಗುರ ಪಟ್ಟೆಂದ್ರರಾಗಂ ಲಲಿತವೀಣಾವಳಿಯು (ಬಸಪು. ೧೦-೨೩). [ಪುಲಿ + ಉಗುರ್]

**ಪುಲಿಯುಗುರು** ‘ಪುಲಿಯುಗುರ್’ ನೋ.

**ಪುಲಿಯೂಟು** ‘ಪುಲಿವೆಟ್ಟು’ ನೋ.

**ಪುಲಿವಟ** ‘ಪುಲಿವೆಟ್ಟು’ ನೋ.

**ಪುಲಿವಟೆ** ‘ಪುಲಿವೆಟ್ಟು’ ನೋ.

**ಪುಲಿವಟ್ಟ** (ನಾ). ಒಂದು ಊರಿನ ಹೆಸರು : ಮೂಗುನ್ದಪನ್ನೆರಡು ಪುಲಿವಟ್ಟಪನ್ನೆರಡುಂ ಕಲ್ವತ್ತಿಯೆಂಟುಂ ಸಾಸ್ಸಳಿಗೆಸಾಯಿರಮುಮಂ ದುಷ್ಟಾಟವಿಕನಿರ್ಮೂಳನಂಮಾಡಿ ಸುಖದಿಂ ರಾಜ್ಯಂಗೆಯ್ಯುತ್ತಿರ್ಪ (ಎಕ. VIII, ಸೊರಬ ೪೭೭-೭೩ ; 991). [ಪುಲಿ + ಪಟ್ಟ$_1$]

**ಪುಲಿವಟ್ಟೆ** ‘ಪುಲ್ಲಿಪಟ್ಟೆ’ ನೋ.

**ಪುಲಿವರೆ** (ಕ್ರಿ). (?) : ಮದನಂ ಶ್ರೀಮಲ್ಲಿಭಟ್ಟಾರಕನ ವಿಮಳಬೋಧಾನಳಜ್ವಾಳೆಗಳ್ ಸೋಂಕದ ಮುನ್ನಂ ತತ್ಪ್ರಪೋರಾಶಿಗೆ ಪುಲಿವರೆ[ವಾಕಾಂ.ರ] ದತ್ತೆಂಬಿನಂ ಬೂದಿಯಾಗಿರ್ಪುದುಮಾಗಳ್ ಪೋದಿಕೊಂಡಳ್ ರತಿ ಮತಿ ಮಾಣ್ದಳ್ ಪೊಯ್ಯಾನೀಡಾಡಿದಳ್ (ಮಲ್ಲಿಕೆ. ೦೯-೪೩). ‘ಹುಲಿವಿರಿ’ ನೋ. [ ? ]

**ಪುಲಿವಲೆ.** ಹುಲಿಬಲೆ (ನಾ). ಒಂದು ಬಗೆಯ ದೊಡ್ಡ ಬಲೆ : ಪುಲಿವಲೆ ಕೊಂಬು ಕಣ್ಣಿ ವಿಡಿಗಣ್ಣಿ ತೊವಲ್ವಲೆ ಸಿಕ್ಕು ದಕ್ಕು ಪೆರ್ವೊಲವಲೆ ಸಂದ ಹಾಸುವಲೆ ನೀರ್ವಲೆ ಮೇಲ್ವಲೆ . . . ಎಂಬಿನಿತಂ ಪೊಟಿಗಟ್ಟಿ ಕಾನನಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ರಕಕು. ೨-೦೦೩). **ಹುಲಿಬಲೆ :** ಅದಟಿಗೊಳಗಡಗಿಪ್ಪರ್ಕೈವರು ಕಳ್ಳರು ಒಬ್ಬ ಸರಿಬಲೆಯುವನೊಬ್ಬ ಹುಲಿಬಲೆಯುವ (ಕಣ್ಮಾಕಾಂ. ೦೦೪-೦೬). [ಪುಲಿ + ಬಲೆ$_1$]

**ಪುಲಿವಾಲ್** (ನಾ). ಹುಲಿಯ ಹಾಲು : ಪುಲಿವಾಲಂ ಕುಡಿದಲ್ಲದೆ ಕಲಿಯಾಗಂ ಪುತ್ರನ್ (ಎಕ. XI, ದಾವಣ. ೪೩-೨೬ ; 1164); ಪುಲಿವಾಲಂ ನಲಿದುಣ್ಡ ಶಕ್ತಿ (ಎಇ. XIV, ೨೬೨-೨೯ ; 1173). [ಪುಲಿ + ಪಾಲ್$_1$]

**ಪುಲಿವಾಲ** (ನಾ). ಹುಲಿಯ ಬಾಲ : ಪುದಿದು ತಳಿರುಡೆ ಸುರಗಿ ಪುಲಿವಾಲದಲಿ ವಿರಚಿಸಿದ ಹದುರುಗಂಕಣ ಖಡೆಯ ಪೆಂಡೆಯದೊದವಿನಿಂ . . . ಬಲೆವಿಡಿದಿಹರು ಬಿಯದರು (ಶಾಕ್ಮಲ. ೩-೭). [ಪುಲಿ + ಬಾಲ]

**ಪುಲಿವುತು** (ನಾ). ಒಂದು ಸ್ಥಳದ ಹೆಸರು : ಪೂರ್ವ್ವೋತ್ತರದಿಗ್ಭಾಗೇ ಸಿರಿಗಾಳಂಗ್ರಾಮಸೀಮ್ನಿ ಪುಲಿವುತು ತತ ಅಗತ್ಯ ಕಪ್ವಸುರಿಗೊಳಂ ತತಃ ಪೆಬ್ಬುರ್ತ್ತು (ಎಕ. XI, ದಾವಣ. ೬೬-೭೦ ; 694). [ ? ]

**ಪುಲಿವೆಟ್ಟು**, ಪುಲಿಪಟು, ಪುಲಿಯೂಟು, ಪುಲಿವಟ, ಪುಲಿವಟೆ, ಪುಲಿವೇಟು, ಪುಲ್ಲಿವೆಟು, ಪುಲ್ಲಿವೇಟು (ನಾ). ದೇವಾಲಯ, ಕೆರೆ, ಕಟ್ಟೆ ಮುಂತಾದುವುಗಳ ಜೀರ್ಣೋದ್ಧಾರ ಇತ್ಯಾದಿ ಸಾರ್ವಜನಿಕ ಕಾರ್ಯಗಳಿಗಾಗಿ ಉದಾರಿಗಳಿಂದ ದತ್ತಿಯಾಗಿ ಬಂದು, (ಬಡ್ಡಿಯ ಉತ್ಪನ್ನವನ್ನು ಉಪಯೋಗಿಸಿಕೊಳ್ಳಬಹುದಾದ) ಕೊಡಿಟ್ಟ ನಿಧಿ,-ಸಂಪತ್ತು,-ಠೇವಣಾತಿ : ೧೦೦ಬುವರಹಂನು ಕೊಟ್ಟು ದೇವರ ಗುಡಿಯಲ್ಲೂ ಮಾಡಿಸಿದ ಪುಲಿವೆಟ್ಟು (ಕ್ರಾಇ. IX-ii, ೫೩೩-೪ ; 1534). **ಪುಲಿಪಟು**: ಶ್ರೀವಿಠಲದೇವರ ಅಮೃತಪಡಿಗೆ ಪುಲಿಪಟು ನೈವೇದ್ಯಕೆ . . . ಧಾರಾಗ್ರುಹೀತವಾಗಿ ಬಂದ ತೆಕ್ಕಲಕೋಟೆಸೀಮೆಯೊಳಗಣ ನಿಟೂರಗ್ರಾಮ ೧ (ಕ್ರಾಇ. IX-ii, ೬೦೭-೨ ; 1543). **ಪುಲಿಯೂಟು** : ನಮ್ಮ ಧರ್ಮವಾಗಿ ಸ್ವಾಮಿಯ ಸನ್ನಿಧಿಯಲೂ ಪುಲಿಯೂಟಾಗಿ ನಡವ ಕಟ್ಟಳೆಯ ವಿವರ (ಎಕ. XIV, ಶ್ರೀರಂಗ. ೨೫೬-೭ ; 1544); ಶ್ರೀಚಲಪತಿರಾಯರ ಸನ್ನಿಧಿಯಲಿ ನಡವ ಪುಲಿಯೂಟ ಕಟ್ಟಳೆಯ ವಿವರ (ಎಕ.XIV, ಶ್ರೀರಂಗ. ೨೬೦-೫ ; 1551). **ಪುಲಿವಟ** : ಪುಲಿವಟವಾಗಿ ಶ್ರೀವಿಠಲದೇವರ ಭಂಡಾರಕ್ಕೆ ಸಮರ್ಪಿಸ್ಸಧು ಘಟವರಹಯಿಂನೂಱು (ಕ್ರಾಇ. IV, ೨೬೪-೦೫; 1530). **ಪುಲಿವಟೆ** : ಶ್ರೀವಿಠಲದೇವರ ಭಂಡಾರಕೆ ಪುಲಿವಟೆ ಆಗಿ ಸಮರ್ಪಿಸಿದ ರೊಕ್ಕ ವರಹ ಗ 100 ಱು (ಕ್ರಾಇ. IX-ii, ೫೩೩-೭ ; 1534). **ಪುಲಿವೇಟು** : ಶ್ರೀವಿಠಲದೇವರಿಗೆ . . . ಪುಲಿವೇಟುಗಳಿಗೆ ಸಮರ್ಪ್ಪಿಸಿದ ಗದೆಯ ಬಳಿಯಲೂ ಸಮರ್ಪಿಸಿದ ಬೀಜವರಿ ಗದ್ದೆ (ಕ್ರಾಇ. IV, ೨೭೩-೫; 1561). **ಪುಲ್ಲಿವೆಟು** : ಯಿಾ ಪುಲ್ಲಿವೆಟು ನಯಿವೇದ್ಯವಾದ ಖಜಾಯ ಪ್ರಸಾದ ಪಲ್ಲ ನಯಿವೇದ್ಯ ಶ್ರೀವಿಠಲದೇವರ ಭಂಡಾರದವರಿಗೆ ಪ[ಕ್ಕೆ] ಪಾಲು (ಕ್ರಾಇ. IV, ೨೭೩-೭ ; 1561). **ಪುಲ್ಲಿವೇಟು** : ಉದಗಿರಿ ತಿಂಮರಾಜಯ್ಯನವರು ಮಾಡಿಸಿದ ಪುಲ್ಲಿವೇಟು (ಕ್ರಾಇ. IV,

೨೭೩-೪: 1561). 'ಪುದಿವಟ್ಟು' ಪರಾ. [ದೇ.॥ ತಮಿ. ಪುಲಿವೀಟು, ಪುಲಿವೇಟು, ಪುಲಿಯುಟ್ಟು; ತೆಲು. ಪುಲಿಪಟ್ಟು]

**ಪುಲಿವೇಟು** 'ಪುಲಿವಟ್ಟು' ನೋ.

**ಪುಲಿಸಮ್ಮ** (ನಾ). ಹುಲಿಯ ತೊಗಲು : ಪುಲಿಸಮ್ಮದುಡುಗೆಯ ತೆಗೆದ ನೇಮದ ಕೇಳಿ ಬಲಿಸುತ ಶಿವಪೂಜೆಗೆಯ್ದು . . . ಹೊಜವಟ್ಟ ಕಲಿಗಳ ದೇವ ಕಾಳಿಗೆಕ (ಶೋಚತ. ೯೦-೪); ಜನನಿಯುಳ್ಳೊಡೆ ಸರ್ವನಾಭರಣಂಗಳಂ ತಲೆಮಾಲೆಯುಂ ತನಯನಂ ತೊಡಲೀವಳೇ . . . ಕರಿಕೃತ್ತಿಯುಂ ಪುಲಿಸಮ್ಮಮುಂ ತನಗೆ ತಾಂ ಪೊದೆವಂತೆ ಮಾಳ್ಪಳೆ (ವೃಷಾ. ೯-೧೦೪).

[ಪುಲಿ+ಸಮ್ಮ₂ (<ಚಮ್ಮ)]

**ಪುಲಿಸು**, ಪುಲುಸು, ಹುಲಸು, ಹುಲಿಸು₂, ಹುಲುಸು (ನಾ). ೧. (ಪೈರಿನ) ಹೆಚ್ಚಳ; ಸಮೃದ್ಧಿ; ಸೊಂಪು : ಧರೆಯೊಳ್ ಸಜ್ಜನಪ್ರತತಿ ದೊಂಬುರು ಬಲ್ಪಿಸಿಸಲೆಮುಂ ನರೇಂದ್ರರ ಮನೆದೀವದಂತೆ ಧನರಾಸಿ ದುನಾ ಪುಲಿಸಿಂದಲೀಯದೇ (?) (ಮಲ್ಲಿಕಾ. ೦ ೩೪); ಪಿರಿದಂಚೆಯೊಗಿ ಕಿಡು ತಿರ್ಪುರುಗರ್ದೆಯನೊಲ್ದು ಪೊಕ್ಕೊಡದು ಫಲಮಕ್ಕುಂ ನಿರುತಂ ಪುಲಿಸಪ್ಪದು (ತ್ರಿಶ್ರಿ. ೦೪-೬); ಫಳಿಕಂ ತ್ರಿವರ್ಗಮುಂ ಕೈಗೊಳಿಕಂ ತತ್ಪಾಧನಂಗಳುಂ ಸಂಗತಿಯಿಂ ಶಿಳಿಪಲ್ಕೆಂದೀ ರೀತಿಯನಳಪಂ ಕಡೆಗಣಿಸಿತಲ್ತೆ ಬೆಳಸುಂ ಪುಲಿಸುಂ (ಶಕಾ. ೪-೭೯). ೨. ಒಕ್ಕದೆ ಇರುವ ತೆನೆ : ಪುಲಿಸಂ ಪೊತ್ತಾತನೆ ಕಳದಲು ಪಡುವುದು ಭತ್ತವುಳ್ಳತೆ ಯಪ್ಪಿನಮಾತ್ರಂ ತೊಲಗಲು ಸಲ್ಲದು (ಕವಿಕ. ಅವಬಿಂದ. I, ೬೮೨-೯೩). **ಪುಲುಸು :** ೧. ಅರಿನಿಂದುರುಟುವರ್ ಮಟಿಯೆಂಬ ವರುಮಾನ ಪುಲುಸುಗುಂದಿದುದು (ಕುಚೇಲ. ೦-೨-೪). **ಹುಲಸು :** ೧. ಬೆಳಸು ಹುಲಸಾತ ಜಗದಾಗ (ಜನಗೀ. ೭೩); ಹುಯ್ಯುವ ಹೊಳೆಗೊಂದು ಕಟ್ಟೆಯ ವಿರಚಿಸಿ ಕೊಂಡರೆ ಕೃಷಿಕರ್ಮ ಹುಲಸು (ಜಂಗಾಶ. ೦೭೬-೭೭). **ಹುಲಿಸು₂ :** ೧. ಅಧರಕ್ಷತವಂ . . . ಚುಂಬನವಳಯಂಗಳಂ ಪ್ರತಿಸಲಚ್ಚಣದಿಂ ಪ್ರತಿಯಿಟ್ಟು ನೋಡಿ ಕಾಮಿನಿ ಹುಲಿ[ಪಾಠಾಂ. ೦] ಸಾದ ಬೇಟವೆಳಸಂ ಕಡು ಸಂತಸವಂತವೆಯ್ದಿದಳ್ (ಸೂಕ್ತಿಸು. ೦೪-೧೧); ಕಾಲನ ಹೆಬ್ಬೆಳಸು ಹುಲಿ [ಪಾಠಾಂ. ಲು] ಸಾಯ್ತು (ಕುಮಾರರಾ. ೪-೦೨); ಮಾರಿಯ ಹೆಬ್ಬೆಳಸು ಹುಲಿಸಾಗಿ ಹಸರಿಸಿದ ಕಣನೆನಿಸಿ ಕಾಣಿಸಿತು ಸಮರಾಂಗಣವು (ಅಕ್ಷರಾ. ೨೨-೦೬). **ಹುಲುಸು :** ೧. ಫಲಪುಷ್ಪಗಳ ಬೆಳಸು ಹುಲುಸಾಯ್ತು (ರೀಠಕ. ೨ ೦೪); ಭಾರತದಲ್ಲಿ ಅನುಭಾವವಿದ್ಯೆಯು ಬಲು ಹುಲುಸಾಗಿ ಬೆಳೆಯಿತು (ತತ್ವಪ್ರಾ. ೫೩೩). ೨. ಒಕ್ಕಲಿಗನು ಕಣದ ಹುಲುಸನ್ನು ದನದ ಸೆಗಣಿಯುಂಡ ಹೊರಗೆ ಒಗೆಯಬಾರದು (ಕನ್ನಡಾ. ೦೩೩).

[ದೇ.॥ ತಮಿ. ಪೊಲಿಚ್ಚ=ಲಾಭ; ಮಲ. ಪೊಲಸ = ಬಡ್ಡಿಯಾಗಿ ಕೊಡುವ ಭತ್ತ; ತುಳು. ಪೊಲ್ಲುಸು=ಲಾಭ]

**ಪುಲಿಸುದಳೆ** (ಕ್ರಿ). ಸಮೃದ್ಧಿಯನ್ನು ಹೊಂದು; ಹುಲುಸಾಗಿ ಬೆಳೆ; ಸೊಂಪಾಗಿ ಬೆಳೆ : ಈಗಳ್ ಕೆಮ್ಮುಗಿಳ್ ಪುಲಿಸುದಳೆವತ್ತಿಗಳಗ್ಗಂ ಪೊಮಟ್ಟತ್ತಿಗಳ್ ಸರ್ವಂ ಸಫಲಮೆನಿಸಿತ್ತಿಗಳಯ್ಯೆಲ್ಲ ಗೆಲ್ಲಂ (ಶಕಾ. ೬-೦೦೦).

[ಪುಲಿಸು+ತಳೆ₁]

**ಪುಲು** 'ಪುಲ್' ನೋ.

**ಪುಲುಗರ್ಚು** 'ಪುಲ್ಗರ್ಚು' ನೋ.

**ಪುಲುಗುಡಿತೆ**, ಹುಲುಗುಡಿತೆ (ನಾ). ಒಂದು ಬಗೆಯ ಕೀಟ (?) : ವಿಲಸನ್ಮಂತ್ರಯುತಂ ಕೂದಲ ನೇಣಂ ಮಂಸಲ ಮಂಥಮಂ ಪೂರೆ ಪುದುಲಾಜಿಲಮಂ ವೇಣ್ ಬಾಸುಬ್ಬಿಳ್ ಪುಲುಗುಡಿತೆಯ ಮೆಯ್ಯೊಳೇ ಬುಗುಂ ತತ್‌ಕ್ಷಣದಿಂ (ಜಚಾಚ. ೦೬-೯೨). **ಹುಲುಗುಡಿತೆ :** ಒಸೆದೀ ಮಂತ್ರದೊಳಂ ಮಂತ್ರಿಸಿಕೊಂಡಡೆ ಭಸ್ಮಮಂ ತವಿಯಾಲಯದಾ ದೆಸೆಗಂ ಹುಲುಗುಡಿತೆಗಳುಂ ಮಿಸುಗದೆ ಚಕಿತರ್ಕಳಾಗಿ ತೊಲಗುಗುಮಿಂದಜಾ

(ಜಚಾಚ. ೦೬-೯೩). [?]

**ಪುಲುದೇಗುಲ** 'ಪುಲ್ದೇಗುಲ' ನೋ.

**ಪುಲುದೊಂದೆ** 'ಪುಲ್ದೊಂದೆ' ನೋ.

**ಪುಲುಬೂತು** (ನಾ). ಅಲ್ಪನಾದ ಯಾಚಕ : ಪಾವಿನಂತೆ ಗೀತಕ್ಕೆಬಗೆದೆ ಪುಲುಬೂತಿನಂತೆ ಉಂಡರನೇನಾನುಮಂ ಬೇಡುತ್ತಿರದೆ (ಧರ್ಮಾಮೃ. ೩-೯೪).

[ಪುಲು (<ಪುಲ್) + ಬೂತು₁]

**ಪುಲುಮನೆ** 'ಪುಲ್ವನೆ' ನೋ.

**ಪುಲುಮೃಗ** 'ಪುಲ್ಮೃಗ' ನೋ.

**ಪುಲುವಟ್ಟೆ** 'ಪುಲ್ವಟ್ಟೆ' ನೋ.

**ಪುಲುವಿಲು**, ಹುಲಿವಿಲಿ, ಹುಲಿವಿಲು, ಹುಲುವಿಲು, ಹುಲುವಿಲೆ (ನಾ). ಒಂದು ಬಗೆಯ ಮರ : ಬೇಲವರುಟಾಳ ಪುಲುವಿಲುಯ ಸಂದಿ[ಪಾಠಾಂ. ಹಲಸಲವ ಕಿಚುಸಂದಿ] ಚಂದನ ಕಕ್ಕೆ ಬಿಕ್ಕೆ ತಜುಯ . . . ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಕ. ೬-೨). **ಹುಲಿವಿಲಿ :** "ಚಂಕ್ರಸಂದರಣಃ _ಹುಲಿವಿಲಿ" (ಓಕಥ. ೩೬). **ಹುಲಿವಿಲು :** "ರಥಿಕ_ಹುಲಿ(ಗಿ)ವಿಲು" (ಓಕಥ. ೦೩೩). **ಹುಲುವಿಲು :** "ಅಶ್ವಗರ್ಭ–ಹುಲುವಿಲು, ಪಚ್ಚೆ" (ಓಕಂ. ೩). **ಹುಲುವಿಲೆ :** ಹುಲುವಿಲೆ ಮರ ಪ್ರಿಯಂಗು ದಾಳಿಂಬ ಮೊದಲಾದ ವೃಕ್ಷಂಗಳು (ಶಾಗಂಂ. ೪೨೩-೦೨). 'ಪುಲಿಗಿಲ್' ಪರಾ. [?]

**ಪುಲುವೀಡು** (ನಾ). ಹುಲ್ಲಿನ ಮನೆ ; ಹುಲ್ಲುಜೋಪಡಿ : ಪುಲುವೀಡೊಳ್ ಪಲವುಂ ಪಗಲ್ ಪರದನಿರ್ದಾದಾಯಮಂ ಪೆತ್ತು ಬಾಳ್ವೆಲೆಯುಳ್ಳೊಂಡೆಡೆ ಗೈದಲಾ ನೆಲೆಯುಮರ್ ನೋಡವಂತೆ (ರತ್ನಾಕ. ೦೩).

[ಪುಲು (<ಪುಲ್) + ಬಿಡು₂]

**ಪುಲುಸು** 'ಪುಲಿಸು' ನೋ.

**ಪುಲುಸೋಗು** (ಕ್ರಿ). ಆಧಿಕ್ಯವು ಕುಂದು,–ಕಡಮೆಯಾಗು : ಒಡೆಯದ ಕಂತುಮಯ್ಯದ್ರೆ ಪುಲುಸೋಗದ ರಾಗದ ರಾಶಿ ನಿರ್ಜರರ್ ಕಡೆಯದ ಪಾಲ್ಗಡಲ್ ಗಿಳಿ ಕರ್ದುಂಕದ ಪಣ್ಗೊನೆ . . . ಕಾದಿ ಕೋಳ್ವಡೆಯದ ದುರ್ಗದಂತೆಸೆಯುತಿರ್ದಳು ಕನ್ನೆ ಕುಲಾಭಿಮಾನದಿಂ (ಮಲ್ಲಿಕಾ. ೬-೬೦).

[ಪುಲುಸು (<ಪುಲಿಸು) + <ಪೋಗು₁]

**ಪುಲಿಕೇಶಿ** 'ಪುಲಿಕೇಶಿ' ನೋ.

**ಪುಲ್ಕಸ** (ನಾ). ೧. ನಿಷಾದಜಾತಿಯವನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದವನು. ೨. ಮಾದಿಗ ; ಶ್ವಪಚ : "ಶ್ವಪಚಃ, ಪುಲ್ಕಸಃ, ಮಾತಂಗಃ, ಪ್ಲವಕಃ—ಈ ೪ ಮಾದಿಗಂ" (ಹಲಾಯು. ೯೬-೪೪೪); ಪರದೇವತೋಪಹಾರಕ್ಕತಿಥಿತರ್ಪಣಕೆ ವರವೈಶ್ವದೇವರ್ಗೆ ಪ್ರಾಣಾಗ್ನಿಹೋತ್ರಕ್ಕೆ ಪಿರಿದು ಧರ್ಮಕ್ಕನರ್ಹಂ ಮತ್ತೆಯುಂ ಕೇಳಿರೆಲೆ ವಿಪ್ರ ಪುಲ್ಕಸರಿರ (ಅರಾಶ. ೦-೩ ೩೬); ಕ್ರೂರವಾದ ಕರ್ಮಗಳಿಂದ ರಜಕರಾಗಿ ಕುಂಭರಾಗಿ ಸಾವರ್ನಕರಾಗಿ ಕುವಿಂದರಾಗಿ ಪುಲ್ಕಸರಾಗಿ ಕಿರಾತರಾಗಿ . . . ಪುಟ್ಟುವರು (ಶೀಕಥ. ೦೮). [ಸಂ].

**ಪುಲ್ಕೊಂಥಬೋಯ** (ನಾ). ಒಬ್ಬಾತನ ಹೆಸರು : ಪುಲ್ಕೊನ್ನಬೋಯಸ್ಯ ಕಾಶ್ಯಾ(ಶ್ಯ)ಪಗೋತ್ರ (ಇಇ. VII, ೦೬೬-೪೯; ೬೬೮).

[ಪುಲ್ಕೊಂಥ₀+ಬೋಯ]

**ಪುಲ್ಗಚ್ಚು** 'ಪುಲ್ಗರ್ಚು' ನೋ.

**ಪುಲ್ಗರ್ಚು**, ಪುಲುಗರ್ಚು, ಪುಲ್ಗಚ್ಚು, ಹುಲುಗಚ್ಚು (ಕ್ರಿ). ೧. ಹುಲ್ಲಂ ಕಡ್ಡಿಯನ್ನು ಬಾಯಲ್ಲಿ ಕಚ್ಚಿ ಹಿಡಿ : ಪುಲ್ಗರ್ಚಿದ ಪುಲ್ಲೆಯುಂ ಕುಜದ ಕೊಂಬಂ ಸಾರ್ದ ಸತ್ಪಕ್ಷಿಸಂಕುಲಮುಂ ಕುಂದದೆ ಕೊಂದಪುಕ್ಕಿದೆ ಫಲಂ ನೋಡೆಂಬವೊಲ್ ಬೇಡರಂ ಬಲಿಗೊಂಡತ್ತು...ಉಗ್ರಕಂಠೀರವಂ (ರಾಜಶೇ. ೩-೦೨೨). ೨. (ಅಲಂ) ಹುಲ್ಲು ಕಚ್ಚಿ ಹಿಡಿಯುವುದರ ಮೂಲಕ

ಶರಣಾಗತಿಯನ್ನು ಸೂಚಿಸು,— ಸೋತೆನೆಂದು ತಿಳಿಸು : ಕರುಣಿಸಲಿ ಶಬರ ತೀಡದಿರು ಸರಲಂ ನೀನೆಂದೆನುತ್ತೆ ಪುಲ್ಗರ್ಚಿದವೋಲ್ ಮರವಟ್ಟು ಸ್ವಕ್ಕದೂರ್ವಾಂಕುರನಾಗಿರ್ದುದು ಭಯಾತ್ತಕರಣಂ ಹರಿಣಂ (ಕುಸುಮಾ. ೧೪-೪೨); ಪುಲ್ಗರ್ಚಿದರುಮಂ ಪುತ್ರನೇಜಿದರುಮಂ . . . ತಲೆಗಾದು ಮನ್ನಿಸಿ (ಶಶಪಂ. ೧೦-೩). **ಪುಲುಗರ್ಚು : ೨.** ದೇಸಿಗನಪ್ಪನಂ ಭಯದಿನೋಡುವನಂ ಕರಮಂಜಿದಾತನಂ . . . ಪುಲುಂಗರ್ಚಿದನಂ ಕೊಲಲಾಗದೆಂಬವಂ ಪೇಸದೆ ಪಾಳಿವುಳ್ಳನಿನಿತುಳ್ಳ ಮೃಗಂಗಳನೆಂತು ಕೊಲ್ವನೋ (ಕಸಾರ. ೨೯೮). **ಪುಲ್ಗಚ್ಚು : ೨.** ದೊರೆದೊರೆಗಳುಂ ಪಲಾಯನವುನ ನುಕರಿಸಿ ಕಡುಭೀತಿಯಿಂದೆ ಜಲದೊಳ್ ಮುಳುಂಗಿ ಪುಲ್ಗಚ್ಚಿ ಪೆರ್ವರ ಪುತ್ರಗಳನೇಱ ಕೈಗಳಂ ಮುಗಿದು . . . ಹಾಯ್ದರ್ ಕಂಡ ಕಡೆಗೆ (ಕಿಪು. ೩೨-೯೨). **ಹುಲುಗಚ್ಚು : ೧.** ಉಚ್ಚಳಿಸುತಪ್ಪಳಿಸುತಂ ಹು[ಪಾಠಾಂ. ಪ]ಲುಗಚ್ಚಿ ಹಾಯ್ಕುತ ಮೇಲುಕಿಱದು . . . ನೆಗೆವುತಂ ಗೂಱಾಡುತಂ ನೆಲನ (ಜಸಪು. ೩೨-೨೬). [ಪುಲ್ + ಕರ್ಚು$_1$]

**ಪುಲ್ಗರ್ಬು, ಹುಲ್ಲುಗಬ್ಬು (ನಾ).** ಒಂದು ಬಗೆಯ ಕಬ್ಬು : ತಮ್ಮಲ್ಲಿ ಪುಲ್ಗರ್ಬನಾಪಗಮೊಂದಂ ಸವಿವಂತೆ ತಾವೆ ಜಗಕ್ಕೆಲ್ಲಂ ದೇವರೆಂಬಂತೆ ಶೀವೃಗುಮುತ್ತಾನಿತಮಿಕ್ಷುಯಾತ್ರನಿನದಂ ದಿಕ್ಕಾವಿನೀಕರ್ಣವುಂ (ಮಲ್ಲಿಪು. ೨.೯೯). **ಹುಲ್ಲುಗಬ್ಬು :** ಕಬ್ಬಿನ ಜಾತಿಗಳು—ರಸದಾಳಿ, ರಾಮಗಬ್ಬು . . . ಬೆತ್ತಗಬ್ಬು ಅಥವಾ ಹುಲ್ಲುಗಬ್ಬು ಎಂದು ಅನೇಕವುಂಟು (ಮುಂಜಯು. ೫-೨೦೦). [ಪುಲ್ + ಕರ್ಬು (<ಕರ್ಬು$_1$)]

**ಪುಲ್ಗಲಿ, ಹುಲುಗಲಿ (ನಾ).** ಕ್ಷುದ್ರನಾದ ಯೋಧ; ನಾಡಾಡಿ ಬಂಟ : ಕಜ್ಜಮಂ ಕಾಲಮಂ ಪಾರ್ವ ಕಜ್ಜಗಲಿಗಳುಮಂ ಮಾರ್ಗಮಿಾಯದ ಬದಿರಿದ ಲೋಭಿಗಲಿಗಳುಮಂ ನೊಂದು ಪಲ್ಗಿರಿದೋಡುವ ಪುಲ್ಗಲಿಗಳುಮಂ ಮೋದಿ ಮೆಯ್ಯೊಳ್ ನಿಂದಿಱಿವರಿಗಲಿಗಳುಮಂ . . . ನೋಡಿ (ಗದಾಯು. ೯-೪೯ ವ). **ಹುಲುಗಲಿ :** ಇವನೆಂದರೆ . . . ಹೊರಗಣವರಿಗೂ ಅವೊಬ್ಬ ದಳವಾಯಿಯಲ್ಲಿದ್ದ ಭಯಗೌರವಗಳೂ ಇಲ್ಲ.— ಆ ತೂಕದ ಹುಲುಗಲಿಯೆನಿಸಿಕೊಂಡಿದ್ದಾನೆ (ಮುಂತ್ರಕ. ೬೬-೦೩). [ಪುಲ್+ಕಲಿ$_2$]

**ಪುಲ್ಗಸ (ನಾ).** ಹುಲ್ಲು ಮೊದಲಾದ ಕಳೆ : ಕೆಯ್ಯ ಮುರಗಸಂ ಪುಲ್ಗಸ ಮೆಂಬೆರಡುಮಂ ಕಳೆದು ಪದದೊಳ್ ಬಿತ್ತಿದೊಡಂ ಮನದೊಳುಳ್ಳ ರಾಗದ್ವೇಷಮೆಂಬೆರಡುಮಂ ಕಳೆದು ಶುದ್ಧಚಾರಿತ್ರದೊಳೆ ಪತ್ತಿದೊಡಮಾತಂಗೆ ಬೆಳಸುಮಿಾತಂಗೆ ಸುಗತಿಯುಮೆಂತಕ್ಕುಮೆಂಬುದುಮಂ ಬಗೆವುದು (ಜೀವಸಂ. ೯೬-೦೯). [ಪುಲ್ + ಕಸ]

**ಪುಲ್ಗಾಡು (ನಾ).** ಹುಲ್ಲು ತುಂಬಿರುವ ಕಾಡು : ಕಂಡಿಯೊಳ್ ಕಡೆ ಕುತ್ತೆಲ್ಸಿಸು ಮೇಲೆ ಪಾಯ್ದು ಪುಲಿಯಂ ಪುಲ್ಗಾಡೊ[ಪಾಠಾಂ. ನೊ]ಳ್ (ಸೂಕ್ತಿಸು. ೩-೦೦೩). [ಪುಲ್ + ಕಾಡು$_2$]

**ಪುಲ್ಗಿಚ್ಚು, ಹುಲುಗಿಚ್ಚು (ನಾ).** (ಹುಲ್ಲಿಗೆ ಬಿದ್ದ ಬೆಂಕಿಯಂತೆ) ಬೇಗನೆ ಆರಿ ಹೋಗುವ ಬೆಂಕಿ : ಸಿರಿಯಪ್ಪೊಡೆ ಪುಲ್ಗಿಚ್ಚಿನ ದೊರೆ ರಾಜ್ಯವಿಭೂತಿ ಮುಗಿಲ ನೆಟಲ ಸಮಾನಂ (ಧರ್ಮಾಮೃ. ೬-೦೫೯). **ಹುಲುಗಿಚ್ಚು :** ಹೊಲೆಯಗಿತ್ತಾ, ಸಾಲ ಒಲೆಯ ಮೇಲಿನ ಹಾಲು ಲಲನೆಯರ ಒಲುಮೆ ಹುಲುಗಿಚ್ಚು ಇವು ನಾಲ್ಕು ನಿಲಲಿಲ್ಲವಯ್ಯ (ಸರ್ವಜ್ಞ. ೭೯೯೯). [ಪುಲ್ + ಕಿಚ್ಚು]

**ಪುಲ್ಗುಡಿ (ನಾ).** ಹುಲ್ಲಿನ ಗುಡಿಸಲು ; ಪರ್ಣಶಾಲೆ : "ತೃಣಕುಟಿ ಪುಲ್ಗುಡಿ" (ವಸ್ತುಕೋ. ೯೬-೯). [ಪುಲ್ + ಗುಡಿ$_2$]

**ಪುಲ್ಗುಡಿಸಲ್** 'ಪುಲ್ಗುಡಿಸಿಲ್' ನೋ.

**ಪುಲ್ಗುಡಿಸಿಲ್, ಪುಲ್ಗುಡಿಸಲ್, ಪುಲ್ಗುಡಿಸಿಲು, ಹುಲುಗುಡಿಸಿಲು, ಹುಲ್ಲುಗುಡಿಸಲು (ನಾ). = ಪುಲ್ಗುಡಿ :** ಪುಲ್ಗುಡಿಸಿಲಿನೊಳಿರ್ಪಂಗೆ ಮಣಿಮಾಡಮಾದಂತೆ ನಾಯಕತನಂಗೆಯ್ವಂಗೆ ಚಕ್ರವರ್ತಿತ್ವಮಾದಂತೆ (ಧರ್ಮಾಮೃ. ೦೦-೨೮೩); ಜಗಮಿಾರೇಳುಮದೊಂದು ಪುಲ್ಗುಡಿಸಿಲಂತಳ್ಕಾಡೆ ಕಲ್ಪಾಂತದೊಳ್ ನೆಗೆವೊಂದಗ್ನಿಯೊಳಿಂತಿದೊಂದೆಸಕಮಿಲ್ಲೆಂಬನ್ನೆಗಂ . . . ಜ್ವಾಲೆಯುಂ ಪೊಗೆಯುಂ ತಳ್ತೊಗೆವೀ ಶಿವಾಸ್ತ್ರಕರನೀ ಮೋಘಪ್ಲುತಂ ಪಾವಕಂ (ಜಗಂ. ೦೩-೬೭). **ಪುಲ್ಗುಡಿಸಲ್ :** ಕರುಮಾಡಮುಂ ಬಿಟ್ಟು ಪುಲ್ಗುಡಿಸಲನಾಶ್ರಯಿಸುವಂತೆ . . ಸದ್ಧರ್ಮವುಂ ಬಿಟ್ಟು ಮಿಥ್ಯಾತ್ವಪ್ರೀತನಾಗಿರ್ಪುದುಂ (ಧರ್ಮಾಮೃ. ೦೦-೦೬೨). **ಪುಲ್ಗುಡಿಸಿಲು :** ತಂದೆ ತಾಯಿಲ್ಲದ ಅನಾಥನ್, ಅಜ್ಜಿಯೊಡನಿಹನಂತೆ, ಆ ಪಾಳ್ಗುಡಿಯ ಬಳಿಯ ಪುಲ್ಗುಡಿಸಿಲಲ್ಲಿ (ಕಂದ್ರಕ. ೦೯-೨೯). **ಹುಲುಗುಡಿಸಿಲು :** ನೋಡಿರೆ ಹುಲುಗುಡಿಸಿಲಾತನ ರೂಢಿ ವಿಭವಗಳಿದಕೆ ಕಾರಣವು ನಾಡೆ ಏನೆನಲೊಳಗಣಾ ಕಳೆಯಿದಕೆ ಕಾರಣವು (ಸುಕಕ. ೨೯-೬೫). **ಹುಲ್ಲುಗುಡಿಸಲು :** ಹುಲ್ಲುಗುಡಿಸಲು ಅಲ್ಲಲ್ಲಿ ಸೋರತೊಡಗಿ, ಮನುಷ್ಯರಲ್ಲಿ ಕೆಲವರು ಸ್ಥಳ ಬದಲಿಸಬೇಕಾಯಿತು (ಕಾಹೂರು ೦೯೯). [ಪುಲ್ + ಗುಡಿಸಿಲ್]

**ಪುಲ್ಗುಡಿಸಿಲು** 'ಪುಲ್ಗುಡಿಸಿಲ್' ನೋ.

**ಪುಲ್ಗೊನರ್ (ನಾ).** ಹುಲ್ಲಿನ ಚಿಗುರು,—ಕುಡಿ : ಗಿಳಿಯೆಱಕೆಯ ಬಣ್ಣದ ಪುಲ್ಗೊನರ್ ಪೊವಟ್ಟದು ಪೊಲದೊಳ್ (ಜಗಂ. ೯-೬). [ಪುಲ್ + ಕೊನರ್$_2$]

**ಪುಲ್ಚೇಡು (ನಾ).** ಒಂದು ಊರಿನ ಹೆಸರು : ಅದಱ ಪೊಲಮೇರೆ ಮುಂಡಣದೆಸೆ ಪೆಣ್ಣಲ್ಚಿನ್ತೆ ಪುಲ್ಚೇಡು ಉದಿಚೇಡು ಚೇರಳಚಿನ್ತೆ (ಎಕ. XII, ಸಿರಾ. ೩೯-೩೩ ; 878). [ ? ]

**ಪುಲ್ದಂಡೆ (ನಾ).** ಒಂದು ಬಗೆಯ ಬೇಟೆಯ ಸಾಧನ ; ಹುಲ್ಲಿನ ಹಗ್ಗ : ಬಡಕೋಲ್ ಕಿರ್ಗಟ್ಟು ಪಾಸಂ ಶುನಕವಿತತಿ ಹೇರಿಟ್ಟ ಕೂರಂಬುಗಳ್ ಕೆಯ್ವೊಡೆ ಬಲ್ ಪುಲ್ದಂಡೆ ಬೆಳ್ಪಾರ್ಪಟವೆರೆಬಲೆಗಳ್ ಸಾಳುವಂ ಕೂಳೆಗಾಳಂ ಗಿಡುಗಂ ಬಲ್ಪಿಂಡಿಯೊಳ್ ದೀಹವ ಪುಲಿ ನಿಶಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದುದುದ್ಯತ್‌ಕಿರಾತಪ್ರಜಾತಂ (ಗಿಲ್. ೦-೭೯). [ಪುಲ್ + ದಂಡೆ$_1$]

**ಪುಲ್ದೇಗುಲ, ಪುಲುದೇಗುಲ (ನಾ).** ಹುಲ್ಲಿನ ಛಾವಣಿಯಿರುವ ದೇವಾಲಯ : ಆಗಲೊಂದು ಪುಲ್ದೇಗುಲಮನವರವಸರವಸರದಿಂ ರಚಿಯಿಸಿ ಬಳ್ಳಮನೊಂದಂ ತಂದವಾಱುಖಿವಾಗಿ ನಟ್ಟು ಕಾಡಲಗ್ರೊಂಚುಲ್ಗಳಿಂ ಪೂಜೆಗೆಯ್ದು ಲಿಂಗಮಿಾಯೆಡೆಲೊಳ್ನಿನ್ನ ಪುಣ್ಯದಿನಿರ್ದುದೆಂದು ಶೆಟ್ಟಿಯುಂ . . . ಒಳಗಣ್ಗೆ ಪುಗಿಸಲೊಡನೆ (ವೃಷಂ. ೬-೯ ವ). **ಪುಲುದೇಗುಲ :** ಶಿವಲಿಂಗದರ್ಶನನಿಯತಿ ತಪ್ಪಿದೊಡೆ ಜೀವವಂ ತಾಂ ತ್ಯಜಿಸುವಂ ಗಡ ಭಾವನೆಂದತಿಕುಟಿಲಚಿತ್ತದ ಗಾವಿಲರು ಪುಲುದೇಗುಲವನೊಂದಂ ರಚಿಸಿ (ಬಸಪು. ೯-೬). [ಪುಲ್ + ದೇಗುಲ]

**ಪುಲ್ದೊಂದೆ, ಪುಲುದೊಂದೆ (ನಾ).** ಹುಲ್ಲಿನ ಸಿವುಡಿನಿಂದ ಮಾಡಿದ ಪಂಜು,—ಸೂಟೆ : ಸುಡುವ ಮುಳಲ ರಾಸಿ ಕಾಸುವಂಬಲಿಯೆಣ್ಣೆಗೊಡ ಸುಣ್ಣವರಲ ಕೊಪ್ಪರಿಗೆ . . . ಪುಲ್ದೊಂದೆ ಬಿಡದೆಸೆದವು ದುರ್ಗದೊಳಗೆ (ಕುಠಾಸಾಂ. ೯೨-೩೮); ಬಿಸಿಯೆಣ್ಣೆಮರವಿಗಳ ಪುದಿದ ಪುಲ್ದೊಂದೆಗಳ ತರತರ ದೊರಿಸಿರ್ದ ಬಲ್ಗೊಲೆಯ ಡೆಂಕಣಿಯ . . . ಮೊತ್ತಂಗಳಾಳ್ವೇರಿಯೊಳ್ ಪಸರಿಸಿದುವು (ಕಿಪು. ೯೨-೦೦). **ಪುಲುದೊಂದೆ :** ತೊಲೆ ಪಂದಿ ಪೊಟ್ಟೆಟ್ಟೆ ಭಂಡಿ ಡೆಂಕಣಿ ಪಂದಿದಲೆ ಭೀಮುಗದೆ ಬಿಡದುರಿವ ಪುಲುದೊಂದೆ ಪುರಿದ ಮುಳಲುಂಗಳಿಂದೊಳಗಣ ಕಲಿಗಳಳುಕದೆ ಕಾದಿದರು (ಕುಠಾಸಾಂ. ೯೫-೬). [ಪುಲ್ + ದೊಂದೆ]

**ಪುಲ್ಪಡಿ, ಪುಲ್ಪದಿ (ನಾ).** ಹುಲ್ಲುಗಾವಲು : ಕೊರಮಂಗಲ ಕಱ ಪಳ್ಳಿಯಿಂ ಪುಲ್ಪಡಿಯಿನ್ ಪಡುವಾಯೊಳ್ಪೆ (ಎಕ್ರಂ. ೦೯೩೯. ೬೦-೦೦೦; 799); ಆನೆದಲೊಗೆಱಿವ ಪುಲ್ಪಡಿಯೇ ಎಬಗಲ್ಲೇ ಪುಲಿಗಾಣದ ಗೆಱ

ಮುಕೂಡಲ್ ತತಃ ಪೂರ್ವ್ವತಃ ನಿಡುವಿಳಿಂಕ್ಕೆ × × ದವಿನ ಪುಲ್ಪಡಿಯೇ ಕನ್ನಗಾಱಗಲ್ಲೇ (ಇಆ. XII, ೦೬-೨೦; 813). **ಪುಲ್ಪದಿ :** ಮೂಡಾಯ್ತು ದುವುಕಿಯ ಪೇರೊಬ್ಬ್ಪಿ ತೆಜಸ್ಕಯ್ತ್ ಕಂಬಳ್ಳಂ ಪಡುವಾಯ್ತ್ಸವಣಱಿವುಂ ಪುಲ್ಪದಿಯುಂ (ಎಕ. IX. ನೆಲಮಂ. ೬೦-೭೨; 802).

[ಪುಲ್ + ಪಡಿ$_0$ (ಶ ← ತವಿ. ಪಟಿ=ಭೂಮಿ)]

**ಪುಲ್ಪದಿ** 'ಪುಲ್ಪಡಿ' ನೋ.

**ಪುಲ್ಪಾಸು** (ನಾ). ಹುಲ್ಲಿನ ಹಾಸುಗೆ; ದರ್ಭಶಯನ : ಭರತನಂ ಪುಲ್ಪಾಸಿನೊಳ್ ಬಿಟ್ಟು ಗುರುಪಾದಕೆರಗಿ ಮಂತ್ರಿಗೆ ಮೆಚ್ಚನುಚ್ಚರಿಸಿ (ಶರಥ. ೫೦೩). [ಪುಲ್ + ಪಾಸು$_2$]

**ಪುಲ್ಪೊದಱು, ಹುಲುವೊದಱು** (ನಾ). ಹುಲ್ಲಿನ ಪೊದೆ: ತರುತತಿ ಬಳ್ಳಿ ಪುಲ್ಪೊದಱು ಪಕ್ಕಿ ಮೃಗಂ ಫಣಿ ಜೀನ್ ಮೃಗವ್ರಂ . . . ಕಿನ್ನರ ಮಿಥುನಾಳಿಗಳ್ ವಿಷಯಮಪ್ಪಿನೆ ತೀರ್ವುದು ಶೈಲವರ್ಣನಂ (ಸೂಕ್ತಿಸು. ೩-೦). **ಹುಲುವೊದಱು :** ಹೊಲಮೇರೆಗಳೊಳುಬ್ಬರದ ಹುಲುವೊದಱುಗಳೊಳಗಲಕಿ ಹರಿದು ಹೋರಟಿಗುಟ್ಟಿದನು ಹೊಮ್ಮೞಿಯು ಬೆನ್ನಿನಲಿ (ಕೊರಲಾ. ೩-೬-೫೭). [ಪುಲ್ + ಪೊದಱು (<ಪೊದಱ್)]

**ಪುಲ್ಪೊಱೆ** 'ಪುಲ್ವೊಱೆ' ನೋ.

**ಪುಲ್ಬಂಟ** (ನಾ). ಕ್ಷುದ್ರನಾದ ಯೋಧ; ತೀರ ಸಾಮಾನ್ಯನಾದ ಸೈನಿಕ: ಪುಲ್ಬಂಟನಂ ನುಱಿ ಬಲ್ಬಂಟನಂ ಬಿಡುವ ಪಗೆಗಾಱನುಮಂ . . . ತಣ್ಪಂ ಬಿಟ್ಟು ಬಿಸಿಲಂ ಕಾಯ್ವ ಪಿತ್ತಾಧಿಕನುಮಂ ಪೋಲ್ವೆಂ (ಧರ್ಮಾಮೃ. ೬-೫೨). [ಪುಲ್ + ಬಂಟ$_1$]

**ಪುಲ್ಬಗೆ** 'ಪುಲ್ವಗೆ' ನೋ.

**ಪುಲ್ಮನೆ** 'ಪುಲ್ವನೆ' ನೋ.

**ಪುಲ್ಮರುಳ್** (ನಾ). ಕ್ಷುದ್ರ ಪಿಶಾಚಿ; ಕ್ಷುಲ್ಲಕವಾದ ಭೂತ : ಸೀಯೆ ತಲೆ ಬೇಯೆ ಮೆಯ್ ಮುಲ್ವಾಯೆ ಕರಂ ಪಸಿವ ಪುಲ್ಮರುಳ್ ಪಿಱಿಕಿನಿಗಳ್ ಬೆಯುತ್ತುಮಿರ್ಪ ಪೆಣನಂ ನಾಯುಗಿವಂತುಗಿದು ತಿಂದುವು (ಕಾಕ್ಯಸಾ. ೫೩೭ ಪೂತ್ರಳ); ಆ ಮರುಳನೊ . . . ಸೀಂ ಮರುಳೆಯೊ ಪೇಟ ಪೇಟದೊಡೆ ಪೋಗದಿರೀಶ್ವರನಾಣೆಯೆಂದು ಪುಲ್ಮರುಳಿನಿಸಾನುಮಂ ತಗೆದು ಕಾಡಿಮದಲ್ಲಿ ಫಣೀಂದ್ರಕೇತುವು (ಕಂಕಭಾ. ೦೩-೫೫); ಮತುಳ್ಗಳ ಮೇಳವಲಿ ಪೆರ್ಮರುಳೊಂದಿರುತ್ತಿರಲ್ ಕಂಡು ಭಯಭಕ್ತಿಯಿಂ ಚರಣಕೆಱಗಿದುದೊಂದು ಪುಲ್ಮರುಳ್ ಶಿವನೆಂದು (ಶಬಕ. ೪೦-೨೭).

[ಪುಲ್ + ಮರುಳ್$_3$]

**ಪುಲ್ಮಾನಸ** 'ಪುಲ್ಮಾನಿಸ' ನೋ.

**ಪುಲ್ಮಾನಸಿಗ** (ನಾ). ಕ್ಷುದ್ರನಾದ ಮನುಷ್ಯ; ಹುಲುಮನುಜ : ರಾವಣನೆಂಬೊಂ ಪುಲ್ಮಾನಸಿಗನಪರಿಮಿತಬಲಂಬೆರಸು ಎಮ್ಮ ಮೇಲೆ ಬಂದಪ್ಪನೆಂದು ಕೇಳ್ದಂ (ಪಾವುಚ. ೩೦೦). [ಪುಲ್ + ಮಾನಸಿಗ]

**ಪುಲ್ಮಿಗ** (ನಾ). ೧. ಹುಲ್ಲು ತಿಂದು ಬದುಕುವ ಪ್ರಾಣಿ; ಕ್ಷುದ್ರವಾದ ಪ್ರಾಣಿ: ಮೇಪಿಂ ಪುಲ್ಮಿಗಮುಂ ಬೆಳ್ಮಿಗಮುಂ ಪಲ್ಮಿಗಮುಂ ತಣಿವುವೆಯ್ದೆ ಕಾಪಿನ ಪೊಲದೊಳ್ (ಅನಂಪು. ೦೦-೩೯). ೨. ಜಿಂಕೆ; ಹರಿಣ : ಮಹಾದಂತಿಗಳಂ ಬೆಗಳ್ಗೊಳಿಪ ಸಿಂಹಕೆ ಲಕ್ಷ್ಯಮೆ ಪುಲ್ಮಿಗಂ (ರಾಜಶೇ. ೫-೦೩೨). [ಪುಲ್ + ಮಿಗ]

**ಪುಲ್ಮೃಗ, ಪುಲುಮೃಗ, ಹುಲುಮೃಗ** (ನಾ). ೧. =ಪುಲ್ಮಿಗ ೧ : ಪುಲ್ಮೃಗಮುಂ ಬೆಳ್ಮೃಗಮುಂ ಬಲ್ಮೃಗಮುಂ ಶಿಲೆಗುಹೆಯೊಳಾದೊಡಂ ಪಿಡಿದಪ್ಪೆಂ (ಸೂಕ್ತಿಸು ೩-೯೦). **ಪುಲುಮೃಗ :** ೧. ಪಲುಮೃಗ ಬೆಳ್ಮೃಗ ಪುಲುಮೃಗ ಬಂದವು ನಲವಿಂದ ಕಾಪಿನ ಪೊಲಕೆ (ಅನಂತ. ೦೭-೯). **ಹುಲುಮೃಗ :** ೨. = ಪುಲ್ಮಿಗ ೨ : ಹುಲುಮೃಗವ ಪಿಡಿವುಜ್ಜುಗದಿ ಪೆರ್ಬುಲಿ ಹುದುಗುವೊಲು ದುರ್ಜನಂ ಮಿಗೆ ಹುದುಗಿಕೊಂಡಿಹ (ಶಂಕರಾ. ೦೭-೪೭). [ಪುಲ್ + ಮೃಗ]

**ಪುಲ್ಲ** (ಗು). ೧. ಅರಳಿದ ; ವಿಕಸಿತವಾದ: (?). (ನಾ). ೨. ಹೂವು ; ಪುಷ್ಪ : ಕುಳ್ಳಿರ್ದು ಬೆಳಗ ನೋಡುತ್ತಲ್ಲಾಡದೆ ಮುಗಿವ ಕೆಯ್ಗಳಂ ನೊಸಲಲಿಡುತ್ತಲ್ಲಿಯೆ ನಡುವುಂ ಬಾಟಿಯ ಪುಲ್ಲದವೊಲಿಟಿಯ ದಿರ್ದೊಡಱಿಯಱದಿಂಗಳ್ (ಕಣಾರ.೩೬೦); ಇಱಿಭಕ್ತನು ದಿವ್ಯನೆ ನಾರುವಂ ಕೊಂದು ಬಱಿದಿರ್ದಪುದು ಕರಂಡದ ಪುಲ್ಲವಂ ಚೆಲ್ಲಿ ಕೊಱಚಾಡು ತಿರ್ಪ ಗಜಮುಂ ದ್ರೋಹಿಯುಂ (ಅಂಗಪು. ೨೪-೨೪). 'ಪುಲ್ಲಂಬ' ಪರಾ. [ < ಸಂ. ಫುಲ್ಲ ]

**ಪುಲ್ಲಂಗ** (ನಾ). ಒಂದು ಬಗೆಯ ಔಷಧೀಸಸ್ಯ : ಕಳ್ಳಂಗಡಲೆ, ಬೋಳಂಗಡಲೆ, ನಾಗಮುತ್ತು, ಪುಲ್ಲಂಗ . . . ಮರದರಿಶಿನ ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಪಂಚಾಹಿಕಜ್ವರ ಗುಣಮಕ್ಕುಂ (ಸಕಶ್ಯ. ೦೦೭). [?]

**ಪುಲ್ಲಂಪುರಚಿ** 'ಪುಳ್ಳಂಪುಣಿಸೆ' ನೋ.

**ಪುಲ್ಲಂಪುರುಚಿ** 'ಪುಳ್ಳಂಪುಣಿಸೆ' ನೋ.

**ಪುಲ್ಲಂಬ** (ನಾ). ಹೂವಿನ ಬಾಣಗಳುಳ್ಳವನು ; ಮನ್ಮಥ : ಮೆಲ್ಲನೆ ಕಳಹುಸ ತುಗೊಳವನಿಳಿವಂತೆ ಪುಲ್ಲಂಬನರಸಿಯ್ಕೆತಂದೊಂದು ಮೆಟ್ಟಿಗೆಯೊಳಲ್ಲಿ ಮುಡಿಸಿ (ಶವಶೋ. ೬-೩೭). [ಪುಲ್ಲ + ಅಂಬು$_2$ + —ಅ$_2$]

**ಪುಲ್ಲಗ** (ನಾ). ಒಂದು ಮನೆತನದ ಹೆಸರು : ಜ್ಯೇಷ್ಠದ ಪುಣ್ಣಮೆ ಆದಿತ್ಯವಾರದನ್ದು ಮಿದಿಯ ಪುಲ್ಲಗರಣ್ಣಮಸೆಟ್ಟಿಯ ಮಗಂ ಪೆದ್ದಣ್ಣಂ ತುಱುಗೊಳಳ್ ಕಾದಿ ಸತ್ತು ದೇವಲೋಕಕ್ಕ ಸನ್ದಂ (ಎಕ. VIII, ಸೊರಬ. ೩೯೭-೫ ; 1004). [?]

**ಪುಲ್ಲಡಕಿ** (ನಾ). ಹುಲ್ಲು ಹೊರುವವನು; ಹುಲ್ಲುಹೊರೆ ತಂದು ಉಪಜೀವನ ಸಾಗಿಸುವವನು : ರಾಜಕುಮಾರರ ಕೆಳೆಯಂ ಬಿಟ್ಟು ಪುಲ್ಲಡಕಿಯೊಳ್ ಕೆಳೆಗೊಳ್ವಂತೆ . . . ಸದ್ಧರ್ಮಮಂ ಬಿಟ್ಟು ಮಿಥ್ಯಾತ್ವ ಪ್ರೀತನಾಗಿರ್ಪುದುಂ (ಧರ್ಮಾಮೃ. ೦೦-೦೭೨).

[ಪುಲ್ + ಅಡಕು$_1$ (<ಅಡುಕು) + —ಇ$_3$]

**ಪುಲ್ಲಡಿಗ** (ನಾ). (?) : ಪುಲ್ಲಡಿಗ[ಪಾಠಾಂ.ಗೆ] ರೇಚಯ್ಯ ಮಲ್ಲಣ ಮೊಲ್ಲೆಯರ ಬೊಮ್ಮಯ್ಯ ಮಲ್ಲಣ ತಲ್ಲಿಗೇಶನ ಮಸಣಹುಳ್ಳಿಯ ಮಾರತಂದೆಗಳು (ಶಾಸಂತ. ೯-೭೯). [< ಪುಲ್ಲವಡಿಗ ?]

**ಪುಲ್ಲತ್ತಿ** (ನಾ). ಒಂದು ಊರಿನ ಹೆಸರು; ಶ ಬೆಳಗಾವಿಜಿಲ್ಲೆಯ ಈಗಿನ ಹುಲ್ಲತ್ತಿ : ಮುದುಗೆಱೆಯ ಪೂರ್ವ್ವಶೃಂಖ(ಗ)ದ ಪುಲ್ಲತ್ತಿವ(ಯ) (ಇಆ. VIII, ೨೦೪-೩೮; 10ನೆಯ ಶತ ?). [?]

**ಪುಲ್ಲಪ್ಪ** (ನಾ). ಒಬ್ಬಾತನ ಹೆಸರು : ಶ್ರೀ ಪುಲ್ಲಪ್ಪನ್ ಶ್ರೀ (?)ಮಾ(?)ಣದೇವಃಕ(ಕ)ಟಿತಪ್ರತಿಮಾ (ಇಆ. X, ೦೬೮ ; ಸು. 8ನೆಯ ಶತ).

[ ? + ಅಪ್ಪ$_1$ ]

**ಪುಲ್ಲಮಂಗಲ** (ನಾ). ಒಂದು ಊರಿನ ಹೆಸರು : × × × ವರಸರು × × × ಕಡುಕಲ್ಲ ಪುಲ್ಲಮಂಗಲ ತೆಱಿದಾರ ಪುನ್ನಾಡನಾಳೆ (ಎಕ. IX, ದೇವನ. ೪೩ ೮; ಸು. ೯೦೦ ?). [ಪುಲ್ಲ + ಮಂಗಲ]

**ಪುಲ್ಲವಟುಕ** (ನಾ). ಹೂವನ್ನು ಮಾರುವ ಹುಡುಗ; ಹೂವಾಡಿಗ : ಸುರಪತಿಯೆಱಿವಸನರ್ಹತ್‌ಪರಮೇಶ್ವರಪಾದಸೇವೆ ಪಾಲಾ ಅಮರ್ದು ಪಿರಿದು ಗಡಿದೆನಿಸಿ ತಂದರ್ ಸುರವಟ್ಟುಕರ್ ಪುಲ್ಲವಟುಕರಂತಿರೆ ಪೂವಂ (ಅಜಪು. ೫-೭೭). [ಪುಲ್ಲ + ವಟುಕ]

**ಪುಲ್ಲವಡ** (ನಾ). ಹೂವು ಮಾರುವವನು; ಹೂವಾಡಿಗ : ಕಱಿಗೊರಲನ ಪುಲ್ಲವಡ[ಪಾಠಾಂ. ಪುಲ್ಲವಳ, ಪುವ್ವಾಳ]ರೊಳು ವನಜನೆಂಬವನೊರ್ವನಾವನು (ಸೋಮಸೋ. ೦೨-೨೦). [ಪುಲ್ಲ + — ವಡ$_4$]

**ಪುಲ್ಲವಡಿಕಾಱ** (ನಾ). = ಪುಲ್ಲವಡ : "ಮಲರ್ವಡಿಗನೆನಲ್ ಪುಲ್ಲವಡ

ಕಾಜಿ ಪೂವಳನೆಂದು ಪೂವಡಿಗನೆಂದೆನಿಕ್ಕುಂ" (ಕಬ್ಬಿಗ. ೩೪); ಇರಿಸಿದೆನ ಪಳಡಿಯುಲಿ ಜಾಜಿಯು ಚೌಸರವನೆಂದನು ಪುಲ್ಲವಡಕಾ[ಪಾಠಾಂ.ವಡಿಗಾ, ಪೂವೆಡಕಾ, ಶರಕಾ]ಟಿ (ಸೂಪಶಾ. ೦೨-೬೨). [ಪುಲ್ಲವಡ + — ಕಾಜಿ]

**ಪುಲ್ಲವಡಿಗ** (ನಾ). = ಪುಲ್ಲವಡ : "ಪೂವಡಿಗ ಪುಲ್ಲವಡಿಗಂ" (ಶಬ್ದಸಂ. ೨೬೬); ಕುಂಚವಡಿಗಂ, ಪುಲ್ಲವಡಿಗಂ (ಶಮದ. ೦೯೬ ಪ್ರಯೋ); ಕುಸುಮಪುರದ ಪುಲ್ಲವಡಿಗಂ ಕುಸುಮದತ್ತನೆಂಬವಂ . . . ಮಂದಸಮಂ ಕೊಂಡು ಬಂದು ನಿಜವಧುವಪ್ಪ ಕುಸುಮಾವಳಿಗೆ ಕುಡುವುದುಂ (ಪುಣ್ಯಾಸ್ರ. ೨-೩೦ ವ).

[ಪುಲ್ಲ + — ವಡಿಗ]

**ಪುಲ್ಲವಡಿಗಿತಿ** (ನಾ). ಹೂವಾಡಗಿತ್ತಿ, ಮಾಲೆಗಾತಿ : ಪುಲ್ಲವಡಿಗಿತಿಯರ ಪಸರದಿನಂದಂಬಡೆದ ಸೂಳೆಗೇರಿಯು ಕೆಲದಲ್ಲಿ ಗರುವರ ಗೊಟ್ಟಿಗಾಜರ . . . ಆಗರವೆನೆ ಪೆಂಪುಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಅನ್ನಶಾ. ೪೦). [ಪುಲ್ಲವಡಿಗ + — ಇತಿ$_1$ (< — ಇತ್ತಿ)]

**ಪುಲ್ಲವಡಿತಿ** (ನಾ). = ಪುಲ್ಲವಡಿಗಿತಿ : ಬಂದುಗೆಯೊಳ್ ನಯನದ್ಯುತಿ ಬಂದುಗೆ ಮಲ್ಲಿಗೆಯ ಪೂಗಳೆಂದೀವರ್ ಕಂಪಂ ದಳಮೆಚ್ಚಿಪರಳಿಗೀವಂ ದಳವಡೆ ಪುಲ್ಲವಡಿತಿಯರ್ ಸೊಗಯಿಸುವರ್ (ಜಗು. ೨-೨೭).

[ಪುಲ್ಲವಡ + — ಇತಿ$_1$ (< — ಇತ್ತಿ)]

**ಪುಲ್ಲವಡುಗ** (ನಾ). = ಪುಲ್ಲವಡ : ಪುಲ್ಲವಡುಗರೊಕ್ಕಲುಂ ಕಲುಕುಟಿಗರೊಕ್ಕಲುಂ ಸರ್ವ್ವಮಾನ್ಯವಾಗಿ ಬಿಟ್ಟರು (ಸೌಇಇ. IX — i, ೦೦೬-೫೯; ಸು. 1057); ಕಂಬೆ ಸ್ವರದೇವರ ಪುಲ್ಲವಡುಗ ನಾಗಣಂಗೆ ಮತ್ತ ೩ [॥] (ಸೌಇಇ. IX — i, ೦೫೫-೦೯; ಸು. 1086).

[☞ ಇದು 'ಪುಲ್ಲವಡಿಗ' ಎಂಬುದರ ಅಪಲಿಖಿತವಿರಬಹುದು]

**ಪುಲ್ಲವಿಸು** (ಕ್ರಿ). ಉತ್ಸಾಹಗೊಳ್ಳು (?): ನಲ್ಲ ಶ್ರೀಜಿಕದೇವನಾಥ ನಿನಗೊಲಿದೆನ್ನ ಮೆಲ್ಲೆರ್ದೆಯು ಹರುಷವೀ ಮೇರೆ ಎಂದು ಸೊಲ್ಲುವವಳೊಡನೊಡನೆ ಪುಲ್ಲವಿಸಿ (ಜಿಕಸ. ೯೭). [ಪುಲ್ಲ + — ಇಸು$_3$]

**ಪುಲ್ಲಶರ** (ನಾ). ಪುಷ್ಪಬಾಣ; ಮನ್ಮಥ : ಪುಲ್ಲಶರನಂಜಿ ಕರ್ಬಿನ ಬಿಲ್ಲಂ ತಲೆಚಮರಿವೆರಸು ಬಿಸುಟಂತೆ ತಪೋವಲ್ಲಭನ ಕೆಲದ ವೇತ್ರಲತೋಲ್ಲಸಿತ ಕಲಾಪಗುಚ್ಛವೆಸೆದುದು ತುಚ್ಛಂ (ಅಪಂಪು. ೩-೯೬). [< ಸಂ. ಪುಲ್ಲಶರ]

**ಪುಲ್ಲಶರಹರ** (ನಾ). ಮನ್ಮಥನನ್ನು ನಾಶ ಮಾಡಿದವನು; ಶಿವ : ಬಲ್ಲವರು . . . ಪುಲ್ಲಶರಹರಲಿಂಗವರ್ಚಿಪರು (ನವಮೋ. ೨-೫೯).

[< ಸಂ. ಪುಲ್ಲಶರಹರ]

**ಪುಲ್ಲಸೊಜ್ಜಿಗೆ** (ನಾ). ನೆನೆದು ಅರಳಿದ ರವೆ : ಬಿಸನೀರನೆಚಿದು ಕಿವಿಚಿದ ಪುಲ್ಲ[ಪಾಠಾಂ. ಪುಲ್ಲ, ಪುಟ್ಟ] ಸೊಜ್ಜಿಗೆಯು ರಸದೊಳಗೆ ಅರೆದಕ್ಕಿಯ ಸಹಂಗೂಡಿ (ಸೂಪಶಾ. ೦-೩೭). [ಪುಲ್ಲ + ಸೊಜ್ಜಿಗೆ (< ಸಜ್ಜಿಗೆ)]

**ಪುಲ್ಲಾಯಟ್** (ನಾ). ಒಂದು ಊರಿನ ಹೆಸರು (?): ಪ್ರಾಚೀದೆಸೆ ಪನೆದುಗ್ಗೆಯಿನ್ನೂಡಾಯ್ ಕಡೆ ಆಗ್ನೇಯದೆಸೆ ಪುಲ್ಲಾಯಟ್‌ದಕ್ಷಿಣದೆಸೆತಳ (?) ಅಣ್ಣಾಯ್ ನೈರಿತ್ಯದೆಸೆ ನೆಲಮುಟ್ಟುಗೂರ್ (ಎಕ. X (8). ಮುಳಬಾ. ೩೨೬-೩೦; ಸು. 650; ಪ್ರೈಅಂ. ೦೯೧೭, ೯-೩೦ ನೋ). [?]

**ಪುಲ್ಲಿ** (ನಾ). ಒಂದು ಬಗೆಯ ಬಟ್ಟೆ : ಅಲ್ಲಲ್ಲಿ ಕಟ್ಟಿದ ಪುಲ್ಲಿಯ ಪಟ್ಟೆಗಳ ಮೇಲೆ ಮೇಘವಣ್ಣಿಗೆಯ ಚೌಕದ ವಿಳಾಸದ ಕಥಾಯಿಯ ಸುಚ್ಚವಿಯನೀವ ಪಚ್ಚೆಯ ಪಟ್ಟೆಗಳ . . . ಸಕಲಸೌಂದರ್ಯಮನೊಳಕೊಂಡ ಮೇಲ್ಕಟ್ಟಿನ ಬೆರಕೆವೆಳಗು ಮಂಟಪದೊಳಗಂ ಪೊಜಗಂ ತೆಕ್ಕನೆ ಶೀವೆ (ಗಿಂಕ. ೦೦-೨೬ ವ); ತೋರಮುತ್ತುಗಳ ಹಾರಮುರಸ್ಥಳದೊಳ್ ಪ್ರಕಾಶಮಂ ಪಸರಿಸೆ ಪಂಚವಣ್ಣಿಗೆಯ ಪುಲ್ಲಿಯ ಚಲ್ಲಣದಿಂ ಕಟೀತಟಂ ನಸುಸಗೆ (ಮಹಾಪೇ. ೭-೭೦); ಪಳಿ ಪಟ್ಟೆ ಪುಲ್ಲಿ ಚೀನಾಂಬರ ದಸರಿ ಗಬ್ಬುಳಗಂದಿ ಮೇಘವಣ್ಣಿಗೆಯಾ ತಲೆಯ ಮೇಲೆಲ್ಲರ್ಗೆ ಕಟಿದರು ವಸ್ತ್ರದ ಮಳೆ ಶಾನೆ ಕಜಿದುದೆಂಬಂತೆ (ಶರಶ. ೭೩-೦೦೩). [?]

**ಪುಲ್ಲಿಊರ್** (ನಾ). ಒಂದು ಊರಿನ ಹೆಸರು : ಕೊರಿಕುನ್ದಭಾಗೇ ಪುಲ್ಲಿ ಊರನ್ನಾಮ ಗ್ರಾಮೇ ಮಹಾತಟಾಕಸ್ಯಾಧಸ್ತಾತ್ ಮೂಲಾಭ್ಯಾಶೇ ಶ್ರವಣಕೇದಾರಸಹಿತಂ ಸಪ್ತಕಣ್ಡುಕಾವಾಪಮಾತ್ರಂ ಕ್ಷೇತ್ರಂ . . . ಪಾನೀಯಪಾತಪುರಸ್ಸರನ್ದತ್ತಂ (ಪ್ರೈಅಂ. ೦೯೩೬, ೦-೨೫; ಸು. 570).

[ಪುಲ್ಲಿ$_0$ + ಊರ್]

**ಪುಲ್ಲಿಂಗ** (ನಾ). [ವ್ಯಾಕ] ಪುರುಷರನ್ನು ಸೂಚಿಸುವ ಲಿಂಗ; ಪುರುಷವಾಚಕಲಿಂಗ : ಪುರುಷರೆ ಪುಲ್ಲಿಂಗ ಸ್ತ್ರೀಯರೆ ತಾಂ ಸ್ತ್ರೀಲಿಂಗ ಮುಟಿದುವೆಲ್ಲಂ ನಪ್ಪಾಗಿರೆ ಸಲ್ಗುಂ ಕನ್ನಡದೊಳ್ (ಶಮದ. ೯೦); ಗಂಡಸರನ್ನು ಹೇಳುವ ಪದಗಳಿಗೆ ಪುಲ್ಲಿಂಗವೆಂದೂ ಹೆಂಗಸರನ್ನು ಹೇಳುವ ಪದಗಳಿಗೆ ಸ್ತ್ರೀಲಿಂಗವೆಂದೂ ಹೆಸರು (ಮಕ್ಕಮ. ೩೦). [< ಸಂ. ಪುಂಲಿಂಗ]

**ಪುಲ್ಲಿಕೆ** 'ಪುಲ್ಲಿಗೆ$_2$' ನೋ.

**ಪುಲ್ಲಿಗೆ$_1$** (ನಾ). ೧. ಊಟದ ಎಲೆ : ರಸಂ ಬಂದೊಡೆ ತಂಬುಲಮಂ ಎಳ್ ಬಂದೊಡೆ ಕೂದಳಿಯುಂ ಬೆಳಸು ಬಂದೊಡೆ ನೆಲನಂ ಸಾಲಂ ಬಂದೊಡೆ ಒಟ್ಟೆ ಗುತ್ತನಂ ಕೂಟನುಂಡೊಡೆ ಪುಲ್ಲಿಗೆಯುಂ[ಪಾಠಾಂ. ಪತ್ತಳೆಯುಂ] ಬಿಡುವಂತೆ ತನ್ನ ಕಾರ್ಯಂ ತೀರ್ದ ಬಟಿಕ್ಕೆ ಕಡೆಯೊಳ್ ಶರೀರಮುಮಂ ಪರಿಗ್ರಹಮುಮಂ ತ್ರಿಶುದ್ಧಿಯಿಂ ಬಿಟ್ಟು ಪರಿತ್ಯೇದಿಯಪ್ಪುದು (ಧರ್ಮಾಮೃ. ೦೯-೦೩೪). ೨. ಎಲೆಯ ಹೊದಿಕೆ,—ಮುಸುಕು : ನಾರು ಸುತ್ತಿ ಪಾದಳದ ತಳಿರ ಪುಲ್ಲಿಗೆಗಳಂ ಹೊದ್ದಿಸಿ ನೆಲದೊಳಗೆ ಪುಟವಿಕ್ಕಿ ಬಿಸಿಯಂ ಮಾಳ್ಪುದು (ಸೂಪಶಾ. ೫-೯೭); ನೆಲದ ಸಿಚಿಯಿಂದ ಬೆಂದ ಕಾಯ ತೆಗೆದು ಪುದಿದೆಲೆಯ ಪುಲ್ಲಿಗೆಯುಮಂ ಬಿಸುಟು (ಸೂಪಶಾ. ೫-೯೬). [← ತೆಲು. ಪುಲ್ಲಿಯ, ಪುಲ್ಲೆಯ]

**ಪುಲ್ಲಿಗೆ$_2$**, **ಪುಲ್ಲಿಕೆ** (ನಾ). ಒಂದು ಬಗೆಯ ಸಿಹಿಭಕ್ಷ್ಯ; ಹೋಳಿಗೆ : "ಪುಲ್ಲಿಗೆ—ಪೋಲಿಕಾ = ಒಂದು ಭಕ್ಷ್ಯ" (ಕರ್ಣಕೋ. ೨೭); ಪುಲ್ಲಿಗೆಯ ತತ್ಸವಿಯ ಮಂಡಿಗೆಯಲ್ಲಿ ನವಘೃತಸೂಪದಂಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತಪಟುನಿಕರ (ಕುವ್ಯಾಕ. ೦೫-೭); ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸರೊಳ್ಳೆಯ ಬಹಳುಪ್ಪುಗಾಯಿ ಘಲ್ಲಿಸಿ ಗಟ್ಟಿಯ ಕಟ್ಟಿದ ಓರಿಯಾರು ಪುಲ್ಲಿಗೆಗಳು ತರತರಿಸೆ ರಸರಸಾಯನವ ಚಪ್ಪರಿದು ನೀವರ್ಜಗೆ ಹಸಗೆಯ್ದು ರಲೀಂಟಿದರು (ಪೋಹತ. ೩-೫೭). **ಪುಲ್ಲಿಕೆ** : ತಾರವಣ್ಣದ ಬಟುವ ಕೀರವಣ್ಣದ ಕಟು ನೀರಜದ ಕೈತೊಡವ ಹೂರಣದ ಪ[ಪು]ಲ್ಲಿಕೆಯನಾರೋಗಣೆಗೆ ನೀಡಲು (ಲಿಂಗಪು. ೬-೯). 'ಪೋಳಿಗೆ$_1$' ಪರಾ.

[< ಸಂ. ಪೂಲಿಕಾ]

**ಪುಲ್ಲಿಗೆ$_3$** (ನಾ). = ಪುಲ್ಲಿ : ಎರಲ್ವಟ್ಟೆಗೆತ್ತಿ ಸುಟ್ಟಿಸಿದ ಕೆಯ್ಯ ಸುಯ್ಯಭರದೊಳ್ ಸುಚಿದು ಸೂಸುವ ಪುಷ್ಕರದ ತುಂತುರಿಂ ತುಜುಗಿ ಸುತ್ತಿದ ಪಂಚಾಯುಧದ ಪುಲ್ಲಿಗೆಯ ತೊಂಗಲ ಸೆಜಂಗು ನಾಂದು ಪಿನೆಲೆಆದೆ ಟಲ್ಚಿದ ವೇಣಿಯೊಳ್ಪೆಸೆದು . . . ಮೇಲೆ ಮೆಜಿಯಿಯುಂ (ಅಪಂಪು. ೨-೨೪ವ). [< ಪುಲ್ಲಿ]

**ಪುಲ್ಲಿದೊಂಗಲ್** (ನಾ). ಒಂದು ಬಗೆಯ ಕೊಡೆ; ಪುಲ್ಲಿಯೆಂಬ ಬಟ್ಟೆಯಿಂದ ಮಾಡಿದ ಛತ್ರಿ,—ಸತ್ತಿಗೆ : ಮತ್ತವರ್ಗವರ್ಗ ಪಿಡಿದ ಮೇಘಡಂಬರದ ಝಲ್ಲರಿಯ ಪ[ಪು]ಲ್ಲಿದೊಂಗಲ ಚೌಕಸತ್ತಿಗೆಯ ಕೊಡೆಯ ಗಡಣಂಗಳುಂ (ಚಂದ್ರಪು. ೭-೮೦ವ). [ಪುಲ್ಲಿ + ತೊಂಗಲ್]

**ಪುಲ್ಲಿಪಟ್ಟೆ**, **ಪುಲಿವಟ್ಟೆ** (ನಾ). = ಪುಲ್ಲಿ : ಮಕರತೋರಣ ಓರಣಂಗೊಂಡ ವಲ್ಲಲ್ಲಿ ಸುಕರಮೆನೆ ಪುಲ್ಲಿಪಟ್ಟೆಗಳಿ[ಶ.ಕಾಂ. ಪಲ್ಲಯಿಸಿ]ರ್ದವಲ್ಲಲ್ಲಿ ಪೊಸ್ನಿಂ ವಿವಾಹವೇದಿಕೆ ಸವೆದುದಂತಲ್ಲಿ (ಪೂಪಸ. ದೇ. ೦೬೪-೦೬); ಅಲ್ಲಲ್ಲಿ ಕಟ್ಟಿದ ಚಿತ್ರಪಟಗಳಿಂದ ಝಲ್ಲಿಗಳಿಂದ ರಾಜಿಸುವ ಪುಲ್ಲಿ[ಪಾಠಾಂ. ಲ್ಲೆ]ಪಟ್ಟೆಯ ನೇಜೆಯಿಂದಲದ ತಳುವಿಲ್ಲದೆ ಸಿಂಗರಿಸಿದರು (ರಾಪಂಪ. ೬-೮೪); ಪುಲ್ಲಿಪಟ್ಟೆಯೊಳು ಸಂಧ್ಯಾರಾಗದೊಳು ಕಾಗಿನಲ್ಲಿ ದುರುಂಗಿ ಪಟ್ಟೆಯೊಳು ಚಲ್ಲಣ . . . ಚಲ್ಲಕಾಸಿಬಿಯರಿಗೊಪ್ಪಿದುವು (ಭರತ. ೦೩-೯೯). **ಪುಲಿವಟ್ಟೆ** : ಜಲಧರ

ಬಣ್ಣದ ವರದೇವಾಂಗದ ಪುಲಿವಟ್ಟ[ಟ್ಟೆ]ಯ ಪಠ್ಠಾವಳಿ ಮಂಜಿಷ್ಟಿಯ (ಶ್ಬಾನಶಂ. ೬-೬೩). [ಪುಲ್ಲಿ + ಪಟ್ಟ]

**ಪುಲ್ಲಿವೆಟು** 'ಪುಲಿವೆಟ್ಟು' ನೋ.

**ಪುಲ್ಲಿವೇಟು** 'ಪುಲಿವೆಟ್ಟು' ನೋ.

**ಪುಲ್ಲು** 'ಪುಲ್' ನೋ.

**ಪುಲ್ಲುಂಗೂರ್** (ನಾ). ಒಂದು ಊರಿನ ಹೆಸರು ; ೩ ಇದು ಧಾರವಾಡ ಜಿಲ್ಲೆಯ ಈಗಿನ ಹುಲಗೂರು : ಮೂಡ ಬನ್ನಿಗಾವುಣ್ಣನ ಕೆಯಿ ತೆಂಕ ಪುಲ್ಲುಂಗೂರ ಬಟ್ಟೆ ಪಡುವ ಬಸದಿಯ ಕೆಯ್ಯು[೦] (ಇಅ. XVIII, ೩೯-೨೬ ; ೨೨೨). [? + ಊರ್]

**ಪುಲ್ಲುಣಿ** (ನಾ). ಒಂದು ಊರಿನ ಹೆಸರು : ಬ್ರಂಹ್ಮರಾಸಿಪಣ್ಡಿತರ್ಗ್ಗೆ . . . ಕೊಟ್ಟಂ ಪುಲ್ಲುಣಿಯ ಮರ್ಯಾದೆ ಸಿರಿಗೆರೆ ಪೊಸವೂರು ಸವಣೂರು ಕೆಱುಗೇರಿ ಇವು ಪೂರ್ವ್ವಮರ್ಯ್ಯಾದೆ (ಎಕ. XI, ದಾವಣ. ೧೧೪-೧೪ ; ೨೨೨). [?]

**ಪುಲ್ಲುರಿ** (ನಾ). ಹುಲ್ಲಿನ ಉರಿ,–ಜ್ವಾಲೆ : ನಾಡೊಳಗೆ ಮಿಸಸದೆಱೆಯಂ ಬೇಡಿಸುವಂ ಬೀರರರಸಿಯರವೆಸರಿಂ ಕೂಸಾಡಿಸಲೀಯಂ ಪು[ಶಾಕಾಂ. ಹು]ಲ್ಲುರಿಯಾಡಿಸುವಂ ತೇಜದುರಿಯಿನರಮಿಸಗಳಂ (ಅರ್ಜಚ. ೬-೩೦). [ಪುಲ್ + ಉರ್ಇ]

**ಪುಲ್ಲುಟ್ಟು** (ನಾ). ಒಂದು ಬಗೆಯ ತೆರಿಗೆ : ಪುಲ್ಲುಟ್ಟು ಬಾಲವಣವು ಮಾಯಿಬದೆಱೆಗಳುಮೆನ್ನಲದ ನೇಸಱ ಉಳ್ಳನೆಗ ಬಿಟ್ಟ ಇದು ಬಲ್ಲಹನ ದತ್ತಿ (ಸೌಇಇ. IX-i, ೩೪-೩ ; ೨ನೆಯ ಶಕ). [?]

**ಪುಲ್ಲೆ₁**, ಹುಲ್ಲೆ (ನಾ). ಚಿಗರೆ ; ಜಿಂಕೆ ; ಎರಳೆ : ಒಡನೆ ನೆರೆದರಸು ಮಕ್ಕಳ ನಿಡುಗಣ್ಗಳ ಬಳಗವೆಱಗೆ ತನ್ನಯ ಮೆಯ್ಯೊಳ್ ನಡೆ ಬಳಸಿ ಪಲರುಮಂಬಂ ತುಡೆ ನಡುವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ (ಕಂಕಥಾ. ೩-೩೦) ; ಪುಲ್ಲೆಯ ನೋಟದಂತೆ ಸಂಚಳನಾಗದೆ (ಧರ್ಮಾಮೃ. ೧೧-೩೭) ; ಪುಲ್ಲಂ ಕಚ್ಚಿದ ನರನಂ ಕೊಲ್ಲಂ ಭಟನಿವರ ಬಾಯೊಳಂ ಬಸಿಱೊಳಗಂ ಪುಲ್ಲೆ ಗಡ ಬಗೆವಡದಱಂ ಪುಲ್ಲೆಗಳೆನಿಸಿರ್ದುವಕ್ಕಟವನೇಕಚ್ಚು (ಬಂಹಂ. ೦೦-೬). **ಹುಲ್ಲೆ** : ಹುಲಿಯ ಬೆನ್ನಿನಲ್ಲಿ ಒಂದು ಹುಲ್ಲೆ ಹೋಗಿ ಮೇದು ಬಂದೆನೆಂದರೆ ಇದ ಕಂಡು ಬೆಱಗಾದೆ (ಅವಕಂ. ೬-೨೭) ; ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನೈ (ಕುಮಾಸ. ೦೪-೧೨೨) ; ನಂದನನ ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆಬಾಣ ತಾಗಿದ ಹುಲ್ಲೆಯಂತೆ (ಷೋಕಶ. ೪-೬೯).

**ಪುಲ್ಲೆಯ ಬಯಲ್**, **ಹುಲ್ಲೆಯ ಬಯಲ್** = ಜಿಂಕೆಗಳು ಓಡಾಡುವ ಪ್ರದೇಶ : ಜಿಡ್ಡುಳಿಗೆ ೭೦ ಱ ಬಳಿಯ ರಾಜಧಾನಿ ಬಳ್ಳಿಗಾವೆಯ ಪುಲ್ಲೆಯ ಬಯಲೊಳ್ ಭೇರುಣ್ಡಗಳೆಯೊಳ್ ಕೊಟ್ಟ ಗಟ್ಡೆ (ಎಕ. VII, ಶಿಕಾರಿ. ೦೨೦-೦೬; 1048) ; ಬಳ್ಳಿಗಾವೆಯ ತಳದ ಹುಲ್ಲೆಯ ಬಯಲೊಳ್ ಕಚ್ಚವಿಯ ಗಡಿಂಬದ ಗಳೆಯೊಳಳೆದು ಕೊಟ್ಟ ಗಟ್ಡೆ ಮತ್ತರೆರಡು (ಮೈಆಅ. ೦೯೨೯, ೬೩-೬ ; 1024). **ಪುಲ್ಲೆಯ ಮೊನೆ** = **ಪುಲ್ಲೆಯ ಬಯಲ್** : ವಿದ್ಯಾಕ್ತಿರ್ತ್ತಿಮಹಾಣೆಯರ್ಗ್ಗೆ ಪುಲ್ಲೆಯ ಮೊನೆಯಿಂ ಪಡುವಲ್ ಮತ್ತರ್ಪ್ಪದಿನಾಱು (ಸೌಇಇ. IX-i, ೦೦೬-೩೯ ; 1075). **ಹುಲ್ಲೆಯ ತೆವರ್** = **ಪುಲ್ಲೆಯ ಬಯಲ್** : ಹುಲ್ಲೆಯ ತೆವರಲಬ್ಬೆಯನವರ ಕೆಯಿಂ ಮೂಡಲುಕ್ಕೇರಿಯ ಎಱಕನವರ ಕೆಯಿಂ ತೆಂಕಲು . . . ಮತ್ತರು ೧೨ ಶ್ರೀವಾಮ್ಯ (ಸೌಇಇ. IX-i, ೩೭೦-೩೯; 1258). [ದೇ.॥ ತಮಿ. ಪುಲ್ವಾಯ್; ತುಳು. ಪುಲ್ಲೆಮ್ಮಿಗ]

**ಪುಲ್ಲೆ₂** (ನಾ). (?) : ಬೆಳ್ಳಿಬಸವನ ಆಭರಣದ ಲೆಖ್ಖಾ . . . ಪುಲ್ಲೆಕಡೆ ಸಾಮೂನು ೧೬ ತಾಳಿಗಳು ೨ ಯಿದರ ಹಗ್ಗದ ಪಟ್ಟೆ (ಎಕ. XIV, ಸಂಹಿಕ. ೨೪೯,೩ನೆಯ ಕಂ೦; ಸು. 1848). [?]

**ಪುಲ್ಲೆಗಣ್**, ಹುಲ್ಲೆಗಣ್, ಹುಲ್ಲೆಗಣ್ಣು (ನಾ). ೧. ಜಿಂಕೆಯ ಕಣ್ಣು. ೨. ಜಿಂಕೆಯ ಕಣ್ಣನಂತಿರುವ (ಚೆಲುವಾದ ಮತ್ತು ಚಂಚಲವಾದ) ಕಣ್ಣು : ಪು[ಶಾಕಾಂ. ಹು]ಲ್ಲೆಗಂಗಳ ಕೊಲ್ಲಿನೋಟದ ಮಲ್ಲಿಗೆಯ ಮೊಗ್ಗೆಗಳ ದಂತದ . . . ವಟಫಲಾಧರೆ ನಿಲ್ಲಲೆಸೆದಳು (ಶಾಗಚ. ೨-೧೩). **ಹುಲ್ಲೆಗಣ್** : ೨. ತವಕದಿ ಹುಲ್ಲೆಗಣ್ಣವಳೊರ್ವಳುದಕವನುಲ್ಲಸದಿ ಚೆಲ್ಲಿದಳು (ಜೀವಂಚ. ೦೬-೬೦); ಚೆಲ್ಲೆಗಣ್ಣವರರಳ್ಗಣ್ಣವರ್ ನಿಡಿಗಣ್ಣ ಹುಲ್ಲೆಗಣ್ಣವರ್ ... ತೋರಥಮ್ಮಿಲ್ಲೆಯರೆಯ್ದಿತೊಗ್ಗಿನಲಿ (ಮೋಹಚ. ೨೯-೧೨). **ಹುಲ್ಲೆಗಣ್ಣು** : ೨. ಹುಲ್ಲೆಗಣ್ಣುಗಳಿಂದ ನಲ್ಕೆನೋಟಗಳಿಂದ ಗೆಲ್ಲ ಕರುಣೆಗಳಿಂದ ಬೆಳೆವ ಮೂರುತಿಯೆ ನಿನ್ನ ಕರುಣೆಯಿನೆನ್ನ ತೊಳೆದು ಹೋಗೈಯ (ಬಿಸೀಗೀ. ೪೩-೦೩).

**ಪುಲ್ಲೆಗಣ್ಣಳ್** = ಜಿಂಕೆಯ ಕಣ್ಣಿನ ಹಾಗಿರುವ ಕಣ್ಣುಗಳುಳ್ಳವಳು; ಹರಿಣನೇತ್ರೆ : ಪುಲ್ಲೆಗಣ್ಣಳೆ ಕೇಳು (ಶಶಮೋ. ೦೦-೯೬). [ಪುಲ್ಲೆ₁ + ಕಣ್]

**ಪುಲ್ಲೆಗೋಡು** (ನಾ). ೧. ಜಿಂಕೆಯ ಕೊಂಬು,—ಕೋಡು. ೨. ಜಿಂಕೆಯ ಕೊಂಬಿನಾಕಾರದ ಒಂದು ಬಗೆಯ ಆಭರಣ : ವನಸಿರಿ ಮುತ್ತಗಶಿಶುಗಂದನುನಯದಿಂ ಪುಲ್ಲೆಗೋಡು ಪುಲಿಯುಗುರ್ಗಳನೊಲ್ದು ನುರಾಗದಿಂದೆ ಕಟ್ಟಿದಳೆನೆ ನನೆ ಕಿಲಮೆಸೆಯುತಿರ್ಪುವಾ ಮುತ್ತಗದೊಳ್ (ಪುಣ್ಯಆ. ೩-೩೭೬). [ಪುಲ್ಲೆ₁ + ಕೋಡು]

**ಪುಲ್ಲೆಮಱಿ** 'ಪುಲ್ಲೆವಱಿ' ನೋ.

**ಪುಲ್ಲೆವರಿ** 'ಪುಲ್ಲೆವಱಿ' ನೋ.

**ಪುಲ್ಲೆವಱಿ**, ಪುಲ್ಲೆಮಱಿ, ಪುಲ್ಲೆವರಿ, ಹುಲ್ಲೆಮರಿ (ನಾ). ಜಿಂಕೆಯ ಮರಿ ; ಚಿಗರೆಯ ಮರಿ : ಅಸು ಪೋಪ ಪುಲ್ಲೆವಱಿಯಂ ಕೈಯಿಂದದಂ ಕೊಂಡು ಬೇಡನಗುರ್ವಿಂ ನಡೆಗೊಂಡಂ (ಕುಸುಮಜಾ. ೦೪-೩೩). **ಪುಲ್ಲೆಮಱಿ** : ಬವರಂಗೆಯ್ದ ಗಜಂಗಳ ನಿವಹದ ನಿಗ್ಗವಮದುಡಿದು ಸೂಸಿರೆ ನೆಲದೊಳ್ ತವೆ ಪಸಿದ ಪುಲ್ಲೆಮಱಿಗಳ್ ತವಕದೆ ಬಿಸಮೆಂದು ತುಡುಕುಗುಂ ತದ್ವನದೊಳ್ (ರಾಜಶೇ. ೩-೭೦). **ಪುಲ್ಲೆವರಿ** : ಪುಲಿಯೊಡನೆ ಕಲಹವೇ ಪುಲ್ಲೆವರಿಗೆ (ಕೇಶರಾ. ೦೭-೩೩). **ಹುಲ್ಲೆಮರಿ** : ಅವನು ಹುಲ್ಲೆಮರಿಯನ್ನು ಅಟ್ಟಿಸಿಕೊಂಡು ಹೋಗಿ ದಟ್ಟವಾದ ಕಾಡಿನೊಳಗೆ ಸಿಕ್ಕಿಬಿದ್ದನು (ಕೂತ). [ಪುಲ್ಲೆ₁ + ಮಱಿ]

**ಪುಲ್ಲೆವೆಚ್ಚು** (ನಾ). ಜಿಂಕೆಯಂತೆ ಗಾಬರಿಯಾಗುವಿಕೆ : 'ಪುಲ್ಲೆವೆಚ್ಚುವೆಚ್ಚು' ಪರಾ. [ಪುಲ್ಲೆ₁ + ಬೆಚ್ಚು₂ (< ಬೆರ್ಚು₂)]

**ಪುಲ್ಲೆವೆಚ್ಚುವೆಚ್ಚು** (ಕ್ರಿ). ಜಿಂಕೆಯಂತೆ ಗಾಬರಿಯಾಗು : ಕದನದೊಳನ್ನು ನಿನ್ನ ತರವಾರಿಯ ಧಾರಿಗೆ ಮೆಯ್ಯನೊಡ್ಡಲಾಱದೆ ನಲಿದಿನ್ನುವನ್ನದನೆ ಜಾನಿಸಿ ಜಾನಿಸಿ ಗಂಗ ತನ್ನ ನಮ್ಬಿದ ಸುವತೀಕದಮ್ಬದೆರ್ದೆ ಪೌವನೆ ಪೋಗಿರೆ ಪುಲ್ಲೆವೆಚ್ಚುವೆಚ್ಚಿದವನಹರ್ನಿಶಂ ತ್ರಿಗುಳ ದಾಮಮನರಣ್ಯಶರಣ್ಯವೃತ್ತಿಯಿಂ (ಎಕ. II, ೨೪೦-೨೪ ; ಸು. 1175). [ಪುಲ್ಲೆವೆಚ್ಚು + ಬೆಚ್ಚು₁ (< ಬೆರ್ಚು₁)]

**ಪುಲ್ಲೋರಿ** (ನಾ). ಹೋರಿ ಕರು : ಕಿಲವ ಕೇಸಿಗ ನಿಱುವ ಹಂಡ ಹಾಱುವ ಚಿಂಚ ಮಲೆವ ಪುಲ್ಲೋರಿ ಬೆಚ್ಚುವ ಬೆಳ್ಳಿ . . . ನಾನಾಪರಿಯ ಕಬ್ಬಸಿಗಳೊಳಗಾದ ಪಲವುಪರಿಯೆತ್ತು ತೊಂಭತ್ತಾಱುಲಕ್ಷ ಮೋಳ್ಳಿಸಿ ಓಡಿದುವು ಗೆಲ್ಲಕೆ (ಸಿಂಗಿರಾ. ೩೩-೭). [ಪುಲ್ + < ಪೋರಿ₂]

**ಪುಲ್ವಕಿ** 'ಪುಲ್ವಕ್ಕಿ' ನೋ.

**ಪುಲ್ವಕ್ಕಿ**, ಪುಲ್ವಕಿ (ನಾ). ಒಂದು ಪ್ರದೇಶದ ಹೆಸರು : ತಮ್ಮಾಪಱ ಪರಿದು ಪುಲ್ವಕ್ಕಿಯಲ್ಲಿ ಕಾದಿ ತುಱುವಮಮ್ ಮಗುಟ್ಚಿ (ಮೈಆಅ. ೦೯೨೯, ೯೯-೩ ; ೪). **ಪುಲ್ವಕಿ** : ದುಗ್ಗಮಾರೆಱೆಯುಪ್ಪೊ ಕೊವಳಾಲನಾಡು ಮೂನೂಱುಂ . . . ಪುಲ್ವಕಿನಾಡುಸಾಸಿರಮು ಬೆಪ್ಪೊದು ಸಾಸಿರಮು

× × × ನಾಡಬುವತ್ತುಮೂನಾಳುತ್ತಿರೆ (ಎಕ. X, ಶ್ರೀನಿವಾ. ೩೭–೫; ಸು. 770).

[?]

**ಪುಲ್ಬಗೆ,** ಪುಲ್ಬಗೆ (ನಾ). ಹೀನವಾದ ವಿಚಾರ ; ಕೀಳಾದ ಯೋಚನೆ : ಅವರ ಮನದ ಪುಲ್ಬಗೆಯುಂ ಪುಲ್ಲಮೆಯುಮುವುನಱಿಯದೆ ಸಮಸ್ತ ಬಳೋದ್ಮುಕ್ತನಾಗಿ . . . ಮದಗಜೇಂದ್ರಪುರವನೆಯ್ದೆ ಬರೆ (ಶಂಶಚ. ೬–೬೯ ವ); ಮಾರಂ ವಿದ್ಯಾಪ್ರೀತನಪ್ಪುದಱಿಂ ತನ್ನ ನುಡಿಯಂ ಕಡೆಗಣಿಸ ದೊಡಂಬಡುಗುಮೆಂಬ ಪುಲ್ಬಗೆಯಿನಾ ಪಾಣ್ಬೆಯಿಂತೆಂದಳ್ (ಪೀಶಪು. ೬–೦೯೬ ವ). **ಪುಲ್ಬಗೆ :** ಅವರ ಪುಲ್ಬಗೆಯನೂ್ನ ಪುಲ್ಲದೆಯನೂ್ನ ಅರಿಯದೆ ಅವನು ಹಸ್ತಿನಾಪುರಕ್ಕೆ ಬರುವನು (ಕವಕ. ೩೯). [ಪುಲ್ + ಬಗೆ₁]

**ಪುಲ್ವಟ್ಟೆ,** ಪುಲುವಟ್ಟೆ, ಹುಲುವಟ್ಟೆ (ನಾ). ೧. ಸಣ್ಣ ಹಾದಿ; ಕಿರುದಾರಿ; ಕಾಲುದಾರಿ : ನೆತ್ತರುಂ ಬಸಿವುತ್ತಿರ್ಪುದು ಪೋದವಿಕ್ಕಿ ಮಱಿಯಂ ಪುಲ್ವ[ಲ್ವ]ಟ್ಟೆಯೊಳ್ ಪುಲ್ಲೆಗಳ್ (ಕಾರಂಕೃ. ೦೫೬); ಕಿರಾತರಾಜನಾ ಕನ್ನೆಯ ಪಾದಂಗಳು ಪಲತೆಱದಿಂದಿರ್ಪೆಸಿ. . .ಪುಲ್ವಟ್ಟೆಯಿಂ ಪೆರಡವಿಯಿಂ ಪೊಱಮಡಿಸಿ ಕಿಱಿದುಂ ದೂರಂ ಪೋಗಿ (ಧರ್ಮಾಮೃ. ೩–೦೦೫); ನೆಟ್ಟನೆ ಸತ್ಪಥಂಬಿಡಿದು ಪೋಪ ನರಂ ಮತಿಗೆಟ್ಟು ಪಾಯ್ದು ಪುಲ್ವಟ್ಟೆಯ ನೆಯ್ದಿ ಪೋಗುತಿರೆ ಕಾನನದೊಳ್ (ಧರ್ಮಪ. ೦–೯೯). **ಪುಲುವಟ್ಟೆ :** ೧. ಒರ್ವ ವನಚರಂ ಮಹಾವನದೊಳ್. . .ಒಂದು ಮಹಾಹಿ ತೊಟ್ಟಗೆ ಬರೆ ಪುಲುವಟ್ಟೆಯೊಳ್ ಕೋಲಗಲಿಂಬಿಲ್ಲದೆ ಬಿಲ್ಲಂ ಕೊಂಡು ವಿಷದೂಷಿತ ಮಪ್ಪಂಬಂ ತೊಟ್ಟಸುವುದುಂ (ಶಂಶಕಂ. ೩೦೦–೦೯). **ಹುಲುವಟ್ಟೆ .** ೧. ಹುಲುವಟ್ಟೆಯೊಳು ಬೆಳೆದ ಹೆಮ್ಮರನ ಮಲಗಿಸಿ ನೀದ ಹುಳ್ಳಿಹೊಱೆಯಂ ಕಂಡಳು (ಹಕಕಾ. ೮೨–೨೦); ಪರಿಕಿಸಲು ಸ್ವರ್ಗಕ್ಕೆ ಪರಿವ ಹುಲುವಟ್ಟೆ ಗಳಪರಿಮಿತಂ ವಿಘ್ನಭಯವೀವಮನಿತುಂ (ಶಾಪಂಕ. ೩–೫). ೨. ಕ್ಷುದ್ರವಾದ ಹಾದಿ ; ಕೆಟ್ಟ ಮಾರ್ಗ: ಧರ್ಮಪಥ ಹುಲುವಟ್ಟೆಯೆನಿಸಿದ ಹಮ್ಮಿನಲಿ ಕೆಡಬೇಡ (ಲುಶ್ಕಾಉ. ೯–೦೩). [ಪುಲ್ + ಬಟ್ಟೆ₁]

**ಪುಲ್ವಟ್ಟೆವಿಡಿ(ಕ್ರಿ).** ಕಿರುದಾರಿಯನ್ನು ಅನುಸರಿಸು; ಕಾಲುದಾರಿಯನ್ನು ಹಿಡಿ : ಆ ಮಹಾಟವೀಮಧ್ಯದೊಳೊಂದು ಪುಲ್ವಟ್ಟೆವಿಡಿದು ನಡೆಯೆ (ಶಂದ್ರಕೃ. ೫–೩೨ ವ); ಕಟ್ಟೊಲ್ಮೆಯೊಳಿವೆಯಲುಗದೆ ನೀಡುಂ ನಿಟ್ಟಿಪ ನೀಱಿನ ಬಗ ದಾಸಿಯು ಪುಲ್ವಟ್ಟೆವಿಡಿದು ನಡೆಯುತ್ತಿರೆ (ಜಯುಕಾ. ೯–೦೦); ಅವನಲ್ಲಿಂದ ಪುಲ್ವಟ್ಟೆವಿಡಿದು ನಿಲ್ಲದೆ ಪೋಗಿ ಕಂಡನು ಕಾನನಮಧ್ಯದಲ್ಲಿ ಮಹಾಸರೋವರವ (ಶಾಗಳು. ೦೦–೬೯). [ಪುಲ್ವಟ್ಟೆ + ಪಿಡಿ₁]

**ಪುಲ್ವನೆ,** ಪುಲುಮನೆ, ಪುಲ್ಮನೆ, ಹುಲ್ಲುಮನೆ (ನಾ). ಹುಲ್ಲಿನ ಮನೆ; ಗುಡಿಸಲು ; ಪರ್ಣಕುಟಿ : ಕಲ್ವಾಟಿ, ಪುಲ್ವನೆ, ನೀರ್ವಾವು (ಶಾಶಾಭೂ. ೩೦ ಉದಾ). **ಪುಲುಮನೆ :** ಚಂದನೆಯುಂ . . . ಶೃಂಖಳಾಬಂಧನೆಯುಂ ಮಾಡಿ ತಲೆವಾಗಿಲ ಕೆಲದ ಪುಲುಮನೆಯೊಳಿರಿಸಿ ಕೊಚ್ಚನಿಕ್ಕಿ ನಡಸುತ್ತುಮಿರ್ದಳ್ (ಷರ್ಪಕೃ. ೦೫–೩೯ ವ). **ಪುಲ್ಮನೆ :** ಪುಲ್ಮನೆಯೋಳಿರ್ದವಂ ಕಿರ್ಚಿನ ಪೆರ್ಚನಿಚ್ಚೈಸಿದೊಡು ಸಂಸಾರದೊಳಗಿರ್ದಾತಂ ಕಷಾಯಂಗಳ ಪೆರ್ಚನಿಚ್ಚೈಸುವೊಡಂ ಆಯಿರ್ವರುಂ ಬೇವುದುಂ ನೋವುದುಂ ಏಂ ಪಿರಿದೆ? (ಜೀವಸಂ. ೦೯೩–೦೦). **ಹುಲ್ಲುಮನೆ :** ಕೆಳಕಾನೂರಿನ ಹುಲ್ಲು ಮನೆಯ ಮುಂದುಗಡೆ . . . ಸೇರೆಗಾರರೂ ಹೂವಯ್ಯನೂ ಉದ್ವೇಗದಿಂದ ಮಾತಾಡುತ್ತಿದ್ದರು (ಕಾಷೂರು. ೯೦೦) ; ಸಿದ್ದಣ್ಣನ ಹುಲ್ಲುಮನೆ ಸ್ಮಶಾನದಂತಾಗಿತ್ತು (ಶುಕಶು. ೭೦). [ಪುಲ್ + ಮನೆ]

**ಪುಲ್ವರಿ** (ನಾ). ಒಂದು ಬಗೆಯ ತೆರಿಗೆ ; (ದನಗಳನ್ನು) ಹುಲ್ಲು ಮೇಯಿಸಿದುದಕ್ಕಾಗಿ ಕೊಡುತ್ತಿದ್ದ ತೆರಿಗೆ : ಇಡತೊರ್ಪೆ ಪುಲ್ವರಿ ಮುಂದೈಕಂಥೆ(ಡೆ) (ಎಇ. XVIII, ೦೯೨–೫೦; 1434). [ಪುಲ್ + ಪರಿ₁./ತಮಿ. ಪುಲ್ವರಿ, ಪುಲ್ಲರಿ ; ತೆಲು. ಪುಲ್ಲರಿ]

**ಪುಲ್ಮಾನಿಸ,** ಪುಲ್ಮಾನಸ, ಹುಲುಮಾನಿಸ (ನಾ). ಅಲ್ಪನಾದ ವ್ಯಕ್ತಿ ; ಕ್ಷುದ್ರಮನುಷ್ಯ : ಕಟ್ಟೊಡಲಾಂತು ಕರ್ಮಭೋಗಂಗೆಯ್ದು ಕುತ್ತದಿಂ ಮಡಿವ ಪುಲ್ಮಾನಿಸರುಮಂ ಕ್ಷುದ್ರದೈವಮುಂ ಪೊಗಳ್ದು ಮುನ್ನುಳ್ಳ ಮತಿಯುಂ ಕಿಡಿಸಿಕೊಳ್ವಧಮಕವಿಗಳ ಮಾತವೇಕಿಲ್ಲಿ (ಶಬ್ದಮಣಿ. ೦–೪೭). **ಪುಲ್ಮಾನಸ :** ಇಕ್ಷ್ವಾಕುವಂಶತಿಳಕನಪ್ಪ ರಾಮನಂ ಪುಲ್ಮಾನಸನೆಂದೇಕೇಳಿಸಿ . . . ನಾಣ್ಚದೆಂತು ನುಡಿವೆ (ಶಾಪುಂಪು. ೩೦೨) ; ಕಲ್ಪಮರಹಿತಂಗೆ ತಿಕ್ಕರಾಜಂ ಗುಳಿದೀ ಪುಲ್ಮಾನಸರಂ ದೊರೆಯೆನೆ ಕಲ್ವಾಣಿಕದನ್ನುಟೆಂದಡೆಂತಂತೆ ದಿಟಂ (ಎಕ. VII, ಶಿಕಾಂ. ೦೯–೩೫ ; 1181) ; ಪುಲ್ಮಾನಸನಾದ ಚಂಡಶಾಸನ ವೆಸರಂ ಚಾಂಡಾಲ ನೀರೊಳೀತರ್ದಾಪರೇ (ಅಸಂಪ. ೦೦–೩೨). **ಹುಲುಮಾನಿಸ :** ಕಾಲಂಗಸದಳದ ಕಲ್ಪಾಂತರುದ್ರನ ವಿಷಮನಯನಜ್ವಾಲೆ ಗಳುಕದ ವೀರಭಟರೊಡನೆ ಉಸುರಬಹುದೇ ಜೀಯ ಹುಲುಮಾನಿಸರ ವ್ಯದುರಣರಾಜಕಾರ್ಯವ (ಕೊರಾ. ೬–೨–೦೨). [ಪುಲ್ + ಮಾನಿಸ₁ (<ಮಾನುಸ)]

**ಪುಲ್ವಿಡಿ,** ಹುಲುವಿಡಿ (ಕ್ರಿ). (ಅಲಂ) ಹುಲ್ಲನ್ನು ಕಚ್ಚಿ ಹಿಡಿಯುವುದರ ಮೂಲಕ ಶರಣಾಗತಿಯನ್ನು ಸೂಚಿಸು : ಪುಲ್ವಿಡಿಯೆ ಸಚಿವತನಯುಂ ಕಾಲ್ವಿಡಿಯೆ ನಿಜೇಶಂ ... ಮಲಗಿವಿಡಿದಳ್ ಕಲ್ಪಾನಸೆ (ಲೀಲಾವ. ೦೯–೨೮) . **ಹುಲುವಿಡಿ :** ಬೊಮ್ಮನ ಮಡದಿಯು ನಾಸಿಕವರೆಯಾಗಲಿ ಮಿಕ್ಕರು ಹುಲುವಿಡಿಯಲಿ ದಿಗಧೀಶರು ಭಂಗಿತರಾಗಲಿ (ಶೀರೇಪ. ೦–೫೦). [ಪುಲ್ + ಪಿಡಿ₁]

**ಪುಲ್ಪೊಱೆ,** ಪುಲ್ಪೊಱೆ, ಹುಲ್ಲುಹೊರೆ (ನಾ). ಹುಲ್ಲಿನ ಕಂತೆ,–ಕಟ್ಟು : ಕಲ್ಪೊಱೆದು ಸದೆಸಟ್ಟು ಪುಲ್ಪೊಱೆಗಳಾಂತವರ್ ನಿಲ್ಮಿದರ್ ಪುರದಗಳಂ (ಕಿಪು. ೪೨–೨೯) ; ಮಡಿದ ಪೆಣಗಳನೆಳೆದು ತುಂಬಿದರ್ ಪುಲ್ಪೊಱೆಗಳಂ ಕೊಱೆದುಗಳನೊಟ್ಟಿದರ್ ಕಲ್ಗುಂಡು ಮಣ್ಣಗಳಂ ಸುರಿದು ನೆಲಸರಿಮಾಡಿ ದರ್ (ಕಿಪು. ೪೨–೩೦). **ಪುಲ್ಪೊಱೆ :** ಪುಲ್ಪೊಱೆವೊತ್ತು ಶ್ರೀಪತೀಶನ ಪುರಕೆ ನಡೆಯುತಿರಲು (ಆರಾಕ. ೦–೯–೩). **ಹುಲ್ಲುಹೊರೆ :** ತೃಣ್ಯಾ, ತೃಣಾನಾಂ, ಸಂಹತೀ—ಹುಲ್ಲ ಮಾಮೆ, ಹುಲ್ಲುರಾಶಿ, ಹುಲ್ಲುಹೊರೆ, ಹುಲ್ಲ ಮೆದೆ, ಹುಲ್ಲುಮೂಟೆ, ಹುಲ್ಲಡಕ (ಸಿದ್ಧಾಂತಿ. ೦೫೨) ; ದೋಸೆ ತಿನ್ನುವ ಆಸೆಯಿಂದ ಬೇಗ ಹುಲ್ಲುಹೊರೆ ಹೊತ್ತುಕೊಂಡು ಸುಗ್ಗಿಗದ್ದೆಯಿಂದ ಮನೆಗೆ ಬಂದಿದ್ದಳು (ಶದ್ಮಸ. ೫೭). [ಪುಲ್ + ಪೊಱೆ³]

**ಪುಲ್ಸರವಿ,** ಹುಲುಸರವಿ (ನಾ). ಹುಲ್ಲನ್ನು ಹೊಸೆದು ಮಾಡಿದ ಹಗ್ಗ : ಪಲವು ಪುಲ್ಸರವಿಗಳ್ ಕೂಡಿ ದೃಢಮಪ್ಪೊಂದು ಲಳಿತರಥಪಾಶಕ್ಕೆ ಪಾಸಟಿಯೆನಿಕ್ಕುವೋ (ಆರಾಕ. ೩–೨–೯). **ಹುಲುಸರವಿ :** ನಿಮ್ಮ ನಂಬಿ ನಂಬದವನ ಬಾಳುವೆ ಹೊಲೆಯರ ನಾಯಿ ಹುಲುಸರವಿಯಿಂದ ಕರ ಕಷ್ಟ (ದೇರಾವ. ೨೦–೩೭) ; ಹುಲುಸರವಿಗಳನೆಯ್ದೆ ಹೊಸೆಹೊಸೆದು (ಬಿಕಪು. ೦೬–೨೦). [ಪುಲ್ + ಸರವಿ₁]

**ಪುಲ್ಸಾರೆ** (ನಾ). ಒಂದು ಬಗೆಯ ಔಷಧೀಸಸ್ಯ : " ಬೆಟ್ಟದುರುಳಿ, . . . ಪುರುಚಲಿಗಿಡ, ಪುಲ್ಸಾರೆ " (ಸಸ್ಯಕಿ.೯೨); ಹೇನುಕುರುವಿನ ಗಿಡ, ಪುರುಚಲಿಗಿಡ, ಪುಲ್ಸಾರೆ (ವೈಕಿಗ. ೩೫–೦೦೦೬). [?]

**ಪುವಗಾಮ** (ನಾ). ಒಂದು ಊರಿನ ಹೆಸರು : ಶ್ರೀಪುರುಷಮಹಾರಾಜ ಪ್ರಿತುವೀರಾಜ್ಯಂಕೆಯೆ . . . ಮುದುಗುನ್ನೂರ ಸಿಜ್ಜಡಿಅರಸ ಪುವಗಾಮ ಮಾಳ್ದುವಿದ್ದರ್ (ಎಕ. VII (R), ಮುಳಪ. ೦೨೨–೬ ; ಸು. 740). [? + ಗಾಮ]

**ಪುವ್ವು** ' ಪೂ₁ ' ನೋ.

**ಪುಷ್ಕರ** (ನಾ). ೧. ನೀಲಿಬಣ್ಣದ ತಾವರೆ. ೨. ಪದ್ಮ ; ಕಮಲ : " ಸಹಸ್ರಪತ್ರಂ . . . ಪುಷ್ಕರಂ, ರಾಜೀವಂ, ಅರವಿಂದಂ, ಪದ್ಮಂ, ಪಂಕಜಂ —ಈ ೧೭ ತಾವರೆ " (ಹಲಾಯು. ೦೦೨–೫೭) ; ಪುರಹರಂ ಪೂಜೆಗೆಯ್ದುವಸರ ದೊಳೊಂದು ಪುಷ್ಕರವಿಲ್ಲದಿರೆ ನೋಡಿ ತನ್ನ ಬೆಳತಿಗೆಗಣ್ಣನಿರದೆ

ಕಿಳ್ತಭವನಂಘ್ರಿಗೆ ಪೂಜೆಗೆಯ್ದುಱಗಿ (ಆರಾಕ. ೧-೪-೨೨). ೩. ಒಂದು ಬಗೆಯ ಮೂಲಿಕೆ; ಚಂಗಲಕೋಷ್ಠ : ಕೋಷ್ಟಂ ಪದ್ಮಕಂ ಕರ್ಪೂರ ಬಾಳದ ಬೇರು ಪುಷ್ಕರಂ ಭದ್ರಮುಸ್ತೆಯುಮಂ ಸರಿಗೊಂಡು . . . ಪೂಸಲು ಯೋನಿದೋಷ ಕೆಡುವುದು (ಕಾಪುಶಾ. ೨೭೩). ೪. ಆನೆಯ ಸೊಂಡಿಲಿನ ತುದಿ : "ಕರಾಗ್ರಂ, ಪುಷ್ಕರಂ—ಈ ೨ ತುದಿಗೆ" (ಹಲಾಯು. ೩೭-೬೬); ಕರಿಗಳ್ ಕೇಸರಿಗಳ್ಗೆ ಪುಷ್ಕರಧೃತಸ್ವಚ್ಛಾಂಬುವಂ ನೀಡೆ (ಆದಿಪು. ೯-೯೭); ಕರಪುಷ್ಕರಂಗಳಿಂ ತಂದು ಪೂಗಿಡುಗಳ್ಗೆ ನೀರೆಱೆವ ಮಱಿಯಾನೆಗಳಿಂ (ಕಾಧಂಪೂ. ೨೨೦); ಜಲಕರಿನಿಕರಂ ಪುಷ್ಕರಮಲರೆ ಕರಂ ನಿಮಿರೆ ಪೂತ್ಕರಿಸೆ ಸಿಡಿದ ಲಸಜ್ಜಲಕಣಮನಮಳಮುಕ್ತಾಫಳಮೆಂದುಱೆ ಮುಗ್ಧಖೇಚರಿಯರ್ ಕೈಯಿಡುವರ್ (ರಾಜಶೇ. ೧-೯೩). ೫. ಚರ್ಮವಾದ್ಯದ ಮುಖ. ೬. ಒಂದು ಬಗೆಯ ಚರ್ಮವಾದ್ಯ; ನಗಾರಿ: ನವಮೇಘಧ್ವನಿ ಪುಷ್ಕರಧ್ವನಿ ಲಸತ್ತಾರಾಳಿ ಪುಷ್ಪೋಪಹಾರವಿಲಾಸಂ (ಆದಿಪು. ೬-೭೨). ೭. ಡಮರುಗ: ನಯನತ್ರಯಾಂಚಿತಪಪುಷ್ಕರ ಪುಷ್ಕರಪುಷ್ಕರಾಂಕ (ರಾಜಶೇ. ೦೩-೫೨). ೮. ಪಾತ್ರೆ; ಭಾಂಡ. ೯. ಕೊಕ್ಕರೆ; ಸಾರಸಪಕ್ಷಿ: "ಪುಷ್ಕರಂ ಸಾರಸಂ" (ಮುಂಗರಾ. ೫೦-೬). ೧೦. ಬಾಣ; ಅಂಬು. ೧೧. ಕತ್ತಿ; ಖಡ್ಗ. ೧೨. ಕತ್ತಿಯ ಅಲಗು,-ಧಾರೆ. ೧೩. ಕತ್ತಿಯ ಒರೆ; ಖಡ್ಗದ ಕೋಶ. ೧೪. ಯುದ್ಧ; ಕದನ. ೧೫. ಗಗನ; ಆಕಾಶ: "ಸುರಸರಣಿ ವಿಷ್ಣುಪದಮಂಬರಂ ವಿಯತ್ ಖಂ ವಿಹಾಯಸಂ ಗಗನಂ ಪುಷ್ಕರಮಾಕಾಶಂ" (ಪಶ್ಚಕೋ. ೧೦. ೫೭); ಮೊಱೆವ ದುಂದುಭಿರಭಸದಲಿ ಪುಷ್ಕರಕೆ ಪ್ರಷ್ಟಕವಡರಿದುದು (ಕೊರಶಾ. ೬-೫೪-೧೦); ಖಣಿಖಟಿಲೆಂಬ ಶಬ್ದವತಿ ಪೂರಿಸೆ ಪುಷ್ಕರ ಭೂತಳಂಗಳಂ ಮಣಿವವು ಕೂಡೆ ದಿಗ್ಗಜ ಫಣೀಂದ್ರ ಮಹಾಕಮಠಂಗಳ್ (ಹರಿಶ್ಚ. ೩-೪೭). ೧೬. ನೀರು; ಜಲ. ೧೭. ಕೊಳ; ಸರೋವರ. ೧೮. ಒಂದು ಬಗೆಯ ಹಾವು,-ಸರ್ಪ. ೧೯. ಮದ; ಉನ್ಮಾದ. ೨, ೪, ೧೯ : ಓರಿಗೆಡೆಯಾದ ಪುಷ್ಕರದೊಳೊಂದಿದ ದೀರ್ಘಸುವೃತ್ತಹಸ್ತದಿಂ . . . ಈ ನರಸಿಂಹಭೂಭುಜಂ ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗನ್ಧವಾರಣಂ (ಎಕ. V, ಬೇಲೂರು. ೦೯೩-೫೦; 1161). ೨೦. ಕೆಂಪುಬಣ್ಣ: ಪಶ್ಚಿಮದಲ್ಲಿ ಕಂಡ ಪಚ್ಚೆಯ ಕಲ್ಲ ಉತ್ತರದಲ್ಲಿ ಕಂಡ ಪುಷ್ಕರದ ಕಲ್ಲ ಪೂರ್ವದಲ್ಲಿ ಕಂಡ ಬಿಳಿಯ ಕಲ್ಲ ಮೂಱೂ ಕೂಡಿ ಮಡಿಕೆಯ ಮಂಡೆಯ ಮೇಲಿರಿಸಲಾಗಿ ಕಂಡಿತ್ತು ಇಲ್ಲಿನ ಇರವು (ಬಸವಪುರಾ. ೦೫೦-೭೬೯). ೨೧. ಶಿವನ ಒಂದು ಹೆಸರು: ನಯನತ್ರಯಾಂಚಿತವಪುಷ್ಕರಪುಷ್ಕರಪುಷ್ಕರಾಂಕ (ರಾಜಶೇ. ೦೩-೫೨). ೨೨. ಕೃಷ್ಣನ ಒಂದು ಹೆಸರು. ೨೩. ವರುಣನ ಮಗ. ೨೪. ನಳಮಹಾರಾಜನನ್ನು ದ್ಯೂತದಲ್ಲಿ ಸೋಲಿಸಿ ರಾಜ್ಯವನ್ನು ಕಿತ್ತುಕೊಂಡ ಅವನ ದಾಯಾದಿಯ ಹೆಸರು : ನಳನೃಪತಿಯ ದಾಯಾದಂ ಸಲೆ ಬಡವಟ್ಟರ್ವನಲ್ಲಿ ಪುಷ್ಕರನೆಂಬಂ (ನಳಕಂ. ೫೦೩). ೨೫. ಸೂರ್ಯ. ೨೬. ಗುಹೆ; ಗವಿ. ೨೭. ಭಾಗ; ವಿಭಾಗ. ೨೮. ಪವಿತ್ರ ಕ್ಷೇತ್ರಗಳಲ್ಲಿರುವ ನದಿ, ಸರೋವರ ಮುಂತಾದುವು; ಪುಣ್ಯತೀರ್ಥ. ೨೯. [ಜ್ಯೋತಿ] ಕೆಲವು ಗ್ರಹಗಳ ಕೂಟದಿಂದ ಉಂಟಾಗುವ ಅಶುಭಯೋಗ. ೩೦. [ಜೈನ] ಕಾಲೋದಧಿಯ ಆಚೆಗೆ ಇರುವ ಒಂದು ದ್ವೀಪ: ಕಾಳೋದಕಜಲಧಿ ಬೆಡಂಗಾಗೆ ತದ್ಬಾಹ್ಯದೊಳ್ ಪುಷ್ಕರನಾಮದ್ವೀಪವಿರ್ಪ್ಪುದು (ಶ್ರೀಪು. ೦-೯೦). ೩೧. [ಕಾವ್ಯಮೀ] ಚಿತ್ರಕಾವ್ಯದಲ್ಲಿ ಒಂದು ಬಗೆ; ಪುಷ್ಕರವೆಂಬ ವಾದ್ಯದ ಆಕಾರದಲ್ಲಿ ಬರೆಯುವ ಪದ್ಯ : ಶರಶೂಲಚಾಪ ಚಕ್ರಾಸಿ ರೂಪಂ . . . ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೫೭೯). "ಅಸಿಯೊಳು ಸುತೀರ್ಥದೊಳು ವಾದ್ಯಘಟತುಂಡದೊಳು ಜಸಜದೊಳು ಗಜಹಸ್ತದಗ್ರದೊಳು ಗಗನದೊಳು ಕುಶದೊಳೌಷಧದೊಳಾ ಪುಷ್ಕರಾಖ್ಯಂ" (ಮುಂಗರಾ. ೦೯೭-೩೨); "ಕಮಲ ನಭ ವಾದ್ಯ ಭಾಂಡಂ ಉಮೆಯುರಸು ಸರ್ಪ ಮದಂ ಖಡ್ಗಂ ತೀರ್ಥೋತ್ತಮ ಭೇಷಜ ಕರಿಕರತುದಿ ಕ್ರಮದಿಂ ಪನ್ನೊಂದು ಪುಷ್ಕರಾಂಕಿತ ಶಬ್ದಂ" (ನಾನಾಳಂ. ೨೮). [ಸಂ.]

**ಪುಷ್ಕರಚಿಕುರ** (ನಾ). ಆಕಾಶವೇ ಕೂದಲಾಗುಳ್ಳವನು; ವ್ಯೋಮಕೇಶ; ಶಿವ : ಶರಣು ಪುಷ್ಕರಚಿಕುರ ಶಿವಭಕ್ತಿಮುಖಮುಕುರ (ಚಂಪ. ೧೦-೦). [ಸಂ.]

**ಪುಷ್ಕರಜ** (ನಾ). ೧. ನೀರಿನಲ್ಲಿ ಹುಟ್ಟಿದುದು; ಕಮಲ. ೨. ಕಮಲದಲ್ಲಿ ಹುಟ್ಟಿದವನು; ಬ್ರಹ್ಮ. ೧, ೨: ಹರಿ ಹುಸು ಳವಿ ಕೌಶಿಕಂ ಶಿಖಿ ಮಹೀಜಾತಂ ಶುಕಂ ಭೃಂಗ ಪುಷ್ಕರಜಂ ಚಕ್ರವಿನಾಯಕಂ . . . ರಂಜಿಸುತ್ತಿರ್ಪ ಶಂಕರನಾಸ್ಥಾನದ ಮಾಳ್ಕೆಯಿಂದೆ ಓರಿದೊಪ್ಪುತ್ತಿರ್ದುದಂತಾವನಂ (ಶ್ರೀಪುರಿ. ೨-೦೨೬). [ಸಂ.]

**ಪುಷ್ಕರಮಿತ್ರ** (ನಾ). ತಾವರೆಯ ಗೆಳೆಯ; ಸೂರ್ಯ: ಪುಷ್ಕರಮಿತ್ರನಂದುದಯಪರ್ವತಮಂ ಪರಿವೇಱೆ ತಾರೆಗಳ್ ನಿಷ್ಕಳೆಯಾಗಿ ಪೋಗೆ ಪೊಗೆಸುತ್ತಿದ ಮುತ್ತಿನೊಲಿರ್ದುವಾಗಳಾ ಪುಷ್ಕರದೊಂದು ಪಾಂಡುರುಚಿಯಂ ತಳೆದಿರ್ದುದು ಮೂಡಣಾಗಸಂ (ಪುಣ್ಯಕಾ. ೯-೬೨). [ಸಂ.]

**ಪುಷ್ಕರಮೂಲ** (ನಾ). ಒಂದು ಬಗೆಯ ಮೂಲಿಕೆ: ಚಂಗಲಕೋಷ್ಠ: "ಪುಷ್ಕರಂ, ಕಾಶ್ಮೀರಂ, ಪದ್ಮಪತ್ರಂ, ಈ ೩ ಪುಷ್ಕರಮೂಲ" (ವಾಚರಾ. ೦೦೦); ಶುಂಠಿ, ಪುಷ್ಕರಮೂಲ . . . ಇಷ್ಟನ್ನು ಕಷಾಯವ ಕಾಸಿ ಕುಡಿಸಲು ಕಾಸ, ಶ್ವಾಸ ... ಪರಿಹರವಹವು (ವೈದ್ಯಸಾ. II, ೬೦); ಶುಂಠಿ, ಪುಷ್ಕರಮೂಲ, ನೆಲಗುಳ್ಳ . . . ಕಷಾಯ ಕಾಯಿಸಿ ಜೇನುತುಪ್ಪಗೂಡಿ ಸೇವಿಸೆ ಶ್ಲೇಷ್ಮಜ್ವರ ಗುಣವಾಗುವುದು (ಸಕಲವೈ. ೮೮). [ಸಂ.]

**ಪುಷ್ಕರವಾಣಿ** (ನಾ). ಆಕಾಶದಿಂದ ಕೇಳಿ ಬರುವ ಮಾತು; ಆಕಾಶವಾಣಿ : ಪುಷ್ಕರವಾಣಿ ನುಡಿದುದೆಲೆ ಸುಸ್ಥಿರಭೂಪತಿ ಕೇಳೆನುತ್ತೆ (ಶಬರಾಶ್ವ. ೦-೪-೯೬). [ಸಂ.]

**ಪುಷ್ಕರಾವರ್ತಕ** (ನಾ). ಅತಿಯಾಗಿ ಮಳೆಯನ್ನು ಸುರಿಸುವ ಮೇಘಗಳ ಒಂದು ಗುಂಪು: ಜಗಕೆ ಜಗತ್ಪ್ರಳಯಂಬರಮೊಗೆದೊಡೆ ಸಂವರ್ತಪುಷ್ಕರಾವರ್ತಕಮಲ್ಲಿಗವೊಂದೆ ಮಾಟ್ಕೆಯಿಂ ನೆಟ್ಟಗೆ ಕಱೆಗುಂ ಜಲಧಿ ಜಲಧಿಯೊಳ್ ಕೂಡುವಿನಂ (ಅಜಿತಪು. ೮-೦೦). 'ಪುಷ್ಕಳಾವರ್ತಕ' ಪರಾ. [ಸಂ.]

**ಪುಷ್ಕರಿ** (ನಾ). ಆನೆ; ಹಸ್ತಿ. [ಸಂ. ಪುಷ್ಕರಿನ್]

**ಪುಷ್ಕರಿಣಿ** (ನಾ). ೧. ಹೆಣ್ಣಾನೆ. ೨. (ತಾವರೆಯ) ಕೊಳ; ಕಲ್ಯಾಣಿ: "ಖಾತಾ, ಪುಷ್ಕರಿಣೀ—ಈ ೨ ಹೊಕ್ಕರಣೆ" (ಹಲಾಯು. ೦೦೧-೫೩); ಸಕಲತರ್ಕವನದಿಂ ದೀರ್ಘಿಕೆಯಿಂ ಪುಷ್ಕರಿಣಿಯಿಂ ಸರೋವರದಿಂ ಕೌತುಕಮನವರ್ಕಂಡಕೌತುಕಮಂಗಳಪುರಮಂ (ಚಂದ್ರಮಾ. ೩-೩೪); ಅವಗಾಹಿತಪಥಿಕಜನಮನಕರುಣೆಗಳೆನಿಪ ಪುಷ್ಕರಿಣಿಗಳುಂ . . . ಅನೂನ ಶೋಭೆಯಂ ಪಡೆಯೆ (ಶ್ರೀಕೃಷ್ಣ. ೯-೨೨ ಪ); ಗಂಗೆಯ ನೀರು ಹರಿದು ಬಂದು ನಮ್ಮ ತೋಟದ ಪುಷ್ಕರಿಣಿಯಲ್ಲಿ ಝರಿಯಂತೆ ಧುಮುಕುತ್ತಿತ್ತು (ನಿಬಂಧ. II, ೩). [ಸಂ. ಪುಷ್ಕರಿಣೀ]

**ಪುಷ್ಕಲ, ಪುಷ್ಕಳ** (ಗು). ೧. ಹೇರಳವಾದ; ಸಮೃದ್ಧವಾದ; ವಿಪುಲವಾದ: ಭೂಮಿಯಿಂದ ಪುಷ್ಕಲಬೆಳಸು ಬರಲು ಏನೇನನ್ನು ಮಾಡಬೇಕೋ ಎಲ್ಲವನ್ನೂ ಮಾಡಿದ ಹೊರತು ಅವನು ಏಳಿಗೆಗೆ ಬಾರನು (ಹಣಶ್ರ. ೦೫೬); ಶಿವಾಜಿಯು ಗೋಲ್ಕೊಂಡಕ್ಕೆ ದಂಡೆತ್ತಿ ಹೋಗಿ ಸುಲ್ತಾನನಿಂದ ಪುಷ್ಕಲಧನವನ್ನು ಕೈಗೆ ಹಾಕಿಸಿಕೊಂಡು ರಾಯಗಡಕ್ಕೆ ತಿರುಗಿದನು (ಛತ್ರಪ. ೦೨೩). ೨. ಉತ್ತಮವಾದ; ಶ್ರೇಷ್ಠವಾದ. (ನಾ). ೩. ಹೇರಳವಾದುದು; ಸಮೃದ್ಧವಾದುದು. ೪. ಶ್ರೇಷ್ಠನಾದವನು: "ಶ್ರೇಯಾನ್, ಶ್ರೇಷ್ಠಃ, ಪುಷ್ಕಲಃ, ಸತ್ತಮಃ, ಅತಿಶೋಭನಃ—೫

ಬಹಳ ಶ್ರೇಷ್ಠನಾದವನ ಹೆಸರುಗಳು" (ಸಿದ್ಧಾಂತಿ. ೩೩೬). ೫. ಶಿವ; ಪರಮೇಶ್ವರ. ೬. ರಾಮನ ತಮ್ಮನಾದ ಭರತನ ಮಗನ ಹೆಸರು: ಪುಷ್ಕಲಂ, ಆಗಳೆ ತಂದೆತಾಯ್ವಿರಡಿಯಾಣತಿವಡೆದು ಕಿಱಿಯಯ್ಯನ ಬೆಂಬಲಕ್ಕೆಂದು ಸಾಯಕಂಗಳನ್ನೆತ್ತಿ ಪೋಪವಸರದೊಳ್ (ರಾಮಾಶ್ವ. ೧೬-೦೯).

**ಪುಷ್ಕಳ**: ೩. ರಾಯರು ... ನನ್ನ ಜತೆಯಲ್ಲಿಯೇ ಪುಷ್ಕಳವಾದ ಭೋಜನವನ್ನು ಮುಗಿಸಿದರು (ರಾಯಚ. ೧); ನಾನು ಅದನ್ನು ಪುಷ್ಕಳವಾಗಿ ತಿಂದೆ (ಗಂಶ್ರೃ. ೬). [ಸಂ.]

**ಪುಷ್ಕಲಾವರ್ತ**, ಪುಷ್ಕಳಾವರ್ತ (ನಾ). =ಪುಷ್ಕರಾವರ್ತಕ: ಅಮರಸಮಿತಿಯು ತಂದ ಪಾಲ್ಗಡಲ ಪುಷ್ಕಲಾವರ್ತ ಬಲಾಹಕಾಂಬುದಂಗಳ್ ಕನಕಾಚಳಚೂಳಿಕೆಯೊಳ್ ಸುರಿವುತಿರ್ಪಂತಿಂದ್ರರುಂ ಭಗವದುತ್ಕ್ಷೇಪದೊಳ್ ಸುರಿಯೆ (ಶಾಂತಿಪು. ೧೦-೯೩ ವ). **ಪುಷ್ಕಳಾವರ್ತ**: ಪೌಳೋಮಿಪತಿ... ಪ್ರಳಯಕಾಳಾಂಬುದದಂತೆ ಮೊಬಗುವುಂ ಸಿಡಿಲ ಬಳಗಮನೊಳಕೊಂಡ ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸಂವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳ್ (ಕಂಕಥಾ. ೩-೯೩ ವ); ಆವರಿಸಿದವು ಪುಷ್ಕಳಾವರ್ತಾವಳಿಗಳೆನೆ ಬಹಳವಿಷಧೂಮಾವಳಿಯಲೇ ಧಾತುಗೆಟ್ಟುದು ಸಕಳಭುವನಜನ (ಕುಮಾ.ಕ. ೨೩-೭). [ಸಂ.]

**ಪುಷ್ಕಳ** 'ಪುಷ್ಕಲ' ನೋ.

**ಪುಷ್ಕಳಂ** (ಅ). ಅಧಿಕವಾಗಿ; ಅತಿಶಯವಾಗಿ: ಅಲಘುಭುಜಪ್ರತಾಪಂ . . . ಪುಷ್ಕಳಂ ಪುಷ್ಕಳನಂ ನೋಯಿಸಿದಂ (ರಾಮಾಶ್ವ. ೦೯೩-೩). [<ಪುಷ್ಕಲ]

**ಪುಷ್ಕಳಭೋಜನ** (ನಾ). ಸಮೃದ್ಧವಾದ ಊಟ,—ಭೋಜನ: ಎಲ್ಲಾ ಇಂದಿರಮ್ಮನ ದೆಶೆಯಿಂದ ನಮಗೆ ಪುಷ್ಕಳಭೋಜನವೆಂದುಕೊಂಡಿದ್ದಾರೆ (ಕಿವಶೇ. ೦೭೩). [ಸಂ. ಪುಷ್ಕಲಭೋಜನ]

**ಪುಷ್ಕಳಾವರ್ತ** 'ಪುಷ್ಕಲಾವರ್ತ' ನೋ.

**ಪುಷ್ಕಳಾವರ್ತಕ** (ನಾ). =ಪುಷ್ಕರಾವರ್ತಕ: ಭೂಧರವಿರೋಧಿ ಭೂಧರಧರಂಗೆ ಕ್ರುದ್ಧನಾಗಿ ಪುಷ್ಕಳಾವರ್ತಕನಿಕಾಯಮುಂ ಕರೆದು (ಜಗ. ೯-೬೪ ವ). [ಸಂ. ಪುಷ್ಕಲಾವರ್ತಕ]

**ಪುಷ್ಟ** (ಗು). ೧. ಚೆನ್ನಾಗಿ ಬೆಳೆಸಿದ,—ಪೋಷಿಸಿದ. ೨. ಶಕ್ತಿಸಂಪನ್ನವಾದ. ೩. ವಿಪುಲವಾದ; ಹೇರಳವಾದ; ಅಧಿಕವಾದ. ೪. ಸಮೃದ್ಧವಾದ; ಶ್ರೀಮಂತ. ೫. ಶ್ರೇಷ್ಠವಾದ; ಉತ್ತಮವಾದ. (ನಾ). ೬. ಹೆಚ್ಚಳ; ಆಧಿಕ್ಯ: "ಬಹುಳಂ ಪ್ರಭೂತಂ ಪ್ರಭೂತಿ ಬಹು ಪುಷ್ಕಳಂ ಪುಷ್ಟಮೆನೆ ಪೊತ್ತಮಕ್ಕುಂ" (ಕಂಂಗರಾ. ೨೩೬-೬). ೭. ಶಕ್ತಿವಂತ; ಸಮರ್ಥ: ಪ್ರಮದಾವಲ್ಲಭನಂತಮಧ್ಯ ಸುಖಿ ಪುಷ್ಟಂ ತ್ಯಾಗಿ . . . ಉಕ್ಷೋದ್ಭವಂ (ಜಾಕ. ೦೭-೨). [ಸಂ.]

**ಪುಷ್ಟಿ** (ನಾ). ೧. ಬೆಳೆಸುವಿಕೆ; ಪೋಷಿಸುವಿಕೆ. ೨. ಆಧಾರ; ಊರೆ. ೩. ಚೆನ್ನಾಗಿ ಬೆಳೆದ ಸ್ಥಿತಿ; ಕೊಬ್ಬಿರುವಿಕೆ. ೪. ಬೆಳವಣಿಗೆ; ಏಳಿಗೆ; ಅಭಿವೃದ್ಧಿ: ವಚನಕಾರರಿಂದ ಕನ್ನಡಭಾಷೆಗೆ ಒದಗಿದ ಪುಷ್ಟಿ ಎಷ್ಟು ವಿಧವಾದುದು (ಬಸ್ವಕು. ೦೩೭). ೫. ಒದಗಿಸುವಿಕೆ; ಪೂರೈಕೆ: ನಾಗರಿಕಮಾನವನ ರಕ್ತದ ರುಚಿಗೋ . . . ಆಹಾರದ ಪುಷ್ಟಿಗೋ ಮೋಹಿಸಿ ಅವನ ಜೊತೆಗೇ ತಾವೂ ಬಿಡಾರ ಹೂಡಿ ಕಾಡುವ ಅಲ್ಪಜಂತುಗಳು ಅನೇಕ ಇವೆ (ಪಂಚಿರು. ೪೨). ೬. ಪೂರ್ಣತೆ; ಪೂರ್ಣವಾಗಿ ಪ್ರಾಪ್ತವಾಗುವಿಕೆ: ಅನಂತಚತುಷ್ಟಯಪುಷ್ಟಿಪರಪುಷ್ಟ[ನುಂ] . . . ಅಪ್ಪ ಶಾಂತೀಶ್ವರನಕಲಂಕಾಚಾರಸಾರಂ (ಶಾಂತಿಪು. ೦೨-೨೯ ವ). ೭. ಐಶ್ವರ್ಯ; ಸಂಪತ್ತು: ಸಮಸ್ತಭಾರತಕಥಾಸಂಬಂಧಮಂ ಬಾಜಿಸಲ್ . . . ಅಕ್ಕುಂ ಧೃತಿ ತುಷ್ಟಿ ಪುಷ್ಟಿ ವಿಭವಂ (ಕಂಕಥಾ. ೦೯-೬೩). ೮. ಸಂಪತ್ತಿನ ಸುಖಪ್ರಾಪ್ತಿಗಾಗಿ ಆಚರಿಸುವ ಒಂದು ಬಗೆಯ ಧಾರ್ಮಿಕಕರ್ಮ: ಅಥರ್ವಣವೇದವು ಯಾಗಕ್ಕೆ ಉಪಯೋಗವಿಲ್ಲ. ಅದರಲ್ಲಿ ಶಾಂತಿ ಪುಷ್ಟಿ ಮೊದಲಾದ ಕರ್ಮಗಳ ವಿಧಿಯಿರುತ್ತದೆ (ಹಿಂದಶಾ. ೦೩೭); ದಿನವೂ ಒಂದಲ್ಲ ಒಂದು ಶ್ರಾದ್ಧ—ಶಾಂತಿ, ಪುಷ್ಟಿ, ಹೀಗೆ ಅವರಿಗೆ ಕಾದಿದ್ದದ್ದೇ (ಹೂಶಕ್ಷ. ೨೯). ೯. ಶಕ್ತಿ; ಸಾಮರ್ಥ್ಯ. ೧೦. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಚಂದ್ರನಾದೊಡೆ ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ ಧವಳವರ್ಣಶರೀರದಿಂ . . . ರಂಜಿಸುತ್ತಿರ್ಪಂ (ಏವೇಕ. ೨೭೭). [ಸಂ.]

**ಪುಷ್ಟಿಕರ** (ಗು). ೧. ಶಕ್ತಿದಾಯಕವಾದ; ಪೋಷಕವಾದ. (ನಾ). ೨. ಶಕ್ತಿದಾಯಕವಾದುದು: ನಮ್ಮದು ಮೊದಲೇ ಪುಷ್ಟಿಕರವಾದ ಆಹಾರಾಂಶಗಳೆಲ್ಲಾ ಇಲ್ಲದಿರುವ ಜನಾಂಗ (ಕರಶ. ೬೩). [ಸಂ.]

**ಪುಷ್ಟಿಕಾರಕ** (ಗು). ಶಕ್ತಿಯನ್ನೊದಗಿಸುವ; ಪೋಷಣೆಯನ್ನುಂಟುಮಾಡುವ; ಸತ್ತ್ವಯುಕ್ತವಾದ: ಅಪು ತಿಂಬುವವರಿಗೆ ಹಾಲು ತುಪ್ಪ ಮುಂತಾದ ಪುಷ್ಟಿಕಾರಕ ಪದಾರ್ಥಗಳು . . . ಇಲ್ಲದೆ ಹೋದರೆ . . . ಮೈ ಒಣಗಿ ಹೋಗುವದು (ಮುಂಬಯು. ೪-೪೦). [ಸಂ.]

**ಪುಷ್ಟಿಕಾರಿ** (ನಾ). =ಪುಷ್ಟಿಕರ ೨: ಆತ್ಮಗುಪ್ತಾ . . . ಮರ್ಕಟೀ—ನಸಗುನ್ನಿಗಿಡ, ಕಪಿತುರಚೀಗಿಡವೆಂದು ಕೆಲವರನ್ನುವರು, ಇದರ ಬೀಜ ಪುಷ್ಟಿಕಾರಿ (ಸಿದ್ಧಾಂತಿ. ೦೩೨) [ಸಂ. ಪುಷ್ಟಿಕಾರಿನ್]

**ಪುಷ್ಟಿಕೊಡು** (ಕ್ರಿ). ೧. ಬೆಳೆಯಲು ಸಹಾಯ ಮಾಡು; ಬೆಳಸು. ೨. ಬೆಂಬಲಿಸು; ಸಮರ್ಥಿಸು; ಬಲಪಡಿಸು: ಆಂಗ್ಲರಾಜನೀತಿಜ್ಞರು ನಿರೂಪಿಸಿದ ವಿದ್ಯಾಭ್ಯಾಸವಿನ್ಯಾಸ ಇವೆರಡಕ್ಕೂ ಪುಷ್ಟಿ ಕೊಟ್ಟಿತು (ಮುಕ್ಸಾರ. ೦೦೯ ೬೬೩೯); ಆ ಶಂಕೆಗೆ ಪುಷ್ಟಿ ಕೊಡಲು ಯಶೋದೆಯ ವರ್ತನೆಯೂ ಬಹುಮಟ್ಟಿಗೆ ಕಾರಣವಾಯಿತು (ವಾತ್ಸಲ್ಯ. ೨೪೦). [ಪುಷ್ಟಿ+ಕೊಡು$_1$]

**ಪುಷ್ಟಿಗೊಳಿಸು** (ಕ್ರಿ). =ಪುಷ್ಟಿಕೊಡು ೨: ಕೆಂಪುದೇವಯ್ಯನು ರಾಜಮರ್ಯಾದೆಯೊಡನೆ ಅರಮನೆಗೆ ಹೋಗುತ್ತಿದ್ದುದೂ ಆ ವಾರ್ತೆಯನ್ನು ಪುಷ್ಟಿಗೊಳಿಸಿದುವು (ಜದೇವ. ೩೬). [ಪುಷ್ಟಿ+ಕೊಳ್$_1$+—ಇಸು$_3$]

**ಪುಷ್ಟಿಮಾರ್ಗ** (ನಾ). ಪರಮಾತ್ಮನ ಅನುಗ್ರಹಸಂಪಾದನೆಯೇ ಮುಖ್ಯವೆಂದು ಪ್ರತಿಪಾದಿಸುವ ವೈಷ್ಣವಮತ; ವಲ್ಲಭಾಚಾರ್ಯರು ಸ್ಥಾಪಿಸಿದ ಮತ: ಈಶ್ವರಾನುಗ್ರಹ ಸಂಪಾದಿಸಬೇಕಾದರೆ ಜೀವಿ . . . ಸರ್ವಸ್ವವನ್ನೂ ಅವನಿಗೆ ಅರ್ಪಿಸಬೇಕು. ಆಗ ಅವನು ಜೀವಿಯ ವಶವಾಗುತ್ತಾನೆ. ಇದಕ್ಕೆ ಅನುಗ್ರಹ, ಪುಷ್ಟಿ, ಪೋಷಣ ಎಂದು ಹೆಸರು. ವಲ್ಲಭಾಚಾರ್ಯರ ಮತವನ್ನು ಶುದ್ಧಾದ್ವೈತವೆಂದೂ ಪುಷ್ಟಿಮಾರ್ಗವೆಂದೂ ಕರೆಯುತ್ತಾರೆ (ಭಾರದ. ೨೯೯). [ಸಂ.]

**ಪುಷ್ಟೀಕರಿಸು** (ಕ್ರಿ). ಬಲಪಡಿಸು; ಬೆಂಬಲಿಸು; ಸಮರ್ಥಿಸು: ನಾನು ಅವರ ಅಭಿಪ್ರಾಯವನ್ನು ಪುಷ್ಟೀಕರಿಸಿದೆ (ಕಂಗಾಳ್ಕ. ೩೯೬); ಕ್ಯಾಂಬೆಲ್‌ನು . . . ಸಸ್ಯಗಳ ಬಗ್ಗೆ ನಡೆಸಿದ ಸಂಶೋಧನೆಗಳಿಂದ, ತನ್ನ ಹೊಸ ತತ್ತ್ವಗಳನ್ನು ಪುಷ್ಟೀಕರಿಸಿದನು (ಸಸ್ಯಕ. ೩೩). [ಪುಷ್ಟೀಕರಣ$_0$+—ಇಸು$_3$]

**ಪುಷ್ಪ** (ನಾ). ೧. ಹೂವು; ಕುಸುಮ: "ಪ್ರಸವಂ ಪ್ರಸೂನಕಂ ಸುಮನಸಂ ಪುಷ್ಪಮೆನೆ ಕುಸುಮಮವು" (ಕಂಂಗರಾ. ೩೨-೩); ಲಲಿತವಿಚಿತ್ರಪತ್ರಫಲಪುಷ್ಪಯುತಾಟವಿ ಸೊರ್ಕಿದಾನೆಯುಂ ಬೆಳೆವುದು (ಕಂಕಥಾ. ೦-೩೪); ಭೂಜಾಳಿ . . . ಪತ್ರಪುಷ್ಪಫಲಭಾರಾಕ್ರಾಂತಮಾಗಿರ್ದುವು (ಜಗ. ೩-೭೭); ಪರಿಪರಿಯ ಪುಷ್ಪಮಂ ಸಿರಿಮುಡಿಯೊಳಗೆ ಸೂಡಿ (ವಂಬರ. ೩-೩೭). ೨. ಮುಟ್ಟು; ಋತುಸ್ರಾವ: ಪುಷ್ಪ ನಷ್ಟವಾದರೆ—ಎಕ್ಕೆಯ ಹಾಲು ಹನಿಸಿ ಬೆಲ್ಲವ ಬೆರಸಿ ಮೆದ್ದು ಮಧುರಾಹಾರವನುಣ್ಣೆ ೭ ದಿನಕ್ಕೆ ಮುಟ್ಟು ಗಾಂಬರು (ವೈದ್ಯಶಿ. ೯೦). ೩. ಒಂದು ಬಗೆಯ ಕಣ್ಣಿನ ರೋಗ. ೪. ಒಂದು ಬಗೆಯ ನೇತ್ರಾಂಜನ,—ಕಣ್ಣಿಗೆ ಲೇಪಿಸುವ ಕಾಡಿಗೆ:

"ಪುಷ್ಪಾಂಜನಂ—ಪುಷ್ಪ" (೬೫೧. ೦೦೦). 'ಕುಸುಮಾಂಜನ' ಪರಾ. ೫. ಕುದುರೆಯ ಮೈಮೇಲೆ ಇರುವ ಒಂದು ಬಗೆಯ ಚಿಹ್ನೆ : ತುರಗದ ಮೆಯ್ಯೊಳ್ ಪುಷ್ಪಂ ೯ರಿದಾದಂದಶುಭಮಾವ ಬಣ್ಣದೊಳಂ ಪಾಂಡರವಾದೊಡೆ ಶುಭಮುದನಾದರಿಪುದು ಪರಿಹರಿಪುದಸಿತಪುಷ್ಪಾದಿಗಳಂ (ಅಶ್ವಶಾ. ೩-೦೨). ೬. ಒಂದು ಬಗೆಯ ನಾಣ್ಯ : ಪಂಚಪುಷ್ಪಾಣಿ ದೇಯಾನಿ ವಿವಾಹೇ ಸತಿ ತಜ್ಞನ್ಯೈಃ (ಎಕ. IV, ೩೦-೩೯; 945). ೭. ಒಂದು ಬಗೆಯ ರತ್ನ ; ಪುಷ್ಪರಾಗ.

**ಪುಷ್ಪದಂಬಿನ ಚೆಲುವ** = ೧. ಮನ್ಮಥ. ೨. ಮನ್ಮಥನಂತೆ ಸುಂದರನಾದವನು : ಕೇಶವ ಪುಷ್ಪದಂಬಿನ ಚೆಲುವ ಸರ್ವಜ್ಞನೆಸೆದಿರ್ದ (ಶಿಶಾಗ. ೦೦-೦೩-೩). [ಸಂ.]

**ಪುಷ್ಪಂಗತಿ** (ನಾ). ಔನ್ನತ್ಯ ; ಊರ್ಧ್ವಮುಖತ್ವ: 'ಪುಷ್ಪಂಗತಿವೆಱು' ಪರಾ. [ಸಂ.]

**ಪುಷ್ಪಂಗತಿವೆಱು** (ಕ್ರಿ). ಉನ್ನತವಾಗಿರು; ಊರ್ಧ್ವಮುಖವಾಗಿರು : ಲಿಂಗದ ಭಕ್ತನಾಗಿ ಪೊಸಬೋನಮನರ್ಪಿಸಿಯೊಕ್ಕುದುಂಡು ಪುಷ್ಪಂಗತಿವೆತ್ತು ಬಾಳ್ವುದರಿದಲ್ಲೆನುತಂ ಘನಭಕ್ತಿಭಾವದಿಂ . . . ಅಮರನೀತಿಗಳ ಚರ್ಚಿಸುತಿರ್ಪರಾವಗಂ (ತ್ರಿಪುರ. ೯-೮). [ಪುಷ್ಪಂಗತಿ + ಪೆಱು₁]

**ಪುಷ್ಪಕ** (ನಾ). ೧. ಹೂವು ; ಕುಸುಮ : 'ಹೇಮಪುಷ್ಪಕ' ಪರಾ. ೨. ಒಂದು ಬಗೆಯ ಕಣ್ಣಿನ ರೋಗ. ೩. ಒಂದು ಬಗೆಯ ನೇತ್ರಾಂಜನ. ೪. ಹಿತ್ತಾಳೆ. ೫. ಮಣಿ; ರತ್ನ. ೬. ಬಿಸಿಲು. ೭. (ಕರಿಯಲು ಬಳಸುವ) ಬಾಣಲೆ. ೮. ಬಾಣಂತಿ. ೯. ಕೈಬಳೆ ; ಕಂಕಣ. ೧೦. ಕುಬೇರನ ಬಳಿಯಲ್ಲಿದ್ದು, ಅವನಿಂದ ರಾವಣನಿಗೆ ವಶವಾಗಿದ್ದ ಸ್ವಯಂಚಾಲನಶಕ್ತಿಯುಳ್ಳ ವಿಮಾನ : "ಚೈತ್ರರಥಮೆಂಬುದು ಕುಬೇರನ ಬನಂ ಪುಷ್ಪಕಮೆಂಬುದಾತನ ವಿಮಾನಂ" (ಹರಿಚ. ೦೫-೬೩); ರಕ್ಕಸರಾಯ ಪುಷ್ಪಕವೇಱಿ ನಭದಲಿ ನೋಡಲೈತಂದ (ತೊರೆರಾ. ೦೭-೦೪); ತರಿಸಿ ಧನಪನ ಪುಷ್ಪಕವ ಮುಂದಿರಿಸಿ ಬಿಜಯಂಗೈವುದೆಂದನು ನರಪತಿಗೆ ಕೈಮುಗಿದು ಲಂಕಾನಾಥನೊಲವಿನಲಿ (ತೊರೆರಾ. ೬-೫೪-೫). ೧೧. ಆಕಾಶದಲ್ಲಿ ಉಡ್ಡಾಣ ಮಾಡುವ ದೇವವಿಮಾನ : ಕಾಯವಿಲ್ಲದೆ ಪುಷ್ಪಕವ ಕಂಡ ನಮ್ಮ ಬಸವಯ್ಯನು (ಶೀಲವ.ಸ. ೦೯-೫೭) ; ಆ ಸಮಯದೊಳ್ಗಂಡ ಹೆಂಡತಿಗೆ ತನಯಂಗೆ ಭೂಸುರದ ಪುಷ್ಪಕಂಗಳ್ ಬಂದುವು (ಜೈಮಿ. ದೀ. ೫೭-೨); ನೋಡುತಿರೆ ಪುಷ್ಪಕವೋರ್ದಂಬರಕೆ ಜನತೆಯುತ್ಕಂಠೆಯಲಿ! (ಶಕ್ತಾಂಗ. ೯೦-೨೪೬೦). ೧೨. ಹೂವುಗಳಿಂದ ಅಲಂಕರಿಸಿದ ರಥ; ಪುಷ್ಪರಥ : "ಅನೇಕವಿಧಕೇಳೀವಿಳಸನಹೇತು[ಪುಷ್ಪ]ಕಂ ಪುಷ್ಪರಥಂ" (ವಸ್ತುಕೋ ೬೭-೨೭). ೧೩. ಕುಬೇರ. ೧೪. ಕುಲಪರ್ವತಗಳಲ್ಲಿ ಒಂದು : ಸುಗಂಧಿ ಶಿಖಿ ತ್ರಿಶೃಂಗಿ ಪುಷ್ಪಕ ಸುಪಕ್ಷ ಕಂಕುಶೈಲ ವೈಡೂರ್ಯ ಕಪಿಲ ಭದ್ರ ಕುಮುದ ಮಧುಮಾನ್ ಅಂಜನ ಮಕುಟ ಪಾಂಡುರ ಸಹಸ್ರಶಿಖರಿ ಪಾರಿಜಾತಮೆಂಬ ಹದಿನಾಱು ಕುಲಾಚಲಂಗಳೇ ಪೂರ್ವೋಕ್ತ ವಿಪುಳವೆಂಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ಶಿವೇಕ. ೨೦೫). ೧೫. ಅರಮನೆಯ ಒಂದು ಭಾಗ : ಪರಿಮಳದ ಪೂರಾಯಮೆನಿಸುವ ಹಿರಿಯ ಪುಷ್ಪಕದೊಳಗೆ ಹೊಕ್ಕನು ಧರಣಿಜಾತೆಯನಱಸುತಿರೆ ಹನುಮಂತ (ತೊರೆರಾ. ೦೦-೪೦). "ಹಿತ್ತಾಳೆಯೊಳು ನಯನರೋಗದೊಳು ಬಾಣಲೆಯೊಳು ಕುಬೇರನೊಳು ರತ್ನದೊಳು ಕಂಕಣದೊಳು ಅಯನದ ವಿಮಾನದೊಳು ಪುಷ್ಪಕಮೆನಿಕ್ಕು" (ರಂಗನಿ. ೧೫೨-೬೩); "ರೀತಿಕಯಕ್ಷಿರೋಗ ಧನದಂ ಮಣಿ ಸೂತಕಿ ಕಂಕಣಂ ವಿಮಾನಾತಪಯಂಬರೀಷಕುಸುಮಂಗಳು ಪುಷ್ಪಕಮಕ್ಕುಂ" (ನಾನಾರ. ೦೨೪). [ಸಂ.]

**ಪುಷ್ಪಕರಂಡ** (ನಾ). ೧. ಹೂವಿನ ಪಾತ್ರೆ; ಹೂವನ್ನಿಡುವ ಬುಟ್ಟಿ. ೨. ಅಲಂಕಾರಕ್ಕಾಗಿ ಮೇಜುಗಳ ಮೇಲೆ ಜೋಡಿಸಿ ಇಡುವ ಹೂದಾನಿ; ಪುಷ್ಪಪಾತ್ರೆ : ಪುಷ್ಪಕರಂಡದಲ್ಲಿ ಜೋಡಿಸಿಟ್ಟ ಗುಲಾಬಿಗಳಿಂದುಂಟಾಗುವ ಅನುಭವ ನಿಜಕ್ಕೂ ಬೇರೆಯಾಗಿರುತ್ತದೆ (ಶ್ರೀಕೃಕ್ರ. ೦೦). [ಸಂ.]

**ಪುಷ್ಪಕವಿಮಾನ** (ನಾ). ೧. ರಾವಣನ ವಶಕ್ಕೆ ಬಂದ ಕುಬೇರನ ವಿಮಾನ : ಪುಷ್ಪಕವಿಮಾನದ ರತ್ನವಿಚಿತ್ರಪುತ್ರಿಕಾಸಂಕುಲಮುಟ್ಟೊಡಟ್ಟುವು ಬೆಮರ್ತೊಡೆ ಕೂಡೆ ಬೆಮರ್ತುವು (ಕಂಠಾಪು. ೯-೦೦೯) ; ರಾವಣನು ಅವನ ಪುಷ್ಪಕವಿಮಾನವನ್ನು ಅಪಹರಿಸಿದನು (ಕಶಘಾ. ೪೦೪). ೨. ಇಂದ್ರನ ವಿಮಾನ : ವ್ಯಾವರ್ಣಿಸಲ್ ಬಲ್ಲನೇ ಮಹಿಯೊಳ್ ಮಾನವನೊಂದೆ ನಾಲಗೆಯೊಳಂತಾ ಭೂಭುಜಾಗಾರಮಂ ಬಹುವಿಸ್ತಾರಮನಿಂದ್ರಪುಷ್ಪಕವಿಮಾನಾಕಾರಮಂ (ಜಗ. ೨-೩೭). [ಸಂ.]

**ಪುಷ್ಪಕಳಂಬ** (ನಾ). ೧. ಹೂವಿನ ಬಾಣ. ೨. ಹೂವಿನ ಬಾಣಗಳನ್ನುಳ್ಳವನು ; ಮನ್ಮಥ : ಜೇವಣಶಾಲೆ ತುಂಬಿಗಳ ಪುಷ್ಪಕಳಂಬನ ಶಸ್ತ್ರಶಾಲೆ . . . ಮಧುಭೂಭುಜನೋಲಗಶಾಲೆ ಮಾಮರಂ (ರಾಜಶೇ. ೯-೫೩). [ಸಂ. ಪುಷ್ಪಕಲಂಬ]

**ಪುಷ್ಪಕಾಸೀಸ** (ನಾ). ೧. ಕಣ್ಣಿನ ದೋಷವನ್ನು ಪರಿಹರಿಸುವ ಒಂದು ಬಗೆಯ ಔಷಧದ್ರವ್ಯ,—ನೇತ್ರಾಂಜನ ; ಹಳದಿಬಣ್ಣದ ಕಾಸೀಸ "ವಿಸದಂ—ಪುಷ್ಪಕಾಸೀಸ" (೬೫೧. ೦೫೩). ೨. ಒಂದು ಬಗೆಯ ಔಷಧೀಸಸ್ಯ: ಪುಷ್ಪಕಾಸೀಸ ಸಸ್ಯ . . . ಈ ಗಿಡವು ಜವುಗುಪ್ರದೇಶದಲ್ಲಿ ಬೆಳೆಯುತ್ತದೆ (ಸಸ್ಯಶಾ. ೪೭). [ಸಂ.]

**ಪುಷ್ಪಕೇತು** (ನಾ). ೧. = ಪುಷ್ಪಾಂಜನ : "ರೀತಿಪುಷ್ಪಂ, ಪುಷ್ಪಕೇತುಃ, ಪೌಷ್ಪಕಂ, ಕುಸುಮಾಂಜನಂ—೪ ಕುಸುಮಾಂಜನದ ಹೆಸರು" (ಸಿದ್ಧಾಂ. ೩೦೫). ೨. ಹಿತ್ತಾಳೆಯ ಭಸ್ಮ. ೩. ಕಾಮ ; ಮನ್ಮಥ. [ಸಂ.]

**ಪುಷ್ಪಗಣೆಯ** (ನಾ). ಹೂವಿನ ಬಾಣಗಳನ್ನುಳ್ಳವನು ; ಮನ್ಮಥ : ತ್ರಿಣಯನುರೆ ಹಣೆಗಿಚ್ಚಿನಿಂದ ಬೆಂದನಾ ಪುಷ್ಪಗಣೆಯಂಗೆ ಪೊಂದೆ ನಿಮಿಷಂ ದುಃಖ ಯಿಾ ರತಿವನಿತೆಯೊಳಗಾವರಿಸಿದತುಳದುಃಖಾನಲನು ಕೊಲ್ಲದೆ ಜೀವದೊಡನೆ (ಸಸಮೋ. ೬-೫೩). [ಪುಷ್ಪ + ಗಣೆ₁ + — ಅ₇]

**ಪುಷ್ಪಚಾಪ** (ನಾ). ೧. ಹೂವಿನ ಬಿಲ್ಲು : ಅತಿಮೃದುಪುಷ್ಪಚಾಪದಳಿನೀಗುಣಟಂಕೃತಿರಾವಮಾಗಮಾಮೃತಪರಿಪೂರ್ಣಕರ್ಣಯುಗನಂ ಸಲೆ ಕೇಳಿಸದು (ಚಂದ್ರಪು. ೦-೨೭). ೨. ಮನ್ಮಥ ; ಕಾಮ : ಪೊಸತಂ ಸ್ತ್ರೀರಾಜ್ಯಮಂ ಮೇಣ್ ಪಡೆದನೊ ಬಿದಿ ಲಾವಣ್ಯಸಿಂಧುಪ್ರವಾಹಂ ಪೊಸತೀಗಳ್ ಬಂದು ಬೆಳ್ಳಂಗೆಡೆದುದೊ ಗಣಿಕಾಸೃಷ್ಟಿಯಂ ಪುಷ್ಪಚಾಪಂ ಪೊಸತಂ ಮಾಡಿಟ್ಟನೋ (ಅದಿಪು. ೦-೬೨); ಅದೇಂ ಮಾಡಿದನೊ ವಿರಹಸಂತಾಪಮಂ ಪುಷ್ಪಚಾಪಂ (ಕಾದಂಪೂ. ೬೫೭). [ಸಂ.]

**ಪುಷ್ಪಣಂದಿ** (ನಾ). ಒಬ್ಬ ಜೈನಯಂತಿಯ ಹೆಸರು : ಶ್ರೀ ಪುಷ್ಪಣನ್ದಿ ನಿಸಿಧಿಗೆ (ಎಕ. II (R), ೯೫; ೮ನೆಯ ಶತ). [ಪುಷ್ಪ + < ನಂದಿ]

**ಪುಷ್ಪದಂತ** (ನಾ). ೧. ಶಿವನ ಪರಿಚಾರಕರಲ್ಲಿ ಒಬ್ಬ. ೨. ಅಷ್ಟದಿಗ್ಗಜಗಳಲ್ಲಿ ಒಂದು ; ವಾಯುವ್ಯದಿಕ್ಕಿನ ಆನೆ: "ಐರಾವತಃ . . . ಪುಷ್ಪದಂತಃ, ಸಾರ್ವಭೌಮಃ, ಸುಪ್ರತೀಕಃ—ಈ ೮ ಮೂಡಣಂ ಕ್ರಮದಿನಿರ್ದ ದೆಸೆಯಾನೆಗಳ್" (ಹರಿಚ. ೦೬-೦೦೪) ; ಬೆದಱಿದುದಭ್ರಮೂರಮಣಂ . . . ಬಿದಿರ್ದುದು ಪುಷ್ಪದಂತಮತಿವಿಹ್ವಲಮಾದುದು ಸಾರ್ವಭೌಮಂದದಿರ್ದುದು ಸುಪ್ರತೀಕವಿರದಾಲಿಸಿ ತತ್ಪಟಹಪ್ರಣಾದಮಂ (ಕುಶ್ಯಶ. ೫-೯). ೩. ಸೂರ್ಯ ಮತ್ತು ಚಂದ್ರರಿಬ್ಬರಿಗೂ ಒಟ್ಟಾಗಿ ಇರುವ ಹೆಸರು : "ಚಂದ್ರ ಸೂರ್ಯರ್ಕಳನೊಂದಾಗಿ ಪೇೞ್ವೊಡೆ ಪುಷ್ಪದಂತರೆಂಬುದು" (ಹರಿಚ. ೨೦-೦೨೦). ೪. [ಜೈನ] ವರ್ತಮಾನ ಕಾಲದ ಇಪ್ಪತ್ತುನಾಲ್ಕು ತೀರ್ಥಂಕರರಲ್ಲಿ ಒಂಬತ್ತನೆಯವನು : ಅನಶ್ವರಸುಖಧಾಮಮನೆಮಗೀಗೆ ಪುಷ್ಪದಂತಜಿನೇಂದ್ರಂ (ಶಾಪುಂಕ.

೧೨೬); ವರಪುಷ್ಪದಂತಜಿನಪತಿ ಪರಮಶ್ರೀಮುಕ್ತಿಲಕ್ಷ್ಮಿಯಂ ಕೆಯ್ಕೊಂಡು (ಶಾಂತಿಪು. ೦೪-೩೬). [ಸಂ. ]

**ಪುಷ್ಪದರ್ಶನ** (ನಾ). ೧. ಹೂವನ್ನು ನೋಡುವಿಕೆ. ೨. ಮುಟ್ಟಾಗುವಿಕೆ ; ರಜಸ್ವಲೆಯಾಗುವಿಕೆ : ಮಕ್ಕಳನೀಯದೆ ನೋಡೆ ನಾಡೆ ನೋಯಿಸಿದವುದಿಕ್ಷುಪುಷ್ಪದವೊಲೆನ್ನಯ ನಿಷ್ಫಲಪುಷ್ಪದರ್ಶನಂ (ಶಂಕರಾ. ೦-೦೦೬). ೧, ೨ : ಪುಷ್ಪದರ್ಶನದಿಂ ಕೆಯ್ಮಾಸಿದನೆಂಬುದೀಕೆಗೆ ಪಾಟಿಯೆ ವಲಮೆಂದು ವಕ್ರೋಕ್ತಿಯಂ ನುಡಿದು (ಶಾಂತಿಪು. ೬-೬೨ ವ). [ಸಂ.]

**ಪುಷ್ಪದಾಮ** (ನಾ). ಹೂವಿನ ಸರ ; ಹೂಮಾಲೆ: ರತ್ನಾಭರಣತೋರಣ ಘಂಟಾಜಾಲಮುಕ್ತಾಲಂಬನಪುಷ್ಪದಾಮಾಷ್ಟಮಂಗಲನವನಿಧಿಪ್ರಧಾನಂಗಳುಂ (ಆದಿಪು. ೦೦-೩೨ ವ) ; ಲಲನೆಯರ್ಗಂಗರಾಗಮದು ದುರ್ವಹಮಂಶುಕ ಭಾರಮಂಗಸಂಚಲತೆಗೆ ಕಾರಣಂ ಕುಸುಮಮಾಲಿಕೆಯುಂ ಪೊಱೆ ಪುಷ್ಪದಾಮಮೇಖಲೆ ನಡೆಗಡ್ಡ . . . ಎಂದೊಡಱೆಯೆಂ ಪೊಗಟಲ್ ಸುಕುಮಾರವೃತ್ತಿಯುಂ (ಕಾದಂಬ. ೦೦೦೩) ; ಧರಣಿಸುತ ನವಪುಷ್ಪದಾಮವ ಹರಿಯ ಕಂಠದಲಿಕ್ಕಿ ಮಂಗಳಮಹಿಮನೊಪ್ಪಿದನು (ಕೌಶಿಕ. ೨-೪೯).
[ ಸಂ. ಪುಷ್ಪದಾಮನ್ ]

**ಪುಷ್ಪಧನು** (ನಾ). (ಮನ್ಮಥನ) ಹೂವಿನ ಬಿಲ್ಲು : ರತಿಯಾರ್ತದಿಂದತನು ಪುಷ್ಪಧನುವಂ ಕೋಡು ಪತಿಯನಲ್ಲಡಸಿ ಮನದೊಳಗಸಲು ಪೂಗೊಂಡು (ತಿರುಕ. ದೀ. ೭-೨೦). [ ಸಂ. ಪುಷ್ಪಧನುಸ್ ]

**ಪುಷ್ಪಧನ್ವ** (ನಾ). = ಪುಷ್ಪಚಾಪ ೨ : "ಪ್ರದ್ಯುಮ್ನಃ . . . ಪುಷ್ಪಧನ್ವಾ, ಮನೋಭವಃ— ಈ ೨೮ ಕಾಮ(ದೇವ)ನ ಪೆಸರ್" (ಹಲಾಯು. ೭-೩೪); ಪುಷ್ಪಧನ್ವನ ಕೃತಪುಣ್ಯಪುಂಜಮೆನೆ ಕಣ್ಗೆಸೆದಿರ್ದುದು ಚಂದ್ರಮಂಡಲಂ (ಸೂಕ್ತಿಸು. ೬-೨೩೦). [ ಸಂ. ಪುಷ್ಪಧನ್ವನ್ ]

**ಪುಷ್ಪಪುಟ** (ನಾ). ೧. ಹೂವಿನ ಕೋಶ. ೨. [ನಾಟ್ಯ] ಹದಿಮೂರು ಬಗೆಯ ಸಂಯುತಹಸ್ತಗಳಲ್ಲಿ ಒಂದು : ಅರಳಿದ ಹೂವಿನಾಕಾರವಾಗುವಂತೆ ಎರಡು ಅಂಗೈಗಳನ್ನೂ ಜೋಡಿಸಿ ಹಿಡಿಯುವುದು : ಮಿಗೆ ಕೈಗಳಂ ಕುಚದಲ್ಲಿ ಪುಷ್ಪಪುಟದಂತಿರಿಸಿ (ರಾಜಶೇಂ. ೪-೯೩), ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಯು ಕೆದರ್ದು (ರಾಜಶೇ. ೩-೦೯೮).
[ ಸಂ. ]

**ಪುಷ್ಪಫಲ** (ನಾ). ಬೇಲದ ಮರ ; ಕಪಿತ್ಥವೃಕ್ಷ : "ಕಪಿತ್ಥಃ . . . ಪುಷ್ಪಫಲಃ, ದಂತಶಠಃ— ೭ ಬ್ಯಾಲದ ಮರಕ್ಕೆ ಪೆಸರುಗಳು" (ಸಿದ್ಧಾಂತಿ. ೦೦೬). [ ಸಂ. ]

**ಪುಷ್ಪಬಾಣ** (ನಾ). ೧. (ಮನ್ಮಥನ) ಹೂವಿನ ಬಾಣ : ಸುಗ್ಗಿ ಬರ್ಪುದನೀ ನಂದನಕಾನೆ ಮುಂದುದೆಗೆದಂ ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣಿಕೆಗೊಟ್ಟಿಂ (ಜಗಾ. ೦೪-೬೩); ಮದನಂ ಪುಷ್ಪಬಾಣಂಗಳಂ ಹೂಡಿದ ಬಿಲ್ಲಂ ಪೊತ್ತು ಪಿಂದಂ ಬರೆ (ಗಿರಿಜಾ. ೪-೯೬). ೨. ಹೂವಿನ ಬಾಣಗಳನ್ನುಳ್ಳವನಂ ; ಮನ್ಮಥ ; ಕಾಮ : ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ (ಕಾವ್ಯಸಾ. ೩೩೦ ಶೂದ್ರಕ). [ ಸಂ. ]

**ಪುಷ್ಪಮಂಜರಿ** (ನಾ). ೧. ಹೂವುಗಳ ಗೊಂಚಲು ; ಪುಷ್ಪಗುಚ್ಛ : ಪುಷ್ಪಮಂಜರಿಯುಂ ತನ್ನ ನಿಕರ್ಣಪೂರಕಮನತ್ಯಾಶ್ಚರ್ಯದಿಂ ನೋಡಿದಂ (ಕಾದಂಬ. ೬೪೦); ಅಮರಸ್ತ್ರೀನಿಚಯಂ ವಿಚಿತ್ರಲತೆಯಂ ಛತ್ರಾಳಿ ಭೂಜಂಗಳಂ ಚಮರೀಜಾವಳಿ ಪುಷ್ಪಮಂಜರಿಯುಂ . . . ಪೋಲೆ ವಿಭ್ರಮದಿಂ ಬಂದನದೊಂದು ನಂದನವನಂ ಬರ್ಪಂತೆ ಸಂಕ್ರಂದನಂ (ಪುಷ್ಪದಂ. ೦೪-೪೩); ಮಣಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣದಾಕ್ಷಣವು ತಳ್ತಡರ್ದು ಕಿರಾತನ ಮಂಡೆಯಾಲಿರೆ (ಕಿರಾ. ೪-೦೦೬). ೨. ಒಂದು ಬಗೆಯ ಭತ್ತ,—ನೆಲ್ಲು : ಸೋಮಶಾಲಿಯು ಬಿಳಿಮಲ್ಲಿಗೆ ಕೆಂಬೂತಿ ಹೇಮವರ್ಣದ ಕೊನೆಮಾಳಿ ರಾಮಣೀಯಕವಾದ ಪುಷ್ಪಮಂಜರಿಯು ಸನಾಮದ ತೆನೆಗಳೊಪ್ಪಿಹುವು (ಕಂಸಾ. ೩-೬೯). [ ಸಂ. ಪುಷ್ಪಮಂಜರೀ ]

**ಪುಷ್ಪಮಂಟಪ** (ನಾ). ಹೂವುಗಳಿಂದ ಅಲಂಕರಿಸಿದ ಮಂಡಪ : ಆ ವನಂಗಳಲ್ಲಿ ಚಿತ್ರಶಾಲೆ ಚಂದ್ರಶಾಲೆ ಶಿಶಿರಶಾಲೆ ಸುರಭಿಶಾಲೆಗಳಲ್ಲಿ ಪುಷ್ಪ[ಪಾಠಾಂ. ಲತಾ]ಮಂಟಪ . . . ತರುವಾಟಗಳ ಶಣ್ಣೆಳಲ್ಗಳೊಳಗೆಯುಂ (ವಿವೇಕ. ೨೦೩); ಒಂದು ಪುಷ್ಪಮಂಟಪವನ್ನು ಕಟ್ಟಿ ಅದರಲ್ಲಿ ಭಗವಾನ್ ವಿಶ್ವಾಮಿತ್ರರನ್ನು ಕುಳ್ಳಿರಿಸಿ ನಾವೆಲ್ಲರೂ ಆ ರಥವನ್ನು ಎಳೆದುಕೊಂಡು ಹೋಗಬೇಕು (ಮುಕ್ತಾ. ೩೦೦). [< ಸಂ. ಪುಷ್ಪಮಂಡಪ]

**ಪುಷ್ಪಮಾರ್ಗಣ** (ನಾ). ೧. ಹೂವಿನ ಬಾಣ. ೨. ಹೂವಿನ ಬಾಣಗಳನ್ನುಳ್ಳವನಂ; ಮನ್ಮಥ : ಮಣಿಯನೆ ಕಾತ ಕಲ್ಪಲತೆ ಸಿಂಜಿನಿಯಂ ತೆಗೆದಿಟ್ಟ ಪುಷ್ಪಮಾರ್ಗಣನ ಧನುಃಶಲಾಕೆ . . . ತಾನೆನಿಸುತ್ತೆ ತಾಳ್ದ ಸನ್ಮಣಿ ಕಿಣಿಲಚ್ಛಮುತ್ತು ಕನಕಾಂಬರದಿಂ ಕಮಳಾಕ್ಷಿ ತೋಱಿದಳ್ (ರಾಜಶೇ. ೦೦-೦೬). [ಸಂ.]

**ಪುಷ್ಪಮಾಲೆ** (ನಾ). ೧. ಹೂವಿನ ದಂಡೆ,—ಮಾಲೆ ; ಹೂವಿನ ಹಾರ : ಹತ್ತಿರ ನಿಂತಿದ್ದ ಮಾಚಿಕಬ್ಬೆ ಮಗಳ ಕೈಗೆ ಪುಷ್ಪಮಾಲೆಯನ್ನು ತೆಗೆದು ಕೊಟ್ಟರು (ಶಾಂತಲಾ. ೦೦೯). ೨. ಒಂದು ಬಗೆಯ ಭತ್ತ,—ನೆಲ್ಲು : ಕುಂದದ ಚಂದ್ರಲೇಖೆ ನಸುಗುಂದದೆ ರಂಜಿಪ ಪುಷ್ಪಮಾಲೆ ಕಂದೊಂದದ ಸೋಮಶಾಲಿ . . . ನಿರಂತರಮೊಪ್ಪುವ ಧರ್ಮಗುತ್ತಿಯೆಂಬಂದದನೇಕ ನಾಮವೆಸೆಗುಂ ಮೃದುಬಂಧುರ ಗಂಧಶಾಲಿಗಳ್ (ಮಲ್ಲಿಕಾ. ೪-೬೮).
[ಸಂ. ಪುಷ್ಪಮಾಲಾ]

**ಪುಷ್ಪಮಾಸ** (ನಾ). ಗಿಡಬಳ್ಳಿಗಳು ಹೂವು ಬಿಡುವ ಸಮಯಂ; ವಸಂತಕಾಲ ; ಚೈತ್ರಮಾಸ : ಪುಷ್ಪಮಾಸವು ಕಳೆಯೆ ಪುಷ್ಪವಿರಹಿತೆಯಾಗ ಭೂಷಣವ ಕಳೆದಿಟ್ಟ ಕಾಂತೆಯಂತಿಹಳು (ಕೃಷ್ಣಾಲೋ. ೩೭). [ಸಂ.]

**ಪುಷ್ಪರಥ** (ನಾ). (ಸಂತೋಷವಿಹಾರಕ್ಕಾಗಿ) ಹೂವುಗಳಿಂದ ಸಿಂಗರಿಸಿದ ಬಂಡಿ : "ವಿನೋದದ ರಥವುಂ ಪುಷ್ಪರಥಮೆಂಬುದು" (ಹಲಾಯು. ೭೩-೨೯೨); ಮರುದಿನ ಪುಷ್ಪರಥವು ಸಿದ್ಧವಾಯಿತು (ಮುಕ್ತಾ. ೩೦೨). [ಸಂ.]

**ಪುಷ್ಪರಸ** (ನಾ). ೧. ಹೂವಿನಲ್ಲಿರುವ ಸಾರವೆತ್ತಾದ ದ್ರವ; ಮಕರಂದ : "ಮಕರಂದಃ, ಪುಷ್ಪರಸಃ—೨ ಹುವ್ವಿನ ಜೇನು, ಹುವ್ವಿನ ಬಂಡು" (ಸಿದ್ಧಾಂತಿ. ೦೦೩). ೨. ಜೇನುತುಪ್ಪ : "ಸಾರಘಂ, ಮಾಕ್ಷಿಕಂ, ಕ್ಷೌದ್ರಂ, ಮಧು, ಪುಷ್ಪರಸಃ—ಈ ೫ ಜೇನ ತುಪ್ಪಂ" (ಹಲಾಯು. ೦೦೨-೪೬೭). [ಸಂ.]

**ಪುಷ್ಪರಾಗ** (ನಾ). ನವರತ್ನಗಳಲ್ಲಿ ಒಂದು ; ನಸುಹಳದಿಬಣ್ಣದ ಒಂದು ಬಗೆಯ ಹರಳು ; ಪುಷ್ಯರಾಗ : "ಪೀತಮಣಿಃ—ಪುಷ್ಪರಾಗ" (೬೩೦. ೪೪). [ಸಂ.]

**ಪುಷ್ಪರಾಜ** (ನಾ). ೧. = ಪುಷ್ಪರಾಗ. ೨. ಹೂವುಗಳ ಅರಸ; ವಸಂತ (?) : ಆ ಲಲಿತಕುಸುಮತತಿಯಾ ಬಾಲಕಪದಪದ್ಮಮೂಲಮಂ ಬಳಸಿದುವೊಡ್ಡೋಲಗಕೆ ಪುಷ್ಪರಾಜನನೋಲಗಿಸಲ್ ಬಂದ ಪುಷ್ಪನಿಚಯದ ತೆಱದಿಂ (ಶಾಂತಿಪು. ೦೦-೬೦). [ಸಂ. ಪುಷ್ಪರಾಜನ್]

**ಪುಷ್ಪಲತೆ** (ನಾ). ಹೂವಿನ ಬಳ್ಳಿ : ಕಾಮಚಾಪದಿಂ ಜನಿಯಿಸಿದಿಕ್ಷು ಚಂದ್ರನಮರ್ದಿಂ ಮಡುಗೊಂಡ ಕೊಳಂ ದಿವಂ ತವರ್ಮನೆ ತನಗೆಂಬ ಪುಷ್ಪಲತೆ ಕಲ್ಪಮಹೀಜದ ಬೀಜದುದ್ಭವಂ (ಶಾಂತಿಪು. ೨-೩೬). [ಸಂ. ಪುಷ್ಪಲತಾ]

**ಪುಷ್ಪಲಾವ** (ನಾ). ಹೂವುಗಳನ್ನು ಆಯ್ದು ತರುವವನು; ಹೂವಾಡಿಗ. [ಸಂ.]

**ಪುಷ್ಪಲಾವಕ** (ನಾ). = ಪುಷ್ಪಲಾವ : ಹರಿಯಂ ಕಾಣ್ಬುದುಮಾದುದು ಪರಮಜ್ಞತೆ ಪುಷ್ಪಲಾವಕಂಗಮಿದೇನಚ್ಚರಿ (ಜಗಾ. ೬-೦೪). [ಸಂ.]

**ಪುಷ್ಪಲಾವಿ** (ನಾ). ಹೂವಾಡಿಗಿತ್ತಿ ; ಹೂವಡಿತಿ : ಮಾಲೆವೂವಂ ನೆಗೞ್ ಸೊಗಯಿಕುಂ . . . ಪುಷ್ಪಲಾವೀಕದಂಬಂ (ಶಂರಾವಿ. ೦-೦೨೦); ಮಾಲೆಗಳಂ ಕೋಳ್ಗೞಿವೊಪ್ಪೆ ಕಣ್ಗೊಳಿಸುತಿರ್ಕುಂ ಪುಷ್ಪಲಾವೀಜನಂ (ಜಗು. ೯-೦೦೩). [ಸಂ. ಪುಷ್ಪಲಾವೀ]

**ಪುಷ್ಪಲಾವಿಕೆ** (ನಾ). =ಪುಷ್ಪಲಾವಿ : ಮದನನ ಪರಿಚಾರಿಕೆಯರಂತೆತ್ತು ವಂತೆ ಪೂವನೆತ್ತುವ ಪುಷ್ಪಲಾವಿಕಾಚತುಷ್ಪಥದೊಳ್ (ಶಾಂತಿಪು. ೬-೭೨ ವ). [ಸಂ. ಪುಷ್ಪಲಾವಿಕಾ]

**ಪುಷ್ಪಲಿಹ** (ನಾ). ದುಂಬಿ; ಭ್ರಮರ : "ಅಳಿ ಚಂಚರೀಕಮಿಂದಿಂದಿರಂ ತುಂಬಿ ಪುಷ್ಪಲಿಹಂ . . . ಭ್ರಮರಮಕ್ಕುಂ" (ಪಂಗನಿ. ೩೨-೦೦). [ಸಂ. ಪುಷ್ಪಲಿಹ್]

**ಪುಷ್ಪವಂತ** (ಗು). ೧. ಹೂವುಗಳುಳ್ಳ ; ಹೂವು ಬಿಡುವ : ಪುಷ್ಪವಂತ ಸಸ್ಯಗಳು . . . ಈ ಸಸ್ಯಗಳು ಹೂವುಗಳನ್ನು ಬಿಡುತ್ತವೆ(ಸಸ್ಯಶಾ. ೩).(ನಾ). ೨. ಹೂವುಗಳಿಂದ ಅಲಂಕಾರಮಾಡಿಕೊಂಡವನು. ೩. ಸೂರ್ಯ ಮತ್ತು ಚಂದ್ರರಿಬ್ಬರಿಗೂ ಕೂಡಿ ಇರುವ ಒಂದೇ ಹೆಸರು : ಅವನ ಮೆಯ್ಯೊಳಗಂ ಈ ಪುಷ್ಪವಂತರ್ಗೆ ಪೊಳೆವೊಡವಿದತ್ತೋ . . . ಆ ವನಜಾಕ್ಷನ ದಿವ್ಯಮೂರ್ತಿಯಂ ಕಣ್ ತಣಿಯೆ ಕಂಡು (ಅದ್ಭುತ. ೭-೦೭). [ಸಂ. ಪುಷ್ಪವತ್]

**ಪುಷ್ಪವತಿ** (ನಾ). ೧. ಮುಟ್ಟಾದವಳ್ ; ಋತುಮತಿ ; ರಜಸ್ವಲೆ : "ಅವೀ, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ — ಈ ೫ ಮುಟ್ಟುವೆಂಗಡವಳ್" (ಹಲಾಯು. ೬೦-೩೪೯); ಒಂದು ದಿವಸಂ ದೇವಕೀ ದೇವಿ ಪುಷ್ಪವತಿಯಾಗಿ (ಜಗು. ೨-೫೯ ವ); ನೀ ಪುಷ್ಪವತಿಯಾಗಲ್ಲಿ ಫಲ ವತಿಯಾಗು ನಡೆ ಕುರುರಾಯಭವನದಲಿ (ಕುವ್ಯಾಸ. ೦೯ ೭೫). ೨. ಹೂವುಗಳನ್ನು ಉಳ್ಳ ಬಳ್ಳಿ; ಹೂವುಬಿಟ್ಟ ಬಳ್ಳಿ : "ಪುಷ್ಪವತೀ =ಹೂತ ಬಳ್ಳಿ" (ಕಾಶಕೃ. ೦೬೩). ೧, ೨ : ವರಾಂಗಿ ಲತೆಯಂತೆ ಪುಷ್ಪವತಿ ಯಾಗಿರ್ಕುಂ (ರಾಜಶೇಖ. ೯-೦೭೯); ಸಲೆ ಪಂಥ್ಯಾಲಯಮೆಂತಿರೆ ಪಲಕಾಲಂ ಪುಷ್ಪವತಿಯೆನಾದಪೆನೆಂದುಂ ಫಲವತಿಯಾದಪೆನಿಲ್ಲೆಂದು ಲತಾಲಲಿತಾಂಗಿ ಬಾಡಿ ಪಾಡೞಿದಂಗಂ (ಸುಕುಮಾ. ೯-೯೮); ಪರಪುಷ್ಪ ವತಿಲತೆ ಬಾಗಿ ತಬ್ಬಿದಳೆಂದು ಮಿಂದೆದ್ದು ವಿಮಲವಾರಿಯನು ಮತ್ತೆ ಸೋಂಕುವಳೆಂದು ಅಂಜಿ ಮಾರುತನಿಂದು ಮೆಲ್ಲಮೆಲ್ಲನೆ ಬರುತಿಹನು (ರಂಜಾಶ. ೯೭-೭೨). [ಸಂ. ಪುಷ್ಪವತೀ]

**ಪುಷ್ಪವರ್ಷ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ : ಜಯನಿನದಂ ಸುರದುಂದುಭಿಜಯನಿನದಂ ಪುಷ್ಪವರ್ಷಮೊರ್ಮೆಯೆ . ಸಕಲೋರ್ವಿಯು ನೆಯ್ದೆ ಪರ್ವುತಿರೆ ಚಿತ್ರಯ ಸಂಯುತೆಱಗೆ ಪೋದುದಮರಸಮಾಜಂ (ಆದಿಪು. ೦೯-೦೯೭); ಕರಂ ಸೊಗಯಿಪನ್ನೆಗಮಾಗಳೆ ತೋಱೆ ತನ್ನ ರೂಪಂ ಕೞೆದಂ ಬೞಿಕ್ಕಳವಿದಪ್ಪದ ಹರ್ಷದೆ ಪುಷ್ಪವರ್ಷಮಂ (ಚಂದ್ರಪ್ರ. ೫-೬೧). [ಸಂ.]

**ಪುಷ್ಪವಸೆ** (ನಾ). ಹೂವಿನ ಹಾಸುಗೆ; ಪುಷ್ಪಶಯ್ಯೆ : ಕೆಲವೆಡೆಗೆ ಕೆಂದಳಿರ ಹಸೆಗಳು ಕೆಲವು ಕೆಲವೆಡೆ ಪುಷ್ಪವಸೆಗಳು (ಕೌಶಿರಾ. ೦೦-೨೨). [ಪುಷ್ಪ + ಪಸ್ಯ]

**ಪುಷ್ಪವಾಟ** (ನಾ). ಹೂವಿನ ತೋಟ ; ಹೂದೋಟ : ಇಕ್ಷು ಪುಷ್ಪ ವಾಟಂಗಳನಾವ ಮಂಡಲಮುಮಂ ಗೆಲೆವಂದುದು ಮೆಗಿಮಂಡಲಂ (ರಾಪು. ೦-೨೦); ಪುಷ್ಪವಾಟದಿನಗಲ್ದಬ್ಜಾಕರಕ್ಕಾಗಿ ಪೊರ್ದುವ ಮತ್ತ ಭ್ರಮರಾಳಿ . . . ಎತ್ತಲುಂ ಸೊಗಯಿಕುಂ ಚಂಪಾಪುರೋಪಾಂತದೊಳ್ (ಸುಕುಮಾ. ೯-೯೩). [ಸಂ.]

**ಪುಷ್ಪವಾಟಿ** (ನಾ). = ಪುಷ್ಪವಾಟ : " ಹೂವಿನ ತೋಂಟಮಂ ಪುಷ್ಪ ವಾಟಿಯೆಂಬುದು " (ಹಲಾಯು, ೩೭-೭೦); ಅಗಳುಂ ಮುಸುಱೆ ನಿಂದಳಿ ಮಾಲೆಯ ಗೀತನಿಸ್ವನಾಭೋಗದೆ ಪುಷ್ಪವಾಟಿ ಬಗೆಗೊಳ್ವುದನಾಗನ ಗೀತಶಾಲೆವೋಲ್ (ಜಗು. ೯-೯೩); ಅಲರ್ಗಣೆ ಪುಷ್ಪವಾಟಿಕಾಲದೊಳ್ ಬಳೆದಿಪ್ಪುವು ಮಿನಕೇತುಗಳ್ ಜಲರುಹಷಂಡದೊಳ್ ಮೆಱೆವುತಿರ್ದಪುವು (ಅನಂಪು. ೩-೮). [ಸಂ. ಪುಷ್ಪವಾಟೀ]

**ಪುಷ್ಪವಾಟಿಕ** (ನಾ). = ಪುಷ್ಪವಾಟ : ಲಿಂಗಂಗಳಿಗೆ ಕೂರ್ತು ತಂದು ಪೂಜಿಪ ಪುಷ್ಪವಾಟಿಕವೃಂದವುಂ ಲಿಂಗಂಗಳಿಗೆ ನಯಮೊಂದಿ ಧೂಪವ ನೀವ ಗುಗ್ಗುಳತರುಸಮುಚ್ಚಯವು (ಬಸವು. ೦೯-೭೦). [ಸಂ. ಪುಷ್ಪವಾಟಿಕಾ]

**ಪುಷ್ಪವಾಟಿಕೆ** (ನಾ). = ಪುಷ್ಪವಾಟ : ಪುಷ್ಪವಾಟಿಕೆಗಳು ಮುರುಟಿದವು ಪಶುಗಳಱಿದುವು (ಬಸವು. ೫೭-೯೮); ಪೂಗಳಿಂದ ತಮ್ಮ ಮಯಾವ ಸೌಂದರ್ಯವಂ ಏಟರಿಗೆ ತೋರಿಸುವಂತೆ ಮಾರುವ ಮಾಲೆಕಾರನ ಬಾಲೆಯರಿಂ ಮನೋಹರಮಾದ ಪುಷ್ಪವಾಟಿಕೆಗಳಿಂ (ಸೌಗಂಧಿ. ೫-೦); ತುಂಬಿಗಳು ಪುಷ್ಪವಾಟಿಕೆಯು ಬಳಿ ಹಾಡುತ್ತಿವೆ (ಶಾಕುಂ. ೭). [ಸಂ. ಪುಷ್ಪವಾಟಿಕಾ]

**ಪುಷ್ಪವಾಸ** (ನಾ). ಹೂವಿನ ವಾಸನೆ ; ಪುಷ್ಪಗಂಧ : ಸುಕುಮಾರಂ . . . ಪುಷ್ಪವಾಸದಕ್ಕಿಯ ಕೂಳನಲ್ಲದೆ ಮತ್ತಿನಾಹಾರಮನುಂಡಱಿಯಂ (ಜೀವಸಂ. ೦೦೭-೩೫ ವ). [ಸಂ.]

**ಪುಷ್ಪವೃಷ್ಟಿ** (ನಾ). =ಪುಷ್ಪವರ್ಷ : ಆ ರಾಜಭವನದೊಳ್ ವಸುಧಾರೆಯು ತಣ್ಣೆಲರ ಪುಷ್ಪವೃಷ್ಟಿಯು ಸುರಭೇರೀರವದ ಪೊಗೞ್ತೆ ದೇವರಹೋರಭಸದ ಪುದುಂಪಿನಾಯ್ತು ಪಂಚಾಶ್ಚರ್ಯಂ (ಶ್ರೀಪು. ೦೯-೦೦); ಅಂತರಿಕ್ಷದಲ್ಲಿ ಅಮರರು ನೋಡಿ ಆಗ ಪುಷ್ಪವೃಷ್ಟಿಯನ್ನೆ ಕಱೆಯಲು (ಪುರಂದ. ೯-೭-೭); ಆಕಾಶದಲ್ಲಿ ದೇವತೆಗಳೂ ಋಷಿಗಳೂ ಅಪ್ಸರೆಯರೂ ಪುಷ್ಪವೃಷ್ಟಿ ಕರೆದು ಇವನು " ಭೀಷ್ಮ!" ಎಂದು ಹೊಗಳಿದರು (ಪಚಶಾ. ೯). [ಸಂ.]

**ಪುಷ್ಪಶಯನ** (ನಾ). ಹೂವಿನ ಹಾಸುಗೆ : ಇದು ತಾನಾಕೆ ಪೊರಳ್ದ ಪುಷ್ಪಶಯನಂ . . . ಇದು ಹಸ್ತಾಬ್ಜದೆ ಜಾರಿದಾಕೆಯ ಮೃಣಾಳೀ ಕಂಕಣಂ (ಶಾಕುಂತ. ೯೩-೭೭). [ಸಂ.]

**ಪುಷ್ಪಶಯ್ಯೆ** (ನಾ). = ಪುಷ್ಪಶಯನ : ಜನತಾಸೇವೆಯೆಂದರೆ ಪುಷ್ಪ ಶಯ್ಯೆಯಲ್ಲ, ಮುಳ್ಳಿನ ಹಾಸಿಗೆ (ಜಕಸ. ೦೦೦). [ಸಂ. ಪುಷ್ಪಶಯ್ಯಾ]

**ಪುಷ್ಪಶರ** (ನಾ). ೧. (ಮನ್ಮಥನ) ಹೂವಿನ ಬಾಣ : ಪುಷ್ಪಶರತೀವ್ರತೆ ಯೆಂತು ರವಿಪ್ರತಾಪಮೆಂತಳಿಕುಳದಂಗನೀಳರುಚಿಯೆಂತು ನಿಜಂ ತನಗಂತು ಸದ್ಗುಣಾವಳಿ ಸಹಜಾತಂ (ಶಾಂತಿಪು. ೭-೦೦೯). ೨. ಮನ್ಮಥ ; ಕಾಮ : ಜಿತಕಾಮರ್ ಮರುಳಾದರ್ ಪುಷ್ಪಶರನ ಪಡೆ ನಡೆವಾಗಳ್ (ಗಿರಿಜಾ. ೬-೮). [ಸಂ.]

**ಪುಷ್ಪಸಮಯ** (ನಾ). ೧. ಹೂವು ಬಿಡುವ ಕಾಲ ; ವಸಂತಮಾಸ : "ವಸಂತಃ, ಪುಷ್ಪಸಮಯಃ, ಸುರಭಿಃ—೩ ವಸಂತಋತುವಿನ ಹೆಸರುಗಳು " (ಸಿದ್ಧಾಂತ. ೯೦). ೨. ಮುಟ್ಟಾಗುವ ಕಾಲ; ಋತು ವಾಗುವ ಸಮಯ : ಮೂಡಿದ ಮೊಡವಿ ಮುಗುಳ್ಮೊಗವೀಡಿ ಱವುನ್ಮಂಜರೀಸ್ತನಂ ತೋಳ್ಮೊದಲೊಳ್ ಕೀಡುವ ನಱುಗಂಪೇಂ ಪಿಸು ಣಾಡಿದುದೋ ಸತಿಗೆ ಪುಷ್ಪಸಮಯೋದಯಮಂ (ಶ್ರೀಪು. ೩-೦೦೫). [ಸಂ.]

**ಪುಷ್ಪಸಾಯಕ** (ನಾ). ೧. (ಮನ್ಮಥನ) ಹೂವಿನ ಬಾಣ : ಪುಳಿಂದರಾದಿರ್ಗೆ ಸಿಡಿಲ್ದುಗುತಂದುವು ಪುಷ್ಪಸಾಯಕಂಗಳ ಪೊಗರ್ವಟ್ಟು ಚಂದ್ರಿಕೆಯ ಬಟ್ಟು . . . ಎಂಬ ವಾರಿಧರವಾರಣವೇಣುವರಾಹಮೌಕ್ತಿಕಂ (ಜಗು. ೦೭-೨೮). ೨. ಕಾಮ ; ಮನ್ಮಥ : ಬಿಲ್ ಪುರ್ವು ಬಾಣಂ ನಿಜಾಕ್ಷಿ ವನಕ್ರೀಡೆಗೆ ಪುಷ್ಪಸಾಯಕನಿಭಂ ತನ್ನಾಯಕಂ ಸಿಲ್ಕುದುಂ (ಶಾಂತಿಪು. ೬-೦೦); ಇಂದುಪಯೋಜಜಂಗೆ ಕೃತಕೃತ್ಯತೆ ಸಾರ್ದುದು ಪುಷ್ಪಸಾಯಕಂಗಿಂದೊಳ

ಸೋರ್ಮುದೇಸುವಸಂ . . . ಎಂದು ನೋಡಿದರ್ (ಶಂಪ್ರಶು. ೬-೬೯); ಪುಷ್ಪಸಾಯಕ ಜಗದೇಕವೀರನ ಮದಂಗಿಡೆ ಮರ್ದಿಸಿದ ಪ್ರತರ್ಕ್ಯನೊಳ್ . . . ಎಚ್ಚು ಗೆಲ್ವ ಬಗೆಯಾಂತೆನಿದೆನ್ನಯ ಮೋಹಮೆಂತುಟೋ (ಶಬಶಂ. ೯-೦೨೬). [ಸಂ.]

**ಪುಷ್ಪಸ್ರಜ** (ನಾ). ಹೂವಿನ ಮಾಲೆ: ಅನಲ್ಪಕಲ್ಪಲತಿಕಾಪುಷ್ಪಸ್ರಜಾ ಮೋದಂ . . . ಸೌಗಂಧ್ಯಮಂದೀಕೃತಭೃಪಂರಂ ತೆಕ್ಕನೆ ತೀವೆ ಗಂಧ ಮಯಂಮಾಯ್ತಂದಾ ಮಹಾಮಂಡಪಂ (ಪುಶ್ಕಪು. ೦೦-೯೦). [ಸಂ. ಪುಷ್ಪಸ್ರಜ್]

**ಪುಷ್ಪಹೀನೆ** (ನಾ). ಮುಟ್ಟು ನಿಂತು ಹೋದವಳು; ಮಕ್ಕಳಾಗುವ ವಯಸ್ಸನ್ನು ಮೀರಿದವಳು: "ಪುಷ್ಪಹೀನಾ, ನಿಷ್ಫಲಾ – ಈ ೨ ಮುಟ್ಟುವೆ ಮಣ್ಣಾವಳ್" (ಶಬಾಯು. ೬೨-೩೩೩). [ಸಂ. ಪುಷ್ಪಹೀನಾ]

**ಪುಷ್ಪಾಂಜನ** (ನಾ). ಹಿತ್ತಾಳೆಯ ಭಸ್ಮದಿಂದ ತಯಾರಿಸಿದ ಒಂದು ಬಗೆಯ ನೇತ್ರಾಂಜನ,–ಕಣ್ಣಿಗೆ ಲೇಪಿಸುವ ಕಾಡಿಗೆ: "ಪುಷ್ಪಕೇತು– ಪುಷ್ಪಾಂಜನ" (ಓಶಂ. ೦೦೦). 'ಕುಸುಮಾಂಜನ' ಪರಾ. [ಸಂ.]

**ಪುಷ್ಪಾಂಜಲಿ, ಪುಷ್ಪಾಂಜಳಿ** (ನಾ). ೧. ಬೊಗಸೆಯ ತುಂಬ ಇರುವ ಹೂವು. ೨. ಬೊಗಸೆಯಲ್ಲಿ ಹೂವುಗಳನ್ನು ತಂದು ಅರ್ಪಿಸುವಿಕೆ; ☞ ನೃತ್ಯ, ನಾಟಕಪ್ರಯೋಗಗಳ ಆರಂಭದಲ್ಲಿ ರಂಗಪೂಜೆಯ ಅಂಗವಾಗಿ, ರಂಗಭೂಮಿಯ ಎಲ್ಲ ಭಾಗಗಳಿಗೂ ಬೊಗಸೆಯಿಂದ ಹೂವುಗಳನ್ನು ಚೆಲ್ಲುವ ಪರಿಪಾಟಿಯು 'ಪುಷ್ಪಾಂಜಲಿ' ಯೆನಿಸಿ ಕೊಂಡಿದೆ: ಕಂತು ಪುಷ್ಪಾಂಜಲಿಯಂ ಸೂಸಿದ ಪದದೊಳ್ ಸಭೆಗಂ ಸೂಸಿದನೊಡನೊಡನೆ ನನೆಮು ಮೊನೆಯಂಬುಗಳಂ (ಅಪು. ೯–೩೦); ಬಸವ ರಾಜಂ ನಲಿದು ಪುಷ್ಪಾಂಜಲಿಯನೀಯೆ (ಬಸಪು. ೬-೪೦); ನಾಟ್ಯಕಾರರು ಪುಷ್ಪಾಂಜಲಿಯೊಡನೆ ಪ್ರಾರಂಭಿಸುತ್ತಾರೆ (ಭಾರತ. ೩೩೬). ಪುಷ್ಪಾಂಜಳಿ: ೨. ನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಳಿಯಂ ಕೆದಱೆ (ಶಾಂತಿಪು. ೦೦-೬೦ ವ); ಸುರದ್ರುಮಪುಷ್ಪಪ್ರಕರದೆ ರಂಗಮಧ್ಯದೊಳ್ ಮಾಡಿ ಮುಂದೆ ಪುಷ್ಪಾಂಜಳಿಯಂ (ಅಪು. ೩ ೬೦); ಇದು ಸಾಧ್ಯತಾಂಡವಾರಂಭದೊಳೀಶ್ವರದಾಹುನರ್ತನಕ್ಷೇಪದೊಳಿಕ್ಕಿದ ಪುಷ್ಪಾಂಜಳಿಯೆನಲೇನುಪಯಿಸಿದುದೊ ಗಗನದೊಳಗೆ ತಾರಾನಿಕರಂ (ಪುಶ್ಕಪು. ೯-೦೦೨). [ಸಂ.]

**ಪುಷ್ಪಾಂಜಳಿ** 'ಪುಷ್ಪಾಂಜಲಿ' ನೋ.

**ಪುಷ್ಪಾಂಜುಲಿ, ಪುಷ್ಪಾಂಜುಳಿ** (ನಾ). ೧. = ಪುಷ್ಪಾಂಜಲಿ ೧: ಒಲವು ಮಿಗೆ ಲಲಿತಾರ್ಘ್ಯಪುಷ್ಪಾಂಜುಲಿ[ಪಾಠಾಂ. ಳಿ]ಯನರ್ಪಿಸಿ (ಬಿಸಪು. ೬೦-೫೦). ೨. = ಪುಷ್ಪಾಂಜಲಿ ೨: ಒಲವಿನಿಂದಾ ಮೆಲ್ಲಡಿಗಳಂ ತೊಳೆದು ಪುಷ್ಪಾಂಜುಲಿ[ಪಾಠಾಂ. ಳಿ]ಗಳಂ ಕೈಗೊಳಿಸಿ (ಬಸಪು. ೬೨-೬೦); ಪುಷ್ಪಾಂಜುಳಿ: ೨. ಎಡೆಯಿಡದ ಪುಷ್ಪಾಂಜುಳಿಗಳಿ ಅಗ ಮೆರ್ಮಳೆಯಾಗೆ (ರಾಶತ. ೯-೯). [< ಪುಷ್ಪಾಂಜಲಿ]

**ಪುಷ್ಪಾಂಜುಳಿ** 'ಪುಷ್ಪಾಂಜುಲಿ' ನೋ.

**ಪುಷ್ಪಾಪಚಯ** (ನಾ). ಗಿಡಬಳ್ಳಿಗಳಿಂದ ಹೂವುಗಳನ್ನು ಬಿಡಿಸುವುದು,–ಕಿರಿಯುವುದು: ಮೇಘರಥಂ ವನವಿಹಾರದೊಳಿರೆ ತದೀಯಾಂತಃಪುರಾವರೋಧಜನಂ ಪುಷ್ಪಾಪಚಯಾಸಕ್ತಿಯಿಂ ವನಮಂ ತೊಲಗುತ್ತುಂ (ಶಾಂತಿಪು. ೯-೭೬ ವ); ಅಂತು ನಿರ್ವರ್ತಿತ ಪುಷ್ಪಾಪಚಯವಿನೋದ ರುರಾಗಿ (ಜಾಪು. ೦೯. ೯೯ವ). [ಪುಷ್ಪ+ಅಪಚಯ]

**ಪುಷ್ಪಾಯುಧ** (ನಾ). ಹೂವಿನ ಬಾಣಗಳನ್ನುಳ್ಳವನಂ; ಕಾಮ; ಮನ್ಮಥ: "ಮನಸಿಜಂ ಮನ್ಮಥಂ ಕಂದರ್ಪನಂಗಜಂ . . . ದರ್ಪಕಂ ಪುಷ್ಪಾಯುಧಂ" (ಮಂಗನಿ. ೭-೩೨); ಪುಷ್ಪಾಯುಧನ ಕೋದ ಕೊಳ್ಗೊಳಸಂ ಪೋಲ್ತು ಪೂಗೊಳದೊಳ್ ಸಾಜನ್ಯಕಂದಾಂಕುರನುಮಪ್ಪ ವಜಾಪ್ರಯುಧಾ . . . ಜಳಕ್ರೀಡಾವಿನೋದದೊಳಿರೆ (ಶಾಂತಿಪು. ೯-೯೭ ವ); ಅಂಗಜಾಗೀ ತ್ರಿಜಗಮುಮಿದಿರಿಲ್ಲೆಂಬಿನಂ ಪೂವಿನಂಬಿಂ ತಿರುವಾಯೊಳ್ಪೂಡಿ ಪುಷ್ಪಾಯುಧನಿರೆ ಕೆಲದೊಳ್ ಲೀಲೆಯಿಂ ಬಾಲೆಯಿರ್ಪಳ್ (ಜಗಪು. ೦೦-೦೭); ನೋಡು ನೋಡಿದು ಪುಷ್ಪಾಯುಧಪದ್ಮರಾಗಮುಕುರಪ್ರದ್ಯೋತವೋ . . . ಎಂಬ ಸಂಪದಮಂ ಬೀಱುದುದಿಂದ್ರದಿಗ್ವಿಪರದೊಳ್ ಚಂದ್ರದ್ಯುತಿ ಪ್ರಾಭವಂ (ಗಿಂಕ. ೯-೯೯). [ಸಂ.]

**ಪುಷ್ಪಾಯುಧಕೇಳಿ** (ನಾ). ಕಾಮಕೇಳಿ; ಸಂಭೋಗ: ಮತ್ತೀಯಸಿಯಿಂಪುವೆತ್ತ ತಂಟಿಯಂ ದಯೆಯಿಂದವೆ ಪೀರ್ದನಲ್ತೆ ಪುಷ್ಪಾಯುಧ ಕೇಳಿಯೊಳ್ (ಪುಸುಚ. ೯೦-೦೫೦). [ಸಂ. ಪುಷ್ಪಾಯುಧಕೇಳಿ]

**ಪುಷ್ಪಾಯುಧವೈರಿ** (ನಾ). ಕಾಮನ ಶತ್ರು; ಶಿವ: ಪೊಜಮಟ್ಟ ದಟಂ ನಡೆಗೊಂಡಲ್ಲಿ ಪುಷ್ಪಾಯುಧವೈರಿಯಂಘ್ರಿಗಳನಾಂತರ್ದಯೊಳ್ಳಿಗೆ ರಾಜಶೇಖರಂ (ರಾಶಕೇ. ೦೯-೯೩). [ಸಂ. ಪುಷ್ಪಾಯುಧವೈರಿನ್]

**ಪುಷ್ಪಾರ್ಘ್ಯ** (ನಾ). ಹೂವುಗಳ ಕಾಣಿಕೆ,—ಅರ್ಘ್ಯ: ಬಂದಿ ದಿಗ್ಗೊಳ್ಳಂತಾಯ್ತು ಕಲ್ಪಕ್ಷಿತಿರುಹಬಹುಪುಷ್ಪಾರ್ಘ್ಯದಿಂದೆಂಬಿನಂ ಚೆಲ್ವಿದ ಗೋಡಶ್ತಿಂಪ್ರಶೈಲಕ್ಕತಿಶಯಮಹಿಮಂ ಬಾದೊಡಂದಾದಿದೇವಂ (ಅಪು. ೭-೬೨). [ಸಂ.]

**ಪುಷ್ಪಾಸವ** (ನಾ). ಹೂವಿನ ರಸ; ಜೇನು; ಮಕರಂದ: ತೀರಸ್ಥ ಲವಂಗಚೂತಲವಲೀಪುಷ್ಪಾಸವಾಸ್ವಾದಿತಾಲಿಯುತೋನ್ಮಾದೆಯ . . . ಸೀತೋದೆಯ ಪೋಲ್ವೆಗಿಲ್ಲ ತೊಱೆಗಳ್ ವಿಶ್ವಂಭರಾಭಾಗದೊಳ್ (ಅಪು. ೦-೩೯); ಪುಷ್ಪಾಸವವನ್ನು ಸೆಳುವ ತೊತ್ತಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೦೭). [ಸಂ.]

**ಪುಷ್ಪಾಸಾರ** (ನಾ). ಹೂಮಳೆ; ಪುಷ್ಪವೃಷ್ಟಿ: ನುತ ಪುಷ್ಪಾಸಾರ ಮುದ್ಯದ್ದಿವಿಜಜಯನಿನಾದಂ . . . ಚಾರುಸಿಂಹಾಸನಮೆನೆ ನೆಗೞ್ದೀ ಪ್ರಾತಿಹಾರ್ಯಾಷ್ಟಕಂ ವಿಶ್ರುತಮಾಗಿರ್ಪಂ ಸುರೇಂದ್ರೋಪಕೃತಮೆನಿಸಿ (ಸುಕುಮಾ. ೯-೫೦). [ಸಂ.]

**ಪುಷ್ಪಾಸ್ತ್ರ** (ನಾ). ೧. (ಕಾಮನ) ಹೂವಿನ ಬಾಣ: ಇದು ನಿನ್ನರ್ಚಿಸು ವಿಕ್ಷುಚಾಪವಿದು ನಿನ್ನೀ ಲೋಕಮಂ ಕೈಗೆ ಮಾಡಿದ ಪುಷ್ಪಾಸ್ತ್ರಂ (ಅಪು. ೦೦-೦೭). ೨. ಕಾಮ; ಮನ್ಮಥ. [ಸಂ.]

**ಪುಷ್ಪಿಣಿ** (ನಾ). ೧. ಹೂವು ಬಿಟ್ಟಿರುವುದು; ಹೂತುದು. ೨. ಮುಟ್ಟಾದವಳು; ಋತುಮತಿ: "ಪುಷ್ಪಿಣೀ–ರಜಸ್ವಲೆ" (ಶಾಕ್ಕ. ೦೯೩). ೧, ೨: ಅವಗಂ ಪುಷ್ಪಿಣಿಯರಾಗಿರ್ಪರಿಲ್ಲಿಯ ಲತಾವಧೂಗಳಿವರ ಸೋಂಕಲೆ ಬಾರದೆಂದು ರಾಜೀವಮಿತ್ರಂ ತನ್ನ ನಿರ್ಮಲಕರಂಗಳಂ ಪೆಱ ದೆಗೆದಂ (ಕೈಬಿಜಾ. ೩-೨೩). [ಸಂ. ಪುಷ್ಪಿಣೀ]

**ಪುಷ್ಪಿತ** (ಗು). ೧. ಹೂವು ಬಿಟ್ಟ; ಹೂವರಳಿದ: ಏರಿದನು ಸೌಮಿತ್ರಿ . . . ವಿರಳ ವರ್ಣದ್ರುಮದ ಪುಷ್ಪಿತಶರೀರದಾ ಸ್ವರ್ಗಚುಂಬಿತಸಾಲಮುನ್ನತ ಶಿರದ ಕರದ ಗೋಪುರಕೆ (ಶ್ರೀರಾಮಾ. ೦೩೭–೦೯೬). (ನಾ). ೨. ಹೂವು ಬಿಟ್ಟುದು; ಹೂತುದು: ಒದೆದಶೋಕೆಯಂ ಬಕುಳಮಂ ಮುಕ್ಕುಳಿಸಿ ಮದ್ಯದಿಂದೆ . . . ಪುಷ್ಪಿತಂ ಮಾಡಿ ತೋಱಿದರಂಬುಜಾಕ್ಷಿಯರ್ (ಕೈಬಿಜಾ. ೮-೦೭). [ಸಂ.]

**ಪುಷ್ಪಿತಾಗ್ರ** (ನಾ). [ಛಂದ] ಅರ್ಧಸಮವಾದ ಅಕ್ಷರವೃತ್ತಗಳಲ್ಲಿ ಒಂದು: ಪುಷ್ಪಿತಾಗ್ರ:–ಇದರ ವಿಷಮಪಾದಗಳಲ್ಲಿ ನನರಯ ಗಣಗಳೂ ಸಮಪಾದಗಳಲ್ಲಿ ನಜಜರ ಗಣಗಳೂ ಒಂದು ಗುರುವೂ ಬರುವುವು (ಕೈಬಿಚ. ೯೯). [ಸಂ. ಪುಷ್ಪಿತಾಗ್ರಾ]

**ಪುಷ್ಪಿತೆ** (ನಾ). = ಪುಷ್ಪಿಣಿ ೨: "ತುಱುಮಿಂಡಿಯೊಂದು ಪುಷ್ಪಿತೆಯಾದ ಕಾಂತೆ" (ಶಶಸಾ. ೬೨-೩೬೨); ಮೈನೆರೆಯದೆ ಬಹುಕಾಲ ಕಳೆದ ಸ್ತ್ರೀಯು ಈ

ಚೂರ್ಣವಂ ಸೇವಿಸೆ ಪುಷ್ಪಿತೆಯಃಹಳು (ಕಕಪ್ಪ. ೧೯೬). [ಸಂ. ಪುಷ್ಪಿತಾ]

**ಪುಷ್ಪಿಸು** (ಕ್ರಿ). ಹೂವು ಬಿಡು; ಪುಷ್ಪಿತವಾಗು : ಅಲಕ್ತಕರಂಜಿತವಾದ ಚರಣಸ್ಪರ್ಶದ ಮಹಿಮೆಯಿಂದ ಪುಷ್ಪಿಸಿ ಸರ್ವದಾ ಪರಿಮಳಯುಕ್ತವಾಗಿರುವುದಾಯಿದು (ಸೌಗಂಧಿ. ೨೬೨-೦೭); ಪುಷ್ಪಿಸಿದ, ಮರಗಳ ಮಧ್ಯದಲ್ಲಿ ಪರಾವಸುವಿನ ಹೆಂಡತಿ ತನಿಯಾಗಿ ನಡೆಯುತ್ತಾ ಇದ್ದಳು (ಪ್ರಾಸತಿ. ೦೭೦). [ಪುಷ್ಪ + — ಇಸು₄]

**ಪುಷ್ಪೇಷು** (ನಾ). ೧. (ಕಾಮನ) ಹೂವಿನ ಬಾಣ : ಇವು ಕಂದರ್ಪಂಗೆ ದೋರ್ದರ್ಪವಂ . . . ಅಡರಿಸುಗುಂ ತಮ್ಮ ಪುಷ್ಪೇಷುವಿಂ ತಮ್ಮ ವಿಕಾಸೋಲ್ಲಾಸದಿಂ ತಮ್ಮ ಶಿಪರಿಮಳದಿಂ ತಮ್ಮ ಚೆಲ್ವಿಂದೆನಲ್ ಜಾತಿವನೇ ಜಾತಪ್ರಸೂನಾವಳಿಯನಿಟಿಸಿ ಸಂಪತ್ಸುವೆತ್ತಿರ್ದುದೆತ್ತಂ (ಜಗವಿ. ೪-೬೩). ೨. ಕಾಮ; ಮನ್ಮಥ : ಅದೆ ಕಂದರ್ಪಂಗೆ ದೋರ್ದರ್ಪದ ಮೊದಲದೆ ಪುಷ್ಪೇಷುಗೀ ಲೋಕಮಂ ಗೆಲ್ವದಟೆಂದತ್ತಿರ್ವ ಚೈತ್ರಧ್ವಜಾ (ಅತಶು. ೨-೪೬). [ಸಂ.]

**ಪುಷ್ಯ** (ನಾ). ೧. ಹೂವು; ಪುಷ್ಪ. ೨. ಪುಷ್ಯರಾಗವೆಂಬ ರತ್ನ. ೩. ಚಾಂದ್ರಮಾನತಿಂಗಳುಗಳಲ್ಲಿ ಹತ್ತನೆಯದು : ಅಮರ್ದಿರೆ ಪುಷ್ಯ ಪೂರ್ಣಮೆಯೊಳಂ ನಯಮಂತ್ರತಿಶುದ್ಧಮಪ್ಪ ಕುಂಕುಮಮನ ಪೂರ್ವಮಪ್ಪ ಫಲವಂ . . . ಓಡಿದಿರ್ದು ಮಾಜಲಾ ಕ್ರಮದೊಳಗಕ್ಕು ಮಾಜನೆಯ ತಿಂಗಳೊಳಯ್ವಡಿಲಾಭಮುತ್ತಮಂ (ಜಲ್ಪಜ. ೬-೪೦); ಆ ಮಾಸವೇ ಚೈತ್ರ ವೈಶಾಖ . . . ಪುಷ್ಯ ಮಾಘ ಫಾಲ್ಗುಣಮೆದು ಹನ್ನೆರಡು ತೆಜನಾಗಿಹುದು (ವಿವೇಕ. ೩೨೦); ಪುಷ್ಯಪ್ರಘಾತದೊಳ್ ಕ್ರೌಂಚ ಪಕ್ಷಿಯ ಪಂಕ್ತಿ ನೆರೆದು . . . ದನಿಸಂತೆಗೈವಂತೆವೋಲ್! (ಶ್ರೀರಾಪಾ. ೯೦-೩೯೯). ೪. ಪೂಜೆ ; ಅರ್ಚನೆ. ೫. ಬೆಲೆ; ಕ್ರಯ. ೬. ಶೂನ್ಯ; ಅಮಂಗಳ : "ಬೆಲೆ ಶೂನ್ಯ ಮಾಸ ತಾರಕಿ ಕಲು ಪೂಜೆಯುಮಾಜು ಪುಷ್ಯ ಶಬ್ದಮದಕ್ಕುಂ" (ನಾನಾಕಂ. ೧೩೨); "ಶಿಳೆಯುಂ ತಾರಗೆ ಮಾಸಭೇದ ಬೆಲೆಶೂನ್ಯಂ ಪುಷ್ಯಮಕ್ಕುಂ" (ನಾನಾರ. ೦೩೦). ೭. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಎಂಟನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : "ಪುಷ್ಯಂ ತಿಷ್ಯಮೆಂದೆನಿಕ್ಕುಂ" (ಮಂಗರಾ. ೦೨-೭); ಪುಷ್ಯ ಅಂಗೀರಸ ತಿಷ್ಯಂ ವಾಚಸ್ಪತಿ ಬೃಹಸ್ಪತಿ—ಈ ೫ ಪುಷ್ಯನಕ್ಷತ್ರಕೆ ಹೆಸರು (ಶಾಸ್ತ್ರರ. ೬೨-೦); ಪುಷ್ಯ ಪುಸಿಯದ ಕಾಳೆ (ಗಾದೆ). [ಸಂ.]

**ಪುಷ್ಯಮಾಸ** (ನಾ). ೧. = ಪುಷ್ಯ ೩: "ಪುಷ್ಯಮಾಸಮಂ ಸಹಸ್ಯಮೆಂಬುದು" (ಹಲಾಯು. ೦೯-೦೦೭). ೨. ಮಂಗಳಕಾರ್ಯಗಳು ನಡೆಯದ ತಿಂಗಳು; ಶೂನ್ಯಮಾಸ : ಪುಷ್ಯಮಾಸವೆಂದರೆ ಶೂನ್ಯಮಾಸ. ಮಂಗಳಕಾರ್ಯಗಳಿಗೆ ಪ್ರಶಸ್ತವಲ್ಲದ ತಿಂಗಳು (ರೂಢಿ). [ಸಂ.]

**ಪುಷ್ಯಮಿ** (ನಾ). ೧. = ಪುಷ್ಯ ೭ : ಆ ಖಗೋಳವಲ್ಲಿ ಅಶ್ವಿನಿ ಭರಣಿ ಕೃತ್ತಿಕಾ ರೋಹಿಣಿ ಮೃಗಶಿರಾ ಆರ್ದ್ರಾ ಪುನರ್ವಸು ಪುಷ್ಯಮಿ . . . ರೇವತಿ ಗಳೆಂಬಿಪ್ಪತ್ತೇಳು ತಾರೆಗಳು (ವಿವೇಕ. ೨೩೮); ಕಟಕದ ದೇಹವೇ ನಮ್ಮ ಪುಷ್ಯಮಿನಕ್ಷತ್ರ (ನಕ್ಷತ್ರ. ೭೬); (ಎಸವ್ಯ. XV, ೩೦). 'ಪಾಡ್ಯಮಿ' ಪರಾ. [< ಪುಷ್ಯ]

**ಪುಷ್ಯರಾಗ** (ನಾ). ೧. ಹಳದಿಬಣ್ಣದ ಒಂದು ಬಗೆಯ ರತ್ನ : "ಪೀತಕಾಂತಮೆನೆ ಪುಷ್ಯರಾಗಂ" (ಮಂಗರಾ. ೩೦-೬); ವಜ್ರದ ಕಂಬ ವಿದ್ರುಮದ ತೊಲೆ ಪುಷ್ಯರಾಗವೊಪ್ಪುವ ಜಂತೆ ಮರಕತದ ಲೋವೆ ಮುತ್ತಿನ ಸೂಸಕ (ಹಕಣ. ೪-೬); ಸಲೆ ಪುಷ್ಯರಾಗದ ತೊಲೆಗಳೆಸೆವ ಮಾಣಿ ಕಂಗಳ ಲೋವೆ ಮುತ್ತುಗಳ ಸೂಸಕಂ . . . ರಂಜಿಸಿತು ಚಾವಡಿಯ ಚೌರಸದೆಡೆಯೊಳು (ಜೈಮಿಭಾ. ೦೭-೨೩). ೨. ಒಂದು ಕುಲಪರ್ವತದ ಹೆಸರು : ಶಂಖಕೂಟ . . . ಪುಷ್ಯರಾಗ . . . ಶೈಲೇಂದ್ರಮೆಂಬ ಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕ ಪರ್ವತಕ್ಕೆ ಬಡಗಣದಿಕ್ಕಿನಲ್ಲಿಹವು (ವಿವೇಕ. ೨೦೬). [ಸಂ.]

**ಪುಸ್** (ನಾ). ಒಂದು ಅನುಕರಣ ಪದ : ಮಳೆ ಬಂದು ಪಟಾಕಿಗಳೆಲ್ಲ 'ಪುಸ್' ಎಂದುವು (ರೂಢಿ).

**ಪುಸಕಿ** (ನಾ). ಕೈಲಾಗದವನು ; ದುರ್ಬಲ : ಹೋಗೋ ಲೇ. ಹೋಗೋ . . . ಕರೀ ಕುರೀ. ಹೆಣ್ಣಾ ಪುಸಕೀ. ಕೈಲಾಗದವನೇ! (ವಠಜಾ. I, ೩೨೩). [← ಮರಾ. ಫುಸಕಾ]

**ಪುಸಕ್ಕನೆ** (ಅ). ಕೂಡಲೆ ; ಒಮ್ಮೆಲೆ ; ಒಮ್ಮಿಂದೊಮ್ಮೆಲೆ : ನಿನ್ನವ್ವ ಮನೇಲೇ ಇರಬಹುದಾಗಿತ್ತು. ಪುಸಕ್ಕನೆ ತೌರುಮನೆಗೆ ಹೊರಟುಹೋದರು (ಕಂಜಕಂ. ೯೧). [ಪುಸಕ್₀ + — ಅನೆ₁]

**ಪುಸಲತ್ತು**, **ಫುಸಲತ್ತು** (ನಾ). ೧. (ಉಕ) ಸಲಿಗೆ ; ಸದರ. ೨. ಬೆಂಬಲ ; ನೆರವು ; ಪ್ರೋತ್ಸಾಹ : ನಿನ್ನ ಪುಸಲತ್ತಿನಿಂದಲೇ ಈ ನಿನ್ನ ಬಂಧುವು ನನಗೆ ಕುಚೇಷ್ಟೆ ಮಾಡುತ್ತಿರುವನು (ಕುಳಸೀ. ೫೭); ಅತ್ತೆಯವರು ತಾವಾಗಿ ಹಂಗ ಇರವಲ್ಲರ್ಯಾಕ. ನೀವೂ ಅಷ್ಟು ಪುಸಲತ್ತು ಕೊಟ್ಟು ನನ್ನ ಕರಿಭಾವಿ ಪಾಲಾಗೂ ಹಂಗ ಮಾಡಬ್ಯಾಡಿರಿ (ಗಂಪಾಯು. ೦೩೩). **ಫುಸಲತ್ತು**: ೨. ಆಕೆಗೆ ನಿಮ್ಮ ಗೆಳತಿಯರ ಫುಸಲತ್ತು ಬಹಳ ಅದ (ಉತ್ತಗ್ಯ. ೭೮); ಗಂಡನ ಫುಸಲತ್ತು ಇದೆ. ಅದಕ್ಕಿಂತಲೇ ಪಾರ್ವತಿ ಹೀಗೆ ಮಾಡುವಳು (ಬಟ್ಟಹೂ. ೭೦). [← ಹಿಂ. ಫುಸಲಾನಾ = ಸವಿಮಾತುಗಳಿಂದ ಮನವೊಲಿಸು]

**ಪುಸಲಾಯಿಸು** (ಕ್ರಿ). ೧. ಸವಿಮಾತುಗಳಿಂದ ಮನವೊಲಿಸು,— ಪ್ರೇರಿಸು : ನಾವು ಇದಕ್ಕೂ ಸೊಗಸಾದ ಮತ್ತೊಂದು ಊರಿಗೆ ಹೋಗೋಣವೆಂದು ಮೆಲ್ಲನೆ ಪುಸಲಾಯಿಸುವನು (ಭಾಚತ್ರ. ೬); ರಾಜಣ್ಣ ಗೋಗರೆಯುವ ದನಿಯಲ್ಲಿ ಪ್ರಮಿಳಾಳನ್ನು ಪುಸಲಾಯಿಸತೊಡಗಿದ (ಮರೆ. ೩೭). ೨. ಎತ್ತಿ ಹಾಕು ; ಕಳವು ಮಾಡು : ಮನೆಮಕ್ಕಳು ಅಟ್ಟದ ಮೇಲಣ ಡಬ್ಬದಿಂದ ಲಾಡುಗಳನ್ನು ಪುಸಲಾಯಿಸಲು ಸದ್ದಿಲ್ಲದೆ ಮೆಲ್ಲಮೆಲ್ಲನೆ ಹೆಜ್ಜೆ ಹಾಕಿ ಹೋಗುವಂತೆ, ನಾವಿಬ್ಬರೂ ಕ್ಲಬ್ಬಿಗೆ ಹೋಗಲು ಸದ್ದಿಲ್ಲದೆ ಹೆಜ್ಜೆಯನ್ನು ಹಾಕಲು ಪ್ರಾರಂಭಿಸಿದೆವು (ವಠದಾ. II, ೬೮೦). [ಪುಸಲಾ₀ (೯ ← ಹಿಂ. ಫುಸಲಾನಾ) + — ಇಸು₄]

**ಪುಸಲಾವಣೆ** (ನಾ). ಸವಿಮಾತುಗಳನ್ನಾಡಿ ವಶಪಡಿಸಿಕೊಳ್ಳುವಿಕೆ,— ತನ್ನ ಪಕ್ಷಕ್ಕೆ ಸೇರಿಸಿಕೊಳ್ಳುವಿಕೆ : ಅವರ ಪುಸಲಾವಣೆಗೆ ಮರುಳಾದವನಂತೆ ನಟಿಸಿ, ಅವರ ಮಾತನ್ನೆಲ್ಲಾ ಕೇಳಿ ನನಗೆ ವರದಿ ಮಾಡಬೇಕು (ಕಲನ. ೧೦೦); ಇದೆಲ್ಲ ಎರಡನೆಯವರ ಪುಸಲಾವಣೆಯ ಫಲ (ಶ್ರೀಮಾಶ್ರ. ೯೩); ಈ ಪುಸಲಾವಣೆಯ ವಿಷಯವನ್ನು ಇವರು ತಮ್ಮ ನಿಶೆಯ ಗುಂಗಿನಲ್ಲಿ ಸಾಹೇಬಜನರಿಗೆ ಹೇಳಿದರೆ ಎಲ್ಲ ದೋಷ ನಿಮ್ಮ ಮೇಲಲ್ಲವೇ? (ಭಾರತಿ. ೭೦). [ಪುಸಲಾಯಿಸು + — ಅಣೆ₄. /ಮರಾ. ಫುಸಲಾವಣೀ]

**ಪುಸಿ₁**, ಹುಸಿ₁ (ಕ್ರಿ). ೧. ಸುಳ್ಳಾಗು ; ನಿಷ್ಫಲವಾಗು ; ವ್ಯರ್ಥವಾಗು : ಪುಸಿಗುಮೆ ದೇವ ಮಂತ್ರಮುಾಲೋಹಿವಿಜಯ ಎಂಬೀ ವಾಕ್ಯಂ (ಕಂಪಕಂ. ೨೦೦-೮); ಋಷಿಗಳಾಡಿದ ಮಾತು ಪುಸಿಯದು (ಜೈಮಿಭಾ. ೩೦-೩೬); ಶಿವನ ಬೆಸನದು ಪುಸಿವುದೇ (ಪವಪೋ. ೯-೩೮). ೨. ಕೊಟ್ಟ ಮಾತಿಗೆ ತಪ್ಪು : ಕೈಕೊಂಡ ಪ್ರತಿಜ್ಞೆಯನ್ನು ಈಡೇರಿಸದಿರು ; ವಚನಭಂಗ ಮಾಡಂ : ಚಾಳುಕ್ಯವಂಶದೊಳೆಲ್ಲಿಯುಮಿನ್ನವರೆಗಂ ನುಡಿದು ಪುಸಿವುದುಂ ಆಡಿ ಅಳುಪುವುದುಂ . . . ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೭ ವ); ಮಿಣ್ಣಳಿ ವಾಸುದೇವ ಮೂಳಭದ್ರೋದ್ಭವನ್ ನುಡಿದು ಪುಸಿಯತ್ತೊಗದಟ್ಟು ಕುಸಿಯಂ ಮಹಾಸಮುದ್ರದನ್ತೆ ಮೇರೆದಪ್ಪಬ್ಬಲದಲ್ ಮಹೇಶ್ವರನನ್ನರ್ (ಎಕ. IV, ಹೆಗ್ಗಡ. ೦೭-೦೨ ; 1033) ; ವಂಚಕನಂ ನುಡಿದು ಪುಸಿವನಂ ಸಂಗರದೊಳ್ ಹಿಂಚುವನಂ ಪುಟುಗೊಂಡದ ಸಂಚದೊಳಕ್ಕಾವ ಕಾಲಮೇಟಿದ ತೆಜದಿಂ (ದಶಕು. ೩-೦೮). ೩. ಸುಳ್ಳು ಹೇಳು ; ಅಸತ್ಯವನ್ನು ನುಡಿ: ಪುಸಿಯದುದು ಪರಾಂಗನೆಗಾಟಸದುದು ಕೊಲ್ಲದುದು

ಮೋಹಮಿಲ್ಲದುದಜೀವಂ ಪೊಸಯಿಸುವುದು ವೈರಾಗ್ಯದ ದೆಸೆಗೆಸವುದು ಧರ್ಮಂ (ಆದಿಪು. ೩-೭೯); ಇಲ್ಲದುದನೆಂತು ಪುಸಿದುಂಟೆಂಬೆಂ (ಸುಕುಮಾ. ೭-೪೬); ಕಡುಗಾಯ್ದ ಪಾರೆಯೆಂತುಂ ಸುಡಲರಿಯದು ಸತ್ಯಮುಳ್ಳನಂ ಪುಸಿವವನಂ ಸುಡುವುದು (ಧರ್ಮಾಮೃ. ೬-೦೪೦); ಪರಪ್ರಾಣಾರ್ಥಂ ಪುಸಿದೊಡೆ ದೋಷಮಿಲ್ಲ (ಧಶಾ. ೨-೦೩೯ ವ). ೪. ಮೋಸಗೊಳಿಸು ; ವಂಚಿಸು : ಬಂಚಿಸಿ ತನ್ನನುಜೆಯ ಧನಮುಂ ಚಪಲಂ ಕೊಂಡು ಪುಸಿದು ಕಳವಳಿಸಿ ಖಳಂ . . . ಈಗಳಲ್ತೆ ವಾನರನಾವಂ (ಆದಿಪು. ೩-೦೮); ಕೊಂದರಿಂದಿಂತೀಗಳ್ ಪುಸಿದೀ ಘಟೋದ್ಭವನನಾ ಕೌಂತೇಯರ್ (ಕಂಕಣ. ೧೨-೪೬). ಹುಸಿ₁ : ೧. ಆಡಿ ಹುಸಿಯಲ್ಕೆಚ್ಚು ತಪ್ಪಲು ಪೋಡಿಗಾಂಬುದು ಲೋಕ (ಸಂಕಶ. ೨೦-೪೩); ಮುನಿವಚನವಿದು ಹುಸಿಯ[ಹಾಕಂ. ತಪ್ಪ] ದಾಸುರಜನನ ತಪ್ಪದು ನಿಮಗೆ (ತೊರವ. ೦-೮-೨೦); ಸುಕ್ಷೇತ್ರದೊಳು ಬಿತ್ತಿದ ಬೀಜ ಹುಸಿವುದೆ (ಭರತ.-೩-೪೭). ೨. ನುಡಿದು ಹುಸಿವನೆ ಶರಣನು (ಬಸವ. ೬೭೩); ತತ್ವಮುಸಿ ಹುಸಿದಿಹರೆ ಉತ್ತಮರು ಕುಸಿದಿಹರೆ ನಿತ್ಯರು ಕೇಡ ಬಗೆದಿಹರೆ ಸತ್ಯವನೆತ್ತಲಱಸುವುದು (ಸರ್ವಜ್ಞ. ೦೨೬೦). ೩. "ಹುಸಿ—ಅನೃತೇ" (ಶಬ್ದಾ); ಹುಸಿಯದ ಬೇಹಾರಿಯೇ ಇಲ್ಲ (ಸಂಕಶಂ. ೦೭೭-೦೦); ಒಡಲುಗೊಂಡವ ಹುಸಿವ ಒಡಲುಗೊಂಡವ ಹುಸಿವ ಒಡಲುಗೊಂಡವನೆಂದು ನೀನೆನ್ನ ಜಡಿದೊಮ್ಮೆ ನುಡಿಯದಿರು ನೀನೆ ನ್ನಂತೊಮ್ಮೆ ಒಡಲುಗೊಂಡು ನೋಡಾ (ದೇವಾಕ. ೩೯-೦೨೩); ಆರು ಕೊಟ್ಟರು ಶರವನಿದ ಮದನಾರಿಯೋ ನಿಮ್ಮಯ್ಯನಹ ಜಂಭಾರಿಯೋ ಪೇಳ್ ಕೃಷ್ಣದ್ರೋಣರೊ ಹೇಳು ಹುಸಿಯದಿರು (ಕುಮಾರವ್ಯಾ. ೦೪-೦೩).

ಪುಸಿದು ನುಡಿವರ ಗಂಡ = ಮಾತಿಗೆ ತಪ್ಪುವವರನ್ನು ಮೆಟ್ಟುವ ವೀರ ; ಒಂದು ಬಿರುದು : ಸತ್ಯರಾಧೇಯ ಪುಸಿದು ನುಡಿವರ ಗಂಡ (ಶಾಸ. IV, ೪೮-೨೪; 1247). ಪುಸಿವರ ಶೂಲ, ಹುಸಿವರ ಶೂಲ, ಹುಸಿವರ ಸೂಲ = ಮಾತಿಗೆ ತಪ್ಪುವವರಿಗೆ ಶೂಲದಂತೆ ಇರುವವನು ; ಒಂದು ಬಿರುದು : ಒಳ್ಪಿನ ಕಣಿ ನಿರ್ಮಲಕೀರ್ತಿನೇಮಿ ಪುಸಿವರ ಶೂಲಂ (ಅಭಿಪು. ೦-೨೪); ಹುಸಿವರ ಶೂಲ ನಿಗಳಂಕಮಲ್ಲ ಚಲದಂಕರಾಮ ರಾಯಗಂಡರ ದಾವಣಿ ಕಲಿಗಳ(ಳ) ಮೊಖದಕೈ ಸುಭಟಚೂಡಾಮಣಿ (ಎಪಿ. XXVII, ೧೬೦-೦೭ ; 1256); ಹುಸಿವರ ಸೂಲಂ ಗಂಡರ ದಾವಣಿ ನಿಗಳಂಕಮಲ್ಲ ಚಲದಂಕರಾಮ ನಿಸ್ಸಂಕಮಲ್ಲರುಂ (ಶಾಸ. IV, ೪೮-೩೮; 1247); ಕಲಿಗಳ ಮುಖದ ಕೈ ಕಟಕಸೂಱೆಕಾಱ ಹುಸಿವರ ಸೂಲ ಕಡಿತಲೆಯ ಮಲ್ಲಂ . . . ಸಂಗಿರಾಯ ಒಡೆಯರು ದಳವತಿ ನಡದು ಬಟ್ಟಕಳದಲ್ಲಿ ಕೂಡಿದಲ್ಲಿ (ಶಾಸ. I, ೪೦-೬ ; 1415).

[ದೇ.॥ ತಮಿ. ಪೊಯ್ ; ಮಲ. ಕೊಡ. ಪೊಯ್=ಸುಳ್ಳು, ಭ್ರಮೆ ; ಗೊಂಡಿ. ಬುಸಾನಾ]

**ಪುಸಿ₂, ಹುಸಿ₂** (ನಾ). ೧. ಸುಳ್ಳು : ಸಟೆ ; ಅಸತ್ಯ : "ತೊದಳ್ ನೂಳೆಂದು ಸೆಱ ಪುಸಿಯೆನಲ್ಕನೃತಮಕ್ಕು" (ಶಬ್ದಮ. ೩೯); ಕುಸುಮಂಗಳೆಂಬ ಮಾತದು ಪುಸಿ ದಹನಮಯಂಗಳೆಂಬುಗಳ್ ಮನಸಿಜನಾ (ಶಬರ. ೩-೦೮೪); ಸತ್ತನೆ ಮತ್ತೆ ಪುಟ್ಟುವಂ ಗಡ ಪುಸಿ ಕಾಣ ಡಂಬಮಿದು ಪೇಟೆಚರ ಸೀನಿದನೆಂತು ನಂಬಿದೋ (ಆದಿಪು. ೨- ); ಪುಸಿ ಠಕ್ಕು ಠವುಳಿಗಳಲ್ಲಿ ಕಟ್ಟಿ ಎಸೆದು ಕೊಲ್ಲುವರೊ ನಿನ್ನವರು ಕೇಳಲ್ಲಿ (ಪುರಂದ. ೨-೩೯-೪). ೨. ತೋರಿಕೆ ; ಕೃತ್ರಿಮತೆ ; ಸೋಗು: ಬಸವರಾಜಂ ಪುಸಿಯ ಕಾಯ್ತಂದೆಗಳ್ ಪೋದುದಂ ಕಂಡಾದರಂ ಮಿಕ್ಕು ಸಂಸಾರದ ಭಾರವಿಳಿದು ನಲಿನಲಿದಾಡಿ (ಬಸವ. ೨-೩); ಕೂಡೆ ಮುಮ್ಮಲಮಱಗಿ ಪುಸಿಗೆ ನಸುನಗುತೆ . . . ನಿನ್ನ ಸುತನು ಕುಡು ಮೂಡಿತುತ್ಸವಮೆಂದನಾ ದುಷ್ಟಬುದ್ಧಿ (ಕೃಜಾ. ೨೯-೩೪); ಮುಂಗುರುಳಗಳ ಕಣ್ಣವೊಳೊತ್ತಿ ಜಲವನು ಹಿಂಗದೆ ತಂದುಕೊಂಡಾಗ ಅಂಗನೆ ಪುಸಿಗೆ ದುಃಖಿಸುತ್ತೈದಿಯಾತನ ಮುಂಗಡೆಯಡ್ಡಗಟ್ಟಿದಳು (ಕಂಸವ. ೬-೦೭೬). ೩. ಸಾರವಿಲ್ಲದುದು ; ನಿಸ್ಸತ್ತ್ವವಾದುದು ; ನಿಷ್ಪ್ರಯೋಜಕವಾದುದು : ನಿನ್ನ ನಾಭಿ ವಳಯಕ್ಕೆ ಪೂಗೊಳಂ ಪುಸಿ ನಿನ್ನ ನಿತಂಬಕ್ಕೆ ಪುಳಿನಸ್ಥಳಂ ಪಳಿವು (ವಂದಿರ. ೦೪-೦೭). ೪. (ಆಲಂ) ಅಸಾಧ್ಯ ; ಅಸಂಭವ : ಇಂದಿನ ದಿನಂ ಸಕಲಜಗಕೆ ಕಡೆಗಾಲಮೇಂ ಬಂದುದೋ ಕಟಕಟಾ ಮತ್ಸ್ಯಭಟನಾವವಂ ನಿಂದು ಕಾದುವನವನ ತಾಯ್ ಪುಸಿ (ಕಿರಾತ. ೪೪-೬). ಹುಸಿ₂ : ೧. ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ (ಬಸವ. ೨೩೩); ಕಂದನಶ್ವತ್ಥಾಮ ಹುಸಿಯೆನಗಿಂದು ಬೇಹ ಕುಮಾರ ನೀ ನಿನ್ನಿಂದ ತನ್ನಯ ಕೀರ್ತಿ ಮೆಱೆವುದು ಮೂಱುಲೋಕದಲಿ (ಕುಮಾರವ್ಯಾ. ೮-೩೦) ; ಬಲ್ಲೆನೆಂಬುವ ಮಾತು ಎಲ್ಲವೂ ಹುಸಿ ಕಾಣೊ ಬಲ್ಲರೆ ಬಲ್ಲೆನೆನಬೇಡ ಸುಮ್ಮನಿರಬಲ್ಲವನೆ ಬಲ್ಲ (ಸರ್ವಜ್ಞ. ೩೯೩). ೩. ಇವಳ ಕೆಣಕಿದು ಜೀವದಲಿ ಬದುಕುವ ಭವಬ್ರಹ್ಮಾಮರೇಂದ್ರರ ಹವಣು ಹುಸಿ (ತೊರವ. ೦-೦೦-೬). ೪. ಎಮ್ಮಯ ಪುರವನೊಂದಂಬಿನಲಿ ಗೆಲುವನೆ ಕಾಯು ಹುಸಿ (ಕುಮಾರ. ೬-೯). ೫. ಪುಸುಕಲು ; ಲೊಡ್ಡು ; ಪಿಸುಗು : ಪೈರಿನ ಕಟ್ಟು ಸಡಿಲವಾಗಿದ್ದರೆ, ಹಗ್ಗ ಹುಸಿಯಾಗಿದ್ದರೆ, ಒಳಗಿರುವ ಹಾಳೆಗಳೂ ಗಿಡ ಮೂದರಿಗಳೂ ಚೆಲ್ಲಾಪಿಲ್ಲಿಯಾಗಿ ಚೆದುರಿ ಕೈಗೆ ಸಿಕ್ಕದೆ ಹೋಗುತ್ತವೆ (ಹಾಹೂ. ೩೨೯). 'ಪುಯ್' ನೋಡಿ.

ಪುಸಿಗೆಗೊಯ್ಯೊಂ = ಒಂದು ಬಿರುದು : ಕೊಮರವಿಳಾಸಂ ತಿಬ್ಬಾನೆ ಮಲ್ಲ ನೊಟವಪ್ಪರ ಭೀಮಂ ಪುಸಿಗೆಗೊಯ್ಯೊಂ ರಾಜರಾಜಾಶ್ರಯಂ ಶ್ರೀಮತ್ತೊಪ್ಪಟಲ್ಲೋರದೇವಂ (ಕೊಶಾ. IX-1, ೩೦-೩೨ ; ೯೮೬). ಪುಸಿಗೆ ಪೇಸುವಂ, ಪುಸಿಗೆ ಪೇಸುವೊಂ = ಅಸತ್ಯವನ್ನು ಕಂಡರೆ ಹೇಸುವವನು ; ಒಂದು ಬಿರುದು : ಅದಟಬ್ಬೆಗಳ್ಳನ್ ಅಯ್ಯನ ಚಕ್ರಿ ಪುಸಿಗೆ ಪೇಸುವನ್ ಓಟಕ್ಕೆ ನಾಣ್ಬವನ್ (ಪ್ರಿಇಂ, ೦೯೦೩ ; ೦೩. II, ೯ ; ೯೦೦); ಜಂಗಾಜನ್ಮಂ ಪುಸಿಗೆ ಪೇಸುವೊಂ ಪಿಸುಣ್ಗೆ ಗಾಯ್ಯ (ಕೊಶಾ. IX-1, ೩೭-೯ ; ೯೮೩). ಪುಸಿ ಪೊರ್ದು = ಹುಸಿ ಹೋಗು ; ವ್ಯರ್ಥವಾಗು ; ತಪ್ಪು : ಪುಸಿ ಪೊರ್ದದ ತನ್ನೊಂದು ಬಾಣದಿಸುಗೆಯಿಂ ರಾವಣ ಕುಂಭಕರ್ಣ ಮಾರೀಚ ಸುಬಾಹುಪ್ರಭೃತಿದಾನವರುಂ ಶಕ್ತಿಱದಱದ ರಾಮನೇಂ ಗಾವಿಲನೇ (ರಾಮಾಕ. ೦೨೩-೬). ಪುಸಿ ಮಾಡು, ಹುಸಿ ಮಾಡು = ೧. ಸುಳ್ಳಾಗಿಸು : ಕುರುಕುಲಶೋಣಿತಪಾದಪದ್ಮತಳಂ ತಳೋದರಿಗೆ ವೃಕೋದರನಾಗಿಪು ಕಚಬಂಧುಬಂಧುರತೆಯನಾತನ ಪೂಣ್ಕೆ ಪೂಣ್ಕೆ ಶಿಲಾ ತಳಾಕ್ಷರಮೆನಿಸಿರ್ಪ ಜನೋಕ್ತಿಯಂ ಪುಸಿ ಮಾಡ್ಪನೇ (ಗದಾಯು. ೦-೬೦); ಎಡೆವಱಯದೆ ವಾಚ್ಯಮನಾ ಹಾಟಕಮೊಡವೆರೆದಲ್ಲದೆ ಬೇರ್ವಡಿಸಿರದೆಂದಾ ಗಡಿಗುಸಿರ್ವ ಬುಧರ ಬಲ್ಲವಿಕೆಯ ನುಡಿಯಂ ಹುಸಿ ಮಾಡಿ (ಜಯನೃ. ೩-೩೬). ೨. ಸುಳ್ಳೆಂದು ಸಾಧಿಸು : ಇದುಚಿತವಿಪರೀತಚಾಟುಚಾಟುವಚನಂ ದೆಮ್ಮ ಮನಮನಾರಯ್ದು ನಿನಗೆ ನೆನಮುಮ್ಪುದೆಂದು ಪುಸಿ ಮಾಡಿ ನಸು ನಗುವುಪೇಂದ್ರನ ಮುಖೇಂದುಗೆದು ಮಂದಸ್ಮಿತಚಂದ್ರಿಕೆಯನೋಲಗಿಸು (ಧರ್ಮಪು. ೪-೦೪೩). ಪುಸಿಯಾಗು, ಹುಸಿಯಾಗು = ಸುಳ್ಳಾಗು : ವ್ಯರ್ಥವಾಗು ; ನಿಷ್ಫಲವಾಗು : ಒಡಲಿರದೊಂದೆ ಜೀವಮಿರ್ಪಂಬುದನೆಂಬುದು ಲೋಕವಿಪಾಗಳಾ ನುಡಿ ಪುಸಿಯಾಯ್ತು (ಶಾಂತಿಪು. ೦೩-೪) ; ಸ್ಥಿರಸತ್ಯವ್ರತಿಯೆಂದು ಧರ್ಮರುಚಿಯೆಂದಾ ಧರ್ಮಪುತ್ರಂ ದಯಾಪರನೆಂದಲ್ಲರ ಪೇಟ್ದ ಮಾತು ಪುಸಿಯಾಯ್ತು (ಗದಾಯು. ೩-೨೩); ಮೇಲುಜಗವೇಕೋಡಿದವು ಧ್ರುವನಾಲಯಕೆ ನೆಲೆದಪ್ಪಿದುದು ಗ್ರಹಮಾಲೆ ಹಾರಾರಾಕ ಜೋಯಸರೋದು ಹುಸಿಯಾಯ್ತು (ಕುಮಾರವ್ಯಾ. ೦೯-೦೯); ಭೂಮಿಯಲ್ಲಿ ಬೆಳೆ ಹುಸಿಯಾದೀತು (ಶಾಂತೀ. ೯೬-೩). ಪುಸಿಯಲ್ಲದಾತಂ = ಸುಳ್ಳಾಡದವನು ; ಸತ್ಯವಂತ ; ಒಂದು ಬಿರುದು : ಮಹಾಸಾಮನ್ತಂ ಪ್ರತ್ಯಕ್ಷಧೂರಿಕೃತಂ ಪುಸಿಯಲ್ಲದಾತಂ × × × ಗಾಂ

ಕನ್ನನ ಬಂಟಂ ಕಟಕಪ್ರಾಕಾರಂ ಗಿರಿದುರ್ಗಮಲ್ಲಂ ರಣವೀರಂ (ಶಾಇ. XI-i, ೪೬-೪ ; 1002); ಪ್ರತ್ಯಕ್ಷಭೂರಿಶ್ರವಂ ಪುಸಿಯಿಲ್ಲದಾತಂ ಕಂನನ ಬಂಟಂ ಕಟಕಪ್ರಾಕಾರಂ (ಶಾಇ. XI-i, ೫೦-೦೦ ; 1005). **ಪುಸಿಯುಳ್ಳಂ**= ಸುಳ್ಳುಗಾರ ; ಅನೃತವಾದಿ : ಪುಸಿಯುಳ್ಳಂ ಕರಡಿಯಾಗಿಯುಂ ಹಿಂಸಾನಂದಮುಳ್ಳಂ ಕುಣಿಯಾಗಿಯುಂ . . . ನರಕದೊಳ್ ಪುಟ್ಟಿ ಪಲಕಾಲಂ ಸ್ವೈರಸಲ್ಪಾರದ ಮಹಾದುಃಖಕ್ಕೆ ಭಾಜನರಪ್ಪರ್ (ಧರ್ಮಾಮೃ. ೬-೦೬೬). **ಪುಸಿವಂ** = ಸುಳ್ಳು ಹೇಳುವವನು : ಅಸ್ಥಿರಂ ವಾಚಾಳಂ ಪುಸಿವಂ ಮೂರ್ಖಂ . . . ಪಿಶಾಚಸತ್ತ್ವಂ ಮನುಜಂ (ಲೋಕೋಪ. ೦೦-೩೪); ಪುಸಿವಂಗೆ ಮಾಡಿದ ಹಿತಮುಂ ಖಳ್ಗೆ ಮಾಡಿದುಪಕಾರಮುಂ . . . ವ್ಯರ್ಥ (ಧರ್ಮಾಮೃ. ೮-೬೦). [<ಪುಸಿ₁/ತಮಿ. ಮಲ. ಕೊಡ. ಪೊಯ್]

**ಪುಸಿಕ**, ಹುಸಿಕ (ನಾ). ೧. ಸುಳ್ಳು ಹೇಳುವವನು ; ಸುಳ್ಳುಗಾರ : ಇಲ್ಲದ ಗುಣಮುಂ ಪೆಱರೊಳ್ ಸೊಲ್ಲಿಸುವಂ ತನ್ನೊಳುಳ್ಳ ಗುಣಮಂ ತಾನಿಲ್ಲೆಂದಾಡುವ ಪುಸಿಕಂಗೆಲ್ಲಿಂದಂ ಬಂದುದಮುಮ ಸುಜಸತಿ ಚಿತ್ರಂ (ಶಕ್ತಿ. ೦-೫೩); ಹೆಂಗೊಲೆಗಂಜದು ಪಿಸುಣನತ್ಯಧಮಂ ಪುಸಿಕಂ . . . ಸರ್ವೆಡೆಯುಲ್ಲವೆ ವಾಜಿಮುಂದುರಂ (ಪಳಕಂ. ೬೫೩); ಪುಸಿಕನಿವಂ . . . ಪೆರ್ಬುಸಿಯುನೆ ಪೇಳ್ದಪಂ (ವೃಷಭ. ೩೬-೦೨೨). **ಹುಸಿಕ** : ೧. ಕುಶಲರೇ ಭೀಮಾರ್ಜುನರು ಪಾಲಿಸುವ ಬಿರುದೇ ಕೃಷ್ಣನದು ಹರಿ ಹುಸಿಕನೋ ಬೆಸಗೊಂಬೆವೆನುತಟ್ಟಿದನು ದ್ರೋಣ (ಕುಮಾರವ್ಯಾ. ೦೭-೨೭); ತನುರುಚಿಯು ಮುಂದಿನಸ ರುಚಿ ಕಪ್ಪನುಪಮಾಕಾರದಲಿ ಹೃದ್ಯಾತನು ಕುರೂಪನು ಶಾಂತದಲಿ ಶಶಿ ಬಿಸಿ . . . ಸತ್ಯದಲಿ ಧರ್ಮನು ಹುಸಿಕನತಿರೋಷದಲಿ ತಣ್ಣನೆ ದವಾನಳನೆಂದೊಡರಸನ ಪೊಗಳ್ವನಾರ್ (ಜಾಮಂಕ. ೨-೯೨); ಒಸೆದಣ್ಣಗೆಱಿ ಬಂದವೆನೆಂದು ನಮ್ಮ ಬಾಳಿಸಿ ಪೋದ ನಿಮ್ಮ ಕುಮಾರ ಹುಸಿಕಗೆ ದೀಕ್ಷೆ ಸಲ್ಲುದೆಯೆಂದು ಮಾಮಾಜಿಗುಸುರ್ವೆವು (ಶಿಶು. ೫೨-೭೭). ೨. ವಂಚಕ ; ಕಪಟಿ : ಹಸಿದ ದಿಂಡುಕಂಗೆ ಭಕ್ತಂಗೆ ಎಸೆದ ಧ್ಯಾನ ಉಂಟೇ . . . ಹುಸಿಧ್ಯಾನದಿಂದ ಜೀವದ ಅಸುಗಳ ಕೊಂಬುವ ಇಾತಿವರಂತೆ ಹುಸಿಕರ ಭಕ್ತಿ ಕಿಸುಕುಳರ ವಿರಕ್ತಿ ಇವು ಹುಸಿ ಎಂದೆ (ಪೋಲಪಾ. ೫೭-೨೪೬); ಸಕಲಮುನಿಜನದ ನಡುವಿತ್ತಿಳೆಯುನಿತ್ತುದಿಲ್ಲೆಂದು ನುಡಿವಂತಾ ಹುಸಿಕನೇ[ಪಾಠಾಂ. ನುಡಿದು ಹುಸಿವಂತಾಗಿ] ನೀನು (ಹರಿಶ. ೬-೩೪). [ಪುಸಿ₂ + — ಕ₃]

**ಪುಸಿಗ**, ಹುಸಿಗ(ನಾ).=ಪುಸಿಕ ೧ : ಪಲಬುರ್ ಜೀಯೆನೆ ನನ್ನಿಯಂ ನುಡಿವನಂ ಪುಸಿಗನೆಂಬರ್ ಪುಮಾತುಗನಂ ನೆಲದೋಱತನೆ ಪುಸಿಯಿಲ್ಲದವನೆಂಬರರಸು ಗಳ್ಗಿದು ನೈಜಗುಣಮಾಗಿರ್ಕುಂ (ಪಂಚತಂ. ೫೦-೬) ; ಅನೃತಕ್ಕೆ—ಅಟಮಟಗಂ, ಮಾಳಿಗಂ, ಪುಸಿಗಂ (ಕಬ್ಬಿಗ. ೦೪೭ ಕ್ರಿಯೋ) ; ಪುಸಿಗನನೆಗ್ಗನಂ ಪುರುಡುಗಾಱನಂ . . . ಬಱಿದೂಱಗಾಱನಂ ಕಸಗಳೆದಿತ್ತು ಮನ್ನಿಪರ ಮಕ್ಕಳ ಪಟ್ಟಗೆ ತಂದು ಸೂರ್ಕಿಸಾ (ಶಬರ. ೬-೦೦೪). **ಹುಸಿಗ** : ನಿನ್ನ ನಡೆಗೆ ನಲ್ಲರು ನಾರಿಯರೊಲಿವರು ಹುಸಿಗ ನಾನಲ್ಲ ರಾಜೇಂದ್ರ ನಿನ್ನಾಣೆ (ಹರಿ. ೭೭-೩೯) ; ಹುಸಿಗನನ್ನು ದೂರದಲ್ಲಿಯೆ ಬಿಟ್ಟು ಕಳೆ (ಚೆಲ್ವು. ೦೦೦-೦೩). [ಪುಸಿ₂ + — ಗ₂]

**ಪುಸಿಗಂಡು** (ನಾ). ತೋರಿಕೆಯ ಪರಾಕ್ರಮ ; ಸುಳ್ಳುಗಲಿತನ : ಪುಸಿಗಣ್ಡಿದಿರಾನ್ತರಂ ತಮಿ × × × ಸ್ಪುಕ್ತಿಯಿಂ ಬೆಸನೇಂ ನೀಂ ಶರಣೆಂದು ಬಂದ ರಿಪುಭೂಪಾಳಕ್ಕರ್ಳಂ ಕಾದು (ಶಾಇ. ೯೦-೦-೦೪ ; 1082). [ಪುಸಿ₂ + ಗಂಡು]

**ಪುಸಿಗಾಣು** (ಕ್ರಿ). ೧. ಸುಳ್ಳೆಂದು ಭಾವಿಸು. ೨. ಮಾಯೆಯೆಂದು ತಿಳಿ : ಪ್ರಕೃತಿಯನೆ ಪುಸಿಗಾಣುವೀ ಚಿನುಮಯ ಗುರುಸಿದ್ಧನವಶೇಷವಾನೆಂಬುವನುಭೂತಿಸಾಮ್ರಾಜ್ಯಪರವಶಲಹರಿಯೆ (ಕೈವ. ೫-೪೫-೫). [ಪುಸಿ₂ + ಕಾಣು (<ಕಾಣ್)]

**ಪುಸಿಗಾಳೆಗ**, ಹುಸಿಕಾಳಗ (ನಾ). ತೋರಿಕೆಯ ಯುದ್ಧ ; ಸುಮ್ಮನೆ ಮಾಡುವ ಕದನ : ಕೇಳೆಲವೊ ಸುಗ್ರೀವ, ನೀಂ ತಮ್ಮನೆಂಬೊಲವರಕೆ . . . ಪುಸಿಗಾಳೆಗಂಗೊಟ್ಟೊಡತಿ ಮಲೆತು ಕೊಬ್ಬಿದೆಯಲಾ! (ತ್ರೀಂಪುರಾ. ೩೦೬-೬೨). **ಹುಸಿಕಾಳಗ** : ಕರ್ಣನು ಎರಡು ಸಾರಿ ಗುರಿಯಿಟ್ಟು ಬಾಣ ಸಂಧಾನ ಮಾಡುವುದಿಲ್ಲ ; ನಮ್ಮಂಥವರು ಹುಸಿಕಾಳಗವನ್ನು ಮಾಡರು (ದಕರಾ. ೨೪೪). [ಪುಸಿ₂ + ಕಾಳೆಗ]

**ಪುಸಿಗಾಱ** (ನಾ).=ಪುಸಿಕ ೧ : ವಂಚಕನಾಗಿ ನಡೆದುಕೊಂಡ ಬಳಿಕ್ಕಂ ನಿನ್ನನ್ನರಪ್ಪ ಪುಸಿಗಾಱರ ಸಮೀಪದೊಳಾನೊಂದು ನಿಮಿಷಮಾತ್ರಮಂ ನಿಲಲಾಱೆಂ (ಕಾದಂಬ. ೨೩). [ಪುಸಿ₂ + — ಕಾಱ]

**ಪುಸಿಗೂರ್ಮೆ** (ನಾ). ತೋರಿಕೆಯ ಪ್ರೇಮ ; ಕಪಟಸ್ನೇಹ : ಈತಂಗೆ ಪೊನ್ನೆತ್ತಣಂ ಬರ್ಪುದಿವನಾರಯ್ವೆನೆಂದು ಪುಸಿಗೂರ್ಮೆಯಿಂದನೇಕ ಚಾಟುಕಾರದಿಂ ನಂಬಿಸಿ ಮೆಲ್ಲನೆ ಬೆಸಗೊಳ್ವುದುಂ (ಧರ್ಮಾಮೃ. ೨-೦೦೬) ; ಬಕವೇಷಿತನದಿಂದೊಡಲ ಸೂಡಿಂಗಿರಲಾಱದೆ ಪುಸಿಗೂರ್ಮೆಯಿಂದೋಪಳ ನಚ್ಚಿಕೊಂಡು ಮೆಲ್ಲನಿಂತೆಂದಂ (ಧರ್ಮಾಮೃ. ೬-೩೫). [ಪುಸಿ₂ + ಕೂರ್ಮೆ]

**ಪುಸಿಗೆಯ್**, ಪುಸಿಗೈ (ನಾ). ೧. ಮೋಸಗೊಳಿಸುವುದಕ್ಕಾಗಿ ಮಾಡಿದ ಹಸ್ತಚಲನೆ,—ಕೈಸನ್ನೆ : ಇದಿರ್ಚಿ ನಿಂದ ಚಳಕದೊಳ್ ಪುಸಿಗೆಯ್ಯಂ ತೋಱಿ ಅದರ್ಕಮಂ ತನ್ನುಳ್ಳ ಬಲ್ಪನಿತಱೊಳಂ ಮುಂತಣ್ಗೆ ನಿಂತು ತುಂಬಱಗೆಯ್ಯುಕ್ಕುವಿನ (ಚಿಕಮಂ. ೦೬೪-೦೩). **ಪುಸಿಗೈ** : ೨. ದುರ್ಬಲವಾದ ತೋಳು ; ಸತ್ತ್ವಹೀನವಾದ ಬಾಹು : ನಿನ್ನಯ ಸತ್ತ್ವಸಮೃದ್ಧಿಯುಪ್ಪಿನಂ ಮಣಿಯದೆ ಪೊತ್ತುದಿನ್ನೆವರಮಿ ಪುಸಿಗೈಯುದಱೊಂದು ಪೇದಮುಂ ಕ್ಷಣದೊಳೆ ತೂಳ್ದಿ ತಾಳ್ದುವುದು ಪಿಂಗದೆ ಪುತ್ರಸಮಸ್ತ ಧಾತ್ರಿಯಂ (ಶಂತ್ರಪು. ೪-೦೪). [ಪುಸಿ₂ + ಕೆಯ್₂]

**ಪುಸಿಗೆಳೆ** (ನಾ). ಸುಳ್ಳು ಗೆಳೆತನ ; ಕಪಟಸ್ನೇಹ : ಒಳಗೊಳಗೆ ಕಳ್ದರಂ ಪುಸಿಗೆಳೆಯಿಂದೊಳಗೊಳಗೆ ಸುಟುವ ಪರವನಿತಾಸಂಕುಳದೊಳ್ ನೆರೆದವರ ವರಘುಮೊಳಗೊಳಗಿಱಗುಂ ವಿಚಿತ್ರರೋಗಚ್ಛಲದಿಂ (ಪುರಾಪು. ೦೦-೭೭). [ಪುಸಿ₂ + ಕೆಳೆ₂]

**ಪುಸಿಗೈ** 'ಪುಸಿಗೆಯ್' ನೋ.

**ಪುಸಿಚರಿತ್ರ** (ನಾ). ಕಪಟದ ನಡವಳಿಕೆ; ವಂಚಿಸುವ ನಡವಳಿಕೆ; ಮೋಸದ ವ್ಯವಹಾರ : ಪುಸಿದೈವದ ಪುಸಿಯಱತದ ಪುಸಿಧರ್ಮದ ಪುಸಿಚರಿತ್ರದಾಗಮುದೆಡೆಯೊಳ್ ಪುಸಿಯೆನಿಪ[ಪಾಠಾಂ. ಪುಸಿವ ಬಲ್ಮೆಯೋದು ಗಳಂ ತಾಂ ಪಸರಿಸುವ] ಠಕ್ಕಸಮಯದ ದೆಸೆವೋಗರದೆಂತುಮಾವ ತೆಱದಿಂ ಜೈನರ್ (ಸಮುಕ. ೬-೭೫). [ಪುಸಿ₂ + ಚರಿತ್ರ]

**ಪುಸಿದೈವ** (ನಾ). ಕ್ಷುದ್ರದೇವತೆ ; ಕೀಳುದೇವತೆ : ಪುಸಿದೈವದ ಪುಸಿಯಱತದ ಪುಸಿಧರ್ಮದ ಪುಸಿವ ಬಲ್ಮೆಯೋದುಗಳಂ ತಾಂ ಪಸರಿಸುವ ಠಕ್ಕಸಮಯದ ದೆಸೆವೋಗರದೆಂತುಮಾವ ತೆಱದಿಂ ಜೈನರ್ (ಸಮುಕ. ೬-೭೫). [ಪುಸಿ₂ + ದೈವ]

**ಪುಸಿಧರ್ಮ** (ನಾ). ಹೀನವಾದ ಧರ್ಮ; ಹೇಯಧರ್ಮ : ಪುಸಿಧರ್ಮದ ಪುಸಿಚರಿತ್ರದಾಗಮುದೆಡೆಯೊಳ್ . . . ದೆಸೆವೋಗರದೆಂತುಮಾವ ತೆಱದಿಂ ಜೈನರ್ (ಸಮುಕ. ೬-೭೫). [ಪುಸಿ₂ + ಧರ್ಮ]

**ಪುಸಿನಡು**, ಹುಸಿನಡು (ನಾ). (ಇಲ್ಲವೇ ಇಲ್ಲವೆಂದು ಭಾಸವಾಗುವಷ್ಟು) ತೆಳುವಾದ ಸೊಂಟ : ಬಡನಡುವಿನ ಬಳುಕುವ ನಡುವಿನ ಸೆಳೆನಡುವಿನ ಸಿಂಗವಸುಳಿನಡುವಿನ ಪುಸಿನಡುವಿನ ಸಂದೆಗನಡುವಿನ ಪಿಡಿನಡುವಿನ . . . ಮದವಯಾಮಿನೆಯರು ನಡೆದರು (ಹಯಾಳಿ. ೫-೩೩); ಸಸಿಪೊಗದ ಕಿಸುವಾಯ ಪುಸಿನಡುವಿನರಸಿ (ರಾಮಾಶ್ವ. ೯೭-೨೩). **ಹುಸಿನಡು** : ಹುಸಿನಗೆ ನಗುತ ಗಂಡನ ಕೂಡೆ ನುಡಿದಳಾ ಹುಸಿನಡುವಿನ ಸೊಬಗೆಯರು (ಹರಿ. ೪-೫೦). [ಪುಸಿ₂ + ನಡು₁]

**ಪುಸಿನಲ್ಮೆ** (ನಾ). = ಪುಸಿಗೂರ್ಮೆ : ಕೆತ್ತುಗತನಕ್ಕೆ ಕೆತ್ತುಗತನವುಂ ಪುಸಿನಲ್ಮೆಗೆ ಪೋದಿ ನಲ್ಮೆಯುಂ ಜತ್ತುಕಱಂಗೆ ಜತ್ತುಕಱು . . . ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೬೩ ಟಿಪ್ಪಣಿ); ಕೊಯ್ಕದೆ ಮಾಣನೊಂದಿರುಳೆ ಕುಂತಳಮಂ ಪುಸಿನಲ್ಮೆದೋಱ (ಪುಲ್ಗಪು. ೭-೯೩). [ಪುಸಿ$_2$ + ನಲ್ಮೆ]

**ಪುಸಿನಿದ್ದೆ**, ಹುಸಿನಿದ್ದೆ (ನಾ). ಸುಳ್ಳುನಿದ್ದೆ; ನಿದ್ರೆಯ ಸೋಗು; ಠಕ್ಕುನಿದ್ದೆ : ಬಗೆ ಗೆಲಲೆಂದು ಕಾದಿ ಪುಸಿನಿದ್ದೆಯೊಳಾನಿರೆ ಲಲ್ಲೆಗೆಯ್ದು . . . ಮೊಗಂ ಮೊಗದತ್ತ ಸಾರ್ಚಿ ಬೆಚ್ಚಗೆ ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಟ್ಟಿದೇಂ ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕಮಂಬದಂಬುಲಂ (ಶಂಶಖಾ. ೪-೧೭). **ಹುಸಿನಿದ್ದೆ** : ಮಕ್ಕಳಿರ ಕೇಳಿ, ರಸ ಕುಡಿಯಲೇಳಿ, ಹುಸಿನಿದ್ದೆಗಿದ್ದೆ ಸಾಕು (ಅರಳು. ೧೭-೭). [ಪುಸಿ$_2$ + ನಿದ್ದೆ]

**ಪುಸಿನುಡಿ$_1$**, ಹುಸಿನುಡಿ$_1$ (ಕ್ರಿ). ಸುಳ್ಳು ಹೇಳು; ಸುಳ್ಳಾಡು : ಜಿನದೇವನ ಬಯಕೆಯಂ ಮಱೆಯಿಸಿ ಪುಸಿನುಡಿದ ಧನದೇವನ ಜಿಹ್ವೋತ್ಪಾಟನಂಗೆಯ್ವುದುಮಂ (ಧಾಪುಂಪು. ೬೯); ರಾಮಂ ಕಲಿಸಿದ ತೆಱದಿಂ ಆಮೆಗೆ ಪುಸಿನುಡಿದು ರಥಮನೇಱಸಿಕೊಂಡಾ ಭೀಮಾಟವಿಯಂ . . . ಕೃತಾಂತವಮುಖನೆಯ್ದಿದಂ (ಕುಮುಸೂ. ೭೩-೭೩); ಪುಸಿನುಡಿವಂಗೆ ಬಾಯ್ನ ನಗವೊಯ್ದುದು ನಾಲಗೆಯೊಂದು ನೂಲದೆಂದೆಸಟಿಸಟಿಯಾಗಿ ಸೀಳ್ದು ನಿಡು ನಾಲಗೆಯಂ ಕಟದಲ್ವು ಸೀಳಿ ಸೀಳಿಸಿ ಕಟಮಾಯ್ಗಳಂ ಹುಸಿಯೊಳಾದ ಫಳಂ ಸವಿನೋಡಿದೆಂದು ಗಾತ್ರಿಸುವರನೇಕರೂಕ್ಷವಿಷತಿಕ್ತಕಠೋರಮೆನಿಪ್ಪ ಖಾರಮಂ (ಅಪಪು. ೯-೩೭). **ಹುಸಿನುಡಿ$_1$** : ಅರವರಿಸದೀ ಸಭೆಯೊಳಿನ್ನಯ ಸಮಕ್ಷದೊಳು ಹುಸಿನುಡಿವರೇ ಕುಡದೆ ಎನ್ನಯ ಕುಮಾರಂಗೆ (ಭಸರ. ೧. ೩೯). [ಪುಸಿ$_2$ + ನುಡಿ$_1$]

**ಪುಸಿನುಡಿ$_2$**, ಹುಸಿನುಡಿ$_2$ (ನಾ). ಸುಳ್ಳುಮಾತು; ಅಸತ್ಯದ ನುಡಿ : ಪುಸಿನುಡಿಯ ವಿಷ[ಪಾಠಾಂ. ಪುಸಿಯುನೆ ನುಡಿವ]ವಿಪಾಕದ ಮಸಕದೆ ಮುಖ ರೋಗಮಾದವೋಲಿನಿತುಮಂ ಬಸವಲ್ಲದುಸಿರ್ವರೆಂದುಂ ಪೊಸಸಿರಿಯಿಂ ಮ್ಯಮೆವೆತ್ತ ಮಾಯ್ದ ಮನುಷ್ಯರ್ (ಕಾದಂಪೂ. ೩೬೨); ದೇವಿಯರ್ಗೆನ್ನ ದೂಸಱಿಂ ಪುಸಿನುಡಿಯಂ ಮಾದೀಯ ಜನಕಂ ನುಡಿದಂದು ಜಿನಾಪ ವಾದಮೆಣ್ದೆಸೆಗಮನರ್ಗಳಂ ಪರೆಗುಂ (ಕಂಠಾಮಾ. ೬-೧೦೪); ಶಿವಶರಣರಿಂದೆ ಪುಸಿನುಡಿ ಬರ್ಪುದೆ (ಕಂಪು. ೪-೨೪). **ಹುಸಿನುಡಿ$_2$** : ಅವನ ಹುಸಿನುಡಿಗಳನ್ನು ಕೇಳಿ ನನಗೆ ಬೇಸರವಾಗಿದೆ (ರೂಢಿ). [ಪುಸಿ$_2$ + ನುಡಿ$_2$]

**ಪುಸಿಬಸನ** (ನಾ). ಸುಳ್ಳು ಹೇಳುವ ಚಟ; ಸುಳ್ಳಾಡುವ ದುರ್ವ್ಯಸನ : ಪುಸಿಬಸನಮೆಂದು ಕೆಲಬರ್ ಕುಸಿವರ್ ನಾಲಗೆಯನಿಕ್ಕುಟಿಯೊಳ್ ಪರಮಧುದುರ್ವ್ಯಸನಂ ನಿಸಗೆಂದಮರ್ದಪ್ಪಿಸುವರ್ ಕೆಂಪೆಸೆಯೆ ಕಾಯ್ದ ಯಃ ಪುತ್ರಿಕೆಯಂ (ಅಂಪು. ೩. ೯೭). [ಪುಸಿ$_2$+ಬಸನ (<ವೆಸನ$_2$)]

**ಪುಸಿಬಾದಿ** (ನಾ). ಸುಮ್ಮನೆ ವಾದ ಮಾಡುವವನು; ವಿತಂಡವಾದಿ : ಕಡುಬಱಗಿ, ಕಡುಗೆಲಸಿ, ಪುಸಿಬಾದಿ, ಬಲ್ಲುಜ್ಜುಗಿ (ಶಬ್ದಮ. ೩೨೯ ಪ್ರಯೋ). [ಪುಸಿ$_2$+ಬಾದು$_1$+ –ಇ$_3$]

**ಪುಸಿಮಾತು** 'ಪುಸಿವಾತು' ನೋ.

**ಪುಸಿಮುಳಿಸು** (ನಾ). ೧. ಸುಳ್ಳುಕೋಪ; ತೋರಿಕೆಯ ಮುನಿಸು : ಅವಳಿನ್ನಂ ಪಂಚಿಸಿದಪರಾಧಮನಾಂ ಸೈರಿಸುವೆನೆ ನೋಡೆನುತಮೊಟ್ಟಿ ಪುಸಿಮುಳಿಸಿಂದಂ (ಕಾದಂಪೂ. ೭೭೯); ಒರ್ವನಳವಿದಪ್ಪಿ ಕೂರ್ತೆಳೆಯಳಂ ಪಟೆಕೆಯ್ದಯೆಂದು ಪುಸಿಮುಳಿಸಂ ತಳೆವುದುಮವಳ್ ಬೆಚ್ಚಿ ಕಾಲ್ಗೆಱಗುವುದುಂ (ಚಂದ್ರಪ. ೬-೩೨ ವ). ೨. ನಿಷ್ಕಾರಣವಾದ ಕೋಪ : ಈ ಪುಸಿಮುಳಿಸೇಕೆ ಪೇಟ್ ಕೆಳೆಯ ನಿನ್ನಯ ಕೂರ್ಮೆಯದೆತ್ತವೋಯ್ತು ನೋಯಿಸದಿನಿಸಟ್ಟು, ನೋಡಿ ನುಡಿ (ಕಾದಂಪೂ. ೯೦೩). 'ಹುಸಿಮುನಿಸು' ಪರಾ. [ಪುಸಿ$_2$ + ಮುಳಿಸು$_2$]

**ಪುಸಿಯಮೆ** (ನಾ). ಸುಳ್ಳಾಡದಿರುವಿಕೆ; ಸತ್ಯವಂತಿಕೆ : ಪುಸಿಯಮೆ ಯನ್ನ ಪೊಗಟೆಲ್ಲುಂ ನೋಯದವೊಲೆಲ್ಲಾ ಅಱಿವುಮಂ ಕೊಡುಗುಂ (ಕುಱಳ್. ೧-೩೦-೭). [ಪುಸಿ$_1$ + – ಅಮೆ$_2$]

**ಪುಸಿಯಳವು** (ನಾ). ತೋರಿಕೆಯ ಸಾಮರ್ಥ್ಯ : ತಮದೊಳ್ ಪುಸಿಯಳವು ತಕ್ಕೆಯೊಳ್ಕಳವು ಮಿಱುವ ನೇಹದೊಳ್ನುಸುಳು . . . ಸೇರುವೆಯಾಗಿ ನೆಲೆಗೊಂಡ ಗಣಿಕೆಯರ ತಂಡಮಿಾ ತೆಱದೆ ಚೆಲ್ವಂ ಪಡೆದುದು (ಕೃಷ್ಣಾಭಾ. ೭-೩೪). [ಪುಸಿ$_2$ + ಅಳವು]

**ಪುಸಿಯಳಿಪು** (ನಾ). ಸುಳ್ಳು ಪ್ರೀತಿ; ತೋರಿಕೆಯ ವ್ಯಾಮೋಹ : ಪುಸಿಯಳಿಪಂ ನಿಮಿರ್ಚಿ ತಮಗಿಲ್ಲದ ಬೇಟಮನುಟುಮಾಡಿ ಕೂರಿಸಿ ಕೂರ್ತವಂತೆ ಪುರುಡು ಪೊಸೆದು . . . ಮುಟ್ಟಿದ ಮುನ್ನಮೆನ್ನರಂ ದೆಸೆವಲಿಗೆಯ್ದರೇನೊ ಕಡುಧಾಳಿಯರೊಂದಿರುಳಲ್ಲಿ ಸೂಳೆಯರ್ (ರಾಜಶೇ. ೩-೧೦೩). [ಪುಸಿ$_2$ + ಅಳಿಪು$_3$]

**ಪುಸಿಯಾಡು**, ಹುಸಿಯಾಡು (ಕ್ರಿ). ಸುಳ್ಳು ಹೇಳು; ಸಟೆಯಾಡು : ಅಱಿಪದೆ ನಿನ್ನಂ ಪುಸಿಯಾ[ಪಾಠಾಂ. ಮಾ]ಡಿ ಕಾದಲೆನಗೇಂ ದೊರೆಯೇ (ಕಂಪಾ. ೯-೪). **ಹುಸಿಯಾಡು** : ಹುಸಿಯಾಡಬೇಡ ಸುಳ್ಳ! (ಕಂಪ್ರಶ. ೧೧೦-೯೦). [ಪುಸಿ$_2$ + ಆಡು$_1$]

**ಪುಸಿಯುಸುಬು** (ನಾ). (ಮೇಲುನೋಟಕ್ಕೆ ಗಟ್ಟಿಯಾಗಿ ಕಂಡರೂ) ಕೆಳಗೆ ಕುಸಿಯುವ ಮರಳು; ಹುಸಿಮರಳು : ಕೆಸರಿನೊಳ್ ನೀರಿನೊಳ್ ಪುಸಿಯುಸುಬಿನೊಳ್ ಸಿಲ್ಕಿದಾ ಕಪಿಕಟಕದ ಪ್ರಕಟಸಂಕಟಮನೇನೆಂಬೆನಕಟಾ ದಶಗ್ರೀವಸುತಶ್ರೇಷ್ಠಕೂಟವಿದ್ಯಾಟೋಪದಿಂ! (ಶ್ರೀರಾಮಾ. ೬೩೪-೧೩೭). [ಪುಸಿ$_2$+ಉಸುಬು (<ಉಸುಕು)]

**ಪುಸಿಯೊಲವು** (ನಾ). =ಪುಸಿಗೂರ್ಮೆ : ಪುಸಿಯೊಲವಿಂದಮೆನ್ನನಿರದೊಪ್ಪಿಸಿ ತೋರ್ಪುದಱಂದಮಾಂ ಪ್ರತಾರಿಸಿದವನಾಗದಿರ್ದಪನೆ ದೇವಿಯ ಚಿತ್ತಮಂ (ಕಾದಂಉ. ೪೦೩). [ಪುಸಿ$_2$+ಒಲವು$_1$]

**ಪುಸಿಯೋತ** (ನಾ). ಸುಳ್ಳಾಡುದು; ಅಸತ್ಯವಚನ : ಪುಸಿಯೋತದ ಮಾತಿನೊಂದು ಭೀತಿಯಿಂ ಮಾತೆಯುಂ ತೋಱದೆನಾಣ್ಮನೊಳ್ ದ್ರೋಹದೆ ಣೆಕೆಯನಲ್ತು (ರಾಮಾಶ್ವ. ೬೩-೧೧). [ಪುಸಿ$_2$+ಓತ$_1$]

**ಪುಸಿವಡೆ** (ನಾ). ಕೃತಕಸೇನೆ; ಮಾಯಾಸೈನ್ಯ : ನಾಲ್ಕುಂ ತೆಱದ ಪುಸಿವಡೆಯಂ ಬಿಜ್ಜೆಯಿಂ ಪುಟ್ಟಿಸಿ (ಕಬ್ಬಿಗಕಾ. ೧೯೭); ತಿಸುಳೆ ಬೇಗದಿಂ ಪುಟ್ಟಿಸಿದಂ ಪುಸಿವಡೆಯಂ (ಕಬ್ಬಿಗಕಾ. ೨೯೯). [ಪುಸಿ$_2$+ಪಡೆ$_2$]

**ಪುಸಿವಾತು**, ಪುಸಿಮಾತು, ಹುಸಿಮಾತು (ನಾ). ಸುಳ್ಳು; ಸಟೆ; ಅನೃತವಚನ : ವಿಪ್ರನಶಿಥ್ಯೆಯರ್ಕೆಯುಂ ಮುಂತಿಟ್ಟು ಗಿಱಜೆಯೊಡನು ಸಿರ್ದಂ ತಡಬಡಿಸುತೆ ಮಿಸುಪ ಪೊಸ ಪುಸಿವಾತಂ (ಗಿರಿ. ೯ ೯೯); ಪುಸಿವಾತಿನಿಂದ ಬಹುಶಿಶುವಧೆಯುಂ ಕರಲೇಸು (ಪವಮೋ. ೩-೬). **ಪುಸಿಮಾತು** : ಕೊಟ್ಟೆನೆಂದಾ ವೃಷಭಮುಖನಲ್ಲಿ ನುಡಿವುತಿರೆ ಕೊಟ್ಟುದಿಲ್ಲೆನಗೆ ಪುಸಿಮಾತ ದೇಕೆನುತಮಿರೆ (ಬಸವ. ೧-೪೮). **ಹುಸಿಮಾತು** : ಅವರ ಹುಸಿಮಾತುಗಳನ್ನು ನಂಬಿ ಎಲ್ಲರೂ ಮೋಸ ಹೋದರು (ರೂಢಿ). [ಪುಸಿ$_2$+ಮಾತು$_1$]

**ಪುಸಿವಾತುಗ** (ನಾ). ಸುಳ್ಳು ಹೇಳುವವನು; ಸುಳ್ಳ; ಹುಸಿಕ : ಪಲಬರ್ ಜೀಯೆನೆ ನನ್ನಿಯಂ ನುಡಿವನಂ ಪುಸಿಗನೆಂಬರ್ ಪುಸಿವಾತುಗನಂ ನೆಲ ದೋಳೀತನೆ ಪುಸಿಯಿಲ್ಲದವನೆಂಬರರಸುಗಳ್ಗಿದು ನೈಜಗುಣಮಾಗಿರ್ಕುಂ (ಶಂಕಶಂ. ೩೦-೬). [ಪುಸಿವಾತು + –ಗ$_2$]

**ಪುಸಿವಾರ್ತೆ** (ನಾ). ಸುಳ್ಳುಸುದ್ದಿ : ಮುನ್ನೆ ಬಂದೀತನೆನಗೆ ಸೇನಾ ಭಂಗಮುಂ ಮನೋಭಂಗಮುಮಪ್ಪಂತು ಪುಸಿವಾರ್ತೆಯಂ ಪೇೞ್ದನೀ ಪುಸಿವನಂ ಕುಸಿಯೊತ್ತಿ . . . ದಸಿಯೊಳ್ತೆಗೆಯಿಂ (ಸುಕುಮಾ. ೭-೩ ವ). [ಪುಸಿ$_2$+ವಾರ್ತೆ]

**ಪುಸಿವುಗು** (ಕ್ರಿ). ಅಪ್ರಾಮಾಣಿಕವಾಗು ; ವಂಚನೆ ಮಾಡು : ಪುದುಂಬಸೆಸ ಗುವಲ್ಲಿಯುಂ ಪೊಡವಿಯುಂ ಪೊರೆವಲ್ಲಿಯುಂ ಪುರುಳ್ಗೊಂಬಲ್ಲಿಯುಂ ಪುಸಿವುಗದೆ ಧರ್ಮಮನಾರಯ್ದು ನಡೆವುದು (ಚಳಪು. ೫೨-೦೦).
[ಪುಸಿ₂+ಪುಗು (<ಪೊಗು)]

**ಪುಸಿವೇಳ್** (ಕ್ರಿ). ಸುಳ್ಳು ಹೇಳು ; ಸುಳ್ಳಾಡು : ಅಜಗಳಸ್ಸನದಂತೆಸೆವ ನಿನ್ನ ಪೌರುಷಂ ನಿಜವಾದೊಡಾಂ ಸ್ವೈರಿಸುವೆನಲ್ಲದಿರ್ದೊಡಾ ರಜದಿಂದೆ ಪುಸಿವೇಳ್ದ ನಾಲಗೆಯುಮರಿವೆನು (ಕೈಬಿಥಾ. ೨೦-೩೬).
[ಪುಸಿ₂+ಪೇಳ್ (<ಪೇಟ್)]

**ಪುಸಿವೋಗು**, ಹುಸಿಹೋಗು (ಕ್ರಿ). ನಿಷ್ಫಲವಾಗು; ವ್ಯರ್ಥವಾಗು; ಬರಡಾಗು : ಬಟಂ ಪೆಟವುಂ ಭಯಂಗಳಾಕುಲತೆಗಳಲ್ಲ ಧಾತ್ರಿ ಪುಸಿವೋಗದು . . . ಎಂದೊಡನ್ನಿವಿರೆ ಬಣ್ಣಿಸಲಾನಜೀಯೆಂ ವಿದೇಹನುಂ (ಅರಿಪು. ೦-೩೨); ಧರೆ ಪುಸಿವೋಗದೆ ಬೆಳಗೀ ಧರೆಯಂ ಭುಜಬಳದಿನಾಳ್ಗಿ ಭುಜಬಳಗಂಗಂ (ಎಕ. VII. ಶಿವಮೊ. ೯೭-೩೦; 1113). **ಹುಸಿಹೋಗು** : ದುಷ್ಟಬುದ್ಧಿಯ ಮತ್ತೊಂದು ಪ್ರಯತ್ನವೂ ಹುಸಿಹೋಗಿ ಅದಕ್ಕೆ ಮದನನೇ ಬಲಿಯಾದನು (ಕರ್ಣಾಕ. ೨೬೮); ಹೀಗೆ ಮಾಡಿದರೆ ಬೀಜವು ಹುಸಿಹೋಗದೆ, ನಾಟ ದೊಡ್ಡ ಬೆಳಸೂ ಬರುವದೆಂಬ ನಂಬಿಗೆಯೂ ಅವನಿಗಿದೆ (ಕನ್ನಡಾ. ೦೬೬); ಹುಸಿಹೋಗದೆಂಬ ಖಾತ್ರೀ ಇದ್ದ ಒಂದು ಮಹಾಸ್ತ್ರವನ್ನೂ ಅಭಿಮಂತ್ರಿಸಿ ಎಸೆದೆ (ಅಚಜ. II. ೦೬೬).
[ಪುಸಿ₂+ಪೋಗು₁ (<ಪೋ₁)]

**ಪುಸುಕಲು** (ನಾ). ೧. ಜಾಳುಜಾಳಾದದು: ಜಾಳುಜಾಳಾದ, ಪುಸುಕಲಾದ (sleazy. ಇಂಕಅ). ೨. ದುರ್ಬಲನಾದ ವ್ಯಕ್ತಿ ; ಅಶಕ್ತ : ಒಂದು ದಿನದ ಜ್ವರಕ್ಕೇ ಇಷ್ಟು ಸೊರಗಿ ಹೋಗಿದ್ದಿ, ತುಂಬಾ ಪುಸುಕಲು ನೀನು (ರೂಪಿ).
[←ಮರಾ. ಪುಸಕುಲ]

**ಪುಸುಗೂರ್** (ನಾ). ಒಂದು ಊರಿನ ಹೆಸರು : ಬ್ರಹ್ಮಶಿವಬಟರರು ಪುಸುಗೂರ ಆಳೆ (ಎಕ. X. ಶಿದ್ಧಶಿ. ೫೯-೩; ಸು. ೯೦೦). [ ? + ಊರ್ ]

**ಪುಸ್ಕು** (ನಾ). ಏನೂ ಆಗದಿರುವುದು ; ವಿಫಲತೆ ; ಅವರೇ . . . ಇನ್ಸ್‌ಪೆಕ್ಟರರಿಗೆ ಶರಾಬು, ಕೋಳಿ, ದಾಳಿಗೊನೆಗಳ ಸಮಾರಾಧನೆ ಮಾಡಿಸಿ ನಂಬ್ರ 'ಪುಸ್ಕು' ಮಾಡಿಸಿದ್ದು (ಹಾಪ. ೦೦೩). [←ತುಳು. ಪುಸ್ಕು, ಪುಸ್ಕ್]

**ಪುಸ್ತ** (ನಾ). ೧. (ಬಣ್ಣ ಮೊದಲಾದುವನ್ನು) ಬಳಿಯುವುದು ; ಲೇಪನ; ಲೆಪ್ಪದ ಕೆಲಸ : "ಪುಸ್ತಂ—೧. ಲೇಪ್ಯಾದಿಕರ್ಮಣಿ_ಬಳಿಯದು ಮೆತ್ತುವ ಕೆಲಸ" (ಸಿದ್ಧಾಂತ. ೩೦೩). ೨. ಬರೆವಣಿಗೆ; ಬರೆಹ ; ಲೇಖನ. ೩. ಮರ, ಲೋಹ, ಮಣ್ಣು, ಗಾಜು ಮೊದಲಾದುವುಗಳಿಂದ ತಯಾರಿಸಿದ ವಸ್ತು : "ಪುಸ್ತ = ಮಣಿ ಗಾಸ ಮೊದಲಾದವಱಿಂದ ಮಾಡಿದ ಪುತ್ಥಳಿ" (ಐಚಾಅ. ೯); ನೇಪಥ್ಯವು ಪುಸ್ತ, ಅಲಂಕಾರ, ಅಂಗ ರಚನಾ, ಸಜ್ಜೀವ ಎಂದು ನಾಲ್ಕು ವಿಧ. ವಾಹನ, ವಿಮಾನ, ಬಂಡೆ ಬೆಟ್ಟ, ಧ್ವಜ ಕವಚಾದಿ ಪದಾರ್ಥಗಳು 'ಪುಸ್ತ' (ಸಂಚಾಟಿ. ೦೨). ೪. ಪುಸ್ತಕ; ಗ್ರಂಥ. [ಸಂ.]

**ಪುಸ್ತಂಗ** (ನಾ). ಒಂದು ಬಗೆಯ ಅಲಂಕಾರದ ವಸ್ತ್ರ : ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪುಸ್ತಂಗ ತೊಡರಾ ಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂಪಪಿ. ೦೩-೦೨).
[←ತೆಲು. ಪುಸ್ತಂಗು]

**ಪುಸ್ತಕ** (ನಾ). ೧. ಕೈಬರೆಹದ ಅಥವಾ ಅಚ್ಚಾದ ಗ್ರಂಥ; ಹೊತ್ತಗೆ; ಬುಕ್ಕು : "ಶ್ರುತಂ ಲೀಪಿ ಭಿತ್ತಿಯೆನೆ ಪುಸ್ತಕಂ" (ಮಂಗರಾ. ೦೦೬-೦೩); ಅವಳ ಕಯ್ಯ ಪುಸ್ತದೋರ್ಪುವು ಲೋಕದ ಸಾರಸೂಕ್ತಿ . . . ಅ ವಧುಗೆ ಕಾವ್ಯದ ನಾಂದಿಯಿಂತರ್ಪುದೆತ್ತುಮೆ (ಸೂಕ್ತಿಸು. ೦-೬); ರಾಯ ಕೇಳ್ಳೆ ನಿಮ್ಮ ಪಾಂಡವರಾಯಚರಿತವನೆಂದು ವೈಶಂಪಾಯನಗೆ ಬೆಸಸಿದನು ಕೊಟ್ಟನು ಬಳಿಕ ಪುಸ್ತಕವ (ಕುಭಾ.ಆ. ೨-೯); ಅಸ್ತಮಯಕೆ ಉಣ್ಣ ಬಾರದು ಎಂದೆಂಬ ಪುಸ್ತಕವನು ಪಿಡಿಕೊಂಡು ವಿಸ್ತರಿಸುತವೋದುವಾರು ಹ್ವರು ತಮ್ಮ ಬಸ್ತಿಯೊಳಗೆ ರಾಜಿಸಿದರು (ಅಭ್ಯಾಂಇ. ೩-೦೨೦). ೨. [ಜೈನ] ಮುನಿಗಳ ಒಂದು ವರ್ಗ : ಗಚ್ಛಗಳು : ಪೊಗರಿ, ಪುಸ್ತಕ . . . ಮೇಘ, ಪಾಷಾಣ (ಕಜಾಅ. ೯೩).

**ಪುಸ್ತಕದ ಬದನೆಕಾಯ್, ಪುಸ್ತಕದ ಬದನೆಕಾಯಿ** = ಪ್ರಯೋಗಕ್ಕೆ ಸಾಧ್ಯವಾಗದ ಜ್ಞಾನ,_ ತಿಳಿವಳಿಕೆ,_ ಅರಿವು : ಸಕಲಲಕ್ಷಣಕಾಗಿ ಬಱಸು ಮಾಡಿದರೆ ಪುಸ್ತಕದ ಬದನೆಕಾಯಹುದು (ಚಟ. ೦-೯); ಬರಿಯ ಪುಸ್ತಕದ ಬದನೆಕಾಯಿ ಹೇಳುವವನಾದರೆ ಪ್ರಯೋಜನವಿಲ್ಲ (ಹೋರಕು. ೨೬). **ಪುಸ್ತಕದ ಹುಳು** = ಪುಸ್ತಕಕೀಟ : ಅವನೊಬ್ಬ ಪುಸ್ತಕದ ಹುಳು, ಯಾರ ಜೊತೆಯೂ ಸೇರುವುದಿಲ್ಲ (ರೂಪಿ). **ಪುಸ್ತಕ ನುಂಗು** = ಪುಸ್ತಕವನ್ನು ಪೂರ್ಣವಾಗಿ ಓದು : ಅವನೆಂದರೆ ನನ್ನ ಜನಾರ್ದನ. ಪುಸ್ತಕ ನುಂಗುವುದರಲ್ಲಿ ಬಕಪಕ್ಷಿ (ತುಂಕಕ್ಷ. ೦೩). **ಪುಸ್ತಕ ನೋಡಿಸು** = ಭವಿಷ್ಯ ಸೂಚನೆಗಾಗಿ ಪುಸ್ತಕದಲ್ಲಿ ಕಡ್ಡಿ ಹಾಕಿ ಓದಿಸಿ ತಿಳಿದುಕೊಳ್ಳು : 'ಪುಸ್ತಕನೋಟ' ಪರಾ. [ಸಂ.]

**ಪುಸ್ತಕಕೀಟ** (ನಾ). ಯಾವಾಗಲೂ ಓದುವುದರಲ್ಲೇ ಕಾಲ ಕಳೆಯುವವನು ; ಓದುವುದೊಂದನ್ನೇ ಹವ್ಯಾಸವಾಗಿಟ್ಟುಕೊಂಡಿರುವವನು : ಅವನೊಬ್ಬ ಪುಸ್ತಕಕೀಟ. ವ್ಯವಹಾರಜ್ಞಾನ ಏನೇನೂ ಸಾಲದು (ರೂಪಿ). ☞ ಇದು 'Book-worm' ಎಂಬ ಇಂಗ್ಲಿಷ್ ಶಬ್ದದ ಅನುವಾದ. [ಸಂ.]

**ಪುಸ್ತಕಕ್ರಿಮಿ** (ನಾ). = ಪುಸ್ತಕಕೀಟ : "ಪುಸ್ತಕಕ್ರಿಮಿ ; ಪುಸ್ತಕಪಿಶಾಚಿ ; ಓದುಕುಳಿ ; ಗ್ರಂಥವ್ಯಸನಿ" (Book-worm. ಇಂಕಅ). [ಸಂ.]

**ಪುಸ್ತಕಗಚ್ಛ** (ನಾ). = ಪುಸ್ತಕ ೨ : ಅಲ್ಲಿಯ ದೇಸಿಗಗಣದ ಪುಸ್ತಕಗಚ್ಛದ ಬೋಧವಿಭವದ ಕುಕ್ಕುಟಾಸನ ಮಲಧಾರಿದೇವರ ಶಿಷ್ಯರ್ (ಎಕ. II. ೭೩-೫೦ ; 1118). [ಸಂ.]

**ಪುಸ್ತಕಘಳ** (ನಾ). = ಪುಸ್ತಕ ೨ : ಶ್ರೀಮೂಲಸಂಗದೇಸಿಯಗಣ ಪುಸ್ತಕ ಘಳ ಕೊಂಡಕುಂದಾನ್ವಯ ಇಂಗುಳೇಸ್ವರದ ಬಳಿಯ . . . ಪ್ರಭಾಚಂದ್ರ ದೇವರ ನಿಸಿಧಿ (ಎಕ. I (R). ೯೯-೦ ; 1044).
[☞ ಇದು 'ಪುಸ್ತಕಗಚ್ಛ' ಎಂಬುದರ ಅಪಲಿಖಿತ]

**ಪುಸ್ತಕನೋಟ** (ನಾ). ಇಕ್ಕಟ್ಟಿನ ಪ್ರಸಂಗಗಳಲ್ಲಿ ಮಾರ್ಗದರ್ಶನಕ್ಕಾಗಿ ಜ್ಯೋತಿಷ್ಯದ ಬದಲಾಗಿ, ರಾಮಾಯಣದಂತಹ ಪುಸ್ತಕದಲ್ಲಿಯೋ, ಭವಿಷ್ಯಸೂಚಕವಾದ ವಾಕ್ಯಗಳಿರುವ ಪುಸ್ತಕದಲ್ಲಿಯೋ ಕಡ್ಡಿ ಹಾಕಿ, ಆಯಾ ಪುಟದಲ್ಲಿರುವ ಮಾತುಗಳಿಂದ, ಸಂದರ್ಭಕ್ಕೆ ತಕ್ಕಂತೆ ಅರ್ಥವನ್ನು ತಿಳಿದುಕೊಳ್ಳುವಿಕೆ : ಈ ಮೇರೆ ಹದಿನೈದು ದಿವಸ ಕಟ್ಟಿದಾಗ್ಯೂ ನಿಲ್ಲದಿರಲು, ಇದೇನಾಶ್ಚರ್ಯವೆಂದು ಪುಸ್ತಕನೋಟ, ಶಕುನ ಮೊದಲಾದ್ದನ್ನು ನೋಡಿಸಲಾಗಿ (ಚಿತ್ರಶಾ. ೭). [ಪುಸ್ತಕ + ನೋಟ]

**ಪುಸ್ತಕಪಟ್ಟಿ** (ನಾ). "(ಸಾ., ಅಕಾರಾದಿಯಾಗಿ ಅಥವಾ ವಿಷಯಾನುಕ್ರಮವಾಗಿ, ಕೆಲವು ಸಂದರ್ಭಗಳಲ್ಲಿ ಸ್ವಲ್ಪ ವಿವರಣೆಯನ್ನು ಸೇರಿಸಿ ರಚಿಸಿದ) ಪೂರ್ಣಪಟ್ಟಿ ; ಪುಸ್ತಕಪಟ್ಟಿ" (Catalogue. ಇಂಕಅ).
[ಪುಸ್ತಕ + ಪಟ್ಟಿ]

**ಪುಸ್ತಕರ್ಮ** (ನಾ). ಬಳಿಯುವುದು ; ಸಾರಣೆ ; ಲೇಪನಕಾರ್ಯ : "ಲೆಪ್ಪ ಮೊದಲಾಗುಳ್ಳ ಕೆಲಸಮುಂ (ಹ)ಪುಸ್ತಕರ್ಮ ಎಂಬುದು" (ಹರಾಯು. ೯೭-೯೩೭). [ಸಂ. ಪುಸ್ತಕರ್ಮನ್]

**ಪುಸ್ತಕವಲ್ಲಿ** (ನಾ). ಒಂದು ಬಗೆಯ ಸಸ್ಯ : "ದ್ರುವಣಿ ಪುಸ್ತಕವಲ್ಲಿ" (ಮಂಗರಾ. ೪೯-೯೩). [ ? ]

**ಪುಸ್ತಿ**, ಪುಸ್ತೆ (ನಾ). ೧. ಶಾಲೆಯಲ್ಲಿ ಮಕ್ಕಳ ಬರೆವಣಿಗೆ ಎಷ್ಟು ಪ್ರಗತಿ

ಯಾಗಿದೆಯೆಂಬುದನ್ನು ತಿಳಿದುಕೊಳ್ಳಲು ನಿರ್ದಿಷ್ಟ ಹಾಗೂ ನಿಯತ ಕಾಲದಲ್ಲಿ ಅವರಿಂದ ಬರೆಯಿಸಿ ತೆಗೆದುಕೊಳ್ಳುವ ಶುದ್ಧಲೇಖನದ ಕಾಗದ ಮತ್ತು ಶುದ್ಧಲೇಖನ: ಅದರ ಮೇಲೆ ನಾನು ದಸರೆಯ ಹಬ್ಬದ ದಿನ ಒಂದು ಪುಸ್ತಿ ಬರೆಯುತ್ತೇನೆ (ಮುಂಬಯಿ. ೦-೩೦). ೨. ಬರವಣಿಗೆಗಾಗಿ ಇಟ್ಟುಕೊಂಡ ಒತ್ತುಕಾಗದಗಳ ಕಟ್ಟು: ಇವು ನಿಮ್ಮ ಪುಸ್ತಿಗಳಲ್ಲವೇ? (ಅದೇ). ೩. ಕೊರಳಲ್ಲಿ ಹಾಕಿಕೊಳ್ಳುವ ಒಂದು ಬಗೆಯ ಆಭರಣ: ಹಾರ ತಿಸರ ಪದಸರ ಕಂಠಮಾಲೆಯು ಚಾರುಪದಕ. ಬಂದಿ ಲುಳಿಯು ತೋರ ಮುತ್ತಿನ ಹತ್ತೆಗಟ್ಟು ಪುಸ್ತಿಯ[ ಪಾಠಾಂ. ತಾಳಿಯು]ನಂದಾ ರಾಯನಿತ್ತ ನಂದನೆಗೆ (ರಾಮಾಶ್ವ. ೬-೪೭); ಪಸ್ಮುಕ ವರ್ಣಕೃತಿಯು ಲಿಪಿಯು ಸಾಲು ಪುಸ್ತಕದೊಳಗೆಸೆವಂತೆ ಪುಸ್ತಿಯು ಚಿಂಶಾಕು ಮಣಿಸರ ಬಂದಿ ಪ್ರಶಸ್ತಿ ಪಡೆದವು ಕಂಠದೊಳು (ಶರಶ. ೪೦-೩೪); ನವರತ್ನದ ಪುಸ್ತಿ ಕಟ್ಟಾಣಿಮುತ್ತಿನ ಖವಖವಿಸುವ ಪಂಚಸರದ . . . ಪದಕದೆ ಕುವಲಯನೇತ್ರೆಯೊಪ್ಪಿದಳು (ಕಂಪಾ. ೬-೬೨). ಪುಸ್ತೆ: ೩. ಸುರಸತಿಯರು ಪುಸ್ತೆ[ಪಾಠಾಂ. ಸ್ತಿ] ಲುಳಿಯಾಣಿಮುತ್ತಿನ ಸರ ಬಣ್ಣಸರ ಬಂದಿ ಪದಕ . . . ಮಂಟಿಕೆಗಳ ಪರಮನ ಜನನಿಗಿಕ್ಕಿದರು (ಶಂಕ್ರಸಾಂ. ೨೩-೯೯). [ <ಪುಸ್ತ. / ತೆಲು. ಪುಸ್ತೆ ]

**ಪುಸ್ತಿಕೆ** (ನಾ). ಚಿಕ್ಕ ಪುಸ್ತಕ; ಪುಟ್ಟಗ್ರಂಥ: ಈ ಅವಧಿಯಲ್ಲಿ ೭೦ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ (ಶರಜೀ. III, ಮುನ್ನುಡಿ); ಈಗ ಈ ಮಾಲೆಯಲ್ಲಿ ಪ್ರಕಟವಾಗಿರುವ ಪುಸ್ತಿಕೆಗಳೆಲ್ಲ ಅಂಥವೇ (ಮುದ್ರಕ. III, ಮುನ್ನುಡಿ). [ಸಂ. ಪುಸ್ತಿಕಾ]

**ಪುಸ್ತೆ** 'ಪುಸ್ತಿ' ನೋ.

**ಪುಸ್ಯ, ಪೋಷ**$_1$ (ನಾ). ೧.=ಪುಷ್ಯ ೪: ಪುಸ್ಯವು ಹುಸಿದರೆ ಸಸ್ಯವು ಸಾಯಿತು ಎಂದೂ . . . ಪುನರ್ವಸು ಮಳೆಯು ಗುಡುಗಿದರೆ ಸುವೃಷ್ಟಿಯಾಗುವುದೆಂದೂ ತಿಳಿದಿದ್ದರು (ಹುಟ್ಟಿಹ. ೬೨). **ಪೋಷ**$_1$: ೨.=ಪುಷ್ಯ ೫: ತದ್ವರಿಷಾಭ್ಯನ್ತರದ ಪೋಷಸುದ್ಧಪಞ್ಚಮಿ ಈ ಬೃಹಸ್ಪತಿವಾರಮುತ್ತರಾಯಣದ ಸಂಕ್ರಾನ್ತಿಯನ್ದು ಶ್ರೀಮತ್ ××× ಳೋಕಯ್ಯ . . . ಆಳುತ್ತಿರೆ (ಎಕ. XI, ಹೊಳಲ್ಕೆ. ೩೦-೨; 964). [<ಸಂ. ಪುಷ್ಯ]

**ಪುಸ್ಸನೆ** (ಅ). 'ಪುಸ್' ಎಂಬ ಶಬ್ದದೊಡನೆ: ದಾರ ಬಿಚ್ಚಿಕೊಂಡ ಬಲೂನಿನಿಂದ ಗಾಳಿ ಪುಸ್ಸನೆ ಹೊರಕ್ಕೆ ಹೋಯಿತು (ಅದೇ).

[ಪುಸ್ + — ಅನ್ನು$_1$]

**ಪುಳ**$_1$ (ಗು). ೧. ಸ್ಫುಟವಾದ; ಸ್ಪಷ್ಟವಾದ: ಗುಳಿಗೆ ವರಾಳಂ ರಗಳೆ ಪುಳಂ—ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಮಂದ. ೨೩ ವೃತ್ತಿ) (ನಾ). ೨. ನಿರ್ಮಲವಾದುದು; ಸ್ವಚ್ಛವಾದುದು: ಸುಖಜಲಮಾ ನೇತ್ರದಿಂ ಜಾರೆ ಚಿತ್ತಂ ಪುಳಮಾಗಲ್ ಬಾಹುಜಂ ತಾನರರೆ ಮನದೆ ವೈಕುಂಠಸಂಗಂಬೊಲಿರ್ದಂ (ಚಂದ್ರಛ್ಛ. ೩-೯೯).

**ಪುಳಮಾಗಿ** = ಸ್ಫುಟವಾಗಿ: ಇದೆ ಕೊಳ್ಗಿಳಿವಜು . . . ಮೆಲ್ನುಡಿಗೊಂಡಂದದೆ ಪುಳಮಾಗಿಲ್ಲಿ ನುಡಿಗುಂ (ಚಿತ್ರಗೋ. ೨೧-೪೩).

[ < ಪ್ರಾ. ಫುಲ. / ಸಂ. ಸ್ಫುಟ ]

**ಪುಳ**$_2$ 'ಪುಲ' ನೋ.

**ಪುಳಂಪುಣಿಸೆ** 'ಪುಳ್ಳುಂಪುಣಿಸೆ' ನೋ.

**ಪುಳಂಪುರುಚೆ** 'ಪುಳ್ಳುಂಪುಣಿಸೆ' ನೋ.

**ಪುಳಂಬು** 'ಪುಳುಂಬು' ನೋ.

**ಪುಳಕ**$_1$ 'ಪುಲಕ' ನೋ.

**ಪುಳಕ**$_2$ (ನಾ). (ಕರಾ) ಗೇರಿಕಾರ; ಮುಖಂಡ. [?]

**ಪುಳಕಪ್ರಭೇದನ** (ನಾ). ರೋಮಾಂಚನವಾಗುವಿಕೆ; ನವಿರೇಳುವಿಕೆ: ಇದು ಪಿರಿದುಂ ಬುಧಾವಳಿಗೆ ಕರ್ಣರಸಾಯನಮಾತ್ರಚಿತ್ರಸಮ್ಮದಜನಕಂ ಮುದಶ್ರುಜಲಕರ್ತೃಲಸತ್ಪುಳಕಪ್ರಭೇದನಪ್ರದಗುರು ಮಸ್ತಕಪ್ರಚುರ ಕಂಪನಶಿಕ್ಷಕನೆಂಬಿನಂ ಪ್ರಯತ್ನದೆ ಕೃತಿವೇಳ್ವುದು (ಚಂದ್ರಕೃ. ೦-೪೯).

[ಸಂ. ಪುಲಕಪ್ರಭೇದನ]

**ಪುಳಕಬಿಂದು** (ನಾ). ಬಹಳ ಸಂತೋಷದಿಂದ ಹೊಮ್ಮಿದ ಕಣ್ಣೀರಿನ ಹನಿ; ಆನಂದಬಾಷ್ಪದ ಬಿಂದು: ತ್ರಿಪುರಸಂಹಾರದ ಮಾತುವಲ್ಲಿ ಶಿವನ ಉನ್ಮಿಷೋನ್ಮೀಲನದೃಷ್ಟಿಯಿಂ ಪುಳಕಬಿಂದು ಕಚ್ಚಟೆಯ ಮೇಲೆ ಬೀಳಲುಣ್ಮಿದ ರುದ್ರಾಕ್ಷಿ ಸರ್ವಕಾರಣಾಧಿಕ್ಯವೆಂಬುದನಱಿದು ರುದ್ರಾಕ್ಷಿಯ ಧರಿಸಿದಾತನೇ ಸರ್ವತೋರುದ್ರನಪ್ಪುದು ತಪ್ಪದು (ಅದವ. ೦೯-೪೬).

[ ಸಂ. ಪುಲಕಬಿಂದು ]

**ಪುಳಕಾಂಕುರ** 'ಪುಲಕಾಂಕುರ' ನೋ.

**ಪುಳಕಿತ** 'ಪುಲಕಿತ' ನೋ.

**ಪುಳಕಿಸು** 'ಪುಲಕಿಸು' ನೋ.

**ಪುಳಗಣ್** (ನಾ). ಒಂದು ಸ್ಥಳದ ಹೆಸರು: ಮಣ್ಣುಲೋರ ವಿಷಾಕಗಾಳೊಳ್ಕಾದಿ ಪುಳಗಣ್ಣೊಳು ಸತ್ತು ಸಗ್ಗಿಯಾದಂ (ಎಕ. X (೩), ಮುಳಬಾ. ೦೮೭-೦೩; 820). [?]

**ಪುಳಗು** 'ಪುಣುಗು' ನೋ.

**ಪುಳಗುಕಾಪು** 'ಪುಣುಂಗುಕಾಪು' ನೋ.

**ಪುಳಗುಳಕಲ್** (ನಾ). ಒಂದು ಪ್ರದೇಶದ ಹೆಸರು: ಸುದ್ದ ಪವುಷಮಾಸದೊಳ್ ಪುಳಗುಳಕಲ್ಲ ಮೇಗಿಟ್ಟು ಪಿರಿಯ ಮೆಟಪಿಗೆ××× ಪಾದಪಂಯಾರವ××× ಯನಟಿ (ಕಇಇ. IX–1, ೩೨-೦೩; ಸು. 10ನೆಯ ಶತ).

[ಪುಳಗುಳ್$_0$ + ಕಲ್$_3$]

**ಪುಳಯಿಸು** (ಕ್ರಿ). ನಿಲ್ಲಿಸು; ಸ್ಥಾಪಿಸು: ಕೆಲೆಯಬ್ಬೆಯ ಮಗ ಮಾರಾಜ . . . ಇದಿರ್ಚಿದ ಬಲಮಂ ಕೊನ್ದು ಸತ್ತಡೆ × × × ಸಂದಂ ಗುಜ್ಜಮ್ಮಡಿಗಾವುಂಡಂ ಕಲ್ಲಂ ಪುಳಯಿಸಿದ ಪರೋಕ್ಷದಲು (ಎಕ. ೪, ಹುಂಚಾ. ೪೪-೦೭; 1027 ?). [☞ ಇದು 'ಪೂಣಿಸು' ಎಂಬುದರ ಅಪಲಿಖಿತ ವಿರಬಹುದು].

**ಪುಳವಿ** (ನಾ). [ಜೈನ] ಲೋಕಗಳನ್ನು ಒಳಗೊಳ್ಳುವ ಚೀಲಗಳಂತೆ ಇರುವ ಅತ್ಯಂತ ಬೃಹದಾಕಾರದ ಅವಕಾಶ; ☞ ಇವುಗಳಿಗೆ 'ನಿಗೋದ' ಎಂಬ ಹೆಸರೂ ಉಂಟು: ಸ್ಕಂಧಂಗಳ್ ಅಸಂಖ್ಯಾತ ಲೋಕಮಾತ್ರಂ ಏಕೈಕಸ್ಕಂಧದೊಳ್ . . . ಅಸಂಖ್ಯಾತಲೋಕಮಾತ್ರ ಪುಳವಿಗಳ್ ಒಂದೊಂದು ಪುಳವಿಯೊಳ್ ಅಸಂಖ್ಯಾತ ಲೋಕಪ್ರಮಿತ ನಿಗೋದಶರೀರಂಗಳ್ (ತತ್ತ್ವಸೂ. ೩೩೦). [ಸಂ. ಪುಲವಿ ? ]

**ಪುಳಿ**$_1$ (ಕ್ರಿ). ಹುಳಿಯಾಗು; ಹುಳಿಯೊಡೆ: ಮಧು ಸೀತುಂ ಕಟು ಸಿಱು ಪೋ ಪುಳಿತ ಕಳ್ಳಲ್ಲುಂ ಕರಂ ಕಯ್ಯು ಬರ್ಪುದು (ಶಂಪಟಾ. ೪-೮೮).

[ದೇ. ೫ ತಮಿ. ಮಲ. ಕೋತ. ತೊದ. ಪುಳಿ; ತುಳು. ಪುಳಿ, ಪುಲಿ; ತೆಲು. ಪುಳಿಯು, ಪುಲಿಯು ]

**ಪುಳಿ**$_2$ 'ಪುಟಿ' ನೋ.

**ಪುಳಿ**$_3$, ಹುಳಿ$_2$ (ನಾ). ೧. ಹುಳಿಯಾಗಿರುವಿಕೆ; ಆಮ್ಲತ್ವ: (ಕ). ೨. ನಿಂಬೆ ಹಣ್ಣು, ಹುಣಿಸೆಹಣ್ಣು ಮೊದಲಾದುವುಗಳ ಆಮ್ಲರಸ; ಷಡ್ರಸಗಳಲ್ಲಿ ಒಂದು: ಪಾಲುಂ ಪುಳಿಯೊಳ್ ಬೆರಸಿದೊಡನಿದಕ್ಕುಮೆ (ಶಬಸಂ. ೦೬೦-೨೦); ಬದಗುಳಿಗನ ತೋಳ್ಪುಟ್ಟಿದ ಸುದತಿಯೊಲಿಂಬಾಗದಂತೆ ಕಟ್ಟುದು ಪುಳಿ ಮುಟ್ಟಿದ ದುಗ್ಧದಂತೆ ನೀಮುರ್ಚಿದ ಜೇನೆಯ್ಯು ತೆಱದೆ ಪಕಿಗೆ ಶಯ್ಯಾತಳದೊಳ್ (ಯುಕೋಶ. ೨-೩೯); ಪುಳಿಯಿಂದೆ ಪಾಲ್ ಒಹುಳಕೋಪದೆ ತಪಃಫಲಮುಂ . . . ಸಲೆ ಕಿಡುವವೋಲ್ ಕಿಡುವುದರ ಸಾಳ್ವ ಧರೆ ಪಿಸುಣರಿಂ (ಕಾವ್ಯ. ೬-೩). ೩. ಹುಣಿಸೆಹಣ್ಣು: ಪುಳಿಯೊಳಲೆದ ಪವಳದ ಬಟ್ಟನಂತೆ ಸೊಗಯಿಸುವ ಸಾರೋದಯನ

ಬಿಂಬಾಧರಮನಂಗಶಾಗರಸಮುರುೞಿಯಂತಾಮುದು (ಶಂಶಾ. ೨-೩೯ ವ). ೪. ಹುಣಿಸೆಹಣ್ಣು ಸೇರಿಸಿ, ಬೇಳೆ, ತರಕಾರಿಗಳ ಸಹಿತವಾಗಿ ಮಾಡುವ ಮೇಲೋಗರ; ಆಮ್ರ : ಮಿಗಿಲೆನಿಸುವ ಪೊಸ ಸುಣ್ಣ ದೊಳಂಗುರ್ವಿಲ್ಲಿಯು ಬೇರನಿಕ್ಕಿ ಗರ್ದುಗಿನ ಕೊನೆಯಂ ತೆಗಪಿ ಪುೞಿಯಡುಗೆ ಮೇಣ್ ಸಂಡಗೆಯಿಡುಗಾ ತೆಱದಿನಪಱ ಬೀಜಂಗಳುಮಂ (ಲೋಕೋಪ. ೬-೨೪); ಲೊಕ್ಕಿಯ ಕೊನೆಯುನಕ್ಕಿ ಮೇಣ್ ಆೞ್ಳಿಯ ಕೊನೆಯಂ ತೆಗಪಿ ಪುೞಿಯ ನಡೆ ಸವಿಯಕ್ಕುಂ (ಲೋಕೋಪ. ೬-೨೬). ಹುೞಿ: ೧. ಹುಲಿಯ ಹುಲ್ಲೆಯ ನೇಹ ಬೞುಗತ್ತಲೆಯ ಬೆಳಗಿನ ಮೈತ್ರಿ ಮಧುರದ ಹುೞಿಯ ಪರಿಸಂಬಂಧ ವಿದ್ದುವು ಬನದೊಳಾ ಮುನಿಯ (ತೊರಟಾ. ೧-೫-೪೩). ೨. ಕೆಡುಗು ಹುೞಿ ಯೆನಲಕಟ ಜಡವೆನಿಪ ಪಾಲ್ಗಡಲು (ಸಾಸಂತ. ೧ ೪೫); ಹುೞಿಗೆ ಹಾಲಳುಕಿ ದರೆ ಹಾಲಿನ ಜಲಧಿ ಕೆಡುವುದೆ (ಕುವ್ಯಾ. ೩೧-೭); ಒಗರುಪ್ಪು ಸಿಹಿ ಕಹಿ ಹುೞಿ ಕಾರಗಳ ತೆಗೆತೆಗೆದೀವುಶಿಹನು ನಾಲಗೆಗೆ ದೃಗವಬೋಧನಶಕ್ತಿ ಸುಖವನಾತ್ಮಗೆ ಬಗೆಬಗೆದೀವುಶಿಹನು ಭಾವದೊಳು (ಭರಚ. ೪-೯೩). ೩. ಉಪ್ಪು ಹುೞಿ ಮೆಣಸು ಸಂಬಾರ (ಸೌಇಂ. ಮಂಗಳೂರು. ೪೭೫-೩೪ ; 1312); ಉಪ್ಪು ಹುೞಿ ಬೆಲ್ಲ ಯೆಂಣೆ . . . ಜವಳಿ ಮುಂತಾಗಿ (ಎಕ. VII, ಶಿವಮೊ. ೨೬-೦೭; 1670); ಕಳ್ಳ ಕಳ್ಳಗೆ ನಂಟು, ಹುೞಿ ಮೆಣಸಿಗೆ ನಂಟು (ಗಾದೆ). ೪. ಗಂಗಾದೇವಿಯು ಹುೞಿ ಕಾಸಿ ಗೌರೀದೇವಿಯು ಕೊಳನಟ್ಟು ಭಕ್ತನ ಬಾಡನಟ್ಟು ದೇವನ ಸಾಸಮೆಗಲಸಿ . . . ಉಣಾಲಿಕ್ಕಿ ಕೈಕಾಲು ಮುಱಿ ಯಿತ್ತು (ಅನಹು. ೦೨೫-೫೭೬); ಅವರೆಲ್ಲ . . . ತಟ್ಟೆಗಳಲ್ಲಿ ಅನ್ನ, ಪಾತ್ರೆ ಗಳಲ್ಲಿ ಹುೞಿ ತುಂಬಿಕೊಂಡು ಬಡಿಸುವುದಕ್ಕೆ ಸಿದ್ಧವಾಗಿ ನಿಂತಿದ್ದರು (ರಂಗಕ. ೯೦); ಹರಿವೆಯ ಸೊಪ್ಪಿನ ಹುೞಿ ಗಂಟಲ ಕೆಳಗೆ ಇೞಿಯಲೇ ಇಲ್ಲ (ದೇವಹು. ೨೦೦). ೫. ಒಂದು ಬಗೆಯ ಸಸ್ಯ : ಕಿರೀಹುೞಿಪ, ಹುೞಿ, ಮಂಗ್ಗಿನ ಕೋಡುಸೊಪ್ಪು, ಸಣ್ಣಗೂಗೆ, ಬಿಳಿಕೊಮ್ಮೆ (ವ್ಯಕಿಗ. ೬-೦೨೭). ೬. (ಅಲಂ) ಪೊಗರು; ಸೊಕ್ಕು; ದರ್ಪ : ಶೀನಪ್ಪಯ್ಯನ ಹುೞಿ ಕುಗ್ಗುವ ರೀತಿಯಲ್ಲಿ ತಾನೊಂದು ಉಪ್ಪರಿಗೆಮನೆಯನ್ನು ಕಟ್ಟಿಸಬೇಕು (ಮರಮ. ೦೩೯). ೭. ಹುೞಿ ಹಿಂಡುವವನು ; ಕೆಡುಕ : ಯಾವನನು ಅಲ್ಲೆಂದಡೆ ಹದಿನೆ[ಂ]ಟ್ಟು ಸಮಯಕ್ಕೆ ಹೊಱಗೂ ದೇಸಕ್ಕೆ ಹುೞಿ (ಸೌಇಇ. IX-1. ೩೭೬-೭೭ ; 1279). (ಗು). ೮. ಹುೞಿಯಾಗಿರುವ ; ಹುಳ್ಳಗಿರುವ : 'ಹುೞಿದಾಳಲು', 'ಹುೞಿನೀರು' ಪರಾ.

ಹುೞಿ ಮುಟ್ಟಿದ ಹಾಲು=ಒಡೆದ ಹಾಲು ; ಕೆಟ್ಟುಹೋದ ಹಾಲು: ಹುೞಿ ಮುಟ್ಟಿದ ಹಾಲಿನಂತಾದ ಮೇಲೆ ಅವಳ ಮೈ ತನ್ನ ಬೆನ್ನಿಗೆ ಆಕಸ್ಮಿಕ ವಾಗಿ ಸೋಕಿದ ಮಾತ್ರಕ್ಕೆ ಕರ್ಕಶಸ್ಪರ್ಶವಾಗುವುದು (ಕಾವ್ಯಸ. ೬೨). ಹುೞಿಯನ್ನು ಹಿಂಡು=ಸ್ನೇಹ, ಸೌಹಾರ್ದ ವಾತಾವರಣವನ್ನು ಕೆಡಿಸು: ಇವೆಲ್ಲವೂ ನಮ್ಮ ನಿಮ್ಮಲ್ಲಿರುವ ಸಂಬಂಧಕ್ಕೆ ಹುೞಿಯನ್ನು ಹಿಂಡಲೋಸುಗ ಕಲ್ಪಿತವಾಗಿರುವ ಒಂದು ನಾಟಕ (ದ್ರೋಕಪ್ಪ. ೨೭೬). [ <ಪುೞಿ$_1$. / ತಮಿ. ಮಲ. ತೆಲು. ಪುೞಿ ; ತುಳು. ಪುೞಿ, ಹುೞಿ ]

**ಪುಳಿಂಚು**, ಪುಣಿಚು, ಪುಳಿಚು (ನಾ). ೧. ಆರ್ದ್ರಪದಾರ್ಥವು ಒಣಗಿ ಏಳುವ ಹಕ್ಕಳೆ; ಹುರುಪು: ಬಿಗಿದೊಗೆದ ನಿನ್ನ ಮೊಲೆಗಳ ಮೃಗಮದದ ಪುಳಿಂಚುಗಳ್ ಪ[ಗಿಲ್ತಿ]ರಲೆಡೆಯೊದಗಲುರಮ ನೆನಗೆ ಪಡೆದಜನೊಗಸುಗಮ ಸ್ತ್ರೀಲಗೆ ನಿನ್ನನೆವಗೆಯೆ ಪಡೆದಂ (ಶಂಶಾ. ೬-೭೭); ಇಂಚರದಮರ್ದಿನ ಸವಿಯ ಪುಳಿಂಚಿನ ಕಿವಿಗಳ್ಗೆ ವೃತ್ತಕುಚಿ ಪಶಿಯುರಮಂ ಮಿಂಚಿನವೊಲಪ್ಪಿ ಮಿಡಿದ ವಿಪಂಚಿಯೆನೆ ಪುಳಿಂದಿ ಪಾಡಿದಳ್ ಮಾನವಸಂ (ರೀಲಾವ. ೬-೩೪); ಎಸೆದುವು ತನುಲಕ್ಷ್ಮಿ ನಲಿದು ಗುಡಿಗಟ್ಟಿದಂದದಿಂ ಪೂಸಿದ ಚಂದನದ ಪುಳಿಂಚು ಗಳಂ ಪೊತ್ತು ನೆಗೆದ ಪುಳಕಾಂಕುರಂಗಳರಸನ ಮೆಯ್ಯೊಳ್ (ಚಂದ್ರಪ್ರ. ೦೨-೨೩). ಪುಣಿಚು : ೨. ಹಲ್ಲಿನ ಕಿಟ್ಟ,-ಕೊಳೆ : 'ಪುಣಿಚೇಟು' ಪರಾ. ಪುಳಿಚು : ೧. 'ಪುಳಿಚೇಟು' ಪರಾ. [ ? ]

**ಪುಳಿಂಚೆ**, ಪುಣಿಚೆ (ನಾ). ಬೇಡರ ಹೆಂಗಸು ; ಬೇಡಿತಿ (?) : ಪಾಱಮುಮಂ ಪೊರೆವಮರ್ದ ಪುಳಿಂಚೆಯ ನುಣ್ಚರಮಗಲ್ದು ಪುಂಸ್ಕೋಕಿಲಗಳ್ ತಾಂ ಚೇಗದೆ ಪೆಣ್ಗೋಗಿಲೆಯಿಂಚರಮೊಂದಲ್ಲಿ ಸುತ್ತಿ ಮುತ್ತುಗುವುನಿತಂ (ಉದ್ಭಟ. ೨-೯೪). ಪುಣಿಚೆ : ದಂಗಟನ ಪುಣಿ[ಪಾಕಾಂ. ಣ]ಚೆಯರು ಹೊಂಗಱಿಯ ಬಿಲ್ಲುಕೋಲನೊಂದು ಕೈಯಲಿ ಪಿಡಿದು ಒಂದು ಕೈಯಲಿ ಬಿದಿರಕ್ಕಿಯ ಹಿಡಿದು ಮುಂದೆ ಬಂದಾಡುತಿರೆ (ಕನ್ನವ. ಕ. ೦೪೭-೩೩೨); ಬಯಸುವರು ಗೋಪಿಯರದಾವನ ಪಾದರೇಣುಗಳ ಬಯಸುವರು ಪುಣಿಚೆಯ [ಪಾಕಾಂ. ಪೂಜೆಯ, ಪೂಜಿಪ]ರು ತೃಣಸಂಚಯನಿಹಿತಪದ ರೇಣುಗಳನವ್ಯಯನನಾವಗಲುವೆವದೆಂತೆಂದರು ಮಹಾತ್ಮೆಯರು (ಭಾಗ. ೧೦-೭೪-೫೭). [ <ಪುಳಿಂದಿ ?]

**ಪುಳಿಂದ** 'ಪುಲಿಂದ' ನೋ.

**ಪುಳಿಂದಕ** (ನಾ). ಬೇಡರವನು; ಶಬರ : ಧುರಕ್ಕೆ ದಶರಥನೃಪತಿ ಸುತರಂ ಭರದೆ ಕಳುಹುಗುವೆಂಬ ಶಂಕೆಯಿನಿರದೆ ಕಿಟ್ಟಿದು ಶಬರಬಲವೆಂದಂ ಪುಳಿಂದಕನು (ಕುಮುರಾ. ೪-೩೯); ಕಾಣಿಕೆಯ ಕೈಕೊಂಡು ಶಬರ ಶ್ರೇಣಿಯನು ಮನ್ನಿಸಿದನುಚಿತದ ವಾಣಿಯಲಿ ವೈವಸ್ವತಾನ್ವಯನಾ ಪುಳಿಂದಕರ (ತೊರಟಾ. ೩-೩-೫). [ಸಂ. ಪುಲಿಂದಕ]

**ಪುಳಿಂದಿ** (ನಾ). ಬೇಡರ ಹೆಂಗಸು ; ಬೇಡಿತಿ ; ಶಬರಿ : ವನಚರನಾಗಿ ಶಂಭು ಗಿರಿಜಾತೆಯನೋತು ಪುಳಿಂದಿ ಮಾಡಿ ನಚ್ಚಿನ ಗುಹನ ಕಿರಾತಬಲ ನಾಯಕನಾಗಿರೆ ಮಾಡಿ . . . ಕವಿದನಾ ಬನಮಂ (ಶಂಶಾ. ೬-೦೪); ಚಂಚಲಕಪಾಂಗದ ಪುಳಿಂದಿಯರ್ ತಮ್ಮ ತಮ್ಮ ಓಪರಂ ಬಳಿವಿಡಿದು ಬರುತಿರ್ದರಾಗ (ಜೈಮಿಭಾ. ೨೬-೪೨); ಪುಳಿಂದಿಯರಾದರಮರ್ತ್ಯಕಾಂತೆಯರ್ (ಶಬಶ. ೩-೯). [ಸಂ. ಪುಲಿಂದೀ]

**ಪುಳಿಂದಿನಿ** 'ಪುಲಿಂದಿನಿ' ನೋ.

**ಪುಳಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : ಬಿಳಿಪೊಳಿಸು, ಬೂದಿತಾಳೆ, ಪುಳಿಕೆ, ಬಿಳಿತಾಳೆ, ತೆಲ್ಲಪುನಿ (ವ್ಯಕಿಗ. ೩೯-೭೭೩). 'ಹುೞಿಗ' ಪರಾ. [?]

**ಪುಳಿಗರ್ಚು** (ಕ್ರಿ). ಹುೞಿ ಹಚ್ಚಿ ತೊಳೆ ; ಹುೞಿ ಹಾಕಿ ಬೆಳಗು,- ಬೆಳ್ಳಗೆ ಮಾಡು : ಕೊರ್ಬೆಂಬ ಕಿಟ್ಟಮುಂದುರೆ ಪಸುರ್ವಣ್ಣವೆಂಬ ಕಾೞಿಕೆ ಕಱಿಲೆ ವಿರಹಾಗ್ನಿಯಿಂ ಕಾಯ್ಸಿ . . . ಬೆಳ್ದಿಂಗಳಿಂ ಪುಳಿಗರ್ಚಿ ಕುಸುಮಶರನ ಶಾಣದೊಳ್ ಪೊಸವೆಳ್ಪು ಪಸರಿಸಿ ಕುಸುಮಶರನೆ ಮಿಸುಗೆ ಮಸೆದಸಿಯಂತಿ ರೆಸೆವಸಿಯ ಮೆಯ್ಗೆ ಮೆಯ್ಸಿರಿಯಾದ ಬೆಳ್ಪಸನದಿಂ (ರೀಲಾವ. ೧೦-೩೭ ವ); ಪುಳಿಗರ್ಚಿದಂಗಜಾಸ್ತ್ರಂಗಳ ಬಳಗಮಿದೆಂಬ ತೆಱದಿನಾವರ್ತಿತೆವಡೆದುಜ್ಜ್ವಳಿ ಪಂಗಾವಳಿಯಿಂ ಕಣ್ಗೊಳಿಸಿದರ್ುದು ಬಳಸಿ ಮಾರನಾರೀನಿವಹಂ (ಕುಸುಮಾ. ೫-೦೫೯). [ಪುೞಿ$_3$ + ಕರ್ಚು$_2$ (<ಕಚ್ಚು)]

**ಪುಳಿಗೂಟ್** (ನಾ). ಹುೞಿ ಇರುವ ಆಹಾರ ; ಹುೞಿಯಂಬಲಿ : ಪುಳಿಗೂಟಿಂ[ಪಾಕಾಂ. ಹೞಿಗೂಳಂ]ತ್ರದಿಕಿನ ಕೆಂದಳಿರಂ ಪಾಲ್ಗನೆ ಯನೆಳೆಯ ಪುಲ್ಲುಂ ಕಬ್ಬುಂ ಬಲವಂತನಕ್ಕುಮೆಂದುಜ್ಜ್ವಲಚಿತ್ತಂ ತಂದು ಪೊರೆವುದುಂ ಗಜಶಿಶುವಂ (ಧರ್ಮಾಮೃ. ೦೨-೦೨೯); ಬೀಳಂಬಲಿಯೊಳ್ ಕಲಸಿದ ಜೋಳದ ಪುಳಿ[ಪಾಕಾಂ. ೦]ಗೂಟನಿಕ್ಕಿಮೊಡಲಿಡಿಯದವೋಲ್ ಕೇಳೆಲಗೆಯಿಂದು ಮಱುವಡೆ ಮೇಳಿಸುಗುಂ ನಿನಗೆ ಕಾಷ್ಠದಂಡದ ಘಾಯಂ (ಪುಣ್ಯಾಸ್ರ. ೯-೭). [ ಪುೞಿ$_3$ + ಕೂಟು$_1$ ]

**ಪುಳಿಚಾರು** 'ಪುಳಿಚಾಱು' ನೋ.

**ಪುಳಿಚಾಱು**, ಪುಳಿಚಾರು, ಪುಳ್ಚಾರು, ಹುೞಿಸಾರು (ನಾ). ೧. ಹುಣಿಸೆ ಹಣ್ಣಿನ ರಸ, ಸಂಬಾರದ್ರವ್ಯಗಳನ್ನು ಸೇರಿಸಿ ಮಾಡುವ ಸಾರು: ಬೆಂದ ಕುಂಬಳದ ಕಾಯ್ಗಳ ಪಲವು ತೆಱ ಮಾಡಿಯೊಂದು ಪು[ಪಾಕಾಂ. ಹು]ಳಿಚಾಱಾಗಿ ಯೊಂದು ಸಿಹಿಗಾಯಾಗಿಯೊಂದು ದಧಿಸಾರಿಕೆಯುಮಾಗಿ ಮತ್ತೊಂದು ದುಸ್ಸಾಯಭಂಗಿಯನೆ ಮಾಡಿ . . . ಒಂ[ದಕೊಂ]ದೊಂದು ತೆಱದ

ಪರಿಮಳವಿಕ್ಕಿ ಪೊಡ್ಡಣಿಗೆಯುಂ ಕೊಟ್ಟು ಹಸ ಮಾಳ್ಪುದು (ಸೂಶಾ. ೩-೩೨); ಪುಳಿಚಾಱು ಪೂರ್ಣವ[ಟ ಭುಕ್ತಭಂಜಿತ]ಶಾಕ ತುಳುವದಾಳಿಲ ಶಾಕವಂಗಿ ಶೂಲ್ಯಕ ಮನಂಗೊಳಿಪ ದಧಿಸಾರಿಕೆ ವಿಚಿತ್ರಪಾಕಂ ಕಹರಿ ಯಡಕೆತಾಳಿಲವೆಸರನು ತಳೆದ ಪಾಕಂಗಳು (ಸೂಶಾ. ೬-೯೩).

**ಪುಳಿಚಾರು :** ೨. ಸಸ್ಯಾಹಾರ : ಪುಳಿಚಾರು ಊಟ ಮಾಡಿದರೆ (ಶಾಟಕಾಂ. ೧೭೩); ಎಂಟು ಹತ್ತು ದಿನಗಳಿಂದ ಪುಳಿಚಾರು ತಿಂದೂ ತಿಂದೂ ಬಾಯಿ ಕೆಟ್ಟುಹೋಗಿರುತ್ತದೆ ಎರಡೂ ಕಡೆಯುಪರಿಗೂ (ಪಹ್ಮೂರು. ೦೦೨). ೩. (ಆಲಂ) ಶಾಕಾಹಾರಿಯಾದ ಬ್ರಾಹ್ಮಣ : ಪುಳಿಚಾರು ಕುಟುಂಬಗಳಾದುದರಿಂದ ಸಹಿಸಿಕೊಂಡು ಸುಮ್ಮನಾದರು (ಪಮ್ಮೂರಿ. ೬). ೪. ಧೈರ್ಯವಿಲ್ಲದವನು; ಪುಕ್ಕ : ಬೆದರಿಕೆಗೆ ಅಡಗುವ ಪುಳಿಚಾರುಗಳೇ ಹೆಚ್ಚು ಈ ಗುಂಪಿನಲ್ಲಿ (ಬೂಶಿ). **ಪುಳ್ಚಾರು :** ೩. ಶ್ಯಾನುಭೋಗರು ಪುಳ್ಚಾರು (ಕೃಸರ್ವ. ೧೩). **ಹುಳಿಸಾರು :** ೫. ಹುಣಿಸೆಹಣ್ಣನ್ನು ಕಿವಿಚಿ ಅದರ ರಸಕ್ಕೆ ಉಪ್ಪು, ಖಾರ ಹಾಕಿ (ಬೇಳೆಯಿಲ್ಲದೆ) ಮಾಡುವ ಸಾರು; ಗೊಡ್ಡುಸಾರು : ಹುಳಿಸಾರು ಮಾಡದವ ನಳಪಾಕ ಮಾಡಿಯಾನೆ? (ಗಾದೆ).

**ಪುಳಿಚಾಱು ಬದನೆಯ ಕಾಯಿ** = ಬದನೆಕಾಯಿಯಿಂದ ಮಾಡುವ ಒಂದು ಬಗೆಯ ಭಕ್ಷ್ಯ; ಸಕ್ಕರೆಬದನೆಕಾಯಿ : ಉದಕದೊಳು ಹುಣಿಸೆಯ ಹುಳಿಯ ಹಾಕಿ ಸಲೆ ಕಿವುಚಿ ಹದನಱಿದು ಸಕ್ಕರೆಯನಿಕ್ಕಿ ಶುಂಠಿಯ ಹಾಕಿ . . . ತುಪ್ಪದೊಳುಕ್ಕರಿಸಿ ಸವಿಯುಮಂ ಹಡೆದ ಬದನೆಯೆಳೆಗಾಯ ಹೋಳಂ ಹಾಕಿಕೊಂಡು ತುಪ್ಪದೊಳು ಪರಿಮಳವಿಕ್ಕಿ ಪೊಡ್ಡಣಿಗೆಯುಂ ಕೊಟ್ಟು ಸವೆ ಹೋಗದಂತಿರಿಸಲು ಅದುವೆ ಪುಳಿಚಾಱು ಬದನೆಯ ಕಾಯಿ ಕನ್ನಡಿಗರದನು ಸಕ್ಕರೆಬದನೆಗಾಯೆಂದು ಹೆಸರಿಡುವರು (ಸೂಶಾ. ೪-೬).

[ಪುಳಿ$_3$ + <ಸಾಱು./ತಮಿ. ಪುಳಿಚ್ಚಾಱು; ಮಲ. ಪುಳಿಞಾಱು; ತುಳು. ಪುಳಿಚಾರ್]

**ಪುಳಿಚು** 'ಪುಳಿಂಚು' ನೋ.

**ಪುಳಿಚೇಲ್** 'ಪುಳಿಚೇಟು' ನೋ.

**ಪುಳಿಚೇಟು**, ಪುಳಿಚೇಟು, ಪುಳಿಚೇಲ್, ಪುಳ್ಚೇಟು (ಕ್ರಿ). ೧. (ದ್ರವವು ಒಣಗಿ) ಹಕ್ಕಳೆಯೇಳು,–ಪದರ ಪದರವಾಗಿ ಮೇಲೇಳು : ಮೆಯ್ಯೊಂಕೆಯಿಂದೊಳಗು ಕಂದೆ ಕತ್ತುರಿಯ ಪಳಿಕಿನಂತೆ ಪು[ ಪಾ.ಕಾಂ. ಹ] ಳಿಚೆರ್ದ ಚಂದನದಣ್ಪುವೆರಸು ಪತ್ತಿದ ಪರಿಮಳವಂ (ಲೀಲಾಪ. ೧೦–೬೧೬). ೨. (ಬೊಬ್ಬೆಯುಂಟಾಗಿ) ಹೊಪ್ಪಳೆಯೇಳು ; ತೊಗಲು ಸುಲಿದು ಬರು : ಬಿಸುಸುಯ್ಯ ನೀಳ್ದ ಲತಾಂಗವಿರ್ಪಱಿದು ಬಾಷ್ಪಂ ಕಾಟ್ಪುರಂಗೊಂಡ ವಕ್ತ್ರಸರೋಜಂ ಪೊಳಪೋಡಿ ಬಾಡಿ ಪುಳಿಚೆಟ್ಟೋಷ್ಠಂ ಕುರುಳ್ ಸೂಸುವೇಣಿ ಸಡಿಲ್ದೊಳ್ಕುಡಿ ಜೋಲ್ವ ಮೆಲ್ಲೆರ್ದೆಯಿವಿಂತಾಗಲ್ಕೆ . . . ಅಬಲೆ ಮೆಯ್ಯಿಕ್ಕಿರ್ದಳಾ ಶಯ್ಯೆಯೊಳ್ (ಕುಸುಮಾ. ೧೩-೦೦೬); ಕಡುಗಾಯ್ದುಗ್ರಾತಪಜ್ವಾಳೆಗೆ ಮಿಗೆ ಪುಳಿಚೇಟಲ್ಕೆ ಬೇಟೆಂದು ಬಾಯಂ ಬಿಡುತುಂ ತೇಱಣ್ಮೆ ಜಿಹ್ವಾಲತೆಯುಟಲೆ ಪವಂಗುಂದುತುಂ . . . ಇರ್ದುವೆತ್ತಂ ಬಿಡದಡವಿಗಳೊಳ್ ಸ್ವೈರದಿಂ ಸೈರಿಭಂಗಳ್ (ಶಾಂತೀಶ್ವ. ೧೩-೩೬); ಎಲೆಯಿಕ್ಕಿ ಪೆರ್ಮರಂ ತಾಱದವಿಲ್ಲರಣ್ಯಮೃಗಯೂಥದ ಬೆನ್ ಪುಳಿಚೆರ್ದು [ಪಾಕಾಂ. ಪುಳಿಲೆರ್ದು, ಪುಣಿಚೆರ್ದು, ಪುಣಿಲೆರ್ದು] ಬಾಯ್ಗಳಿರ್ಪಾಱದವಿಲ್ಲ . . . ಅದೇಂ ಪ್ರಳಯಕಾಲಮೊ ತೀವ್ರನಿದಾಘಕಾಲಮೋ (ಸುಕುಮಾ. ೧೦-೦೦೦). **ಪುಣಿಚೇಟು:** ೩. (ಹಲ್ಲು) ಕಿಟ್ಟದಿಂದ ಕೂಡಿರು: ನೆಕ್ಕ ಕದಂಪು ಪತ್ತಿ ಪೆಡೆಗೊಂಡ ಕೊರಲ್ಪುಣಿಚೆರ್ದ ಕೀನಿವಲ್ ಪೊಕ್ಕುಡ ಗಿರ್ದ ಕಣ್ಮುರುಳಿಗೊಂಡರೆಬತ್ತಿದ ಬಾಯ್ . . . ಅಗುರ್ವಿಸೆ ಬಂದನ ದೊರ್ವ ಪಾರ್ವಂ (ಲೀಲಾಪ. ೬-೩೬). **ಪುಳಿಚೇಲ್ :** ೩. ನೊಳವೆಱಪ ಕೊಳೆವಾಯ ಮಳರುಂ ಪುಳಿಚೆರ್ದ ಕೀನಿವಲ್ಲ ಪುರುಷಾಧಮರುಂ (ಕೃಶಾ. ೩೩-೩೩ ವ). **ಪುಳ್ಚೇಟು :** ೧. ಪೂಸೆಯುಂ ಕಾಯ್ದುರದೆಟ್ಟು ಚಂದನಾಲೇಪದ ತೆಳಿಕೆಗಳ್ ತಂಗದಿರ್ಪಾಱು ಪುಳ್ಚೆ[ಳ್ಚಿ]ರ್ದರುಣೋಷ್ಠಂ ಮುಚ್ಚಿದ ನಯನಯುಗಂ ಹೃತ್ತಟನ್ಯಸ್ತ ಹಸ್ತಾಂಬುರುಹ ವ್ಯಸ್ತಾಳಕಂಗಳ್ವೆ ರಸಲರ್ವಸೆಯೊಳ್ ಕಾಂತೆಯಿಂತಿರ್ದಳಾಗಳ್ (ಕುಸುಮಾ. ೧೩-೬೯).

[ಪುಳಿಚು (< ಪುಳಿಂಚು) + ಏಟು$_1$]

**ಪುಳಿಚೋರಯ್ಯ** (ನಾ). ಒಬ್ಬಾತನ ಹೆಸರು : ಪುಳಿಚೋರಯ್ಯಂ ಮಹಧ್ವಜದೋಜ × × ಮಣಿವಿತಾನದೋಜತೇಜು (ಎಕ. II, ೪೮೯-೦; ಸು. 1000). [ ? + ಅಯ್ಯ$_1$ ]

**ಪುಳಿಚ್ಚುತ (?) ಬದನೆಗಾಯ್** (ನಾ). ಬದನೆಕಾಯಿಯಿಂದ ಮಾಡಿದ ಒಂದು ಬಗೆಯ ವ್ಯಂಜನಪದಾರ್ಥ : ಬದನೆಯೆಳಗಾಯ್ಗೆ ಕರಿದೇವು ಹೊಸತುಪ್ಪಯನಿಸುದಕ ನೀರುಳ್ಳಿಯಿಟ್ಟುದಕವಿಂಗುವ ತೆಱದಿ ಹದನಾಗಿ ಯುಕ್ಕಿಸಿ . . . ತುಪ್ಪದೊಳೊಗ್ಗರಿಸಲ್ಕಂತದು ತಿಗುಳಿನೊಳು ಪುಳಿಚ್ಚುತ [ಪಾಕಾಂ. ಪುಳಿಚತ್ತ, ಪುಚ್ಚುತ್ತ] ಬದನೆಗಾಯೆಂದು ಪೆಸರನೊಲವಿಂ ಕರೆವುದು (ಸೂಶಾ. ೪-೦೩). ? 'ಪುಳಿಚ್ಚುತ' ಎನ್ನುವ ಶಬ್ದವು ತಮಿಳಿನ 'ಪುಳಿಚ್ಚಲ್=ಹುಳಿಯಾದುದು' ಎಂಬುದಕ್ಕೆ ಸಂಬಂಧಿಸಿರಬಹುದು.

[ ಪುಳಿಚ್ಚುತ$_0$ + ಬದನೆ + ಕಾಯ್$_1$]

**ಪುಳಿದೇಗು**, ಹುಳಿತೇಗು, ಹುಳಿದೇಗು (ನಾ). ಹೊಟ್ಟೆಯಲ್ಲಿ ಆಮ್ಲತೆ ಹೆಚ್ಚಾಗಿ ಬರುವ ತೇಗು ; ಅಜೀರ್ಣದ ತೇಗು : ನೆತ್ತರಂ ಕುಡಿದು . . . ನುಂಗಿ ಮಿದುಳಂ ತಣಿವಿಂ ಪುಳಿದೇಗುದೇಗುತ್ತುಮಿರ್ಪುವದಱೊಳ್ ರಜನೀಚರಕೋಟಿಗಳ್ (ಕಾವ್ಯಾಪ. ೬೨೩). **ಹುಳಿತೇಗು :** ಹೊಟ್ಟೆಯಲ್ಲಿನ ಆಮ್ಲದ್ರವವು ಹೆಚ್ಚಾಗಿ ಹುಳಿತೇಗು ಬರುತ್ತಿದೆ (ಪ್ರಕೋಶ. ೦೨೦) ; ಹುಡುಗರು ಇವಳನ್ನು ಹುಳಿ-ತೇಗಿನ ಲಕ್ಷ್ಮೀದೇವಮ್ಮನೆಂದು ಕರೆಯುತ್ತಾರೆ (ಸಂಸ್ಕಾರಿ. ೪೩). **ಹುಳಿದೇಗು :** ಶುಂಠಿ, ಭದ್ರಮುಸ್ತೆ, ಅತಿಬಜೆ, ಅಮರದ ಬಳ್ಳಿ ಇವಂ ಸಮಭಾಗವಾಗಿ ಕಷಾಯವಿಕ್ಕೆ ಕೊಡಲು ಆಮಗ್ರಹಿಣಿ, ಅಗ್ನಿಮಾಂದ್ಯ, ಹುಳಿದೇಗು ಮುಂತಾಗಿ ಗುಣಮಕ್ಕುಂ (ಸಕಪ್ತ. ೩೩೩). [ ಪುಳಿ$_3$ + ತೇಗು$_3$ ]

**ಪುಳಿದೊಡೆ** (ಕ್ರಿ). ಹುಳಿ ಹೆಚ್ಚು,–ಲೇಪಿಸು : ಚೆನ್ನಾಗಿ ಪುಳಿದೊಡೆದೊಪ್ಪವಿಕ್ಕಿದ ಚೊಕ್ಕಚಿನ್ನದ ಪ್ರತುಮೆಗಳಂತೆ ರನ್ನದ ಮುತ್ತ ಹಾರವನಿಟ್ಟು ಸುಗುಣಸಂಪನ್ನೆಯರಿರ್ದರಿಕ್ಕಲದಿ (ಪೊಳಕಥ. ೦೮ ೩೬).

[ ಪುಳಿ$_3$ + ತೊಡೆ$_1$ ]

**ಪುಳಿದೊಳೆ** (ಕ್ರಿ). = ಪುಳಿಗರ್ಚು : ಮಳಯಜಗಂಧಿ ಮಜ್ಜನದ ಮಂದಿರದೊಳ್ ಪೊಸಪೊನ್ನ ಬೊಂಬೆಯಂ ಪುಳಿದೊಳೆದೊಪ್ಪವಿಟ್ಟ ತೆಱದಿಂ ತನುಕಾಂತಿ ದುಕೂಲದಿಂದಮುಚ್ಚಳಿಸೆ . . . ಬಂದೊಳಪುಗುವಂದು (ಕಾಶ್ಯಪಾ. ೩೯೯); ಪುಳಿದೊಳೆದೊಪ್ಪವನಿಕ್ಕಿದ ಹೊನ್ನ ಪುತ್ಥಳಿಯಂತೆ ಮುದವಕ್ಕಳೊಲಿದು ಗಳಲನೆ ಬಂದು ಶ್ರೀಕೃಷ್ಣದೇವರಾಯನ ಪಾದನಳಿನಕ್ಕೆ ಶಿರವ ಚಾಚಿದರು (ಮೋಶಕ. ೪-೪೨). [ ಪುಳಿ$_3$ + ತೊಳೆ$_1$ ]

**ಪುಳಿನ** 'ಪುಲಿನ' ನೋ.

**ಪುಳಿನತಳ** (ನಾ). ಮರಳುದಿಣ್ಣೆ ; ಪುಲಿನಸ್ಥಳ : ಉದ್ಯಾನದೊಳೊಂದು ದಿವಸಂ ತೊಲಲ್ದು ನೋಡುತ್ತುಂ ವೈಶ್ರವಣನಿಮಿತ್ತಮೊಂದು ಪುಳಿನತಳೋದ್ದೇಶದೊಳ್ ಕುಳ್ಳಿರೆ (ಶಾಂತಿಪು. ೬-೯ ವ); ಪುಳಿನತಳಂಗಳೊಳ್ ಸೆಳೆವ ನುಣ್ಮಳಲಂ ಜಳಶೀಕರಂಗಳಂ ತಳದು . . . ಪೂಗೊಳದೊಳಗಲ್ವ ಕೋಕವನಿತಾವ್ಯಥೆಗಿಂ ಶಿಶಿರೋಪಚಾರದೊಳ್ ಕೆಳದಿಯರಾದುವಾ ತಳರ್ವ ತಣ್ಣೆಲರಿಂ ತರಲೋರ್ಮಿಮಾಲೆಗಳ್ (ಅಸಂಪು. ೬-೩೦).

[<ಸಂ. ಪುಲಿನಸ್ಥಲ]

**ಪುಳಿನಸ್ಥಳ** (ನಾ). = ಪುಳಿನತಳ : ದೇವಾರಣ್ಯಂ ದೇವರ ದೇವನ

ಮಾನಕಿಂಬನೀಯ ತನ್ನಂದನದೊಳ್ ದೇವರ್ ಸಿವಿಗೆಯನಾ ಪ್ರಸ್ತಾವನೆಯಂ ಕಟಿಪದಿಟಿಪೆ ಪುಳಿನಸ್ಥಳದೊಳ್ (ಶಾಂತಿ. ೮-೦೨೨); ಪುಳಿನಸ್ಥಳಮಂ ಮಾಣಿಯಿಸಿ ತೊಳಗುವ ನಕ್ಷತ್ರಮಾಲೆಯಂತಿರೆ ಮಣಿಮೇಖಳೆ ಮದನ ಕುಂಭಿಕುಂಭಸ್ಥಳಮಂ ನೆನೆಯಿಸುವುದಸಿಯುಳಲಘುನಿತಂಬಂ (ಸುಕು. ೩-೬೦). [ಸಂ. ಪುಲಿನಸ್ಥಲ]

**ಪುಳಿಬೋರೆ** (ನಾ). ಬೋರೆಯಲ್ಲಿ ಒಂದು ಬಗೆ ; ಹುಳಿಎಲಚಿ ಹಣ್ಣು ಮತ್ತು ಅದರ ಮರ : ಬೋರೆಯುರಬೋರೆ **ಪುಳಿಬೋರೆ** ಸೀಬೋರೆಯಿಂ ರಾಯಬೋರೆಯುಂ (ನವಮೋ. ೨೪-೫೦).

[ ಪುಳಿ$_3$ + ಬೋರೆ$_2$ ]

**ಪುಳಿಮಾವು,** ಹುಳಿಮಾವು (ನಾ). ಮಾವಿನಲ್ಲಿ ಒಂದು ಬಗೆ; ಹುಳಿ ಮಾವಿನ ಹಣ್ಣು ಮತ್ತು ಅದರ ಮರ : ಮಾವು ಗೇಮರ್ಾವು ಪುಳಿ ಮಾವು ಭಾವಿಸಲಡಿಕೆಮಾವು ಗಿಳಿಮಾವು ಬೈತಲೆಮಾವು (ನವಮೋ. ೨೪-೪೯). **ಹುಳಿಮಾವು :** "ಆಮ್ಲಮಾಲುಕಃ —ಹುಳಿಮಾವು" (೬ಕಂ. ೮): ನನಗೆ ಹುಳಿಮಾವಿನ ಹಣ್ಣು ಅಂದರೆ ಇಷ್ಟ ಅಲ್ಲವೇ ? (ಮರಮ. ೨೯).

[ ಪುಳಿ$_3$ + ಮಾವು ]

**ಪುಳಿಮೂಟೆ** (ನಾ). (ಆಲಂ) ಠೊಣಪನಾದ ವ್ಯಕ್ತಿ ; ಧಡೂತಿ ಆಸಾಮಿ : ಅವಳೊಡನೆ ಪ್ರತಿನಿತ್ಯವೂ ಒಂದು ಗಂಟೆ ಮಾತನಾಡುವ ಭಾಗ್ಯ ಈ ಪುಳಿಮೂಟೆಗೆ ಸಿಕ್ಕಿದೆ (ಕೂನಕ್ಟ. ೦೬೩).

[ ಪುಳಿ$_3$ + ಮೂಟೆ (< ಮೂಡೆ) ]

**ಪುಳಿಮೊಸರ್,** ಹುಳಿಮೊಸರು (ನಾ). ಹುಳಿಯಾಗಿರುವ ಮೊಸರು : ಕಟ್ಟುಮೊಸರ್ ಸುಟಿುವ ಮೊಸರ್ ಘಟ್ಟಿಮೊಸರ್ ಕೆನೆಮೊಸರ್ ಕರಂ ತೊಳಿಮೊಸರಿಂ ಪಿಟ್ಟಮೊಸರ್ ಪುಳಿಮೊಸರೆಂದಿಟ್ಟರ್ ಬಟ್ಟಲ್ಗಳಿಂ ಸರೋಜಾನನೆಯರ್ (ನಳಕಾ. ೪೬೦). **ಹುಳಿಮೊಸರು :** ಎಳೆಯ ಬೆಳಸಿಯಿಂದ ನನ ಹೊಟ್ಟೆ ತುಂಬಿಲ್ಲ ಹುಳಿಮೊಸರು ಅನ್ನ ಉಣನೀಡು (ಸಿದ್ಧಶು. ೩-೮೫). [ಪುಳಿ$_3$ + ಮೊಸರ್]

**ಪುಳಿಯಣ್ಣ** (ನಾ). ಒಬ್ಬಾತನ ಹೆಸರು : ಪೊರವಕ್ಕನುಂ ಸೆಮ್ಬಕ್ಕನುಂ ಪಾಟಿಯಕ್ಕನ ಕೆಳದಿಪು ಪುಳಿಯಣ್ಣನೀ ಧರ್ಮಂ ನಡಯಿಸು × × × (ಎಕ. VIII, ಸಗರ. ೪೫-೦೩; ಸು. 950); **ಪುಳಿಯಣ್ಣ** (ಎಕ. II, ೪೩೬; 1000). 'ಪುಲಿಯಣ್ಣ' ಪರಾ. [ಪುಳಿ$_1$ + ಅಣ್ಣ$_1$]

**ಪುಳಿಯಣ್ಣನಂದಿ** (ನಾ). ಒಬ್ಬಾತನ ಹೆಸರು : ಐನೂರ್ವಾಚಾರಿಯ ಮಗಂ ಪುಳಿಯಣ್ಣನನ್ದಿಯು ಎಕಣದ ಬಾಗಿಯುಲಗನಾಗೆ ×ಕ್ಕಟ್ಟು ಪಡೆದ ಸ್ಥಿತಿ (ಎಕ. X (s), ಶಿಕ್ಕಬ. ೨೬-೪; ೨ನೆಯ ಶತ).

[ ಪುಳಿಯಣ್ಣ + ನಂದಿ ]

**ಪುಳಿಯನ್ನ,** ಹುಳಿಯನ್ನ (ನಾ). ೧. ಹುಣಿಸೆಯ ಗೊಜ್ಜಿಗೆ ಸಂಬಾರ ಪದಾರ್ಥಗಳನ್ನು ಸೇರಿಸಿ ತಯಾರಿಸಿದ ಅನ್ನ; ಪುಳಿಯೋಗರೆ : ತಾನುಂಡು ಮಿಕ್ಕ ಪುಳಿಯನ್ನಗಳ ಸುಪವಿತ್ರದಂಡೆಗಳ ಭಕ್ತರ್ಗೆ ಕೊಡಿಸುತಿರ್ಪನು ರಂಗಧಾಮನು (ಅಲಂಗಬ. ೦-೦೨೬). **ಹುಳಿಯನ್ನ :** ೨. ಹುಣಿಸೆಯ ಗೊಜ್ಜಿಗೆ ಸಂಬಾರಪದಾರ್ಥಗಳನ್ನು ಬೆರಸಿ ತಯಾರಿಸುವ ಚಿತ್ರಾನ್ನದಂಥ ಅನ್ನ : ಮಧ್ಯಾಹ್ನ ಮಾಡಿಟ್ಟಿದ್ದ ಹುಳಿಯನ್ನವನ್ನೂ ಇನ್ನೊಂದು ತಟ್ಟೆಯಲ್ಲಿ ಮೊಸರನ್ನವನ್ನೂ ತಂದು . . . ಇಟ್ಟಳು (ಮಮೋನಂ. ೯೩). ೩. ಬೇಳೆ, ತರಕಾರಿಗಳನ್ನು ಹಾಕಿ ತಯಾರಿಸಿದ ಹುಳಿಯಲ್ಲಿ ಕಲಸಿದ ಅನ್ನ : ಹುಳಿಯನ್ನವನ್ನು ಉಣ್ಣುತ್ತ ಪಕ್ಕದ ಬ್ರಾಹ್ಮಣ ಹೇಳಿದ (ಸಂಸ್ಕಾರ. ೦೩೯).

[ ಪುಳಿ$_3$ + ಅನ್ನ$_3$ ]

**ಪುಳಿಯಬ್ಬೆ** (ನಾ). ಒಬ್ಬಾಕೆಯ ಹೆಸರು : × × × ಪುಳಿಯಬ್ಬೆಗೆ × × × (ಸೌಇಇ. XX, ೦೫-೧೬; 604). [ಪುಳಿ$_1$ + ಅಬ್ಬೆ$_1$]

**ಪುಳಿಯಳೆ,** ಪುಳ್ಳಳೆ (ನಾ). ಹುಳಿಯಾದ ಮಜ್ಜಿಗೆ : ಕಳಹಂಸನೆತ್ತ ಪುಳಿಯಳೆಯೆತ್ತ ಬಿಸಿಲುಗ್ರಕಳೆಯೆತ್ತ ಜೊನ್ನವಕ್ಕಿಯದೆತ್ತ (ಸಂಶಾ. ೯-೬೬). **ಪುಳ್ಳಳೆ :** ಲವಣಂ ಪಿಪ್ಪಲಿ ಬಜೆ ಸಾಸಿವೆ ಬವ(ಬೋ)ನಂಗಾರೆ ಶುಂಠಿ ಪುಳ್ಳಳೆ ಕಟಿ (ತಿಲ)ತೈಲವೆನಿಪ್ಪವಱಿಂದು ನಸ್ಯವನಶ್ವಾವಳಿಗೆ ಮಾಡಿ (ಲೋಕೋಪ. ೯-೨೨೪); ಅಂತು ಪುಳ್ಳಳೆ ಪಾಲಂ ಕಿಡಿಸುವಂತುಗ್ರಸೇನನಂ ಕಿಡಿಸಿ . . . ಕಂಸಂ ವಸುದೇವನಂ ಬರಿಸಿ ಸಿಂಹಾಸನಾಲಂಕೃತನಂ ಮಾಡಿ (ಅರ್ಥನೇ. ೬-೭೪ ಪ). [ಪುಳಿ$_3$ + ಅಳೆ$_2$]

**ಪುಳಿಯೋಗರೆ,** ಪುಳಿಯೋರೆ (ನಾ). = ಪುಳಿಯನ್ನ ೧ : ಅವರ ಮಡಿ ಮತ್ತು ಆಚಾರಗಳಿಗೆ ನಾನೇಕೆ ಅಡ್ಡ ಬರಲಿ? ಪುಳಿಯೋಗರೆ ಕಟ್ಟಿಕೊಂಡು ಬಂದಿರಬಹುದು (ರಂಗಳ. ೮೬); ಲಕ್ಷ್ಮಿ ಮಾಡಿಟ್ಟ ಉಳಿಂದೋಗರೆ, ಪುಳಿಯೋಗರೆಗಳನ್ನು ಸವಿದು ಪ್ರಭುಗಳು ಬೇಪ್ಪಾಗಿ ಹೋಗಿದ್ದರು (ಶಾಂತಲ. ೧೨೩). **ಪುಳಿಯೋರೆ :** ಪುಳಿಯೋರೆಯಿರದೆ ಮೊರೆಯುದ ಶಾತ್ತುಮೊರೆಗು ಕಣ್ಣುಟ್ಟಿ ಕೈಮುಗಿದು ಕೂಳ್ ಕಾಯ್ದು ನಿಮಗು ಮುಗಿಯುದೇ ನಿಮ್ಮ ಮರೆಯೊಳು ಬಾಳ್ವ ನನಗು! (ಗಜೇಶ. ೬೦-೬); ಸರಸಮ್ಮ ಮಾಡಿದ್ದ ಪುಳಿಯೋರೆಯು ಅಷ್ಟೇ ರುಚಿಯಾಗಿತ್ತು (ಕಂಸಃಕಂ. ೦೫೩). [ದೇ.॥ ತಮಿ. ಪುಳಿಯೋಕರಮ್, ಪುಳಿಯೋರೈ; ತೆಲು. ಪುಲಿಯೋಗಿರ, ಪುಲಿಯೋರ]

**ಪುಳಿಯೋರೆ** 'ಪುಳಿಯೋಗರೆ' ನೋ.

**ಪುಳಿಯ್ಯಮ್ಮ** (ನಾ). ಒಬ್ಬಾತನ ಹೆಸರು : ಶ್ರೀಮತ್ ಪೆರ್ಗಡೆ ಪುಳಿಯ್ಯಮ್ಮ ತಾನಾಗುನೊರ್ಕ್ಕರ್ಜಿಯಂ ಕಟ್ಟಿಸಿ (ಎಕ. VII, ಶಿಕಾ. ೦೯೪-೦೦; 935). [<ಪುಳಿ$_1$+ಅಮ್ಮ$_1$]

**ಪುಳಿಲ್** 'ಪುಟಿಲ್$_1$' ನೋ.

**ಪುಳಿಲು** 'ಪುಟಿಲ್$_2$' ನೋ.

**ಪುಳಿವಿಳಿ** (ಕ್ರಿ). ಹುಳಿಯನ್ನು ಹಿಂಡು, —ಬೆರಸು : ಕೆನೆವಾಲ ಕಡೆದು ನವನೀತಮಂ ತೆಗೆದು ಬಾಯ್ಗನಿದಾಗಿ ಸವಿಯುದದಱೊಳಗೆ ಪುಳಿವಿಳಿ[ದಾ ಕಾ.ಡಿ]ದು ರಸವನೆ ಕಿಡಿಸಿದೊಡೆ ಕಱಿದ ಸುರಭಿಗಪ್ಪುದೆ ಕೊಱತೆ (ಕೃಪಃಶಾ. ೦-೬). [ಪುಳಿ$_3$+ಪಿಳಿ$_1$ (<ಪಿಟಿ)]

**ಪುಳಿವುಲ್** (ನಾ). ಒಂದು ಬಗೆಯ ಹುಲ್ಲು ; ಮಜ್ಜಿಗೆಹುಲ್ಲು : ಪುಳಿವುಲ್ಕಱಿಂಕೆ ಮೊಡೆಗುಪಳಿ ಕಣ್ಣಿಗೆ ಮಾರವಳ್ತಿ . . . ಬೆಳೆಧೊಪ್ಪುವ ಗಲಗುವೆಸರ ಪುಲ್ಲೆಸೆದಿರ್ದಂ (ತ್ರಿಷಷ್ಟಿ. ೨೬-೨೦). [ಪುಳಿ$_3$ + ಪುಲ್]

**ಪುಳಿಸೆ,** ಪುಣಸೆ, ಪುಣಿಸೆ, ಪುಣುಸಿ, ಪುಣುಸೆ, ಪುಣ್ಸೆ, ಪುಳುಂಸೆ, ಹುಣಚಿ, ಹುಣಸಿ, ಹುಣಸೆ, ಹುಣಿಚಿ, ಹುಣೆಚಿ, ಹುಣಿಸೆ, ಹುಣುಸೆ, ಹುಳಿಸೆ (ನಾ). ೧. ಒಂದು ಬಗೆಯ ಮರ ಮತ್ತು (ಅಡಿಗೆಗೆ ಬಳಸುವ) ಅದರ ಹುಳಿಹಣ್ಣು; ತಿಂತ್ರಿಣಿ : ಸೂರಣದ ಗಡ್ಡೆಯಂ ಸೌವೀರದೆ ಮೇಣ್ ಕಲಸಿಕೊಂಡು ಪುಳಿಸೆಯ ಚಿಗುರಿಂ ನೀರೊಳ್ ಕುದಿಸಲ್ಕದು ಸಂಹಾರಿಕುಮಂತದಱ ವಿಷಮುನಾ ಕ್ಷಣದಿಂದು (ಲೋಕೋಪ. ೮-೨೮). **ಪುಣಸೆ :** ೧. ಸಯ್ಯನೆ ಬನ್ದು ಪೊಲ ಪುಣಸೆ ಎವ ಕೀಲೆ ಅನ್ತೆ ಪೋಯು ಎ ಬದಿರೂಗ್ಗರ್ಱಿ ಮುಕೊಡಲ್ (ಇಇ. XII, ೦೬-೦೪; 813); ಪಲಕಾಲದ ಪುಣಸೆಯ ಪಣ್ಣ ಲೇಹ್ಯಮಂ ಮಾಡೆ (ಳಗ್ಯಶಾ. ೩-೫೦). **ಪುಣಿಸೆ :** ೧. ಮಲ್ಲದೇವನ್ ಕೊಟ್ಟ ಪ್ರಮ್ಮಧಯ ಬಾಣರಸನ್ ಇತ್ತ ಕಯು ಕೆಱಿಯು ನಾಲ್ಕತ್ತು ಪುಣಿಸೆ (ಸೌಇಇ. IX-1, ೦-೩; ೪ನೆಯ ಶತ ?); ಊರ ಮುಂದಿರ್ದ ಪುಣಿಸೆಯ ಮರದ ಪಿರಿದಪ್ಪ ಪೊಟಲೊಳಡಂಗಿರ್ದಳ್ (ಶುಕಕಾ. ೦೫೫-೮); ಪುಣಿಸೆಯ ಪೂವೆಲ್ಲಂ ಕಾಯಪ್ಪವೇ ನೆಲನನಗುಬ್ಬಿರೆಲ್ಲಂ ನಿಧಾನಮಂ ಕಾಣ್ಬರೇ ಕೈಕಾಲುಳ್ಳರೆಲ್ಲಂ ಚಕ್ರವರ್ತಿಗಳೇ (ಧರ್ಮಾಮೃ. ೫-೨೩೯): ೨. ಇಂಥ ಮರಗಳು ಬೆಳೆದಿರುವ ಸ್ಥಳ,—ಜಾಗ : ದೇವರ ಕೆರೆಯ

**ಪೂಣಸೆಯು** ಮಧ್ಯದಿ ಭೂಮಿಯುಂ ಮಾಱುಗೊಂಡ × × × ನೂಱಿಪ್ಪತ್ತು ಮತ್ತಮದಱ ಹತ್ತಸಿನ ತನ್ನ ಬಳದೊಳಗೆ ಬಮ್ಮರ್ಯ್ಯಂ ವಿದ್ಯಾದಾನಕ್ಕೆ ಕೊಟ್ಟು ಮತ್ತರ್ಪ್ಪನ್ನೆರಡು (ಕ೩೩. IX-i, ೧೦೪-೦೬; 1046). **ಪೂಣಾಸಿ :** ೨. ಪೂಣಾಸಿಗೆ [ತೆಙ್ಕ]ಣ ಪಳ್ಳಂ ಸೊಗಿಲ್ಲಪಳ್ಳವೆ ಗುಡ್ಡೆ (ಕ೩೩. XI-i, ೯-೩೪; 862). **ಪೂಣಾಸೆ :** ೧. ಹಡುವ ಲಾಲದ ಮರಂ ಮೇರೆ ಬಡಗಲು ಪೂಣಾಸೆಯ ಮರಂ ಮೇರೆ (ಕ೩೩. XI-ii, ೦೨೬-೨೦; 1082). ೨. ಕೇನನ್ದಾಕಕೊಳ್ವಾಲಿಯುಳ್ ಕುಡಿತ್ತು ಎರಟ್ಟಿಪೂಣಾಸೆವಿ ಮೂಡಾಯ್ಕೋಡಿ ನೀರಿಱಿಪೆ ತಾಱಿವಿ (ಎಇ. XVI, ಗುಬ್ಬ. ೬೩-೩೨; 783); ಚಾಲದಿನ್ದೆ ಬೆಳೆದ ನೆಪಿ ಪೂಣಾಸೆಯಿನ್ದೆ ಸಕ್ಕೆ ಕುಣ್ಪೆಯಿನ್ದೆ (ವ್ಯಾಅ. ೧೯೦೪, ೧೩-೩೯; 806): ಊರಿಂ ಮೂಡ ಲಡ್ಡವೆಟ್ಟದ ಮೂಡಣ ಮೊನೆಯು ಪೂಣಾಸೆಯ ಕುಪ್ಪೆ (ಕ೩೩. XI-i, ೬೦೩-೨೩; 1075). **ಪೂಣ್ಸೆ :** ೧. ಭತ್ತ ಭ ೧ಕ್ಕಂ ಹೆರ್ಜುಂಕಂ ಪೂಣ್ಸೆ . . . ಮೆಣಸಿನ ಭಾರಕ್ಕ ಗ ೧ ಅಡಿಕೆಯು ಹೇಱು ಹತ್ತಕ್ಕಂ × × × (ಕ೩೩. IX-ii, ೪೦೦-೦೩; 1366). **ಪುಳುಂಸೆ :** ೩. ಒಂದು ಊರಿನ ಹೆಸರು (?) : ದೋಣೆಯು ಅಱಿ ಅಲುಕುರಕೆಱಿ ಕುಸುಗೆಕೆಱಿಯ ಪುಳುಂಸೆ ಅಳರಿ ಅತ್ತಿನೆಲ್ವಾಗಿಲ್ಮೆಱೆಯು (ಇಅ. XIV, ೨೩೩-೬೦; ಸು. 9ನೆಯ ಶತ). **ಹುಣಚಿ :** ೧. ಬಸರಿ, ಹುಣಚಿ, ಅರಳಿ, ಅಲ, ನೇರಲ (ಕಭಾಗ. ೩೩); ಹಲಸು, ಹುಣಚಿ, ಬದಾಮು ಮುಂತಾದ ಫಲವೃಕ್ಷಗಳು (ಮುಂಬಯಿ. ೬-೨೬೬). **ಹುಣಾಸಿ :** ೧. ಹಂತದ ಹುಣಾಸಿಯಾ ಚಿಗುರು (ಸಹಗೀ. ೯೨-೦). **ಹುಣಸೆ :** ೧. "ಅಮ್ಲಿ–ಹುಣಸೆ" (೬೫೦. ೦೦); ಅತ್ತಿಯ ಹಣ್ಣು ಹುಣಸೆಯ ಹಣ್ಣು ಜೇನೆಯ ಹಣ್ಣುಱುಪ್ಪೆಯ ಹಣ್ಣದಱ ಹೂ ಮಧುರ ಮಧುವುಂಟು (ಐಕಥ. ೦೬-೨೬); ಹುಣಸೆ- ಈ ಹಣ್ಣು ಸುಣ್ಣ ಸಹ ಕಲಸಿ ಮೆಲ್ಲಲು ಕೆಮ್ಮು ಗುಣ (ಐಕ್ಯವಿ. ೬); ಹುಣಸೆ ಮುಪ್ಪಾದರೆ ಹುಳಿ ಮುಪ್ಪೇ? (ಗಾದೆ). **ಹುಣಿಚಿ :** ೧. ಹುಣಿ[ಪಾಠಾಂ. ಣ]ಚಿಯ ಮರದ ಲ್ಲೊಂದು ಹುಣಿ[ಪಾಠಾಂ. ಣ]ಚಿಯ ಬೆರಳಿಟ್ಟು ಹೋದಲ್ಲಿ ಆ ಹುಣಚಿಯ ಮರ ಹಣಚಿಯ ಮರವಾಗಿ ತಾ ಕಣಚಿ ಹೋದುದ ಕಂಡೆ (ಸಿದ್ಧವ. ೪. ೨೩೩-೬೬೨). **ಹುಣಿಚಿ :** ೧. ಸಕ್ಕರೆಯು ಸೀ, ಬೇವು ಕಹಿ, ಹುಣಿಚಿ ಹುಳಿ (ಬಸವಂಶ. ೩೨೩). **ಹುಣಿಸೆ :** ೧. "ಹುಣಿಸೆ ತಿಂತ್ರಿಣೀ ಚಿಂಚಾಹ್ವಂ" (ವಸ್ತುಕೋ. ೩೫-೦೬); ಏನಾನುಂ ಬಾರ್ತೆಗಲ್ಲದೆನಿಪರಳಿಗೊಲ್ದು ಪೊಡೆ ವಡುವ ನರಂ ಚಿಗುರಿಂ ಪೂವಿಂ ಕಾಯಿಂ ಸೊಗಯಿಪ ಮಾವಿಂಗೆ ಹು[ಪಾಠಾಂ. ಪು]ಣಿಸೆಗೆಱಗಲ್ವೇಡಾ (ಸಮಹ. ೯-೫೬); ಹುಣಿಸೆಯ ಕಾಯಂ ತಿಂದರಂತೆ ಚಳಿತು ಪಣ್ತ ಕಬ್ಬಿನಂತೆ ನೆಲನಂ ಪತ್ತಿ (ಧರ್ಮಾಮೃ. ೦ ೦೬೬); ನಾರು ಬಲಿಯುವ ಹುಣಿಸೆ ಕಾಯ ಮಾವಿನ ಕಾಯನಾರೈದು ಕೆತ್ತಿ ಕಿಱಿದಾಗಿ ಹೋಳಿಸಿ ಸುಣ್ಣನೀರಿಂದೆ ಹುಳಿಯ ತೆಗೆದಟ್ಟ ಪಾಯಸಮುಪಱ ಹೆಸರ ಪಾಯಸವಾದುದು (ಸೂಶಶಾ. ೩-೦೦). ೨. ಸಿವಮ್ಮೆಯನಾಯಕನು ದೇವರ ನಿವೇದ್ಯಕ್ಕೆ ಕಟ್ಟೆಯಿಂದೊಳಗೆ - ಹುಣಿಸೆಯ ಗದ್ದೆ ಕಂಬ ಏಳುನೂಱ ಹದಿನಾಕುಮಂ ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಕ೩೩. IX-i, ೨೩೪-೬೦; 1148). **ಹುಣುಸೆ:** ೧. ಹುಣುಸೆ ಮುಪ್ಪಡಸಿದಡೆ ಹುಳಿ ತಗ್ಗದು (ಶರಕು. ೯-೯). **ಹುಳಿಸೆ :** ೧. " ತಿಂತ್ರಿಣೀ–ಹುಳಿಸೆ " (ಕಾಶಸ್ತ. ೨೩೩); ಫಲದಿ ಪುಷ್ಪದಿ ತೆನೆಗಳಿಂದವೆ ತಳಿರ ತೋರಣದಂತೆ ಮೆಱೆದಿಹ ಹುಳಿಸೆಗಳ ತನಿವಣ್ಣು ತುಂಬಿದ ಮರನ ಕಪಿ ಮುಱಿದ (ಕೌಶಿಕಾ. ೦೦-೦೬).

**ಪೂಣಾಸೆಯು ಗಂಗ** = ಒಬ್ಬಾತನ ಹೆಸರು : ಶ್ರೀ ಪೂಣಾಸೆಯ ಗಂಗ ಪ್ರಥಮನಾಮಧೇಯಃ ಕಲಿಯುಗಭೀಮಾಪರನಾಮಾ (ವ್ಯಾಅ. ೦೯೨೦, ೦೦-೦೦೨; 967). 'ಪುಱಿಯ ಗಂಗ' ಪರಾ.

[< ಪುಳಿ₃ / ತುಳು. ಪುಣಿಕೆ]

**ಪುಳಿಹೀರೆ, ಹುಳಿಹೀರೆ** (ನಾ). ಒಂದು ಬಗೆಯ ಹೀರೆಕಾಯಿ ಮಂತ್ರ ಅದರ ಬಳ್ಳಿ : ಬೇರೂಱಿರ್ದಾ ಪುಳಿಹೀರೆಯುಂ ನಯದೊಳಂ ತಂದಿ ದ್ರ್ದಾದಂ ಪಾತ್ರವಿಂ ಪೇಟಲ್ಕಾವಿಕಗವ್ಯಮಾಹಿಷಮೆನಿಪ್ಪೀ ಕ್ಷೀರದಿಂದಟ್ಟು ಮೆಯ್ಯೋಜಲ್ ತದ್ವಿಷಹಂ ಜಲಾಂಜನಲಸನ್ನಸ್ಯಪ್ರಯೋಗು ಹಿತಂ (ಖಮದ. ೬-೦೦). **ಹುಳಿಹೀರೆ :** "ಕಂಪಿಲ್ಲಃ, ಕಂಪಿಲ್ಲಕಃ–ಅರಗು, ಹುಳಿಹೀರೆ" (೬೫೦. ೨೦). [ಪುಳಿ₃ + ಹೀರೆ₁ (< ಪೀರೆ)]

**ಪುಳು** 'ಪುಱು' ನೋ.

**ಪುಳುಂಗಾಱ** (ನಾ). ಬಲೆಯನ್ನು ಬೀಸಿ ಹಕ್ಕಿಗಳನ್ನು ಹಿಡಿಯುವವನು: ಚಂಪಾನಗರದೊಳೊರ್ವಂ ಪುಳುಂ[ಪಾಠಾಂ. ಪೋಡುಂ]ಗಾಱಂ ಗರುಡವೇಗ ನೆಂಬೊಂ . . . ಕೊರಸುಂ ಮೊದಲಾಗೊಡೆಯ ಪಕ್ಷಿಜಾತಿಗಳಂ ಬಲೆಯ ನೊಡ್ಡಿ ಪಿಡಿದು (ವಡ್ಡಾರಾ. ೦೫೦-೨೨).

[ಪುಳು₆ ( ? ← ತಮಿ. ಮಲ. ಪುಳ್=ಪಕ್ಷಿ) + –ಕಾಱ]

**ಪುಳುಂಬು, ಪುಣಂಬು, ಪುಣುಂಬು, ಪುಣುಬು, ಪುಣ್ಬು, ಪುಳಂಬು, ಹುಣುಬು** (ನಾ). ೧. ಬಾಣ; ಅಂಬು; ಶರ : ಪೊಸನನೆಯ ಪುಳುಂಬಂ ಪೊಸೆದು ಸಲಿಸಿ . . . ಪೊಲಗೆಟ್ಟ ಕಾಮದೇವನಂತೆ ವಸುದೇವನಾ ವನದೊಳಗೆ ಪರ್ಪಾಗಳ್ (ಅರ್ಥನೇ. ೫-೫೩ ವ); ಅಡಿಯಲ್ಲಿ ಹಿಲ್ಕಿದ ಮುಳ್ಗಳಂ ನಿಲ್ಲದೊತ್ತಿ ಪುಳುಂಬನಿಂ ಕಳೆಯುತ್ತೆ . . . ಅರಣ್ಯ ಸಂಚರನೊಪ್ಪಿದಂ (ಉದ್ಭಟ. ೪-೧೨೦); ಮನ್ಮಥನೆಚ್ಚ ಪೂವಿನ ಪುಳುಂಬಿ ನೊಂದು ಪುಲ್ಗೊಂಡು ದೂಱುವ ಪೆಣ್ಬುಯ್ಯಲೆ ಪುಯಲಲ್ಲದಱಿಯೆಂ ಮತ್ತಾವ ಬಯ್ಬ[ಬಲ್ಬ]ಯ್ಯಲಂ (ಧರ್ಮಶಾ. ೩-೨೧). ೨. (?) : ಕಂಬಿಯ ಬಿಲ್ಲುಂ ಪಿಡಿದ ಪುಳುಂಬಿನ ಮೂಱಂಬು ಪೆಗಲ ಬಲೆ . . . ತನಗಿರೆ ಶಂಬರರಿಪುವೆಂದು ಕೂಡೆ ವನಚರನಾದಂ (ಶೇಖುಪು. ೭-೦೬೩); ಕುಟ್ಮಳಿತಚಂಪಕನಿಕಾಯಮಂ ಕಾಮನಿಸುವ ಕಾಯ್ದು ಪುಳುಂಬಿನಂಬುಗಳ [ಪಾಠಾಂ. ಪುಣುಂಬುಗಳ] ಪೊಡರ್ಕೆಯೆಂದು ಪೆಡಂಮೆಟ್ಟುತಂ (ಕುಸುಮಾ. ೦೨. ೦೩೮ ವ; ಶಾಂತೀಶ್ವ. ೦೦-೬೩ ವ ನೋ). **ಪುಣಂಬು:** ೧. "ಕಣೆ ಕೋಲ್ ಪುಣಂಬು ಸರಲೆನಲಂಬು" (ಶಬ್ದಮಂ. ೪೪). **ಪುಣುಂಬು:** ೧. "ಪುಣುಂಬು, ಸರಲ್, ಕಣೆ, ಕೋಲ್— ಈ ೪ ಅಂಬಿಗೆ ಪೆಸರ್" (ಕಕಸಾ. ೩೨-೦೦೯); ಕಾಯ್ದ ಪುಣುಂಬುಗಳಂ ಕುಸುಮಾಸ್ತ್ರನಿಸುತಮಿರ್ದಪಂ (ಕಾದಂಪೂ. ೯೩೬); ವಿರಹಿಗಳಂ ತಾಗಿ ಥಟ್ಟುರ್ಚಿ ಮತ್ತಂ ಬೆನ್ನೊಳ್ ತದ್ರುಕ್ತದಿಂ ತೊಯ್ದು ಗಿದಲರ ಪುಣುಂಬು ರತಿಪ್ರಾರ್ಥಿಯಿಂದಂ ಚೆನ್ನಪ್ಪೇತೈದೆ ತಾಂ ಕ್ಷಾಳಿಸುವ ವೊಲೆಳೆವೆಣ್ಣೊರ್ವಳಂದೊಲ್ದು ಪೊಯ್ದಳ್ ಬೆನ್ನೀರಂ (ಉದ್ಭಟ. ೮-೨೦); ಈ ಪುಣುಂಬರಿಯದಿರ್ದೊಡೆ ನಿನ್ನ ಶಿರಮಂ . . . ಕಾಮುರುಷನಘಮೆನ್ನ ನಂಟುವುದು (ಕೀಶರಾ. ೦೦-೩೪). **ಪುಣುಬು :** ೧. "ಪುಣುಬು ಕಣೆಯಂಬು ಸರಲ್ ತಾವಕ್ಕು ಶರಸಮಾಹ್ವಯಂ" (ಕವಿಕಂ. ೯೨). **ಪುಣ್ಬು:** ೧. "ಕೋಲುಂ ಸರಲ್ ಪು[ಪಾಠಾಂ. ಪೂ]ಣ್ಬು ಮೇಣ್ ಕಣೆಯೆನಲ್ಕಂಬಕ್ಕು" (ಶಬ್ದಸ್ಮೃ. ೩೪). **ಪುಳಂಬು :** ೧. ಪರಿಸಬೋಳಿಯ . . . ಸುಸಂಪಗೆಯ ಮುಗುಳಂಬು ದೊರೆವಡೆದ ಕಣಗಿಲ ಪುಳಂ[ಪಾಠಾಂ. ಳುಂ]ಬವು ತರದಿವಿದಿರೆಲೆಸರವಿ ಮಂತಿಳ್ಪಿರಿಸಿದಾ ಬತ್ತಳಿಕೆಗಳು ನೆರೆದಿರ್ದವವರಲ್ಲಿ (ಜಾಳ್ಳಶಾ. ೫-೧೪). **ಹುಣುಬು :** ೧. ಕೋಸಲಧರಿತ್ರೀಪಾಲಸುತ ಸುರವಂಶಕುಲ ಹೃತ್ಶೂಲ ನೆದೆಯಲಿ ಹುಣುಬುದೋಱಿತು ಹಗೆಯ ಹಮ್ಮುಗೆಯ (ತೊರರಾ. ೬-೨-೦).

[?]

**ಪುಳುಂಸೆ** 'ಪುಳಿಸೆ' ನೋ.

**ಪುಳುಕೊಂಡ** 'ಪುಳುಗೊಂಡ' ನೋ.

**ಪುಳುಗು** 'ಪುಣುಗು' ನೋ.

**ಪುಳುಗುಂಡ** (ನಾ). ಹುಳುಗಳಂ ತುಂಬಿದ ಗುಣಿ,—ಹೊಂಡ; ಒಂದು ನರಕ : ಲಿಂಗಜಂಗಮಕ್ಕೆ ನೀಡದೆ ಜಂಗಮಲಿಂಗಕ್ಕೆ ಕೊಡದೆ ತಾನೆ ಕೊಂಡಡೆ ಪುಳುಗುಂಡದೊಳಗಿಕ್ಕುವನು ಕೂಡಲ ಚೆನ್ನಸಂಗಮದೇವ

(ಕನ್ನವ. ೦೩-೪); ಪುಳುಗುಂಡದೊಳು ಹಾಕಿದರು ತನ್ನಯ ಗೆಳೆಯನ ಬಿಟ್ಟು ಪೋದವನ (ವಜ್ಞಾ. ೨-೪೦). [ಪುಳು (< ಪುಟು) + ಕುಂಡ₁]

**ಪುಳುಗುಗಾಪು** 'ಪುಣುಗುಕಾಪು' ನೋ.

**ಪುಳುಗೊಂಡ,** ಪುಳುಕೊಂಡ, ಪುಳ್ಕೊಂಡ, ಹುಳುಗೊಂಡ (ನಾ). = ಪುಳುಗುಂಡ : ಯಿಾ ಸ್ಥಾನದಲು ಮೊನ್ನವಾಗಿ ಊರುಗಳುಂ ಭೂಮಿಗಳುಂ ಧನಂಗಳುಂ ಈ ಲಿಂಗಕ್ಕೆ ಹಸ್ತೋದಕವಂ ಮಾಡಿ ಕೊಟ್ಟುದುವಂ ಮನಂ ವೇಸದೆ ಕಳಿಮಕೊಂ[ಡಪ]ನೆಂಬಾತನ ಆತನ ಮಾತಾಪಿತೃಗಳೆಲ್ಲ ಯೆಪ್ಪತ್ತೇಳುಕೋಟಿವರ್ಷಂಬರಂ ಪುಳುಗೊಂಡದ ನರಕದೊಳಗಿಕ್ಕಿ ನೀನಾ ಹುತಿಗೊಂಡಿರು ಕಂಡಾಯೆಲೆ ಪಾಪವೇ (ಸೌಇಇ. XX, ೦೭೭-೦೨; 1190) ; ಚಿತ್ರತರನರಕದೊಳಗಾಳುತೇಳುವ ಪ್ರಾಣಿಮಾತ್ರವುಂ ತೆಗೆದು ಪುಳುಗೊಂಡ ಮಂ ತೊಳೆವುದಕೆ ನೇತ್ರತ್ರಯಂಗೆ ಸಾವಿರ ಸೊಲಿಗೆ ತುಪ್ಪದಿಂ ಸ್ನಾನಮಂ ಮಾಡಿಸಿದಪಂ (ಸಿದ್ಧರಾ. ೬-೫೭) ; ಆ ಯಮನ ಪಟ್ಟಣದೆ ಪುಳುಗೊಂಡವಾದಿ ಯುಗಣಿತಕೋಟಿಯುವಟಿಕೊಳಗೆ ತಿಳಿಯಲಪ್ಪತ್ತೆಂಟುಕೋಟಿನಾಯಕನರಕಂ (ಕಬಕ. ೨೦-೧೦) ; ವಂಚಕನಂ ಸುಡಿದು ಹುಸಿವನಂ ... ಪುಳುಗೊಂಡದ ಸಂಚದಲಿರಿಸುವನು ಕಾಲನೇಳದ ತೆರದಿಂ (ಕೀತಿಕಾ. ೪೪೪). **ಪುಳುಕೊಂಡ :** ಉಜಿದ ನಿಜದಂವ್ಮಾಮಂ ಮೇಣು ಕಜಿಪಿಂದ ಪೆಜರ ದವ್ಮಾಮಂ ಮೇಣಳಿವಂ ತೆಜಿಗೊಳುವಂ ಪುಳುಕೊಂಣ್ಡದೊಳಜಿವತ್ತುಸಹಸ್ರಮುದು ಭವಿಸಿತು (ಎಕ. VI, ತರೀಕೆ. ೬೨-೨೭ ; 1104 ?). **ಪುಳ್ಕೊಂಡ :** ನಿಜ ಧರ್ಮ್ಮವಂ ಮೇಣ್ ಕಜಿಪಿನ್ದಂ ಪೆಜರ ಧರ್ಮ್ಮಮಂ ಮೇಣಳಿವಂ ತೆಜಿಗೊಳ್ವಂ ಪುಳ್ಕೊಂಡದೊಳಜಿವತ್ತುಸಹಸ್ರವರ್ಷವಾಳುತವಿಕ್ಕುಂ (ಎಕ. VI, ಕಡೂರು. ೦೫೭-೭೯ ; 1191). **ಹುಳುಗೊಂಡ :** ಭವಿಯ ಮನೆಯ ಅನ್ನ ಸವಿಯಾಯಿತ್ತೆಂದು ಉಂಡ ಭಕ್ತಂಗೆ ಅಘೋರನರಕ ತಪ್ಪದು ಆಗಳಂತೆ ಆ ಭವಿಗೆ ಮಾಡಿದ ಹುಳುಗೋಡವು ಆ ಭಕ್ತಂಗಪ್ಪುದು ತಪ್ಪದು (ಬೀದಾವ. ೩೨-೦೦೪) ; ಉದ್ದಂಡತನದಲ್ಲಿ ನಡೆವ ಭಂಡರು ಹುಳುಗೊಂಡದಲ್ಲಿಕ್ಕುವ ಸೊಡ್ಡಳದೇವ (ಸಕಲವ. ೦೭೪-೭೯೩). [ಪುಳು (< ಪುಟು) + ಕೊಂಡ₂]

**ಪುಳುವಗೆ** 'ಪುಟಿವಗೆ' ನೋ.

**ಪುಳುವಚ್ಚೆ** 'ಪುಟುವಚ್ಚೆ' ನೋ.

**ಪುಳ್ಕೊಂಡ** 'ಪುಳುಗೊಂಡ' ನೋ.

**ಪುಳ್ಕೊಟ್ಟೆ** (ನಾ). ಹುಣಿಸೆಬೀಜ : ಬಾಯೊಳಗೆ ಪುಳ್ಕೊಟ್ಟೆ ಹಾಕಿಕೊಂಡಿದ್ದಿಯಾ ಏನು ? ಹೇಳು (ಬಾಳಗ. ೦೦೩).
[ದೇ. ॥ ತಮಿ. ಪುಳಿಕ್ಕೊಟ್ಟೈ = ಕೊಗಟೆ ಮತ್ತು ಬೀಜಗಳನ್ನು ತೆಗೆದು ಮುದ್ದೆ ಮಾಡಿದ ಹುಣಿಸೆಹಣ್ಣು ; ತುಳು. ಪುಣಿಕೊಟ್ಟೆ, ಪುಳ್ಕೊಟ್ಟೆ, ಪುಳ್ಕೊಟ್ಟಿ]

**ಪುಳ್ಗಿ** 'ಪುಟಿಗ್ಗಿ' ನೋ.

**ಪುಳ್ಗಿಗ** (ನಾ). (?) : ಬಗೆಯದೆ ಪೆಜವಟಿವರ್ದಂ ಸುಗಂಧಿ ಕಲ್ಲುಪ್ಪು ಪುಳ್ಗಿಗಂ ಪುಳ್ಳಕೆ [ಪಾಠಾಂ.ಪುಗ್ಗಿಗಂ ಪುಳಕೆ] ಜೀರಗೆಯೆಂಬಿನಿತುಮಂ ಪೂಸುಗೆ ಕಜಿವಂ ನಕ್ಕಲೊಡನೆ ಪಸು ಕಜಿಗೊಳ್ಗುಂ (ಲೋಕೋಪ. ೬-೦೯೩).
[?]

**ಪುಳ್ಗಿಯೋಗರ** (ನಾ). ಹುಗ್ಗಿಯ ಅನ್ನ ; ಹುಗ್ಗಿ ; ಪೊಂಗಲು : ಓಗರದ ಪುಳ್ಗಿ[ಪಾಠಾಂ. ಪುಲ್ಲಿ, ಹುಳಿ]ಯೋಗರದ ಪಲತೆಜಿದ ಪಾಲೋಗರದ ಕಟ್ಟೋಗರದ ಸೊಗಸುವಡೆದ ನೀರೋಗರದ ವಿಸುಗುವಂಬಲಿಯ ವಿಧಮಂ ಮಧುಜನವಜಿವ ತೆಜಿದಿನೊರೆವೆಂ (ಸೂಶಕಾ. ೩ ಸೂಶಕ).
[ಪುಳ್ಗಿ (< ಪುಟಿಗ್ಗಿ) + ಓಗರ]

**ಪುಳ್ಗೆ** 'ಪುಟ್ಗೆ' ನೋ.

**ಪುಳ್ಚಾರು** 'ಪುಳಚಾಜು' ನೋ.

**ಪುಳ್ಚೇಟ್** 'ಪುಳಚೇಟ್' ನೋ.

**ಪುಳ್ಳಂಗಾಯಿಉಂಡೆ** (ನಾ). ಹೆಸರುಹಿಟ್ಟಿನೊಡನೆ ಬೆಲ್ಲ ಮುಂತಾದುವನ್ನು ಸೇರಿಸಿ ಮಾಡುವ ಒಂದು ಬಗೆಯ ಉಂಡೆ : ಎದುರಿಗೆ ತಟ್ಟೆಯಲ್ಲಿ ಗರಿಗರಿಯ ಚಕ್ಕುಲಿ, ಖಾರವಾದ ತೇಂಗೊಳಲು, ಎರಡು ಪುಳ್ಳಂಗಾಯಿಉಂಡೆ ಹದವಾಗಿ ಹೊಳೆಯುತ್ತಿದ್ದುವು (ಕೃಷ್ಣಾ. ೦೦೯). 'ಪುರಿವಿಳಂಗಾಯಿ' ಪರಾ. [ಪುಳ್ಳಂಗಾಯ್ಯ್ + ಉಂಡೆ]

**ಪುಳ್ಳಂಪುರಚಿ** 'ಪುಳ್ಳಂಪುಣಿಸೆ' ನೋ.

**ಪುಳ್ಳಂಪುರಿಚಿ** 'ಪುಳ್ಳಂಪುಣಿಸೆ' ನೋ.

**ಪುಳ್ಳಗತಿ** (ನಾ). (?) : ಪುಳ್ಳಗತಿಯ ಹೇಳಿ ನೀಚಜಾತಿಗಳನು ಒಳ್ಳಿವರೆನಿಸಿ ಲೋಕದೊಳು (ಬಜ್ಜರಾ. ೯-೭೩). [ ? ]

**ಪುಳ್ಳಪುರಸಿ** 'ಪುಳ್ಳಂಪುಣಿಸೆ' ನೋ.

**ಪುಳ್ಳಳೆ** 'ಪುಳಿಯಳೆ' ನೋ.

**ಪುಳ್ಳಿ,** ಪುಳ್ಳೆ, ಹುಳ್ಳಿ, ಹುಳ್ಳೆ (ನಾ). ೧. ಮರದಿಂದ ಉದುರಿದ ಚಿಕ್ಕ ಚಿಕ್ಕ ಒಣ ಕಡ್ಡಿ ; ಚೂರು ಪಾರು ಸೌದೆ ; ಪುಡಿಸೌದೆ : ಧರ್ಮಬುದ್ಧಿ ಪುಲ್ಲಂ ಪುಳ್ಳಿಯಂ ತರಿಸಿಯಾ ಪೊಟಿಲೊಳಗಡಸಿ ತುಂಬಿ ... ಕಿಚ್ಚನಿಕ್ಕಲೊಡಂ (ಪಂಕತಂ. ೦೭೭-೦೭). ೨. ಸೌದೆ ; ಕಟ್ಟಿಗೆ ; ಉರುವಲು : ಕಾಷ್ಠಕೂಟ ನೆಂಬ ಬೆಸದವಂ ಪುಳ್ಳಿಯ ಪೊಜಿಯುಂ ಪೊತ್ತು ಪೊಟಿಲ್ಗೆ ವರ್ಪೊನಂ ಕಂಡು (ವಡ್ಡಾರಾ. ೭೭-೨೩): ನೆತ್ತಿ ತಲೆಂಟಾಗೆ ಪುಳ್ಳಿಯನಡಕುವ ಬಡವರ್ಗಂ ಬಟ್ಟೆಗಟ್ಟ ಬಡಿವ ಬೇಡರ್ಗಂ ಸಿರಿಯೇಕಾಗದು (ಧರ್ಮಾಮೃ. ೬-೦೩೭); ಪುಳ್ಳಿಗಳ ತಂದದನು ಮಾಜುವ ಗಳ್ಳಗತಕವ ಬಲ್ಲೆಯುಲ್ಲದೆ ಬಿಲ್ಲುವಿದ್ಯ ವಿದೇಕೆ ನಿನಗೆ (ಜೀವಂಪ. ೦೫-೯೭). 'ಪುಳ್ಳಿಗಡಿ' ಪರಾ. ೩. (ಆಲಂ) ಕ್ಷುದ್ರವಾದುದು ; ಹೀನವಾದುದು ; ಕ್ಷುಲ್ಲಕವಾದುದು : 'ಪುಳ್ಳಿವೇಡ' ಪರಾ. **ಪುಳ್ಳೆ :** ೧. ಮೂಡಣ ಗೋಪುರವಂ ಪೊಕ್ಕು ಪುಲ್ಲು ಪುಳ್ಳಿಯ ಹೊರೆಗಳನ್ನಿಳುಹಿ (ಧರ್ಮಾಮೃ. ೨-೩೦). ೨. ಪಾತಕಜೀವಂಗಳ್ ಎಳ್ಳಿನಂತೆ ಗಾಣಕ್ಕೆ ವಂದು ಕಳ್ಳರಂತೆ ಶೂಲಕ್ಕೆ ವಂದು ಪುಳ್ಳೆಯುಂತೆ ಕಿಚ್ಚಿಂಗೆ ವಂದು . . . ಕಿಚ್ಚಿನೆ ಕಿರಿವುವು (ಧರ್ಮಾಮೃ. ೩-೭೭). **ಹುಳ್ಳಿ :** ೧. ಉದಯಕಾಲದೊಳೆದ್ದು ಹುಲುಹುಳ್ಳಿಗೆಂದರಣ್ಯಕ್ಕೆ ನಡೆದು (ಹಕಾ. ೦೨-೭). ೨. ಕಲ್ಲಿನೊಳಗಣ ದಳ್ಳುರಿಯು ಹುಳ್ಳಿಯ ಕಿಚ್ಚಿನಂತೆ ಅಲ್ಲಿಯೇ ಉರಿಯ ಬಲ್ಲುದೆ (ವೋಲಿವಾ. ೦೯೩-೬೯೦); ಹುಳ್ಳಿಯ ಹೊಜಿಯಂ ಹಲವಂ ತಂದು ಬಳಸಿ ನೊಳೆಡದೆಜಿಪಿಲ್ಲದಿರಿಸಿ . . . ಆ ಖಳನೋವದೆ ಬಲ್ಗಿಚ್ಚಂ ನಾಲ್ದೆಸೆಯೊಳಗಿಟ್ಟುರುಪಿದನು (ಜಯಾಕಾ. ೦೩-೯೩). **ಹುಳ್ಳೆ :** ೨. ನಾನು ಹೊತ್ತ ಹುಳ್ಳಿಯ ಹೊಜಿಯನಂಬಲಿಗೆ ಕೊಂಬವರಿಲ್ಲ (ಬಸವ. ೪೬೦); ಹುಳ್ಳೆ [ಪಾಠಾಂ.ಳ್ಳಿ]ಯ ಹೊಳಲೊಳು ಮಾಜುವೆನು (ಜೀವಂಸಾಂ. ೨-೨೭). 'ಪುರಲೆ' ಪರಾ.
**ಪುಳ್ಳಿ ಇಡು** = (ಆಲಂ) ನಾಶಮಾಡು : ಅದರಾಶೆಗೆ ನಾನು ಪುಳ್ಳಿ ಇಟ್ಟೆ, ನನ್ನಾಶೆಗೆ ದೇವರು ಮಣ್ಣೆರಚಿದ (ಅಮಾಶಿ. ೯೦).
[ದೇ. ॥ ತುಳು. ಪುಲ್ಲೆ; ಕೊಡ. ಪುಳ್ಳಿ; ತೆಲು. ಪುಲ್ಲ]

**ಪುಳ್ಳಿಗಡಿ** (ಕ್ರಿ). ಸೌದೆಯನ್ನು ಸೀಳು : ಆ ತಾಪಸಂ ಎರ್ದು ಮುಳಿದು ನಿಚ್ಚಂ ಪುಳ್ಳಿಗಡಿವ ತನ್ನ ಕೊಡಲಿಯಂ ಕೊಂಡು . . . ಕಿಚ್ಚಿನೊಳ್ ಬೇವ ಸವಿಂಧೆಯೊಳಗಣ ಪೊಟಲೊಳಗೆ ಸೀಳ್ದು ನೋಡೆ (ಪಾಹಂ. ೩-೩೭ ವ).
[ಪುಳ್ಳಿ + ಕಡಿ]

**ಪುಳ್ಳಿಯಣ್ಣ** (ನಾ). ಒಬ್ಬಾತನ ಹೆಸರು : ಪುಳ್ಳಿಯಣ್ಣನ ಮಗಂ ರಾಚೆಯಂ (ಎಕ. XI, ಚಿತ್ರದು. ೭೩-೦೨ ; 941). [ಪುಳ್ಳಿ₂ + ಅಣ್ಣ₁]

**ಪುಳ್ಳಿಯಯ್ಯ** (ನಾ). ಒಬ್ಬಾತನ ಹೆಸರು : ತಾಟಿವಡುಗುಡ್ಡಿಗಳ ಮಗಂ ಪುಳ್ಳಿಯಯ್ಯಂ ಮಾಡಿಸಿದ ತೂಮ್ಬು (ಎಕ. X (೩). ಹಾಲೂರು. ೧೬೦-೪; 10ನೆಯ ಶತ). [ಪುಳ್ಳಿ₂ + ಅಯ್ಯ₁]

**ಪುಳ್ಳಿವೇಡ** (ನಾ). ಕ್ಷುದ್ರನಾದ ಶಬರ ; ನಾಡಾಡಿಯಾದ ಬೇಡ : ಕುರುಪತಿ ತನ್ನಾತ್ಮಜೆಯಂ ಸುರಪತಿನಿಭನಪ್ಪ ತನ್ನ ಪಿರಿಯ ಮಗಂ

ಗಾದರದಿಂ ಕುಡಲೆಂದೊಯ್ಯುತ್ತಿರೆ ಕಂಡಲೆ ಪುಳ್ಳಿವೇಡ ಸುಂಕಂ ಬೇಡ್ವಾ ಎನೆ (ಶಂಕರ. ೯-೧೬). [ಪುಳ್ಳಿ₁ + ಬೇಡ₁]

**ಪುಳ್ಳುಂಪುಣಿಸೆ**, **ಪುಲ್ಲಂಪುರಚಿ**, **ಪುಲ್ಲಂಪುರುಚಿ**, **ಪುಳಂಪುಣಿಸೆ**, **ಪುಳಂಪುರುಚಿ**, **ಪುಳ್ಳುಂಪುರಚಿ**, **ಪುಳ್ಳುಂಪುರಿಚಿ**, **ಪುಳ್ಳಪುರಸಿ**, **ಹುಳಿಹುಣಿಚೆ** (ನಾ). ಒಂದು ಬಗೆಯ ಸಸ್ಯ; ಹುಳಿಸೊಪ್ಪು : "ಅಲೋಣಿಕೆ ಕ್ಷುಲ್ಲಕಾಮ್ಲಿ ಪುಳ್ಳುಂಪುಣಿಸೆ" (ಮಂಗರಾ. ೯೨-೩೯); ಪುಳ್ಳುಂಪುಣಿಸೆಯುಮಂ ಕೊಡೊಳ್ದುದುವೆನಿಸಿರ್ಪ ಗೋಣಿಯುಂ ಕುಡು . . . ಕಣಿಗಿಲುಗ್ರತರವಿಷಮುಬ್ಬುಗುಂ (ಕಮಾವ. ೨ ೩೬). **ಪುಲ್ಲಂಪುರಚಿ** : "ಚಾಂಗೇರೀ . . . ಅಮ್ಲಲೋಣಿಕಾ–ಈ ಪುಲ್ಲಂಪುರಚೀಸೊಪ್ಪಿನ ಹೆಸರುಗಳು" (ನಿಘಂ.ಶಿ. ೧೯೯). **ಪುಲ್ಲಂಪುರುಚಿ** : ಯಷ್ಟಿಮಧುಕ, ಪುಲ್ಲಂಪುರುಚಿ, ಸೈಂಧವಲವಣ . . . ಇವುಗಳಲ್ಲಿ ನಾಲಿಗೆಗೆ ಗಂಡೂಷವನ್ನು ಮಾಡಲು ಪಿತ್ತಜ್ವರ . . . ಜಿಹ್ವಾರೋಗ ಇವುಗಳೇ ಮೊದಲಾದುವು ಗುಣವಾಗುವುವು (ಸಕವ್ಯ. ೬೩). **ಪುಳಂಪುಣಿಸೆ** : ಚಂಡಾತ ಕಣಿಗಿಲು; ಚಾಂಗೇರಿ ಪುಳಂಪುಣಿಸೆ (ಅಕಾನಿ. ೧೧-೨೪). **ಪುಳಂಪುರುಚಿ** : ಚಿಲುಕೀರೆಸೊಪ್ಪು ಸಿಹಿಪಾಲೆಸೊಪ್ಪು ಚಕ್ರವರ್ತಿ ಪುಳಂಪುರುಚಿ ಜಾಂಗಲಮಾಂಸ . . . ಯಿಪ್ಪು ಪಥ್ಯಕರವಹುದು (ವಕಶ. ೦೪-೪). **ಪುಳ್ಳುಂಪುರಚಿ** : ಹೊನ್ನಗನ್ನೆಸಪ್ಪು ಬಲಿತ ಕಾರೆಸಪ್ಪು ಪುಳ್ಳುಂಪುರಚಿಸಪ್ಪು . . . ಇವಿಷ್ಟು ಶೋಣಿತವಾತಕ್ಕೆ ಶಮನ (ದ್ರವ್ಯಗುಣ. ೩-೪). **ಪುಳ್ಳುಂಪುರಿಚಿ** : ಕೊಡಸೀಗೆಯು ಬೆರಚಿಲ್ಲಿಯ ಕಡುಗಾಯ್ದ ಕಷಾಯದಲ್ಲಿ ಮಧುಘೃತಯುಕ್ತಂ ಕೊಡು ಜೋಳದ ಕೂಳ್ಗೊಸರಂ ಕೊಡು ಪುಳ್ಳುಂಪುರಿಚಿ ವೆರಸು ಬಸುರಿಂಬಕ್ಕುಂ (ಗೋವೈದ್ಯ. ೧೯೯-೨೩). **ಪುಳ್ಳಪುರಸಿ** : (ವೈದ್ಯಶಿ. ೬-೧೨೬). **ಹುಳಿಹುಣಿಚೆ** : (೯). [<ಪುಳಿ₃ + ಪುಣಿಸೆ (<ಪುಳಿಸಿ)]

**ಪುಳ್ಳೆ** 'ಪುಳ್ಳಿ' ನೋ.

**ಪುಳ್ಳೆಮಾತು** (ನಾ). ಒಣಮಾತು; ಉಪಯೋಗವಿಲ್ಲದ ಮಾತು : (೯). [ಪುಳ್ಳೆ (<ಪುಳ್ಳಿ) + ಮಾತು₁]

**ಪುಜಿಲೆ**, **ಪುರಲಿ**, **ಪುರುಲ್ಲೆ₁**, **ಪುಜುಲೆ**, **ಬುರಲೆ**, **ಬುಜುಲೆ** (ನಾ). ಒಂದು ಬಗೆಯ ಪಕ್ಷಿ : "ಚಂಚಲೇ ಪುಜಿಲೆಯಕ್ಕುಂ" (ಮಂಗರಾ. ೩೨-೯); ಪುರುಳಿ . . . ಪರ್ದು ಮಾರವಂ ಮರಕುಟಿಗಂ ಪುಜಿಲೆ ಬುಜುಗಿ ಹಸುಬಂ ಪೂಣೆವುಲ್ (ಸೂಕ್ತಿಸು. ೩-೦೯೬). **ಪುರಲಿ** : ಪಕ್ಷಿಮಾವಲಯದ ಪುರಲಿಗಳು ಒಂದೇ ರೀತಿಯವು . . . ಅವುಗಳ ಮೇಲ್ಕೊಕ್ಕಿನಲ್ಲಿ ಹಲ್ಲಿನಂತಹ ಒಂದು ಕಚ್ಚು ಇದೆ (ಪಕ್ಷಿ. ೧೩೦). **ಪುರುಲೆ₁** : ಪಟಪಟನೆ ಹಾರಿ ಬಹ ಹೊರಸುಗಳ ಸಮುದಯಂ ; ಪುರುಲಿಗಳ ಪೆರ್ವುಂದೆ (ಚಿಕ್ಕಾಂಗ. ೩೩-೧೯೯೬). **ಪುಜುಲೆ** : 'ಕಾಬುಜುಲೆ' ಪರಾ. **ಬುರಲೆ** : ಬುರಲೆ ಟಿಟ್ಟಿಭ ಕೊಂಚೆ ಕೊಳರ್ವಕ್ಕಿಗಳು . . . ಸುಚಕ್ರವಾಕಗಳೆರೆದೆನಿಪ ಪಕ್ಷಿಗಳ ಭಾವದ ಪ್ರತಿಮೆ ಬೆಸೆದಿಹವು (ಕೋಗಿಲೆ. ೩-೩೩). **ಬುಜುಲೆ** : ತಾಜಿಪ್ಪಿರ್ದ ಮಾರ್ಗಗಳ ತೂಜಿಲ ತುದಿಗೋಡೊಳಿರದೆ ಬುಜುಲೆಗಳೆಡ್ಡಂಬಾಜಿದುವು(ಜಗವ ೧೭-೩೩); ಗಳಿಗೆಳಂಟಿಗೆ ಸಿಲುಕಿದವು ಪಿಕ್ಕಳಿಗ ಪಂಜರ ಮಂಜರಿಗ ವಿಷಾಬ್ಬುಲಿಗ ಲಾವುಗೆ ಸರಲೆ ಬುಜುಲೆಗಳು (ಕೆ.ಅರಾ. ೩-೩-೧೬) ; ಪಲಿಪರಿದು ಗಳರವದ ತಿತ್ತಿರಿ ಕೊಂಚೆ ಬುಜುಲೆಗಳ . . . ಕಂಡನಾ ರಾಮ (ಜಕ್ಕರಾ. ೩೩-೭). 'ಪುರುಳ್ಳಿ₂' ಪರಾ. [ ? ]

△ **ಪುಜುಕು** 'ಪೆರುಕು' ನೋ.

**ಪುಜುಲೆ** 'ಪುಜಿಲೆ' ನೋ.

**ಪುಜ್ಪು** 'ಪುಪ್ಪ' ನೋ.

**ಪುಟಲೂರ್** (ನಾ). ಒಂದು ಸ್ಥಳದ ಹೆಸರು : ತೇಂಕಣದೆಸೆಗೆ ಸೀಮೆ ಪುಟಲೂರ್ಬಾಸಿ ಪೂಣಾಸೆಯು ತೆಂಕಣ ಕೋಡ ಕೆಜಿಗೆ ಪಡುವ ನೋಡಿ ಪರಿದ ಪೇರೊಲ್ವಿಯೆ (ಎಕ. IX (೬). ದೇವನಹ. ೧೩೦-೩೩ ; 828). 'ಪುಟೊಲೂರ್' ಪರಾ. [? + ಊರ್]

**ಪುಟಿ**. ಪುಳಿ₂, ಹುಳಿ₁, ಹುಟಿ (ಕ್ರಿ). ೧. (ಕೊಳೆತು) ಹುಳು ಹಿಡಿ ; ಹುಳುಗಳಿಂದ ತುಂಬು ; ಹುಳಂ ಬೀಳು : ಔದುಂಬರಕುಷ್ಠಮಾಗಿ ಪುಟಿತು ಸಮೆದು . . . ಸತ್ತು ಜಾತ್ಯಂಧ ಪೊಲೆಯರ ಮಗಳಾಗಿ ಪುಟ್ಟಿದಳ್ (ಕಣ್ಣಾರಾ. ೧೧-೩); ಆ ನಾಯ್ . . . ಪುಟಿತು ಸತ್ತಿತ್ತೆಂತೆ ಕಾಲಾಂತದೊಳ್ (ಸುಕುಮಾ. ೩-೨೧); ಪಾತಕಿ ಪುಟಿತೊಡಲ್ಲದೇಂ ಸತ್ತಪಳೇ (ಹುಕೋಕ. ೩-೬೩). ೨. (ಹುಳುಹಿಡಿದ ವಸ್ತುವಿನಂತೆ) ನಿರುಪಯೋಗವಾಗು : ದೇವತೆಗೇಕೆ ಪೇಟಿಟ್ ಪರಸಿ ಗಂಡಂ ಬೇಡಿಕೊಂಡೆನ್ನ ಪೆಂಡತಿಗಿತ್ತ ಪುಟ್ತೊಂದು ಪೆಣ್ಣಂ (ಅರ್ಜನೇ. ೬-೩೦). **ಪುಳಿ₂** : ೨. ಖರನಂ ಸೌಮಿತ್ರಿ ಪುಳಿತ ಕವಡೆಗೆ ಬಗೆದಂ (ಕಣ್ಣಾಸು. ೨೦೯ ಪ್ರಯೋ). **ಹುಳಿ₁** : ೧. ಒಬ್ಬಳವನೆ ಬಿತ್ತಿ ಒಬ್ಬಳವನೆ ಬೆಳೆವಡೆ ಶಬ್ಬನ ಹುಳಿವಡೆನ್ನೇವೆ ರಾಮನಾಥಾ (ದೇದಾವ. ೩೬-೬೩) : ಇಳೆಯ ಮರ್ತ್ಯರು ಶಿವಶಿವಾ ತೆಗೆ ಪುಲುಗುಣಗೆ ಸರಿಯೆಂಬವರ ಬಾಯ್ ಹುಳಿ[ಶಾಶಾಂ. ಳು]ವುದೋ ಗುಣಕೇಕೆ ಮತ್ಸರ (ಕುಮ್ಯಾಬ. ೬-೩೭); ಬಾಯಿ ಹುಳಿವುದು ಇಂಥ ಬಯಲ ನುಡಿದರೆ (ತುರಂಗ. ೩೩-೩೪). ೨. ಹುಳಿತಿತೇ ಬೇಟವಂದ? (ಕಲಾವ. ೩೬-೬). **ಹುಟಿ** : ೧. ತಲೆ ಹುಟಿತ ನಾಯ ಸುಡು (ಸೂಕ್ತಿಸು. ೬-೯೨೩).

**ಹುಳಿದಾಡು**=ಹುಳುವಿನಂತೆ ತೆವಳು : ಕವಿಚಿದೀ ದೊಣ್ಣೆಯುಂ ಬಾನೆಂಬರದಿಯೆ, ಅಳಿದುಳಿದು ಹುಳಿದಾಡುತಿಹೆವಿದರ ಮರೆಯಿ (ಗೀತಾಂ. ೦೨೨-೩೬). ☞ ಜ್ಞಾತಿಶಬ್ದಗಳಲ್ಲಿ ಈ ಧಾತುರೂಪವು 'ಪುಟು' ಎಂದಿದೆಯಾದರೂ ಕನ್ನಡದಲ್ಲಿ ಇದರ ಬಳಕೆಯಿಲ್ಲ.

[ದೇ.॥ ತಮಿ. ಮಲ. ಪುಟು]

**ಪುಟಿದೇಗಾವುಂಡ** (ನಾ). ಒಬ್ಬಾತನ ಹೆಸರು : [ಕದಲೆಕಥಿ]ವಾಣ್ಣ ಎಜಿಯಮ್ಮಂ ನಿವುದಿ ತುರುಗೊಳೊಳ್ ಕಾದಿ ಸತ್ತೊಂ ಈ ಕಲ್ಲ ಪುಟದೇಗಾವುಣ್ಡ[ನ] ತಮ್ಮ ಗುಜಿಯಮ್ಮ ನಿಜಿಸಿದೊ (ಎಕ. XXI. ೨೦೬ ೪ ; ಸಂ. 883). [ಪುಟಿದ್ಯೆ+ಗಾವುಂಡ (<ಗಾಮುಂಡ)]

**ಪುಟಿಯಗಂಗ** (ನಾ). ಒಬ್ಬಾತನ ಹೆಸರು : ಕೋಟೆಯ ಕೊಳ್ನನ್ದು ಶಿಂಗಪೆಣ್ಣಮ ಪುಟಿಯಗಂಗ ಪ್ರಭುಮಲ್ಲನೊಬ್ಬಾಗುಣ್ಣನಳಿಯಮ್ಬಡಗಲು ಕೊಳ್ಳುತ್ತಿರೆ × × × ಕೊನ್ದು × × × (ಎಕ. XII, ಶಿಕಟೂ. ೯೭-೭ ; ಸಂ. 880). [ ? + ಗಂಗ ]

**ಪುಟಿಲ್₁** (ನಾ). ಮರಗಳ ಗುಂಪು; ತೋಟ; ಉಪವನ : ಏಲಾಲವಂಗಕುಸುಮರಜೋಧೂಸರಮಬಾಲಕಸಂಚಲತರಲಂ ಪುಟಿಲೊಳಗೆ ಸುಟಿವುದುಪವನಪವನಂ (ಆದಿಪು. ೬-೧೧೧); ಕುಳಿರ್ವ ಪುಟಿಲ್ಗಳಿಕ್ಕೆಗೆ ಲತಾಳಯದೋವರಿಗಳ್ಗೆ . . . ಶೀತಶೀತಳಿಕೆಯ ಬೀಜನಕ್ಕೆ ಗುಜಿಯಾಯ್ತು [ವಿ]ಯೋಗಿಜನಂ ಬಸಂತದೊಳ್ (ಪರ್ಶಪು. ೧೧-೯೮); ತಮ್ಮಿರ್ದ ಲತಾಗಾರದ ಪುಟಿಲೆಡೆಯುಂ ಸೀತಾರಮಣಿಗೆ ಸುಟ್ಟಿ ತೋಜಿದಂ ರಘುವೀರಂ (ಶಂರಾಮಾ. ೦೩-೨೪); ಅದಾರ ಕೂಗು ಪುಟಿಲ ನಡುವೆ ಕೇಳ್ವುದು ? (ಅಕ್ಷಿತಾ. ೩೭-೬೯೬). [ದೇ.॥ ತಮಿ. ಮಲ. ಪೊಟಿಲ್]

**ಪುಟಿಲ್₂**, **ಪುಣಿಲ್**, **ಪುಳಿಲ್**, **ಪುಳಿಲಂ** (ನಾ). ೧. ಉಸುಕು; ಮರಳು : ಪುಳಿನಂ–ಪುಟಿಲ್ (ಕಮಾರ. ೨೦ ಪ್ರಯೋ). ೨. ಮರಳು ದಿಣ್ಣೆ : "ಪುಟಿಲೆಂದು ಮರಲೊಟ್ಟಲ್" (ಕಶಾ. ೩೩-೦೬೨); ಪಾಡುವ ತುಂಬಿ ಕೋಡುವ ಪುಟಿಲ್ ನಡಪಾಡುವ ರಾಜಹಂಸೆ ಆರಿರ್ದೆಗವಾರ ಮನಕ್ಕೆ ಮನಂಗರ್ದಾಗವಂ ಮಾಡೆ ಮನಕ್ಕೆ ಬಂದುಪರಿಕೇಸರಿಗಿಲ್ಲಿಯ ನಂದನಾಳಿಗಳ್ (ಶಂಕಶಾ. ೩-೩೭); ತಾವರೆಯ ರಜಂಗಳೆಂಬ ಪೊಸನುಣ್ಣಿಕಲಿಂದೆ ಪುಟಿಲ್ಗಳಂ ಮನೋಹರಕೃತಕಪ್ರವಾಹಿನಿಯೊಳಂಗನೆ ಮಾಡಿಸುತಿರ್ದ ಳರ್ಥಿಯಿಂ (ಕಾದಂಶಾ. ೨೪); ನನೆಗಣೆಯನ ಗರುಡಿಯಂತಿರ್ಪ ಪೂವಿನ ಪುಡಿಯ ಪುಟಿಲ್ಗಳಂ (ಅರ್ಜನೇ. ೪-೬೯ ವ). **ಪುಣಿಲ್** : ೨. ವಾಜುವ ವಳಿನೀತತಿ ಹಂಸಂ ರಥಾಂಗವಿಪಾ ತಾವರೆಯಿಂದಾ ತಾವರೆಗೀ ತಡಿಯಿಂದಾ

ತಡಿಗೀ ಪುಣಿಲಿನಾ ಪುಣಿಲ್ಗಾ ಕೊಳನೊಳ್ (ಮಲ್ಲಿಕಾ. ೪-೦೬೬). **ಪುಳಿಲ್ :** ೨. ತೀರಭಾಸುರತರತಾಳನಂದನದಲಂಪು ಪುಳಿಲ್ಗಳದರ್ಪು ಚಿಲ್ಪ ಬಿತ್ತರಿಸೆ . . . ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಕಬ್ಬಿಗ. ೦-೩೯); ಮುಕುಳೀ ಕುಚಮುದ್ಭ್ರತರಂಗಸಂಚಯಂ ವಳಿ ಜಘನಂ ಪುಳಿಲ್ (ಚಂದ್ರಶ್ಮ. ೩-೨೦). **ಪುಳಿಲು :** ೧. "ಪುಳಿಲೆನಲು ಮರಳು" (ಅಭಿ. ೦೨). ೨. ತದ್ವನಲಕ್ಷ್ಮಿಯ ಮುಂದೆ ಮಂಗಳಂಬಾಡುವ ತುಂಬಿ ಕೋಡುವ ಪುಳಿಲು ನಡೆದಾಡುವ ಹಂಸೆ ರಾಗದಿಂದಾಡುವ ಸೋಗೆ (ಕ್ಶಾ. IX-1. ೨೬೬-೨೩; 1160); ಪುಳಿಲೆಡೆಯಿಂದ ಹಂಸಿಯುತ್ತುಂಗ ಕೊಳನ ಪೊಗುವಂತೆ (ಅನಂತ. ೩-೬೯). [?./ಸಂ. ಪುಲಿನ]

**ಪುಟಿಲ್ಗಟ್ಟು** (ಕ್ರಿ). ಮರಳಿನ ಸಾಲಾಗು; ಮರಳಿನ ಕಟ್ಟೆಯುಂಟಾಗು: ಮೊದಲೊಳ್ ವಾಗ್ದೇವಿಯನೊಲಿಸಿದ ತಿಲಕಂ ತಾನಿದೆನಿಪ ತಿಲಕಂ ನಭಸ್ಥ ದಿನೇಸಿಯುಲವು ಪುಟಿಲ್ಗಟ್ಟಿದ ಗಂಗೆಯ ಪೊನಲನನಿಸುಸನುಕರಿಸಿರ್ದಂ (ಶಾರಂಭ. ೭೪೦); ಕರ್ಪೂರದ ರಜದ ಜಗುಲಿಯೊಳ್ ಜಗುಟ್ಡಾ ಮುಡಿಯ ಮುಗುಳ್ಗಳೀ ಕಡೆಯುಕ್ಕಿಯುಮುದಜ ಕೆಲದೊಳ್ ಕೆಟಗೆ ಪುಟಿಲ್ಗಟ್ಟಿದ ಮುತ್ತಿನ ಪುಡಿಯ ನುಣ್ಮಳಲೊಳ್ (ಲೀಲಾವ. ೦೦-೬೩ ವ). [ಪುಟಿಲ್₂+ಕಟ್ಟು₁]

**ಪುಟಿಲ್ದಾಣ** (ನಾ). ಉಪವನ ; ನಂದನ : [ಊರೂರೊಳ್ ಪ]ರಿಪಕ್ವ ಶಾಳಿವನಮೂರೂರೊಳ್ ಪುಟಿಲ್ದಾಣಮೂರೂರೊಳ್ ಪತ್ತಿರ್ದರ್ದ ಪೂಗೊಳಗಳೂರೂರೊಳ್ ಮಹೋದ್ಯಾನಂ . . . ಎನೆ ಪೇಟಾರ್ ಮೆಚ್ಚರಾ ದೇಶಮಂ (ಶರ್ಮಾ. ೧೧-೬). [ಪುಟಿಲ್₂+ತಾಣ]

**ಪುಟಿಲ್ದೊಡಿ** (ನಾ). (ಒಣಗಿ) ಮರಳಿನಿಂದ ತುಂಬಿದ ಹೊಳೆ : ಪೆರ್ದೊಡಿ ಕಾಲ್ದೊಡಿಯುಂ ಕಿಱುದೊಡಿ ಪುಟಿಲ್ದೊಡಿಯುಮಪಾಯ್ತು ನಾಡುಂ ಕಾಡುಂ ಬೀಡುಂ ಸೂಡಿಂ ಸೀಕರಿವೋಯ್ತು (ರಾಮಾಶ್ವ. ೩೭-೦). [ಪುಟಿಲ್₂+ತೊಡಿ₂]

**ಪುಟಿಲ್ವಜ್ಜೆ** (ನಾ). ಮರಳಿನ ಮೇಲೆ ಮೂಡಿದ ಹೆಜ್ಜೆ : ದುರಿಯುಂ ಮಿಱುರ್ದ ನೀರೊತ್ತಿಲ್ತರೆ ತೊಡಿಗೆಲ್ಲಂ ಪುಟಿಲ್ವಜ್ಜೆ ಮೆಯ್ದೋಱಿರೆ ಸ್ವೈಪಾಳಂ ಮಳಲ್ದಿಂಟೆಗಳೆಸೆಯೆ . . . ತಿಳಿದತ್ತಂದು ಸಿಂಧುಪ್ರತಾನಂ (ಶಗು. ೪-೬೨). [ಪುಟಿಲ್₂+ಪಜ್ಜೆ]

**ಪುಟಿವಾಳಬಾಟ್** (ನಾ). ಒಂದು ಊರಿನ ಹೆಸರು : ಶ್ರೀಮುತು [ಪು]ಟಿವಾಳಬಾಟ ಗ್ರಾಮ (ಕ್ಶಾ. IX-i, ೨೪-೦೯ ; 936). [ ? ]

**ಪುಟು**, ಪುಳು, ಹುಳ, ಹುಳಂ, ಹುಟು (ನಾ). ೧. ಕ್ರಿಮಿ; ಕೀಟ : "ಕೃಮಿಃ, ಕೀಟಃ, ನಿ ಲಂಗುಃ, ಪುಲ್ಲಕಃ__ಈ ೪ ಪು[ಹು]ಟು" (ಪರ್ಯಾ. ೦೦೩-೦೪); ಇತ್ತೊದಾನಟಿಪ್ಪೊನ್ ಪಞ್ಚಮಹಾಪಾತಕನಕ್ಕುಂ[ಕ್ಕುಂ] ಏಟನೆಯಾ ನರಕದಾ ಪುಟು ಆಕು[ಕ್ಕು]ವರ್ (ಇಎ. ೫. ೬೦-೪ ; 578); ಜಾಗದೊಳ್ಪಿನಚೊತ್ತದೆ ಮಾಣ್ದು ಬಾಳ್ವ ಪುಟುವಾಸನನೆಂಬನ ಜಾಡಮೆಂಬುದೊಂದಸ್ತಿಯ ಪಡ್ಡೊಳ್ಪರ್ ಪುಟುವಲ್ಲದೆ ಮಾನಸನೇ (ಶಂಕರಾ. ೩-೬೩); ನೀರಂ ಸೋಧಿಪುದಿಂಬಾಗಾರ್ಕೆವುದು ಪುಳ್ಳಿ ಬೆರಟಿ ಯೊಳಗಣ ಪುಟುಪಂ ಸಾರ್ಕೆಸುವಲ್ಲಿ ದಯೆಯಿಂದಾರ್ಕೆವುದೆನಿಪ್ಪ ಮನೆಗಳಲ್ಲವೆ ತೀರ್ಥಂ (ಸಮಚ. ೬-೯೯). ೨. (ಅಲಂ) ಕ್ಷುದ್ರವಾದುದು : 'ಪುಟು ವಗೆ' ಪರಾ. **ಪುಳು :** ೧. ಬಳಕೆ ಪಣ್ಣುಮಟದೊಳ್ಪುಳುವಾಗಿ ನವೆಗುಂ (ಎಕ. VIII, ಸಗ. ೬೦-೦೦ ; 897) ; ಭೂರಿಭೂಜಂ ಪುಳು ಖಗಪ್ರ್ಯಗ ವಾಗುತ್ತುಮೆಂತಕ್ಕೆ ಬಂದೆಂ ನರಜನ್ಮಕ್ಕೆಯ್ಯ (ರತ್ನಾಕ. ೨); ಇಂದ್ರಗೋಪದ ಪುಳುವುದುಂದುವು (ಪೋಶಕ. ೪-೩೬). ೩. ಕ್ಷುದ್ರವ್ಯಕ್ತಿ ; ಕ್ಷುಲ್ಲಕನಾದ ವನಂ : ದ್ರುಪದ ವಿರಾಟರೆಂಬೀ ಪು[ಹು]ಳುಗಳುವರಂತೋರೆಗೆಡ ದರು (ಕುಮಾರ. ೨-೪೦). **ಹುಳ :** ೧. ಹೊನ್ನ ಹುಳವ ಕಂಡು ನರಿ ತನ್ನ ಬಾಲವ ಹುಣ್ಣು ಮಾಡಿಕೊಂಡರೆ ಹೋಲ ಬಹುದೆ (ಬಸವ. ೨೬೬); ಒಂದು ಹುಳವು ಕಾಣಿಸಿಕೊಳ್ಳಲು ಆ ರಾಮನು . . . ಈ ಹುಳವಾದರೂ ತಕ್ಷಣನಾಗಿ ಕಚ್ಚಲಿ' ಅನ್ನಲು (ಕೃಷಾ. ೬೬); ಒಂದು ಸಣ್ಣ ಹುಳವಾದರೂ ಈ ಮನೆಯ ಕರ್ತನಾದ ದೇವರಿಂದ ರಕ್ಷಿಸಲ್ಪಡದೇ ಇರುವುದಿಲ್ಲ (ಮುಂಬಯಿ. ೪-೩೯); ಅತ್ತೀಯ ಹಣ್ಣು ಅತಿ ಕೆಂಪು ಇದ್ದರು ಒಡೆದು ನೋಡಿದರ ಹುಳ ಭಾಳ (ನಡ. ೦೨೯). **ಹುಳು :** ೧. ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬಿ. ೦೩-೦೬); ಜೇನ ಹುಟ್ಟಿನ ಹುಳುವ ಬಡಿದ ಸಗಾನತನ ತಾನೇನು ಚೂಣಿಯ ಸೇನೆಗೋನೆಯು ಸವಟಲಾಯಿತೆ ಶೌರ್ಯಸಿರಿ ನಿನಗೆ (ಕುಮಾ.ಭಾ. ೮-೩೯); ಮನದ ಕರಿನೆರೆಯ ಹುಳುಗಳೆಲ್ಲ ಹೊತ್ತೇರಿ ನಿದ್ದೆ ಹಿಳಿಯೆ (ಅಕಳ. ೦೯೦-೨); ಒಂದು ಎಲೆಯಂತೆ ಇನ್ನೊಂದಿಲ್ಲ. ಕೆಲವನ್ನು ಹುಳುಗಳು ತಿಂದಿವೆ, ಕೆಲವಕ್ಕೆ ಕಜ್ಜಿ (ರಾಮಾಶ. ೦೦೩). ೩. ಅವ ಬಲ್ಲವ ನಿನ್ನ ಮಹಿಮೆಯನಾವ ದೇವರು ನೆನೆಯಬಲ್ಲರು ಜೀವರಾಶಿಯೊಳೊಂದು ಹುಳು ತಾನೇನ ಬಲ್ಲವನು (ಸಂಕ್ಷ. ೬-೮೬). ೪. ಹಾವು; ಸರ್ಪ : ಕಡಿಕ ಹುಳು ಕಚ್ಚಿತು ಮಗನಂ (ಐಶ್ವ. ೪೮-೯). **ಹುಟು :** ೧. 'ಪಡ್ಬಿಂದು ಹುಟು' ಪರಾ.

**ಪುಟು ಪತ್ತು, ಹುಳ ಹತ್ತು, ಹುಳು ಹತ್ತು** — ೧. ಹುಳುಂ ಹಿಡಿ ; ಹುಳುವುಂಟಾಗು : ಅದಱಡಗು ಮುಗ್ಗಿ ಪುಟು ಪತ್ತಿಡೊಡಾಱಲ್ ಪರವೆ ಕಾಗೆಯುಂ ನಾಯುಂ ಮುಟ್ಟದುದನೆ ಶುದ್ಧಮಂ ಮಾಱ್ಪುದನಿಂತೆಂದೋದಿದರ್ ಪುರೋಹಿತರೆಲ್ಲರ್ (ಧರ್ಮಾಮೃ. ೩-೩೩) ; ಚೀಲದಲ್ಲಿದ್ದ ಕಾಳಿಗೆ ಹುಳ ಹತ್ತಿ ಹಾಳಾಗಿವೆ (ರೂಢಿ); ಗಿಡಕ್ಕೆ ಹುಳು ಹತ್ತಿದೆ (ರೂಢಿ). ೨. ಹಾಳಾಗು; ನಿಸ್ಸತ್ವವಾಗು : ವಂಚಕರಿಗಾದರೂ ... ಮೋಸ ಮಾಡಿದ ಗಳಿಗೆಯಿಂದ ಅವರ ವಿವೇಕಕ್ಕೆ ಹುಳ ಹತ್ತಿಬಿಡುತ್ತದೆ (ರೂಬಾಯಿ. ೬೪). **ಹುಳ ಹುಪ್ಪಡಿ ಹುಳು ಹುಪ್ಪಟೆ, ಹುಳು ಹುಪ್ಪಡಿ** = ಕ್ರಿಮಿ ಕೀಟ : ಹುಳ ಹುಪ್ಪಡಿ ಮುಂತಾದವುಗಳು ಕಾಣಿಸದೆ, ಹೊಟ್ಟೆಯೊಳಗೆ ಹೋಗಿ ಬಾಧಿಸುತ್ತವೆ (ಮುಂಜಾವು. ೩-೦೭೨) ; ಮನೆಯನ್ನು ಪರಿಶುದ್ಧವಾಗಿಟ್ಟುಕೊಳ್ಳುವುದರಿಂದ ಹುಳು ಹುಪ್ಪಟೆಗಳು ಸೇರಲು ಅವಕಾಶವಿರುವುದಿಲ್ಲ (ಗೃಹಶಾ. ೦೩೨) ; ಹುಪಾರು, ಹುಳು_ಹುಪ್ಪಡಿ ಇದ್ದೀತು (ಮಹಾಕ್ಷೇತ್ರ. ೯೭); ಮಣ್ಣು ಹುಳು ಹುಪ್ಪಡಿಯ ಅನ್ನ. ಹುಳು ಹುಪ್ಪಡಿ ಹಕ್ಕಿ ಪಕ್ಕಿಗಳ ಅನ್ನ (ಶಿಕಾರಿಯಂ. ೩೩) [ದೇ. ೩ ತಮಿ. ಮಲ. ಪುಟು ; ತುಳು. ಪುರಿ ; ಕೊಡ. ಪುಳು ; ತೆಲು. ಪುರುಗು, ಪುರ್ಗು, ಪುರುವು, ಪುರ್ವು, ಪುರುವ್ವು; ಕೋಲಾ. ನಾಯ್ಕಿ. ಪುರ್ರ; ಗೊಂಡಿ. ಪುರೀ; ಪರ್ಜಿ. ಪುರುತ್; ಗದಬ. ಪುಡುತ್; ಕುವಿ. ಪಿರು]

**ಪುಟುಂಕು** (ನಾ). ಕೊಳೆ ; ಪಿಚ್ಚು ; ಪಿಸುರು : 'ಕಣ್ಪುಟುಂಕು' ಪರಾ. [←ತುಳು. ಪುಳ್ಕು, ಪುರ್ಕು]

**ಪುಟುಕ**, ಹುಳುಕ (ನಾ). (ಅಲಂ) ಕ್ಷುದ್ರನಾದ ವ್ಯಕ್ತಿ ; ಕ್ಷುಲ್ಲಕ ಮನುಷ್ಯ ; ಕೀಳಾದವನು : ಪರನ್ಯಪರನಲ್ಲದೀ ಪುಟು[ಕಾಹಂ. ಟು] ಕರೆಸೆಱಿವುದೆ ಮಾದ್ಪುಜಾಸಿ (ಧರ್ಮಾಮೃ. ೨-೩೯). **ಹುಳುಕ** ಶಿಭವಿ ಹೆಣ್ಣುಗಳ ಕೊಡುಂಡ ಬಾಯ ಹುಳುಕ ನಾನಯ್ಯ (ವಚನ. I, ೨೬೬-೬) ; ಆ ಹುಳುಕರನ್ನು ಕೊಲ್ಲುವುದಕ್ಕೂ ಅವನು ಹೇಸಿದನು (ಕಾವ್ಯಸ. ೬೨). [ಪುಟುಕು + —ಅ₅]

**ಪುಟುಕು**, ಹುಳುಕು (ನಾ). ೧. ಹುಳು ಹಿಡಿದ ವಸ್ತು ; ಹುಳು ತಿಂದು ಕೆಟ್ಟುದು. ೨. ಹುಳು ಹಿಡಿದಿರುವಿಕೆ; ಕೆಟ್ಟುಹೋಗಿರುವ ಸ್ಥಿತಿ. ೩. ಕ್ಷುದ್ರತನ ; ಕ್ಷುಲ್ಲಕಸ್ವಭಾವ : 'ಪುಟುಕ' ಪರಾ. ೪. ಹುಣ್ಣು ; ವ್ರಣ : (೬). (ಗು). ೫. ಕ್ಷುದ್ರವಾದ ; ನೀಚವಾದ : ಎನಗಪ್ಪೊಡೆ ಮುನ್ನಿನ ಜವ್ವನಮುಂ ಲಾವಣ್ಯಮುಂ ವಿಳಾಸಮುಮಿಲ್ಲೀ ಪಾತಯಿರಲೋಪೋ ಪೆರ್ಗಣಮನಿಕ್ಕಿ ಮನೆವಾಡು ವಂದಮಕುಂ ಕಡೆಯೊಳ್ [ಎಂದು ತನ್ನ ಪುಟುಕುಮನದಿಂ]ದಿರಿಸಿ

ಕೊಳ್ಳಲಣ್ಮದೆ ವ್ಯಾಳಿಯೆಂಬ ಕುಂಟಣಿಗೆ ಮಾಱುವುದಂ (ರವಾಸಾಪ್ಸ. ೩-೧೨೩). **ಹುಳುಕು :** ೧. ಬಲ್ಪವತ್ರವಂ ಹುಳುಕುಯಿಲ್ಲದೆ ಕೋಮಲವಾಗಿ ಯಿರುವುದಂ ನೋಡಿ ಸಂಗ್ರಹಿಸಿ ನನಗೆ ಸಮರ್ಪಿಸಲು ಕೋಟಿಯಜ್ಞವಂ ಮಾಡಿದ ಫಲವು ಲಭಿಸುವುದು (ಶಿಗಂಧಿ. ೩೯೦-೩); ಮಕ್ಕಳ ಮನಸ್ಸು . . . ಹುಳುಕು, ಕೊಳಕಾಗಿ, ತೇಜೋಹೀನವಾಗಿ ಅಪವಿತ್ರವಾಗಬಹುದು (ಶ್ರುಹಾ. ೪). ೩. ಖಳರ ಹೃದಯದ ಕಾಳಕೂಟದ ಹುಳುಕು ಬಲ್ಲರೆ ಮಾನ್ಯರು (ಕುವ್ಯಾಸ. ೧೩-೧೪); ಹೊಳಲು ಬೇವಂದಿವನ ಮಂದಿರವಿದು ದಂದೇ ಅಱಿತೆ ನಿನ್ನಯ ಹುಳುಕನೆಲವೋ ನಿನ್ನ ರಾಮನ ಕೊಂಡು ಬಾಯೆಂಬೆ (ಕಾಶಿರಾ. ೦೪-೩೪). (ನಾ). ೬. ಕುಂದು; ದೋಷ; ಲೋಪ; ತಪ್ಪು : ಭ್ರಷ್ಟನಾದ ನೀನು ಮತ್ತೊಬ್ಬರ ಹುಳುಕನ್ನು ಹುಡುಕಿಕೊಂಡು ಹೋಗುತೀಯೆ (ಹಿತಿಹಂ. XIII. ೦೬); ಕುಳಿತರೆ ನಿಂತರೆ ಹುಳುಕನೆ ಬಗೆವೆ (ಒಲುಮೆ. ೨೬-೭). [< ಪುಟು]

**ಪುಟುವಗೆ,** ಪುಳುವಗೆ (ನಾ). ಹೀನವಾದ ವಿಚಾರ; ಕ್ಷುದ್ರವಾದ ಯೋಚನೆ : ಕೃತಾಂತಂ ಬಗೆದಂ ಪೆಱತೊಂದನಾರ ಪುಟುವಗೆಯುಮಂ ಬಗೆಯದಿರೆ ನಿರ್ಮಿಸುವಾತಂ ಬಗೆದೊಡೆ ಬಗೆದಂತೆ ಬಗೆದ ಬಗೆ ನಿವಿರ್ದ ಪುದೇ (ಶಾಂತಿಪು. ೩-೧೧); ಇಂತಪ್ಪುದೆಲ್ಲಮಂ ನೀನಱಿದಿರ್ದನ್ನುಮಂ ಸಾಕ್ಷಿ ಮಾಡಿ ನುಡಿಸಿ ಕೆಡಿಸಲ್ಬಗೆದ ನಿನ್ನ ಪುಟುವಗೆ ನಮ್ಮ ಕುಲಮನೆಲ್ಲಮನಟುವ ಬಗೆ (ಹಂಕಕಂ. ೦೭೩-೭); ಬಟ್ಟಿಯಟ್ಟಿ ಬಂದು ಮುನ್ನಂ ಪುಟುವಗೆಗೊಳ ಗಾದಳೆಂದು ಸಾವಾಸಿಗಳಂ ಕಟ್ಟಿಸಿದನೆಲ್ಲಂ ಕಲೆಯಂ ಬಟ್ಟಿಯಟ್ಟಿದನೆಂದು ಪೋದುದಸು ಶಶಿವಂಶಿಪಯಾ (ಅಸಂಪು. ೦೨-೩). **ಪುಳುವಗೆ :** ಪುಸಿ ಪೃಥಿವಿಗೆ ಪುಳುವಗೆಯಾ ಪುಸಿ ನರಕದ ಕಾರಾಗಾರ ಪುಸಿ ಪುಳುವಿನ ಕೊಂಡಕೆ ಸಂಗಮಂ (ಜಯುಳ. ೦೦-೦೦). [ಪುಟು + ಬಗೆ]

**ಪುಟುವಚ್ಚೆ,** ಪುಳುವಚ್ಚೆ (ನಾ). ದುಂಬಿಯ ಹಸುರುಬಣ್ಣದ ರೆಕ್ಕೆ. **ಪುಳುವಚ್ಚೆ :**

**ಪುಟುವಚ್ಚೆಯ ಬೊಟ್ಟು. ಪುಳುವಚ್ಚೆಯ ಬೊಟ್ಟು** = ದುಂಬಿಯ ಹಸುರು ಬಣ್ಣದ ರೆಕ್ಕೆಯ ತಿಲಕ : ಕೇತಕಿಪತ್ರದೋಲೆ ಗುರುಗುಂಜಿಯ ದಂಡೆ ಕಳಾಪಗುಣಂ ಸಯ್ತುಳಮಲ್ಲ ಬಂದಿ ಪುಟುವಚ್ಚೆಯ ಬೊಟ್ಟು ವನಾಂತಪುಷ್ಪದಿಂ ಪೋತ ತುಱುಂಬು (ಮಲ್ಲಿಶಾ. ೪-೯೩); ಪ್ರವಾಳಮಂಜರಿ ಯುವತಂಸಮಚ್ಚ ಪುಳುವಚ್ಚೆ[ಪಾಠಾಂ. ಪರುವಚ್ಚೆ]ಯ ಬೊಟ್ಟಮರಲ್ದೆ ದಿಲ್ಸರಂಮೆರಸಿ ಕಿರಾತೆಯಾದ ಶಿವಮೋಹಿನಿ ರಕ್ಷಿಸಲಬ್ಬುಜಾಂಡಮಂ (ಹರಿಶಚ. ೨-೯೩); ಸೂಡಿದುತ್ಪಳದಳಮಾಲೆ ತಾಳ್ದ ಪುಳುವಚ್ಚೆಯ ಬೊಟ್ಟು . . . ಒಪ್ಪಿರೆ ಪುಳಿಂದಿಯರಾದರಮತ್ರ್ಯಕಾಂತೆಯರ್ (ಕಹಂ. ೩-೪). [ ಪುಟು + ಪಚ್ಚೆ, (< ಪಸ್ಯ) ]

**ಪುಟುವಾನಸ.** ಪುಟುವಾನಿಸ (ನಾ). ಕ್ಷುದ್ರಮನುಷ್ಯ; ಅಲ್ಪನಾದ ವ್ಯಕ್ತಿ : ಸಂಪನ್ನಯೋಗನಿಯೋಗದಿಂದಮರಣ್ಯದೊಳ್ ನೆಲಸಿರ್ದನಾಲ್ ಬನ್ನಮಿಲ್ಲದೆ ದಾಟ್ಟುದೇಂ ಪುಟುವಾನಸಂಗೆನಗಕ್ಕುಮೇ (ಕ.ಕಥಾ. ೪-೧೭); ವಿಶ್ವಮೆಲ್ಲಂ ನಿನ್ನಾಣತಿಯೊಳಿರ್ಪನಂ ಪುಟುವಾನಸರ್ ದೂಱಲಾರ್ಪರೆ! (ರಾಮಾಕ್ಕ. ೨೪-೧): ಪುಟುವಾನಸರ್ ಇನ್ನೆಗಂ ರಕ್ಕಸರೊಳ್ ಪೋರ್ದು ಗೆಲ್ಲಂಗೊಂಡುದುಂಟೇ! (ಕದ್ಯುಕ. ೪೭-೨೨). **ಪುಟುವಾನಿಸ :** ಪದಪದನಾಗಿ ಪಾಂಗಱಿದು ಬರ್ದಯರಂ ತನಗಾಗುಮಾಡಲಾಱದೆಯುಮುಲಂಪು ಪೋಗೆ ಕುಡಲಾಱದೆಯುಂ ಬಸವಂ ನಿವರ್ಚಲಾಱದೆಯುಮುದೆಂತೊ ಕೆಮ್ಮನೆ ಕೆಲರ್ ಪುಟುವಾನಿಸರಕ್ಕಟಾ ಚದುರ್ ಚದುರೆನುತಿರ್ಪರ್ (ಸೂಕ್ತಿಸು. ೬-೩೭೩). [ಪುಟು + ಮಾನಸ್ಯ (< ಮನುಸ)]

**ಪುಟುವಾನಿಸ** ' ಪುಟುವಾನಸ ' ನೋ.

**ಪುಟ್ಟೊಲೂರ್** (ನಾ). ಒಂದು ಊರಿನ ಹೆಸರು : ಪುಟ್ಟೊಲೂರ್ ದೋಯಪ್ಪ ಪುತ್ರ ವಾಸುಕಿಪರ್ಮಗಾ (ಎಕ. VII. ೦೯೭-೩೦ ; ೬೬೮). 'ಪುಟಲೂರ್' ಪಠಾ. [? + ಊರ್]

**ಪುಟ್ಗು,** ಪುಗ್ಗು, ಪುರ್ಗು, ಪುಳ್ಗು, ಪುಳ್ಗ, ಹುಗ್ಗಿ, ಹುಗ್ಗೆ (ನಾ) ೧. ಅಕ್ಕಿಯೊಡನೆ ಹೆಸರು ಮೊದಲಾದ ಬೇಳೆಗಳನ್ನೂ ಇತರ ಪರಿಕರಗಳನ್ನೂ ಸೇರಿಸಿ ಮಾಡಿದ ಕಾರ ಅಥವಾ ಸಿಹಿಯ ಒಂದು ಬಗೆಯ ಅನ್ನ; ಪೊಂಗಲ್ : "ಪುಟ್ಗು — ಉದರ್ಗ ತೊವರಿ ಹೆಸರು ಮೊದಲಾದುವನಿಕ್ಕಿ ಅಟ್ಟ ಕೂಟು" (ಶಮದ. ಕಂ. ೨೯೯); "ಪುಟ್ಗುಯೆನಲ್ ಮುದ್ಗಾನ್ನಂ" (ಕರ್ಣಾಕ. ೭೩); ಕಱಿಕಱಿದಾಗಿರೆ ಮೆಯ್ಯಂ ಕೊಱಕೊಱದುಂ ಪುಟ್ಗುಯುಟ್ಟು . . . ಕಿಚ್ಚನೊಳಿಡುವರ್ (ರವಾಸಾಪ್ಸ. ೩-೭೪); ಇದು ಮೊದಲಾಗೆ ಬನ್ನನೆ ನಿನ್ನನೆ ಕರೆವೆಡೆಯೊಳಂ ತಿಂಬ ಪುಟ್ಗುಯೊಳೊಗ್ಗರಿಸಿದ ಕಡಲೆಯಂತೆಡೆಗೆಡೆಗೆ ಬಾಯ್ಗೆಱುವಂದಪುದ್ದೆಸೆ (ರಾಮಾಕ್ಕ. ೦೩೪-೦೩). **ಪುಗ್ಗು :** ೧. ಪುರ್ಗು — ಪುಗ್ಗು (ಶಮದ. ೨೭೦ ಪ್ರಯೋ); ಮಳಲ ಪುಗ್ಗುಯೊಳಱಸುವರೆ ಕಲ್ಗಳನು ನಿಂಬೆಯ ಪಣ್ಣನೊಳು ಕಡುಪುಳಿಯ ನೋಳ್ಪರೆ ಬೇವಿನೊಳು ಕಹಿಯಂ ವಿಚಾರಿಪರೆ (ಕಂಠರಾ. ೬-೬). **ಪುರ್ಗು :** ೨. (ಉಕ) ಗೋದಿಯನ್ನು ನೆನಸಿ ಬೆಲ್ಲದೊಡನೆ ಕುದಿಸಿ ಮಾಡುವ ಪಾಯಸದಂತಹ ಒಂದು ಬಗೆಯ ಪಕ್ವಾನ್ನ : ತನ್ನುರು ರಸನೆಗುರು ಸವಿಯದಾಗಲಾ ಪುರ್ಗುಯು ಮುಟ್ಟಿ ಸದ್ವಸ್ತ್ರದಿಂದೆ ವರ ಭೀಮನಾಥಗೀ ಯೆಂದು ತೊಳ್ಸಿನ ಕೆಯ್ಯೊಳಿರದಿತ್ತು ಕಳುಪಲು (ಕುಮಾರಪು. ೪-೩೦). **ಪುಳ್ಗು :** ೨. ಪುಳ್ಗುಯಂ ತಂದು ತಮ್ಮವರು ಪೊಂಬಟ್ಟಲೊಳು ನೀಡಿಯುಣಲೇದು ಕೊಟ್ಟೋಸರಿಸಿ ಪೋಗಲು (ರಾಕಥ. ೦೨-೩೦); ಪುಳ್ಗುಯನದಂ ಸದ್ವಸ್ತ್ರದಿಂ ಮುಚ್ಚಿ ಭಾಳಾಕ್ಷಂಗೀವುದನುತ್ತೆ, ಚೇಟಿಯ ಕರಾಂಭೋಜಾತದಿಂದಟ್ಟಿದಳ್ (ವೃಕಪು. ೨೨-೦೨). **ಪುಳ್ಗೆ :** ೧. ಮಾಡಿದ ಪುಳ್ಗೆ ಕಜ್ಜ ತೊಗೆ ತುಪ್ಪುಡೆ . . . ಇಂತಿವರ ಭೋಜನಕಾರ್ಗುಱಿಯ್ಯೆ ಮದೀಶ್ವರಾ (ಹಾರಾಸ್ಕ. ೦-೮-೩). **ಹುಗ್ಗಿ :** ೧. ಬೇಯದ ಹುಗ್ಗಿಯನುಂಬ ಕಾದ ನೀರ್ಗುಡಿವ ಬಯಲ್ಗಳೊಳ್ ಪಡುವ ಬೇವಸಮೋಲಗಿಮಂಗೆ ದುಡಿನೊಳ್ (ಸೂಕ್ತಿಸು. ೦೮-೩೦); ಕಾರ ಹುಣ್ಣಿಮೆಯು ದನಗಳ ಹಬ್ಬ. ಅದು . . . ಎತ್ತು ಮೊದಲಾದವುಗಳಿಗೆ ಹುಗ್ಗಿಯನ್ನುಣಿಸುತ್ತಾರೆ (ಕನ್ನಜಾ. ೦೭೯). ೨. ಹೋಮದ ಹುಗ್ಗಿಯ ತಿಂದಾ ದೇವರ್ಕಳ ನೆಱ ಹೊಡೆದು (ಬಸವ. ೨-೦೩); ಹುಗ್ಗಿಯು ತುಪ್ಪವು ಮನೆಯೊಳಗಿರಲಿಕ್ಕೆ ಗುಗ್ಗುರಿಯನ್ನುವ ತಿಂದ್ಯಲ್ಲೊ ಪ್ರಾಣಿ (ಪುರಂದ. ೦-೮೭-೨); ಹುಗ್ಗಿ ಕಿಚ್ಚಡಿಯೆರೆಯುಪ್ಪ ಸೇವಗೆ ಹಿಂಡಿ ಗುಗ್ಗುರಿ ಸೂಸಲುಂಡಲಿಗೆ . . . ಬಗ್ಗೆಯಾಹುತಿಯೊಪ್ಪುತಲ್ಲಿ (ಕರಪ. ೨೦-೦೨೬). **ಹುಗ್ಗೆ :** ೧. ದೇವರ ಹಿಟ್ಟು ಹುಗ್ಗೆ ತಱಗೇನು ಬಿಟ್ಟು (ಎಕ. VI. ತಿಕ್ಕೆಮ. ೯೮-೦೪ ; 1649). [ < ಪುಟ್ಗು ]

**ಪುಟ್ಗು,** ಪುಗ್ಗು1, ಪುರ್ಗು (ಕ್ರಿ). ೧. ಸುಡು; ದಹಿಸು : "ಪುಟ್ಗು— ದಹನಕ್ರಿಯಾಯಾಂ (ಉರಿಸು)" (ಶಮಧಾ). ೨. ಸುಟ್ಟು ಹೋಗು : ಪೊಗೆ ಪುಗೆ ಕಣ್ಣಂ ಕಿಂಗಂಗಳಳುರೆ ಗರ್ಜಿಸಿ ಲಂಗಿಸಿ ಪುಡುಪುಡನೆ ಪುಟ್ಗಿ ಸತ್ತುವು ಪಲವುಂ (ಶಂಕಪು. ೩-೯೨). **ಪುಗ್ಗು1 :** ೨. ಸುಡುಮಿಡುಮಂದು ನಡನಡನಡುಗಿ ಮಿಡು ಮಿಡುಮಿಡುಕಿ ಪುಡುಪುಡು ಪುಗ್ಗಿ ತಡತಡದಡಿಸಿ ಬೀಟುತ್ತುಮೋಟುತ್ತುಂ (ಅಜಪು. ೦೦-೦೦ ವ). **ಪುರ್ಗು :** ೨. ಪುಡುಪುಡನೆ ಪುರ್ಗಿ ಜೋಲ್ದುಬಲ್ಮಡಗಾಗಿ ಸುರುಳ್ದು ಸುರುಳ್ದು ಬಾಯ್ಬಿಟ್ಟಿರಲ್ಕಂ (ಸುಕುಮಾ. ೩-೦೩).

[ದೇ. II ತಮಿ. ಪುಟುಜ್ಕು, ಪೊಚುಜ್ಕು, ಪೊಚುಕ್ಕು ; ಮಲ, ಪುಟುಕ್ಕು, ಪುಟುಕು, ಪುಟುಙ್ಙು]

**ಪುಟ್ಟಿ** (ನಾ). ಒಂದು ವಂಶದ ಹೆಸರು : ಪೇರಮಾಸರು . . . ಬೆಳ್ಳಿಮಂಗಿಯರುಂ ಸನ್ನಿಗಾಲು . ಪುಟ್ಟಿರುಂ ಬಟ್ಟವರುಂ ಮಸುನ್ನಾಯ ಕಬಿಕ್ಕುಶಕು ಬಿರದರುಂ ಈ ಪೊಲನಂ ನಡಯಿಸಿದೋರ್ (ಎಕ. XVI. ಗುಬ್ಬಿ ೭೩-೩೯ ; 733). [ ? ]

**ಪುಟ್ಟಿ** 'ಪುಷ್ಪ' ನೋ.

**ಪೂ₁**, **ಹೂ₁** (ಕ್ರಿ). ಪೂತ₁, ಹೂತ₁ (ಭೂತಕೃ) ; ಪೂತು₁, ಹೂತು₁ (ಭೂತನ್ಯೂ) ; ಪೂವ₁ (ಭವಿಕೃ). ೧. (ಮರ, ಬಳ್ಳಿಗಳು) ಹೂವಿನಿಂದ ತುಂಬು ; ಹೂವು ಬಿಡು : "ಪೂ—ಪುಷ್ಪಸಂಭವೇ. ಪುಷ್ಪೇ ಚ" (ಶಮು೩) ; ಎಯ್ದೆ ಪೂತು ಕಿಕ್ಕಿಱಿಗಿಱಿದಿರ್ದ ಪಾದರಿಯುಂ . . . ಒಪ್ಪಿ ತೋಱುಗು[ಂ] (ಎಕ. XIII. ೩೩೦-೨೬ : ೯೨೯) ; ಮನದೊಳಲಂಪನಾಳ್ದಿಸಿಯುನಟ್ಟಿದ ದೂದರ ಸೀಯನಪ್ಪ ಮಾತಿನ ರಸದೊಳ್ ಕೊನರ್ವುದು ತಳಿರ್ವುದು ಪೂವುದು ಕಾಯ್ಪುದು . . . ಮನದೊಳ್ ತೊದಳಿಲ್ಲದ ನಲ್ಮೆಯೆಂಬ ನಂದನವನಮೋಪರೊಳ್ ನೆರೆದೊಡಂತು ರಸಂಬಿಡೆ ಪಣ್ಪುದಾಗದೇ (ಕಂಕಾ. ೪-೧೧೨); ಮಱಿದುಂಬಿ ಪೂತ ಚೂತದೊಳೆಱೆ ಗುಗುಮೆಱಗುಗುಮೆ ಸಲ್ಲಕೀಪಲ್ಲವದೊಳ್ (ಶಾಂತಿಪು. ೩-೭೯) ; ಆವ ಮರವಿದು . . . ಸಕಲರಿತುವೊಳು ಪೂವ ಪಣ್ವ ಮರವೇನು ? (ಗಿರಿಜಾ. ೨೮-೩೮). **ಹೂ₁** : ೧. ಎಲವದ ಮರ ಹೂತು ಫಲವಾದ ತೆಱನಂತೆ ಸಿರಿಯಾದರೇನು ಶಿವಭಕ್ತಿಯಿಲ್ಲದವನ್ನಕ್ಕ (ಬಸವ. ೧೨೦); ಹೂತ ಸಂಪಗೆವನವನಳಿಸಂಘಾತ ಮುತ್ತಿವದೇನು (ಕುಮಾವ್ಯ. ೧೩-೮) ; ಎನಿತು ಮಳೆಗರೆದೊಡೇಂ ಹಬ್ಬೆ ಹೂವ್ವದೇ ದೇವ (ಪ್ರಭುರ. ೧೮-೬೦). ೨. ಅರಳು ; ವಿಕಾಸವಾಗು : ಹೆಚ್ಚಿದಾನಂದಾತಿರೇಕಕೆ ಚಿತ್ತ ನೆಱೆಯದು ಹೂತು ಹಿಗ್ಗುವ ಪುಳಕರಾಜಿಗೆ ದೇಹ ಕಿಱಿದು (ಕುಮಾವ್ಯದ್ರೋ. ೦೩-೨).

**ಹೂತ ಹೊಕ್ಕುಳ ಮಗ**=(ಪುರಾಣಗಳಲ್ಲಿರುವಂತೆ, ವಿಷ್ಣುವಿನ) ನಾಭಿಕಮಲದಿಂದ ಹುಟ್ಟಿದವನು ; ಪದ್ಮನಾಭನ ಮಗ ; ಬ್ರಹ್ಮ : ಹೂತ ಹೊಕ್ಕುಳ ಮಗನು ಬಂದನು ತಂದೆಯಿದ್ದೆಡೆಗೆ (ಜೈಭಾಗ. ೬-೦೪-೨೬). [ದೇ. ॥ ತಮಿ. ಮಲ. ಪರ್ಜಿ. ಪೂ]

**ಪೂ₂**, ಪುವ್ವು, ಪೂವು, ಹುವ್ವು, ಹೂ₂, ಹೂವು (ನಾ). ೧. ಅರಳು ; ಮಲರು ; ಕುಸುಮ ; ಪುಷ್ಪ : ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂವುಮಕ್ಕಿಯುಂ ಮಾದುಫಲಮುಂ ಮೊದಲಾಗೊಡೆಯ ನೇಕಾರ್ಚನೆಯಿಂದಿದಿರಂ ಬಂದು ನಿಱಿಸಿ ಬಲಗೊಂಡು ಬಂದು (ವಡ್ಡಾರಾ. ೭೮-೭); ತನ್ಮುನಿಗಳ ಪಾದಪ್ರಕ್ಷಾಳನೋದಕದೊಳ್ ಪೊರಳ್ದು ಪುಷ್ಪವರ್ಷ ಪೂಗಳೊಳ್ ಪುದಿದು . . . ಉಪಶಮಭಾವಮಂ ತಾಳ್ದಿ (ಆದಿಪು. ೩-೨ ವ) ; ಇಂಪಿಲ್ಲದ ಕೇದಗೆಯುಂ ಕಂಪಿಲ್ಲದ ಪೂ ಸುಪುತ್ರನಿಲ್ಲದ ಭವನಂ . . . ಏನೊಪ್ಪುಗುಮೇ (ಅಜಿತ. ೬-೬೨); ಕಂಪುಳ್ಳ ಸಂಪಗೆಯ ಪೂಗಳಂ ತಿಱಿತಂದು ಹೊಂಬಿನಂ ಶಶಿಧರನ ಸಿರಿಮುಡಿಗೆ ಬೇಕೆಂದು (ಬಸರ. ೧-೨೭). ೨. ತಾವರೆ ; ಕಮಲ : 'ಪೂಗೊಳ' ನೋಡಿ. ೩. ಕಣ್ಣುಗುಡ್ಡೆಯ ಮೇಲೆ ಉಂಟಾಗುವ ಬಿಳಿಯ ಚುಕ್ಕೆ ಮತ್ತು ಹಾಗೆ ಚುಕ್ಕೆ ಬಿದ್ದು ಉಂಟಾಗುವ ನೇತ್ರರೋಗ; ಕಾಚ : ಮೋತಿಬಿಂದು : ಅರೆದಂಬಾಗಿರೆ ತಾಱಿಯ ತಿರುಳಂ . . . ಜೇನೆಯ್ಯಂ ಕಪ್ಪುರಮುಂ ಬೆರಸಟ್ಟೆ ಕಣ್ಣ ಪೂಗಳ್ ಕಿಡುಗುಂ (ಲೋಕೋಪ. ೯-೭೭); ಕಣ್ಣೊಳೇನಿ ಪೂ . . . ಎಂದು ಬಾಯಂ ಕಿಸಿದಳ್ (ರಾಮಾಶ್ವ. ೬೭-೨೮). 'ಪೂಗಣ್' ನೋಡಿ. ೪. (ಅಲಂ) ಹಿತವಾದುದು; ಸುಖಕರವಾದುದು: 'ಪೂಗನಸು' ನೋಡಿ. **ಪುವ್ವು** : ೧. ಕಪ್ಪರ ಕೆಸಣ್ಣನ ಮಗಳ್ × ಲಚಿಬದ ಜಟ್ಟಿ ಪುವ್ವ ಶಾಲೆ ಕಂಮಪಳ್ಳಿ ಆಮಾ ಸಾಸಿರ್ವರ್ಗಂ ಸಾಲೆ (ಎಕ. VII, ಶಿಕಾ. ೪೩b-೭ ; ಸು. ೬೯೦ ?); ಪುವ್ವಿ[ಪಾಠಾಂ. ಪೂವಿ]ನೊಳ್ ಕಂಪು (ಛಾಹಾಪು. ೪-೮೯ ಪ್ರಯೋ). **ಪೂವು** : ೧. ಪೂವಿನಂ ಸಮೆದ ಪಕ್ಕಿಯಂದೆಂಬಿನವಾಗಳೊಂದು ಸಾರಿಕೆ ಪರಿತಂದುದು (ಕಾದಂಉ. ೬೦); ಈಕೆಯ ನಳತೋಳಂಗೊಲ್ದು ತಮ್ಮ ಚೆಲ್ವಿಕೆಯಂ ಕಂಡೆಳಲತೆಗಳ್ ಪೂವುಗಳಂ ತಳೆದಿರ್ದುಂ ತಳೆಯದಿರ್ಪುವಾ ಫಲಿನತೆಯಂ (ಧರ್ಮಾಮೃ. ೩-೦೩೩) ; ಪೂಜ್ಯವು, ಪೂಜಕ, ಪೂಜೆಯು, ಪೂವು ರೂಪರೂಪಗಳು ನಾವೂ ನೀವು (ಅರಳು. ೦೭೮-೦೦). **ಹುವ್ವು** : ೧. ಚೆನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮುಂಡೆಗೆ ಹುವ್ವ[ಪಾಠಾಂ. ಹೂವ] ತಾಹೆನಲ್ಲದೆ ಹುಲ್ಲ ತಾರೆನು (ಮಹಾದೇ. ೨.೬೦-೦೪೮); ಹುವ್ವ[ಪಾಠಾಂ. ಹೂವ] ತರುವರ ಮನೆಗೆ ಹುಲ್ಲ ತರುವ ಅವ್ವೆ ಲಕುಮಿಾರಮಣ ಇವಗಿಲ್ಲ ಗರುವ (ಪುರಂದ. ೧-೦೪೭ ಕಲ್ಪ) : ಸುರರು ದುಂದುಭಿ ಮೊಳಗೆ ಹುವ್ವಿ[ಪಾಠಾಂ. ಹೂವಿ]ನ ಅರಳು ಸುರಿದರು (ರಾಮಾಶ. ೩೨-೦೦೭); ನಿನಗೆ ವೈಜಯಂತಿಯೆಂಬ ಒಂದು ದಿವ್ಯವಾದ ತಾವರೇ ಹುವ್ವಿನ ಮಾಲೆಯನ್ನು ಕೊಡುತ್ತಲಿದ್ದೇನೆ (ಕೃಪಾಕ. ೪೪). **ಹೂ₂** : ೧. ಹೂ ಬಾಡಿದಲ್ಲಿ ಪರಿಮಳ ಪನಱಸುವರೆ (ಬಸವ. ೦೨೭) ; ಒಂದರಳು ಮಲ್ಲಿಗೆ ಒಂದು ಹೂ ಮಂದಾರ ಪುತ್ಪಲ ಒಂದು ಚೆನ್ನೆಯ್ದಿಲು ಬಕುಳ ಒಂದೊಂದು ಅರವಿಂದ (ಬಸವು. ೦೯-೬೩). ೨. 'ಹೂಗೊಳ' ನೋಡಿ. ೩. ಆಲಿ ನೋಯದೊ ಕಣ್ಣ ಬೇನೆಯೊ ಮೈಲಗೆಯೊ ಹೂ ಹುಟ್ಟಿದುದೊ (ಬಸವು. ೦೭-೬೭). ೪. (ಕಾಗದ, ಬಟ್ಟೆ, ಬಟ್ಟೆ ಮುಂತಾದುವುಗಳ ಮೇಲೆ ರಚಿಸುವ) ಹೂವಿನಾಕಾರದ ಚಿತ್ರ : ಕರಿಯ ಮಾಯದಿನ ಮೇಲೆ ತಾನೇ ಹೂ ಹಾಕಿದ ಪತ್ತಲದ ಸೀರೆಮೇ ಅಲ್ಲಿರಲಿಲ್ಲ (ಮುಕ್ತ್ಯರ. ೨೪). ೬. ಎಳೆಯದು : ಕೋಮಲವಾದುದು ; ಮೃದು : 'ಹೂಮರಿ' ನೋಡಿ. **ಹೂವು** : ೧. ಸಿರಿಮುಡಿಗೆ ಹೂವನಡಕುತ್ತಮಿರು ನೀನು (ಸಂದಿರ. ೧-೩೩) ; ಕಳಿದ ಹೂವಿನ ತೊಡಬೆಯೋ ಕುಸಿದಲೆಯ ಬಟ್ಟಯ ಭಾರವೋ . . . ನಳಿನನಾಭನ ಮಾತು ಹಿಂಚಿತು ಕಳಚಿದವು ಕೈದುಗಳು (ಕುಮಾವ್ಯದ್ರೋ. ೦೯-೩೮); ಜಡೆಗಳೊಳಗೆ ಮಲ್ಲಿಗೆಯ ಹೂವಿನ ಸರ ಬಿಡದುಟ್ಟ ಸಾಲಿಯ ಸೀರೆ ಕಡುಪರಿಮಳವಾಂತ ದಿವ್ಯಾಂಗದ ಚೆಲ್ವ ಮಡದಿರನ್ನೆಯರೊಪ್ಪಿದರು (ಕಂಸವ. ೨-೯೦) ; ಒಂದಾರ ಕೊಳಲಿಲ್ಲ ಲೋಕದ ಮುಂದಿ ನಿಂದಾವ ಲೋಕದ ಬಲು ಹೂವು ಎಂದೇನೊ (ಜಾನಿಗ. ೨೦-೨೦).

**ಪೂಗಳನಿದು** = ಪುಷ್ಪರಸ ; ಮಧು ; ಮಕರಂದ : "ಮಧು ಮಕರಂದವೆನಲು ಪೂಗಳನಿದಕ್ಕು" (ಮಂಗರಾ. ೩೩-೬). **ಪೂವಿನಂಬು**=(ಮನ್ಮಥನ) ಹೂವಿನ ಬಾಣ: ಮದನನ ಪೂವಿನಂಬುಗಳ ಪೆಣ್ಪರಿಜಂಬ ಬೆಡಂಗನುಂಟುಮಾಡಿದ . . . ರಾಜಕನ್ಯಕೆಯರಂ ಪಲರಂ ತನಯಂಗೆ ಮಾಡಿದಂ (ಮಲ್ಲಿಪು. ೪-೦೪೦); ಆವನ ಪೂವಿನಂಬದಟರಂ ತಲೆವಾಗಿಸುತಿರ್ಪುದು . . . ಆತನೀಗಾವಗಮೆನ್ನ ಜಾಣ್ನುಡಿಗೆ ಮೆಯ್ಸಿರಿಯಂ (ಕಬ್ಬಕಾ. ೧). **ಪೂವಿನ ಪೊಟ್ತು**, **ಹೂವಿನ ಹೊತ್ತು**=(ಸಾಮಾನ್ಯವಾಗಿ) ಹೂವುಗಳು ಅರಳುವ ಸಮಯ ; ಸಾಯಂಕಾಲ : ಆಗಳಾ ಪೂವಿನ ಪೊಟ್ತಿನೊಳ್ ದೇವಕೀನಂದನಂ ಮಾಲೆಗಾಱಗೇರಿಯೊಳ್ ವಿಚಾರಿಸುತ್ತುಂ ಬಂದು (ಜಗಪು. ೬-೦೦ ವ); ಪೂವಿನ ಪೊಟ್ತು ಸಾರ್ವರೆ ಸಿಂಗರಗೈದನುರಾಗದಿಂ ಪ್ರಿಯಂ ಭಾವಜನಮ್ಯಕೇಳಿಗೃಹಮಂ ಪುಗುತಂದು (ಮನ್ಮಪು. ೦೦-೯) ; ಪಗಲೊಳೆ ಚಂದದಿಂ ಮಲಗಿ ಹೂವಿನ ಹೊತ್ತಿನೊಳೆದ್ದು . . . ಒರ್ವಳ ದೊತ್ತೆಗೆಯ್ದುದಳ್ (ಮಲ್ಲಿಕಾ. ೬-೪೮೭) ; ಸರಸಿಜಾಕ್ಷಿಯರು ಹೂವಿನ ಹೊತ್ತಿನೊಳಗಾಗ ಚರಿಸುವರಾ ಬೀದಿಯೊಳಗೆ (ಕಂಸವ. ೬-೦೦೨). **ಪೂವಿನ ಸುಗ್ಗಿ** = ಹೂವುಗಳ ಸಮೃದ್ಧಿಯ ಕಾಲ ; ವಸಂತಕಾಲ : ಪೂವಿನ ಸುಗ್ಗಿಯುಲ್ಲೆ ಪೂಸವೇಟಂ (ಲೀಲಾವ. ೦೪-೪೩). **ಹೂವಾಗು**=೧. ಅರಳು ; ವಿಕಸಿತವಾಗು : ಮುತ್ತುಗನಡುಗೊನೆ ನಿಕರ ಹೂವಾದಂತೆ ನೆತ್ತರ ಬಣ್ಣ ತೋಱಸಲು ಚಿತ್ತಜನಾತ್ಮಸಂಭವನ ಕೀರ್ತಿಸಿದ ಖಳೋತ್ತಮ ಕಡುಮೆಚ್ಚಿ ನಗುತೆ (ಮೋಹತ. ೩೩-೪೦). ೨. ನಲಿ ; ಸಂತೋಷಪಡು : ಹೊಸಮನೆ ಹೂಡಿ ಸುಖಿಸುವ ನನ್ನ ಆಸೆ ಪೂರೈಸಿತೆಂದು ಹಿಗ್ಗಿ ಹೂವಾಗುತ್ತಿದ್ದೆ (ರೂಕಸಂ. ೦೩). ೩. ಮೃದುವಾಗು : ಮಗಳ ಪರಿಸ್ಥಿತಿಯನ್ನು ಕೇಳಿ ತಂದೆಯ ಮನಸ್ಸು ಹೂವಾಯಿತು (ರೂಢಿ). **ಹೂವಿನಕಾರ**=ಹೂವಾಡಿಗ (?) : ಶ್ರೀನಖರೇಶ್ವರದೇವರಲಿ ಮಾಡಿದ ಧರ್ಮ್ಮದ ವಿವರ . . . ಹಬರ ದೇವಸ್ವದ ಗಡಿಯಿಂದಂ ಪಡುವಲು

ತೆಂಕಲು ಮುಖುರು ಕೇಯ್ವ್ಯರ್ ಹಲರ ಹೂವಿನಕಾರ ದುಗಣಸೆಟ್ಟಿಯು ಗಡಿಯಿಂದಂ ಬಡಗಲು ಪಡುವಲು (ಶಾಸ. IX-ii, ೪೯೯–೦೨ : 1433). **ಹೂವಿನ ಕೆಲಸ**=ಕಲ್ಲು, ಮರ, ಬಟ್ಟೆ, ಗೋಡೆ ಮೊದಲಾದುವುಗಳ ಮೇಲೆ ಹೂವು, ಎಲೆ ಮೊದಲಾದ ಚಿತ್ರಗಳನ್ನು ಬಿಡಿಸುವ ಕೆಲಸ : ಕಡಕತ್ತೂರ ಸೇನಬೋವ ರಾಮರಸರ ಮಗ ಲಖಿಯನೂ ಜನಾರ್ದನ ದೇವರಿಗೆ ಹೂವಿನ ಕೆಲಸ ಮಾಡಿಸಿದನು (ಪ್ರಕಂ. ೦೯೩೬, ೬೨–೨ : 1784). **ಹೂವಿನ ಕೋಲು**=೧. ಹೂವಿನಿಂದ ಅಲಂಕೃತವಾದ ಕೋಲು. ೨. ಯಕ್ಷಗಾನ ಬಯಲಾಟಗಳಲ್ಲಿ ಒಂದು ಪ್ರಕಾರ; ☞ ಈ ಕಲೆಯನ್ನು ಅಭ್ಯಾಸ ಮಾಡಿದವರು ಶಿಷ್ಯರೊಂದಿಗೆ ನವರಾತ್ರಿಗೆ ಮನೆ ಮನೆಗೆ ಹೋಗಿ, ಪ್ರದರ್ಶನ ಮಾಡಿ ತೋರಿಸುತ್ತಾರೆ : ಆ ಶಿಷ್ಯರ ಕೈಯಲ್ಲಿ ಬೆಂಡಿನ ಹೂವುಗಳಿಂದ ಅಲಂಕೃತವಾದ ಒಂದೊಂದು ಕೋಲು ಇರುತ್ತದೆ. 'ಹೂವಿನ ಕೋಲು' ಎಂದು ಹೆಸರು ಇದಕ್ಕೆ. ಈ ಪ್ರದರ್ಶನ ಸಂಪ್ರದಾಯಕ್ಕೂ ಹೂವಿನ ಕೋಲು ಎಂದು ಹೆಸರು ಬಂದಿದೆ (ಯಕ್ಷಬ. ೨೦). **ಹೂವಿನ ಪಡಿ, ಹುವಿನ ಪಡಿ** = ಹೂವಾಡಿಗರಿಗೆ ಕೊಡುವ ಸಂಭಾವನೆ : ಶ್ರೀಗೊಮ್ಮಟದೇವರ ಪಾರಿಶ್ವದೇವರಿಗೆ ಪರ್ವನಿಬನ್ಧಿಯಾಗಿ ಹೂವಿನ ಪಡಿಗೆ ಜಾತಿಹವಳಕ್ಕೆ ಕೊಲೆಗೆ ತಾ ೧ . . . ಯಿದ ಆಚಂನ್ದಾರ್ಕ್ಕರ್ ಕಾರಂಬರು ಸಲಿಸುವರು (ಎಕ. II, ೨೪೦–೨ ; ಸು. 1175) ; ಶ್ರೀ ಗೊಮ್ಮಟದೇವರಯರ್ಚ್ಚನೆಗೆ ಹುವಿನ ಪಡಿಗೆ ಶ್ರೀಮನ್ಮಹಾಮಣ್ಡಲಾಚಾರ್ಯ್ಯರು (ಎಕ. II, ೨೬೬–೬ ; 1198 ?). **ಹೂವಿನ ಮಕ್ಕಳ ಕುಣಿತ** = ಒಂದು ಜಾನಪದ ಕಲೆ ; ☞ ಇದರಲ್ಲಿ ಕಲಾವಿದರು ಜಾತ್ರೆಯ ಸಮಯದಲ್ಲಿ ಕೆಂಪು ಹೂವಿನಿಂದ ಉದ್ದವಾದ ಮಾಲೆಯನ್ನು ಕಟ್ಟಿ ತಲೆ, ಕೊರಳು, ಮುಂಗೈ, ತೋಳು ಮೊದಲಾದುವುಗಳಿಗೆ ಹೂವಿನ ಅಲಂಕಾರ ಮಾಡಿ ಕೊಂಡು, ಹೂವಿನ ಹಾರ ಸುತ್ತಿದ 'ಅಂಬುಗತ್ತಿ'ಯನ್ನು ಹಿಡಿದು, ಕಲಶಗಳನ್ನು ಹೂವಿನಿಂದ ಸಿಂಗರಿಸಿ, ಡೋಲಿನ ಬಡಿತಕ್ಕೆ ಸರಿಯಾಗಿ ಗೆಜ್ಜೆ ಕಟ್ಟಿ ಹೆಜ್ಜೆ ಹಾಕುತ್ತಾ ವೃತ್ತಾಕಾರವಾಗಿ ಕುಣಿಯು ವರು : ಉತ್ತರಕನ್ನಡಜಿಲ್ಲೆಯಲ್ಲಿ ವಾಸವಾಗಿರುವ 'ಪಟಗಾರ'ರಲ್ಲಿ ಮಾತ್ರ ಕಂಡುಬರುವ ಕಲೆ 'ಹೂವಿನ ಮಕ್ಕಳ ಕುಣಿತ' (ಕಜಕ. ೦೫೦). **ಹೂವಿನ ಮಳೆ**=ಪುಷ್ಪವೃಷ್ಟಿ : ನಳನೃಪನ ಕರೆಸಿದರು ಹೂವಿನ ಮಳೆಯು ಕರೆದರು ದೇವದುಂದುಭಿ ಮೊಳಗಲರಸನ ಕೊರಳಿಗಿಟ್ಟರು ಪುಷ್ಪಮಾಲಿಕೆಯ (ನಳಚ. ೩–೬೭). **ಹೂವಿನ ಹಬ್ಬ** = ವಸಂತಕಾಲ : "ಹೂವಿನ ಹಬ್ಬ ಸುಗ್ಗಿ ಬಂದುದು ಬಸಂತಂ ದಲೆಂದೆನೆ ವಸಂತಕ್ಕೆ ಮಿಸುಗುವ ಪೆಸರ್" (ಶಬ್ದಸ್ಮೃ. ೦೭) ; "ಹೂವಿನ ಹಬ್ಬವೆಂದು ಸುಗ್ಗಿಯು ಬಸಂತನುಮೆಂದು ಪೆಸರು ತಾನೊಂದುಗು ವಸಂತಾಖ್ಯದಲ್ಲಿ" (ಕಬ್ಬಿಗ. ೨೦). **ಹೂವಿನ ಹಾಸಿಗೆ**= ೧. ಹೂವುಗಳಿಂದ ಮಾಡಿದ ಹಾಸುಗೆ ; ಪುಷ್ಪಶಯ್ಯೆ : ಶಶಿಕಾಂತ ವೇದಿಕೆಗಳಲ್ಲಿ ಹೂವಿನ ಹಾಸಿಗೆ[ಹಾಸು. ಕೆ]ಗಳಲ್ಲಿ . . . ನೆರೆದು (ವಿವೇಕ. ೦೬೦). ೨. (ಅಲಂ) ಸುಗಮವಾದುದು; ಸುಲಭವಾದುದು ; ಸುಖಮಯವಾದುದು : ಜೀವನವೆಂದರೆ ಹೂವಿನ ಹಾಸಿಗೆಯಲ್ಲ (ರೂಢಿ).

[<ಪೂ₁ ./ ತಮಿ. ತುಳು. ಪೂ ; ಮಲ. ಪೂ. ಪೂವ ; ತೆಲು. ಪೂ. ಪುವ್ವು, ಪೂವ ; ಕೋಲಾ. ಪೂವ್ ; ಗದಬ. ಪೂ. ಪುವ್ವು ; ಮಲ್ತೊ. ಪೂಪು]

**ಪೂಂಡಿ** 'ಪುಂಡಿ' ನೋ.

**ಪೂಂಬಳಿ ?** (ನಾ). ಹೂವಿನ ಕಾಣಿಕೆ; ಪುಷ್ಪೋಪಹಾರ (?) : ಒರ್ವರ್ ಮುನಿದಿನಿಯುನಂ ಶಿಲಪರ್ ಕಳದಿಯಂ ನಂಬದೆ ತೆಂಡೆಲರ್ಗೆ ಪೂಂಬಳಿಯಂ ಬಟ್ಟಿಯಟ್ಟುವಂತೆ ತನ್ನ ತಂಗಿಯುನೆ ಬಟ್ಟಿಯಟ್ಟೆ (ಅರ್ಜುಚ. ೬–೦೦ ವ).

[<ಪೂ₁ + ಬಳಿ₃ (=ಬಲಿ₁)]

**ಪೂಂಬೆ** (ನಾ). (ಕರಾ) ಬಾಳೆಯ ಹೂವು,— ಮೋಕೆ : ಬಾಳೆಗಿಡದ ಗೊನೆಯ ತುದಿಯಲ್ಲಿದ್ದ ಪೂಂಬೆಯನ್ನು ತಂದು ಅದನ್ನಾದರೂ ಬಜ್ಜಿ ಮಾಡೋಣ (ಬಾಳಗ. ೦೩೩) ; ಬಾಳೆಗೊನೆಯ ತುಂದಿಗೆಗೆ ನಮ್ಮಲ್ಲಿ 'ಪೂಂಬೆ' ಎಂಬ ಹೆಸರು (ಕಾರ್ತಿಗು. ೯೩).  [←ತುಳು. ಪೂಂಬೆ]

**ಪೂಂಬೆಕಿರೀಟ** (ನಾ). ಬಾಳೆಯ ಮೋತೆಯ ಆಕಾರದ ಕಿರೀಟ : 'ಪೂಂಬೆಯಂತಿರುವ ಕಿರೀಟ' ಎಂಬ ಅರ್ಥದಲ್ಲಿ 'ಪೂಂಬೆಕಿರೀಟ' ಎಂದೂ ಆಡುತ್ತಾರೆ (ಕಾರ್ತಿಗು. ೯೩).  [ಪೂಂಬೆ + ಕಿರೀಟ]

**ಪೂಂಬೊಲ** (ನಾ). ಹೂವಿನ ತೋಟ ; ಹೂದೋಟ : ಬಸವಸೆಟ್ಟಿ ಪದಿನಯ್ಗಳ ನೀರ್ಮ್ಮಣ್ಣು ಅಯ್ಗಳ ಪೂಮ್ಬೊಲನುಂ . . . ದೇಗುಲಕ್ಕೆ ಬಿಟ್ಟಂ (ಎಕ. IV, ಹಗ್ಗಡ. ೦೬–೦೦ ; 1021) ; ಶ್ರೀದೇಕಟ್ಟೆ ಮಹಾದೇವರ್ಗ್ಗೆ ಬಿಟ್ಟ ಪೂಂಬೊಲಂ ತೋಣ್ಣಬಿಣ್ಣಮುಮಂ . . . ಈ ವಂಸದ[ಲ್] ಪುಟ್ಟಿದವರ್ ಕಾ[ದ]ಳಿಸುಗೆ (ಎಕ. VI, ೨೦೭–೧೩ ; 1057). [<ಪೂ₁ + ಪೊಲ]

**ಪೂಕರೆ** (ನಾ). (ಕರಾ) ಅಲಂಕಾರದ (ಬಾಳೆಯ) ಕಂಬ : ಬುದ್ಧಿವಂತನ ಗದ್ದೆಯ ಬಿತ್ತವನ್ನು ದಂಡಿಗೆಯಲ್ಲಿಯೂ, ಬಿಲ್ಲರ ಗದ್ದೆಯ ಬಿತ್ತವನ್ನು ಕುಕ್ಕೆಯಲ್ಲಿಯೂ ತಂದು ಬಿತ್ತಿ, ಬಾಳೆಯ ಪೂಕರೆಯನ್ನು ಹಾಕಿದರು (ಕೋಟಿಚ. ೯); "ಗದ್ದೆ ಬಿತ್ತಿದ ತರುವಾಯ ಅದರ ಮಧ್ಯದಲ್ಲಿ ಒಂದು ಬಾಳೆಯ ಗಿಡವನ್ನು ತಂದು ಅಲಂಕರಿಸಿ ನಡುವ ಸಂಭ್ರಮ" (ಕೋಟಿಚ. ಕೋಶ).  [←ತುಳು. ಪೂಕರೆ]

**ಪೂಕು**, ಪುಕ್ಕು₂ (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (☆). **ಪುಕ್ಕು₂** : "ಭಗರುತ್ವದೊಳ್ ಯೋನಿಯೊಳ್ ಪುಕ್ಕು" (ಕಬ್ಬಿಗ. ೬೯).

[ದೇ. ॥ ತೆಲು. ಕೊಂಡ. ಪೂಕು]

**ಪೂಕುತಿತ್ತಿ** (ನಾ). ಶರಾಯಿ ; ಇಜಾರ ; ಚಲ್ಲಣ : (☆). [?]

**ಪೂಗ** (ನಾ). ೧. ಗುಂಪು ; ಸಮೂಹ ; ಸಮುದಾಯ : "ನಿಕರಃ, ನಿಕಾಯಃ . . . ಕದಂಬಕಃ, ಪೂಗಃ . . . ಸ್ತೋಮಃ—ಈ ೩೯ ಸಮೂಹಂ" (ಕರ್ಣಾಟ. ೦೦೯–೦) ; ಪೂಗದ ನವನಾಗಲತಾಪೂಗದ ಫಲಪತ್ರದೊಡನೆ ಬಹುವಿಧಫಲದಿಂ ರಾಗಯುತಕ್ರಮವಿರಹನ ರಾಗಯುತಕ್ರಮಮನ ವನಿಭುಜನರ್ಚಿಸಿದರು (ಕೃಷ್ಣಕ. ೦೯–೬); ರಾಘವನು ಮೈಮುಚಿದ ಲಕ್ಷ್ಮಣ ಯೋಗನಿದ್ರೆಯ ತಳ್ದ ಕಪಿಗಳ ಪೂಗ ಜೀವನ್ಮುಕ್ತವಾದುದು (ತೊರಾ. ೨೮–೬೩) ; ಶಿವಾಗಮಪೂಗದರ್ಥಮಂ ವಿವರಿಪ ಶೈವವರ್ಯವರರಿಂ ಮೆರೆದತ್ತು ಪುರಂ (ರಾ.ಶಿಚ. ೨–೯೩) ; ಇಂದ್ರಿಯಸುಖದ ಪೂಗಮಂ ವಿಚಾರದ ಪೊಲ್ ನೆಗಳ್ವುದವಿರುದ್ಧಂ (ಕಂಪ್ರಚ. ೦೨.೦೬). ೨. ಸಂಘ; ಸಮಿತಿ; ಮಂಡಳಿ; ಗುಂಪುಗಳ ಅಭಿಪ್ರಾಯದ ಮೇಲೆ ರಚಿಸಲ್ಪಟ್ಟ ಪೂಗ, ಶ್ರೇಣಿ, ಕುಲ ಎಂಬ ವಿಚಾರಣಾಸಮಿತಿಗಳಿದ್ದುವು. ರಾಜನ ನ್ಯಾಯಾಲಯವು ಈ ವಿಚಾರಣಾಸಮಿತಿಗಳ ಕಾರ್ಯಗಳನ್ನು ಪರಿಶೀಲಿಸುತ್ತಿತ್ತು (ಚಾರಿರ. ೫೬). ೩. ಅಡಕೆ ; ಕ್ರಮುಕ : "ಪೂಗಂ ವ್ರಜಮುಂ ಕೌಂಗುಂ" (ವಸ್ತುಕೋ. ೦೨೬–೫೦) ; ಬಾಲಸಹಕಾರತರು ನವಮಾಲಿಕಾಗಶಿಲಲಿತಪೂಗಭೂಜಾತಂ ತಾಂಬೂಲಲತೆಗಂಬರ್ಪೋಲ್ ಸ್ಮರಲೀಲಂ ನಿಜತನಯನೆನ್ನ ತನುಜೆಗೆ ತಕ್ಕಂ (ಆದಿಪು. ೯–೨೮) ; ಲಸತ್ಪುಳಿನಮೋ ಪುನ್ನಾಗಮೋ ಪೂಗಮೋ . . . ಕೆಡಿರೆ ಪೇಟೆಯೆಮ್ಮ ಪತಿಯಂ (ಸುಕುಮಾ. ೦೨–೨೦) ; ತುದಿಗೆ ಪರ್ವಿದೆಳೆವಳ್ಳಿ ಯಿಂದೆಸೆವ ಪೂಗಂ ನಾಡೆ ಕೊರ್ವಿ ತಿಂತಿಣಿವಣ್ಣಳಿಾತ ಕದಳಂ . . . ನಾಡೆ ಸಾರ್ವಕಾಲಂ ಕುಂದವು (ಕಂಪು. ೦೦–೨೨). ೪. ಒಂದು ಬಗೆಯ ಸಸ್ಯ ; ಹೂವರಸೆ ಗಿಡ : "ತೂದಃ, ಪೂಗಃ, ಕ್ರಮುಕಃ, ಬ್ರಹ್ಮಣ್ಯಃ, ಬ್ರಹ್ಮ ಮಾರು, ತೂಲಂ—೬ ಹುವ್ವರಿಸೆಗಿಡ, ಬೀಜವಿರುವ ಹುವ್ವರಿಸೇಗಿಡವೆಂದು ಕೆಲವರನ್ನುವರು" (ನಿಘಂಟಿ. ೦೨೦).  [ಸಂ.]

**ಪೂಗಂಪು**, ಹೂಗಂಪು (ನಾ). ಹೂವಿನ ವಾಸನೆ; ಪುಷ್ಪಗಳ ಸುಗಂಧ,— ಸೌರಭ: ಪಾದರಿಪೂಗಂಪಿಂಗೆಚ ಪಾದರಿಪಳಿಗಳ ಕಳಕ್ಕೆ ನಿರವಧಿರಾಗೋತ್ಪಾದ ಪಟುವಾಯ್ತು ವಿಳಸತ್ಪಾದಪಜಾತಿಯೊಳದೊಂದೆ ಸುಂದರಮಲ್ತೇ (ಶಬರಶ.

೨-೯) ; ಸರದ ಪೂಗಂಪುಗಳ ಸೊಂಪುಗಳ ತಂಪುಗಳ ಸಿರಿಗಂಧ ಪನ್ನೀರೊಳು ಬೆರಸಿರ್ಪ ಚಳಿಯುದ . . . ಕೇರಿಗಳ ಭೂರಿಗಳ ಭೇರಿಗಳ ರಭಸದಿಂ ಪುರ ಮೆಸೆದುದು (ಕಂಕ್ಕೆ. ೩-೩) ; ಸತತಕುಸುಮಿತತರುಲತಾಳಿಗಳ ಪೂಗಂಪ ...ಪೊಚ್ಚ ಪೊಂದಾವರೆಗಳ ಧೂಳಿಗಳ ತನಿಗಂಪನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲು (ಕೃಬಂಛಾ. ೩-೯). **ಹೂಗಂಪು :** ಅಸುಕೆಯ ಬನದ ಕಡೆಯಿಂದ ಉತ್ತಮದ ಹೂಗಂಪು ಬರುತಿರಲು (ಕೌಶಿರಾ. ೧೦-೪೯).

[ಪೂ₂ + ಕಂಪು]

**ಪೂಗಟ್ಟು**, ಹೂಕಟ್ಟು, ಹೂವುಕಟ್ಟು₁ (ಕ್ರಿ). ಹೂವುಗಳನ್ನು ಮಾಲೆಯಾಗಿ ರಚಿಸು.—ಹೆಣ್ : ವರಡಕ್ಕವಾಜಿದೊಂದಟ್ಟೊಳೆ ನೆಗಟ್ದು ನಿರಂತರ ಸುಖಮಂ ಪಡೆವೆನೆಂಬ ನಿರ್ಬುದ್ಧಿ . . . ನಾರಿಲ್ಲದೆ ಪೂಗಟ್ಟುವೆನೆಂಬ ಪೆರ್ಗಾವಿಲನಂ ಪೋಲ್ಕುಂ (ರಜಾಗಮ್. ೩-೧೦೬). **ಹೂಕಟ್ಟು :** ಹೂಕಟ್ಟುವುದನ್ನು ನಿಲ್ಲಿಸಿ, ಹೂಮರಿಗಳನ್ನು ನೋಡಲು ಓಡಿ ಹೋಗಿದ್ದ ಚಿನ್ನಮ್ಮನಿಗೆ ಅವಳ ಅಜ್ಜಿ . . . ಆಜ್ಞೆ ಮಾಡಿದಳು (ಮಲೆಮ. ೨೭೦). **ಹೂವುಕಟ್ಟು₁ :** ಮನೆಯ . . . ಒಂದು ಮೂಲೆಯಲ್ಲಿ ಚಿನ್ನಮ್ಮ ಹೂವುಕಟ್ಟುವ ಕಾರ್ಯದಲ್ಲಿ ನಿರತಳಾಗಿದ್ದಳು (ಮಲೆಮ. ೨೬೯).

[ಪೂ₂ + ಕಟ್ಟು₁]

**ಪೂಗಣ್**, ಹೂಗಣ್ಣು, ಹೂವುಗಣ್ಣು (ನಾ). ೧. ತಾವರೆಯಂತೆ ಚೆಲುವಾದ ಕಣ್ಣು : 'ಪೂಗಣ್ಣ' ಪರಾ. ೨. ಹೂವು ಬಿದ್ದ ಕಣ್ಣು ; ಮೋತಿಬಿಂದುವಿರುವ ಕಣ್ಣು. ೧, ೨ : ಅಸಿದೊಡಲ ಪೂಗಣ್ಣ ಪೆಣ್; ಸಸಿಮೊಗದ ಕಿಸುವಾಯ ಪುಸಿನಡುವಿನರಸಿ (ರಾಮಾಶ್ವ. ೬೭-೨೩). **ಹೂಗಣ್ಣು :** ೨. ಹೂಗಣ್ಣಿಗೆ ನಾಟ ಔಷಧಿ ಮಾಡಲು ಹೋಗಬಾರದು (ಗಾದೆ). **ಹೂವುಗಣ್ಣು :** ೨. ಹೂವುಗಣ್ಣಿಗೆ : — ನೀಲಿಯ ರಸವಂ ಹಚ್ಚಿದರೆ ಹೂವುಗಣ್ಣು ಮಾಣ್ಗುಂ (ಲವ್ಯಂ. ೭೯). [ಪೂ₂+ಕಣ್]

**ಪೂಗಣ** (ನಾ). ಹೂಗೊಂಚಲು ; ಪುಷ್ಪಗುಚ್ಛ : ಸ್ಥಿರ ಹರಶಕ್ತಿ ದೇವಮುನಿಪೋತ್ತಮಹಸ್ತದೆ ದಾನದೀಕ್ಷೆಯಂ ಸುರಕುಜವೀಕ್ಷಿಸಲು(ಲ್) ತಳೆದಪೋಲೆಸುಗುಂ ಸುರಶೈಳದಲ್ಲಿ ಬಂಧುರತರವಪ್ಪ ಕೆಂದಳಿರೆ ಕೆಂಜೆಡೆ ಪೂಗಣ ಲಾಕುಳಂ ಸುಭಾಸುರವೆನಿಪಾ ವಿಭೂತಿಯೆ ಪರಾಗವಿಭೂತಿ ಫಳಂ ಕಮಂಡಳವು(ಂ) (ಶಿ೩. IV. ೧-೯೦ ; 1204). [ಪೂ₂+ಗಣ]

**ಪೂಗಣೆ**, ಹೂಗಣೆ, ಹೂವುಗಣೆ (ನಾ). (ಮನ್ಮಥನ) ಹೂವಿನ ಬಾಣ : ಅಂತು ತೊಟ್ಟ ಪೂದುಡುಗೆ ಮದನನ ತೊಟ್ಟ ಪೂಗಣೆಗೆಣೆಯಾಗಿರೆ (ಕಂಕಛಾ. ೨-೧೬ ವ) ; ಪೂಗಣೆ ನಾಂಟಿದಂತೆ ತನು ಕಂಪಿಸುತಿರ್ಪುದು (ಕಾದಂಛೂ. ೬೪೭) ; ಮನ್ಮಥನಾಗ ಪೂಗಣೆಗಳನು ಸಂಧಿಸಿಯೆಚ್ಚನಂಗನೆಯ (ನಳಚ. ೧-೩೭). **ಹೂಗಣೆ :** ಎನ್ನ ತರಳಕಟಾಕ್ಷೇಕ್ಷಣಯುಗವಿರ್ದಂತೀ ಹೂ[ಪಾಠಾಂ. ನನೆ, ಪೂ]ಗಣೆಗಳ ಪರ್ಯಂತವೇಕೆ ಮಕರಪತಾಕಾ (ಗಿಂಕ. ೭-೩೩) ; ಮದನ ಮಸೆದೋಜಿಸಿದನು ಹೂಗಣೆ ಹೃದಯವನು ತಾಗಿದುದು (ಕುಮಾವ್ಯಾ. ೨-೭) ; ಹೂಗಣೆಯ ಹರವರಿಯನುಗುಳುವ ಸೋಗೆಗಂಗಳ ಬೆಳಗ ಹಸರಿಸಿ ರಾಗರಸದೊಳು ಮೂಡಿ ಮುಳುಗಾಡಿದಳು ಜಿನದತ್ತೆ (ಸಾಳ್ವಭಾ. ೩-೨೩). **ಹೂವುಗಣೆ :** ಬನವೆಣ್ಣೆ, ನಿನ್ನೊಳೇನಿದೆ ಎನಗೆ ಎಣೆಯಾಗಿ ? ಮೋಣೆನ್ನದೆಗೆ ಹೂವುಗಣೆಯಾಗಿ ? (ಶಕ್ತಾಂಗ. ೨೯-೬೬೮).

**ಪೂಗಣೆಯ**ವ = ಪೂಗಣೆಯ : ಪೂಗಣೆಯವನ ಕಿಚ್ಚು ನೂರ್ಮಡಿಯಾಗಿ ಮುಂದೆಯುಪಾಯವಂ ಪರಿಯೋಗಿಸುವುದದನಟಿದು ಕೋಮಳೆ . . . ಮಗುಗಿ (ಐಶಪು. ೪೩-೩). [ಪೂ₂ + ಕಣೆ₁]

**ಪೂಗಣೆಯ**, ಹೂಗಣೆಯ (ನಾ). ಹೂವಿನ ಬಾಣಗಳುಳ್ಳವನಂ ; ಮನ್ಮಥ : "ಪೂಗಣೆಯನಿಂಗೋಲ್ವಿಲ್ಲನಕ್ಕುಂ" (ಶಬ್ದಾರ್ಥ. ೯) ; ಪೂಗಣೆಯನ ಚಾಮರಮಂ ಸೀಗುರಿಯಂ ಪಿಡಿವಳಂತೆ ಸೆಳೆಗೊಂಬುಗಳಿಂಬಾಗೊತ್ತಿ ಗುಜ್ಜುಮಾವಿನ ಪೂಗೊಂಚಲನುಡಿದು ಪಿಡಿದಳೀ ಪೆರಸೊರ್ವಳ್ (೧೬ಪಾವ. ೧೩-೮೨) ; ಮುಟ್ಟಿತು ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣಾರಿ ಹಂಪೆಯಾಳ್ದನಾ (ಗಿಂಕ. ೬-೯೭) ; ಎಸೆದುದು ಪೂಗಣೆಯನಾಡುಂಬೊಲನವೋಲು ತತ್ಪುರೋದ್ಯಾನ (ಕೂರಛಾ. ೦-೯-೦೩). **ಹೂಗಣೆಯ :** ಸುಗ್ಗಿಯಲಿ ತುಂಬುವೆರೆ ತೆಂಗಾಳಿ ಹೂಗಣೆಯರೊಡ್ಡಿದುರುಳಿಗೆ ಸಿಲುಕಿ ಅಳುಕದೆ ಇಹರು ಉಂಟೇ (ಕಂದ್ರಸ. ೯೬-೦೭). [ಪೂಗಣೆ + — ಅ₇]

**ಪೂಗಣ್ಣ** (ನಾ). ೧. ತಾವರೆಯಂತೆ ಚೆಲುವಾದ ಕಣ್ಣುಗಳುಳ್ಳವನು ; ಕಮಲಲೋಚನ ; ವಿಷ್ಣು. ೨. ಕಣ್ಣಲ್ಲಿ ಹೂವು ಬಿದ್ದವನು ; ಕಣ್ಣಿನ ಕಾಚರೋಗವುಳ್ಳವನು. ೧, ೨ : ಅಳಿಯಂ ಪೂಗಣ್ಣನೆನ್ನೀ ಮಗಳೆ ಚಪಳೆ ಪುತ್ರಂ ಕರಂ ರಾಜಯಕ್ಷ್ಮಾಕುಳನೆನ್ನೈಶ್ವರ್ಯಮಂ ನಿರ್ಜರರೆ ಕವರ್ದರ್ . . . ಎಂದೆಂದೊಳಗಂಭೋರಾಶಿ ಚಿಂತಾಗ್ನಿಯನೆ ತಳೆದಪೋಲೌರ್ವನಂತಸ್ಥಮಿಕರ್ಪಂ (ರಾಜಶೇ. ೦-೧೦೨). [ಪೂಗಣ್ + —ಅ₇]

**ಪೂಗನಸು**, ಹೂಗನಸು (ನಾ). ಹಿತಕರವಾದ ಸ್ವಪ್ನ ; ಸುಖಕರವಾದ ಕನಸು : ಪಣ್ಣಾಗಲಿಪೊಂದು ಸಿರಿಯ ಪೂಗನಸಿಂದು ತನ್ನಿಷ್ಟದಾದರ್ಶವಂ ಪೂಜಿಸೋಲೈಸಿ ಬೆಂಬಾಲಿಪುದೊ (ಶ್ರೀರಾಪದ. ೦೨೭-೬೨). **ಹೂಗನಸು :** ಇಡಿ ವರುಷದ ಹೊಸ ಹರುಷಕೆ ಹೂಗನಸಿನ ತೇರು (ನಂಜು. ೯-೩).

[ಪೂ₂ + ಕನಸು]

**ಪೂಗಫಲ**, ಪೂಗಫಳ (ನಾ). ಅಡಕೆ ; ಕ್ರಮುಕ : ಅತಿಮಧುರ ಪೂಗಫಲಂಗಳೊಳಂ ಸರಸನಾಗವಲ್ಲೀದಳಂಗಳೊಳವೆಸೆವ ತಾಂಬೂಲಿಕಾನಿಕೇತನಂಗಳೊಳ್ (ಶಿಶ್ವಕೃ. ೨-೯೦ ವ). **ಪೂಗಫಳ :** ಕುಲುಸೆಯ ದುಗ್ಧದೊಳೊಂದಿರೆ ಮಲ್ಪುಂ ಸೊಟಿಪ್ ತೊಯ್ದು ಪೂಗಫಳಮಂ ಮೋಣ್ ಪಿಪ್ಪಲಿಯಂ ಬಿಸುನೀರೊಳ್ ಕುಡಿಯಲೊಡಂ ಪ್ಲೀಹಾದಿ ಜಠರರೋಗಂ ಕೆಡುಗುಂ (ರೋಗೀಋಃಕ. ೯-೦೨೩) ; ಗಿಳಿ ಗಿಳಿಮೆಕ್ಕೆ ಪೂಗಫಳಮಂ ಕಳಹಂಸಿಗೆ ಹಂಸನಬ್ಜಕಂದಳಮನಿಭಂ ಕರೇಣುಗೆ ಲವಂಗದಳಂಗಳನೀವ ಚಿತ್ರಮಂ ತಳೆದು ವಿಳಾಸಮಂ ತಳೆದ . . . ಮಣಿಭಿತ್ತಿ ಚೆಲ್ವನೊಳಕೊಂಡೊಳಕೊಂಡುದಪೂರ್ವಭಿತ್ತಿಯಂ (ಮಲ್ಲಿಕೃ. ೨-೭೩). [ಸಂ.]

**ಪೂಗಫಳ** 'ಪೂಗಫಲ' ನೋ.

**ಪೂಗರಡಿಗೆ** (ನಾ). ಹೂವಿನ ಬುಟ್ಟಿ ; ಪುಷ್ಪಕರಂಡಕ : ಲಿಂಗವಂ ಮುಟ್ಟಿ ಪುಷ್ಪದ ದಂಡಿ ಲಿಂಗವಂ ಪೂಗರಡಿಗೆಯಲಿ ಬಡಿದು ಅಂಗುಗಯ್ಯನ ಗುರುವ ಶಿವ ತೋಟಿ (ಕಬಸ್ಕೃ. ೩೭-೪೭). [ಪೂ₂ + ಕರಡಿಗೆ (<ಕರಂಡಿಗೆ)]

**ಪೂಗಲ್ಲು**, ಹೂಗಲ್ಲು (ನಾ). ಹೂವಿನಾಕಾರದ ಪಾಣಿಪೀಠದ ಕಲ್ಲು : ಅಗಳುಂ ನಿಮ್ನೋತ್ತುಂಗದ ಭಾಗಕೀ ಕಲ್ಲುಗಳ ಪೂ[ಪಾಠಾಂ. ಹೂ]ಗಲ್ಲಾಗಿಯೆಲ್ಲಾ ದೇಗುಲಂಗಳೊಳಿರಿಸಿ ಪೂರೆ (ಬಸಕೃ. ೩೦-೭೩) ; ಗಮನಿಸುವ ಲಿಂಗಸಮುಚ್ಚಯಂ ಪೂಗಲ್ಲನಾಜಿ ಕಡೆನೂಂಕಿ ಪೂಜಿಮಡುವ ಅಚ್ಚಲಿಂಗವು (ಬಸಕೃ. ೩೭-೪೩). **ಹೂಗಲ್ಲು :** ಶಿವನ ಸದ್ಭಕ್ತನೆಂದೆನಿಪ ವೀರಣ್ಣನುಜಿ ಶಿವನಿಳಯದಲ್ಲಿರ್ದ ಹೂಗಲ್ಲ ಹಾಜಿಸುತ ಶಿವಲೋಕಕ್ಕೆದಿದೆಡೆಯಂ ನೋಡಿ (ಸಿದ್ಧೇಕೃ. ೩-೨). [ಪೂ₂ + ಕಲ್ಲು (<ಕಲ್₃)]

**ಪೂಗವನ** (ನಾ). ಅಡಕೆಯ ತೋಟ : ಆ ಪುರದುಪವನದೊಳ್ . . . ಪಂಚಬಾಣ ಕೃಪಾಣ ಪಟ್ಟದೊಡನೆ ಕೊನೆಯ ಬಿಣ್ಪಂ ಪೊನೆದು ತೂಗದ ಪೂಗವನಮಿಲ್ಲ (ಕಂರಾಮಾ. ೧-೦೧೭ ವ) ; ಫಳಭರದಿಂ ಮನಂಗೊಳಿಪ ಪೂಗವನಂ . . . ಬನವಾಸಿದೇಸದೊಳು (ಎಕ. VIII, ಸೊರಬ. ೨೭೭-೪೩ ; ಸು. 1165) ; ಪರಿಪಚ್ಯಾಂಬುವನೂಡಿ ಪೂಗವನಮಂ ಕಿಬ್ಬಿತ್ತಿ . . . ಮೆಟಿದುದುರ್ವೀಬಂಧುರಂ ಸಿಂಧುರಂ (ಶಿಶ್ವಕೃ. ೩-೭೯). [ಸಂ.]

**ಪೂಗವಸರ** (ನಾ). ಅಡಕೆಯ ಅಂಗಡಿ : ನಾಗವಲ್ಲಿಯ ದಲದೊಡಗೂಡಿ ನಲ್ಲರ ಬಾಯ್ದೆಜೆಗಳ ರಾಗಮಾಡುವ ಪೂಗವಸರ (ಹರಿಚ. ೧-೦೦೨).

[ಪೂಗ + ಪಸರ]

**ಪೂಗಾರ,** ಹೂಗಾರ (ನಾ). ಹೂವು ಮಾರುವವನು; ಹೂವಾಡಿಗ : ಪೂಗಾರಗೊಲಿದ ಬಂಡುಗಾರ ಗೊಲ್ಲ (ಬಿಜ್ಜ. ೧೫೫-೫) ; ಪೂಗಾರಗೊಲಿದ ಭಂಡುಗಾರ ಗೋವ (ಏಕೋ.ಸು. ೨೭-೫). **ಹೂಗಾರ :** ಗೊರವರು—ಇವರಿಗೆ ಕೆಲವು ಕಡೆಯಲ್ಲಿ ಜೀರರೆಂತಲೂ ಕೆಲವು ಕಡೆಯಲ್ಲಿ ಹೂಗಾರರೆಂತಲೂ ಅನ್ನುವರು (ಶಭಾಗ. ೦೦೬) ; ಆ ಹೂಗಾರರವನು ಅವರಿಗೆ ಇರಲಿಕ್ಕೆ ಒಂದು ಕೋಣೆಯನ್ನು ಕೊಟ್ಟನು (ರಾಶಹಂ. ೦೬) ; ಹಳೆಯ ಕವಿತೆಯ ಬಂಧವು ಹೂಗಾರನು ಕಟ್ಟಿದ ಬಾಸಿಂಗವಾತಹನು (ಶಾಹಿವಿ ೯೬).

[ಪೂ$_2$ + —ಕಾರ$_1$ (< —ಕಾಅ)]

**ಪೂಗಿ** (ನಾ). ಅಡಕೆಯ ಮರ : ನಾಳಿಕೇರ ಪೂಗಿಯು ಫಲ ಪನಸೀಳೆ ಬಾಳೆ ಮಾವು ಮಾತುಳುಂಗ ಶಾಲಿಯಾದಿ ವನವೆಲ್ಲಾ ಕಡೆಯಲಿ ಲೀಲೆಯಿಂದ ಬಳಸಿಹವು (ದ್ಯಾದಶಾ. ೦೦-೯೯೬). [ಸಂ. ಪೂಗೀ]

**ಪೂಗಿಡ** 'ಪೂಗಿಡು' ನೋ.

**ಪೂಗಿಡು,** ಪೂಗಿಡ, ಹೂಗಿಡ, ಹೂಗಿಡು (ನಾ). ಹೂವಿನ ಗಿಡ ; ಹೂವು ಬಿಡುವ ಸಸ್ಯ : ಕರಪುಷ್ಕರಂಗಳಿಂ ತಂದು ಪೂಗಿಡುಗಳ್ಗೆ ನೀರೆರೆದ ಮಣಿಯಾನೆಗಳಿಂ (ಶಾಂತಿಪು. ೨೨೦); ಪೂಗಿಡುವೆಂಬ ಪೆಸರಿಂಗೆ ಕೋಳವಳ್ಳಿಯ ಗಿಡುಗಳಂ ನಟ್ಟು ನೀರೆರೆದು ನಡೆವ ಮಲ್ಲಿಗೆಯ ಪೂವಿನಂತಾಗಲಾಯಿದು (ಧರ್ಮಾಮೃ. ೬-೬೯); ಓಲಗಶಾಲೆ ಪೂಗಿಡುಗಳೊಳಗೆ ಜೇವಣಶಾಲೆ ಮತ್ತ ಭೃಂಗಾಳಿಗೆ . . . ಎನಲೊಪ್ಪುವುವಲ್ಲಿಯ ಪುಷ್ಪವಾಟಿಗಳ್ (ಧರ್ಮಪು. ೨-೫೦). **ಪೂಗಿಡ :** ಪೂಗಿಡದೊಳ್ ಸಿಲ್ಕಿದೊಡು ನಾರುಡೆಯುಂ ಬಿಡಿಸುತ್ತೆ ತಿರುಗಿ ನೋಡಿದಳೆನ್ನಂ (ಶಾಕುಂತ. ೨೬-೯೬). **ಹೂಗಿಡ :** ನಲ್ಲೆಯಂ ನಗುನಗುತ ಹೂಗಿಡಂ ತಲೆದೂಗುತಿಲ್ಲಿ ಬಾಬಾರೆಂದು ಕರೆಯುತಿಹುದಲ್ಲಿ (ಶಾಲೂಕ. ೦೦೨-೨೬೨). **ಹೂಗಿಡು :** ಕೆರೆಬಾವಿ ಹೂಗಿಡುಮರಂಗಳಲ್ಲಿ ಗ್ರಾಮ ಮಧ್ಯಗಳಲ್ಲಿ ಚೌಪಥ ಪಟ್ಟಣಪ್ರದೇಶದಲ್ಲಿ ಹಿರಿಯಾಲದ ಮರದಲ್ಲಿ ಮನೆಯ ಮಾಡಿ (ಬಿಜಿ. ೫೫೬) ; ಆವ ಗಿಡುವಂ ನೋಯಿಸಿದಡಂ ಭಾವಿಸುವಡಿದು ಹಿಂಸೆಯೆನುತಂತೋವಿ ಹೂಗಿಡುಗಳ ಕೆಳಗೆ ಸುತ್ತುವರೆ ಸಾರಿಸುತ . . . ತಮತಮಗೆ ಧರೆಯ ಮೇಲೆ ಬಿದ್ದೊಂದೊಂದರಳನಾ ಲೋಲಮನದಲಿ ತಂದು ಶಿವನಂ ಕಾಲ ವೇಳೆಯನರಿದು ಪೂಜಿಪನು (ಶಿಸಪು. ೪೪-೦೦). [ಪೂ$_2$ + ಗಿಡು]

**ಪೂಗಿಱು** (ಕ್ರಿ). ಹೂವೆಂದು ಭ್ರಮಿಸಂ ; ಪುಷ್ಪವೆಂದು ಭಾವಿಸಂ : ಪೂಗೊಯ್ವ ಖಚರ ಶಿಖರದ ಪೂಗಿಡುಗಳ ಕೊಂಬಿನಲ್ಲಿ ತೊಡರ್ದಿರೆ ಮಿನ್ನಳ್ ಪೂಗೆತ್ತು ತುಡುಂಕುವಳ್ (ಲೀಲಾವ. ೯-೩೯). [ಪೂ$_2$ + ಗಿಱು]

**ಪೂಗು, ಹೂಗು** (ನಾ). ಹೂವು; ಪುಷ್ಪ: ಉಡಿಯ ಲಿಂಗದ ಬೋಳುದಲೆಗಳ ಪಿಡಿದರಿಸಿನದ ಪಾತ್ರೆ ಕಿವಿಯೊಳು ಜಡಿವ ಪೂಗಿನ ಕಂಬಳಿಯ ಟೊಪ್ಪಿಗೆಯ ಮೈಲಾರ . . . ಗೊರವರ ಗಣವೀರರು ದೀವಟಿಗೆಯರು ಪೊಗ್ಗತಿ ಗೂಡಿ ಬಂದು (ಹರಿಶಾ. ೦೪-೩೪). **ಹೂಗು :** " ಹೂಗೆಂಗುಂ ಹೂವೆಂಗೆ " (ಶಶಸಂ. ೦೬).

[< ಪೂ$_2$]

**ಪೂಗುಡಿ** (ನಾ). ೧. ಹೂವಿನ ತುದಿ, —ಕೊನೆ : ರತಿಗವತಂಸಮಾದ ತಳಿರಾವ ಮರಕ್ಕೊಳವೆನ್ನ ಬಲ್ಗೆ ಸಂಗತಶರಮಾದ ಪೂಗುಡಿಪಳಾವ ಮರಕ್ಕೊಳವು . . . ಎಂದು ಮನ್ಮಥಂ ಸ್ತುತಿಯಿಸಿ ಮಾಮರಕ್ಕೆ ಕುಜರಾಜಸಮಾಖ್ಯೆಯನಿತ್ತನಣ್ಣೆಯಿಂ (ಚಂದ್ರಪ್ರಪು. ೬-೯೩). ೨. ಹೂವಿನ ಗೊಂಚಲು; ಪುಷ್ಪಸ್ತಬಕ : ಪದಿನಾಱುಂ ಚಮರಜಮಂ ಪದಿನಱುವರ್ ಖಚರಕನ್ನೆಯರ್ ಪೂಗುಡಿವೇಱಿದ ಜಂಗಮಲತೆಗಳೆನಲ್ ಬಿದಿರ್ದಿಕ್ಕಿದೆ ರೊಡನೆ ಮದನನಂದಿಕ್ಕುವಿನಂ (ಶಂಶಾಪು. ೦೨-೨೫) ; ಆಗಳೆಡೆಗೆಱೆದ ಪೂಗುಡಿಯ ಗುಡಿಗಳೊಳು . . . ಪಾದರಿಯ ಚೌಕಿಗೆಗಳೊಳು ಬಟ್ಟ ಬೀಡು ಬರೆದಂತೆ ಕಂಡರಿಸಿದಂತೆ ಕಣ್ಗೆಸದಿರ್ದುದು (ಚಿನ್ನಶಾ. ೨೫೯) ; ಪಲ್ಲಟಿಸಿತ್ತು ಪೂಗುಡಿಗಳಂ ಗಿರಿಮಲ್ಲಿಗೆ ಬೀತು ಬಿನ್ನನಾಯ್ತೊಳ್ಳಿಹ ಮೊಲ್ಲೆ ಸೋಗೆನವಿಲೊಲ್ಲದೆ ಮಾಣ್ದುದು ನವ್ಯನಾಟ್ಯಮಂ . . . ಶರದಾಗಮನ ಪ್ರವೇಶದೊಳ್ (ಚಾರಪು. ೯-೬೩). [ಪೂ$_2$ + ಕುಡಿ$_2$]

**ಪೂಗುವರ** (ನಾ). ಕಮಲದ ಹೂವಿನ ಪುತ್ರ ; ಬ್ರಹ್ಮ.

**ಪೂಗುವರತತ್ತಿ** = ಬ್ರಹ್ಮಾಂಡ : ನೀರ್ವರ್ಗಳ ಗಂಡನು ಪೆಂಡತಿ ಯೊಳಾಳ್ದ ಪನ್ನತಿಕೆಯಿಂ ಪರಿಜುವೆತ್ತ ಬಿಸುಗೊರಲ ರಕ್ಕಸು ಪೂಗುವರ ತತ್ತಿಯಿಂ (ಚಿಕೋಪು. ೩-೩). [ಪೂ$_2$ + ಕುವರ$_2$]

**ಪೂಗೊಂಚಲ್,** ಪೂಗೊಂಚಲು, ಹೂಗೊಂಚಲು (ನಾ). ಹೂವುಗಳ ಗಂಚ್ಚು : " ಆ ಗುಚ್ಛ ಗುಚ್ಛಕಂ ಸ್ತಬಕಮೊಂದೆನಲು ಪೂಗೊಂಚ ಲಕ್ಕು " (ಚುಂಗಶಾ. ೩೩-೩); ಮಾಧವೀಲತೆಯನೆ ಸಂದದಿರ್ವುತ್ತೆಯ ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮಱೆದವುವೇ (ಅಂಪು. ೦೦-೦೦೬) ; ಪೂಗೊಂಚಲಿಂದೆಯ್ದೆ ಹೇಮನಿಭದ್ಯೋತದಿನೊಪ್ಪುತಿರ್ಪ ಕಳಮಕ್ಷೇತ್ರಂಗಳಾ ದೇಶದೊಳ್ (ಶುಸುಪಶಾ. ೨-೯೨) ; ಲಂಚವಿವಾದೆ ಪುರುಳ ನಿನಗೆ ಪೂಗೊಂಚಲುಂ (ಕಮ್ಮಶಾ. ೩೧೯). **ಪೂಗೊಂಚಲು :** ಮುಂದೆ ಕಂಡನು ದೂರದಲ್ಲಿಹ ನಂದನದ ಮೇಲೆ ತರುನಿಕಾಯದ ಸಂದಣಿಯ ಪೂಗೊಂಚಲಿನ ಪಲ್ಲವನಿಕಾಯದಲಿ ಗೊಂದಣದ ತರುಮಧ್ಯ ದಲ್ಲಿಹುದೊಂದು ಜಂಬೂವೃಕ್ಷ ಮೆಱೆದಿರೆ ನಿಂದು ನೋಡಿದ ಭೀಮ (ಕುಮ್ಮಾಭಾ. ೩-೦೨) ; ಪರಿಮಳಿತ ಪೂಗೊಂಚಲಿನ ಕೆಂಪೊರೆದ ಕಿಸಲಯ ವಲ್ಲರಿಯ . . . ಕೊಂಡಾಡಿದನು ಮನದಣಿಯೆ (ಕೊರಶಾ. ೫-೨-೯೧); ಕರುಳ ಪೂಗೊಂಚಲು ಖಂಡದ ಕಳಿಕೆ ಬಾಧುರದೆಲು ಶಾಖೆಗಳಾಗೆ ಪಿರಿದು ಚೆಂದೊರಳೆದಿರ ಕಬಂಧದ್ರುಮ ಮೆಱೆದುವು ಖಡ್ಗಚೈತ್ರದಲಿ (ಕಂಶಂ. ೦೫-೫೦). **ಹೂಗೊಂಚಲು :** ಕರುಳ ಹೂಗೊಂಚಲಿನ ಮಾಲೆಯ ಬಿರಿಮುಗುಳ ನವಖಂಡದಿಂಡೆಯ ಕರತಳದ ತಳಿರೆಲೆಯ . . . ರಣವನ ವೆಸೆದುದೀತನ ಖಡ್ಗಚೈತ್ರದಲಿ (ಕುಮ್ಮಾದ್ರೋ. ೬-೯೨) ; ನಿನ್ನ ಸ್ಪರ್ಶ ಮಾತ್ರದಿಂದ ಪಲ್ಲವ — ಪುಲಕ ಪಡೆದೆ, ಕಂಪಿನ ಕಂಪನ ಪಡೆದೆ, ಹೂಗೊಂಚಲ ರೋಮಾಂಚನ ಪಡೆದೆ ! (ಕರೊಸ್ಸೋಂ. ೨೬-೨೬). [ಸಂ.]

**ಪೂಗೊಂಚಲು** ' ಪೂಗೊಂಚಲ್ ' ನೋ.

**ಪೂಗೊಯ್,** ಹೂಕೊಯ್, ಹೂಕೊಯ್ಯು (ಕ್ರಿ). ಹೂವುಗಳನ್ನು ಬಿಡಿಸು, —ಕಿರಿ : ಮರನ ಮೇಗಿರ್ದು ಪೂಗೊಯ್ವ ವಸಂತಕನೆಂಬ ಮಾಲೆಗಾಱನರಸನ ಸಾವಂ ಕಂಡು . . . ಭಯಸ್ಥನಾಗಿ (ವಡ್ಡಾರಾ. ೦೬೦-೨೫); ನಿಲುಕಿ ಪೂಗೊಯ್ವ ಲಲಿತಾಂಗಿಯ ಬಟ್ಟಬಲ್ಮೊಲೆಗಳಂ ಪೊಱಲಾಱದಸಿಯ ಸೆಳೆನಡುದವಿ ಶಿಥಿಲ (ಕೃಖಿಚಾ. ೮-೦೯) ; ಪೂಗೊಯ್ಯುದ್ದು ಸರಸಿಜಾನನೆ ಪೊಗಲ್ ನೆರೆ ಮುಗಿದುದಿಲ್ಲ ಬಂಧನಕೋಶಂ . . . ನಾಡೆ ಕಾಣೆಪುದಿನ್ನುಂ (ಶಾಕುಂತ. ೩೩-೫೬). **ಹೂಕೊಯ್ :** ಹೊಲಮನೆಯೊಳ್ಪೊಲವುಗಳ ಕಣಿ ಕಣಿಸಿ ಹೂಕೊಯ್ದು . . . ಮುಡಿಯುವಳ್ ನೇದು (ಶಾಲೂಕ. ೩೩-೬೨). **ಹೂಕೊಯ್ಯು :** ನಾನು ಮಾಮರವನಪ್ಪಿರುವ ಮಲ್ಲಿಗೆಯ ಹೊದರ ಬಳಿಯಲಿ ಹೂಕೊಯ್ಯುತಿದ್ದಾಗ ಅಲಿಸಿದೆ (ಚಂದ್ರಸ. ೬೩-೩).

[ಪೂ$_2$ + ಕೊಯ್]

**ಪೂಗೊಳ,** ಹೂಗೊಳ (ನಾ). ತಾವರೆಗಳುಳ್ಳ ಕೊಳ; ಕಮಲಸರೋವರ: ತಿಳಿಗೊಳನಂ ಪೂಗೊಳನನದಂ ನೆಗಟ್ ಮುಳಿದು ಕೊಳ್ವ ಬಳಸೆ ನಾನದಂ (ಕಶಿರಾ. ೨-೦೩೮) ; ಎಂಟುಂ ಕೋಡವಟ್ಟೊಳಂತೊಂದೊಂದಟ್ಟೊಳ್ ಪೂಗೊಳಂ ನೆಗಟ್ದೊಂದೊಂದೆಸೆದಿರ್ಕುಂ (ಅಂಪು.೬-೩೩); ಸಿರಿಯ ಮೊಗರಸದ ಪೊಸ ಮೈಸಿರಿಯೆನಿಕುಂ ಪೂಗೊಳಂಗಳ್ (ಶಂಶಾಪಶಾ. ೦-೬೪). **ಹೂಗೊಳ :** ಸುಳಿದುದಾ ಮೃಗಪೋತ . . . ಅವನೀನಂದನೆಯ ಹೂ[ಶಾಕಾಂ. ಪೂ] ಗೊಳನ ಹೊರೆಗಾಗಿ (ಕೊರಶಾ. ೩-೮-೦೮). [ಪೂ$_2$ + ಕೊಳ$_2$]

**ಪೂಗೋಲ್,** ಪೂಗೋಲು (ನಾ). ಹೂವಿನ ಬಾಣ ; ಪುಷ್ಪಬಾಣ : ಎಲ್ಲರುಂ ಬಾಯ್ಬಿಡೆ ಗಡಣದ ಪೂಗೋಲ್ಗಳ್ಕೈತಂದುವಾಗಳ್ (ಕಬ್ಬಿಗಶಾ. ೩೦೩) ;

ಗೀದೇಜಿಗಳಲ್ಲಿ ಕರ್ವಿಲ್ಲು ವೊರೆವ ಬಾಲಳಿವೆದೆ ಪೂಗೋಲ್ಗಳಿಲ್ಲಿ (ವೋಹಕ. ೯-೭); ಖಳಂ ಕೈಮಾಡುವಂಗಜನ ಪೂಗೋಲ ಗಾಯದಿಂ ವ್ಯಮುಖಿಸಿದು . . . ಐವೊಗನ ರಾಣಿಯಂ ನುಡಿಸಿದೊಡೆ (ಕೈಖಣ. ೦೫-೨೬).

**ಪೂಗೋಲು** : ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳಿಚ್ಚು ಮನ್ಮಥ ಕೀಲಿಸಲು (ವೋಹಕ. ೩-೦೬); ಬಾಳುಬಟ್ಟಲು ಪಿಡಿದೊವ್ಮೊವ್ಮ ಪೊನ್ನ ಪೂಗೋಲು ಪೊಂಬರಿಗೆಯಾಂತೊವ್ಮ ಕಾಲಿಟ್ಟು ಹೊಳೆವುತಿದ್ದರು ಮನಸಿಜನ ಪವಾಸೀಳುಗಳಂತೆ ದಿಟ್ಟೆಯರು (ಚಕಕ. ೦೨-೯೦). [ಪೂ + ಕೋಲ್[1]]

**ಪೂಗೋಲ** (ನಾ). ಹೂವಿನ ಬಾಣಗಳುಳ್ಳವನು; ಮನ್ಮಥ: "ಮನ್ಮಥನೊಳಂ ಪೂಗೋಲನೆಂದಾಯ್ತು" (ಕಕಾಗಾ. ೯೨); ಪೊಸ ಪೂಗೋಲನಂತೆಸೆವ ಜೀವಕನನು ಶಶಿಮುಖಿ ಕಂಡು ಮದನನ ಕುಸುಮ ಶರಗಳಿಗೆ ತನುವಿತ್ತು ವಿರಹದುಬ್ಬುಸದೊಳಗವಳೊಱಗಿದಳು (ಜೀವಂಸಾಂ. ೦೬-೦೬); ಬಾಯೆನುತೆ ಪೂಗೋಲನ ಬಿಗಿಯಪ್ಪಿ ಮುಂಗಾರಿಯಂದಾಗ ಮಾಂತರವ ವೇಳಿದಳು (ವೋಹಕ. ೦೦-೭೪); ಕಾಮಿನಿಯೊರ್ವಳ್ ಲೀಲೆಯಿಮಲರ್ವಿಲ್ಲಂ ಪೂಗೋಲಂಗಿರದೆತ್ತಿ ಕೊಡುವ ರತಿಯಂ ಪೋಲ್ತಳ್ (ಕೃಷ. ೯-೯೬). [ಪೂಗೋಲ್ + -ಅ[7]]

**ಪೂಗೋಲು** 'ಪೂಗೋಲ್' ನೋ.

**ಪೂಗೌಂಗು** (ನಾ). ಮೃದುವಾದ ಅಡಕೆ; ಉತ್ತಮವಾದ ಅಡಕೆ: ಲತೆಯೆಳಲತೆ ಮಾವಿಮ್ಮಾವು ತೆಂಗು ಚೆಂದೆಂಗು ಕೌಂಗು ಪೂಗೌಂಗು . . . ಪಲಸು ಬಕ್ಕೆವಲಸಾ ಬನದೊಳ್ (ಹಗಿ. ೨-೦೪).

[ಪೂ+ಕೌಂಗು (<ಕವುಂಗು)]

**ಪೂಚಂಡು** 'ಪೂಚೆಂಡು' ನೋ.

**ಪೂಚೆಂಡು**, ಪೂಚಂಡು, ಹೂಚೆಂಡು (ನಾ). ೧. ಹೂವುಗಳಿಂದ ರಚಿಸಿದ ಚೆಂಡು; ಹೂವಿನ ಚೆಂಡು: ಕಟ್ಟಲುಜ್ಜುಗವೆತ್ತ ಪೂಚೆಂಡು ಪನ್ನೀರ ಪೊಟ್ಟಣ ಯಕ್ಷಕರ್ದಮವ ಬಟ್ಟ ಕಂತುಕದಿಂದೆ ಬಲ್ಮೊಲೆ ಬಿದಿರುವಂತಿಟ್ಟಾಡಿದ್ದುದು ಸಖಿನಿವಹ (ಕೋಹಕ. ೦೪-೭೭). **ಪೂಚಂಡು**: ೨. ಹೂವಿನ ಗೊಂಚಲು; ಪುಷ್ಪಗುಚ್ಛ: ವೆಟ್ಟಿದ ಪೊನ್ನ ಪಾವುಗೆ ಕರದೊಳಗಳವಟ್ಟ ಸಂಪಗೆಯ ಪೂಚುಡು ತೊಟ್ಟ ಮುತ್ತಿನ ಪೈತಣೆಯಿಂದ ಚೆಲುವಿನ ಕಟ್ಟೆಱಕದೆ ನಡೆತಂದ (ಕಂಹಪ. ೯-೯೯). **ಹೂಚೆಂಡು**: ೨. ವೇಲು ಮುತ್ತಿನ ಗೊಂಡೆ! ಮಲ್ಲಿಗೆಯ ಹೂಚೆಂಡೆ! ಹಾಳಾದೆ ಅಕಟ-ನಾ-ನಿಂದೇೞಾದೆ (ಕಪು. ೯೨-೦). [ಪೂ+ಚೆಂಡು (<ಸೆಂಡು)]

**ಪೂಜಕ** (ಗು). ೧. ಪೂಜಿಸುವ; ಆದರಿಸುವ: ಪೂಜೆತನಪ್ಪ ಶಿವಲಿಂಗಕ್ಕೆ ಸಂತತವು ನಮಿಸಿ ಪೂಜಿಸಿ ಉಂಬ ಪೂಜಕಸಮಿತಿ ದೊರೆಯೇ (ಬಸವ. ೩೪-೨೪). (ನಾ). ೨. ಪೂಜೆ ಮಾಡುವವನಂ; ಆರಾಧಿಸುವವನು: ಸ್ಥಾವರಜಂಗಮವಱಿಯದ ಪೂಜಕ ನಾನು (ಬಸವ. ೩೭೯); ಲೌಕಿಕಾರ್ಚನೆಯ ಮಾಡುವ ಪೂಜಕರ ಮೆಚ್ಚನೆಂದ . . . ನೀಕಳಂಕ ಮಲ್ಲಿಕಾರ್ಜುನಾ (ವೋಳಪಾ. ೭೦ ೩೩೦); ಸಾಧ್ಯ ಸಾಧಕ ಪೂಜ್ಯ ಪೂಜಕ ದೇವ ದೇಹಿಕ ಎಂಬವರಾರೂ ಇಲ್ಲದ ಎರಡಿಲ್ಲದ ನಿರಾಳ ನೀನೆ (ಸಿದ್ಧೇವ. ೦೫೭-೫೭೦). [ಸಂ.]

**ಪೂಜನ** (ನಾ). ೧. ಪೂಜಿಸುವುದು; ಆರಾಧಿಸುವುದು. ೨. ಆರಾಧನೆ; ಪೂಜೆ: ಸಿದ್ಧಕೂಟದ ಜಿನಬಿಂಬಪೂಜನಾ [ಶಾಶಾಂ. ಪೂಜಾ] ನಂತರಂ . . . ಆಕಾಶಚಾರಣಾಖುದ್ಧಿಪ್ರಾಪ್ತರಾಗಿರ್ದ (ಕಾಪುಂಕ. ೦೫೯). [ಸಂ.]

**ಪೂಜನೆ** (ನಾ). = ಪೂಜನ ೨: ಬೇಗಬೇಗ ಅರ್ಚನೆ ಪೂಜನೆಯ ಮಾಡುವುದು (ಬಸವ. ೦೭೩). [ಸಂ. ಪೂಜನಾ]

**ಪೂಜಲ್ಲಿ**, ಹೂಜಲ್ಲಿ (ನಾ). ಹೂವಿನ ಕುಚ್ಚು: ರಂಗವಲ್ಲಿಗಳನಿಟ್ಟು ಪೂಜಲ್ಲಿಗಳಂ ಬಿಟ್ಟು (ಅದ್ಭುತ. ೦೦-೨೬). **ಹೂಜಲ್ಲಿ**: ಬಳ್ಳಿಬಳ್ಳಿ ಹೂಜಲ್ಲಿಯಲ್ಲಿ ಮುಂಬನಿಯ ತುಳುಕಿ ಚೆಲ್ಲಾ (ಕಪೀಳ. ೭-೨೦). [ಪೂ + ಜಲ್ಲಿ[1]]

**ಪೂಜಾಕಾರಿ** (ನಾ). ಅರ್ಚಕ; ಪೂಜಾರಿ: ನಖರ ಜಿನಾಲಯದ ಪೂಜಾಕಾರಿಗಳು ಒಡವ್ಬಟ್ಟು ಬರಸಿದ ಸಾಸನದ ಕ್ರಮವೆನ್ತೆನ್ದಡೆ (ಎಕ. II, ೩೩೬-೬; 1279); ಕೊಡಕಣಿಯ ರಾಮಯಿದೇವರ ಪೂಜಾಕಾರಿ ರಾಮಯಿದೇವನ ಅಳಿಯ ಬೊಮ್ಮಿದೇವಗೆ ಕನ್ಯಾದಾನವಾಗಿ ಮದುವೆಯನು ಮಾಡಿ (ಎಕ. VIII, ಸೊರಬ. ೦೯-೩೦; 1449). [ಸಂ. ಪೂಜಾಕಾರಿನ್]

**ಪೂಜಾಗಜ** (ನಾ). ರಾಜನ ಪಟ್ಟಾಭಿಷೇಕಕಾಲದಲ್ಲಿ ಪೂಜೆ ಮಾಡಿಸಿಕೊಳ್ಳುವ ಆನೆ; ಪಟ್ಟದಾನೆ; ಪಟ್ಟವರ್ಧನ: "ಪೂಜಾಗಜಮೆನಲ್ ಪಟ್ಟವರ್ಧನಾಖ್ಯಂ" (ಕನ್ನಡಕೈ. ೯೦); "ಪೂಜಾಗಜಮೆಂದೆನಿಪ್ಪುದು ಪಟ್ಟವರ್ಧನ ನಾಮ" (ಕಾ್ಮಹಿಂ. ೩೯). [ಸಂ.]

**ಪೂಜಾಗಾರ** (ನಾ). ದೇವರ ಪೂಜೆ ಮಾಡುವ ಸ್ಥಳ; ದೇವಾಲಯ: ನಗರಗಳಲ್ಲಿ (ಬಹುಮಟ್ಟಿಗೆ ಹಳ್ಳಿಗಳಲ್ಲಿಯೂ) ಮೂರ್ತಿಯುತ ಅಥವಾ ಮೂರ್ತಿಗಳಿಲ್ಲದ ಪೂಜಾಗಾರಗಳಿದ್ದುವು. ಇವುಗಳಿಗೆ ಆಯತನ ಅಥವಾ ಚೈತ್ಯಗಳೆಂಬ ಹೆಸರಿತ್ತು (ಕನ್ನಪ್ರಾ. ೭೦). [ಸಂ.]

**ಪೂಜಾದ್ರವ್ಯ** (ನಾ). ಅರ್ಚನೆಗೆ ಬಳಸುವ ನೀರು, ಹೂವು, ಗಂಧ, ಪತ್ರೆ, ಧೂಪ, ದೀಪ ಮೊದಲಾದ ಪರಿಕರ: ಅರಮನೆಯ ಸುಮಂಗಲೆಯರೂ ಬ್ರಾಹ್ಮಣರೂ ವೇದಘೋಷಗಳೊಡನೆಯೂ ಪೂಜಾದ್ರವ್ಯಗಳೊಡನೆಯೂ ನಂದಿನಿಯ ಬಳಿ ಸಾರಿದರು (ಮಹಾಅ. ೨೪). [ಸಂ.]

**ಪೂಜಾಫಲ** (ನಾ). ಪೂಜೆ ಮಾಡುವುದರಿಂದ ಉಂಟಾಗುವ ಪರಿಣಾಮ,– ಸಂಪಾದಿಸುವ ಪುಣ್ಯ: ನಹುಷಾವನೀಶನೆಂಬವನಿತ್ತಲ್ ಪೂಜಾಫಲದಿಂ ಸಗ್ಗಕ್ಕೋಜೆಯಿನೆಯ್ದುರ್ವ ಸಮಯದೊಳ್ (ಶಾಂಶಾಸ್ಕ. ೦-೨-೩೬); ಹಾಗಾದರೆ ಪೂಜಾಫಲದಲ್ಲಿ ನನಗೂ ಅರ್ಧ (ಶಾಕುಂತ. ೯೦-೯). [ಸಂ.]

**ಪೂಜಾಮಂದಿರ** (ನಾ). ದೇವರ ಪೂಜೆಯನ್ನು ಮಾಡಲು ಇರುವ ಕೋಣೆ; ಬೆಳಕಿನ ವೋಡದ ನಡುವೆ ತೂಗುವ ಹಸಿರು ಮನೆಯಲ್ಲಿ ಮೇನಕೆಯು ತನ್ನ ಪೂಜಾಮಂದಿರವನ್ನು ಕಟ್ಟಿದ್ದಾಳೆ (ಮಹಾಅ. ೦೬೮). [ಸಂ.]

**ಪೂಜಾಮದ** (ನಾ). [ಜೈನ] ಎಂಟು ಬಗೆಯ ಮದಗಳಲ್ಲಿ ಒಂದು; ತಾನು ಪೂಜ್ಯನೆಂಬ ಗರ್ವ: ಪೂಜಾಮದ . . . ತನಗೆ ಮಾನ ಮರ್ಯಾದೆಗಳು ದೊರಕಿದವೆಂಬ ವಿಷಯದಲ್ಲಿ ಹಲವರಿಗೆ ಸೊಕ್ಕು ಬರುತ್ತದೆ. ಇಂಥ ಸೊಕ್ಕನ್ನು ಸಮ್ಯಗ್‌ದೃಷ್ಟಿಯು ಮಾಡುವದಿಲ್ಲ (ಜ್ಞಾಪಕ. ೬೦). [ಸಂ.]

**ಪೂಜಾಯ** (ನಾ). ಅರ್ಚನೆಯ ಕ್ರಮ; ಪೂಜಾವಿಧಿ: ರಾಯನು ರಾಯನ ಸುತರು ವಸ್ತುಗಳ ಪೂಜಾಯವಱಿದು ನೀಡಿ ಕೊಡಲು ತಾಯಿ ಪೂಜಿಸಿದಳಾ ಸ್ವಾಮಿಯನು (ಶರಕ. ೫೯-೨೦). [ಸಂ.]

**ಪೂಜಾರಾಧನ** (ನಾ). [ಜೈನ] ನಲವತ್ತೆಂಟು ಬಗೆಯ ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು; ಗುರುಮುಖದಿಂದ ಧರ್ಮವನ್ನು ತಿಳಿಯುವುದಂ: ಎರಡನೆಯ ದೀಕ್ಷಾನ್ವಯಕ್ರಿಯೆಯೊಳಗವತಾರಮುಂ ವೃತ್ತಿ(ಧೃತಿ) ಲಾಭಮುಂ ಸ್ಥಾನಲಾಭಮುಂ ಗುಣಗ್ರಹಣಮುಂ ಪೂಜಾರಾಧನ [ಶಾಶಾಂ. ಪೂಜಾರಾಧ್ಯ]ಮುಂ . . . ಉಪಯೋಗಿತ್ವಮೆಂಬೆಂಟು ಗರ್ಭಾನ್ವಯ ಕ್ರಿಯೆಯೊಳ್ ಪೇಟ್ದು ಉಪನೀತಂ ಮೊದಲಾಗೆ ನಿವೃತ್ತಿಪರ್ಯಂತಮಪ್ಪ ನಾಲ್ವತ್ತುಮಂತು ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಯೊಳ್ (ಕಾಪುಂಕ. ೩೦೨). [ಸಂ.]

**ಪೂಜಾರಿ** (ನಾ). ಅರ್ಚಕ; ಪೂಜಕ: "ಪೂಜಕಃ, ಪೂಜಾರೀ, ಪೂಜಾಕಾರಃ—ಈ ೩ ಅರ್ಚಕಂ" (ಶಾಶಕ್ಕ. ೨೩೩); ದೇವರ್ಗೆ ಭಕ್ತರಪ್ಪರನೆ ಪೂಜಾರಿ ಮಾಡಿ . . . ನಡಸುವುದು (ಕೊಲ್ಹಾಶಾ. ೯-೦೬; 1083); ಅಚ್ಚಗುಗ್ಗುಳಮನರ್ಪಿಸುತೋಹಿಲದೇವನುದ್ದಂಡಭಕ್ತಿಯಿನಾ ಸೋಮೇಶ್ವರನ ಪೂಜಾರಿಗಳ್ಕಂಡು (ಅದ್ಭುಟ. ೦೦-೯೩ ವ); ಪೂಜಾರಿಯು ಕರ್ತವ್ಯ

ಭ್ರಷ್ಟನಾದರೆ ಅವನನ್ನು ದೇವರು ಶಿಕ್ಷಿಸುತ್ತಾನೆ (ಹಳ್ಳಿ. ೨೬); ದೇವರು ವರ ಕೊಟ್ಟರೂ ಪೂಜಾರಿ ಕೊಡ (ಗಾದೆ). [<ಸಂ. ಪೂಜಾಕಾರಿನ್. / ಓಂ. ಮರಾ. ಪುಜಾರೀ./ತೆಲು. ಪೂಜಾರಿ]

**ಪೂಜಾರಿಕೆ** (ನಾ). ಅರ್ಚಕನ ಕೆಲಸ; ಪೂಜೆ ಮಾಡುವ ವೃತ್ತಿ: ನವಿರಂಗಳ ಅಯಿಸೂರ್ಬ್ಬರ ಸಮಕ್ಷದಲ್ಲಿ ಕೊಟದು ೧೧ ಪೂಜಾರಿಕೆಗೆ ೧ (ಶಾಇ. XX, ೧೦೨-೦೪ ; 1132); ನಿಮ್ಮ ಓರಿಯುವರೇನೋ ನೀಲಕಂಠನ ಗುಡೀಲಿ ಪೂಜಾರಿಕೆ ಮಾಡ್ತಿದ್ದರಂತಲ್ಲ (ಬೇಮ. ೯೯). [ಪೂಜಾರಿ+—ಇಕೆ]

**ಪೂಜಾರ್ಹ** (ನಾ). ೧. ಪೂಜೆಗೆ ಯೋಗ್ಯವಾದುದು: ಕಳಾಹೀನವಾದ ಆ ಮೂರ್ತಿಯು ಪೂಜಾರ್ಹವಾಗುವುದಿಲ್ಲ (ಶಾರದ. ೭೬). ೨. ಮಾನ್ಯನಾದವನು; ಪೂಜೆಗೆ ಯೋಗ್ಯನಾದವನು: ಎಲೈ ಅಗ್ನಿಯೇ, ನೀನು ಅಲೌಕಿಕವಾದ ಪ್ರಕಾಶವುಳ್ಳವನು. ಪೂಜಾರ್ಹನು (ಋಕ್ಸಾರ. ೨೩). [ಸಂ.]

**ಪೂಜಾವಚನ** (ನಾ). ಗೌರವಾರ್ಥವಾಗಿ ಬಳಸುವ ಮಾತು: "ತತ್ರಭವಾನ್ ಭಗವಾನ್—(ಇವೆರಡುಂ) ಈ ೨ ಪೂಜಾವಚನಂ. ಪಾದಃ, ದೇವಃ, ಭಟ್ಟಾರಕಃ—ಈ ಮೂಱುಂ ಪೆಸರ ಕಡೆಯೊಳ್ ಪೂಜಾವ(ಚ)ನಂ" (ಹಲಾಯು. ೨೩-೦೩೪). [ಸಂ.]

**ಪೂಜಾವಾಜಿ** (ನಾ). (ರಾಜನ ಪಟ್ಟಾಭಿಷೇಕಕಾಲದಲ್ಲಿ) ಪೂಜೆ ಮಾಡಿಸಿಕೊಳ್ಳುವ ಕುದುರೆ; ಪಟ್ಟದ ಕುದುರೆ: ಪೂಜಾವಾಜಿ ವಿಲೋಚನವಿಗಳದಶ್ರುಬಿಂದುಗಳನಾನಂದಾಶ್ರುಬಿಂದುಗಳೆಂದುಂ . . . ಅಭೂತಪೂರ್ವಮುತ್ಪಾತಂಗಳನೇನುಮಂ ಬಗೆಯದೆ ಕೋಪಮನೆ ಬಗೆದು (ಶಂಖಾವತಾ. ೦೪-೦೨೬ ವ). [ಸಂ.]

**ಪೂಜಾವಿಧಾನ** (ನಾ). ಪೂಜೆ ಮಾಡುವ ಕ್ರಮ: ಇಂದ್ರ ಚಕ್ರವರ್ತ್ಯಾದಿ ನಿತ್ಯನಿರ್ವರ್ತ್ಯಮಾನಂ ಮಹಾಮಹಸರ್ವತೋಭದ್ರಾದಿಕಂ ಪೂಜಾವಿಧಾನ ಮನೇಕವಿಧಂ (ಶಾಂತಿಪು. ೭-೪೯ ವ). [ಸಂ.]

**ಪೂಜಾವಿಧಿ** (ನಾ). ಆರಾಧನೆ; ಪೂಜಾಕಾರ್ಯ: ದ್ವಿಜರಿಂ ಪೂಜಾವಿಧಿ ಮಂತ್ರಪೂರ್ವಕಂ ಬಾಗಿಲೊಳ್ ತೋರಣಂಗಟ್ಟಿ . . . ಗೃಹವೇದಿಗಳಿಂ ಪ್ರಯೋಗಿಸುವುದು ಪ್ರೀತಿಕ್ರಿಯೆ (ಜಾಪುಂಪು. ೨೦೩); ಯಾರ ಹೆಸರಿನಲ್ಲಿ ಅಷ್ಟೆಲ್ಲ ಪೂಜಾವಿಧಿಗಳು ಜರುಗುತ್ತಿದ್ದುವೋ ಅವೆಲ್ಲ ಆ ಯೇಸುವಿನ ಮುಖಕ್ಕೆಸೆದ ಪರಿಹಾಸವಂತೆ ಮೈತಳೆದ ಪಾಪಂಡಿತನದಂತಿದ್ದುವು (ಕೃಸರು. ೦೭೯). [ಸಂ.]

**ಪೂಜಿ** (ನಾ). ೧. ಬಿಂದು; ಅನುಸ್ವಾರ: ಜಾಜಿ ಪ್ರಶ್ನಾರ್ಥಕವು, ವಿಷ್ಣುಕ್ರಾಂತಿ ವಿಸರ್ಗ, ಪಾರಿಜಾತವೆ ಪೂಜಿ, ಅನುಸ್ವಾರವು! (ಕರುಶ್ರಾ. ೨೩-೦೨). ೨. ಸೊನ್ನೆ; ಶೂನ್ಯ: ಉತ್ತರ ನೂರು ಬರಬೇಕು. ಹತ್ತು ಬರೆದಿರುವಿ. ಮುಂದಿನ ಪೂಜಿ ಸ್ವಲ್ಪ ಅಳಿಸಿದ್ದೀತು! (ನಿರಾಶ. ೯೭); ಅವನ ಸಂಬಳ ದೊಡ್ಡದು, ಭೂಮಿಯು ಉತ್ಪನ್ನ ಬೇಕಾದಷ್ಟು. ಆದರೆ ಉಳಿಕೆ ಮಾತ್ರ ಪೂಜಿ (ಕವನ. ೩೦). [<ಪೂಜೆ]

**ಪೂಜಿಗ** (ನಾ). ಅರ್ಚಕ; ಪೂಜಾರಿ: ಆ [ಪೂ]ಜಿಗಂಗೆ ಮದ್ದಳೆ ಕಾಱಿರ್ವ್ವರ್ಗ್ಗೆ ಎರೆ ಮತ್ತರ ೨೭ ವೊಗೆ ಮತ್ತ ೨೦ (ಶಾಇ. XX, ೩೦೦-೪; 12ನೆಯ ಶತ). [ಪೂಜೆ + —ಇಗ]

**ಪೂಜಿತ** (ಗು). ೧. ಅರ್ಚನೆಯನ್ನು ಪಡೆದ; ಪೂಜೆ ಮಾಡಿಸಿಕೊಂಡ: ಈ ವಿಚಾರಶಾಸ್ತ್ರವೂ ವೇದದಂತೆ ಪೂಜ್ಯವಾದುದರಿಂದ ಪೂಜಿತ ವಿಚಾರ ಶಾಸ್ತ್ರವೆಂದು ಇದನ್ನು ಕರೆಯುತ್ತಾರೆ (ಹಿಂದಸಾ. ೦೪೯). (ನಾ). ೨. ಪೂಜೆಯನ್ನು ಪಡೆದುದು: ಸುರಪತಿಪೂಜಿತಂ . . . ಜಿನಸೇನಮುನೀಂದ್ರಪದಾಂಬುಜದ್ವಯಂ (ಆಪು. ೧-೭). ೩. ಪೂಜೆಯನ್ನು ಹೊಂದಿದವನು ಪೂಜ್ಯ: "ಪೂಜಿತಃ, ಅಪಚಿತಃ—ಈ ೨ ಪೂಜೆ ಪಡೆದವಂ" (ಹಲಾಯು. ೩೩ ೨೨೯); ಈ ದಿವ್ಯತೂರ್ಯಸ್ವರವೊ, ದಿವ್ಯಗಾಯನವೊ ಇವುಗಳಿಂ ಸುಗತನೆದೊ ಸತ್ಕೃತಂ, ಗುರುಕೃತಂ, ಮಾನಿತಂ, ಪೂಜಿತಂ ತಾನಲ್ಲ! (ವೈಶಾಖ. ೭೩-೩೦೨). ೪. ಗೌರವ; ಮರ್ಯಾದೆ: 'ಪೂಜಿತಗೆಡಿಸಂ' ಪರಾ. [ಸಂ.]

**ಪೂಜಿತಗೆಡಿಸು** (ಕ್ರಿ). ಗೌರವವನ್ನು ಇಳಿಸಂ; ಮರ್ಯಾದೆ ಕೆಡಿಸು; ಅಗೌರವಕ್ಕೆ ಗುರಿಮಾಡು: ರಾಜವಂಶೋದ್ಭವರನು ರಾಜರೆನ್ನದೆ ಪೂಜಿತಗೆಡಿಸಿ ಪೇಳ್ವಾಗ ರಾಜತ್ವಕದು ಭಂಗವಲ್ಲವೆ (ಭರತ. ೩೯-೦೦೦). [ಪೂಜಿತ + ಕೆಡಿಸು₁]

**ಪೂಜಿಸು** (ಕ್ರಿ). ೧. ಅರ್ಘ್ಯ, ಪಾದ್ಯ, ಗಂಧ, ಮಾಲೆ ಮೊದಲಾದುವುಗಳಿಂದ ಸತ್ಕರಿಸಂ; ಪೂಜೆ ಮಾಡು: ಪ್ರತಿಮಾಯೋಗಂ ನಿಂದೊರು ದೇವರ್ಕಳುಂ ಮನುಷ್ಯರ್ಕಳುಂ ಬಂದು ಓರಿದಪ್ಪ ಪೂಜೆಯುಂ ಮಾಡಿಯರ್ಚಿಸಿ ಪೂಜಿಸಿ ಬಂದಿಸಿದೊಡೆ (ವಡ್ಡಾರಾ. ೭೪-೨೭); ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ (ಬಸವ. ೯೯); ಕರ್ಣನಾಯುಧಶಾಲೆಯುಲಿ ಶುಚಿಯಾಗಿ ಶಸ್ತ್ರಾಸ್ತ್ರವನು ಪೂಜಿಸಿದ (ಕುವ್ಯಾಕ. ೯-೭); ಪೂಜಿಸುವರೆಲ್ಲರೂ ಪೂಜ್ಯರೆನಗೆ: ಪೂಜ್ಯರಸು ಪೂಜಿಸುವುವೂ ಪೂಜೆ ನಿನಗೆ! (ಅನಿಕೇ. ೩೭-೦). ೨. ಗುಣಿಸು; ಗುಣಾಕಾರಮಾಡು: "ಕಾದಿಸು ಪೂಜಿಸು ಉತ್ತಮದಿಂ ಪೇಟಿ ಮೊದಲ ಗುಣಕಾರಂಗಳ್" (ವ್ಯವಹಾ. ೦೦-೦೦). [ಪೂಜನ + — ಇಸು₃]

**ಪೂಜು** (ಕ್ರಿ). ೧. ಪೂಜೆಮಾಡು; ಅರ್ಚಿಸು: ಹವಣೆಗಾರನು ಕಾರ್ಯ ಮಾಳ್ಪರೆ ಜವದಿ ಹರಿಯನು ಪೂಜಿ ನುತಿಸುವ ಕವಡು ಕುಟಿಲಗಳಿಲ್ಲ ಮನದೊಳು ಅರಸಿ ನೋಡಿದಡೆ (ಹಮುತ. ೦೦೭). ೨. ಗೌರವಿಸಂ; ಮನ್ನಿಸು: ತನ್ನ ಮನೆಯ ಮದುವೆಯೊಳು ಮಂಗಲದೊಳು ತನ್ನ ಬಾಂಧವರೆಲ್ಲರನು ಅನ್ನಪಾನಂಗಳಿಂದಾದರಿಪುದು ಮತ್ತೆ ಪೊನ್ನುಡೆಯಿತ್ತು ಪೂಜುವುದು (ಹದಿಬ. ೪-೩೯). [ < ಪೂಜೆ ]

**ಪೂಜೆ** (ನಾ.) ೧. ಅರ್ಚನೆ; ಆರಾಧನೆ: ದೇವರ್ಕಳುಂ ಮನುಷ್ಯರ್ಕಳುಂ ಬಂದು ಓರಿದಪ್ಪ ಪೂಜೆಯುಂ ಮಾಡಿ (ವಡ್ಡಾರಾ. ೭೪-೨೭); ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗಟ್ತೆ ಲಾಭಮೆಂಬಿವೆ ವಲಂ (ಆದಿಪು. ೦-೩೭); ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ (ಬಸವ. ೦೨೭). ೨. ಗೌರವ; ಮನ್ನಣೆ: ಸೆಣಸಿ ಶೂರ ಸಂಗ್ರಾಮದಲಿ ಬಿಳ್ದೊಡಂ ಬಳ್ದೊಡಂ ಸನ್ಮಾನ್ಯನಾ ಕಲಿಯೆ, ಮೇಣಾಳಿದ ಮಂದೆಗಳಿಗಾ ಪೂಜೆ ಸಲ್ಲದೈ (ಶಿಶ್ರಾಂಗ. ೭೯-೨೧೯೭). ೩. ಸೊನ್ನೆ; ಶೂನ್ಯಚಿಹ್ನೆ: ಎಲ್ಲಕ್ಕೂ ಹತ್ತರಿನ ನಕ್ಷತ್ರವನ್ನು ಹೇಳಬೇಕಾದರೆ ಎರಡರ ಮುಂದೆ ಹದಿಮೂರು ಪೂಜೆಗಳನ್ನಿಡಬೇಕಾಗುವುದು (ಜ್ಯೋತಿಶ್ಯಾ. ೦೨). ೪. (ಆಲಂ) ಶಾಸ್ತಿ; ಶಿಕ್ಷೆ: ನಿಮ್ಮ ತಂದೆಯವರಿಗೆ ಹೇಳಿ ಬಿಡುತ್ತೇನೆ, ನಿನಗೆ ಪೂಜೆ ಆಗುತ್ತದೆ (ರೂಢಿ).

**ಪೂಜೆ ಪುನಸ್ಕಾರ, ಪೂಜೆ ಪುರಸ್ಕಾರ** = ಅರ್ಚನೆ; ಆರಾಧನೆ: ಸನ್ನಿಧಿಗ್ರಪಿ ನಾಗದೇವಯ್ಯಂ . . . ಮೂಲಸ್ಥಾನದೇವರ್ಗ್ಗಂ ಮಲ್ಲಿಕಾರ್ಜುನದೇವರ್ಗ್ಗಂ ಪೂಜೆ ಪುನಸ್ಕಾರ ನಿವೇದ್ಯಕ್ಕಮಿವು ಬಿಟ್ಟ ದತ್ತಿ (ಎಕ. VI, ಕಡೂರು. ೦೪೨-೦೭; 1196); ತೌರುಮನೆಯಲ್ಲಿದ್ದರೆ ಏನೋ ಒಂದಿಷ್ಟು ಪೂಜೆ ಪುರಸ್ಕಾರಗಳನ್ನಾದರೂ ಮಾಡಬಹುದು (ಜಾಡಬ. ೯೪). P ಇದೊಂದು ಕೂಡುನುಡಿ. **ಪೂಜೆ ಮಾಡು** = ೧. ಅರ್ಚಿಸು; ಪೂಜಿಸಂ; ಆರಾಧನೆ ಮಾಡು: ಶಾಂತಲೆ ಲಕ್ಷ್ಮಿಯರಿಬ್ಬರೂ ಸಹಸ್ರಸಹಸ್ರಪುಷ್ಪಗಳಿಂದ ಪರಮಾತ್ಮನ ಪೂಜೆ ಮಾಡಿ ಧನ್ಯರಾದರು (ಶಾಂತಲಾ. ೦೩೦); ಹುತ್ತಕ್ಕೆ ಹಾಲು ಹೊಯ್ದು ಪೂಜೆ ಮಾಡಿದರಂತೆ (ನವ್ಯಾರು. ೩೦). ೨. (ಆಲಂ) ಶಾಸ್ತಿ ಮಾಡು: ಪಾಠ ಓದದೆ ಇದ್ದುದಕ್ಕೆ ಮೇಷ್ಟರು ಪೂಜೆ ಮಾಡಿದರು (ರೂಢಿ). **ಪೂಜೆ ಹಾಕು** = ೧. ತಾಂತ್ರಿಕ ಪೂಜೆ ಮಾಡಿ ಮೆಟ್ಟಿಕೊಂಡ ದೆವ್ವವನ್ನು ಬಿಡಿಸು: ಪೂಜೆ ಹಾಕಿದ

ನಂತರ ಅವಳಿಗೆ ಅರ್ಧ ಘಂಟೆ ಎಚ್ಚರ ತಪ್ಪಿತ್ತು (ಕೂಡಿ). ೨. ಮಂತ್ರ ಹಾಕು; ಮಂತ್ರಿಸು : ರೋಗಿಯನ್ನು ಕೂರಿಸಿ ೧೦೮ ಬಿಂದಿಗೆ ನೀರನ್ನು ರಪರಪ ಅಂತ ಎರಚಿ ಸ್ನಾನ ಮಾಡಿಸುತ್ತಿದ್ದರು; ಅನಂತರ ಪೂಜೆ ಹಾಕುತ್ತಿದ್ದರು (ಮಹೋಪ. ೩೩೫). [ಸಂ. ಪೂಜಾ]

**ಪೂಜೆಗ** (ನಾ). (ಆಲಂ) ಸತ್ವವಿಲ್ಲದವನು : ಅರಸುಗಳ್ಗೆ ವಿರಸಮಾದವ ಸರದೊಳ್ ಜಾಗಿಯಂ ಲುಬ್ಧನೆಂಬರ್ ಭೋಗಿಯಪ್ಪನಂ ಪೂಜೆಗನೆಂಬರ್ ಸೌಭಾಗ್ಯಮುಳ್ಳವನಂ ಪಾಣ್ಬನೆಂಬರ್ ತ್ಯಾಗಿಯಂ ಅರ್ಥದೂಷಕನೆಂಬರ್ ಅರ್ಥದೂಷಕನಂ ತ್ಯಾಗಿಯೆಂಬರ್ (ಹಂಕಚ. ೩೦-೦೦). 'ಹೂಜೆಗ' ಹೋ. [ಪೂಜೆ+—ಗ$_{3}$]

**ಪೂಜೆಗಟ್ಟು** (ಕ್ರಿ). ಪೂಜೆ ಮಾಡು; ಅರ್ಚಿಸು : ಪೂಜೆಗಟ್ಟುವ ಪೂಜಾರಿಗವಲ್ಲಿ . . . ಧಾರಾಪೂರ್ವಕಂ ಮಾಡಿ ಬಿಟ್ಟ ಬೆದ್ದಲೆ ಮತ್ತ ೫ (ಶಾಇ. IX—i, ೦೦೩-೦೨; 1054). [ಪೂಜೆ +ಕಟ್ಟು$_{1}$]

**ಪೂಜೆಗೆಯ್, ಪೂಜೆಗೈ** (ಕ್ರಿ). = ಪೂಜೆಗಟ್ಟು : ಅಗ್ಘವಣಿಹೂಗಳಂ ಬೇಗಂ ತಂದಂತಂತೆ ಪೂಜೆಗೆಯ್ವು (ಬಸವ. ೯-೯೦); ನೀನಲ್ಲದನ್ಯದೈವವ ಪೂಜೆಗೆಯ್ದು ಮತ್ತೇನ ಕಂಡರು ಮಿಥ್ಯಾಧಮರು (ಸೋಚಚ. ೯೦-೬೨). **ಪೂಜೆಗೈ** : ಸಂಗಮೇಶ್ವರಂಗೆ . . . ಓಜೆಯಿಂ ಪೂಜೆಗೈದು ಪ್ರಸಾದಕಾಯ ನಾಗಿ ಸುಖದೊಳಿಪ್ಪುದು (ಬಸವ. ೨-೬೮); ಪೂಜೆಗೈದು-ಮೊರೆಯಿಡುತಿಹರಲ್ಲ ಭಕುತರವೇ ಬೇಡಲು ಬಾಯಿಲ್ಲ (ಗಣೇಶ. ೨-೨೩). [ಪೂಜೆ+ಕೆಯ್$_{1}$]

**ಪೂಜೆಗೈ** 'ಪೂಜೆಗೆಯ್' ನೋ.

**ಪೂಜೆಗೈಸು** (ಕ್ರಿ). ಪೂಜೆ ಮಾಡಿಸು; ಅರ್ಚಿಸುವಂತೆ ಮಾಡು : ಕುತುಪಕಾಲವಂ ಮಿಾಜಲೀಯೆ ನಾಂ ಬಂದ ವಿಪ್ರರನಾದರಿಸಿ ಪೂಜೆ ಗೈಸದಿರೆನು (ಕೃಮಿತಾ. ೦೦-೨೯). [ಪೂಜೆ + ಕೈಸು (< ಕೆಯ್ಸು)]

**ಪೂಜೆಗೊಡಗಿ** (ನಾ). ದೇವರ ಪೂಜೆಗಾಗಿ ಕೊಟ್ಟ ಭೂಮಿ,—ಉಂಬಳಿ : ಚಮೆಯನಾಯಕಂಗೆ ಚತುರಣಸೀಮೆಯೊಳಗಾಗಿ ಕೊಟ ಪೂಜೆಗೊಡಗಿಯ ಕ್ರಮ (ಎಕ. XVI. ತುಮಕೂ. ೮೩-೦೯ ; ೧). [ಪೂಜೆ+ಕೊಡಗಿ (< ಕೊಡಂಗೆಯ್$_{2}$)]

**ಪೂಜೆಗೊಳ್** (ಕ್ರಿ). ಪೂಜಿಸಿಕೊಳ್ಳು ; ಪೂಜೆಯನ್ನು ಹೊಂದು : ಇಂತೀ ದ್ವಿವಿಧ ಒಂದಾಗದ ಮುನ್ನ ಕೂಡಲಸಂಗಮದೇವರು ಪೂಜೆ ಗೊಂಡರು (ಬಸವ. ೯೩೬); ಪೂಜೆಗೊಳಲ್ಕೆ ಬಂದು ನಿಜಮಂದಿರಮಂ ನೆಲೆವೀಡುಗೊಂಡು ರಾರಾಜಿಪ ನಂದನಂದನನ ಚಂದಮನೊಂದಿಸಿ ಚಿತ್ತ ಭಿತ್ತಿಯೊಳ್ (ಶಶಿ. ೫-೦೯). [ ಪೂಜೆ + ಕೊಳ್$_{1}$ ]

**ಪೂಜೆವಂತ** (ನಾ). (ಆಡಂಬರದ) ಪೂಜೆ ಮಾಡುವವನು: ಗುಣವನೆಚಾಯ ರಾಗಿ ಶೀಲವಂತಂಗೆ ನೇಮವಿಲ್ಲ ಘಾತಕಂಗೆ ಭಕ್ತಿಯಿಲ್ಲ ಪೂಜೆವಂತಂಗೆ ಲಿಂಗವಿಲ್ಲ ತ್ರಿವಿಧವ ಮುಟ್ಟಿಯದವಂಗೆ ಜಂಗಮವಿಲ್ಲ (ಮೋಳಿಮಾ. ೫೨-೨೦೬). 'ಪೂಜ್ಯವಂತ' ಪರಾ. [ ಪೂಜೆ + —ವಂತ ]

**ಪೂಜೆವಡೆ** (ಕ್ರಿ). ಪೂಜೆಯನ್ನು ಹೊಂದು ; ಪೂಜಿಸಿಕೊಳ್ಳು : ಈ ಮಹಾತ್ಮಂ ಧರೆಗಚ್ಚರಿಯಾಗೆ ಭಕ್ತಿಯಿಂದಂ ಸುರರಿಂದಂ ಪೂಜೆವಡೆದಂ (ಕರ್ಣಾಮೃ. ೯-೨೬೫); ಈ ಪೊಡವಿಯೊಳಜಂ ಪೂಜೆವಡೆಯನೆ ಹೇಗುಲ ದೊಳಿರ್ದ (ಬಸವ. ೫೯-೬). [ ಪೂಜೆ + ಪಡೆ$_{1}$ ]

**ಪೂಜೋತ್ಸಾಹ** (ನಾ). ೧. ಪೂಜೆ ಮಾಡುವುದರಲ್ಲಿರುವ ಉತ್ಸುಕತೆ. ೨. ಆರಾಧನೆಯಲ್ಲಿ ಉತ್ಸುಕನಾದವನು : ಷಟ್ಕರ್ಮನಿರತರತಿಥಿ ಅಭ್ಯಾಗತವಿಸಿಷ್ಟಜನಪೂಜೋತ್ಸಾಹವ್ಯವಹಾರಚತುರ್ಮುಖರ್ . . . ಅಪ್ಪ ಶ್ರೀಮತ್ ಪಟ್ಟಿಲನಾಲ್ವೂಜಿಷ್ಪರ್ದಿಂಬರ್ (ಶಾಇ. XX. ೫೬-೯; 1084). [ಸಂ.]

**ಪೂಜೋಪಕರಣ** (ನಾ). ಪೂಜೆ ಮಾಡಲು ಬೇಕಾಗುವ ಸಾಧನ,— ಸಲಕರಣೆ : ಚಿನ್ನ ಬೆಳ್ಳಿಗಳ ಪೂಜೋಪಕರಣ, ಸೇವೋಪಕರಣ . . . ಇವುಗಳನ್ನು ಒಪ್ಪಿಸಿ ದೇವತಾಸೇವೆಯನ್ನು ಮಾಡಿದರು (ಮಹಾಪ. II, ೦೨೯). [ಸಂ.]

**ಪೂಜ್ಯ** (ಗು). ೧. ಗೌರವಕ್ಕೆ ಯೋಗ್ಯವಾದ ; ಮಾನ್ಯ ; ಆದರಣೀಯ. (ನಾ). ೨. ಪೂಜೆಗೆ ಅರ್ಹನಾದವನು ; ಪೂಜನೀಯ ವ್ಯಕ್ತಿ : "ಪ್ರತೀಕ್ಷ್ಯ:, ಪೂಜ್ಯ:—ಈ ೨ ಪೂಜಿಸಲ್ಪಕ್ಕವಂ" (ಹಲಾಯು. ೬೩-೨೨೯); ಉಟ್ಟು ತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷವೆಂದು ಕಂಥೆಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡನಾದರೆ ಪಂಚಮಹಾಪಾತಕ (ಬಸವ. ೯೦೦); ಪೂಜ್ಯರೆ, ತಮ್ಮಾಜ್ಞೆಯೇನು ? ಕರುಣಿಸ ಬೇಕು (ಶಾಕುಂತ. ೨೭-೨೦); ಪೂಜ್ಯನನ್ನು ಮಹನೀಯನೆಂದು ತಿಳಿಯುವುದೇ ಭಕ್ತಿ ಎನಿಸುವುದು (ಕತ್ತಿ. ೬೯). ೩. ಪತ್ನಿಯ ಅಥವಾ ಪತಿಯ ತಂದೆ ; ಮಾವ. ೪. ಆದರಣೀಯವಾದುದು ; ಮನ್ನಣೆಗೆ ಯೋಗ್ಯವಾದುದು : ಆಗಸದೊಳು ಚರಿಸುವ ಸುರಸತಿಯರ ಸೋಗೆ ಮುಡಿಗೆ ಪೂಜ್ಯವಾಗಿ ಆಗರಳಿದ ಕಸ್ತೂರಿ ಹೊಂಬಾಳೆಯ ಪೂಗವೃಕ್ಷಗಳೊಪ್ಪುತಿಹುವು (ಕಂಚರಿ. ೨-೯೦); ಪ್ರಕೃತಿಹಿತಾರ್ಥಂ ಕ್ಷಿತಿಪಾಲಕರುದ್ಯೋಗಿಸುಗೆ ಪೂಜ್ಯಮೆನಿಸುಗೆ ಜಗದೊಳ್ ಸುಕವಿಗಳ ಸೂಕ್ತಿ (ಶಾಕುಂತ. ೦೦೬-೨೯೯). ೫. ಸೊನ್ನೆ ; ಶೂನ್ಯ : ರಾಜ್ಯಗೋಮಿನಿಯೊಳು ನೆಲಸಿರ್ದನೆಂದೊಡೆ ರಾಜ್ಯವು ಶಾಪದಸ್ಥಿರವು ಪೂಜ್ಯವಾಗಿರಬೇಕನಲಾಯುಷ್ಯವು ಪೂಜ್ಯವಲ್ಲದೆ ಚಿರವಲ್ಲ (ಅಶಂತ. ೩-೦೩೦); ಜನಾರ್ದನನ ಆಡಳಿತದಲ್ಲಿ ಸಂಪಾದನೆಯು ಪೂಜ್ಯವಾದುದರಿಂದ ಸಂಸಾರದಲ್ಲಿ ವ್ಯಾಜ್ಯಗಳೂ ದಿನದಿನಕ್ಕೆ ಅಧಿಕವಾಗ ತೊಡಗಿದುವು (ಮರಳಿಮ. ೦೦೯). [ಸಂ.]

**ಪೂಜ್ಯತೆ** (ನಾ). ಗೌರವ ; ಮನ್ನಣೆ : ಪೂಜ್ಯಪದರನಾರಾಧಿಪ ಜನಕ್ಕೆ ಪೂಜ್ಯತೆಯರಿದೇ (ಶಾರ್ಙ್ಗಕೃ. ೦೯-೦೦೬); ಧಾರ್ಮಿಕ ಮತ್ತು ಆಧ್ಯಾತ್ಮಿಕ ಮಹಾಪುರುಷರ ಆದರ್ಶದಲ್ಲಿ ಯುವಕರಿಗೆ ಪೂಜ್ಯತೆಯೂ ಆಸಕ್ತಿಯೂ ಇರುವುದರಿಂದ ಅವರ ಜೀವನಕಥನಗಳೂ ತತ್ವದೃಷ್ಟಿಗಳೂ ಪಠ್ಯವಸ್ತು ವಿನಲ್ಲಿ ಅಳವಡಬೇಕು (ಶಿಕ್ಷಣ. ೦೭೦). [ಸಂ. ಪೂಜ್ಯತಾ]

**ಪೂಜ್ಯಪದ** (ನಾ). ೧. ಗೌರವದ ಸ್ಥಾನ; ಆದರಣೀಯವಾದ ಪದವಿ : ನನ್ನನ್ನು ಯಾವ ಗೃಹಿಣೀಪದದಿಂದ ನೀಚನಾದ ನೀನು ಒಮ್ಮೆ ಭ್ರಷ್ಟ ಗೊಳಿಸಿರುವೆಯೋ ಆ ಪೂಜ್ಯಪದವು ಜನ್ಮಜನ್ಮಾಂತರದಲ್ಲಿಯೂ ನನಗೆ ದುರ್ಲಭವಾಗಿಬಿಟ್ಟಿತು (ಉಂಬಳಿ. ೦೬). ೨. ಆದರಣೀಯವಾದ ಪದವಿ ಯಲ್ಲಿರುವವನು ; ಪೂಜನೀಯ ವ್ಯಕ್ತಿ : ಹರಿವಧು ನೂಪುರಮಂ ಜನಚರಣದೊಳಳವಡಿಸಿ ತಳೆಯೆ ಶಿರದೊಳ್ ಮಣಿಶೇಖರಮೆನಿಸಿತಂತೆ ಪೂಜ್ಯಪದರನಾರಾಧಿಪ ಜನಕ್ಕೆ ಪೂಜ್ಯತೆಯರಿದೇ (ಶಾರ್ಙ್ಗಕೃ. ೦೯-೦೦೬). [ಸಂ.]

**ಪೂಜ್ಯಪಾದ** (ನಾ). ೧. ಧರ್ಮಬೋಧಕರು, ಸಂನ್ಯಾಸಿಗಳಂ ಮುಂತಾದವರನ್ನು ಸಂಬೋಧಿಸುವಾಗ ಗೌರವಕ್ಕಾಗಿ ಬಳಸುವ ಶಬ್ದ : ಪೂಜ್ಯಪಾದ ಶ್ರೀ ಶಿವಾನಂದಸ್ವಾಮಿಯವರು ಈ ಪೀಠದಲ್ಲಿ ಕುಳಿತು ಕೊಳ್ಳಲಿ (ಕೂಡಿ). ೨. (ಕ್ರಿ. ಶ. ೬೦೦ರಲ್ಲಿ ಇದ್ದ, ಪ್ರಸಿದ್ಧನಾದ) ಒಬ್ಬ ಜೈನಮುನಿಯ ಹೆಸರು : ಪೂಜ್ಯಪಾದಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ (ಆದಿಪು. ೦-೦೦); ಸುಕವಿಪ್ರಣತವ್ಯಾಕರಣಕರ್ತೃಗಳ್ ಗಗನಗಮನಸಾಮರ್ಥ್ಯರ್ ತಾರ್ಕಿಕಶಿಖರರೆಂದು ಪೊಗಟ್ವುದು ಸಕಳಜನಂ ಪೂಜ್ಯಪಾದಭಟ್ಟಾರಕರಂ (ಶಾಪುಂಪು. ೨). [ಸಂ.]

**ಪೂಜ್ಯಪಾದತೆ** (ನಾ). ೧. ಪಾದಗಳಿಗಿರುವ, ಪೂಜೆಯನ್ನು ಪಡೆಯುವ ಘನತೆ. ೨. ಪೂಜ್ಯಪಾದಮುನಿಯಂತೆ ಇರುವಿಕೆ. ೧, ೨ : ಕ್ಷಿತಿನಾಥವ್ರಜಪೂಜ್ಯಪಾದತೆ ನಿಜಾಚಾರ ಪ್ರತೀತಾಕಳಂಕತೆ ವಿದ್ವನ್ನುತ ವೀರಸೇನತೆ ನಿಜಂ ತಾಂ (ಕಾದ್ರಪು. ೧-೩೦). [ಸಂ. ಪೂಜ್ಯಪಾದತಾ]

**ಪೂಜ್ಯಭಾವ** (ನಾ). ಗೌರವದ ಭಾವನೆ : ಆದರಭಾವ : ಅವಳ ಅಕ್ಕ

ಸುಂದರಿಯು . . . ಗುಣಶಾಲಿನಿಯಾಗಿದ್ದದ್ದರಿಂದ ಚಂದ್ರಶೇಖರನ ಯೋಗ್ಯತೆಯನ್ನು ಗ್ರಹಿಸಿ ಅವನನ್ನು ಪೂಜ್ಯಭಾವದಿಂದ ಕಾಣುತ್ತಿದ್ದಳು (ಬಂಕವು. ೨೦೦). [ಸಂ.]

**ಪೂಜ್ಯಭಾವನೆ** (ನಾ). = ಪೂಜ್ಯಭಾವ : ಗಡ್ಡವು ಎದೆಯವರೆಗೂ ಬೆಳೆದಿದ್ದು ನೋಡುವವರಿಗೆ ಒಂದು ಪೂಜ್ಯಭಾವನೆಯನ್ನುಂಟುಮಾಡು ತ್ತಿದ್ದುದು (ಕಳಹು. ೧). [ಸಂ. ಪೂಜ್ಯಭಾವನಾ]

**ಪೂಜ್ಯವಂತ** (ನಾ). ಗೌರವಾನ್ವಿತನಾದವನು ; ಮಾನ್ಯ : ಪೂಜೆಯಿಂದ ತಾ ಪೂಜ್ಯವಂತನಾದಿಹೆನೆಂದು ಮಾಡುವನಿರವು ಹೊಲಶಿ ತನ್ನ ಹೊಲೆಯು ಮಜ್ಜಿಸಿ ಶುದ್ಧ ನೀರ ಮಿಂದೆನೆಂದು ಕೆಲವರ ಮುಟ್ಟುವಂತೆ ಆ ವಿಧಿ ನಿನಾಯಿತ್ತು ತ್ರಿಕರಣಶುದ್ಧವಿಲ್ಲದ ಪೂಜೆ (ವೋಳವೂ. ೩೯-೧೬೨). [ಸಂ. ಪೂಜ್ಯವತ್]

**ಪೂಜ್ಯೆ** (ನಾ). ಗೌರವಾರ್ಹಳಾದವಳು ; ಆದರಕ್ಕೆ ಯೋಗ್ಯಳಾದವಳು; ಮಾನ್ಯೆ : ದಯೆಯು ತವವರ್ಮನೆ ಭವ್ಯಪ್ರಿಯೆ ... ಭುವನೈಕ ಪೂಜ್ಯೆ ಚೇಳಿನಿ ಧರೆಯೊಳ್ (ರವರ್ಮವ್ಯ. ೭-೯) ; ಪೂಜ್ಯೆಯಾದ ದಾಕ್ಷಾಯಣಿ ಹೇಳಿದುದು ನನ್ನ ಕೋರಿಕೆಯೇ ಅಲ್ಲವೆ ? (ಶಾಕುಂತ. ೦೦೩-೪) ; ಪೂಜ್ಯೆಯುಂ ಪ್ರಾಣವಲ್ಲಭೆಯಾಗಿ ಪಡೆದ ನಾಂ ಧನ್ಯನೈ (ಶ್ರೀರಾವೂ. ೭೨೭-೫೦೬). [ಸಂ. ಪೂಜ್ಯಾ]

**ಪೂಟ, ಪೂಟೆ, ಹೂಟ, ಹೂಟಿ, ಹೂಟೆ** (ನಾ). ೧. ಏರ್ಪಾಟು ; ಯೋಜನೆ : ಇನ್ನುಮೊಂದಂ ಬಯಸಿ ಪೂಟಮಂ ಪೂಡಿದರ್ (ಹೊಂಗಳು ೩೭-೧). **ಪೂಟೆ** : ೨. ಬಂಡಿ, ರಥ, ಕುಂಟೆ, ನೇಗಿಲು ಮೊದಲಾದುವುಗಳನ್ನು ಎಳೆಯುವುದಕ್ಕಾಗಿ ಎತ್ತು, ಕುದುರೆ ಮೊದಲಾದುವುಗಳನ್ನು ಅಳವಡಿಸಿ ಕಟ್ಟುವಿಕೆ,—ನೊಗ ಹೇರುವಿಕೆ : ಚಿತ್ರಂ ಪೂಟೆಯು ಬಳ್ಳುದುರೆಯು ತನ್ನ ರನ್ನದೇರಂ ನೂಂಕಿ ಕೋಲ ಹಂದರವುನೊಡ್ಡಿ ... ನಿಲ್ಲೆಂದು ತಡೆದಂ (ರಾವಾಶ್ವ. ೯೭-೩). **ಹೂಟ** : ೧. ಹೂಟ ಇನ್ನೇನು ಗದ್ದಿತು ಎನ್ನುವ ಹೊತ್ತಿನಲ್ಲಿ ಅವು ಹೀಗೆ ಕಾಲು ಜಾರಬೇಕೆ ? (ತಕಲಾ. ೩೩೦) ; ಕಾಳು ಮನೆಗೆಯ್ದು ಮದುವೆಯ ಹೂಟಮಂ ತಿಳಿಸಿ ಕೇಳಿದಂ ಕಡೆಗೆ ಕಾಲ್‌ಗಟ್ಟಲಿಹ ಕೇಡು (ಕಾಲೂರ. ೦೪೦-೩೦೭). ೨. ಧುರ್ಯಃ, ಧೌರೇಯಃ—ಈ ೨ ಹೂಟದೆತ್ತು (ಹಲಾಯು. ೪೪-೦೦೦) ; ಹೂಟದೊಳು ಏರಂಡ ಕಿಟ್ಟದೊಳು ಹೆಟ್ಟಂ (ಲಬ್ಧವಃ. ೯೦). ೩. ತೋರಿಕೆ ; ನಟನೆ : ಶಿವನತ್ತ ಕಾಲಾಗಿ ಮಜ್ಜಿದು ಹೂಟದ ಹೆಣನ ಮಾಳ್ಕೆಯಿಂದಿರ್ಪನಂ ಅಜ್ಜಿಯಟ್ಟ . . . ಕಾಲ್ಸೆಗೆಯೆನಲು (ಬೀಕ್ಕೃ. ೪-೬-೬). ೪. ಕುಯುಕ್ತಿ ; ಪಿತೂರಿ ; ಸಂಚು ; ಜಾಲ : ನಮ್ಮ ತಪವನು ಕೆಡಿಸೆ ಸುರರು ಹೂಡಿದ ಹೂಟ—ಇಂತಿಲ್ಲದಿನ್ನಿಲ್ಲ—ಬಲ್ಲೆ ನಾನವರಾಟ (ಅಹಲ್ಯ. ೪೪-೪); ಎಲ್ಲ ತರಹದ ಹೂಟ ಆವುಟಗಳೂ ನಿಷ್ಫಲವಾದಾಗ ಅವನನ್ನು ಹಿಡಿದೆಳೆದು ರಂಪ ಮಾಡುತ್ತಾಳೆ (ನಂಜುಂಡ. ೭೭). ಅವನನ್ನು ಕಳಿಸಿಬಿಡಲು ಹೂಡಿದ ಹೂಟ ಅದು (ಬಾತಲಾ. ೨೭೭) . ೫. ರಚನೆ; ಬಂಧ; ಸೇರುವೆ : ಸರಳ ಹರಹಿನ ಹೂಟವನು ಕಾಹುರದ ಕಡುಹಿನಲೊದೆದು ಬೊಬ್ಬಿಜಿ ದುರವಣಿಸಿದನು ಪಾರ್ಥನು (ಕುವ್ಯಾಕ. ೦೪-೩೦). **ಹೂಟಿ** : ೨. 'ಎಳ ಹೂಟಿ' ಪರಾ. **ಹೂಟೆ** : ೨. ಧೃತಿಗೆಡಿಸಿ ಹೋರಿಗಳ ಓಡಿಕುಗಳ ಬಡಿದ ಸನ್ನುತ ಬಂಜೆಯಾಕಳಂ ಹೂಟೆಯುಂ ಹೇಱುವಾಶ್ರಿತರ ರಕ್ಷಿಸಲಜ್ಜಿಯನು (ಲಕಿವಂ ೩೯-೨೦) ; ಮತ್ತೆ ಕಡಿದನು ರಥವ ಚಾಪವ ಮತ್ತೆ ಹೊಸ ಹೂಟೆಯೊಳು ಹೊಕ್ಕರು ತೆತ್ತು ಸವೆಯರು ಶೌರ್ಯದಭಿಮಾನವನು ಪಟು ಭಟರು (ಕುವ್ಯಾಶೀ. ೬-೫೯). ೬. ಉಳುಮೆ; ಬೇಸಾಯ; ಸಾಗುವಳಿ : ಮೂರಯಾರ ಹೂಟೆಯುಲುಂ ಗ್ರಾಮುಶಾನ್ತಿಯುಲುಂ ದೇವರ್ಗ್ಗೆ ಸಹಸ್ರ ಗಡುಗೆ ಪೂಜೆ ನಿವೇದ್ಯಕ್ಕೆ . . . ಯೆರೆ ಮತ್ತ ೧ ಕಂ ಳಿಗಿಂ (ತೌಇಇ. IX—i, ೨೭೭- ೭; 1183); ಜಡಿಮಳೆಯಾದುದರಿಂದ ಯಾರೂ ಹೂಟೆಗೆ ಹೊರಡುವ ಹಾಗಿರಲಿಲ್ಲ (ನಕಲಾ. II. ೦೨೭) ; ಬೀಜ ಬಿತ್ತಿಸುವ ಸಮಯವಾಗಲಿಲ್ಲವೆ ? ಗದ್ದೆ ಹೂಟೆಯಾಗಬೇಡವೇ? (ಮುಗಿಯು. ೪೩). ೭. ಭಾರ; ಹೇರು : ಭಣ್ಣಿಗೆ ದಣ್ಣಿಗೆ ವೊಂದು ಸೆವೆಯಯ್ದು ಹೂಟೆಯೆರಡಕ್ಕಂ ವಣ್ಣಿಗೆವೊಂಡು(ದು)ಸೆವೆಯೆರಡು (ಎಇ. XIX. ೩೪-೩೨; 1135). ೮. ಕಟ್ಟು; ಬಂಧನ : ಇಕ್ಕೆಲದೊಳು ಕಬ್ಬಿಯೊಳು ಕಟ್ಟಿ ನೇಲುತಿರ್ಪುಕ್ಕಿನ ಗುಂಡುಗಳಿಂದ ದಿಕ್ಕುದಿಕ್ಕಿನ ಹಗ್ಗದ ಹೂಟೆಯಿಂದತಿಕಕ್ಕಸದಿಂ ನಡೆಯಿಪರು (ಕುರಾಶಾಂ. ೯-೪೬). ೯. (ಉದ್ಯೋಗದಲ್ಲಿ ಬಂಡವಾಳವನ್ನು) ತೊಡಗಿಸುವಿಕೆ ; ಹೂಡುವುದು : ಖಾಸಗಿ ಉದ್ಯಮಗಳಲ್ಲಿ ಬಂಡವಾಳ ಹೂಟೆಯು ಬೆಳೆಯುವುದಕ್ಕೆ ಉತ್ತೇಜನ ಕೊಡುವುದರ ಮೂಲಕ ಪ್ರಪಂಚದ ಆರ್ಥಿಕಾಭಿವೃದ್ಧಿಗೆ ಸಹಾಯ ನೀಡುವುದೇ ಕಾರ್ಪೊರೇಷನ್ನಿನ ಉದ್ದೇಶವಾಗಿದೆ (ಅಂಕಸಂ. ೦೦೪).

ಹೂಟ ಹಾರು = ಬಂಡಿಯ ಹಿಂಬದಿಗೆ ಭಾರ ಜಾಸ್ತಿಯಾಗಿ ನೊಗದ ಭಾಗ ಕಳಚಿಕೊಂಡು ಮೇಲಕ್ಕೆ ನೆಗೆ : (•). [< ಪೂಡು]

**ಪೂಟರ್ಜಿ** (ನಾ). ಸಾರಾಂಶವನ್ನು ಒಳಗೊಂಡ ಅರ್ಜಿ : (•). [ಪೂಟು (< ಪೂಟು$_1$) + ಅರ್ಜಿ$_2$]

**ಪೂಟಲಾಯರಿ** 'ಫೂಟ್‌ಲಾಯರಿ' ನೋ.

**ಪೂಟಿ** 'ಪೂಟ' ನೋ.

**ಪೂಟು** 'ಫೂಟು$_1$' ನೋ.

**ಪೂಟುಲಾಯರು** 'ಫುಟ್‌ಲಾಯರು' ನೋ.

**ಪೂಡಿಸು, ಹೂಡಿಸು** (ಕ್ರಿ). ೧. ತೊಡಿಸು; ಸೇರಿಸು; ಹಾಕು : ಸೊಕ್ಕಿದರವನ ಭೃತ್ಯರವರೆಲ್ಲರಂ ತಂದು ಕಾರಾಗಾರದೊಳ್ಳಿಗಳವಂ ಪೂಡಿಸುವೆನು (ಕೃಏಭಾ. ೨೯-೨೫). ೨. (ಬಂಡಿಯ ಮೇಲೆ ಹೇರಿ) ಸಾಗಿಸು; ರವಾನಿಸು : ಎಣ್ದೆಸೆಯ ಸೀಮೆಗಳನೊತ್ತಿದಂ ಪೂಡಿಸಿದ ನವರವರ ಮನೆಗಳ ಸುವಸ್ತುಜಾಲಂಗಳಂ ತನ್ನ ಪುರಕೆ (ಕೃಏಭಾ. ೨೯-೯). ೩. ನಿರ್ಮಾಣ ಮಾಡಿಸು ; ರಚನೆಗೊಳಿಸು : ಧರಣಿ ಬೋಯಿತಿ ಧರೆಯೊಳ್ ಹೊಡೆಹುಲ್ಲ ಬೀಸಿ ಪೂಡಿಸಿ ಪಡೆದಳು ತುಂಗಭದ್ರ ಮಧ್ಯದ ಮೊಬಿನಂ (ಎಕ. VII, ಹೊನ್ನಾ. ೬-೦೫; 1220). ೪. ತಂದು ಒದಗಿಸು; ತರಿಸು : ಶಕಟಸಂದೋಹದಿಂ ಪೂಡಿಸುವ ಸಂಭಾರನಿಕರಕಧಿಪತಿಯಾದನನಿರುದ್ಧನು (ಕೃಏಭಾ. ೩೪-೭). **ಹೂಡಿಸು** : ೨. ಆಂಧ್ರ ಜಾಳಾಂದ್ರಾಳಿಗಳನಪ್ಪಳಿಸಿ ಹೂಡಿಸಿದನು ಮಹಾಧನವ (ಕುವ್ಯಾಸ. ೪-೦೦); ರೂಢಿಗುತ್ತರಕುರುಗಳರ್ಥವ ಹೂಡಿಸಿದನರಮನೆಗೆ ದೈತ್ಯರ ಬೀಡ ಬಜೀಗೈದನು (ಕುವ್ಯಾವಿ. ೭-೯). ೩. ಕಂದರ್ಪಾಂಧಕನನುಳುಹುವೊಡೆ ತನಗಿನ್ನಿಂಧನವ ಹೂ[ಶಾಠಾಂ. ಮಾ]ಡಿಸುವುದೈಸಲೆಯೆಂದನಾ ಭೀಮ (ಕುವ್ಯಾಅ. ೨೨-೩೭), ೫. (ಕುದುರೆಗಳನ್ನು ಬಂಡಿಗೆ ಹೂಡಿ) ಅಣಿಗೊಳಿಸು; ಸಿದ್ಧಪಡಿಸು : ಈ ರಥವನೇ ಹೂಡಿಸಿದೆನೀ ಸಾರಥಿಯ ಬೆಸಸಿದೆನು (ಕುವ್ಯಾಅ. ೦೨-೦೦). ೬. ನೊಗವನ್ನು ಹೇರಿ, ಎಳೆಯಲು ತೊಡಗಿಸು,—ಎಳೆಯಿಸು : ಅವನಿಸುರರೊಳೀ ಸೋಮಯಾಜಿಯೆನಿಪ್ಪನಂ ಕೊಯ್ದು ಇನಿತು ನೀರಂ ತೋಜುರೇ ಧಿಕ್ಕನೆ ಇದಕೆ ಅಜದಡೆ ನಿಮ್ಮುವನಿನಿಬರಂ ಪಟ್ಟಣದ ಸುತ್ತೆಳೆಹೂಟೆ ಹೂಡಿಸುವೆ [ಶಾಠಾಂ. ಹೂಟೆಯೊಳೆಳಸುವೆ] (ಬಸವು. ೫೭ ೯೦). ೭. ತೊಡಗಿಸು; ಆರಂಭಿಸು: ಬೇರೆ ಹವ್ಯಾಸ ಹೂಡಿಸ ಬೇಕು (ಮುನಿವೂ. ೬೦). [ಪೂಡು + — ಇಸು$_3$]

**ಪೂಡು, ಹೂಡು$_1$** (ಕ್ರಿ). ೧. ಬಂಡಿ, ರಥ, ರೆಂಟೆ, ಕುಂಟೆ ಮೊದಲಾದುವುಗಳನ್ನು ಎಳೆಯುವುದಕ್ಕಾಗಿ ಅವುಗಳಿಗೆ ಎತ್ತು, ಕುದುರೆ ಮೊದಲಾದುವನ್ನು ಹೊಂದಿಸು, —ಕಟ್ಟು : ನೊಗ ಹೇರು : ಬೆಳ್ಗಟ್ಟಿ ಪೂಡಿದ ಪೊನ್ನ ರಥಮಂ ಬೆಳ್ಗಟ್ಟಿಯನರಸರ್ಕಳೇ

ಉವುದುವಂ . . . ಕಂಡೆಂ (ಪಶ್ಚಾರಾ. ೬೫ ೩೦) ; ಆ ರಥದೊಳೊಡಂಬಡೆ ಪೂಡಿದ ಕುದುರೆಗಳುಂ . . . ಅಸದಳವೆಸೆಯೆ (ಶಂಕಭಾ. ೦೦-೫೨ ವ) ; ಸಂಜೀವಕ ನಂದಕಾಖ್ಯ ವೃಷಭಂಗಳನಂಬೆನೆ ಪೂಡಿ . . . ತಳರ್ದಂ ವಣಿಗ್ವರಂ (ಪಂತಕಂ. ೨೩-೬). ೨. ಅಣಿಗೊಳಿಸಂ ; ಸಿದ್ಧಗೊಳಿಸು : ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯವೆಂಬ ರಥವನೇಱಿ (ಅದಿಪು. ೦೨ ೭೪ ವ) ; ಎಯ್ದೆ ಪೂಡಿ ತರವೇಟ್ಟೀರೆಲ್ಲವಂ (ಅರ್ಧನೇ. ೨-೫೩) ; ಪಲ್ಲಣಿಸು ಕುದುರೆಯಂ ಪೂಡು ತೇರಂ ಭಟರ್ ಕೈದುಗಳಂ ಕೈಕೊಳ್ಳಿಂ (ಜಗನ್ನಾ. ೬-೭೫). ೩. (ಬಂಡಿಗಳಲ್ಲಿ ಸರಕುಗಳನ್ನು ಹೇರಿ)ಸಾಗಿಸು; ರವಾನಿಸು; ಕಳಿಸು : ನಿಚ್ಚಮೊಂದು ಮನೆಯೊಳಿರಡೆಮ್ಮೊರಿಯೊಳ್ ಪೂಡಿದ ಪನ್ನಿರ್ಛಂಡುಗದಕ್ಕಿಯು ಕೂಬುವ[ನ]ದರ್ಕೆ ತಕ್ಕ ಪರಿಕರವುಮಮನೊರ್ವ ಮಾನಸಂ ಕೊಂಡು ಪೋಪಂ (ಶಂಕಭಾ. ೩-೨೫ ವ). ೪. (ಬಂಡಿಯಂ ಮೇಲೆ) ಸಾಗು ; ರವಾನೆಯಾಗು : ಹರಿಯಜಪುರದ ಸರಕುಗಳ್ ಪೂಡಿದುವು ಶಿವಲೋಕಕೆ (ಶಬಪು. ೪೦-೩೦). ೫. ಜೋಡಿಸಂ ; ಸೇರಿಸು : ಕರಿಯ ರದನಂಗಳ್ಗೆ ತಲೆಯೋಡ ಸೊರೆಗಟ್ಟಿ ನರದ ತಂತ್ರಿಯ ಪೂಡಿ ದಂಡಿಗೆವಿಡಿದು ಪಾಡಿದುವು ಕೆಲವು (ಕೈಬಾಳಾ. ೨೨-೨೪). ೬. ಬಿಲ್ಲಿಗೆ ಬಾಣವನ್ನು ತೊಡು ; ಶರಸಂಧಾನ ಮಾಡು : ಪೂಡು [ಶಿತ]ಶರಸಂತತಿಯಂ ಬಿಲ್ಲೊಳ್ (ಶಂಕಭಾ. ೫-೬೩) ; ಅರ್ಜುನನದ್ರಿ ಬಾಣವಂ ಪೂಡಿದಂ (ಕೈಬಾಳಾ. ೧೩-೦೫) ; ಮದನಶಬರ ಸಂಯುಮಿಮೃಗಗಳಿಗಾಗ ಕದುಬಿ ಪೂಡಿದ ಪೂಸರಕೆ ಪುದುಗಿದ ಮಿಂಟೆಗಳೆನೆ ಪರಡುಗಳತಿಮುದವನಿತ್ತುವು ನೋಳ್ಪರಿಗೆ (ಶಂನಟ. ೯-೦೯). ೭. ತೊಡಿಸು ; ಅಳವಡಿಸು : ಕಲಿಂದನಂ ದಂಡಿಸಿದನಾ ದುಷ್ಟಬುದ್ಧಿ . . . ಸೆಱೆವನೆಗಿಕ್ಕಿ ನಿಗಳವಂ ಕಾಲ್ಗೆ ಪೂಡಿ (ಕೈಬಾಳಾ. ೩೦-೨೬). ೮. (ಆಟ, ಕೆಲಸ ಮುಂತಾದುವನ್ನು) ಹಮ್ಮಿಕೊಳ್ಳು : ಪಿಂಗಾಕ್ಷನಕ್ಷಕ್ರೀಡೆಯಂ ಶಕುನಿಯೊಳ್ ಸಮೆಟ್ಟಿ ಪೂಡಲ್ಕೇಟ್ಟು (ಶಂಕಭಾ. ೬-೬೯೫). ೯. ತೊಡಗು ; ಮೊದಲಾಗು ; ಆರಂಭವಾಗು : ಪೂಡಿದುದು ಕರ್ಕಶದ ಕಾಳೆಗಂ ಸವ್ಯಸಾಚಿಗೆ ಬಭ್ರುವಾಹನನ ಕೂಡೆ (ಕೈಬಾಳಾ. ೦೭-೫೯). ೧೦. ಉಂಟುಮಾಡು ; ಆಗಿಸು : ಕಲೆಗಳ ವಿಲಾಸವಂ ಪೂಡುತ್ತೆ ಕೂಡುತ್ತೆ ಕಣ್ಗೆಸೆದರೆಳವೆಣ್ಗಳು (ಕೈಬಾಳಾ. ೩೦-೧೮). ೧೧. ಗುರಿಯಿಡು ; ಚಾಚು : ನಿನ್ನನಿಲ್ಲಿ ಕೊಲ್ಲದೆ ಮಾಣೆನೆಂದು ಸುರಗಿಯಂ ಕಿತ್ತು ಗಂಟಲ್ಗೆ ಪೂಡು [ಪಾಠಾಂ. ಮೋದು]ವುದುಂ (ಧರ್ಮಾಮೃ. ೨-೦೨೪). ೧೨. ಮುಚ್ಚು ; ಹಾಕು : ಕೂಡೆ ಗಜಬಜವಾಯ್ತು ಮನೆಮನೆಯ ಕವಗಳಂ ಪೂಡಿದರ್ (ಶಬಪು. ೨೪-೨೮) ; ನಳಿನಾಳಿ...ಬಾಗಿಲ್ಗಳಂ ಪೂಡಿಕೊಳುತಿರ್ಪುವೆಂಬಂತೆ ಮುಗಿಯುತಿರ್ದುವು (ಕೈಬಾಳಾ. ೦೭-೨೦). ೧೩. ಪ್ರಯೋಗಿಸು ; ಪ್ರಯೋಗ ಮಾಡು : ಸುಂಕಿಗನಂಶಿರೆ ಪೂ[ಪಾಠಾಂ. ಹೂ]ಡಿ ರೇಖೆಯಂ ಭೋರೆನಲೊಡ್ಡಿ . . . ಭಾಷ್ಪನಿಸಲಾಡಿದರಿರ್ವರಿಗೇನೊ ಕೌತುಕಂ (ಪುಷ್ಪಸ್ರ. ೪-೦೮).

**ಹೂಡು**[1] : ೧. ಅರಿಪಟ್ಟವರ್ಗವಂ ತಂದು ಹೂಡುವೆತ್ತಂ ಮಾಡಿ (ಇಳೆ. ದೇ. ೪೮-೦೫) ; ಆ ರಥಾಗ್ರಕೆ ವೇದ ನಾಲುಕು ವಾರುವಂಗಳ ಹೂಡಿದರು (ಕುಮ್ಯಾ. ೭-೫). ೨. ಬಂಡಿ ಹೂಡುವರಂತೆ ತೋರಣಂ ಗಟ್ಟುವರಂತೆ ಬಾಗಿಲ್ಮಾಡುವರಂತೆ . . . ಮುನ್ನಿನ ದರ್ಶನಮುಂ ನಿಶ್ಶಂಕೆಯುಮೆಂಬೆರಡುಂ ಲೇಸು ಮಾಡುವುವು (ಧರ್ಮಾಮೃ. ೨-೪) ; ಬಱಿದೆ ಸೈನ್ಯವ ಹೂಡಿ ಹಲಬರ ಕೊಲಿಸಿ ಬಲವಕ್ಕಾಡೆ ಕುರುಪತಿ ಕಟ್ಟುವಡೆಯನೆ ಕಳನ ಮಧ್ಯದಲಿ (ಕುಮ್ಯಾ. ೯-೨೮). ೩. ಸಾರಥಿಗಳನು ಹೂಡಿತಂತಕಪುರಿಗೆ ತೇಜಿಗಳಸುವ ಕಾಱಿದವು (ಕುಮ್ಯಾಶಿ. ೯-೪೦). ೫. "ಹೂಡು-ಯೋಜನೇ" (ಶಮದ) ; ಧರಣಿಪತಿ ನಿನ್ನಿಂದ ಕರ್ಣನ ತುರಗಪಾಶ್ವೆಯು ಚಮ್ಮಟಗೆಗೀಕರವು ಹೂಡು[ಪಾಠಾಂ. ಹೊದ್ದು]ವುದಾಯ್ತು (ಕುಮ್ಯಾ. ೫-೨೯) ; ಹೂಡಿದೆಲು ಮರಮುಟ್ಟು ಮಾಂಸದ ಗೋಡೆ . . . ನರವಿನ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಗಾ. ೬೫) ; ಮುಖದಲ್ಲಿ ನಗೆಯನ್ನು ಹೂಡಿದ್ದರೂ ಕೈಗಳು ಕಂಪಿಸುತ್ತಿದ್ದುವು (ಮನೋಕಂ. ೦೫೩). ೬. ಮದನಂ ಪುಷ್ಪಬಾಣಂಗಳಂ ಹೂಡಿದ ಬಿಲ್ಲು ಪೊತ್ತು ಪಿಂದಂ ಬರೆ (ಗಿರಿ. ೪-೯೬) ; ಗಾಂಡೀವದಲಿ ಹೂಡಿದನು ಫಲುಗುಣ ಪಾಶುಪತಶರವ (ಕುಮ್ಯಾದ್ರೋ. ೦೪-೩೮) ; ಹೂಡಿದ ಕೂರ್ಗಣೆಯಿಂದೆ ದೈತ್ಯನ ಮೆಯ್ಯ ತೋಡಿದನೈದಂಬಿನಲಿ (ಮೋಹತ. ೩೪-೦೪). ೭. ಎನ್ನ ಮನೆ ಎಂಬವಂಗೆ ಬ್ರಹ್ಮನಿಕ್ಕಿದ ಕೋಳವಾಯಿತ್ತು, ಎನ್ನ ಸ್ತ್ರೀ ಎಂಬವಂಗೆ ವಿಷ್ಣುವಿಕ್ಕಿದ ಸಂಕಲೆ ಹೂಡಿತ್ತು (ಶಸ್ವವ. ೪. ೨೪೩-೫೩೦) ; ಒಂಭತ್ತು ಬಾಗಿಲ ಕದವನಿಕ್ಕಿ ಬಲಿದು ಬೀಗವ ಹೂಡಿ ನವಸಾಸಿರ ಮಂದಿಯ ಕೊಂದುಳಿದನು ಗುಹೇಶ್ವರ (ಅವಚಂ. ೦೦೯-೫೪). ೮. ತಪ್ಪದೆ ಬಾಲಕೇಳಿಯೊಳು ಮೇಗುಲುಗುಲುಗುಪ್ಪಂಡೆಯ ಹೂಡಿದಂತೆ ಒಪ್ಪವಡೆದ ಹಿಮದಿಂಡೆಗಳೆಸೆದುವು (ಮೋಹತ. ೬-೫೦) ; ಮಕ್ಕಳು . . . ಹೊಸ ಹೊಸ ಕೆಲಸಗಳನ್ನು ತಾವೆ ಹೂಡಬಯಸುವಂತೆ ಮಾಡಬೇಕು (ಶ್ರೀಯಶಿ. ೯). ೯. ಚತುರ್ವಿಧ ಸೃಷ್ಟಿಯೊಡ್ಡಣೆ ನಿಗಮಮತದಲಿ ಹೂಡಿತು (ಕುಮ್ಯಾಅ. ೧೪-೩೫). ೧೦. ಲಜ್ಜೆಗೆ ನೆಲೆಯ ಮಾಡಿದೆ ಹೂಡಿದೈ ದುರಿಯಶವನೆನಗೆ (ಕುಮ್ಯಾಭೀ. ೬-೩೯). ೧೧. ಕೃಪಾಣವ ಜಡಿದು ಗಂಟಲ ಬಳಿಗೆ ಹೂಡಿದನರಿವುದಕೆ ಕೊರಳ (ಕುಮ್ಯಾದ್ರೋ. ೦೪-೧೦) ; ದೆಸೆಯಿಂದೆ ದೆಸೆಯಾವ ತಾಣಕ್ಕೆ ಹೂಡಿದ ಹೊಸಮಸೆವೆತ್ತ ಖಡ್ಗದಲಿ ಕುಸಿವೆತ್ತು ಖಳನ ಮಸ್ತಕವ ಕೀಳ್ಪಡಿಸಿ ರಂಜಿಸೆ ಕಾಮದೇವ ನಿಟ್ಟಿಸಿದ (ಮೋಹತ. ೦೦-೩೬). ೧೨. ಜಗವರಾಜಕವಾಯ್ತು ಕುಮುದಾಳಿಗಳ ಬಾಗಿಲು ಹೂಡಿದವು ಸೂಱೆಗರು ಕವಿದುದು ತುಂಬಿಗಳು ಸಿರಿವಂತರರಮನೆಯ (ಕುಮ್ಯಾದ್ರೋ. ೦-೪೩). ೧೩. ಶಿವ ಶರಣೆಂಬ ದಂಡೆಯ ಹೂಡಿ ಗಣಬೋಳಾಪವೆಂಬಲಗಿನಿಂದಿಱಿವೆ (ಬಸವ. ೬೯೯) ; ತೋಳ ಮೊದಲ ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರುವೊಪ್ಪವನೇನ ಬಣ್ಣಿಪೆನು (ಮೋಹತ. ೦೨-೪೪). ೧೪. (ಬಲೆಯನ್ನು) ಬೀಸು ; ಒಡ್ಡು : ಸಿಲುಕುವವು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ (ಕುಮ್ಯಾ. ೪. ೦೩-೦೪). ೧೫. ಆರಂಭಿಸು ; ಉಪಕ್ರಮಿಸು : ಖಂಡೇರಾಯನು ಮುಂದಾಗಿ ಕದನವನ್ನು ಹೂಡಿ ಹೈದರನನ್ನು ಚೆನ್ನಾಗಿ ಸೋಲಿಸಿಬಿಟ್ಟನು (ಓಕೆ. ೯೦) ; ಅಂತೂ ಮನೆ ಮಾಡಿಯಾಯಿತು—ಸಂಸಾರ ಹೂಡಿದೆವು (ರೂಕಸಂ. ೦೦). ೧೬. ರಚಿಸು ; ನಿರ್ಮಾಣಮಾಡು : ಕೊಳನ ತಡಿಯಲಿ ಹೂಡಿದನು ಶರವಳೆಯವಲಿ ಚಪ್ಪರವನು (ಕುಮ್ಯಾದ್ರೋ. ೦೦-೩೩) ; ಹೂಡುವ ಜಗವನೊಂದೆವೆಯಾಟದೆ ಬಯಲ್ಮಾಡುವ ಮರಳಿ ಸೃಷ್ಟಿಸುವ . . . ಒಳಹೊಱಗಾಡುವ ಚೇಷ್ಟಕನೀತ (ಮೋಹತ. ೦೩-೭೯) ; ತ್ರಿಪುಟಿಯೆಂಬ ಒಲೆಯ ಹೂಡಿ . . . ಮಹಾಜ್ಞಾನವೆಂಬ ಪಾಕವ ಮಾಡಿ (ಅಜಂದೇ. ೩೦೯-೦೨). ೧೭. ಉಳು ; ನೇಗಿಲು ಹೊಡೆ : ಗೌಡಬಸವಪ್ಪಯ್ಯಂಬವನು ಗದ್ದೆ ಹೂಡಿಕೊಂಡು ಕೃಷಿರೂಪದಿಂದ ಕಾಲಕ್ಷೇಪ ಮಾಡಿಕೊಂಡು (ಕೆಳವಂ. ೦-೫) ; ನಿನ್ನಪ್ಪನೂ ನಾನೂ ಹೂಡುತ್ತೇವೆ ; ನಡುತ್ತೇವೆ (ಸ್ವಪ್ನಹೂ. ೩) ; ಫಲ ನೋಡದೆ ಕೆಟ್ಟಿತು, ಹೊಲ ಹೂಡದೆ ಕೆಟ್ಟಿತು (ಗಾದೆ). ೧೮. ಊರು ; ನೆಡು : ಹುರುಳುಗೆಡದೆಚ್ಚಾಡಿದರು ಫಲುಗುಣನ ರಥದಲಿ ಹೂಡಿದರು ಹೊಗರಂಬುಗಳನುಚ್ಚೆದ್ದು ತಮತಮಗೆ (ಕುಮ್ಯಾದ್ರೋ. ೧-೬೮) ; ನೆಲದೊಳಗೊತ್ತಿ ಹೂಡಿದ ಕೈಗೋಲು ಹೊತ್ತು ಬೆಳ್ಸರೆಕೂದಲಾ ಮುದಿಸೂಳೆಯರ ಮೊತ್ತವೊಪ್ಪಿದುದು (ಶಂನಟ. ೬-೮೪೦). ೧೯. ಸಿದ್ಧಗೊಳ್ಳು ; ಅಣಿಯಾಗು : ನಿಮಿಷಕೆ ಹೂಡಿದವು ತೇರುಗಳು (ಕುಮ್ಯಾದ್ರೋ. ೨-೦೪). ೨೦. (ಬ್ಯಾಂಕು, ವ್ಯಾಪಾರ, ವ್ಯವಹಾರ ಮೊದಲಾದುವುಗಳಲ್ಲಿ ಹಣವನ್ನು) ತೊಡಗಿಸು ; ವಿನಿಯೋಗಿಸು : ಹಣವಿರುವವರು ದೊಡ್ಡ ಕೆಲಸಗಳಿಗೆ ಹಣ ಹೂಡುವರು (ಹಣಶ್ರ. ೫).

[ದೇ.॥ ತಮಿ. ಮಲ. ಪೂಟ್ಟು]

**ಪೂಡೆ** (ನಾ). ಒಂದು ಬಗೆಯ ಖಾದ್ಯ ; ೯ ಅಕ್ಕಿಯ ನುಚ್ಚಿನಂತೆ ಸಣ್ಣಗೆ ಕತ್ತರಿಸಿದ ಬದನೆಕಾಯಿಯ ಚೂರುಗಳನ್ನು ಬೇರೆ ಬೇರೆ ಭಾಗ ಮಾಡಿ, ಒಂದೊಂದಕ್ಕೆ ಒಂದೊಂದು ಬಗೆಯ ಸಂಬಾರವನ್ನು ಸೇರಿಸಿ, ಚೆನ್ನಾಗಿ ಬೆರಸಿ, ಒಗ್ಗರಣೆ ಕೊಟ್ಟು ಒಂದೊಂದಕ್ಕೂ ಒಂದೊಂದು ಬಗೆಯ ಸುವಾಸನೆಯನ್ನು ಕೊಟ್ಟು ಬಿಸಿ ಆರದಂತೆ ಅರಿಸಿನದ ತರಗೆಲೆಯಲ್ಲಿ ಪ್ರತ್ಯೇಕವಾಗಿ ಕಟ್ಟಿ ಇರಿಸಿದುದು : ಕಡಿಯಕ್ಕಿಯಂತೆ ಕತ್ತರಿಸಿ ಬದನೆಯ ಕಾಯ . . . ಅರಿಸಿನದ ತೞಿಗಿಂದವಂ ಕಟ್ಟಿ ಬಿಸಿಯಾಱದಂತಿರಿಸಲವು ಪೂಡೆವೆಸರಂ ಪಡೆದವು (ಸೂಶಾ. ೪–೨೩).
[ < ಪೂಡು ? ]

**ಪೂಣ್₁**, ಹೂಣ್₁ (ಕ್ರಿ). ೧. ಹೂಡು ; ತೊಡು : ಕಬ್ಬುವಿಲ್ ತುಂಬಿವೆದೆ ಪೂಸರಲ್ ಪೂಣ್ದಸಲ್ನಿಬ್ಬರುಮಿದೆಂದು ಮದನಂ ಮಾಲೆಗಾರ್ತಿಯರ ಹುಬ್ಬೆಂಬ ಚಾಪವಂ . . . ಅಳವಡಿಸಿಕೊಂಡು ಬಿಡದಬ್ಬರಿಸಿ . . . ಕೆಡಪುತಿಹನಲ್ಲಿ ವಿಟರಕ್ಷಿಮೃಗಕುಲವನು (ಕೈಬಿಖಾ. ೬–೦೭). ೨. ಹೊಂದಿಸು ; ಅನ್ವಯಂಗೊಳಿಸು : ರಸಪ್ರಸರದೊಳು ಸವಿ ಸಂಗಳಿಪಂತೆ ಪೂಣ್ದು ಪೇೞ್ವುದು ಕೃತಿಯಂ (ಕುಸುಮಾ. ೦–೫). ೩. ಅಳವಡು ; ಹೊಂದಿಕೆಯಾಗು ; ಕೂಡಿಕೊಂಡಿರು : ಜಾಣ್ ಮನಂಗೊಳಿಸೆ ಪೂಣ್ದಿರದರ್ಥಕೃತಿಪ್ರಬಂಧವಂ ಕಿವಿಗಿನಿದಾಗೆ . . . ಪೇೞಲೊಡರ್ಚಿದೆನೀ ಪ್ರಬಂಧವಂ (ಛಂದೋಂಬು. ೦–೧೧) ; ಇಟ್ಟ ನವಚಂದನದ ಬೊಟ್ಟಿಳವಟ್ಟಿರಲು ಪೂಣ್ದಿಣ್ಣಿಗಂಟಿನ ತೊಟ್ಟ ಱವಕೆಯ . . . ಉಟ್ಟ ಸಾಲೆಯ ಮೇಲುದೊಪ್ಪಿರೆ ದಿಟ್ಟೆಯೊರ್ವಳು ನಿಂದಳಂಗಜನಲಗಿನಂದದಲಿ (ಜೀವಂಚ. ೦೭–೩೩). ೪. ಪಡೆ ; ಹೊಂದು : ಆ ಖೇಚರೇಂದ್ರಂಗಮೇಂ ಬೆರಲಿಂದಗ್ಗಳಮಾವ ಕಾವ ಗುಣವಂ ಪೂಣ್ದಂದಭೂಪಾಳಕ (ಎಇ. XXVII, ೬೨–೩೦ ; 1114) ; ಬಂದುದತಿಮೃದುಗತಿಯಿಂ ಪೂಣ್ದೆಸೆವ . . . ಬಟ್ಟದೊಡೆಗಳಬಲಾನೀಕಂ (ಜಗಪು. ೪–೦೦೬). ೫. ತೊಡಗಿಸು ; ಯೋಜಿಸು:ಬಲಸ್ಥನೊಳ್ ಬಲವುನೆ ಪೂಣ್ವುದುಂ [ಪಾಠಾಂ. ಮಾಟ್ಪುದುಂ, ಮಾಣ್ಪುದುಂ] ಪರಿಭವಕ್ಕೆ ಮೊದಲ್ (ಆದಿಪು. ೦೨–೦೦೩). ೬. ಉಂಟುಮಾಡು ; ಆಗಿಸು : ಪ್ರಭು ಕಿಱಿಯಾತನಂ ನಿಱಿಸಿ ರಾಜ್ಯದೊಳೆನ್ನನವಸ್ತುಮಾಡಿ ಪೂಣ್ದಭಿಭವವಿಾಗಳೀ ಭವದೊಳಿಂತಿದು ನೀಗದು (ಆದಿಪು. ೨–೩೯). ೭. ಸುತ್ತುಗಟ್ಟು ; ಆವರಿಸು ; ಮುಚ್ಚು ; ಕವಿ : ಮೊನೆಯಂಬುಗಳೊಳೆ ಪೂಣ್ದಪನನಿಬರುಮಂ ಕಿಱಿದು ಬೇಗದಿಂ ಹರಿಗನವರ್ಕೆಸಗೆಡೆವೇಟ್ಕುಮೆ ಎಂಬವೊಲನಿಬರುಮಂ ಪೂಣ್ದನ[ತನು] ನನೆಯಂಬುಗಳಿಂ (ಪಂಪಭಾ. ೩–೫೨) ; ಪಾರ್ಥಂ . . . ಶಲ್ಯನ ಪದಾತಿಯಂ ಪೂಣ್ದನುಗ್ರಶರಸಂಹತಿಯಿಂ (ಮಹಾವೀ. ೦೨–೬೨). ೮. ಉಪಕ್ರಮವಾಗು ; ಆರಂಭವಾಗು ; ತೊಡಗು : ತಪನಸುತನುದನ ಸುಧನ್ವರ್ಗೆ ಕಾಳೆಗಂ ಪೂಣ್ದುದು (ಕೈಬಿಖಾ. ೦೨ ಸೂಚನೆ). ೯. ಒಪ್ಪಿಕೊಳ್ಳು ; ಸಮ್ಮತಿಸು ; ಒಡಂಬಡು : ಇಱಿಯಲ್ಕೋಡೆಮ್ಮನೆಮ್ಮಾಳ್ವುದಂ ನೆಱೆ ಕೊಂಡೆಮ್ಮಯ ಬಾೞ್ವಿಯೊಳ್ ನಿಱಿಸುವಂ ನೀನೆಂದು ತಂದಿತ್ತು ಕಯ್ನೆಱೆಯಂ ಕೊಟ್ಟಳವಟ್ಟ ಸಾರಧನಮಂ ಮೂವಿಟ್ಟಿಗಂ ಪೂಣ್ದು ಕಾಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ (ಪಂಪಭಾ. ೬–೩೦) ; ಎನ್ನಾಳ್ದನಪ್ಪ ಮೃಗಾಧಿರಾಜಂ ಪಿಂಗಳಕನಂ ಕಾಣದೆಯುಂ ಆಳ್ತನಕ್ಕೆ ಪೂಣದೆಯುಮಿಲ್ಲಿ [ಪಾಠಾಂ. ಪೂಣ್ದಿಲ್ಲಿಯುಂ] ನಿನ್ನ ಬಾೞ್ವುಪಾಯಮಾವುದು (ಪಂಚತಂ. ೪೪–೦೩); ನಗರನಾರ್ಯನುನ್ನತಿ ತನ್ನಂ ಮುನ್ನಲೆಯುತ್ತಿರೆ ಮಂದರಂ . . . ಸೇವಾವೃತ್ತಿಗೆ ಪೂಣ್ದು ನಿತಾಂತಮೋಲಗಿಸಲಟ್ಟಿದ ಸಾನುವದೆತ್ತಂ ಬಂದೆಳಸಿರ್ಪುದೆಂಬಿನಂ ಸೊಗಯಿಪ್ಪುದು ಪೊಮ್ಮದಿಲ್ (ಪುಷ್ಪಪು. ೨–೯೦). ೧೦. (ಕೆಲಸ, ವ್ರತ, ನಿಯಮ ಮೊದಲಾದುವನ್ನು) ಕೈಕೊಳ್ಳು ; ಸ್ವೀಕರಿಸು : ಇರು ಮೌನವ್ರತವಂ ಪೂಣ್ದ[ಪಾಠಾಂ. ಕೊಂಡ, ತಳೆದ] ರಣ್ಯದೊಳಗಾರ್ಗೆ ಮೆಱೆದಪ್ಪೆ ನಿನ್ನೆಸೆವಿಾಚರಮಂ ಕಳಕೋಟೆಳೆ (ಆದಿಪು. ೦೦–೦೩೨) : ಬೆಸನೆಂದು ಪೂಣ್ದು ದೇವರ ಬೆಸನಂ ಸುಕುಮಾರರೆನಿಪ ರಾಜಕುಮಾರರ್ ಬೆಸದಪ್ಪಿದರ್ (ಆದಿಪು. ೦೦–೩೨); ಆ ವಿಪಶ್ಚಿತ್ತ್ವಮಂ. . . ಮಾಸತ್ರಯಂಬರಂ ಪ್ರಾಯೋಪಗಮನವಿಧಿಯಂ ಪೂಣ್ದು (ನೇಮಿಪು. ೨–೬೪ವ) ೧೧. ದೃಢವಾಗು ; ಸ್ಥಿರವಾಗು : ಪರಭೂಪಾಳಕರುರ್ಕಡಂಗೆ ಪಣವ್ವರ್ [ತ]ವ್ಮಿಕ್ಕೆಯೊಳ್ ಸುಕ್ಕಿ ಮಯ್ಗರೆಯಲು ಗಣ್ಡನ ತೊಣ್ಡಿ ನಂಕದಧಟಲ್ಪೊಂಕ್ಕಾಳ್ತನಂಬೂಣೆ ದಿಗ್ಭರಿತಾತ್ಮೋಜ್ವಳಕೀರ್ತಿ ಪವ್ವಿರೆ ಲೋಕಾಲೋಕಮವರ್ (ಎಕ XIII, ೨೭. ೬೩; 1090). ೧೨. ಆಣೆಮಾಡು; ಪ್ರತಿಜ್ಞೆಮಾಡು; ಶಪಥಮಾಡು: "ಪೂಣ್–ಪ್ರತಿಜ್ಞಾಯಾಂ" (ಶಮ:ದ) ; ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ ಪೂಣ್ದು ನಿಲ್ವನಿತುವರಂ ಸುರಂ ಗಹನಮೋ (ಆದಿಪು. ೦೨–೭೦); ಸಮಸ್ತಲೋಕಮಱಿದಂತಿರೆ ಪೂಣ್ದನಗಾಗದಂಗಜೋತ್ಪತ್ತಿಸುಖಕ್ಕೆ ಸೋಲಲ್ (ಕುಶಖಾ.೦.೬೩) ; ಕುರುನಂದನರು ಕೊಂದೆ ಕುರುಶಾಬಾನುಜನ ನೆತ್ತರಂ ಕುಡಿದೆಂ ಪೂಣ್ದರಡಂ ತೀರ್ಚಿದೆಂ (ಗದಾಯು. ೦–೬೯). ೧೩. ವಚನ ಕೊಡು ; ಭಾಷೆ ಕೊಡು; ಮಾತು ಕೊಡು: ಉೞಿಯಲಾಗದು ನೆಟ್ಟನೆ ಪೂಣ್ದುದಂ ಪುಸಿವರಾಗಿರದೆ ಮಾನಸರ್ (ಕಬಿರಾ.೦–೧೩೫); ಎನ್ನ ಬೇಡಿದುದನೀವೊಡೆ ನಿನ್ನಂ ಕಾವೆನೆಂದೊಡಾಕೆಯುಮಿಾವೆನೆಂದು ಪೂಣ್ದೊಡೆ (ವಡ್ಡಾರಾ. ೦೫–೨೩) ; ಇಂತಪ್ಪ ಬನಮುನಿದನಿ[ನ್ನೆ]ಂತನಲನನೂಡಲೆಂದು ಪೂಣ್ದಯ್ ಮುಂ ಪೂಣ್ದಂತೂಡು (ಶಂಖಖಾ. ೫–೯೩) ; ಪೂಣ್ದುದು ವಿಫಳಮೆನಿಸದೇ ನೀತಿವಪ್ಪದಿಂ ನೆಗೞ್ಗೆ ಬಲ್ಲವೊಲ್ ನಿನ್ನರಸು (ವರ್ಧಪು. ೬–೩೦). ೧೪. ನಿರ್ಧಾರಮಾಡು; ನಿರ್ಣಯಿಸು: ತನುವಂ ತೆಯ್ದಪ್ಪಳಕ್ಕುಂ ಬ್ರತದೊಳೆನುತೆ ಕನ್ಯಾಬ್ರತಕ್ಕಂತೆ ಪೂಣ್ದರ್ದಂ (ಕಾಮಂಜ. ೩೯) ; ಈ ಕುಮಾರನಖಿಳೋರ್ವಿಗದೊರ್ವನೆ ವಲ್ಲಭಂ ಪ್ರತಾಪದೆ ಪೆಱನಿಲ್ಲೆನುತ್ತೆ ನೆಱೆ ಪೂಣ್ದು ವಿರಾಜಿಪ ರಾಜ್ಯಲಕ್ಷ್ಮಿ ರಾಗದೆ ಬೆರಲೆತ್ತಿದಂತೆ . . . ನವೀನಚೀನಚೇಲದ ಗುಡಿ ಕಣ್ಗೆವಂದುದು (ಕುಸುಮಾ. ೬–೭೭) ; ಬರ್ದಿಲದ ನಾಡ ಕಟ್ಟಕಡೆ ಬೀದಿಯ ಹಾದಿಯೊಳೊರ್ಮೆ ಸಲ್ವೆವೆಂದೆರ್ದೆಯೊಳೆ ಪೂಣ್ದವರ್ ಪಡೆದ ಪಾಡುಗಳಾವುದುಮಿಲ್ಲ (ಜಗಪು. ೦–೬೪). ಹೂಣ್₁ : ೧. ಅಲಗು ಮುಱಿಯಿತ್ತು ಗಱಿ ಜಾಱಿತ್ತು ನಾರಿಯ ಹೂಣಿವ ಹಿಳುಕು ಹೊಳ್ಳಾಯಿತ್ತು ಗೊಹೇಶ್ವರನ ಶರಣ ಅಲ್ಲಮ ಹಿಡಿದ ಬಿಲ್ಲು ಮುಱಿಯಿತ್ತು (ಸರ್ವವ. ೩೯–೦೯೯). ೨. ವೀಣೆಯ ನುಡಿಸುತ ಪಾಡಿದರಿವಳೀಗ ವೀಣೆಗಳೆರಡನೊಂದಾಗಿ ಹೂಣಿ ನುಡಿಸುತ್ತಿದ್ದಳೆಂಬೊಲಿಹುದು (ಭರತೇ. ೦೦–೭) ; ಅಣವಾದಿಯೊಳಿರಲು ಹೂಣಿ ಲಿಂಗದಿ ಮನವ ಕೇಣವಿಡದಿಹನು ವಿರತಿಯಲಿ ದೇಹದಿಹ ಪ್ರಾಣಲಿಂಗಿಯು ತಾ (ಸರ್ವಜ್ಞ. ೦೩೬). ೧೪. ಹೂಣೆ ಛಾಂದಸರ ನಟ್ಟದೆ ಕಾಮನೆಡೆಗೆ ಪ್ರವೀಣ ದಕ್ಷಿಣನನಟ್ಟಿದನು (ಭರತ. ೪೭–೩೦). ೧೫. ಒದಗು; ಉಂಟಾಗು : ಅತಿ ಚಿಂತಾತುರ ಹೂಣೆದುವಾ ಕಾಮಿನಿಗೆ (ಅಂಜನ. ೭–೨); ವಿಶಾಕ್ಷಿಯರನೆಣಿಸಿಯೆದೆಗೆಟ್ಟ ಮೋಹಿಂಗಳು . . . ಉರ್ವೀತಳದೊಳಪಕೀರ್ತಿ ಹೂಣೆ ಹಬ್ಬುವುದೆಂಬುದಂ ನೆನೆಯರು (ಸಮ್ಯಕೌ. ೬–೨೨). ೧೬. ಎದುರಿಸು; ಹೋರಾಡು : ಹೂಣಿ ಹಿಡಿದು ಮೋಹಮಲ್ಲನ ಕೆಡಹಿ . . . ಗೋಣ ಮುಱಿದು ಹಾಕಿದ ಬಲ್ಲಿದನ ನಿರ್ವಾಣಪೂಜೆಯ ಮಾಡಿದರು (ಶ್ರೀಪಾಂ. ೦೪–೯೫). ೧೭. ಹೇರು ; ಹೊರಿಸು : ಹೂಣಿದ ಹೊಱೆ ಜಾಱಿದಂತಾದುದೆನಗೆ (ಭರತ. ೬–೬).

**ಪೂಣೆ ಪುಗು, ಪೂಣೆ ಪೊಗು, ಹೂಣ ಹೊಗು, ಹೂಣೆ ಹೊಗು, ಹೂಣೆ ಹೊಗು, ಹೂಣೆಯ ಹೊಗು** = ೧ ಸುತ್ತುಗಟ್ಟಿ ದಾಳಿ ಮಾಡು.—ರಭಸದಿಂದ ನುಗ್ಗು : ಅರಾತಿಕಾಳಾನಳಂ . . . ತಾನುಂ ಭೀಮಸೇನನುಂ ದಿವ್ಯಶರಾಸನಂಗಳಂ ಕೊಂಡು ಪೂಣೆ ಪುಗುವರಾತಿಬಲಮಂ ಮಾರ್ಕೊಂಡು ತಗೆನೆಱೆದಿಸೆ (ಪಂಪಭಾ. ೩–೬೯ ವ); ಹೂಣೆ ಹೊಕ್ಕನು ಹಿಡಿದು ವೈರಿಕ್ಷೋಣಿಪನ ತಱುಬಿದನು (ಕುಮಾರ್ರ್ಯ. ೪–೬); "ಹೂಣೆ

ಪೊಕ್ಕೆಂದಪೆನೆ ಸತ್ರಾಣದಿನೊಳಪೊಕ್ಕನೆಂಬುದು" (ಕಕುಸಿ. ೨೦೭); ಮಗ ನೆಳಲು ಮಿಗೆ ಹೂಣೆ ಹೊಕ್ಕನು ಮಂಗುಳಲಱಿಯನು ತಮ್ಮನೆನುತ ಮನೀಶ ಬೆಸಸಿದ (ಕುಮಾವ್ಯಾ ದ್ರೋ. ೧೨-೧); ಪ್ರಾಣನಾಯಕ ನಿನ್ನ ಸವಿನುಡಿ ಯಲ್ಲದೆ ವೀಣಾದಿಗಾನರವಗಳು ಸಾಣೆವಿಡಿದ ಶಲ್ಯದಂತೆ ಕಿವಿಯೊಳು ಹೂಣೆ ಹೊಕ್ಕುವು ನಿನ್ನಾಣೆ (ಕುನರ. ೯-೧೮೦). ೨. ಪೂರ್ತಿಯಾಗಿ ಒಳಪಡು (?) : ನೋಡಿದ ಮಂಡಿರೆಲ್ಲಂ ಕಾಮದೇವನೆಂಬ ಬೇಂಟೆ ಕಾಱಂಗೊಡ್ಡಿದ ಪುಲ್ಲೆಗಳಂತರಲಂಬಿನ ಮೊನೆಗೆ ಪೂಣೆ ಪೊಕ್ಕು ಪಕ್ಕಾಗಿರೆ (ಶಂಕಥಾ. ೪-೩೯ ವ). ೩. ಒಂದಾಗು ; ತಲ್ಲೀನವಾಗು ; ತನ್ಮಯ ವಾಗು : ಆವುದು ನಿಮಿತ್ತಮಾದೊಡಂ ಬ್ರಹ್ಮದೊಳು ಹೂಣ ಹೊಗಲಾ ಬ್ರಹ್ಮವಪ್ಪನು (ಏಕೃಶು. ೩ ೯-೨೦); ಚೆನ್ನಮಲ್ಲಿಕಾರ್ಜುನನ ಶರಣರ ಸಂಗದಲ್ಲಿ ಹೂಣಿ ಹೊಕ್ಕು ಬದುಕು ಕಂಡಾ ಮನವೆ (ಶುಹಾದೇ. ೪. ೩೦. ೭೯); ಕಾಣಲಿಕೆ ಬಯಲೆಂಬ ಮೂರುತಿಯು ತಾನಲ್ಲ ಹೂಣೆ ಹೊಕ್ಕಿರಡಳಿದ ಲಿಂಗೈಕ್ಯನು (ಶಿವಗೀ. ೩೯ ೨೭೭); ಚತುರ್ವಿಧ ಫಲ ಪದಂಗಳಲ್ಲಿ ಹೂಣೆಯು ಹೊಗದೆ ಸುಖದುಃಖ ಆತುರಂಗಳಲ್ಲಿ ಭೇದಿಸಿ ಕೊಳ್ಳದೆ (ಸಗದೊ. ೪. ೭೩೩-೪೩). ೪. (?) : ಸಲಪ್ರಾಣಿಗಳಲತ್ಯಧಿಕ ನಾಗಿರುತಿರ್ದು ಜಡತೆಯಲಿ ಕೇಣವನು ಕೈಕೊಂಡು . . . ಮರುಳಹ ಹೂಹೆ [ಣೆ] ಹೊಕ್ಕಿರುತಿರ್ಪ ಪರಿಯೇನು (ಶಿಶಾಗ. ೧೧. ೦೩-೬).

[ದೇ.॥ ತಮಿ. ಪೂಣ್, ಪೂಣಿ ; ಮಲ. ಪೂಣ್ ತೆಲು. ಪೂನು]

**ಪೂಣ್₂** 'ಪೂಟ್' ನೋ.

**ಪೂಣ್₃**, ಹೂಣೆ (ನಾ). ೧. ಪ್ರತಿಜ್ಞೆ; ಶಪಥ : "ಪೂಣೆಂದು ಪ್ರತಿಜ್ಞೆ" (ಳಶಾ. ೩೮-೨೬೦). **ಹೂಣೆ :** ೨. ಮಾತು; ವಚನ; ನುಡಿ : ಹೂಣೆಯೇಕವರೊಡನೆ ಸೆಣಸಿನ ಸಾಣೆಯಿಕ್ಕುವ ಮಸೆವ ಕದನವ ಕಾಣೆವೆಮ್ಮುಱಿಕೆಯಲಿ . . . ಬಹೆವರಸ ನಿಮ್ಮಡಿಯಾಣೆಯೆಂದೊಡಬಡಿ ಸಿದರು (ಕುಮಾವ್ಯಾ. ೬೦೩. ೦೮-೨೩): ಶರಣಸಿಹ ಮರ್ತ್ಯವನು ಹರನ ಕೈಲಾಸವನು ಹಿರಿದು ಕಿರಿದಿನ ಹೂಣೆಯಿಂದೆ ಪ್ರಮಥರ್ಗೂಡಿ ಪರಿಕಿಸಲ್ ಬೇಕೆಂದು ಸವಸೂತ್ರಧರ್ಮಚಿಂತಾಲಿನಿಂ ತೂಗಲೊಡನೆ (ವ್ಯಶಾಕ. ೩. ೦೪). ೩. (?) : ದಿನಗಳೆದು ದುರ್ವ್ಯಸನದಿಂ ಓರಿಯ ಹೂಣೆಯಂ ನೆನೆದು ... ಅಣ್ಣನಂ ನೋಯಿಪನುಜರ್ಗೆ ··· ತಪ್ಪದೆಂದೆಂದಿಗುಂ ನರಕವು (ಶ್ರೀರಾಮ. ೪. ೪೪); "ಹೂಣೆಯ-ತ್ನ. ವೈಶೂನ್ಯ, ಹೊಟ್ಟೆಯ ಕಿಚ್ಚು" (ಶ್ರೀರಾಮ. ೬೯೮ ೨೭). [ < ಪೂಣ್₁ ]

**ಪೂಣಿಕೆ** 'ಪೂಣ್ಕೆ' ನೋ.

**ಪೂಣಿಗ**, ಹೂಣಿಗ, ಹೂಣೆಗ (ನಾ). ೧. ಬಾಣವನ್ನು ಹೂಡುವವನು; ಬಿಲ್ಲುಗಾರ; ಧನುರ್ಧರ : ಎಚ್ಚು ಕಾದಿದುಮ ತಗುಳ್ದು ಬಿಲ್ವಡೆ ಪಡಲ್ವಡೆ ಮಾಣದೆ ನಿಂದು ಪೂಣಿಗರ್ (ಚಂದ್ರಪ್ರ. ೧೧. ೭೮); ಪೂಣಿಗರೆನಿಸಿದರಱಿಕೆಯ ಪ್ರಾಣದ ಬಿಲ್ದೆಗೆದ ಬಲ್ಮೆಯಂತಾಱುವವೋಲ್ ಬಾಣಾ ನೆಱೆಗೊಳೆ ತೆಗೆದರ್ ಪ್ರಾಣಮನಪಯುವದಿನೆಚ್ಚು ರಿಪುನೃಪಬಲದೊಳ್ (ಶಾಶ್ರೇಪು. ೩-೧೦೯); ಲವಣಾಂತಕನಂತೇನಂತೆ ಕಸಲ್ದು ತೇರನೇಱಿ ಬಂದು ಕಟ್ಟಿದಿರ ಪೂಣಿಗನಂ ಕಂಡು (ರಾಮಾಶ್ವ. ೦೩೭-೭). ೨. ಹೋರಾಟಗಾರ; ಸಾಹಸಿ ; ಶೂರ : ಓರಿಯರಂ ಪೂಣಿಗರಂ ಬಿರುದರನದಟೆನೊಳಬ್ಬರಮುರಿವರ ನಾಯ್ದುಱಿಸಿಕೊಂಡುಪರಿಗನ ಕಣೆಗಳ್ (ಶಂಕಥಾ. ೦೨-೦೭೪); ಪೂಣಿಗರಂ [ತ]ಜೇಯರಥಟರ್ ಪುಗ್ಗಾಯಿಲರ್ ಜಟ್ಟಿಗರ್ ಚಲಮಂ ಪೂಣ್ದಿದರಳ್ಕಿ . . . ಶರಣೆಂದು ಬಂದೆಱಗಿದರ್ ಚಕ್ರೇಶ ಪಾದಂಗಳೊಳ್ (ವರ್ಧಕಾ. ೯-೩೦). ೩. ಹಟಮಾರಿ ; ಛಲವಾದಿ ; ತನ್ನ ರೀತಿಯೇ ಸರಿಯೆಂದು ವಾದಿಸುವವನು: ಜಾಣರ್ಕಳಲ್ಲದವರುಂ ಪೂಣಿಗರಱಿಯದೆಯುಮಱಿವವೋಲವಗುಣದಾ ತಾಣಮನಿನಿಸಡವತ್ತೊಡೆ ಮಾಣದೆ ಓಡಿಥಧನೆ ಕೃತಿಗಳಂ ಕಿಡೆನುಡಿವರ್ (ಳವರಾ. ೧-೪೧). ೪. ರಚಿಸುವವನು ; ನಿರ್ಮಾಪಕ ; ಕರ್ತೃ : ಕಾಣನೇಗೆಯ್ದುಂ ತನ್ನ ದೋಷಮಂ ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯುಂ ಪೂಣಿಗನಾದುದಱಿಂ ಪೆಱರಿಂ ಜಾಣರಿನೋದಿಸಿ ಪೇಟ್ಟುದು ಕಬ್ಬಮಂ (ಳವರಾ. ೦-೪೩). **ಹೂಣಿಗ :** ೧. ಅರರೆ ಕವಿಕವಿದಂಬು ಕಡಿದವು . . . ಹೊಡೆಗೆಡೆಹಿದವು ಹೊಕ್ಕೆಸೆವ ಹೂಣಿಗರ (ಕುಮಾವ್ಯಾ ಕಿ. ೪-೧೩); ದ್ರೋಣ ಭೀಷ್ಮರ ಮೋಲು ನೆಟ್ಟನೆ ಹೂಣಿಗರು ರಾಧೇಯ ಮಾದ್ರಕ್ಷೋಣಿಪತಿಯೆಂದೆಂಬ ನುಡಿಯುಂಟೆರಡು ಥಟ್ಟನಲಿ (ಕುಮಾವ್ಯಾ ಕ. ೩ ೦೭). ೨. "ಹೂಣಿಗನೆನೆ ಸಾಹಸಿಗ" (ಕಾರಾ. ೨೭): ಸಾಣೆಗಂಡಲಗಿವನು ಸಮರಕೆ ಹೂಣಿಗನು (ಕುಮಾವ್ಯಾ ಕ. ೦೭-೨೧) ; ಆತನುರವಣೆಸೆ ಹೂಣಿಗರು ನೆರೆ ಮುಸುಕಿತು (ಕುರಂಗ. ೩೩-೪೯). ೩. ಜಾಣ ಗುಡ್ಡವ್ವೆಗಳು ವೀರಂ ಹೂಣಿಗು ಹೆಂದಯ್ಯನೋವದೆ ಕೇಣಿಗನ ಕೊಂದೆಸೆದ ಸಗರದ ಬೊಮ್ಮಿತಂದೆಗಳುಂ (ಶಾಸಂಕ. ೯-೭೩) ; ನೀವು ಹೂಣಿಗರಾಗಿ ರಿಪುವನು ಕಾವಡಿತ್ತಲೆ ತೊಲಗುವೆನು (ಕುಮಾವ್ಯಾ ದ್ರೋ. ೯-೩೦). ೫. ಪ್ರಯೋಗ ಸಾಧನ,-ಸಲಕರಣೆ : ಅಱೆ ಹೊದೆದ ಗೋಣಿ ಹೂಣಿಗನಾಯ್ತು ಕೊಲೆಗೆ ಸಲೆ ಉಱೆದಱೆಸಿಕೊಂಡ ತಲೆಗುಱಿ ನೆಱೆಯಿತಿಲ್ಲಿಗೆ (ಶಾಸಂಕ. ೪-೨೨೩); ಶಿವನ ಘಾಟದ ಶರ ಚತುರ್ದಶ ಭುವನಭಂಜನವಿದು ಮದೀಯಾಹವಕೆ ಹೂಣಿಗನಾಯ್ತಲಾ ಹೇರಾಳ ಸುಕೃತವಿದು (ಕುಮಾವ್ಯಾ ಕ. ೦೨-೭೪). **ಹೂಣೆಗ :** ೨. ಬಿರುದ ಭಟರಿಗೆ ಬೆಱಗು ಬಲಿದುದು ಹೂಣೆಗರ ಹೋರಟೆಗಳಳುಕಿದವು (ಕುಮಾವ್ಯಾ ಭೀ. ೭-೭).

**ಪೂಣಿಗಳ್** = ಪ್ರತಿಜ್ಞಾಬದ್ಧಳಾದವಳಂ : ಪೂಣಿಗಳಾಗಿ ಬರ್ದು ಪೊಗಟ್ದಿಪ್ಪ ವಿದಗ್ಧೆಯನೆಲ್ಲಿಮಾತನಂ ಕಾಣಲೊಡಂ ಕರಂ ಬಯಸಿ ತಾಮೆಱೆದಟ್ಟುವರಟ್ಟೆ ಕೂಡೆಯುಂ ನಾ[ಣ]ಲಿವನ್ನರಾದರೆನುತೊಂದು ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಲಕಿಯೆ ಯೆಂತಗೆ ಕೂಡುತೆ ಗೆಲ್ದಯಾತನಂ (ಶಂಹಂ. ೩-೭೧). [ಪೂಣ್₁ + —ಇಗ]

**ಪೂಣಿಗತನ**, ಹೂಣಿಗತನ (ನಾ). ಸಾಹಸ; ಶೌರ್ಯ : ಪಲವು ದಿವಸಮಾಹಾರಂಬಡೆಯದೆ ಕಂಗೋಲ್ಮಸಗಿದ ಸಿಂಹಕ್ಕೆ ಪೂಣಿಗತನದಿಂದೇನಾ ನುಮೊಂದಂ ನುಡಿದೆನಪ್ಪೊಡೆನ್ನನೆ ಮುನ್ನಮಾಪೋಶನಂಗೊಳ್ಗುಂ (ಶಂಕಂ. ೦೭೩-೨೦). **ಹೂಣಿಗತನ :** ಇವನ ಹೂಣಿಗತನವನಿವನಾಹವದ ಹೊಱೆಗೆಯನಿವನ ಭಾರಿಯ ವೆಗ್ಗಳೆಯತನವ ದಿವಿಜರಾನಲು ನೂಕದಿದು ನಮ್ಮವರ ಪಾಡೇನ್ (ಕುಮಾವ್ಯಾ ದ್ರೋ. ೦೭-೦೪). [ಪೂಣಿಗ + — ತನ]

**ಪೂಣಿಸು₁**, ಹೂಣಿಸು₁ (ಕ್ರಿ). ೧. (ಬಿಲ್ಲಿಗೆ ಬಾಣವನ್ನು) ಹೂಡು,—ಸಂಧಾನಿಸು : ಧೃಷ್ಟದ್ಯುಮ್ನಂ ಪೂಣಿಸಿ ಕೂರ್ಗಣೆ ತಿರುವಾಯ್ಗಾಣಲೊಡಂ ತೀವಿ ತೆಗೆದು ಪೊಱಮುಯ್ಯುವರಂ ದ್ರೋಣನ ನೆಚ್ಚಂ (ಶುಹಾವೀ. ೦೨-೨೦೩) ; ಶಂಬರಸೂದನನಾದ್ಯರ್ದಂಬುಗಳ್ಕೆ ಸಾಸಿರಂಬೆನಲ್ ಪೂಣಿಸಿಯಾರ್ಪಿಂ ಬಿಡದೆಚ್ಚವನೆನ್ನಂ (ದಕಳು. ೯-೨೭೪). ೨. ಹೊಂದಿಸು ; ಸಜ್ಜುಗೊಳಿಸು : ಅಳವಡಿಸು : ಪೊಯ್ದು ಬೊಬ್ಬಱಿವ ಪಱೆಯೊಳಂ ತೆನೆಯಂ ತಳ್ತ ಪರಿಗೆಯೊಳಂ ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಆಪು. ೧೧-೬೨ ವ). ೩. ಕೊಡು ; ನೀಡು : ಅನುಗ್ರಹಿಸು : ಅವರ ದೇಶನಾಮಕುಲ ಗೋತ್ರಂಗಳನಱಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ ಸನ್ಮಾನ ದಾನಾದಿಗಳೊಳ್ ಸಂತಸಂಬಡಿಸಿ ತಂತಮ್ಮ ನೆಲೆಗಳ್ಗೆ ಪೋಗಲ್ವೇಟ್ದು (ಆದಿಪು. ೧೩-೪೦ ವ); ಮಾಣದಿತ್ತಳು ಮಾಂಗಲ್ಯಪಾಠಕಿಯರಿಗೇಣಲೋಚನೆ ಕರೆಕರೆದು ಪೂಣಿಸಿ ಕೊಟ್ಟಳಾರತಿಯತ್ತಿದವರ್ಗೆಲ್ಲ ಜಾಣೆ ರನ್ನದ ಭೂಷಣಗಳ (ಅಸಂಕ. ೭-೦೩೯). ೪. ನಿಯಮಿಸು ; ಆಜ್ಞಾಪಿಸು : ಬೆಸನನಿರ್ಮ ಕೇಳದಂತು ಪೂಣಿಸಿ ಕಟುಪಿ (ಆದಿಪು. ೦೩-೬೦ ವ); ಪೆಱಗಣ ಕಾಪನೆನ್ನನೆ ಮಹೀಪತಿ ಪೂಣಿಸಿ ಪೋದಂ (ಶಂಕಥಾ. ೮-೯೭). ೫. ತಡೆಗಟ್ಟು; ಎದುರಿಸು : ಎದುರುಬೀಳು : ಮಾರ್ಬಲಮಂ ಕಂಡು ಪೂಣಿಸಿ

ಜೀವ ಕಡುಗಲಿಗಳುಮಂ . . . ನೋಡಿ (ಗದಾಯು. ೯-೩೪ ವ); ಕಾಣದೆ ದೆಸೆಯುಂ ಬಂದಕ್ಷೋಣಿಬಳಂ ಚಂಚುಯುಗ್ಮದಿಂ ಘಾತಿಸೆ ತತ್ಕ್ಷಣಂ ತಿದಿಯುಂ ಬಿಸುಟುಂ ಪೂಣಿಸಿ ತಗುಳ್ದಿಯ್ದು ಮತ್ತೆ ತಿದಿಯಂ ಪಿಡಿಗುಂ (ನೇಮಿಪು. ೯-೧೦೭). ೬. ಲಕ್ಷ್ಯವಿಡು ; ಗುರಿಯಿಡು : ನರನೆಚ್ಚೊಡೆ ಪಱಿದು ಕರಂ ಕರವಾಳೊಡನವರೆ ಕಾಸಿ ಬೆಚ್ಚಂತೆ ವಸುಂಧರೆಯೊಳ್ ಬಿಟ್ಟುದುರ್ವದದೇಂ ತಿರವೋ ಪೂಣಿಸಿದ ಮುಷ್ಟಿ ಭೂರಿಶ್ರವನಾ (ಪಂಪಭಾ. ೧೧-೧೪೦) ; ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ ಖಡ್ಗದಿಂ ಪೂಣಿಸಿ ಬಿಸುಟುಂ ಪೊಯ್ದುಂ (ಧರ್ಮಾಮೃ. ೩-೭೩) ; ಪೂಣಿಸಿ ಕಂಠಮಂ ಶಿರಿಪಿ ಚಕ್ರದೊಳಿಟ್ಟೊಡೆ . . . ಶಿರಂ ಕರಿಯಿಂದೆ ನೆಲಕ್ಕೆ ಬೀೞ್ಗೆ (ಚಂದ್ರಪ್ರ. ೧೦-೧೦೩). ೭. ಶಪಥ ಮಾಡಿಸು ; ಪ್ರತಿಜ್ಞೆ ಮಾಡಿಸು : ಆನಿನಿತಂ ನಿಮ್ಮ ಪೂಣಿಸಲೆ ಬಂದೆಂ (ಪಂಪಭಾ. ೧೧-೬೪ ವ). ಹೂಣಿಸು₁ : ೨. ಜಾಣೆಂದ ತಮ್ಮ ವಿಮಾನವ ಹೂಣಿಸಿ ಮಾಣದೆ ಮತ್ತೆ ನೋಡಿ ಪರು (ಅಂಜನಾ. ೧೧-೦೯೭). ೩. ವಾಣಿ ಕಲ್ಯಾಣಿ ಕಟ್ಟಾಣಿ ಮಾತಿನೊಳು ಸುಪ್ರಾಣಿ ತಂದಿರಿಸು ನಿಲ್ಲಿಸದೆ . . . ಕಡುಜಾಣನುಡಿಯು ತಂದು ಹೂಣಿಸು ಕೃತಿಗೆ ಮಂಗಳದಿ (ಸೌಂದರ. ೧-೬). ೫. ಆರು ಲಕ್ಷಿಸಬಹುದು ಹೂಣಿ[ಪಾಠಾಂ. ಳಿ]ಸಿದಾರುಭಟೆಗಳ (ತೊರವೆ. ೭-೩೦-೧೬): ಭೂತೇಶ ತಾನಡ್ಡಬಂದು ಶ್ವೇತೋರಸ್ಥಲ ಬಲರಾಮ ತೊಲಗೆಂದು ಪೀತಾಂಬರಗೆ ಹೂಣಿಸಿದ (ಮೋಹತ. ೩೯-೨೦). ೬. ನೀಱಿ ಸೂಕದಿರೆನ್ನ ಮನ ಮುಮ್ಮಾಱುಪೋದುದು ನೀನು ಚಿತ್ತವ ಸೂಱಿಗೊಂಡೀ ಮದನ ಸಂಬಂಗೊಡಲ ಹೂಣಿಸುವೆ (ಕೃಷ್ಣವಿ. ೨-೩೪) ; ಅಲಗಂ ಪಿಡಿಯೊಳಳವಡಿಸಿ ಥಳತಳಿಸಿ ತನ್ನ ಕಂಠಕೆ ಹೂಣಿಸುತ್ತ ಶಿವಶಿವ ಕೊಱಿಯುಲನುಗೈದನು (ಭಾವಚಿಂ. ೯-೧೧); ಹೂಣಿಸಿ ಕೂರ್ಗಣೆಯಿಂದೆಚ್ಚು ಬಱಿಗಾಯುಗಾಣಿಸಿದರು (ಮೋಹತ. ೩೫-೦೨). ೭. ಹೂಣಿಸುತ್ತಿಂದು ತಾರಕನಡಗ ನಿನ್ನ ನಿಜಬಾಣ ಕಾಹುತಿಯು ಕೊಟ್ಟೆಮ್ಮನುಳಿಸು (ಚರಿತ್ರ. ೩೯-೨೦). ೮. ಕೂಡಿಸು; ಸೇರಿಸು; ಬೆರಸು : ರಿಪುಶ್ರೇಣಿಯು ತಱಿದ ರೋಹಿತದಿ ಹೂಣಿಸಿ ಕೆಸಗರ್ದಡಿ ಕೋಟಿಯು ರಚಿಸಲ್ಕೆ ಶೋಣಿತಪುರವೆಂಬುದಾಯ್ತು (ಮೋಹತ. ೨೦-೫) ; ಕ್ಷೋಣಿಯೊಳು ಸತ್ಕೀರ್ತಿ ಬಪ್ಪುದು ಹೂಣಿಸುವೆನಗ್ನಿಯೊಳ್ ತನುವನು ಪ್ರಾಣವಾಪಂಮಾರ್ಗವಿಹುದೆ ತಾಯೆ (ಉತ್ತರ. ೪೩-೧೧). ೯. ಆಕ್ರಮಿಸು ; ದಾಳಿಮಾಡು : ಕಾಳರಕ್ಕಸಿ ತಿರುಗಿ ಹನುಮನ ಮೇಲೆ ಹೂಣಿಸೆ ಹನುಮನಾಬೆಯು ಕಾಲೆರಡ ಓಡಿದಭ್ರಮಂಡಲಕಿಟ್ಟನಬ್ಬರಿಸಿ (ತೊರವೆ. ೫-೧-೪). ೧೦. ಸ್ಪರ್ಧಿಸು ; ಹುರುಡಿಸು : ಜಾಣೆ ನಿನ್ನಯ ನಿಜವೇಷ ಮಾಣದೆ ನಿಂದ ವಿಲಾಸ ಹೂಣಿಸಿ ಬಲಿದ ಪ್ರಕಾಶ ನೆಱಿ ಕಾಣಿಸುತಿದೆ ಕೈಲಾಸ (ಶಿವಗೀ. ೦೭೬-೬೭೫) ; ಮಿಡು ಚೂಣಿಯು ಭಟರು ಹೂಣಿಸಿ ಬೆರಸಿ ಹೊಯ್ದಾಡಿತ್ತು (ಕೌಶಿಕಾ. ೩೭-೦೩); ಕಾಣುತ ಬೇಡರ ಪಡೆ ಹೆದೆವಿಲ್ಲಿಗೆ ಬಾಣವ ಹೂಡಿ ಬೊಬ್ಬಿಱಿದು ಹೂಣಿಸಿ ಕವಿದೆಸೆಯುಲು ಮಥನನು ಬೆಂಗಾಣಿಸಿ ಮರಳಿದ ಪುರಿಗೆ (ಜೀವಂಧರಾಂ. ೬-೨೬) ; ಕ್ಷೋಣಿಯೊಳೀ ಬಲ್ಬಿಸಿಲಿಂದೆ ಕಡುಗಾದ ಬಾಣಲಿಯೆಣ್ಣೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ದುದು (ಮೋಹತ. ೦೯-೪೫). ೧೧. ಆಣೆ ಮಾಡು ; ಶಪಥ ಮಾಡು : ಶೂಲಿಯೊಳು ತಾ ಹೂಣಿಸಿದ ಹೀಹಾಳಿಯನು ಮಱುಕಳಿಸಿ . . . ತಬ್ಬಿಬ್ಬುಪೋಗುತಲಿರ್ದಳಾ ಮಾಯೆ (ಪ್ರಭುಲೀ. ೭-೨೭). ೧೨. ಹಂಗಿಸು; ಮೂದಲಿಸು : ಹೂಣಿಸಿ ಪೆಣ್ಣುಸುರಿದೊಡದನಾಲಿಪುದೇಣಾಂಕಾಂ ಕನವರ್ಗಿಸ್ಸೀ ಸುಡು ನಾಣಿಲಿತನವಿದೆನುತೆ (ಉದ್ಭಟ. ೩-೭೨). ೧೩. ಉಂಟಾಗು ; ಹುಟ್ಟು : ಕಾಣುತಮ ರಾಯಸವ ದೊರೆಗಳು ಕ್ಷೋಣಿಪತಿಗಂಜುವವೊಲಾಗಳು ಹೂಣಿಸಿದ ಭೀತಿಯಿಂದ ಹೂಣಿಕೆಯು ನಾಯಕರು ಸಹಿತ (ಕೊಲ್ಹಾಪ. ೦೯೬). [ಪೂಣ್₁ + — ಇಸು₃]

**ಪೂಣಿಸು₂**, **ಹೂಣಿಸು₂**, **ಹೂಳಿಸು** (ಕ್ರಿ). ೧. ನೆಡು ; ನಿಲ್ಲಿಸು : ಪುರದ ಮಣಲೊಳಂ ಪೂಣಿಸಿದ ಗಾಣದೊಳಂ . . . ಮೊನೆಯುಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಅಸಂಪು. ೦೨-೬೨ ವ). **ಹೂಣಿಸು₂** : ೨. (ಆಲಂ) ಅಡಗಿಸು ; ನಾಶಮಾಡು : ದೈತ್ಯನ ಮಹಾಗರ್ವವ ಹೂಣಿಸಿ ಎನ್ನ ಮೊಮ್ಮಗೆ ತಕ್ಕ ಸತಿ ಕಟ್ಟಾಣಿರತ್ನವ ತಂದೆ ಜೀಯ (ಮೋಹತ. ೪೨-೫೫). **ಹೂಳಿಸು** : ೨. ನಿಮ್ಮ ಮಾವನ ಆಶೆ ಯಾಕೆ ? ಇನ್ನು ಸಾಯಂಕಾಲದೊಳಗೆ ಅವನನ್ನು ಹೂಳಿಸಿ ಬಿಡುತ್ತೀನಿ (ಕಂಗಾಳ್. ೪೨೬). ೩. ಹುದುಗಿ ಹೋಗುವಂತೆ ಮಾಡು ; ಮುಚ್ಚಿಸು : ಅಬುಧಿಯು ಹರುಹ ಹೇಳದಿರೊಂದುನಿಮುಪಕೆ ಹೂಳಿಸುವೆನು (ತೊರವೆ. ೭-೪-೨); ಹೂಳಿಸಿ ಹುತವಹಕುಂಡವನು (ಕುಮಾರರಾಂ. ೩೭-೧೭೭).

[ಪೂಣ್₂ (<ಪೂಟು್) + — ಇಸು₃]

**ಪೂಣ್ಕೆ**, **ಪೂಣಿಕೆ**, **ಹೂಣಿಕೆ** (ನಾ). ೧. ಪರಿಶ್ರಮ ; ಸಾಧನೆ : ಕುಲವಿಲ್ಲೆಯೋ ನಮಗೆ ದಾಯಿಗರಲ್ಲರೊ ಶಸ್ತ್ರವಿದ್ಯೆಯೊಳ್ ಪೂಣ್ಕೆಗಳಿಲ್ಲೆಯೋ (ಪಂಪಭಾ. ೨-೯೦) ; ಪಲವುಂ ಪೂಣ್ಕೆಗಳಿಂದು ಚಲದಿಂದ ಸಹಾಯವಿಕ್ರಮುಂ ತನ್ನಳವಂ ಕಲಿತನಮುಂ ನಂಬಿ (ಧರ್ಮಾಮೃ. ೦೨-೦೯). ೨. ಸಮಗ್ರತೆ ; ಸಮಷ್ಟಿ : ಸಾಕಲ್ಯ : ಶಾಸ್ತ್ರದರ್ಥಮಂ ಬಿಸುಡದೆ ಪೂಣ್ಕೆಯಿಂ ನೋದುವೇಟ್ಟೊಡಾರ್ ಮೆಚ್ಚರಿದಂ (ಜಾತಕ. ೦-೦೨). ೩. **ಆಣೆ ; ಶಪಥ ; ಪ್ರತಿಜ್ಞೆ**: "ಪೂಣ್ಕೆಯದು ಪ್ರತಿಜ್ಞೆಯೊಳಕ್ಕುಂ" (ಶಬ್ದಮ. ೦೨೯) ; ಆ ಕನ್ನೆಗೆ ಯೌವನಂ ನೆಱೆದುದು ಮದುವೆಯಾದೊಡೆ ತನ್ನ ಪೂಣ್ಕೆ[ಪಾಠಾಂ. ಪೂಣ್ದ ಪ್ರತಿಜ್ಞೆ]ಯುಂ ನೆನೆದು . . . ಮೈದುನ ನಿರ್ವಾಪಣಕ್ಕೆ ಪೋಪನ್ನೆಗಂ (ವಡ್ಡಾರಾ. ೦೫-೨೬); ತುದಿಯೆಯ್ದಿತ್ತೆನಗೆನ್ನ ಪೂಣ್ಕೆ ನಿನಗಂ ಪುಣ್ಯೋದಯಂ ಸಾರ್ಚೆ ಬಂದುದು (ಆದಿಪು. ೪-೦೬) ; ಆತನ ಪೂಣ್ದ ಪೂಣ್ಕೆ ಶಿಲಾತಳಾಕ್ಷರಂ (ಗದಾಯು. ೦-೭೦). ೪. ದೃಢನಿರ್ಧಾರ; ಸಂಕಲ್ಪ : ಪೂಣ್ಕೆಯುರಿದೋ ಮೆಚ್ಚಿದಂತೆ ನಡೆವುದರಿದೋ (ಧರ್ಮಾಮೃ. ೭-೬೦). **ಪೂಣಿಕೆ**: ೧. ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಲಕಿಯೆಯೆಂತುಗೆ ಕೂಡುತೆ ಗೆಲ್ದಿಯಾತನಂ (ಬಿಂಹಂ. ೩-೭೦). **ಹೂಣಿಕೆ**; ೩. ಹೂಣಿಕೆಯು ಸಬಳಿಗರೊಳಮ್ಮೈಗಾಣಿಕೆಯು ಬಲುಸೂತರಥಿಕರ ಜಾಣತಿಯು ಬಿಲ್ಲವರ ಧಾಳಾಧೂಳಿ ಬಲುಹಾಯ್ತು (ಕೃಷ್ಣಕ. ೨-೦೪); ಆಯಿತೇ ಕಡೆಯಾಟ ಹೂಣಿಕೆ ಹೋಯಿತೇ ಹುಸಿಯಾಗಿ (ಪ್ರಭುಲೀ. ೭-೩೯); ಕರ್ಣನು ಬಲ್ಬಿಡಿಯುದ ಹೂಣಿಕೆ ಮಾಡುತ್ತಾನೆ (ಕವಿಪ. ೭೭). ೫. ಹವಣಿಕೆ; ಏರ್ಪಾಡು ; ಯೋಜನೆ : ಕಟ್ಟಿಗೆಯು ಹೊರೆ ಹೊತ್ತು ಮಾರಿ ಜೀವನ ನಿರ್ವಹಿಸುವ ಹೂಣಿಕೆಯನ್ನು ಸ್ವಯಂಪ್ರೇರಣೆಯಿಂದ ಆರಿಸಿಕೊಂಡ ಕಾರಣದಿಂದ ಅದು ಆತನಿಗೆ ಸಹನೀಯವಾಯಿತು (ಬಾಳಬ. ೩೫) : ನಮ್ಮ ಅಂತರ್ಶತ್ರುಗಳಾದ ಗಂಗರಾಜಾದಿಗಳು ಅಂಥದೇ ಹೂಣಿಕೆಯನ್ನು ಬೇರೊಂದು ಬಗೆಯಲ್ಲಿ ಪೋಣಿಸುತ್ತಿದ್ದಾರೆ (ಚೀರಬಂ. ೬).

**ಪೂಣ್ಕೆಯಾಳ್** = ದೃಢಸಂಕಲ್ಪವುಳ್ಳ ಸೇವಕ : ಕುದಾನಪ್ರೀತಿಯೆಂಬ ಪೂಣ್ಕೆಯಾಳ್ವೆರಸು ದುರ್ಬುದ್ಧಿಯೆಂಬ ಪೊಲಂಬಿಗರ್ವೆರಸು ನಿಲ್ಲದೆಲ್ಲಿಯುಂ ಬೆನ್ನಟ್ಟಿ ತಗುಳ್ದು (ಧರ್ಮಾಮೃ. ೧೦-೬೭). [ಪೂಣ್₁ + — ಕೆ]

**ಪೂಣ್ಕೆಗೆಯ್**, **ಪೂಣ್ಕೆಗೈ** (ಕ್ರಿ). ಆಣೆ ಮಾಡು ; ಶಪಥ ಮಾಡು ; ಪ್ರತಿಜ್ಞೆ ಮಾಡು: ತದೀಯ ಪ್ರಿಯಮಂ ನಿರ್ಮಿಚದೊಡೆ ಮನ್ಮಿತ್ರತ್ವಮೇವಾಳ್ಕೆ ತತ್ಸತಿಯಂ ತಂದಪೆನೆಂದು ಮಂತ್ರಿತನಯಂ ತಾಂ ಪೂಣ್ಕೆಗೆಯ್ದಾಗಳುಣ್ಮುತು . . . ಭೇರೀಗಭೀರಸ್ವರಂ (ಕುಸುಮಾ. ೧೦-೦೦೪). **ಪೂಣ್ಕೆಗೈ**: ನಿನ್ನನರೆನಿಮಿಸದೊಳಗೆ ಧರೆಗೆ ನಾಂ ಕೆಡಹದಿರಲು . . . ದುರಿತಲಂಪಟನಾದ ದುರ್ವಾರ್ತಿಯುಘಂ ಘಟಿಸಲೆನಗೆಂದು ಪೂಣ್ಕೆಗೈದು (ಶೀಪಾ. ೨೦-೦೬).

[ಪೂಣ್ಕೆ + ಕೆಯ್₁]

**ಪೂಣ್ಕೆಗೈ** 'ಪೂಣ್ಕೆಗೆಯ್' ನೋ.

**ಪೂಣ್ಕೆದಪ್ಪು** (ಕ್ರಿ). ಪ್ರತಿಜ್ಞೆಯನ್ನು ಮೀರು: ಕದನೋದ್ಯೋಗದಿನಾಳ್ದನೆತ್ತಿ

ಬರೆಯುಂ ಬೆಳ್ಮುತ್ತು ಬೆನ್ನಿತ್ತನಿಲ್ಲ ದೃಢಾತ್ಮಂದಲೆದಂ ಪಲರ್ಪೊಗಟ್ಟಿನಂ ನಿಶ್ಶಂಕೆಯಿಂ ಪೂಣ್ಕೆದಪ್ಪಿದನಿಲ್ಲ (ಶಂರಾವಿಜ. ೭-೩೩). [ಪೂಣ್ಕೆ+ತಪ್ಪು₁]

**ಪೂಣ್ಕೆವತ್ತಳೆ** (ನಾ). ಪ್ರತಿಜ್ಞೆಯ ಕಾಗದ ; ಪ್ರತಿಜ್ಞಾಪತ್ರ : ಪೂಣ್ಕೆವತ್ತಳೆಯನ್ನೂ ಮುದ್ರೆಯನ್ನೂ ಲಿಂಗರಾಜನ ಬಗಸೆಗಿರಿಸುವನು (ಪಂಚಶ. ೦೭೬-೨೯). [ಪೂಣ್ಕೆ+ವತ್ತಳೆ₁]

**ಪೂಣ್ಕೆವೇಱು** (ಕ್ರಿ). ಪಟ್ಟುಹಿಡಿ; ಹಟತೊಡು : ಅಂತೆಸಗಿದೆಸಪ್ಪೊಡೋಪದೆ ಖಳನೆರ್ರೆತಂದು ಕಱುತ್ತು ಪೂಣ್ಕೆವೆತ್ತೂಸದೊಳಗಾಗಿ ಮೂಗನರಿದೀ ವಿಧಿಯಾಗಿರೆ ಮಾಡಿರ್ಪರೇ (ಸುಕುಮಾ. ೭-೩೩).

[ಪೂಣ್ಕೆ+ವೇಱು₁]

**ಪೂಣ್ಕೊಳ್** (ಕ್ರಿ). ನಿರ್ಧಾರಮಾಡು; ದೃಢನಿಶ್ಚಯವನ್ನು ಕೈಕೊಳ್ಳು: ಪೂಣ್ಕೊಂಡಕ್ಕಟಾ ಸಾರಿದಂ ನಡೆನೋಡರ್ಚಿಸು ಕೀರ್ತಿಸಾದರಿಸು . . . ಎಂದುಂ ವಿರೂಪಾಕ್ಷನಂ (ಶಂಶತ. ೬೨). [ಪೂಣ್₃+ಕೊಳ್₁]

**ಪೂತ₁** 'ಪೂ₁' ಪರಾ.

**ಪೂತ₂** (ಗು). ೧. ಶುದ್ಧಿಗೊಳಿಸಿದ; ಸ್ವಚ್ಛ ಮಾಡಿದ. ೨. ಧಾನ್ಯದ ಜಳ್ಳು ಹೋಗುವಂತೆ ಒಕ್ಕಿದ, ತೂರಿದ. ೩. ಪವಿತ್ರವಾದ ; ಪಾವನವಾದ ; ಪುಣ್ಯಕರವಾದ : ಶಿವಕಥಾಪೂತಪೌರಾಣವನಿವಂ ಪೇಳಿಸಿದನತಿಪ್ರೀತಿಯಿಂದಂ (ಶಂಶ. ೫೬-೧೭) ; ಆತನಂಗನೆ ಸೀತಮಾಂಬೆಯ ಪೂತಗರ್ಭದೊಳುದಿಸಿ ಕನ್ನೆಯ ರೀತಿಯೊನುತಲಿರ್ದಳೀ ಚೆಲ್ವಾಂಬೆ ಧರೆಯೊಳಗೆ (ಕರ್ಣಾಕ. ೩೦೦). (ನಾ). ೪. ಒಕ್ಕಿದ ಧಾನ್ಯ ; ತೂರಿದ ಧಾನ್ಯ : "ಪೂತಂ, ಬಹುಳೀಕೃತಂ—೨ ತೂರಿಕ್ಕಿದ ಧಾನ್ಯ" (ಸಿದ್ಧಾಂತಿ. ೨೬೦). ೫. ಪವಿತ್ರವಾದುದು ; ಪಾವನವಾದುದು : "ಪವಿತ್ರಂ ಪೂತಂ" (ವಸ್ತುಕೋ. ೦೦೬-೬೦); ವನಜಾಕ್ಷಖ್ಯಾತಿಪೂತಂ ಕಥೆ ಕವಿ ಕವಿರಾಜಂ (ಜಗಲಿ. ೦-೨೨). ೬. ಪವಿತ್ರಾತ್ಮ ; ಪುಣ್ಯವಂತ : ಪಾಪಿಯು ಪೀಡಿಪ ಪುರುಷನು ಪೂತನೆಂತೋ (ಶತಸಾಂ. ೭೬-೯೦); ಆತನ ವ್ರತದ ನಿಟ್ಟೆಯ ಕಂಡು ಪಲಬರು ಪೂತರಾದರು (ಕರ್ಣಾಕ. ೦೨-೯೯). [ಸಂ.]

**ಪೂತಕ್ರತಾಯಿ** (ನಾ). ಇಂದ್ರನ ಹೆಂಡತಿ; ಶಚೀದೇವಿ: ಮಾಯಾಶಿಶುವಂ ತಂದಿಟ್ಟಾಯೆಡೆಯೊಳ್ ಬೇಗನೆತ್ತಿಕೊಂಡಳ್ ಭುವನತ್ರಾಯಿಯಾ ಜಿನಶಿಶುವಂ ತಾಯಿಲೆ ಪೂತಕ್ರತಾಯಿ ದಾದಿಯ ತೆಱದಿಂ (ವರ್ಧಮಾ. ೦೨-೮).

[ಸಂ. ಪೂತಕ್ರತಾಯೀ]

**ಪೂತತೆ** (ನಾ). ಪವಿತ್ರತೆ; ಪಾವನತೆ : ಸೊಡರ್ವೊಲನೂನಕಾಂತಿಯ ಕುಡಿಯಿಂದಂ ನಾಕದಂತೆ ಮಂದಾಕಿನಿಯಿಂ ನುಡಿಜಾಣಿಂ ವಿಬುಧನವೋಲ್ ಪಡೆದಂ ಪೂತತೆಯನಂತೆ ಶೋಭೆಯನವಳಿಂ (ರಬ್ಬಾಕೋ. ೨೦೪).

[ಸಂ. ಪೂತತಾ]

**ಪೂತನಾಂತಕ** (ನಾ). ಪೂತನೆಯೆಂಬ ರಾಕ್ಷಸಿಯನ್ನು ಕೊಂದವನು; ಕೃಷ್ಣ : ದಾರುಣಾಕೃತಿಪೂತನಾಂತಕನಾಡಿದಂ . . . ಮುರಾರಿ ಕೈಪಟಿಗಾಡಿದಂ (ಜಗಲಿ. ೩-೩೬). [ಸಂ.]

**ಪೂತನಿ** (ನಾ). ೧. (ಕೃಷ್ಣನು ಶಿಶುವಾಗಿದ್ದಾಗ ವಿಷವುಣಿಸಿ ಕೊಲ್ಲಲೆಂದು ಕಂಸನ ಆದೇಶದ ಮೇರೆಗೆ ಬಂದು, ಕೃಷ್ಣನಿಂದಲೇ ವಧೆಯಾದ) ಒಬ್ಬ ರಾಕ್ಷಸಿಯ ಹೆಸರು : ನಿಜವಕ್ಷೋಜನಿಕ್ಷಿಪ್ತಕ್ಷ್ವೇಡಪೀಡಿತಲೋಕಘಾತಿನಿಯಪ್ಪ ಪೂತನಿಯುಮಂ . . . ಬೆಸಸಿ (ಜಗಲಿ. ೩-೨೨ ವ); ಶತ್ರುಘ್ನ ಲಕ್ಷ್ಮಣಾಗ್ರಖಳಸೇನೆ ಭಾವಿಸೆ ತವಾಕೃತಿಯ ಬಾಲಕರ ದೆಸೆಯಿಂದ ಗೋವರ್ಧನಂಗೆ ಮೊಲೆಗೊಟ್ಟ ಪೂತನಿವೊಲಾಯ್ತು (ಜೈಮಿಭಾ. ೨೦-೩). ೨. ಪಿಶಾಚಿ; ರಕ್ಕಸಿ; ರಾಕ್ಷಸಿ : ಸಂದಣಿಸಿ ಹರಿದೇಱ ಬಾಯ್ಗೆ ಳೊಳೊಂದಿ ಬಾಯ್ಗಳನಿಡುವ ಪೂತನಿವೃಂದವನು ಕಂಡೋಸರಿಸುವನದೊಂದು ದೆಸೆಗಾಗಿ (ಕುಮಾರ್ಗ. ೩-೦೦). [< ಸಂ. ಪೂತನಾ]

**ಪೂತನೆ** (ನಾ). ೧. = ಪೂತನಿ ೧ : ಪೂತನೆಯಂ ಕೊಂದಾ ಸ್ತ್ರೀಘಾತುಕವೃತ್ತಿಯುಮನೆನ್ನೊಳೇಂ ತೋಱಿದಪ್ಪೆ ಪೂತನೆಯ ತೆಱದೆ ನಿನಗಾನೇತಱ ಪೊಲ್ಲಮೆಯನರಸ ಬಗೆದೆಂ ಬಗೆಯೊಳ್ (ಜಗಲಿ. ೦೨-೯೬). ೨. = ಪೂತನಿ ೨. ೩. ಒಂದು ಬಗೆಯ ಮರ ಮತ್ತು ಅದರ ಕಾಯಿ; ಅಳಲೆ: "ಅಭಯಾ, ಅವ್ಯಥಾ, ಪಥ್ಯಾ, ವಯಸ್ಥಾ, ಪೂತನಾ, ಅಮೃತಾ . . . ಶಿವಾ—೧೧ ಅಳಲೇಗಿಡದ ಹೆಸರು ; ಅಳಲೇಕಾಯಿ ಪ್ರಸಿದ್ಧವು" (ಸಿದ್ಧಾಂತಿ. ೦೨೫). ೪. ಮಕ್ಕಳು ನವೆದು ಅಶಕ್ತರಾಗುವ ಒಂದು ಬಗೆಯ ರೋಗ ; ಹಕ್ಕಿರೋಗ ; ಬಾಲಗ್ರಹ. ೫. ಬಾಲಗ್ರಹಕ್ಕೆ ಕಾರಣಳಾದವಳೆಂದು ಭಾವಿಸಲಾದ ದೇವತೆ.

[ಸಂ. ಪೂತನಾ]

**ಪೂತಾಚರಣ** (ನಾ). ಪರಿಶುದ್ಧವಾದ ಆಚಾರವುಳ್ಳವನು ; ಸರಿಯಾದ ನಡವಳಿಕೆಯವನು: ಸಮರಜಿತಭೂಪ ಜೀವಪ್ರದನುಂ ಅತಿಪೂತಾಚರಣಾರಿಪುಖತಿಕರಣಂ (ಎಕ. III. ಮಂಡ್ಯ. ೭೬ ೮ ; 1022). [ಸಂ.]

**ಪೂತಾತ್ಮ** (ನಾ). ಪರಿಶುದ್ಧವಾದ ಮನಸ್ಸುಳ್ಳವನು : ಪೂತಾತ್ಮಂ ಪರಿತೋಷಮಂಡಿತವರಂ . . . ರಾಜೇಂದ್ರಚಕ್ರೇಶ್ವರಂ (ಹರಿಶ್ಚಂ. ೦-೨೭).

[ಸಂ. ಪೂತಾತ್ಮನ್]

**ಪೂತಿ** (ಗು). ೧. ಹೊಲಸುವಾಸನೆಯುಳ್ಳ ; ದುರ್ಗಂಧಮಯವಾದ : 'ಪೂತಿಗಂಧ' ಪರಾ. (ನಾ). ೨. ಕೊಳಕುನಾತ ; ದುರ್ಗಂಧ ; ದುರ್ವಾಸನೆ. ೩. ದುರ್ಗಂಧವುಳ್ಳ ದ್ರವ; ಕೀವು. ೪. (ದುರ್ಗಂಧಮಯವಾದ) ಒಂದು ನರಕದ ಹೆಸರು : ಕೊಲ್ವೋರುಂ ಕೊಂದು ಉಣ್ಬೋರುಂ ಪಣ್ಚುಮಹಾಪಾತಕಸಂಯುಕ್ತನಾಗಿ ಪೂತಿ ಎನ್ವ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೭-೮ ; ಸು. 675 ?). ೫. ಒಂದು ಬಗೆಯ ಸಂಗಂಧ ದ್ರವ್ಯ ; ಪುಣುಗು : ಕತ್ತುರಿ ಕಾಲಾಗುರು ಚಂದನಂ ಹಿಮಕರಂ ಜಾತೀಫಳಂ ಪೂತಿ . . . ಚೊಡಾರತ್ನಮೆಂಬೀ ವನಾಂತರಸಂಜಾತಮನಾತ ನೋಲಗಿಸಿದಂ (ಕೃಷ್ಣಪು. ೫-೦೦೨) ; ಪೂತಿ ಎಂಬ ಹುಲ್ಲುಜಾತಿಯನ್ನೂ ಒಳಗೊಂಡಿದ್ದ ಹಳ್ಳಿಯನ್ನು . . . ಗೋವಿಂದಚಂದ್ರದೇವನು ದಾನವಾಗಿ ಇತ್ತ (ಶಾಸಗ. ೬).

**ಪೂತಿಯ ಬೆಕ್ಕು**=ಪುಣುಗಿನ ಬೆಕ್ಕು : ಪೂತಿಯ ಬೆಕ್ಕಿರಳೆಯ ಮಱಿ ಮಾತಂಗದ ಮುತ್ತು . . . ಎನಿಪ್ಪುವನಾಂತು ಕಿರಾತರ ನಿಜವಕ್ಕಾಣಕ್ಕೆ ನಡೆತರುತಿರ್ದರ್ (ಕ್ರಿಕೃಪು. ೨೭-೯೩). [ಸಂ.]

**ಪೂತಿಕ** (ಗು). ೧. ದುರ್ಗಂಧವುಳ್ಳ ; ದುರ್ವಾಸನೆಯುಳ್ಳ. (ನಾ). ೨. ತಪಸಿ ಗಿಡ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ—೪ ತಪಸೀಗಿಡದ ಹೆಸರುಗಳು" (ಸಿದ್ಧಾಂತಿ. ೦೨೩). ೩. ಮಲ; ವಿಷ್ಠೆ. [ಸಂ.]

**ಪೂತಿಕರಜ** (ನಾ). ಒಂದು ಬಗೆಯ ಸಸ್ಯ ; ತಪಸಿಗಿಡ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ—೪ ತಪಸೀಗಿಡದ ಹೆಸರುಗಳು" (ಸಿದ್ಧಾಂತಿ. ೦೨೩). [ಸಂ.]

**ಪೂತಿಕಾಷ್ಠ** (ನಾ). ೧. ಒಂದು ಬಗೆಯ ಮರ ; ದೇವದಾರುವೃಕ್ಷ : "ಸರಳಮುದು ಪೂತಿಕಾಷ್ಠಮೆನಿಕ್ಕು" (ನಾಂಗಲಾ. ೩೯-೨೬). ೨. ಒಂದು ಬಗೆಯ ಮರ ; ಪೀತದಾರು; ಪೈನ್‌ಮರ. [ಸಂ.]

**ಪೂತಿಗಂಧ** (ನಾ). ೧. ದುರ್ವಾಸನೆ; ದುರ್ಗಂಧ : ಆ ವಿವಿಧ ಭಕ್ಷೋಪದಂಶಪ್ರಾಯಮಪ್ಪ ದಿವ್ಯಾಹಾರಮೆತ್ತಲೀ ಕ[ನಿ]ತ ಪೂತಿಗಂಧಮಪ್ಪ ಮೃಗಪಿಶಿತಪೇಶಿಯೆತ್ತಲ್ (ವರ್ಧಮಾ. ೬-೪ ವ) ; ಆಮೋದ ಗಂಧದೊಳ್ ಪೊರೆದಾ ಮಣ್ಣಂ ತಳೆಯೆ ಪೂತಿಗಂಧದ ಗಿಡುಗಳ್ ಗೋಮಯತೋಯಮನೆಱೆಯಲ್ಕಾಮೋದಸುಗಂಧವುಪ್ಪಮಾಗಳೆ ಬರ್ಕುಂ (ಲೋಕೋಕ. ೩-೩೦). ೨. ದುರ್ಗಂಧದ ವಸ್ತು: "ಪೂತಿಗಂಧಃ, ದುರ್ಗಂಧಃ—೨ ಕೆಟ್ಟನಾತವುಳ್ಳ ವಸ್ತುವಿನ ಹೆಸರುಗಳು" (ಸಿದ್ಧಾಂತಿ. ೪೭). ೩. ಗಾರೆಗಿಡ ; ಇಂಗುದೀ ವೃಕ್ಷ. [ಸಂ.]

**ಪೂತಿಗಂಧಿ** (ಗು). ದುರ್ಗಂಧವುಳ್ಳ. [ಸಂ.]

**ಪೂತಿದ್ರವ** (ನಾ). ಹೊಲಸು ನಾರುವ ಕೀವು ಮೊದಲಾದ ದುರ್ಗಂಧ ದ್ರವ : ನವವಿವರಾವೃತಪೂತಿ[ಪಾಠಾಂ. ತ]ದ್ರವ ತ್ವಗಾವೃತವಿಮಿಶ್ರ ಮಾಂಸೋಪಚಿತಮಧ್ರುವಮಸುಚಿತ್ರಭ್ರುಮಿತಕ್ರಿಮಿಹಂ ಮೆಯ್ ಬಗೆ ಪೊಡಿಂತು ಕಿಸುಗುಳಮಾದಂ (ಕಬ್ಬಿಗ. ೩-೧೯೬). [ಸಂ.]

**ಪೂತಿನಾಶಕ** (ಗು). ೧. ಹುಣ್ಣು, ಗಾಯ ಮುಂತಾದುವು ಕೊಳೆತು, ಕೀವಾಗುವುದನ್ನು ತಡೆಯುವ : ರೋಗಿಯು ಕೊಠಡಿಯಿಂದ ಹೊರಬಂದ ನಂತರ ಕೂಡಲೆ ಪೂತಿನಾಶಕದ್ರಾವಕದಲ್ಲಿ (Anti.-Septic Lotion) ಕೈತೊಳೆಯಬೇಕು (ಕಲರೋ. ೫). (ನಾ). ೨. ಹುಣ್ಣು, ಗಾಯ ಮುಂತಾದುವು ಕೊಳೆಯುವುದನ್ನು ತಡೆಗಟ್ಟುವಂಥ ವಸ್ತು : ಪೂತಿನಾಶಕ(ಆ್ಯಂಟಿಸೆಪ್ಟಿಕ್)ದ ಮಹದುಪಕಾರದಿಂದ ಪಿರೊಗೋವ್‌ನಿಗೆ ಅಶಕ್ಯವಾದಂತಹ ಶಸ್ತ್ರಕ್ರಿಯೆಗಳನ್ನು ಕೂಡಾ ಈಗ ಸರ್ಜನರು ಮಾಡುತ್ತಿರುವರು (ಹುತ್ತಪು. ೩೯). [ಸಂ.]

**ಪೂತಿಫಲಿ** (ನಾ). ಒಂದು ಬಗೆಯ ಔಷಧೀಸಸ್ಯ ; ಬಾಹುಜಿಗೆ ; ಸೋಮವಲ್ಲಿ : "ಅವಲ್ಗುಜಃ ... ಕೃಷ್ಣಫಲಾ, ವಾಗುಜೀ, ಪೂತಿಫಲೀ — ಈ ಬಾಹುಜಿಗೆಯ ಹೆಸರುಗಳು" (ಸಿದ್ಧಾಂತಿ. ೧೪೩). [ಸಂ. ಪೂತಿಫಲೀ]

**ಪೂತಿಬೆಕ್ಕು** 'ಪೂತಿವೆಕ್ಕು' ನೋ.

**ಪೂತಿಮಾಂಸ** (ನಾ). ೧. ಕೊಳೆತ ಮಾಂಸ ; ಹೊಲಸು ನಾರುವ ಮಾಂಸ. ೨. ಒಂದು ನರಕದ ಹೆಸರು : ಕೃತು ಪೂತಿಮಾಂಸ . . . ಉಚ್ಛ್ವಾಸವೆಂಬೈದು ಮಂತ್ರಿನರಕಂಗಳಿಂ ಕೂಡಿ ಕಾಲರಾತ್ರುವೆಂಬರಸುನರಕ ವಿಹುದು (ಶಿವೇಳ. ೦೬೦). [ಸಂ.]

**ಪೂತಿರಸ** (ನಾ). = ಪೂತಿದ್ರವ : ಸಪ್ತಧಾತುಮಯಮುಂ ಅವಸ್ಕರದ ಪೋಲ್ ಮೂತ್ರ ಪುರೀಷಾದಿ ಮಲಭಾಜನಮುಂ ಅಲ್ಲಿ ಪೂತಿರಸನಿಷ್ಯಂದಿ ಶ್ರವಣಾದಿ ನವರಂಧ್ರಪರೀತಮುಂ . . . ಅಪ್ಪ ಶರೀರಮುಂ (ಕತ್ಯ್ರಸ್ತ್ರಿ. ೩೨೯). [ಸಂ.]

**ಪೂತಿವಕ್ತ್ರ** (ನಾ). ಒಂದು ನರಕದ ಹೆಸರು : ಪೂತಿವಕ್ತ್ರ ರಕ್ತಪೂತಿ ವೃಶ್ಚಿಕ ಕಣ ಧೂಮವೆಂಬೈದುಮಂತ್ರಿನರಕಂಗಳಿಂ ಸುತ್ತಿ ಭೀಮವೆಂಬರಸು ನರಕವಿಹುದು (ಶಿವೇಳ. ೦೬೦). [ಸಂ.]

**ಪೂತಿವೆಕ್ಕು, ಪೂತಿಬೆಕ್ಕು** (ನಾ). ಪುಣುಗಿನ ಬೆಕ್ಕು ; ಕಸ್ತೂರಿಬೆಕ್ಕು : ಪೊಂಬುಲಿಸಮ್ಮುಖಾನೆದಲೆಮುತ್ತು ಮೊಲಂಗಳ ಬಿಕ್ಕು ಪೂತಿವೆಕ್ಕು . . . ಪೀಲಿಯೆಂಬಿವಂ ತುಂಬಿದ ಕಂಡಿಯುಂ ತಳೆದದೇಂ ತಳರ್ದತ್ತೊ ಪುಳಿಂದಸಂ ಕುಳಂ (ರಾಜಶೇ. ೫-೦೦೪); ಮರೆ ನರಿ ಪೂತಿವೆಕ್ಕು ನಕುಲಂ ಮರವಾವುಗಳೆಂಬಿ ವಾಗಳುಂ ಕರಮೆಸೆದಿರ್ದಿಪಂ ಮೆಱೆದುದಾ ವಿಪಿನಂ (ಕಬ್ಬಿಗ. ೩-೩೪). **ಪೂತಿಬೆಕ್ಕು** : ಸಿಂಗದುಗುರಿಂ ವ್ಯಾಘ್ರಚರ್ಮಮಂ ಕ್ರೋಡಶಾಬಂಗಳಂ ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತಡಿಗೆಱಗುತಿರ್ದರಗ್ಗದ ಬೇಡವಡೆಯೊಡೆಯರು (ಹಕಾಕಾ. ೫-೩). [ಪೂತಿ + ಬೆಕ್ಕು (< ಬೆರ್ಕು)]

**ಪೂತು**[1] 'ಪೂ[1]' ಪರಾ.

**ಪೂತು**[2] (ನಾ). ಭಲೆ, ಭಾಪು ಎಂಬಂತೆ ಬಳಸುವ ಒಂದು ಕೊಂಡಾಟದ ಮಾತು, — ಉದ್ಗಾರ : ಆ ಮಾಳವಚಕ್ರವರ್ತಿ ಜಗದೇವನೆ ತನ ಮದಾಂಧಸಿಂಧುರಂ ಕೀಳಿಡೆ ಪೂತು ರಾವುತನೆ ರಾವುತನಲ್ಲೆನಿದಿರ್ಚ್ಚಿ ವೀರಬಲ್ಲಾಳನೆನೆಂದು ಮೆಚ್ಚಿ ತಿವಿದಾಳ್ತನವಚ್ಚರಿಯಾಯ್ತು ಧಾತ್ರಿಯೊಳ್ (ಎಕ. VI. ಕಡೂ. ೯೯-೨೯; 1196); ನಿರ್ಘರ್ಜನಾರ್ಭಟಿಸುತ್ತುಂ ಪೂತು ಮಱ ಬಾಪೆನುತ್ತುಂ ಶಾತಾಸಿಯನಾಂತು ಸವೞತೊಡಗಿದನಾಗಳ್ (ಉದ್ಭಟ. ೯-೬೦); ಪೂತು ಸಾರಥಿ ಭಾಪು ಮಝರೇ ಸೂತ ಧಿರುಧಿರು ಎನುತ ರಥಿಕವ್ರಾತ ಮಿಗೆ ಬೋಳೈಸಿ ಕೊಂಡರು ಹಯದ ವಾಘೆಗಳ (ಕುಮಾವ್ಯಾ. ೯-೯೩).

**ಪೂತುರೆ** (ನಾ). = ಪೂತು[2] : "ಅರರೇ ಭಾಪುರೆ ಮಝ ಪೂತುರೆ ಭಲರೇ ಲೇಸು ಜಾಗುಮಾಧಣು ಧಿರುರೇ ಪುರೆಯೆನೆ ಕೊಂಡಾಟಂ" (ಚತುರ. ೫೫) ; ಭಾಪುರೇ ಕಣ್ಣಂದ ಪೂತುರೇ ಕಣ್ಣಂದ ಭಾಪು ಮಝ ಭಾಪು ಮಝ ಭಾಪುರೇ ಕಣ್ಣಂದ (ಕಿತ್ತೂರ. ದೇ. ೦೪೯-೦೭) ; ನೆರೆದ ನುಸಿಗಳು ಗಿರಿಯ ಕಾಡುವ ಪರಿಯ ನೋಡೈ ಪೂತುರೆ (ಕುಮಾವ್ಯಾ. ೨-೭೫). [< ಪೂತು[2]]

**ಪೂತೆ** (ನಾ). ೧. ಪರಿಶುದ್ಧಳಾದವಳು ; ಪವಿತ್ರವ್ಯಕ್ತಿ : ಮುನ್ನಂ ಲಂಕೆಯೊಳ್ ನೀನೆ ಪೇೞ್ದಿಯಲ್ತೆ ಸೀತೆ ಪೂತೆ, ಅವಳು ಕೈಕೊಳ್ವುದೆಂದು (ರಾಮಾಶ್ವ. ೨೫-೫); ಮಲ್ಲಮ್ಮ ನಾರೀಲೋಕದ ದಾರಿದೀಪ, ನಾರೀಕುಲಕ್ಕೆಲ್ಲ ಗೌರವ ತಂದ ಮಹಾಮಾತೆ, ಪೂತೆ, ಖ್ಯಾತೆ (ಶರಶ. ೬೬೬). ೨. ದುರ್ಗೆ. [ಸಂ. ಪೂತಾ]

**ಪೂತ್ಕರಿಸು** (ಕ್ರಿ). ಬಾಯಿಂದ ಊದಿ ಶಬ್ದ ಮಾಡು ; ಬುಸುಗುಡು : ಎಸೆದುದಾ ಮಣಿಖಚಿತಕಿರಣಪ್ರಸರಮುದ್ರಿಕೆ ಪೂತ್ಕರಿಸಿ ಲಳಿಮಸಗಿದಹಿಪನ ಪೆಡೆವಣಿಯವೊಲು ಕರದಲನಿಲಜನ (ತೊರಾಂ. ೯-೬-೦೭) ; ಈ ಸುರಭಿತ ಸುಮಮಂಜರಿಯ ಹಿಂಜಿ ಪೂತ್ಕರಿಸುವ ಕಾಳಸರ್ಪ ! (ಕಲ್ಯಾಣ. ೨೫-೦೩). 'ಪೂತ್ಕರಿಸಂ' ಪರಾ. [ಪೂತ್ಕರಣ[2] + — ಇಸು[1]]

**ಪೂತ್ಕೃತಿ** (ನಾ). ಪೂತ್ಕರಿಸುವಿಕೆ ; ಊದಿ ಶಬ್ದ ಮಾಡುವಿಕೆ ; ಪೂತ್ಕಾರ : 'ಪೂತ್ಕೃತಿಗೈ' ಪರಾ. [ಸಂ.]

**ಪೂತ್ಕೃತಿಗೈ** (ಕ್ರಿ). = ಪೂತ್ಕರಿಸು : ಪೂತ್ಕೃತಿಗೈದು ಸುಭಟನ ಸಿಂಹನಾದಕೆ ಮುಯ್ಯಿಗೆದು ಕರಿ ಕಾದುತಿರ್ದುದು ಭೀಮಸೇನನಲಿ (ಕುಮಾವ್ಯಾ. ೩-೩೬). [ಪೂತ್ಕೃತಿ + ಕೈ[1] (< ಕೆಯ್[1])]

**ಪೂದಂಡೆ** (ನಾ). ಹೂಮಾಲೆ ; ಹೂವಿನ ಸರ ; ಪುಷ್ಪಮಾಲೆ : ಮುತ್ತೈದೆಮೆಂಗಳು ಸಿರಿಮುಡಿಯ ಪೂದಂಡೆಗಳೊಡನೆ ಹಿಡಿಯಕ್ಕದಳಿದು ಬಂದರು ಮುಕ್ತಿನಾರತಿವಿಡಿದಾ ರತಿದೇವಿಯೊಡನೆ (ಮೋಹತ. ೦೭ ೪೪). [ಪೂ[2] + ದಂಡೆ[1]]

**ಪೂದಂದಲ್** (ನಾ). ಹೂವಿನ ಮಳೆ ; ಪುಷ್ಪವೃಷ್ಟಿ : ಎಸಗಿತ್ತಂದಸು ಕೊಲಮುಂದಪವನಂ ಪೆಣ್ದುಂಬಿಗಳ್ ಮುತ್ತುತುಂ ಮುಸುಱುತ್ತುಂ ಬರೆ ಬಂದುದಿಂದ್ರವನದಿಂ ಪೂದಂದಲ್ (ಶಂಶಪು. ೯-೯೬). [ಪೂ[2] + ತಂದಲ್]

**ಪೂದಳೆ** (ಕ್ರಿ). ಹೂವನ್ನು ತಾಳು, — ಧರಿಸು : ಪೂದಳೆದುವನಿಪ ಪುರ್ಬಿನ ಕುಡಿವೆರಸು ತೂಕಡನೊಳಕೊಂಡ ಜಾಡ್ಯಮುಂ . . . ಎಂತು ದೊರೆಕೊಳ್ಗುಮೆಂದು ಭಾವಿಸಿ (ಕಾದಂಪೂ. ೬೩೯), [ಪೂ[2] + ತಳೆ[1]]

**ಪೂದಿಂಗಳ್**, ಹೂದಿಂಗಳ್ (ನಾ). ಹೂವು ಬಿಡುವ ಕಾಲ ; ವಸಂತ ಮಾಸ : ಕೋದು ಪೂಮಿಡಿ ತಳಿರ ಕಾಡು ನರುವೊಗರಿನಿಂ ಪೂದಿಂಗಳರಸನಂ ಕರೆಯುಗುಂ ತುಳಿಲ್ಗೆ (ಕಾಲೂರ. ೦೦೯-೨೪೯). **ಹೂದಿಂಗಳ್** : ಹೂದಿಂಗಳ್ಬೆತರಲ್ಕೊಸಗೆಯುಂ ಬನದೇವಿ ದೀಪೋತ್ಸವಂಗೈವಳೆಂಬಂತೆ ಮೊಗ್ಗುಗೊಳ್ಳಿಗಳಿಂದೆ ಪೊಂಜಿನುರಿವೂವಿಂದೆ ರಂಜಿಸುವ ಮುತ್ತುಗದ ಮರಗಳಂ : ನೆನೆ, ಮನವೆ (ಶ್ರೀರಾಮಾ. ೧೪೦-೯೦೪). [ಪೂ[2] + ತಿಂಗಳ್]

**ಪೂದಿಸು** (ಕ್ರಿ). ಪೂಜೆ ಮಾಡು; ಪೂಜಿಸು; ಅರ್ಚಿಸು : ಉಚ್ಚಿಯ ಬಚ್ಚಲ ಕೊಚ್ಚೆಯ ತಾವ ಪೂದಿಸುವ[ಪಾಠಾಂ. ಪೂಜಿಸುವ, ಪೂಸುವ] ನಿಶ್ಚಯರಿಗೆ ಮಱೆಮಾಡುವ ಮೆಚ್ಚುನುಂಗಿಗೇಕೆ ನಿಶ್ಚಯದ ಅಱವು (ಸಿಗಮೊ. ೪. ೬೩೪-೦೭೬೨) ; ಇ[ವರ] ದೇವಸ್ಥಾನಮಂ ಬ್ರಾ(೦)ಹ್ಮಣರು ಪೂದಿಸುವರು (ಸೌಇಇ. IX — ೧. ೨೬೨-೨೩; ಸಂ. 1173); ಈ ದಿವ್ಯಲಿಂಗಮಂ ಭಕ್ತಿಯಿಂದಂ ಕೂರ್ತು ಪೂದಿಸಿರೆ ನೀವಖಿಳರು (ಶೀಕ್ಷೆಪು. ೭-೩-೫೦). [< ಪೂಜಿಸು ]

**ಪೂದಿಱು**, ಹೂದಿಱು (ಕ್ರಿ). ಹೂವುಗಳನ್ನು ಕೊಯ್ಯು, — ಬಿಡಿಸು : ತರಳಿಕೆ ದೇವತಾರ್ಚನಕೆ ಪೂದಿಱುಯುತ್ತಿರಲಾಗಳೀಕೆಯಂ ಕರೆದು (ಕಾದಂಬ. ೫೫೭); ನಿನ್ನ ಬಲಾಳಿ ಪೂದಿಱುವುದಂ ನೋಡಿಂ ವನಕ್ರೀಡೆಯೊಳ್ (ಜಗಂ. ೦೪-೯೬); ವರಭಕ್ತಂ ಪೂದಿಱುಯಲ್ ಕರಂಡಮಂ ಕೊಂಡು

ಪುಷ್ಪವನಕೇಳ್ತಂದಂ (ವ್ಯಕಐ. ೬. ೧೩). **ಹೂದಿಱ್:** ತಾನೆ ಬಿತ್ತಿದ ಪುಷ್ಪವಾಟಿಗಾದರದೊಳುದಕವನೆತ್ತಿ ಪೊರೆದು ಹೂದಿಱುವ **ಜಾಣ್ಕೆ** ಯನದೇವಣ್ಣಿಸುವೆನು (ಸಿದ್ಧರಾ. ೯. ೩೫). [ಪೂ<sub>2</sub> + ತಿಱ್]

**ಪೂದುಡುಗೆ** 'ಪೂದೊಡಿಗೆ' ನೋ.

**ಪೂದುಱುಂಬು,** ಹೂದುಱುಬು (ನಾ). ಹೂವುಗಳನ್ನು ಮುಂಡಿಸಿದ ತುರುಬು; ಪುಷ್ಪಗಳಿಂದ ಅಲಂಕೃತವಾದ ಹೆರಳು : ಪೂದುಱುಂಬಿನ ಪುಣ್ಯವತಿಯುರಂದುಗೆಯು ಭಂಗಿಯುರುಂ ನಗೆಗಣ್ಣಳ ನೀಱೆಯರುಂ ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತುಂ (ಗಿರಿಕ. ೯-೨೦ ವ). **ಹೂದುಱುಬು:** ಸನೆಯ ಕಂಚುಳಿಕೆಗಳ ಹೂದುಱುಬಿನ ಹಿಣಿಲ್ಗಳ ದಂಡೆಗಳ . . . ಕನಕರತ್ನಾಭರಣಕಾಂತಿಯ ವನಿತೆಯರು ಬಳಸಿದರು (ಶೂರರಾ. ೧. ೧೬ ೫೨). [ಪೂ<sub>2</sub> + ತುಱುಂಬು<sub>2</sub>]

**ಪೂದುಱುಗಲ್,** ಹೂದುಱುಗಲು (ನಾ). ಹೂವುಗಳ ರಾಶಿ,– ಒಟ್ಟಿಲು : ಮೇದಿನಿ ಬೆಂಗೆ ಬಿಟ್ಟ ಮುಡಿಯಂತೆಸೆದಿರ್ಪುದು ಪುಷ್ಪಿತಂ ತಟೀಪಾದಪವೀಥಿ ಪಂತಿಗುರುಳಂತಿರೆ ಸಂಚಳವಿಾನಸಂಚಯಂ ಪೂದುಱು ಗಲ್ ತಡಂ ತೊಡರ್ದು ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀತೋದೆ ಸಡಿಲ್ದು ನೀಳ್ದ ಶರದಿಂ ನಿಱಿಗೊಂಡು ಬಟಲ್ದ ಭಾಗಿಯಿಂ (ಧರ್ಮನೇ. ೧-೬೦). **ಹೂದುಱುಗಲು:** ಮೆಱೆದುದಸುರನ ಹಸ್ತದಲಿ ಹೂದುಱುಗಲಿನ ಗಂಧಾಕ್ಷತೆಯ . . . ಶೂಲ ಮಹೋಗ್ರತೇಜದಲಿ (ಶೂರರಾ. ೬-೯೯-೩೫). [ಪೂ<sub>2</sub> + ತುಱುಗಲ್ (< ತುಱುಂಗಲ್)]

**ಪೂದುಱುಬು** (ಕ್ರಿ). ಹೂವುಗಳನ್ನು ಮುಡಿದುಕೊಳ್ಳು : ಕಸ್ತೂರಿ ಪುಣುಗು ಜವಾದಿ ಮುಂತಾದ ಸುವಸ್ತುವ ತೊಡೆದು ಪೂದುಱುಬಿ ವಿಸ್ತಾರ ದಿಂದ ಪಾಡಿಸಿಕೊಂಡಳಾಗ ಸಮಸ್ತಭೃಂಗಗಳಿಂದ ತನ್ನ (ಭರತ. ೧೦-೬೬). [ಪೂ<sub>2</sub> + ತುಱುಬು<sub>1</sub> (< ತುಱುಂಬು<sub>1</sub>)]

**ಪೂದೂಳಿ,** ಪೂಧೂಳು (ನಾ). ಹೂವಿನ ಹುಡಿ ; ಪುಷ್ಪಪರಾಗ : ಪವನಂ ಪೂದೂಳಿಯಿಂ ರಂಗವಂ ಕ್ರಮದಿಂ ಮಾಳ್ಪುದು ಕೇಕಿ ಬರ್ಹ ದೆಲರಿಂ ಹೋಮಾಗ್ನಿಯುಂ ವರ್ಧಿಕುಂ (ಶಬಶಂ. ೨-೬೨). **ಪೂಧೂಳು:** "ಪರಾಗಃ, ಕೌಸುಮೋರೇಣುಃ – ಪೂಧೂಳು" (ಸಿದ್ಧಾಂತಿ. ೩೬೬). [ಪೂ<sub>2</sub> + ದೂಳಿ]

**ಪೂದೇರ್,** ಹೂದೇರ್ (ನಾ). ೧. ಹೂವುಗಳಿಂದ ಅಲಂಕರಿಸಿದ ರಥ ; ಪುಷ್ಪರಥ : ಮಾಲೆಗಾಱ ಪೂದೇರುಳ್ಳನ್ನೆಗಂ ಸಲ್ಗೆ (ಹ್ಯಅಂ. ೧೪೩೬, ೨೬-೫೫; 876 ; ತೊಂಡೆದುಟಿಯ ತರುಣೀರತ್ನದ ಸುಣ್ಮಂಡೆ ಮನೋಭವನೇಱುವ ಪೂದೇರಂದದಿನೊಪ್ಪಿದುದು (ಜಯಸಾ. ೫-೬); ಮಿಸುಪ ಕೇದಗಿಯೆಸಳ ಕಿಗ್ಗಟ್ಟ ಕಟ್ಟಿ ರಂಜಿಸುವ ಪೂದೇರನಾ ರತಿಯ ಕೈವಿಡಿದವರ ಬಿಸಜಾತ ಪತ್ರಂಗಳಿಂದೆ ಪೊಂಬಾಳೆಗಳ ಚಮರದಿಂ ರಂಜಿಸಿದನು (ಚಂಪಕ. ೩೫-೬). ೨. ಪುಷ್ಪಕವಿಮಾನ : ರಾಮಂ . . . ಪೂದೇರೊಳ್ ಸರ್ವರಿಂ ಕೂಡಿ, ನಿಜನಗರಿಯಂ ಪದಿನಾಲ್ಗಾಲಂ ಸಮೆಯೆ ಪುಗುತೆ (ಅದ್ಭುತ. ೬೬-೨೪). **ಹೂದೇರ್:** ೧. ಸುದರ್ಶಿಮಣಿ . . . ಅರಸಂಚೆಯ ಕಿಱುದುಪ್ಪುಳುವಾಸಂ ಪರಿಸದಿನೇಱಿದಳಗೋದ್ಭವನಡರ್ದರಗಿಳಿ ಹೂಡಿದ ಹೂದೇರೇಱುವ ರತಿಯೆಂಬಂದದೊಳು (ಜಯಸಾ. ೨-೫೨). [ಪೂ<sub>2</sub> + ತೇರ್<sub>2</sub>]

**ಪೂದೊಂಗಲ್,** ಪೂದೊಂಗಲು (ನಾ). ಹೂವಿನ ಗೊಂಚಲು; ಪುಷ್ಪ ಮಂಜರಿ : ಪುಷ್ಪಪರಾಗಮಲ್ಲುಗುವಿನಂ ಪೂದೊಂಗಲಲ್ಲಾಡಿ ತೋಱುವಿನಂ . . . ಲೀಲೆಯಿನಾ ಪ್ರದೇಶದೊಳದಾರ್ ತನ್ವಂಗಿಯರ್ ಕ್ರೀಡಿಪರ್ (ಜಗಪ. ೧೧ ೬೬). **ಪೂದೊಂಗಲು:** ಕಂಗೊಳಿಸುವ ಕಾಮಂಗೆ ಬೃಹಸ್ಪತಿ ಪೂದೊಂಗಲನಿತ್ತು ಸಂಧಿಸಿದ (ಮೋಹತ. ೫-೪೩) ; ಸುರಿವ ಪೂದೊಂಗಲ ತುಷಾರದಿಂ . . . ತಿರದಿಂಪೆಲ್ಲಿಯುಂ ನಂದನದೊಳು (ಕೈವಾಸಾ. ೩-೨೮). [ಪೂ<sub>2</sub> + ತೊಂಗಲ್]

**ಪೂದೊಗಲು** 'ಪೂದೊಂಗಲ್' ನೋ.

**ಪೂದೊಂಬೆ** (ನಾ). = ಪೂದೊಂಗಲ್ : **ಪೂದೇ**ರ ಬಲಬಂದ **ಪೊಣರ್ವಕ್ಕಿ** ಗಾಲಿಯ ಪೂದೊಂಬೆಯಿಂದ ಪೂಜಿಸಿದ ಪಾದಕೆ ನಮಿಸುತ ಗಿಳಿಗುದುರೆಯ ಮಾರನಾದರದೊಳಗೇಱ ನಡೆದ (ಪರ್ದಿಕ. ೧೦-೧೧೩) ; ನಗೆ ಮಲ್ಲಿಗೆ ಮೊಗ ದಾವರೆ ಕಣ್ಣಾಡಿ ಸೊಗಸುವ ಕನ್ನೈದಿಲಾಗೆ ಮುಗುಳಂಬನ ಮುಡಿಗ ಮರಿದ ಪರಿಮಳವೊಗುವ ಪೂದೊಂಬೆಯಂತಿಪರು (ಕೆಂನಪ. ೬-೯೯). [ಪೂ<sub>2</sub> + ತೊಂಬೆ<sub>1</sub>]

**ಪೂದೊಡಂಬೆ<sub>1</sub>** (ನಾ). ಹೂವಿನ ದೇಟು,–ತೊಟ್ಟು : "ಪ್ರಸವಬಂಧು ವೃಂತಮೆನೆ ಪೂದೊಡಂಬೆಗಳ ಪೆಸರಕ್ಕು" (ಮಂಗರಾ. ೩೬-೫); ಕೆಂದಳಿರ್ ಮಿಸುಪ ಕೆಂಗಱಿಯಾದುದು, ಪೂದೊಡಂಬೆ ಪಿಳ್ಳಿದುದು (ಕಮದ. ೨೯೨ ಪ್ರಯೋ). [ಪೂ<sub>2</sub> + ತೊಡಂಬೆ<sub>1</sub>]

**ಪೂದೊಡಂಬೆ<sub>2</sub>,** ಹೂದೊಡಬೆ (ನಾ). = ಪೂದೊಂಗಲ್ : ಬಂಘಲೆಮುದು ಪಶ್ಚಿಮಾನಿಳನರ್ಚಿತು ಕೇತಕಿ ಪೂದೊಡಂಬೆಯಂ (ಗಿರಿಕ. ೯-೩೬); ಮುಗುಳ್ತುದು ಜಾದಿ ಕದಂಬಕೋರಕಂ ಬಲಿದುದು ಪೂದೊಡಂಬೆಗಳ ನಾಂತುದು ಕೇತಕಿ (ವಿಕ್ರಮಪು. ೫-೨-೪೦); ಸುತ್ತಿಡಿದ ಕೆಂದಳಿರ ಕೆಂಗಾವಿಗಾಸೆ ತಾನಿತ್ತಂಡವಾಗಿ ನೇಲುವ ಪೂದೊಡಂಬೆಗಳ್ ಮತ್ತೆ ಝಲ್ಲಿಗಳ್ (ಮಹಾಪು. ೨೬-೩೯). **ಹೂದೊಡಬೆ:** ತಲ್ಲಣದ ತೋಪಿನ ವಿಷಾದದ ವಲ್ಲರಿಯ ಹೂದೊಡಬೆಗಳ ಹೊಯ್ವಳ್ಳಿಗಳ ಮುನಿಜನವ ಕಂಡರು ಪಾಂಡು ನಂದನರು (ಕುಮಾವ್ಯ. ೨೨-೨೨). [ಪೂ<sub>2</sub> + ತೊಡಂಬೆ<sub>2</sub>]

**ಪೂದೊಡವು** (ನಾ). ಹೂವಿನ ಆಭರಣ,–ಒಡವೆ : ಉಟ್ಟ ನವಾಂಬರಕ್ಕ ಮಾರೆ ಪೂದೊಡವಂ ತುಡುವೊಂದು ಕೌತುಕಂ ಪುಟ್ಟೆ ಮುರಾರಿಗೀಯಲರ ಕಂಪನೆ ಕಾಣಿಕೆಯಾಗಿ ಪೋಗಿ ನೀಂ ಕೊಟ್ಟೊಡಗೊಂಡು ಬರ್ಪುದು (ಜಗಪ. ೬-೦೨): ಒಳ್ಪಿಂ ಸಮೆದಚ್ಚಪೂದೊಡವನೋರಂತಿಟ್ಟು ನಾನಾ ವಿಳಾಸಂದೋಱುತ್ತಿನಿಯರ್ಗೆ ರಂಜಿಪುದಜಸ್ರಂ ಖೇಚರೀಸಂಚಯಂ (ಶಬಶಂ. ೨-೩೯). [ಪೂ<sub>2</sub> + ತೊಡವು]

**ಪೂದೊಡಿಗೆ,** ಪೂದುಡುಗೆ, ಹೂದುಡಿಗೆ, ಹೂದೊಡಿಗೆ (ನಾ). = ಪೂದೊಡವು : ಮಧುಕರಿಕೆಯಂ ಪೂದೊಡಿಗೆಯಂ ಮಾಡಲುಂ ಮಯೂರಿಯಂ ಕಿನ್ನರಮಿಥುನಂಗಳಂ ಸಂಗೀತಶಾಲೆಗೆ ಕಳುಪಲುಂ . . ಪೆಸರ್ವೆಸರೊಳೆ ಕರೆದು ಪೇಟ್ವ ಮನೋಹರಾಲಾಪಂಗಳಂ ಕೇಳುತ್ತಂ ಪೋಗೆವೋಗೆ (ಕಾದಂಪೂ. ೧೦೦೬). **ಪೂದುಡುಗೆ:** ಬಗೆಗೆ ವಂದ ಪೂಗಳೊಳ್ ಪೂದುಡುಗೆಯಂ ಮಾಡಿ ವಸಂತಕಾಂತೆಯರಂತೆ ನೆಱೆಯೆ ಕೆಯ್ಗೆಯ್ದಾಗಳ್ (ಆದಿಪು. ೧೦-೧೨೯ ವ); ಪೂದುಡುಗೆಯಿಂ ಚೆಲ್ವಾದರಾ . . . ಬಾಲೆಯರ್ (ಶಾಂತಿಪು. ೮-೦೫). **ಹೂದುಡಿಗೆ:** ವಾಸಂತಋತುಕಾಲಸಮಯ ಕುಸುಮವನಾ ವಿಳಾಸಿನೀಜನ ತೊಡಿಗೆಯಂ ಮಾಡಿ ತಂದೊಲ್ದು . . . ಶಿವಾರ್ಪಿತಂ ಮಾಡಿ ಹೂದು [ಶಾಕಾಂ. ದೊ]ಡಿಗೆದೊಟ್ಟು (ಹಕಳಾ. ೩-೪೮). **ಹೂದೊಡಿಗೆ:** ಎಲೆ ಮುಗ್ಧೆ . . . ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ (ನಂಬಿರ. ೧೪-೧೩). [ಪೂ<sub>2</sub> + ತೊಡಿಗೆ (< ತೊಡುಗೆ)]

**ಪೂದೊಣೆ<sub>1</sub>** (ನಾ). ಹೂವುಗಳಿಂದ ತುಂಬಿದ ಕೊಳ; ಹೂಗೊಳ : ನೈದಿಲಿಂ ಮೆಱೆವ ಪೂದೊಣೆಗಳಿಂದೆಸೆದತ್ತು . . . ರಜತಶೈಲಂ (ಲಾವಚಂ. ೦-೨೬). [ಪೂ<sub>2</sub> + ದೊಣೆ<sub>1</sub>]

**ಪೂದೊಣೆ<sub>2</sub>** (ನಾ). ಹೂಬಾಣಗಳ ಬತ್ತಳಿಕೆ : ಮನೋಜನಸ್ತ್ರತತಿ ಗೊಪ್ಪುವ ಪೂದೊಣೆಯುಕ್ಕುಮಾಕ್ಷಿಸಲ್ ಮಂಜುಳದಾಡಿಮಾಕುಸುಮ ಮೆಂದಱಿದೊರ್ವ ಸುಧಾಂಶುವಕ್ತ್ರೆ . . . ಕರಂ ತಿಱಿದಳ್ಳೆಡಂಗಿನಿಂ (ಅದ್ಭುತ. ೯-೬೦). [ಪೂ<sub>2</sub> + ದೊಣೆ<sub>2</sub> (< ತೊಣೆ<sub>2</sub>)]

**ಪೂದೋಂಟ,** ಪೂದೋಟ, ಹೂದೋಂಟ, ಹೂದೋಟ (ನಾ). ಹೂವು ಗಳನ್ನು ಬೆಳೆಯುವ ತೋಟ ; ಪುಷ್ಪೋದ್ಯಾನ : **ದೇಗುಲದ**

ಬಡಗಣ ಪೂದೋಂಟ (ಪ್ರಿಅಂ. ೦೯೨೯, ೬೩-೯; 1024) ; ಮತ್ತೊರ್ವ ಚೆನ್ನೆ ಪೊನ್ನ ಕರುವಾಡವುಂ ಬಳಸಿ ಬೆಳೆದ ಪೂದೋಂಟಮಂ ಪೊಕ್ಕು ಮೆಯ್ಗರೆದ ನಲ್ಲನಂ ನೆವದಿನಿಂತೆವಳ್ (ಶಬ್ದಕಾ. ೬೪) ; ಅಲ್ಲಲ್ಲಿ ಪೂದೋಂಟವಲ್ಲಲ್ಲಿ ಕೊಳಗಳಂತಲ್ಲಲ್ಲಿ ಕರ್ವಿನ ಪೊನಲು (ಪರ್ಶ. ೦-೫೩). **ಪೂದೋಟ :** "ಪುಷ್ಪವಾಟಿ ತಾಂ ಪೂದೋಟಂ" (ಪಚ್ಚ ಕೋ. ೩೨-೦೨) ; ಪೂದೋಟವುಂ ವಾಜಿಯುಂ . . . ತಿಳಿಯಲ್ ಸ್ವಪ್ನದಿ ಲೇಸಲ್ತೆ (ಸೋಮಃಶ. ೩೯) ; ಸೌರಭ್ಯವ ತಾಳಿದನೇಕ ಪೂದೋಟ ಕೇಳಿಯ ವನಗಳಿದ್ದುವು ಪುರಲಕ್ಷ್ಮಿಯ ತಾಳಿಯ ಮರಕತದಂತೆ (ಶೋಹಕ. ೨-೫೩) ; ಎತ್ತಣ ತುರಂಗವಿದು ಪೊಕ್ಕು ಪೂದೋಟವುಂ ತೊತ್ತಳದುಳಿವುದು (ಕೃಬಃಕಾ. ೨೦-೬). **ಹೂದೋಂಟ :** ಪಡುವಲು ಹೂದೋಂಟ (ಕೌಇಇ. XI-ii, ೦೨೨-೮೩ ; ಸು. 1072) ; ಹೂದೋಂಟಗಳನುಱೆ ಹೊಕ್ಕು ಚೆಲುವನಾಗಿ ಪರೀಕ್ಷಿಸುತಿಂ (ಬಸವು. ೨೨-೬). **ಹೂದೋಟ :** ಹಲವು ಹೂದೋಟಗಳಪರ್ಜಿಸಿ . . . ಹೂಗಳನೆಯ್ದೆ ಕುಯಿ ತಂದು (ಬಸವು. ೨೨-೨೫) ; ಪರಿಪರಿಯ ಹೂದೋಟಗಳ ಹೊಯ್ದೊರಸಿದನು . . . ಲಾಂಗೂಲದಲಿ ಕಲಿ ಹನುಮ (ತೊರರಾ. ೫-೪ ೦೩) ; ಇಂತಹ ದಾಂಪತ್ಯ ಪ್ರಣಯಲೀಲೆ ಗಾಳಿ ಬೀಸದ ಹೂದೋಟ (ಕನ್ನಕಾ. ೦೦೯).

[ ಪೂ₂ + ತೋಂಟ ]

**ಪೂದೋಟ** 'ಪೂದೋಂಟ' ನೋ.

**ಪೂದೋಱಿಸು** (ಕ್ರಿ). ಹೂವು ಬಿಡುವಂತೆ ಮಾಡು ; ಪುಷ್ಪಿಸುವಂತೆ ಮಾಡು : ಮಿಂಡೆದ್ದ ಹೆಣ್ಗಳುಪವನಕ್ಕೆ ನಡೆತಂದು . . . ಕಂಡಕಂಡವನಿಜಾತಂಗಳು ಚಿಗುರಿಸಿದರೊಡನೆ ಪೂದೋಱಿಸಿದವು (ಕೃಬಃಕಾ. ೩೦-೫).

[ಪೂ₂ + ತೋಱಿಸು]

**ಪೂಧೂಳು** 'ಪೂದೂಳಿ' ನೋ.

**ಪೂನಾಡು** ' ಪುನ್ನಾಡು ' ನೋ.

**ಪೂನಿಱು** (ಕ್ರಿ). ಹೂವುಗಳನ್ನು ಹೆಣೆ,—ಮಾಲೆಕಟ್ಟು : ಲಂಜಿಗೇಸರಂ ದೇವರ್ಕೆ ಪೂನಿಱುವ ಮಾಲ (ಲಾ) ಕಾರಗ್ಗ ಅರ್ದ್ದ ವಿಸದಿ (ಇಅ. X, ೬೬-೨; 578). [ಈ ಇದು ' ಪೂ ನಿಱ ' ಎಂಬುದರ ಅಪಲಿಖಿತವಿರಬಹುದು]

**ಪೂನೀರ್**, ಹೂನೀರು (ನಾ). ಹೂವಿನ ರಸ ; ಮಕರಂದ ; ಪುಷ್ಪರಸ : ತಳಿರಂ ತೂಗಿ ಪರಾಗಮಂ ಪಿರಿದು ಪೂನೀರಂ ತಡಂಗೂಡಿ ಗುಗ್ಗುಳ ನಿರ್ಯಾಸಮನಾಂತು . . . ಏ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಜನೀ. ೫-೯೬). **ಹೂನೀರು :** ನೀರಿನೊಂದು ನೀರಜಾತ ಬೆಳಕಿಗಾಗಿ ಕೆರಳಿತು ಈ ಕಿರಣಕರಳಿತು ಹೂವ ಹೊಕ್ಕ ಕಿರಣವಾಗ ಹೂನೀರ ನೆಕ್ಕಿತು (ಗಂಗಾತ. ೦೫-೦೫). [ಪೂ₂ + ನೀರ್]

**ಪೂಪ** (ನಾ). ಹಿಟ್ಟಿನಿಂದ ಮಾಡುವ ದೋಸೆ, ಇಡ್ಲಿ, ಹೋಳಿಗೆ ಮುಂತಾದ ಮೃದುವಾದ ಭಕ್ಷ್ಯ : '' ಪೂಪಃ, ಅಪೂಪಃ, ಪೂಪಳಿಕಾ —ಈ ೩ ಪಕ್ವಾನ್ನಂ '' (ಹಲಾಯು. ೫೩-೦೬೪) ; ವ್ಯಕ್ತ ಕ್ಷೀರಾನ್ನವುಂ ಘೃತದುಗ್ಧಶರ್ಕರೆಯ ವ್ಯಕ್ತಿಯಿಂಗೈದ ಕಜ್ಜಾಯವುಂ ಪೂಪವುಂ ಮುಕ್ತಭವಜಾಲನಾ ಶಿವಲಿಂಗನಾರೋಗಿಸಿದನು (ದುರಶಿ. ೬ ೫೨) ; ಲಡ್ಡು ಚಕ್ಕುಲಿ ತರಗು ಪೂಪವ [ಪಾಠಾಂ. ತುಪ್ಪವ] ಬಡ್ಡಿಸಿದ ಪೊಂದಟ್ಟೆಯನು ಮುಂದೊಡ್ಡಿ (ಜರಾಮಾ. ೧೬೩-೨೯). 'ಅಪೂಪ' ಪರಾ. [ಸಂ.]

**ಪೂಪಲಿಕೆ** (ನಾ). = ಪೂಪ : ''ಪೂಪಲಿಕಾ ಪೂಪನಾಮಂ'' (ಪಚ್ಚ ಕೋ. ೯೪-೦೨). [ ಸಂ. ಪೂಪಲಿಕಾ ]

**ಪೂಪುಟ್ಟಿಗೆ** (ನಾ). ಹೂವಿನ ಬುಟ್ಟಿ ; ಪುಷ್ಪಕರಂಡ : ಪೂಪುಟ್ಟಿಗೆ ಪನ್ನೀರ್ಗುಪ್ಪಿಗೆ . . . ಕರ್ಪುರ ಕರಡಿಗೆಯಿರ್ದವು (ಶೊಬಸೋ. ೨೩-೩೨).

[ ಪೂ₂ + ಪುಟ್ಟಿಗೆ₁ (< ಪುಡಿಕೆ) ]

**ಪೂಪುಣುಂಬ** (ನಾ). ಹೂವುಗಳನ್ನು ಬಾಣಗಳಾಗಿ ಉಳ್ಳವನು ; ಮನ್ಮಥ : "ಇಂಗೋಲ್ವಿಲ್ಲಂ . . . ಪೂಪುಣುಂಬು . . . ಗಿಳಿದೇರು — ಇವು ೧೩ ಕಾಮದೇವಂಗೆ ಪೆಸರ್" (ಕಜಾ. ೯೬-೦೩) ; "ಕುಡುವಿಲ್ಲ ಸಿಂಗರ ಪೂಪುಣುಂಬ ವಿಷಾಂಬಟವಿಗೆಯ ಪೆಣ್ಬಡೆಯನ್ನೆಸರಲ ಕಾವ ಜತಿಗಳವಗೆಯ ನೆನೆ ಮನ್ಮಥನ ನಾಮಮುಕ್ಕುಂ" (ಕಬ್ಬಿ. ೯). [ಪೂಪುಣುಂಬು + —ಅ₇]

**ಪೂಪುಣುಂಬು** (ನಾ). ಮನ್ಮಥನ ಹೂವಿನ ಬಾಣ, — ಪುಷ್ಪಾಸ್ತ್ರ : ಕಯ್ಪುಱೆಗುಟ್ಟಿಯಾಡಿದರ್ ; **ಪೂಪುಣುಂಬು** ; ಪಲ್ಪುಱೆಗುಟ್ಟಿದಂ (ಕುದ. ೬೭ ಪ್ರಯೋ) ; ಭಾವಜನಾರ್ಪಿಂ ಪೂಪುಣುಂಬಂ[ಪಾಠಾಂ. ಪೂವಿನಂಬಂ] ಪೂಡಿದಂ (ದಶಾವ. ೬-೬೦ ಪ). [ಪೂ₂ + ಪುಣುಂಬು (< ಪುಳುಂಬು)]

**ಪೂಪುರುಳ್** (ನಾ). ಹೂವಿನ ಸತ್ತ್ವ ; ಮಕರಂದ : ಪೊಂಬೆಳ್ಳಿ ಪೂಪುರುಳ್ ಬೆಳ್ದಿಂಗಳಿನ ಚಿತ್ತ ತುಂಬಿದಿರ್ಪಿನ ಬಗೆಯ ಬರೆಹದೊಳ್ಪಲ್ತೆ ? (ಕಾಲಾರ. ೬೫-೦೦೨). [ಪೂ₂ + ಪುರುಳ್]

**ಪೂಪೊಡೆಯ,** **ಹೂಪೊಡೆಯ** (ನಾ). ಹೊಕ್ಕುಳಲ್ಲಿ ತಾವರೆಯ ಹೂವುಳ್ಳವನು; ಪದ್ಮನಾಭ; ವಿಷ್ಣು : "ವಿಷ್ಣು ಪೂಪೊಡೆಯನೆಂದೆನಲ್" (ಕರ್ಣಾಶ. ೯೫). **ಹೂಪೊಡೆಯ :** ಹರನ ಹೆಟ್ಟುಗೆ ಹೂಪೊಡೆಯನೋಪಳ ನಜನರಸಿಯನಂಗಶೇಖರನ ತರುಣಿಯರನು ಗೆಲ್ದಳು ಗಾಡಿ ಸಿರಿಜಾಣ್ಮೆ ಪಿರಿದಪ್ಪ ರೂಪಿನಿಂದವಳು (ಶ್ರೀಪಾಂ. ೩-೬೦). [ಪೂ₂ + ಪೊಡೆ₂ + —ಅ₇]

**ಪೂಬನ** (ನಾ). = **ಪೂದೋಂಟ** : ಬಾಲೆಯರೆಮ್ಮಯ ಪೂಬನದಿ ಆಡಲು ಬಂದು ನುಡಿವರು (ಗೀಬಾ. ೦೪-೫೨). [ಪೂ₂ + ಬನ₁]

**ಪೂಬಾಣ,** **ಹೂಬಾಣ** (ನಾ). ೧. ಹೂವಿನ ಬಾಣ ; ಮನ್ಮಥನ ಬಾಣ. ೨. ಮನ್ಮಥ ; ಕಾಮ : ಬಾಣಪುತ್ರಿಯ ಕೆಳದಿಯರ ನೋಡಿದರು ಪೂಬಾಣಗೆಣೆಯ ಸದ್ವಿಟರು (ಶೋಹಕ. ೨೪-೨೦). **ಹೂಬಾಣ :** ೩. ಸ್ಫೋಟವಾದಾಗ ಮೇಲಕ್ಕೆ ಸಿಡಿದು ಹೂವಿನಾಕಾರದ ಕಿಡಿಗಳನ್ನು ಸೂಸುವ ಒಂದು ಬಗೆಯ ಸುಡುಮದ್ದು : ಈ ಜಾನಸಾಲೆಯಲ್ಲಿ ಹಗಲುಬತ್ತಿ, ಹೂಬಾಣ, ಆಕಾಶಕೊಳವಿ . . . ಉತ್ಸವಗಳ ಕಾಲದಲ್ಲಿ ಹತ್ತಿಸುವಂತೆ ಕಟ್ಟಲೆ ಮಾಡಿದರು (ಮುಹಾಮ. I, ೦೨೮) ; ಎಡವೂರ ತಳದಲ್ಲಿ ಏನೇನ ಶಡಗರ . . . ಹಾರುವ ಹೂಬಾಣ ಹೂಬತ್ತಿ ಕಂಡಿರಿ (ಕನ್ನಕಾ. ೯). [ಪೂ₂ + ಬಾಣ₂]

**ಪೂಬಿಡು,** **ಹೂಬಿಡು** (ಕ್ರಿ). ಹೂವುಗಳನ್ನು ಹೊಂದು ; ಪುಷ್ಪಿತವಾಗು : ಪೂಬಿಡುವ ವಸಂತದಾ, ಪಣ್ ಬಿಡುವ ಗ್ರೀಷ್ಮದಾ, ಮುನ್ನಱಿವು ಇರ್ದುದಿಲ್ಲಂ (ಐದ್ಕೃ. ೨೪-೫೦೬). **ಹೂಬಿಡು :** ಒಂದೂವರೆ ತಿಂಗಳಿಗೆ ಸಸಿಗಳು ದೊಡ್ಡವಾಗಿ ಹೂಬಿಡುತ್ತವೆ (ಮುಂಶಿಯು. ೪-೨೬) ; ಗಿಡ ಹಬ್ಬುವುದು ; ಚಿಗುರುವುದು ; ಹೂಬಿಡುವುದು ; ಹಣ್ಣು ಬಿಡುವುದು (ಸಾಹಿಶೀ. ೮೦). [ಪೂ₂ + ಬಿಡು₁]

**ಪೂಮಡಿ** (ನಾ). ಹೂವಿನ ಮಡಿಕೆ ; ಹೂದಂಡೆ : ತಲೆವಿಕ್ಕಿ ಕಟ್ಟಲೆಗಮಿಂದು ಮರೀಚಿಗಮಾಯ್ತು ನಾಡೆ ಕಣ್ಗಳವಡೆ ಮಲ್ಲಯುದ್ಧವೆನೆ ದೇಸೆಯ ಪೂಮಡಿಯಂ ತೊಡರ್ಚಿದರ್ (ಚಂದ್ರಕೆ. ೬-೬೪). [ ಪೂ₂ + ಮಡಿ₂ ]

**ಪೂಮರ** (ನಾ). ಹೂವು ಬಿಡುವ ವೃಕ್ಷ ; ಹೂವಿನ ಮರ : ತಳ್ತಿರಟ್ಟುಡಿಯ ಪೂಮರದಿಂ ಕಱೆವೂಗಳೆತ್ತಮಿತ್ತಂ ಕವಿದಲ್ಲಿ ಮೆಲ್ಲನಾಗೆ ತೇಂಕುವ ಪೂವಿನ ಸೀಕರಂಗಳಂ (ಆದಿಪು. ೦-೬೦) ; ಪೂಮರನಂ ಕೋಡಗ ವೇಱಿದಂತೆ ಕಬ್ಬಿನ ತೋಂಟವುಂ ನರಿ ಪೊಕ್ಕಂತೆ (ರಘುರ್ಕಿಶ್ಯ. ೨-೬೦). [ಪೂ₂ + ಮರ₁]

**ಪೂಮಲಗು** (ನಾ). ಹೂವಿನ ದಿಂಬು ; ಹೂವುಗಳಿಂದ ರಚಿಸಿದ ಮೆತ್ತೆ : ಪೂಗೋಲ ತೂಗುತೆ ತಳಿರ ಪಾದಾಸನ ಮೇಗೆ ಕಾಲಿಟ್ಟು ಪೂಮಲಗ ರಾಗದೊಳೊಱಗಿ ತಾವರೆಗದ್ದುಗೆಯೊಳಿರ್ದ ಪೂಗೋಲನು (ಪರ್ಶ. ೦೦-೬೬).

[ಪೂ₂ + ಮಲಗು₂ (< ಮಲಂಗು₂)]

**ಪೂಮಳೆ** 'ಪೂವಟೆ' ನೋ.

**ಪೂಮಳೆಗಱೆ** 'ಪೂವಟೆಗಱೆ' ನೋ.

**ಪೂಮಟಿ** 'ಪೂವಟಿ' ನೋ.

**ಪೂಮಾಲೆ,** ಹೂಮಾಲೆ (ನಾ). ಹೂವಿನ ಹಾರ, — ದಂಡೆ; ಪುಷ್ಪಮಾಲೆ: ನಿನ್ನಾಜ್ಞೆ ಪೂಮಾಲೆಯಂದದೆ ನಿಂದಿರ್ಪುದು ಮತ್ಕಿರೀಟದೊಳ್ (ಆದಿಪು. ೦೩-೦೬); ಕಪಿಯು ಕೊರಲೊಳ್ ಪೂಮಾಲೆಯಿಕ್ಕಿದಂತಾನುಮಕ್ಕುಂ (ರಮಾರ್ಣ. ೦-೦೦೬); ಕಂಠದೊಳೊಂದಿಸಿದ ಕೊರಲಗುಮ ಪೂಮಾಲೆಯುಂ ಮಾಡಿ ಅಕ್ಷಯುಂ ನಿಟಿಲಾಕ್ಷನಭವಂ . . . ಅಕ್ಷಣದೊಳುರು ಮೋಕ್ಷವಂ ಕೊಡಲು (ಏಕಪು. ೨೭-೩೦). **ಹೂಮಾಲೆ:** ಹೂಮಾಲೆಗಳ ಸಿಂಪಿಸಿದ ಗಂಧದ ಬಂಧದಕ್ಷತೆಯ ಕೀಲಣೆಯ ಮಣಿವೆಳಗುಗಳ ಹರಿದಾಳಿಯಲಿ . . . ಎಸೆದುದಂಕುಶ ಭಟನ ಮುಷ್ಟಿಯಲಿ (ಕುಮಾವ್ಯಾ. ೩-೫೬); ಎತ್ತಿದ ಹೂ[ಶ.ಕಾಂ. ಪೂ]ಮಾಲೆ ಬಿಲ್ಲಿನಂತಿರಲಾಗ ಮುತ್ತುಮಾಡಿಬಿಡಿಹೆದೆಯಾಗೆ ಚಿತ್ರಭವಗೆ ಪುಷ್ಪಚಾಪವನೀವೊಲು ಬಿತ್ತರದೊಳ್‌ಗೊರ್ವಳೆಸೆಗು (ಶಶಾಕ. ೦-೦೦೫); ಕೋತಿಯ ಕೈಯಲ್ಲಿ ಹೂಮಾಲೆ ಕೊಟ್ಟ ಹಾಗೆ (ಗಾದೆ). [ಪೂ₂+ಮಾಲೆ]

**ಪೂಮಾಲೆಗಾರ್ತಿ** (ನಾ). ಹೂವು ಮಾರುವವಳು; ಹೂವಾಡಿಗಿತ್ತಿ: ಮಲ್ಲಿಗೆಯಲರ್ದಂಡೆವಿಡಿಯೆ ಬಂದೆಣಗುವ ಜಲ್ಲಿದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ ಕಾವನ ಕಬ್ಬುವಿಲ್ಲಿನಂತಿರ್ದಳು. (ಸೋಮಕ. ೩-೦೭). [ಪೂಮಾಲೆ + — ಕಾಱ + — ತ್ತಿ₁ (ನ — ಇತ್ತಿ)]

**ಪೂಮಾಱು,** ಹೂಮಾರು (ಕ್ರಿ). ಹೂವುಗಳನ್ನು ವಿಕ್ರಯಿಸು,— ಮಾರು: ಇದು ಮನೆಯಣ್ಣಾಸಂ ಮಾಱುವಂದಮಲ್ಲದೆ ಪೂಮಾಱುವಂದಮಲ್ತು (ಶಂಕಭಾ. ೪-೩೦ ವ). **ಹೂಮಾರು:** ಹೂಮಾರುವ ಅಂಗಡಿಯಲ್ಲಿ ಹುಲ್ಲು ಮಾರುವುದುಂಟೆ? (ನಾಡಗೀ. ೦೨೨). **ಹೂಮಾರಿದ** ಕೈಲಿ ಹುಲ್ಲು ಮಾರಿಸಬಾರದು (ರಮಾರ. ೬೬). [ಪೂ₂+ಮಾಱು₂]

**ಪೂಮಿಡಿ,** ಹೂಮಿಡಿ (ನಾ). ತೀರ ಎಳೆಯ ಕಾಯಿ; ಚಿಕ್ಕ ಮಿಡಿ: ಮರ್ಮರಪತ್ರಮಂಬುತಳವಂ ನಡುವಂತಿರೆ ನಟ್ಟೊಡತ್ತ ಬೀಟ್ಮರ್ಮ ಗುಟ್ಟಿದತ್ತ ಪೂಮಿಡಿಯು ಪೂವಿನ ಕಾಯ್ಗಳ ಕಯ್ದುವುಳ್ಳುಗುಂ (ಶಾಂತಿಪು. ೬-೯೯); ಸುತ್ತಿಟ್ಟು ಪರ್ಬಿದುದು ಮದವೇರಿ ಪೂಮಿಡಿಗಳೆತ್ತಲುಂ (ಪುಲ್ಲಕ. ೦೪-೫); ಕೋದು ಪೂಮಿಡಿ ತಳಿರ ಕಾಡು ನರುಪೊಗರಿನಿಂ ಪೂದಿಂಗಳರಸನ ಕರೆಯುಗುಂ ತುಳಿಲ್ಗೆ (ಕಾಲೂಕೆ. ೧೦೯-೨೪೬). **ಹೂಮಿಡಿ:** ಹೂಮಿಡಿಯ ಹಱಿದು ಒತ್ತಿ ಹಣ್ಣು ಮಾಡಿದೆನೆಂದರೆ ಹಣ್ಣಾಗಬಲ್ಲುದೆ (ಅವತಂ.೨೨೬-೦೦೩೪); ಎಳೆಯ ಹೂಮಿಡಿಗಳಂ ಹಱಿದು ಹಣ್ಣಂ ಮಾಡಲಳವೆ (ಕಬಪು. ೬-೯); ಗೋದಿ ಹೊಡೆಗಟ್ಟಿರಲು ಕಡಲೆಯ ಮಡಿಲು ಹೂಮಿಡಿ ತುಂಬಿತು (ನಂಮು. ೦೨-೦೨). [ಪೂ₂+ಮಿಡಿ₂]

**ಪೂಮುಡಿ₁,** ಹೂಮುಡಿ₁, ಹೂವುಮುಡಿ (ಕ್ರಿ). ಹೂವುಗಳನ್ನು ಧರಿಸಂ,—ಮುಡಿದುಕೊಳ್ಳು: ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳ್ (ಗದಾಯು. ೬-೩೦). **ಹೂಮುಡಿ₁:** ಹಸುರೆಲ್ಲವು ಕುಸುರಾಯಿತು ಹೂಮುಡಿಯಿತು ಬೇಲಿ (ಸಂಮು. ೬-೨೨); ಸೀಳ್ಕೊಂಬಿನಿಂ ಮಾವು ಹೂಮುಡಿಯುತಿಹುದು (ಕಾಲೂರ. ೦೦೩-೨೩೪). **ಹೂವುಮುಡಿ:** ಹೂವುಮುಡಿಯುವ ಹಕ್ಕು ಹೆಂಗಸರಿಗೆ ಜನ್ಮಸಿದ್ಧವಾದುದು (ದೂಕಿಟ್ಟಿ. ೬೦). [ಪೂ₂ + ಮುಡಿ₁]

**ಪೂಮುಡಿ₂,** ಹೂಮುಡಿ₂ (ನಾ). ೧. ಹೂವುಗಳನ್ನು ಮುಡಿದುಕೊಂಡ ಹೆರಳು,–ಜಡೆ: ಬಟಲ್ಮುಡಿಯ ಸೋರ್ಮುಡಿಯ ಪೂಮುಡಿಯ ನಿಱುದಲೆಯ ಸುಟಿಗುರುಳ . . . ವಿದ್ಯಾಧರವಾರನಾರೀಕದಂಬಂ (ರಮಾರ್ಣ. ೬ ೦೯೬); ತರುಣಿಯರ ಪೂಮುಡಿಯ ಕಂಪಿಂದೆ ಸೌರಭ್ಯಧರನಾಗಿ . . . ಮಾರುತಂ ಸುಳಿದನು (ಕಬಪು. ೦೦-೬). **ಹೂಮುಡಿ₂:** ೧. ಅವನ ಹೆಂಡತಿ ಐವತ್ತೆರಡು ಕಣ್ಣುಳ್ಳವಳು ಅವಳು ತನ್ನ ಹೂಮುಡಿಯ ಬಿಟ್ಟು ಅತ್ತಾಳು (ಬಸವ. ೯೩೨). ೨. ಹೂವನ್ನು ಹೆಣೆದ ಜಡೆ; ಮೊಗ್ಗಿನ ಜಡೆ: ಪೂರವಾರ್ಗಳಂ ಮಿಡಿವ ಹೂಮುಡಿಯು ಪಿಡಿಯುಲೆನೆ ಸೆರಗು ದಡದಡಿಸುತಿರೆ ಚಿಕ್ಕೆಯರ್ ಮೆರೆದು ತರಿಮಿಂಡಿಯರ್ ನಡೆದರ್ (ಕಾಂ.ಆ. ೦೨೪-೨೬೦). [ಪೂ₂+ಮುಡಿ₂]

**ಪೂಯ** (ನಾ). ೧. ಗಾಯಂಗಳಿಂದ ಹೊರಡುವ ಬಿಳಿಯ ದ್ರವ: ಕೀವು. ೨. ಊತ; ಬಾವು: "ಪೂಯಂ, ಪೂಯಿಃ, ಪೂಯುಃ, ಪೂಯನಂ, ಪೂಯನೀಯಂ ಈ ೫ ಬಾವು" (ಕಾಶಕ. ೦೦೦). [ಸಂ.]

**ಪೂರ₁** (ನಾ). ೧. ತುಂಬುವುದಂ; ತುಂಬಿಸುವುದು; ಪೂರ್ಣಗೊಳಿಸುವುದು. ೨. ತೃಪ್ತಿಗೊಳಿಸುವುದಂ; ಸಂತೋಷಗೊಳಿಸುವುದು. ೩. ಸಂರಿಯುವುದು. ೪. ನದಿ, ಸಮುದ್ರ ಮೊದಲಾದುವು ಉಕ್ಕಿ ಹರಿಯುವುದು; ನೆರೆ: "ಪೂರಯೆಂಬುದು ತೊಱೆಯ ಭೂ(ಬೂ)ರಂ" (ಕಹಾಶು. ೦೦೦-೪೬); ಮಳೆಗಾಲದಲ್ಲಿ ಗಂಗಾನದಿಗೆ ಪೂರ ಬಂದ ಸಮಯದಲ್ಲಿ ಹುಮಾಯೂನನು ದಿಲ್ಲಿಯ ಕಡೆಗೆ ತಿರುಗಿದನು (ಹಿಂದುಸ. ೯೯). ೫. ಹರಿವು; ಪ್ರವಾಹ: ಬಿಡದಬ್ಜ ಬಂಧುಜನದೊಬ್ಬೊಡಿಯದ ಕಣ್ಣೀರ ಪೂರವಮಾ ಪ್ರೇತವಮನೋಗಡಿಸದೆ ಸುಡುವುದು ಗತ (ಕಂಕಥಾ. ೨-೨೬); ಕಣ್ಣೀರ ಪೂರದಗುರ್ವಿಂ ದೆಸೆಗಾಣದಂದೆಡವುತಂ . . . ಪೋದಂ (ಕಾದಂಪೂ. ೯೦೪); ಪಾಮರೀಮುಖಶಶಿಗೊಸರ್ವಿಂದುಗ್ರಾಪನಿರ್ಮಳಜಲದ ಪೂರದಿಂ ಬೆಳೆವುತಿಹ ಶಾಳಿಗಳ್ ಕಣ್ಗೆಸೆದುವು (ಕಂಪು. ೦೦-೯). ೬. ನೀರಿನ ಸಮೂಹ; ಜಲಾಶಯ: 'ಪೂರಾಂಬು' ಪರಾ. ೭. ಹುಣ್ಣು, ಗಾಯ ಮೊದಲಾದುವನ್ನು ತೊಳೆದು ಶುದ್ಧಗೊಳಿಸುವುದು. ೮. ಹಿಟ್ಟಿನಿಂದ ಮಾಡಿದ ರೊಟ್ಟಿ, ದೋಸೆ ಮೊದಲಾದ ಖಾದ್ಯ. ೯. ಮಾದಳದ ಗಿಡ; ಮಾತುಲುಂಗವೃಕ್ಷ. ೧೦. [ಯೋಗ] ಪ್ರಾಣಾಯಾಮದ ಒಂದು ಅಂಗ; ಮೂಗಿನಿಂದ ಉಸಿರನ್ನು ನಿಧಾನವಾಗಿ ಒಳಗೆ ಎಳೆದುಕೊಳ್ಳುವುದು: 'ಪೂರಕ' ಪರಾ. [ಸಂ.]

**ಪೂರ₂,** ಪೂರಾ(ಅ). ತುಂಬ; ತೀರ; ಪೂರ್ತಿಯಾಗಿ; ಬಹಳವಾಗಿ: ಕಾಲುಗಳು ಪೂರ ಸೋತುವು (ಮೇಬಮ. ೩೦); ರಾಮಣ್ಣಗೆ ಪೂರ ಕೋಪ ಬಂತು (ಚಂದ್ರಕ. ೦೨೪). **ಪೂರಾ:** ನಾನು ಹೇಳುವ ಮಾತನ್ನು ಪೂರಾ ಕೇಳಬಾರದೆ? (ದೇಜಿಕಾ. ೦೯); ನಿನ್ನ ತಿಳಿವಳಿಕೆ ಪೂರಾ ತಪ್ಪಲ್ಲ (ಅಶ್ವಮ. ೨೦).

**ಪುಟ್ಟಪೂರಾ, ಪುಟ್ಟಾಪೂರಾ** (ದ್ವಿರುಕ್ತಿ): ಮಿಂಚುಬಳಗ ತೆರೆತೆರೆಗಳಾಗಿ ಅಲೆಯುವುದು ಪುಟ್ಟಪೂರಾ (ಹ್ಮಜಸ. ೧-೨); ಛಲಬಲ ಇದ್ದು ಧೀರಾ ಎಂಥ ಶೂರಾ ಆಸಕ್ತಿ ಇಲ್ಲದಾ ವೀರಾ ಪುಟ್ಟಪೂರಾ (ಸ.ಜಿ.ಗಾ. ೨೦-೦೬); ಕೃಷ್ಣದೇವರಾಯನು . . . ಮುಸಲ್ಮಾನರನ್ನು ಈ ಯುದ್ಧದಲ್ಲಿ ಪುಟ್ಟಾಪೂರಾ ಸೋಲಿಸಿದ ಕಾರಣ ಮುಸಲ್ಮಾನರು ವಿಜಯನಗರದ ರಾಜ್ಯದ ಕಡೆಗೆ ಆತನ ಕಾಲದಲ್ಲಿ ಇಣಿಕಿ ನೋಡಲಿಲ್ಲ (ಕಕಕ್ಕ. ೦೨೨). [<ಪೂರ₁]

**ಪೂರಂಗವಿ** (ಕ್ರಿ). ಹೆಚ್ಚಾದ ನೆರೆ ಬಂದು ಆವರಿಸಂ; ಮಹಾ ಪೂರವು ಬಂದು ಮುಂಸುಕು: ಸಭೆಯೆಲ್ಲಂ ಹೊನ್ನ ನೀರಿಂದರೆ ಬಳೆದವೋಲಿ ದರ್ಪ್ಪದೇಕೀ ಜಗದ್ವಲ್ಲಭನಂಗಚ್ಛಾಯೆ ಪೂರಂಗವಿದ ಪಸರದಿಂದೆ (ಅಜಿಪು. ೦೦-೩೪). [ಪೂರ₁+ಕವಿ₁]

**ಪೂರಂಗೊಳ್** (ಕ್ರಿ). ಪ್ರವಾಹವಾಗಿ ಹರಿ; ಧಾರೆಗಟ್ಟಿ ಸುರಿ: ಮುದಶ್ರುಗಳ್ ನಯನದಿಂ ಪೂರಂಗೊಳಲ್ . . . ರಥಾಂಗರಾಜಿ ನೆರೆದತ್ತು (ಕುಸುಮಾ. ೦-೫೩); ಹೃಷಯೋದ್ಭೂತನವಪ್ರಸನ್ನಸುಧೆ ಪೂರಂಗೊಂಡುದು (ಕುಸುಮಾ. ೪-೦೦೫). [ಪೂರ₁+ಕೊಳ್₁]

**ಪೂರಂಬರಿಸು** (ಕ್ರಿ). ತುಂಬಿ ಹರಿಯುವಂತೆ ಮಾಡು; ಉಕ್ಕೇರಿಸು: ನೀರ್ಗಾಯ್ಗಳಿಂ ಭೋರ್ಗರೆದುಗುವೆಳನೀರೆ . . . ಅತುಳಾಮಾಳಖಾತಂಗಳಿಂ ತೀವಿ ನಿತಾಂತಂ ಸುತ್ತಿ ಪೂರಂಬರಿವುವದಱೊಳೇ ನಾರಿಕೇಳಂಘ್ರಿಪಂಗಳ್ (ಕುಸುಮಾ. ೦-೭೬). [ಪೂರ₁+ಪರಿಸು (<ಪರಿಯಿಸು)]

**ಪೂರಕ** (ಗು). ೧. (ಅರೆಯನ್ನು) ತುಂಬುವ; (ಕೊರೆಯನ್ನು)

ಪೂರ್ತಿಮಾಡುವ. ೨. ಸಹಾಯಕವಾದ ; ಸಹಕಾರಿಯಾದ : 'ಪೂರಕಪರೀಕ್ಷೆ' ಪರಾ. ೩. ತೃಪ್ತಿಗೊಳಿಸುವ. (ನಾ). ೪. ಪೂರ್ಣಗೊಳಿಸುವಂತಹುದು ; ಪೂರ್ತಿಗೊಳಿಸುವ ಭಾಗ : ಮೊದಲನೆಯ ಕ್ರಮಕ್ಕೆ ಎರಡನೆಯ ಕ್ರಮ ಪೂರಕದಂತಿದೆ (ಶಿಕ್ಷಣ. ೨೩೬) : ಈ ಜ್ಞಾನವಾಹಿಗಳು ಪರಸ್ಪರ ಪೂರಕಗಳಾಗಿವೆ (ತತ್ವಶಾ. ೩೬೦) ; ಅನೇಕ ಸಂದರ್ಭಗಳಲ್ಲಿ ಒಂದು ದರ್ಶನವು ಮತ್ತೊಂದು ದರ್ಶನಕ್ಕೆ . . . ಪೂರಕವಾಗಿಯೂ ಇರುತ್ತದೆ (ಜೀವಶಾ. II ಮುನ್ನುಡಿ). ೫. ಮಾದಲದ ಗಿಡ ; ಮಾತುಲುಂಗವೃಕ್ಷ. ೬. ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಪಿಸುವ ಪಿಂಡ. ೭. ರೊಟ್ಟಿ, ದೋಸೆ ಮೊದಲಾದ ಹಿಟ್ಟಿನಿಂದ ಮಾಡಿದ ಖಾದ್ಯ. ೮. [ಯೋಗ] ಪ್ರಾಣಾಯಾಮದ ಒಂದು ಅಂಗ ; ಮೂಗಿನಿಂದ ವಾಯುವನ್ನು ಒಳಗೆ ಎಳೆದು ಕೊಳ್ಳುವುದು : "ನಾಸಿಕದಿ ನಿಂದಾನಿಲಂ ಕುಂಭಕವೆನಿಕ್ಕು ನಾಸಿಕದಿ ಬಿಡುವಾನಿಲಂ ರೇಚಕವೆನಿಕ್ಕು ನಾಸಿಕದಿ ಸೇದುವನಿಲಂ ಪೂರಕವೆನಿಕ್ಕು" (ಮಂಗರಾ. ೦೬-೦೪) ; ಕುಂಭಕ ಸಂರೇಚಕ ಪೂರಕಂ ಪರಿವಲಿಯೊಳ್ನಿಶ್ರಮಂ. . . ನಂಜಿನ ಸುಯ್ಯ ಗಾಳಿ ನೃಪನಂ ಕೊಂದಿಕ್ಕಿತು (ಶಾಂತಿಪು. ೬-೯೩) ; ಅಣು ವಿನಲಿ ಲಘುವಿನಲಿ . . . ವಶಿತ್ವದಲಿ ಬೆಂಟಣಿಸಿ ರೇಚಕ ಪೂರಕವ ರಿಂಗಣ ವನಟುವುದು ಯೋಗಸಿದ್ಧಿಗೆ ಲಕ್ಷಣವನು (ಕುಮಾ. ಉ. ೬-೯). ೯. = ಪಾದ ಪೂರಕ : ಮತ್ತೆಂಬ ಪೂರಕದ ಬಟಿ (ಎಂಬ) ಅವ್ಯಯಂ ಜಟಂ (ಶಬ್ದ. ೬. ಕ್ರಿಟಿ ೩೬). ೧೦. [ಗಣಿತ] ಗುಣಿಸುವ ಸಂಖ್ಯೆ ; ಗುಣಕ. [ಸಂ.]

**ಪೂರಕಪರೀಕ್ಷೆ** (ನಾ). ೧. ಮುಖ್ಯಪರೀಕ್ಷೆಯಲ್ಲಿ ತೇರ್ಗಡೆಯಾಗದ ವಿಷಯಗಳಿಗಾಗಿ ಪುನಃ ನಡೆಯಿಸುವ ಪರೀಕ್ಷೆ : ಸೆಪ್ಟೆಂಬರಿನಲ್ಲಿ ಪೂರಕಪರೀಕ್ಷೆ ನಡೆಯಿತು (ಲೂ). ೨. ವಾಕ್ಯಗಳಲ್ಲಿ ಬಿಟ್ಟು ಹೋಗಿರುವ ಭಾಗವನ್ನು ಸರಿಯಾಗಿ ಊಹಿಸಿ ತುಂಬುವ ಪ್ರಶ್ನೆಗಳನ್ನೊಳಗೊಂಡ ಪರೀಕ್ಷೆ : ಪೂರಕಪರೀಕ್ಷೆ—ಉದಾಹರಣೆ ೧. ಒಂದೂರಸ್ಥಾನ . . . ಖಂಡದಲ್ಲಿದೆ. ಮೇಲಿನ ಪ್ರಶ್ನೆಗಳಲ್ಲಿ ಒಂದೊಂದು ಪದ ಬಿಟ್ಟುಹೋಗಿದೆ. ವಿದ್ಯಾರ್ಥಿಗಳು ಅದನ್ನು ಸ್ಮರಣೆಗೆ ತಂದುಕೊಂಡು ಅದನ್ನು ಬಿಟ್ಟಿರುವ ಸ್ಥಳದಲ್ಲಿ ಬರೆದು ಪೂರೈಸಬೇಕು (ಶಿಕ್ಷಣ. ೩೫೪). [ಪೂರಕ + ಪರೀಕ್ಷೆ]

**ಪೂರಣ** (ನಾ). ೧. (ಅರಕೆಯನ್ನು) ತುಂಬುವುದು,—ಭರ್ತಿ ಮಾಡುವುದು : ಸಾಹಿತ್ಯದಲ್ಲಿ ಅಪ್ರತ್ಯಕ್ಷತೆಯ ಅಭಾವವನ್ನು ಪೂರಣ ಮಾಡಬೇಕು (ಕಬೀರ. II, ೨೬೬). ೨. ಸಹಾಯಕವಾದುದು; ಪೂರಕ ವಾದುದು : ಆರೋಗ್ಯ ಆಯುಸ್ಸು ಐಶ್ವರ್ಯವೆಂಬ ಈ ಮೂರುವಿಧ ವಸ್ತುಗಳು ನಾರಾಯಣನ ಭಜಕರಾದವರ ಸಾಧನಕೆ ಪೂರಣವಾಗಿಪ್ಪವು (ಜಗನ್ನಾ. ೦೩೨). ೩. ಪೂರ್ಣತೆ ; ತುಂಬಿರುವಿಕೆ : ಸೋರುವಾನಂದಾಶ್ರು ಪುಳಕದ ಪೂರಣದಲೆತ್ತಿದನು ಪವನಕುಮಾರಕನ ಮಸ್ತಕವ ನಲಿದೊಲಿದ ಬುಜಭವನೂನು (ಕೊರವ. ೫-೯-೬) ; ಕಿಡೆದೊಡಲ ಸೀಳಿಂದೆ ಕಡಿವಡೆದ ತೋಳಿಂದೆ . . . ಇಡಿದಿರ್ದುದಾ ರಣದಲೋರಣದ ಮಾರಣದ ಕಾರಣದ ಪೂರಣದೊಳು (ಕೃಮಜ. ೦೨-೪೪). ೪. (ನದಿ, ಸಮುದ್ರಗಳ ನೀರು) ಉಕ್ಕುವುದು ; ಹೆಚ್ಚುವುದು. ೫. ನೆರವೇರಿಸುವುದು ; ಮುಗಿಸುವುದು ; ಮುಕ್ತಾಯ : ನಮ್ಮ ಬಾಳ್ ಬರಿ ಸಮಸ್ಯೆಯೆ ? ಅದರ ಪೂರಣವದೆಲ್ಲಿ ? (ಮಂಕು. ೩೩). ೬. ಹಿಟ್ಟಿನಿಂದ ಮಾಡಿದ ಒಂದು ಬಗೆಯ ಖಾದ್ಯ. ೭. ಕಡುಬು ಮೊದಲಾದುವುಗಳಲ್ಲಿ ತುಂಬುವ ಹೂರಣ : 'ಪೂರಣಗಡುಬು', 'ಹೂರಣ' ಪರಾ. ೮. (ಸುಷಿರವಾದ್ಯಗಳನ್ನು) ಊದುವುದು,—ಬಾಜಿಸುವುದು : 'ಪೂರಿಸು' ಪರಾ. ೯. ಬೂರುಗದ ಮರ ; ಶಾಲ್ಮಲಿ. ೧೦. ಪೂರ್ಣ ಗೊಳಿಸುವ ಸಂಖ್ಯೆ. ೧೧. ಬಿಲ್ಲನ್ನು ಬಾಗಿಸುವಿಕೆ. ೧೨. [ಗಣಿತ] ಗುಣಾಕಾರ. [ಸಂ.]

**ಪೂರಣಂಗೆಯ್** (ಕ್ರಿ). ತುಂಬು ; ಭರ್ತಿಗೊಳಿಸು : ಕಿಕ್ಕಿಂದದಿಂ ಪೂರಣಂಗೆಯ್ವಲ್ಲಿ ಸಗಣ ಪ್ರಚ್ಛನ್ನ ನೆಮ್ಮುಗೆಗಳೊಳಗಡೆ ಶಬ್ದವು (ಕಬ್ಬಿಮ. ೬೨). [ಪೂರಣ+ಕೆಯ್$_1$]

**ಪೂರಣಗಡುಬು** (ನಾ). ಹೂರಣವನ್ನು ತುಂಬಿಸಿ ಮಾಡಿದ ಕಡುಬು : ದೇವಿ ಮುಳಿಸನುಟಿದು . . . ತನ್ನ ಕಯ್ಯಿಂದವೆ ಪೂರಣಗಡುಬನಿತ್ತಳ್ (ಶಿವತ್ರಗೋ. ೫೦-೦೬) ; ನಿನಗಾವ ಭಕ್ಷ್ಯದೊಳಿಪ್ಪಂ ? ಪೂರಣಗಡುಬ ನೀವೆನೊ ಚಕ್ಕುಲಿಯಂ ? (ರಾಜಶೇಖ. ೯೦-೦) . 'ಹೂರಣಗಡುಬು' ಪರಾ. [ಪೂರಣ+ಕಡುಬು (<ಕಡುಂಬು)]

**ಪೂರಣಿ** (ನಾ). ಬೂರುಗದ ಮರ ; ಶಾಲ್ಮಲೀವೃಕ್ಷ : "ಪಿಚ್ಚಿಲಾ ಪೂರಣೀ, ಮೋಚಾ, ಚಿರಾಯುಃ, ಶಾಲ್ಮಲೀ — ಈ ಬೂರುಗದ ಗಿಡ" (ನಿಘಂಟು. ೦೨೨). [ಸಂ. ಪೂರಣೀ]

**ಪೂರಣೆ** (ನಾ). ೧. ಪರಿಸಮಾಪ್ತಿ ; ಮುಕ್ತಾಯ : ಕ್ಷೀರಂ ದಧಿ[ಘೃ]ತಮಿಶ್ರಿತ ಮಧುಧಾರಾಳಿಯಃ ಲಕ್ಕಿಗಡುಗೆಗೊಟ್ಟ [ಸೊಂ]ಟಿಗೆ ಕರ್ಪೂರದಿ ಪೂರಣೆ ಮಾಡಿ ಮನೋರಾಗದೆ ಚಿತ್ರವಿಧದ ಪೂಜಾವಿಧಿಯಂ ಅನ್ತು ಮಹಾಪೂಜೆಯಂ ಮಾಡಿ (ಶಾಸನ. XX, ೪೯-೩೨ ; ಸು. 1076 ?). ೨. ಅರ್ಚನೆ ; ಪೂಜೆ (?) : ಅರಲಿಂ ಕುಂಕುಮದಿಂ ಕರ್ಪೂರದಿಂ ತೀರ್ಥಕರದಿವ್ಯಚೈತ್ಯಾವಳಿಯಂ ಸರಸಿಜನೇತ್ರೆಯ ಮುಂದಾದರದಿಂ ಲೇಸಾಗಿ ಮಾಡುವಂ ಪೂರಣೆಯಂ (ಧರ್ಮಾಮೃ. ೧೦-೨೩). [ಸಂ. ಪೂರಣ]

**ಪೂರತಿ** (ನಾ). ಪರಿಸಮಾಪ್ತಿ ; ಕೊನೆ : ಕುಜನರ ಪಾಪ ಪೂರತಿ ಯಾಗುವ ತನಕ ಅಜನಯ್ಯ ಎನಗೆ ಈ ಮಾತು ದೊರಕುವದೇನೊ (ಸೋಮೇಶ್ವ. ೬ ೩). [<ಸಂ. ಪೂರ್ತಿ]

**ಪೂರತೆ** 'ಪೂರ್ತೆ' ನೋ.

**ಪೂರಯಿಕೆ** 'ಪೂರೈಕೆ' ನೋ.

**ಪೂರಯಿಸು** 'ಪೂರಿಸು' ನೋ.

**ಪೂರವಟ** (ನಾ). ಒಂದು ಊರಿನ ಹೆಸರು (?) : ಇತ್ತೊಡು ಪೂರವಟ ಗೋಸಾಸಿಗರಾ ಮಂಚಿಧರ್ಮ್ಮ ತುಸವಿನ್ ಪಡೆನು (ಇಕ. VIII, ೨೪೩-೩ ; 706). [ ? ]

**ಪೂರವಾರ** (ನಾ). ದಡವನ್ನು ಸೂಸಿ ನೀರು ಹರಿಯುವಿಕೆ ; ಮಹಾಪೂರ : ಧರೆಯೊಳ್ ಶಾಲೂರಸಂಘಂ ಪವನಪಥದೊಳಂ ಭೋಧರಾನೀಕಂ . . . ತಟನೀವ್ಯೂಹದೊಳ್ ಪೂರವಾರಂ . . . ರುತಂ ಪರ್ವಿಸುತ್ತಿರ್ದುದೆತ್ತಂ (ಅದಿಪು. ೫೩೨). [ಸಂ.]

**ಪೂರವಿಸು** 'ಪೂರಿಸು' ನೋ.

**ಪೂರಾ** 'ಪೂರ್ತ' ನೋ.

**ಪೂರಾಂಬು** (ನಾ). ಜಲಾಶಯದ ನೀರು : ನೊರೆವೆಲ್ಲಂ ಮೇದೆರಟ್ಟಿಕ್ ಕುಮುಟ ಕುಡಿದು ಪೂರಾಂಬುವಂ . . . ವಾಹಿನೀಸಂತತಿ ವಿಪಿನಭವಂ ಕಣ್ಗುವರ್ಗುಯ್ತು ಕಾರೊಳ್ (ಚಂದ್ರಪ್ರ. ೬-೪೬). [ಪೂರ$_1$+ಅಂಬು$_1$]

**ಪೂರಾಯ** (ನಾ). ೧. ಸಂಪೂರ್ಣತೆ ; ಸಮಗ್ರತೆ : ಪೂರಾಯದಲಿ ನುಂಗಿದುದು ಕತ್ತಲೆ ನಿಮಿಷದಲಿ ಜಗವ (ಕುಮಾವ್ಯ. ೯-೩೯) ; ಕೆಲ ಕೆಲರು ಪೂರಾಯದಿಂ ಪೊಯ್ದು ಘಾಯಂಗಳಿಂ ನೋವಿನೊಳ್ ಪೊರಳಿದರುರ್ವಿ ತಳಕೆ (ಶಬರಂಗ. ೫೦-೩೬). ೨. ನೆರವೇರುವಿಕೆ ; ಪೂರ್ಣ ಗೊಳ್ಳುವುದು : ಬಲ್ಲಿದರೊಡನೆ ಬವರವಾದಡೆ ಗೆಲಲುಂಟು ಸೋಲಲುಂಟು ಕಳ್ಳನೊಡನೆ ಭಾಷೆ ಪೂರಾಯವೆ ಆಯ್ಯಾ (ಬಸವ. ೦೫೦). ೩. ಅತ್ಯಧಿಕವಾದುದು ; ಅತಿಶಯವಾದುದು : ರಾಯನೊಡ ಹುಟ್ಟಿದರಲಾ ಪೂರಾಯವಿವದಿರ ಕೈ ಮಹಾದೇವಾಯುಧದ ವಾಳಿಗಜ್ದರ್ಕೆ (ಕುಮಾವ್ಯದ್ರೋ. ೦೩-೨೯) ; ಕೋಪಾಗ್ನಿ ಪರ್ಬಿ ಪೂರಾಯಮಾಗಲ್ಕೆ (ಕಬಕ.

೨೩-೨೩). (ಗು). ೪. ಪೂರ್ಣವಾದ ; ಸಮಗ್ರವಾದ ; ಸಂಪೂರ್ಣವಾದ : ನೀರುನೀರಾಗಿ ಬೆರಸಿ ಪಾದೋದಕಧಾರೆಯು ಕಡಲೋಕುಳಿಯಲ್ಲಿ ಪೂರಾಯ ಸನ್ಮತವಾಗಿ ಮುಳುಗಿ ಕೂಡಲಸಂಗನ ಕೃಪೆಯಿಂದುಳಿದೆ (ಶಿತಗೀ. ೧೦೬-೩೩೦). ೫. ಅಧಿಕವಾದ ; ಅತಿಶಯವಾದ : ಸರಸಸೌಗಂಧಿಕದ ಪುಷ್ಪೋತ್ಕರಕೆ ಪವನಜ ಹೋದನೆಂಬುದನರಸಿಯಿಂದಱಿದವನಿಪತಿ ಪೂರಾಯ ದುಗುಡದಲಿ . . . ಚಿಂತಾಭರಿತನಿದ್ದನು ಭೀಮಸೇನನ ಕಾಂಬ ತವಕದಲಿ (ಕುಮ್ಯಾಭಾ. ೧೦-೨) ; ಆ ಯುವತಿ ಕಣ್ಣೀರಿನಲಿ ಪೂರಾಯಶೋಕದೊಳೆಂದಳಾ ತರಳಾಯತಾಕ್ಷಿಗೆ ತನ್ನ ವೃತ್ತಾಂತವನು ಬಿಸುಸುಯ್ದು (ಶಳಶ. ೫ ೫೫). [ಪೂರ್$_1$+_ಆಯ್$_4$]

**ಪೂರಾಯಗಾಯ, ಪೂರಾಯಘಾಯಂ** (ನಾ). ಆಳವಾದ ಪೆಟ್ಟು,-ಏಟು ; ತೀವ್ರವಾದ ಕ್ಷತ :. ಘಾರವೋಘವೆದ್ದು ಧಾರಾವರ್ತ ಸುರಿವಾಗ ಧಾರಿಣಿಯೆಲ್ಲವು ಮುಳುಗಿತ್ತು ನೋಡಾ . . . ಪೂರಾಯ ಗಾಯದಲ್ಲಿ ಸಾಯ ಕೊಂದಲ್ಲದೆ ಸೂರ್ಯರನೇಕರು ಮಡಿಯರು ಗುಹೇಶ್ವರ (ಅವಚ. ೬೬-೩೪೦) ; ನಾರಾಯಣ ಮಹಾರೋಕ್ಷದಿಂದೆಸುತಿರ್ಪ ತೋರಾಯದೆಸುಗೆಯುಂ ತರಹರಿಸದಾಕ್ಷಣಂ ಪೂರಾಯಘಾಯದಿಂ ಬಲಮಳಿಯೆ (ಕಂಕೃ. ೩೨-೬) ; ಪೂರಾಯಗಾಯದಿಂದಿರದೆ ಶತ್ರುಘ್ನಂ ಮಹೀತಳಕೆ ರಥದಿಂದೆ ಬೀಳ್ವನಿತಱೊಳ್ (ಕೈರಾಭಾ. ೨೦-೩೦). **ಪೂರಾಯಘಾಯ** : ಎನ್ನವರೆಸಗೊಲಿದು ಹೊನ್ನ ಶೂಲದಲಿಕ್ಕಿದರಯ್ಯಾ ಅಹಂಕಾರ ಪೂರಾಯಘಾಯದಲಿ ಆನೆಂತು ಬದುಕುವೆನೆಂತು ಜೆ ವಿಸುವೆ (ಬಸವ. ೩೯೭) ; ಬಿಜ್ಜಳನ ಕಾಯದಲಿ ಒಂದೆರಡುಮೂರುಪೂರಾಯ ಘಾಯದೊಳಿಱಿದು ಕೆಡಹಿ (ಬಸತ್. ೬೦-೩೦) ; ಐದಾಱು ಶರದಲಿ ಕರ್ಣ ನೆದೆಯನು ಡೋಱುಗಳೆಯಲು ಬಳಲಿದನು ಪೂರಾಯಘಾಯದಲಿ (ಕುಮ್ಯಾದ್ರೋ. ೫-೨೬). [ಪೂರಾಯ+ಗಾಯ]

**ಪೂರಾಯಗೆಯ್** (ಕ್ರಿ). ಮುಗಿಸು ; ಪೂರೈಸು : ಪೂರ್ಣಗೊಳಿಸು : ಕುಮಾರತಿಯರು ಶಿವಾರ್ಚನೆಯ ಪೂರಾಯಗೆಯ್ದು ಸದ್ಭಕುತಿಯನಾಂತು ಕೈವಾರಿಸುತಿರ್ದರು (ಪೋಹತ. ೨೬-೨೫). [ಪೂರಾಯ + ಕೆಯ್$_1$]

**ಪೂರಾಯಘಾಯ** 'ಪೂರಾಯಗಾಯ' ನೋ.

**ಪೂರಾಯತ** (ಗು). ಸಂಪೂರ್ಣವಾದ ವಿಸ್ತಾರವುಳ್ಳ ; ಸಮಗ್ರತೆಯುಳ್ಳ : ಸ್ಥಾಯಿಸಂಚಾರಿಗಳ ಸರಿಗಮಪಧನಿಯ ಸರದಾಯತದ ಶುದ್ಧ ಸಂಕೀರ್ಣ ಸಾಳಗದ ಪೂರಾಯತ ಸುತಾನಂಗಳಂ . . . ಗೇಯರಸಮೊಸರೆ ಪಾಡಿದರವರ್ (ಕೈರಾಭಾ. ೨೦-೩೬). [ಸಂ.]

**ಪೂರಿ, ಪುರ್ಿ$_5$, ಪುರ್ಿ$_3$** (ನಾ). ಕಣಕವನ್ನು ಲಟ್ಟಿಸಿ ಎಣ್ಣೆ ಅಥವಾ ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ಖಾದ್ಯ : ಮಸಾಲ್‍ದೋಸೆ, ಚಪಾತಿ, ಪೂರಿ, ರವೆಇಡ್ಲಿ ಏನು ಕೊಡಲಿ ಸಾರ್? (ಮುಹಾರಿ. ೯೬). **ಪುರ್ಿ$_5$** : ಖೀರು – ಪುರಿ ಅಂದಿನ ಮುಖ್ಯಭೋಜನವಾಯಿತು (ಸ್ವಕ್ಷದ. ೦೩೩) ; ಶ್ರೀಖಂಡ ಪುರಿಯನ್ನು ಬಕ್ಕರಿಸುವೆಯಂತೆ ಏಳು ! (ಚಾರಕಿ. ೫೫). **ಪುರ್ಿ$_3$** : ಅಂದು ಮನೆಯಲ್ಲಿ ಪುರಿ–ಸುಧಾರಸವಾಗಿತ್ತು (ಸಮುಷೀ. ೦೦೦) ; ಪುರಿ; ಶ್ರೀಖಂಡ, ಸಿರ, ಅವಲಕ್ಕಿ . . . ಇತ್ಯಾದಿಯಿಂದ ದೊಡ್ಡ ಬಾಳೆಯೆಲೆ ಭರಗಚ್ಚಾಗಿ ತುಂಬಿದ್ದವು (ಅಶ್ವ. ೨೩೫). 'ಪೂರಿಗೆ' ಪರಾ. [ ←ಹಿಂ. ಪೂರೀ ; ಮರಾ. ಪುರೀ ]

**ಪೂರಿಗ** (ನಾ). ಕಠೋರನಾದವನು ; ಕಠಿಣಸ್ವಭಾವದವನು : "ಪೂರಿಗೆ[ಗ]ನೆ ಕಠೋರಂ" (ಚಾರಶಿ. ೫೯). [?]

**ಪೂರಿಗೆ, ಹೂರಿಗೆ** (ನಾ). ತುಪ್ಪವನ್ನು ಸವರಿ ಹಂಚಿನ ಮೇಲೆ ಬೇಯಿಸಿ ಮಾಡುವ ಒಂದು ಬಗೆಯ (ಸಿಹಿಯಾದ) ಭಕ್ಷ್ಯ : ಪೂರಿಗೆಯಿಡ್ಡಲಿಗೆ . . . ಮಂಡಿಗೆ ಮೊದಲಾಗೊಡೆಯಾಪದಿನೆಂಟುಂ ತೆಱದ ಭಕ್ಷರೂಪಗಳುಮಂ...ಬಡ್ಡಿಸಿದೊಡೆ(ಶಬ್ದಾರಾ. ೭೯-೦೭); ಕಲ್ಪುರಿಗನೊಯ್ಯನೆ ಪೂರಿಗೆಗೊಟ್ಟೈದಾಱನೆ ಕೊಂಡವನಟ್ಟಿಯಿಂದೊರಸಿ ನೋಟ್ಟುದುಂ (ಆದಿಪು. ೫-೦೯); ಮಿದಿದಿಂಬಾಗಿರೆ ಖರ್ಜೂರದ ಪಣ್ಣುಂ ನಾರಿಕೇಳಮುಂ ಶರ್ಕರೆಯುಂ ಪುದಿದಡುಗೆ ಕಣಕದೊಳ್ ತುಪ್ಪದೊಳದು ರಸಭರಿತಮಪ್ಪ ಪೂರಿಗೆಯುಕ್ಕುಂ (ಲೋಕೋಪ. ೬-೬) ; ರುಚಿವೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮಾನಾಗಳ್ ಅಡ್ಯಯುತಮಪ್ಪವಂ ಮೆಲ್ದು (ಧರ್ಮಾಮ್ಯ. ೦-೦೯೭). **ಹೂರಿಗೆ** : ಗಾರಿಗೆಯ ಅಳಸುಗಳ ಕುತ್ತಱಿಗಳಲ್ಲಲ್ಲಿ ಹೂರಿಗೆಯ ಲಡ್ಡುಗೆಯ ಬೆಟ್ಟಂಗಳಲ್ಲಿ (ಬಸರ. ೭-೦೦) ; ಶೋಧಿಸಿದ ತನಿಬೆಲ್ಲವಿಕ್ಕಿದ ಹೂರಿಗೆಯ ಮೆದೆಯಲ್ಲಿ . . . ನವಘೃತಸೂಪದಂಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತವಟುನಿಕರ (ಕುಮ್ಯಾಭಾ. ೦೫-೭) ; ಅರೆದ ತೆಂಗಾಯ ಬೋಡದೊಳು ಚಿಲುಪಾಲಿನೊಳು . . . ಹೆಱೆದುಪ್ಪ ಸಕ್ಕರೆಯ ಬೆರೆಸಿದಾ ಹೂರಣವನಿರದಿಕ್ಕಿ ಹೂರಿಗೆಯ ಮಾಡಿಕೊಂಡವಱವಱ ಹೆಸರ ಹೂರಿಗೆಯೆಂಬುದು (ಸೂಶಾ. ೦-೨೭).

[ < ಸಂ. ಪೂರಿಕಾ ]

**ಪೂರಿತ** (ಗು). ೧. ತುಂಬಿದ ; ಭರ್ತಿಮಾಡಿದ ಪೂರ್ಣಗೊಳಿಸಿದ. ೨. (ಸುಸ್ವರವಾದ್ಯವನ್ನು) ಊದಿದ ; ಬಾಜಿಸಿದ : ಪೂರಿತ ರಣ ಶಂಖಗಂಭೀರಾರಾವಂ ದೆಸೆಯ ಕೋಣ ಕೊಸುಕುಱ ಗಜಘೀಂಕಾರವ ಮನುಱದೆ ಪೆಱಗಿಡೆ ಭೈರವಮೆಸೆದತ್ತು ಚರದ ಬಲಜಲನಿಧಿಯೊಳ್ (ಶಾಂತಿಪು. ೩-೯೭). (ನಾ). ೩. ಪೂರ್ಣತೆ : "ಪೂರಿತನಲದು ಪೂರ್ಣಂ" (ಶಕುಶ. ೯. I. ೬೦). [ಸಂ. ]

**ಪೂರಿತಗೆಯ್** (ಕ್ರಿ). ಪೂರ್ಣಗೊಳಿಸು ; ಪೂರ್ಣವಾಗಿ ಸಿದ್ಧಪಡಿಸು : ಗಾಡಿಕಾಱನ ತಾವರೆಗೋಲ್ಗೆ ಚಾಪವ ಮಾಡಿ ಪೂರಿತಗೆಯ್ದು ತೆಱದ ಜೋಡಿಯಿಲ್ಲದೆ ರತಿದೇವಿಯ ಕಣ್ಣಿಗೆ ಕಾಡಿಗೆವಿಡಿದುಟ್ಟಿದರು (ಸೋಹತ. ೦೭-೯೫). [ ಪೂರಿತ + ಕೆಯ್$_1$ ]

**ಪೂರಿಸು, ಪೂರಯಿಸು, ಪೂರವಿಸು, ಪೂರೈಸು** (ಕ್ರಿ). ೧. ತುಂಬು ; ಭರ್ತಿಮಾಡು : ಪಲಕಾಲದೊಳಱಿತಿರ್ದಾಮಲಕದ ಪಣೆಯಂ ಕುಱಾರದಿ ಸೀಳ್ದದಱೊಳ್ ತಿಲ ಮಧು ಘೃತಮಂ ಪೂರಿಸೆ ಫಲವೂ ಮರದೆಲೆಗಳಿಂದಮವು ಪಿರಿದಕ್ಕುಂ (ಲೋಕೋಪ. ೭-೩೯) ; ಆರ ಮೃದೂಕ್ತಿಯಂ ಬಯಸಿ ಕೇಳ್ದು ತನೂಜ ಮದೀಯಕರ್ಣದೊಳ್ ಪೂರಿಪೆನಿಂ ರಸಾಯನಮಂ (ಕಂಪ್ರಕೃ. ೫-೦೭) ; ಮಿಸುಪ ಕಾಂಚನಪಾತ್ರೆಯಲಿ ಪೂರಿಸಿದ ಪರಮಾನ್ನವನು ಬೊಮ್ಮದ ರಸದ ಪರಿಪೂರ್ಣವನು . . . ಒಲಿದಿತ್ತುದಾ ನಿಜಮೂರ್ತಿ ದಶರಥಗೆ (ತೊರರಾ. ೧೭-೫೫). ೨. ಮುಸುಕು ; ಕವಿ ; ವ್ಯಾಪಿಸು : ಮುಸುಕಿದುದು ದುಂದುಭಿಧ್ವನಿ ದೆಸೆಯಂ . . . ಶಂಖಧ್ವನಿ ಪೂರಿಸಿದುದು ತಳ್ಪೊಯ್ದು ರೋದಸೀಮಂಡಳಮಂ (ಕಂಪ್ರಕೃ. ೬-೭೨); ಧಾರುಣಿ ನಭ ದೆಸೆಗಳನು ಪೂರಿಸಿದಂತಂಧಕಾರ ದಟ್ಟೈಸಿರೆ (ಕೈರಹ. ೫-೦೬). ೩. ತುರುಕು : ಗಿಡಿ ; ಒತ್ತಿ ತಳ್ಳು ; ಒಳಸೇರಿಸು : ಪಟ್ಟುರಿವೀವನವಹ್ನಿವಕ್ತ್ರದೊಳ್ ಪೂರಿಪೆನೋ ಕಱುತ್ತಾಗಿದು ಕತ್ತಿಗೆಯಿಂದೆರಡಾಗಿ ಪೋಟ್ಟಿನೋ . . . ಈತನಂ (ಕಂಪ್ರಕೃ. ೫-೩೭). ೪. ತುಂಬಿಡು ; ಕೂಡಿಡು ; ಸಂಗ್ರಹಿಸು : ಜವೆಯಂ ನೆಲ್ಲಂ ಕುಂದದೆ ಪೂರಿಸೆ ಕಾರ್ತಿಕೆಯಂದಿಗೆ(ನ)ಮಾಱೀಗೆ ಮಾಱ(ಲು)ಮುಮ್ಮಡಿ ಲಾಭಂ (ಅಭಿಸು. ೭-೩೯). ೫. ತುಳುಕು ; ಹೊರಸೂಸು ; ಅಧಿಕವಾಗು ; ಹೆಚ್ಚಾಗು : ಆನಂದಾಶ್ರುಸಲಿಲಂ ಕಂಗಳಲಿ ಪೂರಿಸಲು (ಚನಕ. ೩೭-೬೨) ; ಬೀರಿವರಿದು ಚಂದ್ರಸುರಧೇನು ಕೂರ್ತು ಚಕೋರವತ್ಸಗೆ ಮೊಲೆಗುಡಲುಪೂರಿಸಿ ಕಡೆವಾಯೊಳಿವ ತಣ್ಪಲನೆ ಸೋರಿತು ಬೆಳ್ದಿಂಗಳೆಳೆಗೆ (ಮೋಹತ. ೦೭-೫೫). ೬. ಪೂರ್ತಿಮಾಡು ; ಪೂರ್ಣಗೊಳಿಸು : ಸಮಸ್ಯಮಂ ಕೊಡಲೊಡನೆ ಪೂರಿಸುವ . . . ನವರಸರಸಿಕರ್ (ಕಬಿಕೃ. ೭-೦೦). ೭. ಪುಷ್ಟವಾಗು ; ವರ್ಧಿಸು : ಪೂರಿಸುವುದೊರ್ಮೆ ವಿಗತಾಹಾರದೆ ಗಱಯಿಸುವುದೊರ್ಮೆ ತಾನೀ

ವೆಯ್ಯೊಳ್ (ಜೀವಂ. ೨೦೯–೨೦). ೮. (ಬಾಯಿಂದ) ಊದು ; ಊದಿ ಬಾಜಿಸಂ : ಪರಸೈನ್ಯಭೈರವಂ . . . ದೇವದತ್ತಶಂಖಮಂ ಪೂರಿಸಿ (ಶಂಕರಾ. ೧೦–೬೯ ವ) ; ಶಾರ್ಙ್ಗವಾನಂದೇಱಿಸಿದಪನಪಿಶಯ್ಯೆಯನೇಱಿದ ನಯ್ನಾಯ ಶಂಖವಂ ಪೂರಿಸಿದಂ (ಶಾಬ್ಯ. ೨೬೯) ; ಬಿಸಜಾಕ್ಷಂ ಶಂಖವಂ ಪೂರಿಸೆ (ಜಗಂ. ೬–೨೯). ೯. ನಾಟು ; ನಡು : ಮಾರನ ಸರಳು ಸವಿಾರ ಕುಮಾರನ ಚಾರುತನುವಿನೊಳಗೆಯ್ದೆ ಪೂರಿಸಲವ ಬೆದಱುತ ರವಿಪುರವಿಪ್ರ ದಾರಿಯನುದು ನೋಡಿದನು (ಶಂಜಿ. ೬–೦೬೦) ; ಓರೋರ್ವರ ಮೆಯ್ಯೊಳಂಕಿಂವ ಪುಳಕಗಳೋರೋರ್ವರ ಮೆಯ್ಯೊಳಗೆ ಪೂರಿಸಲು (ಕುಮಾರಾ. ೯–೦೯). ೧೦. ಆಗಂ ; ಒದಗು ; ಬರು : ಕೂರ ಪ್ರಾಕಾರಂಗಳ ಮೇಲೆಯು ರೇಫಕ್ಕೆ ಭರದೆ ಱ ಟ ಲತ್ವಂಗಳ್ ಪೂರಿಪುವಸ್ವರ ವಿಧಿಯಿಂ (ಶಬ್ದ. ೨೯೦(೩)). ಪೂರಯಿಸು : ೫. ಆ ಮಾತಿಂಗೆ ನಸುನಾಣ್ಚಿ ಹೃದಯಾರವಿಂದದುಲ್ಲಾಸ ಪೂರಯಿಸಿ ಚಂದನಸೌರಭ್ಯವಡೆದ ವಿಗ್ರಹಜಾತ ಸಂದೋಹ ಗುಡಿಗಟ್ಟಿತವಳ (ಮೋಹತ. ೨೬–೬೯). ೬. ಆ ಕಱಿಯನೂ ಪೂರಯಿಸಿ ಆ ಕಱಿಯ ಕೆಳಗೆ (ಶಾಇ. ೦೯೬೯, ಶೃಂಗಪುರು. ೦೫೬–೮ ; 1419) ; ಈ ಕಾರ್ಯದ ಜವಾಬ್ದಾರಿಯನ್ನು ಕೈಕೊಂಡಿರುವ ಮಹನೀಯರು ಅದನ್ನು ಆದಷ್ಟು ಬೇಗ ಪೂರಯಿಸಿಕೊಡಬೇಕೆಂದು ಬೇಡುತ್ತೇನೆ (ಶಾಹಿಶ. ೬೬). ೮. ಭು ಭೂ ಭೂ ಎಂದು ಪೂರಯಿಸಿದುದು ಶಂಖು (ಶಬ್ದ. ೧೦ ಕ್ರಯೋ) ; ಭು ಭೂ ಭೂ ಎಂದು ಪೂರಯಿಪ ಶಂಖದ ಧಟಂ ಧಟಂ ಧಟವೆಂದು ಮೊಟಗುವ ಭೇರಿಯ . . . ಬಲ್ಲುಲಿಯೊಳ್ ಮಾಪೂಜೆ ಸಮಸಂದುದು (ರಾಜಾಶ. ೬೬–೩). ೧೧. ಮುಗಿ ; ಮಂಕ್ತಾಯ ವಾಗಂ ; ಸಮಾಪ್ತಿ ಹೊಂದಂ : ಸ್ತೋತ್ರವು ಪೂರಯಿಸಿದ ಬಳಿಕ ವಂಶ ಲೋಚನರೆಂದರು (ಎರಸಿ. ೨೮). ೧೨. ಬಳಿ ; ಹಚ್ಚು ; ಲೇಪಿಸಂ : ಹಣೆಗೆ ರಾರಾಜಿಪ ತಿಲಕವನಿಟ್ಟು ಗಂಧವ ಪೂರಯಿಸಿದನು ನುಣ್ಮೆಯ್ಗೆ (ಮೋಹತ. ೦೨–೯೬). ೧೩. ನೀಡು ; ಕೊಡು ; ಒದಗಿಸು : ಹಿಂದೂ ಸ್ಥಾನದಲ್ಲಿ ಬಂದು ನಿಂತುಕೊಳ್ಳುವ ಪೋರ್ತುಗೀಜ ಮತ್ತು ಇಂಗ್ಲೀಷರ ಬಗ್ಗೆ ಇವನು ಸಾಕಷ್ಟು ಲಕ್ಷ್ಯ ಪೂರಯಿಸಲಿಲ್ಲ (ಹಿಂಮುಸ. ೦೨೦). ಪೂರವಿಸು : ೨. ಉಗಿವರೋ ಕತ್ತುರಿಯ ತವಲಾಯಿಗಳ ಮುಚ್ಚಳವನೆ ಕವಾಟವ ತೆಗೆಯೆ ಕವಿದರು ದಿವ್ಯಪರಿಮಳಸಾರ ಪೂರವಿಸೆ . . . ಅಂಕಕಾತಿಯರಿಂದ್ರನೋಲಗದ (ಕುಮಾ. ೬–೮೯). ೫. ಚೀರದಲಿ ನೆಱೆ ತುಂಬಿದಂತಿರೆ ಪೂರವಿಸಿ ಬುದಿಲೆನಿಸಿ ಭಸಿತದ ಧಾರೆ ಪೊಱಮಡೆ ಜಿಕ್ಕೊಳವೆಯಲಿ ಚಿಮ್ಮಿದಂತಾಯ್ತು (ಬಸಪು. ೯೯–೦೩). ೮. ಜಂಗಮ ಸ್ತೋಮ . . . ಘೋರೆನಲಿಂದುಭಯಶಂಖವ ಪೂರವಿಸಿಕೊಳುತಿದ್ದು ಹೋದರು (ಪ್ರಭುಲೀ. ೨೩–೦೦). ೧೨. ಪೂರವಿಸಿದನು ಗಂಧವನು ಸರಳೋರೆವೋರೆಯ ಮೆಯ್ಯ ಘಾಯದ ಹೇರುಗಳ ಹೂಳಿದನು ವರ ಕಸ್ತೂರಿಯ ಸಾರದಲಿ (ಕುಮಾ. ೩–೯೦). ೧೪. ತೃಪ್ತಿಗೊಳಿಸು ; ತಣಿಸು : ಸುದಿರುಳು ರತಿ ಪೂರವಿಸದೋ ಬಂದು ಕಾಮನು ಕೈವಿಡಿ ದಡೋ ಬಿದಿತೆಂದೋ . . . ಇದಱ ಚಂದವೆಲ್ಲಂ ಹೇಳದಡೆ ಗುಣವ್ಯಂ ನಿಮ್ಮಡಿಯಾಣೆಯೆನಲ್ (ಬಸಪು. ೯೩–೦೯). ೧೫. ನೆರವೇರಿಸು ; ಈಡೇರಿಸು : ಸಾರವಿಮಲಪ್ರಾಣಪದದಲಿ ಸೇರಿದೋಗರವಂ ಸಮರ್ಪಿಸಿ ಪೂರವಿಸುವುಪಚಾರವುಪಚಾರಂ ಶಿವಂಗೆ (ಬಸಪು. ೩೩–೦೩).

ಪೂರೈಸು : ೧. ಹರಭಕ್ತಿ ಪೂರೈಸೆ ಪರಮಸುಖ ಕೋರೈಸೆ ಎಸದಿರ್ದ ನಮ್ಮಮ್ಮ ಬಾಹೂರ ಬೊಮ್ಮಯ್ಯ (ಬಾಹೂರ. ಹ. ೩೦೬–೦೨) ; ಆ ಬುದ್ಧ ಸಂಘನಂ ವರವೈಶ್ಯಸಮಿತಿಯಂಗದೊಳಸುವಂ ಪೂರೈಸಿ . . . ಪೂಜಿಸಿದ ರಳ್ತಿಯಿಂ (ಸಶ್ಯಕ. ೯–೯೯). ೨. ನಾನಾರವದ ವಾದ್ಯನಿರ್ಘೋಷವಾ ದಿಕ್ತಟವ ಪೂರೈಸಿ (ಕಿಬಪು. ೫೬–೯೮); ರಘೌಘದ ಚೀತ್ಕಾರರವಂ ದಿಶಾ ವಿವರಮಂ ಪೂರೈಸೆ (ವೃಕಪ. ೩–೨೨). ೫. ಸೋರಿದುವಮೃತಪಾಷಾಣ ಪಾಲ್ಗಡಲಂತೆ ಪೂರೈಸಿತು ಚಂದ್ರಕಿರಣ (ಮೋಹತ. ೨೬–೨೩). ೬. ಇವಂ ತಿರ್ಯಕ್ತ್ವದೊಳ್ನಿಲ್ವನೆನ್ನೆಗ[ಮಾಯುಷ್ಯರಮಾದ ಯಜ್ಞಮನಿದಂ ಪೂರೈಸದಾನಿರ್ಪೆಂ] (ಕಾದಂಬ. ೬೬೯); ಆ ಗರುವಮುನಿಮಂತ್ರದಿಂದ . . . ಯಾಗವನು ಪೂರೈಸಿದನು (ಕಳಿಕ. ೦–೩೦); ತನ್ನ ಕೆಲಸ ಪೂರೈಸಿ ಹಾಕಿಲಿಕನು ಹಿಂದಿರುಗಿದನು (ಕುಕಸ. ೯೩). ೮. ಪಲಕೆಱದ ಪಱೆಗಳಂ ಪೊಯ್ಸಿಯುಂ ಶಂಖಂಗಳಂ ಪೂರೈಸಿಯುಂ . . . ಎಂತುಂ ಪೊಱಮಡಿಸ ಲಾಱದೆ (ಗದಾಯು. ೬–೦ ವ); ಬಿರುದೆತ್ತಿ ದೆಸೆದೆಸೆಗೆ ಕರೆವ ಕಹಳೆಗಳೊಳಗೆ ನೆರೆದು ನೆಱೆ ಪೂರೈಪ ಶಂಖಧ್ವನಿಗಳೊಳಗೆ . . . ಬರುತಿರ್ದನಪ್ರತಿಮ ಸುಕುಮಾರಶೇಖರನು (ಸುಚರಿ. ೩–೫೯); ಫಲುಗುಣಂ ಪೂರೈಸಿದಂ ದೇವ ದತ್ತಮಂ (ಕೈಮಿ. ೨೫–೩೯). ೧೨. ಬಣ್ಣ ಬಂಗಾರವನುಡತೊಡ ಕೊಟ್ಟು ಹೊಂಬಣ್ಣಚಂದನವ ಪೂರೈಸಿ (ಮೋಹತ. ೦೦–೬೩). ೧೩. ನಿಮ್ಮ ಕುಟುಂಬಕ್ಕೆಬೇಕಾದ್ದನ್ನೆಲ್ಲನಾನು . . . ಪೂರೈಸಿ ಕೊಡುವೆನು (ಮುಂಬಯಿ. ೪–೬೮); ಕಾಗದ ಪೂರೈಸುವವರ ಕಡೆಯಿಂದ ವಕೀಲನ ಮುಖಾಂತರ ಪತ್ರ ಬರಲು ಭೂಪತಿಯು ಬೆರಗಾಗಿ ಬಿಟ್ಟನು (ಇಕ್ಕೆ. ೨೬೦). ೧೫. ಜನದ ಮನದಾಸೆಯಂ ತಾನಿನಿಸುಂ ಪೂರೈಸದಾತನರ್ಥಂ ವ್ಯರ್ಥಂ (ಜಿರಪು. ೩–೨೬); ಭಾಷೆಯಂ ಪೂರೈಸದಿಹನೇ ಕಾಶಿನಾಥನು (ಬಸಪು. ೩೯–೩); ಈತನಿಂದು ನಳಿನನಾಭನ ಮುಂದೆ ಭಾಷೆಯಂ ಪೂರೈಸಿ ಕೊಳುಗುಳದೊಳಳಿದನು (ಕೈಮಿ. ೦೩–೬೦). ೧೬. ಸರಿದೂಗಂ ; ಸಾಕಷ್ಟಾಗಂ: ಮೇಲೆ ಬರೆದಂತೆ ಅಡತಿ ಮತ್ತು ಮಜೂರಿ ತೆಗೆದುಕೊಂಡರೆ ಸಹ ನಮಗೆ ಪೂರೈಸುವದಿಲ್ಲ (ಮುಂಬಯಿ. ೦೫೮). ೧೭. ನೀಗಿಸಂ; ಸಾಗಿಸು: ಹೋರುವ ಸತಿಯಿಂದ ಸೋರುವ ಮನೆಯಿಂದ ಪೂರೈಸ ದವನ ಬದುಕಿಂದ ಕೊಂಡೊಯ್ವ ಮಾರಿ ಲೇಸು (ಸರ್ವಜ್ಞ. ೦೩೨೯) ; ಬೆಕ್ಕಿಗೆ ಶಿಕ್ಷಾಕಲಿಸಿ ಯಾರು ಪೂರೈಸಾರು (ಬಾಸಹು. ೯೦). ೧೮. ಸಂಪೂರ್ಣ ವಾಗು ; ಸಮಗ್ರವಾಗಂ : ಪೂರೈಸಿ ವೇದಮೋದಿದನನೂಚಾನನಕ್ಕು (ಮುಂಗರಾ. ೬೯–೩) ; ಪೂರೈಸಿ ತುರುಕರು ಕಂಠೀರವೇಂದ್ರನ ಕೂರಸಿಯಲಿ ನುಗ್ಗಾಯ್ತು (ಕಂಪು. ೦೩–೩೯). [ ಪೂರಣ+—ಇಸು ]

ಪೂರುವ 'ಪುಬ್ಬೆ' ನೋ.

ಪೂರುಷ (ನಾ). ಪುರುಷ ; ಮನುಷ್ಯ : "ಮನುಷ್ಯಃ, ಮಾನುಷಃ. . . ಪುರುಷಃ, ಪೂರುಷಃ, ವಿಟ್—ಈ ೧೨ ಮಾನಸರ್" (ಹಲಾಯು. ೩೩–೦೬೬); "ಮಾನವಂ ಮರ್ತ್ಯಂ ಮನುಷ್ಯಂ ನರಂ ಪುಮಾನ್ ಮಾನುಷಂ ಪೂರುಷಂ ...ಗಂಡುಗೂಸಕ್ಕು" (ಮುಂಗರಾ. ೬೬–೦). [ಸಂ.]

ಪೂರುಷತನ (ನಾ). ಪರಾಕ್ರಮ; ಪೌರುಷ : ಕೆಲಬಲದಿಂದುಮುಖಿಯರ ನೋಡಿದನು ನಲಘಿಂದ ನುಡಿದನು ತನ್ನ ಪೂ[ಪಾಠಾಂ.ಪೌ]ರುಷತನದ ಪರಿಣತೆಯ (ಕುಮಾ. ೩–೦೩). [ಪೂರುಷ + — ತನ]

ಪೂರೈಕೆ, ಪೂರಯಿಕೆ (ನಾ). ೧. ಈಡೇರಿಕೆ ; ನೆರವೇರಿಕೆ : ಕಾವೇರಿ ತನ್ನ ಬಯಕೆಯ ಪೂರೈಕೆಗಾಗಿ ಬೇರೆ ಗಂಡನನ್ನು ಹಿಂಬಾಲಿಸಲು ಸಾಧ್ಯವೇ (ಕಾವೇರಿ. ೯೩). ೨. ಒದಗಿಸುವಿಕೆ; ಸರಬರಾಜು : ಹಾಲು, ಮಧ್ಯಾಹ್ನದ ತಿಂಡಿ, ವೈದ್ಯಪರೀಕ್ಷೆ, ಚಿಕಿತ್ಸೆ ಮತ್ತು ಇತರ ಪೂರೈಕೆಗಳು—ಇವಕ್ಕೆ ಪಾಶ್ಚಾತ್ಯದೇಶಗಳಲ್ಲಿ...ವೆಚ್ಚ ಆಗುತ್ತಿದೆ (ಶಿಕ್ಷದ. ೦೫೮). ೩. ಸಾಮಗ್ರಿಯಂ ಸಮೃದ್ಧಿ : ತನ್ನದೂ ಒಂದು ಸಂಸಾರ, ಹೆಂಡತಿ, ಹೊಲ, ಇತರ ಪೂರೈಕೆ ಸಾಕಷ್ಟು ಇದೆ ಎಂದು ನಂಬಿ ಅಭಿಮಾನದಿಂದ ಸುಬ್ಬ ಸುಧಾರಿಸಿದ್ದ (ಹೊಸಕ್ಷಿ. ೬೯). ಪೂರಯಿಕೆ : ೨. ಸಿದ್ಧವಾದ ಉಡುಪುಗಳು ವಿತರಣೆ ಗೋಸುಗ ಪೂರಯಿಕೆಯ ಮಂದಿರಗಳಿಗೆ ಹೋಗುತ್ತಿದ್ದುವು (ಕಾಂಯಾ. ೯೮). [ಪೂರೈಸು (< ಪೂರಿಸು) + — ಕೆ]

ಪೂರೈಸು 'ಪೂರಿಸಂ' ನೋ.

ಪೂರೋಟಿ 'ಪುರಿವಠೆ' ನೋ.

ಪೂರ್ಣ (ಗು). ೧. ತುಂಬಿದ ; ಭರ್ತಿಯಾದ ; ಪೂರ್ತಿಯಾದ : ಪುನ್ನಾಗಬುಪೂರ್ಣಕುಂಭಾಗ್ರಮುಚಿತಕಂಕೇಲಿಪಲ್ಲವೋಲ್ಲಾಸರಚಿತಂ (ಅಜಿ. ೬-೩೦ ಗದ್ಯ). ೨. ಸಮಗ್ರವಾದ ; ಎಲ್ಲ ; ಇಡಿಯಾದ. ೩. ನೆರವೇರಿದ ; ಈಡೇರಿದ. ೪. ತುಂಬುದನಿಯುಳ್ಳ ; ನಾದಮಯವಾದ. ೫. ಸಮರ್ಥ ; ದಕ್ಷ ; ಬಲವುಳ್ಳ. ೬. (ಬಿಲ್ಲಿನಂತೆ) ಎಳೆದು ಬಾಗಿಸಿದ. ೭. ಮುಗಿದ ; ಮುಕ್ತಾಯವಾದ. (ನಾ). ೮. ಕಡುಬು, ಹೋಳಿಗೆ ಮೊದಲಾದುವುಗಳ ಹೂರಣ; ಹೂರಣ: (+). ೯. ಸಂಕೀರ್ಣವಾದುದು ; ಸಂದಣಿ : "ಆಚಿತಂ, ನಿಚಿತಂ . . . ಪೂರ್ಣಂ—ಈ ೯ ಸಂದಣಿ" (ಹಲಾಯು. ೦೦೬-೦೭). ೧೦. ಸಮಗ್ರತೆ; ಸಂಪೂರ್ಣತೆ : ಕೊಂಚಕೊಂಚಗಳರಿವು ಪೂರ್ಣದರಿವಾದೀತೆ ? (ಮುಂಕುತ. ೩೦೦). ೧೧. [ನಾಟ್ಯ] ಕಪೋಲದ ಆರು ಭೇದಗಳಲ್ಲಿ ಒಂದು: "ಕೆನ್ನೆಗಳನ್ನು ಸ್ವಲ್ಪ ಉಬ್ಬಿಸುವುದು, ರೋಷ, ಹರ್ಷ ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಭಾಸ್ಕರಂ. ೨೭೩ ಗದ್ಯಾನುವಾದ) : ಕುಂಚಿತ, ಕಂಪಿತ, ಪೂರ್ಣ, ಕ್ಷಾಮ, ಫುಲ್ಲ, ಸಮ—ಈ ಆಱುಂ ಗಲ್ಲದ ಭೇದಂಗಳ್ (ಭಾಸ್ಕರಂ. ೩-೬೯ ವ).

ಪೂರ್ಣವಾಗು = ಪೂರೈಸು ; ಪೂರ್ತಿಯಾಗು : ಅದರ ಬೆಳವಣಿಗೆ ಪೂರ್ಣವಾಗಲಿಕ್ಕೆ ಐದು ವರ್ಷ ಹತ್ತುವದು (ಮುಂಚಿಯು. ೯-೯೬). [ಸಂ.]

ಪೂರ್ಣಕಂಠ (ನಾ). ತುಂಬುಶಾರೀರ ; ತುಂಬು ಧ್ವನಿ : ಪೂರ್ಣಕಂಠದಿಂದ (ಧಾತು ಮತ್ತು ಮಾಟು) ಮಹಾವೈದ್ಯನಾಥಅಯ್ಯರ್ ಅವರು ಹಾಡುತ್ತಿದ್ದರು (ಸಂಗೀತ. ೯). [ಸಂ.]

ಪೂರ್ಣಕಾಮ (ನಾ). ೧. ಇಷ್ಟವನ್ನು ಈಡೇರಿಸಿಕೊಂಡವನು. ೨. ಭಗವಂತ; ಪರಮಾತ್ಮ: ಕರ್ಣ ಕರ್ಣಕಠೋರಸಾಹಸ ನಿರ್ಣಯಿಸು . . . ಪೂರ್ಣಕಾಮನು ನೀನು ಕುರುಬಲಕರ್ಣಧಾರನು ನೀನು (ಕುಮಾವ್ಯಾ. ದ್ರೋ. ೦-೦೭). [ಸಂ.]

ಪೂರ್ಣಕುಂಭ (ನಾ). ೧. (ನೀರು ಮೊದಲಾದ ದ್ರವದಿಂದ) ತುಂಬಿದ ಕೊಡ ; ಕಲಶ : ಕಳಸಂ ಕನ್ನಡಿ ತೋರಣಂ . . . ರತ್ನಂ ದಧಿ ಪೂರ್ಣಕುಂಭಮನಿತುಂ ಪೊಮ್ಪಗೆ ಬರ್ಪಂಗನಾಕುಳದಿಂ ಕಟ್ಟಿದಿರ್ವಂದೊಡಿಷ್ಟಫಲಮಂ ಶ್ರೀಶಿಷ್ಟಕಲ್ಪದ್ರುಮಾ (ಕೋಕೊ:ಕ. ೦೨-೯). ೨. ಮಂಗಳ ಸೂಚಕವಾಗಿ ಬಾಗಿಲಲ್ಲಿ ಇಡುವ ನೀರು ತುಂಬಿದ ಕೊಡ: "ಭದ್ರಕುಂಭಃ, ಪೂರ್ಣಕುಂಭಃ—೨ ಅರಮನೆಯ ಬಾಗಿಲು ಮುಂತಾದವುಗಳಲ್ಲಿ ಮಂಗಳಕರವಾಗಿ ಇರಿಸತಕ್ಕ ಪೂರ್ಣಕಲಶಗಳ ಹೆಸರು" (ಸಿದ್ಧಾಂತಿ. ೨೯೩); ಬಿಗಿದೊಗೆದಾತ್ಮತುಂಗಕುಚಕುಂಭಮನೊಡ್ಡಿಪ ಪೂರ್ಣಕುಂಭಮಂ . . . ಅಂಬುಜವದನೆ ಕಂಡಳ್ (ಪುಷ್ಪಪು. ೯-೦೦೦); ಊರ ಬಾಗಿಲಲ್ಲಿಯೂ, ಊರ ಒಳಗೂ ಅಲ್ಲಲ್ಲಿ ಮಂಗಳಾರ್ಥವಾಗಿ ಪೂರ್ಣಕುಂಭಗಳನ್ನು ಇಟ್ಟಿದ್ದರು (ವಠಭಾ. ೩೩೦).

ಪೂರ್ಣಕುಂಭಮರ್ಯಾದೆ = ದೊಡ್ಡವ್ಯಕ್ತಿಗಳನ್ನು ಎದುರುಗೊಳ್ಳುವಾಗ ಮಠ, ದೇವಸ್ಥಾನಗಳಲ್ಲಿ ಪೂರ್ಣಕುಂಭಸಹಿತವಾಗಿ ಮಾಡುವ ಸ್ವಾಗತ: ರಾಷ್ಟ್ರಪತಿಗಳನ್ನು ರಾಮೇಶ್ವರದೇವಸ್ಥಾನದಲ್ಲಿ ಪೂರ್ಣಕುಂಭ ಮರ್ಯಾದೆಯೊಂದಿಗೆ ಎದುರುಗೊಳ್ಳಲಾಯಿತು (ರೂಢಿ). [ಸಂ.]

ಪೂರ್ಣಕ್ರಿಯಾಪದ (ನಾ). [ವ್ಯಾಕ] ವಾಕ್ಯದ ಅರ್ಥವನ್ನು ಪೂರ್ಣಗೊಳಿಸುವ ಕ್ರಿಯಾಪದ : ಧಾತುಗಳಿಗೆ ಕೆಲವು ಆಖ್ಯಾತಪ್ರತ್ಯಯಗಳು ಸೇರಿ ಪೂರ್ಣಕ್ರಿಯಾಪದಗಳಾಗುತ್ತವೆ (ಕೃಶಿಬಿ. ೯೯); 'ಒಂದು' ಕಾಲವನ್ನಾಗಲಿ, 'ಅರ್ಥ' ವನ್ನಾಗಲಿ ಸೂಚಿಸುವ ಕ್ರಿಯಾಪದವನ್ನು ಉಪಯೋಗಿಸಿದರೆ ವಾಕ್ಯದ ಅರ್ಥವು ಪೂರ್ಣವಾಗುತ್ತದೆ. ಉದಾಹರಣೆಗೆ, ಅವನು ಮನೆಯಿಂದ ಹೊರಡುತ್ತಾನೆ . . . ಈ ಬಗೆಯ ಕ್ರಿಯಾಪದಗಳಿಗೆ ಪೂರ್ಣಕ್ರಿಯಾಪದಗಳೆಂದು ಹೆಸರು (ಕ:ವ್ಯಾಕು. ೬೪). [ಸಂ.]

ಪೂರ್ಣಗರ್ಭಿಣಿ (ನಾ). ತುಂಬಿದ ಬಸಿರಿ ; ಗರ್ಭವು ಸಂಪೂರ್ಣವಾಗಿ ಬೆಳೆದು, ಹೆರಿಗೆ ಸನ್ನಿಹಿತವಾಗಿರುವ ಹೆಣ್ಣು : ಎಮ್ಮಣ್ಣನಾಣತಿಗಿವಳಂ ವನದೊಳಿರಿಸಿ ಪೋಪೆಂ ಪೂರ್ಣಗರ್ಭಿಣಿ ಕಾಯಿರಿ ನೀಮೆಲ್ಲರ್ ಕಾವಲಿರ್ದು (ರಾಮಾಶ್ವ. ೬೯-೩); ಪೂರ್ಣಗರ್ಭಿಣಿಯಾದೀ ಹುಲ್ಲೆಗೆ ಯಾವಾಗ ಸುಖ ಪ್ರಸವವಾಗುವುದೋ ಆಗ ನನಗೆ ಕುಶಲಪತ್ರಿಕೆಯನ್ನು ಕಳುಹಿಸಬೇಕು (ಶಾಕುಂತ. ೩೩-೩). [ಸಂ. ಪೂರ್ಣಗರ್ಭಿಣೀ]

ಪೂರ್ಣಗೊಳಿಸು (ಕ್ರಿ). ಪೂರ್ತಿ ಮಾಡು ; ಮುಗಿಸು ; ಪರಿಸಮಾಪ್ತಿ ಮಾಡು : ಅಂಗವಿಜ್ಞಾನಿ ಹಾರ್ವೆಯು ರಕ್ತಪರಿಚಲನಾಸಂಶೋಧನೆಯನ್ನು ಪೂರ್ಣಗೊಳಿಸಿದನು (ವಿಕಾಸ. ೦೪); 'ಪರಿಶಿಷ್ಟ' ವು (Supplement) ಹೊರಬಿದ್ದು ಅದನ್ನು ಪೂರ್ಣಗೊಳಿಸಿತು (ಕವಿಮಾರ್ಗ. ೨೬೩).

[ ಪೂರ್ಣ + ಕೊಳ್$_1$ + – ಇಸು$_3$ ]

ಪೂರ್ಣಗೊಳ್ಳು (ಕ್ರಿ). ಮುಗಿ ; ಸಮಾಪ್ತವಾಗು : ಈ ಕೊನೆಯವರಿಬ್ಬರ ಆಡಳಿತದಲ್ಲೇ ನಿಘಂಟು ಪೂರ್ಣಗೊಂಡದ್ದು (ಕವಿಮಾರ್ಗ. ೨೭೨).

[ಪೂರ್ಣ + ಕೊಳ್ಳು$_1$ (< ಕೊಳ್$_1$)]

ಪೂರ್ಣಗ್ರಹಣ (ನಾ). ಸೂರ್ಯ ಅಥವಾ ಚಂದ್ರನು ಪೂರ್ತಿಯಾಗಿ ಮರೆಯಾಗುವ ಗ್ರಹಣ ; ಖಗ್ರಾಸಗ್ರಹಣ : ಚಂದ್ರಗ್ರಹಣ ಪೂರ್ಣಗ್ರಹಣವಾದರೂ ಆಗಬಹುದು, ಅರ್ಧಗ್ರಹಣವಾದರೂ ಆಗಬಹುದು (ಆಕಾಶ. ೪೨). [ಸಂ.]

ಪೂರ್ಣಚಂದ್ರ (ನಾ.) ೧. ಹದಿನಾರುಕಳೆಗಳಿಂದ ಕೂಡಿದ ಚಂದ್ರ ; ಹುಣ್ಣಿಮೆಯ ಚಂದ್ರ : ಉದಯಂಗೆಯ್ಯಲಿರ್ದ ಪೂರ್ಣಚಂದ್ರನನೊಳಕೊಂಡು ಬೆಳ್ಪಿಸೆವ ವಾಸವದಿಗ್ವನಿತಾನನಂಬೊಲಾನನರುಚಿ ಚೆಲ್ವನೇಂ ನೆಱೆಯೆ ತಾಳ್ದಿದುದೋ ಬಿಸಕಾಂಡಪಾಂಡುರಂ (ಅಜಿ. ೬-೯೬). ೨. [ಕಾಮಶಾ] ಸ್ತ್ರೀಯರ ಯೋನಿಯಲ್ಲಿರುವ ಒಂದು ನಾಡಿ : ಮದನಾಂದೋಳನ ಮದನಚ್ಛತ್ರ ಪೂರ್ಣಚಂದ್ರಾದಿ ನಾಡೀಮರ್ದನಂಗಳಿಂ (ವಿವೇಕ. ೨೩೦) ; ಭಗಕ್ಕೆ ಕೊಂಚ ದೂರದಿ ಕಾಮಜಲ ತುಂಬಿರ್ಪುದು ಪೂರ್ಣಚಂದ್ರವೆಂಬ ನಾಡಿಯುಂಟು (ಕಾಮಕಾ. ೨೩೦). [ಸಂ.]

ಪೂರ್ಣಚಂದ್ರನಾಡಿ (ನಾ). = ಪೂರ್ಣಚಂದ್ರ ೨ : ತುಟಿತುದಿಯಿಂ ಪೂರ್ಣಚಂದ್ರನಾಡಿಯಂ ಮರ್ದಿಸಿ ಹಲ್ಗಳಿಂ ಕಾಮಾತಪತ್ರದ ನ್ನಾಡಿಯ ಈಷನ್ಮರ್ದನ. ನಾಲಿಗೆಯ ತುದಿಯಿಂ ಮದನಾಂದೋಳಿಕನಾಡಿಯೊಳ್ ಹಲವು ಬಾರಿ ಅಲ್ಲಾಡಿಸುವದು (ಕಾಮಕಾ. ೨೩೯). [ಸಂ.]

ಪೂರ್ಣಚಂದ್ರಿಕೆ (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ಣಚಂದ್ರಿಕೆ—೨೯ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ (ಸಂಗೀತಂ. ೦೪೬) ; ಪಟ್ಣಂ ಸುಬ್ರಮಣ್ಯಅಯ್ಯರ್ ಅವರು ಪೂರ್ಣಚಂದ್ರಿಕಾರಾಗವನ್ನು ಹಾಡಿದ ರೀತಿಯಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ತೋರುತ್ತಿದ್ದರು (ಸಂಗೀತ. ೨೭). [ಸಂ. ಪೂರ್ಣಚಂದ್ರಿಕಾ]

ಪೂರ್ಣಜಠರ (ನಾ). ೧. ತುಂಬಿದ ಹೊಟ್ಟೆ. ೨. [ನಾಟ್ಯ] ನರ್ತನದಲ್ಲಿ ತೋರುವ ಕ್ಷಾಮ, ಖಲ್ವ, ಪೂರ್ಣ, ರಿಕ್ತಪೂರ್ಣ ಎಂಬ (ಉದರಭಾಗದ) ನಾಲ್ಕು ಪ್ರಕಾರಗಳಲ್ಲಿ ಒಂದು ; ಹೊಟ್ಟೆಯನ್ನು ಮುಂದಕ್ಕೆ ಚಾಚುವುದು : ಪೂರ್ಣಜಠರಮೆಸೆಗುಂ ಪೊಡೆಯುಬ್ಬರ ರೋಗದನೊಳ್ ತೋಱುತ್ತುರುಜಠರನೊಳೆಯ್ದೆ ತೋರ್ಪ ನೆಗಳ್ದಟದನೊಳ್ (ಭಾಸ್ಕರಂ. ೨-೦೭೩). [ಸಂ.]

ಪೂರ್ಣಜ್ವರ (ನಾ). ಅತ್ಯಧಿಕವಾದ ಜ್ವರ : ಶುಂಠಿಯಂ ಸೈಂಧವ ದುಪ್ಪಿನಲ್ಲಿ ಬಿಸಿನೀರಂ ಕೂಡಿಸಿ ತುಪ್ಪವಂ . . . ನೆಲಗುಳ್ಳ ಇವುಗಳ ಕಷಾಯದಿಂದ ಸಿದ್ಧಮಪ್ಪುದಂ ಕುಡಿಯಲು ಪೂರ್ಣಜ್ವರ, ಹಲವು ಕಾಲದ ಜ್ವರ, ಕೆಮ್ಮು, ಶೂಲೆ, ಊರ್ಧ್ವತೃಷೆ, ಮಂದಾಗ್ನಿ, ಗ್ರಹಣಿ, ಸಂಗ್ರಹಿಣಿ, ಈ ವ್ಯಾಧಿಗಳೊಳು ಹಿತಮಪ್ಪುದು (ವೈಶಿ. ೦೦). [ಸಂ.]

**ಪೂರ್ಣತಟಾಕ** (ನಾ). ತುಂಬಿದ ಕೆರೆ : ಕೊಳನಂ ತಾವರೆಯಿಂ . . . ಪೂರ್ಣತಟಾಕಮಂ ಕಾವುಡಿದವಂ ದೇವರ್ಕಳಂ ತುಂಬಿಯಂ ತಿಳಿಯಲ್ ಸ್ವಪ್ನದಿ ಲೇಸೆಲ್ಲೈ (ಸೋಟಕೋಟ. ೬೯); ಕೊಳರ್ವಕ್ಕಿಯಿಂದೊಪ್ಪುವ ಪೂರ್ಣತಟಾಕಂಗಳಿಂ (ಚಂದ್ರ. ೦೨-೨೮). [ಸಂ.]

**ಪೂರ್ಣತೆ** (ನಾ). ೧. ಸಮಗ್ರತೆ; ಪೂರ್ತಿಯಾಗಿರುವಿಕೆ. ೨. ಸಮೃದ್ಧಿ. [ಸಂ. ಪೂರ್ಣತಾ]

**ಪೂರ್ಣತ್ವ** (ನಾ). ಎಲ್ಲ ಬಗೆಯ ಶಕ್ತಿಗಳಿಂದ ಕೂಡಿರುವಿಕೆ ; ಸರ್ವಸಮರ್ಥತೆ : ಶಿವನ ಸರ್ವಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವ ಎಂಬ ಶಕ್ತಿಗಳು . . . ಕ್ರಮೇಣ ಪಂಚಕಂಚುಕಗಳಾಗುತ್ತವೆ (ಶಾರದ. ೨೦೯). [ಸಂ.]

**ಪೂರ್ಣದೃಷ್ಟಿ** (ನಾ). ಎಲ್ಲವನ್ನೂ ಚೆನ್ನಾಗಿ ಹೊಂದಿಸಿ ನೋಡುವ ಮನೋಧರ್ಮ ; ಸಮಗ್ರದೃಷ್ಟಿ ; ಸಾಕಲ್ಯದೃಷ್ಟಿ : ವಿಜ್ಞಾನಿಗಳಲ್ಲಿ . . . ಗಭೀರವಾದ ವಿಶ್ವದ ಮೂಲಸಮಸ್ಯಾಪರಿಹಾರಕ್ಕೆ ಆವಶ್ಯಕವಾದ ಪೂರ್ಣದೃಷ್ಟಿ ಇರಲಿಲ್ಲ (ಪುಕ್ವಾರ. ೨೭ ಏಳಿಳ). [ಸಂ.]

**ಪೂರ್ಣಪಾತ್ರ** (ನಾ). ೧. ಮಂಗಳವಸ್ತುಗಳಿಂದ ತುಂಬಿದ ಪಾತ್ರೆ ಅಥವಾ ಪೆಟ್ಟಿಗೆ. ೨. ಒಂದು ಬಟ್ಟಲಿನಷ್ಟು ಪ್ರಮಾಣ. ೩. ಇನ್ನೂರಐವತ್ತಾರು ಮುಷ್ಟಿಗಳಷ್ಟು (ಕಾಳಿನ) ಅಳತೆ ; ☞ ಎಂಟು ಮುಷ್ಟಿ = ೧ ಕಿಂಚಿತ್ (ಅಥವಾ ಕುಂಚಿ), ೮ ಕಿಂಚಿತ್ = ೧ ಪುಷ್ಕಲ, ೪ ಪುಷ್ಕಲ=೧ ಪೂರ್ಣಪಾತ್ರ. ೪. ಯಜ್ಞಸಮಾಪ್ತಿಯಾದಾಗ ಬ್ರಾಹ್ಮಣರಿಗೆ ಕೊಡುವ ದಕ್ಷಿಣಾರೂಪವಾದ ಇನ್ನೂರೈವತ್ತಾರು ಮುಷ್ಟಿ ಅಕ್ಕಿ. ೫. ಹೋಮಕಾರ್ಯದಲ್ಲಿ ಬಳಸುವ ತಂಪ್ಪದ ಪಾತ್ರೆ : ಚಮಸ ದರ್ವೀ ಆಜ್ಯಸ್ಥಾಲೀ ಪ್ರೋಕ್ಷಣಪಾತ್ರ ಪೂರ್ಣಪಾತ್ರ ಪ್ರಮುಖಪಾತ್ರವಿಶೇಷಂಗಳಿಂ (ವಿವೇಕ. ೦೪೩). ೬. ಪುತ್ರ ಜನನ ಮೊದಲಾದ ಸಂತೋಷಸಮಾರಂಭಗಳಲ್ಲಿ ಅಥವಾ ಒಳ್ಳೆಯ ವರ್ತಮಾನವನ್ನು ಕೇಳಿದ ಸಮಯದಲ್ಲಿ ಪರಿಜನರಿಗೆ ಪಾರಿತೋಷಕವಾಗಿ ಕೊಡುವ ವಸ್ತ್ರ, ಆಭರಣ ಮೊದಲಾದುವನ್ನು ತುಂಬಿದ ಪಾತ್ರೆ ಅಥವಾ ಪೆಟ್ಟಿಗೆ; ☞ ಪರಿಜನರೂ ಬಂಧುಮಿತ್ರರೂ ಯಜಮಾನನಿಂದ ಈ ವಸ್ತ್ರಾಭರಣಗಳನ್ನು ತಾವಾಗಿ ಎಳೆದು ತೆಗೆದುಕೊಳ್ಳುತ್ತಾರೆ : ಮಹಾತ್ಮಜಾತಜನನೋತ್ಸವದೊಳ್ . . . ಪೂರ್ಣಪಾತ್ರಹರಣವಿಲುಠ್ಯಮಾನವಸನಭೂಷಣಮುಂ (ಕಾದಂಪೂ. ೯೦೦); ಒಸೆದೀ ವಾರ್ತೆಗೆ ಪೂರ್ಣಪಾತ್ರಮಿದು ದೇವರ್ ಮನ್ನಿಸಲ್ವೇಟ್ಕುಮೆಂದು ಸಮಂತೀಟ್ಕುಳಿಗೊಂಡಳಾಕೆ ನೃಪಕಂಠೋದ್ದೇಶದಿಂ . . . ಹಾರಮುಂ (ಕೃಷ್ಣಕೃ. ೯-೨೮). [ಸಂ.]

**ಪೂರ್ಣಪ್ರಜ್ಞ** (ನಾ). ೧. ಸಮಗ್ರವಾದ ಜ್ಞಾನವುಳ್ಳವನು; ಸರ್ವಜ್ಞ : ಅರ್ಜುನನು ಪಾರ್ಥಿವಪ್ರಜ್ಞೆಯ ಪಾರ್ಥ; ಶ್ರೀಕೃಷ್ಣನು ಪೂರ್ಣಪ್ರಜ್ಞನಾದ ಅಧ್ಯಾತ್ಮಶಕ್ತಿಯ ಪ್ರಭು (ಶಾರದ. ೦೦೦). ೨. ದ್ವೈತಮತಪ್ರವರ್ತಕರಾದ ಮಧ್ವಾಚಾರ್ಯರ ಹೆಸರುಗಳಲ್ಲಿ ಒಂದು : ಯತ್ಯಾಶ್ರಮವನ್ನು ಸ್ವೀಕರಿಸಿದ ಕೆಲವು ದಿನಗಳಲ್ಲಿಯೇ ಪೂರ್ಣಪ್ರಜ್ಞರ ಯಶಸ್ಸು ಎಲ್ಲ ದಿಕ್ಕುಗಳಿಗೂ ವ್ಯಾಪಿಸಿತು (ಶಾರದ. ೨೭೦); ಮಧ್ವಾಚಾರ್ಯರು ಈ ಕಾಲದಲ್ಲಿ ಜನ್ಮತಾಳಿದರು; ಆನಂದತೀರ್ಥರೆಂತಲೂ ಪೂರ್ಣಪ್ರಜ್ಞರೆಂತಲೂ ಅವರನ್ನು ಕರೆಯುತ್ತಾರೆ (ಕರ್ನಾಕ. ೩೭). [ಸಂ.]

**ಪೂರ್ಣಫಲ** (ನಾ). ೧. ಸಂಪೂರ್ಣವಾದ ಸಿದ್ಧಿ; ಪೂರ್ಣತ್ವ : ವಾರಣಾಸಿಯ ವಿಶ್ವೇಶ್ವರನ ದರುಶನದಿಂದ ಮಾತ್ರ ಪೂರ್ಣಫಲ ಪ್ರಾಪ್ತವಾಗದು (ನವದ. ೦೬). ೨. ಒಡೆಯದೆ ಇರುವ ತೆಂಗಿನಕಾಯಿ : ಪಂಡಿತರು ಮಗಳ ಕೈಗೆ ಪೂರ್ಣಫಲವಿಷ್ಟು . . . ಧಾರೆಯೆರೆದು ಕೊಟ್ಟರು (ಶಾಂತಲಾ. ೦೦೨). [ಸಂ.]

**ಪೂರ್ಣಮಾಸ** (ನಾ). ೧. ಚಂದ್ರ. ೨. ಹುಣ್ಣಿಮೆ : ಅದು ಪೂರ್ಣಮಾಸ. ಹೀಗಾಗಿ ದೇವಸ್ಥಾನದಲ್ಲಿ ವಿಶೇಷಕಟ್ಟೆ (ಹೊಸ್ತಿ. ೦೩). ೩. ಹುಣ್ಣಿಮೆಯ ದಿನ ಮಾಡುವ ಯಾಗ (ಆಗ್ನೇಯ, ಅಗ್ನಿಷೋಮೀಯ ಮತ್ತು ಉಪಾಂಶುಯಾಜ — ಎಂಬ ಯಾಗಗಳನ್ನೊಳಕೊಂಡುದು) : "ಕೃಷ್ಣಪಕ್ಷ ಮುಗಿಯುವಾಗ ಮಾಡತಕ್ಕ ಯಾಗಕ್ಕೆ ದರ್ಶವೆಂತಲೂ, ಶುಕ್ಲಪಕ್ಷ ಮುಗಿಯುವಾಗ ಮಾಡತಕ್ಕ ಯಾಗಕ್ಕೆ ಪೂರ್ಣಮಾಸವೆಂತಲೂ ಹೆಸರು" (ಸಿದ್ಧಾ. ೬೩-೨೩೦). [ಸಂ.]

**ಪೂರ್ಣಮಾಸಿ** (ನಾ). ಹುಣ್ಣಿಮೆ; ಪೂರ್ಣಿಮೆ. [ಸಂ. ಪೂರ್ಣಮಾಸೀ]

**ಪೂರ್ಣಮಿ** 'ಪುಣ್ಣಮೆ' ನೋ.

**ಪೂರ್ಣಮೆ** (ನಾ). = ಪೂರ್ಣಮಾಸಿ : ಕಾರ್ತಿಕಮಾಸದ ಪೂರ್ಣಿಮೆ ತಲೆದಿವಸಮಾಗೆ . . . ಬಿಟ್ಟ ಧರ್ಮಸ್ಥಿತಿಕ್ರಮಂ (ಶ್ರವಣ. ೦೯೯೬; ೨೮-೯; 1032). [ಸಂ. ಪೂರ್ಣಮಾ]

**ಪೂರ್ಣವರ್ತಮಾನಕಾಲ** (ನಾ). [ವ್ಯಾಕ] ಕ್ರಿಯೆಯು ಸಂಪೂರ್ಣವಾಗಿದೆ ಎಂಬುದನ್ನು ತಿಳಿಸುವ ಕಾಲ : ಒಂದು ಧಾತುವಿನ ಭೂತನ್ಯೂನ ರೂಪಕ್ಕೆ 'ಇರು' ಧಾತುವಿನ ವರ್ತಮಾನಕಾಲದ ವಿಶೇಷರೂಪಗಳನ್ನು ಹತ್ತಿಸಿದರೆ ಪೂರ್ಣವರ್ತಮಾನಕಾಲದ ರೂಪಗಳಾಗುತ್ತವೆ (ಮಧ್ಯಮ. ೦೦೦). [ಸಂ.]

**ಪೂರ್ಣವಿರಾಮ** (ನಾ). ೧. ವಾಕ್ಯವು ಮುಗಿದುದನ್ನು ಸೂಚಿಸುವ ಚುಕ್ಕೆಯ ಗುರುತು (.) : ಅಲ್ಪವಿರಾಮ, ಅರ್ಧವಿರಾಮ, ಪೂರ್ಣವಿರಾಮಗಳನ್ನು ಅರಿತುಕೊಳ್ಳಬೇಕು (ಮುದ್ರಣ. ೨-೮). 'ಅರ್ಧವಿರಾಮ', 'ಅಲ್ಪವಿರಾಮ' ಪರಾ. ೨. (ಆಲಂ) ಮುಕ್ತಾಯ; ನಿಲುಗಡೆ; ಕೊನೆ : ಗಂಡ ಲಕ್ನೋದಿಂದ ಮರಳಿ ಬರುವ ತನಕ ಯಶೋದೆಯ ಕಾಲೇಜುವ್ಯಾಸಂಗದ ಕುರಿತಾದ ಚಿಂತೆಗೆ ಪೂರ್ಣವಿರಾಮ (ವಾತ್ಸಲ್ಯ. ೬೯); ಮುಂದುಕ ಮಾತ್ರ ತನ್ನ ಕಥನಕ್ಕೆ ಪೂರ್ಣವಿರಾಮ ವಿತ್ತಿರಲಿಲ್ಲ (ಹಳ್ಳಿಜಾ. ೦೦೩). [ಸಂ.]

**ಪೂರ್ಣಷಡ್ಜ** (ನಾ). [ಸಂಗೀತ] ಒಂದು ರಾಗದ ಹೆಸರು : ಪಲ್ಲವಿ ಶೇಷಯ್ಯರ್ ಅವರು ನಾದನಾಮಕ್ರಿಯಾ, ಭೈರವಿ, ಕೀರವಾಣಿ, ಪೂರ್ಣಷಡ್ಜಂ, ಗೌರೀಮನೋಹರಿ . . . ಷಣ್ಮುಖಪ್ರಿಯರಾಗಗಳಲ್ಲಿ ರಚಿಸಿರುವ ಕೃತಿಗಳು ಮನಮೋಹಕವಾಗಿವೆ (ಸಂಗೀತ. ೯೮). [ಸಂ].

**ಪೂರ್ಣಸಮಾಧಿ** (ನಾ). [ಯೋಗ] ವ್ಯಷ್ಟಿ, ನಿಶ್ಚಿತ, ವಿಲಕ್ಷಣ, ನಿರ್ವಿಷಯ, ಸಮಷ್ಟಿ ಮತ್ತು ಪೂರ್ಣ ಎಂಬ ಆರು ಬಗೆಯ ಸಮಾಧಿಗಳಲ್ಲಿ ಒಂದು : ಪೂರ್ಣಸಮಾಧಿಯೆಂಬುದು ವಿಕಸನಂಗೈದಿರ ವನುನ್ಮನಿ ಸುಖಸಮಗ್ರವನೆಸಗಿ ತನುಮೋಹವನು ಮರಸುವುದು (ಗಗಣ. ೦೩-೩೦). [ಸಂ.]

**ಪೂರ್ಣಾಂಕ** (ನಾ). [ಗಣಿತ] ಪೂರ್ಣವಾದ ಸಂಖ್ಯೆ ; ದುಂಡಂಕೆ ; ವಿಭಾಗವಾಗದ ಮೊತ್ತ : ಅಳತೆಯಲ್ಲಿ ಸರಪಣಿ ಸಂಪೂರ್ಣವಾಗಿ ಅದರಲ್ಲಿ ಒಂದು ಪೂರ್ಣಾಂಕವೆಂತಲೂ . . . ಲೆಕ್ಕವಿಡಬೇಕು (ಭೂಮಿ. ೯). [ಸಂ.]

**ಪೂರ್ಣಾಯುಷ್ಯ** (ನಾ). ಜೀವಿತದ ಸಮಗ್ರ ಅವಧಿ; ದೀರ್ಘಾಯುಷ್ಯ; ನೂರುವರ್ಷಗಳ ಜೀವನಕಾಲ : ನಿನಗೆ ದೇವರಂಥಾ ಪೂರ್ಣಾಯುಸ್ಸಿನ ಗಂಡ ಸಿಕ್ಕಲಿ (ಹೀರಯೋ. ೦೦೩). [ಸಂ. ಪೂರ್ಣಾಯುಸ್]

**ಪೂರ್ಣಾವತಾರ** (ನಾ). ದೈವತ್ವವು ಪೂರ್ಣವಾಗಿ ಪ್ರಕಟವಾಗುವ ಭಗವಂತನ ಅವತಾರ ; ☞ ನರಸಿಂಹಾವತಾರ, ರಾಮಾವತಾರ ಹಾಗೂ ಕೃಷ್ಣಾವತಾರಗಳು ಪೂರ್ಣಾವತಾರಗಳೆಂದು ಗಣಿಸಲ್ಪಟ್ಟಿವೆ; ಅದರಲ್ಲಿಯೂ ಕೃಷ್ಣಾವತಾರವು ಪರಿಪೂರ್ಣವೆನಿಸಿದೆ : ಯಾರಲ್ಲಿ ದೈವತ್ವವು ಅತ್ಯಂತಪ್ರಕಾಶಮಾನವಾಗಿ ಮೆರೆಯುತ್ತದೊ ಅಂಥವರದು

ಪೂರ್ಣಾವತಾರ; ಯಾರಲ್ಲಿ ಅದು ಯಾವುದೇ ಒಂದು ವಿಶಿಷ್ಟಮುಖದಲ್ಲಿ ಪ್ರಕಟವಾಗುತ್ತದೋ ಅಂಥವರದು ಅಂಶಾವತಾರ; ಇನ್ನೂ ಕಡಿಮೆ ಯಾಗಿದ್ದರೆ ಅಂಥವರದು ಕಲಾವತಾರ (ಕಶ್ಯ್ರಾ. ೬೯). 'ಅಂಶಾವತಾರ' ಪರಾ. [ಸಂ.]

**ಪೂರ್ಣಾಹುತಿ** (ನಾ). ೧. ಯಜ್ಞಾದಿಗಳಲ್ಲಿ ದರ್ವಿ ಅಥವಾ ಸ್ರುವಟವನ್ನು ಪೂರ್ತಿಯಾಗಿ ತುಂಬಿಕೊಂಡು ಕೊಡುವ ಆಹುತಿ. ೨. ಯಜ್ಞದಲ್ಲಿ ಅಗ್ನಿಗೆ ಕೊನೆಯಲ್ಲಿ ಒಪ್ಪಿಸುವ ಬಹುಮುಖ್ಯವಾದ ಬಲಿ; ಯಜ್ಞವನ್ನು ಪೂರ್ಣಗೊಳಿಸುವ ಆಹುತಿ : ಭೂಪತಿಯ ರಣಯಜ್ಞ ಮುಖಕೆ ನಿಜಾಪಘನಪೂರ್ಣಾಹುತಿಯಲೀ (ಕುವ್ಯಾ.ಗ. ೦-೩೬) ; ಚಂದ್ರ ಹಾಸಂ . . . ಪೂರ್ಣಾಹುತಿಗೆ ಶಿವವನರಿದಪೆನೆಂದು ಖಡ್ಗಮಂ ಗೋಣೆಗ ಪೂಡಿ . . . ಅರಿಯಲನುವಾದನು (ಜೈಮಿಭಾ. ೫೦-೬೬) ; ಪೂರ್ಣಾಹುತಿ ಗೊಂಡು ವಿಜೃಂಭಿಸಿ ಶಾಂತನಾಗುವ ಯಜ್ಞೇಶ್ವರನಂತೆ ಸುತ್ತಮುತ್ತಲೆಲ್ಲ ಏನೋ ಶಾಂತಿ ತಲೆದೋರಿತು (ಮಹಾಜ. ೦೬೯). ೩. (ಆಲಂ) "ಒಟ್ಟಿಗೆ ಕೊಟ್ಟ ಬಲಿ; ಸರ್ವನಾಶ" (Holocaust. ೩೦೪೬). [ಸಂ.]

**ಪೂರ್ಣಮಾಂತ** (ಗು). ೧. ಹುಣ್ಣಿಮೆಗೆ ಕೊನೆಗೊಳ್ಳುವ. (ನಾ). ೨. ಹುಣ್ಣಿಮೆಯ ಕೊನೆ,–ಮುಕ್ತಾಯ. [ಸಂ.]

**ಪೂರ್ಣಿಮಾಂತಮಾಸ** (ನಾ). ಹುಣ್ಣಿಮೆಗೆ ಮುಗಿಯುವ ತಿಂಗಳು ; ಹುಣ್ಣಿಮೆಯಿಂದ ಹುಣ್ಣಿಮೆಯವರೆಗೆ ಎಂದು ಎಣಿಸುವ ತಿಂಗಳು; ಚಾಂದ್ರಮಾನಮಾಸ : ಕೃಷ್ಣಪ್ರತಿಪದೆಯಿಂದ ಪೂರ್ಣಿಮೆಯ ತನಕ ; ಇದಕ್ಕೆ ಪೂರ್ಣಿಮಾಂತಮಾಸವೆಂಬ ಹೆಸರು (ಮುಂಬಯಿ. ೬-೬೬). 'ಅಮಾಂತಮಾಸ' ಪರಾ. [ಸಂ.]

**ಪೂರ್ಣಿಮೆ** (ನಾ). ಚಂದ್ರನು ಹದಿನಾರುಕಳೆಗಳನ್ನೂ ಹೊಂದಿ ಪೂರ್ಣವಾಗಿರುವ ತಿಥಿ ; ಹುಣ್ಣಿಮೆ : ಅನುಮತಿಯೆನಿಕುಂ ಪೂರ್ಣಿಮೆ ಯಿನಿಸಾನುಂ ಕುಂದಿ ತೋಱುತಿರೆ ಚಂದ್ರಂ (ಶಬ್ದಮಣಿ. ೦೬-೯); ಮಾರ್ಗಶಿರ ಪೂರ್ಣಿಮೆಯು ಸಾಮಾನ್ಯವಾಗಿ ಡಿಸೆಂಬರ್ ಮಧ್ಯಭಾಗದಲ್ಲಿ ಬರುತ್ತದೆ (ಪಕ್ಷಿಶ. ೭). [ಸಂ. ಪೂರ್ಣಿಮಾ]

**ಪೂರ್ಣೆ** (ನಾ). ೧. ಪೂರ್ಣತಿಥಿ; ಪಂಚಮಿ, ದಶಮಿ ಮತ್ತು ಹುಣ್ಣಿಮೆ—ಇವು ಪೂರ್ಣತಿಥಿಗಳು. ೨. ಚಂದ್ರನ ಹದಿನಾರು ಕಳೆಗಳಲ್ಲಿ ಒಂದು: ಅಮೃತ ಪೂಷ ... ಪೂರ್ಣೆ . . . ಕಾಮದಾಯಿನಿ ಯೆಂಬ ಷೋಡಶಕಲೆಗಳಂ (ಐವೀ. ೨೬೭). ೩. [ಸಂಗೀತ] ಮಧ್ಯಮ ಸ್ವರದಿಂದ ಹುಟ್ಟುವ ನಾಲ್ಕುಶ್ರುತಿಗಳಲ್ಲಿ ಒಂದು : ರಂಜಕಿ ಪೂರ್ಣೆ ಅಲಂಕಾರಿಣಿ ವಾಂಶೆಯೆಂಬ ನಾಲ್ಕುಶ್ರುತಿಗಳೆ ಮಧ್ಯಮಸ್ವರದಿಂ ಪುಟ್ಟಿದವು (ಐವೀ. ೨೬೨). [ಸಂ. ಪೂರ್ಣಾ]

**ಪೂರ್ಣೇಂದು** (ನಾ). = ಪೂರ್ಣಚಂದ್ರ ೧ : ಸೌಂದರಪೆರುಮಾಳೆ . . . ರಾತ್ರಿಯುಂ ಬೆಳಗಲಿರ್ದ ಪೂರ್ಣೇಂದುವಿನಂತೆ ದಿವಮಂ ಧವಳಿಸಲಿರ್ದ ಸಹಸ್ರಕರನಂತೆ ಇರ್ದಪಂ (ಸಂಬಿರ. ೬-೦೪) ; ಕಂದ ಬಾರೋ ಎನ್ನ ಮನಕಾನಂದ ಬಾರೋ' ಬಾಲಕರ ಪೂರ್ಣೇಂದು ಬಾರೋ (ಕುವ್ಯಾದ್ಯ. ೬ ೨೦). [ಸಂ.]

**ಪೂರ್ಣೋಪಮೆ** (ನಾ). [ಕಾವ್ಯಮೀ] ಉಪಮೇಯ, ಉಪಮಾನ, ಸಾದೃಶ್ಯವಾಚಕ ಮತ್ತು ಸಾಧಾರಣಧರ್ಮ ಎಂಬ ನಾಲ್ಕೂ ಅಂಗಗಳನ್ನು ಸ್ಪಷ್ಟವಾಗಿ ಹೇಳಿರುವ ಉಪಮೆ : ತಾಯಂತೆ ಪೊರೆದು ತಂದೆವೊಲಾರಯುತಿರ್ಪೊಳ್ ಹಿತಮನೆಣಿಸಿ ಚಿಕದೇವಮಹಾ ರಾಯಂ ಪ್ರಜೆಯನಿತಂ ನಾರಾಯಣನಂತೆ ಟಿಕ್ಕಿವಡಿಸಿಯಾಳ್ದಂ ಸೊಗ ದೊಳ್ ಇದರೊಳ್ 'ಚಿಕದೇವಮಹಾರಾಯಂ' ಎಂದು ಉಪ ಮೇಯಮಂ, 'ತಾಯ್ತಂದೆ ನಾರಾಯಣರ್' ಎಂದು ಉಪಮಾನಂಗಳಂ, 'ಪೊರೆದು' 'ಹಿತಮನೆಣಿಸಿ' 'ಎಟ್ಟಿಗೆವಡಿಸಿ' ಎಂದು ಸಮಾನಧರ್ಮ ಗಳಂ 'ಅಂತೆ', 'ವೊಲ್' ಎಂದು ಉಪಮಾವಾಚಕಪದಂಗಳುಮಂ ಪೇಳ್ದ ಪ್ರದೞಿಂದಿದು ಪೂರ್ಣೋಪಮಾಲಂಕಾರವೆನಿಪುದು (ಅಪ್ರತಿ. ೩೬-೦೬); ಬಳಸಿ ಸುಟ್ಟಾಡಿ ಕಾಲ್ವಿಡಿದೆಳಸಿ ಕಲಾಲಾಪವೊದವೆ ಜನನಿಯ ವೊಲೆ ವಾಲ್ಗಳನುಣ್ಬ ಶಿಶುಗಳಂತಿರೆ ಕಳವೆಯ ಪಾಲ್ದೆನೆಯ ಪಾಲನುಂಡುವು ಗಿಳಿಗಳ್—ಈ ಪದ್ಯದಲ್ಲಿ ಗಿಳಿಗಳೆಂಬ ಉಪಮೇಯವೂ ಶಿಶುಗಳೆಂಬ ಉಪ ಮಾನವೂ 'ಅಂತಿರೆ' ಯೆಂಬ ಉಪಮಾವಾಚಕವೂ ಸಹ . . . ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ಈ ಹೋಲಿಕೆ ಪೂರ್ಣೋಪಮೆ (ಕೃಬಿಐ. ೨೫೬). [ಸಂ. ಪೂರ್ಣೋಪಮಾ]

**ಪೂರ್ತ**$_1$ (ಗು). ೧. ಎಲ್ಲ; ಸಂಪೂರ್ಣವಾದ; ಸಮಗ್ರವಾದ. ೨. ತುಂಬಿದ ; ಭರ್ತಿಯಾದ. (ನಾ). ೩. ಪೂರ್ಣಗೊಳಿಸುವಿಕೆ ; ಪೂರೈಕೆ ; ನೆರವೇರಿಕೆ. ೪. ಬಾವಿ, ಕೆರೆಗಳ ನಿರ್ಮಾಣ, ಯಾತ್ರಾರ್ಥಿ ಗಳ ಸೌಕರ್ಯಕ್ಕಾಗಿ ಉದ್ಯಾನವನ, ಅನ್ನಸತ್ರ, ಅರವಟ್ಟಿಗೆ, ದೇವಾಲಯ, ಧರ್ಮಶಾಲೆ ಮೊದಲಾದುವುಗಳನ್ನು ಏರ್ಪಾಟು ಮಾಡುವುದು ಮುಂತಾದ ಧರ್ಮಕಾರ್ಯ : ಇಷ್ಟಂ ಯಾಗಾರ್ಥ ದೊಳುತ್ಕೃಷ್ಟಂ ಪೂರ್ತಂ ವದ[ದಾ]ನ್ಯಹೇತುವಿಕೀರ್ಣಂ ಇಷ್ಟಾಪೂರ್ತಂ ಗಳವೃತ್ಕೃಷ್ಟಶ್ರೇಯೋನಿಮಿತ್ತಮಕ್ಕುಮವೆರಡುಂ (ಶಬ್ದಮಣಿ. ೫೯-೯೬) ; ಮಾಡಿ ಷೋಡಶದಾನವನು ಮನ ಬೇಡಿದಂದದಲನ್ನದಾನವ ನೀಡಿ ವಿಪ್ರರಿಗೊಲಿಯುತಿಷ್ಟಾಪೂರ್ತಗಳ ಮುಗಿಸಿ ಜೋಡಿಯಿಲ್ಲದ ಪುಣ್ಯಫಲ ಕೈಗೂಡೆ (ಅಪ್ಪುಕ. ೨-೦೦೦). [ಸಂ.]

**ಪೂರ್ತ**$_2$ (ಅ). ಪೂರ್ಣವಾಗಿ ; ಪೂರ್ತಿಯಾಗಿ ; ಸಂಪೂರ್ಣವಾಗಿ : ಪೂರ್ತ ಕೂಲಿ ಅವರಿಗೆ ಕೊಟ್ಟರು (ಕೊಸಕೆ. ೨೨೧) ; ಸಾಮಾನುಗಳನ್ನು ಪೂರ್ತ ಹಿಂದಿರುಗಿ ಕೊಟ್ಟಿರಲಿಲ್ಲ (ಕ್ರಪಾಠ. II. ೨೨೦). [<ಪೂರ್ತ$_1$]

**ಪೂರ್ತಗೊಳಿಸು** (ಕ್ರಿ). ಪೂರೈಸು ; ಪೂರ್ಣ ಮಾಡು ; ಮುಗಿಸು : ಈ ಕೆಲಸವನ್ನು ಇಂದೇ ಪೂರ್ತಗೊಳಿಸಬೇಕು (ರೂಢಿ). [ಪೂರ್ತ$_1$+ಕೊಳ್$_1$+–ಇಸು$_3$]

**ಪೂರ್ತತೆ** (ನಾ). ಪೂರ್ಣತೆ ; ಪರಿಪೂರ್ಣತೆ : ಜೀವನದಲ್ಲಿ ಗೌರೀಶ, ನಿನಗೆ ಆತ್ಮಸಿದ್ಧಿ ದೊರೆಯಲಿ, ಪೂರ್ತತೆ ನಿನ್ನ ಪಾಲಿಗೆ ಬರಲಿ (ಮುಕ್ತಿ. ೨೫೩) ; ದೈವದೊಳಗೆ ಪೌರುಷದ ಪೂರ್ತತೆಯಿರುವುದು (ಕ್ರಬಂಧ. ೬೨). [ಸಂ. ಪೂರ್ತತಾ]

**ಪೂರ್ತಾನುಪಾಲನ** (ನಾ). 'ಪೂರ್ತ' ವೆಂಬ ಹೆಸರಿನ ದಾನದತ್ತಿಗಳನ್ನು ನಿರಂತರವಾಗಿ ನಡೆಸಿಕೊಂಡು ಬರುವುದು,–ರಕ್ಷಣೆ ಮಾಡುವುದು : ಪೂರ್ವದಿಂದ ನಡೆದು ಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ ಪೂರ್ತಾನುಪಾಲನ ಸರ್ವಮಾನ್ಯ ಭಟ್ಟಮಾನ್ಯ . . . ಮುಂತಾದುವೇನೂ ಹೆಚ್ಚುಕಡಿಮೆಯಾಗದಂತೆಯೂ ಅವೊಂದೂ ಈ ಪೌಜುಗಂದಾಯಕ್ಕೆ ಒಳಸೇರದಂತೆಯೂ ನಮ್ಮ ಕರಣಿಕರು ಎಚ್ಚತ್ತಿರ ಬೇಕು (ಐಸುಗಂ. ೩೬-೨೦). [ಸಂ.]

**ಪೂರ್ತಿ**$_1$ (ನಾ). ೧. ತುಂಬುವುದು ; ಭರ್ತಿಮಾಡುವುದು. ೨. ಮುಗಿಸು ವುದು ; ಮುಕ್ತಾಯಗೊಳಿಸುವುದು. ೩. ಪೂರ್ಣಗೊಳಿಸುವುದು ; ಪೂರೈಸುವುದು : ವಸುಧೆಯೊಳಿಷ್ಟಾರ್ಥಪೂರ್ತಿಯ [ಜಾತಾಂ. ಮ ತವೆ] ನೆಗಳ್ದುವನ ಬಹುವಿಧದ ಧರ್ಮಂಗಳಂ ರಚಿಸುವನ ಮನೆಯೊ ಳಿಂದಿರೆ ಬಿಡದೆ ನೆಲಸಿರ್ಪಳು (ಜೈಮಿಭಾ. ೩-೬೬). ೪. ಪೂರ್ಣಗೊಳ್ಳು ವುದು ; ಪೂರ್ಣತೆ. ೫. ತಣಿವು ; ತೃಪ್ತಿ. [ಸಂ.]

**ಪೂರ್ತಿ**$_2$ (ಅ). ಸಂಪೂರ್ಣವಾಗಿ ; ಪೂರಾ : ಇಲ್ಲಿಯ ಪರಿಸ್ಥಿತಿ ಪೂರ್ತಿ ಹದಗೆಟ್ಟುಹೋಗಿದೆ (ರೂಢಿ). [<ಪೂರ್ತಿ$_1$]

**ಪೂರ್ತಿಗೊಳಿಸು** (ಕ್ರಿ). ೧. ಮುಗಿಸು ; ಮುಕ್ತಾಯಗೊಳಿಸು : ಈ ಕೆಲಸವನ್ನು ಪೂರ್ತಿಗೊಳಿಸದೆ ಇಂದು ಮನೆಗೆ ಹೋಗುವಂತಿಲ್ಲ (ರೂಢಿ).

೨. ಕೈಗೂಡಿಸು ; ನೆರವೇರಿಸು ; ಕೈಗೂಡಿಸು : ಈಗ ನನ್ನ ಮನೋಭಿಲಾಷೆಯನ್ನು ಪೂರ್ತಿಗೊಳಿಸು (ಕುಕಿಸ. ೬೩).
[ಪೂರ್ತಿ$_1$+ಕೊಳ್$_1$+ —ಇಸು$_1$]

**ಪೂರ್ತಿಸು** (ಕ್ರಿ). ೧. ಮುಗಿಸು ; ಮುಕ್ತಾಯಗೊಳಿಸು : ಕುಂದದನುದಿನ ವಶನನಿದ್ರಾಮಂದತೆಯನುಳಿದಧಿಕಜಾಗ್ರತೆಯಿಂದ ವನವಾಸವನು ಪೂರ್ತಿಸಿ ಬಹುದು ನೀನು (ಅಸಂಗಾ. ೨-೦-೬೬) ; ಸಂಜೆಗಿಂತ ಮೊದಲೆ ಆಹಾರವನ್ನು ಪೂರ್ತಿಸಬೇಕೆಂಬುದು...ಸ್ವತಃ ಬಂಕೆಯನಿಗೇ ನೆನಪಾಗಲಿಲ್ಲ (ಪಿಂಚಾಂ.೧೦). ೨. ಈಡೇರಿಸು ; ಕೈಗೂಡಿಸು : ಚೆಲುವನ್ನೇ ಮೂರ್ತಿಸಿ ಬಯಕೆ ಗಳನು ಪೂರ್ತಿಸಿ ಬರಲಿ ದೇವ–ದ್ವೀಪಿನೀ ಬಾರೆ ಬಾ ಮನೋನ್ಮನೀ (ಹೃದಸ. ೨೦-೬). [ಪೂರ್ತಿ$_1$+—ಇಸು$_1$]

**ಪೂರ್ಬ** (ಗು). ೧. ಹಿಂದಿನ ; ಪ್ರಾಚೀನ : 'ಪೂರ್ಬಮರ್ಯಾದೆ' ಪರಾ. (ನಾ). ೨. ಮೂಡಣದಿಕ್ಕು ; ಪೂರ್ವದಿಕ್ಕು : 'ಪೂರ್ಬಾಭಿಮುಖ' ಪರಾ. [<ಸಂ. ಪೂರ್ವ]

**ಪೂರ್ಬಮರ್ಯಾದೆ** (ನಾ). ಹಿಂದಿನಿಂದ ನಡೆದು ಬಂದ ಕ್ರಮ ; ಪರಂಪರಾನುಗತವಾದ ನಿಯಮ : ಹಾರಮರವೂರ ಕೋಟೆಯ ಪೂರ್ಬ್ಬಮರ್ಯಾದೆಯ ಚತುಸ್ಸೀಮೆ ಗದ್ದೆ ಬೆದ್ದಲು ಸೀಮೆ . . . ಕೊಟ್ಟೆವು (ಎಕ. IX. ಬಂಗಳೂ. ೩೦–೦೨ ; 1340). [ಪೂರ್ಬ+ಮರ್ಯಾದೆ]

**ಪೂರ್ಬಾಭಿಮುಖ** (ನಾ). ಮೂಡಣದಿಕ್ಕಿಗೆ ಎದುರಾಗಿರುವುದು; ಪೂರ್ವಕ್ಕೆ ಅಭಿಮುಖವಾಗಿರುವುದು: ಸರೋವರದ ಪಶ್ಚಿಮತಟದಲ್ಲೂ ಪೂರ್ಬ್ಬಾಭಿಮುಖವಾಗಿಟ್ಟು ಶಿವಾಲಯಮಂ ಪ್ರದಕ್ಷಿಣಂ ಬಂದು ಶ್ರೀಸೋಮೇಶ್ವರದೇವರಂ ಕಂಡು (ಕಇಶಾ. XX. ೪೯-೪೯ ; ಸಂ. 1076). [<ಪೂರ್ವಾಭಿಮುಖ]

**ಪೂರ್ಬಾಯ** (ನಾ). ಒಂದು ಬಗೆಯ ತೆರಿಗೆಯಿಂದ ಬರುವ ಆದಾಯ : ನಾಡುಮರಿಯಾದೆಯುಳ್ಳಿ ಪೂರ್ಬ್ಬಾಯವೇನು ಬಂದಡೆ ಆ ಸ್ಥಾನದವರು ತೆಱುವರು (ಎಕ. III. ತಿರುಮ. ೦೦೦–೩೫ ; 1281) ; ಪಂಚಕಾರುಕ ಆಲೆದೆಱೆ ಮುಂಬಡಿದೆಱೆ ಚಟ್ಟೆದೆಱೆ ಕೊನೆದೆಱೆ ಪಾಣಸಂಬಳವೊಳಗಾದ ಪೂರ್ಬ್ಬಾಯ ಅಪೂರ್ಬ್ಬಾಯ . . . ಎಲ್ಲವನೂ ಕಾರುಣ್ಯಂಮಾಡಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಎಕ. VI. ಕಡೂರು. ೪೯–೪೨ ; 1291). [<ಪೂರ್ವಾಯ]

**ಪೂರ್ಬಿಗ, ಪೂರ್ವಿಗ, ಪೂರ್ವೀಕ** (ನಾ). (ವಂಶದ) ಹಿರಿಯ ; ಪೂರ್ವಿಕ : ಅಡಗಿನ ಬಸನಿಗರ್ಗ್ಗಂ ಕಳ್ಗುಡಿವವರ್ಗ್ಗಂ ವೃತ್ತಿಲೋಪ ಮೆಂಬಿ: ನುಡಿಯುಂ ಕಡೆಗಣ್ಗಣಿಸದೆ ಮೊದಲಿಂದೆ ಕಿಡಿವುದದಂ ಸ್ಥಾನ ಗುರುಗಳುಂ ಪೂರ್ಬ್ಬಿಗರುಂ (ಸೌಇಶಾ. IX-i. ೦೦೬-೩೯ ; ಸಂ. 1055). **ಪೂರ್ವಿಗ** : ಬಿಂಬಿರನೂರ ಪೂರ್ವ್ವಿಗರ ಗೊಲುಕಿಗಾವುಣ್ಡನ ಮಗ ಬೆಳಿಯಮ್ಮಗಾವುಣ್ಡನು (ಎಕ. IX (ಹ). ಹೊಸಕೋ. ೨೦೬–೯ ; ಸು. 900) ; ಜಗವರಿಯೆ ಪಮ್ಮನ್ನಯದ ಪೂರ್ವಿಗನಲಾ ನಹುಷಂಗೆ ಬಂದುಬ್ಬೆಗದ ಹದನಿದು (ಕುಭಾ.೪.೦೩-೬೦). **ಪೂರ್ವೀಕ**: ಅವರ ಪೂರ್ವೀಕರೆಲ್ಲ ಒಳ್ಳೆಯ ವಿದ್ವಾಂಸರಾಗಿದ್ದರು (ಚೂಡ). [< ಸಂ. ಪೂರ್ವಿಕ]

**ಪೂರ್ಯ** (ಗು). ೧. ತುಂಬಬೇಕಾದ. ೨. ತೃಪ್ತಿಗೊಳಿಸಬೇಕಾದ. ೩. ಅಧಿಕವಾದ ; ಅತಿಶಯವಾದ : ಗದ್ಗದಕಂಠವೆಸೆಯಲು ಪೂರ್ಯಹರುಷಸಮುದ್ಗತಾಶ್ರುಕಳಿಕೆಗಳೆಸೆಯಲು (ಐಸತ್ತಿ. ೬-೬) ; ಸ್ಥೈರ್ಯಶೌರ್ಯಂ ವರಕ್ಕೆಡೆಯಿಲ್ಲಿ ಪೂರ್ಯಧೈರ್ಯಂ . . . ಭೂಜನವೆಮಸ್ಕಾರ್ಯನೆಸಗಿದ (ಐಸತ್ತಿ. ೨೨-೨೪). [ಸಂ.]

**ಪೂರ್ವ** (ಗು). ೧. ಹಿಂದಣ ; ಪ್ರಾಚೀನ : ನಿಮ್ಮಯ ಪೂರ್ವಪೃಥ್ವೀಪಾಲರ್ದ್ದರು ಗುಪ್ತದಿಂದ ವಿರಾಟನಗರಿಯಲಿ (ಕುಭಾ.೬. ೨-೦). 'ಪೂರ್ವಕಾಲ' 'ಪೂರ್ವಾಚಾರ್ಯ' ಪರಾ. ೨. ಮೊದಲಿನ ; ಎಳೆಯ : 'ಪೂರ್ವವಯಸ್ಸು' ಪರಾ. ೩. ಇಂದಿಗೆ ಹಿಂದಿನ ಕಾಲಕ್ಕೆ ಸೇರಿದ : ಇಂದಿಗೆ ಮುಂಚಿನ ಸಮಯದ. ೪. (ಅನುಕ್ರಮದಲ್ಲಿ) ಮೊದಲನೆಯ ; ಅಗ್ರೇಸರ ; ಪ್ರಥಮ. ೫. ಮೂಡಣ ; ಮೂಡಣ ದಿಕ್ಕಿನಲ್ಲಿರುವ ; ಪೂರ್ವದಿಕ್ಕಿಗೆ ಸಂಬಂಧಿಸಿದ. (ನಾ). ೬. ಹಿಂದಣಕಾಲ ; ಪ್ರಾಚೀನಕಾಲ : ಖ್ಯಾತಸಲ್ಲಾ ರಾಯರಲಿ ನಳನಾತ ಗಾದಾಪತ್ತ ಬಲ್ಲ ಕೇಳಿ ಪೂರ್ವದಲಿ (ಕೂರಗಾ. ೩-೨-೦೩) ; ತ್ರಿಮೂರ್ತಿಗಳು . . . ಅತ್ರಿಯ ಸತಿಗನುಸೂಯದೇವಿಗೆ ಪುತ್ರರಾದರು ಪೂರ್ವದೊಳು (ಹರಿ. ೨-೪೬). ೭. ಹಿಂದೆ ನಡೆದು ಹೋದ ಸಂಗತಿ ; ಪೂರ್ವಕಾಲದ ಘಟನೆ : ನಂಬಿಯಣ್ಣಂ ಪೂರ್ವಮಂ ನೆನೆದು ಪರಿತಂದು ಚರಣದೊಳು ಬಿಳುತುಂ (ಸಂಬಸ. ೬–೨೨೬). ೮. ಮೊದಲು ಇರುವಂತಹುದು ; ಮೊದಲಿನದು : "ಆದಿಃ, ಪೂರ್ವಃ, ಪೌರಸ್ತ್ಯಃ, ಪ್ರಥಮಃ, ಆದ್ಯಃ–ಇ ಮೊದಲನೆ ದರ ಹೆಸರುಗಳು" (ಸಿದ್ಧಾಂತಿ. ೩೪೪) ; ವಿದಿತ ಸಮಾಸಂಗಳ ಪೂರ್ವದಕ್ಕರಂ ಹ್ರಸ್ವಮದೆಱ ಪರದಕ್ಕರಮಂತದು ದೀರ್ಘಂ (ಶಮದ. ೯). ೯. ಹಿಂದಿನ ಭಾಗ ; ಹಿಂಭಾಗ : ಆದೇಶವಾಗಿ ಮುಂಗಳ್ಗಾದರುವದು ನಿಲ್ಕುಮಿರ್ಗಮೆವುಗಂ ಪೂರ್ವಕ್ಕೆ (ಶಮದ. ೨೨೦). ೧೦. ಮೂಡಣದಿಕ್ಕು : "ಪ್ರಾಚಿಯೆನೆ ಪೂರ್ವನೈಂದ್ರಿಯೆನೆ ಮೂಡಲೆನಿಕ್ಕು" (ಕಂಗಾ. ೦೬-೨೯). ೧೧. ಹಿಂದಿನವನು , ಹಿರಿಯಂ : "ಪೂರ್ವಃ-೧ ಮೂಡಲಲ್ಲಿರುವಂಥಾದ್ದು, ಪೂರ್ವಕಾಲ, ಮೂಡಲಲ್ಲಿ ಹುಟ್ಟಿದವರು, ಪೂರ್ವಕಾಲದಲ್ಲಿ ಹುಟ್ಟಿದವರು" (ಸಿದ್ಧಾಂತಿ. ೪೦೩) ; ಅರಸ ದೂರಾಗತರ ಪೂರ್ವರ ಚಿರಸಮಾಶ್ರಿತರೆನಿಪ ಧರಣೀಸುರರ ಸಲಹಲು ಸಮನೆನಿಸುವೀ ಮೂಱು ತೆಱದವರ . . . ರಕ್ಷಿಸುತಲಿರಬೇಕು (ತಿಮ್ಮ. ೬-೩೬). ೧೨. [ಜೈನ] ಹನ್ನೆರಡನೆಯ ದೃಷ್ಟಿವಾದದ ಅಂಗಗಳಲ್ಲಿ ಬರುವ, ಶ್ರುತಾಂಗಗಳ ವಿವರಣೆಯನ್ನು ನೀಡತಕ್ಕ ಉತ್ಪಾದಪೂರ್ವ, ಅಗ್ರಾಯಣೀಯಪೂರ್ವ, ವೀರ್ಯಾನುವಾದಪೂರ್ವ, ಅಸ್ತಿನಾಸ್ತಿಪ್ರವಾದಪೂರ್ವ, ಜ್ಞಾನಪ್ರವಾದಪೂರ್ವ, ಸತ್ಯಪ್ರವಾದ ಪೂರ್ವ, ಆತ್ಮಪ್ರವಾದಪೂರ್ವ, ಕರ್ಮಪ್ರವಾದಪೂರ್ವ, ಪ್ರತ್ಯಾಖ್ಯಾನಪೂರ್ವ, ವಿದ್ಯಾನುವಾದಪೂರ್ವ, ಕಲ್ಯಾಣವಾದಪೂರ್ವ, ಪ್ರಾಣಾವಾಯಪೂರ್ವ, ಕ್ರಿಯಾವಿಶಾಲಪೂರ್ವ ಮತ್ತು ಲೋಕಬಿಂದುಸಾರಪೂರ್ವ ಎಂಬ ಹದಿನಾಲ್ಕು ಆಗಮಗ್ರಂಥಗಳು : ಪ್ರಥಮಾನುಯೋಗಮುಮಂ ಪದಿನಾಲ್ಕುಪೂರ್ವಂಗಳುಮನಯ್ದುಚೂಳಿಕೆಯುಮಂ . . . ಪೆಸರ್ಗೊಂಡು (ಆದಿಪು. ೩-೪೦೩) ; ಅಂಗಗಳಿಗಿಂತ ಮುಂಚೆ ಶಾಸ್ತ್ರಜ್ಞಾನವು ಶ್ರುತರೂಪದಿಂದ ಪ್ರಚಾರದಲ್ಲಿತ್ತು. ಆಗ ಅದು ಹದಿನಾಲ್ಕು ಪೂರ್ವಗಳ ರೂಪದಲ್ಲಿ ಪ್ರಚಲಿತವಾಗುತ್ತಿತ್ತು (ಶ್ರವಶಾ. ೦೩೯). 'ಚತುರ್ದಶಪೂರ್ವ' ಪರಾ. ೧೩. ದೀರ್ಘವಾದ ಒಂದು ಕಾಲಮಾನ : ಎಪ್ಪತ್ತುಲಕ್ಷದ ಐವತ್ತಾರುಸಾವಿರ ಕೋಟಿ ವರ್ಷ : ಲಕ್ಕೆಯ ಲೆಕ್ಕದೊಳೊಂದಿ ಪೂರ್ವಮಿರ್ಪತ್ತು ನಿರಂತರಂ ನಡೆದುದಾ ವೃಷಭಂಗೆ ಕುಮಾರಕಾಲದೊಳ್ (ಆದಿಪು. ೬-೩೦) ; ಎರಡುಲಕ್ಷಪೂರ್ವಂ ಪರಮಾಯುಷ್ಯಮಂ . . . ಧವಳವರ್ಣನುಮಾಗಿ ಬಳೆದಯ್ವತ್ತುಸಾಸಿರಪೂರ್ವಂ ಕುಮಾರಕಾಲಂ ಪೋಗೆ ರಾಜ್ಯಾಭಿಷೇಕಮಾಗಿ (ಅಜಿತಪು. ೦೫೯). ೧೪. ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ. ೧೫. [ಯೋಗ] ಉಚ್ಛ್ವಾಸ ನಿಶ್ವಾಸಗಳ ಒಂದು ಬಗೆ : "ನಾಸಿಕದಿ ನಿಂದಾನಿಲಂ ಕುಂಭಕಮೆನಿಕ್ಕು . . . ಅನವರತ ಸಂಚರಿಸೆ ಪೂರ್ವಮಕ್ಕುಂ" (ಕಂಗಾ. ೦೬–೦೪).

**ಪೂರ್ವಪೂರ್ವ** = ೧. ಹಿಂದು ಹಿಂದಿನ ; ಹಿಂದಿನದಕ್ಕಿಂತ ಹಿಂದಿರುವ : ಹೀಗೆ ಉತ್ತರೋತ್ತರಾವಸ್ಥೆಗಳಿಂದ ಉತ್ಪತ್ತಿವ್ಯವಹಾರಗಳು, ಪೂರ್ವಪೂರ್ವಾವಸ್ಥಾವಿನಾಶದಿಂದ ವಿನಾಶವ್ಯವಹಾರ (ಹಿಂದಶಾ. ೬೩). ೨. ಹಿರಿಯರಿಗೆ ಹಿರಿಯ; ಪುರಾತನರಿಗೆ ಪುರಾತನನಾದವನು;

ಆದಿಪುರುಷ ; ಪರಮೇಶ್ವರ : ನಿಜನಿರ್ಮಲಿತರೂಪನಂ ಪೂರ್ವ ಪೂರ್ವನಂ . . . ದೇವದೇವನಂ ಭಜಿಸಿದಳಗಜೆ ಬನದೊಳು (ಶ್ರೀವಿಜ. ೧೫-೨೬). **ಪೂರ್ವದ ಹಳಗನ್ನಡ** = ಹಳಗನ್ನಡಕ್ಕೂ ಹಿಂದಿನ ಅತಿ ಪ್ರಾಚೀನವಾದ ಕನ್ನಡಭಾಷೆಯ ರೂಪ : ಹಳಗನ್ನಡಕ್ಕೂ ಹಿಂದೆ ಕನ್ನಡಕ್ಕೆ ಒಂದು ರೂಪವಿತ್ತು. ಅದನ್ನು "ಪೂರ್ವದ ಹಳಗನ್ನಡ" ವೆನ್ನುತ್ತಾರೆ (ಶ್ರೀಶಿ. ೧). **ಪೂರ್ವಾಪರ** = ೧. ಮೊದಲಿನ ಮತ್ತು ಅನಂತರದ. ೨. ಹಿನ್ನೆಲೆಯಿಂದ ಪರಿಣಾಮದ ವರೆಗಿನ ಸಮಸ್ತ ವೃತ್ತಾಂತ; ಹಿಂದುಮುಂದಿನ ಸಮಗ್ರವಿಷಯ : ಎಲೆ ಮುನೀಶ್ವರ ಪೇಳು ಪೇಳೆನೆ ತಿಳುಹಿ ಪೂರ್ವಾಪರವ ರಾವಂಗೆ ಬಳಿಕಹಲ್ಯಾದೇವಿಯರ್ತಿಯ ಸಲಿಸಿ ಬೀಳ್ಕೊಂಡ (ತೊರಾ. ೧-೯೬). ಪೂರ್ವಾಪರಗಳನ್ನು ಅರಿಯದ ಮಾನವರ ಕಣ್ಣಿಗೆ ನಾವು ಹುಚ್ಚರು (ಶುಜಾ. ೧೫೬). ೩. ಹಿಂದೆ ಇರುವುದು ಮತ್ತು ಮುಂದಿರುವುದು : ಪರಿಗೀತಾರ್ಥಂ ಪೂರ್ವಾಪರದೊಳ್ ಬಗೆವಾಗಳೆಂದುಮೊಂದಱೊಳೊಂದುಂ ದೊರೆಕೊಂಡೊಂದದೊಡದು ದುಷ್ಕರಮೆ ವಿರುದ್ಧಾರ್ಥಮೆಂಬುದಾದು ದೋಷಂ (ಕಾವ್ಯಾ. ೧-೬೦). ೪. ಸಂಬಂಧ. **ಪೂರ್ವಾಪೂರ್ವ** = ಬಹಳ ಹಿಂದಿನ : ಪ್ರತಿಕ್ಷಣಂ ವಿಶರಾರುಗಳ್ ಚಿತ್ತಕ್ಷಣಂಗಳ್ ಪೂರ್ವಾಪೂರ್ವಚಿತ್ತವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು. ೮-೧೪೨ ವ). **ಪೂರ್ವೋತ್ತರ** = ಮೊದಲಿನ ಮತ್ತು ಅನಂತರದ; ಮುಂಚಿನ ಹಾಗೂ ಕೊನೆಯ : ಪೂರ್ವೋತ್ತರಕಾಲವ್ಯಾಪ್ತಿ ಜೀವತತ್ತ್ವವೊಂದುಂತೆಂಬರದೊಂದುಮಿಲ್ಲ (ಶಾಂತಿಪು. ೮-೧೪೨ವ) : ವಿದಿತಪೂರ್ವೋತ್ತರದ ಯದುವಂಶದ ಕಥಾವಿಸ್ತಾರವನು ಹೇಳಿದನು ದುಷ್ಯಂತನಲಿ ಶಾಕುಂತಲೆಯ ಕಥೆಸಹಿತ (ಕುಮ್ಯಾಭಾ. ೨-೧೮). [ಸಂ.]

**ಪೂರ್ವಂ** (ಅ). ಮುಂಚೆ; ಮುನ್ನ; ಮುಂಚಿತವಾಗಿ : "ಆದಿಃ, ಅಗ್ರಂ, ಪು(ರಾ)ರಂ, ಪೂರ್ವಂ, ಪ್ರಥಮಂ, ಪ್ರಾಕ್, ಪುರಃ —ಈ ೭ ಮುನ್ನಂ" (ಶಬ್ದಮ. ೧೧೭ ೨೨); ಪೂರ್ವಂ ದೇವೇಶನಿಂ ನಿರ್ಮಿತ ತುರಗಚಯಂ ರಾಯದೊಳ್ ಕಟ್ಟಿರುತ್ತುಂ . . . ಪರ್ವಿಕ್ಕಾ ಪಟ್ಟಣಾದ್ಯಂತರದೊಳ್ (ಜಾರಾಸ್ಯ. ೪-೦೨-೨). [ಸಂ.]

**ಪೂರ್ವಕ** (ಗು). ೧. ಮುಂಚಿನ ; ಮೊದಲಿನ ; ಹಿಂದಣ. ೨. ಸಹಿತವಾದ ; ಕೂಡಿಕೊಂಡ : ಆದರಪೂರ್ವಕ ವಿಜ್ಞಾಪನೆಗಳು (ಜಾಪ್ರ). (ನಾ). ೩. ಪೂರ್ವಜ ; ಪೂರ್ವಿಕ. ೪. ಸಹಿತವಾದುದು; ಕೂಡಿಕೊಂಡಿರುವುದು : ದೃಷ್ಟಿಗಳಿಗೆಯ್ದಿಸದವಂ ನಿಜದೃಷ್ಟಿಪೂರ್ವಕವಾಗಿ ನೋಡಲು ದೃಷ್ಟವಾ ತವನಱುಪಿದಪೆನೆಂದ ವರನಱಿಸುವವ (ಶಶಿಪು. ೩೧-೯೪). [ಸಂ.]

**ಪೂರ್ವಕಂಕಣ** (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ . . . ಪೂರ್ವಕಂಕಣ ಕಾವ್ಯಕಂಕಣ . . . ಜಯತಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳು (ಶಿತೀಶ. ೨೩೮). [ಸಂ.]

**ಪೂರ್ವಕಕ್ಷೆ** (ನಾ). ವಾದದಲ್ಲಿ ಮಂಡಿಸುವ ಮೊದಲನೆಯ ಆಕ್ಷೇಪಣೆ : ಇಂತೀ ಸ್ಥಲಂಗಳಲ್ಲಿ ಸ್ಥಿರೀಕರಿಸಿ ಆರೋಪಿಸಿ ಪೂರ್ವಕಕ್ಷೆಯಂ ಕಂಡು . . . ಉತ್ತರಕಕ್ಷೆಯು ಕೂಡಿದಲ್ಲಿ ಆಚಾಸ್ಥಲದ ಸೋಂಕಿಲ್ಲ (ಶೂನ್ಯಸಂ. ೧೩೯-೩೩೬); ಜಾತಿಭೇದಂಗಳಂ ಸಪ್ತಶೈವಂಗಳಂ ಪ್ರೀತಿಬಿಂದಾ ತ್ರಿಶೈವಂಗಳಂ ವೀರಶೈವಾತಿಶಯಕಂ ಪೂರ್ವಕಕ್ಷೆಯೊಳಗೆಂದವಂ ಬಿತ್ತರಿಸಿದಂ ದೇಶಿಕಂ (ಶೀಕ್ಷಾಪು. ೭-೨ ಸೂಚನ). [ಸಂ. ಪೂರ್ವಕಕ್ಷಾ]

**ಪೂರ್ವಕರ್ಮ** (ನಾ). ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮ ಮತ್ತು ಆದರ ಫಲ : ಪೂರ್ವಕರ್ಮವ ಕೆಡಿಸಿದನೆನ್ನ ಗುರು ಉಭಯಕರ್ಮವ ಬಿಡಿಸಿ ತೋಱಿದ ಶರಣರವರಿಂದ ಬದುಕಿದೆನು (ಸಳವ. III, ೧೩೫-೨೩೪); ಅಂಗವೆಂಬುದು ಪೂರ್ವಕರ್ಮಸಂಗಶೇಷವು ಪುಣ್ಯಪಾಪೋತ್ಪನ್ನಗನಿಳಯಂ ಸುಕೃತದುಃಕೃತಗತಿಗಳಾಶ್ರಯವು (ಬಸವಪು. ೩೧-೨೬). [ಸಂ. ಪೂರ್ವಕರ್ಮನ್]

**ಪೂರ್ವಕಲ್ಪನೆ** (ನಾ). ೧. ಮೊದಲು ಮಾಡಿದ ಕಲ್ಪನೆ; ಮುಂಚೆ ಮಾಡಿದ ಊಹೆ : ಅವರು ಬಹಳ ಅಹಂಕಾರಿಗಳೆಂಬುದು ನನ್ನ ಪೂರ್ವಕಲ್ಪನೆಯಾಗಿತ್ತು (ಜಾಪ್ರ). ೨. ಪುರಾಕೃತಕರ್ಮ : ಪೂರ್ವಕಲ್ಪನೆಯು ಮಾಡುವರಾರ್ (ಕಬೀರ್ಶ. ೧೧). [ಸಂ. ಪೂರ್ವಕಲ್ಪನಾ]

**ಪೂರ್ವಕಲ್ಯಾಣಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಕಲ್ಯಾಣಿ-೫೩ನೇ ಮೇಳಕರ್ತ ಗಮನಶ್ರಮದ ಜನ್ಯ. ಪ್ರಾಚೀನ ರಕ್ತಿರಾಗ. ಕರುಣಾರಸಪ್ರಧಾನರಾಗ (ಸಂಗೀಶಂ. ೧೫೫). [ಸಂ. ಪೂರ್ವಕಲ್ಯಾಣೀ]

**ಪೂರ್ವಕಾಲ** (ನಾ). ೧. ಮುಂಚಿನ ಕಾಲ; ಹಿಂದಿನ ಕಾಲ; ಪ್ರಾಚೀನ ಕಾಲ : ಪೂರ್ವಕಾಲದಲ್ಲಿ ಈ ಪ್ರಾಣಿಗಳು . . . ಕಮಲಗಳನ್ನು ಮುತ್ತಿ ಸುತ್ತುತ್ತಿದ್ದವು (ಗೀತ. ೨೦೭). ೨. [ವ್ಯಾಕ] ಭೂತಕಾಲ : ಇಕಾರ ಮುಮುಕಾರಮುಂ ಪೂರ್ವಕಾಲಕ್ರಿಯೆಯೊಳಕ್ಕುಂ (ಶಮದ. ಪ. ೨೯೭ ವೃತ್ತಿ). [ಸಂ.]

**ಪೂರ್ವಕೋಟಿ** (ನಾ). ೧. ಪೂರ್ವಪಕ್ಷ; ವಾದದ ಪ್ರಾರಂಭದಲ್ಲಿ ಮಂಡಿಸುವ ಪ್ರಶ್ನೆ. ೨. [ಜೈನ] ಅತಿದೀರ್ಘವಾದ ಒಂದು ಕಾಲಪ್ರಮಾಣ ; ಒಂದು ಕೋಟಿ ಪೂರ್ವವರ್ಷ : ಪೂರ್ವಕೋಟ್ಯಾಯುಸ್ಥಿತಿಯುಮಿರ್ಪತ್ತುಂ ಷಡ್ವಿಧೇತಿಪ್ರತತಿನಿಯಾತಪ್ಯನೂಱುಬಿಲ್ ಮರ್ತ್ಯಮಾತ್ರ್ಯೋನ್ನತಿಯೊಂದುಂ ತನ್ನೊಳೆಂಬೀ ಸ್ತುತಿವಡೆದುದು ಸೌಖ್ಯಾವಗಾಹಂ ವಿದೇಹಂ (ಶಂಕ್ರಪು. ೧-೭೬) ; ಪೂರ್ವಗಳು ಒಂದು ಕೋಟಿಯಾವರ್ಷಯಾದರೆ . . . ಪೂರ್ವಕೋಟಿ (ಪುರುಷ. ೧೬). [ಸಂ.]

**ಪೂರ್ವಕ್ರೀ** (ನಾ). ಹಿಂದೆ ನಡೆದು ಹೋದ ಸಂಗತಿ; ಪೂರ್ವಚರಿತ್ರೆ : ಶಾಸ್ತ್ರ ಬಲ್ಲಿತ್ತೆಂಬೆನೆ ಶಬ್ದಕ್ರೀ ಪುರಾಣ ಬಲ್ಲಿತ್ತೆಂಬೆನೆ ಪೂರ್ವಕ್ರೀ [ಪಾಠಾಂ. ಕ್ರಿ] (ಬಸವ. ೫೫೨) ; ಮುತ್ತು ರತ್ನಸಿತಕೆ ಘೃತಕೆ ಮತ್ತೆ ಪೂರ್ವಕ್ರೀ [ಪಾಠಾಂ. ಕ್ರಿಯೆ]ಗಳಂತೆ ನಿತ್ಯಮುಕ್ತಶರಣಗುಂಟೆ ಮತ್ತೆ ಪೂರ್ವಚರಿತವು (ಶಿಪೂ. ೦೨-೪೪೪). [<ಸಂ. ಪೂರ್ವಕ್ರಿಯಾ]

**ಪೂರ್ವಗಿರಿ** (ನಾ). ಮೂಡಣ ದಿಕ್ಕಿನ ಬೆಟ್ಟ : ಸೂರ್ಯನು ಹುಟ್ಟಿಬರುವ ಸ್ಥಾನವೆಂದು ನಂಬಲಾದ ಪರ್ವತ; ಉದಯಾಚಲ : ಪೂರ್ವಗಿರಿಯ ಶಿಖರಾಂತರವ ಪದ್ಮರಾಗದ ಕಳಸಮೆನೆ ಸೂರ್ಯಮಂಡಲಂ ರಂಜಿಸಿದುದು (ಶಿಶಿಪು. ೪೭-೪೭). [ಸಂ.]

**ಪೂರ್ವಗುಣ** (ನಾ). ಹಿಂದಿದ್ದ ಸ್ವಭಾವ. —ಪ್ರಕೃತಿ : ಆರಾಧ್ಯ ಪ್ರಾಣಲಿಂಗವೆಂದಱಿದು ಪೂರ್ವಗುಣವಳಿದು ಪುನರ್ಜಾತನಾದ ಬಳಿಕ ಸಂಸಾರಬಂಧುಗಳೆನ್ನವರೆಂದೊಡೆ ನಂಟಭಕ್ತಿ ನಾಯಿಂನರಕ (ಬಸವ. ೬೪). [ಸಂ.]

**ಪೂರ್ವಗ್ರಹ** (ನಾ). ಯಾವುದಾದರೊಂದ ವಸ್ತು, ವಿಷಯ ಅಥವಾ ವ್ಯಕ್ತಿಯು ವಿಷಯಕವಾಗಿ, ಪರಿಶೀಲನೆಗೆ ಮುಂಚಿತವಾಗಿಯೇ ಮಾಡಿಕೊಂಡ (ಅನುಕೂಲವಾದ ಅಥವಾ ಪ್ರತಿಕೂಲವಾದ) ಅಭಿಪ್ರಾಯ ; ಅವಿಚಾರಕಲ್ಪಿತಅಭಿಪ್ರಾಯಂ ; ಅಭಿನಿವೇಶ : ಅದು ಅನಾರ್ಯಪದ್ಧತಿ ಎಂಬ ಪೂರ್ವಗ್ರಹವನ್ನು ನಾವೇಕೆ ಒಪ್ಪಬೇಕು ? (ಸಂಸ್ಕೃ. ೫೨) ; ವಿಮರ್ಶಕನ ಮನಸ್ಸಿನ ಸ್ವಾಸ್ಥ್ಯವನ್ನು ಎಲ್ಲಕ್ಕಿಂತಲೂ ಮಿಗಿಲಾಗಿ ಕೆಡಿಸತಕ್ಕದ್ದು ಪೂರ್ವಗ್ರಹ (ವಿಮರ್ಶೆ. ೧೭).

**ಪೂರ್ವಗ್ರಹಪೀಡಿತ** = ಯಾವುದಾದರೊಂದು ವಸ್ತು, ವಿಷಯ ಅಥವಾ ವ್ಯಕ್ತಿಯ ವಿಷಯವಾಗಿ, ಪರಿಶೀಲನೆಗೆ ಮುಂಚಿತವಾಗಿಯೇ (ಅನುಕೂಲವಾದ ಅಥವಾ ಪ್ರತಿಕೂಲವಾದ) ಅಭಿಪ್ರಾಯವನ್ನು ಹೊಂದಿದ ವ್ಯಕ್ತಿ ; ಅವಿಚಾರಕಲ್ಪಿತಅಭಿಪ್ರಾಯವನ್ನುಳ್ಳವನು : ಪೂರ್ವಗ್ರಹಪೀಡಿತರಾದವರಿಂದ ಯಾವ ವಿಚಾರದಲ್ಲಿಯೂ ನಿರ್ದುಷ್ಟವಾದ ಪರಿಶೀಲನೆ ಸಾಧ್ಯವಿಲ್ಲ (ಜಾಪ್ರ). [ಸಂ.]

**ಪೂರ್ವಗ್ರಹಿಕೆ** (ನಾ). = ಪೂರ್ವಗ್ರಹ : ಆದರ್ಶವಾದಿ ಎಷ್ಟೋ ಸಲ ತನ್ನ ವಿಶ್ವದ ಪರಿಚಯವನ್ನ ಸಂಪೂರ್ಣವಾಗಿ ಮಾಡಿಕೊಂಡಿರುವುದಿಲ್ಲ. ಪೂರ್ವಗ್ರಹಿಕೆಯ ಬಣ್ಣದ ಕನ್ನಡಕದಲ್ಲಿಯೆ ಎಲ್ಲವನ್ನೂ ನೋಡುತ್ತಾನೆ (ರೀಕವ್ನ. ೭). [ಸಂ. ಪೂರ್ವಗ್ರಹಿಕಾ]

**ಪೂರ್ವಚಿಂತನೆ** (ನಾ). ಮೊದಲಿನ ಆಲೋಚನೆ : ಪೂರ್ವಚಿಂತನೆಯಿಂದ ಕಂಡು ಉತ್ತರಚಿಂತನೆಯಿಂದ ಖಂಡಿಸಿ . . . ಪುರಾಣಾಗಮಂಗಳೆಲ್ಲವೂ ನಾನಾರೆಂಬುದ ತಿಳಿವುದಕಿಕ್ಕಿದ ಭಿತ್ತಿ (ಸಕವ III. ೨೬೩--೫೦೩). [ಸಂ. ಪೂರ್ವಚಿಂತನಾ]

**ಪೂರ್ವಜ** (ಗು). ೧. ಮೊದಲು ಹುಟ್ಟಿದ ; ವಯಸ್ಸಿನಲ್ಲಿ ಹಿರಿಯ. ೨. ಬಹು ಹಿಂದಣ ಕಾಲಕ್ಕೆ ಸೇರಿದ ; ಪುರಾತನ ; ಪ್ರಾಚೀನ : ಬಹುಶಃ ಅವುಗಳ ಪೂರ್ವಜ ಕೀಟಗಳಿಗೆ ರೆಕ್ಕೆಗಳು ಇಲ್ಲದೆ ಇದ್ದಿರಬಹುದು (ಕೀಟಜೆ. ೦೮). (ನಾ). ೩. ಹಿರಿಯ ಸೋದರ ; ಅಣ್ಣ : "ಅಗ್ರಜಃ, ಪೂರ್ವಜಃ, ಶ್ರೇಷ್ಠಃ—ಈ ೩ ಅಣ್ಣಂ" (ಹಲಾಯು. ೮೩-೩೫೨). ೪. ವಂಶದಲ್ಲಿ ಹಿಂದೆ ಆಗಿಹೋದವನು ; ಮೂಲಪುರುಷ ; ಪೂರ್ವಿಕ : ಅವರ ಪೂರ್ವಜರಪ್ಪರಸುಗಳೊಳಗಯೋಧ್ಯಾಪುರಪರಮೇಶ್ವರನುಂ ಸತ್ಯಾದಿ ಗುಣಾಶ್ರಯವಲ್ಲಭನುಮತಿಪ್ರೌಢದಿಶಾದಂತಿಪ್ರಕಟಪ್ರಭಾವನಪ್ಪ ಸತ್ಯಾಶ್ರಯದೇವನಿಂ (ಗದಾಯು. ೨-೭ ವ) ; ನಮ್ಮ ಪೂರ್ವಜರ ಪುಣ್ಯದಿಂದ ಕೆಲವು ಸಂಪ್ರದಾಯ ಇನ್ನೂ ಬದುಕಿದ್ದು ನಮ್ಮ ವಿನೋದಪ್ರವೃತ್ತಿಗೆ ಆಗಾಗ ಅನುವು ಮಾಡಿಕೊಡುತ್ತವೆ (ಗಾಳಿಕ. ೪೫). ೫. (ಚಂದ್ರಲೋಕದಲ್ಲಿ ವಾಸಿಸುವ) ಪಿತೃ. [ಸಂ.]

**ಪೂರ್ವಜನ್ಮ** (ನಾ). ಹಿಂದಿನ ಜನ್ಮಗಳಲ್ಲಿ ಯಾವುದಾದರೊಂದು : ಪೂರ್ವಜನ್ಮನಿವೃತ್ತಿಯಾಗಿ ಗುರುಕರುಣವಿಡಿದಂಗೆ ಬಂಧನವೆಲ್ಲಿಯದೂ (ಬಸವ. ೬೭೦) ; ಆರೇನು ಮಾಡುವರು ಆರಿಂದಲೇನಹುದು ಪೂರ್ವಜನ್ಮದ ಕರ್ಮವಿಧಿ ಬೆನ್ನ ಬಿಡದು (ಪುರಂದ. ೨-೬೦ ಪಲ್ಲವಿ). [ಸಂ. ಪೂರ್ವಜನ್ಮನ್]

**ಪೂರ್ವತತ್ತ್ವ** (ನಾ). ಮೊದಲಿನ ಸಂಬಂಧ ; ಪೂರ್ವಾಶ್ರಯ : ಪೂರ್ವತತ್ತ್ವ ಬಿಟ್ಟುದು ಭಕ್ತಸ್ಥಲ ಮಧ್ಯದ ಭಾವವ ಬಿಟ್ಟುದು ಮಾಹೇಶ್ವರಸ್ಥಲ ತ್ರಿವಿಧವ ಕೂಟವ ಬಿಟ್ಟುದು ಪ್ರಸಾದಿಸ್ಥಲ (ಶೂನ್ಯಸಂ. ೦೩೯-೫೩೬). [ಪೂರ್ವ + ತತ್ತ್ವ]

**ಪೂರ್ವದಿಕ್ಕು** (ನಾ). ಮೂಡಣ ದೆಸೆ : ಈ ಕೋಲರು ಕೇವಲ ಭಾರತದ ಪೂರ್ವದಿಕ್ಕಿನಲ್ಲಿ ಮಾತ್ರ ನೆಲಸಿದಂತೆ ತೋರುತ್ತದೆ (ದ್ರಾವಿಏ. ೩೦) ; ನಾವು ಪೂರ್ವದಿಕ್ಕಿನ ಕಡೆ ನಮ್ಮ ಮುಖ ತಿರುಗಿಸೋಣ . . . ಚಂದ್ರನು ನಮ್ಮ ಗಮನವನ್ನು ಕೂಡಲೆ ಸೆಳೆಯುತ್ತಾನೆ (ನಕ್ಷತ್ರ. ೪). [ಪೂರ್ವ + ದಿಕ್ಕು]

**ಪೂರ್ವದಿಕ್ಪತಿ** (ನಾ). ಮೂಡಣ ದಿಕ್ಕಿನ ಒಡೆಯ ; ಇಂದ್ರ : "ಇಂದ್ರಃ . . . ಪೂರ್ವದಿಕ್ಪತಿಃ . . . ಮೇಘವಾಹನಃ —ಈ ೩೯ ದೇವೇಂದ್ರನ ಪೆಸರ್" (ಹಲಾಯು. ೦೦-೫೩). [ಸಂ.]

**ಪೂರ್ವದೀರ್ಘ** (ನಾ). [ವ್ಯಾಕ] ಹಿಂದಿನ ಸ್ವರ ದೀರ್ಘವಾಗಿರುವ ಶಬ್ದ : ಪೂರ್ವದೀರ್ಘವಾದೊಡಂ ಅವ್ಯಯಮಾದೊಡಂ ಅನೇಕಾಕ್ಷರಮಾದೊಡಂ ದ್ವಿತ್ವಮಿಲ್ಲ (ಶಮ. ೬೯ ವೃತ್ತಿ). [ಸಂ.]

**ಪೂರ್ವದೇವ** (ನಾ). ೧. ಹಿಂದೆ ದೇವತೆಗಳಾಗಿದ್ದು, ಅನ್ಯಾಯ, ಅಕೃತ್ಯಗಳಿಂದ ಹಾಗು ದ್ವೇಷದಿಂದ ದೇವತ್ವವನ್ನು ಕಳೆದುಕೊಂಡ ವರ್ಗ. ೨. ದೇವತೆಗಳ ಶತ್ರು ; ರಾಕ್ಷಸ : "ಅಸುರಃ, ದಾನವಃ . . . ಪೂರ್ವದೇವಃ, ಶುಕ್ರಶಿಷ್ಯಃ, ಪಾತಾಲನಿಲಯಾಃ (ಸ್ಮೃತಾಃ)—ಈ ೮ ಅಸುರರ ಪೆಸರ್" (ಹಲಾಯು. ೨-೫) ; ಅಮೋಘಯುಂ ಸಕಲನೃಪಕುಲಜ್ಯಾಯನಾಂ ಪೂಜನೀಯುಂ ಸಮನಾವಂ ಪೂರ್ವದೇವಂಗೆನಗೆ (ಜಗಂ. ೦೫-೬೦). ೩. ಅನಾದಿದೇವ ; ಪುರಾತನಪುರುಷ ; ವಿಷ್ಣು. ೧, ೩ : ಈ ಮಹಾಪುರುಷಂ . . . ಸಪ್ತಾರ್ಚಿಯಾಗಿಯುಂ ಹುತವಹನಲ್ತು ಸಮವರ್ತಿಯಾಗಿಯುಂ ದಕ್ಷಿಣದಿಕ್ಪಾಲಕನಲ್ತು ಪೂರ್ವದೇವನಾಗಿಯುಂ ನೈಋತನಲ್ತು (ಜಗಂ. ೮-೦೦ ವ). [ಸಂ.]

**ಪೂರ್ವದ್ರಾವಿಡ** (ನಾ). ದ್ರಾವಿಡಭಾಷೆಗಳಿಗೆ ಮೂಲವಾಗಿ ಇದ್ದಿರಬಹುದಾದ ಪ್ರಾಚೀನ ಭಾಷಾರೂಪ ; ಮೂಲದ್ರಾವಿಡ: ಕ್ರಿ.ಪೂ. ೫೦೦—೬೦೦ ವರುಷಗಳಿಂದಲೂ ಈ ದ್ರಾವಿಡಭಾಷೆ ಬೆಳೆದುಬಂದಿರಬೇಕೆಂದು ಹೇಳಲು ಸಾಧ್ಯವಿದೆ. ಆಗಿನ ದ್ರಾವಿಡಭಾಷೆಯನ್ನು ಮೂಲದ್ರಾವಿಡ ಅಥವಾ ಪೂರ್ವದ್ರಾವಿಡ ಅಥವಾ ಪ್ರಾಕ್‌ದ್ರಾವಿಡವೆಂದು ಕರೆಯಲಾಗಿದೆ (ದ್ರಾವಿಏ. ೩೨). [ಸಂ.]

**ಪೂರ್ವಧರ** (ನಾ). [ಜೈನ] ಪೂರ್ವಗಳೆಂಬ ಆಗಮಗಳನ್ನು ಚೆನ್ನಾಗಿ ತಿಳಿದವನು ; ಚತುರ್ದಶಪೂರ್ವಗಳಲ್ಲಿ ಪಾರಂಗತನಾದವನು : ಎಣ್ಬತ್ತುನಾಲ್ವರ್ ಗಣಧರದೇವರುಂ ನಾಲ್ಸಾಸಿರದೇೞ್ನೂಱಯ್ವತ್ತಿಂಬರ್ ಸಕಲಪೂರ್ವಧರರುಂ ನಾಲ್ಸಾಸಿರದೆಣ್ನೂಱಯ್ವತ್ತಿಂಬರ್ ಶಿಕ್ಷಕರುಂ (ಆದಿಪು. ೦೬-೯೦ ವ) ; ಇರ್ಪತೆಣ್ಬರ್ ಗಣಧರರುಂ ಆಯ್ನೂಱಯ್ವತ್ತಿಂಬರ್ ಪೂರ್ವಧರರುಂ (ಮಲ್ಲಿಪು. ೦೪-೦೬೯). [ಸಂ.]

**ಪೂರ್ವನಾಡಿ** (ನಾ). ದೇಹದೊಳಗಿನ ನಾಡಿಗಳಲ್ಲಿ ಒಂದು : ಮಯೂರನಾಡಿ . . . ಉತ್ತರನಾಡಿ ಪೂರ್ವನಾಡಿ ಪಶ್ಚಿಮನಾಡಿ ಗಜಗಮನನಾಡಿ, ಅಚ್ಚೊತ್ತುನಾಡಿ . . . ಸಂತೋಷನಾಡಿ ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣಪರ್ಣದಂತೆ (ಶರಶ. ೪೮೦). [ಸಂ.]

**ಪೂರ್ವನಿರ್ದಿಷ್ಟ** (ಗು). ಮುಂಚೆ ನಿಶ್ಚಯಿಸಿದ : ಮೊದಲು ನಿರ್ಧಾರಮಾಡಿದ ; ಪೂರ್ವನಿಶ್ಚಿತ : ಈ ಷಡ್ದರ್ಶನಗಳೂ ಅಲ್ಲಲ್ಲಿ ತಮ್ಮ ಪೂರ್ವನಿರ್ದಿಷ್ಟಉದ್ದೇಶದಿಂದ ಭಿನ್ನವಾದ ಅಡ್ಡದಾರಿ ಹಿಡಿದಂತೆ ಕಾಣುತ್ತದೆ (ಭಾರದ. ೦೨೦). [ಸಂ.]

**ಪೂರ್ವನಿರ್ದೇಶಿತ** (ಗು). ಮುಂಚೆ ತೋರಿಸಿದ,—ತಿಳಿಸಿದ : ಇವೆಲ್ಲವನ್ನೂ ಪೂರ್ವನಿರ್ದೇಶಿತ ರೂಪದಲ್ಲಿ ನಡೆಸಬೇಕು (ಶಿಕ್ಷದ. ೬೩೭). [ಸಂ.]

**ಪೂರ್ವನಿಶ್ಚಯ** (ನಾ). ಮೊದಲೇ ಮಾಡಿದ ನಿರ್ಣಯ ; ಮುಂಚಿತವಾಗಿ ಮಾಡಿಕೊಂಡ ತೀರ್ಮಾನ : ಅವರು ಪೂರ್ವನಿಶ್ಚಯವಿಲ್ಲದೆ ಯಾವ ಕಾರ್ಯದಲ್ಲೂ ತೊಡಗುವುದಿಲ್ಲ (ಕೂ). [ಸಂ.]

**ಪೂರ್ವನಿಶ್ಚಿತ** (ಗು). ೧. ಮೊದಲೇ ನಿರ್ಧಾರವಾದ,—ನಿಗದಿಯಾದ. (ನಾ). ೨. ಮೊದಲೇ ನಿರ್ಣಯಿಸಿದುದು : ಅನುಭವವನ್ನ ಹುಡುಕಿಕೊಂಡು ಹೋದರೆ, ಸಿಗೋದು ಪೂರ್ವನಿಶ್ಚಿತವಾದದ್ದು (ಹೊಸಕ್ಷ. ೨೪೬). [ಸಂ.]

**ಪೂರ್ವನೇತ್ರ** (ನಾ). ಕಣ್ಣಿನ ಕುಣಿಕೆ : "ಅಕ್ಷಿಮೂಲಂ ಪೂರ್ವನೇತ್ರಮೆಂಬೆ ಮೊದಲಗಣ್" (ಶಂಗಂ. ೯೪-೩). [ಸಂ.]

**ಪೂರ್ವಪಕ್ಷ** (ನಾ). ೧. ತಿಂಗಳಿನ ಮೊದಲನೆಯ ಹದಿನೈದು ದಿನಗಳ ಅವಧಿ ; ಶುಕ್ಲಪಕ್ಷ. ೨. ವಾದವನ್ನು ಮಂಡಿಸುವ ಮೊದಲ ಭಾಗ. ೩. ಶಾಸ್ತ್ರಸಿದ್ಧಾಂತವನ್ನೊ, ಪ್ರಮೇಯವನ್ನೊ ವಿರೋಧಿಸುವುದಕ್ಕಾಗಲಿ ಅಥವಾ ಸಂಶಯಗಳ ಪರಿಹಾರಕ್ಕಾಗಲಿ ಹೂಡುವ ಪ್ರಶ್ನಸಹಿತವಾದ ಯುಕ್ತಿ : ಇಲ್ಲಿಗೇವಿಧೇಯಂ ಮಾಟ್ಪುದೆಂದು ಪೂರ್ವಪಕ್ಷದ ಪಕ್ಷಸಿದ್ಧಿಯು ವಿಸ್ತಾರಕ್ಕವಕಾಶಮಪ್ಪಂತು ನುಡಿದು (ಶಾಂತಿಪು. ೨-೩೫ ವ) ; ಪೂರ್ಣವಾಗಿ ವಿಚಾರ ಮಾಡದೆ ಇರುವಾಗ ತೋರುವ ಪಕ್ಷವೇ ಪೂರ್ವಪಕ್ಷವು (ಬೃಹಭಾ. ೩೭-೨) ; ಅವಳು ಹೀಗೆ ತನ್ನ ಇಡೀ ಪೂರ್ವಪಕ್ಷವನ್ನೇ . . . ವಿರೋಧಿಸುತ್ತಾಳೆಂದು ಅವನು ಬಗೆದಿರಲಿಲ್ಲ (ದೂರಸ. ೨೬೯). ೪. ಹೇಳಿಕೆ; ಪ್ರತಿಪಾದನೆ. ೫. ವಿರುದ್ಧವಾದ ಹೇಳಿಕೆ : ನಿಮ್ಮಯ ಪೂರ್ವಪಕ್ಷಮುಮಂಗಾದುದೇ ಮಲಂ ಸಿದ್ಧಾಂತಂ (ಗದಾಯು. ೪-೮). [ಸಂ.]

**ಪೂರ್ವಪಕ್ಷಿ** (ನಾ). ಪೂರ್ವಪಕ್ಷವನ್ನು ಮಂಡಿಸುವವನು: ಸಿದ್ಧಾಂತವನ್ನು ವಿರೋಧಿಸಿ ಪ್ರಶ್ನಿಸುವವನು : ಸಿದ್ಧವಸ್ತುವು ಪ್ರತ್ಯಕ್ಷಾದಿಗಳಿಗೆ ವಿಷಯವಾಗುವುದರಿಂದ ಶಾಸ್ತ್ರಕ್ಕೆ ಅನುವಾದ ತತ್ತ್ವವು ಬರುವುದೆಂಬ ದೋಷವನ್ನು ಇಲ್ಲಿ ಪೂರ್ವಪಕ್ಷಿಯು ತೆಗೆದಿರುತ್ತಾನೆ (ಬ್ರಿಸೂಶಾ. ೨೨ ೮೪). [ಸಂ. ಪೂರ್ವಪಕ್ಷಿನ್]

**ಪೂರ್ವಪದ** (ನಾ). [ವ್ಯಾಕ] (ಸಮಾಸದಲ್ಲಿ) ಮೊದಲು ಇರುವ ಪದ : ಪರಪದಪೂರ್ವಂ ದ್ವಿತ್ವಾಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ (ಶಬ್ದಾ. ೫೯); ಉತ್ತರಪದವೆಂದರೆ ಮುಂದೆ ನಿಲ್ಲುವ ಪದ; ಹಿಂದೆ ನಿಲ್ಲುವ ಪದಕ್ಕೆ 'ಪೂರ್ವಪದ' ಎಂದು ಹೆಸರು. 'ಮಳೆಗಾಲ' ಎಂಬುವರಲ್ಲಿ 'ಮಳೆ' ಪೂರ್ವಪದ; 'ಕಾಲ' ಉತ್ತರಪದ (ಶುದ್ಧಮು ೨೦ ೬೩೪). [ಸಂ.]

**ಪೂರ್ವಪರಾಮರ್ಶೆ** (ನಾ). ಹಿಂದಿನ ಸಂಗತಿಯ ಸ್ಮರಣೆ; ಪೂರ್ವಸ್ಮರಣೆ : ಆಯೆಂಬುದು ಪೂರ್ವಪರಾಮರ್ಶೆಗವೊದವುಗುಂ (ಶಬ್ದ. ೦೬೯). [ಸಂ. ಪೂರ್ವಪರಾಮರ್ಶ]

**ಪೂರ್ವಪರಿಷ್ಕಾರ** (ನಾ). ಮುಂಚೆ ಮಾಡಿಕೊಳ್ಳಬೇಕಾದ ಅವಶ್ಯಕ ಬದಲಾವಣೆ, ಹೊಂದಾಣಿಕೆ, ಸಿದ್ಧತೆ ಮೊದಲಾದ ಕಾರ್ಯ : ಭಿನ್ನಶ್ರುತಿಪ್ರಮಾಣವಿರುವ ವಾದ್ಯಸಮೂಹವು ಪ್ರಬಲವಾಗಿ ರಚನೆಗಳಲ್ಲಿಯೂ, ಪ್ರಯೋಗದಲ್ಲಿಯೂ ಪೂರ್ವಪರಿಷ್ಕಾರದ ಅವಶ್ಯಕತೆಯು ಹೆಚ್ಚಿ . . . ಸಂಗೀತವು ಒಂದು ಮೂರುಕಾಲಿನ ಓಟದಂತೆ (Three legged race) ಆಗಿದೆ (ಶಾಕರ. ೩೩೬). [ಸಂ.]

**ಪೂರ್ವಪರ್ವತ** (ನಾ). ಮೂಡಣದಿಕ್ಕಿನ ಬೆಟ್ಟ; ಸೂರ್ಯನು ಹುಟ್ಟುವ ಪರ್ವತ ; ಉದಯಾಚಲ : "ಉದಯಃ, ಪೂರ್ವಪರ್ವತಃ– ೨ ಉದಯಪರ್ವತದ ಹೆಸರುಗಳು. ಮೂಡಲಲ್ಲಿ ಸೂರ್ಯನು ಮೂಡುವುದಕ್ಕೆ ಸಂಧ್ಯಾಸ್ಥಾನವಾದ ಪೂರ್ವಾದ್ರಿ" (ಸಿದ್ಧಾಂತಿ. ೦೦೬). [ಸಂ.]

**ಪೂರ್ವಪುಣ್ಯ** (ನಾ). ಮುಂಚಿನ ಜನ್ಮಗಳಲ್ಲಿ ಗಳಿಸಿದ ಪುಣ್ಯ : ಕನ್ನಡದೊಳಗೆನಗಭಿರುಚಿ ಬೆಳೆಯಿತು ಪೂರ್ವಪುಣ್ಯದ ಫಲದ ತೆರದೆ (ಶಂಜಾಕ. ೨೬.೪). [ಸಂ.]

**ಪೂರ್ವಪ್ರಕೃತಿ** (ನಾ). ಮೊದಲಿನ ಸ್ಥಿತಿ; ಮುಂಚಿನಿಂದಲೂ ಬಂದ ಸಹಜಸ್ಥಿತಿ ; ಅರಳಿಚದೆ ಮಧುಮಾಸ ಮಾಣಲಿ ಮರುಷಕುತುವೇ ಸಾಕು ಜಾತಿಗೆ ಜಡದರಿವಾಗಿನ್ನೇನು ಪೂರ್ವಪ್ರಕೃತಿ ವನವಾಸ (ಕುಚ್ಚಾ೪. ೦೬ ೩೨). [ಸಂ.]

**ಪೂರ್ವಪ್ರಜ್ಞೆ** (ನಾ). ಮುನ್ನರಿವು ; ಮುಂಗಾಣ್ಕೆ; ಪೂರ್ವಸೂಚನೆ: ಸ್ನಾನ ಮಾಡುವಾಗ, ದೇವರ ಪೂಜೆಗೆ ಲೋಟಾಗ ಕೇಳಲಿರುವ ಯಾವುದೋ ಕೆಡಕಿನ ಪೂರ್ವಪ್ರಜ್ಞೆಯಿಂದ ಎಂಬಂತೆ ಜೀವ ನಡುಗಿತು (ಕುಕೂರುಚಾ. ೦೯). [ಸಂ. ಪೂರ್ವಪ್ರಜ್ಞಾ]

**ಪೂರ್ವಪ್ರತ್ಯಯ** (ನಾ). [ವ್ಯಾಕ]ಶಬ್ದಗಳ ಆದಿಯಲ್ಲಿ ಸೇರಿ ಪದವನ್ನು ಸಿದ್ಧಗೊಳಿಸುವ ಪ್ರತ್ಯಯ; ಉಪಸರ್ಗ: ಪೂರ್ವಪ್ರತ್ಯಯ (ಪ್ರಿಫಿಕ್ಸ್), ಪರಪ್ರತ್ಯಯ(ಸಫಿಕ್ಸ್), ಅಂತಃಪ್ರತ್ಯಯ(ಇನ್‌ಫಿಕ್ಸ್) (ಶಂಕೋ I. ೬೮೩). [ಸಂ.]

**ಪೂರ್ವಫಲ್ಗುನಿ** (ನಾ). ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೊಂದನೆಯದು. [ಸಂ. ಪೂರ್ವಫಲ್ಗುನೀ]

**ಪೂರ್ವಭವ** (ನಾ). =ಪೂರ್ವಜನ್ಮ ; ಶಾರ್ದೂಲನ ಪೂರ್ವಭವವೃತ್ತಾಂತಮುಮಂ . . . ಅಱಿಪಿ (ಆದಿಪು. ೫ ೧೧ ವ); ನಿನ್ನ ತಪಕ್ಕೆ ಮೆಚ್ಚಿ ಪರಮಿತ್ರಂ ಶ್ರೀವರಂ ತಾನೆ ನಂದನನಪ್ಪಂ ನಿನಗೆಂದು ಪೂರ್ವಭವದೊಳ್ (ಶಾಂಪು. ೨-೬೯). [ಸಂ.]

**ಪೂರ್ವಭಾಗ** (ನಾ). ೧. ಮೊದಲನೆಯ ವಿಭಾಗ—ಖಂಡ : ವೇದದಲ್ಲಿ ಪೂರ್ವಭಾಗ, ಉತ್ತರಭಾಗವೆಂದು ಎರಡು ವಿಭಾಗ (ಹಿಂದಶಾ. ೨೪೩). ೨. ಮೂಡಣದಿಕ್ಕಿಗಿರುವ ಪ್ರದೇಶ ; ಪೂರ್ವಪಾರ್ಶ್ವ : ಬೆಟ್ಟದ ಪೂರ್ವಭಾಗದಲ್ಲಿ ಒಂದು ಆಳವಾದ ಕಮ್ಮರಿಯಿದೆ (ದೂ೦). ೩. ಮುಂಭಾಗ; ಮುಂದಿನ ಪ್ರದೇಶ. [ಸಂ.]

**ಪೂರ್ವಭಾವಿ** (ಗು). ೧. ಮುಂಚೆ ಇರುವ ; ಮೊದಲೇ ಇರುವ. ೨. ಮುಂಚೆ ಆಗಬೇಕಾದ ; ಮೊದಲೇ ಮಾಡಬೇಕಾದ: ಈ ಕೆಲಸಕ್ಕೆ ಕೆಲವು ಪೂರ್ವಭಾವಿ ಸಿದ್ಧತೆಗಳನ್ನು ಮಾಡುವುದು ಅಗತ್ಯ (ಜುದ್ರ೪. ೩೯). (ನಾ). ೩. ಮೊದಲನೆಯದು ; ಮುಂಚಿತವಾದುದು : ಪ್ರತಿಷ್ಠಾಪನೆಗೆ ಪೂರ್ವಭಾವಿಯಾದ ವಿಧಿಗಳೆಲ್ಲ ಸಾಂಗವಾಗಿ ನಡೆದುವು (ಕಾಂಕಲಾ. ೦೪೯) ; ಓದು ಬರಹ, ಲೆಕ್ಕಗಳನ್ನು ಹೇಳಿಕೊಡದಿದ್ದರೂ ಅವುಗಳನ್ನು ಕಲಿಯಲು ಆವಶ್ಯಕವಾದ ಪೂರ್ವಭಾವಿಯಾದ ಶಿಕ್ಷಣವೀಯಬಹುದು (ಶಿಕ್ಷದ. ೦೦೮). [ಸಂ. ಪೂರ್ವಭಾವಿನ್]

**ಪೂರ್ವಭಾಷಿ** (ನಾ). (ಗೌರವಸೂಚಕವಾಗಿ) ಬೇರೆಯವರನ್ನು ತಾನೇ ಮೊದಲು ಮಾತನಾಡಿಸುವ ವ್ಯಕ್ತಿ. [ಸಂ. ಪೂರ್ವಭಾಷಿನ್]

**ಪೂರ್ವಮರ್ಯಾದೆ** (ನಾ). ಹಿಂದಿನಿಂದ ನಡೆದು ಬಂದ ಕ್ರಮ ; ಸಂಪ್ರದಾಯ : ನಾಲ್ಕು ನಾಡ ಸುಂಕಮುಂ ಪೂರ್ವ್ವಮರ್ಯ್ಯಾದೆಯುಂ ಪ್ರತಿಪಾಳಿಸಿ ಕೊಟ್ಟ ಸಾಸನಂ (ಕಶಾ. ೦೦೩-೦೯-೨೫; 1057). [ಸಂ. ಪೂರ್ವಮರ್ಯಾದಾ]

**ಪೂರ್ವಮೀಮಾಂಸೆ** (ನಾ). [ತತ್ತ್ವಶಾ] ಸಾಂಖ್ಯ, ವೈಶೇಷಿಕ ಮೊದಲಾದ ಆರು ದರ್ಶನಗಳಲ್ಲಿ ಒಂದು ; ಕರ್ಮಮೀಮಾಂಸೆ ; ವೇದಗಳಲ್ಲಿ ಉಕ್ತವಾದ ಕರ್ಮಾಚರಣೆ ಹಾಗೂ ವೇದಪಾಠಗಳನ್ನು ಕುರಿತ ನಿರ್ಣಯಗಳನ್ನೊಳಗೊಂಡು ಜೈಮಿನಿಋಷಿಗಳಿಂದ ರಚಿತವಾದ ದರ್ಶನ : ಪೂರ್ವಮೀಮಾಂಸೆಯು ತಾತ್ಪರ್ಯನಿರ್ಣಾಯಕವಾದ ಉಪಕ್ರಮದಿ ಷಡ್ವಿಧಲಿಂಗಗಳಂ ವೇದವಾಕ್ಯವಿಚಾರಪೂರ್ವಕಮಾಗಿ ಜ್ಯೋತಿಷ್ಟೋಮಾದಿ ಯಾಗಪ್ರಮುಖವಿಧಾನಕ್ರಮಮಂ ನಿರ್ವಹಿಸುವುದು ಱಿಂದ ಕರ್ಮಕಾಂಡವೆನಿಪುದು (ಏಪೀಶ. ೯) ; ಜೈಮಿನಿಸೂತ್ರಕ್ಕೆ ಪೂರ್ವಮೀಮಾಂಸೆ, ಧರ್ಮಮೀಮಾಂಸೆಯೆಂದೂ, ಬಾದರಾಯಣಸೂತ್ರಕ್ಕೆ ಉತ್ತರಮೀಮಾಂಸೆ, ಬ್ರಹ್ಮಮೀಮಾಂಸೆಯೆಂದೂ ವ್ಯವಹಾರ (ಹಿಂದಶಾ. ೦೯೪). [ ಸಂ. ಪೂರ್ವಮೀಮಾಂಸಾ ]

**ಪೂರ್ವರಂಗ** (ನಾ). ೧. ಪೂರ್ವಸಿದ್ಧತೆ ; ಪೂರ್ವಭಾವಿವ್ಯವಸ್ಥೆ : ಜಿನಜನ್ಮಾಭಿಷವಂ ನರ್ತನದಿಂ ಸೊಗಯಿಸುವುದಂತದಂ ಸುರರಾಜಂ ಪುನರುಕ್ತಂ ಮಾಡೆ ಜಿನೇಂದ್ರನ ವಿಹರಣಪೂರ್ವರಂಗಮೇನೊಪ್ಪಿದುದೋ (ಶಾಂತಿಪು. ೦೨.೦೬). ೨. [ನಾಟ್ಯ] ನೃತ್ಯ ಅಥವಾ ನಾಟಕವು ಆರಂಭವಾಗುವುದಕ್ಕೆ ಪೂರ್ವಭಾವಿಯಾಗಿ ರಂಗಸ್ಥಳದಲ್ಲಿ ನಡೆಸತಕ್ಕ ರಂಗಪೂಜೆ, ನಾಂದಿ ಮೊದಲಾದ ಕಾರ್ಯಕ್ರಮ : ಶುದ್ಧಚಿತ್ರ[ಶಾಂ. ಪವಿತ್ರ, ವಿಚಿತ್ರ]ಮೆಂಬ ಪೂರ್ವರಂಗಪ್ರಸಂಗದೊಳ್ ಜರ್ಜರಪೂಜಾಮಂಗಲಪಠೋಚ್ಚಾರಣಪುಷ್ಪಾಂಜಲಿವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ (ಆದಿಪು. ೬-೦೦೩ ವ) ; ಪೂರ್ವರಂಗಪ್ರಸಂಗದೊಳುರ್ವಿಂದಂ ಕೂಡೆ ಚೆಲ್ಲಿ ಪುಷ್ಪಾಂಜಳಿಯಂ ಸರ್ವಜ್ಞಂಗೆಱಗಿ ಮುಂದಂ ಪರ್ವಿನ್ನಂ ನಡೆದು ಬಂದು ರಂಗಮಲೊಕ್ಕಂ (ಚಾರಪು. ೯.೦೦) ; ಪೂರ್ವರಂಗವೆಂದರೆ ನಾಟಕದ ಕಥೆ ಕ್ರಮವಾಗಿ ಆರಂಭವಾಗುವುದಕ್ಕೆ ಮುಂಚೆ ರಂಗಸ್ಥಾನದಲ್ಲಿ ನಟರು ನಡಸ ತಕ್ಕ ಕಾರ್ಯಗಳು (ಕೃಬಿಪ. ೨೦೨). ೩. ಮೊದಲನೆಯ ನೃತ್ಯ : " ಮೊದಲ ನಾಟ್ಯಮಂ ಪೂರ್ವರಂಗಮೆಂಬುದು " (ಹಠಾಯು. ೦೬-೯೩). [ ಸಂ. ]

**ಪೂರ್ವರಾಗ** (ನಾ). [ಕಾವ್ಯಮೀ] ನಾಯಕನಾಯಿಕೆಯರ ಸಮಾಗಮಕ್ಕೆ ಪೂರ್ವದಲ್ಲಿಯೇ ಅವರಿಬ್ಬರಲ್ಲಿ ಉಂಟಾಗುವ ಪರಸ್ಪರ

ಪ್ರೇಮಂಭಾವ,-ಅನುರಾಗ ; ಕಣ್ಣೋಟ, ಕಿವಿಮಾತುಗಳಿಂದ ಉದ್ಭವಿಸುವ ಅನುರಾಗ: ಸೀತೆಯ ಮನಸ್ಸಿನಲ್ಲಿ 'ಪೂರ್ವ-ರಾಗ'ವನ್ನು ಉದ್ದೀಪನಗೊಳಿಸುವುದು ಕವಿಯ ಅಭೀಷ್ಟವಾಗಿದೆ (ಕ್ರೀಕೃ. ೨). [ಸಂ.]

**ಪೂರ್ವರಾತ್ರಿ** (ನಾ). ಸಾಯಂಕಾಲದಿಂದ ಮಧ್ಯರಾತ್ರಿಯ ವರೆಗಿನ ಸಮಯ ; ಇರುಳಿನ ಪೂರ್ವಾರ್ಧ : ಪೂರ್ವರಾತ್ರಿಯಲ್ಲಿ ಬೇಗನೆ ಮಲಗಿಕೊಂಡು, ಬೆಳಗ್ಗೆ ಬೇಗ ಏಳುವುದು ಬಹಳ ಹಿತವು (ಮ.೦೫೨ಬು. ೪-೨೩). [ಸಂ.]

**ಪೂರ್ವರಾತ್ರೆ** (ನಾ). = ಪೂರ್ವರಾತ್ರಿ : ತುರಗಂ ಮಾಯುನ್ಮದಿಶಾಂತರದೊಳ್ ಘನರವದೆ ಪಲವು ಸೂೞುಂ ಕಿಳಿಱುತ್ತಿರೆ ಪೂರ್ವರಾತ್ರೆಯೊಳ್ ತನ್ನರಸನ ಪೆರ್ಗಡೆಗೆ ಮರಣಮಂ ಪ್ರಕಟಿಸುಗುಂ (ಅಕ್ಕಾ. ೪ ೩೩). [ಸಂ. ಪೂರ್ವರಾತ್ರ]

**ಪೂರ್ವರೂಪ** (ನಾ). ೧. ಮೊದಲು ಇದ್ದ ರೂಪ,-ಆಕಾರ; ಹಿಂದಿನ ರೂಪ. ೨. ಹಿಂದಿರುವ ಅಕ್ಷರದ ರೂಪ : ನಿರುತಂ ಟಚಟತಪಂಗಳಪರದ ದಕಾರಕ್ಕೆ ಪೂರ್ವರೂಪಮದಕ್ಕುಂ (ಶಮದ. ೩೪೦). ೩. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಒಂದು ವಸ್ತುವು ತನ್ನ ಗುಣವನ್ನು ಬಿಟ್ಟು ಬೇರೆ ಗುಣವನ್ನು ಹೊಂದಿದ್ದರೂ ಕಾರಣಾಂತರದಿಂದ ಪುನಃ ತನ್ನ ಮೂಲಗುಣವನ್ನೇ ಪಡೆಯುವುದು : ಒಂದು ವಸ್ತುವಿನ ಗುಣಂ ಪೆಱತೊಂದು ತೆಱನಾಗಿ ತೋಱಿ ಮಗುೞ್ದಿಂದಿನಂತಾದುದೆಂಬುದು ಪೂರ್ವರೂಪಂ ಎಂತೆನೆ ಐಗೂರರಸನ ಪೆಂಡಿರ ಮೂಗುತಿ ಕಣ್ಣನಿಯೊಳಿಟ್ಟಿದ ಕಾಡಿಗೆಯಿಂ ಕರ್ಪಾಗಿ ಬೞಿಕಂಗುವ ಹಸನೀರ್ ತಾಗುವಿನು ತೊಳಗಿತೆಂದಿನಂತಪ್ರಶಿಸಿ (ಅಕ್ರ.ಕ. ೦೦-೯೯). [ಸಂ.]

**ಪೂರ್ವರೂಪಾಲಂಕಾರ** (ನಾ). = ಪೂರ್ವರೂಪ ೩ : ತನ್ನ ಗುಣವನು ಬಿಟ್ಟ ಅಂಶಹ ಅನ್ಯಗುಣವನು ಹೊಂದಿ ಮತ್ತೆ ತನ್ನ ಪೂರ್ವಗುಣವನು ಹೊಂದಿದಡೆ ಪೂರ್ವರೂಪಾಲಂಕಾರ (ಕುಶಂ. ೦೧೦). [ಸಂ.]

**ಪೂರ್ವಲಿಖಿತ** (ನಾ). (ಅಲಂ) ಹುಟ್ಟುವುದಕ್ಕೆ ಮುಂಚೆಯೇ ನಿರ್ಧಾರವಾದುದು ; ಹಣೆಬರಹ ; ವಿಧಿಲಿಖಿತ : ಮಾಣದೆ ಅರಳಿಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ ಪೂರ್ವಲಿಖಿತ ಮುಂದುಗಾಣಲೀಯದು (ಚಶಕ. ೩೬೦) ; ಪೂರ್ವಲಿಖಿತವಿದಾಯಿತು (ಚಶಕ. ೪೦-೦೨). [ಸಂ.]

**ಪೂರ್ವವಯಸ್ಸು** (ನಾ). ಎಳೆಯ ವಯಸ್ಸು ; ತಾರುಣ್ಯ ; ಯೌವನ : ಪೂರ್ವವಯಸ್ಸಿನ ಪರಿಶುದ್ಧ ಪರಿಸ್ಥಿತಿಯನ್ನವಳು ಪಡೆಯಬೇಕೆಂಬುದೂ ಅವನ ಇಚ್ಛೆಯಾಗಿತ್ತು (ಪುಸಂ. ೧೯೬). [ಸಂ. ಪೂರ್ವವಯಸ್]

**ಪೂರ್ವವರ್ಣ** (ನಾ). ಹಿಂದಿರುವ ಅಕ್ಷರ : ಲಘ್ವಾದಿಯೂ ದ್ವಿಲಘುಸ್ವರಯುಕ್ತವೂ ಆದ ಧಾತುವಿನ ಅಂತ್ಯಾಕ್ಷರವು ಗು, ಸು, ಡು, ಱು ಆಗಿದ್ದರೆ ಆ ಅಕ್ಷರಗಳಿಗೆ ಕ್ರಮವಾಗಿ ಕ್, ಚ್, ಟ್, ತ್‌ಗಳೂ ಪ್ರತ್ಯಯಕ್ಕೆ ಪೂರ್ವವರ್ಣವೂ (ಕ್, ಚ್, ಟ್, ತ್) ಆದೇಶವಾಗುತ್ತವೆ (ಕೈಪಿ. ೪೭). [ಸಂ.]

**ಪೂರ್ವವಾಸನೆ** (ನಾ). ೧. ಹಿಂದಿನ ಜನ್ಮದ ನೆನಪು ; ಪೂರ್ವಜನ್ಮದ ಸ್ಮರಣೆ : ಮೆಲ್ಲಮೆಲ್ಲನೆ ಪೂರ್ವವಾಸನೆ ಮನಕೆ ತೋಱಿತ್ ಇಲ್ಲಿ ಪುಟ್ಟಿದುದಲ್ಲ ಎನಿಸಿನಂದದೆ ತೋಱಿತ್ (ಕಂಚಕ. ೭-೦೯). ೨. ಪೂರ್ವಜನ್ಮದ ಸಂಸ್ಕಾರ : ಈ ಬುದ್ಧಿ ಅವನವನ ಪೂರ್ವವಾಸನೆಗಳಿಂದ . . . ಅಲ್ಲಿ ಪ್ರಧಾನವಾದ ತಾಮಸ ಅಥವಾ ರಾಜಸಗುಣಗಳ ಪ್ರಬಲತೆಗೆ ಅವಕಾಶ ಮಾಡುತ್ತದೆ (ಶಾಂತಕ. ೦೦೦). [ಸಂ. ಪೂರ್ವವಾಸನಾ]

**ಪೂರ್ವವಿದೇಹ** (ನಾ). [ಜೈನ] ಸುಮೇರುಪರ್ವತದ ಪೂರ್ವದಿಕ್ಕಿನಲ್ಲಿ ಇದ್ದ ಕಚ್ಛ ಮೊದಲಾದ ಹದಿನಾರು ಕ್ಷೇತ್ರಗಳ ಪ್ರದೇಶ ; ಈ ಜಂಬೂದ್ವೀಪದ ಸಪ್ತಕ್ಷೇತ್ರಗಳಲ್ಲಿ ಒಂದು ; ಮಂದರದ ಪರ್ವತದ ಪೂರ್ವಕ್ಕೆ ಇದೆ (ಕೈಶಕೋ. ೦೭೨) : ಅಪೂರ್ವಸಂಪತ್ಸಾರಸರ್ವಸ್ವಗೇಹಮಾದ ಪೂರ್ವವಿದೇಹಮಹೀಮಧ್ಯದೊಳ್ (ಶಂಪ್ರಪು. ೦-೮೦ ಶ); ಷೋಡಶಮಹಾವಿಷಯಂಗಳಿನೊಪ್ಪಿ ಮಾಟ್ಟುದುರ್ವಿಗೆ ಮುದಮಂ ಸುಖೈಕನಿಧಿ ಪೂರ್ವವಿದೇಹಮುರ್ವಸಂಪದು (ಪುಕ್ಕಪು. ೨-೬). [ಸಂ.]

**ಪೂರ್ವವಿರೋಧ** (ನಾ). ಮೊದಲಿನಿಂದಲೂ ಇರುವ ಹಗೆತನ : ಪೂರ್ವವಿರೋಧದಿಂ ನಿಜಪರಾಕ್ರಮದಿ ಪರರಾಜ್ಯಕಾಂಕ್ಷೆಯಿಂ . . . ಮಾಳವಭೂಮಿಪಾಲಕಂ ಸರ್ವಬಲಾನ್ವಿತಂ ನಡೆದು ಮಾಗಧನೊಳ್ ಮುಳಿದೊಡ್ಡನೊಡ್ಡಿದಂ (ಚಕಅ. ೨-೦೯). [ಸಂ.]

**ಪೂರ್ವವೃತ್ತಿ** (ನಾ). ಮೊದಲಿನ ಉದ್ಯೋಗ ; ಪರಂಪರೆಯಿಂದ ಬಂದ ಉದ್ಯೋಗ : ತಾಂಬೂಲಾದಿ ದಾನಸನ್ಮಾನಪುರಸ್ಸರಮವರ ಪೂರ್ವವೃತ್ತಿಯುಮಂ ಕಮ್ಮುಮಟ್ಟಯುಮನಿತ್ತು (ಸುಕುಮಾ. ೨-೮೬ ಶ). [ಸಂ.]

**ಪೂರ್ವವೇದಿ** (ನಾ). ಯಜ್ಞಕುಂಡದ ಮುಂದಿರುವ ಜಗಲಿ : ಯಮನಂದನನು ವೈಶಾಖದ ಚತುರ್ದಶಿದಿನದಲುತ್ತರಪೂರ್ವವೇದಿವರಾಭ್ಯುದ್ಯಕ್ಕದಲಿ . . . ಮಱುದಿನ ಯಜ್ಞದೀಕ್ಷಿತನಾದನೊಲವಿನಲಿ (ಕುವ್ಯಾಸ. ೭-೨೭). [ಸಂ. ಪೂರ್ವವೇದೀ]

**ಪೂರ್ವವೈಭವ** (ನಾ). ಹಿಂದಿನ ಕಾಲದ ಸಂಪತ್ತು, ಯಶಸ್ಸು ಮುಂತಾದುವುಗಳ ಸಮೃದ್ಧಿ : ಕೈಲಪನು . . . ತನ್ನ ಮನೆತನದ ಪೂರ್ವವೈಭವವನ್ನು ಸಂಪಾದಿಸಿದನು (ಕಶಾಂ. ೩೦). [ಸಂ.]

**ಪೂರ್ವವೈರ** (ನಾ). = ಪೂರ್ವವಿರೋಧ : ಪೂರ್ವವೈರಮಂ ಮನಸ್ಸಿನೊಳ್ ವಿಚಾರಿಸುತ್ತ ಬಂದೊರ್ವನಿಲ್ಲಿ ಸಿಲ್ಕಿದಂ (ಧರ್ಮಶ. ೦ ೯೬). [ಸಂ.]

**ಪೂರ್ವಶಾಸ್ತ್ರ** (ನಾ). ಪ್ರಾಚೀನಕಾಲದಿಂದ ನಡೆದು ಬಂದ ಶಾಸ್ತ್ರ : ಪರಂಪರಾಗತಶಾಸ್ತ್ರ : ಅಱಿದು ಪೀನು ಮಾರ್ಗಗತಿಯಂ ತಱಿಸಲಾಗದಾರ್ಗಂ ಬಹುವಿಕಲ್ಪದೊಳ್ ಕುಱಿತು ಪೂರ್ವಶಾಸ್ತ್ರಪದವಿಧಿಯಂ ತೆಱಿದಿರ ಪೇಳ್ವೆನಿನಿಸಂ ಕನ್ನಡದೊಳ್ (ಕರಾ. ೨-೪೬). [ಸಂ.]

**ಪೂರ್ವಶೈವ** (ನಾ). ಶೈವದ ಪ್ರಭೇದಗಳಲ್ಲಿ ಒಂದು : ಶುದ್ಧಶೈವನವ ಹೊದ್ದದೆ ಪೂರ್ವಶೈವವನಾಚರಿಸದೆ ಮಾರ್ಗಶೈವದ ಮನ್ನಣೆಯ ಮಾಡದೆ ವೀರಶೈವದನಾಧರಿಸದೆ ಆದಿಶೈವವನನುಕರಿಸದೆ ಭೇದಿಸಬಾರದ ಲಿಂಗ ಕರದಲ್ಲಿದ್ದು ಕಂಗಳನಲ್ಲಿ ನಿಂದು ಮನದಲ್ಲಿ ಸಿಂಹಾಸನಂಗೈದು ಸಕಲೇಂದ್ರಿಯದ ಮಱಿದು ಕಾಯದ ಜೀವದ ಹೊಲಿಗೆಯ ಬಿನ್ನಾಣದಿಂ ಬಿಚ್ಚಿ ದೇಹಿಕೊಂದ ಅಱಿಸಲಿಲ್ಲವಾಗಿ ಬಯಕೆ ಅಱಿತು ಭವ ಹಿಂಗಿ ತಾನೆನ್ನದೆ ಇದಿರೆನ್ನದೆ ಏನುವೆನ್ನದ ಲಿಂಗೈಕ್ಯಂಗೆ ಸ್ವಾನುಭಾವದಿಂದ ನಮೋ ನಮೋ ಎಂಬೆ (ಪೋಕವಚ. ೦೨೬-೪೮೦); ಶುದ್ಧ ಮಿಶ್ರ ಸಂಕೀರ್ಣ ಪೂರ್ವಮಾರ್ಗಶೈವಂಗಳಲ್ಲಿ ಕರ್ಮಭಕ್ತಿಯಲ್ಲದೆ ನಿರ್ಮಳಸದ್ಭಕ್ತಿ ಎಲ್ಲಿಯದೋ (ಅವಚ. ಮು. ೪೩-೭೭). [ಸಂ.]

**ಪೂರ್ವಶಾಸನ** (ನಾ). ಹಿಂದಿನ ಕಾಲದ ರಾಜಾಜ್ಞೆ ; ಪೂರ್ವಕಾಲೀನ ಶಾಸನ : [ಪೆ]ರ್ಗ್ಗಡೆ ವಾಸುದೇವಯ್ಯನುಂ ಮಲ್ಲಯ್ಯನುಂ ಪೂರ್ವ್ವಶಾಸನಮರ್ಯ್ಯಾದೆ ಕೊಟ್ಟಿದ್ದುದೆಂದು ಬಿನ್ನಪಂಗೆಯ್ಯಲು (ಕಶಾತ. XX. ೬೦-೨೦; 1088). [<ಸಂ. ಪೂರ್ವಶಾಸನ]

**ಪೂರ್ವಸಿದ್ಧತೆ** (ನಾ). ಮುಂಚಿತವಾಗಿ ಮಾಡಿಕೊಳ್ಳಬೇಕಾದ ಏರ್ಪಾಡು,-ತಯಾರಿ : ಈ ಪೂರ್ವಸಿದ್ಧತೆ ಪ್ರದರ್ಶಕರ ಕಡೆಯಿಂದ, ಅದಕ್ಕಿಂತ ಹೆಚ್ಚಾಗಿ ಪ್ರೇಕ್ಷಕರ ಕಡೆಯಿಂದ ಆದಾಗ ಮಾತ್ರ ಆ ಪ್ರದರ್ಶನ ಸಂಪೂರ್ಣ ಫಲದಾಯಿ (ರಾಮರಾ. ೯೦). [ಸಂ. ಪೂರ್ವಸಿದ್ಧತಾ]

**ಪೂರ್ವಸಿದ್ಧಾಯ** (ನಾ). ಒಂದು ಬಗೆಯ ತೆರಿಗೆ : ರುದ್ರದೇವಂ ಪತಿಬೆಸಸಿದ ಧರ್ಮಕ್ರಿಯಿಂ ಪೂರ್ವಸಿದ್ಧಾಯದೊಳೊಲ್ಲಯ್ಯತ್ತು ಪೊಂನಂ ನಿಯ್ಯ[ಮ]ದ ಪುರಾಣಕ್ಕೆ ಭೋಗಕ್ಕೇನು ... ಪೂಣ್ಣು ...ಧಾರಾ

[ಪೂ]ರ್ವ್ವಕಂ ಮಾಡಿ ಕೊಟ್ಟರ್ (ಕಶಾ. V, ೨೪-೪೦; ೧೧೫೬). [ಸಂ.]

**ಪೂರ್ವಸುರ** (ನಾ). = ಪೂರ್ವದೇವ ೨ : "ಸುರವೈರಿಗಳು . . . ಅಸುರರು ಪೂರ್ವಸುರರೆನಲು ದೈತ್ಯರು " (ಕುಂಗರಾ. ೩-೯). [ಸಂ.]

**ಪೂರ್ವಸೂಚನೆ** (ನಾ). ೧. ಮುಂಚಿತವಾಗಿ ಸೂಚಿಸುವುದು,— ತಿಳಿಸುವುದು; ಮುನ್ಸೂಚನೆ : 'ಪೂರ್ವಸೂಚನೆಗೆಯ್' ಪರಾ. ೨. ಮುಂದೆ ಒದಗಲಿರುವ ಘಟನೆಗಳ ವಿಚಾರವಾಗಿ ಮುಂಚೆಯೇ ತಿಳಿದು ಬರುವ ಕುರುಹು : ಅಪಘಾತದ ಪೂರ್ವಸೂಚನೆ ಸಿಕ್ಕಿದ ತಕ್ಷಣ ವಿಮಾನಚಾಲಕ ಪ್ರಯಾಣಿಕರಿಗೆಲ್ಲ ಎಚ್ಚರಿಕೆಯನ್ನು ನೀಡಿದನು (ಕೂಂ). [ ಸಂ. ಪೂರ್ವಸೂಚನ ]

**ಪೂರ್ವಸೂಚನೆಗೆಯ್** (ಕ್ರಿ). ಮುಂಚಿತವಾಗಿ ತಿಳಿಸು ; ಮುನ್ಸೂಚನೆ ಕೊಡು : ಇದೆಲ್ಲಮಂ ದೇವರ್ಗೆ ಪೂರ್ವಸೂಚನೆಗೆಯ್ದು ಬಟೆಕ್ಕೊಡ ಗೊಂಡು ಬರ್ಪೆಂ (ಕಂಕಕಂ. ೫೫-೦೪). [ಪೂರ್ವಸೂಚನೆ + ಕೆಯ್$_1$]

**ಪೂರ್ವಸ್ಥಿತಿ** (ನಾ). ಮೊದಲು ಇದ್ದ ರೀತಿ ; ಮೊದಲಿನ ಕ್ರಮ : ಅವಾಸಿತವಿಜಯಕಟಕನಾಗಿ ಪೂರ್ವಸ್ಥಿತಿಯೊಳ್ ಪೋಗಿ (ಆದಿಪು. ೦೩-೩ ವ). [ಸಂ.]

**ಪೂರ್ವಸ್ಮರಣ** (ನಾ). ಹಿಂದಿನದನ್ನು ನೆನೆಸಿಕೊಳ್ಳುವುದು ; ಹಿಂದಾದುದನ್ನು ನೆನೆಯುವುದು : ಆ ಎಂಬುದು ಪೂರ್ವಸ್ಮರಣದೊಳಂ ಪ್ರಸಿದ್ಧಿಯೊಳಮುಂಟು (ಶಬ್ದ. ೦೬೯ ವೃತ್ತಿ). [ಸಂ.]

**ಪೂರ್ವಸ್ಮರಣೆ** (ನಾ). ಹಿಂದಿನ ಕಾಲದ ನೆನಪು : ಸ್ವಾಮಿಯಡಿಗೆ ಶಿರ ಬಾಗಿ ಬಂದೆವಿದೊ ಎಲ್ಲ ಸೀಮೆಯಿಂದ, ಅರಿವು—ಮರೆವು ಕಣ್ದೆರೆದು ಕರೆದ ಆ ಪೂರ್ವಸ್ಮರಣೆಯಿಂದ (ಕಂಪು. ೩೯-೨). [ಸಂ. ಪೂರ್ವಸ್ಮರಣ]

**ಪೂರ್ವಸ್ವರ** (ನಾ). [ವ್ಯಾಕ] ಸಂಧಿ ಮಾಡಬೇಕಾದಾಗ ಸಂಧಿಸ್ಥಾನದಲ್ಲಿರುವ ಎರಡುಸ್ವರಗಳಲ್ಲಿ ಮೊದಲು ಇರುವ ಸ್ವರ : ಸ್ವರಮಿರೆ ಪರದೊಳ್ ಪೂರ್ವಸ್ವರಲೋಪಂ ಕೃತವಿಭಕ್ತಿಗಕ್ಕುಂ ಪ್ರಕೃತಿಸ್ವರದೊಳುಂದೇ ದಂತಕ್ಕಾಚರಿಸುವರವಿನಷ್ಟನಾಮಭಾಗಸ್ಥಿತಿಯೊಳ್ (ಶಾವ್ಯಾವ. ೩೨); ವಿಧು ಇದು, ಕವಿ ಅರ್ ಎಂಬಿವನ್ನು ವಿಧಿದು, ಕವಾರ್ ಎಂದು ಪೂರ್ವಸ್ವರಕ್ಕೆ ಲೋಪಮಾಡಿ ಕೂಡಿಸಿದರೆ ಅರ್ಥಕ್ಕೆ ಹಾನಿ ಬರುತ್ತದೆ (ಕ ಬಿ. ೭). [ಸಂ.]

**ಪೂರ್ವಹಗೆ** (ನಾ). ಮೊದಲಿನ ದ್ವೇಷ; ಮುಂಚಿನ ವೈರ : ಅಂತರಿಸದೆ ಕೊಲ್ಲಿಯೆಂದು ಕಳುಹಿದ ಎಂತವನಿಗೆ ಪೂರ್ವಹಗೆಯೊ (ಜೈಭಾರ. ೬-೯). [ಪೂರ್ವ + ಹಗೆ$_2$ (< ಪಗೆ$_2$)]

**ಪೂರ್ವಾಂಗ** (ನಾ). ೧. ಮೊದಲನೆಯ ಭಾಗ; ಪೂರ್ವಾರ್ಧ : ನಾಟ್ಯ ಶಾಸ್ತ್ರದ ಪ್ರಕಾರ ತಾಂಡವವು . . . ನಾಟಕದ ಪೂರ್ವಾಂಗವಾಗಿ ಅಭಿನಯಿಸಲ್ಪಡುತ್ತಿತ್ತು (ಭಾರದ. ೫೫೨). ೨. ಅಂಗೈ ಮತ್ತು ಮಣಿಕಟ್ಟಿನ ಮಧ್ಯಭಾಗ : ಸೆಳೆಯುತ್ತಿರ್ಪಂತಿರಿಂ ಮಾರ್ವಿಯ ಕಠಿನತೆವೆತ್ತಿರ್ಪ ಪೂರ್ವಾಂಗದಿಂ ಕಂಗೊಳಿಸುತ್ತುಂ (ಶಾಕುಂತ. ೨೨-೩೬). ೩. [ಜೈನ] ಎಂಬತ್ತುನಾಲ್ಕುಲಕ್ಷ ವರ್ಷಗಳ ಅವಧಿ : ರಾಜ್ಯದೊಳ್ಇರ್ದುಮಯ್ದು ಲಕ್ಕೆಯುಮಯಾನೂಱುಪೂರ್ವಮಿಪ್ಪತ್ತುನಾಲ್ಕುಪೂರ್ವಾಂಗಮುಂ ರಾಜ್ಯ ಕಾಲಂ ಸಲೆ (ಶಾಪುಂಪು. ೦೨೨); ಎಂಬತ್ತನಾಲ್ಕುಲಕ್ಷವರುಷಗಳಾದರೆ ಪೊಂದು ಪೂರ್ವಾಂಗವೆಂದು ಹೇಳುವರು (ಭರತೇಶ. ೦೩). [ಸಂ.]

**ಪೂರ್ವಾಚಲ, ಪೂರ್ವಾಚಳ** (ನಾ) = ಪೂರ್ವಗಿರಿ : "ಮೂಡಪಟ್ಟೆಂದು ಪೂರ್ವಾಚಲಂ" (ಕಶಸಾ. ೯೯-೫೦); ಬೀಡುಗೊಂಡಿರ್ದ ಕತ್ತಲೆಯ ಪಾಳೆಯ ಮೆತ್ತಲೋಡಿದುದೋ ನೋಡಿದಪೆನೆಂದು ಪೂರ್ವಾಚಲದ ಕೋಡುಗಲ್ಲಂ ಪತ್ತುವಂತೆ ಮೆಱೆದಂ ಪ್ರಭೆಯೊಳೌನ್ನತ್ಯನಾದಿತ್ಯನು (ಕೃಮಿಭಾ. ೨-೬೩). **ಪೂರ್ವಾಚಳ** : "ಪೂರ್ವಾಚಳಮೆ ಮೂಡವೆಟ್ಟೆಂದಕ್ಕುಂ" (ಕವಿಕಂ. ೯೯); ಎಣಿಸಿಚಿತಾಸನದೊಳ್ ಮುನಿಗಣಪತಿಯುಂ ನೃಪತಿ ತಂದು ಕುಳ್ಳಿರಿಸೆ ನಭೋಮಣಿ ಪೂರ್ವಾಚಳಚೂಡಾಮಣಿಯೆನಿಸಿದನೆನೆ ಪೊದಟ್ದುದಪಘನ ಕಿರಣಂ (ಸುಕುಚ. ೦೪-೩); ಸುರುಚಿರ ಪೂರ್ವಾಚಳದೊಳ್ ಗುರುತರ ಪೂರ್ಣೇಂದುವುದಯಿವಂತಿರೆ ರಾತ್ರೀಶ್ವರವದನೆ ಗಿರಿಜೆ ಭರದಿಂ ಗಿರಿರಾಜನ ತೊಡೆಯ ಮೇಲೆ ಬಿಜಯಂಗೆಯ್ದಳ್ (ಗಿರಿಕ. ೯-೪೪). [ಸಂ.]

**ಪೂರ್ವಾಚಳ** 'ಪೂರ್ವಾಚಲ' ನೋ.

**ಪೂರ್ವಾಚಾರ** (ನಾ). ಹಿಂದಿನ ಕಾಲದಿಂದ ಬಂದ ನಡವಳಿಕೆ ; ಸಂಪ್ರದಾಯ : ಶ್ರೀಪೃಥುವಿಮಾಣ ಪರಮಸುಭಗನ್ . . . ಪೂರ್ವ್ವಾಚಾರದಾ ತೆಱಯಪ್ಪೆ ಈಯೆಮೆನ್ದೊಡೆ ಪೊನ್ನೆರಿನಂ ಚೋಲಮಹಾರಾಜನುಂ ಮೂಱಡಿಪ್ಪುಪ್ಪ್ವಾರ್ವರಾನ್ಯೊನ್ದು × ಶ್ರೀಧನಪತಿಆಚಾರಿಮಾ (ಎಶಿ. XVI, ಮದ್ದೂರು. ೦೦೬-೩ : ೩ನೆಯ ಶ) ; ವಿಷ್ಣುಖಂಡದ ಜನರು ಪೂರ್ವಾಚಾರಗಳಲ್ಲಿ ಬಹುಪ್ರೀತಿಯುಳ್ಳವರಾಗಿದ್ದಾರೆ (ಭೂಗೋಳ. ೨೦). [ಸಂ.]

**ಪೂರ್ವಾಚಾರ್ಯ** (ನಾ). ಹಿಂದಿನ ಕಾಲದ ವಿದ್ವಾಂಸ,—ಪಂಡಿತ : ಪೂರ್ವಾಚಾರ್ಯರ್ ದೇಸಿಯನೆ ನಿಱಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ (ಕವಿರಾ. ೦-೬೩); ಹದಿಮೂರುವಿಧವಾದ ಸನ್ನಿಪಾತಗಳಿಗೂ ಆಯುಃಪ್ರಮಾಣಂಗಳ ಅವಧಿಯು . . . ಪೂರ್ವಾಚಾರ್ಯರಿಂದ ಪೇಳಲ್ಪಟ್ಟಿರುವುದು (ಸಕವ್ಯ. ೦೬೯). [ಸಂ.]

**ಪೂರ್ವಾದತ್ತ** (ಗುಂ). ಹಿಂದೆ ಗಳಿಸಿಕೊಂಡ,—ಸಂಗ್ರಹಿಸಿದ : ಪೂರ್ವಸಂಚಿತವಾದ : ಜಲಧಿಯಲಿ ಫಣಿವದನದಲಿ ರಿಪುಬಲದ ಮುಖದಲಿ ಸಿಡಿಲ ಹೊಯ್ಲಲಿ . . . ಸಿಲುಕಿದಡೆ ಬಿಡಿಸುವವಲೇ ಪ್ರತಿಫಲಿತ ಪೂರ್ವಾದತ್ತಪುಣ್ಯಾವಳಿಗಳು (ಕುಮಾ್ವ್ಯಾಗ. ೯-೨೫). [ಸಂ.]

**ಪೂರ್ವಾದ್ರಿ** (ನಾ). = ಪೂರ್ವಗಿರಿ : ಪೂರ್ವಾದ್ರಿಯೊಳಪರಾದ್ರಿಯ ನಿರ್ವಂದದೆ ತಾಗುವಂತೆ ತಾಗಿದುವು ಗಜಂ (ಪಾರ್ಶ್ವಪು. ೩-೦೨೬). [ಸಂ.]

**ಪೂರ್ವಾನುಭವ** (ನಾ). ಹಿಂದೆ ಅನುಭವಿಸಿದುದು ; ಇಂದ್ರಿಯ ಮೂಲಕವಾಗಿ ಅಥವಾ ಮಾನಸಿಕವಾಗಿ ಈ ಮುಂಚೆ ಪಡೆದ ಅನುಭವ : ಮತ್ತೊರ್ವಂ ಪೂರ್ವಾನುಭವಮಂ ನೆನೆದು . . . ಕೆಳದಿಯೊಳ್ ನುಡಿದಂ (ಕಂಪ್ರಸು. ೮-೭೪ ವ). [ಸಂ.]

**ಪೂರ್ವಾನುರಾಗ** (ನಾ). [ಕಾವ್ಯಮೀ] ಪೂರ್ವಾನುರಾಗ, ಮಾನ, ಪ್ರವಾಸ ಮತ್ತು ಕರುಣಾತ್ಮಕ ಎಂಬ ನಾಲ್ಕು ವಿಪ್ರಲಂಭಶೃಂಗಾರ ಪ್ರಭೇದಗಳಲ್ಲಿ ಒಂದು ; ಪ್ರಿಯೆ, ಪ್ರಿಯಕರರು ಒಂದುಗೂಡುವ ಉತ್ಸುಕತೆಯುಳ್ಳಿದ್ದರೂ ಅದು ಸಾಧ್ಯವಾಗದೆ ಉಂಟಾಗುವ ಮರುಕ: ಸಮನಂದು ನೋಡಿ ಮೋಹಿಸ್ಸಿಡಿದು ಮೋಹ್ನನಂಗೊಂಡು ಕೂರ್ತು ಕೂಟಂ ತನ್ನೊಳ್ ಸಮನಿಸದೆ ಮುಱುಗುವಾ ಮುಱುಕಮುಮದು ಪೂರ್ವಾನುರಾಗಮೆನೆ ಪೆಸರ್ವಡೆಗುಂ (ಶೃಂಗಾರ. ೯-೪೦) ; ಪೂರ್ವಾನುರಾಗಮೆಂಬುದಭಿಲಾಷೆ ಅದು ದೈವ ಪಾರವಶ್ಯಮೆಂದಿರ್ತೆಱು (ರಶಿರ. ೦-೩೪ ತು). [ಸಂ.]

**ಪೂರ್ವಾಭಾದ್ರ** (ನಾ). ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಇಪ್ಪತ್ತೈದನೆಯದು : ಪೂರ್ವಾಭಾದ್ರಾ ಅಜಪಾದ ಪೂರ್ವ ಪ್ರೋಷ್ಠಪದ ಯಿಾ ೪ ಪೂರ್ವಾಭಾದ್ರನಕ್ಷತ್ರಕ್ಕೆ ಪೆಸರು (ಶಾಸ್ತ್ರರ. ೬೩-೭). [ಸಂ.]

**ಪೂರ್ವಾಭಾದ್ರಪದೆ** (ನಾ). = ಪೂರ್ವಾಭಾದ್ರ : ಪುಬ್ಬೆಯುತ್ತರೆ ಶತವಿಶಾಖೆ ಸಂದ ಪೂರ್ವಾಭಾದ್ರಪದೆ ಮೂಜಹವು (ಮಂಗರಾ. ೦೯-೨). [ಸಂ. ಪೂರ್ವಾಭಾದ್ರಪದಾ]

**ಪೂರ್ವಾಭಾದ್ರೆ** (ನಾ). = ಪೂರ್ವಾಭಾದ್ರ : ಅಶ್ವಿನಿ ಭರಣಿ . . . ಪೂರ್ವಾಭಾದ್ರೆ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳು (ವಿವೇಕ. ೨೫೬). [ಸಂ. ಪೂರ್ವಾಭಾದ್ರ]

**ಪೂರ್ವಾಭಿಮುಖ** (ನಾ). ೧. ಮೂಡಣದಿಕ್ಕಿಗೆ ಎದುರಾಗಿ ಇರುವವನು ; ಪೂರ್ವದಿಕ್ಕಿಗೆ ಮುಖ ಮಾಡಿದವನು : ಯೋಗಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ

(ಆದಿಪು. ೧೬-೪೦ ವ); ಪೂರ್ವಾಭಿಮುಖಂ ಜಿನಶಿಶು . . . ಕನಕೋರ್ವೀಧರ ಶಿಖರದಂತೆ ಮೆಗೆ ಸೊಗಯಿಸಿದಂ (ಪರ್ಶ್ವ. ೦೪-೧೩) ೨. ಪೂರ್ವ ದಿಕ್ಕಿಗೆ ಎದುರಾಗಿರುವುದು : ವಿಂಧ್ಯಪರ್ವತಗಳು . . . ನರ್ಮದಾ ನದಿಯ ಉತ್ತರದಲ್ಲಿ ಪೂರ್ವಾಭಿಮುಖವಾಗಿ ಹಾಯುತ್ತವೆ (ಭೂಗೋಳ. ೩೦). [ಸಂ.]

**ಪೂರ್ವಾಮರ** (ನಾ). = ಪೂರ್ವದೇವ ೨ : ಪೂರ್ವಾಮರರೊಳಾ ದುರ್ದುಧರ ಮಹಾದ್ಭುತವಾಗಿ (ಕೌಶಿಕಾ. ೦-೨೬); ಮಥಿಯಿಸಿದೊಡಂ ತಕ್ಷೀರಧಿ ಪೂರ್ವಾಮರಾಮರರ ಬಲ್ಪಾವ ಪಿಡಿಸುತಾಚ್ಛೈಶ್ರವಮೆನಿಪ್ಪ ಹಯವ ಸರ್ವಬಾಧೆಯೊಳಿತ್ತಂ (ಭಾವಶಿ. ೭-೧೨). [ಸಂ.]

**ಪೂರ್ವಾಯ** (ನಾ). = ಪೂರ್ಬಾಯಂ : ರಾಮನಾಥದೇವರ್ಗೆ ಆಗುವ ಚಿಕ್ಕ ಕೊಡಲಿಯ ಹನಸವಾಡಿಯ ಪೂರ್ವ್ವಾಯ ಅಪೂರ್ವ್ವಾಯ ಅಳಿಯನ್ಯಾಯ ಯೇನುಯಿಲ್ಲೆಂದು ಧಾರಾಪೂರ್ವ್ವಕ ಮಾಡಿದ ಧರ್ಮ್ಮ (ಎಕ. VII. ಶಿವಮೊ. ೩೮-೩ ; 1318); ರಾಮದೇವರಂಗಭೋಗಕ್ಕೆ ಕೊಟ್ಟ ಧರ್ಮವಿದಕೆ ಪೂರ್ವ್ವಾಯವಪೂರ್ವ್ವಾಯವೊಂದಿಲ್ಲ (ಎಕ. VII. ಶಿವಮೊ. ೬೯-೨೬; 1320). [ಸಂ.]

**ಪೂರ್ವಾರ್ಜಿತ** (ಗು). ೧. ಹಿಂದೆ ಗಳಿಸಿದ ; ಪೂರ್ವಜನ್ಮದಲ್ಲಿ ಸಂಪಾದಿಸಿದ : ಯಥಾಕಾಲಾನುಭವನ ತಪೋನಿಮಿತ್ತವಾಗಿ ಸವಿಪಾಕಾವಿಪಾಕ ರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು (ಆದಿಪು. ೧೦-೬೩ ವ) ; ಗಣಪತಿಯಷ್ಟು ನಿಷ್ಠೆಯಿಂದ ಅಷ್ಟೊಂದು ದೀರ್ಘಕಾಲ ಸಾಧನೆಮಾಡಿದ ಒಬ್ಬನನ್ನೂ ಅವರು ಕಂಡಿರಲಿಲ್ಲ. ಅದಕ್ಕೆ ಪೂರ್ವಾರ್ಜಿತ ಪುಣ್ಯವಿಶೇಷ ಬೇಡವೆ? (ಹೊಸಕ್ಷ. ೩೪). ೨. ಹಿರಿಯರು ಗಳಿಸಿ ಕೊಟ್ಟ; ಪೂರ್ವಜರಿಂದ ಸಾಗಿ ಬಂದ : ಅವರಿಗೆ ಪೂರ್ವಾರ್ಜಿತ ಆಸ್ತಿ ಏನೂ ಇರಲಿಲ್ಲ, ಸ್ವಂತ ಪರಿಶ್ರಮದಿಂದಲೇ ಅವರು ಮುಂದೆ ಬಂದರು (ರೂಢಿ). (ನಾ). ೩. ಹಿಂದೆ ಗಳಿಸಿದುದು ; ಪೂರ್ವಸಂಚಿತವಾದದು : ಸಮ್ಯಗ್ದರ್ಶನ ಜ್ಞಾನಚಾರಿತ್ರವಿಷಯಮಪ್ಪಱಿವು . . . ಅದೆಂತೋ ಪೂರ್ವಾರ್ಜಿತಮಪ್ಪ ಮಹಾಸುಕೃತವಿಶೇಷದಿಂ ಪ್ರಾಪ್ತಮಾದುದು (ಜೀವಸಂ. ೦೬೬-೨೩). ೪. (ಆಲಂ) ಹಣೆಬರಹ : ಪಣೆಯೊಳಂ ಪೂರ್ವಾರ್ಜಿತಂ ಹಾಗಿರಲ್ ಕೊಲನೇ ಕ್ಷುದ್ರ ಸಮರ್ಥನಂ (ಸೋಮೇಶ. ೩೦). [ಸಂ.]

**ಪೂರ್ವಾರ್ಣವ** (ನಾ). ಮೂಡಣ ಕಡಲು ; ಪೂರ್ವಸಮುದ್ರ : ಪೂರ್ವಾರ್ಣವಮಂ . . . ನೋಡಿದಂ ಚಕ್ರನಾಥಂ (ಆದಿಪು. ೦೨-೭೦). [ಸಂ.]

**ಪೂರ್ವಾರ್ಧ** (ನಾ). ಮೊದಲನೆಯ ಅರ್ಧಭಾಗ : ಕಂದದ ಪೂರ್ವಾರ್ಧದೊಳನುಸಂದಿಸಲಾರ್ಯಾಪರಾರ್ಧಮದನುಕ್ರಮದಿಂದೊಂದಿರ್ದೊಡೆ ಸಂಕೀರ್ಣಕಂ (ಛಂದೋಂಬು. ೪-೨೩೪) ; ಈ ಶತಮಾನದ ಪೂರ್ವಾರ್ಧಕ್ಕಿಂತಲೂ ಉತ್ತರಾರ್ಧದಲ್ಲಿ ಭಾಷಾವಿಜ್ಞಾನದ ದೃಷ್ಟಿಯಿಂದ. . .ಒಳ್ಳೆಯ ಕೆಲಸ ನಡೆಯುತ್ತಿದೆ (ದ್ರಾವಿಡ. ೦೩೨). [ಸಂ.]

**ಪೂರ್ವಾರ್ಧಗೋಳ** (ನಾ). ಭೂಮಂಡಲದ ಪೂರ್ವಭಾಗ : ಪಶ್ಚಿಮಾರ್ಧಗೋಳದಲ್ಲಿರುವ ಭೂಮಿಯ ಎರಡರಷ್ಟಕ್ಕಿಂತಲೂ ಪೂರ್ವಾರ್ಧಗೋಳದಲ್ಲಿರುವ ಭೂಮಿಯು ಹೆಚ್ಚಾಗಿದೆ (ಭೂಗೋಳ. ೦೩). [ಸಂ. ಪೂರ್ವಾರ್ಧಗೋಲ]

**ಪೂರ್ವಾಶ್ರಮ** (ನಾ). (ಸಂನ್ಯಾಸಕ್ಕೆ) ಮುಂಚಿನ ಆಶ್ರಮ ; ಬ್ರಹ್ಮಚರ್ಯ ಅಥವಾ ಗೃಹಸ್ಥಾಶ್ರಮ : ಶೈವಪಂಥೀಯಸಂನ್ಯಾಸಿಗಳು ತಮ್ಮ ಪೂರ್ವಾಶ್ರಮದ ಮನೆಯನ್ನು ಅಪರಿಚಿತಸ್ಥಳವೆಂದು ತಿಳಿಯುತ್ತಾರೆ (ಆಶ್ರಮ. ೨೪). [ಸಂ.]

**ಪೂರ್ವಾಶ್ರಯ** (ನಾ). ಹಿಂದಿನ ಇರವು ; ಮೊದಲಿನ ಅಸ್ತಿತ್ವ : ಗುರುಕಾರುಣ್ಯವ ಪಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದರೆ ಗುರುದ್ರೋಹ ಲಿಂಗದ್ರೋಹ ಜಂಗಮದ್ರೋಹ ಆಚಾರದ್ರೋಹ ಪ್ರಸಾದದ್ರೋಹ (ಬಸವ. ೬೬೬): ಇಂತಪ್ಪ ಪದಾರ್ಥದ ಪೂರ್ವಾಶ್ರಯವನು ಶಿವಮಂತ್ರ ಶ್ರೀವಿಭೂತಿಯಿಂದೆ ಕಳೆದು ಶುದ್ಧಸಂಸ್ಕಾರವೆನಿಸಿ . . . ಶಿವಲಿಂಗಕ್ಕೆ ಅರ್ಪಿಸಿದಲ್ಲಿ ಶಿವಪ್ರಸಾದವೆನಿಸಿತ್ತು (ಚೆಂದೇ. ೦೬೨-೨೪). [ಸಂ.]

**ಪೂರ್ವಾಷಾಢ** (ನಾ). ಇಪ್ಪತ್ತೇಳುನಕ್ಷತ್ರಗಳಲ್ಲಿ ಇಪ್ಪತ್ತನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಆರ್ದ್ರೆ ಪೂರ್ವಾಷಾಢ . . . ಮಖೆಯೆಂಬುವೇ ಕ್ರಮದಿಂದ ಷಡ್ಜಾದಿ ಸ್ವರಂಗಳ ಜನ್ಮನಕ್ಷತ್ರಂಗಳು (ಶಿವೇಶ. ೨೩೦). [ಸಂ. ಪೂರ್ವಾಷಾಢಾ]

**ಪೂರ್ವಾಸನ** (ನಾ). ಮುಂದಿನ ಆಸನ; ಪೂರ್ವಪೀಠ : ಪೂರ್ವಾಸನದೊಳ್ ಪದೆಪಿಂ ಪಾರ್ವತಿಯುಂ ಪರ್ವಮೇಱೆ ಬಿಜಯಂಗೆಯ್ಯುತ್ತ . . . ಪರ್ವತರಾಜಂ ಪುರಕ್ಕೆ ತಿರುಗಿದನಾಗಳ್ (ಗಿರಿಜಾ. ೩-೦೦೨); ಮಹಾದೇವಿ ಶರ್ವಾಣಿ ಸಮಸ್ತಾಧಿಕ್ಯೆ ಪೂರ್ವಾಸನದೊಳಿರೆ ಬರುತ್ತೊಪ್ಪಿದಂ ಶೈಳಪ (ಗಿರಿಜಾ. ೩.೦೦೩). [ಸಂ.]

**ಪೂರ್ವಾಹ್ಣ** (ನಾ). ಸೂರ್ಯೋದಯದಿಂದ ಮಧ್ಯಾಹ್ನದ ವರೆಗಿನ ಕಾಲ; ಹಗಲಿನ ಪೂರ್ವಾರ್ಧ : ಪೂರ್ವಾಹ್ಣದೊಳಾಂ ಕಂಡ ಬಲಾಕೆಯೆ ಮತ್ತೊಂದಿದಲ್ತು (ಕಶ್ಯಕ್ರ. ೫೬); ಅಯೇಷೆಯ ಸೌಂದರ್ಯ ಪೂರ್ವಾಹ್ಣದ ಸೂರ್ಯರಶ್ಮಿಯಂತೆ (ಬಂಕಿಮ. ೦೫೬). [ಸಂ.]

**ಪೂರ್ವಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಿರಾಗವು ರಕ್ತದ ಒತ್ತಡವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರ ಭಾರತದಲ್ಲಿದೆ (ಭಾರದ. ೫೪೪); ಆನಂದಭೈರವಿ ಮುಗಿಯುವುದೇ ತಡ ನೇರವಾಗಿ ಪೂರ್ವಿರಾಗವನ್ನೆತ್ತಿಕೊಂಡ (ಸಂಧ್ಯಾರಾ. ೦೫೬). [ಸಂ. ಪೂರ್ವೀ]

**ಪೂರ್ವಿಕ** (ಗು). ೧. ಹಿಂದಿನ; ಪೂರ್ವಕಾಲದ ; ಪೂರ್ವಕಾಲದಿಂದ ಬಂದ. (ನಾ). ೨. ಹಿರಿಯ; ಪೂರ್ವಜ; ವಂಶದ ಹಿಂದಿನ ವ್ಯಕ್ತಿ : ನನ್ನ ಪೂರ್ವಿಕರನು ಕುರಿತೀಗ ಹೇಳುವೆ ತಿಳಿದಷ್ಟು ಸಂಗತಿಗಳನು (ಇಂಕಾಶ. ೪-೦೦); ಮೊದಲು ಮಗುವಿನ ಪೂರ್ವಿಕರ ಇತಿಹಾಸವನ್ನು ಸಂಗ್ರಹಿಸಬೇಕು (ಶಿಕ್ಷದ. ೯೬). [ಸಂ.]

**ಪೂರ್ವಿಗ** 'ಪೂರ್ಬಿಗ' ನೋ.

**ಪೂರ್ವೀಕ** 'ಪೂರ್ಬಿಗ' ನೋ.

**ಪೂರ್ವೆ** (ನಾ). ೧. ಮೂಡಣ ದಿಕ್ಕು : "ಐಂದ್ರೀ, ಪೂರ್ವಾ, ಪ್ರಾಚೀ— ಈ ೩ ಮೂಡಣ ದೆಸೆ" (ಕರ್ಣಾಟ. ೦೭-೦೨೦). ೨. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು; ಪುಬ್ಬೆ ನಕ್ಷತ್ರ ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಭರಣಿ ಮಘೆ ಪೂರ್ವೆ ಕೃತ್ತಿಗೆ . . . ಎಂಟೀಟುಂ ವೈಶ್ವಾನರ ಮಂಡಳಮೆಂಬ ನಾಮಮಂ ತಳೆದಿರ್ಕುಂ (ಲೋಕೋಪ. ೪-೬೦); ಮಹಾ ಪೂರ್ವಾ ಉತ್ತರಾನಕ್ಷತ್ರಗಳ ಮಳೆಗೆ ಹತ್ತಿಯ ಬಿತ್ತಿಗೆಯಾಗುತ್ತದೆ (ಕುಂಬಿಯ. ೪-೨೬). [ಸಂ. ಪೂರ್ವಾ]

**ಪೂರ್ವೇತರ** (ಗು). ಪಶ್ಚಿಮದ; ಪಡುವಣ ದಿಕ್ಕಿನ : ಘನಸಂಧ್ಯಾರಾಗಶೀಮಾನಲನೊಳೊಲವಿನಿಂ ಕಾಸಿ ತಿಗ್ಮಾಂಶುಮೆಂದೆಂಬ ನವೀನ ಸ್ವರ್ಣಸತ್ಪಿಂಡಮಂ . . . ಪೂರ್ವೇತರಶರನಿಧಿಯೊಳ್ [illegible] ಜನಲ್ಲಲ್ಲ ನಿಸುರ್ಬೆಳ್ದುದೋ ಕಾಬೊರ್ಗೆಯೆನೆ ದೆಸೆದೀವಿತ್ತು ಘೋರಾಂಧಕಾರಂ (ರಾಜಶೇ. ೦೦-೦೯). [ಸಂ.]

**ಪೂರ್ವೇತಿಹಾಸ** (ನಾ). ಹಿಂದಿನ ಕಥೆ ; ಪೂರ್ವಚರಿತ್ರೆ : ತುಸು ನೀಳವಾಗಿಯೆ ಮನದೊಳು ಮೂಡಿತು ಪೂರ್ವೇತಿಹಾಸದ ನೆಳಲು (ಇಂಕಾಶ. ೬೦-೯೪). [ಸಂ.]

**ಪೂರ್ವೋಕ್ತ** (ಗು). ೧. ಹಿಂದೆ ಹೇಳಿದ ; ಮೊದಲೆ ತಿಳಿಸಿದ,— ನಿರೂಪಿಸಿದ : ಆ ವಾಕ್ಯಮುಂ ವಿಜ್ಞಾನಮೆಂಬೆಯಪ್ಪೊಡೆ ಪೂರ್ವೋಕ್ತ

ದೋಷಪಾಷಾಣಸಂಚೂರ್ಣಿತವಪ್ರಿಯೈ ಏನನೇತಟಿರೊಳ್ ನಿಶ್ಚಯಿಸುವೈ (ಅಜಿತ. ೨-೦೦ ವ); ಪೂರ್ವೋಕ್ತಸ್ಥಿತಿಯೊಳ್ ವಜ್ರಕವಾಟೋದ್ಘಾಟನಂ ಗೆಯ್ದು (ಶಾಂತಿ. ೦೦-೬೬ ವ). (ನಾ). ೨. ಮುಂಚೆ ಹೇಳಿದುದು; ಮೊದಲು ನಿರೂಪಿತವಾದುದು: ವಿಶ್ವಸಾರೋತ್ತರಾಗ್ರನಿರ್ವಾಳಸೂತ್ರ ದಿಂದ ಪೂರ್ವೋಕ್ತವಹ ಕಾರ್ಯಂಗಳೊಳು ಶಬ್ದವೃತ್ತಿ ಕೋಟಾತ್ರ ವಿರ್ದುದಲ್ಲಿ (ಶಬ್ದಸ್ಮೃ. ೬-೨-೪೮); ಎದುರುಗೋಡೆಯಲ್ಲಿ ಪೂರ್ವೋಕ್ತವಾದ ಕಿಟಕಿಗಳ ಮಧ್ಯೆ . . . ಗಡಿಯಾರವಿದೆ (ಜೀವಯೋ. ೧). [ಸಂ.]

**ಪೂರ್ವೋದಿತ** (ಗು). = ಪೂರ್ವೋಕ್ತ ೧ : ಪುನರುಕ್ತಮೆಂಬುದಕ್ಕಂ ನೆನೆಯದೆ ಪೂರ್ವೋದಿತಾರ್ಥಪದಪದ್ಧತಿಗೊಂದನಿಕುಂ ವಿಶೇಷವಿಲ್ಲದೆ ಜನಿಯಿಸಿದ ಪದಾರ್ಥಂ (ಕವಿರಾ. ೦-೬೯). [ಸಂ.]

**ಪೂರ್ವೋಪಾರ್ಜಿತ** (ಗು). = ಪೂರ್ವಾರ್ಜಿತ ೧ : ಅಂತವರ್ ಕರ್ಕಟಕೇಶ ಚರ್ವರಾಗಿ ಪುಟ್ಟಿ ಪೂರ್ವೋಪಾರ್ಜಿತಸುಕೃತಮಹೀರುಹನಿಶಾಕರ ನಿಜಾಂಗುಳಿನಿಸ್ರವದ್ದುಗ್ಧಾಜ್ಯಧಾರೆಯ ಸವಿಯಂ ಸೇವಿಸಲೇಟಿಟು ದವಸಂಗಳುಂ ಪೋಗೆವೋಗೆ (ಶಾಂತಿ. ೬-೦೦೬ ವ); ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದಂಗಿಗಂ ಮಗಳಾಗಿ ಪೂರ್ವೋಪಾರ್ಜಿತ ಶುಭಾನು ಪೂರ್ವಿನಾಮಕರ್ಮೋರ್ವೀರುಹಪರಿಪಾಕಫಳಮನನುಭವಿಸುತ್ತಂ (ಸುಕುಮಾ. ೩-೨೦ ವ). [ಸಂ.]

**ಪೂಲತೆ** (ನಾ). ಹೂವು ಬಿಟ್ಟಿರುವ ಬಳ್ಳಿ : ಪೂಲತೆ ಪೂಗಿಡು ಪೂಮರ ಸಾಲಿಂದಲ್ಲಲ್ಲಿ ಕೇರಿಕೇರಿಗಳೊಳ್ ಚೈತ್ಯಾಲಯದ ಮುಂದೆ ತುಂಬಿಯ ಜಾಳಂ ಮದಮೇಱೆ ಮೆಱೆವಮಾ ಪುರಮುಖದೊಳ್ (ಎಕ. VIII. ಸೊರಬ. ೨೬೦-೨೨ ; 1408). [ಪೂ$_2$+ಲತೆ]

**ಪೂಲಿ**$_1$, **ಹೂಲಿ**$_1$ (ನಾ). ಒಂದು ಬಗೆಯ ಸಸ್ಯ : ಪೂಲಿಯ ಪಣ್ಣಂತೆ ಪೊಱವಾಯ್ತು ಕೀವುಂ (ರಸರತ್ನಾ. ೯-೬೩); ಅದಱ ಬಚಿವಿಡಿದು ಬೆಳೆದ ಬಳ್ಳಿಯ ಪಸಿಯ ಪುಲ್ಲ ಪೂಲಿಯ ಸಾನಲನಱಿದು ನಡೆವಾಗಳ್ (ಲೀಲಾವ. ೬-೯೨ ವ). **ಹೂಲಿ**$_1$ : " ಶಂಬಾ ಸುಖನಿ ಹೂಲಿಯಕ್ಕುಂ " (ವೈದ್ಯಸಾ. ೩೭-೨೦); ಪರಿಪತಿಸೂರಂ ಪಿರಿದಾಗಿರೆ ಹೂಲಿಯ ಬೇರ ತಿಗುಡನೆಮ್ಮೆಯ ಪೊಸರೊಳ್ ಬೆರಸಿಟ್ಟು ಸೈಂಧವಂ ಕೂಡಿರೆ ಮೆಲುವುದು ದಿವ್ಯಯೋಗ ಮಿದು ಪರಿಹರಿಕುಂ (ಕಲ್ಯಾಕಾ. ೯-೦೩) ; ಹೂಲಿ ಮಾಲಿನಿ ಬನ್ನಿ ಹೊನ್ನೆ . . . ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಕುಶ. ೩-೨). [ದೇ.॥ ತಮಿ. ಪೂಳ ; ತೆಲು. ಪೂಲಿ./ಹಿಂ. ಪೂಲೀ, ಪೂಲಾ]

**ಪೂಲಿ**$_2$, **ಹೂಲಿ**$_2$ (ನಾ). ೧. ಒಬ್ಬಾತನ ಹೆಸರು: ಪೂಲಿಯೂ ಕೊಂಗಿಯೂ ಕಾಲಿಯಪ್ಪನೂ ಇಟ್ಟು ಕೊಟ್ಟರ್ (ಎಕ. VIII. ಸೊರಬ. ೨೨-೦೦; ಸು. 800). ೨. ಒಂದು ಊರಿನ ಹೆಸರು : ಅರವಡ್ಡಗಿಯರವದಪೂರ್ಲಿ ಯರ್ಮಾಡಿದ ಸಿಲಾಕಮ್ಮ (ಎಕ. VIII. ಸೊರಬ. ೨೨-೦೦ ; ಸು. 800); ಸ್ವಯಂಬುದೇವರ ದೇಗುಲದ ಪೂಲಿಯ ಪಣ್ಡಿತರ ವಿದ್ಯಾಶಿಷ್ಯರ್ಕೊಪ್ಪಿನ ವಕ್ಖಾಣಿಜೀಯರ ಶಿಷ್ಯರಪ್ಪ ಕಾಳಗ್ನಾನಿ ವಕ್ಖಾಣಿಜೀಯರ್ಗ್ಗೆ ಧಾರಾ ಪೂರ್ವ್ವಕಂ ವಿದ್ಯಾದಾನವಾಗಿ (ಕಾಇಶಾ. XI-೧. ೯೮-೯; 1002); ಪಡುವಲು ಪೂಲಿಯ ದಶಕಂ ಒಡ[ಗಲು] ಪೆರ್ವ್ವಟ್ಟಿ (ಕಾಇಶಾ. XV. ೩೦-೯೯; 1142). **ಹೂಲಿ**$_2$ : ೨. ಅಬ್ಜಗರ್ಭಸಹಿತಂ ಶ್ರೀಹೂಲಿಗೆಯ್ಯಂದು ನಿನ್ದಾರಾಧ್ಯಂ ಕರುಣಾರಸಾರ್ದ್ರಹೃದಯಂ ರಕ್ಷಿಕ್ಕೆ ಸಾಸಿರ್ವ್ವರಂ (ಕಾಇ. I. ೩೭-೩ ; 1162) ; ಆ ಸಿದ್ಧೇಶ್ವರಾಚಾರ್ಯ ಚಂದ್ರಭೂಷಣದೇವರು ಹೂಲಿಯ ಯಿಶ್ವರಭಟ್ಟರ ಕೈಯಿಂ ××× ಗೆ ಕೊಟ್ಟ . . . ವೊಂದು (ಕಕಾಂ. ೩-೬೭ ; ೯).

**ಪೂಲಿ**$_3$ (ನಾ). ಒಂದು ಬಗೆಯ ಚಿನ್ನದ ನಾಣ್ಯ : (೬). ' ಕಾಲ್ಪೋಲಿ ರೂಪಾಯಿ ' ಹೋ. [ದೇ.॥ ತೆಲು. ಪೂಲಿ]

**ಪೂಲಿಕುಂಟೆ**, **ಹೂಲಿಕುಂಟೆ** (ನಾ). ಒಂದು ಊರಿನ ಹೆಸರು : ಆಗ್ನೇಯದ ಎಲಂಟಿಕುಣ್ಟೆಯಿನ್ದೆ ಪೂಲಿಕುಣ್ಟೆಯಿನ್ದೆ ಪೆರ್ಬಳದೊಳಗಣ ಚಾದುಪೂಲದಿನ್ದೆ ಪಿರಿಯೊಟ್ಟಿಯ ಕೈವರದೊಳ್ ಒನ್ದು ಮಾನ್ನಂ (ಎಕ. X (೩). ಚಿಕ್ಕಬ. ೦೦೬-೬೨ ; ೩೬೦). **ಹೂಲಿಕುಂಟೆ** : ಹೂಲಿಕುಂಟೆ ಚೆಂದ ನಾಯಕನ ಮಗ ತಳವಾರಿ ದೊಡ್ಡಗೆ ಕಾಚಪ್ಪೊಡೆಯ ಆಗಳಿ ತಳವಾಱಿಕೆನೂ ಆಚೆಂದ್ರಾ(೦)ರ್ಕಸ್ತಾಯಿಯಾಗಿ ಕೊಟ ಶಾಸನ (ಕಾಇಶಾ. IX-II. ೩೦೯-೦; ೯). [ಪೂಲಿ$_2$ + ಕುಂಟೆ$_3$]

**ಪೂಲಿಕೆಱೆ** (ನಾ). ಒಂದು ಊರಿನ ಹೆಸರು : ಪೂಲಿಕೆಱೆ ಕಾದವಾ ಕಣ್ಮೊರ್ಬ್ಬೆಡಿ (ವೈಇಆರ. ೦೬೨೯. ೬೦-೦೭೦; 799). [ಪೂಲಿ$_2$ + ಕೆಱೆ]

**ಪೂಲು** (ನಾ). ಸಂಕ ; ಸೇತುವೆ ; ಕಟ್ಟೆ : ಹರಿಹರದ ಹತ್ತಿರ ಈ ಹೊಳೆಗೆ ದೊಡ್ಡ ಪೂಲು ಕಟ್ಟಿದ್ದಾರೆ (ಕಡಾಗ. ೦೨) ; ಅಪ್ಪಣ್ಣನು ಲೋಕಾ ಪುರದ ಹಳ್ಳದ ಪೂಲಿನ ಮೇಲೆ ಬರುತ್ತಿದ್ದನು (ಕಂಕು.೦೩೬). [←ಫಾರ. ಹಿಂ. ಪುಲ್ ; ಮರಾ. ಪೂಲ]

**ಪೂವ** (ನಾ). ಒಂದು ಬಗೆಯ ಔಷಧೀಸಸ್ಯ : ರಜನಿ ಕೃತಾಂಜಲಿ ಕಳವಿಗೆ ಬಜೆ ಗಂಧಕ ಪೂವಮೆಂಬಿವಂ ತವೆ ತಿಲತೈಲಜಲಾನ್ವಿತಘೃತದಿಂ ದಂಬುಜಾಕ್ಷಿಯರ್ಗೆಱೆಯೆ ನಸ್ಯಮಂ ಮೊಲೆ ಬರ್ಕುಂ (ಲೋಕೋಪ. ೯-೦೬೦). " ಸುಗಂಧಿ " (ಲೋಕೋಪ. ಟೀಕು). [ದೇ.॥ ತಮಿ. ಮಲ. ಪೂವ=ಅರಗಿನ ಮರ]

**ಪೂವಂಡು** (ನಾ). ಹೂವಿನ ರಸ ; ಮಕರಂದ ; ಪುಷ್ಪರಸ : ಅಂಚೆ ಕೊಂಚೆ ಪೂವಂಡು ಗಳಿವಿಂಡು ರಂಜಿಸುವ ಕಾದಲರೆಲರ್ ಸವಿವಾವು ಪೂವು . . . ಸೊಂಪು ಪೆಂಪಿಂದೀ ಪುರೋಪವನಮೆಸೆದಿರ್ಪುದು (ಕಬಿಕ. ೧೦-೨೦) ; ಬರೆ ಪೀರಿ ಪೂವಂಡನುರೆ ಸೊಕ್ಕಿ ಝೇಂಕರಿಪ ಮರಿ ದುಂಬಿಗಡಣದಿಂ . . . ಒಪ್ಪುವೊಂದುದ್ಯಾನಮಲ್ಲಿರ್ದುದು (ಶೀಪರಾ. ೯-೩೭). [ಪೂ$_2$+ಬಂಡು$_2$]

**ಪೂವಕ್ಕಿ**, **ಹೂವಕ್ಕಿ** (ನಾ). ೧. ದುಂಬಿ ; ಭ್ರಮರ : ಸುರುಳೆ ಪೂವಕ್ಕಿಗಳ ಬಳಗವೊ ಅರಿವೆಣ್ಣೆಯೊ ಪಣೆಯೋ . . . ಪೇಳಲೇನೆಂದ (ಕನಕು. ೦೩-೯೬); ತೀಡೆ ತಂಗಾಳಿ ಪರಿದಾಡೆ ಪೂವಕ್ಕಿ ದನಿಮಾಡೆ ಪರಪುಟ್ಟ . . . ಅರ್ಯಮನುದಿಸಿದಂ (ಗುರುಚಾ. ೩-೦೯). **ಹೂವಕ್ಕಿ** : ೨. ಒಂದು ಬಗೆಯ ಹಕ್ಕಿ : ಹೂವಕ್ಕಿಯ ಗಿಂಚರ ಟುವ್ವಿಟ್ಟುವೊ (ಅಶೀ. ೩೦-೯). 'ಅಲರ್ವಕ್ಕಿ' ಪರಾ. [ಪೂ$_2$+ಪಕ್ಕಿ]

**ಪೂವಟ್ಟೆ** (ನಾ). ಹೂವುಗಳನ್ನು ಪಟ್ಟಿಗಳಂತೆ ಜೋಡಿಸಿ ರಚಿಸಿದ ಚಿತ್ರ,—ಹಸೆ : ಕತ್ತುರಿಯ ಸಾರವಣೆ ಬಿಡುಮುತ್ತಿನ ಕಡೆ ಕಂಪು ವಿಡುವ ಕಪ್ಪುರವುಡಿಯಿಂದೊತ್ತಿದ ಲತೆ ಪೂವಟ್ಟೆಯಿನೊತ್ತರಿಸಿದ ಬಂಧ ವೆಸೆಯೆ ದೇವಿಯ ಗೃಹದೊಳ್ (ಲೀಲಾವ. ೦೦-೯). [ಪೂ$_2$+ಪಟ್ಟೆ$_3$]

**ಪೂವಡಿ** (ನಾ). ಹೂವಿನಂತೆ ಕೋಮಲವಾದ ಪಾದಗಳುಳ್ಳ ವ್ಯಕ್ತಿ : ಶಾಂಭವಲೋಕದ ಗಂಭೀರ ಪೂವಡಿ ಜಂಬೂದ್ವೀಪಕೆ ಕೆ ಪೋಪೆ (ಕೋಪಚ. ೦-೯೪). [ಪೂ$_2$+ಅಡಿ$_1$]

**ಪೂವಡಿಗ**, **ಹುವ್ವಾಡಿಗ**, **ಹೂವಡಿಗ**, **ಹೂವಾಡಿಗ** (ನಾ). ಹೂವು ಗಳನ್ನು ಕಟ್ಟಿ ಮಾರುವವನು ; ಹೂವಿನ ವ್ಯಾಪಾರಿ : "ಪೂವಡಿಗಂ ತಾಂ ಪುಲ್ಲವಡಿಗನೆಂದು ತಿಳಿವುದು " (ಕಶಬ್ದ.. ೦೦೦) ; ಅಡಿಗ ಪ್ರತ್ಯಯಕ್ಕೆ— ದೇವಡಿಗಂ, ಪಾವಡಿಗಂ, ಪೂವಡಿಗಂ (ಕಶಬ. ೨೦೩ ಪ್ರಯೋ) ; ಪೊಸ ಪೂವಡಿಗರ ಗರವಟಿಗರ ಕೊಲ್ಲಾಯ್ತರ ನುಡಿಗಾಱರ ಮಾಸ್ವಾರರ ಸಂದಣಿ ಸಲೆ ಸೊಗಯಿಸಿತಾಗ (ಜಗದುಕಾ. ೦೨-೦೯) ; ಈ ಧರ್ಮವತೀ ಪಟ್ಟಣವು ಸೋಮಸೂರ್ಯವೀಥಿಗಳಿಂದಲೂ . . . ಪೂವಡಿಗರ ಸಾಲಿ ನಿಂದಲೂ ಒಪ್ಪುತ್ತಿರುವುದು (ಕೃಶಸು. ೬). **ಹುವ್ವಾಡಿಗ** : " ಮಾಲಾಕಾರಃ, ಮಾಲಿಕಃ—೨ ಹುವ್ವಾಡಿಗನ ಹೆಸರುಗಳು " (ಸಿದ್ಧಾಂತಿ. ೩೦೯) ; ಹುವ್ವಾ ಡಿಗರು ಬಚ್ಚಣೆಯ ಕೆಲಸದವರು ಚಿಪ್ಪಿಗರು . . . ಮುಚ್ಚಿಗರು ಮೊದ ಲಾದ ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳಂ ಹಂಚಿ (ಕಾಗಂಧಿ.

೧೩೩-೭). **ಹೂವಡಿಗ :** ಪಡಪಿಗರು ಚಾಮರಿಗರೆಡೆಯಾಡುವವರು ಪೂವಡಿಗರು ಸುಮಾರರರಸಾಳುಗಳು . . . ಇಡಿಕಿರಿದು ಸೊಗಯಿಸಿದರು (ಶಂಂದಪು. ೬ ೫೯); ಹೂವು ಯಾವ ತೋಟದಲ್ಲಿ ಬೆಳೆಯಿತು ಎಂಬ ಚಿಂತೆಯನ್ನು ಹಚ್ಚಿಕೊಳ್ಳದೆ ರಸಿಕರು . . . ಮುಡಿದು ನಲಿಯಲಿ ಎಂಬ ಹೂವಡಿಗನ ನಿಲವು ನನ್ನದು (ಬಂಶಾಶ. VI. ೬೦೯). **ಹೂವಾಡಿಗ :** " ಹೂವಾಡಿಗನೆನಲ್ಕೆ ಹೂ ಮಾರುವವನು " (ಕಶರ. ೧೧೩); ಹೂವಾಡಿಗನ ಪುತ್ರಿಯರಿಬ್ಬರು ಜಿನದೇವನ ಹೊಸ್ತಿಲ ಮೇಲೆ ಹೂವನರ್ಚಿಸಿದ ಫಲದಿ ಸ್ವರ್ಗದಿಂದ್ರಂಗೆ ದೇವಿಯರಾಗಿ ಪುಟ್ಟಿದರು (ದ್ವಾದಶಾ. ೦೦-೬೬೯).

[ಪೂ₂ + — ಅಡಿಗ₂]

**ಪೂವಡಿಗವೆಣ್** (ನಾ). ಹೂವನ್ನು ಕಟ್ಟಿ ಮಾರುವ ಹೆಣ್ಣು ; ಹೂವಾಡಿಗಿತ್ತಿ : ಕುಸುಮದ ಪಸರದೊಳೊಪ್ಪಿದರಲ್ಲಿ ಪೂವಡಿಗವೆಣ್ಗಳದ ನೇವೇಳ್ವೆನು (ಶ್ವಸುಪಾ. ೬-೧೬). [ಪೂವಡಿಗ + ಪೆಣ್]

**ಪೂವಡಿಗಿತಿ**, ಪೂವಾಡಗಿತ್ತಿ, ಹೂವಾಡಗಿತ್ತಿ (ನಾ). = ಪೂವಡಿಗವೆಣ್ : ಮಾಪಡಿಗಿತಿ, ಪೂಪಡಿಗಿತಿ, ಮಾಲೆವಡಿಗಿತಿ (ಶಬ್ದಾಮ. ೦೯೨ ಪ್ರಯೋ). **ಪೂವಾಡಗಿತ್ತಿ:** ವಾಸವರಾಯನ ಹಿರಿ ಹೂವು ಎಂದು ದೇಶವ ತಿರುಗಿದರು ಪೂವಾಡಗಿತ್ತೇರು (ಚಾಸಿಗ. ೨೦-೦೦). **ಹೂವಾಡಗಿತ್ತಿ :** ಬಾಗಿಲಲ್ಲಿ ಹೂವಾಡಗಿತ್ತಿಯೊಬ್ಬಳು ಸೊಗಸಾದ ಮಲ್ಲಿಗೆಮಾಲೆಗಳನ್ನು ಹೆಣೆದುಕೊಂಡು ಬಂದಳು (ಕಮನ. ೦೩೦).

[ಪೂವಡಿಗ + — ಇತಿ₁ (< — ಇತ್ತಿ)]

**ಪೂವಡೆ** (ನಾ). ಒಂದು ಬಗೆಯ ವಸ್ತ್ರ (?) : ಕುಡುಗುಂ ಚಿತ್ರಾವಟಿ ಪಟಿಯುಡವಟ್ಟೆ ಸುವರ್ಣಚೇಲಮುಂ ತಿವಟಂ ಪೂವಡೆ ಕರ್ಮಂ ನೆರೆವಂ ಮಣಲೆಡೆಯುಂ ರತ್ನಂಗವಸನಮುಂ ವಸನಾಂಗು (ಶಾಂತಿಪು. ೬-೦೦೦). [?]

**ಪೂವಣಿಗ** (ನಾ). = ಪೂವಡಿಗ : ಪೂವಣಿಗಂ ಪಟಿಗಂ (ಶಬ್ದಾಮ. ೯೦೬ ಪ್ರಯೋ). [ಪೂ₂ + — ವಣಿಗ₂ (< — ವಳಿಗ₂)]

**ಪೂವರಸೆ** (ನಾ). ಒಂದು ಬಗೆಯ ಕಣ್ಣಿನ ರೋಗ : ಅರಿವಾಳಿ ಪಟೋಲಂ . . . ತಮಸ್ತಿಮಿರಂ ಪೂವರ[ಪಾಠಾಂ ಮರಿ]ಸೆ ನರೆಯೆಂಬ ಪಲವಕ್ಷಿರೋಗಮುಂ ಕಳೆಗುಮಂಜನಂ (ಅಶ್ವಶಾ. ೦೩-೦೩). [?]

**ಪೂವಲಿ**, ಪೂವಳಿ, ಹೂವಲಿ (ನಾ). ೧. ರಂಗವಲ್ಲಿಯಂತೆ ರಚಿಸಿದ ಹೂವುಗಳ ಅಲಂಕಾರ : ಗಂಧಾಂಬುಮಿಂದಾದ ಪೂವಲಿಯಿಂ ಚೆಲ್ವೆಸೆದಿರ್ದ ಬೀದಿಗಳ್ . . . ಚೆಲ್ವನಗ್ಗಳಿಸುತ್ತಿತ್ತು ವು ತತ್ಪುರಕ್ಕೆ ಸುರರಾಜಾವಾಸ ಸಾಮ್ರಾಜ್ಯಮಂ (ಆದಿಪು. ೭-೦೦೩); ಇದಱ ತಪನೀಯಸೋಪಾನಂಗಳ್ ಜಿನಸವನ ಗಂಧೋದಕಂಗಳಿಂ ಪೂವಲಿಯುಂ ಮುದದೆ ತಲೆಯೊಳ್ ಪೊತ್ತಂತಿರ್ಪುವು (ಶಾಂತಿಪು. ೧೦-೩೭); ಸೊಗಯಿಪ ಸುಧಾಬ್ಧಿಮೋಹದೊಳಿಂದು ಬಂದೆನ್ನ ಪ್ರಾಗನು ದಟ್ಟಡಿಯಿಡುವ ರಾಜಾಂಗಣವಿದೆಂದು . . . ಸಮ್ಮಾರ್ಜನೆಯ ಮಾಡಿ ಮಲ್ಲಿಗೆಯ ಪೂವಲಿಯ ಕೆದಱಿ ಗಗನವನಲಂಕರಿಸಿದಳೊಯೆನಿಪ್ಪಂತೆ . . . ಮೃಗಧರಂ ಕಣ್ಗೆಸೆದುದು (ಹಪಶಾ. ೩-೮೦). ೨. ರಂಗವಲ್ಲಿ : "ಕಡೆಯುದೆಂದುಂ, ಪೂವಲಿಯೆಂದುಂ ರಂಗವಲಿ " (ಕಶಾಂ. ೬೩-೯೦೪). ೩. ಹೂವುಗಳ ಮಳೆ ; ಪುಷ್ಪವೃಷ್ಟಿ : ಸುರವೈರಿಯ ವಧದಿನದೊಳ್ ಧರೆಗುದಿರ್ದುವು ತಾರಕಂಗಳೆನೆ ಪೂವಲಿ ಭಾಸುರಮಾಯ್ತು ಮಲ್ಲರಂಗದೊಳ್ (ಜಗವಿ. ೬-೪೦); ಮಲಯಾದ್ರಿಗಂಧವಹನರ್ತಕನು ತಳಿರೆಂಬ ಕರಗಳಿಂ ಪೂವಲಿಯ ಸಲೆ ಸೂಸಿ (ಶ್ವಾವಚಂ. ೧-೬೦); ಸೂಸಿ ಪೂವಲಿಯನಾಹ್ವಾನಗೈವಳಿದೊ ಈ ವಿಪಿನರಾಜೇಶ್ವರಿ (ಶ್ರೀರಾಮಾ. ೦೯೩-೨೭). **ಪೂವಳಿ :** ೧. ಸಾರಣೆಯ ಕಾರಣೆಯ ಗಂಧೋದಕದ ಚಳೆಯಗಳ ಸೌರಭದ ಪೂವಳಿಗಳಲಿ ಶೃಂಗಾರಿಸಿದ ಬೀದಿಗಳ ಸೊಬಗಿನ ಸಾರದಲಿ ಸಮನಿಸಿದುದತಿ ಸೌರಂಭ ಬನವಸೆಯು (ಪ್ರಭುಲಿಂ. ೩-೪). ೩. ಇಳೆಯುಂ ಪಾದಾಬ್ಜರಾಗಂ ಮುರುಚಿ ಘುಸೃಣಾಂಭಶ್ಛಟಾಸಕ್ತಿಯಿಂ ಪೂವಳಿಯಿಂ ದಿಕ್ಚಕ್ರಮಂ . . . ಪೂರಿಸೆ ನೆರೆದುದಜಸ್ರಂ ಪುರಸ್ತ್ರೀಸಹಸ್ರಂ (ಜಗಪ. ೦೬-೭೯). **ಹೂವಲಿ :** ೧. ಪೂವಲಿಯ ವೀಥಿಗಳ ನವರತ್ನಾವಳಿಯ ಸೂಸಕದ ಭದ್ರದ ಲೋವೆಗಳ ಲಂಬಳವಲಿಸೆದವು ಕೇರಿಕೇರಿಗಳು (ಕುಮಾವ್ಯಾ. ೧೯-೪೭); ಹೂವಲಿಯ ಪುರರಚನೆಗಳ ಸಂಭಾವನೆಯನೆಸಗುವುದು (ತಿಪ್ಪಾಗ. ೧-೭-೯).

[ಪೂ₂ + ಬಲಿ₃]

**ಪೂವಲಿಗೆದಱ್**, ಪೂವಲಿಗೆದಱು (ಕ್ರಿ). ಹೂವುಗಳನ್ನು ಚೆಲ್ಲು; ಪುಷ್ಪಗಳನ್ನು ಹರಡು : ಪೂವಲಿಗೆದರ್ವ ಸಂಪಗೆಯೆಸಳ ಪ್ರಸರದಿಂ ಸುವರ್ಣದ್ವೀಪದಂತೆಯುಂ . . . ಅಪ್ಪ ಮಾರ್ಗಮಂ ನೋಡುತೆ (ಕಾದಂಪೂ. ೦೦೨೦); ನಲಿದು ನರ್ತಿಸುವ ಪೂವಲಿಗೆದರ್ವ . . . ಪೂಗಳ ಬೊಂಬೆಗಳ ಸಾಲ್ಗಳಿಂದೆ ಚೆಲ್ವಾದುದಾ ಬನಂ (ಕಬಿಪು. ೪೩-೨೭). **ಪೂವಲಿಗೆದಱು :** ಪೂವಲಿಗೆದಱಿದ ಪೊಂಗೇದಗೆಯ ಗಱಿಯ ಕಿಱುಮುಳ್ಗ ಬೆಱಿದೆ ಬೈಗುಳಂ ಮಾಡಿಯುಂ . . . ಎಂತಾನುಂ ತತ್ಕಾಂತೆ ಒಂದೆರಡಡಿಯನಿಡುವಲ್ಲಿ (ಕಾದಂಸಂ. ೩೭); ಅವಱಿಡೆಯೆಡೆಯೊಳ್ ಪೂವಲಿಗೆದಱಿದಂದದಿಂ ಪ್ರಕೀರ್ಣಕಂಗಳಿರ್ಪುವು (ವರ್ಧಪು. ೦೦-೩ ವ); ಕತ್ತುರಿಯ ಕೆಸಱಿನಲಿ ಸಾರಿಸಿ . . . ಸುರಕುಜಕುಸುಮದಲಿ ಪೂವಲಿಗೆದಱಿ . . . ಸೇವೆಯ ಮಾಳ್ಪರಮರಿಯರು(ಶಾಳ್ವಭಾ. ೩೨-೩೩). [ಪೂವಲಿ + ಕೆದಱ್₁]

**ಪೂವಲಿಗೆದಱು** 'ಪೂವಲಿಗೆದಱ್' ನೋ.

**ಪೂವಲಿಗೆಯ್** (ಕ್ರಿ). = ಪೂವಲಿಗೆದಱ್ : ಪೂವಲಿಗೆಯ್ದು ಪೂವಿನ ತೊಡಂಬೆಯ ನಿಬ್ಬರಮಪ್ಪ ಸೋಂಕಿನೊಳ್ ನೋವುವೆನಿಪ್ಪ ಮೆಲ್ಲಡಿಯ ನಂಡಿಡುವಂ ಮಹಿಪಂ ತಪೋವನಸ್ಥಾವಕೀರ್ಣಮಪ್ಪೆಡೆಯೊಳ್ (ಮಲ್ಲಿಪು. ೧೦-೩೩); ಸ್ತನಕಲಶಂ ಕದಕ್ಕದಿಸೆ ಸೋಮರ್ಬುಡಿ ಪೂವಲಿಗೆಯ್ಯೆ . . . ಕಾಂ ತಳರ್ದತ್ತು ವಿಲಾಸಿನೀಜನಂ (ಕುಸುಮಾ. ೩-೯೯).

[ಪೂವಲಿ + ಕೆಯ್₁]

**ಪೂವಲಿಗೊಡು** (ಕ್ರಿ). = ಪೂವಲಿಗೆದಱ್ : ಮಣಿಮಯಕಳಶವಸ್ತ್ರದ ವಿಪಣಿ ನಿರ್ಜನದೆಡೆ ಕುರೂಪಾದ ಲಲನೆ ಪೂವಲಿಗೊಡದ ಮಾರ್ಗಸ್ಥಳದ ಕೋವಿದಮನುಜರಿಲ್ಲೆನೆ ಹೊಳಲ ಮಹದೈಶ್ವರ್ಯವನು ವರ್ಣಿಸುವರಾರು (ಜೀವಂಚ. ೨-೨೩). [ಪೂವಲಿ + ಕೊಡು₁]

**ಪೂವಲ್ಲಿ** (ನಾ). ಹೂವು ಬಿಡುವ ಬಳ್ಳಿ; ಪುಷ್ಪಲತೆ : ಪೂವಲ್ಲಿ ಹಾಳಾಗಿ ಮಾವುಫಲಗಳು ಪೋಗಿ ಗೋವುಗಳೆಲ್ಲವು ಪಾಲು ಕೊಡದಾಗ ಜಗದೊಳಗೆ ಸಾವು ಪೆಚ್ಚುವುದು (ಕಾಲಸಂ. ೬೩-೧೦೦); ಪಿರಿದೆನಿಸುವ ಕಲ್ಪವೃಕ್ಷ ನಾನಾಬಗೆ ಪರಿಮಳಪೂವಲ್ಲಿಗಳು ವರದಿವ್ಯಸರಸಿಯ ಬಳಸಿದುದ್ಯಾನದೆ ಮೆಱೆದುವು (ಕಂಪನಿ. ೨೩-೩೩). [ಪೂ₂ + ವಲ್ಲಿ₂]

**ಪೂವಸರ** (ನಾ). ಹೂವು ಮಾರುವ ಅಂಗಡಿ : ಪ್ರೀತಿ ಮಿಗೆ ಮಾಲೆಗಾರ್ತಿಯರುಸಿರುತಿರ್ಪ ಸವಿಮಾತೆನಲ್ ಮಧುಪರವಮೊಡಗೂಡಿ ಕಂಪುಗಳ ಜಾತಿಯಂ ಬೇಱೆಬೇಱಿದಿಸುತೆ ಸುಳಿಗಾಳಿ ಪೂವಸರದೊಳ್ ಮೆಱೆದುದು (ಪುಪು. ೦೨-೩); ಮದಹಸ್ತಿಗಮನೆ ಮತ್ತೋರ್ವಳಾ ಪೂವಸರಸದನಕ್ಕೆ ಮುಂಗಡೆ(ಯೊಳಿಟ್ಟು) ಸಾಣೆಯನು ಮೃಗಮದಕುಂಕುಮಂಗಳಂ ಧರಿಸಿ ಪೋಪಣೆಗೆಯ್ಯೆ (ವೆಂಕಾರಾ. ೦-೪-೨೭). [ಪೂ₂ + ಪಸರ]

**ಪೂವಸೆ** (ನಾ). ಹೂವಿನ ಹಾಸುಗೆ; ಪುಷ್ಪಶಯ್ಯೆ : ಕೋಮಲ ವೀಣಾರುತಿಗೇಳ್ವ ಪೂವಸೆಗಳೊಳ್ ಪಟ್ಟಿರ್ಪ ಸೌಖ್ಯಾಳಿ ದೋಹಲಕೇಳೀ ಮುದಮುಂ ಸಮಂತು ತಳೆದಳ್ ತತ್ಕಾಂತೆಯಿಂತಾಮಗು (ಕುಸುಮಾ. ೦೨-೨೯); ಪೊಸಸುಸಿಲೊಳ್ ನೃಪಾತ್ಮಜೆಯೊಳಿಂತು ಮರಂ ಪಡೆಯಲ್ಕೆ ಕೂರ್ತು ಪೂವಸೆಗೆಸೆವಾಕೆಯುಂ ಬರಿಪುದುಂ (ಲಸರ. ೦-೩೯); ಕೂರ್ಪಳ ಕೈವಿಡಿದೆಯ್ದಿ ಪಲ್ಲವಪ್ರಸರಸಮೇತಮಾದ ಮನೆಯೊಳ್ ಪೊಸ ಪೂವಸೆಯಲ್ಲಿ ಕೂಡಿದಂ (ರಾಜಶೇ. ೩-೦೦೩). [ಪೂ₂ + ಪಸೆ₂]

**ಪೂವಳ**, ಹೂವಳ (ನಾ). = ಪೂವಾಡಿಗ : " ಅಲರ್ವಡಿಗನೆನಲ್

ಪುಲ್ಲವಡಕಾಱ ಪೂವಳನೆಂದು ಪೂವಡಿಗನೆಂದೆನಿಕ್ಕುಂ" (ಕಬ್ಬಿಗ. ೩೯); ಒಂದುದಿವಸಂ ಪೂವಳಂ ಶೈಲಜಾತೆಗಾ ಮಾಲೆಯಂ ಕೊಡುತಿರಲ್ಕೆ (ಶಬಕ್ರೆ. ೯೫-೩). **ಹೂವಳ :** ಮಡದಿ ಮುಡಿದಿರುವ ಹೂ ಯುವಕಂಗೆ ಚಂದ ಗುಡಿಯೊಳಗೆ ಕೊಡುವ ಹೂ ದೈವಭಕ್ತಗೆ ಚಂದ ಬಿಡಿಗಾಸು ಹೂವಳಗೆ (ಶುಂಕರಂಲ. ೩೦೦). [ಪೂ$_3$ + — ವಳ]

**ಪೂವಳಿ** 'ಪೂವಲಿ' ನೋ.

**ಪೂವಳಿ** 'ಪೂವಟಿ$^3$' ನೋ.

**ಪೂವಟಿ$^3$, ಪೂಮಂಳೆ, ಪೂಮಟಿ$^3$, ಪೂವಳೆ, ಹೂಮಳೆ** (ನಾ). ಮಳೆಯಂತೆ ಹೂವು ಸುರಿಯುವಿಕೆ; ಹೂವಿನ ಮಳೆ; ಪುಷ್ಪವೃಷ್ಟಿ : 'ಪೂವಟಿಗಱಿ$^3$' ಪರಾ. **ಪೂಮಳೆ :** ದುಂದುಭಿಗಳೆಸೆಯೆ ಪೂಮಳೆ ಸುರಿಯೆ (ಸಿದ್ಧರಾ. ೦-೫೬) ; ಅಬುಜಾಸನ ಸುರೇಂದ್ರಾದಿಗಳು ಜಯಜಯ ನಿನದದಲಿ ಸೂಸಿದರು ಸುಮ್ಮಾನದಲಿ ಪೂಮಳೆಯ (ಕೊರರಾ. ೦-೦೦-೨೩) ; ಚಿಣ್ಣರಂಗದ ಮೇಲೆ ಮೆಚ್ಚಿ ಪೂಮಳೆಗಳಂ ಕಱಿದರಮರರ್ (ಕೈಖರಾ. ೨೦-೧೨). **ಪೂಮಟಿ$^3$ :** ಪೂಮಟಿಯ ಕಂಪನಿತಿಂಪು ಪೊದಟ್ದು ಬಂದು ಬಂಧುರಹಿಮಮಂದಗಂಧವಹಮೆಟ್ಟಿಱಿಸಿತ್ತು ವ್ಯಾಕಾಂಶುವಕ್ತ್ರಯಂ (ಆದಿಪು. ೩-೨೨): ನಭದೊಳ್ ಪೂಮಟಿ ಭೂಮಿಯೊಳ್ ಮರುತಕಂ ದಿಗ್ಭಿತ್ತಿಯೊಳ್ ದೇವದುಂದುಭಿನಾದಂ . . . ಒಪ್ಪಿರೆ ಬಂದಂ ಲೋಕನಾಥಂ (ಶಾಂತಿಪು. ೮-೩೦) ; ಪೂಮಟಿಯುಂತಲ್ಲೊಕ್ಕುವು ಪೂಮರಗಳ ಪೂಗಳ್ (ಸಂಶಾಖ. ೦೦-೦೩). **ಪೂವಳೆ :** ಸರಿದುದು ಪುಸಿವೇಷದ ತೆರೆ ಸುರಿದುದು ಕಯ್ಯಾರ ಕಱಿದೆ ಪೂವಳೆ (ಗಿರಿಜಾ. ೯-೭೨೦) ; ಸುರಿದುದು ಪೂವಳೆ ಕಾಮಗೆ ನೇತ್ರದೆ ಸುರಿದುದಾನಂದಾಶ್ರು ರತಿಗೆ (ಸೋಹಕ. ೦೨-೬೯); ದೇವಗಂಧರ್ವಸಂದೋಹ ಚದುರಿಂದ ಪೂವಳೆಯ ಕರೆದು ಪಾಡಿದರಾ ಮರುತ್ಸುತನ ಕೀರ್ತಿಗಳನು (ವೆಂಕರಾ. ೩-೦-೨೯). **ಹೂಮಳೆ :** ಹೂಮಳೆಗಳೆಱಗಿ ಸುರಿದವಾತನ ಮೇಲೆ (ಇಹರ. ದೇ. ೪೩-೦); ಎಕ್ಕತುಳದಲಿ ಬಂದನಮರರ ಹೆಕ್ಕಳದ ಹೂ ಮಳೆಯ ಹೊಯ್ಲಿನ ಪೂರದಲಿ ಹನುಮ (ಕೊರರಾ. ೩-೯-೬); ದೇವತೆಗಳು ಹೂಮಳೆ ಕರೆದರು (ಪ್ರಾಸಕಿ. ೦೩). [ಪೂ$_3$ + ಮಟಿ$^3$]

**ಪೂವಟಿಗಱಿ$^3$, ಪೂಮಂಳೆಗಱಿ$^3$, ಹೂಮಳೆಗಱಿ$^3$** (ಕ್ರಿ). ಮಳೆಯಂತೆ ಹೂವುಗಳನ್ನು ಸುರಿಸು ; ಪುಷ್ಪವೃಷ್ಟಿ ಮಾಡು : ಅಱಿವುದುಮ ಘಾತಿಗಳ್ ಪೂವಟಿಗಱಿದುದು ನಭದಿಂ (ಶಾಂತಿಪು. ೦೨-೩೩) ; ಸುರರ್ ಪೂವಟಿಗಱಿವರ್ (ಕಣ್ಣಸು. ೦೦೩ ಪ್ರಯೋ). **ಪೂಮಳೆಗಱಿ$^3$ :** ಸುರರು ಪೂಮಳೆಗಱಿವರು (ಕೊರರಾ. ೯-೦೨-೩೫) ; ದೇವದುಂದುಭಿ ಮೊಳಗೆ . . . ಪೂಮಳೆಗಱಿಯೆ (ಶ್ರೀರಾಷ. ೩-೧೦). **ಹೂಮಳೆಗಱಿ$^3$ :** ದೇವದುಂದುಭಿ ವೃಂದವುಲಿಯಲು ತೀವಿ ಹೂಮಳೆಗಱಿಯೆ . . . ಪ್ರಮಥರುತ್ಸವಿಸೆ (ಬಸಪು. ೦೬ ೭೬) ; ನಾಕಜನಿವಹ ಹೂಮಳೆಗಱಿದು ಹರುಷಿಸಿ ಪವನಜನ ತಾಯ್ ಭೀಮಸೇನನುಯೆಂದು ಹೆಸರಿಡಲು (ಸಂಭಶ. ೦೫-೫೬); ಅವರಿರ್ವರಿಗೆ ಹೆಱಿನ್ನೊಸಲಮರಾಂಗನೆಯರು ಹೂಮಳೆಗಱಿದರು ರಣ ರಂಗದೊಳಗೆ (ಮೋಹಕ. ೩೯-೨೯). [ಪೂವಟಿ$^3$ + ಕಱಿ$^3_1$]

**ಪೂಪಾಡಗಿತ್ತಿ** 'ಪೂವಡಿಗಿತಿ' ನೋ.

**ಪೂವಾಸು$_1$** (ಕ್ರಿ). ಹೂವಿನ ಹಾಸುಂಗೆಯನ್ನು ರಚಿಸು : ಚಂದನದೆಳ ದಳಿಗರ್ಗಳಂ ಪಾಸಿ ಮಲ್ಲಿಗೆಯುಲರ್ಗಳಂ ಪೂವಾಸಿ (ಶಂಶಭಾ. ೩-೬ ವ).

[ಪೂ$_3$ + ಪಾಸು$_1$]

**ಪೂವಾಸು$_2$** (ನಾ). = ಪೂವಸೆ : ಪೂವಾಸಿಗೆ ಶಿಱಿವರೆಂಬ ಭಯದಿಂ ಮುಟುಂಗಿದ ಚೆನ್ನೆಯ್ದಿಲ್ಗಳಂತಿರೆ ನಿರಂತರಾಶ್ರುಪಾತದಿಂ ಕೆಂಪುದಳೆದ ಕಣ್ಮಲರಸೊಳಕೆಯ್ದು ಪವನದ ಕಿಳಿಗೊಳಂಗಳೊಳು ಪುಗುವಳ್ (ಕಾದಂಬ. ೩೩೯) ; ತರಳೆ ನಿನ್ನಯ ವಿರಹದಿಂದ ಪೂವಾಸಿನೊಳು ಪೊರಳೆ ಮತ್ತಲ್ಲಿ ಸೈರಿಸಲಾಱದೆರ್ದು ಕುಳ್ಳಿರಲ್ (ಶಿಣ್ಣಕ. ೨-೨೯) ; ಪಾಸಿದ ಪೂವಾಸಿನೊಳು ಸ್ಮರಾಸಿಯಂದದಿ ಮಲಗಿಹಳೇ ಮಡದಿ (ಶಾಕುಂತ. ೩೩ ೪೩೪).

[ಪೂ$_3$ + ಪಾಸು$_2$]

**ಪೂವಿನಪಿಪ್ಪರಗೆ** (ನಾ). ಒಂದು ಊರಿನ ಹೆಸರು ; ಈಗಿನ ವಿಜಾಪುರಜಿಲ್ಲೆಯ ಬಾಗೆವಾಡಿ ತಾಲ್ಲೂಕಿನ ಹೂವಿನ ಹಿಪ್ಪರಗೆ ಎಂಬ ಊರು : ಪೂವಿನ ಪಿಪ್ಪರಗೆ[ಯ] ನಾಲ್ಕು ದೆಸೆಯ ಪೊಲ ಮೇರೆಯಂ [ನ]ಡುಸರಿಯಾಗಿ ನಡದು[ಂ] ಕೊಟ್ಟರ್ (ಶಾಇಇ. XI-i, ೯-೨೩; 862). [< ಪೂ$_3$ + ಪಿಪ್ಪರಗೆ]

**ಪೂವಿನಪುಲ್ಲಿಮಂಗಲ** (ನಾ). ಒಂದು ಊರಿನ ಹೆಸರು : ಬೆಂಪೂರು ತೊವಗೂರು ಪೂವಿನಪುಲ್ಲಿಮಂಙ್ಗಲ . . . ಪರಪೂರು ಕೊಡಲೆ ಇವಿತು ಮಮ್ ಪೊಲಮೇರೆ ಸಹಿತಂ ಇತ್ತನ್ ಎಱೆಯಪಂ ಕೇವುಚರನ್ ನಾಗ [ತ್ತ]ರಱ್ಙ (ಎಕ. IX. ಬೆಂಗಳೂ. ೯೩-೬ ; ಕ್ರಿ. 890).

[< ಪೂ$_3$ + < ಪುಲ್ಲಮಂಗಲ]

**ಪೂವಿಲ್, ಪೂವಿಲು, ಪೂವಿಲ್ಲು** (ನಾ). ಹೂವಿನ ಧನುಸ್ಸು ; ಮನ್ಮಥನ ಬಿಲ್ಲು : 'ಪೂವಿಲ್ಲ' ಪರಾ. **ಪೂವಿಲು :** 'ಪೂವಿಲುಗಾಱ' ಪರಾ. **ಪೂವಿಲ್ಲು :** ಸ್ಮರನಿಗೆ ಪೂವಿಲ್ಲನು ಕೊಡುವಂದದಿ ವರಗುಣ ಮಾಲೆಯು ತನ್ನ ಹರಣದೊಡೆಯನ ಕೈಯಲಿ ಪೂಮಾಲೆಯಾದರದಿಂದಿತ್ತಳು (ಜೀಜಂಸಾಂ. ೦೬-೨೯) ; ಕಾವನ ಪೂವಿಲ್ಲ ಗೊಂಡೆಯಗಳನೊರ್ವ ಭಾವಕಿ ವಂಚಿಸಿ ತಂದು ಪೂವಿನಂಗಡಿಯೊಳಿರಿಸಿ ಮಾಱುವೊಲು ಪೊಸ ಸೇವಂತಿಯರಲ ಮಾಱುವಳು (ಅಂಜಶ. ೩-೬೯) ; ಪೂವಿಲ್ಲನೇರಿಸಿ ಕಾವನು ಕಣೆಗೊಂಡು ಟಂಕಾರ ಮಾಡಿದನಲ್ಲ (ಅಂಜಾಶ. ೦೯೯-೯). [ಪೂ$_3$ + ಬಿಲ್$_3$]

**ಪೂವಿಲು** 'ಪೂವಿಲ್' ನೋ.

**ಪೂವಿಲುಗಾಱ** (ನಾ). ಹೂವಿನ ಬಿಲ್ಲಿನಲ್ಲಿ ಹೂಬಾಣಗಳನ್ನು ಹೂಡುವ ಬಿಲ್ಲುಗಾರ ; ಮನ್ಮಥ ; ಪುಷ್ಪಬಾಣ : ನಾಡಿವಮೂಲವ ತಿಳಿದು ಗೆಲವಿತ್ತು ಸುಸಿಲಿಂಪುಗಲಿಸಿ ಕಾಣಿಪರು ಪೂವಿಲುಗಾಱನಾಗ ಮಾರ್ಗವನು (ಕೃರವೇ. ೨-೦೦೩). [ಪೂವಿಲು (< ಪೂವಿಲ್) + —ಕಾಱ]

**ಪೂವಿಲ್ಲ** (ನಾ). ಕಾಮ ; ಮನ್ಮಥ : "ಅಲರಂಬಂ ನನೆವಿಲ್ಲ ಬಲ್ಲಹ ನೆನಲ್ ಪೂವಿಲ್ಲ ಕಾವಂ" (ಕರ್ಣಾಟಿ. ೮) ; ಪುಣ್ಣಲ್ಲದೆಯುಂ ಪೂವಿಲ್ಲನ ಶರಹತಿಯಿಂ ನೋವನೆ ತಳೆದಪುದಿದೆನ್ನ ಹೃದಯಂ (ಕಾಕ್ಷ್ಮೀ. ೦೦-೩೦); ಪೂವಿಲ್ಲನ ಚಾಪಸಂಜನಿತಮೋಹನನಾದಮೊ ಸೋಮರಾಜಭೂವಲ್ಲಭ ನಿಂಪುವೆತ್ತ ವಚನಾಮೃತವೋ ವಿಬುಧಾನುರಾಗವೋ (ಉದ್ಭಟ. ೦-೩೩) ; ಹೊಲ್ಲಹದೊಂದು ಪೆಣ್ಮೀನು ಕಂಡೆಱಗಿ ಪೂವಿಲ್ಲನ ನೆಱೆ ನುಂಗಿತಾಗ (ಮೋಹಕ. ೧೨-೬). [ಪೂವಿಲ್ + —ಅ$_3$]

**ಪೂವಿಲ್ಲು** 'ಪೂವಿಲ್' ನೋ.

**ಪೂವು** 'ಪೂ$_3$' ನೋ.

**ಪೂವುಟ್ಟಿ, ಹೂಬುಟ್ಟಿ** (ನಾ). ಹೂವಿನ ಕರಂಡ, —ಬುಟ್ಟಿ : ರಾಣಿ ಕೋದಿದ್ದ ಹಾರವನ್ನು ... ಅದೇ ಪೂವುಟ್ಟಿಯಲ್ಲಿರಿಸಿದಳು (ಶಚಿ. ೨೯೨). **ಹೂಬುಟ್ಟಿ :** ದೇವರ ಪೂಜೆಗೆಂದು ಅವರು ಹೂಬುಟ್ಟಿಯ ತುಂಬ ಸಂಪಿಗೆಹೂವುಗಳನ್ನು ತಂದಿದ್ದಾರೆ (ಚೂಪ). [ಪೂ$_3$ + ಪುಟ್ಟಿ$_1$]

**ಪೂವುಡಿ** (ನಾ). ಹೂವಿನ ಧೂಳು, —ಪರಾಗ : ಅಲರ್ಗುಡಿ ಚಾಮರಂ ನೆಗೆವ ಪೂವುಡಿ ಸೀಗುರಿ ತುಂಬಿಯಿಂಚರಂ ಸುಲಲಿತಗಾನಂ . . . ಆಗೆ ಬನವೋಲಗಶಾಲೆವೊಲಾಯ್ತು ಕಾವನಾ (ಪ್ರಶಪ. ೯-೩೫) ; ತನಿಯುಸಿರ ಪೂವುಡಿಯು ಪೊಸಸೋನೆಯೆನಿತು ? (ಕಾಂಚಿರ. ೦೨೦-೨೫೦) ; "ಉದಿರ್ದ ಪೂವುಡಿ ಬನರಾಣಿಯ ಮೊಗವಾಡದ ಪಳಿಕಿನ ಪೊಸಂತಿಲೊಳ್ ಬರೆದ ರಂಗವಲ್ಲಿ"ಯಂತಿದ್ದಿತು (ಹಸುಹೂ. ೨೩೯). [ಪೂ$_3$ + ಪುಡಿ]

**ಪೂವೃಷ್ಟಿ** (ನಾ). = ಪೂವಟಿ$^3$ : ನಿಟ್ಟಿಸಿ ಬಿ ೩ವಮ ಗಜವದನರಿಗೆ ಪೂವೃಷ್ಟಿಯ ಸುರರು ಚೆಲ್ಲಿದರು (ಮೋಹಕ. ೩೮-೬೯). [ಪೂ$_3$ + ವೃಷ್ಟಿ]

**ಪೂವೆಂಟೆ** (ನಾ). ತಾವರೆಯಿಂದ ತುಂಬಿದ ಸರೋವರ; ಹೂಗೊಳ : ಪೂವೆಂಟೆಯುಂ ಪೊಱವಟ್ಟುಂಚರವುನುಡುಗದೆ ಪರಿದು ಮುತ್ತುವ ಮತ್ತಮುಂಬಳಂಗಳುಮಂ (ಆದಿಪು. ೩-೬೨ ವ). [ಪೂ$_{3}$ + ಬೆಂಟೆ]

**ಪೂವೆತ್ತು**, ಹೂವೆತ್ತು (ಕ್ರಿ). ೧. ಹೂವಿನ ಮಾಲೆಯನ್ನು ಮೇಲೆತ್ತು,–ಎತ್ತಿ ಹಿಡಿ : ಚೆಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರ ನಂದರಿಕೇಸರಿ ನಿಂದು ನೋಡಿದಂ (ಶಂಕಶಾ. ೯-೯೦). **ಹೂವೆತ್ತು** : ೨. ಹೂವನ್ನು ಕೀಳು,– ತಿರಿ : ಬೆಳಗ್ಗೆ ಪೂಜೆಗೆ ಹೂವೆತ್ತುವುದು ಅವರ ಪ್ರತಿದಿನದ ಕಾರ್ಯಕ್ರಮ (ರೂಢಿ). [ಪೂ$_{3}$ + ಎತ್ತು$_{1}$]

**ಪೂವೊರ್ಕುಟಿ** (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು; ಪದ್ಮನಾಭ; ವಿಷ್ಣು : ಬೊಮ್ಮಂ ಪೂವೊರ್ಕುಟಿನ ಗಂಗಾವರ್ತಸನಾಭಿಯೊಳ್ ನಾಭಿಯೊಳ್ ಪುಟ್ಟಿಯುಂ ಸತ್ಯಲೋಕಕ್ಕೊಡೆಯನಾದಂ (ರಾಮಾಶ್ವ. ೦೯೦-೨). [ಪೂ$_{3}$+ಪೊರ್ಕುಟ್ (< ಪೊಕ್ಕುಟು) + –ಅ$_{7}$]

**ಪೂಷ** (ನಾ). ೧. ಸೂರ್ಯ : "ರವಿ ಮಾರ್ತಂಡಂ ಪತಂಗಂ ತಪಿ ತಪನನಿನಂ ಭಾನು ಪೂಷಂ . . . ಆದಿತ್ಯನಕ್ಕುಂ" (ವಸ್ತುಕೋ. ೦೦-೬೪); ಅಭಿತಿಮಿರಪೂಷನತಿವಿಗತದೋಷ . . . ಪಂಪಾವಿರೂಪಾಕ್ಷನೆಮಗೀಗೆ ಭಕ್ತಿಜ್ಞಾನಸಂಪದವನು (ಹರಿಶ್ಚ. ೧-೪); ಹರಿಯ ಶಿರವರಿದು ಸಿರಿ ಮುಂದಲೆಯ ತಱಿದುಯಾ ವರುಣನಂ ಮೆಟ್ಟಿ ಪೂಷನ ಪಲ್ಗಳಂ ಕುಟ್ಟಿ . . . ವೀರನಂ ಭಂಗಂಬಟ್ಟರೆಸೆ ಜಿನವಾದಿ ಬಂದು ನುಡಿದಂ (ಕಹಿಂ. ೩-೦೦೪). ೨. ವಿಶ್ವರಕ್ಷಕ; ಜಗತ್ಪಾಲಕ : ಎಲೈ ಸವಿತೃವೇ . . . ನಿನ್ನ ಸಂಚಾರಕಾರ್ಯಗಳಿಂದ ನೀನೇ ಪೂಷನೆನ್ನಿಸಿಕೊಳ್ಳುತ್ತೀಯೆ (ಋಕ್ಸಾರ. ೦೬೩). ೩. ಒಬ್ಬ ವೈದಿಕದೇವತೆ : ಜಗನ್ನಿರ್ಮಾತ್ರಿಯಾದ ರಾತ್ರಿಗೆ ಪತಿಯಾದ ಪೂಷನನ್ನು ನಾನು ಸ್ತುತಿಸುತ್ತೇನೆ. ಸಹೋದರಿಯಾದ ಉಷಸ್ಸಿಗೆ ಉಪಪತಿಯಾದ ಪೂಷನು ನಮ್ಮ ಸ್ತುತಿಗಳನ್ನು ಕೇಳಲಿ (ಋಕ್ಸಾರ. ೦೬೬). ೪. ಹನ್ನೆರಡು ಜನ ಆದಿತ್ಯರಲ್ಲಿ ಒಬ್ಬ : ಧಾತಾ ಅರ್ಯಮಾ ಮಿತ್ರ ವರುಣ ಇಂದ್ರ ವಿವಸ್ವಾನ್ ಪರ್ಜನ್ಯ ಪೂಷ ಅಂಶುಮಾನ್ ಗಭಸ್ತಿಮಾನ್ ತ್ವಷ್ಟೃ ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ಶಿವೇಕ. ೩೬೬). ೫. ಭೂಮಿ. [ಸಂ. ಪೂಷನ್]

**ಪೂಷಕ** (ನಾ). ಸೂರ್ಯ : ಪೂಷಕ ನಿಶೇಶಾಕ್ಷಿಯಾಶಾಂತ ಭಾಸುಯಶ ಶೇಷ . . . ನಂಜೇಶ ಜಯತು (ಗುರುಚಾ. ೦೪-೧). [ಸಂ.]

**ಪೂಷಣ** (ನಾ). ಸೂರ್ಯ : "ಸೂರಃ, ಸೂರ್ಯಃ . . . ಅರುಣಃ, ಪೂಷಣಃ, ದ್ಯುಮಣಿಃ . . . ರವಿಃ–೩೭ ಸೂರ್ಯನ ಹೆಸರುಗಳು" (ಸಿದ್ಧಾಂತಿ. ೩೨). [ಸಂ.]

**ಪೂಷೆ** (ನಾ). ೧. ಮನುಷ್ಯಶರೀರದಲ್ಲಿರುವ ಒಂದು ನಾಡಿ : ತರಳೆ ತಿಳಿ ನಾಡಿಗಳ ಚೌದಶಗಳಿಗೆ ನಾಮಂಗಳಂತಿಯುಮಂ ಸುಷುಮ್ನೆಯುಂ ಪಿಂಗಳೆಯುಂ ಯಿಡಾ ಸರಸ್ವತಿ ಪೂಷೆ ವಾರುಣಿ ಮೆರೆವ ಹಸ್ತಿನಿ ಜಿಹ್ವೆಯಾ ಅಶ್ವಿನಿ ಅಲಂಬುಸೆಯುಂ . . . ಗಂಧಾರಿಯುಂ ವರಸೆದಪ್ಪದೆಯಿರುವವು (ಗಗಶಾ. ೯-೦೦). ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು : ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿ ಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲಾಭರಿತನಾಗಿ (ಶಿವೇಕ. ೨೦೪). [ಸಂ. ಪೂಷಾ]

**ಪೂಷ್ಣ** (ನಾ). =ಪೂಷಣ : "ನಿಶಿವೈರಿ ಮಿಹಿರಂ ವಿರೋಚನಂ ಭಾಸ್ಕರಂ . . . ಸಹಸ್ರಾಂಶು ಪೂಷ್ಣನೆನೆ ಸೂರ್ಯನಕ್ಕುಂ" (ಶಬ್ದಮಣಿ. ೦೦-೨); ಕೃಷ್ಣಂಗೀ ಯಾತ್ರಾಪ್ರಟನೆ ಪೂಷ್ಣಂಗಂ ಕೃಷ್ಣವರ್ತ್ಮಕೃಷ್ಣಗರ್ಗಂ ವೇಣುಪ್ಪಾರ್ಜನೆಯೊಳ್ಕೃಷ್ಣಂ ವಿಷ್ಣುಶ್ಚಾರ್ಜನೆಯು ಯತ್ನವೆಂಗುಂ ವಿಬುಧರ್ (ಕೃಸೂಪು. ೩-೦೬೭). [< ಸಂ. ಪೂಷನ್]

**ಪೂಸ**, ಹೂಸ (ನಾ). (ಆಲಂ) ಒಳಗೊಂದು, ಹೊರಗೊಂದು ನಡವಳಿಕೆ ಇರುವ ವ್ಯಕ್ತಿ; ಡಂಭಾಚಾರಿ : ಭಕ್ತಿಧಾಳಕರ ದರ್ಶನ ಚೋರಕರ ವಾಚಾರಚನೆಗರ ಬಱಿಮಾತಿನ ಪೂಸರ ಈಶ್ವರಭಕ್ತರ ಪರಮೇಶ್ವರನ ರೂಪು ಎನಲಾಱೆ (ಬಸವಣ್ಣ. ವ. ೩೬೦-೨೭); ಹಂದೆಯ ಶೃಂಗಾರ ಪೂಸನ ಕಠಿನದಂದ ಅಱಿವಿಲ್ಲದವನ ಸಂಗ (ಮನುಗುಂ. ವ. ೨೩೬-೩೪); ವಿರುತಿಗಳ ನಿಜವನಱಿದು ಪೂಸರ ಆಸೆಯನಱಿದು ವೇಷಗಳ್ಪರ ನಿಹಿತವ ನೋಡಿ (ಸರ್ವಪ. ೦೨೨-೬೨೪). **ಹೂಸ** : 'ಹೂಸತನ' ಪರಾ.

**ಹೂಸಹುಂಡ**=ತೋರಿಕೆಯವನು; ಡಂಭಾಚಾರಿ : ಹೂಸಿ[ಸ] ಹುಂಡನೆಂದಾಡಿದ ಮಾತೆ ನಿರ್ವ್ಯಜಿನನಪ್ಪ ಜಿನೇಂದ್ರನೊರ್ವ್ಯ ಕೂರ್ತು ಕೊಂಡಾಡಿದೊಡಣ್ಣ ಮುಕ್ತಿ ಮನೆದೊಟ್ಟಿನೆ ಮಚ್ಚಿ ಮರಲ್ದು ಬಾರಳೇ (ಧರ್ಮನಾ. ೧-೩೩); ಮರ್ತ್ಯರ ಹೂಸಿ[ಸ]ಹುಂಡರ ನಡೆವಳಿಯ ನೀನೊಪ್ಪವಿಟ್ಟೆಯಲಾ (ಶ್ರೀಶೈಲೀ. ೦೩-೦೨); ಮಾಡಬಾರದು ಮಾಡಬಾರದು ಹುಸಿಡಂಭಕ ಹೂಸ ಹುಂಡರ ಸಂಗವ (ಶಿವಾಂಜೇ. ೦೨೯-೯೩).

[ಪೂಸು$_{1}$ + –ಅ$_{7}$]

**ಪೂಸಂತೆ** (ನಾ). ಹೂವನ್ನು ಮಾರುವ ಅಂಗಡಿಗಳ ಸಾಲು : ಇನಿತು ಸೊಬಗಂ ಪಡೆದ ಪೂಸಂತೆಯಿಂ ಮುಂದೆ ನೆನೆವವರ ಚಿತ್ತಮೆಲ್ಲಂ ಪರಿಮಳಂ (ಕಿಂಪು. ೦೦-೩). [ಪೂ$_{3}$ + ಸಂತೆ$_{1}$]

**ಪೂಸಣಂಬ**, ಪೂಸಣಬ, ಹೂಸಣಂಬ (ನಾ). ಒಂದು ಬಗೆಯ ಸಿಹಿಯಾದ ಭಕ್ಷ್ಯ (?) : ಸರವಳಿಗೆ ಸಣ್ಣಸರವಳಿಗೆ ಮಣಿಸರವಳಿಗೆ ವರಮಧುರ ಪೂಸಣಂಬಂ ಸವೆದವಂತೆರೊಳಗೆ (ಬಸಪು. ೭-೦೪). **ಪೂಸಣಬ** : ಅಂಗಾರಕಂ ಕ್ಷೀರಪೂರಿಗೆಯುಂ ಪೂಸಣಬಾದಿ ಭಕ್ಷ್ಯಚಯಮಂ ತಂದಿಕ್ಕಿ ದರ್ಕಾಂತೆಯರ್ (ಧರ್ಮಪ. ೨-೩೪). **ಹೂಸಣಂಬ** : ಹಾಲಲಪುಗು ಹಾಲಲುಂಡೆ ಹಾಲ ಮಂಡಿಗೆಗಳನಟ್ಟು ಮೇಲೆನಿಪ್ಪ ತಱಗ ಹೂಸಣಂಬ[ಪಾಠಾಂ. ಪೂಷಣಂಬು]ಮಂ ತೆರಳ್ಕೆ ಇಟ್ಟು (ಬೈಪರ. ಹ. ೨೬೬-೨); ತಱಗು ಚಕ್ಕುಲಿ ಹೂಸಣಂಬ ಹೂರಿಗೆಗಳಂ . . . ಕಱಿಕಂಠನಾರೋಗಿಸಿದೊಡೆ ಇನಿದಾಪರಿಸಿ ಗರಳ ಸುಧೆಯಂತಿರ್ದುದು (ಸಿದ್ಧರಾ. ೯-೩೩). [?]

**ಪೂಸಣಬ** 'ಪೂಸಣಂಬ' ನೋ.

**ಪೂಸತನ**, ಹೂಸತನ (ನಾ). ದಂಭ; ದಂಭಾಚಾರ : ಆಸೆಯೆಂಬ ಕತ್ತೆಯ ಮೇಲೆ ಪೂಸತನವೆಂಬ ಸಟ್ಟೆವೇಷ ವೇಷಲಾಂಛನದ ತನ್ನಾತ್ಮವಾಸದ ಪಾಶವನೆತ್ತಿ ಈಶನಱಿಯದ ಸಟ್ಟೆ ವಿಷಕ್ಕಾಗಿ ಕೈಯಾಂತು ತನ್ನ ಬೆವಹಾರಕ್ಕೆ ನಷ್ಟ ಬಂದಿತ್ತು ಬಂಕೇಶ್ವರಲಿಂಗಕ್ಕೆ ಲಾಭವಾಯಿತ್ತು (ಸುಂಕಶಿಂ. ವ. ೬೩೯-೨೩); ಪೂ[ಪಾಠಾಂ. ಹೂ]ಸತನದಂದವ ಹೇಳಿ ಎಡಗಾಲ ಸಂಧಿಯ ಮಚ್ಚಿ ಅನಂಗನ ಬಲೆಯೊಳಗಾದವರಿಗೆ ಘನಲಿಂಗನ ಶುದ್ಧಿಯೇಕೆ (ಪಗಮಾ. ವ. ೪೨೦-೩೪). **ಹೂಸತನ** : ಮೇಲಿನ 'ನಗೆಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ಪೂಸ + – ತನ]

**ಪೂಸತ್ವ** (ನಾ). = ಪೂಸತನ : ಕೂಪರ ಕೈಯಿಂದ ಘಾತಕತನದಿಂದ ವ್ಯಾಪರಿಸುತ್ತ ಸುಡು ಆದೇಶಱ ವಿರಕ್ತಿ ಮಾತಿನ ಮಾಲೆಯ ಪೂಸತ್ವ ಇದ ನಿಹಿತ ಲಿಂಗಾಂಗಿಗಳೊಪ್ಪರು (ಚಾಸೋಸಂ. ವ. ೩೯೦-೩೦). [ಪೂಸ+–ತ್ವ]

**ಪೂಸರ** (ನಾ). ೧. ಹೂವಿನ ಹಾರ ; ಹೂಮಾಲೆ : ಬಲಗೈಯ ಪೂಸರದೊರ್ವ ವನಿತೆ ನಿಂದಿರ್ದಳುತ್ಸವದಿ (ಮೋಹತ. ೩-೩೭); ಅವನ ಕರಾಬ್ಜದೆ ಪರಿಮಳವನು ನಿನ್ನ ಜವಳಿಮೊಲೆಗಳ ಮಧ್ಯದಲಿ ತವೆ ತಿಗುರಿಸಿಕೊಂಡು ಮುಡಿಗೆ ಪೂಸರವ ಬಲ್ಪುವಳದೆ ಬಿಗಿದು ಸುತ್ತುವುದು (ಕಂಸಶಿ. ೬-೦೩೪); ತುರು ನಡೆವ ದೆಸೆಗೊಲ್ದು . . . ಸರಳಿಸುತುಮಾಡುತುಂ ಕರು ಪಿಂತನೆಯೆ ಪೋಪ ಪಾಂಗಿನಿಂ ಪೂಸರದ ಪಥಕೆ ಪೊರಮಟ್ಟೆ ನಾಂ (ಸಂಶಕ. ೨೯-೭). ೨. ಹೂವಿನ ಬಾಣ; ಪುಷ್ಪಬಾಣ; ಮದನಾಸ್ತ್ರ : ಅಚ್ಚರಿಪಡೆದ ಭ್ರೂಲತೆ ಸಿಂಗಾಡಿಗಳೊಚ್ಚೇರಿಗಣ್ಣ ಪೂಸರದಿ ಎಚ್ಚಱುವರ ಜಿತೇಂದ್ರಿಯರರ್ದೆಯನು ತಟ್ಟುರ್ಚಲು ವನವಧೂಟಿಯರು (ಮೋಹತ. ೦೯-೬೨); ಕಬ್ಬಿನ

ಬಿಲ್ಲಲರ್ವಕ್ಕಿಯ ತಿಬ್ಬಂ ಒಲಿದತನು ಪೂಸರಂಗಳನಿಸಲಾ ಉಬ್ಬೆಗೆ ಕೊಬ್ಬಿದ ಪೆಣ್ಣಂ ತಬ್ಬಿದೊಡದಱುಬ್ಬು ನಿಲ್ಕುಮಿಂತಿದು ಸುಖಮೋ (ಶಬ್ದಾನು. ೫೦ ಪ್ರಯೋ); ಮದನಶಬರಸಂಯುಮಿಮೃಗಗಳಿಗಾಗ ಕದುಬಿ ಪೂಡಿದ ಪೂಸರಕೆ ಪುದುಗಿದ ಮಿಂಟೆಗಳೆನೆ ಪರಡುಗಳತಿಮುದದಿನಿತ್ತುವು ಸೋಳ್ಪರಿಗೆ (ಶಂಪಪು. ೯-೨೯). ೩. ಕಾಮಂ; ಪುಷ್ಪಾಸ್ತ್ರ; ಮನ್ಮಥ: ಎಳೆದೆರ ನನೋಡಿಪೆನೆಂದು ಪೂಸರಂ . . . ಪಡೆಯೆಲ್ಲಮಂ ಪಲವುಂ ಸನ್ನಣದಿಂ ಬರಲಿಮೆಂದು ಪೇೞ್ದ (ಕಬ್ಬಿಗ. ೧೦೫); ಮಾಸರಮಾಹವಪಸ ಪೂಸರಸಂಗ ದಹನಕರ . . . ಲೋಕಾಧ್ಯಕ್ಷ ಸಲಹೆಮ್ಮನು (ತಿಬಪು. ೨೧-೧); ಚೆನ್ನಿಗನೆ ಸೂಸಿ ನಿನ್ನಯ ರತಿಸುಖದ ವಿಲಾಸದ ಪೂಸರನುಱುಬ ನೀ ಬಿಡಿಸೊ (ಶಂಪಪು. ೦೦-೩೨). [ಪೂ$_2$ + ಸರ$_3$]

**ಪೂಸರಂಬಡೆ** (ಕ್ರಿ). ಹೂವಿನ ಗುಚ್ಛಗಳನ್ನು ಹೊಂದು; ಹೂವಾಲೆಯನ್ನು ಧರಿಸು: ನಿನ್ನಡಿಯುಂ ನೆರವಿಲ್ಲದೆ ನಂಬಿದೆವೆಂಬರಸರ ಚೆನ್ನ ಪೊನ್ನ ನೆಲೆವಾಡದಂತೆ ಪೂಸರಂಬಡೆದ ಕೊಸಗಿನ ಮರಂಗಳೊಳಂ (ಕಬ್ಬಿಗ. ೯೯). [ಪೂಸರ + ಪಡೆ$_1$]

**ಪೂಸರಗರ್ಭಿಣಿ** (ನಾ). ಮನ್ಮಥನನ್ನು ಗರ್ಭದಲ್ಲಿ ಧರಿಸಿದವಳು; ರುಕ್ಮಿಣಿ: ಮಾಣಿಕ್ಯಸಿಂಹಾಸನದೊಳು ಕೃಷ್ಣ ಕುಳಿತು ಪೂಸರಗರ್ಭಿಣಿ ಮೊದಲಾದ ರಾಣೀವಾಸಕ್ಕೆ ವನವನೊಪ್ಪಿಸಿದ (ಮೋಹತ. ೪-೫೬). [ಪೂಸರ + ಗರ್ಭಿಣಿ]

**ಪೂಸರದಹನ** (ನಾ). ಕಾಮದಹನ: ಪೂಸರದಹನ ಕಾಮೋತ್ಪತ್ತಿ ವರಶಂಬರಾಸುರವಧೆ ಕಂತುಸುತನ ಭಾಸುರಲೀಲೆ ಬಾಣನ ಗೆದ್ದ ಜಯಲಕ್ಷ್ಮೀಶನ ಕೃತಿಯ ವರ್ಣಿಪೆನು (ಮೋಹತ. ೧ ೩೩). [ಪೂಸರ + ದಹನ]

**ಪೂಸರಲ್**, ಪೂಸರಲು, ಪೂಸರಳು (ನಾ). ಹೂವಿನ ಬಾಣ; ಕಾಮನ ಬಾಣ: ಇಂದು ನೀನೆನಗೋಸುಗ ಧೂರ್ಜಟಿಯ ಮೇಲೊಂದು ಪೂಸರಲಿಂದಲೆಸೆಯೊ ನೊಂದು ಲಲಾಟನೇತ್ರವ ತೆಱೆದರೆ ನೀನು ಬೆಂದು ಹೋದಪೆ ಬೇಡ ಮಗನೆ (ಮೋಹತ. ೭-೨೬); ಕಬ್ಬುವಿಲ್ಲುಂಬಿವೆದೆ ಪೂಸರಲ್ಪೂಣ್ದಿಸಲ್ ನಿಬ್ಬರಮಿದು (ಕೈಬಿಭಾ. ೬-೦೭). **ಪೂಸರಲು**: ಕಾಣಬಾರದು ಪುಂಡ್ರೇಕ್ಷುಕೋದಂಡನೊ ಬಾಣ ಪೂಸರಲುಗಳಿಲ್ಲ . . . ಜಾಣನಾರೆಂದು ನೋಡಿದರು (ಮೋಹತ. ೦೯-೬೦). **ಪೂಸರಳು**: ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ ಜೀವನಿಗೆ (ಮೋಹತ. ೫-೬೦). [ಪೂ$_2$ + ಸರಲ್$_1$]

**ಪೂಸರಲ**, ಪೂಸರಳ (ನಾ). ಹೂವುಗಳ ಬಾಣವುಳ್ಳವನು; ಮನ್ಮಥ: ತೊಳಪ ತೋರಮೊಲೆಗಳೆಂಬ ಪೂಗೊಂಚಲ್ ಪೂಸರಲನೆಂಬ ತುಂಬಿಗಿಂಬಾಗೆಯುಂ (ಕಬ್ಬಿಗ. ೦೨೩); ಪೂಸರಲನ ಜಸಮಂ ದೂಸರಮಂ ಗೆಯ್ದ ನ . . . ದಿವಿಜಾಸುರನತಪದನಂ . . . ನುತಿಸಿದ ಪನಭವನ (ಉದ್ಭಟದೇ. ೭-೦೯); ಸೂಸುಮೋಹನದ ಸಿಂಗರದೋಟ್ಟು ತನ್ನ ವಿಲಾಸಿನಿಯರ ಬಳಸಿನೊಳು ಪೂಸರಲನ ಪುಣ್ಯದೇವತೆಯಂತಿರ್ದ ಭಾಸುರಾಂಗಿಯ ಕಂಡರಾಗ (ಭರತ. ೪೦-೪೪). **ಪೂಸರಳ**: ಮೈಸೂರಧಿಕಾರಿಯುವನೀಗ ಚಿತ್ತೈಸು ಪೂಸರಳನ ಪಟ್ಟದಾನೆ (ಶಂಪಪು. ೨೫ ೬೦). [ಪೂಸರಲ್ + —ಅ$_7$]

**ಪೂಸರಲು** 'ಪೂಸರಲ್' ನೋ.

**ಪೂಸರಳ** 'ಪೂಸರಲ' ನೋ.

**ಪೂಸರಳು** 'ಪೂಸರಲ್' ನೋ.

**ಪೂಸರಿ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ಮೌನೆಧರಗೀಶ ಪ್ರತ್ಯಕ್ಷವಾಗಿ ಸುರಮುಂದುಭಿಯೊಳು ಪೂಸರಿಯೊಳು ಕೈಲಾಸಗಿರಿಗೆ ಕೊಂಡೊಯ್ದ ಸೋಮೇಶ (ಕೈರವೇ. ೧-೨೪೯). [ಪೂ$_2$ + ಸರಿ$_6$]

**ಪೂಸಿ** 'ಪೂಸು$_3$' ನೋ.

**ಪೂಸಿಕೆ** (ನಾ). ಬಳಿಯುವಿಕೆ; ಹಚ್ಚುವಿಕೆ; ಲೇಪನ: ಭರದ ತೊಲೆ ಸಿಡುಗಂಭ ಜಂತೆಯುಸ್ಥಿಗಳುಮಾ ನರಗಳೇ ಕಟ್ಟುವಿಂಡಿಗೆ ಮಾಂಸ ಪಂಕದಾ ಸಱಿಯಾ ಪೂಸಿಕೆ (ಲಕಿತಂ. ೩೯-೪೨). [ಪೂಸು$_1$ + —ಇಕೆ]

**ಪೂಸಿಮಾತು** (ನಾ). ಪುಸಲಾವಣೆಯ ಮಾತು; ರಮಿಸುವ ಮಾತು: ಅವಳು ಅಳುವ ಹುಡುಗನನ್ನು ಪೂಸಿಮಾತುಗಳಿಂದ ಸಮಾಧಾನಗೊಳಿಸಿದಳು (ರೂಢಿ). [ಪೂಸಿ (<ಪೂಸು$_3$) + ಮಾತು$_1$]

**ಪೂಸು$_1$**, ಹೂಸು$_1$ (ಕ್ರಿ). ೧. ಬಳಿ; ಸವರು; ತೊಡೆ; ಲೇಪಿಸು: "ಪೂಸು—ವಿಲೇಪನೇ, ಅಪಾನವಾಯೌಚ" (ಶಮುಧಾ); ಏವಿರಿದಿದೆನ್ನ ಭುಜಾಸಿಗೆ ತೀದು ಪೂಸಲುಂ ಸೆಱೆಯದು ನೀನಿರಾನೆ ರಿಪುಸೇನೆಗೆ ಸಾಲ್ವೆಂ (ಕಾವ್ಯಸಾ. ೪೦೦ ಶೂದ್ರಕ); ಏಮ್ಮ ಮಾವಂ . . . ಕೆಱೆಗವೋಗಿ ಮಿಾವಾಗಳ್ ತಲೆಯಂ ಪೂಸಲೆಣ್ಣೆಯುಸಪ್ಪೊಡಮೆಱೆಯಿಸಿಯುಮುಱಿಯಂ (ವಡ್ಡಾರಾ. ೪—೦೬); ಪೂಸಿದರು ಸೇವಕರು ಪರಿಮಳ ವಾಸಿಸುವ ಸಿರಿಗಂಧ ವಸು (ತೊರಣಾ. ೬-೨೬-೬೦). ೨. ತೊಳೆ; ಪ್ರಕ್ಷಾಲನ ಮಾಡು: 'ಬಾಯಪ್ಪೂಸು' ಪರಾ. ೩. ಪರಿಮಳವನ್ನು ಕೊಡು; ಸುವಾಸನೆಯನ್ನು ಕೊಡು: ಅರೆದ ತೆಂಗಾಯ ಸವಿಹಾಲು ಸಕ್ಕರೆ ಬೆಣ್ಣೆವೆರಸಿ ಪಾಕಂ ಮಾಡಿ ಪೂಸಿದ[ಪಾಠಾಂ. ಪೂವಿನೊ, ಹುವ್ವಿನೊ]ಗ್ಗರಣೆಯಂ ಕೊಟ್ಟು ಪರಿಮಳವಿಡುವುದು (ಸೂಪಶಾ. ೪-೬೨). ೪. (ಅಲಂ) ಸಲ್ಲಿಸು; ಕೊಡು: ಘಾಸಿಯ ನೀ ಮಾಡುತೆನ್ನನು ಪೂಸೆಂದರೆ ಧನವನೆಲ್ಲಿ ನಾ ತರಲೀಗಂ (ಹಮಾಶ. ೮೫). ೫. (?) : ಇದಾನಱಿತ್ತೋನ್ಪಱ್ಣಮಹಾಪಾತಕನಾಗಿ . . . ಆಟ್ಟುವೆಣ್ಣೆತ್ತಲ ಪೂಸುವೋನಕ್ಕು (ಎಕ. III, ನಂಜನ. ೨೬-೭; ಸು. 810). **ಹೂಸು$_1$**: ೧. ಹಂದಿ ಶ್ರೀಗಂಧವ ಹೂಸಿದಡೇನು ಗಂಧರಾಜನಾಗಬಲ್ಲುದೇ (ದೇದಾವ. ೨೨-೩೯); ದೂಪಿಸಿದ ಬಿಳಿದುಗುಳ ಸುಟ್ಟನು ಲೇಪನಂಗಳ ಹೂಸಿ ಮಧುರಾಳಾಪದಲೆ ಬೋಳೈಸಿ ಸಾರಥಿ ಗಜಹಮಾಪಳಿಯ (ಕುವ್ಯಾಗ. ೦-೨೬); ಎಣ್ಣೆಮಜ್ಜನವಿಲ್ಲದವಳ ತಲೆ ಮಾಸಿಹುದೊ ಹೂಸಿ ಎರೆವನು ತನ್ನ ಕೂಸು ಬರಲಿ (ಬಿಜಾಸ. ೩೫-೦೪). ೪. ಬೊಪ್ಪಣಾಗೆ ಹಿಟ್ಟಂ ಹೂಸಿ ಗೆಜ್ಜೆಯ ಹಸ್ಯಯೊಂದು (ಇಎ. ೦೯೫೦, ಜಾನಗರ್. ೬೦-೩೭; 1026). ೬. ಲೇಪಿಸಿಕೊಳ್ಳು; ಬಳಿದುಕೊಳ್ಳು: ಒಲೆಯ ಬೂದಿಯ ಬಿಲಿಯಲು ಬೇಡ ಒಲಿದಂತೆ ಹೂಸಿಕೊಂಡಿಪ್ಪುದು ಹೂಸಿ ಏನು ಫಲ ಮನದಲ್ಲಿ ಲೇಸಿಲ್ಲದನ್ನಕ್ಕ (ಬಿಸವ. ೦೧೪).

**ಪೂಸಿಕೊಳ್**, **ಪೂಸಿಕೊಳ್ಳು** = ೧. ತೊಡೆದುಕೊಳ್ಳು; ಬಳಿದುಕೊಳ್ಳು: ಇದು ಪೇಲಿಮ ಮೆಯ್ಯಿನ್ನಾರೆಂಬುದನಱಿಯದೆ ಮೆಯ್ಗೆ ಪೂಸಿಕೊಳ್ಳುವ ಮಕ್ಕಳ್ (ರವರ್ಣವ್ಯ. ೫-೯೭೬); ಪೂಸಿಕೊಂಬ ಅನುಲೇಪನ ಮೊದಲಾಗಿ (ಗಣಿತ. ೨೩೨-೩). ೨. ಶ್ರೀಡಿಕೊಳ್ಳು; ನೀವಿಕೊಳ್ಳು: ಪಕ್ಷಿಗಳು . . . ತಮ್ಮ ಗರಿಗಳನ್ನು ಪೂಸಿಕೊಳ್ಳುತ್ತಿದ್ದವು (ಬಿದು. ೫). **ಹೂಸಿಹುಂಡನ ಮಾಡು**, **ಹೂಸಿಹುಂಡನೆ ಮಾಡು** = ತೋರಿಕೆಯನ್ನು ಮಾಡು; ಡಂಭಾಚಾರವನ್ನು ಮಾಡು: ಹೂಸಿಹುಂಡನ ಮಾಡಿ ಶಂಗೆಟ್ಟೋಸರಿಸದಸಾಂತಲಕ್ಷ್ಯವನಾಸುರತೆಯಂ ತೊಡರಿ ಬಿಡದಂತ ಡಗದನ್ಯೋನ್ಯವಾಸಿಯಾಗಿರುತಿರಲು (ಸದ್ಗುರು. ೨ ೬); ನಾನೀಸುದಿನ ಪರಿಯಂತರಂ ಬಹಿಃಕ್ರಿಯೆಗಳಿಂ ಹೂಸಿಹುಂಡನ ಮಾಡಿ ಹೊಱಗೆ ನಾಂ ಪೂಜಿಸೆ ವೃಥಾ ದಿನಂಗಳು ಸವೆದುವು (ತಿಬಪು. ೬-೦೦); ಹೂಸಿಹುಂಡನೆ ಮಾಡಿ ಬಾಯ ಸವಿಯ ನುಡಿವರೆಲ್ಲಾ ಭಕ್ತರಪ್ಪರೆ (ಶಿವಶಂ. ೨೨೩-೦೦೦೦). [ದೇ. ‖ ತಮಿ. ಮಲ. ಪೂಚು; ತುಳು. ಪೂಜು; ತೆಲು. ಪೂಯು]

**ಪೂಸು$_3$**, ಹೂಸು$_3$ (ಕ್ರಿ). ಅಪಾನವಾಯುವನ್ನು ಬಿಡು: "ಪೂಸು ವಿಲೇಪನೇ, ಅಪಾನವಾಯೌ ಚ" (ಶಮುಧಾ). **ಹೂಸು$_3$**: "ಹೂಸು— ಅಧೋವಾಯೌ" (ಶಮುಧಾ); ಹೂಸಿದವರ್ಯಾರು ಅಂದ್ರೆ ಹಳೇಸೀರೆಯವರು (ಹುಟ್ಟಿಹ. ೦೫೦).

[ದೇ.॥ ಮಲ. ಪೂಚ್ಚಿ=ಅಪಾನವಾಯು ; ತುಳು. ಪೂವು]

**ಪೂಸು₃**, ಪೂಸಿ (ನಾ). ೧. ಬಳಿಯುವಿಕೆ; ಲೇಪನ : ಹಾಸು ಇಲ್ಲದ ಸಿದ್ರೆ ಪೂಸು ಇಲ್ಲದ ವಿವಾಹ ಭಾಷೆಯುಟ್ಟುಸನಳ ಗೆಳೆತನವು ಮೋಟ ಕೈ ಬೀಸಿ ಕರೆದಂತೆ (ಸರ್ವಜ್ಞ. ೦೫೦೩) ; ಚಿನ್ನಂ ಮಣಿ ಮುತ್ತುಮಡೆ ಕಾಡಿಗೆ ಬಾವನ್ನದ ಪೂಸು (ಕೌಸಂಧ. ೬-೫೭). **ಪೂಸಿ**: ೨. (ಅಲಂ) ಮೆಚ್ಚುಗೆಯನ್ನು ಪಡೆಯಲು ಹೊಗಳಿ ಉಬ್ಬಿಸುವಿಕೆ ; ಮರ್ಜಿ ಹಿಡಿಯುವಿಕೆ : 'ಪೂಸಿ ಮಾತು ' ಪರಾ.

**ಪೂಸಿ ಮಾಡು**= ೧. ಉಬ್ಬಿಸು ; ಹೊಗಳು ; ಮರ್ಜಿ ಹಿಡಿ : ಆಸೆಯೆಂಬ ವೇಸಿ ಅರಸನಾದರೂ ತನ್ನತ್ತ ಕರೆವಳು ಯಾ ಆಸೆಯೆಂಬವಳು ಆರನಾದರೆಯೂ ಪೂಸಿ ಮಾಡಿ ತನುಮನಸವ ಪ್ರಯವ ಮಾಡಿದಳು (ಶರಗೋ. ೨೨೬-೫೦) ; ಒಂದೊಂದು ದಿನ ಏನೇನೋ "ಪೂಸಿ' ಮಾಡಿ ಸೆಳೆದೇ ತರಬೇಕಾಗಿತ್ತು ಮನೆಗೆ (ರಂಗಣ್ಣ. ೯೪); ಹೀಗೆ 'ಪೂಸಿ' ಮಾಡಿದರೆ ಮರುಳಾಗದ ಸಂಬರು ಕೊಡೋಕೆಲ್ಲ ನಾ... (ಸಂದೇಶ. ೬೦). ೨. ಮೋಡಿ ಮಾಡು; ಅಚ್ಚಿ ಮಾಡು; ರಮಿಸು : ಶ್ರೀಧರನು ಗೋಪುವನ್ನು ಪೂಸಿ ಮಾಡುವುದು ಒಳ್ಳೆಯದೆಂದೂ . . . ಕ್ಷೇಮವೆಂದೂ ಅವನನ್ನು ಎತ್ತಿ ಕೊಂಡು ಸರೋಜಳನ್ನು ನಿಧಾನವಾಗಿ ಹಿಂಬಾಲಿಸಿದನು (ವಾಕಪೂ.೦೨೩).

**ಪೂಸಿ ಹೊಡೆ** = ಪೂಸಿಮಾಡು ೧ : ಅವನು ಹಣಕ್ಕಾಗಿ ಅವರನ್ನು ಪೂಸಿ ಹೊಡೆಯುತ್ತಿದ್ದಾನೆ (ರೂಢಿ). [< ಪೂಸು₁]

**ಪೂಳ್** 'ಪೂಟಿಸ್' ನೋ.

**ಪೂಳಿ** 'ಪೂಟಿಸ್' ಪರಾ.

**ಪೂಳು** 'ಪೂಟಿಸ್' ನೋ.

**ಪೂಳ್ದು** 'ಪೂಟಿಸ್' ಪರಾ.

**ಪೂಜ**, ಪೂಜು (ನಾ). ಶಿಗ ; ಪಿರ್ರೆ ; ಕುಂಡೆ ; ಪೃಷ್ಠ : ಪೂಜವಕೆಯುಂ ತರವೇಟಿಸೆ (ಶಬ್ದಮ. ಸ. ೭೩ ಪ್ರಯೋ). P ಇದು ಅಸಹ್ಯೋಕ್ತಿಗೆ ಕೊಟ್ಟಿರುವ ಉದಾಹರಣೆ. **ಪೂಜು**: ಏನಗಿಲ್ಲಳ ಪೂಜು ತೋಜು ಪೇಜುತ್ತಿರಲಾಸೆಯುಂ ಬಿಸುಟು ನೀಂ ಕಳೆ ಪಾಂಟಿವಾತಕ್ಕೆ ಸೈರಿಸಂ (ಕಾವ್ಯಾವ. ೪೫೦).

[ದೇ.॥ ತಮಿ. ಪೂಜು ; ಮಲ. ಪೂಜ, ಪೂಜು ; ತೆಲು. ಪೂಡ]

**ಪೂಜವಕೆ** (ನಾ). ಹೂವಿನ ಚಿತ್ರಗಳುಳ್ಳ ಕುಪ್ಪುಸ : ಪೂಜವಕೆಯುಂ ತರವೇಟಿಸೆ (ಶಬ್ದಮ. ಸ. ೭೩ ಪ್ರಯೋ). [ಪೂ + ಜವಕೆ (< ಜವಿಕೆ)]

**ಪೂಜು** 'ಪೂಜ' ನೋ.

**ಪೂಟಿಸ್**, ಪೂಣ್₂. ಪೂಳ್, ಪೂಳು, ಹೂಣು₂, ಹೂಳ್, ಹೂಳು₁ (ಕ್ರಿ). ಪೂಳ್ದು, ಹೂತ್ತು, ಹೂಳ್ದ (ಭೂತಕೃ), ಪೂಳ್ದು, ಪೂಳಿ, ಪೂಳ್ದು, ಹೂಣಿ, ಹೂತ್ತು, ಹೂಳಿ, ಹೂಳ್ದು (ಭೂತಸಾ). ೧. (ನೆಲದಲ್ಲಿ) ಮುಗಿ; ಅಡಗಿಸು; ಬೈಚಿಡು: ಕಳ್ದಂ ಕಸಪರಂಗಳೆಲ್ಲಮಂ ಪೂಳ್ದಿಟ್ಟು ಗುಣೆಯು ಬಾಗಿಲಂ ಪಿರಿದೊಂದು ಸಿಲೆಯಂ ತಂದಿಟ್ಟು ಮುಚ್ಚಿ (ವಡ್ಡಾರಾ. ೦೨೨ ೩೦); ಇಳೆಯುಂ ಘಾತಿಸಿ ತಕ್ಕರಂ ಬಿಟ್ಟುರ್ದಕೊಂಡಾದರ್ಥವಂ ಪೂಳ್ದು ಮಿಳ್ಳೆ ನೋಡುತ್ತಂ (ಆದಿಪು. ೨-೧೫) ; ಮುನ್ನಿನ ತಪ್ಪು ವಿದ್ಯಾಧರರಾದಂದಿನ ಮಹಾವಿದ್ಯೆಗಳ್ . . . ಮಂ ಪೂಳ್ದು ನಿಧಾನು ಸುಕೃತಮಂನಿಗೆ ಕೊಳಿಪಂತಾಸಂ ಸಮಸಿಸೆ (ಶಾಂತಿಪು. ೨-೨೭ ವ). ೨. ತಗ್ಗು, ಕುಳಿ, ಬಾವಿ ಮೊದಲಾದುವುಗಳನ್ನು ಮಣ್ಣು, ಕಲ್ಲು ಮೊದಲಾದುವುಗಳಿಂದ ತುಂಬು, – ಮುಚ್ಚು : ಸೈನ್ಯದೋಳಪರಿಸಿತ ಧೂಳಿ ಪೂಳ್ದುದಂಭೋನಿಧಿಯಂ (ಅಜಿತ ೦೩-೭೪) ; ಸೇನಾಪದೋದ್ಧೂತ ಧೂಳಿ ... ವಿಯನ್ನದಿಯಂ ಪೂಳ್ದುಜೆ ಸತ್ಯಲೋಕವೊದವಂ ವಿವಾಜಿತ್ತ ಗರ್ಬಪ್ಪಿನಂ (ಜಗನ್ನಾ. ೩-೮) ; ಅಂದಾ ರಣಧೂಳಿಧೂಳಿಳಗಂ ಪೂಳ್ಚಿಂ (ಶಶಿಪ. ೨೧೦೦೨). ೩. ಮುಳುಗುವಂತೆ ಮಾಡು ; ಮುಳುಗಿಸು : ಗೀತವಾದಿತ್ರರವವೇಪೇಳ್ದುದೊ ಸಭೆಯುಂ ರಸದೊಳ್ ಪೂಳ್ದುವೊಳಿಸಿದತ್ತು (ಅಜಿತ. ೯-೦೯) ; ಅಶೋಕದಮ ಮಾಧವಾದದಿಂದುದಿದಿದುದೊ ಕೇಸರವನ್ನುಮದೆ ನಿನ್ನುಮನಾನನಸಿಂಧುವಿಂದೆ ಪೂಳ್ದುದೊ (ಅಜಿತ. ೦೦-೦೨೭). ೪. ಕಪಿ : ಮುಚ್ಚು ; ಹೊದ್ದು : "ಪೂಟಿಸ್ – ಆಚ್ಛಾದನೇ" (ಶಮಪ್ರ) : ಮುಸಿಯುಂದಂ ಜಗಮೆಲ್ಲಮಂ ದಿತಿಸುತಂ ಮುಂ ಪೂಳ್ದುನೋ ಕಾಲಮೇಘಸಮೂಹ ದೆಸೆಯೆಲ್ಲಮಂ ದಿವದೊ (ಶಂಕರಾ. ೯.೪೯): ವಿಕಲಪೂ ಕೊಯ್ದುವೆ ನೆಯ್ದಿಲನೆಂದು ಪೂಳ್ದುವೋಲ್ ನೆಯ್ದಿಲ ಮಾಲೆಯಿಂ ಕಳಮಗೋಪಿಯರೀಕ್ಷಿಸೆ (ಲೀಲಾವ. ೫-೭೨). ೫. ಮುಳುಗು : ಕತ್ತುರಿಯಿಯುಮುಂ ಮೆಂಜಿದು ಕತ್ತುರಿಯೊಳ್ ಪೂಳ್ದು ಕತ್ತುರಿಮಿಗದಂತಿರ್ಪ ಕತ್ತುರಿಬೊಜಂಗರುಂ (ಕಾವ್ಯಾ. ೯-೬೭ ವ); ನವಿತಾರಿಗೆ ಉಟ್ಟ ಸುಟ್ಟಂಬೆಯು ನೆಟಿಲೊಳ್ಪಂದುಮುಗುಟಿಸೊಳ್ ಪೂಳ್ದುಂ ಭ್ರೂಲತಾ ಪ್ರತಾನದೊಳ್ ಕಟ್ಟುಂ ಕಿಚ್ಚುಟ್ಟುವಿರ್ಪುದುಚಿತಮಲ್ತು (ಶಾಂತಿಪು. ೯-೬೨ ವ). ೬. ತುಂಬಿ ಹೋಗು; ಆವರಿಸಲ್ಪಡು; ಮುಚ್ಚಿ ಹೋಗು : ಅಂಬರ ದೊಳ್ಲತುಂಬಿಸೊಳಿ ಪೂಟಿ . . . ಪೂಣಾರ್ವಂ ಸರಿಲ್ಲದೆ ವಿಕ್ರಮಾರ್ಜುನ (ಪ.ಪಭಾ. ೦೦-೯೩). ೭. ನೆನಪಿನಿಂದ ಮರೆಯಾಗು; ಮರೆತು ಹೋಗು: ಏನೆಯುದೆ ಪೂಳ್ದು ಕೆಟ್ಟ ಪಟುಗಬ್ಬಮುನಾವಗಮೆಮ್ಮುವೆಂದು ಬಾಚಿಸಿ ಪೆರ್ಜಿರ್ಗತ್ತುನಲ್ಲದೆ . . . ರಂಜಿಸುವರ್ದೆಗೊಳ್ಳದೀಗಡಿನ ಕಬ್ಬಿಗನಂಗಿಗಳೊಂದವಿಂದಿನಗಳ್ (ಶಾಂತಿಪು. ೦೨-೭೭). **ಪೂಣ್₂**: ೨. ಕೂರಂಬಿನಿಂದಂಬುನಿಧಿಯ ಪೂಣ್ದು [ಪಾಠಾಂ. ಳ್ದು]ದ ತನಗೆ ದಾರಿಯಾಗಲ್ ನಡೆದು . . . ಪೊಣ್ಕೆ ಬೊಬ್ಬಿಜಾಪುತಿರಲು (ಭಾರತಾಂ. ೫-೦೯). **ಪೂಳ್**: ೧. ಮುನ್ನಿಲ್ಲದುದ ಸುಡಿದುಳ್ಳುದಂ ಪೂಳ್ದು ಹುಲ್ಲುಹೊಲನೆಲ್ಲವಂ ಪೊಗಳಿ ಸುಧೆಯೊಳಗೆ ನಂಜಿಡುವಂತೆ ಮೇಳವಿಸಿ ಪೇಳಿ ನಾನು (ಸಿದ್ದರಾ. ೦-೫): ಮಾಸಿನ ಬೀಜ ಮತ್ತೊಂದು ಶಿರುವಾಗಲೆನುತ ಬಿತ್ತಲುದ್ಯೋಗಿಪ ತೆಜದಿಂದೆ ಪೂಳ್ದರು ಜಪ್ಪಾಯುವೆಲ್ತ ಪೊಮ್ಮೆಗೆಯ (ಪೋಹಕ. ೦೭-೨೨). ೨. ಶರಧಿಯಂ ಪೂಳ್ಪರ್ಗೆ ಪುರದಗಳ ಪೂಳ್ಪುದೇಸರಿದು (ಜಬಪು. ೪೨-೩೦). ೬. ಭವಜಾಟಳವ ಬಾವಿ ಘಾತಂಗೆಟ್ಟು ಪೂಳ್ದಪುದೊ ಎಂಬಂತೆ ಗಂಭೀರನಾಭಿ ನೆಜೆ ಗುಣ್ಪಾಳಿದುದು (ಸಿದ್ಧರಾ. ೦೯೯);ಪೂಳ್ದುವು ದಿಶಾವನಿನಭೋಮಂಡಲಂ ಗಳ್ ಜಗುಳ್ದುವಾ ತಾರಾಗ್ರಹಾಳಿಗಳ್ (ಜಬಪು. ೯೯-೦೨). **ಪೂಳು** : ೧. ಏಳುದಿವಸ ಧರೆಯೊಳು ಪೂಳರ್ದ ತರುಣನ ಪಡೆದ ಕದಿರ ರೇಮಂತೆ (ಭೈರವೇ. ೯-೦೦೦). ೨. ಧೃತಿಯುಂ ಮನಕೆ ಪೇಳಿ ಚಿಂತಾಬ್ಧಿಯುಂ ಪೂಳಿಯೋಡುವ ಪಟುಭಟಾಳಿಯುಂ ಮರಳಿ ಬರವೇಳಿಪೆಂದುಸಿರಿ . . . ಹರಿ ನಡೆದನು (ತಬಪು. ೩೦-೫೫). ೪. ಪೂಳುವರ್ ಕೋಲ್ಗಳಿಂದಹಿತರ ಪ್ರದ್ಯುಮ್ನು ಹಾರ್ಥಸುತರು(ಕೃ.ಬಿಜಾ. ೨೨-೩೦). **ಹೂಣು₂**: ೧. ಒಡಲೊಳು ಮೊದಲು ಹೂಣಿದ ವೈರಾಗ್ಯವೆಂಬೊಡವೆಯು ತೆಗೆದು ವಲ್ಲಭನ ಮುಡದಿ ಬೊಡಂಬಡಿಸುತ ಜಿನದೀಕ್ಷೆಯ ಕಡುವೇಗದಿಂ ಕೊಂಡಾಗ (ನೇಮಿಜಿನಸಂ. ೫-೫೫) ; ಪರಮನ ದಿವ್ಯನಿರೂಪಮೆಂಬುದು ಕರ್ಮಧರಣಿಯೊಳಗೆ ಹೂಣಿ ಹೋದ ಪರಮಾತ್ಮನಿಧಿಯು ಕಾಣಿಸುವ ನಿಪ್ಪಾಂಜಸದಿರವಾಗುತಿದೆ ನವಗೆಲ್ಲ (ಶರತ. ೬೯-೦೫೦). ೫. ಅಸಿ ಮುಸುಂಡಿಮುದ್ಗರಗದಾವಳಿಯಿಂದೆ ಬೊಬ್ಬಿಜಿದು ಹೂಣಲಿದುತಿರ್ದರಾಸುರಿಭಟರ್ ಸುರಭಟರನು (ಜಿಬಪು. ೪೨-೨೭). ೮. ಸಮಾಧಿ ಮಾಡು ; ಶವಸಂಸ್ಕಾರವನ್ನು ಮಾಡು : ಆ ಭವಿಗೆ ಉಪದೇಶವಿಲ್ಲ ಉಪದೇಶವ ಮಾಡಬಾರದು ಸತ್ತರೆ ಹೂಣಬಾರದು (ಅಪಚ. ೦೦-೦೮). **ಹೂಳ್**: ೧. ಜಾವ ಹೂಳ್ದ ನಿಧಾನ ತಮಗಹುದೇನು ವಿಸ್ಮಯ (ಪ್ರಭುಲೀ. ೮-೨೩); ಭೂಮಿಯೊಳಗೆ ಹೂಳ್ದ ಲೋಹ ಮಣ್ಣಡಿವುದು ಹೇಮ ಮಣ್ಣಡಿವುದೇ (ಭರತ. ೨-೩೨). ೨. ಅಭ್ರದಲ್ಲಿ ತಾರೆಕೆಯ ತೇರುಗಳು ಹರಿವ ಮಂಜಿನ ನದಿಯ ಹೂಳ್ದವು (ಕಾವ್ಯಾರ್ದ್ರಾ. ೯-೦೨). ೬. ಎಳಮಾವುಗಳ ಬಿಡಿ ಹೂಳಿ ಕೋಗಿಲೆಯ ಕೊರಳೊಳಗು ತೆಬವಾಗೆ...ಋತುಸಂಧಿಯುಳಲ್ವ

ಮೇಲೆಯಿತ್ತು (ಹಕಕಾ. ೪-೦೯). **ಹೂಳು₁** : ೧. ಬೀದಿಯಲ್ಲಿ ಬಿದ್ದ ಮಾಣಿಕ್ಯದ ಹೂಳಿರ್ದ ನಿಧಾನಮಾರಿಗೂ ಕಾಣಬಾರದು ನೋಡ (ಅಪಶಂ. ೨೨೬-೧೧೪೨); ಒರೆಸಿ ಹುಡಿಯಲಿ ಹೂಳಿದನು ಕಿವಿಮ್ಮಾರದಾನವನ (ಕುವ್ಯಾಅ. ೧-೪೯); ಭಸ್ತ್ರಭರಣ ಧಾನ್ಯ ಬೆಳೆವುದೆ ಮಣ್ಣು ಸತ್ತವರನು ಹೂಳಿ ಸುಡುವುದೆ ಮಣ್ಣು (ಪುರಂತ. ೨-೬೦-೩). ೨. ಸಲೆ ಸುರಂಗಗಳ ಘಾತವ ಹೂಳಿದರಾಗ ತಳುವದೆ ಹೊಕ್ಕುಕಾಹಿನವರು (ಕಂವಿ. ೦೯-೬೩). ೩. ವಾರಣೌಘವ ಸೀಳಿದನು ಹೂಳಿದನು ರಕುತದಲಿ (ಕುವ್ಯಾಕ. ೨೦-೨೨). ೪. ಹಗಲ ಹೂಳಿದರಮಮ ಬಾಣಾಳಿಗಳಲಸಮಮಹಾರಥರು (ಕುವ್ಯಾಶೀ. ೪-೯೬); ಹೊಗರುಗಣೆ ಹೂಳಿದುವು ಗುರುಸುತನಂಬಿನಂಬುಧಿಯ (ಕುವ್ಯಾಶ. ೩-೫). ೫. ಉಗಿವ ಹುಂಗಳ ಬಾಯಿದೊಳೆದುಗುವ ನೆತ್ತರಿಂ ಹೂತೊಳಗಿ ಬಂದಾಗೆ ಪೊಲೊಳಗಿದಂ ಕಲಿ ಸಂಕನು (ಶಾಶಾ. XX. ೧೨೬-೧೧; 1186); ಆಲಿ ಹೂಳಿದವಶ್ರುಜಲದಲಿ (ಕುವ್ಯಾದ್ರೋ. ೧೫-೧); ಹೊಲೆದಾಸ್ಯಪಂಕದಲಿ ಹೂತಿರುವೆವು (ಐಸೀರಿ. ೧೨೧-೨೧). ೬. ಮಹಾರಥರೆಸಗೆಯಲಿ ಹೂಳಿದುದು ನಭ ನುಗ್ಗಾಯ್ತು ನೆಲ ಚತುರಂಗಪದಹತಿಗೆ (ಕುವ್ಯಾಕ. ೧೧-೧೨); ಅಲ್ಲವು ಹೂಳಿ ಹೋದನು ಕವಣೆಗಲ್ಲಲಿ (ಶ್ರೀಕೃ. ೦೩-೧೮); ಹೂಳಿತಂಬರ ರತ್ನಮಯ ಕಲಶಾಳಿ ಸತ್ತಿಗೆಗಳಲಿ (ತೊರವೆ. ೬-೨೧-೪೯). ೭. ತುಂಬು; ಗಿಡಿ; **ಭರ್ತಿ ಮಾಡು** : ಹೊಟ್ಟೆಯ ಹೂಳಲಿಕೆ ಹಿಂಸೆಯನು ಮಾಡುವ ಹೊಲಬು ತಾನಲ್ಲ (ಶ್ರೀಕೃ. ೦-೦೨); ಜೋಗಿ ಕಡುದರವೇಸಿ ಜಂಗಮರು ಹೆಡಗೆಯೊಳಗೆ ಹೂತು ಕೊಡುವನ್ನಪಾನದೆ ಬಿಡದೆ ಸಂತುಷ್ಟಿಪಡೆವರು (ಕಂಪಿ. ೨೦-೧೧). ೧೦. ಇಂಗಿಸು ; **ಪರಿಹರಿಸು** ; **ನಾಶಪಡಿಸು** : ರಾಮಾಯಣವನಾ ಮುನಿ ಹೇಳಿದನು ಹೂಳಿದನು ಭೂಪನ ಮಾನಸ ವ್ಯಥೆಯ (ಕುವ್ಯಾಅ. ೨೩-೧); ವಿಷಯವ ಹೂಳುವದು ನಿಜಮುಕ್ತಿಕಾಂತೆಯ ನಾಳುವದು (ಹಂಶಾ. ೧೧೨); ಕರಣಂಗಳನು ಆಳು ಕಾಮಂಗಳನು ಹೂಳು (ಇಂಶಾಕ. ೦೫೩-೫೨). ೧೧. ಅಡಗು; ಹುದುಗು; **ಮರೆಯಾಗು** ; **ಕಾಣದಾಗು** : ಹೂಳಿಹೋಯಿತನ್ನಪಾನವ ಮೇಲಣೆಚ್ಚಿ (ಶ್ರೀಕೃ. ೬-೦೯); ಮುಚ್ಚಿದೆರಡುತುಟಿಗಳಲ್ಲಿ ಅರ್ಥವೆಲ್ಲ ಹೂಳಿದೆ (ಅರಳು. ೨೩-೮). ೧೨. (ಕಣ್ಣು, ಕಿವಿ, ಬಾಯಿ ಮುಂತಾದುವನ್ನು) ಮುಚ್ಚು ; **ಮುಚ್ಚಿಕೊಳ್ಳು** : ಕಾಳಿ ನಿರ್ವಾಣದಾಕೃತಿಯ ತಾಳಿ ಬಂದಿದಿರಾಗಿ ನಿಲಲಚ್ಯುತ ನೋಡಿ ಹೂಳಿದ ದೃಗ್ಯುಗಳವನು (ಮೋಹತ. ೩೮-೨೯). ೧೩. **ಹೊಗು** ; **ಪ್ರವೇಶಿಸು** : ಹೂಗಣೆ ಹೃದಯವನು ಹೂಳಿದವು [ಕಾಶಾಂ. ತಾಗಿದುದು] (ಕುವ್ಯಾವಿ. ೨-೬).

**ಹೂಳಿಡು, ಹೂತಿಡು** = (ನೆಲದಲ್ಲಿ) ಮುಚ್ಚಿಡು ; ಬಚ್ಚಿಡು : ಪರಿ ಕೊಟ್ಟ ಕಾಲಕ್ಕೆ ಉಣಲಿಲ್ಲ . . . ಹತ್ತುಸಾವಿರಹೊನ್ನು ತಿಪ್ಪೇಲಿ ಹೂಳಿಟ್ಟು ಮತ್ತೆ ಉಪ್ಪಿಲ್ಲದೆ ಉಂಡ್ಯಲ್ಲೊ ಪ್ರಾಣಿ (ಪುರಂದ. ೦-೬೭ ೦); ಹೆಂಗಸರೆಂದರೆ 'ಗೃಹಸ್ವಾಮಿನಿಯರು', ಎಂಬ ಚಂದವಾದ ಹೆಸರಿನಿಂದ ಅವರನ್ನು ಅಡುಗೆಯ ಮನೆಯಲ್ಲಿ ಹೂಳಿಡುವ ಕಾಲವು ಮುಗಿದು ಹೋಯ್ತು (ಯುಕ್ಷಕ್ರ. ೦೯೦); ಹಣವನ್ನು ಹೂಳಿಟ್ಟು, ಅದರ ಮೇಲೆ ಗೋಣಿತಟ್ಟನ್ನು ಹಾಸಿಕೊಂಡು ಯಾವಾಗಲೂ ಅಲ್ಲಿಯೇ ಕೂತಿರುತ್ತಿದ್ದನು (ಪಂತಿಶಾ. X. ೩); ಗೆದ್ದವರು ಬಳಿಗಾಡನ್ನು ಹೂತಿಡುವ ಕೆಲಸವನ್ನು ವಹಿಸಬೇಕಾಗುತ್ತದೆ (ಕವಿಕೋ. I. ೬೦೩); ನೆಲದಲ್ಲಿ ರೂಪಾಯಿ ಹೂತಿಟ್ಟರೇನು ಫಲ ? (ವಕರಾ. I. ೩೭೦).

[ದೇ.॥ ಮಲ. ಪೂಟು, ಪೂಣು ; ಕೊಡ. ಪುಳ್ ; ತೆಲು. ಪೂಡುಚು, ಪೂಡ್ಚು ; ತಾಯಿ., ಪುಪ್೯; ಕೋತ. ಪುಗ್ ]

**ಪೂಟ್ಕೆ** (ನಾ). ಶವವನ್ನು ಹೂಳುವುದು, –ಸಮಾಧಿ ಮಾಡುವುದು : ಇನ್, ಅವಳ ಮೇಲೆಯುಮ್ ಪೂಡಿಸಿದಪೆನ್, ಈ ಪೂಟ್ಕೆಯಾ ಸಂಚಿನೊಳಗೆ ಸುಪಾಲ ತಪ್ಪನ್. ಕರೆತನ್ನಿಮವಳನ್ (ಅಂತಿಗೂ. ೨೩-೪೬೮).

[ಪೂಟ್ + – ಕೆ]

**ಪೂಟ್ಟಿ** 'ಪೂಟು' ಪರಾ.

**ಪೂಟ್ಡು** 'ಪೂಟಿರ್' ಪರಾ.

**ಪೃಕ್ತಿ** (ನಾ). ಸ್ಪರ್ಶ ; ಸಂಪರ್ಕ : "ಸ್ಪೃಷ್ಟಿಃ, ಪೃಕ್ತಿಃ – ೨ ಮುಟ್ಟುವಿಕೆ, ಸೋಂಕುವಿಕೆ" (ಸಿದ್ಧಾಂತಿ. ೩೫೭). [ಸಂ.]

**ಪೃಚ್ಛಕ** (ನಾ). (ಪ್ರಶ್ನೆಯನ್ನು) ಕೇಳುವವನು : 'ಪೃಚ್ಛಕಲಗ್ನ' ಪರಾ. [ಸಂ.]

**ಪೃಚ್ಛಕಲಗ್ನ** (ನಾ.) [ಜ್ಯೋತಿ] ಪ್ರಶ್ನಿಸುವ ಕಾಲ : ದಿವಾಕರನುಂ ಪೃಚ್ಛಕಲಗ್ನದೊಳ್ ನೆಲಸೆ ಮತ್ತಂ ಗ್ರೀಷ್ಮಮಾ ಕಾಲಮುಂ (ಜಾತಕ. ೨೯-೬); ಪೃಚ್ಛಕಲಗ್ನದಿಂ ಸರುತದಿಂದಾರೂಢದಿಂ ನೋಡಿದಾ ಬೋಧಂ . . . ಭೋಂಕನೆ ಪೇಳ್ವ ಜೋಯಿಸಮುದಾರ್ಗಂ ಮರ್ತ್ಯರೊಳ್ ದುರ್ಲಭಂ (ಸುಕುಮಾ. ೩-೨೦). [ಸಂ.]

**ಪೃಚ್ಛನೆ** (ನಾ). ೧. ಕೇಳುವುದು ; ಪ್ರಶ್ನಿಸುವುದು. ೨. ವಿಚಾರಣೆ. ೩. [ಜೈನ] ವಾಚನ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ—ಎಂಬ ಪಂಚವಿಧಸ್ವಾಧ್ಯಾಯಗಳಲ್ಲಿ ಒಂದು; "ಶಬ್ದಾರ್ಥಗಳೆರಡರಲ್ಲಿಯೂ ಪ್ರಶ್ನೆಗಳನ್ನು ಮಾಡಿ ನಿರ್ಣಯ ಮಾಡಿಕೊಳ್ಳುವುದು" (ಜೈನಕೋ. ೦೬೨) : ವಾಚನೆಯುಂ ಪೃಚ್ಛನೆಯುಮನುಪ್ರೇಕ್ಷೆಯುಮಾಮ್ನಾಯಮುಂ ಧರ್ಮೋಪದೇಶಮುಮೆಂಬ ಪಂಚವಿಧಸ್ವಾಧ್ಯಾಯದೊಳಂ ನೆಱೆದು (ಅಜಪು. ೧೨-೪ ವ); ವಾಚನಾ – ವಕ್ಖಾಣಿಸುವುದುಂ, ಪೃಚ್ಛನಾ—ಬೆಸಗೊಳ್ವುದುಂ . . . ಧರ್ಮೋಪದೇಶಾಃ–ಧರ್ಮಮನುಪದೇಶಂಗೆಯ್ವುದುಂ ಎಂಬಯ್ದುಸ್ವಾಧ್ಯಾಯವಿಕಲ್ಪಂಗಳಪ್ಪುವು (ತತ್ವಸೂ. ೩೪೪); ಸ್ವಾಧ್ಯಾಯವು ವಾಚನೆ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ ಎಂದು ಐದು ಬಗೆಯಾಗಿದೆ (ಜೈನಧ. ೬೮).

[ಸಂ. ಪೃಚ್ಛನ]

**ಪೃಚ್ಛಿಸು** (ಕ್ರಿ). ಪ್ರಶ್ನೆಮಾಡು ; ಪ್ರಶ್ನಿಸು : "ಗಾಂಧಾರೀನೂ ರಾಜರ ತಾಯಿಾನ ಅಲ್ಲ ಏನರೀ ?" ವಿಶ್ವಾಸ ಪೃಚ್ಛಿಸಿದ (ದೀಕಹ. I. ೪೬).

[<ಪೃಚ್ಛನೆ + – ಇಸು₃]

**ಪೃಚ್ಛೆ** (ನಾ). ೧. ಕೇಳುವುದು; ಪ್ರಶ್ನೆಮಾಡುವುದು; ಪ್ರಶ್ನಿಸುವುದು : "ಪ್ರಶ್ನಃ, ಅನುಯೋಗಃ, ಪೃಚ್ಛಾ—೩ ಕೇಳುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೫೨). ೨. ಪ್ರಶ್ನೆ : ಪರಮಹಂಸಂ ಬಂದು ಕುಳ್ಳಿರ್ದೊಡಿತ್ತು ಬೞಿಕ್ಕರ್ಘ್ಯಮನೆಯ್ದೆ ನೀಮೆಮಗೆ ಪೇೞಿಂ ಸ್ವೇಚ್ಛೆಯಿಂ ಪೃಚ್ಛೆಯಂ (ಸುಕುಮಾ. ೩-೬). ೩. ವಿಚಾರಣೆ ಮಾಡುವುದು; ವಿಚಾರಿಸುವುದು.

**ಪೃಚ್ಛಾಪೃಚ್ಛೆ** (ದ್ವಿರುಕ್ತಿ) : ನೀವಿಷ್ಟು ಪೃಚ್ಛಾಪೃಚ್ಛೆ ಮಾಡಿದ ಕಾರಣವೇನೆಂದು ನಮಗಿನ್ನೂ ಹೇಳಲಿಲ್ಲವಲ್ಲ ? (ಅಂಬರು. ೦೯); ಭಾರತೀಯರು, ಇಲ್ಲದ ಪೃಚ್ಛಾಪೃಚ್ಛೆ ಮಾಡದೆ, ಎಷ್ಟೋ ಸಲ ವಿಚಾರ ಗ್ರಹ ಮಾಡದೆ, ಪರಾತ್ಪರಸತ್ಯವನ್ನು ಒಪ್ಪಿ ಸ್ವೀಕರಿಸಿ ಬಿಡುತ್ತಾರೆ (ಮಹಾಯೋ. ೦೫೯).

**ಪೃಚ್ಛೆ ಮಾಡು** = **ಪೃಚ್ಛಿಸು** : ಸಾಮ್ಯವಾದದ ಪ್ರವೃತ್ತಿಗಳ ರಸವೇನು ಎಂದು ಪೃಚ್ಛೆಮಾಡಿ ಆತ್ಮನಲ್ಲಿ ಅವುಗಳ ಉಗಮವನ್ನು ತೋರಿಸಲು ಯತ್ನಿಸುವವನು (ಸಾಹಿಬಿ. ೬೪). [ಸಂ. ಪೃಚ್ಛಾ]

**ಪೃಚ್ಛ್ಯ** (ಗು). ೧. ಕೇಳಬೇಕಾದ ; ಪ್ರಶ್ನಿಸಬೇಕಾದ. ೨. ವಿಚಾರಣೆ ಮಾಡಬೇಕಾದ; ವಿಚಾರಿಸಬೇಕಾದ. [ಸಂ.]

**ಪೃತನಾಜಾಳ** (ನಾ). ಸೇನೆಯ ಸಮೂಹ, –ಗುಂಪು : ಗಿರಿರಾಜೋದಗ್ರ ಸಿಂದೂರಿತಕರಟಘಟಾಟೋಪಮಂ . . . ಚಿತ್ರನೇತ್ರಾಂಬರನಾನಾ ಹೇಷಿಹಸ್ತ್ಯುದ್ಭಟಭಾಪೃತನಾಜಾಳಮಂ ಚಿತ್ರದೊಳ್ ವೀರರಸಂ ಕೈಗಣ್ಮೆ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ (ಅಜಪು. ೦೯-೬೭).

[ಸಂ. ಪೃತನಾಜಾಲ]

**ಪೃತನೆ** (ನಾ). ೧. ಸೈನ್ಯ; ಪಡೆ : "ಪೃತನಾ, ಸೇನಾ . . . ಅನೀಕಂ

–ಈ ೧೦ ಪಡೆ" (ಹರಿಾಯು. ೭೩-೩೦೩); ಪತ್ತಿಯೆಂದುಂ ಸೇನೆಯೆಂದುಂ ಸೇನಾಮುಖಮೆಂದುಂ ಗುಲ್ಮವೆಂದುಂ ವಾಹಿನಿಯೆಂದುಂ ಪೃತನೆಯೆಂದುಂ ಚಮುಪೆಂದುಮನೀಕಿನಿಯೆಂದುಮಿಂತೆಂಟುತೆಱದಿಂ ಪಡೆಗೆ ಪೆಸರಕ್ಕುಂ (ಶಂಠಾಪಮಾ. ೦೩-೯ ವ); ಫಣಿಪತಿ ಪೃತನಾಭರದಿಂ ಪ್ರಭಗ್ನಫಣನಾದುದು ಸೂನ್ಯತಮೆಂದು ಸೂಚಿಪಂತದ್ಭುತಮಾದುದು ಬಾಣಗಮನದೊಳ್ ಭೂಕಂಪಂ (ಜಗಿಂ. ೦೮-೯೩); ಅತ್ತಲಾ ತೆರೆತೆರೆ ಕೆರಳ್ದುದದ್ಭುತಪೃತನೆ (ಶ್ರೀರಾಮಾ. ೬೩೨-೯೬). ೨. ೨೪೩ ಆನೆಗಳು, ೨೪೩ ರಥಗಳು, ೭೨೯ ಕುದುರೆಗಳು ಮತ್ತು ೧೨೧೫ ಕಾಲಾಳುಗಳಿಂದ ಕೂಡಿದ ಒಂದು ಸೇನಾವಿಭಾಗ : ಆನೆ ೨೪೩ ರಥ ೨೪೩ ಕುದಿರೆ ೭೨೯ ಕಾಲಾಳು ೧೨೧೫ಯಿಂದು ೧ ಪೃತನೆಯೆಂಬ ಬಲ (ಸ್ವವಹಾ. ಅನುಬಂಧ. ೦-೦೦). ೩. ಕದನ; ಯುದ್ಧ. [ಸಂ. ಪೃತನಾ]

**ಪೃಥಕ್ಕರಣ** (ನಾ). ಬೇರೆಬೇರೆ ಮಾಡುವಿಕೆ ; ವಿಂಗಡಿಸುವಿಕೆ ; ವಿಂಗಡಣೆ : ಕಲೆಯು ವೈಜ್ಞಾನಿಕಪೃಥಕ್ಕರಣಕ್ಕೆ (Scientific analysis) ತಲೆಬಾಗುವ ಶಾಸ್ತ್ರವಲ್ಲ (ಶಾಶಕ್ರ. ೦೨). [ಸಂ.]

**ಪೃಥಕ್ಕರಣೆ** (ನಾ). = ಪೃಥಕ್ಕರಣ : ಈ ವಿಷಯದಲ್ಲಿ ಶ್ರೀಗೋವಿಂದ ಪೈಗಳು ಮಾಡಿದ ಪೃಥಕ್ಕರಣೆ ಯೋಗ್ಯವೇ ಆಗಿದೆ (ಕಶ್ಯಕ. ೬೭); ಈ ಕವಿಯ ಕಾಲಕ್ಕಾಗಲೇ ಭಾಷಾಕ್ಷೇತ್ರದ ಪೃಥಕ್ಕರಣೆ ನಡೆದಿತ್ತೆಂಬುದು ಸಂತೋಷದಾಯಕವಾದ ಮಾತು (ದ್ರಾಐ. ೦೨ ಹಿನ್ನೆಲೆ). [ಸಂ. ಪೃಥಕ್ಕರಣ]

**ಪೃಥಕ್ಕರಿಸು** (ಕ್ರಿ). ವಿಂಗಡಿಸು ; ವಿಭಾಗಿಸು : ಕಥೆ ಮತ್ತು ರೇಖಾಚಿತ್ರಗಳ . . . ಸಾಮ್ಯ ವೈಷಮ್ಯಗಳನ್ನು ಬರಹಗಾರರೇ ನೇರವಾಗಿ ಪೃಥಕ್ಕರಿಸದೆ, ಬೇರೊಬ್ಬರ ಬಾಯಿಂದ ಹೇಳಿಸಿರುವ ರೀತಿ ಮನೋಜ್ಞವಾಗಿದೆ (ಶ್ರೀಕೃಕೃ. iv ಮುನ್ನುಡಿ) ; ಕಾದಂಬರಿಗಳಲ್ಲಿ ಪಾತ್ರ ಮೇಲ್ಮಟ್ಟದ ಹುಡುಗ–ಹುಡುಗಿಯರ ಗುತ್ತಿಯಲ್ಲ. ಕೇವಲ ಅವರ ಮುಳ್ಳು ಪರಚಿದ ಸಂಕಷ್ಟಗಳನ್ನು ಹೇಳುತ್ತ, ವರ್ಣಿಸುತ್ತ, ಪೃಥಕ್ಕರಿಸುವುದೊಂದೇ ಕಾದಂಬರಿಯ ವಸ್ತುವಲ್ಲ (ರಕ್ತರೂ. ಕೃಸ್ತಾಕ). [ಪೃಥಕ್ಕರಣ + –ಇಸು]

**ಪೃಥಕ್ತ್ವ** (ನಾ). ೧. ಬೇರೆಯಾಗುವಿಕೆ; ಹೊರತಾಗಿರುವಿಕೆ; ಪ್ರತ್ಯೇಕತೆ. ೨. = ಪೃಥಕ್ತ್ವವಿತರ್ಕವೀಚಾರ : ಇರ್ವರುಪಶಮಕರ್ಗಂ ನಾನಾಜೀವಾಪೇಕ್ಷೆಯಿಂ ಸಾಮಾನ್ಯದವೊಲ್ ಏಕಜೀವಾಪೇಕ್ಷೆಯಿಂ ಜಘನ್ಯದಿಂ ಅಂತರ್ಮುಹೂರ್ತಂ ಉತ್ಕೃಷ್ಟದಿಂ ಪಲ್ಯೋಪಮಶತಪೃಥಕ್ತ್ವಂ (ತತ್ತ್ವಸೂ. ೯೦). [ಸಂ.]

**ಪೃಥಕ್ತ್ವವಿತರ್ಕವೀಚಾರ** (ನಾ). [ಜೈನ] ಎಂಟನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದ ಕೆಲವು ಭಾಗಗಳವರೆಗೆ ನಡೆಯುವಂತಹ ಶುಕ್ಲಧ್ಯಾನ; ಪ್ರಥಮಶುಕ್ಲಧ್ಯಾನ: ▶ "'ವಿತರ್ಕ' ಎಂದರೆ ಶಾಸ್ತ್ರ, 'ವೀಚಾರ' ಎಂದರೆ ವಿಪರೀತವರ್ತನ" (ಜೈಪಕೋ. ೧೭೨); "ಮೊದಲ ಶುಕ್ಲಧ್ಯಾನದಲ್ಲಿ ೮ನೆಯ ಗುಣಸ್ಥಾನದಿಂದ ೧೨ನೆಯ ಗುಣಸ್ಥಾನದ ಕೆಲವು ಭಾಗದವರೆಗೆ ನಡೆಯುವಂಥದು" (ವಡ್ಡಾರಾ. ಜೈನಪಾರಿಭಾಷಿಕಶಬ್ದಕೋಶ); "ಗುಪ್ತಿ ಮುಂತಾದವುಗಳ ಅಭ್ಯಾಸ ಮಾಡಿದವನು ಮತ್ತು ದ್ರವ್ಯಪರ್ಯಾಯಗಳ ಚಿಂತನೆಯಲ್ಲಿ ನಿಪುಣರಾದ ಮುನಿಗಳು ಅರ್ಥ, ವ್ಯಂಜನ, ಕಾಯಯೋಗ, ವಚನಯೋಗ ಇವುಗಳ ಪೃಥಕ್ ಪೃಥಕ್‌ರೂಪದಿಂದ ಸಂಕ್ರಮಣ ಮಾಡುವ ಮನಸ್ಸಿನ ಮುಖಾಂತರವಾಗಿ ಮೋಹನೀಯ ಕರ್ಮಪ್ರಕೃತಿಗಳ ಉಪಶಮ ಅಥವಾ ಕ್ಷಯ ಮಾಡುವುದಕ್ಕೋಸ್ಕರ ಉದ್ಯುಕ್ತರಾಗುತ್ತಾರೆ. ಅಂಥವರಲ್ಲಿ ಈ ಶುಕ್ಲಧ್ಯಾನವು ಉದಯವಾಗುತ್ತದೆ" (ಆದಿಪು. ಜೈನಪಾರಿಭಾಷಿಕಶಬ್ದಕೋಶ) ; ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮಶುಕ್ಲಧ್ಯಾನದೊಳ್ ಕೂಡಿಯುಪಶಾಂತಗುಣಸ್ಥಾನದೊಳಿರ್ದು ರತ್ನತ್ರಯಮಂ ಸಾಧಿಸಿ ಸಯಸತ್ಯಮದೇವನಾಗಿ ಪುಟ್ಟಿದೊಂ (ವಡ್ಡಾರಾ. ೨೯-೦೩); ಪೃಥಕ್ತ್ವವಿತರ್ಕವಿ[ವೀ]ಚಾರಮೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳಹಮಿಂದ್ರನಾದಂ (ಆದಿಪು. ೩-೩೯ ವ); ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮಶುಕ್ಲಧ್ಯಾನಪರಿಣತಿಯಿಂ ಕ್ಷೀಣಕಷಾಯವೀತರಾಗಛದ್ಮಸ್ಥಗುಣಸ್ಥಾನವ್ಯವಸ್ಥಿತನಾಗಿ (ಸುಕುಮಾ. ೮-೬೨ ವ). [ಪೃಥಕ್ತ್ವ + ವಿತರ್ಕ + ವೀಚಾರ ?]

**ಪೃಥಕ್ಪರ್ಣಿ** (ನಾ). ಒಂದು ಬಗೆಯ ಸಸ್ಯ ; ನರಿಹೊನ್ನೆಗಿಡ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ–ಳ ಕೋಲಿಹೊನ್ನುಯೆಂಬುವವು, ನರಿಹೊನ್ನೇಗಿಡ, ನಕ್ಕಚಿಕ್ಕನಾಕು" (ಸಿದ್ಧಾಂತಿ. ೦೪೩).
[ಸಂ. ಪೃಥಕ್ಪರ್ಣೀ]

**ಪೃಥಗರ್ಥ** (ನಾ). ಬೇರೆಯ ಅರ್ಥ : ಪೆಸರೊಳಸಂಭವಮೆನಿಸುಗುಮ ಸಂಭವಂ ತದ್ವಿಶೇಷಣಂ ಪೃಥಗರ್ಥಂ ಪೊಸಯಿಸೆ ಭಿನ್ನರಸಂ ಸುಪ್ರಸಿದ್ಧವಾಚ್ಯದೊಳದಲ್ತೆ ವಕ್ರೋಕ್ತಿ ಕರಂ (ಕಾವ್ಯಾ. ೬೩೩); ಏಗಂ ವಲಂ ವೆಟ್ಟಿಂ ದಲ್ ತಾಗುಗುಮತಿನಿಶ್ಚಯಾರ್ಥಮಂ . . . ಬೇಱೆಬೇಱೆಯೆನೆ ಪೃಥಗರ್ಥಂ (ಶಮದ. ೩೦೬). [ಸಂ.]

**ಪೃಥಗ್ಜನ** (ನಾ). ೧. ತಿಳಿವಳಿಕೆ ಇಲ್ಲದವನು ; ದಡ್ಡ ; ಪಾಮರ : "ಪ್ರಾಕೃತನಪಶದಂ ಪೃಥಗ್ಜನನಿತರಂ ಪಾಮರನೆನಿಪ್ಪನಕ್ಕುಂ ಜಾಲ್ಮಂ" (ವಸ್ತುಕೋ. ೬೯-೬೨); ಪೃಥಗ್ಜನವಂತುದಾತ್ತಚಿತ್ತಂ ಜನಪತಿ ಧೈರ್ಯವಾಂಬು ರಾಶಿ ಚಳಯಿಸಿದವನೆ (ಅಜಿಪು. ೦೦-೯೮). ೨. ನೀಚ ; ದುಷ್ಟ : "ವಿವರ್ಣಃ, ಪಾಮರಃ, ನೀಚಃ, ಪ್ರಾಕೃತಃ, ಪೃಥಗ್ಜನಃ . . . ಇತರಃ—೧೦ ನೀಚನ ಪೆಸರು" (ಸಿದ್ಧಾಂತಿ. ೩೦೨). [ಸಂ.]

**ಪೃಥಗ್ಭಾವ** (ನಾ). ಬೇರೆಯೆಂಬ ಭಾವನೆ, –ಆಲೋಚನೆ ; ಬೇರೆ ಎಂಬ ಕಲ್ಪನೆ : ಅನೇಕ ಪ್ರಕಾರಕಪಟೋಪಾಯಂಗಳಿಂದತಿಸ್ನೇಹಿತರೊಳ್ ಪೃಥಗ್ಭಾವಮಂ ಮಾಟ್ಟುದೇ ಭೇದಮೆಂಬುದು (ಶಂಕಕಂ. ೨೦-೨೨) ; ನೀವು ನಾವೆಂಬೀ ಪೃಥಗ್ಭಾವಾವಲಂಬನವೇಕೆ ನಿಮ್ಮಲಿ ನಾವು ನಮ್ಮಲಿ ನೀವೆಯೆಂದನು ನಗುತ ಕುರುರಾಯ (ಕುವ್ಯಾಸ. ೮೩-೩೬) ; ಭಾವಿಸಲು ಯಾದವರೊಳು ಪೃಥಗ್ಭಾವದಲಿ ಸಂಕರುಷಣಾಖ್ಯೆಯನೀ ವಿಬುಧನುತ ನೆಯ್ದುವನು (ಶಿಹಾಗ. ೦೦-೭–೯೦). [ಸಂ.]

**ಪೃಥಗ್ವಿಧ** (ನಾ). ಬೇರೆ ಬೇರೆಯ ರೀತಿ, –ವಿಧ : "ವಿವಿಧಃ, ಬಹುವಿಧಃ, ನಾನಾರೂಪಃ, ಪೃಥಗ್ವಿಧಃ —೪ ಬೇರೆ ಬೇರೆ ರೂಪವುಳ್ಳದ್ದು, ನಾನಾರೂಪವನಾಗಿರುವಂಥಾದ್ದು" (ಸಿದ್ಧಾಂತಿ. ೩೯೮). [ಸಂ.]

**ಪೃಥವಿ** (ನಾ). ಭೂಮಿ; ಧರೆ: ಪೃಥವಿಗೊಱಗಿದುವೆಂಟುಸಾವಿರಪೃಥುಳಹಯನುಗ್ಗಾಯ್ತು ಗಣನೆಯ ರಥ ಪದಾತಿಯೊಳಿತ್ತಲಿನೆ ಸವಱಿದನು ಪರಬಲವ (ಕುವ್ಯಾಗ. ೧-೦೨). [ಸಂ. ಪೃಥವೀ]

**ಪೃಥಾಕು** (ನಾ). ಹಾವು ; ಸರ್ಪ : "ವಿಷಧರಃ, ದಂದಶೂಕಃ . . . ಪೃಥಾಕುಃ, ಕಾಕೋದರಃ . . . ಭುಜಂಗಮಃ—ಈ ೨೫ ಹಾವಿನ ಪೆಸರ್" (ಹರಿಾಯು. ೦೦೩ ೦೮) ; ಪೃಥಾಕು ಸನ್ನಂಡನನೈಕ್ಯಮಂ ವಿಧಿಸುವೀ ಕೃತಿಯಂ ಕಿಱಿದೆನ್ನಬಪ್ಪುದೇ (ಷಟಿಂ. ೦ ೦೮). [ಸಂ.]

**ಪೃಥಾಸುತ** (ನಾ). ಕುಂತಿಯ ಮಕ್ಕಳಲ್ಲಿ ಒಬ್ಬ ; ಭೀಮ : ರಥವಾಜಿಗಳೊಂದೆಸೆಯೊಳ್ ರಥಾಂಗಗಳೊಂದೆಸೆಯೊಳುರುಳ್ದು ಕೆಡೆದುವು ನೋಡಾ . . . ಪೃಥಾಸುತಪೃಥಿತ ಪೃಥುಗದಾಪ್ರಹರಣೆಯಿಂ (ಗದಾಯು. ೩-೬). ▶ ಧರ್ಮರಾಯ, ಭೀಮ, ಅರ್ಜುನ ಈ ಮೂವರೂ ಕುಂತಿಯ ಮಕ್ಕಳಾದರೂ ಅರ್ಜುನನೊಬ್ಬನಿಗೇ ವಿಶೇಷವಾಗಿ ಈ ಹೆಸರನ್ನು ಅನ್ವಯಿಸುವುದುಂಟು ಮತ್ತು ಪಾಂಡವರಲ್ಲಿ ನಕುಲ ಸಹದೇವರು ಮಾದ್ರಿಯ ಮಕ್ಕಳಾದರೂ ಒಟ್ಟು ಪಾಂಡವರೈವರಿಗೂ ಅನ್ವಯಿಸಿ ಹೇಳುವುದು ಬಳಕೆಯಾಗಿದೆ.

**ಪೃಥಾಸುತರ್** —ಕುಂತಿಯ ಮಕ್ಕಳು ; ಪಾಂಡವರು: ನಿರ್ದೋಷಿ ಗಳೊಳ್ ಪೃಥಾಸುತರೊಳಂ ಮಗುಳ್ದುಂ ಪುದುವಾಟ್‌ನೆಂಬೆನೇ (ಹಂಪಭಾ. ೧೪-೦೯) ; ಆಗಡು ಮಾಡಿದ ನಿಮ್ಮ ಮಕ್ಕಳ ವಿಗಡತನಕಳುದರೊ ದುರಿತದ ಸೊಗಡಿಗಂಜದರೋ ಪೃಥಾಸುತರೆಂದಳಂಮುಮುಖಿ (ಕುಮ್ಯಾ.ಕ. ೦೩-೪೭). [ಸಂ.]

**ಪೃಥಿವಿ** (ನಾ). ೧. ಪಂಚಭೂತಗಳಲ್ಲಿ ಒಂದು ; ನೆಲ ; ಧರೆ ; ಭೂಮಿ : "ಭೂಃ, ಭೂಮಿಃ, ಪೃಥಿವೀ . . . ಧರಾ, ಆಧಾರಾ—ಈ ೩೭ ಭೂಮಿಯ ಪೆಸರ್" (ಹಲಾಯು. ೨೬-೧) ; ಸೊಗಯಿಸಮೆಂದು ಪೃಥಿವ್ಯಾದಿಗಳೆನಿಸುವ ಪಂಚಭೂತಮೆಲ್ಲವನುಟದಾವಗಮುಜ್ಜ್ವಳಾಂಗಿಯಂ ಧವಳಗುಣದೆ ನಿರ್ಮಿಸಿದನಾಗವೇಟ್ಮುಂ ಧಾತ್ರಂ (ಅರಂ‌ಪು. ೩೩೦) ; ಪೃಥಿವಿ ನೆಗ್ಗಿತು ಹೊತ್ತ ಕಮಠನ ವ್ಯಥೆಯುನಾರುಸುರುವರು ಸುಮಹಾರಥರ ಹೊದಟಿಲಿ ಹೊಕ್ಕನುರಿ ಬಲುಮಳೆಯ ಹೊಕ್ಕಂತೆ (ಕುಮ್ಯಾದ್ರೋ. ೨-೩೦) ; ಮತ್ತಂ ಪೃಥ್ವಂಶಮರ್ಧಮುಂ ಪಿಕ್ಕ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ಪೃಥಿವಿಯೆನಿಕ್ಕುಂ (ಚಳವ. ೨೮ ಪ). ೨. ಮಣ್ಣು.

**ಪೃಥಿವಿಯಾತ್ಮಜೆ**—ಭೂಮಿಯಲ್ಲಿ ಜನಿಸಿದವಳು ; ಸೀತೆ : ಪೃಥಿವಿಯಾತ್ಮಜೆ ಬಳಿಕ ಚೇತರಿಸಿ ತನಗಿನ್ನು ಪಥಮಾವುದೆಂದು ದೆಸೆದೆಸೆಗಳಂ ನೋಡಿ . . . ಹಲುಬಿದಳ್ಕಲ್ಮರಂ ಕರಗುವಂತೆ (ಕೈಬಿಆ. ೦೯-೩೬). [ಸಂ.]

**ಪೃಥಿವಿಜೆ** (ನಾ). ಭೂಮಿಯಲ್ಲಿ ಹುಟ್ಟಿದವಳು ; ಸೀತೆ : ಪೃಥಿವಿಜೆಯನಱಸಲ್ಕೆ ವೀರಹನುಮಂತನಂ ಕಳುಹಿದಂ ಕಾಕುತ್‌ಸ್ಥನು (ಕೈಬಿಆ. ೦೯-೫). [ಸಂ. ಪೃಥಿವಿಜಾ]

**ಪೃಥಿವಿಪ** (ನಾ). ಭೂಮಿಯ ಒಡೆಯ; ಪೃಥ್ವೀಪತಿ : ಬಂದುದೇ ಪೃಥಿವಿಪನ ಮುಖಕೆಡರಕಟಯೆನುತ ಮನದೊಳಗೆ ಕೃಷ್ಣನಂ ಧ್ಯಾನಿಸಿದನಾ (ಕೈಬಿಆ. ೦೪-೨೦). [ಸಂ.]

**ಪೃಥಿವಿಪಂಚಕ** (ನಾ). [ವೇದಾಂತ] ಭೂಮಿಯ ಅಂಶದಿಂದ ಉತ್ಪನ್ನವಾದ ವಾಕ್ಕು, ಪಾಣಿ, ಪಾದ, ಪಾಯು ಮತ್ತು ಉಪಸ್ಥಗಳೆಂಬ ಐದರ ಗುಂಪು : ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳಿದನ್ನು ಇವು ಪೃಥಿವಿಯ ಅಯಿದುಭಾಗಗಳಿಂದ ಉತ್ಪನ್ನವಾದವುಗಳು, ಇವು ಪೃಥಿವಿ ಅಂಶವಾದ್ದರಿಂದ ಇವುಗಳನ್ನು ಪೃಥಿವಿಪಂಚಕವೆಂದು ಹೇಳುವರು (ವೇದಾಂಶ. ಸಾಂಖ್ಯಸೂತ್ರ). [ಸಂ.]

**ಪೃಥಿವಿಪತಿ** (ನಾ). ಭೂಮಿಯ ಒಡೆಯ ; ರಾಜ : ಪೃಥಿವಿಪತಿ ಕೇಳೆದೆಯ ಮೇಲೆ ಕೋಲ್ಕೀಲಿಸಲ್ ವ್ಯಥಿಸಿ ಮೈಮಟೆದನು (ಕೈಬಿಆ. ೬-೩೯). [ಸಂ.]

**ಪೃಥಿವಿಪಾಲ** (ನಾ). =ಪೃಥಿವೀಪಾಲ. [ಸಂ.]

**ಪೃಥಿವೀಚಕ್ರ** (ನಾ). ಭೂಮಂಡಲ; ಭೂಭಾಗ : ಪೃಥಿವೀಚಕ್ರಂ ಪ್ರಕಂಪಾಕುಳಿತಮುದಧಿಸೀಮಾತಿಮಾತ್ರಂ ಘನಾಧ್ವಂ ಮಥಿತಾಂಭೋವಾಹಮಪ್ಪಂತೊದವೆ ಬಹುಳಪಕ್ಷಾನಿಲಂ ಕೂಡೆ ಬಂದಂ . . . ಆ ವೈನತೇಯಂ (ಜಗಾ. ೦೦-೯೦). [ಸಂ.]

**ಪೃಥಿವೀಧಾತು** (ನಾ). [ತತ್ತ್ವಶಾ] ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ಮತ್ತು ಋತುಗಳೆಂಬ ಆರು ಧಾತುಗಳಲ್ಲಿ ಒಂದು : ಪೃಥಿವೀಧಾತು . . . ಋತುಧಾತು ಇವುಗಳೇ ಆರು ಧಾತುಗಳು. ಇವುಗಳಲ್ಲಿ ಪೃಥಿವೀಧಾತುವು ಅಂಗುರದಲ್ಲಿ ಕಾಠಿಣ್ಯವನ್ನು ಮತ್ತು ಗಂಧವನ್ನು ಹುಟ್ಟಿಸುವುದು (ಶಾಕಕ್ತ. ೨೦೪). [ಸಂ.]

**ಪೃಥಿವೀಪತಿ** (ನಾ). ಭೂಮಿಯ ಒಡೆಯ ; ರಾಜ : ಪೃಥುಲಯಶನಮಿತತೇಜಂ ಪೃಥಿವೀಪತಿನತಕಿರೀಟಮಣಿಗಣಕಿರಣಗ್ರಥಿತಪದಪೀಠನಾಗಲ್ ರಥನೂಪುರಚಕ್ರವಾಳಪುರಮಂ ಪೊಕ್ಕಂ (ಶಾಂತೀಶ್ವ. ೬-೦೩೩). [ಸಂ.]

**ಪೃಥಿವೀಪಾಲ, ಪೃಥಿವೀಪಾಳ** (ನಾ). ಭೂಮಿಯನ್ನು ಪಾಲಿಸುವವನು ; ಭೂಮಿಯ ರಕ್ಷಕ ; ರಾಜ. ಪೃಥಿವೀಪಾಳ : ಪೃಥಿವೀಪಾಳಸಹಸ್ರಂ ಪ್ರಥಿತಮಹೀನಾಥನಂತೆ ದೀಕ್ಷೆಯನಾಂತೇಂ ಕಥಿಯಿಪ್ಪುದೆ ಯಥಾರಾಜಾ ತಥಾಪ್ರಜಾಯೆಂಬ ನೀತಿಯಂ ಪ್ರಕಟಿಸಿತೋ (ಜಾಕ್ಕಗೆ. ೩೨-೩೦). [ಸಂ.]

**ಪೃಥಿವೀಪಾಳ** 'ಪೃಥಿವೀಪಾಲ' ನೋ.

**ಪೃಥಿವೀರಾಜ್ಯಂಗೆಯ್** (ಕ್ರಿ). ಭೂಮಿಯನ್ನು ಆಳು ; ರಾಜ್ಯಭಾರ ಮಾಡು : ಗಂಡತ್ರಿಣೇತ್ರ ಶ್ರೀಬೆಯ್ಯಂಬಮಹಾರಾಜರ್ ಪೃಥಿವೀರಾಜ್ಯಂಗೆಯೆ (ಎಇ. XXIV. ೨೬-೪ ; ಸು. ೫೫೬). [ಸಂ. ಪೃಥಿವೀ + ರಾಜ್ಯಂಗೆಯ್]

**ಪೃಥಿವೀಶ್ವರ** (ನಾ). ಭೂಮಿಯ ಒಡೆಯ ; ರಾಜ : ಆ ಪೃಥಿವೀಶ್ವರಂ ಪಗಲು ತಿಂಗಳನಚ್ಚರಿವಟ್ಟು ನೋಡಿದಂ (ಕಂದ್ರಶ್ರೀ. ೯-೬). [ಸಂ.]

**ಪೃಥು** (ಗು). ೧. ವಿಸ್ತಾರವಾದ ; ವಿಶಾಲವಾದ. ೨. ದೊಡ್ಡದಾದ ; ಗಾತ್ರವಾದ : ಪೃಥುಕಮಲಪರಿಮಲಪರಾಗಭರಕಲಿಲದಿಂ . . . ಪರಮಜಿನರಾಜನಂ ದುರಿತಾಬ್ದರಾಜನಂ ಪೂಜಿಸಿ (ಕಂದ್ರಪು. ೬-೧೦೦ ಕಗಳ) ; ಪಾಂಡುಸುತರ್ಮೈವರು ನಡೆಯಲು . . . ಆ ಪೃಥುಕುಕ್ಷುರನು ಸಪ್ತಮವಾಗಿ ಕಾನನಸರಿಸಿದುದು (ತಿಮ್ಮಮ. ೦-೦೯). ೩. ಅಸಂಖ್ಯವಾದ ; ಲೆಕ್ಕವಿಲ್ಲದ ; ಹೇರಳವಾದ. ೪. ವಿವರವಾದ. ೫. ಮಂಖ್ಯವಾದ. ೬. ವಿವಿಧವಾದ; ಬೇರೆಬೇರೆಯ. ೭. ಚುರುಕಾದ; ಕುಶಲತೆಯುಳ್ಳ. (ನಾ). ೮. ವಿಶಾಲವಾಗಿರುವಿಕೆ ; ವಿಸ್ತಾರವಾಗಿರುವಿಕೆ : "ಬಹು ಭೂಯಿಷ್ಠಮದಭ್ರಂ ಬಹುಳಂ . . . ಪೃಥು ಗುರು ಮಹದ್ವಿಶಾಳಂ ವಿಶಂಕಟಂ ವಿಸ್ತೀರ್ಣಂ" (ಚಸ್ತುಕೋ. ೦೦೩-೫೫) ; "ಬೃಹದುರು ಪುರು ಪೃಥುಳ ಪೃಥು . . . ವ್ಯೂಢಮೆನೆ ವಿಸ್ತೀರ್ಣಮೆಂದೆನಿಕು" (ಮಂಗರಾ. ೦೨೯-೬). ೯. ದೊಡ್ಡದಾಗಿರುವುದು ; ಹಿರಿದಾದುದು : "ಬೃಹತ್ . . . ಪೃಥು, ಪೃಥುಳು . . . ಭವ್ರಂ, ವರಿಷ್ಠಂ—ಈ ೧೨ ಹಿರಿದು" (ಹಲಾಯು. ೦೦೬-೦೯). ೧೦. ಒಂದು ಬಗೆಯ ಜೀರಿಗೆ ; ಕರಿಜೀರಿಗೆ : "ಸುಷವೀ, ಕಾರವೀ, ಪೃಥ್ವೀ, ಪೃಥುಃ, ಕಾಲಾ, ಉಪಕುಂಚಿಕಾ—೬ ಕರೀಜೀರಿಗೆ" (ನಿಘಂಟು. ೩೪೯). ೧೧. ಹಿಂಗಿನ ಮರ : "ಕಾರವೀ, ಪೃಥ್ವೀ, ಬಾಷ್ಪಿಕಾ, ಕಬರೀ, ಪೃಥುಃ—೫ ತತ್ಪತ್ರೀ—ಆ ಹಿಂಗಿನ ಮರದ ಹೆಸರುಗಳು" (ನಿಘಂಟು. ೨೯೫). ೧೨. ಅಗ್ನಿ. ೧೩. ವಿಷ್ಣು. ೧೪. ಮಹಾದೇವ ; ಶಿವ. ೧೫. ಅಷ್ಟವಸುಗಳಲ್ಲಿ ಒಬ್ಬ. ೧೬. ಅಫೀಮು. ೧೭. ಪ್ರಸಿದ್ಧರಾದ ಹದಿನಾರು ಜನ ಚಕ್ರವರ್ತಿಗಳಲ್ಲಿ ಒಬ್ಬ ; P ಭೂಮಿಯನ್ನು ಆಳಿದ ಮೊದಲನೆಯ ರಾಜ ಇವನೇ ಎಂದೂ ಇವನಿಂದಲೇ ಭೂಮಿಗೆ 'ಪೃಥ್ವೀ' ಎಂಬ ಹೆಸರಾಯಿತೆಂದೂ ನಂಬಿಕೆಯಿದೆ : ಮಹಿಯೊಳಗಿದರೇ ಪೃಥುಪುರೂರವ ಹರಿಶ್ಚಂದ್ರಾದಿ ನರಪತಿಗಳು (ಕೈಬಿಆ. ೦೯-೩೯). [ಸಂ.]

**ಪೃಥುಕ** (ನಾ). ೧. ಅವಲಕ್ಕಿ : "ಪೃಥುಕಮೆನಲವಲಕ್ಕುಂ" (ಚಸ್ತುಕೋ. ೯೯-೦೧); "ಅವಲಕ್ಕಿ ಪೃಥುಕಮಕ್ಕು" (ಮಂಗರಾ. ೦೦೦-೬). ೨. ಯಾವುದೇ ಪ್ರಾಣಿಯ ಮರಿ ; ಶಾಬ. ೩. ಮಗು ; ಶಿಶು: "ಬಾಳಃ, . . . ಪೋತಃ, ಪೃಥುಕಃ, ಶಿಶುಃ, ಶಾಬಃ, ಡಿಂಬಃ— ಈ ೯ ಮಗುವು" (ಹಲಾಯು. ೦೩-೩೯೯). ೪. ಒಂದು ಬಗೆಯ ರತ್ನ ; ಪಚ್ಚೆ : ಪಿತ್ಸಕವೆಂಬುವದು ಗಿಣಿಯ ರೆಕ್ಕೆಯಂತೆ ಇರುವುದು . . . ಪೃಥುಕವೆಂಬುವದು ತಾವರೆಯ ಎಲೆಯ ವರ್ಣವಾಗಿಯಿರುವುದು (ಜಗಂಗಂಧ. ೩೩೭-೦೬). [ಸಂ.]

**ಪೃಥುಕತ್ವ** (ನಾ). ಎಳೆತನ ; ಬಾಲ್ಯ ; ಶೈಶವ : ದೊರೆವೆತ್ತುದು ಪೃಥುಕತ್ವಂ ಪರಮನೊಳಾತ್ಮೀಯಜನನಿಯುದರದೊಳಿರ್ದುಂ ಪರಿಕಿಪೊಡಾಕ್ರಾಂತಚರಾಚರಗೋಚರಸಕಳಭುವನನಾದುದಱಿಂದಂ (ಕಂದ್ರಪು. ೦೨-೦೩೩). [ಸಂ.]

ಪ್ರೋತ್ಸಾಹಿಸು : ಅವಂ ಕಂಡು ಕಂಸಂ ಪಂದಿಗೆಱಗಿದ ನಾಯುಂ ಹೆಕ್ಕ [ಪಾಠಾಂ. ಪೆಕ್ಕು]ಳಿಸುವಂತೆ ಕ್ರೋಡೆಯನಪ್ಪಳಿಸಿ (ಅರ್ಜನೇ. ೯-೧೦೭ ವ); ಕವಿವ ಕಣೆ ಕಿಱುಗಣೆಯು ಮುಕ್ಕುಳಿಸಿದವು ಹೆಕ್ಕಳಿಸಿದವು ಹಂದೆಗರ (ಕುಮಾ.ಭಾ. ೪-೧೪). ೮. ಅಗಲವಾಗಿ ತೆರೆ : ಪಿಂಗದಸುರರ ಬಲವ ಪಾಱಿಸುತ್ತೇಱಿಸುತ ಕಂಗಳಂ ಕೆಕ್ಕಳಿಸಿ ಕಿವಿಗಳಂ ಹೆಕ್ಕಳಿಸಿ (ಚತುಕ್ರ ೩-೭-೭೯). ೯. ಸಿಡಿ ; ಚಿಮ್ಮು ; ಹಾರು : ಸಿಳಿಸಿಳಿಧ್ವನಿ ಮಸಗೆ ಕಿಲ ಹೆಕ್ಕಳಿಸಿದವು ರುಮ್ಮೆಂದು ಸವಿಂಧಾವ್ಯಗಳಬ್ಬರಿಸಿದವು ಛಟಛಟಛಟನಿನಾದದಲಿ (ಕೊರಾ. ೧-೭-೪೪). [ಪೆಕ್ಕಳ್₁ + — ಇಸು₃]

**ಪೆಕ್ಕಣ** ‘ಪೆಕ್ಕಣ₁’ ನೋ.

**ಪೆಕ್ರ**, ಪೆಕರ (ನಾ). ದಡ್ಡ ; ತಿಳಿಗೇಡಿ : ನಿಮಗೆ ಮದುವೆಯಾಗಿರಬೇಕಲ್ಲವೆ? . . . ನಾನೊಬ್ಬ ಪೆಕ್ರನ ಹಾಗೆ ಕೇಳುತ್ತಿದ್ದೇನೆ? (ಸಂಸ್ಕಾರ. ೧೧೪). **ಪೆಕರ** : ಅವನೊಬ್ಬ ಪೆಕರ (ರೂಢಿ). [?]

**ಪೆಗಲ್**, ಪೆಗಲು, ಹೆಗಲ್, ಹೆಗಲು (ನಾ). ೧. ಸ್ಕಂಧ; ಭುಜ : “ತೆಗಳ್ = ಪೆಗಲ್” (ಶಬ್ದ. ಶಂ ೨); ಬಲದೇವಂ ದುರ್ಯೋಧನಾಗಾಯು ಬರ್ಪಂತೆ ಪೆಗಲೊಳ್ ಹಲಾಯುಧಮನಿಕ್ಕಿಕೊಂಡು ಜಂಗಮ ಪರ್ವತಮೆ ಬರ್ಪಂತೆ ಬಂದು (ಪಂಪಭಾ. ೧೩-೯೮ ವ); ನೇಹದಿಂದಾ ಮಾತಂ ಪೇಳ್ದ ತುಂಬುರನ ಪೆಗಲೊಳ್ ಕಯ್ಯಿಕ್ಕಿ (ಪಂಪರಾ. ೪-೯೮) ; ಕಾಮುಮಂಜರಿ ಮುನಿಪನ ಪೆಗಲೊಳ್ ಕೆಯ್ಯನಿಟ್ಟಿರ್ದಳ್ (ದಶಕು. ೯ ೩೦ ವ); ಜನ್ನವಿತಮಂ ಪೆಗಲೊಳ್ ತೆಗೆದಿಕ್ಕಿ (ಕಾವ್ಯಸಾ. ೫೩೫). **ಪೆಗಲು** : ೧. ಮುಂಚೆತಗ ನಿಂವಿಡಿದು ಪೆಗಲೆತಡ ಸುತ್ತಿ (ಕಾರಣ. ೧೪೮-೩೨೪). **ಹೆಗಲ್** : ೧. ಸೊದ್ದಳ ಬಾಚರಸರ ಹೆಗಲ ಮೇಲೆ ಹಸ್ತಮಂ ಮಡಗಿ (ಶಾಸ್ತ್ರಸಂ. ೨೦೦-೨); ಹೆಗಲ ಕಂಬಳಿ ಕೈಯು ಕಲ್ಲಿಯೋಗರದಿಂದೆ . . . ಎಸವುತಿರೆ (ಬಸರ. ೯-೯೫) ; ಹೆಗಲಡ್ಡವರಿಗೆಯ ನೀಡಿ ವ್ಯಮಣಿವಾಕಿ ತಿವಿದಾಡಿದರು ಸಬಳಿಗರು (ಕುಮಾ.ಭಾ. ೯-೧೭). ೨. ಎತ್ತು, ಆನೆ ಮುಂತಾದವುಗಳ ಹೆಗ್ಗತ್ತು—ಬೆನ್ನಿನ ಮೇಲೆ ಇರುವ ಏಣು : “ಸ್ಕಂಧವೇಶಃ. ವಹಃ— ಈ ೨ ಹೆಗಲ್” (ಹಲಾಯು. ೪೪-೦೦೨). **ಹೆಗಲು** : ೧. ಅರೆಮರಳು ವಾಲಿಗಳ ಹೆಗಲಲಿ ಮುರಿದ ಗೋಣಿನ . . . ಅರಸನನು ಕಂಡಳಲಿದರು (ಕುಮಾ.ಭಾ. ೧೧-೫೫) ; ಅಕ್ಷಯಮೂಡಿಗೆಯು ದಕ್ಷಿಣದ ಹೆಗಲಿಗೇಱಿಸಿ (ಕೊರಾ. ೩-೭-೫); ಹೆಗಲ ಹಸಿಬೆಯೊಳಗಿಟ್ಟು ಮಡಿಯನುಟ್ಟು (ಪುರಂದ. ೨-೩೯-೧) ; ಹೆಗಲ ಮೇಲೆ ಹೊದೆದಿದ್ದ ಒಂದು ಉತ್ತರೀಯ (ಕಳಹು. ೧). ೨. “ಹೆಗಲು = ಸ್ಕಂಧಪ್ರದೇಶ, ವಹ” (ಪಾಶರಾ. ೪) ; ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು (ಕುಮಾ.ದ್ರೋ. ೯-೪೫) ; ಅಗಣಿತಲೋಕಾದಿ ಲೋಕಂಗಳುದರದಿ ಸೊಗಯಿಪ ನಾರಾಯಣನ ಹೆಗಲೊಳು ಹೊತ್ತು ಖೇಚರದೆ ಸಂಚರಿಸುವ ಖಗರಾಜ ಕರುಣಿಪುದು (ಮೋಹತ. ೧-೧೩); ಸಿಂಹವ . . . ಗೋಣು ಹೆಗಲುಗಳ ಮೇಲೆ ಬಿರುಸುಗೂದಲು ಉದ್ದವಾಗಿ ಬೆಳೆಯುವವು (ಮುಂಬಯಿ. ೪-೨೦೭).

**ಪೆಗಲೆಣೆ, ಹೆಗಲೆಣೆ** = ಸರಿಸಮಾನ ; ಸಾಟಿ : ಅವನ ಪೆಗಲೆಣೆಯ ಕೆಳೆಯರನ್ ಬಾಟರಸ್ ಗವಿಗಟ್ಟಲೆಯಿರುಳ್ ಮುಚ್ಚಿ ಮುಸುಕಿರ್ದಪುದು (ಬದ್ಧಶ್ರ. ೦೩-೨೭೩) ; ಜಸದೊಳು ಪರಮರೋಹಿಣಿಗೆ ಹೆಗಲೆಣೆ . . . ಚಂದ್ರಮತಿ (ಹಕಾ. ೧-೪೪). **ಹೆಗಲ ಕೆಲಸ** = ಭುಜದ ಸಹಾಯದಿಂದ ಮಾಡುವ ಕೆಲಸ ; ಹೊರುವ ಕೆಲಸ : ಬುದ್ಧಿಯ ಕೆಲಸ ಶ್ರೇಷ್ಠ . . . ಕಾಲ್ಕೆಲಸ ಹೆಗಲ ಕೆಲಸಗಳು ಅಧಮ (ವಕಶಾ. ೩೩೭). **ಹೆಗಲ ಮೇಲೆ ಬೀಳು** = ಹೊಣೆ ಹೊರುವಂತಾಗು ; ಭಾರ ಬೀಳು : ಆತನ ಹೆಗಲ ಮೇಲೆ ಬಿದ್ದಿದ್ದ ಜವಾಬ್ದಾರಿ ಎಷ್ಟು ಗುರುತರವಾಗಿತ್ತು (ಕೃದಃಪ. ೦೨). **ಹೆಗಲ ಸಾಳುವ** = ಬೇಟೆಗಾರರು ಬೇಟೆಗೆ ಹೊರಡುವಾಗ ಭುಜದ ಮೇಲೆ ಕೂಡಿಸಿಕೊಂಡು ಹೋಗುವ ಸಾಕಿದ ಗಿಡುಗ : ಹಿಡಿನಾಯಿಗಳು ಹೆಗಲ ಸಾಳು[ಪಾಠಾಂ. ೪]ವಂ . . . ಪರಿಪರಿಯ ಹಕ್ಕಿವೆರಸಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಕ. ೩-೪). **ಹೆಗಲಿಗೆ ಹೆಗಲು ಕೊಡು** = ಜೊತೆಯಾಗಿರು ; ಸಮಸಮವಾಗಿರು : ಶಿಷ್ಯರ ಹೆಗಲಿಗೆ ಹೆಗಲು ಕೊಟ್ಟು ನಾನು ದುಡಿಯುತ್ತೇನೆ (ಶಸ್ತ್ರಕೊ. ೫೦) ; ನನ್ನ ಹೆಗಲಿಗೆ ಹೆಗಲು ಕೊಟ್ಟಿರಿ, ಹಿಂದೆ ಬೆಂಬಲವಾದಿರಿ (ಶಂಪಮು. ೫೨-೦೩). **ಹೆಗಲು ಕೊಡು** = ಸಹಾಯ ಮಾಡು ; ನೆರವು ನೀಡು : ನೆರೆಹೊರೆಯವರು ಸಹಾಯ ಬೇಡಿದರೆ ಎಷ್ಟು ಶ್ರಮವಾದರೂ ಹಿಂಜರಿಯದೆ ಹೆಗಲು ಕೊಡುವವನು (ಹೋಧಕೃ. ೭೪) ; ಬಾ ಬಂಧು, ಹೆಗಲು ಕೊಡು, ನಡುದಾರಿಯಲಿ ನಿಂತ ಈ ರಥವ ಸಾಗಿಸೋಣ (ಶಂಪಮು. ೧೯-೨೨). **ಹೆಗಲು ತೊಳೆ** = ಜವಾಬ್ದಾರಿ ಇಲ್ಲದಂತೆ ಮಾಡು : ನನಗಂತೂ ಸಾಧಿಸುವದಿಲ್ಲ, ನನ್ನ ಹೆಗಲು ತೊಳೆದು ಬಿಡಿರಿ (ಕಬ್ಬಹೂ. ೧೫). **ಹೆಗಲೆಣೆಯಾಗು** = ಸರಿಸಮಾನವಾಗು ; ಸಾಟಿಯಾಗು : ಅವಳಿಗೆ ಹೆಗಲೆಣೆಯಾಗಿ ನಿಲ್ಲಬಲ್ಲ ಮತ್ತೊಬ್ಬ ವ್ಯಕ್ತಿಯೆಂದರೆ ಮುಕ್ತಾಯಕ್ಕ (ಶೂನ್ಯಕು. ೧೦೫) ; ಮಾನವನಿಗೆ ಸೌಂದರ್ಯದರ್ಶನವೃಷ್ಟಿ ಲಭಿಸಿದಾಗ ಅವನು ದೇವತೆಗಳ ಹೆಗಲೆಣೆಯಾಗಿ ನಿಂತು ಅಮರನಾಗುತ್ತಾನೆ (ಸೌಂದಃ. ೫೯).

[ದೇ.॥ ತಮಿ. ಪಿಚಲ್ ; ತುಳು. ಪುಗೆಲ್, ಪುಗ್ಗೆಲ್ ; ಕೋತ. ಪೆಯ್ಲ್, ಪೆಯ್ಳ್]

**ಪೆಗಲಿಕ್ಕು** (ಕ್ರಿ). ಹೆಗಲಿನ ಮೇಲೆ ಇಡು, —ಇರಿಸು : ಬಲಗೈಯ ಪೆಗಲಿಕ್ಕಿ ಬಪ್ಪ ಯೋಗೀಂದ್ರರ ಸುಳುಹುಗಾಣದೆ ಚಿಂತೆ ಮಾಳ್ಪ (ಛಕ. ೩-೩೫). [ಪೆಗಲ್ + ಇಕ್ಕು]

**ಪೆಗಲೀ** (ಕ್ರಿ). ಹೆಗಲನ್ನು ಕೊಡು : ಪೆಗಲಿತ್ತು ಪೊತ್ತು ಜವದಿಂ ಮಿಗೆ ಪರಿಯೆ ವಿರಾಜಿಸಿರ್ದ ಗೋರಥಮಂ ಪೆಂಪಗಲದೊಡನೇಱೆ (ಕೃಷ್ಣಕ. ೩೯-೭೦). [ಪೆಗಲ್ + ಈ₂]

**ಪೆಗಲು** ‘ಪೆಗಲ್’ ನೋ.

**ಪೆಗಲೇರು** ‘ಪೆಗಲೇಱು’ ನೋ.

**ಪೆಗಲೇಱು**, ಪೆಗಲೇರು, ಹೆಗಲೇರು, ಹೆಗಲೇಱು (ಕ್ರಿ). ೧. ಭುಜವನ್ನು ಹತ್ತು ; ಭುಜದ ಮೇಲೇರು : ಸಮನಾಗೆ ಮೇಘದೊಳ್ ಕಾಳಮಹಾಕಾಳರ್ಕಳವರ ಪೆಗಲೇಱಿದ ವಿಭ್ರಮದಿಂ ನೋಡುವರ್ಗನ್ವರ್ಥಮಾದುದಾ ಮೇಘರಥನ ಪೆಸರಂಬರದೊಳ್ (ಶಾಂತಿಪು. ೯-೭೪). ೨. ಹೆಗ್ಗತ್ತಿನ ಮೇಲೆ ಏರು, —ಹತ್ತು : ಸಿಂಗನ ಪೆಗಲೇಱಿ ಸಾಗೆ ಕರಿ (ಪುರಂದ. ೨-೭೪-೩). **ಪೆಗಲೇರು** : ೧. ಬಡಬಡಿಪ ಪರೆಗಳುಂ ಪೆಗಲೇರೆ (ಕಾರಣ. ೦೫೦-೩೩೦). **ಹೆಗಲೇರು** : ೧. ಮಂಗ ಡೊಂಬರವನ ಹೆಗಲೇರಿ ಕುಳಿತುಕೊಂಡಿತು (ರೂಢಿ). **ಹೆಗಲೇಱು** : ೧. ಪಾಪ ಪುಣ್ಯಗಳೆರಡು ವ್ಯಾಪಿಸುತ ಬೆಂಬಿಡಿದು ಪಾಪ ಮಾಡಿದನ ಹೆಗಲೇಱಿ ರಾಜಕುಲದೀಪ ಬರುತಿಹನು (ಸರ್ವಜ್ಞ. ೬೫೩).

**ಪೆಗಲೇಱಿಸಿಕೊಳ್** = ಹೆಗಲಿನ ಮೇಲೆ ಕೂಡಿಸಿಕೊಳ್ಳು : ಸುಖದೋಱು ಲೋಕವಱಿಯಲ್ ಪೆಗಲೇಱಿಸಿಕೊಂಡು ಪೋದಂ (ಕುಮಾಕ. ೭೯); ಪೆಗಲೇಱಿಸಿಕೊಂಡೆನ್ನುಂ ಮಿಗೆ ನಿಮ್ಮೋಲಗಕೆ ಬರ್ಪನತಿಸಂಭ್ರಮದಿಂದಗಲದನು ದಿನಮುಂ (ವೃಷಭ. ೩೨-೪೦). [ಪೆಗಲ್ + ಏಱು₁ (<ಏಱ್₁)]

**ಪೆಗಲ್ಗೂಟ್** (ನಾ). ಹೆಗಲ ಮೇಲಿಟ್ಟುಕೊಂಡು ಹೋಗುವ ಬುತ್ತಿ : ಹರಿ ಗೋಪಾಲರೊಳಾಡಿದೊಂದೆ ಪೆಗಲ್ಗೂ [ಪಾಠಾಂ. ಪಸಲ್ಗೂ]ಟುಂಡ ತಾಣಂ . . . ತನ್ನದೀತೀರದೊಳ್ ತರದಿಂ ರಂಜಿಪುವು (ದಶಕು. ೧೪-೬). [ಪೆಗಲ್ + ಕೂಟ್₁]

**ಪೆಗಲ್ವೊಱೆ** (ನಾ). ಹೆಗಲಿನ ಮೇಲೆ ಹೊತ್ತುಕೊಂಡಿರುವ ಹೊರೆ : ಪಟು ಕೊಟ್ಟಿಗೆ ಪೆಗಲ್ವೊಱೆ . . . ಆಪ್ತವರ್ಗಂ ಸಹಿತಮನಿಪನುಂ ಸೇನೆಯುಂ ಕೊಟ್ಟು (ದಶಕು. ೩-೬). [ಪೆಗಲ್ + ಪೊಱೆ]

**ಪೆಗೆವೆಗೆ** (ನಾ). ಒಂದು ಸ್ಥಳದ ಹೆಸರು : ಗೆಟ್ಟಿವಡಿಗೆ ಪೆಗೆವೆಗೆಯು ಎಟ್ಟದಿವ್ಯಗ್ಗ್ರೆ ಎಳಚಾಗವಳ್ಳಿಯ ವಾರಯ್ಯ . . . ಕವ್ವುಳದೆಳೆವೆಟ್ಟಿ ಕೊಟ್ಟ (ಎಕ. III, ಶಂಜಕ. ೯೬-೨; 898 ?). [?]

**ಪೆಗೋಡ** 'ಪಗೋಡ' ನೋ.

**ಪೆಗ್ಗ** 'ಪೆಂಗ' ನೋ.

**ಪೆಗ್ಗಡೆ** 'ಪೆರ್ಗಡೆ$_1$' ನೋ.

**ಪೆಗ್ಗಣ** 'ಪೆರ್ಗಣ' ನೋ.

**ಪೆಗ್ಗಟಯ್ಯ** (ನಾ). ಒಬ್ಬಾತನ ಹೆಸರು : ವಚ್ಚಪಯ್ಯನ ವಾಗ ಶ್ರೀ [ಕೊ]ನ್ನದ ಪೆಗ್ಗಟಯ್ಯಂ (ಸೌಇಇ. XI_1, ೯೩-೦೯; 970). [? + ಅಯ್ಯ$_{61}$]

**ಪೆಗ್ಗಟ್ಟಿ, ಹೆಗ್ಗದ್ದೆ** (ನಾ). ದೊಡ್ಡ ಗದ್ದೆ; ವಿಸ್ತಾರವಾದ ಗದ್ದೆ: ದೇಗುಲಕೆ ಸಲ್ವುದು ದೇವರ ಕೆಱೆಯ ಮೂಡಣ ಕಡೆಗೋಡಿನಲಿ ಪೆಗ್ಗಟ್ಟಿ (ಎಕ. IX, ಶಹಗಹ. ೭೩-೩೦; 966). **ಹೆಗ್ಗದ್ದೆ** : ವಿಷ್ಣುಭಟ್ಟೋಪಾಧ್ಯಾಯರಿಂಗೆ . . . ಮೂಡಣ ಹೆಗ್ಗದ್ದೆ ಅದಱ ಮೇಗಣ ಕೊಡಂಗೆ ಎರಡಱಲ್ಲಿಯೂ ಮೂಡೆ ೨ (ಎಇ. XXVII. ೨೮-೪೮; 1256). [<ಪಿರಿದು$_1$+ಗಟ್ಟಿ]

**ಪೆಗ್ಗು** 'ಪೆಂಗು$_1$' ನೋ.

**ಪೆಗ್ಗೂರಿಡು** 'ಪೆರ್ಗೂರಿಡು' ನೋ.

**ಪೆಗ್ಗೂರು** 'ಪೆರ್ಗೂರು' ನೋ.

**ಪೆಗ್ಗೊಲ್ಲಿ** 'ಪೆರ್ಗೊಲ್ಲಿ' ನೋ.

**ಪೆಗ್ಗೋಳಿ** 'ಪೆರ್ಗೋಣೆ' ನೋ.

**ಪೆಚ್ಚ** (ನಾ). ದಡ್ಡ; ತಿಳಿಗೇಡಿ: "ಎಗ್ಗ, ಹುಂಬ . . . ಪೆಚ್ಚ" (ಕುವುಹು. ೬೯); ಶುದ್ಧ ಪೆಚ್ಚ ನಾನು (ಕ್ರಕ್ರ. ೬೯). 'ಪಿಚ್ಚ$_1$' ಪರಾ. [ಪೆಚ್ಚು$_3$+ — ಅ$_7$]

Δ**ಪೆಚ್ಚಳ$_1$** 'ಹೆಚ್ಚಳ' ನೋ.

**ಪೆಚ್ಚಳ$_2$** 'ಪಚ್ಚಳ$_2$' ನೋ.

Δ**ಪೆಚ್ಚಳಿಸು** 'ಹೆಚ್ಚಳಿಸು' ನೋ.

**ಪೆಚ್ಚಾಟ** (ನಾ). ತಿಳಿಗೇಡಿತನ; ಹುಚ್ಚಾಟ; ಅವಿವೇಕ: ಈಚೀಚೆಗಂತೂ ಅವನ ಪೆಚ್ಚಾಟ ಹೇಳತೀರದು (ರೂಶಿ). [ಪೆಚ್ಚು$_3$+ಆಟ]

**ಪೆಚ್ಚಿ** (ನಾ). ದಡ್ಡ ಹೆಂಗಸು; ಪೆದ್ದಿ : ಅವಳೊಬ್ಬಳು ಪೆಚ್ಚಿ. ಬಾಯಿಗೆ ಬಂದ ಹಾಗೆ ಹರಟುತ್ತಿರ್ದ್ದಾಳೆ (ರೂಶಿ). [ಪೆಚ್ಚ+ — ಇ$_2$]

**ಪೆಚ್ಚಿಸು** 'ಪೆರ್ಚಿಸು' ನೋ.

**ಪೆಚ್ಚು$_1$** 'ಪೆರ್ಚು$_1$' ನೋ.

**ಪೆಚ್ಚು$_2$** 'ಪೆರ್ಚು$_2$' ನೋ.

**ಪೆಚ್ಚು$_3$** (ಗು). ೧. ಏನೂ ತಿಳಿಯದ; ಮೂಢತನದಿಂದ ಕೂಡಿದ : ಏನೋ ಪೆಚ್ಚು ಹುಡುಗಿ. ಕನಿಕರದಿಂದ ಹಾಗೆ ಆಡುತ್ತಾಳೆ (ಸಿಶಾಕ. ೬೩). (ನಾ). ೨. ದಡ್ಡತನ; ತಿಳಿಗೇಡಿತನ : 'ಪೆಚ್ಚ', 'ಪೆಚ್ಚಿ' ಪರಾ. ೩. ಹುಚ್ಚು ; ಮರುಳು : "ಪೆಚ್ಚು (ಪುಚ್ಚು) — ಪಿತ್ತ = ಧಾತುವಿಕಾರ" (ತರ್ಕಕೋ. ೨೭). ೪. ಕಾಂತಿಹೀನವಾದುದು; ಮಂಕು : ನವಶಾಸ್ತ್ರ ದೊರೆಸಾವಿರ ಇವಗಚ್ಚುಮಚ್ಚು ವೇದವೇದಾಂತಗಳೆ ಅವನಿದಿರು ಪೆಚ್ಚು! (ಗಹೇಕ. ೭೦-೦೨). ೫. ದಡ್ಡವ್ಯಕ್ತಿ; ತಿಳಿಗೇಡಿಯಾದ ವ್ಯಕ್ತಿ : ಅಯ್ಯೋ ಪೆಚ್ಚ . . . ನಿನಗೆ ಗೊತ್ತೇ ಆಗಿಲ್ಲ (ಪತಿದಾ II, ೯೯೩); ಪೆಚ್ಚುಗಳು ಲಲಿತ, ನರಸಮ್ಮ (ಪತಿದಾ II, ೦೦೩೯).

**ಪೆಚ್ಚಾಗು** = ತಬ್ಬಿಬ್ಬಾಗು; ಕಂಗಾಲಾಗು; ಮಂಕು ಕವಿ : ಅವಳು ಮಾತನಾಡದ ಧಾಟಿಗೆ ಆನಂದ ಪೆಚ್ಚಾಗಿ ಕುಳಿತ (ದೂರಕ. ೬೭); ರಂಗನಾಥನು ಬಹಳ ಪೆಚ್ಚಾಗಿದ್ದನು (ಶಂಕಶಂ. ೭೬೩); ಪೆಚ್ಚಾಗಿ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾರೆ (ಕಂಕಕೂ. ೩೯). **ಪೆಚ್ಚುಪೆಚ್ಚಾಗು** = ಪೆಚ್ಚಾಗು : ಏನೇ ಪೆಚ್ಚುಪೆಚ್ಚಾಗಿ ನಿಂತಿದ್ದೀಯಾ ? (ಕೊಗ್ಗು. ೦೭). **ಪೆಚ್ಚುಬೀಳು** = ಪೆಚ್ಚಾಗು : ಹಿಂದೆ ಕೆಲವು ಸಲ ಇವರ ಮಾತಿನಂತೆ ನಡೆದು ಪೆಚ್ಚು ಬಿದ್ದಿದ್ದ ತಂಗವೇಲು ಅಂಗಡಿಯವನನ್ನು ಕೇಳುವುದಕ್ಕೆ ಹಿಂಜರಿದ (ಹಹುಹೂ. ೦೯೬). **ಪೆಚ್ಚು ಮಾಡು** = ಮಂಕು ಕವಿಸು ; ತಬ್ಬಿಬ್ಬುಗೊಳಿಸು : ಭೋಳೆಮನುಷ್ಯರೆಂದು ನಮ್ಮ ನಂದಬಾಬುಗಳನ್ನು ಪೆಚ್ಚು ಮಾಡಿದ (ಕುಂಹಿ. ೪೬). **ಪೆಚ್ಚೆನ್ನಿಸು** = ತಬ್ಬಿಬ್ಬಾಗು; ಮಂಕಾಗು : ಈ ನಾಮಕರಣದ ಪರಿಯನ್ನು ಕಾಣದವರ ಮಾತು ಹಾಗಿರಲಿ, ಕಂಡವರಿಗೂ ಸ್ವಲ್ಪ ಪೆಚ್ಚೆನ್ನಿಸಬೇಕು (ಪಮ್ಮುಕು. ೨೩೨).

**ಪೆಚ್ಚುಗೆ** 'ಪೆರ್ಚುಗೆ' ನೋ.

**ಪೆಚ್ಚುತನ** (ನಾ). ೧. ದಡ್ಡತನ; ಅವಿವೇಕ : ನಿನ್ನ ಪೆಚ್ಚುತನದಿಂದ ಕೆಲಸ ಹಾಳಾಯಿತು (ರೂಶಿ). ೨. ಹುಚ್ಚುತನ : "ಉನ್ಮಾದ, ಚಿತ್ತವಿಭ್ರಮ . . . ಪೆಚ್ಚುತನವು" (ಸಿದ್ಧಾಂತಿ. ೬೬). [ಪೆಚ್ಚು$_3$ + — ತನ]

**ಪೆಜ್ಜುಂಕ** 'ಪೆರ್ಜುಂಕ' ನೋ.

**ಪೆಜ್ಜೆ** 'ಪಜ್ಜೆ' ನೋ.

**ಪೆಜ್ಜೆಗೆಡು** 'ಪಜ್ಜೆಗೆಡು' ನೋ.

**ಪೆಜ್ಜೆವಿಡು** (ಕ್ರಿ). ದಾರಿ ಬಿಡು ; ಕ್ರಮವನ್ನು ಮೀರು : ನಾಡಿಗರ್ ದಿನದಿನಂ ಬೇಳ್ಪೊಂದು ಹವ್ಯಮನುಂಡುಂಡು ಸವಿಗೊಂಡ ಬೋಟೆಯು ರೆತ್ನಾನುವೊರ್ವನೀ ನಿಚ್ಚವಲಿಯಿಡಯಿಂ ಪುರುಳ್ಗಾಣದೆ ಪೆಜ್ಜೆವಿಟ್ಟು . . . ತಡೆವರ್ಪರ್ (ರಾಮಾಶ್ವ. ೫೩ ೩೦). [ಪೆಜ್ಜೆ (<ಪಜ್ಜೆ) + ಬಿಡು$_1$]

**ಪೆಟಲ್**, ಪೆಟಲ, ಪೆಟಲು, ಪೆಟ್ಟಲು, ಪೆಟ್ಲು (ನಾ). ೧. ಯುದ್ಧದಲ್ಲಿ ಮದ್ದನ್ನು ಸಿಡಿಸಲು ಉಪಯೋಗಿಸುತ್ತಿದ್ದ ಒಂದು ಬಗೆಯ ಸಾಧನ; ತುಪಾಕಿಯಂತಹ ಸಾಧನ : ಹೊಡಿದುವು ಪೆಟಲ್ಗಳಿಕ್ಕುವ ದಸಿಗಳಾಗಳೋರಾಡಿದುವು (ಕಲಶು. ೯೨-೬೨). **ಪೆಟಲ** : ೧. ಹಾರೆ ಬಿರಿ ಕೊಱಡು ಪೆಟಲ ತಿರುಗಣಿ ಬೀಸುವಲೆ ಕಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಪಮ್ಮುಳ. ೬-೨೮); ಗುಂಡು ಪೆಟಲ ತಿರುಗುಣಿ ಜಾಲದ ತಱಿಗೆಂಡ . . . ದಾಣೆಯು ತಂಡತಂಡದಿಂದೆಸೆದುದಾ ಕೋಟೆ (ಶಂಕ್ರಶಾಂ. ೯-೦೦). **ಪೆಟಲು** : ೧. ಸುಡುವ ಪೆಟಲು ಕೊಡೆ ನೆಗೆವ ಗುಂಡಿ ಕೇತು ತೋರಣದಿಂದ ಪಾಯ್ದುಳವೆಲ್ಲ ಸಡಗರಗೊಂಡುದು (ಭರತ. ೯೬-೨೨); ಪೆಟಲು ಡಮ್ಮನೆ ಗುಂಡು ಸಿಡಿದು ಪೋಪಂತೆ (ಕ್ರಶುಕ್ತಿ. ೬-೦೬೬); ಸುಭಟರ ಹರಣಗೊಳುವ ಪೆಟಲುಗಳ ಕಱಿವ ಗುಂಡಿನ ಮಳೆಯೂರೊಳಗೆಸೆದುದು (ಕಂಪಶಿ. ೦೬ ೩೬); ಛಟಿಛಟಲುಛಟಲೆಂದು ನಾದಿಸೆ ಪೆಟಲಿನಿಂ ಸಿಡಿವ . . . ಗುಂಡುಗಳು (ಅಪಂರಾ. ೯-೨-೯). **ಪೆಟ್ಟಲು** : ೧. ಇಡುವ ಪೆಟ್ಟಲು ಕೂಡಬ್ಬರಿಸುವ ಬಾಣ . . . ಹರಿಗೆಗಳ ಕಡುಗಲಿಭಟರು ಭೋಯಿ‌ ದಾರ್ದುರ ರಿಪುಗಳ ತುಡುಕಿದರು (ಕಂಪಶಿ. ೩-೬೫). ೨. ಮಕ್ಕಳು ಆಟಿಕೆಯಾಗಿ ಬಳಸುವ ತುಪಾಕಿಯಂಥ ಒಂದು ಸಾಧನ: (೯). **ಪೆಟ್ಲು** : ೨. ಪೆಟ್ಲಗೆ ಗಜ ಒದಗಿಸುತ್ತಿದ್ದವರು ರಾಗಜ್ಜ (ಕ್ರಕ್ರ. ೦೬); ಉಡುಪಿಯಲ್ಲಿ ಕೃಷ್ಣಜಯಂತಿಯಂದು ಯಾವ ಹುಡುಗರ ಕೈಯಲ್ಲಿ ನೋಡಿದರೂ ಪೆಟ್ಲು ಇರುತ್ತದೆ (ರೂಶಿ) ೩. ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ; ಮಕ್ಕಳು ಈ ಕಾಯಿಯನ್ನು ತುಪಾಕಿಯಂತಿರುವ ಸಾಧನದಲ್ಲಿ ಹಾಕಿ 'ಟಪ್' ಎಂದು ಸದ್ದಾಗುವಂತೆ ಹೊಡೆಯುತ್ತಾರೆ : ಉಸುಮುನಿ, ಹೂಮ್ಮುಗುಳಿ, ಪೆಟ್ಲು, ಗೋರಿ (ಪಮ್ಮುಕು. ೨೬೯).

**ಪೆಟಲ ಕಂಡಿ** = ಯುದ್ಧಕಾಲದಲ್ಲಿ ಕೋಟೆಯಲ್ಲಿ ಮರೆಯಾಗಿ ನಿಂತು ತುಪಾಕಿಯನ್ನು ಹೊಡೆಯುವುದಕ್ಕಾಗಿ ಮಾಡಿಕೊಂಡಿರುವ ಕಂಡಿ : ಎಸುವಂಬುಗಂಡಿ ಪೆಟಲ ಗಂಡಿ . . . ಲಾಳವಂಡಿಗೆ ಕಣ್ಗೆಸೆದವು

ಕುಮ್ಮಟದೊಳಗೆ (ಕುಠಾಸಾಂ. ೩೭-೩೨). **ಪೆಟಲ ಗುಂಡು** = ಪೆಟಲಿಗೆ ಹಾಕುವ ಗುಂಡು,-ಗೋಲಿ: ಓಂಗದಿಡುವ ಚೆಂಡು ಪೆಟಲ ಗುಂಡಿನ ಸಮುಭಂಗಿಯಂತೆದೆಗೆಡಿಸಿದುದು (ಕುಠಾಸಾಂ. ೩೦-೧೧೦); ತೂಳಿಸು ಪೆಟಲ ಗುಂಡುಗಳನೆಂಬಸುರರ ಕೋಳಾಹಳವೊಪ್ಪಿತು (ಕಂಪರ. ೧೯-೩). **ಪೆಟಲವರ್**, **ಪೆಟಲವರು** = ತುಪಾಕಿಯನ್ನು ಹಿಡಿದಿರುವವರು : ಪೆಟಲವರ್ ಥೆರೆ ಮಾಲೆಯೊಳ್ ಪರಿದರು (ಲಕ್ಷ್ಮೀಶ. ೧-೨೧); ಸುತ್ತ ಬಳಸಿ ಪೆಟಲವರು ಕೋವಿಗಳನು ತೆತ್ತಿಸಲು (ಕುಠಾಸಾಂ. ೧೧-೩೨).

[ ದೇ. ॥ ತಮಿ. ಪೊಟ್ಟಿಲ್ ; ತುಳು. ಪೆಟ್ಲ, ಪೇಟ, ಪೇಟ್ಲ, ಪೇಟ್ಲೆ; ತೆಲು. ಪೆಟಲು, ಪೆಟಿಲು, ಪೆಟುಲು, ಪೆಟ್ಲು ]

**ಪೆಟಲ** 'ಪೆಟಲ್' ನೋ.

**ಪೆಟಲಂಬು** (ನಾ). = ಪೆಟಲ್ ೧ : ಪೆಟಲ ಕೋವಿಯ ಬಂಡಿ ಪೆಟಲಂಬಿನ ಬಂಡಿ . . . ಕಟ್ಟದೊಳೆಯ್ದಿದವು (ಕುಠಾಸಾಂ. ೧೦-೯೯); ಪೆಟಲಂಬು ಗುಂಡುಗಳಾಂತು ರಕ್ಕಸರು . . . ಕೋಂಟೆಗಾಳಗವನುಜ್ಜಿ ಮಾಡುತಿರೆ (ವೀಕೃಶ. ೨-೧೧-೨೦). [ಪೆಟಲ್ + ಅಂಬು₁]

**ಪೆಟಲು** 'ಪೆಟಲ್' ನೋ.

**ಪೆಟಲುಪ್ಪು**, ಪೆಟ್ಲುಪ್ಪು (ನಾ). ೧. ಒಂದು ಬಗೆಯ ಉಪ್ಪು; ಬಂದೂಕಿಗೆ ಹಾಕುವ ಮದ್ದು: ಪೆಟಲುಪ್ಪು ಗುಂಡು ದಸಿ ಬಿತ್ತರಿಸಲೀಂ (ಪದ್ಮರಾ. ೩-೨೦): ಪೆಟಲ ಬೆಣೆಯ ಬಂಡಿ ಪೆಟಲುಪ್ಪಿನ ಬಂಡಿ ಕಟಕದೊಳೆ ಯ್ದಿದವು (ಕುಠಾಸಾಂ. ೧೦-೯೯). ೨. ಒಂದು ಬಗೆಯ ಉಪ್ಪು; ಕಡ್ಡುಪ್ಪು: ಪಿ[ಪೆ]ಟಲುಪ್ಪನ್ನು ಸಣ್ಣನಾಗಿ ಪುಡಿ ಮಾಡಿ . . . ನಿಂಬೇಹುಳಿಯನ್ನು ಬಿಟ್ಟು ಕಲಸಿಕೊಂಡು ನುಂಗುವುದು (ಐಪ್ರವಿ. ೯೯). **ಪೆಟ್ಲುಪ್ಪು**: ೧. ಉಣ್ಣೆ, ಪೆಟ್ಲುಪ್ಪು, ಎಣ್ಣೆಕಾಳುಗಳು, ಪರಿಮಳದ್ರವ್ಯಗಳು ಪರನಾಡುಗಳಿಗೆ ಹೋಗುವುವು (ಮುಂಬಯಿ. ೯-೦೩೭); ಈ ದಹನಕಾಲದಲ್ಲಿ ಅಂಗಾರ, ಗಂಧಕ, ಪೆಟ್ಲುಪ್ಪು ಮೊದಲಾದುವು ಆಮ್ಲಜನಿಲದೊಡನೆ ಸೇರಿ ಕೆಲವೊಂದು ಅನಿಲಗಳು ಉಂಟಾಗುವುವು (ಶಾಂಕೃ. II, ೧೧೦೬). ೨. "ಪಾಂಡುಜಃ —ಪೆಟ್ಲುಪ್ಪು" (ಓಷ. ೯೯); ಪೆಟ್ಲುಪ್ಪುಗ ೧ ತೂಕವಂ ನರಮೂತ್ರ ದೊಳರೆದು ಕೊಡಲು ಆ ಕ್ಷಣವೇ ಮೂತ್ರ ಬಿಡುವುದು (ಸಕವ್ಯ. ೩೭೯).

[ ಪೆಟಲ್ + ಉಪ್ಪು₁./ತಮಿ. ಪೊಟ್ಟಲುಪ್ಪು; ತುಳು. ಪೆಟ್ಲುಪ್ಪು, ಪಟ್ಲುಪ್ಪು; ತೆಲು. ಪೆಟ್ಲುಪ್ಪು ]

**ಪೆಟಲುಯಂತ್ರ** (ನಾ). ಪೆಟಲನ್ನು ಅಳವಡಿಸುವ ಯಂತ್ರವಿಶೇಷ: ದಡಿ ದಸಿ ಕವಣೆ ಕೈಕಲ್ಲೆತ್ತುಗುಂಡಾರ್ದಿಡುವ ಪೆಟಲುಯಂತ್ರ . . . ಎಸೆದವು (ಕುಠಾಸಾಂ. ೩೭-೩೪). [ಪೆಟಲು ( < ಪೆಟಲ್) + ಯಂತ್ರ]

**ಪೆಟಲ್ಗೋವಿ** (ನಾ). =ಪೆಟಲ್ ೧ : ನಾಸಿಕದಿರವು ಹೊಂಚಂಪಕವೊ ಹೇಮಂದಿ ವಿರಚಿತದ ಪೆಟಲ್ಗೋವಿ ಕೇಳಲರಂಬನಾಡುತಿಹ ಪರಿಯೊಳೆ ಸದಿಹುದು (ಜನಭಾ. ೮೮-೩೯). [ ಪೆಟಲ್ + ಕೋವಿ₁ ]

**ಪೆಟಾರಿ** 'ಪಿಟಾರಿ' ನೋ.

**ಪೆಟಾರಿಗೆ** 'ಪಿಟಾರಿ' ನೋ.

**ಪೆಟ್ಟ** 'ಪೆಂಟೆ₁' ನೋ.

**ಪೆಟ್ಟಣಿಗೆ** (ನಾ). ನೆಲವನ್ನು ಧಮ್ಮಸ್ಸು ಮಾಡಲು ಉಪಯೋಗಿಸುವ ಒಂದು ಬಗೆಯ ಮರದ ಸಾಧನ ; ಬಡಿಮಣೆ : "ಪೆಟ್ಟಣಿಗೆ [ಪಾಠಾಂ. ತೇಜಣಿಗೆ] ಕರಪೀಠವಕ್ಕು" (ಮಂಗರಾ. ೯೭-೬). [ ? ]

**ಪೆಟ್ಟಮೆಟಿಸು**, ಹೆಟ್ಟವೆಳಸು (ಕ್ರಿ). ಹೆಂಟೆಯೊಡೆಯುವ ದಿಮ್ಮಿಗೆ ಕಟ್ಟಿ ಎಳೆಯಿಸು : ಬೆಟ್ಟೀಜು ಬೀಟ್ವರಂ ಪೆಟ್ಟಮೆಟಿಸಿಕೊಳ್ವರಂ . . . ನೆರದು ನೋಡುವರಂತೆ (ರವಶೀಕು. ೯-೨೩). **ಹೆಟ್ಟವೆಳಸು** : ಕಿಡಹಿ ಮೂಗನರಿದೆಳೆಹೂಟಿಯಂ ಕಟ್ಟಿ ಹೆಟ್ಟವೆಳಸುವೆ ಬಟ್ಟಬಯಲೊಳು (ಹಕಲಾ. ೯-೦೩). [ ಪೆಟ್ಟ (< ಪೆಂಟೆ₁) + < ಎಟಿಸು ]

**ಪೆಟ್ಟಮೆಟಿ**, ಪೆಟ್ಟವೆಟಿ (ಕ್ರಿ). ೧. ಹೆಂಟೆ ಒಡೆಯುವ ದಿಮ್ಮಿಗೆ ಕಟ್ಟಿ ಎಳೆ ; ಇದನ್ನು ಅಪರಾಧಕ್ಕೆ ಶಿಕ್ಷೆಯಾಗಿ ಪ್ರಯೋಗಿಸು ತ್ತಿದ್ದರು : ಪಿಡಿ ಪಿಡಿ ಕಟ್ಟು ಪೆಟ್ಟಮೆಟಿ ಕೋಲುಗಿ (ವರ್ಧಮಾ. ೩-೨೮); ಈ ಪುಸಿವನಂ ಕುಸಿಯೊತ್ತಿ ಬಟ್ಟೆಯೊಳ್ ಪೆಟ್ಟಮೆಟಿದು ಬಳಸಿದ ದಸಿಯೊಳ್ಳಿಗೆಯಿಂ (ಸುಕುಮಾ. ೭-೩೪). **ಪೆಟ್ಟವೆಟಿ** : ೨. (ಅಲಂ) ನೆಲಸಮ ಮಾಡು ; ನಾಶಮಾಡು. ೧, ೨ : ಮೂಜಗತ್ತುಮಂ ಗುಣದಿಂ ಭಾವಜನಂ ಕಟ್ಟಿ ಪೆಟ್ಟವೆಟಿ [ ಪಾಠಾಂ. ಪಟ್ಟವೆಟಿ, ಪೆಟ್ಟವೇಳ ] ದರ್ ವೃಷದಿಂ (ಶಂಖಮಾ. ೦-೦೯). [ ಪೆಟ್ಟ (< ಪೆಂಟೆ₁) + ಎಟಿ₁ ]

**ಪೆಟ್ಟಯ**, ಪೆಟ್ಟಿಯ (ನಾ). ಪೆಟ್ಟಿಗೆ ; ಸಂದೂಕ : "ಪೇಟಾ, ಮಂಜೂಷಾ—ಈ ೨ ಪೆಟ್ಟಿಯಂ" (ಶಬ್ದಮ. ೩೨-೦೫೭). **ಪೆಟ್ಟಿಯ** : "ಪೆಟ್ಟಿಗೆ(ಯ)—ಪೇಟಿಕ (ಪಿಟಕ)" (ಶಬ್ದಕೋ. ೨೭). [< ಪ್ರಾ. ಪೇಡಿಆ./ ತಮಿ. ಮಲ. ಪೆಟ್ಟಕಮ್; ತೆಲು. ಪೆಟ್ಟಿಯ; ಪರ್ಜಿ. ಪೆಟೆಯು]

**ಪೆಟ್ಟಲು** 'ಪೆಟಲ್' ನೋ.

**ಪೆಟ್ಟವೆಟಿ** 'ಪೆಟ್ಟಮೆಟಿ' ನೋ.

**ಪೆಟ್ಟಾರಿ** 'ಪಿಟಾರಿ' ನೋ.

**ಪೆಟ್ಟಿ₁** 'ಪೆಂಟೆ₁' ನೋ.

**ಪೆಟ್ಟಿ₂** (ನಾ). ಒಂದು ಬಗೆಯ ಪಕ್ಷಿ : ಪರಡೆ ಪಸುಂಬಂ ಮೈನಂ ಎರಳೆ ನವಿಲ್ಗಾಗೆ ಪೆಟ್ಟಿ ಪೋದಗೆ ಕರಭಂ ಶರಕಮಿವು ಪೋಗೆ ಶಾರುಂ ಬರೆಯಿಡಕೆ ಯಂದೂರಕೊಳೊಳ್ಪಂ (ಲೋಕೋಪ. ೦೨-೦೭).

[ ದೇ. ॥ ತೆಲು. ಕೋಲಾ. ಪಿಟ್ಟ; ಗೊಂಡಿ. ಪಿಟಿ, ಪಿಟ್ಟೆ, ಪಿಟ್ಟೀ ]

**ಪೆಟ್ಟಿ₃**, ಪೆಂಟ್ಟೆ, ಪೆಟ್ಟೆ₂ (ನಾ). ೧. = ಪೆಟ್ಟಿಯ : ಮುಜ್ಜಾತಂದ ಪೆಟ್ಟಿ[ಪಾಠಾಂ. ಪಚ್ಚೆ]ಯಂ . . . ಎನುತ ಸಖಿಯರು ನೆರೆದು ಪೆಟ್ಟಿಗೆಗಳು ಮನೊಡೆದು (ಸಂಚರ. ೦೩-೬೩); ಚಂದ್ರಾನನೆ ತೊಡವಿನ ಪೆಟ್ಟಿಯು ನಾನಂದದಿನೀಯಲ್ (ರಕಕು. ೯-೦೦೯); ಅವರ ಕನಸಿನೊಳು ಶಂಕರ ನಿರಿಸಲಾ ಪುಸ್ತಕವನೆದ್ದು ಪೆಟ್ಟಿಯೊಳ್ಕಂಡು (ವೀಕೃಶ. ೭-೦೭-೮). ೨. (ಹಾವು ಗಳನ್ನಿಡುವ, ಬಿದಿರಿನಿಂದ ಮಾಡಿದ) ಬುಟ್ಟಿ : ಹೇಳಿಗೆ : ಹಾವು ಗಳಿಗಾದೊಡಂ ಸುಖವುಂಟೆ . . . ಜೋಗಿಗಳು ಮಂತ್ರದಿಂ ಪಿಡಿದು ಪೆಟ್ಟಿಯೊಳು ಮುದುಡಿ ತುಂಬಿ (ವೀಕೃಶ. ೯-೨೩-೬೦). ೩. ಭರಣಿ ; ಕರಂಡ : ಅಲ್ಲಿರ್ದ ಪೆಟ್ಟಿಯೊಳಗಣ ಸಲ್ಲಲಿತಕ್ರಮುಕಪತ್ರಕರ್ಪೂರವಮನಾಂ ಬಲ್ಲನಿತಂ ಕೊಂಡು (ದಕಹ. ೯-೩೦೩). **ಪೆಂಟ್ಟೆ** : ೪. ಧಾನ್ಯಗಳನ್ನು ತುಂಬುವ ಗಳಗೆ ; ತೊಂಬೆ ; ಮೂಡೆ : ಧಾನ್ಯವನ್ನು ಪೆಂಟೆಯಲ್ಲಿಟ್ಟರೆ ಹುಳು ಬೀಳುವುದಿಲ್ಲ (ಕೂಶಿ). **ಪೆಟ್ಟೆ₂** : ೧. ಪರಿಪರಿಯ ವಸ್ತುಗಳಂ ತುಂಬಿರುವ ಪೆಟ್ಟಿಗಳ ಪೆಸರ ದುಕೂಲಗಳ ಪಿಂಡಿಗಳ್ (ಶಕ್ತಿಸ. ೯-೩೭-೩). ೪. ಹಗ ಪೆಟ್ಟಿ ಕಣಜದೊಳಿಹ ಬಹುಧಾನ್ಯವ ಬಗೆಯದೆ ಸೂಜಿಯ ಕೊಟ್ಟು . . . ಜನವಂಜಿ ಜಗುಳಿದರು (ಕುಶಪ. ೦೦-೯೮).

[ < ಸಂ. ಪೇಟೀ./ತಮಿ. ಪೆಟ್ಟಿ, ಪೊಟ್ಟಿ ; ಮಲ. ಪೆಟ್ಟಿ ; ಕೊಡ. ಪೊಟ್ಟಿ; ತೆಲು. ಪೆಟ್ಟೆ ]

**ಪೆಟ್ಟಿಕಾಳಿ** (ನಾ). ಪೆಟ್ಟಿಗೆಗಳ ಸಾಲು,—ಪಂಕ್ತಿ : ಮುಂದೆ ಸುವರ್ಣದ ಪೆಟ್ಟಿಕಾಳಿಯಗ್ಗಳಿಸಿ ಬರುತ್ತಮಿರೆ (ಸಂಚರ. ೦೩ ಸೂಚನೆ).

[ <ಸಂ. ಪೇಟಿಕಾಳಿ ]

**ಪೆಟ್ಟಿಕ್ಕು** (ಕ್ರಿ). ಏಟು ಕೊಡು ; ಹೊಡೆ ; ಬಡಿ : ನೆತ್ತಿಯನು ನೀರ್ವಿಂದಿಗೆಯೊಳು ಟೊಂಗುಟೊಂಗೆನಲ್ಪೆಟ್ಟಿಕ್ಕಿ (ಪುರೀಶು. ೨೩-೩೦).

[ ಪೆಟ್ಟು₂ + ಇಕ್ಕು ]

**ಪೆಟ್ಟಿಗೆ**, ಪೆಡಗೆ, ಪೆಡಿಗೆ, ಪೇಳಿಗೆ, ಪೇಳ್ಗೆ, ಹೆಡಗೆ, ಹೆಡಿಗೆ, ಹೇಳಿಗೆ (ನಾ). ೧. (ವಸ್ತುಗಳನ್ನು ತುಂಬಿಡಲು ಮಾಡಿದ, ಲೋಹ ಅಥವಾ ಮರದ) ಸಂದೂಕ : ಪೇಟಿಕಾ—ಪೆಟ್ಟಿಗೆ (ಕಮುದ. ೨೩೩ ಶ್ರಯೋ) ;

ಪೆಟ್ಟಿಗೆಯೊಳಗಿನ ಅಪ್ಪಾಭರಣ ನೀನೆ (ಪುರಂದ. ೧-೧೯೬-೧) : ನನ್ನ ಬಳಿಯಲ್ಲಿ ಒಂದು ಇಂಥಾ ದೊಡ್ಡ ಪೆಟ್ಟಿಗೆಯುಂಟು (ಮುಂಬಯಿ. ೪-೧೬೮). ೨. ಭರಣಿ; ಕರಂಡಕ : ಸಾದಿನ ಪೆಟ್ಟಿಗೆಗಳ ಮೃಗಮದದ ಕೊಂಬುಗಳ (ಗಿರಿ. ೧೦-೬೯ ವ) : ಸಾರಪರಿಮಳವಸ್ತುಗಳ ಬಲುಭಾರಣೆಯ ಪೆಟ್ಟಿಗೆಗಳೊಟ್ಟಿತು (ಕುಮಾ.ಭ. ೧೬-೨೮) ; ಬಾರಿಸಿದ ಬಲು ಹೊಱೆಯ ಬಂಡಿಗಳೋರಣಿಸಿದವು ಪಯಣದಲಿ ಕರ್ಪೂರ ಕಸ್ತುರಿ ಕುಂಕುಮದ ಪೆಟ್ಟಿಗೆಯ ಸಾಲಿನಲಿ (ಕೊರಂ. ೧-೬-೩). **ಪೆಡಗೆ :** ೩. (ದೊಡ್ಡ) ಕುಕ್ಕೆ ; ಗೂಡೆ : ಪೊಱಗೊಂದು ಪೆ[ಪಾಠಾಂ. ಹೆ]ಡಗೆ ಮಣ್ಣಂ ನೆಱೆ ಶೌಚಂಗೆಯ್ವರೊಳಗೆ ಪಲಕೆಱದಡಗಂ ತುಱುಕುವರಿಂತುಟು ಶೌಚದ ತೆಱಂ (ಸಮಯ. ೧೪-೧೩೦) ; ಪರದರ ಪುತ್ರಿಗೆತ್ತಣದೊ ವೀಣೆಯ ಜಾಣಱವಂತು ಬಳ್ಳಮೊ ಪರಿಕಿಪೆ ಮಾನಮೋ ಪೆಡಗೆಯೋ (ಮುಹಾನೀ. ೪-೧೦೨) ; ಮತ್ತೊಂದುದಿವಸಂ ಪೆಡಗೆಯೊಳಿಳ್ಳಿಂ ತುಂಬಿ ಆವ ಮಾನದೊಳಳದುಕೊಂಡಪರಾ ಮಾನದೊಳೆಣ್ಣೆಯನಳದು ಮಗುಱ್ದಿಟ್ಟುವುದೆನಲ್ (ಪುಣ್ಯಾಸ್ರ. ೩-೩೦ ವ). **ಪೆಡಿಗೆ :** ೩. ಸಕಲಪುಷ್ಪಂಗಳಂ ಪೆಡಿಗೆಯೊಳುಮುಲ್ಲಾಸದಿಂ ತುಂಬಿ . . . ಕಳುಪಿದಳು (ಶ್ರೀಪು. ೩-೯೩). **ಪೇಳಿಗೆ :** ೧. ಭೂಷಣಾದಿಗಳಂ ಪೇಳಿಗವೆರಸಿ ತೋರ್ಪ ಭಂಡಾರಿಗನೆನಿಸಿದನಮರನಜರನಾಸ್ಥಾಯಿಕೆಯೊಳ್ (ಶಾಂತಿಪು. ೧೦-೮೩೨) ; ದೇಪಶರ್ಮಂ ತನಗೆ ತಕ್ಕನಿತು ದ್ರವ್ಯಮಂ ದಾನಂಗೆಯ್ಯಲ್ವೇಟ್ಟುಕೊಂಡು ದೇವರ ಪೇಳಿಗೆಯೊಳಿಕ್ಕಿ (ಕಂಚಕಂ. ೬೦-೧೬) ; ಪೞಿಕಂ, ಪೇಳಿಗೆ . . . ಪುಳಂ— ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಮದ. ೨೨ ವೃತ್ತಿ). ೨. ಮಗಮಗಿಪ ಬಹುವಿಧಪರಿಮಳದ್ರವ್ಯಂಗಳ ಪೇಳಿಗೆಗಳಿಂದೆಯುಂ . . . ಸೊಗಯಿಸುತಿರ್ಪುದು (ಮುಂಡ. ೬-೬ ವ). ೪. (ಹೂಳುವುದಕ್ಕೆ ಮುಂಚೆ) ಹೆಣವನ್ನಿಡುವ ಪೆಟ್ಟಿಗೆ : ಒಡಲ ಪೇಳಿಗೆಯಲಿ ಒಪ್ಪ ಮಾಡಲು ಇಲ್ಲ (ಶಂಗೀತ. ೦೪-೪). ೫. (ಹಾವುಗಳನ್ನಿಡುವ) ಬಿದಿರಿನಿಂದ ಮಾಡಿದ ಬುಟ್ಟಿ : "ಪೇಟಿಕೆ ಪೇಳಿಗೆ" (ಚತುರ. ೦೩) ; ಪಾವಿನ ಪೇಳಿಗೆಯಂ ಬಿಟ್ಟು ನೋಡಿದ ಮರ್ಕಟನಂತೆ (ಕಂಚಕಂ. ೯೫-೬) ; ಫಣಿಪಲ್ಲಿಯ ಪೇಳಿಗೆಯುಮೆನಿಸಿದ ದೇವರಮಣೋದ್ಯಾನಮಂ . . . ಪುಗುತರ್ಪಾಗಳ್ (ಶಾಂತೀಶ್ವ. ೧೦-೭೮ ವ) ; ಪೇಳಿಗೆಯ ಪಾವಿನೊಂದು ಮಾಟಕ್ಕಿಯಿಂ ತಡೆಗಟ್ಟುವಟ್ಟರಾಗಿ ಮರಳ್ದು (ರಾಜಶೇಖ. ೯೬-೪). **ಪೇಳ್ಗಿ :** ೫. ವಿಟರೆರ್ದೆವಾವುಗಳ್ಗಿಟ್ಟ ಪೇಳ್ಗಿ (ಉದ್ಭಟ. ೫-೨೦). **ಹೆಡಗೆ :** ೩. ಒಂದು ಬೀಜವ ಬಿತ್ತಿದಡೆ ಮೂಱು ಫಲವಾಯಿತ್ತು . . . ಹೆಡಗೆಗೆ ಅಳವಡಿಸುವಾಗ ಐವತ್ತೊಂದು ಕೊಳಗವಾಯಿತ್ತು (ಬೋಳಬಸ. ೨೦೬-೬೬೦) ; ಮಾಱುವ ಹೆಡಗೆಯ ಹಣ್ಣು ಹಂಪಲ್ ಬಾಡುಕಾಯ್ಗ . . . ಕೊಟ್ಟರ್ (ಎಕ. V. ೨೦-೬೯ ; 1161) ; ಒಂದು ಹೆಡಗೆಯ ಬತ್ತವಂ ಭರದಿಂದ ಕಳಹಲು (ಬಸವು. ೨೩-೬). **ಹೆಡಿಗೆ :** ೩. ಹಿಕ್ಕೆಯ ಹೆಡಿಗೆಯ ಬಿಟ್ಟು... ಮುಂದಕೆ ನಡೆತರಲು (ಅಭಕಂ. ೩೦೦-೪) : ಮಾಱ ಬಂದ ಹಣ್ಣು ಹೆಡಿಗೆ ಸೂಱಿಗೊಂಬ (ಪುರಂದ. ೧-೧೦೪-೪) ; ಹಿಂಡಿಯ ಹೆಡಿಗೆಗೆ ಕೋಣನೆ ತಂದು (ಸರ್ವಜ್ಞ. ೦೮೬೫). **ಹೇಳಿಗೆ:** ೫. "ಸರ್ಪಪರ್ಯಂಕಮೆನೆ ಹೇಳಿಗೆ" (ಮುಂಗರಾ. ೧೦೫-೮) ; ಮನವೇ ಸರ್ಪ ತನುವೇ ಹೇಳಿಗೆ (ಬಸವ. ೦೬೦) : ರವಿಕುಲದ ವೈರಿಗಳ ಶುಭಕೀರ್ತಿಶಶಿಯಂ ಪಿಡಿವ ರಾಹುವಿಪ್ಪ ಹೇಳಿಗೆಯೊ (ಹಕಕಾ. ೧-೩೬) ; ಹೇಳಿಗೆಯ ಮುಚ್ಚುಳ ಜಾಱಿಸಿದ ಫಣಿಯಂತೆ ಭುಲ್ಲವಿಸಿತ್ತು ಕುರುಸೇನೆ (ಕುಮಾ.ಕ. ೨೩-೩೮). [< ಸಂ. ಪೇಟಿಕಾ. / ತುಳು. ಪೆಟ್ಟಿಗೆ]

**ಪೆಟ್ಟಿಗೆಗಾಡಿ** (ನಾ). ಮುಚ್ಚುವ ಮರದ ಬಾಗಿಲುಗಳುಳ್ಳ ಗಾಡಿ,— ಬಂಡಿ : ಸಾರೆಟ್, ಬಗ್ಗಿ, ಪೆಟ್ಟಿಗೆಗಾಡಿ ಮುಂತಾದ್ದು ಕಲಶಕುಚ್ಚಿನ ಗಜ್ಜೆ ತೇರಿಗೂ ಹೆಸರು (ಸಿದ್ಧಾಂತಿ. ೨೫೨); ಘೋಷಾಪದ್ಧತಿಯಿರುವ ಕೆಲವರು ಹಿಂದೆ ಪೆಟ್ಟಿಗೆಗಾಡಿಗಳಲ್ಲಿ ಹೋಗುತ್ತಿದ್ದರು (ಕೂಡಿ). [ಪೆಟ್ಟಿಗೆ + ಗಾಡಿ$_3$]

**ಪೆಟ್ಟಿಗೆಬಂಡಿ** (ನಾ). = ಪೆಟ್ಟಿಗೆಗಾಡಿ : ಪೆಟ್ಟಿಗೆಬಂಡಿಗಳು ೪, ಚಕ್ಕಡಾ ಬಂಡಿಗಳು ೫೦ ((ಗುರುದ. ೧೧). [ಪೆಟ್ಟಿಗೆ + ಬಂಡಿ$_1$]

**ಪೆಟ್ಟಿಯ** 'ಪೆಟ್ಟಿಯಂ' ನೋ.

**ಪೆಟ್ಟಿಲು** (ನಾ). (?) : ಯೆರಡು ಮುಡಿ ಕಾಡೆ ಪೆಟ್ಟಿಲ ಭೂಮಿಯಿಂದ (ಸೌಇ. ೧೯೩೦, ಮುಂಗಳೂರು. ೫೨೬-೨೨ ; 1376). [?]

**ಪೆಟ್ಟಿಸು, ಹೆಟ್ಟಿಸು** (ಕ್ರಿ). ೧. (ನಾಣ್ಯವನ್ನು) ಮುದ್ರಿಸು,— ತಟ್ಟಿಸು : ಸೇದಿರಾಜನು ಸೂಕರನಂಗ ಸುವರ್ಣವಾಗಲು ಕಂಡು ಹೊನ್ನ ಪೆಟ್ಟಿಸಿ [ಪಾಠಾಂ. ಫಟ್ಟಿಸಿ, ಪುಟ್ಟಿಸಿ] ವರಹನೆಂದು ಪೆಸರಿಟ್ಟು (ಭೈರಸೂ. I, ೨೩೬) ; ಈ ನಾಣ್ಯಗಳಲ್ಲಿ ಪರದೇಶದಿಂದ ಇಲ್ಲಿಗೆ ಬಂದ ಮತ್ತು ನಮ್ಮ ದೇಶದಲ್ಲಿಯೇ ಪೆಟ್ಟಿಸಿದ ನಾಣ್ಯಗಳೆರಡೂ ಸೇರಿವೆ (ಕ್ರಶಾಇ. I, XI ಪ್ರಸ್ತಾವನೆ). **ಹೆಟ್ಟಿಸು :** ೨. ತಿವಿಸು : ಚುಚ್ಚಿಸು : ಕಂಡವರ ಕೈಯಲ್ಲಿ ಎದೆಯ ಹೆಟ್ಟಿಸಿಕೊಂಬಂತೆ (ಕೋರಶಾಂ. ೫. ೦೪-೬೨). [ಪೆಟ್ಟು$_1$ + —ಇಸು$_3$]

**ಪೆಟ್ಟು$_1$, ಹೆಟ್ಟು** (ಕ್ರಿ). ೧. (ಕೈ, ದೊಣ್ಣೆ, ಸುತ್ತಿಗೆ ಮುಂತಾದುವುಗಳಿಂದ) ಹೊಡೆ,— ಬಡಿ : ಗುಡಿಯನೆತ್ತುವರಂತೆ ಗೂಂಟಮಂ ಪೆಟ್ಟುವರ್ (ರಮರ್ಣಮ್ಮ. ೩-೬೩) ; ತೊಲೆಯಂ ಹೇಱ ಕಬ್ಬುನವ ಪೆಟ್ಟಿ ಸಂಕಲೆಗೆಯ್ದು (ಸಿದ್ಧೇಪು. ೦೪-೬೬) ; ಕುದುರೆಯ ಗೂಟವನ್ನು ನೆಲದ ಮೇಲೆ ಇರಿಸಿ ಗಟ್ಟಿಯಾಗಿ ಪೆಟ್ಟಿದನು (ಚಕ್ರಪಾ. ೧೧). ೨. ಚುಚ್ಚು ; ಇರಿ : ನಾಟುವಂತೆ ಮಾಡು : ಸಂದುಸಂದುಗಳೊಳ್ ಸೂಜಿಯಂ ಪೆಟ್ಟಿಯುಂ (ರಮರ್ಣಮ್ಮ. ೩-೬೩) ; ಒಣಗಿದ ಮರದ ಮೊನೆಯ ಕೊಂಬಂ ತಂದು ಮುನೀಶ್ವರನ ಜಂಘೆಯೊಳ್ ಪೆಟ್ಟುವುದುಂ (ಪುಣ್ಯಾಸ್ರ. ೩-೯೫ ವ). ೩. (ನಾಣ್ಯವನ್ನು) ಮುದ್ರಿಸು : ಪೆಟ್ಟೆಂಬ ನುಡಿ ಟಂಕದೊಳಗೆ... ಅಲ್ಲದೆ ಬೇಱೆ ದಿಟ್ಟಿಸಲು ನಾಡೊಳಿಲ್ಲ (ಕಂಸಾ. ೨-೦೫). 'ಪೆಟ್ಟಿಸು' ಪರಾ. ೪. ಸಂಭೋಗಿಸು : (ಕ). **ಹೆಟ್ಟು :** ೨. ಹೆಟ್ಟಿ ಮುವ್ವದಲ್ಲಿ ಲೋಹಜಾದಿರಸವನೆಱದು ಸುಡುವರೆಯ್ದು (ಶಾವಂಶ. ೬-೧೪೪) ; ಅಟ್ಟಿ ಬಹ ಮಾಸವನ ಕೊಂತದಿ ಹೆಟ್ಟಿದನು (ಅಂಬಿಕಾ. ೨೨-೦೨) ; ಬೇಗ ಬೇಗ ಹೆಜ್ಜೆ ಇಡುವ ಅಂದರೆ ಮುಳ್ಳು ಹೆಟ್ಟಿದ ನೋವು (ಶದ್ಯಸ. ೬೪). ೪. (ಕ). ೫. ಬಲವಂತದಿಂದ ಒಳಸೇರಿಸು ; ತುರುಕು : ಕೆಡಹಲರಿದೀ ಖಳನನೆನೆ ಕೇಳ್ದೊಡನೆ ರಾಘವ ಕಡಿದು ಬಸುಱೊಳು ತಲೆಯ ಹೆಟ್ಟಿದನು (ತೊರಾ. ೫-೩೦) ; ಅಗುಳು ನುಂಗಲಿಕ್ಕೆ ತೀರದವನ ಬಾಯಲ್ಲಿ ಕಡುಬು ಹೆಟ್ಟಿದ (ಗಾದೆ). ೬. ಮುಂಚಿಯಿಂದ ಕುಟ್ಟು ; ಗುದ್ದು : ಮಕ್ಕಳ ಮಂಡೆ ಬೋರೆಹೋಹಂದದಿ ಹೆಟ್ಟಿ (ಶೇಬುಕಂ. ೧೫-೧೦೬) ; ನೊಸಲೊಡೆವಂತೆ ಹೆಟ್ಟಿದ ವಜ್ರಮುಷ್ಟಿಯಲಿ (ಮೋಹಕ. ೦೨-೮೮) ; ನೆತ್ತಿಯ ಮೇಲೆ ಹೆಟ್ಟಿ ನೀನುದಕವಂ ತಂದೀವುದೆನೆ (ಗುರುಪಾ. ೫-೬೫).
[ದೇ.॥ ತೆಲು. ಪೆಟ್ಟು ; ಕೋತ. ಪೆಟ್]

**ಪೆಟ್ಟು$_2$** (ನಾ). ೧. ಏಟು ; ಹೊಡೆತ ; ಪ್ರಹಾರ : ಪೆಟ್ಟನಿಕ್ಕನೆ ಪ್ರಲಂಬಾಸುರನ ಬಾಳಹರಣಗಳೌಂಕಿ ಮಿಗೆ ಕೂಸಾಟದಿ (ಮುದೇಪು. ೦೪-೦೨) ; ಸಾಯದರಿಲ್ಲ ಖಂಡೆಯದ ಪೆಟ್ಟಲಿ (ಕಂಪಬ. ೦೫-೪೮) ; ನಿಪುಣಕೆಯ ಕಠೋರಧಿಕ್ಕಾರವಾಕ್ಯಗಳ ಪೆಟ್ಟನ್ನು ಕ್ಷಣಕಾಲವೂ ಮರೆಯಲಾಗಲಿಲ್ಲ (ಪಾಣಿ. ೩೦೨). ೨. (ಆಲಂ) ನೋವು ; ಅಳಲು ; ವ್ಯಥೆ : ನೀನು ಪೆಟ್ಟನ್ನು ಅನುಭವಿಸಿದ್ದು ನನಗೆ ತುಂಬಾ ದುಃಖದ ಸಂಗತಿಯಾಗಿದೆ (ರಂಗರೋ. ೧೧).
[< ಪೆಟ್ಟು$_1$. / ತುಳು. ಕೊಡ. ಕೋಲಾ. ಪೆಟ್ ; ತೆಲು. ಪೆಟ್ಟು]

**ಪೆಟ್ಟು$_3$** (ನಾ). ೧. ಸಾಹಸ ; ಪರಾಕ್ರಮ : "ದಪ್ಪ ಪೆಟ್ಟುದಟಾರ್ಪು ಸಾಸ ಪೆರ್ಚುಗ್ಬುಟೆಯುದಪ್ಪುದು" (ಕಬ್ಬಿಕಾಂ. ೩೯) ; "ಪನ್ನತಿಕೆ ಪೆಟ್ಟು . . . ಅಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕ೬೪೦, ೦೨೫). ೨. ಸೊಕ್ಕು; ಗರ್ವ : "ಅದಟು ದಪ್ಪಂ ಪೆಟ್ಟು[ಪಾಠಾಂ. ಪೆಂಪು] ಪೆರ್ಚೆಂದು ಗರ್ವಮಪ್ಪುದು" (ಕಬ್ಬಿಕೈ. ೬೫). 'ಪೆಟ್ಟುವೆರ್ಚು$_1$' ಪರಾ.

**ಪೆಟ್ಟುಗೆ**, ಹೆಟ್ಟಗೆ, ಹೆಟ್ಟಗೆ$_1$, ಹೆಟ್ಟುಗೆ (ನಾ). ೧. ಹೆಂಡತಿ ; ಪತ್ನಿ : ಬೆಟ್ಟಗ ಕಾಳಿಮಯಂಗಂ ಪೆ[ಟ್ಟು]ಗೆ ಶಚಿ ಮಾರಕಬ್ಬೆಗಂ . . . ಪುಟ್ಟಿದ ನೊಳ್ಗಣ್ಣ ನೆನಿಸಿ ತಿಪ್ಪಗವುಂಡ್ (ಕಇ. I, ೨೯-೨೬ ; 1148). **ಹೆಟ್ಟಗೆ : ೨.** ಹೆಂಗಸು ; ಸ್ತ್ರೀ : ಜಗದೊಳಿನ್ನಾವ ಹೆಟ್ಟಗೆ ಪಡೆದಳೊ (ವೆಂಕಾರಾ. ೩-೯-೯). **ಹೆಟ್ಟಗೆ$_1$ :** ೧. ಭೂಪಾಲರೆಲ್ಲರು . . . ಹೆಟ್ಟಗೆಯರ ಹಂಗು ಬಿಟ್ಟೋಡಿ ಭೀಕರಡವಿಯ . . . ಹೊಕ್ಕು (ಕೈರವೀ. ೦-೨೯೦). **೨.** ಹೆಟ್ಟಗೆ ಯರವಾಳ ಶಶಿಮೊಗದ ಬೆಳಗಿಂದೆ ಪೊರಮಟ್ಟು ಬರುತಿರ್ದರು (ಪಪಮೋ. ೦೦-೨೬). **ಹೆಟ್ಟುಗೆ :** ೧. ಹೆಟ್ಟುಗೆಗೆ ಗುಜ್ಜುಗರೆದುದು ಮೆಟ್ಟುವ ಮೆಲ್ಲಡೆ (ಅಸಂಕ. ೦೨-೬೫) ; ಹೆಟ್ಟುಗೆಗೆ ಪೇಟ್ದ ಮಾತ್ರಂ ಪೊಟ್ಟೆಯ ಶಿಶು ಕೇಳ್ದುದೆಂಬುದಿದು ವಿಪರೀತಂ (ಧರ್ಮಶ. ೬-೯). **೨.** "ಹೆಟ್ಟುಗೆಯೆಂದು ವನಿತೆ" (ಕಚಾ. ೬೨-೩೯೯); ಹೆಟ್ಟುಗೆಯರೆಲ್ಲ ಮೊದಲಿಸಿ ಮುಮ್ಮಳಿಗೊಂಡು (ಹಕಾ. ೩-೫೦) ; ಅಜಂ ಕಪ್ಪಿನ ನಲ್ಪೊಟ್ಟೆಟ್ಟಂತೆವೊಲಂತಾ ಹೆಟ್ಟುಗೆಯ ಕನೀನಿಕಂಗಳ್ (ಉದ್ಭಟ. ೬-೦೦೮). **೩.** ಗೆಳತಿ ; ಸಖಿ : "ಗೆಳತಿ ಹೆಟ್ಟುಗೆ ಸಖಿಗೆ ತೋರ್ಪ ನಾಮಂ" (ಕಮೃಕ. ೨೮) ; "ಗೆಳತಿ ಹೆಟ್ಟುಗೆಯೆನಲ್ ಸಖಿ" (ಕಾ.ಕು. ೬೫). **೪.** ಕನ್ಯೆ : ಹೆಟ್ಟುಗೆಗೆ ಶಿವಯೋಗರಾಜ್ಯದ ಪಟ್ಟಗಟ್ಟುವರಂತೆ ನೊಸಲಿನೊಳಿಟ್ಟರಮಲವಿಭೂತಿಯನು . . . ಸುಮತಿ ನಿರ್ಮಳರು (ಕೃಕುಂ. ೯-೩). **೫.** ಹೆಣ್ಣುಮಗಂ,–ಕೂಸು : ಪುತ್ರನನು ಬೇಡಿದೊಡೆ ದೇವತೆಯಿತ್ತಳೀ ಹೆಟ್ಟುಗೆಯನು (ಕಾಶ್ಯಶಾ. ೨೦-೨೦).

**ಪೆಟ್ಟುಮಣೆ,** ಪೆಟ್ಟೆಮಣೆ (ನಾ). ೧. = ಪೆಟ್ಟಣಿಗೆ : (*). **ಪೆಟ್ಟೆಮಣೆ : ೨.** (ರಥದ) ಚಕ್ರಗಳ ವೇಗವನ್ನು ತಡೆಯುವ ಒಂದು ಬಗೆಯ ಸಾಧನ ; ಗೊದಮ : ಅವನ ಆತುರತೆಯ ತೇರಿನ ಗಾಲಿಗೆ ಬಲವಾದ **ಪೆಟ್ಟೆಮಣೆ** ಹಾಕಿದಂತಾಗಿತ್ತು ಹೆಂಡತಿಯ ಹೇಳಿಕೆ (ಶುಕಸ. ೨೯೯). [ಪೆಟ್ಟು$_1$ + ಮಣೆ]

**ಪೆಟ್ಟುವೆರ್ಚು$_1$** (ಕ್ರಿ). ೧. ಅಹಂಕಾರಪಡು ; ಗರ್ವಿಸು ; ಸೊಕ್ಕು : "ಪೆಟ್ಟುವೆರ್ಚು (ಪೆಟ್ಟುಪೆರ್ಚು) — ದರ್ಪೇ (ಗರ್ವಪಡು), (ಬೆಟ್ಟುವೆರ್ಚು)" (ಕಮುಧಾ) ; ಮರಗಳೆ ಮುನ್ನಿತ್ತಿನಿಸಂ ಮರವಟ್ಟವು ಪೆಟ್ಟುವೆರ್ಚಿ ಕುದಿದಿತ್ತೊಡಮಾ ಧರಣಿತಲಕ್ಕವಿವೇಕಿಯಮರಮಾನಸನೀವ ಚಾಗಮೇಂ ನಿಮಿರ್ದಪುದೇ (ಆದಿಪು. ೬-೫೦) ; ಪೆಟ್ಟುವೆರ್ಚಿ ಕಡುಮೆಸನಂ ಮಾಡ್ಪಿ ಸೊಸೆ ಮಾವನ ಮಂಡೆಯಂ ಬೋಟಿಸಿದಳೆಂಬಂತೆ (ಧರ್ಮಾಮೃ. ೬-೫೯). **೨.** ದೊಡ್ಡದಾಗು ; ಉಬ್ಬು : ಬೆಂದ ಮುತ್ತುಗಳಂತೆ ಪೆಟ್ಟುವೆರ್ಚದೆ (ಧರ್ಮಾಮೃ. ೦೦-೩೬). [ಪೆಟ್ಟು$_3$ + ಪೆರ್ಚು$_1$]

**ಪೆಟ್ಟುವೆರ್ಚು$_2$** (ನಾ). ಅತ್ಯಧಿಕವಾದ ಸಾಹಸ,—ಕೆಚ್ಚು : "ಪನ್ನತಿಕೆ, ಪೆಟ್ಟುವೆರ್ಚು, ತಕ್ಕು . . . ಅಣ್ಮು — ಈ ೮ ಪರಾಕ್ರಮಂ" (ಕಕಸಾ. ೫೯-೨೬೩). [ಪೆಟ್ಟು$_3$ + ಪೆರ್ಚು$_2$]

**ಪೆಟ್ಟೆ$_1$** 'ಪೆಂಟೆ$_1$' ನೋ.

**ಪೆಟ್ಟೆ$_2$** 'ಪೆಟ್ಟೆ$_3$' ನೋ.

**ಪೆಟ್ಟೆಮಣೆ** 'ಪೆಟ್ಟುಮಣೆ' ನೋ.

**ಪೆಟ್ರೋಮ್ಯಾಕ್ಸ್** (ನಾ). ಸೀಮೆಎಣ್ಣೆಯ ಸಹಾಯದಿಂದ (ಉಜ್ವಲವಾಗಿ) ಉರಿಯುವ ದೀಪ : ಪೆಟ್ರೋಮ್ಯಾಕ್ಸ ಹಚ್ಚಿಸಿ ತರಿಸಲಾಯಿತು (ಶುಂಬಕೊ. ೯೩). [← ಇಂ. Petro + ?]

**ಪೆಟ್ರೋಲ್** 'ಪೆಟ್ರೋಲು' ನೋ.

**ಪೆಟ್ರೋಲಿಯಂ** (ನಾ). ಒಂದು ಬಗೆಯ ಖನಿಜತೈಲ : ಕರೆಯು ಹೋಗದಿದ್ದರೆ . . . ಬಿಳಿ ಪೆಟ್ರೋಲಿಯಂ ಅಥವಾ ಬೆನ್‌ಝಿನ್ ಉಪಯೋಗಿಸಿ ಎಣ್ಣೆ ಜಿಡ್ಡನ್ನು ತೆಗೆಯಬಹುದು (ಗೃಹಶಿ. ೯೦). [← ಇಂ. Petroleum]

**ಪೆಟ್ರೋಲು, ಪೆಟ್ರೋಲ್** (ನಾ). (ಮೋಟಾರಂ ಮುಂತಾದ ಸ್ವಯಂಚಾಲಿತ ವಾಹನಗಳಿಗೆ ಉಪಯೋಗಿಸುವ) ಶುದ್ಧೀಕರಿಸಿದ ಪೆಟ್ರೋಲಿಯಂ ಎಣ್ಣೆ; ಕಲ್ಲೆಣ್ಣೆ : ಪೆಟ್ರೋಲು ತುಂಬಿಸಿಕೊಳ್ಳುವುದಕ್ಕಾಗಿ ಧಾರವಾಡದಲ್ಲಿ ಮೋಟಾರು ನಿಂತುಕೊಂಡಿದ್ದಾಗ ಆಕೆಯ ಚಿತ್ತ ಹೊಯ್ದಾಡತೊಡಗಿದ್ದಿತು (ಬೋಹಬ. ೪೨೬) ; ಹುರಿದ ಬಿತ್ತುವನೆತ್ತಿ ಚೆಲ್ಲಿ . . . ಪೆಟ್ರೋಲ ಸುರಿದೆರೆಲೆ ಗಿಡವಾಗಿ ನಳನಳಿಸಿ ಬೆಳೆ ಮರವಾಗಿ ಎನುವ ಗೆಳೆಯನೆ ! (ಪಕಬಂ. ೮೪-೫). **ಪೆಟ್ರೋಲ್ :** ಇವನಪ್ಪ ಕೆಂಪೇಗೌಡನ ರಸ್ತೆ ಪೆಟ್ರೋಲ್ ಪಂಪಿನಾಗೆ ಕಸ ಗುಡಿಸುತ್ತಿದ್ದುದು ನಾನರಿಯೆನಾ ? (ಬೆಂಗಬ. ೨೬). [← ಇಂ. Petrol]

**ಪೆಟ್ಲು** 'ಪೆಟಲ್' ನೋ.

**ಪೆಟ್ಲುತುರುವೆ** (ನಾ). (ಪೆಟಲಿಗೆ ಹಾಕಲು ಬಳಸುವ ಕಾಯಿಗಳನ್ನು ಬಿಡುವ) ಒಂದು ಬಗೆಯ ಸಸ್ಯ : (*).

[ಪೆಟ್ಲು (<ಪೆಟಲ್) + ತುರುವೆ$_2$ (<ತುಱುವೆ)]

**ಪೆಟ್ಲುಪ್ಪು** 'ಪೆಟಲುಪ್ಪು' ನೋ.

**ಪೆಠಾರಿ** 'ಪಿಟಾರಿ' ನೋ.

**ಪೆಡ,** ಹೆಡ$_1$ (ಸಪೂರೂ). 'ಪೆಱಗು' ಎಂಬ ನಾಮಪದಕ್ಕೆ ಸಮಾಸದಲ್ಲಿ ಬರುವ ಆದೇಶರೂಪ : ಪೆಡವೆಂಬಾದೇಶಂ ಬಂದೆಡೆಗೊಳ್ಗುಂ ಪೆಱಗೆನಿಪ್ಪ ಶಬ್ದದೊಳ್ (ಶಮದ. ೦೬೩). 'ಪೆಡಂಗೆಯ್', 'ಪೆಡಂಮಗುಟಿದ್' ಪರಾ. ▸ 'ಡ', 'ಟ'ಕಾರಗಳಿಗಿರುವಂತೆ ವ್ಯಾಕರಣಬದ್ಧವಾದ ಹತ್ತಿರದ ಸಂಬಂಧವು, 'ಡ', 'ಱ'ಕಾರಗಳಿಗಿಲ್ಲದಿರುವುದರಿಂದ, 'ಪೆಱಗು' ಶಬ್ದದ 'ಸಪೂರೂ'ಗಳಾದ 'ಪೆಡ', 'ಪೆಱ' ರೂಪಗಳನ್ನು ಪ್ರತ್ಯೇಕವಾಗಿ ಕೊಟ್ಟಿದೆ. ಹೆಡ$_1$ : 'ಹೆಡಕತ್ತು' ಪರಾ.

**ಪೆಡಪೆಡಸಾರ್** = ಹಿಂದೆ ಹಿಂದೆ ಹೋಗು ; ಹಿಂಬಾಲಿಸು : ಪೆಡಪೆಡಸಾರ್ದು ಸಾರ್ದವನ ನೇಹಿಗರೊಳ್ ನೆಱೆ ನೇಹವಾಂತು (ಧರ್ಮ. ೬-೦೬೦). [<ಪೆಱಗು. / ತೆಲು. ಪೆಡ; ಪರ್ಜಿ. ಪಿಟ್ರೆಲ್]

**ಪೆಡಂಗಯ್** 'ಪೆಡಂಗೆಯ್' ನೋ.

**ಪೆಡಂಗಲಸು** (ಕ್ರಿ). ಮುಗ್ಗರಿಸು ; ನಡೆಯು ಕುಂಠಿತವಾಗು : ಕಿಱು ಬೇಂಟೆಯ ನಾಯ್ಗಳಿಂದ [ಮು]ಟ್ಟುಪಟ್ಟ ಪೆಣ್ಮೊಲನಂತೆ ಭಯಮನೆಡಗಲಿಸಿ ಬೆಳ್ವೇಟಮೋಡಿ ಜಪಂಗೆಟ್ಟು ಕಾಲ್ ಪೆಡಂಗಲಸೆ ಬೀಱುತ್ತುಂ ಮೇಱುತ್ತುಮೆಂತಾನುಮೆಯ್ದೆ (ಶಾಂತಿಪು. ೬-೯೧ ವ). 'ಎಡಗಲಿಸು' ಪರಾ.

[ಪೆಡ (<ಪೆಱಗು) + ಕಲಸು$_?$]

**ಪೆಡಂಗಾಲ್,** ಪೆಡಗಾಲ್ (ನಾ). ೧. ಪಾದದ ಹಿಂಭಾಗ ; ಹಿಂಗಾಲು. **೨.** ಚತುಷ್ಪಾದಿಗಳಿಗೆ ಇರುವ ಹಿಂಭಾಗದ ಕಾಲು : ಪೆಡಂಗಾಲೊಳಡಗಿದ ಬಾಲಮುಂ ಬಟ್ಟೆತ್ತಾದ ಬಱಿಯುಂ . . . ತೋಱುತ್ತುಂ ಸರಳಿಸಿ ಪಾಯ್ದು ಪೋಪ ಪೊಳ್ಳೆಪಂದಿಯಂ ಕಂಡು (ಲೀಲಾವ. ೬-೦೬ ವ). **ಪೆಡಗಾಲ್ :** ೧. ಪೆಡಗಾಲ್, ಪೆಡಗಯ್ (ಶಬ್ದಾನು. ೩೬೯ ಪ್ರಯೋ).

[ಪೆಡ (<ಪೆಱಗು) + ಕಾಲ್$_1$]

**ಪೆಡಂಗೆಯ್,** ಪೆಡಂಗಯ್, ಪೆಡಗಯ್, ಪೆಡಗೆಯ್, ಪೆಡಗೈ, ಹೆಡಗಯ್, ಹೆಡಗೈ (ನಾ). ಕೈಯ ಹಿಂಭಾಗ; ಹಿಂಗೈ : ಆತನುಂ ಪೋಗಿಯು ಪರಾಜಿತನೊಡನೆ ಮಹಾಯುದ್ಧಂಗೆಯ್ದು ಗೆಲ್ದು ಪೆಡಂಗೆಯ್ಯಡಿಯೆ ಕಟ್ಟಿ (ವಡ್ಡಾರಾ. ೫೦-೨೫) ; ಅಂತೊರ್ವನಂ ಪೆಡಂಗೆಯ್ಯಡಿಯಲ್ಕಟ್ಟಿ ಪೊಱಲ ಜನಂಗಳೆಲ್ಲಂ ನೆರೆದು ನುಡಿಯುತ್ತುಂ (ಸುಕುಮಾ. ೬-೫೩ ವ). **ಪೆಡಂಗಯ್ :** ಗಂಡನುಮಂ ಪೆಂಡತಿಯನೊಡಗೂಡಿ ಇರ್ವರುಮಂ ಪೆಡಂಗಯ್ಯಡಿಯೆ ಕಟ್ಟಿಕೊಂಡು ಪೋಪರಂ ಕಂಡು (ವಡ್ಡಾರಾ. ೨೦-೨೫) ; ಪೆಡವಾದೇಶಕ್ಕೆ—ಪೆಡಂಗಯ್, ಪೆಡಂದಲೆ (ಶಮದ. ೦೬೩ ಪ್ರಯೋ). **ಪೆಡಗಯ್ :** ತಳಾಱರ್ ಪರಿತಂದು ಪರದನಂ ಪಿಡಿದು ಪೆಡಗಯ್ಯಂ ಕಟ್ಟಿ ಧರ್ಮಾಧಿಕರಣರಲ್ಲಿಗುಯ್ಯೆ (ಪಂಕಕಂ. ೦೯೨-೩) ; ಅಬಿಂದುವಿಗೆ_ಪೆಡಗಯ್, ಪೆಡದಲೆ (ಶಮದ. ೧೬೩ ಪ್ರಯೋ) ; ಪೆಡಗಯ್ಯ ಕಟ್ಟಿಸಿ . . . ನಡೆಯಿಸಿದನು

(ಕುಡಾಪಾಂ. ೩೬–೬೨). **ಪೆಡಗೆಯ್**: ಪೆಡಗೆಯ್ಯಂ ಪಿಡಿದೀಟ್ಟು ಕಟ್ಟಿ . . . ಕರಸಿಮೆಂದಂ (ಧಕೆಲು. ೧೨–೯೮). **ಪೆಡಗೈ**: ಆ ಪಾರ್ವನು ಪಿಡಿದು ಪೆಡಗೈಯಂ ಕಟ್ಟಿ ತಂದೊಪ್ಪಿಸುವುದುಂ (ಶಂಕಕಂ. ೧೦೨–೦೬); ಮೋಹಾಸುರನ ಪೆಡಗೈಯನು ಕಟ್ಟಿ . . . ಕೆಡಹಿದರು (ಶ್ರೀಪುಪಾಂ. ೨೩–೨೩೭); ವ್ಯಾಡನೆಲ್ಲರಂ ಕರಸಿ ಪೆಡ[ರ]ದ[ಱ]ಗೈಗಳಂ ಬಿಡಿಸಿ ಸ್ತುತಿಸಿದರ್ ಭಕ್ತಿಯಿಂದೆ (ಕಂಥಿ. ೩೨–೯೪). **ಪೆಡಗಯ್**: ಮತ್ತೊಂದು ಬಾಣವ ಬಿಡಲಾಗಿ ಪದ್ಮನಾಭನ ಪೆಡ[ರ]ದ[ಱ]ಗಯ್ಯ ಕಟ್ಟಿತ್ತು (ಕಪಾವ. ೩೭–೦೯೪); ಕಟ್ಟು ಹೆಡಗಯ್ಯನಂಬುಜದ ಪೊಸನೂಲಿಂದೆ (ಸಂಶಿರ. ೦೫–೮೩); ಹೆಡಗಯ್ಯ ಬಿಗಿದ ನೇಣಂ ಕೊಯ್ದು ಬಿಸುಟು (ಹಕಳಾ. ೦೩–೦೨). **ಹೆಡಗೈ**: ನಳಿನಮುಖಿ ಹೆಡಗೈಯ ಬಿಡು (ಕುಷ್ಯಾಕ. ೨೦–೪); ಹೆಡಗೈಯ ಬಿಗಿದು ಕಟ್ಟಿದ ಕಳ್ಳಗಾಟಟ್ಟು ಸಡಲಿದಪ್ಪಕೆ ಸುಖವಹುದು (ಭರತ. ೧೮–೪೩); ಒರ್ವ ಕಳ್ಳನ ಪಿಡಿದು ಹೆಡಗೈಯ ಕಟ್ಟಿ ಕೊಂಡೊಯ್ಯುತಿರಲು (ಗುರುಚಾ. ೭–೯೦).

[ಪೆಡ(<ಪೆಱಗು)+ಕೆಯ್₂]

**ಪೆಡಂಗೈಸು** (ಕ್ರಿ). ಹಿಮ್ಮುಖವಾಗಿ ಮಾಡು: ಮುಳಿಸಿಂದಂ ಭೂತವೃಂದಂ ಕೊಳುಗುಳದೆಡೆಯೊಳ್ ಸಿಲ್ಕಿದಸ್ವಪ್ನರಂ . . . ತತ್ಕೇಶದಿಂದಂ ಬಿಗಿದಿಗಿದುರದಾರ್ದುಂ ಪೆಡಂಗೈಸಿ ನಿಂತಾಗಳೆ ಕಟ್ಟುತ್ತುಂ (ಶೀರ೮೬. ೦೨–೬೪).

[ಪೆಡ (< ಪೆಱಗು) + ಕೈಸು (< ಕೆಯ್ಸು)]

**ಪೆಡಂದಲೆ, ಪೆಡತಲೆ, ಪೆಡದಲೆ, ಹೆಡತಲೆ, ಹೆಡದಲೆ** (ನಾ). ೧. ತಲೆಯ ಹಿಂಭಾಗ; ಹಿಂದಲೆ: ಪೆಡವಾದೇಶಕ್ಕೆ—ಪೆಡಂಗಯ್, ಪೆಡಂದಲೆ (ಶಮತ. ೦೭೩ ವೃಯೋ). **ಪೆಡತಲೆ**: ೧. ಪಡಿಯುಱನಿಂದವೆಟಿಯಿಸಿ ಪೆಡತಲೆಯುಂ ಪಿಡಿದು ನೂಂಕುತ್ತಮರವುನೆಯಿಂದಂ ಪೊಱಮಡಿಸಿ (ವಡ್ಡಾರಾ. ೦೯೬–೨); ನುಡಿಯೆ ನುಡಿಯೆ ನಾಲಗೆಯಂ ಪಿಡಿದು ಪೆಡತಲೆಯಿಂದುರ್ಚುವರಂ (ಅಬಿಶೃ. ೫–೯೫ ವ); ನೀವಿತ್ತಂ ಬರಲಾಗದೆಂದು ಪೆಡತಲೆಯಂ ಪಿಡಿದು ನೂಂಕಿ (ಪುಣ್ಯಾಸ್ರ. ೯–೫ ವ); ಇದುಗೋಪದಿಂದ ತನ್ನಯ ಪೆಡತಲೆಯಂ ಪೊಡೆದು ಕಡಿವೆನೆಂದೆನುತಿರ್ದಾ ಕೊಡಲಿಯ ಕೈಯಂ ಪಿಡಿದಂ ಮೃಡಂ (ಶ್ರೀಪು. ೨೨–೨೪). ೨. ಕತ್ತಿನ ಹಿಂಭಾಗ; ಹೆಡಕು; ಹೆಗ್ಗತ್ತು: ಸತಿಗೆ ಭಂಗವುಂ ಮಾಡಿದನಂ . . . ಪೆಡತಲೆಯಂ ಮೆಟ್ಟಿ ಕಿಟ್ಟುಕೊಳ್ವಂ ತಲೆಯಂ (ಶಂಖಾಪಚಾ. ೯–೯೪). **ಪೆಡದಲೆ**: ೧. ಪೆಡದಲೆಯ ಪಾವು ಸೋಂಕಿಲ ಕಿಡಿ ನಣ್ಪಿನ ಮೃತ್ಯು (ಜಗಾ. ೫–೬೦); ಅಬಿಂದುವಿಗೆ ಪೆಡಗಯ್, ಪೆಡದಲೆ (ಶಮತ. ೦೭೩ ವೃಯೋ). ೨. ಚರನಂ ಪೆಡದಲೆಯಂ ಪಿಡಿದು ನೂಂಕಿಸಿದನವನೀಶಂ (ಧಕೆಲು. ೯–೭೦೯). ೩. ಹಿಂಭಾಗಕ್ಕೆ ತಿರುಗಿಕೊಂಡಿರುವ ತಲೆ; ಹಿಮ್ಮುಖವಾಗಿರುವ ತಲೆ: ಎಮ್ಮಂತಲ್ಲ ಪರ ರೂಪು . . . ಕೆಲರ್ಗೆ ಪೆಡದಲೆ; ಕೆಲರ್ಗೆ ಬಿಡುದಲೆ (ಅಮೃತ. ೪೪–೪).

**ಹೆಡತಲೆ**: ೧. ಹೆಡತಲೆಯ ಮಾತ ಬಲ್ಲರೆ ಪ್ರಸಾದಿ (ಸರ್ವವ. ೦೬೦–೪೦೩); ಹೆಡತಲೆಗೆ ಮೋಹಿ ಕಯ್ಯೆತ್ತಿ ಕಂಧರ ಹಱಿಯೆ ಹೊಡೆಯಲನುವಾದಂ (ಹಕಳಾ. ೦೩–೦೨); ಸರಸಿಜಾಸನನಂದು ನೊಸಲಲಿ ಬರೆದ ಲಿಪಿ ಹೆಡತಲೆಗೆ ಹೋಹುದೆ (ಬಿಸಪು. ೯೬–೦೩); ಹೆಡತಲೆಯ ತುಱಿಸುವರೆ ಹಾವಿನ ಹೆಡೆಯನಕಟಾ (ಕುಷ್ಯಾಸ. ೦೪–೩೭); ಮುನಿವನುತ್ತರದಲಗು ಬೆನ್ನಲಿ ಮೂಡಿದುದು ಹೆಡತಲೆಗೆ ಸಾರ್ದುದು (ಕೊರಂಶಾ. ೦–೯–೨೬). ೪. ಹಿಂಭಾಗ; ಹಿಂದುಗಡೆ; ಹಿಂಬದಿ: ಅರ್ತಿಯಾಗಿದೆ ಬದುಕು ಸಾಯಲಾಟಿಸಿನು ಎನಲು ಮೃತ್ಯು ಹೆಡತಲೆಯಲ್ಲಿ ನಗುತಿರ್ಪಳಯ್ಯ (ಪುರಂದ. ೨–೬೦–೪); ಮೊಗಲರು ಹೆಡತಲೆಯ ಗಂಡವನ್ನು ಮರೆತು ಮನೆಗಳನ್ನು ಸೂರೆಗೊಳ್ಳುವುದಕ್ಕೆ ಹೊರಟರು (ಧಕ್ರುಶಿ. ೬೪). **ಹೆಡದಲೆ**: ೧. ಶಬರಸಂಕುಲವ ಸೀಳಿ ಹೆಡದಲೆಯಿಂದಲುಗಿಪೆನು ನಾಲಗೆಯನು (ಜೀವಂಶ. ೬–೭).

[ಪೆಡ (< ಪೆಱಗು) + ತಲೆ₁]

**ಪೆಡಂಬಾಯ್** (ಕ್ರಿ). ಹಿಂದಕ್ಕೆ ನೆಗೆ.—ಹಾರು.—ಜಿಗಿ: ಮತ್ತಮವಱೊಳಗೊಂದು ಜಾತಿಜಾಯಿಲು ಪೋಗನೆ ನಿಂದು ಮುಳಿದಟ್ಟಿ ತಿರುಗಿ ನೋಡುತ್ತೆ . . . ಪೆಡಂಬಾಯ್ದಾಳಲಿಂ ಬಳಸುತ್ತಿರೆ (ಗಿರಿಶ. ೦–೦೦೪).

[ಪೆಡ(<ಪೆಱಗು)+ಪಾಯ್₁]

**ಪೆಡಂಭೂತ** (ನಾ). ೧. ಭಯಂಕರವಾದ ದೊಡ್ಡ ಭೂತ: ಪೆಡಂಭೂತಗಳು ಕುಣಿಯುವುವು,—ತೆರೆಗಳ ಹೆಡೆಗಳ ಮೇಲೆ (ಜಂಕಕ. ೨–೦೪); ಸ್ಕೂಲ್‌ನಲ್ಲಿ ಪ್ರತಿಯೊಬ್ಬರನ್ನೂ ಪರೀಕ್ಷೆಯ ಪೆಡಂಭೂತ ಹಿಡಿದುಕೊಂಡು ಬಿಟ್ಟಿತ್ತು (ಸ್ವಾಮಿನ್ಕೆ. ೩೪). ೨. ತುಂಬ ದೊಡ್ಡದು: ಅತ್ಯಲ್ಪವನು ಪೆಡಂಭೂತವನೆ ಮಾಡಿದಿರಿ (ಕುಂರುಶಾ. ೦೦೯–೬೯೪). ೩. ಪ್ರಾಚೀನ ಕಾಲದಲ್ಲಿ ಇತ್ತೆಂದು ನಂಬಲಾದ ಬೃಹದಾಕಾರದ ಒಂದು ಪ್ರಾಣಿ. [←ತೆಲು. ಪೆನ್ಬೂತ. ಪ ಪೆಡ<ಪೆಱಗು ಅಥವಾ ಪೆಡ<ಪಿರಿದು–ಹೀಗೆಯೂ ವ್ಯುತ್ಪತ್ತಿಗೊಂಡಿರುವುದು ಸಾಧ್ಯ]

**ಪೆಡಂಮಗುಳ್** 'ಪೆಡಂಮಗುಂಟು' ನೋ.

**ಪೆಡಂಮಗುಳಿಸು** (ಕ್ರಿ). ಹಿಂದಕ್ಕೆ ಬರುವಂತೆ ಮಾಡು: ಹಿಂದಿರುಗಿಸು: ತೀರ್ದ್ಯನುಸರಿನಂತುಂ ಪೆಡಂಮಗುಳಿಸುವುದಸದಳಂ(ಶ್ರೀಅಪುಶಾ.೦೦೦–೨೬೦).

[ಪೆಡಂಮಗುಳ್ (<ಪೆಡಂಮಗುಟು)+—ಇಸು]

**ಪೆಡಂಮಗುಟು, ಪೆಡಂಮಗುಳ್, ಪೆಡಮಗುಟು** (ಕ್ರಿ). ೧. ಹಿಂದಕ್ಕೆ ಚಲಿಸು,—ಹೋಗು: ನೆರೆದರಸುಮಕ್ಕಳೆಲ್ಲರಾ ಬಿಲ್ಲಂ ಕಂಡು ಬಲ್ಲಳಂ ಪೊಡೆದಂತೆ ಪೆಡಂಮಗುಟೆ (ಶಂಖಾಪಚಾ. ೫–೬೨ ವ); ಪಟಯಿಗೆ ಬಾಂಗೆ ಪೆಡಂಮಗುಟೆ ಸೂತರ್ಗೆ ಗತ್ತಿರೆ ವಾಹಂಗಳತಿಜವದೆ ಪರಿಯೆ ರಥಂಗಳ್ ಪರಿದುವು (ಜಗಾ. ೭–೬೨); ರಣರಭಸೋತ್ಕಟಂ ಧರೆ ಪೆಡಂಮಗುಟ್ಟಂತೆ (ಶಂಖಾಪ. ೦೦–೬೪). ೨. ಹಿಂದಕ್ಕೆ ತಿರುಗಿ ಆಕ್ರಮಿಸು,—ಎದುರಿಸು: ಅಗಳಾ ಕಳಕಳಕ್ಕೆ ಮುನ್ನೀರೆ ಮೇರೆದಪ್ಪಿದಂತೆ ಬೆಂದಗುಳ್ದು ಬರ್ಪ ಮಾರ್ಪಡೆಗೆ ಕಡೆಗಾಲದ ಕೃತಾಂತನಂತೆ ಪೆಡಂಮಗುಟ್ಟು (ಶಂಖಾಪಚಾ. ೭–೩೪ ವ). ೩. ಅಡಿಮೇಲಾಗು; ಬೋರಲಾಗು: ನೆಲಂ ಪೆಡಂಮಗುಟ್ಟು ಕವಿದಿಕ್ಕಿದಂತೆ ತೊಟ್ಟನೆ ಪುಟ್ಟಿದತಿಭಯದಿಂ ವಿಭಂಗಮನರಾಗಿ . . . ಮೂಡಲಿಸುತ್ತುಂ (ಶುಕುಪಾ. ೦೦–೯೨ ವ). ೪. (ಅಲಂ) ಕೆಡಿಸಿ; ಕುಗ್ಗು: ಉರಗೇಂದ್ರಂ ಪೆಡೆಗಳ್ ಪೆಡಂಮಗುಟ್ಟನಂ ಪೊತ್ತಿರ್ದ ವಿಶ್ವಂಭರಾಧರವಂ ತನ್ನ ಭುಜಾಗ್ರದೊಳ್ಕೆದು (ಬಿವ್ಯಶಿ. ೬–೦೩). **ಪೆಡಂಮಗುಳ್**: ೧. ಮೋದಿದ ತಾಳವಟ್ಟದೊಳ್ಪಂದ ಪೆಣ ಪೆಡಂಮಗುಳೆ ಕಣ್ಗೆಸಗುಂ ಜವನೇಱಿದೊಂದು ಜಕ್ಕಂದೊಳದಂತೆ ಸೇವುಣಭುಟ್ಟನ ವೀರವಿಳಾಸಸಿಂಧುರಂ (ಎಕ. VI. ಕಡೀಕ. ೪೫–೯೬; 1190). **ಪೆಡಮಗುಟು**: ೧. "ಪೆಡಮಗುಟು (ಪೆಡಂಮಗುಟ್)—ಪರಾಙ್ಮುಖೇ (ಹಿಂದಿರುಗು)" (ಶಬುಶಾ).

[ಪೆಡ (<ಪೆಱಗು) +ಮಗುಟು]

**ಪೆಡಂಮೆಟ್ಟು₁, ಪೆಡಮೆಟ್ಟು₁** (ಕ್ರಿ). ಹಿಂದಕ್ಕೆ ಸರಿ; ಹಿಮ್ಮೆಟ್ಟು: "ಅಕ್ಕುಳಿಸಿತೆಂದುಂ . . . ಪೆಡಂಮೆಟ್ಟಿತೆಂದುಂ . . . ಪಾರಿಗೆಯ್ದೆಂದುಂ— ಈ ೧೩ ಅಪಸರಣಕ್ಕೆ ಪೆಸರ್" (ಶಶಾ. ೬೨–೬೯೪); ಮುಳಿಸಿಂ ಮುಟ್ಟುವ ನಾಯ್ಗಳನೆ ತುಂಡಿಸಲ್ಕೆಂದುಱೆ ಕಿರ್ಗುಟ್ಟುತೆ ಮುಂದಟ್ಟಿ ಪೆಡಂಮೆ[ಟಾಕಾಂ.ಮು]ಟ್ಟುತೆ ಸೂಕರನಡರ್ದು ಸಾರ್ದುದು ಮೆಳೆಯಂ (ಗಿರಿಶ. ೦–೦೦೨); ಚಂದ್ರಮಣಿಕುಟ್ಟಿಮಂಗಳಂ ತಿಳಿಗೊಳಂಗಳೆಂದಡಿಯಿಡಲಂಜಿ ಪೆಡಂಮೆಟ್ಟುವ ಕಿಱುವೆಂಡಿರಂ (ರಾಜಶೇ. ೨–೦೩೬ ವ). **ಪೆಡಮೆಟ್ಟು₁**: ಪೆಡಮೆಟ್ಟಿದನಾಂಧ್ರಮಗಧಂ ಮಱೆಗಡೆಗೆ ಜಗುಳ್ದಂ (ಜಪುಶಾ. ೭–೪); ಉರಿಯನುಗುಳುವ ಫಣೆಯ ಗರಳವನು ಕಾಣಲ್ಕೆ ಗರುಡ ಶಾನಾದಡಂ ಪೆಡಮೆಟ್ಟುವಂ (ಜ್ಞಾಪಜ. ೯–೦೦೦); ಪೆಡಮೆಟ್ಟದೊಂದಡಿಯನಾದೊಡಂ ರಣದಲ್ಲಿ ಹೊಡೆದಾಡುವುದು (ಜೀಶಾಂ. ೨–೩೯).

[ಪೆಡ (<ಪೆಱಗು)+ಮೆಟ್ಟು₁]

**ಪೆಡಂಮೆಟ್ಟು₂, ಪೆಡಮೆಟ್ಟು₂, ಹೆಡಮೆಟ್ಟು** (ನಾ). **ಹಿಂದುಗಡೆ**: ಹಿಂಭಾಗ; ಹಿಂಬದಿ: "ಪೆಱತು ಪಿಂಗಡೆ ಪೆಡಂಮೆಟ್ಟುಱ ಪೆಱಗುಂ

ಪಿಂತೆ ಪಿಂತಿಲೆನೆ ಹಿಂದೆನಿಕುಂ" (ಶಬ್ದಮ. ೦೯೩). ಪೆಡಮೆಟ್ಟು₃: "ಪೆಡಮೆಟ್ಟು, ಪೆಜಗು, ಪೆಜತು, ಪಿಂತಿಲ್—ಈ ೪ ಪಿಂಗಡೆಗೆ ಪೆಸರ್" (ಶಬ್ದಮ. ೬೩-೪೩೩): ಆ ಪದಾತಿಬಲದ ಪೆಡಮೆಟ್ಟಿನೊಳ್ ಪೂಡಿದ ಕುದುರೆಯ ನೀಡಿ ನೆಗೆದ ಪಳವಿಗೆಯ (ಗಂಕ. ೬-೫೩ ಪ). ಪೆಡಮೆಟ್ಟು : ತುರಗದ ಪೆಡೆ[ಡ]ಮೆಟ್ಟಿನ ಗಜಘಟೆಯ ಸಂದಣಿಸಿದ ರಥತತಿ ಮೆಜೆಯಲ್ (ಪಂಪಭಾ. ೨-೬೩): ಪೆಡಮೆಟ್ಟಿನೊಳಲಗಂ ಕೊಂಡೆಯ್ತಂದೊಡನೆ ಬೆರಸಿ ಕಲಕಿಲಬರ್ಬರರ ಕಡಿಖಂಡವ ಮಾಡಿದಂ (ಕುಮಾರರಾ. ೮-೫೦). [<ಪೆಡಂಮೆಟ್ಟು₁]

**ಪೆಡಕಟ್ಟು** 'ಪೆಡಗಟ್ಟು' ನೋ.

**ಪೆಡಕು. ಹೆಡಕು** (ನಾ). ೧. ಕತ್ತಿನ ಹಿಂಭಾಗ ; ಹೆಗ್ಗತ್ತು : ಕಡಲು ದಾಟಿದ ಬಲುಧೀರನೆ . . . ಪೆಡಕಿಲಾಸನವಿತ್ತ ದಾತಗೆ (ಶ್ರೀಸಕೀ. ೫-೩). ಹೆಡಕು : ೧. "ಘಾಟಾ, ಅವಟುಃ, ಕೃಕಾಟಿಕಾ — ಈ ೩ ಹೆಡಕು" (ಹಲಾಯು. ೪೭-೩೭೦) ; ಫಣಿರಾಜನೇಬನ ಹೆಡಕು ಮಣಿವುದು (ಸಂಕಕ. ೨೦-೭೯) : ಹಾಲಿನ ಸವಿಯ ನೋಡುವೆ ಬಡಿಗೆಗಾಣದೆ ಹೆಡಕ ಮೋಹಿಪ ರಾಮಬಾಣವಿರೆ (ಶೌರಿರಾ. ೦೯-೯೯) ; ತುಡುಗುಗುಣಿಗಳು...ಹವಿಗೊಂಬವುರ ನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೊರಟಾ. ೦-೧೧-೯). ೨. (ಕೋಟೆ ಮುಂತಾದುವುಗಳ ತುದಿಯ) ಹಿಂಭಾಗ,—ಹಿಂಬದಿ : ಕೇಳು ಬಳಿಕಕ್ಷೀಣಬಲಂ . . . ಘುಡುಘುಡಿಪ ಕೋಪದಲಿ ದುರ್ಗದ ಹೆಡಕು ಪರಿಯಂತೇಜ ಪುರ ಗಡಬಡಿಸಿ ಬೆಚ್ಚಿತು (ಕೊರಟಾ. ೪-೬-೨೦). [ದೇ.॥ ತಮಿ. ಪಿಟಿಹ್ಯು ; ತುಳು. ಪೆದಂಗ್]

**ಪೆಡಕೆಡಪು** (ಕ್ರಿ). ಹಿಂದಕ್ಕೆ ತಳ್ಳು ; ಹಿಮ್ಮುಖವಾಗಿ ಬೀಳಿಸು : ನಡೆಸಾರಂ ನೆಲವಾರ್ಗೆ ಪೆಡಕೆಡಪುವ ಡೆಗ್ಗ (ಶ್ರೀಕೃಕ. ೫-೦೦).

[ ಪೆಡ (< ಪೆಜಗು) + ಕೆಡಪು ]

**ಪೆಡಗಟ್ಟು, ಪೆಡಕಟ್ಟು, ಹೆಡಕಟ್ಟು₂, ಹೆಡಗಟ್ಟು** (ನಾ). (ಶಿಕ್ಷೆಗಾಗಿ) ಕೈಗಳನ್ನು ಬೆನ್ನಿನ ಹಿಂದೆ ಸೇರಿಸಿ ಕಟ್ಟುವ ಕಟ್ಟು; ಹೆಡಮುರಿಗೆ ; ಹಿಂಗಟ್ಟು : ಶೇಷಂ . . . ಅಲಘುಬಿಲೇಶಯಪಾಶದಿನೋವದೆ ಬಲಯುತ ರವಿಕೀರ್ತಿಯ ತೋಳಂ ಪೆಡಗಟ್ಟಂ ಕಟ್ಟಿದನು (ಜಗಧರಾ. ೬-೯೬) ; ಕಟ್ಟು ನುಡಿದ ಪೊಳಲಧಿಕಾರಿಯ ಪೆಡಗಟ್ಟಿನಿಂತಂದೊಪ್ಪಿಸಿದರು (ಕುರಾಮಾ. ೦೦-೫೨). ಪೆಡಕಟ್ಟು : ಪೆಡಕಟ್ಟ ಕಟ್ಟಿ ಮಂಡೆಯ ಕೆದಜಿಕೊಂಡು ಕಡಿವೆವು ತಲೆಯನೆಂದೆನುತ (ಕೃಶಂಜ. ೨-೦೯೭). ಹೆಡಕಟ್ಟು₂ : ಸಂಕೋಲೆ ಹೆಡಕಟ್ಟು ಹಾಕಿದ್ದಾಗ ಕಂಡರೆ ಆರೋಗ್ಯ . . . ಬಲಿತ ವೈರುವುಳ್ಳ ಭೂಮಿಯುಂ ಕಂಡರೆ ಐಶ್ವರ್ಯವು (ಸೌಗಂಧಿ. ೫೧೦-೦೯); ಗಂಗಾತೀರದಲ್ಲಿ ನಿದ್ರೆಹೋಗುವ ಭೀಮನನ್ನು ಹೆಡಕಟ್ಟಾಕಿ ಗಂಗೆಯ ಮಧ್ಯದಲ್ಲೆತ್ತಿ ಹಾಕಲು (ಕೃಪಾಕ. ೪೬). ಹೆಡಗಟ್ಟು : ಪುಷ್ಪೋದ್ಭವ ಹೆಡಗಟ್ಟಿಗೀಡಾದ (ಪೋಕಚು. ೦೯೬-೬೨೯) ; ಕರಮೆ ಹೆಡ[ಪಾಠಾಂ. ಪೆಡ] ಗಟ್ಟಿನಿಂ ಕೈಸಂಕಲೆಗಳು ಮಿಗೆ . . . ನಡೆಗುಜಿಗಳಂ ಮಾಡಿ (ಶಾಪಂಕ. ೪-೦೬೦); ರಾಯ ಕೋಪಾಟೋಪನಾಗಿ ತನ್ನ ಶಕ್ತಿಯಿಂದ ಅವನ ಮಾಯೆಯ ಗೆದ್ದು . . . ಹೆಡಗಟ್ಟ ಕಟ್ಟಿ (ಏಕ್ಕಿ.ಟ. ೭೪).

[ ಪೆಡ ( < ಪೆಜಗು) + ಕಟ್ಟು₂ ]

**ಪೆಡಗಡೆ** (ನಾ). ಹಿಂಬದಿ ; ಹಿಂಭಾಗ : ಪೆಡಗಡೆ ಸಾರ್ಚಿದೊಂದು ಕರದಿಂದೆಳೆದೋರಿದುಬುಂಬಂ (ಜಕಕ. ೬-೨೦೨). [ ಪೆಡ < ಪೆಜಗು) + ಕಡೆ₃ ]

**ಪೆಡಗಯ್** 'ಪೆಡಂಗೆಯ್' ನೋ.

**ಪೆಡಗಾಲ್** 'ಪೆಡಂಗಾಲ್' ನೋ.

**ಪೆಡಗುಡಿ, ಹೆಡಗುಡಿ** (ನಾ). ೧. =ಪೆಡಗಟ್ಟು : ಒಟ್ಟಿಯೊಳೊರ್ವ ಪ್ರಾಯದವನಂ ಪೆಡಗುಡಿಯಂ ಕಟ್ಟಿ ಕೊಲಲ್ಕೊಯ್ಗುತ್ತಿರೆ (ಪುಣ್ಯಾಸ್ರ. ೩-೬ ಪ) ; ಕಮಲಜಮುಖ್ಯರಂ ವೀರಭದ್ರನತಿಕೋಪದಿಂ ಪೆಡಗುಡಿಯ ಕಟ್ಟಿ ಭೂತಾಳಿಗಳ ವಶಕಿತ್ತನು (ಶಬಪು. ೩೦ ಸೂತಪ). ಹೆಡಗುಡಿ : ೧. ದೃಢವಿರಬೇಕು ಲಿಂಗಾರ್ಚನೆಯಲ್ಲಿ ದೃಢವಿಲ್ಲದವನ ಹೆಡಗುಡಿಯ ಕಟ್ಟಿ ಎಡಹಿ ಬಿಡುವ ಭವದಡಿಗೆ (ಸಿದ್ಧೇಶ.ವ. ೦೯೫-೬೦೫) ; ಹೊಡೆಯಲೆಂದತಿವೀರ್ಯನನುಗೆಯ್ಯಲು ತಡೆಯದಾಗಳೆ . . . ಹೊಡೆದು ಹೆಡಗುಡಿಯ ಕಟ್ಟಿದನಾತನಂ (ಕುಮಾರರಾ. ೬-೩೫) ; ದೈತ್ಯನ ಜಡಿದು ವಾರುಣಪಾಶದಲಿ ಹೆಡಗುಡಿಯ ಬಿಗಿದನು (ಶಿಕಾಗ. ೪-೦೯-೨೮). ೨. ಹಿಂಭಾಗ ; ಹಿಂಬದಿ : ನುಡಿಯದಟು ಪಕಾನಗ್ರುಹದ ಹೆಡಗುಡಿಯಲಿದ್ದುದು ರಾಯ ಕುಲವು (ಕುಪ್ಪಾಸ. ೮-೪೩). [ ಪೆಡ (<ಪೆಜಗು) + ಕುಡಿ₃ ? ]

**ಪೆಡಗುಡಿಗಟ್ಟು, ಹೆಡಗುಡಿಗಟ್ಟು** (ಕ್ರಿ). ಕೈಗಳನ್ನು ಹಿಮ್ಮುಖವಾಗಿ ಕಟ್ಟು ; ಹೆಡಮುರಿಗೆ ಹಾಕು : ಪಿಡಿದೆಟತಂದು ಮುಂದಲೆಯನಾಗ್ರಹದಿಂ ಪಿಡಿದೊತ್ತಿ ಹಗ್ಗದಿಂ ಪೆಡಗುಡಿಗಟ್ಟ (ಪುಣ್ಯಾಸ್ರ. ೫-೩೦) ; ಅಂತ್ಯಜನ ನನುನಯದೆ ಪಿಡಿದು ಪೆಡಗುಡಿಗಟ್ಟ ತನ್ನ (ಅರಾಕ. ೦೦ ೬-೨೫) ; ರಥಾಶ್ವಮಂ ಕೊಚ್ಚಿ ಪೆಡೆ[ಡ]ಗುಡಿಗಟ್ಟ ವಿಧಿಯನಂಬಿ ಮತ್ತೆ ವೀರಭದ್ರಂ ಕಿರಳುತ್ತಂದನು (ಕಜಪು. ೩೦-೫೨). ಹೆಡಗುಡಿಗಟ್ಟು : ನಾನಿನ್ನ ಹೆಡಗುಡಿಗಟ್ಟ ನಿನ್ನಪುಗಳೆಯುತಿರಲು (ಜಿಪಂಕ. ೦೫-೯೬); ದಿಂಡುಗೆಡೆವಂತೆ ಒಳಗುದ್ದು ಹೊಜಗುದ್ದಿಕ್ಕಿ ದಂಡಿಸಿ ಬಳಿಕ್ಕ ಬಲುಹೂಸಿ ಹೆಡಗುಡಿಗಟ್ಟ[ ಪಾಠಾಂ. ಪೆಡಗ್ಗೆಗಟ್ಟ, ಹೆಡೆಗ್ಗೆಕಟ್ಟ ]ಕೊಂಡು ಬರ್ಪಾಗಳು (ಸಮ್ಯಕೌ. ೪-೦೯).

[ಪೆಡಗುಡಿ + ಕಟ್ಟು₁]

**ಪೆಡಗೆ** 'ಪೆಟ್ಟಿಗೆ' ನೋ.

**ಪೆಡಗೆಪಾಗು** (ನಾ). ಬುಟ್ಟಿಯಾಕಾರದಲ್ಲಿರುವ ರುಮಾಲು,— ಮುಂಡಾಸು : ಪೆಡಗೆಪಾಗು ದಡಿದೋತ್ರದ . . . ಹಂಡಹುಂಡ ಮಟ್ಟಿಗರೆಸೆದರ್ (ಜಿತ್ಸ್ಯಾರ. ೬-೦೯). [ಪೆಡಗೆ ( < ಪೆಟ್ಟಿಗೆ) + ಪಾಗು₁]

**ಪೆಡಗೆಯ್** 'ಪೆಡಂಗೆಯ್' ನೋ.

**ಪೆಡಗೆಯ್ಗಟ್ಟು** (ನಾ). = ಪೆಡಗಟ್ಟು : ನಿನ್ನ ಪೆಡಗೆಯ್ಗ[ಟ್ಟ]ಂ ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ (ಕಂಶಾ. ೬-೫೩).

[ಪೆಡಗೆಯ್ ( < ಪೆಡಂಗೆಯ್ ) + ಕಟ್ಟು₂]

**ಪೆಡಗ್ಗೆ** 'ಪೆಡಂಗೆಯ್' ನೋ.

**ಪೆಡಗ್ಗೆಗಟ್ಟು** (ಕ್ರಿ). = ಪೆಡಗುಡಿಗಟ್ಟು: ಪೆಂಡಿರೆಲ್ಲಂ ಪರಿಚಾರಕಿಯರಂ ಕೂಡಿಕೊಂಡಜ್ಜಗಾಪಿನಜ್ಜರಂ ಪಿಡಿದುರುಳ್ಚಿ ಚೆನ್ನಸಂಕಲೆಯಿಂ ಪೆಡಗ್ಗೆಗಟ್ಟ (ಅರ್ದನೇ. ೫-೨ ಪ); ಪಿಡಿದು ಪನ್ನಗಪಾಶದಿಂ ಪೆಡಗ್ಗೆಗಟ್ಟ (ಶೇಬಿಪಂ. ೦೯-೦೭೭). [ಪೆಡಗ್ಗೆ ( < ಪೆಡಂಗೆಯ್ ) + ಕಟ್ಟು₁]

**ಪೆಡಗೊಳ್** (ಕ್ರಿ). ಕುಗ್ಗು ; ಕುಸಿ : ನೆ[ಪಾಠಾಂ. ಪೊ]ಕ್ಕ ಕದಂಪು ಪತ್ತಿಪೆ[ಪಾಠಾಂ.ದೆ]ಡೆ[ಡ]ಗೊಂಡ ಕೊರಲ್ . . . ಅಕ್ಕುಟಿಸಿರ್ದ ಪೆರ್ಚುಸಿಬಿಗುರ್ವಿಸೆ ಬಂದನದೊರ್ವ ಪಾರ್ವಂ (ಅಂಚಾಪ. ೬-೫೬).

[ಪೆಡ ( < ಪೆಜಗು ) + ಕೊಳ್₁]

**ಪೆಡತಲೆ** 'ಪೆಡಂದಲೆ' ನೋ.

**ಪೆಡದಲೆ** 'ಪೆಡಂದಲೆ' ನೋ.

**ಪೆಡಪೌಜು** (ನಾ). ಯುದ್ಧದಲ್ಲಿ ಹಿಂಭಾಗದಲ್ಲಿ ನಿಲ್ಲುವ ಸೈನ್ಯ ; ಹಿಂಚೂಣಿ : ಪೆಡಪೌಜಿನೊಳೊಟ್ಟೈಸಿದ ಮದಮಾತಂಗದ ಬಲ್ಪಿಣಲೆಜಿದ ಕದನೋದ್ಧತಮಾನುಷರಿನಿಪಗ್ಗದ ಮಾಪತಿಗರ್ . . . ಹಾಣಾಹಣಿಯಿಂದ ನಿಮಿರ್ಚಿದರು (ಜಯಕಾ. ೬-೩೭).

[ ಪೆಡ (< ಪೆಜಗು)+ಪೌಜು (< ಫೌಜು) ]

**ಪೆಡಮುಗುಟು** 'ಪೆಡಂಮುಗುಟು' ನೋ.

**ಪೆಡಮೆಟ್ಟಿಸು** (ಕ್ರಿ). ಹಿಮ್ಮೆಟ್ಟಿಸು ; ಹಿಂಜರಿಯುವಂತೆ ಮಾಡು : ಅಡಕಕೆ ನಿಲ್ಲದಾಸೆ ಮನಮಂ ಪೆಡಮೆಟ್ಟಿಪ ಲಜ್ಜೆ (ಜಕಕ. ೪-೦೨೫).

[ ಪೆಡಮೆಟ್ಟು₁ ( < ಪೆಡಂಮೆಟ್ಟು₁) + — ಇಸು₃ ]

**ಪೆಡಮೆಟ್ಟು₁** 'ಪೆಡಂಮೆಟ್ಟು₁' ನೋ.

**ಪೆಡಮೆಟ್ಟು₂** 'ಪೆಡಂಮೆಟ್ಟು₂' ನೋ.

**ಪೆಡಲು** (ನಾ). ಬೈಸಿಕಲ್ಲನ್ನು ನಡೆಸುವವನು ಕಾಲು ಇಡುವುದಕ್ಕೂ ತುಳಿದು ಅದನ್ನು ಮುನ್ನಡೆಸುವುದಕ್ಕೂ ಅಳವಡಿಸಿರುವ ಸಾಧನ : ತನ್ನ ಕಾಲೊಂದನು ಪೆಡಲಿನ ಮೇಲಿಟ್ಟು...ಸೈಕಲ್ಲಿನಿಂದಿಳಿದಿಳಿಯದಂತಿರ್ಪನು ನಿಟ್ಟಿಸುತಾತಿ ಬರ್ಪುದನು (ಶಂರ್ರ್ರ. ೦೬೯-೫೪). [← ಇಂ. pedal ]

**ಪೆಡಸರ** (ನಾ). ಸೊಕ್ಕು ; ಗರ್ವ : ಅಪ್ಪಾಜಿಯವರ ಗೆಳೆಯ ಅಂತ ಅವರದು ಆಸು ಪೆಡಸರ (ಶಳಣ. ೦೯೯). [← ತೆಲು. ಪೆಡಸರ ]

**ಪೆಡಸಾರ್** (ಕ್ರಿ). ಹಿಂದಕ್ಕೆ ಹೋಗು ; ಹಿಂಜರಿ : ನರವುಮಂ ಬರಿಯುವುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ (ಶಂಶಭಾ. ೦೩-೩೬ ಪ); ಪೆಡಸಾರ್ದಂ ನೆಲೆವಿಡಿದಂ ಪಡಿಬರಿಸಿದುಬೆಯದೋಡಿದಂ ನಿಡು ವಯಣಂ (ಅಶ್ವ.ತಿ. ೫೦-೫). [ ಪೆಡ (<ಪೆಱಗು) + ಸಾರ್₁]

**ಪೆಡಸು**, ಪೆಟಸು, ಹೆಡಸು (ನಾ). ೧. (ಲೋಹಪದಂತೆ) ಗಡುಸಾಗಿರುವುದು ; ಬಿರುಸಾಗಿರುವುದು : ಪೆಡಸಾದ ಲೋಹವಾದರೂ ಕರಗಿ ಗಟ್ಟಿಯಾಗುವಾಗ. ವಿಕಾಸಗೊಳ್ಳುವ ಗುಣವನ್ನು ಪಡೆದಿದೆ (ಶಂಕೋ. I. ೦೯೬). ೨. ಭಂಗುರತೆ : ನೀರೆಲ್ಲ ವ್ಯಯುಂಡು ಸೂಜಿಗಳ ಪೆಡಸು ಕಡಿಮೆಯಾಗುತ್ತದೆ (ಖುಂಬಯು. ೬. ೯-೦೫೬). ೩. ಕಾಠಿಣ್ಯ : ನಿಷ್ಠುರತೆ ; ಒರಟುತನ : ಮಮತೆಯನ್ನುಳಿದು ಪೆಡಸಿಂದಿರಲು ಒರ್ವೆಯಿಂತೆಂದಳು (ಶಂಕಾಣ. ೩-೦೦-೦೦) ; ನಿನ್ನದೂ ಬಲು ಪೆಡಸು ! (ಎಳಿ. ೩೮). ೪. ಕಷ್ಟ ; ಎಡರು ; ಬಿಕ್ಕಟ್ಟು : ಪೆಡಸಿನ ಹಾದಿಗೆ ಪೆಟರಲ್ ಚಲದಂಕರೊಲ್ದು ಬೂಡಿಗೆ ಸಲೆ ನಡೆವರ್ (ಪ್ರಸೂಸು. ೬-೦೮); ದಾರಿ ಬಹಳ ಪೆಡಸು (ಶಜಾಣಾ. ೬). **ಪೆಟಸು** : ೩. ಇನ್ನೆಬರಂ ಕೊನೆವರಿದು ನೀಟ್ಟರಿಸಿದ ಬಟ್ಟೆಯ ಬಟ್ಟೆಯಾಗಳ್ ತನ್ನೊಳ್ ತಡೆದುದೆ ಬೊಂದು ಬಾಗುಳ ಪೆಟಸಿನಗವಟ್ಟಾಗಳುಮಿ ಕತದೊಳೆ ಬಗೆಗೆಟ್ಟಿರ್ಪ ರಾಯನೋಲಗಕೊರ್ವ ಜಾಬಾಲಿಮುನಿಪಂ ಬಿಜಯಂಗೈದಂ (ಶಾಖಕ್ಕೆ. ೦೦೯-೨೦). ೫. ಕದನ ; ಹೋರಾಟ (?) : "ಪೆಟಸೆಂದು ತೋಟಯೊಳ್" (ಶಬ್ದಾ. ೬೯). 'ಪೆಣಸು'₁ ಪರಾ. **ಹೆಡಸು** : ೬. ಬಿಂಕ ; ಗರ್ವ : ತಾವೇ ಅಪ್ಸರೆಯರೆಂದುಕೊಂಡು ಕೆಲವು ಹೆಣ್ಣುಮಕ್ಕಳು ಹೆಡಸಿನಿಂದ ತಿರುಗಾಡುತ್ತಾರೆ (ಅಂಹೂ. ೯). ೭. ಸಾಂದ್ರತೆ ; ಸ್ನಿಗ್ಧತೆ : ಇಬ್ಬನಿಗಳಾ ಹವ್ವ ಹೆಡಸಿನಲ್ಲಿ ಉಗಿಯೊಲು ತೋರುವ ಉಸಿರಿನ ಸರಣಿ (ಪ್ಯಾಶ್ವ. ೩-೨) ; ಮೊಸರು-ಅವಲಕ್ಕಿಯ ಹೆಡಸು ಇನ್ನೂ ಕೈಗೆ ಅಂಟಿಕೊಂಡೈತೆ (ಪಟ. ೦೯); ಉಕ್ಕಿದ ಹಾಲಿಗೆ ಹೆಡಸು (ಅಕ್ಕ.ತಿ. ೦೨೬). ೮. ತಲೆಗೂದಲಿನ ಬುಡದಲ್ಲಿ ಉಂಟಾಗುವ ಒಣಗಿದ ಚರ್ಮದ ಹೊಟ್ಟು ; ಹಗರು : (೬).

**ಪೆಡಸಾಗು** = ೧. ಗಟ್ಟಿಯಾಗಂ ; ಬಿರುಸಾಗು : ಸೂಜಿಗಳು ಸಿದ್ಧವಾದವೆಂದರೆ . . . ತಣ್ಣೀರೊಳಗೆ ಚೆಲ್ಲುವನು. ಅದರಿಂದ ಅವು ಪೆಡಸಾಗುವವು (ಖುಂಬಯು. ೯-೦೫೯). ೨. ಕಠಿಣವಾಗು; ನಿಷ್ಠುರವಾಗು; ಎಲ್ಲಿಯೂ ಅವರ ಭಾಷೆ ಪೆಡಸಾಗಿಲ್ಲ (ಶಂಖ. ೦೦೦). ೩. ಗರುಗಾಗು : ತುಂಡುಗಳು ಚೆನ್ನಾಗಿ ಕಾದು ಪೆಡಸಾದಾಗ . . . ಎಣ್ಣೆ ಬಸಿದು ಹೋಗುವಂತೆ ತೂತುಗಳಿರುವ ಪಾತ್ರೆಯೊಂದರಲ್ಲಿ ಹಾಕಬೇಕು (ಅಡುಗೆ. ೯೦).

[ ದೇ.॥ ತೆಲು. ಪೆಟುಕು, ಪೆಳುಸು ; ತುಳು. ಪೆಡ ]

**ಪೆಡಸುಗಟ್ಟು** (ಕ್ರಿ). ಗಟ್ಟಿಯಾಗು ; ಗಡ್ಡೆಕಟ್ಟು : ವಯಸ್ಸಾದವರಲ್ಲಿ ಮಿದುಳಿನ ತಳದ ನರಗಂಟುಗಳಿಗೆ ರಕ್ತ ಒದಗಿಸುವ ರಕ್ತನಾಳಗಳು ಪೆಡಸುಗಟ್ಟುವುದು(ಶಂಕೋ. I. ೫೬೬). [ಪೆಡಸು+ಕಟ್ಟು₁]

**ಪೆಡಸುಗೊಳ್ಳು** (ಕ್ರಿ). ಒರಟಾಗು ; ಬಲಿ : ಪೆಡಸುಗೊಳ್ಳದಿದ್ದ ಎಳೆಯ ಮನಸ್ಸಿನ ಮೇಲೆ . . . ಸ್ಥಿರವಾಗಿ ನೆಲಸುವುದು (ಶಕ. ೩೫).

[ಪೆಡಸು+ಕೊಳ್ಳು₁ (<ಕೊಳ್₁)]

**ಪೆಡಸುದಾರಿ** (ನಾ). ಅಡ್ಡಿ, ಆತಂಕಗಳಿಂದ ಕೂಡಿರುವ ದಾರಿ ; ಬಿಕ್ಕಟ್ಟಾದ ಮಾರ್ಗ : ಕಷ್ಟನಷ್ಟವ ಪೆಡಸುದಾರಿಯ ಯಾವುದೊಂದನು ಗಣಿಸನು (ಶಜಿ. ೦೯-೦೯). [ಪೆಡಸು+ದಾರಿ]

Δ**ಪೆಡಱು** 'ಪೆಳಱು₁' ನೋ.

**ಪೆಡಿಗೆ** 'ಪೆಟ್ಟಿಗೆ' ನೋ.

**ಪೆಡೆ**, ಹೆಡೆ₁ (ನಾ). ೧. ಹಾವಿನ ಬಿಚ್ಚಿದ ತಲೆ,—ಫಣೆ : "ಫಣಾಹ್ವಯಂ ಪೆಡೆಯುಕ್ಕುಂ" (ಪಶು.ಕೋ. ೦೯-೪); ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣ ಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೬೮ ಕೂರ್ಮ) ; ಎರಟಪ್ಪಾಳಿಂಗನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತುಂ ಬಂದೊಡೆ (ಪಮ್ಪಾಭಾ. ೦೦೦-೬೦) : ಪಡೆಯ ಪೊಱಗಿಗಿದು ಶೇಷಂ ಪೆಡೆಗಳನುಡುಗುವುದುಮೆಳೆ ಬೊದಿಲ್ಲೆನೆ ಬಿದ್ದತ್ತು (ಶಂಶಭಾ. ೧೦-೬೦).

**ಹೆಡೆ₁** : ೧. "ಫಣಃ, ಫಣಾ, ಫಟಾ—ಈ ೩ ಹಾವಿನ ಹೆಡೆ" (ಹಲಾಯು. ೦೦೫-೯೦): ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುಱಸುವಂತೆ (ಏಕವ. ೬೬೦ ೮) ; ಹೆಡೆಯ ಮಣಿಗಳ ಕಂಡು ಸೂಸಿದ ಕಿಡಿಗಳಹಹಾಯೆನುತ ಶಿರಗಳ ಕೊಡಹಿ ಮಱುಗಿದರುರಗಿಯರು ಮಱುಗಳಗೆ ಮೈಚಾಚಿ (ಕುಮ್ಮಾ.೪. ೦೨-೬೦) ; ಜಡೆಯುಳ್ಳ ಹಿರಿಯನಿಗೆ ಹೆಡೆಯುಳ್ಳ ಸರ್ಪನಿಗೆ ನಡುಗುತ್ತನಮಿಸಿ (ಸರ್ವಜ್ಞ. ೫೨೬) : ಹಳದಿಯ ಹೆಡೆಯನು ಬಿಚ್ಚೋ ಬೇಗಾ (ಕಣ್ವ. ೦೨೨). ೨. ಅಗಲವಾದ ತುದಿ : ಬೆಂಕಿಯೊಳಗೆ ಸೌಟು ಚೆಲ್ಲಿದರೆ ಮೊದಲು ಅದರ ಹೆಡೆಯು ಕಾದ ಎತ್ತದೆ (ಮುಂಬಯು. ೦೫-೦೯೮). ೩. ತೆಂಗು, ತಾಳೆ ಮೊದಲಾದಂವುಗಳ ಗರಿ; ಸೋಗೆ : ಬೊಬ್ಬರ್ಯ್‌ಗಳ ಹಾಗೆ ನಿಂತ ಹನೆಮರಗಳಿಗೆ ನಿಮ್ಮ 'ಹೆಡೆ' ತೂಗಿಸಬಾರದು ಎನಲು ಅವರಿಗೆ ಹಕ್ಕಿದೆಯೇ ? (ಪುರಕವ. ೦).

**ಹೆಡೆಯಾಡಿಸು** = ೧. ಹೆಡೆಯನ್ನು ತೂಗು,—ಅಲ್ಲಾಡಿಸಂ ; ಎಳೆಬಿಸಿಲಿನಲ್ಲಿ ಹಾವು ಹೆಡೆಯಾಡಿಸುತ್ತಾ ಇತ್ತು (ಲೂ). ೨. ಪ್ರಧಾನವಾಗಿ ಕಂಡು ಬರು ; ಎದ್ದುಕಾಣು : ಕ್ಷುಲ್ಲಕವಿಷಯ ಹೆಡೆಯಾಡಿಸುತ್ತದೆ. (ಹೊಸ್ತಿ. ೬೫). **ಹೆಡೆಯಾಡು** = ೧. ಹೆಡೆಯನ್ನು ಆಡಿಸು,—ತೂಗು : ಭರವಸ ತಲೆಯ ಬಳಿಯಲ್ಲಿ ನಾಗಸರ್ಪ ಹೆಡೆಯಾಡುವುದನ್ನು ಕಂಡು ಇವನ ಬಳಿಗೆ ಬಂದರು (ಶಕ್ರಶಾ. ೩೬). ೨. ಮೇಲೇಳು ; ಆಸ್ಫೋಟಿಸು : ಸಾಮಾಜಿಕದಾಸ್ಯದ ವಿಷಯದಲ್ಲಿ ಅಸಂತೋಷದ ಭಾವನೆ ದೇಶಾದ್ಯಂತ ಹೆಡೆಯಾಡತೊಡಗಿತು (ಶ್ರೀಕೃಶ್ರಿ. ೦೫೬).

[< ಸಂ. ಸ್ಫಟ]

**ಪೆಡೆಗಟ್ಟು** (ಕ್ರಿ). ಹೆಡೆಯ ಆಕಾರದಲ್ಲಿ ಕಟ್ಟು,—ರಚಿಸು : ಮುಂಕೊಂಡು ಮುಡಿ ಮಾಡಿ ಪೆಡೆಗಟ್ಟುವಾ ಕೇಳ್ ನಿನ್ನ ಗಂಡಂಗೆ ಲೇಸೆ ಪೇಳೆಂಬಳಕದಿಂ ಮಿಂದು ರಾಜಿಸಿದಳಾ ಮಾನಿನಿ (ಶಾಶಕಂ. ೩-೩೭).

[ಪೆಡೆ + ಕಟ್ಟು₁]

**ಪೆಡೆಗಲ್** (ನಾ). ಹಾವಿನ ಹೆಡೆಯಲ್ಲಿರುವ ಮಣಿ,–ರತ್ನ ; ಫಣಾರತ್ನ : ಪಾವೆಣೆಯನ ಪೆಡೆವಣೆಗಳೆನಿಪ ಪೆಡೆಗಲ್ಲೊಳ್ಳಂ . . . ಕುಳ್ಳಿರ್ಪ ಕೋಟಲೆಯುಂ ಮಱೆತು ನಿನ್ನ ದುಂಡುದೊಳೊಳ್ ನೆಲೆ ನೆಲಸಿ ಸೊಗಂ ಬಡೆದುದು (ಶಕಂ. ೦೫೬-೦೩). [ಪೆಡೆ + ಕಲ್₁]

**ಪೆಡೆದಲೆಯ** (ನಾ). ಹೆಡೆಯನ್ನೇ ತಲೆಯಾಗುಳ್ಳವನು ; ಆದಿಶೇಷ : ಪೆಡ[ದೆ]ದಲೆಯನ ಪೆಂಡತಿ ಮೈಗಣ್ಣನ ಮಡದಿ . . . ಮುಪ್ಪೊಡವಿಯ ಪೆಣ್ಣುಕ್ಕಳ ನಿಕುರುಂಬಂ (ಜಯುಶಾ. ೦೬-೯೦). [ಪೆಡೆ + ತಲೆ₁ + — ಅ₁]

**ಪೆಡೆಮಣೆ** 'ಪೆಡೆವಣೆ' ನೋ.

**ಪೆಡೆಯುಕ್ಕಿ** (ನಾ). ಒಂದು ಬಗೆಯ ಸಸ್ಯ ; ಹಾಲುತೊಟ್ಟಿನ ಗಿಡ : ಪೆಡೆಯುಕ್ಕಿಯ ಬೇರಂ ಕಟ್ಟಿಡುತ್ತಿರ್ದು ಕರ್ಣದೊಳೆ ಪಿಂಗುಗುಂ ಸೂಟಿಜ್ವರಮುಂ (ಶೋಶಕೆ. ೯-೨೩). 'ಅಕ್ಕಿಹೆತ್ತೆ' ಪರಾ. [ಪೆಡೆ + ಅಕ್ಕಿ₁]

**ಪೆಡೆಯಿಕ್ಕು** (ಕ್ರಿ). (ಆಲಂ) ತಲೆಯೆತ್ತು : ಪೆಡೆವಣಿದಳೆದ ನಾಗರ ಮಣಿಯೆಂಬಂತೆ ಹೊಡೆವರಳುವ ತನ್ನ ತಾನೇ ಪೆಡೆಯಿಕ್ಕುವ ಮುಕ್ತಿನರ ಲೆಲೆದಾಳ್ದು ಕೆಂಜೆಡೆ ಮುದ್ದುಮೊಗದಲ್ಲಿ ನಲಿಯೆ (ಶೋಚಶ. ೧೭-೬೦). [ಪೆಡೆ + ಇಕ್ಕು]

**ಪೆಡೆಯೆತ್ತು, ಹೆಡೆಯೆತ್ತು** (ಕ್ರಿ). ೧. ಹೆಡೆಯನ್ನು ತೆಗೆ,—ಬಿಚ್ಚು : ನಾಗವರಾಳಿಯನೊರ್ವನಾಲಾಪಿಸಲಾಗಳೆ ನೆರೆದು ಸರ್ವಗಳು ರಾಗಿಸಿ ಪೆಡೆಯೆತ್ತಿ ಕೇಳುತಿರ್ದುವು (ಶಠಕ. ೬೯-೧೦). **ಹೆಡೆಯೆತ್ತು** : ೧. ತನು ಹಾಳಿಗೆ ಮನ ಸರ್ಪನಾಗಿ ತನ್ನಯ ವಿಲಾಸಿತದಿಂದ ಹೆಡೆಯೆತ್ತಿ ಆಡುತ್ತಿರಲಾಗಿ (ಸಗಜಿಶ ೪. ೬೩೬-೧೮೦೬); ಹೆಡೆಯೆತ್ತಿ ಬುಸುಗುಡುತಪರಿವರನು ಕಚ್ಚಿ ಹುತ್ತವ ಹಾವು ಹೊಗುವೋಲು (೫ಂಕಾಕ. ೯೯-೭೭). ೨. (ಆಲಂ) (ದ್ವೇಷ, ರೋಷ ಮೊದಲಾದವು) ಕಾರ್ಯೋನ್ಮುಖವಾಗು : ಅವರ ಬಗೆಗಿದ್ದ ದ್ವೇಷ ಅವನಲ್ಲಿ ಹೆಡೆಯೆತ್ತಿತು (ರೂಢಿ). [ಪೆಡೆ + ಎತ್ತು₁]

**ಪೆಡೆವಣಿ, ಪೆಡೆಮಣಿ, ಹೆಡೆಮಣಿ, ಹೆಡೆವಣಿ** (ನಾ). ಹಾವಿನ ಹೆಡೆಯಲ್ಲಿರುವ ರತ್ನ; ನಾಗಮಣಿ : ಸೊಡರ್ವಾವನಿಪ್ಪ ಪೆಡೆವಣಿಯು ಸರ್ವಂಗಳಿಂದಾರಾಧ್ಯಮಾನೆಯುವೊಲಂತಸೆದು ತೋರ್ಪ(?)ರ್ಕಳ (ಆದಿಪು. ೨೬೦) : ಪಡೆವಂ ರಜೋಧಿಕಂ ವಿಧಿ ಪೆಡೆವಣಿಯುಂ ಫಣಿಯುಂ . . . ಮಟಿಯಂ ಸಿಡಿಲಿಂ ಪಡೆದಂತೆ ಸುಜನರಂ ದುರ್ಜನರಂ (ಶಂಕಾಪು. ೦-೪೨); ಖಡೆಯ ಸರವಣಿ ತೋಳಬಂದಿಗೆ ಪೆಡೆವಣಿಯು ಮಣಿವಾವುಗಳನಳವಡಿಸಿದನು (ಕುಮ್ಮಾ. ೬-೧೨). **ಪೆಡೆಮಣಿ** : [ಉರಗಂ] ಪೆಡೆಮಣಿಯಂ ವಿಷಮಂ . . . ಧರಯಿಸಿದಂತಿರೆ ಸಜ್ಜನರಂ ದುರ್ಜನರಂ ಪಡೆದಂ ಕಮಳಭವಂ (ಕುಬುಶಾ. ೦-೪೨). **ಹೆಡೆಮಣಿ** : ಮೆರೆದಳು ಕೈಕೆ ಮಂಥರೆಯ ತೊಡೆಯಲ್ಲಿ ಕಾಳಾಹಿಭೋಗದಲಿ ಹೊಳೆವ ಹೆಡೆಮಣಿಯಂತೆ (ಶ್ರೀಕಾಪು. ೨೪-೬೦೭). **ಹೆಡೆವಣಿ** : ಫಣಿಪನ ಹೆಡೆವಣಿಯನುದ್ಧರಿಸುವಂತಿರೆ ತೆಗೆವ ಭಿಸುಟನು ರತುನಮುದ್ರಿಕೆಯ (ಕುಮ್ಮಾ. ೬-೨೮): ಒತ್ತಿ ತಿವಿದು ಛಿದ್ರವ ಮಾಡಿ ಭೂಮಿಯ ಹೊತ್ತ ಹಾವಿನ ಹೆಡೆವಣಿಯು ಕಿತ್ತು ತನ್ನಿ (ಕೀಜೀಪ. ೦೬-೩೩); ಎಡೆಯ ಪಂಜುಗಳಿರ್ದುವು ನಾಗನಾಥನ ಹೆಡೆವಣಿಗಳ ದೀಪ್ತಿಯಂತೆ (ಶೋಚಶ. ೦೫-೨೨). [ಪೆಡೆ + ಮಣಿ₂]

**ಪೆಡೆವರಲ್** (ನಾ). = ಪೆಡೆವಣಿ : ಪೆಡೆವರಲಾವುವೊ ರನ್ನದ ಸೊಡರಾವುದೊ ಪೇಟಿಮೆಂಬಿನಂ ಸುದೆಗದಚ್ಚಿಡಿದಿರೆ ನಾಗಾಂಗನೆಯರ್ . . . ಸಾರ್ತಂದರ್ (ಶಂಕಾಪು. ೦೬-೬೨); ಪೆಡೆವರಲ ಬೆಳಗುಮುರಗನ ವಿಷಮುಂ ನಿಮಿರ್ದುದೆನೆ ರಾಗ ಪೇದಮನೆಪಂಗಿತ್ತುದು ನಿನ್ನ ನುಡಿಯು ಮೊದಲುಂ ತುದಿಯುಂ (ಶಕ್ರಪು. ೬-೨); ನೇವಳದ ಫಣಿಯು ಪೆಡೆವರಲ್ಗಳೊಳು ಮಾರ್ಪೊಳೆವ (ಬಾಶಿಶಂ. ೨-೦). [ಪೆಡೆ + ಪರಲ್]

**ಪೆದ್ದಗೆಯ್** (ಕ್ರಿ). ಲಟ್ಟಿಸು (?) : ದೊಡ್ಡ ಉಳಿಕು ಬೆಲ್ಲ ಮಡ್ಡಿ ಜಾದ ಸಣ್ಣಗೆ ಸುರದ್ದ ಕಂಪಿನ ಮಿಶ್ರದದ್ದಿಮಂದುದುರಪಯದಿ ನಿಧ್ದಗಲ್ಲಿಂದಲೀರಂಗುಲದ ಚೌಕದಿಂ ಪೆದ್ದಗೆಯಿದು ಸ್ಥೂಲ್ಯದಿ (ಅಂಚಪು. ೬-೦೩). [ ? + ಕೆಯ್₁]

**ಪೆಣ್, ಪೆಣ್ಣು, ಹೆಣ್, ಹೆಣ್ಣು** (ನಾ). ೧. ಹೆಂಗಸು ; ಸ್ತ್ರೀ : "ಪೆಣ್ಗಳ್ ಜೋಸೆಯರಪ್ಪರ್" (ಕರ್ಣಾಶಿ. ೯); ಶೀತಕ್ಕಾಜದಲ್ಕಿ ಕೊಟ್ಟಿರ್ದ ಧರಾತಳಮೆಂಬ ಪೆಣ್ಣ ಪೊಸ ಕಂಚುಳಿಕೆಯ ಸೀಮರ್ಮೂರ್ತಿನಂದಮಾದುವು ಪನಿಗಳ್ (ಕಾವ್ಯಸಾ. ೬೯೯ ಹೊದ್ರ೪); ಪರಮಜಿನೇಂದ್ರವಾಣಿಯ ಸರಸ್ವತಿ ಬೇಱದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು (ಅಂಶು. ೦-೯) ; ಅವನ ಚಿಲ್ಲಿಕೆ ಗಂಡು ಪೆಣ್ಗಳ ಕಂಗಳ ಸೆಱೆವಿಡಿದಿಹುದು (ಶಠಕ. ೦-೫೦). ೨. ಮಗಳು ; ಪುತ್ರಿ : "ಪೆಣ್ ದುಹಿತೃ ನಂದನೆ ಪುತ್ರಿ ತನೂಜೆ" (ಪದ್ಯಕೋ. ೫೯-೦೭); ಬುಧನೆ ಮತ್ತಂ ನೋಡೆ ಕಾಂತಾದ್ವಿದೇಹನವಾಂಶೋಪಗತ ಗ್ರಹೋದಯಮುಮುಂ ಪೆಣ್ಣೊಂದರೆಟ್ಟಂಡುಗಳ್ (ಜಾತಕ. ೩-೦೯); ಬೆಲೆವೆಣ್ ಪೆಣ್ಣಂ ಪೆತ್ತಂತಿರೆ (ಧರ್ಮಾಶ್ಮು. ೦-೦೨೭). **ಪೆಣ್ಣು** : ೧. ಪೆಣ್ಣಂಗಂ ಪೊನ್ನಿಂಗಂ ಮಣ್ಣಿಂಗಂ ಕಾಂಕ್ಷೆಯಿಂದಮೊಱಗದೆ (ಧರ್ಮಾಶ್ಮು. ೬-೯೯); ಕಂಡುದಿಲ್ಲವು ಪೆಣ್ಣಿಗೆ ಪೆಣ್ಣುಮನ ಮರುಳ್ಗೊಂಡಿದೆ ಕೇಳಾಯತಾಕ್ಷಿ (ಶೋಚಶ. ೨೬-೨೬); ಪೆಣ್ಣಿಲ್ಲವೆ ತಮ್ಮನೆಲ್ಲ ಪಡೆದ ತಾಯಿ . . . ಪೆಣ್ಣು ಪೆಣ್ಣಿಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು (ಹದಿ. ೫-೭). **ಹೆಣ್** : ೧. ಹೆಣ್ಗಳ ಕಣ್ಣನೀಡಿಗೆ ಗುಜಿಯಾದೊಡೆ (ಕಂಸಿ. ೯-೦೩೫). **ಹೆಣ್ಣು** : ೧. ಮೊಲೆ ಮುಡಿ ಬಂದರೆ ಹೆಣ್ಣೆಂಬರು ಗಡ್ಡ ಮೀಸೆ ಬಂದರೆ ಗಂಡೆಂಬರು ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ (ದೇವಾಶ. ೬೫-೦೪೬); ಹೆಣ್ಣಿನಿಂದಲೆ ಇಹವು ಹೆಣ್ಣಿನಿಂದಲೆ ಪರವು (ಸರ್ವಜ್ಞ. ೦೬೪೫); ಹೆಣ್ಣಿನಿಂದ ಏನಾಗುವುದೋ ಯಾರು ಬಲ್ಲರು ? (ಆರ್ಯಶ. ೯೯). ೨. ಹೆಣ್ಣ ಕುಡುವರಲ್ಲದೆ ಕೂಟಗಾದವರುಂಟೆ (ಕೊನ್ನಸಂ. ೨೨೬-೨೬). ೩. ಹೆಂಡತಿ ; ಪತ್ನಿ : ಹೆಣ್ಣ ಬಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು (ಕುಹಾರೀ. ಬಿ. ೯೯-೦೦೭). ೪. ಮದುಮಗಳು ; ವಧು : ಗಂಡಿನ ಕಡೆಯ ಮೆರವಣಿಗೆ ಇದ್ದಂತೆಯೇ ಇರುತ್ತದೆ ಹೆಣ್ಣಿನ ಕಡೆಯ ಎದುರುಗೊಳ್ಳಲು ಬಂದವರ ಮೆರವಣಿಗೆ (ನನ್ನೂರು. ೬೫); ಹೆಣ್ಣಿನ ಕಡೆಯುವರೂ ಕನ್ಯೆಯರೂ ಹಿಂದಿನ ರಾತ್ರಿಯೇ ಬಂದು ಅರಮನೆಯ ಒಂದು ಭಾಗದಲ್ಲಿ ಬಿಡಾರ ಮಾಡಿದ್ದರು (ಶಾಂಕಲಾ. ೦೦೯).

**ಪೆಂಗಳ್, ಹೆಂಗಳ್, ಹೆಂಗಳು** (ಬಹುವ) : ಆ ವಸ್ತ್ರಿಯಂ ಕಾದ ಪೆಂಗಳಿಗೆ ಪಾತಿವ್ರತ್ಯಪಳಿದುದು (ಶೀಕೃಶು. ೩-೨೦-೨೯); ಪೆಂಗಳ ಸೂಱೆ ವಿಶೇಷಮಾಯ್ತು (ಹಶ್ಮಾರ. ೩-೯); ಕೊಳೆಯ ಹತ್ತಿ ಹೆಂಗಳಿಕ್ಕೂಗಡೆ ಹೇಱಾಳವ ಮಾಡುತ್ತವಿರಲು (ಪ್ಯಕಂ. ೦೯೨೯, ೦೫-೯ : 12ನೆಯ ಶತ) ; ಲೋಕೇಶ್ವರನೆಂಬ ಪಾಪಿಷ್ಠ ಹೆಂಗಳನೇಕೆ ನಿರ್ಮಿತವ ಮಾಡಿದನೋ ಸಾಕೀ ಜನ್ಮವಿದೇಕೆಂದಾಕೆಯೊಳಾಕೆ ಪೇಳಿದಳು ದುಕ್ಖವನು (ಶೋಚಶ. ೦೦-೫೦); ಚೆಲುವಿನ ಹೆಂಗಳೊ ಒಲವಿನ ಕಂಗಳೊ (ಅನೀ. ೫೦-೦೯). **ಪೆಂಡಲ್, ಪೆಂಡಿರು, ಪೆಂಡಿರ್, ಪೆಂಡಿರ್ಕಳ್, ಹೆಂಡರು, ಹೆಂಡಿರ್, ಹೆಂಡಿರು** (ಬಹುವ) : ಪನ್ನಿಬ್ಬರ್ ಬಾ[ದೇ]ರರುಮಂ ಪೆ[ಣ್ದಿ][ರಂ] ಕವಿಲೆಯುಮಂ ಅಱದ ಮಹಾಪಾತಕಂ (ಕ್ರಾಇ. XI-i, ೯೦-೦೭ ; 965); ಲೋಕದೊಳ್ಪೋಡದ ಪೆಂಡರಿಲ್ಲ ಆಡು ಮುಟ್ಟದ ಗಿಡುವಿಲ್ಲ (ಧರ್ಮಾಶ್ಮು. ೩-೯೨); ತೆಱಗೆ ನೆಱೆವೂರಿಲ್ಲದಾಗಳ್ಪೆಣ್ದಿರು ಮಕ್ಕಳುಂ (ಎಕ. III, ಪಂಜಕ. ೦೬೯-೫ ; 915 ?); ಕಲಿಗಳ್ನನೆಂಬೋ × × × [ಱ]ಯ ಬಾಱನೆನ್ದು ಪರಿಚ್ಛೇದಿಸಿ ಪೆಣ್ದಿರನುಱದೊಡೆ ಪುಟ್ಟಿದೊ × × × ರದೆ (ಕ್ರಾಇ. XI-i, ೨೦-೮; 893); ಪೆಂಡಿರ್ ಪೆಂಡಿರೊಳದೆಂತು ಬೆರಸುವರಬಲೇ (ಶಂಕಶಾ. ೦-೭೬) ; ಸಮಸ್ತಶಾಸ್ತ್ರಂಗಳೊಳಂ ಪರಿಣತನೆನಿಸಿದನಂ ಪೆಂಡಿರ ಚಿತ್ರಮನಿಂತುಟೆಂದು ನಿಟ್ಟಿಸಲಾಱಂ (ಶಸುಶ. ೯-೦೦೦); ಪತಿಹಿತಕಾರ್ಯೆಯುಂ . . . ಕಳತ್ರಮೆಂದತಿಶಯದಿಂದೆ ಪಾಲಿಸುವುದಲ್ಲದ ಪೆಂಡಿರನಿಕ್ಕು ಕಿಚ್ಚಿ ಸೊಳ್ (ದಶಕು. ೧೨-೦೦೭) ; ಪೆಂಡವಾಸದೊಳ್ಪೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತಂ (ಪಶ್ಮಾರಾ. ೮೯-೦) ; ಪಿಂಡ ಬಲಿದವು ಬಳಿಕ ಮೂವರು ಹೆಂಡರಿಗೆ (ಕೊರಶಾ. ೦-೯-೦), ಹೆಂಡರ ಕೌತುಕವ ಗಂಡರು ಬಲ್ಲರೇ (ಸರ್ವಜ್ಞ. ೦೭೬೮); ಮಕ್ಕಳೆಲ್ಲ ಮನೆವಾರ್ತೆ ಮಾಡಿದರೆ ಅಪ್ಪಗೆ ಯಾಕೆ ಇಬ್ಬರು ಹೆಂಡರು ? (ಗಾದೆ); ಗಂಡ ಹೆಂಡಿರನತ್ಯುಗ್ರದಿ ಶಿಕ್ಷಿಸಲ್ . . . ಹರ ಕೊಲ್ಲಲ್ ಪರ ಕಾಯ್ವನೇ (ಶೀಚಂಚ. ೨೯); ರಿಣ ತಪ್ಪಿದ ಹೆಂಡಿರಲ್ಲಿ . . . ಜೀವವಿಲ್ಲದ ದೇಹದಲ್ಲಿ ಫಲವೇನೊ (ಶಸಶ. ೫೬೯); ಸೂಱೆವೋಯಿತು ಸುರಪತಿಯ ಭಂಡಾರ ಹೆಂಡಿರುಸಹಿತ ನಿರ್ಜರನಾರಿಯರು ತೊತ್ತಾದರು (ಕುಮ್ಮಾ. ೬-೦೦); ಕಂಡರೆಡೆಯಲಿ ಖರನ ನಗರದ ಹೆಂಡಿರುಗಳಕ್ಕಿಗಳ . . . ಬಸುಱ ಹೊಯ್ಲುಗಳ (ಕೊರಶಾ. ೩-೬-೨); ಹೆಂಡಿರುಗಳ ಬಿಟ್ಟೋಡಿದವರ . . . ಅಂಡಲೆಗಳನೇವೇಳ್ವೆ (ಕಂಪಶ. ೦೦-೫೨). **ಪೆಂಡಿರಾಳಿಗ** = (ಆಲಂ) ಬರಿಯ ಮಾತಿನ ಜಗಳ :

ಕಾಳಿಗಪುನುಟಾದು ಪೆಂಡಿಗರ್ಗಳಿಗವುಂ ಮಾಟ್ಪೆ (ಹಂಚಾಹೂ. ೦೩-೦೩೯). ಪೆಣ್ಣಲೆರನ್ನೆ = ಹೆಂಗಸರಲ್ಲಿ ತಲೆಮಾಣಿಯಂತಿರುವವಳು ; ಅತ್ಯಂತ ಶ್ರೇಷ್ಠಳಾದವಳು : ಚಿತ್ತುಧಾರುಚಿಜ್ಞಂ ಗರ್ಭದೋಳಿರ್ಪನಾಗಿ ಪೆಣ್ಣಲೆರನ್ನೆಗೆ ಅರರೆ ವಸ್ತುಗಳ ರುಚಿಯರುಚಿಯಾದುವು (ಶಬ್ದಾ. ೨-೯೦); ೯ಪ್ಪುರವ ಚೆನ್ನಾಗಿ ಹದ ಮಾಡಿ ಲೇಪಿಸಿ ಪೆಣ್ಣಲೆರನ್ನೆಗೆ ತಳವನಿಕ್ಕಿದರು (ಮೋಹತ. ೩೦-೫). **ಪೆಣ್ಮಂಡೆಮಾಣಿಕ** = ಪೆಣ್ಣಲೆರನ್ನೆ : ಪೆಣ್ಮಂಡೆ ಮಾಣಿಕ ಹರಿಪಧೂಟಿಯಲಿ ಮುಗುಳಂಬನೊಡಲ ಬೇಡಿದಳು (ಮೋಹತ. ೦೦-೯); ಪೆಣ್ಮಂಡೆಮಾಣಿಕವಹ ಪಟ್ಟದರಸಿ . . . ಪೂಗೋಲನ ಕಾಣಿಸಿದಳು ಕಾಂತನೆಡೆಗೆ (ಮೋಹತ. ೨೨-೦೬). **ಪೆಣ್ಮಾಡು, ಹೆಣ್ಮಾಡು**=೧. ಹೆಣ್ಣು ರೂಪಾಗಿ ಮಾಡು; ಸ್ತ್ರೀಯನ್ನು ಸೃಷ್ಟಿಸು : ವಿಶುದ್ಧಮಪ್ಪ ಪಳಿಕಿಂ ಪೆಣ್ಮಾಡಿದಂತೊಪ್ಪಿದಳ್ (ಅಂಕು. ೬-೨೩); ಕಾಮದೇವನಯ್ದುಲರಂಬಿನ ಶಕ್ತಿಗಳುಮನೊಂದುಮಾಡಿ ಲೋಕಮೆಲ್ಲಮುಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಂ (ಶಂಶಭಾ. ೯-೬೫ ವ). ೨. ಹೇಡಿಯನ್ನಾಗಿ ಮಾಡು ; ಓಂಜರಿಯುವಂತೆ ಮಾಡು : ನಿಜಾರಿಬಳಮಂ ಪೆಣ್ಮಾಡಿ ಪೆಮ್ಮಾಡಿ ತತ್ಸತುಪುತ್ರಂ ನೆಗಳ್ದಂ (ಕಶಾ. ೬೯ ೦೨-೮ ; 1170) ; ಉದ್ಧತಾರಿಬಳಮಂ ಪೆಣ್ಮಾಡಿ ಪೆಮ್ಮಾಡಿ ತಾಂ ನೆಗರ್ದ್ದಂ (ಎಇ. XV. ೩೦೯-೦೨ ; 1172). **ಹೆಂಗಳೆ**=ಹೆಂಗಸು; ಸ್ತ್ರೀ : ಹೆಂಗಳೆಯೊಬ್ಬಳು ಅಳುತ್ತ ನಿಂತಿದ್ದಳು (ಶ್ರೀರಾಕ. ೬); ಹೆಂಗಳೆಯಾದ ನನಗೆ ಹೇಗೆ ತಿಳಿಯಬೇಕು ? (ಇಂದು. ೪೫). **ಹೆಂಡಹೆಂಡಿರು** (ದ್ವಿರುಕ್ತಿ) : ಗಂಡಗಂಡರನೆಲ್ಲ ಹೆಂಡಹೆಂಡಿರಾಗಿ ಆಳುವ ಗರುವನ ಕಂಡೆ ನಾನು (ಬಸವಾದೇ. ಬ. ೩೨-೬೮). **ಹೆಣ್ಣಾಗು** = ೧. ಸ್ತ್ರೀಯಾಗು ; ಹೆಂಗಸಾಗು : ಮತ್ತೊಮ್ಮೆಯಾನು ಹೆಣ್ಣಪ್ಪೆ ನಯ್ಯಾ . . . ನಿಮ್ಮ ಶರಣರಿಗೆ ವಧುವಪ್ಪೆ (ಬಸವ. ೬೦೩); ಹೆಣ್ಣಾದೊಡಂ ಗಂಡಾದೊಡಂ . . . ಸರ್ಪನೆಂಬವಾದಿಯಾದುವರ್ಕೆ ಪುಲ್ಲಿಂಗದಂತೆ ರೂಪು ಪತ್ತುಗುಂ (ಶಮದ. ೮೨೦ (ಅ) ಪ್ರಯೋ) ; ಹೆಣ್ಣಾಗಿ ಜಾಣಸದ ಪವಣಜೆ ದುದಿಲ್ಲಲಾ (ಕೃಬಂಭಾ. ೨-೬೧). ೨. ಮೈನೆರೆ : ಋತುಮತಿಯಾಗು : ಅವಳು ಹೆಣ್ಣಾದ ಮೇಲೆ ಅವಳ ಸುಂದರತೆ ಮನ್ಮಥನೊಡನೆ ಪ್ರತಿ ಸ್ಪರ್ಧಿಸುವಂತಿತ್ತು (ಶಿರಾಕು. ೦೦೫); ಮಣ್ಣಯ್ಯನರಲಿಸುತ ಹೆಣ್ಣಾದಳವಳು (ಕಾರಿಂಬಿ. ೩೩-೩೦). **ಹೆಣ್ಣಾಪುಸಕಲಿ** = ಹೇಡಿ ; ಅಂಜುಬುರುಕ : ನೀನು ಯಾವಾಗಲೂ ಹೆಣ್ಣಾಪುಸಕಲಿ ಕಳ್ಳಿಕಾಯಿ ಹಾಗೆ . . . ಅಳ್ತೀಯ ! (ಸ್ವಾಭಿಸ್ಮೀ. ೧೬೨). **ಹೆಣ್ಣಾಪುಸಕಿ** = ಹೆಣ್ಣಾಪುಸಕಲಿ : ಹೆಣ್ಣಾಪುಸಕೀ ಕೈಲಾಗದವನೇ! (ನರಧಾ. I. ೫೨೫). **ಹೆಣ್ಣುದಿಕ್ಕು** = ಹೆಂಗಸಿನ ನೆರವು ; ಸಹಾಯ : ಅವನ ತಾಯಿ ಸತ್ತುಹೋದಳು. ಆಗ ಅವನಿಗೆ ಮನೆಯಲ್ಲಿ ಹೆಣ್ಣುದಿಕ್ಕಿನ ಅವಶ್ಯಕತೆ ಗೊತ್ತಾಯಿತು (ಬಂಕಿಸು. ೦೯೦). **ಹೆಣ್ಣುಹುಡುಗಿ**=ಬಾಲಿಕೆ : ಗರಡಿಮನೆಗೆ ಬೆಂಕಿ ಹಾಕಿದ್ದು ಯಾರೋ ಹೆಣ್ಣುಹುಡುಗೀರ ಕೆಲಸ (ರಾಜೇಂದ್ರ. ೨೬೬). **ಹೆಣ್ಣುಹೆಂಗಸು, ಹೆಣ್ಣುಹೆಂಗುಸು** = ಅಬಲೆ ; ಆಶ್ರಯರಹಿತಳು : ನಾನು ಒಬ್ಬಳೇ ಹೆಣ್ಣುಹೆಂಗಸು, ಸಣ್ಣಮಕ್ಕಳನ್ನು ಕಟ್ಟಿಕೊಂಡಿರುವುದು ಹ್ಯಾಗೆ ? (ಕಂಗಾಳ್ಳ. ೬); ಹೆಣ್ಣುಹೆಂಗುಸು ನಾನು. ಈ ಕಾರ್ಯದಲ್ಲಿ ಪ್ರವರ್ತಿಸುವುದೆಂದರೇನು ? (ಅರ್ಪಣೆ. ೪೪).

[ದೇ. || ತವಿ. ಮಲ. ಕೋತ. ಪೆಣ್ ; ತುಳು. ಪೊಣ್ಣು ; ಕೊಡ. ಪೊಂಗು, ಪೊಣ್ಣ್]

**ಪೆಣ, ಹೆಣ** (ನಾ). ಜೀವ ಹೋದ ಶರೀರ ; ಶವ : "ಪ್ರೇತಃ, ಪರೇತಃ, ಕುಣಪಃ, ಶವಃ— ಈ ೪ ಪೆ(ಹೆ)ಣಂ" (ಕಬಾಡು. ೦೦೯-೬); ಬೆದೆಕಾಜಿರ್ದೆಯಂತೆ ಬೇಯುತಿರ್ದ ಪೆಣಂಗಳಿಂ . . . ರಣದೇವತೆಯ ರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೫೨೯ ಶೂದ್ರಕ) ; ತುಜು ಪರಿವಾಗಳೆಮ್ಮ ಪೆಣನಂ ತುಟಾದುಂ ಪರಿಗುಂ ದಲ್ (ಶಂಶಭಾ. ೬-೯೫) ; ಪೆಣದ ಕೈಗಳೆ ಪುಟ್ಟುಗಳಾಗೆ . . . ನೆತ್ತರ ತೊಜೆಯುಂ ಮರುಳ್ಗೊಟಿಸಿ ಪಾಯಿಸುತಿರ್ದುವು ಯುದ್ಧಭೂಮಿಯೊಳ್ (ಹಂಚಾಹೂ. ೦೩-೬೬). **ಹೆಣ** : ಅಡವಿಯೊಳಬಿುಹವುಂ ಹೆಣಕ್ಕೆ ಲೇಪನಂಗೆಯ್ವುದುಂ . . . ಇವಜೋಪಾದಿ ಎಂಬ ನೀತಿಕಾಜಿನ ಮಾತದೇಕೆ ತಪ್ಪುಗುಂ (ಶಂಶಶಂ. ೦೩೬-೮): ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯಾ (ಬಸವ. ೦೫೯) ; ಅರ್ಜುನನಂಬಿನಬುಬೆಗೆ ಹೆಣನ ದಾವಣಿ ಹಾಸಿದವು (ಕುಮಾರರ್ಕು. ೦೦-೫) ; ಊರು ಉಪಕಾರ ಅರಿಯದು, ಹೆಣ ಶೃಂಗಾರವರಿಯದು (ಗಾದೆ).

**ಹೆಣ ಎತ್ತಿಸಿ ಬಿಡು** = ಕೊಲ್ಲು ; ಸಾಯಿಸು : ಮೊದಲು ಹಣ ಇಲ್ಲಿ ಬಡೀರಿ, ಇಲ್ಲದಿದ್ರೆ ನಿಮ್ಮ ಹೆಣ ಎತ್ತಿಸಿ ಬಿಡ್ತೀನಿ ಈಗ್ಲೇ ! (ಹೇಹುಳೂ. ೩೯). **ಹೆಣ ಎತ್ತು**=ಸಾಯು ; ಸತ್ತುಹೋಗು : ಬರೆದವನು ಎಂತಹ ಹೊಲಸು ಮಾತುಗಳನ್ನು ಬರೆದಿದ್ದಾನೆ ನೋಡು. ಇವನ ಹೆಣಾ ಎತ್ಲಿ (ಕಂಗಟೋ. ೦೬೬). **ಹೆಣಚಾಕರಿ** = ಹೆಣವಾಗುವಂಥ ಕೆಲಸ ; ಅವಿರತವಾದ ದುಡಿಮೆ : ಕಂಪನಿ ಕೆಲಸ ಇದ್ದೇ ಇರುತ್ತೆ ಹೆಣಚಾಕರಿ (ಕುಣ ೩೯). **ಹೆಣದತ್ತ** = ಹೆಣಕ್ಕಿಂತಲೂ ಕಡೆಯಾಗಿರುವವನು ; ನಿಷ್ಪ್ರಯೋಜಕ : ಹೆಣದತ್ತನ ಹಾಗೆ ಈ ರೀತಿ ಕೂತಿದ್ದರೆ ಯಾವ ಕೆಲಸ ತಾನೇ ಆದೀತು ? (ರೂಢಿ). **ಹೆಣನುಂಡು ಹೋಗು**="ಹಾಳಾಗು" (ಅಬಹಂ. ೯೦೮೬) : ಹರಿದು ಹತ್ತಿ ಮುತ್ತಿ ಹಿಡಿದಹೆನೆಂದು ಜಾಜು ಉರುಳಿ ಬಿದ್ದರು ಅನಂತರು ಹಿಡಿದವರೆಲ್ಲ ಹೆಣನುಂಡು ಹೋದರು (ಅಬಹಂ. ೦೦೫-೪೭೬). **ಹೆಣ ಬಿದ್ದು ಹೋಗು**=ಅತ್ಯಂತ ಕಷ್ಟಕ್ಕೆ ಒಳಗಾಗು; ವಿಪರೀತವಾದ ತೊಂದರೆಗೆ ಈಡಾಗು : ಸರಳಬಡ್ಡಿ, ಚಕ್ರಬಡ್ಡಿಗಳನ್ನು ತೆರುವುದರಲ್ಲೇ ಅವರ ಹೆಣ ಬಿದ್ದು ಹೋಗಿತ್ತು (ಹೇಹುಳೂ. ೩೯). **ಹೆಣ ಬೀಳು** = ೧. ಸಾಯು ; ಸತ್ತುಹೋಗಂ. ೨. ಹಾಳಾಗು; ನಾಶವಾಗು : ಕೇಳಿದಿಯಾ, ಸ್ವಾಮಿಜಿ ! ನಮ್ಮ ಹೆಣ ಬಿದ್ದ ಸಮಾಜದ ಈ ವಿಷೋದ್ಧಾರಗಳನ್ನು ! (ಹೊಸಂಗಾ. ೦೦). ೩. ಅಡಗು ; ಇಲ್ಲವಾಗು : ನಿದ್ದೆ ಕಟ್ಟಿ ಹಾಕಿದೆ ; ಸದ್ದು ಹೆಣ ಬಿದ್ದಿದೆ ! (ಅಂಕೇ. ೨-೬). **ಹೆಣಭಾರ**=ಹೆಣದಷ್ಟು ಭಾರ ; ಬಹಳವಾದ ಹೊರೆ : ಬೆನ್ನಿನಲಿ ಹೆಣಭಾರವಿಟ್ಟು ಈಗ ನಮ್ಮ ಹೆಗಲಿಗೇ ಕೈಹಾಕಿ ನಡೆದಿರುವೆಯಲ್ಲ (ಶಿಂಶು. ೨೬-೦೦). **ಹೆಣವಾಗು** = ಬಹಳವಾಗಿ ದಣಿ ; ಬಳಲು : ಬೆಳಗ್ಗೆಯಿಂದ ಒಂದೇ ಸಮನೆ ಕೆಲಸ ಮಾಡಿ ಹೆಣವಾಗಿದ್ದೀನಿ (ರೂಢಿ). [ದೇ.॥ ತವಿ. ಮಲ. ಪಿಣ ; ತುಳು. ಪುಣ ; ತೆಲು. ಪೀನಿಗ, ಪೀನುಗ, ಪೀನುಗು, ಪೀನ್ಗು ; ಗದಬ. ಪೀನಿಗೆ ; ಕುವಿ. ಪೀನುಗು]

**ಪೆಣಕಿ** 'ಪೆಳಕೆ' ನೋ.

**ಪೆಣಕೆ**[1], **ಹೆಣಕೆ** (ನಾ). ೧. ಹೆಣಿಗೆ; ಜೋಡಣೆ : ಎರಡುಗಯ್ಯ ನಾಳ್ಕೆರಲ ನಡನಡುವೆ ಪೆಣಕೆಯೊಳಿಟ್ಟು ಹಿಡಕಿತ್ರಿಲಿರದಿಟ್ಟು ತೂನೆ ಬಾರದೊಡೆ ಶುಭವವು ಹಿರಿದು ಬರಲು ತಿಂಗಳಿಗೆ ಮರಣಂ (ಜೀಕೃತ. ೯-೨೯-೨೯). **ಹೆಣಿಕೆ** : ೨. ಉಲ್ಲನ್ನು, ಬಣ್ಣದ ದಾರ ಮುಂತಾದುವುಗಳಿಂದ ಹೆಣೆಯುವುದು: ತಾಯಿಯವರು ಹೆಣಿಕೆಯ ಕೆಲಸವನ್ನು ಮಾಡುತ್ತಿದ್ದರು (ಮೇಜಿಮು. ೨೦೦) ; ನಿನಗೆ ಮೊದಲಿನಿಂದಲೂ ಹೊಲಿಗೆ ಹೆಣಿಕೆ ಅಂದರೆ ಪ್ರೀತಿ ತಾನೆ ? (ಕುಂಕುಮ. ೦೨). ೩. ಹೆಣೆದುದು ; ಅದನ್ನು ಹೆಣೆದ ಹೆಣಿಕೆ, ಅದರಲ್ಲಿ ತೆಗೆದ ಚಿತ್ರ ಅವಸವಾಗಿವೆ (ಕಶಾ. ೦೦) ; ಹೂಬಿಸಿಲ ಕರವಸ್ತ್ರದಲಿ ತರತರದ ಹೆಣಿಕೆಯ ನಕ್ಷೆಯು (ಶಿಂಮಮು. ೦೦೦೬)

[ಪೆಣ್[1] + -ಕೆ./ತವಿ. ಪಿಣಕ್ಕ, ಪಿಣಕ್ಕು]

**ಪೆಣಕ್ಕೆ** 'ಪೆಳಕೆ' ನೋ.

**ಪೆಣಗಾಟ, ಹೆಣಗಾಟ** (ನಾ). ೧. ಕಷ್ಟ ; ತೊಂದರೆ ; ತಾಪತ್ರಯ : ಈ ಪೆಣಗಾಟದಿನ್ ಎನಾನುಮಾನ್ ಬಿಡುಗಡೆಯನಜಿಸು (ಬಿದ್ಧಕ್ರ. ೦೫-೩೦೭). **ಹೆಣಗಾಟ** : ೧. ಜೀವನ ಅಂದ ಮೇಲೆ ಹೆಣಗಾಟ ಇದ್ದದ್ದೆ (ರೂಢಿ). ೨. ಪ್ರಯತ್ನ ; ಹೋರಾಟ : ಅವರ ಬರವಣಿಗೆ ನಿರ್ದುಷ್ಟವಾಗಿ

ರೋದ್ಧತ ಕಾಡವಸ್ಯೆನ್ಯವಪ್ಪ ಹೆರ್ಗ್ಗಡಲನಳುರ್ಕೆಯಿನ್ದೆ ಭುಜ ಮನ್ಬರದಿಂ ಕಡಿದು (ಎಕ. XI. ಚಾಕಚಾ. ೨೫-೯೨; 1224).
[ಪೆರ್ (< ಪಿರಿದು₁) + ಕಡಲ್₃]

**ಪೆರ್ಗಡಹು** (ನಾ). ವಿಸ್ತಾರವಾದ ದಾಟುವ ಸ್ಥಳ ; ಹಾಯ್ಗಡ : ಎರಡು ಬೆಟ್ಟದ ನಡುವಣ ಪೆರ್ಗ್ಗಡಹು ಅಂತೆ ಬರೆ ಬೆಟ್ಟದ ಮೇಗಣ ಕೊಳವಾವಿ (ಪ್ರೌಢ. ೧೯೨೦, ೧೧-೧೮೯; 967).
[ಪೆರ್ (< ಪಿರಿದು₁) + ಕಡಹು₂]

**ಪೆರ್ಗಡಿತ** (ನಾ). ಬರೆಯುವುದಕ್ಕಾಗಿ ಬಳಸುವ, ಕಪ್ಪುಲೇಪನವುಳ್ಳ ಬಟ್ಟೆಯ ದೊಡ್ಡ ಪುಸ್ತಕ,-ಕಡಿತ : ಧೀರರ್ ಶಂಕರಶಾಬ್ದಿಗಳ್ ಪೊಣರೆ ತತ್ಸಂಘಟ್ಟದಿಂ ಭೂತಳಂ ನೀರೊಳ್ ಪಾಸಿದದೊಂದು ಪೆರ್ಗಡಿತ ದಂತಳ್ಕಾಡಲ್ (ಜಗ. ೦೯-೨೬). [ಪೆರ್ (< ಪಿರಿದು₁) + ಕಡಿತ₁]

**ಪೆರ್ಗಡಿತಿ, ಹೆಗ್ಗಡತಿ, ಹೆಗ್ಗಡಿತಿ, ಹೆರ್ಗಡಿತಿ** (ನಾ). ೧. ಅರಮನೆ ಮುಂತಾದ ಕಡೆಗಳಲ್ಲಿ ಒಳಾಡಳಿತವನ್ನು ನೋಡಿಕೊಳ್ಳುವವಳು : ಭಂಡಾರವತಿಯೆಂಬ ಪೆರ್ಗಡ[ಡಿ]ತಿಗೆ ಪೆಣ್ಣ ತಂಡ ನಂಬುಗೆವಂತರ ಸೆಯೆ . . . ಭೂಷಣಾದ ಕರಂಡಗೆಗೊಟ್ಟು ಕಳುಹಿದ (ಕಠಕ. ೩೬-೦೨೬). **ಹೆಗ್ಗಡತಿ:** ೧. ಹೆಗ್ಗಡತಿಯನೊರ್ವಳಕಿವೇಗದಿಂದ ಕರೆದು (ಕಂಠಾಹಾಂ. ೩೫-೬೦); ಗಂಧವ ಸಂಗೊಳಿಸಿ ನೀವೆಂದು ಹೆಗ್ಗಡ[ಹಾಹಾಂ.ಡಿ]ತಿಯರೊರೆವರಲ್ಲಿ (ಶುಬೇಪು. ೨-೦೯); ವಿಮಾನ ತಂದವಗೆ ಬೇಡಿದ ವಸ್ತುಗಳ ಕೊಟ್ಟು ಭೂನಾಥ ತಾ ತ್ವರಿಯದಲಿ ತಾನೊರ್ವ ಹೆಗ್ಗಡತಿಯ ಕೈಯ ಕಳುಹಿದ ಬೋನದ ಮನೆಗೀವುದೆನುತ (ಕೋಪಕ. ೦೦-೩೬). ೨. ಗ್ರಾಮದ ಮುಖ್ಯಾಧಿಕಾರಿಣಿ, -ನಾಯಕಿ : (ಎಕಪ್ಪ. I, ೦). ೩. ಗ್ರಾಮದ ಮುಖ್ಯಾಧಿಕಾರಿಯ ಹೆಂಡತಿ : ಆತನ ಹೆಗ್ಗಡತಿ ಮಾಚೌವೆ (ಎಕ. VI. ಕಳ್ಳಕು. ೬೦-೫; 1172); ಹೆಗ್ಗಡತಿಗೆ ಪ್ರಸಾದ ಕೊಡಿ (ದೇವಹಂ. ೦೯೦). ೪. ದಿಟ್ಟೆ ; ಗಂಡುಬೀರಿ ; ಉದ್ಧಟೆ : ಲೋಕದಲ್ಲಿ ಗಂಡ ಬಡವನಾದರೆ ಹೆಂಡತಿ ಹೆಗ್ಗಡತಿಯಾಗುವಳು (ಅರಚಾ. ೦-೨೦೦). **ಹೆಗ್ಗಡಿತಿ** : ೧. ಕೆಲಬರ ಕಳುಹಿ ತಿಳಿವೆನೆನುತ್ತ ಹೆಗ್ಗಡಿತಿಯರನಟ್ಟಿದರೆ (ಪ್ರಕುಂ. ೦೦-೬). ೨. ಚಿಕ್ಕ × × ಹೆಗ್ಗಡಿತಿ (ಎಕ. II. ೩೫೨-೪೦; ಸು. 1185); ಅವನೂರಿಗೆ ಹೆಗ್ಗಡಿತಿಯಾಗಿ ಹೋಗುವ ವಿಚಾರವನ್ನು ಯಾರಾದರೂ ಎತ್ತಿದರೆಂದರೆ ಮಾತ್ರ ಆಕೆ ಹುಚ್ಚಿಯಂತೆ ವಿಚಿತ್ರರೀತಿಯಿಂದ ವರ್ತಿಸುತ್ತಿದ್ದಳಂತೆ (ಚಾಕೂಕು. ೬೨೦). ೩. ಗಂಡು ಹೆತ್ತರೆ ಗೌಡನ ಹೆಸರು, ಹೆಣ್ಣು ಹೆತ್ತರೆ ಹೆಗ್ಗಡಿತಿಯ ಹೆಸರು (ಗಾದೆ). **ಹೆರ್ಗಡಿತಿ :** ೨. ಶ್ರೀಮತು ಹಿರಿಯ ಹೆರ್ಗ್ಗಡಿತಿಯಾಚಲದೇವಿಯುನ್ನುಯಪ್ಪೆಂತೆಂದೊಡೆ (ಎಕ. II. ೩೨೬-೪೩ : 1181) ; ಮಲಯಾಳಿತಿಯುಂ, ಹೆರ್ಗಡಿತಿಯುಂ, (ಕಾಕಕ್ಕ. ೦೫೮).
[ಪೆರ್ಗಡೆ₁ + — ಇತ್ತಿ₁ (< — ಇತ್ತಿ)]

**ಪೆರ್ಗಡೆ₁, ಪೆಗ್ಗಡೆ, ಪೆರ್ಗಡೆ, ವೆಗ್ಗಡೆ, ವೆರ್ಗಡೆ, ಹೆಗಡಿ, ಹೆಗಡೆ, ಹೆಗೆಡೆ, ಹೆಗ್ಗಡಿ, ಹೆಗ್ಗಡೆ, ಹೆಗ್ಗೆಡೆ, ಹೆಗ್ಡೆ, ಹೆರ್ಗಡೆ** (ನಾ). ೧. ಗ್ರಾಮದ ಮುಖ್ಯಾಧಿಕಾರಿ,- ಒಡೆಯ : ದಾಮಡಿಗಟಂ ಪೆರ್ಗ್ಗಡೆ (ಎಕ. IV. ಹುಣ್ಣ. ೯೩-೯ ; ಸು. 780) ; ದುಷ್ಟಮನ್ನೆಯಪ್ರಳಯಕಾಳಂ ಶ್ರೀಮತ್ಪೆರ್ಗ್ಗಡೆ ಮಾದಿ[ಮ]ಯ್ಯಂ (ಕೌಇ. XX. ೩೪-೬ ; 1034) ; ಬಲ್ಲಾಳ ಪೆರ್ಗಡೆ ಮಾಸಾಮಂತ ಮನ್ನೆಯ ರಾಯರ್ ಮುಂತಪ್ಪ ನಾಡೊಡೆಯರ್ . . . ಕೈಮುಗಿದು (ರಾಕಚಾಕ್ಕ. ೩೦-೦೩). ೨. ಅರಮನೆ ಮುಂತಾದ ಕಡೆಗಳಲ್ಲಿ ಒಳಾಡಳಿತವನ್ನು ನೋಡಿಕೊಳ್ಳುವವನು ; ಮನೆವಾರ್ತೆಯ ಮೇಲ್ವಿಚಾರಕ : ಮಂತ್ರಿಯುಂ ಪೆರ್ಗಡೆಯುಂ ಮೊದಲಾಗಿ ಪೊಟಲೊಳಗುಳ್ಳ ಜನಮೆಲ್ಲಮರ್ಚನೆಗಳಂ ಕೊಂಡು ಬಂದು (ಪಚ್ಚಾರಾ. ೬೩-೨೩) ; ಶಂತನು . . . ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟಿದೊಡೆ (ಪಂಪಭಾ. ೦-೬೦ ಪ) ; ರಾಣೀವಾಸದ ಪೆರ್ಗಡೆ ತನ್ನಿಜನಿಯೋಗಮಂ ಬಿನ್ನವಿಕುಂ (ಶಾಂತಿಪು. ೩-೬೦) ; ರಾಣಿವಾಸದ ಪೆರ್ಗಡೆಯಂತೆ (ಧರ್ಮಾಪ್ಪು. ೫-೦೩೦). ೩. ಮಂತ್ರಿ ; ಪ್ರಧಾನಿ : ಅರಸಂ ಸ್ತಬ್ಧಂ ಪೆರ್ಗಡೆ ಮರುಳಂ (ಮುದಿತ. ೦೦-೫೦) ; ಪಡಿಯಿಲ್ಲದ ಮನೆಯುಂ ಪೆರ್ಗಡೆಯಿಲ್ಲದ ರಾಜ್ಯಮುಂ . . . ಒಪ್ಪಲಾರವು ಜಗದೊಳ್ (ಧರ್ಮಾಪ್ಪು. ೬-೦೫೦) ; ಇಂತು ಷಡಂಗಬಲವುಂ ಅರಸು ಪೆರ್ಗಡೆ ಜನಪದ ದುರ್ಗ ಭಂಡಾರ ಮಿತ್ರರುಮೆಂಬಿವರುಂ ಷಡಂಗಬಲ ಸಹ ಚಕ್ರಿಗೆ ಸಪ್ತಾಂಗ ದುನಿಕ್ಕುಂ (ಆದಿಪ. ೬-೦೦). ೪. ಮುಖ್ಯಸ್ಥನಾದವನು ; ಉನ್ನತಾಧಿಕಾರಿ ; ಹಿರಿಯ : "ಪೆರ್ಗಡೆಯೆನಲ್ ಮುಖ್ಯನಕ್ಕುಂ" (ಶಬ್ದಕೈ. ೩೬) ; ಬಸಂತನಿವರ್ಕೆ ತಾನೆ ಪೆರ್ಗಡೆ ಗಡ (ಕಬ್ಬಿಗಕಾ. ೦೯೩) ; ಅತನು ಪುರಾಧಿಪಂ ತಳವಟಂ ಶಶಿ ಪೆರ್ಗಡೆ ಮಂದಮಾರುತಂ (ಕಪಕಾ. ೯-೬೦). ೫. "ರಾಯಭಾರಿ" (ಕಂಪಟೇ. ೩೩೫) : ಅಟ್ಟಿದ ನಿಮ್ಮ ಪೆರ್ಗಡೆ ಬರ್ದುಂಕಿದನೆಂಬುದನಿಂದ್ರಜಾಲಮಂ ತೊಟ್ಟನೆ ತೋಱು ಬಂದು ಬರ್ದುಕಾಡಿದಂ (ಪಂಪಭಾ. ೯-೮೯) ; ತನ್ನ ದೂತರ ಕೈಯೊಳ್ ಪಾಗುಡಮಂ ಕೊಟ್ಟು ಬೇಡಿಯಟ್ಟಿದೊಡೆ ಬಂದ ಪೆರ್ಗಡೆಗಳಂ ಜಡಿದು ನುಡಿದು ಕಳಿಪಿ (ಚಾವುಂಪು. ೧೯೭). **ಪೆಗ್ಗಡೆ :** ೧. ಪೆಗ್ಗಡೆ ನಾಯಕ ಕಲ್ಲುಣ್ಣಪುರದೂರಟಿವಿನೊಳು (ಪ್ರೌಢ. ೦೯೩೬, ೨೦-೬ ; ಸು. 896) ; ಕರಹಡನಾಡ ಪೆಗ್ಗಡೆ (ಕಇ. II. ೦೩-೨೨ ; 1115) ; ಪರಮೇಷ್ಠಿಯೆಂಬ ಪೆಗ್ಗಡೆಯಂ ವಿಲಾಸದಿಂ ಮಿಱುಪ ಧ್ರುವನೆಂಬ ಕೊಲ್ಲಟಿಗನೆಲ್ಲಾ ಜಗಂ ಬೆರಸಿಟ್ಟು ನೋಡಲೆರ್ದಾಡಲೆಂದಿರಿಸಿರ್ದ ನಿಡುವಿಸುನಿಗಳೆಯೊ ತಿಳಿಯೆ (ಹಂಪರಾ. ೨-೦೨). **ಪೆರ್ಗಡೆ :** ೧. ಪೆರ್ಗ್ಗಡೆ ಮಾಚಯ್ಯಂ ಮಂಗಲದ ಗಾವುಣ್ಡಗಳುಂ ಮೆಟ್ಟಿದ್ದಡೆ ಬಾಚಿಸಿದ ಸ್ಥಿತಿ ಕ್ರಮಮಾವುದೆನ್ದೊಡೆ (ಎಕ. IV. ಚಾಮರಾ. ೯೮ ೬ ; 965). ೩. ನೊಣಂಬನ ಪೆರ್ಗ್ಗಡೆ ತ್ರಿಭುವನಯ್ಯಂ ಪೆಮ್ಮಾಡಿಯನೋಲಗಿಸಿ (ಎಕ. IV. ಚಾಮರಾ. ೦೯೦-೦ ; ೯೯೦ ?) ; ಶ್ರೀಮತ್ಕಲದಂಕಾಬದೇವನ ಪೆರ್ಗ್ಗಡೆ ಬಸವಯ್ಯ ನಂಕನ ಭಟ್ಟನು ಮಾಡಿಸಿದ ಮಾನಸ್ತಮ್ಭವ್ (ಎಕ. X. ಮುಳಬಾ. ೫೯-೮; ಸು. ೯೦೦ ?). **ವೆರ್ಗಡೆ :** ೧. ಮೂವತ್ತೊರ್ಬ್ಬಾಸಿರದ ನೂಱಿರಡು ಬಾಡಮುಂ ಲೋಕಟಿಯರಾಳಿಯಾತನಾಳ್ವ ನಾಟ್ಕಿಲ್ಲಂ ವೆರ್ಗಡೆ ಬಿಟ್ಟಯ್ಯನ್ . . . ಪ್ರತಾಪಿಯುಂ (ಎಕ. VII (S). ಶಿಕಾ ೩೬೮-೫ ; 902). **ಹೆಗಡಿ :** ೧. ಅಡಿಯರ ಬಳಿ ಹೆಗಡಿ ಬಳಿ ತಪ್ಪಿಸಿ . . . ಯಿಸರಂಣನಾಯಕನು ವುಭಯದಳ ಮೆಚ್ಚಿ ಹೊಯಿದು (ಕಇ. I. ೯೬-೦೩ ; 1423). **ಹೆಗಡೆ :** ೧. ಹೆಗಡೆ ಮಾರತಂಮನ × × ಮಾದ ಮಾರಗವುಡರ ಮಕ್ಕಳು ಮಾದಿಗವುಡ ಮಾದಿಗವುಡನವರು ಕೊಟ್ಟ ಕೊಡಗೆಯ ಮಣ್ಣು ೫೦೦ (ಎಕ. III (R). ಹೆಗ್ಗಡ. ೨೯-೦ ; ಸು. 1೬ಶತಮಾನ) ; ಎ × × × ಳಿಊರ ಹೆಗಡೆ ಕೂವಲೂರ ಕೊಲಗಟ ಮಾರಚ ಹರದೆ . . . ಪೊಳಗಾವ ಸಮಸ್ತ ಗ × × ನಂಜುಂಡೇಸ್ವರದೇವರ ಅಮ್ರಿತಪಡಿಗೆ (ಎಕ. III (R). ನಂಜನ. ೦೬೨-೯, 17ಶತಮಾನ) ; ಹೆಗಡೆಯವರನ್ನು ಕಂಡಾಗಲೇ ಅನಂತ ಕುಸಿದು ಬಿದ್ದ (ಕೀಪಕಂ. ೦೩೯). ೬. ಗೌಡಸಾರಸ್ವತಬ್ರಾಹ್ಮಣರಲ್ಲಿ ಒಂದು ಒಳಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು ; ಪರ್ಬು, ಹೆಗಡೆ, ಬಾಳಿಗ . . . ಭಕ್ತ—ಎಂಬುದಾಗಿ ಕೊಂಕಣರಲ್ಲಿ ಹದಿನಾಲ್ಕು ಭೇದಗಳುಂಟು (ಕುಳಿಚಾ. ೦೬೦) ; ಇವರಲ್ಲಿ ಭಟ್ಟರೂ (ವೈದಿಕರೂ) ಹೆಗಡೆಗಳೂ (ಗೃಹಸ್ಥರೂ) ಎಂಬ ಎರಡು ಭೇದಗಳಿವೆ (ಕಾಕಶ. ೪೫). ೭. (ಅಧಿಕಾರಸೂಚಕವಾಗಿ, ಹೆಸರಿನ ಕೊನೆಯಲ್ಲಿ ಸೇರಿಸುವ) ಒಂದು ಮನೆತನದ ಹೆಸರು : ಶುಂಠಿಕೊಪ್ಪದ ಹೆಗಡೆ ಮನೆತನದವನು ನಾನು (ಕೀಪಕಂ. ೦೩೩). **ಹೆಗೆಡೆ :** ೧. ದಂಡನಾಯಕ ಗಂಗಪ್ಪಯ್ಯಂಗಳನ್ನು ಹೆಗೆಡೆ ಬಮ್ಮಣಯ್ಯನ ಮ(೦)ಗ ಹಿರಿಯೋಜಿಮ್ಮಂಯ ಮಾಡಿಸಿದ ಶಾನ್ತಿನಾಥದೇವರುವಂ ಬಸದಿಯುಮುಂ ಮಾ[ಡಿ]ಸಿದ (ಎಕ. II (R). ೦೬೯-೦ ; 12ಶತಮಾನ). **ಹೆಗ್ಗಡಿ:** ೧. ಈ ಹೆಗ್ಗಡಿಗಳ ವಂಶವು ಮುಂದೆ ಸಾಗುತಾ

ಹೋಯಿತು (ಶಾಸಗಾ. ೫). ೪. ಪಂಥದಿಂ ಕಿಳಿದೆಲ್ಲರೊಳಗೆ ಪೆಗ್ಗಡಿಯಾದನು [ಶಾಶಾಂ. ಹೆಗ್ಗಡಿಗನಾಗಿ] (ಶ್ರೀಕಂ. ೬-೫). **ಹೆಗ್ಗಡೆ :** ೧. ಶ್ರೀಕರಣದ ಹೆಗ್ಗಡೆ ಎಚಿಯಣ್ಣನ ಕಯ್ಯಲು ಕ್ರಯದಾನಂ ಕೊಂಡು . . . ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XIV, ಶ್ರೀರಂಗ. ೨೨೪-೫; 1175); ತೆರಣಿಯ ಚಾಣ್ಡಯ ಹೆಗ್ಗಡೆ ಬಸವಣ್ಣ (ಎಕ. II, ೨೩೬-೧೮; ಸು. 1185); ನಾಡ ಹೆಗ್ಗಡೆ ಗುಮ್ಮಣ್ಣ (ಎಕ. XI, ಚಿತ್ರದು. ೬-೨೦; 1338); ಪಟೇಲನಿಗೆ . . . ಬೊಂಬೈಜಿಲ್ಲಾದಲ್ಲಿ ನಾಡುಪಟೇಲ, ಹೆಗ್ಗಡೆ ಎಂತಲೂ ಹೆಸರುಂಟು (ಗ್ರಾಕೋಶ. ೦). ೩. ಆತನ ಹೆಗ್ಗಡೆ ತೊಮ್ಮನೆಮ್ಬೊ × × × [ಆಜಿ]ಯೊಳ್ಪಾದಿ ಸತ್ತೊಡೆ (ಸೌಇಇ. IX-1, ೫೬-೭; 908) ; ಸಾಮಂತ ಬೊಪ್ಪ ಗೌಡನ ಹೆಗ್ಗಡೆ ಸೋಮಯ್ಯನು (ಇಆ. XII, ೧೧೧-೬ ; 1246). ೪. "ಸಿರಿವೆತ್ತ ಹೆಗ್ಗಡೆಗಳಧ್ಯಕ್ಷರಧಿಕೃತರಕ್ಕುಂ" (ಮಂಗರಾ. ೭೯-೭): ಮತ್ತಂ ಪಟ್ಟಣದ ಹೆಗ್ಗಡೆ ಗೊಮ್ಮಲಯನಾಯಕನ ಬಿಂನಪದಿಂ ಕುಮಾರಂ . . . ಹತ್ತು ದ್ರ[ವ್ಯಮುಂ] ಬಿಟ್ಟಂ (ಎಇ. XXVIII, ೩೫-೫೫; ಸು. 1082); ಹೆಗ್ಗಡೆಯರೆಂದೆನಿಸುವ ಮಿಸುಪ ಭಂಡಾರಿ ಲಕ್ಕಣ್ಣಂ (ಲಕಮಂ. ೩೮-೯೫) ; ಈಗ ನಮ್ಮಲ್ಲಿ ಉಳಿದಿರುವ ನಮ್ಮ ಯಜಮಾನಿಕೆಯ ಪದಗಳೆಂದರೆ ಗೌಡ ಹೆಗ್ಗಡೆ (ಕಮ್ಮಸು. ೨೯೮); ನನ್ನನ್ನು ನೀವು ಈ ದಿನದ ಆಟಕ್ಕೆ ಹೆಗ್ಗಡೆಯನ್ನಾಗಿ ಚುನಾಯಿಸದಿದ್ದರೆ ನಿಮ್ಮ ಪಾಲಿಗೆ ಇದೋ, ಸೊನ್ನೆ (ರಾಮೂಶಿ. ೨೬). ೬. ಗೌಡಸಾರಸ್ವತರು—ಕಾಮತ, ನಾಯಕ, ಕಿಣಿ, ಪ್ರಭು, ಹೆಗ್ಗಡೆ (ತುಳುನಾ. ೦೮೪) ; ಗೌಡಸಾರಸ್ವತದಲ್ಲಿರುವ ಬೇರೆ ಬೇರೆ ಕುಲಗಳು (ಕೌಟುಂಬಿಕ ಹೆಸರುಗಳು) ಉದ್ಯೋಗಪರವಾಗಿ ಈ ಕೆಳಗಿನಂತೆ ಬಂದಿರಬಹುದೆಂದು ನನಗನಿಸುತ್ತದೆ . . . ಹೆಗ್ಗಡೆ—ಹಿರಿಯ ಮನುಷ್ಯ (ಮುಖ್ಯಸ್ಥ) (ತುಳುನಾ. ೨೩೯). **ಹೆಗ್ಗಡೆ :** ೭. ಕೇಡಚ್ಚನಾಯಕನ ಮಮಮಳಿಗೆ ರಾಚಮನಾಯಕಿತಿಯ ಮಗ ಕುಂದಾಡಹೆಗ್ಗಡೆ ನಯಚಕ್ರದೇವರ ಬೆಸದಿಂ ಮಾಡಿಸಿದ ಬಸದಿ (ಎಕ. II (R), ೫೬೨-೨೪; ಸು. 12ನೆಯ ಶತ). **ಹೆಗ್ಡೆ :** ೭. ಹೆಗ್ಡೆಯವರ ಕೈ ಥರಥರನೆ ನಡುಗತೊಡಗಿತು (ಕ್ರಮೂಶ. ೧೦೬). **ಹೆಗ್ಗ್ಗಡೆ :** ೧. ಜನಕಂ ಹೆಗ್ಗ್ಗಡೆ ಚಾಚಿರಾಜಮಹಿಮಂ (ಸೌಇಇ. IX-1, ೨೫೭-೨೬; 1160) : ಶ್ರೀನಾರಸಿಂಹದೇವರು ಹೆಗ್ಗ್ಗಡೆಯುಂ ಹಡವಳಯ್ಯನುಂ ಅರೆವಿನತೊಳಲ ಕಾರುಣ್ಯಂಗೆಯ್ದು (ಎಕ. VI, ಕಡೂರು. ೨೩-೧೭: 1156) ; ಹೆಗ್ಗ್ಗಡೆ ಚವು[ಂ]ಡಮಯ್ಯನಾಯಕರ ಮಗ ಹೆಗ್ಗ್ಗಡೆ ಮಲ್ಲಯ್ಯನ ಕೆಯಿ (ಇಆ. XII, ೯೭-೪೦; 1187). ೨. ಬ್ರಹ್ಮದೇವರ ದಂಡನಾಯಕರುಂ ಅವರ ಹೆಗ್ಗ್ಗಡೆ ಮಚ್ಚರಸುರಂ . . . ಬಿಟ್ಟ ಧರ್ಮವೆಂತೆಂದಡೆ (ಎಇ. V, ೨೭-೨೭; 1178). ೪. ದಂಡಾಯದ ಹೆಗ್ಗ್ಗಡೆ ದಂಡನಾಯಕ ಮಹಾದೇವಯ್ಯಂಗಳುಂ (ಸೌಇಇ. XI-1, ೫೦-೨೪; 1138).

**ಹೆಗ್ಗಡೆವಾಳಸೂಳೆ =** ಗ್ರಾಮದ ಮುಖ್ಯಾಧಿಕಾರಿಯ ಆಶ್ರಯದಲ್ಲಿದ್ದ ಸೂಳೆ (?): ಪೆಗ್ಗ್ಗಡೆವಾಳಸೂಳೆಗೆ ಮತ್ತರ್ ಪದಿನಯ್ದು (ಎಇ. XV, ೮೯-೪೪; 1060).

[ಪೆರ್ (< ಪಿರಿದು₁) + ಕಡೆ₃. / ತುಳು. ಪೆರ್ಗಡೆ, ಹೆಗ್ಗಡೆ; ತೆಲು. ಪೆಗ್ಗಡ, ಪೆಗಡ, ಪ್ರೆಗಡ, ಪ್ರೆಗ್ಗಡ, ಹೆಗ್ಗಡಿ, ಹೆಗ್ಗಡು]

**ಪೆರ್ಗಡೆ₂** 'ಪೆರ್ಗಳೆ' ನೋ.

**ಪೆರ್ಗಡೆಗದ್ಯಾಣ, ಹೆಗ್ಗಡೆಗದ್ಯಾನ** (ನಾ). ಒಂದು ಬಗೆಯ ನಾಣ್ಯ : ಪೊಜ್ಜ[ದ್ಯಾಣ]ಮಯ್ದು [ಪೆಗ್ಗ್ಗಡೆ]ಗದ್ಯಾಣಮ್ಮ × × × (ಸೌಇಇ. XI-1, ೪೦-೧೨ ; 965). **ಹೆಗ್ಗಡೆಗದ್ಯಾನ :** ಪರಿಹಾರ ಹೆಗ್ಗಡೆಗದ್ಯಾನಗನ ಹೊರಲು (ಎಕ. IX, ಕೊಳಗು. ೩೩-೯; 1116 ?) ; ಸುಂಕದ ಬಿಡುಗೊಳು ನಲ್ಲಿತ್ತು ಪರಿಹಾರ ಹೆಗ್ಗಡೆಗದ್ಯಾನ ಗನಹೊರಲು ಒಂದು ಹಳ್ಳಿಗೆ ಹಣವೈದು (ಎಕ. I (R), ೬೭-೯ ; 1175). [ಪೆರ್ಗಡೆ₁ + ಗದ್ಯಾಣ]

**ಪೆರ್ಗಡೆಗೋಲ್** (ನಾ). ದೊಡ್ಡದಾದ ಕಡೆಯುವ ಕೋಲು,—ಮಂತು : ಪೆರ್ಗಡೆಗೋಲಾದುದುಮಿಲ್ಲ ಮ್ಮಡನ ಕಾಮರ್ಗಕವಾದುದಿಲ್ಲೆಂದು ಗುರುತ್ವವಡೆದಿದರ್ಗದಾ ಕರ್ಲವೆರ್ಟ್ಟು (ಕೋಹಕ. ೭-೯೬).

[ಪೆರ್ (< ಪಿರಿದು₁) + ಕಡೆಗೋಲ್]

**ಪೆರ್ಗಡೆತನ, ಪೆರ್ಗ್ಗಡೆತನ, ಹೆಗ್ಗಡೆತನ** (ನಾ). ೧. ಗ್ರಾಮದ ಮುಖ್ಯಾಧಿಕಾರಿಯ ಅಧಿಕಾರ,—ಸ್ಥಾನ : ನೀಮಾರ್ಗದೇಕೆ ಕಿಡನುಡಿದಪಿರಿಟ್ಟೆಡೆಪೆರ್ಗಡೆತನದೊಳಿದೇಪಡೆವಿರ್ (ಆದಿಪು. ೯-೧೦೭) ; ಇನಿವಿರಿದು ಸತ್ಕಾರಮುಂ ಪೆರ್ಗಡೆತನಂ ಬಂದನಾಮನುಂ ದೇವರ ದೊರೆಯ ರಾಜಾಧಿರಾಜನೊಳ್ ಪಡೆಯಂ (ಶಾಂತಿಪು. ೨-೭೪ ಟ); ಪೆಗ್ಗ್ಗಡೆತನಮುಂ ಬಲ್ಲರ್ (ಎಕ. VII, ಶಿಕಾರಿ. ೧೧-೪೨ ; 1086?). **ಪೆರ್ಗ್ಗಡೆತನ :** ೧. 'ಪೆರ್ಗಡೆತನಂಗೆಯ್' ಪಠಾ. **ಹೆಗ್ಗಡೆತನ :** ೨. ಮುಂದಾಳುತನ ; ನಾಯಕತ್ವ: ಬಾಬು ಎನ್ನದೆ, ಅವನನ್ನು ನಾವು ಹೆಗ್ಗಡೆತನಕ್ಕೆ ಚುನಾಯಿಸುತ್ತಿದ್ದೆವು (ರಾಮೂಶಿ. ೨೬). [ಪೆರ್ಗಡೆ₁ + —ತನ]

**ಪೆರ್ಗಡೆತನಂಗೆಯ್, ಪೆರ್ಗಡೆತನಕೆಯ್, ಪೆರ್ಗ್ಗಡೆತನಂಗೆಯ್** (ಕ್ರಿ). ೧. (ಅರಮನೆಯಲ್ಲಿ) ಒಳಾಡಳಿತವನ್ನು ನೋಡಿಕೊಳ್ಳು : × × × ಗಾವುಣ್ಡುಗೆಯೆ ಕಲಿಗನಾತಜ್ಜಿಗ ಪೆಗ್ಗ್ಗಡೆತನಂಗೆಯೆ (ಎಕ. VII (8), ಶಿಕಾರಿ ೩೭೪-೧೨ ; 902). **ಪೆರ್ಗಡೆತನಕೆಯ್ :** ೨. ನಾಯಕನಾಗಿರು ; ಮುಂದಾಳಾಗಿರು : ಅರಿಉರದ ಅಗ್ಗರವರ್ ಪೆಗ್ಗ್ಗಡೆತನಕೆಯೆ (ಎಕ. IV, ಗುಂಡ್ಲುಪೇ. ೮೮-೩ ; ಸು. 750). **ಪೆರ್ಗ್ಗಡೆತನಂಗೆಯ್ :** ೧. ನಣ್ಣುವರ ಕಲಿಗಂ ಪೆಗ್ಗ್ಗಡೆತನಂಗೆಯ್ಯೆ (ಎಕ. VII, ಶಿಕಾರಿ. ೨೦೯-೧೨ ; 918). ೨. ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನದಿಂ ಪೆಗ್ಗ್ಗಡೆತನಂಗೆಯ್ಯೆ (ಸೌಇಇ. XX, ೨೪-೮ ; 1034) ; ಶ್ರೀಮತ್ಪೆಗ್ಗ್ಗಡೆ ನಾರಣಯ್ಯ ಪ್ರಮುಖಕರಣಂ ಬನವಾಸಿಪನ್ನಿಚ್ಛಾಸಿರಕ್ಕಂ ಪೆಗ್ಗ್ಗಡೆತನಂಗೆಯ್ಯೆ (ಸೌಇಇ. XX, ೩೫-೬; 1055). [ಪೆರ್ಗಡೆತನ + ಕೆಯ್₁]

**ಪೆರ್ಗಡೆತನಕೆಯ್** 'ಪೆರ್ಗಡೆತನಂಗೆಯ್' ನೋ.

**ಪೆರ್ಗಣ, ಪೆಗ್ಗಣ, ಹೆಗ್ಗಣ₁** (ನಾ). ಇಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ : ಓವೊ ಪೆರ್ಗಣಮನಿಕ್ಕಿ ಪನೆ ಮಾಡುವಂದಮಕ್ಕುಂ ಕಡೆಯೊಳ್ (ರಾಮಾಕಥಾ. ೩-೧೨೨) ; ಒಡವತ್ತಿಯ ತೊಕ್ಕಿನೊಳಂದೊಡಗೂಡಾಡುಳಿಚ ಕುಂಠಿ ನೆಲಗುಳ್ಳಮಿಮಂ ಕಿಡುಗುಂ ನೀರಿಂ ಪಾನಂಗುಡೆ ಪೆರ್ಗಣದುಗ್ರಮಪ್ಪ ವಿಷಮಾ ಕ್ಷಣದೊಳ್ (ಅಕುದ. ೧೨-೫೨). **ಪೆಗ್ಗಣ :** "ಖನಕಮುಂದುರುವೆನಲು ಪೆಗ್ಗಣಂ" (ಬಂಗರಾ. ೪೯-೧೨) ; ಬೆಳಗಿನೊಳಂ ಕಾಣದು ನಿಶಿಯೊಳ್ ಕಾಣ್ಬುದು ಪೆಗ್ಗಣಕ್ಕೆ (ರಾಮಾಕಥಾ. ೦-೦೦೬) : ಸಿರಿ ಬರಲುಣಲಜಿಯದವಂ ಧರೆಯೊಳು ಬೈಚಿಟ್ಟು ಸತ್ತು ಪೆಗ್ಗಣರೂಪು ಧರಿಯಿಸಿ ತೋಡುತ್ತುಮಿರ್ಪಂ ಧರೆಯೊಳು (ಶಾಸ್ತ್ರಸಾ. ೫೨-೨). **ಹೆಗ್ಗಣ₁ :** "ಉಂದುರಃ, ಖನಕಃ—ಈ ೨ ಹೆಗ್ಗಣಂ" (ಕರಾಡು. ೩೯-೮೨); ಹೆಗ್ಗಣವನಿಕ್ಕೆ ನೆಲಗುಟ್ಟಿ ಕಟ್ಟಿದಂತೆ ಆಯಿತ್ತೆನ್ನ ಕಾಯಗುಣ (ಕಸ್ಮಕ. ೪. ೦೬-೩೩) ! ಬಡಿಗಲ್ಲಿನಲಿ ಹೆಗ್ಗಣ ಮಿಡುಕುವಂದದಿ ಮದನಶರಮಾಯೂಪ್ರಬಂಧದಲಿ ಕೊಡರಿ (ಅಶ್ವಕ. ೨-೬೨) ; ಹಾಳು ಹೆಗ್ಗಣಗಳ ಉಪದ್ರವಂತು ಹೇಳ-ವುದಕ್ಕೇ ತೀರದು (ಕಪಿರಾಜ್ಯಮು. ೮೦೬) ; ಹೆತ್ತವಳಿಗೆ ಹೆಗ್ಗಣ ಮುದ್ದು, ಕೂಡಿದವಳಿಗೆ ಕೋಡಗ ಮುದ್ದು (ಗಾದೆ).

[ದೇ. ॥ ತುಳು. ಪೆರ್ಗುಡೆ ; ಕೋತ. ಪೆಗಣ್ ; ಕೊಡ. ಎಗಣ್, ಎಗನ್]

**ಪೆರ್ಗಣೆ** (ನಾ). ದೊಡ್ಡ ಗಣೆ : ಲತೆಗಳ ಜನ್ಮಭೂಮಿ ಪುಳಿನಂಗಳ ಪೆರ್ಗಣೆ . . . ತಣ್ಣೆಲರ ತಾಯ್ಮನೆ ತಾಪಸಾಸುದರ್ಗದಾ ವನಂ (ಕುಸುಕಾ. ೦೦-೦೬೯).

[ಪೆರ್ (< ಪಿರಿದು₁) + ಕಣೆ]

**ಪೆರ್ಗಣಗಿಲ್** (ನಾ). ಕಣಗಿಲೆಯಲ್ಲಿ ಒಂದು ಬಗೆ: "ದ್ವಿಪ ಉನ್ಮಧುಕ ಪೆರ್ಗಣಗಿಲ್" (ಮಂಗರಾ. ೯೨-೩೬).

[ಪೆರ್ (< ಪಿರಿದು₁) + ಕಣಗಿಲ್ (< ಕಣಗಿಲೆ₁) ]

**ಪೆರ್ಗಣೆ** (ನಾ). ದೊಡ್ಡ ಬಾಣ, —ಸರಳಂ ;' ಪೆರ್ಗಣೆದೊಡು ' ಪರಾ.
[ಪೆರ್ (< ಪಿರಿದು$_1$) + ಕಣೆ$_1$]

**ಪೆರ್ಗಣೆದೊಡು** (ಕ್ರಿ). ದೊಡ್ಡ ಬಾಣವನ್ನು ಹೂಡು : ಉತ್ತುಂಗಗಜ ಪನೊಂದೆಡೆಯಲ್ಲಿ ಬೇಡ ಕಾಣುತ್ತೆ ಪೆರ್ಗಣೆದೊ[ಶಾಶಾಂ. ದು]ಟ್ಟು ಕಿವಿವರಂ ತೆಗೆದು ನಡುನೆತ್ತಿಯೊಡೆಯೆಚ್ಚನು (ಶಾಶಿತ. ೧೭-೬೯).
[ಪೆರ್ಗಣೆ + ತೊಡು$_1$]

**ಪೆರ್ಗದ** ' ಪೆರ್ಗದಪು ' ನೋ.

**ಪೆರ್ಗದಪು, ಪೆರ್ಗದ, ಹೆಗ್ಗದ** (ನಾ). ಬಾಗಿಲಿಗೆ ಜೋಡಿಸಿರುವ ದೊಡ್ಡದಾದ ಮರದ ಹಲಗೆ,—ಬಾಗಿಲಿನ ಪಡಿ : ಮುಗಿಲನೇಱೆ ಧುಮುಕ್ಕಿ ಪೆರ್ಗದಪುಗಳನೊಡೆಬಿಡಿ (ಚಕಪು. ೩೭-೩೭). **ಪೆರ್ಗದ** : ಮದಹಸ್ತಿಗಳ ಕೈಯ ನೂಕಿ ಬಂಧಿಸುವ ಪೆರ್ಗದ ವಜ್ರಲಾಳವಿಂಡಿಗೆಯು ಅದಟನ ದ್ವಾರಾಷ್ಟಕವ ವರ್ಣಿಸುವೊಡೆ ವದಕವಿಗಳಗಗೋಚರವು (ಸೋಹಕ. ೨೦-೦೩). **ಹೆಗ್ಗದ** : ಶ್ರೀದ್ವಾರದ ಹೆಗ್ಗದಗಳನ್ನೆಳೆದು ಮುಚ್ಚಿ ಒಳಗೆ ಸರಪಳಿ ತಾಳುಗಳನು ಸಶಬ್ದವಾಗಿ ಹಾಯ್ಕಿ ಬೆಟ್ಟುವರು (ಐಶಿಸಂ. ೦೨-೨೦).
[ಪೆರ್ (< ಪಿರಿದು$_1$) + ಕದಪು$_3$ (< ಕದವು$_1$) ]

**ಪೆರ್ಗದೂರು** (ನಾ). ಒಂದು ಸ್ಥಳದ ಹೆಸರು : ಪೆರ್ಗ್ಗದೂರುಂ ಪೊಸವಾಡಗಮುನನಭ್ಯನ್ತರಸಿದ್ಧಿಯಾಗೆ ಪಡೆದರ್ (ಇಆ. VI. ೧೦೨-೦೦ ; 777 ?) : ಶ್ರೀಮತ್ ಅನನ್ತವೀಯ್ರ್ಯಯ್ಯಂಗಳ್ ಪೆರ್ಗ್ಗದೂರು ಪೊಸವಾದಗಮುವನಭ್ಯನ್ತರಸಿದ್ಧಿಯಾಗೆ ಪಡೆದರ್ (ಇಆ. XIV. ೩೩-೦೦ ; 977).
[ ? + ಊರು$_3$ (< ಊರ್) ]

**ಪೆರ್ಗದೆ** (ನಾ) ದೊಡ್ಡ ಗದೆ ; ಭಾರಿಯಾದ ಗದೆ : ಮತ್ತಗಜಾನನ ಹರವಸದಿಳಿದೆಚ್ಚತ್ತು ಪೆರ್ಗದೆಯು ತೆಕ್ಕೊಂಡು . . . ಅಪ್ಪಳಿಸುತಿಕ್ಕಿದನು (ಸೋಹಕ. ೩೯-೬೦).
[ಪೆರ್ (<ಪಿರಿದು$_1$) + ಗದೆ]

**ಪೆರ್ಗರಡಿ, ಹೆಗ್ಗರಡಿ** (ನಾ). ದೊಡ್ಡಗಾತ್ರದ ಭಲ್ಲೂಕ : ಪೆರ್ಗರಡಿಯು ಬೇಂಟೆ . . . ಸಿಂಹ ಶರಭಂಗಳ ಬೇಂಟೆಗಳಾದಿಯಾದ ಭೀಕರಮೃಗಸಂಘಸಂಹನನಮುಣ್ಮೆತು (ಗಂಳ. ೦-೬೦) ; ಪುತ್ರನಗುಟ್ಟು ಪೆರ್ಗರಡಿಗಳ್ ಮೊಗವಿಟ್ಟೆಸೆಗುಂ ವನಾಂತದೊಳ್ (ದಳಿಸಿ. ೨-೦೧೯) : ಕುಂತಳವುಯವಾಗಿರ್ದ ಪೆರ್ಗರಡಿಯು ಕೊಂತದಿ ಕಡಿದ ಪೆರ್ದಲೆಯು ಸಂತಸ ಬಿಡದೆ ಹೊತ್ತಿರ್ದರು (ಸೋಹಕ. ೦೯-೨೮). **ಹೆಗ್ಗರಡಿ** : ಹೆಗ್ಗರಡಿಯು ಹಿಂಡಿದೆ . . . ಪಂದಿಯ ಗೊಂದಣವಿದೆಯೆಂದು ಮುಗ್ಗಿ ಕವಿದರು ಶಬರರು (ಶುಶಾಕಾಂ. ೨೭-೬೦).
[ಪೆರ್ (<ಪಿರಿದು$_1$)+ಕರಡಿ$_1$]

**ಪೆರ್ಗರಡೆ** (ನಾ). ದೊಡ್ಡದಾದ ಕರಡೆ ಎಂಬ ವಾದ್ಯ : ಉಣ್ಮಿದವು ಪೆರ್ಗರಡೆ ಬೊಂಬುಳಿ ಮದ್ದಳೆ (ಸಿಂಗಿರಾ. ೩-೯೨).
[ಪೆರ್ (<ಪಿರಿದು$_1$)+ಕರಡೆ$_1$]

**ಪೆರ್ಗರುಳ್, ಹೆಗ್ಗರುಳು** (ನಾ). ೧. ಗಾತ್ರವಾದ ಕರುಳು : ಕೆಲಕೆಲವು ನಾಯ್ಗಳೊರ್ಮೆಯೆ ಮಲೆದಿೞ್ಕನೆ ಪೊಯ್ದು ಸೆಳ್ದು ತಿನೆ ಪೆರ್ಗರುಳು (ರಶಾರ್ಕಾ. ೩-೬೩)/; ಎಳ್ತರುತಿರ್ದಪುದಿತ್ತ ನಿನ್ನ ಪೆರ್ಬಲವೊಡಿದಸ್ಥಿಯಿಂ . . . ಪಱದ ಪೆರ್ಗರುಳಿಂ (ಚಾಶಿ. ೫-೦೦೯). **ಹೆಗ್ಗರುಳು** : ೧. "ಸ್ಥೂಲಾಂತ್ರವೆಂದರೆ ಹೆಗ್ಗರುಳು" (ಚಾಹಚಿ. ೨-೩-೪೮ ಆ). ೨. ಮನುಷ್ಯ ದೇಹದ ಎರಡು ಕರುಳುಗಳಲ್ಲಿ ಒಂದು ; ದೊಡ್ಡ ಕರುಳು : ಕರುಳುಗಳಲ್ಲಿ ಸೋಂಕು ಹತ್ತಿದೆ ಹೀಗೆಯೇ ಆದರು. ರಕ್ತ ಬೀಳುವುದಾದರೂ ಹೆಗ್ಗರುಳಿನ (ಕೋಲನ್) ಸೋಂಕಿನಿಂದ ಆದುದಕ್ಕೇ ಈ ಹೆಸರು ರೂಢಿಯಲ್ಲಿದೆ (ಆಶಿಕೋ. I. ೮೨೬).
[ಪೆರ್ (< ಪಿರಿದು$_1$) + ಕರುಳ್]

**ಪೆರ್ಗಲ್, ಹೆಗ್ಗಲ್ಲು** (ನಾ). ದೊಡ್ಡ ಕಲ್ಲು : ಹೆಬ್ಬಂಡೆ : ಪೆರ್ಗಲ್ಲಿಂದ ದಪುತ್ತುಂ . . . ನೆಲದೊಳೊರಸಿ ಮೇಲ್ಮುಕ್ಕತ್ತುತ್ತುಂ (ರಶಾರ್ಕಾ. ೬-೦೯೦) : ಪೆರ್ಗಲ್ಲನೆತ್ತಿದ ಬಲ್ಪಿಂಗೆ ಕಡಂಗಿ ಪೊಂಗಿ ಗೋವಿಂದನೊಳ್ ಬಂದು ತಾಗಿದಂ (ಶರಶ್ರು. ೮. ೫೭). **ಹೆಗ್ಗಲ್ಲು** : ಕೆಲರು ಪೆಗ್ಗಲ್ಲುಗಳ ಕಟಿದರು (ಕೌಶಿಕಾ. ೨೦-೦೫).
[ಪೆರ್ (< ಪಿರಿದು$_1$) + ಕಲ್$_3$]

**ಪೆರ್ಗಲಸು** (ಕ್ರಿ). "ಗರ್ವಿಸು, ಹೆಮ್ಮೆಪಡು" (ಕ್ರಿ.ಶ್ರು. ಕೋಶ) : ಪೆರ್ಗಲಸಿ ಸಿರಿಯುಳ್ಳ ಪೆರ್ಮೆಯ ಬಲುಮನಿದಂ ಮೆಱೆವೆಯೆನ್ನೊಳೆಂದಂ ಮುನಿಪಂ (ಕ್ರಿ.ಶ್ರು. ೯-೬೩). [P ಇದು 'ಪೆಕ್ಕಳಿಸು' ಎಂಬುದರ ಅಪಲಿಖಿತವಿರಬಹುದು]

**ಪೆರ್ಗಲಿ** (ನಾ). ಮಹಾಪರಾಕ್ರಮಿ ; ಹಿರಿಯ ಯೋಧ : ಕಿಱುಪೊಸೂರ ಪೆರ್ಗ್ಗಲಿಯರ ಬಿಜಯಿತಗಾವುಣ್ಣನ ಮಗಂ ಅಮ್ಮಡಿಗಾವುಣ್ಣಂ . . . ಭಾಗಂಗೊಣ್ಡು (ಕ್ರು.ಆಂ. ೦೯೩೦. ೯೩-೫; ೯೯೨). [ಪೆರ್ (<ಪಿರಿದು$_1$)+ಕಲಿ$_2$]

**ಪೆರ್ಗವತೆ** (ನಾ). (ಬೆರಳಂಗಳನ್ನು ವಿರಳವಾಗಿಟ್ಟ) ದೊಡ್ಡ ಅಂಗೈ : ಪೆರ್ಗವತೆ ಸೇರೆ ಪಿಡಿ ಶರಭಂಗಳನಿಪಿವಱಿಳೊಳಭನಯಿಸಿ ತೋಱಿಸಲ್ ಪ್ಯುದುಪಾಣಿಪನಜಪಮಂ ಸೃಷ್ಟಿಸಿದನೆಂಬ ಚೆಲ್ವಿನ ಕೋವುಲೆಯರಲ್ಲಿ ಸಣ್ಣೆಸೆದರು (ಕ್ರಿ.ಸುಶ್ರಾ. ೬-೨೦).
[ಪೆರ್ (< ಪಿರಿದು$_1$) + ಕವತ್ತೆ]

**ಪೆರ್ಗಳ$_1$** (ನಾ). ಧಾನ್ಯಗಳನ್ನು ಒಕ್ಕುವುದಕ್ಕಾಗಿ ಸಿದ್ಧಪಡಿಸಿದ ವಿಶಾಲವಾದ ಕಣ : ಸುರ್ಗಿದುದೆನೆ . . . ಪೆರ್ಗಳವೆನೆ ಕುರ್ಗಿದುದೆನೆ ಮೂರ್ಗದೊಳ್ ಸರೆಫುಪದಂಗಳ್ (ಕಉದ. ೩೬).
[ಪೆರ್ (< ಪಿರಿದು$_1$) + ಕಳ$_3$]

**ಪೆರ್ಗಳ$_2$** (ನಾ). ದಪ್ಪವಾದ ಕುತ್ತಿಗೆ ; ಕೊಬ್ಬಿದ ಕತ್ತು : ಹೋಳೆವ ಕೂರ್ಗಣೆಯಿಂದೆ ಹೊಡೆದೆಕ್ಕಲನ ಪೆರ್ಗಳದೊಳು ಸುರಿವ ರೂಹಿತದ ನೆಳಲೊಳು ಕಣ್ಗೆ ಕಾಣಿಸ ಬಂತು ಗಗನಸ್ಥಳದಲಿ ಹೊಳೆವಂತೆ ವಿಪಿನ (ಸೋಹಕ. ೦೯-೩೫).
[ ಪೆರ್ (< ಪಿರಿದು$_1$) + ಗಳ$_2$ (= ಗಲ) ]

**ಪೆರ್ಗಳೆ, ಪೆರ್ಗಡೆ$_2$** (ನಾ). ೧. ಬಲಿತಿರುವ ದಂಟು; ದಪ್ಪವಾದ ಕಾಂಡ : ಕುವಳಯಕುಟ್ಮಳಾವಳಿಯ ಪೆರ್ಗಳೆಯಂ ನೆಗೆದೇಱೆ ಲಾಗಿಸುತ್ತೆ ...ಅಡಿದುದು ಕೂಪೆ ರ್‍ಥುಪಾ ಪೊಸಡೊಂಬನೆಂಬಿನಂ (ರಾಜಶೇ. ೨-೬೨). **ಪೆರ್ಗಡೆ$_2$** : ೨. ಉದ್ದವಾದ ಕೋಲು,—ದಂಡ : ಗಡಿಸು ಭಟರು ಗಗನವ ತಿವಿವಂತೆ ಪೆರ್ಗಡೆಯುತ್ತಿ ಪೆರ್ಗಡೆಗೂಡಿ...ಕುಣಿವುತೆಯ್ದುವರು (ಭಕಶ. ೨೩-೨೪).
[ ಪೆರ್ (<ಪಿರಿದು$_1$)+ಗಳೆ (<ಗಟ್) ]

**ಪೆರ್ಗಳ್ತಲೆ, ಹೆಗ್ಗತ್ತಲೆ** (ನಾ). ದಟ್ಟವಾದ ಕತ್ತಲೆ ; ಗಾಢಾಂಧಕಾರ : ಮುಸುಂಕುಗಳ್ತಲೆ ಪೊದಳ್ದ ಪೆರ್ಗಳ್ತಲೆ . . . ರಸೆಗಳ್ತಲೆಯೆನಿಸಿ ಕೂಡೆ ತೀವಿತು ತಿವಿರಂ (ಗಂಳ. ೯-೬೩) ; ನೆಲೆಗೊಂಡ ಪೆರ್ಗಳ್ತಲೆಯೊಳ್... ಪಲವು ದೀವಿಗೆಗಳ್ ಕಳ್ತಲೆ ಪೂತಂತೊಪ್ಪುತಿರ್ದುವಾ ಮನೆಮನೆಯೊಳ್ (ಗಂಳ. ೯ ೬೯). **ಹೆಗ್ಗತ್ತಲೆ** : "ಸಂತಮಸಂ, ವಿಷ್ವಗ್‍ಧ್ವಾಂತೇ—ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿ ಇರುವ ಕತ್ತಲೆ ಅಂದರೆ ಹೆಗ್ಗತ್ತಲೆ " (ಸಿದ್ಧಾಂಶಿ. ೬೦).
[ ಪೆರ್ (<ಪಿರಿದು$_1$) + ಕಳ್ತಲೆ (<ಕಟ್ತಲೆ) ]

**ಪೆರ್ಗಱ, ಹೆಗ್ಗಱ** (ನಾ). ೧. (ಹಕ್ಕಿಯ) ದೊಡ್ಡದಾದ ರೆಕ್ಕೆ,—ಉದ್ದವಾದ ಪುಕ್ಕ : ಕಾಡೆಮ್ಮೆಯ ಕೋಡು ಪರಹದಂತಿಯ ದಾಡೆ... ಭೇರುಂಡನ ರೂಢಪೆರ್ಗಱಯಿತ್ತರೊಳಿದು (ಸೋಹಕ. ೦೯-೬೪). **ಹೆಗ್ಗಱ** : ೨. (ಉದ್ದವಾದ ಈಜುರೆಕ್ಕೆಗಳಿರುವ) ಒಂದು ಬಗೆಯ ಮೀನು : ಲಂಕಿಲು ಹೆಗ್ಗಱ . . . ಹುಡೆಗಸಾನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದುರು (ಹಕಶ ೫-೯೩).
[ಪೆರ್ (< ಪಿರಿದು$_1$)+ಗಱ]

**ಪೆರ್ಗಟನಿ** (ನಾ). ಒಂದು ಸ್ಥಳದ ಹೆಸರು : ಪ್ರಥಮಂ ದುಗ್ಗನೈಱ ಮೊಱ್ಡೆ ಸಡೆಗೋಡೆವ ಸಂಗವೊಯರಾ ಕೆಱೆಯಿನ್ತೆಂಕೆ ನಟ್ಟ ಕಲ್ಲೆ ಪೆರ್ಗ್ಗಟನಿಯಿನ್ ಬಡಗೆ ನಟ್ಟ ಕಲ್ಲೆ (ಎಆ. X (ಶ). ಶಕ್ಯಬ. ೬೬-೦೭ ; ಸು. 850).
[ಪೆರ್ (<ಪಿರಿದು$_1$) + ಕಟನಿ]

**ಪೆರ್ಗಟ್ಟಿಪ್ಪು** (ನಾ). ಒಂದು ಸ್ಥಳದ ಹೆಸರು : P ಈಗಿನ ಶ್ರವಣ ಬೆಳುಗೊಳ : ಪೆರ್ಗ್ಗಟ್ಟಿಪ್ಪಿನಾ ಪೊಲದಿನ್ನಡದು ಕೊಟ್ಟದು (ಎಆ II. ೩೫-೯ ; ಸು. 800).
[ಪೆರ್ (<ಪಿರಿದು$_1$) + ಕಟ್ಟಿಪ್ಪು ]

**ಪೆರ್ಗಾಗಾವಮಾಸಿ** (ನಾ). ಒಂದು ಊರಿನ ಹೆಸರು : ಪೆಗ್ಗ್ಗಾಗಾವಮಾಸಿ ಗ್ರಾಮ ಪಶ್ಚಿಮಭಾಗ ಕೃತಾಕೃತಕ್ಷೇತ್ರಂ (ಎಕ. XI, ದಾವಣ. ೬೬-೨೯ ; ೧೧೪). [ ? ]

**ಪೆರ್ಗಾಡು**, ಹೆಗ್ಗಾಡು (ನಾ). ದಟ್ಟವಾದ ಅಡವಿ ; ಗೊಂಡಾರಣ್ಯ : ಬಾಗೆ ತೇಗು ಪನೆ ಕಮ್ಮರಮೆಸಳೆಯೆನಿಪ್ಪವಿರ್ಪುವಾ ಪೆರ್ಗಾಡೊಳ್ (ರಾಜಶೇ. ೩-೫೪) ; ಇದು ದನಶಿಖಿಯಿದು ಕಿಂಶುಕಂ...ಇದು ಮದಗಜ ಮಿಂತಿದು ಗಂಡಶೈಲಮೆಂದೆಂಬುದು ತಿಳಿಪೊಡಶಕ್ಯಮೆನಿಪುದಾ ಪೆರ್ಗಾಡೊಳ್ (ಶಬಶಂ. ೩-೩೦). **ಹೆಗ್ಗಾಡು** : "ಮಹಾರಣ್ಯಂ, ಅರಣ್ಯಾನೀ— ೨ ದೊಡ್ಡ ಅಡವಿ, ಹೆಗ್ಗಾಡು, ಗೊಂಡಾರಣ್ಯ" (ಸಿದ್ಧಾಂತಿ. ೦೨೯) ; ಈ ಹೆಗ್ಗಾಡಿನಲ್ಲಿ ಯಾವ ಮದ್ದನ್ನರೆಯಬಹುದು? (ಶೀಲಶಂ. ೯೯) ; ಸುತ್ತಲೂ ಹೆಗ್ಗಾಡೂ ಅಡಕೆತೋಟಗಳೂ ಬೆಳೆದು ಸ್ಥಳ ಏಕಾಂತವಾಗಿತ್ತು (ಕಾನೂರು. ೫೯೬). [ ಪೆರ್ (< ಪಿರಿದು$_1$) + ಕಾಡು$_2$ ]

**ಪೆರ್ಗಾಲ್** (ನಾ). (ನೀರು ಹಾಯಿಸಲು ಮಾಡಿರುವ) ದೊಡ್ಡದಾದ ನಾಲೆ,—ಕಾಲುವೆ : ಲೀಲೆಗಾರ್ತಿಯರಚ್ಯುತನಾಜ್ಞೆಯಿಂದೆ ಪೆರ್ಗಾಲ ಹೊಂದೂಂಬನು ನೆಗಹೆ . . . ಸುರಿದುದು ಸಲಿಲ (ಜೋಹತ. ೦೯-೬೩). [ ಪೆರ್ (< ಪಿರಿದು$_1$) + ಕಾಲ್$_2$ ]

**ಪೆರ್ಗಾವಲಿ**, ಹೆಗ್ಗಾವಲಿ (ನಾ). ದೊಡ್ಡದಾದ ಹುರಿಯುವ ಹೆಂಚು ; ಅಗಲವಾದ ತವೆ : ಕಾಯ್ದ ಕರ್ಬೊನ್ನ ಪೆರ್ಗಾವಲಿವೊಲಾಯ್ತಾ ನೆಲಂ (ಜಗಪ. ೦೬. ೬೦). **ಹೆಗ್ಗಾವಲಿ** : ಕಾದ ಹೆಗ್ಗಾವಲಿಯ ಮೇಲಿರಿದರಿದು ದೇಹವನುರುಹಲುಹಿಸುವ (ಬಸವು. ೯೩-೨೯). [ ಪೆರ್ (< ಪಿರಿದು$_1$) + ಕಾವಲಿ$_2$ ]

**ಪೆರ್ಗಾವಿಲ** (ನಾ). ಸ್ವಲ್ಪವೂ ತಿಳಿವಳಿಕೆಯಿಲ್ಲದವನು ; ಮಹಾ ಮೂರ್ಖ : ಒಂದೆ ಗಾಲಿಯೊಳ್ ರಥಮಂ ನಡೆಯಿಸುವೆನೆಂಬ...ನಾರಿಲ್ಲದೆ ಪೂಗಟ್ಟುವೆನೆಂಬ ಪೆರ್ಗಾವಿಲನಂ ಪೋಲ್ಪುಂ (ರರ್ಹಾಶ್ಯ. ೩-೦೦೬). [ ಪೆರ್ (< ಪಿರಿದು$_1$) + ಗಾವಿಲ ]

**ಪೆರ್ಗಾವುಂಡ** (ನಾ). ಹಿರಿಯಂ ಗೌಡ ; ಮುಖ್ಯ ಗ್ರಾಮಣಿ : ಮುಳ್ಗುನ್ದ(ನ್ದ) ಪನ್ನೆರಡುಮಂ ಪಾಯಿಮ್ಮಾನಾಳೆ ಸಿರಿವುರಕೆ ಬಗೆಗ ಪೆಗ್ಗಾವುಣ್ಡಮಾಗುತ್ತಿರೆ (ಎಇ. XXVI, ೬೨-೦೨ ; ೯೦೮). [ಪೆರ್ (< ಪಿರಿದು$_1$) + ಗಾವುಂಡ (< ಗಾಮುಂಡ)]

**ಪೆರ್ಗಾಳಿ** (ನಾ). ರಭಸವಾಗಿ ಬೀಸುವ ಗಾಳಿ ; ಬಿರುಗಾಳಿ : ಪೆರ್ಗಾಳಿಯ ಕೋಳೊಳ್ (ಪೊಯ್ಲೊಳ್) ಕೆಡದಿರ್ದ ವಟವೃಕ್ಷಮಂ ಕಂಡು (ಕಾಲಂತ. ೨೬೩) ; ಸದ್ವಸ್ತುಸಂದೋಹಮಂ ನಿರುತಂ ತೀವಿ ಬರುತ್ತೆ ಭೈತ್ರಮಡೆಯೊಳ್ ಪೆರ್ಗಾಳಿಯಿಂ ಪುಟ್ಟಿದಾ ತೆರೆಯಿಂ ದುರ್ಧರಮಪ್ಪುದೋಂದು ಸುಟಾರಿಯೊಳ್ಪಿಟ್ಟು (ರರ್ಪಾಶ. ೦೦-೬೨) ; ಕಾಳಿಂಗಮರ್ದನ ಖಳರಾಯನ ಮೇಲೆ ವಾಳಿಯ ಬಂದ ನಿಷ್ಠುರದಿ ಕೇಳಿ ಮಾಡುವುದೇನು ಗರುಡನ ಗಜಾಯಿ ಪೆರ್ಗಾಳಿಯಂ ದೀಶ್ವರ ನುಡಿದ (ಜೋಹತ. ೩೬-೬೦). [ಪೆರ್ (< ಪಿರಿದು$_1$) + ಗಾಳಿ$_1$]

**ಪೆರ್ಗಿಚ್ಚು** (ನಾ). ದೊಡ್ಡ ಉರಿ ; ದಳ್ಳುರಿ : ಮದನನ ಪೆರ್ಗಿಚ್ಚಿಂ ಮುಗ್ಗಿದ ಪೊಣರ್ವಕ್ಕಿಗಳ ಹೃದಯಸಂಕುಳದಿಂದುಣ್ಮಿದ ಕರ್ಬೊಗೆ ಯೆಂಬನೆಗಂ ಪುದಿದೆತ್ತಂ ಮರ್ಬುನುರ್ಬು ಪರ್ಬಿತ್ತು (ಕಾದಂಬ. ೦೯೦) ; ಮುಕುರಂ ಮಾಂಸವು ಮದ್ಯ ತುಂಬಿದ ಕೊಡ ಪೆರ್ಗಿಚ್ಚ[ಶಾಕುಂ. ಚಿ] ನಾರ್ ಕಂಡೊಡಂ ಶಕುನಂ ಶೋಭನಕಾಸ್ಪದಂ (ಸೋಕುಶ. ೬೬) ; ಸಲೆ ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ಪೆಂಕೆ ಮೇಲಿಕ್ಕಿದುದು (ಕೃಪಾಶ. ೦೯-೦೨) ; [ಪೆರ್ (< ಪಿರಿದು$_1$) + ಕಿಚ್ಚು]

**ಪೆರ್ಗಿಡಿ**, ಹೆಗ್ಗಿಡಿ (ನಾ). ಬೆಂಕಿಯ ದೊಡ್ಡ ಕಣ : ವಡಬಾಗ್ನಿಯಿಂ ಸಿಡಿದ ಪೆರ್ಗಿಡಿಯಿದೋ . . . ಎನಲಖ್ಯಗಿರಿಮಸ್ತಕದೋಳಿನಬಿಂಬಮೆಸೆ ದಿರ್ದುದು (ಚಂಪೂ. ೯-೨). **ಹೆಗ್ಗಿಡಿ** : ಕುಪಿತ ಯಮನುಬ್ಬರದ ಕೋಪವೊ ಕಾಲರುದ್ರನ ಹಣೆಯ ಹೆಗ್ಗಿಡಿಯೋ (ಕುಮಾ.ಶ. ೨-೬೦). [ಪೆರ್ (< ಪಿರಿದು$_1$) + ಕಿಡಿ]

**ಪೆರ್ಗಿಡುಗ**, ಹೆಗ್ಗಿಡುಗ (ನಾ). ದೊಡ್ಡ ಜಾತಿಯ ಡೇಗೆ : ಕಾರಂಡಂ ಕೆಂಗಣ್ಣಂ . . . ಹರಡೆ ಸುರಗಿಗಿಡಿ ಪೆರ್ಗಿಡುಗಂ (ಶಾಶ್ವತಾ. ೦೦೯೩). **ಹೆಗ್ಗಿಡುಗ** : ದೊಡ್ಡಡೇಗೆ, ಹೆಗ್ಗಿಡುಗ (Gerfalcon. ಇಂಕ). [ಪೆರ್ (< ಪಿರಿದು$_1$) + ಗಿಡುಗ (< ಗಿಡಿಗ)]

**ಪೆರ್ಗುಂಜಿ**, ಹೆಗುಂಜಿ (ನಾ). ಒಂದು ಸ್ಥಳದ ಹೆಸರು ; ᵖ ಸೊರಬ ತಾಲ್ಲೂಕಿನ ಈಗಿನ ಮಾವಳಿ : ಆ ಕಾಕರಾಸರುಮುಬ್ಬಿ ಪೆರ್ಗುಂಜಿಯ ಕೋಟೆಯಾನ್ ರೋಹಿಸಿ (ಎಕ. VIII, ಸೊರಬ. ೦೦-೯ ; ಕು. ೮೦೦). **ಹೆಗುಂಜಿ** : ಬಾಳ ಚತುಸೀಮೆಯ ವಿವರ . . . ಹೆಗುಂಜ್ಜಿಯ ಗಡಿಯಿಂದಲು ಬಡಗಲು ಪಡುವಲು ಕಿಂಣಿಕಗಾವಂ[ಡನ] ಬಾಳಿಂದಲು ಮೂಡಲು (ಕಇಇ. IX-ii, ೯೦೬-೯ ; 1377) ; ಹಿರಿಯ ದೇವ[ಕ]ನಾಯಿಕಿತಿಯ ಮೊಮಗ ಹೆಗುಂಜಿಯಲಿ ಹುಟಕೊಂಡ ಹೊಲೆಯ ಬಳಿಯ (ಕಇ. I, ೬೬-೦೦ ; 1494). [?]

**ಪೆರ್ಗುಂಡು**, ಹೆಗ್ಗುಂಡು (ನಾ). = ಪೆರ್ಗಲ್ : ಎರಡು ಪೆರ್ಗುಂಡು ಗಳು ತಮ್ಮೊಳಗರದೆ ತಾಗುವವೆಡೆವಿಡದೆ ಪಂತರರ ದೆಸೆಯಿಂದೆ (ಶಾಕ್ಯಭಾ. ೨೬-೨೬) ; ಒಂದು ಪೆರ್ಗುಂಡನು ಕಟ್ಟಿ ಕೊರಳಲಿ . . . ನಿಂದಿರಲ್ (ಶಂಕು. ೬-೬೬). **ಹೆಗ್ಗುಂಡು** : ಒದಱಿದರೆ ಪರ್ವತದ ಶಿಖರದ ಉದುರಿದುವು ಹೆಗ್ಗುಂಡುಗಳು (ಕುಮಾ.ಶ. ೦೦-೯). [ಪೆರ್ (< ಪಿರಿದು$_1$) + ಗುಂಡು]

**ಪೆರ್ಗುಡಿ** (ನಾ). ಅತಿಯಾಗಿ ಮದ್ಯಪಾನ ಮಾಡುವವನು : ಜೂಜಾಟಿಕೆ ಸೂಳೆಬಂಟಿಕೆ ರುಣದ ಸಂವಾದ ಪೆರ್ಗುಡಿಗಳ ಚರ್ಚೆ ರಾದ ವೀಧಿಯೊಳೀಜಾಡುವ ಸಂದಣಿ ಮಾಜದು ನಿತ್ಯಕೃತ್ಯದಲ್ಲಿ (ಜೋಹತ. ೨೮-೨೬). [ᵖ ಇದು 'ಪೆರ್ಗುಡಿಹಿ' ಎಂಬುದರ ಸಂಕ್ಷಿಪ್ತರೂಪವಿರಬಹುದು]

**ಪೆರ್ಗುಡುಗು** (ನಾ). ಭಾರಿಯಾದ ಮೇಘಧ್ವನಿ : ಕಾಮುರ್ಗಿಲ್ ಗಡಣಮೆನಿಪ್ಪ ದಂತಿತತಿಯುಗ್ರದ ಡಿಂಡಿಮನಾದದಂತೆ ಪೆರ್ಗುಡುಗು ನಿದಾಘನಂ ತಗುಳಲ್ಕೆದಿದ ನೀರದಕಾಲರಾಜನಾ (ರಾಜಶೇ. ೬-೦೦೨). [ಪೆರ್ (< ಪಿರಿದು$_1$) + ಗುಡುಗು$_2$]

**ಪೆರ್ಗುಡುಗೋಲು** (ನಾ). ದೊಡ್ಡ ಕುಡುಗೋಲು : ಮಿಂಡವೆಂಗಳ ನಗಲಿದ ಚದುರರು ತಮ್ಮ ದಂಡಿಪ ಸ್ಮರಚಾಪವೆಂದು ಭಂಡಿ ಪೆರ್ಗುಡು ಗೋಲುಗಳಿಂದಲಡೆಗಿಕ್ಕಿ ಖಂಡಿಸುವರು ಕಬ್ಬುಗಳನು (ಜೋಹತ. ೨-೯೯). [ಪೆರ್ (< ಪಿರಿದು$_1$) + ಕುಡುಗೋಲು (< ಕುಡುಗೋಲ್)]

**ಪೆರ್ಗುತ್ತ** (ನಾ). ೧. ದೊಡ್ಡ ಕಾಯಿಲೆ ; ಮಹಾರೋಗ : ಈ ಮಹಾ ಪುರುಷಂ ನಿಷ್ಠುರಮಪ್ಪೀ ಪೆರ್ಗುತ್ತದ ನಿರೋಧಮಂ ತಾಳ್ದಿ ಮಟಾಗ ದೆಂತಿರ್ದಪನೋ (ಧರ್ಮಾಮೃ. ೯-೩೬). ೨. ದೊಡ್ಡ ಅಪಾಯ ; ದೊಡ್ಡ ಕೇಡು,—ವಿಪತ್ತು : ಸಣ್ಣಕುತ್ತಂ ಚಿಕ್ಕಿದಾದ ಯತ್ನದಿಂ ಮಾಣಲಪ್ಪುದು ಪೆರ್ಗುತ್ತಂ ಪಿರಿದುಂ ಯತ್ನಂಗೆಯ್ಯೆ ಪೋಕುಮೊ ಪೋಗದೊ (ಶಾಸಂಶ. ೦೦-೦೦) ; ಅಡಸಿದ ಪೊಸವಗೆ ಪೆರ್ಗುತ್ತಗಳನ್ ನುಡಿಯುಲ್ಲಾಸಿಕಾಂ (ಅದ್ಭ.ಕ್ರ. ೬-೦೩೬). [ ಪೆರ್ (< ಪಿರಿದು$_1$) + ಕುತ್ತ ]

**ಪೆರ್ಗುರುಂಟಗೆ**, ಹೆಗ್ಗುರಂಟಿಕೆ, ಹೆಗ್ಗುರಟಿಗೆ, ಹೆಗ್ಗುರುಟಗೆ, ಹೆಗ್ಗುರಟಿಕೆ, ಹೆಗ್ಗುರುಟಿಗೆ (ನಾ). ಒಂದು ಬಗೆಯ ಔಷಧೀಸಸ್ಯ ; ಅಜಶೃಂಗಿ : ಕಕ್ಕೆ ಮಾದಲ(ಲೆ) ಪೆರ್ಗುರುಂಟಗೆ . . . ನುಗ್ಗೆಯುಮೆಲ್ಲಮಂ ಟೀಯಿಂ ಕೊಳುತ್ತಿರೆ ಪೂಸಲಿಂ ನಿಕ್ಕುಮಂ ಕಿಡುಗುಂ ಫಣೀಂದ್ರಮುಖ ಪ್ರಚಂಡವಿಷಂಗಳುಂ (ಕಮದ. ೩-೬೯). **ಹೆಗ್ಗುರಂಟಿಕೆ** : ಮಂಜನ ನಾರು, ಗೊಡ್ಡುಮಂಜಿ, ಹೆಗ್ಗುರಂಟಿಕೆ (ವೃಕ್ಷಿನಿ. ೬೬-೦೩೬೦). **ಹೆಗ್ಗುರಟಿಗೆ** : ಗಂಟುಭಾರಂಗಿ, ದ್ರಾಕ್ಷಿ, ನೆಲಬೇವು, ಹೆಗ್ಗುರಟಿಗೆ . . . ತೈಲಪಾಕ

ದಲ್ಲಿಳುಹಿಕೊಂಡು ಸೇವಿಸಲು ಶೀತಜ್ವರಂ ಶಮನಮಕ್ಕುಂ (ಕಳವ್ಯ. ೬೨). **ಹೆಗ್ಗುರುಟಿಗೆ**: "ತ್ರಿಪರ್ಣೀ—ನರಿವಾಲ, ಹೊನ್ನೆ, ಹೆಗ್ಗುರುಟಿಗೆ, ಮುತ್ತುಗ, ಕುಹರಲೆಹೊನ್ನೆ" (೬ಶಂ. ೬೮). **ಹೆಗ್ಗುರುಟಿಕೆ** : "ಮೂರ್ವಾ, ದೇವೀ... ಗೋಕರ್ಣೀ, ಪೀಲುಪರ್ಣೀ—೧೦ ಹೆಗ್ಗುರುಟಿಕೆಯು ಹೆಸರುಗಳು" (ಸಿದ್ಧಾಂತ. ೦೩೦). **ಹೆಗ್ಗುರುಟಿಗೆ** : "ಮೂರ್ವೆ . . . ಗೋಕರ್ಣೆ, ಪೀಲುಪರ್ಣೆ-ಹೆಗ್ಗುರುಟಿಗೆ" (ನಾತರಾ. ೩); ಹೆಗ್ಗುರುಟಿಗೆ, ಇದನ್ನು ಕೆಲವರು ಸವಣೇಗಡ್ಡೆ ಎಂಬರು (ವಿಶ್ವಿ. ೩೬); ಅಂಬಟೆಬೇರು,ಕಟುಕರೋಹಿಣಿ,ಹೆಗ್ಗುರುಟಿಗೆ, ಹುರುಗಲುಬೇರು, ಕಹಿಪಡವಲ ಸಹ ಕಷಾಯುವಂ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ನಾಶವಾಗುವುದು (ಕಳವ್ಯ. ೮೯).

[ಪೆರ್ (< ಪಿರಿದು$_1$) + ಕುರುಂಟಿಗೆ$_0$ (< ಕುರಂಟಗೆ)]

**ಪೆರ್ಗುೞಿ** 'ಪೆರ್ಗುೞಿ' ನೋ.

**ಪೆರ್ಗುೞಿ, ಹೆಗ್ಗಳಿ** (ನಾ). ೧. ಕೊಬ್ಬಿದ ಕುರಿ : ಆತನ ಬಲಿಗಟ್ಟಿ ಮನ್ಮಥಬಲಾರಿಗೆ ಪೆರ್ಗುೞಿ ಮಾಡಿ ಪೊಯ್ದಪೆಂ (ರಾಜಶೇ. ೧೧-೮೬೫). **ಹೆಗ್ಗಳಿ** : ೨. (ಅಲಂ) ಅತ್ಯಂತ ತಿಳಿಗೇಡಿ ; ಮಹಾಮೂರ್ಖ : ಹೆಚ್ಚಾಗಿಕ್ಕಿ ಹೆಗ್ಗಳಿಯಾಗಬೇಡಾ (ಬಸವ. ೨೦೦).

[ಪೆರ್ (< ಪಿರಿದು$_1$) + ಕುೞಿ$_3$]

**ಪೆರ್ಗುಱಿಪು, ಪೆರ್ಗುಱುಪು, ಹೆಗ್ಗುಱುಹು** (ನಾ). ೧. ಮುಖ್ಯವಾದ ಲಕ್ಷಣ ; ಪ್ರಧಾನವಾದ ಗುರುತು,-ಚಿಹ್ನೆ : ಜನಪತಿಯಪ್ಪ ಪೆರ್ಗುಱಿಪಿನಿಂದಿವು ಬಿಡಿವು ನಾಡೆಯುಮರ್ಗಳೆಂದನುಮಿಪರೆಲ್ಲರುಂತಱಿಯಬಾರದು (ಅನಂಪು. ೧೦-೧೧). **ಪೆರ್ಗುಱುಪು** : ೨. ಅಧಿಕವಾದ ಕೀರ್ತಿ,-ಪ್ರಸಿದ್ಧಿ : ಪೆರ್ಗುಱುಪಿ[ಪಾಠಾಂ. ಪೆಗ್ಗುಱುಹಿ]ನ ಬೇಡರಂ ತಱಿದು ಸೀಳ್ದಱಿದಿಕ್ಕಿತು ಸೊಕ್ಕಿದೆಕ್ಕಲುಂ (ಕೃತ್ತಿ. ೨೬-೬೨; ಹಮ್ಮಸಾ. II, ೮೫೬ ನೋ). **ಹೆಗ್ಗುಱುಹು** : ೨. ಆಸ್ಥಾನದೊಳು ಸತಿಯರ ನಾಮ ಸಲ್ಲದಂತಸ್ಥದೊಳ್ ಪತಿ ಕೇಳಬೇಕೆ ಈ ಸ್ಥಿತಿಗಸರ ಹೆಗ್ಗುಱುಹಿನವರನಷ್ಟೆ ಸ್ವಸ್ಥವೆಂದೆಣಿಸಿದರವರು (ಭರತ. ೨೮-೬೫). [ಪೆರ್ (< ಪಿರಿದು$_1$) + ಕುಱಿಪು]

**ಪೆರ್ಗುಱುಪು** 'ಪೆರ್ಗುಱಿಪು' ನೋ.

**ಪೆರ್ಗುೞಿ, ಪೆರ್ಗುೞಿ, ಹೆಕ್ಕುಳಿ, ಹೆರ್ಕುೞಿ** (ನಾ). ದೊಡ್ಡದಾದ ಹಳ್ಳ,- ಗುಣಿ,-ತೆರಪು : ಎಯ್ದೆ ಮುನ್ನೀರನಡುರ್ತು ಪೀರ್ದುಗುಟ್ಟೆ ಪೆರ್ಗುೞಿಗಳ್ ದಿನಕೃದ್ವಿಮಾನಮಾಕಾರಮಡಂಗೆ ಪುತ್ತುಡದುರ್ ಮುಚ್ಚಿದುದೆಂಬಿನೆಗಂ ವಿಕೀರ್ಣಸೇನಾರಜಮುರ್ವಿ ಪರ್ವಿದುದು (ಶಬ್ದಾಕ್ಷ. ೬-೦೪). **ಪೆರ್ಗುೞಿ** : ಸಮದ ಪೆರ್ಗುೞಿಯೊಳ್ ಕರಿಪೋತಕಂಗಳು ಕೆಡೆವು (ಗಿರಿಜ. ೦-೯೩). **ಹೆಕ್ಕುಳಿ** : ಎತ್ತಾನುಮಿವರ ಮಱಿದೊಡೆ ಮೆಯ್ಯರಂ ಹುಳಿತು ಸತ್ತು ನರಕದ ಹೆಕ್ಕುಳಿ[ಪಾಠಾಂ. ಹೇಕುಳಿ]ಯೊಳಾಳುತಿಹರಿದಕ್ಕೆ ಸಂದೇಹ ಬೇಡ (ಸಮ್ಯಕ್ತ್ವ. ೫-೩೦). **ಹೆಕ್ಕುೞಿ** : ಇಳಿದು ನರಕಭೂಮಿಯ ಹೆಕ್ಕುೞಿಯೊಳ್ ಮುಳುಗಿ ನೆಗೆದು ಜೀವಿಸುತಿಹರ್ (ಜಯುತಾ. ೧೦-೦೩).

[ಪೆರ್ (< ಪಿರಿದು$_1$) + ಕುೞಿ$_2$]

**ಪೆರ್ಗೂಪ** (ನಾ). ಆಳವಾದ ಭಾವಿ ; ದೊಡ್ಡದಾದ ಕೂಪ : ಲಿಂಗದಿಂ ನೃಪಗೆ ಸಾಕ್ಷಿಯು ಕೊಟ್ಟ ತನ್ನಿಷ್ಟಲಿಂಗದಿಂ ಪೆರ್ಗೂಪವಗುಳಿಸಿದ (ಕೃತ್ಯ. ೦-೪-೨). [ಪೆರ್ (< ಪಿರಿದು$_1$) + ಕೂಪ$_2$]

**ಪೆರ್ಗೂಱಿಕ್ಕು** (ಕ್ರಿ). = ಪೆರ್ಗೂಱಿಡು : ಪೆ[ಪಾಠಾಂ. ಹೆ]ರ್ಗೂಱಿಕ್ಕಿ ನುಡಿವ ನಾಲಿಗೆ ಜಳಿ (ಶಿಂಶೋಲ. ಹ. ೫೦೬-೦೫). [ಪೆರ್ಗೂಱು+ಇಕ್ಕು]

**ಪೆರ್ಗೂಱಿಡು, ಪೆಗ್ಗೂಱಿಡು, ಹೆಗ್ಗೂಱಿಡು** (ಕ್ರಿ). ಅತಿಯಾದ ಉಬ್ಬಸದಿಂದ ಕೂಡಿರು ; ದಮ್ಮು ಹೆಚ್ಚಾಗು : ಪೆರ್ಗೂಱಿಡುತ್ತೆಯು ಬಂದಿರ್ದವರಂಜಲ್ ಶ್ವಾಸಮೋಱುತ್ತಿಳಿಯುತುಮಿರೆ (ಕಣ್ವಶ. ೪೦). **ಪೆಗ್ಗೂಱಿಡು** : ಕಾಲನವರನುವಾಗೆ ಬಾಯೊಳ್ಸುರಿಯೆ ಲೋಳೆ ಮೊಗವೊಳ್ಗುಡಿಸಿ ಗೂರು ಪೆ[ಪಾಠಾಂ. ಹೆ]ಗ್ಗೂಱಿಡುತ್ತಮಿರೆ (ಶಿಂಶೋಲ. ಹ. ೫೦೬-೨೬). **ಹೆಗ್ಗೂಱಿಡು** : ಕೆಮ್ಮಿ ಹೆಗ್ಗೂಱಿಟ್ಟು ಸುಯಿವುತೆ (ಹುರೀಕ್ಷ. ೭-೫೫).

[ಪೆರ್ಗೂಱು+ಇಡು$_1$]

**ಪೆರ್ಗೂಱು, ಪೆಗ್ಗೂಱು, ಹೆಗ್ಗೂಱು** (ನಾ). ಹೆಚ್ಚಾದ ದಮ್ಮು,- ಉಬ್ಬಸ : 'ಪೆರ್ಗೂಱಿಡು' ಪರಾ. **ಪೆಗ್ಗೂಱು** : 'ಪೆಗ್ಗೂಱಿಡು' ಪರಾ. **ಹೆಗ್ಗೂಱು** : 'ಹೆಗ್ಗೂಱಿಡು' ಪರಾ.

[ಪೆರ್ (< ಪಿರಿದು$_1$) + ಗೂಱು$_3$]

**ಪೆರ್ಗೂಳಿ** (ನಾ). ಮಾನಂ ಒಡಿಯುವ ದೊಡ್ಡ ಬಂಟ : ಕಿಱುಗೂಳಿ ಪೆರ್ಗೂಳಿ . . . ಸೂಸುಗೂಳ್ಗಳೆಂಬಿವಂ ಕೊಂಡು . . . ಬಿನ್ನಣಂಬಡೆದ ಬೇಡರೊಡಪರೆ (ರಾಜಶೇ. ೫-೦೦೪೮).

[ಪೆರ್ (< ಪಿರಿದು$_1$) + ಕೂಳಿ (< ಕೂಳ್$_1$)]

**ಪೆರ್ಗೆಂಡ** (ನಾ). ದಪ್ಪವಾದ ಕೆಂಡ,-ಇಂಗಳ : ಪೆರ್ಗೆಂಡಂಗಳಂ ಸೂಸುತ್ತುಂ ಗಱ್ಗೆಂದೋವದೆ ತೇಗಿಯುಂ (ರಘುರಾಜ್ಯ. ೬-೦೮೯).

[ಪೆರ್ (< ಪಿರಿದು$_1$) + ಕೆಂಡ]

**ಪೆರ್ಗೆಚ್ಚಲ್, ಹೆಗ್ಗೆಚ್ಚಲು** (ನಾ). ದೊಡ್ಡ ಕೆಚ್ಚಲು ; ತುಂಬಿದ ಕೆಚ್ಚಲು : ಜರಲಾಱದೆ ಪೆರ್ಗೆಚ್ಚಲ ಭರದಿಂದು ಪೆಱಗು ಕುಸಿಯೆ . . . ಬಂದುವಂದು ಪಯಗಳ್ ಪಲವುಂ (ಲೀಲಾವ. ೫-೮೯) ; ಪೊರಲಾರದೊಲೆದಾಡುತಿರ್ಪ ಪೆರ್ಗೆಚ್ಚಲಿಂ ಚುರಿಸುತಿಪ ಹೋಮಧೇನುಗಳಿಂದೆ . . . ಆಶ್ರಮವದೇನೊಪ್ಪಿತೊ (ಲೀಲಾ. ೩೦-೬). **ಹೆಗ್ಗೆಚ್ಚಲು** : ಪೀನೋಧ್ನೀ, ಪೀವರಸ್ತನೀ—ಈ ೨ ಹೆಗ್ಗೆಚ್ಚಲಾವು (ಹಲಾಯು. ೪೫-೦೦೬) ; ಪೀವರಸ್ತನಿ ಪೀವರೋಧ್ನಿಯೆನೆ ಹೆಗ್ಗೆಚ್ಚಲಾಪದು (ಪುಂಗರಾ. ೫೪-೫).

[ಪೆರ್ (< ಪಿರಿದು$_1$) + ಕೆಚ್ಚಲ್]

**ಪೆರ್ಗಡೆ** 'ಪೆರ್ಗಡೆ$_1$' ನೋ.

**ಪೆರ್ಗಡೆತನ** 'ಪೆರ್ಗಡೆತನ' ನೋ.

**ಪೆರ್ಗಡೆತನಂಗೆಯ್** 'ಪೆರ್ಗಡೆತನಂಗೆಯ್' ನೋ.

**ಪೆರ್ಗೆಯ್ವಾಡಿ** (ನಾ). ಒಂದು ಊರಿನ ಹೆಸರು : ಗಾವುಣ್ಣುಗಳೆ ಸೀಮೆದೋಱಿದ ಕ್ರಮ ತೊಳಂಚಿಯವ ಪೆರ್ಗೆಯ್ವಾಡಿಯು . . . ತೊಳಂಚಿಯದ ಸೀಮೆಯೊಳ್ ತಾಗಿ (ಎಕ. XII, ಶಂಶಪ. ೨೬೪-೪೦ ; ೯೦೪).

[ಪೆರ್ (< ಪಿರಿದು$_1$) + ಕೆಯ್$_4$ + ಪಾಡಿ$_2$]

**ಪೆರ್ಗೆಲಸ** (ನಾ). ದೊಡ್ಡ ಕೆಲಸ ; ಮಹತ್ಕಾರ್ಯ : ಕಳಕಳಸಂಭ್ರಮಂ ನೆಲಸಿ . . . ಸಮಂತು ವಿವಾಹಗೇಹಮಂಗಳ[ಕರ]ವಾದ ಪೆರ್ಗೆಲಸಮುಜ್ಜುಗಮಂ ತಳೆದಿರ್ದುದಾವಗಂ (ಶಳಶಂ. ೪೨೩). [ಪೆರ್ (< ಪಿರಿದು$_1$) + ಕೆಲಸ]

**ಪೆರ್ಗೆಸಱ್, ಹೆಗ್ಗೆಸಱು** (ನಾ). ಅತಿಶಯವಾದ ರಾಡಿ ; ಅಧಿಕವಾದ ಕೆಸರು : ಪೆರ್ಗೆಸಱಾಗಿರ್ಪುದು ಬಟ್ಟೆ ಪೋದವಿದಱೊಳ್ ಪೆರ್ಬಂದಿಗಳ್ (ಶಾದಂಪು. ೦೫೮) ; ಅಂಭೋಧಿಯುಂ ಪಿರಿದುಂ ಪೆರ್ಗೆಸಱಾಗಿ ಶತ್ರುಶಿರಮಂ ಸೆಣ್ಣಾಡಿ ವೈರಿಶ್ರೀಯುಂ ಪರಿತಂದೀವುದು (ಎಕ. XI, ದಾವಣ. ೫೪-೧೫; 1280). **ಹೆಗ್ಗೆಸಱು** : ದೇವಮಯಿರಿಯ ಸೆಣಸಿ ಸಮರದಿ ದಾಪಸಿಱಿವರಿಪರಿದು ರಿಪುಗಳ ಹೇಪಗೆಡಿಸಿವ ರಣಾಂಕಣವ ಹೆಗ್ಗೆಸಱು ಮಯಮೆನಿಸಿ (ಕುಮಾರರಾ. ೪-೩೨). [ಪೆರ್ (< ಪಿರಿದು$_1$) + ಕೆಸಱ್]

**ಪೆರ್ಗೆಱೆ³, ಹೆಗ್ಗೆರೆ$_1$, ಹೆಗ್ಗೆಱೆ³, ಹೆರ್ಗೆಱೆ³** (ನಾ). ದೊಡ್ಡ ಕೆರೆ,- ತಟಾಕ : ಪೆರ್ಗೆಱೆಯಾ ಕೆಱಗೆ ಅಱುಗಣ್ಡುಗಂ (ಎಕ. IV, ಹಾಗಪುಂ. ೯೫-೬೮; 776); ಪೆರ್ಗೆಱೆಗಳ ಚಿಲ್ಮಿಂ . . . ಒಪ್ಪುವುದು ರೌರವಪುರಂ (ರಘುರಾಜ್ಯ. ೪-೬); ಪೆರ್ಗೆಱೆಗಳೆಂಬ ವಿನಿಶ್ಚಲಲೋಚನಂಗಳಿಂ ಭೂರಮೆ ದೇಶಸಂಪದಮನೀಕ್ಷಿಸಿ (ಜಾರಿಪು. ೪-೦೬). **ಹೆಗ್ಗೆರೆ$_1$** : ಒಂದು ಅಡವಿಯಲ್ಲಿ ತಿಳಿನೀರನೆಂಬ ಹೆಗ್ಗೆರೆಯಿತ್ತು (ಶಗಡ್ಯ. ೩೪). **ಹೆಗ್ಗೆಱೆ³** : ಆ ಊರ ತೆಂಕಣ ಹೆಗ್ಗೆಱೆಯು ಕೀಳೇರಿಯಲು ಗದ್ದೆ ಖಣ್ಡುಗ ಐದಕ್ಕೆ ಗುಳಿ ೫೦೦ (ಎಕ IV (R). ಹಾಪುರಾ. ೨-೨೮; ಸು. 1116); ಮತ್ತಿಹಳ್ಳಿಯ

ಹೆಗ್ಗೞಿಯ ಬಡಗಣ ಕೋಡಿಯ ಸಂಕಿನ ಯೇರಿಯ ಕೆಳಗೆ (ಶಾಇ. XX. ೨೨೬-೩೭; 1207). **ಹೆರ್ಗೞಿ**[3] : ಕಣಂಬುರಿಗೆಯಾಳೂರಿಂ ಪಡುವಣ ಹೆರ್ಗ್ಗೞಿಯಿಂ ಪಡುವಲ್ ಕೆಯ್ಯುತ್ತರ್ ಹನ್ನೆರಡು (ಎಇ. XIII. ೨೦-೯೩; 1204). [ಪೆರ್ (< ಪಿರಿದು$_1$) + ಕೞಿ[3]]

**ಪೆರ್ಗೇಡು** (ನಾ). ಭಾರಿಯಾದ ಕೇಡು,—ಅಪಾಯ; ಮಹಾ ವಿಪತ್ತು : ಈ ನಿನ್ನ ಪೆರ್ಗೇಡ ನೋಡುತ್ತುಮಾನುಂ ಮುನ್ನಮಿದೆ ಅರಯ್ಯೆ ಅರಯ್ದಂ (ಖಧ್ಯಕ್ಷ. ೨೯-೬೨೦). [ಪೆರ್ (< ಪಿರಿದು$_1$) + ಕೇಡು]

**ಪೆರ್ಗೊಂಬು**, ಹೆಗ್ಗೊಂಬು (ನಾ). ೧. ದೊಡ್ಡದಾದ ಶಾಖೆ,—ಟೊಂಗೆ : ೯ರಿಯ ಭೂಮಿಯೊಡಗೂಡಿ ಮೊದಲಿಂದಂ ಪಣೆಯಿಂದಂ ಪೆರ್ಗೊಂಬುಗಳಿಂದಂ [ಕಿಱುಗೊಂಬುಗಳಿಂದಂ] ಆಲದ ಮರನೆಂತೊಪ್ಪುಗುಂ (ಧರ್ಮಾಮೃ. ೦೩-೫); ೯ರಿ ಮುಱಿದ ಪೆರ್ಗೊಂಬಿನಿೞುಂಬಿನೊಳೞಿತ್ತುಗುವ ಪಾಲ ಪೂನದೊಳ್ ಮಿಗೆ ನೆಗೆವ ಗಗನಚರಿಯ ನಿಡುಜಡೆ ತೊಡಂಕಿ (ಕಾಂಚೊ. ೩-೩೫ ವ) : ಪೊಯ್ಲ್ ಬಲ್ಪಿಂ ಮುರಿದ ಮರದ ಪೆರ್ಗೊಂಬಿನೊಳ್ ಕೊಂಬದೊಂದಂಟರೆ (ಕಾಕಂತ. ೦೭-೩೩). ೨. ಕಹಳೆಯಾಕಾರದ ಒಂದು ಬಗೆಯ ದೊಡ್ಡ ವಾದ್ಯ : ಬುರುಗಿನ ಪೆರ್ಗೊಂಬಿನ ಕಾಳೆ ಜಾಗಟೆ ... ದಮಾಸಗಳಬ್ಬರಮೆಸೆದುದು (ಕಂಪಿ. ೯-೬೦). **ಹೆಗ್ಗೊಂಬು** : ೧. "ಸ್ಕಂಧಶಾಖಾ, ಶಾಲಃ — ಈ ೨ ಮರದ ಹೆಗ್ಗೊಂಬು" (ಹಲಾಯು. ೩೦-೨೬): ಮರದ ಹೆಗ್ಗೊಂಬುಗಳಲಿಟ್ಟನು (ಕುವ್ಯಾಶ. ೬-೨೨): ದಧಿಮುಖನೊಂದು ಹೆಗ್ಗೊಂಬುಳ್ಳ ಹೆಮ್ಮರನ ಹಿಡಿದು ಕೆಡಹುತ ಹರಿದು ಬಂದನು (ತೊರಾ. ೩೨-೩೭): ಖಳನಿಕುರುಂಬವನು ಬಲುಹೆಮ್ಮರನ ಹೆಗ್ಗೊಂಬುಗಳಲೇ ಹೊಯ್ದು ಹೊಱಮಂಡಿಸಿದನುಸುರುಗಳ (ತೊರಾ. ೫-೯-೨೨). [ಪೆರ್ (< ಪಿರಿದು$_1$) + ಕೊಂಬು$_1$]

**ಪೆರ್ಗೊಡಲಿ** (ನಾ). ದೊಡ್ಡದಾದ ಪರಶು : ಸಂಜಯಂತಮುನೀಶ್ವರಂ ಕ್ಷಮೆಯೆಂಬ ಪೆರ್ಗೊಡಲಿಯಿಂ ದುರಿತಾಟವಿಯಂ ತಱಿದು (ಧರ್ಮಾಮೃ. ೬-೦೨೯) : ಮೊಳೆಯೊಳೆ ತೋಡಿ [ಸೀಂಟಿ] ಕಳೆಯಲ್ ಬಗೆದಪ್ಪುದು ಮಾಡದಾಗಳುಮ್ಮಳಿಸಿ ಬೞಿಕ್ಕೆ ಪೆರ್ಗೊಡಲಿಗೊಳ್ವವೊಲಕ್ಕುಮದೊಳ್ಳಿತಕ್ಕುಮೇ (ಸೂಕ್ತಿಸು. ೦೭-೦೯). [ಪೆರ್ (< ಪಿರಿದು$_1$) + ಕೊಡಲಿ]

**ಪೆರ್ಗೊಣ್ಣಂದ** (ನಾ). ಒಂದು ಸ್ಥಳದ ಹೆಸರು (?) : ಪೆರ್ಗೊಣ್ಣನ್ದ ತಟಾಕ ಪೂರ್ವ್ವಭಾಗ (ಎಕ. VII (R), ಹೊಂಶ. ೩೫-೫೯ ; 713). [ಪೆರ್ (< ಪಿರಿದು$_1$) + ಕೊಣ್ಣಂದ]

**ಪೆರ್ಗೊತ್ತಳ** (ನಾ). ದೊಡ್ಡ ಬುರುಜು : ಪರಿಖಾದಿಗಳಂ ಸಾಂಗಮೆನೆ ರಚಿಸಿಯುಂ ಪೆರ್ಗೊತ್ತಳ ಪಿರಿಯ ಪಿರುಗಿಗಳನಮರ್ಚಿಯುಂ (ಶ್ರೀಪು. ೦೨-೦೦ ವ). [ಪೆರ್ (< ಪಿರಿದು$_1$) + ಕೊತ್ತಳ$_1$]

**ಪೆರ್ಗೊತ್ತು** (ಕ್ರಿ). ಹೆಚ್ಚಾಗಿ ತಳ್ಳು ; ಅಧಿಕವಾಗಿ ನೂಕು (?) : ಮೊಲೆಯಿಂದಂಬಿರಿವಿಟ್ಟು ಪಾಲುಗುತುಂದೋರಂತಿರ್ದೊಡಂ ತಮ್ಮ ಕೆಚ್ಚಲನಂದೊಯ್ಯನೆ ಕಂದದುರ್ವಿ ಕೆಲನಂ ಪೆರ್ಗೊತ್ತೆಯುಂ . . . ವಿಭ್ರಾಜಿಸುತಿರ್ಪುವಾ ವಿಷಯದೊಳ್ ಸಾನಂದದಿಂ ಧೇನುಗಳ್ (ಶಾಂತೀಶ್ವ. ೦-೯೫); ಮನದೊಳ್ ಪುಟ್ಟಿದ ಸಮ್ಮದಂ ಪುದಿದು ಪೆರ್ಗೊತ್ತಲ್ಕೆ ತಾನುರ್ದಿದತ್ತನೆ ಮಯ್ಯುರ್ಚೆ . . . ಸುತನಂ ನೋಡುತ್ತುಮಿರ್ದಂ ನೃಪಂ (ಕುಸುಮಾ. ೦೫-೦೨೯). [?]

**ಪೆರ್ಗೊನೆ** (ನಾ). (ಹಣ್ಣು, ಹೂವು ಮುಂತಾದುವುಗಳ) ದೊಡ್ಡ ಗೊಂಚಲು ; ತುಂಬಿದ ಗೊಲೆ : ಸುಲಭದಾನಿಯ ಪೋಲ್ತು ಪೆರ್ಗೊನೆಯೊಳು ಕಾತ ಹಲಸಿನ ಮರಗಳೊಪ್ಪಿದುವು (ಸೋಮಶ. ೨೩-೯೬) ; ಕಿಕ್ಕಿಱಿದ ಪೆರ್ಗೊನೆಗಳಿಂದೆ ಎಸೆವ ಚೆಂದೆಂಗಾಯ್ಗಳೊಂದೊಂದನೊಡೆಯೊತ್ತಲೊಸರಿ ಸೋರ್ವೆಳನೀರ್ಗಳರ್ಘ್ಯಂಗಳಾಗೆ (ಕೃಷ್ಣಕಾ. ೩-೨೭). [ಪೆರ್ (< ಪಿರಿದು$_1$) + ಗೊನೆ$_2$ (< ಗೊಲೆ$_2$)]

**ಪೆರ್ಗೊರವ**, ಹೆಗ್ಗೊರವ (ನಾ). ೧. ಉತ್ತಮ ಸಂನ್ಯಾಸಿ ; ಹಿರಿಯ ತಪಸ್ವಿ : ಕೇಳೋಯ್ಪ್ಪನ್ಕಟವಪ್ರಶೈಲಮಡೞ್ದೀನಮ್ಮಾ ಕಳನ್ತೂರನಂ ಪಾಲೇ ಪೆರ್ಗ್ಗೊರವಂ ಸಮಾಧಿ ನೆಱೆದೊನ್ ನೋನ್ತೆಯ್ದಿದೋಸ್ಸಿರ್ದ್ಧಿಯಾನ್ (ಎಕ. II. ೨೨-೯; ಸು. 700). **ಹೆಗ್ಗೊರವ** : ೨. ಈಶ್ವರ; ಶಿವ : ಧಿಟ್ಟನೈ ಹೆಗ್ಗೊರವ . . . ಅಬಲಾಜನಾಣ್ಮಪ[ನ]ನಂಗನನು ಬಳಿಕ ಸುಟ್ಟನು (ಅಂಬಿಶಾ. ೨೯-೯೦). [ಪೆರ್ (< ಪಿರಿದು$_1$) + ಗೊರವ]

**ಪೆರ್ಗೊಲ್ಲಿ**, ಪೆಗ್ಗೊಲ್ಲಿ (ನಾ). ದೊಡ್ಡ ಪ್ರವಾಹ,—ಹಳ್ಳ : ತೆಂಕಯ್ಯ ಗ್ಗೊರ್ಕ್ತಿಗೂಡಲ ಪಳ್ಳಮೇ ಪಡುವಾಯ್ ಪೆಗ್ಗೊರ್ಲ್ಲಿಯೆ . . . ಸೀಮೆ (ಎಕ. IV. ಹಗ್ಗಡ. ೯-೨೬ ; ಸು. 750); ಪೆಗ್ಗೊರ್ಲ್ಲಿಯುಳ್ಕೂಡಿತ್ತು ಪೆಱ್ಕೋಗೆಯ ಮೊದಲುಳ್ ಬಡಗಾಯ್ಪೆಗ್ಗೊರ್ಲ್ಲಿಯೆ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV. ಎಡತೊ. ೬೮-೭೬ ; ಸು. 890). **ಪೆಗ್ಗೊಲ್ಲಿ** : ಪೆಗ್ಗೊಲ್ಲಿಯ ನೀರ್ವ್ವರಿಗಿಲು ಬಡಗಣದೆಸೆಯೊಳ್ (ಮ್ಯಅ೦. ೦೯೨೦, ೦೦-೧೮೪ ; 967). [ಪೆರ್ (< ಪಿರಿದು$_1$) + ಕೊಲ್ಲಿ]

**ಪೆರ್ಗೊಸರ್ಕೆ** (ನಾ). ಅತ್ಯಧಿಕವಾದ ಮೋಹ : ಘನಕುಚಮಧ್ಯತಾಡನೆಗೆ ಮುಂದಲೆಯೊಳ್ ಸಮನಾಗೆ ಬಲ್ಲಿಯಿಂದಿನಿಯನ ಪೆರ್ಗೊಸರ್ಕೆ ಸರಿಯಾಗೆ ಪತಿಕ್ಷಮನಾಳ್ದ ಚಾಟುನಿಸ್ವನಮರ್ದೆಗೊಳ್ವ ಚುಂಬನಕೆ ಬೆಂಬಱಿಯಿಂದಿರ್ದಪ್ಪ ತನ್ನ ಚುಂಬನ[ಮ]ಣಿಯಾಗೆ ಕಾಂತೆ ಪುರುಷಾಯಿತದೊಳ್ ಕರವೊಪ್ಪೆ ತೋಱಿದಳ್ (ಸೂಕ್ತಿಸು. ೦೯-೯೭). [ಪೆರ್ (< ಪಿರಿದು$_1$) + ಕೊಸಱು$_0$ (< ಕೊಸಱು$_2$) + — ಕೆ]

**ಪೆರ್ಗೊಱಡು** (ನಾ.) ದೊಡ್ಡ ಮರದ ತುಂಡು,—ಕಟ್ಟಿಗೆ : ಆತನ ಕೈಗಳಂ ಕಟ್ಟಿಸಿ ತಳವಳನೆ ಕುದಿವೆಣ್ಣೆಗೊಪ್ಪರಿಗೆ ಕಾಯ್ಸುಲ್ಲಿಗೆಳತರಿಸಿ ಮತ್ತೆ ಪೊತ್ತುವೊಲುರಿವ ಪೆರ್ಗೊಱಡುಗಳನಿಡಿಸಿ (ಶ್ರೀಖಂಶಾ. ೦೦-೩೦). [ಪೆರ್ (< ಪಿರಿದು$_1$) + ಕೊಱಡು (< ಕೊಱಂಡು)]

**ಪೆರ್ಗೋಣೆ**, ಪೆಗ್ಗೋಳಿ (ನಾ). ಗೋಣಿಯ ಮರದಲ್ಲಿ ಒಂದು ಬಗೆ; ದೊಡ್ಡ ಗೋಣಿ : ಗೋಣಿಗೆ—ಕಿಱುಗೋಣಿ, ಗೋಣಿಕಾಪುತ್ರ, ಪೆರ್ಗೋಣಿ (ಕಶಬ್ದ. ೨೯೮ ಕ್ರಿಯಾ). **ಪೆಗ್ಗೋಳಿ** : ಹಾಲೆಯುರನೇಱಲು ಕಡವ ಪೆಗ್ಗೋಳಿ ... ಹಾದರಿಯ ಮರ ಮೊದಲಾದವುರ್ವಿಜವು (ಶಾಳ್ವಭಾ. ೫-೩). [ಪೆರ್ (< ಪಿರಿದು$_1$) + ಗೋಣಿ$_1$ (< ಗೋಳಿ$_1$)]

**ಪೆರ್ಚಾಳ್**, ಹೆಚ್ಚಾಳು (ನಾ). ಹಿರಿಮೆಯುಳ್ಳವನು ; ಶ್ರೇಷ್ಠನಾದವನು : ಕೋಪಪ್ರಸಾದಮುಳ್ಳವರೆ ದೈವಮೆಂಬೊಡೆ ಮನ್ನೆಯರುಮರಸರುಂ ತಳಾಱರುಂ ದಂಡಾಧಿಪರುಂ ಪೆರ್ಚಾಳ್ಗಳುಂ ದೈವಮಪ್ಪರ್ (ಧರ್ಮಾಮೃ. ೯-೦೦೮). **ಹೆಚ್ಚಾಳು** : "ಮಹೋತ್ಸಾಹಃ, ಮಹೋದ್ಯೋಗಃ, ಮಹೇಚ್ಛಃ, ಮಹಾಮನಾಃ—ಈ ೪ ಹೆಚ್ಚಾಳು" (ಹಲಾಯು. ೫೬-೨೦೦) : ನಿನಗೆ ಮಣಿವವನಲ್ಲ ರಾಧಾತನಯನವ ಹೆಚ್ಚಾಳು ಕಡ್ಡಿಯ ಮೊನೆಗೆ ಕೊಂಬನೆ ನಿನ್ನನು (ಕುವ್ಯಾಶ. ೦೭-೦೭). [ಪೆರ್ಚ್$_3$ + ಆಳ್$_3$]

**ಪೆರ್ಚಿಸು**, ಪೆರ್ಚ್ಚಿಸು, ಪೆಱ್ಚ್ಚಿಸು, ಹೆಚ್ಚಿಸು (ಕ್ರಿ). ೧. ವೃದ್ಧಿಪಡಿಸು ; ಅಧಿಕಗೊಳಿಸು: "ಪೆರ್ಚಿಸು-ವರ್ಧನೇ" (ಕಶಬ್ದ) : ಬಂಧುಜನಕ್ಕೆ ಮುಗ್ಧ ಮುಖಚಂದ್ರಾಲೋಕಮಾಲೋಕನೋತ್ಸವಮಂ ಪೆರ್ಚಿ[ಪಾಠಾಂ. ಚ್ಚಿ]ಸೆ ಬಾಲನಿಂತೊದವಿದಂ ಸಂಸಾರಸಾರೋದಯಂ (ಆದಿಪು. ೬-೦೨೯); ತದೀಯ ಸರ್ವಸ್ವಮಂ ನಿಜೇಶಂಗೆ ತಂದುಕೊಟ್ಟು ಪತಿಪ್ರಸಾದಮಂ ತನ್ನೊಳನುದಿನಂ ಪೆರ್ಚಿಸುತ್ತುಂ (ಶಾಂದೇಶ. ೩-೨೨ ವ; 1047); ಚೇತಃಪ್ರೀತಿಯಂ ಪೆರ್ಚಿಸುವುದು ಪವನಸ್ವೈರಚಾರಂ ಸಮೀರಂ (ಶಬ್ದಮ. ೨-೯೦). ೨. ಹಬ್ಬಿಸು; ಹಬ್ಬುವಂತೆ ಮಾಡು : ವಿಷಯವಿಷವಲ್ಲಿಯಂ ಪೆರ್ಚಿಸುವ ಜಳಧಾರೆ (ಶಾದಂಪು. ೫೫೩). ೩. ಉಕ್ಕುವಂತೆ ಮಾಡು ; ಹೊರಹೊಮ್ಮಿಸು : ಕೊಳಪ ದಯಾಂಭೋನಿಧಿಯಂ ಪೆರ್ಚಿಸಿಯುಱವಿಗಳಿದ ಸತ್ಪಥದೊಳ್ಸರಿಯಿಸುವಲಘುಗುಣಪ್ರಾಭೇಂದುಪದಂ ನಮ್ಮಂ ಪರಿರಕ್ಷಿಸುಗೆ (ಜಯಾಸ. ೮-೯); ಬಾಣನ ಮಹ

ದಾಸ್ಥಾನದುಗ್ಧಾಬ್ಧಿಯ ಕೇಣವಿಲ್ಲದೆ ಪೆರ್ಚಿಸುವ ಏಕಾಂಕ ತಾನೆಂಬಂತೆ . . . ಮಂತ್ರೀಶನೊಪ್ಪಿದನು (ಬೋಪಿತ. ೨೦-೩೨). ೪. ವಿಸ್ತಾರಗೊಳಿಸು : ಮನೆಯಂ ಪೆರ್ಚಿಸುವೊಡೆ ಮುನ್ನಿನ ಮಾಟ್ಕೆಯೊಳಯ್ದೆ ಮಾಡಲುಂ ಬಡಗಲ್ವೊತ್ತು ನಿರ್ಮಿಸುಗುಟ್ಟಿದ ದೆಸೆಗಳೊಳನಿತಂ ಪೆರ್ಚಿಸಲೇಡ (ಲೋಕೋಪ. ೩-೦೩). ೫. (ಆಲಂ) ಕತ್ತರಿಸು ; ಕಡಿ ; ಕೊಯ್ಯು : ಆಗಳಾ ಮದಗಜಾಂಕುಶದಿಂದೆ ಪೆರ್ಚಿಸಿ ನಾಭಿಯಂ (ಶಂಕರ. ೦-೯೩) ; ಕ್ಷೀರಾಜ್ಯಾಮೃತಮನ್ನಾಭಿಯೊಳ್ತಳೆದು ಧಾತ್ರಿಕ್ಷಯಮಮಕ್ಕೆಂದು ಪರಸೆ ನಾಭನಾಳಮಂ ಪೆರ್ಚಿಸುವುದು (ಜಾತ್ರಂತಿ. ೨೩೫); ಪೊರ್ಕ್ಕುಳ ಕುಡಿಯಂ ಪೆರ್ಚಿಸಲಿಕ್ಕಿದ ಮಣಿಕನಕಪುಂಜಮೊಸದಿರೆ (ಅಸಂಪು. ೦೨-೮೨). 'ಪಚ್ಚಿಸಂ$_1$' ಪರ್ರಾ. ೬. ಬೀಗುವಂತೆ ಮಾಡು; ಉಬ್ಬಿಸಂ : ಅವರನೆ ಪೊರೆವರ್ ಪೆರ್ಚಿಪರವರನೆ . . . ನೋಡುವರ್ಗಳೆ ನಂಟರ್ (ಕಾವ್ಯಸಾ. ೫೬೨); ಸಂತಸದೆ ಪೆರ್ಚಿಪುದೆಂದವರ್ದರ್ಪ್ಪಿನೊಳ್ ಕರಂ ಕರಗಿಪುದೆನ್ನನೆಂದೊಸೆಮ ನೀಂ ಕೃಪೆಯಿಂದೆಲೆ ಹಂಪೆಯಾಳ್ದನೇ (ಹಂಪಾಶ. ೫); ನೀನೆಣಿಕೆಗೊಂಡನ್ನ ಪೆರ್ಚಿಸಿ ಬಯಲಿಗೀಗ ಮುನಿದಣಕದಿಂ ದಿಟ್ಟ ತಪ್ಪಿಸಿದೊಡೆ (ಸೌಂದರ. ೦೯-೨೯). ೭. [ಗಣಿತ] ಗುಣಾಕಾರ ಮಾಡು; ಗುಣಿಸು : "ಪೆರ್ಚಿಸು ನೂಂಕು . . . ಗುಣಿಸು . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು" (ಕ್ಷೇತ್ರ. ೦೦-೮); ಕ್ರಮದಿಂದು ಗೃಹರಾಶಿಭಾಗಕಲೆಯಂ ನೂಱಿಂಟಱಿಂ ಪೆರ್ಚಿಸು (ಜಾತಕ. ೮-೦). ಪೆಚ್ಚಿಸು : ೧. ಚತುರೋಪಾಯಮನೊದವಿಸಿ ಸಿಜಾಧಿಪತಿ ಯಾದವನಾರಾಯಣನ ರಾಮ ರಾಜ್ಯಶ್ರೀಯಂ ಪೆಚ್ಚಿಸುವಜ[ಂ]ಗೆ ನಲ್ಲಂ ಮಲ್ಲಂ (ಶಾಇ. XX. ೨೦೩-೦೬; 1244). ಪೆಟ್ಚಿಸು : ೧. ಮಾಱು ತೋಣ್ಣದ ನೆಲನುಮಾದಿತ್ಯಭಟರರ ಸ್ಥಾನವುವ ರಕ್ಷಿಸಲ್ಪೆಟ್ಚಿಸಲಿವರ ಸಮರ್ತ್ಥರೆನ್ದು ಗೋಕರ್ಣ್ಣಪಣ್ಡಿತ ಭಟರಗ್ಗ . . . ಕೊಟ್ಟರು (ಕಇ. I, ೦೩-೦೫; 865); ತನ್ದೆ ನಡಯಿಸಿದ ಬಳಿಕನ್ತಿಂದುವರ ಬಡ್ಡಿಗೊಟ್ಟು ಪೆಟ್ಚಿಸಿ ಪೊನ್ನಂ ಮನ್ದರಗಿರಿಧೈರ್ಯ್ಯಂ ಸಾನನ್ದದೆ ಶ್ರೀಸಾನ್ತಿಸೆಟ್ಟಿ ಪರಿರಕ್ಷಿಸಿದಂ (ಶಾಇ. XX. ೫೫-೩೨; 1082). ಹೆಚ್ಚಿಸು : ೧. ಆಸನ-ಶತ್ರುವನಾಕ್ರಮಿಸಲು ಸಮರ್ಥನಲ್ಲ ಎಂದು ದೇಶ ಕಾಲಾದಿಗಳಂ ಹಾರುತೆ ದುರ್ಗಾದಿಗಳಂ ಹೆಚ್ಚಿಸುವ ವಿಜಿಗೀಷುವಿನ ಸ್ಥಿತಿಯು (ಶಾಸನ. ೬): ಕೊಳುಗುಳದ ಹೆಚ್ಚಳಸು ಹೆಚ್ಚಿಸಿತಂತಕನ ಪುರವ (ಕುಮಾರಕೃ. ೨-೩೬). ೬. ಮಕ್ಕಳನ್ನು ಪ್ರೀತಿಯಿಂದ ಸಾಕಬೇಕೇ ಹೊರತು, ಅವರನ್ನು ಹೆಚ್ಚಿಸಿ ಹಾಳು ಮಾಡಬಾರದು (ಜೂ). ೭. "ಗುಣಿತಂ, ಆಹತಂ — ೨ ಗುಣಿಸಲ್ಪಟ್ಟದ್ದು, ಹೆಚ್ಚಿಸಲ್ಪಟ್ಟದ್ದು, ಹೊಡೆಯಲ್ಪಟ್ಟದ್ದು" (ಸಿದ್ಧಾಂತ. ೩೯೬). ೮. (ಆಲಂ) (ಶುಭವೆಂದು ಗಣಿಸುವ ದೀಪವನ್ನು ಕುರಿತು ಹೇಳುವಾಗ) ಆರಿಸು,– ನಂದಿಸು : ಕಡೆ ಹಗಲ ಕೂಳುಂಡ ಮೇಗೆ, ಹಣತೆ ಹೆಚ್ಚಿಸೆ ಕಣ್ಣು ತೂಗೆ ಮುಚ್ಚುವುದೆ ಮಾನಚ್ಚಿಯಾ (ಗೀತಾಂ. ೬೦-೨೬).

ಪೆರ್ಚಿಸಿಕೊಳ್ಳು—ವೃದ್ಧಿಯನ್ನುಂಟು ಮಾಡಿಕೊಳ್ಳು : ವಿಧಿಪೂರ್ವಸಾಧಿತ ಮಹಾಮಂತ್ರವ್ರಜಂ ತನ್ನ ತೋಳ್ವಲದಿಂ ಪೆರ್ಚಿಸಿಕೊಂಡಿಳಾಲಲನೆಯೊಳ್ ಮಿಗಿಂಗಮೆಕ್ಕೆಗಂ ಚಲಕಂಗೆಯ್ವವೊಲ್ (ಶಾಂತಿಪು. ೫-೦೩).

[ಪೆರ್ಚು$_2$ + — ಇಸು$_1$]

ಪೆರ್ಚು$_1$, ಪೆಚ್ಚು$_1$, ಪೆಟ್ಚು, ಹೆಚ್ಚು$_1$ (ಕ್ರಿ). ೧. ಅಧಿಕವಾಗು ; ವೃದ್ಧಿಯನ್ನು ಹೊಂದು : ಅತಿಶಯಂವಾಗು : ಸಂಸಾರವೈರಾಗ್ಯದಾದವಾನುಂ ಪೆರ್ಚೆ (ಪಣ್ಣ್ಯರಾ. ೬೫-೨೮); ಆ ಶಂಕೆ ಪೊಣ್ಮುತ್ತಿರೆ ಪೆರ್ಚಿತ್ತುಗ್ರಘೋಷಂ (ಆದಿಪು. ೦೩-೩೬); ಪಗೆ ನೀಗೆಯುಂ ಮುಳಿಸು ಪೋಗೆಯುಮಾಯತಿ ಪೆರ್ಚೆಯುಂ ಜಗಂ ಪೊಗೞೆಯುಮಾಂತರಾತಿನೃಪರಂ ಕವೆ ಕೊಲ್ವುದು (ಶಂಕರ. ೮-೯೯). ೨. (ಮರ, ಗಿಡ ಮೊದಲಾದುವುಗಳಂತೆ) ಬೆಳೆ : ಸರಿದಧಿಪತಿ ಮೊಟಕಾಲ್ವರಂ . . . ತಲೆಯ ನೆಲೆಗೆ ಲೋಕಾಂತರಮೆಡೆಯಿಲ್ಲೆನಿಸೆ ಪೆರ್ಚಿದಂ ದನುತನಯಂ (ಶಂಕರ. ೧೨-೧೧) : ಕಸದೊಡನೆ ಕೂಡಿ ಪೆರ್ಚಿದ ಸಸಿಯುಂ . . . ಪಲವಂ ಭಾವಿಸುತಿರ್ಪನ ತಪಮುಮೊಪ್ಪಲಾರ್ಕುಮೆ ಕಡೆಯೊಳ್ (ಧರ್ಮಾಮೃ. ೨-೮೨). ೩. ದೊಡ್ಡದಾಗು ; ಹಿರಿದಾಗಂ : ಅಲ್ಲಿಯ ಖಚರರ್ . . . ದೇಹಪ್ರಮಾಣದೊಳ್ ಕುಂದುಮರುಂ ಪೆರ್ಚುವರುಮಲ್ಲರ್ (ಆದಿಪು. ೯-೧೨೦ ವ) ; ಪವನಂ ಪೆರ್ಚಿದ ಮಹಾವೃಕ್ಷಂಗಳಂ ಕೀಳ್ವುದಲ್ಲದೆ ಮೃದುವಪ್ಪ ತೃಣಂಗಳಂ ಕೀಳದು (ಕುಶಲ. ೯೬-೯) ; ತೆಳುಮಸಿಱ್ ಪೆರ್ಚಿತು (ಸಿದ್ಧರಾ. ೦-೯೯). ೪. ಉಕ್ಕು ; ಪ್ರವಹಿಸು : ಸುಯ್ಯೆಲರುಬ್ಬುರಾಶಿ ವಾರಿಮಯಮೆನಲ್ಕೆ ಪೆರ್ಚುವುದು (ಕಾದಂಬ. ೩೩೫) ; ಶ್ರುತದುಗ್ಧಾಂಭೋಧಿ ಪೆರ್ಚಲ್ಪಿನನಿಗದಿತ ತತ್ತ್ವಾಂಶು ಪರ್ವಲ್ (ಧರ್ಮಾಮೃ. ೦-೯); ಜಿನಧರ್ಮ್ಮಾಂಬೋಧಿ ಪೆರ್ಚುತ್ತಿರೆ (ಎಕ. VIII (S), ಸೊರಬ. ೫೮೭-೯೭ ; 1207). ೫. ವಿಸ್ತಾರವಾಗಂ; ಹಬ್ಬು; ವ್ಯಾಪಿಸು ; ಹರಡು : "ಪೆರ್ಚು – ವಿಸ್ತಾರೇ" (ಶಮದ) : ಪೊಗೆ ಪೆರ್ಚೆ [ಪಾಠಾಂ. ಪೊಣ್ಮೆ] ನೆಗೆದ ಕಾಟ್ಕಿರ್ಚುಮು ಸಿಂಹಾಸನದ ಮೇಗೇಱಿದ ಕೋಡಗಮುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆನೆಂದಂಜಿ (ಪಣ್ಣ್ಯರಾ. ೮೫-೨೭) ; ದಿಗ್ಭಿತ್ತಿವಿಭೇದಿ ಪೆರ್ಚೆ ಕವನಾರ್ಣರಾವಂ (ಶಂಕರ. ೯-೯೨) ; ಹಿಡಿಂಬೇಶ್ವರಮೆಂಬುದು ಆ ಲಿಂಗಂ ಪೆರ್ಚ್ಚೆ ಪೆರ್ಚುವ ಕಾರಣದಿಂ ಕಳೇಶ್ವರಮದಮೃತಲಿಂಗದೇ[ವರ್] ಪ್ರಸನ್ನತೆಯಿಂ ಕಣ್ಣಶ್ರೀಮದ್ದಣ್ಣನಾಯಕ ದೇವಪಯ್ಯ . . . ದೇಗುಲದ ಅಧಿಷ್ಠಾನಮಂ ಕಟ್ಟಿಸಿ (ಶಾಇ. IX-i, ೦೨೬-೨೯ ; 1064). ೬. ಬೀಗು ; ಹೆಮ್ಮೆಪಡು ; ಗರ್ವಿಸಂ : ಎನ್ನನೆ ನಚ್ಚಿ ಪೆರ್ಚೆ ಮುಂ ಪೊರೆದು (ಶಂಕರ. ೯-೬೦) : ಗಂಗಾನ್ವಯಂ ಪೆರ್ಚ್ಚೆ ವರ್ತಿಸುತ್ತಿರೆ (ಎಕ. VII, ಶಿಕಾರಿ. ೯ ೩೯ ; 1122) ; ಆದಟಂ ಮುಂ ಗೆಲ್ದುದಂ ನೀಂ ನೆನೆನೆನೆದು ಭುಜಾಗರ್ವದಿಂ ಪೆರ್ಚದಿರ್ ಪೆರ್ಚದಿರ್ (ಜಗಂ. ೮-೬೯). ೭. ಸಂತೋಷಿಸಂ ; ಹಿಗ್ಗು : ಸವಣರೆಂದೊಡೆ ಪೆರ್ಚುವಳ್ ಜಿನಪೂಜೆಯೆಂದೊಡೆ ನೋಡುವಳ್ (ಧರ್ಮಾಮೃ. ೬-೦೯); ನುಡಿಯಂ ಬಳಲ್ದ ಪಾಂಥನೆರ್ದೆ ತಣ್ಪಿನ ಸೋನೆಯನಾಂತ ಮಾಳ್ಕೆಯಿಂ ಪೊಡಕರಿಸುತ್ತೆ ಪೆರ್ಚೆ (ಗಿರಿ. ೨-೦೯): ಅವಗುಣಕೋಟಿಯಂ ಮಱೆದು . . . ತಲೆದೂಗಿ ಮೆಚ್ಚಿ ಪೆರ್ಚುವ ವಿನಸೂಯರಂ . . . ಆರ್ಚಿಪೆಂ (ಜಗನ್ನಾ. ೦-೦೦). ೮. ನೀಳವಾಗು ; ಚಾಚು ; ನಿಡಿದಾಗು : ದೆಸೆಗಳ್ ಪೆರ್ಚಿದೆ ಮೊಟ್ಟನಾದುವಗಲಕ್ಕೆಂಬನ್ನೆಗಂ . . . ಅದ್ರೀಂದ್ರಂಗಳಂ ತಂದು ಕೀಲಿಸಿದಂ (ಆದಿಪು. ೮೫-೫೦). ೯. ವಿಜೃಂಭಿಸು ; ಅಟ್ಟಹಾಸ ಮಾಡು : ದಡಿಗನ ವಿಬ್ಬುಮಂ ಮಿದಿದೊಡಲ್ಲದೆ ಮಾಣೆನ ಮೋಘಮೆಂದು . . . ರಥಂಗಳನುಬ್ಬಿದಿಯಿಚ್ಚು ಭೀಮನಂ ತಡೆಯದೆ ಮುಟ್ಟೆ ಪೆರ್ಚಿ ನುಡಿದಂ ಕಪಿಕೇತನನಂ ಮುರಾಂತಕಂ (ಶಂಕರ. ೧೨-೧೬). ೧೦. ಅಭಿವೃದ್ಧಿ ಹೊಂದು; ಏಳಿಗೆಯಾಗು, ವರ್ಧಿಸಂ : ಒಳಗಿರ್ದ ವೈರಿಗಳ್ ಮೊಕ್ಕಳವಿಲಾಯರ್ ಪೆರ್ಚಲಧಿಕವಿಭವರ್ಕಳುಮಂ ತಳರದೊಡನಿರ್ದ ಬಡಬಾನಳನೆಂದುಂ ಪೆರ್ಚಲೀಯ[ದಂ]ತಂಬುಧಿಯುಂ (ಕಾವ್ಯಾ. ೩-೦೯೯); ಪೆಣ್ಣು ಪೆತ್ತವರ ಬಳಗ ಬಳೆವುದು ಬೇಗ ಪೆಣ್ಣು ಪೆತ್ತವರು ಪೆರ್ಚುವರು (ಜಾಲಿ. ೫-೯). ೧೧. ಉಬ್ಬು : ಒಳಗಿರ್ದ ವೈರಿಗಳ್ ಮೊಕ್ಕಳವಿಲಾಯರ್ ಪೆರ್ಚಲಧಿಕವಿಭವರ್ಕಳುಮಂ ತಳರದೊಡನಿರ್ದ ಬಡಬಾನಳನೆಂದುಂ ಪೆರ್ಚಲೀಯ[ದಂ]ತಂಬುಧಿಯುಂ (ಕಾವ್ಯಾ. ೩-೦೯೯); ಉರಿಗಣ್ ಕೆತ್ತುವ ಮಿಸೆ ಪೆರ್ಚಿದ ಕೊರಲ್ ಪೆರ್ಬಾಲ . . . ಚೆಲ್ವಾಗೆ ತತ್ಸ್ಯಾನನಂ ತರದೊಳ್ ಪೆರ್ಬುಲಿಯಿದ್ದುದು (ಕಳಶಂ. ೬೬). ಪೆಚ್ಚು$_1$ : ೧. ಎನಿತನಿತಂ ಪೆಚ್ಚುಗುಮಂತನಿತನಿತೊಡನೊಡನೆ ಪೆರ್ಚುತಿಕ್ಕುಂ ಮೋಹಂ ಧನದಿಂ ಪರಿಜನದಿಂದೆಂದಿನಿತಱಿನಗ್ಗಳವನೊಲ್ಲೆನೆಂಬಂ ಜೈನಂ (ಸಮಯ. ೫-೮೩) ; ಒಂದಕ್ಕೆ ನೂಱುಮಡಿಯಾಗಿ ಪೆಚ್ಚುಗುಂ (ಚಿತ್ರಪು. ೬-೦೯) ; ಉಚ್ಚವದೊಳಗಿತ್ತ ನವರತ್ನಭೂಷಣ ಪೆಚ್ಚಿ ಬಂದಿವೆ ನೋಡೇಳು (ಶಂಕರ. ೨೨-೯೬). ೪. ಒಸೆದು ಕಣ್ಗಳಿಂದೆ ಸುಱಿದ ರಸದ ಪೊನಲು ನಚ್ಚಿ ಪೆ[ಪಾಠಾಂ. ಪು]ಚ್ಚೆ (ಸಮಯ. ದೀ.

೦೯೬-೧) : ಪೆರ್ಚಿದಿಂಗಡಲೂರ್ಮಿಮಾಲೆ ಮಾಲೆಗಳೆದೆಯೊಳಂಪ್ಪಳಿಸಿ ಪೊಳೆ ಪೊಳೆವ ಮಂಜುಮಿನ್ನುಗಳ್ (ಕ್ಯಜಾ. ೬-೦೦). ೭. ಭೂತೇಶನಂಗೆಗೆಲ್ಲಾ ರಾಧಿಸುತ್ತಮಿರೆ . . . ಧನವೆಲ್ಲ ತೀರುತಿರೆ ಮನವಲ್ಲಿ ಪೆರ್ಚುತಿರೆ (ಕೊಂಗುರ. ದೇ. ೧೫೩-೧೩) ; ಸಚ್ಚರಿತ್ರಂ ಕಲ್ಲದೇವಂ ಪೆರ್ಚಿ . . . ಜಾಯಿಲದನಾಗಳ್ ಬಟುಕಿದುತ ಕರೆದು (ಬಸವು. ೫೫-೯೬) ; ಪೆರ್ಚುತಂ ಸೀಕರಣೆ ರಸಪಾನಗಳ ಸವಿಗೆ (ಕಬಕೃ. ೫-೬೦). ೧೨. ಅಧಿಕಗೊಳಿಸು : ವೃದ್ಧಿಪಡಿಸು : ಒಲಿದು ಕೌರವ ಪಾಂಡವರಿಗಗ್ಗಳಿಪ ಮಿತ್ರತ್ವವನು ಪೆರ್ಚಿಯುಲಘುಸೌಖ್ಯದ ರಚಿಸಿ ಬಂದೈ (ಕಿಶ್ಯಅ. ೩-೨೩). ೧೩. ಮೀರು : ಮಿಗಿಲಾಗು : ಪೆರ್ಚಿದವರುಂಟಾದಡೀಕೆಯು ಮೆಚ್ಚುವುದು ವೀಣೆಯನೆನಲು ತಾನುಚ್ಚ ಸರದಲಿ ಸಾರಿಸಿದನಾ ಚಾರುದತ್ತಕನು (ಕಾಶ್ಯಶಾ. ೦೮.೯). ೧೪. ಶೋಭಿಸು: ಕಾಂತಿಯನ್ನು ಹೊಂದು : ಅಚ್ಚಮುತ್ತಿನ ಗುಡಿಗಳಿಂ ರತ್ನಪಟ್ಟಗಳ ಕುಚ್ಚುಗಳ ಸಂದಣಗಳಿಂ ಕೇರಿಕೇರಿಯೊಳ್ ಪೆರ್ಚಿದುವು ಗೃಹಗೃಹದ್ವಾರಂಗಳೊಳ್ ಮಹಾಮೇರುವೆಗಳೇನೆಂಬೆನು (ಕಬಕೃ. ೫-೩). ಪೆರ್ಚು : ೧. ಬಲ್ಲಿಲ್ಲಳ್ಳುದುರೆ ಕುದುರೆಯೊಳ್ಕಟ್ಟಿ ಅತಿಕುಮಾರ ಕಾಳಗ ಪೆರ್ಚು (ಎಕ. VIII. ಸೊರಬ. ೦೦-೬ ; ಸು. 800). ೧೦. ಈಸತ್ತ ಧರ್ಮ್ಮಗವಾನ್ಯ ದೋರಾ ಕಾಲಂ ಪೆರ್ಚುಗೆ (ಎಕ. VI. ಕಡೂ. ೩೭.೮ ; ಸು. 675 ?) ; ಕಜಾಯ ಅರಸಂಗೆ ಒಕ್ಕಲ್ ಪೆರ್ಚುಗೆ (ಬ್ಯಆ೦. ೦೯೦೮, ೦೫-೦೫ ; 700) ; ಕೊಟ್ಟೋನ ಕಾಲಂ ಪೆರ್ಚುಗೆ (ಎಕ. VI. ಚಿಕ್ಕಮಗ. ೨೬-೦೦ ; ಸು. 950 ?). ಹೆಚ್ಚು₁: ೧. ಹೆಚ್ಚದು ಕುಂದದು . . . ಕರಗದು ಕೊರಗದು ಎನ್ನ ನಿರ್ಭಾವಾರ್ಚನೆ (ಅನಭ. ೫೦-೦೫೦) ; ಮಾತುದೋಟದು ಹೆಚ್ಚಿದಾನಂದಾ ತಿರೇಕಕೆ ಚಿತ್ತ ನೆಟ್ಟಿಯುದು (ಕುಮಾರವ್ಯಾ. ೦೫-೨) ; ದಿವಸ ದಿವಸಕೆ ಬಾಲಶಶಿ ಹೆಚ್ಚುವವೊಲನುಜರುಸಹಿತ ಲಕ್ಷ್ಮೀಧವನು ಹೆಚ್ಚಿದನು (ತೊರವೆ. ೦-೮-೬೦). ೫. ಕದಳಿಯೊಳು ಮದದಾನೆ ಸೊಕ್ಕಿಂದದಲಿ ಹೆಚ್ಚಿದ ಚಾತುರಂಗದ ಮೆದೆಯನೊಟ್ಟಿದು ಹೂಣೆ ಹೊಕ್ಕನು (ಕುಮಾರವ್ಯಾ. ೫-೪). ೬. ಇದ ಸನ್ನದೆಂದು ಸಟ್ಟೆ ಮಟ್ಟೆ ಹೆಚ್ಚಿ ಕೆಚ್ಚುಗೊಂಡು ಒಚ್ಚತಹೋದ ಎನ್ನ ಮನಕ್ಕೆ ಇನ್ನಾವುದು ಗತಿಯೊ (ಅನಭ. ೦೫-೩೪); ಹೆಚ್ಚಿದ ಹಿರಿಯ ಡೊಳ್ಳಿನ ರಾವುತರ ಕೆಡಹಿದನು ನಿಮಿಷದಲಿ (ಕುಮಾರವ್ಯಾ. ೦೦ ೦೮); ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು (ಪುರಂದ. ೨-೪೫ ಅನುಬಂಧ). ೭. ದೇವದೇವ ಕರುಣವುದೆನುತ ಬಗೆ ಹೆಚ್ಚಿ ತನು ಹೆಚ್ಚಿ ನಟ್ಟಂತೆ ನಿಂದಿರುತೆ (ಬಸವ. ೫-೨೪); ಮೆಚ್ಚಿ ಬಂದವಳಲ್ಲ ಕಂಪಿಲರಾಯಗೆ ಹೆಚ್ಚಿ ಬಂದವಳಾನಲ್ಲ (ಕುಮಾರರಾಮ. ೨೬-೦೨೦). ೯. ಬೊಮ್ಮದೇವಂ ಹೆಚ್ಚಿ ಹೋಹೋ ನಿಲ್ಲು ನಿಲ್ಲೆಂದೆನುತ ರಘುಂಕಿಸಲು . . . ಬೆಚ್ಚಿ ಮದಕರಿ ಕೆದೆದು ಮಡಿಯುತು (ಬಸವು. ೨೨. ೩೩); ಪೌರುಷಾಂಗದ ನಿರತಿಶಯವನು ನೋಡು ನೀನೆಂದುರುಪರಾಕ್ರಮಿ ಹೆಚ್ಚಿದನು ಹೇರಾಳರೋಷದಲಿ (ತೊರವೆ. ೪. ೦೦-೨೬). ೧೦. ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ ಚಂದ್ರ ಕುಂದೆ ಕುಂದುವುದಯ್ಯಾ (ಬಸವ. ೨೫). ೧೧. ಜಡಿವ ಹಿರಿಯ ಉಬ್ಬಣದ ಹೆಚ್ಚಿದ ಮುಡುಹುಗಳ . . . ಹೊಳೆವ ದಾಡೆಯ ದಡಿಗ ದಾನವನವನಿ ಹಚ್ಚೆಗೆ ನೆಗ್ಗಲೈತಂದ (ಕುಮಾರವ್ಯಾ. ೦೫-೪೪). ೧೫. ಉತ್ಸಾಹಿಸು : ತಿರುನೀಲಕಂಠಕುಶವರು ಹಿಗ್ಗಿ ಹೆಚ್ಚುತ್ತ [ಪಾಠಾಂ. ಹೆಚ್ಚಿ ಹಿಗ್ಗುತ್ತ] (ತಿರುರ. ದೇ. ೦೦-೦); ಉರಿಯ ಬಂದಿಯ ಹಿಡಿದು ಹೆಚ್ಚುವ ದೊರೆಯುಲೀ ದಿಟ ಪಾದರಸವೆಲಿಯಾರಸ ನಿನ್ನ ಕುಮಾರನೇಸರ ಮಾಡು ಪಾರ್ಥಂಗೆ (ಕುಮಾರವ್ಯಾ. ೯-೪೦). ೧೬. (ಆಲಂ) (ಬಳೆ, ಮಂಗಳಸೂತ್ರ ಮುಂತಾದ ಮಂಗಳವಸ್ತುಗಳನ್ನು ಕುರಿತು ಹೇಳುವಾಗ) ಒಡೆ: ತುಂಡಾಗು ; ಸೀಳು : ಈ ಕಾಲದ ಬಳೆಗಳು ತೊಟ್ಟು ಕೊಂಡು ಒಳಗೆ ಹೋಗುತ್ತಿದ್ದಂತೆಯೇ ಹೆಚ್ಚುವುವು (ದಾಸಕಂ. ೮೦); ಕರಿಮಣಿಸರ ಹೆಚ್ಚಿದೆ. ಬೇರೆ ಮಾಡಿಸಬೇಕು (ರೂಢಿ). ೧೭. ಮುಗಿ: ಇಲ್ಲವಾಗು; ತೀರು : ಮನೆಯಲ್ಲಿ ಅರಿಸಿನ, ಕುಂಕುಮ ಹೆಚ್ಚಿದೆ. ಅಂಗಡಿಯಿಂದ ತರಬೇಕು (ರೂಢಿ). ೧೮. ತುಂಡು ಮಾಡು; ಕತ್ತರಿಸು: "ಕೊಚ್ಚು, ಹೆಚ್ಚು, ಹೆರೆ, ತುರಿ, ತುಂಡರಿಸು" (ಕಂನುಹು. ೮೨); ಈ ಮೂಲೆಯಲ್ಲಿ ಪಲ್ಲೆ ಹೆಚ್ಚುವ ಈಳಿಗೆ ಇಟ್ಟಿದೆ (ಮುಂಬಯಿ. ೪-೦೭೩); ತರಕಾರಿಗಳನ್ನು ಹೆಚ್ಚುವುದಕ್ಕೆ ಮುಂಚಿತವಾಗಿ ತೊಳೆದು ಶುಚಿಮಾಡಬೇಕು (ಗೃಹವಿ. ೫೦). 'ಪಸು₁' ಪರಾ.

ಹೆಚ್ಚಿಕೊಳ್ಳು = ೧. ಕತ್ತರಿಸಿಕೊಳ್ಳು : ಕೈಹೆಚ್ಚಿಕೊಳ್ಳದೆ ಜೋಪಾನವಾಗಿ ತರಕಾರಿಯನ್ನು ಹೆಚ್ಚು (ರೂಢಿ). ೨. ಗರ್ವಿಸು : ಅಹಂಕಾರಪಡು : ಈ ಹುಡುಗ ತುಂಬ ಹೆಚ್ಚಿಕೊಂಡಿದ್ದಾನೆ. ಇವನು ಕ್ಷಮೆಗೆ ಅರ್ಹನಲ್ಲ (ಪತ್ರಿ. ೮೫).

[ದೇ॥. ತಮಿ. ಪೆರು, ಪೆರುಕು ; ಮಲ. ಪೆರುಕು; ತುಳು. ಪೆರ್ಚು, ಪೆರ್ಜು. ಪೇರ್ಚು. ಹೆಚ್ಚು : ತೆಲು. ಪೇರುಚು, ಪೇರ್ಚು, ಹೆಚ್ಚು, ಎಚ್ಚು ; ಕೋಲಾ. ನಾಯ್ಕಿ. ಪೆರ್ಗ್ ; ಗೊಂಡಿ. ಪರ್ಸಾನಾ]

ಪೆರ್ಚು₂, ಪೆಚ್ಚು₂. ಹೆಚ್ಚು₂ (ನಾ). ೧. ಆಧಿಕ್ಯ ; ಹೆಚ್ಚಳ; ವೃದ್ಧಿ : ಕಾಲ್ಪರ್ಚಂ ಕಂಡುದಜಾಂ ಧೂರ್ತರಪ್ಪ ಪೊಲ್ಲ ಲಿಂಗಿಗಳ ಪೆರ್ಚಲ್ಕಂ (ಪಂಪಭಾ. ೯೬-೨೯) : ಕೋಪದ ಪೆರ್ಚಿನೊಳ್ ನಡುಗುವ್ವೂರುಯುಗಂ ಬಡುಪಿಂದರಲ್ದ ನಾಸಾಪುಟಂ (ಕಂಕಪಾ. ೭-೬) ; ಇನನಸ್ತಮಿತನಾತನೊಳ್ ತಪದ ಪೆರ್ಚಂ ನಿಚ್ಚಲುಂಗೆಯ್ವ ಕೋಕಪಿಕಾಯಕ್ಕಿನಿತಾಯ್ತು ಶೋಕಂ (ಕಂತ್ರೃ. ೮-೦೦). ೨. ಹಿರಿದು ; ದೊಡ್ಡದು : ನೀನ್ ಪೆಚ್ಚು ದಾವುದುಂ ಪೆರ್ಚಲ್ತು (ಅಕ್ಯಕಾ. ೦೫-೨೯೬). ೩. ಹಿರಿಮೆ ; ಮೇಲ್ಮೆ : ಹೆಗ್ಗಳಿಕೆ : ಕರ್ನಾಟಕದಿಂದೆ ಮಾತ್ತೆ ರಚಿಸಿ ಶ್ರೀಧರ್ಮನಾಥಪ್ರಬಂಧದ ಪೆರ್ಚಂ ತಳೆದಂ (ಬಾರವು. ೦.೪೮). ೪. ಅಭ್ಯುದಯ ; ಏಳಿಗೆ : ದೈವಬಲಮಿಲ್ಲದ ಸೇವಕನಂತೆ ಮುಟ್ಟುಗೆಟ್ಟು ಗ್ರಹಬಲಮಿಲ್ಲದ ಜನ್ಮಗನಂತೆ ಪೆರ್ಚಿಲ್ಲದೆ (ಲಾಂತಿಪು. ೪-೩೦ ವ); ಗಂಗಾಧರ ಪುರಹರ ಸರ್ವೇಶನೆಂದುರ್ಬಿಪಾ ಸೌಖ್ಯದ ಪೆರ್ಚಂ ಕೊಟ್ಟು...ರಕ್ಷಿಪ್ಪುದೆನ್ನಂ (ರಕ್ಷಶ. ೬೦). ೫. ಉಕ್ಕೇರಿಕೆ; ಪ್ರವಾಹ : ಉದರದೊಳಿರ್ದ ತನೂಜನ ವದನೇಂದುನ್ಮತಿಯೆ ಮಾಡೆ ಲಾವಣ್ಯಸಮುದ್ರದ ಪೆರ್ಚನರಸಿ ಲಾವಣ್ಯದ ಪೂರ್ಣ್ಯದ ಪರಮಪದಮನೇನೆಬ್ಬಿದಳೊ (ಅಜಿತ. ೩-೨೦) : ವರ್ಚಸ್ಸುಧಾಂಬುಧಿಗೆ ಪೆರ್ಚಂ ಮಾಡಿ ಚಂದ್ರೋದಯಂ (ಕಾವ್ಯಸಾ. ೫೬೯) : ಜಗತೀಪಲಯುವಪಾಲಸೌಭಾಗ್ಯ ರತ್ನಾಕರಂ ಪೆರ್ಚನಿಂ ಮೇರೆವರಿಯೆ (ಕ್ಯಜಾ. ೦.೦). ೬. ಸಂತೋಷ; ಹಿಗ್ಗು ; ಆನಂದ : ಮತ್ತಕೋಕಿಲೋಚ್ಚೈರ್ಧ್ವನಿಂ ಮಹೋರಾರ್ಣವನೆ ಪಡೆದತ್ಯುಹರ್ಷಿಕಾ ಪೆರ್ಚನಂತರಂಗಕ್ಕೆನ್ನ (ಶಬರ. ೦-೫೬); ತ್ರೈಲೋಕ್ಯ ಮಾಂಗಲ್ಯನಂ ಕಣ್ಣಾರೆ ನೋಡಿ ಮನದ ಪೆರ್ಚಿಂದಂ ಕರಕಮಳಂಗಳಂ ಮುಗಿದು ನಿಂದಿರ್ದು (ಧರ್ಮಾಮೃ. ೫-೬೦) : ಪೆರ್ಚಿದವಿದ ಮೇನೆ ತತ್ಪತಿಗಳುತ್ಸವವಾರಿಧಿ ಮೀಟಿ ಗೌರಿ ತಾನುದಯಿಸಿದಳ್ (ಗಿರಿಜಾ. ೩-೪೬). ೭. (ಆಲಂ) ಕತ್ತರಿಸುವಿಕೆ ; ಛೇದನ : ಒಸಗೆಯ ಮೇಲೆ ಮತ್ತೊಸಗೆ ಪೊರ್ಕ್ಕುಟ ಪೆರ್ಚಿನ ಮೇಲೆ ಪೆರ್ಚು (ಅನಂತಪು. ೦೨.೬೧). ೮. ಗರ್ವ ; ಅಹಂಕಾರ : ಪೆರ್ಚ [ಚರ್] ನೊಸದೀವತಿಬೆಳ್ಳಗದಿಂದಮಿನಾವ ಮಮ್ಮಲ ಮಜಾಗುತ್ತಮಿನಾವ ಕದುಲೊಭಕದಾನಗುಣಂಗಳಂ ಪಳಂಚಲೆವುದಾತುರ್ ಕೂತು ಬಿರಿದೀವ ಗುಣಾ ಗುಣಾದಂಕಕಾತ್ರಿಯಾ (ಅಜಿತ. ೦೨-೦೬). ಪೆಚ್ಚು₂ : ೧. ಎಲ್ಲಿ ನೋಡಲು ರೋದನದ ಪೆಚ್ಚು (ಶಿವಸ್ವ. ೦-೦೮) ; ಪೆಚ್ಚಿನಿಂ ಪೊಡೆವ ಸಿಡಿಲ್ಮಿಂಚುಗಳ ಹೊಯ್ಲ್ಗಳಿಂ ಬಯ್ಗಳಿಂ ತತ್ಪಥಮಂಗುರ್ವಿ ಸಿದುದು (ಕಂಪ್ರ ೫೬ ೨೨). ಹೆಚ್ಚು₂ : ೧. ಮುಚ್ಚರಿವ ವಿಟಕೋಟಿಯುಂ ಕಟವುಚ್ಚಿ ನೋಡುವ ನೋಟದಂಬಿನ ಹೆಚ್ಚನೀಕ್ಷಿಸಿ (ಬಸವು. ೪೦.೪) : ಕೂಡೆ ಮೋಘೇಶ್ವರ ವಿಜಯ ಜಯಂತರ್ಗೆ ನಾಡೂರುಗಳ ಹೆಚ್ಚನಿತ್ತು (ಭರತ. ೨೩-೦೦೮) ; ಆದರೆ ಸಿಟ್ಟು ನನಗೇ ಹೆಚ್ಚು (ಹಾಡು. ೪). ೨. ನನ್ನ

ಸಹೋದರರ ಹಸಿವೆಯ ಸಂಕಟದ ಮುಂದೆ ನನ್ನದೇನೂ ಅಷ್ಟು ಹೆಚ್ಚಿನದಲ್ಲ (ಪುಂಬಾಯಿ. ೯ ೭೭). ೩. ಮುಂದಿ ಮೆಚ್ಚಲದುವೆ ಹೆಚ್ಚೆ ? ಸುಳ್ಳು. ಹೊಳ್ಳು ಆ ಸ್ತುತಿ ! (ಅಸಕ. ೦೭-೦). ೯. "ಹೆಚ್ಚು ಎಂದರೆ ಧಾನ್ಯ ಸಾಗಿಸುವುದಕ್ಕೆ ಮೊದಲು ಮಾಡುವ ಒಂದು ಕ್ರಿಯೆ" (ಪುರಾಣಸ. ೫೯) ಇನ್ನು ಳಿದಿರುವುದು ಧಾನ್ಯವನ್ನು ಮನೆಗೆ ಸಾಗಿಸುವುದೊಂದೇ. ಇದಕ್ಕೆ ಮೊದಲು "ಹೆಚ್ಚು" ಮಾಡುತ್ತಾರೆ (ಪುರಾಣಸ. ೫೯).

**ಹೆಚ್ಚು ಹೆಚ್ಚು, ಹೆಚ್ಚೆಚ್ಚು** (ದ್ವಿರುಕ್ತಿ) : ಇತ್ತೀಚಿಗೆ ಅವನು ಹೆಚ್ಚು ಹೆಚ್ಚು ಮೌನಿಯಾಗತೊಡಗಿದ್ದನು (ಕಾನೂರು. ೩೯೯); ಬೊಂಬಲಿಗರ ಹಾಕಿ ಬೊಂಡೊರಡೆ ಹೊರಳಿದರಿಲ್ಲ ಹೆಚ್ಚೆಚ್ಚು ಬಯಸಿದರಿಲ್ಲ (ಭೂರಂದ. ೫. ೦೩೭ ೧) ; ನಾವು ಮೇಲಕ್ಕೆ ಹತ್ತಿದಷ್ಟೂ ನಮಗೆ ಭೂಮಿಯು ಹೆಚ್ಚೆಚ್ಚಾಗಿ ಕಾಣುವದು (ಭೂಗೋಳ. ೨). **ಪೆರ್ಚುಕಡಮೆ, ಹೆಚ್ಚುಕಡಮೆ, ಹೆಚ್ಚುಕಡಿಮೆ** = ೧. ವ್ಯತ್ಯಾಸ; ಭೇದ ; ಲೋಕವೂಪುದಾದೊಡವೇನ್? ಪೆರ್ಚು ಕಡಮೆ ಗಳೊಳವೆ ಸಚ್ಚಿದಾನಂದದೀ ಲೀಲಾವಿನೋದದೊಳ್ (ಶ್ರೀರಾಮಪ. ೭೨೫. ೧೩೬); ಕೆಲಸದಲ್ಲಿ ಹೆಚ್ಚುಕಡಮೆ ಆಗದಂತೆ ಮಾಡು (ರೂಢಿ); ಸದಸ್ಯ, ವಿಧಿದರ್ಶಿ... ೨ ಯಜ್ಞದಲ್ಲಿ ಹೆಚ್ಚು ಕಡಿಮೆ ಬಾರದಂತೆ ಸರಿ ನೋಡುತ್ತಿರುವ ಋತ್ವಿಕ್ಕಿನ ಹೆಸರು (ಸಿದ್ಧಾಂತ. ೨೦೭); ಚಿನ್ನಕ್ಕೂ ಕಬ್ಬಿಣಕ್ಕೂ ಹೆಚ್ಚು ಕಮಿಮೆ ಇಲ್ಲವೇ? (ಗಾದೆ). ೨. ಸುಮಾರು; ಅಜಮಾಸು ; ಹೆಚ್ಚುಕಡಮೆ ನಾನು ಅಲ್ಲಿ ಆರು ಗಂಟೆಗೆ ಬರುತ್ತೇನೆ (ರೂಢಿ); ಹೆಚ್ಚು ಕಡಮೆ ನಾಳೆಯೊಳಗೆ ಈ ಕೆಲಸವನ್ನು ಮಾಡಿ ಮುಗಿಸುತ್ತೇನೆ(ರೂಢಿ); ಕೆಲವರು ಈ ವಿವರಣೆಯನ್ನು ಹೆಚ್ಚು ಕಡಿಮೆ ಒಪ್ಪಿಕೊಂಡು ತಮ್ಮ ದೃಷ್ಟಿಯನ್ನು ಅಂತರ್ಯಾಮಿಯಾದ ನಿರಪೇಕ್ಷ ಸತ್ಯದ ಕಡೆಗೆ ತಿರುಗಿಸಿದರು (ತತ್ತ್ವಶಾ. ೩೦೯). **ಪೆರ್ಚು ಕುಂದು, ಹೆಚ್ಚು ಕುಂದು** = ೧. ಆಧಿಕ್ಯ ಹಾಗೂ ಕೊರತೆ; ನ್ಯೂನಾಧಿಕ್ಯ : ಪೆರ್ಚು ಕುಂದಿಲ್ಲ ದಂತೆಚ್ಚಱಿಗೂಡಿ . . . ಸೊಲ್ಲಿಸುವೆನು (ಹರಿಭ. ೧. ೯೪); ಮಾತಿನ ಮಾಲೆಯು ಹೆಚ್ಚು ಕುಂದಿನ ಹೋರಾಟವುಳ್ಳನ್ನಕ್ಕರ ಅನ್ವೇಷಿತಿಯಿಲ್ಲ (ಅನುಭ. ೩೩-೯೭); ಶರಣರ ಹೆಚ್ಚು ಕುಂದುಗಳು ನುಡಿಯುದಿಹ ಸತ್ಯರಿನ್ನರ ಭಾಷೆ (ಬಸವ. ೬. ೧). ೨. ವ್ಯತ್ಯಾಸ; ಹೆಚ್ಚುಕಡಮೆ; ಅಂತರ: ಪರಿಕಲ್ಪಂಗೆಯ್ಯದನ್ನಂ ಕುಡುವ ಮರಕುಜಂ ಪೆರ್ಚು ಕುಂದುಳ್ಳುದು (ಶಬ್ದಮಣಿ. ೨-೦೩೦). ೩. ಏರಿಳಿತ; ಉಬ್ಬರವಿಳಿತ : ಒಂದು ಭಂಗವನಾಂತೆನೆನುತಬ್ಧಿ ತಗ್ಗಿ ತಾಂ ಹೆಚ್ಚು ಕುಂದಿನೊಳೆಸೆದುದು (ಪಂಪ. ೨-೩). **ಹೆಚ್ಚಲಿ** = 'ವೃದ್ಧಿಯಾಗಲಿ' ಎಂಬರ್ಥದಲ್ಲಿ ಹೇಳುವ ಮಾತು : ರಾಗಿಯನ್ನು . . . ಅಳೆಯಲು ಪ್ರಾರಂಭಿಸುತ್ತಾರೆ. ಪ್ರಾರಂಭದಲ್ಲಿ ಒಂದು ಎಂದು ಹೇಳುವುದಿಲ್ಲ. "ಹೆಚ್ಚಲಿ" ಎನ್ನುತ್ತಾರೆ (ಪುರಾಣಸ. ೫೯). [< ಪೆರ್ಚು$_1$ /ತೆಲು. ಪೆಚ್ಚು]

**ಪೆರ್ಚುಂಬುರುಳ್** (ನಾ). ಅಧಿಕವಾಗುತ್ತಿರುವ ಹೊನ್ನು; ಹೆಚ್ಚುತ್ತಿರುವ ಸಂಪತ್ತು : ಆತುಂಬೊಲಿಮಿಂಚುಂಬುಬುರ್ಚಿ ಪೆರ್ಚುಂಬುರುಳ್ (ಕಪುದ. ೦೬೦ ಶ್ರಡೂ). [ಪೆರ್ಚು$_1$ + ಪುರುಳ್]

**ಪೆರ್ಚುಗೆ, ಪೆಚ್ಚುಗೆ, ಹೆಚ್ಚಿಗೆ$_1$, ಹೆಚ್ಚುಗೆ** (ನಾ). ೧. ಆಧಿಕ್ಯ ; ವೃದ್ಧಿ; ಬಾಹುಳ್ಯ ; "ಉಬ್ಬರಂ . . . ಒಟ್ಟಜೆ, ಪೆರ್ಚುಗೆ–ಈ ೧೯ ಅತಿಶಯಂ" (ಶಬ್ದಮ. ೫೭–೨೩೪); ಉತ್ತಮವೈರಾಗ್ಯದ ಪೆರ್ಚುಗೆಯಿಂ ತಡೆಯದೆ ಸೆಟ್ಟಿಯನೆಯ್ದಿವಂದು (ಧರ್ಮಾಮೃ. ೨-೦೯೫); ಪರರ್ಗೆ ತಮ್ಮಯ ಸುವಿದ್ಯೆಯನಿತ್ತೊಡೆ ಮತ್ತಮುತ್ತಿಯುಂ ಸೊಂದರವಾಗಿ ಪೆರ್ಚುಗೆಯನೆಯ್ದುವುದು (ಧಾರ್ಮ. ೪-೨೧). ೨. ದೊಡ್ಡದು ; ಹಿರಿದು : "ಪೆರ್ಚುಗೆಯೆನೆ ಪಿರಿದಪ್ಪುದು" (ಶಬ್ದಮ. ೫೭). ೩. ನೀಳವಾದುದು; ನಿಡಿದಾದುದು : ನಿನ್ನ ವಿಕ್ರಮಸಿಂಹದಾ ಕೇಸರವನೆಲ್ಲ ಕತ್ತರಿಸದಿರೆ, ಪೆರ್ಚುಗೆಯ ದಂಷ್ಟ್ರ ನಖಗಳಂ ಕಸಿವಾಡದಿರೆ . . . ಹೆತ್ತಬ್ಬೆ ಮೇಣಾಯ್ಕನಾಣೆ (ಚಿತ್ರಾಂಗ. ೭೯–೨೦೭). ೪. ಹೆಚ್ಚಿನದು ; ಅತಿಶಯವಾದುದು ; ಉತ್ತಮವಾದುದು : ತರುಣಿಯರಿರ್ವರು ತಂತಮ್ಮ ಸಖಿಯರ ಐರದೊಳಗಿತ್ತಾಪದ ಪುಡಿಯ ಪರಿಮಳ ಪೆರ್ಚುಗೆಯಿಂದು ವಿದಗ್ಧರಿಂದಬಿಡು ಬರುವುದೆಂದು ಕಳುಹೆ (ಜೀವಂಧರ. ೦೨. ೦೭). ೫. ಉಬ್ಬರ ; ಉಕ್ಕುವಿಕೆ : ತೆರೆನೊರೆ ಬುದ್ಬುದಂ ಸುಳಿ ಜಲಂ ತನೆ ಪೆರ್ಚುಗೆ ಗುಣ್ಪು ಘೋಷಣಂ . . . ಬಗೆಗಾದೊಡೆ ಸೈತು ಸಮುದ್ರವರ್ಣನಂ (ಕಾವ್ಯಾವ. ೨. ೦); ಪೆರ್ಚುಗೆಯೊಳುಬ್ಬೆದ್ದ ಪಾಲ್ಗಡಲ ವೀಚಿಗಳೊ . . . ಎನಲ್ಪಸರಿಸಿತ್ತು ಚಂದ್ರಕಿರಣಂಗಳೆಲ್ಲಾ ದೆಸೆಯೊಳು (ಕೃಷ್ಣರಾ. ೨೬-೦೫); ವಾರ್ಧಿ ಪೆರ್ಚುಗೆಯುವರ್ಚೆ ತಾಳ್ದನುಮಿತೋರ್ವಯುಮಂ ಪಿಮಕಾಲಚಂದ್ರಮಂ (ರಾಜಶೇ. ೯. ೪). ೬. ಏಳಿಗೆ ; ಅಭ್ಯುದಯ ; ಪ್ರಜೆಗಳ ಪೆರ್ಚುಗೆಗೆಂದಖಿಳಜನಾರ್ಥಿತ ಫಳದ ನಮಸುರದ್ರುಮಮಂ ವಿಶ್ವಜಗನ್ನುತನ ಸುಳಿನುಬುದ್ಧಿ ಜಳದೆ ಬಳೆಯಿಸನೇನುದಾರನೊ ಭೂಪಂ (ವರ್ಧಮಾ. ೦ ೫೪). ೭. ವೈಶಾಲ್ಯ ; ವ್ಯಾಪ್ತಿ : ಒಂದು ಚಿಜ್ಞನ ಪೆರ್ಚುಗೆಗೆ ಕಾರಣವಲ್ಲದುದಂ ಕಾರಣಂಗೆಯ್ದು ಸುರಲಿದು ಪ್ರೌಢೋಕ್ತಿಯೆನಿಪುದು (ನರಸ. ೮೯-೨೩೩). ೮. ಪರಾಕ್ರಮ ; ಶೌರ್ಯ : "ಪೆರ್ಚುಗೆಯೊಳ್ ಬಲಂ" (ಶಬ್ದಮ. ೮೭). **ಪೆಚ್ಚುಗೆ** : ೧. "ಪೆಚ್ಚುಗೆ ಮುಸಲ್ ಪೆಚ್ಚು[ಶಾಕಾಂ. ಹೆಚ್ಚು]ಗೆ" (ಶಾರಂ. ೨೫). ೫. ಭಂಗದಿಂದ ಗೊಂದಾದಂ ನೆನೆನೆನೆದು ನಿಟ್ಟುಸಿರ್ವಿಟ್ಟು ಸುದ್ಯುಂತನುಧಿ ತೆರೆಪೆಚ್ಚು [ಶಾಕಾಂ. ಚೆರ್]ಗೆಯೊಳಿರ್ಪುದು (ಕೃಷ್ಣರಾ. ೬-೨); ಕಣ್ಗೆಸೆದುದು ಮಹಾರ್ಣವವುದಬ್ಬರಿಯ ಪೆಚ್ಚುಗೆಯನೆಚ್ಚಱಿಸುತ (ಸಂದಿಏತ. ೨-೬). ೯. ಹಿರಿಮೆ ; ಹೆಗ್ಗಳಿಕೆ : ಕಿಚ್ಚು ಮಚ್ಚರಿಸಿ ಜಲದ ಮೇಲೆ ನಡೆಸಿದೆ ಪೆಚ್ಚುಗೆ ತನಗೆಂಬಂತೆ ಮಚ್ಚರಿಸಿಯೆ ಮಾಜಿಣಾಂಕೊಡೆ ನಿನ್ನನು ಹೆಚ್ಚು ಮಾಡುವೆ ರಣಧರೆಗೆ (ಅಜಿತ. ೬-೨೦೩). **ಹೆಚ್ಚಿಗೆ$_1$** : ೧. ಸಲಿಕೆ ಕೈಗಳಬಿಟ್ಟಿ ಬಿದ್ದನು ಪುತ್ರವಿರಹನ ಹೆಚ್ಚಿಗೆಯ ತಾಪದನು ಹಸಿದಿಬಳಿಯಿನರ್ಜನನ (ಕುಮಾರವ್ಯಾ. ೮-೩೦). ೧೦. [ಗಣಿತ]ಗುಣಾಕಾರ (?) : ಆಚೂಟಾನನು ತಂನ ಪಾಲಿಗೆ ಬಂದ ಭೂಮಿಯ ಪಳಗೆ ಕೊಟದು ಗ ೪॥ ಉಭಯಂ ಗ ೮॥ ತಾಶಾವಗ ನಿಂದ ಗ ೧'೩ = ಒಟ್ಟಿನಲು ಕೂಡಿದ ಹೆಚ್ಚಿಗೆ ಯಿಂದ ಗ ೨'೩॥ ಅಂತು ಗ ೯॥ (ಎಕ. VII. ಶಿಕಾರಿ. ೨೫-೨೩; 1712).

**ಹೆಚ್ಚುಗೆ** : ೧. ಹನಿಯ ಹೆಚ್ಚುಗೆ ಹಸನ ಕೊಡುವುದ (ಕುಮಾರ. ೮. ೪೮) ; ಕಂಚುಕಿಯೊರ್ವಳ್ ತನ್ನಪರದಟನ ಪೆಂಪಂ . . . ವಿವಿಕಾಪ್ಸರು ಶುದ್ಧದ ಹೆಚ್ಚುಗೆಯುಂ . . . ಪೇಳುತ್ತುಂ ನುಲ್ಲನೆ ನಡೆಸಿದಳು (ಶಬ್ದಾಲ. ೫-೯೭); ಶ್ಲೇಷ್ಮ ಹೆಚ್ಚುಗೆಯುಂಟಾದ ಛರ್ದಿಯು ಶ್ಲೇಷ್ಮದಿಂದುದಯಿಸಿದುದೆಂದರಿವುದು(ಶತಕ್ತ್ರ. ೨೬೪). ೫. ತನ್ನನೇ ಹೀರಿ ಬಡ ಮಾಳ್ಪ ಪಡಬಾಗ್ನಿಯಂ ತನ್ನನೇ ಹೆಚ್ಚುಗೆ [ಶಾಕಾಂ. ಪೆರ್ಚುಗೆ]ಯ ಮಾಳ್ಪಮೃತಕಿರಣನಂ ಮುನ್ನಿನಂತ ಗಂಭೀರತನವನೇ ಮೆಱೆದು ಗರ್ಭೀಕರಿಸಿತಲ್ಲವೇ (ಪ್ರಭುಲಿಂ. ೬-೫೦). ೬. ಈ ಸಿರಿಯ ಸುಗ್ಗಿಯಲಿ ನಿನ್ನಪದೇಸು ಹೆಚ್ಚುಗೆಯಾಗಿ ಬದುಕಿಪರೈಸುವನು ನೀ ನೋಡಿ ಹಿಗ್ಗದೆ . . . ಮುಲುಗುತ ಸೂಸಿದೈ ಸಾಹಿತ್ಯಭಾಷೆಯನೆಂದನಾ ಕರ್ಣ (ಕುಮಾರ. ೦೭. ೦೭); ಗತಿಯದಾವುದು ತನಗೆ ವಂಶೋನ್ನತಿಯ ಹೆಚ್ಚುಗೆಗೇನು ಹದನೆಂದಚಿಂತಿಸಿಯದ ಶೋಕದಿ ಬಿಬಿದಿಬುದಬಿದನು ಭೂಪ (ಕುಮಾರ. ೦-೪-೬). [ಪೆರ್ಚು$_2$ + — ಗೆ]

**ಪೆರ್ಚುಗೊಳ್** (ಕ್ರಿ). (ಅಲಂ) ಹಿಗ್ಗು ; ಸಂತೋಷಿಸು : ತನ್ನ ಪೆರ್ಚುಗೆಯೊಳು ಪೆರ್ಚುಗೆಗೊಂಡುಱಿ ತನ್ನ ಕುಂದಿನೊಳು ಕುಂದುವಳ . . . ಮನ್ನಿಪುದೊಲಿದು (ಹರಿಭ. ೬. ೪೪). [ಪೆರ್ಚುಗೆ + ಕೊಳ್$_1$]

**ಪೆರ್ಚುಗೆಗೊಳಿಸು** (ಕ್ರಿ). ಪೋಲ್ಮೆಯನ್ನುಂಟು ಮಾಡು ; ತನಗಾವ ರೀತಿಯಿಂದಪಾದೊಡಂ ಬ್ರಹ್ಮಾಸ್ತ್ರಮಂತ್ರಮಂ ಕಲಿಸಿ ಪೆರ್ಚುಗೆಗೊಳಿಸು ಎಂದು ನಾನಾ ಪ್ರಕಾರವಾಗಿ ಬಿನ್ನಪಂಗೆಯ್ಯಲು (ಶಾರಣಂ. ೯-೨). [ಪೆರ್ಚುಗೆಗೊಳ್ + — ಇಸು$_3$]

**ಪೆರ್ಚುಗೆಡು** (ಕ್ರಿ). ಕುಂದು ; ಕಡಮೆಯಾಗು : ಚಂದ್ರನ ಪೆರ್ಚೆ ಪೆರ್ಚುಗೆಡಲಾಗಿ . . . ಪಯೋಧಿಯ ಲೀಲಮುಂ ಬಳಸಿ ನಿಂದುವು

ನೀಲಘಟಂಗಳೀರ್ವಿಯುಂ (ಶಾಂತಿಪು. ೯-೭೯). [ ಪೆರ್ಚು$_2$ + ಕಿಡು$_1$ ]

**ಪೆರ್ಚುಗೆವಡೆ** (ಕ್ರಿ). ವಿಸ್ತಾರಗೊಳ್ಳು ; ವಿಶಾಲವಾಗಂ : " ಅಗ್ಗಲಿಕುಂ-ಪೆರ್ಚುಗೆವಡೆದವುದು " (ಕಪುರ. ೧೫೬ ೮೬೯). [ ಪೆರ್ಚುಗೆ + ಪಡೆ$_1$ ]

**ಪೆರ್ಚುವಡೆ** (ಕ್ರಿ). ಹೆಚ್ಚಾಗು ; ಅಧಿಕವಾಗು : ತನುಭೋಗಾಯುಷ್ಯಂಗಳ್ ಮನುಷ್ಯರೊಳ್ ಪೆರ್ಚುವಡೆಗುಮುತ್ಸರ್ಪಣದೊಳ್ (ಶಾಂತಿಪು. ೧-೩೮); ಎರಡುಂ ಪಕ್ಕದ ವಜ್ರವೇದಿಕೆಗಳಂ ಮೆಯ್ವೆರ್ಚೆಯುಂ ಕ್ಷೀರ ಸಾಗರಮುಲ್ಲಂಘಿಸದಂತೆ ಪೆರ್ಚುವಡೆದುಂ ಧರ್ಮಾರ್ಥಮುಂ ಕಾಮರಾಗರಸಂ ವಿಾಜದೆ ಚಿತ್ತವೃತ್ತಿಗದು ಲೀಲಾಮಾತ್ರಮಾದಂತೆನಲ್ . . . ಭೂಚಕ್ರಮಂ ತಾಳ್ದಿದಂ (ಮಲ್ಲಿಪು. ೩-೫೦). [ ಪೆರ್ಚು$_2$ + ಪಡೆ$_1$ ]

**ಪೆರ್ಚುವೆಱು** (ಕ್ರಿ). ಅತಿಶಯವಾಗು : ಪೆರ್ಚುವೆತ್ತಪರಂಜಿಗಳಶವನಷ್ಟ ವಿಧಾರ್ಚನೆಯಿಂದ ಸತ್ಕರಿಸಿ (ಶಠಕ. ೮೬-೬೫). [ ಪೆರ್ಚು$_2$ + ಪೆಱು$_1$ ]

**ಪೆರ್ಜಡಿ** ' ಪೆರ್ಜೆಡಿ ' ನೋ.

**ಪೆರ್ಜಸ** (ನಾ). ಹಿರಿದಾದ ಕೀರ್ತಿ,—ಹೆಸರಂ : ಪೆರ್ಜಸಮನೆ ಪಿಡಿದೆನ್ನನೆ ರಣದೊಳಟ್ಟವೆಂ (ಸಂಶಖ. ೯-೮೬); ಚಿಕದೇವನೃಪನಂದು ಪೆರ್ಜಸಮೊಂದಿ ಸೊಗವಾಳ್ದಂ (ಅಪ್ರತಿ. ೦-೨೦). [ ಪೆರ್ (< ಪಿರಿದು$_1$) + ಜಸ$_1$ ]

**ಪೆರ್ಜಾರಂಗಿ** (ನಾ). ಒಂದು ಊರಿನ ಹೆಸರು : ಎಡೆದಿಕ್ಕೋ ಸಪ್ತತಿ ಪ್ರತಿಬದ್ಧಃ ಪೆಜ್ಜಾರಜ್ಗಿ ನಾಮಗ್ರಾಮಸ್ಸರ್ವಬಾಧಾಪರಿಹಾರಸಮೇತೋ (ಪ್ಮಆಂ. ೦೯೯೨, ೬೫-೦೦೦; 819). [ ? ]

**ಪೆರ್ಜುಂಕ**, ಪೆಜ್ಜುಂಕ, ಹೆಜುಂಕ, ಹೆಜ್ಜುಂಕ, ಹೆರ್ಜುಂಕ (ನಾ). ಬೆಲೆಬಾಳುವ ಸರಕು, ಪ್ರಾಣಿ, ಧಾನ್ಯ, ಅಂಗಡಿ ಮೊದಲಾದುವುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಟಾಣಘೋಷಸಹಿತಂ ಪೆಜ್ಜುಂಕಂ ಬಿಲ್ಕೊಡೆ (ಕೊಂಕಶಾ. ೦೯೩೬, ಹಾನಗಲ್. ೬೩-೦೯; 976); ಆಯೂರ ಪೆಜ್ಜುಂಕಮುಮಂ ಬಿಟ್ಟು (ಪ್ಮಆಂ. ೦೯೩೦, ೬೬-೯೬; 1080); ಆತ್ರಿಮಾರಸಂ ಮೂರುಲಕ್ಷದಡಕೆಯ ಪೆಜ್ಜುಂಕಮುಂ ಬಿಟ್ಟ (ಸೌಇಇ. IX—I, ೦೦೮-೬೬. 1107). **ಪೆಜ್ಜುಂಕ** : ಪೆಜ್ಜುಂಕಕ್ಕೆ ದ್ರಮ್ಮ ೧ (ಪಾಂಡ್ಯೇಶ. ೩-೨೨ ಪ; 1047); ಕೆಱೆಗೆ ಪೆಜ್ಜುಂಕದಲುಯೆರಡುಲಕ್ಕವ(ಂ)ಡಕೆಯುಂ ಬಿಟ್ಟರ್ (ಕಇ. II, ೮-೨೯; 1072). **ಹೆಜುಂಕ** : ಹೆಜುಂಕ ಪಡರಾವು[ಳ]ದ ದಂಡನಾಯಕಂ ಕರಿಯ ಮಹೇಸ್ವರದೇವ ಗೋಯಿದರಸರ ಬೆಸದಿಂ (ಕಇ. IV, ೦೯-೦೦; ಸು. 1172); ಉಭಯಮಾರ್ಗದ ಹೆಜುಂಕ × × ಸುಂಕ (ಎಕ. XII, ತಿಪ. ೬೬-೦೬; 1379). **ಹೆಜ್ಜುಂಕ** : ಶ್ರೀಮನ್ಮಹಾಪ್ರಧಾನಂ ಬೆಳ್ವಲನಾಡ ಹೆಜ್ಜುಂಕ ದಂಡನಾಯಕ ಮಲ್ಲಪಂ (ಶಾಸಕ. ೨೩-೨೯; 991); ಗವಱೇಶ್ವರ ದೇವರ್ಗೆ ಮೂಱುಲಕ್ಕ ಅಡಕೆಯ ಸುಂಕ ಪಡ್ಡಲಾಉಳ ಹೆಜ್ಜುಂಕಮಂ ಬಿಟ್ಟರು (ಸೌಇಇ. IX—I, ೨೩೮-೯; 1142); ಹೆಜ್ಜುಂಕದ ಅಧಿಕಾರಿ ಮಲ್ಲರಸರು (ಎಕ. IX, ಶಂಗಳೂ. ೮-೯; 1440). **ಹೆರ್ಜುಂಕ** : ವಿನಾಯಕ ದೇವರ ನಿವೇದ್ಯಕ್ಕೆ ಹೆಜ್ಜುಂಕದಲು ತಿಂಗಳಿಂಗೆ ಪಣವೆರಡಂ ಬಿಟ್ಟರು (ಸೌಇಇ. IX—I, ೨೨೩-೩೬, 1127) ; ಪಡ್ಡರಾವುಳದಲೂ ಹೆರ್ಜುಂಕದಲೂ . . . ಕೊಟ್ಟರು (ಕಂಶಾ. ೯೦-೦೫ ; 1186) ; ಭತ್ತ ಭಾಗ ಕ್ಕಂ ಹೆರ್ಜುಂಕಂ (ಸೌಇಇ. IX-II, ೯೦೦-೦೬ ; 1366) ; ಹನ್ನಿಚ್ಛಾಸಿರದ ಹೆಜ್ಜುಂಕ ಬಿಲ್ಕೊಡ (ಸೌಇಂ. ೦೯೯೬, ಹಾನಗಲ್. ೨೦೯-೨೯ ; ?).

**ಹೆರ್ಜುಂಕದ ಹೆರ್ಗಡೆ, ಹೆಜ್ಜುಂಕದ ಹೆರ್ಗಡೆ** = ಬೆಲೆ ಬಾಳುವ ಸರಕು, ಪ್ರಾಣಿ, ಧಾನ್ಯ ಅಂಗಡಿ ಮೊದಲಾದುವುಗಳ ಮೇಲೆ ಹಾಕುವ ತೆರಿಗೆಯನ್ನು ವಸೂಲು ಮಾಡುವ ಅಧಿಕಾರಿ : ಶ್ರೀಮತ್ ಪೆಜ್ಜುಂಕದ ಪೆರ್ಗ್ಗಡೆ ಮಾವಣಯ್ಯಂಗಳ ಬೆಸದೆ (ಸೌಇಇ. XX, ೩೯-೦೦ ; 1053) ; ಪೆಜ್ಜುಂಕದ ಪೆರ್ಗ್ಗಡೆ ಕರಣಂಗಳುಂ ಗ್ರಾಮೇಶ್ವರದೇವರ್ಗ್ಗೆ . . . ಬಿಟ್ಟರ್ (ಸೌಇಇ. XI—II, ೦೯೫-೩ ; 1098).

[ಪೆರ್ (< ಪಿರಿದು$_1$) + ಸುಂಕ$_1$]

**ಪೆರ್ಜೆಡಿ**, ಪೆರ್ಜಡಿ (ನಾ). ಒಂದು ಊರಿನ ಹೆಸರು : ಶ್ರೀ ಕಾಲಾವಿಗ್ರ್ವರವಡಿಗಳ ಶಿಷ್ಯರ್ ತಱೆಕಾಡ ಪೆಱ್ಜಡಿಯ ಮೊದೆಯ ಕಲಾಪಕದ ಗುರವಡಿಗಳ್ ((ಎಕ. II, ೩೩-೨ ; ಸು. 700). **ಪೆರ್ಜಡಿ** : ಪೆಜ್ಜಡಿಯ ಕೆಱೆಯ ಕೆಱಗೆ ಮೂಗಣ್ಣಾಗಂ ಕಟನಿ(ಎಕ. IX, ಹಾಗಮಂ. ೬೦-೦೨೩; 797). [?]

**ಪೆರ್ಜೆಡೆ** (ನಾ). ನೀಳವಾದ ಜಡೆ ; ಉದ್ದವಾದ ಹೆರಳು : ಪೊಳೆವ ಪೆರ್ಜೆಡೆಯಲವರ್ಮಾಲೆ ಹೊಗೆಜ್ಜ ಬಡಯವಿಲ್ಲದ ಹೊನ್ನಂಡೊಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ಪೋಹಕ. ೦೯-೬೦).

[ಪೆರ್ (< ಪಿರಿದು$_1$) + ಜೆಡೆ (< ಜಡೆ$_1$)]

**ಪೆರ್ಜೆಱೆವು** (ನಾ). ದೊಡ್ಡ ಆತಿಥ್ಯ : ಮೂಮೆ ಪೆರ್ಜ್ಜೆಱೆವು ಪಟ್ಟಮುಂ ತ್ರಿಭುವನಾಚಾರಿಯೆನ್ದು ಪೆಸರಿಟ್ಟು (ಇಆ. X, ೦೬೯-೫ ; ಸು. ೭ನೆಯ ಶಕ)

[ಪೆರ್ (< ಪಿರಿದು$_1$) + < ಸೆಱವು]

**ಪೆರ್ಜೊಡರ್**, ಹೆಜ್ಜೊಡರ್, ಹೆಜ್ಜೊಡರು (ನಾ). ೧. ದೊಡ್ಡ ದೀವಿಗೆ,—ದೀಪ : ಇರುಳ ಪೆರ್ಜೊಡರ ಕಜ್ಜಕೆ ಬೇಱೇನುಮಿಲ್ಲದಿರಲಾಗ ದೀಪದ ಕಲಿಯನಾರು ತಲೆನವಿರ ಪೆರ್ಜೊಡರ ಪತ್ತಿಸಿ (ರಾಘಕ. ೬-೨೨). ೨. ದೊಡ್ಡ ಪಂಜು,—ದೀವಟಿಗೆ : ದುರ್ಜಯರ್ ಬಡಿವ ಹಱೆಗಳ ಕೈಗಳೊಳಗಾಂತ ಪೆರ್ಜೊಡರ ಗಡಣದಿಂ . . . ಕೋಂಟೆಯಂ ಕಾದಿರ್ದರು (ಜಿಪು. ೯೨-೯). ೩. [ತತ್ತ್ವಶಾ]ಚಿದಾಕಾಶದ ದೀಪದ ಕುಡಿ : ಚಿಜ್ಜ್ಯೋತಿ : ಅಹಿಗಳ್ ಪತ್ತಿ ಪರಿದಾಡುತ್ತಿರೆ ನಡುನೆತ್ತಿಯ ಪೆರ್ಜೊಡರನೊರ್ವನೀಕ್ಷಿಸುತಿರ್ದಂ (ರಾಜಶೇ. ೦-೦೩೯). **ಹೆಜ್ಜೊಡರ್** : ೧. ಮೊಳೆವ ಸಂಧ್ಯಾಂಗನೆಗಬುಧಿ ನಿವಾಳಿಸಲೆಂದು ತಳೆದ ಮಾಣಿಕದ ಹೆಜ್ಜೊಡರೊ . . . ಎನಿಸಿ ಕಡೆವಗಲ ರವಿ ಲೆಕ್ಕ ಸೊಗಸಿರ್ದನು (ಹಕಾ ೩-೬೩) ; ಹಿಡಿದ ಹೆಜ್ಜೊಡರನಿಂದುಬೀಬಂ ಪೋಲ್ತುದು (ಸಿದ್ಧರಾ. ೦-೫೯). **ಹೆಜ್ಜೊಡರು** : ೧. ನಡೆಮುಡಿ ಕಱೆಬೋನ ಕಳಸ ಕನ್ನಡಿ ಹೆಜ್ಜೊಡರು ವೆರಸಿ ನಿನ್ನ ಬಳಿಗೆ ನಡೆವೆಂ (ರಾಮಬ. ೬-೦೨೫) ; ಅಂಚಿನೊಳುರಿವ ತುಪ್ಪಗಳ ಹೆಜ್ಜೊಡರಿಂದ ಸಂಚಿಸಿದ್ದುದು ಶಸ್ತ್ರಪೂಜೆ (ಶರಕ. ೨೦-೦೨೭) ; ಬೆಳಗಲಿ ಹೆಜ್ಜೊಡರು (ಇಂಶಾಕ. ೦೫೦-೩೬). [ಪೆರ್ (< ಪಿರಿದು$_1$) + ಸೊಡರ್]

**ಪೆರ್ಜೋಡೆ** (ನಾ). ಅನುಭವಸ್ಥೆಯಾದ ಸೂಳೆ : ಪೆರ್ಜೋಡೆಯಂತೆ ನುಣ್ಣಿತಂ ದೇಟ್ದು (ಶಂಶಧ. ೬-೬೨ ಪ). [ಪೆರ್ (< ಪಿರಿದು$_1$) + ಜೋಡೆ]

**ಪೆರ್ಜ್ವಾಲೆ** (ನಾ). ಉರಿಯನ್ನು ಚಾಚುವ ಜ್ವಾಲೆ,—ಅಗ್ನಿಶಿಖೆ : " ಉರಿಯ ಪೆರ್ಜ್ವಾಲೆ ಕೀಲಕಮೆನಲ್ " (ರಂಗರಾ. ೦೯-೮).

[ಪೆರ್ (< ಪಿರಿದು$_1$) + ಜ್ವಾಲೆ]

**ಪೆರ್ತಾಯ್** (ನಾ). ಶ್ರೇಷ್ಠಳಾದ ಜನನಿ ; ಹಿರಿಮೆಯುಳ್ಳ ತಾಯಿ : ಓ ತಾಯೆ, ಕನ್ನಡದ ಪೆರ್ತಾಯೆ, ನಮ್ಮಮ್ಮ, ದೇವಿ, ಸಾಮ್ರಾಜ್ಞಿ (ಹೊಂಗಳು. ೦೫-೧೮). [ಪೆರ್ (< ಪಿರಿದು$_1$) + ತಾಯ್]

**ಪೆರ್ದಂಡೆ** (ನಾ). ವಿಶಾಲವಾದ ದಡ : ವಿಸ್ತಾರವಾದ ತೀರ : ಉಪಾಂತದೊಳ್ ಪರ್ವಿದ ಪೊಂಗೇದಗೆಯ ರಜದಿಂ ಪುಟ್ಟಲ್ಗಟ್ಟಿದ ಪೆರ್ದಂಡೆಗಳೊಳಂ (ಕಾದಂಪೂ. ೦೦೬). [ಪೆರ್ (< ಪಿರಿದು$_1$) + ದಂಡೆ$_2$]

**ಪೆರ್ದಡಿ** (ನಾ). ಉದ್ದವಾದ ಬಡಿಗೆ ; ದೊಡ್ಡದಾದ ದೊಣ್ಣೆ : ಪಾಣಿಯೊಳಾಂತ ಪೆರ್ದಡಿಗಳ ಲುಬ್ಧಕಶ್ರೇಣಿ ಬೊಬ್ಬಿಡುತಲ್ಪೆದಿದುದು (ಪೋಹಕ. ೦೯-೯). [ಪೆರ್ (< ಪಿರಿದು$_1$) + ದಡಿ$_1$]

**ಪೆರ್ದರಿ** (ನಾ). ದೊಡ್ಡದಾದ ಗ್ರಾ...ಡೊಗರು : ಮಿಱುಗುವ ದಾಡೆಯಿಂದಗೆದು ಪೆರ್ದರಿಯಂ ಕರದಿಂದಮೆತ್ತುತುಂ . . . ಬರುತಿರ್ದುದು ಘೋರತರನೊಂದು ಸೂಕರಂ(ಕಾವ್ಯಸಾ. ೦೦೧೨). [ಪೆರ್(< ಪಿರಿದು$_1$) + ದರಿ]

**ಪೆರ್ದರಿಯಂಗಿ** (ನಾ). (?) : ಕರಡಿ ರುರುಪ್ರತಾನಮುಡು ಬೆಳ್ಳಿರಿ ಪೆರ್ದರಿಯಂಗಿ ಪೇರಣಿಲ್ ಮರದಣಿಲೆಂಬಿವಂ ಕಿಡಪಿಯೇಂ ತಿರುಗಿತ್ತೊ ಕಿರಾತಸುಕಾಳಂ (ದಕಳು. ೨-೦೨೦). [?]

**ಪೆರ್ದಲ** (ನಾ). ಒಂದು ಸ್ಥಳದ ಹೆಸರು : ಪೆರ್ದ್ದಲೆಯಾ ಸೀಮ್ಮಾತಃ ಪೂರ್ವ್ವತಃ (ಎಕ. VIII, ಸೊರಬ. ೩೩-೬ ; ಸು. 420 ಕ್ರಿಶ) [?]

**ಪೆರ್ದಲೆ, ಹೆದ್ದಲೆ** (ನಾ). ೧. ದೊಡ್ಡ ತಲೆ: ಪೆರ್ದಲೆಯ ಕಟ್ಟೆಬುಂಪ್ಪೆಗಳುಮಾಗಿ ಮೆಯ್ಯೆಲ್ಲಮನಸಂರ್ಚಿ[ಯುಂ] (ಚಿತ್ರಾರಾ. ೦೬೮-೫) ; ಪೆರ್ಗರಡಿಯು ಕೊಂತದಿ ೯ಡಿವ ಪೆರ್ದಲೆಯು ಸಂತಸ ಬಿಡದೆ ಹೊತ್ತಿರ್ದರು (ಜೋಚಚ. ೦೯-೨೮). **ಹೆದ್ದಲೆ :** ೨. ಮುಖ್ಯನಾದವನು : ಪ್ರಮುಖ : ಬೃಹ್ಮಾಚ್ಯುತಾದಿಗಳ ಒಳಗೆ ಹೆ[ಶಾಶಾಂ. ಹೊ]ದ್ದಲೆಯಾಗಿ ಬಾಳ್ವನ ತಲೆಯು ನಿನ್ನಯ ತಲೆಯು ಸರಿಯು (ಬಸಪು. ೩೮-೩೯). [ ಪೆರ್ ($<$ ಪಿರಿದು$_1$ ) + ತಲೆ$_1$ ]

**ಪೆರ್ದಸಿ** (ನಾ). ದೊಡ್ಡ ಬೆಣೆ,—ಗೂಟ : ಪೆರ್ದಸಿಯ ಮೇಲೆ ಮಹಾದ್ಯುತದಿಂದಮಿದ್ದು . . . ವೇದನೆಗೆ ಸ್ಮೈರಣೆಗೆಟ್ಟಬುತಿರ್ದ ಭೀತರಂ ನೋಡುತ್ತುಂ (ಧರ್ಮಾಮೃ. ೦೨-೨೦). [ಪೆರ್ ($<$ ಪಿರಿದು$_1$ ) + ದಸಿ]

**ಪೆರ್ದಳಿ** (ನಾ). ದೊಡ್ಡ ದಿಮ್ಮಿಗಳ ಬೇಲಿ : ಸಾಲ್ಗೊಂಡು ತರತರದ ಪೆರ್ದಳಿಯು ದಡ್ಡಿಗಳನುಚಿ ಮುಚಿದು . . . ಪುರವನೊಳಪುಗುತಿರ್ದರು (ಶಿಂಪು. ೯೨-೨೮). [ ಪೆರ್ ( $<$ ಪಿರಿದು$_1$ ) + ತಳಿ$_1$ ( $<$ ತಟಿ ) ]

**ಪೆರ್ದಾತು?** (ನಾ). ಒಂದು ಸ್ಥಳದ ಹೆಸರು (?) : ತತ ಆಗತ್ಯ ಕರ್ದೇಸುರಿಗೋದು ತತ ಪೆರ್ದಾ(?)ತು ತತ ಆಲೆಚಿ (ಇಎ. VI, ೯೩-೩೨; 695). [?]

**ಪೆರ್ದಾರಿ, ಹೆದಾರಿ, ಹೆದ್ದಾರಿ** (ನಾ). ದೊಡ್ಡ ಹಾದಿ ; ಪ್ರಧಾನವಾದ ಬೀದಿ ; ರಾಜಮಾರ್ಗ : "ಪೆರ್ದಾರಿ—ಬಟ್ಟೆಸಲ್ಪು" (ಶಶಬ. ೪. I. ೩೫) ; ನರಕಕ್ಕೆ ಪೋಪ ಪೆರ್ದಾರಿ ಮಹಾವ್ಯಸನಕ್ಕೆ ಮೂಲಮುಚಿಪೊಡೆ ಪುಸಿಯಿಂದಂ ಬಿಟ್ಟು ಪಾತಕಂ ಪೆಜತೊಳವೇ (ಧರ್ಮಾಮೃ. ೦೦-೦೪೦). **ಹೆದಾರಿ:** ಪಡುವಲು ಸುಗ್ಗಿಯ ಗದೆಯು ಕೆಟಗಡಿ ಬಡಗಲು ಹೆದಾರಿಯ ಸುಗ್ಗಿಯ ಗದ್ದೆಯ ಹಾಳಿ ಗಡಿ . . . ಬಿಟ್ಟರು (ಕಇ. I. ೯೦-೯೦ ; 1417 ಕ್ರಿ). **ಹೆದ್ದಾರಿ :** ಪಡುವ ಮೂಲಿಗವನೆಯ ಹೆ[ದ್ದಾ]ರಿ ಮೂಡ ಬಡಗ ಮುಖ ಬಂದ ಕೈ ಆಲ (ಸೌಇಇ. XI-I. ೬೯ ೩೫; 1033) ; ಕೂಗುವ ಕಲ್ಲ ಸಮೀಪದ ಹೆದ್ದಾರಿ (ಎಕ. VII. ಶಿಕಪು. ೨೬-೨೩೬ ; 1524) ; ವಿವಿಧ ರಾಷ್ಟ್ರಗಳ ನಡುವೆ ಕ್ರಮವಾಗಿ ಹೆದ್ದಾರಿಗಳನ್ನು ಕೂಡಿಸುವುದರ ಮೂಲಕ ಉತ್ತಮವಾದ ಅಂತರರಾಷ್ಟ್ರೀಯ ಹೆದ್ದಾರಿಗಳನ್ನು ನಿರ್ಮಿಸುವುದು ಇಕಾಫೆಯ ಮುಖ್ಯ ಉದ್ದೇಶ (ಅಂಕಸಂ. ೯೮) ; ಉದ್ದು ಉರುಳಿದರೆ ಹೆದ್ದಾರಿ ದಾಟೀತೇ ? (ಗಾದೆ).
[ ಪೆರ್ ( $<$ ಪಿರಿದು$_1$ ) + ದಾರಿ ]

**ಪೆರ್ದಿದಿ** (ನಾ). ದೊಡ್ಡ ಚೀಲ : ಪೆಟಲುಪ್ಪಿನ ಪೆರ್ದಿದಿ ಮರ್ದಿದೆಂಬಿವಂ ಸುರಿದು . . . ಘಟರಿಂತು ಕಾಮತಿರೆ (ರಾಚಚಿ. ೬-೦೦೬).
[ ಪೆರ್ ($<$ ಪಿರಿದು$_1$ ) + ತಿದಿ]

**ಪೆರ್ದಿನಿ, ಹೆದ್ದಿಣ್ಣಿ** (ನಾ). ಎಲ್ಲವನ್ನೂ ತಿನ್ನುವವನು ; ಸರ್ವಭಕ್ಷಕ : "ಸರ್ವಾನ್ನೀನಃ, ಸರ್ವಭಕ್ಷಃ—ಈ ೨ ಪೆರ್ದಿನಿ [ಶಾಶಾಂ. ಹೆದ್ದಿಣಿ]" (ಹಲಾಯು. ೫೮-೦೯೬). **ಹೆದ್ದಿಣ್ಣಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಪೆರ್ ( $<$ ಪಿರಿದು$_1$ ) + — ತಿನ್ನಿ$_2$ ]

**ಪೆರ್ದುಡುಗೆ** (ನಾ). ಬಹಳ ಬೆಲೆಬಾಳುವ ಆಭರಣ ; ಅಮೂಲ್ಯವಾದ ಒಡವೆ : ಪಸರಿಸಿದ ತೋರಹಾರದ ಪೊಸವೆಳ್ದಿಂಗಳುಮನವರ್ದ ಪೆರ್ದುಡುಗೆಗಳೊಳ್ ಮಿಸುಗುವ ಪೊಸಮಾಣಿಕದೆಳಮಿಸಿಲುಮನೊಡಗೂಡಾದುದಾಸ್ಥಾಯಿಕೆಯೊಳ್ (ಆದಿಪು. ೯-೫).
[ ಪೆರ್ ( $<$ ಪಿರಿದು$_1$ ) + ತುಡುಗೆ ( $<$ ತೊಡುಗೆ) ]

**ಪೆರ್ದುರ್ಗ** (ನಾ). ದೊಡ್ಡ ಕೋಟೆ,— ಕಿಲ್ಲೆ : ಬರುತಿರಲು ಮುಂದೊಂದು ಪೆರ್ದುರ್ಗಮಿರಲದರ ಬಾಹ್ಯದೊಳೆಸೆದುದುದ್ಯಾನವನಂ (ಶಶಪೋ. ೬-೦೮). [ ಪೆರ್ ( $<$ ಪಿರಿದು$_1$ ) + ದುರ್ಗ]

**ಪೆರ್ದುಱುಬು** (ನಾ). ದೊಡ್ಡ ಮುಡಿ,—ಗಂಟು : ಪೂಸಿದ ಗಂಧ ನಡುವಿನ ಬಂಕು ಪೆರ್ದು[ಶಾಶಾಂ. ಪೂದು]ಱುಬು ಉಡಿಜಲ್ಲಿಯುಟ್ಟ ಕಾಶೆಯ ಸಬಳಿಗರಂದು ನಡೆದು ಬಂದರು (ಕುಮಾರಾ. ೦೦-೩೬); ಮೌಕ್ತಿಕದ ಹಾರ ಕಿರೀಟ ಪೆರ್ದುಱುಬಿನೊಳೊಪ್ಪುವ ತೋರಮುತ್ತುಗಳ ಪಾಲಿಸಿದ (ಜೋಚಚ. ೦೫-೦೬).
[ ಪೆರ್ ($<$ ಪಿರಿದು$_1$ ) + ತುಱುಬು$_2$ ($<$ತುಱುಂಬು$_3$) ]

**ಪೆರ್ದೂಲ** (ನಾ). ದೊಡ್ಡ ದಿಮ್ಮಿ ; ಭಾರಿಯಾದ ತೊಲೆ : ಸಾಲ ಡೆಂಕಣಿ . . . ಪೆರ್ದೂಲ ಕಕ್ಕಡಮಂದಿ . . . ಜೊತ್ತುಗುಂಡುಗಳ ಜಾಲ ಪೊಪ್ಪಿಹವು (ಗುಕಚ. ೦-೩೦). [ಪೆರ್ ($<$ಪಿರಿದು$_1$)+ದೂಲ]

**ಪೆರ್ದೆಪ್ಪ** (ನಾ). ದೊಡ್ಡದಾದ ಹರಿಗೋಲು,—ನಾವೆ : ಕಾಡೊಡೆಯಂ . . . ಬೇಡರೊಡವರೆ ನೀಡುಂ ಪರಿವ ಪೆರ್ದೊಱೆಗೆಯ್ದಿ ಸಾರ್ದು ಪೆರ್ದೆಪ್ಪಮನೇಱಿ ನಿಂದು (ರಾಚಚಿ. ೫-೦೦೯ ವ).
[ಪೆರ್ ($<$ ಪಿರಿದು$_1$)+ ತೆಪ್ಪ]

**ಪೆರ್ದೆರೆ, ಹೆದ್ದೆರೆ** (ನಾ). ೧. ದೊಡ್ಡ ಅಲೆ,—ತರಂಗ : "ಊರ್ಮಿಃ, ಉತ್ಕಳಿಕಾ, ಉಲ್ಲೋಲಃ, ಕಲ್ಲೋಲಃ, ಲಹರೀ—ಈ ೫ ಪೆರ್ದೆರೆ" (ಹಲಾಯು. ೦೦೯-೩೦) ; ಭಯಂಕರತರಮಾದ ಪೆರ್ದೆರೆಗಳಂ ಹಮಸಂತತಿ . . . ನಿರಂತರಂ ತಿರಸ್ಕರಿಸಿರೆ (ಕಂಕಚಾ. ೦೦-೨೮) ; ಕಣ್ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೆಂಬಿನಂ (ಕಬ್ಬಿಕಾ. ೬೯) ; ಮರ್ದಲ ತಾಳಾನುಗತಿಯೊಳು ನಡೆದಳು ಪೆರ್ದೆರೆಯಂತೆ ಮುಂದೊತ್ತಿ (ಧರತ. ೦೨-೬೪). **ಹೆದ್ದೆರೆ :** ೧. "ಹೆದ್ದೆರೆ—ಉಲ್ಲೋಲ, ಕಲ್ಲೋಲ" (ನಾಕಂಶ. ೬) ; ಅದ್ದೆನದ್ದೆನು ನರಕದುಃಖದ ಹೆದ್ದೆರೆಯ ಹೊನಲಿನಲಿ. (ಶಿತಾಗ. ೬-೨-೩೩) ; ಪೆರ್ಗಡಲ ಹೆದ್ದೆರೆಗಳೆದ್ದು ತನ್ನಂ ಕೊಂಡು ಕಾರ್ಗತ್ತಲೋಳದ್ದುವಂತೆ (ಭರಶ. ೪-೬೬). ೨. ಅಗಲವಾದ ಪರದೆ,—ಜವನಿಕೆ : ಅಸಹನೀಯ ಮೌನದ ಹೆದ್ದೆರೆಯೊಂದು ನಮ್ಮ ನಡುವೆ ಇಳಿಬಿದ್ದಿತು (ಸಂಸ್ಕೃ. ೦೫೯).
[ಪೆರ್ ($<$ಪಿರಿದು$_1$)+ತೆರೆ$_1$]

**ಪೆರ್ದೆವರ್, ಹೆದ್ದೆವರು** (ನಾ). ಎತ್ತರವಾದ ದಿಣ್ಣೆ,—ತಿಟ್ಟು : ಪೆರ್ದೆವರುದ್ದ ಬಿಟ್ಟುಮೆಚೆಡೆಯುಣಮಿಲ್ಲದೆಯ್ದೆ ಧರೆ ತರ್ಗಿ ಬಟ್ಟೆಕ್ಕದು ಕೊಳ್ಳ ಪಾಮುದಾ ಪಡೆ ನಡೆಯಲ್ (ನೇಮಿಪು. ೦೨-೩೬). **ಹೆದ್ದೆವರು :** ವಿಗಡ ಭೀಮನ . . . ಮುಂಡುಹು ಸೋಂಕಿದೊಡಾ ಮಹಾದ್ರಿಗಳೊಡನೆ ತೋರ ಹತರು ಕೆಡೆಮುಪಡಿಯಿಡಲು ಹಜ್ಜೆಗೆ ತಗ್ಗಿದುದು ನೆಲಸಹಿತ ಹೆದ್ದೆವರು (ಕುಭಾಅ. ೦೨-೯). [ಪೆರ್ ($<$ಪಿರಿದು$_1$)+ತೆವರ್ ($<$ತೆವುರ್$_2$)]

**ಪೆರ್ದೆಸೆ** (ನಾ). ಏಳಿಗೆಯ ಕಾಲ ; ಅಭ್ಯುದಯಾವಸ್ಥೆ : ಸುಸ್ಥಿತಿ : ಕಳವಿಂ ಧನಲಾಭಮಾದೊಡಾ ವನಿತೆಯುಮಿಷ್ಟರುಂ ಸುತರುಮುಣ್ಪೆಡೆಯೊಳ್ ಪುದುಗಳ್ಪನೆಂದು ಭೋಂಕನೆ ಕಡಿದಿಕ್ಕಿ ಪೆರ್ದೆಸೆಯೊಳಲ್ಲದವರ್ಪುದು ವಾಗಳಾರ್ಪರೇ (ಧರ್ಮಾಮೃ. ೬-೦೩೬). [ಪೆರ್ ($<$ಪಿರಿದು$_1$)+ದೆಸೆ$_2$]

**ಪೆರ್ದೊಡವು** (ನಾ). ಬಹಳ ಬೆಲೆ ಬಾಳುವ ಆಭರಣ,—ಒಡವೆ : ಮಾಣಿಕದ ಪೆರ್ದೊಡವಿಂ ಪೊಱಪೊಣ್ಮುವಂಶುಗಳ್ ದಾವಾಣಕೋಪಪಾವಕನೆ ತನ್ನೊಡಲಂ ಸುಡುವಂದ ಮಾಗೆ (ಶಂಖಾಶಿವ. ೦೪-೦೨೬).
[ಪೆರ್ ($<$ಪಿರಿದು$_1$)+ತೊಡವು]

**ಪೆರ್ದೊಡೆ, ಹೆದ್ದೊಡೆ, ಹೆದೊರ್ಡೆ** (ನಾ). ಸೊಂಟದಿಂದ ಮಂಡಿಯವರೆಗಿನ ದೇಹಭಾಗ; ಊರು : "ಊರುಗಳು ಪಿಚಂಡಿಗಳೆನಲು ಪೆರ್ದೊಡೆಗೆ ನಾಮಮಕ್ಕುಂ" (ಶಂಗರಾ. ೯೮-೦೭); ಪೆರ್ದೊಡೆ ಕಟಿ ಮುಮ್ಮಡಂ ಪರಡು ಸಂದಿ ನೊಸಲ್ ಪಣೆ ಕೆಣ್ ಕದಂಪಿವೆಂಬೆಡೆಯುನೆ ನಟ್ಟುಪುರ್ಚಿದುವು ನೇರ್ದುವು ಸೀಳ್ದುವು ಪಾರ್ಥನಂಬುಗಳ್ (ಶಂಕಭಾ. ೦೦-೦೩೬); ನೆನೆಯಿಸಿ ಕಾಡುಗುಂ ಸತತವಾತನುದಗ್ರ ಲಲಾಟಪಟ್ಟವು . . ಆತನ ಬಗೆಗೊಳ್ವ ಪೆರ್ದೊಡೆಗಳ್ (ಅಗಂ. ೦೨-೦೫); ಬಟ್ಟಮುತ್ತುಗಳು

ಕೇವಣಿಸಿರ್ದ ಪಾರಿಯ ಪಟ್ಟಾವಳಿ ಚಲ್ಲಣವ ತೊಟ್ಟು ಪೆರ್ದೊಡೆಗೆ ಕೇಸರಿ ಮಧ್ಯಕೆ ಬಿಗಿದುಟ್ಟು ಕಾಸೆಯ ರಣೋತ್ಸವದಿ (ಮೋಹತ. ೧೨-೪೫). **ಹೆದ್ದೊಡೆ :** ಊರುದಘ್ನ, ಊರುಮಾತ್ರಂ, ಊರುದ್ವಯಂ ಇವು ಹೆದ್ದೊಡೆಯ ಉದ್ದವ ಹೇಳುವುದು (ನಾಚಿರಾ. ೧೨೨); ಹಾಯ್ದು ಗದೆ ಹೆದ್ದೊಡೆಗಳನು ಮುರಿದಯ್ದಿತಪನಿಯನರುಣಜಲದಲಿ ತೊಯ್ದು ಧೊಪ್ಪನೆ ಕೆಡೆದನಿಳೆಯಲಿ ಕೌರವರ ರಾಯ (ಕುವ್ಯಾ. ಗ. ೭-೫೧). **ಹೆದ್ದೊಡೆ :** ೧. "ಊರು. ಸಕ್ಥಿ, ಪಿಚಂಡಂ ?—ಈ ೩ ಹೆದ್ದೊಡೆ" (ಹಲಾಯು. ೬೫-೩೬೦). ‘ಕಿಬ್ಬೊಡೆ’ ಪರಾ. [ಪೆರ್ (< ಪಿರಿದು$_1$) + ತೊಡೆ$_2$]

**ಪೆರ್ದೊರೆ** ‘ಪೆರ್ದೊಱೆ$^3$’ ನೋ.

**ಪೆರ್ದೊಲೆ** (ನಾ). ದೊಡ್ಡ ದಿಮ್ಮಿ : ಬಲ್ಗಂಡು ಪೆರ್ದೊಲೆ ಕೊಱಡು ಕಾಯ್ದ ಪಣಿಲ ರಾಶಿ (ಶಬ್ದರಾ. ೩-೨೦); ಉರಿಪರಿವೆಣ್ಣೆ ಪಂದಿವಲೆ ಪೆರ್ದೊಲೆ . . . ಪೆರ್ದಿಡಿಮುರ್ದಿವೆಂಬಿವು ಸುರಿದು (ರಾಜಶೇ. ೬-೧೦೬).

[ಪೆರ್ (< ಪಿರಿದು$_1$) + ತೊಲೆ$_3$]

**ಪೆರ್ದೊಱೆ$^3$, ಪೆದ್ದೊರೆ, ಪೆದ್ದೊಱೆ$^3$, ಪೆರ್ದೊರೆ, ಪೆಱ್ದೊಱೆ$^3$, ಹೆದ್ದೊರೆ$_1$, ಹೆದ್ದೊಱೆ** (ನಾ). ೧. ದೊಡ್ಡ ಹೊಳೆ ; ಮಹಾನದಿ : ಎರಡು ಬೆಟ್ಟದ ನಡುವೆ ಪರಿವ ಪೆರ್ದೊಱೆ$^3$ಯಂತೆ (ರಕ್ಷೇಕಾವ್ಯ. ೨-೬೩); ಗೋಮತಿಯೆಂಬ ಪೆರ್ದೊಱೆ$^3$ಯ ರಾಮಣೀಯಕ ಶೀತಜಲವೀಂಟಿ (ಮೋಹತ. ೩೬-೬೪). ೨. ಕೃಷ್ಣಾನದಿ: [ಪೆದ್ದೊ]ಱೆ$^3$[ಪ]ರ್ಯ[ಂತ]ಮುಮ ನಾಳುತ್ತುಮಿಬ್ದು (ಎಇ. IV, ೩೫೨-೦೫; 975); ಅಱುಕೆಯ ಗಟ್ಟಗೆಯುಂ ಪೆರ್ದೊಱೆ$^3$ಯುಂ ಪರಿದಲ್ಲಿ ತದ್ದಮಾಡಿಗೆ ತೇಱಲ್ (ಅಕಥ. ೦೨-೪೬); ಪೆದ್ದೊಱೆ$^3$ಯ ತಡಿಯ ಕೊಪ್ಪದಲು (ಹ್ಯಆ. ೧೯೨೮, ೩೦-೨; 1056) **ಪೆದ್ದೊರೆ :** ೨. ಅವನು ಪೆದ್ದೊರೆಯ ದಂಡೆಯಲ್ಲಿದ್ದಾಗ ಅನುಕೂಲಸ್ಥ ನಾಗಿದ್ದ (ಶಾಹುಕ. ೫೪). **ಪೆದ್ದೊಱೆ$^3$ :** ೧. ಇದ್ದೊಱೆ$^3$ಯೆಂಬ ಪೆದ್ದೊಱೆ$^3$ ತುಂಬಿ ಬರೆ (ಬಸಕ. ೩೨-೩೨) ; ಒಂದುದಿನ ಪೆದ್ದೊಱೆ$^3$ಯು ತುಂಬಿ ಪರಿವುತ್ತಿರಲು (ಗುರುಚಾ. ೦೫-೯). **ಪೆರ್ದೊರೆ :** ೧. ಪೆರ್ದೊರೆಗಳಂ ಪೇರಡವಿ ಪೆರ್ಬೆಟ್ಟುಗಳನಂತು ನೂರಾರು ಪೇರೂರ್ಗಳಂ ದಾಂಟಿ (ಕೇಹರಾ. ೬-೫೦) ; ಮುಂಗಾರ ಸಮಯುವಿದು ಪೆದ್ದೊರೆಯು ನಂಬ ಲಾಗದು (ಶನಾ೪. ೩೯). △ **ಪೆಱ್ದೊಱೆ$^3$ :** ೨. ಗಂಗಾನ್ವಯ ಕುಳತಿಳಕಂ ಬೂತಯ್ಯ ಪೆಮ್ಮಾಡಿ ಪೆಱ್ದೊಱೆ$^3$ ಮರ್ಯ್ಯಾದೆ ಗಂಗಾವಾಡಿ ತೊಂಬತ್ತಱುಸಾಸಿರಮುಮಂ ಪ್ರತಿಪಾಳಿಸೆ (ಶಾಇಇ. XI-1, ೩೮-೪; 950); ಪೆಱ್ದೊಱೆ$^3$ ಮರ್ಯ್ಯಾದೆಯಾಗೆ ನಿರಾಕುಳಪಾಳುತ್ತಿರೆ(ಎಇ. VI, ೨೫೯-೫;975). **ಹೆದ್ದೊರೆ$_1$ :** ೧. ಅಲ್ಪಾಲ್ಪಕಾವ್ಯಗಳ ಭಾವನೆಯ ಹೊನಲಾದರೂ ಆ ತೊರೆ—ಹೆದ್ದೊರೆಗಳತ್ತಲೇ ಹರಿದುಹೋಗುವುದೆಂಬುದನ್ನೂ ಬಗೆವಡೆದವು (ಶಾಕೋಅ. ೩೫೩); ಸಾಹಿತ್ಯವಾಹಿನಿ ಬತ್ತದ ತೊರೆ. ಅದು . . . ಹೊಳೆ ಹಳ್ಳಗಳ ಜೀವಂತವಾಹಿನಿಯನ್ನು ತುಂಬಿಕೊಂಡು ಹೆದ್ದೊರೆಯಾಗಿ ಹರಿಯುತ್ತದೆ (ಸಾಹಪ. ೨೨೪). ೨. ವಿಷ್ಣುವರ್ಧನಪ್ರಭು ಹೆದ್ದೊರೆಯನ್ನು ಸೇರಿ, ಆ ನದಿಯಲ್ಲಿ ತಮ್ಮ ಕಾಂಭೋಜಿಯನ್ನೂ ಕತ್ತಿಯನ್ನೂ ತೊಳೆದರು (ಶಾಂತಲಾ. ೨೩೩). **ಹೆದ್ದೊಱೆ$^3$ :** ೧. ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬರ್ಕು ಹರಿದು ಹೆದ್ದೊಱೆ$^3$ಯ ಕೆಱೆ$^3$ ತುಂಬಿದಂತಯ್ಯಾ (ಬಸವ. ೦೬೪); ಹೆದ್ದೊಱೆ$^3$ಯನುಱೆ$^3$ ತಡಿಗೆ ದಾಂಟಿಸುವ ತೋರವಹ ಬಲುದೆಪ್ಪವಿರೆ ಮನಹಾರಿ ಸೊರೆಯೋಡಂ ಪಿಡಿದು ತಾಂ ಪಾರವೆಯ್ದುವೆನು (ಬಸಪು.೬೦-೪೬); ಕರಗಿ ಹರಿದವು ಹೇಮರಸ ಹೆದ್ದೊಱೆ$^3$ಯವೊಲು (ತೊರರಾ. ೫-೯-೮೦). ೨. ಹುಲಿಗೆಱೆ$^3$ ಮುಸೂಱುಮಂ ಹೆದ್ದೊಱೆ$^3$ ಪರಿಯನ್ತವಾಗೆ ಯನ್ತನಿತುಮಂ . . . ಸುಖರಾಜ್ಯಂಗೆಯ್ಯುತ್ತಿರೆ (ಎಇ. XII, ೫೪,ಣಾ. ೩೦-೦೨ ; 1149 ?); ಬಾದುರನೊಕ್ಕಲ ಕೊಂಡು ಹೆದ್ದೊಱೆ$^3$ಯ ದಾಂಟಿದನು (ಉರಾಣಾಂ, ೦೯-೧೫೦). [ಪೆರ್ (< ಪಿರಿದು$_1$) + ತೊಱೆ$^3_2$]

**ಪೆರ್ದಮ್ಮಿಲ್ಲ** (ನಾ). = ಪೆರ್ದುಱುಬು : ನಿಮ್ನಲ ಬಹಿರ್ಭಾಗದೊಳೆಸೆ ವಂತೆ ಪೆರ್ದಮ್ಮಿಲ್ಲ ಜಡೆಗಳೊಪ್ಪಿದವು (ಮೋಹತ. ೦೪-೯೩).

[ಪೆರ್ (< ಪಿರಿದು$_1$) + ಧಮ್ಮಿಲ್ಲ]

**ಪೆರ್ನಂದಿ** (ನಾ). ಒಂದು ಬಗೆಯ ನಾಣ್ಯ (?) : ಅವರಾ ಪಡೆಯಂ ಪೆರ್ವ್ವಟ್ಟೆಯೂರುನ್ದು ತೆಱೆ$^3$ ಪೆರ್ನ್ನನ್ದಿ ಎರಡು ತೆಱುವುದು (ಎಇ. IV, ಹಗ್ಗ. ೪-೨೨; ಸು. 750). [?]

**ಪೆರ್ನಗರ** (ನಾ). ಒಂದು ಸ್ಥಳದ ಹೆಸರು : ಅನ್ದರಿಯ ಆಲನೂರ ಪೌರುಳಱಿ$^3$ಅ ಪೆರ್ನ್ನಗರಾದ್ಯನೇಕ ಸಮರಮುಖಾಭ್ಯಾಹುತ ಪ್ರಪಾತ ಶೂರಪುರುಷ (ಇಅ. V, ೦೩೪-೯; ಸು. 788); (ಮ್ಯಆ. ೧೯೩೪, ೬೪-೦೫; ಸು. 788 ನೋ). [ಪೆರ್ (< ಪಿರಿದು$_1$) + ನಗರ]

**ಪೆರ್ನಗೆ** (ನಾ). ಅಧಿಕವಾದ ನಗೆಪಾಟಲು : ಘನನಾಮಂ ಲೋಕದೊಳ್ ಪೆರ್ನ್ನಗೆಗೆಡೆಯೆನಿಸಿತ್ಕೃಟಾ (ರಾಜಶೇ. ೬-೪). [ಪೆರ್(< ಪಿರಿದು$_1$) + ನಗೆ]

**ಪೆರ್ನರ, ಹೆನ್ನರ** (ನಾ). (ದೇಹದೊಳಗಿನ) ಮುಖ್ಯವಾದ ರಕ್ತನಾಳ,— ಸೆರೆ : ಗೋಣರೆಗಡಿದು ಪೆರ್ನರವಾಂತು ಮಿಡುಕುವ ಪ್ರಾಣದ ಶವಗಳೊಪ್ಪಿ ದುವು (ಮೋಹತ. ೪೦-೬೦). **ಹೆನ್ನರ :** "ಕಕುಂದರವೆಂಬುದು ಕೊರಳ ಹೆನ್ನರ" (ಹಲಾಯು. ೦೦೪-೧೨); ತಲೆ ಕಿವಿಸಂದುಯಲ್ವಣ ಪುಷ್ಪ ನೋವಡೆ ದಾಹಮಾಗೆ ಮ್ಯ ಬಲಿವಡೆ ಹೆನ್ನರಂ ತೆಗೆಯೆ ಮೂರ್ಛೆಗೆ ಕಣ್ಣಾತಿ ರಕ್ತವಾಗೆ (ಕಲ್ಯಾಕಾ. ೩-೧೩); ಶಿರದೊಳು ಖಡ್ಗವನಿರಿಸಿ ಬಲ್ಪಿನಲೊತ್ತಿ ಘರಿಘರಿ ನರಿದು ಹೆನ್ನರವ ಭರದಿಂದ ಬಿಡಿಸಿ ಗೋನಾಳಿ ಇಬ್ಬಗಿಯಾಗೆ ಉರವಣಿಸಿತು ಬಲುರುಧಿರ (ನಿಜಾಣಾಂ. ೪-೧೦೬). [ಪೆರ್ (< ಪಿರಿದು$_1$) + ನರ$_1$ (< ನರವು)]

**ಪೆರ್ನಾವೆ** (ನಾ). ದೊಡ್ಡ ತೆಪ್ಪ,— ದೋಣಿ : ಕಟ್ಟಿದೆ ೬ಲಿ ಕಾಲಾಳಂ, ಮೆಚ್ಚಿನ ಪೆರ್ನಾವೆಗಳುಂ, ರಾಜರಾಜನಾಣೆಯಾಯ್ತು ! (ಶಾರಸಿ. ೩-೧). ‘ಪೆರ್ದೆಪ್ಪ’ ಪರಾ. [ಪೆರ್ (< ಪಿರಿದು$_1$) + ನಾವೆ]

**ಪೆರ್ಣಿಣ** (ನಾ). ಅಧಿಕವಾದ ಕೊಬ್ಬು,— ಮೇದಸ್ಸು : ಪೆರ್ಣಿಣದ ಖಂಡದ ಮಾಂಸದ ತಾಣಮಲ್ಲಪೇ ಎಂದು ಶರೀರದೊಳಾದ ಅಶುಚಿತ್ವಮಂ ಭಾವಿಸಿ (ರಕ್ಷೇಕಾವ್ಯ. ೫-೨೮). [ಪೆರ್ (< ಪಿರಿದು$_1$) + ನೆಣ]

**ಪೆರ್ನೊಣ** (ನಾ). ದೊಡ್ಡ ಜಾತಿಯ ನೊಣ : ಪೆರ್ನೊಣಂಗಳಿಂ ತಗುಳ್ದೊಱೆ$^3$ಸಿಯುಂ . . . ಸೈರಿಸಲಾಱದೆ (ರಕ್ಷೇಕಾವ್ಯ. ೩-೬೩).

[ಪೆರ್ (< ಪಿರಿದು$_1$) + ನೊಣ (< ನೊಳವು)]

**ಪೆರ್ನೊರೆ** (ನಾ). ಅಧಿಕವಾದ ಫೇನ ; ಅತಿಶಯವಾದ ಬುರುಗು : ಪೆರ್ನೊರೆ[ಶಾಕಾಂ. ಪೊನ್ನೊರೆ]ಯುಂ ತಗುಳ್ದ ವಿಹತ್ತಾಂಬುವ ಬಲ್ಪೊನಲಿಂದ ಪೆಱಱದ ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱಿದು ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೨೬); ಪೆರ್ನೊರೆ ಸೂಸುತ್ತಿರೆ ಭೀಕರಂ ಸೊಗಯಿ ಸಿತ್ತುತ್ತ್ಯೇಕರಂ ಸೂಕರಂ (ಕಂದ್ರಕ. ೫-೬೦).

[ಪೆರ್. (< ಪಿರಿದು$_1$) + ನೊರೆ$_2$]

**ಪೆರ್ನೊಸಲ್** (ನಾ). ವಿಶಾಲವಾದ ಹಣೆ; ದೊಡ್ಡ ಹಣೆ : ಪೆಱ$^3$ನೊಸಲ್ ಪೆರ್ನೊಸಲಾಗೆ . . . ಸೀತೆ ಕರಾಳಮುಖಿಯಾದಳ್ (ಅದ್ಯುತ. ೫೦-೨೦).

[ಪೆರ್ (< ಪಿರಿದು$_1$) + ನೊಸಲ್]

**ಪೆರ್ಪಟ್ಟುಪೊಲ** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀ ಕೊಱುಗಣ ಮುತ್ತರಸರ್ ಕೊಟ್ಟತು ಪೆರ್ಪ್ಪಟ್ಟುಪೊಲವು (ಎಇ. X (B), ಶ್ರೀಚಿಣಾ. ೦೦೬-೩; 750). [? + ಪೊಲ]

**ಪೆರ್ಬಂಟು** (ನಾ). ದೊಡ್ಡ ಸೈನ್ಯ,— ಪರಿವಾರ : ತಲೆಕೆಬಗಾಗಿ ಕಟ್ಟಿದಲ ಗೊಱೆ$^3$ಮುನರ್ಬೆ ಬೀಟ$^3$ ಪಿಮ್ಮಡಿಯಂ ಪಱೆ$^3$ಯ ಪೆಱಗಂ ನೋದುತ್ತುಂ ಪರಿವ ಪೆರ್ಬಂಟುಮಂ (ಶಿಲಾಶ. ೫-೦೦೪ ಶ).

[ಪೆರ್ (< ಪಿರಿದು$_1$) + ಬಂಟು]

**ಪೆರ್ಬಂಡಿ** (ನಾ). ದೊಡ್ಡ ಗಾಡಿ,— ಶಕಟ : ಎತ್ತಲಾ ಪೆರ್ಬಂಡಿ ಬೀಳಪ

ದೆತ್ತಲೀತನ ಮೇಲೆ ಬದುಂಬುವುದೆತ್ತಲೀ ಶಿಶು ಪರಮಪುರುಷನ ಕೃಪೆಯು ದಲ್ಲದಡೆ (ಶಿಖಾಗ. ೧೦-೦೦-೩). [ಪೆರ್ (<ಪಿರಿದು$_1$) + ಬಂಡಿ$_1$]

**ಪೆರ್ಬಂದಿ** 'ಪೆರ್ವಂದಿ' ನೋ.

**ಪೆರ್ಬಕ್ಕವಾಣ** (ನಾ). ಒಬ್ಬಾತನ ಹೆಸರು : ತಸ್ಯ ಸಾಕ್ಷಿಣ ಗಙ್ಗರಾಜಕುಲ ಸಕಲ ಸ್ಥಾಯಿಕ ಪುರುಷ ಪೆರ್ಬಕ್ಕವಾಣಮಜುಗರೆಯು ಸೇನ್ದ್ರಿಕ ಗಂಜಿ ನಾಡ ನಿರ್ಗುನ್ದ ಪಾಣಿಯುಗುರೆಯು ನನ್ದ್ಯಾಲ ಸೀಂಬಾಲಾದಪಭೃತ್ಯಾಯಾಂ (ಎಕ. I (R), ೦-೩೨ ; 466). [ ? ]

**ಪೆರ್ಬಕ್ಕಿ** 'ಪೆರ್ವಕ್ಕಿ' ನೋ.

**ಪೆರ್ಬಟ್ಟ**, ಹೆರ್ಬಟ (ನಾ). ಒಂದು ಸ್ಥಳದ ಹೆಸರು ; ₱ ಈಗಿನ ಕೋಲಾರಜಿಲ್ಲೆ : ಪೆರ್ಬಟ್ಟಕ್ಕಂ ಬಿದಿರೂರ ಅಗ್ಗಳಮಿಳಿಪಲ್ಲಿ ಅಂಕಕೆ ಕಾದಿದ ಬದೆಯಿತ್ತ ಸತ್ತನ್ (ಎಕ. X, ಶ್ರೀನಿವಾ. ೨೭-೨೨ ; ಸು. 870). **ಹೆರ್ಬಟ** : ಮಹಿಷವಿಷಯ ಹೆರ್ಬಟಗ್ರಾಮ (ಮೈಆರ್. ೧೯೩೩, ೦೦೬-೦೦;?). [ ? ]

**ಪೆರ್ಬಟ್ಟೆ** 'ಪೆರ್ವಟ್ಟೆ' ನೋ.

**ಪೆರ್ಬಡಗು** 'ಪೆರ್ವಡಗು' ನೋ.

**ಪೆರ್ಬಡಿಕೆ** 'ಪೆರ್ವಡುಕೆ' ನೋ.

**ಪೆರ್ಬಡಿಗೆ** (ನಾ). ದಪ್ಪವಾದ ಕೋಲು,—ದೊಣ್ಣೆ : ಪಲಗೆ ಪೆರ್ಬಡಿಗೆ ಎಕ್ಕಟಿಗರ ಮೇಲೆ ಚಿಮ್ಮುವ ಚವುರವ ಲೆಕ್ಕವ ಮಾಡುವರಾರು (ಕೋಹಕ. ೪೦-೦೩). [ಪೆರ್ (<ಪಿರಿದು$_1$) + ಬಡಿಗೆ$_1$]

**ಪೆರ್ಬಡಿಸು** (ಕ್ರಿ). ಅಧಿಕವಾಗಿ ಶಬ್ದ ಮಾಡು ; ಜೋರಾಗಿ ಧ್ವನಿ ಮಾಡು : ಗುಡಿಗುಡಿಗಳ ನರ್ತನಗಾತಿಯರೊಳು ಪೆರ್ಬಡಿಸುವ ಗೀತ ರುದ್ರಗಳ ಪಡಿ ತಪ್ಪದೆ ಕೋಲ ಚಾರಿಗಳಿಂದ ಜಕ್ಕಡಿ ಮೆಟ್ಟಿದುವು ದೇವಾಲಯದಿ (ಕೋಹಕ. ೦೪.೭). [ಪೆರ್ (<ಪಿರಿದು$_1$) + ಬಡಿಸು$_1$]

**ಪೆರ್ಬಡೆ** 'ಪೆರ್ವಡೆ' ನೋ.

**ಪೆರ್ಬತ್ತಿ** (ನಾ). ದಪ್ಪವಾಗಿರುವ ಬತ್ತಿ : ಆಗಳ್ ಪರಿತಂದೊಂದಾಖು ಮೇಗಣ್ಗೆಳೆಯಲುರಿವ ಪೆರ್ಬ[ಶಾಂತಿ. ರ್ವ]ತ್ತಿಯುಂ ಕರ್ಚಿ ಬೇಯುತ್ತಿರೆ ಬಾಯ್ಬಿಟ್ಟೋಡೆ ಬಿದ್ದತ್ತದು ನಯನದೊಳ್ (ಧರ್ಮಾ. ೯-೦೬). [ಪೆರ್(<ಪಿರಿದು$_1$) + ಬತ್ತಿ]

**ಪೆರ್ಬಯಕೆ**, ಹೆಬ್ಬಯಕೆ (ನಾ). ೧. ಹಿರಿಯ ಆಸೆ ; ಮಹತ್ವಾಕಾಂಕ್ಷೆ. ೨. ಗರ್ಭಿಣಿಯ ಹಿರಿಯ ಆಸೆ,—ಬಯಕೆ : ಸ್ವರ್ಭಾನುಭಯವಿರಹಿತ ಚಂದ್ರಪದನೆ ಕೇಳರ್ಭಕಸತಿಯರುಗಮದಿ ಪೆರ್ಬಯಕೆಯ ಭುಕ್ತ ನವ್ಯಾಂಬರಗಳ ಗರ್ಭಾಂಗನೆಗುಡಿಸಿದರು (ಕೋಹಕ. ೦೬-೦೦). **ಹೆಬ್ಬಯಕೆ:** ೧. ತಮ್ಮ ತಮ್ಮ ವಿಶಿಷ್ಟಕಾಣಿಕೆಯನ್ನು ಸಲ್ಲಿಸಬೇಕೆಂಬ ಹೆಬ್ಬಯಕೆ ಅಂಕುರಿಸುತ್ತದೆ (ಶಿಕ್ಷರ. ೦೦೩) ; ದುಷ್ಯಂತನನ್ನು ಅವಳು ಪರಿಸಿದ್ದಕ್ಕೆ ತಾನು ರಾಜಮಾತೆಯಾಗಬೇಕೆಂಬ ಹೆಬ್ಬಯಕೆಯೊಂದೇ ಮುಖ್ಯ ಕಾರಣ (ಕಾವ್ಯಸ. ೨೯). [ಪೆರ್ (<ಪಿರಿದು$_1$) + ಬಯಕೆ$_2$]

**ಪೆರ್ಬಯಲ್** 'ಪೆರ್ವಯಲ್' ನೋ.

**ಪೆರ್ಬರಿ** (ನಾ). ಪಕ್ಕೆಯ ಮೇಲ್ಭಾಗ : ಮಿಡಿಯಿಂ ಬೆಂಬರಮೆಯ್ದೆ ಸೀಟ್ದ ಶಬಸಂಘಾತಂಗಳಂಗುಷ್ಠದಿಂ ತೊಡೆಯಿಂ ತಾಪಿನಮೆಯ್ದೆ ಪೋಟ್ದ ಪೆಣಗಳ್ ಬೆರ್ವಟ್ಟೆಯಿಂ ಮುಟ್ಟೆ ಮೆಯ್ಬಿಡೆ ಭಾಳಾಗ್ರಮನೆಯ್ದೆ ಬಿಟ್ಟ ಕುಣಪವ್ರಾತಂಗಳು ಬಟ್ಟೆಯೊಳ್ ಮಡದಿಂ ಪೆರ್ಬರಿಗೆಯ್ದೆ ನೇರ್ದ ಘ್ರುತಕವ್ಯೂಹಂ ಕರಂ ಭೀಕರಂ (೮ಶಾಪ. ೬-೭). [ಪೆರ್ (<ಪಿರಿದು$_1$) + ಬರಿ

**ಪೆರ್ಬಲ** 'ಪೆರ್ವಲ' ನೋ.

**ಪೆರ್ಬಲೆ** 'ಪೆರ್ವಲೆ' ನೋ.

**ಪೆರ್ಬಸ** 'ಪೆರ್ವಸ' ನೋ.

**ಪೆರ್ಬಸವು** 'ಪೆರ್ವಸ' ನೋ.

**ಪೆರ್ಬಸಿಱ್** (ನಾ). ದೊಡ್ಡ ಹೊಟ್ಟೆ : ಪೆರ್ಬಸಿಱುಂ ಕ್ರೂರೇಕ್ಷಣಮುಂ ದನುಜಾಕಾರಮನೊಡರಿಸೆ ನಿಶಾಚರರ್ವಿಸಿ ಕೋರ್ವರ್ (ಕಾವ್ಯಾಕ. ೨೨೦) ; ಉರ್ಬರಿಸಿದ ಪೆರ್ಬಸಿಱ್ ನಸು ಕುಸುಂಗಿದ ಬೆನ್ (ವೃಕಪ. ೦೦-೬೦). [ಪೆರ್ (<ಪಿರಿದು$_1$) + ಬಸಿಱ್ (<ಬಸಿಱು)]

**ಪೆರ್ಬಳ** (ನಾ). ಒಂದು ಊರಿನ ಹೆಸರು (?) : ಆಗ್ನೇಯದ ಎಲಂಚಿಕೊಣ್ಡೆಯಿನ್ದೆ ಪೂಲಿಕುಣ್ಟೆಯಿನ್ದೆ ಪೆರ್ಬಳದೊಳಗಣ ಬಾದು ಪೊಲದಿನ್ದೆ (ಎಕ. X (8), ಶಿಕ್ಕಬ. ೦೦೬-೭೨ ; 850). [₱ ಇದು 'ಪೆರ್ಬಳ್ಳ'ದ ಅಪಲಿಖಿತವಿರಬಹುದು]

**ಪೆರ್ಬಳ್ಳ** 'ಪೆರ್ವಳ್ಳ' ನೋ.

**ಪೆರ್ಬಳ್ಳಿ$_1$** (ನಾ). ವಿಸ್ತಾರವಾಗಿ ಹರಡಿದ ಬಳ್ಳಿ ; ಚೆನ್ನಾಗಿ ಹಬ್ಬಿದ ಲತೆ : ಓರ್ವ ಲುಬ್ಧಕಂ . . . ಮರನನೇಱಲ್ ಸಾಲದೆ ಕಾಲಪಾಶ ದಂತೆ ಮುರಿದು ಪರಿದು ಪರ್ವಿದ ಪೆರ್ಬಳ್ಳಿಯನಡರ್ದೇಱು (೧೦೪. ೦-೦೨೬ ಪ) ; ಪೆರ್ಬಳ್ಳಿಯ ಬಳಿಯನಡರ್ದು ಪಿಡಿಯಲೆಳಸಿ ಫಳಿಲನೆ ಸಾರೆವರ್ಪ ಘೋರಲುಬ್ಧಕನಂ ಕಂಡಗಿದು (ರಾಜಶೇ. ೩-೩೩ ಪ) ; ಪದಕೆ ತೊಡರ್ದ ಪೆರ್ಬಳ್ಳಿಗಳ್ ಪಾಶದಂತೊಪ್ಪಿರೆ (ಶಾಕುಂತ. ೦೭-೩೩). [ಪೆರ್ (<ಪಿರಿದು$_1$) +ಬಳ್ಳಿ]

**ಪೆರ್ಬಳ್ಳಿ$_2$** 'ಪೆರ್ವಳ್ಳಿ' ನೋ.

**ಪೆರ್ಬಱಿ** 'ಪೆರ್ವಱಿ' ನೋ.

**ಪೆರ್ಬಟ್** (ನಾ). ಅಮೂಲ್ಯವಾದ ಬಟ್ಟೆ,—ವಸ್ತ್ರ : ಏಳಸದ್ವಿ ಮಲಾಪುರೀ ಪರಶ್ರೀನಟಿ ನರ್ತಿಸುತ್ತುಮಿರೆ ತತ್ಕರವಿಭ್ರಮದಂದದವಾಯ್ತು ಮಂದಾನಿಳಸಂಚಳಲ್ಲುಳಿತ ಚೀನದ ಪೆರ್ಬಟ್[ಪೆರ್ಬಟಂ] ವೀಧಿವೀಧಿ ಯೊಳ್ (ಕುಸುಮಾ. ೬-೦೦೬). [ಪೆರ್ (<ಪಿರಿದು$_1$) + ಪಟ್ಟು]

**ಪೆರ್ಬಾಗಿಲ್** 'ಪೆರ್ವಾಗಿಲ್' ನೋ.

**ಪೆರ್ಬಾಣ** (ನಾ). ಒಂದು ಊರಿನ ಹೆಸರು : ಪಾಣಿಗ್ರಹಣಂಕೆಯ್ದು ಕೊಟ್ಟಾಪ್ಪೆರ್ಬಾಣ ಮುತ್ತರಸರು (ಮೈಆರ್. ೦೯೪೦, ೧-೩೩ ; 788) ; ಪೆರ್ಬಾಣನ ಪಳ್ಳಿಯ ಕೊಣ್ಡ ಶ್ರೀಕೇಸಿಗ × × × ತಲೆನೆಱಿಯಲ ಕಟ್ಟಂ ಕಟ್ಟುವುದರ್ಕೆ ಕೊಟ್ಟ ಸ್ಥಿತಿಕ್ರಮವೆನ್ತುಪನ್ದೊಡೆ (ಎಕ. VI (R), ಶ್ರೀರಂಗ. ೮೩-೦೨ ; ಸು. 904). 'ಪೆರ್ಬಾಟ್' ಪಠಾ. [?]

**ಪೆರ್ಬಾರವ** 'ಪೆರ್ವಾರ್ವ' ನೋ.

**ಪೆರ್ಬಾರ್ವ** 'ಪೆರ್ವಾರ್ವ' ನೋ.

**ಪೆರ್ಬಾಲ** (ನಾ). ಉದ್ದವಾದ ಬಾಲ ; ನಿಡಿದಾದ ಬಾಲ : ಪೆರ್ಚಿದ ಕೊರರ್ ಪೆರ್ಬಾಲವುದ್ದಂಡವಕ್ರರದಂ ಮಿಂಚುವ ಮೆಯ್ . . . ಚೆಲ್ವಾಗೆ ತತ್ಕಾನನಾಂತರದೊಳ್ ಪೆರ್ಬಾಲಿಯಿರ್ದುದು (ನೇಮಿ. ೭೬). [ ಪೆರ್ (<ಪಿರಿದು$_1$) + ಬಾಲ$_1$ ]

**ಪೆರ್ಬಾವು** 'ಪೆರ್ವಾವು' ನೋ.

**ಪೆರ್ಬಾವುಗ** (ನಾ). ದೊಡ್ಡ ಗಂಡುಬೆಕ್ಕು : ಎಲೆ ಪರಾರ್ಜಾ ನಿನ್ನ ವಕ್ಕಾಲಣ ಬೇಂಟೆಗಾಗಿ ನಮ್ಮನೆಯೋಳಗ ಪೊಂದಿ ಪೆರ್ಬಾವುಗನು ಪುದುಗಿ ಕುಳಿತಿದೆ (ಸಪಪಾಂ. ೦೭-೨೩). [ ಪೆರ್ ( < ಪಿರಿದು$_1$ ) + ಬಾವುಗ ]

**ಪೆರ್ಬಾಳ್** 'ಪೆರ್ಬಾಟ್' ನೋ.

**ಪೆರ್ಬಾಳು$_1$** 'ಪೆರ್ವಾಳ್' ನೋ.

**ಪೆರ್ಬಾಳು$_2$** 'ಪೆರ್ಬಾಟ್' ನೋ.

**ಪೆರ್ಬಾಟ್**, ಪೆರ್ಬಾಳ್, ಪೆರ್ಬಾಳು$_2$, ಹೆಬ್ಬಾಳು$_2$ (ನಾ). ಒಂದು ಸ್ಥಳದ ಹೆಸರು : ಪೆರ್ಬ್ಬಾಟ ಉತ್ತಮಗಾಮುಣ್ಡರುಂ ಕುನ್ದ ಗಾಮುಣ್ಡರುಂ (ಎಕ. IV, ಶ್ರೀರಂಗ. ೦೩೦-೨೦; ಸು. 900) ; ಪೆರ್ಬ್ಬಾಟ ನಾಳುತ್ತಮಿಟ್ಟು (ಎಪ. IV, ೩೩೩-೨೦ ; 975). **ಪೆರ್ಬಾಳ್** : ಪೆರ್ಬ್ಬಾಳ

ಶ್ರೀಸ್ವಯಂಭು ದಕ್ಷಿಣ ಸೋಮನಾಥದೇವರ ಮಠದಾಚಾರ್ಯ್ಯರ್ (ಕಸೌಇ. XI-ii. ೦೩೯-೩೦ ; 1095). **ಪೆರ್ಬಾಳ್ವು₂ :** ಶ್ರೀಮತ್ಕನ್ನಯ್ಯ ಚರಿತ್ರ ವಳ್ಳಿಯುಮಂ ಪೆರ್ಬ್ಬಾಳುಮಂ ಬಿದಿರುವಳ್ಳಿಯು ಧುರದೊಳಿ ಕೊಣ್ಡು (ಎಕ. XI. ಜಗ್ಗಳ. ೪೯-೬೦ ; 947). **ಹೆಬ್ಬಾಳ್ವು₂ :** ಶಿವಲಿಂಗದೇವರ್ಗ್ಗೆ ಆ ನಾಡ ಬಳಿಯ ಕಂಪಣಂ ಹೆಬ್ಬಾಳು ಪನೆರಡರೊಳಗಣ ನಾಗವಾಡಮಂ ಸರ್ಬ್ಬನಮಸ್ಯಂ ಮಾಡಿ (ಕೊಲ್ಹಾ. ಶಾ. ೬-೩೬ ; 1147).

[ ಪೆರ್ (< ಪಿರಿದು₁ ) + ಪಾಳ್ ]

**ಪೆರ್ಬಿಟ್ಟಿ** (ನಾ). ಪ್ರತಿಫಲವಿಲ್ಲದೆ ಮಾಡುವ ಅಧಿಕವಾದ ಕಾಯಕ : ಪಿರಂತೀ ದೇಹಮಂ ರಕ್ಷಿಸುವಶಿಭರದಿಂದಾಳ್ದು ತೆತ್ತುಂ ಸತೇಜಕ್ಕಾರೇನು ಪೇಳ್ದೊಡಂ ಕೈಮುಗಿದು ಸುಗಿದು ಪೆರ್ಬಿಟ್ಟಿಯಂ ಪೊತ್ತು (ರಕ್ಷಿಶ. ೦೮).

[ ಪೆರ್ (< ಪಿರಿದು₁)+ಬಿಟ್ಟಿ ]

**ಪೆರ್ಬಿಡಿ** 'ಪೆರ್ವಿಡಿ' ನೋ.

**ಪೆರ್ಬಿದಿರ್** 'ಪೆರ್ವಿದಿರ್' ನೋ.

**ಪೆರ್ಬಿಲ** (ನಾ). ದೊಡ್ಡ ಕಂಡಿ,—ರಂಧ್ರ : "ಪೆರ್ಬಿಲಂ ಬಿಲಸಗ್ಗಮುಂ ಬಿಲದ್ವಾರ್ಮೆಂದು" (ಕವಿಕೈ. ೯೭) ; ಬಿಲದ್ವಾರ . . . ಪೆರ್ಬಿಲ (ಶಬ್ದ. ೨೯೯ ಪ್ರಯೋ).

[ಪೆರ್ (<ಪಿರಿದು₁) +ಬಿಲ]

**ಪೆರ್ಬಿಸಿಲ್** 'ಪೆರ್ವಿಸಿಲ್' ನೋ.

**ಪೆರ್ಬಿಳ್ಗೆ ?** (ನಾ). (?) : ಲೋಕದಲ್ಲಿ ಪಾರ್ವರಾದಪರೊರ್ಮೆಯುಂ ಮಣ್ಣೀರು ಪೆರ್ಬಿಳ್ಗೆ ಬಿಸಪಾದಿಯಾದ ನಿಷಿದ್ಧವಸ್ತುಗಳನೊಂದಿನಿಸುಂ ಕಾಮಿಸಿ ಭಕ್ಷಣೆಗೆಯ್ಯಲಾಗದು (ಧಾರಶಾ. ೨೬೪).

[ ? ]

**ಪೆರ್ಬುಡಿಕೆ** (ನಾ). ದೊಡ್ಡ ಕುಕ್ಕೆ : ಪೆರ್ಬು[ಪಾಶಾಂ. ಬ]ಡಿಕೆಯೊಳಿಪ್ಪ ಗುಂದಿ ನಸುನೆತ್ತುವ ಮಿಸ್ಸಗಳ್ (ಸೂಕ್ತಿಸು. ೩-೦೬೭).

[ ಪೆರ್ (<ಪಿರಿದು₁)+ಪುಡಿಕೆ ]

**ಪೆರ್ಬುಣ್** (ನಾ). ದೊಡ್ಡ ಗಾಯ : ತಱಿದುಕೊಳಿ ದೋಣಿಪೋಗಿರ್ದ ಪೆರ್ಬುಣ್ಗಳಿಂ (ಕಾದಂಬ. ೨೬೦) ; ಪಡಿಕೆಯಂತೆ ನಾಱುತಿರ್ಪ ಪೆರ್ಬುಣ್ಗಳಿಂ . . . ಅದ್ಭುತವಾಗೆ (ಧರ್ಮಾಮೃ. ೪-೭೫). [ಪೆರ್ (<ಪಿರಿದು₁) + ಪುಣ್]

**ಪೆರ್ಬುತ್ತು** 'ಪೆರ್ವುತ್ತು' ನೋ.

**ಪೆರ್ಬುಲಿ** 'ಪೆರ್ವುಲಿ' ನೋ.

**ಪೆರ್ಬುಸಿ, ಹೆಬ್ಬುಸಿ** (ನಾ). ದೊಡ್ಡ ಸುಳ್ಳು : ಎನಗಿದಯುಕ್ತಮೆಂದಿರದೆ ಪೆರ್ಬುಸಿಯೊಳ್ಪುದಿದಿರ್ದ ಧರ್ಮನಂದನನನೆ ಧರ್ಮನಂದನನೆನಲ್ (ಗದಾಯು. ೩-೩೨) : ಮಾತಾಡದಿರೊಂದುಮಂ ಮಱೆದು ಪೆರ್ಬುಸಿಯಂ (ಧರ್ಮಾಮೃ. ೩-೭೫) ; ಪುಸಿಕನಿವಂ . . . ಪೆರ್ಬುಸಿಯನೆ ಪೇಳ್ದಪಂ (ವೃಷಟ. ೩೯-೦೨೨). **ಹೆಬ್ಬುಸಿ :** ಹೆಬ್ಬುಸಿಯ ಕೇಳಲ್ಬಾರದು (ಬೀಕೈತ್ತು. ೪-೬-೩೪) ; ಅಸಮ ಸಸಿರಾಯರೊಳು ಹೆಬ್ಬುಸಿಯ ಬಿರನಂಗಳೇಕೆ (ಕೊಲ್ಹಾ. ಶ. ೦೪೪).

[ಪೆರ್ (< ಪಿರಿದು₁) + ಪುಸಿ₂ ]

**ಪೆರ್ಬೆಟ್ಟು, ಪೆರ್ಬೆಟ್ಟು, ಪೆರ್ವೆಟ್ಟು, ಹೆಬ್ಬೆಟ್ಟು, ಹೆಬ್ಬೆಟ್ಟು₁** (ನಾ). ೧. ದೊಡ್ಡ ಬೆಟ್ಟ ; ಮಹಾಪರ್ವತ : ಲುಬ್ಧಕರು ಕೊಟ್ಟರೊಂದೊಂದು ಕೂರ್ಗಣೆಗಳು ಬಿದ್ದು ಪೆರ್ಬೆಟ್ಟುಕೆ ಎಱಗಿಲಾದುದೆನಿಸಿ (ವೀಚಿಕಚ. ೦೯-೩೮) ; ಭರತಂ ಮಹೀತಳಕೆ ಬಿದ್ದು ಮೂರ್ಛೆಯೊಳಿರಲ್ಕೆ ವಿಗಡಹನುಮಂ ಕಂಡು ಕಿತ್ತು ಪೆರ್ಬೆಟ್ಟುಮಂ ನೆಗಪಿ ತಂದರ್ಭಕನ ಮೇಲಿಡಲ್ಕೆ (ಕೈಬಿಟಾ. ೨೦-೩೦). ೨. (ಅಲಂ) ಅತ್ಯಂತ ಭಾರವಾದುದು : ಮುಪ್ಪಡಸಿರ್ದಾತಗೆ ಪೆಣ್ಣು ಬೆಟ್ಟ ರುಣವೇ ಪೆರ್ಬೆಟ್ಟು ಮೂಲೋಕದೊಳ್ (ಸೋಬೀಸೇ. ೮೫). **ಪೆರ್ಬೆಟ್ಟು :** ೧. ಸುವೇಗನ ಬಲೌಘಕದಿಂಟ್ಟು ನಿಂದಂ ಭೀಮನುತ್ಸಾಹದಿಂದೆ ಪೆರ್ಬೆಟ್ಟೊತ್ತಿ ನೂಕುವ ಮಹಾವಾತಘಾತಮಂ ತಡೆದೊಲೆಯದಿಪ್ಪಂತಿರೆ (ಕೈಬಿಟಾ. ೯-೨೯) ; ಕೇಱಡವಿ ಪೆರ್ಬೆಟ್ಟುಗಳನಂತು ನೂರಾರು ಪೇರೊರ್ಗಳಂ ದಾಂಟಿ ಪೂರ್ವದಿಙ್ಮುಖನಾಗಿ ನಡೆದನಾ ಶತ್ರುಘ್ನನು (ಕೀಶಶಾ. ೬-೫೦). **ಪೆರ್ವೆಟ್ಟು :** ೧. ಕಲ್ಲುಗಳೊಣ್ದು ಪೆರ್ವೆಟ್ಟು ಧರಾತಳಕೆ ಸರಿಯಾದವು (ಎಕ. II. ೦೯೩-೦೦ ; 1131). **ಹೆಬ್ಬೆಟ್ಟು :** ೧. ಕಣ್ಣಿಂಬ ಕೂರ್ಗಣೆಯನು ಉಬ್ಬರದ ಸಾಹಸದೊಳಳವಡಿಸಿಕೊಂಡು ಬಿಡದಬ್ಬರಿಸಿ ಸೋವಿ ತಂದವರ ಬಲ್ಮೊಲೆಯೆಂಬ ಹೆಬ್ಬೆಟ್ಟದೆಡೆಯಾಱುಬಿನೊಳ್ಕಡವುತಿಹನಲ್ಲಿ ವಿಟರಕ್ಷಿಮೃಗ ಕುಲವನು (ಕೈಬಿಟಾ. ೬-೦೬) ; ಗಗನದೊಳ್ಗನ್ನ ರಥಮಂ ಬಿಟ್ಟು ಹೆಬ್ಬೆಟ್ಟ ದಂತಿವನ ಮಸ್ತಕದ ಮೇಲೆ ಬೀಳಲ್ಕೆ (ಕೈಬಿಟಾ. ೨೩-೨೦). **ಹೆಬ್ಬೆಟ್ಟು₁ :** ೧. ಅಶ್ವಹೇಷಾರ್ಭಟಮುಮಿಭಘಟಾಘೀಂಕೃತಿಯುಮೇಕವಾಗಿ ಉಬ್ಬೆದ್ದು ಹಬ್ಬುತ್ತೆ ಘೋರನಿರ್ಘೋಷೆಯೊಳಂ ಹೆಬ್ಬೆಟ್ಟುಗಳ ಗುಹೆಗಳೊಳಗೆ ಮೊಳಗಿದುವು (ಕೀಶಶಾ. ೦೯-೭೩).

[ ಪೆರ್ (< ಪಿರಿದು₁) + ಬೆಟ್ಟು ]

**ಪೆರ್ಬೆಟ್ಟು** 'ಪೆರ್ಬೆಟ್ಟು' ನೋ.

**ಪೆರ್ಬೆಡೆ** 'ಪೆರ್ವೆಡೆ' ನೋ.

**ಪೆರ್ಬೆಣ** 'ಪೆರ್ವೆಣ' ನೋ.

**ಪೆರ್ಬೆಣ್ಣಯ** (ನಾ). ಒಬ್ಬಾತನ ಹೆಸರು : ಶ್ರೀಮತ್ಪಡೆಯಂಕರಾಜ ನೊಲಂಬಾಧಿರಾಜಂ ಪೆರ್ಬ್ಬೆಣ್ಣಯಂ (ಎಕ. X. ಮುಳಬಾ. ೨೦೪-೦೦ ; 1000).

[? + ಅಯ್₁ ( < ಅಯ್ಯ₁) ]

**ಪೆರ್ಬೆಲೆ** 'ಪೆರ್ವೆಲೆ' ನೋ.

**ಪೆರ್ಬೆಳಸು** 'ಪೆರ್ವೆಳಸು' ನೋ.

**ಪೆರ್ಬೊಗೆ, ಹೆಬ್ಬೊಗೆ** (ನಾ). ದಟ್ಟವಾದ ಹೊಗೆ,—ಧೂಮ : ಏಳು ನೂಱ್ ಭೂತಂಗಳುದುಭಟಿನ ಸುಡುವ ಪೆರ್ಬೊಗೆ ತಾಗಲೊಡನಾ ಮೃಡನ ಕೈಲಾಸಕ್ಕೆ ಪೋದವು (ಬಸವು. ೫೭-೦೪). **ಹೆಬ್ಬೊಗೆ :** ಹೆಬ್ಬೊಗೆಯುನಡಗಿ ಸುತ ಪಿರಿಯುರಿ ಹಬ್ಬುತ . . . ಇರಲು (ಬಸಕ್ತಿ. ೪೪-೨೦).

[ಪೆರ್ ( < ಪಿರಿದು₁ ) + ಪೊಗೆ₂]

**ಪೆರ್ಬೊಟ್ಟು, ಪೆಬ್ಬೆಟ್ಟು, ಹೆಬ್ಬೆಟ್ಟು₂, ಹೆಬ್ಬೊಟ್ಟು** (ನಾ). ಕೈ ಮತ್ತು ಕಾಲುಗಳಲ್ಲಿರುವ ದಪ್ಪನಾದ ಮೊದಲನೆಯ ಬೆಟ್ಟು ; ಅಂಗುಷ್ಠ ; ಹೆಬ್ಬೆರಳು : ನೆಟ್ಟನೆ ಪೆರ್ಬೊಟ್ಟಂ ಮಣಿಕಟ್ಟಿಂಗಳಿತಂದ ಸಂದಿಯಲ್ಲಿಯು ಸರೆಯಂ ಮುಟ್ಟಿದೊಡೆ ಮಿಡಿಯುದಿರ್ದೊಡೆ ನಿಟ್ಟೆಯುನ್ನಿಗೆ ಅಯ್ದು ತಿಂಗಳಾಯುಃಕ್ರಮಮಂ(ಶಗಾಶ. ೩೩೬): ಸುಟ್ಟುಂಬೆಯುಂ ಕನಿಷ್ಠಾಂಗುಲಕೆ ನಾಲ್ಕು ಪೆರ್ಬೊಟ್ಟಗೈದು (ಮಂಗರಾ. ೦೦೩-೬). **ಪೆಬ್ಬೆಟ್ಟು :** ಸಣ್ಣ ಬೆರಳ ಶಕ್ತಿಯಂತು ಪೆಬ್ಬೆಟ್ಟನ ಬಣ್ಣಿತೆಂತುಟೊ ಮುಪ್ಪಿಯೆಂತೊ (ಶಿಶ. ೪೯-೦೩೬). **ಹೆಬ್ಬೆಟ್ಟು₂ :** ತರ್ಜನಿ, ಪ್ರದೇಶಿನಿ—ಈ ೨ ಹೆಬ್ಬೆಟ್ಟಿನ ಒತ್ತಿನ ಬೆರಲ ಪೆಸರು (ಶಾಶರಾ. ೦೨೦); ಈ ಭಾಷೆ ಹುಸಿಯಾಗೆ ಹೆಬ್ಬೆಟ್ಟು ಮಿಱ್ಕು ಬೇವುದು (ಸಿದ್ಧರಾ. ೭-೦೫); ಹೆಬ್ಬೆಟ್ಟುಗಳು, ಪವತಳಗಳು . . . ಶಿರಸ್ಸು ಮುಂತಾದ ಸ್ಥಾನಗಳೇ ಸ್ತ್ರೀಯರುಗಳಿಗೆ ಕಳಾಸ್ಥಾನಗಳೆನಿಸಿಕೊಂಬವು (ಸಶವ್ಯ. ೩೦) : ಕರದ ಹೆಬ್ಬೆಟ್ಟ ಬಾಯೊಳಗಿಟ್ಟು ವಟಪತ್ರಶಯನನಂತೊಪ್ಪಿದರ್ ಸುಕುಮಾರಕರ್ (ಭರತ. ೨-೩೦); ಹಿಡಿ ಹಿಡಿದರೆ ಹೆಬ್ಬೆಟ್ಟು ಹೊರಗೆ (ಗಾದೆ). **ಹೆಬ್ಬೊಟ್ಟು :** ಇಂಡಿಯನರು ನಡೆಯುವಾಗ ಹೆಬ್ಬೊಟ್ಟು ಮೇಲಕ್ಕೆ ಎತ್ತುವುದಿಲ್ಲ (ಮುಂಬಯಿ. ೩-೪೪).

**ಹೆಬ್ಬೆಟ್ಟಯ್ಯ**=ಸಹಿಗೆ ಬದಲು ಎಡಗೈ ಹೆಬ್ಬೆಟ್ಟನ್ನು ಒತ್ತುವವನು : ತನ್ನಂತೆ ಮಗ ಹೆಬ್ಬೆಟ್ಟಯ್ಯನಾಗದಿರಲಿ ಎಂದೆ ಮಗನನ್ನು ಚೆನ್ನಾಗಿ ಓದಿಸಿದನು (ರೂಢಿ). **ಹೆಬ್ಬೆಟ್ಟಿನವರು** = ಸಹಿಗೆ ಬದಲು ಎಡಗೈ ಹೆಬ್ಬೆಟ್ಟನ್ನು ಒತ್ತುವವರು : ಆ ಹಳ್ಳಿಯಲ್ಲಿದ್ದ ಮುಕ್ಕಾಲು ಭಾಗ ಜನರೆಲ್ಲ ಹೆಬ್ಬೆಟ್ಟಿನವರೇ (ರೂಢಿ).

[ಪೆರ್ ( < ಪಿರಿದು₁) + ಬೊಟ್ಟು₁]

**ಪೆರ್ಬೊಡೆಯ** 'ಪೆರ್ವೊಡೆಯ' ನೋ.

**ಪೆರ್ಬೊಣಲ್** 'ಪೆರ್ವೊಣಲ್' ನೋ.

**ಪೆರ್ಬೊಣನಲು** 'ಪೆರ್ವೊಣಲ್' ನೋ.

**ಪೆರ್ಬೊಲ** (ನಾ). ವಿಶಾಲವಾದ ಜಮೀನು ; ವಿಸ್ತಾರವಾದ ಭೂಮಿ : ಕಣ್ಗೆ ಸೊಗಸಾದುದೆಇದಮುರರಟ್ಟಿಯ ಬೆಳಸು ತ್ರಿಪುರದ ಮಹಾಬಯಲ ಪೆರ್ಬೊಲದೊಳು (ಶಂಪು. ೧೨-೩೬). [ಪೆರ್ (< ಪಿರಿದು$_1$) + ಪೊಲ]

**ಪೆರ್ಬೊಲಸು** (ನಾ). ಅಧಿಕವಾದ ಹೇಸಿಗೆ,—ಹೊಲಸು : ಕುಮುದ ಶೇಖರ ಜಲಕೇಳಿಲೀಲೆಯಲಿ ತರುಣಿಸಹಿತಲಿರೆ ವರಮುನಿ ಶಪಿಸಲು ಶರೀರ ಪೆರ್ಬೊಲಸಾದಂತೆ (ಕೃಕಚ. ೨-೨೯). [ಪೆರ್ (< ಪಿರಿದು$_1$) + ಪೊಲಸು]

**ಪೆರ್ಬೊಳಲು** 'ಪೆರ್ಪೊಟಲ್' ನೋ.

**ಪೆರ್ಬೊಳೆ** 'ಪೆರ್ಪೊಳೆ' ನೋ.

**ಪೆರ್ಭಯ** (ನಾ). ಅಧಿಕವಾದ ಹೆದರಿಕೆ, – ಅಂಜಿಕೆ : ನನ್ನೆಚ್ಚರಿಸಿತು ಒಂದರೆಜಾವ ಬೆದೆಗಾಲದ ಹಮ್ಮೈಸಿಕೆಯೊಳಗೆ ಪೆರ್ಭಯದಂಬಾಸಂರಾತಿಯೊಳಗೆ (ಗಕೀತ. ೬೬-೪). [ಪೆರ್ (< ಪಿರಿದು$_1$) + ಭಯ]

**ಪೆರ್ಭಾಗ್ಯ** (ನಾ). ಅತಿಶಯವಾದ ನಿಧಿ,–ಸಂಪತ್ತು : ಗರ್ಭದೊಳಿದ್ದುದು ಮೊದಲಾಗಿ ನಾವೆಮುಗರ್ಭಕನಾಗುವನೆಂದು ಪೆರ್ಭಾಗ್ಯದಂತೆ ಪಾರ್ಥಿವ ನೀವೆಮ್ಮ ನಿರ್ಭಾಗ್ಯ ಮಾಡಿಹೋಗುವಿರಿ (ಜಕ. ೪೩-೦೦೬).
[ಪೆರ್ (< ಪಿರಿದು$_1$) + ಭಾಗ್ಯ]

**ಪೆರ್ಭುಜ** (ನಾ). ವಿಶಾಲವಾದ ಭುಜ,–ಹೆಗಲು : ಮಂಡೆಯನೊತ್ತಿ ಪೆರ್ಭುಜಗಳನೊರಸಿ (ಚೋಚಕ. ೦೨-೯೦). [ಪೆರ್ (< ಪಿರಿದು$_1$) + ಭುಜ]

**ಪೆರ್ಭೂತ** (ನಾ). ದೊಡ್ಡ ದೆವ್ವ ; ಪೆಡಂಭೂತ : ಹಸುರ್ಬಯಲು, ಪೆರ್ಭೂತ... ಎಂಬಂತಹ ಪ್ರಯೋಗಗಳನ್ನು ಕುರಿತು ಶುದ್ಧ ವೈಯಾಕರಣಿಗಳು, ಭಾಷೆಯ ಮಡಿವಂತರು ಏನೆಂದುಕೊಳ್ಳುವರೋ! (ಶಾಸಕಾ. ೦೮೨); ತನ್ನ ಮನಸ್ಸು ಕಲ್ಪಿಸಿದ್ದ ಭೀತಿಯೊಂದು ಪೆರ್ಭೂತವಂತೆ ಅವಳ ಮನಸ್ಸಿನಲ್ಲಿ ಕಕ್ಕಲೆ ಮಾಡಿದ್ದಿತು (ಶಾಂತಳಾ. ೬೨).
[ಪೆರ್ (< ಪಿರಿದು$_1$) + ಭೂತ]

**ಪೆರ್ಮ$_1$, ಪೆರ್ಮ್ಮ, ಹೆಮ್ಮ** (ನಾ). ೧. ಮಹಿಮೆಯುಳ್ಳವನು; ಹಿರಿಯ: ಪೆರ್ಮ್ಮನಿನ್ನ ದರ್ಶನವಾಯ್ತು; ಜಯಮಾಯ್ತು ಇನ್ನೆನಗೆ (ಆಶ್ವಾ. ೨-೨೦). ೨. ಒಬ್ಬಾತನ ಹೆಸರು : ಸ್ವಸ್ತಿಶ್ರೀ ಕಡ್ಡಾಣೆ ಪೆರ್ಮ್ಮನ್ ಸಾಮ್ರಾಜ್ಯಂಗೆಯೆ (ಎಕ. X(ಅ), ಶಂಕಾಪು. ೦೭೦-೦ ; ಸು. 750). **ಪೆರ್ಮ$_1$** : ೩. ಹೆಚ್ಚು ; ಅಧಿಕ್ಯ : "ಅಧಿಕದೊಳ್ ಪೆರ್ಮವೆನಿಕುಂ" (ಕಕರ. ೦೨೬). **ಹೆಮ್ಮ** : ೨. ಅವಂ ವಿಪಾಲಿತಧರ್ಮ್ಮಂ ಪ್ರಭುಪ್ರಧಾನಂ ಹೆಮ್ಮಂ (ಕೂಡ್ಲಾತಾ. ೨೩-೩೯ ; ೪); ಕಾಣೂರ್ಗ್ಗಣ ಬಿನವಾಸೋ ನಿರ್ಮ್ಮಿತಂ ಹೆಮ್ಮಭೂಭೃತಃ (ಎಕ. VII, ಶಿಕಪೂ. ೬೪-೨೨ ; 1112 ?). ೪. ದೊಡ್ಡದು (?): 'ಪೆರ್ಮ್ಮಧೇನು' ಪರಾ. [ಪೆರ್ಮ + –ಅ$_7$]

**ಪೆರ್ಮ$_2$** (ನಾ). ಧನ ; ಸಂಪತ್ತು : ಪೆರ್ಮ್ಮೆಂಬಡೆದು ಮಡಗಿದೊಡೊರ್ಮ್ಮೆಯ ತಾಂ ಕಿಡುಗುಮೆಂದು ರೇವಗವುಂಡಂ ಧರ್ಮ್ಮಕ್ಕೆ ತವಿಸಿ ಧನವಂ ನಿರ್ಮ್ಮಿಸಿದುದು ಶಿವಗೃಹಂಗಳು ಮುದದಿಂದಂ (ಕ್ಚಿಇ. IX—i, ೨೯೯-೬೦ ; 1147). [?]

**ಪೆರ್ಮಂದೆ** (ನಾ). ದೊಡ್ಡ ಹಿಂಡು,—ಗುಂಪು : ಹೊರಸುಗಳ ಸಮುದಯಂ ; ಪುರುಲೆಗಳ ಪೆರ್ಮಂದೆ (ಶಬ್ದಾಂಗ. ೩೩-೦೯೯೬).
[ಪೆರ್ (< ಪಿರಿದು$_1$) + ಮಂದೆ]

**ಪೆರ್ಮಕ್ಕಿ** (ನಾ). ಒಂದು ಊರಿನ ಹೆಸರು (?) : ಆ ಯುದ್ಧದುಳ್ ಉಜಿ ಕೀಲಿಚ್ಚಿದವಂಬುವಾಳ್ಪಲಗೆಯುಳ್ಳಟ್ಟುಟ್ಟುವಲ್ಲನ್ನಿ ಪಿನ್ ಮಜಿಮೋಗೀಶ್ವರನುಳ್ಳೆ ಕದಿ ಫಣಿದ ನಾಗವ್ವನೀ ಶೂದ್ರಕನ್ ಪೆರ್ಮ್ಮಕ್ಕಿ ಮೇಗಿರೆ ಪತ್ತೊನ್ನಿದೊಡ ಕಾದು (ಕ್ಚಿಇ. IX—i, ೬೮೨-ಆ ; ೫೫೬ಹು ೫೫). [?]

**ಪೆರ್ಮಗ, ಹೆಮ್ಮಗ, ಹೆರ್ಮಗ** (ನಾ). ಹಿರಿಯ ಮಗ; ದೊಡ್ಡ ಮಗ : ಗಂಗೆಯ ಪೆರ್ಮಗಂಗೆ ಘಟಸಂಭೂತಂಗೆ ಕರ್ಣಂಗಸಾಧ್ಯನೊಳಾಗಾಂಡೀವಿಯೊಳ್ ಕಜಿತ್ತಿಜಿವರಾರ್ (ಶಂಪಭಾ. ೧೩-೪); ಪೆರ್ಮಗನಂ ನೋಡುವೆನೆಂದು ಪೋಗಿ ತಲೆ ಬೇಜಾಗಟ್ಟೆ ಬೇಜಾಗೆ ಧಾತ್ರಿಗೆ ಬಿಟ್ಟಿರ್ದೊಡೆ ಕಂಡು (ಶಂಪರಾಮಾ. ೯-೯೩); ಅಗ್ನಿಭೂತಿಗಂ ಗೌತಮಿಗಂ ಅಗ್ನಿಸಖನೆಂಬ ಪೆರ್ಮಗನಾಗಿ (ಶರಪು. ೦೦-೫೦ ಕ). **ಹೆಮ್ಮಗ** : ತ್ರಿಶಂಕುವಸುಧಾಧಿನಾಯಕನ ಹೆಮ್ಮಗ ಹರಿಶ್ಚಂದ್ರನು ಮಾಣುಗೊಂಡೋಲ್ಲೆ ಸಿಕೊಂಬರಿಲ್ಲಾ ಎನುತ್ತ ಬಗೆಬಗೆದು (ಹಕಾ. ೦೦-೦೪) ; ಬೊಮ್ಮರಕ್ಕಸಗೀವರೇ ಈ ಹೆಮ್ಮಗನ ನೀ ಕೊಟ್ಟೆಯಾದರೆ ನಮ್ಮ ಕಾವ ಮುಕುಂದ ಬಲ್ಲನು ನಿಮ್ಮ ಮಾತುಗಳ (ಸಂಕಕ. ೨೩-೯೯); ಬೃಹಸ್ಪ ದೇವಸ್ಯ ಮಾನಿಸ್ಯ ಹೊಕ್ಕಿಹರೆ ಹೆಮ್ಮಗನು ಸಾವ (ಸರ್ವಜ್ಞ. ೦೦೦೬). **ಹೆರ್ಮಗ** : ಪೆರ್ಮ್ಮಡಿರಾಯನಣುಗಿನ ಹೆರ್ಮಗನೆನಿಪ ಯುಗೀನ ನೃಪಸರ್ವಜ್ಞಂ (ಕೂಡ್ಲಾತಾ. ೯-೦೨ ; 1147). [ಪೆರ್ (< ಪಿರಿದು$_1$) + ಮಗ]

**ಪೆರ್ಮಗಳ್** (ನಾ). ಹೆಣ್ಣು ಮಗಳು : ಒರ್ವಳೆ ಪೆರ್ಮಗಳ್ ಬಗೆಪೊಡಿನ್ನೆಮಗೀಕೆಯೆ ಗಂಡುಗೂಸು (ಅಪ್ಪಾಪ. ೦೬೬). [ಈ ಇದು 'ಪೆಣ್ಮಗಳ್' ಎಂಬುದರ ಅಪಲಿಖಿತವಿರಬಹುದು ]

**ಪೆರ್ಮಗು** (ನಾ). ಮೊದಲನೆಯ ಮಗು; ಹಿರಿಯ ಮಗು : ಧರ್ಮಜನೆಂಬ ಪೆಸರನು ಪೆರ್ಮಗುವಿಗೆ ಕೊಟ್ಟು ಪಾಂಡುನೃಪತಿಯತಿನಿರ್ಮಲಚಿತ್ತನಾಗಿರಲು (ಪೀಠಿಸಂ. ೬-೩೬).

**ಪೆರ್ಮಕ್ಕಳ್, ಪೆರ್ಮಕ್ಕಳು** = ೧. ಊರಿನ ಪಂಚರು; ಮಹಾಜನ : ಪೆರ್ಮ್ಮಕ್ಕಳ ಸನ್ನಾನ ಪಾರ್ವ್ವನ್ನಿನಿಯೂರಾ ಮಹಾಜನಕ್ಕೆ ಕೊಟ್ಟದು ಸಾಲೆ ಆಚನ್ದ್ರತಾರಕಂ (ಎಕ. VII, ಶಿಕಾಂ. ೪೩-೨೬; ಸು. 890?). ೨. ಹಿರಿಯ ಮಕ್ಕಳು : ಸಾವಿರಸಂತಾನವಡೆದಲ್ಲಿ ಮಮಕಾರತೀವಿಹುದಬಲನ ಮೇಲೆ ಕೋವಿದೆ ಪೆರ್ಮಕ್ಕಳ ಬಿಟ್ಟು ಸಲೆ ವಾಗ್ದೇವಿಯ ನ್ನೊಳಗಿರು ತಾಯೆ (ಮೋಚಕ. ೦-೦೦). [ಪೆರ್ (< ಪಿರಿದು$_1$) + ಮಗು]

**ಪೆರ್ಮಚ್ಚರ** (ನಾ). ೧. ಅಧಿಕವಾದ ಅಸೂಯೆ; ಹೆಚ್ಚಾದ ದ್ವೇಷ. ೨. ಅತ್ಯಂತ ದ್ವೇಷವುಳ್ಳವನು; ಅಸೂಯಾಪರ: ಪೆರ್ಮಚ್ಚರನಿಕ್ಕಲೆನ್ನ ಭುಜದಂಡವ ಸಾಲದೆ (ಅಪ್ಪಾಪ. ೯೯೯). [ಪೆರ್ (< ಪಿರಿದು$_1$) + ಮಚ್ಚರ]

**ಪೆರ್ಮಟ್ಟಿ, ಪೆರ್ಮ್ಮಟ್ಟಿ** (ನಾ). ಒಂದು ಬಗೆಯ ವಾದ್ಯ.

**ಪೆರ್ಮಟ್ಟಿತೂರ್ಯನಿರ್ಘೋಷಣ**=(ಕದಂಬ ವಂಶದ ಅರಸರಿಗೆ ಸಲ್ಲುತ್ತಿದ್ದ) ಒಂದು ಬಿರುದು : ಕಾದವ್ವಚಕ್ರಿ ಮಯೂರವರ್ಮ್ಮ ಮಹಾಮಹೀಪಾಳಕುಳಭೂಷಣಂ ಪೆರ್ಮ್ಮಟ್ಟಿತೂರ್ಯ್ಯನಿರ್ಗ್ಘೋಷಣಂ (ಎಕ. XVI, ೬೬-೬ ; 1053) ; ಪೆರ್ಮ್ಮಟ್ಟಿತೂರ್ಯ್ಯನಿರ್ಗ್ಘೋಷಣಂ ಚತುರಾಶೀತಿನಗರಾಧಿಷ್ಠಿತಲಲಾಟ ಲೋಚನಚತುರ್ಭುಜ (ಎಕ. XI, ದಾಕ. ೩೨-೨೬ ; 1 1). **ಪೆರ್ಮ್ಮಟ್ಟಿತೂರ್ಯನಿರ್ಘೋಷಣ** — **ಪೆರ್ಮಟ್ಟಿತೂರ್ಯನಿರ್ಘೋಷಣ** : ಪೆರ್ಮ್ಮಟ್ಟಿತೂರ್ಯ್ಯನಿರ್ಗ್ಘೋಷಣಂ ಶಾಖಾಚರೇಂದ್ರಧ್ವಜವಿರಾಜಮಾನವಾನೋತ್ತುಂಗ ಸಿಂಹಲಾಂಛನ ದತ್ತಾರ್ತ್ತಿಕಾಂಚನ ಮಾಕ್ಕೊಳ್ಬರ ಗಣ್ಡಂ (ಎಇ. I, ೨೬-೦೩ ; 1055). **ಪೆರ್ಮಟ್ಟಿಪಟು ಘೋಷಣ** — ಒಂದು ಬಿರುದು : ಪೆರ್ಮ್ಮಟ್ಟಿಪಟು ಘೋಷಣ (ಕ್ಚಿಇ. ೦೯೯೬, ಹಾಕಶ್. ೨೦೪-೦೩ ; 943) ; ಸಿಂಹಲಾಂಛನಂ ಪೆರ್ಮಟ್ಟಿಪಟುಘೋಷಣಂ ಚತುರಾಸೀತಿನಗರಾಧಿಷ್ಠಿತಂ (ಕ್ಚಿಇ. XX, ೯೦-೬ ; 1068). [?]

**ಪೆರ್ಮಡಿ** 'ಪೆರ್ಮಾನಡಿ' ನೋ.

**ಪೆರ್ಮಡಿಗವುಂಡ** 'ಪೆರ್ಮಾನಡಿಗಾವುಂಡ' ನೋ.

**ಪೆರ್ಮಡಿಗಾವುಂಡ** 'ಪೆರ್ಮಾನಡಿಗಾವುಂಡ' ನೋ.

**ಪೆರ್ಮಡಿಯ** 'ಪೆರ್ಮಾನಡಿ' ನೋ.

**ಪೆರ್ಮಡಿವಟ್ಟ** (ನಾ). ಪೆರ್ಮಾನಡಿಯ ಪಟ್ಟ,– ಪದವಿ : ಶ್ರೀಮತ್ ಪೆರ್ಮ್ಮಾನಡಿಗಳ್ ಜಡಲ ಎಱೆಯಂಗಾವುಣ್ಡನ ಮಗಂಗೆ ಪೆರ್ಮ್ಮಡಿ ಪಟ್ಟಂಗಟ್ಟ (ಎಕ. I(ಆ), ೯೬-ಆ; 890).
[ಪೆರ್ಮಡಿ (< ಪೆರ್ಮಾನಡಿ) + ಪಟ್ಟ$_3$]

**ಪೆರ್ಮಡು, ಹೆಮ್ಮಡು** (ನಾ). ಬಹಳ ಆಳವುಳ್ಳ ಮಡ ,—ಆಳವಾದ ನೀರಿನ ಭಾಗ : ತನ್ನ ತಂದೆಗೆ ನೀರ್ಗುಡಲುವೊಂದು ಮಾಡಿದ ಶಮಂತ ಪಂಚಕಂಗಳೆಂಬಯ್ದು ಪೆರ್ಮಡುಗಳ ಕೆಲದೊಳೆಡೆಯುಱದು ಬೀಡಂ ಬಿಡಿಸಿ (ಪಂಪಭಾ. ೯ ೦೦೯ ವ); ಬಾಯ್ಬಿಟ್ಟೊಡಂ ಪೆರ್ಮಡು. ಬಱದೆನಿಸಲ್ ಸೊರ್ಕಿ . . . ವೆಱಿದುದು ಕಡುಪಿ ಸ್ಥೂಲಕಾಯಂ ಲುಲಾಯಂ (ತ್ರಿಪುರ. ೨೬-೬೯); ಕ್ರೂರನಕ್ರಾಕುಲದೊಳಡಿದಿರ್ದ ಪೆರ್ಮಡು ಗಭೀರ ನಿರ್ಮಲಜಲದೊಳೆಸೆವಂತೆ ಮನದೊಳ್ಕಠೋರತರಭಾವಮಂ ತಳೆದು ಬಹಿರಂಗದೊಳ್ ವಿನಯಮುಖ್ಯತನಾಗಿ (ಕೃಷ್ಣರಾ. ೨೮-೨೯). **ಹೆಮ್ಮಡು :** ಸುಲೋಚನೆಯಾವುದ್ದಾಮ ನದಿಯ ಹೆಮ್ಮಡುವಂ ಪೊಕ್ಕಳ್ (ಜಯನೃ. ೯-೨೯); ಹೆಮ್ಮಡುವೊಂದು ಮನೆ ತಮದೇಳಿಗೆಯ ತುದಿಯೊಂದು ಮನೆ . . . ಕಾಣಿಸುವಡರಿಂದ (ಸಿಕಾಗ. ೬-೨-೬). [ಪೆರ್ (<ಪಿರಿದು) + ಮಡು]

**ಪೆರ್ಮನದಿ** 'ಪೆರ್ಮಾನದಿ' ನೋ.

**ಪೆರ್ಮನೆ, ಹೆಮ್ಮನೆ** (ನಾ). ೧. ದೊಡ್ಡ ಮನೆ : ವಿಶಾಲವಾದ ಭವನ : ಭಟಾರರುಂ ಕಿಱುಮನೆ ಪೆರ್ಮನೆಯೆನ್ನದುಣಲ್ಪಕ್ಕ ಮನೆಗಳಂ ಚರಿಗೆವುಗುತ್ತಂ (ವಡ್ಡಾರಾ. ೬೮-೩); ತೊವಲಿನೆಲ್ಲಿನಿಮುಗ್ಗದ ನೆತ್ತಱಿಂ ಮನಂಬಿಡೆ ಸಮೆದಿರ್ದ ಪೆರ್ಮನೆ ಶರೀರವಿದಂ ಪಿಡಿವಂದವಾವುದೋ (ರಸರತ್ನಾ. ೩-೬೬); ಮುಗಿಲ್ಗಳ್ನೆಯ ಪೆರ್ಮನೆ . . . ಪೊಸವಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದನೊಂದು ಪಾಮರಂ (ಲಕ್ಷ್ಮೀಶ. ೦೦೦). ೨. (ಅಲಂ) ದೊಡ್ಡ ವಂಶ ; ಹಿರಿಯ ಮನೆತನ : ಇನ್ ತೋಱಿಪ್ಪೆ ನಿನ್ನ ಪೆರ್ಮನೆಯ ಪುಟ್ಟುನ್ (ಅಂತಿಗೂ. ೨-೨೯). **ಹೆಮ್ಮನೆ :** ೧. ಹಮ್ಮಿಲಿ ಪಿರಿಗಿದೆ ಒಪ್ಪಮ್ಮಟ್ಟದ ಹೆಮ್ಮನೆ ... ಹೊನ್ನು ಹಮ್ಮಿಣಿವುಳ್ಳ ಸಂಭ್ರಮದಲ್ಲಿ (ಶೀರ್ಷವು. ೦೧೯-೦) ; ವಾರಿಗೆಯ ಸಖಿರನೊಡಗೂಡಿ ಹೆಮ್ಮನೆಯ ಪೊರವಟ್ಟು ಸವಿಲಾಸದಿಂದೆ (ಪಪಕೊ. ೦೬-೦೯). [ಪೆರ್ (<ಪಿರಿದು) + ಮನೆ]

**ಪೆರ್ಮರ** 'ಪೆರ್ಮರ' ನೋ.

**ಪೆರ್ಮರುಳ್, ಪೆಮ್ಮರುಳ್** (ನಾ). ೧. ದೊಡ್ಡ ಭೂತ ; ಭಯಂಕರವಾದ ಪಿಶಾಚಿ : ತೊಡಿನೊಳ್ಕರ್ ಕಿಟ್ಟಿ ದಶಕಂಠನನಕ್ಕಟ ಕೊಂಡ ಪೆರ್ಮರುಳ್ ಕೊಂಡುದೆ ತನ್ನುವಂ (ಪಂಪರಾ. ೬-೩೩) ; ತಂಡತಂಡದ ಭೂತವಿತತಿಗಳ್ಪಲಿಗೆದಱಿಕೊಂಡು ಪೆರ್ಮರುಳಂತೆ ಬಹ ದುಷ್ಟಬುದ್ಧಿಯಂ ಕಂಡು (ಕೃಷ್ಣರಾ. ೩೦-೩೬). **ಹೆಮ್ಮರುಳ್:** ೨. ಅಧಿಕವಾದ ಹುಚ್ಚು ,—ಮರುಳುತನ (?) : ಪೆಮ್ಮರುಳ ಮೇಗೆ ಸೊರ್ಕಿನೆ ತಾಮ್ಮನ್ನಮೆ ಮುಗ್ಗೆಯದಱ ಮೇಗುಂದಯಿಸೆ ಕೋಪಮ್ಮಿಗೆ ತನ್ನ ನೆಟಲ್ಗಂ ಸಮ್ಮನಿಸಳೆ ಕೊರ್ತು ಕಣ್ಣಾ ಕಾಣ್ಬವನೊಳರೇ (ಅಜಿತಪು. ೦೯-೩೦). [ಪೆರ್ (<ಪಿರಿದು) + ಮರುಳ್]

**ಪೆರ್ಮರೆ, ಹೆಮ್ಮರೆ** (ನಾ). ದೊಡ್ಡ ಜಂಕೆ : ಪೆರ್ಮ[ಪಾಠಾಂ. ಹೆಮ್ಮ]ರೆಯ ಬೇಂಟೆ ವಿಹಂಗದ ಮೊತ್ತವೇಂಟೆ . . . ಉಣ್ಮೆತು ಪರ್ವಿದರಣ್ಯಮಧ್ಯದೊಳ್ (೧೦೯. ೦-೬೦) ; ಪೆರ್ಮರೆಯಂನಟ್ಟಿ ಕರುಳ್ಗಳ ತಿಂಬ ಬಂದ ಮುಂಗುಡಿಗಳ ನಾಯ್ಗಳಂ ಪಿಡಿದು ಬೇಂಟೆಯವರ್ ಕರೆದರ್ ನೃಪಾಲನಂ (ಶಬ್ದಮ. ೬೮) ; ಪೆರ್ಮರೆಗಳವಿತ್ತ ದಂತಿಚಯಮಿತ್ತ . . . ಭೀಕರ ಶರಭಾಳಿಯಿತ್ತಲೆನಿಪಬ್ಬರಮಬ್ಬರಮಾಯ್ತರಣ್ಯದೊಳ್ (ತ್ರಿಪುರ. ೨೬-೩೦). **ಹೆಮ್ಮರೆ :** ಮುಱಿಗೆಡೆದು ಕಾಡ್ಕೋಣ ಹೆಮ್ಮರೆ ಕಿಱುಬ ಚಿತ್ರಕ ಶಿಖರಿ ಹಾಯ್ದುವು ಮಱಿಗಳನು ಮುಂದಿಕ್ಕಿ ವನಚರ ಕಂಡ ಬೀದಿಯಲಿ (ಕೃಷರಾ. ೩-೦೨-೦೩) ; ಹೆಮ್ಮರೆಯ ಕ್ಷೀರ ಬದಿರಕ್ಕಿಯೋಗರವುಂಟು ತಣ್ಣನಲ್ಲಿರೊಂದು (ಜಾಶೋಕು. ೯-೬೯). [ಪೆರ್ (<ಪಿರಿದು) + ಮರೆ]

**ಪೆರ್ಮಲ** (ನಾ). ಅತಿಯಾಗಿ ಭೇದಿಯಾಗುವ ಒಂದು ಬಗೆಯ ರೋಗ; ಅತಿಸಾರ : "ಪೆರ್ಮಲಂ ಗ್ರಹಣಿ" (ಮುಂಗರಾ. ೦೨೯-೪). [ಪೆರ್ (<ಪಿರಿದು) + ಮಲ]

**ಪೆರ್ಮಲೆ, ಹೆಮ್ಮಲೆ** (ನಾ). ದೊಡ್ಡ ಬೆಟ್ಟ ; ಎತ್ತರವಾದ ಬೆಟ್ಟ : ಪೊಲೆಗಳ ಮೇಲಿರ್ದಂ ಪೆರ್ಮಲೆಗಳ ಮೇಲಿರ್ದರಧಿಕಗುಣಗಣಯುಕ್ತರ್ (ರಸರತ್ನಾ. ೬-೬೨). **ಹೆಮ್ಮಲೆ :** ತಾಯೊಂದೆಸೆ ಮಕ್ಕಳೊಂದೆಸೆ . . . ಆಗಿ ಬಾಯ ಬಿಡುತ ಬಲು ಭೀತಿಯೊಳಗೆ ಹೊಕ್ಕರಾಯಾಸಗೊಂಡು ಹೆಮ್ಮಲೆಯ (ಕಂಸವ. ೦೩-೯೬). [ಪೆರ್ (<ಪಿರಿದು) + ಮಲೆ]

**ಪೆರ್ಮಳೆ** 'ಪೆರ್ಮಟಿ' ನೋ.

**ಪೆರ್ಮಳೆಗಱಿ** (ಕ್ರಿ). ದೊಡ್ಡ ಮಳೆಯನ್ನು ಸುರಿಸು,—ವರ್ಷಿಸು: ಪೆಟಲ ಗುಂಡುಗಳ ಎಸೆವ ಪೆರ್ಮಳೆಗಱಿಯುತ ಬೊಬ್ಬಿಱಿದಾಗಳಸಮಸಾಹಸಿಗಳೇಱದರು (ಕಂಸವ. ೦೯-೯೮). [ಪೆರ್ಮಳೆ (<ಪೆರ್ಮಟಿ) + ಕಱಿ]

**ಪೆರ್ಮಱವೆ** (ನಾ). ೧. ಸಂಪೂರ್ಣವಾದ ಮರೆವು : 'ಪೆರ್ಮಱವೆಗೊಳ್' ಪರಾ. ೨. ಸಾವು : (?). ೩. (ಅಲಂ) ಅತಿಶಯವಾದ ಔದಾಸೀನ್ಯ : ಪೆರ್ಮಱವೆಯ ಮೆಯ್ಸಿರಿ ಪಾತಕದೆಱದಿಟ್ಟಪಯಸದ ಬೆಟ್ಟು ಕಾಪಂನ ಕಯ್ಪಂ (ಚಾಂತೀಶ್ವ. ೬-೬೨). [ಪೆರ್ (<ಪಿರಿದು) + ಮಱವೆ]

**ಪೆರ್ಮಱವೆಗೊಳ್** (ಕ್ರಿ). ಮೂರ್ಛೆ ಹೊಂದು : ಊರ್ವಿಳಾಕಾಂತಂ . . . ಸ್ವರ್ಮಣಿ ಧರಾತಳಕೆ ನಭದಿಂದುರುಳ್ವಂತೆ ಪೆರ್ಮಱವೆಗೊಂಡು ಬೀಳ್ವನಿತಱೊಳ್ (ಕೃಷ್ಣರಾ. ೨೦-೬೦). [ಪೆರ್ಮಱವೆ + ಕೊಳ್]

**ಪೆರ್ಮಱಿ** (ನಾ). ದೊಡ್ಡ ಹಾವು; ಹೆಬ್ಬಾವು : ಅಡಗೆಡಹಿ ಪೆ[ಪಾಠಾಂ. ಪೆ]ರ್ಮಱಿ ಪರಾಹನ ಮಂಡದಲುಱಿ ಘಟ್ಟಿಸಿ ವಿನೋದದಿ ನಡೆಯೆ ಧರೆ ಕಂಪಿಸಿತು ಭೀಮನ ಪದದ ಘಲ್ಲಣೆಗೆ (ಕುಮಾರವ್ಯಾ. ೩-೦೦). [ಪೆರ್ (<ಪಿರಿದು) + ಮಱಿ./ತುಳು. ಪೆರ್ಮರಿ, ಪೆರುಮರಿ]

**ಪೆರ್ಮಟಿ, ಪೆರ್ಮಳೆ, ಪೆರ್ವಳೆ, ಹೆಮ್ಮಳೆ** (ನಾ). ದೊಡ್ಡ ಮಳೆ ; ಭಾರಿ ಮಳೆ : ನೆಗದ ಮುಗಿಲ್ಗಳುಂ ಸುರಿವ ಪೆರ್ಮಟಿಯುಂ . . . ಅಂಜಿಸುವಂತಿರೆ (ಕೀರಾ. ೦-೦೨೯); ಕರೀಂದ್ರಸಂಕುಳಮದವಾರಿಧಾರೆಗಳ ಪೆರ್ಮಟಿಯೊಳ್ ಕಣವೆಂಬ ರಾತ್ರಿಯೊಳ್ ಸಲೆ ಬರುತಿರ್ಪಳೆಂದುಮಭಿಸಾರಿಕೆಯಂದದೆ ರಾಜ್ಯಲಕ್ಷ್ಮಿ ತನ್ನೊಲವಿನೊಳ್ (ಗದುಯು. ೦೩) ; ನೆತ್ತರ ಪೆರ್ಮಟಿ ಕಱಿದತ್ತು (ಪಂಪಭಾ. ೯-೬೬). **ಪೆರ್ಮಳೆ :** ಸುರಿವ ಪೆರ್ಮಳೆಯೊಳಗೆ ತಾಂ ಕಂಪಿಸದೆ ನಿಂದಿರ್ದ (ವಡ್ಡಾ. ೨-೦೨), ಬೀಸದು ಬಿಱುಸುಗಾಳಿ . . . ಮುಗಿಲ್ಗಳತಿಭರದಿಂ ಸಿಡಿಲ್ಮಿಂಚುಗಳ ಕೂಡೆ ಪೆರ್ಮಳೆಯುಮ ಸೂಸದು (ಕೃಷ್ಣರಾ. ೦೩-೦೬). **ಪೆರ್ವಳೆ :** ಕರಿಮುಗಿಲ ಪೆರ್ವಳೆಯೊ ಅಂಜನಗಿರಿ ಕರಗಿ ಪರಿವಿರವೊ (ಜಾಳ್ಮಕಾ. ೨೨-೦೬) ; ಚಾಚಿ ಸೋಮಯಾಜಿ ಸುರಿತರ್ಪ ಕಮ್ಮಲರ ಪೆರ್[ಪಾಠಾಂ. ಮ್]ಳೆಯಾಗಿರೆ (ಕಶಶಂ. ೦ ೪೩). **ಹೆಮ್ಮಳೆ :** ಸುರಿದರು ಹಾವುಗಳ ಹೆಮ್ಮಳೆಯ (ಕುಮಾರ. ೦೨-೪೯) ; ಕುಱುಮನೆಜಲು ಗುರುವು ಧರೆಗೆ ಹೆಮ್ಮಳೆಯಂಕಬ್ಬ (ಸರ್ವಜ್ಞ. ೦೫೪೦). [ಪೆರ್ (< ಪಿರಿದು) + ಮಟಿ]

**ಪೆರ್ಮಾಡಿ** 'ಪೆರ್ಮಾನಡಿ' ನೋ.

**ಪೆರ್ಮಾಡಿಗಾವುಂಡ** 'ಪೆರ್ಮಾನಡಿಗಾವುಂಡ' ನೋ.

**ಪೆರ್ಮಾಣೂರ್** (ನಾ). ಒಂದು ಸ್ಥಳದ ಹೆಸರು : ಚಾಟ್ಟೂರುಂ ಪೆರ್ಮಾಣೂರುಂ ಸಮಿಪಪತ್ (ಶ್ವಾಕಂ. ೦೯೪೦, ೦-೩೫; 788). [? + ಊರ್]

**ಪೆರ್ಮಾತು** 'ಪೆರ್ಮಾತು' ನೋ.

**ಪೆರ್ಮಾನಡಿ, ಪೆಮ್ಮಡಿ, ಪೆಮ್ಮನಡಿ, ಪೆಮ್ಮಾಡಿ, ಪೆಮ್ಮಾನಡಿ, ಪೆರ್ಮಡಿ, ಪೆರ್ಮಡಿಯಂ, ಪೆರ್ಮನಡಿ, ಪೆರ್ಮಾಡಿ, ಪೆರ್ವಡಿ, ಹೆಮ್ಮಾಡಿ, ಹೆರ್ಮಾಡಿ** (ನಾ). ೧. ಒಬ್ಬಾತನ ಹೆಸರು : ಶ್ರೀಮತ್ ಪೆರ್ಮಾನಡಿಗಳುಂ ಎಱಿಯಪ್ಪರಸರುಮಿಬ್ದು . . . ಕೊಮಾರಸೇನಭಟಾರರ್ ಪಡೆದ ಸ್ಥಿತಿ (ಎಕ್. III, ಶ್ರೀರಂಗ. ೦೯೬-೦೦ ; ಸು. ೯೦೦ ?). ಶ್ರೀಮತ್ಪೆಮ್ಮಾನಡಿಗಳ್ಗಂಗವಾಡಿ ತೊಂಭತ್ತಱುಸಾಸಿರ[ಮು]ಮಂ . . . ಆಳುತ್ತಿರೆ (ಎಕ್. XI-1. ೯೦-೯ ; ೯೦೦). ೨. ಒಂದು ಬಿರುದು (?) : ರಾಚಮಲ್ಲಪೆಮ್ಮಾನಡಿ

. . . ಕಾವ (ಎಕ. X(೩), ಬಾಗೇಪ. ೮೬-೯ ; ಸು. 820); ಶ್ರೀಮಚ್ಚಾಳುಕ್ಯ ಗಂಗಪೆರ್ಮಾನಡಿ ವಿಕ್ರಮಾದಿತ್ಯದೇವರ್ ಗಂಗವಾಡಿತೊಂಭತ್ತಾಱು ಸಾಸಿರಮು[ಂ] . . . ರಾಜ್ಯಂಗೆಯ್ಯೆ (ಕಇ. I. ೦೭-೯; 1055). **ಪೆಮ್ಮಡಿ :** ೧. ಸ್ವಸ್ತಿಶ್ರೀ ಪೆಮ್ಮಡಿಯ ಬೆಸದೊಳ್ (ಎಕ. XVI, ಮಧುಗಿ. ೦೩೩-೦; ೧೫ಶ ಶ); ಪೆಂಮಡಿ . . . ನರಸಿಂಹ (ಎಕ. VII. ಶಿವಮೊ. ೩೦-೨೭ ; 1413). **ಪೆಮ್ಮನಡಿ :** ೧. ಪೆಮ್ಮನಡಿಗಳ್ ಪ್ರಿಥುವೀರಾಜ್ಯಂಗೆಯ್ಯುತ್ತಮಿರೆ (ಎಕ. VI. ಚಿಕ್ಕಮ. ೩-೭; 899 ?); ಶ್ರೀಮತ್ ಪೆಮ್ಮನಡಿಗಳ್ ಸ್ವರ್ಗ್ಗ ಮೇಱಿದ (ಎಕ. III. ತಿರುಮ. ೯೦-೩; 921 ?). **ಪೆಮ್ಮಾಡಿ:** ೧. ಶಿವಚಿತ್ತಂ ವೀರಪೆಮ್ಮಾಡಿ ತಾಂ ಭೂವಂದ್ಯಂ (ಕಕಶಂ. ೩-೬; ?). **ಪೆಮ್ಮಾನಡಿ :** ೨. ಶ್ರೀಮದ್ಗಂಗಪೆಮ್ಮಾನಡಿ ಭುವನಯ್ಯ(ನ್ನೆಕ) ವೀರನ್ನೊದೆ(ದ)ಯಾದಿತ್ಯದೇವಂ (ಇಕ.IV, ೨೦೯-೨೦; 1075). **ಪೆರ್ಮಡಿ :** ೧. 'ಚೋಳಪೆರ್ಮಡಿ' ಪರಾ. **ಪೆರ್ಮಡಿಯ :** ೨. ಮದನ್ನೆಯೊಳಿಱಿದು ಪರದೇವನು ಪೆರ್ಮ್ಮಡಿಯ ನೋಟವಪ್ಪನುಮೆಟ್ಟಿಭದಯೆಗೇದ (ಎಕ. X (೩). ಶಂಕಾ. ೦೬೩-೭; 937). **ಪೆರ್ಮನಡಿ :** ೧. ಸ್ವಸ್ತಿ ಸತ್ಯವಾಕ್ಯಪೆರ್ಮ್ಮನಡಿಗಳ ಪಟ್ಟಂಗಟ್ಟಿದ ಪದಿನಯ್ದು ವರಿಶದನ್ದು (ಎಕ. II, ೩೯೯-೩ ; 384 ?); ಶ್ರೀಮತ್ ಪೆರ್ಮ್ಮನಡಿಗಳ್ ಜೆಡಲ ಎಟೆಯಬ್ಬಿಬ್ಬಿವೃನ್ನ ಮಗಜಿಸ್ಗಿ (ಇಕ. VI. ೦೨೩-೯ ; ?). ೨. ಶ್ರೀಮತ್ ರಾಚಮಲ್ಲಪೆರ್ಮ್ಮನಡಿಗಳ್ (ಇಕ.VI, ೦೦೨-೫ ; 777 ?); ಸ್ವಸ್ತಿ ಶ್ರೀಪೆರ್ಮ್ಮನಡಿ ಮಹಾರಾಜಿಬ್ಬದೇವನ ಪಟ್ಟಬ್ಗಟ್ಟಿದ ಪ್ರಥಮವರಿಷದನ್ದು (ಎಕ. XIV. ಪಾಗಮಂ. ೦೦೦-೦ ; ಸು. 961). **ಪೆರ್ಮಾಡಿ :** ೧. ಪೆರ್ಮ್ಮಾಡಿಯ ಸುಳೆ ಜೋಗಬ್ಬೆಯ ಮಗಳ್ (ಕ್ಯಕಂ. ೦೯೨೦, ೦೯-೩; ಸು. 881); ಧರ್ಮಾನುರಾಗಮಂ ಕೂಡೆ ಜಗತ್ತ್ರಯದೊಳ್ಮಾಡಿದ ಪೆರ್ಮಾಡಿಯುಮಣ್ಣನುಮಜಿತಸೇನದೇವರ ಗುಡ್ಡರ್ (ಶಾಶು:ಶು. ೯). ೨. ಶ್ರೀ ಸತ್ಯವಾಕ್ಯಪೆರ್ಮ್ಮಾಡಿ (ಕ್ಯಕಂ. ೦೯೩೭. ೨೦-೦ ; 896); ಕನ್ನರದೇವನ ಭಾವಂ ಮಹಾಮಣ್ಡಲಿಕ ಪೆರ್ಮ್ಮಾಡಿ ಬೂತಾಯ್ಯಂ . . . ಅಳುತ್ತಿರೆ (ತೌಶಾ. XI-i. ೩೭-೩ ; 942). ೩. ಹಿರಿಯ ; ಗೌರವಕ್ಕೆ ಪಾತ್ರನಾದವನು : ದೇವರ ಸಾಲೆಯುಂ ಭೋಗಾದಿತ್ಯ ನಿಕೇತನಮುಂ ಪೆರ್ಮ್ಮಾಡಿಯ ಬಸದಿಯ ಪುರದ ಕೇರಿಯುಂ . . . ಮಾಡಿಸಿ (ತೌಶಾ. XI-i, ೦೦೩-೦೫ ; ?). **ಪೆರ್ವಡಿ :** ೪. ದೊರೆ ; ರಾಜ : ಅರವರಿಸದೆ ಪಲರುಂ ಪಾದರಿಗನಿವಂ ಕಷ್ಟನೆಂದು ಕಾಱಿಯುಂ ಕೊಲ್ವಂತಿರೆ ಕೊಂದು ಪೊಲೆಯರಿಂ ಚೆಚ್ಚರಮೆಟ್ಟಿಸುವರಟ್ಟೆ ದೂಱುವರ್ ಪೆರ್ವಡಿಯೊಳ್ (ರಪರಾಜ್ಮು. ೬-೦೯೨). **ಹೆಮ್ಮಾಡಿ :** ೧. ಪಡವಳ ಹೆಂಮಾಡಿ ತಂಮಮ್ಮೆ ಕಾಳವ್ವೆ ಕಡವಳೆತಿಯ ಹೆಸರಿಂ (ಎಕ. VII. ಶಿವಮೊ. ೫೫-೭೨ ; 1167 ) ; ಧರೆಯೊಳ್ ರೂಢಿಯ ಮಾಸವಾಡಿಯರಸಂ ಹೆಮ್ಮಾಡಿದೇವಂ ಗುಣಾಕರನ್ (ಎಕ. II, ೩೨೭-೯೯ ; 1181). ೩. ಆ ಪುರದ ಸೀಮೆ ಎನ್ತೆಂದಡೆ ಮೂಡಲು ಹೆಮ್ಮಾಡಿಯ ಬಸದಿಯ ಕೆಯ್ಯ ಹಡುವಣ ನಿಲ್ಲಲ್ಲು ಮೇರೆ (ಎಕ. VII, ಶಿಕಾರಿ. ೦೩೩-೭೭; 1159). ೫. ಒಂದು ಸ್ಥಳದ ಹೆಸರು : ಬೆಲತೂರ ಚತುಸ್ಸೀಮೆ ವಿವರ ಅವಳಾಡಿಯ ಗಡಿಯಿಂ ಪಡುವಲು ಯೆತಿದ ಅಗಳಿಂದ ಬಡಗಲು ಹೆಂಮಾಡಿಯ ಗಡಿಂ ಪಡುವಲು ಹೊಳೆಯಿಂ ತೆಂಕಲು ಕುದುರು ಸಹವಾಗಿ (ತೌಶಾ. IX-ii, ೯೭೯-೦೦; 1510). **ಹೆರ್ಮಾಡಿ :** ೧. ಪದ್ಮಾವತೀದೇವಿಗೆ ಹರಸಿ ಹೆರ್ಮ್ಮಾಡಿದೇವನಂ ಹಡೆದು ಕಾಣಿಕೆಯಂ . . . ಕೊಟ್ಟರ್ (ಎಕ. VII, ಶಿವಮೊ. ೯-೬೨; 1122) ; ಕೈಫಿಡಿಕಾರರ ಪ್ರಕಾರ 'ಹಲ್ಲಂಡೆ','ಹೆರ್ಮಾಡಿ' ಮೊದಲಾದ ಶಬ್ದಗಳು ತಮಿಳಿನಿಂದ ಬಂದುವು (ಭಾಶಾತ. ೦೬೩).

**ಪೆರ್ಮಾಡಿಯಂಕಕಾಱ**=ಒಂದು ಬಿರುದು : ಚೋಳಕಟಕಸೂಱೆಕಾಱ ಪೆರ್ಮ್ಮಾಡಿಯಂಕಕಾಱ (ಕಶಾ. ೨೨-೭-೨೦; 1083).

[ದೇ. ತಮಿ. ಪೆರುಮಾನಟಿ, ಪೆರುಮಾನ್]

**ಪೆರ್ಮಾನಡಿಗಾಮುಂಡ, ಪೆರ್ಮ್ಮಾಡಿಗೊಂಡ, ಪೆರ್ಮಡಿಗವುಂಡ, ಪೆರ್ಮಡಿಗಾವುಂಡ, ಪೆರ್ಮಾಡಿಗಾವುಂಡ** (ನಾ). ಒಬ್ಬಾತನ ಹೆಸರು : ಸಾಕ್ಷಿ ಸಂಗಮದ ಪೆರ್ಮ್ಮಾನಡಿಗಾಮುಣ್ಡರುಂ ರಣವಿಕ್ರಮಗಾಮುಣ್ಡರುಂ (ಎಕ. IV, ಎಡತೊ. ೬೦-೬೯; ಸು. 890); ಪೆರ್ಮ್ಮಾನಡಿಗಾಮುಣ್ಡನ ಮಗಂ ರಾಮನಲ್ಲಿ ಸತ್ತೊಡೆ ಪೆರ್ಮ್ಮಾನಡಿಯುಮೆಱೆಯಪ್ಪೊನುಮೊಡನಿಟ್ಟು (ಎಕ. IV, ಹೆಗ್ಗಡ. ೦೦೩-೯; ಸು. 910). **ಪೆರ್ಮ್ಮಾಡಿಗೊಂಡ :** ಪೆರ್ಮ್ಮಾಡಿಗೊಣ್ಡಂಗೆ ಕೊಟ್ಟ ನೀರ್ಬ್ಬಣ್ಣ ಇನ್ನೂಱು (ಎಕ. VI, ಚಿಕ್ಕಮ. ೩-೬; 899 ?). **ಪೆರ್ಮಡಿಗವುಂಡ :** ಪೆರ್ಮ್ಮಡಿಗವುಣ್ಡಂ ಏಚಗವುಣ್ಡನೊಂಗುಣೆ ಗಾವುಣ್ಡನ್ (ಎಕ. IV, ಹೆಗ್ಗಡ. ೦೦೯-೦೩; 1037). **ಪೆರ್ಮಡಿಗಾವುಂಡ :** ಅಪಚವಾಡಿಯ ಪೆರ್ಮ್ಮಡಿಗಾವುಣ್ಡನ ಲಕೊಳಾದಿತ್ಯನಮೊಳೆಯ ಪುಣಸುಗ ಸತ್ತಂ (ಎಕ. IV. ಚಾಮರಾ. ೦೩೯-೦೦; 893); ಪೆರ್ಮ್ಮಡಿಗಾವುಣ್ಡನು ಪೇಳ್ವೆಡೆಯು . . . ಅಱಯೆ ಕೊಟ್ಟರ್ (ಎಕ. IV, ಗುಂಡ್ಲು.ಶೇ. ೫೭-೭; ಸು. 900 ?). **ಪೆರ್ಮಾಡಿಗಾವುಂಡ :** ಪೆರ್ಮ್ಮಾಡಿಗಾವುಣ್ಡನ ಪೆಣ್ಡತಿ ಚಾವುಣ್ಡಬ್ಬೆ (ಕ್ಯಕಂ. ೦೯೩೦, ೦೯-೭; ಸು. 882); ಪೆರ್ಮ್ಮಾಡಿಗಾವುಣ್ಡನೆಂಬ ಪೆಸರಂ ಪಡೆದಂ (ಎಕ. VII. ಶಿವಮೊ. ೦೦-೩೨; 1085 ?). [ಪೆರ್ಮಾನಡಿ+ಗಾಮುಂಡ]

**ಪೆರ್ಮಾರಿ, ಹೆಮ್ಮಾರಿ** (ನಾ). ದೊಡ್ಡ ಮಾರಿ : ಮಸಗಿತ್ತು ಪಾಜಿ ಪೆರ್ಮಾರಿಪೋಲ್ (ಶಂಕಾಶ. ೯-೦೦೬); ನೊಂದ ಪೆರ್ಬುಲಿಯೊ ಕಿನಿಸಿ ದೆಕ್ಕಲನೊ ಮಸಿದೈತಂದ ಪೆರ್ಮಾರಿಯೋ (ಶಂಚ್ರು. ೩೯-೩೫). **ಹೆಮ್ಮಾರಿ :** ಶಿವಶಿವಾ ಕಾಮಾರಿಯೋ ಪಾಂಡವಬಲದ ಹೆಮ್ಮಾರಿಯೋ ನಿನ್ನಾನೆ (ಕುವ್ಯಾಕ. ೦೦-೦೩); ಊರ ಹೊಗಿಸಿದರಱುದಱುದು ಹೆಮ್ಮಾರಿಯನು (ಕೂರರಾ. ೫-೭-೦೬); ಗಂಡಗುಂಜದ ನಾರಿ ಅವಳೆ ಹೆಮ್ಮಾರಿ (ಕನಕ. ೫೦-೯).

[ಪೆರ್ (<ಪಿರಿದು$_1$) + ಮಾರಿ$_1$]

**ಪೆರ್ಮಾವಿ** (ನಾ). ಒಂದು ಊರಿನ ಹೆಸರು : ಕಾಡುಮಟ್ಟಿಯು ಮ್ಮಡು ಮಾನಂ ಬನ್ದು ಪೆರ್ಮಾವಿಯಾನೆಱಿಮ ಸುಟ್ಟಾ ಮಾತ ಕೇಳ್ದು (ತೌಶಾ. IX-i. ೨೦-೭; ಸು. ೯ಶ ಶ). [?]

**ಪೆರ್ಮಾವುಲಿಗ** (ನಾ). ನಿಷ್ಣಾತನಾದ ಬೇಟೆಗಾರ : ಅವಳುಮನೊಲಿಸಿ ಕಂಟಿಸಿ ಗೋವರ ಗುಗ್ಗುರಿಗೆ ಮಱಿಯುಂ ತಣೆಯುಟ್ ಪೆರ್ಮಾವುಲಿಗನೆಯೋ ಪೇಱೀಂ ಸ್ತ್ರೀವಧೆ ನಿನಗಶ್ವಮೇಧಮೋ ಸಂಬಳಮೋ (ಕಾವ್ಯಾಕ. ೦೬೬).

[ಪೆರ್ (<ಪಿರಿದು$_1$) + ಮಾವುಲಿಗ]

**ಪೆರ್ಮಾಳಿಗೆ** (ನಾ). ಭವ್ಯವಾದ ಉಪ್ಪರಿಗೆ,–ಸೌಧ : ಉಂಗುರವನ್ನು ಲೇಸಾಗಿ ಮಾರಿ ಪೊಂಗಿ ಪೆರ್ಮಾಳಿಗೆ ಕಟ್ಟುತೇರಿ ಅಂಗನೆಗೂಡಿ ಭೋಗಿಪೆನು (ಶಾಕುಂತ. ೬೫ ಅಖ). [ಪೆರ್ (<ಪಿರಿದು$_1$) + ಮಾಳಿಗೆ$_1$]

**ಪೆರ್ಮಿದ್ದಿಲ್** (ನಾ). ಒಂದು ಊರಿನ ಹೆಸರು : ತೆಜ್ಜಿಕ್ಕೈ ಪೆರ್ಮ್ಮಿದ್ದಿಲ್ ಪೆಲ್ಬುನನ್ದಿಯ ಕಿಱುನನ್ದಿಯ ಸೊಡಲಿಯದಾ ಮಱುಱು ಕುಡಿದಾ ಓಟಪ್ಪಿ (ಎಕ. X(೩), ಚಿಕ್ಕಬ. ೬೬-೦೬; ಸು. 850). [?]

**ಪೆರ್ಮಿಣಿ, ಹೆಮ್ಮಿಣಿ** (ನಾ). ದಪ್ಪ ಹಗ್ಗ ; ಚೆನ್ನಾಗಿ ಹುರಿಗೊಳಿಸಿದ ಹಗ್ಗ : 'ಪೆರ್ಮಿಣಿಗಟ್ಟು' ಪರಾ. **ಹೆಮ್ಮಿಣಿ :** ಬಹು ಸಲಗೆತ್ತುಗಳ ಸೊಗಕ್ಕಂ ಹೂಡೆ ಹೆಮ್ಮಿಣಿಯೊಳುಂ ತೂಡರ್ಚಿ . . . ಇರ್ವರುಮ ನೆಳಸೆಂದು ಪೇಳಿ (ಕ್ರಶುಭು. ೯-೦೯೨). [ಪೆರ್ (<ಪಿರಿದು$_1$) + ಮಿಣಿ]

**ಪೆರ್ಮಿಣಿಗಟ್ಟು** (ಕ್ರಿ). ಬಲವಾದ ಹಗ್ಗವನ್ನು ಬಿಗಿ,– ಕಟ್ಟು : ನಡುತೆ ಕಂಭಮನಲ್ಲಿ ಪೆರ್ಮಿಣಿಗಟ್ಟುತುಂ . . . ಅವನಿರ್ಪಿನಂ (ವೃಶಾಪ. ೩೯-೯೭).

[ಪೆರ್ಮಿಣಿ + ಕಟ್ಟು$_1$]

**ಪೆರ್ಮಾನ್, ಪೆರ್ಮಾನು, ಹೆಮ್ಮಾನ್, ಹೆಮ್ಮಾನು** (ನಾ). ದೊಡ್ಡ ಆಕಾರದ ವಿಮಾನ : "ಶೃಂಗೀ:, ಮಂದ್ರಾ:, ಆವಾಗು:, ನಂದ್ಯಾವರ್ತ:— ಈ ೪ ಮೊದಲಾಗುಳ್ಳುವು ಪೆರ್ಮಾನ್" (ಶಬಾಯು. ೦೦೯-೩೭); ಕರಡಿ ಮಹಿಷಿ ಪೆರ್ಮಾನಜಂ . . . ಕಾಟಿಕ್ರೋಟಿಯೆಂಬೀ ತಿರಿಕಪ್ರಾತಂ

ಗಳೊಳ್ ಸಂಭವಿಸಿ ದುರಿತದಿಂ ದುಃಖಮಂ ಪೇೞಲಾೞ್ಗಿಂ (ಧರ್ಮಾಮೃ. ೦೬-೦೫೬); ತಿಮಿತಿಮಿಂಗಿಲಂಗಳಂ ಕೆಳೆಗೊಳ್ವ ಪೆವಿರ್ಮಾನ್ಗಳ ಬಾಳಚಳನದಿಂ ಕರಗಣ್ಮುವ ಕರ್ಮಡುವಿನೆಡೆಯೊಳ್ (ಜಗಸಂ. ೪-೬). ಪೆವಿರ್ಮಾನು: ತಾನಿ ಧಿರ್ವಣಂದು ಮನ್ಮಥನ ಟೆಕ್ಕೆಯದ ಪೆವಿರ್ಮಾನಿಂಗೆ ಹಾಯ್ದುದಾರ್ಭಟಿಸಿ (ಸೋಹಕ. ೩೬-೨೬). **ಹೆವಿಮ್ಮಾನ್ :** "ಹೆವಿಮ್ಮಾನ್—ಝಷ" (ಶಾಸರಾ. ೬) ; "ಅವಾಗು ಮದ್ಗು ಶೃಂಗಿಯೆನಲು ಹೆವಿಮ್ಮಾನಕ್ಕು" (ಜುಂಗರಾ. ೧೨೦-೬). **ಹೆವಿಮ್ಮಾನು :** "ಶೃಂಗಿ ಮದ್ಗುರ ವಾಗುಸ ನಂದ್ಯಾವರ್ತ ಈ ೪ ಮೊದಲಾಗುಳ್ಳುವು ಹೆವಿಮ್ಮಾನು" (ಶಾಸರಾ. ೬) ; ಬಲೆಗೆ ಬಿದ್ದ ಹೆವಿಮ್ಮಾನು ಕಿರುಮೀನುಗಳೆಲ್ಲವನ್ನು ದಡಕ್ಕೆ ತಂದೊಡರಿ. ಹೆವಿಮ್ಮಾನುಗಳನ್ನು ಆಮ್ದು ಕೊಂಡು . . . ಹೋಗುವುದುಂಟು (ಕೃಪರು. ೪೯೪).

[ಪೆರ್ (< ಪಿರಿದು₁) + ಮೀನ್₂]

**ಪೆವಿರ್ಮಾನು** 'ಪೆವಿರ್ಮಾನ್' ನೋ.

**ಪೆಮ್ಮುರ್ಗಗೆಱೆ³** (ನಾ). ಒಂದು ಸ್ಥಳದ ಹೆಸರು: ತೆಸನಾಡ್ಕಕೆಱೆವಿ ಪೆಮ್ಮುರ್ಗಗೆಱೆಎ ಪಡಗಾಯ್ ಸನ್ದ (ಎಕ. IV, ಎಡತೊ. ೬೦-೬೪ ; ಸು. 890). [ ? + ಕೆಱೆ³ ]

**ಪೆಮ್ಮುರ್ಗಿಲ್, ಹೆಮ್ಮುಗಿಲ್** (ನಾ). ಒತ್ತೊತ್ತಾಗಿರುವ ಮೋಡ ; ಸಾಂದ್ರವಾದ ಮೋಡ : ಗಗನಾಂತರದೊಳ್ ಸಲೆ ಪೆಮ್ಮುರ್ಗಿಲೊಂದು ವಿಚಿತ್ರನಾಟಕೋಟಿಕ್ರಮದಿಂ ನೆಗೆದುದು ಬಳೆದುದು . . . ಕರಗಿದುದು ನರರ ಸಿರಿಗನುರೂಪಂ (ಧರ್ಮಾಮೃ. ೦೨-೬೨); ಗಗನದೆ ಗರುಡನೈತಂದುದು ಪೆಮ್ಮುರ್ಗಿಲಗಲದೆ ಗಱಿಯು ನಾಟಿಸುತೆ (ಸೋಹಕ. ೩೬-೫೦). **ಹೆಮ್ಮುಗಿಲ್ :** ಕೊಡಿಸು ನೇಮಿವ ಹಿಡಿದು ಬಲುಮಿಂ ಕಡಲ ಕುಡಿಸುವೆ ಬಾಡಬಾಗ್ನಿಯುನು ಒಡ ಪಡಬ ತಾ ಕುಡಿಯಲಾಜನು ಹಿಡಿದು ಹೆಮ್ಮುಗಿಲಿಂದ ಕುಡಿಸುವೆ ಪಡೆಯ ನಡೆಸುವೆ ತಾಯಿಮಳಲೊಳಗೆಂದು ಸಳ ನುಡಿದ (ಗಿರಿಜಾ. ೧೫-೪೨).

[ ಪೆರ್ (< ಪಿರಿದು₁) + ಮುಗಿಲ್ ]

**ಪೆರ್ಮುಡಿ** (ನಾ). = ಪೆರ್ದುಱುಬು : ತನ್ನ ತನಯುಳ ಪೆರ್ಮುಡಿಯು ಸರಿದೆನ್ನ ಜೆಡೆಯಂ ಕಟ್ಟಿಸಿದನಂದುನ್ನತಿಯೊಳಾ ಮಾನಕಂಜರನು (ಬಸಪು. ೨೫-೪). [ ಪೆರ್ (< ಪಿರಿದು₁) + ಮುಡಿ₂ ]

**ಪೆಮ್ಮುರ್ತ್ತು** (ನಾ). ದೊಡ್ಡ ಮುತ್ತು,— ಮೌಕ್ತಿಕ : ಕತ್ತುರಿಯಿಂದೆ ಸಮ್ಮಾರ್ಜನೆಗೆಯ್ದು ಪೆಮ್ಮುರ್ತ್ತುಗಳೊಡನೆ ಮಾಣಿಕದ ಪತ್ತುಗೆಗೊಳಿಸಿ (ಸೋಹಕ. ೨೨-೫). [ ಪೆರ್ (< ಪಿರಿದು₁) + ಮುತ್ತು₃ ]

**ಪೆಮ್ಮುರ್ಸುಂಡೆ** (ನಾ). ಒಂದು ಬಗೆಯ ಸಸ್ಯ : ಪರಿಕಿಸಿ ಪೆಮ್ಮುರ್ಸುಂಡೆ ಪೊಸಜೀರಗೆ ಸಾಸುವೆ ಲೊಕ್ಕೆಯುಲ್ಲಮಂ ಬೆರಸಿರೆ ತೆಳ್ಳನಪ್ಪ ಕಳಿಯು ಕುಡಿಸು (ಗೋವೈದ್ಯ. ೨೦೩-೯೬).

[ ಪೆರ್ (< ಪಿರಿದು₁) + ಮುಸುಂಡೆ (< ಮುಸುಂಡಿ₂ )]

Δ**ಪೆಮ್ಮುರ್ಱಿಕ್ಕು** (ನಾ). ದೊಡ್ಡ ಬಾಗು ; ವಿಶಾಲವಾದ ತಿರುವು (?) : ಸಾವುಗೆಱೆಯಾ ಪಳ್ಳದಾ ಪೆಮ್ಮುರ್ಱಿಕ್ಕು (ಎಕ. IV, ನಾಗಮಂ. ೮೫-೬೪; 776). [ ಪೆರ್ (< ಪಿರಿದು₁) + ಮುಱಿಕ್ಕು (< ಮುರಿಗ್₁) ]

**ಪೆಮ್ಮೂರ್ಗು** (ನಾ). ದೊಡ್ಡ ಮೂಗು ; ಹಿರಿದಾದ ನಾಸಿಕ : ನೊರೆವಾಯಟ್ ಜೋಲ್ದುಟಿ ಪೆಮ್ಮೂರ್ಗರಲ್ದ ಕಿವಿಮ್ಮಾಸೆ . . . ಕಾರೊಡಲಿರೆ ಮೆಱೆದು ಕರಾಗ್ರದಲ್ಲಿ ಮುಳ್ಗತ್ತಿಗೆಯುಂ (ಕೃಕಾ. ೦೦-೬೦); ಪೆಮ್ಮೂರ್ಗಲರೆ ತೆಱೆದ ಬಾಯ್ ಭೀತಿಯುಂ ಬೀಱೆ³ . . . ಪಾಯ್ದುಂದುದುದ್ಧೃತ್ಪದ ನಖವಿದಳಿತಮ್ಮಂಜರೇಂದ್ರಂ ಮೃಗೇಂದ್ರಂ (ಕದಂ. ೩-೬೨).

[ ಪೆರ್ (< ಪಿರಿದು₁) + ಮೂಗು₁ ]

**ಪೆರ್ಮೆ, ಪೆಮ್ಮೆ, ಹಿರಿಮೆ, ಹೆಮ್ಮೆ** (ನಾ). ೧. ಅಗ್ಗಳಿಕೆ ; ಶ್ರೇಷ್ಠತೆ : ಜಿನಧರ್ಮದ ಪೆರ್ಮೆಗೆ ರಾಗಿಸರೆ ಭವ್ಯರ್ (ಶಾಂತಿಪು. ೧೨-೩೬); ಅಂತು ಜನಕೀ ಬೀಯದ ಬಾಗದ ಪೆರ್ಮೆಯುಂ ಮೆಱೆವುದುಂ (ಶಂಕರಪು. ೫-೦೪೦ ಪ); ವರಕಾಶ್ಯಪಾನ್ವಯಂ ತಳೆದುದು ಪೆರ್ಮೆಯುಂ ಪೆಸರನುಂನತಿಯುಂ ಯಶಮುಂ (ಸೌಇಇ. IX-1, ೨೬೬-೫೫ ; 1160) ; ಪೆರ್ಮೆಯುನ್ ಕಾವೆನೆಂದಿರ್ದಪೆನ್ (ಅಂತಿಗೊ. ೯-೦೬೩). ೨. ಅಹಂಕಾರ ; ಗರ್ವ : ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ ಪೆರ್ಮೆಯಿಂ ದೇಹವ ನಂಬಬೇಡಿ ಕಾಣಿರೊ (ಪುರಂದ. ೨-೪೯ ಅನುಬಲ್ಲವಿ). **ಪೆಮ್ಮೆ :** ೧. ಪೆರ್ಗ್ಗಡೆ ಮಾಕಿಮಯ್ಯನ × × ವ ಪೆಮ್ಮೆಯನು ಕರಣದಲಣ್ಣ (ಸೌಇಇ. IX-1, ೦೧೨-೦೪ ; 1053) ; ಅನುಪಮವಾದ ಪೆಮ್ಮೆಯೊಳು ರಞ್ಜಿಸುತಿರ್ಪ್ಪ ನೊಳಂಬವಾಡಿಯೊಳ್ (ಎಕ. XI. ದಾವಣ. ೮೫-೮೩ ;1143) ; ತೋಳ್ವಲದ ಪೆಮ್ಮೆಯನೈನ್ನೊಡೆ (ಎಕ. VI. ಕಡೂರು. ೩೬-೦೩ ; 1203). **ಹಿರಿಮೆ :** ೧. ಅಂತೂ ನಮ್ಮನ್ನು ಹೊಗಳುವ ವ್ಯಾಜವಲ್ಲೇ ನಿಮ್ಮ ಹಿರಿಮೆಯನ್ನು ತೋರಿಸಿಕೊಂಡಿರಿ (ಬೆಕಂಬಾ. ೫) : ರಾಮನ ಹಿರಿಮೆ ಗರಿಮೆಗಳು ವ್ಯಕ್ತವಾಗಬೇಕಿದ್ದರೆ . . . ರಾವಣನಂಥ ಪ್ರಬಲವಿರೋಧಿಯೂ ಬೇಕು (ವಾಲ್ಮೀಕಿ. ೧). **ಹೆಮ್ಮೆ :** ೧. "ಪ್ರಭವಂತೀ ಎಂಬುವು ಹಿರಿದಪ್ಪ ಹೆಮ್ಮೆ [ಪೆರ್ಮೆ]" (ಶಬ್ದಮ. ೦೩೦-೦೦೦); ಊರ್ಜಿತ ಶಕ್ತಿಯೊಳ್ ಮಹೇಶ್ವರಪದಭಕ್ತಿಯೊಳ್ ತನಗೆ ಪ್ರಸಟಿಯೂಪ್ಪೆಱರೆಂಬ ಹೆಮ್ಮೆಯೊಳ್ ನೆರೆದು . . . ನೆಗಟ್ಟಂ ಬಸವಂ (ಎಇ. V, ೮೬-೨೪; 1142); ಹಳಿವಿನಲಿ ಹೆಮ್ಮೆಯನು ಕುಂದಿನ ಕುಲದೊಳಗ್ಗಳಿಕೆಯನು ತವದಲಿ ಬೆಳಗ ಬಣ್ಣಿಸುತಿಹೆ (ಕುಮಾವ್ಯಾ. ೧೦-೦೦); ನಿಮ್ಮಯ ಪಿತ ಕೃಷ್ಣರಾಯನ ಮಹಿಮೆಯು ಹೆಮ್ಮೆಯುಱಿದು ಕೀರ್ತಿಪೊಷೆ ನಮ್ಮಳವಲ್ಲ (ಸೋಹಕ. ೧-೪). ೨. ಬೊಮ್ಮಬೋಧೆಯು ಹೇಳಿ ಕೇಳಿಯು ಸುಮ್ಮನಿಹ ನೃಪತನವು ಬಂದಿರೆ ಹೆಮ್ಮೆಯಲಿ ಹಿರಿದಾಗಿ ಕೆಡುವರು (ಸಂಶಕ. ೩-೦೨); ಹೆಮ್ಮೆಯಿಂದಲಿ ನೀವು ಕೆಡಬೇಡಿರಯ್ಯ (ಪುರಂದ. ೦-೦೪೦ ಪಲ್ಲವಿ); ಎಮ್ಮನೆಲ್ಲರನಾದರಿಸಿ ನಿಗರ್ವಿಕೆಯಿಂ ಸಹಸ್ರವದನಂ ಕಳುಹಲು ಹೆಮ್ಮೆಗಳನುಳಿದು ವಿಸ್ಮಿತರಾದರ್ (ಕೃಬಶಾ. ೩೨-೪೬). ೩. ಸಂತೋಷ ; ಹಿಗ್ಗು : 'ಹೆಮ್ಮೆಗೊಳಿಸಂ' ಪರಾ. ೪. ಅಭಿಮಾನ: 'ಹೆಮ್ಮೆಪಡು' ಪರಾ.

[ಪೆರ್ (< ಪಿರಿದು₁) + — ಮೆ₃./ತಮಿ. ಪೆರುಮೈ : ತುಳು. ಪೆರ್ಮೆ, ತೆಲು. ಪೆರಿಮೆ, ಪೆಮ್ಮೆ]

**ಪೆರ್ಮೆಗಿಡು** 'ಪೆರ್ಮೆಗೆಡು' ನೋ.

**ಪೆರ್ಮೆಗೆಡು, ಪೆರ್ಮೆಗಿಡು** (ಕ್ರಿ). ಹೆಮ್ಮೆಯನ್ನು ಕಳೆದುಕೊಳ್ಳು ; ಅಭಿಮಾನವಿಲ್ಲದಾಗು : ಒರ್ಮೆ ಪೋಗಿ ಮೃಗಯಾನಿಮಿತ್ತದಿಂ ಧರ್ಮಮಂ ಮಱೆದು ನೋಡ ಬೇಡಿದೊಂ ಪೆರ್ಮೆಗೆಟ್ಟು ಜಮದಗ್ನಿಯುಂ ನೃಪಂ ದುರ್ಮದಂ ಸುರಭಿಯಂ ವಿಮೋಹದಿಂ (ಕಾವ್ಯಾಕ. ೩೬೩). **ಪೆರ್ಮೆಗಿಡು :** ಕೂರ್ಮೆಯೊಳನುಭವಿಸುತ್ತುಮದೊರ್ಮೆಯುಮುಪಚಱದೆ ಕಾಮಸುಖದಿಂ ಜನಪಂ ಪೆರ್ಮೆಗಿಡದಿರ್ದಂ (ಧನ್ಯಪು. ೯-೪೮).

[ಪೆರ್ಮೆ + ಕೆಡು₁]

**ಪೆರ್ಮೆಗೊಳ್** (ಕ್ರಿ). ಹಿರಿಮೆಯನ್ನು ಹೊಂದು ; ಅಗ್ಗಳಿಕೆಯನ್ನು ಪಡೆ : ಪೆಣ್ಣಿಂದ ಪೆರ್ಮೆಗೊಂಡನು ಹಿಮವಂತನು ಪೆಣ್ಣಿಂದ ಭೃಗು ಪೆರ್ಚಿದನು . . . ಪೆಣ್ಣ ನಿಂದಿಸಲೇಕೆ ಪೆಱರು (ಹರಿಶ್ಚ. ೫-೫).

[ಪೆರ್ಮೆ + ಕೊಳ್₁]

**ಪೆರ್ಮೆಯೊಡೆಯ** (ನಾ). ಶ್ರೇಷ್ಠನಾದವನು ; ಹಿರಿಮೆಯುನ್ನು ಹೊಂದಿರುವವನು : ಒಡೆಯ ಪ್ರತ್ಯಯಕ್ಕೆ ಪೆರ್ಮೆಯೊಡೆಯಂ . . . ಜಾಣೊಡೆಯಂ (ಶಬ್ದ. ೨೦೬ ಪ್ರಯೋ). [ಪೆರ್ಮೆ + ಒಡೆಯ₁]

**ಪೆರ್ಮೆವಡೆ** (ಕ್ರಿ). ಮೇಲ್ಮೆಯನ್ನು ಪಡೆ ; ಹಿರಿಮೆಯನ್ನು ಹೊಂದು : ಪೆರ್ಮೆವಡೆದುದನಾದ್ಯನಂತಮದೊರ್ಮೆಯಿಂ ಧಾರ್ಮಿಕರನಾ ಜಿನಧರ್ಮಮದೆ ತಾಂ ದಾಟಿಸುಗೆ ಕುಂವಪೆ ಭವಸಮುದ್ರಧನು (ಶಾಲ್ಯಾ. ೦-೬) ; ಪೊರೆದಯ್ಮನ ಕೂರ್ಮೆ ಪೆರ್ಮೆವಡೆವಂತುಂ . . . ಎಕ್ಕಿವಂದ ಜಗಿಯುಂ ಬಾರಿಸುವೆಂ (ರಾಮಾಶ್ವ. ೬೬-೪). [ಪೆರ್ಮೆ + ಪಡೆ₁]

**ಪೆರ್ಮೆವೆಱು** (ಕ್ರಿ). = ಪೆರ್ಮೆವಡೆ : ಮೇದಿನಿಯುಂ ಹಿಮಾದ್ರಿಯುಮು ಕಾನನಗಂ ಲವಣಾಂಬುರಾಶಿ ಕಾಳೋದಕವಾರ್ಧಿಸೀಮೆಯೆನೆ ಸಾಧಿಸಿ . . . ಪೆರ್ಮೆವೆತ್ತಂ (ಚಂದ್ರಪ್ರ. ೬-೨೮). [ಪೆರ್ಮೆ + ವೆಱು₁]

**ಪೆರ್ಮೆಳೆ, ಹೆಮ್ಮೆಳೆ** (ನಾ). ೧. ದೊಡ್ಡ ಪೊದರು; ದಟ್ಟವಾಗಿ ಬೆಳೆದ ಗಿಡಗಳ ದೊಡ್ಡ ಗುಂಪು : ಪೆರ್ಮೆಳೆಗಳಿಂ ಕಱೆಯಿಂ ತೊಱೆಯಿಂ . . . ಅರಣ್ಯದಿನಲ್ಲಿಯ ತಳ್ತುಲುಪ್ಪುಗಂ (ಗಿಂಶ. ೧-೬೦) : ಪೆರ್ಮೆಳೆಯೊಳೊತ್ತಗೊಂಡು ಇದಿರಾಲಿಸಿ ದಾಡೆ[ಯವುಂಕಿ] ಕೋಪದಿಂ ಘೂರ್ಮಿಸುತಟ್ಟಿ ಮುಟ್ಟಿ ಬಹ ಜಾಯಿಲನಂ ಕಡಿಯಿಂದ ಮಾಡುತಂ (ಸನ್ಮತಿ. ೫-೧೦೫). ೨. ಒಂದು ಪ್ರದೇಶದ ಹೆಸರು (?) : ಪೆರ್ಮೆಳೆ ಅಂತೆ ಬರೆ ತೆಱ್ಱ ಮ್ಯಸುಂಸಿ ಕಱುಗೊಲ್ಲಿಯುಳ್ ಪೊಕ್ಕು (ಮ್ಯಸೂ. ೧೯೩೦. ೧೧-೦೮೫ ; ೫೦೭). **ಹೆಮ್ಮೆಳೆ:** ೧. ಹೆಱುಮೆಟ್ಟಿ ನಡೆನಡೆದು ಹೆಮ್ಮೆಳೆಯನೆಡೆಗೊಂಡು ಗರ್ಜಿಸುತುಂ ಬಂದ ಜಾತಿ ಜಾಯಿಲಂಗಳನಿತ್ತುಂಡುಮಾಡುತ್ತ . . . ಕಕ್ಕಳಿಸಿ ನೋಡುವೆಕ್ಕಲಂಗಳುಮಂ (ನಂದಶ. ೧೨-೦೫), ಹೆಮ್ಮೆಳೆಯ ಪರಪುಗಳಬ್ಬರದ ಶಾರ್ದೂಲ ಸ್ತೈರಿಭ ಶರಭಸೂಕರದ ಉಬ್ಬಟೆಯ . . . ಅಬ್ಬರದ ಕಾಂತಾರದೊಳಗಿವರಬ್ಬರಿಸುತ್ತೈದಿದರು (ತೊರವೆ. ೩-೧-೬).
[ಪೆರ್ (< ಪಿರಿದು₁) + ಮೆಳೆ₁]

**ಪೆರ್ಮೊರಹು** (ನಾ). ಗಟ್ಟಿಯಾದ ಮೊರೆತ,—ಘೋಂಕಾರ : ಪಿರಿದು ನಿಗಳದ ಗೆಜ್ಜೆಗಳ ಪೆರ್ಮೊರಹಿಗಂಜಿ ಭವಾನಿಯರ್ಧಶರೀರಮಂ ಬಿರಸ (ಬಸವಪು. ೧೬-೮೫). [ಪೆರ್ (< ಪಿರಿದು₁) + ಮೊರಹು (< ಮೊರೆಪು)]

**ಪೆರ್ಮೊಲ** (ನಾ). ದೊಡ್ಡ ಗಾತ್ರದ ಮೊಲ; ದಷ್ಟಪುಷ್ಟವಾದ ಮೊಲ : ಉಡುಪತಿಬಿಂಬದಿಂದೆ ಸರಿದೋಡಿ ಮುಗಿಲ್ಗಳೊಳೆಯ್ದೆ ಪೊಕ್ಕು ಗಂಡುಡುಗಿ ಸುರುಳ್ದ ತಚ್ಛಶಕನಂ ನೆಱೆ ಪೋಲ್ತುದು ಕಾಡ ಪೆರ್ಮೊಲಂ (ಗಿಂಶ. ೧-೯೮); ಬಡಿಯುಡುವಂ ತೊಡಂಕದಿಡು ಪೆರ್ಮೊಲನಂ (ಶಬರಶಂ. ೩-೫೦). [ಪೆರ್ (< ಪಿರಿದು₁) + ಮೊಲ]

**ಪೆರ್ಮೊಲೆ, ಹೆಮ್ಮೊಲೆ** (ನಾ). ೧. ದೊಡ್ಡ ಮೊಲೆ : ಕಾದಲಳಬ್ಬತಂ ತೆಱಂದಿರಿದು ನೋಡಿದ ನೋಟದೊಳೆಯ್ದೆ ತಳ್ತ ಪೆರ್ಮೊಲೆ . . . ಬೆನ್ನಿನಿತುಮೊಮೆಯಿ ನಾ[ಂಬಿ]ನಂ (ಚಂದ್ರಪ್ರ. ೪-೧೦೮) ; ಪೆರ್ಮೊಲೆ ಹಾರದಿಂದೆಸೆಯೆ ಬಂಬಲಬಾಡಿದ ರೂಪು ಗಾಡಿಯುಂ ಸೂರ್ಪಾಡಿಪಾಡೆ (ಶಂಕರಚ. ೩-೧೦೮); ಸೊಕ್ಕುಜವ್ವನದ ನೀರಜಗಂಧಿಯರ ಕೊಬ್ಬಿದ ಪೆರ್ಮೊಲೆಗಳೆಡೆಯ ಚಂದನದಗ್ಗ . . . ತಂದೆಲರ್ಮೆಲ್ಲಮೆಲ್ಲನೆ ಪರಪುತಿರ್ದುದು (ಕೃಷ್ಣರಾ. ೬-೦೨). ೨. (ಹಾಲಿನಿಂದ ತುಂಬಿದ) ಕೆಚ್ಚಲು : ಕಾಡೆಮ್ಮೆಯ ಪೆರ್ಮೊಲೆಯೊಳೆಚ್ಚು ಪಾಯ್ದ ಪಾಲ ಪಿರಿಯ ಬಲ್ಸರಿಯೊಳೋಲಾಡಿಯುಂ . . . ಅಪರಸಾಂಧ್ಯಗಂಧವಹನೆಳಸೆ (ಶಬ್ದಮ. ೬-೪). **ಹೆಮ್ಮೊಲೆ :** ೧. ಗಂಧದ ಪೂಸಿದಂದದ ರವಿಕೆಯೊಳುರೆ ಬಂದಿಸಿ ಬಗುಳ್ದ ಹೆಮ್ಮೊಲೆಯ (ಶಿವತ. ೪-೬೬). [ಪೆರ್ (< ಪಿರಿದು₁) + ಮೊಲೆ₁]

**ಪೆರ್ಮೊಳೆ** (ನಾ). ದೊಡ್ಡ ಮೊಳಕೆ : ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ ಬಿಜ್ಜೆಯ ಬೇರ್ ··· ಅನುಮಾತುಮಣ್ಣ ಬೊಕ್ಕೊನೆಯೆನೆ ಚಿಕ್ಕದೇವನೆಸೆದಂ (ಚಿಕ್ಕ. ೦೩-೪೦). [ಪೆರ್ (< ಪಿರಿದು₁) + ಮೊಳೆ₂]

**ಪೆರ್ಮೊಱೆ** (ನಾ). ಅಗಲವಾದ ಮೊರ,—ಗೆರಸೆ : ಮಾಡುವರ್ ಕೆಲರು ಪೆರ್ಮೊಱೆದೊಳ್ಕೆಯನಿಕ್ಕ ಮಾಡುವರ್ ಕೆಲರು (ಕೋಳಹಕ. ೦೯-೬೦).
[ಪೆರ್ (< ಪಿರಿದು₁) + ಮೊಱೆ₁]

**ಪೆರ್ಮೊಱೆಗೊಳ್** (ಕ್ರಿ). ದೊಡ್ಡ ಮೊರದಿಂದ ಗಾಳಿಯನ್ನು ಹಾಕು,—ಬೀಸು (?): ಆಳಿಯರ್ ಬೀಸುವ ಚಮರಾಲವಟ್ಟ ತಣ್ಗಾಳಿಯಿಂದವಳೊಡಲ್ಗಿಚ್ಚು ತಾಳಿಯ ಹಾಕಿ ಪೆರ್ಮೊಱೆಗೊಂಡ ತೆಱದಿ ಭಡಾಳಿಸಿತಃಷ್ಣ ಸುಂಘಟಿಸಿ (ಕೋಳಹಕ. ೨೬-೬೨). [ಪೆರ್ಮೊಱೆ + ಕೊಳ್₁]

**ಪೆರ್ಮೊಱಹು** (ನಾ). ಅತಿಶಯವಾದ ಅಬ್ಬರ; ಅಧಿಕವಾದ ಆರ್ಭಟ : ಪಾಲ ಜಳಧಿಯು ಕಡೆವ ಪೆರ್ಮೊಱಹೊ ಪ್ರಳಯಾಗ್ನಿಯಾಡಂಬರವೊಯೆಂದೆನಲಲ್ಲಿ ಮೊಳಗಿದವಂದು ವಾದ್ಯಗಳು (ಶಬರಶಂ. ೩೯-೯೨), ಮಿನುಗು ಮಾಯುಧದ ನೊರೆಗಳ ವಾದ್ಯದಾರ್ಭಟೆಯ ಪೆರ್ಮೊಱಹಿನ ಚಲಿವ ಕೇತನತತಿಯ ಸುಳಿಯ . . . ಸೇನಾಸಮುದ್ರಮನಾಗ ಪುರಜನಂ ನಿಟ್ಟಿಸಿದುದು (ಚಂದ್ರ. ೯೨-೧೪). [ಪೆರ್ (< ಪಿರಿದು₁) + ಮೊಱಪು₂]

**ಪೆರ್ಮೊೞಗು** (ನಾ). ಅತಿಶಯವಾದ ಗುಡುಗು: ಪೆರ್ಮೊೞಗಲ್ಲಿದು ಗಜ್ಜವೃಷ್ಟಿಯಲ್ಲಿದು ಸುರಿವಸ್ತ್ರಜಾಲಮೆನಲ್ . . . ಬಿಲ್ಲೊದವಿದ ಗರ್ಜಿತಂ ಸುರಿವ ಸಾಯಕಮದ್ಭುತವಾಯ್ತು ಸಾಲ್ವನಾ (ಜಗ. ೧೪-೯೦).
[ಪೆರ್ (< ಪಿರಿದು₁) + ಮೊೞಗು₂]

**ಪೆರ್ಮೋಡ** (ನಾ). = ಪೆರ್ಮುಗಿಲ್ : ಕಾಲ್ಪೊನಲ ಕಡುಪಿಂಗಂ ಪೆರ್ಮೋಡದ ಕಳ್ತಲೆಗಂ . . . ಅರಣ್ಯದಾಘೀಳತೆಗಂ ಕೋಡದೆ ಕೊಂಕದೆ . . . ವಿಪುಳತಪದಿಂದಮಣ್ಣೆಯೊಪ್ಪುತ್ತುಮಿರೆಯಿರೆ (ಗಿಂಶ. ೯-೫೪ ವ).
[ಪೆರ್ (< ಪಿರಿದು₁) + ಮೋಡ]

**ಪೆರ್ವಂದಿ, ಪೆರ್ಬಂದಿ, ಹೆಬ್ಬಂದಿ** (ನಾ). ದೊಡ್ಡ ಹಂದಿ; ಮಹಾವರಾಹ : ಪುಳಿಂದನಾಥನಾಳಿದಾರುತೆ ಕೂರಲಗಂ ಕಱುತ್ತು ಪೆರ್ವಂದಿ [ಪಾಠಾಂ. ಪೆರ್ಬಂದಿ, ಪೇರ್ವಂದಿ]ಯನೆಯ್ದೆ ತಳ್ತಿಱಿದೊಡೆ (ಗಿಂಶ. ೧-೧೦೯). **ಪೆರ್ಬಂದಿ:** ಧರಣಿಯುಂ ಪೆರ್ಬಂದಿ ಕೀಱ್ತಿತ್ತಿದೊಂದೆಡೆ ನೀರ್ ತೀವಿತೆನಲ್ಕೆ ಪೆಂಪುವಡೆಗುಂ ಗುಣ್ಪಿಂದೆ ಪಂಪಾಸರಂ (ಪಾಮಂಪೂ. ೧೧೬). **ಹೆಬ್ಬಂದಿ :** ಬ್ರಹ್ಮ ವಿಷ್ಣ್ವಾದಿಗಳು . . . ಹದ್ದು ಹೆಬ್ಬಂದಿಗಳಾದುದನಱಿಯರೇ (ತನ್ನ. ೪. ೦೯೯-೪೪೪); ಈತನುಱುಬೆಗೆ ಬೆದಱಿ ತುರುಸಂಘಾತದಲಿ ಹೆಬ್ಬಂದಿಯೊಂದು (ಶಬ್ದಾಕ. ೦೩-೩೦); ನಿಂದನೈ ಬಳಿಕೀತನಾ ಹೆಬ್ಬಂದಿಯಿದಿರಲಿ (ತೊರವೆ. ೩-೩-೨೦). [ಪೆರ್ (< ಪಿರಿದು₁) + ಪಂದಿ]

**ಪೆರ್ವಕ್ಕಿ, ಪೆರ್ಬಕ್ಕಿ, ಹೆಬ್ಬಕ್ಕಿ** (ನಾ). ದೊಡ್ಡ ಹಕ್ಕಿ; ಗರುಡ : ಸಿರಿಯೊಡೆಯ ಕೋಲ್ಗೞಿಯ ಪೆರ್ವಕ್ಕಿಗಲರಾಣೆಯನಱಿಸುತಿರೆ ಬಂಗಟ್ಟು ಸರಿಗೆನ್ನದಾ ಪಾವಿಗಿರದವುದುರ್ಗಯ್ಕ ನೇಸರ್ಗಾಲಿಗಳು ನಡುಗಿ ಬೀಳೆ (ಪಾಮಶಂ. ೩-೧೧). **ಪೆರ್ಬಕ್ಕಿ :** ಪೆರ್ಬಕ್ಕಿ ಹೊಂಗರು ಕಾಕಂ ಬಿಲುಗೂಲಿ ರತ್ನಖಗಮಿಂಕರ್ಗಂ ತದ್ವನಾಗ್ರಘದೊಳ್ (ಪಾಶಕೇ. ೫-೫೯). **ಹೆಬ್ಬಕ್ಕಿ :** ಒಬ್ಬ ಹೆಬ್ಬಕ್ಕಿಯಾದ ಒಬ್ಬ ಸೂಕರನಾದ (ಸವಗಿಶ. ೦೬೩-೬೬೩) ; ಹೆ[ಪಾಠಾಂ. ಕ]ಬ್ಬಕ್ಕಿ ಗಿಡುಗ . . . ಹದ್ದೆಂಬಿವಂ ಸಾಳುವಂಗಳು ನೆಗೆದು ತಾಗಿ ಹೊಡೆಹೊಡೆದು (ಸೋಮಕುತ. ೩-೯); ಪಟಪಟನೆ ಪಾರ್ವ ಹೆಬ್ಬಕ್ಕಿಗಳ ವೃಂದದ ಸ್ಫುಟತರ ಬಹುಧ್ವಾನದಿಂ (ಶುಕಾಂ. ೦೬-೫೬). [ಪೆರ್ (< ಪಿರಿದು₁) + ಪಕ್ಕಿ]

**ಪೆರ್ವಟ್ಟೆಯೂರ್** (ನಾ). ಒಂದು ಸ್ಥಳದ ಹೆಸರು : ಕೆಸುಗೊಳಮೊಡೆಯ ಮಹಾಜನಕ್ಕೆ ಪೆರ್ವಟ್ಟೆಯೂರುಂ ಮದ್ದೂರುಮುಂ ಬ್ರಹ್ಮದೇಯಂ ಪೊಯ್ದುದು (ಎಕ. IV. ಹೆಗ್ಗಡ. ೪-೨೦; ಸು. 750). [ ? + ಊರ್ ]

**ಪೆರ್ವಟ್ಟೆ, ಪೆರ್ಬಟ್ಟೆ, ಹೆಬ್ಬಟೆ, ಹೆಬ್ಬಟ್ಟೆ** (ನಾ). ಹೆದ್ದಾರಿ; ದೊಡ್ಡ ರಸ್ತೆ; ರಾಜಮಾರ್ಗ : ಅಣಲಾಪುರದ ಪೆರ್ವಟ್ಟೆ ತೆಂಕಣಸೀಮೆ ಮೇರ್ಗೆಯ ಪೆರ್ವಟ್ಟೆ (ಸೌಇಇ. XI–1, ೬೮-೫೦; 1046) ; ಅನ್ಯಸ್ತ್ರೀರತಿ ಲೋಲತೆ ನರಕಗತಿಯ ಪೆರ್ವಟ್ಟೆ ಫಲಂ (ಧರ್ಮಾಮೃ. ೧೧-೧೧): ಒಟ್ಟಿದ ಬಣಂಬೆಯುಂ ಪೆರ್ವಟ್ಟೆಯ ವಾರಿಧಿಯನೆಸೆವ ನಂದನವನಮುಂ ಕಟ್ಟಿದ ಮಂದಿರಿಯುಂ ಗುಡಿಕಟ್ಟಿದುದಂ ಕಾಣೆ ಗುಡಿಯ ನಧಿಕಂ ಬೆಳಗುಂ (ಅಜಿತಪು. ೯-೪೦). **ಪೆರ್ಬಟ್ಟೆ :** ಪೆರ್ಬಟ್ಟೆ ಕೆರಂ ಗೊಂಟು ದೇವತಾಲಯದ ನೆಟಲ್ಮುಟ್ಟುವೆಡೆ ನೀರ ತಡಿ ಮನೆಗಟ್ಟುವೊಡ ಶುಭಂ (ಲೋಕೋಪ. ೩-೦೨): ಪೆರ್ಬಟ್ಟೆಯೊಂದಿರಲ್ಕೊಂದೊರ್ಬಳ್ ಪೋಗುತ್ತಿರಲ್ಕೆ (ವಡ್ಡಾ. ೫೬೪); ಏಱಿಸಿ ಮಹಾಧನುಪನಶಸಿಬಾಣಮನೆಚ್ಚು ಡೋಱುಗಳೆದವನಿಯುಂ ಸಪ್ತಪಾತಾಳಕ್ಕೆ ತೋಱಿಸಿದನೊಂದು ಪೆರ್ಬಟ್ಟೆಯಂ

(ಶ್ರೀ.ಚಿ.ಶಾ. ೨೮-೩೦). **ಹೆಬ್ಬಟಿ** : ಮುಂದೆ ನಡೆದು ಎಳೆತ್ತುದೆಬ್ಬಟಿನ ಹೆಬ್ಬಟಿ (ಎಕ. XIV. ಎಳಂದೂ. ೦೭೦-೦೦ ; ಸು. 12ನೆಯ ಶತ) · **ಹೆಬ್ಬಟ್ಟೆ** : ಅರ್ಹನ ಹಳ್ಳಿಯಿಂದಾ ×× ವಡಿವುರಕ್ಕಂ ಹಿರಿಯದೇವರ ಬೆಟ್ಟಕ್ಕಂ ಹೋದ ಹೆಬ್ಬಟ್ಟೆಯೆ ಗಡಿ (ಎಕ. II. ೩೯೭-೯೯; 1179 ?) ; ಮೂಡಲು ತಗ್ಗಿಗೆ ಹೋದ ಹೆಬ್ಬಟ್ಟೆ (ಕಶಾ. I. ೩೦-೯೩ ; 1222).

**ಹೆಬ್ಬಟ್ಟೆಯಾಗು**=೧. ಹೆದ್ದಾರಿಯಾಗು ; ದೊಡ್ಡ ದಾರಿಯಾಗು : ಪಾರ್ಥನ ತನುವಿನಲಿ ಹೆಬ್ಬಟ್ಟೆಯಾದುದು ಬಾಣಪಥಿಕರಿಗೆ (ಕುವ್ಯಾ.೦೮ ೯-೩೯). ೨. ರಾಜಮಾರ್ಗದಲ್ಲಿ ಪ್ರಯಾಣಮಾಡುವವನಾಗು : ಅಟ್ಟಿಯಾಡಿವರಾಹವದಲಡಗಟ್ಟಿ ಹೊಯ್ದರು ಸುರವರರು ಹೆಬ್ಬಟ್ಟೆಯಾದರು ಬಳಿಕ ಕಾಲನ ಪುರಕೆ ದೈತ್ಯರಿಗೆ (ಶಿಭಾಗ. ೭-೬-೩೩).

[ ಪೆರ್ (< ಪಿರಿದು$_1$) + ಬಟ್ಟೆ$_1$]

**ಪೆರ್ವಡಗು**, **ಪೆರ್ಬಡಗು** (ನಾ). ದೊಡ್ಡ ಜಹಜು : ಅಡಿಗಡಿಗೆ ನಡೆವ ಪೆರ್ವಡಗುಗಳ ಬೆಡಗುಗಳ . . . ಮುತ್ತುಗಳ ಪಡೆಪಿನಿಂ ಕಡಲಿಸೆದುದು (ಶಿಪು. ೨-೯). **ಪೆರ್ಬಡಗು** : ರಣವಾರ್ಧಿಯೊಳರಿಯ ಶಿರೋಮಣಿಯಂ ತವೆ ಮಾಜುಗೊಳ್ವ ಪೆರ್ಬಡಗೆಂಬಂತಣಿಯೊಡ್ಡಿದ್ದಾಳ್ಗಳೆಲ್ಲಂ ಪೆಣ ನೊಡ್ಡಾಗಲ್ಕೆ ಪರಿದುವಗ್ಗದ ತೇರ್ಗಳ್ (ವರ್ಧ. ೭-೭೦).

[ ಪೆರ್ (<ಪಿರಿದು$_1$)+ಪಡಗು (<ಪಡಂಗು) ]

**ಪೆರ್ವಡಹ** (ನಾ). ಸತತವಾಗಿ ಸುರಿಯುವ ಮಳೆ ; ಜಡಿಮಳೆ : ಪಕ್ಷಿಗ್‌ದುರ್ವಿಚಂಕಿಯುಗ್ರದಿಂ ಜಲಲವಬಿಂದುಗಳ್ಸುರಿಯೆ ಪೆರ್ವಡಹಂ ಬಿಡೆ ಸೋರ್ವಗುರ್ವಿನೊಳ್ (ಶಾಂತೀಶ್ವ. ೦೨-೫೭).

[ ಪೆರ್ (<ಪಿರಿದು$_1$) +ಬಡಹ (<ಬಡವ) ]

**ಪೆರ್ವಡಿ** 'ಪೆರ್ವಾನಡಿ' ನೋ.

**ಪೆರ್ವಡಿಕೆ** 'ಪೆರ್ವಡುಕೆ' ನೋ.

**ಪೆರ್ವಡಿಯಜ** (ನಾ). ಮುಖ್ಯ ದ್ವಾರಪಾಲಕ; ಬಾಗಿಲು ಕಾಯುವವರ ಮುಖಂಡ : ರಾಜರಾಜನನುಮತಮನಜಾದು ಪೆರ್ವಡಿಯಜನಾವರದಿಂ ಕಾಣಿಸಿದಂ ವ್ಯಂತರೇಶನಂ (ಶಾಂತಿಪು. ೦೦-೦೭೦).

[ ಪೆರ್ (<ಪಿರಿದು$_1$)+ಪಡಿಯಜ ]

**ಪೆರ್ವಡುಕೆ**, **ಪೆರ್ಬಡಿಕೆ**, **ಪೆರ್ವಡಿಕೆ**, **ಹೆಬ್ಬಡಿಕೆ** (ನಾ). ೧. ಅತ್ಯಧಿಕವಾದ ದುರ್ವಾಸನೆ; ಹೆಚ್ಚಾದ ಹೊಲಸು ವಾಸನೆ: ಕೀವಿನ ಕೊಂಡವುಳ್ಳಿನಾಗರವಟದೊಳ ಪೆರ್ವ[ಶಾಶಾ. ರ್ಬ]ಡುಕೆ ಜಂತು ಗಳಾಗಳುಮಿಪ್ಪ ಠಾಣ (ಸಮುಶ. ೭-೩೯). **ಪೆರ್ಬಡಿಕೆ** : ೨. ಅತ್ಯಂತ ಹೊಲಸಾದುದು ; ಬಹಳ ಹೇಸಿಗೆಯಿಂದ ಕೂಡಿದುದು : ಸುಡುವ ದಗಿಂ ಕರಂ ಪೊಗೆವ ಪರ್ಬುವ ಕರ್ಬೊಗೆ ಪೆರ್ಕುಮಪ್ಪ ಪೆರ್ಬಡಿಕೆಯ ನಾತಂ (೯೯೮೩ವ. ೭-೩೫); ಕಡುಪೆರ್ಬಡಿಕೆಯ ನಾತಂ ತೊಡರ್ದಿರೆ ಘೀರೆದುನಿಪ್ಪ ಪೆಣನಂ ಕಾಣುತ್ತೆ (ಕೃಷ್ಣ. ೩೦-೫೬). **ಪೆರ್ವಡಿಕೆ** : ೧. ಸುಡುಸುಡು ನಿಮ್ಮ ದೇವತನಮೇವುದು ಕೀವೊಸರುತ್ತ ಮಿರ್ಪ ಪೆರ್ವಡಿಕೆಯ ತೊನ್ನನಂ ಬಯಸಿ ಬಂದಿರಿ (ಪುಣ್ಯಾಸ್ರ. ೯-೨೯). **ಹೆಬ್ಬಡಿಕೆ** : ೧. ನಿಮ್ಮ ತನುವಿನ ಹೆಬ್ಬಡಿಕೆಯ ಮುಂದೆ ಒಬ್ಬರಾದರು ನಿಲಬಹುದೆ (ಶವಗೀ. ೨೫೯-೦೬); ನಡೆವೆಣನೆ ನಿನ್ನ ತನು ಹೆಬ್ಬಡಿಕೆ ನಾಱುವುದು (ಸಾಶುಕ. ಹ. ೨೯೩-೦೯); ಹೇಸಿಕೆಯು ಹೆಬ್ಬಡಿಕೆ ಕೀವು ರಕ್ತದ ಕುಂಡ (ಶಂಕರಾ. ೨-೩೫-೦೦).

[ ಪೆರ್ (<ಪಿರಿದು$_1$)+ಪಡುಕೆ ]

**ಪೆರ್ವಡುಕೆನಾತ** (ನಾ). ಅತ್ಯಂತ ಹೊಲಸು ವಾಸನೆ: ಅತ್ಯಧಿಕವಾದ ದುರ್ಗಂಧ : ಮೆಯ್ಯೋಗಡಿಪಂತು ಪೆರ್ವಡುಕೆನಾತದ ಯೋನಿಸುಖಂ ಗಳಿಂದೆ ಬಿಟ್ಟಾಗಲ್ (ಅನಂಪು. ೯-೨೯).    [ ಪೆರ್ವಡುಕೆ + ನಾತ ]

**ಪೆರ್ವಡೆ**, **ಪೆರ್ಬಡೆ** (ನಾ). ದೊಡ್ಡ ಸೈನ್ಯ : ತನ್ಮಧ್ಯದೊಳ್ ಸೊದರಿರ್ಪಂ ತಿರೆ ಚಕ್ರರತ್ನಮುದಜಿಸೊಳ್ ನಿರ್ಬಾಧಮಿರ್ದತ್ತು ಪೆರ್ವಡೆ ವಾರಾಶಿಯೊಳಿರ್ದ ಬೈತ್ರದೊಳಗಂದೆತ್ತಂ ತೆರಳ್ದಿರ್ದಪೊಲ್ (ಆದಿಪು. ೦೩-೩೦) ; ನಿಷ್ಠುರತನದಿಂದೀ ಪೆರ್ವಡೆವೆರಸು ಮಹಾನೆರವಿವೆರಸು ಕಟ್ಟಾಳ್ಗಳನದಿಂ ಪರಿತಂದು (ಧರ್ಮಾಮೃ. ೬-೦೦೬). **ಪೆರ್ಬಡೆ** : ಆ ಪೆರ್ಬಡೆಯಂ ಪ್ರಾಚೀಕೂಪಾರಕ್ಕೊಯ್ವ ನೃಪತಿ ಸೇನಾಪತಿ . . . ಅಂದಂಬಡೆದಂ (ಶಾಂತಿಪು. ೦೦-೦೫೭) ; ಪರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಗ. ೨೦೭); ಪೆರ್ಬಡೆ ನಡೆದುದೇನೆಂದೆನು (ಭಾರತಸಂ. ೯-೬).

[ ಪೆರ್ (<ಪಿರಿದು$_1$)+ಪಡೆ$_2$]

**ಪೆರ್ವಡೆಗಿತ್ತಿ** (ನಾ). ದೊಡ್ಡ ಸೈನ್ಯದ ಒಡತಿ : ಆ ಸಮಯದೆ ಬಂದ ಳೊರ್ವ ಪೆರ್ವಡೆಗಿತ್ತಿ ದೇಶಾಧಿಪತಿಯತ್ತಣಿಂದ (ಅಂಜನಾ. ೩-೯೩).

[ಪೆರ್ವಡೆ+ –ಗಿತ್ತಿ]

**ಪೆರ್ವಣ್** (ನಾ). ತೋರವಾದ ಹಣ್ಣು ; ದೊಡ್ಡಗಾತ್ರದ ಹಣ್ಣು. ಪೆರ್ವಣ್ಸೋತ್ತಿರ್ದೆ ಪುತ್ತಿಂಗಳಿಗಿದ ನೆಲದಿಂದುಣ್ಮಿ ತಣ್ಣಂಪಿನುರ್ವಿಂ ನೀರ್ವಟ್ಟೊಳ್ಪಕ್ಕೆ ಪುತ್ತೆರ್ದೊಗೆದು ಮುಸುಱಿ ಮೆಯ್ಮುಂಟು ಕಾಯ್ಮಾಯ್ದು ದೆಂದೆಂದೊರ್ವನ್ನಂ ಪಾಂಥರೆತ್ತಂ ಬಳಸಿದ ರಸಪನ್ನಾತುಳಂಗಂ ಅಲ್ಲಿ ಜೆಲ್ವಾದುವಾದಂ (?) (ಚಂದ್ರಪ್ರ. ೦೦-೯೯).

[ ಪೆರ್ (< ಪಿರಿದು$_1$) + ಪಣ್$_3$ ]

**ಪೆರ್ವಯಲ್**, **ಪೆರ್ಬಯಲ್**, **ಹೆಬ್ಬಯಲು** (ನಾ). ೧. ಒಂದು ಸ್ಥಳದ ಹೆಸರು : ಪೆರ್ವ್ವಯಲ ಕೆಱೆಯುಂ ಶನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ . . . ಸಾಕ್ಷಿ (ಎಕ. III. ಎಡತೊ. ೬೦-೭೦; ಸು. 890) ; ನಗುಲರಸಂಗೆ ಪೆರ್ವ್ವಯಲ್ಪನ್ನೆರಡಱ ಕೆಱುದೆಱೆ (ಪ್ಯಕಾಂ. ೦೯೩೦. ೭೯-೯೫ ; 1053 ?). **ಪೆರ್ಬಯಲ್** : ೨. ವಿಸ್ತಾರವಾದ ಮೈದಾನ ; ವಿಶಾಲವಾದ ಜಾಗ : ಪಟುಗಳ್ ಪೆರ್ಬಯಲಾಗೆ (ಕಾವ್ಯಸಾ. ೯೩೫). **ಹೆಬ್ಬಯಲು** : ೧. ತಟ್ಟೀಕೆರೇ ಹೆಬ್ಬಯಲು ನಾಮಮಾರ್ಗ್ಯಾಂ ಸಹ ಪಂಚಭಿಃ ಉಪಗ್ರಾಮೈಃ . . . ಸಂಯುತಂ (ಎಕ. VII. ಶಿಕಾರಿ. ೨-೯೭; 1641).

[ ಪೆರ್ (< ಪಿರಿದು$_1$) + ಬಯಲ್(< ವಯಲ್) ]

**ಪೆರ್ವಯ್ಮಂಗೊಳ್** (ಕ್ರಿ). ಹುಚ್ಚುಹಿಡಿ : ಮುನ್ನಮಿ ತಪ್ಪ ನಿರ್ಬುದ್ಧಿತನಮಿಲ್ಲ ನಿನ್ನಂತಪ್ಪ ಬುದ್ಧಿವಂತರುಂ ಪೆರ್ವಯ್ಮಂಗೊಂಡರಂತೆ ಒಡಸಾದುವಂ ಕಳ್ಳನೆಂದು ಬೆನ್ನಟ್ಟಿ ಬಂದುದಕ್ಕೆಮಗೆ ಪಿರಿದಂ ವಿಸ್ಮಯವಾದಪುದು (ಧರ್ಮಾಮೃ. ೬-೦೦೯). 'ಪೆರ್ವೈತ್ತಿಕೆ' ಪಠಾ.    [ ? + ಕೊಳ್$_1$ ]

**ಪೆರ್ವರ**, **ಪೆಮ್ಮರ**, **ಪೆರ್ಮರ**, **ಹೆಮ್ಮರ** (ನಾ). ೧. ದೊಡ್ಡ ಮರ ; ಉನ್ನತವೃಕ್ಷ : ಒಗೆವ ದಿನೇಶನು ಹರಿವ ಸಿಂಧುವಂ . . . ಸೊಗಯಿಸಿ ನಿಂದ ಪೆರ್ವರನಂ . . . ದೈವವೆಂದೆಱಗುವಾತನೆ ದೇವವಿಮೂಢನಾಗನೆ (ಜಾಶ. ೯೩೫). **ಪೆಮ್ಮರ** : ೧. ಪಡೆಯ ಕಾಲ್ದುಳಿಗಾಗ ಗಿಡು ಬಳ್ಳಿ ಪೆಮ್ಮರ ಪುಡಿಯಾಗೆ (ಕಂಚಿ. ೦೨-೬). **ಪೆರ್ಮರ** : ೧. ಅಱಕೆಯ ಗೋವರಣ್ಣೆ ಬರೆ ಪಾಯಿಸಿ ಪೋಱಯಿಸುಲರ್ ತಗುಳ್ದು ತತ್ತಳತಱದಿಕ್ಕಿ ದೇಗುಲಕೆ ಪೆರ್ಮರವಂ ಕಡಿವಂತೆ ಮಾಡಿದರ್ (ಸಂಕಶಾ. ೯-೯೫); ನೀರಸವಾಗೆ ಬಳ್ಳಿ ಗಿಡು ಪೆರ್ಮರಗಳ್ . . . ಬಂದುದು ಬೇಸಗೆಗಾಲಂ (ಸಂಶಾಕು. ೭-೯೩). **ಹೆಮ್ಮರ** : ೧. ಹೆಮ್ಮರನಿರ್ದೇನದಱೆಂದಲೆತ್ತ ಬಹುದೇ ಬಲ್ಗಾರವಂ (ಸೋಸೋಶ. ೭೩); ಹೆಮ್ಮರ ನಿವಾತದಲಾಡಿದು ಬಿದ್ದವು ಕೌರವೇಂದ್ರನ ಪತನಕಾಲದಲಿ (ಕುವ್ಯಾಗ. ೯-೩); ಕಿತ್ತು ಬೀಳುವ ಹೆಮ್ಮರಂಗಳಿಪತ್ತಲವಱವಡಿಗಿದ್ದು ಬದುಕುವುದೆತ್ತಲೀ ಶಿಶುಪಶುಗಳು (ಶಿಭಾಗ. ೦೦-೦೦-೫). ೨. ಒಂದು ಬಗೆಯ ಮರ ; ಶಿಗಡುಮರ : " ಶ್ಯೋನಾಕಃ . . . ಶೋಣಕಃ, ಅರಲುಃ—ಇವು ಹೆಮ್ಮರ " (ಶಾಶಸಾ. ೦೦೬) ; ಅಯ್ಯ ಹೆಮ್ಮರದಲ್ಲಿ ಸುಗಂಧವನಱಸುವರೆ (ಆತಪ. ೦೩-೨೯) ; ಹಾಲೆ ಹೊಂಗೇತಕಿ ವನಸಂಪಿಗೆ ಹಿಂತಾಲ ಹೆಮ್ಮರ ಕಮ್ಮರಗಳು (ಶಂಕಶಂ. ೮೯-೩೬).

[ ಪೆರ್ (< ಪಿರಿದು$_1$) + ಮರ$_1$ ]

**ಪೆರ್ವರುಷ** (ನಾ). ಭಾರಿ ಮಳೆ : ಪೆರ್ವರುಷಗರೆದಾಪರಿಸಲೊಡನೆ ದಳ್ಳುರಿಯಾತಿಶಾಂತಿಯಾದುದು (ನವನೀ. ೬ ೭).
[ಪೆರ್ (< ಪಿರಿದು$_1$) + ಪರುಷ (< ಬರಿಸ)]

**ಪೆರ್ವರ್ದು, ಹೆಬ್ಬದ್ದು** (ನಾ). ದೊಡ್ಡ ಜಾತಿಯ ಹದ್ದು : ಪರಿಯ ಬಿರ್ದುಱೆ ಪರ್ದು ಚೆಂಬರ್ದುರಾತರದ ಹಡೆಹರ್ದು ಪೆರ್ವರ್ದ[ಪಾಠಾಂ. ಪೆರುವರ್ದು]ವಱೆಯೊಪ್ಪಿದವು (ಶಾಳ್ಮಶಾ. ೫ ೨೩). **ಹೆಬ್ಬದ್ದು** : ಕಿಱು ಹಕ್ಕಿಯ ಕೊಂಡು ಕುಕ್ಕಿಯೆ ಸೆಳೆಗಟ್ಟು ಹೆಬ್ಬದ್ದ ಒಡಿದು ಕಬ್ಬದ್ದ ಜಾಣಸಪ ಮಾಡಿ (ಕ್ರಶೋಗ. ೪. ೫೦೬ ೦೦೦). [ಪೆರ್ (< ಪಿರಿದು$_1$) + ಪರ್ದು]

**ಪೆರ್ವಲ, ಪೆರ್ಬಲ, ಹೆಬ್ಬಲ** (ನಾ). ಭಾರಿಸೈನ್ಯ; ದೊಡ್ಡ ದಂಡು: ಇದು ಪೆರ್ವಲಮಾನೊರ್ವನೆ ಕದನಂ ಪಿರಿದಕ್ಕುಂ (ರಸರತ್ನಾ. ೦೩-೦೨೫); ಬಲಕ್ಕೆ ಆಳ್ಬಲ ... ನೆಲವಲ, ಪೆರ್ವಲ(ಕಮುದ. ೨೯೮ ಪ್ರಯೋ). **ಪೆರ್ಬಲ** : ಪೆರ್ಬಲದಿಂದಂ ಇಱಿಪರ್ವಱೆರೆಕಾಂಗದಿನಿಱಿವಪರಾರ್ಸಿನ್ನ ತೆಱದಿನಿಱಿವ ಬೆಡಂಗಾ (ಗದಾಯು. ೦೦-೪) ; ಕವಿತಪ್ಪ ವಿರೋಧಿಬಲಕ್ಕೆ ಭೀತಿಯಿಂ ನೆಲವಲನೆನ್ನದಲ್ಲದಿದು ಪೆರ್ಬಲವೆನ್ನದೆ ದೋಃಪ್ರತಾಪದಿಂ ಗಿಲಿಗಿಲಿಗಂಟವಾಡಿಸುವಂ (ಎಕ. XII, ತಿಕ್ಕಶಾ. ೪೩-೦೭; 1171) ; ಕಱುತ್ತೆಱಗೆ ತಾಗಿದರಾ ಶಿವೊಲಂತೆ ಮಾಣ್ದು ಪೆರ್ಬಲಮೊಡವಾಯೆ (ಕಾವ್ಯಸಾ. ೪೬೩). **ಹೆಬ್ಬಲ** : ತಳಿತುದೆಡಬಲಮಂಕದಲಿ ಹೆಬ್ಬಲ (ಕುಮಾರರಾ. ೫-೪೦) ; ಬೊಬ್ಬಿಱಿದು ಮೂಱಿಂಬುಗಳಲಱೆಯೆಬ್ಬಿಸಿದನಾ ಖಳತನೂಜನ ಹೆಬ್ಬಲವ ರಥ ಹಯ ಮದೇಭ ಪದಾತಿ ಸಂತತಿಯ (ಕೊರರಾ. ೬-೪೦-೨೪); ಹೆಬ್ಬಲದೊಡನಿಂತು ಕಿಱುಬಲ ಬವರ ಕಾನುವುದೆ (ಶಂಪರಿ. ೦೭-೨೭). [ಪೆರ್ (< ಪಿರಿದು$_1$) + ಬಲ$_3$]

**ಪೆರ್ವಲಗೆ** (ನಾ). ಅಗಲವಾದ ಗುರಾಣಿ,–ಹರಿಗೆ : ಪಿಡವಸಿಗಳಿಂದ ಮುಂಗೈಯ ಪೆರ್ವಲಗೆ . . . ದುಃಶ್ವಾಸ ಸಂಕಲಿತ ಸಂಗಡಿಗರೆಸೆವಾಳ್ಗಳುತಮುವ ಮೈದೋರಿತು (ಕುಶಾರಾ. ೦-೦೭-೪೬).
[ಪೆರ್ (< ಪಿರಿದು$_1$) + ಪಲಗೆ]

**ಪೆರ್ವಲೆ, ಪೆರ್ಬಲೆ, ಹೆಬ್ಬಲೆ** (ನಾ). ದೊಡ್ಡಬಲೆ ; ಮಾರಿಬಲೆ : ಪೆರ್ವಲೆ ಬಡಿಕೋಲ್ ಕಿಱುನಾಯ್ (ಕಮುದ. ಸ. ೦೪೨ ಪ್ರಯೋ) ; ಚಕ್ರವಲೆ ಮಿಗೆ ಮುಕ್ಕಣ್ಣವಲೆ ಪೆರ್ವಲೆಯ ಪೊಱೆಗಳು ವಿಂಧ್ಯಕನ ಗೂಡೆ (ಶಾಳ್ಮಶಾ. ೫-೦೮) ; ಪೆರ್ವ[ಪಾಠಾಂ. ರ್ಬ]ಲೆ ತೊಡಂಕುವಲೆ ಕೊಲ್ವಲೆ . . . ಬಿಡುವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ (ಲಾಶಂ. ೩-೨೪). **ಪೆರ್ಬಲೆ** : ಪೆರ್ಬಲೆ . . . ಕವಲಂಬುಸಹಿತಂ ಭೋರನೆ ನೆರೆದತ್ತು ಬೇಂಟೆಕಾಱರ ತಂಡು (ಪಳಶಂ. ೬೪); ಸ್ಮೃತಿನಿಕರವೆಂಬ ಪೆರ್ಬಲೆಗಳಂ ಬೀಸಿ . . . ಶಮೆ ದಮೆ ಶಾಂತಿ ಸತ್ಯಸಂಗತಿ ಬೇಂಟೆಗುಚಿತಸಾಧನವಾಗೆ ಮೃಗಕೇಳಿಯಿಂದಿರ್ದನರ್ಹತ್ಪಟಕನು (ಶಾಂದಪು. ೦೬-೪೬). **ಹೆಬ್ಬಲೆ** : ಹೆಬ್ಬಲೆಯ ಬೆಳ್ಳಾಲವಲೆಗಳ ಮಯಣದಂಟಿನ ಮೋಲುಕೋಬಿನ ಬೇಟೆಗಾಱರು ಬಳಸಿದರು ಶಿವನ (ಕುಮಾರ. ೫-೩೩); ಭ್ರಾಂತಿಯೆಂದೆಂಬ ಹೆಬ್ಬಲೆಗೆ ಸಿಕ್ಕಿ ಅಂತ್ಯ ಮೊದಲನು ಕಾಣೆ (ಪುರಂದ. ೨-೧೬೩-೩); ದೈವ ವಂಚಿಸಲು, ಬುದ್ಧಿಬಲದಿಂದಾರು ಬದುಕಬಹುದು ? ಒಡ್ಡಿದಾ ಹೆಬ್ಬಲೆಯ ಹಾರಬಹುದು ? (ಜಾರಸಿ. ೬-೨೦). [ಪೆರ್ (< ಪಿರಿದು$_1$) + ಬಲೆ$_1$]

**ಪೆರ್ವಸ, ಪೆರ್ಬಸ, ಪೆರ್ಬಸವು** (ನಾ). ದೊಡ್ಡ ಬರ ; ಘೋರಕ್ಷಾಮ : ಪಾಪಿಲಿ ಬೆಟ್ಟ ಮತ್ಸ್ಯವಿನಿತುಂ ಪೊಱಗಾಗಿರೆ ಮತ್ತಮನ್ಯಜೀವಾವಳಿ ತಮ್ಮ ಜಾತಿಯಡಗಂ ತಿನೆ ಪೆರ್ವಸಮಾಗ್ಯುಂ (ಲೋಕೋಪ. ೪-೬೮); ಮಿಂಚಿನ ಬಣ್ಣಮೆಯ್ದೆ ಕರಿದಾದೊಡೆ ಪೆರ್ವಸವಕ್ಕು (ಅಭಿಪು. ೬-೦೨). **ಪೆರ್ಬಸ** : ಸುರಧನು ಪಾಟಳರುಚಿಯಾಗಿರೆ ಸಮರಂ . . . ಅದು ಕರಿದಾಗಿರೆಯುಂ ಧಾರಿಣಿಗೆ ಕೂಡೆ ಪೆರ್ಬಸಮಕ್ಕುಂ (ಲೋಕೋಪ. ೪-೨೫). **ಪೆರ್ಬಸವು** : ಅರ್ಕನ ಸೂನು ಕುಂಭದೊಳ್ ಜೆಟ್ಟಿಗನಪ್ಪ ದೇವಗುರು ಸಿಂಹದೊಳಲ್ಲಿರೆ ಲಂಕೆಯಿಂದಮೆಟ್ಟಟ್ಟ ತಗುಳ್ದು ಪೆರ್ಬಸವಿನೊಳ್ ಪ್ರಜೆ ಮೂಱಱೊಳೊಂದು ಭಾಗೆಯುಂಬ್ಬಟ್ಟೆಯೊಳೆಂಬಿನಂ ಬರ್ದುಗುಗು ನಲೆನಾಗರುವಪಾರನೋಱೆಯಿಂ (ಅಭಿಪು. ೭ ೫೭). [ಪೆರ್ (< ಪಿರಿದು$_1$) + ಪಸ$_1$]

**ಪೆರ್ವಸಲೆ** (ನಾ). ದೊಡ್ಡ ಹುಲ್ಲುಗಾವಲು : ಅಸದ್ರಿಶವಿಂದುಮಂಡಳವದಿಂದಮಿತ್ರತೋಜ್ಜ್ವಳಕೀರ್ತಿಕಾಂತಿಗೀಕ್ಷಿಸೆ ಕೆಱೆವುಳ್ಳದೊಂದು ಕಱೆಯಿಲ್ಲದುದೊಂದಱಿಂದಮಂದು ಹೋಲಿಸಿದಪೆನಿಂದು ನಾಳೆ ರಿಪುಹರ್ಮ್ಯತಳಂಗಳ ಮೇಲೆ ತಳ್ತ ಪೆರ್ವಸಲೆಗೆ ಪಾಯ್ಗುಮಿಂದುಪವಿತ್ರಂ ಬಳಿಕಂದೆಣೆ ಚಂದ್ರಮಂಡಳಂ (ಸೌಇಇ. IX–i, ೩೪೩-೩೦; 1226). [ಪೆರ್ (< ಪಿರಿದು$_1$) + ಪಸಲೆ]

**ಪೆರ್ವಸಿವು** (ನಾ). ಹೆಚ್ಚಾದ ಹಸಿವು : ಪಸುಘೆಗಧೀರನಪ್ಪ ನಳನಧ್ವರ ಸತ್ಪಲದಿಂ ಸುರರ್ಗೆ ಪೆರ್ವಸಿವಡಗಿತ್ತು (ನಳಚಂ. ೩೩).
[ಪೆರ್ (< ಪಿರಿದು$_1$) + ಪಸಿವು (< ಪಸಿ$_2$)]

**ಪೆರ್ವಸುಗೆ** (ನಾ). ಒಂದು ಸ್ಥಳದ ಹೆಸರು (?) : ಲೊಕ್ಕಿಗುಣ್ಡಿಯ ಊರೊಡೆವೊಲದ ಪೆರ್ವಸುಗೆಯು ಸ(ಶ)ಂಕರಯ್ಯಂ(ಮ್ಯ)ನಾಯಕರ ಪಾಗಂ (ಎಇ. XIX, ೨೦೯-೫ ; 1037). [ ? ]

**ಪೆರ್ವಳವಿಗೆ** (ನಾ). ಅತಿಶಯವಾದ ಬೆಳವಣಿಗೆ : ದಳದಳಿಸಿ ಪೊಸಕೆಂಪಳಿರ್ಗಳ ಕಾವಣವೂ ಕಮಳಿನಿಯ ರಾಗ ಪೆರ್ವಳವಿಗೆಯೊ ಪೇಱಿಮೆನೆ ಕೆಗ್ಗೊಳಿಸಿದುವರುಣೋದಯಂ ಸುರೇಂದ್ರನ ದೆಸೆಯೊಳ್ (ರರ್ಮಕ. ೨-೩೦).
[ಪೆರ್ (< ಪಿರಿದು$_1$) + ಬಳವಿಗೆ]

**ಪೆರ್ವಳಿ, ಹೆಬ್ಬಳಿ** (ನಾ). ೧. ದೊಡ್ಡ ಮನೆತನ ; ಹಿರಿಯ ವಂಶ : ಶಸ್ತ್ರಮುಂ ಶಾಸ್ತ್ರಮುಂ ಕಲ್ತು ಮೋಣ್ ಪೆರ್ವಳಿಯೊಳಾದವಂ ಅವನಂ ಕಂಡವಂ ವ್ಯರ್ಥಕಾರ್ಯನಾದುದು ಕಾಣದು (ಶಾನಂದ. ೨-೯). **ಹೆಬ್ಬಳಿ** : ೨. ಒಂದು ವಂಶದ ಹೆಸರು (?) : ಹೆಬ್ಬಳಿ ಮೊದಲಾದ ಬಳಿಯವರ ಕಯ್ಯಲು × (ಸೌಇಇ. IX–ii, ೪೦೬.೦೭ ; 1064).
[ಪೆರ್ (< ಪಿರಿದು$_1$) + ಬಳಿ$_2$ (< ಬಱಿ$_3$)]

**ಪೆರ್ವಳು** 'ಪೆರ್ವಱು' ನೋ.

**ಪೆರ್ವಳಿ** 'ಪೆರ್ವುಱಿ$^3$' ನೋ.

**ಪೆರ್ವಳ್ಳ, ಪೆರ್ಬಳ್ಳ** (ನಾ). ೧. ನೀರಿನ ದೊಡ್ಡ ಹಳ್ಳ. ೨. ಒಂದು ಹಳ್ಳದ ಹೆಸರು : ತಸ್ಯ ಸೀಮೆ ಮೂಡಾಯ್ಪೆರ್ವಳ್ಳಮೆ ಪೊಟೆವಾಡಿಯ ಸೀಮೆಯುಳ್ ಕೂಡಿತ್ತು . . . ಮೂಡಯ್ಯಾಡಿಲ ಪೆರ್ವಳ್ಳಮೇ ತೆಂಕಯ್ಯಗ್ರೆಸ್ತಿಗೂಡಲ ಪಳ್ಳಮೇ . . . ಸೀಮೆ (ಎಕ. IV, ಹೆಗ್ಗಡ. ೪-೭; ಸು. 750). **ಪೆರ್ಬಳ್ಳ** : ೧. ಅತಿಪ್ರಬಲಜಲಪ್ರವಾಹ ಬೆಳ್ಳಂಗೆಡಮ ಪರಿತರ್ಪ ಪೆರ್ಬಳ್ಳದೊಳ್ ಪಿರಿದಪ್ಪ ತೆಪ್ಪದ ಮೇಲೆ ತೇಂಕುತ್ತುಂ (ಶಂಕಶಂ. ೨೯೬-೦೭) ; ಅಸಿದುಮರಿವ ಪೆರ್ಬಳ್ಳದಿರ್ಪಕ್ಕದೊಳ್ ನಿಲ್ತ್ರಾಸೆದೊಂದಂ ಜಾನಿಸುತ್ತಿರ್ದುದು ಚಳಶಫರೀಕಾಲಕೂಟಂ ಬಕೋಟಂ (ಜಗಂ. ೦೭-೬೨). [ಪೆರ್ (< ಪಿರಿದು$_1$) + ಪಳ್ಳ]

**ಪೆರ್ವಳ್ಳಿ, ಪೆರ್ಬಳ್ಳಿ$_2$** (ನಾ). ಒಂದು ಸ್ಥಳದ ಹೆಸರು : ಚೋಱರ ಪಿರ್ದುವೆಮ್ಮ ಪೆರ್ವಳ್ಳಿಯ ತುಱುಗೊಳೊಳ್ ಸ್ವರ್ಗಸ್ಥನಾದಂದು (ಎಕ. XI. ಹೊಳಲ್ಕೆ. ೯೫-೬; 977). **ಪೆರ್ಬಳ್ಳಿ$_2$** : ಪೆಬ್ಬಳ್ಳಿ ನಾಮ ಗ್ರಾಮಾನಾಂ ಮಧ್ಯೇ (ಎಇ. IX, ೨೦೪-೬೦; 750).
[ಪೆರ್ (< ಪಿರಿದು$_1$) + ಪಳ್ಳಿ$_1$]

**ಪೆರ್ವಱೆ$^3$, ಪೆರ್ಬಱೆ$^3$, ಹೆಬ್ಬಱೆ$^3$** (ನಾ). ದೊಡ್ಡ ಹರೆ,– ತಮಟೆ : ಎಡೆಯೊಳ್ ದೂಂಟಿಂದೆ ದೂಂಟಿಂಗೆ ಪೆರ್ವಱೆಯುಂ ಪೊಯ್ದು ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪಾಕಬೋಲು ಜೋಡಿಯೋ (ಶಂಶಶಾ. ೪-೬೨). **ಪೆರ್ಬಱೆ$^3$** : ಅಱಿಕೆಯ ತೇರ್ ಪಱಿಯಂಗೆ ಪೆರ್ಬಱೆ ಚಕ್ರಂ ರಾಜ್ಯಚಿಹ್ನಮೆಂಬಿವಱಿಂ ಗೊಟಱೊಳೆ ಬರಮಂ ವಿರೋಧಿಗಳಱಿಯೆ ಜಯೋದ್ಯೋಗ ಮೇಚರೇಂದ್ರಂ ಬೀದಂ (ಶಾಂತಿಪು. ೪-೪೦) ; ಪೆರ್ಬಱೆಯುಂ ಪೊಯ್ಯಿಸ್ತ್ರಂ . . . ಅತಿಗರ್ವದಿ ಮಾಱಾಂಕನೆನಿಪ ಭಟನೇಳ್ತಂದಂ (ತ್ರಿಶುಶಿ. ೨೩-೦೪). **ಹೆಬ್ಬಱೆ$^3$** :

ಹೆಬ್ಬುಟೆಗಳು ಬಾಚಿಸುವ ಗತಿಗುಬ್ಬುತುಬ್ಬುತ . . . ಚಾಂಗು ಭಲ ಎನುತಿರಲು (ಐಸಪು. ೫೬-೦೪) ; ಉಲಿವ ಹೆಬ್ಬುಟೆಗಳನು ಕಿವಿಗಳ ಬಳಿಯು ಬೊಬ್ಬಿಡಿಸುವುದು (ತೊರೆರಾ ೬-೨೬-೨೩); ಹೊಡೆವ ಹೆಬ್ಬುಟೆ ಜಾವಗಹಳೆ . . . ಜಡಿವ ದನಿಗಳಿಂದ ತಳವಾಚಿರುಗಳ ಪಡೆ ತಿರುಗುವುದು (ಕಂಪಪ. ೧೧-೧೪೧). [ಪೆರ್ (<ಪಿರಿದು$_{1}$) + ಪಟೆ$_{1}$]

**ಪೆರ್ವಟು, ಪೆರ್ವಳು, ಹೆಬ್ಬಳುವ** (ನಾ). ದಟ್ಟವಾದ ಕಾಡು ; ಮಹಾರಣ್ಯ : ಅಂತೆಂತುನುಮೆಯ್ದೆವಂದುಜ್ಞಯಿನಿಯ ಪಡುವಣ ಪೆರ್ವಟುವಂ ಕಟಿದು . . . ಸೀತೆ ಸೇದೆವಟ್ಟಪೃದುಂ (ಕಂಠಾಪು. ೬-೦೦೩ ಪ). **ಪೆರ್ವಳು :** [ನಾಡು ಬೀಡುಗಳನಂದು] ಕಳೆದು . . . ಶಬರಸಂದಣೆಯಿಂದಗುರ್ವಿಸುವ ಪೆರ್ವಳುವನು ಪುಗುತಿರಲು (ಕುಪುರಾ. ೬-೦೦೦). **ಹೆಬ್ಬಳುವ :** ಬೆಳೆದ ಹೆಬ್ಬಳುವಕ್ಕೆ ಕಾಲಾನಳನು ಕವಿದಂದದಲಿ ಮುರಹರನಲಘುಬಾಣವ್ರಾತ ಕವಿವುದು ಸಾಲ್ವನೆಡಬಲದ (ಪಿಶಾಗ. ೦೧-೮೨-೨೨). [ಪೆರ್ (<ಪಿರಿದು$_{1}$) + ಪಟು$_{1}$ (<ಪಟುವ)]

**ಪೆರ್ವಟ್ಟಿ** (ನಾ). ಒಂದು ಊರಿನ ಹೆಸರು (?) : ಪೆರ್ವಟ್ಟಿಯ ತೆಂಕಾಯೊಟ್ಟಿ ಎ ಪಡುವಾಯ್ವಾಟ್ಟೀಲಿಯ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV, ಎಡತೊ. ೬೦-೬೫ ; ಸು. 890). [?]

**ಪೆರ್ವಾಗಿಲ್, ಪೆರ್ಬಾಗಿಲ್, ಹೆಬ್ಬಾಗಿಲ್, ಹೆಬ್ಬಾಗಿಲಂ** (ನಾ). ದೊಡ್ಡ ಬಾಗಿಲು ; ಮಹಾದ್ವಾರ : ಪೆರ್ವಾಗಿಲ ನೆಲೆವಾಡದಗುರ್ವನದೇನೆಂಬೆಂ (ಧರ್ಮಾಪು. ೨-೧೨೦); ಜಪಹುರದ ಪೆರ್ವಾಗಿಲಂ ಪುಗುತರ್ಪಂತಿರೆ ಬರ್ಪಟೆ ಬೀರ ನೀನಾರವಂ (ರಾಶಾಕ್ರ. ೯೫-೨೦). **ಪೆರ್ಬಾಗಿಲ್ :** "ಪರಿಕೂಟವಮಾ ಹಸ್ತಿನಖಿಮೆಸಲು ಪೆರ್ಬಾಗಿಲಕ್ಕು" (ಶುಂಗರಾ. ೫೬-೪); ನರಪ ಬಲ್ಲಾಳ ನರಪುನೆಯ ಪೆರ್ಬಾಗಿಲೊಳಗಂದಳಪನಿರಿದು ನಿಂದು (ಚದ್ಮರಾ. ೯-೦೦); ಆ ಪಟ್ಟಣಕ್ಕನುಪಮಿತನವರತ್ನಮಯದ ಮುನ್ನೂಱುಪತ್ತೆಸೆವ ಪೆರ್ಬಾಗಿಲ್ಗಳು (ಶಬಠ. ೦೦-೩೪); ಪೊಸಲ ಪೆರ್ಬಾಗಿಲ್ಗಳಿಕ್ಕಿದವು (ಕ್ರಪಿಠಾ. ೯-೦೬). **ಹೆಬ್ಬಾಗಿಲ್ :** ಮುಖಂ, ನಿಃಸರಣಂ— ಈ ೨ ಹೆಬ್ಬಾಗಿಲ ಮುಂತು (ಹಲಾಯು. ೪೮-೭೩೪). **ಹೆಬ್ಬಾಗಿಲು :** ಪುರದ ಹೆಬ್ಬಾಗಿಲ ಮುಚ್ಚುಳ ನಗರದೇವತೆಯರ್ಕಿಲಿಸಲ್ (ಭುಪ್ಪಾಕ್ರ. ೬-೩೯ ಪ) ; ಪುರದ ಹೆಬ್ಬಾಗಿಲು ಗಳಿಕ್ಕಿತು (ಕೌಶಿರಾ. ೨೨-೩೨): ಊರು ಸೂರೆ ಹೋದ ಮೇಲೆ ಹೆಬ್ಬಾಗಿಲು ಹಾಕಿದರು (ಗಾದೆ). [ಪೆರ್ (<ಪಿರಿದು$_{1}$) + ಬಾಗಿಲ್]

**ಪೆರ್ವಾಣದಿ** (ನಾ). ಒಬ್ಬಾತನ ಹೆಸರು : ಕಲಿಪಲ್ಲವ(ಭ)ರ್ ಪೆರ್ವ್ವಾಣದಿಯರಸರ್ (ಇಅ. XIV, ೨೩೨-೫೬; ೯ನೆಯ ಶತ).

[P ಇದು 'ಪೆರ್ವಾಣನಡಿ' ಎಂಬುದರ ಅಪಲಿಖಿತವಿರಬಹುದು]

**ಪೆರ್ವಾತು, ಪೆರ್ಮಾತು, ಹೆಮ್ಮಾತು** (ನಾ). ೧. ಅಹಂಕಾರದ ಮಾತು : ಕೊರ್ವಿದಾ ಪೆರ್ವಾತುಗಳ್ಗಾಂ ಬೆದರ್ವಂತುಟಣಾಗಿಯೇಂ ? (ಶ್ರೀಣಾಪು. ೯೯-೩೦೨). **ಪೆರ್ಮಾತು :** ೧. ಭಯಮೇಕಕ್ಕುಮದೆಂತು ಟೆಂದದಟುಮಂ ಪೆರ್ಮಾತುಮಂ ಭೂತಧಾತ್ರಿಯೊಳೋರಂತೆ ನೆಗಟ್ಟು (ಶಂಕಶಾ. ೧೨-೦೭೫) ; ಈ ಪರಾಕ್ರಮಮುಮಿಾ ಪೆರ್ಮಾತುಮಿಾ ಗಂಡುಮಿಾ ಸುಭಟಾಲಾಪಮುಮೆಲ್ಲಮಾ ನೃಪಸುತರ್ಗೆಂದೆಲ್ಲಿ ಪೊಕ್ಕಿರ್ದುದೋ (ಗದಾಯು. ೩-೫೬). ೨. ಗಂಭೀರವಾದ ನುಡಿ ; ತೂಕದ ಮಾತು : ಭೂತಳದೊಳರ್ಥವಿಹೀನನ ಶೌಚಮುಮ್ಮ ಪೆರ್ಮಾತುಕುಲಂ ನೆಗಟ್ಟಿಯಿನಿತುಂ ವಿಫಲಂ (ಕಾವ್ಯಾವ. ೫೩). ೩. ಕೀರ್ತಿ ; ಪ್ರಸಿದ್ಧಿ : ಆತನ ಸಿರಿಯುಂ ಪೇಟಿಟ್ಟೊಡೆ ಭೂತಳದೊಳ್ ರೂಢಿವೆತ್ತ ಧನದಂಗಂ ಪೆರ್ಮಾತಿನ ದೇವೇಂದ್ರಂಗಂ ಮಾತೇಂ ಒಗೆಪಂದು ನಾಲ್ವೆರಲ್ ತಾಂ ಪಿರಿಯಂ (ಧರ್ಮಾಮ್ಮ. ೬-೦೧). **ಹೆಮ್ಮಾತು :** ೪. ಒಳ್ಳೆಯ ಅಭಿಪ್ರಾಯದ ಮಾತು : ಅಪರ ಬಾಯಿಗೆ ಲೋಕೋಪಕಾರದ ಹೆಮ್ಮಾತುಗಳು ಬರಲಾಗವು (ಜಾರುಧಾ. ೨೫೦). [ಪೆರ್ (<ಪಿರಿದು$_{1}$) + ಮಾತು$_{1}$]

**ಪೆರ್ವಾರುವ** 'ಪೆರ್ವಾರ್ವ' ನೋ.

**ಪೆರ್ವಾರ್ವ, ಪೆರ್ಬಾರವ, ಪೆರ್ಬಾರ್ವ, ಪೆರ್ವಾರುವ, ಹೆಬಾರ, ಹೆಬಾರು, ಹೆಬಾರುವ, ಹೆಬ್ಬಾರ, ಹೆಬ್ಬಾರು, ಹೆಬ್ಬಾರುವ, ಹೆರ್ವಾರುವ** (ನಾ). ೧. ಬ್ರಾಹ್ಮಣರಲ್ಲಿ ಶ್ರೇಷ್ಠನಾದವನು ; ಬ್ರಾಹ್ಮಣರ ಮುಖಂಡ : ಅಲ್ಲಿಯ ಪೆರ್ವ್ವಾರ್ವ್ವರ್ವಾಸುದೇವಭಟ್ಟರ್ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಪ್ರಾಆ. ೧೯೨೫, ೬೮-೦೬; 1060); ಜಾತಿಶಪಥಂಗೊಣ್ಡೂರ ಪೆರ್ವ್ವಾರ್ವ್ವರಂ ಸೊಡರುಂ ಜೀವಿತವಗ್ಗರ್ವಮುಂ ಗಡುಗೆಯುಂ ನೈವೇದ್ಯಮುಂ × × × ಬಡಪಟ್ಟಗ್ಗರ್ ತಪಸ್ವಿಗಳ್ಗೆ ತಿರಿವಗ್ಗಾರ್ಹಾರದಾನಂಗಳಂ ನಡವಂತಾಗಿರೆ (ಎಕ. VI, ಕಡೂರು. ೫೦-೬೦; 1169). **ಪೆರ್ಬಾರವ :** ೧. ಓರೋರ್ವರೋರ್ವರು ಮೇಲೆ ಬಿದ್ದಲ್ಲಿ ಪೆರ್ಬಾರವನ ಮಗನೋರ್ವ ತೀರಲನುಸಂಧಾನಕಾರಣದಿ ಬಾಯಾಟೆ ಬಸವನೇ ಕೊಂದನವಿಧಾಯೆಂದು ಮೊಟೆಯಿಡಲ್ಕೆ (ಸಿಂಗಿರಾ. ೫-೯೨). **ಪೆರ್ಬಾರ್ವ :** ೧. ತಾಗರಚೆಯುಪೂರೊಡೆಯ ಅರಸಿಮಯ್ಯನ ಮಗಂ ಪೆರ್ಬ್ಬಾರ್ವ್ವ ಮಾಧವೈಯ್ಯನ ದೇಗುಲದ ನಾರಾಯಣದೇವರ್ಗ್ಗೆ ದೇವಭೋಗಕ್ಕೆ ಧಾರಾಪೂರ್ಬ್ಬಕದಿಂ . . . ಕೊಟ್ಟಂ (ಎಕ. VII, ಶಿಕಾಂ. ೫೩-೨೩; 1027). **ಪೆರ್ವಾರುವ :** ೧. ಸಾಲಿಯೂರ × × × [ಪೆ]ರ್ವ್ವಾರುವ ಶ್ರೀ × × × ದೇವಾರಿಂಗೆ ಕಗೆಚೆಯ ಬಾಯಲೊಳಗೆ ನಿವೇದ್ಯಕೆ ಬಿಟ್ಟ ಗದೆ (ಪ್ರಾಆ. ೧೯೩೦, ೮೨-೦೯ ; 1122). **ಹೆಬಾರ :** ೧. ನಾರಣ ಹೆಬಾರ (ಸೌಇಇ. IX-ii, ೬೨೦-೩೮ ; 1546). **ಹೆಬಾರು :** ೧. ಶಿಲಾ ಶಾಸನದ ಕ್ರಮವೆಂತೆಂದರೆ × × × ದಲ್ಲಿಯ ಸರಸ ಹೆಬಾರು × × × ದ ಮಯ್ಯಾರ್ದೆಯಲು (ಎಕ. VI, ಶೃಂಗೇರಿ. ೩೩-೦೯; 1418). **ಹೆಬಾರುವ :** ೧. ಮಳಲೂರ ಅವಣ್ಣಹೆಬಾರುವ ಮಳಲೂರ ಜನರುಗಳಿಗೆ ಕೊಟ್ಟ ಶಿಲಾಶಾಸನಕ್ರಮವೆಂತೆಂದರೆ (ಎಕ. IX, ಕನ್ನಕ. ೯೩-೭ ; 1572). **ಹೆಬ್ಬಾರ :** ೧. ಮುಡಲು [ಹು]ರಿದ ಹೊಳೆ ತೆಂಕಲು ಕುಂಞಣ ಹೆಬ್ಬಾರನ ಮಕ್ಕಳ ಉತ್ರಿ (ಕಇ. I , ೫೫-೦೭ ; 1438) ; ಆನೆಕೆರೆ ಭಾರದ್ವಾಜಗೋತ್ರದ ... ಅಪ್ಪಾಜಿ ಹೆಬ್ಬಾರ ಪುತ್ರನಿಲಯಪ್ಪ ಹೆಬ್ಬಾರ ಮಗ ವೆಂಕ್ಯಯನು ಪಟ್ಟಸ್ತ ಪುದಿವಟ್ಟು (ಎಕ. V, ಬೇಲೂರು. ೨೭-೪ ; 1707). ೨. ವೈಷ್ಣವ ಮತ್ತು ಶ್ರೀವೈಷ್ಣವರಲ್ಲಿ ಒಂದೊಂದು ಒಳಪಂಗಡ ಮತ್ತು ಆ ಪಂಗಡಗಳಿಗೆ ಸೇರಿದವರು : ಅಹಿಚ್ಛತ್ರದ ಬ್ರಾಹ್ಮಣರು . . . ಹೆಬ್ಬಾರ, ವೈಯ, ಕಾರಂತ (ಕುಳಯಾ. ೦೯೦). **ಹೆಬ್ಬಾರು :** ೧. ಹೆಬ್ಬಾರು ಚಂನಪ್ಪನವರು (ಎಕ. XVI, ಶಿಕ್ಷಾ. ೯೦-೩೩; 1802). **ಹೆಬ್ಬಾರುವ :** ೧. ಪೆರಿಯಾಣ್ಣ ಹೆಬ್ಬಾರುವ ಪ್ರಮುಖವಾದಶೇಷಮಹಾಜನಂಗಳು (ಎಕ. VII, ಹೊನ್ನಾ. ೯೦-೩೫ ; 1185 ?) ; ಬಿಟ್ಟಿಯ ಹೆಬ್ಬಾರುವ ನಾಳು (ಪ್ರಾಆ. ೧೯೨೯, ೭೩-೬; 1216). ೨. ನಡುವೆ ಹೆಬ್ಬಾರುವರ ಮಹಾಜನಂಗಳ ಗುಡಿವಾಡ (ಕೋಲಾಶಾಂ. ೩೦-೦೬); ಕೂಡಲೂರ ಅಶೇಷಹೆಬ್ಬಾರುವ ಮಹಾಜನಂಗಳು (ಎಕ. IX, ಕನ್ನಕ. ೧೫೫-೦೯; 1534); ತನ್ನ ಕಡೆಯ ದೊಡ್ಡ ಹೆಬ್ಬಾರುವನಿಗೆ ಸ್ವಾಧೀನ ಮಾಡಿ (ಕನ್ನಿ. ೨೨೦-೦೬). **ಹೆರ್ವಾರುವ :** ೧. ಹೆರ್ವ್ವಾರುವ ಚವುಂಡಮಯ್ಯನುಂ ದೇವಪಯ್ಯನುಂ ಹರಳುಗುಣಿಗನ ಮತ್ತ ೨ (ಸೌಇಇ. IX-i, ೦೬೫-೫೦ ; 1099); ಹೆರ್ವ್ವಾರುವ ಚಿಣಿಯ ಹರಿಮಯ್ಯ (ಪ್ರಾಆ. ೧೯೩೦, ೮೩-೦೦; 1128).

[ಪೆರ್ (< ಪಿರಿದು$_{1}$) + ಪಾರ್ವ]

**ಪೆರ್ವಾವು, ಪೆಬ್ಬಾವು, ಪೆರ್ಬಾವು, ಹೆಬ್ಬಾವು** (ನಾ). ೧. ದೊಡ್ಡ ಗಾತ್ರದ ಹಾಗೂ ಬಹಳ ಉದ್ದವಿರುವ ಒಂದು ಬಗೆಯ ಹಾವು; ಅಜಗರ : "ತ್ರಿಲಿಂಗಃ . . . ಅಜಗರಃ, ಶಯುಃ— ಈ ೫ ಪೆರ್ವಾವು (ಹೆಬ್ಬಾವು)" (ಹಲಾಯು. ೦೦೬-೨೦) ; ಆರ್ತಧ್ಯಾನದಿಂ ಸತ್ತು ಪೆರ್ವಾವಾಗಿ ಪುಟ್ಟಿದೊಡೆ (ಶಬ್ದಾರಾ. ೦೪೦-೨೩) ; ಉರ್ವೀನಾಥರವೇಕರುಂ ಮಡಗಿ

ಭಂಡಾರಂಗಳಂ ಲೋಭದಿಂ ಪೆರ್ವಾವಾಗಿ ಪಿಶಾಚರಾಗಿ ಪಲಕಾಲಂ ಕಾದು ಕೊಂಡಿರ್ದರ್ (ಶಂಗಾಪು. ೬-೦೩೩). ೨. ಆದಿಶೇಷ : ಇಂಗಡಲೆಡೆಯ ಪೆರ್ವಾವಿನ ಹೆಡೆಯ ರತ್ನಂಗಳ ಬೆಳ್ಪುಗಳಿನಲಿ ಕಂಗೊಳಿಸುವ ವಾಸು ದೇವನ ಶ್ರೀಚರಣಂಗಳ ಸನ್ನುತಿಸಿದನು (ಕೋಪಚ. ೩-೯). **ಪೆರ್ಬಾವು** : ೨. ಸಮ್ಮೊಬಸನಂಬೊದೆದ ಕತ್ತಲೆವೆಸರ್ವಡೆದನಂ ಕೊಂದ ಬಗೆಯೊ ಳೊಗೆದನನೆನೆತಲೆಯೋರ್ವನೊಡನಾಡಿಗಿತ್ತುರು ತೂಣನಂ ತುಳಿದ ಪೆರ್ಬ್ಬಾವಿ ನೆಂಜಲುಂಡ (ಶಂದಿಪು. ೨೦-೩೩). **ಪೆರ್ಬಾವು** : ೧. ಅಂತಿರುಳ್ ನಾಲ್ಕುಂ ಜಾವಮುಂ ವಣಿಹೂರ್ತಿಕನಂತೆ ಪೊತ್ತಿನಳವಿಯುಂ ನೋಡುತ್ತುಂ ಪೆರ್ಬಾವಿನಂತೆ ಮಂಡಲಂಗೊಳ್ಳುತ್ತುಂ ... ಕಣ್ಣೋಳೆ ಬೆಳಗಾಗೆ (ರಡಾಕ್ಷು. ೦-೦೬೦); ಈವರ್ವರು ಒಲಿದು ಭಂಡಿಯನೇಱಿ ಪೋಪಾ ಬಳಿಯಲಿರೆ ಪೆರ್ಬಾವು ಕಾಣುತ (ಜಾಳ್ಳಭಾ.೨೦-೯೩). **ಹೆಬ್ಬಾವು** : ೧. "ಅಜಗರಃ ಶಯುಃ, ವಾಹಸಃ —ಈ ೩ ಹೆಬ್ಬಾವಿನ ಹೆಸರು" (ಚಾಶಾ. ೯೩); ಹಸಿವೆಬ ಹೆಬ್ಬಾವು ಬಸಿಱ ಬಂದು ಹಿಡಿದಡೆ ವಿಷವೇಱುತ್ತಯ್ಯ (ಬೇದಾಶ. ೦೬-೨೩); ಹೊಗ್ಯ ಹೆಬ್ಬಾವಿನ ಬಸುಱ ಸೀಳಿಕ್ಕಿದನೆ (ಕುಪ್ಪಾಕ. ೦೦-೦೯); ಒಲೆಯು ಮಱ ಕಿಡೆದಂತೆ ಹೆಬ್ಬಾವುಗಳೀಳುತುರುಳುತಿದ್ದುವಾಗ (ಜಕಶ. ೨೦-೯೦).

[ಪೆರ್ (< ಪಿರಿದು₁) + ಪಾವು₁]

**ಪೆರ್ವಾಳ್**, ಪೆರ್ಬಾಳ್, (ನಾ). ನಿಡಿದಾದ ಕತ್ತಿ; ಉದ್ದವಾದ ಖಡ್ಗ : ಪೆರ್ವರಂ, ಪೆರ್ವಾಳ್ (ಚಾಚಾಪು. ೦೬೭ ಶ್ರ ಯೋ). **ಪೆರ್ಬಾಳ್**, : ಚಕ್ರ ಪರಶು ಪಿಂಡಿವಳು ಪೆರ್ಬಾಳು (ಶೀರೇಶ. ೨-೩೦).

[ಪೆರ್ (< ಪಿರಿದು₁) + ಬಾಳ್₂]

**ಪೆರ್ವಿಡಿ**, ಪೆರ್ಬಿಡಿ (ನಾ). ದೊಡ್ಡ ಹೆಜ್ಜಾನೆ : ವಿಚಿತ್ರಾತಪತ್ರವ್ರಜಂ ಪೆರ್ವ್ವಿಡಿ ಸೌಧಂ ಚಿತ್ರದಣ್ಡಂ (ಎಕ. XIII, ೩೩೦-೦೩; ೯೨೧); ಏಱಿದ ಪೊನ್ನ ಪಣ್ಣುಗೆಯ ಪೆರ್ವಿಡಿ ಕಟ್ಟದಿರಾಗೆ (ಶಂಶಭಾ. ೯-೦೦೦); ವಾಜಿ ಪೆರ್ವಿಡಿ ಪೇರಾನೆ ಸುಖಾಸನಂ ತಂಬುಗೆ (ಶುಬ್ಲಶು. ೩-೭೭). **ಪೆರ್ಬಿಡಿ** : ಪೊಸವಮದದಾನೆಯಂ ನಸೆಯ ಪೆರ್ಬಿಡಿ . . . ಪೊರ್ದಿ ಶೋಭಿಸುಪಪೊಲ್ (ಚಾಂತಿಪು. ೬-೨೯).  [ಪೆರ್ (< ಪಿರಿದು₁) + ಪಿಡಿ₂]

**ಪೆರ್ವಿದಿರ್**, **ಪೆರ್ಬಿದಿರ್**, **ಪೆರ್ವಿದಿರಂ**, **ಹೆಬ್ಬಿದರಂ**, **ಹೆಬ್ಬಿದಱು**, **ಹೆಬ್ಬಿದಿರ್**, **ಹೆಬ್ಬಿದಿರು** (ನಾ). ಎತ್ತರವಾಗಿ ಹಾಗು ದಟ್ಟವಾಗಿ ಬೆಳೆಯುವ ಒಂದು ಬಗೆಯ ದೊಡ್ಡ ಜಾತಿಯ ಬಿದಿರು : ನಟ್ಟ ಕೂರ್ಗಣೆಯ ದಿಕ್ಕೋಱೆಯಿಂದೆ ಬಟ್ಟಲ್ದನುರ್ವಿ ಪೆರ್ವಿದಿ [ಪಾಠಾಂ. ದ]ರ ಸಿಡಿಂಬಿನೊಳ್ ಪುದಿದದೊಂದು ಕುಳಾಚಳದಂತೆ ಸಿಂಧುಜಂ (ಶಂಶಭಾ. ೦೦-೯೩); ತನಿಗಂಪಿನ ಬಟ್ಟವಲ್ಲಿಯಿಂ ಜನಾರ್ದನಂ ಭೃಂಗದಂತೆ ಸುಮನೋರಾಗಂ ಜನಿಯಿಸೆ ತಮಾಲಪಲ್ಲವತನುರುಚಿ ಪೆರ್ವಿದಿರ ಪೊದಱನಂದ್ಯೆತಂದಂ (ಶಂಗಾಪು. ೯-೦೯). **ಪೆರ್ಬಿದಿರ್** : ಕರ್ಬಿರಲು ಪೆರ್ಬಿದಿರ ಕಡಿವುತಿರ್ದಂ ದೇವ (ಜಾಗೀಶ. ೮೮-೨೩೦-೦೩); ಬರುತ ದಾರಿಯೊಳೀಡಿಱಿವ ಪೆರ್ಬಿದಿರ ಮೆಳೆಯಲಿ ರೂಢಿ ಗುರುವಿನ ಸುತರನಱಿಯದೆ (ಸಂಶಕ. ೨೩-೯): ಏಸೆದುದಾ ಗಿರಿ . . . ಬೆಸಲಾದ ಪೆರ್ಬಿದಿ[ಪಾಠಾಂ. ದ]ರ ಕಾಡುಗಳ ಬೀಡುಗಳ ಶಬರಿಯರ ಸಂಕುಲದೊಳು (ಕ್ಮಬಿಶಾ. ೦೦-೩). **ಪೆರ್ವಿದಿರು** : ಬಿಡದೆ ಜಟ್ಟಿಗಳೆಲ್ಲರುಂ ಸುಗಡದೆ ತೋಳ್ಗಳನೊದಱಿಸಲು ಕಿಚ್ಚಡಸಿತೊ ಪೆರ್ವಿದಿರ ಮೆಳೆಗೆನೆ ಪರ್ವಿತಾ ರವವು (ಜಾಳ್ಮಭಾ. ೨೨-೬೯). **ಹೆಬ್ಬಿದರು** : ಹೆಬ್ಬಿದರು ಕಿರುಬಿದರು . . . ಹುಣಸೆಯು . . . ಎಡೆಯಡೆಗೆ ಹಾ ಭಾವಿ ಕೆರೆಯಿಹವಲ್ಲಿ (ಗುಂಡುಚು. ೦-೬೮). △ **ಹೆಬ್ಬಿದಱು** : ಮೂಡ ಹೆಬ್ಬಿದಱು ಅಲ್ಲಿ ಪೂ ××× ಮೂಡಣಕಿನರಲು ಅಲ್ಲಿ ×××ಡ್ಡೆಯ ಕಲ್ಲಱದು (ಎಕ. VII, ಶಿಕಾಪು. ೬೯-೦೦೦ ; 111೩). **ಹೆಬ್ಬಿದಿರ್** : ಎಚ್ಚೊಡುಚ್ಚಳಿಸಿದ ಬಾಳ ಹೆಬ್ಬಿದಿರ್ಗಳ ಕೊಚ್ಚಲು ಪಸಾಕ್ತಿ ಭಟರ್ಗೆ ಮೆಚ್ಚಿಕೊಟ್ಟಂತೆ ಮುತ್ತುಗಳು ದುರಿತು (ಕೋಪಚ. ೦೯-೨೩). **ಹೆಬ್ಬಿದಿರು** : " ವಾಶನೀಯಃ — ಹೆಬ್ಬಿದಿರು" (೬೪೦. ೦೩೦) ; ಹಿಳಿದುರಿವ ಹೆಬ್ಬಿದಿರ ಗಂಟಿನ ಠಳಠಳತ್ಕಾರದಿ ದಿಶಾವಂಡ ಳದ ಮೂಲೆಗಳೊಡೆದುವದ್ಭುತವಾಯ್ತು ವನದಹನ (ಕುಪ್ಪಾಕ. ೨೦-೩೬); ಬಿದಿರ ಮೆಳೆ ಧಗಧಗಿಸೆ ಘನ ಹೆಬ್ಬಿದಿರು ಛಟಛಟರೆನಲು . . . ಪಕ್ಷಿಸಂಕುಲ ವುದುರಿದುವು ಗಜಸಹಿತ ಬೆಂದುವು ವನದ ಮಧ್ಯದಲಿ (ಜಳಚ. ೬-೬); ನೇಱಲು ಹೆಬ್ಬಿದಿರುಗಳು ಕಾರಾಚ ಕಗ್ಗಲಿ ಕಂಟಿವಾಳದ ಮರ ಸೂರ ವರ್ಗವ ತಡೆಡಿಹವು (ಕಂಶಪ. ೦೯-೩೭). [ಪೆರ್ (< ಪಿರಿದು₁) + ಬಿದಿರ್₂]

**ಪೆರ್ವಿದಿರು** 'ಪೆರ್ವಿದಿರ್' ನೋ.

**ಪೆರ್ವಿಲ್** (ನಾ). ದೊಡ್ಡ ಬಿಲ್ಲು,—ಧನುಸ್ಸು : ಸಗ್ಗಿಗಪೆಟ್ಟೋ ಪೆರ್ವಿಲ್ಲಾ ಸುಗಿಯಗ್ಗಳದೋಳ್ತಿರು (ಉದ್ಭರೀ. ೯-೬೬). [ಪೆರ್ (< ಪಿರಿದು₁) + ಬಿಲ್₂]

**ಪೆರ್ವಿಸಿಲ್**, ಪೆರ್ಬಿಸಿಲ್, ಹೆಬ್ಬಿಸಿಲು (ನಾ). ಹೆಚ್ಚಾದ ಬಿಸಿಲು; ಅತ್ಯಧಿಕವಾದ ಬಿಸಿಲು : ಪರ್ವಿದ ಬೆಟ್ಟ ಬೇಸಗೆಯ ಪೆರ್ವಿಸಲರ್ವಿಸೆ ಮೆಯ್ಯನೊಡ್ಡಿ ತಾಂ ನಿರ್ವಹಿಸಲ್ಕಮಾಱದೆ ಹಿಮಾಂಶುಕಳಾಳಿಯನೆತ್ತಿ ಪೊತ್ತನಾ ಶರ್ವಂ (ಬಾರಕ್ಷ. ೯-೮೦). **ಪೆರ್ಬಿಸಿಲ್** : ಕೆಂಡಮಂ ಕಿಡಿಯನೊಡ ರ್ಚುತಿರ್ದನೆನಲುರ್ಬುವ ಪೆರ್ಬಿಸಿಲಿಂದೆ ತಾಪಮಂ ಪಡೆದು (ಪಶರವಾ. ೨-೨೩೦). **ಹೆಬ್ಬಿಸಿಲು** : ಹೆಬ್ಬಿಸಿಲ ಉಗುಳುವಂತಿಹುದು ಹೊತ್ತಾರೆ (ಕಂಪು. ೯೯-೩). [ಪೆರ್ (< ಪಿರಿದು₁) + ಬಿಸಿಲ್]

**ಪೆರ್ವೀಡೆ** (ನಾ). ದೊಡ್ಡ ಬಿರುಕು, —ಸೀಳು : ಕೆಱೆಗಳ ತೊಱೆಗಳ ಸರಸಿಗಳಱುನೀರಂ ಪೀರ್ದರ್ ಪೀರ್ದರ್ ನೆಱೆಯುದೆ ಧರೆ ಮುತ್ತಱಸಿ ಬಾಯ್ಬಿಟ್ಟ ತೆಱದಿಂ ನೆಱೆ ಪರ್ವಿದವಂದು ಬಿರಿದ ಪೆರ್ವೀಡೆಗಳಂ (ಬಾರಕ್ಷ. ೯-೮೦). [ಪೆರ್ (< ಪಿರಿದು₁) + ಬೀಡೆ₁ (< ಬೀಟ್₂)]

**ಪೆರ್ವೀದಿ** (ನಾ). ದೊಡ್ಡ ರಸ್ತೆ ; ರಾಜಮಾರ್ಗ : ಪೆರ್ವೀದಿಗಳಿಂ ನೇಸಱುಪಿರ್ವಡಗಲುದೆಸೆಯೊ . . . ಸೊಗಯಿಪುದು ಸಮವಸರಣ ವಿಲಾಸಂ (ಅಕಪು. ೬-೦೫). [ಪೆರ್ (< ಪಿರಿದು₁) + ಬೀದಿ]

**ಪೆರ್ವುತ್ತು**, ಪೆರ್ಬುತ್ತು (ನಾ). ದೊಡ್ಡ ಹುತ್ತ : ಬಡಗ್ಗೆ ಪೆರ್ವ್ವುತ್ತು ಅತ್ತಿಯಿಂನ್ ತೆಱಿಕ್ಕ ದಿಣ್ಣೆಯಿನ್ ಪಡುವಯ್ ನೋಡಿ ಪೋದ ಒಟ್ಟಿಯೊಳಲೆ ಪೆಟ್ಟನಂದಿ ಕೆಱೆಯ ಮೂಡ್ಡೆ ಕಡೆಗೋಡಿನ್ನಿ ಬಡಗ್ಗೆ ನಡದು (ಸ್ಮಇಅ. ೦೯೦೯. ೧೨-೦೯; 810). **ಪೆರ್ಬುತ್ತು** : ಕಪ್ಪೆಸುರಿಗೊಳಂ ತತಃ ಪೆರ್ಬ್ಬುತ್ತು ತತ ಆಲ್ದೊರೆ ತತೋ ಆಲ್ದೊಳ (ಎಕ. XI, ಚಾಪಪ. ೬೬-೬೨ ; ೬೮೩) ; ಪೆರ್ಬುತ್ತು ಧಾರುಣೀಧರವಾದುದ್ಯೆ (ಶೀಕ್ಮಪು. ೬-೩-೦).

[ಪೆರ್ (< ಪಿರಿದು₁) + ಪುತ್ತು₁]

**ಪೆರ್ವುರ್ಬು** (ನಾ). ಅತಿಶಯವಾದ ದಾನ,—ಕೊಡುಗೆ : ಪೆರ್ವುರ್ಬುಗೆಯ್ ' ಪರಾ.

[ಪೆರ್ (< ಪಿರಿದು₁) + ಪುರ್ಬು₄ (ಪ← ತಮಿ. ಪುರವು)]

**ಪೆರ್ವುರ್ಬುಗೆಯ್** (ಕ್ರಿ). ಅತಿಶಯವಾದ ದಾನವನ್ನು ಮಾಡು : ಸೂರ್ಯ್ಯಗ್ರಹಣದನ್ದು ದತ್ತೆಯ್ಯನುಂ ಶಿಂಕಯ್ಯನುಂ ಪೆರ್ವ್ವುರ್ಬ್ಬುಗೆಯ್ಕೆ ತಾಗರತ್ತಿಯ ಮಹಾಜನಕ್ಕೆ ಪೊನ್ನಬ್ಬೆ ಪೊನ್ನ ಕೊಟ್ಟು ಸಾಲೆ ನೀಡೆನ್ದು ಮತ್ತಲಂ ಕೊಣ್ಡು ಕೊಟ್ಟ× (ಎಕ. VII, ಶಿಕಾಪು. ೬೦-೩ ; 978).

[ಪೆರ್ವುರ್ಬು + ಕೆಯ್₁]

**ಪೆರ್ವುಲಿ**, ಪೆರ್ಬುಲಿ, ಹೆಬ್ಬುಲಿ₁ (ನಾ). ದೊಡ್ಡ ಗಾತ್ರದ ಹುಲಿ ; ಮಹಾವ್ಯಾಘ್ರ : ಮುಱಿದುಱದಿಂದ ಪೆರ್ವ್ವುಲಿಯ ವಿಸಾಸೆ ಯೊಳುಯ್ಯಲಾಡುವೊಂದು (ಕೋಪಶಾ. ೦೯೩೬, ಹಾಸಗೆ. ೬೯-೩೬ ; ೧). **ಪೆರ್ಬುಲಿ** : ಆ ಪರ್ವತದ ಗುಹೆಯೊಳೊಂದು ಪೆರ್ಬುಲಿಯಿರ್ದುದು (ಪಶ್ಮಾರಾ. ೦೯೬-೮೦) ; ಕುರಂಗಯೂಥದೊಳ್ ಬೆರಸಿದುದೆಂದು ಪೆರ್ಬುಲಿ ಗಳಿಂದ್ರತನೂಜತಪಃಪ್ರಭಾವದಿಂ (ಶಂಗಶಾ. ೬-೮೦) ; ಕಲಿತನದಿಂದಂ ಲೋಗರ್ ಪುಲಿಯಂ ಪಿಡಿದೊಡಮಾದೇಂ ಬಿಡೆಂಬರ್ತಾನೊಂದಿಲಿಯಂ ಪಿಡಿದೊಡಮದು ಪೆರ್ಬುಲಿಯೆಂಬರ್ದುರ್ಜನರ್ಗೆ ತಾನಿದು ಸಹಜಂ

(ದರ್ಶನವ್ಯ. ೧-೦೭೩). ಹೆಬ್ಬುಲಿ : ನಿಲಿಸಬಹುದಯ್ಯ ಒಂದೇ ಮಾತ್ರದಿಂದ ಹೆಬ್ಬುಲಿಯ (ಶತರ. ೪೦-೦೫೮) ; ಮುನಿ ಹೊಯ್ಕೊಂಡಡೆ ಹೊಯ್ದು ಹೆಬ್ಬುಲಿಯಸಾವಂ ತತ್ಸಳಂ ಹೊಯ್ಸಳಂ (ಎಕ. VI, ಕಡೂರು. ೦೯೩-೩ ; 1275) ; ಹಸಿದ ಹೆಬ್ಬುಲಿ ಮಸಗಿದರೆ ಮೃಗದಿಸರವೇನಹುದದರಸ (ಕುಮಾ.ರಾಮ. ೧೭-೨೭) ; ಬೆಳೆದ ಹೆಬ್ಬುಲಿಯೊಂದು ಮೇವ ದನಕರುಗಳಂ ಕೊಲ್ಲುತಿರ್ಪುದು (ಕಾಂಚಿ. ೭೯-೦೯೬). [ಪೆರ್ (<ಪಿರಿದು$_1$) + ಪುಲಿ]

**ಪೆರ್ವೆಟ್ಟು** 'ಪೆರ್ವೆಟ್ಟ' ನೋ.

**ಪೆರ್ವೆಡೆ, ಪೆರ್ಬೆಡೆ, ಹೆಬ್ಬೆಡೆ** (ನಾ). ಹಾವಿನ ಅಗಲವಾದ ಹೆಡೆ.-ದೊಡ್ಡ ಹೆಡೆ: ಬಲಭರದಿಂ ನೆಲಂ ಕುಸಿಯೆ ಶೇಷನ ಪೆರ್ವೆಡೆ ತರ್ಗಿ ಕಂಠ ಕಂಧರದೊಳಗಬ್ಬುಡಂಗಿದುದು (ಧರ್ಮಪು. ೫-೭೬). **ಪೆರ್ಬೆಡೆ :** ಕಣ್ ತುಮುಬ್ ಪೆರ್ಬೆಡೆಯುಂ ಮಣಿ ಸೂಸೆ ಬೇಸಜ್ಞಂ ತಿಣುಕಿದ ನಾನಲುಮ್ಮಳಿಸಿ ಶೇಷನಶೇಷಮಹೀವಿಭಾಗಮಂ (ಶಂಶಭ. ೯-೯೯). **ಹೆಬ್ಬೆಡೆ :** ಅದೆ ಕಾಣ್ ಅದೊ . . . ಪಿರಿನಾಗನ ಹೆಬ್ಬೆಡೆ ಹರಹು (ರಾಜಶೇಖ. ೨-೨೩).

[ಪೆರ್ (<ಪಿರಿದು$_1$) + ಪೆಡೆ]

**ಪೆರ್ವೆಣ, ಪೆರ್ಬೆಣ** (ನಾ). ದೊಡ್ಡಗಾತ್ರದ ಹೆಣ ; ದಡಿಗವೆಣ : ರಕ್ತವಾರಿ ಬೆದೆಗೊಡಿಸೆ ಸುಲಿಪೆ ಪೆರ್ವೆಣಂ ರಣಾವನಿತಲವಿದುರ್ದಂಕುರಿತ ಮಾದವೊಲೊಕ್ಕ ಕರುಳ್ವಿಣಲ್ಲಳಿಂ (ಶಂಶಭಪು. ೦೩-೪೯); ಮಾಂ ತಳರ್ದ ಭಟರನಜ್ಜಿಯಟ್ಟುತುಂ ಕುಟ್ಟುತುಂ ಪೆಟ್ಟುತುಂ ಪೆರ್ವೆಣನಸು . . . ಭ್ರಾಂತಿಬಡಿಸಿದರು (ಶಪು. ೨೪-೦೦) ; ಪಾಸಿ ಪಸರಿಸಿದಂತೆ ಬಿದ್ದ ಪೆರ್ವೆಣಂಗಳಿಂದತಿಭಯಾವಹವಾದ ಬಟ್ಟೆಯಂ ನಿಟ್ಟಿಸುತ್ತಿರೆ (ರಾಜಶೇ. ೫-೦೨೦ ಟ). **ಪೆರ್ಬೆಣ :** ಜವನುಣ್ಣಾಯ್ಮನೆ ಕಾಜೀದನ್ತೆ ಪೆರ್ಬೆಣದ ಬಳಂಬೆ ಪೆಗ್ಗರುಳ ತಿನ್ಸಿನೆ ನೆತ್ತರ ಪೆರ್ಬೊನಲು (ಎಕ. VIII, ಸೊರಬ. ೦೨-೭: 1155 ?).

[ಪೆರ್ (<ಪಿರಿದು$_1$) + ಪೆಣ]

**ಪೆರ್ವೆರಲ್, ಹೆಬ್ಬೆರಳು** (ನಾ). ಕೈ ಮತ್ತು ಕಾಲುಗಳಲ್ಲಿರುವ ದಪ್ಪಗಿರುವ ಮೊದಲನೆಯ ಬೆರಳು ; ಹೆಬ್ಬೆಟ್ಟು : ಅತಿವೃದ್ಧನಿಮ್ನಸ್ನಿಗ್ಧಾಯತರೇಖಾಶ್ರಿತಯುಪ್ರಾಗೆ ಕರತಳದೊಳ್ ಸನ್ನುತದಿನಸರಿಗಂಜಿ ಬೆಳ್ವಿಡಿದು ತೋಜೆ ಪೆರ್ವೆರಲೊಳಾತನುತ್ತಮಪುರುಷ: (ಲೋಕೋಪ. ೦೦-೦೩); ಬಲದ ನಾಸಾಪುಟವನೊತ್ತಿ ಪೆರ್ವೆರಲಿಂದೊಡಲ ಮರುತನಂ ರಚಿಸಿದೊಡೆ ರೇಚಕಮದಕ್ಕುಂ (ರಾಶಕ. ೦೨-೭೮). **ಹೆಬ್ಬೆರಳು :** "ಅಂಗುಷ್ಠ:-ಹೆಬ್ಬೆರಳು" (ಸಿದ್ಧಾಂತ. ೦೯೩); ಹಿಂಡುಶಿಷ್ಯರೊಳಧಿಕ ನೀನೇ ಗಂಡುಗಲಿ ನಮಗೀಗ ಕೊಡು ಕೊಡು ನಿನ್ನ ಹೆಬ್ಬೆರಳ (ಸಂಶಕ. ೦೭-೦೨೪) ; ಏನೆಂಬೆ ನಿನ್ನ ಬಲಗೆಯ್ಯ ಹೆಬ್ಬೆರಳನೀ ಎನೆ ಕಂದ ? (ಜೈಮಿ. ೩೧ ೦೦೬).

[ಪೆರ್ (<ಪಿರಿದು$_1$) + ಬೆರಲ್]

**ಪೆರ್ವೆಲೆ, ಪೆರ್ಬೆಲೆ** (ನಾ). ಅಧಿಕ ಬೆಲೆ; ದೊಡ್ಡ ಮೌಲ್ಯ : ಪಾರ್ವರ್ ಪಟಿನುಡಿವುರುಳಂ ಪೆರ್ವೆಲೆಯುಂ ಪರದರ್ . . . ಸಾರ್ವರ್ (ಅಕ್ರೂ. ೫೬-೩). **ಪೆರ್ಬೆಲೆ :** ಹುತ್ತಿನಿಂ ತೆಗೆದು ಬೆಲ್ವೆತ್ತಾಭರಣವ ಮಾಡಿತ್ತು ಪೆರ್ಬೆಲೆಗೊಂಡು ಹರನ ಭಕ್ತರ್ಗೆ ಕೊಟ್ಟು (ಶೈವರ. ೪-೦೦೪).

[ಪೆರ್ (<ಪಿರಿದು$_1$) + ಬೆಲೆ$_1$]

**ಪೆರ್ವೆಸರ್** (ನಾ). ಬಹಳ ಒಳ್ಳೆಯ ಹೆಸರು ; ಅತಿಶಯವಾದ ಖ್ಯಾತಿ : ತಾನಮ್ಮತಮುಕಿಯೆಂಬ ಪೆರ್ವೆಸರವರ್ದಿರೆ ತನ್ನಹಿಪನುಹಿಳೆ ೀರದು ಸೆದಿರ್ದಳ್ (ರಾಜಶೇ. ೩-೦೨). [ಪೆರ್ (<ಪಿರಿದು$_1$) + ಪೆಸರ್]

**ಪೆರ್ವೆಳಗು, ಹೆಬ್ಬೆಳಕು** (ನಾ). ದೊಡ್ಡ ಬೆಳಕು: ತನುಪವನರ್ಪಿಪ ಸಮಯವಾಯಿತು . . . ಪೆರ್ವೆಳಗನಿಕ್ಕುವೆನು ಎನುತ ಬಿಟ್ಟಿದ ಕೂದಲು ದಿಕ್ಕನೆ ಕೃಶಾನುವಿಗೊಡ್ಡಿ (ಬಸವಪು. ೨೭-೬). **ಹೆಬ್ಬೆಳಕು :** ನಾಡು ಸಿಂಗರವಾಯ್ತು, ಬೀಡು ಹೆಬ್ಬೆಳಕಾಯ್ತು, ಅದೊ ಹಬ್ಬ ಮೆರೆತ ! (ಹೊಂಗಳು. ೦೯-೦೭).

[ಪೆರ್ (<ಪಿರಿದು$_1$) + ಬೆಳಗು$_1$]

**ಪೆರ್ವೆಳಸು, ಪೆರ್ಬೆಳಸು, ಹೆಬ್ಬೆಳಸು, ಹೆಬ್ಬೆಳಿಸು** (ನಾ). ೧. ಬಹಳ ಹುಲುಸಾದ ಬೆಳೆ; ಸರ್ವೋತ್ಕೃಷ್ಟವಾದ ಫಸಲು: ಮೇದಿನಿ ಪೆರ್ವೆಳಸಿಂ ಲಗ್ಗಾದವು ಬರೆ ತಾವು ತಮ್ಮ ಪರಿಣತಕಣಿಶಾವೋದದೊಳೆ ಸೊರ್ಕಿ ತಲೆಕೆಟಿಗಾದಂತಿರ್ಪುವು ಸುಗಂಧಶಾಲಿವನಂಗಳ್ (ಕಾಪು. ೩-೦೦) ; ಕೊಲೆಯ ತವರ್ವನೆ ದುರಿತದ ಪೆರ್ವೆಳಸು ಕಳವು ಬಗೆವೊಡೆ ಜಗದೊಳ್ (ದರ್ಶನವ್ಯ. ೦೨-೨೩೩ ಅ೨೮). **ಪೆರ್ಬೆಳಸು :** ೧. ಕಳವೆಯುಮೆಲೆಯಡಕೆ ತೆಂಗು ಮಾಉಫಲಂ . . . ಇವು ಪೆರ್ಬೆಳಸಡವಿಯ ಬೆಳಸು (ಎಕ. VIII, ಸಾಗರ. ೦೦೯-೧೮ : 1042) ; ಸಿತೇಕ್ಷುರಸಪ್ರವಾಹಪೂತ್ಕೃತವೆನೆ ಸಂತತಂ ಬೆಳೆಯೆ ಪೆರ್ಬೆಳಸಿಂ ಪುಸಿಯಾಯ್ತು ದೇವಮಾತೃಕಪೆಸರೆನ್ನದಾ ನೆಲದ ಕೆಯ್ವೊಲನು ಮೆಚಿತೇನನೆಂಬುದೋ (ಪಾರ್ಶ್ವಪು. ೨-೦೭). **ಹೆಬ್ಬೆಳಸು :** ೧. ತಲೆಪೊಲದೊಳ್ ಐದೆ ಬೀಜದ ನೆಲೆ ನೊಸಲ ಕಣ್ ಚೆಲುವ ಮುಖವೈದಲೆವ ಜೆಡೆ ದಶಭುಜವೆನಿಪ ಹೆಬ್ಬೆಳಸಬಯ್ಯರಟ (ಸಾಸಂತ. ೮-೩೩) ; ಒಬ್ಬೊಬ್ಬರಿದಿರಾಗಿ ಮೊನೆಮೊನೆಗಾಣಪರಬ್ಬಿ ಹಾಬುವರು ದಾಬುವರು ಒಬ್ಬುಳಿಗಡೆಯೆತ್ತಿ ನಡೆವರು ಜೋಳದ ಹೆಬ್ಬೆಳಸೆದ್ದುದೆಂಬಂತೆ (ದಶಕ. ೨೩-೨೭) ; ಬಿತ್ತದೆ ಬೆಳೆಯದೆ ಎತ್ತಣ ಹೆಬ್ಬೆಳಸಿನ ಇತ್ತ ರಾಶಿಯ ನೋಡಯ್ಯ (ಸಿದ್ಧಪು. ೨೭-೦೫). ೨. ಆಧಿಕ್ಯ ; ಹೆಚ್ಚಳ : ಉಬ್ಬಟೆಯಲಿದಿರಾಂತು ಕಾಲನ ಹೆಬ್ಬೆಳಸು ಹುಲುಸಾಯ್ತು ಬಿರಹೇಳೆಂಬವ್ರೋಲೊದಬು (ಕುಮಾ.ರಾ. ೯-೦೨) ; ಹಬೆದ ಕರುಳಿನ ಕಳೆಟಿನೆಲುವಿನ ಕುಣಿವ ಮುಂಡದ ಕೊಳುಗುಳದ ಹೆಬ್ಬೆಳಸು ಹೆಚ್ಚಿಸಿತಂತಕನ ಪುರವ (ಕುಮಾ.ರಾಮ. ೨-೬೬). **ಹೆಬ್ಬೆಳಿಸು :** ೧. ಕಾಲನ ಹರವರಿಯೊ ಹೆಬ್ಬೆಳಿಸ ಮುತ್ತುವ ವಿಹಗ ಸಂತತಿಯೊ (ಕುಮಾ.ರಾ. ೯-೦೫). [ಪೆರ್ (<ಪಿರಿದು$_1$) + ಬೆಳಸು$_2$]

**ಪೆರ್ವೇಂಟೆ** (ನಾ). ಬೇಟೆಯಲ್ಲಿ ಒಂದು ಬಗೆ ; ದೊಡ್ಡ ಪ್ರಾಣಿಗಳ ಬೇಟೆ (?) : ಬಳ್ಳಿಗು ಬಸನಕ್ಕಂ ಸವಿಯಪ್ಪ ಕಿಱುವೇಂಟೆಯುಂ ಪೆರ್ವೇಂಟೆಯುಮಲ್ಲಮಟಂದ ಬೇಂಟೆಯುಂ ಬೇಂಟೆಯನ್ನೆಂ (ಶಂಶಭ. ೫-೪೬ ಟ) ; ಬೇಂಟೆಗಳೊಳ್ ನಾನಾವಿಧ ಬೇಂಟೆಗಳೆನಿತೊಳವವೆಲ್ಲೊಡಂ ನೃಪತಿಗೆ ಪೆರ್ವೇಂಟೆ ಕಿಱುವೇಂಟೆಯಾ ಪರವೇಂಟೆಯೆನಲ್ ಮೂಱುವೇಂಟೆ ಪೆಸರ್ವಡೆ ದಿರ್ಕುಂ (ಸೂಕ್ತಿಸು. ೩-೯೫). 'ಕಿಱುವೇಂಟೆ' ಪರಾ.

[ಪೆರ್ (<ಪಿರಿದು$_1$) + ಬೇಂಟೆ]

**ಪೆರ್ವೇಲ್** (ನಾ). ಅಧಿಕವಾದ ಮಲ,-ಅಮೇಧ್ಯ : ಒಡಲಪ್ಪೊಡಕುಚಿ ನಿಲ್ಲದು ಪಡಿಕ ಕರಂ ಜಂತಿನಾಗರಂ ಪೆರ್ವೇಲಿರ್ಪೆಡೆ ಕ್ರಿಮಿಯ ರಾಶಿ (ದರ್ಶನವ್ಯ. ೬-೦೭೯). [ಪೆರ್ (< ಪಿರಿದು$_1$) + ಪೇಲ್$_2$]

**ಹೆರ್ವೈಕ್ರಿಕ** (ನಾ). ಅಧಿಕವಾದ ಮನೋವೈಕಲ್ಯ : ನಿನ್ನೀ ಮರುಳ್ಗೆಯ್ಯುದರ್ಪನಮುಕ್ಕುಂ ಬಗೆದಾ ವಿಮೋಹವಶದಿಂ ಪೆರ್ವೈಕ್ರಿ [ದಾಶಂ. ಪೆರ್ಬುಯ್ಯು]ಕಂಗೊಂಡೆಯುಂ ಜಿನವಾಕ್ಯಾಮೃತಸೇವೆಯುಂ ಕಿಡಿಸದಂ ಮೆಯ್ಯುಟ್ಟಿರಲ್ ಜೀವನೇ (ಜೀವಸಂ. ೭೭೨-೦೭).

[ಪೆರ್ (< ಪಿರಿದು$_1$) + ವೈಕ್ರಿಕ]

**ಪೆರ್ವೊಗರ್** (ನಾ). ಅಧಿಕವಾದ ಕಾಂತಿ ; ಉಜ್ವಲವಾದ ಪ್ರಕಾಶ : ಬೆಳ್ಳಿ ಸಾರಿದಲ್ ಪೆರ್ವೊಗರ ಕಡಲೊಡಲ ಪೊರ್ದಿ (ಕಾಂಚಿ. ೦೭೯-೯೨೩).

[ಪೆರ್ (< ಪಿರಿದು$_1$) + ಪೊಗರ್]

**ಪೆರ್ವೊಡೆಯ, ಪೆರ್ಬೊಡೆಯ** (ನಾ). ದೊಡ್ಡ ಹೊಟ್ಟೆಯುಳ್ಳವನು; ಲಂಬೋದರ ; ಗಣಪತಿ : " ಪೆರ್ವೊಡೆಯ-ದೊಡ್ಡಹೊಟ್ಟೆಯವ, ಗಣೇಶ" (ಗಂಗಾಸು. ೨೦೫). **ಪೆರ್ಬೊಡೆಯ :** " ಎಲರುಣಿವಸಿಱನೆಡರ್ಗೇಡಿ ಪೆರ್ಬೊಡೆಯ ಸುಂಡಿಲಿಮೊಗಂ . . . ಬಿಸುಗಣ್ಣಾಣುಗನು" (ಕಾವ್ಯಸು. ೫).

[ಪೆರ್ (< ಪಿರಿದು$_1$) + ಪೊಡ್ಡೆ + — ಅ$_2$]

**ಪೆರ್ವೊಣಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಮತ್ ನಾಗತರನ ಮನೆವಗತಿ ಪೆರ್ವೊಣಸೆಟ್ಟಿ ಬೆಳ್ಗುಳೂರ ಕಾಳೆಗದೊಳ್ ನಾಗತರನ

ಮುಗಮ್ಮ್ ಬಿಬ್ಬಣಪತಿ ಸತ್ತುವನ್ (ಎಕ. IX (8), ಬೆಂಗಳೂ. ೦೬೨-೩ ; ಸು. 850). [ಪೆರ್ವೊಣ, + ಸೆಟ್ಟಿ]

**ಪೆರ್ವೊದರು** ‘ ಪೆರ್ವೊದಱ್ ’ ನೋ.

**ಪೆರ್ವೊದಱ್,** ಪೆರ್ವೊದರು (ನಾ). ಒತ್ತಾಗಿ ಬೆಳೆದ ಪೊದೆ ; ದಟ್ಟವಾದ ಹೊದರು : ಒಣಗಿದುದೊಂದು ಪೆರ್ವಿದಿರ ಪೆರ್ವೊದಱಿಂ ಪೊಱಮಡುವುರ್ವಾಶುಶುಕ್ಷಣಿಯವೊಲ್ . . . ಅಭಿಮನ್ಯುವ ಕೂರ್ಗಣೆ ಪಾಯ್ದು ಮಂಗಲುಂ ನೊಣೆಯಲುಮಾರ್ಪ ಮುಕ್ಕಲುಮಿದೇಂ ನೆಱೆ ಕಲ್ತುವೊ ಯುದ್ಧರಂಗದೊಳ್ (ಪಂಪಭಾ. ೧೦-೯೯) ; ತಾ ಪಿಂಥವ ಪೆರ್ವೊದಱ ಕರಿ ಶಂಕೆಯಿಂ ಪಾಯ್ದುದಱೊಳ್ ಹರಿಪತ್ರಶಿ ಬಂಜೆವಡಿವುದು ಮಾಳಿಸಂ (ಶಂಪ್ರಕೃ. ೫-೫೦). **ಪೆರ್ವೊದರು :** ಓಟೆ ಮುಳ್ಳಿಡಿಗಳಂ ಪೆರ್ವೊದರುಗಳನಾಳಿದ ಬೇಟೆಯಾಟದಿ ಹುಲಿಯು ನೆಲೆಗಟ್ಟುದಿಲ್ಲಂ (ಕಾಲೂರ. ೫೦-೭೫೦). [ಪೆರ್ ( < ಪಿರಿದು$_{1}$ ) + ಪೊದಱ್ ]

**ಪೆರ್ವೊನಲ್,** ಪೆಬ್ಬೊನಲ್, ಪೆಬ್ಬೊನಲು (ನಾ). ತುಂಬಿದ ನೀರು ಇರುವ ನದಿ ; ದೊಡ್ಡ ನದಿ ; ಮಹಾನದಿ : ಭುವನಾಂತರವಂ ಸಿಂಚಿಸುವವೊಲಾಶಾವನಿತೆಯುರುಮನೋಲಾಡಿಸುವಂತೆವೊಳೆಸೆದರಂಗನೆಯ ರಾಣ್ಮುವ ನಿಜಲಾವಣ್ಯರಸದ ಪೆರ್ವೊನಲಿಂದಂ (ಕಾವ್ಯಾ. ೯೯೯); ಸಂನ್ಯಸನವಂ ಕೈಕೊಂಡ ಮಹಾಪುರುಷನ ಕರ್ಮಾ . . . ಪೆರ್ವೊನಲಿಂಗಿದಿರಾದ ಮಳಲೇರಿಯಂತೆ ಜರಿಗುಂ (ಧರ್ಮಾಮೃ. ೦೯-೦೦೨); ಮಂದಾಕಿನಿಯ ಪೆರ್ವೊನಲ್ ಗಿರಿಗೆ ಮೇಖಲೆಯಾಗಿ ಕಂದರದ ಸೀಮೆಯುಂ ಸಿಂಗರಿಸಿದತ್ತು (ಶ್ರೀಶಾಪು. ೦೯೦-೯೩೨). **ಪೆಬ್ಬೊನಲ್ :** ಕಾಂತಾಜನೋತ್ಕರರತ್ನಾಭರಣಪ್ರಭಾಪ್ರಸರವಾದಂ ಕಳ್ತು ತದ್ವೀಧಿಕಾಂತರದೊಳ್ ಪೆಬ್ಬೊನಲಂದದಿಂ ಪರಿಯೆ (ಕಾವ್ಯಾ. ೦೦೦೦) ; ಕಪಾಲದೋಳ್ ಬಾಟ್ಕಿಣಬೆಡೆ ಖಂಡದಿಂಡೆ ಬಿಸುನೆತ್ತರ ಪೆಬ್ಬೊನಲರ್ಬಿಸಲ್ಕೆ ಮಾರ್ಗಣಗಣಘಾತದಿಂ ತವಿಸಿದಂ ದಿವಿಜಾರಿ ವಿರೋಧಿಸೈನ್ಯಮಂ (ಜಗಂ. ೬-೯೯). **ಪೆಬ್ಬೊನಲು :** ಪೆಗ್ಗರುಳ ತಿನ್ನಣಿ ನೆತ್ತರ ಪೆಬ್ಬೊನಲು × × × ಳಿಪಿದನ್ (ಎಕ. VIII, ಸೊರಬ. ೦೨-೬ ; 1155 ?). [ಪೆರ್(<ಪಿರಿದು$_{1}$) + ಪೊನಲ್]

**ಪೆರ್ವೊಳೆ,** ಪೆಬ್ಬೊಳೆ (ನಾ). =ಪೆಬ್ಬೊನಲ್ : ಘುಳುಘುಳಿಸಿ ನೊರೆವೆಂಡು ಪಸರಿಸೆಯುಮಾ ಪೆರ್ವೊಳೆ ಪರಿಯುಡುಗದ ಸಿರಿಯನೊಳಕೊಂಡು ಭೂಮಂಡಳಕ್ಕೆ ಮಂಡನಮೆನಿಸಿ ರಂಜಿಸಿರ್ಪುದು (ರಾಜಶೇ. ೬-೨೯ ವ). **ಪೆಬ್ಬೊಳೆ :** ಕಳಿತ ರಸಾಲ ನೇಱಲವಣ್ಣಗಳ ಪಿಕಗಿಳಿ ಚಂಚುಪುಟದಿ ಕರ್ದಿಕಿ ತುಳುಕಿದ ಮಧುರಸ ಡಡಸೂಸೆ ಪರಿವ ಪೆಬ್ಬೊಳೆಯೆಸೆದುದನೀಕ್ಷಿಸಿದ (ಕೋಹಕ. ೫-೨೩), ಕೋರ್ಕೆಯ ಬಿತ್ತರು ಬಡೆದು ಬತ್ತಿತ್ತೆಂಬವೋಲಿರ್ದ ಪೆಬ್ಬೊಳೆ (ಕಾಕುಂತ. ೧೦೨-೦೭೦).

[ಪೆರ್ (<ಪಿರಿದು$_{1}$) + ಪೊಳೆ$_{3}$ (<ಪೊಱ$^{3}$)]

**ಪೆರ್ವೊಱೆ** (ನಾ). ಅಧಿಕವಾದ ಭಾರ, —ಹೊರೆ, —ಹೇರು : ಇನಿವಿರಿದನ್ವಯಕ್ಷಯದವಪಾದದ ಪೆರ್ವೊಱೆಯುಂ ಆನೊರ್ವಳೆನಗಂ ಪೊತ್ತು ನಿತ್ತರಿಸಲಾರ್ಪುದೆ (ಶಾಂತಿಪು. ೪-೬೯ ವ) ; ಅರ್ಥಮಂ ಸಾಗಿಸಿದನಿಭವುಂಗೆ ಪೆರ್ವೊಱೆಗಳಟ್ಟಣಿಸಲು (ಕೃಪಿರಾ. ೫-೬೨).

[ಪೆರ್ (<ಪಿರಿದು$_{1}$) + ಪೊಱೆ$^{3}$]

**ಪೆರ್ವೊಟಲ್,** ಪೆಬ್ಬೊಟಲ್, ಪೆಬ್ಬೊಳಲು, ಹೆಬ್ಬೊಳಲ್ (ನಾ). ೧. ಒಂದು ಊರಿನ ಹೆಸರು : ಪೆರ್ವೊಟಲ ಉಮ್ಮಾದಗಾಮುಣ್ಡರುಂ ಪಿಟ್ಟುವಿಗಾಮುಣ್ಡರುಂ . . . ಸಾಕ್ಷಿ (ಎಕ. IV, ಎಡತೊ. ೬೦-೬೧ ; ಸು. 890). **ಪೆಬ್ಬೊಟಲ್:** ೧. ಮುದುಕೊಟ್ಟೂರ ವಿಷಯೋ ಪೆಬ್ಬೊಟಲ್ ಗ್ರಾಮೋ (ಎಕ. X, ಶ್ರೀನಿವಾ. ೬೩-೦೮ ; ಸು. 870 ಕ್ರಿಶ). **ಪೆಬ್ಬೊಳಲು :** ೨. ದೊಡ್ಡ ನಗರ,—ಊರು : ಪುಲಿಯೂರೆನಿಪ್ಪ ಪೆಬ್ಬೊಳಲಿನಲ್ಲಿ ಅರನ ಮೆಚ್ಚಿಸಿ ಹೊನ್ನ ಮಳೆಯನೇಳುಂ ದಿವಸ ಕರೆಸಿದಳು . . . ನಂಬಿ (ಶಾಂಪಶ. ೦೦-೨೯). **ಹೆಬ್ಬೊಳಲ್ :** ೧. ಶ್ರೀಮತು ಹೆಬ್ಬೊಳಲ ಕೊಂಗಾಳೇಶ್ವರದೇವರಿಗೆ (ಎಕ. IV, ಕೃಷ್ಣರಾ. ೪೦-೧ ; 950 ?).

[ಪೆರ್ (<ಪಿರಿದು$_{1}$) + ಪೊೞಲ್]

**ಪೆರ್ಸಂಪಗೆ** (ನಾ). ದೊಡ್ಡ ಜಾತಿಯ ಸಂಪಿಗೆಹೂವುಗಳನ್ನು ಬಿಡುವ ಒಂದು ಬಗೆಯ ಮರ : ಗಂಪ ಷಟ್ಪದ ಜಾಲರಿಗೆ ಇಂಪಾದ ಸೌಗಂಧ ರುಚಿದೋಱದಾತೆ ಪೆರ್ಸಂಪಗೆ ಮರಗಳೊಪ್ಪಿದುವು (ಕೋಹಕ. ೨೪-೪೯)

[ಪೆರ್ (<ಪಿರಿದು$_{1}$) + ಸಂಪಗೆ]

**ಪೆಲ್ಲಣೆ,** ಪೆಲ್ಲವಣೆ, ಹೆಲ್ಲಣೆ$_{1}$, ಹೆಲ್ಲಣೆ$_{1}$, ಹೆಲ್ಲವಣೆ (ನಾ). ೧. ಕತ್ತಿಕಾಳಗದಲ್ಲಿ ಒಂದು ವರಸೆ ; ಖಡ್ಗಯುದ್ಧದಲ್ಲಿ ಒಂದು ಪಟ್ಟು : ರಕ್ಕಸಿ[ಸಿ]ಂದುವ × × × ಗಡ್ಡದೊಳೊಡ್ಡಿ ಗಡು[ಗಿ ಚಾವುಟ]ಹೊಕ್ಕತಿವೇಗದಿಂ ಕಡುಗ[ದಿಂ]ಗಿ ಪೊರಗ ಕಾಳೆವಟ್ಟದಿಂದಿಕ್ಕಿದ ಭೂರಣಂ ನೆಗಳ್ದ ಪೆಲ್ಲಣೆ ಸುತ×[ಣ]ಚಾರಣಗಳಿಂ ಮಿಕ್ಕಿರೆಸಪ ವೀರವಳಕಾಱ × × ಕಲಿಗೊಗ್ಗಭೂಭುಜಂ (ಸೌಇಇ. XV, ೫೯-೫೨ ; 1184). ೨. [ಸಂಗೀತ] ಕೊಳಲನ್ನು ನುಡಿಸುವುದರಲ್ಲಿ ಒಂದು ಕ್ರಮ : ಭಣಿತೆ ಬೆಡಂಗು ಕಾಕು . . . ಬಹುಲಾಯಿ ದೇಸೆ ಪೆಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗಂ. ೫-೩). **ಪೆಲ್ಲವಣೆ :** ೨. ವಾಸಮಂ ಪಿಡಿದು ಕಳೆಯ ಮಯಣಮನಪ್ಪಿಂ ಪವಣಾಗಿರೆ ಪತ್ತಿಸಿ ಪೊ[ಪೆ]ಲ್ಲವಣೆ ಕರಂ ಶುದ್ಧವಾಗೆ ಪೂಱಿಸಿ (ಧರ್ಮಾಕ. ೨ ೦೯). **ಹೆಲ್ಲಣೆ$_{1}$ :** ೨. ಕಿನ್ನರಂ ತನ್ನಯ ಸೊಳಹೆಯೆಂಬ ವಾಸಮಂ ಕೊಂಡು ಹೆಲ್ಲಣೆಯಂ ಸುದ್ಧವಾಗಿ ಪೂಱಿಸಿ . . . ಮಧ್ಯಮಾದಿಯೆಂಬಾದಿರಾಗಮಂ ರೂಹುಗೋಳಿಪುದುಂ (ಶಾಂತೀಶ್ವ. ೦೬-೬೬). **ಹೆಲ್ಲಣೆ$_{1}$ :** ೧. ಖಡ್ಗಂಗಳಂ ಜಡಿದು ಮೆಱೆವಾರ್ಪ ಸ್ವಪಕ್ಷ ಪರಪಕ್ಷ ಹೆಲ್ಲಣೆ ನಿರ್ವಾಣ ಮಂದಗತಿ ಚಾರಣ . . . ತಾಳದಟ್ಟವೆಂಬ ನಾನಾವಿಧಖಡ್ಗಬಿನ್ನಾಣಮಂ ತೋಱೆ (ತ್ರಿಪುರ. ೨೩-೦೬ ವ). ೨. ರಾಗಸಾಗರನೆಂಬ ವಾಸುಕಾರಂ ಭಾಸುರತೆವಡೆದ ಬಾರಹೆಯೆಂಬ ವಾಸಮಂ ಕಳೆದುಕೊಂಡು ಪೊಳೆವದಱ ರಸಂಗಳಿಂ ಪುಟ್ಟುವ ನಾದಲಕ್ಷ್ಮಿಯ ಮಾರ್ಗವೇದಿಕೆಯೆನಿಸಿ ಕಣ್ಗೊಳಿಸಿ ಕಳೆಯ ಮಯಣಮಂ ನುಣ್ಣಗೆ ತಿರ್ದಿ ಪೂಱಿಸಿ ಹೊ[ಹೆ]ಲ್ಲಣೆಯ ಶುದ್ಧಮಾಗಿ ಮುಹಚಾಳೆಯುಮುಮಾಡಿ (ಶಾಂತೀಶ್ವ. ೬-೯೩ ವ) ; ಹದಿನೆಂಟುತೆಱದ ವಾಸಂಗಳ ಲಕ್ಷಣವನಱಿದಾ . . . ಹೇಳಿಕೆ ಹೆಲ್ಲಣೆ ವ್ಯಾಪ್ತಿ ಮೊದಲಾದ ಇಪ್ಪತ್ತುನಾಲ್ಕು ತೆಱದಲ್ಲಿ . . . ಆಲಾಪಿಸಿ ಕೇಳಿಸುವ ಭಾಸುರತರವಾರವಿಲಾಸಿನಿಯರಿಂದ (ಪಶೇಕ. ೦೯೦). **ಹೆಲ್ಲವಣೆ :** ೨. ಅಧರದೊಳ್ತಂದಿರಿಸಿದಂ ಕೊಳಲನೊಪ್ಪದಿಂ ಮಧುರಾಕ್ಷರಂಗಳಂ ಸವಿವ ಸಮರಾಗದಿ ಹೆಲ್ಲವಣೆ ಹೆಕ್ಕಳಂಗೊಂಡು ವನದೊಳು ತೀವೆ ಎಲ್ಲಾ ಮೃಗಂ ಮೋಹನಂಳಿದು ಕಿವಿಗಳನೋವೆ (ಅಪಾರ. ದೇ. ೦೬೦-೦೯). [ ? ]

**ಪೆಲ್ಲಯಿಸು,** ಪೆಲ್ಲಿಸು (ಕ್ರಿ). ೧. ಒಟ್ಟುಗೂಡು ; ತುಂಬು ; ಮಡುಗಟ್ಟು : ನವಸುಧಾಜಳಪ್ರವಾಹು ಪ್ರಸರಿಸಿ ಪರಿದು ಮಂದರದೋದಾರ ಕಂದರದರಿಪ್ರದೇಶಂಗಳೊಳೆಲ್ಲಮಲ್ಲಿಗಲ್ಲಿಗೆಲ್ಲಿಯಾನುಂ ಪೆಲ್ಲಯಿಸಿ ನಿಂದುಂ . . . ಎಲ್ಲಿಯಾನುಂ ಕಾಟ್ಟುರಮಾಗುಬ್ಬರಿಸಿಯುಂ ಪೋಗಿ ಮೆಲ್ಲಮೆಲ್ಲನೆ ಭದ್ರಶಾಲವನಮನೆಯ್ದಿದಾಗಳ್ (ಧರ್ಮಾಮೃ. ೦೨-೨೯ ವ). **ಪೆಲ್ಲಿಸು :** ೨. ಒಟ್ಟುಗೂಡಿಸು ; ಸೇರಿಸು : ಪೊದೆಯಿಸಿದಡ್ಡಣಂಚೊಲಿರೆ ಸುತ್ತಿದ ಸತ್ತಿಗೆ ಡಿಂಡಿಮಸ್ವನಂ ಕಿದಱಿ . . . ಕರ್ಪೂರ ಕುಂದದ ಕಡೆಗಣ್ಣಗೀಣ್ ಪೊಳೆಯ ಪೆಲ್ಲಿಸಿ[ಪಾಠಾಂ. ಪಿಲ್ಲಿಸೆ, ಪೆಲ್ಲಿಸೆ]ಕಟ್ಟ ಕಳಕ್ಕೆ ಪರ್ವ ದರ್ಪದ ಕುಸುಮಾಸ್ತ್ರನಂಕಚುನೆ ಖೇಚರಿ ಬಂದಳದೆಂದು ದೇಸೆಯಿಂ (ಅರ್ಜುನ. ೩-೦೯); ಅಲ್ಲಿಗೆ ಮುನ್ನೆ ಬಂದಡಸಿ ನಿಂದ ಗುಹಾಮುಖನೆಂಬ ರಕ್ಕಸು ಪೆ[ಪಾಠಾಂ. ಪಿ]ಲ್ಲಿಸಿ ಕಂಡಕಂಡರನೆ ನುಂಗುತುಮಿರ್ದೊಡೆ ಬಾರಿಗಟ್ಟುವೆಂದೆಲ್ಲರುಮಿರ್ದು ಮಾಡಿದೊಡೆ ಮಾಡಿದ ಬಾರಿಯ ಸೂಟು

ನಿಯೋಗದಿಂದಲ್ಲಿಯುವಂತೆ ಬಂದು ಬಟ್ಟಿಕಾ ಮನೆಯಲ್ಲಿಗೆ ಬಂದುದೆಂಬುದಂ (ಶೀವಸಂ. ೩೮-೨೩). [ಪೆಲ್ಲ₀ (p<ಪ್ರಾ. ಪೆಲ್ಲ. /ಸಂ. ಪೂರಯ)+—ಇಸ್ಸು₃]

**ಪೆಲ್ಲವಣೆ** 'ಪೆಲ್ಲಣೆ' ನೋ.

**Δಪೆಲ್ಲಾಪೆಲ್ಲಿ** 'ಹೆಲ್ಲಾಪೆಲ್ಲಿ' ನೋ.

**ಪೆಲ್ಲಿಸು** 'ಪೆಲ್ಲಯಿಸು' ನೋ.

**ಪೆವಡಿ** 'ಪೀವಡಿ' ನೋ.

**ಪೆವ್ವಳಿಸು** 'ಪೆಳ್ಪಳಿಸು' ನೋ.

**ಪೆಸದೊರ** ? (ನಾ). ಒಬ್ಬಾತನ ಹೆಸರು (?) : ಪ್ರಿ(ಪೃ)ಥಿವೀರಾಜ್ಯಂಗೆಯೆ ಪೆಸದೊರಾ ಮಗನ್ ರೆವಡಿಬದ್ದರ್ (ಇಇ. VIII. ೨೮೬-೨ : 732).

[ ? ]

**ಪೆಸರ್**, ಪೆಸರು₁, ಪೇರ್₂, ಪೇರು₃, ಹೆಸರು₁ (ನಾ). ೧. ನಾಮಧೇಯ ; ನಾಮಾಂಕಿತ ; ಅಭಿಧಾನ : ವನರುಹದಂತೆ ಮುಖಂ ಲೋಚನಮೆಸೆವುತ್ಪಳದವೋಲ್ ತಳಂ ತಳಿರಂತೆಂದನುರೂಪವಾಗಿ ಪೇಟ್ಟೊಡದೆನಸುಂ ಪಸೂ್ತಪಮಾನಮೆಂಬುದು ಪೆಸರಿಂ (ಕಲಾ. ೩-೬೦); ಆ ಕೂಸಿಂಗೆ ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡೆ (ವಡ್ಡಾರಾ. ೬೩-೦೧); ಪೆಸರಿಲ್ಲದಾರ್ಯರೆಂಬೀ ಪೆಸರೊಳೆ ಮುನ್ನಡೆಯೆ ನಡೆಯದೀ ವ್ಯವಹಾರಂ ಪೆಸರಿಲ್ಲದೊಡೆಂದಾ ಮನು ಪೆಸರಿಟ್ಟು ಯಶಸ್ವಿಯೆಂಬ ಪೆಸರಂ ಪಡೆದು (ಅಂಕ. ೩-೬೦): ಕರ್ಣಾಟಕವ್ಯಾಕರಣಮುಂ ಶಬ್ದಮಣಿದರ್ಪಣಮೆಂಬ ಪೆಸರನಿಟ್ಟು ಲಕ್ಷಣಾಚಾರ್ಯರ್ ಪೇಟ್ದಿಂದು ಬೆಸಸೆ ಮನಂಬುಗುವಂತೆ ಪೇಟ್ದಿಂ (ಶಬ್ದ. ಪೀಠಿ ೩ ವೃತ್ತಿ). ೨. ಪ್ರಸಿದ್ಧಿ ; ಖ್ಯಾತಿ ; ಹೆಸರುವಾಸಿ : ಗುಣಧರ್ಮ್ಮವೆಯಿಂ ವರ ಕಾಶ್ಯಪಾನ್ವಯುಂ ತಳೆದುದು ಪೆರ್ಮ್ಮೆಯಿಂ ಪೆಸರನುನತಿಯಿ ಯಶಮಂ ಪ್ರಭುತ್ವಮಂ (ಸೌಇಇ. IX—i. ೨೬೭-೩೫ ; 1160) ; ಪೆಸರ ನರೇಂದ್ರನಂದನರ ಚಾಮರವಾಯು ಕಟಲ್ವೆ . . . ನಿಶ್ವಸಿತದ ಗಾಳಿ ಚಾಳಿಸೆ ತೆರಳ್ಗಡಿಗಳ್ಗೆತು ಧೂಳಿಜಾಳಮುಂ (ಕೃಷ್ಣ. ೮-೩೬). 'ಪೆಸರ್ವಡೆ' ಪರಾ. ೩. ಬಿರುದು ; ಪ್ರಶಸ್ತಿ : ವಿಕ್ರಮಾರ್ಜುನನುಮರಾತಿಕಾಳಾನಳನುಂ . . . ಪಡೆವೆಚ್ಚೆಗಂಡನುಂ ಪರಸೈನ್ಯಭೈರವನುಮೆಂಬ ಪೆಸರ್ಗಳನನ್ವರ್ಥಂ ಮಾಡಿ (ಪಂಪಭಾ. ೦೦-೦೨೯ ವ); ಪಡೆಯೆಡೆಯು ಕಡೆಯ ಬಡವರ್ ಕುಡೆ ಪಡೆವನೊ ಚಕ್ರವರ್ತಿಯೊಳ್ ತೈಲಪನೊಳ್ ಪಡೆದಂ ಮಹಿಮೋನ್ನತಿಯಿಂ ಪಡೆದಾ ಕವಿಚಕ್ರವರ್ತಿಪೆಸರಂ ರನ್ನಂ (ಗದಾಯು. ೦-೩೭); ಸಂಗರದೊಳ್ ಭೀಕರಬೆನಿಪ್ಪ ಮದ್ದುಜಬಲದಿಂದರಿಮರ್ದನನೆಂ ತವೆ ಕೊಂದರಿಮರ್ದನನೆಂಬ ಪೆಸರನಾಂ ತಳೆದಪ್ಪೆಂ (ಶಂಕಶಂ. ೨೦೩-೦೫). ೪. (ಅಲಂ) ದೂಷಣೆ ; ಅಪವಾದ ; ನಿಂದೆ : 'ಪೆಸರ್ವು' ಪರಾ. **ಪೆಸರು₁** : ೧. ನಂಬಿ ನಂಬೀ ಕಂದ ಮೊಸಳೆ ನುಂಗಿತೆ ಮಗನೆ ನಂಬಿಯಣ್ಣನ ಪೆಸರು ಫಲಿಸದಿಂತೆಲೆ ಮಗನೆ (ಶಂಪರ. ೦೭-೦೩೫) ; ಧರಣಿಯೊಳು ಮೇಣ್ ತಮ್ಮ ತಮ್ಮ ಪೆಸರುಗಳೊಳು ಹರನಾಮವಂ ಸಲೆ ಧರಿಸಿ ಭಜಿಸುವವರಿಳ ಗಿರಿತರುಖಗಮೃಗಾದಿಗಳು (ಬಸವ. ೦೯-೬೨) ; ಮಡಿವೆಸರು ಮರುಗಗಳೊಳು ಪಳಿವೆಸರೊಂದು ವಸನದೊಳು . . . ಅಲ್ಲದೆ ನೋಳ್ಪೊಡಿಲ್ಲಾ ಮೆಚ್ಚಿಪ ನಾಡೊಳಗೆ (ಸಾಳ್ವಭಾ. ೦-೬೦). ೨. ನೆಲಪಡಿದು ಕುಳಿತೊಡನೆ ನಾಡೆ ಬಂದಿತು ನೋಡೆ ಚೆಲುವಲ್ಲ ಪೆಸರ ಪುಲಿ ನನ್ನಿಯುಳಿವರಿದು (ಕಾಂಜಿ ೦೨೨-೨೦೬). 'ಪೆಸರುಪೆಚು' ಪರಾ. **ಪೇರ್₂** : 'ಪೇರ್ಗೊಳ್' ಪರಾ. **ಪೇರು₃** : ೧. ಮಾರನ ತೇರುವೆಸರನಿಟ್ಟು ಜಾಣರದಾರೆ ಧರೆಯೋಳೀ ತರುವಿಗೆ ದೂರದಿಂ ನೋಡೆ ತೇರಂತೆ ಸೂಚಿಸುತಿದೆ ಪೇರು ಸಲುವುದು ಕಿಂಶುಕಗೆ (ಕೃಷ್ಣಗೋ. ೮-೦೫). **ಹೆಸರು₁** : ೧. ಅಯ್ಯ ಅಜಿವನಜಾತ ಅಜಾವ ತಿಳಿವ ಮಚಿಹ ಮಚಿದು ಮಚಿಹನಳಿದು ಕುಚುಹಿದು ಹೋಳ ಹೆಸರಿಲ್ಲದೆ ಗುರುಲಿಂಗಜಂಗಮ ತ್ರಿವಿಧ ಒಂದಾದ ಎಡೆಯ ತೋರಿಸು ಬದ.ಕಿಸಾ (ಅವಚ. ೪೪-೦೩೬) ; ನೀನೆತ್ತಲನಿಮಿಷ್ಟವೀಯೆಡೆಗೆ ಬರವೆತ್ತ ನೀನಾರು ಮನೆಯೆಲ್ಲಿ ಹೆಸರಾವುದು (ಸಿದ್ಧರಾ. ೨-೨೭); ಹರಿಹರಬ್ರಹ್ಮಾಮರೇಂದ್ರಾದ್ಯರ ಹೆಸರ ದಿವ್ಯಾಸ್ತ್ರಮಂತ್ರವನೊರೆದನಾಚಮನೀಯ ಸಾಂಗೋಪಾಂಗಮುದ್ರೆಯಲಿ (ಕೊರಚಾ. ೦-೯-೪೩) ; ಹೆಸರು ಕ್ಷೀರಸಾಗರ ಭಟ್ಟ ಮಜ್ಜಿಗೆನೀರಿಗೇ ತತ್ವಾರ (ಗಾದೆ). ೨. ನುಡಿವ ಬೆಡಂಗು ನೋಡುವ ಪಠಾಕ್ರಮ ಮಾಡುವ ಸಾಹಸೋಕ್ತಿ ನಡವ ಚರಿತ್ರಮುಂ ಹೆಸರು ರೂಪು ಗುಣಾರ್ನ್ನವನೆಂತು ನೋರ್ಪ್ಪಡಂ ಕಡುಗಲಿಯಪ್ಪ ವಿಕ್ರಮನ ಗಂಡಿನ ದೊಂದು ಪೊಡರ್ಪನೇನ ಬಣ್ಣಿಸಲಳವಲ್ತೆ (ಸೌಇಇ. IX-i. ೨೬೬-೨೫ ; 1183); ಹೆಸರ ನಾಯ್ಗಳ ಹಾಸ ಹರಿದುಬ್ಬಸದಲುಳಿಗದವದಿರ ಹಿಡಿಮೃಗ ಮಸಗಿದವು ಹದವಿಲುಗಳೊಡೆದವು ಹೆದೆಯು ಹರವಿನಲಿ (ಕುಮಾ.ಭಾ. ೦೩-೨೦); ಆ ಪ್ರಯತ್ನಗಳು ತರುವ ಫಲಕ್ಕಿಂತ ರಾಯರಿಗೆ ಬೇಕಾದುದು ಒಳ್ಳೆಯ ಹೆಸರು (ರಾಯುಕ. ೪).

**ಪೆಸರ್ವೆಸರ್** (ದ್ವಿರುಕ್ತಿ) : ಭರಂಗೆಯ್ವಾಗಳ್ ನೀಂ ಪೆಸರ್ವೆಸರೊಳಾ ನಾಲ್ವರುಮನಾದರಂ[ಗೊಂಡಾ] ನಾಲ್ಕುಂ ದೆಸೆಗೆ [ಬೆಸಸಿಂ] ಬೆಳ್ಕುಱುವಿನಂ (ಪಂಪಭಾ. ೬-೨೫) ; ಹರಿಣಿಕೆಯುಂ ಶುಕ ಸಾರಿಕೆಗಳನೋದಿಸಲುಂ ಪೆಸರ್ವೆಸರೊಳೆ ಕರೆದು ಪೇಟ್ವ ಮನೋಹರಾಲಾಪಂಗಳಂ ಕೇಳುತ್ತುಂ ಪೋಗೆಪೋಗೆ (ಕಾದಂಪೂ. ೦೦೦೬) ; ತಂದ ಕಪ್ಪಂಗಳಂ ಪೆಸರ್ವೆಸರೊಳೆ ಪೇಟ್ದು ಕುಡೆ (ಚಂದ್ರಪ್ರ. ೮-೪ ವ). **ಪೆಸರಾಗು, ಹೆಸರಾಗು**=೧. ಹೆಸರು ಬರು ; ಹೆಸರುಂಟಾಗು : ಆಗುಟ್ಟಿರಲಾ ಕುಟೀಯೊಳ್ ತೊಟ್ಟಗೆ ನಿಧಿಗಂಡಂತೆ ವಸುಧೆಗೆಸದಳವಾಯ್ತು ಮಗ[ನಂ]ದಮೆಂದು [ಲೋಗರ್] ಬಗೆದಿರೆ ವಸುಪೇಣನೆಂಬ ಪೆಸರಾಯ್ತಾಗಳ್ (ಶಂಪಶಾ. ೦-೯೬); ಚಂದ್ರಹಾಸನೆಂದಿಳೆಯೊಳೀತಂಗೆ ಪೆಸರಾಗಲೆಂದುಚ್ಚರಿಸಿ ನಾಮಕರಣಂಗೈದರು (ಜೈಮಿಭಾ. ೨೯-೬೦) ; ಚರಿಸುವುದು ರಥವೊಂದು ವಾಗೀಶ್ವರನ ಪುರಿಗೆ . . . ಉರಗರಾಜನ ನಗರಿಗದಚಿಂ ಧರೆಯೊಳಗೆ ಹೆಸರಾದುದಾ ಭೂವರಶಿರೋರತ್ನಂಗೆ ದಶರಥನೆಂಬ ಗುಣನಾಮ (ತೊರವೆ. ೦-೩-೨೦). ೨. ಪ್ರಸಿದ್ಧವಾಗು ; ಪ್ರಖ್ಯಾತವಾಗು ; ಹೆಸರುವಾಸಿಯಾಗು : ಹೊಸ ಹರೆಯದಲಿ ದ್ರವ್ಯವ ನೆಚಿ ಕೂಡಿಸು ಹೆಸರಾಗು ವಸ್ತ್ರಭೂಷಣದಿ ವ್ಯಸನಕ್ಕೆ ಪ್ರೌಢನೊಳೆಜಗದಿರೆಂದು ರಕ್ಕಸಿಮುಂಡೆ ಮಗಳ ಹಿಂಡಿದಳು (ಮೋಹತ. ೦೮-೬೩) ; ಡಾಕಾ ಎಂಬ ಪಟ್ಟಣದಲ್ಲಿ ಹುಟ್ಟುವ ಜಿನುಗಾದ, ಮಲಮಲಿಯು ದಿಗ್‌ದೇಶಕ್ಕೆ ಹೆಸರಾಗಿದೆ (ಮುಂಬಯಿ. ೪-೨೬); ಸೀಕೆಯ ಗೌಡರು ಭಾಂಡ್ಯದ ಗೌಡರು ಊರಿಗೆ ಹೆಸರಾದ ಜನರು (ಜಂಕಾಕ. ೬-೨೦). **ಪೆಸರುಬರ್, ಹೆಸರುಬರು**=೧. ಹೆಸರು ಉಂಟಾಗು ; ಹೆಸರು ರೂಢಿಗೆ ಬರು : ಬಸವನಾಲ ವಿದೆಂಬುದೇತಕೆ ಪೆ[ಸಾಕಾಂ. ಹೆ]ಸರು ಬಂದಿತ್ತುಸುರಿ ನೀವೆನೆ (ಬಸವ. ೩೨-೦೧). ೨. ಪ್ರಸಿದ್ಧಿ ಬರು ; ಖ್ಯಾತಿಯುಂಟಾಗು : ಆ ವ್ಯಕ್ತಿಯ ಮಹತ್ಕಾರ್ಯದಿಂದ ಅವರ ವಂಶಕ್ಕೆ ಹೆಸರು ಬಂದಿದೆ (ರೂಢಿ). ೩. ಅಪಖ್ಯಾತಿಯುಂಟಾಗು ; ಅಪವಾದ ಬರು ; ದೂಷಣೆ ಬರು : ಅವರು ನಾಲ್ಕು ಜನರ ಬಾಯಲ್ಲಿ ಹೆಸರು ಬರದಂತೆ ನಡೆದುಕೊಂಡರು (ರೂಢಿ). **ಪೆಸರುಳಿಸು, ಹೆಸರುಳಿಸು**=ಹೆಸರನ್ನುಳಿಸು ; ಕೀರ್ತಿಗೆ ಕಳಂಕ ತರದಿರು ; ಹೆಸರು ತರು : ಈರೇಳು ಜಗದೊಳಗೆ ಮೆಚ್ಚೆ ಪೆಸರುಳಿಸಿತಣ್ಣ ಉಳಿಸಿತು (ಪುರಂತ. ೦-೦೬೦-೦); ಹೆಸರುಳಿಸುವ ಮಕ್ಕಳಾಗಬೇಕೆಂದು ಎಲ್ಲರೂ ಬಯಸುತ್ತಾರೆ(ರೂಢಿ). **ಪೆಸರೆತ್ತು, ಹೆಸರೆತ್ತು**=ಹೆಸರನ್ನು ಹೇಳು; ಹೆಸರನ್ನು ನೆನಪಿಗೆ ತಂದುಕೊಳ್ಳು : ಹನ್ನೊಂದರೊಳ್ ನೆರವಿಯಂ ಬಳಗ ನೆರದು ಚೆನ್ನೆಯಂ ಪೆಸರೆತ್ತಿ ತಣಿಮುಂಡು ಮರೆಯಾಯ್ತು (ಕಾಬೂರ. ೦೯೬-೨೨೦); ಅವರ ಹೆಸರೆತ್ತಿದರೆ ಮೈಯೆಲ್ಲ ಉರಿಯುತ್ತದೆ (ಪ್ರಹರ. ೩೩೦): ಹನ್ನೊಂದನೆಯ ದಿನ ಬಳಗದವರೆಲ್ಲ ಚೆನ್ನೆಯ ಹೆಸರೆತ್ತಿ, ಉಂಡು ತಣಿದು ಮರೆಯಾಯ್ತು (ಕಾಬೂರ. ೦೯ ಕನ್ನಡ). **ಪೆಸರ್ಮಾಡು, ಹೆಸರುಮಾಡು**=೧. ಪ್ರಸಿದ್ಧಿಯನ್ನುಂಟು ಮಾಡು ; ಖ್ಯಾತಿಯನ್ನುಂಟು ಮಾಡು :

ತನಗೆ ಭರತೇಶ್ವರಂ ವಂದನಾರ್ಥದಿಂ ಸಮೆದ ಮಾಲೆ ಭರತದೊಳಿದು ವಂದನಮಾಲೆಯೆಂಬ ಪೆಸರಂ ತನಗೆ ಪೆಸರ್ವಾಡೆ ಕೂಡಿ ಸಂದಪುದಿನ್ನುಂ (ಆದಿಪು. ೧೬-೪೯). ೨. ಹೆಸರನ್ನು ಗಳಿಸು; ಖ್ಯಾತಿಯನ್ನು ಪಡೆ: ಊರಿನಲ್ಲಿ ಅವರು ದೊಡ್ಡ ಕೆಲಸಗಳನ್ನು ಮಾಡಿ ಹೆಸರು ಮಾಡಿದ್ದಾರೆ (ಲೂಇ). **ಹೆಸರಾಗಿ ಕಟ್ಟಿಸು** = ನೆನಪಿಗಾಗಿ ಕಟ್ಟಿಸು; ಸ್ಮರಣಾರ್ಥವಾಗಿ ನಿರ್ಮಿಸು: ನಾಗಸಮುದ್ರವೆಂಬ ಗ್ರಾಮವನು ಹೆಸರಾಗಿ ಕಟ್ಟಿಸಿ (ಎಕ. VII. ಶಿವಮೊ. ೧೬೮-೪೪; 1558). **ಹೆಸರಿಗೆ ಮಾತ್ರ** = ಕೇವಲ ಹೆಸರಿಗೆ; ನಾಮಕಾವಸ್ತೆಗೆ: ನಯವಿಲ್ಲದ ಕಾಗದ, ಅಂದವಿಲ್ಲದ ಮುನ್ನುಡಿ, ಹೆಸರಿಗೆ ಮಾತ್ರ ಇರುವ ರಕ್ಷಾಪತ್ರ (ಸಹೃದಯ. ೪). **ಹೆಸರಿಲ್ಲದಾಗು** = ಹೆಸರು ಕೂಡ ಉಳಿಯದಾಗು: ನಾಶವಾಗು; ಹಾಳಾಗು; ಹಿರಿಯರಲ್ಲಿ ಗೌರವವು ದೈವದಲ್ಲಿ ನಂಬಿಕೆಯು ಹೆಸರಿಲ್ಲದಾಗುತ್ತಿವೆ (ಕರಿಹೋ. ೩೬-೨). **ಹೆಸರು ಕೊಡು** = ಹೆಸರನ್ನು ದಾಖಲುಮಾಡು: ಮದ್ರಾಸಿನಲ್ಲಿ ಯಾರೂ ಹೆಸರು ಕೊಡಬಹುದು ನಿಂತವರಿಗೂ ಉಂಟು ನೋಡಿ ಸಂತಸಪಡುವ ಭಾಗ್ಯ (ನಂಬವು. ೩೩.೨೨). **ಹೆಸರು ತರು** = ಪ್ರಸಿದ್ಧಿಯನ್ನುಂಟುಮಾಡು; ಕೀರ್ತಿ ತರು: ಕೊಟ್ಟ ಮನೆಯಲ್ಲಿ ಹೆಣ್ಣುಮಕ್ಕಳು ಚೆನ್ನಾಗಿ ನಡೆದುಕೊಂಡು ಹೆಸರು ತಂದರೆ ಹೆತ್ತ ತಾಯಿಗೆ ನೆಮ್ಮದಿ (ಲೂಇ). **ಹೆಸರುಬಲ** = ಹೆಸರುಗಳ ಆಧಾರದ ಮೇಲೆ ತಿಳಿಯುವ ಗ್ರಹಬಲ; ನಾಮನಕ್ಷತ್ರ: ಮದುವೆ ಮಾಡಬೇಕೆಂದು ಯೋಚಿಸಿದರೆ . . . ಜೋಯಿಸರಲ್ಲಿ ಹೆಸರು ಬಲ ಕೇಳುವರು (ಹುಟ್ಟಿಹ. ೮). **ಹೆಸರು ಬೀಳು** = ಹೆಸರು ಬರು; ಹೆಸರುಂಟಾಗು: ನೀರಿನ ನಾರಪ್ಪ ಅಂತ ನನಗೆ ಹೆಂಗೂ ಹೆಸರು ಬಿದ್ದದ. ನನ್ನೋಗ ಎಷ್ಟು ನೀರದ ನೋಡೇ ಬಿಡತೀನಿ! (ಕರಕ. ೨೪). **ಹೆಸರು ಹಚ್ಚು** = ಹೆಸರನ್ನು ಪಟ್ಟಿಯಲ್ಲಿ ಸೇರಿಸು,—ದಾಖಲುಮಾಡು: ಇಲ್ಲಿಯ ಶಾಲೆಯಲ್ಲೇ ಅವನ ಹೆಸರು ಹಚ್ಚಿದಂತಾಯಿತು (ನಂಗಾರ. ೧೩೨). **ಹೆಸರು ಹೇಳು** = ೧. ಹೆಸರನ್ನು ಹೇಳು,—ಉಚ್ಚರಿಸು: ಕವಲೇಳು ಸಮುದ್ರವ ಕುಡಿದು ನೀರಡಸಿದಾತ ಅಜಲುಗೊಂಡು ಬೆಜಗಾದ ಶಿಶು ತಾಯ ಹೊಸ ಹೊತ್ತುಕೊಂಡು ಹೆಸರು ಹೇಳುತ್ತೈದಾನೆ (ಶಿವಶ. ೬-೦೫); ಗುರುಭಕ್ತಿಯೆಂದರೆ ಅವನ ಹೆಸರು ಹೇಳಬೇಕು (ಏಕಲ. ೨೦). ೨. ಕೀರ್ತಿಯನ್ನು ತರು: ಹೆಸರು ಹೇಳುವ ಮಗನಾಗಲಿಲ್ಲ ಅವನು (ಲೂಇ). **ಹೆಸರು ಹೊಡೆದು ಹಾಕು** = ಪಟ್ಟಿಯಿಂದ ಹೆಸರನ್ನು ತೆಗೆದು ಹಾಕು: ಸರಿಯಾದ ವೇಳೆಗೆ ಪರೀಕ್ಷೆಯ ಹಣ ಕಟ್ಟಲಿಲ್ಲವಾದ್ದರಿಂದ ಆ ಹುಡುಗನ ಹೆಸರು ಹೊಡೆದುಹಾಕಿದರು (ಲೂಇ). **ಹೆಸರು ಹೋಗು** = ೧. ಹೆಸರು ಇಲ್ಲದಂತಾಗು, — ಅಳಿಸಿಹೋಗು: ಬಸವನೊಳಗಡಗುವುದು ಭಕ್ತಿಯ ಹೆಸರು ಹೋಹುದು (ಬಸವು. ೩೬-೪೯). ೨. ಹೆಸರು ಹರಡು; ಪ್ರಸಿದ್ಧವಾಗು; ಖ್ಯಾತವಾಗು: ಅವನ ತಂದೆ, ಅಜ್ಜ ಎಲ್ಲ ಕುಡಿಯುವುದರಲ್ಲಿ ಭಾರೀ ಹೆಸರು ಹೋದವರು (ಕಳರು. ೯೩).

[ದೇ॥. ತಮಿ. ಮಲ. ಪೆಯರ್, ಪೇರ್, ಪಿಯರ್; ತುಳು. ಪುದರು; ತೆಲು. ಪೇರು; ನಾಯ್ಕಿ. ಪೇರ್; ಪರ್ಜಿ. ಗದಬ. ಪಿದಿರ್]

**ಪೆಸರಕ್ಕರ** (ನಾ). ಹೆಸರಿನ ಅಕ್ಷರ; ನಾಮಾಕ್ಷರ: ಮನ್ನಯಸದೊಳ್ ನಮನಂ ಕರದೊಳ್ ಕರಾಬ್ಜವಂಗದೊಳೆಸೆವಂಗಯಷ್ಟಿ ಪೆಸರಕ್ಕರದೊಳ್ ನಿಜವಾಣಿ ಕೂರ್ಮೆಯೊಳ್ ಹೃದಯಂಮದೊರ್ಮೆಯುಂ ನೆಲಸಲಂಗನೆ ಗೆಂತಿರೆ ಪೋದುದಾ ದಿನಂ (ಕಾದಂಬ. ೨೬೩); ಬಿರುದಿನ ಬೀರದ ಪೆಸರಕ್ಕರಮಂ ಪರನೃಪರ ಮೆಯ್ಯು ಪುಣ್ಗಲೆಗಳ್ ಪೋಲ್ತಿರೆ ತೋಳ್ವಲಕ್ಕೆ ಪಡೆವಂ ನರಶಾಸನಮಂ ನರೇಂದ್ರಚೂಡಾರತ್ನಂ (ಪಂಪ್ಭಾ. ೩-೦೯). [ಪೆಸರ್ + ಅಕ್ಕರ$_2$]

**ಪೆಸರಾನ್, ಹೆಸರಾನು** (ಕ್ರಿ). ೧. ಹೆಸರನ್ನು ಹೊಂದು; ಅಭಿಧಾನವನ್ನು ಪಡೆ: ನಗರ ಪಟ್ಟಣ ಖೇಡ ಖರ್ವಡ ಪುರ ಗ್ರಾಮಂಗಳೆಂಬ ನಾನಾ ಪೆಸರಾಂತು ನೊಗಯಿಸುತಿಪ್ಪುವಾ ದೇಶದಿ ಬಳುವಳಿಗಳಲ್ಲ (ಮೋಹಚ. ೨ ೦೬). ೨. ಹೆಸರನ್ನು ಗಳಿಸು; ಪ್ರಸಿದ್ಧಿಯನ್ನು ಹೊಂದು; ಖ್ಯಾತಿಯನ್ನು ಪಡೆ: ಹೆಬ್ಬುಲಿಯನಿಂದೊರಗಿ ಪೆಸರಾಂತ ಒಟ್ಟಾಳದೊಬ್ಬನೇ ದೊಡ್ಡಂ (ಕಾಂಚಿಪ. ೦೦೬-೨೦೬). **ಹೆಸರಾನು**: ೨. ಅವರು ನಾಡಿನಲ್ಲಿಲ್ಲ ಹೆಸರಾಂತ ವಿದ್ವಾಂಸರನ್ನಿಸಿಕೊಂಡಿದ್ದಾರೆ (ಲೂಇ). [ಪೆಸರ್ + ಆನ್$_1$]

**ಪೆಸರಾಳ್** (ನಾ). ಪ್ರಸಿದ್ಧನಾದ ಸೈನಿಕ; ಖ್ಯಾತಿಯನ್ನು ಪಡೆದ ಭಟ: ಬಿಸುಪುಮಾರ್ದ ನೊಸಲ ಕಣ್ಣಿಂ ತಿಸುಳ್ಗಂಗಳನಾಂತ ಕೈಗಳುಂ ನೋಟ್ಪರನಂಜಿಸಿ ನಡೆತಂದರ್ ಕಲಿಬರ್ ಪೆಸರಾಳ್ಗಳ್ ಬೆಟ್ಟನಣ್ಣಿ ಕಲ್ಲಾಮುತ್ತಲ್ವಿಂ (ಕಬ್ಬಿಗಾ. ೨೫೩). [ಪೆಸರ್ + ಆಳ್$_3$]

**ಪೆಸರಿಡು, ಹೆಸರಿಡು** (ಕ್ರಿ). ೧. ಹೆಸರನ್ನು ಇಡು; ನಾಮಕರಣ ಮಾಡು: ಪೆಸರಿಲ್ಲದಾರ್ಯರೆಂಬೀ ಪೆಸರೊಳೆ ಮುಂ ನಡೆಯೆ ನಡೆಯದೀ ವ್ಯವಹಾರಂ ಪೆಸರಿಲ್ಲದೊಡೆಂದಾ ಮಂಸು ಪೆಸರಿಟ್ಟು ಯಶಸ್ವಿಯೆಂಬ ಪೆಸರಂ ಪಡೆದಂ (ಆದಿಪು. ೬-೬೦); ಬೆಳೆಯದೆ ಜಗದಂ ತೋಡುವನೆಂಬ ವುಟ್ಟಿದ ಕೂಸಿಂಗೆ ಪೆಸರಿಡುವೆನೆಂಬ . . . ಮರುಳನಂತೆ (ಧರ್ಮಾಮೃ. ೯೩-೨೪); ಪರಮಪಾವನತನೂಜಂಗೆ ವಿಮಲಾಂಗಂಗೆ ಹರಿಸದಿಂ ಪದ್ಮರಸರೆಂದು ಪೆಸರಿಟ್ಟು (ಪದ್ಮರಾ. ೨-೬೩). ೨. (ಗುಣವನ್ನು) ಮೆಚ್ಚಿ ಹೊಗಳು; ಮೆಚ್ಚುಗೆಯನ್ನು ಸೂಚಿಸು: ತಮ್ಮ ತಮ್ಮ ಗುಣಗಿಂದಂ ಪೆಸರಿಟ್ಟು ಬುಧಸಮೂಹವಿಂದಂ ಪೇಟೆಂದೊಡೆ ಪೇಜಲ್ಕಾಂ ಬಗೆದಂದೆನಿದೆನ್ನಳವೆ ಗುಂಭರೋದಿತಚರಿತಂ (ಆದಿಪು. ೧-೪೯); ಏನೆವಾತ್ಮಮನೋಹರಿದೇವಿ ಸರ್ವೇತಂ ಬಾಹುವೀರ್ಯನಾ ನಟಿಯರ ವಾದ್ಯಸಮಗ್ರನೃತ್ಯಮಂ ವೀಕ್ಷಿಸಿ ನಿಜಕೆ ಪೆಸರಿಟ್ಟು ನಾಡೆ ಮೆಚ್ಚುತ್ತಿರ್ದಂ (ಕುಸುಮಾ. ೦೯-೮೦). ೩. ದೂಷಿಸು; ನಿಂದಿಸು: ಅಸಮಾನಮಚಳಮದುಬ್ಬುತವಿಸರಮನೂನ ಪ್ರಭಂ ಶುಭಂ ಘನವಿಭವಂ ಪೆಸರಿಡಬಾರದು ಮಿಗೆ ನಿಟ್ಟಿಸಬಾರದು ನೋಡಬಾರದೆಂಬೆಕೆಯ ತಪಂ (ಗಿರಿಕ. ೮-೦೬). **ಹೆಸರಿಡು**: ೧. ಏಳನೆಯ ಭವಾಂತರದಲ್ಲಿ ಬಸವನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು (ಬಸವ. ೪); ಮದನಹರನರಸಿ ಬಿಜಯಂಗೈದು ಹರಸಿ ಮೋಹದೊಳೀತನಂ ತಮ್ಮ ದೇವನೆಂದೋವಿ ಪ್ರೇಮದಿ ಸಿದ್ಧರಾಮಯ್ಯನೆಂದು ಹೆಸರಿಟ್ಟಾಡಿ ಹಾಡಿ ಹರಸಿದಳು (ಸಿದ್ಧರಾ. ೨-೩); ಒಸೆದು ಮುಂದಣ ತಾಗುಬಾಗಿನ ಸಸಿನವನು ಹೇಳಿದನು ಹಸೆದಡೆ ಹೆಸರಿಡಲು ಬೇಕೆವನ . . . ಎನುತ್ತ ಕೆಲಬಲಕಸವಳೆಂ ಬಿಜುನಗೆಯ ಸೂಸಿದನಾ ದಶಗ್ರೀವ (ತೊರರಾ. ೩-೬-೬೩). ೩. ಅವಳ ಅಡಿಗೆಗೆ ಯಾರಾದರೂ ಹೆಸರಿಟ್ಟರೆ ಅವಳಿಗೆ ಸಹನವಾಗುತ್ತಿದ್ದಿಲ್ಲ (ಸ್ವ.ಚಿಕ. ೦೨೩); ತಂದೆ ತೀರಿದ ಮೇಲೆ ತಾಯಿಯ ಸಂರಕ್ಷಣೆ ಮಾಡದ ಮಗನಿಗೆ ಮಂದಿ ಹೆಸರಿಡತಾರ (ಹೊಸಮಾ. ೯೩). ೪. ಸ್ಪಷ್ಟಪಡಿಸು; ವ್ಯಕ್ತವಾಗಿ ತಿಳಿಸು: ಮುಚ್ಚಿದನು ಕಂಗಳನು . . . ಎಚ್ಚಜಿದಗಿತು ನೆಲಕೆ ಕೈಗಳ ಬಿಚ್ಚಿ ಬಿದ್ದನು ಪುತ್ರವಿರಹದ ಹೆಚ್ಚುಗೆಯ ತಾಪವನು ಹೆಸರಿಡಲರಿಯೆನರ್ಜುನನ (ಕುಮಾರವ್ಯಾ. ೮-೩೦); ಪ್ರಳಯಮೆ ಭುವನೋಡೆವ ರವಿಮಂಡಲಸಹಸ್ರದ ರಶ್ಮಿಯೋ . . . ಮುಳಿದ ನರಕೇಸರಿಯ ದಾಡೆಯ ಥಳಥಳತ್ಕಾರವೊ ಮಹಾಸ್ತ್ರದ ಬೆಳಗೊ ಹೆಸರಿಡಲಾರು ಬಲ್ಲರು (ಕುಮಾರವ್ಯಾ. ೦೯-೦೩).

**ಹೆಸರಿಟ್ಟು ಬೈ** = ಹೆಸರೆತ್ತಿ ಬಯ್ಯು,—ದೂಷಿಸು,—ನಿಂದಿಸು: ಹೆಸರಿಟ್ಟು ಬೈದೆನೊ ಅತ್ತೆ ಮಾಸಂದಿರ (ಜಾನಪಾ. ೨-೦೯).

[ಪೆಸರ್ + ಇಡು$_1$]

**ಪೆಸರಿಲಿ** (ನಾ). ೧. ಹೆಸರಿಲ್ಲದುದು. ೨. ಕೈಯ ಕಿರುಬೆರಳಿನ ಪಕ್ಕದ ಬೆರಳು; ಅನಾಮಿಕ: "ಅಂಗುಷ್ಠಂ ತರ್ಜನಿ ಮಧ್ಯಾಂಗುಳಿ ಪೆಸರಿಲಿ ಕನಿಷ್ಠೆಯೆಂದಕ್ಕುಂ ನಾಮಂಗಳ್ ಬೆರಳ್ಗೆ ತರದೆ" (ಪಟ್ಟುಕೋ. ೬೯೦೦).

ಪೆಸರಿಲಿಯ ಬೊಟ್ಟಿನಿಂದಂ ದೆಸೆದೆಸೆಗಂ ಮಿಡಿದು ಮಿಡಿದು ಕೈವಾಗಿ ವುತ್ತುಂ (ಶಾರಕ್ಷ. ೧೧-೦೨೯). [ಪೆಸರ್ + – ಇಲ್ಲಿ]

**ಪೆಸರಿಸು, ಹೆಸರಿಸು** (ಕ್ರಿ). ೧. ಹೆಸರನ್ನು ಹೇಳು,—ಸೂಚಿಸು : ಸುನಿಮೇಷವಿಮಾನಚಾಪಲನೇತ್ರ . . . ಮನಸಿಜಶಶಾಂಕಕರ್ಕಟಕ ಚೇಳಂ ಗುಡುವ ತನಿಸೊಬಗುವಡೆದ ಸನ್ಮೋಹನದ ಕಣಿಯೆ ಬಾಯೆನುತೊರ್ವ ನಿಃಜ್ ಸಖಿಯುಂ ಕರೆದಳೀರಾಱು ರಾಶಿಯುಂ ಪೆಸರಿಪವೊಲು (ಕೃ.ಲೀಳಾ. ೬-೨೫). ೨. ಎತ್ತಿ ಹೇಳು : ಹೊಗಳು ; ಪ್ರಶಂಸಿಸು : ಎಸೆವಂಜುವರ್ ಪೊಯ್ವರುಬ್ಬುವರ್ ಕೊಬ್ಬುವರ್ ಮಸಕದಿ ಸಮರಂಗಕುಱುಬುವರ್ ತಱುಬುವರ್ ಪೊಸ ಪರಿಯ ಬಿರುದನುಱ್ ಪೆಸರಿಪರ್ ಪಸರಿಪರ್ ತಂತಮ್ಮ ಬೀರಂಗಳ . . . ಉಭಯಭಟರು (ಕಬಕ್ಷ. ೩೮-೩೬) : ನಾಗರಿಪುವಾಧ್ಯ ಮುರ್ವಸಿಯು ನಡುವಿಂಗೆ ಸರಿಯಾಗಬಲ್ಲುದೆ . . . ಪೂಗಣೆ ವಿಲಾಸದಾ ರಂಭೆಯು ವಿರಾಜಿಸುವ ಸೋಗೆಗಣ್ಗೆಣೆಯಹುದೆ ನೋಡೆಂದು ಪೊಗಳ್ದನನು ರಾಗದಿಂದೊರ್ವಳಂ ವಿಟನಪ್ಸರಸ್ತ್ರೀಯರಂ ಪೆಸರಿಸುವ ನೆವದೊಳು (ಕೃ.ಲೀಳಾ. ೬-೨೯). **ಹೆಸರಿಸು** : ೧. ಅವರು ನಾಡಿನಲ್ಲೆಲ್ಲ ಹೆಸರಿಸು ವಂತಹ ಕಲಾವಿದರು (ರೂಢಿ). ೩. ನಿಗದಿಪಡಿಸು ; ನಿರ್ದಿಷ್ಟ ಪಡಿಸು : ಹೆ.ಮಭಾರದ ವಿಮಲರತುನಸ್ತೋಮವಿದೆ ಪಣವೆನಲು ಕೌರವ ಭೂಮಿಪತಿಯೊಡ್ಡಿದನು ಧರ್ಮಜ ಹೆಸರಿಸಿದ ಧನವ (ಕುವ್ಯಾಸ. ೦೩-೪೪). ೪. ಹೆಸರಿಡು ; ನಾಮಕರಣಮಾಡು : ಚರಿತ್ರಕಾರನು ಅಂದಂದಿನ ದೃಷ್ಟಿಯಿಂದ ನಡೆದ ಘಟನೆಗಳನ್ನೂ ಹುಟ್ಟಿದ ಕೃತಿಗಳನ್ನೂ ಪರಿ ಕ್ಷಿಸಿ ಹೆಸರಿಸಬೇಕಾಗುತ್ತದೆ (ಕಚು. ೨೦). ೫. ಹೆಸರನ್ನು ಗಳಿಸು ; ಪ್ರಸಿದ್ಧಿ ಯನ್ನು ಪಡೆ; ಖ್ಯಾತಿಯನ್ನು ಹೊಂದು : ಹೆಸರಿಸಿದ ಗಂಧರ್ವ ಕಿನ್ನರವಿಸರಮಾಗಧವಂದಿಗಳು ವೇಷ್ಟಿಸಿತು ನಾರದನಭ್ರಮಂಡಲದೊಳಗೆ ನಲಿದಾಡೆ (ಕಭಾಗ. ೪-೧೦-೩೦); ಎಸೆದನದಱೊಳು ಭೂಪನೊಬ್ಬನು . . . ಸುಬಲಾಶ್ವನೆಂಬುವನು ಹೆಸರಿಸಿದ ವ್ಯೋಥಿಲನೃಪಾಲರ ನೊಸಲ ತಿಲಕದವೋಲು ಮಿಗೆ ರಂಜಿಸುತ (ಕಭಾಗ. ೦೦-೪೦-೨).

[ಪೆಸರ್ + – ಇಸು₁]

**ಪೆಸರೀ** (ಕ್ರಿ). ಹೆಸರನ್ನು ಕೊಡು ; ಹೆಸರಿಡು : ಈ ಸುತನ ಸೌಂದರ್ಯಕ್ಕೆ ತಕ್ಕಂದದಿಂ ಪೆಸರಿತ್ತಪ್ಪೆನೆಸುತ್ತುಮಿತ್ತನರಸಂ ಕಂದರ್ಪದೇವಾಖ್ಯಮಂ (ಕುಸುಚರಿ. ೬-೦೦೩). [ಪೆಸರ್ + ಈ]

**ಪೆಸರು₁** 'ಪೆಸರ್' ನೋ.

**ಪೆಸರು₂** 'ಪೆಸಱು' ನೋ.

**ಪೆಸರುಗೊಳ್** 'ಪೆಸರ್ಗೊಳ್' ನೋ.

**ಪೆಸರುವಡೆ** 'ಪೆಸರ್ವಡೆ' ನೋ.

**ಪೆಸರುವೆಱು** 'ಪೆಸರ್ವೆಱು' ನೋ.

**ಪೆಸರ್ಗಿಡು, ಹೆಸರುಕೆಡು** (ಕ್ರಿ). ಅಪಕೀರ್ತಿಯುಂಟಾಗು; ಕೆಟ್ಟ ಹೆಸರು ಬರು ; ದೂಷಣೆಯುಂಟಾಗು : ಪೆಱವಣ್ಣಂ ತುದನೋ ತಂದನೊ ಪೆಸರ್ಗಿಡೆ ಪೆಮ್ಮಾರಿಯುಂ ನಮ್ಮ ದುರ್ಗಕ್ಕರಸಂ (ಅಸಂಕ್ಷ. ೧೧.೮೦). **ಹೆಸರುಕೆಡು** : ಸಮಾಜದಲ್ಲಿ ಹೆಸರುಕೆಡದಂತೆ ಜೀವನ ನಡೆಸಬೇಕು (ರೂಢಿ). [ಪೆಸರ್ + ಕಿಡು (< ಕೆಡು₁)]

**ಪೆಸರ್ಗೇಳ್** (ಕ್ರಿ). ಹೆಸರನ್ನು ಕೇಳು : ಅಂಗಳ್ ಪೆಸರ್ಗೇಳ್ದಿರ್ದಪೊಡೆವ ರೆಂಬ ಶೂದ್ರಕನ ವಿಕ್ರಮಾಡಂಬರಮಂದರೆವಾನಿಸಿಕೆಯೊಳೊಂದಿದ ನರಸಿಂಹಾ ಡಂಬರಕ್ಕೆ ನಸುನಗುತಿರ್ಕುಂ (ಕಾದಂಪೂ. ೦೦); ಮನುಜಮನೋಜ ನಿನ್ನ ಪೆಸರ್ಗೇಳಲೊಡಂ ಬೆಮರಿಂದೆ ಕಣ್ಣ ಲಾಗೆನೆ ನೆಱ್ ನಾಂದು ಪತ್ತಿದ ನಿಜಾಂಶುಕಮಂ ಪುಳಕಂಗಳೆತ್ತೆ (ಕಾದಂಪೂ. ೩೦೪). [ಪೆಸರ್ + ಕೇಳ್]

**ಪೆಸರ್ಗೊಳ್, ಪೆಸರುಗೊಳ್, ಪೇರ್ಗೊಳ್, ಹೆಸರುಗೊಳ್, ಹೆಸರಂಗೊಳ್ಳು, ಹೆಸರ್ಗೊಳ್** (ಕ್ರಿ). ೧. ಹೆಸರನ್ನು ಹೊಂದು : ಜಂಬೂ ದ್ವೀಪದ ಭರತಕ್ಷೇತ್ರದೊಳಖಿಳಸುಖಮುಖದ್ವಾರಂ ದ್ವಾರಾವತೀಪುರಂ ಪುರಂದರಪುರೀವಿಳಾಸಮಂ ಪೆಸರ್ಗೊಂಡಂತೆ ಮೆಱೆದಿರ್ಪುದು (ಶಾಂತಿ. ೦೨-೯೩ ವ). ೨. ಹೆಸರನ್ನು ಹೇಳು,—ಉಚ್ಚರಿಸು; ಹೆಸರೆತ್ತು : ವಿನಯ ಮುಮೆಱಕಮುಮಪ್ಪುದು ಸನಾಭಿಗಳ್ ಸಂಗತಂಗಳಪ್ಪೊಡೆ ಪೆಸರ್ಗೊಂಡನಿತ ಱೊಳೆನ್ನಂ ಸ್ಮರಿಸನೆನೆ ಭರತಂಗೆಱಗಿ ಲೋಕದಿಂ ನಗಿಸುವನೇ (ಆದಿಪು. ೦೪-೩೬); ಆತನನಾರಾಧಿಸಿ ನೃಪನೀತಿವಿದರ್ ಪೇಚರಾವನೀಚರರಾಖ್ಯಾತಿಪ್ರಿಯಾ ಕಾದಭಿಜಾತನೃಪಾನ್ವಯರನೆನಿಬರಂ ಪೆಸರ್ಗೊಳ್ವಂ (ಶಾಂತಿಪು. ೩-೫೬); ಪೆಸರ್ಗೊಳೆ ವಿಷಹರಮಂ ಮಾಱಿಸಿಕೆದ ಮಣಿಮಂತ್ರತಂತ್ರತತಿಯಿಂ ತಾನೆೞ್ಬಿಸಲಾಱದೆ ಭೂರಮಣಂ ಬಸವಱದಾ ಸತಿಯ ಮೇಲೆ ಮೂರ್ಛೆಸಿ ಬಿಚ್ಚಂ (ಶಾಂತೀಶ. ೫-೦೬೪); ಉದಯಕಾಲದೊಳೆದ್ದೊಲಿದಿಷ್ಟದೈವದ ಪದ ಗಳ ಪಾಡುವಂದದೊಳು ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತ ವ್ಯಸಲೆ ವೈದಿಕರಿಗೆ (ಹಂಪ. ೨-೦೩). ೩. ಹೆಸರಂ ಹಿಡಿದು ಕರೆ,—ಕೂಗು ; ಸಂಬೋಧಿಸು : ಪೆಸರ್ಗೊಂಡಿಂದ್ರನರೇಂದ್ರವಂದ್ಯನೆನೊಱಲ್ದತ್ತಾನು ಮೋರೊರ್ಮೆ ಚಿಂತಿಸಿದೊಂಗು ಪವಣಿಲ್ಲ ಪುಣ್ಯಮೆನೆ (ಆದಿಪು. ೦-೩೬) ; ಆಗಳಾ ಕೊಳನಂ ಬಳಸಿ ಬಂದು . . . ಮಹಾಮಹಾವಾದ್ಯಗಳಂ ಬಾಜಿಸಿಯುಂ ಎಂತುಂ ಪೊಱಮಡಿಸಲಾಱದೆ ಸುಯೋಧನನಂ ಪೆಸರ್ಗೊಂಡು ನಕುಲನಾಸ್ಫೋಟಿಸಿ (ಗದಾಯು. ೭-೦ ವ); ಸಮಾಧಿಯಂನಾಗ ತೆಗೆಸುತ್ತ . . . ಪೆಸರ್ಗೊಂಡಾ ಸುಪುತ್ರಕನಂ ಕರೆಯಲು (ಬಸಪು. ೪೮-೨೪) ; ಎನ್ನಂ ಪೆಸರ್ಗೊಂಡನೇ ನುಡಿಸಿವನೆ ಕುಳ್ಳಿರೆಂದನೆ (ಕಲಕ್ಷ. ೩೦-೦೮). ೪. ವರ್ಣಿಸು ; ಬಣ್ಣಿಸು ; ವಿವರಿಸು : ಕಳಹಂಸೀಲೀಲೆ . . . ಶ್ರೀಚಕ್ರವಾಕದ್ವಯ ವಿಳಸನಮಂತಃಪುರಸ್ತ್ರೀಸಹಸ್ರಂಗಳ ಮೆಯ್ಯೊಳ್ ತಾನೆ ತಳ್ಪೊಯ್ದಿರ್ಪುದು ಪೆಸರ್ಗೊಳ್ವೆಗ್ಗ ಗಾರೇಂಬಿನಂ (ಆಪು. ೦೦-೦೩೬); ಗಂಡನನೊರ್ವಳೊರ್ವಳಿಗೆ ಗಂಗೆಗೆ ಗೋಪಿಗೆ ಕೊಟ್ಟರೆಂದೊಡಾ ಪೆಂಡಿರ ರೂಪುಮಂ ಸೊಬಗುಮಂ ಭವಮಂ ಪೆಸರ್ಗೊಳ್ವುದೇ (ಜುಲ್ಲಕ್ಷ. ೨-೫೫): ಅವರ ವಿಲಾಸಿನಿ ಜನದ ರಾಣಿಯ ವಾಸದ ಪುತ್ರಮಿತ್ರಬಾಂಧವರ ವಿಯೋಗಸಂಕಟಮನೇ ಪೆಸರ್ಗೊಂಡಪೆಂ (ಅಸಂಕ್ಷ. ೪-೪). ೫. ಪ್ರಸಿದ್ಧಿಯನ್ನು ಪಡೆ ; ಖ್ಯಾತಿ ಯನ್ನು ಹೊಂದು: ಪೆಸರ್ಗೊಂಡರ್ತಿಯೊಳತ್ತಿಮಬ್ಬೆಯ ಗುಣಾವ್ರಾತಂಗಳಂ ಕೇಳ್ದ ಭವ್ಯಸಮೂಹಂ ಪೊಗೞ್ವಂತು . . . ಬಣ್ಣಿಸುವೆಂ ಪುಣ್ಯಪುರಾಣಮಂ ಜಿತಮನೋಜಾತಾಜಿತಸ್ವಾಮಿಯಾ (ಅಜಿತ. ೦-೯೬). ೬. (ಉತ್ತಮ ವಾದುದೆಂದು) ಆಯ್ದುಕೊಳ್ಳು ; ಆರಿಸಿಕೊಳ್ಳು : ಕುಸುಮಮಾಸಪಕ್ಕೆ ವೆಱಪಂ ಪೆಸರ್ಗೊಳ್ಳವು ತುಂಬಿ ಬಾಣರಚನೆಗೆ ವೆಱನಂ ಪೆಸರ್ಗೊಳ್ಳಂ ಮನಸಿಜನೆನೆ ಪೊಸಸುಗ್ಗಿಯ ತೊಡವು ವೆಱತೆ ಮಲ್ಲಿಗೆಯೊಲಂ (ಜುಲ್ಲಕ್ಷ. ೫-೦೩). ೭. ಹೊಗಳು ; ಸ್ತುತಿಸು ; ಧ್ಯಾನಿಸು ; ನೆನೆ : ಭಕ್ತಿಯಿಂ ಪಾಡದ ಬಾಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ . . . ಕೂಡಿಯಾಳ್ಕಾಡದ ಚಿತ್ತವೇಕೆನಗೆ ಹಂಪೆಯ ಲಿಂಗವೆ ನಿಮ್ಮೊಳ್ಳಱಿಂ (ಕಂಪಾಶ. ೮); ಭಕ್ತರ್ಗೆ ಬಂದೆಡರನಾವಗಂ ಪರಿಹರಿವೆ ಗಡ ದೇವ ನಿನ್ನಂ ಪೆಸರ್ಗೊಂಡೊಡೆ (ಕೃ.ಲೀಳಾ. ೦೦-೩೩). **ಪೆಸರುಗೊಳ್** : ೨. ನಿನ್ನೂರ ಪೆ[ಶಾಂತಾಂ, ಹೆ]ಸರುಗೊಂಡಡೆ ನಿನ್ನ ವಾರ್ತೆಯನುಸುರಿದಡೆ ಕೇಳಿದಡೆಯು ತಪ್ಪಸಮವಿಕ್ರಮನಾದಡವನು ಪಿಡಿದು ಕೊಲಿಸುವೆನು (ಬಸಪು. ೨೬-೬೦). ೩. ಬಸವರಸನಿಂತೊಂದನೊಂದಂ ಪೆಸರುಗೊಳುತಿಪ್ಪ ಮೊದಲೆನಿಪ ಗಜ ವಿಸರಮಂ ಕ್ಷಣದೊಳು ತರಿಸಿ ಮತ್ತಂ ನಿರೂಪಿಸಿದ (ಬಸಪು. ೫೯-೩೩). **ಪೇರ್ಗೊಳ್** : ೫. ಅದರಿಂದೀ ಕೃತಿ ಕೃಷ್ಣರಾಜಮಹಿಮಾಖ್ಯಾತಂ ಪುನೀತಾಂಕಿತಂ ಬುಧರಿಂ ಮೈಸುರನಾಡ ಮೈಸಿರಿಯೆನಲ್ ಪೇರ್ಗೊಂಡುದೈ ಲೊಂಕದೊಳ್ (ಮೈ.ಸೂಮ. ೦ ೨೦). **ಹೆಸರುಗೊಳ್** : ೨. ಹುಸಿಯಿಂದೆ ಜನಿಸಿದೆನಯ್ಯಾ . . . ಹುಸಿಯಿಂದಲಿ ಲಿಂಗವ ಹೆಸರುಗೊಂಡು ಕರೆದೆನಯ್ಯಾ (ಬಸವ. ೪೪೩) ; ಹೆಸರುಗೊಂಡವನಂ ಕೊಲುವೆನೆಂಬಸವಮುಖಾಷೆಯೊಳೆರು

ತಿರಲು (ಬಸಪು. ೩೬-೩೯); ಹೆಸರುಗೊಂಡರೆ ಕವಿಗಳಿಗೆ ಕರ್ಕಶರು ರಕ್ಕಸರೆಂಬ ಹೆಸರಿದು ನುಸಿಗಳೊಳಗಾಶ್ರಯಿಸಿ ಕೆಟ್ಟುದು (ಕುಮ್ಮಾರ್ರಾ. ೦೩-೬೦).
**ಹೆಸರುಗೊಳ್ಳು :** ೫. ಹೆಸರುಗೊಂಡ ಬಹುಮಂದಿ ವೀರರು ಮಡಿದರು (ಪರಿವಾ. II. ೯೯೩); ದಂತಿದುರ್ಗನು ಹರ್ಷವರ್ಧನ . . . ಕೇರಳ ರಾಜರನ್ನು ಸೋಲಿಸಿ ಹೆಸರುಗೊಂಡ ಕರ್ಣಾಟಬಲವನ್ನು ಅನಾಯಾಸವಾಗಿ ಜಯಿಸಿದನೆಂದು ಹೇಳಿದೆ (ಕರ್ಣಾಕ. ೯೬). **ಹೆಸರ್ಗೊಳ್ :** ೫. ಮಕರಧ್ವಜರೂಪನಾವ ರಾಯನ ಕುಮಾರಕನೆಂದು ಹೆಸರ್ಗೊಂಡುದಿಲ್ಲ ಮುಖಪರೀಕ್ಷೆಯ ಬಲ್ಲಿನಾತನ ತಂದೆನ್ನ ಸುಖಬಡಿಸುವುದೆಂದಳೊಲಿದು (ಕೋಹಕ. ೨೮-೨೩). [ಪೆಸರ್ + ಕೊಳ್$_1$]

**ಪೆಸರ್ಚು** (ಕ್ರಿ). (?) : (ಕ)ರಿ ವ ರ ಗ ಜ ರ್ಜಿ ತ ತೂ ರ್ಯ ರ್ ಸ್ವ ರ ಮುಂ ೦ ಸಂರಂಭ(ಹ)ುಂ ? ಪೆಸರ್ಚಲ್ ಕಾತರವೆನೆ ಪಡೆಗುಂ (ಪಸ್ಕುಕೋ. ೦೩೦-೬೯). [?]

**ಪೆಸರ್ಪು** (ಕ್ರಿ). ದೂಷಿಸು ; ಆಕ್ಷೇಪಿಸು ; ದೂರು : ನೆಟ್ಟನೆ ಚಂದ್ರನೊಳ್ ಬಿಸುಪು ಪುಟ್ಟದವೊಲ್ ನೃಪರೂಪಚಂದ್ರನೊಳ್ ಪುಟ್ಟದು ಮಂತಿದಂ ತಿಳಿವುಗೆಟ್ಟ ಕೃತಜ್ಞತೆಗೆಟ್ಟ ಪಾತಕಂಗೆಟ್ಟ ದುರಾತ್ಮನಂ ಕುಱಿತು ಭಾವಿಸದೇನುಮನೀ ಮಹಾತ್ಮನಂ ತೊಟ್ಟನೆಲೆಂತು ದೇವ ಯುವರಾಜನನೀತೆಱದಿಂ ಪೆಸರ್ಪುದೇ (ಕಾಪಂಶಾ.೯೬೬). ◘ ಇಲ್ಲಿ ನಾಮಪದದ ಮೇಲೆ 'ಪು' ಪ್ರತ್ಯಯವು ಪ್ರೇರಣಾರ್ಥದಲ್ಲಿ ಹತ್ತಿದೆ. [ಪೆಸರ್ + —ಪು$_1$]

**ಪೆಸರ್ವಡೆ,** ಪೆಸರುವಡೆ, ಹೆಸರುವಡೆ (ಕ್ರಿ). ೧. ಹೆಸರನ್ನು ಹೊಂದು; ನಾಮಧೇಯವನ್ನು ಪಡೆ : ಪೆಱಪೆಱ ಧರ್ಮಂಗಳನೀತೆಱದಿಂದಂ ತಂದು ಪೆಱಪೆಱರೊಳ್ ಪತ್ತಿಸಿ ಕಣ್ಣೆಱೆಯೆ ಚತುರೋಕ್ತಿ ಕೃತಿಯೊಳ್ ನೆಱೆದಿರೆ ಪೇೞ್ವುದು ಸಮಾಧಿಯೆನೆ ಪೆಸರ್ವಡೆಗುಂ (ಕಪುದ. ೯೬ ಪ್ರಯೋ); ಹೊಱಟ ಬೆನ್ನಿಂತೆಂಬ ನುಡಿಯುದು ಧರೆಗೆ ಕೂನನೆನಿಪ್ಪುದು ಪರಿಹರಿಸಿ ಸೌಂದರಪಾಂಡ್ಯರಾಯನೆನಲು ಪೆಸರ್ಪಡೆದ (ಬಸಪು. ೩೦-೬೦). ೨. ಪ್ರಸಿದ್ಧಿಯನ್ನು ಪಡೆ ; ಖ್ಯಾತಿಯನ್ನು ಹೊಂದು : ಮತ್ತಂ ಸ್ವಯಂಭುವಾಭಿಧಾನಪದವಿದ್ಯಾಛಂದೋವಿಚಿತ್ರಲಂಕಾರಂಗಳೆಂಬ ಮೂಱಱಿಂ ಪೆಸರ್ವಡೆದ ವಾಙ್ಮಯಮುಮಂ . . . ಮತ್ತಿನ ತನೂಜರ್ಗೆಲ್ಲಮುಪದೇಶಂಗೆಯ್ದಂ (ಆದಿಪು. ೬-೬೦ ಪ); ಧರೆಯೊಳು ವಿಶಾಲತೆಯೊಳತಿ ಪೆಸರ್ವಡೆದಿರ್ಪ ಪುರಪಟ್ಟಣಗ್ರಾಮಸಂಕುಳದ ನಡುವೆ ಕಿಱುವಳ್ಳಿಯಾಗಿಯುಂ ಕಣ್ಗೆ ಮೆಱೆದು ಹೆಂಪಿನೊಳಿರ್ಪುದು (ಸಿದ್ಧರಾ. ೦೯೬೦) ; ಧರ್ಮಾನುಜಂ ಭೂಪಾಲರೊಳ್ಪೆಸರ್ವಡೆದವಂ (ಕೃಬಿಹಾ. ೨೫-೦೫). **ಪೆಸರುವಡೆ :** ೨. ಪೆಸರುವಡೆದ ಮಧುರಸವಾಹಿನಿಯ ದಾಂಟಸಲು ಚಂದನೆಡೋಣಿಗಡರ್ದು . . . ನಿಟ್ಟಿಸಿದ (ಕೋಹಕ. ೩-೨೬). **ಹೆಸರುವಡೆ :** ೧. ದಶಗುಣೋತ್ಕರವೆನಿಪ ತತ್ಪ್ರಸರವೇಳೋರಂತೆ ಪರಿವೇಷ್ಟಿಸಿದ ಜಾಂಡಕಟಾಹಕೋಟಿಗಳಾವನುದರದಲಿ ನುಸಿಗಳಂತಿಹವದು ನಿಮಿತ್ತವೆ ಪೆಸರುವಡದುದನಂತನೆಂಬೀ *ಹೆಸರು ನಿಮ್ಮಡಿಯಲ್ಲದಾರಿಂಗಳವಡುವುದೆಂದ (ಜೈಭಾಗ. ೬-೧೩೦೩). ೨. ಹೆಸರುವಡೆದತಿ ಖಳರನಡೆಗೆಡಹಿದನು ರಣದೊಳಗೆ (ಕುಮ್ಮಾರ್ರಾ. ಕಂ. ೨೮೨). [ಪೆಸರ್+ಪಡೆ$_1$]

**ಪೆಸರ್ವಾಸಿ,** ಹೆಸರುವಾಸಿ (ನಾ). ಕೀರ್ತಿ ; ಖ್ಯಾತಿ ; ಪ್ರಸಿದ್ಧಿ : ಮಹಿಷಾಸುರಪುರಾಧೀಶ ಚಾಮರಾಜೇಂದ್ರನಿಂ ಮೆಚ್ಚುಂ ಪಡೆಯುದಿರ್ದೊಡೆವಂಗೆ ಪೆಸರ್ವಾಸಿಯಿಲ್ಲಂ (ಮರಾಕ. ೦೯೨-೦೯). **ಹೆಸರುವಾಸಿ :** "ಯಶಃ, ಕೀರ್ತಿಃ, ಸಮಜ್ಞಾ—ಕಿ ಕೀರ್ತಿಯ ಹೆಸರುಗಳು ಆದರೆ ಹೆಸರುವಾಸಿ" (ಸಿದ್ಧಾಂತಿ. ೩೨). [◘ ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪ]

ಹೆಸರುವಾಸಿಯಾಗು = ಪ್ರಸಿದ್ಧವಾಗು ; ಕೀರ್ತಿಯನ್ನು ಹೊಂದು : ಅವನ ಮನೆತನದವರೆಲ್ಲರೂ ಮಿಲಿಟರಿಸಾಹಸಗಳಿಗೆ ಹೆಸರುವಾಸಿಯಾಗಿದ್ದರು (ಸಕ್ಕಕ. ೦೦೯) ; ರಾಕೂರವಮನೆತನ ಕೀರ್ತಿ, ಪ್ರತಿಷ್ಠೆಗಳಿಗೆ ಹೆಸರುವಾಸಿಯಾದುದು (ಶರ್ಮಸಾ. ೫೬). [ಪೆಸರ್+ವಾಸಿ$_1$]

**ಪೆಸರ್ವಿಡಿ,** ಹೆಸರುಹಿಡಿ (ಕ್ರಿ). ಹೆಸರನ್ನು ಹೇಳು : ಶಿವಂ ಪಿಂತಿರುಗಿ ಪೆಸರ್ವಿಡಿದು ನಿಲ್ಲೆಂಬ ದನಿಯುಣ್ಮಿಲೊರ್ವರೊರ್ವರ್ ಮೞೆಯೊಳಡಗುವರ್ (ಕಬಿಪು. ೯೩-೬೦) ; ಪೆಸರ್ವಿಡಿದು ಕರೆವುತೇಳ್ಳಿಸಪಾಕ್ಷಿಯೆನುತ್ತೆ ಕರೆಯಲೊಡನಾಕ್ಷಣದೊಳ್ಪೊಸನುಲಿಗಳ್ಪಿಟಿಬಿಟಿರವಮೆಸೆಯೆ ಕರಂ ಸಿಡಿಯೆ ಸಿಬಿಕೆಯಿಂದವಳೆಳ್ದಳ್ (ಪ್ರಪಶಿ. ೨೦-೪೦). **ಹೆಸರುಹಿಡಿ :** ಅವಳು ಮಗನನ್ನು ಹೆಸರುಹಿಡಿದು ಕೂಗಿದರು (ಕೂಪ). [ಪೆಸರ್ + ಪಿಡಿ$_1$]

**ಪೆಸರ್ವೆಱು,** ಪೆಸರುವೆಱು (ಕ್ರಿ). ಪ್ರಸಿದ್ಧಿಯನ್ನು ಹೊಂದು : ಮ×ಯೆಱೆದ ಮಾರಸಿಂಗನಾ ಕುರುಳ ರಾಜಿಗಂ ಪೆಸರ್ವೆತ್ತಾ ಮರುಳಂ ತಂನ್ನ ಪತಿಳಕಂ ಪಿರಿಯ ಮಗಂ ಸತ್ಯವಾಕ್ಯಂ (ಎಕ. VII. ಶಿವಮೊ. ೫೬-೦೦ ; 1116) ; ಗರುವಿಕೆಗೀಬು . . . ಪೆಸರ್ವೆತ್ತ ನೆಗೞ್ತೆಗೆ ತಾಣವಾಗಿ ಬಲ್ಲರ ಬಗೆಯಲ್ಲಿ ಕೂಡಿ ನೆಲಸಿರ್ದು ಪೊಗೞ್ತೆಯನಾಂತಳಾಪಳಾ ಸರಸತಿ ಕೂರ್ಮೆಯಿಂದೊಸೆದು ಮಾಡುಗೆ ಕಬ್ಬದ ಬರ್ದಿನೇೞ್ಗೆಯಂ (ಕಬ್ಬಿಕಾ. ೩) ; ಪೆಸರ್ವೆತ್ತ ಗಣಧರಪ್ರಮುಖಸಮಸ್ತಸಭಾಜನಾಂಗತತಿಯೊಳ್ಪುಳಕಪ್ರಸರ ಮನಂದೊರ್ಮೆದಲೊಳ್ [ಪಸರಿಸೆ] ಪೊಣ್ಮಿದುದನೂನ ದಿವ್ಯಧ್ವಾನಂ (ಶಾಂತೀಶ್ವ. ೦೬-೦೦೦). **ಪೆಸರುವೆಱು :** ಬಸವ ಪೋಳಿಗೆ ಮಾರನಂತಹ ಪೆಸರುವೆತ್ತ ಶಿವೈಕ್ಯನಾವನು ವಸುಧೆಯೊಳು (ಬಸಪು. ೬೦-೬). [ಪೆಸರ್ + ಪೆಱು$_1$]

**ಪೆಸಱ್,** ಪೆಸರ್ು$_2$, ಪೆಸಱು, ಹೆಸರ್ು$_2$, ಹೆಸಱ್, ಹೆಸಱು (ನಾ). ಒಂದು ಬಗೆಯ ದ್ವಿದಳಧಾನ್ಯ ; ಮುದ್ಗ : ರಾಜಾನ್ನದ ಕೂೞುಂ ಪೆಸಱ ತೊವೆಯುಂ . . . ನಾನಾ ಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿದಂತೆ ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ (ವಡ್ಡಾರಾ. ೬೮-೦೯) ; ಪೊಸಪೆಸಱಗೆಯ ಬಣ್ಣದಂತೆ ಸೊಗಯಿಸುವ ನಾಮಂತಚೂಡಾಮಣಿಯ ಮೆಯ್ಯ ಬಣ್ಣಂ ವಿಧಾತ್ರನೆಂಬ ಚಿತ್ರಾರಿಯ ವರ್ಣಕ್ರಮಂಗೆಯ್ದ ಕದಳೀಗರ್ಭಶ್ಯಾಮಮೆಂಬ ಬಣ್ಣದಂತಾದುದು (ಕುಶಿಕಾ. ೨-೩೯ ಪ) ; ಜವೆ ಪೆಸಱುರ್ದೆಂಬಿಸನಾಡುವ ಪಾಲೊಳಗಟ್ಟು ಕುಜವ ಮೂಲಂಗಳೊಳಿಕ್ಕುವುದಾ ಮರನೊಪ್ಪುವ ಪಲ್ಲವದಿಂ ಪುಷ್ಪಂಗಳಿಂ ಫಲಂಗಳಿನೆಸೆಗುಂ (ಲೋಕೋಪ. ೬-೦೩). **ಪೆಸರ್ು$_2$ :** ದೇವರ ನಿವೇದ್ಯಕ್ಕೆ ರಾಜಾನ್ನದಕ್ಕಿ ಕೊಳಗ ಒಂದು ಪೆಸರು ಮಾನ ಒಂದು... ನುದಾದೀವಿಗೆ ಒಂದು ಇನ್ನಿನಿತುಂ ನಿತ್ಯವ್ರಯಮಾಗಿ ನಡೆವುದು (ಕಇಇ. ೭೯-೦೩-೯೦ ; ಸು. 1088). **ಪೆಸಱು :** ಘೃತದೊಳ್ ಪುರಿದುದ್ದು ಪೆಸಱು ಗೋದುವೆಪರಸಿ (ಕಬ್ಬಿಕಾ. ೨೬). **ಹೆಸರ್ು$_2$ :** "ಮುದ್ಗ—ಹೆಸರು" (೬ಶಧಿ. ೦೨೬) ; ಅಕ್ಕಿ ತುಪ್ಪ ಹೆಸರು ಮೆಲೊಗರವ ಕಾಯಿ (ಬೊಂಕಶಾ. ೦೯೪೦, ಕುಪುಪು. ೦೦೨-೯೬ ; 1332) ; ಧ್ವಜಾರೋಹಣದ ಧ್ವಜಸ್ತಂಭದ ನಯಿವೆದ್ಯಕೆ ಪೂಜೆ ಗ ೧ಸಂ ಅಕ್ಕಿ ಹೆಸರು ಬೆ ಗ ೩ ಮೇಲೊಗರ . . . ತೊಗಿನಕಾಯಿ ಬೆ ಗ ೧ (ಸೌಇಇ. IX–ii, ೬೩೩-೬ ; 1554) ; ಹೆಸರೂ ಬೇಡ, ಉಮ್ದೂ ಬೇಡ, ಸದ್ಯ ಮನೆಗೆ ಹೋದರೆ ಸಾಕು ಎನ್ನಿಸಿತು (ರಾಯಸ.೨೦). **ಹೆಸಱ್ :** "ಹೆಸಱ್–ಮುದ್ಗ" (ಚಾಶಿಂಶಾ. ೪). **ಹೆಸಱು :** "ಮುದ್ಗಮೆನಲ್ಕೆ ಹೆಸಱು" (ಕಂಗಶಾ. ೦೦೦-೩) ; ಪುಱ್ಗಿ-ಉರ್ದು, ತೊವೆ, ಹೆಸಱು ಮೊದಲಾದುವನಿಕ್ಕಿ ಅಟ್ಟ ಕೂೞ್ (ಕಪುದ. ಕಂ. ೦) ; ಭಕ್ಷಕ್ಕೆ ಗೋಧಿ ಪ ೩ ಉದ್ದು ಪ ಳ ಬೆಲ್ಲ ೧೦ . . . ಹೆಸಱು ಪ ೨೧ ತೆಂಗಿನ ಕಾಯಿ ಬಾಳೆಯ ಹಣ್ಣು ಅತಿಕೆಲೆ ಸಹ (ಎಕ. XV, ಬೇಲೂರು. ೬೦-೪೪; 1486) ; ಹೆಸಱು ತವಗುಣಿ ಕಡಲೆ ತೊಗರಿಗಳ ಬೇಳೆಯು ಹೊಸ ಬೆಲ್ಲವಿಕ್ಕಿ ಬೇಯಿಸಿ (ಸೂಪಶಾ. ೧-೬೦).

[ದೇ. II ತಮಿ. ಪಯಱು; ಮಲ. ಪಯಱ್, ಪಯಱು; ತುಳು. ಪದೆಂಜಿ ; ತೆಲು. ಪೆಸರ, ಪೆಸಲು; ಕೋಲಾ. ಪೆಸಲ್, ಪೆಸಾಲ್; ನಾಯ್ಕಿ. ಪೆಸಳ್ ; ಪರ್ಜಿ. ಪಯರಿ ; ಗೊಂಡಿ. ಪೆಸಲ್]

**ಪೆಸಱು** ‘ ಪೆಸಱ್ ’ ನೋ.

**ಪೆಹೆಲ್‌ವಾನ್** ‘ ಪೈಲವಾನ ’ ನೋ.

**ಪೆಳಕು** (ನಾ). ನಿಗದಿ ಮಾಡಿಕೊಂಡ ಸ್ಥಳ ; ಸಂಕೇತಸ್ಥಾನ : “ಸಂಕೇತ ಯುಕ್ತಸ್ಥಳಂ ಪೆಳಕೆಂದು ” (ಕರ್ಣಾಟ. ೪೫). [ ? ]

**ಪೆಳಕೆ, ಪೆಣಕಿ, ಪೆಣಕ್ಕೆ, ಹೆಳಕೆ** (ನಾ). ತೆಳುವಾದ ಹಲ್ಲೆ,—ಬಿಲ್ಲೆ; ಹೆಕ್ಕಳೆ : ಮಾತಿಲ್ಲದೆ ಉಗುರುಗಳಿಂದ ಪೆಳಕೆಗಳನ್ನು ಕಿತ್ತಿಸೆಯುತ್ತಿದ್ದಾಗ (ಹಸುಹೊ. ೩೭೮). **ಪೆಣಕಿ :** ಗೋಡೆಯ ಮೇಲೆ ಸುಣ್ಣದ ಪೆಣಕಿಯು ಹಾರಿ ನಾಲ್ಕು ಕಲೆಗಳು ನಿಂತಿದ್ದರೆ ಚಿಂತಾಮಣಿಯು ತನ್ನ ನಿಸ್ತೇಜಮುಖದ ಪಡಿನೆಳಲನ್ನೇ ಅಲ್ಲಿ ಕಾಣುವನು (ಕವಕ. ೬೩). **ಪೆಣಕ್ಕೆ :** ಕಲ್ಲಿನ ಪೆಣಕೆ ಹಾರಿ ಶಾಸನದ ಕಡೆಕಡೆಯ ಭಾಗವು ನಷ್ಟವಾಗಿದೆ (ಶಾಸಕ. ೭೮). **ಹೆಳಕೆ :** ಬಿರುಕಿನ ಸಂದಿಯಲ್ಲಿ ಬೆರಳು ತೂರಿಸಿ ಹೆಳಕೆಯನ್ನೆಬ್ಬಿಸಿದರೆ . . . ಕಾಣಬಹುದು (ಹಸುಹೊ. ೩೮). ‘ಹೊಳಕ್ಕೆ’ ಪರಾ. [←ತವಿ. ಪಿಳವೈ]

**ಪೆಳರ್** ‘ ಪೆಳಱು$_1$’ ನೋ.

**ಪೆಳರು$_1$** ‘ಪೆಳಱು$_1$ ’ ನೋ.

**ಪೆಳರು$_2$** ‘ಪೆಳಱು$_2$’ ನೋ.

**ಪೆಳರ್ಚಿಸು** (ಕ್ರಿ). ಹೆದರಿಸು ; ಅಂಜಿಸು ; ಭಯಪಡಿಸು : ಪುರದ ಪೃಥಿವಿಪಾಲಪೂರ್ವಾನ್ವಯದರಸುಗಳಂದಿನ ಚಕ್ರೇಶ್ವರರಂ ಪಿರಿದಪ್ಪವ ಗಡದಿಂದ ಪೆಳರ್ಚಿಸಿ ಬಲ್ಗಪ್ಪಂಗೊಂಡು ಇರಿಸಿದ ನವನಿಧಿಯೋ ಎನಲ್ (ಜಗನ್ನಾ. ೧-೫೭). [ಪೆಳರ್ಚು + —ಇಸು$_3$]

**ಪೆಳರ್ಚು** (ಕ್ರಿ). ಹೆದರಿಸು ; ಅಂಜಿಸು ; ಭಯಪಡಿಸು : ‘ಪೆಳರ್ಚಿಸು’ ಪರಾ. [<ಪೆಳಱು$_1$ + —ಚು$_1$]

**ಪೆಳರ್ವಡು** (ಕ್ರಿ). ಭಯಪಡು : ಹೆದರು ; ಅಂಜು : ವನಗಜಪೊಕ್ಕ ಮಾಳ್ಕೆದವ ಕೋಟಿಗ್ಗಸಜಿಗೊಳ್ ಕೆಸಱಾಟವಾಡಿ ಸೊಕ್ಕಿನ ಸೊವಡಿಂಗೆ ಮುತ್ತಿ ಮುಱುಂಬುಗಳಿಂಬಿಸೆ ರೋಮವಿಕ್ಕಿ ಬಿಕ್ಕನೆ ಬಿರಿವಂತೆ ಬಂದ ಬಲದೊಳ್ಪೆಳರ್ವಟ್ಟು[ಪಾಠಾಂ. ಬೆಳರ್ವಟ್ಟು, ಬೆಳರ್ವಟ್ಟು] ಮದಕ್ಕೆ ಪಂದ ಕಂಪಿನ ಕಳಭಂಬೊಲಿದುರ್ವದಿದರ್ಪರಸಾಕರನೊಂದುಸೂಕರಂ (ಅರ್ಜನೇ. ೩-೬೫). [ಪೆಳಱ್ (<ಪೆಳಱು$_2$) + ಪಡು$_1$]

**ಪೆಳವ** ‘ಪೆಟಿವ’ ನೋ.

**ಪೆಳವಳಿಸು** ‘ಪೆಳ್ಪಳಿಸು’ ನೋ.

**ಪೆಳವಿ** ‘ಪೆಟಿವಿ’ ನೋ.

**ಪೆಳಱ್** ‘ಪೆಳಱು$_2$’ ನೋ.

**ಪೆಳಱಿಸು, ಪೆಣಱಿಸು** (ಕ್ರಿ). ೧. ಹೆದರಿಸು ; ಭಯಪಡಿಸು ; ಅಂಜಿಸು : ಜುಂಜೆಯ ದನಿ ದಿಕ್ಪಾಲರನಂಜಿಸೆ ತಳ್ಪೊಗೆವ ಕೋಡ ಕಾಳೆಯ ದನಿ ದಿಕ್ಕುಂಜರಮಂ ಪೆಳಱಿಸೆ [ಪಾಠಾಂ. ಬೆದಱಿಸೆ] ನಭಮಂ ಜೇವೊಡೆಯುಲಿವು ಸುತ್ತಿ ಮುತ್ತಿತ್ತಾಗಳ್ (ಶಂರಾಪಾ. ೪-೫೭) : ಪೊಡವಿ ಯೊಳಗಿರ್ದುರಗರಾಜನ ಹೆಡೆಹೆಡೆಯನಪ್ಪಳಿಸಿ ದಿಗಿಭಪನೊಡನೆ ಪೆಳಱಿಸೆ . . . ಶಿವಿತ್ತದಿತ್ತಂ ಬಿಡದೆ ದಶರಥನೃಪನ ಧನುರ್ಗುಣಘೋಗಟಂಕಾರ (ಶಮುರಾ. ೨-೫೦) ; ನೀನು ಪ್ರೀತಿಯಿಂ ಸಕಲದೇವಾನ್ನಮಂ ಸಲಿಸೆ ನಿನ್ನಯ ನೆನಹಿನಿಂ ಜನಿಸಿದ ಭೂತಜೀವರ್ಗೆ ಸಂತೃಪ್ತಿಯಹುದೆಲೆ ಮಹಾ ಪೂತ . . . ಪೆಳಱಿಸಬೇಡ ಸಲಿಸೆನಲು (ಶ್ರೀಕೃಷ್ಣ. ೪-೫೫). ೨. (ಆಲಂ) ಓಡಿಸು ; ನಿವಾರಿಸು ; ತೊಲಗಿಸು ; ನಾಶಮಾಡು : ಬೆಳಗಿ ದಿಗಂಬರ ಪ್ರತತಿಯಂ ಕುಮುತೋಗ್ರತಮಃಪ್ರಕಾರಮಂ ಪೆಳಱಿಸಿ . . . ನಿರ್ಮಳನ ಕಳಂಕ ಚಂದ್ರನೆಸೆದಂ ಧರೆಗಚ್ಚರಿ ಪೆರ್ಚೆ ತೇಜದಿಂ (ನೇಮಿಪು. ೧-೨೦) ; ಮಳರಹಿತದರ್ಶನಮನಸ್ಖಳಿತಸ್ವರ್ಗಾಪವರ್ಗಸುಖಕರಮನದಂ ಪೆಳಱಿಸು ವುದಾತ್ಮನೊಳ್ಸಂಗಳಿಸಿದನಂತಾನುಬಂಧಿನಾಮಕಷಾಯಂ (ಶಾಂತೀಶ್ವ. ೧೩-೬೨). ೩. ಕಳೆಗುಂದಿಸು ; ತೇಜೋಹೀನವನ್ನಾಗಿ ಮಾಡು : ಬಳಸಿ ಚಿಲಿಮಿಲಿಪ ವಿಹಗಂಗಳ ಕಳಕಳದೊಡನೆ ತೊಡರ್ದು ಸರಸಿಜವಳಮಂ ಪೞಗೊಳಿಸಿ ಕುಮುದಮುಖಮಂ ಪೆಳಱಿಸಿ ಕೀಡಿತ್ತು ಸುಪ್ರಭಾತಸಮೀರಂ (ಕುಸುಮಾ. ೪-೭೦). **ಪೆಣಱಿಸು :** ೧. ರಥಪರಿವೃಢಮೆಂಬ ಗಿರಿಯೇಱಿ ಪೆಣಱಿಸಿ ರಥರಾಕ್ಷಸನೊಸೆದೀಯೆ ಪೃಥುವೀರ್ಯನು ಮಕರಧ್ವಜಯುತ ಪುಷ್ಪರಥಮನಿರದೆ ಕೈಕೊಂಡು (ನೇಮಿಸಂ. ೧೪-೧೪೪). [ಪೆಳಱು$_1$ + —ಇಸು$_3$]

**ಪೆಳಱು$_1$, ಪೆಡಱು, ಪೆಣಱು, ಪೆಳರ್, ಪೆಳರು$_1$** (ಕ್ರಿ). ೧. ಹೆದರು ; ಭಯಪಡು ; ಅಂಜು : “ಪೆಳಱು—ಭಯೇ” (ಶಮದ) ; ಮದಕೋಕಿಲ ಕಲನಿನದೆಯ ವದನಸುಧಾಸೂತಿ ಬೆಳಗೆ ಪೆಳಱಿದ ತಮವಿಪ ಪುದಿದು ಪೆಱಗಿರ್ದುದೆನಿಪುದು ಮದಗಜಗಮನೆಯ ವಿನೀಲಕೇಶಕಲಾಪಂ (ಆದಿಪು. ೩-೯೨) ; ಪೆಳಱಿದ ವಾಜಿರಾಜಪವನಂಜಯನಾ ತ್ತರುಮೂಲದೇಶದಿಂ ತಳರ್ದು . . . ಮಣಿಶೃಂಖಳೆಯುಂ ಪಿಡಿಯಲ್ (ಕುಸುಮಾ. ೧೪-೯೩) ; ಬಿಡು ಬಿಡು ಪಿಡಿಯದಿರೆಲೆಯೆಲೆ ಜಡಮತಿ ಸಾವಿಂಗೆ ಪೆಳರ್ದು ಪೊಕ್ಕುದು ಬಂದೀ ಗುಡಿಯಂ ಕುಱಿಯಿದು (ವೃಷಭ. ೧೭-೪). Δ **ಪೆಡಱು :** ೧. ಧರೆ ಕಂಪುಗೊಳ್ಗುಮಾಸಾಕಲಿ ಪೆಡಱುಗುಂ (ಎಕ. VII, ಶಿಕಾ. ೧೧೪-೨೫ ; 1096). **ಪೆಣಱು :** ೨. (ಆಲಂ) ಸೀಳಿಹಾಕು ; ಕೊಲ್ಲು (?) : ಇರುಳೆಂಬ ಕಂಭದಿಂ ಹಿಮಕರನಾದು ಕರಿಯ ತೆಱದಿ ತಳ್ಪೊಗೆಯ ಸುಧಾ ಕಿರಣಮದವ್ವಣ್ಕೆ ಪರಿದುದು ವಿರಹಾಕುಳರೆಂಬ ಬೀರರಂ ಪೆಣಱುತ್ತುಂ (ಆದಿಪು. ೬-೪೩). **ಪೆಳರ್ :** ೧. ಲಲನೆಯರು ಮಾನಕಗಿದಾವಡಂ ಶಿಕ್ಷಾದಿಗಳಿಗೆ ಪೆಳರ್ದಾವಡುಂ ಪರಪುರುಷಸಂಪರ್ಕವುಳಿವುದೆ ಕನಿಷ್ಠತರಮಾದ ಪಾತಿವ್ರತ್ಯವು (ಮಲ್ಲಿಶ. ೧೪-೨೯). **ಪೆಳರು$_1$ :** ೧. ಮಾವುರಿಯ ಬಿರು ದನಿಗೆ ಕೈಪರೆಗೆ ಬಾಯ್ಬುರೆಗೆ ಕಲ್ಗವಣೆಗೊಂದಿನಿತು ಪೆಳರಿ ಗಾಱಾಗುತುಂ, ಭುರ್ರೆಂದು ಪೆರತೊಂದೆಡೆಗೆ ಪಾರಿ ಮುಂಡಿಸುತೆ ತೊಡಗಿದಪವಿನ್ನೊಮ್ಮೆ ನೆಲ್ಮೇವಿಗೆ (ಶಕ್ರಾಂಗ. ೫೩-೧೪೭೨).

[ದೇ.॥ ತವಿ. ಪಿಱಟ್ಟು ; ತೆಲು. ಪೆಱುಕುಱು, ಪೆಲ್ಕುಱು]

**ಪೆಳಱು$_2$, ಪೆಳರು$_2$, ಪೆಳಱ್** (ನಾ). ಭಯ ; ಅಂಜಿಕೆ ; ಭೀತಿ ; ಹೆದರಿಕೆ : “ ಅಗುರ್ವು, ಬಿಗುರ್ . . . ಪೆಳಱು, ಮಲ್ಲಱಿ, ತಲ್ಲಱಂ, ಅದಿರ್ವು — ಈ ೧೦ ಭಯಂ ” (ಕರ್ಣಾ. ೫೭-೨೨೩); ಇಳಿದಳಿಯನೇಳದಂ ಸೂಕಳಿಯೋಕಳಿ ಕಳಱು ಪೆಳಱು ಮಱುಕುಳಿಯಳಿಯಂ. . . ಇಱುಕುಳಿ ಯಿವಾದಿಯಾಗಱು ಕುಳನು (ಕಪಿದ. ೨೭) ; ಕೋಗಿಲೆಮಱು ಮಾಮರದೊಳ್ ಕಾಗೆಯ ಕೊತ್ತಟಿಯೊಳೆಟ್ದು ಪೋಗಲುಮಿರಲುಂ ಕೂಗಲುಮೆಮೆದೆಱ್ ದಿಕ್ಕುಮೇಗೆಯ್ಯಲುಮಾರ್ತುದಿಲ್ಲ ಬನದೊಳ್ ಪೆಳಱಿಂ (ಕಣ್ಣಪು. ೫೭ ವ್ಯಾಖ್ಯಾ). **ಪೆಳರು$_2$ :** ಇಲ್ಲ ಕರು ದನವೆಂಬ ಹೋಹೋಯ್ತು ಯೆತ್ತೆಂಬ ಸೊಲ್ಲಿನಿಂ ಮನೆಮನೆಯ ಪೆಳರು ಪಿರಿದಾಯ್ತು (ಕಾಲಕೂರ. ೭೯-೧೪೭); ಸುಯ್ವೊಡಲಿನಿಂ ಪೆಳರ ಮೆಟ್ಟಿ ಬಾದಂ ಕೊರಗ ಹುಯ್ಯಲಿಂ ಹಂದರಂ ಕಳವಳಿಸುತಿರಲು (ಕಾಲಕೂರ. ೧೭೦-೩೯೨). **ಪೆಳಱ್ :** “ಪೆಳಱಬಲಿಂದೆಲ್ಲಿಯುಂ ಕವಿವರರುಸಿರಲ್ ನಿಲ್ಲದೆ ಭಯನಾಮ” (ಶಬ್ದಮ. ೧೦೮); ಮನದೊಳಗೆ ಧೃತಿಗೆಡದೆ ಅವನಿಪಂ ಕೇಳ್ದೊಡಂ ತನುವ ತತ್ತಱದೆಱ್ ಸುವಂ ಬಳಿಕವೆಂಬ ಪೆಳಱಣಮೆಯ್ದು ತಲೆದೋಱದೆ ನೆನಸುಮೆನಗಂ ಸಾವು ತಪ್ಪದು (ಅರಾಜ. ೧-೭-೨೨). [<ಪೆಳಱು$_1$]

**ಪೆಳಱುಗೊಳ್** (ಕ್ರಿ). ಹೆದರು ; ಅಂಜು ; ಭಯಪಡು : ‘ಪೆಳಱು ಗೊಳಿಸು’ ಪರಾ. [ಪೆಳಱು$_2$ + ಕೊಳ್$_1$]

**ಪೆಳಱುಗೊಳಿಸು** (ಕ್ರಿ). ಭಯಗೊಳಿಸು ; ಅಂಜಿಸು ; ಹೆದರಿಸು : ಅತ್ತ ಮತ್ತೊಮ್ಮೆ ಹಳಿಗೂಳಿಯಂ ಪೆಳಱುಗೊಳಿಸಿದಡೆ ಕಿಸಟಂಕಕಾಱರ ನಿಕ್ಕಿದೊಡೆ ಕಂಸನಾ ಚಾಳಾನೆಯಂ ಕೆಡಹಿದೊಡೆ ಮಹಾದ್ಭುತವಾಯ್ತು (ಸೌಳ್ಳಭಾ. ೨೫-೩೦). [ಪೆಳಱುಗೊಳ್ + —ಇಸು$_3$]

**ಪೆೞ** (ನಾ). (?) : ಮತ್ತಂ ಪುಭಯ ನಾನಾದೇಸಿಗಳು ದೇ × × ×ಕ್ಕೆ

ಯೂರೊಳಗೆ ಹೊರ್ಕ ಪೆಳಯಲ್ಲಿ ಬಿಟ್ಟ ಪಣ ೨ ಹೆಱವರ ಪೆಳಯಲ್ಲಿ ಬಿಟ್ಟ ಪಣ ೨ ಮತ್ತಂ ಕುದುರೆಗೆ ಪೀಸವೊಂದಂ ಬಿಟ್ಟರ್ (ಕ್ರಿಇಶ. XV. ೧೩೫-೫೬ ; 1179). [ ? ]

**ಪೆಳ್$_1$** (ನಾ). ಪೊದೆ ; ಪೊದರು : ಪೆಳ್ : ಒಂದು ಕೈಯಲ್ಲಿ ಸೀರೆಯ ನಿರಿಗೆಗಳನ್ನು ಹಿಡಿದುಕೊಂಡು ಕಂಟಿ ಪೆಳಗಳ ಮಧ್ಯದಲ್ಲಿ ಓಡಲನುವಾದನೆ (ತಂದುಙ. ೩೦); ಇಂದು ಅಲ್ಲಿ ಕೆಂಪು ಬಟ್ಟೆ ಬಿದ್ದುಕೊಂಡಿದ್ದುದರ ಬದಲು ಸೂರ್ಯಪ್ರಭೆಯಂತೆ ಲಕಲಕಿಸುವ ನಿಲುವಂಗಿಯ ತುದಿಯೊಂದು ಪೆಳೆಯಲ್ಲಿ ಮರೆಯಾದಂತೆ ಕಂಡಿತು (ಹುಮಾಂಕ. ೧೮). 'ಪೆಂಳ್$_1$' ಪರಾ. [ ? ]

**ಪೆಳ್$_2$** (ನಾ). ಗುಳ್ಳೆ ; ಬೊಕ್ಕೆ ( ? ) : ಕಣ್ಣನೊಳಗಣ ಕಸ ಕೈಯೊಳಗಣ ಪೆಳ[ಪಾಠಾಂ. ಪೇಳ್ ] ಬಾಯೊಳಗಣ ಬಗದಳ ಮನದ ಶಂಕೆ ಹಱದಲ್ಲದೆ ಪ್ರಾಣಲಿಂಗಿಯಾಗಬಾರದು (ಮನುಗುಂ. ೪. ೨೫೪-೩೩).

[ ?. / ತನಿ. ಪಿಳವೈ]

**ಪೆಳ್ತಿಯೂರ್** (ನಾ). ಒಂದು ಊರಿನ ಹೆಸರು : ಕುಡುಕೂರ ಭಟಲ ದೋರಯ್ಯನ ಮಗಂ ಮಾರಯ್ಯಂ ಜಿನವಾರನೊ × × × ಳ್ದಿಯ ಪೆಳ್ತಿಯೂರಟಿವಿನೊಳ್ಸತ್ತಂ ದೋರಯ್ಯಂ ಕುಡುಕೂರಲ್ಲಿ ಲ್ಲಿಸ್ಲಿಱಿಸಿದಂ (ಎಕ. VI. ಮೂಡಗೆ. ೫೦ ೫; 997). [ ? +ಊರ್ ]

**ಪೆಳ್ಬಳ** (ನಾ). ಭಯ ; ಹೆದರಿಕೆ ; ಗಾಬರಿ : 'ಪೆಳ್ಬಳಿಸು'. 'ಬೆಳ್ಬಳ' ಪರಾ.

**ಪೆಳ್ಬಳಿಸು, ಪೆಪ್ಪಳಿಸು, ಪೆವ್ವಳಿಸು, ಪೆಳವಳಿಸು, ಪೆಳ್ವಳಿಸು, ಹೆಪ್ಪಳಿಸು** (ಕ್ರಿ). ೧. ಹೆದರು ; ಬೆದರು ; ಭಯಪಡು ; ಗಾಬರಿಗೊಳ್ಳು : ಪೊಸತಲದೊಂದು ತಾವರೆಯ ಗೆತ್ತು ಮುಖಾಬ್ಜಮನೊಂದು ತುಂಬಿ ಚುಂಬಿಸೆ ಸತಿ ಬೆರ್ಚಿ ಪೆಳ್ಬಳಿಸಿ ನೋೞ್ಪುದುಂ (ಕಂಪಾ. ೫-೩೩) ; ಕುಲಶೈಲಂಗಳ ಪದ್ಮಿನೀಕುಲದ ದೇವೀಸಂಕುಲಂ ಬೆರ್ಚಿ ಪೆಳ್ಬಳಿಸುತ್ತುಂ ದೆಸೆಯಾನೆ ಬೆರ್ಚಿ . . . ಘೂರ್ಣಿಸಿತ್ತು ರಘುಜಪ್ರಸ್ಥಾನಭೇರೀರವಂ (ಕಂರಾಪಾ. ೧೨-೧೮) ; ಕೇಸರಿಗೆ ಪೆಳ್ಬಳಿಪ ತುರಗಮುಖಿಯರ್ಕಳಿಂ ತುರಗಮುಖಿಯರನಱಮೆ ಱೋಡಿಸುವ ಕಪಿಗಳಿಂ (ಜಂಪು. ೧೧-೨೭ ರಗಳೆ) : ಸುತ್ತಿತ್ತಲುಂ ನೋಡಿ ಪೆಳ್ಬಳಿಸುತಿರೆ ಸೀತೆ, ಕಣ್ದೆರೆದನಾ ರಜಿಕರಾಕ್ಷಸಂ (ಶ್ರೀರಾಮಾ. ೨೯೩-೪೨೭). ೨. (ಭಯದಿಂದ) ತಿರುಗು ; ಚಲಿಸು : ಪರಿಮೂತ್ರಂ ಛಿನ್ನಲಂಡಂ ಸುರಿಯೆ ಮದಜಳಂ ಮೆಯ್ಯೊಳಬ್ಬಾಡೆ ಭೀತಾತುರಚಿತ್ತಂ ಸುತ್ತಲುಂ ಪೆಳ್ಬ[ಪಾಠಾಂ. ಪ್ಪ, ಳ್ವ]ಳಿಸೆ ನಯನಮುತ್ಕಂಪಿತಂ ಕುಂಚಿತಾಂಗಂ ಪರಿದೇಳಾಕುಂಜರಂ ಪೊಕ್ಕೆದೆವಿಡುಕದೆ ನಿಂದಿತ್ತು ಮತ್ತೊಂದಿಭಂ ಸಾರ್ತರೆ ಕರ್ಣಾಘೂರ್ಣಮಂ ಪನ್ನಮ್ಯಗವಿಳಯನಿಷ್ಪಾದಕಂ ಸಿಂಹನಾದಂ (ಪುಳ್ಳಕು. ೧೨-೯೭ : ಸೂಕ್ತಿಸು. ೩-೬೯ ನೋ). **ಪೆಪ್ಪಳಿಸು** : ೧. ನಡುಗುತ್ತಿರ್ಕೆ ಕಂಡಪ್ಪಳಿಂದ ಮೃಗಾಕ್ಷಿ ಪೆಪ್ಪಳಿಸಿ ದೆಸೆಯುಂ ನೋಡುತ್ತುಂ ಪೊರ್ದಿದಳ್ ನೃಪಚಂದ್ರನಂ (ಅಜಿತಪು. ೬೮೫) ; ಅಲ್ಲಿಗೆ ಚಿತ್ರಾಂಗನೆಂಬ ಸಾರಂಗಂ ಘೋರೆನೆ ಬಂದು ನೀರಂ ಕುಡಿಯಲಣ್ಮದೆ ಪೆಪ್ಪಳಿಸಿ ಪೆಱಗಂ ನೋಡಿ ನಡುಗುತ್ತುಂ ನಿಂದುದಂ ಕಜ್ಜಪಾದಿಗಳ್ ಕಂಡು (ಕಂಪಕಂ. ೩೦೭-೮) ; ಇಂತಹ ಸುಲಭೋದ್ವೇಗಗಳ ಕ್ಷುದ್ರಭಾವಗಳ ಕಿರುದೆರೆಗಳಿಂದಲೇ ಹೀಳನಾಗಿ ಪೆಪ್ಪಳಿಸಿ ಮನ್ನನಾಗಿ ದಿಙ್ಮೂಢನಾಗಿರುವ ನೀನು : . . ತೊಂತುಪೋಗಿರುವ ಈ ರಾಷ್ಟ್ರವೆಂಬ ಹಳೆಯ ನಾವೆಗೆ ಹೊಸ ಕರಣಧಾರನಾಗಿರುವೆ! (ಬಭ್ರ. ೨೦೫-೨೦). ೨. ತಳಮಳಗಾಗದ ತನು ಪೆಪ್ಪಳಿಸದ ನೆಲೆ ತೊಲಗದಱವು ಪೆಳಱದ ಚೇಷ್ಟಾವಳಿ ಪಂಚನಮಸ್ಕಾರದ ಕಳ್ದುಂತಿ ತಮುಗಮರೆ ಮಾಡಿಪಿವರ್ ಮಣಿಚೂಳರ್ (ಶಾಂತಿಪು. ೬-೮೦).
**ಪೆವ್ವಳಿಸು** : ೧. ಮತ್ತಮೊವರ್ ಚಿಂತಾವಿಹಾರಭರದೊಳಟಲ್ದು ನಸು ಮುಚ್ಚಿದ ವಿಲೋಚನದಿನಿಱದು ಪೆವರ್ೊಲೆಯ ಕೆಲದೊಳ್ ಪನಿವ ಕಣ್ಣನೀಯ ಸಪ್ಪುಳ್ಗೆ ಪೆವ್ವ[ಪಾಠಾಂ. ರ್ವ]ಳಿಸಿ ಬಱದೆ ಕಂಪಿಸುವಳ್ (ವರ್ಧಮಾ. ೪. ೫೬ ವ).

**ಪೆಳವಳಿಸು** : ೧. ಭಯಂಗೊಳ್ಳ ಬೆಳ್ಳರುಮಂ ಉಬ್ಬರಿಸುವ ಕುರುಡರುಮಂ ಪೆಳವಳಿಸುವ ಕಿವುಡರುಮಂ ಕಂಡು (ಲೀಲಾವ. ೫-೧೧೪ ವ). **ಪೆಳ್ವಳಿಸು** : ೧. ಕನಸಿನೊಳ್ ರಥಾಂಗಧರ ಯಕ್ಷರೂಪಮಂ ಕಂಡು ನೆನಸೆಂದು ತಂತಪ್ಪ ನೆಲೆಗಳೊಳ್ ಪುರಸ್ಥರಾಜಕೋಟ ಪೆಳ್ವಳಿಸೆಯುಂ (ಶಾಂತಿಪು. ೧೦-೦೨೨ ವ).
**ಹೆಪ್ಪಳಿಸು** : ೧. ಕಳವಳಿಪ ಹೆಪ್ಪಳಿಪ ತೋಳಿಪ . . . ಬಳಲ್ವ ಹಾಹಾಕ್ರಂದ ನಂಗೆಯ್ವುಳಲ್ವ ಜೀವಿಗಳೆಲ್ಲ ದುಃಖಂ ಕಳಲ್ವವೋಲೀಕ್ಷಿಸಲಿಕಯ್ಯಂದಾ ಮಹಾಕರುಣೆ (ಕಾಸಂಕ. ೮-೧೭) ; ಹರನಿಂತು ಮೂಗುವಟ್ಟಿರೆ ಕೆಡೆದು ದಡದಡಿಸಿ ಕೆರಳಿ ಕೂರಂಬು ಮಱುವೊನೆದೇರ್ಪ ಮಱಿವೆಲ್ಲೆಯಿರವಿನಂತಿರಲು ಹವ್ವನೆ ಹಾಱಿ ಹೆಪ್ಪಳಿಸಿ (ಸೌಂದರ. ೧೪-೩೦). ೩. ಹೆದರಿಕೆಯನ್ನುಂಟು ಮಾಡು ; ಹೆದರಿಸು : ತಪ್ಪದಹುದು ಕೌಶಿಕನ ಕೋಟಲೆ ಈಗ ಮುಪ್ಪುರಿಗೂಡಿ ರಾಯನಿಗೆ ಹೆಪ್ಪಳಿಸಿತು ಶಿವಶಿವ ಎಂದು ಬೆಱಗಾಗಿ ಒಪ್ಪಗುಂದಿದ ಮನದೊಳಗೆ (ಹರಿಶ್ಚಂ. ೧-೮೩). ೪. ಹಿಂದುಮುಂದು ನೋಡು ; ಸಂಕೋಚಪಡು : ಅರ್ಪಿತಪ್ರಸಾದವಲ್ಲದಿಹನ್ನವ ಹೆಪ್ಪಳಿಸದೆ ಬಲು ಮನದಿಂದುಂಬವ ಸತ್ತ ಹೆಣನ ಮಲವಂ ಕಿಲ್ಬಿಷಮಂ ನಿತ್ಯಂ ಸಲೆ ಸವಿವವ ಪಾತಕಮಂ (ಬೀಳ್ವಾಹೊ. ೯೩-೫೨೮) ; ಅರ್ಪಿಸಿದ ಪದಾರ್ಥಮುಮನೊಪ್ಪುಗೊಂಬ ಪ್ರಸಾದಿ ಅರ್ಪಿಸದ ದ್ರವ್ಯಕ್ಕೆ ಹೆಪ್ಪಳಿಸುವ ಪ್ರಸಾದಿ ತನು ಸೋಂಕಿತಂ ಲಿಂಗಕೇನ ಬಲ್ಲ ಪ್ರಸಾದಿ ಮುಹಮುಟ್ಟಿತಂ ಲಿಂಗಕೇನ ಬಲ್ಲ ಪ್ರಸಾದಿ (ಬೀಳ್ವಾಹೊ. ೧೦೫-೧೯೮). 'ಬೆಳ್ಬಳಿಸು' ಪರಾ.

[ಪೆಳ್ಬಳ + — ಇಸು$_3$]

**ಪೆಳ್ವಳಿಸು** 'ಪೆಳ್ಬಳಿಸು' ನೋ.

**ಪೆಳ್ಳಗಿಸು** (ಕ್ರಿ). ಹೊರಕ್ಕೆ ಎಳೆ : ಈ ಬೆಟ್ಟವನ್ನು ಬೇರು ಮುಟ್ಟ ಕಿತ್ತು ಪೆಳ್ಳಗಿಸಿ ಎತ್ತಿ ನನ್ನ ತಲೆಯ ಮೇಲಿಟ್ಟರೆ ನಾನು ಹೊರುವುದಕ್ಕೆ ಸಿದ್ಧ (ಕಥಾಮಂ. IV. ೩). [? + — ಇಸು$_3$./ತೆಲು. ಪೆಲ್ಲಗಿಂಚು]

**ಪೆಳ್ಳನೆ** (ಅ). ಒಂದು ಅನುಕರಣಾವ್ಯಯ : ಈ ರೂಪೆಂಬುದು ಭುವನ ಜನಾರಾಧ್ಯಂ ಚಕ್ರಿಜನನಿಷೇವಿತಮಿದಱೊಳ್ ಸಾರದಳಿಪೆಂದು ಪೆಳ್ಳನೆ ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್ (ಕಂಪು. ೯-೯೩).

[ ? + — ಅನೆ$_1$ ]

**ಪೆಱ$_1$, ಪೆರ$_1$** (ಸಪೂರೂ). 'ಪೆಱತು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೆಱವರಿಜು', ಪೆಱವುಟಿ$_1$' ಪರಾ. ಪೆರ$_1$ : 'ಪೆರತಿ' ಪರಾ. [< ಪೆಱತು]

**ಪೆಱ$_2$, ಪೆರ$_2$, ಹೆರ$_1$, ಹೆಱ** (ಸಪೂರೂ). 'ಪೆಱಗು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೆಡ', 'ಪೆಱಪಿಂಗು', 'ಪೆಱಸಾರ್' ಪರಾ. ಪೆರ$_2$ : 'ಪೆಗದೆಗೆ' ಪರಾ. ಹೆರ$_1$ : 'ಹೆರದೆಗೆ', 'ಹೆರಹಿಂಗು' ಪರಾ. ಹೆಱ : 'ಹೆಱಹಿಂಗು', 'ಹೆಱಸಾರ್' ಪರಾ. [< ಪೆಱಗು]

**ಪೆಱ$_3$** (ನಾ). (?): ಬಾಡದ ಸ್ವಯಂಭುದೇವರ್ಗ್ಗೆ ಊರ ತೋಟದ × × × ಕೂಯ್ವಲಿ ವರ್ಷಂಪ್ರತಿ ಅಯ್ದು ಪೆಱ ನನ್ದಾದೀವಿಗೆಗೆ ಬಿಟ್ಟರು (ಎಕ. XI. ದಾವಣ. ೦೭೦-೩೫ ; 1065). [ ? ]

**ಪೆಱಊಟಿ** 'ಪೆಱವುಟಿ$_2$' ನೋ.

**ಪೆಱಂಟೆ** (ನಾ). (ನೇಗಿಲ) ಗುಳ : ನಾಲಗೆವಂಡಿ ಕಾಲ ಮುಟ್ಟಿ ಕೈಗೊಡೆ ತೀವಿದ ಪಳ್ಳ ಪೆರ್ಪೆಣಂ ಪಾಲಿ ಪೆಱಂಟೆ[ಪಾಠಾಂ. ಟಿ] ತಳ್ತಿಱನು ಮೆಂಬವಱೊಂದು ಕಥಾವಿನೋದದಿಂ ಲೀಲೆಯನಾಂತು ರಾಜಸುತನುಂ ಜಠರಾಮಿಳನಿಂದ್ರದತ್ತನುಂ ಮೇಳಿಸೆ ವ್ಯರ್ಥವೇದನಸಮನ್ವಿತರೆಯ್ದರಾ ತಿರ್ದರಾಪಗಂ (ಪುಣ್ಯಾಸ್ರ. ೩-೦೩):

**ಪೆಱಕೆಣ್ದಱಿವು** (ನಾ). ಹಿಂದಿನ ಜನ್ಮದ ಅಱಿವು : ವಿದಲಿತ ಪುಷ್ಪಸೌರಭ ದಿನಚ್ಯುತಕಲ್ಪದ ಶುಕ್ಲಲೇಶ್ಯ ಲೆಪ್ಪದ ಕರ: ಮಹ್ರಣಂತದ ಬಲು

ಪೊಳೆವುನ್ನತ ತಿಗ್ಮರೋಚಿ ಬಣ್ಣದ ರುಚಿ ಮಿಂಚು ಮಿಂಚು ಪೆಱಕಣ್ಬೞವಾಗಿರೆ . . . ಮೆಱೆವಂ ಕುಮಾರಕಂ (ಅನಂತ. ೬-೦೬).

[ಪೆಱ₃ (< ಪೆಱಗು) + ಕಣ್ಬೞವು]

**ಪೆಱಕಾಲ್** 'ಪೆಱಗಾಲ್' ನೋ.

**ಪೆಱಕಾಲ್ಗೊಳಿಸು** (ಕ್ರಿ). ಹಿಂಗಾಲಿನ ಮೇಲೆ ನಿಲ್ಲಿಸು : ಸುಳಸುಳಿದಶ್ವಮಾನೇಱುತೆ ಪೊಳೆಯಿಸಿ ಮೀಗೆ ದಂಡೆಗುಡುತ್ತಿದಿರ್ಚುತೆ ಪೆಱಕಾಲ್ಗೊಳಿಸಿ ಪೆಡಂಮೆಟ್ಟುತ್ತಮಪ್ವಳಸುತ್ತೆ ಪಳಂಚಿದರ್ತುರಂಗಿಗಳದಱೊಳ್ (ರಾಜಶೇ. ೦೩-೯೩). [ಪೆಱಕಾಲ್ (< ಪೆಱಗಾಲ್) + ಕೊಳ್₁ + – ಇಸು₁]

**ಪೆಱಗಣ್** 'ಪೆಱಗು' ಪರಾ.

**ಪೆಱಗಣ** 'ಪೆಱಗು' ಪರಾ.

**ಪೆಱಗನೆ** (ಅ). ಹಿಂದೆಯೇ; ಹಿಂಬದಿಯಲ್ಲೇ : ಎನ್ನಯ ಸಖಿನಸತ್ತ ಪೊಯ್ದುಪೆ ಮಾಣೆಂದೆನುತಂ ಕೋಪದಿನಾ ಪುರುಷನ ಪೆಱಗನೆ ತಾನುಮಂತ ರಿಕ್ಷಕ್ಕೊಗೆದಂ (ಅನಂತ. ೬೬೩) : ಪೊಱಮಟ್ಟು ಮಿರುಟಂ ಪೆರ್ದುಱುವಿನ ಪೆಱಗನೆ ಚತುರ್ಬಳೋಪೇತಂ ತಾಂ ತಱಸಂದು ಪೋಪ ಪದದೊಳ್ (ನೇಮಿ. ೧೧-೦೩೬).

**ಪೆಱಪೆಱಗನೆ** (ದ್ವಿರುಕ್ತಿ) : ಬೞಯಾನೆ ಮಕ್ಕಳ್ ಭೋರ್ಗರೆದೆಱುತುಂ ಪೆಱಪೆಱಗನುತೆ ಪರಿತರೆ (ಶಂಕರ. ೨-೨೯). [ಪೆಱಗು + – ಅನೆ₁]

**ಪೆಱಗಾಲ್**, ಪೆಱಕಾಲ್ (ನಾ). ಹಿಂದಿನ ಕಾಲು; ಹಿಂಗಾಲು : ಪೆಱಗಾಲಡೆಯಿಂ ನುಸುಳ್ದೋಡಿ ಕಾಡಿ ಸಂಗಳಿಸಿತದೊಂದು ಪಲ್ಲಮಱತಾಯ್ಬಿಡಿಗುತುಮನಂತಸೌಖ್ಯಮಂ (ಚಂದ್ರ. ೩-೬೩). **ಪೆಱಕಾಲ್ :** ಕಡವೆ ತುಱಿದು ಕದಡಿದೆಡೆಯೊಳೆಲೆ ಕಬಿಲ್ದು ಕಡೆದ ತೋರಗೊಂಬುಗಳಂ ಪೆರ್ಮಾಪೆಂದು ಪೊರ್ದಲಂಜಿ ಗೆಂಟಱೊಳ್ ತೂಗಿ ನೋಡಿ ಪೆಱಕಾಲೊಳೋಡುವ ಕಿಱುನರಿಗಳುಮಂ (ಕಬ್ಬಿಗ. ೨೩೪).

[ಪೆಱ₃ (< ಪೆಱಗು) + ಕಾಲ್₁]

**ಪೆಱಗಿಕ್ಕು**, ಪೆರಗಿಕ್ಕು (ಕ್ರಿ). ೧. ಹಿಂದೆ ಉಳಿಯುವಂತೆ ಮಾಡು ; ಹಿಂದೆ ಇರಿಸು; ಹಿಂದಕ್ಕೆ ಹಾಕು : ತಮಿಸ್ರಗುಹೆಯೊಳಗನೆ ಕಾಕಿಣೀ ರತ್ನದೊಳ್ ಬರೆದ ಚಂದ್ರಾದಿತ್ಯರ ಬೆಳಗುಗಳೊಳ್ ನಿಜವಿಜಯಕಟಕಂ ನಡೆಯೆ ವಿಜಯಾರ್ಧಾಚಲಮಂ ಪೆಱಗಿಕ್ಕಿ ಶಬರಖಂಡಂಗಳಂ ಸೇನಾನಾಯಕನೆ ಬಾಯ್ಕೊಳಿಸಿ ಬರೆ (ಆದಿ. ೦೧-೩೬ ವ) ; ನಿಜಚೇಟಿಯರಂ ಪೆಱಗಿಕ್ಕಿ ಬೇಗದಿಂ ನಡೆದು ಪೆಱಳ್ ಜನಾರ್ದನನ ರೂಪವಿಲಾಸಮನೊಲ್ದು ನೋಡಿದಳ್ (ಜಗ. ೦೩-೬೩). ೨. ಹಿಮ್ಮೆಟ್ಟುವಂತೆ ಮಾಡು; ಹಿಮ್ಮೆಟ್ಟಿಸು : ಮುನಿದ ಜವನುತಱದಾ ಭೀಷ್ಮನಂ ಪೆಱಗಿಕ್ಕಿದು (ಕೇಶಿ. ೦೨-೦೪). ೩. ಹಿಂದಿಟ್ಟುಕೊಳ್ಳು, ಕಾಪಾಡು ; ರಕ್ಷಿಸು : ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ ತಳರದೆ ಪೆಱಗಿಕ್ಕಿ ಕಾವ ಶರಣಾಗತಜಳನಿಧಿಯ ಪೆಂಪುಮಂ (ಶಾಂತಿ. ೯-೩೨ ವ) ; ಮುಡಿವೊಱೆಯ ವಿಷಯದೆ ಮಱೆಗೆವಂದಂಧಕಮನಮಂ ಪೆಱಗಿಕ್ಕಿ ತನ್ನೋಳ್ ಮಲೆವ ಲಲನೆಯರ ವದನವಿಧುಬಿಂಬದೊಳ್ ಕಪೋಳಸಂಭೃತಪ್ರತಿಕೃತಿಚ್ಛದ್ಮದಿಂ ಪೊಕ್ಕು ಪೊರ್ಕುಳಿಯಿಕ್ಕಿಯುಂ (ಪರ್ಶ್ವ. ೬-೯೩ ವ). ೪. ಬಿಡು ; ತ್ಯಜಿಸು : ಬಾಲಿಕೆ ಮುಗ್ಧೆ ತಕ್ಕುದಱಯಳ್ ಪಲರಂ ಪೆಱಗಿಕ್ಕಿ ಸೂಡಿದಳ್ ಮಾಲೆಯುಂ (ಶಾಂತಿಪು. ೬-೪೭) ; ಪ್ರಿಯೆ ತನಗೇಬಿದಂ ಬಗೆಯದೆನ್ನನಪಂ ಪೆಱಗಿಕ್ಕಿ ಪೋಗಿ ಸಂಜೆಯೊಳನುರಕ್ತನಾಗಿ ನೆರೆದಿರ್ದಪಂ (ಮಲ್ಲಿ. ೬-೦೯). ೫. ಮೀಱು ; ಅತಿಕ್ರಮಿಸು ; ಉಲ್ಲಂಘನೆ ಮಾಡು : ಅಱನ ಮಗಂ ಪ್ರಾರ್ಥಿಸೆ ಬಾಂದೊಱೆಯ ಮಗಂ ಮಾಡೆ ಸಂಧಿಯಾಮವಪುದೆನುತುಂ ಮಱುಗದಿ[ರ್ದ್ದನ] ಮಾತಂ ಪೆಱಗಿಕ್ಕುಮೆ (ಗದಾಯು. ೦-೬೨). ೬. ಉದಾಸೀನ ಮಾಡು ; ಉಪೇಕ್ಷಿಸು : ಈ ನುಡಿಯನೀ ಪದದೊಳ್ ಪೆಱಗಿಕ್ಕಿ ನಾರದಂ ಮನದೊಳೆ ಪೊಸುಗುಂ ಸುರಪನುಂ ನಗುಗುಂ . . . ಎಂತು ಪೇಸಿಸುವುದೀ ಮುಖಮಂ [ಸರಸೀರುಹೋದರಾ (ಶಂಕರ. ೬-೭೩). **ಪೆರಗಿಕ್ಕು :** ೨. ವಿಕ್ರಮನು . . . ಪರಾಕ್ರಮದಿಂದ ಪರಸೈನ್ಯವನ್ನು ಪೆರಗಿಕ್ಕಿ ಎಡೆಗೊಡದಟ್ಟಿ ಕೊಂದನು (ಕವೀಶ. ೬೦). [ಪೆಱಗೆ + ಇಕ್ಕು₁]

**ಪೆಱಗಿಡು** (ಕ್ರಿ). ೧. ಹಿಂದಕ್ಕೆ ಇಡು : ಚಲಕೆ ಬಿಡದಿಱಮು ನೆಲಂ ಬಿಡದಣ್ಣ ತಮ್ಮ ಮುಂದಿರ್ದಡಿಯಂ ಪೆಱಗಿಡದೆ ಸತ್ತರಿಲ್ಲಿ ಭಟರ್ಕಳ್ (ಗದಾಯು. ೪-೨೪). ೨. ಹಿಮ್ಮೆಟ್ಟು ; ಹಿಂದೆ ಸರಿ : ಕದಱ ಚತುರ್ಬಲಂ ಬೆದಱ ತಳ್ತ ದಟಂ ಕೆಡೆದಟ್ಟೆ ತಱ್ಗೆ ಮಾಣದೆ ಪೆಱಗಿಟ್ಟು ಬಾಯ್ವಿಡೆ ಘಟಾಳಿ . . . ಕನಲ್ದೊನಲ್ದು ಮಾಣದೆ ಪೆಣದಂ ಹರಂ ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್ (ಶಂಕರ. ೯-೨೦). ೩. ಮೀಱು ; ಅತಿಕ್ರಮಿಸು ; ಸೋಲಿಸು : ಪೂರಿತರಣಶಂಖಗಭೀರಾರಾವಂ ದೆಸೆಯ ಕೋಣ ಕುಸುಕುಱ ಗಜಘಂಟಾರವಮನುಱದೆ ಪೆಱಗಿಡೆ ಭೈರವಮೆಸೆವತ್ತು ಚರವ ಬಲಜಲನಿಧಿಯೊಳ್ (ಶಾಂತಿಪು. ೩-೯೭). [ಪೆಱಗೆ + ಇಡು₁]

**ಪೆಱಗು**, ಪೆರಗಂ, ಹೆಱಗಂ (ನಾ). ೧. ಹಿಂಬದಿ ; ಹಿಂಭಾಗ : ಹಿಂದಂಗಡೆ : "ಪೆಡಮೆಟ್ಟು, ಪೆಱಗು, ಪೆಱತು, ಪಿಂತಿಲ್–ಈ ೪ ಪಿಂಗಡೆಗೆ ಪೆಸರ್" (ಶಬ್ದಮ. ೬೩-೪೩೩) ; ಪೆಱಗಸಿದಾಗಿ ಮುಂತ್ರಗಲಿತಪ್ಪದಱಂದೆ . . . ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೬೪೭ ಕೂರ್ತ್ರಿ) ; ಬುದ್ಧಿವಂತರ್ಗೆ ಕೇಡಿಲ್ಲೆಂದು ನಿಶ್ಚೈಸಿಕೊಂಡು ದಿನಾಂತಂಬರೆಗಂ ತಡೆದು ಬೞಕ್ಕಿಲ್ಲಿಯುಂ ನಿಲ್ಲದೆ ಪೆಱಗಂ ನೋಡುತ್ತುಂ ಭಯಾತುರನಂತೆ ಬಂದುಂ (ಕುಶಲ. ೬೩-೦೯) ; ಭಯದಿಂದೋಡುತ್ತಿರೆ ಕಾಡೊಳೊಂದುಮುರದ ಕೊಂಕುಗೊಂಬಾತನ ತುಱುಂಬುಂ ಪಿಡಿದು ತಡೆಯೆ ಪೆಱಗಂ ನೋಡ ಲಣ್ಮದೆ (ಧರ್ಮಾಮೃ. ೨-೩೭). ೨. ಹಿಂದೆ ನಡೆದುದು,–ಆದುದು ; ಪೂರ್ವ ಸಂಗತಿ : ಪೋದುದಿದು ಪೋಗಲಿ ಪೆಱಗನೆಣಿಸಲಾಗದು (ಧರ್ಮಾಮೃ. ೨-೯೬) ; ಎತ್ತಣನಿತ್ತಲೆಟ್ಟರವೆನಲ್ಕದು ಮಾರ್ದನನಾ ಮಣಕ್ಷಮೂಹೋತ್ತನುಂ . . . ಪೆಱಗಂ ನೆಱ ಬನ್ನವಿಸಲ್ಕೆ ವಿಷ್ಣು ಪೆಚ್ಚಿತ್ತನನರ್ಘ್ಯವಸ್ತುಗಳನಾ ಪರದಂಗೆ ಪ ಸಾ ಯ ದಾ ನ ಮಂ (ಮಲ್ಲಿನಾ. ೦೨-೪೪). **ಪೆರಗು :** ೧. "ಪೆಡಮೆನಲ್ ಪೆರಗೆ ನಲ್ಕಭಿಧಾನಮಕ್ಕು ಬೆಂಗಡೆಗೆ" (ಕವಿರಾ. ೬೬). **ಹೆಱಗು.**

**ಪೆಱಗಂ ತಗುಳ್**=ಬೆನ್ನಟ್ಟು : ಬಲದೇವನನುಮತದೊಳ್ ಪೆಱಗಂ ತಗುಳ್ವ ಯಾದವಬಲಮುಂಟಪ್ಪೊಡದನಂಬುಗಾಣಿಸಲ್ ನೀನೆ ಸಾಲ್ವೆಯ್ (ಶಂಕರ. ೩-೨೦ ವ). **ಪೆಱಗಣ್**=೧. ಹಿಂಬದಿ ; ಹಿಂದುಗಡೆ ; ಹಿಂಭಾಗ : ಅವರ್ಗಳನಿಬರುಂ ಪೆಱಗಣ್ಗರುಳ್ದು ಬೞಯೋಡಿದು ಮಹಾಚೋದ್ಯಂ ಸಾರೆ ಪೋಗಿ ನೋಟ್ಟಪೆಂದು ಪೋಪರ್ (ಪಶ್ಚಾತ್ತಾ. ೯೬-೭) ; ಕನ್ನಡಿಯುಂ ನೋಡುವವಂ ತನ್ನಯ ಪೆಱಗಣ್ಗೆ ಕಾಣಲಾರ್ಪನೆ ರೂಪಂ (ಧರ್ಮಾಮೃ. ೦-೦೮೨). ೨. ಹೊರಗಡೆ ; ಹೊರಭಾಗ : ಒಳಗಣ ಕಿವುಡಿಯರ್ ಪಿಡಿದುಕೊಂಡಪಳ್ಳು ಪೆಱಗಣ್ಗೆ ನೂಂಕಿದರ್ (?) (ಧರ್ಮಾಮೃ. ೨-೩೨) **ಪೆಱಗಣ**=೧. ಹಿಂದುಗಡೆಯ ; ಹಿಂದಿನ : ಅತಿಶೋಕಾಕ್ರಾಂತಮತಿಯುಂ ಶ್ರೀಮತಿಯುನೊರ್ವಳನೆ ಕನ್ನೆಮಾಡದ ಪೆಱಗಣ ನಂದನವನಕ್ಕಿಯ್ದು (ಆದಿ. ೬-೨೯ ವ) ; ಪುರೋಹಿತನನುಂ ಪೆಱಗಣ ಕಾವಂ ಕಪ್ಪಾಳಿನಲೆ ಕಾದಿರ್ಪನ್ನೆಗಂ (ಶಬರ. ೬-೪ ವ) ; ಪೆಱಗಣ ಮುಂತಣವಿತಾಗಳ ಶೋಭೆಯಂ ನಿಶ್ಚಯಿಸಿ ಮಧುಕರಂ ಮಧುಕರಮಂ ತೆಱಲಾಱದೆ ಮಲ್ಲಿಗೆಯೊಳ್ ಸೆಱಗೆಯ್ದಂತಿರ್ದುದೊಂದು ಪರಿಮಳಫಲಮುಂ (ಆದಿ. ೬-೦೪). ೨. ಹಿಂದೆ ನಡೆದ ; ಘಟಿಸಿದ : ನಿಮ್ಮಡಿಯ ಪ್ರಸಾದದಿಂದೆನಗೆ ಮಹಾಪಾತಕಂ ಪಿಂಗಿ ಪೋದುದೆಂದು ಪೆಱಗಣ ವಾರ್ತೆಯೆಲ್ಲಮಂ ಪೇಟ್ದು ದೀಕ್ಷೆಯಂ ಪ್ರಸಾದಂಗೆಯ್ಯಮೆಂದೊಡೆ (ಧರ್ಮಾಮೃ. ೩-೨೦೦). ೩. ಬಹಿರಂಗದ ; ಹೊರಗಿನ ; ಬಾಹ್ಯ : ಉಪವಾಸಕ್ಕಲಸಿ ಕರಂ ತಪಮಂ ಬಿಸುಡಲ್ಕೆ ಬಾರದಮನೀತಳದೊಳ್ ವಿಪರೀತಮಾಗೆ ಪೆಱಗಣ ತಪದಿಂದಲ್ಲದೆ ಪೊಗಟ್ಟಿ

ಯಾಗದು ಬೇಗಂ (ರನ್ನಾಗ್ನ. ೬-೪೦). **ಪೆಱಗನೇಱಿಸು** = ಹಿಂಭಾಗಕ್ಕೆ ಹತ್ತಿಸು : ತನ್ನ ಮುಂದೆ ಸಾರ್ದಿರ್ದ ವಾರುವಂಗಳ್ಗಳ್ಕೆ ಬೆಗಡುಗೊಂಡ ಪಿಡಿಯನೆ ಕೆಯ್ಯೂರರನುಮಂ ಪತ್ರಲೇಖೆಯುಮಂ ಪೆಱಗನೇಱಿಸಿ ನಿಜಭವನಕ್ಕೆ ಬಂದು (ಕಾದಂಬ. ೩೬೦). **ಪೆಱಗಾಗಿಸು** = ಹಿಂದೆ ಬೀಳಿಸು ; ದೂರವಾಗುವಂತೆ ಮಾಡು : ಅದು ಸನ್ಮಾರ್ಗವಿಶುದ್ಧಿಯಂ ಕಡಿಸುತಾ ಶಾಂತಸ್ಪುಟಸ್ವಚ್ಛಭಾವದ ಪೆಂಪಂ ಪೆಱಗಾಗಿಸುತ್ತು . . . ಜಡಧಿಗಳ್ಗಂತಸ್ಥಮಾಗಿರ್ದುದೆಂಬಿದು ಯುಕ್ತ್ಯೋಕ್ತಿ ಕುಮಾರ್ಗನಿರ್ಗತರಜೋಜಾಳಕ್ಕೆ ದಾರ್ಷ್ಟ್ಯರ್ಯಮೇಂ (ಕೃಷ್ಣ. ೮-೩೫). **ಪೆಱಗಾಗು**=೧. ಹಿಂದೆ ಬೀಳು.—ಉಳಿ : ಪೆಱೆಯ ವಿಲಾಸವಧುಗಳ್ ಪೆಱಗಾಯ್ತೆನೆ ರೂಪವತಿಯ ಪೆಱನೊಸಲೆಸೆಗುಂ (ಮಲ್ಲಿ. ೩-೮೨). ೨. ಹೊರತಾಗು : ಇಲ್ಲಿಗನೊಳ್ಳಿಲ್ಲದೆಪ ೨೨ ಜನರಂಗಮುಱಿಪ್ಪುವೊಡೆ ಮದೀಯಹೃದಯುದ್ವಿತೀಯ ನಪ್ಪ ವೈಶಂಪಾಯನಂ ಪೆಱಗಾಗಿ ಪೆಱನಾವನಱಿದಪ್ಪಂ (ಕಾದಂಬ. ೩೮೩). ೩. ಬಿಡುಗಡೆಯನ್ನು ಹೊಂದು.—ಪಡೆ : ಆಗಳ್ ನಿದ್ರೆಯಿನೆಚ್ಚಱಾದಂತು ಕಣ್ಗಟ್ಟಿಂ ಪೆಱಗಪ್ಪುದುಂ (ರಾಮಾಶ್ವ. ೧೧೦-೩). **ಪೆಱಗು ಮಾಡು** = ಹಿಂದೆ ಉಳಿಯುವಂತೆ ಮಾಡು ; ಹಿಂದಕ್ಕೆ ಬೀಳಿಸು : ನೆಲನಂ ಪೆಱಗುಮಾಡಿ ಜಯಾವಹದುಂಬಿನಂ ಬೀಸೆ ಬೆಂಬಱಿಯನೊಯ್ಯನೆ ಗಾಳಿ . . . ನೂಱನೂರ್ಭಾರ್ಗಸಿರಂಗಳವೋಲಾಯ್ತು ರಥಂ ಕಡುವೇಗದಿಂ (ಕಾವ್ಯಾವ. ೨೭).

[ದೇ.॥ ತಮಿ. ಪಿಱಕು, ಪಿಱಕ್ಕು, ಪಿಱ್ಕು ; ಮಲ. ಪಿಱಕು]

**ಪೆಱಗುಗುಡು** (ಕ್ರಿ). ಬೆನ್ನನ್ನು ತೋರಿಸು ; ವಿಮುಖವಾಗು : ಅಱಿದು ಶುಕಪ್ರಿಯಕಾಮಿನಿ ಗಱ ಗದಗದ ನಡುಗೆ ಪಿಡಿದು ಪೊಣ್ಮಿದ ಮುನಿಸಿಂ ಪೆಱಗುಗು[ಡಾ. ಗೆ]ಡೆ ಕೀರಕಾಮುಕನೆಱಗಿದನನಿಯಳ ಪದಕ್ಕೆ ಸಂಭ್ರಮದಿಂದಂ (ಲೀಲಾವ. ೬-೯೮). [ಪೆಱಗು + ಕುಡು$_1$ (< ಕೊಡು$_1$)]

**ಪೆಱಗುಗೆಯ್** (ಕ್ರಿ). ೧. ಬೆನ್ನು ತಿರುಗಿಸು ; ಬೆನ್ನನ್ನು ತೋರಿಸು ; ವಿಮುಖವಾಗು : ಮುಳಿದು ಮನಃಪ್ರಿಯಂ ಪೆಱಗುಗೆಯ್ವರೆ ಬೆಂಬಿಡ ಪಟ್ಟಿಕೊಂಡ ನಲ್ಲಳ ಪೊಲೆಯೊತ್ತಿನೊಳ್ ತೊಡರ್ದುದಾಕೆಯ ದೂಱಿಸಿ ಸುಯ್ದು ಸುಯ್ಯೊಳುಚ್ಚಳಿಸಿದುದಾ . . . ಕೋಪಮೋಪನಾ (ಆದಿಪು. ೬-೧೨-೦೯) ; ತನ್ನ ಬೆನ್ನೊಳ್ ಪರೆದೊಪ್ಪಲ್ ಕೇಶಪಾಶಂ ಕರಿಯ ಚಮರಿಯಂ ಕಟ್ಟವಂತತ್ಪೂರ್ವಸ್ಮರಚಾಪಶ್ರೀಯ ಚೆಲ್ವಂ ತಳೆದು ಪೆಱಗುಗೆಯ್ದಿರ್ದೊಡಾಂ ಸೋಂಕೆ ಸಾರಂತಿರೆನುತ್ತುಂ ನೂಂಕಿ ಸುಯ್ವನ್ನಿನಿಯಳ ತೆಱನಿನ್ನುಂ ಮನಂಗೊಳ್ವುದೆನ್ನಂ (ಜಗನ್ನಾ. ೧೬-೧೩೩). ೨. ಮರೆಯಾಗು ; ಅಡಗು : ಕೆಲರ್ ಕಾಣ್ಗುಮೆಂದು ಪೆಱಗಣಿಂ ಪೆಱಗುಗೆಯ್ದು ಜಗುಳ್ದುಂ ಕೆಲರ್ ಕಂಡೊಡೆ ಕರೆಗುಮೆಂದು ಕೆಲದ ಮರಂಗಳನೊತ್ತುಗೊಂಡುಂ (ಆದಿಪು. ೯-೯೨ ವ). ೩. (ಅಲಂ) ಕಡೆಗಣಿಸು ; ಕೀಳು ಮಾಡು ; ತಿರಸ್ಕರಿಸು : ನೆರೆದರಸುಗಳ ನಡುವೆ ತಮ್ಮ ಪೆರ್ಮೆಯುಂ ಪೆಱಗುಗೆಯ್ದು ಪೆಱಗೆ ಪೂಮಾಲೆ ಸೂಡುವುದಂ ವಿಳ್ಕಳನೆ ನೋಡಿ . . . ಬಂದ ಬರವಿಂಗೆ ಮಾನದೊಳನುಶಯಂಬಡುವ ಮಾನಧನಧರಾಧಿಪತಿಪಟಳದೊಳಂ (ವರ್ಧಮಾ. ೯-೧೩ ವ). [ಪೆಱಗು + ಕೆಯ್$_1$]

**ಪೆಱಗೆ**, ಪೆರಗೆ, ಪೆಱಗೆ (ಅ). ೧. ಹಿಂದಕ್ಕೆ ; ಹಿಂಬದಿಗೆ ; ಹಿಂದುಗಡೆಗೆ : ಬೀಡಂ ಪೆಱಗೆ ಬಪ್ಪಂತು ನಿಯಮಿಸಿ ಪಯಣದಿಂ ಬಂದು (ಚಾವುಂಡ. ೨೯) ; ಭರತಜರೊಳ್ಮನ್ನಿಲ್ಲದ ಪರಿಭಾಷೆಯುಮುಂಟುಮಾಡಿ ಪೆಱಗಡಿಯಟ್ಟಿಂ ಕುರುರಾಜನೆಂದು ಲಜ್ಜಾಭರದಿಂದಂ ತಲೆಯನೆಱಗಿದಂ ಧರ್ಮಸುತಂ (ಗದಾಯು. ೬-೩೯) ; ನೀನಾವ ಪ್ರಾಣಗಾದೊಡಂ ಮುನಿವಲ್ಲಿ ಪೆಱಗೇಱಿದಿಯುಂ ಪಿಂಗಿ ಇಱಿಕ್ಕಂ ನಿನ್ನ ಮೆಚ್ಚಿದಂತೆ ಮಾಡು (ರನ್ನಾಗ್ನ. ೨-೨೦೩). ೨. ಹೊರಗೆ ; ಹೊರಭಾಗದಲ್ಲಿ : ಶಕಟವ್ಯೂಹದ ಪೆಱಗೆ ನಾಲ್ಕುಯೋಜನದೊಳರ್ಧಚಂದ್ರವ್ಯೂಹದೊಳಧಿಕಬಲರಪ್ಪ ಸೌಬಲ ದುಶ್ಶಾಸನಾದಿ ಪ್ರಧಾನ ವೀರಭಟಕೋಟಿಯ ನಡುವೆ ಸಿಂಧುರಾಜನನಿರಿಸಿ (ಪಂಪಭಾ. ೧೧-೧೪೨ ವ) ; ಎಱಗಿದ ನರಪತಿಸಹಸ್ರಮುಂ ನಿಮ್ಮ ನಿಮ್ಮ ವಾಹನಂಗಳನೇಱಿಮೊದು ಬೆಸಸಿ ಬಿಜಯಂಗೆಯ್ವಲ್ಲಿ ಪೆಱಗೆ ಧಕ್ಕಾರವದಿಂ ಬಧಿರಿತದಿಗಂತರಾಳ ಮೆನಿಸಿ ಬರುತ್ತುಂ (ಚಾವುಂಡ. ೫೯೬). ೩. ಅನಂತರದಲ್ಲಿ ; ತರುವಾಯದಲ್ಲಿ ; ಅನಂತರ : ಈತನೆ ನಮ್ಮ ಕುಲಕ್ಕಂ ಕೇತು ದಲಾನಱಿವೆಂ . . . ಬಿಸುಡುವುದೀತನ ಪೆಱಗುಟಿದ ಸುತರೆ ಸಂತತಿಗಪ್ಪರ್ (ಪಂಪಭಾ. ೦-೧೩೩) ; ಆ ಸತ್ತೊಡೆ ಪೆಱಗೀ ವೃಂದಮನಪ್ಪೊಡೆ ಪೊರೆವರಿಲ್ಲವಾಂ ದೇಸಿಗನೆಂ (ರನ್ನಾಗ್ನ. ೨-೫೮). ೪. ಹೊರತಾಗಿ : ಪುಂಡರೀಕದೇವನ ಪೆಱಗಿಂತು ಜೀವಿಸುತಮಿರ್ದಪಳೆ (ಕಾದಂಬ. ೬೦೭) ; ಅದು ಕಾರಣದಿಂ ರಣದಿಂ ತದುದ್ಧತನ ದುಷ್ಟಚೇಷ್ಟೆಯಂ ಮಾಟ್ಗಿಸಿ ಬರ್ಪುದೆ ಕಾರ್ಯಮೆಂನಗೆ ಕಾದಿರ್ಪುದೆ ಕಾರ್ಯಂ ಪೆಱಗೆ ನಿನಗವಿಾ ಪುರವರಮಂ (ವರ್ಧಮಾ. ೨-೨೬) : ಎಲೆ ತಣ್ಗಾಳಿಯೆ ನೀನೇಕಲೆದಪೆ . . . ಕಾವಲನಿಲ್ಲದ ಪೆಱಗೆ ನೋಯಿಪರೆ ನಿವನ್ನಂ (ಕಬ್ಬಿಗ. ೬೫). ೫. ಬೆನ್ನಿನ ಹಿಂದೆ ; ಪರೋಕ್ಷವಾಗಿ : ಪೆಱಗೆ ಪಳಿವರ ಜನ್ಮತಿಗಣ್ಣ × × ದನ್ನ × × ಕಾಱರಣರಂಗನೀಱ ಪುಸಿವರ ಬಾಯಂ ಸುಡುವ ಪಿಸುಣಾರರನೇಲ್ವ × ಳುವ ಜಯಲಕ್ಷ್ಮೀತೋರಣಂ ನಾಕಿಯ ಗನ್ಧವಾರಣನಾಮಾದಿ ಸಮಸ್ತಪ್ರಸಸ್ತಿಸಹಿತಂ (ಎಕ. VII. ಶಿಕಾ. ೫-೨೨ ; 1061). **ಪೆರಗೆ** : ೧. ರಾಯಮಳಮಾಯದಳ, ದಳದಳದ ಪೆರಗೆ, ಬಂನು ಬಂದೆತ್ತಲುಂ, ನೆಲ ನೆರೆಯದಲ್ಲಿ (ಶಾಶಿ. ೫-೦೦೯). **ಹೆಱಗೆ** : ೫. ಕೂಡಿ ಕೂಟಕೆ ತಪ್ಪುವರ ಗಣ್ಡ ಹೆಱಗೆ ಹಳಿವರ ಗಣ್ಡ (ಎಕ. VI. ಕಲೇಶ. ೬೫-೮೮ ; 1141 ?).

**ಪೆಱಪೆಱಗೆ** (ದ್ವಿರುಕ್ತಿ) : ಕಿಶೋರಕೇಸರಿಯ ಸಮ್ಮುಖಕ್ಕೆ ಬಾರದೆ ಪೆಱಪೆಱಗೆ ಬರ್ಪ ಮೃಗಂಗಳಂ ಕಂಡುಮಱಿಂ (ಚಾವುಂಡ. ೫೩). [< ಪೆಱಗು]

**ಪೆಱಗಿಡೆ** (ಕ್ರಿ). ಹಿಂದೆ ಬೀಳು : ಹಿಮ್ಮೆಟ್ಟು : ಧನುರ್ಧರರೆಚ್ಚ ಶರನಿಕರಂಗಳಿಂ ನೆಯ್ ಪೇಱುವಂತಂಬನೆ ಪೇಱ ಪೆಱಗಿಡೆವ ತುರುಷ್ಕತುರಂಗಂಗಳುಮಂ (ಪಂಪಭಾ. ೧೨-೬೦ ವ) : ತನ್ನ ಭೀಕರಗದಾಘಾತದೊಳ್ ಜಾಱ ಪಱಿವಱಿದು ಪೆಱಗಿಡೆದು ಕಾಱಿವಱಾದ ಕಾಂಭೋಜಾವಳಿಗಳ ತುರುಷ್ಕತುರಂಗಮಂಗಳಡಿಯೋಳಡಂಗಿದನೆ ಗೆತ್ತು ಕೈಗುತ್ತಿ ನೋಡಿಯುಂ (ಗದಾಯು. ೬-೨೮ ವ). [ಪೆಱ$_2$ (< ಪೆಱಗು) + ಕಿಡೆ$_1$]

**ಪೆಱಗೇಱಿಸು** (ಕ್ರಿ). ಹಿಂಬದಿಗೆ ಹತ್ತಿಸು ; ಹಿಂದೆ ಕುಳ್ಳಿರಿಸು : ಪವನಜಯಾಶ್ವಮನದಂ ತೆಗೆದೇಱಿಯುಮೊಲ್ಲೆನೊಲ್ಲೆನೆಂದೆನೆ ತನತಾಜ್ಞೆಯಿಟ್ಟು ಸಮಿನಂ ಪೆಱಗೇಱಿಸಿಕೊಂಡು ಭೋಂಕನೆ ಪೊಱಮಟ್ಟಂ (ಕುಸುಮಾ. ೧೦-೧೩೩).

[ ಪೆಱಗೆ + ಏಱಿಸು ]

**ಪೆಱಗೇಱು** (ಕ್ರಿ). ಹಿಂದೆ ಹತ್ತು ; ಹಿಂಬದಿಗೆ ಹತ್ತಿ ಕುಳಿತುಕೊಳ್ಳು : ಸಡಹುಡನಪ್ಪ ಕಟಿಸ್ತಿ ಕೊಡೆ ಸಂತಸದಿಂ ಪೆಱಗೇಱ ಏರ್ಪ ಕನ್ನಡಿವಿಡಿದಾಕೆ (ಪಂಪಭಾ. ೯-೦೦೩) ; ಕಟಿಸ್ತಿ ಚಮ್ಮಟಿಗೆ ಮುಟ್ಟಿದವೋಲ್ ನಸುಬೆರ್ಚೆ ತಾನದರ್ಕೆಮ್ಮಡಿ ಬೆರ್ಚೆ ಪೆರ್ಚೆ ನಡುಕಂ ಪೆಱಗೇಱಿದಳೊರ್ಮೆಯೋಪನಂ ಪೆರ್ಮೊಲೆ ಬೆನ್ನನುರ್ಚಿದಪುದೆಂಬಿನಮುಪ್ಪಿದಳಾಗಳಾರ್ತದಿಂ (ಕಾವ್ಯಾವ. ೮೨೩). [ ಪೆಱಗೆ + ಏಱು$_1$ (< ಏಱ್$_1$) ]

**ಪೆಱತು**, ಪೆಱದು, ಹೆರತು (ಸ). ೧. ಬೇರೆಯದು : ಮತ್ತೊಂದು : ಆವಲರುಂ ಪಣ್ಣುಂ ಬೀತೋವವು ಗಡ[ಬೀಯುವಲ್ಲಿ ಪುಳ್ಳಿಗೆಗಳುಮಿಮ್ಮಾವುಗಳುಮೆಂದೊಡಿನ್ ಪೆಱತಾವುದು ಸಂಸಾರಸಾರಸರ್ವಸ್ವಫಲಂ (ಪಂಪಭಾ. ೧-೫೫) ; ಆನಿನಿತು ಭೋಜ್ಯದಿಂ ಪೆಱತೇನುಮನುಣಪೊಲ್ಲೆನೆಂದುಣ್ಬೆಡೆಯೊಳ್ ತಾನಱಿದು . . . ಸಂಯಮಿ ನೆಗಟ್ಟಂ (ಸುಕುಮಾ. ೪-೬) ; ಅದುವಿದುವುದು ವಾವುದುಮೆಲ್ಲದು ಪೆಱತೇನ್ನೆಱದೆನಿಪ್ಪ ಶಬ್ದಂಗಳ್ ತಪ್ಪದೆ ಸರ್ವನಾಮ ಮಕ್ಕುಂ (ಶಮದ. ೭೮) ; ಆವಾವ ದಿಕ್ಕುದಿಕ್ಕುಗಳೊಳಂ . . . ಹರಿಯ ಸುಭಟಾವಳಿ ಹರಿಯ ವರೂಥಂಗಳಲ್ಲದೆ ಪೆಱತನಾಂ ಕಾಣೆನಾಹವದೊಳು (ಪಂಪಭಾ. ೦೬-೮). ೨. ಅನ್ಯ ; ಬೇರೆ ; ಪೆಱತು ವಿನೋದವಾಂಛೆ ಪೆಱಪಿಂಗಿ

ಮನೋಧೃತಿಯುಂ ಪೊದಟ್ಟು ಪಾಂಗಾಱ ಪರಿಪಟ್ಟು ಬಜ್ಜು ಲವಮಿಲ್ಲದೆ ಬಿಟ್ಟು . . . ಕುಸುಮಾವಳಿ ತಾನಿರೆ ನಿಮ್ಮ ದೂಸಱಂ (ಕುಸುಮಾ. ೧೩-೨೩). **ಪೆಱದು :** ೧. ನೆಲನಂ ಪರ್ವುವ ಬಳ್ಳಿಗಂ ಚದುರನೊಳ್ ಪ್ರೇಮ್ಮೆಯೊಡಂಬಟ್ಟು ತಳ್ತ ಲತಾಕೋಮಳೆಗಂ ತಗುಳ್ದು ಪೆಱದೊಂದೆಂತಕ್ಕುಂ (ಅಜಿ. ೦೨-೦೮); ಪೆಱದೇನನಿನಿ ಪೊಗೞುತಿಟ್ಟಪುದೀವ ನೆಗೞ್ತೆ ಕಳ್ಪಭೂಮಿ ರುಹದಿನಗ್ಗಳಂ (ಎಕ. II. ೦೩೩-೨೫ ; 982) ; ನಾಗಸ್ಥಾನದ ಶಂಬರ ನಾಗಕುಮಾರಂಗೆ ಪರಸಿ ಪಡೆದಂ ಪೆಱದೇಂ ಪೋಗೆಂದು ನಾಗಶರ್ಮಂ ನಾಗಶ್ರೀಯೆಂದು ನಾಮಕರಣಂಗೆಯ್ದಂ (ಸುಕುಮಾ. ೫-೩೦) ; ಅದುವಿವಾ ವ್ಯದುಪಾವ್ಯದುಪೆಲ್ಲದು ಪೆಱತೇನ್ಪೆಱದೆನಿಪ್ಪ ಶಬ್ದಂಗಳ್ ತಪ್ಪದೆ ಸರ್ವನಾಮಮಕ್ಕುಂ (ಶಮಂದ. ೬೮). **ಪೆಱತು :** ೧. ಪುಂಸ್ತ್ರೀಲಿಂಗಗಳಲ್ಲಿ ಪೆಱತು ಶಬ್ದದ ಮುಂದೆ ಲೋಪ ಬರುತ್ತದೆ (ಶಬ್ದಾನು. ೪೬) ; ಅವನು 'ಹರಿ' ಎಂಬ ಎರಡು ವರ್ಣಗಳನ್ನಲ್ಲದೆ ಪೆಱತನ್ನು ಅಕ್ಷಿಯಿಂದ ನೋಡಲಿಲ್ಲ (ಜಗದ. ೦೬೦).

**ಪೆಱಪೆಱತು** (ದ್ವಿರುಕ್ತಿ) : ನಿನ್ನ ಪಡಗೂಟಿಲ್ಲ . . . ನೀನೀಯೆ ಬಂಮದೆನಗಿವನೆನತಂದೆನ್ನನಗೆ ಬಗೆಯಲಪ್ಪದೆ ನಿನ್ನನೆ ನೀಂ ಬಗೆಯ ಬಗೆಯದಿರ್ **ಪೆಱಪೆಱತಂ** (ಅಜಿ. ೦೪-೦೪೪) ; ಗಂಡರ ಬೂತೆ ನುಡಿವುದೆ ಪೆಱಪೆಱತಂ (ರಮಾಶ್ವ. ೨-೦೨೦). **ಪೆಱಪೆಱರ್** (ದ್ವಿರುಕ್ತಿ) : ರಾಮಾನಂದಿ ಶಿಧ್ಯಾತಿಗಳಿರ್ದಂತೆ ಪೆಱಪೆಱರಸಂತಿಸಂತಂದೇನೆಂದು ಬಣ್ಣಿಪರ್ಜಾಣಶಿಗಳ್ (ರಮಾಶ್ವ. ೦-೨೩). **ಪೆಱಪೆಱವು** (ದ್ವಿರುಕ್ತಿ) : ಜಯಾವತಿ ಕಣ್ಗೆತ್ತಿ ಬಾರಿಸಿದೊಡೆ ಕಮ್ಮಗಿರ್ದು ಪೆಱಪೆಱವನೆ ನುಡಿಯಲ್ ತಗುಳ್ದೊಡೆ ಸುಶೀಲಸ್ವಾಮಿಯುಮವಿರ್ವರ ನುಡಿಗಳ್ ಸಗರ್ಭವಚನಂಗಳೆಂದು ತನ್ನ ಮನದೊಳೆ ಬಗೆಯುತ್ತಿರ್ದನಂ (ವಡ್ಡಾರಾ. ೪೬-೦೪) ; ಪಲುಂಬದಿರ್ ಪೆಱಪೆಱವಂ (ಶಂಕರಾ. ೨-೨೬).

**ಪೆಱರೊಡವೆ, ಹೆಱರೊಡವೆ** = ತನ್ನದಲ್ಲದ ಆಭರಣ; ಪರರ ವಸ್ತು : ತನ್ನಳವಿನಿಂ ನಡೆವ ಕಸ್ನುಡಿಯ ನುಡಿವೆಣ್ಗೆ ಪೊನ್ನಿರ್ಕೆ ಪೆಱರೊಡವೆ ಚೆನ್ನಲ್ತು ಕಳೆಗೆ (ಶಾಂತೀಶ. ೨೨-೫) ; ಹೆಣ್ಣು ಹೆಱರೊಡವೆ (ಶಾವ್ಯಸ. ೪೬).

**ಪೆಱವಿಜಯಕಾಳಾಯುಧ** = ಒಂದು ಬಿರುದು : ಸು × × × ನಮನಸ್ಸ ರೋಜನೀರಾಜಹಂಸ ವಿದಗ್ಧವಿದ್ವಜ್ಜನಕರ್ಣ × × × ವಿಟನಿದಾವಾನಲ ಪೆಱವಿಜಯಕಾಳಾಯುಧ (ಎಕ. VI. ೫೬೬-೦೦ ; 1064). **ಪೆಱತೊಂದು** = ಬೇರೊಂದು ; ಮತ್ತೊಂದು : ಪೆಱತೊಂದೆಡೆಯೊಳಿಲ್ಲೆನಿಸುವ ತಾರ್ಕ್ಷ್ಯ ಪಕ್ಷದನ್ಯೈಕಪಕ್ಷಪಾಳನೆಯುಮಂ (ಎಕ. XIII. ೫೩೨-೪೫ ; 729) ; ಸುದತಿ ಪೆಱತೊಂದು ನೆವದಿಂ ಕೆದಱವಳೊಂದಿನಿಸು ಮಂದಹಾಸದ್ಯುತಿಯುಂ (ಶಾಂತಿಪು. ೨೪೬) ; ಇನ್ನುಮುಸಿರದಿರ್ದೊಡೆ ಪೆಱತೊಂದು ಬಿಲನನಱಸಿ ಕೊಳ್ವೆಂ (ಶಂತಕಂ. ೩೨-೦೪). **ಪೆಱತೊರ್ವ** = ಬೇರೊಬ್ಬ ; ಮತ್ತೊಬ್ಬ : ಅವರಿರ್ವರ ಪ್ರೇಮಮುಮಂತವರಿರ್ವರ . . . ಬೇಟಮುಮಂತವರ್ವ ರೊಳ್ಳದಿಲ್ಲ ಪೆಱತೊರ್ವರೊಳು (ಕನ್ನಿಕಾ. ೦೨೪). **ಪೆಱನ್, ಪೆಱನ್, ಪೆಱನು, ಹೆಱನು** = ೧. ಬೇರೆಯವನು ; ಅನ್ಯ ; ಪರಕೀಯ : ಸಾಧುಗೆ ಸಾಧು ಮಾಧುರ(ಧು)ರ್ಯಂಗೆ(ಜಗ್ಗಿ) ಮಾಧುರ(ಧು)ರ್ಯಂ ಬಾಧಿಪ್ಪ ಕಲಿಗೆ ಕಲಿ ಯುಗವಿಪರೀತನ್ ಮಾಧವನೀತನ್ ಪೆಱನಲ್ಲ (ಎಕ. X. ೩೦-೬ ; ಕಿ. 700) ; ನಂದನರಾಜ್ಯಸ್ಥಾನದೊಳ್ ಪೆಱನೊರ್ವನಂ ಚಂದ್ರಗುಪ್ತ ನೆಂಬೊನಂ ನಿಱಿಸಿದೊಡೆ (ವಡ್ಡಾರಾ. ೬೫-೬) ; ಬಂದನೀತಂ ಪೆಱನಲ್ಲಂ ಮಾರ್ಜಮಂ ಕೌರವಕುಳನಳಿನೀಕುಂಜರಂ ಭೀಮಸೇನಂ (ಶಂತಕಂ. ೦೩-೬೬) ; ವಿರಚಿಸಿದನೀ ಶೇಷರಾಮಾಯಣವನಿಂತು ಪರತರಪುರಾವೃತ್ತರೂಪದಿಂ ಜಗದೊಳಗೆ ಪೆಱನೊರ್ವನಂ ಕಾಣದಿಂತಪ್ಪ ಗುಣಶಾಲಿ ಸತ್ಕಥಾನಾಯಕನನು (ಶೇಷರಾ. ೦-೦೭) ; ಪೆಱನಾರೊ ಬಂದಿರಲ್ ಕಣ್ಮುರಿದು ಗೆಳತಿಯುಂ ನೆರೆದ ಪೆಣ್ 'ನಿನಗೆಂ'ದು ಚುಚ್ಚಿ ನುಡಿಯುವಳು (ಶಾಂತೀಶ. ೩೦-೦೦೨) ; ಹೆಮ್ಮೆಯಲಿ ಹೆಱನ ಹೊಡೆಮುಳ್ಳ ಹಿಡಿದವನು ಗುಮ್ಮಿಕೊಂಡಂತೆ (ಸರ್ವಜ್ಞ. ೪೩೫).

೨. ಕೀಳುಜಾತಿಯವನು ; ಹೊಲೆಯ : "ಪೆಱಂ ಎಡೆಯುಂ (ಸಡೆಯುಂ, ಸಡೆಯಂ, ಪೆಱಯಂ)" (ಕಮಂದ. ಕಾ. ೨) ; ಪಿಂಗದೆ ಸೇನಜಿತನಣುಗಿ ಪೆಱನಂ ಮಿಂಗುಲಿಯ ಕುಮುದ್ವತಿ ಕೈವಿಡಿದಳ್ ಸಿಂಗವನಂತೆ ಬೃಹದ್ರಥ ಸೇರ್ದಳ್ ಪೆಂಗಳ್ಗಿಲ್ಲಂ ಸೇರಲ್ ತಗವರ್ (ಶಶಿಪಂಶ. ೬-೪೪). **ಪೆಱರ್, ಪೆಱರು, ಪೆಱರು, ಪೆಱವರ್, ಹೆಱರು, ಹೆಱವರು, ಹೆಱರು, ಹೆಱವರು** (ಬಹುವ) : ನೆನೆನೆನೆದು ಪೆಱರ ಮಾತುಗಳನೆ ನೆಗಳ್ದಿರೆ ಕೃತಿಗೋಳಿಡುವವಂ ನಗದ ಗುಹಾಧ್ವನಿಯವೊಲನರ್ಥವಚನಂ (ಕರಾ. ೦-೦೪) ; ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದ ಮಪ್ಪುದೇಂ (ಅಜಿ. ೦-೩೫) : ಪೆಱರ ಕವಿ ನಾಲಗೆಯ ಕಣ್ ಬರಹಗಳ ನೋದಿ ಮೆರೆವ ನಲ್ಲರ ಕಣ್ಗೆ ಮಾನರ್ಗಿಡಿಯುತಿರ್ಕುಂ (ಶಾಂತೀಶ. ೪೨-೫೩) : ಪೆಣ್ಣಿಂದ ಪೆರ್ಚುಗೊಂಡನು ಹಿಮವಂತನು . . . ಪೆಣ್ಣಿಂದ ಜನಕಲಯನು ಜಸವಡೆದನು ಪೆಣ್ಣು ನಿಂದಿಸಲೇಕೆ ಪೆಱರು (ಶಬ್ದ. ೫ ೫) ; ಪೆಱವರೊಳಾವು ಬೈಗಮಂ ಮಾಱಯಿಸುವುದು ನಿದ್ರೆ (ಪರ್ಕ. ೯-೬೫) : ಹೊಟ್ಟೆಪಡೆ ಪೆಱರ ಕೈಯಿಂದೂಟ ಸುತ್ನಾಟ ಹಾವಿಟ್ಟು ಬಗೆಯಾಟ ಹೋಲಲು ಪೆಣ್ಗೆ ? (ಶಾಂತೀಶ. ೨೬-೦೫) ; ಹೆಱವರ ಬರಹದೊಳಿರುವ ಸಂಗತಿಗಳು ಮನ್ನಿತಿಯನು ಬೆಳಗುವುವು (ಬಂಕಾಶ. ೩೩-೫) : ಹೆಱವರ ಮಾತು ನಿಕ ಆದ್ದ ? ಈಗ ರಾಜಮಾತೆಯವರನ್ನೇ ಕೇಗೆದುಕೊಳ್ಳಿ (ಸಹ. ೩೩) : ಹೆಱರ ಗೋಣ ಕೊಯ್ದೆನೆಂದು ಮಂತ್ರವನೋದುವ ನೇಣಾಗಾಱರ ಮೆಚ್ಚ (ಬಸವ. ೫೫೦) ; ಸಂಚಯಿಸಿದ ಧನವು ಕುಱು ಕಬ್ಬಿನವಕ್ಕು ಹಂಚಕ್ಕು ಹೆಱರಿಗುಣಲಕ್ಕು (ಸರ್ವಜ್ಞ. ೬೬೩) ; ಮೂಱು ಗುಣಭೇದದಲಿ ತೋರ್ಪವು ಮೂಱುತನುಗಳು ದೇವನೊಬ್ಬನಿಗಾರು ಹೆಱವರು ವಿಶ್ವಮಾಯಾಧೀಶ್ವರೇಶ್ವರಗೆ (ಐರಾಗ. ೦೦-೯೨-೩೪). **ಪೆಱವು** (ಬಹುವ) : ಕುಱತಂತೆ ಪೇಳ್ದ ನಾಲ್ಕುಂ ಕುಱಪುಗಳಂದೆಱದು ಪೆಱರ ದೋಷಂಗಳುಮಂ ಪೆಱವುಮನೀ ಮಾಱ್ಕೆಯೊಳು ತೋಱವುದು ತೋಱವಂತಸಾಧುಜನಸಂಗತಿಯುಂ (ಕರಾ. ೦-೬೬) ; ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವೆಂದಾ ವಾರಾಶಿವರಂ ಸುರಜನದಾರಿ ಮನೋಹಾರಿ ನೀಳ್ದುವೆರಮಂ ಕೆಲದೊಳ್ (ಅಜಿ. ೬-೯೨) ; ಪೆಱವೇಱದಿವಸದೊಳ್ಗಣಿಮಯುಮಹೀತಳದೊಳು ತಳರ್ನಡೆ ನಡೆದುಂ ಪೆಱವೆಱದಿವಸದೊಳು ಪವನಳಂ ನಡೆದುಂ (ತಾಪುಂಕಿ. ೨೬). **ಪೆಱಳ್** = ಬೇರೆಯವಳು : "ಲಿಂಗತ್ರಯದೊಳ್ ಪೆಱತು ಪೆಱಂ ಪೆಱಳೆನಿಪ್ಪದನ್ಯಾರ್ಥಂ" (ಕಶಬ. ೯೯) ; ಲತೆಯಂ ಲಲಿತಾಂಗಿಗೆತ್ತು ನೀನೆ ಜಗಿದೆಯನ್ನ ಪಕ್ಕದೆ ಪೆಱಳ್ಗೆನೆ ಬೆರ್ಚಿ ಲತಾಂಗಿಗಾಗಳಾನೆಱಗಿದಂ (ಅಜಿ. ೪-೦೩) ; ಬೇಗದಿಂ ನಡೆದು ಪೆಱಳ್ ಜನಾರ್ದನನ ರೂಪವಿಲಾಸ ಮನೊಲ್ದು ನೋಡಿದಳ್ (ಜಗಂ. ೦೬-೯೫). [ದೇ. II ತಮಿ. ಪಿಱತು]

**ಪೆಱತೆಗೆ** 'ಪೆಱದೆಗೆ' ನೋ.

**ಪೆಱದು** 'ಪೆಱತು' ನೋ.

**ಪೆಱದೆಗೆ, ಪೆರದೆಗೆ, ಪೆಱತೆಗೆ, ಹೆರದೆಗೆ, ಹೆಱತೆಗೆ, ಹೆಱದೆಗೆ** (ಕ್ರಿ). ೧. ಹಿಂಜರಿ; ಹಿಂದೆ ಸರಿ; ಹಿಮ್ಮೆಟ್ಟು : ಚರಣಾಕ್ರಾಂತಂ ಮಹೀಮಂಡಲಮದಿರೆ ಭುಜಾಕ್ರಾಂತಮಾಶಾಗಜೇಂದ್ರೋತ್ಕರಮಾಶಾಭಿತ್ತಿಯುಂದಂ ಪೆಱದೆಗೆಯೆ (ಗದಾಯು. ೯-೨೦) ; ವೀರಭಟಾ ನೀಂ ಸೇನೆ ಬೆಂಗೊಟ್ಟೋಡೆ ಪೆಱದೆಗೆಯಲ್ ನಿನ್ನ ಶೌರ್ಯ ಪ್ರಭಾವಕ್ಕಭಿಭಾವಂ ಪೊರ್ದುಗುಂ (ಜಗಂ. ೦೩-೬೬) ; ಬಿರುದಿನ ಬಲ್ಲಾಳ್ವಡೆ ಪೆಱದೆಗೆದುದು (ಜಯಕಾ. ೬-೩) ; ಮಱುಮಕ್ಕದ ಬೀರಂ ಪೆಱದೆಗೆದೆಡಕಂ ಬಲಕಂ ತಿರಿಗಿ ತನ್ನೊಂದು ಪೊಸಮಸೆಯ ಬಾಣದಿಂ ಕಡಿದು (ರಾಮಾಶ್ವ. ೦೨೯-೪). **ಪೆರದೆಗೆ :** ೨. ಹೊರಕ್ಕೆ ತೆಗೆ ; ಹೊರಸೆಳೆ : ಒರೆಯಿಂದ ಪೆರದೆಗೆದ ಸ್ಮರಶರಂಗಳ ತೆರದಿ . . . ಸ್ಮರಪಾರವಶ್ಯತೆಯನಾಂತು ನಿದ್ರೆಯೊಳಿರ್ಪ ತರುಣಿಯರ ಕಂತು (ಪಂಕಾಂ. ೫-೪೫).

**ಪೆಱತೆಗೆ :** ೧. "ಅಕ್ಕ್ಳಕಿತೆಂದು ಪೆಱತೆಗೆದುದಕ್ಕ" (ಶಬ್ದಸ. ೭೧) ; ಲಲಿತೆಯು ಮುಗಿಲೆಂದುಬಿಬ್ಬದ ಬೆಳಗಿನೊಳಿರದಗಿದು ಪೆಱತೆಗೆದು ತಮೋಬಳಮಿರ್ದುದೆಂಬಿನಂ ಕಣ್ಗೊಳಿಸುಗುಮಾಕೆಯ ಪಿನಿಳಕಬರೀಭಾರಂ (ಸುಕುಮಾ. ೯-೮೮) ; ಪೆಱತೆಗೆವ ತಮಂ ತಱಿಸಿ ಪೊದುಱುಗಲೆನಲ್ ಪೂರ್ವದಿಗ್ವಧೂವದನಂ ಕಣ್ಪಟಿದವೊಲದೇಂ ಬೆಳತುರ್ದುದೊ . . . ತುಹಿನಾಂಶುಬಿಂಬಂ (ಶಂಖವಿ. ೧೧-೧೮೪) : ತಿಮಿರಬಳಂ ತೆರಳ್ದು ಪೆಱತೆಗೆವ ರಣೋತ್ಸವಮಂ ನೋಡಲ್ಕೆಟ್ಟೆಂದವೊಲೆಱದನುದಯ ಶಿಖರಮಂ ಮೃಗಲಕ್ಷ್ಮಂ (ವರ್ಧಮಾ. ೬-೩೦). ೨. ಪೆಱತೆಗೆವ ಬಾಣಮುಷ್ಟದು ನೆಱನಡುವಂತವನ ಮನಮನಾಕೆಯ ಬಾಣಂ (ಪಾರ್ಶ್ವ. ೩-೯೮). **ಹೆರದೆಗೆ :** ೧. ಪೆರದೆಗೆವ ನಿಜಮಾಹಿನಿಯು ಮುಂಬರಿಸಿ (ಅನಂತಾ. ೧-೧೧-೪). **ಹೆಱತೆಗೆ :** ೧. ಕಟಕದ ಚಂದ್ರಮಂಡನಾರ್ಯನ ಕುಮಾರಿತಿ ಮೇಲಿ ಪರಿದಡೆ ಹೆಱತೆಗೆಯದೆ ಎರಡ್ಕ್ಯಮಾರೆಲಿ ನೆಟ್ಟು . . . ಸ್ವರ್ಗಸ್ಥನಾದಂ (ಶಾಇ. IX-i, ೨೮೪-೧೧ ; ಕ್ರಿ. 1190) ; ತೆಱಹುಗೊಡು ಫಡ ಫಡ ಜಯದ್ರಥ ಹೆಱತೆಗೆದು ಸಾರೆನುತ ಹೂಣಿಗನುಱುಬಿದರೆ ಪಾಱನಂತು ಘೀಪನ ಕಡುಹ ನಿಲಿಸಿದನು (ಕುಮಾ.ದ್ರೋ. ೫-೬೪). **ಹೆಱದೆಗೆ :** ೧. ರಣದಿಂದೆ ಹೆಱದೆಗೆದು ಕಂಡ ಕಡೆಗೋಡಿದರ್ . . . ಸುಭಟರು (ಶ್ವೇ. ಭಾ. ೨೨-೪೦) ; ಬಿರುದಿನ ಸಬಳದ ಭಟರು ಹಿನ್ನೆಲೆಗಾಗ ಹೆಱದೆಗೆಯದೆ ಹೆಜ್ಜೆಗಳ ಧುರಮುಂಡಲದೊಳಿಱಿದಾಡಿ ಪೌರುಷವನು ಪರಬಿದರೇನ ಬಣ್ಣಿಸುವೆ (ಕಂಸಾ. ೦೪-೬೪). ೩. ಹೊರಕ್ಕೆ ಬರು ; ಹೊರಬರು : ಹೊಗಲು ಒಲ್ಲಿನು ಮೊಕ್ಕವೊಲು ಹೆಱದೆಗೆಯಲಱಿಯನು ವೀರಪಾರ್ಥನ ಮಗನು (ಕುಮಾ.ದ್ರೋ. ೪-೩೪). [ಪೆಱ₂ (<ಪೆಱಗು) + ತೆಗೆ₁]

**ಪೆಱದೆಗೆಯಿಸು** (ಕ್ರಿ). ಹಿಂದಕ್ಕೆ ಹೋಗುವಂತೆ ಮಾಡು : ಪಸಿದೆ ಯೆಱಿಲೆ ಕಂದ ಪಗಲಿಱುತ್ತಮುದೆಂದಾಸಿರ್ದ ಮಾತೆಯೊಳುರವಣಿಸಿ ಬಸುಬಿಸುಸುಡಿಗಳಿಂ ಪೆಱದೆಗೆಯಿಸಿ ಮುನ್ನ ಪಸವಾತನೊಸೆದಾಲಿಪುದು (ಚೆನ್ನ. ೩-೦೫೭ ಸಾಂಗತ್ಯ). [ಪೆಱದೆಗೆ + — ಇಸು₃]

**ಪೆಱನಡಿ** (ನಾ). ಒಂದು ಊರಿನ ಹೆಸರು : ಇಗ್ಗಲಿಯ ಆನಿಪುರ ಮಾಱಜೂರ ಸನ್ನಿನಲ್ಲಿ ತಣ್ಣಾಲಿಗಾಲ ಮುಂಡಣ ಪೇರೊಟ್ಟಿಯಿಂ . . . ಅನ್ತೆ ಬನ್ದು ಪೆಱನಡಿಯ ಪಡುವಣ ಪೇರೊಟ್ಟಿಯಿಂ ಅನ್ತೆ ಬನ್ದು ಕಿತ್ತೆಬುಲ ಪಡುವಣ ಪೇರೊಟ್ಟಿಯಿಂ (ಎಕ. III (R), ನಂಜನ. ೨೦೪-೨೩ ; 915 ?). [?]

**ಪೆಱನಡು** (ಕ್ರಿ). ಹಿಂದಕ್ಕೆ ಹೋಗು : ಪೊಟ್ಟೆ ಬಟ್ಟಾಗಿರ್ದ ಪೆಱನಟ್ಟ ನಡುವಂ ನೋಡಿ ಪೊಕ್ಕು ಪಿಟ್ಟಿಂದು ಮಿಡುಕಲಾಱದೆ × × × ಗೆಯ ಕಾಪಿನಾಳ್ಗಳುಮು (ಗದಾಯು. ೯-೩೪ ವ).
[ಪೆಱ₂ (<ಪೆಱಗು) + ನಡು₁]

**ಪೆಱನಾಡು** (ನಾ). ೧. ಬೇರೆಯ ನಾಡು ; ಅನ್ಯದೇಶ ; ಪರಸ್ಥಳ : ಪೆಱನಾಡಱಿಯು ನಿನ್ನ ಕೈಯೊಳ್ ಬನ್ನಂಬಡೆದು ಕಿನ್ನರಾಗಿಯುವನ ಮೆಯ್ಗಂದಿದ ಚಿನ್ನಪಾಂಗಿನಂತೆ ಪೊಡರ್ಪುಡುಗಿದ ಱಿದಿಯುಂ (ಶಬ್ದಮ. ೮೯). ೨. (ಅಲಂ) ಬೇರೆಯ ಲೋಕ ; ಪರಲೋಕ : ಅಭಿಮನ್ಯು . . . ಪೆಱನಾಡ ನೆಲದಲ್ಲಿ ನಾಟಿರ್ಪ್ಪಂ (ಅಕ್ಷಾ. ೩೩-೬).
[ಪೆಱ₁ (<ಪೆಱತು) + ನಾಡು]

**ಪೆಱನೂಂಕು** (ಕ್ರಿ). ಹಿಂದೆ ಬೀಳುವಂತೆ ಮಾಡು ; ಹಿಂದಟ್ಟು : ಪಾವಸೆಯುಂ ಪೆಱನೂಂಕುವ ಪೊಸಕೆಂದಾವರೆಯೆನೆ ಕಿಱುಗೈಯುಂ ಮೇಲಾದ ನೋವದೆ ನೂಂಕಿ (ಜಯಕಾ. ೨-೩೬). [ಪೆಱ₂ (<ಪೆಱಗು) + ನೂಂಕು₁]

**ಪೆಱಪಿಂಗಿಸು** (ಕ್ರಿ). ೧. ಹಿಂದಕ್ಕೆ ಸರಿಸು : ಕರದಿಂದೆ ಮುಂದೆ ಪರ್ವಿದ ರಜನೀಶಿರಸ್ಥರಿಣಿಯುಂ ಪೆಱಪಿಂಗಿಸಿ ಪದ್ಮಿನೀವಧೂವದನ ಸರೋಜಮುಂ ಪದಪಿನಿಂದಮೆ ನೋಡುವೆನೆಂಬ ಮಾಱ್ಕೆಯಿಂದುದಯ ಗಿರೀಂದ್ರವೇದಿಕೆಯನೇಱುವನೊಯ್ಯನೆ ಪದ್ಮಿನೀಪ್ರಿಯಂ (ಕಾದಂಬ. ೪೩೦). ೨. ಕಳೆ ; ನಿವಾರಿಸು ; ಪರಿಹರಿಸು : ಮೃದುಸದುಪದೇಶಪೇಶಲಂಗಳಪ್ಪ ವಚನನಿಚಯಂಗಳಿನಾ ವಿರೋಧನನಬಾಧಕನಪ್ಪಂತು ಬೋಧಿಸಿ ದೀನಾರಮನೇನಾನುಮನಿತ್ತು ತತ್ಕರುಣೆಯ ಸೆಱೆಯುಂ ಪೆಱಪಿಂಗಿಸಿ (ವರ್ಧಪು. ೦೩-೩೨ ವ). [ಪೆಱಪಿಂಗು + — ಇಸು₃]

**ಪೆಱಪಿಂಗು, ಹೆರಹಿಂಗು, ಹೆಱಹಿಂಗು** (ಕ್ರಿ). ೧. ಹಿಂದೆ ಸರಿ ; ಹಿಂದಕ್ಕೆ ಹೋಗು ; ಹಿಂಜರಿ : ಪುರಿ ಪುರಿ ಪರಿಪರಿ ಪೊಪೊಗೆಲೆ ಯೆಲೆ ಪೆಱಪಿಂಗು ಪಿಂಗು . . . ತೊಲತೊಲಗೀ ಮೊಳೆಗೆ ಪುಲಿಯ ದೆಬುದು ಮಾರ್ಗಂ (ಶಬರ. ೨-೨೬); ಬಾಳೊಳೆ ಬಾಳ್ ಪಳಂಚೆ ಪಾರ್ಕೆಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಸುಕುಮಾ. ೧೦-೪೨): ಮತ್ತಂ ದುರ್ಗಂಧಕ್ಕೆರಲಾಱದೆ ಲೆಂಕರ್ ದಂಡಂಗೊಂಡರಂತೆ ಶಂಕಿಸುತ್ತುಂ ಪೆಱಪಿಂಗೆ (ರಾಜಶೇಖ. ೪ ೦೩೪). ೨. ಹೊರಬರು ; ಮರಳು : ಅವಳ ನಗೆಮೊಗದೊಳೊಯ್ಯನೊಯ್ಯನೆಱಗಿದ ಕಣ್ ಎಸೆವ ಪೊಸದಾವರೆಗೆಱಕದಿಂದೆಱಗಿದ ಮಱಿದುಂಬಿಯಂತೆ ಪೆಱಪಿಂಗಲಾರ್ತುದಿಲ್ಲ (ಕಬ್ಬಿಗ. ೭೮). ೩. ಕುಗ್ಗು ; ಕಡಮೆಯಾಗು ; ತಗು : ಮಂಗಲಾಕಾರನಂ ಮಿಗೆ ನೋಡಿ ನೋಡಿ ಪೆಱಪಿಂಗದಾನಂದದಿಂ ಬೆಚ್ಚಂತಿರೊಚ್ಚತಂಬಾಗಿ ನಲಿನಲಿದಾಡುತೆ (ಶಬ್ದರಾ. ೭-೩೭). ೪. ದೂರವಿರು; ಅಗಲಿರು: ಗಂಗಾಧರನ ಭಕ್ತೆ ತಿರುಕೊಳವಿನಾಚಿಥೆಂಬಂಗನೆ ಪವಿತ್ರಜಲಘಟವನುಱಿ ಪೊತ್ತು ಪೆಱಪಿಂಗದಾ ಪಂಚಪರ್ವದ ಕುಮಾರಂಬೆರಸು ಮುನ್ನ ತಾಂ ನೀರಡಾವ ಲಿಂಗವಂತರ ಮನೆಯ ಪೊಕ್ಕು (ಬಾಪು. ೬ ೦೭). ೫. ಇಲ್ಲವಾಗು : ನಾಶವಾಗು : ನೆಱೆ ಘೋಷಂ ಪೆಱಪಿಂಗಿದಿಂಗಡಲ ಮಧ್ಯಾದಭ್ರ ಶುಭ್ರಾಬ್ಜದೊಳ್ ವರಕಂದರ್ಪನ ಗರ್ಭದಿಂದೆಸೆವ ಲಕ್ಷ್ಮೀಕಾಂತೆಯೇಬಂತೆ . . . ಕ್ಷೌಮಾಂಬರಾಚ್ಛಾದಱಚಧವಳಪರ್ಯಂಕದೊಳಿರ್ದ ಗರ್ಭವತಿಯಂ ಕಂಡಂ (ಕುಸುಮಾ. ೫-೫೫); ಧೂವಳಯಾಧಿಪಂ ಬೆಱಗುಪೆತ್ತು ಮುದಂ ಪೆಱಪಿಂಗಿ ಪಂದೆಯಂ ಪಾಡದರ್ಪಂತೆ ತೊಟ್ಟನೆ ಕಬಲ್ದು (ದಶಕು. ೧೧-೧೧೧). ೬. ಕಳೆ; ನೀಗು : ಸಾಸು ನೀಸುಗಳಳಿದು ತಾನು ಲಿಂಗದಿ ಉಳಿದು ನಾನಾಭ್ರಮೆಗಳ ಪೆಱಪಿಂಗಿ ನಿಂದವನು ತಾನೈಕ್ಯ ನೋಡ (ಸರ್ವಜ್ಞ. ೦೫೩). ೭. ಪರಿಹಾರವಾಗು : ಉಪಶಮನವಾಗು : ಸ್ಮರ ತಾಪಂ ಪೆಱಪಿಂಗೆ ಸೂಳೆಯರೊಳುಂಗುಪ್ಪೊಂದಿ ಕೂಡಿರ್ದ ಗಂಡರನಾಟಂದದಲೆ ದಟ್ಟಿ ಪೊಯ್ದು ಕಳೆದು . . . ಸೂಳೆಯರೊಳುಗ್ರಾಟೋಪದಿಂ ಬಲ್ಮೆಯಿಂ ನೆರಪಂ ಭೂಭುಜನಂದನಂ (ರಾಜಶೇಖ. ೨ ೩೮). **ಹೆರಹಿಂಗು :** ೩. ಹೆರ ಹಿಂಗದ ಪರಮಸುಖ ದೊರೆಕೊಂಡಿತ್ತು (ವಚನ. ೧೦೨). ೮. ಬೇರೆಯಾಗು ; ಬೇರ್ಪಡು : ಅಂಗಲಿಂಗಕ್ಕೆ ಕಿಂಚಿನ್ಮಾತ್ರ ಸೂತ್ರ ಹೆರ ಹಿಂಗದಂತನವರತ ಧರಿಸಿಕೊಂಡಿರುತಿರ್ಪ (ವೃಷಭೇ. ೨-೨). **ಹೆಱಹಿಂಗು:** ೧. ಚೋಳನಂಜಿ ಹೆಱಹಿಂಗದೆ ಮಾಳವನೋಡಿ ದುರ್ಗ್ಗಮಂ ಹುಗದೆ ಕಳಿಂಗನೋಸರಿಸಿ ಹೋಗದೆ ಗುರ್ಜ್ಜರನಂತು ಯುದ್ಧದೊಳ್ಮಿಗುವರೆ ಬಿಟ್ಟದೇವ ಗರುಡಂಗಿದಿರಾಗಿ ಧರಿತ್ರಿಪಕ್ಷದೊಳು (ಎಕ. V. ಹಾಸನ. ೬೯-೨೪; 1155): ನಡೆನಡೆದು ತಿರುಗಿ ಹೆಂಬೆಱಕೆನು ನಡೆನಡೆದು ದಡದಡಿಸಿ ಹೆಱಹಿಂಗಲಾಱದೆ ಮನಂಬಿಡಿದು (ಶಿವತ. ಬೆ. ೧೩೩-೧೧); ಹೊಗರುಗು ವಂಗೋಪಾಂಗವಕ್ಷದೊಳು ಪೊಂಬೊಗರುಱುಂತಿರ್ದ ನುಣ್ಗೊಲೆಯ ದೃಗುಯುಗಳದಿ ನೋಡಿ ಹೆಱಹಿಂಗಲಾಱದೆ ಮುಗುಳಂಬನವರ್ಣಿಪ . . . (ಪೋಹನ. ೦೪-೩೨). ೪. ನೆಱೆ ರೂಪುವಡೆದ ಮನ್ಮಥನೆಂಬ ರ . . . ಹೊನ್ನೊರೆಯೆಂದಲುಗಿದ ಕೂರಸಿಯು ಮಱೆಯಬಾರದು ಮಹಾದೇವ ಸತ್ಯವರನ ಹೆಱಹಿಂಗಬಹುದೆ ಬಲ್ಲವರು (ಪೋಹನ. ೨೪-೫೫). ೫. ಲಿಂಗವ ನಲಿನಲಿದು ಪೂಜಿಸುತಂಗಚೇಷ್ಟೆಗಳೊಡನೊಡನೆ ಹೆಱಹಿಂಗುತಿರೆ ಸಲೆ ನೋಡಿ ನೋಡಿ ಮುಯಾಬ್ಬಮಲರಿಸುತ (ಬಸವ. ೩೩ ೬): ಎರಬು

ಸುಳಿದುದು ದೀಪಶಿಖಿ ಪರಿಹಾಸಿಸಿದತಿಬಲದಬ್ಬುಗದ ನಿಷ್ಠುರತೆಗಂಜದೆ ಪೊಣಿದೆನೆ ಪೆಱಹಿಂಗಿತಾ ರಜನಿ (ಸುಪ್ಪಾಸ. ೯-೦೪). ೭. ಕೆಲದೂರ ಬಂದಾ ದಾರಿಯ ನಡೆವಲಸಿಕೆ ಪೆಱಹಿಂಗಲೆನುತ (ಪ್ರಶಂಪ. ೫.೩೦).

[ಪೆಱ್ಸ (<ಪೆಱಗು) + ಹಿಂಗು$_1$]

**ಪೆಱಭಾಗ** (ನಾ). ಹಿಂಬದಿ ; ಹಿಂದುಗಡೆ ; ಹಿಂಭಾಗ : ತನ್ನ ಬಲಂ ಪೆಱಭಾಗದಲ್ಲಿ ಬಂದಡಿಗೆತದಂದೆ ಪಜಿಯೊಳೆ ಪಾಯಿಸಿ ಮೂಲಬಲ್ಲವುಂ ಪಡಲ್ವಡಿಸಿ (ಎಳೆ. II. ೦೩೬-೯; ಸು. ೯೪೦). [ಪೆಱ್ಸ (<ಪೆಱಗು)+ಭಾಗ]

**ಪೆಱಮೆಟ್ಟು**, ಹೆಱಮೆಟ್ಟು (ಕ್ರಿ). ಹಿಂದಕ್ಕೆ ಅಡಿಯಿಡು; ಹಿಂದೆ ಸರಿ; ಹಿಂಜರಿ : ಮೂರುರ್ಗಿಜಿದೆಷ್ಟೋರಿಯುಂ ಪೆಱಮೆಟ್ಟದ ತಗರುಂ (ಶಾಂತಿಪು. ೬.೫೬ ವ); ಪೆಱಮೆಟ್ಟಿ ತುಱುಗಿ ಮಿಗೆ ತಳ್ಳಿಱಿದಪ್ಪು ವೊಡನೊಡನೆ ತಮ್ಮೊಳೀ ಕಾಂತೆಯ ಸುಣ್ಣಿಡುಱುಗಿವೆಗ[ಣ್ಣ]ಳ್ (ಪುಷ್ಪಕೃ. ೬-೫೨). **ಹೆಱಮೆಟ್ಟು** : ಬಾಡುತಂ ಬಳಲುತಂ ಹೆಱಮೆಟ್ಟಿ ಭೀತಿಯಿಂ ಕೆಲಸಾರ್ದು ಮಂಟಪದ ಗೋಂಟಿನೊಳು ಕುಳ್ಳಿರ್ದು (ಕರುರ. ೯೬. ೦೩-೨೦).

[ಪೆಱ್ಸ (<ಪೆಱಗು) + ಮೆಟ್ಟು$_1$]

**ಪೆಱಮೆಯ್** (ನಾ). ಮೈಯ ಹಿಂಭಾಗ ; ಬೆನ್ನು : ನೆಱಿಯೆ ನವಿರ್ ಪೆಂಪಿಡಿದೆದೆದೆಱಿಲ್ಲದೆ ನೆರೆದ ಪಕ್ಕದಿಂ ಸೊರ್ಕುತುಮಾ .ಪೆಱಮೆಯ್ಯುಕ್ಕ ಮನೆರಡುಮನೆಱಿತರ್ ಭೂಭಾರವೆಂದೆ ತಱಿಸಂಗಾಗಳ್ (ಚಕೆಪ. ೬-೨೦೯).

[ಪೆಱ್ಸ (<ಪೆಱಗು) + ಮೆಯ್$_2$]

**ಪೆಱವಕ್ಕ** (ನಾ). ಹಿಂದುಗಡೆ; ಹಿಂಭಾಗ : ನರ್ಮದಾತಿಲಕದ್ವಿಪೇಂದ್ರವುಂ ಪಣ್ಣಲ್ವೇಟ್ಟು ತಾನುಂ ಕೈಗೆಯ್ದು ಪದ್ಮಾವತಿಯಂ ಬರಿಸಿ ಪೂರ್ವಾಸನ ದೊಳಾಕೆಯುಂ ಕುಳ್ಳಿರಿಸಿ ಪೆಱವಕ್ಕಮುಂ ತಾನಳವಡಿಸಿವೊಡನೆ ಗಡಣಿಸಿ ಬಪ್ಪ ರಾಜಪುತ್ರರಿಗೆತ್ತಿದ ಸತ್ತಿಗೆಗಳಿಂದಂಬರತಳಂ ಪುಂಡರೀಕಷಂಡದಂತೆ ಕಣ್ಗೊಪ್ಪವಿರಾಜಿ (ಧರ್ಮಾಮೃ. ೨-೩೯ ವ). [ಪೆಱ್ಸ (<ಪೆಱಗು) + ಪಕ್ಕ]

**ಪೆಱವರಿಜು** (ನಾ). ಬೇರೆಯ ರೂಪು, —ಆಕಾರ : ಅಂತಃಕರಣಮ ಪೆಱವರಿಜಾಱತುದು ದಲ್ ತಿರುಮಲಾರ್ಯನೆಂಬೊಳ್ವೆಸರಿಂದಿಂತೀ ತಿಳಿ ದಪ್ರತಿಮನುಮೆಂತಪ್ಪ ರಹಸ್ಯಮಾದೊಡಂ ತೊಡರ್ದಿರ್ಕುಂ (ಚಕೆಪ. ೫-೦೦೦).

[ಪೆಱ್ಸ (<ಪೆಱತು) + ಪರಿಜು]

**ಪೆಱವುಟ್**$_1$ (ಕ್ರಿ). ಬೇರೆಯಾಗಿ ಉಳಿ; ಮಿಗು : ಪೆಱವುಟಿದ ಮೂಱು ಮಿಱುಮಿಱುಪಿನುಪ ಶಿತಾಸ್ತ್ರಂಗಳಿಂ ದ್ವಿಜನ್ಮನ ನೊಸಲುಂ ನೆಱಗೊಳ್ವಿನ ಮೆಚ್ಚೊಡೆ (ಶಾಂತೀಶ್ವ. ೦೨-೬೪). [ಪೆಱ್$_1$ (<ಪೆಱತು) + ಉಟ್$_1$]

**ಪೆಱವುಟ್**$_2$. ಪೆಱಉಟ್ (ನಾ). ೧. (ಗೃಹಸ್ಥನಿರುವ ಕಡೆಯಿಂದ) ಬೇರೆಯಾದ ಸ್ಥಳ : ಭಟ್ಟಾರಾ ನೀಮಿಲ್ಲಿಗೇಕೆ ಬಂದಿರಿಲ್ಲಿಂದಂ ಪೊಱ ವೊಟಲೊಳ್ ಪೆಱವುಟ್ ಬಸದಿಯಿಲ್ಲಾ ಎಂದೊಡೆ (ವಡ್ಡಾರಾ. ೨೭-೨೭). ೨. ಬೇರೆಯ ಕಡೆ, –ಎಡೆ : ತದುಪಗತಮಧ್ಯಮೈಕತ್ವದೊಳಕ್ಕುಂ ಪ್ರಾಯದಿಂದಿಕಾರಮುಕಾರಂ ವಿದಿತಸ್ವರೂಪವಲೋಪಮುಮದಂತೆ ಪೆಱವುಟ್‌ಯೊಳು ಪ್ರಕೃತಂತ್ರದೊಳಂ (ಶಾಬ್ದಾನು. ೪೦೫); ವರುಣನೆಂಬ ನೈಮಿತ್ತಿಕನಂ ಕರೆದು ಬೆಸಗೊಳ್ವುದುಮಾತಂ . . . ದೇವಕಿಯ ಮಗ ನೊರ್ವಂ ಪೆಱವುಟ್ ಬಳೆದಪನೆಂದು ಬಗೆಯೊಳ್ ಪಗೆಯನಿಕ್ಕಿ ಪೋಗೆ (ಅರ್ಧನೇ. ೭-೭೬ ವ). **ಪೆಱಉಟ್** : ೩. (?) : ತಿರ್ದಲಿಕೆ ಬಂದ ಶಕುನ ಪಲ್ಲಿರ್ದಂತಿರೆ ಪಲವು ತಿರ್ದೆ ಪೆಱಉಟ್ ಲಾಭಂ ತಿರ್ದಿದದುನಯಂಗೆ ಪೊರ್ದದು ಫಲಮಂತದಕ್ಕೆ ಕಡೆವೊಗಶುಭಂ (ಲೋಕೋಪ. ೦೨-೬); ಆರಂಬದ ಫಲಮುಂಟೆಂಬುದಂ ಪಡೆದ ಧಾನ್ಯರಾಶಿ ಪೇಟ್ವಂತೆ ಧರ್ಮದ ಫಲಮನಿಪ್ಪುದೀ ಸಂಪತ್ತೆ ಪೇಟ್ಟಪ್ಪುದದಱೊಳ್ ನೀಂ ಬಗೆದು ನೋಡಿ ನೆಗಟ್ಟುದೆಂಬೀಯೋಜೆಯನೀ ನೆಗಟ್ತೆಯುಂ ಪೆಱಉಟ್‌ಯ(ಮ)ನ್ನು ಮೆಂದು ಭ್ರಾಂತಿಸದಿರು (ಚಿಪಸ. ೨೨೦-೦೬ ಪ). 'ಅರೆಉಟ್' ಹೋ.

[ಪೆಱ್$_1$ (<ಪೆಱತು) + ಉಟ್$_2$]

**ಪೆಱವುಟ್**$_3$ (ಅ). ಮತ್ತೊಂದೆಡೆಯಲ್ಲಿ; ಬೇರೆಯ ಕಡೆಯಲ್ಲಿ : ಮಗಳೆ ಎಮ್ಮ ಕೊಟ್ಟ ಬ್ರತಂಗಳಂ ನಿಮ್ಮಮ್ಮಂ ಬಿಸುಡಲ್ವೇಡ್ಟನಪ್ಪೊಡೆ ಪೆಱವುಟ್ [ಪಾಠಾಂ. ಪೆಡೆ]ವಿಸುಡದಿರೆಮ್ಮಲ್ಲಿಗೆ ನಂದೆಮ್ಮ ಕೊಟ್ಟ ಬ್ರತಂಗಳನೆಮಗೊಪ್ಪಿ ಸುವುದು (ವಡ್ಡಾರಾ. ೦೩-೦೫) ; ಪೆಱವೊಳವುಳ್ಳುವಲ್ಲಿಯೊಳವಾಗಮುಖಾಪೆ ಗಳಲ್ಲಿಯುಳ್ಳುವಂ ಪೆಱವುಟ್ ಕಱಲಾಗದೆನೆ . . . ನೆಗಟ್ಟುದು ೯ವಿ ಚತುರ್ಮುಖನಾಗಮುವೇದಿಯಪ್ಪುದಂ (ಆದಿಪು. ೦೨-೩೩); ಪಿತರರನೂಡಿ ದಪ್ಪಿವೇಬರಂತಪ್ಪುದೆ ಪೆಱವುಟ್ ಪುಟ್ಟಿ ಬಳೆಯುತ್ತಿರ್ದ ಪಿತರರನೂಡುವ ಪಾರ್ವರ್ತಮ್ಮ ಕೆಯ್ಯಲಿರ್ದ ಪಾರ್ವಂಗೆ ಕೂಟನೊಯ್ವರು (ಧರ್ಮಪ. ೯೭೩-೪).

[<ಪೆಱವುಟ್$_2$]

**ಪೆಱವೆಣ್** (ನಾ). ಬೇರೆಯ ಹೆಣ್ಣು ; ಪರಸ್ತ್ರೀ : ಪೆಱವೆಣ್ಗಳ್ಳಂಗ ವೋಗಾಗದು (ಶಂಪು. ೯-೮೦) ; ಚಾಳುಕ್ಯವಂಶದೊಳಿಲ್ಲಿಯುಮಿನ್ನವರೆಗಂ . . . ಬೇಡಿದರ್ಗಿಲ್ಲೆಂಬುದುಂ ಕಾದಿ ಸೋಲ್ವುದುಂ ಪೆಱವೆಣ್ಣಂ ಪಿಡಿಸುವುದುಂ[ಪಾಠಾಂ. ಪೆಱರ ವಿಘಟಿಸುವುದುಂ]ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೭ ವ); ಬಿಗೆಯ್ದುಂ ಪೆಱವೆಣ್ಗಾಟಿಸುವನಂ ಶುಚಿಯೆಂಬರ್ ಶುಚಿಯುಂ ಅಶುಚಿಯೆಂಬರ್ (ಶಬ್ದಮ. ೫೦-೦೩).

[ಪೆಱ್$_1$ (<ಪೆಱತು) + ಪೆಣ್]

**ಪೆಱವೋಗು**, ಪೆಱಸೋಗು (ಕ್ರಿ). ಹಿಂದಕ್ಕೆ ಹೋಗು ; ಮರಳು : ಅಱುವೋ ನಿಸ್ನೇಹನೆನ್ನಂ ಹಿಮಗ್ರಪಕದೊಳೆಂತಿರ್ದಳಂ ಕಂಡು ಪುತ್ರಂ ಪೆಱವೋದಂ (ಕಾದಂಬ. ೫೮೦). **ಪೆಱಹೋಗು** : "ಅಕ್ಕುಳಿಸಿತೆಂದುಂ . . . ಪೆಱಹೋದುದೆಂದುಂ, ನುಣ್ಚಿತೆಂದುಂ, ಪಾರಗೆಯ್ತೆಂದುಂ — ಈ ೧೩. ಅಪಸರಣಕ್ಕೆ ಪೆಸರ್" (ಶಬ್ದಾನು. ೭೨-೬೯೯).

[ಪೆಱ್ಸ (<ಪೆಱಗು) + ಪೋಗು$_1$ (<ಪೋ$_1$)]

**ಪೆಱಸಾರ್**, ಪೆರಸಾರು, ಪೆಱಸಾರು, ಹೆಱಸಾರ್, ಹೆಱಸಾರು (ಕ್ರಿ). ಹಿಂದಕ್ಕೆ ಹೋಗು; ಹಿಂದೆ ಸರಿ; ಹಿಂದೆ ಸಾರು: ತಂಬುಲಿಗರ್ ನಂಬುಗೆ ಗೆಟ್ಟವರಂತೆ ಪೆಱಸಾರೆ (ಧರ್ಮನಾ. ೨-೬೯); ಅಂದು ನನ್ನನು ಕನಸಲಿ ಕೂಡಿ ಪೆಱಸಾರ್ದು ಕೊಂದು ಹೋದವನ ರೂಹನಱಿಯೆ(ಪೋಲಿಪತ. ೩೦-೨೯); ಪೆಳಱ್ ಪೆಱಸಾರ್ದಪೆಯೋ? ಸ್ವರ್ಗ್ಗ ಪಗೆವರೊಳ್ ಮಱುಗಿದಪೆಯೋ (ಬನ್ನಿಶ. ೫-೮೦). **ಪೆರಸಾರು** : ರಾಮಚರಿತಾಮೃತಂ ರಮಣೀಯತರ ಭವತ್ಕೋಮಲಸುವಾಣಿಯಿಂ ಕಲಿತಪೂರದಡೆ ಶ್ರವಣದಾ ಮಹಾ ಸಾಮ್ರಾಜ್ಯಮಂ ಸವಿದು ಪೆರಸಾರದೆನ್ನ ಮಾನಸ ಮಹೇಶ (ವಂಕಾಂಡ. ೫-೦-೩); ಮೃತ್ಯು. ಓ. ನನ್ನ ಮೃತ್ಯು! ಬಾ. ನಿನ್ನ ಶಂಖನಾದದ ನಿರಾತಂಕ ನಿರುಪಾಧಿಯಲಿ ನಿದ್ದೆ ಪೆರಸಾರಿರುವ ರಾತ್ರಿಯಲ್ಲಿ (ಶಂಮು. ೯೯-೦೯). **ಪೆಱಸಾರು** : ಪರಿಮಳದ ಪಾಡಱಿದು ತಳವೇಲ್ಗಳೊಳಗೆ ಪೊಯ್ದು ರವಣಿಸಿ ಪೆಱಸಾರಿ ಮುಂಬರಿದು ಗದೆಗಳಂ ತಿರುಪಿ ಭುಜಸತ್ತ್ವದಿಂ ತೋಱಿದರ್ ಘನಗದಾಯುದ್ಧಮಂ ಸಂಗರದೊಳು (ಕಲಪು. ೦೬-೨೩). **ಹೆಱಸಾರ್** : ಇರವಂತಿಯ ಮಾಲೆಗಳಂ ವಿಲಾಸಿನಿಯಗ ಕಯ್ಯೊಳ್ ನೀಡೆ ಹೆಱಸಾರ್ದು (ಶಂಬರ. ೦೬-೦೦೦); ಹೆಱಸಾರ್ದು[ಪಾಠಾಂ. ಕೆಲಸಾರಿ] ನಿಂದು ಬೆಸನಾವುದೆನಲು (ಹಕಣ. ೬-೨). **ಹೆಱಸಾರು** : ನಿಮ್ಮ ತೇಜವ ನೋಡಲೆಂದು ಹೆಱಸಾರಿ ನೋಡುತಿರಲು ಶತಕೋಟಿಸೂರ್ಯರು ಮೂಡಿದಂತೆ ಇರ್ದುದಯ್ಯ (ಅವಸಂ. ೦೬೩-೭೬೬); ಥಟ್ಟುಗೆಡಹಿದ ಕರ್ಣನನು ಕೈಮುಟ್ಟದಿರು ಹೆಱಸಾರು ಪಾರ್ಥನು ಕೊಟ್ಟ ಭಾಷೆಯ ಮಱೆದೆಲಾ ಕೃತಪ್ಪ ಮಾಡದಿರು (ಕುಪ್ಪಾಕ. ೦೨-೨೯); ನೆಱೆ ಲಕ್ಷ ಪರಿ ಪಾಯಿದಳದ ಮನ್ನೆಯ ಸೋತು ಹೆಱಸಾರಿದನಲ್ಲಬಲಕೆ (ಕಂಪು. ೦೭-೭೭).

[ಪೆಱ್ಸ (<ಪೆಱಗು) + ಸಾರ್$_1$]

**ಪೆಱಸಾರಿಸು** (ಕ್ರಿ). ಹಿಂದಕ್ಕೆ ಸರಿಸು ; ಹಿಂದೆ ಹೋಗುವಂತೆ ಮಾಡು : ನೀರೆಂಬ ಸ್ತ್ರೀಯೆಯಂ ಪೆಱಸಾರಿಸುತುಂ ಪುಳಿನಮೆಂಬ ಜಘನ

ಸ್ಥಳದಿಂ ನಾರಿಯವೊಲ್ ನದಿ ಮೆಱೆಗುಂ (ಶಾರಭ. ೪-೬೯).

[ಪೆಱಸಾರ್ + — ಇಸು₃]

**ಪೆಱಸಾರು** 'ಪೆಱಸಾರ್' ನೋ.

**ಪೆಱಸಾರ್ಚು** (ಕ್ರಿ). ೧. = ಪೆಱಸಾರಿಸು : ಅಡಪಮನತ್ತಲೊಯ್ ದವಕೆಯುಂ ಕಳೆ ಸೀಗುರಿ ಬೇಡ ಬೀಸದಿರ್ ಕೊಡೆಯುಂ ವಿಡಂಬವೇಕೆ ಸಿರಿಗನ್ನಡಿಯುಂ ಪೆಱಸಾರ್ಚು (ಪುಷ್ಪ. ೧೩-೯೬). ೨. ಕಡೆಗಣಿಸು : ಬಂದಿವರ್ ಮಱುವಲಂ ಕಿಱಿಪಿರಿದೆಂಬೆಣಿಕೆಯುಂ ಪೆಱಸಾರ್ಚಿ ಪೆರ್ಚಿದ ರಕ್ಕಸವಡೆಗಿದಿರ್ಚುವಿಂದ್ರಾಬ್ಯುತರಂತೆಯುಂ . . . ತೆಲುಂಗಪಾಳೆಯಮಂ ದಟಿದುಱಿವಾಯ್ತು (ಜಗ. ೨-೪೯). [ಪೆಱ₂ (<ಪೆಱಗು) + ಸಾರ್ಚು₁]

**ಪೆಱಹೋಗು** 'ಪೆಱವೋಗು' ನೋ.

**ಪೆಱಿಸು, ಪೆರಿಸು, ಹೆಱಿಸು** (ಕ್ರಿ). ಪ್ರಸವವಾಗುವಂತೆ ಮಾಡು : ಹೆರಿಗೆ ಮಾಡಿಸು : ದೇವಕಿಯುಮಳುಂ ಪೆತ್ತಳ್ ಜೀವಂಬಸೆ ಪೆಱಿಸೆ ಹರಿಯ ಬೆಸದಿಂದಂ ಮಾಯಾವಿ ಪರಿತಂದು ನೈಗಮದೇವಂ ತಂದಿಕ್ಕಿ ಮುಂದೆ ಮಾಯಾಶಿಶುವಂ (ಅರ್ಜನೇ. ೬-೨೯). **ಹೆರಿಸು :** ಸೂತಿಕಾಪರಿ ಪಾಲಿತಾ–ಅನೇಕಮಂದಿಯಿಂ ಹೆರಿಸಿದಂಥಾ ಸೂಲಗಿತ್ತಿಯರಿಂ ರಕ್ಷಿಸಲ್ಪಟ್ಟ ವಳಾಗಿರುವಂಥಾ ಆ ಗರ್ಭಿಣಿಯು (ಶಾಕುಂ. ೨-೦-೬೬ ವ). **ಹೆಱಿಸು :** ಬಱಿಯ ಮಾತೋ ಚಾಪವಿದ್ಯದೊಳಱಿತವುಂಟೋ ಹೊತ್ತುಗಳೆಯದೆ ಹೆಱಿಸಿರೇ ನಾರಿಯನು ನಿಮ್ಮಯ ಬಾಣಗರ್ಭಿಣಿಯ (ಕುಮಾ.ಭಾ. ೯-೩೪) ; ಪುಲ್ಲೆ ಗರ್ಭದಿ ಬೇನೆವಡೆದು ಹೆಱುತಲಿರೆ ನಿಲ್ಲದೆ ಪೆಬ್ಬುಲಿ ಕಂಡು ಸಲ್ಲೀಲೆಯಿಂ ಪೈದಡಹಿ ಹೆಱಿಸುತಿರ್ದುದೆಲ್ಲವನೇನುಸುರುವೆನು (ಅನಂತ. ೩-೬೪).

[ಪೆಱು₁ +—ಇಸು₃]

**ಪೆಱು₁, ಪೆರು₁, ಹೆರು₁, ಹೆಱು₁** (ಕ್ರಿ). ಪೆತ್ತ₁, ಹೆತ್ತ₁ (ಭೂತಕೃ). ಪೆತ್ತು₁, ಹೆತ್ತು₁ (ಭೂತನ್ಯೂ). ೧. ಪಡೆ ; ಹೊಂದು: ವಿತತಶ್ರೀ ಸಂಪತ್ತಂ ಶತಮಖಿನವ್ಯಾನುಭಾವನೊಲವಿಂ ಪೆತ್ತಂ (ಕಬ್ಬಿ. ೨-೪೪) ; ಊರ್ಗಳುಮಂ ನಾಡ್ಗಳುಮಂ ತೊಱಲ್ದು ಬೈಕಂದಿರಿದೆಲ್ಲಿಯುಂ ಪೆತ್ತುಂ ಪೆಱದೆಯುಮಿಂತು ಬಾೞುತ್ತುಂ ಪದಿನ್ಛೈದು ಪದಿನಾಱು ವರುಷದ ಪ್ರಾಯ ದಾತನಾಗಿ ವೈದಿಕವೆಂಬ ಪೊಲ್ಗೆ ವರ್ಪೊಂ (ವಡ್ಡಾರಾ. ೬೬-೨೦) ; ಅದೇಂ ಗಗನಮಂಡಲಂ ನೆಱೆಯೆ ಶೋಭೆಯಂ ಪೆತ್ತುದೋ (ಆದಿಪು. ೬-೩೯). ೨. ಗಳಿಸು ; ಸಂಪಾದಿಸು : ದೇವರ ಪರಿಯೊಂದಿನಂದ ವಲ್ಲೆಂದೊಂದು . . . ಪರಪುಲಾಭವ ಪೆತ್ತ ಠೀವಿಯೊಳಿದೆ (ಭರತ. ೪. ೯) ; ಲಾಭಮಾವೆಡೆಯೊಳ್ ಪೆಱವೇಟ್ಟುವೆಂಬುದನ್ ಕಂಡಱಿತು. ಇನ್ ಮುಂದೆ ನೀವ್ ಕಳ್ವರಂತೆ (ಅಂಕಿಗ. ೦೫-೨೮೮). ೩. ಹೊಣೆ ಯನ್ನು ಒಪ್ಪಿಕೊಳ್ಳು ; ಹೊರು : ಅಗ್ಗಳಾಅರಸರಾ ಬೆಸಸಿದೊಡೆ ಬೆಸನ ಪೆತ್ತುಬಿರ್ ಬಲಮಾಳ್ವಿ ಎಱದು ಬಿಟ್ಟರ್ (ಎಕ. X (S). ಬೌರಿಂಗ್. ೮೬. ೭; ಶು. 820) ; ವಿಕ್ಕ ಬೆಸನಂ ತ್ರೈಲೋಕ್ಯಮಲ್ಲಂ ಜಯಶ್ರೀಗೇಹಂ ಕುಡೆ ಪೆತ್ತು ಶೌಚಗುಣ ದಕ್ಷಂ ಸ್ವಾಮಿಭಕ್ತಂ ಯಶಶ್ರೀನಿವಾಸ ಮೆನಲ್ಕೆ ಸಂದ ನರಲಾರ್ (ಶಾಂತೀಶ್. ೩. ೦೨ ; 1047). ೪. ಹಡೆ ; ಪ್ರಸವಿಸು : "ಪೆಱು__ಉಪಲಬ್ಧೌ (ಸಂಪಾದಿಸು), ಪ್ರಸೂತೇ ಚ" (ಶಮದ) ; ಮತ್ತಾತನಿಂ ಬಟಿಯಂ ಪೆಣ್ಗೂಸುವಂ ಪೆತ್ತೊಡೆ ಅಕಿಗೆ ವೀರಶ್ರೀಯೆಂದೇ ಪೆಸರನಿಟ್ಟು (ವಡ್ಡಾರಾ. ೦೦೬-೦೫) ; ಭಾಸ್ವನ್ನಾಭಿ ರಾಜಾಂಗನೆ . . . ತಿಗ್ಮಕರಸುದಯದೊಳ್ ಪುತ್ರನಂ ಪೆತ್ತಳಾಗಳ್ (ಆದಿಪು. ೭-೩೬) ; ತರುದೇ ಪಣ್ಗಳ ಮೆಲ್ಲೆ ಮಾತೆ ವಿಷಮಂ ಪೆತ್ತರ್ಭಕಂ ಗೂಡಿಸಲ್ ಹರ ಕೊಲ್ಲಲ್ ಪರ ಕಾಯ್ವನೇ (ಸೋಮೇಶ. ೨೯). ೫. ಸೃಷ್ಟಿಸು ; ಉತ್ಪತ್ತಿಮಾಡು : ದ್ಯುನದೀಕಂಜಾಳಿಗೆಟ್ಟಿರ್ಪಳಿ ಸಮುದಯಮೋ. . .ತಿಗ್ಮನಿದಾಘೋರ್ವೀಜಮಂ ತೂಳ್ದಿಸಲನಿಲಪಥಶ್ರೀ ಪೆಱುತ್ತಿರ್ಪ ಧಾನೀಕನಿಯೋ ಪೇಟಿಂಬಿನಂ ಪೊಣ್ಮೆದುದೆಸೆವಸಿತೋತ್ಪಾನ ಮೇಘವ್ರತಾನಂ (ಕುಸುಮಾ. ೬-೯) ; ನಡುಗಣ್ಣಿನಿಂದ ಬೀರನ ಪೆತ್ತು ಕಳುಪೆ (ಭಾಪತಂ. ೩-೦೩) ; ಮಗನಂ ಪೆಱವಂಗೆ ಸಗ್ಗಿಗರ್ ಬಾಗಿಲಂ ತೆಱೆಯುರೆಂಬರಲ್ತೆ ! (ರಾಮಾಶ್ವ. ೦೦೪-೨೭). ೬. ಹೊರಸೂಸು ; ಹೊರಚೆಲ್ಲು ; ಬೀರು : ಕಡುಪೊಗರಂ ಪೆಱುವ ದೊಗಂ ಸುರ್ಬಡರ್ದ ವಾಳಾಗ್ರಂ ಮುಂದುಱುವಾಯ್ತು ತವಕವೊಪ್ಪುವ ಕುಱುಪಿನ ಕುಮರೆಗಳ ನಾರ್ಮ ಬಿಟ್ಟರ್ ಸುಭಟರ್ (ದಕಶು. ೨-೦೮). ೭. (ಪ್ರಾಣಿ, ಪಕ್ಷಿ, ಮುಂತಾದುವು ಮರಿ, ಮೊಟ್ಟೆಗಳನ್ನು) ಇಡು ; ಹಾಕು : ತತ್ತಿಗಳಂ ನೀಂ ಪೆತ್ತಂಪು ಚಿಂತಿಸಿಕೊಳ್ವಂ (ಪಂಚತಂ. ೦೫೮-೦೨). ೮. ದೊರಕು ; ದೊರೆ ; ಲಭ್ಯವಾಗು : ಜನನಪ್ರಸ್ತುತಕಾಲದೊಳ್ ಸ್ವಭವ ನದ್ರೇಕ್ಕಾಣವರ್ಗೋತ್ತಮಾಂಶ ನವಾಂಶೋಪಗತಂ ಸಕೃದ್ಧಿಗುಣಮಂ ವಕ್ರಸ್ಥನಾಗಿರ್ದೊಡಕ್ಕೆ ನಿಜೋಚ್ಚಸ್ಥಿತನಾದೊಡಂ ತ್ರಿಗುಣಮಂ ತಾನೀಗುಂ (ಜಾತಕ. ೮-೩). **ಪೆರು₁:** ೪. ಲಕ್ಷ್ಮಣಂ ಶತ್ರುಘ್ನರೆಂಬವಳಿಮಕ್ಕಳ್ಗಳಂ ಪೆತ್ತಳ್ ಸುಮಿತ್ರೆ (ಶ್ರೀರಾಮಾ. ೦೬-೪೨೨). **ಹೆರು₁:** ೪. ಈ ರೀತಿಯಾಗಿ ಕೊಲೆಗೀಡುಮಾಡಬೇಕಾದ ಮಕ್ಕಳನ್ನು ಹೆರುವ ಬಸಿರು ಬೇಡ (ವಾಂಶ. ೩೯) : ಹನ್ನೆರಡು ಹೆತ್ತು ಎರಡು ಉಳಿಸಿಕೊಂಡಿದ್ದ ತಾಯಿ ಅವಳು. ಸತ್ತರೆ ಇನ್ನೊಂದು ಪೆತ್ತೇನು ಎನ್ನುವ ಎದೆಗಾರಿಕೆ ಅವಳಲ್ಲಿತ್ತು ! (ಮುಂಗಾರು. ೨೩). **ಹೆಱು₁:** ೪. ಭರತಸಂತಾನಕ್ಕೆ ಕುಮಾರರ ಹೆಱುವೆ ನಾ ಮುನ್ನೆಂದು ಗರ್ಭವ ಧರಿಸಿದೆನು (ಕುಮಾ.ಭಾ. ೪-೪೪): ಅರಗಿಳಿಯೆಂಬಂತೆ ನುಡಿವಳು ಕೋಕಿಲಸ್ವರದಿಂದೆ ಕೂಗುವಳೊಡನೆ ಮೊರೆವಳು ಪೆಣ್ದುಂಬಿಯೆನೆ ಹೆಱಲಾಱದೆ ನರಳುವಳಬುಜಾಯತಾಕ್ಷಿ (ಪೋಪತ. ೦೬-೦೪). ೫. ಹೆತ್ತ ನಿನ್ನೊಡಲಿಂಗೆ ತಂಪಿನ ತೆತ್ತಿಗನೊ ಮೇಣ್ ಬಹಳತಾಪದ ಮುತ್ತಯನೊ ಕುರುರಾಯನೆಲೆ ಧೃತರಾಷ್ಟ್ರ ಕೇಳೆಂದ (ಕುಮಾ.ದ್ರೋ. ೪-೨): ಸಾಮಾನ್ಯವೇ ಮನದ ಉತ್ತಮಿಕೆ ಲೇಸಾಪ್ತನಹ ಹಗೆ ಸತ್ತನೀತನ ಕಯ್ಯ ಮಕ್ಕಳ ಹೆತ್ತರೀತನ ಹೆಸರಿಡಬೇಕೆಂದನಾ ರವಿಜ (ತೊರವೆ. ೪-೩-೨೦). ೬. ಅಂಗಜ ಪಂಚಫಣೋರಗನಾ ದಿವ್ಯಾಂಗದೊಳುದ್ಭವಿಸಿದ ಕಿಱುಮುತ್ತಿನ ಜಂಗುಳಿಯಂ ತದ್ವದನಂಗಳನೋವದೆ ಹೆಱುವಂದದೊಳು (ಜಯನೃ. ೮-೩೭).

**ಪೆತ್ತ ಜಯನ್**=ಜಯವನ್ನು ಹೊಂದಿದವನು ; ವಿಜಯಿ : ಸೇನ್ನ್ರಕ ಬಣೋಭಯದೇಶದಾ ವೀರಾಪುರುಷಸಮಕ್ಷದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತ ಜಯನಾ ವಿಜ ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮುಱುವಳ್ಳಿಉಂ ಕೊಟ್ಟಾನ್ (ಪ್ಕೆಲು. ೦೯೩೬. ೦೬-೦೦; ಶು. 450). **ಪೆತ್ತ ತಂದೆ, ಹೆತ್ತ ತಂದೆ**=ಜನ್ಮ ನೀಡಿದವನು ; ಹಡೆದ ತಂದೆ ; ಜನಕ : ಸತ್ಯದೇವನ ಪೆತ್ತ ತಂದೆ ಸತ್ಯಕಂ ತನ್ನ ಮಗನನಱಸುತ್ತುಂ ಬಂದಲ್ಲಿ ಕಂಡು (ಜಾವುಂಪು. ೬೩): ಗಂಧೇಭಗಮನೆ ಚಿತ್ತವಿಸು ನಿನ್ನಯ ಪೆತ್ತ ತಂದೆ ಬೀಳ್ಕೊಟ್ಟ ಧೂರ್ಜಟಿಗೆ ಸಂದೇಹವಿಲ್ಲದೆ ಶರಣೆಂದು ಬರ್ಪವೇಳೆ ದೆನಲವಳು ಹಿಗ್ಗಿದಳು (ಪೋಪತ. ೨೩-೮). **ಪೆತ್ತ ತಾಯ್, ಹೆತ್ತ ತಾಯ್, ಹೆತ್ತ ತಾಯಿ, ಹೆತ್ತಾಯಿ**=ಹಡೆದವಳು; ಹಡೆದ ತಾಯಿ: ವನಿತೆಯುಮಂ ನಂಟರುಮಂ ಜನಕನುಮಂ ಪೆತ್ತ ತಾಯುಮಂ ಪೃತ್ತಿಯುಮಂ ಮನಮುರಿದು ತೊಱೆದು ತಪಕಂ ತನುವಂ ತಂದೊಡ್ಡಿ (ರಜಾಕ್ವಾ. ೬-೬೯); ಹೆತ್ತ ತಾಯುಂ ಮಾಱಿ ತೊತ್ತ ಕೊಂಬರೆ (ಹಕಶಾ. ೮ ೬೬); ಹೆತ್ತ ತಾಯಿಗೆ ವಂದಿಸುತ ನಾಂ ಪೊತ್ತ ಹಿಂದಣ ಕೆಲಸವಿಂದಾಯಿತ್ತೆ ಎಂದುತ್ತಮೆಯ ಕೃಪೆಯಂ ಪಡೆದು (ಬಸಪು. ೬೦-೩೪); ಸಂತೋಷದಿಂದ ನಾರದ ಕಂತುವಿನ ಹೆತ್ತಾಯಿಗೆ ಅಂತರಂಗದ ಮಾತುಗಳನಾಡುತಿದ್ದನು (ಶ್ರೀಕೃ.ಶಾ. ೫). **ಪೆತ್ತ ಮಗ, ಹೆತ್ತ ಮಗ**=ತಾನು ಜನ್ಮಕೊಟ್ಟ ಮಗ ; ಸ್ವಂತ ಮಗ: ಕೃತಾಂತನುಮ್ದು ಸುತರಂ ಪಡೆದೀಯೆಮಗೆಂದು ಕಾಂತೆಯರ್ ನುಡಿದಪರೆನ್ನ ಪೆತ್ತ ಮಗನಂ ಪಡೆದೀಯೆನಗೆಂದು ಪಾರ್ವನುಂ ನುಡಿದಪಂ (ಆದಿಪು. ೦೦-೫೨): ಹೆತ್ತ ಮಗನಂತೆಯೇ ಅವನನ್ನು ಸಾಕಿದರು (ರೂಢಿ). **ಪೆತ್ತಯ್ಯ, ಹೆತ್ತಯ್ಯ**=೧.

ಪೆತ್ತ ತಂದೆ : ಆರ್ಪೊರ್ಗನಂ ಪೆತ್ತಯ್ಯಂ ಕೂರ್ಪೊರ್ಯಿನುಸುರಲ್ಕೆ ಸಂತಸದಿಂ (ಶ್ರೀಪುರಾ. ೯-೨); ಆ ಕಣ್ಣೆಱವಾದ ನಿಕ್ಷೇಪವ ದೃಷ್ಟಿ ಮುಟ್ಟಿದಡೆ ಅಲ್ಲಿ ನಮ್ಮ ಪೆತ್ತಯ್ಯನ ಹೊಳವ ಕಂಡು ತಳವೆಳಗಾದನು ಕಾಣಾ (ದೇದಾವ. ೧೩-೨೦). ೨. ತಂದೆಯ ತಂದೆ ; ಅಜ್ಜ ; ತಾತ : ಬಸವನಾಲವಿದೆಂಬುದೇತಕೆ ಪೆಸರು ಬಂದಿತ್ತುಸುರಿ ನೀವೆನೆ . . . ಒಸೆದು ಪೆತ್ತಯ್ಯಂಗಳಿಂದಾಲಿಸಿದೆನೆಂದೆಮ್ಮಯ್ಯನೊಲವಿಂ ಶಿಶುಗಳಪ್ಪೆಮ್ಮೆಲ್ಲರಿಗೆ ಪೇಳಿದನು (ಬಸಪು. ೩೨-೧೯); ನಮ್ಮ ಪೆತ್ತಯ್ಯನು . . . ನಮ್ಮನ್ನು ಕೂರಿಸಿಕೊಂಡು ಪ್ರಸ್ತಾಪ ಬಂದಾಗ ಹಳೇ ಕಥೆಯನ್ನೆಲ್ಲಾ ಹೇಳುತ್ತಿದ್ದರು (ಪಜಪುರಾ. ೧೧೬). **ಪೆತ್ತವರ್, ಪೆತ್ತರ್, ಪೆತ್ತವರು, ಹೆತ್ತವರು, ಹೆತ್ತೋರು** (ಬಹುವ)=೧. ಪಡೆದವರು ; ಹೊಂದಿದವರು : ಇತ್ತರ್ಗಿತ್ತ ಧನಮೇನದು ನಿಲ್ವುದೆ ಮುನ್ನಮಿತ್ತರೆಲ್ಲಿದರಿಪರೀಯೆ ಪೆತ್ತವರುಮೆಲ್ಲಿದರಾ ಧನಮೆಲ್ಲಿತಿಂದ್ರಜಾಲದ ಸಿರಿಗೇಕೆ ಮೆಚ್ಚಿಡುವಿರೆಂದೊರೆದಂ ಕವಿಕುಂಜರಾಂಕುಶಂ (ಗದಾಯು. ೧-೩೫). ೨. ಹಡೆದವರು ; ಜನ್ಮ ನೀಡಿದವರು; ತಾಯಿ ತಂದೆಗಳು : ಜಿನಪೂಜೆಗಳಂ ಮಾಡದೆ ಮುನಿಗಳ್ಗಾಹಾರದಾನಮಂ ಮಾಡದೆ ಭೋಂಕನೆ ಪೋಗಲಾಗ ಮಗಳೇ ಮನಕತಮಂ ಮಾಡಿ ಪೆತ್ತವರ್ಗಱಿಗುವಿನಂ (ಧರ್ಮಾಮೃ. ೩-೨೨೪); ಬೇವಸಂಗಳೆಲ್ಲಮಱಿ ಸದಾ ಪಯಸ್ಸಿನಿಂದಲೆಸವ ಕೋವಿದಂಗೆ ಪೆತ್ತರಿತ್ತರೆನ್ನ (ಮಹಾದೇ. ಬ. ೧೫೦-೨); ತಂದಪಂ ಕುಲದ ಕೀರ್ತಿಗೆ ದಿವಾದೀಪ್ತಿಯಂ, ಮೇಣೆನ್ನನೊಲ್ದು ಪೆತ್ತರ್ಗೆ ಸಂತೃಪ್ತಿಯಂ! (ಜಕ್ಕಾಂಗ. ೬೦-೧೬೪೦); ತನ್ನ ಪೆತ್ತವರು ಮಿಗಿಲು ತನ್ನವರೊಳ್ ತನ್ನ ಪೆತ್ತವರಿಗೆ ಮಿಗಿಲು ತನ್ನನಿಯನ ಪೆತ್ತವರು (ಹರಿಬ. ೪-೪); ಹಳಿವು ಹೊದ್ದದೆ ಹೆತ್ತವರು ಮಕ್ಕಳುಗಳೆಂಬೀ ಬದುಕು ಮಾಣದೆಯೆಳಸಿ ಕೊಂಬಂತಾಯಿತೆಂದಳು ಪಾಂಡವರ ರಾಣಿ (ಕುಮ್ಮಾವ್ಯಾ. ೨-೩೫); ಹೆತ್ತವರಿಗೆ ಹೆಗ್ಗಣ ಮುದ್ದು, ಇಡಿದವರಿಗೆ ಕೋಡಗ ಮುದ್ದು (ಗಾದೆ) ; ನಿತ್ಯಾನಂದ ರಜತಾಚಲವಾಸನೆ ಭಕ್ತವತ್ಸಲ ಭಾಳನೇತ್ರ ಹೆತ್ತೋರ ಮನೆದೈವ ಶ್ರೀಮೈಲಾರಗೆ ಹಸ್ತವ ಮುಗಿದು ವಂದಿಸುವೆ (ಶಾಂಧ್ರಹಾ. ೧-೫). **ಹೆತ್ತ ಕರುಳು** = ೧. (ಆಲಂ) ತಾಯಿಯ ಕರುಳು ; ಮಮತೆಯ ಹೃದಯ : ಹೆತ್ತ ಕರುಳಾದ್ದರಿಂದ ಮಕ್ಕಳ ಸಂಕಟ ನೋಡಲಾರದೆ ಅವಳು ಕೂಲಿಕೆಲಸ ಮಾಡಿ ನಾಲ್ಕು ಕಾಸು ಸಂಪಾದಿಸಿ ಸಾಕುತ್ತಾ ಇದ್ದಾಳೆ (ರೂಢಿ). ೨. ತನ್ನಿಂದಾದ ಸಂತಾನ : ಮಕ್ಕಳಿರ, ಅಕ್ಕರೆಯ ಮಕ್ಕಳೆ, ಹೆತ್ತ ಕರುಳನು ಮರೆವೆನೆ ? (ಹೊಂಗಳು. ೨-೯). **ಹೆತ್ತಪ್ಪ**= ೧. ಹಡೆದ ತಂದೆ. ೨. ಅಜ್ಜ ; ತಾತ : ಶತಬಲನೆಂಬ ನಿಮ್ಮ ಪೆತ್ತಪ್ಪನು ಬಹುಕಾಲ ರಾಜ್ಯವನ್ನಾಳಿ ಅಂತ್ಯದೊಳ್ ರಾಜ್ಯ ಭೋಗದೊಳ್ ನಿಸ್ಪೃಹನಾಗಿ ನಿಮ್ಮ ತಂದೆಯವರಿಗೆ ರಾಜ್ಯವಂ ಕೊಟ್ಟು ಅನಶನಾದಿ ಯೋಗದಿಂ ತನುವಂ ತ್ಯಜಿಸಿ (ಪುರುಚ. ೨೨). **ಹೆತ್ತ ಮನೆ**= ಬಾಣಂತಿಯ ಮನೆ ; ಹೆರಿಗೆ ಮನೆ ; ಸೂತಿಕಾಗೃಹ : "ಅರಿಷ್ಟಗೃಹಂ, ಸೂತಿಕಾಭವನಂ–ಈ ೨ ಪೆತ್ತ ಮನೆ " (ಹಲಾಯು. ೮೨-೩೪೫). **ಹೆತ್ತ ಮುತ್ತ**=ಹೆತ್ತಪ್ಪ ೨ : ಛತ್ರ ಚಾಮರ ಪೆತ್ತ ಮುತ್ತರ ಬಿರುದ ಜಿಟ್ಟಿಳುತಳುತಲೋಡಿದನು (ಶರಂ. ೫೬೨-೪೦). **ಹೆತ್ತಮ್ಮ**=೧. ತಾಯಿ ; ಅಮ್ಮ : ಪೆತ್ತಮ್ಮನಿಗೆ ಹೆಗ್ಗಣವೂ ಮುದ್ದು (ಈಶಥ. ೧೩೫). ೨. ತಾಯಿಯ ತಾಯಿ ; ಅಜ್ಜಿ : (?). **ಹೆತ್ತ ಸೂತಕ**= ಹೆರಿಗೆಯ ಮೈಲಿಗೆ; ಪುರಂಡು : ಪೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ ಮೃತ್ಯುಸೂತಕವು ಹನ್ನೊಂದು ದಿನಕೆ ಮತ್ತೆ ಋಣಸೂತಕವು ಜನ್ಮಜನ್ಮಾಂತರಕೆ ಎತ್ತೆತ್ತಲೂ ಬೆನ್ನು ಹತ್ತಿಕೊಂಡಿಹುದು (ಕುಚೆ. ೨೩-೪). **ಹೆತ್ತೊಡಲು**=(ಆಲಂ) ಹಡೆದ ಹೊಟ್ಟೆ ; ತಾಯಿಯ ಹೃದಯ : ಕೊಟ್ಟ ಹೆಣ್ಣು ಕುಲಕ್ಕೆ ಹೊರಗಾದರೂ ಹೆತ್ತೊಡಲಿಗೆ ಅವಳ ಚಿಂತನೆ ತಪ್ಪಿದ್ದೆಂದು ? (ಹೊಸಕ್ಷಿ. ೧೭).

[ದೇ.॥ ತಮಿ. ಮಲ. ಪೆಱು; ತುಳು. ಪೆದ್ದು; ಕೊಡ. ಪೆರ್; ತೆಲು. ಪೆಟ್ಟು ; ಕೋಲಾ. ಪೆಟ್, ಪೆಟ್ಟ್ ; ನಾಯ್ಕಿ. ಪೆಟ್ಟ್ ; ಪರ್ಜಿ. ಪೆಡ್]

**ಪೆಱು₂, ಹೆರು₂, ಹೆರೆ₁, ಹೆಱು₂, ಹೆಱೆ₁** (ಕ್ರಿ). ಪೆತ್ತು₂, ಹೆತ್ತು₂, ಪೆರ್ತ(ಭೂತಕೃ). ಪೆತ್ತು₂, ಹೆತ್ತು₂, ಹೆರ್ತು (ಭೂತನ್ಯೂ). ಗಟ್ಟಿಯಾಗು : ಹೆಪ್ಪುಗಟ್ಟು ; ಹೆಪ್ಪಾಗು : "ಪ್ರಸೂತಾಜ್ಯಗಟ್ಟಿಗಳೊಳು ಪೆಱು" (ಶಬ್ದಮಂ. ೧೧೮); ಪೆತ್ತ ತುಪ್ಪದಿನೆತ್ತಂ ತೀವಿದ ಕೊಡದಂತಿರ್ದುವು (ಅಕಪು. ೧೧-೩೬) ; ಪಿದಳಿಸೆ ಘನದಂತಿ ಬಿಸಿಲ್ಗದುರೆಗಳಂ ಪನಿತು ಪೆತ್ತನೆತ್ತರ ಪನಿಯಂದದಿನಲ್ಲಲ್ಲಿಗೆ ಕಣ್ಗೊಳಿಸಿದತ್ತು ಕಾರ್ಮುಕದೊಳಿಂದ್ರಗೋಪಕಳಾಪಂ (ಜಗಬಿ. ೪-೮೩). **ಹೆರು₂**: ನೀರು ಹೆರ್ತು ಬರ್ಫವಾಯಿತೆಂದರೆ ಅದರ ಆಕಾರವು ಬೆಳೆಯುತ್ತದೆ. ಹೆರ್ತ ತುಪ್ಪವನ್ನು ಕಾಸಿದರೆ ಅದು ಪ್ರವಾಹಿಯಾಗುತ್ತದೆ (ಮುಂಬಯಿ. ೫-೧೧೮); ಕೊಬ್ಬರಿಯೆಣ್ಣೆ ತಂಪಾಯಿತೆಂದರೆ ಹೆರುತ್ತದೆ (ಮುಂಬಯಿ. ೫-೧೨೦). **ಹೆರೆ₁** : ಉಷ್ಣಮಾಪಕಯಂತ್ರ-ಇದರೊಳಗಿನ ಪಾರಜವು ಶೂನ್ಯಸ್ಥಾನದಲ್ಲಿ ಇದ್ದಾಗ ನೀರು ಹೆರೆಯುತ್ತದೆ (ಮುಂಬಯಿ. ೫-೧೧೬) ; ಉಷ್ಣಮಾಪಕಯಂತ್ರದಲ್ಲಿ ನೀರು ಹೆರೆಯುವಾಗ ಅದರ ಉಷ್ಣತೆಯನ್ನು ತೋರಿಸಲಿಕ್ಕೆ ಶೂನ್ಯವು ಬರೆದಿರುತ್ತದೆ (ಮುಂಬಯಿ. ೫-೧೩೫). **ಹೆಱು₂** : ಅರೆದಲೆಬೇನೆಗೀಶ್ವರಿಯ ಮೂಲದ ನಸ್ಯಮನುಗ್ರಪನ್ನಗೋತ್ಕರದ ವಿಷಕ್ಕೆ ಮತ್ತವಱ ಬೇರೊಡನೊಂದಿರೆ ಹೆತ್ತ ತುಪ್ಪಮಂ . . . ಪ್ರಯೋಗಿಸುತ್ತಿರೆ ಪೆಱತೇನಿದೊಂದೆ ಕಳೆದಿಕ್ಕುಗುಮಾವಗಮಂತವೆಲ್ಲಮಂ (ಲೋಕೋಪ. ೯-೬೩) ; ಹೆತ್ತ ಹಾಲಿನ ಕೆನೆಯ ತೆಗೆದು (ಸೂಪಶಾ. ೨-೧೧). **ಹೆಱೆ₁** : ಕರಗಿದ ತುಪ್ಪ ಹೆಱೆವಂತೆ ಜವ್ವನವು ತಿರುಗಿ ಬಂದಿಹುದೆ (ಸರ್ವಜ್ಞ. ೧೮೦೫).

**ಹೆತ್ತುಪ್ಪ**=ಗಟ್ಟಿಯಾದ ತುಪ್ಪ ; ಹೆಪ್ಪುಗಟ್ಟಿದ ತುಪ್ಪ : ಬತ್ತಿ ಹೆತ್ತುಪ್ಪವನು ಹೊತ್ತಿಸಿದ ಫಲವೇನು ಮತ್ತೊಂದು ದೈವಕೆಱಗುವನ ಶಿವಪೂಜೆ ಹತ್ತಿಗೇಡೆಂದ (ಸರ್ವಜ್ಞ. ೧೬೨).

[ದೇ. ॥ ತಮಿ. ಪೆರು; ಮಲ. ಪಿರಸ್ಸು; ತೆಲು. ಪೇರು, ಪೇಱು]

**ಪೆಱುಕು, ಹೆಕ್ಕು₂, ಹೆರಕು** (ಕ್ರಿ). ೧. ಆರಿಸು ; ಆಯು ; ಹಿಕ್ಕು : ಈತನಂಗಡಿಯುಲಿಪಡಂ ಪೆಱುಕಿ ತಿಂದು ಬಾಳ್ವೊಂ (ವಡ್ಡಾರಾ. ೪೬-೭). **ಹೆಕ್ಕು₂** : ೧. ಕೆಳಗೆ ಬಿದ್ದ ಹೂಗಳನ್ನು ಹೆಕ್ಕಲು ಆರಂಭಿಸಿದಳು (ವ್ಯಜಲಿ. ೧೧೫) ; ಅವಳು . . . ಉತ್ತಮವಾದ ಪಟ್ಟೆವಸ್ತ್ರಗಳನ್ನು ಹೆಕ್ಕಿ ತೆಗೆದಳು (ಹಾಹುತ. ೪೦). ೨. ಕೆದಕು ; ಬೆದಕು : ಸತ್ತವರ ತಪ್ಪನ್ನು ಹೆಕ್ಕಿ ಏನು ಪ್ರಯೋಜನ ? (ಸಂಸ್ಕಾರ. ೧೧) ; ಅವಳು ತನ್ನ ನೆನಹುಗಳನ್ನು ಹೆಕ್ಕಿ ಶೋಧಿಸತೊಡಗಿದಳು (ಪಡೆರಾ. II, ೧೨೯). 'ಪಿಕ್ಕು₁' ಪರಾ. **ಹೆರಕು** : ೧. ಬಡನಡುವಿಸಬಲೆಯರ್ . . . ಕರಿಯ ಕುಂಭಸ್ಥಳದ ಮುಕ್ತಾಫಲಂಗಳಂ ಹುಡುಕುತ್ತ ಹೆರಕುತ್ತ ಇನ್ನೆಲ್ಲಿಹರೊ ಕಾಣೆ (ಶಂಧ್ರಸ. ೨೯-೧೨) ; ಗುತ್ತಿ ಅದನ್ನು ಹೆರಕಿಕೊಂಡು . . . ಕೆಲಸಕ್ಕೆ ತೊಡಗಿದನು (ಮಲೆಮ. ೭೪). ೨. ಇದು ನಿಜವಾಗಿ ತನ್ನ ಲೇಖನವೆ ? ಅವರಿವರ ಎಂಜಲನ್ನು ಬೋಜಣ್ಣ ಜನಪ್ರಿಯವಾಗಲೆಂದು ಹೆರಕಿ ಬರೆದಿದ್ದಲ್ಲವೆ (ಪ್ರಶ್ನೆ. ೧೧). ೩. (ಹಲ್ಲಿನಿಂದ) ಗೋರು,–ಕವರು : "ಈಷತಿ = ಪಲ್ಲಿಂ ಪೆರಕಿದಪಂ " (ಕಾಶಕ್ಕ. ೫೭). ' ಹೆರಕುಗ ' ಪರಾ.

**ಹೆಕ್ಕುಹೆಕ್ಕು** (ದ್ವಿರುಕ್ತಿ) : ಮರದ ಬುಡದಲ್ಲಿ ಮಾವಿನ ಕಾಯಿಗಳಂತೆ ಹಸುರಾಗಿ ಮಲಗಿಸಿದ್ದ ನೂರಾರು ಗಿಳಿಗಳನ್ನು ಹೆಕ್ಕಿಹೆಕ್ಕಿ ತನ್ನ ಜೋಳಿಗೆಯಲ್ಲಿ ತುಂಬಿಕೊಂಡನು (ನಾಗಕಾ. ೫); ಅಶೋಕನಿಗೆ . . . ಹೆಕ್ಕಿಹೆಕ್ಕಿ ಕೇಳುವ ಪ್ರಶ್ನೆಗಳು ಸರಿದೋರಲಿಲ್ಲ (ವ್ಯಜಲ. ೩೮). **ಹೆಕ್ಕಿಕೊಳ್ಳು**= ಆರಿಸಿಕೊಳ್ಳು ; ಆಯ್ದುಕೊಳ್ಳು : ಎಲ್ಲಿಂದಲೋ ಹೇಗೋ ನಾಲ್ಕು ಅಕ್ಷರಗಳನ್ನು ಹೆಕ್ಕಿಕೊಂಡು ಪ್ರಸಂಗಗಳನ್ನು ಓದುವುದಕ್ಕೆ ಕಲಿತ (ದೇವಮ. ೪೦) ; ಆಗ ಆ ರಕ್ಕಸನೇ ಆ ಎಂಟೂ ನೋಟುಗಳನ್ನು ಹೆಕ್ಕಿ

ಕೊಂಡನು (ಹಳ್ಳಿಹಾ. ೬೩).

[ದೇ. ॥ ತಮಿ. ಪೆಱುಕ್ಕು, ಪೊಱುಕ್ಕು; ಮಲ. ಪೆಱುಕ್ಕು; ತುಳು. ಪೆಜ್ಜು; ಕೊಡ. ಪೊರೀಕ್; ತೊದ. ಪೆಟ್ಯ್; ಕೋಲಾ. ಪೆತ್ಕ್; ನಾಯ್ಕಿ. ಪೆತ್; ಪರ್ಜಿ. ಪೆಡ್, ಪೆತ್, ಪೆತ್ಕ್; ಕೊಂಡ. ಪೆಱು]

**ಪೆಱೆ, ಪೆರೆ₁, ಹೆರೆ₄, ಹೆಱೆ₃** (ನಾ). ೧. ಚಂದ್ರ; ಶಶಿ: "ಚಳಿಗದಿರ ಸವಿಗಧಲಣುಗ . . . ಚಂದಿರಂ ಪೆಱೆಯು . . . ಬಿದುವೆಂಬಲ್ ಚಂದ್ರ ನಾಮ" (ಕಬ್ಬಿಸಂ. ೦೬); ಪೆಱೆಗಿವೆ ಪೂರ್ಣಿಮದತ್ತಮೃತಬಿಂದುಗಳೆಂಬಿನೆಗಂ ಲಲಾಟದೊಳ್ . . . ಘನಘರ್ಮಬಿಂದುಗಳ್ ಪೊಱಮಡೆ (ಕಾದಂಪೂ. ೬೧); ಪೊಲ್ಲುಲ್ ಕಳೆದುಡುಗಣಮಂ ಕೆಮ್ಮುಗಿಲೆಳಸಿದ ಪೆಱೆ ಪೊಳೆವ ಪೂರ್ವ ದಿಗ್ಯ್ವತೆಯಂ (ಪುಷ್ಪ೩. ೩–೦೦೬); ಲಲಾಟದೊಳ್ ಮೃಗಮದಬಿಂದುವಂ ಪೆಱೆಗೆ ಸುಣ್ಣಟಿಯಂ ಪಡೆವಂತೆ ತಿರ್ದಿದಳ್ (ಕಾವ್ಯಸಾ. ೬೩೪). ೨. ಅರ್ಧಚಂದ್ರ: "ಪೆಱೆ ಸೋಪಮಾರ್ಧಾಂಶದೊಳ್" (ಶಬ್ದಾಶ. ೪೦); ಕಣ್ಬೆಲ್ ಕಱೆ ಪೆಱೆ ನೊಸಲೊಳ್ ಚಂಡದೋರ್ದಂಡದೊಳ್ ಕಂಧರದೊಳ್ ತನ್ನುತ್ತಮಾಂಗಾಂತರದೊಳೆಸೆಯೆ ನಿಂದಾಂತನಾಚಾರ್ಯಪುತ್ರಂ (ಪಂಪಭಾ. ೦೩–೬೩); ಕೊರಲ ಕಱೆ ಶಿರದ ಪೆಱೆ ನೊಸಲುರಿಗಣ್ ಧೃತಚಾಪಹಸ್ತ ಶಾಸ್ತ್ರರಚಿಹ್ನಂ ವಿರಚಿಸೆ . . . ಮುಳಿದು ಬಂದನಶ್ವತ್ಥಾಮಂ (ಗದಾಯು. ೮–೨); ಪೆಱೆಯಂತೆ ರಾರಾಜಿಪ ನೊಸಲೆಲ್ಲಿ (ಸೋಮಪಶ. ೮–೮). **ಪೆರೆ₁**: ೧. "ಉಡುರಾಜನಕ್ಕು ಪೆರೆಯನಲು" (ಕಈ. ೬೮); ಪೆರೆಯ ಬೆಳ್ದಿಂಗಳಿಂ ಪುದಿದ ಕರುಮಾಡಗಳ ಶರದಮಂಡಲವನಂಟುತೆ ಸುಧಾಲೇಪ ಪಾಂಡುರಮೆನಿಸಿದುತ್ತುಂಗಶಿಖರಭಾಗಂ ಪೊಳೆಯೆ (ಶಿತರಾ. ೩–೦೨); ಕಲ್ಪನೆ ಹಾರಿತು ಪೆರೆಯನ್ನೇರಿ, ಹಿಗ್ಗು ಊದುತಿರೆ ತುತ್ತೂರಿ (ಅರಳು. ೩೩೯–೦೩). ೨. ಸುಡುವಿಲ್ಲಂ ವಿರಹಿಗಳಂ ಸುಡೆ ತೆಗೆದಾಗ್ನೇಯಬಾಣಮೆನೆ ಪೆರೆ ಕರೆ ಸಂಗಡಿಸಿದ ಧೂಮಾಂಕುರಮೆನೆ (ಧಮನ್ಸ್ಯ. ೩–೪೦); ಗಗನ ತಲೆನವಿರಾಗೆ ಪೆರೆ ತಾರೆ ಹೂವಾಗೆ . . . ನಗುನಗುವ ಬೊಬ್ಬಿಡುವ ಜೀವತಾಂಡವ ರಸಿಕ ಭಗವಂತ ಶಿವರುದ್ರ (ಸುಂಕುಳ. ೬೬). **ಹೆರೆ₄**: ೧. "ಗ್ಲೌ:—ಹೆರೆ" (ಕಾಕ್ಕಿ. ೬೩). ೨. 'ಹೆರೆನೊಸಲು' ಪರಾ. **ಹೆಱೆ₃**: ೧. ಭಾನುವಂ ಹೆಱೆಯುಂ ಗೋಕುಲವಮಂ . . . ದೇವರ್ಕಳಿಂದಿಂತು ಕೂರ್ತೆಱಗುತ್ತಿರ್ಪವರೇಕೆ ಮುಕ್ತಿ ಸಡೆವತ್ರ್ಯೈಲೋಕ್ಯಚೂಡಾಮಣೀ (ಜಸಾರ. ೪೬೧); ಹೆಱೆಯ ರಾಹು ಪಯೋಜವನು ಮಧುಕರವು . . . ಮುಸುಕಿರ್ದುದೆನೆ (ಜೀವಂಧ. ೦೬–೩೩). ೨. ಮುಡಿಯೊಳು ಹೆಱೆಯುಂಟು ತೊಱೆಯುಂಟು ಜಡೆಯುಂಟು . . . ನೊಸಲ ಕಣ್ಣುಂಟಾತನಂ ತ್ರೋಱು ಕೊಡಿ (ಸಿದ್ಧರಾ. ೨–೩೬); ಜೆಡೆಯಾಡಿನೊಳಿದ್ದ ಹೆಱೆಯ ಬಿಡಿಸುವಂದದಿ ದಿವ್ಯಾಮೋದಪುಷ್ಪಂಗಳ ಮುಡಿಸಿದ ಶಿವನ ಮಸ್ತಕದಿ (ಸೋಮಪಶ. ೨೦–೨೧). ೩. (ಮುಂದಲೆಯಲ್ಲಿ ಧರಿಸುವ) ಅರ್ಧಚಂದ್ರಾಕೃತಿಯ ಒಂದು ಬಗೆಯ ಆಭರಣ; ಚಂದ್ರಮುರು: ಪಡುವಣ ದಿಶಾಂಗನೆಯ ಮುಂದಲೆಯ ಮುತ್ತಿನ ಹೆಱೆಯೊ ಎನಲರ್ಧಚಂದ್ರನಂ ಬಣ್ಣಿಸುವೊಡರಿಮ ಕಾವ್ಯಂಗಳೊಳಗೆ (ಜಕಳಾ. ೩–೬೨); ಹೆಱೆ ನೇಸಱು ಮುಂಗುರುಳ ಮೇಲೆ ತಿತ್ತಿಸಿ . . . ಅಂಜನವನೆಚ್ಚಿದರು ಪರವೆಗಾ ಸತಿಯರು (ಶೌಂದಪು. ೬–೨೪).

**ಪೆಱೆತಲೆದಿವಸ, ಪೆಱತಲೆದಿವಸ** = ಚಂದ್ರನು ಸಂಪೂರ್ಣವಾಗಿ ವೃದ್ಧಿಹೊಂದಿರುವ ದಿನ; ಹುಣ್ಣಿಮೆ: ಶ್ರೀರಾಜ್ಯವಿಜಯ ಸಂವತ್ಸರ ಸತ್ಯವಾಕ್ಯಪೆರ್ಮ್ಮಾನಡಿಗಳಾಳುತ್ತ ನಾಲ್ಕನೆಯ ವರ್ಷದ ಮಾರ್ಗ್ಗಸಿರಮಾಸದ ಪೆಱತಲೆದಿವಸಮಾಗೆ (ಎಕ. III. ಶ್ರೀರಂಗ. ೦೪೮–೪; 904 ?); ಶಕನೃಪಕಾಲಾತೀತಸಂವತ್ಸರಶತಂಗಳೆಣ್ಣೂನೂಱರ್ಪ್ಪತ್ತೊಮ್ಬತ್ತನೆಯ ಶ್ರಾವಣದ ಪೆಱತಲೆದಿವಸಮಾಗೆ (ಎಕ. III. ಮಂಡ್ಯ. ೦೪–೩; 907). **ಪೆಱೆತಲೆದೆವಸ** = ಪೆಱೆತಲೆದಿವಸ: ಮಾಘಮಾಸದ ಪೆಱೆತಲೆ ದೆವಸಮುಮ್ಮುಜ್ಜಿಳವಾರದನ್ದು . . . ಧಾರೆಯನೆಱೆದು ಕೊಟ್ಟನು (ಎಕ. XV. ಹೊಳೆ. ೦೦೪–೬; 871); ಭದ್ರಪದಮಾಸದ ಪೆಱೆತಲೆದೆವಸಮಾಗೆ . . . ತೆರಗಾಲಂ ದೇವಟ್ಟ ಬಿಟ್ಟಲ್ (ಪ್ರಕಂ. ೦೪೩೦, ೦೪–೩; ಸಂ. 882).

**ಪೆಱೆಯ ಮುಱುಗಂ** = "ಅರ್ಧಚಂದ್ರನ ಚೂರಿನಂತಿರುವ ಬಾಣ?" (ಶಂಶಂ. ೩೨೪): ಪೆಱೆಯ ಮುಱುಗಂ ಕಣಕೆನೆಪೋಪಂ[ಬು] ಕೆಪಲ [ಂಬುವೆಂ]ಬಂಕದಂಬೆತ್ತ[ಲುಂ] ತುಱುಗಿ ನಡುವಿನಂ ಸಾರ್ದು ಸಾರ್ದೆಚ್ಚೆಚ್ಚು ಕಾದಿದರತಿರಥರೊಂದು ಜಾವಂ (ಪಂಪಭಾ. ೦೩–೪೯). 'ಪೆಱೆಯಂಬು' ಪರಾ. **ಪೆಱೆಯಾದಿ** = ಶುಕ್ಲಪಕ್ಷದ ಮೊದಲ ತಿಥಿ; ಶುಕ್ಲ ಪಾಡ್ಯಮಿ (?): ಇಪ್ಪತ್ತೊಂಬತನೆಯ ಚಯಿತ್ರಮಾಸದ ಪೆಱೆಯಾದಿಯಾಗೆ ಎಱೆಯಪ್ಪರಸರ ಮಗ . . . ಅಟ್ಟು ಸತ್ತಂ (ಎಕ. IX. ಕಾಪಕಾ. ೯೬–೪; 899 ?). **ಪೆಱೆ ಸೂಡಿದಂ, ಹೆಱೆ ಸೂಡಿದಂ** = ಚಂದ್ರನನ್ನು ತಲೆಯಲ್ಲಿ ಧರಿಸಿದವನು; ಚಂದ್ರಚೂಡ; ಶಿವ: ಪಿಚ್ಚನೇ ಪೆಱೆ ಸೂಡಿದನೆ ಪರಮ ಪಶುಪತಿಯೆ (ಪಂಪರ. ೬–೦೪೬); ಹೆಱೆ[ಸಾಕಾಂ. ಪೆಱೆ] ಸೂಡಿದನ ಮನವನೀ ತೆಱದಿಂದಂ ಸುತ್ತುಘಳ್ ಭವಾನಿಯೆನಿಪ್ಪಾ ತೆಱನಂ ತೋಱುವ ತೆಱದಿಂ ಮೆಱೆವುಡಿಗೆಯ ಮೇಲೆ ಸುತ್ತಿದುಡೆವಣಿ ತೋರ್ಕುಂ (೧೧೪. ೩–೮೮). **ಹೆಱೆಚಂದ್ರಮ** = ಪೆಱೆ ೩: ಮಿಱುಗುವ ಕಾರ್ಮುಗಿಲೆಡೆಯೊಳು ರಾಜಿಪ ವರ ಬಿದಿಗೆಯ ಶಶಿಯಂತೆ ತರುಣಿಪರನ್ನೆಯರುತ್ತಮಾಂಗದ ಚಿಕುರದ ಹೆಱೆಚಂದ್ರಮನೊಪ್ಪಿದುವು (ಕಂಪರ. ೨೪–೪೦).

[ದೇ. ॥ ತಮಿ. ಪಿಱೈ; ಮಲ. ಪಿಱ]

**ಪೆಱೆಗೊಂಕು** (ನಾ). ಬಾಲಚಂದ್ರನಂತೆ ಕೊಂಕಿರುವುದು; ಅರ್ಧ ಚಂದ್ರಾಕೃತಿ: ಪೊಳೆವುವೆತ್ತ ನೊಸಲ್ ಪೆಱೆಗೊಂಕುನಾಮುಮೊಳ್ಮುನಿಯ ಮಿಂಚಿನೋಲೆ . . . ಸೊಗಂಬಡೆಯೆ (ಜಳಪ. ೬–೫೩).

[ಪೆಱೆ + ಕೊಂಕು₂]

**ಪೆಱೆಗೊಡೆಯ, ಪೆರೆಗೊಡೆಯ** (ನಾ). ಚಂದ್ರನನ್ನು ಕೊಡೆಯಾಗಿ ಉಳ್ಳವನು; ಮನ್ಮಥ; ಕಾಮ: "ಇಗೋಲ್ವಿಲ್ಲಂ . . . ಪೆಱೆಗೊಡೆಯಂ . . . ಗಿಳಿದೇರಂ—ಇವು ೧೩ ಕಾಮದೇವಂಗೆ ಪೆಸರ್" (ಕಶಾ. ೪೭–೦೩); "ಪೆಱೆಗೊಡೆಯಂ ಪೆಣ್ಬಡೆಯಂ . . . ಅಲರ್ವಿಲ್ಲನೆಂದು ಕಾಮಂ" (ಕಬಕಂ. ೨೭). **ಪೆರೆಗೊಡೆಯ**: "ಪೆಣ್ಬಡೆಯನನೆ ಪೆರೆಗೊಡೆಯನನೆ ಶಂಬರಾರಿ ಪೆಸರ್" (ಕಕಿ. ೬೮).

[ಪೆಱೆ + ಕೊಡೆ₂ + —ಅ₇]

**ಪೆಱೆದಲೆ, ಪೆರೆದಲೆ, ಹೆಱೆದಲೆ** (ನಾ). ೧. ಬಾಲಚಂದ್ರನನ್ನು ಧರಿಸಿದ ತಲೆ,—ಶಿರಸ್ಸು: 'ಪೆಱೆದಲೆಯ' ಪರಾ. ೨. ಹುಣ್ಣಿಮೆ: ಪೆಱೆದಲೆಯ ×× ವಾರದೊಳು ಗಂಗವಾಡಿಯ ವಿಕ್ರಮ ಚೋಳವುಣ್ಣಲದಿ (ಎಕ. IX (S). ಹೊಸಕೋ. ೦೫೦–೬; 1028). **ಪೆರೆದಲೆ**: ೧. ಪೆರೆದಲೆಯ ಬಾಂದೊರೆಯ . . . ಕೆಂಜೆಡೆ ಕಿರುನಗೆಯ ಪದಿನೈದುಕಂಗಳ ಪನಪುಶಿಪ ನಿರುತಿರ್ದನನುಪಮರತ್ನಪೀಠದಲಿ (ಅಪಂರಾ. ೦–೨–೦೩). **ಹೆಱೆದಲೆ**: ೧. 'ಹೆಱೆದಲೆಯ' ಪರಾ.

**ಹೆಱೆದಲೆಯವನು** = ಚಂದ್ರನನ್ನು ತಲೆಯಲ್ಲಿ ಧರಿಸಿದವನು; ಶಿವ: ಬಿಱುಸಿನಡ್ಡಾಯುಧನಿಹತಿಯಿಂ ಹೆಱೆದಲೆಯವನ ದೇಗುಲದ ಹೊಱ ಹೊಱಗೆ ಬಿದ್ದುದು ಖಳನ ತಲೆ (ಜನಪ್ರ. ೨೮–೨೭). [ಪೆಱೆ + ತಲೆ₁]

**ಪೆಱೆದಲೆಯ, ಪೆರೆದಲೆಯ, ಹೆಱೆದಲೆಯ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು; ಚಂದ್ರಚೂಡ; ಶಿವ: "ಪೆಱೆದಲೆಯಂ ಮಾದೇವಂ ಕಱೆಗೊರಲ . . . ಉಮೆಯಾಣ್ಮಂ" (ಕತಕ. ೬); ಪಾರ್ವತೀಪತಿಯನಭವನಂ ಪೆಱೆದಲೆಯನಂ ಶಂಕರನನೆಯರಂ ಮನದೊಳೆಱಕದಿಂ ತಾಳ್ದು (ಅರಾಪ. ೦–೨–೫೭); ಪೆಱೆದಲೆಯನ ಮೆಯ್ಯಂ ಗೌರಿ . . . ಒಲಿದಂದದಿಂ (ಜಯುಕಾ. ೦೫–೩). **ಪೆರೆದಲೆಯ**: "ಪೆಣ್ಬೊಡೆಯನನೆ

ಪೆರದಲೆಯನೆನಲಂತಕಾಂತಕಂ " (ಅಜಿ. ೬೪) : ಪೆರದಲೆಯನಿಂತು ಪರಿಭವಣಗಳನುಣಲೇಕೆ (ಪಂಪಾರಾ. ೩-೨೯). ಹೆಱೆದಲೆಯ : ಹೆಱೆದಲೆಯ ನಾತ್ಮಜನನೆಚ್ಚು ಮರುಳೆಚ್ಚು ಬೊಬ್ಬಿಱಿದು (ಜಗನ್ನಾ. ೧೦-೮೨).
[ಪೆಱೆದಲೆ + — ಅ₇]

**ಪೆಱೆನೊಸಲ್**, ಪೆರೆನೊಸಲಂ, ಪೆಱೆನೊಸಲು, ಹೆರೆನೊಸಲು, ಹೆಱೆನೊಸಲು (ನಾ). ಅರ್ಧಚಂದ್ರನಾಕಾರದ ಹಣೆ : ವ್ಯಗಮದ ತಿಲಕಾಂಕದಿನೆಸೆದುದು ಮಿಱುಪ ಪೆಱೆನೊಸಲ್ಕೊಮಲೆಯಾ (ಕಾದಂಬ. ೦೮); ಪೆಱೆಯ ವಿಲಾಸಮದೀಗಳ್ ಪೆಱಾಯ್ತನೆ ರೂಪವತಿಯ ಪೆಱೆನೊಸಲೆಸೆಗುಂ (ಮಲ್ಲಿಪು. ೬-೮೨). **ಪೆರೆನೊಸಲು :** ಪೆರೆನೊಸಲೊಳಗೆ ಕತ್ತುರಿಯ ತಿಲಕಮನ್ನಿಟ್ಟು . . . ಜಾರೆ ಮೆಲ್ಲನೈತರೆ (ಶಂಕರಾ. ೩-೨-೩೯); ಪೆರೆನೊಸಲು ಬೆಳ್ದಿಂಗಳ್ಪೆಟ್ಟನಿಂದಿಳಿದುದೆನೆ ಕರಿಸುರುಳಿಗುರುಳು ತೆರೆತೆರೆಯಾಗಿ ನೆರೆ ಜೋಲ್ದು ಬಿಡುಮುಡಿಯ ನಿಡುಪೊನಲ್ ರಾರಾಜಿಸಿತು ಕಣ್ಗೆ ಕದ್ದಿಂಗಳಂ ಮೆತ್ತಿ (ಕಾವ್ಯಾಂಗ. ೩೪-೧೦೩). **ಪೆಱೆನೊಸಲು :** ಕೋಮಲದ ಕದಪಿನ ಪೆ[ರಾಜಾಂ. ಹೆ]ಱೆನೊಸಲ ಪ್ರಜ್ವಲಿಪ ದಂತಾವಳಿಯ . . . ಮಾನವ ವಿಲಸಿತಾಂಗದ ರೂಪ ಕೈಕೊಂಡೆಸದಳದಿರಿನಲಿ (ಕೊರಂ. ೩-೯-೩); ಪೆಱೆನೊಸಲೊಳು ನೊಸಲಿಟ್ಟು ಮುಂಡಾಡಿ ಕಣ್ದೆಱೆಯದೆ ಮಱೆದೊಱಗಿಹರು (ಪೋತಕ. ೦೮-೯೩); ಪೆಱೆನೊಸಲಹುದಾದರಾ ಪೆಱೆಯೊಳಗಣ ಕಱೆಯಸ್ತವ್ಯಸ್ತವೆಂದದನು ಜಱೆವಂತೆ ಕಸ್ತೂರಿತಿಲಕವೊಪ್ಪುದೊಳೆಸೆವೆಱೆಯನ ಪಣೆ ಗೆಲ್ದುದೆನ್ನ (ಭರತ. ೬-೯೯). **ಹೆರೆನೊಸಲು :** ಹರೆನೊಸಲು ಅಂಚೆಯ ನಡೆ ನುಡಿಯ ಜಾಣೆಯರು (ಸೌಂದರಾ. ೩-೬೬). **ಹೆಱೆನೊಸಲು:** ಹೆಱೆನೊಸಲ ನಿಡುಹುಬ್ಬುಗಳ ಧಾಳಿಸುವ ಕದಪುಗಳ. . .ನಳಿತೋಳುಗಳ ನೀಱೆಯರೈದಿತೊಗ್ಗಿನಲಿ (ಕುಮಾರ. ೦೩-೩೦); ಸೆಱಗು ಸಂಭಾಳಿಕೆ ಬಹು ಭೂಷಣಗಳೆಚ್ಚಱ ಮೇಲಪ್ಪಾವಧಾನ ಹೆಱೆನೊಸಲಬಲೆಯರ್ದಿಟ್ಟ ಪರಾಕು ಮಿಾಂಗುಱುಹಿನ ಜೇಯ ಚಿತ್ರೈಸು (ಪೋತಕ. ೦೬-೯).

**ಪೆಱೆನೊಸಲಳ್** = ಅರ್ಧಚಂದ್ರನಾಕಾರದ ಹಣೆಯುಳ್ಳವಳು ; ಸುಂದರಿ : ವಜ್ರಮುಷ್ಟಿ ಸಮಂತಾ ಪೆಱೆನೊಸಲಳನಗಲದಿರಲ್ ನೆಱೆದತ್ತಂ ಬಂದುದಂದು ಕಾಂತವಸಂತಂ (ಜೀವಂಧ. ೬-೨೯).
[ಪೆಱೆ +ನೊಸಲ್]

**ಪೆಱೆನೊಸಲ** (ನಾ). ಅರ್ಧಚಂದ್ರನಾಕಾರದ ಹಣೆಯುಳ್ಳವನು; ಸುಂದರ : ಅಲರ್ಗಣ್ಣಂ, ಪೆಱೆನೊಸಲಂ, ಕುಸುಮಿಲ್ಲಂ (ಕಬ್ಬಿಗಸ. ೩೨೬ ಪ್ರಯೋ). [ಪೆಱೆನೊಸಲ್ + — ಅ₇]

**ಪೆಱೆನೊಸಲು** 'ಪೆಱೆನೊಸಲ್' ನೋ.

**ಪೆಱೆಮಿಾನ್** (ನಾ). (ಅರ್ಧಚಂದ್ರನಾಕಾರದಲ್ಲಿರಬಹುದಾದ) ಒಂದು ಬಗೆಯ ಮಿಾನು : ಪಂದಿಮಿಾನ್ಪೆಱೆಮಿಾನ್ಪಗ್ಗಡೆ ಬಣ್ಣಮಿಾನೆನಿಪವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೩ ೦೦೩). [ಪೆಱೆ + ಮಿಾನ್₂]

**ಪೆಱೆಮುಖಿ** (ನಾ). ಚಂದ್ರನಂತಿರುವ ಮುಖವುಳ್ಳವಳಂ ; ಇಂದು ಮುಖಿ; ಸುಂದರಿ : ಪೆಱೆಮುಖಿ ಸಮಸ್ತದುಃಖಂ ಪಱಿಪೊಡೆ ನೆಱೆಯಜ್ಞದತ್ತೆ ನವಮಾಸಂಗಳ್ ನೆಱೆಯೆ ಸುರರಾಜನಿಭನಂ ನೆಱೆ ಪೆತ್ತಳ್ ಸಕಲಜೀವನ್ನುತನಂ ಸುತನಂ (ಧರ್ಮಾಮೃ. ೮-೬೨).
[ಪೆಱೆ + ಮುಖ + — ಇ₃]

**ಪೆಱೆಮೊಗ** (ನಾ). ಚಂದ್ರನಂತಿರುವ ಮುಖ : ಪೆಱೆಮೊಗದಂಗನೆಯೊಳಳವಟ್ಟಂಗಜಕೇಳಿಯುಂ ನೆಗಟ್ಟ್ಟ ತೃಪ್ತಿಪಟ್ಟು (ಉದ್ಭಟ. ೩-೩೦ ವ); ಕಡೆಗಣ್ಬೊಗರ ಕುಡುನೋಟದಿಂ ನೋಡಿ ಪೆಱೆಮೊಗದ ನಗೆಜೊನ್ನಮಂ ಕೂಡಿ (ರಾಘವಾಂಕ. ೯-೦೩). [ಪೆಱೆ + ಮೊಗ]

**ಪೆಱೆಯಂಬು**, ಹೆರೆಯಂಬು, ಹೆಱೆಯಂಬು (ನಾ). ಅರ್ಧಚಂದ್ರಾಕೃತಿಯ ಅಲಗುಳ್ಳ ಬಾಣ; ಕವಲಂಬು : ಪೆಱೆಯಂಬಂ ತೀವಿ ತೊಟ್ಟು ಹಸ್ತನ ತಲೆಯಂ ಪಱಿಯೆಚ್ಚಂ (ಕಂಠಾಪೂ. ೦೩-೮೬) ; ಪೆಱೆಯಂಬು ಕವಲಂಬನೆಯ್ದು ಸರಲಂ ತೀವ್ರಾಸಿಯುಂ ಚಕ್ರಮಂ ನೆಱೆ ಭಾಳಂ ದಿಗು ದಂತಪಂಕ್ತಿ ನಳಿತೋಳುದ್ಯತ್ಕುಚಂ ಪೋಲೆ (ಧರ್ಮಾಮೃ. ೬-೨೦೩). **ಹೆರೆಯಂಬು :** ತನ್ನ ಬತ್ತಳಿಕೆಯಿಂದ ಒಂದು ಹೆರೆಯಂಬನ್ನು ಕಿತ್ತು... ಅದರ ಹೆರೆಯಿಂದ ತನ್ನ ಬಲಗೆಯ್ಯ ಹೆಬ್ಬೆರಳನ್ನು ಕಟಕ್ಕನೆ ಕಡಿದು ದ್ರೋಣನ ಕಾಲ ಬುಡದಲ್ಲಿ ನೀಡುವನು (ಹಳ್ಳಿಕ. ೩೦-೭). **ಹೆಱೆಯಂಬು :** "ಅರ್ಧಚಂದ್ರಮೆಂಬುದು ಹೆಱೆಯಂಬು" (ಹಲಾಯು. ೬೬-೩೦೩) ; ಹೆಱೆಯಂಬಿಂದ ಕಡಿದಿಳುಹಿದನು ಪಾಂಚಾಲಾಧಿಪನ ಶಿರವ (ಕುಮಾರವ್ಯಾ. ೦೭-೩೮) . [ಪೆಱೆ+ಅಂಬು₁]

**ಪೆಱೆವಣೆ** (ನಾ). =ಪೆಱೆನೊಸಲ್ : ಆ ಸತಿಗಡ್ಡಂಬಡೆದವು ನಗೆವೊಗ ವಾಸುರವಡಗಿದ ಚೆಂಬಾಯ್ . . . ತುಱುಗಿವೆ ಪೆಱೆವಣೆ ನಿಱಿದಲೆಯು (ಉದ್ಭಟ. ೨-೩೬).

**ಪೆಱೆವಣೆಯಳ್** = ಅರ್ಧಚಂದ್ರನಾಕಾರದ ನೊಸಲುಳ್ಳವಳು ; ಸುಂದರಿ : ಮೆಲ್ಲೆರ್ದೆಯಳ್, ನುಣ್ದೊಡೆಯಳ್, ಪೆಱೆವಣೆಯಳ್ (ಕಬ್ಬಿಗಸ. ೦೮೨ ಪ್ರಯೋ). [ಪೆಱೆ + ಪಣೆ₁]

**ಪೆಱೆವಣೆಯ** (ನಾ). =ಪೆಱೆನೊಸಲ : ಮೆಲ್ಲೆರ್ದೆಯುಂ, ಪೆಱೆವಣೆಯುಂ (ಕಬ್ಬಿಗಸ. ೦೯ ಪ್ರಯೋ). [ಪೆಱೆವಣೆ+—ಅ₇]

**ಪೆಟಕ** (ನಾ). (?) : ಬಟಲದ ಪೊತ್ತು ಕಲ್ಲಮಲುವಂಗೆಣೆಯಾದ ಮಹಾಪ್ರತಾಪಿ ನೀಂ ಪೆಟಕನಡುರ್ಕೆ ಕೊಂದ ಕಡುವಲ್ಲಿನ ಮಣ್ಣುರದಣ್ಣ ಬಂದು ನಾಯ್ಕೊಟಲೆಯ ಮೇಲೆ ಪಟ್ಟ ಕಡುವೀರ ಕುಟುಂಬದಿನಗ್ಗಳಿಕ್ಕೆ ಕೈಗಟಿದಿರೆ ಶಂಖಿವೋ [ಗಡ] ಮಹಾತ್ಮರಣಾಗ್ರದೊಳೀಡಗುಳ್ಳಿಯೋ (ಐಸಂ. ೭-೬೬). [?]

**ಪೆಟಕು** (ನಾ). ೧. ಜಗಳ ; ವ್ಯಾಜ್ಯ ; ಕಾದಾಟ : "ಪೆಟಕು—ಜಗಳಂ" (ಕಟುಪ. ಶಂ. ೦); ಪೊಟಗು, ಪೆಟಕು, ಪೊಟಕು (ಕಬ್ಬಿಗಸ. ೦೬೯ ವ್ಯಾಖ್ಯಾ). ೨. ನಾಶ (?) : ನೋಟಕ್ಕೊಡಂದಿನ ಮುಂದಿನ ಖಲನ ಪೊಟಕು ಪೆಟಕಪ್ಪ ನೆಗಂ, ತುರಿಪದೆ ಕಾದಿ ಗೆಲ್ದು ಹಯಮಂ ತಾರದುಟಿದೆನಾದೊಡೆ, ಶ್ರೀರಾಮರಂ ಪೊಕ್ಕಳಂ ತನ್ನೊಂದು ಹಂಪದಟಿವಗ್ಗಿನ ಬೆಸಗೆಯ್ಯಿಯುಂ ತೆಗಟ್ವ ಕೀಟನ ದುರ್ಗತಿಗಿಟೆವೆಂ (ರಾಘವಾಂಕ. ೦೦೦-೦೬). [?]

**ಪೆಟಗಾಲ್** (ನಾ). ಕುಂಟುಗಾಲು ; ಹೆಳವುಕಾಲು : ಕೆಲರ್ಗೆ ಪೆಟಗಾಲ್, ಕೆಲರ್ಗೆ ಕುಡುಗೆಯ್ (ಅದ್ಭುತ. ೨೩-೨೩). [<ಪೆಟವು+ಕಾಲ್₁]

**ಪೆಟವ**, ಪೆಳವ, ಹೆಳವ, ಹೆಟವ (ನಾ). ೧. ಊನವಾದ ಕಾಲುಳ್ಳವನು; ಕಾಲಿಲ್ಲದವನು ; ಕುಂಟ : "ಖಂಜಃ, ಪಂಗುಃ, ಶ್ರೋಣಃ—ಈ ೩ ಪೆಟವಂ" (ಹಲಾಯು. ೦೦೦-೯೩೬) ; ಬರೆ ವಿಾನಗೇಹದುದಯಂ ನೋಟ್ಬಂದದಂ ಮುಂದ ವಕ್ರಶಶಾಂಕರ್ ಪೆಟವಂ (ಜಾತಕ. ೯-೦೦); ಪೂಡುವ ಕುಮರೆ ಬೆಸಗೊಂಡೋಡುವ ತೇರ್ಗೊಂದೆ ಗಾಲಿ ಪೊಡೆವಂ ಪೆಟವಂ ಕೇಡಿಂಗಲಸಿದೊಡಕ್ಕುಮೆ ನೋಡಿರೆ ಗವಿ ಕೆಡವನಸ್ತಗಿರಿಮಸ್ತಕದೊಳ್ (ಅರ್ಧನೇ. ೩-೦೯). ೨. ಸೂರ್ಯನ ಸಾರಥಿ ; ಅರುಣ : ಪುಱಿಯಿಗೆಯ ನುಡುಗಿ ರಥಮಂ ಪೆಟವನನೆಸಗಲ್ಕೆವೇಟ್ದು ಸುತಶೋಕದ ಪೊಂಪುಱಿಯೊಳ್ ಮೆಯ್ಮಱಿಯದೆ ನೀರಿಳಿವಂತೆವೊಲಿಟಿದನಪರಜಳಧಿಗೆ ದಿನಪಂ (ಶಂಕಶಾ. ೦೨-೨೨೦). **ಪೆಳವ :** ೧. ಪೆಳವಂಗೆ ಕಾಲನಿತ್ತುದೆಱೆಂ (ಎ.ಕ. XVI, ೬೯. ೦೭; 1067); ಪೆಳವನ ಕಣ್ಗಳಂಧಕನ ಕಾಲ್ಗಳಿವಿಂತೊಡಗೂಡಿ ಗಾವುದಂ ತಳರ್ದೊಡೆ ಬಲ್ಲಿದಂ ನಡೆದ ಮಾರ್ಕೆಯಿನಿಪ್ಪುದೆ (೧೧೮೯. ೦-೨೯); ಇನನ ವರೂಥದ ಗಾಲಿಗಳ್ವಾಯ್ದುವು ತನೆತೆನೆಯಂಬುಗಂಡಿಯೊಳು ತನೆಗಳು ಪೊಯ್ಯುಮೆಂದಳ್ಕಿ ಕಾಲ್ನೀಡದೆ ಇನನ ಸಾರಥಿ ಪೆಳವಾವ (ನಾಗಕು. ೨-೯೨); ಪೆಳವಂ ಮರದುದಿಯ ಮಹಾಫಳವಂ ಮಿಗೆ ಬಯಸುಮಂತೆ (ಕಂಕಂ. ೨-೯೭). **ಹೆಳವ₁ :** ೧. ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯಾ ತಂದೆ

(ಜಸ. ೩೯) ; ಒಡಿಸ ಕಲಿಸೆ ಹೆಳವನನೊಕ್ಕುಡಿತೆನೀರಲಿ ಮುಳುಗಲೇಳಲ್ಕೆ ಮಳಲಿಂ ಸರವಿಯಂ ಹೊಸೆಯೆ . . . ಇಂತಿಳೆಯೊಳಾಗಲು ಸತ್ತು ಹುಟ್ಟಲು ಬಲ್ಲ ನೞ್ ಜಾಣೆ (ಜಸ. ೯೨-೨); ಗುರುಬುಧಮಂಗಳೋನ್ನತಿಗೆ ಕುಂದನಿತ್ತುದಱಿಂದೆ ಸಾರಥಿ ಹೆಳವನಾದನು (ಕೈಬಾಶಾ. ೦೭-೯೩).

**ಹೆೞವ :** ೧. "ಶೋಣಃ, ಪಂಗುಃ—ಈ ೨ ಹೆೞವನು" (ಪಾಕರಾ. ೦೦೯); "ಖಂಜು ಪಂಗುವೆಂದೆನಲು ಹೆೞವನಕ್ಕುಂ" (ಮುಂಗರಾ. ೦೦೯-೩).

**ಪೆೞವಿ, ಪೆಳವಿ,** ಹೆಳವಿ (ನಾ). ಕಾಲಿಲ್ಲದವಳು ; ಕಾಲು ಊನವಾದವಳು ; ಕುಂಟಿ : ಪೆೞವಿ ದುರ್ಗಂಧೆ ದುರ್ವರ್ಣೆ . . . ಸಂಸಾರ ಕೂಪಾರದೊಳನವರತಂ ನೀಡುಮೋಲಾಡುತಿರ್ದಳ್ (ಸುಕುಮಾ. ೩-೨೦). **ಪೆಳವಿ :** ದಿವಿಜರಂ ಪೊರೆವವಂ ಚಮ್ಮಟಿಗೆವಿಡಿಯಲೇತಕೆ ನರನ ಕಾಱುಹುಗಾಣಿಸುದವಂ ಪೆಳವಿಗೊಲ್ದು ಸುಮ್ಮನೇತಕೆ ಸಿಕ್ಕಿದಂ (ಕೈಬಾಶಾ. ೬-೯೯). **ಹೆಳವಿ :** ಆ ಮಗನಿಗೆ ಒಂದು ಹೆಳವಿ ಹೆಣ್ಣನ್ನು ತಂದು ಪಾಣಿಗ್ರಹಣ ಮಾಡಿಸೋ ಸಂಕಲ್ಪ (ಉಮಾ. ೩). [ಪೆೞವ+—ಇ₂]

**ಪೆೞವು, ಹೆಳವು₂,** ಹೆೞವು (ನಾ). ಕಾಲು ಊನವಾಗಿ ನಡೆಯಲಾಗದಿರುವ ಸ್ಥಿತಿ; ಪಂಗುತನ; ಕುಂಟು: ಪಾರಕ್ಕೆ . . . ಉೞವು, ಪೆಳವು (ಪೆೞವು), ಕೆಳವು (ಶಬ್ದ. ೨೦೦ ಪ್ರಯೋ); ಪೆೞವು ಪೊಕ್ರ್ಗಟುಂ . . . ಮಹಾಪ್ರಾಣಾಕ್ಷರಂಗಳೊಳ್ ಸುಟಿಶ್ಲಾಕೃತಿರ್ಕನುಕರಣೆಯೊಲ್ಲವುಂ ನಿತ್ಯಱುಂ (ಸಂಕೇಶ. ೯). 'ಪೆೞವೆ' ಪರಾ. **ಹೆಳವು₂ :** "ಖಜಿ—ಗತಿವೈಕಲ್ಯೇ, ಹೆಳವಿನೊಳ್" (ಕಾಶ್ಯ. ೦೯). **ಹೆೞವು :** ೧. 'ಹೆೞವುಗೊಳಿಸು' ಪರಾ. [ಪೆೞವ + — ಉ₄]

**ಪೆೞವುಗೊಳ್** (ಕ್ರಿ). ಕಾಲು ಊನವಾಗು : ಪಿರಿದುಮಥರ್ಮದೆ ಗತಿಗೆಟ್ಟರಸುಗಳಿಲೆ ಪೆೞವುಗೊಂಡರೆಂಬಂತೆ ವಲಂ ಕರವಿಡಿದು ಸಾಚಿರ್ಪವೆತ್ತುವ ತುಱಿಪದೆ ಕಯ್ಯುಗ್ಗುಡುವುದಕ್ಕೆ ಲಜ್ಜಿಸರರೆಬರ್ (ಕಾದಂಶೂ. ೩೬೦).
[ಪೆೞವು + ಕೊಳ್₁]

**ಪೆೞವೆ** (ನಾ). = ಪೆೞವಿ : ಕೊಂಟಿಯುಂ ಪೆೞವೆಯುಂ ಕುಷ್ಠನಿಯುಂ ಕುಬ್ಜೆಯುಮಪ್ಪ ಮಗಳ್ದಿರಱುವರನಿಬರಿಂ ಪಿರಿಯ್ಯ ನೀಂ (ಶಾಂತಿಪು. ೯-೬೬ ವ). [ಪೆೞವ + — ಎ₂]

**ಪೆೞಸು** 'ಪೆತಸು' ನೋ.

**ಪೆಱ್ಚಿಸು** 'ಪೆರ್ಚಿಸು' ನೋ.

**ಪೆಱ್ಚು** 'ಪೆರ್ಚು₁' ನೋ.

**ಪೆೞ್ಚವಸಿ** (ನಾ). ಒಂದು ಬಗೆಯ ತೆರಿಗೆ : ಕೊಳಗುಪ್ಪೆ ಪೆೞ್ಚವಸಿ ಅರ್ಧಂ ಕಾಣಸೊಟ್ಟನರ್ದ್ಧಂ ಪಾರಲರ್ದ್ಧಂ... ಇದು ಗೋಪಾಲದೇವರಾದತ್ತಿ (ಎಇ. XXI, ೦೬೯-೦೯; ೬ನೆಯ ೩೮). [?]

**ಪೆಱ್ಜೋಗೆ** (ನಾ). ಒಂದು ಪ್ರದೇಶದ ಹೆಸರು (?) : ಪೆಱ್ಜೋಗೆಯ ಮೊದಲುಳ್ ಬಡಗಾಯ್ವೆಗೊರ್ಳ್ಕಿಯೆ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV, ಎಡತೊ. ೬೦-೬೬; ಸು. 890). [?]

**ಪೆಱ್ದಿಂಟಲ್** (ನಾ). ಒಂದು ಪ್ರದೇಶದ ಹೆಸರು (?) : ನೈರಿತ್ತ ದೆಸೆ ನೆಲಫುಟ್ಟುಗೂರ್ ಪ್ರತಿಚಿದೆಸೆ ಪೆದ್ದಾಣ ಎ ವಾಯುವ್ಯಾದೆಸೆ ಪೆಱ್ದಿಣ್ಟಲಿನ್ಪಡಕಾಯುರ್ಕು ಉದಿಚಿ ದೆಸೆ ಕೞ್ಯಿನ್ನೀಗೊರ್ಗರೆ ಮುಟ್ಟೆ (ಎಕ. X (೩), ಮುಳಬಾ. ೬೨೮-೩೨ ; ಸು. 650). [?]

**ಪೆಱ್ದಿಸೆ,** ಹೆರ್ದಿಸೆ (ನಾ). ಒಂದು ಪ್ರದೇಶದ ಹೆಸರು : ಪಞ್ಚಿಗಂ ಬನವಾಸಿಪನ್ನಿಚ್ಛಾಸಿರಕ್ಕಧಿಪತಿಯಾಗಿ ಪೆಱ್ದಿಸೆಯೊಳಿಟ್ಟು ರಾಜ್ಯಂಗೆಯ್ಯೆ (ಎಕ. VIII, ಸೊರಬ. ೬೬-೯; 940). **ಹೆರ್ದಿಸೆ:** ಶ್ರೀಸಾನ್ತಿವರ್ಮ್ಮ ಹೆಱ್ದಿಸೆಯೊಳ್ಸುಖಸಂಗತವಿನೋದಂಗಳಿಂದರಸುಗೆಯ್ಯೆ (ಎಕ. VIII, ಸೊರಬ. ೯೬೯-೩; ಸು. 991). [?]

**ಪೆಱ್ದೊಱೆ** 'ಪೆರ್ದೊಱೆ' ನೋ.

**ಪೆೞ್ನಂದಿ** (ನಾ). ಒಂದು ಪ್ರದೇಶದ ಹೆಸರು (?) : ಪೆರಗ್ಗಱಿಯನ್ ಬಡಗ್ಗೆ ನಟ್ಟ ಕಲ್ಲ ತೆಂಕ್ಕಪೆರಮ್ಮಿದ್ದಿಲ್ ಪೆೞ್ನಂದಿಯ ಕಿಱುನಂದಿಯ ಸೊಡಲಿಯುದಾ ಮಾೞುವರ್ ಕುಡಿದ ಒಟ್ಟಿ ಪಡುವ್ವೆ ನಡದು (ಮೈಆರಿ. ೦೯೦೯, ೦೨-೦೬; 810). 'ಕಿಱುನಂದಿ' ಪರಾ.
[☞ ಇದು 'ಪೆರ್ನಂದಿ' ಎಂಬುದರ ಅಪಲಿಖಿತವಿರಬಹುದು]

**ಪೇಂಕುಳಿ** 'ಪೆಂಕುಳಿ' ನೋ.

**ಪೇಂಠೆ** 'ಪೇಟೆ' ನೋ.

**ಪೇಕುಳಿ** 'ಪೆಂಕುಳಿ' ನೋ.

**ಪೇಕುಳಿಗೊಳ್** 'ಪೆಂಕುಳಿಗೊಳ್' ನೋ.

**ಪೇಕುಳಿನಾಯ್** 'ಪೆಂಕುಳಿನಾಯ್' ನೋ.

**ಪೇಗುರ, ಪೇಗೂರ** (ನಾ). ಒಬ್ಬಾತನ ಹೆಸರು : × × × ತಾ ಕುಮಾರರಿನಟ್ಟಿಕೆಯ್ಯೆ ತಾಂ ಸ್ಥಿರವರಳಿನ್ತು ಪೇಗುರಮ ಸುರಲೋಕ ವಿಭೂತಿ ಎಯ್ದಿದಾರ್ (ಎಕ. II, ೨೬-೩; ಸು. 700). **ಪೇಗೂರ :** × × × ಪೇಗೂರ ಸ್ವರ್ಗ ಪರಲೋಕಕೆ ಸನ್ದ (ಎಕ. IX, ಬೆಂಗಳೂ. ೮೬-೩; ಸು. 900).
[?]

**ಪೇಗೂರ** 'ಪೇಗುರ' ನೋ.

**ಪೇಚಕ** (ನಾ). ೧. ಗೂಬೆ ; ಗೂಗೆ : "ಉಲೂಕಃ, ವಾಯಸಾರಾತಿಃ, ಪೇಚಕಃ—೩ ಗೂಗೆ, ಗೂಬೆ" (ಸಿದ್ಧಾಂತಿ. ೦೩೬). ೨. ಆನೆಯ ಬಾಲದ ಬುಡ,—ಮೂಲ : "ಪೇಚಕಃ, ಪುಚ್ಛಮೂಲು—ಈ ೨ ಮೊದಲ ಬಾ(ವಾ)ಲಂ" (ಹಲಾಯು. ೩೬-೬೬) ; ವನಕರಿ ಮೆಲ್ಲದೆ ಲಲಿತಸಲ್ಲಕೀಪಲ್ಲವಮುಂ ಸ್ಮರವಶದಿಂದಿರ್ದಮ ನಿಜಕರೇಣುಪೇಚಕನಿರೂಪಿತಾಯತಹಸ್ತಂ (ಕಬಾ. ೩-೮); ಬೇಟ್ದುದಂ ಪಡೆದುವೆತ್ತಾನುಂ ದಿಶಾದಂತಿ ದಿಕ್ಕರಿಣೀಪೇಚಕಚುಂಬನೈಕಸುಖಮುಂ ಶೇಷೋರಗಂ ಭೋಗಿನೀಪರಿರಂಭೋತ್ಸವಮುಂ (ಶಂರಾವಾ. ೬-೯೯). ೩. ಹೇನು. [ಸಂ.]

**ಪೇಚಕಿ** (ನಾ). ಆನೆ ; ಗಜ. [ಸಂ. ಪೇಚಕಿನ್]

**ಪೇಚಾಟ** (ನಾ). ೧. ತೊಂದರೆ ; ಕಷ್ಟ ; ತೊಡಕು; ಕ್ಲೇಶ : ಭೂಚಕ್ರದೊಡೆಯನ ಮುಂದೆ ಪೇಚಾಟದೆಮಗೊಂದು ರಾಜಮೋಡಿಯೆ ಸುತು (ಭರತ. ೨೩-೬೦) ; ಮನೆಯೊಳಗೆ ಪೇಚಾಟ ಹೀನ (ಸರ್ವಜ್ಞ. ೦೬೩೬). ೨. ಚಿಂತೆ ; ದುಃಖ ; ಗೋಳಾಟ : ನೋಡಿಕೊಳ್ಳೋಣ ಅದಕ್ಕೆ ಈಗಲೇ ಯಾತಕ್ಕೆ ಪೇಚಾಟ (ಹೀತಿ೩೦. VIII. ೦೬) ; ದುಡುಕಿ ಪೇಚಾಟದಲ್ಲಿ ಬೀಳುವೆನು (ಹೀಶುಂಠ. ೨೩೦). [ಪೇಚು₃+ಆಟ]

**ಪೇಚಾಡು** (ಕ್ರಿ). ೧. ಹೆಣಗಾಡು ; ತೊಂದರೆಗೆ ಈಡಾಗು ; ಒದ್ದಾಡು : ಆಚಾರವೆಂಬುದು ಅತಿಕಷ್ಟವದಱೊಳು ಪೇಚಾಡಲಾರದೆ (ಬಸ್ತ್ರಾ. ೩-೦೦೨). ೨. ಚಿಂತಿಸು ; ದುಃಖಿಸು ; ಗೋಳಾಡು : ನಾವು ಮನೆ ಸೇರದೆ ಅಡವಿಯಲ್ಲಿ ಸಿಕ್ಕಿ ಪೇಚಾಡುವ ಕಾಲ ಬಂತು (ಕಥಾಮಂ. IV, ೦೬) ; ಎಲ್ಲ ಮನೆಯಿಲ್ಲದೆ ಪೇಚಾಡುತ್ತಿರುವಾಗ ಅಂಥ ಮನೆ ಹೇಗೆ ಸಿಕ್ಕಿತು ? (ಬಾಕ್ಯಂ. ೨೬೬). [ಪೇಚು₃+ಆಡು₁]

**ಪೇಚು₁** 'ಪೇಸು₁' ನೋ.

**ಪೇಚು₂** (ಕ್ರಿ). ಗೋಳಾಡು ; ಸಂಕಟಪಡು ; ವ್ಯಥೆಪಡು : ಪಿಶಾಚಿಗಳಿರಾ . . . ನೀವು ವಿವಿಧಪ್ರಕಾರದೊಳಮಂಗಲದ ನುಡಿಯೊಳಂ ಮಿಱುವಗಾರು ಗತಿಗೆಟ್ಟವೆನುತ ಪೇಚುವಿರೆಂದು ಸವಿಶೇಷದಂಡದಿಂದಟ್ಟಿ ಬಡಿವುತ್ತಿರ್ದಂ (ಹರಿಶ್ಚ. ೨-೯-೨೮) ; ಸದ್ಬ್ರಾಹ್ಮಣರ ನೆರಪಿ ಭೋಜನವನಧಿಕತರದಿಂದೆಸಗಿ ಮಾಡಿದಲ್ಲದೆ ಶುದ್ಧವಲ್ಲವೆಂದುಱ್ ಪೇಚುತೆ (ಸಿದ್ಧೇಶ. ೯-೩೬). [←ಮರಾ. ಪೇಚ್, ಪೇಂಚ್]

**ಪೇಚು₃** (ನಾ). ೧. ತೊಡಕು ; ಇಕ್ಕಟ್ಟು ; ತೊಂದರೆ : ಅವನನ್ನು ಪೇಚಿಗೆ ಕೆಡವಲು ಪ್ರಯತ್ನಿಸುತ್ತೇನೆ (ಹೀಕವ್ಯ. ೩೬) ; ಶಿವಣ್ಣಯ್ಯನವರು

. . . ಅವರಿಗೂ ಮಾತನ್ನು ಕೊಟ್ಟು ಪೇಚಿನಲ್ಲಿ ಸಿಕ್ಕಿದರು (ಅಳಿಸಿ. ೦೩೮). ೨. ಹಿಡಿತ ; ಪಟ್ಟು : ಎಷ್ಟೋ ಪೇಚುಗಳನ್ನು ಹಾಕಿದೆ (ಜಾಳಕ. ೯); ಭಾರತದ ಮೇಲೆ ಸಾಮ್ರಾಜ್ಯ ಹಿಡಿತವಿಟ್ಟುಕೊಳ್ಳುವುದು ಬ್ರಿಟಿಷ್ ರಾಜಕಾರಣಿಗಳ ಒಂದು ಕುಶಲ ಪೇಚು (ಎಕ್ಕಸಾ. ೬೯); ಜಟ್ಟಿಯೇ, ನಾನು ಮಾಡುವ ಕೈಸನ್ನೆಗಳು ಯಾವ ಪೇಚನ್ನು ಸೂಚಿಸುತ್ತವೆ (ಹಿನೋದ. ೧೦). ೩. ತಿರುಪುಮೊಳೆ ಮೊದಲಾದುವುಗಳಲ್ಲಿಯ ಸುತ್ತು; ಮರಸುತ್ತು : ಅದರ ತುದಿಗೆ ಹೊರಮೈಯಲ್ಲಿ ಗಂಡುಮಲಸೂತ್ರದ ಪೇಚುಗಳಿರುತ್ತವೆ (ಮುಂಬಯಿ. ೩-೬೨).

[< ಪೇಚು$_1$./ಪಾರ. ಹಿಂ. ಮರಾ. ಪೇಚ್]

**ಪೇಜವಿತಿ** (ನಾ). ಒಂದು ಬಗೆಯ ಚಲನೆಯ ಗತಿ, –ಸಂಚಾರಕ್ರಮ : ಗೋಮೂತ್ರ ಮಂಡಲಮುಮಪಾಕಾಶಂ ಪೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಕಾಂತಿಪು. ೩-೨೩ ವ). [?]

**ಪೇಜು** (ನಾ). (ಪುಸ್ತಕಗಳ) ಪುಟ : ಆ ನೀತಿಪ್ರಶ್ನೆಗೆ ಒಂದು ಪೇಜು ಬರೆದಿದ್ದಾರಂತೆ (ಜ್ಞಾನಿಸ್ಮ. ೬೩); ನಾವು ದಪ್ಪ ಪೇಜುಗಳು ಇರುವ ಒಂದು ಪುಸ್ತಕವನ್ನು ತೆಗೆದುಕೊಂಡು . . . ಬರೆದೆವು (ಶಾರದಾ. ೨೦೩).

[←ಇಂ. page ]

**ಪೇಟ$_1$** (ನಾ). ೧. ಸಾಮಾನುಗಳನ್ನಿಡುವ ಪೆಟ್ಟಿಗೆ,– ಪೆಟಾರಿ. ೨. ಗುಂಪು ; ಸಮುದಾಯ. ೩. ಸೇವಕಜನ ; ಪರಿವಾರ. ೪. ಬೆರಳುಗಳನ್ನು ಚಾಚಿದ ಕೈ ; ತೆರೆದ ಹಸ್ತ. [ಸಂ.]

**ಪೇಟ$_2$** (ನಾ). ತಲೆಯುಡುಗೆ ; ರುಮಾಲು ; ಮುಂಡಾಸು : ತಲೆಗೆ ಪೇಟ. ಪೋಷಾಕೆಲ್ಲ ಶುದ್ಧ ಬಿಳುಪಿನದು (ಭಾರತ. ೩೬೯); ಟೋಪಿ ಪೇಟವ ತೊರೆದು ಪಿಳ್ಳನೆ ಜುಟ್ಟು ತೋರುವ ಊರೊಳು (ಗಜೀಶ. ೬೨-೬).

[← ಹಿಂ. ಮರಾ. ಫೇಟಾ]

**ಪೇಟಕ** (ನಾ). ೧. ಪೆಟ್ಟಿಗೆ; ಪೆಟಾರಿ : "ಪಿಟಕಃ, ಪೇಟಕಃ—೨ ಪೆಟಾರಿಗೆ ಹೆಸರುಗಳು" (ಸಿದ್ಧಾಂತ. ೩೦೫). ೨. ಬುಟ್ಟಿ : ದಟ್ಟಿಯುಟ್ಟು ಮುಂದದೆ ಸಲಿಕೆ ಪೆಗಲೊಳೆಸೆಯೆ ಪೇಟಕಮುದೆ ಸಿರದೊಳಮರೆ (ಹಾಲಾಸ್ಯ. ೯-೦೩-೦ ರಗಳೆ). ೩. ಗುಂಪು : ಸಮೂಹ : ಅಧಿಕಭಕ್ತಿಯ ತರೆ ಬಂದುದು ದೇವದಿವಿಜಪೇಟಕಮನಿತುಂ (ಅಂಪು. ೯-೧೧). . [ಸಂ.]

**ಪೇಟನ** (ನಾ). ಸವರುವುದು ; ನೀವುವುದು : ದಶಮಿಯೊಳ್ ನಾಭಿಯ ನಾಭಿಯಿಂ ಪೇಟನಂ ಮಾಡುವುದು (ಕಾಮಶಾ. ೨೨೭). [< ಸಂ. ಪೇಟ ?]

**ಪೇಟಪಾವುಡ** (ನಾ). ಒಂದು ಬಿರುದುಸೂಚಕವಾದ ವಸ್ತ್ರವಿಶೇಷ; ಪೇಟಕ್ಕೆ ಸುತ್ತುವ ಬಟ್ಟೆ (?) : ಚಂದ್ರಗಾವಿ ವುಡಾಸ್, ಪೇಟಪಾವುಡ, ಸಾಗ (ಗುರುಚ. ೧೧). [ಪೇಟ$_2$ + ಪಾವುಡ$_1$]

**ಪೇಟಿ** (ನಾ). ೧. ಪೆಟ್ಟಿಗೆ; ಪೆಟಾರಿ : ಅಂಬುಜಮುಖಿಯೊರ್ವಳ ನಿಡುಗಣ್ಬೆಳಗಿನೊಳೊಂದು ಸಿಲ್ಕಿದರಗಿಳಿಯೆಸೆಗುಂ ತಣ್ಬೆಳಗುವಣೆಯ ಪೇಟಿಯೊಳಿಂಬಾಗಿ ಮಂಗೊಳಿಪ್ಪ ಮರಕತಮಣಿವೋಲ್ (ಅದ್ಭುತಿ. ೩-೨೫); ಧರಣಿಯುಂ ಸಂಶೋಧಿಪಾಗಳ್ ಕರಸ್ಥಿತ ಕುದ್ದಾಲಕಿ [ಸಿಲ್ಕೆ ಪೇಟಿ ಮರ] ಭಾಸ್ವತ್ಕನ್ಯಕಾರೂಪರಂಜಿತಮೊಂದುಂ ಶಿಶು ಸಿಲ್ಕೆ (ಅಭ್ಯಕ. ೬-೪). ೨. ಪೆಟ್ಟಿಗೆಯಾಕಾರದ ಒಂದು ವಾದ್ಯ ; ಹಾರ್ಮೋನಿಯಂ : ವಸಂತ ನಾಟಕದಲ್ಲಿ ರಾಜಾಪಾರ್ಟು ಮಾಡಲು ಹವ್ಯಾಸಬಿಟ್ಟದ್ದು, ವಡದೆ ಪೇಟಿಗಳ ಬಗ್ಗೆ ವಿಚಾರಿಸಿದ್ದು (ಗಂಮಾಯಿ. ೨೯೧).

**ಪೇಟಿ ಬಾರಿಸು**=ಹಾರ್ಮೋನಿಯಂ ನುಡಿಸು : ಜ್ಞಾನಶಂಕರ . . . ಈಗ ಪೇಟಿ ಬಾರಿಸುವುದರಲ್ಲಿ ಮಗ್ನನಾಗಿರುತ್ತಿದ್ದ (ಕ್ರಿಟಾಶ್ರ. ೬).

[ಸಂ. ಪೇಟೀ]

**ಪೇಟಿಕೆ** (ನಾ).=ಪೇಟಿ ೧ : "ಪೇಟಿಕೆಗೆ ಪೇಳಿಗೆಯೆನಿಕ್ಕುಂ" (ಸಂಜೀವ. ೨೯); ಆಭರಣಪೇಟಿಕೆಯನತ್ಯುರುತರಾವಿಲೇಪನದ, ಭರಣಿಗಳ ಕುಸುಮಸಾಂದರ ಭಾಜನಂಗಳಾಂತಬಲೆಯರು ಸುತ್ತಲೋಲೈಸಿ ಬರೆ (ಚೀಕ್ಕಿಷು. ೩-೨-೨೬) ; ಕ್ರೀಡಾವಸ್ತುವಿನೋದಪೇಟಿಕೆಯನಿಪ್ಪೀ ವಿಶ್ವಮಂ ಕೊಂಡು ನೀವಾಡುತ್ತ ಗ್ಗದ ಜಾಣ್ಮೆಯಿಂದಮೊಲಿಸಲ್ ನಾಂ ಪಾರಿತೋಷಂಗಳಂ ನೀಡುತ್ತಿರ್ಪೆಂ (ಶಿವೇದ. ೨೫-೦). [ಸಂ. ಪೇಟಿಕಾ]

**ಪೇಟೆ**. ಪೇಂಠೆ, ಪೇಠಾ, ಪೇಠೆ$_2$ (ನಾ). ೧. ಅಂಗಡಿಗಳಿರುವ ಬೀದಿ : ಕ್ರಯ ವಿಕ್ರಯ ಮಾಡುವ ಸ್ಥಳ ; ಮಾರುಕಟ್ಟೆ : "ಮಾಜಾಹ ಟಾವು ಪೇಟೆಯಕ್ಕುಂ" (ಶಬ್ದಮಂ. ೦೦೨-೩) ; ಉರಿಯ ಪೇಟೆಗಳಲ್ಲಿ ಪತಂಗದ ಸರಕು ಮಾಡಿದೆ ಮರಳುವುದೆ (ಕುಮಾ. ೪. ೦೦-೨೮); ನನೆಯ ದಾವಣಿಗಟ್ಟಿಂ ಕಟ್ಟಿಕ್ಕಿನಿಯರ್ಗೊಪ್ಪಿಸಿ ಕೊಡುವವೊಲಿತ್ತರ್ವನಿತೆಯರಾ ಪೂವಿನ ಪೇಟಿಯೊಳ್ಪಾಸಿಗವುಂ ವಿಟರ್ಗೆ (ಶಯಾಕಾ. ೦-೩೦) ; ಅಗವುಜ್ಞರು ಹಂಚಿ ಕೊಟ್ಟಂತೆ ಪೇಟೆಯ ಭಾಗದಂಗಡಿಗಳೊಪ್ಪಿದುವು (ಕೊಃಹಕ. ೩-೦೨) ; ಇಲ್ಲಿಯ ಪೇಟೆಯಲ್ಲಿ ಬೂಸದ ವ್ಯಾಪಾರವಾದರೂ ತಕ್ಕ ಮಟ್ಟಿಗೆ ನಡೆಯುತ್ತದೆ (ಮುಂಬಯಿ. ೯-೦೪೩). ೨. ನೆಲೆ ; ಆಗರ : ಹದಿರು ಚದುರಿನಾಗರ ಠಾಳಿಯ ಪೇಟೆ (ಕಂಶಂ. ೨-೯೬). ೩. ಜನರು ವಾಸವಾಗಿದ್ದು ವ್ಯಾಪಾರ, ವ್ಯವಹಾರಗಳನ್ನು ನಡೆಸುವ ಸ್ಥಳ : ಅವರ ಮನೆ ಪೇಟೆಯೊಳಗೆ ಇದೆ (ರೂಢಿ). ೪. ಶಹರು ; ಪಟ್ಟಣ : ಇದೇಯೇನು ನಿಮ್ಮ ಪೇಟೆಯವರ ಧೈರ್ಯ (ಬಟ್ಟಿಜೀ. ೦೬೯). **ಪೇಂಠೆ** : ೫. ತಾಲ್ಲೂಕಿಗಿಂತ ಸಣ್ಣದಾದ ಆಡಳಿತವಿಭಾಗ ; ಹೋಬಳಿ : ನಡೆದು ಬನ್ದ ನಾಡ ಗಾಡಿಕ ದೇಶ ಪೇಂಠೆ ಪಟ್ಟಣದ ಹಟ್ಟಿಗೆ ಮರಿಯಾದೆ (ಎಕ. VIII, ಸೊರಬ. ೨೬೬-೨೯ ; 1620 ?). **ಪೇಠಾ** : ೫. ರಾಜಕೀಯದ ಮಟ್ಟಿಗೆ, ಅದು ಪೇಠಾ ಅಂದರೆ ಉಪತಾಲೂಕಿನ ರಾಜಧಾನಿ (ಜಾರಿಯಾ. ೨೪) ; ಪೇಠಾದ ಸ್ಥಳವಾದುದರಿಂದ ೪–೮ ಕಚೇರಿಯ ಜನರು ಕಣ್ಣಿಗೆ ಬೀಳುತ್ತಿದ್ದರು (ಎಂ.ಎ. ೭). **ಪೇಠೆ$_2$** : ೧. ಕೃಷ್ಣಾಪುರದ ಪೇಠೆಯ . . . ಸ್ಥಳಸುಂಕ (ಸೌಇಇ. IV, ೨೫೫-೨೫; 1513) ; ಯಿಾ ಗ್ರಾಮದಲು ಹಳೆ ಪೇಠೆಯಲು (ಎಕ. VIII. ಸೊರಬ. ೩೫೯-೨೯ ; 1743 ?). ೨. ಸ್ಮರನಿಕ್ಕೆ ರತಿಯರಮನೆ ಮಧುವಿನ ಪೇಠೆ[ಶಾಶಾಂ. ಟಿ] (ಸೊಂಡಸೋ. ೨೫-೫೬). ೫. ತಾಲೂಕು ದೊಡ್ಡದಿದ್ದಲ್ಲಿ ಪೇಠೆಯೆಂಬ ಸಣ್ಣ ಭಾಗ ಮಾಡಿ . . . ಅಧಿಕಾರಿಯನ್ನು ನೇಮಿಸುತ್ತಾರೆ (ಮುಂಬಯಿ. ೯೫) ; ಈ ಜಿಲ್ಲೆಯಲ್ಲಿ ೮ ತಾಲೂಕುಗಳೂ ೩ ಪೇಠೆಗಳೂ ಇರುವುವು (ಕಾರವಾ. ೬೦).

**ಪೇಟೆಧಾರಣೆ** = ಮಾರುಕಟ್ಟೆಯಲ್ಲಿ ಆಯಾ ದಿನದಲ್ಲಿ ಇರುವ ಸರಕುಗಳ ಬೆಲೆ : ತರಬೇಕು ತಕ್ಕ ಬೆಲೆ, ಪೇಟೆಧಾರಣೆ ಬೇರೆ (ಶಿಂಮು. ೩೬-೫). [← ಮರಾ. ಪೇಟಾ, ಪೇಠ. / ತಮಿ. ಪೇಟ್ಟೈ ; ತುಳು. ಪೇಂಟೆ, ಪೇಟೆ ; ತೆಲು. ಪೇಟ]

**ಪೇಠಣೆ** 'ಪೈಠಣಿ' ನೋ.

**ಪೇಠಾ** 'ಪೇಟೆ' ನೋ.

**ಪೇಠೆ$_1$** (ನಾ). ಗುಂಪು ; ಸಮೂಹ : ಬೆಜವಾಡದೊಳ್ ನ್ಯಾಯಮಂ ಪೇಳ್ದ ಮಧ್ಯಸ್ಥರಂದದ ಜನದ ಪೇಠೆಗಳಿನೊಪ್ಪಿರ್ದುದು (ಶೀರವು. ೨-೧೧).

[< ಸಂ. ಪೇಟ]

**ಪೇಠೆ$_2$** 'ಪೇಟೆ' ನೋ.

**ಪೇಡ**, ಪೇಡೆ, ಪೇಢೆ, ಫೇಡೆ (ನಾ). (ಉಕ) ಹಾಲುಖೋವ ಹಾಗು ಸಕ್ಕರೆಯಿಂದ ಮಾಡುವ ಒಂದು ಬಗೆಯ ಮಿಠಾಯಿ; ದೂದಪೇಡ : ಧಾರವಾಡದ ಪೇಡ ಬಾಯಿಗೆ ಸಾಕುತ್ತಿದ್ದ ಹಾಗೇ ಕರಗಿ ಬಟ್ಟಿತು (ರೂಢಿ). **ಪೇಡೆ** : ನಿನ್ನೆ ಎಲ್ಲರಿಗೂ ಪೇಡೆ ಕಳಿಸಿದ್ದಿ (ಕುಂಕುಮ. ೨) ; ಅದಕ್ಕಾಗಿ ಪೇಡೆ ಹಂಚುವ ವ್ಯವಸ್ಥೆಯನ್ನು ಗುಪ್ತವಾಗಿ ತಿಳುಹಿಸಿರಿ (ಅಮನಾಂ. ೫೦). **ಪೇಢೆ** : ಅವಳು ಗಾಡಿಯಲ್ಲಿ ಕುಳಿತ ಮೇಲೆ ಟಿಳಕರು ಖರ್ಜೂರ ಮತ್ತು ಪೇಢೆ ತಂದು ಅವಳ ಕೈಗಿತ್ತರು (ಸ್ವಾತಂತ್ರ. ೦೯೯).

**ಫೇಡೆ** : ಖಾದರನು ಕೈಚೀಲದಲ್ಲಿ ಫೇಡೇದ ಪುಡಿಕೆಗಳನ್ನು ತಂದಿಟ್ಟನು (ಮುಕ್ತ್ಯ. ೧೬೬) : ಊರೆಲ್ಲೆಲ್ಲಾ ಆ ಸಂಭ್ರಮದ ಪ್ರತೀಕವಾಗಿ ಫೇಡೆ ಹಂಚಿದರು (ಅರಿಯು. ೨೨). [←ಹಿಂ. ಪೇಡಾ ; ಮರಾ. ಪೇಡಾ, ಪೇಢಾ]

**ಪೇಡಿ₁**, ಪೇಟಿ₁, ಹೇಡಿ (ನಾ). ೧. ಅಂಜುಕುಳಿ ; ಕೈಲಾಗದವನು ; ಹೆದರುಪುಕ್ಕ : ಆನೆ ರಿಪುಸೇನೆಗೆ ಸಾಲ್ದನವುಂಕಿ ಪೇಡಿ ಪಾಡಿಗಟ್ಟಿಟು ವೆಡಕ್ಕೆಯ ಕೈಯುಗುರೆ ಸಾಲದೆ ನಟ್ಟನ ಕೈದುವೇಟ್ಟುದೇ (ಕಾವ್ಯಸಾ. ೯೦೦ ಜಾತ್ರಸ) ; ಮುಂ ಬಳೆದೊಟ್ಟ ಪೇಡಿಯ ನಿಮ್ಮನಿಂತಿಳಿಸಿ ಮದ್ವಲಮೆಲ್ಲಮಂ ಕೊಲೆ ನೋಡುತಿರ್ಪುದು ಪಾಟಿಯೇ (ಹಂಪಕು. ೦೦-೦೯) ; ಪೇಡಿಯಪ್ಪರಸಿನ ಮಾತಿನಂತೆ ಬೇಸಗೆಯು ಮುಗಿಲಂತೆ (ರಚೂಕಾವ್ಯ. ೯-೨೬). ೨. ನಪುಂಸಕ ; ಷಂಡ : " ನಪುಂಸಕಂ ಪೇಡಿ ಷಂಡಕಂ ತಾಂ ಷಂಡಂ" (ಚ್ಯುತಕೋ. ೫೬-೨೬). **ಪೇಟಿ₁** : ೧. ಧರ್ಮಾನುಜಂಗೇಕೆ ಕಿಂಕರನಾದಂ ಕರವೇಟಿಯಾದನದಟಿಂ ಸೂತಂ ಭಟಂ ಪೇಟಿಯೆಂಬರ ಮಾತೊಪ್ಪುಗುಂ (ಗದಾಯು. ೪-೯೩). **ಹೇಡಿ** : ೧. ಹೇಡಿ ಬಿರುದ ಕಟ್ಟಿದಂತಾಯಿತೆನ್ನ ವೇಷ ಕಾದ ಬೇಕು ಕಾದುವರೆ ಮನವಿಲ್ಲಾ (ಜಸ. ೪೦೦) ; ರಾಯನಿದಿರಲಿ ಹೇಡಿ ಕಲಿಯಹ (ಕುಮಾವ್ಯ. ೯-೨೬): ನನ್ನನ್ನು ಹೇಡಿಯೆಂದು ಎಲ್ಲರೂ ತಿಳಿದುಕೊಂಡಿದ್ದಾರೆ (ಕಯೂಕ. ೦೦೨) ; ಹೇಡಿ ಯುದ್ಧಕ್ಕೆ ಹೋಗ, ಪೋಡಿ ಕೆಲಸಕ್ಕೆ ಹೋಗ (ಗಾದೆ). ೨. "ಉಭಯವ್ಯಂಜನಾ, ಪೋಟಾ—ಈ ೨ ಹೆ(ಪೆ)ೀಡಿ" (ಹಲಾಯು. ೬೦-೨೬೬). ೩. ಗಟ್ಟಿಯಲ್ಲದುದು ; ಪೊಳ್ಳಾದುದು : ಅರಳೆ . . . ಕಟ್ಟಿಗೆ ಹೇಡಿ, ಕೆಲಸಕ್ಕೆ ಬರುವುದಿಲ್ಲ (ಕಠಾಗ. ೪೫). ' ಹೇಡಿಮಣ್ಣು ' ಪಲಾ.

[ದೇ.॥ ತಮಿ. ಪೇಟಿ; ಮಲ.ಪೇಡಿ; ತುಳು. ಹೇಡಿ,ಹೇಡೆ; ತೆಲು. ಪೇಡಿ]

**ಪೇಡಿ₂**. ಪೇಢಿ (ನಾ). (ಉಕ) ಚಿನ್ನ, ಬೆಳ್ಳಿಯ ವ್ಯಾಪಾರಕೇಂದ್ರ ; ಸರಾಫ್ ಕಟ್ಟೆ : ಈ ಅಜ್ಞಾನ ಮತ್ತು ಭಯದ ಮೂಲಕ ಪೇಟೆಯ ವ್ಯವಹಾರವು ಅಡತಿ ಅಂಗಡಿ ಇಲ್ಲವೆ ' ಪೇಡಿ ' ಗಳ ಮುಖಾಂತರವಾಗಿ ಇದುವರೆಗೆ ನಡೆದಿರುವುದು . . . ' ಪೇಡಿ ' ಗಳ ವ್ಯವಹಾರಕ್ಕೆ ಕಾಯದೇ ಕಾನೂನಿನ ನಿರ್ಬಂಧವಿರುವುದಿಲ್ಲ (ಜ್ಯೋತಿಕ್ಯ. ೦): ಈ ಮುಂಬಯಿಯೊಳಗಿನ ದುಕಾನಿನ ಹೊರ್ತು ನಮ್ಮ ಮುಖ್ಯ ಪೇಡಿಯೂ ನಮ್ಮ ವಾಸಸ್ಥಾನವೂ ಸೋಲಾಪುರದಲ್ಲುಂಟು (ಮುಂಬಯಿ. ೨೦). **ಪೇಢಿ** : ಆಗಿನಿಂದ ನಡೆದು ಬಂದ ಕೆಲವು ಪೇಢಿಗಳು, ಅಂಗಡಿಗಳು, ಸಂಸ್ಥೆಗಳು (ಕಸ್ಯಾ. ೯೨): ನಮ್ಮೂರಲ್ಲಿ ಪೇಢೀ ನಡೆಸುತ್ತಿದ್ದ ಗಂಗಾಪ್ರಸಾದತಿವಾರಿ . . . ರಂಗಣ್ಣಾ, ಇವರೇ ಈ ವಾಸಂತಿಕಾಛತ್ರಕ್ಕೆ ಮಹಾಪಾಲರಾಗಿದ್ದರು (ಬೀಕಹ. II. ೦೯೯).

[ ← ಮರಾ. ಪೇಢೀ ]

**ಪೇಡಿತನ**, ಹೇಡಿತನ (ನಾ). ಅಂಜುಬುರುಕುತನ ; ಪುಕ್ಕಲುತನ : ಏನದುಮ್ಮ ಪೇಡಿತನಂ, ಅಂಜದಿರ್ (ಅಕ್ಕಕಾ. ೯-೬೨): ಕೊಲೆಯ ಅಪರಾಧ ದಿಂದಮಾ ಪೇಡಿತನಪದಮಾನಮೋ ಮೇಲು (ಜಿನ್ನಕ್ರ. ೯೬-೯೯೫). **ಹೇಡಿತನ** : ನೋಡಿದಳು ದಮಯಂತಿ ಭೀತಿಯಲೋಡುತಿಹ ಬೇಡಿಕೆಯ ವೃಕ್ಕರ ಹೇಡಿ[ಪಾಠಾಂ. ಕೇಡ]ತನವನು (ನಳಕ. ೫-೯೦): ಅವರಲ್ಲಿ ಬೇಗನೆ ಪುಕ್ಕು, ಹೇಡಿತನಗಳು ಮೆಲ್ಲನೆ ಸೇರಿಕೊಳ್ಳುವುವು (ಯುಕ್ಷಕ್ರ. ೪೦).

[ ಪೇಡಿ₁ + — ತನ ]

**ಪೇಡೆ** ' ಪೇಡ ' ನೋ.

**ಪೇಢಿ** ' ಪೇಡಿ₂ ' ನೋ.

**ಫೇಢೆ** ' ಪೇಡ ' ನೋ.

**ಪೇಣಿ** (ನಾ). ಒಂದು ಬಗೆಯಂ ಸಿಹಿಭಕ್ಷ್ಯ : ಬೆಳತಿಗಕ್ಕಿಯ ಹಿಟ್ಟ ಹೊಸ ಬೆಣ್ಣೆಯಿಂ ಕಲಸಿ . . . ಸರಿಬೆಣ್ಣೆ ಸಂದುಪ್ಪದೊಳಗೆ ಪಾಕವ ಮಾಡಿ ಪದರಿನೊಳು ಸಕ್ಕರೆಯನಿಡಲದುವೆ ಪೇಣಿಯಹುದು (ಸೂಪಶಾ. ೦-೯೩) ; ಚಿಲುಪಾಲುವ್ರತವೆಂದೆಳೊರ್ವಳು ಪೇಣಿಯ ಮೆಲಲೊಲ್ಲೆನೆಂದ ಳೊರ್ವಬಲೆ (ಶಠಕ. ೨೧-೨೯). [ <ಸಂ. ಫೇಣೀ ]

**ಪೇತ**, ಪೇತು, ಹೇದೆ (ನಾ). ೧. ಭೂತ ; ಪಿಶಾಚಿ ; ಪ್ರೇತ : ಕೆಲಕ ಕಾದಿಹ ಬೂತಪೇತವು (ಕಾವ್ಯಾಂಶ. ೪೯-೨೪) ; ಕೊಳುಗಾಣದ ಪೇತರು ಗಳಂತೆ ಕಾಡುವರು ಕಂಡವರ (ಕಂಕಣ. ೬-೨೨). ೨. ಹೆಣ; ಶವ : ' ನರಪೇತ ' ಪರಾ. **ಪೇತು** : ೧. '' ಪೇತು(ತ)—ಪ್ರೇತ = ಪಿಶಾಚಿ " (ಕರ್ಣಕೋ. ೨೬); ಪೇತೆ ನೀನೇನು ದೊಡ್ಡಿತು (ಮೋಹತ. ೦೨-೦೫೯) ; ಪೇತುಗಳಲ್ತೆ ಖೇಚರರು ಭೂಚರರೆಲ್ಲ ಭೂತಗಳಲ್ತೆ (ಶರಕ. ೯೯-೪೫). ೩. ಅಂಜುಬುರುಕ ; ಹೇಡಿ : ' ಪೇತುಗ ' ಪರಾ. **ಹೇದೆ**: ೧. "ಹೇದೆ_ಭೂತಂ" (ಕಮರ. ಹಂ. ೨) ; ತೊನೆವ ನೆಲ ಮಾಟವಿದು ಮನೆಯ ಕಾಟದ ಹೇದೆ ಬಿನುಗೊಂದು ನೆಲಮುಕ್ಕು ಕಾಡುತಿಹುದು (ಕಾಲರ. ೦೫೯-೪೪೯). [< ಸಂ. ಪ್ರೇತ]

**ಪೇತು** ' ಪೇತ ' ನೋ.

**ಪೇತುಕಣೆ** (ನಾ). (ಆಲಂ) ಹಿಂಸೆಗೊಳಗಾಗಿಸುವ ಅನಂಗನ ಬಾಣ ; ಪುಷ್ಪಬಾಣ : ಚೂತ ಕುಮುದಂ ಕಮಲ ಮಲ್ಲಿಗೆಯಶೋಕೆಗಳ ಪೇತುಕಣೆ ಗಳ ತೊಟ್ಟು ಕಾತರಿಪ ಸ್ತ್ರೀಪುಂಸರೆಸೆಯು ಬೀಳುವರು (ಶ್ರಶಾಕ. ೫-೦೨೯).

[ಪೇತು (< ಪೇತ) + ಕಣೆ₁]

**ಪೇತುಗ** (ನಾ). ೧, ಪಿಶಾಚಿಯಂತಹವನು ; ದುಷ್ಟ : ದುರಾತ್ಮನು ಪಾಂಡವರ ಕಪಟದ್ಯೂತದಲಿ ವನವಾಸಕಟ್ಟಿದ ಪೇತುಗನು ಕಡುಲಜ್ಜ ಭಂಡನು (ಕುಮುಂದ. ೦೯). ೨. ಅಂಜುಬುರುಕ; ಹೇಡಿ : ತಿರುಗಿ ಸೀತೆಯ ಬಿಟ್ಟನಾದರೆ ಕರೆಯ ಪೇ[ಪಾಠಾಂ. ಕೇ]ತುಗನೆಂದು (ತೊರೆರಾ. ೬-೦೨-೦೬) ; ಕಂಡ ದೆಸೆಗೋಡುತಿರಲು ಕೇಳಿ ಚೈದ್ಯಂ ಪೇತುಗರ ಬಯ್ದು (ಯಾದವ. ೪೯). [ಪೇತು (< ಪೇತ) + —.ಗ₂]

**ಪೇದೆ** ' ಪ್ಯಾದೆ ' ನೋ.

**ಪೇದೆಮಾತು** ' ಪ್ಯಾದೆಮಾತು ' ನೋ.

**ಪೇನ್**, ಪೇನ್ನು, ಹೇನ್, ಹೇನು (ನಾ). ೧. (ಸಾಮಾನ್ಯವಾಗಿ ಕೊಳ ಕಾದ ಬಟ್ಟೆ ಹಾಗೂ ತಲೆಯ ಕೂದಲಿನಲ್ಲಿ ಸೇರಿಕೊಳ್ಳುವ) ಒಂದು ಬಗೆಯ ಸಣ್ಣ ಹುಳು ; ಯೂಕ : ಅಂತೊಪ್ಪುವ . . . ಶಯ್ಯಾತಳ ದೊಳ್ ಮಂದವಿಸರ್ಪಣೆಯೆಂಬುದೊಂದು ಪೇನಿರ್ಪುದು[ಪಾಠಾಂ. ಯೂಕವಿಪ್ಪುದು]. (ಹಂಪಕಂ. ೦೨೪-೦೦) ; ರಸಮಂ ಫಣಿವಲ್ಲೀದಳರಸ ದೊಳ್ ಮರ್ದಿಸಿ ಬಟ್ಟೆಕ್ಕೆ ಕಪ್ಪಡದೊಳ್ ಭಾವಿಸಿ ತಲೆಯೊಳ್ ಕಟ್ಟಿದೊಡುಳ್ಳ ಸೀರುಮುಳ್ಳನಿತು ಪೇನುಮಾಗಳೆ ಕಿಡುಗುಂ (ಲೋಕೋಪ. ೯-೫೬) ; ತಲೆ ಯೊಳ್ತೀವಿದ ಪೇನ ಸೀರ್ಮಲಮನೆಂತುಂ ಬಾರ್ಚೆ (ಜಾವಸಂ. ಹಂ. ೦-೯) ; ಕಣ್ಮಂಡಲೆಂದು ತೂಪಿಟಿದು ಬಣ್ಣದಾವರೆಮೊಗ್ಗೆಮೊಲೆಯ ಬಾಯೊಳ ಗೂಡಿಯುಣ್ಣಲ್ಕೆ ಪೇನ್ಪದಕುವಳು (ವಾಹಕ. ೦೬-೬೩). **ಪೇನ್ನು** : ೧. ಸ್ಪರ್ಶ ರಸ ಗಂಧಂಗಳೆಂಬೀ ಮೂಜಾಜೀವ . . . ಪೇನು ಸೀರು ತೇಟು . . . ತುರುಬುಬು ಮೊದಲಾದವಜೊಳಂ (ಚಾರ. ೯೯). **ಹೇನ್** : ೧. " ಮಸ್ತಕವ್ಯಗಂ ಷಟ್ಪದಂ ಹೇನೆನಿಕ್ಕುಂ " (ಮಂಗರಾ. ೯೯-೦೯); " ಉಂದುಕಂ=ಹೇನ್ " (ಗಾಕಶ್ಯ. ೨೬) ; ಕೇಶವಿಳಿದಿಹದೆಂಬೆ ಹೇನ್ನೀರ್ ಸೂಸುತಿಹವೆಲ್ಲಲ್ಲೆ ಮೃತವಹ ಘಾಸೆ ಬಪ್ಪದು (ಶಟಭಾ. ೪-೦೫). **ಹೇನು** : ೧. "ಹೇ[ ಪಾಠಾಂ. ಪೇ ]ನಿಗುಂಜಿ ಸಂಮರ್ಜಿಪರುಂಟೆ ಕುಂತಳವಂ (ಬಾರತ್ತ.೦-೬೭) ; ಹೇನನೊರಸುವಡೇಕೆ ಶರಸಂಧಾನ (ತೊರರಾ ೬-೪-೫೬) ; ಹೇನು ಬಲ್ಲುದೆ ಮುಡಿದ ಹೂವಿನ ಪರಿಮಳವ (ಪುರಂದ. ೦-೦೨೫-೨). ೨. ಗಿಡಮರಗಳಿಗೆ ಹತ್ತುವ ಕೀಟಗಳಲ್ಲಿ ಒಂದು ಬಗೆ : ಗಿಡಮರ ಗಳಿಗೆ ಅಂಟಿರುವ ಹೇನುಗಳಲ್ಲೂ ಇನ್ನು ಅನೇಕ ಕೀಟಗಳಲ್ಲೂ ಈ ರೀತಿ ಯಿಂದ ಸಂತತಿಯು ಬೆಳೆಯುವುದು (ಜೀವಶ್ರ. II. ೬೦೦) ; ಗಿಡದ ಸೀರು ಅಥವಾ ಹೇನುಗಳು (aphids) ಲಕ್ಷಾವಧಿ ಸಂತಾನವನ್ನು ಉತ್ಪತ್ತಿ ಮಾಡುವುವು (ಜೀಟಾ. ೬).

**ಹೇನ ಕೆರೆ**=ಕೂದಲು ಉದುರುವ ಒಂದು ಬಗೆಯ ರೋಗ : ಇಂದ್ರಲುಪ್ತ ಎಂಬುದೊಂದು ಮಂಡೆಯು ಕೂದಲು ಒಂದೂ ಇಲ್ಲದೆ ಉದುರಿ ಮಂಡೆಯು ಚರ್ಮ ಕಾಣಲ್ಪಡುವುದು ; ಅವನೇ ಹೇನ ಕೆರೆ ಎಂಬರು (ವೈದ್ಯಸಾ. II. ೦೩೦).

[ದೇ. ‖ ತಮಿ. ಮಲ. ನಾಯ್ಕಿ. ಗದಬ. ಪೇನ್ ; ತುಳು. ತೆಲು. ಕುಇ. ಮಲ್ತೊ. ಪೇನು ; ಕುವಿ. ಪೇನು, ಪೇನೂ]

**ಪೇನ$_1$** (ನಾ). ನೊರೆ ; ಬುರುಗು : " ಪೇನ—ಫೇನ=ನೊರೆ" (ತದ್ಭಕೋ. ೨೭); ಫಕಾರಕ್ಕೆ ಪಕಾರಂ . . . ಫಾಲ್ಗುನ – ಪಾಲುಗುಣ ; ಫೇನ-ಪೇನ (ಶಮದ. ೨೫೫ ಪ್ರಯೋ). [ <ಸಂ. ಫೇನ ]

**ಪೇನ$_2$** ' ಪೆನ್ನು ' ನೋ.

**ಪೇನಾ** ' ಪೆನ್ನು ' ನೋ.

**ಪೇನಾರಿ** ' ಪೀನಾರಿ$_1$ ' ನೋ.

**ಪೇನಿ** (ನಾ). ೧. ಒಂದು ಬಗೆಯ **ಪಿಶಾಚಿ** : ಬಟ್ಟೆವೋಪರ್ ಪಸಿದೆಳೆಗೆಯ್ಯಂ ಪೊಕ್ಕಂತೆ ಪೊಟ್ಟೆಯನುರ್ಚಿ ತಿಂಬ ಪೇನಿಗಳುಂ (ಜಂಹರಿ. ೨-೦೦ ವ). ೨. (ಅಲಂ) ಲೋಭಿ ; ಜಿಪುಣ : ಪೇನಿಗಳಂ ಪೊಗಳದಿರಭಿಮಾನಿಗಳಂ ಗುಣದ ಕಣಿಗಳಂ ವಸುಮತಿಯೊಳ್ ದಾನಿಗಳನೂನಮಿಲ್ಲದ ಮೋನಿಗಳಂ ಪೋಗಿ ಪೊಗಟಿ (ಎಕ. V, ಬೇಲೂರು. ೦೨೩-೦೭ ; 952) ; ತಾನುಣ್ಣದ ಪೆಜರ್ಗಿಕ್ಕದ ಪೇನಿಯ ಪಚ್ಚಡಿಕೆಯೆನಿಪ ಲೋಭಿಯ ಪೊನ್ನ . . . ಕವರ್ದುಕೊಂಡು (ಧರ್ಮಾಮೃ. ೨-೩೪). [ದೇ. ‖ ಕುವಿ. ಪೇನು]

**ಪೇನು$_1$** ' ಪೇನ್ ' ನೋ.

**ಪೇನು$_2$** ' ಪೆನ್ನು ' ನೋ.

**ಪೇಪಂದಿ** (ನಾ). ಹೆಣ್ಣುಹಂದಿ : ಆ ಪೊಟಿಲೊಳ್ . . . ಪೇಪಂದಿಯಾಗಿ ಪುಟ್ಟಿ (ವರ್ಧಮಾ. ೦೦-೬) ; ಆ ಪುರದೊಳ್ ಪೇಪಂದಿಯಾಗಿ ಬಂದು (ಸುಕುಮಾ. ೫-೨೭) ; ಅಮೇಧ್ಯದ ನಾಯ ಪೇಪಂದಿಯ ಕತ್ತೆಗಳ ನಡುವೊಂದೆರಡು ಜಾವಂಬರಮಿರ್ದು (ಜಂಹರಿ. ೪-೪ ವ). [ <ಪೆಣ್ + ಪಂದಿ ]

**ಪೇಯ** (ನಾ). ೧. ಕುಡಿಯಲು ಯೋಗ್ಯವಾದುದು ; ಪಾನೀಯ ; ಮದ್ಯ, ಪಾನಕ, ಚಹಾ, ಕಾಫಿ ಮುಂತಾದುವು : ನೀರಿಲ್ಲದಿದ್ದರೆ ಚಹಾ, ಕಾಫೀ, ಕೋಕೋ ಮೊದಲಾದ ಪೇಯಗಳನ್ನು ಕುಡಿದು ಬದುಕಬಹುದಲ್ಲವೆ (ವಿನೋದ. ೦೪) ; ಬಾರಿನಿಂದ ಯಾವ ಯಾವುದೋ ಪೇಯಗಳನ್ನು ತರಿಸಿ ಕುಡಿಯುತ್ತಿದ್ದಾರೆ (ಕ್ಷೀಜ. ೯). ೨. ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಪೇಯ ಎಂಬ ನಾಲ್ಕು ವಿಧವಾದ ಆಹಾರಗಳಲ್ಲಿ ಒಂದು : ಬಾರದ ಭವದಲ್ಲಿ ಬಂದು, ಉಣ್ಣದ ಪೇಯವನು ಉಂಡು, ಕಾಣದ ದುಃಖವ ಕಂಡು (ಶರಶ. ೬೩೬) : ಮನುಷ್ಯರ ಜಠರದಲ್ಲಿರುವ ವೈಶ್ವಾನರಾಗ್ನಿಯಲ್ಲಿ . . . ಸಂಯುಕ್ತನಾಗಿ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ ಎಂಬ ನಾಲ್ಕು ವಿಧ ಅನ್ನವನ್ನು ಜೀರ್ಣ ಮಾಡುತ್ತೇನೆ (ಶಾತಕ. ೦೬೯). ➤ ಭೋಜ್ಯ, ಪೇಯ, ಚೋಷ್ಯ, ಲೇಹ್ಯ, ಖಾದ್ಯ, ಚರ್ವಣ, ನಿಷ್ಪೇಯ ಮತ್ತು ಭಕ್ಷ್ಯಗಳೆಂದು ಆಹಾರಗಳು ಎಂಟು ವಿಧ ಎಂಬ ವಿವರಣೆಯೂ ಇದೆ. ೩. ನೀರು. ೪. ಹಾಲು. [ಸಂ.]

**ಪೇಯತ್ತಿ** (ನಾ). ಒಂದು ಬಗೆಯ ಅತ್ತಿಮರ : "ಮಲಯೂಃ—ಕಲ್ಲತ್ತಿ, ಪೇಯತ್ತಿ" (ಚಿಕರಿ. ೦೦೪). [ಪೇಯ$_?$ + ಅತ್ತಿ$_1$]

**ಪೇರ್$_1$** 'ಪಿರಿ$_4$' ನೋ.

**ಪೇರ್$_2$** 'ಪೆಸರ್' ನೋ.

**ಪೇರ್ಡಂಡೆ** (ನಾ). ದೊಡ್ಡ ಪಾತ್ರೆ,—ಅಂಡೆ : ಶತಸಂಖ್ಯೆ ಕೊಪ್ಪರಿಗೆಯಿಂ ಬಹುವಿಧದ ತೈಲಂಗಳ ಮಿಂದೆದ್ದು ಪೇರಂಡೆಗಳಲಿ ಮೊಗದತಿ ಪಂಜು ತಂಡವಮಂ ಪತ್ತಿಸಿದರು (ಲಕ್ಷ್ಮೀಶಾ. ೯-೭-೩೩).

[ಪೇರ್$_1$ (<ಪಿರಿದು$_1$)+ಅಂಡೆ$_2$]

**ಪೇರಂದ** (ನಾ). ಅತಿಶಯವಾದ ಪ್ರದರ್ಶನ : ಆ ವರ್ತಕನು ದೊರೆಯನ್ನು ತನ್ನ ಮನೆಗೆ ಔತಣಕ್ಕೆ ಕರೆದನು ; ತನ್ನ ಭಾಗ್ಯವನ್ನೆಲ್ಲಾ ಪೇರಂದ ಮಾಡಲು ಹೊರಟನು (ಪೀಠಿಕಾ. IV, ೫).

[ಪೇರ್$_1$ (<ಪಿರಿದು$_1$)+ಅಂದ]

**ಪೇರಗಳು** 'ಪೇರಗಟ್' ನೋ.

**ಪೇರಗಟ್**, ಪೇರಗಳಂ (ನಾ). ದೊಡ್ಡದಾದ ಕಂದಕ : ಸೀಪರ್ಣಿಯಾಯ್ತುಬ್ಧಿಯೆನುತ್ತುಮಾರ್ದುಲಿವಪ್ಪೋಲೊಪ್ಪಿರ್ದುದಾ ಪೇರಗಟ್ (ಕುಸುಮಾ. ೨-೭೩). **ಪೇರಗಳು** : ಪೇರಗಳು ವಾರಿನಿಧಿ ಚಕ್ರವಾಳಾದ್ರಿ ವಿಸ್ತಾರತರ ಕೋಟೆ ತತ್ಪುರವೆ ಜಂಬೂದ್ವೀಪ (ಸಕ್ಕೋದಕು. ೨-೯) ; ನೆಗಳಾನೆ ಮೀನ್ಗಳನೊಳಕೊಂಡು ಬಂದು ಪೇರಗಳಾಮುದಬ್ಧಿ ದ್ವಾರಕೆಗೆ (ನೋಹಕ. ೩-೫) ; ಬಂದು ಬಿದ್ದರಮರಾವತಿಯ ಪೇರಗಳನಮರಭಟರು (ಕಂಠೀ. ೨೪-೨೪). [ ಪೇರ್$_1$ (<ಪಿರಿದು$_1$)+ಅಗಟ್$_2$(<ಅಗುಟ್$_2$) ]

**ಪೇರಗುಟಿ** (ನಾ). ದೊಡ್ಡ ಅಗುಳಿ ; ಭಾರಿಯಾದ ಲಾಳವಿಂಡಿಗೆ : ಭರದೊಳ್ಮುರಿದರ್ ಬಿಡುಗಣ್ಣರೂರ ಪೇರಗುಟಿಗಳಂ (ಅಕ್ರೂ. ೩೨-೨).

[ ಪೇರ್$_1$ (<ಪಿರಿದು$_1$)+ಅಗುಟಿ (<ಅಗ್ಗುಟಿ$_1$) ]

**ಪೇರಟೆ** (ನಾ). (ಕರಾ) ವರನ ಮನೆಗೆ ಮದುಮಗಳ ಸಂಗಡ ಹೋಗುವ ಆಕೆಯ ಅಕ್ಕ ಅಥವಾ ತಂಗಿ : ಅಕ್ಕನ ಜೊತೆಗೆ ಪೇರಟೆಯಾಗಿ ಅವಳ ಊರಿಗೆ ಹೋಗಿದ್ದಳು (ರೂಢಿ). [ ? ]

**ಪೇರಟ್ಟಣೆ** 'ಪೇರಟ್ಟಳೆ' ನೋ.

**ಪೇರಟ್ಟಳೆ**, ಪೇರಟ್ಟಣೆ (ನಾ). ದೊಡ್ಡ ಬುರುಜು,—ಕೊತ್ತಳ : ಮಿಳಿರ್ವುತ್ತುಂಗಧ್ವಜು ಮಾರ್ಪೊಳೆವ ಜಲಧರವ್ರಾತಮೆಂಬಂತೆ ಪೇರಟ್ಟಳೆಗಳ್ ತಳ್ತಿತ್ತಲುಂ ಬಿಂಬಿಸೆ (ಧರ್ಮನಾ. ೨-೬೪). **ಪೇರಟ್ಟಣೆ** : ಮಕರಬಿಬ್ಬಿ ಪೇರಟ್ಟಣೆಗಳಮರನಾಯಕರ ಕಾಯ್ಪಿಂ . . . ಮನಕೆ ಮಂಗಳವೆನಿಸುವಮರಾವತಿಯ ಪುರಕ್ಕೈತಂದನೆಮ್ಮ ರುದ್ರಂ (ಪೀಕ್ಷೆ. ೨-೩-೦೪).

[ಪೇರ್$_1$ (<ಪಿರಿದು$_1$) + ಅಟ್ಟಳೆ]

**ಪೇರಟ್ಟೆ** (ನಾ). ದೊಡ್ಡ ಮುಂಡ ; ದಪ್ಪವಾದ ದೇಹ : ನೆಟ್ಟನೆ ನಡೆಯುತ್ತೆ ಪಡಲ್ವಟ್ಟರ ಪೇರಟ್ಟೆಗಳನೆ ಮೆಟ್ಟುಗೆಗೆಯ್ದು (ಶಳವ. ೨-೦೦೪).

[ಪೇರ್$_1$ (<ಪಿರಿದು$_1$) + ಅಟ್ಟೆ$_1$]

**ಪೇರಡಗು** (ನಾ). ಅಧಿಕವಾದ ಮಾಂಸ : ದೆಸೆದೆಸೆಗೆ ನರಶಿರಂ ತಕ್ಕಿಸಿ ಮೆಚಿದುವು ವಾಗಿಲೊಳಟ್ಟೆ ಪೇರಡಗಿನ ಪೆರ್ಚಸನದೆ ಪೊಣಗಣ ಜೀವ ಪ್ರಸರಮುಮಂ ಪಲವು ಮುಖದಿನವಳೋಕಿಪವೋಲ್ (ಯಶೋಧ. ೦-೫೭) ; ತೊಡೆ ಪೇರಡಗಿನ ಕಾಳಜದೆಡೆ ಚರಣಂ ದುರಿತಕಾರಣಾ ಕಾಣೆನಿಪ . . . ಗಣಿಕೆಯರೊಡಲೊಳ್ಪಿರುಡುಂಟೆ (ವೃತ್ತಹ. ೨೮-೭೦).

[ ಪೇರ್$_1$ (<ಪಿರಿದು$_1$)+ಅಡಗು$_3$ ]

**ಪೇರಡಬಳ** (ನಾ). ಹೆಚ್ಚಾದ ಆತಂಕ ; ಅಧಿಕವಾದ ಕಾತರ : ಕಾರುಣ್ಯನಿಧಿಯು ಕಾರುಣ್ಯಮಿಂತಾಯ್ತೆನುತಪಾರಭೀತಿಗ್ರಸ್ತಮನನಾಗಿ ಬಾಯುಳಿದು ಪೇರಡಬಳಂ ಬಲಿದು ಬಸವಳಿವುತಿರ್ಪನ್ನಂ (ಕೊಟ್ಟೂರು. ೦೩-೦೪).

[ ಪೇರ್$_1$ (<ಪಿರಿದು$_1$) + ಅಡಬಳ$_?$ ]

**ಪೇರಡವಿ, ಹೇರಡವಿ** (ನಾ). ದೊಡ್ಡ ಕಾಡು ; ದಟ್ಟವಾದ ಅರಣ್ಯ : ಒರ್ವನೆ ಸಂಧಿಸಿ ಪೋದನಂದು ಪೇರಡವಿಯೊಳಾ ತುರಂಗವದನರ್ಕಳ ಬೆಂಬಟಿಯುಂ ಮಹೀಭುಜಂ (ಕಾದಂಪೂ. ೬೨೦) ; ಭೃತ್ಯರ್ಗೆ ಪೇರಡವಿಯೊಳ್ ಪಣ್ಪಲಂಗಳನಜಿಸಿ ತನ್ನಿಮೆಂದು ಪೇಟ್ವುದುಂ (ಧರ್ಮಾಮೃ. ೨-೦೫೩) ; ಪಾತಕಿಯುಸಟ್ಟುವಂತೆ ಪೇರಡವಿಗಟ್ಟುವೊಡೆ (ಶ್ರೀಣಾಕು. ೫-೨೨). **ಹೇರಡವಿ** : ಆಡಿನ ತಪ್ಪಿಯೊಳಗೊಂದು ಹೇರಡವಿ ಇದ್ದಿತ್ತು ಆ ಹೇರಡವಿಯೊಳಗೆ ಮೇರುವೆ ಇದ್ದಿತ್ತು (ಅದವ. ೪೮-೦೦೭) ; ಕೌರವಪಡೆಯು ಹೇರಡವಿಯನು ಸವಳಲು ಕಡಿತಕಾಅರು ಮುಂದೆ ಹೊಕ್ಕುದು(ಕುಮಾರೀ. ೫-೯);

ಪೇರಡವಿಗಳ ಪೊತ್ತುದಲಿ ವ್ಯವಾಜಾತಿಯದಿಡಿಸಿದರಾ ನಿಶಾಚರನ (ಕೊರವಿ. ೯-೦೦-೦೫). [ಪೇರ್$_1$ (<ಪಿರಿದು$_1$)+ಅಡವಿ]

**ಪೇರಡಿ** (ನಾ). ೧. ದೊಡ್ಡ ಪಾದ: ಪದದಾದಿಯ ಹ್ರಸ್ವಕ್ಕೆ ಬಹುಳತೆಯಿಂ ದೀರ್ಘಮಕ್ಕುಂ . . . ಪೇರಡಿ, ಪೇರೊಡಲ್ (ಶಮದ. ೦೫೦ ವೃಯೋ). ೨. ಶ್ರೇಷ್ಠವಾದ ಪಾದವುಳ್ಳವನು ; ಪೂಜನೀಯ: ತಣ್ಪಿನ್ ತರ್ಪಾ ಪೇರಡಿ ಬಾರಯ್! ನೋವನ್ ನೀಗುವ ಪೇರಡಿ ಬಾರಯ್! (ಅಂತಿಗೂ. ೫೦-೦೦೬೫). ೩. ದಾಪುಗಾಲಂ ಹಾಕಲಂ ಅನುಕೂಲವಾಗುವಂತಹ ಕಾಲುಳ್ಳುದು ; ನಾಯಿ ; "ಪೇರಡಿ, ಸೊಣಗು, ಜಾಯಿಲು—ಈ ೩ ಕುಕ್ಕುರಂ" (ಕಕಣಾ. ೫೦-೦೦೯); ಪೇರಡಿ ತನ್ನನಟ್ಟಿಯಿಂ ನಲಿನಲಿದಾಡೆ ಪೋದ ಮನುಜಂ ಪಡೆಗುಂ ತನಗಿಷ್ಟಸಿದ್ಧಿಯಂ (ಲೋಕೋಪ. ೦೨-೨೩); ಬೇಂಟೆಯ ಪೇರಡಿಗಳಿಂ ಮುಂ ಬಿಟ್ಟು (ಪುರಾಶ. ೧೦-೯೧). [ಪೇರ್$_1$ (<ಪಿರಿದು$_1$)+ಅಡಿ$_1$]

**ಪೇರಡ್ಡ** (ನಾ). (ಅಲಂ) ಮುಖವನ್ನು ತಿರುಗಿಸುವಿಕೆ; ತಿರಸ್ಕಾರ : ಅಂತುದಾಸೀನವಮಾನಸಂ ಮಸಕಮಿಲ್ಲದ ಸಾರ್ವಭೌಮಂ ಪೇರಡ್ಡಮಾಗಿ ಕೆಲದ ಚಕ್ರಾಯುಧನೊಳ್ ತಮ್ಮಂಗಬಾಹ್ಯವಸ್ತುವಂ ಪರಿತಂ ಮಾಡುತ್ತಿರೆ (ಶಾಂತಿಪು. ೦೦-೦೦೬ ವ). [ಪೇರ್$_1$ (<ಪಿರಿದು$_1$) + ಅಡ್ಡ$_1$]

**ಪೇರಣ, ಪೇರಣೆ** (ನಾ). ನೃತ್ಯ ಮುಂತಾದ ಮನರಂಜನೆಯ ಪ್ರದರ್ಶನ : ಭೂವರನ ಮುಂದಾಡುತಿಹ ಪೇರಣ ದಲೆಂಬ ಸಂವರಣೆ ಗುಂಟಾದ ವಾಜಗಳೆಯ್ದೆ ಚಾರಿವರಿದಾಡಿದವು ಶತಕೋಟಿಯು (ಹಕಣ. ೩-೨೦); ರುದ್ರುಕನ್ನೆಯರುಗ್ಗಡದ ಪಾತ್ರ ಸೂಜಾಡಿದು ತಾಳಮೇಳದ ಲಕ್ಷಲಕ್ಷಣವ ತೋಱು[ತ್ತೆ] ಗುಂಡಾಲದೊಲುಂಡಲೆದು ಪೆಕ್ಕಣದ ಪೇರಣದ ಲಾಸ್ಯಗಳ (ಗುಹಕ. ೩-೯೯); ಪೇರಣ ಪೆಕ್ಕಣ ಗುಂಡಲಂಗಳಂ ಬಲ್ಲ ಸಾತ್ತ್ವಿಕ ಆರಭಟೆ ಕೌಶಕಿಯೆಂಬ ಪಾತ್ರುಂಗಳಿಂ (ರಜಾವ. ೨-೦೦ ವ). **ಪೇರಣೆ:** ಹಾಡುತಿಹ ಗುರುನಿರೂಪಿತದ ವಚನಂಗಳಿಂದಾಡುತಿಹ ಪೇರಣೆಯ ವೇಡಾಂಕ ಕೇಳಿಕೆಯ ನೋಡುತಿಹ ಪೃಥ್ವಿಯ ಮಹಾಭಕ್ತಜನದ ಸಮ್ಮರ್ದನವ ಕೆಲವಿಂಗಿಸಿ (ಸಿದ್ಧರಾ.೯-೬೯); ಲಾಲಿಪ ಪೇರಣೆಯೊಳ್ಗಿಗೆ ಮೇಲೆನಿಸುವ ಕುಶಲೆ . . . ಕಾಲೇ ನಾಲಗೆಯೆಂಬಂತೋಲಗದೊಳ್ ಕುಣಿದು ದೇವಿಯುಂ ಮೆಚ್ಚಿಸಿದಳ್ (ಚಾರಪು. ೬-೬೫) ; ನಾಟಕದ ಪಾತ್ರದ ಪೇರಣೆಯ ಜೋಳಿಗಳ ಜೋಕೆಗಳ ಪ್ರಕಟವೆಸೆಯಲು (ಬಸಪು.೯-೬) ; ಬಿತ್ತರದ ನೂಪುರಂಗಳನಿಟ್ಟು ಕಾಲೊಳಗೆಯತ್ಯಧಿಕ ಸಪ್ತತಾಳದ ಪೇರಣೆಯ ನಟಿಸೆ (ಚತುಪು. ೦-೯-೬೬). [< ಪ್ರಾ. ಪೇರಣ./ಸಂ. ಪೇರಣಿ]

**ಪೇರಣಿ$_1$** (ನಾ). ೧. ದೊಡ್ಡ ಪದಾತಿಸೇನೆ; ಭಾರಿ ಸೈನ್ಯ: ಅಂತು ಪೇರಣಿ ಪೊಮಯಮಾಗೆ (ಸಂರಾಮಾ. ೦೩-೫೬ ವ); ಇಸುವ ಧನುರ್ವರಲಂ ಭರದಿನೆಯ್ದುವ ಪೇರಣಿ (ಜಗ. ೦೬-೯೯). ೨. ದೊಡ್ಡ ಸಾಲು, —ಶ್ರೇಣಿ : ಅಣಿಯರಮಿಸೆ ಓವರನ ಕೂರ್ಗಣೆಯೇಱಂ ಪಱಿದು ಬಿರ್ದ ಖಚರರ ತಲೆ ಸಂದಣಿಸೆ ವಿಮಾನಂಗಳ ಪೇರಣಿ ಪೋಲ್ತುದು ತೆಱೆದ ಮೊಗದ ಪೇಳಿಗಳಿರವಂ (ಚಂದ್ರಪ್ರಪು. ೬-೩೯). [ಪೇರ್$_1$ (<ಪಿರಿದು$_1$)+ಅಣಿ$_3$]

**ಪೇರಣಿ$_2$** (ನಾ).=ಪೇರಣ: ಗೀತದ ಮಾತ ಮಾನುಷಮಿದೇಂ ಪಂಚಾಂಗ ಮೊಪ್ಪಿತ್ತೊ ಪೇರಣಿ ಸಂಕ್ರಾಂವನನಲ್ಲದಿಲ್ಲೆನಿಸಿದತ್ತಾ ತಾಂಡವಾಡಂಬರಂ (ಅನಂಪು. ೫-೯೬). [ಸಂ.]

**ಪೇರಣಿಗ** (ನಾ). ನಾಟ್ಯ ಮಾಡುವವನು; ನರ್ತಕ : ಕವಿ ಗಮಕಿಗಳ ನವರಸಂಗಳಂ ಕೇಳುತುಂ ನವಪೇರಣಿಗರ ರಸದಾಟಮಂ ನೋಡುತುಂ (ಸಂಶಿರ. ೯-೦೫೦); ಸುಕವಿಗಳ ಶಾಸ್ತ್ರಾಗಮಿಕ ಭಾವಕ ಕಲಾವಿದ ಪೇರಣಿಗ ವಾದ್ಯಕರ ಶಿಲ್ಪಿಗ . . . ಸುಗಂಧಾಧಿಕರ ಕೇರಿಗಳಿರವ ಚಿತ್ರೈಸೆನುತರಸ ನಡೆದ (ಸಂಕರಾ. ೯-೨೬). [ಪೇರಣ+—ಇಗ]

**ಪೇರಣಿಲ್, ಹೇರಣಿಲ್, ಹೇರಣಿಲೆ** (ನಾ). ೧. ಒಂದು ಬಗೆಯ ಕೋಡಗ (?): "ಪೇರಣಿಲೆನೆ ಸೂಂದಿಗೋಡಗಂ" (ಚತುರ. ೬೬). **ಹೇರಣಿಲ್:** ೨. ದೊಡ್ಡ ಜಾತಿಯ ಅಳಿಲು : ಹೇರಣಿಲ್ ಗಿಡುಗ ಮೊಲಂ . . . ಕೂರಗೆಯೆಂಬಿವನ್ನೆದೆ ಕಾನಿನೊಳ್ಗಡಣದೆ ಪೊತ್ತು ಬೇಡವಡೆ ಬಂದುದು (ಸೂಕ್ತಿಸು. ೩-೦೬೯). **ಹೇರಣಿಲೆ:** ೨. ಹೇರಣಿಲೆಯುವು ಮುಂಗುರಿಗಳಿವು ಗೌಜುಗಳಿವು ಗಜಗಮನೆ ನೋಡು (ಕೊರವಿ. ೩-೦-೩೦). [ಪೇರ್$_1$ (<ಪಿರಿದು$_1$)+ಅಣಿಲ್]

**ಪೇರಣೆ** 'ಪೇರಣ' ನೋ.

**ಪೇರಣೆಮಣಿ** (ನಾ). (?) : ಪತ್ತಿದರುಣೌಘದಿನಾ ವೃಷಶೃಂಗಯುಗ್ಮ ಮೊಂದಣೆಯರವಮಾಯ್ತು ಸಾರವಿಪ ನೆತ್ತರೊಳೊಕ್ಕೆಱೆದರ್ಚಿಸಿರ್ದ ಪೇರಣೆ [ಪಾಠಾಂ. ಣಿ]ಮಣಿಯೆಂಬ ಭೈರವನ ಲಿಂಗದ ಸೀಯದರಂಬೊಲದ್ಭುತಂ (ಅರ್ಜಶೇ. ೯-೦೨೨). [ ? ]

**ಪೇರಬ್ಬಿ** 'ಪೇರಬ್ಬಿ' ನೋ.

**ಪೇರರ್ವಿ, ಪೇರಬ್ಬಿ** (ನಾ). ದೊಡ್ಡ ಜಲಪಾತ : ಪೇರರ್ವಿಗಳ್ಪೆರಸು ಜಾಜಿನ ಪರ್ವತಂಗಳಂತೆ ಕೆಡೆದು (ಶಂಕಥಾ. ೦೦-೯೬ ವ); ಪೇರರ್ವಿಗಳ ನಸದಳಂ ಕಣ್ಗೆ ಚೆಲ್ವಾಗಿ . . . ಚಿತ್ರಕೂಟಂ ಸೊಗಯಿಸೆ (ಶಂರಾಮಾ. ೬-೩೦). **ಪೇರಬ್ಬಿ:** ಪೆರ್ಗಱೆಗಳಿಂ ಪುಂಡ್ರೇಕ್ಷುವಾಟಕ್ಕೆ ಪೊಣ್ಮುವ ಪೇರಬ್ಬಿಗಳೆತ್ತಲುಂ ಸೊಗಯಿಕುಂ (ಸುಕುಮಾಚ. ೯-೯೩). [ಪೇರ್$_1$ (<ಪಿರಿದು$_1$) +ಅರ್ವಿ]

**ಪೇರಲ, ಪೇರಲ್$_2$, ಪೇರಿಲ, ಪೇರಿಲು** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಸೀಬೆ : ಚಂದೂರಿನಲ್ಲಿಯೇ ಅವರ ಪೇರಲ ಬನ ದೊಡ್ಡದು (ಬಿಸಗ. ೯೩) ; ಪೇರಲದ ತೋಟಗಳ ಹಳದಿ ಬಣ್ಣದ ಹಣ್ಣು (ಕಾವಚಿ. ೨೨-೨೫) ; ಹುಬ್ಬಳ್ಳಿಯಿಂದ ಪೇರಲಹಣ್ಣನ ಬುಟ್ಟಿ . . . ಕಳಿಸಿ ಕೊಡುವಳು (ಗಂವಾಯು. ೫೬). **ಪೇರಲ್$_2$:** ಹೊರಗಡೆ ಪೇರಲೆ ಮರದ ಮೇಲೆ ಮಂಗಗಳ ಕುಣಿತ (ಹೂಸಕ್ಷಿ. ೬೬). **ಪೇರಿಲ :** ನೇರಿಲ ಪೇರಿಲ ಬೋರೆಯ ಬೆಳವಲ ಫಲವಿಹುದು (ಕರುಣ್ಯಾ. ೫೯-೦೩). **ಪೇರಿಲು :** ಬೆಲ್ಲವತ್ತಂ ಬೇವು ಬಿಕ್ಕೆ ತಂಡಸಿ ತವಸಿ ನೆಲ್ಲಿ ಪೇರಿಲು ಮಾವು ಬದರಿ (ಸಿದ್ಧರಾ. ೬-೦೬). [?/ಮರಾ. ಪೇರ, ಪೇರು]

**ಪೇರಲೆ$_1$** (ನಾ). ಭಾರಿಯಾದ ಅಲೆ ; ದೊಡ್ಡ ಅಲೆ : ಇದು—ದುಗುಡ ಸಂತಸದ ಪೇರಲೆಗಳೇರಿಳಿತದಿಂದೆ ಮೆರೆದಾಡುತಿಹ ಸಂಸಾರಸಾಗರದೊಳಲೆ ಯುತಿಹ ಜೀವಿಗಳ . . . ನೀರ್ಗುಡಿಸಿ ನಗುನಗುವ ಕಾಲನರಮನೆ ! (ಕಿಶಾ. ೨೯-೦೯). [ಪೇರ್$_1$ (< ಪಿರಿದು$_1$) + ಅಲೆ$_3$]

**ಪೇರಲೆ$_2$** ' ಪೇರಲ ' ನೋ.

**ಪೇರಳ್ಕು** (ನಾ). ಅತಿಯಾದ ಹೆದರಿಕೆ,—ಅಂಜಿಕೆ : ಪೇರಳ್ಕು ಪೇರಬಲ ಕಲ್ಲೋಲದಂತೆಪೋಲ್ ಪುರ್ಚಿಟ್ಟು ಬಡಿಗುಮೇ ಬಡಿಬಡಿಪ ಸುಡಿಗಳ್ (ಬದ್ಧಕ್ರ. ೯೬-೦೦೦೫). [ಪೇರ್$_1$ (< ಪಿರಿದು$_1$) + ಅಳ್ಕು$_2$]

**ಪೇರಳ್ತಿ** (ನಾ). ಹೆಚ್ಚಿನ ಪ್ರೀತಿ ; ಅತ್ಯಾಸಕ್ತಿ : ಬುಧಪಟ್ಟವಪ್ರಜಕೆ ಪೇರಳ್ತಿಯಂ ಜನಿಸುವೀ ಕಾವ್ಯಂ . . . ಫಲವನೀಯದಿರದು (ಲೀಪರಾ. ೦-೦೨). [ಪೇರ್$_1$ (< ಪಿರಿದು$_1$) + ಅಳ್ತಿ (< ಅಟ್ಟಿ)]

**ಪೇರಜಾಕೆ, ಹೇರಜಾಕೆ** (ನಾ). ಅಧಿಕವಾದ ಕೀರ್ತಿ ; ಅತಿಶಯವಾದ ಖ್ಯಾತಿ : ಪೆಬ್ಬೂಲಿಯ ವಿಾಸೆಯೊಳುಯ್ಯಲನಾಡುವೊಂದು ಪೇರಜಾ ಕೆಯ ಬೀರರ್ (ಎಕ. VII, ೨೦. ೯೯-೦೬ ; 1100) ; ಇರ್ಪರಿರ್ವರ್ ನೆಱೆದೊಕ್ಕಲ್ತನದ ಪೆರ್ಮೆಯೊಕ್ಕಲಿಗರ್ ಪೇರಜಾಕೆಯ ಶಶಿ ಸೂರ್ಯರ್ ಖ್ಯಾರ್ (ಚಂದ್ರಪ್ರಪು. ೫-೯೬) ; ತಕ್ಕಿನ ರಕ್ಕಸರನೊಕ್ಕಲಿಕ್ಕಿದ ಪೆಸರ ಪೇರಜಾಕೆ ಯೊಳಿಂತೆಂದಂ (ಕಬ್ಬಿಕಾ. ೨೯೫). **ಹೇರಜಾಕೆ:** ಅದಟರ ರಾಮಂ ಮಱುಗರೆ ನಾಡೊಳಗೇ ಹೇರಜಾಕೆಯ ಕಯ್ದಾಳದಲಿ ಧರ್ಮೋರ್ಣನ್ನತಿಯಂ ಆ ಕಯ್ದಾ ಳದ ವಿಳಾಸಾಬ್ಬದವದೆಂತೆಂದೊಡೆ (ಎಕ. XII, ಕುಪುಕೂ. ೯-೫೬; 1151) ;

ಟುಂದದೆ ಲಕ್ಷ್ಮಿಯಿರ್ಪ್ಪ ಹೇರಜಿಕೆಯಶೇಷಸೌಖ್ಯನಿಳಯಂ (ಎಕ. IV. ಹುಣಸೂ. ೦೩೭–೯೩ ; 1162). [ಪೇರ್$_1$ (< ಪಿರಿದು$_1$) + ಅಜಿಕೆ]

**ಪೇರಟಿ³** (ನಾ). ದೊಡ್ಡ ಬಂಡೆ: ಪೇರಟಿಯ ತೆಱದೆ ಜಲಪುಂಜದಿಂ ಮಿಂಚಿನಿಂ ಸಾರವೊಳಗಿಂದೆ . . . ಮುಂಗಾರ್ ಬಂದುದು (ಭಾವಕಂ. ೬–೨). [ಪೇರ್$_1$ (< ಪಿರಿದು$_1$) + ಅಜಿ$_4$]

**ಪೇರಾಣ್ಕೋವ** (ನಾ). ಒಬ್ಬಾತನ ಹೆಸರು : ಸತ್ಯಾನ್ ಪೇರಾಣ್ಕೋವನ್ (ಮೈ.ಆಂ. ೧೯೧೭, ೦೦–೫ ; 7ನೆಯ ಶತ) ; ಮಂದುವೂರಾ ತೊಱು ಕೊಳ್ವಲ್ಲಿ ವಿಟ್ಟೋರ್ ಪೇರಾಣ್ಕೋವರ್ (ಎಕ. X, ಶ್ರೀನಿವಾ. ೨೦–೬ ; ಸು. 750). [ ? ]

**ಪೇರಾನಂದ, ಹೇರಾನಂದ** (ನಾ). ಅತಿಶಯವಾದ ಸಂತೋಷ,–ಹಿಗ್ಗು ; ಮಹದಾನಂದ : ಹೋ ! ಆನಂದಂ ! ಪೇರಾನಂದಂ ! ನೆಗೆವಾ ಕುಣಿವಾ ಮಿಗುವಾನಂದಂ ! (ಅಶ್ವತ್ಥಾ. ೨೮–೩೮೩). **ಹೇರಾನಂದ :** ಅವನಾಟವನು ಕಣ್ತುಂಬ ನೋಡುತಿಹೆವದುವೆ ಹೇರಾನಂದವಾನಂದ ! (ನಡೆದಾ. I, ೯೫೨). [ಪೇರ್$_1$ (< ಪಿರಿದು$_1$) + ಆನಂದ]

**ಪೇರಾನೆ, ಹೇರಾನೆ** (ನಾ). ದೊಡ್ಡ ಆನೆ : ಪಾಜಿ ತಾಱಿದ ಪೇರಾನೆಯೊಡಲ್ಗಳಭ್ರುತಳದೊಳ್ ಸಿಲ್ಕಿರ್ದುವು (ಶಂಪಭಾ. ೦೦–೬೭); ಭೂತಗಣಂ ಪೇರಾನೆಯ ನೆಣನಂ ತಿಂದೆದ್ದಾನಂದದೆ ಕೂಡೆ ನಲಿದು ನರ್ತ್ತಿಸುತಿರ್ಕ್ಕುಂ (ಎಕ. VIII, ಸಾಗರ. ೧೦೯–೩೯ ; 1042) ; ಪೇ[ಪಾಠಾಂ. ಹೇ]ರಾನೆವೆಟ್ಟುಗಳ ನೆತ್ತಿಯ ಮುತ್ತುಗಣಿಯನಗುಜ್ಜಿ ವಜ್ರದ ಗುದ್ದಲಿಗಳೆನಿಸಿ . . . ಅಳುಂಬವಾದ ದಂಷ್ಟ್ರಾಂಕುರಂಗಳೊಳಂ . . . ಭಯಂಕರವಾದುದು (ವರ್ಧಪು. ೦೦–೫೭). **ಹೇರಾನೆ :** ಕಡಿದು ಬಿಸುಟನು ತುರಗದಳವನು ಕೆಡಹಿದನು ಹೇರಾನೆಗಳ (ಕುಮಾ.ಭಿ. ೯–೦೮); ಹೇರಾನೆಯ ತಲೆಯಡಗ ಭಕ್ಷಿಸುವ ಕಂಠೀರವನೊಡಲ ನೆಗ್ಗೊತ್ತಿ . . . ಶರಭ ಹೂಂಕಾರದಿಂದಿದಿರ್ವಂದುದಾಗ (ಮೋಹತ. ೦೯–೩೯). [ ಪೇರ್$_1$ ( < ಪಿರಿದು$_1$ ) + ಆನೆ$_1$]

**ಪೇರಾಮೆ, ಪೇರಾವೆ** (ನಾ). ೧. ದೊಡ್ಡ ಆಮೆ. ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಎರಡನೆಯದು ; ಆದಿಕೂರ್ಮ : ಶ್ರೀಯುಂ ಶೈಲಮಂ ಪೊತ್ತಾಯಸಮಂ ಮಜಿದು ನೀಡಿ ಕೊರಲಂ ಮಲೆತೊಂದೋಯುರದಿಂದಂ ನಿಟ್ಟಿಪ ಮಾಯೆಯ ಪೇರಾಮೆ ಕುಡುಗೆ ನರಪತಿಗೊಳ್ಪಂ (ಚಕಂ. ೩–೧). **ಪೇರಾವೆ :** ೧. ಪಾವಸೆಗೊಂಡ ಪೇರಾವೆಯಂ ತಾವರೆಯ ಕೊಡೆಯೆಲೆಗೆತ್ತಱಿಯದೆಱಿಗಿ (ಚಂದ್ರಪು. ೫–೯೦ ವ); ಏಡಿಯಿಂ ಮೊಸಳೆಯಿಂ ಪೇರಾವೆಯಿಂದಾನೆಯಿಂ ... ಒಪ್ಪಿದುದಿಳಾಶ್ರೀಗಾಗರಂ ಸಾಗರಂ (ಕಾಲಾಸ್ತ. ೦–೦–೦೮). [ ಪೇರ್$_1$ ( < ಪಿರಿದು$_1$ ) + ಆಮೆ$_1$]

**ಪೇರಾಲ್** ‘ ಪೇರಾಲ ’ ನೋ.

**ಪೇರಾಲ, ಪೇರಾಲ್, ಹೇರಾಲ** (ನಾ). ದೊಡ್ಡ ಆಲದ ಮರ : ಚಳಿಗಾಱಿದೆ ಪೇರಾಲದ ಕೆಳಗಿರ್ಪನಿತಱಿಕೊಳೆ . . . ಸೂಸುವೆಲೆವನಿಗಳಿನೊರ್ವಂ ನೆನೆದು ನಡುಗಿ ಸಿಡಿಮಿಡಿಗೊಂಡಂ (ರಾಜಶೇ. ೯–೨೪); ಬಳಿಯ ಪೇರಾಲವು ಬೇರ್ವೆರಸುರುಳಿರುವೆಡೆಗೆಣೆಯೂರೆನಿಸುವುದು (ಗಾಥಾಸ. ೨೪–೯೪). **ಪೇರಾಲ್ :** ಮೊಱಿಡಿಯ ಮೇಗಿಟ್ಟ ಪೇರಾಲೆ ಈಶಾನಂಗೆ ಸೀಮೆ ನೆಡು ಮೊಱಿಡಿಯಾ . . . ಪಳ್ಳಮೆ (ಎಕ. IX (S), ಬೆಂಗಳೂ. ೦೩೦–೪೮ ; 828). **ಹೇರಾಲ :** ಅದೊಂದು ವಟಭೂಜಾತವೊಪ್ಪಿತು ಪಿರಿದಾಗಿ ಕಾಲೆತ್ತಿ ನೆಱಿದ ಹಲ ಹೆಣನೆಳ್ವಲುವಾಲೆಗಟ್ಟದ ಬಳ್ಳಿಗರುಳು ಸಾಲೇಱಿದ ಪಂದಲೆಯಿಂದ ಹೇ[ಪಾಠಾಂ. ಪೇ]ರಾಲಯ[ವು] ಭಯಂಕರವಾಯ್ತು (ಶ್ರೀಪಾಂ. ೬–೩೩). [ಪೇರ್$_1$ ( < ಪಿರಿದು$_1$ ) + ಆಲ$_1$]

**ಪೇರಾವೆ** ‘ ಪೇರಾಮೆ ’ ನೋ.

**ಪೇರಾಸೆ, ಹೇರಾಸೆ** (ನಾ). ಹಿರಿಯಾಸೆ ; ಹೆಬ್ಬಯಕೆ ; ಮಹತ್ವಾಕಾಂಕ್ಷೆ : ನಾಡಿನಲ್ಲಿ ಹಿಂದಣ ಅದೇ ದಿನಗಳು ಮರುಕಳಿಸಬೇಕು ಎಂಬ ಪೇರಾಸೆಯಿಂದ ಅಂತಹ ಕಜ್ಜದಲ್ಲಿ ಮನವಾಡಿದೆನಹುದು (ಸವತಿ. ೦೬೦) ; ತನ್ನ ಕುವರಂ ತನಗೆ ಸರಿಯೆನ್ನಲೆಳಸಿದೊಂದುನ್ನತಿಯ ಪೇರಾಸೆ ಬಯಲಾದುದೇ (ಅರುಣ. ೨೦–೦೪). **ಹೇರಾಸೆ :** ಈ ಪಾಳೆಯಗಾರಿಕೆಗಳ ಹೇರಾಸೆಯ ದೊರೆಗಳು ಒಬ್ಬರೊಬ್ಬರ ಮೇಲೆ ಮತ್ತೆ ಮತ್ತೆ ಯುದ್ಧ ಮಾಡಿದುದು ಕಂಡುಬರುತ್ತದೆ (ತತ್ವಶ್ವಾ. ೩೨೯) ; ಹೇರಾಸೆಗಳನಟ್ಟಿ ಮಿತಿಯೊಳಗಿದ್ದರೆ ನೆಮ್ಮದಿಯಿರುವುದು ಮನಕೆ (ಇಂತಿಸತಿ. ೨೨೬–೦೭). [ಪೇರ್$_1$ ( < ಪಿರಿದು$_1$ ) + ಆಸೆ$_1$]

**ಪೇರಾಳ್ ಹೇರಾಳು** (ನಾ). ಕಟ್ಟಾಳು ; ಮಹಾಶೂರ : ಈರಯ್ದುಸ್ತ್ರದಿಂದೆಚ್ಚು ಖಂಡಿಸಿ ಪೇರಾಳ್ ತಿಱಿದಿಕ್ಕಿದಂತೆ ತಲೆಯಂ ಪೋಗೆಚ್ಚನಾ ಶ್ವೇತನಾ (ಪಂಪಭಾ. ೦೦–೦೨೩); ದ್ವಿಷತ್ಸೇನೆಯೊಳ್ ಪೇರಾಳುಂ ತುರಗಂಗಳುಂ ರಥಮುಮುನ್ಮತ್ತೇಭಮುಂ ಬಿಟ್ಟುವು (ಪಂಪಾವಾ. ೧೩–೧೨೦). **ಹೇರಾಳು :** ಬಂದ ಬಲ ಹೇರಾಳ ತೆಗತೆಗೆ (ಕುಮಾ.ಆ. ೦೮–೩೩). [ಪೇರ್$_1$ (< ಪಿರಿದು$_1$) + ಆಳ್$_3$]

Δ **ಪೇರಾಳ$_1$** ‘ಹೇರಾಳ$_1$’ ನೋ.

**ಪೇರಾಳ$_2$** (ನಾ). ಅತಿಯಾದ ಆಳ,–ಗಭೀರತೆ : ಇಹರು ಹೆಗ್ಗಡಲ ತಳಕೂ ಮುಳುಗಿ ಬಂದವರು . . . ಈ ಬರಿಹೆಣ್ಣ ಎದೆಗಡಲ ಪೇರಾಳ ಕಂಡ ಕಲಿಗಳು ಮಾತ್ರ ಕಂಡರಿಲ್ಲ (ವಿಡಿಬಂ. ೩೯–೩). [ಪೇರ್$_1$ (< ಪಿರಿದು$_1$) + ಆಳ$_1$ (< ಆಱಿ)]

**ಪೇರಾಟ್ಟಿಪಳ್ಳ** (ನಾ). ಒಂದು ಹಳ್ಳದ ಹೆಸರು : ಬಡಗ ಪೋಗಿ ಬೆಳ್ಳೊಲೆಯ ಬಟ್ಟೆಯ ಪೇರಾಟ್ಟಿಪಳ್ಳಂಬಿಡಿದು ಪೋಗಿ ಪಿರಿಯ ಪಳ್ಳದಳ್ಕೂಡಿ (ಸೌಇಇ. IX–I, ೩೮–೨ : ?). [ಪೇರಾಟ್ಟಿ$_0$ + ಪಳ್ಳ]

**ಪೇರಿ$_1$** ‘ಫೇರಿ’ ನೋ.

**ಪೇರಿ$_2$** (ನಾ). (?) : ಪೇರಿಯಾ ಒಸಗೆಯಂ ಅಲವಣವುಂ ಅಪುತ್ರಿಕ ಪೊರಳುಮಾನ್ ವಿಟ್ಟಾರ್ (ಇಇ. XIX, ೦೯೯–೫ ; 680); ತಪ್ಪದೆ ನಡಸುವುದಕ್ಕೆ ಕೊಟ್ಟು ಕೇಳ್ವಿಯ × ಪೇರಿಯ × × × ಉಭಯಂವೆರಸಿಯಾ ಗ್ರಾಮಕೆ ಆಱಿಮಾನ್ಯವು ಮಠಕ್ಕೆ ಆಱಿಮಾನ್ಯವಾ[ಗಿ] ಕೊಟದು (ಸೌಇಇ. IX—II, ೯೬೬–೮ ; ಸು. 1472). [?]

**ಪೇರಿಕೆ** (ನಾ). ಓರಣವಾಗಿ ಒಂದರ ಮೇಲೊಂದರಂತೆ ವಸ್ತುಗಳನ್ನು ಇಟ್ಟುದು : ಪಟ್ಟಿಗಳನ್ನು ಸೇರಿಸಿ ಪರಮಾಣು ಪೇರಿಕೆಗಳನ್ನು (Atomic piles) ಮಾಡುತ್ತಾರೆ (ಶಿಂಪಾ. ೨೬೨) ; ಹೀಗೆ ಮಾದರಿಗಳನ್ನು ಒಳಗೊಂಡ ಹೇರುದಾಳೆಗಳ ಪೇರಿಕೆ ಒಂದು ಒಂದೂವರೆ ಅಡಿ ಎತ್ತರವಾದರೂ ಚಿಂತೆಯಿಲ್ಲ (ಹಸುಹೂ. ೦೨೬). [ ಪೇರು$_1$ (< ಪೇಱು$_1$) + –ಇಕೆ./ತುಳು. ಪೆರಿಕೆ ]

**ಪೇರಿಟ್ಟಿ, ಹೇರಿಟ್ಟಿ, ಹೇರೀಟಿ** (ನಾ). ನೀಳವಾದ ಶಲ್ಯ ; ದೊಡ್ಡ ಈಟಿ : “ಪೇರಿಟ್ಟಿಯೆ ಬಿಟ್ಟೇಱು” (ಹಕುಪ. ೨೦೩) ; ಮುಸಲ ಪೇರಿಟ್ಟಿ ··· ಶಕ್ತಿಯಾದಿಯನು ವಿಭುಗಳು ಧರಿಸಿ ಯುದ್ಧಕೆ ಸೇರಿದರಾಗ ಸುಭಟರಂದಾಳು ಪೇರಿಯನು (ಅನಂತ. ೦೮–೯೩). **ಹೇರಿಟ್ಟಿ :** ಸುಲಿ ತೊಗಲ ಹಿಡಿದು ಹೇರಿಟ್ಟಿಯಿಂದಿಱಿ ಕರುಳ (ಹರಿಕಾ. ೬–೩೪) ; ಹೇರಿಟ್ಟಿ ಪೊಱಿಯ ಪೆರ್ಬಲೆ . . . ಕವಲಂಬುಸಹಿತಂ ಘೋರನೆ ನೆಱಿದತ್ತು ಬೇಂಟೆಕಾಱರ ತಂಡಂ (ವಿಕಕಂ. ೬೯) ; ಸಾಲವನು...ಹಿಂದೆ ಕೊಡುವಾಗ ಹೇರಿಟ್ಟಿ[ಪಾಠಾಂ. ಟ್ಟೆ] ಬಂದು ಬಡಿದಂತೆ (ಸರ್ವಜ್ಞ. ೦೩೯೨). **ಹೇರೀಟಿ :** ಹೇರೀಟಿಯಿಂದಿಱುಬುವ . . . ಕರಗಸದಿ ಕೊಱಿವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೬–೨೮). [ ಪೇರ್$_1$ (< ಪಿರಿದು$_1$) + ಇಟ್ಟಿ$_2$ ]

**ಪೇರಿರ್ಪೆ** (ನಾ). ದೊಡ್ಡ ಹಿಪ್ಪೆಮರ : ತಸ್ಯ ಸೀಮಾಸ್ತ್ಯರಂ ಕೊಳ್ಳಿನಿ ತೊಱಿವ ಪೇರಿರ್ಪ್ಪೆವ (ಎಕ. XVI, ಗುಬ್ಬಿ. ೬೫–೫೦ ; 733). [ಪೇರ್$_1$ (< ಪಿರಿದು$_1$) + ಇರ್ಪೆ]

**ಪೇರಿಲ** 'ಪೇರಲ' ನೋ.

**ಪೇರಿಲು** 'ಪೇರಲ' ನೋ.

**ಪೇರಿಸು₁** 'ಪೇಱಿಸು₁' ನೋ.

**ಪೇರಿಸು₂, ಪೇರ್ಮೆಸು** (ಕ್ರಿ). ೧. ದೊಡ್ಡದಾಗು ; ಅಗಲವಾಗು : ಕೂಡಿದುವಪ್ಪ ಕಣ್ಮಲರ್ಗಳ್ಕೆರ್ದೆಯೊಳ್ ತಡವಾಡೆ ತಾಮೆ ಕಣ್ ಪೇರಿಸೆ ಪುರ್ವು ನಾಲಗೆವೊಲಾಗೆ ಮನಂಬುಗಿಸಲ್ಕೆ ಬಲ್ಲೊಡಾ ಜಾರೆಯೆ ಜಾರೆ (ಜಂಶಾ. ೯-೮೩). **ಪೇರ್ಮೆಸು :** ೨. ಅಧಿಕವಾಗು ; ಅತಿಶಯಿಸು(?) : ಅದಱ ಕರ್ಣಚಮರದ ರ್ಘುಲ್ಲಿಯಂತೆ ಜಲ್ಲೆನೊಟ್ಟು ಧಾರೆಗೆದಱ ಪೇರ್ಮೆಸಿ ಸೂಸುವುಭಯಕಟದ ಸೊರ್ಕುಕದಡಿನ ತೆರ್ಕೆಗಡಲ್ಗಳೊಕ್ಕೈಸಿ (ಅನಂಪು. ೧೩-೨೦ ವ). [ಪೇರ್₁ (< ಪಿರಿದು₁) + — ಇಸು₃]

**ಪೇರೀಳೆ, ಪಿರಳೆ, ಹೆರಳೆ, ಹೇರಳೆ, ಹೇರಿಳೆ, ಹೇರೀಳೆ** (ನಾ). ಈಳೆಯ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಕಂಚೀಕಾಯಿ : ಪೇರೀಳೆಯು ನಾರಂಗವ ಕಂಚೀಳೆಯು ತನಿವಣ್ಣನಿಕ್ಕಿ ಮೆಲ್ದು (ರವರಾಶ್ಯ. ೦-೧೫೦) ; ಬಾಳೆ ಪೇರೀಳೆ ತಾಳೀತರು ತೆಂಗುಂ . . . ಸಾಲ್ಗೊಂಡು ಕಣ್ಗೊಪ್ಪುತಿರ್ಕುಂ (ರಾಜಶೇ. ३-೩೭); ಕಿತ್ತಿಳೆ ಪೇರೀಳೆ ದಾಳಿಂಬಂ . . ಮನೋಹರಮಾಗಿರ್ಕುಂ (ರಾಜಶೇ. ೬-೨೫). **ಪಿರಳೆ :** "ಪಿರಿಳೆ, ಪಿರುಳೆ, ಪಿರಳೆ = ಕಂಚೀಕಾಯಿ" (ಗಂಗಾಪು. ೩೪೯) ; ಪಿರಳೆ ಕಾಯಿ ಗೊಜ್ಜು, ಉಪ್ಪಿನಕಾಯಿ ತಿನ್ನಲು ರುಚಿಯಾಗಿರುತ್ತವೆ (ರೂಢಿ). **ಹೆರಳೆ :** "ಐರಾವತಃ, ನಾಗರಂಗಃ—೨ ಹೆರಳೇಗಿಡ" (ಸಿದ್ಧಾಂತಿ. ೦೨೦) ; ನಾರಾಯಣನಿಗೆ ಕಣ್ಣು ಹೆರಳೆಕಾಯಿ ಗಾತ್ರವಾಯಿತು (ಗರುಡಾ. ೬೭). **ಹೇರಳೆ :** "ಕಾಗಿನೇರಳೇಗಿಡ . . . ನೆಲನೇರಳೇಗಿಡ—ಈ ೪ ಹೇರಳೇ ಗಿಡವೆಂದು ಕೆಲವರನ್ನುವರು" (ಸಿದ್ಧಾಂತಿ. ೦೨೦) ; ಹೇರಳೆ : ಈ ಚಿಕ್ಕೆಯನ್ನು ಎಮ್ಮೆಕಟ್ಟುಮೊಸರಿನಲ್ಲಿ ಅರೆದು ಕಟ್ಟುಮೊಸರಲ್ಲಿ ತೆಗೆದು ಕೊಳ್ಳೆ ಅತಿಸಾರ ಪರಿಹಾರಂ (ಪಿಶ್ವವಿ. ೮) ; ಕಿತ್ತಲೆ, ಹೇರಳೆ . . . ಅಂಜೂರ ಇವೇ ಮುಂತಾದ ಹಲವು ಹಣ್ಣಿನ ಗಿಡಗಳನ್ನು ತೋಟಗಳಲ್ಲಿ ಬೆಳೆಯಬಹುದು (ವೃಪವು. ೫೮). **ಹೇರಿಳೆ :** "ಜಂಬೀರಃ—ನಿಂಬೆ, ಹೇರಿಳೆ, ಮರುಗ, ಕಕ್ಕೊರಲೆ" (೬ಷರ. ೬೦) ; ಹೇರಿಳೆ ಪರಿಮಳಸಾರವಂ ನಿನ್ನಲ್ಲಿ ಮಾರಾರಿಗೀಯೆಸುತ್ತಂ ಹೂಗೊಳುತ್ತಲ್ಲಿ (ಭೃಕ್ಕ್ರ. ೯-೦೮) ; ಪೂರ್ಮೆಸಿದ ಫಲ ಸಹ ಹೇರಿಳೆಯು ಮರವಾರಾವುದೊಳೊಪ್ಪಿದುವು (ಕಂವಶಿ. ೫-೬೨) ; ಹೇರಿಳೆ ಹಾಗಲಗಳಲ್ಲಿ, ಒಬ್ಬೊಬ್ಬರಿಗೆ ಒಂದೊಂದು ಇಷ್ಟವಾಗಿರುತ್ತದೆ (ಜೀವಸಾ. ೩೪). **ಹೇರೀಳೆ :** "ಹೇರೀಳೆಯೆನೆ ಕಂಚಿ" (ಮಂಗರಾ. ೩೪-೦೦) ; ಮಂಜುಳಫಲೋ ಚ್ಚಂಡಮಾದ ಕಿತ್ತಿಳೆಯಿಂ ಕೆಂಜಿಗುರಲರ್ಪಣ್ಗಳಮರ್ದ ಹೇರೀಳೆಯಿಂ . . . ವಿಮಲವಲ್ಲರಿಗಳಿಂ ಪೊಂಗಿ ಪೊಪುಟಿಯೋಗಿ (ಉದ್ಭಟ. ೩-೯೦) ; ಮಧುರರಸದ್ರುಮದ ಕಿತ್ತಿಳೆ ಕಂಪಿತ ಫಲಭರದ ಹೇರೀಳೆ (ಕೊರರಾ. ೫-೪-೮). [ಪೇರ್₁ (< ಪಿರಿದು₁) + ಈಳೆ]

**ಪೇರು₁** 'ಪೇಱು₁' ನೋ.

**ಪೇರು₂** 'ಪೇಱು₂' ನೋ.

**ಪೇರು₃** 'ಪೆಸರ್' ನೋ.

**ಪೇರುಕಟ್ಟು** (ಕ್ರಿ). ತಕ್ಕಡಿಯ ಪರಡೆಗಳ ಸಮತೋಲನವು ವ್ಯತ್ಯಾಸ ಗೊಂಡಾಗ ಭಾರವನ್ನು ಹೆಚ್ಚು ಕಡಮೆ ಮಾಡಿ ಸಮಗೊಳಿಸು : ಪದಾರ್ಥವನ್ನು ತೂಕ ಮಾಡುವುದಕ್ಕೆ ಮುಂಚೆ ಪೇರುಕಟ್ಟಿ ತೋರಿಸು (ರೂಢಿ). [ಪೇರು₂ (< ಪೇಱು₂) + ಕಟ್ಟು₁]

**ಪೇರುಡು, ಹೇರುಡು** (ನಾ). ದೊಡ್ಡ ಉಡು : ಪುಲ್ಗಾನೊಳಾ ಪೋಪ ಪೇರುಡುವಂ ಸೋವು (ಸುಕುಸು. ೩-೦೦೫) ; ಪೇರುಡುವಿಳಿದು ಬಂದುಂಡು ರಸವನು ಪೋಗುತದೆ (ಸಾಳ್ವಭಾ. ೦೭-೭೭). **ಹೇರುಡು :** ಭಲ್ಲಾತಕತರು ಮೂಲಂ ಸಲ್ಲಲಿತ ಗುಡಸಿಚಿ ಭದ್ರಮುಸ್ತೆಯಿಮಂ ತಾಂ ನಿಲ್ಲದೆ ನೀರಿಂ ಕುಡಿಯಲ್ ನಿಲ್ಲದು ಹೇರುಡುಗಳಗಿದು ತುಡುಕಿದ ಗರಳಂ (ಖಖಪ. ೦೩-೬೯). [ಪೇರ್₁ (< ಪಿರಿದು₁) + ಉಡು₂]

**ಪೇರುರ, ಹೇರುರ** (ನಾ). ೧. ವಿಸ್ತಾರವಾದ ಎದೆ ; ಹರವಾದ ವಕ್ಷಸ್ಥಳ : ಸಕಳಕಳಾಧಾರನ ಪೇರುರದೊಳ್ಮಣಿಹಾರಂ ಥಳಥಳಿಸಿ ಪೊಳೆವುತ್ತಿರ್ದತ್ತಾಗಳ್ (ಕಾದಂಪೂ. ೩೦) ; ಶ್ರೀರಮಣಿಗೆ ನೆಲೆ ತನ್ನಯ ಪೇರುರಮಂ ಮಾಟಿಪ್ಪೆನೆಂಬ ಬಗೆ ಮಿಗೆ (ಗದಾಯು. ೬-೦) ; ಖಳನ ಪೇರುರದಲ್ಲಿ ತಾಗ ಲೆಚ್ಚನು ಕಡೆಯೆನುತ (ಜೋಹತ. ೩೪-೨೦). ೨. (ಸ್ತ್ರೀಯ) ಉನ್ನತವಾದ ಎದೆ ; ಪುಷ್ಟವಾದ ಸ್ತನ : ಜಾರ ಗೋಪಾಂಗನೆಯು ಪೇರುರದ ಸೋಂಕು ಚಿಂತಾರತ್ನವೆನೆ ತ್ರಿದಿವದೂರ ಸಂಪತ್ಕಲಾ (ಭಾವಚಿಂ. ೫-೪). **ಹೇರುರ :** ೧. ಕಲಿಪಾರ್ಥನು . . . ಕೌರವನ ಹೇರುರದಲಂಬನು ಹೂಳಿದನು (ಕುವ್ಯಾಭೀ. ೬-೦೦೮) ; ಹೀನಹೃದಯನ ಹೇರುರವನೆಚ್ಚೊಡನೆ ಕಡೆಕಡೆಯೆನುತ ನಡೆತಂದ (ತೊರರಾ. ೪-೪-೨೮). ೨. ಮದನಾರಿಯರ್ಧದ ನಾರಿ ಹರಿ ತಾ ಹೇರುರದ ಹೆಂಗುಸುಱಿ ಬೊಮ್ಮನು ಮಂಗಳ ಮೊಱೆಗೇಡಿ (ಕುವ್ಯಾಆ. ೦೩-೩೭). [ಪೇರ್₁ (< ಪಿರಿದು₁) + ಉರ₂]

**ಪೇರುರಿ, ಹೆಬ್ಬುರಿ** (ನಾ). ದೊಡ್ಡ ಉರಿ ; ದಳ್ಳುರಿ : "ದಳ್ಳುರಿಯು ಪೇರುರಿಯು ಘನಜ್ವಲಿತದೊಳು ಸೊಗಯಿಪ್ಪುದು" (ಶಬ್ದಮಂ. ೦೨) ; ಪೇರುರಿಯಾರತಿಯನೋರಂತೆ ಪಿಡಿದು ಬೆಳಗೆಯುಂ (ವೃಷಪು. ೯-೨೦ ವ). **ಹೆಬ್ಬುರಿ :** ಎಬ್ಬಿಸುತೆ ಹೆಬ್ಬುರಿಯು ಕಾರ್ಬೊಗೆಯ ಕಣಗಳಂ (ಶರಕು. ೨೯-೩೩). [ಪೇರ್₁ (< ಪಿರಿದು₁) + ಉರಿ₁]

**ಪೇರುಸಿರು, ಪೇರುಸುರು** (ನಾ). ನಿಡಿದಾದ ಉಸಿರು ; ನಿಟ್ಟುಸಿರು : ಕೊಡೆವಿಡಿದು ಪಡೆಯುಸದರಡಿಯ ಮರಿಯನ್ನಿಟ್ಟು ನಿಡುತರದ ಪೇರುಸಿರ ಗಾಳಿಯಿಂ ತಣ್ಣಿಸುತೊಡನಂದು ಮರುಗುತಿರಲು (ಪಂಕಾರಾ. ೩-೬-೦೨). **ಪೇರುಸುರು :** ತಲ್ಲಣಿಸಿ ಹೋಗುತೆ ಬರುತ್ತಿದೆ ಡಿಳ್ಳವಾಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರುಗಳು ತೊಡಕೆ (ಬಸವು. ೫೪-೪೦). [ಪೇರ್₁ (< ಪಿರಿದು₁) + ಉಸಿರು₂ (< ಉಸಿರ್₂)]

**ಪೇರುಸುರು** 'ಪೇರುಸಿರು' ನೋ.

**ಪೇರೂರ್, ಹೇರೂರ್** (ನಾ). ೧. ದೊಡ್ಡ ಊರು, ಗ್ರಾಮ : ನೂರಾರು ಪೇರೂರ್ಗಳಂ ದಾಂಟಿ (ಶೀಪರಾ. ೬-೫೦). ೨. ಒಂದು ಊರಿನ ಹೆಸರು : ಕೋರಿಕುನ್ದವಿಷಯೇ ವೆನ್ನೆಲ್ಕರನಿಗ್ರಾಮಃ ಪೇರೂರೇವಾನಿ ಅಡಿಗಳ್ (ಎಕ. X, ಮಾಲೂರು. ೭೨-೨೪; 425 ? ಕೃಶ); ನೈರಿತಿಯೊಳೆ ಅವದಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೭ ೬; 962). **ಹೇರೂರ್ :** ೨. ಹೇರೂರ . . . ಶ್ರೀಪಾದಪದ್ಮಾರಾಧಕ ರಾಚಯ್ಯ (ಎಕ. VII, ಹನ್ನಗಿ. ೩೨-೨೩೩; ಸು. 1050 ?); ಮುನ್ನ ತನ್ನರ್ತಿಗೆ ಹೇರೂರ ಹೆಣ್ಣಂ ಗಂಡುರೂಪಂ ಮಾಡಿದೋಪಾದಿಯಿಂದೆನ್ನಂ ಹೆಣ್ಣಂ ಮಾಡದೆಂತು ಪೋದಪಂ (ಬಸರ. ೦೨-೦೨೫). [ಪೇರ್₁ (< ಪಿರಿದು₁) + ಊರ್]

**ಪೇರೆದೆ** (ನಾ). = ಪೇರುರ ೧ : ಉನ್ನತನ ಭುಜಯುಗಲ ಪೇರೆದೆ ಹೊನ್ನ ಸಲಿನಡು ಬಾಳೆದೊಡೆ ಮೆಱೆದನ್ನರಂ ಸೋಲಿಸುವ ಜವ್ವನ ವಾಂತನಾ ಕುವರ (ಸಾಳ್ವಭಾ. ೪-೬). [ಪೇರ್₁ (< ಪಿರಿದು₁) + ಎದೆ (< ಎರ್ದೆ)]

**ಪೇರೆಲು** (ನಾ). ದೊಡ್ಡ ಎಲುಬು; ನಿಟ್ಟೆಲುವು : ರಕ್ತದೊಳ್ ನನೆದು ಪೇರೆಲುಗಳುಮನೊದೆದು ಕೈದುಗಳ ಸೋಂಕಿಂ ಗಾಯವಡೆದು (ಜಿಬಪು. ೯೪-೯೪). [ಪೇರ್₁ (< ಪಿರಿದು₁) + ಎಲು₁ (< ಎಲ್ವು)]

**ಪೇರೆಲೆ** (ನಾ). ಅಗಲವಾದ ಎಲೆ : ಬಲದ ಕೈಯಲಿ ಮಾಂಸವಿಹ ಪೇರೆಲೆಯ ಜೊನ್ನೆಯನಾ ಶಿವೈಕ್ಯಂ ಪಿಡಿದು ನಡೆತಂದು (ಬಸವು. ೦೮-೩೦). [ಪೇರ್₁ (< ಪಿರಿದು₁) + ಎಲೆ₁]

**ಪೇರೆಳ್ತು** (ನಾ). ಭಾರಿಯಾದ ಎತ್ತು : ಭಾಳಮಧ್ಯಸ್ಥಳಬದ್ಧಸ್ವರ್ಣಪಟ್ಟಾಂಕನದಿನೆಸೆವ ಪೇರೆಳ್ತುಗಳ್ಪೆರ್ಮೆಯಿಂದಂ . . . ಪರಿಯೆ (ಶೃಕಂ. ೩೮-೬೯). [ಪೇರ್$_1$ (< ಪಿರಿದು$_1$) + ಎಳ್ತು (< ಎಟ್ತು$_1$)]

**ಪೇರೇರ** (ನಾ). ಒಬ್ಬಾತನ ಹೆಸರು : ಇಳವ್ಪುಟುವಸ್ಯ ಪುತ್ರೇಣ ಪೇರೇರನ್ನಾಮಲಿಖಿತಮ್ ಪಟ್ಟಿಕಾ (ಮ್ಯಾಆ. ೧೯೩೬, ೦-೩೯; ಸು. 567). [?]

**ಪೇರೈಸಿರಿ** (ನಾ). ಹಿರಿದಾದ ಸಂಪತ್ತು,—ಐಶ್ವರ್ಯ : ಈ ರೇಖೆಯೆ ಧನರೇಖೆಯಿದಾರಯ್ಯಿಂ ನುಡಿಗುವಿವನ ಪೇರೈಸಿರಿಯಂ (ವಸ್ತ್ವಂ. ೫-೩೫). [ಪೇರ್$_1$ (< ಪಿರಿದು$_1$) + ಐಸಿರಿ]

**ಪೇರೈಸು** 'ಪೇರಿಸ್ಸು' ನೋ.

**ಪೇರೊಕ್ಕಲ್**, ಪೇರೊಕ್ಕಲು (ನಾ). ದೊಡ್ಡ ಮನೆತನ,–ಕುಟುಂಬ : ದೀರ್ಘಕ್ಕೆ–ಪಿರಿದು + ಆನೆ=ಪೇರಾನೆ; ಪೇರಡವಿ, ಪೇರೊಕ್ಕಲ್, ಪೇರಡಿ, ಪೇರೊಡಲ್ (ಶಮದ. ೧೮೦ ಪ್ರಯೋ). **ಪೇರೊಕ್ಕಲು** : ಎಲ್ಲರೂ ನನ್ನಕ್ಕ ತಂಗಿಯರು . . . ಆ ಕಡೆಗೆ, ಈ ಕಡೆಗೆ ತೂಗುವರು ತೊನೆಯುವರು . . . ಪೇರೊಕ್ಕಲಾಗಿ ಪಾಡುವರು (ಹೊಂಗಳು. ೦೮-೯); ಪೇರೊಕ್ಕಲು ! ಈ ಮಕ್ಕಳು ಬಡವರ ಮೈಸಾಲ (ದೀಶಮ. ೧-೦೭). [ಪೇರ್$_1$ (< ಪಿರಿದು$_1$) + ಒಕ್ಕಲ್$_2$]

**ಪೇರೊಕ್ಕಲು** 'ಪೇರೊಕ್ಕಲ್' ನೋ.

**ಪೇರೊಡಲ್**, ಪೇರೊಡಲು, ಹೇರೊಡಲ್, ಹೇರೊಡಲು (ನಾ). ದೊಡ್ಡ ದೇಹ; ಭಾರಿಯಾದ ಶರೀರ : ಕಾರಿರುಳ ತಿರುಳ ಬಣ್ಣಂ... ಮಿಳಿರ್ಪುರಿಗೇಸಂ ಪೇರೊಡಲಸೆದಿರೆ ಪುಟ್ಟಿದನಾರುಮಗುರ್ವಿಸೆ ಮಗಂ ಘಟೋತ್ಕಚನೆಂಬಂ (ಪಂಪಭಾ. ೩-೨೦); ಕಾರೊಸಡಂ ಕರ್ಬುಯಂ ಪೇರೊಡಲುಂ ... ದನುಜಾಕಾರಮನೊಡರಿಸೆ ನಿಶಾಚರರ್ವಿಸಿ ತೋರ್ಪರ್ (ಕಾವ್ಯಾವ. ೨೨೦); ಪಲರ್ಗೆ ಬಿರಿದಲೆ, ಸುರಿವಾಯ್ ಪಲರ್ಗೆ . . . ಅರೆಬರ್ಗೆ ಪೇರೊಡಲ್ (ಅದ್ಭುತ. ೨೬-೨೭). **ಪೇರೊಡಲು** : ಪೇರೊಡಲ ಧಿಜ್ಜನೆ ತಿರುಗಿಸುತೆ . . . ಅಪ್ಪಳಿಸುತಿಕ್ಕಿದನು (ಮೋಹತ. ೩೯-೬೦). **ಹೇರೊಡಲ್** : ಮಿಂಚುದಲೆಗಳ ಖಂಡಿಪಲ್ಗಳ . . . ದೊಳ್ಳುಗಳ ಹೇರೊಡಲ ವಂಚಕರ . . . ಹಿಂಡು ನೆರೆದು (ಬಸವು. ೫೦-೫೯). **ಹೇರೊಡಲು** : ಕರೆ ನಿಮ್ಮಯ್ಯನನು ಹೇರೊಡಲ ತೋಟಿಸಿ ಬಲವ ಬೆದಱಿಸಲಗ್ಗಳಿಕೆಯಹುದೇ (ಕುವ್ಯಾದ್ರೋ. ೦೩-೩೩); ಮಹೋದರನ ಹೇರೊಡಲನೊಡೆದು . . . ಶಕ್ರಜಿತುವನು ಹುಡುಕುನೀರದ್ದಿದನು ನಡೆದು ಸಮುದ್ರಮಧ್ಯದಲಿ (ತೊರಾಲ. ೫ ೯-೩); ಪೊಡೆಗೆಡೆದ ಹೇರೊಡಲ ಸೀಳ್ಗಳಿಂ ಪೋಳ್ಗಳಿಂ . . . ಕಡುಭಯಂಕರವಾಗಲು (ಕೃಪಾಭಾ. ೯-೯೬). [ಪೇರ್$_1$ (< ಪಿರಿದು$_1$) + ಒಡಲ್]

**ಪೇರೊಡಲು** 'ಪೇರೊಡಲ್' ನೋ.

**ಪೇರೊನಕೆ** (ನಾ). ದೊಡ್ಡ ಒನಕೆ : ಇಕ್ಕಡಿವಡೆದ ಕಾರ್ಮುಕವ ನಿವಾರಿಸಿ ತೆಕ್ಕೊಂಡು ಭಾರಿಯ ಹಲವ ಒಕ್ಕಯ್ಯೊಳಾಂತ ಪೇರೊನಕೆಯಿಂದಿಕ್ಕಿದ ಸೊಕ್ಕಾನೆದಲೆಗನ ಮೇಲೆ (ಮೋಹತ. ೩೮-೫೯). [ಪೇರ್$_1$ (< ಪಿರಿದು$_1$) + ಒನಕೆ]

**ಪೇರೊರ್ಬೆ** 'ಪೇರೊಟ್ವಿ' ನೋ.

**ಪೇರೊಸಗೆ** (ನಾ). ದೊಡ್ಡ ಹಬ್ಬ,–ಉತ್ಸವ : 'ಪೇರೊಸಗೆಗೆಯ್' ಪರಾ. [ಪೇರ್$_1$ (< ಪಿರಿದು$_1$) + ಒಸಗೆ]

**ಪೇರೊಸಗೆಗೆಯ್** (ಕ್ರಿ). ದೊಡ್ಡ ಹಬ್ಬವನ್ನು ಆಚರಿಸಂ; ಭಾರಿ ಉತ್ಸವವೇರ್ಪಡಿಸು : ಕಲಸೋಗರಮಂ ನಲಿದಿಕ್ಕಿ ಭೂಷಣಪ್ರಚಯಮ ನಿಟ್ಟು ಪೇರೊಸಗೆಗೆಯ್ದು ಸಖೀಜನದೊಂದುಗೂಡಿ (ರಾಜಶೇ. ೯-೯೨). [ಪೇರೊಸಗೆ + ಕೆಯ್$_1$]

**ಪೇರೊಟ್ಬಿ** 'ಪೇರೊಟ್ವಿ' ನೋ.

**ಪೇರೊಟ್ವಿ**, ಪೇರೊರ್ಬೆ, ಪೇರೊಟ್ಬಿ, ಪೇಱೊರ್ಪೆ, ಪೇಱೊರ್ಬೆ, ಹೇರೊಬ್ಬೆ (ನಾ). ದೊಡ್ಡ ಮುಳ್ಳುಪೊದರು (?) : ಅಱೆಯನ್ತೆಂಕ್ಕೆ ನೋಡಿ ನಡದು ಪೇರೊಟ್ವಿ ದುಗ್ಗನ್ನೆಱೆ (ಎಕ. X (೩), ಶಕ್ರಿ. ೬೬-೨೨ ; 850) ; ಸಾಲತ್ತ ಕಾಡೇಱಿನ ಪೇರೊಟ್ವಿಎ ಪಗನ್ತೆವಳ್ಳಮೆ (ಎಕ. IV, ಎಡತೊ. ೬೦-೭೫ ; ಸು. 890). **ಪೇರೊರ್ಬೆ** : ಪಡುವ ನೋಡಿ ಪರಿದ ಪೇರೊರ್ಬೆಯಿ (ಎಕ. IX (೩), ಬೆಂಗಳೂ. ೦೫೦ ೩೭ ; 828). **ಪೇರೊಟ್ಬಿ** : ಪುಲಿಪದಿಯು ತೆನ್ಕಣ ಪೇರೊಟ್ಬಿಯೆ (ಇಆ. XII, ೦೬-೯ (b) ; 813) ; ಇಗ್ಗಲಿಯು ಅರಿಪುರ ಮೂಡೂರ ಸನ್ದಿನಲ್ಲಿ ತಱ್ಸಾಲಿಗಾಲ ಮೂಡಣ ಪೇರೊಟ್ಬಿಯಿಂ (ಎಕ. III, ಶಂಜವ. ೦೩೯-೦೯; 916 ?). **Δಪೇಱೊರ್ಪೆ** : ದಕ್ಷಿಣಸ್ಯಾನ್ದಿಶಿ ಪಡುವ ನೋಡಿ ಪೋದ ಪೇಱೊರ್ಪೆಯೆ (ಎಕ. XVI, ತಿಪಟೂ. ೦೯೦-೬೮ ; ಸು. 900). **Δಪೇಱೊರ್ಬೆ** : ಅನ್ತೆ ತುಬ್ಬಿಲ ಪೇಱೊಟ್ಬಿಯೆ (ಎಕ. XVI, ತಿಪಟೂ. ೦೯೦-೬೮ ; ಸು. 900). **ಹೇರೊಬ್ಬೆ** : ತೆಂಕಣ ಕಡೆಗೋಡಿ ಏರಿಯ ಮೇಲೆ ಬಂದು ಚಣ್ಡಿಹಿನಲೇದು ಹೇರೊಬ್ಬೆ ಪುಳಿಗಡಪಿನೊಳು ಕೂಡಿ (ಎಕ. XIV, ಎಳಂದೂ. ೦೬೦-೦೩ ; ಸು. 12ನೆಯ ಶತ); ಚಕ್ರನ ಕೊಡಗೆಯ ಹೊಲದ ಹೇರೊಬ್ಬೆಯಿಂ ಮೂಡಲು (ಮ್ಯಾಆ. ೧೯೩೦, ೫೮-೬೫ ; 1413). [ಪೇರ್$_1$ (< ಪಿರಿದು$_1$) + ಒಟ್ವಿ]

**ಪೇರೋಟ** (ನಾ). ವೇಗವಾದ ಓಟ : ಕುದುಕುವರಿಯುಲಿ ಪರಿದು ಪೇರೋಟದಲಿ ಪರಿದೋಡುತ್ತವಾಯಾಸದಿ ಬಳಲುತೊಯ್ಯನೆ ನಡೆದು (ಬಸವು. ೨೬-೩೨). [ಪೇರ್$_1$ (< ಪಿರಿದು$_1$) + ಓಟ]

**ಪೇರೋಣಿ** (ನಾ). ದೊಡ್ಡ ಓಣಿ : ಸೀಮೆ ಮೂಡಾಯ್ತೋಱಿ ಎ ತೆಂಕಾಯ್ಬುಟಾರನ ಮಾಡಮೆ ಪೇರೋಣಿ ಎ ಸನ್ದು (ಎಕ. IV, ಎಡತೊ. ೬೦-೭೩ ; ಸು. 890). [ಪೇರ್$_1$ (< ಪಿರಿದು$_1$) + ಓಣಿ]

**ಪೇರೋಲಗ** (ನಾ). ದೊಡ್ಡ ಸಭೆ ; ಮಹಾಸಭೆ : ಪೇರೋಲಗವಂ ಪರೆಯವೇಳ್ದಲ್ಲರಂ ಕಳುಪಿ (ಬಸಆ. ೬-೩೭) ; ಚಂದ್ರಾಪೀಡನಲ್ಲರುಮಂ ಕಳುಹಿ ಪೇರೋಲಗಂ ಪರೆದು (ಬಸವು. ೦-೫೦). [ಪೇರ್$_1$ (< ಪಿರಿದು$_1$) + ಓಲಗ$_1$]

**ಪೇರ್ಗೊಳ್** 'ಪೆಸರ್ಗೊಳ್' ನೋ.

**ಪೇಲ್**, ಹೇಲು$_1$ (ಕ್ರಿ). ಹೇತು$_1$ (ಭೂತನ್ಯೂ). ಮಲವಿಸರ್ಜನೆ ಮಾಡು : "ಪೇಲ್–ಮಲವಿಸರ್ಜನೇ, ಮಲೇ ಚ" (ಶಮಧಾ) ; ಗುದತಿ=ಪೇಲ್ತಪಂ (ಕಾಶಕ್ಕ. ೨೩೦). **ಹೇಲು$_1$** : ನೂಲೋ ಹೆಂಡತಿ ಬಿಟ್ಟು ಹೇಲೋ ಮೂಳಿ ತಂದ (ಗಾದೆ) ; ನಡುಮನೇಲಿ ಹೇತು, ನಾತ ಬರುತ್ತೆ ಎಂದ (ಗಾದೆ). [ದೇ. ೫ ತಮಿ. ಪೇಲ್, ಪೇಳ್; ಗೊಂಡಿ. ಪೇಲಾನಾ]

**ಪೇಲ್$_2$**, ಪೇಲು, ಹೇಲು$_2$ (ನಾ). ಅಮೇಧ್ಯ; ವಿಷ್ಟೆ ; ಮಲ : ಪೇಲಂ ಕಚ್ಚಲ್ ತಕ್ಕುದೆ (ಸಮುಶ. ೯-೩೯) ; ಪಂದಿಗಳೊಡನಾಡಿದ ಕಱುವುಂ ಪಂದಿಯಂತೆ ಪೇಲಂ ತಿಂಗೆಂಬುದು ನಾಣ್ನುಡಿ (ಧರ್ಮಾಮೃ. ೨-೭೬). **ಪೇಲು** : ಸಾಸನಮಯ್ಯಾದೆಯುಮಂ ಪೇಸದೆಯದನಳಿವೆನೆಂಬ ಮಹಪಾತಕನಿಂತೀಸನೆ ಪೇಲಿನ ಗುಳಿಯೊಳ್ಸಾಸಿರಸತವರ್ಷ ಬಾಲವುಳುವಾಗಿಯುವಂ (ಶಾ. I. ೨೯-೩೬; 1148). **ಹೇಲು$_2$** : ಹೇಲೊಳಗಣ ಹುಳುವ ಕೋಳಿ ಕೆದಱಿದಂತಾಯಿತ್ತವನ ಶಿವಪೂಜೆ (ಗಣಶಾ. ೦೯೦-೬) ; ಯಾ ಧರ್ಮಕೆ ತಪಿದವರು ಹೇಲೊಳಗಣ ಹುಳುವಾಗಿಯಿರಲುಳವರು (ಶಾಇ. IX-ii. ೫೬೦-೩೨ ; 1534) ; ದಂಡಿಗೆ ಮೇಲೆ ನಾಯಿಯಾ ಕೂಡ್ರಿಸಿದರೆ ಹೇಲಂ ಕಂಡು ಹಾರಿತು (ಗಾದೆ). [< ಪೇಲ್$_1$]

**ಪೇಲವ** (ಗು). ೧. ಕೃಶವಾಗಿರುವ; ತೆಳುವಾದ. ೨. ಕೋಮಲವಾದ; ಸಂಕುಮಾರ. ೩. ಮಸುಕಾದ ; ನಿಸ್ತೇಜವಾದ : ಬಿಳಿಚಿ

ಕೊಂಡ : ಅರೆಬಿರಿದ ಸಂಪಿಗೆಯು ಹೂವಿನ ಹಾಗೆ ಪೇಲವವರ್ಣದಾಕೆ ಈಕೆ (ಇಶ್ವ. ೪೦೬). ೪. ಸಣ್ಣ ; ಎಳೆಯ. ೫. ವಿರಳವಾದ ; ಬಿಡಿಬಿಡಿಯಾದ. (ನಾ). ೬. ಕೃಶವಾದುದು : "ಕ್ಷಾಪಂ . . . ಪೇಲವಂ, ತಳಿನ(ಮ)ಂ. ತನು—ಈ ೭ ಅಸಿದು" (ಹಲಾಯು. ೦೧೯-೩೨). ೭. ವಿರಳವಾದುದು : "ಪೇಲವಂ, ವಿರಳಂ, ತನು—೩ ಎಡೆಬಿಟ್ಟುದ್ದು, ವಿರಳವಾದದ್ದು" (ಸಿದ್ಧಾಂಶಿ. ೩೪೦). ೮. (ಆಲಂ) ಸತ್ತ್ವವಿಲ್ಲದುದು ; ನೀರಸವಾದುದು : 'ತಾಯಿ' ಯಂಥ ಕಥೆಗಳ ಜೊತೆಗೆ ಬಂದಿರುವುದರಿಂದ ಅವು ಪೇಲವವಾಗಿ ಕಾಣುತ್ತವೆ (ಎಮುಕ. XVI, ಮುನ್ನುಡಿ) ; ಪಂಪನ ಆದಿಪುರಾಣದಲ್ಲಿ ಬರುವ ಸನ್ನಿವೇಶದ ಎದುರು ಇದು ತೀರಾ ಪೇಲವವಾಗಿದೆ (ಹಂಶಿ. ೦೫೬). [ಸಂ.]

**ಪೇಲವತೆ** (ನಾ). ಬಿಳಿಚಿಕೊಂಡಿರುವಿಕೆ : ಗರ್ಭಿಣಿಯಾಗಿ ಬಂದಾಗ ಇದ್ದ ಆ ಪೇಲವತೆ ಈಗಿಲ್ಲ (ಅಹಾಕ. ೨೩೫). [ಸಂ. ಪೇಲವತಾ]

**ಪೇಲು** 'ಪೇಲ್₂' ನೋ.

**ಪೇಲೆ, ಪ್ಯಾಲೆ** (ನಾ). ಕುಡಿಯಲು ಬಳಸುವ ಪಾತ್ರೆ ; ಬಟ್ಟಲು : ಬೆಳ್ಳಿಯಿಂದ ತಾಟು, ತಬಕ, ಪೇಲೆ ಮುಂತಾದ ಸಾಮಾನುಗಳನ್ನು . . . ಮಾಡುತ್ತಾರೆ (ಮುಂಬಯಿ. ೪-೦೨೦) ; ಚಿನ್ನಾ ಹಾಲಿನ ಪೇಲೆ ಹಿಡಿದು ಅಡಿಗೆ ಮನೆಯ ಹೊಸ್ತಿಲ ಮೇಲೆ ಕುಳಿತ (ಕ್ಷಿತಿಜ. ೫೫) ; ಪೇಲೆಗಳು ತುಂಬಿದವೆನ್ನುವಷ್ಟರಲ್ಲಿ ಬರಿದಾಗುತ್ತಿದ್ದವು (ಮೋಹಾಸಾ. ೦೨). **ಪ್ಯಾಲೆ** : ಆ ಮುಹೂರ್ತದಲ್ಲಿ ಕಾರ್ಕೋಟಕವಿಷ ತುಂಬಿದ ಪ್ಯಾಲೆ ಕೊಟ್ಟಿದ್ದರೂ ಗುಟುಕರಿಸಿಬಿಡುತ್ತಿದ್ದರು (ಕೃಕೃಶಿ. ೯). [←ಪಾರ. ಹಿಂ. ಪ್ಯಾಲಾ ; ಮರಾ. ಪೇಲಾ, ಪ್ಯಾಲಾ]

**ಪೇಲೆವರಿಗೆ** (ನಾ). ಒಂದು ಬಗೆಯ ತೆರಿಗೆ (?) : ಬಸವನಹಳ್ಳಿಯ ಪೇಲೆವರಿಗ ಹಟ್ಟಿಗೆ ಹುರಿಗೆ ಸಿನ್ದುಪಟು ದೇವಳಿಗೆನಾಡ ಎಳ್ಪದಿಪ್ಪ್ಟರು ಪ್ರಭುಗಳ್ ಅಟಿಯಲು (ಎಕ. VI, ಕಳ್ಳವು. ೦೫-೦೦; 1674 ?). [?]

Δ **ಪೇವಯ್ಸು** 'ಹೇವಯಿಸು' ನೋ.

**ಪೇಶಣ** 'ಪೇಸಣ' ನೋ.

**ಪೇಶಲ, ಪೇಶಳ** (ಗು). ೧. ಕೋಮಲವಾದ; ಮೃದುವಾದ : ಓಸರಿಸದಿಂದನ್ನ ಬಡಸೇವೆಯನು ತಾವು ಪೇಶಲ ಸುಭಾವದಿಂ ನೋಡಿ ಕೈಕೊಳಲು (ಕಾಲಿದೀ. ೦೦-೫೦). ೨. ತೆಳುವಾದ ; ಕೃಶವಾದ. ೩. ಸುಂದರವಾದ ; ಮನೋಹರವಾದ : ದೇವ ದೋಷಹೃದ್ಗರಧರ ವಂದ್ಯ ಪೇಶಲ ಪಿನಾಕ ಸುಪಾಣಿ ಮಹೇಶ ಪಾಲಿಸಾ (ಹಮ್ಮೀಕ. ೧-೨). ೪. ಸಮರ್ಥವಾದ; ದಕ್ಷ. ೫. ಮೋಸದ ; ವಂಚನೆಯ. ೬. ಅಲಂಕಾರ ಮಾಡಿದ ; ಸಿಂಗರಿಸಿದ. (ನಾ). ೭. ಮೃದುತ್ವ ; ಕೋಮಲತೆ : ಪ್ರಯೋಗಮಾರ್ಗದೊಳತಿಪೇಶಲಮಾಗೆ (ಮಾಧವ ೨-೨೪೨); ಮೃದು ಪೇಶಲಮನಾಂತ ನುಡಿಗಳಿಂ ಬಿನ್ನವಿಸಿದಂ (ವಂಕಾರಾ. ೬-೬೬ ೨). ೮. ತೆಳುವು ; ಪಾರದರ್ಶಕವಾದುದು : ನಟಿಯಂತೆ ಪೇಶಲವಾದ ವಸ್ತ್ರಗಳನ್ನು ಧರಿಸಿ . . . ತನ್ನ ವಕ್ಷಸ್ಸನ್ನು ಲೋಕದೆದುರಿಗೆ ಆವಿಷ್ಕಾರ ಮಾಡುತ್ತಾ (ಖಾರವ. ೨೨). ೯. ಶುಭ; ಮಂಗಳ : "ಕಮನಂ ಶುಭಂ ಪೇಶಲಂ ಶೋಭನಂ" (ಮುಂಗಾ. ೦೨೬-೨). ೧೦. ಒಂದು ಬಗೆಯ ಬಣ್ಣ ; ತಿಳಿ ಹಳದಿ : ಪೇಶಲವೆಂಬುವದು ಭತ್ತದ ಗರಿಯ ವರ್ಣವಾಗಿಯಿರುವದು (ಸೌಗಂಧಿ. ೩೬೬-೦೪). ೧೧. ಅಂದ ; ಸೊಬಗು : ಮನೋವಿಕಾಸವಂ ಕನ್ನಡಿಸಿತ್ತು ಸೀತೆಗೆ ಮುಖಾಂಬುರುಹಂ ದರಹಾಸಪೇಶಲಂ (ಶಂಠಾಶಾ. ೦೦-೮೬). ೧೨. ದಕ್ಷತೆಯಿಂದ ಕೂಡಿದ ವ್ಯಕ್ತಿ ; ಪರಿಣತ : "ದಕ್ಷಃ, ಚತುರಃ, ಪೇಶಲಃ . . . ಉಷ್ಣಃ—ಆಲಸ್ಯವಿಲ್ಲದವನ ಹೆಸರುಗಳು" (ಸಿದ್ಧಾಂಶಿ. ೩೦೨). ೧೩. ಮೋಸದಿಂದ ಕೂಡಿದುದು ; ಕುಟಿಲತನ. ೧೪. ವಿಷ್ಣುವಿನ ಹೆಸರುಗಳಲ್ಲಿ ಒಂದು. **ಪೇಶಳ** : ೩. ಪ್ರವಾಳಜಾಳಕಮನೆ ಕಣ್ಗೊಳಿಸಿದುದಾ ವಧೂವರರ ಸಲೀಳಪೇಶಳಕರಕ್ಕೆ ಪಾಣಿಗ್ರಹಣಂ (ಕರ್ಣಮ. ೩-೯೫). [ಸಂ.]

**ಪೇಶವಾಯಿ** (ನಾ). ಮರಾಠರ ಆಳ್ವಿಕೆಯಲ್ಲಿದ್ದ ಮುಖ್ಯಮಂತ್ರಿಯ ಆಡಳಿತ,—ಅಧಿಕಾರ : ಇದು ಪೇಶವಾಯಿಯಲ್ಲಿ ಕಿತ್ತೂರ ದೇಸಾಯಿಯ ವಶಕ್ಕೆ ಬಂತು (ಕಳವ. ೬೨).
[←ಪಾರ. ಹಿಂ. ಪೇಶವಾಈ; ಮರಾ. ಪೇಶವಾಯಿ]

**ಪೇಶವೆ, ಪೇಶ್ವೆ, ಪೇಷ್ವೆ** (ನಾ). ಮರಾಠರ ಆಳ್ವಿಕೆಯಲ್ಲಿದ್ದ ಮುಖ್ಯಮಂತ್ರಿ : ಅವನು . . . ಕೊಂಕಣಸ್ಥ ಬ್ರಾಹ್ಮಣನಿಗೆ ಪೇಶವೆ (ಮುಖ್ಯ ಪ್ರಧಾನಿ) ಎಂಬ ಅಧಿಕಾರ ಕೊಟ್ಟು, ಎಲ್ಲ ಕಾರಭಾರವನ್ನು ಅವನ ಸ್ವಾಧೀನ ಮಾಡಿದನು (ಕರ್ನಾಇ. ೬೬). **ಪೇಶ್ವೆ** : ಪೇಶ್ವೆಗಳ ಆಡಳಿತವು ಬಿಗಿತಪ್ಪಿ ಸುಬೇದಾರನು ಪರಾಕ್ರಮಪರನಾಗಿದ್ದನು (ಝಾರಾಣಿ. ೧). **ಪೇಷ್ವೆ** : ಎಂಟುಮೂಲೆಗಳಿಂದಲೂ ಮುತ್ತಿದ ಶತ್ರುಗಳನ್ನು ಎದುರಿಸಲು ಅವರು ಪುಣೆಯ ಪೇಷ್ವೆಯ ನಾಯಕತ್ವವನ್ನು ಅಂಗೀಕರಿಸಲಿಲ್ಲ (ಭಾರದ. ೪೨೫). [←ಪಾರ. ಹಿಂ. ಮರಾ. ಪೇಶವಾ, ಪೇಶ್ವಾ]

**ಪೇಶಳ** 'ಪೇಶಲ' ನೋ.

**ಪೇಶಿ** (ನಾ). ೧. ಮಾಂಸ ; ಅಡಗು ; ಬಾಡು : ಹೊಟ್ಟೆಯೊಳು ರಕ್ತ ಪೇಶಿಯು ಬಲಿದ ಗರ್ಭ (ಬೀಕೃಪು. ೨-೫-೦೩). ೨. ಮಾಂಸದ ಮುದ್ದೆ : ವಿವಿಧಭಕ್ಷೋಪದಂಶಪ್ರಾಯಮಪ್ಪ ದಿವ್ಯಾಹಾರಮೆತ್ತಲೀ[ನಿ]ತ ಪೂತಿಗಂಧಮಪ್ಪ ಮೃಗಪಿಶಿತಪೇಶಿಯೆತ್ತಲ್ (ವರ್ಧಮಾ. ೬-೪ ವ). ೩. ಮೊಟ್ಟೆ ; ತತ್ತಿ : "ಕೋಶಂ ಪೇಶಿಯಂಡಮೆನೆ ತತ್ತಿಯಕ್ಕುಂ" (ಮಂಗರಾ. ೫೦-೧). ೪. ಗರ್ಭಧಾರಣೆಯ ನಂತರದ ಕೆಲವೇ ದಿನಗಳ ಭ್ರೂಣ. ೫. ಅರಳುವುದರಲ್ಲಿರುವ ಮೊಗ್ಗು. ೬. ಇಂದ್ರನ ವಜ್ರಾಯುಧ. ೭. ಒಂದು ಬಗೆಯ ವಾದ್ಯ. ೮. ಹಣ್ಣಿನ ಓಟೆ. ೯. ಕತ್ತಿಯ ಒರೆ.—ಕೋಶ. ೧೦. ಚೆನ್ನಾಗಿ ಬೇಯಿಸಿದ ಅಕ್ಕಿ. ೧೧. ಸ್ನಾಯು ; ಸ್ನಾಯುರಜ್ಜು : ಶರೀರದ ನಷ್ಟವಾದ ಹಲವೊಂದು ಪೇಶಿ (Tissues)ಗಳು ರಕ್ತವನ್ನು ಸೇರಿ ಯಕೃತ್ತಿಗೆ ಬರುವುವು (ಶಾಂಶ್ರ. I, ೩೦೦). [ಸಂ.]

**ಪೇಶು** (ಕ್ರಿ). ಹೊಗಳು ; ಕೊಂಡಾಡು : ಪೇಶಾದ ದಿನವೆಲ್ಲ ಪಟುವಾದ ದಿನವಯ್ಯ ಈಶನಂ ನೆನೆಯದ ದಿನಂ ಬಂಜೆದಿನವಯ್ಯ (ವಾಗೀಶ. ದೇ. ೫೬೫-೯); ಪೇಶಾದ ನಾಳೆಲ್ಲ ಪಟುನಾ[ವಾ]ದ ದಿನ (ಬೀಕೃಪು. ೪-೯-೧೩). [ದೇ. ‖ ತಮಿ. ಪೇಚು ; ಮಲ. ಪೇಚು = ಮಾತನಾಡು]

**ಪೇಶ್ವೆ** 'ಪೇಶವೆ' ನೋ.

**ಪೇಷ್‌ಕಷ್, ಪೇಷಕಶಿ** (ನಾ). ಹಿಂದೆ ಜಮೀನುದಾರ ಮುಂತಾದವರು ಸರ್ಕಾರಕ್ಕೆ ತೆರುತ್ತಿದ್ದ ನಿಗದಿಯಾದ ಹಣ ; ಪೊಗದಿ : ಪ್ರಭುಗಳೂ . . . ನಿಯಮಿತವಾದ ಪೇಷ್‌ಕಷ್‌ನ್ನು ಕ್ರಮವಾಗಿ ಸಲ್ಲಿಸುತ . . . ಅವರ ದೇಶಗಳನ್ನೆಲ್ಲಾ ಸರ್ಕಾರಕ್ಕೆ ಸೇರಿಸಿಕೊಂಡರು (ಮಹಾಮಂ. II, ೧೩) ; ಇಂಗ್ಲೀಷ್ ಸರ್ಕಾರದವರು . . . ಪೇಷ್‌ಕಷ್ ಎಂಬ ಪೊಗದಿಯನ್ನು ತೆಗೆದುಕೊಳ್ಳುತ್ತಿದ್ದಾರೆ (ಶಾಳಗಾ. ೩೦). **ಪೇಷಕಶಿ** : ಫವುಜಿನ ಖರ್ಚಿಗೆ ಮೊಗಲು ಮರಾಟೇರ ಪೇಷಕಶೀ ಸಹಾ ನವಾಬರೇ ತೀರಿಸಿಕೊಳಬೇಕು (ಹೈದರ. ೫೦). [←ಪಾರ. ಮರಾ. ಪೇಶ್‌ಕಶ್; ಹಿಂ. ಪೇಶಕಷ್]

**ಪೇಷಕಶಿ** 'ಪೇಷ್‌ಕಷ್' ನೋ.

**ಪೇಷಣ₁** 'ಪೇಸಣ' ನೋ.

**ಪೇಷಣ₂** (ನಾ). ೧. ಧಾನ್ಯವನ್ನು ಹಿಟ್ಟು ಮಾಡುವುದು,— ಬೀಸುವುದು. ೨. ಅರೆಯುವುದು : ಪೇಷಣದ ಶಿಲೆಯೊಳಂ ಪೊಸದಿರ್ಕೆಂದು (ಶಬ್ದಮಂ. ೯೯). ೩. ಬೀಸುವ ಕಲ್ಲು. ೪. ಅರೆಯುವ ಕಲ್ಲು ; ಕಲಬತ್ತು. ೫. ನರಕದ ಶಿಕ್ಷೆಗಳಲ್ಲಿ ಒಂದು : ಪೇಷಣ . . .

ದುರ್ಭೋಗ್ಯ ನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ ಶಿವ ದ್ರೋಹಿಗಳಿಗೆ ನಿಷ್ಕಾರುಣ್ಯದಿ ಮಾಳ್ಪ ಶಿಕ್ಷಾಲೇಶವೆಂದೆನಿಸಿ (ಏವೇಳ. ೧೬೦).

[ಸಂ.]

**ಪೇಷಣಿ** (ನಾ). ಅರೆಯುವ ಕಲ್ಲು : ಚುಲ್ಲಿ ಪೇಷಣಿ ಕಂಡನಿ ಉಪಸ್ಕರ ಉದಕುಂಭ ಎಂಬೈದು ಗೃಹೋಪಕರಣಗಳೂ ಹತ್ಯಾಕಾರಕಗಳು . . . ಪೇಷಣಿ—ಅಂದರೆ ಅರೆಯುವ, ಬೀಸುವ ಕಲ್ಲುಗಳು (ಆರ್ಯಧ. ೧೬೭).

[ಸಂ. ಪೇಷಣೀ]

**ಪೇಷುಖಾನೆ** (ನಾ). ಹಿಂದೆ ರಾಜ ಮೊದಲಾದವರು ಪ್ರವಾಸ ಹೊರಡುತ್ತಿದ್ದಾಗ ಅವರ ಮುಂದಿನ ಮೊಕ್ಕಾಮಿಗಾಗಿ ಮೊದಲೇ ರವಾನಿಸುತ್ತಿದ್ದ ಡೇರೆ ಮೊದಲಾದ ಸರಂಜಾಮು : ಮೂರು ಮಂದಿ ಪಾದುಶಹರು ತಮ್ಮ ತಮ್ಮ ಪೇಷುಖಾನೆ ಸಂಗಡ ಝಾಂಡಾವನ್ನು ಹೊರಗೆ ಹಾಕಿಸಿದರು (ಏಕ್ಕರು. ೫).

[←ಪಾರ. ಮರಾ. ಪೇಶ್‌ಖಾನಾ; ಹಿಂ. ಪೇಶ್‌ಖೇಮಾ]

**ಪೇಷ್ಕಾರ್, ಪೇಷ್ಕಾರ** (ನಾ.) ಕಂದಾಯವನ್ನು ವಸೂಲು ಮಾಡುವ ಒಬ್ಬ ಅಧಿಕಾರಿ : (ಮೈಗಜೆ· IV, ೭೮೨). **ಪೇಷ್ಕಾರ :** ಸಿದ್ಧನಾಯಕ ಬೇಗ ನೀನೋಡು ಪೇಷ್ಕಾರರೆದ್ದಿದ್ದರುಸುರು (ಅರ್ಕಾಶಿ· ೩೦-೩೮); ಪ್ರತಿ ತಾಲ್ಲೂಕಿಗೂ ಒಬ್ಬ ಸುಬೇದಾರ, ಒಬ್ಬ ಪೇಷ್ಕಾರ . . . ಗೊತ್ತಾಗಿ (ಮುಹಾವಂ· II, ೪೨). [←ಪಾರ. ಹಿಂ. ಮರಾ· ಪೇಶ್‌ಕಾರ್]

**ಪೇಷ್ಕಾರ** 'ಪೇಷ್ಕಾರ್' ನೋ.

**ಪೇಷ್ವೆ** 'ಪೇಶವೆ' ನೋ.

**ಪೇಸಣ, ಪೇಶಣ, ಪೇಷಣ$_1$, ಪೇಸಣೆ, ಪೇಸಾಣೆ, ಪೇಸಾಳಿ** (ನಾ). ೧. ಕೆಲಸ ; ಕಾರ್ಯ· ೨. ಸ್ವಾಮಿಕಾರ್ಯನಿರ್ವಹಣೆ ; ಒಡೆಯನ ಕೆಲಸ ಮಾಡುವುದು. **ಪೇಶಣ. ಪೇಷಣ$_1$. ಪೇಸಣೆ. ಪೇಸಾಣೆ. ಪೇಸಾಳಿ.**

**ಪೇಸಣಗರುಡ, ಪೇಷಣಗರುಡ** = ಸ್ವಾಮಿಕಾರ್ಯನಿರ್ವಹಣೆಯಲ್ಲಿ ಗರುಡನಂತಿರುವವನು; ಒಂದು ಬಿರುದು : ಶ್ರೀಮತ್ರಿ × ಮನಮಲ್ಲದೇವ ಪೇಸಣಗರುಡಂ ಜಯಲಕ್ಷ್ಮೀನಿಳಯಂ (ಸೌಇಇ. IX-i, ೧೪೨-೯; 1079) ; ಶ್ರೀಮತ್ರಿಭುವನಮಲ್ಲದೇವ ಪೇಷಣಗರುಡನಾಮಾದಿ ಸಮಸ್ತ ಪ್ರಸಸ್ತಿಸಹಿತಂ (ಸೌಇಇ. VIII, ೩೭೭-೯; 1085). **ಪೇಸಣಹಣುವಂತ, ಪೇಶಣಹಾನ್ಮಂತ, ಪೇಸಣಹನುಮಂತ** = ಸ್ವಾಮಿಕಾರ್ಯನಿರ್ವಹಣೆಯಲ್ಲಿ ಹನುಮಂನಂತಿರುವವನಂ ; ಒಂದಂ ಬಿರುದಂ : ಜಯಸಿಮ್ಹದೇವ ಪೇಸಣಹಣುವನ್ತ (ಮೈಆ· ೧೯೨೯, ೬೫-೩೩; 1081); ಸ್ವಸ್ತಿಶ್ರೀಮಚ್ಚಾಳುಕ್ಯಪ್ರತಾಪಚಕ್ರವರ್ತ್ತಿ ಜಗದೇಕಮಲದೇವ ಪೇಶಣಹಾನ್ಮನ್ತರಪ್ಪ ಶ್ರೀಮಹಪ್ರಧಾನಂ ಕನ್ನಡಸಂಧಿವಿಗ್ರಹಿ (ಕಇ. IV, ೧೧-೪; ಸು. 12ನೆಯ ಶತ); ಪೇಸಣ ಹನುಮಂತನೆನಿಪ ನಾವಿದದಾಸ (ಸೌಇಇ. XI-ii, ೧೩೩-೧೮ ; 1087). **ಪೇಸಣ ಹನುಮ, ಪೇಷಣ ಹಣುಮ, ಪೇಸಣೆ ಹನುಮ, ಪೇಸಾಣೆ ಹನುಮ, ಪೇಸಾಳಿ ಹನುಮ** = ಪೇಸಣಹಣುವಂತ : ಪಶಿಹಿತುರಾಯನ್ಸಸಿಂಹನ ನಚ್ಚಿನಚ್ಚು ಪೇಸಣಹನುಮಂ (ಸೌಇಇ· IX—i, ೩೪೩-೧೧; 1226); ಕಡುಗಲಿ ದಣ್ಡನಾಥಮಿತನಾತ್ಮಜ ಪೇಷಣಹಣ್(ಣು)ಮ ಬಲ್ಲಿಗನ್ (ಎಕ· V, ಚನ್ನರಾ. ೧೯೭-೭೬; 1228) ; ದಣ್ಣನಾಥ ಪೇಸಣೆಹನುಮ (ಎಕ. VI, ಕಡೂರು. ೪೯-೩೯; 1291); ಪೇಸಾಣೆಹನುಮ ಮೋಹರಮುರಾರಿ (ಎಕ. XI, ಹೊಳಲ್ಕೆ. ೪೦-೧ ; ಸು. 1225 ?) ; ಚಕ್ರೇಶ್ವರ ಜಾವಾದಿ ಕೋಲಾಹಳ ಪೇಸಾಳಿಹನುಮ ಗಜಬೇಣ್ಟೆಕಾರ (ಎಕ. XIV, ಎಳಂದೂ. ೧೫-೫ ; ಸು. 1511). [< ಪ್ರಾ. ಪೇಸಣ. / ಸಂ. ಪ್ರೇಷಣ]

**ಪೇಸಣೆ** 'ಪೇಸಣ' ನೋ.

Δ **ಪೇಸರಗತ್ತಿ** 'ಹೇಸರಗಳ್ತಿ' ನೋ.

Δ **ಪೇಸರು** 'ಹೇಸರ' ನೋ.

**ಪೇಸಾಣೆ** 'ಪೇಸಣ' ನೋ.

**ಪೇಸಾಳಿ** 'ಪೇಸಣ' ನೋ.

**ಪೇಸಿಕೆ, ಹೇಸಿಕೆ** (ನಾ). ೧. ಹೊಲಸು ; ಕೊಳಕು : ಬೇಡಮಟ್ಟಮಂ ಕಂಡೆಂ . . . ನರಕದ ನೆಲೆ ಪೇಸಿಕೆಗಳ ಕರು ಮಸಣದ ಪುಟ್ಟು ಪಾಪದೆಱೆ ಪಾತಕದಾಗರಮದು (ಕಾದಂಉ· ೭೪೬); ಉದುರಿದುವು ಧರಣಿಯಲಿ ಬಲುಮಾಂಸದ ಸುರಕ್ತದ ಘಟ್ಟಿಗಳು ಖಂಡದ ಸುಧಾಳದ ಜಗಿಯ ಪೇ[ಪಾಠಾಂ. ಹೇ]ಸಿಕೆ ನಿಕರ ನೂಱೊಂದು (ಕುವ್ಯಾಆ. ೪-೪೨). ೨. ಅಸಹ್ಯ ; ಜುಗುಪ್ಸೆ : ನೀನಲಬ್ಧಸಮ್ಯಗ್ದರ್ಶನೆಯಪ್ಪುದಱಿಂ ಪೇಸಿಕೆಯಂ ತಾಳ್ದದೆ (ಶಾಂತೀಶ್ವ. ೮-೧೩೨ ವ). **ಹೇಸಿಕೆ :** ೧. ಸಂತವೊಂಬತ್ತುಮಾಸಂ ಹೇಸಿಕೆಯ ನಡುವೆ ಕತ್ತಲೆಯ ಕರುಳೊಳಗೆ ಮರುಳಂದದಿಂ ಬೆಳೆದು (ಬಿಂದೋರ. ಹ. ೫೦೦-೨) ; ರಕುತದ ಹೇಸಿಕೆಯನು . . . ನೆರಹಿದಂ ನಿಳಯದೊಳಗೆ (ಹಕಕಾ. ೦೦-೩೦); ಮುಂದಿಳುಹಿದಳು ಹೇಸಿಕೆ ಹೊನಲಿಡುವ ಹಂದಲೆಯನು (ಕೊರರಾ. ೩-೭-೨೦) ; ಹೇಸಿಕೆಯ ಕಿಸುಕುಳದ ಕೀವು ತುಂಬಿ ಒಸರುವ ಹಸಿಯ ತೊಗಲಿನ ಹಳೆಯ ಗಾಯದಲ್ಲಿ ವಿಷಯಾತುರದಿಂದ ಬಿದ್ದು (ಅಬಂಧೀ· ೮-೬). ೨. ಮಾತಿನಲ್ಲಿ ಮಾನ್ಯತನ ಮನದಲ್ಲಿ ಆಶೆ . . . ಇದು ಎನಗೆ ಹೇಸಿಕೆಯಾಯಿತ್ತು (ಪೋಳಪಮ. ೩೮-೦೫೭); ಹಾಸಿಕೆಲ್ಲದೆ ಹಾವಿನ ಮೇಲೆ ಒಱಗಿದವ ಹೇಸಿಕೆಲ್ಲದೆ ಕರಡಿಯ ಕೂಡಿದ (ಪುರಂದ. ೨-೦೦ ೦) ; ವಿನಾಯಕರಾಯನಿಗೆ ತನ್ನ ಪ್ರಿಯಪತ್ನಿ ಸರಳೆಯನ್ನು ಬಿಟ್ಟು ವೇಶ್ಯೆಯ ಮನೆಗೆ ಹೋಗಲು ಹೇಸಿಕೆ (ಕುಂಕುಮ. ೬೦). ೩. (ಅಲಂ) ಅವಮಾನ ; ಅಗೌರವ : ತಿರುಗಿ ರುಮೆಯನು ಕೊಟ್ಟು ತಮ್ಮನ ಕರಸಿಕೊಂಬೀ ಹೇಸಿಕೆಯ ನಿಜಶಿರದೊಳಾನುವನಲ್ಲೆನುತ ನಡೆತಂದನಾಹವಕೆ (ಕೊರರಾ. ೯-೯-೦೦). [ಪೇಸು$_1$ + — ಇಕೆ. / ತುಳು. ಪೇಸಿಗೆ, ಪೇಶಿಗೆ]

**ಪೇಸು$_1$, ಪೇಚು$_1$, ಹೇಸು$_1$** (ಕ್ರಿ). ೧. ಅಸಹ್ಯಪಡು ; ಜುಗುಪ್ಸೆಹೊಂದು : ದೋಸಮೇನಾನುಂ ಸ್ವಲ್ಪಮಾದೊಡಂ ಮಾಸಿಸಿರ್ಕುಮಣಂ ಕೃತಿವಧುವಂ ಪೇಸದೆ ದುರ್ಜನದೊಳಾದ ಪರಿಚಯಂ ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ (ಕಾಂಠಾ. ೧-೦೦೦) ; ಭೀಭತ್ಸಮಂ ಕಂಡಾದಮಾನುಂ ಪೇಸಿ ಶರೀರ ವೈರಾಗ್ಯಮನೊಡೆಯನಾಗಿ (ಪಡ್ಮಾರಾ· ೬೩-೦೭); ನಾರದಂ ಮನದೊಳೆ ಪೇಸುಗುಂ (ಹಂಪಭಾ. ೬-೨೫); ಬೇನೆ ಬದ್ದಿರೆ ಪೇಸದೆ ಬೇಸಱದೆ ಸನ್ಮಾನದೊಳುಪಚರಿಸುವುದು (ಹರಿಶ. ೪-೦೪); ತನ್ನ ಗಂಡುಸುತನಕೆ ಪೇಸಿದಳ್ ತಾನೆ ಚಿತ್ರಾಂಗನೆ (ಚಿತ್ರಾಂಗ. ೦೭-೪೫೮). **ಪೇಚು$_1$:** ೧. ಭಸ್ಮಧಾರಿಯ ಕಂಡು ಪೇಚುತಂ ನಿಂದಿಸುವವಂ ಶೂದ್ರಗೊಗೆದನೆಂದೇ ಚತುರ ರೂಹಿಪುದು (ರಾಶಿಶ· ೯-೦೪). **ಹೇಸು$_1$:** ೧. "ಹೇಸು—ಜುಗುಪ್ಸಾಯಾಂ" (ಶಮದ); ಕಾಳುದೈವಕ್ಕೆಱಗಿ ನಾನು ಶಿವಭಕ್ತನೆನಿಸಿಕೊಂಬ ಚಂಡಿನಾಯಿಗಳ ಕಂಡು ಎನ್ನ ಮನ ಹೇಸಿತ್ತು ಕಾಣಾ (ಬುಡಿವಚ· ೨೮-೪೦). ೨. ಹಿಂಜರಿ; ಹಿಂದೆಗೆ; ಅಳುಕು : ಹೇಸುವುದು ಮನ ಬೊಮ್ಮಹತಿಗಾಗಿ (ಕೌರರಾ. ೦೭-೦೨); ಕೌರವ ಹೇಸದೆ ನಿನ್ನನು ಕಟ್ಟಿಸಲು ಸಾಸಿರನಾಮನೆ ವಿಶ್ವರೂಪವ ತೋಱಿ ಮೋಸಗೊಳಿಸಿದಾಟವೆಲ್ಲಿ ಕಲಿತೆಯ್ಯ (ಪುರಂದ. ೦-೯೬-೨೨); ಸೂಸುವ ಮನವನ್ನು ಹೇಸದಲೆ ಹಱಿದೊಗೆದು ಲೇಸಾಗಿ ಇಪ್ಪ ಶಿವಯೋಗಿ ಗುರುವಿನ ಕೂಸು ತಾನಿರುವ (ಸರ್ವಜ್ಞ· ೫೯೩); ಏನೂ ಇಲ್ಲದವ ಯಾವುದಕ್ಕೂ ಹೇಸ (ಗಾದೆ).

**ಪೇಸೆ ಪಡು**—ಇತರರ ಜುಗುಪ್ಸೆಗೆ ಒಳಗಾಗು,—ಅಸಹ್ಯಕ್ಕೆ ಗುರಿಯಾಗು : ವಿನಯಮತಿಯೆಂಬೊಳ್ ಗುಜ್ಜಿ ವಿರಳದಂತೆ ಆದಮಾನಂ ವಿರೂಪೆ ಪೇಸೆಪ[ಪಾಠಾಂ. ಪೇಸರ್ಪ]ಡುವಳ್ (ಪಡ್ಮಾರಾ. ೦೦೬-೨೫).

[ದೇ.॥ ತುಳು. ಪೇಸು]

**ಪೇಸು$_2$, ಹೇಸು$_2$** (ನಾ). ಅಸಹ್ಯ; ಜುಗುಪ್ಸೆ: **ಪೇಸೇಱ್ ಪಡಾ**

**ಹೇಸು$_2$ :** ಪರಿಚಯವಿದ್ದವರೊದ್ದರು ಕಡುಲೇಸು . . . ಪರಿಚಯವಿರದವರೊಲಿದರು ಕಡುಹೇಸು (ಇಂಚಾಶ. ೬೯-೬೬). [<ಪೇಸು$_1$]

**ಪೇಸುಗೆ** (ನಾ). ಅಸಹ್ಯ; ಜುಗುಪ್ಸೆ: ಮತ್ತಿನ ಪೆಂಡಿರ್ಗೆ ಪೇಸುಗೆಯಂ ಪುಟ್ಟಿಸುವ ನಾಯಕಸ್ತ್ರೀಯಂತಪ್ಪ (ಧರ್ಮಾಮೃ. ೦೨-೨೪); ಪೇಸುಗೆ ಪಸರಟಿಯೆ ಹೇಯಂ ಮಾಯವಾಗೆ (ಜಗಊ. ೨-೫೩ ಪ); ಜುಗುಪ್ಸೆ ಪೇಸುಗೆಯುಂ ಮಾಟ್ಪುದು (ಕಶಾರ. ೧೨). [ಪೇಸು$_1$ + – ಗೆ]

**ಪೇಸುಗೆಗೆಡು** (ಕ್ರಿ). ಅಸಹ್ಯಭಾವವನ್ನು ಕಳೆದುಕೊಳ್ಳು; ಜುಗುಪ್ಸೆಯಿಲ್ಲದಂತಾಗು: ಸಂಸಾರದೊಳ್ ಪೇಸುಗೆಗೆಟ್ಟೀ ನಾಣ ಪುತ್ತುಪ್ಪಟಿಜಗಳದೊಳೇನಮ್ಮ ತಕ್ಕೂರ್ವರ್ಯುಂಟೇ (ಶಾಂತಿಪು. ೬-೮೬). [ಪೇಸುಗೆ+ಕೆಡು$_1$]

**ಪೇಸುತಪ** (ನಾ). ಜುಗುಪ್ಸೆಯನ್ನುಂಟುಮಾಡುವ ತಪಸ್ಸು: ಭಾವಿಸು ವಂದಿನಿಸು ಪೇಸುತಪಮಂ ಕಾಣೆಂ (ಧರ್ಮಾಮೃ. ೪-೦೦೬). [ಪೇಸು$_2$ + ತಪ$_3$]

**ಪೇಸುಪತ** ‘ ಪೇಸುಪಥ ’ ನೋ.

**ಪೇಸುಪಥ, ಪೇಸುಪತ** (ನಾ). ಅಸಹ್ಯ; ಜುಗುಪ್ಸೆ: ರಾಜ್ಯಾಭಿಲಾಷೆಯಿಂದಿರ್ದನಪ್ಪೊಡೆ . . . ಸೌಂತೆಯ ತೋಂಟದಂತೆ ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೬-೦೨೨); ಕಣ್ಗೆ ಕೊಕ್ಕರಿಕೆ ಮನಕ್ಕೆ ಪೇಸುಪಥಮಾಯ್ತೆನಸುಂ ನೆಗಟ್ದಾ ರಣಾಂಗಣಂ (ಶಾಂತೀಶ್ವ. ೬-೦೨). **ಪೇಸುಪತ :** ತಪ್ಪೆಯಂತೆ ಪೇಸುಪತಮಪ್ಪುದು . . . ಬಣಗಿನಂತೆ ನೇರಿತಲ್ಲದು ಬಗೆಪಂದಿ: ಶರೀರಂ (ಧರ್ಮಾಮೃ. ೪-೦೬೫); ಪೇಸುಪತಂ ಕರಂ ಕಿಸುಗುಳಂ ಕಾಯಂ ಶುಚಿಪ್ರಾಯಮೇ (ಪುಷ್ಪದ. ೦೩-೪೪). [ಪೇಸು$_2$+ಪಥ ?]

**ಪೇಸುವೆ** (ನಾ). ಹೇಳಿದುದಂ; ವಿಷಯ; ಸಂಗತಿ: ಮಾಣಿಗಬಸುಣ್ಣ ಪೇಸುವೆ ಚಲಭೂಷಣನೆಟ್ಟು × ಪರಾಕ್ರಮನ ಪುದಿದ ಕಲ್ಲು ಕೊತ್ತುಟಿ ಸುದ್ದಂವಡೆಯರಂ ಪಾಂಗಿಳಂ (ಎಕ. X, ಶಿಡ್ಲ. ೦೨-೨; ಸು. 800 ?). [←ತಮಿ. ಪೇಚ್ಚು]

**ಪೇಸೇಳ್** ‘ಪೇಸೇಟಿ$^1$’ ನೋ.

**ಪೇಸೇಳು** ‘ಪೇಸೇಟು’ ನೋ.

**ಪೇಸೇಟು, ಪೇಸೇಳ್, ಪೇಸೇಳು, ಹೇಸೇಳ್** (ಕ್ರಿ). (ಅಜ್ಜಿಬಜ್ಜಿಯಾಗಿ) ಅಸಹ್ಯವುಂಟಾಗಂ; ಜುಗುಪ್ಸೆಯಾಗು: ಪದಿನೆಂಟುಕೋಟಿ ಪದಾತಿಯುಮನಲಸದೆ ಪೇಸೇಟ$^3$ ಕೊಂದು (ಜೈಕಭಾ. ೦೦.೦೪ ಪ) ; ಒಡಿದು ಪೇಸೇಟ$^3$ ಸೀಳ್ದಿಕ್ಕಿದು (ಪರ್ವಶಾ. ೩-೨೨) ; ರಣದೊಳ್ ಪೇಸೇಟ$^3$ ಹೊಯ್ದು (ಎಕ. VIII. ಸೊರಬ. ೨೫೦-೯ ; 1237). **ಪೇಸೇಳ್ :** ನಿಬನ್ಧಿಸಿ ಕಟ್ಟಾಳಲಾರದ ನಾವೀ ಅಧಿರಾಜರು ಪಾಲಕರೆನಿಸಿರುವುದು ಪೇಸಳ್ದು, ಪಟ್ಟಣದ ರತ್ನಸಿಂಹಾಸನದಡಿಯಲ್ಲಿ ಭೂಕಂಪವಾಗುತ್ತಿರಬೇಕೆಂಬ ಶಂಕೆಯನ್ನುಂಟುಮಾಡಿ ಬಾಧಿಸುತ್ತಿದೆ (ಬಬ್ರು. ೬೪-೦೬). **ಪೇಸೇಳು :** ಉಗ್ರಾಂತ್ಮಕನಂದ್ದಿಂದ ಪಲರಂ ಪೇಸೇಳೆ ಕೊಂದಿಕ್ಕಿ (ಎಕ. VII, ಶಿಕಾ. ೦೩೩-೦೦ ; 1198 ?). **ಹೇಸೇಳ್ :** ಜಪನೊಕ್ಕಲಿಕ್ಕಿದಂತಿರದ್ಬುತಪಾಗೆ ಹೇಸೇಳೆ ಕೊಣ್ದು ಬೆನ್ನಟ್ಟಿದಲ್ಲಿ (ಎಕ. VII. ಹೊನ್ನಾಳಿ. ೫೫-೦೦ ; 1247). [ಪೇಸು$_2$ + ಏಟ್$_1$]

**ಪೇಳ್** ‘ ಪೇಟ್ ’ ನೋ.

**ಪೇಳಾಪೇಳಿ** (ನಾ). [ಸಂಗೀತ] ಠಾಯದಲ್ಲಿ ಒಂದು ಪ್ರಕಾರ: ತಾಳ ಸಾರಿವರೀತ ಪೇಳಾಪೇಳಿಯುಂ ಸಂಜಾತಜಾಯನುಜಾಯುಚಿತ್ರಮೊಯ್ಯಾರ ಮೊಡಗೂಡಿ (ಬಸವು. ೦೮-೦೨).

[← ತೆಲು. ಪೆಳ್ಳಾಪೆಳ್ಳಿ. / ಸಂ. ವೇಲಾವಲಿ = ಒಂದು ನಿರ್ದಿಷ್ಟ ಸ್ವರಶ್ರೇಣಿ]

**ಪೇಳಿ** ‘ ಪೇಟ್ಳಿ$_2$ ’ ನೋ.

**ಪೇಳಿಕೆ, ಹೇಳಿಕೆ$_2$** (ನಾ). ೧. [ಕಾವ್ಯಮೀ] ಶಬ್ದಾಲಂಕಾರದಿಂದ ಕೂಡಿದ ಕಾವ್ಯರಚನೆ ; ಒಗಟು ; ಒಡ್ಡಪು : ಸುಕವಿಪ್ರಕರಕ್ಕೆ ವಿನೋದ ಕೇಳಿಗುಪಯೋಗಹೇತುಗಳ್ ಪ್ರಚ್ಛನ್ನಪ್ರಕಟಾರ್ಥಂಗಳನೇಕಪ್ರಕಾರದಿಂದೊಂದಿ ವರ್ತಿಕುಂ ಪೇಳಿಕೆಗಳ್ (ಕಾವ್ಯಾವ. ೫೯೩) ; ನುಸುಳೊರ್ನುಡಿ ಭಾಮೆ ಮನಕ್ಕೆಸೆವಪ್ಪಷ್ಟಾರ್ಥಮುಟಿವು ನಾಮಾಂತರಿತಂ ಕುಸುರಿಯ ನುಡಿಯೆಂಬಿವು ಭಾವಿಸೆ ಪೇಳಿಕೆಗಳೊಳ್ ಪೇಟ್ವ ಭೇದಮವಕ್ಕುಂ (ಕಾವ್ಯಾವ. ೫೯೪). **ಹೇಳಿಕ್ಕೆ:** ೧. ಅನುಗತಂ ಪೂರ್ವಕವಿಗಳ್ ನೆನೆದಿನ್ನುಂ ಪೇಟ್ದಿಂ ದುಷ್ಕರೋಕ್ತಿಯನ್ನನುಗತಕ್ರಮದೆ ಬಗೆದು ಹೇಳಿಕೆಯೊಳ್ ಜನಿತವಿಭೇದಮುಮಂ ಪೇಟ್ವೆಂ (ಕವಿರಾ. ೨-೦೪೦). ೨. [ಸಂಗೀತ] ಕೊಳಲನ್ನು ನುಡಿಸುವುದರಲ್ಲಿ ಒಂದು ಪ್ರಕಾರ : ಆಲಾಪ . . . **ಹೇಳಿಕೆ** . . . ವ್ಯಾಪ್ತಿ ಮುಂತಾದ ಪ್ಪತ್ನಾಲ್ಕು ತೆಱವಲ್ಲಿ . . . ಭೇದವಱಿದಾಲಾಪಿಸಿ (ಪಿಕೇಳ. ೨೩೬).

[< ಸಂ. ಪ್ರಹೇಲಿಕಾ]

**ಪೇಳಿಗೆ** ‘ ಪೆಟ್ಟಿಗೆ ’ ನೋ.

**ಪೇಳಿಸು** ‘ ಪೇಟಿಸು ’ ನೋ.

**ಪೇಳು** ‘ ಪೇಟ್ ’ ನೋ.

**ಪೇಳ್ಕೆ** ‘ ಪೇಟ್ಕೆ ’ ನೋ.

**ಪೇಳ್ಗೆ** ‘ ಪೆಟ್ಟಿಗೆ ’ ನೋ.

**ಪೇಱಿಸು, ಪೇರಿಸು$_1$, ಹೇರಿಸು, ಹೇಱಿಸು** (ಕ್ರಿ). ೧. (ಭಾರವನ್ನು) ಹೊರುವಂತೆ ಮಾಡು ; ಹೊರಿಸು : ಶೀಘ್ರದಿಂ ನಿಖಿಳಭಂಡಾರಮಂ ತೆಗೆಸಿ ನಾನಾವಸ್ತುನಿಚಯಮಂ ಪೇಱಿಸಿ ಸಮಸ್ತಸೇನಾವಿತತಿಸಹಿತ . . . ಪೊಱಮಟ್ಟನು (ಕೃಷ್ಣಭಾ. ೪-೬೭). **ಪೇರಿಸು$_1$:** ೨. (ವಸ್ತುಗಳನ್ನು)ಒಂದರ ಮೇಲೊಂದರಂತೆ ಇಡು; ಅಡುಕಂ: ಮಡಿಕೆಗಳನ್ನು ಪೇರಿಸಿ ಇಟ್ಟುಕೊಟ್ಟನು (ಕಥಾಮಂ. IV, ೩೭) ; ಬಲಭಾಗದಲ್ಲಿ ಪೇರಿಸಿದ್ದ ಹಾಸಿಗೆಸುರುಳಿಯನ್ನೇರಿ ಕುಳಿತಳು (ಮಾಪುಣಿ. ೫); ಹೀಗೆ ಬೆಳವಣಿಗೆಯು ಪದರಗಳು ಒಂದರ ಮೇಲೊಂದನ್ನು ಪೇರಿಸಿಟ್ಟಂತೆ ಕಾಣುತ್ತವೆ(ಹಸುಹೂ. ೨೮೩). **ಹೇರಿಸು:** ೧. ವಿವಿಧರತ್ನಾಭರಣಕಾಂಚನನವಮುಕೂಲಂಗಳನು ಅವರವರ ತೆರನರಿತು ಹೇರಿಸಿದರು ವಿಚಿತ್ರದಲಿ (ಕೋಗಯು. ೦೩-೯) ; ಹೊಗಳಿಕೆಯ ಹೊರೆಯನ್ನೇ ಹೇರಿಸುತ್ತಿದ್ದರು (ಕಂಳ. ೯೨). **ಹೇಱಿಸು :** ೧. ಕೇರಳರ ಸದೆದು ಮಹಾರ್ಘರತ್ನಾವಳಿಯ ಹೇಱಿಸಿದನು ಸುಚಿತ್ರಾಂಬರ ವಿಲೇಪನವ (ಕುವ್ಯಾಸ. ೫-೨೦) ; ಅತಿ ಸುಮ್ಮಾನದಲಿ ಶಿಶುಪಾಲ ಹೇಱಿಸಿದನು ಮಹಾಧನವ (ಕುವ್ಯಾಸ. ೪-೩).

[ಪೇಱು$_1$ + – ಇಸು$_3$]

**ಪೇಱು$_1$, ಪೇರು$_1$, ಹೇರು$_1$, ಹೇಱು$_1$** (ಕ್ರಿ). ೧. (ವಸ್ತುಗಳನ್ನು) ಒಂದರ ಮೇಲೊಂದರಂತೆ ಇಡು; ಅಡುಕು: ತಳಿರ್ಗಳಿಬುಂಬಿನೊಳ್ತಿರದೆ ಪೇಱಿದ ಕೃಷ್ಣಮೃಗಾಜಿನಂಗಳಿಂ . . . ತೋಱಿದಮಾಗಳಶೋಕಭೂರುಹಂ (ಕಾದಂಪೂ. ೨೨೭); ಆ ಜವನಿಕ್ಕುಂ ಕೋಣನಿನ್ದಂ ಪಗೆವರ ಪೆಣನಂ ಪೇಱಲೀ ವಿಷ್ಣುಪಂ ಕಾದುವನಾವಂ (ಎಕ. V, ಹಾಸನ. ೬೫-೨೫ ; 1149). ೨. ಇಡು ; ಇರಿಸು : ವಿಜಯಗಜಮನೇಱಿ . . . ಬಲದ ಕೋಡ ಮೇಲೆ ಕೆಯ್ಯಂ ಪೇಱಿ (ಪಂಪಭಾ. ೯-೯೫ ಪ); ಗಿರಿಜೆಗೆ ಶಿವಲಿಂಗವಂ . . . ತೋಱಿ ಲೊಡಂ ಕಣ್ದಱಿದಳ್ ಪೇಱಿದಳೆರಡುಂ ಕರಂಗಳಂ ನೊಸಲೊಳ್ (ಗಿರಿಜಾ. ೩-೫೪). ೩. ತುಂಬಿಕೊಳ್ಳು ; ತಾಳು ; ಹೊಂದು : ನನೆಯನೆ ಪೇಱಿಕೊಂದಳಿರೊಳೆಯ್ದೆ ಬಟಲ್ದೆಳಮಾವು (ಆದಿಪು. ೦-೬೫) ; ಕಾಯ್ದುಱುಗಲಂ ಪೇಱಿರ್ದ್ದ ಚಿನ್ದಂಗು (ಎಕ. VIII, ಸೊರಬ. ೨೬೫-೮ ; 1231) ; ಬೇರಿಂದಂ ಕಾಯ್ಗಳಿಂ ಪೇಱಿದ ಪಲಸುಗಳೆಲ್ಲೆಲ್ಲಿಯುಂ(ಶಾರಕ್ಷ. ೦-೦೦೬); ಮಾಮರಗಳು ತಳಿರ್ಗಳಂ ಪೇಱಿ$^3$ ವಿರಹಿಗಳ ಬಾಯಾಱಿ$^3$ (ಶಬಪು. ೪೫-೯). ೪. ಹೆಚ್ಚಿಸು ; ಅಧಿಕಗೊಳಿಸು : ಮುಂದಪವನಂ ಸಂತೋಷಮಂ ಪೇಱಿ$^3$ (ದಶಕು. ೩-೪). **ಪೇರು$_1$:** ೨. ಬೀಳ್ದ ಕಲ್ಲೊತ್ತಲೆಯುನಾರ್ಯಂ ಪೇರಿರೆಂದೊರೆಯಲು ಕಲ್ಲುಗಳನೆಲ್ಲ ಪೇರಲು (ಮಹಾಂಕೇ. ೨೧-೩೩); ತನ್ನ ಕುಕ್ಕೆಯನ್ನು ನಿಧಾನವಾಗಿ ಮಂಡೆಯ ಮೇಲಿನ ಚುಂಡಿನ ಮೇಲೆ ಪೇರಿಕೊಂಡಳು ಕಾವೇರಿ (ಹೊಸಕ್ಷ. ೫೩). **ಹೇರು$_1$:** ೧. ಅವುಗಳ ಮೇಲೆ ಕಟ್ಟಿಗೆಯ ತುಂಡುಗಳನ್ನು ಹೇರಿ

. . . ಓಪಾಯಿಯನ್ನು ತುಂಬುತ್ತಾರೆ (ತುಂಬಯು. ೯-೫೫). ೫. ಭಾರವನ್ನು ತುಂಬು,-ಹೊರುವಂತೆ ಮಾಡು : ಹೇರುವ ಮಾನ್ಯದ ಎತ್ತು ನಡೆ ೫೦ (ಎಕ. VII, ಶಿವಮೊ. ೨೮-೯೩ ; 1670); ಇಷ್ಟೊಂದು ಪಠ್ಯ ವಿಷಯಗಳನ್ನು ಮಕ್ಕಳ ಮೇಲೆ ಹೇರುವುದೆ ? (ಶಿಕ್ಷದ. ೦೨೬). ೬. (ಆಲಂ) ಹೊಡೆ; ಬಡಿ : ತನ್ನ ಎರಡೂ ಕೈಗಳಿಂದ ಬಲವಾಗಿ ಪಟಾ, ಪಟಾ ಎಂದು ಏಟು ಹೇರುತ್ತಿದ್ದಳು (ಹಳ್ಳಹಾ. ೦೦೯); ಆ ಪುಂಡನನ್ನು ಹಿಡಿದು ಚೆನ್ನಾಗಿ ಹೇರಿದರು (ರೂಢಿ). ಹೇಱು₁: ೧. ಹೇಱಿದರು ಹಿಳುಕು ಗಳ ಮೈಯಲ್ಲಿ (ಕುವ್ಯಾಶೀ. ೬-೦೯). ೨. ಕರಂಗಳ್ ಚಿಲ್ಲನಾಂತಿರ್ದೊಡಂ ಮುಱಿದಂತಿರ್ಪರ ಮೇಲೆ ಹೇಱಿ ನಡೆಪರ್ (ಸೋಮಶ. ೫೩). ೩. ಲೌಕಿಕಧರ್ಮಮಂ ಮಿಱಿ ಕಡುನಿಷ್ಠೆಯಂ ಹೇಱಿ ಪರಮಸುಖದಿಂದಿ ರ್ಪುದು (ಚಕರ. ೯-೫೫); ತುದಿ ಮೊದಲ್ವನಕ ಹೇಱಿದ ಕಾವ್ಯರಸಫಲಂಗಳನು ಸವಿಸುವುದು (ಹರಿಕಾ. ೦-೧೮) ; ನೂಱಿರೊಡನೈವರನು ಧರಿಸಿರಲಾಱದೀ ಪುರಿಯೆನುತ ದುಗುಡವ ಹೇಱಿ ಹೊದಕುಳಿಗೊಳುತಲಿರ್ದುದು ಹಸ್ತಿನಾ ನಗರ (ಕುವ್ಯಾಆ. ೮-೩). ೪. ಹೇ[ಪಾಠಾಂ. ತೋ]ಱಿದವು ಹರುಷವನು ತನು ನಗೆದೋಱಿದವು ಮುಖಕಮಲ (ಹರಿಚಾ. ೦-೮-೨) ; ಅತಿತ್ವರಿತ ಗಮನದಿಂದೆ ಹೇಱಿದುದು ಭಯಮನಹಿಸಂಕುಲಂ (ಜಬಪು. ೯೦-೮). ೫. ಹುಲ್ಲ ಹೇಱುವೊಡೆ ಬಂದಿರುವ ಕವಾಡದ ರ್ಬಲ್ಲಿಯ ಕೊಂಬಿನೆತ್ತುಗಳ ನಿಲ್ಲದೆ ತಿರುಹಿಕೊಂಡು (ಕುವಶಿ. ೩-೬೨). ೬. ಹೇಱಿದನು ಶತಬಲಿಯ ಕರು ಳನು ಕಾಱಿಸಿದನಂಗದನ (ಕೌಶಿರಾ. ೩೫-೦೬); ಖಳರಾಯ ತ್ರಿಶೂಲದಿ ಹೆದ್ದೈ ವವ ಹೇಱಿದನು (ಸೋಹಶ. ೯೦-೬೫). ೭. ತುಂಬಿ ಸಾಗಿಸು : ಇಱಿದಡೆ ದಂಡವಿಲ್ಲ ಹೇಱಿವಡೆ ಸುಂಕವಿಲ್ಲ (ಎಕ. VI, ಕಡೂರು. ೦೫೬-೬೩ ; 1191). ೮. ಮುತ್ತು ; ಕವಿ ; ಆವರಿಸು : ಖಡ್ಗ ತೋಮರ ಸುರಗಿ ಹೊಳೆದವು ಕೈದು ಹೇಱಿದವಖಿಳದೆಸೆಗಳಲಿ (ಕುವ್ಯಾದ್ರೋ. ೫-೮); ಮಿಱಿದ ಕವ್ಮು ಲರ್ಗಳ ದೇವಾರ್ಚನೆಗೇಱಿಸಗೊಡದೆಯೆಂಜಲಿಸಿ ಹೇಱಿದ ಪೞವೆಎಂಡು ಗಳ ಬಂಧಿಸಿವಂತೆ ನೇಱಿಲ ಪಣ್ಗಳೊಪ್ಪಿದುವು (ಸೋಹಶ. ೨೯-೯೫). ೯. ಹೆಚ್ಚಾಗು ; ಅಧಿಕಗೊಳ್ಳು : ವೈರಾನುಬಂಧದ ಬೇಗುದಿಯ ದುಮ್ಮಾನ ದಳವೇಱಿದುದು ಹೇಱಿತು ಭೀತಿ ಭೂಪತಿಗೆ (ಕುವ್ಯಾಗ. ೦-೬೨).

ಹೇಱುವೆತ್ತು, ಪೇರ್ವೆತ್ತು, ಹೇಱುವೆತ್ತು = ಭಾರವನ್ನು ಹೊರುವ ಎತ್ತು : ಸಾಸಿರ ಪೇಱುವೆತ್ತಿಗೆ ಪೆಜ್ಜುಂಕ . . . [ವ] ರಿಹಾರಂ ಮಾಡಿ ಬಿಟ್ಟಂ (ಎಇ. XXVIII, ೩೫-೫೦ ; ಸು. 1082); ಅಖಿಳಧಾನ್ಯಂಗಳಾ ಪೇರ್ವೆತ್ತುಗಳ ಮೇಲೆ ಬರೆ (ಜಬಪು. ೯೬-೯೦); "ಸ್ಥಾರೀ, ಪೃಷ್ಠವಾಹ್ಯಃ – ಈ ೨ ಹೇಱುವೆತ್ತು" (ಹಲಾಯು. ೯೯-೦೦೦) ; ನವನಿಧಿಯೊಳಗೊಲಿದು ದುಮಂ ಬ್ಯಪಹರಿಸಲುಕೆನ್ದು ಪೇಱುವೆತ್ತ್ವೆತ್ತುಂ ಭುವನದೊಳೆತ್ತಲು ನಡೆದಡೆ (ಎಕ. XI, ದಾವಣ. ೫೯-೮೦ ; 1280).

[ದೇ. ‖ ತಮಿ. ಏಱಕ್ಕು ; ಮಲ. ಪೇಱು ; ತುಳು. ಪೇರು ; ತೆಲು. ಪೇರುಚು]

ಪೇಱು₂, ಪೇರು₂, ಹೇರ್₂, ಹೇರು₂, ಹೇಱ್, ಹೇಱು₂ (ನಾ). ೧. ಪೇರಿಸಿಟ್ಟುದು ; ಅಡಕಿಲು : ಬಳೆಯ ಪೇಱನಾನೆ ಮೆಟ್ಟಿದಂತೆ ನುಚ್ಚುನೂಱಪ್ಪನಮುಪುಂಕಿ (ಶಂಶಭಾ. ೮-೬೩ ವ) ; ಬೆಲ್ಲದ ಪೇಱನಿರಿ ಪ್ಪೊಕ್ಕಂತೆ (ರಮಾಶ್ವ. ೨-೬೦) ; ಪತ್ತಿಯ ಪೇಱುಗಳಂ ಕೊಯಿದೆತ್ತುಗಳು ಬಿಲ್ಲರಾಜರೊಯ್ದಡೆ (ಕೃಷ್ಣಸ್ತ್ರ. ೯-೨೨). ೨. (ಒಂದು ಪ್ರಾಣಿ ಅಥವಾ ಒಬ್ಬ ಆಳು ಹೊರುವಷ್ಟು ತೂಕದ) ಹೊರೆ ; ಭಾರ : ಅಡಕೆಯ ಪೇಱಿಂಗೆ ಮೂನಱಿಱು (ಎಇ. IX, ೨೨-೮ ; 800) ; ಒಂದು ಪೇಱು ಪೊನ್ನಂ ಕುಡುವೆಂ (ಪಡ್ಮಾರಾ. ೦೮೬-೨೨) ; ದೇವರಿಗೆ ನನ್ದಾದೀವಿಗೆಗೆ ತಿಂಗಳ್ದಿಂಗಳಿಗೆ ಬಿಟ್ಟ ಎಲೆಯ ಪೇಱು ೧ (ಸೌಇಇ. IX-i, ೦೯೯-೫ ; 1081). ೩. ಚೀಲ : 'ತೊಗಲ್ವೇಱು' ಪರಾ. ಪೇರು₂ : ೪. ತಕ್ಕಡಿಯನ್ನು ಸಮ ತೋಲನಗೊಳಿಸಲು ಪರಡೆಗಳಲ್ಲಿ ಹಾಕುವ ಬಟ್ಟು ಇತ್ಯಾದಿ ಭಾರವಾದ ವಸ್ತು : 'ಏರುಪೇರು', 'ಪೇರುಕಟ್ಟು' ಪರಾ. ಹೇರ್₂ : ೧. ಇದು ವರಹ ರೂಪಾಯಿ ಹೇರ್ಗಳಿವು ಕನಕಾಭಿಷೇಕದಕ್ಷಿಣೆಗಿದು (ಕೃಷ್ಣಶಿ. ೨-೨೫). ಹೇರು₂ : ೨. ಉಭಯಪಾರ್ಗದ ಬೇಹಾರಿಗಳ ಹೇರು ಗಳಿಗೆ ಕೊಂಬು ಕಟ್ಟಣೆ (ಎಕ. XII, ಶಿರಾ. ೬೬-೬ ; 1379) ; ಹಸುಗಳ ಮೇಲೆ ಹೇರುಗಳನ್ನು ಎತ್ತದೆ . . . ರಕ್ಷಿಸುತ (ಕೃಪಾಅ. ೦೦೯) ; ಉಳುವೆ ನಾ ಭೂಮಿಯನು ; ಹೊರುವೆ ನಾ ಹೇರನ್ನು (ಪೀಗಟ್ಟ. ೦೬೩). ೫. (ಆಲಂ) ಹೊಣೆ ; ಜವಾಬ್ದಾರಿ : ನಾನಿನ್ನೂ ಕಾಲ ಮೇಲೆ ನಿಲ್ಲೋದೇ ಕಷ್ಟ ವಾಗಿದೆ. ಆಗಲೇ ಬೆನ್ನ ಮೇಲೆ ಹೇರು ಹೊರು ಅಂದರೆ ? (ಖಂಡಪ. ೦೯). ಹೇಱ್ : ೩. ಹೇರ್ಗಳು ಬಿಸುಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗುನೇಣಡುತೆ ಹೇರ್ಗಳ ಹೊಲಿವುತೆ (ಜಬಪು. ೯೬-೯೬). ಹೇಱು₂ : ೨. ಉಪ್ಪಿನ ಹೇಱು ಅಯ್ವತ್ತು (ಬೊಂಕಶಾ. ೦೯೩೬, ಹಾನಗಲ್. ೬೩-೨೦ ; 975) ; ಕೋಣನ ಹೇಱಿಂಗೆ ಕುನ್ನಿ ಬಸುಗುತ್ತಬಡೆವಂತೆ ತಾವು ನಂಬರು ನಂಬುವವರ ನಂಬಲೀಯರು (ಬಸವ. ೬೬೩) ; ಹೇಱನೊಪ್ಪಿಸಿದವಂಗಿಲ್ಲಿ ಯದು ಸುಂಕ (ಹರಿಕಾ. ೮-೫೯) ; ಎತ್ತು ಹೇಱುಗಳಿಂದ ಹೊತ್ತು ಮಾಱುವು ದಲ್ಲ (ತುರಂಪ. ೦-೦೨೬-೩).

[ <ಪೇಱು₁./ ತಮಿ. ಪೆಱು ; ಮಲ. ಪೇಱು ; ತೆಲು. ಪೆಱಿಕ ]

Δ ಪೇಱೊರ್ಪೆ 'ಪೇರೊಟ್ಟೆ' ನೋ.

Δ ಪೇಱೊರ್ಬೆ 'ಪೇರೊಟ್ಟೆ' ನೋ.

ಪೇೞ್, ಪೇಳ್, ಪೇಳು, ಹೇಳ್, ಹೇಳು, ಹೇೞ್, ಹೇೞು (ಕ್ರಿ). ಪೇಳ್ದ, ಪೇೞ್ದ (ಭೂತಕೃ). ಪೇರ್ದು, ಪೇಳ್ದು, ಪೇೞ್ದು, ಹೇಳ್ದು (ಭೂತನ್ಯೂ). ೧. ತಿಳಿಸು ; ನುಡಿ ; ಅರಿಯುವಂತೆ ಮಾಡು : ಏನೇನಭಿಮತಮಂ ಪೇೞ್ ನೀನಾಸ್ವಾದಿಸಿದೆ ದೇವಿಯರ ಮನೆಯೊಳ್ (ಕಾದಂಪೂ. ೮೫) ; ನೀವೆನಗೊಂದಪೂರ್ವಮಪ್ಪ ಕಥೆಯಂ ಪೇೞ್ವೇ ಱ್ಪುದು (ಶಂಕಶಂ. ೦೦-೦೦) ; ಇಂದು ನೃಪಂಗೆ ಸಂಭವಿಸಿದಂ ಭುಜಶಕ್ತಿ ಸವಿಸ್ತಾರನಂದನಂ ನಂದನನೆಂದು ಪೇರ್ದು (ಕುಸುಮಾ. ೬-೦೦೯). ೨. ನಿರೂಪಿಸು ; ವಿವರಿಸು ; ವಿಶದಪಡಿಸು : "ಪೇೞ್ದಂ = ನಿರೂಪಿಸಿದಂ" (ಕಮತ. ಶಂ. ೦) ; ಕಟ್ಟಪ್ಪಿನಾ ಪೆಟ್ಟದುಳ್ಳಿಪ್ರಸಂಗಂಗಳ ಪೇೞ್ದ ಸಿದ್ಧಸಮಯನ್ತ ಪ್ಪಾದೆ ನೋನ್ತು (ಎಕ. II, ೨೬-೦ ; ಸು. 700) ; ನೀವಿರ್ಪರುಂ ಬಂದುದ ಮುಮಂ ಮನೆವಾೞ್ತೆಯುಂ ಪೇೞಿಂ (ಶಂಶಭಾ. ೯-೦೦ ವ) ; ಬಣ್ಣ ಸರಂಗೋದಂತೆ ಧರ್ಮಶಾಸ್ತ್ರಂಬೇೞ್ವರ್ (ಸಮುಶ. ೩-೬೬). ೩. ಕಾವ್ಯ ರಚನೆ ಮಾಡು : ಪ್ರಕಟತರವಸ್ತುವಿಸ್ತರವಿಕಲ್ಪವಿದನಲ್ಲದಾಗದಾಗದು ಪೇೞಲ್ (ಕವಿರಾ. ೦-೨೮) ; ಛಂದಛಂದದಿಂ ಪೇೞ್ವಡುವುದಂ ಕಂಡು (ಪಡ್ಮಾರಾ. ೮೯-೦೯) ; ಕತೆ ಪಿಂದಾದೊಡಂ ಕತೆಯ ಮೆಯ್ವೆಡಱಿಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ (ಪಂಪಭಾ. ೦-೦೦) ; ಕರ್ಣಾಟಕಲಕ್ಷಣಶಬ್ದಶಾಸ್ತ್ರಮಂ ಲಾಕ್ಷಣಿಕರ್ಪೇೞೆಂದು ಬೆಸಸೆ ಬಗೆವುಗೆ ಪೇೞ್ದಂ (ಶಮದ. ೩). ೪. (ಯುದ್ಧಕ್ಕೆ ಹೋಗುವಂತೆ) ವಿಧಿಸು ; ನಿಯಮಿಸು : ಅಂತು ಭೀಮಸೇನನನಿಂದ್ರನ ಮೇಲೆವೇೞ್ವುದೆ ಪೂರ್ವದಿಗ್ಭಾಗಕ್ಕೆವೇೞ್ದು (ಶಂಶಭಾ. ೬-೨೮ ವ). ೫. ನಿರ್ದೇಶಿಸು ; ಸೂಚಿಸು : ಆಕೆ ಪುರೋಹಿತನ ಪೇೞ್ದಾಪಡಿಯೊಳ್ ಲಾಜೆಯವಗ್ನಿಕುಂಡ ದೊಳ್ ಸುರಿದು (ಶಂಶಭಾ. ೩-೬೫ ವ). ಪೇಳ್ : ೧. ಪನ್ನಿರ್ಮತ್ತರ್ಕ್ಕೆಯ್ಯುಂ ಮಾನ್ಯಂಗುಡುಗೆನ್ದು ಪೇಳೆ (ಇಇ. XII. ೨೨೩-೫ ; 929) ; ತತ್ಪುರದ ಮಹಾ ಜನದ ಮಹಿಮೆಯುಂ ಪೇಳ್ವಡೆ (ಸೌಇಇ. XI-ii, ೦೨೬-೧ ; 1080) ; ಸರ್ವಾ ಭರಣನಲ್ಲಿಗೆ ಕಳಿಪುವುದೆಂದು ನಾರದಮುನಿ ಪೇಳ್ದು ಪೋಗೆ (ನಿಜ.೨ ಕಾಣಿಗರ್) ೩. ರಸಪೂರಿತ ಸುಪ್ರಬಂಧ ವಿಲಕ್ಷಣವೆಸವಂತೆ ಪೇಳ್ದಪೆಂದನು (ಸೋಮಶ. ೦-೨೬). ೫. ಪಾವಿಸೆಟ್ಟಿ ಪೇಳೆ ಬರೆದಂ (ಪ್ರಾಆ. ೦೯೩೬, ೫೫-೩೨ ; 1064).

೬. ಹೆಸರಿಟ್ಟು ತಿಳಿಸು; ಗುರುತಿಸು: ಮಂತ್ರೀಶ ಪೇಳ್ದ ಪೇಳ್ದರಿಗುಡು ಗೊಱಯಿತ್ತು ಮನ್ನಿಸಲು (ಪೋಹಶ. ೯೦-೫೯). ಪೇಳು : ೧. ಪೊಗಳ್ವಲ್ಲಿಗಾವಳವೆ ಪೇಳು ಸಾಸಿರ್ವರ ಖ್ಯಾತಿಯುಂ (ಸೌಇಇ. V, ೬೯೯-೨೦ ; ೧೦೪೪); ಎಂತುಸುರದಿರ್ಪೆನಿನ್ನೆಂತು ಪೇಳುವೆನಿದಂ (ತಿರುರ. ದೀ. ೨೦. ೬); ಮಂದಗಮನೆ ಇವನಾರೆ ಪೇಳವ್ವ (ಪುರಂದ. ೨-೭೦-೧) ; ಒಡೆಯನಿರಿಸಿ ದಂತಿಪುರ್ದಲ್ಲದೆ ಪೇಳೊಡವೆಗೆ ಬೇಱರವುಟೆ (ಹರಿಬ. ೧-೯೯). ೨. ಬಣ್ಣಿಸಿ ಪೇಳುತ್ತಿಪ್ಪುದು (ಪ್ಯಾಅಂ. ೦೯೩೭, ೩೨-೦೩ ; 1140). ೩. ಸಕಲ ಸೂರಿಗಳ ಪಾದಾರವಿಂದವ ನೆನೆದೀ ಕೃತಿಯನು ಮೇದಿನಿ ನಲಿಯೆ ಪೇಳು ವೆನು (ಕಂಪಬಿ. ೦-೦೨). ಹೇಳ್ : ೫. ಎಲ್ಲರ ತಱಬಿ ಹರ್ಮ್ಯದ ಹತ್ತಿ ಹೇಳ್ದಳು ಪುಲ್ಲಶರಾತ್ಮಸಂಭವಗೆ (ಪೋಹಶ. ೩೩-೫೯) ; ದೇವಾಲ್ಯವುಂ . . . ಮಾಡೆಂದೊಸೆದು ಹರಿಹರಂ ಹೇಳ್ದು ತಾಂ ಮಾಡಿಕೊಣ್ಡಾವ್ (ಎಕ. XI, ದಾವಣ. ೨೫-೬೦ ; 1224). ೭. ಶಾಸನದಲ್ಲಿ ಬರೆಸಿ ದಾನ ಮಾಡು : ಗವುಡುಗೆಱಯಲ್ಲಿ ತಮ್ಮ ಕೊಡಗಿಯುಲು ಖಣ್ಣುಗಗದ್ದೆಯುಂ ಹೇಳ್ದು (ಎಕ. V, ಹಾಸನ. ೫೩-೬೨ ; 1170). ಹೇಳು : ೧. ಜೀವ ಪರಮನ ಮಧ್ಯದಲ್ಲಿ ನಿಂದು ಆರ್ಕೈಕೆಗೊಂಬರಾರು ಹೇಳಿರಣ್ಣಾ (ಕೋಂಶಾಂ. ೯-೯) ; ಕಡೆಗೆ ಧರ್ಮಜ ಹೇಳು ಕೊಂದವನಾರು ನಂದನನ (ಕುವ್ಯಾದ್ರೋ. ೬-೨೭) ; ಕಬ್ಬಿನಂತಿರಬೇಕು ಬದಿರಂತೆ ರಚಿಸಲೇ ಕಬ್ಬ ಹೇಳಲೆ ಸರಸ್ವತಿಯೆ (ಭರತ. ೦-೭). ೨. ರವಕುಳವ ನಾನೇನ ಹೇಳುವೆನವನಿಪತಿ (ಕುವ್ಯಾಕ. ೦-೭). ೩. ತಿಳಿಯ ಹೇಳುವೆ ಕೃಷ್ಣಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ (ಕುವ್ಯಾಆ. ೦-೦೩). ೪. ಕಾಳಗವ ಮಾಡಲ್ಲದಿದ್ದರೆ ಹೇಳಿದಾ ಕಪ್ಪವನು ತೆತ್ತೀ ತಲೆಯನುಳುಹಿಕೊಳು (ಸಾಳ್ವಭಾ. ೦೯-೦೦) ; ದೊರೆ ಹೇಳಿದನೆಂದರೆ ಮರದ ಕಾಯಿ ಬಿದ್ದೀತೆ ? (ಗಾದೆ). ೮. ಕಥನ ಮಾಡು ; ಕಥಿಸು : ಆ ದೇವರಲ್ಲಿ ಶಾಸ್ತ್ರಬ್ಯಾಖ್ಯಾನಮುಂ ಮಾಡಲುಂ ಪುರಾಣಮುಂ ಹೇಳಲುಮೊಬ್ಬುರ್ಪಾಧ್ಯಾಯರ್ಗ್ಗೆ ವರ್ಷವರ್ಷಕ್ಕೆ ಬಾಗುಳಿ ಯೇಳು ಗದ್ಯಾಣ (ಸೌಇಇ. IX-i, ೨೭೭-೬೨ ; 1160) ; ಹೆ.[ಶಾಕಾಂ. ಪೇ]ಳಿದ ಹರಿಕಥೆಯ ಕೇಳದವ ಹೊಲೆಯ (ಪುರಂದ. ೦-೦೭೪-೦). ೯. ಗಮನಕ್ಕೆ ತರು : ತಾಂ ಹೇಳದೆ ಸೋಮಭೂಮಿಪತಿಯಲ್ಲಿಗೆ ಬಂದಡೆ ರಾಜ್ಯ ವಾಯ್ತು ಸಲ್ಲೀಲೆಯೊಳು (ಕೊಲ್ಹಾಶಾ. ೯-೯೦ ; 1147). ೧೦. ಕರೆ ; ಆಮಂತ್ರಿಸು ; ಬರಹೇಳು : ಹೇಳದಾತನಕೆ ಬರ ಹೊಲ್ಲ (ಸರ್ವಜ್ಞ. ೦೯೫೩). ೧೧. ದೂರು ; ಚಾಡಿ ಚುಚ್ಚು : ಮೇಲಧಿಕಾರಿಯೊಂದಿಗೆ ಉಳಿದವರ ಮೇಲೆ ಯಾವಾಗಲೂ ಹೇಳೋದೇ ಅವಳ ಸ್ವಭಾವ (ರೂಢಿ). ೧೨. ಒತ್ತಿ ನಂಡಿ,—ತಿಳಿಸು : ನೀನು ಹಾಗೆ ಹೇಳಬೇಡ (ರೂಢಿ). ೧೩. ಪ್ರಕಟಿಸು ; ತೋರ್ಪಡಿಸು : ಕಾಳಿಕೆಯ ಕೈಕೊಂಡು ಸಿರಿಮೊಗ ಹೇಳುತಿದೆ ಭೀತಿಯನು (ಕುವ್ಯಾದ್ರೋ. ೬-೫೭). ಹೇಟ್ : ೧. ದಾಳಿಂಬ ದೊಳ್ವಣ್ಣನೊಡೆದು ಚಿಮ್ಮೂಗಿಟ್ಟು ಹೇಟಿಉಳವಡದ ಸಲ್ಲೀಲೆಯೊಳಗಳ ವಟ್ಟು ತೊಱದೆಚ್ಚು ಪಾಯ್ವ ತನಿರಸಮನುಂಡು (ಉದ್ಯಬಿ. ೩-೯೫). ಹೇಟು : ೧. 'ಹೇಟುಹ' ಪರಾ.

ಹೇಳುಹೇಳು (ದ್ವಿರುಕ್ತಿ) : ಮುಗುಳುನಗೆ ನಿನಗೇಕೆ ಬಂದಿತ್ತು ಹೇಳುಹೇಳನಲು[ಶಾಕಾಂ. ಪೇಳೆನಲು] (ಬಸವು. ೯೦-೫) ; ಹೇಳುಹೇಳಿ ನ್ನೊಮ್ಮೆ ನುಡಿನುಡಿ ಕೇಳುವೆನು ಕಿವಿಯಾರೆ (ಕುವ್ಯಾಕ. ೫-೨೦) ; ಹೇಳು ಹೇಳಭಿಮಾನಭಂಗಭಡಾಳವಾರಿಂದಾಯಿತೆಂಬುದ (ತೊರರಾ. ೩-೫-೯). ಪೇಟ್ ಪಡು, ಪೇಳಿಪಡು = ಹೇಳಲ್ಪಡು : ಮಹಾಪುರಾಣದೊಳ್ ಪೇಟ್ ಪಟ್ಟುದು (ಚಾವುಂಪು. ೦೬೨) ; ಪರಮಾಗಮುಂ ಪುಸಿಯೆಂ ದೆಯಪ್ಪುಡೀ ಸಿದ್ಧಾಂತದೊಳ್ ಪೇಟ್‌ಪಟ್ಟ ಗಣಿತ ಜೋಯಿಸಂಗಳೇಕೆ ತಪ್ಪುವು (ಧರ್ಮಾಮೃ. ೫-೦೯೭) ; ಖಳನೆಯುದೇ ತೂರ್ಯಗಾಮಿನಿ ಪೇಳಿಪಡುಗುಂ (ಅಪೇಳ ೦೭-೨೩). ಹೇಳದೆ ಕೇಳದೆ = ಅಪ್ಪಣೆಯಿಲ್ಲದೆ : ಹೇಳದೆ ಕೇಳದೆ ಅಲ್ಲಿಗೆ ಯಾರೂ ಹೋಗುವಂತಿಲ್ಲ (ರೂಢಿ). ಹೇಳ ಹೆಸರಿಲ್ಲದಂತೆ = ನಿಶ್ಶೇಷವಾಗುವಂತೆ ; ಸಂಪೂರ್ಣವಾಗಿ : ಅರ್ಜುನನ ಶಕ್ತಿಗೆ ಶತ್ರುಸೈನ್ಯ ಹೇಳ ಹೆಸರಿಲ್ಲದಂತೆ ಓಡಿತು (ರೂಢಿ). ಹೇಳಿ ಕಳಿಸು = ಸಂದೇಶ, ವರ್ತಮಾನ, ಅಪ್ಪಣೆ ಮುಂತಾದು ವನ್ನು ಬೇರೆಯವರ ಮುಖಾಂತರ ತಿಳಿಸು ; ಸುದ್ದಿ ಮುಟ್ಟಿಸು : ಈ ಸಂಜೆ ಅವರ ಮನೆಗೆ ಬರಬೇಕೆಂದು ಹೇಳಿಕಳಿಸಿದ್ದಾರೆ (ರೂಢಿ). ಹೇಳಿ ಕೇಳಿ = ಎಲ್ಲರಿಗೂ ಗೊತ್ತಿರುವಂತೆ ; ತಿಳಿದೂ ತಿಳಿದು : ನೀವೆ ಕರೆಯದಿರುತಿರೆ ಛಂದವೇನು ನೀವೆ ಹೇಳಿ ? ಕೂಸು ನಾನು ಹೇಳಿ ಕೇಳಿ (ಹ್ಯದಸ. ೨೭-೧೭); ಹೇಳಿಕೇಳಿ ಮೊದಲೇ ಅವಳ ಕೆಲಸ ನಿಧಾನ. ಈಗಂತೂ ಕೇಳುವ ಹಾಗೇ ಇಲ್ಲ (ರೂಢಿ). ಹೇಳಿಕೊಂಡು ಹೋಗು = (ಸುಳ್ಳು) ಸುದ್ದಿ ಹಬ್ಬಿಸು ; ಪ್ರಚಾರ ಮಾಡು: ಅವಳು ಆ ಸಣ್ಣ ವಿಷಯವನ್ನು ಎಲ್ಲರೊಡನೆ ಹೇಳಿಕೊಂಡು ಹೋಗಿದ್ದರಿಂದ ಅದೇ ದೊಡ್ಡ ಹಗರಣವಾಗಿ ಹೋಯಿತು (ರೂಢಿ). ಹೇಳಿಕೊಟ್ಟ ಮಾತು = ಅರ್ಥ ಮಾಡಿಕೊಳ್ಳದೆ ಬೇರೆಯವರು ಆಡಿದುದನ್ನೇ ಆಡುವುದು; ಗಿಳಿಪಾಠ : ಕಟ್ಟಿ ಕೊಟ್ಟ ಬುತ್ತಿ, ಹೇಳಿಕೊಟ್ಟ ಮಾತು ಎಲ್ಲಿವರೆಗೆ ಬಂದೀತು ? (ಗಾದೆ). ಹೇಳಿ ಕೊಡು = ೧. ತಿಳಿಸು : ಇದಕ್ಕೆ ಪೇಚಾಡಬೇಡಿ ಎಂದು ಉಪಾಯ ವನ್ನು ಹೇಳಿಕೊಟ್ಟನು (ಕೀತಿಶಂ. IV, ೬). ೨. ಕಲಿಸು ; ಬೋಧಿಸು : ಹೀಗೆ ಹೇಳಿಕೊಟ್ಟರೆ ಸ್ವಲ್ಪವೂ ಪ್ರಯೋಜನವಿಲ್ಲ (ಕಳಹು. ೬೬). ೩. ಚಾಡಿ ಹೇಳು ; ಚುಚ್ಚಿಕೊಡು : ಅಕ್ಕಪಕ್ಕದವರು ಹೇಳಿಕೊಟ್ಟು ಅವಳ ಸಂಸಾರ ಹಾಳುಮಾಡಿದರು (ರೂಢಿ). ಹೇಳಿಕೊಳು, ಹೇಳಿಕೊಳ್ಳು = ೧. ಬಿನ್ನವಿಸಿ ಕೊಳ್ಳು; ಕೋರು: ಶಾಸನವ ಬರಸಿಕೊಡಬೇಕೆಂದು ನೀನು ಹೇಳಿಕೊಳುಧಾನೆಂದು ನಿರ್ವಾಣ್ಯೆಯಮಾವನವರು ಹೇಳಿದರಿಂದ ಬರಸಿ ಕೊಟ್ಟದು (ಪ್ಯಾಅಂ. ೦೯೩೩, ೩೦-೨೦; 1730). ೨. ತಿಳಿಸು ; ನುಡಿ : ಜನ್ಮ ಇರುವವರೆಗೂ ತಮ್ಮ ಉಪಕಾರ ನೆನಸುವೆನು ಎಂದು ವಿನಯದಿಂದ ಹೇಳಿಕೊಂಡನು (ಮುಂಬಯಿ. ೪-೫೦). ೩. ದುಃಖ, ಕಷ್ಟ ಮುಂತಾದು ವನ್ನು ಬೇರೆಯವರಲ್ಲಿ ತೋಡಿಕೊಳ್ಳು : ನಾಲ್ಕು ಜನರ ಹತ್ತಿರ ದುಃಖವನ್ನು ಹೇಳಿಕೊಂಡರೆ ಮನಸ್ಸಿನ ಭಾರ ಎಷ್ಟೋ ಕಡಮೆಯಾಗುತ್ತದೆ (ರೂಢಿ). ೪. ಜಂಬ ಕೊಚ್ಚಿಕೊಳ್ಳು : ಸದಾಕಾಲವೂ ತನ್ನ ವಿಷಯ ಬೇರೆಯವರ ಮುಂದೆ ಹೇಳಿಕೊಳ್ಳೋದೆ ಅವಳ ಜಾಯಮಾನ (ರೂಢಿ). ಹೇಳಿದ್ದು = ಶಾಸ್ತ್ರಸಮ್ಮತವಾದುದು ; ವಿಧಿವತ್ತಾದುದು : ಸ್ವಯಂ ವರದಲ್ಲಿ ಬ್ರಾಹ್ಮಣರಿಗೇನು ಅಧಿಕಾರ ? ಅದು ಕ್ಷತ್ರಿಯರಿಗೆ ಹೇಳಿದ್ದು (ವಕಥಾ. ೫೩). ಹೇಳಿ ಬರೆಯಿಸು = ಯಾವುದಾದರೊಂದು ವಿಷಯ ವನ್ನು ಮತ್ತೊಬ್ಬರು ಬರೆದುಕೊಳ್ಳಲು ಆಜ್ಞಾಪಿಸು:ಆ ಅಧಿಕಾರಿಯು ಆ ಎರಡು ನಿಯಮಗಳನ್ನು ಹೇಳಿ ಬರೆಯಿಸಿದರು (ರೂಢಿ). ಹೇಳಿ ಮಾಡಿಸಿದ್ದು = ಸಂಪೂರ್ಣವಾಗಿ ಹೊಂದಿಕೊಳ್ಳುವಂತಹುದು ; ತಕ್ಕುದು : ಈ ಕೆಲಸ ಅವಳಿಗೆ ಹೇಳಿ ಮಾಡಿಸಿದ್ದು (ರೂಢಿ). ಹೇಳುವವ = ಗ್ರಾಮದ ನಿರ್ದಿಷ್ಟ ಮನೆಗಳ ಮುಂದೆ ನಿಂತು ಅವರ ಮನೆತನದ ಬಗೆಗೆ ಹೊಗಳಿ ಜೀವನ ನಡೆಸುವವನು ; ಹೆಳವ : ಹೆಳವ ಎಂಬ ಪದವು ಬಹುಶಃ 'ಹೇಳುವವ' ಎಂಬುದರಿಂದ ಬಂದಿರಬಹುದು (ರೂಢಿ). ಹೇಳುವವರು ಕೇಳುವವರು = ಅಧಿಕಾರಯುಕ್ತವಾಗಿ ಅಪ್ಪಣೆ ಮಾಡು ವವರು : ಹೇಳುವವರು ಕೇಳುವವರು ಇಲ್ಲದಿದ್ದರೂ ಅವರವರ ಕೆಲಸವನ್ನು ಒಪ್ಪವಾಗಿ ಮಾಡಬೇಕು (ರೂಢಿ).

[ದೇ. ‖ ತೆಲು. ಪೇಲು, ಪ್ರೇಲು ; ಮಲ್ತೊ. ಪೇಳ್ಕೆ]

ಪೇಟು₁ 'ಪೇಡಿ₁' ನೋ.

ಪೇಟು₂, ಪೇಳಿ (ನಾ). ಬುಟ್ಟಿ ; ಗೂಡೆ : ಪಱದು ಬಿರ್ದ ಖಚರರ ತಲೆ ಸಂದಣಿಸೆ ವಿಮಾನಂಗಳ ಪೇರಣೆ[ಣಿ] ಪೋಲ್ತುದು ತೆಱದ ಮೊಗದ

ವೇಟಿಗೆಳಿರವಂ (ಕಂದ್ರಪು. ೬-೩೪). **ಪೇಳಿ :** ದೇವರ ಪೂಜೆಗಂ ಅಬಿವಂಟಿಗೆಗಂ ಬಿಟ್ಟ ಧರ್ಮ್ಮವೆಂತೆಂದಡೆ ಪೇಳಿಯುಲು ಪಣವಯ್ದು (ಕೌಇಇ. IX–1. ೨೨೩-೪೪ ; 1127). [←ತವಿ. ವೇಟ್ಕಿ. / ಸಂ. ಪೇಟೀ]

**ಪೇಟಿಸು, ಪೇಳಿಸು, ಹೇಳಿಸು, ಹೇಟಿಸು** (ಕ್ರಿ). ೧. ಅಭಿಪ್ರಾಯವನ್ನು ವ್ಯಕ್ತಪಡಿಸುವಂತೆ ಮಾಡು ; ಮಾತನಾಡುವಂತೆ ಮಾಡು; ಹೇಳುವಂತೆ ಮಾಡು : ಶುಕನಾಸನಂದನಂ ಬಂದವನಾತನಿಂದವಾಟಿ ವಂತಿರೆ ಪೇಟಿಸಿ ಮತ್ತ್ರಪಂಚಮುಂ (ಕಾದಂಣ. ೩೬೨). ೨. ಕಾವ್ಯವನ್ನು ಬರೆಸು ; ಕಾವ್ಯರಚನೆ ಮಾಡಿಸು : ಇಂತು ಪೇಟಿಸಿದ ನರೇಂದ್ರರುಂ ನೆಟಿಯ ಪೇಟ್ದ ಕವೀಂದ್ರರುಮಾರ್ ಧರಿತ್ರಿಯೊಳ್ (ಕಂಕಣ. ೦೪-೩೩) ; ಮಲ್ಲಪಾರ್ಯನುಮುದಾತ್ತಯಶೋನಿಧಿ ಪುನ್ನಮಾರ್ಯನುಂ ಸವಿ ತವದಂತು ಪೇಟಿಸಿದರ್ (ಶಾಂತಿಕ. ೦ ೩೭). ೩. (ಕಾವ್ಯವನ್ನು) ಓದಿಸು ; ವ್ಯಾಖ್ಯಾನಿಸು : ಪಿತ್ರ ಪುತ್ರನಂ ಕಥೆಯುಂ ಪೇಟಿಸಿದಂ (ಕಣ್ಣಾಸು. ೨೦೬ ಪ್ರಯೋ). **ಪೇಳಿಸು :** ೨. ಪಂಪಾಕ್ಷೇತ್ರದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡೆ ಸವಿನುಡಿಗಳಿಂದೀ ಚೆನ್ನಬಸವಪುರಾಣವಂ ಪೇಳ್ದೆನಧಿಕೋತ್ಸವದೊಳು (ಚಬಪು. ೦-೩೦); ಪೊಸವಿಪ ದಳವಾಯಿ ನಂಜರಾಜೇಂದ್ರ ತನ್ನೊಡೆಯನ ಕಾರ್ಯದೇಳಿಗೆಯು ಗಡಣವ ಚಿಂತೆಯಾಗೊಲಿದು ಪೇಳಿಸಿದನು (ಕಂಕಪ. ೦-೨೯); ಸಂತಸದಿ . . . ಪುರಂದರವಿಠಲ ವ್ಯಾಸಮುನಿಗಳು ಪೇಳಿಸಿದರು (ಜಗದಾ. ೬೬). ೩. ಕವಿದು ಪರಿಯೆ ರಸದೊಳ್ಗಂಪು ಕಮ್ಮನೆ ಕವಿತೆಯೊಂದನು ಪೇಳಿಸು (ಹರಿಬಿ. ೦-೨೬). **ಹೇಳಿಸು :** ೧. ಗಾಳಿಯಂ ಗಂಟಿಕ್ಕಲುಂ ಕಣ್ಣಾಲಿಗಳೊಳಿಹ ಬಾಲಕರನೊಳು ಸೂಳುಮಾತಂ ಹೇಳಿಸಲು . . . ಬಲ್ಲ ನೆಟಿ ಜಾಣೆ (ಬಸಪು. ೪೨-೪); ಭೀಮಗೆಹೇಳಿಸಿದಳಾ ಫಲುಗುಣನ ಕೈಯಿಂದ (ಕುಮ್ಮಾಆ. ೯ ೨೨); ಮುಂದಬುದ್ಧಿಯ ಬಿಟ್ಟು ಬಾಗಿಲ ತೆಗೆಸ ಹೇಳೆಂದ ನಾಯಕಗೆ ಪೇಳಿಸಿದ (ಮೋಹಕ. ೩೩-೬೩). **ಹೇಟಿಸು :** ೪. ವಿಧಿಸು; ಅಜ್ಞಾಪಿಸು : ಅನುಜ್ಞೆ–ಬೆಸನ ಹೇಟಿಸಿಕೊಳುಹ (ನಾಕಣ. ೬).

**ಪೇಟಿಸಿಕೊಳ್**=ವಿವರಣೆಯನ್ನು ಪಡೆ; ವರ್ಣನೆಯ ವಸ್ತುವಾಗು: ಈ ಲಕ್ಷಣಂಗಳನುಳ್ಳ ಕುದಿರೆ ಸಂಪೂರ್ಣಮಪ್ಪಾಯುಷ್ಯಮನುಳ್ಳುದೆಂದು ಪೇಟಿಸಿಕೊಳ್ವುದು (ಲೋಕೋಪ. ೦೦-೭೫ ಟೀಕ). [ಪೇಟು+—ಇಸು]

**ಪೇಟ್ಕೆ, ಪೇಳ್ಕೆ, ಹೇಳಿಕೆ₁** (ನಾ). ೧. ಹೇಳಿದಂದು; ಅಭಿಪ್ರಾಯಕಥನ : ಅನ್ಯರ ಪೇಟ್ಕೆಯುದೆಂಬ ಬಟ್ಟೆಯೊಳ್ನಡೆಯದಿರ್ (ಕಾದಂಉ. ೪೦೭); ಕೆಮ್ಮನೆ ಮೂರ್ಖರ ಪೇಟ್ಕೆಗೆ ತಮ್ಮ ಮನಂ ಸೋಲ್ತು (ಧರ್ಮಾಮೃ. ೦೦-೩೪); ತತ್ಪ್ರಪಂಚಮುಂ ನಿಜಪ್ರಿಯಸಖಿಯ ಪೇಟ್ಕೆಯಿಂ ಕೇಳ್ದು (ಜಗದಾ.೦೩-೩ ಪ); ಏನ್ ಪೇಟ್ಕೆ ಪೇಟ್ದೆ ನೀನ್, ಮುತ್ತಬ್ಬೆ, ಘೋರಂ! (ಅಶ್ವತ್ಥಾ. ೦೦-೦೯೬). ೨. ಅಜ್ಞೆ; ಅಪ್ಪಣೆ : ಸುರಸಿಂಧುವಾರಿನಿರ್ಝರನವರತ್ನಕುಂಭಶತತಿಗಳ್ . . . ಸುರರಾಜನದೊಂದು ಪೇಟ್ಕೆಯಿಂ ಸುರಪಥದಿಂದೆ ಬಂದುಮಭಿಷೇಕಮಹೋತ್ಸವದೊಳ್ ಮುಕುಂದನಾ (ಜಗಂ. ೬-೦೦೩); ಪುರಜ ಸಮಸ್ತಚೈತ್ಯನಿಳಯಂಗಳೊಳೆಯ್ದೆ ಜಿನೇಂದ್ರಪೂಜೆಯಂ ನಿರುಪಮಭಕ್ತಿಯಿಂ ಹಿತಪುರೋಹಿತನೊಪ್ಪಿರೆ ತನ್ನ ಪೇಟ್ಕೆಯಿಂ ನಿರವಿಸಿ (ಶಾರ್ಬ್ಯಕು. ೩-೩೩). 'ಪೇಟ್ಕೆಗೇಳ್' ಪರಾ. ೩. ವಿವರಣೆ ; ನಿರೂಪಣೆ : ಚಾಮರಾದಿಗಳನಿಕ್ಕಿದ ಗದ್ದುಗೆಯೊಳ್ ಮಹಾಪ್ರತೀಹಾರರ ಪೇಟ್ಕೆಯಿಂದೆಳಸಿ ಮತ್ತವರಂ ಪೆಸಗೊಂಡು (ಸೂಕ್ತಿಸು.೫-೨೪). **ಪೇಳ್ಕೆ :** ೪. ಕಾವ್ಯರಚನೆ: ಅಗ್ಗಳದ ಪಳೆಗಬ್ಬಿಗರ[ಪೇಳ್ಕೆಯ]ತೆಜದಿ ವಿರಚಿಸದೆ (ಶಾಸ್ತ್ರಬ. ೦-೪೫). **ಹೇಳಿಕೆ₁:** ೧. ನಿಮ್ಮ ಹೇಳಿದ ಹೇಳಿಕೆಯಿಂದ ಪಿಟೆರ ಪ್ರೈಲಿಗೆ ಮೇಳವಾಡುತ್ತಿದ್ದ ಕಾಣಾ ತ್ರೈಜಗದೊಳಗೆ (ಬಸವ.೩೬೭); ಈ ಹಳೆಯ ಹೇಳಿಕೆಗೆ ಹೊಸ ಉಸಿರು ತುಂಬಿದ್ದಾರೆ (ದ್ರಾಬಿ. ೪೨) ; ಈ ವಿಷಯದಲ್ಲಿ . . . ಒಬ್ಬರ ಹೇಳಿಕೆಯನ್ನಾಗಲೀ, ನಾವು ನಂಬುವುದಕ್ಕಿಲ್ಲ (ಕ್ರಕಾಶ. ೫೯). ೨. ಎಲ್ಲಾ ಸುಂಕವಂ ಶ್ರೀಮತು ಭುಜಬಲಚಕ್ರವರ್ತ್ತಿ ಬಿಜ್ಜಲದೇವರಸರ ಹೇಳಿಕೆಯಿಂ ರಾಮೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ (ಕಇ. II, ೨೪-೨೬; 1167); ನಮ್ಮ ಹೇಳಿಕೆ ಯಾವುದದನೀ ತಮ್ಮ ವಿವಾಹದು ನಡೆದನಾದಡೆ ನಮ್ಮ ವಾಪೆಯ ಬೀಳುಕೊಡುವೆವು (ಕುಮ್ಮಾಆ. ೬-೭); ಮದನನ ಹೇಳಿಕೆಯೊಳಂದು ವಿದಿತ ಮಂಗಳವಿವಾಹೋಚಿತಕ್ರಿಯೆಗಳಂ ವಿರಚಿಸಿದರು (ಕೈಬಣ. ೩೦-೫೪). ೩. ಎನ್ನ ಜನ್ಮಗಳೇಳನೊಲ್ಲದೆ ಬಂದೆವಾವ್ ಜನ್ಮತ್ರಯಂಗಳಲಿ ಹೇಳಿಕೆಯುಲಿನ್ನೊಂದು ಜನ್ಮದ ಬಾಳುವೆಯುಂ ನವಗುಂಟು (ಕೊರಣ. ೬-೪೬-೨೦). ೫. ಕರೆ ; ಆಹ್ವಾನ ; ಆಮಂತ್ರಣ : ಪ್ರಾಣೇಶಾಚಾರ್ಯರು ಯಾಕೆ ಬರಲಿಲ್ಲ . . . ಏನು ಹೇಳಿಕೆ ಕಳ್ಳಲಿಲ್ಲವೆ ಅವರಿಗೆ ? (ಸಂಸ್ಕಾರ. ೯೦) ; ಎರಡೂ ಕಡೆಯು ಹೇಳಿಕೆಗಳು ಶೀನಮಯ್ಯರಿಗೆ ಬಂದಿದ್ದುವು (ಮರಳು. ೨೬೪). ೬. ಕೋರಿಕೆ ; ಬಿನ್ನಹ : ಹೇಳಿಕೆಯಲಿ ವಿಚಿತ್ರ ಕುಳಿತಳು ಕಾಂತಿ ಥಳಾಳಿಪ ಮಣಿಮಂಚದೆಡೆಯ (ಮೋಹಕ. ೨೭-೩೩).

**ಹೇಳಿಕೆ ಮಾಡು, ಹೇಳಿಕೆಯನ್ನು ಮಾಡು**=ಕರೆ; ಆಮಂತ್ರಿಸು: ಚನಿಯ ಪ್ರತಿಯೊಬ್ಬರನ್ನು ಕಂಡು 'ನಾಳೆಗೆ ಪೂಜೆ ನಿಶ್ಚಯ ಮಾಡಿದೆ' ಎಂದು ಹೇಳಿಕೆ ಮಾಡಿದ (ಕುಂಡಕೊ. ೦೪೬) ; ತಿಮ್ಮ ಎಲ್ಲರಿಗೂ ಹೇಳಿಕೆಯನ್ನು ಮಾಡಿದ. ಊಟಕ್ಕೆ ಜನರೂ ಬಂದಿದ್ದರು (ಕುಂಡಕೊ. ೨೨೪). **ಹೇಳಿಕೆ ಮಾತು**=ಚಾಡಿ ; ಪಿಸುಣು : ಹೇಳಿಕೆ ಮಾತು ಕೇಳಿ ಅನೇಕ ಸಂಸಾರಗಳು ಹಾಳಾಗಿವೆ (ಲೂಪ). **ಹೇಳಿಕೆಯಾಗು**= ೧. ವರದಿಯಾಗು ; ಅಭಿಪ್ರಾಯ ತಿಳಿ : ಕೊರಳ ತೆತ್ತುದು ಚೂಣಿ ದಳಮುಖ್ಯರಿಗೆ ಹೇಳಿಕೆಯಾಯ್ತು (ಕುಮ್ಮಾಆ. ೬-೦೪). ೨. ಅಪ್ಪಣೆ ಮಾಡು ; ಆಜ್ಞಾಪಿಸು : ಹೇಳಿಕೆಯಾಯ್ತು ವರಪಾಂಚಾಲರಿಗೆ (ಕುಮ್ಮಾಆ. ೫-೦೬) ; ಬರಸಿದವು ಬಳಿಕೋಲೆ ಮಣಿಹಾಜಿರಿಗೆ ಹೇಳಿಕೆಯಾಯ್ತು (ಕೊರಣ. ೦-೭-೯).

[ಪೇಟು +—ಇಕ]

**ಪೇಟ್ಕೆಗೇಳ್** (ಕ್ರಿ). ಆಜ್ಞೆಯನ್ನು ಪಾಲಿಸು : ಗೋವಿಂದುಗಳಂ ಮೊಲೆತೊರೆದಾವುಗಳಂ ಪೇಟ್ಕೆಗೇಳ್ವ ತೊಟ್ಟಿರ್ಕಳ ಸದ್ಭಾವಮನೆಮ್ಮೆಯ ಪಿಂಡಂ ಭಾವಿಸಿ ನೋಡಂಬುಜಾಕ್ಷಿ ಚಿತ್ರೋತ್ಸವದಿಂ (ಧರ್ಮಾಮೃ. ೩-೦೦೭ ಅಡಿ). [ಪೇಟ್ಕೆ + ಕೆ.ಳ್]

**ಪೈ₁** (ಗು). ೧. ಮೇಲಿನ ; ಹೆಚ್ಚಿನ : 'ಪೈಪೋಟಿ' ಪರಾ. ೨. ಹೊರಗಿನ ; ಬಾಹ್ಯ : (೬). (ನಾ). ೩. ಮೇಲುಗಡೆ ; ಮೇಲು ಭಾಗ: (೬). [←ತೆಲು. ಪೈ, ಪಯಿ]

**ಪೈ₂** 'ಪಾಯ್ಯ₂' ನೋ.

**ಪೈಂಗಲ, ಪೈಂಗಳ** (ನಾ). ಚಾಂದ್ರಮಾನಗಣನೆಯ ಪ್ರಕಾರ ಅರುವತ್ತುಸಂವತ್ಸರಗಳಲ್ಲಿ ಐವತ್ತೊಂದನೆಯ ಸಂವತ್ಸರ; ಪಿಂಗಳ. **ಪೈಂಗಳ :** ಆ ವರ್ಷವೇ ಪ್ರಭವ ವಿಭವ . . . ನಳ ಪೈಂ[ಶಾಕಾಂ. ಪಿಂ] ಗಳ ಕಾಳಾಯುಕ್ತಿ . . . ಅಕ್ಷಯುವೆಂದಱುವತ್ತುತೆಱನಾಗಿಹುದು (ಏವೇಕ. ೨೬೩). 'ಪಿಂಗಲ' ಪರಾ. [ಸಂ.]

**ಪೈಂಗಳ** 'ಪೈಂಗಲ' ನೋ.

**ಪೈಂಜಣ** 'ಪೈಜಣ' ನೋ.

**ಪೈಂಟು** 'ಪಾಯಿಂಟು' ನೋ.

**ಪೈಕ** 'ಪಯಿಕ' ನೋ.

**ಪೈಕರಿ** (ನಾ). ತಾತ್ಕಾಲಿಕ ಬಾಡಿಗೆದಾರ ಅಥವಾ ಒಂದು ಊರಿನಲ್ಲಿ ವಾಸವಾಗಿದ್ದು ಇನ್ನೊಂದು ಊರಿನಲ್ಲಿರುವ ಜಮೀನಿನ ವ್ಯವಸಾಯ ಮಾಡುವವನು : (ಕೈಸ್‌ಗೆ. II, ೫೫೮). [?]

**ಪೈಕಿ, ಪಯಿಕಿ** (ಅ). ಸಂಬಂಧಿಸಿದುದರಲ್ಲಿ ; ಸೇರಿದುದರಲ್ಲಿ : ನೆಲಮಂಗಲತಾಲೂಕು ಪೈಕಿ ಹೇಗುಂದ (ಬೊಂಕಶಾ. ೦೯೪೦, ಸಿದಿ. ೨೭-೬; 1260);

ಬಳುಕಾರವ ಪೈಕಿ ಕೈಲಿಗೆರೆ ಗ್ರಾಮದ ಸಾಧನಪುತಿ (ಪ್ರ೩೦. ೦೯೩೪. ೨೩-೦ ; 1394) ; ರಾಯರ ಶಿಷ್ಯರ ಪೈಕಿ ಯಾರು ಯಾರು ಅನುಭವಸ್ಥರು (ರಾಘು೪. ೬೯). **ಪಯಿಕಿ :** ನಮ್ಮ ಮೊದಲನೇ ಆವೃತಿಯ ರಿವಾಜ ಪುಸ್ತಕ ದೊಳಗಿನ ಪಾನು ೬೩ರ ಪಯಿಕಿ ೬ನೇ ಕಲಮಿನಲ್ಲಿ ಸೂಚನಾ ಪ್ರಸಿದ್ಧ ಮಾಡಿದಾಗ್ಯೂ (ಮುಂಬವ್ಯಾ. ೨೦೬). [←ಮರಾ. ಪೈಕೀ]

**ಪೈಗಂಬರ್** 'ಪೈಗಂಬರ' ನೋ.

**ಪೈಗಂಬರ, ಪೈಗಂಬರ್** (ನಾ). ದೇವರ ಸಂದೇಶವನ್ನು ಸಾರುವವನು ; ಪ್ರವಾದಿ : ಮಹಮ್ಮದನು ಪೈಗಂಬರನೆನಿಸಿ ಮಕ್ಕಳ್ಗೆ ಮರೆಳಿದನು (ಚಾಂಶ್ರ. II. ೯೩೩) ; ಪೈಗಂಬರನು ನೀನೆ, ಮರಿಯಾತ್ಮಜನು ನೀನೆ ಎಂಬ ಸತ್ಯವನೀ ಜಗತ್ತರಿವುದೆಂದು? (ಗೀ೭೦. ೦೯-೯). **ಪೈಗಂಬರ್ :** ಇಸ್ಲಾಂಸಂಸ್ಕೃತಿಗೆ ಆದ್ಯಪ್ರವರ್ತಕ ಪೈಗಂಬರ್ ಮಹಮ್ಮದ್ (ಇಸ್ಲಾಂಸಂ. ೦). [←ಪಾರ. ಪೈಗಂಬರ್, ಪೈಗಾಂಬರ್ ; ಹಿಂ. ಪೈಗಂಬರ್ ; ಮರಾ. ಪೈಗಂಬರ್, ಪೇಗಂಬರ್]

**ಪೈಗಸ್ತಿ, ಪೈಗಸ್ತು** (ನಾ). ೧. ಪಹರೆ ; ಗಸ್ತು: ಎರಡು ದಿನಗಳು ಒಂದೇ ಸಮನಾಗಿ ಸರಸ್ವತಿಯ ಮನೆಯ ಬಳಿ ಪೈಗಸ್ತಿ ತಿರುಗಿಸಿ ಗಣೇಶ ಹೊಸ ಸುದ್ದಿಗಳನ್ನು ತಂದು ದಣಿಗೆ ಒಪ್ಪಿಸಿದ (ಶಶಿಸಂ. ೨೦೦). **ಪೈಗಸ್ತು :** ೨. ಹೆಚ್ಚಿನ ಮೇಲ್ವಿಚಾರಣೆ ಮಾಡುವವನು; ಮೇಲ್ವಿಚಾರಕ : (*). ೩. ಕಾವಲುಗಾರನು; ಗಸ್ತುತಿರುಗುವವನು : (*). ೪. ಸೇವಕ : ರಾಮನಾಥಯ್ಯನವರ ಜತೆ ಬಂದಿದ್ದ ಅವರ ಪೈಗಸ್ತಿಗೆ ಹೊರಗೆ ಎಲೆ ಹಾಕ ಹೇಳಿ, ಅವರೊಂದಿಗೆ ಶಾಸ್ತ್ರಿಗಳು ಊಟಕ್ಕೆ ಕುಳಿತರು. (ಮುದ್ದುಮ. ೯೩).

[←ಹಿಂ. ಪೈಗಶ್ತೀ; ಮರಾ. ಪೈಗಸ್ತ್./ತೆಲು. ಪೈಗಸ್ತಿ]

**ಪೈಗಸ್ತು** 'ಪೈಗಸ್ತಿ' ನೋ.

**ಪೈಗು, ಪೈಗೋ** (ನಾ). ೧. ಬರ್ಮಾದ ಸಮೀಪದಲ್ಲಿರುವ, ಕುದುರೆಗಳಿಗೆ ಪ್ರಸಿದ್ಧವಾದ ಒಂದು ದೇಶದ ಹೆಸರು : (*). ೨. "ಒಂದು ಜಾತಿಯ ಕುದುರೆ, ತಟ್ಟು" (ರವಾಕಾಂ. ೩೯೬). **ಪೈಗೋ :** (*).

**ಪೈಗೋ ಟಾಂಕ್ಣಾ**=ಪೈಗೋದೇಶದ ಉತ್ತಮಜಾತಿಯ ಕುದುರೆ : ಜವನಃ, ಜವಾಧಿಕಃ—ವೇಗದಿಂದ ಅಧಿಕವಾದ ಕುದುರೆಯ ಹೆಸರು . . . ಅರಬ್ಬೀಟಾಂಕ್ಣಾ, ಪೈಗೋಟಾಂಕ್ಣಾ, ಮುಂತಾದವುಗಳು (ಸಿದ್ಧಾಂತಿ. ೨೯೯). [←ಮಲಯ. ಪೈಗು / ತಮಿ. ಪೈಕೋವೈ]

**ಪೈಗೋ** 'ಪೈಗು' ನೋ.

**ಪೈಚುಕೆ** (ನಾ). ಒಂದು ಬಗೆಯ ಸಸ್ಯ : "ಪೈಚುಕಾ_ಕುರುಟಿಗೆ, ನಾಯಹತ್ತಿ" (೬ಶಂ. ೦೦೩). [?]

**ಪೈಜಣ, ಪೈಂಜಣ, ಪೈಜಣೆ, ಪೈಜಣು** (ನಾ). ೧. ಕಿರುಗೆಜ್ಜೆಗಳಿಂದ ಕೂಡಿದ ಕಾಲಿನ ಆಭರಣ ; ಅಂದುಗೆ ; ನೂಪುರ : ಆಕೆಯ ಕಾಲಲ್ಲಿ ಇನ್ನೂ ಪೈಜಣಗಳಿದ್ದು ಆಕೆಯು ನಡೆಯುವಾಗ ಅವುಗಳ ಸಪ್ಪಳದಿಂದ ಅಲ್ಲಿ ನಿಂತವರ ಎದೆಯು ಖಿಲವಾಯಿತು (ಗಾಂಗ. ೦೬೩); ಕಾಲೊಳಗಿನ ಪೈಜಣದ ರತ್ನಪ್ರಭೆಯು ಅವಳ ವೈಯಲ್ಲಿ ಹಬ್ಬಿರುವುದು (ಮುಂಬಯ. ೩-೩೦೦). ೨. ಗೆಜ್ಜೆಯ ನಾದ : ಬೇಸಗೆಯ ನಿಟ್ಟುಸಿರು ಮಳಿವನಿಯು ಪೈಜಣಕೆ ಕುಣಿದು ಕೊಸರುವ ಹಸಿರು (ನಂಮು. ೯೨-೩). **ಪೈಂಜಣ :** ೧. ಬಾಲೆಯರ ಕಾಲಲ್ಲಿ ರುಳಿ ಪೈಂಜಣ ಗಿಲಿಗಿಲಿ ಎಂದು ಸುಸದಾವ (ಸಿದ್ಧಕು. ೦೭-೬೦). **ಪೈಜಣೆ:** ೧. ಹುಡುಗಿಯ ರತ್ನಾಭರಣಗಳ ತೊಡಿಗೆಯ ಪೈಜಣೆ ಚಾದರದುಡಿಗೆಯ ತ್ರಿಭುವನ ಮೋಹಿಪ ಬರೆ ಬೆಡಗಿಯ ಕಂಡಾಗ . . . ಖಳರು ಸೋಲುತ (ಸಮುಮ. ೨೯). **ಪೈಜಣು :** ೧. ಅವುಗಳ ಕೋಡುಗಳಲ್ಲಿ ಸೆಟ್ಟರ ಹೆಣ್ಣುಮಕ್ಕಳ ಕಾಲೊಳಗಿನ ಬೆಳ್ಳಿಯ ಸರಪಳಿ, ಪೈಜಣುಗಳು ಒಪ್ಪುತ್ತಿದ್ದುವು (ಶಿಶು. ೨೦೨).

[←ಹಿಂ. ಪೈಜನೀ, ಪೈಂಜನಾ ; ಮರಾ. ಪೈಜಣ್, ಪೈಂಜಣ್]

**ಪೈಜಣೆ** 'ಪೈಜಣ' ನೋ.

**ಪೈಜಣು** 'ಪೈಜಣ' ನೋ.

**ಪೈಜಾಮ** 'ಪಾಯಜಾಮ' ನೋ.

**ಪೈಜಾಮಾ** 'ಪಾಯಜಾಮ' ನೋ.

**ಪೈಜಾರ** 'ಪೈಜಾರು' ನೋ.

**ಪೈಜಾರು, ಪೈಜಾರ** (ನಾ). ಜೋಡು ; ಮೆಟ್ಟು ; ಪಾದರಕ್ಷೆ : ಏಕಲವ್ಯನು ರತ್ನಖಚಿತವಾದ ಪೈಜಾರುಗಳನ್ನೂ . . . ಹಿಡಿದು (ಕೃವಾಸ. ೦೨೦). **ಪೈಜಾರ :** ಪೈಜಾರದಿಂದ ಒಂದು ಪೆಟ್ಟು ತಾಡಿಸಿದ್ದು ನಿಶ್ಚಯವು (ಕಶಾರ. ೩೦). [←ಅರ. ಪಾರ. ಹಿಂ. ಮರಾ. ಪೈಜಾರ್]

**ಪೈಜೆ** (ನಾ). ಶರತ್ತು ; ಕರಾರು ; ಪಣ : ಶಿಖಿವೆನಾತನ ನಿಜವನಥವಾ ಸೆಳೆದನಾದೊಡೆ ಮುಟ್ಟಿ ಹಿಡಿಕೊಂಡೆಳೆವು ತಹೆ ನಾನೆನುತ ಪೈಜೆಯ ನುಡಿದಳಾ ಮಾಯೆ (ಪ್ರಭುಲೀ. ೨-೯೦) ; ಎಲೆಲೆ ಗರುವೆ ನಿನ್ನಯ ಪೈಜೆಯಂ ಸಲಿಪನಿನ್ನುಮಾತನು ಪೋಗೆ ಮರ್ತ್ಯಕೆ (ಪ್ರಭುಕು. ೯-೩೦); ಧೀರಮುನಿ, ಪೈಜೆಯಂ ಪಾಲಿಸುವ ನಿನ್ನ ಧೈರ್ಯವದೆತ್ತ ಜಾರಿದುದೊ? (ಹರಿಶ್ಚಂ. ೩೯-೦೦೩೯). [<ಪ್ರಾ. ಪಇಜ್ಜಾ. / ಸಂ. ಪ್ರತಿಜ್ಞಾ./ಹಿಂ. ಮರಾ. ಪೈಜ್]

**ಪೈಜೆಗ** (ನಾ). ಪಣ ತೊಟ್ಟವನು ; ಶಪಥ ಮಾಡಿದವನು : ನಡೆವು ತಿರ್ದುದು ಸಮರವೀಚೆಯ ಕಡೆಯಲ್ಲೆವರು ರಕ್ಕಸರ ಖಳರೊಡೆಯ ಕಳವಿನ ಕಾಳಗಕೆ ಕಳುಹಿದನು ಪೈಜೆಗರ (ಕೊರಿರಾ. ೬-೦೩-೩೦).

[ಪೈಜೆ + — ಗ$_3$]

**ಪೈಜೆಗಾಱ** (ನಾ).=ಪೈಜೆಗ : ಆಜಿರಂಗದಲಿಂದು ನಿನ್ನಯ ಭಟಶಿರೋಮಣಿಯ ಪೈಜೆಗಾಱನ ಗೆಲಿದಡಹುದು ಬಡೌಜಸುತನೆಂಬಗ್ಗಳಿಕೆ (ಕೊರಿರಾ. ೯-೯-೩).

[ಪೈಜೆ+ — ಕಾಱ]

**ಪೈಟನ** 'ಪೈಠಣಿ' ನೋ.

**ಪೈಟನಿ** 'ಪೈಠಣಿ' ನೋ.

**ಪೈಟಾಣಿ** 'ಪೈಠಣಿ' ನೋ.

**ಪೈಟಿ** 'ಪಲ್ಲಿ' ನೋ.

**ಪೈಠಣಿ, ಪೇಠಣಿ, ಪೈಟನ, ಪೈಟನಿ, ಪೈಟಾಣಿ, ಪೈಠಣೆ** (ಗು). ೧. 'ಪೈಠಣ' ಎಂಬ ಸ್ಥಳದಲ್ಲಿ ತಯಾರಾದ : ಐದಂಬು ತಿಂಗಳಿಗೆ ಕೊಯ್ದು ಮಲ್ಲಿಗೆನಂಡೆ ಹಸರು ಪೈಠಣಿಸೀರಿ ಕುಬ್ಬಸ ಬಗೆಸುವಳ (ಲಾ೯೧. ೯೯). (ನಾ). ೨. ಪೈಠಣ ಎಂಬ ಸ್ಥಳದಲ್ಲಿ ತಯಾರಾದ ಒಂದು ಬಗೆಯ ಬಟ್ಟೆ ; ಜರಿಯ ನಕಾಸೆಯುಳ್ಳ ರೇಷ್ಮೆವಸ್ತ್ರ ; P 'ಪೈಠಣ' ಎಂಬುದು ಈಗಿನ ಔರಂಗಾಬಾದ್ ಜಿಲ್ಲೆಯ ಹಿಂದಿನ 'ಪ್ರತಿಷ್ಠಾನಪುರ' ವೆಂಬುದಕ್ಕೆ ಈಗ ಇರುವ ಹೆಸರು : ಕೇಜಿಡೆಗೊಪ್ಪುವ ಕಾಸಿ ಚಿನ್ನಾಂಬರವ ರಂಜಿಪ ಸಣ್ಣ ಪೈಠಣಿಯ (ದೇವಾಂಪು. ೬-೨೩೩) ; ಹಸಿರ ಪೈಠಣ ಮೇಲೆ ಕುಸಲದ ಹೂಗಳು ಕಸುತಿ ತಗೆದಾರ ಕುಬಸೀಗೆ ಕನ್ಯೆಯರು (ಸಿದ್ಧಕು. ೦೭-೬೩). ೩. ರೇಷ್ಮೆಯ ಅಂಗಿ : ತೊಟ್ಟ ಮುತ್ತಿನ ಪೈಠಣಿಯಿಂದ ಚೆಲುವಿನ ಕಟ್ಟೆಯೊಡೆದೆ ನಡೆತಂದ (ಕಂಸವ. ೯-೯೯). **ಪೇಠಣೆ :** ೧. ಪೊನ್ನ ಪೇಠಣೆಯ ಪೊರ್ ಥಳತ್ಥಳಿಸೆ (ರಾಜಶೇ. ೦೩-೬೨). **ಪೈಟನ :**೪. ಜರತಾರಿ ಬಟ್ಟೆ; ಜರಿಬಟ್ಟೆ : ಉಟ್ಟ ಎಳೆಗಾವಿಯ ಸುಧೋತ್ರವ ತೊಟ್ಟಗೆಲಸದ ಪೈಟ[ಟ]ನಂಗಿಯ ಕಟ್ಟಿದನು ಮಣಿತಾತಿಯಂಗುಲಕಟ್ಟು ಮುದ್ರಿಕೆಯ (ಶರಲೀ. ೨೨೯-೨). **ಪೈಟನಿ :** ೧. ಹಸರು ಪೈಟನಿಸೀರೆ ನಿರಿವಿಡಿದುಟ್ಟು ಪೊಸ ವಜ್ರಗಾಳಿಕುಪ್ಪಸವನ್ನು ತೊಟ್ಟು (ಶಂಪ್ರಾವ. ೬). **ಪೈಟಾಣಿ:** ೧. ಉಟ್ಟಾಳು ಪೈಟಾಣಿಶೀರೆಯ ತಾನೂ ತೊಟ್ಟಾಳು ಜರತಾರಿ ಕುಪ್ಪಸವನ್ನು (ಶಿವಪಾ. ೦೨). **ಪೈಠಣೆ :** ೨. ವರನೂತನವಸ್ತ್ರವನು ಸುರುಚಿರಮಪ್ಪ ಪೈಠಣೆ ಮುಂತಾದುವ ದೊರೆಗುಡಲಿತ್ತನಾ ದೇವ

(ಚಾ. ಸಹ. ೩-೯೯). ೩. ಪೊಳೆವ ಪಸುರುವಟ್ಟೆಯ ಪೈಠಣೆ ಪೊಸ ಸಣ್ಣ ರುದ್ರಾಕ್ಷಿಗಳ ಕಂಠಮಾಲೆ ರಾಜಿಸಲು ನಂಬ್ಯಣ್ಣನಂದಂಬಡೆದ (ಸೌಂದಕ. ೩-೯). ೪. ಇಳಿಯೊಳೆಳಲುವ ಶೋಣ ಪೈಠಣೆಯು ಪೈಠಣೆಯು ಕಳಕಳಿಸೆ ಮೈಯೊಳಂ ದಾಳಿಂಬಪೂವಿನಂತಳವಟ್ಟ ಚಿಂದಿ ಮಸ್ತಕತಟದೊಳುಂ ಚುಂಗ ಮೆಱೆವುತಿರೆ ಸೊಬಗಿನಿಂದಂ . . . ನಿಂದು (ಶ್ರಕುಪು. ೫-೨೬).

[←ಮರಾ. ಪೈಠಣೇ./ಸಂ. ಪ್ರತಿಷ್ಠಾನ]

**ಪೈಠಣೆ** 'ಪೈಠಣಿ' ನೋ.

**ಪೈಠರ** (ನಾ). ಮಡಕೆಯಲ್ಲಿ ಬೇಯಿಸಿದ ಹಿಟ್ಟು ಮುಂತಾದುವು : "ಉಖ್ಯಂ, ಪೈಠರಂ–೨ ಮಡಕೆಯಲ್ಲಿ ಅಟ್ಟ ಹಿಟ್ಟು" (ಸಿದ್ಧಾಂತಿ. ೨೧೭). [ಸಂ.]

**ಪೈಠವ** (ನಾ). ಒಂದು ಬಗೆಯ ಸಿಹಿ ಖಾದ್ಯ : ಕಣಿಕದ ಬಟುವ ತೆಗೆದ್ರು ವಣಿಕ ಸೂಸಲನಿಕ್ಕಿ ಮಣಿದು ಪೈಠವದ ವರ್ತುಳಭಾಷಣಂಗೈದು (ಲಿಂಗಪು. ೯-೦೦). [ ? ]

**ಪೈಣ** 'ಪಯಣ' ನೋ.

**ಪೈಣಗತಿ** 'ಪಯಣಗತಿ' ನೋ.

**ಪೈಣಿಗ** 'ಪಯಣಿಗ' ನೋ.

**ಪೈತಿಕ, ಹೈತಕ, ಹೈತಿಗೆ**[1] (ನಾ). ೧. ಪಿತ್ತಸಂಬಂಧವಾದುದು : ಲಲನಾಮುಖೇಂದುಲಾವಣ್ಯಲೀಲೆಯಂ ಪಡೆವ ಬಣ್ಣದಿಂ ಕಂಪಿಂದೇ ನಲೆದುದೊ ಪೈತಿಕ[ ಪಾಠಾಂ·ಪೈತಿಗ, ಬಯ್ತುಗ]ದಂತಿರೆ ತಲೆಗೇಱುವ ಕುಸುಮನಿಚಯಮಂ ಕಾಶ್ಮೀರಂ (ಅಭಿಪು. ೦೦-೨೨೪). **ಹೈತಕ :** ೨. ಮೈಮೇಲೆ ಪಿತ್ತದಿಂದುಂಟಾಗುವ ಗಂದೆ,— ಗಾದರಿ : (ಕ). **ಹೈತಿಗೆ**[1] : ೨. ಮಗುವಿನ ಮೈಮೇಲೆ ಹೈತಿಗೆ ಎದ್ದಿದೆ (ಲೂಂ).

[ <ಸಂ. ಪೈತ್ತಿಕ ]

**ಪೈತೃಕ** (ಗು). ೧. ತಂದೆಗೆ ಸಂಬಂಧಿಸಿದ. ೨. ಪಿತೃಸಂಬಂಧವಾದ ; ಪಿತ್ರಾರ್ಜಿತವಾದ : ದುರ್ಯೋಧನಾದಿಗಳಿಗೆ ಭೀಷ್ಮದ್ರೋಣಾದಿಗಳು ಎಷ್ಟೋ ಬಗೆಯಲ್ಲಿ ಬುದ್ಧಿ ಹೇಳಿ ಪಾಂಡವರಿಗೆ ಅವರ ಪೈತೃಕ ರಾಜ್ಯವನ್ನು ಕೊಡಿರೆಂದು ಎಷ್ಟು ಬೇಡಿದರೂ ಅವರು ಕೇಳಲಿಲ್ಲ (ಭೀಷ್ಮಕ. ೦೩೯) ; ಕಗ್ಗತ್ತಲೆ, ಗುಹೆ, ಕಾಡು ಮತ್ತು ಭಯ ಇತ್ಯಾದಿಗಳ ಸಂಸ್ಕಾರಗಳು, ಗುಣಗಳು ಪೈತೃಕ ಆಸ್ತಿಯಂತೆ ನಮ್ಮನ್ನು ಸಂಬಂಧಿಸಿಕೊಂಡು ಬಂದಿರುವುವುಗಳಾಗಿರುತ್ತವೆ (ಜೀವಾತ್ಮ. ೨೦೭). (ನಾ). ೩. ಪಿತೃಗಳಿಗೆ ಮಾಡುವ ಶ್ರಾದ್ಧ ; ತಿಥಿ : ನಾಳೆ ಪೈತೃಕಮಮದಂ ನಾಡಿದಲ್ಲದೆ ಮಾಡೆನು (ಕೃಪಿಚಾ. ೦೦-೨೬) ; ಬೇಗದಿಂ ಪೈತೃಕಕೆ ಕ್ಷಣಿಸಲ್ಪಿರಿಯ ಭಕ್ತನಾಗಿ ಬಂದರ್ಚನೆಯ ಕೈಕೊಂಡು ನಿಜಮುಕ್ತನಾಗೆ ಚಿತ್ತೀಸಪುರವರಸಿ ಕೈಲಾಸಕ್ಕೆ ಸಾಮವೇದಿಯನೊಯ್ದನು (ರಾಘಶ. ೯-೨೦). [ ಸಂ. ]

**ಪೈತೃಕಕರ್ಮ** (ನಾ). ಶಾಸ್ತ್ರೋಕ್ತವಾಗಿ ಮಾಡುವ ಶ್ರಾದ್ಧ ; ಪಿತೃಕರ್ಮ : "ಶ್ರಾದ್ಧಂ . . . ಬ್ರಾಹ್ಮಣಭೋಜನ, ಪಿಂಡಪ್ರದಾನಾದಿ ರೂಪವಾದ ಪೈತೃಕಕರ್ಮಕ್ಕೆ ಹೆಸರು" (ಸಿದ್ಧಾಂತಿ. ೨೨೩). [ಸಂ.]

**ಪೈತೃಕಧನ** (ನಾ). ಪಿತ್ರಾರ್ಜಿತವಾಗಿ ಬಂದ ಸ್ವತ್ತು ; ವಂಶಪಾರಂಪರ್ಯವಾಗಿ ಬಂದ ಐಶ್ವರ್ಯ. [ಸಂ.]

**ಪೈತೃಪತಿ** (ನಾ). ಪಿತೃಗಳ ಒಡೆಯ ; ಯಮ : ಪೈತೃಪತಿವಿಧ್ವಂಸನ ಸುರನಿಕರಪೋಷಣ ಮಹಾಪೌರುಷಪ್ರಯುತ . . . ತ್ರಿಣೇತ್ರ ದಾನವ ಜೈತ್ರ ಸುಪವಿತ್ರಚಾರಿತ್ರನೆ (ಶಿಶಿಪು. ೦೫-೦). [ಸಂ.]

**ಪೈತ್ತ** (ಗು). ಪಿತ್ತದಿಂದ ಉಂಟಾದ. [ ಸಂ. ]

**ಪೈತ್ತಲ** (ಗು). ಹಿತ್ತಾಳೆಯಿಂದ ಮಾಡಿದ. [ ಸಂ. ]

**ಪೈತ್ತಲಜ** (ನಾ). ಹಿತ್ತಾಳೆಯಿಂದ ಹುಟ್ಟಿದುದು ; ಕಂಚು ಮುಂತಾದ ಮಿಶ್ರಲೋಹ : ಪಾದವೆರಡಾ ಸಮಾಂಗುಲವದಂ ಚಿನ್ನದಿಂದಾದಡಾಗಲಿ ಬೆಳ್ಳಿ ತಾಮ್ರ ಪೈತ್ತಲಜ ಲೋಹಾದಿಯಾಗಲಿ ಪಿಷ್ಟರಚಿತವಾಗಲಿ ಪಾತ್ರೆಯಂ ರಚಿಸಿ (ಶೀಕೃಪು. ೭-೦೦-೩೪). [ ಸಂ. ]

**ಪೈತ್ತಿಕ** (ಗು). ೧. ಪಿತ್ತಸಂಬಂಧವಾದ ; ಪಿತ್ತದಿಂದುಂಟಾದ : ೩೦ ಕಂಡಂ ಮುಟ್ಟೆಗೆಯಾಟರೂಷಕಂ ಕಕ್ಕೆ ಮುಸ್ತೆ ನಿಂಬಂ ಕೊತ್ತುಂಬರಿಯೆಂಬಿವ ನೆಂಟೊಂದಾಗಿರೆ ಮಱುಗಿಸಿ ಕುಡಿಯೆ ಪೈತ್ತಿಕಜ್ವರಹರಣಂ (ಕೋಕಿಲೋಚ. ೯-೦೭) ; ಇದು ನಿಮಗನಿತು ಪೈತ್ತಿಕಜ್ವರವಾದೊಡಮಿಂತೆನಲಕ್ಕುಮೆ (ಜಂಹಂ. ೯-೩೯ ಪ). (ನಾ). ೨. ಪಿತ್ತದಿಂದ ಉಂಟಾಗುವ ವಿಕಾರ ; ಉನ್ಮಾದ : ನೀತಿಯೆ ತಾಯೆ ಪೈತ್ತಿಕವಮದಾದೊಡಮಾಡಲವೋಘ ಮೆನ್ನೊಳೀ ಮಾತಂ (ಜೀಜಿಪು. ೭-೦೯೩). ೩. ಪಿತ್ತಶರೀರಿಯಾದುದು: ವಾತಪ್ರಕೃತಿಯ ಗುಣಂಗಳ್ ಮಾತಾಪಿತೃಗಳ್ಗೆ ಮುನ್ನಮುಳ್ಳೊಡೆ ಮಱಿಯುಂ ವಾತಿಕನಕ್ಕುಂ ಪೈತ್ತಿಕಜಾತಿಕನುಂ ಶ್ಲೇಷ್ಮಕಾಂಗನುಂ ತಜ್ಜಾತಂ (ಅಶ್ವಶಾ. ೭-೯೬). [ ಸಂ. ]

**ಪೈತ್ಯ** (ಗು). ೧. ಪಿತ್ತದಿಂದುಂಟಾದ ; ಪಿತ್ತಸಂಬಂಧವಾದ : ಅನಿಲ ಕಫ ಪೈತ್ಯದೋಷದಿನನಿಲನ ಕುಂದಿಂದೆ ಪಂಗುಳಾಂಧ ಕೃಶಂ ವಾಮನ ಕುಬ್ಜ ಬಧಿರ ಮೂಕರುಮನೇಕವಿಧದಂಗಹೀನರುಂ ಜನಿಯಿಸುವರ್ (ಸುದಪು. ೦-೬೩). 'ಪೈತ್ಯಜ್ವರ' ಪರಾ. (ನಾ). ೨. ಪಿತ್ತಸಂಬಂಧವಾದ ದೋಷ ; ಪಿತ್ತದೋಷ : ಬೇಗದಿ ಹರಿ ಶೀತಳಿಯಂ ಪೈತ್ಯದ ರೋಗವನುಜ್ಜಾಯಿಯ ವಜ್ರಾಸ್ತ್ರವ (ಕರ್ಣಾಮೃತ. ೩೩) ; ಕಳ್ಳೆಂಕಡಲೆ ೫೦ ಹಲ . . . ಸಕ್ಕರೆ ೩೦ ಭಾಗ, ಇವಂ ಚೂರ್ಣವಂ ಮಾಡಿ ಸೇವಿಸೆ ಪೈತ್ಯ, ಶ್ವಾಸ, ಕಾಸ ಮಾಣ್ಗುಂ (ವೈದ್ಯಾ. ೭೪) ; ಬಲುಭೂತ ಸೋಂಕಿತೋ ಗ್ರಹದ ಚೇಷ್ಟೆಯೋ ಪೈತ್ಯ ತಲೆಗಡರ್ದುದೊ ಮಿತ್ರೆಯೇನಪ್ಪಳೋ (ಪಠಮೋ. ೨೩-೯೯). ೩. ಉನ್ಮಾದ ; ಹುಚ್ಚು : ಪೈತ್ಯದೊಳುಲಿದ ಯತಿನುಡಿ ನಿಶ್ಚಯವೆ (ಜಗಮಹ. ೨೦೭-೯೩) ; ಪೈತ್ಯವಾದವಗೆ ಸೈತ್ಯವಾಗದೋ ? (ಗಾದೆ). 'ಪೈತ್ಯಗಾರ' ಪರಾ. [ < ಸಂ. ಪೈತ್ತ ]

**ಪೈತ್ಯಗಾತಿ** (ನಾ). ಹುಚ್ಚಿ ; ಉನ್ಮಾದಿನಿ : (ಕ). [ ಪೈತ್ಯ + — ಕಾತಿ]

**ಪೈತ್ಯಗಾರ** (ನಾ). ಉನ್ಮತ್ತ ; ಹುಚ್ಚ : ಪೆತ್ತ ಮಗಳಂ ಮಡದಿಯಾಗಿ ಮಾಡಿಕೊಂಡ ಬೊಮ್ಮನಂ ಪಾರ್ವರ್ ಪೈತ್ಯಗಾರರಾಗಿ ಪೊಗಳುತ್ತಿರ್ಪರ್ (ಅಕಾಲಿ. ೨೯-೨೯ ಪ). [ ಪೈತ್ಯ + — ಗಾರ (< — ಕಾಱ) ]

**ಪೈತ್ಯಜ್ವರ** (ನಾ). ಪಿತ್ತದಿಂದ ಉಂಟಾದ ಜ್ವರ : ಘೋಡಾಬೋಳರಸ . . . ಪೈತ್ಯಜ್ವರಕ್ಕೆ ಜೀರಿಗೆಯಲ್ಲಿ ಕೊಡುವುದು (ವೈದ್ಯಾ. ೨೬); ಉನ್ಮಾದರೋಗದವರು, ಪೈತ್ಯಜ್ವರದವರು . . . ವಿಷದ ರೋಗದವರು, ಇವರಿಷ್ಟೂ ವಮನಯೋಗ್ಯರೆಂದರಿವುದು (ಸಕವೈ. ೨೩). [ಸಂ.]

**ಪೈತ್ಯಾಧಿಕೆ** (ನಾ). ಪಿತ್ತವು ಹೆಚ್ಚಾಗಿರುವವಳು : ಪೈತ್ಯಾಧಿಕೆಗತಿಕೋಪಂ (ಮದಚಿ. ೦೦-೭). [ ಸಂ. ಪೈತ್ಯಾಧಿಕಾ ]

**ಪೈತ್ರ**[1] 'ಪಯಿತ್ರ' ನೋ.

**ಪೈತ್ರ**[2] (ಗು). ೧. ಪಿತೃಗಳಿಗೆ ಸಂಬಂಧಿಸಿದ,—ಸೇರಿದ; ಪಿತೃಸಂಬಂಧವಾದ. (ನಾ). ೨. ಪಿತೃಗಳನ್ನು ಉದ್ದೇಶಿಸಿ, ಅಂಗುಷ್ಠ ಮತ್ತು ತೋರುಬೆರಳುಗಳ ಮಧ್ಯದಿಂದ ಬಿಡುವ ತೀರ್ಥ : "ಪೈತ್ರಂ—ಪಿತೃಸಂಬಂಧವಾದ ತೀರ್ಥವು. ಅಂಗುಷ್ಠಾಂಗುಲ್ಯೋಃ—ಹೆಬ್ಬೆರಳಿಗೂ ಅದರ ತರ್ಜನೀ ಬೆರಳಿಗೂ ಮಧ್ಯದಲ್ಲಿರುತ್ತೆ" (ಸಿದ್ಧಾಂತಿ. ೨೩೦). ೩. ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವಿನ ಭಾಗ. [ ಸಂ. ]

**ಪೈದಲ್** (ನಾ). ಕಾಲಾಳುಗಳ ಪಡೆ ; ಪದಾತಿಸೈನ್ಯ : ಇವರ ಸಂಗಡ ಭಾರಿ ಫೌಜು, ಕುದುರೆ, ಪೈದಲ್ ಸಹಾ, ಕೊಡಗಿನ ಕಡೆಗೆ ರವಾನೆ ಮಾಡಿದ್ದರಿಂದ (ರಾಜೇಂದ್ರ. ೩೬). [ ← ಹಿಂ. ಪೈದಲ್ ]

**ಪೈನೆ** 'ಬಯಿನೆ' ನೋ.

**ಪೈಪಾಡು** 'ಪಯಂಪಾಡು' ನೋ.

**ಪೈಪು** (ನಾ). ೧. ನಳಿಕೆ ; ಕೊಳವೆ : ಮಂಡಿಯು ಈಗಿರುವ ಆಕಾರದ ಬದಲು ಮೂರು ಅಂಗುಲದ ಪೈಪಿನ ಹಾಗೆ ಇದ್ದರೆ ಎಷ್ಟೋ ಚೆನ್ನು (ಶಾಂಗೀ. ೪೪). ೨. ಕೊಳಾಯಿ ; ನಲ್ಲಿ ; ನಳ : ಪೈಪುಗಳಿದ್ದ ಪಟ್ಟಣಗಳಲ್ಲಿ ಮೊದಲಿನಷ್ಟು ಗಿರಾಕಿ ದೊರೆಯದಿದ್ದರೂ ಒಟ್ಟಿನ ಮೇಲೆ ಅವನ ಪ್ರಾಪ್ತಿ ಚೆನ್ನಾಗಿಯೇ ಇತ್ತು (ಡಾಸಹು. ೨೬). [ ← ಇಂ. Pipe ]

**ಪೈಪೋಟಿ** (ನಾ). ಹುರುಡು ; ಸ್ಪರ್ಧೆ ; ಮೇಲಾಟ : ಅವರ ಮನೆಯಲ್ಲಿ ನಡೆದ ಸತ್ಕಾರದಲ್ಲೆಲ್ಲಾ ಒಂದು ಪೈಪೋಟಿ ಮನೋಭಾವ ಕಾಣುತ್ತಿತ್ತು (ಹೊಸಕ್ಷ. ೦೦೬); ಅಲ್ಲಿ ಯಾವಾಗಲೂ ಜನರ ಪೈಪೋಟಿ ನಡೆಯುತ್ತಿರುತ್ತದೆ (ಕೂವಶೀ. ೨೩೬).

**ಪೈಪೋಟಿ ಹಾಕು** = ಸ್ಪರ್ಧಿಸು ; ಮೇಲಾಟವಾಡು ; ಹುರುಡಿಸು : ಗುರು ಅಜಿತಸೇನನ ಕೀರ್ತಿ ವಲ್ಲಿಗೆಯೊಂದಿಗೆ ಪೈಪೋಟಿ ಹಾಕಿತಂತೆ ! (ಶಾಸಗಿ. ೬೯).

[ ಪೈ$_1$ + ಪೋಟಿ$_1$. / ತೆಲು. ಪಯಿಪಾಟು, ಪೈಪಾಟು = ವಿಜೃಂಭಣೆ ]

**ಪೈಮಾಯಿಷಿ, ಪೈಮಾಷಿ, ಪೈಮಾಷೆ, ಪೈಮಾಸಿ** (ನಾ). ಭೂಮಿಯನು ಅಳೆಯುವಿಕೆ ; ಮೋಜಣಿ ; ಸರ್ವೆ : ಜಮೀನು ಪೈಮಾಯಿಷಿಯಿಂದ ಬೀಜವರಿಯ ಮೇಲೆ ಕಂದಾಯವನ್ನು ಠರಾವ್ . . . ಮಾಡಿದರು (ಮುಚಾಪಂ. II, ೩೦). **ಪೈಮಾಷಿ :** ಮೋಜಣಿ, ಪೈಮಾಷಿ (—ಮಾಡುವುದು) (Surveying. ಇಂಕೊ). **ಪೈಮಾಷೆ :** ಇದು ಈಗಿನ ಪೈಮಾಷೆಯು ಸಾಕಳಿ ಅಳತೆಯು (ಕ್ಷಿಶಿಪ್ರ. ೦೫೯). **ಪೈಮಾಸಿ :** ೧೮೦೪ ರಲ್ಲಿ ಸೀಮೆ ಪೈಮಾಸಿಯು ಮಾಡಲು ಮಕಂಜಿಸರದಾರಂ ಲಕ್ಷ್ಮಣರಾಯಂಮೆರಸು ಕನಕಗಿರಿಗೆ ಬಂದು (ಕಲಿಶ. III, ೦೯೬); ಒಂದು ಸಾಕಳಿ ಅಗಲ ಹಾಗು ಹತ್ತು ಸಾಕಳಿ ಉದ್ದ ಅಳೆದರೆ ಈಗಿನ ಪೈಮಾಸಿ ಪ್ರಕಾರ ಒಂದು ಎಕರೆ ಆಗುವುದು (ಕ್ಷಿಶಿಪ್ರ. ೦೫೯).

[ ← ಪಾರ. ಪೈಮಾಇಶ್, ಪೈಮಾಯಿಶ್; ಹಿಂ. ಪೈಮಾಇಶ್; ಮರಾ. ಪೈಮಾಯಷ್, ಪೈಮಾಶೀ, ಪೈಮಾಷೀ ]

**ಪೈಮಾಷಿ** 'ಪೈಮಾಯಿಷಿ' ನೋ.

**ಪೈಮಾಷೆ** 'ಪೈಮಾಯಿಷಿ' ನೋ.

**ಪೈಮಾಸಿ** 'ಪೈಮಾಯಿಷಿ' ನೋ.

**ಪೈಯಿವಸ್ತಿಕೆ** (ನಾ). ಪತ್ರವು ಬಂದ ತಾರೀಖಿನ ದಾಖಲೆ : ಶ್ರೀಕೃಷ್ಣ ಪೈಯಿವಸ್ತಿಕೆ ಚಿತ್ರಭಾನು ಸಂ॥ ರದ ಉಭಯಾತ್ಮಕ ಪುಷ್ಯ ಬ ೩ ಮಂಗ್ಗಳವಾರ (ಪ್ರಶಂ. ೦೯೩೦, ೪೨-೦೬; 1822).

[ ← ಪಾರ. ಪೈವಸ್ತ್; ಮರಾ. ಪೈವಸ್ತೀ, ಪೈವಸ್ತಾ ]

**ಪೈರಣ** 'ಪೈರಣೆ' ನೋ.

**ಪೈರಣಿ** 'ಪೈರಣೆ' ನೋ.

**ಪೈರಣು** 'ಪೈರಣೆ' ನೋ.

**ಪೈರಣೆ, ಪೈರಣ, ಪೈರಣಿ, ಪೈರಣು, ಪೈರನ, ಪೈರಾಣ, ಫೇರಣೆ** (ನಾ). ಸಡಿಲವಾದ ಅಂಗಿ : ಇಕ್ಕಿದ ಕುಂಡಲಯುಕತಾಯಿ ಪೈರಣೆ ಸುಕ್ಕುಗುಪ್ಪಸ ಕಿರುಮೆರಲ ಚೊಕ್ಕಮುದ್ರಿಕೆ ಚೆಲ್ವುವೆತ್ತಿರಲಾಸ್ಥಾನ ವೊಕ್ಕನಾ ಮಂತ್ರಿತಿಲಕನು (ಕುಶಾಸಾಂ. ೯-೦೦೬); ಇಳೆಯೊಳೆಳಲುವ ಶೋಣ ಪೈಠಣಿಯ ಪೈರಣೆಯು ಕಳಕಳಿಸೆ (ಕೃಶಬು. ೩-೨೬) ; ನರಸೇಂದ್ರನ ಪೈರಣೆಯ ಜೋಲ್ಸೆರಗಾಂತು ಗರುವಮುರಿರ್ವೆರ್ಕೈದಿದರು (ಕಂಸಪ. ೨೪-೬೩). **ಪೈರಣ :** ಮೈಮೇಲೆ ಬಿಳಿದಾದ ಒಂದು ಪೈರಣ; ಅಂಚು ಇಲ್ಲದ ಧೋತರವನ್ನು ತೀಡಿ ಉಟ್ಟುಕೊಂಡಿದ್ದಾನೆ (ಕಾವ್ಯ. ೯). **ಪೈರಣಿ :** ಲೋಕೇಶ ಜಿನನ ಕೊರಳೊಳಿಕ್ಕಿ ಮಾಲೆಯು ಬೇಕಾದ ಪೈರಣಿದೊಡಿಸಿ (ಜ್ಞಾಪಕ. ೬-೬೪). **ಪೈರಣು :** ಬಿಂದುಮಾಧವನು . . . ಪೈರಣನ್ನು ಕಳೆದು ಬರಿಮೈಯಿಂದ ಅಡಿಗೆಮನೆಗೆ ಹೊರಟನು (ಸರ್ವಾಸಿ. ೦೪೬); ಕೋಟು ಟೊಪ್ಪಿಗೆ ತೆಗೆದಿರಿ, ಪೈರಣು ಇರಲಿ (ಹಿಂಚ ೬೦). **ಪೈರನ :** ಮೈಯಲ್ಲಿ ಒಂದು ಉದ್ದನ್ನ ಪೈರನದ ಮೇಲೆ ಜಾಕೀಟು (ಮುಂದಾಕಿ. ೦೯೧). **ಪೈರಾಣ :** ಧೋತ್ರ, ಪೈರಾಣ, ಟೊಪ್ಪಿ—ಎಲ್ಲ ಖಾದಿಬಟ್ಟೆಯದೇ (ಅಳಿ. ೭). **ಫೇರಣೆ :** ತೊಟ್ಟ ಫೇರಣೆ ಮೇಲುಟ್ಟ ದೇವಾಂಗವು ಇಟ್ಟ ಶ್ರೀಭಸಿತ ರುದ್ರಾಕ್ಷಿ (ಬಸಪ. ೦-೦೯೩).

[ ← ಪಾರ. ಪೆರಾಹನ್, ಪೀರಾಹನ್ ; ಹಿಂ. ಪೈರಾಹನ್ = ಹೊದಿಕೆ ; ಗುಜ. ಪಹೇರಣ್./ಪ್ರಾ. ಪರಿಹಾಣ./ ಸಂ. ಪರಿಧಾನ]

**ಪೈರನ** 'ಪೈರಣೆ' ನೋ.

**ಪೈರಾಣ** 'ಪೈರಣೆ' ನೋ.

**ಪೈರು** 'ಪಯಿರ್' ನೋ.

**ಪೈರುದಾರ** (ನಾ). ಜಮೀನನ್ನು ಸಾಗುವಳಿ ಮಾಡುವವನು ; ರೈತ ; ಕೃಷಿಕ : ನಾಲ್ದೆಸೆಯೊಳಿರ್ಪ ವರ್ತಕ ಪೈರುದಾರ ಗಂದಿಗ ಕೊಂಕಣಿಗ ಪೂರ್ಣಂತಾದ ಮಹಾನಾಡವರಂ ಬರಿಸಿ (ಕಲಿಕ್ಷ. ೭-೨) ; ಇವನಿಗೆ ಶೇಕದಾರನು, ಸಾಗುವಳಿದಾರನು, ಪೈರುದಾರನು ಎಂಬ ಹೆಸರುಂಟು (ಕಠಾಪಂ. IV, ೩೦). [ಪೈರು (<ಪಯಿರ್) + — ದಾರ್]

**ಪೈರೆ** (ನಾ). ೧. ದಿನಗೂಲಿಯ ಹಣ. ೨. ದಿನಗೂಲಿ ಕರಾರಿನ ಮೇಲೆ ಮಾಡುವ ಕೆಲಸ : ನಮ್ಮ ಕೂಡೆ ಪೈರೆ ಮಾಡ್ತೇನ ಅಂದರ ಕೊಡತೇನಿ (ಅಹೋ. ೯೦). [← ಮರಾ. ಪೈರೇ]

**ಪೈರೆತ್ರ** (ನಾ). ಒಂದು ಬಗೆಯ ಸಸ್ಯ : ಪೈರೆತ್ರುಂ, ಕ್ರಿಮಿನಾಶಕಹೂವು (ವೃಕಿಗ. ೬೩-೦೩೯). [ ? ]

**ಪೈಲವಾನ, ಪಯಿಲ್ವಾನ್, ಪಹಿಲವಾನ, ಪಹಿಲ್ವಾನ್, ಪೆಹೆಲ್‌ವಾನ್, ಪೈಲ್ವಾನ್** (ನಾ). ಕುಸ್ತಿಯಾಳು ; ಜಟ್ಟಿ ; ಮಲ್ಲ : ಮತ್ತೊಂದು ಕಡೆಯಲ್ಲಿ ಟಗರು ಕೋಣ ಮೊದಲಾದವುಗಳ ಕಾಳಗವನ್ನೂ ದೊಂಬರು ಪೈಲವಾನರು ಮುಂತಾದವರ ಆಟಗಳನ್ನೂ ನೋಡಿ (ಮಚಾಪಂ. I, ೩೭) ; ಅವನು ಪೈಲವಾನನಂತೆ ಹುರಿಕಟ್ಟಾಗದಿದ್ದರೂ ಆರೋಗ್ಯಕ್ಕೆ ಹೊಂದಿಕೊಂಡು ದುಂಡಗೆ ಬಳೆದಿದ್ದನು (ಜಯುಂತ. ೩೦). **ಪಯಿಲ್ವಾನ್ :** ಅವನು ಆ ಊರಿನ ಭಾರಿ ಪಯಿಲ್ವಾನ್ ಆಗಿದ್ದಾನೆ (ಕೂ೦). **ಪಹಿಲವಾನ :** ಗ್ರಂಥಕರ್ತನು . . . ೧೫೫ ವರ್ಷದ ಒಬ್ಬ ಬಲಿಷ್ಠನಾದ ಅರಬೀ ಪಹಿಲವಾನ (ಜಟ್ಟಿ)ನನ್ನು ಸ್ವತಃ ಕಣ್ಣಾರೆ ನೋಡಿರುವನು (ಬ್ರಹ್ಮಚ. ೦೯೬); ದೊಡ್ಡ ದೊಡ್ಡ ಜಟ್ಟಿಗಳು (ಪಹಿಲವಾನರು) ಇಷ್ಟು ನಿರ್ವಿಕಾರಿಗಳೂ ಶಾಂತರೂ . . . ಬಲವಂತರೂ ಆಗುವ ನಿಜವಾದ ರಹಸ್ಯವು ವ್ಯಾಯಾಮವೇ ಸರಿ (ಬ್ರಹ್ಮಚ. ೦೯೬). **ಪಹಿಲ್ವಾನ್ :** ಕೆಲವು ಪಹಿಲ್ವಾನ್ ಚಿತ್ರಗಳಲ್ಲಿ ಎದೆಯ ಮೇಲೆ ದೊಡ್ಡ ಎರಡು ಕಾವಲಿಗಳಿರುತ್ತವೆ (ಕಸಧ. ೯೫). **ಪೆಹೆಲ್‌ವಾನ್ :** ನಮ್ಮ ತಾಲೀಮಿನಲ್ಲಿಯ ಪೆಹೆಲ್‌ವಾನ್‌ರನ್ನೆಲ್ಲ ಕೂಡಿಕೊಂಡು, ಒಬ್ಬೊಬ್ಬ ಕಾಫರ್‌ನನ್ನೂ ಹಿಡಿದು, ಗುಟಲನ್ನೊತ್ತಿ ಪಡಚಾ ಮಾಡಿಬಿಡುತ್ತಿದ್ದೆ (ಕಣಾಂತ. ೦೮೧). **ಪೈಲ್ವಾನ್ :** ಪೈಲ್ವಾನ್ ಸುಬ್ಬುವೂ ತೊಡೆ ತಟ್ಟಿ ನಿಂತ (ಘಮಕಾ. ೩) ; ನಮ್ಮೆಲ್ಲರ ಪೈಲ್ವಾನ್ ಆಗಿದ್ದವನು ಹೀಗಾದೆಯಲ್ಲ (ಅತ್ಕಾರ್ಣ. ೯೮).

[ ← ಪಾರ. ಹಿಂ. ಪಹಲವಾನ್ ; ಮರಾ. ಪಹಿಲವಾನ್, ಪಹೇಲ್ವಾನ್, ಪೈಲವಾನ್ ]

**ಪೈಲಾ** 'ಪಯಿಲಾ' ನೋ.

**ಪೈಲಾನಂಬರು** 'ಪಯಿಲಾನಂಬರು' ನೋ.

**ಪೈಲಿಕೆ** (ನಾ). ಒಂದು ಬಗೆಯ ಮೂಲಿಕೆ : "ಪೈಲಿಕಾ—ಅಗುಳುಶುಂಠಿ" (ಓಷಧಿ. ೦೦೩). [ ? ]

**ಪೈಲು** (ನಾ). (ವಿಶೇಷವಾಗಿ ರತ್ನಗಳ) ಪಾರ್ಶ್ವ ; ಮಗ್ಗುಲು : ಒಂದು ನಕ್ಷತ್ರ ನೂರು ಕಡೆಗೆ ಬೆಳಕನ್ನು ಚೆಲ್ಲುತ್ತದೆ. ಹಾಗೆ ಭಗವಂತನ ಸೃಷ್ಟಿಯಲ್ಲಿ ಒಂದೊಂದು ಘಟನೆಗೂ ನೂರೊಂದು ಪೈಲುಗಳಿರುತ್ತವೆ

(ಸಮುಜೀ. ೧೩೩); ಕರ್ಮಕುಶಲತೆಯು ಅವನ ವ್ಯಕ್ತಿತ್ವದ ಒಂದು ಪೈಲು (ಸವ್ಯಶಾ. ೨೩). [← ಪಾರ. ಹಿಂ. ಪಹ್ಲೂ; ಮರಾ. ಪೈಲೂ, ಪಹಿಲೂ]

**ಪೈಲ್ವಾನ್** 'ಪೈಲವಾನ' ನೋ.

**ಪೈವಸ್ತಿ** (ನಾ). ವಾಸ್ತವ್ಯ; ವಸತಿ: ಇದರ ಮುಂದೆ ವಿಜಾಪುರದಲ್ಲಿ ಮುಸಲ್ಮಾನರ ಪೈವಸ್ತಿಯು ಬಿದ್ದದ್ದರ ಪ್ರಮಾಣಗಳು ಇತಿಹಾಸದಲ್ಲಿ ಇರುತ್ತವೆ (ಕರ್ನಾಗ. ೫೩೯). [← ಪಾರ. ಪೈವಸ್ತ್; ಮರಾ. ಪೈವಸ್ತೀ]

**ಪೈವಸ್ತೆ** (ಗು). ಮೂರು ವರ್ಷಗಳ ಹಿಂದಿನ: (ಮೈಗೆಶಿ. IV, ೭೮೦). [← ಮರಾ. ಪೈವಸ್ತಾ]

**ಪೈಶಂಗಿತ** (ನಾ). ನಸುಹಳದಿಬಣ್ಣ: ಪಿರಿದುಂ ಮಾಡಿತ್ತುಮರ್ತ್ಯಪ್ರಕರದ ನಯನನಕ್ಕಂ ಮನಕ್ಕಂ ಸುರಸ್ತ್ರೀಯರ . . . ಅಧರಮಯೂಖಾಳಿಯಿಂ ದೆತ್ತಲುಂ ಪಾಂಡುರಿತಂ ಪೈಶಂಗಿತಂ ಕರ್ಬುರಿತಮರುಣಿತಂ ವ್ಯೋಮರಂಗಂ ಬೆಡಂಗಂ (ಚಂದ್ರಪು-೦೨-೭೬). [ಸಂ.]

**ಪೈಶಾಚ** (ಗು). ೧. ಪಿಶಾಚಿಗೆ ಸಂಬಂಧಿಸಿದ. ೨. ಆಸುರೀಸ್ವಭಾವದ; ಅಮಾನುಷವಾದ. (ನಾ). ೩. ಪಿಶಾಚಿ: ಹಿಂದೆ ರಣದೊಳಭಿಲಾಷೆಯಿಂ ಪೈಶಾಚರಂತೆ ಹೇಸದೆ ರಕ್ತಪಾನಮಂ ಮಾಡಿಯೊಡಲ ಪೋಷಿಸಿದೆ (ಕೈಬಿಭಾ. ೨-೬೦). ೪. ಹಿಂದೂವಿವಾಹಪದ್ಧತಿಯ ಎಂಟು ಪ್ರಕಾರಗಳಲ್ಲಿ ಒಂದು: 'ವಿವಾಹ' ಪರಾ. [ಸಂ.]

**ಪೈಶಾಚಕ** (ನಾ). ೧. = ಪೈಶಾಚಿಕ ೩: ಹರಂ ಗಿರಿಸುತೆಗೆ ಪೇಟ್ದಾ ಕಥೆಗಳಂ ಪೈಶಾಚಕಭಾಷೆಯೊಳ್ ಬೃಹತ್ಕಥೆಗಳಂ ಮಾಡಿ ಪೇಟ್ದೊಡೆ (ಶಂಕರಕಂ. ೦೦-೦೩). ೨. ಪಿಶಾಚಿ ಹಿಡಿದವನು; ದೆವ್ವ ಮೆಟ್ಟಿ ಕೊಂಡವನು: ದಿಗ್ಭ್ರಮೆ ಪದಂಗೆಟ್ಟಂಗೆ ಪೈಶಾಚಕಂಗೆ ದುರಾವೇಶ ಮಧಾರ್ವಿಕಂಗೆ ಕುಮತಂ ತತ್ವಪ್ರಮೂಢಂಗೆ ಬೀಸಿದ ಕಣ್ಮಾಯದ ಕುಂಚ ದಂತಿರೆನಗಾದತ್ತಾಗಳೇನೆಂಬುದೋ (ಶಾಂತಪು. ೮೧೩). [ಸಂ.]

**ಪೈಶಾಚಿ** (ನಾ). ೧. ಪಿಶಾಚಿ: ಪುತ್ರಾಭ್ಯುದಯಮೋಹದ ತಮಸ್ಸು ತೀವ್ರವಿರ್ದ ಲೋಭಪೈಶಾಚಿಗೀ ಪಿರಿಯ ಬಲಿಯಹುದೆಂದು ಮುನ್ನಮಾನ ರಿಯಲಾರದೆ ಹೋದೆ (ಶ್ರೀರಾಪಟಾ. ೦೦೬-೨೨೦). ೨. = ಪೈಶಾಚಿಕ ೩: ಈ ದೃಶ್ಯಕಾವ್ಯದಲ್ಲಿ ರಾಜನು ಮುಂತಾದವರುಗಳಿಗೆ ಸಂಸ್ಕೃತಭಾಷೆಯೂ . . . ರಾಕ್ಷಸ ಪಿಶಾಚಾದಿಗಳಿಗೆ ಪೈಶಾಚೀ ಮತ್ತು ಚೂಳಿಕಾಪೈಶಾಚೀ ಭಾಷೆಯೂ ಚಂಡಾಲಾದಿಗಳಿಗೆ ಅಪಭ್ರಂಶಭಾಷೆಯೂ ವ್ಯವಹಾರಾರ್ಹವಾಗಿ ವಿಹಿತವಾಗಿರುವುದು (ಭಾರದ. ೪೩೩). [ಸಂ. ಪೈಶಾಚೀ]

**ಪೈಶಾಚಿಕ** (ಗು). ೧. ಪಿಶಾಚಿಗೆ ಸಂಬಂಧಿಸಿದ. ೨. ಆಸುರೀಸ್ವಭಾವದ. (ನಾ). ೩. ಪ್ರಾಕೃತ ಭಾಷೆಗಳಲ್ಲಿ ಒಂದು; ಗುಡ್ಡಗಾಡುಜನಾಂಗದ ಭಾಷೆ: ಸಂಸ್ಕೃತಂ ಪ್ರಾಕೃತಂ ಅಪಭ್ರಂಶಂ ಪೈಶಾಚಿಕಮೆಂಬ ಮೂರು ವರೆಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೧-೪೬ ವ); ಸಂಸ್ಕೃತ ಪ್ರಾಕೃತ ಪೈಶಾಚಿಕ ಮಾಗಧ . . . ಮಿಶ್ರಾದಿ ಭಾಷಾಭೇದಗಳಂ ಪೇಳ್ವ ಲಾಕ್ಷಣಿಕರಪ್ಪ ಕವಿಗಳಿಂ (ವಿವೇಕ. ೨೨೬). [ಸಂ.]

**ಪೈಶುನ್ಯ** (ನಾ). ೧. ಚಾಡಿ ಹೇಳುವಿಕೆ; ಚಾಡಿಕೋರತನ. ೨. ಪಿಸುಣಾ ಚಾಡಿ; ದೂರು: ಆ ಬಳಿಕ ನೀವು ಮಾಡಿಟ್ಟಿರುವ ಪೈಶುನ್ಯದ ಕುಚೇಷ್ಟಿತವನ್ನು ತಿದ್ದುವುದಾಗಲಿ (ವಿಗಿತ. ೭-೦೩). ೩. ದುಷ್ಟ ತನ; ದುರ್ಗುಣ. [ಸಂ.]

**ಪೈಶೂನ್ಯ** (ನಾ). ೧. ಚಾಡಿ; ದೂರು; ಪಿಸುಣು: ಪರಿವಾದಂ ಪೈಶೂನ್ಯಂ ಪರಮರಹಸ್ಯಪ್ರಕಾಶಕರಣಂ ಕೂಟಾಕ್ಷರನಿಧಿನಿಕ್ಷೇಪಾದ್ಯಪಹರಣಂ ಸತ್ಯವ್ರತಕ್ಕತಿಕ್ರಮಮಕ್ಕುಂ (ಧರ್ಮಾಮೃ. ೭-೯). ೨. ದುಷ್ಟತನ: 'ಪೈಶೂನ್ಯ ದೂರ' ಪರಾ. ೩. ಚಾಡಿಕೋರ; ಪಿಸುಣ: ಒತ್ತಿ ಬುದ್ಧಿಯ ಪೇಳ್ದಡಲಗನು ಕಿತ್ತು ನಾ ಮರುಳಾದೆನಟವನೆತ್ತ ಪೋದನೊ ಕೊಲುಗು ಹಗೆ ಪೈಶೂನ್ಯನೆಂದೆನುತ (ಕಾತಿರಾ. ೦೩-೦). [< ಸಂ. ಪೈಶುನ್ಯ]

**ಪೈಶೂನ್ಯದೂರ** (ನಾ). ದುಷ್ಟತನವಿಲ್ಲದವನು; ದುರ್ಗುಣವಿಲ್ಲದ ವನು: ದೇವಾಗ್ರಗಣ್ಯಂ ಶಂಭುಸ್ವಾಮಿಷ್ಟಲಿಂಗಂ ಪ್ರಮಥಪರಿವೃಢಂ ಪಾತು ಪೈಶೂನ್ಯದೂರಂ (ಹರಿಶ್ಚಾರ. ೫-೬೬). [ಪೈಶೂನ್ಯ + ದೂರ]

**ಪೈಷ್ಟಿಕ** (ಗು). ೧. ಹಿಟ್ಟಿನಿಂದ ತಯಾರಿಸಿದ; ಪಿಷ್ಟಸಂಬಂಧವಾದ. (ನಾ). ೨. ಹಿಟ್ಟಿನಿಂದ ಮಾಡಿದ ಮಾದಕಪೇಯ: "ಪೈಷ್ಟಿಕಃ— ಮದ್ಯ" (ಚಿಕಂ. ೦೦೩). [ಸಂ.]

**ಪೈಸ, ಪೈಸಾ, ಪೈಸೆ** (ನಾ). ೧. ಒಂದು ನಿರ್ದಿಷ್ಟ ಬೆಲೆಯ ತಾಮ್ರದ ನಾಣ್ಯ; ಆಣೆಯ ಮೂರನೆಯ ಒಂದು ಅಂಶ; ಒಂದು ದುಡ್ಡು: ನಾಲ್ಕು ಕಾಸು: ಟಂಕೆ ವಿವರ: ಟಂಕೆಗೆ ಶೋಡಶ ದುಡ್ಡಂ ಬಿಂದಿ ಸಸಿ ಗಾಣಿ ನಾಲ್ಕು ಪೈಸಗಳೆಂಟಂ ಪಂಜಮಿತ್ರನ ಗಣನೆಗೆ ಭೋಂಕನೆ ತಾಂ ಒರಗಾಣಿ ದುಗ್ಗಾಣಿರಡಂ (ಭಾಸ್ಕರ. ೭೬-೯). ೨. ಹಣ; ದುಡ್ಡು: (೬) ೩. ಒಂದು ರೂಪಾಯಿಯ ನೂರನೆಯ ಒಂದು ಭಾಗ: (೬). **ಪೈಸಾ:** ೨. ಭಟಾರಜ . . . ನಿಮಗ ಪೈಸಾ ಖೂಬ ಕೊಡ್ತಾವ (ಸ್ವಾಮಿಂ. ೮). **ಪೈಸೆ:** ೧. ಚಕ್ರವ ಪರರಿಗೆ ವಿಕ್ರಯ ಮಾಡಲು ಹನ್ನೆರಡೇ ಪೈಸೆ (ಕೃಕಿಅ. ೪೯). ೩. ಈಗಿನ ದಿನಗಳಲ್ಲಿ ಐವತ್ತು ಪೈಸೆ ಕೊಟ್ಟರೂ ಒಂದು ಒಳ್ಳೆಯ ಬಾಳೆಹಣ್ಣು ಸಿಕ್ಕುವುದಿಲ್ಲ (ರೂಢಿ). 'ಪಾಯ್ಲಿ' ಪರಾ. [← ಪಾರ. ಪೈಸ; ಹಿಂ. ಮರಾ. ಪೈಸಾ]

**ಪೈಸರ, ಪಯ್ಸರ, ಪೈಸಾರ** (ನಾ). ೧. ಮಲ್ಲಯುದ್ಧದ ಒಂದು ಪಟ್ಟು; ಕುಸ್ತಿಯ ಒಂದು ವರಸೆ: ಗಳಹತ್ತ ಡೊಕ್ಕರ ತಳಮೇಲು ಪೈಸರ ಸುಳಿವು ವಂಚನೆ ಪತನದಲಿ . . . ಹೋರಿದರು (ಕಂನಪಿ. ೨೦-೯೨). ೨. ಯುದ್ಧದಲ್ಲಿ ಬಳಸುವ ಒಂದು ಪಟ್ಟು: ಓಸರದ ಪೈಸರದ . . . ಸಮರವಿಲಾಸಿಗಳು ಸರಕಟಿಸಿ ಕಾದಿದರು (ಕೊರಚಾ. ೬-೦೦-೨೦). ೩. ಕುಗ್ಗುವುದು; ಕುಸಿ ಬೀಳುವುದು; ಜೋಲುವುದು: ಮುರಿದ ಕಂಗಳ ಮಲಗಿನಲಿ ಪೈಸರದ ಗಾತ್ರದ ಗಾಢವೇದನೆಯುರವಣಿಸೆ ಸೊಂಪಡಗಿ ನಿಮಿಷ ಮಹೀಶ ಮೈಮರೆದ (ಕುವ್ಯಾಶ. ೩-೪೩). ೪. ಜಾರುವುದು; ಜಾರುವಿಕೆ: ವ್ಯೋಮದೊಳೆಯ್ದುವ ನಿಮಗೆ ಪೈಸರವುಂಟೆ (ಶರಶ. ೩-೬೯). ೫. ಹಿಂದಕ್ಕೆ ಸರಿಯುವುದು; ಹಿಂಜರಿತ; ಹಿಮ್ಮೆಟ್ಟುವಿಕೆ: ಆಸೆಯ ಪೈಸರಂ ಮೊಳೆವ ಚೆಲ್ವಂ ದೇವ ನೀವೇಟ್ ನೋಡಿರೆ (ಅನಂಪು. ೨-೩೦); ☞ ಇಲ್ಲಿ 'ಪೈಸರಂ' ಎಂಬುದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪವಿರಬಹುದು; ಮನಕೆ ಭೀತಿಯ ಬೆರಕೆಯುಳ್ಳಡೆ ಬಿಟ್ಟು ಕಳೆ ಪೈಸರಕೆ ಸಮಯವಿದು (ಕುವ್ಯಾಶ. ೦೩-೫೮). ೬. ಹಿಂದುಮುಂದು ನೋಡುವುದು; ಅನುಮಾನ: ಕನ್ನಗಳ್ಳರನಿವರ ಮೊಗದಿ ಪೈಸರವ ಮಾಡದೆ ವಿಚಾರಿಸು ವುದು (ಕಮ್ಮಕೌ. ೨-೬೩). ೭. ತಪ್ಪುವುದು; ನುಣುಚಿಕೊಳ್ಳುವುದು: ಭಾಷೆ ಪೈಸರವಿಲ್ಲ ಓಸರಿಸೆನನ್ಯಕ್ಕೆ ಆಸೆಮಾಡೆನು ಮತ್ತೆ ಭಿನ್ನಸುಬಿಕ್ಕೆ (ಮಹಾದೇ. ಬ. ೩೦-೭೭). ೮. ನಷ್ಟ; ಹಾನಿ: ಈಸು ಕಳವಳವೇನು . . . ನಿನ್ನ ಹರುಷಕೆ ಪೈಸರವದೇನು (ಕುವ್ಯಾಶ. ಓಂಇ. ೦೩-೩೯). 'ಪೈಸರಂ ಗೊಳ್' ಪರಾ. ೯. ಇಳಿಜಾರಾದ ಪ್ರದೇಶ; ಇಳುಕಲು: ಪಾಂಡು ನಂದನರು ಗಾಸಿಯಾದರು ಗಟ್ಟ ಬೆಟ್ಟದ ಪೈಸರದೊಳು (ಕುವ್ಯಾಅ. ೦೭-೦೭); ಪಾದವೆಚ್ಚಜಿಕೆ ಪೈಸರ ಪರಾಕವಧಾನವೆನಲು (ಶರಶ. ೩೯-೩೬); ಅವರು ಒಂದು ಬೆಟ್ಟದ ಶಿಖರದ ಅಂಚಿನ ಸಮೀಪದ ಪೈಸರದಲ್ಲಿ ನಿಂತಿದ್ದರು (ಗಿಂಬಾ. ೭೦). ೧೦. ಸೋಲು; ಭಂಗ: ನೆನಹಿನಭಿರುಚಿಯ ವಾಸಿಗಳ ಪೈಸರವನೆನ್ನಲಿ ಸೂಸಬಾರದೆ (ಕುವ್ಯಾಸ. ೦೨-೨೮). ೧೧. "ಸೋರಿಕೆ" (ಷಟ್ಪ್ರಿ): ಪರಿಕಾಲ್ಗಳೀಳ್ಗೆದಪ್ಪಿದೊರ್ಡವಜಿಹೋಳಿಯಿಂಭೋವಾಟವೂ ಪೈಸರವು ಮುಂದಕಸೂತ್ರಕ್ಕೆ ಹರಿಯಾದೊಡೆ . . . ನೀವೆಲ್ಲರಾರ್ದು ಪೊಗಳ್ವಂ ತೆಸಗದೊಡೆ ಮಹಾದೇವನೇ ದೇವನೆಂದೆನಲಕ್ಕುಮೇ (ಶಬ್ದರಾ. ೬-೯೦).

೧೨. ವ್ಯಾಪನೆ; ವಿಸ್ತಾರ; ಹರಹು : ಪೈಸರಿಸು' ಪರಾ. ೧೩. (ಯುದ್ಧದ ಪಟ್ಟಿನಿಂದ ಒದಗುವ) ರಕ್ಷಣೆ (?) : ಅಚಲ ಮೂಬಿಟಿ ಪೈಸರದ ಬಲನಿಚಯ ನಮ್ಮದು ವೀರಸುಭಟಪ್ರಚಯಮುಖ್ಕುರ ಮಾಡಿ (ಕುವ್ಯಾ.ಶ. ೧-೨೦). **ಪಯ್ಸರ :** ೩. ' ಪಯ್ಸರವೋಗು ' ಪರಾ. ೪. 'ಪಯ್ಸರಿಸು' ಪರಾ. ೭. ನುಸುಳು ನೆಲೆ ಡಿಳ್ಳಾಯ್ತು ಪಯ್ಸ [ಶಾಕಾಂ. ಪೈಸ]ರ ಬೆಸುಗೆ ಬಿಗುಹುಳುಕೊತ್ತು ಕಲೆಗಳ ರಸದ ಪಸರವ ನಜಿಯಬಾರದು ವಿಗಡವಿಟರುಗಳ (ಕುವ್ಯಾ.ಅ. ೧೩-೨೩). **ಪೈಸಾರ :** ೧೨. ಬಯಲ ಬಿಡಾರ ಪೈಸಾರದಿಂದೆ ಬಿಟ್ಟಿತು ಬಹುಬಲವಾ (ಸೌಂದಕಾ. ೭-೬).

**ಪೈಸರವಾಗು, ಪಯ್ಸರವಾಗು** = ೧. ಸೋಲುಂಟಾಗು; ಪರಾಭವ ವುಂಟಾಗು : ಬೀದಿಗಲಹದೊಳೊಮ್ಮೆ ಪೈಸರವಾದಡದು ಪರಿಹರಿಸಿದವರೇ ಸೋದರರಲಾ (ಕುವ್ಯಾ.ಅ. ೨೦-೩೩). ೨. ಇಲ್ಲವಾಗು; ಮರೆಯಾಗು : ಶೌರ್ಯದ ಮಾಸಿ ಪೈಸರವಾಯ್ತು ರಣದಾವೇಶವಿಳಿದುದು ಮಗಧಪತಿಗೆ (ಕುವ್ಯಾ.ಸ. ೨-೧೧೯); ಉಜಿ ಮನದ ಮಾಸಿ ಪಯ್ಸರವಾಯ್ತು ಗೆಲ್ವಾಸೆ ಯಡಗಿತು (ಜೈಮಿ. ೨೩-೩೩). [ದೇ. ॥ ತೆಲು. ಪೈಸರ, ಪಯಿಸರ]

**ಪೈಸರಂಗೊಳ್, ಪೈಸರಗೊಳ್** (ಕ್ರಿ). ೧. ಹಾಳಾಗು; ಕೆಡು : ' ಪೈಸರಂಗೊಳಿಸು ' ಪರಾ. **ಪೈಸರಗೊಳ್ :** ೨. ಅನುಮಾನಿಸು; ಹಿಂದೇಟು ಹಾಕು; ಹಿಂದುಮುಂದು ನೋಡು : ಕೈಸೇರಿದೊಡವೆ ಯೆನುತ ಕೊಡಬೇಕೆಂದು ಪೈಸರಗೊಳಬೇಡ ಮನದಿ (ಮೋಹತ. ೨೬-೩೯). [ಪೈಸರ + ಕೊಳ್$_1$]

**ಪೈಸರಂಗೊಳಿಸು** (ಕ್ರಿ). ಹಾಳು ಮಾಡು; ಕೆಡಿಸು : ಹಣ್ಣನಿಟ್ಟೊಡೆ ಕಾಯಿ ಬಿದ್ದ ತೆಱದಿಂ ನಾನು ಹಣ್ಣಿದಾ ಕಾರ್ಯಮಂ ಪೈಸರಂಗೊಳಿಸಿ ಮಸಿವಣ್ಣಮಂ ಮಾಡಿದೆಯಲಾ ಪಾಪಿದೈವಮೇ ಎಂದು ಬಸಿಱಂ ಹೊಸೆಯುತ (ಸಮ್ಯಕೌ. ೩-೩೦). [ಪೈಸರಂಗೊಳ್ + — ಇಸು$_3$]

**ಪೈಸರಂಬೋಗು, ಪಯ್ಸರವೋಗು, ಪೈಸರವೋಗು** (ಕ್ರಿ). ೧. ಜಾರು ; ಜಗುಳು : ಗತಿ ಸ್ತಂಭಿಸಿ ಪಾದಂ ಪೈಸರಂಬೋ[ಶಾಕಾಂ.ಪೋ]ಗೆ ... ಮೂರ್ಛಿಸುವ ಮಗಳಂ ಪದ್ಮಾವತಿ ಕಂಡು (ಪುಣ್ಯಾ. ಹ. ೧೬೯-೧೮). ೨. ಇಲ್ಲವಾಗು ; ತೊಲಗು : ಪನ್ನತಿಕೆ ಪೈಸರಂಬೋಗಿ ಮೈಗರೆದು ದೇವತ್ವಮುಡುಗಿ ಬಲಗೆಟ್ಟು ನಾಣ್ಗೆಟ್ಟು ನಿಂದು (ಅರಾಕ. ೩-೮-೩೩). **ಪಯ್ಸರವೋಗು :** ೩. ಜೋಲು ; ಕುಸಿಬೀಳು : ಅಸಮಸಾಹಸಿ ತಿವಿದರಮುಮಾ ದೆಸೆಗೆ ಚೆಲ್ಲಿತು ಕರುಳು ಪಯ್ಸರವೋಗಿ ಖಳ ಕೆಡೆದ (ಕೌಶಿಕಾ. ೨೨-೨೦). **ಪೈಸರವೋಗು :** ೧. ಮುಂದೆ ಹೆಜ್ಜೆಯನಿಡುತ ಪೈಸರವೋಗಿ (ಕುವ್ಯಾ.ಗ. ೩-೧೩). ೨. ಆಶೆ ಪೈಸರವೋಯ್ತು (ಕುವ್ಯಾ.ಅ. ೮-೩೬); ಬಿದಿರ್ದುದು ಬಿಂಕಂ ಬೀತುದು ಪರಿ ಪೈಸರವೋದುದು ಪೆಂಪು (ಜಯನೃ. ೩-೩೨). ೪. ತಪ್ಪಿಸಿಕೊಳ್ಳು ; ನುಣುಚಿಕೊಳ್ಳು : ತಿರುಗಿ ಪೈಸರವೋಗಿ ಪವನಜ ಮುರಳಿ ತಿವಿದನು ಕೀಚಕನ ಪೇರುರವನು (ಕುವ್ಯಾ.ವಿ. ೩-೯೨). [ಪೈಸರ + ಪೋಗು$_1$ (< ಪೋ$_1$)]

**ಪೈಸರಗೊಡು** (ಕ್ರಿ). ವಿಸ್ತಾರವಾಗಿಡು ; ಅಗಲವಾಗಿಡು: ಕಾಲ ಪೈಸರ ಗೊಟ್ಟು ಸರಪಣಿವಿಡಿದು ಹಿಮ್ಮಾಲಾಗಿ ಪಡೆ ತೆಗೆವಾಗ ತೋಳ ಸಿಕ್ಕಿಗೆ ರಾಯ ನೀಡಿದನುಱಿ ಹೊಟ್ಟೆಮೇಲಾಗಿ ಕೆಡೆದರುರ್ವಿಯೊಳು (ಭರತ. ೯೯-೧೧೯). [ಪೈಸರ+ಕೊಡು$_1$]

**ಪೈಸರಗೊಳ್** ' ಪೈಸರಂಗೊಳ್ ' ನೋ.

**ಪೈಸರಗೋಲು** (ನಾ). ದೊಣ್ಣೆವರಸೆಯಲ್ಲಿ ಬಳಸುವ ಕೋಲು : ಉರ ತಗ್ಗಿ ಬಗ್ಗಿ ಕುಪ್ಪಳಿಸಿ ಮೈಸಿರಿಯುಬ್ಬಿ ಭರತಕೋವಿದರಂತೆ ಹೆಣಗಿ ಸರಿಬವರಿಯೊಳು ಪೈಸರಗೋಲ ತಿರುಗಿ ಶ್ರೀಕರದ ಸಾದಕವ ತೋರಿದರು (ಕವಿಚ. III, ೯೯ ಸೌಂದರಕಾವ್ಯ). [ಪೈಸರ+ಕೋಲು$_1$ (<ಕೋಲ್$_1$)]

**ಪೈಸರವೋಗು** ' ಪೈಸರಂಬೋಗು ' ನೋ.

**ಪೈಸರಿಸು, ಪಯಿಸರಿಸು, ಪಯ್ಸರಿಸು** (ಕ್ರಿ). ೧. ಕೆಳಕ್ಕೆ ಬೀಳು; ಜಾರು; ಜಗುಳು: "ಪೈಸರಿಸಿತೆನಲ್ಕೆ ಜಾಱಿತೆಂದಱಿಗೆ ಬುಧರ್" (ಭಾರತಿ. ೩೩); ಸಂಜಯನು ಬರಬರಲು ಕಂಡನು . . . ಕರಿಗಳೊಟ್ಟಿಲನೇಱಿಳಿದು ಪೈಸರಿಸಿ ಮಿದುಳಿನ ಜೋಱು ಜೊಂಡಿನ ತೊರಳೆಯಲಿ ದಡದಡಿಸಿ ಜಾಱುತ ಬೀಳುತೇಳುವನ (ಕುವ್ಯಾ.ಗ. ೩-೮); ಜೋಲುವ ದೋತ್ರ ಪೈಸರಿಸಿದಕ್ಷಮಾಲೆ (ಸೌಂದಪು. ೩-೧೬); ಪಾದಪಶಾಖೆಯಿಂ ಪೈಸರಿಸಿ ಧೊಪ್ಪನೆ ಕೆಡದು ಪವನನ ಕಾಲು ನೊಂದಿರಲು (ತಿಮ್ಮ.ಅ. ೭-೨೩). ೨. ಕುಸಿದುಂಬೀಳು,— ಕೆಡೆ: ಅಧಟ ನವನಿಗೆ ಪೈಸರಿಸಿ ಹರಿವದನವನು ನೋಡುತ್ತ ಬಿಟ್ಟನು ನಿಜಕಳೇವರವ (ಶಿಭಾಗ. ೩-೮-೩೯). ೩. ಕುಗ್ಗು ; ಕುಂದು ; ಕಡಮೆಯಾಗು : ಬರಸು ಭಾಷೆಯನಿಂದು ಕರ್ಣನ ಶಿರವುಳಿದು ತಾವರೆಯ ನಗೆ ಪೈಸರಿಸಿದರೆ . . . ಕಲಿಭಿ.ಮನಯ್ಯನ ಹರಹು ನಿಂದರೆ ಬಳಿಕ ನಿಮ್ಮಯ ತಮ್ಮನಲ್ಲ (ಕುವ್ಯಾ.ಕ. ೧೮-೬); ಜೀಸರಂಬೊಂದಿತ್ತು ಮನದೆಸಕಮಾವಗಂ ಪೈಸರಿಸಿತತಿಧೈರ್ಯಂ (ಅರಾಕ. ೨-೩-೬); ಧೃತಿ ಪೈಸರಿಸುತಾ ನೃಪನೊಡನೆ ತದ್ವಿಪ್ರನಿಂತೆಂದು (ತಿಮ್ಮ.ಅ. ೩-೮೨). ೪. ಕ್ಷಯಿಸು; ನಾಶವಾಗು : ಇರುತಿರುತ ರವಿಸೂನು ಗಂಧರ್ವರಲಿ ತನ್ನಯ ಕೀರ್ತಿಲತೆ ಪೈಸರಿಸಿದಂದವನ್ನೆದೆ ಚಿಂತಿಸುತಿರಲು ರಜನಿಯಲಿ ತರಣಿ ಕಂದನ ಮೋಹದಿಂದವೆ ಧರೆಗೆ ಬಂದನು (ಕುವ್ಯಾ.ಅ. ೧೦೩. ೨೩-೬); ಅತ್ಯಂತವಿಷಯಾತುರರಿಗೆ . . . ಕುಲ ಪೈಸರಿಸುವುದು (ಜೀವಂಧ ೯-೨); ತೇಜದೇಳಿ ಯದು ಪೈಸರಿಸಿತ್ತೆ (ವೀರವಿ. ೧೧-೭೩). ೫. ಹಿಂಜರಿ; ಹಿಮ್ಮೆಟ್ಟು : ಭೀತಿಗೆ ಸೆಡೆದಾ ನಕುಲ ಪೈಸರಿಸಿದನು (ಕುವ್ಯಾ.ಗ. ೨-೩೩); ವೀರಹನುಮನ ಮಱೆಯ ಹೊಕ್ಕುದು ಭೂರಿವಾನರಸೇನೆ ಪೈಸರಿಸಿ (ತೊರರಾ. ೬-೩೨-೯); ಆ ಸುರಾರಿಗಳೆಮ್ಮ ದೆಸೆಯಿಂ ಪೈಸರಿಸುವವರಲ್ಲ (ಉರರಾ. ೩-೨೬). ೬. ತೊಲಗು ; ದೂರ ಸರಿ: "ಪೈಸರಿಸಿತೆನಲ್ಕೆ ಪೋದುದು" (ಶಕುಶಿ. ೧೨೬-೧೬೯); ಬೀಸುವ ಗಾಳಿಗೊಯ್ಯನೆ ಪೈಸರಿಸುವ ದಾಸಿಮುಗಿಲ ತೆಱನಂತೆ (ಅಂಜಶ. ೧೩-೨೯೯); ಎರಡುಘಳಿಗೆಯು ಮೇಲಾ ಕಾಂತೆ ನಿದ್ರೆ ಪೈಸರಿಸಿ ಮೈಮುರಿದೆದ್ದಳು (ಭರತ. ೯೦-೧೬೬). ೭. ಹಿಂದಿರುಗು ; ವಾಪಸ್ಸಾಗು : ಪೈಸರಿಸುವುದು ಬಂದ ಬಳಿವಿಡಿದು (ಕುವ್ಯಾ.ಉ. ೩-೧೩); ಪುರವ ಹೊಱವಂಟುರಗಪತಿ ಪೈಸರಿಸಿದನು ಯವನೇಶನೈತರೆ (ಶಿಅ.ಗ. ೯-೧೮-೨೬). ೮. ಮರೆಯಾಗು ; ಕಾಣದಾಗು : ಅತುಳಮೋಹಮದೋ ಸರಿಸಲ್ ಥಳಥಳಿಪ್ಪ ವಿಮಲಾತ್ಮನವೋಲ್ ಪೈಸರಿಸಲಿಂದ್ರಜಾಲಕಮಾ ಸನ್ಮುನಿಯೊರ್ವನೊಪ್ಪಲು (ಉದ್ಭಟ. ೩-೯೬). ೯. ಪಕ್ಕಕ್ಕೆ ಸರಿ; ಓರೆ ಯಾಗು : ಬಿಗಿದು ತೊಟ್ಟ ಕಂಚುಕಮಿನಿತು ಪೈಸರಿಸೆ ನಿಬಿಡಕುಚಮಿಟ್ಟ ಸಲ್ ನಸುದೋರೆ . . . ಗಟ್ಟಿವಾಳ್ತಿಯರೆಸೆದರು (ಶಕುಪು. ೧-೩-೩೦). ೧೦. ಸಡಿಲವಾಗು; ಅಳ್ಳಕವಾಗು : ನಿಱಿಯ ಬಿಗಿ ಪೈಸರಿಸೆ (ಕೈಬಿಭಾ. ೧೧-೧೯). ೧೧. ಬಿಡು; ವರ್ಜಿಸು; ತ್ಯಜಿಸು: ಆ ಸುರುತಾಳನ ಖಾನನ ಕರೆದುಕೊಂಬಾಸುರಕೃತ್ಯ ಬೇಡೆಮಗೆ ಪೈಸರಿಸುವುದದನು (ಕುಂರಾಸಾಂ. ೧೮-೧೩೮); ಆದಿಶೈವಾಚರಣೆಯಿಂ ಮುಕ್ತಿವನಿತೆಯೊಳಗಾವರದೆ ಸುಖಿ ಮಿರ್ಪುದಂ ಪೈಸರಿಸಿಯರ್ಹತೋದಿತಾಚಾರದೊಳ್ವರ್ತಿಸುತವಿದ್ಯಾಂಗನಾ ಸಂಗದಿಂದಿರ್ಪುದು ಹಾದರಮದಲ್ಲವೆ: (ಶಾಸೋಪು. ೯-೧೧೩). ೧೨. ಕೆಡು; ಹಾಳಾಗು : ಹೇಸದರಿಭೂಪಾಲರನು ನಿಶ್ಶೇಷವೆನಿಸುವುದಲ್ಲದಿರ್ದೊಡೆ ಪೈಸರಿಸುವುದು ರಾಜಕಾರ್ಯವಿದು (ಕುವ್ಯಾ.ಅ. ೮-೯೬). ೧೩. ಸಿಡಿ ; ಚಿಮ್ಮು : ಪೊಂಗೇದಗೆಯ ಕಿಱಿಯ ಗಱಿಗಳಿಂ ಪೈಸರಿಸಿದ ಅಲರ್ಪುಡಿಗಳಿಂ (ಶೀವಣ. ೨೭-೨೭) ; ಪೈಸರಿಸಿ ಭೂತ್ಕರಿಪ ಕಿಡಿ ನಿಶ್ವಾಸದುರಿ ಭುಗಿಭುಗಿಲೆ ನುತ ಪಡೆಸಾಸಿರವ ಪಸರಿಸುತ ಪವನನ ಕರೆದನಾಹವಕೆ (ಆಪಂರಾ. ೧-೭-೨೩). ೧೪. ಹರಡು ; ವಿಶಾಲವಾಗಿಸು ; ಹರಹು : ಉಱುಗಿತು ಬ್ರಹ್ಮಾಂಡವೆನೆ ಖಗರಾಜ ಕಿಳ್ಕಱಿಯನೊಯ್ಯನೆ ಪೈಸರಿಸೆ (ಮೋಹತ.

೬೬-೬೨) ; ಸದಮಲಸರ್ವಜ್ಞ ನಿಂದು ನಿಟ್ಟಿಸೆ ವಿಶಾರದ ಗಱಿಯನು ಪೈಸರಿಸೆ ಮದವಕ್ಕಳಿಳಿದರು (ಮೋಹತ. ೯೨-೧೫). ೧೫. ಹರಡಿಕೊಳ್ಳು; ವಿಸ್ತಾರಗೊಳ್ಳು : ತರೆತರೆಗೊಂಡು ಜಾರುತ ಪೈಸರಿಸುತ ಸಿರ ಮುಖ ಕಂಠ ವಕ್ಷಕ್ಕೆ ಮರಿದು ಜಠರ ಕಟಿಯೂರುಗಳಿಗಿಳಿತಂದು ಚರಣದಿಂದಂಗಣ ತುಂಬಿ (ಗೊಮ್ಮಟ. ೭-೨೨೨). ೧೬. (?) : ಆ ಸಮಾಪದೆ ಸುಂಡಿಲ ಗಳೆಳು ಪೈಸರಿಸಿ ಸುಂಡಿಲುಗಳಿಟ್ಟು ವಿಲಾಸದಿಂ ವತ್ತರಿಸಿ ನೂಂಕುತೆ ಬ್ರಹ್ಮೇತಂಗೈದು ವಾಸದಿಂ ಪೂರ್ವಾನೆಗಳದಿಂ ದೋಸಪದೊಪ್ಪಿದುದು ಬರುತಿಹ ಭೂಸುರೋತ್ತಮರುಗಳಿಗಂ ಭಯಮಾವುತೇಳೆಯಲಿ (ಕಾವೇಮ. ೬೦-೦೯). ಪಯಿಸರಿಸು : ೧೭. ತಪ್ಪಿಸಿಕೊಳ್ಳು ; ನುಣುಚಿಕೊಳ್ಳು : ದೊರೆಗಳ ಹಿಂದೆ ದೊರೆ ಪಯಿ[ ಪಾಠಾಂ. ಪೈ] ಸರಿಸಿತಲ್ಲಿಯದಲ್ಲಿ ಭೀಮನ ಹೊಯ್ಲ ಹೋರಟಿಗೆ (ಕುವ್ಯಾಕ. ೦೫-೬೬). ಪಯ್ಸರಿಸು : ೧. ಕುಚ ಯುಗಂ ವರನಿತಂಬಂ ಕದಕ್ಕದಿಸೆ ಮೇಲುದ ನಿಱಿಗಳಿರದೆ ಪಯ್ಸರಿಸೆ (ಕಬಪು. ೫-೦೬). ೧೭. ಬಾಹುಗಳಿಂದೆ ಕಂಠಮಂ ತೊಡರೆ ಕುಸುಂಗಿ ಪಯ್ಸರಿಪ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಶಬಶಂ. ೯-೬೩).

[ಪೈಸರ + — ಇಸು$_3$]

**ಪೈಸಾ** ‘ಪೈಸ’ ನೋ.

**ಪೈಸಾರ** ‘ಪೈಸರ’ ನೋ.

**ಪೈಸೆ** ‘ಪೈಸ’ ನೋ.

**ಪೊಂ** ‘ಪೊನ್’ ನೋ.

**ಪೊಂಕ** (ನಾ). ೧. ಗರ್ವ ; ಅಹಂಕಾರ : ಅರಿದರ್ಪರೆಗಳಿಗೆಯೆ ಜಾದಿಯ ಮಲೆಪುಂ ಮಲ್ಲಿಗೆಯ ಪೊಂಕಮುಂ ಬಟಿಕವನಾರ್ ತಲೆಯೊಳ್ ತಾಳ್ದುವರ್ (ಅದಿಪು. ೦೧-೦೦೮) ; ಪಂಕಜನಂದನ ದಾನವಾರಿ ರುದ್ರರ್ ಪೊಂಕದ ಬೋಳೆ ಯರಾದಿಕಾರಣಾಂಗರ್ ಬಿಂಕದ ಮೂಪರಿವರ್ಗೆ ಬೀಜಮಾಶಂ (ಹಾಲಾಸ್ಯ ೦-೦೭-೨೬) ; ಪೊಂಕಮಿಟ್ಟಿದು ಬಂದು ಎನ್ನ ಕೆಳೆಯ ನೆರೆದಪೆನ್ (ಬದ್ಧಶ್ರಿ. ೦೩-೨೩೯). ೨. ಉಬ್ಬು ; ಉತ್ಸಾಹ ; ಸಂಭ್ರಮ : ಪಂಕರುಹಸಖಿನುಮುದಯಿಸೆ ಪೊಂ[ ಪಾಠಾಂ. ಕೊಂ, ಬಿಂ ]ಕದೆ ಬಂದೊಡ್ಡಿ ನಿಂದುವೆರಡುಂ ಪಡೆಗಳ್ (ನೇಮಿಪು. ೦೨-೦೦೦) ; ಶಂಕೆಯಿಲ್ಲದೆ ಬದಿಯಲಿ ಬಂದು ನಿಂತು ಪೊಂಕದಲಿ ನಲಿದಾಡುವನಮ್ಮಾ (ಪುರಂದ. ೫-೦೩೦-೨) ; ಮುನೀಂದ್ರದೇವತಾಸಂಕುಳಮೊಲ್ದು ಭಕ್ತಿರಸಪೂರಣದಿಂದೆ ಪರಸುತ್ತೆ ಸೇಸೆಯುಂ ಪೊಂಕಮುದಾಗೆ ಸೂಸಿದರ್ (ಹಾಲಾಸ್ಯ. ೦-೦೭-೬೦). ೩. ಸೊಗಸು ; ಶೋಭೆ : ಕಂಕಣಝಣತ್ಕಾರಕಿಂಕಿಣೀಕಲರವದ ಪೊಂಕ ಮೆಯ್ವಡಲು ಮಾನಾಂಕನೋಜೆಯ ಬೆಡಗ ಸೋಂಕಿಸುತ ವಿಟತತಿಗೆ ಬಾಪಸ್ನವನ್ನರೆವ ನಲವು ಚೆಲುವಾಗಿರ್ದುದು (ವೆಂಕಾರಾ. ೦-೯-೨೮).

[<ಪೊಂಗು$_1$./ತಮಿ. ಪೊಙ್ಕು, ಪೊಕ್ಕು ; ಮಲ. ಪೊಕ್ಕು ; ತುಳು. ತೆಲು. ಪೊಂಕ]

**ಪೊಂಕಂಗಿಡಿಸು** (ಕ್ರಿ). ಗರ್ವಭಂಗಮಾಡು : ಶಿತಾಸ್ತ್ರಂಗಳ್ ಪೊ[ಕ]ಂಗಿ [ಪಾಠಾಂ. ಪೊಂಖಂಗಿ, ಪೋಗಂಕಿ]ಡಿಸೆ ಸುಗಿದಂ ಭಾರ್ಗವನಿದೇಂ ಪ್ರತಿಜ್ಞಾ ಗಾಂಗೇಯಂಗದಿರದಿದಿರ್ನಿಲ್ವನ್ನರೊಳರೇ (ಶಂಶಭಾ. ೧-೮೦) ; ಕಿಂಕುವರ್ಣಾಣ ಪ್ರವಣರರೆಬರ್ ಬರ್ಪನಂ ಕಾದು ತನ್ನಂ ಬಿಂಕಂ ಪೊಂಕಂಗಿಡಿಸೆ ನನೆವಿಲ್ಲಾತನಂ ತೊಟ್ಟ ದಿವ್ಯಾಲಂಕಾರಗಳ್ ನಯನಸುಖಮಂ ನೀಡೆ (ಶಂರಾವಾ. ೭-೦೩೦). [ಪೊಂಕಂಗಿಡು (<ಪೊಂಕಂಗೆಡು) + — ಇಸು$_3$]

**ಪೊಂಕಂಗಿಡು** ‘ಪೊಂಕಂಗೆಡು’ ನೋ.

**ಪೊಂಕಂಗೆಡು, ಪೊಂಕಂಗಿಡು** (ಕ್ರಿ). ಗರ್ವಭಂಗವಾಗು ; ಸೊಕ್ಕಿಳಿ : ಪೊಂಕಮುಳ್ಳವರ್ ಪೊಂಕಂಗೆಟ್ಟಪ್ಪಡೆ (ಧರ್ಮಾಮೃ. ೦೩-೫೩). **ಪೊಂಕಂಗಿಡು** : ಅಂಕದ ನರೇಂದ್ರತನಯರು ಪೊಂಕಂಗಿಡೆ ಜನದ ನೆರವಿ ಬಾಯಂ ಬಿಡೆ...ಕೊಂಡುದರ್ಜುನನ ಶರಂ (ಬಿಂಹಾ. ೦೦-೦೫). [ಪೊಂಕ + ಕೆಡು$_1$]

**ಪೊಂಕು$_1$** ‘ಪೊಂಗು$_1$’ ನೋ.

**ಪೊಂಕು$_2$** ‘ಪೊಂಗು$_2$’ ನೋ.

**ಪೊಂಕುಂದ, ಪೊಕ್ಕುಂದ, ಹೊಂಕುಂದ** (ನಾ). ಒಂದು ಊರಿನ ಹೆಸರು; ☞ ಈಗಿನ ಕೋಲಾರಜಿಲ್ಲೆಯ ಬೌರಿಂಗ್‌ಪೇಟೆ ತಾಲ್ಲೂಕಿನ ಹನಕುಂಡ : ಶ್ರೀಮಾಧವಮುತ್ತರಸರ್ ... ಆವನ್ಯನಾಡು ಮೂವತ್ತುಂ ಪೊಂಕುನ್ದ ಪನ್ನೆರಡುಮಾಳುತ್ತು[ವಿ]ರೆ (ಎಕ. X, ಬೌರಿಂಗ್. ೦೩ ೨ ; ಸು. 890) ; ☞ ಇದು ‘ಪೊಂಕುಂದ’ ಎಂಬುದರ ಅಪಲಿಖಿತ ; ಸ್ವಸ್ತಿಶ್ರೀ ದಿಲೀಪಯ್ಯಂ ಪ್ರಿಥುವೀರಾಜ್ಯಂಗೆಯ್ಯುತ್ತಿರೆ ಪೊಂಕುನ್ದದ ತುಱುಗೊಳೆ ... ಕಾದಿ ಸತ್ತು ಸಗ್ಗಿಯಾದನ್ (ವ್ಯಕಂ. ೦೯೩೦, ೮-೨ ; ?). **ಪೊಕ್ಕುಂದ** : ಪೊಕ್ಕುನ್ದದ ತುಱುಗೊಳೆ ಕೊಂಗಮಂಗಲದ ಮೇದಯ್ಯ ಕಾದಿ ಸತ್ತು ಸಗ್ಗಯ್ದದ (ಎಕ. X, ಬೌರಿಂಗ್. ೯೦-೨ ; ಸು. 950). **ಹೊಂಕುಂದ** : ಸ್ವಸ್ತಿಶ್ರೀಮತು ಪಲ್ಲವಾನ್ವಯಪ್ರದೀಪಕಮ್ ಕುಮಾರಮ್ ಮಾಚಿ ದೇವರಸರುಮ್ . . . ರಾಜಾಧ್ಯಕ್ಷ ವಾಮನಕ್ರಮಿತರುಮ್ ಹೊಳಲೆ ಕೆಱೆನಾಡುಮುಮ್ ಹೊಂಕುನ್ದಮೂವತ್ತುಮುಮ್ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನೆಯಿನಾಳುತ್ತಮಿರ್ದ್ದು (ಎಕ. XI, ಚಿತ್ರದು. ೨೩-೨೦ ; 1205).

[ಪೊಂ (< ಪೊನ್) + ಕುಂದ$_3$]

**ಪೊಂಗ$_1$** (ನಾ). ಧೈರ್ಯಶಾಲಿ ; ದಿಟ್ಟ : ‘ಚೆನ್ನಪೊಂಗ’ ಪರಾ.

[ಪೊಂಗು$_2$ + — ಅ$_7$]

**ಪೊಂಗ$_2$** ‘ಪೊಂಗಯಿ’ ನೋ.

**ಪೊಂಗಂಟೆ, ಹೊಂಗಂಟೆ** (ನಾ). ಚಿನ್ನದ ಗಂಟೆ : ವಿಳಸದ್ರುದ್ರಾಕ್ಷಮಾಲಾ ಭರಣದೆ ಕೊರಲೊಳ್ತಳ್ತ ಪೊಂ[ಪಾಠಾಂ. ಹೊಂ]ಗಂಟೆಯಿಂ . . . ಎಸೆವ ಪೇರೆಳ್ತುಗಳ್ (ವೃಷಭ. ೩೮-೬೯) ; ಬಾಳದೊಳ್ ಬಂಧಿಸಿದ ಜಲ್ಲಿ ಪೊಂಗಟ್ಟೆ [ಂಟೆ]ಗಳ ಮೇಳದಿಂ ಸೊಗಸಾಂತ ಬೆಂಡುವೂವ್ಗಳನು ಮಿಗೆ ಥಳಿಸುವ ಪುಲಿವಾಲಗಳನಾಂತ ತುಳಿಲಾಳ್ಗಳು (ಭೋಜರಾಸು. ೭-೦೦). **ಹೊಂಗಂಟೆ** : ಹಯನಿಕರ . . . ಹೊತ್ತುವು ರಘುಡಿವ ಹೊಂಗಂಟೆಯ ವಿಡಾಯಮರೂಥ ವನು (ಕುವ್ಯಾಭೀ. ೯-೯೨) ; ಹೊಂಗಂಟೆ ಹೊಮ್ಮೇಳದ ಕಠಾರಿಗಳು . . . ಒದವಿತೊಗ್ಗಿನಲಿ (ಮೋಹತ. ೦೯-೦೦). [ಪೊಂ (< ಪೊನ್) + ಗಂಟೆ$_2$]

**ಪೊಂಗಂಬ** (ನಾ). ಚಿನ್ನದಿಂದ ಮಾಡಿದ ಕಂಬ ; ಬಂಗಾರದ ಕಂಬ : ವರತನು ಪೊಂಗಂಬವಾಗೆ ಪೊಲ್ದುಟ್ಟಂಬರದ ಸೆಱಗು ಪಟವಾಗೆ ಅರಲ್ಗಣ್ಣು ಮೀನಾಗೆ ಬಂದರು ಪೆಣ್ಗಳು ಸ್ಮರನ ಪತಾಕೆಯೆಂಬಂತೆ (ಶಂಪ್ರಸಾಂ. ೦೨-೦೫೯). [ಪೊಂ (< ಪೊನ್) + ಕಂಬ$_1$ (< ಕಂಭ) ]

**ಪೊಂಗಜೆ** (ನಾ). ಬಂಗಾರದ ಗದೆ : ಪಾಱುಂಬಳೆ ಸಂಕು ಪೊಂಗಜೆ ಬಿಗುರ್ಪಿನ ಬೀಯಮರಲ್ದ ಪೇರುರಂ (ಜಕಪ. ೩-೮೯).

[ಪೊಂ (< ಪೊನ್) + ಗಜೆ]

**ಪೊಂಗಟ್ಟಿ, ಪೊಂಘಟ್ಟಿ** (ನಾ). ಬಂಗಾರದ ಗಟ್ಟಿ,-ತುಂಡು : ಸುರ ಶೈಲಂ ಪುಟ್ಟಿ ಪೊಂಗಟ್ಟಿ [ಪಾಠಾಂ. ಬುಟ್ಟಿ]ಪೊಲಿರೆ . . . ಜಗದ್ವ್ಯಾಪಿಯಾ ದತ್ತುಯುದ್ಧೋದ್ಧರತತ್ಸೇನಾದ್ವಯಾಭ್ಯುಚ್ಚಲನದಳದಿಳೋತ್ಪಾತಪಾಂಸು ಪ್ರತಾನಂ (ಚಂದ್ರಪು. ೦೦-೬೬ ; ಕಾವ್ಯಸಾ. ೯೬೦ ನೋ). **ಪೊಂಘಟ್ಟಿ** : ಕೆಸಱೊಳಗಬ್ಬಂ ಕಲ್ಲೊಳು ಮಿಸುಗುವ ಪೊಂಘಟ್ಟಿ ಪೋಲದಂತಾ ಯೆಡೆಯುಂ ವಸುಧಾಸೇವ್ಯಂ ಕ್ಷೀರಂ ಪಸುವಿನ ತನುವಿನೊಳೆ ಪುಟ್ಟಿ ಪೋಲದು ತನುವಂ (ಶಸಾರ. ೨೯೬). [ಪೊಂ (< ಪೊನ್) + ಗಟ್ಟಿ]

**ಪೊಂಗಟ್ಟಿಗೆ, ಹೊಂಗಟ್ಟಿಗೆ** (ನಾ). ಚಿನ್ನದ ಕೋಲು : ಹಡಪ ಕಾಳಾಂಜಿ ಪೊಂಗಟ್ಟಿಗೆ ಕಂಚು ಕನ್ನಡಿ ಗಿಂಡಿ ಬಿಜ್ಜಣಿಗೆಗಳ ಪಿಡಿದೂಳಿಗಗೈವ ಬಿಂಕ ಗಾತಿಯರಾ ಪೊಡಮಿಯಾಣ್ಮನ ಪೊದ್ದಿಹರು (ಹರಿಬ. ೧-೦೭). **ಹೊಂಗಟ್ಟಿಗೆ** : ಹರುಷದಲಿ ನೃಪ ಹೊಂಗಟ್ಟಿಗೆಯ ಚರರಿಂದಲಾ ಮನಮುಟ್ಟಿದಾಪ್ತರ ಕರೆಸಿ (ತೊರರಾ. ೨-೧-೦೦). [ಪೊಂ (< ಪೊನ್) + ಕಟ್ಟಿಗೆ$_1$]

**ಪೊಂಗಡಗ,** ಹೊಂಗಡಗ (ನಾ). ಬಂಗಾರದ ಕಡಗ : ಬೇಸರಿಂದೆಡಗ ಯ್ಯೊಳ್ ಪಿಡಿದಾಂತು ಪೊಂಗಡಗವೊಂದಂ...ರಂಜಿಪನಿವಂ ತೇಜೋನ್ವಿತಂ ಭೂಮಿಪಂ (ಶಾಶಂತ. ೬೨-೦೬೭). **ಹೊಂಗಡಗ** : ಹೊಂಗಡಗದ ಲಿಂಗ ವಂತೆಗೆ ತೋಳಬಂದಿಯ ಬಾಲಕಗೆ . . . ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ . . . ಷೋಡಶಸಹಸ್ರವಿಳಾಸಿನಿಯರ್ವೆರಸು (೧೦೪. ೩-೯೦ ಪ) ; ಹೊಂಗಡಗದ ಲಿಂಗವಂತಂ ಉಡಿವಣೆಯ ದಿಗಂಬರಂ ಗೆಜ್ಜೆಗಳ ಸಜ್ಜನನೆನಿಪ ಸಿದ್ಧರಸಂ . . . ಭೋಂಕನೆದ್ದು (ಬಸ. ೦೨-೦೦೩).

[ ಪೊಂ (<ಪೊನ್) + ಕಡಗ$_1$ ]

**ಪೊಂಗಡಲು,** ಹೊಂಗಡಲು (ನಾ). ಚಿನ್ನದ ಬಣ್ಣದ ಸಮುದ್ರ ; ಹೊಂಬಣ್ಣದ ಕಡಲು : ಪೊಂಗಡಲ ನುಣ್ದೆರೆಗಳ ಬಿಣ್ಪಿನ ಮಲ್ದಿರಳ್ಕೆಯ ಗಾಂಭೀರ್ಯದಿಂದ ಚಳಚಳಿಸುತ್ತ (ಮಂತ್ರಶ. ೬೬-೦೭). **ಹೊಂಗಡಲು :** ಪಡುವಣ ಹೊಂಗಡಲಿನಲ್ಲಿ ಮಾಯಲಿದಿರುವ ಮುಳುಗುನೇಸರು (ಶಿಬುಕ್ಕೆ. ೦೨೯) ; ಬಾ ಗೆಳತಿ, ನನ್ನೊಡನೆ ಗಗನದಂಚಿಗೆ ರವಿ ಮೂಡುವ ಹೊಂಗಡಲಿನ ಮಿಂಚು ಹೊಂಚಿಗೆ ! (ಅಂಷೂ. ೯೩).

[ ಪೊಂ (<ಪೊನ್) + ಕಡಲು (<ಕಡಲ್$_2$) ]

**ಪೊಂಗಣೆ** (ನಾ). ಚಿನ್ನದ ಗಣೆ : ಬೆಳಗೆಯ್ಯುಂ ಪೊಂಗಣೆಯುಂ ಫಲತರುವಿಂ ದೊಪ್ಪಯಂಗಳಿಂ ಕುಸುಮರಜಾನಿಳನಿಂ ಪಗರೆಯ ಪರಿಯಿಂ ತಳರದ ಸಿರಿ ಬಲ್ಲಹುಂದೆನಾಳ್ಕೆಸೆದಿರ್ಕ್ಕುಂ (ಶಾಸ. IX-i, ೨೯೯-೦೩ ; 1147).

[ ಪೊಂ (<ಪೊನ್) + ಗಣೆ$_2$ (<ಕಣೆ$_2$) ]

**ಪೊಂಗಣೆ,** ಹೊಂಗಣೆ (ನಾ). ಚಿನ್ನದ ಬಾಣ : ಮಕರಾಂಕಮಂಡಿತ ಪೊಂಗಣೆಗಳ್ಗೆ ವರಾಕ್ಷಿಮಿಂಟಿಯು ಸಾರ್ಚಿದಂತೆ ನಖಚಕ್ರದಶಕದಿಂ ಬೆರಲ್ಗಳೊಪ್ಪಿರ್ದುವು (ಪೋಹಶ. ೨೩-೦೧). **ಹೊಂಗಣೆ :** ಹೊರಕಿಸಿದ ಹೊಂಗಣೆಯ ಶರಧಿಯ ತುಳುಕಿಸಿದ (ಅಂಬಿಕಾ. ೨೦-೩).

[ ಪೊಂ (<ಪೊನ್) + ಕಣೆ$_1$ ]

**ಪೊಂಗದ** (ನಾ). ಚಿನ್ನದ ಕದ : ಸೋಮೇಶ ನೀಂ ತೆಗಿಸೀ ಬಾಗಿಲ ಪೊಂಗದಂಗಳನೆನುತ್ತಂದೋಹಿಲಂ ಕೂಗಿದಂ (ಅನ್ನಟಿ. ೦೦-೬೦) ; ನವ ಪುಷ್ಕರಾಗಾಳಿಯಿಂ ಸಮೆದ ಬಾಗಿಲ್ ಪೊಂಗದಂಗಳಿಂ ಪೇಳಲಚ್ಚರಿಯಾದು ದರಮನೆ (ಶಿಖೆ. ೩-೯೬). [ ಪೊಂ (<ಪೊನ್) + ಕದ (<ಕದವ್$_1$) ]

**ಪೊಂಗದಳಿ,** ಹೊಂಗದಳಿ (ನಾ). ಒಂದು ಬಗೆಯ ಬಾಳೆ; ಹೊಂಬಾಳೆ: ತಾಮರಸಜನು ನಿರ್ಮಿಸಿದ ಪೊಂಗದಳಿಯೊ ವಾಮಲೋಚನೆಯ ತೊಡೆ ಗಳೊ (ಶರ್ಶ. ೨-೨೨); ಪೊಂಗದಳಿಸ್ತಂಭಂಗಳಂ ನೆರೆ ಗೋಲಿಪಾ ಪೊಳೆವ ನುಣ್ದೊಡೆಯುಗಳಂ (ಶಶಮೋ. ೬-೦೩). **ಹೊಂಗದಳಿ :** "ಗೌರಿಕಃ — ನೀರಿಪ್ಪೆ, ಹೊಂಗದಳಿ" (ಚಿಕಿ. ೩೨) ; ಹೊಂಗದಳಿಯ ಕೋಮಲಪತ್ರ ವೀಜನದಂಗನೆ ಮೆಚ್ಚಿವಳೊತ್ತಿನಲಿ (ಪೋಹಶ. ೩-೩೯).

[ ಪೊಂ (<ಪೊನ್) + ಕದಳಿ$_2$ (=ಕದಲಿ) ]

**ಪೊಂಗದಿರ್$_1$** (ನಾ). ಚಿನ್ನದ ಬಣ್ಣದ ತೆನೆ : ಪೊಂಗದಿರಿನೆನೆ ಪೊಂಗದಿರಿಂ ಬಗ್ಗೊಳಿಪ ಕಿಯ್ಯೊಲಸತ್ತ್ರಣಂ ಪಕ್ಕಿ ಸೋವ ಕರ್ಕಸಜವ್ವನೆಯರ ಮೆಲ್ಲುಲಿ ಕೇಳಿಪರ್ಪುದು (ಶಾಮೂಕ್ಕ. ೯-೭). [ಪೊಂ (<ಪೊನ್) + ಕದಿರ್$_1$]

**ಪೊಂಗದಿರ್$_2$,** ಪೊಂಗದಿರು, ಹೊಂಗದಿರು (ನಾ). ಚಿನ್ನದ ಬಣ್ಣದ ಕಿರಣ ; ಹೊಂಬಣ್ಣದ ಕಿರಣ : ಪೊಂಗದಿರ್ ಚವರಿಯಂ ಬೀಸಿ ರವಿ ಮೂಡಣದ್ರಿಯನೇರಿ ಬರ್ಪನಿತರೊಳೆ (ಶ್ರೀರಾಶಾ. ೩೬-೦೨೩). **ಪೊಂಗದಿರು:** ಗಗನಾಂಗಣವನ್ನು ತನ್ನ ಪೊಂಗದಿರುಗಳಿಂದಲೇ ದೀಪ್ತಿಗೊಳಿಸುವ ಸೂರ್ಯ (ಕೋಟಿರ್ಗ. ೦೯೨). **ಹೊಂಗದಿರು :** ಮೇರುಗಿರಿಯೊಂದುದಿನ ಗರ್ವದಿಂ ತಲೆಯೆತ್ತಿ ಕೆಂಗದಿರ ಹೊಂಗದಿರ ಜಿಹ್ವೆಯಲಿ ನುಡಿಯುತ್ತು (ಕಂಸೋ. ೨೦-೨); ಹೊಂಗದಿರ ಜೀರ್ಕೊಳವಿಯಿಂ ಸಂಜೆ ಜಿರ್ರೆಂದು ರಂಗೆರಚಿ (ಕಶ್ಯಾಂಗ. ೨೦-೩೩೭).

[ ಪೊಂ (<ಪೊನ್) + ಕದಿರ್$_2$ ]

**ಪೊಂಗದಿರು** 'ಪೊಂಗದಿರ್$_2$' ನೋ.

**ಪೊಂಗದುಗು** (ನಾ). ಚಿನ್ನದ ಗಜ್ಜುಗ : ಜೂಜಿನಲಿ ಭರವಸದೊ ಳಾಸಕ್ತಿಯುವಡೆದು ಪೊಂಗದುಗುಗಳ ಕರತಳದೊಳಾಂತು (ಶಾಂಡಪು-೦೭-೩).

[ ಪೊಂ (<ಪೊನ್) + ಗದುಗು$_1$ (<ಗದುಗು) ]

**ಪೊಂಗದ್ಯಾಣ** (ನಾ). ಚಿನ್ನದ ಗದ್ಯಾಣ : ಅರಸರ ದೆಸೆಗೆ ಸಿದ್ಧಾಯಂ ಪೊಂಗ ದ್ಯಾಣಮೆರಡು (ಎಇ. XIV, ೩೬೯-೦೭; 946); ಎಲಸೆಯು ಮಹಾಜನಕ್ಕೆ ಕೊಟ್ಟ ಪೊಂಗದ್ಯಾಣವಯ್ವತ್ತಯ್ದು (ಸ್ಕುಅಂ. ೦೮೨೯, ೭೯-೦೩ ; 964) ; ಅಂಕದೊಳಂ ಪೊಂಗದ್ಯಾಣಂ ೧೨೦ (ಎಇ. XIII. ೪೯-೬೩; 1112).

[ಪೊಂ(<ಪೊನ್)+ಗದ್ಯಾಣ]

**ಪೊಂಗನ್ನಡಿ** (ನಾ). ಚಿನ್ನದಿಂದ ಮಾಡಿದ ಕನ್ನಡಿ : ಕಣ್ಮಲರ್ಗಳ್ ಕಡು ನಿಡಿದಾದುವು ಪೊಣಿಪೊಣ್ಮಿತು ಪೊಂಗನ್ನಡಿವೊಗದೊಳ್ ಪೊಗರುಣ್ಮಿದು ದಂಗಲತಿಕೆಯೊಳು ಕಂಪು (ಜಿಡುಕಾ. ೩-೨೩).

[ ಪೊಂ (<ಪೊನ್) + ಕನ್ನಡಿ$_1$ ]

**ಪೊಂಗಯ್** (ನಾ). ಹೊಂಬಣ್ಣದ ಕೈ : ತಲೆಯಲ್ಲಿ ಪೊನ್ನ ಮುಡಿ, ಪದಿ ದರಿಲ ಪೆಂಪು, ಬೆಳ್ದಾವರೆಯು ಪೊಂಗಯ್ ! (ಹೊಂಗಳು. ೦೬-೦).

[ ಪೊಂ (<ಪೊನ್)+ಕಯ್$_2$ (<ಕೆಯ್$_2$) ]

**ಪೊಂಗಯಿ,** ಪೊಂಗ$_2$ (ನಾ). ದೋಣಿ ; ನಾವೆ : ದೋಣಿಯಲ್ಲಿ ಅಥವಾ ಪೊಂಗಯಿಯಲ್ಲಿ ಮಿಕ್ಕ ಹುಡುಗರ ಸಂಗಡವಿದ್ದಾಗ ಸಾಮಾನ್ಯವಾಗಿ ನಾನೇ ಅದನ್ನು ನಡೆಸುವ ಯಜಮಾನನಾಗುತ್ತಿದ್ದೆ (ಬಂಜಪ್. ೦೭). **ಪೊಂಗ$_2$ :** ಪಂಪನೆಂದರೆ ಎರಡು ಭಾರತಗಳ ದೋಣಿಗಳಲ್ಲಿ ಕಾಲಿಟ್ಟು ತಾನೇ ಮುಳುಗಿಹೋಗುವಂತಾದನೆಂದು ಭಾವಿಸುವುದಾಗಲಿ, ಆ ಕಾರಣ ದಿಂದಲೆ ಸುಭದ್ರೆಯನ್ನು ನಾಯಿಕೆಯನ್ನಾಗಿ ಮಾಡಿದ ಪೊಂಗ(ಕಿರು ದೋಣಿ)ವನ್ನೇರಬೇಕಾಗಿ ಬಂತೆಂದು ಬಗೆವುದಾಗಲಿ, ಈ ಎರಡರಿಂದಲೂ ಪರಿಣತಿಯೊಂದೇ (ಶಾಡೂಕ. ೦೯೩). [ ←ತುಳು. ಪೊಂಗಾಯಿ ]

**ಪೊಂಗರಗ,** ಹೊಂಗರಗ (ನಾ). ಚಿನ್ನದ ಕರಗ ; ಬಂಗಾರದ ಜಲ ಪಾತ್ರೆ : ಪೊಂಗರಗೆದೊಳ್ತೀವಿದ ಘುಸೃಣರಸಂ (ಶಾಗಳು. ೩೦-೩೬ ಪ); ಪನ್ನೀರ ಗಿಂಡಿ ಕುಡಿನೀರ ಪೊಂಗರಗ . . . ಬಹುವಿಧಾಭರಣವಿತತಿಗಳ ನಾಂತ ಕನ್ನೆಯರು . . . ನೆರೆದಿರ್ದರು (ರಾಶಿತ. ೭-೮೪). **ಹೊಂಗರಗ :** ನೀಡಿಹರು ಪನ್ನೀರ ಹೊಂಗರಗದಲಿ ಸಲಿದಾ ನಾರಿಯರು (ಕ್ರಕುಂ. ೪-೩೯). [ ಪೊಂ (<ಪೊನ್) + ಕರಗ ]

**ಪೊಂಗರಡಿಗೆ,** ಹೊಂಗರಡಿಗೆ (ನಾ). ೧. ಚಿನ್ನದ ಸಂಪುಟ,–ಭರಣಿ : ತಂದೆ ಪುಷ್ಪವನೊಂದನಿಂದುವರೌಳಿಗೆಂದು ಮುಂದಿಡೆ ಪೊಂಗರಡಿಗೆಯ (ಕೋಚಶ. ೦-೬೪). **ಹೊಂಗರಡಿಗೆ :** ೧. ಹೊಜಿಡಾಗದಂತೆ ನಾಲ್ಕೊಗ ಜಂತದಲಿ ಹೊಂಗರಡಿಗೆಗಡೆದು ಕರ್ಮಣಿಯ ಜರುಡೆಯ ಬಿಗಿದಿಟ್ಟನೆಂಬಂತೆ ಬಲ್ಕೊಲಿಯೆರಡಜಿ ಮೊಗವು ತೋಜಿದುವು (ಮೋಹಶ. ೨೩-೨೩). ೨. ವೀರಶೈವರು ಧರಿಸುವ ಚಿನ್ನದ ಕರಡಿಗೆ : ಎದೆಯ ಮೇಲೆ ಲಿಂಗಹಾರ, ಹೊಂಗರಡಿಗೆ (ತುಂಗಶ. ೨).

[ ಪೊಂ (<ಪೊನ್) + ಕರಡಿಗೆ (<ಕರಂಡಿಗೆ) ]

**ಪೊಂಗರಿ** ' ಪೊಂಗಜಿ ' ನೋ.

**ಪೊಂಗರು** (ನಾ). ಚಿನ್ನದ ಎರಕ : ಹೃದಯದೊಳೆಸೆವ ಶಾಂತತೆ ಬಹಿರಂಗ ದೊಳೊದವಿದ ರೌದ್ರತೆಯಿಂದ ಸದಮಲಗಿರಿದೊಪ್ಪಿತು ಪಾದರಸ ನೆಜಿ ಪುದಿದ ಪೊಂಗರುವಿನಂದದೊಳು (ಬಿಬಸಂ. ೨೮-೬೭) ; ಕರಮೆಸೆದಳು ಕರು ಮಾಡದ ಮೇಲೆ ಪೊಂಗರುವಿನ ಪುತ್ತಳಿಯಂತೆ (ಕುರಾಸಾಂ. ೨೦-೭೩) ; ಅರಮನೆಯಕುಳಶಾಲಾಗ್ರದೆ ಮೆಜಿವ ಪೊಂಗರುವಿನ ತೆನೆಗಳೊಪ್ಪಿದುವು (ಕಂಪಬಿ. ೭-೨೨). [ ಪೊಂ (<ಪೊನ್) + ಕರು$_2$ ]

**ಪೊಂಗರುವಾಡ** (ನಾ). ಚಿನ್ನದ ಉಪ್ಪರಿಗೆ : ಆ ಪುರವರದ ಪೊಂಗರು

ಮಾಡಗಳೊಳು ಕರಮೆಸೆದಿರ್ಪವು ಕಣ್ಗೆ ದುಕೂಲದ ಪರವ್ವೆಡಯಂತೆ ಕೋಟೆಗಳು (ಕುಚಾಸಂ. ೩-೭೦). [ಪೊಂ (<ಪೊನ್) + ಕರುಮಾಡ]

**ಪೊಂಗರೆ, ಹೊಂಗರೆ** (ನಾ). ಜರತಾರಿ ಅಂಚು ; ಜರಿಯಂಚು : ಒಟ್ಟಿರ್ಪ ಕೆಂಬೊಗರಿ ನೆರೆಯುಡೆಯು ತಲೆಸುತ್ತಿ ನಿಟ್ಟೆಳದ ಪೊಂಗರೆಯ ಕಣ್ಮೋರೆಗಳಿಗೆ ಕಟ್ಟಿರ್ಪ ಕವಲಾಳಿಗಂ ನೋಡೆ ಕಣ್ಗೆಸರ್ ಮುಟ್ಟುವುದ (ಗಾಚರಿ. ೦೪೭-೩೨೨). **ಹೊಂಗರೆ :** ಈ ಮುಂಗುರ ತೊಂಡಿಲು ಬಂದಿ ಹೊಂಗರೆಯಂಬರವೀ ನಾಲ್ಕು ಹೆಚ್ಚು ಪುಣ್ಯಾಂಗನೆಗಿವು ಸಲಲಿ (ಕರಕ. ೩೯-೭೭). [ ಪೊಂ (<ಪೊನ್) + ಕರೆ$_4$ ]

**ಪೊಂಗಲ್$_1$, ಹೊಂಗಲ್ಲು** (ನಾ). ಚಿನ್ನದ ಕಲ್ಲು : ಚಿಪ್ಪಿನ ಮಂದಿರದಲ್ಲಿ ಮುತ್ತು ಬೆಳೆದ ಭೇದದಂತೆ ವ್ಯುತ್ಪತ್ತಿಯ ಸಾರದಲ್ಲಿ ಹೊಮ್ಮಿದ ಪೊಂಗಲ [ ಲ್ಲ ] ಪರಿಯಂತೆ (ಮೋಕ್ಷಶಾ. ೯೩-೩೭೭); ಸ್ವರ್ಣೋರ್ವಲೇ_ಪೊಂಗಲ್ಗಳ್ (ಜೀವಸಂ. ೦೭೩-೨ ೮೪೯). **ಹೊಂಗಲ್ಲು :** ಮಂದರತಳದ ಹೊಂಗಲ್ಲಂತೆ ಬಹಿರಂಗಸಾಮಗ್ರಿಯನೆಂದುಂ ಪಡೆಯದೆ ನಿಗೋದಾವಾಸದೊಳು ನಮೆಯುತ್ತಿರ್ಪರನಭವ್ಯಸಮಾನದ ಭವ್ಯರೆಂದಱಿವುದು (ಪಸಾರ. ೪೩೨). [ ಪೊಂ (< ಪೊನ್) + ಕಲ್$_3$ ]

**ಪೊಂಗಲ್$_2$, ಪೊಂಗಲು$_1$** (ನಾ). (ವಿಶೇಷವಾಗಿ ಸಂಕ್ರಾಂತಿಯಂದು) ಅಕ್ಕಿ, ಹೆಸರುಬೇಳೆ, ಬೆಲ್ಲ, ತುಪ್ಪ ಮುಂತಾದುವುಗಳಿಂದ ತಯಾರಿಸುವ ಖಾದ್ಯ ; ಹುಗ್ಗಿ : ಈ ದಿನ ನೈವೇದ್ಯಕ್ಕೆ ಪೊಂಗಲ್ ಮಾಡಿದ್ದರು (ರೂಢಿ). **ಪೊಂಗಲು$_1$ :** ಜನಕ್ಕೆಲ್ಲ ಪೊಂಗಲು ಹಂಚಿದರು (ಗಾಬಿಗಾಂ. ೪೭) ; ಪೊಂಗಲು ಮತ್ತು ಪಕ್ವಾನ್ನಗಳನ್ನು ಮಕ್ಕಳಿಗೆ ಕೊಟ್ಟು ತಿನ್ನಿಸುತ್ತ ಉಪಚರಿಸುತ್ತಿದ್ದರು (ಇಶದು. ೩೮).

**ಪೊಂಗಲುಹಬ್ಬ** = ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ದಿನದಂದು ಸೂರ್ಯನಿಗೆ ಪೊಂಗಲಿನ ನೈವೇದ್ಯವಿಟ್ಟು ಪೂಜಿಸುವ ಹಬ್ಬ ; ಮಕರಸಂಕ್ರಾಂತಿ : ನಮ್ಮಲ್ಲಿ ಪೊಂಗಲುಹಬ್ಬದಂದು ಎಳ್ಳು ಬೀರುವ ವಾಡಿಕೆಯಿದೆ (ರೂಢಿ).

[ದೇ.॥ ತಮಿ. ಪೊಙ್ಕಲ್ ; ತೆಲು. ಪೊಂಗಲಿ, ಪೊಂಗಳಿ]

**ಪೊಂಗಲು$_1$** 'ಪೊಂಗಲ್$_2$' ನೋ.

**ಪೊಂಗಲು$_2$** (ನಾ). ಒಂದು ಬಗೆಯ ಆಭರಣ (?) : ಲಾಳಿದಾರ ಕಂಠಿಕೆ ಖಡೆಯ ಪೊಂಗಲು ಹೊನ್ನ ಬಳೆಯುತ್ತರಿಗೆ ಚೆನ್ನಸರವ ಕಳುವು (ಕುಚಾಸಾಂ. ೪೨-೨೪). [?]

**ಪೊಂಗವಚ** (ನಾ). ಚಿನ್ನದ ಕವಚ ; ಹೊನ್ನಿನ ಮೈಜೋಡು : ಸಂಗರಲಾಭೋತ್ಸವಪುಷ್ಪಾಂಗತೆಯಿಂ ಕಿಱಿಯವಾದೊಡಟ್ಟಿ ಜನಕ್ಕಾ ಪೊಂಗವಚಂಗಳನಿತ್ತರ್ . . . ಮಹಾವೀರಭಟರ್ (ಚಂದ್ರಪ್ರ. ೦೦-೭೪). [ಪೊಂ (<ಪೊನ್) + ಕವಚ]

**ಪೊಂಗವಡಿಕೆ** (ನಾ). ತಲೆಯಲ್ಲಿ ಧರಿಸುವ ಕವಡೆಯಾಕಾರದ ಒಂದು ಬಗೆಯ ಚಿನ್ನದ ಆಭರಣ : ಎಡೆಗಿಱಿದಿರೆ ಪೊಂಗವಡಿಕೆ ಬಿಡೆ ಪುಲ್ಕೆನೆ ಗೆಜ್ಜೆ (ಜಗನ. ೩-೪೪) ; ಮಾಂಗಾಯ್ ಕದಪಂ ಚುಂಬಿಸೆ ಪೊಂಗವಡಿಕೆ ನೊಸಲೊಳಲೆಯೆ (ಚಂದ್ರಪ್ರ. ೩-೪೮) ; ಪೊಳೆವ ಪೊಂಗವಡಿಕೆ[ಪಾಠಾಂ. ಗೆ] . . . ಉಲಿವ ಪೊಂಗೆಜ್ಜೆಗಳಿಂದ ಸಿಂಗರವಾಗಿ ನೆಲದೆಱೆಯನ ಸುತನಿಹನು (ಚಂದ್ರಸಾಂ. ೪-೭೭). [ಪೊಂ (<ಪೊನ್) + ಕವಡಿಕೆ$_2$]

**ಪೊಂಗವಳಿಗೆ** (ನಾ). ಚಿನ್ನದ ಕರಂಡಕ ; ಹೊನ್ನಿನ ತಾಂಬೂಲದ ಪೆಟ್ಟಿಗೆ : ತಂಬುಲಂದೀವಿವ ಪೊಂಗವಳಿಗೆಯಂ ಪಿಡಿದಂಬಿಕೆಗವಟಯ್ಸಿದಳೊರ್ವಳಿಂದ್ರವಧು ತಂಬುಲವಂ (ಶಾಂತಿಪು. ೯-೦೮೦) ; ಮೆಲ್ಲನೆಯ್ತಂದೊರ್ವಳ್ ಪೊಂಗವಳಿಗೆಯಂ ಪಿಡಿದು ಮನಂಗೊಳೆ ನೃಪಸತಿಗೆ ನೀಡಿದಳ್ ತಂಬುಲವಂ (ಧರ್ಮಶಾ. ೬೮-೪೭). [ ಪೊಂ ( < ಪೊನ್ ) + ಕವಳಿಗೆ$_2$ ]

**ಪೊಂಗಸೆದೇವ** (ನಾ). ಒಬ್ಬಾತನ ಹೆಸರು : ಪೊಂಗಸೆದೇವನ ಮಗ ಪೊನ್ನಯ್ಯ (ಎಕ. XII, ಪಾವುಗ. ೬೦-೧ ; ಸು. 925). [ಪೊಂಗಸೆ ? + ದೇವ]

**ಪೊಂಗಹಳೆ, ಪೊಂಗಾಳೆ** (ನಾ). ಚಿನ್ನದ ಕಹಳೆ : ಕೊಂಬುಗಹಳೆ ಪೊಂಗಹ[ಪಾಠಾಂ. ಪೊಂಗಾ]ಳೆಯುತ್ಕಟತಾಳಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯಖಿಳದೆಸೆಯೊಳಾವರಿಸಲು (ಚಂಪ್ರ. ೫-೭) ; ಪಿಡಿನಡುವು ರತುನ ಕೈಪಿಡಿ ಗಂಡಮಂಡಲಗಳಡಿದಾವರೆಯು ಸ್ಮರನ ಪೊಂಗಹಳೆ ಜಂಘೆಗಳೊ ಪೊಡವಿ ಜಘನಂ ತಳೋದರ ಶ್ರೀಫಲೋಪಮಿತ ಕುಚ ಕಂಬುಕಂಠಗಳೊ (ವಂಕಾಬ. ೫-೬-೫೪). **ಪೊಂಗಾಳೆ :** ಮೇಲಿನ 'ಚಂಪ್ರ' ಪ್ರಯೋಗದ ಪಾಠಾಂತರವನ್ನು ನೋಡಿ. [ಪೊಂ (<ಪೊನ್) + ಕಹಳೆ]

**ಪೊಂಗಳಂತಿಗೆ** (ನಾ). ಚಿನ್ನದ ಜಲಪಾತ್ರೆ : ತಣ್ಪನ ನೀರ್ ಸೆಱೆಯಾದ ಪೊಂಗಳಂತಿಗೆಯಿರೆ ಸಜ್ಜೆಯೋವರಿಯುದೋವರಿ ಮಾಡಿತು ಕಂತುಗೆಮುಮ್ಮುಮಂ (ಚಂದ್ರಪ್ರ. ೬-೭೦). [ಪೊಂ (<ಪೊನ್) + ಗಳಂತಿಗೆ$_1$]

**ಪೊಂಗಳಶ, ಹೊಂಗಲಶ, ಹೊಂಗಳಶ** (ನಾ). ೧. ಚಿನ್ನದ ಕಲಶ ; ಸ್ವರ್ಣಕುಂಭ : ಸುಲಲಿತಲಾವಣ್ಯಸುಧೆಯ ಪೊಂಗಳಶಗಳಲಿ ತುಂಬಿ (ಕಂವಂ. ೯-೨೮). ೨. ಗುಡಿ ಗೋಪುರಗಳ ಮೇಲೆ ಇರಿಸುವ ಚಿನ್ನದ ಕಲಶ : ಅಭ್ಯುದಯಕರಮೆನಿಪ ಕರುಮಾಡದ ಶಿಖರದೊಳೊಪ್ಪಿ ತೋಱುಗುಂ ಪೊಂಗಳಶಂ[ಪಾಠಾಂ. ಸಂ](ಸುಕುಮಾ. ೦೦-೫೦). **ಹೊಂಗಲಶ :** ೧. ಹೊಂಗಲಶ[ಪಾಠಾಂ. ಸ]ವೊಲೆ ಹೊಗರೊಗುವ ನೆರೆದಿಂಗಳೊಲು ಮೊಗ . . . ಕಣ್ಣನವ ಸೋಲಿಸಿದವು ಮನೋಭವನ (ಸಾಳ್ವಭಾ. ೨೮-೨೭). ೨. ಬಳಿಬಳಿಯ ಸೌಧಾಳಿಗಳ ಹೊಂಗಲಶ[ಪಾಠಾಂ.ಳಸ]ಗಳ ಹೊದಱಿನ ಪತಾಕಾವಳಿಯ ಪಸರದಿನೆಸೆದುದಾ ಪುರ ಮುನಿಯ ಕಣ್ಮನಕೆ (ಕೊರಂಗ. ೦-೯-೦೮). **ಹೊಂಗಳಶ :** ೧. ಇದು ಭೂದೇವತೆ ಹೊತ್ತ ಹೊಂಗಳಶಮೋ . . . ತಾನೆಂದು × × × ಲೋಕಂ ಮನೋಮುದದಿಂ ಬಣ್ಣಿಸೆ ಬಮ್ಮಿಸೆಟ್ಟಿ ಜಿನಚೈತ್ಯಾವಾಸಮಂ ಮಾಡಿದಂ (ಎಕ. VII, ಶಿಮೊ. ೫೭-೫೭; 1115); ತರಿಸಿದನು ಹೊಂಗಳಶ[ಪಾಠಾಂ.ಸ]ತತಿಯಲಿ ವರನದೀವಾರಿಗಳನು (ಕುವ್ಯಾಕ. ೦-೨೮). [ಪೊಂ (<ಪೊನ್) + ಕಳಶ (=ಕಲಶ)]

**ಪೊಂಗಳಸ, ಹೊಂಗಲಸ, ಹೊಂಗಳಸ** (ನಾ). ೧. = ಪೊಂಗಳಶ ೧: ಪೊಂಗಳಸಂಗಳೊಳಿರ್ದ ಪುಣ್ಯತೋಯಂಗಳೊಳಟ್ಟಿಱಿಂ ಮಿಸಿಸಿ ಕಟ್ಟಿದನಾ ವಿಭು ವೀರಪಟ್ಟಮಂ (ಚಂಶಭಾ. ೦೦-೦೫); ರಸರಸಾಯನಂಗಳಂ ತೀವಿ ನೇಱಿದ ಪೊಂಗಳಸಂಗಳಂತಪ್ಪ ನವಫಲಂಗಳಿಂ ನೆಱೆದೊಪ್ಪುವ ಮಾತುಲುಂಗದ ಪೊದಱುಗಳುಮಂ (ಚಂಶಚಂ. ೦೦೭-೦೩); ನೀರ್ದುಂಬಿ ಮೆಱೆವ ಪೊಂಗಳ[ಪಾಠಾಂ.ಲ]ಸಂಗಳಂ ಕೊಂಡು ಬಂದರುತ್ಸವದಿಂದೆ (ಕೈಬಿಭಾ. ೩೪-೪). ೨. = ಪೊಂಗಳಶ ೨: ಮಂಗಳಜಲಕುಂಭದಂತೆ ಕಂಗೊಳಿಸುವ ಕೋಟೆಯ ತೆನೆಗೊಂದೊಂದು ಪೊಂಗಳಸಂಗಳೊಪ್ಪಿದುವು (ಮೋಹತ. ೨೪-೩). **ಹೊಂಗಲಸ :** ೨. ಬೆಟ್ಟದ ಕಿತ್ತು ತಂದಿರಿಸಿದಂದದಿ ಮುಗಿಲಟ್ಟಣೆ ತೆನೆಗಳಗ್ರದಲಿ ಬಟ್ಟರನ್ನಗಳ ತೆತ್ತಿಸಿದ ಹೊಂಗಲಸಂಗಳಿಟ್ಟಿರ್ದುವೇನ ಬಣ್ಣಿಸುವೆ (ಮೋಹತ. ೨೦-೮). **ಹೊಂಗಳಸ :** ೧. ಕರವತಿಗೆ ಹೊಂಗಳ[ಪಾಠಾಂ.ಲ]ಸ ಹೊಂಗೊಪ್ಪರಿಗೆ . . . ವೈಡೂರಿಯದ ಪಡಿಗವ ಚರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ (ಕುವ್ಯಾಗ. ೪-೦೫); ಮಡಿವಸನವನುಟ್ಟು ಪೂರ್ವದಿಗ್ವನಿತೆಯು ಮುಡಿಯೊಳು ಹೊತ್ತ ಹೊಂಗಳಸನಿಡನಿಂದ ರಥದ ಮೇಲಡರ್ಚಿದ ರನ್ನಗನ್ನಡಿಯಂತೆ ಸೂರ್ಯ ಮೂಡಿದನು (ಮೋಹತ. ೦೮-೦೦೯). ೨. ತೋಱಿದನುತ್ತಮದ ಹೊಂಗಳಸವೊಂದನು ನಿಮಿಷಮಾತ್ರದಲಿ (ಶ್ರೀಶುಲೀ. ೦೦-೦೮); ಕೋಂಟೆಯ ತೆನೆ ಹೊತ್ತ ಹೊಂಗಳಸಂಗಳಿಂದೆ . . . ರಾಜಿಸಿತು (ಮೋಹತ. ೨೯-೨೫) ; ಹೊಂಗಳಸ ಮೆರುಗುವಡೆ . . . ಸುಳಿವ ಮಾರುತದ ಪಾವಿತ್ರ್ಯದೊಸಗೆಯನು ತಳೆದು (ಶುಲದೇ. ೩೪-೦). [ಪೊಂ (< ಪೊನ್) + ಕಳಸ$_1$ (<ಕಲಸ)]

**ಪೊಂಗಣೆ**, ಪೊಂಗಱಿ, ಪೊಂಗಱಿ₁, ಹೊಂಗಣೆ (ನಾ). (ಬಾಣದ ಹಿಂಭಾಗಕ್ಕೆ ಕಟ್ಟುವ) ಚಿನ್ನದ ಗರಿ : ರವಿಕಿರಣಂಗಳಸ್ತಮಿಸೆ ಕಟ್ಟಲೆ ಕೈಮಿಗೆ ಸುತ್ತಿ ಮುತ್ತಿ ದಿಗ್ವಿವರಮನಾಗಸಂ ಪೊಳೆವ ಪೊಂಗಣೆಯಿಂ ಕವಿಲಾಗೆ . . . ಬಾಣಸಂಕುಳಂ ಕವಿದುವು (ಶಂಖಾವತಾ. ೧೩-೯೩). **ಪೊಂಗಱಿ :** ಪೊಳೆವ ಪೊಮಱ್ಱುಡಿಗೆಯ ಪೊಂಗಱಿಯ ಬಾಣಗಳ್ . . . ಸೆಳೆದು (ನವಮೋ. ೧೨-೫೭). **ಪೊಂಗಱಿ₁ :** "ಪೊಂಗಱಿ=ಚಿನ್ನದ ಗರಿ" (ಸಿಂಕೋ. ೫೫೯). **ಹೊಂಗಣೆ :** ಹೊಂಗಣೆಯ ಬಿಲ್ಲುಕೋಲನೊಂದು ಕೈಯಲಿ ಪಿಡಿದು (ತಸ್ವಪ.೪. ೧೯೭-೩೩೨); ಪೊಗರೊಗುವ ಪೊಂಗಣೆಯ ಬಿಲುಸರಳುಗಳ ಪೊದೆಗಳ ನಡೆದುವಡವಿಯ ಬೆಗಡುಗೊಳಿಸುತ ಮುಂದೆಮುಂದೆ ಪುಳಿಂದ ಸಂದೋಹ (ಕುಮ್ಮಾಅ. ೧೩ ೨೨); ಸರಳ ಹಿಳುಕಿನ ಹೊಂಗಣೆಯ ತುದಿ ವೆರಳಲೊಯ್ಯಾರಿಸುತ (ಕೂರಣಾ. ೩-೪-೧೫). [ಪೊಂ (< ಪೊನ್) + ಗಣೆ]

**ಪೊಂಗಣೆಗೆ** (ನಾ). (?) : ಆ ಪ್ರಾಸಾದಂಗಳ ಚೌಪಳಿಗೆಗಳ ಪೊನ್ನ ಪೊಂಗಣೆಗೆ ನೀಳ್ಪುಂ ಬೆಳ್ಪುಮಂ ತಾಳ್ದಿ ಕರ್ಪಿನೊಳುಪಾಶ್ರಯಂಬಡೆದು (ಶಂಶಾ. ೩-೪೦ ವ). [?]

**ಪೊಂಗಾಜು**, ಹೊಂಗಾಜು (ನಾ). ಚಿನ್ನದ ಬಣ್ಣದ ಗಾಜು ; ಹೊಂಬಣ್ಣದ ಗಾಜು : ಮಧುವಂ ವನಲಕ್ಷ್ಮಿ ಪೀರ್ವ ಪೊಂಗಾಜಿನ ಬಟ್ಟಲಂತೆ (ಮಲ್ಲಿಪು. ೫-೨೦). **ಹೊಂಗಾಜು :** "ಕಾಂಚನಭೂಷಣಂ—ಹೊಂಗಾಜು" (ಓಕಂ. ೩೨). [ಪೊಂ (< ಪೊನ್) + ಕಾಜು]

**ಪೊಂಗಾರುಕ** (ನಾ). ಚಿನ್ನದ ಕೆಲಸ ಮಾಡುವವನು ; ಅಕ್ಕಸಾಲಿಗ : ಚಾರುವೈದ್ಯರ ಜೋಯಿಸರ ಪೊಂಗಾರುಕರ ಪರಿಹಾಸಕರ . . . ತೇರಂಗರ ವಾಹಕರ ಜೋದರ ಸೇರುವೆಯ ಸಂಭ್ರಮದೊಳೆಸೆದಿರ್ದಂ ಧರಾಕಾಂತ (ಶಂಕದಾ. ೧೦-೭). [ಪೊಂ (< ಪೊನ್) + ಕಾರುಕ₂ ]

**ಪೊಂಗಾಲಿ** (ನಾ). (ರಥದ) ಚಿನ್ನದ ಚಕ್ರ : ಅರದದ ಪೊಂಗಾಲಿಯ ಜೀರ್ಗರೆವಂದಮನಂತವೀರ್ಯನೇಱಿದ ನಿನಗಂ ಪರಿವೆನಗಮೊಡನೆ ಕೇಡಂ ತರೆ ನಿನ್ನುಮನೆನ್ನುಮಂ ಪೆಱು ಕಾವಪನೇ (ಶಾಂತಿಪು. ೩-೧೧೧); ಪೊಳೆವ ಪೊಂಗಾಲಿಗಳಿಂದೊಪ್ಪುವ ರಥಂಗಳಿಂ . . . ಎಸೆದು (ಧರ್ಮಾಮೃ. ೬-೧೯೭); ಪೊಂಗಾಲಿ ಮಿಱುಗೆ ಪಱಿಯಿಗೆ ಬಾಂಗೆ ಪೆಡಂಮುಗುಳೆ . . . ರಥಂಗಳ್ ಪರಿದುವು (ಜಗಂ. ೭-೭೨). [ ಪೊಂ (< ಪೊನ್) + ಗಾಲಿ ]

**ಪೊಂಗಾಳೆ** 'ಪೊಂಗಹಳೆ' ನೋ.

**ಪೊಂಗಿಂಡಿ**, ಹೊಂಗಿಂಡಿ (ನಾ). ಕೊಂಬು ಅಥವಾ ಸೊಂಡಿಲಿರುವ ಚಿನ್ನದ ಪಾತ್ರೆ : ವರುಣಂ ಪೊಂಗಿಂಡಿಯ ವಾಸವನೆ ಡವಕೆಯಂ ಪಾವಕಂ ದೀಪಮಂ . . . ಪಿಡಿದೋಲೈಸಿ ನಿಂದಿರ್ದರಾಗಳ್ (ರಾಜಶೇ. ೧೪-೧೫೬). **ಹೊಂಗಿಂಡಿ :** ಎರಮುನಿಗಳೋದಿದರು ಕನ್ಯಾವರಣಗಳ ಹೊಂಗಿಂಡಿಯುದಕ ವನೆರೆವರರಸನ ರಾಣಿಯರು ನಿಜಭಾವ ಶುದ್ಧಿಯಲಿ (ಅನಂರಾ. ೧-೨೪-೨೪). [ ಪೊಂ ( < ಪೊನ್) + ಗಿಂಡಿ ]

**ಪೊಂಗಿರುಗಟೆ** (ನಾ). ಚಿನ್ನದಿಂದ ಮಾಡಿದ ಒಂದು ಬಗೆಯ ವಾದ್ಯ : ಪೊಂಗಿರುಗಟೆಯ ಕೇಳಿಕೆಯ ಜೋಕೆಗಳ ಭೂರಿಯೆನಿಸಿದ ಸೊನ್ನಲಿಗೆಪುರ (ಬಸಪು. ೫-೪೦). [ ಪೊಂ ( < ಪೊನ್) + ಗಿರುಗಟೆ ]

**ಪೊಂಗಿಸು**, ಹೊಂಗಿಸು (ಕ್ರಿ). ೧. ಹೆಚ್ಚಿಸು ; ಅಧಿಕಗೊಳಿಸು ; ಉತ್ಕರ್ಷಗೊಳಿಸು : ಲಲನಾಸಂಭೋಗರೋಗಂ ಪಸಿವನುಡುಗಿಸು ತ್ತಾ ತಿರ್ಯಂ ಪೊಂಗಿಸುತ್ತುಂ ಬಲಮಂ ಕೈಗುಂದಿಸುತ್ತುಂ . . . ಸಲೆ ಲಜ್ಜಾಭಾವಮಂ ಮಾಱಿಸುತುಮಿದೆ (ರಕ್ಷಾಶ. ೨೭). ೨. ಹಿಗ್ಗಿಸು ; ದೊಡ್ಡದು ಮಾಡು : ರೇಚಕ ಪೂರಕಗಳೆಂಬ ವಾಯು ಧಾರಣದಿಂ ಪೊಟ್ಟೆಗಳಂ ಪೊಂಗಿಸಿ ಕುಳ್ಳಿರ್ಪುದುಂ (ಶುಜ್ಞಾಸ್ತ್ರಿ.೩-೪೯ ವ); ಅಂಗವಂ ನಡುಗಿಸುತ ಬಸುಱಂ ಪೊಂಗಿಸುತ . . . ಬೆಚ್ಚುತ ಬೆದಱುತಂ (ಬಸಪು. ೧-೪೪). **ಹೊಂಗಿಸು :** ೧. ನಿನ್ನಂ ನುಡಿಯ ತೊಡಂಕಿನ ಬೆಡಂಗಿನಿಂ ಸೋಲಿಸಿ ಸಮಸ್ತರಾಜ್ಯವನು ಬಡಮುನಿ ಕೊಂಡು ಮೇಲೆ ಋಣವ ಹೊಂಗಿಸಿ ತಗುಳ್ವುದಿದು ದೈವಿಕಂ (ಹಕಾ. ೧೦-೧೩). ೩. ಚೆನ್ನಾಗಿ ಕುದಿಸಿ ಮೆದುವಾಗಿಸು ; ಹದವಾಗಿ ಬೇಯಿಸು : ಬೇವಾಗ ಗಂಜಿಯ ಬಸಿದುಕೊಂಡು ಮುಚ್ಚುಳನಿಕ್ಕಿ ಘಟ್ಟಿಪಾವಡೆಗಟ್ಟಿ ತಱಿಗೆಂತ ದೊಳಗೆ ಹೊಂಗಿಸಿಕೊಂಡು ಮೃದುವಾಗಿ ಮಾಡಿದುದು ತಾ ಶುದ್ಧ ಮಪ್ಪೋದನಂ (ಸೂಶಾ. ೩-೨). [ ಪೊಂಗು₁ + — ಇಸು₃ ]

**ಪೊಂಗು₁**, ಪೊಂಕು₁, ಹೊಂಗು₁ (ಕ್ರಿ). ೧. ಹೆಚ್ಚಾಗು ; ವೃದ್ಧಿಗೊಳ್ಳು ; ಅಧಿಕಗೊಳ್ಳು : ತಿರಿಪುತ್ತುಂ ಜವದಿಂ ಮುಕುಂದನಿಡೆ . . . ತದುತ್ತಮಾಂಗದೊಡನುದ್ದಂಪಾಱಿ ಮೃತ್ಕ್ಷಾಘಟಂಬೆರಸುದ್ಯದ್ಭುಜದಂಡವರ್ತನ ದಿನುಗ್ರಾಡಂಬರಂ ಪೊಂಗೆ . . . ತಿರಿದುದಾ ಚಕ್ರಂ ವಿಯಚ್ಚಕ್ರದೊಳ್ (ಶಾಂತಿಪು. ೪-೫೪); ಅವಿವೇಕಿಯಾದ ನೃಪನೊಪ್ಪುವ ಪುಣ್ಯಂ ತೀರ್ದು ದೋಷಮುಂ ಪೊಂಗುವವೋಲ್ (ಉದ್ಭಟ. ೪-೨೭); ಗಂಗಾನದೀತಟಕೆ ನಡೆತಪ್ಪ ಷಟ್ಕೃತ್ತಿಕಾಂಗನೆಯರೀ ಮಹಾಜ್ವಾಲೆಯೆತ್ತಣದೆಂದು ಹಿಂಗದೀ ವೀರ್ಯದೆಡೆಗೈತಂದು ನೋಡುತಿರಲಾ ಸ್ತ್ರೀಯರಂ ಕಾಣುತೆ ಪೊಂಗು ತ್ತೊಡನೊಡನೆ ಘನಗಾಢದಿಂದವರ ಗರ್ಭಂಗಳಂ ಬಿಡದೆ ಭೇದಿಸಿ ಬಲಿಯ ಲಾಕ್ಷಣಂ (ಚಬಪು. ೩೬-೧೩). ೨. ಉಕ್ಕು ; ಸೂಸು ; ಹೊರಹೊಮ್ಮು : "ಪೊಂಗು-ಸ್ಫುಟನೇ (ಹೊಮ್ಮು, ಉಕ್ಕು)" (ಶಮದ) ; ಸುಧಾಂಗನಿಂ ಪೊಂಗುವೆಳದಿಂಗಳ ತೊಡರ್ದ ಕಂಗಳ ಬೆಳಗಿನ . . . ಲತಾಂಗಿಯರೆನಿಪ್ಪ ಪಣ್ಯಾಂಗನಾಜನವೆಸೆದುದು (ಹಕಾ. ೪-೪೦). ೩. ಕೆರಳು ; ಉದ್ರೇಕಗೊಳ್ಳು : ಪೊಂಗುವುದು ಗಡತಿಕೋಪದೆ ಕೆಂಗೋಲ್ಗೊಳ್ವುದು ಗಡಿಂದ್ರಜಾಲದ ಸಿಂಗಂ ತಾಂ ಗಡ (ಶುಶಂ. ೨೫೨-೨೦). ೪. ವ್ಯಾಪಿಸು ; ಹರಡು : ಮಂಗಳಗೀತವಾದ್ಯನಿನದಂಗಳಶೇಷದಿಶಾತಟಂಗಳೊಳ್ ಪೊಂಗಿರೆ (ವರ್ಧಪು. ೧೪-೩೯). ೫. ಅರಳು ; ಬಿರಿ ; ವಿಕಸಿಸು : ಮಗಮಗಿಸುವುವು ಪೊಂಗಿ ಪೊಂಗೇದಗೆಗಳ್ (ಲೀಲಾವ. ೭-೧೨೪) ; ಶೃಂಗಾರವಾಂ ತೀವಿದ ಮೊಗಗೊಳದೊಳು ಪೊಂಗಿದ ಪುಂಡರೀಕಗಳೊ...ತಿಂಗಳ ಮೊಗದಳಕ್ಷಿಗಳೊ (ವರ್ಧತ. ೨-೩೯) ; ಪೊಂಗುವ ಸಂಪಗೆದಂಡೆಯೊಳಂಗೈಸುವರತಿಳಿಜನರಂ (ಜಕಶ. ೩-೪೭). ೬. ಉಬ್ಬು ; ದೊಡ್ಡದಾಗು ; ದಪ್ಪವಾಗು : ತನುವಳಿರೇಖೆಗಳ್ ಕಿಡೆಯುಮೆಯ್ದೆ ಬೆಡಂಗಿನದೊಂದು ರೇಖೆಯಂ ತನಗೆಡೆಮಾಡಿ ಪೊಂಗೆ ನಡು (ಆದಿಪು. ೬-೪೭); ಸುದತಿಯು ಗರ್ಭಚಿಹ್ನಮನ ದೇವೊಗಟ್ಟಿಪ್ಪುದೊ ಬಾಸೆ ಕರ್ಪನಾಂತುದು ನಡು ಕೂಡೆ ಪೊಂಗಿದುದು (ಜಗಂ. ೨-೯೫) ; ಪೊಂಗಿದಧರಂ ಮುಗಿದ ಕಣ್ಮಲರ್ಪರೆದ ಸುಕ್ಕುಂಗುರುಳ್ (ಸೌಂದಪು. ೯-೨೦). ೭. ಉತ್ಸಾಹಿಸು; ಹಿಗ್ಗು : ಅಂಗಜನಂಕಮಿದೆನೆ ಮಿಗೆ ಪೊಂಗುವ ಮಧುವಿಂಗೆ ರಾಗದಿಂ ಕಟ್ಟಿದ ನಾರಂಗದ ಪಟ್ಟೆಯ ತೊಂಗಲ ಭಂಗಿಯನಿಳಿಸಿದುವು ಪೂತ ಮುತ್ತದ ಗೊಂಚಲ್ (ವರ್ಧಮಾ. ೧೦-೩೭); ಇನಿವಣ್ಗೊಂಚಲಂ ಕಂಡರಗಿಳಿಯಂತೆ ಪೊಂಗಿ ಪೊರೆಯೇಱಿ (ಉದ್ಭಟ. ೧೦-೧೦೭ ವ); ಪೊಂಗಿ ನಾಟ್ಯವನಾಡುತಂಗಜಾರಿಗೆ ನಮಿಸಿದಂಗವಱಿದು ಗಿರಿಜೆ ತುಂಗಕೋಪದಲಿ ತನ್ನಂಗವಂ ತಾರೆನಲು (ಚಬಪು. ೧-೮) ; ಅಬ್ಬೆ ! ಪಿಡಿ ನಡೆದಪೆನೆನುತುಮೆರಟ್ಟೊಡಿಡಿಯಿಡುತೆ ಪೊಂಗಿ ತಾಯ ನಿಡುದೋಳಂ ತಾಂಗಿ (ರಾಮಾಶ್ವ. ೧೬-೨೪). ೮. ನವಿರೇಳು ; ರೋಮಾಂಚವಾಗು : ಪೊಂಗಿ ಹಾಡುತ ಶಮತಮಂಗೆ ವಾದ್ಯಂಗಳುಲಿಯಲ್ಕೆ (ಬಸಪು. ೦೯-೦೯) ; ಜಡಿದು ನಾಣ್ಗೆಡೆ ನುಡಿಯಲುಬ್ಬುವಂ ಬಿಱಿಸಿನಿಂ ಪೊಡೆಯೆ ಪೊಂಗುವಂ (ಚಬಪು. ೧೦-೨೯). ೯. ಸೊಕ್ಕಿಗೇಳು ; ಗರ್ವಪಡು ; ಬೀಗು : ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೧೧೧೪ ಪೂದ್ರಿ) ; ಅನಗಿದಱಿದಿರ್ದೊಡಂ ಚಲದಿನೆನ್ನೊಳೆ ಪೊಂಗಿ ಪೊಡರ್ಪುದೋರ್ಪಂ . . . ಕೊಂದಪನಕಾರಣದಿಂ ಮೋಱಿಯೋ ಮನೋಭವಾ (ಆದಿಪು. ೨೨-೩೩) ; ಪೊಂಗುವ ರಿಪುಕುಳ

ಮದವಮಾತಂಗವುನಜಿ೦ಯಟ್ಟೈ (ಶಾಇ. XX, ೩೦-೧೬ ; 1088). ೧೦. ಹೊಳೆ ; ಪ್ರಕಾಶಿಸು : ಪೊಂಗುವ ನುಣ್ಗೊಗು ಪೊಳೆದು ಪೊಂಚುವ ಸಂಚಿನ ನೋಟದಟ್ಟಿಯಿಂದಂಗಜವೀರನಾರುಬಟೆಯುಂ ಪಟುಗೆಯ್ಯುತೆ ಬಾಜಿಪೋಜೆಯೊಳ್ (ಚಕಪು. ೬-೨). ೧೧. ಸೋಕು ; ಮುಟ್ಟು : ಪೊಲೆ ಪಿಂಗದೆ ಪೊಂಗುವುದಕ್ಕಲಸುವರಾಳಿಜನಂಗಳ್ (ಶುಕ್ಕಪು. ೩ ೬೬). ೧೨. ತಟ್ಟು ; ತಾಕು : ಮಹಿಯು ಪೊಂಗಿ ತಲೆಕೆಳಗು ಮಾಡಿದ ಹಿಮುವ ಮರ್ಬು ಭಾಪು (ಭಾಪಕಾಂ. ೬-೦೯). ೧೩. ಕೂಗು ; ಅರಚು : ವಾತ ಪೂರಣಂಗಳಿಂ ನೊಂದಂತೆ ದೆಸೆದೆಸೆಗೆ ಪೊಂಗುವ ಗೂಗೆಗಳಿಂ . . . ಉಯ್ಯಾಲಾಡುವ ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಪೂರ್ವ೪). ೧೪. ಕಂದಣಿಸಿ ತುಂಬಿರು ; ಮೆಟ್ಟು : ಮುಂಗುರುಳಗಳನು ಪಿಡಿದೊಯ್ದೆನ್ನ ನಪರತ್ನ ಪೊಂಗಿದ ಮಣಿಮಂಚದಲಿ ಅಂಗಜಕೇಳಿಯ ನಿತ್ತೆನ್ನನುಳುಹೊ (ಕಂಸವ. ೯-೦೬೬). ಪೊಂಕು₁ : ೧೧. ಸೊಗಸನಗಲ್ಚ ದಾಗಿಸೆ ಲತಾಂಗಮುನರ್ತಿಯೆ ಪೊಂಕುವಾಸೆಯುಂ ತೆಗೆದವರ್ದಪ್ಪುವಾಸೆಯ ನಬೀಕ್ಷಿಸೆ (ಪುಹಾಪೇ. ೬-೭೪); ತುಂಗವಯೋಧರೆ ಮಿಂದು ಸಿಂಗರಗೈದಾಸನ ದೊಳು ನಲ್ಲನರ್ಥಾಂಗವ ಪೊಂಕಿ ಕುಳ್ಳಿರ್ದು (ವರ್ಧಚ. ೧೦-೭೭).

ಹೊಂಗು₁ : ೧. ಹೂತ ಹರುಷದ ಹೊಂಗಿದುತ್ಸವದ . . . ಉಬ್ಬಿನಲಿ ಹೊಂಪುಳಿಯೋದನು (ಸಂಭಶ. ೩೩-೫೭). ೨. ಹೊಂಗಿ ಪೈತ್ಯಶ್ಲೇಷ್ಮ ತತಿ ರಂಧ್ರಂಗಳಲಿ ಮುಸುಕಿದಡೆ ತನುರೋಮಂಗಳನಿತುಂ ಕವುಚುನಾತಡೆ . . . ದೃಷ್ಟಿಗಳು ವಿಚ್ಛಿನ್ನವಾದಡೆ ನಿಮ್ಮಯಾಣೆ ಪ್ರಮಥರುಗಳಾಣೆ (ಬಸಪು. ೪೪-೨೭). ೪. ಥೋಲ್ಗಳ ಥಳಂಕಾರ ಹೊಂಗುತಿದೆ (ಗೀಶಿಂ. ೭೦-೯). ೫. ಹೊಂಗಿದ ಪುಷ್ಪದ ಪರಿಮಳವನುಂಡೆಳ್ಳು ಅವು ತಮ್ಮಂಗವ ಬಟ್ಟು ಹೋಹಾಗ ಕಮ್ಮೆಣ್ಣೆಯಾಗದಿಪ್ಪುವೆ (ಪನ್ನವ. ೪. ೩೩೫-೭೦೦). ೬. ನವ ನೀಳಕಾಂತಿಮಿಂದಿದಿರೇಚುತಿರೆ ಬಾಸೆ ನಡು ಹೊಂಗಿ ಕಿಳ್ಳೊಡೆಯದೊಪ್ಪದಿಂ ಹಿಗ್ಗುತಿರೆ (ಬಸರ. ೦-೦೦೯). ೭. ಜನಕಂ ಸಾಮನ್ತಭೀಮಮ್ . . . ಮಿಾಚಿ ಇಡಂಗಿ ಹೊಂಗಿ ಮದವೇಚಿ ಚಲಂ ತಲೆದೋರಿ ಬಿಲ್ಲನಾರ್ದ್ರೇಚಿಸಿ ನೀವಿ ಜೀವೊಡೆದು (ಎಕ. XII, ಪಕ್ಕಸಾ. ೨೦-೯೬ ; 1160) ; ಸಂಗಡ ವಿದರ್ಗಂಗನೆಯರ್ ಶೃಂಗರಿಸೆ ಮಂಗಳಮುಖಿ ಹೊಂಗಿ ಹೊರೆಯೇಚಿ (ಗಿಂಶ. ೯-೬ ವ) ; ವನಜನಾಭಧ್ಯಾನಸುಧೆಯಲಿ ನನೆದು ಹೊಂಗಿದ ಕರಣ ಹೊರೆಯೇಚಿತ್ತು (ಕುವ್ಯಾದ್ರೋ. ೦-೨೨). ೧೦. ಹೊಂಗಿ ಮಿಡುಕುವ ವಿಮಾನ ಗುದಿಗಳಂ . . . ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆ ಯನಿತ್ತು (ಹಕಶಾ. ೫-೩) ; ಮುಗುಳುನಗೆಗಳ ಹೊಂಗುವಂಗದ ನಗೆ ಮೊಗದೊಳಾನಂದಬಿಂದುಗಳೊಗುವ ಕಂಗಳ . . . ಪಾಂಡವರೆಚಿಗಿದರು (ಕುವ್ಯಾಅ. ೦೬-೩೦) ; ಅರಸರ ವಿಭವದುತ್ಸವದ ತೆರವ ಕಂಡು ಕುಶಲವ ಪಡೆದ ಕಂಗಳಿವು ಹೊಂಗುವುವು (ಜುಲಿದೀ. ೪೭-೫). ೧೨. ರಂಗ ನಿನ್ನಯ ವಕ್ಷದೊಳಗಿರ್ಪ ಕೌಸ್ತುಭಮಂಗಂಡ ಘನಮಹಿಮರನು ಹೊಂಗದು ಕಿಲ್ಬಿಷವು (ಕಕಪಾಂ. ೩-೦೩). ೧೩. ಬಾಗು ; ಬಳುಕು : ಅವನ ಭಾರ ತುಯ್ದು ಹೊಡೆತಕ್ಕೆ ಬಚ್ಚನ ಕೈ ಹೊಂಗಿ, ಬೈಸಿಕಲ್ ಅವನತ್ತ ಬಾಗಿ, ಬೀಳುವುದರಲ್ಲಿತ್ತು (ಪುಚಿಪು. ೧೬೩). ೧೬. ಹುಟ್ಟು ; ಉಂಟಾಗು ; ಪ್ರಕಟವಾಗು : ತಿಂಗಳಿಗೆ ತಲೆ ಮಾಸವೆರಡಜಿಲಂಗ . . . ಹೊಂಗುವವು ಧಾತುಗಳು ನಾಲಕುತಿಂಗಳಿಗೆ ಬರೆ ಹಸಿವು ತೃಷೆಗಳು ತಿಂಗಳೈದಜಿಲಿ (ನಿಭಾಗ. ೩-೦೪-೨೦).

[ದೇ. ‖ ತಮಿ. ಪೊಙ್ಕು; ಮಲ. ಪೊಙ್ಙು; ತುಳು. ಪೊಂಗು, ಬೊಂಗು ; ತೆಲು. ಪೊಂಗು ; ಕೋತ. ಪೊಂಗ್, ಪೊಗ್ ; ಕೋಲಾ. ನಾಯ್ಕಿ. ಪೊಂಗ್]

ಪೊಂಗು₂, ಪೊಂಕು₂, ಹೊಂಗು₂ (ನಾ). ೧. ಗರ್ವ ; ಸೊಕ್ಕು : ಪೊಂಗುಚಿದು ಭರತನೃಪಚರಣಂಗಳ್ಗೆ ಮಾಗಧಾಮರಂ . . . ಬಾಗಿದಂ (ಆದಿಪು. ೦೨-೦೦೦) ; ಮಲೆಪರ ಪೊಂಗಡಂಗಿದುದು ಮನ್ನೆಯರುರ್ಕ್ಕು ಕದಲ್ದುದು (ಎಇ. XV, ೩೦-೯ ; 1028) ; ಅಂತಾ ದೇವತೆಯರ್ ಪೊಂಗುಚಿದು ಪಿಂಗಿ ಪೋಗೆ (ನೇಮಿಪು. ೬-೯೬ ವ). ೨. ಸೊಗಸು ; ಅಂದ ; ಶೋಭೆ : ಪೊಸದೇಸೆ ಪೊಂಗು ಪಾಂಗೆಸೆವೆಸಕಂ ಕಡುಗಾಡಿ ಗರುಡಿಯೆಂಬಿವಚಿಂವಂ . . . ವಸುದೇವಂ ಧರೆಗೆ ಕಣ್ಣ ಮುಳಿಸಾಗಿರ್ದಂ (ಅರ್ಧನೇ. ೯-೦೩೯) ; ಅಂಗನೆಯ ಹಸ್ತನಖಮೆ[ಳ] ದಿಂಗಳ್ ಕೇದಗೆಯ ಸುಟಿಯು ಮಧುಮೆಂಬುದನೆತ್ತಂ ಗೆಲ್ದಿರ್ದಪು ತೊಳಗುವ ಪೊಂಗಿನೊಳಾಕೃತಿಯೊಳೆಸೆವ ವರ್ಣಕ್ರಮದೊಳ್ (ಬಂಹಂ. ೭-೩೭). ೩. ಶುಭ ; ಮಂಗಳ : 'ಪೊಂಗುನೂಲ್' ಪರಾ. ೪. ವ್ಯಾಪನೆ ; ವಿಕಾಸಹೊಂದುವಿಕೆ : (ಕ). (ಗು). ೫. ವ್ಯಾಪಕ ವಾದ ; ಹೆಚ್ಚಾದ : ಎಸಳುಗಂಗಳ ಪೊಂಗುಶೋಭೆಯಿಂ ರಂಜಿಸುವ ಮಿಸುಪ ತುರುಗೆವೆ (ಕುರಂಗ. ೯-೩೦). ಪೊಂಕು₂ : ೨. ಕುಂಕುಮ ಪನ್ನೀರು ಕೂಡಾ ಗೋಡೆಗೆ ಪೂಶಿ ಪೊಂಕಾದ ಚಿತ್ರಪತ್ತಿಗೆಯನ್ನು ಬರದು (ಹುಸಳ. ೩೭). ೬. ಬೆಡಗು ; ಬಿನ್ನಾಣ ; ಬಿಂಕ : ಮಯ್ಯಗ್ಗರೆಯಲು ಗಣ್ಣನ ತೊಣ್ಣಸಂಕಧಟಲ್ ಪೊಂಕಾ(ಕ)ಳ್ತನಂ (ಹ್ಮಆಸಿ. ೦೩-೨೭-೭೩ ; 1090) ; ಸೊಗಯಿಪ ಪೊಂಕು ಲಾಲಿಸುವ ಲಲ್ಲೆ ಮುರಲ್ವುವ ಮಾತು (ಚಂದ್ರಪು. ೪-೭೦). ಹೊಂಗು₂ : ೭. ಉತ್ಸಾಹ ; ಹುರುಪು : ನಾರುಡೆಯಿದಾರದಯ್ ? ಹೋಹ ಹೊಂಗಿಂದಿದಂ ಮರೆದಿರೇಂ ? (ಶ್ರೀರಾಮಪ. ೨೨೯-೪೭). ೮. ಕೊಂಕು ; ಬಾಗು : ಕಂಗಳಲಿ ಕುಡಿಮೀಳ ಹುಬ್ಬಿನ ಹೊಂಗಿನಲಿ ಭಂಜವಣೆ ಭಾವದ ಭಂಗಿಯಲಿ ಪಶಿಕರಣೆ (ಕುವ್ಯಾಕ. ೦೩-೨೫). ೯. ಉತ್ಕರ್ಷ ; ಏಳಿಗೆ : ಬ್ರಾಹ್ಮಣಮತದ ಹೊಂಗು ಹೆಚ್ಚಾಗಿತ್ತು (ಶೀನಾಶಾ. ೭೨). ೧೦. ತೀವ್ರತೆ ; ಹೆಚ್ಚಳ : ಹಿಂಗ ದಾಸಚು ಮನದ ಬಯಕೆಯ ಹೊಂಗು ಮುಚಿಯದು ಚಿತ್ತದೊಲವಿನ ಹುಂಗು ಹಜಿಯದು (ನಿಭಾಗ. ೬-೨೩-೨). [< ಪೊಂಗು₁./ತಮಿ. ಪೊಙ್ಕು, ಪೊಙ್ಕ, ಪೊಕ್ಕ ; ಮಲ. ಪೊಕ್ಕ ; ತುಳು. ಬೊಂಗು ; ತೆಲು. ಪೊಂಗು]

ಪೊಂಗುಡುಪು (ನಾ). ಚರ್ಮವಾದ್ಯವನ್ನು ಬಾರಿಸುವ ಚಿನ್ನದ ಕೋಲು ; ಚಿನ್ನದ ವಾದನದಂಡ : ಸಮರಸನ್ನಾಹಭೇರಿಯಂ ಪೊಂಗುಡುಪಂ ಪಿಡಿದಡಸಿ ಪೊಡೆಯಲ್ (ರಾಜಶೇ. ೬-೩೦ ವ).

[ ಪೊ (< ಪೊನ್) + ಕುಡುಪು ]

ಪೊಂಗುನೂಲ್, ಪೊಂಗುನೂಲು, ಹಂಗನೂಲು (ನಾ). ೧. ಮಂಗಳ ಕಾರ್ಯಗಳಲ್ಲಿ ಮುಂಗೈಗೆ ಕಟ್ಟಿಕೊಳ್ಳುವ ಹಾಗೂ ದೇವರು, ಕಲಶ ಮೊದಲಾದುವುಗಳಿಗೆ ಏರಿಸುವ ಅರಿಸಿನದ ದಾರ : ನಾಂದುವ ಬೇವಿನ ಸರಳಿಗೆಗಳುಂ ಕೂಲೊಳ್ ಪೊಂ[ಪಾಕಾಂ. ಪಾಂ]ಗು ನೂಲಂ ಸುತ್ತುವ ಕುಡುಗೋಲ್ಗಳುಂ . . . ಪುಂಜಿಸುವ ಕಣಶಂಗಳು ಮೆಸೆಯೆ (ಕೀಲಾವ. ೭-೬೬ ವ). ೨. ಎಳೆಯ ಮಕ್ಕಳಿಗೆ ಹಾಕುವ ಒಂದು ಬಗೆಯ ಆಭರಣ : ಅರಳಿಲೆ ಪೊಂಗುನೂಲ್ ಪುಲಿಯುಗುರ್ . . . ಭುವನೈಕಮಂಡನನೊಳೇನೆಸೆದಿರ್ದುದೊ ಬಾಲಮಂಡನಂ (ಅಜಿಪು. ೫-೬೨). ಪೊಂಗುನೂಲು : ೧. ನನೆಯ ದಂಡೆಗಳನು ಕಟ್ಟು ಅನುಮಾಡು ಪೊಂಗುನೂಲನು ಗಂಧವರೆ (ಶಂಶ್ರಸಾಂ. ೦೨-೩೭). ಹಂಗನೂಲು : ೧. ಗಂಧದ ಬೊಟ್ಟು ಗವಂಕಿಲೆ ಇಟ್ಟು ಹಂಗನೂಲು ಹಾಕಿಯೆಮ್ಮು . . . ಆ ಕಲ್ಲೇನೂ ಉಣಲಿಲ್ಲಾ ಎಡೆಮಾಡಿ ನೀನೆ ಉಂಡೆಲ್ಲಾ (ಕಂಆ. ೩೭-೦೩) ; ಈ ದಿನ ಈ ನಾಗಗಳ ಪೂಜೆ ಮಾಡಿ ಹಂಗನೂಲು ಕುಬಸಗಳನ್ನು ಏರಿಸಿ . . . ಬರುತ್ತಿದ್ದರು (ಹಬ್ಬಾಚ. ೭೯). [ಪೊಂಗು₂ + ನೂಲ್₂]

ಪೊಂಗುನೂಲು 'ಪೊಂಗುನೂಲ್' ನೋ.

ಪೊಂಗುಪ್ಪಸ (ನಾ). ಜರತಾರಿ ಎಳೆಗಳಿರುವ ಕುಪ್ಪಸ : ಪೊಂಗುಪ್ಪಸಂ ದೊಟ್ಟೊಡನಿಟ್ಟೊರಂತೆ ಮಾಣಿಕ್ಯದ ಕಿವಿದೊಡಮಂ (ರಾಜಶೇ. ೦೩-೭೦).

[ಪೊಂ (< ಪೊನ್) + ಕುಪ್ಪಸ ]

**ಪೊಂಗುಪ್ಪೆ** (ನಾ). ಚಿನ್ನದ ಜಾಡಿ ; ಬಂಗಾರದ ಹೂಜಿ : ಪರಿಮಳಿಪ ಸೀತಳೋದಕವ ಪೊಂಗುಪ್ಪೆಯೊಳು ತುಂಬಿಡುತ್ತ (ಸಬಬೋ. ೧೪-೧೭).
[ಪೊಂ (< ಪೊನ್) + ಕುಪ್ಪೆ$_3$ (< ಕುಪ್ಪಿ$_1$)]

**ಪೊಂಗುಬ್ಬಿ** (ನಾ). ಚಿನ್ನದ ಗುಬುಟು,–ಗುಮಟ : ಅಂಗದೊಳ ಗಮರ್ದ ಬಣ್ಣಬಗೆಗಳ ಬೆಳ್ಪೊಂಗುಬ್ಬಿವರಿಗೆಯುಂ ತೊಡೆ ಚಾಟು ಗೊಳುತೆ (ಕಬ್ಬಿ. ೪೮-೩೦). [ಪೊಂ (< ಪೊನ್) + ಗುಬ್ಬಿ$_1$]

**ಪೊಂಗುರು**, **ಪಿಂಗುರು**, **ಪೆಂಗುರು**, **ಹೆಂಗುರು**, **ಹೊಂಗರ್**$_3$, **ಹೊಂಗುರು** (ನಾ). ಕೊಕ್ಕರೆಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ : ಕೋಗಿಲೆ ಚಾದಗೆ ಪೋದಗೆ . . . ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕೆ ಲಾವುಗೆ ಸೇನಂ (ಕಾವ್ಯಸಾ. ೧೦೪೪ ಕಾದ್ರಕ). **ಪಿಂಗುರು** : ಪೊಣರ್ವಕ್ಕಿ ಪಿಂಗುರು[ಪಾಠಾಂ. ೦] ಗೂಗೆ ಮುಕುಂದ ಬಳಾಹಕ (ಸೂಕ್ತಿಸು. ೩–೦೪೪). **ಪೆಂಗುರು** : ಗಿಳಿ ಪುರುಳಿ ಪೆಂಗುರು[ಪಾಠಾಂ. ಪಿಂಗುರಿ] ಕಾರಂಡವಾಂದೆ ಮೊದಲಾಗೊಡೆಯು ಗಗನಚರಂ ಪಂಚೇಂದ್ರಿಯಂ ಗಳುವಾಗಿ (ಧರ್ಮಾ. ೯೬–೯). **ಹೆಂಗುರು** : ಬಾನಾಡಿ ಪೆರ್ವಕ್ಕಿ ಹೆಂ[ಪಾಠಾಂ. ಹಿಂ]ಗುರು ಕಾಕಂ . . . ಇರ್ಕುಂ ತದ್ವನಾಗೌಘದೊಳ್ (ರಾಜಶೇ. ೩–೩೯); ಕಾಕಂ ಬಕಂ ಕೊಂಚೆ ಹೆಂಗುರು . . . ಚಾತಕಮುಮಿರ್ಕುಂ ತತ್ತರು ವ್ರಾತದೊಳ್ (ಪುಣ್ಯಾಶ್ರ. ೪–೪೬); ಪಾರಾವತಂ ಹೆಂಗುರು ಟೀವಂ ಟಿಟ್ಟಿಭಂ . . . ತದ್ವನಾಂತಸ್ಥಮಿರ್ಕುಂ (ಕಬಕ. ೩–೩೩). **ಹೊಂಗರ್**$_3$ : ಹೊಂಗರಿ ಚರಣಾಯುಧಂ ಗಿಡುಗ ಗೀಜಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಪಶ್ನಿಕಾ. ೬–೨೦೩). **ಹೊಂಗುರು** : ಹೊಂ[ಪಾಠಾಂ. ಹೆಂ]ಗುರು ಚರಣಾಯುಧಂ ಶಕುನಿ . . . ತಿತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯ ಮೊಪ್ಪುಗುಂ (ಗಿರಿಶ. ೦-೭೪ ; ಮಲ್ಲಿಕಾ. ೩-೧೪೦ ನೋ) ; ಹರಡೆ ಹಸುಬ . . . ಹೊಂಗುರುವಕ್ಕಿಯೆಸೆದವಂದಲ್ಲಿ (ಶ್ರೀಪಾಲ. ೭–೦೮).
[< ಪ್ರಾ. ಪೋಕ್ಖರ./ಸಂ. ಪುಷ್ಕರ./ತೆಲು. ಪೆಗ್ಗುರು, ಬೆಗ್ಗುರು]

**ಪೊಂಗುರುಜು** (ನಾ). ಬಂಗಾರದ ಮಂಟಪ : ಕೇರಿಕೇರಿಯಲಿ ಪನ್ನೀರ ಚಳಯ ರನ್ನದೋರಣ ಪೊಂಗುರುಜುಗಳು ಮೇರೆಯಿಲ್ಲದೆ ಕಾಂತಿ ಪಿಡಿದುವು (ಕಂಪರ. ೨೩–೨೬). [ಪೊಂ (< ಪೊನ್) + ಕುರುಜು]

**ಪೊಂಗುಲ** (ನಾ). ೧. ಚಿನ್ನದ ಕೆಲಸ ಮಾಡುವವರ ಕುಲಕ್ಕೆ ಸೇರಿ ದವನು ; ಅಕ್ಕಸಾಲಿಗ : ಕಡೆಕೊಳಂದ ಮಣ್ಣೆಗಪೊಂಗುಲಂ ಕೊಡ ಲಿಯಂ ಬಲ್ಲಹಿಯ ಕಮ್ಮಟು ಮುಟ್ಟಿಗೆಯೆಡೆಯೊಂ ಓದಲಪೋಲೆಯುಂ ಮಜ್ಜಳಂ (ಮೈಅಂ. ೦೯೩೪, ೩೮–೨೨ ; ಸು. 11ನೆಯ ಶತ). ೨. ಒಬ್ಬಾತನ ಹೆಸರು : ಸಾಕ್ಷಿ ಕೊಡಲೂರ್ ಪೊಜ್ಜುಲರು ಎಳ್ಮಡಿಯರು ಬದಿರಿಯರುಮ್ (ಮೈಅಂ. ೦೯೦೬, ೦೩-೯ ; 726). [ಪೊಂ (< ಪೊನ್) + ಕುಲ]

**ಪೊಂಗುಲ್ವಟ್ಟಿ** (ನಾ). ಒಂದು ಪ್ರದೇಶದ ಹೆಸರು (?) : ತೆನ್ಕಣ ಕೊಸೆದು ಪೊನ್ಗುಲ್ವಟ್ಟಿಯ ತೆನ್ಕೊಳ್ವೆ ತೆನ್ಕಣಸೀಮೆ (ಮೈಅಂ. ೦೯೨೭, ೦೨೨–೭೦ ; 808 ?). [ ? ]

**ಪೊಂಗುಳ** (ನಾ). ಚಿನ್ನದ ಕುಳ,–ಗುಳ : ಪೊಂಗುಳಂಗಳಂ ಕಬ್ಬಿಣದ ಗುಳವೆಂದು ಕೈಯುಲೀಯೆ (ಶಕುಭ್ರ. ೬–೩–೨).
[ ಪೊಂ (< ಪೊನ್) + ಕುಳ$_1$ (< ಕುಟು) ]

**ಪೊಂಗುಳಿಗೆ** (ನಾ). ಚಿನ್ನದ ಗುಳಿಗೆ : ಪೊಂಗುಳಿಗೆಗಳ ಪರಿಯೊಳಂಗು ಷ್ಟಂಗಳೊಪ್ಪುಗು ನಿಮಿರ್ದ ಕೋಮಳದಂಗುಳಂಗಳು ಮೆಱೆವವುಡುಗಣ ದೊಲು ಪದನಖಾಳಿ (ಐಕಥ. ೪-೦೭). [ ಪೊಂ (< ಪೊನ್) + ಗುಳಿಗೆ$_1$]

**ಪೊಂಗುಱುವ** (ನಾ). ಚಿನ್ನದ ದ್ವೀಪ : ಪಾಲ್ಗಡಲೊಳಗಣ ಪೊಂಗು ಱುವಂ ಗಡವೆನಿಸಿದುದವುರನಗಮಿದೇನಚ್ಚರಿಯೋ (ವರ್ಧಮಾ. ೦೨-೩೩).
[ ಪೊಂ (< ಪೊನ್) + ಕುಱುವ$_1$ ]

**ಪೊಂಗೆಜ್ಜೆ**, **ಹೊಂಗೆಜ್ಜೆ** (ನಾ). ಚಿನ್ನದ ಗೆಜ್ಜೆ : ಮಧುಪಾನದಿಂ ಸೊಕ್ಕಿದ ಮುತ್ತುಂಬಿಯ ಧ್ವನಿಗಳಂತೆ ಜರ್ಝರವಾದ ಪೊಂಗೆಜ್ಜೆಗಳ ಮೆಲ್ಲುಲಿ ಯೊಳಂ (ಕಾದಂಪೂ. ೬೬) ; ಪೊಂಗೆಜ್ಜೆಯುಲಿಪು ನೆಲಹಾಗ್ಗಡಿಸುತ್ತುಂದೆಸೆಯು . . . ನಡೆತರುತಿರ್ದಳ್ (ಗಿರಿಶ. ೩–೧೦೬), ಮೆಱೆಯಲೊಡ್ಯಾಣದ ಪೊಂಗೆಜ್ಜೆಗಳ ದನಿ . . . ಪಾಡುತ ಪಿರಿದು ಸಂಭ್ರಮದ ಬೀಱೆದರು (ಕಂಪರ. ೨೧–೧೦೦). **ಹೊಂಗೆಜ್ಜೆ** : ಹೊಂಗೆಜ್ಜೆಗಳ ಮುಕುರದ ಘಂಟೆಗಳ . . . ವಜ್ರಮಯಧಾರೆಗಳಲೆಸೆದುದು ಭದ್ರಮಂಟಪ (ಕುಮಾಅ. ೦೨–೦೨); ಪುಟ್ಟಪಾದಗಳ ಹೊಂಗೆಜ್ಜೆಗಳ್ ಘಲಿರೆನೆ ದಟ್ಟಡಿಯಿಡತೊಡಗಿದನು (ಕೋಹತ. ೦೭–೭೨); ಸುಗತಿಗುಲಿವ ಹೊಂಗೆಜ್ಜೆಗಳ ರಭಸದಿಂದೆಸೆವ ನಿರ್ಮಲ ವಾಜಿಯುಂ ಸುವೇಗಂ ತುದು ನಿಲಿಸಿದಂ (ಕೃಬಕಾ. ೩–೦೦).
[ ಪೊಂ (< ಪೊನ್) + ಗೆಜ್ಜೆ$_1$ ]

**ಪೊಂಗೆಲಸ**, **ಹೊಂಗೆಲಸ** (ನಾ). ಚಿನ್ನದ ರೇಕಿನ ಕೆಲಸ : ಪೊಸ ಪೊಂಗೆಲಸದ ಯೂಪಸ್ತಂಭಂಗಳ ಭಂಗಿಯನನುಕರಿಸಿದುವುಳ್ಳೊಡೆಯಾ ಕಮಲ ದಳಾಂಬಕಿಗೆ (ಜಯಕಾ. ೩–೩೦). **ಹೊಂಗೆಲಸ** : ತೀವಿದವು ಹೊಂಗೆಲಸ ಗತಿಯಲಿ ಲೋವೆಗಳು (ಕುಮಾಅ. ೦೨–೯) ; ಹೊಂಗೆಲಸದ ಪೊಚ್ಚಪದುಮ ಪಿಟ್ಟರದೊಳು ಮಂಗಲಮಜ್ಜನಗೆಯ್ದು (ಪೋಹತ. ೨೦–೩).
[ ಪೊಂ.(< ಪೊನ್) + ಕೆಲಸ ]

**ಪೊಂಗೇದಗೆ**, **ಹೊಂಗೇದಗೆ** (ನಾ). ಒಂದು ಬಗೆಯ ಕೇದಗೆ ; ಹೊಂಬಣ್ಣದ ತಾಳೆಹೂವು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆ ಯೆಂಬ ಪಲವು ಪೂಮಾಲೆಗಳಂ ಬಗೆಯಱದೋಲಗಿಪುದು ಮಾಲೆಗಾಜನಂ ಪೋಲ್ತುದಗ್ರಮಾಲ್ಯಮಹೀಜಂ (ಆದಿಪು. ೩–೩೬), ಸೋಮರ್ಮಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱ್ (ಶಂಗಾವಿ. ೨-೦೩ ಪ) ; ವನಮ ನುಱ ಬಳಸಿ ಕಂಗೊಳಿಪ ಪೊಂಗೇದಗೆಗಳೊಪ್ಪಿದುವು (ಕಬ್ಬಿ. ೪೩–೦೮). **ಹೊಂಗೇದಗೆ** : ಕುರವಕದ ವಕುಳದೆಳೆಗೌಂಗಿನ ಹೊಂಗೇದಗೆಯ ಬಳಸಿ ನೊಳಂ . . . ಲತಾಮಂಟಪಂಗಳ್ ಮನಂಗೊಳಿಪುವು (ಕಾದಂಪೂ. ೯೭) ; ಈಳೆ ಹೊಂಗೇದಗೆಯ ಕಂಚಿಯ . . . ಕಿತ್ತೊರಸಿ ಹುಡಿಹುಡಿ ಮಾಡಿದನು (ಕಾಶಿರಾ. ೦೦–೨೦) ; ಹೊಂಗೇದಗೆಯೆಸಳಂ ಮುಸಿಸಿ (ಜಯಕಾ. ೨-೦೪).
[ಪೊಂ (< ಪೊನ್) + ಕೇದಗೆ]

**ಪೊಂಗೊಡ**, **ಹೊಂಗೊಡ** (ನಾ). ಚಿನ್ನದ ಕೊಡ ; ಸ್ವರ್ಣಕುಂಭ : ಪೊಂಗೊಡಂ ತಮಾಳಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕ ಮಾಂತುದು ಕರ್ಪನಾಕೆಯಾ(ಶಂಕಭಾ. ೧–೧೨೩) ; ಬಿಳಿಯ ಸಾಸವೆ ಪೊಂಗೊಡ ನಷ್ಟಶೋಭೆ ಕನ್ನಡಿ . . . ಎಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನು ರಾಗಮಂ (ಕಾವ್ಯಶ. ೬೩೨) ; ಕೀಲಾಲಮನುಱ ಸಾಸಿರಸೂಳ್ಪೊಂಗೊಡನಿಂ ತಂದು . . . ಅಭಿಷೇಕಂಗೆಯ್ದಂ (ಉದ್ಯದೇ. ೩–೪೩). **ಹೊಂಗೊಡ** : ತೊಳೆದ ಹೊಂಗೊಡದೊಳಗ್ಗಣಿಗಳಂ ತುಂಬಿ ತಂದಿಳುಹಿದರು ಕಾಮಿನಿಯರು (ಹಕಾ. ೩–೩೭) ; ಹೊಂಗೊಡನ ಹಿಡಿದ್ಯತರಲಿ ನಾರಿಯರು (ಕುಮಾದ್ರೌ. ೧–೩೭) ; ಮಜ್ಜನಕುಷ್ಣಜಲ ಹೊಂಗೊಡದಲಿಳುಹಿದವು (ಕೂರಾ. ೩–೩–೩೪). [ಪೊಂ (< ಪೊನ್) + ಕೊಡ$_3$]

**ಪೊಂಗೊಡೆ** (ನಾ). ಚಿನ್ನದ ಛತ್ರಿ ; ಬಂಗಾರದ ಸತ್ತಿಗೆ : ಶಕ್ರಂಗೆತ್ತಿದ ಮಾಣಿಕಗೊಡೆ ಪೊಂಗೊಡೆ ಬೆಳ್ಗೊಡೆಯೆನಿಸಿದುದು ಶಶಿಬಿಂಬಂ (ಜಗಂ. ೦೬–೦೦೬) ; ಚೈತ್ರನೆತ್ತಿದ ಪಲವುಂ ಪೊಂಗೊಡೆಗಳೆನಿಸಿ ಪೂತು ಮನಂಗೊಳಿಸಿದುವೆಸೆವ ಕರ್ಣಿಕಾರಕುಜಂಗಳ್ (ಕುಸುಶಾ. ೩–೪೦).
[ಪೊಂ (< ಪೊನ್) + ಕೊಡೆ$_3$]

**ಪೊಂಗೊಳಗು** (ನಾ). ಪಶುಗಳ ಗೊರಸಿಗೆ ತೊಡಿಸುವ ಚಿನ್ನದ ಆಭರಣ : ಪೊಂಗೋಡು ಪೊಂಗೊಳಗು ಪೊಂಗೆಜ್ಜೆ ಘಂಟೆಗಳು ಪೊಂಗಲಶ ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗಿರಾ. ೩–೦೩).
[ಪೊಂ (< ಪೊನ್) + ಕೊಳಗು]

**ಪೊಂಗೊಳಲು** (ನಾ). ಚಿನ್ನದ ಕೊಳಲು : ಪೊಂಗೊಳಲನೂದುತಿಹ ಯಾದವಕುಲೋತ್ತುಂಗ (ಪ್ರಭು. ೩-೫೮ ಪದ್ಯ) ; ಪೊಂಗೊಳಲಾಂತು ನಿಂದು . . . ಬಾಜಿಪೋಜೆಯೊಳ್ (ಜಗ. ೬-೨).
[ಪೊಂ (<ಪೊನ್) + ಕೊಳಲು (<ಕೊಟಲ್)]

**ಪೊಂಗೋಂಟೆ, ಹೊಂಗೋಂಟೆ, ಹೊಂಗೋಟೆ** (ನಾ). ಚಿನ್ನದ ಕೋಟೆ : ವರಯೋಜನಜ್ಜನವಂ ಪುರಂ ಪುರವನೊಳ್ಪೊಂಗೋಂಟೆ ಪೊಂಗೋಂಟೆಯುಂ ತರುಷಂಡಂ . . . ತಳ್ತೊಳಕೆಯ್ದು ಚೆಲ್ವನೊಳಕೊಂಡಿರ್ಕುಂ ತದುರ್ವೀತಳಂ (ಪಾರ್ಶ್ವ. ೧-೫೨) ; ಪ್ರಕಟಂಬೆತ್ತಿರ್ಪ ಪೊಂಗೋಂಟೆಯು ತನೆಯೆಸಟ್ಟಗಳ್ ಕೇಸರಂ . . . ತಾನೆಸಲ್ಕೊಪ್ಪುಗುಂ . . . ತತ್ಕುಸುಮಪುರಿ (ದಶಭ. ೧-೨೫) ; ಬಗೆಗೊಂಡುದಾ ಪೊಳಲ ಪೊಂಗೋಂಟೆ (ಶಾಂತಿನಾ. ೩-೬೨). **ಹೊಂಗೋಂಟೆ :** ಪುರದ ಮಧ್ಯದ ಮಣಿಮಯದ ಹೊಂಗೋಂಟೆ ರಂಜಿಸಲು (ಶಬರಶ. ೨-೩೯) ; ಹೊಂಗೋಂಟೆ ಗಗನಮಂಡಲವ ಮುಟ್ಟಿಹುದು (ಕಂಸವ. ೬-೪). **ಹೊಂಗೋಟೆ :** ಸುತ್ತಣ ಮಣಿಗಲ್ಲ ಹೊಂಗೋಟೆ ನೋಡಲು ತತ್ತಳಗೆಯ್ದುದಕ್ಷಿಗಳ (ಬೋಹಜ. ೩-೬); ದಿನಮಣಿಯು ಮಣಿರಥದ ಗಾಲಿಗಳ ನೇಮಿಗಳ ಪೊಯ್ಲಿಂದೆ ಪುಡಿವಡೆದಯಿದ್ದ ಸಾಲ ಹೊಂಗೋಟೆದೆನೆಗೊನೆಗಳಿಂದೇಳ್ವ ದೂಳಲ್ಲಿಗಲ್ಲಿಗೆ ನಭದೊಳು ಸ್ಥೂಲದಂಡಾಕೃತಿಯನಾಂತವೋಲ್ (ಕೃಷ್ಣಾ. ೩-೨೦). [ಪೊಂ (<ಪೊನ್) + ಕೋಂಟೆ]

**ಪೊಂಗೋಡು** (ನಾ). ಪ್ರಾಣಿಗಳ ಕೊಂಬುಗಳಿಗೆ ಹಾಕುವ ಒಂದು ಬಗೆಯ ಚಿನ್ನದ ಒಡವೆ : ಚಿನ್ನದ ಕೋಡಣಸು : ಪೊಂಗೋಡು ಪೊಂಗೊಳಗು . . . ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗಿರಾ. ೫-೧೫). [ಪೊಂ (<ಪೊನ್) + ಕೋಡು₁]

**ಪೊಂಗೋಲ್** (ನಾ). ೧. ಚಿನ್ನದ ದಂಡ ; ಬಂಗಾರದ ಕೋಲು : ಮೇಲ್ಗಳೊ . . . ಪಾರ್ವತಿಯ ಚಿತ್ರಮಂ ಸೋಲಿಸುವಾ ಕೀಲ್ಗಳೋ ಸಲ್ಲೀಲೆಯ ಪೊಂಗೋಲ್ಗಳೊ ಕಣಕಾಲ್ಗಳೋ ಲಲಾಟೇಕ್ಷಣನಾ (ಗಿರಿಜಾ. ೧೧-೬೦). ೨. ಚಿನ್ನದ ಬಾಣ : ಪೊಂಗೋಲ ಪಿಡಿದವರೊಳಾರಾರ್ಗ ನಮ್ಮಳ್ಳೆ ? (ಪಾರಿಶ. ೧೩-೩೦೦). [ಪೊಂ (<ಪೊನ್) + ಕೋಲ್₁]

**ಪೊಂಘಟ್ಟ** 'ಪೊಂಗಟ್ಟ' ನೋ.

**ಪೊಂಚು₁, ಹೊಂಚು₁** (ಕ್ರಿ). ೧. ತಕ್ಕ ಸಮಯವನ್ನು ಕಾಯು, — ಎದುರುನೋಡು : ಪೊಂಚುವ ಪಾಯ್ವ ಪೊಯ್ವ ಕೊಯ್ವ . . . ಸಾವ ಬೇವನಿಬರುಂ ಪದ್ಮಾಸನಂ ಕಂಡನು (ಪಂಪಭಾ. ೪೪-೩೨). ೨. (ಬೇಟೆಯಾಡುವಾಗ) ಗುಟ್ಟಾಗಿ ಅಡಗಿದ್ದು ಬೇಟೆಯ ಮೇಲೆ ಬೀಳಲು ಸಿದ್ಧವಾಗಿರು : ಬೆಸ್ಕಂ ಇರದೆ ಪೊಂಚಿ ಪಿಡಿದು ಹಾವು . . . ನುಂಗಲಾಜಿದಿರುತಿರಲು (ಕಬ್ಬಿಗ. ೩೬-೩). ೩. ಇತರರ ಚಲನವಲನಗಳನ್ನು ರಹಸ್ಯವಾಗಿ ಗಮನಿಸು ; ಕದ್ದು ನೋಡು; ಬೇಹು ಮಾಡು : ಪೊಂಗುವ ನುಣ್ಕೊಗಂ ಪೊಸೆದು ಪೊಂಚುವ ಸಂಚಿನ ನೋಟದಟ್ಟಿಯಿಂದಂಗಜವೀರನಾರುಬಟೆಯುಂ ಪಟುಗೆಯ್ಯುತೆ ಬಾಜಿಪೋಜೆಯೊಳ್ (ಜಗ. ೬-೨). ೪. ಯಾರಿಗೂ ಕಾಣದಂತೆ ಗುಪ್ತವಾಗಿರು ; ಅಡಗಿ ಕುಳಿತಿರು : ಕಾಂತರಾಲಿಂಗನದೊಳು ಪೊಂಚಿರ್ದ ಕಾಮಿನಿಯರೆದೆ ಧಿಗಿಲೆನಲ್ಕೊಗಲುಂಚದೊಳ್ಕೋಳಿಗಳ್ (ಕೃಷ್ಣಾ. ೨೬-೨೪). **ಹೊಂಚು₁ :** ೧. ಮಿಂಚಿದವು ದೆಸೆಗಳಲಿ ಗಮನಕೆ ಮುಂಚಿದವು ಹಂಸೆಗಳು ನಭದಲಿ ಹೊಂಚಿದುದು ಜೀವನಕೆ ಜೀವನವಿರಹಿನಿಕುರುಂಬ (ಕುಮಾರ. ೧೪-೨೦); ಕತ್ತಲೆಯೊಳು ಮಿಂಚುವ ವಿಭೂಷಣಕೆ ಮುಸುಕಿಟ್ಟು ಸುಳಿವರ್ಗೆ ಹೊಂಚುವ ಚಮತ್ಕೃತಿಯನಳವಡಿಸಿ ನೆನಹಿಂಗೆ ಮುಂಚುವ ಪದನ್ಯಾಸಮಂ ಕಲಿತು ನಡೆವ ಜಾರೆಯರ ಚದುರೆಸೆದಿರ್ದುದು (ಕೃಷ್ಣಾ. ೨೬-೧೦) ; ತನಗಾದ ಅಪಮಾನಕ್ಕೆ ಪ್ರತೀಕಾರವನ್ನು ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡು ಸಮಯವನ್ನು ಹೊಂಚಲು ಮೊದಲಿಟ್ಟನು (೭ಕಳ. ೧೫). ೨. ಆ ಪೊಸತಾಗಿ ಸೊರ್ಕಿದಿಭಮಂ ಪದೆದೀಕ್ಷಿಸಿಯೊರ್ವ ಧೀವರಂ ಕೋಪದೊಳೊಯ್ಯನೊಯ್ಯನುಚಿ ಹೊಂಚಿ ನಿಕುಂಜಮನೊತ್ತಗೊಂಡು ಮೇಣ್ಕಾಪಮನಾದರ್ದು ನೋಡಿ ತೆಗೆದಂದಿಸೆ (ಉದ್ಭಟ. ೨-೫೫); ತೋಳ ದಾಡೆಯಲಿರಿಸಿ ಮೆಟ್ಟಿಸಿ ಕಾಲುಗೊಲೆಯಲಿ ಸುಂಡಿಲಲಿ ಸಮಸೀಳ ತೋಟಿಸಿ ಹಾಟಿ ಹೊಂಚುವ ವೀರವಾನರರು . . . ಜೋದರುಗಳಂತಕನಾಲಯವ ಹೊಗಿಸಿದರು (ತೊರವೆ. ೬-೨೦-೧೪) ; ತಲೆಯೆತ್ತುವ ಮಿಗಂಗಳನೋರಂತೆ ಮುರಿದಿಕ್ಕಲಿಹ ಬಕದಂತೆ ಹೊಂಚುತೆ ಕುಳಿತಿರುವನು ಕಾದು ! (ಕಂಠೀ. ೪೨-೫).

೫. ಗುಪ್ತವಾಗಿ ಪ್ರಯತ್ನಿಸು ; ರಹಸ್ಯವಾಗಿ ಕಾರ್ಯ ನಡೆಸು : "ಹೊಂಚು–ಸಂಕೇತೋದ್ಯೋಗೇ" (ಶಮದ). ೬. ಉಪಾಯ ಮಾಡು; ತಂತ್ರವನ್ನು ಹೂಡು : ನಿನ್ನೀ ನಿಲವು ನೀ ಹೊಂಚಿಹುದು ಸಮರಕೆ ಬಂದ ಸಿಂಗರವೂ (ಉತ್ತರಾ. ೩೨-೭೪). ೭. ಸೂಸು; ಹೊರಹೊಮ್ಮು : ಹರಿಗೆಗಳ್ ಮೇಘದೊಡ್ಡಣೆ ಕತ್ತಿಗಳ ತೊಳಪದಿರವೆ ಹೊಂಚುವ ಮಿಂಚು ಕವಿದೆಸೆವ ಸಾಯಕದ ಸರಿಯ ಸರಿವಳೆ (ಕಂಠೀ. ೩೮-೩೭); ನಳತೋಳ್ಗಳಿಂ ಜಡಿದು ಝಳಪಿಸುವ ಕೈದುಗಳ ದೀಧಿತಿಗಳು ಹೊಂಚಿದುವು ವಜ್ರಮಣಿಭೂಷಣದ ಕಾಂತಿಯಿಂ (ಕೃಷ್ಣಾ. ೧೬-೭); ನಿನ್ನೆ ನಡೆದಂತಿಹುದ ಮರೆವೆನೆಂತು ? . . . ಸಂಜೆಸೂರ್ಯನ ಸೌವರ್ಣರಾಗದ ಕಾಂತಿ ಹೊಂಚಿ ಎಮ್ಮಿಬ್ಬರನು ಹೊದಿಸಿ ಬೆಳಗಿದುದ (ಪಾಂಚಜ. ೭೪-೧೬). ೮. (ಆಹಾರ, ಹಣ ಮೊದಲಾದುವನ್ನು) ಹೊಂದಿಸಿಕೊಳ್ಳು ; ಜೋಡಿಸಿಕೊಳ್ಳು : ಸಾಮಾನ್ಯವಾಗಿ ಎಂಥ ಬಡರಾಷ್ಟ್ರವಾದರೂ ಯುದ್ಧಕಾಲದಲ್ಲಿ ಹಿಮಾಲಯದೆತ್ತರಕ್ಕಾದರೂ ಹಣವನ್ನು ಹೊಂಚಲು ಶಕ್ಯವಾಗುತ್ತದೆ (ಶಿಕ್ಷದ. ೭೩೬). ೯. ಅಳವಡಿಸು ; ಹೊಂದಿಸು ; ಜೋಡಿಸು : ಪಂಚರತ್ನದ ಕಾಸೆ ನವರತ್ನಭೂಷಣ ಮಿಂಚುಮುತ್ತಿನ ಮೊಲೆಗಟ್ಟು ಹೊಂಚಿ ರತ್ನದೊಳು ನಿರ್ಮಿಸಿದ ಪುತ್ತಳಿಗಳ ಸಂಚಯದಂತಿದ್ದರಾಗ (ಭರತ. ೧೩-೪೮).
[ದೇ.೫ ತುಳು. ಅಂಚು; ತೆಲು. ಪೊಂಚು]

**ಪೊಂಚು₂, ಹೊಂಚು₂** (ನಾ). ೧. ಅಡಗಿಕೊಂಡು ಕಾಯುವಿಕೆ : ಗುಪ್ತವಾಗಿ ನಿರೀಕ್ಷಿಸುವಿಕೆ : ಪದವಮೊತ್ತಮಿಡುತುಸಿರ್ವಿಡದೆ ಪೊಂಚಿ[ಚಿ]ನೊಳ್ ಶಾರ್ದೂಲವೊಂದು ಮುಂಗಡೆಯ ಮೆಳೆಯ ಒತ್ತಿನೊಳು ಮೇವ ಮೃಗಕವ್ವಳಿಸುತಾರ್ದು . . . ಮುತ್ತರುಣಜಲವ ಪೀರಿದುದು (ಶಂಕರಾ. ೩-೬-೪೭). ೨. ಸೇರಿಕೆ ; ಜೋಡಣೆ ; ಹೊಂದಾಣಿಕೆ : "ಪೊಂಚಿನೆ ಪೊರ್ದಿದ ಬಗೆ" (ರತ್ನಕೋ. ೩-೫). **ಹೊಂಚು₂ :** ೨. ಈ ಕತೆಗಳಲ್ಲಿ ಸೋದ್ದಿಶ್ಯವಾದ ಆಕಾರರಚನೆಯ ಪ್ರಯತ್ನವಿದೆ. ಇಲ್ಲಿಯೂ ಪಾತ್ರಗಳಿರುತ್ತವೆ, ಸನ್ನಿವೇಶಗಳಿರುತ್ತವೆ ; ಆದರೆ ಅವುಗಳನ್ನು ಜೋಡಿಸಿರುವ ಕ್ರಮದಲ್ಲಿಯೇ ಹೊಸ ಅರ್ಥವೊಂದು ಪ್ರಕಟವಾಗುವಂತೆ ಅವುಗಳ ಹೊಂಚು ಕಾಣುತ್ತದೆ (ಹೊಸಕ್ಷಿ. ೨೮೩). ೩. ಗೂಢಚರ್ಯೆ ; ಬೇಹು. ೪. ಉಪಾಯ ; ತಂತ್ರ ; ಹಂಚಿಕೆ : ಅಳಿಯ ಆ ಆಕರ್ಷಣೆಗೆ ಸುಲಭವಾಗಿ ಬಲಿಯಾಗುತ್ತಾನೆಂದು ಏರ್ಪಡಿಸಿದ ಇಂದ್ರಾಣಿಯ ಹೊಂಚು ವಿಫಲವಾಗಲಿಲ್ಲ (ಹೊಸಕ್ಷಿ. ೨೫) ; ಅವರ ರಾಜಕೀಯ ಹೊಂಚು-ಸಂಚುಗಳು ಜಗತ್ತಿನಲ್ಲಿ ಯಾವೆಡೆಗಳಲ್ಲಿ ಎಷ್ಟು ಯಶಸ್ವಿಯಾದವು ? (ಕೂಪಾದ. ೦೭೧). ೫. ಸಿದ್ಧತೆ ; ಹವಣಿಕೆ : ದಾಯಾದಿಗಳು ದತ್ತಕ ಪುತ್ರನನ್ನು ಕೊಡಲು ನಾ ಮುಂಗೆ ನೀ ಮುಂದೆ ಎಂದು ಹೊಂಚಿನಲ್ಲಿಯೇ ಒದ್ದಾಡುತ್ತಿದ್ದರು (ಸಿರಾಶ. ೦೦೪).

**ಹೊಂಚು ಹಾಯು** = ಸರಿಯಾದ ಸಮಯಕ್ಕಾಗಿ ರಹಸ್ಯವಾಗಿ ಕಾಯು : ಒಬ್ಬ ಹುಡುಗನನ್ನು ಹಿಡಿದು ಅವನ ಸಂಗಡ ಹೊಂಚು ಕಾದು, ಅವಳು ಆನಂದನೊಡನೆ . . . ತಿರುಗಾಡಲು ಹೋಗುವುದನ್ನು ಕಂಡುಹಿಡಿದ (ದೂರಸ. ೨೦೮) ; ಬೆಕ್ಕು, ಏಡಿ ಮುಂತಾದುವು ತಮ್ಮ

ಆಹಾರಕ್ಕಾಗಿ ಹೊಂಚು ಕಾಯುತ್ತವೆ (ಜೀವಾತ್ಮ. ೧೯೯). **ಹೊಂಚು ಕೇಳು**= ರಹಸ್ಯವಾಗಿ ಕೇಳಿಸಿಕೊಳ್ಳು; ಕದ್ದು ಕೇಳು : ಎಲ್ಲರೂ ಅವನಿಗೆ ಕಾಣಿಸದಂತೆ ಹೊಂಚು ಕೇಳುತ್ತಿದ್ದರು (ಗೋಕೂರ. ೩). **ಹೊಂಚು ಜಾಗ**= (ಕಳ್ಳರು ಹಾಗೂ ಬೇಟೆಯಾಡುವ ಪ್ರಾಣಿಗಳು) ಅಡಗಿಕೊಂಡು ಕಾಯುವ ಸ್ಥಳ,– ರಹಸ್ಯವಾದ ಜಾಗ : (೬). **ಹೊಂಚು ನೋಡು**= ಗುಟ್ಟಾಗಿ ನೋಡು ; ಕದ್ದು ನೋಡು : ಗುಬ್ಬಿಗಳ ಮೇಲೆ ಎರಗಲು ಕಾಯುತ್ತಾ ಬೆಕ್ಕು ಹೊಂಚು ನೋಡುತ್ತಿದೆ (ರೂ೩). **ಹೊಂಚು ಹಾಕು**= ೧. ಅಡಗಿಕೊಂಡು ಕಾಯು ; ಗುಪ್ತವಾಗಿ ಸಮಯವನ್ನು ನಿರೀಕ್ಷಿಸು : ಅಲ್ಲಲ್ಲಿ ಕಂಡು ಕಾಣದಂತೆ ಹೊಂಚು ಹಾಕುತ್ತಿದ್ದ ಇತರರೂ ಬೆರಗಾಗಿ ನೋಡುತ್ತ ವಿಷಯವೇನೆಂದು ತಿಳಿಯದಿದ್ದರೂ ಏನೋ ಒಂದು ದೊಡ್ಡ ಕಾರ್ಯವನ್ನು ಸಾಧಿಸಿದವರಂತೆ ಸಮಾಧಾನಗೊಂಡರು (ಶರೀವ. ೬೬); ಹೀರೆಯು ಸ್ವಲ್ಪ ಮುಂಚೆ ಬಂದಿದ್ದು ಕಿಟಕಿಯ ಹತ್ತಿರ ಹೊಂಚು ಹಾಕಿ ಎಲ್ಲವನ್ನೂ ಕೇಳಿ ಹೋಗುತ್ತಿದ್ದಾಗ, ದೇವೇಂದ್ರನ ಕೈಗೆ ಸಿಕ್ಕಿದಳು (ಬಂಕಿಮ. ೫೧). ೨. ಬೇಟೆ ಮೊದಲಾದುವುಗಳಿಗಾಗಿ ಅಡಗಿಕೊಂಡು ಕಾಯು ; ಗುಟ್ಟಿನಿಂದ ಮೇಲೆ ಬೀಳಲು ಸಿದ್ಧವಾಗಿ ನಿರೀಕ್ಷಿಸು : ಒಂದು ದೊಡ್ಡ ಹುಲಿ ಬೆಕ್ಕಿನಂತೆ ಹೊಂಚು ಹಾಕುತ್ತ ಕುಳಿತಿದ್ದುದನ್ನು ಅವರು ನೋಡಿದರು (ಕಳಹು. ೫) ; ದೂರದಿಕ್ಕಿನ ಅಂಚಿಗಿದೆ ಹೊಸಹೊಂಚು ಹಾಕಿದ ಜೇಡವು (ನಲಮು. ೯೭–೧೯). ೩. ಉಪಾಯವನ್ನು ಮಾಡು ; ತಂತ್ರವನ್ನು ಹೂಡು : ಪೋಗದೊತ್ತಾಯದೀ ದನದ ಹಟ್ಟಿಯೊಳಿಹಳ್ಬಂಡಿ ಭೀತಿ ಲಜ್ಜೆಗಳಿಲ್ಲದೆ ಮತ್ತೇನು ಹೊಂಚು ಹಾಕಿಹಳೊ ಸಂಶಯವಿಹುದು (ಮಲ್ಲಿಕ. ೭–೩೯) ; ಮುಸಲ್ಮಾನರು . . . ಈ ಹಿಂದೂರಾಜ್ಯವನ್ನು ಸಮೂಲ ನಾಶಮಾಡಲು ಹೊಂಚು ಹಾಕಿದ್ದುದೂ ಸುಪ್ರಸಿದ್ಧವಿದೆ (ಯುಕ್ಷಶ್ರ. ೨೦). ೪. ಜೊತೆ ಮಾಡು ; ಹೋದಿಸು : ನಿನ್ನೆ ದೊಡ್ಡಪ್ಪ ನನ್ನ ಮದುವೆಯ ಪ್ರಸ್ತಾಪ ಮಾಡಿದರು. ಅವರು ಯಾರನ್ನೋ ಹೊಂಚುಹಾಕಿಕೊಂಡಿರುವಂತಿದೆ (ವಾತ್ಸಲ್ಯ. ೨೬೯). [ <ಪೊಂಚು$_1$. / ತೆಲು. ಪೊಂಚು ]

**ಪೊಂಜಗಲಿ**, ಪೊಂಜಗುಲಿ (ನಾ). ಚಿನ್ನದ ಕಟ್ಟೆ; ಬಂಗಾರದ ವೇದಿಕೆ: ಪಸೆವಾಸಿನ ಪಟ್ಟವಳಿಯ ದುಗುಲದ ರುಚಿಗಳ್ ಪಸರಿಸೆ ಪೊಂಜಗಲಿ ವಿರಾಜಿಸುತಿರ್ದುದು (ಜಗವಿ. ೧೦-೯೫) ; ಬೆಳ್ಮುಗಿಲ ಕೆಳಗಳವಡಿಸಿದ ಸುರಯಿಯರಲ ಪರಾಗದ ಪೊಂಜಗಲಿಯ ಮೇಲಣಸುಗೆದಳಿರಲರ್ವಾಸಿನೊಳರಸಿ ವೆರಸಿ ಕುಳ್ಳಿರ್ದು (ರಾಜಶೇ. ೧೦–೩೦ ವ). **ಪೊಂಜಗುಲಿ** : ಪೊಂಜಗುಲಿಯೊಳಗೆ ಮನಪೊಸೆದು ಮಂಡಿಸಿರಲು (ಚಬಕೃ. ೯೬–೯).

[ ಪೊಂ (<ಪೊನ್) + ಜಗಲಿ]

**ಪೊಂಜಗುಲಿ** 'ಪೊಂಜಗಲಿ' ನೋ.

**ಪೊಂಜರಪಣಿ** (ನಾ). ಚಿನ್ನದ ಸರಪಣಿ : ವಾಮಕರದ ಪೊಂಜರಪಣಿಯ ಬೆರಳ ಮಣಿಮುದ್ರಿಕೆಗಳ . . . ಸಂಗರಧೀರರಾಜಸುಕುಮಾರರೊಪ್ಪಿರ್ದರು (ಚಬಕೃ. ೭–೫). [ ಪೊಂ (<ಪೊನ್) + ಸರಪಣಿ ]

**ಪೊಂಜರಿ** (ನಾ). ಚಿನ್ನದ ಮಳೆ; ಸುವರ್ಣವೃಷ್ಟಿ : ತನುವೆಲ್ಲ ಮಾಟಾದ ಕನಕವರ್ಣಮದಾಗೆ ಮನ ನೆನೆದನಿತು ಪೊಂಜರಿಯಾ ನೆನೆದಾಗಲುಗುಳ್ವಂ (ಶೃಂಗವೇ. ೨–೧೫೫). [ ಪೊಂ (< ಪೊನ್) + ಸರಿ$_6$ ]

**ಪೊಂಜರಿಗೆ** (ನಾ). ೧. ಚಿನ್ನದ ಎಳೆ ; ಬಂಗಾರದ ತಂತಿ : ಕಿವಿಗಳೊಳ್ ಪೊಂಜರಿಗೆಯ ಮಿಸುಪ ತುದಿಯೊಳ್ ರನ್ನಮಾಗಾಯ್ಗಳೊಲೆದಾಡೆ (ಚಬಕೃ. ೫–೩೭) ; ಅನಿತುಂ ತಂತ್ರಿಗಳಿಂದಮೊಂದೆ ದನಿಯುಣ್ಮಿತ್ತೆಂಬಿನಂ ಕೂಡೆ ನುಣ್ಣನೆ ಕಂಬಚ್ಚಿನೋಳಿಟ್ಟ ಪೊಂಜರಿಗೆಯಂ ಪೋಲ್ಗುಂ (ಚಕವಿ. ೫–೧೦೩). ೨. ಬಂಗಾರದ ಕಲಾಬತ್ತು ; ಚಿನ್ನದ ಜರಿ : ಪೊಸದುಗುಲದುಡೆಯಿನಮರ್ದೊಪ್ಪುವ ಪೊಂಜ[ಪಾಠಾಂ. ಜು]ರಿಗೆಯುಮುಜ್ವಲ ನಾನಾಭರಣಂಗಳುಮೇಂ ವಿಲಾಸಮಂ ಮಾಡಿದುವೋ (ಸುಕುಮಾ. ೧೦.೯೬); ಎಸೆವುವು . . . ಕೊಂಬವರ್ಗೆ ತೋರಿಪ ಬಲ್ವಲೆಯ ಪಟ್ಟೆಸೀರೆಗಳ ಪೊಂಜರಿಗೆಗಳ್ದೂಸಿಗರ ಪಸರಪಸರದೊಳಗೆ (ಗೀತಗೋ. ೧೬–೮).

[ ಪೊಂ (<ಪೊನ್) + ಸರಿಗೆ ]

**ಪೊಂಜಲಗೆ** (ನಾ). ಚಿನ್ನದ ಸಲಾಕೆ : ಪೊಂಜಲಗೆಯಂತೆ ಕಿರ್ಚಿಂದಂ ಜಾನಕಿ ಶುದ್ಧೆಯಾಗೆ (ಕಂಠಾಮಾ. ೦೬–೩೦). [ಪೊಂ ( <ಪೊನ್) + ಸಲಗೆ$_2$]

**ಪೊಂಜಳಂಬ** (ನಾ). ಚಿನ್ನದ ಎಳೆಯಿಂದ ಮಾಡಿದ ಮುಸುಕು,– ಹೊದಿಕೆ : ವಿಳಸದ್ ಭರ್ಮ್ಯಹರ್ಮ್ಯಪ್ರಭಾವಿಸ್ಫುರಿತಾಭ್ರಂ ಪೊಂಜಳಂಬಂ ಮಿಸುಪಪೊಲಿರೆ ಕಾಂಚೀಪುರಂ ಕಣ್ಗೆ ತೋರ್ಕುಂ (ವೃಷಭ.. ೧೦–೩).

[ ಪೊಂ (<ಪೊನ್) + ಜಳಂಬ ]

**ಪೊಂಜಾಜಿ** (ನಾ). ಒಂದು ಬಗೆಯ ಜಾಜಿಹೂವು ; ಹೊಂಬಣ್ಣದ ಜಾಜಿ : "ಚಾರುಮೈದ–ಪೊಂಜಾಜಿ'' (ಅಕಾವಿ. ೧೦–೨೫).

[ಪೊಂ (<ಪೊನ್) + ಜಾಜಿ$_1$ (<ಜಾದಿ) ]

**ಪೊಂಜಾಮರ** (ನಾ). ಚಿನ್ನದ ಹಿಡಿಕೆಯುಳ್ಳ ಚಾಮರ : ಪೊಂಜಾಮರ ಮುಜಿ ತೊಳಪಾರಂಜಿಯ ಬೀಸಣಿಗೆ ಗಿಂಡಿ ಹಡಪಂ ಮಣಿಕಾಳಾಂಜಿಯ ನಾಂತೆಸೆವರ್ . . . ಪಲಂಬರ್ ಸತಿಯರ್ (ಉದ್ಭಟ. ೨–೯).

[ ಪೊಂ (<ಪೊನ್) + ಚಾಮರ ]

**ಪೊಂಜಾಳಿಗೆ, ಹೊಂಜಾಳಿಗೆ** (ನಾ). ಚಿನ್ನದ ನಾಣ್ಯಗಳಿರುವ ಚೀಲ, –ಹಮ್ಮಿಣಿ : ಪೊಂಜಾಳಿಗೆಯೆರಡ ವಿನಯದಿಂದಿಬ್ಬರು ಜಂಗಮಕಿತ್ತು (ಮೋಳಿಪು. ೫–೮೯) ; ಪಣಾಂಗನೆ ಕನಲ್ದು ಪೊಂಜಾಳಿಗೆಯಂ ನೂಂಕಿ ಕಳೆದು (ವೃಷಭ. ೦೭–೧೫ ವ). **ಹೊಂಜಾಳಿಗೆ** : ಮಾರಯ್ಯನವರ ವಚನಗಳು, ಬಸವಣ್ಣ . . . ಪೊಂಜಾಳಿಗೆಯನಿರಿಸಿ ಹೋದ ಸಂಗತಿಯನ್ನು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಹೇಳುತ್ತಿವೆ (ಮೋಳಿವಾ. ೯೦ ಪ್ರಸ್ತಾವನೆ).

[ ಪೊಂ (<ಪೊನ್)+ಜಾಳಿಗೆ$_1$ ]

**ಪೊಂಜುರಿಗೆ, ಹೊಂಜುರಿಗೆ** (ನಾ). ಚಿನ್ನದ ಕಿರುಗತ್ತಿ ; ಬಂಗಾರದ ಕಠಾರಿ : ಕರೆವೆರಸಿದ ಪೊಸದುಗುಲದ ತೆರಳ್ಕೆವೆತ್ತುಡೆ ಹಟತ್ಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೊ (ಆದಿಪು. ೪–೩೬) ; ತರತರದಿನೆಸೆವ ಕರೆಗಳ್ವೆರಸಿದ ಪೊಸದುಗುಲದುಡೆಯಿನಮರ್ದೊಪ್ಪುವ ಪೊಂಜುರಿಗೆಯುಂ . . . ಏಂ ವಿಲಾಸಮಂ ಮಾಡಿದುವೋ (ಸುಕುಮಾ. ೧೦–೯೭) ; ಬಿಗಿದುಡೆಯೊಳ್ಪೊಂಜುರಿಗೆಯಂ ಕಟ್ಟಿ (ರಾಜಶೇ. ೬–೧೦ ವ) ; ಪೊಂಜುರಿಗೆಯೊಂದೇ ಎರ್ದೆಗೊತ್ತಿದಂ (ರಾಮಾಶ್ವ. ೨೪–೨೬). **ಹೊಂಜುರಿಗೆ** : ನಡುವಿನೊಳು ಚೆಲ್ವಂಕೆಗೊಂಡೆಸೆವ ಹೊಂಜುರಿಗೆ (ಭರತ. ೨೯ ೦೩). [ಪೊಂ (< ಪೊನ್)+ಸುರಿಗೆ$_2$]

**ಪೊಂಜೂಜಿ** (ನಾ). ಚಿನ್ನದ ಸೂಜಿ : ಪೊಂಜೂಜಿ [ಪಾಠಾಂ. ಜೂಜೆ, ಪೂಜೆ]ಯೊಂದೊಂದು ಚೂರ್ಮೊನೆಗೊಂಡೊಂದಲರಾಯ್ದು ಕೋಪ ತೆಜಿದಿಂದಿರ್ಪಂತು ಫುಲ್ಲಾಂಬುಜಾನನೆ ಪುಷ್ಪಾಂಜಲಿಗೊಟ್ಟಳ್ (ಅರ್ಧನೇ. ೩–೯೯). [ಪೊಂ (< ಪೊನ್) + ಸೂಜಿ]

**ಪೊಂಜೂಡಗ** (ನಾ). ಚಿನ್ನದ ಕಡಗ ; ಬಂಗಾರದ ಬಳೆ : ಕರ್ಣದ ಕನನ್ಮಣಿಕುಂಡಲವೊಂದೆ ಕೆಯ್ಯ ಪೊಂಜೂಡಗವೊಂದೆ . . . ಒಪ್ಪಿರೆ (ಚಂದ್ರಕೃ. ೧೦-೭) ; ಪೊಂಜೂಡಗವ ಪಿಡಿದ ಕಯ್ಪಿಡಿಯ ನೋಳ್ಪುದೆಸೆ (ಕಾಲೂರ. ೦೪೮–೩೨೪). [ಪೊಂ (<ಪೊನ್) + ಸೂಡಗ]

**ಪೊಂಜೂಲು** (ನಾ). ಚಿನ್ನದ ಎಳೆಗಳಿಂದ ಮಾಡಿದ ಹೊದಿಕೆ ; ಜರತಾರಿ ಹೊದಿಕೆ : ಅಂತ ರತ್ನಂಗಳೇ ಮಣಿಮೊರಜೆ ಕಳಧೌತಕಾಂತಿ ಪೊಂಜೂಲೆನೆ ವಿರೂಪಾಕ್ಷನಡರೆ ಬೊಮ್ಮಂ ತಿರ್ದಿ ತೋರ್ಪ ಪಟ್ಟದ ದಂತಿಯೆಂದೆನಲ್ ಕನಕಾಚಲಂ ಮೆಱೆದುದು (ಚಬಪು. ೨–೮). [ಪೊಂ (<ಪೊನ್) + ಜೂಲು$_2$]

**ಪೊಂಜೆಂಡು** (ನಾ). ಚಿನ್ನದ ಚೆಂಡು : ರನ್ನದ ಚೆಂಡು ಮೇಲೆ ಪೊಂಜೆಂಡು

ಮೌಕ್ತಿಕದ ಚೆಂಡಾದಂತನುಕ್ರಮದೊಳಿಂದುಬಿಂಬಂ ಸಾಲಾಗಿಯರುಣಂ ಪಿಶಂಗಮಾ ಸಿತರುಚಿಗಳೋಲೈಸಿ . . . ಚೆಲ್ವಾದುದು (ಚಿಪು. ೯-೧೬).
[ ಪೊಂ (<ಪೊನ್) + ಚೆಂಡು (<ಸೆಂಡು) ]

**ಪೊಂಜೆಳೆ,** ಹೊಂಜೆಳೆ (ನಾ). ಚಿನ್ನದ ಕೋಲು ; ಬಂಗಾರದ ಬೆತ್ತ : ಗಂಧಸಿಂಧುರದವೊಲ್ನಡೆಯನಾಂತ ನವಯೌವನೆ . . . ಪೊಂಜೆಳೆಯ ಮೆಯ್ಯ ಪದ್ಮಿನಿ (ಪಂಪಭಾ. ೭-೧೧). **ಹೊಂಜೆಳೆ:** ಕರತಳದೊಳು ಹೊಂ[ಪಾಠಾಂ. ಪೊ]ಜೆಳೆಯನು ಪಿಡಿದು ತನ್ನರಸಗಂಗಜಲಾಸ್ಯವನು ಭರದಿಂದುಪದೇಶಿಪ ಲಾಸ್ಯಕಿಯೆನೆ ತರುಣಿ ಕಣ್ಗೊಪ್ಪವಡೆದಳು (ಪಂಪ್ರಸಾಂ. ೯-೨೯) ; ಹೊಂಜೆಳೆಯಂದದಿ ಬಳಕುವ ಕಾಯದಿ (ಜ್ಞಾಪಕ. ೩-೧೮೦).

**ಪೊಂಜೆಳೆಮೆಯ್, ಹೊಂಜೆಳೆಮೆಯ್, ಹೊಂಜೆಳೆಮೈ**=ಚಿನ್ನದ ಬೆತ್ತದಂತೆ ಹೊಳೆಯುವ ಶರೀರ ; ಸುಂದರವಾದ ದೇಹ: ಪೊಂಜೆಳೆಮೆಯ್ಯ. . . ಗೌರೀದೇವಿಯೆಂಬ ತರುಣಿಯಂ ಮದುವೆಯಂ ಮಾಡಿ (ಹರಿಶ್ಚ. ೨-೩೨ ವ) ; ನೀರಾಟವಮನಾಡಿ ಪೋದ ವಾರನಾರಿಯರ ಪೊಂಜೆಳೆಮೆಯ್ಯೊಳ್ ರಂಜಿಸಿರ್ದ ರಜನೀರಜಂಗಳಿಂ ಕದಡೇಳ್ದು (ರಾಜಶೇ. ೦೨-೩೯ ವ); ಅಂಜನದಲರುವಕ್ಕಿಯ ಬಣ್ಣಮೆನೆ ತೋರ್ಪ ಕಂಜಲೋಚನನ ಮೂರುತಿಯು ರಂಜಿಸುವಂತಲರ್ಗಂಗಳೊಳಿಡುವರು ಹೊಂಜೆಳೆಮೆಯ್ಯ ನೀಟೆಯರು (ವರ್ಧಕ. ೯-೨) ; ಮೊಳೆಯೆ ಹೊಂಜೆಳೆಮೈಯೊಳಾಗಳೆ ಪುಳಕಸಸಿ ತನಿಮೋಹರಸ ಮನದೊಳಗೆ ಕಾಳ್ಪುರವಾಗೆ ಸಾರ್ದಳು ರೋಹಿಣೀದೇವಿ (ಸಾಳ್ವಭಾ. ೧೮-೫೭). [ಪೊಂ (< ಪೊನ್) + ಸೆಳ್ಳೆ]

**ಪೊಂಜೆಳೆಮಂಚ** (ನಾ). ಚಿನ್ನದ ತೂಗುಮಂಚ : ಪೊಂಜೆಳೆಮಂಚದ ಮೇಲೆ ಪೊರೆಯೊಳೇಟುಂಜೌವನೆ ಲಜ್ಜಾತುರೆ ಕಾಂಚನಕಂಜವದನೆ ತಲೆವಾಗಿರೆ (ಜಯನೃ. ೯-೯೯). [ಪೊಂ (<ಪೊನ್) + ಸೆಳೆಮಂಚ]

**ಪೊಂಜೆಱಂಗು** (ನಾ). ಚಿನ್ನದ ಎಳೆಗಳಿಂದಾದ ಸೆರಗು ; ಜರತಾರಿಯಿರುವ ಸೆರಗು : ವಿಟಜಂಗಮಂ ಬಂದಪುಪೆ ಕರೆಸಿ ನಲ್ಲಳ ಸೀರೆಸೆಱಗು ವಿಡಿದೆಳೆವುತಿರಲು ಅಂಗಸ್ಥವಸನವಂತಿರ್ದುದದಱೊಳ್ಪೊಂಜೆಱಂಗು ರಂಗೆಸೆವ ಸೀರೆಗಳಪರಿಮಿತಮುದಿಸೆ ಜಂಗಮವಾವಳಿ ವಣಿಯಲಿತ್ತು (ರಾಘಶ ೬-೯೦).
[ ಪೊಂ (<ಪೊನ್) + ಸೆಱಂಗು ]

**ಪೊಂಜೊನ್ನಲಿಗೆ** (ನಾ). ಚಿನ್ನದ ಕೊಡ, —ಕಲಶ : ಜಲಜನ್ಮಕೋರಕವ್ರಯ ಸೊಕ್ಕುಮಿಕ್ಕಾನೆದಲೆ ಗಾಲಿವಕ್ಕಿ ಪೊಂಜೊನ್ನಲಿಗೆಗಳ ಚೆಲ್ವನಲೆದು ಮಲೆದು . . . ನೆಲವೊಲೆಗಳ್ . . . ಎಡ್ಡಂಬಡೆದವು (ಉದ್ಭಟೀ. ೪-೨೦).
[ಪೊಂ (<ಪೊನ್) + ಸೊನ್ನಲಿಗೆ]

**ಪೊಂಡವಕೆ** (ನಾ). ಚಿನ್ನದ ಪೀಕದಾನಿ : ಶಕ್ತಿವ್ರಜಮಾನ್ಯೆ ಪೊಂಡವಕೆಯಾಂತಿರ್ದಾದಿದೇವಿಸಮುತ್ಕರವೊಲ್ದಾಂತಿರೆ ರನ್ನವಾವುಗೆಯನೊಪ್ಪಿರ್ದಂ ಭವಾನೀಧವಂ (ಕಪಸಂ. ೧-೬೩) ; ಪರಮಗಾಯತ್ರಿ ನಿಂದಿರೆ ಶಕ್ತಿಗಳ ವಿತತಿ ಪೊಂಡವಕೆಯೊಲ್ದಾಂತಿರಲ್ (ಕುಮಾಪು. ೦-೭೦).
[ಪೊಂ (<ಪೊನ್) + ಡವಕೆ₁]

Δ**ಪೊಂತಕಾರಿ** 'ಹೊಂತಕಾಱಿ₁' ನೋ.

Δ**ಪೊಂತಕಾಱಿ** 'ಹೊಂತಕಾಱಿ₁' ನೋ.

**ಪೊಂತಿವಣೆ** (ನಾ). (?) : ಬಟ್ಟ ಕಣ್ಣುಂ ಬಿಗಿದ ಮೊಗಮುಂ ಮನದ ಮುನಿಸುಂ ಮೆಯ್ಯ ಮುಱುಕಮುಂ ಪ್ರತಿಮಾನದ ಪೆಣನುಮಣಲೊಳಡಸಿದಾನೆಯಡಂಗುಂ ಕೋಡ ಕಯ್ಯ ಪೊ[ಪಾಠಾಂ. ಪೊಸಂ]ತಿವಣೆಯು ನೆತ್ತರ ನೊಂದುನಿವಿಷಮುಂ ಕುಂದಿಸದ ಕ್ರೋಧಿನಿಯೆಂಬಯ್ದಾನೆಯ ಮದದೊಳ್ (ಅರ್ಜುನ. ೬-೬೯ ವ). [ ? ]

**ಪೊಂದಂಡ** (ನಾ).=ಪೊಂಗೋಲ್ ೧ : ಏಣಾಂಕವದನೆಯರು . . . ಪಾಣಿಯಲಿ ಪೊಂದಂಡವಿಡಿದವರು ಮುನ್ನಡೆಯೆ (ನವಮೋ. ೩೪-೨೭).
[ಪೊಂ (< ಪೊನ್) + ದಂಡ]

**ಪೊಂದಂಡಿಗೆ,** ಹೊಂದಂಡಿಗೆ (ನಾ). ಚಿನ್ನದ ಪಲ್ಲಕ್ಕಿ ; ಬಂಗಾರದ ಮೇನೆ: ಮಂಗಳಪಾಠಕರು ಸಂಗಡಿಸಿ ಬಿರಿದುಗಳಂ ಪೊಗಳುತಂ ನಡೆಯೆ ಪಿಳ್ಳೆಯನಾಯನಾರ್ ಪೊಂದಂಡಿಗೆಯನೇಱಿ (ಬಸಪು. ೫೦-೧೬). **ಹೊಂದಂಡಿಗೆ :** ನೆಗಹಿದವು ಕೈದೀವಿಗೆಯು ಸಾಲುಗಳು ಹೊಂದಂಡಿಗೆಯ ದೂವಾರಿಗಳು ವೆಂಟಣಿಸಿದರು (ಕುವ್ಯಾದ್ರೋ. ೬-೫೩).
[ಪೊಂ (<ಪೊನ್) +ದಂಡಿಗೆ]

**ಪೊಂದಗಡು,** ಹೊಂದಗಡು (ನಾ). ಚಿನ್ನದ ತಗಡು ; ಬಂಗಾರದ ವರ್ತಿ : ಪೊದಗಡಿನ ಕಡಾರವಂ ಕಾದಿರ್ಪಂತೆ ಕಂಪಂ ಪೀರ್ದು (ಲೀಲಾವ. ೬-೭೦ ವ) ; ಮುತ್ತಿನ ಪುಡಿಯಂ ಪೊರಳ್ಚಿ ಪೊಸಪೊಂದಗಡಂ ತಱಿದಿಕ್ಕಿದಂತೆ ತೋರ್ಪಿನಿಯನ ಬಾಯ ಕರ್ಪುರದ ತಂಬುಲಕೊಯ್ಯನೆ ಕೆಯ್ಯನೊಡ್ಡಿದಳ್ (ಅನಂಪು. ೧೨-೬೮) ; ಸ್ಮರನ ಪಸ್ಸದ ಯಂತ್ರವ ಪೊಂದಗಡಲಿ ಬರೆವಂತೆ ಕತ್ತುರಿಯಿಂದ ತರುಣಿಯ ಕದಪಿನಲಿ ಮಕರಿಕಾ ಪತ್ರವ ವಿರಚಿಸಿದರು (ಜೀವಂಸಾಂ. ೧೦-೧೯). **ಹೊಂದಗಡು :** ಹೊಂದಗಡಿನ ಹೊದಕೆಯ ಮನೆ ಬಹಳ ನೇರಂದವಡೆದ ಪಟ್ಟಶಾಲೆ (ಮೋಹತ. ೩-೭೯).
[ಪೊಂ (<ಪೊನ್) +ತಗಡು]

**ಪೊಂದಟ್ಟೆ,** ಹೊಂದಟ್ಟೆ (ನಾ). ಚಿನ್ನದ ತಟ್ಟೆ ; ಬಂಗಾರದ ಹರಿವಾಣ: ಕರಯುಗದೊಳಾಂತ ಪೊಂದಟ್ಟೆಯನದಱ ಮೇಲೆ ಪರಪಿರ್ದ ಸಂಪಗೆಯ ಪೂಗಳಂ . . . ಕೊಂಡು ಬಂದು (ಕೈವಲ್ಯಭಾ. ೧೦-೧೦) ; ಹೊಳೆವ ಪೊಂದಟ್ಟೆಯಾರತಿಗಳ ಪಿಡಿದಾಗ ಲಲಿತಾಂಗಿಯರು ಸಾಲ್ಗೊಂಡು (ಕಂಸವ. ೭-೧೧೬). **ಹೊಂದಟ್ಟೆ:** ಹೊಂದಟ್ಟೆಯೊಳು ಕುಂಕುಮರಸಪೂರಿತ ಗಂಧಾಕ್ಷತೆಗಳ ಕೊಟ್ಟು ಅಂದವಡೆದ ಕದಳಿಯ ಪರ್ಣದೊನ್ನೆಯ ತಂದಿರಿಸಿದ ರೆಲ್ಲರಿಗೆ (ಮೋಹತ. ೩-೫೦) ; ಮಕರಂದಾಜಯೆಂಬೊರ್ವ ನೀಱೆ . . . ಕೆಳದಿಯ ಕೈಯ ಹೊಂದಟ್ಟೆಯ ತಾನೊಯ್ದು . . . ಭಾವಗೆ ಕೊಟ್ಟಳು (ಶಕಕ. ೯-೨೦). [ಪೊಂ (< ಪೊನ್) + ತಟ್ಟೆ]

**ಪೊಂದಳಿಗೆ,** ಹೊಂದಳಿಗೆ (ನಾ). = ಪೊಂದಟ್ಟೆ : ಮಂಗಳಭೂಷಣಾವಳಿಯ ಬೆಳ್ಪು . . . ಪೊಂದಳಿಗೆ ಸೂಸಿದ ಸೀಸೆಯ ಬೆಳ್ಪು ತಳ್ತಿರಲ್ (ಜಗವಿ. ೦೦-೯೦) ; ಪೊಂದಳಿಗೆವಿಡಿದಾರತಿಯನೆತ್ತಲೈದೆಯರು . . . ಕಂಗೊಳಿಸಿತಾ ದಂಪತಿಗಳ ಮದುವೆ (ಕೈವಲ್ಯಭಾ. ೩೦-೧೬). **ಹೊಂದಳಿಗೆ :** ಸುಳಿದವಾರತಿಯಮರಿಯರ ಹೊಂದಳಿಗೆಗಳ ದೀಪಗಳ ಮುಕ್ತಾಫಲದ ಸೇಸಾಕ್ಷತೆಯ ಮಳೆ ಸಿರಿಮುಡಿಯ ಸರಿಸದಲಿ (ತೊರರಾ. ೩-೬-೫೬) ; ಹೊಂದಳಿಗೆಯಲಿ ಸಂಧ್ಯೆಯೋಕುಳಿಯನೆರಚುತ್ತ . . . ನಿನ್ನ ಪೂಜಿಸುವಳನುದಿನಂ ! (ಚಿತ್ರಾಂಗ. ೦೭-೪೪೨). [ಪೊಂ (< ಪೊನ್) + ತಳಿಗೆ]

**ಪೊಂದಳಿರ್,** ಪೊಂದಳಿರು (ನಾ). ೧. ಹೊಂಬಣ್ಣದ ಚಿಗುರು : ಪೊಂದಳಿರ್ಗಳ್ ತೋರಣಮೆನೆ ಕರಮೆಸೆವುವು (ಸುಕುಮಾ. ೯-೭೦). ೨. ಚಿನ್ನದಿಂದ ಮಾಡಿದ ಚಿಗುರಿನಾಕಾರದ ಅಲಂಕಾರವಸ್ತು : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ . . . ನಡುವೆ (ಆದಿಪು. ೬-೦೫ ವ). **ಪೊಂದಳಿರು :** ೧. ಕುರವಕದ ಕುತ್ತುಂಗಱಿಯುಮಂ ಪೂಂದಳಿರ ಪೊಂದಳಿರುಮಂ . . . ಮನೋಹರಮೆನೆ ಸಮೆದು (ಕಂದ್ರಶ. ೭-೦೦೪ ವ). [ಪೊಂ (< ಪೊನ್) + ತಳಿರ್₂]

**ಪೊಂದಳಿರು** 'ಪೊಂದಳಿರ್' ನೋ.

**ಪೊಂದಳೆ** (ನಾ). ಚಿನ್ನದ ಸತ್ತಿಗೆ : ತುಱುಗಿದ ಪೊಂದಳೆಗಳ ಬಳಿನೆಳಲೊಳ್ ನೆಱೆ ಬರ್ಪ ಗಣಂಗಳ್ (ವೃಷಭ. ೫-೨೨ ವ).
[ಪೊಂ (< ಪೊನ್) + ತಳೆ₄ (< ತಱೆ)]

**ಪೊಂದಾಮರೆ,** ಪೊಂದಾವರೆ, ಹೊಂದಾವರೆ (ನಾ). ಒಂದು ಬಗೆಯ ತಾವರೆ ; ಹೊಂಬಣ್ಣದ ಕಮಲ : ಭೂಮಿಯ ಮೇಗೆ ಸಿಂಹಾಸನ ಮಕ್ಕುಂ ಅದಱ-ಮೇಗಲರ್ದ ಪೊಂದಾಮರೆಯಕ್ಕುಂ (ವಡ್ಡಾರಾ. ೧೫೫-೩) ;

ತಾಮರೆ ಪೊಂದಾಮರೆ ಕಲ್ಪಲತೆಯೆ ಲತೆಯೆಲ್ಲಂ (ಶಾಂತಿಪು. ೩-೭). **ಪೊಂದಾವರೆ :** ಮಾದರಧರನೀ ಪೊರ್ಕುಟಿ ಪೊಂದಾವರೆವೊಕ್ಕು ಮೇಣವಂ ಬದುರ್ಕುವನೇ (ಶಂಕರಭಾ. ೧೦-೧೨೦), ಸರೋವರಮಂ ಪೊದಟ್ಟು ಪೊಂದಾವರೆ ಬಳ್ಳಿ (ಮಲ್ಲಿಪು. ೨-೨೨). **ಹೊಂದಾವರೆ :** ತಾವರೆ ಹೊಂದಾವರೆಗಳ್ ಮಾವಿವಸ್ತ್ರಾವಳಿಮದಾಳಿ ಗಿಳಿಯರಗಿಳಿಗಳ್ (ಗಂಜ. ೨ ೬೮); ಕೆಲರು ಹೊಂದಾವರೆಯ ಹಂತಿಯ ಕೊಳನ ಹೊಕ್ಕರು (ಕುವ್ಯಾಶ. ೧೮-೪), ಶರಧಿಯೊಳೊಗೆದ ಹೊಂದಾವರೆಯಂತಿರ್ಪ ಪುರಮಧ್ಯದಲಿ ಕೃಷ್ಣರಾಯ ಅರಮನೆ . . . ರಂಜಿಸಿತು (ವೋಹತ. ೩-೬೨). [ಪೊಂ (< ಪೊನ್) + ತಾಮರೆ]

**ಪೊಂದಾರ** (ನಾ). ಚಿನ್ನದ ದಾರ ; ಜರತಾರಿ ಎಳೆ : ಪೊಂದಾರಗೆಯ್ಮೆ ಸೆಜಗಿನ ಚೆಂದದ ಚೆಂಗಾವಿಯುಡೆಯನುಟ್ಟನೇರಿಪಳ್ (ಶಶಿ. ೬-೦೪೦).
[ಪೊಂ (< ಪೊನ್) + ದಾರ$_1$]

**ಪೊಂದಾವರೆ** 'ಪೊಂದಾವರೆ' ನೋ.

**ಪೊಂದಾವು** (ನಾ). ಚಿನ್ನದ ಎಳೆಯಿಂದ ಮಾಡಿದ ಹಗ್ಗ : ಕೊರಲೊಳ್ ಕಟ್ಟಿರ್ದ ಪೊಂದಾವುಜ ಪಜಿದದನೀಳುತ್ತ ಬಾಗಿಲ್ಗದಂಗಳ್ ಜಿರಿವಂತೊತ್ತುತ್ತೆ (ಜಿತ್ರಗೋ. ೨೦-೩೪). [ಪೊಂ (< ಪೊನ್) + ದಾವು$_2$]

**ಪೊಂದಾಳ, ಹೊಂದಾಳ** (ನಾ). ಚಿನ್ನದ ತಾಳ : ಮಿಗೆಯೊತ್ತುವ ಪೊಂದಾಳದ ಬಗೆಯಂ ಪೋಲ್ದಲರ್ದ ಕರ್ಣಿಕಾರಮದೆಸೆಗುಂ (ಉದ್ಯಟ. ೪-೨೨); ಹರನಿತ್ತ ಪೊಂದಾಳವಮಂ ನುಡಿಸುತ್ತ ಪಾಡಿದಂ (ಸೌಂದಪು. ೮-೫೦); ಶ್ರೀಧರದ ಪೊಂದಾಳವಮಂ ತೆಗೆದು ತಿರುಪಾಡನೇಕವಮಂ ಪಾಡಲ್ಕೆ (ಪೀಕ್ಷಿ. ೭-೪-೦೨). **ಹೊಂದಾಳ :** ನುಡಿಗೇಳಿ ಹೊಂದಾಳವಮಂ ಓಡಿವೃತಂ (ಲಂಗಪು. ೦೪-೩೬).
[ಪೊಂ (< ಪೊನ್) + ತಾಳ್$_2$ (= ತಾಲ)]

**ಪೊಂದಿಕೆ, ಹೊಂದಿಕೆ** (ನಾ). ಹೊಂದಾಣಿಕೆ ; ಸಾಮರಸ್ಯ : ಒಂದಿಕೆ, ಒಂದಿಕೆಗಳ್ . . . ಪೊಂದಿಕೆ, ಪೊಂದಿಕೆಗಳ್ (ಶಬ್ದಾನು. ೫೬೮ ಪ್ರಯೋ). **ಹೊಂದಿಕೆ :** ಹೊಂದಿಕೆಯ ಹೊಲಬಲ್ಲವೀ ನುಡಿ (ಕೊರಡ. ೫-೩-೬೬); ಅಪೂರ್ಣವಾದರೂ ಹೊಂದಿಕೆಯುಳ್ಳ ಅರ್ಥವನ್ನು ಕೊಡುವ ಪದಗಳ ಗುಂಪಿಗೆ ಪದಸಮುಚ್ಚಯ ಎಂದು ಹೆಸರು (ಪುರ್ಶ್ಸು. ೩). 'ಪೊರ್ದುಗೆ' ಪರಾ. [ಪೊಂದು$_1$ (< ಪೊರ್ದು) + – ಇಕೆ]

**ಪೊಂದಿಗೆ** 'ಪೊರ್ದುಗೆ' ನೋ.

**ಪೊಂದಿಸು** 'ಪೊರ್ದಿಸು' ನೋ.

**ಪೊಂದು$_1$** 'ಪೊರ್ದು' ನೋ.

**ಪೊಂದು$_2$, ಹೊಂದು$_2$** (ಕ್ರಿ). ಸಾಯು ; ಮರಣ ಹೊಂದು : ನೀಲಸಿನ್ದ ಮನಸಿಜರಾನಿಜಿದು ಓಡಿದು ತಾನ್ಪೊನ್ದಿದಾನ್ (ಪ್ರಕಂ. ೦೪೭೧, ೨-೪; ಸು. 788); ಕೆಡೆದು ಪೊಂದಿದನಾಬಿಳೆಯಲ್ಲಚೇತನಂ (ಕಾದಂಬ. ೫೬೫); ನಿಜಕಾಲಪೂರ್ತಿಯೊಳ್ ಪೊಂದುವರೊಯ್ಯಗೆ (ವಿಷ್ಣುಪು. ೦-೪-೦೨೪); ತಂತಮ್ಮ ದುಷ್ಕೃತಂಗಳ ಫಲಂಗಳತ್ತಣಿನಾ ರಕ್ಕಸರ್ ಪೊಂದಿದರ್ (ರಾಮಾಶ್ವ. ೦೨-೦೮). **ಹೊಂದು$_2$ :** "ಹೋದು – ಮರಣೇ" (ಶಮಠ); ಹುಟ್ಟುವಲ್ಲಿ ಭವಿ . . . ಹೊಂದುವಲ್ಲಿ ಭವಿಯಾಗಿ ಹೋಹರ ಮುಟ್ಟಲಾಗದು (ಬಸವ. ೬೭೪); ಹರಣವಿರೆ ಹೊಂದಿದನದಾವನು (ಕುವ್ಯಾಶ. ೨೩-೪೪); ಮರಳಿ ಮರಳಿ ಹುಟ್ಟಿ ಹೊಂದಿ ತೊಳಲಿ ಬಳಲಿ ಬಂದೆ ನಾ (ಪುರಂದ. ೧-೦೬೬-೪).
[ದೇ.॥ ತಮಿ. ಪೊನ್ನು ; ಮಲ. ತೆಲು. ಪೊಲಿ]

**ಪೊಂದು$_3$, ಹೊಂದು$_3$** (ನಾ). ೧. ಸೇರಿಕೆ; ಹೊಂದಿಕೆ: 'ಪೊಂದುಗುಂದು' ಪರಾ. ೨. ಸಮೂಹ ; ಗುಂಪು : ಎಡೆಯೆಡೆಯೊಳಿಡಿಕಿಜಿದ ದೋಣಿಗಳ ಶ್ರೇಣಿಗಳ ಸಿಡಿಸಿಡಿದುರುಳ್ವ ಜಲಬಿಂದುಗಳ ಪೊಂದುಗಳ . . . ಕಡಲೆಸೆದುದು (ಚಿಬಿಪು. ೨-೪). **ಹೊಂದು$_3$ :** ೩. ಪಕ್ಕ ; ಬದಿ ; ಸಾಮೀಪ್ಯ : ಗಂಜೀಯ ಸೀರುಟ್ಟು ಗಂಧದಾ ಬೊಟ್ಟಿಟ್ಟು ನಂದೀಶ ನಿಮ್ಮ ಹೊಂದೀಲಿ ಕೂತಿರುವ ನಾರಿ ಗಂಗವ್ವ ಏಳ ಹೋಗಿ ನೀ ಗಂಡರನೆಬ್ಬಿಸೇಳ (ಜೋಳಗಿ. ೦೩೩) ; ಬೆಳಗುಜಾವದ ಎಲರು ಕದಿರಿನ ಬದಿಗೆ ನಿರ್ನೆರನಲಗುತ ಎಲೆಯ ಸಂದಿಗೆ ಅಲರಿನಂದಿಗೆ ಮರದ ಹೊಂದಿಗೆ ನಲಗುತ (ಹಾಡುಪಾ. ೫೩-೨೮). [< ಪೊಂದು$_1$. / ತಮಿ. ಪೊರುತ್ತು ; ತೆಲು. ಪೊಂದು]

**ಪೊಂದು$_4$, ಹೊಂದು$_4$** (ನಾ). ಸಾವು ; ಮರಣ : ಪುಟ್ಟು ಪೊಂದಿ ಗೆಡೆಯಲ್ಲದೆ ತೋರ್ಪರ್ (ದಕಸು. ೯-೮); ಕೀವುಳಿವ ಪೊಂದುಗಳ . . . ನೋಡಿ ನಗುತಲಿಹೆಯೊ (ಪಿಸೀಗೀ. ೬೯-೦೦). **ಹೊಂದು$_4$ :** ಹೆಸರಿಲ್ಲದ ಕುಲವಿಲ್ಲದ ಹುಟ್ಟಿಲ್ಲದ ಹೊಂದಿಲ್ಲದ ಅಯೋನಿಸಂಭವ ನೀನಾದ ಕಾರಣ ನಿನ್ನ ನಾನು ನಿಷ್ಕಲಲಿಂಗವೆಂಬೆನಯ್ಯ (ಸಿದ್ಧೇಶ. ೬-೨೨); ಭಾವಲಿಂಗದಲ್ಲಿ ಬಯಲನೈದಿದ ಮಹಾಶರಣಂಗೆ ಹುಟ್ಟು ಹೊಂದುಗಳು ನಷ್ಟವಾದುವಯ್ಯ (ಅಖಂಡೇ. ೦೦೬-೪೩). [< ಪೊಂದು$_2$]

**ಪೊಂದುಗುಂದು** (ಕ್ರಿ). (ಸಾಂಸಾರಿಕಜೀವನದೊಡನೆ) ಹೊಂದಿಕೆಯನ್ನು ಕಳೆದುಕೊಳ್ಳು,—ಸಂಬಂಧವು ಕಡಿದುಹೋಗು : ಈ ಪಂಬಲಿಂ ಬೆಂಡಾಗಿ ಕುಂದುಬಗೆಯಿಂ ನಂದಿ ಪೊಂದುಗುಂದಿರ್ಪ ಪುರದಧಿರಾಜಂ ಸುರಥರಾಜಂ ತಾನೋಲಗದೊಳಿರ್ಪನ್ನೆಗಂ (ರಾಜಾಶ್ವ. ೦೩೪-೪).
[ಪೊಂದು$_3$ + ಕುಂದು$_1$]

**ಪೊಂದುಗುಲ** (ನಾ). ಚಿನ್ನದ ಎಳೆಗಳಿರುವ ರೇಷ್ಮೆಬಟ್ಟೆ : ತೆರೆ ಮಸಗುವ ಪೊಂದುಗುಲದ ಪೊಗರು (ಗೀತಗೋ. ೦೩-೨೬).
[ಪೊಂ (< ಪೊನ್) + ದುಗುಲ$_1$]

**ಪೊಂದುಗೆ** 'ಪೊರ್ದುಗೆ' ನೋ.

**ಪೊಂದುಡಿಗೆ** 'ಪೊಂದೊಡಿಗೆ' ನೋ.

**ಪೊಂದೆನೆ, ಹೊಂದೆನೆ** (ನಾ). ೧. ಚಿನ್ನದ ಬಣ್ಣದ ಧಾನ್ಯದ ಹೊಡೆ; ಹಣ್ಣಾದ ತೆನೆ : ತುಂಬುವುದು ಕಾಡುಗಳನೆಲ್ಲ ಪೊಂದೆನೆಯು ಕವ್ಮಿತು ಗಾಳಿ (ಶಶ್ರೀಂಗ. ೫೩-೦೪೪೦). ೨. ಕೋಟೆಯ ತುದಿಗಿರುವ ಚಿನ್ನದ ಕೊತ್ತಳ : ಕೋಂಟೆಯ ಪೊಂದೆನೆಗಳ್ ವಿರಾಜಿಕುಂ (ಜಗಪ. ೨-೦೪) ; ಪೊಂದೆನೆಗಳ್ ಖರಕರಕರದಿಂದಂ ಕರಗುಗುಂ (ರಾಜಶೇ. ೨-೮೮). **ಹೊಂದೆನೆ :** ೧. ಚೆಲ್ವ ಹಸುಗೊರ್ನೆಯಲ್ಲಿ ನೆಲ್ಲ ಹೊಂದೆನೆಯಲ್ಲಿ ಚೆಲ್ಲಿಹವು ಇಬ್ಬನಿಯ ಮುತ್ತುಗಳಿವಿಲ್ಲಿ (ಪಿಸೀಗೀ. ೨೮-೧೫). [ಪೊಂ (< ಪೊನ್) + ತೆನೆ$_1$]

**ಪೊಂದೆರೆ$_1$** (ನಾ). ಚಿನ್ನದ ರೂಪದಲ್ಲಿ ಕೊಡಬೇಕಾದ ತೆರಿಗೆ : ಏಷ್ಯದಾ ಸಾಮಂತರೆಲ್ಲ ಪೊಂದೆರೆಯ ತೆರಲೊಲ್ಲರಲ್ಲ! (ಶಾರಶಿ. ೨೨ ೪೪೬).
[ಪೊಂ (< ಪೊನ್) + ತೆರೆ$_3$ (< ತೆಱೆ$_3$)]

**ಪೊಂದೆರೆ$_2$, ಹೊಂದೆರೆ** (ನಾ). ೧. ಜರತಾರಿಯ ಪರದೆ : ಪೊಂದೆರೆಯ ಪೊರೆಯ ಮಱೆವಿಡಿದು . . . ನಿಂದಳು ವಿಲಾಸದಿಂದ (ಸೌಂದಪು. ೮-೨) ; ಮೃಗಾಕ್ಷಿಯೊರ್ವಳುಜ್ಜ್ವಳತರಮಾದ ಪೊಂದೆರೆಯನೋಸರಿಸುತ್ತಿರೆ ಕಂಡನಿಂದುಮಂಡಳಮುಖಿಯಂ (ರಾಜಶೇ. ೦೦-೬). **ಹೊಂದೆರೆ :** ೨. ಹೊಂಬಣ್ಣದ ಅಲೆ : ಅಲರ್ದ ತಾವರೆವಂಡನುಮರಿಸಿ ಕೊಳನ ಹೊಂದೆರೆಯೊತ್ತಿ ಮಿಂದು . . .ಸುಳಿದಾಡುವುದು ಬಾಲಕನವದೊಂದಲರು (ಸಾಳ್ವಭಾ. ೨-೫). [ಪೊಂ (< ಪೊನ್) + ತೆರೆ$_4$]

**ಪೊಂದೇರ್, ಪೊಂದೇರು, ಹೊಂದೇರ್, ಹೊಂದೇರು** (ನಾ). ಚಿನ್ನದ ತೇರು ; ಸ್ವರ್ಣರಥ : ಪೊಂದೇರ ಮೇಲಿರ್ದ ವಸುದೇವನಂದನರ್ಗೆ ಮುಕುಳಿತಾಂಜಲಿಯಾಗಿ (ಜಗಪ. ೫-೧೦೨ ವ) ; ಧೀರರ ದೇವ ಮೂಜಿನೆಸು ಜಾವದೊಳು ಪೊಂದೇರೇಜಿ ನಡೆದನಬ್ಧಿಯೊಳು (ಭರಜ. ೨೪-೨೬) ; ಪೊಂದೇರನಳವಡಿಸಿ ತುರಗಂಗಳಂ ಪೂಡಿ (ಜೈಮಿಭಾ. ೦೨-೪). **ಪೊಂದೇರು :** ಕರಿತುರಗನಿಚಯದೆಡೆಯಾಟಗಳ ಘಾಟಗಳ ಪೊಂದೇರ ಸಂದಣಿಗಳ . . . ಪಾಳೆಯಂ ಕಣ್ಗೆಸೆದುದು (ಚಬಿಪು. ೪೨-೧೫). **ಹೊಂದೇರ್ :** ಅಭ್ರಮಾರ್ಗದೊಳ್ಸುಳಿವ ಮುಂಗಾರ ಮಿಂಚಂ ತನ್ನ ಹೊಂದೇರ ಚಲಕೆಜಗುವಶನಿಯುಂ ತನ್ನ ಘಾತಿ . . . ತಿರಸ್ಕರಿಸೆ ವೃಷಕೇತು ರಿಪುಸೈನ್ಯಮಂ ಪೊಕ್ಕನು

(ಕೃಬಿಕಾ. ೧೨-೦೫). **ಹೊಂದೇರು :** ಹೊಳೆಹೊಳೆದು ಹೊಂದೇರು ಹರಿದವು (ಶಿವಾ೯ಟೀ. ೯-೨), ನೇಸರಿಂಗಳ ತನ್ನ ಹೊಂದೇರಹಸ್ತಗಿರಿವಸ್ತಕದೊಳಿರಿ ಸುತಿರ್ಪನ್ (ಅಗಾಳ. ೯೯-೬). [ಪೊಂ (<ಪೊನ್) + ತೇರ್$_2$]

**ಪೊಂದೇರು** 'ಪೊಂದೇರ್' ನೋ.

**ಪೊಂದೊಟ್ಟಿಲ್, ಹೊಂದೊಟ್ಟಿಲು** (ನಾ). ಚಿನ್ನದ ತೊಟ್ಟಿಲು : ಆ ವಣಿಜನ ಗೇಹದೊಳಿಪ್ಪರದಲಿ **ಪೊಂದೊಟ್ಟಿಲೊಳಗೆ** . . . ಜೀವಂಧರ ನೊಪ್ಪುವ ಲೀಲೆಯಲಿ . . . **ಬೆಳೆದನು** (ಜೀವಂಚ. ೬-೨); ಗಿರಿಜೆ ವಗನಂ . . . ಕೊಂಡಾಡಿ **ಹರುಷ ಪೊಂದೊಟ್ಟಿಲೊಳ್ ತೂಗಿದಳ್** (ಕಬಸ. ೫-೨೬). **ಹೊಂದೊಟ್ಟಿಲು :** ಕಟ್ಟಿ ಹಜ್ಜದ ಮಿಣಿಗಳಲಿ ಹೊಂದೊಟ್ಟಿಲನು . . . ರಕ್ಷೆಯ ಕಟ್ಟಿರಿಸಿ ಪಾಡಿದಳು ಗೋಪಿ ಮುಕುಂದನನು (ಕಭಾಗ. ೦೦-೬-೦೫). [ಪೊಂ (< ಪೊನ್) + ತೊಟ್ಟಿಲ್$_1$]

**ಪೊಂದೊಡರ್, ಹೊಂದೊಡರು** (ನಾ). ೧. ಚಿನ್ನದ ಅಂದುಗೆ : ಪೀತಪಟಂ ಕಟಿಯೊಳ್ ಬೆಡಂಗು ಮೆಯ್ಯೊಪ್ಪಿರೆ ಕಾಲ ಪೊಂದೊಡರ ದೈತ್ಯರ ಹಾಹೆಗಳೊಪ್ಪೆ . . . ಗೋವಳರಾಯನ ಲೀಲೆ ರಂಜಿಸಂ (ಜಗು. ೫-೯೩); ಎಡಗಾಲೊಳ್ ಪೊಂದೊಡರ್ ತಳ್ತಿರೆ (ರಾಜಶೇ. ೦೩-೬೦). **ಹೊಂದೊಡರು :** ೧. ಹೊಂದೊಡರು ಕಿಱುಗೆಜ್ಜೆ ಘಂಟೆಗಳುಂದವಡೆದರಳೆಲೆ . . ಕಂಕಣಂಗಳ ಗೊಂದಣದ ಭೂಷಣಗಳಲಿ ಗೋವಿಂದ ರಾಮರು ಮೆಱೆದರು (ಕಭಾಗ. ೦೦-೬-೩). ೨. ಚಿನ್ನದ ಆಭರಣ ; ಬಂಗಾರದ ಒಡವೆ : ಹೊಂದೊಡರ ಹಾರಾದಿಗಳಲೊಪ್ಪಂಬಡೆದು ನಸು ನಗೆಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು (ಕುಮಾವ್ಯಾ. ೯-೪೯); ಹೊಂದೊಡರು ತೊಡರಲ್ಲವೇ ? (ಕಶಾಸ. XXIV, ೬೬೦೯).
[ಪೊಂ (< ಪೊನ್) + ತೊಡರ್$_2$]

**ಪೊಂದೊಡವು, ಹೊಂದೊಡವು** (ನಾ). ಚಿನ್ನದ ಒಡವೆ ; ಬಂಗಾರದ ಆಭರಣ : ಪೊಂದೊಡವಿನೊಳಾದ ನಿಸ್ವನಮೆ ದುಂದುಭಿಯಾಗ (ರಶೋಶ್ವ. ೪-೦೩೯); ಮಾನದಣಿವಂದದಿ ಪೊಂದೊಡವಂ ಮೆಚ್ಚಿತ್ತು (ಶಸುಗ. ೨-೨೨). **ಹೊಂದೊಡವು :** ಹೊಂದೊಡವುಗಳನಿತ್ತುಪಚರಿಸಿ ಹರಸಿವಳು (ಕೊರಾ. ೩-೦-೪); ಕಾಲ್ಗೆಜ್ಜೆ ನೇವುರ ಬಳೆಯು ಹೊಂದೊಡವುಗಳ ಕಿಂಕಿಣಿಗೆ . . . ಹಾರಿದಪನಾಲಿಸಿ ಮರಳಿ ಮರಳಿ ದನಿಯನಾಕರ್ಣಿಸ ಲ್ಯಾಟಿಸುತ್ತೆ (ಶ್ರೀಣಬಾ. ೫೫-೪೩). [ಪೊಂ (<ಪೊನ್) + ತೊಡವು]

**ಪೊಂದೊಡಹ** (ನಾ). ಚಿನ್ನದ ಲೇಪನ ; ಬಂಗಾರದ ಗಿಲೀಟು : ಉಡಿಝಲ್ಲಿ ಕಟ್ಟಿದ ಸುರಗಿ ಕೈಪೂಡೆ ಪೊಂದೊಡಹದಂಬಿನ ಬತ್ತಳಿಕೆ (ಕರಾಶಾಂ. ೨೬-೨೬). [ಪೊಂ (< ಪೊನ್) + ತೊಡಹ$_1$ (<ತೊಡೆಪ)]

**ಪೊಂದೊಡಿಗೆ, ಪೊಂದುಡಿಗೆ, ಹೊಂದುಡಿಗೆ, ಹೊಂದೊಡಿಗೆ** (ನಾ). = ಪೊಂದೊಡವು : ಪೊವಟ್ಟೆ ಪೊಂದೊಡಿಗೆ ಶಕ್ತಿ ವಿರಾಜಿಪ ಶಕ್ತಿ ಶೂಲವೊಳ್ಪಿಡಿದ ಕರಾಸಿ ಗೌರಿ ನಿಜವಲ್ಲಭೆ (ಶಂದೊಣಿಣ. ೦-೨); ಪರಿ ಪರಿಯ ಪೊಂ[ಪಾಠಾಂ.ಹೊಂ]ದೊಡಿಗೆಗಳ ಪರಿಪರಿಗಳುಡುಗೆಯ ದೇಶಿ ಮಿಗೆ (ಕುವ್ಯಾಅ. ೬-೬); ಇಡೆ ತೊಟ್ಟಿಲಿಲ್ಲಾಡಿಸುವರಿಲ್ಲ ನಿನಗೆ ಪೊಂದೊಡಿಗೆಯಿಲ್ಲ (ಕೃಬಿಕಾ. ೨೮-೦೬). **ಪೊಂದುಡಿಗೆ :** ಎಲೆ ಶಬರರಾಜ ನೋಡಿದೆ ಪಲವುಂ ಪೊಂದುಡಿಗೆದೊಟ್ಟು ಬಂದೊರ್ವಂ ವ್ಯಾಕುಲನಾಗಿರ್ಪಂ (ಶಂಶಶಂ. ೦೦೫-೨೨) ; ಆಳವಡೆ ತೊಟ್ಟ ಪೊಂದುಡಿ[ಪಾಠಾಂ. ದುಡು, ದೊಡಿ]ಗೆಯಿಂ (ಅರ್ಜನೇ.೨-೦೦). **ಹೊಂದುಡಿಗೆ:** ಅರಿಸಿನವನೆ ಮಿಂದು ಹೊಂದು [ಪಾಠಾಂ. ದೊ]ಡಿಗೆಯನೆ ತೊಟ್ಟು ... ಪುರುಷ ಬಾರಾ (ಮುಹಾರೇ. ೬. ೦೪೦-೩೨೦). **ಹೊಂದೊಡಿಗೆ :** ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನ ಒಲವಿಲ್ಲದ ಲಲನೆಯಂತಾಗಿರ್ದನಯ್ಯಾ (ಬಸವ. ೨೬೯); ರಾರಾಜಿಸುವ ಹೊಂದೊಡಿಗೆಯ ಕುವರ ನೀನಾರವನು (ವೋಚಶ. ೦೦-೬೦).
[ಪೊಂ (<ಪೊನ್) + ತೊಡಿಗೆ (<ತೊಡುಗೆ)]

**ಪೊಂಪಲ** 'ಪೊಂಪುಲ' ನೋ.

**ಪೊಂಪಲ್ಲ** 'ಪೊಂಪುಲ' ನೋ.

**ಪೊಂಪು, ಹೊಂಪು** (ನಾ). ೧. ಸೊಗಸು ; ಅಂದ ; ಚಂದ : ಪುರಿಯೊೞ್ ದಶದಿಸೆಯ ಪೊಂಪು ಜೊನ್ನದ ಪೊಂಪು ಮೆಱೆದುದಾ ಚಾರುಚಂದ್ರೋದಯದ ಸಮಯಮಂ ಬಗೆದು ಬಣ್ಣಿಸುವರೊಳರೆ (ಶಂಬಿಜಾ. ೦೯-೦೦). **ಹೊಂಪು :** ೧. ಸೊಂಪಿನಿಂ ಕಂಪಿಡುವ ಸಂಪಗೆಗಳಂ ಕೊಂಡು ಹೊಂ[ಪಾಠಾಂ.ಹೆಂ]ಪೆಸೆವ ಹೊಂಗೇದಗೆಯ ಹೂಗಳಂ ಕೊಂಡು (ಅಶರ. ೩-೨೪). ೨. ಹೆಚ್ಚಳ ; ಮೇಲ್ಮೆ ; ಅತಿಶಯ : ರಾಣೀವಾಸ ಬಿಡದೆ ವಸಂತವಾಡಿ ವಿಲಾಸದಲಿ ಶ್ರೀಕಾಂತೆಯೋಲಗ ಕೊದಗಿತ್ತೆ ಮಜ್ಜನಗಳನು ರಚಿಸಿ ತಿಂತಿಣಿಸಿಕೊಂಡಾಭರಣಗಳ ಕಂತುವಿನ ಮದದಾನೆ ಸಾಲಿಟ್ಟಂತೆ ಪಂಮಳಿಕೆಱಗುವಳಿಗಳ ಹೊದಱ ಹೊಂಪಿನಲಿ (ಕೃಶಾ೯. ೦೬-೨೯). ೩. ಹಿರಿಮೆ ; ದೊಡ್ಡಸ್ತಿಕೆ : ನಳನೃಪ ಮುಗುಳುನಗೆಯಿಂದಲ್ಲಿಗಲ್ಲಿಗೆ ಜಗಳವಾಡುವ ಭಟರ ದಟ್ಟಿಸುತಧಿಕ ಹೊಂಪಿನಲಿ ಒಗುಮಿಗೆಯ ಹರುಷದಲಿ ರಥವಿಳಿದಗಡು ಪುಷ್ಕರನಿರ್ದ ಸಭೆಗೊವಗ್ಗಿದೊಳ್ಪಿದಿದ (ಅಂಶಾ. ೪೯-೬೩). ೪. [ಸಂಗೀತ] ಸ್ವರವಿಸ್ತಾರ (?) : ಗತಿ ಗಮಕ ಗಹುಗಹಿಕೆ ತಿರುಪು ಚಾಳಿಯ ಕೊಂಕು ಜತಿ ಜೋಕೆ ಮಾರ್ಗವಣೆ ಪಹಣಿ ತರಹರಿಕೆ ಕಂಪಿತ ಹೊಂಪು ಬಾಗು ಡೊಕ್ಕರ ವಿವರ ಕಾಳಾಸ ಕಮ್ಮವಣೆ ಲೋಲಂಗಿತ ನುತಶುದ್ಧಸಾಳಂಗಸಂಕೀರ್ಣಮಂ ಯಥೋಚಿತ ತಾರ ಮಧುರ ಮಂದ್ರಂಗಳಿಂ ಹಾಡಿ (ಹಕಾ. ೬-೩). [<ಪೊಂಗು$_2$. / ತೆಲು. ಪೊಂಪು]

**ಪೊಂಪುಲ, ಪೊಂಪಲ, ಪೊಂಪಲ್ಲ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಗುವಳಾಲಂ ಗೊಂಗುಂ ವಾಣರಸ ಆಳೆ ವೇಗೂರುಂ ಪೊಂಪುಲಂ ಆಳೆ (ಎಕ. X, ಮುಳಬಾ. ೨೬೫-೦ ; ಸು. ೬೦೦?). **ಪೊಂಪಲ :** ರಾಜಾಲ ಪೊಮ್ಪಲ ಚಲ್ಲನತ್ತಮ್ಮ ಮುದ್ದಯ್ಯನುಂ ಎಱೆಯಮ್ಮನೆಸುವರಾದಿತ್ತಂ ತುಱುವನಿಕ್ಕಿಸಿ ಸತ್ತೊಂಗೆ (ಎಕ. X, ಶಂಪಾಬು. ೦೪೩-೦೦ ; ೯೬೬?). **ಪೊಂಪಲ್ಲ :** ಸತ್ಯಶೌಚಶೀಲಾಚಾರಸಮ್ಪನ್ನ ಬೆಂಗದನಾಥ ಶ್ರೀಮ[ತ್] ಪೊಮ್ಪಲ್ಲಮೊಡೆಯಮ್ ಊರ್ಗ್ಗೆ ಪಾಡಿಯೊಳೊಡ್ಡಿ ಬಾಣರಸರುಳ್ಳಾದ ... ಬೀರಲೋಕಮೆಯ್ದಿದ (ಎಕ. X, ಕೋಲಾರ. ೬೯-೦೦ ; ಸು. ೬೦೦). [ ? ]

**ಪೊಂಪುಳಿ** 'ಪೊಂಪುೞ್' ನೋ.

**ಪೊಂಪುಳಿಗೊಳ್** 'ಪೊಂಪುೞ್ಗೊಳ್' ನೋ.

**ಪೊಂಪುಳಿಯೋಗು** 'ಪೊಂಪುೞ್ವೋಗು' ನೋ.

**ಪೊಂಪುಳಿವಡೆ** 'ಪೊಂಪುೞ್ವಡೆ' ನೋ.

**ಪೊಂಪುಳಿವೆಱು** 'ಪೊಂಪುೞ್ವೆಱು' ನೋ.

**ಪೊಂಪುಳಿವೋಗು** 'ಪೊಂಪುೞ್ವೋಗು' ನೋ.

**ಪೊಂಪುೞ್, ಪೊಂಪುಳಿ, ಹೊಂಪುಣಿ, ಹೊಂಪುಳಿ** (ನಾ). ೧. ಹೆಚ್ಚಳ ; ಆಧಿಕ್ಯ ; ಅತಿಶಯ : "ಪೊಂಪುೞ್ = ಪೆರ್ಚುಗೆ" (ಕಮತ. ಹು. ೦); ಸುತಶೋಕದ ಪೊಂಪುೞಿಯೊಳ್ ಮೆಯ್ಯಱಿಯದೆ ನೀರಿೞಿವಂತೆವೊಲಿೞಿದ ನಪರಜಳಧಿಗೆ ದಿನಪಂ (ಶಂಶಾ.೦೨-೨೨೦); ಕಂಪಿನ ಪೆಂಪು ಪೊಂಪುೞಿಯನಲ್ ದೊರೆವತ್ತ ನಮೇರುಮಾಲೆಯಿಂಪಂ ಪರಿಚುಂಬಿಸಲ್ ಬಯಸಿ ಬರ್ಪಳಿ ಮಾಳಿಕೆಯಂತೆ (ಶಾಂತಿಪು. ೫-೩೩) ; ಸುೞಿವ ಮರಾಳಯಾನೆಯರಪಾಂಗ ಮರೀಚಿಚಯಂ ತ್ರಿವರ್ಣಮಂ ಗೞಿಯಿಸೆ ಪರ್ವಿ ಮುಂ ನೆರೆಯ ಬೀತವೊಲಿರ್ದ ಲತಾಳಿ ಮತ್ತೆ ಬೆಂಬೞಿಯೊಳೆ ಪಲ್ಲವಪ್ರಸವಭೃಂಗಕುಳಂಗಳನಾಂತು ಸೊಂಪು ಪೊಂಪುೞಿಯೆನಿಪಂತೆ ತೋಱಿದುದು (ಹಂಕ್ರಶ. ೬-೦೦೬). ೨. ಹರವು ; ಪ್ರಸರ : ದಿವಿಜಸೌಂದರಿಯರ್ ಗೊಂದಣಂ ಮಾಡುವಲ್ಲಿ ಕಡೆಗಣ್ಣೊಳ್ ತುಳುಂಕಿಯುಂ ಕದಪಿನೊಳ್ ಪೊಂಪುೞ್ ಯೋಗಿಯುಂ ಭ್ರೂವಿಭ್ರಮದೊಳ್ ಪೊನಲ್ವರಿದುಂ . . . ಆಕೆಗಳಂಗೋ

ಪಾಂಗದೊಳಿಂತು ನಾಟ್ಯರಸಮ ತೀವಿ ತುಳುಂಕುಗುಟ್ಟಿ (ಅಂಪು. ೬-೧೨೬ ವ); ರಂಜಿತಗೀತವಾದ್ಯನಿನದಂ ಮಾಧುರ್ಯವೀಣಾಲಸನ್ನಿನದಂ ಪೊಂಪುಟಿಯಾದುದಚ್ಚರಿಯೆನಲ್ ವೇಶ್ಯಾಲಯಾನೀಕದೊಳ್ (ಕೃಕೃಳು. ೮-೦೦೯). ೩. ದೊಡ್ಡತನ ; ಘನತೆ ; ಹಿರಿಮೆ : ದಾನದ ಪೊಂಪುಟಿ ಲೋಭದಾಸೆಯೊಳ್ಕೊಡರದು (ಕನುಕ. ೬-೨). ೪. ಹಿಗ್ಗು ; ಸಂತೋಷ : "ಪೊಂಪುಟಿಯೆನಲ್ ಸಂತಸಂ" (ಕಂಜೀವ. ೨) ; ಧಾರಿಣೀಶ್ವರಂ ತಣಿಯೆ ಮನಂ ವದನಾಬ್ಜಂ ಪೊಂಪುಟಿಯೊಳ್ ಪುದಿದಿರೆ ವರಸುರತಸುಖಮ ನೆಯ್ದಿದನಾಗಳ್ (ಕುಸುಮಾ. ೯-೬೩). ೫. ಮೈ ನವಿರೇಳುವಿಕೆ ; ಪುಳಕ ; ರೋಮಾಂಚನ : "ಪೊಂಪುಟಿಯೆಂದು ಪುಳಕಂ" (ಕಕಾ. ೬೪-೪೦೯) ; ಒದವುವ ಗದ್ಗದಂ ನೆಗೆವ ಪೊಂಪುಟಿಯುಣ್ಮುವ ಸೇದೆಯಿಂದೆ ಯುಂ ಪದವಟಿದೊಂದು ಪೊಚ್ಚಪೊಸದೇಸೆ ಪುದುಂಗೊಳೆ (ಕಕಾ. ೩-೯೪). ಪೊಂಪುಳಿ : ೧. "ಪೊಂಪುಳಿಯೆನಲ್ ಪೆರ್ಚಿನೊಳ್" (ಕಕರ. ೬೯) ; ಅಭಿಮಾನದ ಜನ್ಮಭೂಮಿ ಮಾನ್ಯನದ ಮೊದಲ್ವಿಳಾಸನಿಧಿ ರೂಪಿನ ಪೊಂಪುಳಿ (ಕರ್ನಾ. XI-1, ೬೩-೩೯ ; 1028) ; ಮನಂಗೊಂಡು ರಮಾಭಾಜನಮೆನೆ ಹಿರಿಯಾರತಿ ರಾಜಿಸುವುದು ಸಕಲಸುಖದ ಪೊಂಪುಳಿಯಿಂದಂ (ಪಾರ‍ಚಾ. ೦-೩). ೪. ನಳಿನನಾಭನ ಕರುಣದಳತೆಯು ತಿಳಿದು ಪೊಂಪುಳಿಯಾಗಿ ಧೌಮ್ಯನ ಬಳಿಗೆ ಬಂದರು ಪರಮಸುಖದಲಿ ಕುಂತಿಯಾತ್ಮಜರು (ಸಂಕಕ. ೨೬-೧೩) ; ತಾಂ ಪೊಂಪುಳಿಯಿತ್ತು ನೋಳ್ಪ ನರರ್ಗೆ ನಲವಾಂತರೊ ಮಾಲೆಗ್ರಾರ್ತಿಯರ್ (ಕಮಮಾ. ೨-೩೬). ೫. "ಪೊಂಪುಳಿಯೆನಲ್ ರೋಮಾಂಚಮಕ್ಕು" (ಕಕರ. ೭೦) ; ಕಾಯಜವೈರಿಯ ದಿವ್ಯ ಮೂರ್ತಿಯಂ ನೆಟ್ಟನೆ ಕಂಡು ಪೊಂಪುಳಿಯನಾಳ್ದು . . . ಸುಭಕ್ತಿಯಿಂದೆಱಗಿದಂ ಹರನಂಘ್ರಿಯೊಳಾ ಹಲಾಯುಧಂ (ಪ್ರಕಕ. ೦೩-೪೩) ; ತವ ಶೀರ್ಷದೊಳ್ನೆಗಳಲೀ ರಾಜ್ಯಾಭಿಷೇಕೋತ್ಸವಂ ದೊರೆಗುಂ ಪೊಂಪುಳಿ ತಣ್ಪು ಮಾಡಿದುದು ತಾಂ ಸರ್ವಪ್ರಜಾಂಗಂಗಳೊಳ್ (ಪರಕ. ೬೩-೦೩೬). ಹೊಂಪುಣಿ : ೧. ಹೊಂಬಟ್ಟೆಗಳ ಹೊಂಪುಣಿಯಿಂದ ಮೆಱೆದಿಹ ಪಂಚ ಘಂಟೆಗಳಿಂದ್ರನೈರಾವತಕೆ ಸರಿಮಿಗಿಲೆಂದುದಖಿಳಜನ (ಸಂಭಕ. ೨೦-೦೦). ಹೊಂಪುಳಿ : ೧. ಹೊಂಗಿದರು ಹೊಂಪುಳಿಯ ಪುಳಕದ ಮುಂಗುಡಿಯ ರೋಮಾಂಚನದ ರಣರಂಗಧೀರರು ತಱುಬಿ ನಿಂದರು ಮತ್ತೆ ಕಾಳೆಗವ (ಕುಮ್ಮಾದ್ರೋ. ೦೩-೪೦) ; ಹೊಂಪುಳಿಯ ಘನಸೌಖ್ಯ ಮಿಕ್ಕಳಿಗಂಪುಗಳಲಿಲ್ಲೆನುತ ತನ್ನೊಳು ಜೊಂಪಿಸುವ ಮನವೆಂಬ ತುಂಬಿಯ ಭಾವ ಮಿಗೆ ತುಂಬಿ ಸಂಪಿಗೆಯ ಸಾರ್ವಂತೆ ಬಂದಳಲಂಪಿನಲಿ ಮಹದೇವಿ . . . ಅಲ್ಲಮ ಪ್ರಭುರಾಯನಿದ್ದೆಡೆಗೆ (ಪ್ರಲಿಂ. ೦೭-೩). ೪. ಇಂದ್ರನು ಪೃಥೆಯ ಮಾತಿಗೆ ನೆನೆದು ಹೂಂಪುಳಿಯಾಗಿ . . . ವನಿತೆಗೆಂದನು (ಸುಭಕ. ೦೩-೦೯) ; ಶರಣಾಗತರ ಸೇವೆಯೊಳು ಹೊಂಪುಳಿಯಾಗಿ ಬಾಳುವರೇಸು ಧನ್ಯರೊ (ಹಂಸಾ. ೦೭). ೫. ಒಡನೊಡನೆ ರೋಮಾಂಚಿಡುತ ತನುಲತೆ ನಡುಗಿ ಹೊಂಪುಳಿಯಾಗಿ . . . ತಲೆವಾಗಿ ಮೆಲ್ಲಡಿಯಿಡುತ ನಸುಲಜ್ಜೆಯಲಿ ನಡೆತಂದಳು ಧರಾತನುಜೆ (ಅನಂರಾ. ೦-೨೩-೩೩).

[ದೇ. ॥ ತಮಿ. ಪೊಮ್ಮಲ್ ; ತೆಲು. ಪೊಂಪಿರಿ]

**ಪೊಂಪುಟಿಗೊಳ್, ಪೊಂಪುಳಿಗೊಳ್** (ಕ್ರಿ). ಸಂತಸಪಡಂ ; ಹಿಗ್ಗು : ಸುಟಿಗುರುಳೊಳ್ ತೊಡಂಕಿ ವದನಾಂಬುಜಸೌರಭದೊಳ್ ಮುಱುಂಗಿ ಪೊಂಪುಟಿಗೊಳುತಿರ್ಪ ಸೋರ್ಮುಡಿಯೊಳೊತ್ತಿದ ಕಸ್ತುರಿಯಂ ಕಲಂಕಿ . . . ತೀಡಿದುದು ವಲ್ಲಭನಂತಿರೆ ಮಂದಮಾರುತಂ (ಸೂಕ್ತಿಸು. ೪-೦೯೦). ಪೊಂಪುಳಿಗೊಳ್ : ಮುಂ ಪೇಳ್ದ ಬಾಹ್ಯರತಮಂ ಪಿರಿದೆಸಗಿ ರಮಿಸೆ ಪೊಂಪುಳಿಗೊಳುತ್ತವಳ್ ಪುರುಷನೊಡನೆ ತಂಪಿಂ ದ್ರವಿಸಿ (ಜನವ. ೮-೩೭).

[ಪೊಂಪುಟಿ + ಕೊಳ್$_1$]

**ಪೊಂಪುಟಿಯೇಱು** (ಕ್ರಿ). ಸಂತೋಷವು ಹೆಚ್ಚಾಗಂ ; ಹಿರಿಹಿಗ್ಗು : ರಾಜನ್ಯವನಂದನಂ ಧರೆ ಸೊಂಪೇಱೆ . . . ಮುಂ ಪೊರ್ದಿದರ್ ಪಿರಿದುಂ ಪೊಂಪುಟಿಯೇಱೆ ಪಟ್ಟವಣೆಯಂ ತಾನೇಱಿದಂ (ಜಕಾ. ೨-೯೩).

[ಪೊಂಪುಟಿ + ಏಱು$_1$ (< ಏಱ್$_1$)]

**ಪೊಂಪುಟಿಯೋಗು** 'ಪೊಂಪುಟಿವೋಗು' ನೋ.

**ಪೊಂಪುಟಿವಡೆ, ಪೊಂಪುಳಿವಡೆ** (ಕ್ರಿ). ೧. ಸಂತೋಷಪಡಂ ; ಹಿಗ್ಗು : ಕಂಕೆಲ್ಲಿಯು ಸೋಂಕಿನೊಳ್ ಚಂಪಕದಣ್ಪಿನೊಳಂ ಪೊಂಪುಟಿವಡೆದು ವನವಲ್ಲಭೆಯಧರಪಲ್ಲವಕ್ಕೆ ಕುಸುಮವಿಸರದಿಂ ಪಾಟಳರುಚಿಯಿಂ ಪಾಟಿಸಲ್ ನೆಱೆವ ಪಾಟಳಿಯಂ ಸಹಕಾರನೆಂಬ ನಾಗರಕಂ ನೋಡಿ (ಆದಿಪು. ೭-೦೦ ವ). ಪೊಂಪುಳಿವಡೆ : ೨. ಆಧಿಕ್ಯವನ್ನು ಪಡೆ ; ಹೆಚ್ಚಾಗು : ಕಂಪಿಂ ಸೊಂಪಿಂ ಪೆಂಪಿಂ ಪೊಂಪುಳಿವಡೆದಿರ್ದ್ದಮೆಲ್ಲಿನೊದವಿದ ಗುಣದಿಂ ಗುಂಪಿಲ್ಲದೆ ಪಡೆದಳ್ ಪತಿಗಿಂಪಂ ಮಾಳವ್ವೆ ಮಾಲತೀಮಾಲೆಯವೊಲ್ (ಎಕ. V, ಅರಸೀ. ೦೨೭-೩೦ ; 1185 ; ಶಾಶಮಂ. ೦೦೦೩ ನೋ) ; ತೊಳಗಿ ಬೆಳಗುವ ವಿಮಳ ವಸತಿಯ ಬಳಿಗೆ ಭಕ್ತಿಯು ರಸಮ ಪೊಂಪುಳಿವಡೆಯೆ ನಡೆತಂದ (ಸಾಳ್ಯಶಾ. ೪-೩೭). ೩. ರೋಮಾಂಚನವನ್ನು ಹೊಂದು ; ಪುಳಕಗೊಳ್ಳು : ಒಂದೆಡೆಯೊಳ್ ನಿಲ್ಲದೆ ಗೋಮಿಂದಂ ಬಳಸಿರ್ಪ ಗೋಪಿಯರ ಕೈ ಮೈಸೋಂಕಿಂದಂ ಪೊಂಪುಳಿವಡೆದಾನಂದದಿನಕ್ಷಿಗಳನಲ್ಲಿ ತೇಲಿಸುತಿರ್ದಂ (ವಿಷ್ಣುಪು. ೩-೩-೦೭೭). [ಪೊಂಪುಟಿ + ಪಡೆ$_1$]

**ಪೊಂಪುಟಿವೆಱು, ಪೊಂಪುಳಿವೆಱು** (ಕ್ರಿ). ೧. ಸುಖವನ್ನು ಪಡೆ : ದೇವಕಾಂತೆಯರ್ . . . ತನ್ನಿಂಪರುಪಭೋಗದ ಪೊಂಪುಟಿವೆತ್ತರಂದು . . . ತಪಃಪ್ರಭಾವದಿಂ (ಶೇಖಪು. ೦-೦೨೭). ೨. ಅತಿಶಯವಾಗು : ರಾಗದಿನಾಡುವೀ ಹರನ ರಾಗಮೆ ಪೊಂಪುಟಿವೆತ್ತದೊಂದು ರೂಪಾಗಿಯೆ ನಿಂದುದೆಂಬರುಣವಸ್ತ್ರದಿನುಜ್ವಲದೇಹಮಂದು ಚೆಲ್ವಾಗಿರೆ (ಜಗಾ. ೦೭-೦೦೦). ಪೊಂಪುಳಿವೆಱು : ೩. ಹಿಗ್ಗು ; ಸಂತೋಷಿಸು : ಆ ಪ್ರೋಜ್ವಲರಂಗಾಧೀಶವೃತ್ತಾಂತಮನತಿಮುದದಿಂ ಪೇಳೆಯಾ ಗೌತಮಂ ಪೊಂಪುಳಿವೆತ್ತು (ಶ್ರೀಪು. ೩-೪). ೪. ರೋಮಾಂಚನಗೊಳ್ಳು : ಪೊಂಪುಳಿವೆತ್ತ ಮೆಯ್ಯ ಪೊರ್ದುಗೆಯಱಿದಪ್ಪಿ ಜಾಣಱಿದು ಮುದ್ದಿಸಿ (ಯಾದವ. ೩-೦೪೦). [ಪೊಂಪುಟಿ + ಪೆಱು$_1$]

**ಪೊಂಪುಟಿವೋಗು, ಪೊಂಪುಳಿಯೋಗಂ, ಪೊಂಪುಳಿವೋಗು, ಪೊಂಪುಟಿಯೋಗಂ, ಹೊಂಪುಳಿಯೋಗು, ಹೊಂಪುಳಿವೋಗು, ಹೊಂಪುಳಿಹೋಗು** (ಕ್ರಿ). ೧. ಹೆಚ್ಚಾಗು ; ಅಧಿಕವಾಗು ; ವೃದ್ಧಿಹೊಂದು: ಕೇಸರಿಣೇಸ್ತನ್ಯಮನನ್ಯವನ್ಯಗಜಪೋತಾನೀಕಮುಂಡಾಡೆ ಶಾ ೦ ತ ರ ಸ ಂ ಪೊಂಪುಟಿವೋದುದಾ ಮುನಿಪನಿಂ ತತ್ಕಾಂತಕಾಂತಾರದೊಳ್ (ಆಂಪು. ೯-೯೭) ; ಪೊಂಪುಟಿವೋಯ್ತು ದೀಪ್ತತಪಮೆಂಬಿನಮರ್ಕಕರಂಗಳತ್ತ ಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ (ಶಾಂತಿಪು. ೯-೧೦೪) ; ಕಂಪಿನ ಪೊಂಪುಟಿವೋಪ ನಿಳಿಂಪನ ಮೆಯ್ವೆಳಗೆಂ ಕರಂ ಮನಂಗೊಳಿಸಿದುದೋ (ಪರ್ವಪು. ೦೨-೪೪). ೨. ಸೊಗಸಾಗು ; ಚೆನ್ನಾಗು : ಪುಷ್ಪವಾಸನೆಯ ಮೆಲ್ಪಿನ ತಣ್ಪಿನ ಕಂಪಿನಲ್ ಪೊಂಪುಟಿವೋಗುತ್ತಿರ್ದ ತಂಡುಲಂಗಳಂ ಕಳದುಕೊಂಡು ಬಾಗಿದೋಗರಮನಾರೊಗಿಸುವಂ (ಸುಕುಮಾ. ೧೦-೩೩ ವ) ; ಗಾಂಪಿನೊಳನ್ಯಪುಷ್ಪದೊಳು ಮೇಳಿಸಿ ನೀಳ್ದುದಿದೇಕೆ ಕಂಪಿನೊಳ್ ಪೊಂಪುಟಿವೋಗುತಿರ್ದಮಳವಕ್ತ್ರಸರೋಜಮೆ ಸಾಲ್ಗುಮೆಂದು ತಣ್ಗಂಪಸುಣಲ್ಕೆ ಬಂದೆಱಗಿ (ಧರ್ಮಾಮೃ. ೬-೨೦೦). ೩. ವ್ಯಾಪಿಸು ; ಹರಡು ; ಹಬ್ಬು : ಈ ಬಂದಂ ಧರಾಧೀಶನೆಂಬ ರವಂ ಪೊಂಪುಟಿವೋಗೆ ವಾರಿಧಿತಟಂ ಚೆಲ್ವಾದುದಾ ಸೈನ್ಯದಿಂ (ಆದಿಪು. ೦೨-೦೨೬) ; ಪೊಂಪುಟಿವೋಗೆ ರಾಗವೆರಡುಂ ಕೆಲದೊಳ್ ಮದನಾನುರಾಗಮುಂ ಸಿಂಪಿಸುವಂತೆ ಬಾಜಿಸುವ ಬಂಚದ ನುಣ್ಚರದೊಳ್ ಪಳಂಚಿ ಗೀತಂ ಪಂಪುಪುಷ್ಪಮಾಗೆ (ಪುಷ್ಪಪು. ೦೧-೦೦೨). ೪. ಹಿಗ್ಗು ; ಸಂತೋಷಪಡಂ :

ವಿದ್ಯಾಧರೀರಮ್ಯ ನರ್ತನರಂಗೋತ್ಥಿತಪಾರಿಹಾರ್ಯರಶನಾಮಂಜೀರಿಕೋದ್ಧಾಮನಿಸ್ವನದೊಳ್ ಪೊಂಪುಟಿವೋಗುತಿರ್ಪುವೆರಡುಂ ವಿದ್ಯಾಧರಶ್ರೇಣಿಗಳ್ (ಆದಿಪು. ೧-೭೦); ತವೆ ಮುಂಚಸ್ಥಿತ ಭೂಮಿಭವನಂ ನಡೆನೋಡಿ ಕಾಂತೆ ಪೊಂಪುಟಿವೋದಳ್ (ಉದ್ಭಟ. ೬-೯೯); ತನಗೆ ದೊರೆವಡೆದೋದು ಜವ್ವನದ ಪೊಸ ಕುದುರೆಯಂ ನಿಟ್ಟೆಸಿಯಟ್ಟಿಯುಂ ಪೊಂಪುಟಿವೋಗಿ (ರಾಮಾಶ್ವ. ೬೫-೨). **ಪೊಂಪುಳಿಯೋಗು :** ೪. ಮೆಯ್ಯಿಕ್ಕಿ ಪೊಂಪುಳಿಯೋದನಾ ಮುನಿಪನಂದು (ಲೀಲಾ. ೯೭-೧೩); ಸಂಪಗೆ ನಾಗಸಂಪಗೆ . . . ಪೊಂಪುಳಿಯೋಗುವೊಪರ ಮನ ತನುವಿಗೆ ತಂಪ ಪುಟ್ಟಿಸುವವೇನೆಂಬೆ (ಅನಂತ. ೦-೦೦೨). ೫. ರೋಮಾಂಚನ ಹೊಂದು; ಪುಳಕಗೊಳ್ಳು: ನಳಿನಗಂಧದ ಗಾತ್ರತರಸುಖದೊಳಗೆ ಪೊಂಪುಳಿಯೋಗಿ [ಪಾಠಾಂ. ಹೊಂಪುಳಿವೋಗಿ] ಭೂಪತಿತಿಲಕನಿದ್ದನು ಗಂಧಮಾದನಗಿರಿಯ ತಪ್ಪಲಲಿ (ಕುಮ್ಮಾ.ಆ. ೧೧-೫); ಮಗುಳೆ ಸೊಂಪಿಡಿದು ಕುಣಿಕುಣಿವುತ್ತೆ ಪೊಂಪುಳಿಯೋಗುತಡಿಗಡಿಗೆ (ಶಾಂತೀಶ. ೫೫-೦೯). **ಪೊಂಪುಳಿವೋಗು :** ೧. ರಸವಿಸರಂ ಪಸರಿಸೆ ಸೊಂಪು ಪೊಂಪುಳಿವೋಗೆ ರೀತಿ ಕೌತುಕಮನೀಯೆ . . . ಪ್ರಮುಖಪ್ರಬಂಧಂಗಳಂ ಪೇಳ್ವ (ರಾಜಶೇ. ೫-೦೯ ಪ). ೪. ಹರಿಯದಮಳಾನಂದರಸದಲಿ ಹೊರೆದು ಪೊಂಪುಳಿವೋಗಿ [ಪಾಠಾಂ. ಹೊಂಪುಳಿಯೋಗಿ] ಲಕ್ಷ್ಮೀಧರನ ನೆನೆದನು (ಕುಮ್ಮಾ.ಉ. ೪-೦೨೨); ಪೊಡವಿಯೊಳ್ ಮೆಯ್ಯಿಕ್ಕಿದಗರಾಜ ಮೇನೆಯರನೊಡನೆತ್ತಿ ತಾನೆಱಗಲುಮೆಯನವರೆತ್ತಿ ಬಿಗಿಯಪ್ಪಿ ಪೊಂಪುಳಿವೋದರು (ಶಬರ. ೩೭-೦೭); ನೀ ಕೇಳಿದ ವನಿಯಿದಕಾಲದ ವೋಡದವೊಳಗೆಲೆ ಮುಗುದೆ ಗಂಡನ ಬಿಲ್ಲಿನ ಸಿಂಜಿನಿದನಿಯೆಂದದೇತಕೆ ಪೊಂಪುಳಿವೋದೆ (ರಾಜಶೇ. ೦೫-೪). ೫. ಲತಾಂಗಿಯ ಮೆಲ್ಪುವೆತ್ತ ಸಿರಿಮೆಯ್ಯಸೋಂಕಿಗೆ ಮೆಯ್ಮರೆದು ಪೊಂಪುಳಿವೋದ ಮಾರಾಯನ ಕಯ್ದಾವರೆಯಂ ಪಿಡಿದು (ಪುರಾಣ. ೪-೫೨ ಪ); ಮಣಿದೆನದ್ವೈತದ ಪೀಠಕೆ ಕೊಂಡಾಡಿ ಕುಣಿದು ನಾ ಪೊಂಪುಳಿವೋದೆ (ಇಂಶಾಶ. ೦೭-೨೫). **ಪೊಂಪುಟಿಯೋಗು :** ೪. ವಿಮಲವಲ್ಲರಿಗಳಿಂ ಪೊಂಗಿ ಪೊಂಪುಟಿಯೋಗಿ ಪೊದಟ್ದು ನುಣ್ಣರವೆತ್ತಿ ರ್ಘೋಂಕರಿಸುವಳಿಗಳಿಂ (ಉದ್ಭಟ. ೩-೯೯). ೫. ಮಹಾದೇವನ ಮೂರ್ತಿಯಂ ಕಂಡು . . . ಪೊಂಗಿ ಪೊರೆಯೇಱಿ ಪೊಂಪುಟಿಯೋಗಿ ಮಹಾನಂದಂಬಡೆದು (ಉದ್ಭಟ. ೦೨-೦೩೬ ಪ). **ಹೊಂಪುಳಿಯೋಗು:** ೩. ಬಸವನ ಪುಣ್ಯಕೀರ್ತಿಲತೆ ಬೆಳ್ವರಿಯಿತ್ತುರಗೇಂದ್ರಲೋಕದೊಳ್ . . . ಕುಸುಮಿತವಾಗಿ ಸೌರಭದಿ ಹೊಂಪುಳಿಯೋಯ್ತಮರೇಂದ್ರಲೋಕದೊಳ್ (ಬಸವ. ೦೨-೦ ಸೂಕ್ತಿಶಾಸ್ತ್ರ). ೪. ರೋಮಾಂಚನದಲಾನಂದಾಶ್ರುಜಲವಲಿ ನನೆದು ಹೊಂಪುಳಿಯೋಗಿ ಓಣ್ಣವೆ ಮುಚ್ಚಿ (ಕುಮ್ಮಾ.ದ್ರೋ. ೧೬-೭೦); ಹೊರೆಯೇಱಿ ಹೊಂಪುಳಿಯೋದಳುಮೆ ಮಹಿಮೆಗೆ ಮಧುದ್ವಿಷನ (ತೊರವೆ. ೪-೯-೩೨). ೫. ತೆಗೆದು ಬಿಗಿಯಪ್ಪಿದನು ಯಮಜಾದಿಗಳ ಮನ್ನಿಸಿ ವೀಳೆಯವನಿತ್ತೊಗುಮಿಗೆಯ ಹರುಷದಲಿ ಹೊಂಪುಳಿಯೋದನಾ ಭೀಷ್ಮ (ಕುಮ್ಮಾ.ಭೀ. ೭-೦೭); ಉಬ್ಬರದ ಹರುಷದಲಬಲೆ ಹೊಂಪುಳಿಯೋದಳಡಿಗಡಿಗೆ (ತೊರವೆ. ೫-೩-೯೩); ವರಮುನೀಶ್ವರ ಮನದೊಳಗಜಾವರನ ಮೂರ್ತಿಯ ಕಂಡು ಹರ್ಷೋತ್ಕರದ ಸುಖಮಯನಾಗಿ ಹೊಂಪುಳಿಯೋದನಡಿಗಡಿಗೆ (ಅಂಬಿಕಾ. ೨ ಸೂಕ್ತಿ). **ಹೊಂಪುಳಿವೋಗು :** ೪. ಸಗೆವೊಗವರಳಿ ಹೊಂಪುಳಿವೋ[ಪಾಠಾಂ. ಯೋ]ಗಿ ಕೌರವರರಸ ನುಡಿದನು (ಕುಮ್ಮಾ.ದ್ರೋ. ೦-೭೯); ಜೋಗದ ಜಲಪಾತದಿ ಧುಮುಕುವ ಮನ, ಮಲೆನಾಡಿಗೆ ಹೊಂಪುಳಿವೋಗುವ ಮನ (ಕೋಗಿಲೆ. ೪೩-೦೬). ೫. ವನಿತೆ ಗುಣಗಳೊಳೋದನೊಂದನು ಮನದೊಳಗೆ ಸವಿಮಾಡಿ ತರುಣಿಯ ನೆನನು ಹೊಂಪುಳಿವೋ [ಪಾಠಾಂ. ಯಾ]ಗಿ ವಿರಹದಿ ಮದನಗೀಡಾಗಿ . . . ಜನಪ ನಳನಿರೆ (ನಳಚ. ೨-೬). **ಹೊಂಪುಳಿಹೋಗು :** ೪. ಮನದ ಭಾವದ ರಾಗರಸದುಬ್ಬಿನಲಿ ಹೊಂಪುಳಿಹೋದನವರನು ಕಂಡು ಪಾಂಚಾಲ (ಕುಮ್ಮಾ.ಆ. ೦೭-೬೨). [ಪೊಂಪುಟಿ+ಪೋಗು$_1$(<ಪೋ$_1$)]

**ಪೊಂಪುಟಿಸು** (ಕ್ರಿ). ೧. ಅಧಿಕವಾಗು; ಹೆಚ್ಚಾಗು; ಉಕ್ಕು : ಮನೋಹರಿಯರ್ ಬಂದೊಡಲಂಪು ಪೊಂಪುಟಿಸೆ (ಅನಂತ. ೩-೭೭); ತುಂಬಿಗಳ್ಕದ ನಱುಗಂಪು ಪೊಂಪುಟಿಸೆ ಪೆಂಪೆಸೆದಿರ್ದುದು ಚಂಪಕವೃಜಂ (ಧರ್ಮ. ೦-೫೨). ೨. ವ್ಯಾಪಿಸು; ಹರಡು; ಹಬ್ಬು : ಪೊಟಲನಿತುಂ ಪಳಚ್ಚನಮೃತಪ್ಲವದಿಂ ತೊಳೆದಂತೆ ಸೊಂಪು ಪೊಂಪುಟಿಸೆ (ಅನಂತ. ೭-೯೦).
[ಪೊಂಪುಟಿ+ –ಇಸು$_1$]

**ಪೊಂಬಕ್ಕರಗೆ** 'ಪೊಂಬಕ್ಕರಿಕೆ' ನೋ.

**ಪೊಂಬಕ್ಕರಿಕೆ, ಪೊಂಬಕ್ಕರಗೆ, ಪೊಂಬಕ್ಕರಿಗೆ** (ನಾ). ಆನೆ, ಕುದುರೆಗಳಿಗೆ ಹಾಕುವ ಚಿನ್ನದ ರಕ್ಷಾಕವಚ, —ಮೈಜೋಡು : ಎರಡುಂ ಬಳಿಗಳ ಪೊಂಬಕ್ಕರಿಕೆಗಳೊಳ್ಳುಱುಗಿ ನಟ್ಟು ಗಱಿಗಳ ಗಱಿಯಂತಿರೆ . . . ತುರಂಗತತಿ ಗರುಡಬಳಮನೇನಿಳಿಸಿದುದೋ (ರಾಜಶೇ. ೬-೩೩). **ಪೊಂಬಕ್ಕರಗೆ:** ಪರಿದುವು . . . ಘೋಟಾಯ್ಲರ್ ಪರಿಯಿಸೆ ತರದಿಂ ಪೊಂಬಕ್ಕರಗೆಯ ತುರಗಂಗಳಾಹವಾಂಭೋನಿಧಿಯೊಳ್ (ಸಂಪ್ರಪು. ೦೦-೬೮). **ಪೊಂಬಕ್ಕರಿಗೆ :** ಪೊಳೆವ ಪೊಂಬಕ್ಕರಿಗೆಯ ತೇಜಿಗಳು ರಣಜಲನಿಧಿಯಲ್ಲಿ ಪರಿವವು (ಸಂಪ್ರಸಾಂ. ೨೦-೦೯೬). [ಪೊಂ (<ಪೊನ್)+ಪಕ್ಕರಿಕೆ]

**ಪೊಂಬಕ್ಕರಿಗೆ** 'ಪೊಂಬಕ್ಕರಿಕೆ' ನೋ.

**ಪೊಂಬಕ್ಕರೆ** (ನಾ). =**ಪೊಂಬಕ್ಕರಿಕೆ :** ಹಾಯ್ಕಿದ ಪೊಂಬಕ್ಕರೆ ರುಲ್ಲಿಗಳೆಸೆವ ಮಿಕ್ಕ ಮನದ ಕುದುರೆಯನೇಱಿ ಬಂದನಂದಕ್ಕಸಾಲೆಯ ಚಿಕ್ಕಬೇಗ (ಕುಮಾರಾಂ. ೦೦-೫೩). [ಪೊಂ (<ಪೊನ್)+ಪಕ್ಕರೆ$_1$]

**ಪೊಂಬಕ್ಕಿ** (ನಾ). ಚಿನ್ನದ ಬಣ್ಣದ ರೆಕ್ಕೆಗಳುಳ್ಳ ಹಕ್ಕಿ; ಗರುಡ : ಇಕ್ಕಿದ ಪಕ್ಕರಕ್ಕೆ . . . ಮೊಗರಂಬಮೊಂದು ಪೊಂಬಕ್ಕಿಯ ತೋಱ್ಕೆ ಮೆಯ್ಗರೆಯೆ ಬಾಸಿಗದಿಂ ಮೆಱೆದತ್ತು ಸಪ್ತಿಗಳ್ (ಶಬರ. ೨-೯೬).
[ಪೊಂ (<ಪೊನ್) + ಪಕ್ಕಿ]

**ಪೊಂಬಗರಿ** 'ಪೊಂಬೊಗರಿ' ನೋ.

**ಪೊಂಬಚ್ಚ** (ನಾ). ಚಿನ್ನದ ಒಡವೆ; ಸ್ವರ್ಣಾಭರಣ : ಕೊರಳಪೊಂಬಚ್ಚಗಳ ಬೆಳ್ಪಿಯ ಮುರುಹುಗಡಗದ . . . ಪರವುಗೋಪರ ಕಂಡು ನಸುನಗುತಿರ್ದನಕ್ರೂರ (ಅಕ್ರೂಕ. ೨-೯೯); ಪೊಂಬಚ್ಚಮಂ ಪಣ್ಣಿಬಣ್ಣಮಂ ಕೇಳ್ದಯ್ ? (ರಾಮಾಶ್ವ. ೦೨-೨೩).
[ಪೊಂ( < ಪೊನ್ ) + ಪಚ್ಚ$_2$]

**ಪೊಂಬಚ್ಚಲ್** (ನಾ). ಚಿನ್ನದಿಂದ ನಿರ್ಮಿತವಾದ ಬಚ್ಚಲು,—ಸ್ನಾನದ ಮನೆ: ಲೇಸೆನುತ್ತೆತಂದು ಮಗ ಸೊಸೆಗೆಣ್ಣೆಯ ಪೂಸಿ ಪೊಂಬಚ್ಚಲೊಳ್ ನಿಲಿಸಿ ಮಿಾಸಿದ ಬಳಿಕ ಸಿಂಗರಗೆಯ್ದು ರನ್ನದ ಬಾಸಿಗವನು ಕಟ್ಟಿದರು (ಮೋಹಕ. ೦೩-೬೪). [ಪೊಂ(<ಪೊನ್)+ಬಚ್ಚಲ್]

**ಪೊಂಬಚ್ಚು** (ನಾ). ಒಂದು ಬಗೆಯ ಹುಳು,—ಕ್ರಿಮಿ : ನಮ್ಮಲ್ಲೂ, ಒಮ್ಮೊಮ್ಮೆ ಬತ್ತದ ಪೈರಿನ ಮೇಲೆ ತಲೆದೋರುವ "ಪೊಂಬಚ್ಚು" ಹುಳುವು ಬಯಲಿಗೆ ಬಯಲನ್ನೇ ಕೆಡಿಸಿಬಿಡುವುದು (ಪ್ರಾಂತ್ಯ. III, ೦೩೬೭). [ ? ]

**ಪೊಂಬಟ್ಟ, ಹೊಂಬಟ್ಟ** (ನಾ). ಚಿನ್ನದ ಹಣೆಪಟ್ಟಿ,—ಫಲಕ : ಪೆತ್ತನಗೆ ನೀಂ ಪೊಂಬಟ್ಟಮಂ ಕಟ್ಟಿದೈ (ಧರ್ಮಾಮೃ. ೨-೦೦೦); ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತಪರಾಕ್ರಮಿ ತಡೆಯಲಿ ವಾಜಿಯನೆಂದು ತನ್ನ ಬಿರುದಂ ಬರೆದು ಪೊಂಬಟ್ಟಮಂ ಕಟ್ಟಿ ಬಿಡುವುದಾ ಹಯದ ಪಣೆಗೆ (ಜೈಮಿಭಾ. ೨-೨೬). **ಹೊಂಬಟ್ಟ :** ಇದು ಇಂತಹ ರಾಯನ ಕುದುರೆ . . . ಎಂದು ಬರೆದಿರುವ ಹೊಂಬಟ್ಟವನ್ನು ಕಟ್ಟಿ ಬಿಡಬೇಕು (ಬಿಡುಗಿ. ೪).
[ ಪೊಂ ( < ಪೊನ್ ) + ಪಟ್ಟ$_3$ ]

**ಪೊಂಬಟ್ಟಲ್, ಪೊಂಬಟ್ಟಲುಂ, ಹೊಂಬಟ್ಟಲು** (ನಾ). ೧. ಚಿನ್ನದಿಂದ ಮಾಡಿದ ಬಟ್ಟಲು : ಪೊಂಬಟ್ಟಲೊಳ್ತೀವಿದಾಸವದ ರುಚಿಗಿರ್ವರುಂ ಬಿಡದೆ ಮೊಗಮಿಟ್ಟಿರಲ್ಕೆ (ಜೈಮಿಭಾ. ೦೫-೯೬) ; ಕಪಿಲಾಕ್ಷೀರಮಂ

ಳಮ್ಮಗಿನಿದಷ್ಟಂತೆ ಕಾಸಿ ಬೞ್ದಿನಳೆದು ಪೊಯ್ದು ಪೊಂಬಟ್ಟಲ್ದೀವಿ (ಕೃಹಂ. ೯-೬೦ ಕ). **ಪೊಂಬಟ್ಟಲು :** ೧. ಪೊಂಬಟ್ಟಲೊಳಗಿನ ಹಾಲು ಉಚ್ಛಿಷ್ಟ ಹಾಕಿಸೊ (ಪುರಂದ. ೧-೩೩-೨). ೨. (?) : ತೊಟ್ಟ ವಜ್ರಾಂಗಿಯ ಜೋಡುಸವಗ ಪೊಂಬಟ್ಟ[ ಪಾಠಾಂ. ಲು ] ಚೀನಿಯ ಠೌಳಿ ಕಟ್ಟಿದ ಬಿರಿದು ಮೞೆಯ ರಾವುತರು ಬಿಟ್ಟೋಱಿದರು ಕುದುರೆಗಳ (ಕುಠಾಸಾಂ. ೦೨-೮೬). **ಹೊಂಬಟ್ಟಲು :** ೧. ಬಳಿಕನಿತು ಪಾಲ್ಗೞೆದು ಹೊಂಬಟ್ಟಲೊಳಿರಿಸಿ ತಾಂ ನಿಲಿಸಿ ಬಂದಾ ಮಲಹರನ ಬಳಿಗದೆ ಯುವತಿ ಹೋದಹಳು ನೋಡೆನಲು (ಶಶಪು. ೩೦-೦೨) ; ಹೊಳೆವ ಹೊಂಬಟ್ಟಲಲಿ ಸೂಸಿದ ಸಫ್ಘಜಲವನು ಜನಕನಿದಿರಿನಲಿ (ಕುವ್ಯಾಳ. ೬-೦೭) ; ಹೊಂಬಟ್ಟಲಲಿ ಬೀಳೆಯುವ ನಂದನಂಗಿತ್ತು . . . ದೆಸಸಿದನು ಬಳಿಯಲಿ ಬವರಕನಿಲಜನ (ಹರಿಹಾ. ೩-೫-೦೦). [ಪೊ (<ಪೊನ್) + ಬಟ್ಟಲ್]

**ಪೊಂಬಟ್ಟಲು** 'ಪೊಂಬಟ್ಟಲ್' ನೋ.

**ಪೊಂಬಟ್ಟು** (ನಾ). ಚಿನ್ನದ ದುಂಡನೆಯ ವಸ್ತು : ಮುಗಿಲೊಡ್ಡೞೆಲೆವಂದ ಕಾಯಭರದಿಂ ಪೊಂಬಟ್ಟನೊಟ್ಟೈವ ದಿಟ್ಟಗಳಿಂ . . . ಪೞೆಯ ಸೌಭಾಗ್ಯಕ್ಕೆ ತೋಡಾದ ಕೋಡುಗಳಿಂದೇಂ ಜನಕಂಗೆ ಹರ್ಷಜನಕಂ ತಾನಾಯ್ತೊ ವನ್ಯದ್ವಿಪಂ (ಹಂಪಚಾ. ೯-೦೦೯) ; ಭೂತಳಕ್ಕೆ ಪರಿವೇಷಂಗೊಂಡು ಬೀಟ್ಟುಂಪ ಭಾಸ್ಕರನಂತಿರ್ದುದು ಸಿಂಹಪೀಠದ ಶಿರಂ ಪೊಂಬಟ್ಟ ನಾಳ್ದಟ್ಟನೊಳ್ [ಪಾಠಾಂ. ಳ್ಬಟ್ಟೆಯೊಳ್] (ಆಪುಪು. ೦೦-೬೩).
[ ಪೊಂ (<ಪೊನ್) + ಬಟ್ಟು ]

**ಪೊಂಬಟ್ಟೆ**, ಹೊಂಬಟ್ಟೆ (ನಾ). ಜರತಾರಿಯ ಪೀತಾಂಬರ : ಪಕ್ಷಶಾಳಿಕಣಶಾಳೀನಮ್ಮುದೊಪ್ಪಿರ್ದದೇಂ ಗೆಲೆಪಂದತ್ತೊ ಸುವರ್ಣವರ್ಣದಿನಿಳಾಶ್ರೀಯುಟ್ಟ ಪೊಂಬಟ್ಟೆನೋಲ್ (ಜಗಪು. ೨-೫) ; ಜಾಣಮರೆ ಪೊಂಬಟ್ಟೆಯುಟ್ಟು ನೀಲಾಬ್ಜಮಂ ಪಾಣಿಯೊಳ್ ಪಿಡಿದು . . . ಒಪ್ಪಿದಳ್ (ಪದ್ಮಚ. ೯-೯೬) ; ತುಱುಗಿವೆಗ್ಗಿಣ್ಣ ನೀರಿಂಗೆ ಹೞಗೋಲ ಹಾಯ್ಕುಸಬೇಡೆಂದು ಪೊಂಬಟ್ಟೆಸೆಱಗಿನಿಂ ತೊಡೆದ ಲೋಚನವ (ರಾಜಶೇ. ೯-೮೬). **ಹೊಂಬಟ್ಟೆ :** ತಂದು ಹೊಂಬಟ್ಟೆಗಳ ಹೊಂಪುಣಿಯಿಂದ ಮೆಱೆದಿಹ ಪಂಚಘಂಟೆಗಳಿಂದ್ರ ನೈರಾವತಕೆ ಸರಿವಿಗಿಲೆಂದುದಖಿಳಜನ (ಸಂಕಶ. ೨೦-೦೦); ಎಡಗೈಯೊಳಾಂತ ಹೊಂಬಟ್ಟೆ ಅಕ್ಷತೆ ಪುಷ್ಪ ನಿಡುಗಿಂಡಿ ಬಲದ ಹಸ್ತದೊಳು ತೊಡಿಗೆಯ ಪ್ರಭೆ ದಿಕ್ಕುದಿಕ್ಕಿಗೆ ಪಸರಿಸಿ ನಡೆಯೆ ನಡೆದನಾ ರಾಯ (ಶರಶ. ೩-೬).
[ ಪೊಂ (<ಪೊನ್) + ಬಟ್ಟೆ ]

**ಪೊಂಬಡಲಗೆ**, ಪೊಂಬಡಲಿಗೆ (ನಾ). ಚಿನ್ನದಿಂದ ಮಾಡಿದ ಅಗಲವಾದ ತಟ್ಟೆ : ಎಡದ ಕರದೊಳ್ಗಂಧಂ ಪೂಮಾಲೆ ಸಿರ್ಜನ ಸೇಸೆ ಪೊಂಬಡಲ [ಪಾಠಾಂ. ಲಿ]ಗೆಯೊಳೊಂದಂದಂ ಬಲ್ಗಾಗೆ ಗಂಧಜಲಂಗಳಂ ಪಿಡಿದ ಕಳಸಂ ಕಯ್ಯೊಳ್ಪತ್ತೊಂದಱೊಳ್ಪಿಗೆ ಶೋಭೆಯುಂ ಪಡೆಯೆ ಪದಪಿಂದೊರ್ವಂ ಬಂದಂ ಪುಗಲ್ಪುಪುರೋಹಿತಂ (ಅರ್ಹಸೇ. ೨-೦೯). **ಪೊಂಬಡಲಿಗೆ :** ನಿಜಜನನಿಯ ಮಾನೋಹರಮಪ್ಪ ಮಣಿದೊಡವುಗಳಂ ಪೊಂಬಡಲಿಗೆಯೊಳ್ತೀವಿಯೋರ್ವ ಕೆಳದಿಯ ಕೈಯೊಳ್ಮಾತೆಯೆಡೆಗಟ್ಟಲ್ (ಜಾಗಪು. ೯-೦೦೯ ವ). [ ಪೊಂ (<ಪೊನ್) + ಪಡಲಿಗೆ ]

**ಪೊಂಬಡಲಿಗೆ** 'ಪೊಂಬಡಲಗೆ' ನೋ.

**ಪೊಂಬಡಿಗ** (ನಾ). ೧. ಚಿನ್ನದ ಪೀಕದಾನಿ : ಮಿಂಡಿಯರ್ ಪೊಂಬಡಿಗವನಾರ್ಚಿ ಬಿಸಿನೀರ ಗಿಂಡಿಯೊಳ್ ತಂದು ಕಾಲ್ದೊಳೆಯೆ (ರಾಜಶೇ. ೦೬-೯೯). ೨. ಚಿನ್ನದ ಪಾತ್ರೆ: ಪಾವನಪಾದ್ಯಮಂ ತಳೆದ ಪೊಂಬಡಿಗಂಬೊಲ ದಾಯ್ತು ಮೇರು (ಕಕಾ. ೯-೨). [ ಪೊಂ (<ಪೊನ್) + ಪಡಿಗ ]

**ಪೊಂಬಡೆ** (ಕ್ರಿ). ಹಣವನ್ನು ಗಳಿಸು ; ಐಶ್ವರ್ಯವನ್ನು ಸಂಪಾದಿಸು : ಗಂಡುಗೂಸುವೆತ್ತ ಸಜ್ಜನದಂತೆ ಪೊಂಬಡೆದ ಸೂಳೆಯಂತೆ . . . ಚಿತ್ರದೊಳಾನಂದಂ ಬೆರಸಿರ್ಪುದು (ಧರ್ಮಾಮೃ. ೯-೩). [ಪೊಂ (<ಪೊನ್) + ಪಡೆ[1]]

**ಪೊಂಬಣತಿ** (ನಾ). ಚಿನ್ನದ ದೀಪ : ಪಟ್ಟಸೂತ್ರದಿ ಪೊಸೆದು ಬತ್ತಿಯನಿಟ್ಟು ಪೊಂಬಣತಿಯೊಳು . . . ಮುದದಿಂದ ದೀಪ್ತಿಯ ಮುಟ್ಟಿಸೆ (ಸಂಶರಾ. ೫-೫೬). [ ಪೊಂ (<ಪೊನ್) + ಪಣತಿ[1] (<ಪಣತೆ) ]

**ಪೊಂಬಣ್ಣ**, ಹೊಂಬಣ್ಣ (ನಾ). ೧. ಬಂಗಾರದ ಬಣ್ಣ ; ಚಿನ್ನದ ಬಣ್ಣ : ಕಣ್ಣಾರೆ ಬಿರಯಿಯಂ ಮೂಪಣ್ಣಂ ಬರಿಸಿದುವರಲ್ದ ಸುರಹೊನ್ನೆಯ ಪೊಂಬಣ್ಣದ ಬೆಳರ್ವಣ್ಣದ ಕೆಂಬಣ್ಣದ ಕೇಸರಮುಮೆಸಟ್ಗಳುಂ ಕರ್ಣಿಕೆಯುಂ (ಮಲ್ಲಿಪು. ೩-೦೮); ಒಲೆದಾಡುವ ಪೊಂಬಣ್ಣಮೆಸೆವ ಕಳವಶ್ರೀಯ ಪರಿಚರ್ಯೆಯಂ ಬಿಡದೆ ಮಾಳ್ಪ ಕೆಳದಿಯರೆನಲ್ಕೀರನಿಕುರುಂಬಮಂ ಸೋವಲೆಂದಲ್ಲಿರ್ದ ಪಾಮರಿಯರಧ್ವಗರ ನಡೆಗೆಡಿಪರು (ಕೃಬಿಕಾ. ೩-೬). ೨. ಕೆಂಪು ಬೆರೆತ ಹಳದಿ ಬಣ್ಣ ; ಮಾಸಲುಕೆಂಪು ; ಕಪಿಲವರ್ಣ : "ಕವಿಲೆವಣ್ಣಮೆಂದು ಪೊಂಬಣ್ಣಂ" (ಶಕಸಾ. ೩೬-೨೨೦) ; ಪೊಂಬಣ್ಣದ ಕೆಂಪಿಡಿದಿರೆ ಸೊಗಯಿಪುವು ಗಂಧಶಾಲಿವನಂಗಳ್ (ಅದಪು. ೦-೬೦) ; ತೋರಮಾಯ್ಪುಗಳೊಳೆಸೆವ ಕುಂಕುಮಂಗಳ ಬಂಬಲಿ ಸೋಂಕಿನೊಳ್ ರಜಂ ನೆಗೆದು ದೆಸೆಗಳ್ ಪೊಂಬಣ್ಣಮಾಗೆಸೆಯೆಯುಂ (ಗಿರಿಜಾಕ. ೬೭). **ಹೊಂಬಣ್ಣ :** ೧. ಮೇರುವ ಸಾರಿದ ಕಾಗೆ ಹೊಂಬಣ್ಣವಪ್ಪುದು ತಪ್ಪದು (ಬಸವ. ೪೬೦); ಪೂರ್ವಮಂದರಂ . . . ಅಂಬುಜಜಂ ನಟ್ಟರಿಸಿದ ಹೊಂಬಣ್ಣದ ಕಂಭಮೆಂಬಿನಂ ರಂಜಿಸುಗುಂ (ಜಾರಪು. ೯-೯); ಹೊಂಬಣ್ಣಮೈಯಳೊರ್ವಳು . . . ನಿಂದಳು ಹೊನ್ನ ಬೊಂಬೆಯಂತರಸನೊತ್ತಿನೊಳು (ಚಶಕ. ೫-೨೯). ೨. ಅಣ್ಣಗಳ ! ಹೊಂಬಣ್ಣ ತಿರುಮಾಸೆಯಬ್ಬರಕೆ ಮಣ್ಣಕ್ಕ ! (ಕುಪು. ೧೨-೫). [ ಪೊಂ (< ಪೊನ್) + ಬಣ್ಣ ]

**ಪೊಂಬಣ್ಣಿಗೆ** (ನಾ). ಚಿನ್ನದ ಅಲಂಕಾರ,–ಶೃಂಗಾರ : ಬಂದತ್ತು ಪೊಂಬಣ್ಣಿಗೆಯ ಪಿಡಿಗಳೊಳ್ ತಂಡದಿಂ ಪೆಂಡವಾಸಂ (ಜಗಪು. ೦೫-೬೮).
[ಪೊಂ (< ಪೊನ್) + ಪಣ್ಣಿಗೆ (< ಪಣ್ಣುಗೆ)]

**ಪೊಂಬರಣೆ** (ನಾ). ಬಂಗಾರದ ಕರಂಡಕ; ಚಿನ್ನದ ಡಬ್ಬಿ: ಪೊಂಬರಣೆಯ ಮೇಲೇನಿದು ತುಂಬಿಯ ಕತ್ತುರಿಯ ಬೊಟ್ಟಿ (ಜಕಪು. ೬-೫೦).
[ಪೊಂ (<ಪೊನ್) + ಬರಣೆ]

**ಪೊಂಬರದ** (ನಾ). ಚಿನ್ನದ ವ್ಯಾಪಾರ ಮಾಡುವವನು ; ಸರಾಫ : "ಸೊನ್ನೆವರದನೆಂದುಂ ಪೊಂಬರದನೆಂದುಂ ಚಿನ್ನವರದಂ" (ಶಕಸಾ. ೬೦-೩೩೫) ; ಪೊಂಬರದರ ಪೂವಡಿಗರ ತಂಬುಲಿಗರ . . . ಕದುಂಬದಿನಾ ರಾಜವೀಧಿ ಕಣ್ಗೆಸೆದಿರ್ಕುಂ (ಶಾಕ್ಷಟಿ. ೦-೫೦) ; ತಂಬೆಲರೆಂಬ ಪೊಂಬರದ ನಲರ್ಪೊನ್ನಂ ಪರ್ಣಕರ್ಪೋಪಲದೊಳೊರೆಯ (ಕಚಕಂ. ೨-೯೨ ವ).
[ಪೊಂ (< ಪೊನ್) + ಪರದ[1]]

**ಪೊಂಬರಹ**, ಹೊಂಬರಹ (ನಾ). ೧. ಚಿನ್ನದ ಎರಕದಲ್ಲಿ ಬರೆದ ಲಿಪಿ,– ಬರವಣಿಗೆ : ಆತನ ಮೇಲೆ ಪೊಂಬರಹಶೋಭಿತಶರವ್ರಾತವನೆಚ್ಚು ಬೊಬ್ಬಿಱಿದ (ರಾಜಶೇ. ೩೬-೬). ೨. ಬಂಗಾರದ ಚಿತ್ರ,–ಅಲಂಕಾರ : ಕರುಮಾಡ ಕಂಡರಿಸಿದ ಗೋಪುರ ಪೊಂಬರಹದ ಲೋವೆ . . . ಮಣಿವಾಗಿಲೆಸೆಯೆ ಕಣ್ಗರಮನೆ ಗಾಡಿವೆತ್ತಿಹುದು (ಕುಠಾಸಾಂ. ೫-೯). ೩. ಚಿನ್ನದ ಎಳೆಯ ಕಸೂತಿ ; ಜರತಾರಿ ಹೆಣಿಗೆ : ಪರಚಂದ್ರಿಕೆಯ ಪಾವುಡಕೆ ಶೋಭಿಸುವ ಪೊಂಬರಹದ ಶುಭ್ರದೂಪಟವ ಸ್ಮರಬಾಣಗಱಿಯಂತೆ ನಿಱಿವಿಡಿದುಡಿಸಿದರ್ ದರಹಾಸಮುಖಿಗೆ (ರಾಜಶೇ. ೨೩-೦೩). **ಹೊಂಬರಹ :** ೧. ಹೊಂಬರಹದಂಬಿನ ಮಿಂಚುಗಳಲೆವೆಹಳಚಿದವು ಹರಿಹರ ಪುರಂದರರ (ಕುವ್ಯಾಳ. ೨೩-೦೦); ಹೊಳೆವ ಹೊಂಬರಹದ ಸುರೇಖೆಯ ತಳಪದಸ್ಪದಲವಳ ಹಸ್ತವ ಕಳಚಲೆಚ್ಚನು ಭೂತಗಣ ಬಿಱುತೋಡೆ ಭೀತಿಯಲಿ (ಕೂಕರಾ. ೦-೦೦-೦೩). ೨. ಕೀಲಿಸಿದ ಪಟ್ಟೆಗಳ ದಿವ್ಯದುಕೂಲದಲಿ ಹೊಂಬರಹದೆಲೆಗಳ [ಪಾಠಾಂ. ಹೊಂಬಾಳೆತೆಱೆಗಳ] ಚೂಳಿಕೆಯ ಕನ್ನಡಿಯ ತೋರಣವೆರಡುಪಕ್ಕದಲಿ (ಕುವ್ಯಾಳ. ೦೨-೦೩); ತೆಗೆದು ವಜ್ರಾಂಗಿಯನು

ವ್ಯೆಯಾಲಿ ಬಿಗಿದು ಹೊಂಬರಹದ ಸುರತ್ರಾಣಿಗಳ ಬಲುಸೀಸಕವನಳವಡಿಸಿ ದನು ಸಿರಿಪಾಡಿಗೆ (ಕುಮಾ.ಗ. ೫-೯೦).

[ಪೊಂ (< ಪೊನ್) + ಬರಹ (< ಬರೆಪು) ]

**ಪೊಂಬರಿಗೆ** (ನಾ). ಬಂಗಾರದ ಥಾಲು; ಚಿನ್ನದ ಗುರಾಣಿ: ಕಡಿತಲೆ ದೂಗುತ ಕಯ್ಯ ಪೊಂಬರಿಗೆಯನೆಡಬಲಗಳಿಗೆ ತೋರಿಸುತ ಕಡಿದಾಡಿ ಮಡಿದರು (ಕುಮಾರಾ. ೦೨-೬೯); ದಾಳುಬಟ್ಟಲ ಪಿಡಿದೊಪ್ಪುವ ಪೊನ್ನ ಪೂಗೋಲು ಪೊಂಬರಿಗೆಯಾಂತೊಪ್ಪು ಕಾಲಿಟ್ಟು ಹೊಳೆವುತಿದ್ದರು ಮನಸಿಜನ ಮಾಸಾಳುಗಳಂತೆ ದಿಟ್ಟೆಯರು (ಚಂಪ. ೦೨-೯೧).

[ಪೊಂ (< ಪೊನ್) + ಪರಿಗೆ]

**ಪೊಂಬರಿಜು** (ನಾ). ಚಿನ್ನದ ವಿಗ್ರಹ; ಬಂಗಾರದ ಪ್ರತಿಮೆ: ಕಟ್ಟಿ ಹಾಕಿದ ಪೊಂಬರಿಜೊ ನಿಜಾತ್ಮನ ತಿಟ್ಟಪೊಯನೆ ನೃಪವರನ ದಿಟ್ಟಿಗತ್ತಾನಂದಮನೊದವಿಸಿದುದು ದಿಟ್ಟಿಯೋಗಿಯ ದಿವ್ಯಮೂರ್ತಿ (ಶಂಕ್ರಶಾ. ೩-೪೫).

[ಪೊಂ (< ಪೊನ್) + ಪರಿಜು]

**ಪೊಂಬರಿಯಣ** 'ಪೊಂಬರಿಯಾಣ' ನೋ.

**ಪೊಂಬರಿಯಾಣ, ಪೊಂಬರಿಯಣ, ಪೊಂಬರಿವಾಣ, ಹೊಂಬರಿಯಣ, ಹೊಂಬರಿವಾಣ** (ನಾ). ಚಿನ್ನದ ತಟ್ಟೆ; ಬಂಗಾರದ ಹರಿವಾಣ: ಬಳಿಕ ಪೊಂಬರಿಯಾಣದೊಳು ವೀರರಾಮನ ಕಳಕಳಿಸುವ ಪಂದಲೆಯನು ತಳುವದಿರಿಸಿಕೊಂಡು ತಂದು ತೋರಿಸಲು (ಕುಮಾರಾ. ೩೬-೮೦); ಮಿಸುನಿಯದ್ದಣಿಗೆಯೊಳ್ಪೊಂಬರಿಯಾಣಮನಮರ್ಚಿ (ವ್ಯಕ್ತಿ. ೫-೬೨ ಪ). **ಪೊಂಬರಿಯಣ**: ನೀಂ ಬಯಸಿದಗ್ರಪೂಜೆಯ ಪೊಂಬರಿಯಣಮಿದೆ ನಿಶಾಟಕೊಳ್ಳೆಂದು ಸರೋಜಾಂಬಕನಿಡೆ (ಜಗ. ೦೬-೫೦); ಪೊಂಬರಿಯಣದ ಪೋಳ್ಕಣಿಮಾಯುಪಡೆದಿರ್ದ ಸಂಬಳಿಗೆಯ ಪರ್ಣಚೂರ್ಣ ಕೊಂಬ ಕರ್ಪೂರ ಕರಂಡವ ಸ್ಮರನ ತಲೆಗಿಂಬಿನೊಳ್ ತಂದಿರಿಸಿದರು (ಸೋಹಕ. ೦೬-೨೬). **ಪೊಂಬರಿವಾಣ**: ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಳಿ ಪೊಂಬರಿವಾಣಗಳ ತುಂಬಿ ಸುಳಿಹೆತ್ತಿ ಚೆಲ್ಲಿಸಿದಳು ದೆಸೆದೆಸೆಗೆ (ಸೋಹಕ. ೩೦-೩೬); ಮಿನುಮಿನುಪ ಪೊಂಬರಿವಾಣಗಳೊಳೆಯ್ದೆ ನೀಡಿದರ್ ಪರಿಪರಿಯ ಪರಿಕರವನು (ಕಂಠಿ. ೫-೫೯). **ಹೊಂಬರಿಯಣ**: ಹೊಂಬರಿಯಣದೊಳೊಸೆದು ಬಡಿಸಿದ ಸುಘೃತ ದಿವ್ಯಾನ್ನಮಂ ನಿವೇದ್ಯಂಗೊಟ್ಟು (ಹಶಾ. ಕಂ. ೩-೬೭); ಮಿಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ . . . ದೀವಿಗೆಗಂಬಗಳನಿತ್ತನೊಲಿದು (ಸೋಹಕ. ೦೫-೦೯). **ಹೊಂಬರಿವಾಣ**: ಮುತ್ತಿನಾರತಿಯ ಹೊಂಬರಿವಾಣದಿಂ ಬೆಳಗಿಸಿ ಮಂತ್ರ ಪೀತಾಂಬರಧರನ ಕೀರ್ತಿಸಿದ (ಸೋಹಕ. ೯೦-೫೩); ಲಾವಣ್ಯ ಧಗಧಗಿಸುವ ನರಪತಿಯ ಮುಂದೋವಿಟ್ಟು ಹೊಂಬರಿವಾಣ ಭಾವಿಸಲೊಪ್ಪಿತು . . . ಚೆಲ್ವಿನೊಳು (ಚಂಪ. ೯-೬೨). [ಪೊಂ (< ಪೊನ್) + ಪರಿಯಾಣ₁]

**ಪೊಂಬರಿವಾಣ** 'ಪೊಂಬರಿಯಾಣ' ನೋ.

**ಪೊಂಬಲಗೆ** (ನಾ). ಚಿನ್ನದ ಹಲಗೆ; ಬಂಗಾರದ ಫಲಕ: ಕಡಿತಕೆ ಪಾರೆ ಪೊಂಬಲಗೆ ಬೀಳೆ ಶಿರಂ ಸಿಡಿದೇಳೆ ಭೂತಸಂಗಡಣದಿ ನೋಡಿ (ಎಕ. VI, ಕಡೂರು. ೦೫೭-೩೯; 1191); ಮನಸಿಜಮಂತ್ರಾಕ್ಷರಮಂ ಬಳಪದಿನನುರಾಗದಿ ಬರೆಯಲ್ಪೊಂಬಲಗೆಗೆ ಮಿನುಗುವ ಮಸಿಯಿಡು ಪಂದದೆ ನೊಸಲೊಳ್ ಪ್ಪುಗಮದಮಿಕ್ಕಿದಳು (ಜಯಕಾ. ೨-೩೯).

[ಪೊಂ (< ಪೊನ್)+ ಪಲಗೆ]

**ಪೊಂಬಲೆ** (ನಾ). ಜಾಲರಿಯಂತಹ ಚಿನ್ನದ ಆಭರಣ: ದಿಟ್ಟಸರ ಪೊಂಬಲೆಗಳ್ ಪೊಗರಂಬಪೋದು ಪೊಂಬಕ್ಕಿಯ ತೊಳ್ಕು ಮೆಯ್ಗರೆಯೆ ಬಾಸಿಗದಿಂ ಮೆರೆದತ್ತು ಸಪ್ಪಿಗಳ್ (ಚಲಿ. ೨-೯೬).

[ಪೊಂ (< ಪೊನ್) + ಬಲೆ₁]

**ಪೊಂಬಲ್ಲಕಿ** 'ಪೊಂಬಲ್ಲಕ್ಕಿ' ನೋ.

**ಪೊಂಬಲ್ಲಕ್ಕಿ, ಪೊಂಬಲ್ಲಕಿ** (ನಾ). ಚಿನ್ನದ ಅಂದಣ; ಬಂಗಾರದ ಪಲ್ಲಕ್ಕಿ: ನಿಲ್ಲದಾಳಿಯರಂದಣಗಳ ನಡುವೆ ಪೊಂಬಲ್ಲಕ್ಕಿಯೊಳು ಲೀಲೆಯೊಳು ಮೆಲ್ಲನೆಯ್ತಂದಳಾ ಸುರುತಾಳಸುತೆ (ಕುಮಾರಾ. ೦೬-೯೨); ಸಲ್ಲಲಿತಾಂಗಿಯ ಪರಪಾಣಿಪಿಡಿದು ಪೊಂಬಲ್ಲಕ್ಕಿಯೊಳ್ [illegible]ಂಡಿಸಿದ (ಸೋಹಕ. ೯೦-೩೯). **ಪೊಂಬಲ್ಲಕಿ**: ಅಲ್ಲಿ ತಪ್ಪೊಡನೆ [illegible] ಬಲವನಿರವೇಳ್ದು ಪೊಂಬಲ್ಲಕಿಯನಿಳಿದು . . . ಒಳಪುಗೆ (ಪದ್ಮಾ. [illegible]); ಪೊಂಬಲ್ಲಕಿಯ ಹರಿಸದಿಂದಿಳಿದು . . . ಅರಮನೆಯ ಪೊಕ್ಕು (ರಾಜ[illegible] ೨-೨೬).

[ಪೊಂ (< ಪೊನ್) + ಪಲ್ಲಕ್ಕಿ₁ (< ಪ[illegible]ಂಗ)]

**ಪೊಂಬಸದಿ** (ನಾ). ಬಂಗಾರದಿಂದ ನಿರ್ಮಿತವಾದ ಬಸದಿ: ಇವ ನೆಮ್ಮಾಳ್ದನನಿಕ್ಕಿ ಸಾಧುವಿನಪೋಲ್ ತಾನಲ್ಲದಂತಿಲ್ಲಿ ಪೋ ಕವಿದಿರ್ಪಂ ಜಿನನೆಂದು ಪೊಂಬಸದಿಯಂ ಪುಷ್ಪಾಸ್ತ್ರಸೇನಾಳಿ ಮುತ್ತುವಪೋಲ್ ಪೆಂಡಿರ ತಂಡವೊಪ್ಪೆ (ಅರ್ಧನೇ. ೨-೯೬). [ಪೊಂ (< ಪೊನ್) + ಬಸದಿ]

**ಪೊಂಬಸಿರ** 'ಪೊಂಬಸಿಱ' ನೋ.

**ಪೊಂಬಸಿಱ, ಪೊಂಬಸಿರ, ಪೊಂಬಸುಱ** (ನಾ). ಬ್ರಹ್ಮ; ಹಿರಣ್ಯಗರ್ಭ; P ಚಿನ್ನದ ಮೊಟ್ಟೆಯಿಂದ ಜನಿಸಿದನೆಂಬ ಪ್ರತೀತಿಯಿಂದ ಬ್ರಹ್ಮನಿಗೆ ಈ ಹೆಸರು ಬಂದಿದೆ: "ಅಂಚೆದೇರಂ, ನುಡಿಮಣ್ಣನಿಯಂ, ಪೊಂಬಸಿಱಂ . . . ತಾವರೆಪಸೆಯಂ—ಈ ೮ ಬ್ರಹ್ಮಂಗೆ ಪೆಸರ್" (ಕಕಾ. ೯೮-೦೫); ಪೊಂಬಸಿಱನ ಬಾಯ ಬೀಯಗ ಜಯಯೆಂದು ಶಂಬರಾರಿಯ ಹೊಗಳಿದರು (ಸೋಹಕ. ೦೬-೫); ಪೊಂಬಸಿಱನ ಗುಂಡಿಗೆಯಂ ಪೊಕ್ಕು ಪೊಱಮಟ್ಟುಂ ಧರೆಗಿೞಿದು ಬಂದು . . . ತ್ರಿಪಥಗೆ ಕಾಣಿಸಿಕೊಂಡಳ್ (ರಾಜಶೇಕ್ಕ. ೩೦-೦೨). **ಪೊಂಬಸಿರ**: ಪೊಂಬಸಿರನೀ ಪರಿ ಬರೆದನೇತಕೆ ಹಾ ಮಹಾದೇವ (ಶಾಕುಂತ. ೭ ಪಿದ್ಯಾಂಚರ ಅಂಕಾಶ್ಚೃಮು). **ಪೊಂಬಸುಱ**: ಪೊಂಬಸುಱನ ಪೆಣ್ಣಾಗರಡಿಂದ ತಕ್ಕನೆ ತುಂಬಿತು ಕಿಱಿದೆ ಕುಟುಂಬ (ಚಂಪ. ೬೨-೩೮). [ಪೊಂಬಸಿಱು + —ಅ₇]

**ಪೊಂಬಸಿಱು, ಹೊಂಬಸಿರು** (ನಾ). ೧. ಚಿನ್ನದ ಗರ್ಭ: 'ಪೊಂಬಸಿಱ' ಪರಾ. ೨. ಶ್ರೇಷ್ಠವಾದ ಗರ್ಭ: ಪಂದಲೆ, ಬೆಂದೊವಲ್, ಬೆಂಬಱ್, ಪೊಂಬಸಿಱು (ಶಬ್ದಾ.ಸು. ೮೦ ವ್ಯಾಖ್ಯಾ). **ಹೊಂಬಸಿರು**: ೨. ಬೇಂದ್ರೆಯವರ ಕವಿತೆಯಲ್ಲಿ ಮೇಲೆ ಹೇಳಿದಂತೆ 'ಹೂ' ಎಂದರೆ ಸಮಾಧಿಯಲ್ಲಿದ್ದ ಹೊಂಬಸಿರಿನ ಉಸಿರು (ಸಕ್ಕಣ. ೬೨); ನಮ್ಮ ಕನ್ನಡತಾಯಿ, ತನ್ನ ಹೊಂಬಸಿರಿನಿಂದ ನಮ್ಮನ್ನು ತೆರೆದು . . . ಹಾರೈಸುತಿಹಳು (ಹೊಂಗಳ. ೦೯-೨). [ಪೊಂ (< ಪೊನ್) + ಬಸಿಱು (< ಬಸಿಱ್) ]

**ಪೊಂಬಸುಱ** 'ಪೊಂಬಸಿಱ' ನೋ.

**ಪೊಂಬಳಯಿಗೆ, ಹೊಂಬಳಯಿಗೆ** (ನಾ). ಚಿನ್ನದ ಕಾಂತಿಯ ಬಾವುಟ; ಹೊಂಬಣ್ಣದ ಪತಾಕೆ: ಪೊಂಬಳಯಿಗೆ ಮಿಂಚು ಮಣಿತೋರಣ ಕಣ್ಗೊಂಬಿಂದ್ರಧನು ಕುಸುಮಮಾಳೆ ಇಂಬುಗೊಂಡಾಲಿಲ್ಲಗಲಾ ನಗರಿ ಏಡಂಬಿಸಿದುದು ಕಾರ ಸಿರಿಯ (ಕುಮಾರಾಂ. ೭-೭೯). **ಹೊಂಬಳಯಿಗೆ**: ತಳಿತ ಪಲ್ಲವಸತ್ತಿಗೆಯ ಹೊಂಬಳಯಿಗೆಯ ಸೀಗುರಿಯ ಚಮರಾವಳಿಯ ಲಗ್ಗೆಯೊಳೆಳ್ಚಿವ ಘನವಾದ್ಯರಭಸಗಳ ಒಲವಿನಿಂದಾ ನೃಪತಿ ಚಾತುರ್ಬಲ ಸಹಿತ ಬಂದಾ ಕಿರಾತರನಳವಿಯಲಿ ತಾಗಿದನು (ಕೀಶಂಕ. ೭-೦೦).

[ಪೊಂ (< ಪೊನ್) + ಪಳಯಿಗೆ (< ಪಟಯಿಗ) ]

**ಪೊಂಬಳೆ** 'ಪೊಂಬಾಳೆ₁' ನೋ.

**ಪೊಂಬಳೆದೊಂಗಲ್** (ನಾ). ಅಡಕೆ, ತೆಂಗು ಮೊದಲಾದುವುಗಳ ಹೂವಿನ ಗೊಂಚಲು: ಎರಲಲೆಪಿಂ ತೆಱಂಬೊಳೆದು ಪೊಂಬಳೆದೊಂಗಲನಾಂತ [ಪಾಠಾಂ. ಪೂಮುಡಿದೊಂಗಲನಾಂತು] ಕೌಂಗುಗಳ್ (ಜಗ. ೦೯-೫೦).

[ಪೊಂಬಳೆ (< ಪೊಂಬಾಳೆ₁) + ತೊಂಗಲ್]

**ಪೊಂಬಳ್ಳಿ, ಹೊಂಬಳ್ಳಿ** (ನಾ). ೧. ಚಿನ್ನದ ಬಳ್ಳಿ; ಸ್ವರ್ಣಲತೆ:

**ಪೊಂಬಳ್ಳಿ**ಯ ಪೊಗರಂ ಗೆಲ್ವಂಗದ ಕಂಬುಲಲಿತಕಂಧರೆ ಮುನ್ನೆಱೆದ ನವಾಂಬು ಜಲಕ್ಕನೆ ತೀವಲ್ಕೆ (ಶಬ್ದಮ. ೧-೪೩); ವರನಾರಾಯಣನ ರಾಣಿಯರ ಪಾದದ ಹೊನ್ನ ಸರಪಳಿಯೆಳೆಯುತ್ತ ಬರಲು ವರನೀಲದ ನೆಲಗಟ್ಟಲ್ಲಿ ಪೊಂಬಳ್ಳಿ ಬರೆದಂತೆ ರೇಖೆದೋಱುದುವು (ಮೋಹತ. ೧೪-೨೬). ೨. ಹಳದಿಬಣ್ಣದ ಒಂದು ಬಗೆಯ ಲತೆ : ಖರ್ಜೂರ ದ್ರಾಕ್ಷೆಗಳೊಮ್ಮೆ ಪೊಂಬಳ್ಳಿಗಳ ಫಲವೊಮ್ಮೆ ಘನತರಾರ್ಘ್ಯಗಳಿಂದ ಶಾಂತಿಧಾರೆಗಳಿಂದ ಜನಪನಂಬಿಕೆಯನರ್ಚಿಸಿದ (ಶಶಿ. ೧೯-೦೨೦). **ಹೊಂಬಳ್ಳಿ** : ೧. ಹೊಂಪಿಡಿದ ಹೊಂಬಳ್ಳಿಯೊಳೆಸೆವ [ಪಾಠಾಂ. ಹೊಂಬಳಿಮಾಯ್ಕೊಳೆಸೆವ ] ಕಡುಬಿಣ್ಪಿನ ಜಘನದ ಕಾಮಿನಿಗಿಂದು ಪಡಿಗಟ್ಟಿ ಪೇಳುವನೇನ (ಜೀವಂಧರ. ೧೧-೨೫); ವಿಳಾಸಿನೀಚರಣದ ನಿಗಳವೇಳ್ತರಲು ವರನೀಲಮಣಿಗಟ್ಟಿನ ಮೇಲೆ ಹೊಂಬಳ್ಳಿ ಬರೆದಂತೆ ಕಣ್ಗೆ ರಂಜಿಸಿತು (ಮೋಹತ. ೨೪-೩೮). [ಪೊಂ (<ಪೊನ್) + ಬಳ್ಳಿ]

**ಪೊಂಬಱುಗಲ್** (ನಾ). ಚಿನ್ನದ ದೋಣಿ ; ಬಂಗಾರದ ನಾವೆ : ಗಗನತಟಾಕದೊಳೊಗೆದು ಪೊಳೆವ ವಿಮಾಂಗಳೆಂಬ ವಿಮಾಂಗಳ್ಗೆ ಬಿಂಬಮೆಂಬ ಪೊಂಬಱುಗಲ ಕಳಂಕಧೀವರನಡರೆ ಬೀಸಿದ ಜಾಲದಂತೆಯುಂ (ಅಜಿತಪು. ೭-೮೦ ವ). [ಪೊಂ (<ಪೊನ್) + ಪಱುಗಲ್ (<ಪಱಿಗೋಲ್)]

**ಪೊಂಬಾಗಿಲ್, ಪೊಂಬಾಗಿಲು** (ನಾ). ಚಿನ್ನದ ಬಾಗಿಲು; ಬಂಗಾರದ ದ್ವಾರ : ಪೊಂಬಾಗಿಲ್ಗೆ ಬಂದನಾ ಕವಿರಾಜು (ಉದ್ಭಟ. ೧೨-೫೫). **ಪೊಂಬಾಗಿಲು** : ಮದಿಲೊಳು ಮಣಿಮಾಡದೊಳು ಪೊಂಬಾಗಿಲ ತುದಿಯೊಳು . . . ಪುರಸುದತಿಯರವನ ನೋಡಿದರು (ಶ್ರೀಪಾಂ. ೧೩-೩೪); ಅಂತರಾಂತರದ ಪೊಂಬಾಗಿಲೊಳಗೆ ನೀಲಕುಂತಳೆಯರು ನಸುನಗುತ ಸಂತೋಷದೆ ಮುತ್ತಿನಾರತಿಗಳ ಭೂಕಾಂತನಿಗೊಲೆದೊಪ್ಪಿದರು (ಕಂಪಹ. ೮-೫೦). [ಪೊಂ (<ಪೊನ್) + ಬಾಗಿಲ್]

**ಪೊಂಬಾಗಿಲು** 'ಪೊಂಬಾಗಿಲ್' ನೋ.

**ಪೊಂಬಾದರಿ** (ನಾ). ಹೊಂಬಣ್ಣದ ಪಾದರಿಹೂವು ; ಪಾಟಲಪುಷ್ಪ : ಸುರಯಿಯ ಚೊಲ್ಲೆಯಮುಂ . . . ಪೊಂಬಾದರಿಯ ಕಿಱುಮುಗುಳ ತೊಡರುಂ ಪರಿವಡೆದಿರೆ ಬಂದನಟ್ಟಿಯಿಂದೆ ಬಸಂತಂ (ಕಬ್ಬಿಗ. ೩೨೫). [ಪೊಂ (<ಪೊನ್) + ಪಾದರ್ಿ]

**ಪೊಂಬಾರಿಕ** (ನಾ). ಓಲಗದಲ್ಲಿ ಚಿನ್ನದ ದಂಡ ಹಿಡಿದು ಶಿಸ್ತು ಕಾಯುವವನು : ಕುಂಭಾಂಡಮಂತ್ರೀಶ್ವರನ ಚಿತ್ತೈಸೆಂದು ಪೊಂಬಾರಿಕರು ಪೊಗಳಿದರು (ಮೋಹತ. ೨೦ ೫೬). [ಪೊಂ (<ಪೊನ್) + ಬಾರಿಕ]

**ಪೊಂಬಾವಡೆ** 'ಪೊಂಬಾವುಡೆ' ನೋ.

**ಪೊಂಬಾವುಗೆ, ಹೊನ್ನುಹಾವಿಗೆ** (ನಾ). ಬಂಗಾರದ ಪಾದುಕೆ : ಮಾಣಿಕವೆತ್ತ ಪೊಂಬಾವುಗೆವೆರಸಿ . . . ಹಿಂಸಕನಕ್ತಂಚರಭೇದಿ ನಡೆದ (ಮೋಹತ. ೦೪-೦೮). **ಹೊನ್ನುಹಾವಿಗೆ** : ಎನ್ನ ಮಾನ ಪ್ರಾಣಗಳು ಹೊನ್ನುಹಾವಿಗೆಯಾಗಿ ನಿನ್ನ ಚರಣಕೆ ಯೋಗ್ಯ ಮೆಟ್ಟಾಗಲಿ (ಸುಜಾರ. ೦೪-೫). [ಪೊಂ (<ಪೊನ್) + ಪಾವುಗೆ]

**ಪೊಂಬಾವುಟ** (ನಾ). ಹಳದಿಯ ಬಣ್ಣದ ಬಾವುಟ,—ನಿಶಾನೆ : ನೋಡಲ್ಲಿ ಗುಡಿ ತೋರಣಂ ಅಲ್ಲಿ ಪೊಂಬಾವುಟಂ (ಶ್ರೀಣಾವಿ. ೫೯-೦೫೯). [ಪೊಂ (<ಪೊನ್) + ಬಾವುಟ]

**ಪೊಂಬಾವುಡೆ, ಪೊಂಬಾವಡೆ** (ನಾ). ಹೊಂಬಣ್ಣದ ವಸ್ತ್ರ; ಪೀತಾಂಬರ: ತಡಿ ಸುಖಾಸನ ಸುಗತಿ ಪೊಂಬಾವು[ಪಾಠಾಂ.ವ]ಡೆ ಜನಾಖಿ . . . ಮಣಿಲಂಬಳದ ಹಯು ಮಿಗೆ ಗುಡಿಯಿಱಿದು ಮೊಗವೆತ್ತಿ ನರ್ತಿಸಿತು (ಕೂರಾ. ೬-೨೯-೦೨). **ಪೊಂಬಾವಡೆ** : ಬಿರುದಿನ ಪೊಂಬಾವಡೆ ಸೆಡಕಿನ ವಲ್ಲಿ . . . ಮಿಱುಗುವ ರತ್ನಭೂಷಣಗಳಾಂತಿಹ ಹಯ ಖುರವೆತ್ತಿ ಕುಣಿಯುತ್ತಿದಿದುವು (ಕಂಪಹ. ೦೫-೦೪). [ಪೊಂ (<ಪೊನ್) + ಪಾವುಡೆ$_1$ (<ಪಾವುಡ$_1$) ]

**ಪೊಂಬಾಸಿಗ** (ನಾ). ಚಿನ್ನದ ಬಾಸಿಂಗ : ಲಲನೆಯರು ಪೊಂಬಾಸಿಗವ ನಿಕ್ಕಿದರು ಶಶಿಮುಖಿಗೆ (ಬಸವ. ೯-೯೦). [ಪೊಂ (<ಪೊನ್) + ಬಾಸಿಗ]

**ಪೊಂಬಾಸು** (ನಾ). ಚಿನ್ನದ ಎಳೆಗಳ ಪಾಶ : ಮಾಣಿಕ್ಯರಚಿತ ಕಂಬಟ್ಟೆ ಪೊಂಬಾಸಿನ ನೇಣ ಚತುಷ್ಪಾದಿಗಳ ಪಾಣಿಯೊಳಾಂತ ಪೆರ್ಗಡಿಗಳ ಲುಬ್ಧಕಶ್ರೇಣಿ ಬೊಬ್ಬಿಡುತಲೈದಿದುದು (ಮೋಹತ. ೧೯-೯). [ ಪೊಂ (<ಪೊನ್) + ಪಾಸು$_3$ (<ಪಾಸ$_1$) ]

**ಪೊಂಬಾಳೆ$_1$, ಪೊಂಬಳೆ, ಹೊಂಬಾಳೆ$_1$** (ನಾ). ೧. ಅಡಿಕೆ, ತೆಂಗು ಮುಂತಾದ ಮರಗಳಲ್ಲಿ ಹೊರಡುವ ಹೊಡೆಯಾಕಾರದ ಹೂವಿನ ಗೊಂಚಲು ; ಸಿಂಗಾರ ; ಕಂಹಳಿ : ಓರೊಂದೆಡೆಯೊಳ್ ವನವಿಲಾಸಿನಿಯ ವಿಲಾಸಭವನದಂತಿರ್ದ ಪೊಂಬಾಳೆಯ ಕುರುಂಬುಗಳೊಳ್ (ಪುಣ್ಯಾಪು. ೨-೩೩); ಇಂಬಾಗಿರೆ ವರಹಿಮಕರಬಿಂಬದ ಬೆಂಬಳಿಯೊಳಿವ ತಣ್ಗದಿರ್ಗಳೆನಲ್ ಪೊಂಬಾಳೆಯ ಚಮರಮದಾಲಂಬಿಸೆ ಪಿಡಿದೊರ್ವ ಚಂದ್ರಮುಖಿ ನಡೆತಂದಳ್ (ಗಿಂಕ. ೭-೯) ; ಪರಿವ ಕಾಲ್ವೆಗಳಿಂದ ಬಾಳೆಮಿನ್ನೆಗೆದು ಬಂಧುರಪೂಗಮುಂ ಮುಟ್ಟಲಲ್ಲಿರ್ದ ಪೊಂಬಾಳೆ ಬಿರಿದು ಮಕರಂದರಸಮುಂ ಸೂಸಲ್ (ಸೌಂದಪು. ೫-೯೨). **ಪೊಂಬಳೆ** : ಅಗ್ಗಲಿಸಿ ಬಿರಿವ ಪೊಂಬಳೆಯ [ಪಾಠಾಂ. ಪೊಂಬಟೆಗಳ, ಪೊಂಬಾಟೆಯ ]ತಣ್ಮಲೆವ ಪೊಸಗಂಪಿನೊಳ್ ಪುದಿದಲ್ವೆಲರಾಱಿಪುದು ಖಚರದಂಪತಿಶತಮುಂ (ಆದಿಪು. ೧-೬೮) ; ಕಂಪಿಡಿದ ಪೊಂಬಳೆಗಳಿಂದೆಸೆವ ಅಡಕೆ ಎಸೆದವು ಕಣ್ಗಳಿಗೆ (ಕುಂಶಾಸಾಂ. ೩-೫೫). **ಹೊಂಬಾಳೆ$_1$** : ಮಘಮಘಿಪ ಹೊಂಬಾಳೆಗಳ ರಸವೊಗುವ ಮಧುರದ್ರಾಕ್ಷಿಗಳ . . . ಸೊಗಸು ಸೆಳೆದುದು ಮನವನು (ಕುಮಾರ. ೭-೨೬); ಗಾಳಿಯೊಲಹಿಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ (ತೊರರಾ. ೫-೩-೦೩); ಆಗರಳಿದ ಕಸ್ತೂರಿ ಹೊಂಬಾಳೆಯ ಪೂಗವೃಕ್ಷಗಳೊಪ್ಪುತಿಹವು (ಕಂಪಹ. ೨-೪೦).
[ ದೇ. ॥ ತಮಿ. ಪೂವ್ಪಾಳೈ; ತುಳು . ಪೂಂಬೆ; ತೆಲು. ಪೂಂಬಾಳ ]

**ಪೊಂಬಾಳೆ$_2$** 'ಪೊಂಬಾಟೆ' ನೋ.

**ಪೊಂಬಾಟೆ, ಪೊಂಬಾಳೆ$_2$, ಹೊಂಬಾಳೆ$_2$, ಹೊಂಬಾಟೆ** (ನಾ). ಒಂದು ಬಗೆಯ ಬಾಳೆಯ ಗಿಡ ಮತ್ತು ಅದರ ಹಣ್ಣು : ಶತಪತ್ರದ ಸಿತಾತಪತ್ರದೊಳಂ ಪೊಂಬಾಟೆಯ ಚಾಮರಂಗಳೊಳಮೆಸೆವ ಮಂಟಪಂಗಳ ನಡುವಣ ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನನತಿಪ್ರೀತಿಯಿಂದರ್ಚಿಸಿ (ಕಾದಂಬ. ೭೮೦) ; ಅಂದಂಬೆತ್ತ ಬಂದುಗೆಯೆಸಟಿಂ ಕತ್ತರಿಸಿ ಪತ್ತಿಸಿದ ಚಿತ್ರಪತ್ರಂಗಳಳುಂಬಮಾದ ಪೊಂಬಾಟೆಯ ಕಂಬಂಗಳೊಳಂ (ಚಂದ್ರಪ್ರ. ೭-೯೫ ವ) ; ಪೊಂಬಾಟೆಯ ಪಣ್ಣ ಬಿಣ್ಪೊನೆಗಳೊತ್ತಂಬಂಕರಂ ಬೀಱುತಿರ್ಪುದು . . . ಅಲಂಪಂ (ಕುಸುಮಾ. ೨-೪೪). **ಪೊಂಬಾಳೆ$_2$** : ಪಳಿಕಿನ ಪಟ್ಟಕೆಯಲ್ಲಿ ಪೊಂಬಾಳೆಯ ಸುಳಿಯಲ್ಲಿ ರತಿಯ ಕುಳ್ಳಿರಿಸಿ ನಳಿನಾಕ್ಷಿಯರೊಡತಿಯ ಕಾಲೆರಡುಮಾಂದಳಿರನು ಜಲದೊಳದ್ದಿದರು (ಮೋಹತ. ೯-೪೦) ; ತಮಾಲದೆಳೆದಳಿರಂ ಕೊಱೆದು ಚಿತ್ರಪತ್ರಮಪ್ಪಂತೆ ಪತ್ತಿಸಿ ನಟ್ಟ ಪೊಂಬಾಳೆಯ ಬಾಳ್ಗಂಬಂಗಳಿಂ (ರಾಜಶೇ. ೧೧-೩೦ ವ). **ಹೊಂಬಾಳೆ$_2$** : ಹೊಂಬಾಳೆಗಳ ಸುಳಿಯ ಸಪುರನೇತ್ರಂಗಳಂ ಇಂಬಱಿದು ಹಾಸಿ (ಪುಷ್ಪರ. ೯-೨೭) ; ಬಣ್ಣಬಣ್ಣದ ಪೂಗೊಯ್ದು ಹೊಂಬಾಳೆಯ ಪರ್ಣದೆ ಪೊಟ್ಟಣಗಟ್ಟಿ . . . ತೋಱಿದರು (ಮೋಹತ. ೨೪-೬೮). **ಹೊಂಬಾಟೆ** : ಇಂತೆಸೆವ ನುಣ್ಪಳಿನತಳದೊಳ್ ಹೊಂಬಾಟೆಯ ಕಂಬಂಗಳಿಂ ಪಚ್ಚೆಯ ಪಲಗೆಗಳಿಂ ಬಾಳದ ಬಿಜ್ಜಣಿಗೆಗಳಿಂ ಬಿತ್ತರಿಸಿ ಚೆಲ್ವಿನ ನೆಲೆಯುಂ ಕಂಪಿನ ಕಣಿಯುಂ ತಂಪಿನ ತಾಯ್ಮನೆಯುಮೆನಿಪ ಲತಾಮಂಟಪಮಂ ಕಂಡು (ಶಾಂತೀಶ್ವ. ೧೦-೦೦೭ ವ). [ಪೊಂ (<ಪೊನ್) + ಬಾಟೆ]

**ಪೊಂಬಿಸಿಲ್, ಪೊಂಬಿಸಿಲು, ಹೊಂಬಿಸಿಲು** (ನಾ). ಪ್ರಾತಃಕಾಲ ಮತ್ತು ಸಂಧ್ಯಾಕಾಲಗಳಲ್ಲಿ ಕಾಣುವ ಹೊನ್ನಿನ ಬಣ್ಣದ ಬಿಸಿಲು :

ಕುಸಿದುವು ಕಿರಣಂಗಳ್ . . . ಅನಂತರಂ ಪೊಂಬಿಸಿಲಾದುದು ಪೂರ್ದೆ ಪಟ್ಟಿಕೆಟ್ಟಮನರ್ಕಂ (ಶಂಗಾಪು. ೧೦-೦೬೭); ಪೊಸಸೊದೆ ಕೌಮುದಿಯಂ ಪಸರಿಸೆ ಕನಕದ ಕಳಶವಾಳಿ ಪೊಂಬಿಸಿಲಂ ಪೂರಿಸೆ ತರತರದಿಂದಂ ರಾಜಿಸು ತಿರ್ಪುವು ಸೋಮಸೂರ್ಯವೀಥಿಗಳ್ (ಗಿಂಕ. ೨-೬೨); ಪರೆದುದಾಕ್ಷಣ ಮನದ ಸಂದೇಹಮೆಂದೆಂಬ ಪರವಾತಿಮಿರಂ ವಿವೇಕಮೆನಿಪ್ಪ ಪೊಂಬಿಸಿಲ್ ನಿರುತದಿಂ ಪಸರಿಸಿತು (ಕಬಪು. ೬-೨೨). **ಪೊಂಬಿಸಿಲು:** ಹಗಲು ಸವೆದುದು ಪೊಂ[ಪಾಠಾಂ. ಹೊಂ]ಬಿಸಿಲು ನೆಚು ತೆಗೆದುದತಿವೇಗದಲಿ (ವಳಕ. ೫-೯೩). **ಹೊಂಬಿಸಿಲು:** ಮುತ್ತಿನ ಧಾಳ ಧವಳಿಸಲಾಯ್ತು ಚಂದ್ರಿಕೆ ತನುವ ಡೊಕ್ಕರಿಸಿ ಮೇಲೆ ಹೊಂಬಿಸಿಲಾಯ್ತು ಮಾಣಿಕದೇಳಿಗೆಯ ಲಹರಿಯಲಿ (ಶುವ್ಯಾಸ. ೫-೪೪); ಬಿಡದೆ ಚಂದ್ರಾತಪವನಪಹರಿಸುವುದು ಹೊಂಬಿಸಿಲು (ತೊರರಾ. ೫-೨-೬೪); ಗಿರಿಯುತ್ತಮಾಂಗದಲಿ ಮೈದೋರಿದನು ಅಹ ಹೊಂಬಿಸಿಲಿನೆಳನೇಸರು ! (ಜಕ್ಕಾಂಗ. ೬-೦೫೪).

[ಪೊಂ (<ಪೊನ್) + ಬಿಸಿಲ್]

**ಪೊಂಬಿಸಿಲು** 'ಪೊಂಬಿಸಿಲ್' ನೋ.

**ಪೊಂಬಿಸುಗೆ** (ನಾ). ಚಿನ್ನದ ಅಂಬಾರಿ : ಪೊಂಬಿಸುಗೆಯು ಕರಿಗಳ ಚೆಂಬೊ [ಬ]ಕ್ಕರೆಯಶ್ವಚಯದ ಬಹುವಿಧಮಪ್ಪಾಡಂಬರದ ಪತಾಕೆಯ ಪಲವುಂ ಬಿರುದಿನ ಭಟರ ಬಹಳ ಬಲದರ ನೆಲೆಯೊಳ್ . . . ಅಪರಾಜಿತಕುಮಾರ ನಿರ್ಪುದುಂ (ಮಹಾಪೇ. ೫-೫೦). [ಪೊಂ (<ಪೊನ್) + ಬಿಸುಗೆ]

**ಪೊಂಬೀವು** (ನಾ). ಚಿನ್ನದ ತಂತಿಗಳಿಂದ ಮಾಡಿದ ಹಗ್ಗ : ಪೊಂಬಡ ಲಿಗೆಯೊಳ್ ಪರಪಿದ ಪೊಂಬೀಪಿಂ ಕಟ್ಟಿಗೊಳಿಪ ಮೋಹನಂಬೆತ್ತ ಕಾಂತೆಯರ್ (ಕಂದಕೂ. ೨೮೫). [ಪೊಂ (<ಪೊನ್) + ಬೀವು]

**ಪೊಂಬುಗುಡಿ** (ನಾ). ಚಿನ್ನದ ಬುಗುಡಿ : ಕೊಪ್ಪು ಪೊಂಬುಗುಡಿ ಬಾವುಲಿ . . . ಪಿಲ್ಲಿ ವಿಂಚು ಮೊದಲಾದ ಪೊಸಮಿಸುನಿದೊಡವುಗಳಿಂ ತೊಂಡಿಲ್ಗಳಿಂದಲಂಕೃತೆಯಾದ . . . ಕನ್ನಿಕೆಯಂ . . . ಬಿಜಯಂಗೆಯ್ಸು ತಮಿರ್ಪಿನಂ (ಹಾಲಾಸ್ಯ ೪-೯-೬೪ ಪ). [ಪೊಂ (<ಪೊನ್) + ಬುಗುಡಿ]

**ಪೊಂಬುಚ್ಚ** 'ಪೊಂಬುಟ್ಟಿ' ನೋ.

**ಪೊಂಬುಜ್ಜಣೆ** (ನಾ). ಚಿನ್ನದ ಬಣ್ಣದ ಬುದ್ದಲಿ : ಮುಟ್ಟಲಮ್ಮದೆ ಕುಂಕುಮರಸಪನಿನೀರ ಬಟ್ಟಬಲ್ಮೊಲೆಗೆ ಸಿಂಪಿಸಲು ಇಟ್ಟ ಮುಡಿಗೆಯ ಪೊಂಬುಜ್ಜಣೆ ತೈಲಸಂಘಟ್ಟದಿಂ ಪೊಂಗಿದಂತಾಯ್ತು (ಮೋಹತ. ೨೬-೦೮). [ಪೊಂ (<ಪೊನ್) + ಬುಜ್ಜಣೆ (<ಬುದ್ದಲಿ)]

**ಪೊಂಬುಡಿ** (ನಾ). ಚಿನ್ನದ ಪುಡಿ ; ಬಂಗಾರದ ಹುಡಿ : ತೊಟ್ಟ ಮೈದುಡಿಗೆಗಳ ಮಸೆದ ಪೊಂಬುಡಿಯಂತೆ ಕುಂಕುಮರಜಂಗಳು . . . ಸೂಸುತಿರೆ (ಶೈಶಿಭಾ. ೩೩-೨೨); ತಂಬೆಲರೆಂಬ ಪೊಂಬರದನಲರ್ಪೊನ್ನಂ ಪರ್ಣಕರ್ಪೋಲಪುಲದೊಳೊರೆಯೆ ಸುರಿದು ಪರಿದ ಪೊಂಬುಡಿಯೆಂಬಂ ತಿಬುವೆತ್ತ ರಜನೀರಜಃಪಿಂಜರರಜೋಗುಣದಿಂ ಸುರುಚಿರಮಾದ ಸುರಯಿ ಯುಂ (ಶಬಶಂ. ೨-೯೨ ಪ). [ಪೊಂ (<ಪೊನ್) + ಪುಡಿ]

**ಪೊಂಬುತ್ತಳಿ, ಹೊಂಬುತ್ತಳಿ** (ನಾ). ಚಿನ್ನದ ಬೊಂಬೆ ; ಬಂಗಾರದ ಪ್ರತಿಮೆ,- ವಿಗ್ರಹ : ಭಾವಿಸಲಧಿಕ ಪೊಂಬುತ್ತಳಿಯೆಂಬಂತೆ ಕೋವಿದ ಕೋಮಲಾಂಗಿಯರು ದೇವಕಿಯಾತ್ಮಸಂಭವನೆಡಬಲದಲಿ ಶೀವಿರ್ದರೇನ ಬಣ್ಣಿಪೆನು (ಮೋಹತ. ೪-೪); ಬಿಸಜಗಂಧಿನಿಯೆನಿಸಿ ರಾಮರುದ್ರರ ರಾಣಿ ಪೊಂಬುತ್ತಳಿಯೊಲೆಸೆದಳು (ಬಿಕೋಶ. ೬-೪೦). **ಹೊಂಬುತ್ತಳಿ:** ಅತ್ಯಂತ ರೂಪಯೌವನಗಾರ್ತಿಯರು ಹೊಂಬುತ್ತಳಿಯೆಡೆಯಾಡುವಂತೆ . . . ಸತ್ಯಭಾಮೆಯನು ಸಾರಿದರು (ಮೋಹತ. ೦೪-೬೨).

[ಪೊಂ (<ಪೊನ್) + ಪುತ್ತಳಿ (=ಪುತ್ತಲಿ)]

**ಪೊಂಬುದಿ** (ನಾ). ಬಂಗಾರದ ಬಾಗಿಲುವಾಡ : ಕಾಮುಜಟ್ಟಿಯ ಕಟ್ಟಿ ಸಿದ ಕಾಮಗೃಹದ ಪೊಂಬುದಿ[ಪಾಠಾಂ. ಪೊಂದುಡೆ, ಪೊಂಬುಡೆ, ಪೊಂಪುಡೆ]ಯೆನಲೊಪ್ಪಿದುವಾ ಮುಗ್ಧೆಯೆಸವೊಳ್ತೊಡೆಗಳು (ಶ್ರೀಪಾಂ. ೩-೫೧). [ಪೊಂ (<ಪೊನ್) + ಪುದಿ]

**ಪೊಂಬುರ್ಚ** 'ಪೊಂಬುಟ್ಟಿ' ನೋ.

**ಪೊಂಬುಲಿ** (ನಾ). ಹಳದಿಬಣ್ಣದ ಹುಲಿ : ಬಂದುವು ಪೊಂಬುಲಿದೋಲು ವಲ್ಲಣಂಗಟ್ಟಿದ ಪಟ್ಟಸಾಹಣದ ವಾಜಿಗಳುಂ ಜಯೋತ್ಸವಾಜಿಗಳ್ (ವಲ್ಲಕೃ. ೯-೪); ಪೊಂಬು[ಪಾಠಾಂ. ಪೆರ್ಬು]ಲಿಯು ತೊವಲನಾನೆಯ ಕೊಂಬಂ ಕುತ್ತಬಿಸದಡಸಿ ಪಿಡಿದುಗಿದೆತ್ತಿದುವಂ ಪತಿಗೆ ಕಾಣ್ಕೆಗೊಟ್ಟಂತೆಂದಂ (ಅಸಂಪು. ೦೦-೩೬); ಪೊಂಬುಲಿಯ ಚರ್ಮದ ಕಕ್ಷಪಾಳಿಕೆಯೊಳಳವಟ್ಟ ನಿಗ್ಗವದ ಕರಂಡಕದೊಳಗೆ ಮುದ್ರಿಸಿರ್ದನರ್ಘ್ಯಮಣಿಯಂ . . . ತುಡುಂಕಿ ತೆಗೆದು (ರಾಜಶೇ. ೫-೨೫ ಪ). [ಪೊಂ (<ಪೊನ್) + ಪುಲಿ]

**ಪೊಂಬುಲಿಸಮ್ಮ** (ನಾ). ಹಳದಿಬಣ್ಣದ ಹುಲಿಯ ಚರ್ಮ: ಆನೆದೊವ ಲ್ಪೊಂಬುಲಿಸಮ್ಮಂ ತಾವರೆಗಣ್ಣಂ ಕಣ್ಣೀಚಿಸಿದಡಿದಾವರೆಯಿಂತೀ ಪರಿ ಸೊಗಯಿಪ ಶೋಭಾಪಹದಿವ್ಯಾಂಗಂ ಲಿಂಗದಿನೆಳ್ತಂದು (ಶಾದ್ವರೇ. ೩-೩೯); ಪೊಂಬುಲಿಸಮ್ಮಮಾನೆದಲೆಮುತ್ತು . . . ಪೀಲಿಯೆಂಬಿವಂ ತುಂಬಿದ ಕಂಬಿಯಂ ತಳೆದದೇಂ ತಳರ್ವತ್ತೊ ಪುಳಿಂದಸಂಕುಳಂ (ರಾಜಶೇ. ೫-೦೦೪). [ಪೊಂಬುಲಿ + ಸಮ್ಮ₂ (<ಚಮ್ಮ)]

**ಪೊಂಬುಟ್ಟಿ, ಪುಂಬುಚ್ಚ, ಪೊಂಬುಚ್ಚ, ಪೊಂಬುರ್ಚ, ಪೊನ್ಬುಚ್ಚ, ಹೊಂಬುಚ, ಹೊಂಬುಚ್ಚ, ಹೊಂಬುರ್ಚ, ಹೊಂಬುಟ್ಟಿ** (ನಾ). ೧. ಒಂದು ಊರಿನ ಹೆಸರು ; P ಈಗಿನ ಶಿವಮೊಗ್ಗ ಜಿಲ್ಲೆಯ ನಗರತಾಲ್ಲೂಕಿನ ಹುಂಚ. ಇದು ಜೈನರ ಪ್ರಸಿದ್ಧವಾದ ತೀರ್ಥ ಕ್ಷೇತ್ರ : ಉದಯಪುರದ ನಕ(ಗ)ರಸಹಿತಂ ಪೊಂಬುಟ್ಟದ ನಕ(ಗ)ರಕ್ಕೆ ಸುಂಕಕಾದುದು (ಎಇ. IX, ೨೨-೫ ; ಸು. ೬೦೦); [ಪೊ]ಮ್ಬುಟ್ಟದ ಮೇಲೆಟ್ಟು ಕೋಟೆಯ ಕೊಳ್ವನ್ನು (ಸೌಇಇ. XX, ೦೫-೬ ; 904). 'ಪಟ್ಟಿಪೊಂಬುಟ್ಟಿ' ಪರಾ. ೨. ಒಂದು ಊರಿನ ಹೆಸರು ; P ಈಗಿನ ಗದಗು ತಾಲ್ಲೂಕಿನ ಹೊಂಬಳ : ಪೊಂಬುಟ್ಟದ ಮಹಾಜನಂ . . . ಧರ್ಮಾ ನುಷ್ಠಾನಪರಾಯಣರಾಗಿ ಸುಖದಿನಿರೆ (ಸೌಇಇ. XI-i, ೬೪-೧೦ ; 1049). **ಪುಂಬುಚ್ಚ:** ೧. ತುಂಗಾದ್ರಿಯು ದೊರೆಯ × × × ಭಕ್ತಿಮನದಿಂ ಪುಂಬುಚ್ಚಮಿಪುಂನೆಗಂ ಪ × × × ಹದಿಲೊಕ್ಕಿಯಬೆಯಂ ಜಿನಗೇಹಮಂ ಮಾಡಿದಂ (ಎಕ. VII, ಶಿವಮೊ. ೦೦೪-೧೦ ; 950?). **ಪೊಂಬುಚ್ಚ:** ೧. ಏಕಾಂಗವೀರ ಸಂಗ್ರಾಮಧೀರ ಪೊಂಬುಚ್ಚನಿರ್ದ್ಧಾಟಣ ಸಾವಿಮಲೆ ನಿರ್ಲೋಟಣ (ಎಕ. II, ೧೪೩-೩೬ ; 1131) ; ಪೊಂಬುಚ್ಚಪುರವರಾಧೀಶ್ವರ ಮಾರೆಹೊಕ್ಕರೆ ಕಾವ ಮಾರಾಂತರೆ ವೈರಿ (ಇಇ. V, ೪೦-೬ ; 1586). ೩. ಒಂದು ವಂಶದ ಹೆಸರು (?) : ಸ್ವಸ್ತಿಶ್ರೀಪೊಮ್ಬುಚ್ಚಕುಲ ತಿಲಕಂಬ್ಬಳರ ಹರಿತಿನ್ರಿಪಂ ಲೋಕ್ಕೈಕ (ಎಕ. VIII, ನಗರ. ೨೨-೦ ; ಸು. 900 ?). **ಪೊಂಬುರ್ಚ:** ೧. ಕೊಂಗಳಿಯುಚ್ಚಂಗಿ ತಲೆಯೂರ ಪೊಂಬುರ್ಚ . . . ಮೊದಲಾಗನೇಕದುರ್ಗ್ಗತ್ರಯಂಗಳನಶ್ರಮದಿಂ ಕೊಣ್ಡು (ಎಕ. II, ೦೩೨-೨೭ ; 1123). **ಪೊನ್ಬುಚ್ಚ:** ೧. ಸ್ವಸ್ತಿಶ್ರೀ ಮಚ್ಚಿತ್ರವಾಹನ ಪೊನ್ಬುಚ್ಚಾಳಿಕೆಳ್ಳಂ ನಾಗಣ್ಣನಧಿಕಾರಿಗಳಾಗೆ (ಎಕ. VI, ಕೊಪ್ಪ. ೩೭-೦ ; ಸು. 675 ?). **ಹೊಂಬುಚ:** ೧. ಇಂತಪ್ಪುದಕ್ಕೆ ಸಾಕ್ಷಿಗಳು ಹೊಂಬುಚನಾಡು ಮುದುವರ್ಣನಾಡು ಸಾಕ್ಷಿಗಳು ವೊಪ್ಪ ಬಲ್ಲೇಶ್ವರ ದೇವರು (ಎಕ. VIII, ತೀರ್ಥ. ೧೦೬-೪೦ ; 1378) ; ಹೊಂಬುಚದ ಸೀಮೆಯಿಂದಲು ಪ್ರಾಕು ಸುಂಣದ ಬಸ್ತಿಯ ಸಿದ್ದಾಪುರದ ಮಠಕೆ ಉತ್ತಾರವಾಗಿಯಿದ್ದ ಸ್ವಾಸ್ತಿಯು (ಎಕ. VIII, ತೀರ್ಥಹ. ೯೬-೦೩ ; 1664). **ಹೊಂಬುಚ್ಚ:** ೧. ಶ್ರೀಮಂತು ಹೊಂಬುಚ್ಚದ ಆದಿಬಲ್ಲೇಶ್ವರ ದೇವರ ದಿವ್ಯಶ್ರೀಪಾದಪದ್ಮಾರಾಧಕಂ (ಎಕ. VIII, ಸಾಗರ. ೦೨೫-೯ ; 1216) ; ಮಲ್ಲಪ್ಪಗಳ ಮಗ ಹೊಂಬುಚ್ಚದ ಯಿಂ × × ವಾಯಣ್ಣ . . .

ಸ್ವರ್ಗಸ್ಥರಾದರು (ಎಕ. VIII. ಸಾಗ. ೫೦-೯ ; 1398). **ಹೊಂಬುರ್ಚ** : ೧. ಹದಿನೆಂಟುಕಂಪಣದೊಳಗಣ ಹೊಂಬುರ್ಚ್ಚನಾಡ × × × ನಾಗರ ಹಳ್ಳಿಯ (ಎಕ. VIII. ತಗ. ೬೪-೦೪; ೪). **ಹೊಂಬುಚ್ಚ** : 'ಪಟ್ಟಿ ಪೊಂಬುಚ್ಚ' ವರಾ.

**ಪೊಂಬೆಟ್ಟು, ಪೊಂಬೆಟ್ಟು, ಪೊನ್ನೆಟ್ಟು, ಹೊಂಬೆಟ್ಟು** (ನಾ). ಚಿನ್ನದ ಬೆಟ್ಟ; ಮೇರುಪರ್ವತ : "ಪೊಂಬೆಟ್ಟುವೆಂದೆನಲಕ್ಕು ಹೇಮಾದ್ರಿಗೆ" (ಕಕ. ೬೦); ದಿಟ್ಟಗೆ ಪೊಲನಾದುದು ಪೊಂಬೆಟ್ಟುಂ ಜನಜನ್ಮಸವನಮಣಿ ಮಯಮಪ್ಪುಂ (ಹಂಪಂ. ೦-೪೪); ಅಂಬುಧಿಮಧ್ಯದ ಧರೆಯೊಳು ಚತುರಾಸ್ಯನೆಂಬ ವಿದ್ಯಾಧಿಕನೊಲಿದು ಕಂಭಸೂತ್ರವ ಪ್ರತಿಷ್ಠೆಯ ಮಾಡಿದಂದದಿ ಪೊಂಬೆಟ್ಟು ಕಣ್ಗೆ ರಾಜಿಸಿತು (ಸೋಹಕ. ೨-೦೦). **ಪೊಂಬೆಟ್ಟು** : "ಸೊಗಯಿಕುಂ ಪೊಂಬೆಟ್ಟು ರನ್ನದಪ್ಪಲು ಸುರಗಿರಿಗೆ" (ಶಶಿಕುಂ. ೦೦); ಭೂವನಿತೆ ಭರ್ಗಂಗೆ ನೆತ್ತಿಯೊಳ್ ಪೊತ್ತ ಸೊಡರೋ ವಿಚಾರಿಪೊಡೆನಿಸಿ ಪೊಂಬೆಟ್ಟೆಸೆವುದು (ಶಿಚ್ಯಾ. ೨-೬); ಗಿರಿಯಗ್ರದ ನಾಲ್ಕುಶಿಖರದೊಳು ನಾಲ್ಕುನಾಲ್ಕಿರೆಯಕೃತ್ರಿಮಜಿನವಾಸ ವರರತ್ನ ರಜತ ಸುವರ್ಣಾದಿ ಪದಿನಾಱು ಮೆಱೆಯಲಾ ಪೊಂಬೆಟ್ಟನಲಿ (ಜೀಪಂಸಾಂ. ೦-೨೫). **ಪೊನ್ನೆಟ್ಟು** : ಮಾದೇವನ ಪೊನ್ನೆಟ್ಟೀಱಿದರತ್ನಾದರದಿಂದ ಕರೆದೊಡೆಳೆಕೆ ಯರ್ಪುರಸರ್ವಸರ್ಜಿತೆ (ಚಾದ್ಯಕೇ. ೩-೬೬). **ಹೊಂಬೆಟ್ಟ** : ವನ್ನನೆಯ್ದಿ ಪೊವ್ವೆಟ್ಟಮನಾಗಭೀರತೆಯೊಳಮ್ಬುಧಿಯಂ ಗೆಲೆವನ್ನಂ (ಎಕ. VIII. ಸೊರಬ. ೬೩೫-೪೦ ; 1178 ೪); ತಂಟ್ಟ ಸಮ್ಮೋಹಸಮುದ್ರಕೆ ಹೊಂಬೆಟ್ಟದೊಟ್ಟ ಸೇತುವೆಗಟ್ಟದಂತೆ ಬಟ್ಟವೊರೆಗಳೊಡ್ಡು ಮೋಹಿಸಿದುವು ಮೊಲೆಕಟ್ಟಿನ ಮಱೆಯೊಳು (ಚರಕ. ೦೩-೯೨).

**ಪೊಂಬೆಟ್ಟಬಿಲ್ಲಯ್ಯ** — ಮೇರುಪರ್ವತವನ್ನು ಧನುಸ್ಸಾಗಿ ಉಳ್ಳವನು; ಶಿವ : ಸುಕುಮಾರನಂ ಒಯ್ದು ಪೊಂಬೆಟ್ಟಬಿಲ್ಲಯ್ಯನೋಲಗದಲ್ಲಿ ನಿಲಿಸಲ್ಕೆ (ಶ್ರೀಕಣ. ೦೯-೨೬). **ಪೊಂಬೆಟ್ಟವಿಲ್ಲ, ಪೊಂಬೆಟ್ಟುವಿಲ್ಲ** = ಪೊಂಬೆಟ್ಟಬಿಲ್ಲಯ್ಯ : "ಎಣ್ಮಯ್ಯಂ . . . ಪೊಂಬೆಟ್ಟವಿಲ್ಲಂ, ಇಂಗಳಗಣ್ಣಂ . . . ಆಯ್ಗೊಗಂ—ತಾ ಶಿಶಿ ಈಶ್ವರಂಗೆ ಪೆಸರ್" (ಕಶಾ. ೯೭-೦); ವಿರಹಾಗ್ನಿಯ ಕಿಡಿಸು ಪೊಂಬೆಟ್ಟುವಿಲ್ಲನ ಪಟ್ಟದರಸಿ (ಕುಂಜಾಸಾಂ. ೨೩-೬೫).

[ಪೊಂ (<ಪೊನ್) + ಬೆಟ್ಟ]

**ಪೊಂಬೆಟ್ಟು** 'ಪೊಂಬೆಟ್ಟ' ನೋ.

**ಪೊಂಬೆತ್ತ** (ನಾ). ಚಿನ್ನದ ಬೆತ್ತ.—**ಸೆಳೆ** : ಕೆಯ್ಯ ಸೋಂಕಿಂದೆ ಕೆಂಪಂ ತಳೆದೊಪ್ಪಂಬೆತ್ತ ಪೊಂಬೆತ್ತದ ಸೆಳೆಗೆ ತಳಿಮುರ್ಗಿದಂತಾಗೆ . . . ಬಂದಳ್ ಪ್ರತೀಹಾರಿಯೊರ್ಬಳ್ (ಲೀಲಾವ. ೯-೬೬); ನೆರೆದೊತ್ತರಿಪ ಸುರಸಿದ್ಧ ಸಾಧ್ಯಗಂಧರ್ವಾದಿಗಳ ವಿಸರದಳವಿಗಳೆದ ಕಳಕಳಮಂ ಪೊಂಬೆತ್ತಮನೆತ್ತಿ ಹೋ ಸಾರ್ ತೊಲಗೆಂದು ನಿವಾರಿಸಿ (ಕಜಕಂ. ೦-೭೯ ಪ).

[ಪೊಂ (<ಪೊನ್) + ಬೆತ್ತ]

**ಪೊಂಬೆಸ, ಹೊಂಬೆಸ, ಹೊಂಬೆಸೆ** (ನಾ). ಚಿನ್ನದ ಕೆತ್ತನೆಕೆಲಸ; ಹೊಂಗೆಲಸ : ಕಂಬುಲತಾಸುಲಲಿತಲವಣಾಂಬುಧಿಪರಿಧಾನಮಾಗೆ ಚೆಲ್ವಂ ಪಡೆದೀ ಜಂಬೂದ್ವೀಪಪ್ರಭುಗಿದು ಪೊಂಬೆಸದೊಳೆ ಸಮೆದ ಮಕುಟವಿರ್ಪಂತಿರ್ಪಂ (ಅಂಧು. ೬-೬೨); ಪೊಂಬೆಸದುಪ್ಪರಿಗೆಯ ಬಿಸವಂದಮಾದ ಚುಂಚುರ್ಲೋವೆಗಳೊಳಗೆ ಬಳಸಿ ಸಲಿದುಲಿವ ಪಾರಿವಂಗಳ ಕೊರಲುಲಿಯೊಳಂ (ಕಬ್ಬಿಗಾ. ೪೪). **ಹೊಂಬೆಸ** : ಸಿಡಿಲ್ . . . ದಿಟಂ ಹೊಂಬೆಸಕ್ಕಂ ಬಡೆಯಲ್ ಯಕ್ಷೇಶನಂ ನಿರ್ಮಿಸಿ ನಿರುಪಮಸಾಮ್ರಾಜ್ಯಪಟ್ಟಾರ್ಹನಂ ಮಾಡಿಡೆ . . . ಅದರ್ಕಪ್ಪುದಾ ವಜ್ರಪಾತಂ (ಶಾಂತೀಶ್ವ. ೫-೬೬); ಚಂದ್ರಾತಪವನಪಹರಿಸುವುದು ಹೊಂಬಿಸಿಲು ಕಡೆದ ಕರುವಾಡದ ಕವಾಟದ ಕಡೆವಿಡಿದು ಹೊಂಬೆಸದಲುಱೆ ಹೊಗರಿಡುವ ನೀಲದ ಮಹೌಕ್ತಿಕದ ಮಾಣಿಕದ ಲಹರಿಯಲಿ (ಕೊರಾ. ೫-೨-೬೪). **ಹೊಂಬೆಸೆ** : ಅಂಬರವಿಂಬಿಲ್ಲ ಮುಂಬರಿ ತುಂಬಿದ ಹೊಂಬೆಸೆಯಾಲವಟ್ಟದಿಗೆ ಜಂಭಾರಿಗಿಂಬಾದ ಕುಂಭಿಯುಂದದ ಮದಸ್ತಂಬೇರಮಗಳ್ಕಿದಿದುವು (ಕಂಶ. ೦೩-೨೬).

[ಪೊಂ (< ಪೊನ್) + ಬೆಸ₁]

**ಪೊಂಬೆಸಗೆಯ್** (ಕ್ರಿ). ಚಿನ್ನದ ಕೆತ್ತನೆಕೆಲಸವನ್ನು ಮಾಡು : ಇರೆ ಚಂದ್ರಂ ತೊಲೆಯೊಳ್ ಹಿಮಕಿರಣಸುತಾದಿ ಗ್ರಹತ್ರಯಂ ನೋಡೆ ಧರಾಮರಪತಿ ಪೊಂಬೆಸಗೆಯ್ಯಂ (ಜಾತಕ. ೨೦-೭). [ಪೊಂಬೆಸ + ಕೆಯ್₁]

**ಪೊಂಬೆಸಱ್, ಹೊಂಬೆಸರು, ಹೊಂಬೆಸಱ್, ಹೊಂಬೆಸಱು** (ನಾ). ಹೊಂಬಣ್ಣದ ಹೆಸರುಕಾಳು : ತಿವುಡುಗಳೆದ ಪೊಂಬೆಸಱ ಮಹೋಜ್ವಳಮಪ್ಪ ಕಂಪಿನಿಂಪಿನ ನಿಳಯಮುಮೆನಿಸಿರ್ದ ಸವಿಯಿನೊದವಿದ ತೊವೆಯಂ . . . ಉಂಡು (ಧರ್ಮಾಮೃ. ೦-೦೪೯); ಪೊಂಬೆಸಱ ಸೂಪವ ನೊಪ್ಪುವ ಮಾದುರಂಗಳಂ ಯುವತಿ ತೆರಳ್ಚಿ ಬಡ್ಡಿಸಿದಳ್ (ಪಚಕು. ೦೩-೦೬೦). **ಹೊಂಬೆಸರು** : "ಪೀತಮುದ್ಗಾ — ಹೊಂಬೆಸರು" (ಬಿತ್ಥ. ೯೯). **ಹೊಂಬೆಸಱ್** : ಹೊಂಬೆಸಱ ಸೂಪಮುದಱೊಳಗಿಂಬಾದುದು (ಜಾಲಕ, ೦೦-೦೬೬). **ಹೊಂಬೆಸಱು** : ಸಿಹಿತೊಂಡೆ, ಹೊಂಬೆಸಱು, ಕಳ್ಳಂಗಡಲೆ ಇವಂ ಕಷಾಯವಂ ಕಾಸಿ . . . ಪ್ರತಿಪಾಕ ಹಾಕಿ ಕೊಡುವುದು (ಚಿಕ್ಕಿ. ೦೩೩).

[ಪೊಂ (< ಪೊನ್) + ಪೆಸಱ್]

**ಪೊಂಬೆಳಗು, ಹೊಂಬೆಳಕು, ಹೊಂಬೆಳಗು** (ನಾ). ೧. ಹಳದಿಬಣ್ಣದ ಕಾಂತಿ ; ಹೊಂಬಣ್ಣದ ಪ್ರಕಾಶ : ಪೊಂಬೆಳಗುಮಂ ಪರವುತ್ತದು ... ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯುಮಂ ಪಣೆಗಣ್ಣುರಿ ಹಂಪೆಯಾಳ್ದನಾ (ಗಿಂಂ೯. ೬-೪೭). **ಹೊಂಬೆಳಕು** : ೨. (ಆಲಂ) ಜ್ಞಾನದ ತೇಜಸ್ಸು; ಅರಿವಿನ ಬೆಳಕು : ತಂಬೆಳಕಾಗಲಿ ನಂಬೆಳಕೆನುವೊಲು ಹೊಂಬೆಳಕೇ ಹೊರಸೂಸಲಿ (ಅರಳು. ೩೦೦-೭); ಈಚೆಗೆ ಪಾಶ್ಚಾತ್ಯ ಶಿಕ್ಷಣರಂಗದಲ್ಲಿ ಸಂಶೋಧನೆಯ ಹೊಂಬೆಳಕು ಬಿದ್ದು, ಅಲ್ಲಿನ ಬೋಧನ ಕ್ರಮ ಬಹುವಾಗಿ ಉತ್ತಮಗೊಂಡಿದೆ (ಶಿಕ್ಷಕ. ೨೦೪). **ಹೊಂಬೆಳಗು** : ೧. ಅಸಿಯಳಿ ಕಂಡಪ್ಪಿ ಜ್ಯೋತಿ ಪ್ರಜ್ವಲಿಸಲು ಮಸುಳಿಸದೆ ಜ್ಯೋತಿ ಹೊಂಬೆಳಗಾಯಿತಮ್ಮ (ಅಶಕಂ. ೨೯೯-೦೩೦೫). [ಪೊಂ (< ಪೊನ್) + ಬೆಳಗು₁]

**ಪೊಂಬೊಂಬೆ, ಹೊಂಬೊಂಬೆ** (ನಾ). ಚಿನ್ನದ ಗೊಂಬೆ; ಸ್ವರ್ಣಪುತ್ಥಳಿ : ಕಂದರ್ಪನೆಂಬ ಡೊಂಬನ ಚಂದದ ಪೊಂಬೊಂಬೆವಿಂದು ನೆರೆದತ್ತಾಗಳ್ (ಹಮ್ಮಿ. ೨-೬೦). **ಹೊಂಬೊಂಬೆ** : ನನ್ನ ಸರಿಹರೆಯದ ರಮಣಿಯರು ಹೊನ್ನ ಸಸಿ ಹೊಂಬೊಂಬೆ ರನ್ನದ ಚಿನ್ನ ಕನ್ನಡಿಯೆನಿಪ ಮಕ್ಕಳ ನೋಡಿ ಪಾಡುವರು (ಹಾಳ್ಳಾ. ೬-೦೦); ಇಟ್ಟ ಕಿರೀಟ ಮೂಡುವ ಸೂರ್ಯನಂತೆ ಮೈಗಟ್ಟು ಹೊಂಬೊಂಬೆಯಂತೆಸೆಯೆ ಬೆಟ್ಟವ ನಡೆಸುವಂತಾ ರಾಯ ಮುಂದಕೆ ಪಟ್ಟದಾನೆಯ ನಡೆಸಿದನು (ಚರಕ. ೨೦-೬೨).

[ಪೊಂ (<ಪೊನ್) + ಬೊಂಬೆ]

**ಪೊಂಬೊಗರ್, ಹೊಂಬೊಗರು** (ನಾ). ೧. ಚಿನ್ನದ ಕಾಂತಿ.—ಹೊಳಪು. ೨. ಚಿನ್ನದ ಬಣ್ಣದ ಕಾಂತಿ; ಹೊಂಬಣ್ಣದ ಪ್ರಕಾಶ.—ಹೊಳಪು : ಕೆಂಬೊಗರಿನ ಸಿರಿಯಿಂದಂ ಮೊದಲೊಳ್ ಪೊಂಬೊಗರಿಂದಂ ಸಮನಂತರದೊಳ್ ಅಂಬರಕೇರುತ ಚಂದ್ರಂ ತುದಿಯೊಳ್ ಬೆಳ್ಪೆಳಗಿಂ ಮೆರೆದಂ (ಜಾತಕ. ೦೫೯); ಒಪ್ಪಿನಿಂ ಕುಣಿವ ಪರಿಜಂ ನೆರೆದು ಜೋಲ್ದವಿರ ಕಪ್ಪು ಬೆಳ್ಪುಗಳ ಪೊಂಬೊಗರ ನೇವರಿಸಿ . . . ಹಬ್ಬುಲಿಯು ಬರುತಿಹುದು (ಕಾಂಡ. ೯೯-೦೬೬). ೩. ವಿಶೇಷವಾದ ಕಾಂತಿ,—ತೇಜಸ್ಸು : ನಗೆಮೊಗದ ಪೊಂಬೊಗರ ಮಿಂಚಿನ ಬೊಗಸೆಗಂಗಳ ಸೆಳೆನಡುವ ಸೆಳ್ಳುಗುರ ಬೆಡಗಿನ ಕಾಂತೆ ರಂಜಿಸುತಿರ್ದಳಾ ಪುರದಿ (ಪಚಕು. ೨-೨೪). **ಹೊಂಬೊಗರು** : ೧. ಕವಿಯೊಬ್ಬ ಚಂದ್ರೋದಯವನ್ನು ನೋಡುತ್ತಿದ್ದಾನೆ . . . ಪೂರ್ವದಿಶೆಯಲ್ಲಿ ತಣ್ಣನೆಯ ಹೊಂಬೊಗರು ಹಬ್ಬುವುದು ಕಣ್ಣಿಗೆ ಬೀಳುತ್ತದೆ (ಸೌಂದರ. ೦೦).

[ಪೊಂ (<ಪೊನ್) + ಪೊಗರ್₂]

**ಪೊಂಬೊಗರಿ, ಪೊಂಬಗರಿ, ಹೊಂಬುಗುರಿ, ಹೊಂಬೊಗರಿ** (ನಾ). ಬಂಗಾರದ ಬುಗುರಿ ; ಚಿನ್ನದ ಬೊಗರಿ : ಅವಳ ನೆಲೆ ವೊಲೆಗೆ ತಾವರೆವೊಗ್ಗೆ ಪೊಂಬೊಗರಿಗಳೆಳೆಯೆಂದು ಭಾವಿಪನವನೆಗ್ಗನಲ್ತೆ (ಕುಂದಾಸಾಂ. ೬-೨೬) ; ಪೊಂಬೊಗರಿಯಂತಿರ್ಪ ಸುಣ್ಣೊಲೆಯ ದ್ಮುಗುಯುಗಳದಿಂ ನೋಡಿ (ಪೋಹಚ. ೦೯-೮೨). **ಪೊಂಬಗರಿ :** ವೊಳೆತುವು ವೊಲೆ . . . ಪೊಂಬಗರಿಯ ಬೆಳುಗಾಯ ಕರಂಡದಡೆ ವಕ್ಕಿಯ ಕಳಸದ ದೊರೆಯೆನೆ ಪರಿವಿಡಿಯಿಂ ಸುಕುಮಾರಿ ಸುರೋಚನೆಗೆ (ಜಯುಕಾ. ೩-೨೪). **ಹೊಂಬುಗುರಿ :** ಪೊಳ್ತರೆ ಬಂದು ನಿಶಿಯ ಬೋಗುಣಿ ಯೊಳಕೆ ಹೊಂಬುಗುರಿಯಸೆದು ತಾರೆಯರಳುಗಳನಲ್ಲಿಂದೆ ಚೆಲ್ಲಾಡಿಹನು (ಅಮರ. ೧-೧). **ಹೊಂಬೊಗರಿ :** ಹೊಳೆವ ಹೊಂಬೊಗರಿಗೆ ಬೆವಟಕ್ಕೆ ಕೈಯಾರ ಬೆಳಗಿದೊಡೊಪ್ಪುವೆತ್ತಂತೆ ಅಳಲುವ ರತಿಯುರಸ್ಥಳದೆ ಭಸ್ಮಾಂಕಿತ ಕಳಸಕುಚುಗಳೊಪ್ಪಿದುವು (ಪೋಹಚ. ೬-೨೨).

[ಪೊಂ (< ಪೊನ್) + ಬೊಗರಿ (< ಬವರಿ)]

**ಪೊಂಬೊಡೆಯ** (ನಾ). = ಪೊಂಬಸಿಬಿ : "ಪೊಂಬೊಡೆಯನಂಚಿದೇರಂ . . . ಬ್ರಹ್ಮಗೆಸೆವ ನಾಮಂ" (ಅಭ್ನಿಕಾ. ೯) ; ಸುರರಾಜನ್ಯೆತಂದು ಪೊಂಬೊಡೆಯಗಿಂತೆಂದು ಬಿನ್ನಮಿಸಿದಂ (ಶಂಕಾರಾ. ೧-೦೫-೯೩) ; ಮಹಾತಪದಿನೊಲಿಸಿ ಪೊಂಬೊಡೆಯನಂ ಪಡೆದನಾ ರಾವಣಂ ತ್ರೈಲೋಕ್ಯರಾಜ್ಯಾಧಿಕೃತಿಪದವನು (ಶೀಪಠಾ. ೫-೯೬). [ಪೊಂ (< ಪೊನ್) + ಪೊಡೆ್ಯ + -ಅ]

**ಪೊಂಬೊರಜೆ** (ನಾ). ಚಿನ್ನದ ಹಗ್ಗ : ಬೆಳಗುವ ದಂತ ಪೊಂಬೊರಜೆ . . . ಪೊಕ್ಕುಳ ಘಂಟೆಯೆಳಸಲೆಯ್ತಂದುದಾ ಹಸ್ತಿ (ಕುಂದಾಸಾಂ. ೭-೯೯) ; ಕರದ ಪಟ್ಟೆಯ ಕೊಂಬಿನ ಸೂನಗಿ ಪೊಂಬೊರಜೆ[ಪಾಠಾಂ. ಜಿ]ಮೆಟಿಯೆ . . . ಕರಿ ಕರಿಗಳು ತಾಗಿದವು (ಕುಂದಾಸಾಂ. ೦೨-೦೦೨).

[ಪೊಂ (< ಪೊನ್) + ಪೊರಜೆ]

**ಪೊಂಭಾಂಡ** (ನಾ). ಚಿನ್ನದ ಪಾತ್ರೆ; ಸ್ವರ್ಣಭಾಜನ : ಅಡಲೊಡ ಚುವ ಪೊಂಭಾಂಡಗಳ ಕರ ಬೋನಗಡಣವ ಕೊಟ್ಟಸುತ್ಸವದಿ (ಪೋಹಚ. ೦೫-೦೯). [ಪೊಂ (< ಪೊನ್) + ಭಾಂಡ]

**ಪೊಂಭಿತ್ತಿ** (ನಾ). ಚಿನ್ನದಿಂದ ನಿರ್ಮಿತವಾದ ಗೋಡೆ; ಬಂಗಾರದ ಗೋಡೆ : ಆ ಸಭಾಮಂಟಪದ ಪೊಂಭಿತ್ತಿಗೋಪುರದಿ ಲೇಸಿನ ವಿಚಿತ್ರ ಪತ್ರುಮನಿರದೆ ರಚಿಸಿ (ಪಪಪೋ. ೨೦-೦೭). [ಪೊಂ (< ಪೊನ್) + ಭಿತ್ತಿ]

**ಪೊಂಭುಣಶೆ** (ನಾ). ಒಂದು ಬಗೆಯ ಮರ : ಅನ್ತೆ ತುಟ್ಟಿಲ ಪೇಟಿಸೊ ಟ್ಟಿಯೆ ಕೆಮ್ಬುರೆಯ ಗುಮಿಪುಣಸೆಯ ಅಲೆ ಪೊಮ್ಬುಣಶೆ ಅನ್ತೆ ಬಳಿಪುಣು ಶೆಯೆ (ಎಕ. XVI, ತಿಪಟೂ. ೦೯೦-೬೮ ; ಸು. 900).

[ಪೊಂ (< ಪೊನ್) + < ಪುಳಿಸೆ]

**ಪೊಕ್ಕ**1 'ಪೊಗು' ಪರಾ.

**ಪೊಕ್ಕ**2 (ನಾ). 'ಲೆಕ್ಕ' ಶಬ್ದದ ಜೊತೆ ಬರುವ ಪ್ರತಿಧ್ವನಿಪದ : ಉಳ್ಳೋಮುಗಳೊಳಗೆನಿತಜೀವುಳ್ಳರ್ಗಂ ತಿಳಿಪಲರಿಯದೆನಿಪೆಡೆಗಳುಮಂ ತಳ್ಳಗಿರೆ ತಿಳಿಪುಗುಂ ಬೆಸಗೊಳ್ಳೆ ಗುಣಾರ್ಣವನ ಲೆಕ್ಕಮುಂ ಪೊಕ್ಕ[ಪಾಠಾಂ. ಬಿಂಕ]ಮುಮಂ (ಶಂಶಠಾ. ೫-೩೫) ; "ಪೊಕ್ಕಮುಮಂ = ಲೆಕ್ಕಪಕ್ಕಗಳನ್ನು" (ಶಂಶದೀ. ೬೯). [?]

**ಪೊಕ್ಕರಣಿ** 'ಪೊಕ್ಕರಣೆ' ನೋ.

**ಪೊಕ್ಕರಣೆ, ಪೊಕ್ಕರಣಿ, ಹೊಕ್ಕರಣಿ, ಹೊಕ್ಕರಣೆ, ಹೊಕ್ಕರಣೆ, ಹೊಖರಣೆ** (ನಾ). ೧. (ದೇವಸ್ಥಾನದ ಬಳಿಯಿರುವ ಪವಿತ್ರವಾದ) ಕೊಳ ; ಕಲ್ಯಾಣಿ : ತೀವಿದ ಪೊಕ್ಕರಣೆಗಳ ನೆಟಿದ ಕೆಟಿಗಳ ಸರೋವರಂಗಳ ಬೆಡಂಗುಗುಂದಲೆ ಪುರದೊಳ್ (ಸುಕುಮಾ. ೯-೫೦); ಇಕ್ಕೆಲ ದೊಳಗೊಪ್ಪುವ ಕರಣೆಕಶಾಲೆ ಪೊಕ್ಕರಣೆಗಳೆರುತಿಹವು (ಶಂಜಿಶ. ೩-೩೫). **ಪೊಕ್ಕರಣಿ :** ೧. ಮಲ್ಲಿಕಾರ್ಜುನದೇವರ ಗಟ್ಟಿಯಿಂ ಪಡುವಲು ಪೊಕ್ಕರಣಿಯಿಂ ಬಡಗಲು ಬಿಟ್ಟ ಗಟ್ಟಿ (ಎಕ. VII, ಶಿಕಾ. ೦೯-೨೬; 1066). **ಹೊಕ್ಕರಣಿ :** ೧. ಪಾಯಬ್ಬ ಬಿಂಡನಕಳ ಹೊಕ್ಕರಣಿಯ ಬಡಗಣ ದತ (ಎಕ. V, ಹಾಸನ. ೬೦-೯೩ ; 1218) ; ಕೆಟಿ ಬಾವಿ ಹೊಕ್ಕರಣಿ ದೀರ್ಘಿಕೆ ಕೊಳು ಪಳ್ಳಂಗಳು ತಸತೆನಗೆ ನೇಮಿಸಿರ್ಪುವು ಲೆಕ್ಕಮಿಲ್ಲ (ಶಬರ್ಣ. ೦೨-೨೯) ; ಬಲುವುದರವು ನರಕದ ಹೊಕ್ಕರಣಿ (ಜನಾಕೋ. ೬೭-೬). **ಹೊಕ್ಕರಣೆ :** ೧. "ಪಾತಾ, ಪುಷ್ಕರಿಣೀ—ಈ ೨ ಹೊಕ್ಕರಣೆ" (ಕರಾಚಿಯು. ೦೦೧-೫೩) ; ದೇವರ ಹೊಕ್ಕರಣೆಯಿಂದ ಮೂಡಣ ದೆಸೆಯೊಳು . . . ಮತ್ತರೊನ್ದಂ ಬಿಟ್ಟರು (ಕಶಿಇ. IX-I, ೦೫೩-೫೯ ; 1083) ; ಗುರುಲಿಂಗಜಂಗಮಕ್ಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ ನಾಲ್ಕು ಪುರುಷಪ್ರಮಾಣದ ಘಾತ (ಶಕ್ಕಶ. ೪. ೦೫೬-೩೩೭) ; ಒರೆದ ವಜ್ರದ ಗಾರೆಗಳ ಹೊಕ್ಕರಣೆಗಳ ಸಾಲುಗಳು ಯೋಜನವೆರಡಟಿ ಘೃತತೈಲದುಗ್ಧಾದಿಗಳಿಗೆಡೆಯಾಯ್ತು (ಕೂರಠಾ. ೧-೭-೬). ೨. ಕಮಲಗಳಿಂದ ತುಂಬಿರುವ ಕೊಳ ; ತಾವರೆಕೊಳ : (೩). **ಹೊಕ್ಕರಣೆ :** ೧. ಹಿರಿಯ ಹೊಕ್ಕರಣೆಯಿಂ ತೆಂಕಣ ಹೆಗ್ಗೆಱೆಯೊಳಗಣ ಮತ್ತರಾಜು ಕಮ್ಮಂ ನಾಲ್ನೂಱಯ್ವತ್ತು (ಹಾಸಕ. ೯೭-೫೫ ; 1107 ?). **ಹೊಖರಣೆ :** ೧. ಹೆಗ್ಗಡೆ ಶ್ರೀಪದ್ಮನಾರಾಯಣದೇವರ ಮುಂದಣ ಹೊಖರಣೆಯ × × × ಗೆಳ್ಸ ದೇವರ ಉಪಹಾರಕ್ಕೆ (ಎಕ. XI, ಹೊಳಕ್ಕೆ. ೦೯-೮೭ ; 1210).

[< ಪ್ರಾ. ಪೋಕ್ಖರಿಣೀ, ಪುಕ್ಖರಿಣೀ./ಸಂ. ಪುಷ್ಕರಿಣೀ]

**ಪೊಕ್ಕಳು** 'ಪೊಕ್ಕುಟು' ನೋ.

**ಪೊಕ್ಕುಟು** 'ಪೊಕ್ಕುಟು' ನೋ.

**ಪೊಕ್ಕೆ** (ನಾ). ಹಾದರಗಿತ್ತಿ ; ಜಾರೆ : 'ನಾನು ಆ ಮಾಸ್ತರನ ಸುದ್ದಿ ತೆಗೆದ ಕೂಡಲೆ . . . ಒಡಿದಳಲ್ಲ ಹೆಣ್ಣುನಾಯಿ—ಪೊಕ್ಕೆ (ಮೂರೂರು. ೦೯೪).

[← ತುಳು. ಪೋಕೆ = ವ್ಯಭಿಚಾರಿ]

**ಪೊಕ್ಕು**1 'ಪೊಗು' ಪರಾ.

**ಪೊಕ್ಕು**2, **ಹೊಕ್ಕು**2 (ನಾ). ಮಗ್ಗದ ನೆಯ್ಗೆಯಲ್ಲಿ ಅಡ್ಡವಾಗಿ ಹಾಕುವ ಎಳೆ : ಪಾಸಿನ ಪೊಕ್ಕಿನ ಮಾಣಿಕದ ಕಾಂತಿಯ . . . ಕೂಟದಂತೆ ಮಹಾಪುರುಷರ ಸಮ್ಯಕ್ತ್ವದೊಳಾದ ಕೂಟಮುಮತಿಶಯಂ (ಧರ್ಮಾಮೃ. ೫-೦೯೯). **ಹೊಕ್ಕು**2 **:** ಒಂದೆ ಕಾಲೊಳ್ ಪರಿವೆನೆಂಬ ಹೊಕ್ಕಿಲ್ಲದೆ ಸೀರೆಯು ನೆಯ್ವೆನೆಂಬ . . . ಪರ್ಗಾವಿಲನು ಪೋಲ್ಕುಂ (ಧರ್ಮಾಮೃ. ೫೦-೦೬ ಅಂತರ್) ; ಅಡ್ಡಕ್ಕೆ ಬೀಳುವ ನೂಲುಗಳು 'ಹೊಕ್ಕು' ಎನಿಸುವುವು (ಪಾಲ್ಕು. I, ೯೨೦). [< ಪೊಗು]

**ಪೊಕ್ಕುಂದ** 'ಪೊಂಕುಂದ' ನೋ.

**ಪೊಕ್ಕುಳ್** 'ಪೊಕ್ಕುಟು' ನೋ.

**ಪೊಕ್ಕುಳವಕ್ಕಿ** 'ಪೋರ್ಕುಳಿವಕ್ಕಿ' ನೋ.

**ಪೊಕ್ಕುಳಿ** 'ಪೋರ್ಕುಳಿ' ನೋ.

**ಪೊಕ್ಕುಳಿವಕ್ಕಿ** 'ಪೋರ್ಕುಳಿವಕ್ಕಿ' ನೋ.

**ಪೊಕ್ಕುಳು** 'ಪೊಕ್ಕುಟು' ನೋ.

**ಪೊಕ್ಕುಳುಘಂಟೆ** (ನಾ). ಮಕ್ಕಳಿಗೆ ಉಡಿದಾರದಂತೆ ಕಟ್ಟುವ, ಘಂಟೆ ಯಾಕಾರದ ಒಂದು ಬಗೆಯ ಆಭರಣ : ಅರಳೆಲೆಯು ಮಾಗಾಯಿ . . . ಪೊಕ್ಕೊ[ಕ್ಕು]ಳುಘಂಟೆ ಪಾಲ್ಗಡಗ ಗೆಜ್ಜೆ ಸಹ ಬಾಲದೊಡವಾ ಪರಿಪರಿಯ ರತ್ನಖಚಿತಾಭರಣಗಳನಿಟ್ಟು (ಪಪಪೋ. ೦೫-೫೦).

[ಪೊಕ್ಕುಳು (< ಪೊಕ್ಕುಟು) + ಘಂಟೆ]

**ಪೊಕ್ಕುಳ್ಗೊಯ್** (ಕ್ರಿ). (ಮಗುವು ಹುಟ್ಟಿದ ತಕ್ಷಣ) ಹೊಕ್ಕುಳು ಬಳ್ಳಿಯನ್ನು ಕತ್ತರಿಸು : ಪುಟ್ಟಲೊಡನೆ ಪೊಕ್ಕುಳ್ಗೊಯ್ದು ಬೆನ್ನೀರಟ್ಟಿ . . . ಕೌರಿನ ಹೊಗೆಗೊಟ್ಟೊಪ್ಪುವಿದರು ಬಾಲಕನನು (ಶ್ರೀಚಾ. ೨-೭೭).

[ಪೊಕ್ಕುಳ್ (< ಪೊಕ್ಕುಟು) + ಕೊಯ್]

**ಪೊಕ್ಕುಟಿ಼್**, **ಪೊಕ್ಕಳು**, **ಪೊಕ್ಕಟು**, **ಪೊಕ್ಕುಳ್**, **ಪೊಕ್ಕುಳು**, **ಪೊಕ್ಕುಟು**, **ಪೊಕ್ಕುೞ**, **ಪೊಕ್ಕುೞ್**, **ಪೊಕ್ಕುೞಟಿ಼್**, **ಹೊಕ್ಕಳು**, **ಹೊಕ್ಕುಳ್**, **ಹೊಕ್ಕುಳ**, **ಹೊಕ್ಕುಳಂ**, **ಹೊಕ್ಕುಟಿ**, **ಹೊಕ್ಕುಟು** (ನಾ). ೧. ಹೊಟ್ಟೆಯ ಮೇಲಿರುವ ಸಣ್ಣ ಕಣಿ ; ನಾಭಿ : ಈಕೆಯ ಪೊಕ್ಕುಟ ಚೆಲ್ವೀ ಲೋಕದೊಳತಿಸೇವ್ಯಂ (ಧರ್ಮಾಮೃ. ೩-೦೯೭) ; ಅರಿಸಿನ ದಂಟಿಯನಿನಿಸೋಸರಿಸಲುಮಾಯದೆ ಯಶೋದೆಯಾತಂ ಪೀತಾಂಬರನೆಂದು ಧರೆಗೆ ಪೇಟ್ವಂತಿರೆ ಪೊಕ್ಕುಟಿ಼ೊಳಿಕ್ಕಿದಳ್ ಪಯೋಜೋದರನಾ (ಅರನೇ. ೭-೫೩) ; ಒಸಗೆಯ ಮೇಲೆ ಮತ್ತೊಸಗೆ ಪೊಕ್ಕುಟ ಪೆರ್ಚಿನ ಮೇಲೆ ಪೆರ್ಚು . . . ಪಸರಿಸುವಂತಿರಗ್ರಜೆ ತನೂಭವನಂ ಪಡೆದು (ಅನಂಪು. ೦೨-೮೦). **ಪೊಕ್ಕಳು**: ೧. ನಿನ್ನ ನಡೆ ಜಗವ ಈರಡಿ ಮಾಡಿತು ನಿನ್ನ ಪೊಕ್ಕಳು ಸರಸಿಜ ನಾಭನ ಪಡೆಯಿತು (ಪುರಂದ. ೫-೦೭೦-೦೯೨). **ಪೊಕ್ಕಟು** : ೧. "ಪೊಕ್ಕಟು ನಾಭಿಯಕ್ಕು" (ಪಂಗರಾ. ೯೭-೦೩). **ಪೊಕ್ಕುಳ್** : ೧. ಹರಿಯ ಪೊಕ್ಕುಳ ಕನಕಾಂಬುಜದೊಳುದಯಿಸಿದಾ . . . ಬ್ರಹ್ಮಂ (ನಾಂದೇಡ್. ೨೯-೭ ; 12ನೆಯ ಶತ) ; ಅಡಿ ತಳಿರ್ಗಳ್ ಕುರುಳ್ ತುಂಬಿಗಳ್ . . . ಪೊಕ್ಕುಳೇ ಕೊಳಂಗಳ್ (ಜಿಬಪು. ೯೫-೩೪). ೨. ಮಧ್ಯಭಾಗ ; ಕೇಂದ್ರ : ಪರಿಗೋಲನೇರ್ದು ಪೊಳೆಯಂ ಪಾಯ್ದು ಪೋಪವಂ ಪೊನಲ ಪೊಕ್ಕುಳ್ಗೆ ಬರೆ ಕಾಣ್ಬನದೊ ; ರಂಧ್ರದಿಂ ನೀರೊಳ್ಕಿ ನುಗ್ಗುತಿರ್ಪುದು ಬುಗ್ಗೆಯೋಲ್ ! (ಶ್ರೀರಾಮಪಾ. ೭೭-೩೦೦). ೩. ಒಳಗು ; ಒಳಭಾಗ : ಪೊಳೆಗಳ ಮೂರರ ಪೊಕ್ಕುಳೊಳಿರ್ಪನ ಮೃತ್ಯುಂಜಯಾ ಎನ್ನಿರೊ (ಶಕ್ತಿಸ. I. ೨-೨). **ಪೊಕ್ಕುಳು** : ೧. ಚಿಪ್ಪಿರದೆ ಪೊಕ್ಕುಳಲಿ ಬೆಳೆದು ಬಾಸೆನಾಳದ ಸರಸಿಜವೆನೆ ಕೃಷ್ಣಗೆಸೆಗು (ಪರ್ದಶ. ೭-೩೦) ; ಎಸೆವ ತಿಲಕದ ನೊಸಲ ನೆಲೆಮೊಲೆಯ ನೀಳ್ದ ಬಾಸೆಯಗುಳಿದ ಪೊಕ್ಕುಳಿನ . . . ಸೊಬಗಿನ ನಾರಿ ಸಕಲಸೌಖ್ಯಾಧಾರಿ (ಚಬಪು. ೩೭-೦೦). ೪. ದ, ಪ, ಬ ಮುಂತಾದ ಕೆಲವು ಅಕ್ಷರಗಳಿಗೆ ನಡುವೆ ಬರುವ ಒಳಸುಳಿ : ಪೊಕ್ಕುಳು ತಲೆಕಟ್ಟುಮನನ್ಯಕ್ಕರದವಯುವಮನಱಿದು ಖಣ್ಡರಿಸಲುಕೀ ಇಟ್ಕುಡನೆ ಬಲ್ಲನ್ (ಎಕ. XI. ದಾಪಡ. ೦೯೯-೨೫ ; 1113). **ಪೊಕ್ಕುಟು** : ೧. ನಗೆಗಣ್ ನೀಳಸಹಸ್ರಪತ್ರದೆಸಟಂ . . . ಪೊಕ್ಕುಟು ನಂದಿಪಟ್ಟದರಲಂ ಚೆಲ್ವಿಂದುಗುೞ್ದಡೆ ಕೇದಗೆಯಂ . . . ಪುಷ್ಪಾಸ್ತ್ರನ ಪಂಚಬಾಣಮಿಪಳೆಂಬಾಶಂಕೆಯಂ ಮಾಡಿದಳ್ (ಧರ್ಮಾಮೃ. ೭-೨೦೭). **ಪೊಕ್ಕುೞ**: ೧. ಪುಂಗಯ್ ಮೊಗಂ ಪೊಕ್ಕುೞ ಕಿಟ್ಟಿಪ್ಪಡೆ . . . ಪುರ್ವಳ್ಪೆ ಪಲ್ ಕೆಕ್ಕ ಕಾಲಡಿಯೆಂದಿಂತಿಪನುರ್ಚೆ ಪೋದುವಿಸೆ ತತ್ಸಾಜನ್ಯಕಂದಾಂಕುರಂ (ಶಾಂತಿಪು. ೯-೦೭). **ಪೊಕ್ಕುೞ್** : ೧. ನಿರುತಂ ಶ್ರೀಯುತಪುರಮೆಂಬಿಂದ್ರಾಪರಜನ ಮಧ್ಯದ ಪೊಕ್ಕುೞಳ ಹೋದಾವರೆಯೆನೆ ರಂಜಿಪ ರಾಜಾಲಯಮೆಸೆಯುತ್ತಿರಲ್ (ಜಯುಕಾ. ೦-೭೭) ; ಪೊಕ್ಕುೞಳೊಳ್ ವೇದಾಗಮಸೃಷ್ಟಿಕರ್ತೃ ಮೂದೇವರೂಪ ಚಂದ್ರನ ಕಣ್ಣೊಳಗಾಂತ ಮಾಧವನಿರವ ನೋಡಿದಳು (ಮೋಹತ. ೨೯-೪೪). ೫. ಚಕ್ರದ ಮಧ್ಯಭಾಗ ; ಗುಂಬ : ದರುಮದ ಚರಕಂ ನನ್ನಿಯ ಪೊಕ್ಕುೞಳುಮರಿವು ಸಮಾಧಿ ಧೃತಿಯುಮಿರೆ ನೇಮಿ ಅರಮನೆ ನಯ ವಿನಯಮುಮಂ ಹಿತಕಾ ಪರಿಷದದೊಳವಂ ನಡೆಯಿಸಿದಂ (ಶಾಂತಂದ. ೩-೦೦). **ಪೊಕ್ಕುೞಟಿ಼್** : ೧. "ನಾಭಿ ಪೊಕ್ಕುೞಟೆಂದಱಿವುದು" (ವಸ್ತುಕೋ. ೭೮-೬) ; ಕೊಂದೆನ್ನ ಮಗನನಿಂ ಭಯದಿಂದಂ ರಸಪೊಕ್ಕುಮಜನ ಗುಂಡಿಗೆಪೊಕ್ಕುಂ ಮಂದರಧರನೀ ಪೊಕ್ಕುೞಟ ಪೊಂದಾವರೆಪೊಕ್ಕು ಮೇಣವಂ ಬರ್ದುಕುವನೇ (ಶಂಕಥಾ. ೦೦-೦೨೦) ; ಆ ಮಹೀಪಾಲನ ಲೋಲಲೋಚನಂಗಳಾಕೆಯ ಲಾವಣ್ಯರಸಕೂಪದಂತೆ ನಿಮ್ನಮಾದ ಪೊಕ್ಕುೞಟಂ ಪೊಕ್ಕಱಿದುಂ . . . ತನುಲತೆಯೊಳ್ಪುಳಕಾಂಕುರಮನೊದವಿಸುತ್ತುಮಿರೆ (ಮಲ್ಲಿಪು. ೩-೮೮) ; ಎಳೆವೆಣ್ಣ ಪೊಕ್ಕುೞಟಲಗೊಂಡೆಯಂತಿರೆ ಪೊಂಬೆಟ್ಟಂ . . . ಕಣ್ಗೊಳಿಕುಂ (ರಾಮಾಕ್ಷ. ೭-೩). ೪. ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊಕ್ಕುೞಟಿ ಚೆಲ್ವು . . . ಪೋದಿರಲಕ್ಕರಕ್ಕೆ ಬರೆವಂ ಚತುರರ್ ಪರಿವರ್ಣಿಸಲ್ ನವಿಲ್ಗುಂದದ ಮಾದಿರಾಜವಿಬುಧಂ (ಪುಷ್ಪಪು. ೦೪-೫೮). **ಹೊಕ್ಕಳು** : ೧. "ನಾಭಿಃ . . . ಹೊಕ್ಕಳಿಗೆ ಹೆಸರು" (ಸಿದ್ಧಾಂತಿ. ೯೦೭) ; ಭೀಮನು ಹೊಕ್ಕಳ ಕೆಳಗೆ ಹೊಡೆದನಲ್ಲಾ . . . ಹೊಕ್ಕಳಿಂದ ಕೆಳಗೆ ಹೊಡೆಯಕೂಡದೆಂಬುದು ನಿಯಮ (ಶತಶಾ. ೩೦೮). **ಹೊಕ್ಕುಳ್** : ೧. ಹೊಕ್ಕುಳಿಂದ ಕೆಳಗೆಯು ಧರಿಸುವರಿಗೆ ಅಕ್ಕು ನೋಡು ಮಹಪಾತಕವವರಿಗೆ (ದೀಕ್ಷಾಬೋ. ೭೫ ೦೩೫). ೨. ಅರ್ಚನೆಯ ಮಂಟಪವಂ ನಿಮಿರ್ಚಿ ನಡುವೆ ಕಟ್ಟಿದ ಮೇಲ್ಕಟ್ಟಿನ ಹೊಕ್ಕುಳ ಪುಲ್ಲಿಯ ತೊಂಗಲ್ಗಳಂ (ಕೇಶಿರ. ಹ. ೩೦೯-೫). **ಹೊಕ್ಕುಳ** : ೪. ಹೊಕ್ಕುಳ ಎಂಬುದು ಕೆಲವು ಅಕ್ಷರಗಳಿಗೆ ನಡುವೆ ಬರುವ ಒಳಸುಳಿ. ದ, ಪ, ಬ – ಇಂತಹ ಅಕ್ಷರಗಳಲ್ಲಿ ಹೊಕ್ಕುಳವನ್ನು ಕಾಣಬಹುದು . . . ಕೆಲವು ಅಕ್ಷರಗಳಿಗೆ ಹೊಟ್ಟೆ ಹೊಕ್ಕುಳಗಳಿಲ್ಲ (ಸಂಕೋಧ. ೦೦). ೬. (ಅಲಂ) ಹೊಟ್ಟೆ ; ಬಸಿರು: ಎಲೆ ಆತ್ಮನೆ ಪಾತಕದ ಹೊಕ್ಕುಳದಲೇಕೆ ಹುಟ್ಟಿದೆ (ಪೋಲೀಸಶಾ. ೦೦-೩೪). **ಹೊಕ್ಕುಳು** : ೧. ತ್ರಿವಳಿ ಮೈಗರೆಯ ಹೊಕ್ಕುಳ ಗುಣ್ಪು ಹೊಱಸೂಸೆ (ಬಸರ. ೦-೦೦೭) ; ಪುಷ್ಪವ ತಂದು ನಿನಗರ್ಪಿಸುವೆನೆಂದರೆ ಪುಷ್ಪ ಪಲ್ಲವಿಸಿದೆ ಹೊಕ್ಕುಳಲಿ (ಪುರಂದ. ೨-೭೭-೨). ೪. ಅನೇಕರು . . . ಹೊಕ್ಕುಳು, ತಲೆಕಟ್ಟು ಮುಂತಾದ ಅಕ್ಷರಗಳ 'ಅವಯವ' ಗಳೆನ್ನರಿತು ಕೆತ್ತಬಲ್ಲೆವೆಂದೂ ಹೇಳಿಕೊಂಡಿದ್ದಾರೆ (ಕಶಾಶಿ. ೭೩). ೬. ಬಿಡದೆ ಪಾಂಡುಕುಮಾರರಡಗಲಿ ಹರಿಯ ಹೊಕ್ಕುಳಲಿ . . . ರಿಪುಗಳ ಕಡಿದು ತಿನಿಸುವೆನು (ಕುಮ್ಯಾಶಿ. ಓಂ೩. ೨೫-೦೩). **ಹೊಕ್ಕುಟಿ**: ೧. "ತುಂದಿಯೆನೆ ಬುಗುಡು ಹೊಕ್ಕುಟಮೆನಿಕು" (ಮಂಗರಾ. ೦೧೪-೫). **ಹೊಕ್ಕುಟು**: ೧. ಹೊಕ್ಕುಟು ಬುಗುಡುಳ್ಳವನು. ತುಂಡಿಲ, ತುಂಡಿ (ನಾಚರಾ. ೬).

**ಪೊಕ್ಕುಳ ಅರಸುಮಕ್ಕಳು** = ಪರಸ್ಪರ ಸಂಬಂಧವುಳ್ಳ ರಾಜವಂಶ : ಅತ್ತಲಿದ್ದರು ಸೆಟ್ಟಿಮುದ್ಯರು, ಗುತ್ತಿನಡ್ಯಂತಾಯರು, ಇತ್ತ ಪೊಕ್ಕುಳ ಅರಸುಮಕ್ಕಳ ಒತ್ತಿನಲಿ ಕಳದೆಡದಲಿ (ಕುಪು. ೩೮-೪). **ಪೊಕ್ಕುಳ ಘಂಟೆ**, **ಪೊಕ್ಕುೞಳ ಗಂಟೆ**, **ಪೊಕ್ಕುೞಳ ಘಂಟೆ**, **ಹೊಕ್ಕುಳ ಗಂಟೆ**, **ಹೊಕ್ಕುಳ ಘಂಟೆ** = ೧. ಆನೆ, ಕುದುರೆ ಮುಂತಾದ ಪ್ರಾಣಿಗಳ ಹೊಟ್ಟೆಗೆ (ಹೊಕ್ಕುಳಿನ ಭಾಗಕ್ಕೆ ಬರುವಂತೆ) ಕಟ್ಟುವ ಘಂಟೆ : ತಳೆದು ಕಾಲ್ಪರಜೆಯ ಪೊಕ್ಕುಳ ಘಂಟೆಯನೆಳಲಿಕ್ಕಿ ಬಿಗಿದು ಗುಳವನು . . . ಕರಿಯನೇಱಿ ಕಲಿಜೋದರೆಳ್ತಂದರಂದು (ಕುರಾಸಾಂ. ೦೦-೨೫) ; ಪೊಕ್ಕುಳ ಘಂಟೆ ಡೌಡೆ ಜಾಗಟೆರವಂ ತೀವಿತೆಣ್ದೆಸೆಯನಿರದೆ (ನವಮೋ. ೨೭-೭೦) ; ಪೊಕ್ಕುೞಳ ಗಂಟೆಯ ಮೋಹಿಸುವ ದೊಗವಡದ . . . ಪರಿದು ಶರಧಿಯನೆಡಗಲಿಪ ಗಗನಮನಡರ್ವ ಜಾತ್ಯಶ್ವಂಗಳ ವಳಯಮಂ (ಗಿಂಕ. ೬-೫೫ ವ) ; ಗರ್ಗರವ ತರಜಗತ್ತರಿಯ ಪೊಕ್ಕುೞಳ ಘಂಟೆಯ . . . ತುರಗಸಂಘಾತದಿಂ (ರಾಜಶೇ. ೬-೦೦ ವ) ; ಹೊಕ್ಕುಳ ಗಂಟೆ ಸೂಡಿದ ಸುವರ್ಣಗನ್ನಡಿ ಮೌಕ್ತಿಕಾವಳಿಯ ಜೋಡು (ಸಿಂಗಿರಾ. ೩೫-೭) ; ಕಟ್ಟಿದ ಹೊಕ್ಕುಳ ಗಂಟೆಯ ತೇಜಿಗಳಿಟ್ಟಣಿಸುತಲೈದಿದುವು (ಕಂಪಿ. ೨೩-೯೪) ; ನೊಸಲಗನ್ನಡಿ ಢಣರೆಂಬ ಹೊಕ್ಕುಳ ಘಂಟೆ ಮಿಸುನಿಬರಹದ ಹಾವರಣ ಬಸಿವ ಗಲ್ಲದ ಮದಧಾರೆಯಿಂದಾನೆಗಳ್ಮಸಗಿ ಬಂದುವು ರಾಯ ನೆಡೆಗೆ (ಭರತ. ೨೦-೬೨). ೨. ಮಕ್ಕಳಿಗೆ ಉಡಿದಾರದಂತೆ ಕಟ್ಟುವ, ಗಂಟೆಯಾಕಾರವುಳ್ಳ ಒಂದು ಬಗೆಯ ಆಭರಣ : ಪೊಕ್ಕುಳ ಘಂಟೆ ಪುಲಿನಖಂ . . . ಮಣಿಮಯಮುದ್ರೆಗಳ ಬೆರಳ್ಗಳಿಗಮರ್ಚಿ (ನವಮೋ. ೦೨-೦೮). **ಪೊಕ್ಕುಳ ಪುರಿ**, **ಹೊಕ್ಕಳ ಹುರಿ** = ಭ್ರೂಣ ಮತ್ತು ಗರ್ಭಾಶಯದಲ್ಲಿರುವ ಪೋಷಕಾಂಗವನ್ನು ಸಂಬಂಧಿಸುವ ನಾಳ ; ನಾಭಿನಾಳ : ನೆರೆದಿರ್ದ ವಾರಿಜಾಕ್ಷಿಯರು ಪೊಕ್ಕುಳ ಪುರಿಯ ಕೊಯ್ದು . . . ಉಪಚಾರಮಂ ಮಾಡುತಿರಲು (ನವಮೋ. ೦೦-೨೦); "ಹೊಕ್ಕಳ ಹುರಿ=

ಭ್ರೂಣವನ್ನೂ ಗರ್ಭಾಶಯದಲ್ಲಿರುವ ಪೋಷಕಾಂಗವನ್ನೂ ಸಂಬಂಧಿಸುವ ನಾಳ; ನಾಭಿನಾಳ" (ಅಸಂಪಾ). **ಪೊಕ್ಕುಳ ಬಳ್ಳಿ, ಹೊಕ್ಕುಳ ಬಳ್ಳಿ**=ಪೊಕ್ಕುಳ ಪುರಿ: ಮಿಡಮಿಡನೆ ಮಿಡುಕಿ ಪೊ[ಪಾಠಾಂ. ಹೊ]ಕ್ಕುಳ ಬಳ್ಳಿಯಂ ಕೊಯ್ದು (ಬಿಂತೋಠ. ೫. ೫೦೦-೨೯); ಬೆಳ್ಳಿಯ ಒಡಿಯ ಕತ್ತಿಯ ತಂದು ಹೊಕ್ಕುಳ ಬಳ್ಳಿಯ ಕೊಯ್ದಾರರ್ಭಕನ (ಸೋಷಕ. ೧೭-೨೦); ಜೀವ ಜೀವವ ಬಂಧಿಸಿದ ಹೊಕ್ಕುಳ ಬಳ್ಳಿಯಯ್ಯಾ ಇದು (ಪ್ರಭುಲಿಂಗ. ೨೦೬). **ಪೊಕ್ಕುಟಂ ಕೊಯ್**=ನಾಭಿನಾಳವನ್ನು ಕತ್ತರಿಸು: ಮಕ್ಕಳು ಪುಟ್ಟಿದಾಗಳೆ ಪೊಕ್ಕುಟಂ ಕೊಯ್ವುದನೆಲ್ಲರ್ಗಱಿಪಿ ನಾಭಿರಾಜನೆಂಬ ಪೆಸರನ್ವರ್ಥಂ ಮಾಡಿ (ಪುಪ್ಪಾಸ್ರ. ೧೦-೧೪ ವ). **ಪೊಕ್ಕುಟ ಕುಡಿ, ಹೊಕ್ಕುಳ ಕುಡಿ**=ಪೊಕ್ಕುಳ ಪುರಿ: ಪೊಕ್ಕುಟ ಕುಡಿಯಂ ಪೆರ್ಚಿಸಲಿಕ್ಕಿದ ಮಣಿಕನಕಪುಂಜಮೆಸೆದಿರೆ ಮೂಲೋಕಕ್ಕೋಜನೆನಿಸುವಜನಂ ಪೊಕ್ಕುಟ ಪೂವಿಂದೆ ಪಡೆದುದುಂಟೆನಿಸಿರ್ದಂ (ಅಸಂಥ. ೧೨-೮೨); "ಹೊಕ್ಕುಳ ಕುಡಿ=ಭ್ರೂಣವನ್ನೂ ಗರ್ಭಾಶಯದಲ್ಲಿರುವ ಪೋಷಕಾಂಗವನ್ನೂ ಸಂಬಂಧಿಸುವ ನಾಳ; ನಾಭಿನಾಳ" (ಅಸಂಪಾ). **ಪೊಕ್ಕುಟ ಪೂ, ಪೊರ್ಕುಟ ಪೂ**=(ವಿಷ್ಣುವಿನ) ನಾಭಿಯಲ್ಲಿ ಹುಟ್ಟಿದ ಹೂವು: ಲೋಕಂಗಳನಾ ಹರಿ ಬಸುಱೊಳಿಟ್ಟನಂತಾತನ ಪೊಕ್ಕುಟ ಪೂವಿನಲ್ಲಿ ಲೋಕಂಗಳನೆಲ್ಲ ಮಾಡಿದಜನೆ ಪುಟ್ಟಿದನೆಂಬರ್ (ಸಮಪ. ೧೦-೪೪); ಮೂಲೋಕಕ್ಕೋಜನೆನಿಸುವಜನಂ ಪೊಕ್ಕುಟ ಪೂವಿಂದೆ ಪಡೆದುದುಂಟೆನಿಸಿರ್ದಂ (ಅಸಂಥ. ೧೨-೮೨); ರಾಜೀವಸಖಂ ಸಜಲಜಲಧರಶ್ಯಾಮಾಭ್ರ ಶ್ರೀವತ್ಸಾಂಕನ ಪೊರ್ಕುಟ ಪೂವೆನೆ ಕೆದಱಿದಪನಮೆಳಕರಕೇಸರಮಂ (ಲೀಲಾವ. ೪-೦೯೯). **ಪೊಕ್ಕುಟ ಸುೞಿ, ಹೊಕ್ಕುಳ ಸುಳಿ** = ೧. ನಾಭಿಯ ವರ್ತುಲ: ಅಳಿಪಿಂ ಪೆಂಡಿರ ಪೊಕ್ಕು[ಪಾಠಾಂ. ಪೊರ್ಕು]ಟ ಸುೞಿಯೊಳ್ ಸುೞಿತರ್ಪ ನೃಪನ ಕಣ್ಬೊಂಬಣ್ಗಳನೇನಿಱಿಸಿದವೊ ನದಿಯೊಳೊದವಿದ ಸುೞಿಗಳ ಬೞಿವಿಡಿದು ಸುೞಿದು ಪೊಳೆವೆಳಮೀಂಗಳ್ (ಪಾರ್ಶ್ವಪು. ೯-೨). ೨. ಪ, ಮ ಮುಂತಾದ ಅಕ್ಷರಗಳ ಅಡಿಯಲ್ಲಿರುವ ಒಳಸುಳಿ: ಪ, ಮ, ವ—ಇಂಥವಕ್ಕೆ ಅಡಿಯಲ್ಲಿ ಅಂದರೆ ಕೆಳಗಡೆ ಒಳಸುಳಿಯಿದೆ. ಈ ಕೆಳಗಡೆ ಇರುವ ಸುಳಿ "ಹೊಕ್ಕುಳ ಸುಳಿ" ಎನಿಸುತ್ತದೆ (ಸಂಶೋಧ. ೨೦೦). **ಹೊಕ್ಕುಳಲಿ ಹೂದುಱುಬಿದಾತ** = ನಾಭಿಯಲ್ಲಿ (ಕಮಲದ) ಹೂವುಳ್ಳವನು; ಪದ್ಮನಾಭ; ವಿಷ್ಣು: ಹೆಱಿಯ ಹೊತ್ತನ ಹೊಕ್ಕುಳಲಿ ಹೂದುಱುಬಿದಾತನ ಮಗಳಿಗಳುಪಿದ ಮೋಱೆಯವನ ಹೆಂಡಿರನು ಬಲ್ಲೆನು ಕಂಡು ಶಾನು (ಕೊರವ. ೬-೯-೨೯). **ಹೊಕ್ಕುಳ ಸೀಳು** = ದ, ಪ ಮುಂತಾದ ಅಕ್ಷರಗಳನ್ನು ಮಹಾಪ್ರಾಣಗಳಾಗಿ ಬರೆಯುವಾಗ ಆ ಅಕ್ಷರಗಳ ಹೊಕ್ಕುಳ ಸುಳಿಯಿಂದ ಕೆಳಗೆ ಗೆರೆ ಎಳೆ: ಡ, ದ, ಪ—ಮುಂತಾದುವನ್ನು ಮಹಾಪ್ರಾಣಗಳಾಗಿ ಬರೆವಾಗ 'ಹೊಕ್ಕುಳ ಸುಳಿ'ಯಿಂದ ಕೆಳಗೆ (ಢ, ಧ, ಫ— ಎಂಬಂತೆ) ಗೆರೆ ಎಳೆಯುವರಷ್ಟೆ. ಇದನ್ನು 'ಹೊಕ್ಕುಳ ಸೀಳು ವುದು' ಎನ್ನುತ್ತಾರೆ (ಸಂಶೋಧ. ೨೦೨). **ಹೊಕ್ಕುಳ ಹೂವ** = ನಾಭಿಯಲ್ಲಿ ಹೂವಿರುವವನು; ವಿಷ್ಣು: ಹೊಕ್ಕುಳ ಹೂವನ ರೂಹ ತೋಱಿದಳು ಪೆಣ್ಮಕ್ಕಳ ಮಂಡೆಮಾಣಿಕಕೆ (ಸೋಷಕ. ೩೦-೨೩). **ಹೊಕ್ಕುಳಾರದ ಶಿಶು**=ಆಗ ಹುಟ್ಟಿದ ಕೂಸು; ಹಸುಗೂಸು: ಮಹೀಶೂರರತ್ನಸಿಂಹಾಸನದ ಸಮರಾಂಗಣಧರ್ಮಕ್ಕೆ ಇಂತಹ ವೀರವಿಶ್ವಾಸವನ್ನೊಪ್ಪಿಸಿ, ತವಕದ ಪ್ರತ್ಯಾಶೆಯಿಂದ ಕುದಿಯುತ್ತಿರುವ ಕಯ್ದುಗೊಳ್ಳದ ಮಾರಾಳಿ . . . ಸ್ತ್ರೀ!—ಹೊಕ್ಕುಳಾರದ ಶಿಶು! (ಪಟ್ಟಾಭಿ. ೭೩-೦೫). **ಹೊಕ್ಕುಟ ಬುಗಟು** = ಉಬ್ಬಿರುವ ನಾಭಿ: ವೃದ್ಧನಾಭಿಃ, ತುಂದಿಲಃ, ತುಂಡಿಭಃ—ಈ ೩ ಹೊಕ್ಕುಟ ಬುಗುಟುಳ್ಳವನು (ಪಾಠಸಾ. ೦೨೦). [ದೇ. ॥ ತಮಿ. ಪೊಕ್ಕುಳ್, ಪೋಕಿಲ್; ಮಲ. ಪೊಕ್ಕುಳ್, ಪೊಕ್ಕಿಳ್; ತುಳು. ಪುವಳು, ಪುವೊಳು, ಪೂವೊಳು; ಕೊಡ. ಪೊಕ್ಕಿ; ತೆಲು. ಪೊಕ್ಕಿಲಿ; ಕೋಲಾ. ನಾಯ್ಕಿ. ಬೊಗುರ್]

**ಪೊಕ್ಕುಟು** 'ಪೊಕ್ಕುಟ್' ನೋ.

**ಪೊಕ್ಕ** 'ಪುಗುಳ್ಳ್' ನೋ.

**ಪೊಗಟು** 'ಪಗಟು' ನೋ.

**ಪೊಗಡ**, ಪಗಡೆ$_1$, ಪೊಗಡೆ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು; ಬಕುಳ; ಕೇಸರ: ಪೊಗಡದ ಪೊಸಪೂವಿನ ತುಡುಗೆಗಳ್ಗಮಧರದ ಪೊದಟ್ದಿ ತಣ್ಗಂಪಿಂಗಂ ಮೃಗನಯನೆಯರನೆ ಬಿಡದೋಲಗಿಸಿ ದುದಳಿನಿಕರಮವರನಾರೋಲಗಿಸರ್ (ಆದಿಪು. ೧೦-೧೦೨). **ಪಗಡೆ$_1$**: ಸುರಗಿ ಸುರಹೊನ್ನೆ ಸಂಪಿಗೆ ಪಗಡೆ ಪನ್ನೀರು ಪಾರಿಜಾತ ಮೊದಲಾದ ತರುಗಳಲ್ಲಿ (ಸೌಗಂಧಿ. ೪-೦), ನೇರಳೆ, ಪಗಡೆ, ಪಾದರಿ . . . ಮೊದಲಾದ ಪುಷ್ಪಫಲ ಭರಿತವಾದ ವೃಕ್ಷಗಳನ್ನು (ಕೃಷ್ಣಾ. ೨೨೬). **ಪೊಗಡೆ**: ಸೌಗಂಧಿಕಾದೇವಿಗೆ . . . ಪೊಗಡೆಹುವ್ವುಗಳ ಪೋಣಿಸಿದ ಒಡ್ಯಾಣವಂ ನಡುವಿನೊಳ್ ಕಟ್ಟಿದರೆ ನಡೆಯುವದಕೆ ತಡವಾಗಿ ಬಳಲಿ ಅಲ್ಲಲ್ಲಿ ನಿಲ್ಲುವಳು (ಸೌಗಂ. ೨೦೦-೨೨). [ದೇ. ॥ ತೆಲು. ಪೊಗಡ, ಪೊಂಡ]

**ಪೊಗಡೆ** 'ಪೊಗಡ' ನೋ.

**ಪೊಗದಸ್ತು** 'ಪಗದಸ್ತು' ನೋ.

**ಪೊಗದಿ** 'ಪಗುದಿ' ನೋ.

**ಪೊಗರ್**, ಪೊಗರು, ಹೊಗರ್, ಹೊಗರು$_2$ (ನಾ). ೧. ಕಾಂತಿ; ಹೊಳಪು; ಮೆರುಗು; ಪ್ರಕಾಶ: "ತೊಳಗು, ಬೆಳಗು . . . ಪೊಗರ್, ತೊಳಪಂ, ಮಸೆ—ಈ ೧೪ ಕಾಂತಿ" (ಕಕಪಾ. ೫೫-೨೦೨); ಪೊಗರಳವಟ್ಟು ಪೊನ್ನನೊರೆದಂತೆವೊಲಿರ್ದೊಡೆ . . . ತಾನೆ ವೀರಲಕ್ಷ್ಮಿಗೆ ನೆಲೆಯಕ್ಕುಮಿಾ ತೆಱದ ಬಾಳ್ದೆಡಿದಂ (ಲೋಕೋಪ. ೦೦-೦೦೦); ಅಂಗಜನ ಬಾಳಪೊಗರ್ ನಿಜಬಾಹುಮೂಲದಿಂ ತುಳ್ಕೆ ತುಳುಂಕಿದಳ್ ಹರಿಯ ಮೇಲೆ ಪೆಱಲ್ ತರಳಾಕ್ಷಿ ತೋಯಮಂ (ಜಗವ. ೦೪-೦೦೩); ಪೊಂಬಳ್ಳಿಯ ಪೊಗರಂ ಗೆಲ್ವಂಗದ ಕಂಬುಲಲಿತಕಂಧರೆ ಮುನ್ನೆಱೆದ ನವಾಂಬು ಜಲಕ್ಕನೆ ಶೀವಲ್ಕೆ (ಶಮಕಾ. ೦-೯೩). ೨. ಹರ್ಷ; ಉತ್ಸಾಹ; ಉಬ್ಬು: ಗಮಕಂ ಪ್ರಯೋಗಮಾ ಭೋಗವಮಳಂಕಾರಂ ಪೊಗರ್ ನಯಂ ಮಿಱುಗು ಪೊದಟ್ದಮರೆ ಕೊಳೆ ಪಾಡುವಮರಿ ದಲಮರ್ದಂ ಮುಕ್ಕುಳಿಸಿಯುಗುಟ್ವ ತೆಱನಂ ಪೋಲ್ತಳ್ (ಆದಿಪು. ೭-೦೬); ದನಿಯ ಪೊಗರ್ ಮನೋಭವನ ಬಾಳ್ವೊಗರಂತಿರೆ . . . ವನಚರಿ ಪಾಡಿದಳ್ ಮಧುರಗೀತಿಗಳು (ಲೀಲಾವ. ೬-೩೨); ಪೊಗರಿಂಪು ನುಣ್ಪು ಪೆಂಪಿನ ಸೊಗಸಿನ . . . ಚೆಲ್ವ ಕಾವ್ಯದ ಬಗೆಯುಱಿಯದ ಪುಚ್ಚುಗುನ್ನಿ ಕೂಗಿದೊಡಳ್ಕೆಂ (ಹಮ್ಮಿರ. ೦-೦೬). **ಪೊಗರು**: ೧. "ಪೊಗರನಲ್ಕೆ ಕಾಂತಿಯುಕ್ಕುಂ" (ಕಕಶ. ೬೧); ಧುರದೊಳರುಹದ್ದಾಸರಾಯನ ವರಕೃಪಾಣದ ಪೊಗರು ಪೊಗರಿಲ್ಲರಿನೃಪಾಲರ ಶಿರವನೊಡೆವೊಯಿದೆತ್ತ (ಸಾಳ್ವಭಾ. ೨-೨೩); ಮೊಗಮುಂ ಮಯ್ಯುಂ ಪೊಗರುಂ ಮಿಗೆ ಸೊಗಸಂ ಪಡೆಯೆ (ಜಕಾ. ೩-೦೦); ಮೂಡಲಿದೆ ಹೊಸಬೆಗುರು ಮೂಡಲಿದೆ ಹೊಸ ಪೊಗರು (ಅರಳು. ೪೪೬-೫). ೩. ಬಿಂಕ; ಗರ್ವ; ಸೊಕ್ಕು: ಹೈಹಯಾತ್ಮಜನ್ಯದೆ ನಗರವಂ ಪೊರಮಟ್ಟು ಚತುರಂಗಬಲವೆರಸಿ ಪೊಗರಿನಿಂದೈತರುತಲಿರೆ (ಶಕಟು. ೦೦-೧); ಮುಂದಕೆ ವಿಗಡಿಸುವ ದಾಯವನು ತಿಳಿಯದೆ ಪೊಗರಿನಿಂ ದುರ್ನೀತಿಗೆಳಸಿದ ಪಾರ್ಥನು (ಕೋಗಹು. ೧೬-೬೦); ಮಿತ್ರುವಿನ ಕೋರೆದಾಡೆಯ ಪೊಗರಿಗಂಜದೆದೆಯು . . . ಕಂಗೆಟ್ಟು ಮಮ್ಮಲನೆ ಮರುಗುತಿಹುದು! (ಶಂಕಾ. ೨೨-೨). **ಹೊಗರ್**: ೧. ಉರವಣಿಸಿ ತವ್ವುನಱಿಗುಂ ಧುರದೊಳೆಂದಂಜಿ ಹೊಗರ ನೆವದಿಂ ರಿಪುಭೂಪರ ನೊಸಲಕ್ಕರಮಿರ್ಪುವು ನೆರೆದು ಶರಣ್ಬೊಕ್ಕಿಳಾಧಿಪನ ಕೂರಸಿಯೊಳ್ (ಪರ್ವಪು. ೭-೪೦); ನಳಿತೋಳ ಮೊದಲು ಹೊಗರಂ ಕಱಿಯೆ ಕಡೆಗಣ್ಣ ತೊಳಪ ಮಿಂಚಂ ಕೆದಱಿ (ಹಕಸಾ. ೩-೩೦); ಹೂಮೊಗ್ಗೆಗಳ ಹೊದಱಿನ ಹೊಗರ ಹೊಸದೇಸಿಯಲಿ ಯುದ್ಧೋನ್ಮತ್ತನನುವಾದ (ಕೊರವ. ೬-೨೯-೨೬). **ಹೊಗರು$_2$**: ೧. ಲಲಿತವಿದ್ರುಮಲತಾವಿಭ್ರಮೋಪಮ

ಜಟಾವಲಿ ಹೊಗರನುಗುಳ್ವ ರುದ್ರಾಕ್ಷಮಾಲಾಜಾಲ (ಶದ್ಮರಾ. ೨-೩೦); ಹೊಗರನುಗುಳುವ ಹೊಸಮಸೆಯ ಕೋಲುಗಳ ಕವಿಸಿದನು (ಕುಮ್ಯಾ.ಕ. ೪-೦೩); ಕಾಸಿದಂತೆ ಕಾಂಚನದ ಹೊಗರು ಅಧಿಕವಲ್ಲವೆ ? (ಕೀದಾಪ. ೭). ೨. ಬಾಹುಸತ್ವದ ಹೊಗರು ಹೋಗದು ಮನದ ಖಾತಿಯು ತೆಗಹು ತಗ್ಗದು ಹೊಕ್ಕು ತಿವಿದಾಡಿದರು ಬೇಸಱದೆ (ಕುಮ್ಯಾ.ಕ. ೨-೦೦೦). ೪. ಹೆಚ್ಚಳ; ಆಧಿಕ್ಯ: ಭುಜಪ್ರತಾಪದ ಹೊಗರು ಹೊಸ ಪರಿಯೆನುತ ರಿಪುಗಳ ಹೊಗಳುತಿರೆ (ಕುಮ್ಯಾದ್ರೋ. ೩-೩೬); ಜಗದುಸುರು ಪಸರಿಸಿತು ಹರುಷದ ಹೊಗರು ಮಾಸಿಗತು ರಿಪುನೃಪರ (ಕುಮ್ಯಾದ್ರೋ. ೧೯-೩೦). ೫. (ಆಲಂ) ಮಂಕು : ಮೇಲುಮುಸುಕಿನ ಹೊತ್ತ ದುಗುಡದ ಹೊಗರ ಹೊಗೆವೊಗದ ತಾಳಿಗೆಯ ನಿರ್ದ್ರವದ . . . ನೃಪಾಲ ಹೊಕ್ಕನು ನಡು ವಿರುಳು ನಿಜರಾಜಮಂದಿರವ (ಕುಮ್ಯಾ.ಕ. ೦೨-೧).

[ದೇ.॥ ತಮಿ. ಮಲ. ಪುಕರ್; ತೆಲು. ಪೊಗರು, ಪೊವರು]

**ಪೊಗರಂಬು**, ಹೊಗರಂಬು (ನಾ). (ಸಾಣೆ ಹಿಡಿದ) ಹೊಳೆಯುವ ಬಾಣ; ಹರಿತವಾದ ಸರಳು: ಹರಿಯೆರ್ದೆಯೊಳಾಮುನಿಯ ನುಡಿಯು ಮಂಗಜನ ಪೊಳೆವರಲ ಹೊಸಮಸೆಯ ಪೊ[ಪಾಠಾಂ. ಹೊ]ಗರಂಬುಗಳು ಮೊಡನೊಡನೆ ಭರದಿ ನೆಲೆಗೊಂಡುವು (ಸಾಳ್ವಭಾ. ೨೯-೨೨). **ಹೊಗರಂಬು** : ತ್ರಿಶಿತ ಹೊಗರಿನ ಬಾಯಿಧಾರೆಯ . . . ಹಂಗನ ಗಱಿಯ ಬಿಗುಹಿನ ಹಿಳುಕುಗಳ ಹೊಗರಂಬು ಕವಿದವು (ಕುಮ್ಯಾದ್ರೋ. ೩-೦೩); ಹೊಡಕರಿಸಿ ಹೊಗರಂಬು ಹೊಕ್ಕುವು ಕೊಡಹಿದರು ಕೊಬ್ಬಿದ ವಿರೋಧಿಗಳೊಡಲ ಬಗೆದುವು ಬಗಿಯೆ ನೆತ್ತರ ಧಾರೆ ದೆಸೆದೆಸೆಗೆ (ಜಾಕ್ಷಭಾ. ೭-೩೯).

[ಪೊಗರ್ + ಅಂಬು$_2$]

**ಪೊಗರಲಗು**, ಹೊಗರಲಗು (ನಾ). (ಕತ್ತಿ, ಖಡ್ಗ ಮೊದಲಾದುವುಗಳ) ಹೊಳೆಯುವ ಅಲಗು,-ಬಾಯಿ : ಬಗೆಯೆ ನಿಜದೇಹದನ್ವರ್ ಖಗನಾಯಕರಟ್ಟಿದೊಡುರ್ಕುಗೆಟ್ಟನೆ ಮುನ್ನಿಂ ಮಿಗೆ ಕಡುಗೂರ್ಪಂ ತಳೆದಂ ಪೊ[ಪಾಠಾಂ. ಹೊ]ಗರಲಗಂ ಪಱಿಯೆ ಮಸೆದವೋಲ್ ಹಯಕಂಠಂ (ವರ್ಧಪು. ೬-೫೭). **ಹೊಗರಲಗು** : ಹಿಪ್ಪೆಗರ ಹರಿಗಡಿದು ಹೊಗರಲ ಗೊಬ್ಬಿದವು ಕರುಳುಗಳ ನಿಮಿಷದೊಳೊಪ್ಪಗೆಡಿಸಿದವರಿಕದಂಬವನೀತ ನಂಬುಗಳು (ಕುಮ್ಯಾದ್ರೋ. ೨-೩೩); ವ್ಯೊಯೊಳಗೆ ಹೊಚ್ಚಿದವು ಹೊಗರಲಗು ಮುಚ್ಚಿದವು ನೆಣಪಸೆಯನು (ಕೃಜಿಭಾ. ೦೩-೦೬). [ಪೊಗರ್ + ಅಲಗು$_2$]

**ಪೊಗರಳಿ**, ಹೊಗರಳಿ (ಕ್ರಿ). ಕಾಂತಿಗುಂದು ; ಕಾಂತಿಹೀನವಾಗಂ : ಅವನಿಪರ ಮುಖಂ ಪೊಗೆ ಸುತ್ತಿದ ಪೊಂಗನ್ನಡಿಯಂದದಿ ಪೊಗರಳಿದುವು ಪೊಗಸಿನ ಚಂದ್ರಂಬೋಲ್ (ಶಮಃಶಾ. ೬-೦). **ಹೊಗರಳಿ** : ಒಗೆದ ಚಿಂತೆಯ ಹೊಗರಳಿದ ಮೊಗದ ಮೊಯ್ದೊಗೆದ ಮಾತಿನ ಬಲವೆರಸು ದುಗುಡದಿಂ ಬಂದು ಪೊಕ್ಕನು ಬೀಡ ಒಲ್ಲಾಳ ಬಿಗುವುಗುಂದಿದ ಬಿಂಕದೊಳು (ಕುರಾಶಾಂ. ೦೩-೦೫೩). [ಪೊಗರ್ + ಅೞಿ$_1$ (<ಅೞ್$_1$)]

**ಪೊಗರಾನ್**, ಹೊಗರಾನ್ (ಕ್ರಿ). ಕಾಂತಿಯನ್ನು ಹೊಂದು ; ಥಳ ಥಳಿಸು : ಪುಂಖದ ಪೊಳೆವುರ್ವ ಮುಮ್ಮೊನೆಯ ಕೆಂಗಿಡಿ ಸಾಲಿಡೆ ರೂಢಿ ಸುತ್ತೆ ಪಿಂಗದೆ ಪೊಗರಾಂತ ಕೂರ್ಗಣೆಗಳೇಂ ಪರಿತಂದುವೊ ಪಾಂಡು ಪುತ್ರನಾ (ಕಬಿಶಾಂ. ೯-೯೨). **ಹೊಗರಾನ್** : ಹೊಗರಾಂತ ಹೊಸ ಹೊನ್ನ ರಸ ಕಾಯ್ದಿರೆ ಕಂಡು ಸೆಗಣಿಯೊಳಱಿವಂತೆ ಮೊಱಿದಿ ಮೃಗಮದ ಗಂಧಿಯರ್ ಗೋಮಯದಿಂ ಮುದ್ದುಮಗನ ದೇಹವ ಸಾರ್ಚಿದರು (ನೇಮಿಶ. ೦೭-೨೦). [ಪೊಗರ್ + ಆನ್$_1$]

**ಪೊಗರಿ** (ನಾ). [ಜೈನ] ಮುನಿಗಳ ಒಂದು ಸಂಘದ ಹೆಸರು ; ಗಚ್ಛಗಳಲ್ಲಿ ಒಂದು: ಗಳ್ಛೇ(ಚ್ಛೇ)ಶು ತುಳ್ಛೇ(ಚ್ಛೇ)ಪಿ ಪೊಗರ್ಯ್ಯಾಭಿಖ್ಯೇ ಸಂಸ್ತೂಯಮಾನೋ ಮುನಿರಾರ್ಜ್ಯ(ರ್ಯ್ಯ) ಸೇನಃ (ಇಇ. XIX, ೨೬೨-೧೯; 1054); ಜಿನಧರ್ಮಕ್ಕೆ ಮೂಲವಾದ ಮೂಲಸಂಘದಲ್ಲಿ ಪ್ರಸಿದ್ಧವಾದುದು ಸೇನಗಣ; ಅದರಲ್ಲಿ ಪ್ರಸಿದ್ಧವಾದುದು ಪೊಗರಿಗಚ್ಛ (ಕಶಾಇ. ೮೭ ಅಡಿ). [?]

**ಪೊಗರಿಗೆಱೆ** (ನಾ). ಒಂದು ಊರಿನ ಹೆಸರು : ತಳವನಪುರದೊಳ್ ತಳ ಏತ್ತಿಯ ಮಾರ್ ಪೊಗರಿಗೆಱೆಯೊಳ್ ಪನ್ನಿರ್ಕ್ಕಣ್ಣಾಗಂ ಮನೋಹರಂ ದತ್ತಂ (ಎಕ. I, ೦-೨೦ ; ಸು. ೪೫೦ರ ಕಠ).

[p ಇದು 'ಪೊಗರಿಗೆಱೆ' ಎಂಬುದರ ಅಪಲಿಖಿತವಿರಬಹುದು]

**ಪೊಗರಿಡಿ** (ಕ್ರಿ). ಕಾಂತಿಯಿಂದ ತುಂಬಿರು : ಪಡೆಯನುೞಿ ಕೊಂದುವು ಶರಧಿಭವನಭವನ ಪೊಗರಿಡಿದಂಬುಗಳ್ಪೊಳೆಯುಶತಕೋಟಿ ಶತಕೋಟಿಯಂ ಪೋಲ್ತು ಸಂಗರದೊಳು (ಕೃಜಿಭಾ. ೨೨-೨೦). [ಪೊಗರ್ + ಇಡಿ$_2$]

**ಪೊಗರಿಳಿಸು** 'ಪೊಗರಿೞಿಸು' ನೋ.

**ಪೊಗರಿೞಿಸು**, ಪೊಗರಿಳಿಸು (ಕ್ರಿ). ಗರ್ವವನ್ನು ಕುಗ್ಗಿಸು ; ಅಹಂಕಾರ ವನ್ನು ಹೋಗಲಾಡಿಸು : ಸೊಕ್ಕಿಳಿಸು : ಜಯಲಕ್ಷ್ಮಿಯ ನಯ ನೋತ್ಪಲಮಯೂಖಮನೆ ತಾನೆ ಬಂದು ಕರಕಿಸಲಯಕಾಂತಿಯಿನೇಂ ರಾಗಂಬೆತ್ತುದೊ ಜಯಮಾ ಪೊಗರಿೞಿಸೆ ಕಿಸುರ ಮಸಿಯಕ್ಕರಮಂ (ಶಂರಾಪಶ. ೯-೨೦). **ಪೊಗರಿಳಿಸು** : ಯಾರಾದರೂ ಆ ಜಂಬುಗಾರನ ಪೊಗರಿಳಿಸಬೇಕು (ಊಂ). [ ಪೊಗರ್ + ಇೞಿಸು ]

**ಪೊಗರು** 'ಪೊಗರ್' ನೋ.

**ಪೊಗರುಗು**, ಹೊಗರುಗು (ಕ್ರಿ). ಚೆಲುವು ಹೊರಸೂಸು ; ಕಾಂತಿಯು ಹೊರಚೆಲ್ಲು : ನಾಡೆ ಕಡುಚೆಲ್ವು ಮಿಕ್ಕು ಪೊಗರುಗುವ ಹೊಂಬಣ್ಣ ಮೊಲೆಯಾಯತದ ಸೆಕ್ಕುಂದುಱುಂಬಿನ . . . ಪೆಣ್ಮಕ್ಕಳೆಯ್ತಂದರೊಸೆದು (ಶದ್ಮರಾ. ೩-೬೭) ; ಪಲ್ಲವಾಧರ ದಂತ (ಕಂಚ ಪೊಗರುಗುವ) ಧವ್ವಿಲ್ಲದೆ ಮೆಱೆವ ಹೆಣ್ಣುಗಳು ಪುಲ್ಲದಳಾಕ್ಷಗೆ ಪೊಸವೇಟ ಪುಟ್ಟುವಂತೆಲ್ಲರಿಬ್ಬಗೆ ಯಾದರಾಗ (ನೇಮಿಶ. ೦೯-೬೩) ; ಪೊಗರುಗುವ ಕಣೆಗಳ್ ಸಾರ್ತರ್ಪುದಂ ಕಾಣುತೆ ರಾಘವಂ ಪಡಿಸರಳಂ ತುಡುತೆ ಬಿಡದೋರೊಂದು ಪಗೆಗೋಲಂ ನಡುದಾರಿಯೊಳೆ ಇರ್ಕಡಿಗೆಯ್ವಂ (ಅದ್ಭುತ. ೯೯-೨೦). **ಹೊಗರುಗು** : ಹೊಗರು[ಪಾಠಾಂ. ರೊ]ಗುವ ಹೊಸ ಕಣೆಯ ದಡ್ಡಿಯ ಬಿಗಿದನೆಡಬಲ ನಿದಿರಿನಲಿ ಸೆಗಳಿಗೆಯ ಸಸಿಯಂತಾಯ್ತು ಕೌರವಸೇನೆ ನಿಮಿಷದಲಿ (ಕುಮ್ಯಾ.ಶ. ೭-೩೨) ; ಹೊಗರುಗುವಂಗೋಪಾಂಗ ವಕ್ಷದೊಳು ಪೊಂಬೊಗರಿಯಂತಿರ್ಪ ನುಣ್ಪೊಲೆಯ ದೃಗುಯುಗಳದಿ ನೋಡಿ ಹೆಱಿಹಿಂಗಲಾಱಿದೆ ಮುಗುಳಂಬ ನಮರ್ದಪ್ಪಿದನು (ನೇಮಿಶ. ೦೯-೯೨). [ಪೊಗರ್ + ಉಗು$_1$]

**ಪೊಗರುವೇೞು** (ಕ್ರಿ). ಗರ್ವಪಡು; ಬೀಗು ; ಹೆಮ್ಮೆಪಡು : ಗದ್ದೆಯ ಗೊರವನೊಳ್ ಕಡಿದಾಡಿ ಪೊಗರುವೆತ್ತಿದ್ದೆ ನೀ ರಣರಂಗದೊಳಗೆ ಬಿದ್ದೆಯ ನನ್ನ ಬಾಧೆಗೆ ಕೃಷ್ಣ ಕರೆ ನಿನ್ನ ದೊದ್ದೆಯ ನಿಲಲೊಬ್ಬಗರಿದು (ನೇಮಿಶ. ೧೦-೦೬). [ಪೊಗರು (<ಪೊಗರ್) + ಪೆಱು$_1$]

**ಪೊಗರೆ** (ನಾ). ಪೊಟರೆ; ಬಿರುಕು; ಹೋರು : ಕಲ್ಲ ಪೊಗರೆಯೊಳಿಟ್ಟ ಕಾಮುರ್ಗಿಲ ಮೊಟ್ಟೆಗಳ್ ತಾಮೆನಿಸಿ ಪರ್ಬಿದುವು ಪೆರ್ಜೇನ ಪುಟ್ಟುಗಳ್ . . . ಪೊಕ್ಕು ಕುಕ್ಕಿಱಿಸಿ ಜೋಂಪಿಸಿ ಕಲ್ಲ ಪೊಗರೆಯಂ ನಿಮ್ಮಿ ಪುಲಿ ಸಮುಱಿದುವು ಕಟವಾಯ ಸವಿಗಳಂ (ಅನಂತ. ೯-೦೭ ರಗಳೆ).

**ಪೊಗರೇರು** 'ಪೊಗರೇಱು' ನೋ.

**ಪೊಗರೇಱು**, ಪೊಗರೇರು, ಹೊಗರೇರು, ಹೊಗರೇಱ್, ಹೊಗರೇಱು (ಕ್ರಿ). ೧. ಕಾಂತಿಯುಂಕ್ಕು; ಸೊಬಗು ಹೆಚ್ಚಾಗು : ಪೊಂಗುವ ಪೊಱಿವಾಱಿನ ಪೊಗರೇಱುವ ಪೊಂಗೊಡವೊಲೆಯ ಸೋಮ್ಮುಡಿಯ ಉಂಗುರವಿಡಿನಡುವಿನ ನಿಡುಗಣ್ಣ ಲತಾಂಗಿಯರೆಸೆದರಂದಲ್ಲಿ (ಕುಂರಾಶಾಂ. ೨೬-೩೫); ಅಲಿಗಳರಳ್ದುವಸು ಪಸರಿಸಿತೊಡಲೊಳಗೆಸೆದುದಾ ಲಲಿತಮುಖ ಕಾಂತಿ ಪೊಗರೇಱಿತವಯವಂ (ಕೃಜಿಭಾ. ೨೯-೬೬); ಪವಣೆಗೆಯೊಪ್ಪೆ ಪುರುಳು ಪೊಗರೇಱಿಯಂಗವಿಸೆಯಲಂಕಾರಗಳು (ಹರಿ. ೮-೨೬).

೨. ಹರ್ಷಗೊಳ್ಳು; ಉಬ್ಬು; ಉತ್ಸಾಹಪಡು : ಸುರರುಂ, ಕಿನ್ನರರುಂ, ನರರುಂ, ವಾನರರುಂ ಪೊಗರೇಱೆ ಕಳಿವೆರ್ಚಿದರ್ (ರಾಮಾಶ್ವ. ೧೧೪-೯).
**ಪೊಗರೇಱು** : ೩. ಗರ್ವವು ಹೆಚ್ಚಾಗು; ಸೊಕ್ಕು : ಈಚೀಚೆಗೆ ತುಂಬಾ ಪೊಗರೇರಿರುವುದರಿಂದಲೇ ಈತ ಹೀಗಾಡುವುದು (ರೂಢಿ).
**ಹೊಗರೇಱು** : ೧. ಗಿಡಬಳ್ಳಿ ಚಿಗುರಿಡಲು ಹೊಗರೇರಿ ಹೂಬಿಡಲು ನಕ್ಕಿಡಲು ಮುತ್ತಿಡಲು ತುಂಬಿ ಬಹವು (ರಾಮವಿ. ೨೦-೪೧೯); ಉಡಿಗೆ ತೊಡಿಗೆಗಳಿಂದ ಹೊಗರೇರಿದ ರಾವುತನು ಅಂಗಳಕ್ಕಿಳಿಯುತ್ತಿದ್ದನು (ಪದಿದಾ. I, ೪೪೩). **ಹೊಗರೇಱ್** : ೧. ಹೊಗರೇರ್ವ ಹೊಂಬಣ್ಣ ಮುಖದೊಳು ಮುಖವಿಟ್ಟು ಸುಗುಣಿ (ಶಿವಗೀ. ೧೬೯-೬೨೩). **ಹೊಗರೇಱು** : ೧. ವಿನಾಬಾರದು ಪ್ರಾಪ್ತಿವಶನೆಂದವಳಿಗೆ ಮಾಱುತ್ತರಗೊಟ್ಟು ನಗುತ ನೂಱಲೆಗಣ್ಣ ರುಕ್ಮಿಣಿಗೊಡರ್ಚಿದ ಹೊಗರೇಱುವ ಗರ್ಭೋತ್ಸವವ (ಮೋಹತ. ೪-೬೬); ಹೊವಿಮ್ಮಿದ ಮೊಲೆ ಹೊಗರೇಱಿದ ಜೌವನವೊಮ್ಮಾಱು ಜಡೆಯ ಸೊಬಗಿನ ಉಮ್ಮತ್ತೂರು ಗೌರಾಜಿ ಚಿತ್ತಿನಿ ಬಲುಸುಮ್ಮಾನದೊಳ್ಪಿದಿದಳು (ಕಂಪಿ. ೨೦-೬೬). ೨. ಕೇಶವನಾತ್ಮಸಂಭವಸೂನು ವೀರಾವೇಶದಿ ಹೊಗರೇಱುತಿರಲು ಆ ಸಮಯದಿ ಚಿತ್ರಲೇಖೆ ನಿರ್ಮಿಸಿದಳು ಭಾಸುರರಣಯಂತ್ರಮಣಿಯ (ಮೋಹತ. ೩೩-೫೮). ೪. ಉದ್ದೀಪನ ಹೊಂದು ; ಅಧಿಕವಾಗು ; ಹೆಚ್ಚಾಗು : ಮನದ ಖತಿ ಹೊಗರೇಱೆ ದುಶ್ಶಾಸನನ ಮಗನಿದಿರಾಗಿ ಖಡುಗದ ಮೊನೆಯ ಚೂರಿಸಿ . . . ತನಗೆ ಮೃತ್ಯುವ ಕರೆವವೋಲರ್ಜುನಕುಮಾರನ ಕರೆದು ಹಳಚಿದನು (ಕುಮಾದ್ರೋ. ೬-೫೭). [ಪೊಗರ್ + ಏಱು₁ (<ಏಱ್₁)]

**ಪೊಗರೇೞ್**, **ಹೊಗರೇಳ್**, **ಹೊಗರೇಳು** (ಕ್ರಿ). ೧. ಕಾಂತಿಯನ್ನು ಸೂಸು ; ತೇಜಸ್ಸನ್ನು ಬೀರು : ಸಮಸಂದಾ ಮಲಯಜ ಕುಂಕುಮ ಕಸ್ತೂರೀಜಲಾರ್ದ್ರಿತನುತತಿಯಿಂ ತತ್ಸಮದಾಜನಮೆಸೆದುದು ರತಿರಮಣನ ಪೊಗರೆಳ್ದ ಕುಸುಮಶರಸಮಿತಿಯವೋಲ್ (ಕುಸುಮಾ. ೫-೧೬೦).
**ಹೊಗರೇಳ್** : ೧. ಅಗುರು ಕುಂಕುಮ ಪಚ್ಚೆಗಪ್ಪುರ ಪನ್ನೀರು ಮೃಗನಾಭಿ ಮುಖ್ಯಲೇಪನದಿ ತಿಗುರನಿಕ್ಕಿದರಾಳಿಯರು ಸತ್ಕುಮರಿಯ ಹೊಗರೇಳ್ವ ಹೊಂಬಣ್ಣಮೆಯ್ಗೆ (ಮೋಹತ. ೨೩-೧೨). **ಹೊಗರೇಳು** : ೧. ಮುಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ ಹೊಗರೆದ್ದ ದಸಿ ಮೊನೆ ಶೂಲ ಝಗಝಗಿಸುವ ಹೇರಿಟ್ಟೆ ಮರುಳುಗೈಗಳುಗುಳುತಿರ್ದವು ಕೆಂಗಿಡಿಗಳ (ಕಂಪಿ. ೧೧-೧೩೦). ೨. ಉಬ್ಬು ; ಸಂತೋಷಪಡು : ನೆಗಹಿ ಪುಳಕಾಂಬುಗಳ ಲೋಚನ ಬಿಗಿದು ಹೊಗರೆದ್ದಾಗ ಹಿಮ್ಮಡಿಗೊಗುವ ಕೇಶದ ಬಾಲೆ ಭಾವಿಸಿ ನೆನೆದಳಚ್ಯುತನ (ಕುಮಾಭ. ಹಿಂಇ. ೧೭-೨೩); ಬಲಸಂಘಾತಕಭಯಮನಿತ್ತು ಬಾಣವ್ರಾತವನು ಹೊದೆಗೆದಱಿ ಹೊಸ ಹೊಗರೆದ್ದನಡಿಗಡಿಗೆ (ಕುಮಾಕ. ೧೩-೨೨). ೩. ಉದ್ದೀಪನಗೊಳ್ಳು ; ಹೆಚ್ಚಾಗು ; ಅಧಿಕವಾಗು : ಹೃದಯದಲಿ ಹೊಗರೆದ್ದುದುರಿ ಬಳಿಕಾ ದಶಾನನನ (ತೊರರಾ. ೩-೭-೧೩) ; ಬೊಬ್ಬರಿಯೆ ವೀರಧ್ವನಿಯಿಂದ. ತರುಗಿರಿ ಹಬ್ಬಿ ಮುಂಚೂಣಿ ಉರಿ ಹೊಗರೆದ್ದು ಸುತ್ತೆ (ಏರಾಶ್ವ. ೭೫-೫).
[ಪೊಗರ್ + ಏೞ್₁]

**ಪೊಗರೊಗು**, **ಹೊಗರೊಗು** (ಕ್ರಿ). ೧. ಕಾಂತಿಯನ್ನು ಹೊರಸೂಸು,—ಚೆಲ್ಲು : ಮುಗುದೆಯೊರ್ವಳು ನೀರನೆಱೆವುತ ಪಥಿನ ಪೊಗರೊಗುತಿರ್ದ ಪಲ್ಲುಗಳ ಸೊಗಸುವ ದಾಡಿಮಬಿತ್ತೆಂದು ಶುಕನಿಗೆ ವಿಗೆ ತೋಱೆ ನಗುವರಬಲೆಯ (ಶರ್ಣೀ. ೧-೬೦) ; ಗಗನವಡರ್ದ ಸೌಧಂಗಳ ಮರೀಚಿಯಿಂ ಪೊಗರೊ[ಪಾಠಾಂ. ರು]ಗುವ ಪೊಚ್ಚಪೊಸ ಪೊನ್ನ ಕೋಟೆಗಳ ಕಾಂತಿಗಳ್ಪಿದೆ ಮುಸುಕಿಕೊಂಡೆಸೆದಿರ್ದುವರ್ಜುನನ ಕಣ್ಗೆ ಕೌತುಕಮಾಗಲು (ಕೃಖಾ. ೧೭-೭). ೨. ಹೆಚ್ಚಾಗು ; ಅಧಿಕವಾಗು : ಪೊಗರೊಗುವ ಕಟ್ಟಲೆಗೆ ಕಣ್ಗಳಂ ಮುಚ್ಚುತುಂ (ಉದ್ಭಟ. ೧೧-೧೨೭).

**ಹೊಗರೊಗು** : ೧. ಹೊಗರೊಗುವ ಸೂನಿಗೆಯ ಸುಮತಾಕೆಗಳ ಸಿಂಧದ ಹೊಳೆವ ಹೊಂಗಂಬುಗೆಯ . . . ಅಗಿವ ಚೀತ್ಕಾರದ ಭಡಾಳದ ವಿಗಡ ರಥಿಕರ ರಹಿಯ ರಥವಾಜಿಗಳ ನೋಡ್ಡೆ ಪಾರ್ಥ (ಕುಮಾಶೀ. ೩-೧೯) ; ಹೊಗರೊಗುವ ದಾಡೆಗಳ ದಳ್ಳಿಸುವ ಗಡುಮೋಱೆಯ ಕೆಂಪಡರ್ದ ಮಿಸೆಗಳ ಕೆಂಗಣ್ಣುಗಳ ಮುಪ್ಪುರಿಗೊಂಡ ಹುಬ್ಬುಗಳ . . . ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ (ತೊರರಾ. ೬-೧೩-೬).
[ಪೊಗರ್ + ಒಗು₁]

**ಪೊಗರೊಗೆ** (ಕ್ರಿ). ಕಾಂತಿಯು ಸೂಸು ; ಪ್ರಕಾಶವು ಹೊಮ್ಮು : ಕಾಮಿನಿಯ ನಿಡುಜಡೆ ರಂಜಿಸಿದುದು ಪೊಗರೊಗೆಯೆ ವಿಜೃಂಭಿಸುವಂಗಜನೃಪನ ಮಸೆದ ಸುರಗಿಯ ಪಾಂಗಿಂ (ಉದ್ಭಟ. ೯-೧೧೩).
[ಪೊಗರ್ + ಒಗೆ₁]

**ಪೊಗರ್ಗಣ್**, **ಹೊಗರುಗಣ್ಣು** (ನಾ). ಹೊಳಪಿನಿಂದ ಕೂಡಿದ ಕಣ್ಣು ; ಕಾಂತಿಯುಕ್ತವಾದ ಕಣ್ಣು : ಪೊಗರ್ಗಣ್ಗಳ ಪೊಳೆವಲರ್ಗಣ್ಗಳ ಬೆಳತಿಗೆಗಣ್ಗಳ ಬೆಳದಾವರೆಗಣ್ಗಳ ಸೊಗಯಿಪ ಸೊರ್ಕುಂಗಣ್ಗಳ ಸುದತಿಯರೀಕ್ಷಿಸಿದರ್ ನೃಪನ (ಜಯುಕಾ. ೧೧-೫೪). **ಹೊಗರುಗಣ್ಣು** : ಹೊಗರುಗಣ್ಣು, ನಿಗುರಿದ ಕಿವಿ ಹಗುರುಮೈಯ್ಯ ಚಿಗುರೆಯು ಎರಡೆ ದಿವಸ ಕೂಡಿ, ಬೇಡಿ ತಿಗುರಳಿದಿತು ಚಿಗುರೊಲು (ನಾದಂ. ೨೭-೧). [ಪೊಗರ್ + ಕಣ್]

**ಪೊಗರ್ಗಣೆ**, **ಹೊಗರುಗಣೆ** (ನಾ). ಕಾಂತಿಯುಕ್ತವಾದ ಬಾಣ ; ಹೊಳಪಿನಿಂದ ಕೂಡಿದ ಸರಳು : ಉಬ್ಬಿದುದು ಮೈ ರೋಷದಿಂದೆ ಗಂಟಿಕ್ಕಿದುವು ಪುಬ್ಬುಗಳ್ಬಭ್ರುವಾಹುಗೆ ತೆಗೆತೆಗೆದಿಸುತೆ ಬೊಬ್ಬಿಱಿದನನು ಸಾಲ್ವನಂ ಮುಸುಕಿದುವು ಕೋಟಿಸಂಖ್ಯೆಯ ಪೊಗರ್ಗಣೆಗಳು (ಕೃಖಾ. ೨೨-೧೧). **ಹೊಗರುಗಣೆ** : ಘೃತಲೇಪನದ ಬಂಧದ ಹೊಗರುಗಣೆ ಹೂಳಿದುವು ಗುರುಸುತನುಬಿನಂಬುಧಿಯ (ಕುಮಾಕ. ೩-೫).
[ಪೊಗರ್ + ಕಣೆ₁]

**ಪೊಗರ್ತೆ** 'ಪೊಗಱ್ತೆ' ನೋ.
**ಪೊಗರ್ತೆವಡೆ** 'ಪೊಗಱ್ತೆವಡೆ' ನೋ.
**ಪೊಗರ್ತೆವೆಱು** 'ಪೊಗಱ್ತೆವೆಱಂ' ನೋ.

**ಪೊಗರ್ವಟ್ಟು** (ನಾ). ಕಾಂತಿಯ ವೃತ್ತ,—ಬಿಂಬ; ಶೋಭೆಯ ಮಂಡಲ: ಪೊಗರ್ವಟ್ಟನತನುಬಾಣದ ಪೊಗರಂ ನುಣ್ಪುಗರೊಳಿಱಿಸಿ ನೋಡಿದ ಕಣ್ಣುಣ್ಣುಗುವೆನಿಪ ನುಣ್ಪಿನಿಂದೇಂ ಸೊಗಯಿಸುವುವೊ ಬಾಹುಮೂಲಮಾಕಾಮಿನಿಯಾ (ಚುಲ್ಲಕಿ. ೩-೬೮); ಸಿಡಿಲ್ದುಗುತುದುವು ಪುಷ್ಪಸಾಯಕಂಗಳ ಪೊಗರ್ವಟ್ಟು ಚಂದ್ರಿಕೆಯ ಬಿಱಿತ್ತಿಳಮಿಂಚಿನ ತತ್ತಿ ತಾರಕಂಗಳ ಮಱಿಯೆಂಬ ವಾರಿಧರವಾರಣವೇಣುವರಾಹವರಾಕ್ಷಿಕಂ (ಜಗ. ೧೬-೨೪).
[ಪೊಗರ್ + ಬಟ್ಟು]

**ಪೊಗರ್ವಟ್ಟೆ** (ನಾ). ಹೊಳಪಿನಿಂದ ಕೂಡಿದ ಬಟ್ಟೆ,—ವಸ್ತ್ರ : ರಾಂತಕ್ಕೆ—ಕುಳಿರ್ಗಾಳಿ, ಬೆಳರ್ಗಂಪು . . . ಪೊಗರ್ವಟ್ಟೆ, ಬೆಮರ್ವನಿ, ಅಲರ್ದೊಂಪಂ, ಕದಿರ್ದೊನ್ನಂ (ಕಮರ. ೪೩ ಪ್ರಯೋ); ತಳಿರ್ಗಂಪು, ಬೆಳರ್ಗಂಪು . . . ಪೊಗರ್ವಟ್ಟೆ (ಕಶಾಸು. ೭೩ ಪ್ರಯೋ).
[ಪೊಗರ್ + ಪಟ್ಟೆ₁]

**ಪೊಗರ್ವಡು** (ಕ್ರಿ). ೧. ಪ್ರಕಾಶವನ್ನು ಹೊಂದು,—ಪಡೆ; ಕಾಂತಿಯುಕ್ತವಾಗು : ಸೊಗಯಿಸೆ ತೋಳ ಪೊತ್ತಮೊದಲೊಳ್ ಪೊಗರ್ವಟ್ಟಿಸೆ ಪೊಂದು ನುಣ್ಪು ಸಾವಗಿಸುವ ಮೇಲುದಂ ಪೊಲೆಗಳ್ಪೆಱಿಯುತ್ತಿರೆ . . . ಘಟ್ಟಿಮಗುಳ್ಚುವ ಘಟ್ಟಿವಳ್ತಿಯಂ ಭೋಂಕನೆ ಕಂಡು (ಕಂಶಥಾ. ೯-೫೯); ಅಗಲದ ರೇಖಾತ್ರಯದಿಂದಗಲದ ಪೊಗರ್ವಟ್ಟ ಬಂಧುರಚ್ಛವಿಯಿಂ ಕಂಬುಗಳಂ ನಗುವಂತಿರೆ ಕಂಬುಗಳಂ ಕರಮೆಸಗುವಮಾ ವಣಿಕ್ಪತಿಸತಿಯಾ (ಸುಕುಮಾ. ೯-೧೯). ೨. ಚೆಲುವನ್ನು ಹೊಂದು : ಸೊಗಯಿಸಿ ತೋರ್ಪ

ಸೋಗೆಕೊರಲೊಳ್ ಪೊಗರ್ವಟ್ಟೆಸೆದಿರ್ಪ ಕರ್ಪು ... ಮನಂಗೊಳೆ ಚೆಲ್ವ ನಾಳ್ದುದೀ ನಗವನರಾಜಿಯೊಳ್ ಸುಟ್ಟಿಯುತಿರ್ಪ ವಿಚಿತ್ರಶಿಖಂಡಿಮಂಡಲಂ (ಕಾವ್ಯಾವ. ೩೦೯). [ಪೊಗರ್+ಪಡು$_1$]

**ಪೊಗರ್ವಡೆ** (ಕ್ರಿ). ಕಾಂತಿಯುಕ್ತವಾಗು ; ಪ್ರಕಾಶಮಾನವಾಗು : ತೋರ್ಪ ಕಣೆಯಲ್ಲ ಪರುಷದ ಕಣಿಗಳಗ್ರದಿ ಪೊಗರ್ವಡೆದ ರತ್ನಂಗಳೆಯ್ದೆ ಚಿಂತಾರತ್ನಮುರ್ವಿ ಬೆಳೆದಿರ್ಪ ತರುಗಳ್ ಕಲ್ಪತರುಗಳಲ್ಲಲ್ಲಿ ಗಿರಿಸಾನುವಿಂದೆ ...ಕೈಲಾಸಪರ್ವತಂ ಕಣ್ಗೆಸೆದುದು (ಶಂಕ್ರ. ೨-೧೦) ; ಉಡುರಾಜಮಂಡಲಂ ಶಂಖವರ್ಣಂ ಪೊಗರ್ವಡೆದ ಕೌಮುದಿಯಾಗೆ ರಾತ್ರಿಲಕ್ಷ್ಮಿಯ ಭಾವಮಡಸಿ ಕಣ್ಗೆಸೆದುದು (ಸಂಂಶಾ. ೨-೬). [ಪೊಗರ್ + ಪಡೆ$_1$ ]

**ಪೊಗಸು** (ನಾ). ೧. ಬೆಳಗಿನ ಜಾವ ; ಮುಂಜಾವ ; ಪ್ರಾತಃಕಾಲ : ನಿನ್ನ ಮೊಲಗಟ್ಟಲೆಗಾಂ ಬೆಜಗಾದೆನಿಂದು ಪೇಟೀಗೆಳೊ ಬಯ್ಗೆಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ (ಅಂಕ್ರಿ. ೩-೬೬) ; ವಿಮಲ ಪ್ರಗುಣನುಪಶಾಂತಕಾಮಂ ಪೊಗಸಿನ ಚಂದ್ರಂಬೊಲಿರ್ದನಾ ಶ್ರೀಚಂದ್ರಂ (ಅರ್ಧನೇ. ೪-೩೨) ; ನಸುನಗೆ ಮಿಸುಗುವ ಮೊಗಮೇಕೆ ಪೊಗಸಿನ ಶಶಿಯಂತೆ ಕಲೆಗುಂದಿದುದು (ಶೇಬುಸಂ. ೮-೬೦). ೨. ಹಗಲು : ನಿನ್ನೋಳಿರುಳುಂ ಪೊಗಸುಮೆಟ್ದು ಪೊಗೆ ಗುಡುಗುಂಗಳನ್ ಆ ಬೇವ ಬೆಂಕೆ ಒಳಗಿನಿತಿರ್ಕು ಮೆಂಬುದು ! (ಅಕ್ಷತ್ಕಾ. ೩೫-೬೨೪).

**ಪೊಗಳ್** 'ಪೊಗಟ್$_1$' ನೋ.

**ಪೊಗಳಿಕೆ** ' ಪೊಗಟ್ಕೆ ' ನೋ.

**ಪೊಗಳಿಸು** ' ಪೊಗಟಿಸು ' ನೋ.

**ಪೊಗಳು** ' ಪೊಗಟ್$_1$ ' ನೋ.

**ಪೊಗಳ್ಕೆ** ' ಪೊಗಟ್ಕೆ ' ನೋ.

**ಪೊಗಳ್ತೆ** ' ಪೊಗಟ್ತೆ ' ನೋ.

**ಪೊಗಳ್ತೆವಡೆ** ' ಪೊಗಟ್ತೆವಡೆ ' ನೋ.

**ಪೊಗಟ್$_1$**, ಪೊಗಳ್, ಪೊಗಳು, ಹೊಗಳ್, ಹೊಗಳು$_1$ (ಕ್ರಿ). ೧. ಕೊಂಡಾಡು ; ಬಣ್ಣಿಸು ; ಸ್ತುತಿಸು : " ಪೊಗಟ್-ಸಂಸ್ತವನೇ " (ಶಮಂದ) ; ಮಾದಕ್ಷಿಣಾಪಥಬಹುಶತಹವನಾಹವದು[ಳ್] ಪಶುಪ್ರದಾನ ಶೌರ್ಯೋರ್ಕದ್ಯಮಭರಿತೋ[ನ್ನಾನ]ಪಶುಪತಿಯೆನ್ದು ಪೊಗಟೆಪ್ಪೊಟ್ಟಣ ಪಶುಪತಿ ನಾಮಧೇಯನಾಸರಕ್ಕೆಲ್ಲಭಟರಿಯಾ ಪ್ರೇಮಾಲಯಸುತನ್ಗೆ (ಪ್ಯಕಂ. ೦೯೩೬, ೦೬-೮ ; ಸಂ. 450) ; ಪಟಿಗೆ ಮೇಣ್ಪೊಗಟ್ಗೆ ಮೇಣ್ ನೆವವಿಲ್ಲದೊಡಿಂತು ಕೈಗಟ್ಟಿಯೆ ಬಗ್ಗಿಸುಗೆ ಮೇಣ ವರೆಲ್ಲರುಮಂತುಮಾನು ಟೀವೆನಲ್ಲೆಂ (ಕಂದಾ. ೦-೦೬೬) ; ನೀನ್ನಿನ್ನ ನೃಪನ ದಿಗ್ವಿಜಯೋನ್ನತಿಯಂ ಪೊಗಟ್ದು ಮೂರ್ಛೆವೋಪ್ಪೆ ಪೊಗಟ್ದಂ ನೀನ್ನಿನ್ನ ಮನದೋಳಿಂತಿದು ಬನ್ನಮನೆತ್ತುಪವೊಲಾಯ್ತು ನಿನ್ನವನಿಪನಾ (ಅಂಕ್ರಿ. ೦೯-೬೬). **ಪೊಗಳ್**: ೧. ತಮ್ಮದೊಂದರ್ಕ(ಟ್ಕ)ಟಿಂದಂ ಪೊಗಳಲ್ (ಎಫ. XIII. ೩೩೦-೮; 929); ರಾಜಕುಲದೀಪಕನ ರೂಪು ಸೌಂದರ್ಯಮನೇನೆಂದು ಬಣ್ಣಿಪೆಂ ಎಂತು ಪೊಗಳ್ದಪೆಂ (ಕಂಬರ. ೪-೨೦) ; ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತವ್ಯಸಲೆ ವೈದಿಕರಿಗೆ (ಜಂಂ. ೨-೧೩). **ಪೊಗಳು** : ೧. ಆ ಸತಿಯ ರೊಲಿದು ಬಲಗೊಂಡೆಟಗಿ ಪೊಗಳುತಿರ್ಪಾ ಸಮಯದೊಳು . . . ಸಿರಿ ಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೦-೬೬) ; ಸುಜ್ಞಾನ ದಿಂದಟಿದು ಪೊಗಳತೊಡಗಿದನು ಸೌಂದರಕುಮರನು (ಸೌಂದಕ್ರ. ೫-೦೬) ; ಪರಮಪತಿವ್ರತೆಯರ ನಡತೆಯನಿಲ್ಲಿ ಪುರುಳುಗೊಳಿಸಿ ಪೊಗಳುವೆನು (ಹರಿ. ೦-೯೭). **ಹೊಗಳ್** : ೧. ಹೊಗಳ್ವ ವೇದಾಳಿಗತಿಗೂಢ ಕೂಡಲಸಂಗ ಸೊಗಯಿಸುವ ಘನವೃಷಾರೂಢ ಕೂಡಲಸಂಗ (ಬಸಕ. ೩-೯೩). **ಹೊಗಳು$_1$** : ೧. ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ ಹೊಗಳಿ (ಬಸಕ. ೩೯೬) ; ತೆಗೆಸು ದಳಿವನು ಸಾಕು ಬಟಿದೇ ಹೊಗಳುತಿಹೆ ನೀ ನಮ್ಮನು (ಕುಮಾರವ್ಯಾ. ೧೫-೪) ; ಅಗಣಿತವಿದ್ಯಾಧಿಕರು ಬಂದಲಸದೆ ಹೊಗಳಿದರಬುಜಾಂಬಕನ (ಭೋಹಕ. ೪-೬೦) ; ಹೊಗಳಿ ಮಾರಬೇಕು, ತೆಗಳಿ ಕೊಳ್ಳಬೇಕು (ಗಾದೆ). ೨. ನಿರ್ಧಾರವಾಗಿ ಹೇಳು ; ವಿವರವಾಗಿ ಹೇಳು : ಧರ್ಮಜ ಹೊಗಳು ಹೊಣೆಯನು ವಚನಿಸೊಡ್ಡವನಿದು ವಿನೋದವಲೆ ಒಗೆವಡೊಂದೇ ಹಲಗೆ ಮೇಲಣ ದುಗುಣ ಸಲ್ಲದು (ಕುಮಾವ್ಯಾಸ. ೦೬-೯೭) ; ಮನೆಯನ್ನು ಎರಡನೆಯ ಭೋಗ್ಯಕ್ಕೆ ಕೊಟ್ಟಾಗ ಭೋಗ್ಯಪತ್ರದಲ್ಲಿ ಮೊದಲ ಭೋಗ್ಯವನ್ನು ಹೊಗಳಿ ಬರೆಯಬೇಕು (ಲೂ).

**ಪೊಗಟ್ ಪಡು** = ಹೊಗಳಿಸಿಕೊಳ್ಳು : ಸುಬ್ರಾಹ್ಮಣನಾಗಿರ್ದುಂ ಸುಬ್ರಾಹ್ಮಣರಿಂದೆ ಪೊಗಟೆಪಟ್ಟುಂ ಮತ್ತಂ ಸುಬ್ರಾಹ್ಮಣತ್ವಮಾ ನೀಂ ನಿರ್ಬ್ರಾಹ್ಮಂ ಕಿಡಿಸಿ ಸವಣನಾದೈ ಮರುಳೇ (ಧರ್ಮಾಮೃ. ೮-೬೬).

[ದೇ. ॥ ತಮಿ. ಪುಕಟ್ ; ಮಲ. ಪುಗಟು ; ತುಳು: ಪೊಗಳು, ಪುಗಳು ; ತೆಲು. ಪೊಗಡು, ಪೊವಡು ]

**ಪೊಗಟ್$_2$**, ಹೊಗಳ್ಕು$_2$ (ನಾ). ಸ್ತುತಿ ; ಕೊಂಡಾಟ ; ಪ್ರಶಂಸೆ : ಜಟಕ್ಕೆ —ಪೊಟ್, ಬೀಟ್ . . . ನೆಗಟ್, ಪೊಗಟ್, ತೆಗಟ್ (ಶಮಂದ. ೯೬ ಕ್ರಿಯಾ). 'ಪೊಗಟುಲಿ' ಪರಾ. **ಹೊಗಳ್ಕು$_2$** : ದೂರನ್ನು ಎದುರಿಗಾಡು, ಹೊಗಳನ್ನು ಹಿಂದಾಡು (ಗಾದೆ). [ < ಪೊಗಟ್$_1$ ]

**ಪೊಗಟಿಸು**, ಪೊಗಳಿಸು, ಹೊಗಳಿಸು (ಕ್ರಿ). ಸ್ತುತಿ ಮಾಡಿಸು ; ಪ್ರಶಂಸೆ ಮಾಡಿಸು : ಮಾನಧನಾ ಪೊಗಟಿಸಲೇಂ ದಾನಿಯೆ ನೀನಂತೆ ನಿನ್ನ ಕಸವರಮೆಂದುಂ ದೀನಾನಾಥರ ಕೆಯ್ಯದು ದಾನಿಯದೆಂತೆಂಬುದಿಂತು ಹೇತ್ವಾಕ್ಷೇಪಂ (ಕಂದಾ. ೩-೦೦೫) ; ಬಲಿಂದಮನಿಂ ಬಿಲ್ಲ ಬಲ್ಮೆಯಂ ಪೊಗಟಿಸಿದಂ (ಶಂಶಶಾ. ೫-೪೩); ತುಂಬಿಯಿಂದಂ ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಟಿಸುವಂ ಚೈತ್ರದೊಳ್ ಚೈತ್ರಮಿತ್ರಂ (ಜಗಂ. ೦೯-೪೦). **ಪೊಗಳಿಸು** : ಮನವೊಲ್ದಾಗ್ಗಿರ್ಯನಾರಿಂ ಪೊಗಳಿಸನವನೀಮಂಡನಂ ವೀರಲಕ್ಷ್ಮೀಸ್ತನಹಾರಂ ವಾಜಿವಂಶಾಂಬರಹಿಮಕಿರಣಂ . . . ನಾಗವರ್ಮ್ಮ (ಶಾಂದೀಸ್. ೩-೦೬ ; 1047); ಶಿವನಾಜ್ಞೆಯಂ ಸಂಪಾದಿಸಲು ಪಾಲಿಸ ಲಖಿಳರಂ ಭೇದಿಸಲು ಲೋಕಂಗಳಂ ಪೊಗಳಿಸಲು ನೆಗಳಿಸಲು ಈ ಮಹಿಷ ವಾಗಿಳೆಗೆ ಬಂದ ಮಹಾಮಹಿಮ ಹರಮೂರ್ತಿ (ಬಸಕ್ರ. ೩೬-೪೨). **ಹೊಗಳಿಸು** : ಅರಸ ಕರ್ಣಚ್ಛೇದವೇ ಜಯಸಿರಿಯ ನಾಸಚ್ಛೇದವಿನ್ನ ರವರಿಸದಿರು ಹೊಯ್ದಾಡಿ ಹೊಗಳಿಸು ಬಾಹುವಿಕ್ರಮವ (ಕುಮಾವ್ಯಾಕ. ೦-೦೬).

[ಪೊಗಟ್$_1$ + — ಇಸು$_3$]

**ಪೊಗಟುಲಿ** (ನಾ). ಹೊಗಳಿಕೆಯ ಮಾತು ; ಕೊಂಡಾಟದ ನುಡಿ : ಮಗಮಗಿಸುತ್ತುಮಿರ್ಪ ನಟುಸುಯ್ಗಲರ್ಮಕ್ಕೆ ಜಿನುಂಗುತಿರ್ಪಿನಂ ಬಗೆಗೊಳೆ ಬಂದು ನಿಂದು ನೆಟಿದಗ್ಗದ ನೀಟಿಯರೊಲ್ದು ಪರ್ವಿವಾ ಪೊಗಟುಲಿ ಪೊಣ್ಮೆ ಬಿತ್ತರದೆ ಮುತ್ತಿನ ಸೇಸೆಯನಾಗಳಿಕ್ಕಿದರ್ (ಕಬ್ಬಿಗಾ. ೩೪೨). [ಪೊಗಟ್$_2$ + ಉಲಿ$_2$]

**ಪೊಗಟ್ಕೆ**, ಪೊಗಳಿಕೆ, ಪೊಗಳ್ಕೆ, ಹೊಗಳಿಕೆ, ಹೊಗಳ್ಕೆ (ನಾ). ಕೊಂಡಾಟ ; ಪ್ರಶಂಸೆ : 'ಪೊಗಟ್ಕೆವೆಟು' ಪರಾ. **ಪೊಗಳಿಕೆ** : ಎನ್ನ ಜಿಹ್ವೆಗೆ ಮೊಳಗುವಂದದಿ ನಿನ್ನ ನಾಮಾವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ (ಹಂಶಾ. ೨೦) ; ಪೊಗಳಿಕೆಗೆ ಹಿಗ್ಗಲೊಲ್ಲಡೆ, ತೆಗಳಿಕೆಗೆ ಕುಗ್ಗಲಾರದೆ, ಲತೆ ಫಲಕೆ ಸಿಗ್ಗಲೇಕೆ ? (ಗೀಶಂ. ೦೦೪-೪೦). **ಪೊಗಳ್ಕೆ** : ಮುನಿಗಳ ಪೊಗಳ್ಕೆಯಂದಲೆಗೆ ಕೆಲದವನಿನಂದನೆಯ ಮೊಗ ನೋಡಿ ನಸುನಗುತಾ ರಘೂದ್ವಹಂ . . . ಮುಂ ನೆರೆದ ಸಭೆಗಿಂತೆಂದನು (ಶ್ರೀರಾಮ. ೫-೪೦). **ಹೊಗಳಿಕೆ** : ಹೊಗಳಿಕೆಗೆ ಹೊಟಗಾದರ್ಕೈವರು ವಿಗಡರ ದರೊಳಗಿಬ್ಬರಳಿದರು ಹಗೆಗಳುಳಿದಿರಿ ಮೂವರೆಂದನು ಭಾನುಸುತ ಮುಳಿದು (ಕುಮಾವ್ಯಾಕ. ೯-೦೬) ; ನೋಟಕರು ಹೊಗಳಿಕೆಯ ಪರಿಪರಿಯ ಕೈವಾರಿಗಳು ನೆರೆದುದು ನಿಮ್ಮಯೋಧ್ಯಾನಗರದಧಿರಾಜೇಂದ್ರಚಂದ್ರಮನಶ್ವಮೇಧದಲಿ

ಜಾಡ್ಯಮುಂ (ಕಾದಂಖ. ೬೩೯). ೨. ಆಧಿಕ್ಯ ; ಅತಿಶಯ : ತುಡುಗೆಯ ಮಣಿದೀಧಿತಿಗಳ ಪೊಡರ್ಪು ಮೇಗೊಗೆವ ಕೊಡೆವೊಲಿಸೆದಪುದೆಂಬೀ ನುಡಿ ನೆಗಟ್ಚೆ ಪಂಚರತ್ನದ ಕೊಡೆಯಂ ಪಿಡಿದಮರಿಜನದ ಮನದಡಿವಿಡಿದಲ್ (ಆದಿಪು. ೭-೩) ; ಕಡುಗಲಿಯುಪ್ಪ ವಿಕ್ರಮನ ಗಂಡಿನದೊಂದು ಪೊಡರ್ಪನೇನ ಬಣ್ಣಿಸಲಳವಲ್ತೆ (ಶಾಸಂ. IX-1, ೨೭೭-೨೬; 1183) ; ಎಡೆಗುಡದು ಸಿರ್ದೆಗೆವಡೆಯೊಳ್ ಪೊಡಕರಿಸುವುದುಸಿರನಿಕ್ಕುವೆಡೆಯೊಳ್ ಮುನ್ನೀರ್ಗಡಲಿಂದೊಡೆ ವಡಬಾಗ್ನಿಯ ಪೊಡರ್ಪಿನಿತ್ತೆಂಬ ರಸನೆಗೊಗೆಯವೆ ಪುಗುಳ್ಗಳ್ (ಸಂತಿ.ಸು. ೨-೨೦). ೩. ತಾಪ ; ಶಾಖ ; ಬಿಸುಪು : ಬಡಬಶಿಖಿಯಲ್ಲಿ ಪರ್ಬುವ ಪೊಡರ್ಪನೊಳಕೊಂಡು ಮೇಲೆಮೇಲೈತರ್ಪನ್ನೊಡಲುರಿಯುನವಧರಿಸು (ರಾಜಶೇ. ೦೩-೦೯೭). ೪. ಶಕ್ತಿ; ಪ್ರತಾಪ; ಸಾಮರ್ಥ್ಯ : ಮಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ (ಕಂಕಭಾ. ೦೦-೨೩); ಆ ಮಹಾರೌದ್ರಭದ್ರಾಕಾರನ ಪೊಡರ್ಪಿನಾರ್ಪಿನಳವಿಗಟಿದ ದರ್ಪಮಂ ಪೇಟಲ್ಕೊಡೆ (ಕಂಪತಂ. ೯೩-೦೬) ; ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇಳ್ಗೆ ತಾರಕಾಸುರನ ಪೊಡರ್ಪು (ಗಂಶ. ೬-೦೦); ಮಾತಂಗದ ಬಲಂ, ಸಿಡಿಲ ಪೊಡರ್ಪು, ಕಡಲ ಗುಣ್ಪು, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳ್ದಿರ್ದಂ (ರಾಮಾಶ್ವ. ೭-೦೬). ೫. ಆವೇಶ ; ಉತ್ಸಾಹ; ಸ್ಫುರಣೆ : ತನ್ನ ಮನದ ಪೊಡರ್ಪುಮಂ ಕೂರ್ಪುಮನುಂಟುಮಾಡಿ ನುಡಿದಂ (ಕುಶಕಥಾ. ೦೦-೩೯ ವ) ; ಇದಿರ್ಗೆ ಬರೆ ಪುನ್ನಿಗಂ ಕಿಡಿಸದಿರಂ ಕವಿಗಮಕಿವಾದಿವಾಗ್ಮಿಗಳ ಕವಿತ್ವದ ಗಮಕಿತ್ವದ ವಾದಿತ್ವದ ಪೊಡರ್ಪುಮಂ ದರ್ಪಮುಮಂ (ಶಾಂತಿಪು. ೦೨-೬೯) ; ಆರ್ಪುಗಳಬಹುದು ಹರಸೈನ್ಯಮಿಾ ಪರಿಯೊಳ್ ಪೊಡರ್ಪಿನಿಂದೈತರುತ್ತಿರ್ದುದು (ಕಂಶ್ರು. ೨೬-೦೨). **ಪೊಡಪು:** ೪. ಸಿಡಿಲ ಪೊಡವು ಘುಡುಘುಡಿಸುತ ಮಿಂಚಿನ ಕುಡುಪು ಮೋಡದಿ ಹೊಳೆಹೊಳೆದು ಬಿಡದೆ ಸುರಿವ ಮಳೆಯಲಿ ತರುಮೂಲದಿ ತಡೆದಿರ್ದನಾ ಮುನಿರಾಜ (ಅಪಂಶ. ೪-೩೦) ; ಸುಖ ದುಃಖವಾಯ್ತೋ, ಪೊಡಪು ಪುಡಿಯಾಯ್ತೋ, ಪಾಡೆಲ್ಲ ಗೋಳಾಟವಾಯ್ತೋ! (ಪಾರಸಿ. ೦೨-೨೮೬). [ಪೊಡರ್ + —ಪು$_2$]

**ಪೊಡರ್ಪುಗಿಡು** 'ಪೊಡರ್ಪುಗೆಡು' ನೋ.

**ಪೊಡರ್ಪುಗುಂದಿಸು** (ಕ್ರಿ). ಬಲವನ್ನು ಕುಂದಿಸು; ಶೌರ್ಯಹೀನನನ್ನಾಗಿ ಮಾಡು : ಮನುಜಸುತಂ ಪನ್ನಗಶರದಿನಿಸುವುದುಂ ಜನಕಸುತನನದು ಪೆಣೆದಹಿಬಂಧನದಿಂ ಪೊಡರ್ಪುಗುಂದಿಸೆ (ಕಂರಾಮಾ. ೦೩-೦೯೩).
[ಪೊಡರ್ಪು + ಕುಂದಿಸು]

**ಪೊಡರ್ಪುಗುಂದು** (ಕ್ರಿ). ಬಲಗುಂದು ; ಶಕ್ತಿಯನ್ನು ಕಳೆದುಕೊಳ್ಳು : ಕುತ್ತದೊಳ್ ಪೊರಳುತ್ತಿರ್ಪವರನ್ನಲಿಂಗಿಗಳ ರೂಪಂ ಕಂಡು ತದ್ಬಾಧೆಯುಬ್ಬರದಿಂ ಪಿಂಗಿ ಪೊಡರ್ಪುಗುಂದದೆ ಮಹಾಸಂತೋಷದಿಂದಿರ್ದರೇ (ರರ್ಮಾಮ್ಮ. ೯-೯೭). [ಪೊಡರ್ಪು+ಕುಂದು$_1$]

**ಪೊಡರ್ಪುಗೆಡಿಸು** (ಕ್ರಿ). = ಪೊಡರ್ಪುಗುಂದಿಸು : ಈ ಶರವ ಇಂದೆಸೆದವನ ಪೊದ[ಡ]ರ್ಪುಗೆಡಿಸಿ ನಾವು ತಂದೊಪ್ಪಿಸುವೆವು ನಿನ್ನಡಿಗೆ (ಗೋಮಟೇ. ೦೦-೭೭). [ಪೊಡರ್ಪು+ಕೆಡಿಸು$_1$]

**ಪೊಡರ್ಪುಗೆಡು**, ಪೊಡರ್ಪುಗಿಡು (ಕ್ರಿ).=ಪೊಡರ್ಪುಗುಂದು : ವಿಾಜುವೆವೆಂಬ ಮಣ್ಡಳಿಕರಿಲ್ಲದಟಿಂದೆ ಬಯಲ್ಗವನ್ದು ಮೆಯ್ದೋಜುಪೆವೆಂಬ ವಿಕ್ರಮಿಗಳಿಲ್ಲ ಕುನುಂಗಿ ಕಳಲ್ದಳಲ್ದು ಕಾಯ್ಬಾಜಿ ಪೊಡರ್ಪ್ಪುಗೆಟ್ಟು ಬೆಸಕೆಯ್ವವರಲ್ಲದೆ ಮಿಕ್ಕ ತನ್ನ ಕಾಯ್ಪೇಜಿದ ತೇಜದಿಂ ವಿಜಯಪಾಣ್ಡ್ಯಮಹೀಪನಿದೇಂ ಪ್ರತಾಪಿಯೋ (ಎಕ. XI, ದಾವಣ. ೩೨-೦೦ ; 1171). **ಪೊಡರ್ಪುಗಿಡು :** ಈ ಸಕಲಧರೆಯಂನುಗ್ರಭುಜಾಸಿಯೊಳಳವಡಿಸಿ ನಹುಷನಗ್ರಸುತಂ ಸಂವಾಸಂರಿಪುದಾರಕರಂ ದಾಸೇರಕರೆನೆ ಪೊಡರ್ಪುಗಿಡೆ ನಡೆಯಿಸಿದಂ (ಕಂರಾಮಾ. ೨-೬೦); ಕೃಪ ಕೃತವರ್ಮರಿರ್ವರುಮನಂತಿಷುಜಾಲದಿನೆಯ್ದು ಪೂಟೆ ಸಗ್ಗಪಿತಮನರ್ ಪೊಡರ್ಪುಗಿಡೆ[ಪಾಕಾಂ.ಡುಗಿ]ನಿಲ್ವುದುಂ ( ಜೀವಂಧ. ೦೨-೪೦) ; ಪೊಡರ್ಪುಗಿಡೆ ದೈನ್ಯದಿಂ ನಿಜಪದಾಬ್ಜದೊಳ್ಬಿಟ್ಟು ಬಾಯ್ವಿಡುತ್ತುಮಿರೆ ನೋಡಿ ಪೇಡಿಯನದೆಂತು ಕೊಂದಪ್ಪೆನೆಂದಡಂಗಿಸಿದನಾತ್ಮಕೋಪಮಂ (ವರ್ಧಪು. ೨-೩೩). [ಪೊಡರ್ಪು+ಕೆಡು$_1$]

**ಪೊಡರ್ಪುಗೆಯ್** (ಕ್ರಿ). ಬಲವನ್ನು ತೋರಿಸು; ಶಕ್ತಿಯನ್ನು ಪ್ರದರ್ಶಿಸು; ಪೌರುಷವನ್ನು ಪ್ರಕಟಿಸು : ಕೊಲೆ ಪುಸಿ ಪರವಧುಸಂಗಂ ಕಳವೆಂಬಿವು ಬೇಡ ಬೇಡ ಬೇಡೆಂಬೀ ನಿರ್ಮಳವೀತರಾಗನಾಜ್ಞೆಯನುಲಿಂದಣ್ಣ ಪೊಡರ್ಪುಗೆಯ್ವ ಗಂಡರುಮೊಳರೇ (ರರ್ಮಾಮ್ಮ. ೯-೯೩); ಮತ್ತನನ್ನನೊಳನನ್ನಪರಾಕ್ರಮನೊಳ್ ಪೊಡರ್ಪ್ಪುಗೆಯ್ವದಿರಿಡುವೊಡ್ಡಿನಿತ್ತರಿಪ ಕಾದುವ ಮೆಯ್ಗಲಿಯಾರ್ದ್ದರಿತ್ರಿಯೊಳ್ (ಶಾಸಂ. XX. ೬೪-೨೩; 1112); ಬಿಸಿಲೊಳೆ ಬೆಬ್ಬರಂಬಿರಿದ ಮಸ್ತಕಶಕ್ತಿಕೆಯಿಂದೆ ಮುತ್ತುಮುಂದೆಸೆ ಕವಿತಂದೊಡೆ . . . ಪೊಡರ್ಪುಗೆಯ್ದು ಪೂಸಿಸುವಳಿಪಿಂದೆ ಪುಷ್ಕರಮನೆತ್ತಿದುದೆಂದು ನಭಕ್ಕದೊಂದಿಭಂ (ಕಂದ್ರಪ್ರ. ೯-೬೩)
[ಪೊಡರ್ಪು+ಕೆಯ್$_1$]

**ಪೊಡರ್ಪುಡುಗು** (ಕ್ರಿ). ಶಕ್ತಿಯು ಕುಂದಿ ಹೋಗು; ಪರಾಕ್ರಮವು ಅಳಿ; ಬಲಹೀನವಾಗು : ಪೊಡರ್ಪುಡುಗದೆ ಬಿಟ್ಟುವಿರ್ದ ನೆಲೆಯಿಂ ಕೆಲವುನ್ನದ ಗಂಧಸಿಂಧುರಂ (ಕಂಕಭಾ. ೦೦-೯೪); ಯಕ್ಷರ್ ಭಗ್ನದಂಷ್ಟ್ರಹರ್ಯಕ್ಷರೆನಿಸಿ ಪೊಡರ್ಪುಡುಗೆಯುಂ (ಜಗಂ. ೦೩-೭೭ ವ); ಪೆಜಿನಾಡೆಜೆಯಂ ಎನ್ನ ಕೈಯೊಳ್ ಬನ್ನಂಬಡೆದು ಕಿನ್ನರಾಗಿಯವನ ಮೆಯ್ಗಂದಿದ ಚೆನ್ನಪಾಂಗಿನಂತೆ ಪೊಡರ್ಪುಡುಗಿದ ಜಾಡಿಯಂ ನಗುವಂದದಿನರಲ್ದ ಸುರಹೊನ್ನೆಗಳೊಳಂ (ಕಬ್ಬಿಕಾ. ೯೯). [ಪೊಡರ್ಪು + ಉಡುಗು$_1$]

**ಪೊಡರ್ಪುದೋಱು** 'ಪೊಡರ್ಪುದೋಱು' ನೋ.

**ಪೊಡರ್ಪುದೋಱು**, ಪೊಡರ್ಪುದೋಱು (ಕ್ರಿ). ಶಕ್ತಿಯನ್ನು ತೋರಿಸು; ಪರಾಕ್ರಮವನ್ನು ಪ್ರದರ್ಶಿಸು; ಬಲವನ್ನು ತೋರು : ಭುಜಂಗಕಾಂಡಕ್ಕೆ ಖಗೇಶಕಾಂಡಮನಧೋಕ್ಷಜನೆಚ್ಚು ಪೊಡರ್ಪುದೋಱಿದಂ (ಜಗಂ. ೦೬-೨೯). **ಪೊಡರ್ಪುದೋಱು :** ಅನಗಿದಱಿದಿರ್ದೋಡಂ ಚಲದಿನೆನ್ನೊಳ್ ಪೊಂಗಿ ಪೊಡರ್ಪುದೋರ್ಪಂ (ಆದಿಪು. ೦೨-೩೩); ಬಲನಾರಾಯಣರಂ ನಿರೀಕ್ಷಿಸಿ ದಶಗ್ರೀವಂ ರಣಕ್ಷೋಣಿಯೊಳ್ತಲೆಯಂ ತೂಗಿ ಪೊಡರ್ಪುದೋರ್ಪೆನೆನುತಂ ಬಂದೊಡ್ಡಿ (ಕಂರಾಮಾ. ೦೩-೩೨).
[ಪೊಡರ್ಪು + ತೋಱು]

**ಪೊಡರ್ಪುವೆಱು** (ಕ್ರಿ). ಅತಿಶಯವನ್ನು ಪಡೆ; ಆಧಿಕ್ಯವನ್ನು ಹೊಂದು : ಪರಿವ ಪಡಂಗು ಬಲ್ದೆರೆಯ ಸಾಲ ಬೆಡಂಗು . . . ಪೊಡರ್ಪುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಕಂಕಂ. ೦-೩೯).
[ಪೊಡರ್ಪು + ಪೆಱು$_1$]

**ಪೊಡವಿಗಾಸೆ** (ನಾ). ನಡುಗುವ ವಿಗಾಸೆ; ಅದುರುವ ಮಿಾಸೆ : ಕೆಂಗಣ್ಣ ಕೆದರ್ದಲೆಯ ತೆರೆವಾಯ ಪೊಡವಿಗಾಸೆ ತುಂಗತರನಾಸಿಕಂ ಹೆದ್ದಂಷ್ಟ್ರ . . . ದುಃಶ್ವಾಸಸಂಕಲಿತಸಂಗಡಿಗರೆಮನಾಳ್ಗಳಂತಮುಮ ಮೈದೋರಿತವನಿಯುಂ ಗದ್ಗದಿಪೊಲು (ಕಂಶಾಣ. ೦-೦೭-೪೭).
[ಪೊಡರ್ + ವಿಾಸೆ]

**ಪೊಡವಡಿಕೆ** (ನಾ). ಅಡ್ಡಬೀಳುವುದು; ನಮಸ್ಕಾರ; ನಮನ : "ನಮಸ್ಯಾ, ವಂದನಾ—ಈ ೨ ಪೊಡವಡಿಕೆ" (ಕಶಾಯು. ೦೨೬-೪೦) ; ಕಾದಂಬರೀದೇವಿ ಪರಿಜನಂಬೆರಸು ನಿಮಗೆ ತನ್ನ ಪೊಡವಡಿಕೆಯಂ ಬಿನ್ನವಿಸಲ್ವೇಟ್ಟಿದಳೆಂಬುದುಂ (ಕಾದಂಖ. ೫೭೦); ದೇವಿ ನಿಮ್ಮ ಸವತಿ ಜಯಂಧರನರಸಿ ವಿಶಾಳನೇತ್ರೆಯೆಂಬುದುಮಂತಾದೊಡೆನ್ನ ಪೊಡವಡಿಕೆಯಂ ಪಾರುತ್ತಿರ್ದ ಲಾರ್ಪಳೆಂದಱಿದು (ಧರ್ಮಾಸ್ರ. ೭-೪೭ ವ).
[ಪೊಡವಡು (< ಪೊಡೆವಡು$_1$) + — ಇಕೆ]

**ಪೊಡವಡಿಸು** 'ಪೊಡೆವಡಿಸು' ನೋ.

**ಪೊಡವಡು** 'ಪೊಡೆವಡ್ಕು' ನೋ.

**ಪೊಡವಿ** 'ಪೃಥುವಿ' ನೋ.

**ಪೊಡವಿಕಂಟಕ** (ನಾ). ಭೂಮಿಗೆ ಮುಳ್ಳಿನಂತಿರುವವನು ; ಲೋಕಕ್ಕೆ ತೊಂದರೆಯನ್ನು ಕೊಡುವವನು : ಪೊಡವಿಕಂಟಕರೆನಿಪ ನೃಪಕುಲ ದಡವಿಯನು . . . ತಡೆಗಡಿದನು (ಶಿಶಾಗ. ೨-೩-೦೦).
[ಪೊಡವಿ (<ಪೃಥುವಿ)+ಕಂಟಕ]

**ಪೊಡವಿಜ** (ನಾ). ಭೂಮಿಯ ಮಗ ; ಮಂಗಳ : "ಮಂಗಳನ ಪೆಸರು ...ಪೊಡವಿಜನೆಂದು" (ಕ್ಕಾಮಂ. ೦೬). [ಪೊಡವಿ (<ಪೃಥುವಿ) + —ಜ]

**ಪೊಡವಿಜೆ** (ನಾ). ಭೂಮಿಯ ಮಗಳು ; ಸೀತೆ : ಪೊಡವಿಜೆಯ ಬಿಡೆನೆಂಬ ಚಿತ್ತದ ಕಡುಹು ಖರೆಯವೆ ಎನಗೆ ನೇಮವ ಕೊಡಿಸು (ಶೌಶಿರಾ. ೦೯-೬). [<ಸಂ. ಪೃಥ್ವೀಜಾ]

**ಪೊಡವಿಪ,** ಪುಡವಿಪ (ನಾ). ಭೂಮಿಯ ಒಡೆಯ ; ಅರಸ ; ರಾಜ : ಪೊಡವಿಪಂಗೀ ಹದನನರುಪಲು ಘುಡುಘುಡಿಸುತಹುಡಹುದು ಭಕ್ತನು ಕಡುಹುಗೊಡ್ಡಾಟಂಗಳಂ ಕುಪರಿಗಳನಾಡಿದನು (ಬಸಪು. ೨೯-೪೪) ; ಕಡುಮನದ ಕಟಿಬಲದ ಧಾಳಿಗೆ ನಡುಗಿ ಕಂಡುದು ಪೂರ್ವದಿಕ್ಕಿನ ಪೊಡವಿಪರ್ದು ಸಾವಂತ ಮನ್ನೆಯ ಮಂಡಲೇಶ್ವರರು (ಕೊರಿರಾ. ೪-೯-೨೨) ; ಪೊಡವಿಪ ಕೇಳು ನಿಮ್ಮೊಡನೆ ಮಚ್ಚರಿಸುವ ಕಡುಗಲಿಗಳನೆಲ್ಲವರನು ಪಿಡಿಯಾಳಾಗಿ ಹಿಡಿದು ನಿಮ್ಮಡಿ[ಗೊಪ್ಪಿಪ] ಸಡಗರವೆನಗಿರುತಿರಲಿ (ತ್ರಿಶಾಂ. ೦೪-೦೩೫). **ಪುಡವಿಪ :** ಕಡಲು ಕದಡಿತು ಭೂರಿಭೇರಿ ವಾದ್ಯಂಗಳಿಂ ಪು[ಶಾಶಾಂ. ಪೊ]ಡವಿಪರ ಮಣಿಮಕುಟಮಣಿಯೊಳಗೆ ತರಣಿ ಶಶಿಯುಡಗಿದುವು (ತುರಂಗ. ೪೩-೨೫). [ಪೊಡವಿ (<ಪೃಥುವಿ)+—ಪ]

**ಪೊಡವಿಪತಿ,** ಪಿಟ್ಟುವಿಪತಿ (ನಾ). =ಪೊಡವಿಪ : ಪೊಡವಿಪತಿ ಗೊರವನೆನೆ ಪೇಟ್ಟಡೆಯದುವದೆಕರಿಸಿ ಕಬ್ಬಿಗದರ್ಪುಟಿನೆಯುಂ (ಕವಿರಾ. ೦-೪೯) ; ಪೊಡವಿಪತಿ ಕೂರ್ತು . . . ಅನಿರ್ದೆಡೆಗೇಟ್ಟುಂದಂ (ದಶಕು. ೦೨-೯೩) ; ಪೊಡವಿಪತಿ ಕೇಳ್ಬಳಿಕ ಕಣ್ಕೊಂಡದಂತಾಗೆ ಉಡಿಹುಬ್ಬು ಧೂಮಲತೆಯೆಂಬೊಲಿರೆ (ಕೈಬುಧಾ. ೦೩-೩೬). **ಪಿಟ್ಟುವಿಪತಿ :** ಶ್ರೀಮತ್ ಪಿಟ್ಟುವಿಪತಿಯ ಮಗ ನನ್ನಿಯ ಗಂಗನಣ್ಣಿಯೆಂಬ ಗಣ್ಡ ಬೀರನೊಟಮ್ಪಂ ತಾಗಿ ಶಾನ್ತರನೆಱಿಯರಟ್ಟಿದೊಡೆ (ಎಕ. X, ಗೋಂಬಿ. ೪-೯ ; ಸು. 920).
[ಪೊಡವಿ (<ಪೃಥುವಿ)+ಪತಿ]

**ಪೊಡವಿಯಾಣ್ಮ** (ನಾ). =ಪೊಡವಿಪ : ಬಿಜ್ಜಣಿಗಳ ಪಿಡಿದೂಳಿಗಗೈವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹರಿಬಿ. ೦-೦೬).
[ಪೊಡವಿ (<ಪೃಥುವಿ)+ಆಣ್ಮ (<ಆಳ್ಮ)]

**ಪೊಡವಿಯೆಱೆಯ** (ನಾ). =ಪೊಡವಿಪ : ಓವರೆ ಪೊಡವಿಯೆಱೆಯ ನಣುಗಿನ ಸುಕುಮಾರಂ ಸಡಗರದಿಂ ಸಲೆ ಸಂಪದದೊಳ್ ದಿನಮಂ ನೂಂಕುತ್ತಿಹನು (ಶಬುಶಾ. ೨-೬೬). [ಪೊಡವಿ (<ಪೃಥುವಿ)+ಎಱೆಯ]

**ಪೊಡವಿವನೆ** (ನಾ). ಭೂಮಿಯಲ್ಲಿನ ಮನೆ ; ಹುತ್ತ.
**ಪೊಡವಿವನೆಯರ್** = ಹುತ್ತದಲ್ಲಿ ವಾಸಿಸುವವರು ; ಹಾವುಗಳು; ನಾಗಗಳು : ಪೊಡವಿವನೆಯರ ದಂಡು ಖಗಪತಿಯ ಮುತ್ತಿದೊಲು (ನವಪೋ. ೦೨-೪೯). [ಪೊಡವಿ (<ಪೃಥುವಿ)+ಮನೆ]

**ಪೊಡವಿವೆಣ್** (ನಾ). ಭೂಮಿಯ ಮೇಲಿನ ಹೆಣ್ಣು ; ಮಾನವಸ್ತ್ರೀ : ಪೊಡವಿವೆಂಗಳ ಬಿಟ್ಟು ಸಗ್ಗವೆಂಗಳಿಗೊಲ್ದು ಜಡಬ್ರಹ್ಮಚಾರಿಯೆ ಅವನು (ಶರಶ. ೯-೦೦೬). [ಪೊಡವಿ (<ಪೃಥುವಿ)+ಪೆಣ್]

**ಪೊಡವಿಸು** 'ಪೊಡೆಯಿಸು' ನೋ.

**ಪೊಡವಿಸುತೆ** (ನಾ). =ಪೊಡವಿಜೆ : ಉಡುಗೊಱೆಯನುಚಿತದಲಿ ರಾಘವ ಕೊಡಿಸುತಿರ್ದನುಪೊಬ್ಬರುಳಿಯದೆ ಪೊಡವಿಸುತೆಯೊಲಿದಂತೆ ತಾನೊಲಿದಂತೆ ಮನ್ನಿಸಿದ (ಶೌಶಿರಾ. ೪೪-೩೪). [ಪೊಡವಿ (< ಪೃಥುವಿ) + ಸುತೆ]

**ಪೊಡವೀಶ** (ನಾ). =ಪೊಡವಿಪ : ಪೊಡವೀಶರ್ಧುವನೈಕವಲ್ಲಸುತ ಪಾದಾಂಭೋಜರತ್ನೂರ್ಜಿತರ್ ದೃಢಚಿತ್ತರ್ (ರಸರಾಜು. ೦-೨೪); ಪೊಡವೀಶ ಬೊಟ್ಟುದೋಱುವ ಪೊಡರ್ಪದೇಕಜ್ಜ ಮಂತುಮಿದಿರಪ್ಪಡ ಮೆನ್ನೆಡಗೆಯ್ಯ ಕಿಱುಕುಣಿಕೆಯ ಮುಡಿಯೊತ್ತಿರೆ ನೋಟ್ಪೆಮೆಂದು ನೀಡಿದ ಬೆರಲಂ (ಶಂಹಂ. ೦೩-೨೦); ಬಡವನೊಳ್ಳಿಯ ಮಾತ ನುಡಿದರಲ್ಲೆಂಬುವರು ಪೊಡವೀಶ ಪೊಳ್ಳುಗೆಡೆದರೂ ಕೈವಾರಿ ಕಡುನಗುತಲಿಹರು (ಸರ್ವಜ್ಞ. ೦೨೬೬).
[ಪೊಡವಿ (< ಪೃಥುವಿ) + ಈಶ]

**ಪೊಡವು** (ನಾ). ಗುರುತು; ಚಿಹ್ನೆ; ಸುಳಿವು : ಶಿರಿಯೊಳಿಹ ಕಲ್ಯಾಣ ಪುರವನಾಳುವ ಬಸವ ಧೊರೆಯ ಮಂದಿರ ಪೊಕ್ಕು ಚರಮೂರ್ತಿಯಂತೆ ಪೊಡವು ಶಿಕ್ಕದ ತೆರದೊಳಡರಿಯುವರೊಳು ನೀನು ಮೃಡನ ರೂಪಿಗಳೊಳಗೆ ಕಡುವಿನೋದದೊಳು (ಹುಕೋಡಿ. ೬೬). [?./ತೆಲು. ಪೊಡ]

**ಪೊಡಸೆಂಡು** 'ಪೊಡೆಸೆಂಡು' ನೋ.

**ಪೊಡಿಪ್ಪಾಡಿ** (ನಾ). ಒಬ್ಬಾತನ ಹೆಸರು : ಶ್ರೀಪೊಡಿಪ್ಪಾಡಿಯರ್ಗ್ಗೆ ಯಪ್ಪೊಂಬು ಕಟನಿ ಕೊಟ್ಟರ್ (ಪ್ರಿಅಂ. ೦೯೨೬, ೦೦೦-೦೦ ; ೪ನೆಯ ಕತ). [ ? ]

**ಪೊಡಿಮಡೆ ?** (?) : ಹಾರವರ್ ಸೋರಡೆಯ ಕದಂಬರ ತೈಲಹನ್ ಇಱಿದು ಪೊಡಿಮಡೆ ಉರ್ಬ್ಬಲ್ ಅ ತುಱು ಪರಿಯೆ ಬೊಪದಳಾಟ ಕಾದಿ ಸುರಲೋಕಪ್ರಾಪ್ತನ್ ಆದಡೆ (ಪ್ರಿಅಂ. ೦೯೨೩, ೬೨-೦೨ ; ೧). [ ? ]

**ಪೊಡೆ$_1$,** ಹೊಡೆ$_1$ (ಕ್ರಿ). ೧. ಏಟುಕೊಡು ; ಪೆಟ್ಟುಹಾಕು : "ಪೊಡೆ-ಪ್ರಹರಣೇ, ಕುಕ್ಷಾಚ (ಹೊಟ್ಟೆ)" (ಕವಂಧಾ); ಪೊಡೆವ ಬೀರರ ಜಂಕೆಗೆ ಗೊಂಟನಾನೆಗಳ್ ಕೋಡುವಿನಂ ಕಡಂಗಿ ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ (ಕದ್ಯಕಾ. ೨೦೫) ; ವೇತ್ರದಿಂ ಪೊಡೆದೆಲೆಲೆ ಮಗನೆ ಯೇಳೇಳೆನಲ್ಕೆ (ಶದ್ಮರಾ. ೨-೩೨) ; ಪೊಡೆದರೇ ಕಾಮಧೇನುವ ಕಲ್ಪವೃಕ್ಷಮಂ ಕಡಿದರೇ ಸೌಂದರ್ಯರಸದ ಕೆಱೆಯಂ ಮಾಣದೊಡೆದರೇ (ಶಿಬಪು. ೩೫-೨೪). ೨. ಹರೆ, ನಗಾರಿ, ತಮಟೆ ಮೊದಲಾದ ಚರ್ಮವಾದ್ಯಗಳನ್ನು ಬಾರಿಸು,—ಬಾಜಿಸು : ಪೊಡೆ ಪಱೆಯನೆಂದು ಪಱೆಯಂ ಪೊಯ್ಸಿ (ವಡ್ಡಾರಾ. ೦೯೦-೦೩) ; ಪೊಡೆವ ಪಟಹ ಡಕ್ಕೆಗಳ ಬೊಬ್ಬಿಱುವ . . . ಪೇಚರಿಯರ ತುಮುಳರವದೊಳ್ ತೊಡರ್ದು (ಅರ್ಧನೇ. ೩-೦೬ ಪ); ಪೊಡೆವ ಡಕ್ಕೆಯ ಪಿಡಿದ ಬಿರುದಿನ ಕಾಳೆಯ ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳು ಕಿವುಡುವಡಿಸೆ (ಕದ್ಯಕಾ. ೨೩೦) ; ಪೊಡೆ ಭೇರಿಯನಡರಾನೆಯ ನಡೆಯಿಡು ಕದನಕ್ಕೆ ಬಲವ ನೊಡ್ಡೆಂಬ ರವಂ ಸಡಗರದಿಂದೆಡೆವಿಡಿದುಗ್ಗಡವಾದುದು (ಹಮ್ಮಾರ. ೩-೩೦). ೩. (ಸಿಡಿಲು ಮೊದಲಾದುವುಗಳು ಪೆಟ್ಟಾಗುವಂತೆ) ತಾಗು ; ಬಡಿ ; ಅಪ್ಪಳಿಸು : ನೆಗಟ್ಟಿಯ ಗಾಂಡಿವಮಂ ತಗುಳ್ದು ಜೇವೊಡೆಯ ಸಿಡಿಲ್ ಸಿಡಿಲ್ದು ಪೊಡವಂತೆವೊಲಾಯ್ತು (ಶಂಕಭಾ. ೯-೦೦೦) ; ಪೊಡೆದತ್ತುರ್ವರೆಯಂ ಯುಗಾಂತರದ ಸಿಡಿಲ್ (ಕಾದಂಪೂ. ೩೮೫); ದುರಿತಂ ಮತ್ತದ್ವಿಪಂ ಮೂರ್ಖಿತೆ ಪೊಡೆವ ಸಿಡಿಲ್ ದುರ್ಜನಂ ದುರ್ಮದಂ ತಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂದವೇಂ ಸೋಜಿಗಂ (ರಶ್ನಾಶ. ೨೯). ೪. (ಗ್ರಹ ಮೊದಲಾದುವುಗಳು) ಮೈಮೇಲೆ ಬರು ; ಆವರಿಸು ; ಮೆಟ್ಟಿಕೊಳ್ಳು : ಪೊಡೆದುದು ಗರವಶಿಕೋಪದೆ ಪಿಡಿದುದು ಪುಲಿ ಗಾಳಿ ಸೋಂಕಿದತ್ತು (ಕಾದಂಪೂ. ೩೬೩); ಕವಿಗಳ್ ಕಾವ್ಯಂಗಳಂ ಮಾಡುವಾಗ್ರಹವಂ ಮಾಡಿ ದೊಡಾ ಗ್ರಹಂ ಪೊಡೆದವೊಲ್ ಬೆಂಡಾಗಿ ಬೀಳಾಗರೇ (ಅನಂಪು. ೦-೩೯). ೫. (ಗಾಡಿ, ಪ್ರಾಣಿ, ಗಾಣ ಮೊದಲಾದುವುಗಳನ್ನು) ಮುಂದಕ್ಕೆ ಸಾಗಿಸು ; ಚಲಿಸುವಂತೆ ಮಾಡು; ಅಟ್ಟು; ನಡೆಸು : ಗಾಣವಂ ಪೊಡೆ (ರೀವಡ. ೩-೩೨). ೬. ಮೂಡು; ಹುಟ್ಟು; ಕಾಣಿಸಿಕೊಳ್ಳು :

ಗಡಿಗೆ ಮಡಿಕೆಯು ಕೊಂಡು ಅಡಿಗೆಯು ವೇಳೆಯೊಳು ಬಿಡದೆ ಮಳೆಮೋಡ ಪೊಡೆಯಲ್ಕೆ ಈರ್ವರಿಗೆ ತಡಬಡಲಾಯ್ತು (ಸರ್ವಜ್ಞ. ೬). ೭. ಸೋಲಿಸು; ಮಿಗಿಲಾಗು; ಮೀರು : "ಅಲಗಣಸಾದುದು ಮಿಕ್ಕುದು ಗೆಲೆವಂದುದು ಮಿಳ್ಕಿಸಿದುದುಮೋರಂಡಲಮುಂಡಲೆದುದು ಪಳಂಚಿದುದು ತಾನಟ್ಟಿಸಿದುದಂ ಪೊಡೆದುದ್ಯೆದ ವಿಪಾಟಿದುದೆಂದುಂ" (ಕಬಿಕಂ. ೦೩೭). ೮. ಇಲ್ಲದಂತೆ ಮಾಡು; ನಿವಾರಿಸು; ಕಳೆ : "ಕೊರ್ಬು ತೆನೆ ತಾಡನ ಬಸಿಱು ನಿವಾರಿಪುದೆಂಬಿವಱೊಳು ಪೊಡೆ" (ಕಾ.ಘಂ. ೯೦). ೯. (ಆಲಂ) ತಿನ್ನು; ಭಕ್ಷಿಸು : ಕಡೆಗಣ್ಣೊಳೆ ರಕ್ಕಸನಂ ನಡೆ ನೋಡಿ ಕೊಲಲ್ಕೆ ಸತ್ತ್ವಮಪ್ಪಂತಿರೆ ಮುಂ ಪೊಡೆವಂ ಕೂಟಂ ಬಟ್ಟೆಯುಂ ಪೊಡೆವಂ ರಕ್ಕಸನನೆಂದು ಸಾಹಸ ಭೀಮಂ . . . ಸಮೆಯ ತಾತ್ತುವುದಂ ಕಂಡು (ಶಂಕಭಾ. ೩-೨೯). ೧೦. [ಗಣಿತ] ಗುಣಾಕಾರ ಮಾಡು ; ಗುಣಿಸು : ಪೊಡೆ ಪೊಡವಿಸು . . . ಗುಣಿಯಿಸೆಂಬುದು ನಿರತಂ (ವ್ಯಕಚಾ. ೦೦-೦೦). **ಹೊಡೆ₁ :** ೧. ತಿರ್ರನೆ ತಿರುಹಿ ನೆಲದೊಳು ಹೊಡೆವ ಸಮಯಕೆ ಕಂಡು ಪಾರ್ವತಿ ಬಿಡುಬಿಡೆಲೆ ಪವಮಾನನಂದನ ಈತ ಶಿವನು ಕಣಾ (ಶಂಭಕ. ೧೭-೩೭) : ಕಡೆದರೆ ತಡೆದೊದ್ದರೊದ್ದೆ ಟಿಕೆಯೊಳಿಟ್ಟು ಹೊಡೆದರೆ ಹೊಡೆದು ಡೊಕ್ಕರಿಸಿ ಕೆಡೆದರೆ ಕೆಡೆದುಗುರ್ಗಳೊಳೊತ್ತಿ ಭೀಕರವಡೆದು ಹೊಯ್ದಾಡಿದುವೆರಡು (ಮೋಹಕ. ೩೬-೨೬) ; ತಱಿಯುಱಿ ಹೊಡೆ ಕಾಹಿನವರನೆಂಬಬ್ಬರ ಮೊಱೆದುದು ಚೌದೆಸೆಯೊಳಗೆ (ಕಂವರ. ೦೯-೭) ; ನಮ್ಮ ದೇಶದಲ್ಲಿ ಎಷ್ಟೋ ಜನ ಯಜಮಾನರು ತಮ್ಮ ಕೈಕೆಳಗಿನವರನ್ನು ಹೊಡೆಯುತ್ತಾರೆ (ಮುಂಬಯಿ.೪-೭೪). ೨. ಸಿಡಿಲ ಕುಡುಹುಗಳಿಂದ ಕಮಲಜ ಹೊಡೆಯಲ ಬುಜಭವಾಂಡ ಭೇರಿಯ ಕಡುದನಿಗಳೆನಲೊದಱಿದವು ನಿಸ್ಸಾಳಕೋಟಿಗಳು (ಕುವ್ಯಾದ್ರೋ. ೦-೪೭); ಹೊಡೆದುದಮರರ ಭೇರಿ (ಕೂರರ ೧-೦೦-೦೯); ಆನೆಯ ಮೇಲೆ ಹೊಡೆವ ಡಮಾಮಿಗಳಬ್ಬರ ಗಗನವ ತುಡುಕಿತು (ಕಂವಿ. ೦೦-೨೩). ೩. ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ (ಹಕಳ. ೨-೩೦); ಉರಿ ಹೊಡೆದ ಕೆಂದಾವರೆಯವೋಲ್ ಕರುಕು ವಡೆದುದು ಮುಖ (ಕುವ್ಯಾಕ. ೦೭-೦೫); ಧಗೆ ಹೊಡೆದಳ್ಕೆ ಹೊಯ್ಕುತ ಬಿಸಿಲಿಂಗೆ ನಾಲಗೆ ನೀರು ತಟಗುಟ್ಟೆ ಸುರಿಯೆ . . . ನಾಯಿಗಳಡಸಿದು ವೆಡಬಲದೆ(ಮೋಹಕ. ೦೯-೧೪). ೪. ಕಳವಳಿಸುವ ಕಪಿಯ ಭೂತ ಹೊಡೆದು ಬೀಳೂಱಿ ಘಾಳಿಯೊಳು ನಿಂದು ಧೂಳಿಯ ಹೊಯ್ಕುತ್ತಿದೆ (ಅದವ. ೦೫-೩೨). ೫. ಹಾದರಿಯು ನೆಳಲ್ಗೆ ಹರಿಣಂಗಳಂ ಹೊಡೆಯೆಂಬ ಕೆಲಸದ ನೆವದಿಂ ರತಿಪುಂಗಳೆ ಬಂದ ಕೆಳದಿಯರೆಲ್ಲರುಂ ಮೆಲ್ಲಮೆಲ್ಲನೆ ಕಳುಪಿ (ವಂಬರ. ೦೯-೩೯); ಹೊಡೆದನೊಬ್ಬನು ಸೂರ್ಯರಥವನು (ಸಂಭಕ. ೫-೪೦). ೯. ಎಡೆಯುಲೇ ಭಕ್ಷ್ಯಾದಿಗಳ ಬಱಿ ಹೆಡಗೆಯುಳಿದವು ಕೂಳೊಳರ್ಥವ ಹೊಡೆದು ಸುಱಿದನು ಹಾಲುತುಪ್ಪದ ಹರವಿಯೋಜೆಯಲಿ (ಕುವ್ಯಾಕ. ೦೦-೩೦); ತುಡುಗುಣಿಯು ಗಂಡನ ಬಡತನವ ಬಲ್ಲಳೆ ಕಡನ ತಂದಿಕ್ಕಿ ಕುಡಿಸಿ ತುಪ್ಪವ ಬೆರಸಿ ಹೊಡೆದು ಕುಳ್ಳಿಹಳು (ಸರ್ವಜ್ಞ. ೦೬೫೭). ೧೧. ಕಡಿ; ಕತ್ತರಿಸು : ತಲೆಯಂ ಹೊಡೆದ ಕೊಡಲಿಯಿಂ (ಇಹರ. ದೇ. ೧೦೬-೦೭); ಕಡುಹಿನಲಿ ಸೈಂಧವನ ತಲೆಯನು ಹೊಡೆದು ನಿನ್ನಯ ಕಾಲ ಬಳಿಯಲಿ ಕೆಡಹುವನು (ಕುವ್ಯಾದ್ರೋ. ೯-೩೩); ಅಖಿಳದ್ವೀಪಪತಿಗಳ ತಲೆಗಳನು ಹೊಡೆವಲ್ಲಿ ತನ್ನಗ್ಗಳೆಯ ಭೃತ್ಯರನರಿಸಿ ಬಂದನು(ಕೂರರ. ೦-೬-೩೭). ೧೨. (ಬಾಣ ಮೊದಲಾದುವನ್ನು) ಬಿಡು; ಪ್ರಯೋಗಿಸು; ಎಸೆ : ಕರ್ಣಗಣೆಯು ಗಾಯವ ತಿನ್ನ ಹೋಗೆಂದು ಹೊಡೆದನಂಬುಗಳ (ಮೋಹಕ. ೩೬-೭). ೧೩. (ವೇಗದಿಂದ ಗಾಳಿ, ಮಳೆ ಮುಂತಾದುವು) ಬೀಸು; ಚಲಿಸು : ಹೊಡೆವ ಬಿಱುಗಾಳಿಯಲಿ ಮುಗಿಲೊಡ್ಡೊಡೆದವೊಲು (ಕುವ್ಯಾದ್ರೋ. ೦-೭೯). ೧೪. ತಟ್ಟು; ಆಸ್ಫಾಲನ ಮಾಡು : ಮದಮುಖನೆಡಬಲನ ನೋಡಿದರೆ ರಕ್ಕಸಕೋಟ ಜೀಯೆನುತ ಸಿಡಿಲ ಸೆಱೆಬಿಟ್ಟಂತೆ ಭುಜವನು ಹೊಡೆದು ಮುಂಚಿತು (ಕುವ್ಯಾದ್ರೋ. ೦೫-೪೭). ೧೫. ಲಪಟಾಯಿಸು; ಕದಿ; ಅಪಹರಿಸು : ಅಂಗಡಿಯಿಂದ ಉತ್ಪನ್ನವಾಗುವ ಹಣದ ಬಹುಭಾಗವನ್ನು ಆದಂಸಾಹೇಬ ಹೊಡೆಯುತ್ತಿದ್ದ (ಸಸುಕ. ೨೪). ☞'ಹೊಡೆ' ಪದವು ಇತರ ಅನೇಕ ನಾಮಪದಗಳೊಂದಿಗೆ ಸೇರಿ ಬೇರೆ ಬೇರೆ ಅರ್ಥಗಳಲ್ಲಿ ಸಮಾಸವಾಗುತ್ತವೆ. ಉದಾ : ಊಟ ಹೊಡೆ, ದುಡ್ಡು ಹೊಡೆ, ಬಣ್ಣ ಹೊಡೆ, ಹರಟೆಹೊಡೆ— ಇತ್ಯಾದಿ.

**ಪೊಡೆಪೊಡೆ, ಹೊಡೆಹೊಡೆ** (ದ್ವಿರುಕ್ತಿ) : ಬಡಿಬಡಿ ತಿವಿತಿವಿ ಪೊಡೆ ಪೊಡೆ. . . ಎಂದು ನಾನಾಪ್ರಕಾರದಿಂ ನಾರಕರ್ದಂಡಿಸುವರ್ (ಧರ್ಮಾಮೃ. ೭-೦೯೩) ; ಮುಟ್ಟೆ ಹೊಡೆಹೊಡೆ ನೀಳ್ದ ಪುಷ್ಪಮಾಲೆಗಳಿಂದೆ (ವಂಬರ. ೦೫-೭-೯೪). **ಹೊಡೆದಾಟ**= ಕಾದಾಟ; ಜಗಳ : ಸ್ವದೇಶಗಳಲ್ಲಿ ವ್ಯಾಜ್ಯ, ಹೊಡೆದಾಟ ಆಗುತ್ತಿದ್ದರೂ, ಸಂಘದವರು ಅಪ್ಪಣೆ ಮಾಡಿರುವಂತೆ . . . ಕೆಲವು ಮಾತುಗಳನ್ನು ಹೇಳುತ್ತೇನೆ (ರಾಯುಕ. ೪೭). **ಹೊಡೆದಾಡು**= ೧. ಕಾದಾಡು; ಹೋರಾಡು : ತರ್ಕಶಾಸ್ತ್ರದೊಳೊಡ್ಡಿ ತಗರು ತಗರಿನಂತೆ ಮಾರ್ಕೊಂಡು ಹೊಡೆದಾಡಬಹುದು (ಶರಹ. ೨-೯೦) ; ಜೊಂಡುಹುಲ್ಲು ಬೆಳೆದಿತ್ತು. ಅದನ್ನು ಕಿತ್ತುಕೊಂಡು ಹೊಡೆದಾಡಿದರು (ನೀತಿಚಂ. II, ೭). ೨. ಶ್ರಮಪಡು : ಅದೆಲ್ಲ ಎನ್ನದೆಂದು ಹೊಡೆದಾಡಿ ಬೇಸತ್ತೆನಲ್ಲಾ! (ಅಂತರಾ. ೩). **ಹೊಡೆದು ಕಾಣು** = ಎದ್ದು ತೋರು; ಸ್ಪಷ್ಟವಾಗಿ ಕಾಣು : ಈ ವಿಚಾರದಲ್ಲೂ ಕೇರಳದ ವೇಷಗಳಿಗೂ ನಮ್ಮ ವೇಷಗಳಿಗೂ ಬೇಕಷ್ಟು ಅಂತರ ಹೊಡೆದು ಕಾಣುತ್ತದೆ (ಯಕ್ಷದ. ೧೩೬). **ಹೊಡೆದು ಕೊಳ್ಳು**= ಕದಿ; ಲಪಟಾಯಿಸು : ನನ್ನ ಪರಿಶ್ರಮದಿಂದ ಗಳಿಸಿದ್ದ ಹಿಂಡನ್ನು ನನ್ನ ಅಲಕ್ಷ್ಯದಿಂದ, ಮೋಸಮಾಡಿ ನೀನು ಹೊಡೆದುಕೊಂಡಿದ್ದ (ದಂಗಾಹ. ೫೨).

[ದೇ. ‖ ತಮಿ. ಪುಟೈ ; ತುಳು. ಪೊಡೆ, ಪುಡೆ ; ಕೊಡ. ಪೊಡ ; ತೆಲು. ಪೊಡುಚು]

**ಪೊಡೆ₂, ಹೊಡೆ₂** (ನಾ). ಏಟು ; ಪೆಟ್ಟು ; ಹೊಡೆತ : 'ಪೊಡೆವಡು₁' ಪರಾ. **ಹೊಡೆ₂ :** ಪತಿ ಬಿಱಿಸಿನಲಿ ಹೊಯ್ವ ಹೊಡೆಗಳು ಸತಿಯ ಮೇಲಣುವಾತ್ರದನಿತುಂ ತಾಗವು (ಬಸವ. ೫೨-೯); ಬಿಸಿಲ ಹೊಡೆಯಿಂದ ಕಂದದೆ ದೋಸೆವದದಿ ಸೊಗಯಿಸುವ ಸಕ್ಕರೆಗಳೆಳನೀರ ಕುಯಿದಿಳುಪಿ (ಸೊವಕಾ. ೨-೩೦); ಚಬುಕಿನ ಹೊಡೆಗಳಱಿಯದ ರಾವುತರುಗಳ ಮಡದ ಸನ್ನೆಗೆ ಸುಳಿವ ದಿವ್ಯಾಶ್ವಂಗಳೊಪ್ಪಿದುವು (ತಿವ್ಯ. ೭-೪೨). [<ಪೊಡೆ₁]

**ಪೊಡೆ₃, ಹೊಡೆ₃** (ನಾ). ೧. ಹೊಟ್ಟೆ ; ಉದರ ; ಒಡಲು : "ಪೊಡೆ—ಪ್ರಹರಣೇ, ಕುಕ್ಷೌಚ (ಹೊಟ್ಟೆ)" (ಕಮಧಾ) ; ಸತ್ತಿರ್ದನಡ್ವಾಹನಂ ಕಂಡದಱ ಪೊಡೆಯಂ ದಾಡೆಯಿಂ ಪೊಯ್ಕಲ್ಕೆ (ಶಂಕಶಂ. ೦೯-೦೩) : ಪೊಡೆಯೊಳ್ ತುಂಬಿರೆ ಪಂಕ ಮೇಲೆ ತೊಳೆಯಲ್ ತಾಂ ಶುದ್ಧನೇನಪ್ಪನೆ (ಸೋಮೇಶ. ೪೭) : ಉದರದೇಶಮಂ ಪೊಡೆಯೆಂಬರ್ (ಕೈಮಾ. ೨-೯). ೨. ಬಸಿರು ; ಗರ್ಭ : ನಾಭಿ ಗುಣ್ಪಾಯ್ತು ಪೊಡೆ ಪೊಣ್ಮದುದು (ಶಧ್ಯಾ. ೪-೨೯) ; ಪೊಡೆಯೊಳಗಿಹ ಬಾಲಕ ಮೂಱುಲೋಕಕ್ಕೆ ಸೊಡೆಯನೆಂಬುದ ಜಗಜನಕೆ ಬಿಡದೆ ಪೇಳುವವೊಲು ಮಡದಿಯ ತನುಕಾಂತಿ ಮಡುವಿಡುತಿಹುದು (ಅಂಜಕ. ೯-೧೦); ಬಳೆದುದು ಪೊಡೆಯುಂ ಜಘನಾಚಳಮುಂ ಕರ್ಪಡಿದುದಳಕಮುಂ ಚೂಚಕಮುಂ (ರಾಜಕೇ. ೪-೩೬). ೩. ತೆನೆಯ ಮೊದಲಿನ ಸ್ಥಿತಿ ; ಗಬ್ಬ : "ಕೊರ್ಬು ತೆನೆ ತಾಡನ ಬಸಿಱು ನಿವಾರಿಪುದೆಂಬಿವಱೊಳು ಪೊಡೆಯಾದು" (ಕಾ.ಮಂ. ೯೦) ; ಸಸಿಯಂತೆ ಪೊಡೆಯಂತೆ ಪೊಡೆಯೆಂಬುದು ಬೆಳೆಗೆಯ್ಕೆ ಪಾಲ್ದನೆಯಂತೆ (ಧರ್ಮಾಮೃ. ೦೨-೨೪) ; (ಕಾ.ಕಾ. ೨೫). ೪. ಬಿಲ್ಲಿನ ಹಗ್ಗವು ಕೈಗೆ ತಗುಲದಂತೆ ತೊಡುವ ರಕ್ಷಾಕವಚ ; ಗೋಧೆ : ಹೊದಱ ರಖಿಲ್ಲಿಗಳಡಾಯುಧ ಕೆಯ್ಕ ಪೊಡೆ ಸರಳ ಹೊಡೆಗಳಂ ತತ್ತತ್ಸ್ಥಳಂಗಳೊಳ್ ಕಟ್ಟಿ (ಕವಿಕು. ೪೬-೪೯).

'ಕೆಯ್ಪೊಡೆ', 'ಪೊಟ್ಟೆ₁' ಪರಾ. **ಹೊಡ್ಡೆ :** ೧. ಏಷ್ಟು ವಿಧವಾಃಶದಿಂ ಬಿಗಿಯೆ ರುದ್ರನ ಹೊಡೆ ನಿಚ್ಚ ಹೊಯ್ಯುತಿದೆಯವ್ವ (ಶಿವಗೀ. ೦೫೯-೭೯೯ ಪ); ಈ ಜಗವನೆಲ್ಲವನೊಂದುಹೊಡೆಯಲಿ ಹೊತ್ತ ಬಲರಾಮಂಗೆ ಕಡುಮಾಳದು (ಶಿಭಾಗ. ೦೦-೦೫-೪೦); ನವನೀತಮಂ ಸವಿದು ಹೊಡೆ ಸಿಡಿದು ಹೋಯ್ತು! (ಕಂಠ್ರಸ. ೪೪-೨೦). ೩. ಹೊಡೆಯ ಹುಲ್ಲು ಕರವಾಳ ಹಿಡಿಯ ಕೊಯ್ಯುತ್ತ (ಪಗಿಶಭಾ. ೪. ೪೨೬-೫೭); ಮೊಳೆವ ಬೀಜವನು ಕ್ರಿಮಿಕೀಟಕಂಗಳು ಸಸಿಯನೆಳ ಹುಲ್ಲಗಳ ಹೊಡೆಯನೆರಳೆಗಳು ಸವಿದು . . . ನಾಡೆಲ್ಲಮಂ ಗೋಳಿಡಿಸು ತಿರ್ದುವು (ಪಶಶ್ಯಾ. ೩-೬೩); ಮುಂಗುಳುಹೊಡೆಗಳರೆಹೊಡೆ ನೆಟೆ ಮೇಲಕ್ಕೆ ನಿಗುರುವ ಹೊಡೆ ಪಸುರ್ಪೊಡೆಯ ಒಗುಮಿಗೆಯಲಿ ಹಾಲು ದುಂಬುದೆನೆಯ ಶಾಲಿ ಸೊಗಸನಿತ್ತುವು (ಕಂಶಪ. ೫-೬೨). ೪. "ಹೊಡೆ(ಡ)– ವುಟ, ಮುಚ್ಚಳ, ಪೊಡ" (ಕಿಶ್ಯಕೋ. ೫೦). 'ಕೈಹೊಡ್ಡೆ' ಪರಾ. ೫. (ಬಾಳೆ, ಕೇದಗೆ ಮುಂತಾದುವುಗಳ) ಮೋತೆ : ಮುಂಗುಳು ವಾಳೆಯ ಹೊಡೆಯ ನುಚ್ಚಾಗಿ ಕತ್ತರಿಸಿ (ಸೂಶಪಾ. ೪-೬೦). ೬. ತೆನೆಯ ಪೈರುಗಳ ಬೆಳೆ : ಕೋಟಿಚೆನ್ನಯರು . . . ಹಿತ್ತಿಲಿಗೆ ಇಳಿದು, ಅಡ್ಕ ವನ್ನು ಅಡರಿ, ಹೊಡೆಯಲ್ಲಿ ಹೋಗಿ, ಹೊಳೆಯನ್ನು ಹಾಯ್ದು . . . ಬೆಳ್ಳಿಯ ಕಲಶದ ಬಳಿಯ ಉಪ್ಪರಿಗೆಯನ್ನು ಏರಿದರು (ಕೋಚಿಕ. ೦೫).

**ಪೊಡೆಯಲರಾತ**– ಹೊಕ್ಕುಳಲ್ಲಿ ಹೂವನ್ನುಳ್ಳವನು ; ಪದ್ಮನಾಭ; ವಿಷ್ಣು : ಪೊಡೆಯಲರಾತಂ ರಾಗದೆ ತೊಡೆಯಂ ಪೊಯ್ದಾರ್ದ ನೆವದೆ ನೆಱನೀತಂಗೀಯಡೆಯೆಂದು ತೋಱೆ ಕುಡೆ ಪೊಲಗಿಡದಱಿಂದಂ ಪರಮ ಮುದಿತಂ ಪವನಸುತಂ (ಗದಾಯು. ೮-೬೫); ಪೊಡೆಯಲರಾತನಕ್ಷಿಗಮಗೋ ಚರಮಾಗಿರೆ . . . ಕೃಷ್ಣನ ತೇರ ಧೂಳಿಯಪ್ಪೊಡಮಿರದಾಯ್ತೆನುತ್ತಬಳೆ ಧೂಳಿವಿಡುತ್ತಿರೆ ಬಾಯ್ಪುಲುಂಬಿದರ್ (ಜಗಪು. ೫-೦೪೦). **ಪೊಡೆಮಕ್ಕಳ್** = ಹೊಟ್ಟೆಯ ಮಕ್ಕಳು ; ಸ್ವಂತಮಕ್ಕಳು : ಪೊಡೆಮಕ್ಕಳಂ ಭಕ್ತಿಯಿಂದೆ ಪೆಸಂಟ್ಟುಯೆಡೆವಿಡದೆ ಗುಡಿಗಟ್ಟಿ ಜಗವೆಲ್ಲ ಬಂದಡಿಗೆಱಗೆ ಪೊಡವಿಯೊಳ್ಳುರಿವ ಕಿಚ್ಚಂ ಪರಿವ ಪಾವ ಸ್ವಾಜ್ಞಾಮಾತ್ರದಿಂದೆ ನಿಲಿಸಿ (ರಾಘಶ. ೦೯-೯೯).

**ಪೊಡೆಗಟ್ಟು** (ನಾ). "ಹೊಟ್ಟೆಯ ಮೇಲಣ ಕಟ್ಟು" (ಶ್ರಶಾ) : ಒಳ ಗಿಡಿದ ಮೂಱುಂ ಜಗದ ಭಾರದಿಂ ಸರಿಯದಂತೆ ರನ್ನದ ಪೊಡೆ[ಶಾಶಾಂ. ಡ]ಗಟ್ಟುಗಟ್ಟಿರ್ಪುದು (ಕಶಪು. ೦೨೮-೦೫). [ಪೊಡ್ಡೆ₂ + ಕಟ್ಟು₂]

**ಪೊಡೆಗಲ್ಲು**, ಹೊಡೆಗಲ್ಲು (ನಾ). (ತಾಗುವಂತೆ) ಮೇಲೆದ್ದಿರುವ ಕಲ್ಲು ; ಗೂಟಕಲ್ಲು : ಕೆಡೆದ ಕರಿಗಳ ಬೆಟ್ಟವೆಳೆಯ ಗುಂಡುಗಳೊಳಗೆ ಮಡಿದ ಕುದುರೆಗಳ ಪೊಡೆಗಲ್ಲ ಪೊರಳೆಗಳೊಳಗೆ . . . ರುಧಿರಪ್ರವಾಹಮ ವರಿಯೆ ಸವಱಿದಂ ಪಾರ್ಥಜಂ ಪರಬಲವನು(ಕೃಪಿಶಾ. ೨೨–೨೭). **ಹೊಡೆಗಲ್ಲು :** ಹೊಡೆಗಲ್ಲೊಳು ಮುಗ್ಗಿ ಎಡಪುತ ಕಾಲನು ತೊಡರುವ ಬಳ್ಳಿಯ ಪಱಿದು ಅಡಗುವೆಡೆಯ ನೋಡಿ ತಳತ ಕಾನನದೊಳು ನಡೆ ತಂದನು ಚಿಕ್ಕನೊಲಿದು (ಚಿಶಾಂ. ೦-೭೭). [ಪೊಡ್ಡೆ₁+ಕಲ್ಲು (< ಕಲ್₃)]

**ಪೊಡೆಗಿಚ್ಚು** (ನಾ). ಜಠರಾಗ್ನಿ : ಪೊಡೆಗಿಚ್ಚಿಂದಮೆ ಜೀರ್ಣನಾದನಸುರಂ ವಾತಾಪಿ (ಕಾದಂಪೂ. ೦೨೩). [ಪೊಡ್ಡೆ₃ + ಕಿಚ್ಚು]

**ಪೊಡೆಗಿರ್ಚು**, ಹೊಡೆಗಿಚ್ಚು (ನಾ). ದಳ್ಳುರಿ ; ಆವರಿಸುವ ಬೆಂಕಿ : ಭವವೇಕಾನೇಕಸತ್ವಾದಿ ಗುಣದ ವುದಿವಾಳೇದಾನೇಕೆ ಕಾಮೋತ್ಸವ ವೇಕಾನೇಕೆ ತಾಪತ್ರಿತಯದ ಪೊಡೆಗಿರ್ಚೇಕದಾನೇಕೆ (ರಶ್ನಾಶ. ೫೩). **ಹೊಡೆಗಿಚ್ಚು :** ಸಂಸಾರಕ್ಕೊಳಗಾದವರೆಲ್ಲ ಮಾಯೆಯ ಹೊಡೆಗಿಚ್ಚ ಗೆಲಬಲ್ಲರೇ (ಅಶಕಂ. ೨೭೭-೦೨೭೨); ಒಡಲ ಬಿಡದಾಪತ್ತು ಕಿಡಹಿ ಧರೆಯೊಳು ಕಾಡ ಹೊಡೆಗಿಚ್ಚಿನಂತೆನ್ನ ಸುಟ್ಟು ಸುರುಳಿಪುದು (ಕೃಶವ. ೦-೦೭-೨) ; ಸನ್ನುತ ಶರಣರ ಮನದಲ್ಲಿ ಕೋಪಾಗ್ನಿಯು ತಾನೆ ಎದ್ದರೆ ನಿಂದಕರ ಗುರಿ ದೇವನ ನಿನ್ನ ಹೊಡೆಗಿಚ್ಚಿಗೆ ನಾ ಗುರಿಯಲ್ಲ (ಸಿದ್ಧಪು. ೨೨-೮೮). [ಪೊಡೆ₁ + ಕಿರ್ಚು (< ಕಿಚ್ಚು)]

**ಪೊಡೆಗೆಡೆ**, ಹೊಡಗೆಡೆ, ಹೊಡೆಕೆಡೆ, ಹೊಡೆಗೆಡೆ (ಕ್ರಿ). ೧. ನೆಲಕ್ಕೆ ಹೊಟ್ಟೆ ತಗುಲುವಂತೆ ಬೋರಲಾಗಿ ಬೀಳು ; ಮುಗುಚಿ ಬೀಳು : ಬಿಡೆ ಕುಣಿವ ಮುಂಡದಿಂ ಬೊಬ್ಬಿಡುವ ರುಂಡದಿಂ ಬಿಡುಮಿದುಳ ಜೊಂಡಿನಿಂ ನಡುತೊಡೆಯ ತುಂಡಿನಿಂ ಪೊಡೆಗೆ[ಶಾಶಾಂ. ಯೊ]ಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣಿ ಕಣ್ಗೆಸೆದುದು (ಕಂಶ. ೩೮-೩೯) ; ಭಾಸುರದ ಗಜವದನ ಪೊಡೆಗೆಡೆದು ಪೊಡಮಟ್ಟಿರೆ (ಶಶಶೋ. ೭-೨). ೨. ನಮಸ್ಕರಿಸು; ಅಡ್ಡಬೀಳು : ಶಿಷ್ಯಸುಜ್ಞಾನಾಮೃತಸ್ವಾದಿಹಂಸ ಶರಣಾಗೆಂದು ಪೊಡೆಗೆಡೆದನು (ಬಕೋಶ. ೦೫-೫೨). **ಹೊಡಗೆಡೆ :** ೨. ಭೂತಳಂ ಬೆಱಗಾಗಿ ಜಯ ಎಂದು ಹೊಡಗೆಡೆದು ಪ್ರೀತಿಯಿಂ ವಂದಿಸುತ (ಗುರುಚಿ. ೩-೨೯); ಅವರು ಕಳುಹಿದಂತೆ ಮಾಡೆನಲು ಉರಗರಾಜ ಹೊಡ ಗೆಡೆದು ವಂದಿಸಿ (ಕೃಕಚ. ೨೭). **ಹೊಡೆಕೆಡೆ :** ೧. ಮುಡಿಕೆ ನಿವಿರ್ದಾಡೆ ಜಡೆಗಳ್ ತುಡುಕೆ ಶರಾಘಮುಮನಭವನತಿಕೋಪದೊಳಂ ಅಡಕೆ ಮರುಳ್ಗಳ್ ಪೆಣನಂ ಹೊಡೆಕೆಡೆದರ್ ದೈತ್ಯರಂದು ತ್ರಿಪುರಸ್ಥಳದೊಳ್ (ಕಪಾಲಕ. ೫೭). **ಹೊಡೆಗೆಡೆ :** ೧. ಮಹಾರ್ಣವವುರಿದು ಬೇವಲ್ಲಿ ಕರಗದ ಜಲಕ್ಕೆ ಹೊಡೆಗೆಡೆವುದೆ (ಸಶವ. I. ೨೦೫-೦೨೭); ಕುಸುಮಚಾಪಂ ಕಾಲ್ಗೆ ಬಗುವಂತೆ ಪಂಚಭೂಣಂ ಹೊಡೆಗೆಡೆವಂತೆ . . . ಪೊಡೆಮಟ್ಟು ನಿಂದು (ಗಂಶ. ೫-೪೨ ಪ); ಹೊಡೆಗೆಡೆವ ದಂತಿಗಳು ರಕ್ತದ ಕಡಲೊಳೀಸಾಡಿದವು (ಕುಶ್ಯಾಕ್ರೋ. ೦೦-೦೦). ೨. ಗೊರವರ ಪಡೆ ಬೆದಱೆ ಹೊಡೆಗೆಡೆದವರಾತನ ಪಾದಪಂಕಜಕೆ (ಕಂಕಶಾ. ೦೫-೭೨); ಹೊಡೆಗೆಡೆದ ಮಣಿಮಕುಟಶಿರಗಳಂ ... ನೋಡಿದನು ಕಲಿದ್ರೋಣನು (ಕುರುಗ. ೫೫-೩೮). [ಪೊಡ್ಡೆ₂ + ಕೆಡೆ₁]

**ಪೊಡೆಗೊಳ್**, ಹೊಡೆಗೊಳು (ಕ್ರಿ). ೧. ಒಡಲಲ್ಲಿ ಇಟ್ಟುಕೊಳ್ಳು ; ಒಳಗೊಳ್ಳು. ೨. ಹೊಟ್ಟೆಯಲ್ಲಿರು ; ಗರ್ಭದಲ್ಲಿರು : ನಿನ್ನಿರವಿಂತು ಬೇಱೆ ಪಿರಿಯಕ್ಕೆವಮಂ ಪೊಡೆಗೊಂಡ ದೇಸೆಯಿಂದುನ್ನತವಾದುದು (ಕಶಪು. ೩-೦೦೩); ಪೊಱಿಲಾಱಿರ್ ತೊಡವುಗಳಂ ಪೊಱುವಳ್ ಪೊಡೆಗೊಂಡ ವಿಶ್ವಗರ್ಭನನೊಲ್ಪಿಂ (ಕಶಪು.೪-೬). **ಹೊಡೆಗೊಳು :** ೧.'ಹೊಡೆಗೊಳಿಸು' ಪರಾ. [ಪೊಡ್ಡೆ₃ + ಕೊಳ್₁]

**ಪೊಡೆಚೆಂಡು** 'ಪೊಡೆಸೆಂಡು' ನೋ.

**ಪೊಡೆಚೆಂಡಾಟ** 'ಪೊಡೆಸೆಂಡಾಟ' ನೋ.

**ಪೊಡೆಚೆಂಡು** 'ಪೊಡೆಸೆಂಡು' ನೋ.

**ಪೊಡೆಜ** (ನಾ). ಹೊಟ್ಟೆಯಲ್ಲಿ ಹುಟ್ಟಿದವನು ; ತನುಜ ; ಮಗ : ದೇವಿ ನಿಮ್ಮಯ ಪೊಡೆಜನು ತನ್ನ ವಲ್ಲಭೆಯಂ ಪೊಡವಿಯೊಳಱಸಿ ಕಾಣದೆ ತನ್ನಸುವನು ಬಿಡದೆ ಮಾಣನು ತಾನೆಂದಂ (ಕಂಚಶ. ೦೦-೦೩೦). [ಪೊಡ್ಡೆ₃ + — ಜ₀./p ಸಂಸ್ಕೃತದ 'ಜ' ಪ್ರತ್ಯಯವು ಕನ್ನಡಪದ ದೊಂದಿಗೆ ಸೇರಿದೆ]

**ಪೊಡೆತ**, ಹೊಡೆತ (ನಾ). ಏಟು ; ಪೆಟ್ಟು : ಬಾಸುಳಂ ತೋರದಂದದಿ ಬೆರಳ್ಪೊಡೆತಮಂ ಕೊಡು (ವಂಕಾಶಾ. ೫-೨-೪೦) ; ಕೊಂಬಿನಂಡೆಗಳೊಳ್ ತುಂಬಿದೋಕುಳಿಯ ನೀರ ಪೊಡೆತಗಳಿಂ ಕುಣಿಕುಣಿದಾಡುವ ಬೊಜಗರಿಂ (ಬಿಕ್ರಗೋ. ೮-೦೭). **ಹೊಡೆತ :** ಈ ದಿನವೇ ಮೇಷ್ಟರಿಂದ್ಲ ಹೆಚ್ಚಾಗಿ ಹೊಡೆತ ತಿಂದರೆ ಸಾಕಷ್ಟು ಕಾರಣವೂ ಆಯಿತೆಂದು ಬಗೆದು, ನಾನಿ ಶಾಲೆಯೊಳಕ್ಕೆ ಸಾಗಿದನು (ವಾಡಿಗ. ೦೦೯). [ಪೊಡೆ₁+—ತ₂]

**ಪೊಡೆದುಂಬು** (ಕ್ರಿ). ತೆನೆಯ ತುಂಬಿಕೊಳ್ಳು,—ಪುಷ್ಪವಾಗು : ದೆಸೆಗೆ ಕವಿಲ್ತು ಗಂಟಿಡಿದು ನುಣ್ಬಸಿಱುಂ ಪೊರೆಯೇಱೆ ಕೊರ್ಬಿಯುರ್ಬಿಸಿ ಪೊಡೆದುಂಬಿ ಪಾಲ್ದನೆಗಳರ್ಬೆ ಕರಂ ತಲೆವಾಗಿ ಬಿಣ್ಪಿನಿಂದೆಸೆವುವು (ದಶಕು. ೦-೨೭). [ಪೊಡ್ಡೆ₃+ತುಂಬು₁]

**ಪೊಡೆಮುಗುಚು**, ಹೊಡಮಗುಚು, ಹೊಡೆಮಗುಚು (ಕ್ರಿ). ೧. ಹೊರಳು ; ಹೊಟ್ಟೆ ಕೆಳಗಾಗಿ ಮಲಗು : ಪೊಳೆವುದೋಱುವ ಪೊಡೆ

ಮಗುಚುವ ಸುಳಿಗೊಂಡು ಸುಳಿವ ಕೇಲ್ವಕ್ಕಿಗಳ್ನಡುಗೆ ಇಳಿವ ಮೇಲಕೆ ಪುಟನೆಗೆವ ಹಲವು ವಿಧಾಂಗಳನೊಪ್ಪುತಾ ಕಿಳಿಗೊಳನು (ಶ್ರೀಚಾಂ.೦೨-೦೭).

**ಪೊದಮಗುಚು** : ೧. ಪೊಡವಿಯೊಡೆಯನ ಕೈಯು ಕದಡಂ ಕಡುವಿಷಂ ವಿಗೆ ಕಚ್ಚೆ ಪೊಚ್ಚವುತ ಹೊಡವಮಗುಚಿದನಿತಚ್ಛೊಳಗಾ ಸತಿ ನಿದ್ರೆ ತಿಳಿದೆದ್ದು ನಡವಡುಗಿ ಹಾ ಎನುತೊಚಲುತಿಹ ನಿಡುದನಿಗಳಂ ಕೇಳಿ (ಜಕ್ಕ. ೯೭-೨೨).

**ಪೊದೆಮಗುಚು** : ೧. ಜಿನದತ್ತರಾಯನು ಹೊದೆಮಗುಚುವುದನ್ನು ಜನನಿ ತಾ ನೋಡಿ ಪ್ರೀತಿಪಳು (ಜಿಚ. ೨-೦೩೩); ಮಕ್ಕಳ ಮಾಣಿಕ . . . ಹೊದೆಮಗುಚಲು ಭವಿಗಳ ಪಡೆ ನಡುಗಿತ್ತು (ಅಭ್ಯಂ. ೨-೩೭). ೨. ತಲೆ ಕೆಳಗಾಗಿಸು ; ಬುಡಮೇಲು ಮಾಡು : ಸಡಗರದಿ ಕೌರವನ ಸಿಂಹಾಸನ ವನು ಹೊದೆಮಗುಚಿ ಕೆಡಹಿದ್ದೀ ಪಾದವೆ ಕೃಷ್ಣ (ಭಾರಂದ. ೦-೦೦೪-೨).

[ಪೊದ್ಕ+ಮಗುಚು (< ಮಗುಚ್ಚು)]

**ಪೊದೆಮಗುಳ್** 'ಪೊದೆಮಂಗುಂಟು' ನೋ.

**ಪೊದೆಮಗುಟ್**, ಪೊದೆಮಗುಳ್ (ಕ್ರಿ). = ಪೊದೆಮಗುಚು ೧ : ಪೊಡೆ ಮಗುಟ್ದಿಡಯೊಳ್ ಪೊಕ್ಕುಟ ಕುಡಿ ಸುಟ್ಟಿಯುಂ ವಳಿಯುನೆಸೆದು ತೆಳ್ಳೊಡೆ ಕಡುಚಿಲ್ಲುಡೆದುದು (ಆಪು. ೬-೫). **ಪೊದೆಮಗುಳ್** : ಅರರೆ ದುಡಪ್ರಣಾಮಪವನಭಿನಯಿಸಿ ಬೋಧಿಪಂತೆ ಪೊದೆಮಗುಳ್ದು ಬೀಳ್ಗಂ (ಕದ್ಮಾ. ೨-೬೦); ಪೊದೆಮಗುಳ್ದುಂದು ಬಾಲನನೆತ್ತಿದಿರವ ಕನ್ನಡಿಸುವಂತಾ ಜಗನ್ಮಾತೆ . . . ಹರಸಿದಳು (ಚಿಕ. ೯೭-೯೭). [ಪೊದ್ಕ + ಮಗುಟ್]

**ಪೊದೆಮಡಿಸು** ಪೊದೆಮಡಿಸು' ನೋ.

**ಪೊದೆಮದು** 'ಪೊದೆಮದ್ದು' ನೋ.

**ಪೊದೆಮರಳ್**, ಹೊದಮರಳು, ಹೊದೆಮರಳ್, ಹೊದೆಮರಳು (ಕ್ರಿ). ೧. ಹೊರಳು; ಮಗುಚಿಕೊಳ್ಳು : ತಾಪದಿಂ ಪೊದೆಮರಳ್ದಂ ಕೂರ್ಪಣೀ ರವಿಯ ರೂಪಧಿಗಿತಿಸುವ ಬಾಹಾಂಧಕಾರದೊಳು (ಕ್ರಜಾ. ೨೦-೦೭). **ಹೊದಮರಳು**: ೧. ಹೊದಮರಳ ಕಲಿತರೆ ವಿರಕ್ತರ ದೃಢತೆ ಹೊಡೆಗೆಡೆಯಿತ್ತು (ಕೃಕಾ. ೭-೨೮). ೨. ಹಿಂತಿರುಗಿ ಬರು; ಮರಳಿ ಬರು : ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದಡೆ ಹಿಡಿದಿರ್ದ ಲಿಂಗ ಹೊದಮರಳಿ ಕಚ್ಚುವ ಹೆಡನಾಗ (ಸರ್ವಶ. ೦೮೭). **ಹೊದೆಮರಳ್** : ೩. (ಸಸ್ಯಗಳಲ್ಲಿ) ಸುಳಿಯು ಹೊರಡು, – ಹೊರಬರು : ಕೊಚ್ಚಿಗಣಗಿಲ್ ನಾಯ್ಕುಟ ಪೆರ್ಗುರುಟಗೆ ಹೊದೆಮರಳ್ದ(ಬ್ದ) ಹಚ್ಚೆಯೆಲೆ (ಖಸುಕ. ೦೭-೦೦೯). **ಹೊದೆಮರಳು** : ೧. ಉಡಿದ ತೊಡೆಗಳ ಹಚ್ಚಿದ ಹೊಟ್ಟೆಯು ಹೊದೆಮರಳಿದಾಲಿಗಳ ತೋಳಿನ ಕಡಿಕುಗಳ ರಣಮಹಿ ಭಯಾನಕರಸಕೆ ಗುಡ್ಡಿಯಾಯ್ತು (ಕುಪ್ಯಾ. ೬-೦೩); ಪೊಡೆವಣಿದಳಿದ ನಾಗರ ಮಚಿಯೆಂಬಂತೆ ಹೊದೆಮರು[ರ]ಳುವ ತನ್ನ ತಾನೆ ಪಡೆಯುತ್ತುವ ಮುತ್ತಿನರಳಿಲೆದಾಳ್ದು ಕೆಂಜೆಡೆ ಮುದ್ದುಮೊಗದಲ್ಲಿ ನಲಿಯೆ (ಸೋಚಕ. ೦೭-೬೦). ೨. ವಿಕ್ರಮನು ಹೊದೆಮರಳಿ ಸೋಮೇಶ್ವರನ ಸೇನಾಕಾಪನವನ್ನು ನುಗ್ಗಿದನು (ಕಂಚ. ೬೦); ಜೀವನದಲ್ಲಿ ಎಲ್ಲ ದುಃಖಿಗಳನ್ನೂ ನುಂಗಿದ ಭಾಗೀರಥಿಗೆ ಮಗಳ ಚಿಂತೆ ಹೊದೆಮರಳಿ ಹೊಡೆಯು ಹತ್ತಿತು (ಚಾರಿ. ೨೦೩). ೩. ಹೊದೆಮರಳಿದುದೆನೆ ಬೆಳೆದುದು (ಚಾರಿ. ೨೨). [ಪೊದ್ಕ + ಮರಳ್$_1$ (< ಮಱಲ್$_1$)]

**ಪೊದೆಯರಲ** 'ಪೊದೆಯಲರ' ನೋ.

**ಪೊದೆಯಲರ**, ಪೊದೆಯರಲ (ನಾ). ೧. ಹೊಕ್ಕುಳಲ್ಲಿ (ಕಮಲ) ಪುಷ್ಪವನ್ನು ಉಳ್ಳವನು ; ವಿಷ್ಣು : "ಸಿರಿಯೆಚ್ಚಿಯಂ ಸೌರಿಯೆಂದು ತಾವರೆಗಣ್ಣಂ ಸಿರಿಯಾಣ್ಮಂ ಪೊದೆಯಲರಂ" (ಕರ್ಣಾ. ೩); ಪೊದೆಯಲರನ ಕೊರಲ ಪುಲಿಯುಗುರ್ ಕರಮೆಸೆಗುಂ (ಜಾಪು. ೩-೯೯); ಅತಂ ತಾವರೆಯಂತೆ ಸಿರಿಯೊಳೊಂದಿಯುಂ ಪೊದೆಯಲರನೆನಿಸಂ (ಕಾವ್ಯಾ. ೫೦); ಖಳಂ ನಸುನಗುತೆ ತಾಂ ತಡೆಯುದಾ ಗದೆಯನುಳಿದು ತೋಳ್ಪೊಯ್ಯುತಂ ಪೊದೆಯಲರಗಂತೆಂದನು (ಕಂಪು. ೨೫-೩೦). ೨. [ಛಂದ] ಅಂಶಗಣಗಳಲ್ಲಿ ಒಂದು ; ವಿಷ್ಣುಗಣ : ಪೊದೆಯಲರವರಿರ್ವರ್ಮೊದಲೊಳಿರ್ಕೆ ಜಡೆಯ ಶಂಕರ ನೊರ್ವಂ ತುದಿಯೊಳಿರ್ಕೆ ಮಡದಿ ಕೇಳ್ಕೊಟ್ಟ ಗಣಮಸದಿರ್ಕೆ ಗಡ ಕಿಚ್ಚಿಯಕ್ಕರಕ್ಕಿದೆ ಲಕ್ಷಣಂ (ಛಂದೋಂಬು. ೫-೨೯೬). **ಪೊದೆಯರಲ** : ೧. ಸೆಣಗುವಿಡಿದೆಯ್ದುಯೆಂದಜರನು ಪೊದೆಯರಲರನು . . . ಜಡಿದು ದಟ್ಟಿಸುತೊಪ್ಪಿದರು ಕೈಯು ದಡಿಯು ಬಿಂಕದ ನಂದಿಯುಂ ಮಹಾಕಾಳನಂ ವ್ಯಾಡನ ಸಮ್ಮುಖದೊಳಿರ್ದು (ಶೌಂದಪು. ೦-೩೯); ಬಿಡದೆ ಕೇಸರಿಯೆಂಬ ದೇವತೆ ಕಡುವಿಗಡ ದುಷ್ಪಾಶ್ವರೂಪದಿ . . . ನೆಚ್ಚ ಕೆರಳಿ ಬಂದು ಪೊದೆಯರಲನೊಡವಾಯ್ದು ಹಣೆಗಣ್ಣೊಡೆಯು ತಿವಿದಡೆ ಕಾಚ್ಚಿ ನೆತ್ತರ ಕೆಡೆದು ಬಿದ್ದೋಡಿದುದು ಹರಿಯದಟನೇನೆಂಬೆ (ಸಾಕ್ಯಾ. ೨೦-೯೬).

[ಪೊದ್ಕ + ಅಲರ್$_2$ + –ಅ$_7$]

**ಪೊದೆಯಿಸು**, ಪೊಡವಿಸು, ಪೊಡೆಸು, ಹೊಡಯ್ಯು, ಹೊಡಿಸು, ಹೊಡೆಯಿಸು, ಹೊಡೆಸು (ಕ್ರಿ). ೧. ಹೊಡೆಯುವಂತೆ ಮಾಡು ; ಪೆಟ್ಟು ಕೊಡಿಸು: (೬). ೨. ಭೇರಿ, ನಗಾರಿ, ತಮಟೆ ಮೊದಲಾದ ವಾದ್ಯಗಳನ್ನು ಬಾರಿಸುವಂತೆ ಮಾಡು,—ಮೊಳಗಿಸು : ಅಮರಪತಿ ಸಮರೋತ್ಸಾಹಭೇರಿಯಂ ಪೊಡೆಯಿಸೆ . . . ಕೋಳಾಹಳೋತ್ಕರನಿಸ್ಸಾಳ ಧ್ವಳಧ್ವಳಧ್ವಳರವಂ ಪರ್ಬಿತ್ತು ಮಾಲೋಕಮಂ (ಗಿಂಚ. ೬-೫೭ ಪ); ಪೌದನ ಪುರಾಧಿಪತಿ . . . ಪೊಡೆಯಿಸೆ ಪೊಣ್ಮೆ ತತ್ಸಮಯ ಮಂಗಳವಾದ್ಯದ ಹೃದ್ಯ ನಾದಮಾ ಪೊಡವಿಯನುರ್ವಿ ಪರ್ವುತಿರೆ (ಚಾತೀಕ್ಕ. ೨-೦೭೬); ಪೊಡೆಯಿಪ ಜುಂಜೆಯಂಜೆಸೆ ದಿಶಾಗಜಮಂ ಮಚುಮಕ್ಕದಂತೆ ಬೊಬ್ಬಿಡುವ ರವಕ್ಕೆ ಬೊಬ್ಬಿಡೆ ಗುಹಾಕುಹರಂ (ಸುಚಾತೀ. ೨-೦೧) ; ಇಂತೊಗೆಸಂದ ಶರದೃತು ವಿನೋಳು ಕುಮಾರಂ ವಿಜಯಯಾತ್ರೆಗೆ ಪೋಗಲ್ . . . ಸಮರಪ್ರಸ್ಥಾನ ಭೇರಿಯಂ ಪೊಡೆಯಿಸೆಂಬುದುಂ (ರಾಚತೀ. ೬-೦೦೫). **ಪೊಡವಿಸು**:೩.[ಗಣಿತ] ಗುಣಾಕಾರ ಮಾಡು; ಗುಣಿಸು : ಪೊಡೆ ಪೊಡವಿಸು . . . ಬಳಯಿಸು ಏಕಂದೊಡರಿಪ ವಾಕ್ಯಂಗಳ್ ತಾಂ ಪೊಡವಿಯು ನರಗಳ್ಗಲ್ಲ ಗುಣಿಯಿಸೆಂಬುದು ನಿರತಂ (ಕ್ಯಕಜಾ. ೦೦-೦೦). **ಪೊಡೆಸು**: ೧. ಪದದುಂಗುಟದ ತುದಿಯಿಂದ ಬರೆವುತಿಳೆಯ ನಿರೀಕ್ಷಿಸುತ ನೆರಿಗುರುಳನಂಗಕೆ ಪೊಡೆಸಿಕೊಳುತುತ್ತರಕೆ ಬದಲುತ್ತರವನೀಯದೆ ನಿಂದಳರೆಘಳಿಗೆ (ಅಕಂರಾ. ೨-೦-೩೬). ೨. ಪೊಡೆಸು ಭೇರಿಯನಿಂದೆ ನಡೆಸು ಮತ್ಸ್ಯನ್ಯವಂ . . . ತಡೆಸದೆನ್ನಂ ದಾಳಿಯಿಡಿಸು ಬೇಗದೊಳು (ಜೈಪು. ೯೭-೨೨). **ಹೊಡಯ್ಯು**: ೨. ಪೆಳಚ್ಚಿ ದಿಗುದ್ದಾಗಳು ದಿಗುವಿಭಾಗಾಂತರದೊಳು ಪಾತಾಳದೊಳು ಪರ್ವತಕುಹರದೊಳಾಕಾಶದೊಳು ಕೊರ್ವಿ ಪರ್ವಿತ್ತುರುತೇಜ ವೀರಬಮ್ಮಂ ಹೊಡಯ್ಯು ನೆಗರ್ದ್ದ ಚಂಡನಿಸ್ಸಾಣಘೋಷ (ಶಾಇಕ. XV . ೫೯-೦೦; 1184). **ಹೊಡಿಸು** : ೧. 'ಡಿಕ್ಕಿಹೊಡಿಸು' ಪರಾ. **ಹೊಡೆಯಿಸು** : ೧. ಅವನು ಅಪ್ಪನಿಗೆ ಚಾಡಿ ಹೇಳಿ ನನಗೆ ಹೊಡೆಯಿಸುತ್ತಾನೆ (ಲೋಕ). ೪. (ದನಕರು, ಗಾಡಿ ಮೊದಲಾದುವನ್ನು) ಅಟ್ಟಿಕೊಂಡು ಹೋಗುವಂತೆ ಮಾಡು : ಕರುಗಳನ್ನು ಕಟ್ಟಿದ್ದ ಸ್ಥಳಕ್ಕೆ ಹೋಗಿ ಅವುಗಳನ್ನು ಜಾತ್ರೆಮಾಳಕ್ಕೆ ಹೊಡೆಯಿಸಿಕೊಂಡು ಬಂದು ಅಲ್ಲಿ ಕಟ್ಟಿಸಿದೆನು (ಹಿಂಚಾಕ್ಯ. ೩೩೩). **ಹೊಡೆಸು** : ೧. ಅವನು ಉಪಾಧ್ಯಾಯರಿಗೆ ಚಾಡಿ ಹೇಳಿ ಆ ಹುಡುಗನನ್ನು ಹೊಡೆಸಿದನು (ಲೋಕ). ೪. ನಿನ್ನ ಕೈಯಲಿ ಬರಲಿ ಸತ್ತಿಗೆಯೆನ್ನ ಕೈಯಲಿ ಹೊಡೆಸು ಬಂಡಿಯ (ಕುಪ್ಯಾ. ೫-೨೬).

[ಪೊದ್ಕ + – ಇಸು$_3$]

**ಪೊದೆಯೊತ್ತು** (ಕ್ರಿ). (ಸಸ್ಯವು) ತೆನೆ ಬಿಡು ; ಹೊಡೆಯಾಗು : ಪಸುರೇಟುತ್ತೆ ಕವಲಿಚ್ಚು ಪೊದೆಯೊತ್ತುತ್ತುಂ ಪಾಲೇಟುತ್ತುಂ ಪೆಚ್ಚ ದಿಂಪಿಂ ನಳನಳಿಸಿ ಶಾಲಿವನಮೆಸೆದಿರ್ಕುಂ (ಗಿಂಚ. ೨-೦೭).

[ಪೊದ್ಕ + ಒತ್ತು$_1$]

**ಪೊಡೆವಡಿಸು**, ಪೊಡಮಡಿಸು, ಪೊಡವಡಿಸು, ಪೊಡ್ಡಮಡಿಸು, ಹೊಡವಂಡಿಸು, ಹೊಡವಡಿಸು (ಕ್ರಿ). ನಮಸ್ಕಾರ ಮಾಡಿಸು ; ವಂದಿಸುವಂತೆ ಮಾಡು : ಅಧಿಪಂ ಮೊಗಮೊಗದಿಂ ಬೆಸಸಿದೊಡಲ್ಲದೊಲ್ಲೆವೆನೆ ವಿಕ್ರಿಯೆಯಿಂದಂ ಬೆಸಸುವಂತೆ ಮಾಡಿ ಮನಂಬಿಡೆ **ಪೊಡೆವಡಿಸಿ** ನವಿಯಿಯುಮಂ ವಿನಮಿಯುಮಂ (ಆದಿಪು. ೯-೧೦೨); ಗಂಗಾಜಳಪವಿತ್ರೀಕೃತಗಾತ್ರನುಂ ಕೌಶೇಯಪರಿಧಾನನುಮಾಗಿರ್ದ ಮಾನನಿಧಾನನಂ ತಂದು **ಪೊಡೆವಡಿಸಿ** (ಸಂಶಖಾ. ೦೪-೦೭ ವ). **ಪೊಡಮಡಿಸು** : ಕರ್ಣನಂ ಮುಂದಿಟ್ಟೊಡಗೊಂಡು ಪೋಗಿ ಧೃತರಾಷ್ಟ್ರಂಗಂ ಗಾಂಧಾರಿಗಂ ಪೊಡಮಡಿಸಿದಾಗಳ್ (ಕುಪಿಶಾ. ೨-೮೩ ವ); ಪಟ್ಟವರ್ಧನಕೆ ಜಗತ್ಪ್ರಭುವಂ ಪೊಡಮಡಿಸುವುದು (ಆಕ್ಯಾಪಿ. ೮-೨೩); ಮಂಗಲೆ ನಿಜಾತ್ಮಜೆಯಂ ತಂದು ಪೊಡಮಡಿಸಿದಳು ಭಕ್ತಿಯಿಂದ (ಸೌಂದಪು. ೦೩-೦೩). **ಪೊಡವಡಿಸು** : ಪ್ರತಿಪತ್ತಿಮೂರ್ಧೆಯೆನಿಸಿರ್ದ ತರುಣಿಯುಂ ಗುರುಜನಕ್ಕೆ ಪೊಡವಡಿಪುದುಂ (ಕಾದಂಅ. ೬೮೦); ನಿಜಪಾದಪೀಠಘಟಿತೋತ್ತಮಾಂಗನಾದ **ಚಿತ್ರಭಾನು**ವಂ ಪುತ್ರನಿರ್ವಿಶೇಷಮೋಹದಿಂದಮಾದರಿಸಿ ತ ತ್ಸ ಮ ಯ ದೊ ಳ ಮಾ ತ್ಯ ವೈಶ್ರವಣಂಗೆ ಪೊಡವಡಿಸೆ (ಕೃಪ್ಪಪು. ೯-೬೨ ವ); ತನ್ನ ಮಗಳೇ . . . ಒಡಗೊಂಡು ಬಂದು ಸಮಸ್ತಭಕ್ತರಿಗೆ ಪೊಡವ[ಪಾಠಾಂ. ಮ]ಡಿಸಿ (ಬಸಪು. ೯-೬೩). **ಪೊಡೆಮಡಿಸು** : ಆತನ [ಮನೆಗೆ ವಂದು ಪೊಸಮದವಳಿಗೆಯ ಕೆಲದೊಳಿರ್ದ ಪುಷ್ಪದಾಡನಂ ಕಂಡು] ಕಯ್ಯಂ ಪಿಡಿದೊಡಗೊಂಡು ಬಂದು ತಮ್ಮ ಗುರುಗಳ್ಗೆ ಪೊಡೆಮಡಿಸಿ (ಧರ್ಮಾಮೃ. ೬-೦೨೭); ನಿನ್ನಾಳ್ದನ ಕೊಂದ ಮದೀಯವಲ್ಲಭನ ಸಂದರುಶನವ ಮಾಡೇಳೆಂದು ಚರಣಾರವಿಂದಕೆ ಪೊಡೆಮಡಿಸಿದಳು (ಸೋಚಹ. ೯-೩೭). **ಹೊಡವಂಡಿಸು** : ಕಮಲಾನನೆಯು ಹೊಡವಂಡಿಸಿದನವ್ವೆಗೆ (ಕುವ್ಯಾಕ. ೦೭-೭). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಹೊಡವಡಿಸು** : ಕಂದನಂ ತಾನೆತ್ತಿ ಕೊಂಡೈತಂದವರ ಚರಣಾಂಬುಜಕೆ ಹಣೆಯೊಂದೆ ಹೊಡವಡಿಸಲ್ಕೆ (ಬಸಪು. ೯೬-೩೦); ತನಗೆ ತಾನೇ ಹೋಗಲಚ್ಯುತನೆನಿಪನಂ ಕೊಂಡೊಯ್ದು ವಿಶ್ವೇಶನ ಪದಾಬ್ಜಕೆ ಹೊಡವ[ಪಾಠಾಂ. ಪೊಡವ]ಡಿಸಿದಪೆನಿನ್ನು (ಬಸಪು. ೩೩-೬೨).

[ಪೊಡೆವಡು₂ + — ಇಸು₃]

**ಪೊಡೆವಡು**₁ (ಕ್ರಿ). ಹೊಡೆತವನ್ನು ಹೊಂದು ; ಹೊಡೆಯಲ್ಪಡು : ಆ ಮುನೀಂದ್ರನಂ ಬಲೋಪೇಂದ್ರರ್ ಪೊಡೆವಟ್ಟು ಕಬ್ಬಿಪೆ ಪೊಡೆ[ಪಾಠಾಂ. ಡ]ವಟ್ಟ ಸೆಂಡಿನಂತೆ ಗಗನಕ್ಕೊಗೆದಂ (ಅಜಿಪು. ೦೩-೯೦ ವ).

[ಪೊಡ್ಡೆ₃ + ಪಡು₁]

**ಪೊಡೆವಡು**₂, ಪೊಡಮಡು, ಪೊಡವಡು, ಪೊಡೆಮಡು, ಹೊಡಮಡು, ಹೊಡವಂಡು, ಹೊಡವಡು, ಹೊಡೆವಡು (ಕ್ರಿ). (ಸಾಷ್ಟಾಂಗ) ನಮಸ್ಕಾರ ಮಾಡು ; ವಂದಿಸು ; ನಮಿಸು : ಶಚೀಮಹಾದೇವಿಯನೆ ಪೋಲ್ವ ಧಾರಿಣಿಮಹಾದೇವಿಯೆನ್ನ ಕಾಲ್ಗೆಱಗಿ ಪೊಡೆವಟ್ಟಿರ್ದಳ್ (ವಡ್ಡಾರಾ. ೬೦-೬); ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ . . . ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ ಮಿಡಿವ ಬಹುಪ್ರಕಾರಜನಸಂಕುಲಮೊಪ್ಪಿದುದಾ ಪ್ರಯಾಣದೊಳ್ (ಆದಿಪು. ೬-೫೭) ; ಕರ್ತಾರ ನಿನಗೆ ಕರವೆತ್ತಿ ಪೊಡೆವಡುವ ಭಕ್ತರ ಮನೆಯ ಹಿತ್ತಿಲ ಬೇಲಿಯಾಗಿಪ್ಪನ್ನೆ (ದೇದಾವ. ೨೯-೪೯). **ಪೊಡಮಡು** : "ಪೊಡಮಡು (ಪೊಡ + ಮಡು)—ನಮಸ್ಕಾರೇ" (ಕುಬ್ಜಾ); ಪೊಡಮಡುವರ್ ಜೀಯೆಂಬರ್ ಕುಡು ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್ ನಡೆಗೆಮ್ಮ ನಿನ್ನಯೆಡೆಯೊಳ್ ನಡೆಯಲ್ವೇಡೆನಗೆ ಕೆಳೆಯನ್ನೆ ರಾಧೇಯಾ (ಪಂಪಭಾ. ೨-೮೫) ; ವಸುಧೆಯೊಳು ಪೊಡಮಡಲು ದೇಗುಲಂ ಬಿರ್ದ ನುಡಿ ಪಸರಿಸುವ ನಾಡ ಗಾದೆಯು ತೆಱದಿ ನಿಮ್ಮ ಸೇವಿಸಬಂದ ನಮಗಾಯ್ತು ಶಶಿಕಳ (ಸಿದ್ಧರಾ. ೦-೨೭) ; ಪೊಡಮಟ್ಟು ಶಿರವ [illegible] ಮಣ್ಣಿ[illegible]ನಡಿಗೆಱಗಿದನು ಭಕ್ತಿಯಲಿ (ಅಶ್ವಲೀ. ೩-೬).

**ಪೊಡವಡು** : ಧರ್ಮಪುತ್ರನಾ ಮುನೀಂದ್ರಂಗೆ ಸಾಷ್ಟಾಂಗವೆಱಗಿ ಪೊಡವಡೆ ಪರಸಿ ಪಯೋಧರಪಥಕ್ಕೊಗೆದಂ (ಪಂಪಭಾ. ೬-೬೩ ವ) ; ತನ್ನ ತಂದೆಯುಂ ಕಂಡು ಲಜ್ಜಿಸಿ ತಲೆಯಂ ಬಾಗಿ ದೂರದೊಳ್ ಪೊಡವಟ್ಟು (ಕಾದಂಅ. ೯೭೪). **ಪೊಡೆಮಡು** : "ಮೊಟ್ಟು, ತುಱುಲ್, ಕುಂಬು, ಎಱಗು, ಬಾಗು, ಪೊಡೆಮಡ್ಡು, ಕಾಲ್ವಿಡಿ, ಮಣಿ, ಮೆಯ್ಯಿಕ್ಕು—ಈ ೯ ನಮಸ್ಕಾರಂ" (ಕಶಪಾ. ೬೪-೪೯೦) ; ಕಿತ್ತಯ್ಯ್ಯ ಇಂದೆಮ್ಮ ಮನೆಯೊಳ್ ಪಾರಿಸಲ್ವೇಟ್ಕುಮೆಂದು ಕಾಲಂ ಪಿಡಿದು ಪೊಡೆಮಟ್ಟಿರ್ದೊನಂ ನೋಡಿ (ವಡ್ಡಾರಾ. ೬೦-೦೪) ; ಸೂಸೆಗೂಡಿ ಕಂಸಮರ್ದನನ ಸೂಸೆ ಮದವಕ್ಕಳು ಸಹಿತ ಕೃಷ್ಣಾಂಘ್ರಿಗೆ ಯೊಸಗೆಯೊಳ್ ಪೊಡೆಮಟ್ಟರೊಲಿದರು (ನೇಮಿಹಕ. ೯೨-೬೫) ; ಮುನಿಯ ನಿದಿರ್ಗೊಂಡು ಪೊಡೆಮಟ್ಟು . . . ಕುಶಲಮಂ ಬೆಸಗೊಂಡುಪಚರಿಸುತಿರ್ದಂ (ರಾಮಾಶ್ಚ. ೦೦-೬). **ಹೊಡಮಡು** : ವಾರಿಜಾಸ್ಯೆಯಪೂರ್ವಲಾಂಛನಧಾರಿಯಾಗಲು ತನ್ನ ಮನದೊಳು ಹಾರವಿಸಿ ಹೊಡಮಟ್ಟು ಮುಗ್ಧರ ದೇವನಿಂತೆಂದ (ಬಸಪು. ೦೨-೨೩). **ಹೊಡವಂಡು** : ನಿಮ್ಮ ನಿಮ್ಮ ಹೊಡವಂಡುವ ದೈವಗಳೆಲ್ಲಾ ಗಿಡ ಮರನಾಗಿ ಹೋದವಲ್ಲಾ (ಅಂಬಿವ. ೪. ೯೦೭-೦೨೦); ಹರಿಗೆ ಹೊಡವಂಟಸ್ಮೃತಿಕ್ಷಾಗುರುವ ಮನದಲಿ ನೆನೆದು ಹೊಸಬಿಲುದಿರುವನೇಱಿಸಿ ಮಿಡಿದು . . . ನರನಾಥನಿದಿರಾದ (ಕುವ್ಯಾಕ. ೩-೩೦). **ಹೊಡವಡು** : ಇಂತು ವರ ಕೊಡಗೂಸು . . . ದೇಗುಲದೊಳಿಪ್ಪ ಭವನಂ ಕಂಡು ಹೊಡವಡುತ್ತಂ ಬಟ್ಟಲಂ ಮುಂಗಡೆಯೊಳಿಟ್ಟು (ಬಸಪು. ೦೯-೬). **ಹೊಡೆವಡು** : ಶಿವನೇ ನಿತ್ಯನೆಂದು ಹೊಡೆ[ಪಾಠಾಂ. ಡ] ವಡುತ್ತಿದೆ ವೇದ . . . ಬಸವಪ್ರಿಯ ಕೂಡಲಚೆನ್ನಸಂಗಯ್ಯನೇ ನಿತ್ಯನೆಂದು ಹೊಗಳುತ್ತಿದೆ ವೇದ (ವಚನ. I, ೦೭-೪ ; ಶತಗೋ. ೬-೧೬೦ ನೋ) ; ಮಗನರಸಿ ಮಂತ್ರಿಸಹಿತವನಿಪಂ ಹಿಂದೆ ದೇಸಿಗನಂತೆ ಕೌಶಿಕನ ಕಾಹಿನೊಳು ಬರೆ ಕಂಡು ಬಗೆ ಬೆವಱಿ ಹೊದ್ದಿ ಹೊಡೆವಟ್ಟು ಕಾಸಿಕೆಯ ಚಿತ್ಯೈಸು ಭೂಭುಜ ಎಂದರು (ಹಪಾಪ. ೬-೭೨).

[ಪೊಡ್ಡೆ₃ + ಪಡು₁]

**ಪೊಡೆವಳಸು** (ಕ್ರಿ). ಹೊಟ್ಟೆಯನ್ನು ಸುತ್ತು,— ಬಳಸು : ಅವಳ ಮಟ್ಟತ್ತರ್ಪ ಕೊಲಲೆತ್ತಿದ ಕೋಲಂ ಕಲಕಟ್ಟು ಕಟ್ಟುಬಿದೊಳ್ಬಿಟ್ಟತ್ತನೆ ನಿಟ್ಟುರವಂ ನುಡಿದು ಕಟ್ಟೆ ನಿಲಿಸಲ್ಕೆಂದು ತೊಟ್ಟನೊಂದು ಕಡೆವಾವಂ ಪೊಡೆವಳಸಿ ಪಿಡಿವಿನಮೆರಟ್ಟಿರಲಳವು ಕಡಮೆಯಾಗೆ (ಚಕವಂ. ೬೩-೦).

[ಪೊಡ್ಡೆ₃ + ಬಳಸು₁]

**ಪೊಡೆವೇಱು** (ಕ್ರಿ). ಹೊಡೆತವನ್ನು ಅನುಭವಿಸು ; ಪೆಟ್ಟುತಿನ್ನು : ಪೊಡೆವೆತ್ತ ಪಾವಿನಂತೆ ನೊಂದ ಶರಭದಂತೆ ಸಿಕ್ಕಿದ ಪುಲಿಯಂತೆ ಕೋಪಾವಿಷ್ಟವಾಗಿ . . . ಮುತ್ತಿಕೊಳ್ಳುದುಂ (ಧರ್ಮಾಮೃ. ೮-೦೨೪)

[ಪೊಡ್ಡೆ₂ + ಪೆಱು₁]

**ಪೊಡೆವೊಗು** (ಕ್ರಿ). ಹೊಟ್ಟೆಯನ್ನು ಹೊಗು ; ಉದರವನ್ನು ಪ್ರವೇಶಿಸು,— ಸೇರು : ದೆಸೆಗೆಟ್ಟು ತಮವೋಡಿ ಭೀತಿಯಿಂ ಸಸಿಪಸುಱ ಬಹನೆಂದು ಪೊಡೆವೊಕ್ಕುದೋ . . . ಎನಲ್ ಪೊಸತಾಯ್ತು ವಿಧುಬಿಂಬ ಮಧ್ಯದಂಕಂ ಪಳಿಕುಪಸೆಯಿರ್ದ ಕಾಳಿಯಂತೆ (ಪಂಪು. ೯-೨೫).

[ ಪೊಡ್ಡೆ₃ + ಪೊಗು ]

**ಪೊಡೆಶಂಡು** ' ಪೊಡೆಸೆಂಡು ' ನೋ.

**ಪೊಡೆಸು** ' ಪೊಡೆಯಿಸು ' ನೋ.

**ಪೊಡೆಸೆಂಡಾಟ**, ಪೊಡೆಚೆಂಡಾಟ (ನಾ). ಚೆಂಡನ್ನು ಪುಟಿಸಿ ಆಡುವ ಒಂದು ಬಗೆಯ ಆಟ : ಅವರ ಪಸುಳೆಗಳ್ ಪಕ್ಕಿಯ ಸಿಡಿದಲೆಯೊಳ್ ಶಿಱಿಕಲ್ಲಾಟಮಂ . . . ತುಪ್ಪುಟ್ಟಿಗೆಱಿ ಸಿಡಿವ ಪಾರಿವಂಗಳಂ ಪೊಯ್ದು ನೆಲಕ್ಕೆ ಕೆಡಪುವಲ್ಲಿ ಪೊಡೆಸೆಂಡಾಟಮಂ . . . ಖಲ್ವರ್ (ಚಕವಂ. ೮-೦೬). **ಪೊಡೆಚೆಂಡಾಟ** : ಅಹಿತರಾಯರುಗಳ ಶಿರವನು ಪೊಡೆಚೆಂಡಾಟವಾಡುವೆನು (ಅಂಜಕ. ೭-೨೨). [ ಪೊಡೆಸೆಂಡು + ಆಟ ]

**ಪೊಡೆಸೆಂಡಾಡು,** ಹೊಡೆಚೆಂಡಾಡು, ಹೊಡೆಸೆಂಡಾಡು (ಕ್ರಿ). ಚೆಂಡನ್ನು ಎಸೆಯುವ ಆಟವನ್ನು ಆಡು : ಕಡಲಂ ಪೀರಲುಂ . . . ಮೇರುವಂ ಪೊಡೆಸೆಂಡಾಡಲುಮಾರ್ಪ ಕಾಲಯುವನಂಗೇನಾರ್ಪನೆ ಯುದ್ಧದೊಳ್ ತೊಡರಲ್ ಚಕ್ರಿ ದಿಶಾಗಜಕ್ಕೆ ಕಳಭಂ ಕೈಯಿಕ್ಕಲೇನಾರ್ಕುಮೇ (ಆದಿಪು. ೯-೦೭); ಕುಲಾದ್ರಿಸ್ತೋಮಮಂ ಕಿಳ್ತಣಾ ಪೊಡೆಸೆಂಡಾಡುವ . . . ಗಣಗಳ್ ಬಂದರಾನಂದದಿಂ (ಗಿರಿಜಾ. ೧೧-೭೮). **ಹೊಡೆಚೆಂಡಾಡು :** ಹೊಡೆದು ಹೊಡೆಚೆಂಡಾಡಿ ರಿಪುಗಳ ಗಡಣವನು ಯಮರಾಜಧಾನಿಗೆ ನಡೆಸುವೆನು (ಕುಮಾ.ರಾ. ೬-೯); ತೇರ್ಗಳ ನುಚ್ಚುನುಱಿ ಮಾಡಿಯಾನೆಗಳನಿರದೆ ತಿವಿತಿವಿದು ಹೊಡೆಚೆಂಡಾಡುತಿರ್ದಂ ಗಜಾಸುರಂ ಸಂಗರದೊಳು (ಶಿವಪು. ೨೬-೨೫). **ಹೊಡೆಸೆಂಡಾಡು:** ಚಂಡಪರಾಕ್ರಮದಿಂದಿದಿರಾದವುದ್ದಂಡ ಮಂಡಳಿಕರೆಲ್ಲರನು ಗಂಡುತನದಿ ಹೊಕ್ಕು ತಲೆಗಳ ಹೊಡೆಸೆಂಡಾಡದೆ ಸುಮ್ಮನಿಹನೇ (ಪ್ರಭುಸಂ. ೨೯-೨೨). [ ಪೊಡೆಸೆಂಡು + ಆಡು$_1$ ]

**ಪೊಡೆಸೆಂಡು,** ಪೊಡಸೆಂಡು, ಪೊಡೆಚೆಂಡು, ಪೊಡೆಚೆಂಡು, ಪೊಡೆಶಂಡು, ಹೊಡಸೆಂಡು, ಹೊಡೆಚೆಂಡು, ಹೊಡೆಚೆಂಡು, ಹೊಡೆಸೆಂಡು (ನಾ). ೧. ಹೊಡೆದ ಚೆಂಡು ; ಪುಟಿದ ಚೆಂಡು. ೨. ಚೆಂಡನ್ನು ಎಸೆದು ಹಿಡಿಯುವ ಒಂದು ಬಗೆಯ ಆಟ : "ಪೊಡೆಸೆಂಡೆಂದು ಅಮ್ಮಾಲೆ" (ಶಬ್ದಮ. ೬೯-೩೩೯); ಒಡನಾಡಿಯುಮೊಡನೋದಿಯುಮೊಡವಳೆದುಂ ಗುಳ್ಳೆಗೊಟ್ಟ ಬಟ್ಟುಳಿಸೆಂಡುಂ ಪೊಡೆಸೆಂಡೆಂಬಿವ ನಾಡುತ್ತೊಡವಳೆದರ್ ತಮ್ಮೊಳೆಳಸೆ ತಂತಂ ಗೆಡೆಗಳ್ (ಶಾಂತಿಪು. ೨-೩೦); ಅಭಿನವಜಲಧರತತಿಗಳ್ ಸಭೆಕ್ಕೆ ನೆಗೆವುವು ಖಗಾದ್ರಿಯುತಿಯಿಂ ಸೂರ್ಯಪ್ರಥಿತನಯನತುಳಭುಜಬಲವಿಭವಂ ಪೊಡೆಸೆಂಡುವೊಯ್ದ ಬೆಟ್ಟಂಗಳವೋಲ್ (ಅರ್ಜುನಚ. ೨-೯೦); ಪೊಡೆಸೆಂಡುವೊಯ್ವನಾ ದ್ರುಪದನ ಪುತ್ರನಂ ಘಟಜಸೂನು (ಪಂಪಭಾ. ೦೩-೩೦). ೩. ಚೆಂಡನ್ನು ಅಂಗೈಯಿಂದ ನೆಲಕ್ಕೆ ಮತ್ತೆ ಮತ್ತೆ ಹೊಡೆದು ಪುಟಿಸುವ ಆಟ ; ಪುಟಚೆಂಡಾಟ : ತನ್ನ ಮುಂ ನೆರಪಿದ ಪಾಪಮೆ ಕೋಪದಿಂ ಪೊಡೆಸೆಂಡುವೊಡೆಯುತ್ತಿರ್ದುದು (ಪಾರ್ಶ್ವಪು. ೩-೦೦೦ ವ). **ಪೊಡಸೆಂಡು :** ೨. ವೈರಿಭೂಪ್ರಭುಗಳ ಮಸ್ತಕಾವಳಿಗಳಂ ಮುಳ್ಸಿಂ(ಳಸಿ) ಪೊಡಸೆಂಡುವೊಯ್ದನೀ ತ್ರಿಭುವನಮಲ್ಲನೀ ಪೃಥ್ವಿ ಸೆಟ್ಟಿಯುಮಂ ಹರಿಪಂ ರಣೋರ್ವಿಯೊಳ್ (ಕ್ಷಾ. IV, ೦-೬೮: 1204). **ಪೊಡೆಚೆಂಡು :** ೧. ಪೊಗಮತ್ತಿ ಫಲುಗುಣಾ ನೋಡುತಿರೆ ಕರ್ಣಜಂ ಗಗನದಿಂ ಬದ್ದಿಳಿಗೆ ಪೊಡೆಚೆಂಡಿನಂತೆ ಪುಟನೆಗೆದೆದ್ದು ರೋಷದಿಂ . . . ತೆಗೆದಿಸಲ್ (ಕೃಷ್ಣಭಾ. ೨೩-೦೯). **ಪೊಡೆಚೆಂಡು :** ೨. ಕುಲೋರ್ವಿಧರಂಗಳನೆತ್ತಿ ಪೊಡೆಚೆಂಡನಾಡಲೋ ದಿಗ್ಗಜಂಗಳ ನಿಗ್ಗವಂಗಿತ್ತು ತಂದಿರಿಸಲೋ ಕೊಡು ಬೆಸನನೀ ರಿಪುಗಳಂ ಗೆಲುವುದರಿದ (ಸಾಳ್ವಭಾ. ೨೫-೩). 'ಪೊಡೆಚೆಂಡಾಟ' ಪರಾ. **ಪೊಡೆಶಂಡು :** ೧. ಕೆಳೆಯಂ ಕೊಂಡಪನೆಂಬವಂಗಭಯಮಂ ಕಾರುಣ್ಯದಿಂ ಕೊಟ್ಟಪಂ ಕಲಿಬ × × × ಪೊಚ್ಚಳಿಸಿ ಬಲ್ಪಿಂದಾನ್ತೋನ್ತೋಪೆನಲ್ ತಲೆಯುಂ ಚಕ್ಕನೆ ಕಿತ್ತುರ್ವ ಮೆಟ್ಟಿ ಪೊಡೆಶಂಡಂ ಪೊಯಿದಪಂ ಭೂರಿಭೂತಳಮಾಕಂಪಿಸೆ (ಶಾಸನ. IX — i, ೨೫೭-೦೯ ; ಸು. 1160). **ಹೊಡಸೆಂಡು :** ೧. ಸಿಡಿಲಂ ನುಗ್ಗೊರ್ಗಿತ್ತುಮಂ ಭೈರವನ ಮುಸಕಮಂ ಬಗ್ಗಿಪಂ . . . ಹೊಡಸೆಣ್ಡಂ ಹೊಯ್ವುನಸ್ತಾಮನಿಪರ ತಲೆಯುಂ ವೀರಸಾಮನ್ತಸಿನ್ದನ್ (ಎಕ. XIV, ನಾಗಮಂ. ೦೯೦-೩೬; ಸು. 1224). **ಹೊಡೆಚೆಂಡು :** ೨. ಒಂದುದಿನ ಭೋಜನು ಸಖರ ಕೂಡಿಕೊಂಡು ಹೊಡೆಚೆಂಡನಾಡುತಾಗ ಸಿಡಿದು ಕಿಱಿಯ ತಾಯಿಯ ಮಂಚದ ಕೆಳಯಿಕೆ ಬೀಳಲು (ಕೃಕಸೂ. I, ೬೨); ಉರ್ವಿಯೊಳು ನಮ್ಮನು ನಿಷೇಧಮಾಡುತಲಿರ್ಪ ಗರ್ವರಾರವರೆರ್ದೆಗೆ . . . ಕಿಡಹದಿರೆವೆಂದು ಹೊಡೆಚೆಂಡನಾಡುತಿರ್ದರು.ಗೆಲುವಿನಿಂ (ವಿಶಕೋ. ೦೭-೩೮). **ಹೊಡೆಚೆಂಡು :** ೨. 'ಹೊಡೆಚೆಂಡಾಡು' ಪರಾ.

**ಹೊಡೆಸೆಂಡು :** ೧. ಕುಲಗಿರಿಗಳ ಕೈಗುಂಡುಗಳ ಬ್ರಹ್ಮಾಂಡಂಗಳ ಹೊಡೆಸೆಂಡುಗಳ . . . ಧರೆ ಗಗನಂಗಳ ಪಲ್ಲಟಿಸುವ ಬಲಯುತಬಲದಿಂ ಗಣಕುಲ ನಡೆದುದು ವೀರೇಶನ ಕಿಲಬಲದಲಿ ಜಗದಗಲದೊಳು (ವೀರೇಶ. ೨-೨೦); ಗಜದಳದ ಘಾಡಿಕೆಗೆ ವಾಜಿವ್ರಜದ ವೇಢೆಗೆ ಭೀಮನೇ ಗಜಬಜೆ ಸುವನೆ ಹೊಡೆಸೆಂಡನಾಡಿದನಹಿತಮೋಹರವ (ಕುಮಾ.ಭಾ. ೩-೦೦).

[ಪೊಡೆ$_1$ + ಸೆಂಡು]

**ಪೊಡ್ಡಣ,** ಪೊಡ್ಡವಣೆ, ಪೋಡಣೆ (ನಾ). ಒಗ್ಗರಿಸುವಿಕೆ; ಒಗ್ಗರಣೆ : 'ಪೊಡ್ಡಣಗೆ' ಪರಾ. **ಪೊಡ್ಡವಣೆ :** 'ಪೊಡ್ಡವಣೆಗೊಡು' ಪರಾ. **ಪೋಡಣೆ :** ಶಾಕ ಶೀಕರಣೆಯ ಗಾಡ ಪೋಡಣೆಯು ಸುಪಾಕವೊಗ್ಗರಣೆ ಪಾಯಸವ ಈಕೆಗಾಕೆಗೆ ಸ್ವಾಮಿಗವಳಿಗವಳಿಗೆಂದು ಜೋಕೆವಿಡಿದು ಬಡಿಸಿದರು (ಭಕ್ತ. ೪-೭೯).

[< ಪ್ರಾ. ಪೋಡಣ. / ಸಂ. ಸ್ಫೋಟನ./ ಮರಾ. ಫೋಡಣೀ]

**ಪೊಡ್ಡಣಗೆ,** ಪೊಡಣಗೆ (ನಾ). ಒಗ್ಗರಿಸುವುದು; ಒಗ್ಗರಣೆ : ಮೊದಲು ತುಪ್ಪದೊಳುಕ್ಕರಿಸಿ ಸವಿಯುಮಂ ಹಡೆದ ಬದನೆಯೆಳೆಗಾಯ ಹೋಳಂ ಹಾಕಿಕೊಂಡು ತುಪ್ಪದೊಳು ಪರಿಮಳವಿಕ್ಕಿ ಪೊಡ್ಡಣಗೆಯಂ ಕೊಟ್ಟು ಸಿಪಿ ಹೋಗದಂತಿರಿಸಲು ಅದುವೆ ಪುಳಿಚಾರು ಬದನೆಯ ಕಾಯಿ (ಸೂಪಶಾ. ೪-೬); ಬಳಿಕ ಕೆಂಪಂ ಮಾಡಿ ಹುರಿದು ತಾಳಿಸಿಕೊಂಡು ಇಳುಹಿ ಪೊಡ್ಡಣಗೆಯಂ ಕೊಟ್ಟು (ಸೂಪಶಾ. ೪-೩೮). **ಪೊಡಣಗೆ :** ಸುಗಮಮಹ ಸಕಲಸಂಭಾರಂಗಳ ಅಮ್ಮಿಕಲ್ಲೊಳಗರೆದು ನುಱುಗುವಂದದಿ ಕಾಸಿ ಕಮ್ಮನೆಯ ತುಪ್ಪದೊಳು ಪೊಡ[ಪಾಠಾಂ. ಪೂವ, ಪೊಡ್ಡ]ಣಗೆಯು ಕೊಟ್ಟು . . . ನವಪರಿಮಳವನು ಭಾವನೆಗೊಡುವುದು (ಸೂಪಶಾ. ೨-೪೮).

[ಪೊಡ್ಡಣ + — ಇಗೆ ]

**ಪೊಡ್ಡಣಗೆಗೊಡು,** ಪೊಡಣಗೆಗೊಡು (ಕ್ರಿ). ಒಗ್ಗರಣೆ ಕೊಡು; ಒಗ್ಗರಿಸು : ಬಂದ ತಿಳಿಯಲ್ಲಿ ಸಂಭಾರಮಂ ಕದಡಿ ಸರಿಯಪ್ಪಂತೆ ಕಾಸಿಕೊಂಡು ನಿಂದುದಂ ಪಲಭಾಗ ಮಾಡಿ ಪೊಡ್ಡ[ಪಾಠಾಂ. ಡ]ಣಗೆಗೊಟ್ಟು (ಸೂಪಶಾ. ೨-೪೯); ಬಟ್ಟ ಬದನೆಯ ಕಾಯ . . . ತುಪ್ಪಮಂ ಬಿಟ್ಟು ಪೊಡ್ಡ[ಪಾಠಾಂ. ಡ]ಣಗೆಗೊಡೆ ತುಪ್ಪಗಾಯಪ್ಪಯಿತು (ಸೂಪಶಾ. ೪-೦೩). **ಪೊಡಣಗೆಗೊಡು :** ಕೂಡಿ ಮಾಡಿದ ಸುಪದಾರ್ಥದಂದವನಱಿದೊಂದಿನಿಸು ತುಪ್ಪವನೆಱೆದೊಪ್ಪವಾಗಿ ಪೊಡಣಗೆ[ಪಾಠಾಂ. ಪೊಡವಣಗೆ]ಗೊಟ್ಟು ಮಹಾಸ್ವಾದುಗೊಳಿಸುವಂತೆ (ಶರಪು. ೦). [ಪೊಡ್ಡಣಗೆ + ಕೊಡು$_1$]

**ಪೊಡ್ಡವಣೆ** 'ಪೊಡ್ಡಣ' ನೋ.

**ಪೊಡ್ಡವಣೆಗೊಡು** (ಕ್ರಿ). = ಪೊಡ್ಡಣಗೆಗೊಡು : ಮಿಗೆ ಪೊಡ್ಡವಣೆ ಗೊಟ್ಟ ಸಾರು ಮೊದಲಾದ ಬಲುಸೊಗಸುಳ್ಳ ಪಾಕಂಗಳವನಿಷ್ಟದಂತಿರಲು (ಕುಬ್ಜಕ. ೫-೬). [ಪೊಡ್ಡವಣೆ (< ಪೊಡ್ಡಣ) + ಕೊಡು$_1$]

**ಪೊಡ್ಡಿ,** ಪೋಟ್ಟಿ, ಬಡ್ಡಿ$_1$, ಬೊಡ್ಡಿ (ನಾ). ೧. ಸೂಳೆ; ವೇಶ್ಯೆ. ೨. ಕೆಲವು ವೇಶ್ಯೆಯರ ಹೆಸರಿನ ಮುಂದೆ ಸೇರುವ ಪದ : ದೇಗುಲದ ಸೂಳೆ ಗೋಯಿಂದಪೊಡ್ಡಿಯ ಮಗಳು ಬಾಡಿ (?ೞ) ಪೊಡ್ಡಿಯೆಂಬೊಳ್ (ಇಕ. XI, ೦೨೫-೯; 778). **ಪೋಟ್ಟಿ:** ೨. ಮಹಾರಾಜಾಧಿರಾಜ ಪರಮೇಶ್ವರಭಟ್ಟಾರರಾ ಪ್ರಾಣವಲ್ಲಭೆ ವಿನಾಪೋಟಿಗಲೆನ್ನೊರ್ ಸೂಳೆಯರ್ (ಇಕ. X, ೦೦೭-೩ ; ?). **ಬಡ್ಡಿ$_1$ :** ೩. ನೀಚಳು, ದುಷ್ಟಳು ಎಂಬರ್ಥದ ಒಂದು ಬಯ್ಗುಳು : ಏನನೆಂಬಳು ಬಡ್ಡಿ ಖಡ್ಡಿನಿತೇನು ಕಾರಣಮೆಂದು ನಸುನಗುತಾ ನಿಶಾಚರಚಕ್ರವರ್ತಿಯು ಕೇಳ್ದಲೋಲವಿನಲಿ (ತೊರವೆರಾ. ೩೯-೦೫); ಅಟ್ಟಕ್ಕೆ ಹಾರಲಾರದ ಬಡ್ಡಿ ಸ್ವರ್ಗಕ್ಕೆ ಹಾರಿದಳಂತೆ (ಕುಮ್ಮಿತ. ೦೩೩); ಓಡಹೋಗುವ ಬಡ್ಡಿ ಹಾಲಿಗೆ ಹೆಪ್ಪು ಹಾಕ್ಯಾಳೇ ? (ಗಾದೆ). **ಬೊಡ್ಡಿ :** ೨. ಶ್ರೀ ವಿಜಯಮಹಾದೇವೀಬೊಗ್ಗಿ(ಡ್ಡಿ) ಪೋಧೀ(ಥೀ) ಸವ್ವಾರ್ಣಾಜ್ಞಾಪಯತಿ (ಇಕ. VIII, ೪೬-೦೫; ೪ನೆಯ ಶ). ೩. ಮುಂಡಾಡುವ ಮಕ್ಕೆ

ಸೊಕ್ಕಿದಿರದೇನಭಿಮಾನದ ಬೊಡ್ಡಿ[ಪಾಠಾಂ. ಜೋಡೆ] ಬಾಲವುಂ ಬಡಿದವೆ (ಆಪಂಪು. ೮-೩೦ ; ಸೂಕ್ತಿಸು. ೮-೪೨೪ ನೋ.); ಇಬ್ಬರಿಗೆ ಘಡ ಹುಟ್ಟನಿಕ್ಕುವ ಕೊಬ್ಬಳೇ ಜಯಲಕ್ಷ್ಮಿ ಬೊಡ್ಡಿಯು ಕೊಬ್ಬ ನಿಲಿಸುವೆನು (ಕುಮಾ.ರ. ೨೩-೨೬); ದುಡ್ಡಿಗೆ ಮಣ್ಣು ಹಾಕೋ ಆ ಬೊಡ್ಡಿಯಾದರೂ ಇದ್ದಾಳಲ್ಲ (ಒಡ್ಡಿಲ. ೨೬).

ಬೊಡ್ಡಿಮಗ, ಬಡ್ಡಿಮಗ=ವೇಶ್ಯೆಯ ಮಗ ; ಒಂದು ಬಯ್ಗುಳು ; ಬೊಡ್ಡಿಮಗನಿಗೆ ಸರಿಯಾಗಿ ಬುದ್ಧಿ ಕಲಿಸಬೇಕಾಗಿದೆ (ಪುನರು. ೯೩೦); ಎಲಾ ಬೊಡ್ಡೀಮಗನೇ, ಸುಳ್ಳು ಹೇಳುತ್ತೀಯಾ? (ರಂಗರೂ. ೯೬); ನಿನಗೆ ಬರಬೇಕಾದ ದುಡ್ಡನ್ನು ಆ ಬಡ್ಡಿ ಮಗನ ಹತ್ತಿರದಿಂದ ಕೊಡಿಸುತ್ತೇನೆ (ರೂಪ).

[ದೇ. ೩ ತಮಿ. ಪೊಟ್ಟೈ; ಮಲ. ಪಟ್ಟಿ; ತುಳು. ಪಡಪೆ, ಪಡಪ್ಪೆ]

**ಪೊಣಕೆ** 'ಪೊಣರ್ಕೆ' ನೋ.

**ಪೊಣರ್$_1$, ಪೊಣರು$_1$, ಪೊಣಱ್, ಹೊಣರು** (ಕ್ರಿ). ೧. ಸೇರು; ಕೂಡು; ಜೋಡಿಯಾಗು : ನಡೆಯೊಳ್ರಾಜಮರಾಳರಾಜಿ . . . ಪಿಕ ಶ್ರೇಣಿಯುಂ ಪಿಡಿದಂಚಸ್ಮೃದುನಾದದೊಳ್ಪೊಣರಲಂದೆಲ್ತ್ರುಂದುವೀ ವೇಳೆ ಯೊಳ್ಗಡವಾದೀ [ ವೀ ] ಕ್ಷಿಸು ತಂಗಿಯೆಂದೆನುತಲೈತಂದತ್ತು ಕಾಂತಾಕುಳಂ (ಅದ್ಯಟಿ. ೬-೩೦). 'ಮೆಯ್ಪೊಣರ್' ಪರಾ. ೨. ಸೇರಿಕೊಂಡಿರು; ಕೂಡಿ ಕೊಂಡಿರಂ : ಬಾಹುಬಲಿ ಭರತನಂ ದೃಷ್ಟಿಯುದ್ಧ ಜಳಯುದ್ಧದೊಳು ಗೆಲ್ದು ಮಲ್ಲಯುದ್ಧದೊಳು ಪೊಣರ್ದು ಪಲವಾಯಂಗಳೊಳು ಪೊಣರ್ದು ಶ್ರಾಂತವಾದಾಗಳು ಭರತನಂ ಪಿಡಿದೆತ್ತಿ ನೆಲಕ್ಕಿಕ್ಕುವುದು (ಪಾಪುಂಪು. ೯೯); ಪೊಣರ್ವ ಪುಂಭಗಳುಃಚದಿಂ ಕೆದಱ ಮುದದಿಂದೆ ದಣುವಿಲ್ಲದೊಲ್ದು ಕುಣಿವಚ್ಚಕೀಳಿಕೆಗಳಿಂ (ಅದ್ಯಟಿ. ೩-೯೮). ೩. ಉಂಟಾಗು; ಒದಗು; ಸಂಭವಿಸು : ಅತ್ತ ದುರ್ಯೋಧನಂಗಂ ಭೀಮಂಗಮನುಪರಂ ಪೊಣರ್ದಿ ದುರ್ದು (ಹುಪಾ. ೧೨-೦೭೮ ವ); ವರಾಹಕಲ್ಪಂ ತಾಂ ಪೊಣರ್ದುದು [ಪಾಠಾಂ. ಪೊಣ್ಮಿದುದು]ಎರಡನೆಯ ಪರಾರ್ಧಾಬ್ದದೊಳ್ (ಬಿಸ್ತುಪು. ೦-೦-೧೯೩). ೪. ಶೋಭೆಗೊಳ್ಳು ; ಶೋಭಿಸು ; ವಿರಾಜಿಸು : ಪೊಣರ್ವಕುಳಿಕ್ಷೇತ್ರ ಶಿಖಾಮಣಿಯಾದೀ ಪಂಪೆಯೊಳ್ವಿರೂಪಾಕ್ಷಂ . . . ಕಂಗೊಳಿಪ್ಪಂ (ಅದ್ಯಟಿ. ೩-೬೪). ೫. ವೃದ್ಧಿಗೊಳ್ಳು ; ಅತಿಶಯವಾಗು ; ಹೆಚ್ಚಾಗು : ಎಣಿಕೆಗಳವಡದ ಮಹಿಮೆಗೆ ಗಣಭೂಷಣೆಗೊಲ್ದು ರತ್ನಕೀಲಿತನವಭೂಷಣ ಜಾಲಮನರ್ಪಿಸಿದಂ ಪೊಣರ್ವ ಮುದಂಬೆತ್ತು ಘೂರ್ಜರಕ್ಷಿತಿಪಾಲಂ (ಅದ್ಯಟಿ. ೩-೦೭೮). ೬. ಕಾದು ; ಹೋರಾಡು ; ಯುದ್ಧಮಾಡು : ಆ ಕ್ಷಣದೊಳೆ ಮಾರ್ಕೊಣ್ದು ಪೊಣರ್ದು ತಳ್ತಿಱಿದು ಮಡಿದನೀ ಗೊಗ್ಗಿ × × (ಎಕ. XI. ಹಳ್ಳಿ. ೬-೮ ; ಸು. 925); ಇರ್ವರುಂ ನೀಲನಿಷಧಗಿರಿಗಳೊಂ ದೊಂದಱೊಳ್ ಬಂದು ಪೊಣರ್ವಂತೆ ನಿಂದೊರ್ವರೊರ್ವರೆವೆಯಿಕ್ಕದೆ ನೋಡುವಲ್ಲಿ (ಆದಿಪು. ೦೯-೦೦೯ ವ); ಶರನಿಧಿಯೊಡನೊರ್ವಗೆ ಮಚ್ಚರಿಸಿ ಕೊಳಂ ಪೊಣರ್ವ ತೆಱದಿನಂಗಜಮದಸಂಹರನೊಳ್ ತನ್ನಳವಱಿಯದೆ ಗುರುಲಘುವೆಂಗಱಿಯದುಕ್ಕಿ ನೆಱೆ ಬಲಿ ನುಡಿದಂ (ರವಿಣಿಸು. ೯-೬೯); ಭರದಿಂದಿಭದೊಳಿಭಂ ಹರಿ ಹರಿಯೊಳ್ ತೇರ್ ತೇರೊಳಾಳೊಳಾಳ್ ಪೊಣರ್ದುದು (ಚಂದ್ರಪು. ೯-೯೬). ೭. ಸ್ಪರ್ಧಿಸು ; ಪೈಪೋಟಿ ನಡೆಸು : ಕೆಲರಂ ಬೀಸಿಯುಮೊತ್ತಿಯುಂ . . . ಭುಜಾದಂಡದಿಂ ಕೆಲರಂ ಕುತ್ತಿಯುಮುತ್ತಿಯುಂ ಪೊಣರಿಯುಂ ಪೊಯ್ದುಂ ಧನುರ್ದಂಡದಿಂ ಕಲಿ ಕಟ್ಟಾನೆ ಕಡಂಗಿ ಕೊಲ್ವ ತೆಱದಿಂ ಕೊಂದು ಮರುನ್ನಂದನಂ (ಗದಾಯು. ೩-೦೨); ನೀಮುತ್ತಮೆಯೊಳ್ ಕರಂ ಪೊಣರೆ ಸೋಲ್ವುದು ತಪ್ಪದೆನಲ್ಕೆ ಕೇಳ್ದು ಕಾಡುತ್ತಿರದಾಡಿಮಂದೆನೆ ಮನೋಮುದದಿಂ ಪೊಣ ರ್ದಾಡುತಿರ್ಪುದುಂ (ಸೂಪು. ೯-೩೩). **ಪೊಣರು$_1$** : ೬. ಬಾಣಾಂಬುಧಿಯ ತೆರೆಯೊಳದ್ದಿ ಪೊಣಕುವರೊಮ್ಮೆ ಮೂರ್ಛೆಯಿಂ ಮೈಮಱಿದು ಬಿದ್ದು [illegible] ಕಾದುವರೊಮ್ಮೆ ಕೃಷ್ಣ ಪಾರ್ಥರ ತನಯರಾಹವದೊಳು (ಕೃಬಿಶಾ. ೨೨-೨೯); ಮುನಿಪತಿಯೆನ್ನೊಡನೀ ಮೇದಿನಿಯೊಳ್ ಪೊಣರಲ್ಸ ಮರ್ಥರಾರೊಳರುಸಿರ್ (ಬಿಸ್ತುಪು. ೩-೬.೮). Δ **ಪೊಣಱ್** : ೬. ಎರೆವ ಮನುಜಂಗೆ ಸುರಭೂಮಿರುಹಂ ಶರಣೆಂದವಂಗೆ ಕುಳಿಶಾಗಾರಂ ಪರವನಿತೆಗನಿಲತನೆಯಂ ಧುರದೊಳು ಪೊಣರ್ದಂಗೆ ಮೃತ್ಯು ವಿನೆಯಾದಿತ್ಯಂ (ಎಕ. II, ೦೯೩-೭; 1131). **ಹೊಣರು** : ೬. ಸಿಂಹಿಕೆ ಹನುಮರಿರ್ವರುಂ, ತಾವೊರ್ವರೊರ್ವರಂ ಸೆಳೆದು, ಹೊಣರಿದ ರೊರ್ವರೊರ್ವರಂ ಸೋಲಿಸುವ ಛಲದ ವೀರ್ಯದ ಗರ್ವದಿಂ (ತ್ರೀಣಾಪೂ. ೯೦೩-೨೯೨); ಅರೆಜಾವದಷ್ಟು ಸಮಯ ಆತನೊಡನೆ ಹೊಣರಿದರೂ ಈ ಅಪರಿಚಿತಮಲ್ಲನನ್ನು ಸೋಲಿಸಿ ಕೆಡಹಲಾಗಲಿಲ್ಲ (ಹುಲಿಹಾ. ೨೯೩); ಅವರು ಧೈರ್ಯದಿಂದ ಹೊಣರಿದರೂ ಹಗೆಗಳನ್ನು ಸೋಲಿಸಿ ಹಿಂದಟ್ಟಲು ಅಸಮರ್ಥರಾದರು (ಹಾಕುತ್ತ. ೩೩).

[ದೇ. ೩ ತಮಿ. ಪುಣರ್; ಮಲ. ಪುಣರು; ತೆಲು. ಪೊನರು]

**ಪೊಣರ್$_2$, ಪೊಣರು$_2$** (ನಾ). ೧. ಸೇರಿಸುವಿಕೆ; ಕೂಡಿಸುವಿಕೆ; ಜೊತೆ ಗೂಳಿಸುವಿಕೆ : (೬). ೨. ಎರಡರ ಜೊತೆ ; ಜೋಡಿ; ಯುಗ್ಮ : "ಯುಗಳಂ ಯುಗ್ಮಂ ದ್ವಂದ್ವಂ . . . ದ್ವಯಂ ದ್ವಿತಯಂ ಸಂಜ್ಞೆಗಳಿವೆ ಪೊಣರೊಳ್" (ಪಸ್ತುಕೋ. ೧೦೯-೩೩); ತಪನಕರಂ ತನುಗಳನುರ್ಚಿ ಪೋಗೆ ಸಾರ್ವತ್ತು ಜಕ್ಕವಕ್ಕಿಯ ಪೊಣರುಂ ಗ್ಲಪಿತಮನವಾಗಳುದ್ದಂಡಪುಂಡರೀ ಕೋಜ್ಜ್ವಲಾತಪತ್ರದ ನೆಟಲಂ (ಆದಿಪು. ೦೦-೩೦); ಗುಣವತಿ ರಾಘವನಂ ಲಕ್ಷ್ಮಣನಂ ನೆನೆನೆನೆದು ಶೋಕಪಾವಕನೆರ್ದೆಯೊಳ್ ಮಣೆಯದೆ ದಳ್ಳಿಸೆ ಕಣ್ಗಳ ಪೊಣರಿಂ ಕಣ್ಬನಿಗಳುಣ್ಕೆ ದೆಸೆಗೆಟ್ಟಿರ್ದಳ್ (ಸಂಪಾಪೂ. ೦೩-೬೬); ಪೊಣರದೆ ಮದನನ ದೊಣೆಗಳ ಪೊಣರದೆನಲ್ ನಂಬಿ ಕೇಳ್ವುದಾ ಯುವತಿ ಶಿಖಾಮಣಿಯ ಕಿಱುದೊಡೆಯನೀಕ್ಷಿಸಿ ಮಣಿಯದರಾರ್ ಮದನನುಸುವ ಮೋಹನಶರದಿಂ (ಜಗಖ. ೦೦-೨೩). ೩. ಕಾಂತಿ; ಹೊಳಪು; ಶೋಭೆ: "ತೊಳಗು, ಬೆಳಗು . . . ಪೊಣರ್, ಮಿಂಚು, ಡಾಳಂ, ಪೊಗರ್, ತೊಳಪಂ, ಮಸೆ—ಈ ೧೪ ಕಾಂತಿ" (ಕಕಸಾ. ೩೩-೨೦೨). ೪. ಯುದ್ಧ; ಕಾಳಗ; ಕದನ: "ಮೊನೆ ಪೊಣರ್ ಕೊಳುಗುಳಂ ಬಂಡಣಂ ಜುದ್ಧ ಮೆಂದೆನೆ ಕಾಳಗಕ್ಕೆ ನಾಮಂ" (ಕಬ್ಬಿಗ. ೯೦). **ಪೊಣರು$_2$** : ೩. "ತೊಳಗನೆ ಮಿನುಗೆನೆ . . . ಕಳೆ ಪೊಳೆವು ಪೊಣರು ಮಸೆಯೆನೆ ತಳಪಮೆನಲ್ ಕವಿಗಳಿಂದೆ ಕಾಂತಿಯೆನಿಪ್ಪಂ" (ಕರಿಕಂ. ೧೦೦). ೪. "ಕೊಳುಗುಳ ಬಂಡಣಂ ಜುದ್ಧ ಮೊನೆ ಪೊಣರು ಕಾಳಗಕ್ಕಳವಟ್ಟ ನಾಮ" (ಕಬ್ಬಿಸಂ. ೯೦).

[< ಪೊಣರ್$_1$. / ತಮಿ. ಮಲ. ಪುಣರ್]

**ಪೊಣರಱ** (ಕ್ರಿ). ಜೊತೆಗೆಡು ; ಅಗಲು ; ಬೇರೆಬೇರೆಯಾಗು : ಇನರಥಹತಿಯಿಂ ನೆಗೆದ ಗಗನಧಾತುಸ್ಥಳೀರಜಂಗಳಿಂ ರೂಪಱದತ್ತೆನೆ ಸಂಜೆ ಗೆಂಪನುಱದಿರೆ ಕನಲ್ದು ಪೊಣರಱದುವೊಡನೆ ಕೋಕಯುಗಂಗಳ್ (ಜಗಖ. ೦೬-೯೬); ಇನಿಯಳ್ ಪೊಣರಱದೊಡದಂ ನೆನೆನೆನೆದುಂ ಸುಯ್ದು ಸುಯ್ದುಟಲ್ದಳ್ತಳ್ತಬ್ಬಿನಿಯಬ್ಬಿನಿದಪ್ಪದೆ ನೋಡಿ ನೋಡಿ ಜಾನಿಸಿದುದ ತುಲಶೋಕಂ ಕೋಕಂ (ಜಗಖ. ೦೬-೯೭). [ಪೊಣರ್$_2$ + ಅಱ$_1$]

**ಪೊಣರಿಚು** 'ಪೊಣರ್ಚು' ನೋ.

**ಪೊಣರಿಸು** (ಕ್ರಿ). ಕಾದಿಸು ; ಯುದ್ಧಮಾಡಿಸು ; ಹೋರಾಡಲು ಪ್ರಚೋದಿಸು : ಗಣನೆಗೊಳಲ್ಕದೇಂ ನೆರಪಿದಂ ಮದನಂ ಕದನೋತ್ಸವಕ್ಕೆ ಮೇಣ್ ಪೊಣರಿಸಲೆಂದು ಪೋರಿಸುವನಲ್ಲದೊಡೇಂ ಪೆಱಸಾರದಂತೆವೋಲ್ ಬೆಣೆಯನಮರ್ಚಿ ಪೂಣ್ದಪನಿದೆಂಬಿನಮೋಂ ಒಗೆಪಂದುದಿಂದು ಸಂದಣಸುತೆ ಗುಂಬದಂಬಟೆವುಯಿಲ್ವಱಿಯಿಂ ಗಣಿಕಾಕದಂಬಕಂ (ಜಕಖ. ೬-೧೩೭).

[ಪೊಣರ್$_1$ +— ಇಸು$_3$]

**ಪೊಣರು$_1$** 'ಪೊಣರ್$_1$' ನೋ.

**ಪೊಣರು$_2$** 'ಪೊಣರ್$_2$' ನೋ.

**ಪೊಣರ್ಕೆ, ಪೊಣಕೆ, ಹೊಣಕೆ, ಹೊಣಿಕೆ, ಹೊಳಕೆ₁** (ನಾ). ೧. ಜೊತೆ ; ಜೋಡಿ ; ಯುಗಳ : ಗುಣಾಗ್ರಣಿ ದಿನೇಶವಾಯುಯುಗಳಂ ಪೊಣರ್ಕೆಯೊಳ್ ಕೀಱ ಬಂದೊಡೆ . . . ಕೀಳ್ಗರೋದ್ಧತರತಂ (ಛಂದೋಂಬು. ೨-೦೩೮). ೨. ಯುದ್ಧ ; ಕಾಳಗ ; ಹೋರಾಟ : ಇರೆ ಭಿದ್ರಿಸಿದೊಂ ಜವನನುವರಕ್ಕೆವಿಧಿರ್ಗಂ ಪೊಣರ್ಕೆಗಂ ಸುಗಿದವೊಲಾ ಹರಿಯಂ ಮೂದಲಿಸಿ ಚಲಂಬೆರಸಿ ನಿರಾಕರಿಸಿ ಹರಿಯನಿಱುವುದು ಮೊಗ್ಗೇ (ಶಾಂತಿಪು. ೪-೦೯೭); ಬಲವಿರೋಧಿ ವಜ್ರಂಗೊಳೆ ದಾನವರಂಪು ಚಕ್ರಂಗೊಳೆ ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ (ಕಬ್ಬಿಗ. ೦೩೭ ಪ್ರಯೋ); ಕ್ಷತ್ರಿಯರ್ಗೆ ದಿಮ್ಮಿದರೊಳ್ ಪೊಣರ್ಕೆ ಸಲ್ಲದೆಂದಮಂ (ಅದ್ಯ.ಕ. ೩೨-೨೨). ೩. ಸ್ಪರ್ಧೆ ; ಪೈಪೋಟಿ ; ಮೇಲಾಟ : ನೆತ್ತವನಾಡಲೀ ಘನಸುವೃತ್ತಪಯೋಧರೆಯೊಳ್ ಪೊಣರ್ಕೆ ಕೇಳತ್ತಳಗಂ ದಿಟಂ (ಶಬ್ದಮ. ೪-೫೩). **ಪೊಣಕೆ :** ೨. ತಂದಪೆ ನಾ ಸೇನೆಗಳಂ ಚಾದದ ಕಾಲ್ಬಂದಿ ಕುದುರೆ ತೇರಾನೆಗಳಂ ಪೊಣಕೆಯ ಬಂಟರಂ (ಹಾಶಾಸ್ತ್ರ. ೨-೦೪-೨೩). **ಹೊಣಕೆ :** ೧. ಭಟರು . . . ರಣ ಭಯಂಕರವಾಗಲು ಹೊಣಕೆಗಳಿಂದಲಿ ಹೊಕ್ಕಿಱಿದಾಡ್ದರು (ತ್ರಿಶುಮೋ. ೬-೪೩). ೨. ಸೆಣಸು ಗಡ ನಮ್ಮೊಡನೆ ಸಲೆ ಟೆಂಕಣಿಸುವವರು ಗಡ ಬವರಕೋಸುಗ ಹೊಣಕೆ ಗಡ ನಮ್ಮೊಡನೆ (ಕುಮಾರವ್ಯಾ. ೦೫-೬೦) : ಬರಸಿಡಿಲುಗಳ ಸಮೂಹವಬ್ಬರಿಸುತ ಗಿರಿಶಿಖರಗಳ ಹೊಯ್ವಂತೆ ಬಿರುದಿನ ಹೊಣಕೆಯ ಹೊಂತಕಾಱಗಳಾಗ ತಱುಬಿದರರಿವಾಹಿನಿಯ (ಕಂಠೀ. ೦೫-೨೫). ೩. ಬಾಲಕರು . . . ಚೆಂಡಿನ ಹೊಣಕೆ ಚಿಣಿಕೋಲಾಳು ಗೊತ್ತಿನ ದಾಡೆಯಾನೆ ನಾನಾವಿನೋದದಲಿ . . . ಆಡಿದರು (ಕುಮಾ.ಕ. ೬-೦); ತವತವಾಗೆ ಹೊಣಕೆಯಲಿ ತೋರಿದರಮಿತಬಲಸನ್ನಾಹಗಳ ಸಂಭ್ರಮದೊಳೆಪ್ಪತ್ತೇಳು ಕೋಟಿ ಕಿರೀಟವರ್ಧನರು (ಅಹಂಶಾ. ೪-೨-೨೭). ೪. ಹೊಂದಿಕೆ ; ಸೇರಿಕೆ ; ಕೂಡಿಕೆ : ಈ ಸಿದ್ಧಾಂತಕ್ಕೆ ಎಣಿಕೆಯ ಕಾಣಿಕೆ ಮಾತ್ರವೇ ಕಾರಣವೋ ಆಧಾರದ ಹೊಣಕೆಯೂ ಇದೆಯೋ ಎಂದು ಕೇಳಬಹುದು (ಬಾಕೋಶ. ೬೫). ೫. ಕೂಟ; ಸಂಭೋಗ : ಹೊಣಕೆಗೆ ಹೋರಿದಲ್ಲಿ ವಾತೆಯರ ಮನೆಯಾಸೆ ಉಂಟೆ ಘನತರವಪ್ಪ ಪರಮದಾಸೋಹಿ ತಾನಾಗಿ ಅಲ್ಲಿ ಅನುಪರವನಱಸಲುಂಟೆ (ಸಕಪ. I. ೩೩೦-೦೨೦೭). ೬. ಎಣೆ ; ಸಾಟಿ; ಸರಿ : ವರರೂಪಿನೊಳು ರತಿಗೆ ಹೊಣಕೆ ಸೌಭಾಗ್ಯದೊಳು ಸಿರಿಗೆ ಹೊಯಿಕೈ (ಚಕಶ. ೦-೪೪). ೭. ಶೌರ್ಯ ; ಪರಾಕ್ರಮ : ಹೊಣಿಕೆಯುಳ್ಳಭಟರೊತ್ತರಿಸಿದರ್ಕಱಿಸಿದರ್ಕಣೆವಳೆಯ ಸಬಳದಿಂ ಸಿಕ್ಕಿದರ್ ಕುಕ್ಕಿದರ್ಕೆಣಕಿ ಕುಂತದಿ ಕಡಿದರಸಿಗಳಿಂ ಮುಸೆಗಳಿಂದರುಣಜಲ ಧಾರೆವರಿಯೆ (ಕಂಠೀರ. ೦೩-೪೮). ೮. ಪ್ರತಿಜ್ಞೆ; ಶಪಥ : ಭಾಷೆಯತಿಬಳರು ಹೊಣಕೆಯಿಂದಲೇ ಹಿಂದ ಹಾರದಿರಣಕಿಸುವ ಮಾತಿಲ್ಲ ದಿವಿಜರ ಗಣಿಕೆಯರು ಬಯಸುವರು ನೂಕುವದೆಂದು ಸಾರಿದರು (ಕುಮಾ.ಶಿ. ೪-೩೪); ಅಣಕಿಸುವ ಬಾಧಕರ ಬಾಯನೆ ಟೊಣೆದು ಬಸವನ ಭಕ್ತಿಭಾರದ ಹೊಣಕೆಯನೆ ಹುಂಕೊಂಡು ಪೂರೈಸಲಿಕೆ ಬೇಕು (ಪ್ರಭುಲಿಂ. ೨೨-೩೦): ಹೊಣಕೆಗಳ ತಡಹುಗಳ ಕಲಿತನದ ಕಡುಹುಗಳ ರಣದವಕದಿಂ ಕುದಿಯುತಿಹುದು ಹುಸಧ್ವಜನ ಪರಿವಾರವನುದಿನದೊಳು (ಕೈಟಭಾ. ೦೦-೪೨). **ಹೊಣಿಕೆ :** ೧. ಕನಕದ ಗುಂಡು ಪವಳ ಎರಡನೆ ತಂದು ಹೊಣಿಕೆಯಲ್ಲಿ ಇಟ್ಟು ಪೊಣಿಸಲು ಜನರಿಗೆ ಪೊಳೆವದು ಎಂದಿಗಾದರು ಮೋಹನಮಾಲೆಯಲ್ಲದೆ ಪ್ರತಿಮೆಸರೆ (ಬಿಹಾಸು. ೨೮-೩). ೬. ತೆಂಗಿನಕಾಯಿಯ್ಯಾಗ ಗಟ್ಟಿಯು ಬಿಂಗಡಿಸಿ ಹೊಣಿಕೆಯಲಿ ರಾವುತ ಲಂಘಿಸುತ ನೋಡಿದ್ದ ಯಿರಾಟಿಯಲಿರಿದ ತೆರನಂತೆ (ಜ್ಞಾಪಸಿಂ. ೦೮-೮೦). **ಹೊಳಕೆ₁ :** ೨. ಹೊಳಕೆಗೆ ಹೊಸವೀಳೆಯಾವೀಯೆಂಬಗ್ಗಳಿಕೆಯ ಪಂತದ ಪಲವಾತುಗಳಂ ಗಳಪುವ . . . ಭುಜಬಲಶಾಲಿಗಳ್ (ಜಯಕಾ. ೬-೨೭): ಹೊಳಕೆಯ ಹೊಂತಕಾಱಗಳು ಹೋರಾಟದ ಕಲಿಗಳು ಬಿರುದಿನ ಭಟರು . . . ಎಳಸಿದರವನ ಪೌಜಿನೊಳು (ಕುಶಾಕಾಂ. ೦೨-೩೪); ಇಂತಪ್ಪ ಬಿರುದಿನ ಹೊಳಕೆಯು ಭಟಗಳು ಮುಂತಾರ್ಧಟಿಸುತ್ತೈತರಲು (ಕೋಟಿಕ. ೩೩-೩೫). ೩. ಬಾಣದ ಹೊಳಕೆಗಳ ಹೋರಾಟ ಬಿಡುವಿಲ್ಲಾಧಟುಭಟರ (ಶಿಮ್ಮ.ಶ. ೬-೬೩); ತಂದೆ ಮಕ್ಕಳು ಬೆರಸಿ ಹೊಯ್ದಾಡಿದರು ಮೊದಲಿಸುತ್ತ ಹೊಳಕೆಯಲಿ (ಅಶ್ವಶಾ. ೨೦-೦೪); ಹೊಳಕೆಯಿಂ ವೀರವಾದಗಳೆಸೆವ ಚರರ ಪದಗತಿಗಳಾ ದುಂದುಭೀಭೇಂಕಾರಧರಕಳಕಿ ನವಿಸಲ್ಕೆ ಕಜ ರಾಜಮಾಳಿಗಳ ತೆರದೆ ಖಣಿಖಟಿಲೆಂಬ ನಾದ ಮಹಾಧರವದಿ ತುಂಬಿ ತೆಕ್ಕೆಸೆ ರಭಸದಿ (ಚಂಕಾಕಾ. ೦-೬-೦೩). ೯. ಗುಂಪು ; ಸಮೂಹ : ತೀವಿದ ಕಾರಿರುಳೆರಕವೋ ಮೇಣ್ ಖಳಜನದ ಹೃದಯಾಂಧಕಾರದ ಹೊಳಕೆಯೋ ತಾವೆನುತಿರಲು ನಡೆತಂದನಾ ದನುಜ (ಕುಮಾ.ಕ. ೫-೨೦): ಅತ್ತ ದಿಷ್ಣಲಭೂಪ . . . ಹೊಳಕೆಯ ರಾವುತರು ಎಳೆವ ದಾವುಲಿ ದೊಂಡೆ ಕಾಳಕನ ಕುಲದಂತೆಯೊಪ್ಪಿಹನು (ಕೋಟಿಕ. ೩-೭೪).

**ಹೊಣಿಕೆ ಮಾಡು** = ಸಂಗಡಿಸು ; ಅಣಿಗೊಳಿಸು : ಕಣೆಯ ತಿದ್ದುತ ಗಱಿಯ ಕಟ್ಟುತ . . . ಪಡೆಯನಳವಡಿಪ ರಣಕೆ ಸುಭಟರ ಹೊಣಿಕೆ ಮಾಡುವ ತ್ರಿಣಯಪುರವನು ನೋಡಿ ಕಾಲವನೆಣಿಪ ತೆಱದಲಿ ನೋಡುತಿಹ ರಣಧೀರ ಸೌಮಿತ್ರಿ (ಲೌಕಿಶಾ. ೦೭-೨೦). [ಪೊಣರ್₁+—ಕೆ]

**ಪೊಣರ್ಗಳಸ** (ನಾ). ಜೊತೆಯಾಗಿರುವ ಕಲಶ ; ಜೋಡುಕಲಶ : ಪೊಱವಾಱ ಮೆಟ್ಟುವಂತುಬ್ಬರಿಪ ಮುಗುಳ ಗೊಂಚಲ್ಗಳಂ ದೆಟ್ಟಿ ಪೂವಂ ತೀಱುವುದ್ಯಚ್ಚಂದ್ರಬಿಂಬಾನನೆಯು ಘನಕುಚದ್ವಂದ್ವಮಂ ಪೊತ್ತು ಜೆಲ್ಮಿಂದೆಱಗುತ್ತಿರ್ಪುಜ್ಜಲನ್ಮಾಧವಿಮಧುನೃಪನೇಟ್ಟಂದೊಡಾನಂದದಿಂದಂ ಮಿಱುಗುತ್ತಿರ್ಪನ್ನೆಗಂ ಕನ್ನಡಿ ಪೊಣರ್ಗಳಸಂಬೊತ್ತುಪೋಲ್ ಪೆತ್ತುದಿಂತು (ರಾಜಶೇ. ೦೩-೬೨). [ಪೊಣರ್₂ + ಕಳಸ₁ ( < ಕಲಶ)]

**ಪೊಣರ್ಚಿಸು** (ಕ್ರಿ). ಕಾದಾಡುವಂತೆ ಮಾಡು ; ಹೋರಾಡಿಸು : ಪೊಣರ್ಚಿಸಿದಪನಾನೆಯಂ ಮಾವಟಿಗನಿನರಸಂ (ಕಮ್ಮಾಕು. ೫೪೦ ಪ್ರಯೋ). [ಪೊಣರ್ಚು + — ಇಸು₁]

**ಪೊಣರ್ಚು, ಪೊಣರಿಚು** (ಕ್ರಿ). ೧. ಜೊತೆಮಾಡು ; ಸೇರಿಸು; ಹೊಂದಿಸು : "ಪೊಣರ್ಚು—ಸಂಯೋಗೇ (ಬೆರಸು)" (ಶಮದ); ಸುರಸುದತೀಕದಂಬಕದ ಗಾಂದರದಿಂ ದನಿಯೊಳ್ ದರಸ್ಮಿತಾಂಬುರುಹಮನೊತ್ತಿ ಚುಂಬಿಸುವ ತುಂಬಿಯ ಗಾವರಮಂ ಪೊಣರ್ಚೆ (ಅಕಂಪು. ೪-೦೨೭). ೨. ಉಂಟಾಗು ; ಒದಗು ; ಸಂಭವಿಸು : ನೀರದಪಿಟಂಗೆ ವಿದ್ಯುನ್ನಾರಿಯ ವಿರಹಂ ಪೊಣರ್ಚೆ ಬಡವಾಗಿ ಕರಂ ದೂಱಿಸಿ ಬೆಳರ್ತ ತೆಱದಿಂ ಶಾರದಜಳಧರದ ತುಱುಗಲೊಗೆದುವು ನಭದೊಳ್ (ಲೀಲಾಶ. ೫-೨೦). ೩. ಮಾಡು ; ಉಂಟುಮಾಡು ; ಒದಗಿಸು : ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಮೋದಿ ನಲ್ಮೆಯಂ . . . ಉಕ್ಕೆವಕುಕ್ಕೆವಗೆಯ್ತುಮಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಶಬ್ದಸಾ. ೪೮೫ ಪ್ರಯೋ) ; ಬೆಚ್ಚದೆ ಬೆದಱದೆ ಮೂಲೆಯಂ ಸಾರ್ಚಿದ ಮಱುಮರಸು ಸುಟ್ಟಿವ ಮಾನಿಸರುಲಿಪಂ ಮುಚ್ಚಿದ ಪುಲ್ಲೆಗಳಲ್ಲಿ ಪೊಣರ್ಚುತ್ತಿರ್ದಪುವು ಶಾಂತರಸಪರಿಣತೆಯಂ (ಸೂಕ್ತಿಸು. ೩-೦೪೦). ೪. ನೆರವೇರಿಸು ; ನಡೆಸು ; ಆಚರಿಸು: ಜನಪದಪದ್ಮದೊಳ್ ಮಣಿಕಿರೀಟತಟಂ . . . ಪರಿಶುದ್ಧಿಯೊಳ್ ತ್ರಿಕರಣಂ ಸಮಸಂದಿರೆ ಮುಖ್ಯಸೌಖ್ಯಭಾಜನನಮರಾ ತ್ರಿಲೋಕತಿಲಕಂಗೆ ಮಹಾಮಹಮಂ ಪೊಣರ್ಚಿದಂ (ಶಾಂತಿಪು. ೬-೩೦). ೫. ಕೈಕೊಳ್ಳು ; ಪ್ರಯೋಗಿಸು : ಇಂತೀ ಪೇಳ್ದ ಪದನಾಱುಂ ಸಂಧಿ ಮಾಡುಪ್ಪತಿನೀತಿಯಲ್ಲಿರ್ಕುಂ ಸೋಮದೇವನೀತಿಯಲ್ಲಿರ್ಕುಂ ಇವಱಲ್ಲಿ ನಾವಾವ ಸಂಧಿಯಂ ಪೊಣರ್ಚುವೊಡಮರಿಮರ್ದನನೊಡಂಬಡುವನಲ್ಲ (ಚಂಕಶ. ೨೨೦-೫). ೬. (ಯುದ್ಧ, ಜಗಳ ಮೊದಲಾದುವುಗಳನ್ನು) ಹೂಡು; ಒಡ್ಡು ; ಏರ್ಪಡಿಸು : ಒರ್ವ ಗಂಧರ್ವನೊಳೆ ಚಿತ್ರಾಂಗದಂ ದ್ವಂದ್ವಯುದ್ಧಮಂ ಪೊಣರ್ಚೆ ಕುರುಕ್ಷೇತ್ರಮಂ ಕಳಂದೇಟ್ಟು ಕಾದಿ ಸತ್ತೊಡೆ (ಚಂಶಭಾ. ೦-೬೩೫);

ಅಂತಚಿಂತ್ಯಯುದ್ಧಂಗೆಯ್ದು ಲಕ್ಷ್ಮಣನಂ ಗೆಲಲ್ ನೆಱೆಯದೆ ವಿದ್ಯಾಯುದ್ಧಮಂ ಪೊಣರ್ಚೆ ದಿವ್ಯಾಸ್ತ್ರಮನಭಿಮಂತ್ರಿಸಿಕೊಂಡಿಸುವುದುಮಂ (ಶಂರಾಪೂ. ೧೪-೧೩೮ ವ) ; ಅವನ ಸತಿ ಪುರುಡಿ ನೆವದಿಂ ಬವರಮನೆ ಪೊಣರ್ಚೆ ಮಾರಿದತ್ತಾಖ್ಯೆ ಮಹಾಹವಶೀಲೆ ತನ್ನ ಮನೆಯಿಂದವೆ ಪೊಱ ಮಡಿಸಿದ[ಳು ಕ]ನಲ್ಲದು ಪದ್ಮಾವತಿಯುಂ (ಭುಜ್ಯಾಸ್ರ. ೨-೯೩). ೭. ಯುದ್ಧಮಾಡು ; ಕಾದು ; ಸೆಣಸು : ತಲೆಗಾಯಿಸಿ ಭಟನಂ ಪೊಣರ್ಚಿ ಪೊಡೆದಿಕ್ಕೀ ದ್ರೋಹನಂ (ಅವಂಕ. ೧೦-೩೬) ; ಹರಿಹರಪದ್ಮಜಾದಿಗಳ ನೋವದೆ ಕಂತು ಲತಾಂತಬಾಣಮೊಂದೆರಡಱನೆಚ್ಚು ಗೆಲ್ದ ಜಯದಗ್ಗದ ಸುಗ್ಗಿಯ ಮೊಟ್ಟಿದೆಂದು ಬಂದಿರದೆ ಪೊಣರ್ಚೆ ಸೋಲ್ತು (ಕ್ಷತ್ರಕೃ. ೦-೦೨); ಕಲಿ ರಾಜಹಂಸನಶ್ವವನೊಸೆದೇಱಿಯೆಕ್ಕತುಳದಿಂ ಪೊಱಮಟ್ಟರಿಯೊಳ್ ಪೊಣರ್ಚಿದಂ (ದಶಕು. ೦-೭೩). ೮. ಪೈಪೋಟಿ ನಡೆಸಂ ; ಸ್ಪರ್ಧಿಸು : ತನುವಿದುವೊಂದನುಳ್ಳ ನಭದೊಳ್ ಶಿಶುಕೇಸರಿಯೊಂದನುಳ್ಳ ಕಾನನದೊಳದೊಂದು ಕುಟ್ಮಲವನುಳ್ಳ ಸರೋವರದೊಳ್ ಪೊಣರ್ಚೆ ನೆಟ್ಟನೆ ದೊರೆಯಾವುದೀ ಬಾಲವಾಯವಿಸಿ ಶಿಶುಪೂರ್ವನೆನಿಂಬಿನಂ ಜಗಜ್ಜನಮತಿಮುಗ್ಧಬಾಲನರಪಾಲಕಮಾದುದು ಚಕ್ರಭೃತ್ಕುಲಂ (ಅಂಕು. ೪-೬೨); ಗಣದದೊಳೇಂ ಕರುಮಾಡಂ ಪೊಣರ್ಚುವೊಡೆ ನೆಗಟ್ದ ದಿವಿಜರಾಜವಿಮಾನಕ್ಕಣೆ ಪೋಲ್ವೆ ಸಮಂ ಸದೃಶಂ ತೊಣೆ ತೋಡನುಸಾರಿ ಸಾಟಿ ಪಾಸಟಿಯೆನಿಕುಂ (ಸುಕುಮಾ. ೦೦-೫೦). **ಪೊಣರಿಚು :** ೭. ಪೊಣರಿಚುವನಾವ ದಕ್ಷಂ ನೋಳ್ಪೆ ವಿದುವೆ ಸನ್ನಾಹಭೇರಿಯ ಪೊಡೆಯಿನ್ನೆ (ಶಕುಕೃ. ೪-೯-೦೩).

**ಪೊಣರ್ಚುವ ಬಲೆ**=ಒಂದಕ್ಕೊಂದು ಕೂಡಿಸಬಹುದಾದ ಒಂದು ಬಗೆಯ ಬಲೆ (?) : ತಡಿಕೆವಲೆ ಕಣ್ಣವಲೆ ನಿಟ್ಟಡಕಿಲ್ವಲೆ ಗೂಂಟವಲೆ ಪೊಣರ್ಚುವ ಬಲೆ ಮುಂ ಬಿಡುವಲೆ ನಡುವಲೆ ತಡೆವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (೧೦೪. ೦-೬೦). [ಪೊಣರ್$_1$ + – ಚು$_1$]

**ಪೊಣರ್ಪುಳಿ** (ನಾ). ಒಂದು ಸ್ಥಳದ ಹೆಸರು : ತಸ್ಯ ಸೀಮಾನ್ತರಾಣಿ ಬಡಗಣದೆರೆ ಪೊಣರ್ಪುಳಿ ಬಡಗಣ ಪಡುವಣ ಕೊನೆದು ಪಾಣತ್ತಿಗಲ್ಲು (ಪ್ರ೬೦. ೦೬೨೭. ೦೨೨-೫೯; 808). [?]

**ಪೊಣರ್ವಕ್ಕಿ** (ನಾ). (ಹಗಲಿನಲ್ಲಿ) ಜೊತೆಯಾಗಿರುವ ಹಕ್ಕಿ; ಚಕ್ರವಾಕ ಪಕ್ಷಿ; ಜಕ್ಕವಕ್ಕಿ : "ಕೋಕಂ ರಥಾಂಗಂ ಪೊಣರ್ವಕ್ಕಿ ಚಕ್ರಂ" (ವಸ್ತುಕೋ. ೪೨-೦೭); ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಂಬುಂದು ಬಲಾಕೆ ಲಾವುಗೆ ಸೇನಂ (ಕಾವ್ಯಸಾ. ೦೦೪೪ ಶೂದ್ರಕ) ; ಮದನನ ಪೆರ್ಗೆಚ್ಚಿಂ ಮಗ್ಗಿದ ಪೊಣರ್ವಕ್ಕಿಗಳ ಹೃದಯಸಂಕುಳದಿಂದುಣ್ಮಿದ ಕರ್ಬೊಗೆಯೆಂಬಿನೆಗಂ ಪುದಿದೆತ್ತಂ ಮರ್ಬಿನಬ್ಬುರ್ ಪರ್ಬಿತ್ತಾಗಳ್ (ಕಾದಂಬ. ೦೪೦); ನಲ್ಮೆಯ ಪೊಣರ್ವಕ್ಕಿಯ ನುಡಿವಕ್ಕಿಯ ಬೆಳುದಿಂಗಳ ಹಕ್ಕಿಯ ನಿಡುಗಣ್ಣಱವಕ್ಕಿಯ ಬಳಗಂ ಬಳಸಿದುದಾ ನೃಪಸತಿಯಾ (ಜಯುಕಾ. ೨-೦೮). [ಪೊಣರ್$_1$ + ಪಕ್ಕಿ]

**ಪೊಣರ್ವೆಟ್ಟು** (ನಾ). ಜೊತೆಯಾಗಿರುವ ಬೆಟ್ಟ : ಜೋಡಿಬೆಟ್ಟ : ಮೊಲೆ ಪೊಣರ್ವೆಟ್ಟು... ಕೋಮಳತನುಯಷ್ಟಿ ಕಲ್ಪಲತಿಕಾಂಕುರಮೊಳ್ಮುಡಿ ಸೋಗೆ ಮನ್ಮಥಾನಳಶಿಖಿ ಬೇಗೆಯಾಗೆ ಮದನಾಟವಿಯುಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೦೨ ಶೂದ್ರಕ).
[ಪೊಣರ್$_2$ + ಬೆಟ್ಟು$_2$ (< ಬೆಟ್ಟ)]

Δ**ಪೊಣಱ್** 'ಪೊಣರ್$_1$' ನೋ.

**ಪೊಣೆ$_1$** (ಕ್ರಿ). ಹೊಡೆ; ಪೆಟ್ಟುಕೊಡು ; ಏಟುಕೊಡು : ಪೊಣೆದೋರೋರ್ವರನೆಚ್ಚುಂಬುಗಳು ಮಧ್ಯರಣರಂಗದೊಳು ಕತ್ತರಿಸುತ ಬಣಬೆಯ ನೊಡ್ಡಿದಂತಾಗಲು ೯ಟಿಕೇತುವಣುಗನ ಕೈಯಂಬು ತೀರೆ (ಪೇಊಸಂ. ೨೮-೬೭); ಬಾಯುಂ ಪೊಣೆದು ವಿರಿಂಚಿಯ ಕಾಯುಜಪಿತನೆರ್ದೆಯನೊದೆದು ಸುರಪತಿಯೂಗಕ್ಕಾಯುತಭಗದಂಕಿತವಂ ಮಾಯದೊಳಾಗಿಸಿ ಮಹೇಶನಂಗದೊಳೆಸೆದೆಂ (ಹಮ್ಮೀರ. ೬-೨೮); ವರ್ಾಣೆಗಳುಂ ಪಣೆಯೊಳಣೆವುತುಂ ಪೊಣೆವುತುಂ . . . ತೇರ್ಕುದುರೆಗಳ ಭಟರನಟ್ಟುತುಂ ಮೆಟ್ಟುತುಂ ವೃಷಭಂ ಪ್ರಹಾರಿಸಿದನು (ಚಿಂಕು. ೪೪-೦೮). 'ಪೊಣೆಗುಂಡು' ಪರಾ.

**ಪೊಣೆ$_2$**, ಹೊಣೆ (ನಾ). ೧. ಜವಾಬ್ದಾರಿ; ಉತ್ತರದಾಯಿತ್ವ : 'ಪೊಣೆಕಾಱ' ಪರಾ. ೨. ಹೊಣೆಗಾರಿಕೆಯನ್ನು ವಹಿಸಿಕೊಂಡ ವ್ಯಕ್ತಿ; ಜವಾಬ್ದಾರ ; ಹೊಣೆಗಾರ : ನರನ ಜೀವನಕ್ಕೆ ಪೊಣೆ ದೇವಪುರಲಕ್ಷ್ಮೀಶನು (ಕೈಪಿಡಿ. ೨೩-೬೪). ೩. ಕರಾರುಪತ್ರ ; "ಜಾಮೀನು" (ಗಂಗಾಪು. ೨೦೭). ೪. ಕರಾರುಪತ್ರವನ್ನು ಬರೆದುಕೊಟ್ಟವನು; ಜಾಮೀನುದಾರ : (೬). **ಹೊಣೆ :** ೧. ಹಣೆಯ ಹೊಣೆಯ ಕೋಟಿಯ ಉದರದ ಹೊರೆವ ನಿಮ್ಮ ಮಱೆಯಲಡಗಿಪ್ಪ ಹಡಪಿಗ ನಾನಯ್ಯ (ಕೂಸ್ವಸಂ. ೯೩-೦೦); ಧರ್ಮಜ ಹೊಗಳು ಹೊಣೆಯನು ವಚನಿಸೊಡ್ಡನಿದು ವಿನೋದವಲೆ (ಕುಮ್ಯಾಸ. ೦೭-೯೭); ಅವನ ಹೊಣೆ ನಿಮ್ಮ ಹೊಣೆಯೇ ಆಗಿದೆ (ರಂಗರೋ. ೧೦); ದೋಣಿಗೆ ಹೋದರೂ ಹೊಣೆ ತಪ್ಪದು (ಗಾದೆ). ೨. ಶಿವನೇ ಶಂಕರಾ ಸ್ಥಾಣುವೇ ಜಲಂಧರಾಸುರವಿಜಯ ರಕ್ಷಿಸು ರಕ್ಷಿಸು ನಮಃ ಶಿವಾಯ ನೀನೆ ತೊಣೆ ನೀನೆ ಹೊಣೆ (ವಾ೧೬. ದೇ. ೨೭೭-೯); ಬಾಳಿಸುವಡಕೆ ಹೊಣೆ ನಾನು ಭಕ್ತನಾಗು ಸಮಸ್ತವಸ್ತುವ ಯುಕ್ತರಾಜ್ಯವನೀವೆನು (ಬಸಪು. ೨೭-೫೪); ನಿಮ್ಮಾಯಿಯಷಕೆ ಹೊಣೆ ತಾನು ಹೇಳಿತ ಮಾಡಿ ಬೇಗದಲಿ (ಕುಮ್ಯಾದ್ರಾ. ೦೯-೫೭). ೩. ರಮಾದೇವಿಯವರನ್ನು ಹೊಣೆಯ ಮೇಲೆ ಬಿಡುಗಡೆ ಮಾಡಿಕೊಂಡು, ಗೋವರ್ಧನರಾಯನು ಅವರನ್ನು ತಮ್ಮ ಮನೆಗೆ ಕರೆದೊಯ್ದನು (ಸ್ವಾಂಬಿಸಿ. ೨೨೦). ೪. ಸರ್ವವೂ ಸಾಧ್ಯವಾದಡೆ ತಾನಿಲ್ಲ ಬಯಲಪ್ಪುದಕ್ಕೆ ಇದೇ ಚಿಹ್ನ ಹೀಗೆಂದು ನಂಬುವುದು ನಂಬದಿದ್ದರೆ ಚೆನ್ನಬಸವಣ್ಣನ ಹೊಣೆಯ ಕೊಡುವ ಕಾಣಾ (ಅವಶಂ. ೦೭೮-೭೯೯); ಮಾಜಿ ಹೋಗರು ನಾವು ಹೊಣೆಯವರ್ಗಂದಾದಿರಾಜ ಪೊಕ್ಕಣಿಸಿ ಕೈಮುಗಿದ (ಶರತ. ೯೩-೮೮).

**ಪೊಣೆಯಾಗು, ಹೊಣೆಯಾಗು** = ಜವಾಬ್ದಾರಿಯನ್ನು ಹೊರು ; ಭಾರವನ್ನು ವಹಿಸಿಕೊಳ್ಳು : ಇಱಿಯಲ್ಬಲ್ಲೊಡೆ ವೀರನಾಗು . . . ತೆಱಬಲ್ಲೊರ್ಪೊಣೆಯಪ್ಪುದೈ (ಸೋಮೇಶ. ೭೭); ತಾಯೆ ಕೊಟ್ಟುದು ತಮಗೆ ತಾನದ ಕಾಯುವಗತಿಗನುಸಾರಿ ಯಾದವರಾಯ ಹೊಣೆಯಾಗಿರಲು ಲಕ್ಷ್ಯವೇ ದೈತ್ಯಕೋಟಿಗಳು (ಸಂಭಶ. ೨೩-೯೯); ಮಾಯೆಯು ನಿನ್ನ ಬಹುವಿಧದಿ ಕಾಡುತಲಿಹುದು . . . ಕ್ಷಿತಿಯ ಪೂಜ್ಯತೆ ಕೆಡಿಸುವುದು ಮುಂದೆ ಶತಜನ್ಮಗಳಿಗೆ ಹೊಣೆಯಾಗಿ ನಿಲ್ಲುವುದು (ಕುರಂದ. ೦-೫೨-೨); ಗಣಿತನ ನೆರೆ ಹೊಲ್ಲ ಗಣಿಕೆ ಮುದಿಯಳು ಹೊಲ್ಲ ಕಣುಕಟ್ಟು ಹೊಲ್ಲ ಅಱದರಲಿ ಅರಮನೆಗೆ ಹೊಣೆಯಾಗ ಹೊಲ್ಲ (ಸರ್ವಜ್ಞ. ೭೪೭). **ಹೊಣೆಗೊಡ್ಡು** =ಜಾಮೀನಾಗಿಸು ; ಹೊಣೆಯಾಗಿಸು ; ಜಾಮೀನು ಮಾಡು : ಹೊಣೆಗೊಡ್ಡಿ ದೊಡ್ಡಣ್ಣ ಚಿಕ್ಕಣ್ಣನವರ ಪೊಕ್ಕಣಸಿರಿ (ಭರತ. ೯೩-೬೭). **ಹೊಣೆ ಮಾಡು** = ೧. ಜಾಮೀನು ಕೊಡು; ಹೊಣೆಯಾಗು : ಆ ಪೊಂಗಳಿತ್ತವರೊಂದುದಿನ ನಿಲಿಸಿ ಗಾಜುಮಾಡುತ್ತಿರಲ್ಕಂದು ಬರಲೀತನಂ ತೋಱವಪೆನೆಂದು ಶಿವಭಕ್ತನಂದದಿ ಬಂದು ಹೊಣೆ ಮಾಡಿ ಬಿಡಿಸಿ ತಂದು (ಗುರುಚಾ. ೦೪-೭೬). ೨. ಜವಾಬ್ದಾರನನ್ನಾಗಿ ಮಾಡು; ಹೊಣೆಗಾರನನ್ನಾಗಿ ಮಾಡು : ಅವನು ತನ್ನ ತಪ್ಪಿಗೆ ಬೇರೆಯವರನ್ನು ಹೊಣೆ ಮಾಡಿದನು (ರೂಢಿ). ೩. ಕಾದಿರಿಸು ; ಮೀಸಲಾಗಿಡು : ಅವನು ತನ್ನ ಪ್ರಾಣವನ್ನು ಒಡೆಯನ ಶತ್ರುಸಂಹಾರಾರ್ಥವಾಗಿ ಹೊಣೆ ಮಾಡಿದ್ದನಲ್ಲದೆ ಸ್ವರಕ್ಷಣಾರ್ಥವಾಗಿ ಎಂದೂ ಆಶಿಸಿದವನಲ್ಲ (ಕಂಠಿ. ೨೩).

[ದೇ. ॥ ತಮಿ. ಪಿಣ್ಯೆ, ಪುಣ್ಯೆ; ಮಲ. ಪಿಣ ; ತುಳು. ಪೊಣೆ, ಹೊಣೆ]

**ಪೊಣೆಕಾಱ,** ಪೊಣೆಗಾರ, ಹೊಣೆಕಾರ, ಹೊಣೆಕಾಱ, ಹೊಣೆಗಾರ, ಹೊಣೆಗಾಱ (ನಾ). ೧. ಜವಾಬ್ದಾರಿಯನ್ನು ಹೊತ್ತವನು ; ಭಾರವನ್ನು ವಹಿಸಿಕೊಂಡವನು ; ಜವಾಬ್ದಾರ : ಇನ್ನೇಕೆ ಬಹು

ಪ್ರಚಿಂತೆಯೆನಗಂ ಸಂಸಾರವಂ ಖಂಡಿಸಲ್ಪೋಣಕಾಱ ಪತಿ (ನೀ)ನಿರಲ್ಕಿವ ಗಣಾನಂದಾಬ್ಧಿಚಂದ್ರೋದಯಾ (ಶಂಕಕ. XVIII, ೬೮೪). **ಪೋಣಗಾರ :** ೨. "ಜಾಮೀನುದಾರ" (ಗಂಗಾಪು. ೨೦೭). **ಹೋಣೆಕಾರ :** ೧. ಎಲೆ ಭೈರವಾ ಕಾಶಿಯಲ್ಲಿದ್ದವರ ಮುಕ್ತಿಗೆ ನೀನು ಹೊಣೆಕಾರನು (ಕಾಶೀಖ. ೨೮-೪). **ಹೋಣೆಕಾಱ :** ೧. ಹೊಣೆಕಾಱನೊಪ್ಪ ಶ್ರೀಮಹಾದೇವಶರಣ (ತೌಳು. ೦೯೩೦, ಉಡುಪಿ. ೬೦೦-೨೪ ; 1339) ; ತಲೆ ಪೋಪ ಬಳಿಗೆ ಕಾಲೆ ಹೋಣೆಕಾಱನೆಂದೆಂಬ ಗಾದೆಗೆ ಸಂದು ಮೇಲನಱಿಯದೆ ಬಂದು ರಂಡನಾ ವೀರ ಶರಜಾಲದಿಂ ಪುದಿದ ರಣರಂಗವಂ (ಕಂಪು. ೩೨-೨). **ಹೋಣೆಗಾರ :** ೧. ಆ ಸೆರೆಮನೆಯಲ್ಲಿ ನಡೆಯುತ್ತಿದ್ದ ಕ್ರೂರಕೃತ್ಯಗಳಿಗೆಲ್ಲ ಯಾರು ಹೊಣೆಗಾರರೊ ಅಂಥ ಇನ್‌ಸ್ಪೆಕ್ಟರ್ ಮತ್ತು ಮುಖ್ಯ ಕಾವಲುಗಾರರಿಗೆ ವಿನಯವಿನವ್ರನಾಗಿ ವಂದನೆಯನ್ನರ್ಪಿಸಬೇಕಾಗಿತ್ತು (ಪುಸರು. ೦೮೬). 'ಹೊಣೆಗಾರಿಕೆ' ಪರಾ. ೨. "ಲಗ್ನಕಃ, ಪ್ರತಿಭೂಃ — ೨ ಹೊಣೆಗಾರ, ಜಮೀನ್‌ದಾರ" (ಸಿದ್ಧಾಂತಿ. ೩೦೯). **ಹೋಣೆಗಾಱ :** ೧. ತಾಯೆ ಬಾರೌ ತಂಗಿ ಗಂಧದ ವಾಯುವಿದೆ ಹೊಣೆಗಾಱನಾಗಿ ನವಾಯುಭೋಜನವಿಂದು ಮೊರಕಿತು ಮನುಜಮಾಂಸದಲಿ (ಕುಮ್ಮಾರ. ೯-೦೦) ; ಹುಟ್ಟಿಸಿದ ದೇವ ತಾ ಹೊಣೆಗಾಱನಾಗಿರಲು ಗಟ್ಟಾಗಿ ರಕ್ಷಿಪನು ಇದಕೆ ಸಂಶಯವಿಲ್ಲ (ಕವಕ. ೩೦-೧). ೨. "ಪ್ರತಿಭೂಃ, ಲಗ್ನಕಃ — ಈ ೨ ಹೊಣೆ(ಗಾಱು)" (ಹಲಾಯು. ೬೨-೨೨೩). [ ಪೊಣ್ಕ₂ + — ಕಾಱ ]

**ಪೋಣಗಾರ** 'ಪೋಣೆಕಾಱ' ನೋ.

**ಪೊಣೆಗುಂಡು,** ಹೋಣೆಗುಂಡು (ನಾ). ಒಂದು ಬಗೆಯ ಆಟ (?) : ☞ ಇದು 'ಪೊಡೆಸೆಂಡು' ಎಂಬ ಆಟವಿರಬಹುದು: ಪರಿವರಿ ಪಾಱಂ ಬಳೆ ಮರದೆರಸಿ ಕುಳಿಲ್ಲೆಂಡು ಬಟ್ಟು ತಿಱಿಕಲ್ಲಟ್ಟುಂಗರ ಪೊ[ಕಾಕಾಂ. ಹೊ]ಣೆಗುಂಡೆಂಬಿವನಾ ಮುರಹರನಲ್ಲಲ್ಲಿಗಾಡುತುಂ ಬರಲ್ (ಜಗ. ೯-೯೪ ; ಕಾವ್ಯಸಾ. ೬೭೭ ನೋ). **ಹೋಣೆಗುಂಡು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಪೊಣ್ಕ₁+ಗುಂಡು ]

**ಪೊಣ್ಣನೆ** (ಅ). ಕೂಡಲೆ ; ತಕ್ಷಣ ; ತಟ್ಟನೆ : ಅಣ್ಣಾಜಿ ಬಹಾಗ ಕುಳಿತಿರಲಾಗದೇಳಣ್ಣಾಯೆಂದನು ಚಿಕ್ಕಮಗನ ಪೊಣ್ಣನಾ ಮಗನೆದ್ದನೊಡನೆ (ಕರಕ ೩೨-೩೬).

☞ **ಪೊಣ್ಣಪೊಣ್ಣನೆ** (ದ್ವಿರುಕ್ತಿ) : ಪೊಣ್ಣಪೊಣ್ಣನೆ ಕುಣಿಯೊ ಚಿಣ್ಣ ಯೌವನರಜಿುದು ಕಣ್ಣ ಬಿಱಿವು ಹರಿಯಿತೆಂದು ಹೆಣ್ಣುಗಳೆಲ್ಲರು . . . ಲಿಂಗಣ್ಣಗಾರತಿಯನೆತ್ತಿದರು (ಕೋಟಿಕ. ೩-೦೦೭). [ಪೊಣ್₀ + — ಅನೆ₁]

**ಪೊಣ್ಮಂಚೆ** (ನಾ). (?) : ಅಂಚೆಮುಪ್ಪಳುಮಾಸು ಕೌಳುಡೆಮಲಗು ಪೊಣ್ಮಂಚೆಯು ಮೇಲ್ಗಟ್ಟು ಗಿಂಡಿ ಮಿಂಚುವಡಿಗ ವೀಣೆ ಸಂಗಲಿಸಿದುವು ಲಾವಂಚದ ಬೀಸಣಿಗೆಗಳು (ಶರಕ. ೦೩-೨೭). [ ☞ ಇದು 'ಪೊನ್ನಂಚೆ (= ಚಿನ್ನದ ಹಂಸ)' ಎಂದಿರಬಹುದು ]

**ಪೊಣ್ಮಿಸು,** ಹೊಮ್ಮಿಸು (ಕ್ರಿ). ೧. (ನಾದ ಮೊದಲಾದುವನ್ನು) ಹೊರಡಿಸು ; ಉಂಟುಮಾಡು : ನವಕುಮುದಾಮೋದವಮಾಧುರ್ಯದಿಂ ಪಟ್ಟದಗಾನಂಬೊಣ್ಮಿಸುತ್ತುಂ ಶಶಿಯುದಯದೊಳೊಪ್ಪಿತ್ತು ರಾಜೋಪಚಾರಂ (ಗಂಕ. ೪-೯೬) ; ಕಂಠನಿನಾದಂಬೊಣ್ಮಿಸುತ್ತುಂ ಶುಕಪಿಕಶಕುನೀನಾದವೊಟ್ಟೈಸೆ ಚಿತ್ರಾಸನೆ ತಚ್ಚಿತ್ತಪ್ರಿಯಂಗೀಂ ಮೆಱೆದಳೊ ಸುರತಕ್ರೀಡೆಯುಂ ಪ್ರೌಢಿಯಿಂದಂ (ಕಾವ್ಯಸಾ. ೬೬೪). ೨. (ದ್ರವ ಮೊದಲಾದುವು) ಹೊರಸೂಸುವಂತೆ ಮಾಡು ; ಹೊರಹೊಮ್ಮುವಂತೆ ಮಾಡು : ಮದನೋಗ್ರಾಗ್ನಿ ಮನಕ್ಕೆ ಪಾಟ್ಟುದು ಮಹಾಸಂತಾಪಮಂ ಜ್ವಾಲೆಯಿಲ್ಲದೆಯುಂ ಕಣ್ಮಲರ್ಗಳ್ಗೆ ಪೊಣ್ಮಿಸುವುದಂಭೋಧಾರೆಯಂ ಧೂಮವಿಲ್ಲದೆಯುಂ (ಕಾದಂಸಂ. ೩೦೯). **ಹೊಮ್ಮಿಸು :** ೩. ಹರಡು ; ವ್ಯಾಪಿಸುವಂತೆ ಮಾಡು ; ಪಸರಿಸುವಂತೆ ಮಾಡು : ಮುಕ್ಕುಳಿಸುವ ಕೆಂಗಿಡಿರಾಶಿರಾಶಿಯ ದಿಕ್ಕೆಂಟಱೊಳಗೆ ಹೊಮ್ಮಿಸುತೆ ಹೊಕ್ಕುದು ವಿಧಿಬಾಣ ಕೃಷ್ಣನ ನಾಭಿಯ ಕುಕ್ಕರಿಸುತೆ ಶಿಶುವೆನಲು (ಕೋಟಿಕ. ೯೦-೯೩); ಬರುವುದು . . . ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ, ಅಬ್ಬರದಲಿ ಭೋರ್ ಭೋರೆನೆ ಗುಮ್ಮಿಸಿ (ಕಂಪು. ೨೭-೨). ೪. ತೋರ್ಪಡಿಸು ; ಪ್ರದರ್ಶಿಸು : ಜನರು ಕುಸ್ತಿ ಕಸರತ್ತು ಮೊದಲಾದುವುಗಳಲ್ಲಿ ತಮ್ಮ ಹೊಸತನವನ್ನು ಹೊಮ್ಮಿಸುವರು (ಕನ್ನಾ. ೦೭೭). [ಪೊಣ್ಮು + — ಇಸು₃]

**ಪೊಣ್ಮು,** ಹೊಣ್ಮು, ಹೊಮ್ಮು₁ (ಕ್ರಿ). ೧. ಹೊರಚಿಮ್ಮು ; ಹೊರಸೂಸು : "ಪೊಣ್ಮು — ಉದ್ಗಮನೇ (ಏಳು, ಕಾಣು)" (ಶಮಧಾ) ; ಸಾಧ್ವಸದಿಂ ಬೆಮರ್ ಬೆಮರ್ವಡೆಗಳಿನಂಣ್ಮೆ ಪೊಣ್ಮಿದುದು (ಸಂಕಾ. ೩-೦೩); ಅಪರಿಮಿತಂ ಪೊಣ್ಮುವ ಬಾಷ್ಪಪಯೋಧಾರಾಳಿ ಪರಿವ ಪರಿನಾಳಿಕೆಯೊಂದು ಪಮೆಗೆ ಬಂದಿರ್ದುದು ಕರ್ಣಪೂರನವಕೇತಕೀದಳಂ ಕಾಮಿನಿಯಾ (ಕಾದಂಸಂ. ೨೨೪). ೨. ಹರಿ ; ಪ್ರವಹಿಸು : ಪೆರ್ಗೆಱೆಗಳಿಂ ಪುಂಡ್ರೇಕ್ಷುವಾಟಕ್ಕೆ ಪೊಣ್ಮುವ ಪೇರರ್ಬಿಗಳೆತ್ತಲುಂ ಸೊಗಯಿಕುಂ ಚಂಪಾಪುರೋಪಾಂತದೊಳ್ (ಸುಕುಮಚ. ೪-೪೩) ; ಸಿರಿ ಸುರಚಾಪದಂತೆ ಪೊಸಜವ್ವನಮಿದ್ದಿಲ ಬೂದಿಯಂತೆ ಪೆಂಡಿರ ಸುಖಮುಂಣ್ಮೆ ಪೊಣ್ಮುವ ಬಯಲ್ದೊಱೆಯಂತೆ . . . ಕಿಡಲಲ್ಲದೆ ತಾಂ ಸ್ಥಿರಮಪ್ಪಗಲಾರ್ಕುಮೇ (ಧರ್ಮಾಮೃ. ೩-೦೬); ಅಟ್ಟೆಯಿಂ ಸ್ಫುರಿಸಿ ರಕ್ತದ ಧಾರೆ ಪೊಣ್ಮೆ (ಛಾಪಕಾಂ. ೯-೨೭). ೩. ಹೊರಕ್ಕೆ ಬರು ; ಹೊರಬೀಳು : "ಎಚ್ಚು ಪಾಯ್ದುದೆನಲ್ಕೆ ಪೊಣ್ಮಿತ್ತೆಂಬರ್ಥಮಕ್ಕುಂ" (ಶಮ್ಮಕಿ. ೬೨). ೪. ಹರಡು ; ಹಬ್ಬು ; ವ್ಯಾಪಿಸು : ನೀರಿಲ್ಲದ ಕೆಱೆಯ ನಡುವುಮಂ ಪೊಗೆ ಪೊಣ್ಮೆ ನೆಗೆದ ಕಾಟ್ಕಿರ್ಚುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆಂ (ವರ್ಧಮಾ. ೬೩-೨೭); ದೇವಾನೀಕನೀದುಂದುಭಿರವಮುಮರೀವೃಂದ ಮಾಂಗಲ್ಯಗೇಯಸ್ವರದೊಳ್ ಕೈಗೂಡಿ ಪೊಣ್ಮುತ್ತಿರೆ (ಅಂತ. ೦೪-೦೦೬); ಪೊಣ್ಮುತಿರ್ಪ ಪೂವಿನ ಪೊಸಗಂಪು ಕತ್ತುರಿಯ ಕಂಪೆನೆ ಪಾಡುವ ತುಂಬಿ ಗಾಣರೆಂದೆನೆ ನನೆಯಂಬ ನೋಲಗದ ಸಾಲೆಪೊಲಿರ್ದುವು ಬಂದ ಮಾಮ್ಪಗಳ್ (ಕಮ್ಮಾ. ೬೦); ನೂಪುರ ಕಂಕಣಸ್ವನಂ ದೆಸೆಗಳೊಳ್ ಪೊಣ್ಮೆ . . . ಬರುತಿರ್ದರಖಿಳಸ್ತ್ರೀಯರು (ಶಂತು. ೩-೬೨). ೫. ಉಂಟಾಗು ; ಕಾಣಿಸಿಕೊಳ್ಳು ; ತಲೆದೋರು : ಬಗೆಯೊಳ್ ಪೊಣ್ಮೆ ದಯಾರಸಂ ಚರಿತದೊಳ್ ಕೈಗಣ್ಮೆ ಚಾರಿತ್ರಂ (ಅಂತ. ೦-೩); ರೋಮೋದ್ಗಮಂ ಕೂಡೆ ಪೊಣ್ಮುತ್ತಿರೆ ಬಾಹುದ್ವಂದ್ವದಿಂದಂ ಬರೆತೆಗೆದುಱೆ ತಟ್ಟೈಸೆಯುಂ (ಕಾದಂಪೂ. ೪೯೦) ; ಪೊಗೆಯಿಲ್ಲದೆ ಪೊಣ್ಮಿತ್ತಗ್ನಿ (ಶಂಕರಪಚ. ೩-೦೦೦); ಸಂಪನ್ನಮತಿ ಪವನಜಂ ತಳರ್ದನಲ್ಲಿಗೆ ವಿಪುಲಪುಲಕೋತ್ಸವಂ ಪೊಣ್ಮಲು (ಕೃಮಿಕಾ. ೩-೪೦). ೬. ಹೆಚ್ಚಾಗು; ವೃದ್ಧಿಯಾಗು ; ಅತಿಶಯವಾಗು : ತ್ರಿದಶನರಾಸುರೋರಗಗಣಪ್ರಭು ನಿಶ್ಚಿತತತ್ತ್ವಯೋಗಿ ಯೋಗದ ಬಲಮುಂಣ್ಮೆ ಪೊಣ್ಮೆ ನಿಲೆ (ಶಂಕಕಾ. ೦-೬೩); ಸ್ಮರರಾಗಾಂಧತ್ವದಿಂದಂ ಪಗಲೊಳಮಸತೀಕೇಳಿ ಪೊಣ್ಮಲ್ . . . ಬಂದುದು ಶಿಶಿರನೃಪೋದ್ಯತ್ಕೃತಾಂತಂ ವಸಂತಂ (ಕಾದಂಪೂ. ೬೨೦); ಇನಿತೊಂದುದ್ವೇಗಂ . . . ಅವನಿನಾದತ್ತೆಂತು ಪೊಣ್ಮಿತ್ತೆನೆ . . . ವಸುಮತೀಕಾಂತೆಯಿಂತೆಂದಳ್ (ಜಗ. ೦-೨೯). ೭. ಉತ್ಸಾಹಿಸು ; ಹರ್ಷಗೊಳ್ಳು; ಸಂಭ್ರಮಪಡು : ತನಗಾಗಳ್ ಪೊಡವಟ್ಟಳಂ ಪದಪಿನಿಂ ಪೊಣ್ಮುತ್ತ ಬಾಯಿತ್ತಬಾಯಿನುತಂ ತನ್ನ ಕೆಲಕ್ಕೆ ಕಾಂತೆ ಕರೆದು . . . ಅಲಂಪಿನೊಳಾ ಕಾಂತೆಯು ಮೆಯ್ಯನೊಯ್ಯನೆಳಮುತ್ತಿರ್ದಳ್ ಕರಾಂಭೋಜದಿಂ (ಕಾದಂಸಂ. ೨೪೦); ಬೆಚ್ಚರಮುಮನೀತಳಂ ತನಗೆ ಸಾರ್ವ ಪೊಲೊರ್ಮೊದಲುಣ್ಮೆ ಪೊಣ್ಮಿದಂ (ಧರ್ಮಾಮೃ. ೬-೮೦) ; ಪುಳಕಿಸುತ್ತುಂ ಪುಟವೇಱುತ್ತುಂ ಪೊಣ್ಮುತ್ತುಂ ನಲಿಯುತ್ತೆ ಗಜಾರೂಢನಾಗುತುಂ ಗಿರಿರಾಜಂ . . . ಪುರಕ್ಕೆ ತಿರುಗಿದನಾಗಳ್ (ಗಂಕ. ೩-೦೦೦); ಸುತ್ತುವ ಪತ್ತುವ ನಿಲ್ವ ಗಲ್ವ ಪೊಣ್ಮುವ ಪುಟವೇಳ್ವ ಪಾಯ್ವ . . .

ನೆಟ್ ನೂಂಕುವೇಳ್ಗೆಯು ಬಲಂ ಬಗೆಗೊಂಡುದು ತಕ್ಕುವಾರರಾ (ರಾಜಶೇ. ೧೪-೫೯). ೮. ಉಬ್ಬು; ದಪ್ಪವಾಗು; ಸ್ಥೂಲವಾಗು: ನಡು ಪರ್ಚಿದುದು ನಾಭಿ ಗುಹ್ಯಾಯ್ತು ಪೊಡೆ ಪೊಣ್ಮಿದುದು . . . ಗರ್ಭಚಿಹ್ನವೆಸೆದುದು ಲತಾತನ್ವಿಗೆಂದು (ಚನ್ನರಾ. ೯-೨೫); ಎಚುಂಚೌವನದ . . . ಪೊಣ್ಮುವ ಪೊಚುವಾಚಿ . . . ಮನೋಹರರೂಪದ ನೀಟಿಯ ನವಲಾವಣ್ಯದ ಸಿರಿಯನದೇನಂ ಬಣ್ಣಿಪೆನು (ಶಿಯುಶಾ. ೩-೩೩); ಪೊಂಗಳಸಮೊಲೆಯ ಪೊಣ್ಮುವ ಮೊಲೆಯ . . . ಬೆಳ್ಕೊಲೆಯ ಭಾವೆಯರ್ ಬರುತಿರ್ದರು (ಶಬ್ದ. ೩೬-೪೩). ೯. ಚಿಮ್ಮು; ಸಿಡಿ; ಪುಟಿ: ಮಲ್ಲಿಂದವಳ್ ಪೊಯ್ದು ಪೊಣ್ಮಿದ ಸೆಂಡಂ ನಖದೀಪ್ತಿ ರಂಜಿಸುವಿನಂ ಮೇಗೆಯ್ಯೊಳಾಂತು . . . ತಾಳದ ಸೂಟು ತಿರಿದಾಡಿದಳ್ ಸುದತಿ ಪೆಂಪಿಂ ಕಂತುಕಕ್ರೀಡೆಯಂ (ಬಸವ. ೦೨-೨೯). ಹೊಣ್ಮು: ೫. ಜೈಮಿನಿಮುನಿ, ಕುರ್ತರ್ ಕೇಳುವರಿಗೆ ರೋಮಾಂಚನ ಹೊಣ್ಮುವಂತೆ, ಹರುಷ ಉಣ್ಮುವಂತೆ, ಆ ಕಥಾಮೃತವನ್ನು ಅದರ ಕಾರಣಸಹಿತ ತುದಿಮೊದಲಾಗಿ ವಿರಚಿಸಿದ (ಐಮಿ. ೦೯೩). ಹೊಮ್ಮು₁: ೧. ಸಡಿಲಿದ ಎಣೆಗಂಟಿನ ದೆಸೆಯಿಂದ ಹಾರಿದ ಕುಸುಮಗಳುಳ್ಳ ಮುಡಿಯಿಂದಲೂ, ಹೊಮ್ಮಿದ ಬೆವರಿನ ಹನಿಗಳುಳ್ಳ ಮುಖದಿಂದಲೂ . . . ಸ್ವಲ್ಪ ಬಳಲಿದವಳಂತೆ ಬರೆಯಲ್ಪಟ್ಟಿರುವ ಈಕೆ ಪೂಜ್ಯಳಾದ ಶಕುಂತಳೆ (ಶಾಕುಂತ. ೬೯-೩೨); ವಿಶ್ವ ಕಾಣಿಸುವ ಆ ಸಂಜೀವಿನೀರಸ ಹರಿಯುತಿದೆ ಎಲ್ಲೆಲ್ಲೂ ಝುರಿಝುರಿಯಾಗಿ, ಸಮುದ್ರದೊಡಲಿಂದ ಹೊಮ್ಮಿ! (ಜ್ವಾಕ್ರ. ೯-೨೦). ೪. ಬಳಕ ಮಹಾಯಾಂಗನೆಯ ಮನಸಿಗೆ ತೀವ ತಿಣ್ಣನೆ ತಿಟ್ಟು ಬಿಟ್ಟಿತು ಹೊಳಹು ಹೊಮ್ಮಿತು (ಕ್ರಕುಂ. ೭-೮); ನಮ್ಮಂತಿರಡುಮೆಸರನು ತಾಳಿ ರಾಜಿಪ ಸುಮ್ಮಾನದರಲಿಲ್ಲವೆನುತ ಹೊಮ್ಮಿದ ನಂದನದಲಿ ಸುರಹೊನ್ನೆಯು ಕಮ್ಮಲರುಗಳೊಪ್ಪಿದುದು (ಕಂಶಾ. ೩-೯೩); ಶ್ರುತಿಗೂಡಿದಾಗ ಹೊಮ್ಮುವುದು ಹಾಡಿನ ಲಹರಿ ಗಾಳಿಯ ಬೆನ್ನ ಮೇಲೆ ಮೋಡದ ಸವಾರಿ (ಕಾಮು. ೬೨-೨೪). ೫. ಹೊಮ್ಮಿಡುತ ಜೋಲುತ್ತಲೊಂದವೊಂದಂ ಪಿಮ್ಮಿ ಸುಮ್ಮಾನವೇಟ್ ದುಮ್ಮಿದುರಿಯ ಸುಖಂ ಹೊಮ್ಮಿ . . . ಗೋಕುಲದಲ್ಲ ಮಣಿದು ಕೇಳುತ್ತಲಿರೆ (ಅಶಾಕ. ದೇ. ೦೧೨-೨೨); ಅನುತಾಪವೇಟ್ ವಿರಹು ಹೊಮ್ಮಿ ಚಿಣ್ಣಿಟ್ಟಿಗಲಾಚಿದೆ ಕಂಗಮಂಚಿಸದ ಕಂಥಮಂ ಘಳಿಲನೆ ಪಾಯ್ದು (ಶಿವ. ೯-೨೩). ೭. ಪೂಗಳಂ ಪಡೆ ನೋಡುತಾಹಾ ವಿರೂಪಾಕ್ಷ ಎನುತ ಹಿಗ್ಗುತ್ತ ಹೊಂಗುತ್ತ ಹೊಮ್ಮುತ್ತಂದು [ಪಾಠಾಂ. ಎದೆಯೆನುತ ಹಿಗ್ಗಿ ಹೊಗಳುತ್ತೊಲೆದು ನಲಿವುತ್ತ] (ಕ್ರಕ. ಪ. ೩೩೩-೦೯). ೧೧. ಉಂಟುಮಾಡು; ಒದಗಿಸು: ಕೊಡುವವರು ವರವಲ್ಲದಿದ್ದರೆ ನುಡಿಗೆ ಮೊಳೆ ಹೊಮ್ಮುವರೆ ವಿಮ್ಮಯ ಕೊಡಹ ನೋಲುವವನಲ್ಲ (ಕುಮಾರರಾ. ೦-೯೦). [ದೇ.: ತಮಿ. ಪೊಮ್ಮು, ಪೊಟಿ; ಮಲ. ಪೊಡಿ; ತೆಲು. ಪೊಡಮು, ಪೊಡ್ಚು]

**ಪೊತ್ತ₁** 'ಪೊಟು' ಪರಾ.

**ಪೊತ್ತ₂, ಪೊತ್ಥ** (ನಾ). ೧. ಹಣದ ಚೀಲ; ಥೈಲಿ; ಹಮ್ಮಿಣಿ: ಪೊತ್ತಗಳನ್ನು ಬಾಯ್ಬಿಚ್ಚಿ ಹೊಸ ಪುತ್ತಳಿ ನಾಣ್ಯಗಳನ್ನು ಬಡಿತೆಯತ್ತಿ ಕೇರಿ ತೂರಿ ಧಾರೆಯರೆದು ಸುರಿದಾಡಿದನು! (ಕುಂತ್ರಕ. ೦೫೦-೯). ೨. ಹಣ; ದ್ರವ್ಯ; ಧನ: ರಸ್ತಿನ ಮೊತ್ತದ ಚೀಲವನು ಕೆಂಚಾವಿಯವರ ಮನೆಯನು ಕಳರು ಬಳಿದಿದ್ದು ಅರಮನೆ ರಸ್ತು ಹಾಕಿ ಗಣ್ಣು ಕಟ್ಟಿದುಕ್ಕಿದನ್ತ ಪೊತ್ತದ ಚೀಲವನು ಕಳರು ಕದ್ದುಕೊಣ್ಡು ಹೋಗಲಾಗಿ (ಎಕ. XI, ಹೊಳಲ್ಕ. ೨೫-೯೩; 1688). ಪೊತ್ಥ: ೨. ಸುಂಕವ ತಮಚಿ[ಯ] ಮುದ್ರೆಯ ಪೊತ್ಥದೊಳ್ × × × ಕೆ ತಿಂಗಳಿಗೊಂದು ಗದ್ಯಾಣ ಪೊನ್ನುಮಂ . . . ಲೆಕ್ಕಂ ಮಾಡಿ ಕುಡುವರ್ (ಕೌಜಾ. XI-ii, ೦೫೦-೩೩; 1102).

[← ಪಾರ. ಪೋತಾ; ಮರಾ. ಪೋತ್, ಪೋತೀ, ಪೋತೇ]

**ಪೊತ್ತಗೆ, ಪೊಸ್ತಕ, ಹೊತ್ತಗೆ** (ನಾ). ಗ್ರಂಥ; ಪುಸ್ತಕ; ಹೊತ್ತಿಗೆ: ತಿಂತಿಣಿಯಾಗೆ ನಟ್ಟ ಕಣಿಯೊಳ್ ನೆಲಮುಟ್ಟದೆ ಮೆಯ್ಯೊಳತ್ತಮಿತ್ತಂ ತೆಚಿದಿರ್ದ ಪುಣ್ಗಳೆಸೆವಕ್ಕರದಂತಿರೆ ನೋಡಿ ಕಲ್ಲಿವೆಂಬಂತೆಪೊಲಿರ್ದನಟ್ಟ ವಣಿಕೋಲ್ಗಳ ಮೇಲೆಸೆದಿರ್ದ ವೀರಸಿದ್ಧಾಂತದ ಶಾಸನು ಬರೆದ ಪೊತ್ತಗೆಯಂತಮುರಾಮಗಾತ್ಮಜು (ಶಂಕಶಾ. ೦೦-೯೬); ಪೊತ್ತಗೆಯಂ ಪೊತ್ತಿರ್ದಂ ಪೊತ್ತಗೆಯೊಳಗಿರ್ದ ಮಾತನಟಿವನೆ (ಸಪುಕ. I, ಅನುಬಂಧ. ೩೯೦); ಮಿಸುನಿ ವಾವುಗೆಸೆವ ಪೊತ್ತಗೆಯಾಲವಟ್ಟ . . . ಕರ್ಪುರದ ನಾಳಗಳ ಪಿಡಿದೊಡನೆ ನಡೆದರೊಲಿದು (ಕದ್ಮರಾ. ೮-೭). ಪೊಸ್ತಕ: ವೀರಸಿದ್ಧಾಂತದ ಪೊಸ್ತಕಂ ತವಣಿಕೋಲೊಳುವ್ವಿಸಿದಂತೆ ವೀರವಿಕ್ರಾಂತವಾನಾಸೆವಟ್ಟು ಕಲೆ ಬೆಳೆಯು ನೆಯ್ದಿದ ದೇವಲೋಕಮಂ (ಪ್ರಮಅ. ೦೯೫೦, ೩೩-೦೯; 1194); ಯಮಿಗಳ್ಗೆ ಪರಿಗ್ಗೆದು ಪರಮಾಗಮದ ಪಾವನಪೊಸ್ತಕಂಗಳ ನಮಿಸಿ ಕೊಡುವುದು (ಶಶಿ. ೫-೩೦); ದಾಹುದಂಡದ ಪೊಸ್ತಕದಿ ಪೊಯ್ದರಾತನೊಡ್ಡು ವಸದಬೊಳು (ಶಂಗಕು. ೨೬-೩೯). ಹೊತ್ತಗೆ: ಅನ್ನು ಕಾದಿ ತುಚುವ ಮಗುರ್ಚ್ಚಿ ದೇಕರಸನು ಹೊತ್ತಗೆಯ ಟವಣಿಕೋಲ್ಗಳಲೆತ್ತಿದ ತೆಚಿವನ್ತೆ ಸರದ ತನ್ದಲು ತನುಮಂ ತೆತ್ತಿಸಲ್ಕಮರಕಾಂತಾಜತ್ರಕಿಯರುಯ್ಯೆ ದೇಕನಾಕೆಯ್ದಿದ (ಎಕ. XII, ಚಿಕ್ಕನಾ. ೦೬-೫೦; 1149); ಚಿಕ್ಕದೊಂದು ಹೊತ್ತಗೆ ಬೆನಕನ ಕರಡಗೆಯಯ್ಯಾ (ಬಸವ. ೭೫೦); ದಿಟದ ನಾಮಂಗಳ ಅಕ್ಷರವೃತ್ತಿಗೆ ಪೊ, ಮರಂ, ಹೊತ್ತಗೆ, ಕವಳಿಗೆ, ಕಟ್ಟವತ್ತಿಗೆ (ಶಕುದ. ೭೩ ಪ್ರಯೋ); ಬಾಳೆ ಹೊತ್ತಗೆಯಲ್ಲಿ ಬರೆಯ ಗೆಲವಿನ ಗಲಗೆ ಬರೆಯಬೇಕೆಂದಾರು ಕಟ್ಟುಹಾಕಿಲ್ಲ (ಕಾಜ್ವಾ. ೩-೨೦).

**ಪೊತ್ತಗೆಗೆಯ್** = ಬರೆದಂ ಪುಸ್ತಕವನ್ನಾಗಿ ಮಾಡು: ಪರವೋತ್ಸವದಿಂ ಗುಣರತ್ನಭೂಷಣಂ ಕವಿಜನಶೇಖರಂ ಬರೆದು ಪೊತ್ತಗೆಗೆಯ್ಸಿದಂ ಪುರಾಣಮಂ (ಶಾಪುಂಕು. ೯೩೨).

[< ಸಂ. ಪುಸ್ತಕ./ಪ್ರಾ. ಪುತ್ಥಯ, ಪೋತ್ಥಯ]

**ಪೊತ್ತಡಿ** (ನಾ). ಹಣದ ಚೀಲ; ಥೈಲಿ: ಆ ಕಳ್ಳನಲ್ಲಿಂ ಪೊಚಿಮಡುತ್ತಂ ವಸುದತ್ತ ಸುಡಿಯೊಳಿರ್ದ ಪೊತ್ತಡಿಯಂ ಕೊಯ್ದುಕೊಂಡು ಪೋದಂ (ಪ್ರಜ್ವಾಸ್ರ. ೩-೭೭ ಶ); ತನ್ನ ಪೊತ್ತಡಿಯೊಳ್ ಪೊನ್ನುಗಳಂ ತೆಗೆದು ಅಕೃತಪುಣ್ಯನ ಕೈಯಲಿಕ್ಕಲ್ (ಪ್ರಜ್ವಾಸ್ರ. ೦೨-೨೦ ವ). [< ಪೊತ್ತ₂]

**ಪೊತ್ತಡೆ** 'ಪೊಟ್ಟಣ' ನೋ.

**ಪೊತ್ತರ** (ನಾ). ಒಂದು ಬಗೆಯ ಸುಂಕ,—ತೆರಿಗೆ: ಜೋಲಕಾರುಣ್ಯ ಬಟ್ಟೆಯ ಭಣ್ಡ ೧ ಕಂ ಗ ೨ ಎತ್ತಿನು ಪೊತ್ತರ ಪ ೮ ಖಾಣದು ಪೊತ್ತರ ಪ×ಅಂತು ಗ ೭೬ ಪ ೩ (ಎಕ. V, ಚಾಶಪ. ೯೯-೬೯; ಸು. 1230); ಜೋಳ ಕಾರುಣ್ಯ ಬಟ್ಟೆಯ ಭಂಡಿ ಗದ್ಯಾಣ ೧ ಪಣ ೯ ಪತ್ತಿನು ಪೊತ್ತರ ಪಣ ೪ ಹಾ!!! (ಎಕ. V, ಬೇಲೂರು, ೭೯-೦೯೯; 1261); ಜೋಲಕಾರುಣ್ಯ ಬೆದೆದರ್ ೯ ಪ ೩!!—ಬಟ್ಟೆಯ ಭಂ ೧ ಕ್ಕಂ ಗ ೨ ಎತ್ತಿಲು ಪೊತ್ತರ ಪ ೫ ಖಾಣದು ಪೊತ್ತರ!!! (ಎಕ. XVI, ಚಿಕ್ಕನಾ. ೭೦-೨೦; ಸು. 1330). [?]

**ಪೊತ್ತಳ** (ನಾ). ಬತ್ತಳಿಕೆ; ಬತ್ತಳೆ (?): ಪೊತ್ತಳದಂಬನೆ ತೆಗೆದು ಪೊಸಗಾಯದಿ ಬಸವಳಿದು ಮತ್ತವನುಗವನಿಟಿದಳು ಮಚುಮೊನೆಗಾಬುತಲಿ (ಶಿವಗೀ. ೦೬೯-೮೦೯); "ಆಗ ತಾನೆ ತಯಾರಿಸಿದ" (ಶಿವಗೀ. ಕೋಶ). [?]

**ಪೊತ್ತಟಿ** 'ಪೊಟ್ಟಣ' ನೋ.

**ಪೊತ್ತಣಿ** 'ಪೊಟ್ಟಣ' ನೋ.

**ಪೊತ್ತಾರ** 'ಪತ್ತಾರ' ನೋ.

**ಪೊತ್ತಾಣಿ** 'ಪೊಟ್ಟಣ' ನೋ.

**ಪೋತ್ರಿ** (ನಾ). ಬಟ್ಟೆ; ವಸ್ತ್ರ: ಧಗಧಗಿಪ ಕೆಂಡಂಗಳಂ ಬಗಿಬಗಿದು ದಸರಿಯ ಪೊತ್ರಿಯಲಿ ಬಿಗಿಬಿಗಿದು ಕರಯುಗಳಂಗಳಿಂ ತೆಗೆದೊಪ್ಪಿ ಥಳವೊಪ್ಪಿ ನೆಗಳನೇ ಶಿವಪಡಿತಂ (ಏಕಕು. ೫೫-೨೫). [< ಪ್ರಾ. ಪೊತ್ತೀ./ಸಂ. ಪೋತ]

**ಪೊತ್ತಿಗೆ, ಹೊತ್ತಿಗೆ** (ನಾ). ೧. ಪುಸ್ತಕ; ಗ್ರಂಥ; ಹೊತ್ತಗೆ : "ಪೊತ್ತಗೆ (ಪೊತ್ತಿಗೆ)—ಪುಸ್ತಕ" (ಶಬ್ದಕೋ. ೨೭). ೨. ಜೋಯಿಸರು ಶಾಸ್ತ್ರ ಹೇಳಲು ಬಳಸುವ ಪುಸ್ತಕ,—ಭವಿಷ್ಯವನ್ನು ಹೇಳುವ ಗ್ರಂಥ : ಸಂತತಿಯದೆಂದಪ್ಪುದೆಮಗಿಸ್ನೆಂತೆನುತ ಸಚಿಪತಿಗಳುಂ ಮತಿವಂತರುಂದಂ ಪೊತ್ತಿ[ಪಾಠಾಂ. ತ್ತ]ಗೆಗಳಂ ತೆಗಿಸಿ ನೋಡಿಸುತ (ಜಗತ್ತು. ೨-೪೮). **ಹೊತ್ತಿಗೆ:** ೧. "ಹೊತ್ತಗೆ(ಹೊತ್ತಿಗೆ)—ಪುಸ್ತಕ = ಪೊತ್ತಗೆ" (ಶಬ್ದಕೋ. ೩೦) : ಅನುಭವವೆಂಬುವದು ಅನುಭಾವಿಕಗಲ್ಲದೆ ಹೊತ್ತಿಗೆಯಲ್ಲಿಲ್ಲ ನೋಡಾ (ಸಿದ್ಧರ. ೪. ೬೨-೨೭೩); ನುಡಿದಹನು ದುರ್ಭಾಷೆಗಳನಡಿಗಡಿಗೆ ಶಿವನಿಂದೆಯ ನುಸುರ್ವ ಬಗ್ಗಡೆಯನಂ ಕೊಲಲಹುದು ಸುಡಲಹುದವನ ಹೊತ್ತಿಗೆಯ [ಪಾಠಾಂ. ಪುಸ್ತಕವಂ, ಹೊತ್ತಗೆಯ] (ಜಗತ್ತು. ೩೭-೨೯); ಮೊದಲಿನವರು ಕೈಬರಹದ ಹೊತ್ತಿಗೆಗಳನ್ನು ಓದುತ್ತಿದ್ದರು (ಕುಂಬಾಯು. ೯-೦೬೪). ೨. "ಹೊತ್ತಿಗೆ"ಯನ್ನು ತೆಗೆಯಿಸಿ ಪ್ರಶ್ನೆ ಮಾಡಿದಾಗ ಜೋಯಿಸರು ಏನು ಹೇಳಿದರು? (ಸವಾಲಿಕೋ. ೮೯).

**ಹೊತ್ತಿಗೆ ಕೇಳು=ಹೊತ್ತಿಗೆ ತೆಗೆಸು** : ಒಂದು ರೂಪಾಯಿ ಇಟ್ಟು ಹೊತ್ತಿಗೆ ಕೇಳಿ ಬಾ (ರೂಢಿ). **ಹೊತ್ತಿಗೆ ತೆಗೆಸು**=ಜೋಯಿಸರ ಬಳಿ ಇರುವ ಶಾಸ್ತ್ರ ಹೇಳುವ ಪುಸ್ತಕವನ್ನು ತೆಗೆಸಿ, ಭವಿಷ್ಯವನ್ನು ಕೇಳು, —ಪ್ರಶ್ನೆ ಕೇಳು : ಗೌಡರು ಹೊತ್ತಿಗೆ ತೆಗೆಸಿ ಕೇಳಿದರೆ—"ಹಿರಿಸೂಸೆ ಮಲ್ಲವ್ವನ ಕೆರೆಗೆ ಹಾರ ಕೊಡಬೇಕು" ಎಂದು ಹೊರಟಿತು. ಗೌಡನು ವಿಚಾರದಲ್ಲಿ ಮುಳುಗಿದನು (ಕಡತ. ೭-೨೩).

[<ಸಂ. ಪುಸ್ತಿಕಾ. / ಪ್ರಾ. ಪೋತ್ಥಿಯಾ]

**ಪೊತ್ತಿನ್ಮಕ್ಕಳ್** 'ಪೋಂತು' ಪರಾ.

**ಪೊತ್ತಿಮಕ್ಕಳ್** 'ಪೋಂತು' ಪರಾ.

**ಪೊತ್ತಿಯ** (ನಾ).=ಪೊತ್ತಿ : "ಪತ್ರಂ, ಚೀರ್ಣಂ, (ಧೌತ)ಕೌಶೇಯಂ — ಈ ೩ ಪೊತ್ತಿಯಂ" (ಕರಾಯು. ೯೦-೩೯೫) 'ಪೊತ್ತಿ' ಪರಾ.

[<ಪ್ರಾ. ಪೋತ್ತಿಅ, ಪೋತ್ತಿಅ]

**ಪೊತ್ತಿರ್ಮಕ್ಕಳ್** 'ಪೋಂತು' ಪರಾ.

**ಪೊತ್ತಿರ್ಮಕ್ಕಳು** 'ಪೋಂತು' ಪರಾ.

**ಪೊತ್ತಿಸು, ಹೊತ್ತಿಸು** (ಕ್ರಿ). ೧. (ದೀಪ, ಬೆಂಕಿ ಮೊದಲಾದುವನ್ನು) ಉರಿಯುವಂತೆ ಮಾಡು; ಹತ್ತಿಸಂ; ಪುಟಗೊಳಿಸಂ : ಶರಮನಿದು ಕಡಿಕಡಿದುಡಿದೆರಡೆರಡಪ್ಪಂತು ತಱಿದು ರಿಪುಬಲಗಹನಾಂತರಮಂ ಸುಡಲೊಗೆವುದು ದುರ್ಧರಕೋಪಾಗ್ನಿಯನೆ ಮುನ್ನಮಾಂ ಪೊತ್ತಿಸನೇ (ಅಜಿತ. ೦೨-೦೦೨); ಸೊಡರಂ ಪೊತ್ತಿಸುವರ್ಸತ್ತ್ರಡೆಯೊಳ್ (ಸಚುಕ. I. ಅಮರಂದ. ೩೭೯); ಬನಮೆಂಬ ಮದನನೃಪನರಮನೆಯೊಳ್ ಪೊತ್ತಿಸಿದ ದೀಪಮಾಲೆಯ ವ್ಯಾಡಕ್ಕನುರೂಪಮಾಗಿ ಪಣಿಯಿಂ ಕೊನೆವರೆಗಂ ಪೂತುವರರೆ ಚಂಪಕನಿಕರಂ (ಚಂದ್ರಪ್ರ. ೬-೫೩); ಮಿಗೆ ಮುದ್ರಿಸಿದ ಚಿತ್ತುಖದಿನಾತನಿರ್ದನಾ ಸೊಗಸನೀಕ್ಷಿಸಿ ಪೊಳೆವ ದೀವಿಗೆಯೊಳೊಂದು ದೀವಿಗೆಯ ಪೊತ್ತಿಸಿದಂತೆ ಸಮಕಲೆ ಘಟಿಸಿತು (ಶಬ್ದಕಾ. ೦೨-೫೯). ೨. ಉಂಟುಮಾಡು; ಆಗುವಂತೆ ಮಾಡು : ಹರಿಬಲದಿಂ ಪಾಂಡವರನುವರಮಂ ಪೊತ್ತಿಸಿದರೆನ್ನೊಳ್ (ಕಂರಭಾ. ೦೦-೬). **ಹೊತ್ತಿಸು** : ೧. ಎಣ್ಣೆ ಬತ್ತಿಯು ಕೂಡಿ ಜ್ಯೋತಿಯು ಹೊ[ಪಾಠಾಂ. ಪೊ]ತ್ತಿಸಲು ಬಣ್ಣ ಬೆಳಗೇಕವಾಗದೆ ದಿಟ ವಿಚಾರಿಸಲು (ದೀಕ್ಷಾಬೋ. ೦೩೦-೨೦); ಹೊತ್ತಿಸಿದ ಜೆಡೆ ಬೆಂದು ದಳ್ಳುರಿ ಹತ್ತಿ ಭಗಭಗ ಎನುತ್ತಲುತ್ತಮನುತ್ತಮಾಂಗಂ ಬೇವುತಿರಲು (ಜಗತ್ತು. ೦೩-೨೫); ಅಂಜನಾಸುತ . . . ದನುಜಪುರಕೆ ಧನಂಜಯನ ಹೊತ್ತಿಸಿದ ಖಳರನು ಭಂಜಿಸಿದ ಸಾಗರವ ದಾಂಟಿದ ರೂಪು ತೋಱು (ಕುಮಾರಿ. ೦೦-೩೦); ಕತ್ತಲೆಯುಹುದೊಮ್ಮೆ ಬೆಳಗಹುದದು ಮಾಸಿ ಮತ್ತೊಂದು ತಂಪಿನ ಸೊಡರ ಹೊತ್ತಿಸಿ ದಃಶಿಹುದಾ ಭರತೇಶನ ಚಿತ್ತದೊಳಾತ್ಮಯೋಗವದು (ಭರತ. ೬-೦೦೫); ಕಸಕಡ್ಡಿಗಳನ್ನು ಪ್ರತಿದಿನ ಕೂಡಿಸಿ ಹೊತ್ತಿಸಬೇಕು (ಆಮುಶಾ. ೫೦). ೨. ಚಿತ್ತಜನು ಪಾತಕನು ವಿರಹದ ಹೊತ್ತಿಸಿದನಿಬ್ಬರಿಗೆ (ಕಕಕ. ೨-೪೯). ೩. (ಪದಾರ್ಥಗಳು ಸೀದು ಅಥವಾ ಹೆಚ್ಚಾಗಿ ಬೆಂದು ಪಾತ್ರೆಯ ತಳದಲ್ಲಿ) ಅಂಟಿಕೊಳ್ಳುವಂತೆ ಮಾಡು; ಹತ್ತಿಕೊಳ್ಳುವಂತೆ ಮಾಡು: (ಕುಂಬಾಯು. ೬. ೫-೦೬೭). [ಪೊತ್ತು₁ + — ಇಸು]

**ಪೊತ್ತು₁, ಹೊತ್ತು₁** (ಕ್ರಿ). ೧. (ಬೆಂಕಿ, ದೀಪ ಮೊದಲಾದುವು) ಹತ್ತಿಕೊಳ್ಳು; ಉರಿ : ಪುಟಗೊಳ್ಳು : "ಪೊತ್ತು—ಅಗ್ನಿಪುಟೀಕರಣೇ, ಅತಿಪಕ್ವಾನ್ನೇ ಚ (ಸೀದ ಅನ್ನ)" (ಕುರಾ); ಕವಿಯ್ಗಿನಿ ದಿಶಾವಳಿವರಸುಬರಂ ಪೊಗೆದು ಪೊತ್ತಿದುದು (ಕಂರಭಾ. ೦೦-೭೦); ತನುತಾಪದಿಂದೆ ಪೊರ್ದಿದ ಬನಮುಂಬಿದು ಪೊತ್ತ ಪೂಗೊಳಂ ಬತ್ತುವುದಿರ್ದ ನೆಲಂ ಪೊತ್ತುವುದು (ಜಗತ್ತು. ೯-೬೦) : ಪೊತ್ತಿದತ್ತು ಕಿಡಿಯುಟ್ಟುದು . . . ಮುಟ್ಟಿತು ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣು ಹಂಪೆಯಾಳ್ದನಾ (ಗಿರಿಜಾ. ೬-೪೭); ಮತ್ತೆ ತಳಿವ ಪೊಸಗಪ್ಪುರದೊಳ್ಪಡಿ ಪೊತ್ತಿಮುದಾ ವಿರಹಾನಲನೊಳಗೆ (ಶಬ್ದಮ. ೯-೯೦). ೨. ಬೆಂದು ಹೋಗು; ಸುಟ್ಟುಹೋಗು ; ಕರಿಕಾಗು : ಪನ್ನಗಲೋಕದ ಜೀವರಾಶಿಗಳ್ ಪೊತ್ತುವ ಮಾಟ್ಕೆಯಿಂ ಶಿದಿಗಳಿಂ ಪೊಗೆದಪ್ಪರೊ ಭಿಲ್ಲರೆಂದಿನಾ ಪುತ್ತನ ಗುಟ್ಟು ಪೆರ್ಗರಡಿಗಳ್ ಪೊಗಮಿಟ್ಟಿಸಗುಂ ವನಾಂತದೊಳ್ (ಚಕಳು. ೨-೦೦೯). ೩. ಸುಟ್ಟುಹೋಗುವಂತೆ ಮಾಡು ; ಸುಡು ; ದಹಿಸು : ಆ ಶಗರ್ ಪಂದು . . . ಪುಲ್ಲೊಳ್ ಪೊರಳಲೊಡಮಾ ಪುಲ್ಲು ಪೊತ್ತಿ ಪೊಗೆದುರಿದು ಮುಂದುರಮಂ ಪೊತ್ತಿದೊಡೆ (ಕಂಕಕಂ. ೦೭೯-೦೨); ಉಗ್ರದಾವಾಗ್ನಿ ತರುನಿಚಯಮಂ ಕೊಂಡುರಿಯುವಂತೆ ಪೊತ್ತಿದುದು ಚಿತ್ರಾಂಗಿಯಂ ಪ್ರಣಯಪ್ರಲಯಶಿಖಿ (ಚಿತ್ರಾಂಗ. ೯೦-೦೦೦೨). ೪. (ಪದಾರ್ಥಗಳು ಹೆಚ್ಚು ಬೆಂದು ಅಥವಾ ಸೀದು ಪಾತ್ರೆಯ ತಳದಲ್ಲಿ) ಹತ್ತಿಕೊಳ್ಳು ; ತಳಹಿಡಿ ; ಬುಡಹತ್ತು : ಪೊತ್ತದೆ ಪೊಗೆ ಸುತ್ತದೆ ನುಸುಬತ್ತದೆ ಕೆಂಪಡರ್ದು ಬೆಂದ ಪಾಗಲಕಾಯಂ ಪತ್ತೆಂಟು ತುತ್ತಿದಲ್ಲದೆ ಚಿತ್ತಂ ತಣಿಗುಮೆ (ಸೂಪಶಾ. ೦೦-೯೨); ಪಸಿವೇನಾದುದೊ ದೇವ ಕೇಳ್ನನಗೆ ಪಾಲೇಂ ಕಾಯದೋ ಪೊತ್ತಿತೋ (ಕೃಷ್ಣ. ೯-೭೯). ೫. ಒಣಗು : ತಾರು : ಪಲವು ದಿವಸ ಮಾಯಾಸಂಬಟ್ಟು ಬತ್ತಿದ ಬಾಯ್ಗಂ ಪೊತ್ತಿದ ನೆತ್ತಿಗಮಂತೇನುಮಂ ಪಡೆಯದೆ ಬಡತನವಡಸಿ ಬಳೆಮುಱಿದು ಪುಱಿತು ನಮೆದು ಸತ್ತುಂ (ಸುಕುಮಾ. ೫-೦೨ ವ); ಪೊತ್ತಿದ ನೆತ್ತಿಗೆ ಕಾಣದೆ ತುತ್ತಿಲ್ಲದೆ ಬಡಿಯ ಜಡಿಯೆ ಕಂಡವರೆಲ್ಲಂ ಚಿತ್ತೋತ್ಸಾಹಂಗಿಡುವರ್ಮತ್ತನಿಪದೆ ಜೈನಪೂಜೆಯಂ ಕಿಡಿಸಿದವರ್ (ಧರ್ಮಾಮೃ. ೬-೦೭೬). **ಹೊತ್ತು₁** : ೧. ನಿಮ್ಮ ಗಣಂಗಳು ಬತ್ತಿದ ಕೆಱೆ ಬಾಯ ಬಿಟ್ಟಂತೆ ಮೊಱೆಯಿಟ್ಟು ಬರಲು ಹೊತ್ತಿದ ಅಂಗಾಲ ಕಿಚ್ಚು ನೆತ್ತಿಯ ಮುಟ್ಟಿದಡೆ ಚಕ್ಕನೆ ಕಪಿಲಸಿದ್ಧಮಲ್ಲಿನಾಥ ನೊಸಲ ಕಣ್ಣ ತೆಗೆದನು (ಸಿದ್ಧರ. ೪. ೦೯-೫೨); ಉತ್ತಮತೆ ಲೋಹಾದಿಗಳಿಗೀ ಹೊತ್ತಿದಗ್ನಿಯ ಸ್ಪರುಶದಲಿ ಪಾವನತೆಯಹುದು (ಶಿಭಾಗ. ೦೦-೨೯-೬); ಹೊತ್ತಿದೇಕಾರತಿ ಪಂಚಾರತಿ ಕಡ್ಡಿಬತ್ತಿ ನೀಲಾಂಜನವಲಗೆ ಮತ್ತೆ ನಾನಾವಾದ್ಯರಭಸದಿಂ ಮೊಳಗಲುಯೆತ್ತಿದ ಮಹಮಾರತಿಯ (ಸೋಹತ. ೨೨-೪೩). ೨. ಹತ್ತುಸಾವಿರ ಯೋಜನದ ಸಂತಪ್ತತೈಲದ ತಾಂಬ್ರತಳದಲಿ ಹೊತ್ತುವನಲಾ ದಿವ್ಯರಶ್ಮಿಯ ಕಾಲಸೂತ್ರದಲಿ ಎತ್ತಿ ಬಿಸುಡುವರದಱೊಳಗೆ ತನು ಹೊತ್ತಿ ಹೊರಳಲು ಪಾಪಿಗಳನುದ್ವೃತ್ತತನದಲಿ ದೇವ ವಿಪ್ರದ್ರೋಹಿಗಳನೆಂದ (ಶಿಭಾಗ. ೫-೦೦-೨೨). ೪. ಇನಿಸು ಹೊತ್ತದ ಕೆಱದಿ ತಱಿಗೆಂಡದೊಳು ಪಾಕವನೆ ಮಾಡಿ (ಸೂಪಶಾ. ೦-೦೩); ಅವಳು ಆ ಹೊತ್ತಿದ ರೊಟ್ಟಿಗಳನ್ನು ನೋಡಿ (ಕುಂಬಾಯು. ೬. ೫-೦೬೭); ಪಾತ್ರೆಯಲ್ಲಿ ಆಹಾರ ಹೊತ್ತಿ ಅಂಟಿಕೊಂಡಿದ್ದರೆ ಅದನ್ನು ತೆಗೆಯಲು ಪಾತ್ರೆಯಲ್ಲಿ ನೀರು ಹಾಕಿ . . . ಇಡಿಸಬೇಕು (ಆರುಶಾ. ೪೭). ೫. ತಪನಪ್ರದ್ಯೋತಹತಿಯಿಂ ಬೆನ್ನೊಡೆದು ಬಾಯಾಱಿ

ತಾಳಿಗೆ ಬತ್ತಿ ನೆತ್ತಿ ಹೊತ್ತಿ ಕಣ್ಣೊಳ್ ನೆತ್ತರೆಚ್ಚು ಪಾಯೆ (ಗಿರಿಕ. ೯-೨೬ ಪ). ೭. ಉಂಟಾಗು ; ಒದಗು ; ಪ್ರಾಪ್ತವಾಗು : ಅತ್ತಲಾ ದಮಯಂತಿ ನಳನೊಳು ಚಿತ್ತವಿಟ್ಟಳು ನೃಪಗೆ ವಿರಹವು ಹೊತ್ತಿತಾಕೆಯ ಮೇಲೆ ಯಿರ್ವರಿಗಾಯ್ತು ಸಂತಾಪ (ನಳಕ. ೨-೯೯) ; ಹೃದಯಗುಹೆಯಲ್ಲಿ ಹಿಗ್ಗು ಹೊತ್ತಿಹುದು ಅಗ್ನಿಸತ್ವದಂತೆ (ಅರಳು. ೦೧೩-೨) ; ಧ್ಯಾನಸುಪ್ತಿಯಿಂ ಜ್ಞಾನ ವೆದ್ದಿತೋ ಬಾಳಿಗಾನಂದ ಹೊತ್ತಿತೋ (ಗೋಕುಲ. ೩೩-೨೨). ೭. ಆರಂಭ ವಾಗು ; ಮೊದಲಾಗು : ಮತ್ತ ಕರ್ಣನ ಭೀಮನಾಹವ ಹೊತ್ತಿದುದು (ಕುಮಾ.ಕ. ೦೩-೨೮). ೮. ಉಗ್ರವಾಗು ; ಪ್ರಚಂಡವಾಗು : ಒಳಗೆ ಹೊ[ಪಾಠಾಂ. ಯೊ]ತ್ತುವ ಧಗೆಯ ಹೊಱಗಣ ತಳಿತ ಬಿಮ್ಮಿನ ನಗೆಯ ನೃಪವಮಂಡಲದ ಪ್ರೌಳಿಯನೇನನೆಂಬೆನು (ಕುಮಾ.ಭ. ೦೩-೯೬). ೯. (ಆಲಂ) ಉದ್ವೇಗಗೊಳ್ಳು ; ಉದ್ವಿಗ್ನವಾಗು : ದುಗುಡವ ಹಿಡಿದ ರಾಯನ ಕೆತ್ತ ಮುಖವನು ಕಂಡು ಭಟರೆದೆ ಹೊತ್ತಿದವು ಹೊಗೆದೋಱದವು ಮೋಱೆಗಳು ಪಟುಭಟರ (ಕುಮಾ.ದ್ರೋ. ೦೩-೩). ೧೦. ಸಂಕಟಪಡು; ನೋಯು : ಮಾಡಿದ ಭೃತ್ಯರಪರಾಧಕ್ಕೆ ಚಿಂತಿಸಿ ಸುಯ್ದು ತನ್ನೊಳಗೆ ಹೊತ್ತುವೆದೆಯಲಿ ರವಿತನಯನಳಲುತ್ತ ನುಡಿದನು ದೂತರಿಗೆ (ಜೈಮಿ. ೬-೩-೨೦). ೧೧. ಸಂಕಟಪಡಿಸು; ನೋಯಿಸು : ಭಾಷೆ ಸಲ್ಲದೆ ಹೋಯಿ ತೆನ್ನಯ ವಾಸಿ ವರ್ಧಿಸಿ ಹೊತ್ತುತಿದೆ ಕೈಲಾಸದಪರಿದ ಕೇಳಿ ನಗುಪಂತಾ ಯಿತೇ ಎನಗೆ (ಪ್ರಭುಲಿಂ. ೭-೬೯). [ದೇ.॥ ತಮಿ. ತುಳು. ಪೊತ್ತು]

**ಪೊತ್ತು₃** 'ಪೊಱು' ಪರಾ.

**ಪೊತ್ತು₃, ಹೊತ್ತು₄** (ನಾ). ೧. ಹತ್ತಿಕೊಂಡಿರುವಿಕೆ ; ಉರಿಯುವಿಕೆ ; ಜ್ವಲನ: (+). ೨. ಸೀದು ಹೋದುದು ; ಕರಿಕಾದುದು ; ಸೀದು ತಳಹಿಡಿದ ಅನ್ನ ಮುಂತಾದುದು : "ಪೊತ್ತು—ಅಗ್ನಿ ಪಟೂಕರಣೇ, ಅತಿಪಕ್ವಾನ್ನೇ ಚ (ಸೀದ ಅನ್ನ)" (ಕಮಧಾ) ; "ಇಂಗಳವ ಪಟುವಾಟ್ಟಲ್ಲಿಯತಿಪಕ್ವದೊಳು ಪೊತ್ತು" (ಕರ್ಣಾಮಿ. ೯೯). **ಹೊತ್ತು₄** : ೨. ದಗ್ಧಿಕೆ=ಸುಟ್ಟ ಅನ್ನ, ಹೊತ್ತು (ಗಂಗಾಪು. ೦೬೨). [<ಪೊತ್ತು₁]

**ಪೊತ್ತು₄** 'ಪೊಟ್ಟು' ನೋ.

**ಪೊತ್ತುಂಗೊಱಡು** (ನಾ). ಉರಿಯುತ್ತಿರುವ ಮರದ ತುಂಡು ; ಉರಿಗೊರಡು ; ಕೊಳ್ಳಿ : ಉಕಾರಾಂತದೊಳ್ ಗಕಾರಂ ಪರವಾದುದರ್ಕೆ —ಎತ್ತುಂಗೋಲ್, ಕುತ್ತುಂಗಱ, ಪೊತ್ತುಂಗೊಱಡು (ಕಮಧ. ೦೬೦ ಕೃ.ಯೋ.). [ಪೊತ್ತು₁ + ಕೊಱಡು (<ಕೊಱಂಡು)]

**ಪೊತ್ತುಗಳೆ** 'ಪೊಟ್ಟುಗಳೆ' ನೋ.

**ಪೊತ್ತುಗೆ** (ನಾ). ೧. ಹತ್ತಿಕೊಳ್ಳುವಿಕೆ; ಉರಿಯುವಿಕೆ; ಪುಟಗೊಳ್ಳುವಿಕೆ. ೨. ಬೆಂಕಿ; ಜ್ವಾಲೆ ; ಉರಿ : ಮಿಕ್ಕು ಸೂಸುವ ತೂಱುಗಿಡಿಗಳ ಕಣಾಳಿಗಳ ಕೌಱಿಡುವ ಪೊತ್ತುಗೆಗಳ . . . ಮೊಗೆವ ಪೆರ್ಗಿಚ್ಚುಗಳ ಪೆಂಕಿ ಮೋಲಿಕ್ಕಿದುದು ಹೆಸಧ್ವಜನ ಸೇನೆ ಬೆಂದು ಬೇಗುದಿಗೊಂಡುದಾಕ್ಷಣ ದೊಳು (ಕೈಬಿಭಾ. ೦೩-೦೨). [ಪೊತ್ತು₁ + -ಗೆ]

**ಪೊತ್ತುಪೋಕ, ಹೊತ್ತುಹೋಕ** (ನಾ). (ವ್ಯರ್ಥವಾಗಿ) ಕಾಲ ಕಳೆಯುವವನು; ಕಾಲಹರಣ ಮಾಡುವವನು : ದ್ಯೂತದುರ್ವ್ಯಸನಿ ಗಳೆನಿಪ್ಪ ಪೊತ್ತುಪೋಕರುಗಳೊಡನಾಡಿ ತನ್ನಯ ಲಿಂಗಪೂಜೆ ಲಿಂಗ ಧ್ಯಾನದಾ ಗೊತ್ತನಱಿಯದೆ . . . ಭಂಗಿಯ ತಿಂದವೋಲಿರ್ಪಗೆತ್ತಣದು ಲಿಂಗನಿಷ್ಠೆ (ಸಿದ್ಧೇಶ. ೨೨-೬೬). **ಹೊತ್ತುಹೋಕ** : ವೇದವ ಪಠಿಸುವಲ್ಲಿ ಶಾಸ್ತ್ರವನೋದುವಲ್ಲಿ . . . ಪಗುಡಿ ಪರಿಹಾಸಕರ ಅರ್ತಿಕಾಱರ ಹೊತ್ತು ಹೋಕನಿಗಾಗಿ ಘಟ್ಟುವರ ಕೂಡಲುಂಟೆ (ಶಿಂಬಸ.ಕ. ೩೯೯-೯೨); ಅಸತ್ಯದಲ್ಲಿ ನಡೆದು ವಿಪ್ರರು ನಾವು ಘನವೆಂದು ಹೋರುವ ಹೊತ್ತುಹೋಕರ ಮಾತೇ ತಕ್ಕೆ (ಸರ್ವವ. ೦೦೩-೩೩೯); ಬಱಿದೆ ಹೊತ್ತುಹೋಕರೊಳಾಡದಿರು (ಸದ್ಗುರು. ೨-೦೩). [ಪೊತ್ತು₄ (< ಪೊಟ್ಟು) + ಪೋಕ]

**ಪೊತ್ತುವೆಳಗು** (ನಾ). ಪ್ರಾತಃಕಾಲದ ಬೆಳಕು ; ಬೆಳಗಿನ ಹೊಳಪು : ಕೆತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುವೆಳಗಂ ಬೇಱೆ ತೋರ್ಪ ರಾರ್ (ಕೈಬಿಭಾ. ೨-೦೬). [ಪೊತ್ತು₄ (< ಪೊಟ್ಟು) + ಬೆಳಗು₁]

**ಪೊತ್ತೆ** (ನಾ). ಕುಚ್ಚು ; ಗೊಂಚಲು; ಗುಚ್ಛ : ಮರದಲ್ಲಿ ಪೊತ್ತೆ ಪೊತ್ತೆಯಾಗಿ ಹಿಡಿದ ಕಾಯಿಗಳೊಳಗಿಂದ ಒಂದು ಕಾಯನ್ನು ತೆಗೆದು ತಿನ್ನುತ್ತಿದ್ದಂತೆ ಅದರ ಹುಳಿರಸಕ್ಕೆ ಮೈಮೇಲೆ ಮುಳ್ಳು ನಿಂತವು (ಮೂರುದಾ. ೨೨೩); ಅಂಗಡಿಯ ಹುಡುಗ ಬಸ್ಯಾ ಒಂವ ಇವರಿಂದ ಕೀಲಿಕೈ ಪೊತ್ತೆಯನ್ನು ತೆಗೆದುಕೊಂಡು ಬಾಗಿಲು ತೆರೆಯುತ್ತ (ಮೂರುದಾ. ೨೩೪).

[ದೇ. ॥ ತಮಿ. ಪೊತ್ತೈ = ದೊಡ್ಡದು ]

**ಪೊತ್ತೆಮಿಸೆ** (ನಾ): ಕುಚ್ಚು ಕುಚ್ಚಾಗಿರುವ ಮಿಸೆ ; ಹೊದೆಮಿಸೆ : ಮೋರೆಗೆ ಇಪ್ಪುದ್ದ ಕಪ್ಪು ಪೊತ್ತೆ—ಮಿಸೆಗಳು ; ಕಪ್ಪು ಎದೆಯ ಮೇಲೆ ಕಪ್ಪು ರೋಮ (ಹೊಸಕ್ಷಿ. ೦೭೦). [ ಪೊತ್ತೆ + ಮಿಸೆ ]

**ಪೊತ್ಥ** ' ಪೊತ್ತು₃ ' ನೋ.

**ಪೊದಕುಳಿ,** ಹೊದಕುಳ, ಹೊದಕುಳಿ (ನಾ). ಅಳಲು ; ದುಃಖ ; ನೋವು : ' ಪೊದಕುಳಿಗೊಳ್ ' ಪರಾ. **ಹೊದಕುಳ** : ಇದಕ್ಕೆ ಪರಿ ಹಾರವನು ನೀ ಮಾಡದರೆ ನಾನಿಹೆನಲ್ಲದಿರ್ದೊಡೆ ಹೊದಕುಳದಿ ನಲುಗುತ್ತ ಲಿರಬೇಕಿನಿತು ನೀವಿದ್ದು (ತಿಪ್ಪಸ್ವಾ. ೦-೬೩). **ಹೊದಕುಳಿ** : " ಹೊದ ಕುಳಿಯೆನೆ ಸಂತಾಪಂ" (ಭಾರತಿ. ೨೯); ಆ ಚದುರರ್ಗೆ . . . ಮುಕ್ತಿ ಯಲ್ಲದೆ ಭವದ ಸಂಕಟದ ಹೊದಕುಳಿಯುಮಿಲ್ಲೆಂಬುದಕ್ಕಿದೇ ಸಾಕ್ಷಿ ಯಾಯ್ತು (ಸಮ್ಯಕ್ತ್ವ. ೦೦-೫೩).

**ಪೊದಕುಳಿಗೊಳ್,** ಹೊದಕುಳಿಗೊಳ್, ಹೊದಕುಳಿಗೊಳು (ಕ್ರಿ). ದುಃಖಪಡು ; ಶೋಕಗೊಳ್ಳು ; ನೋವನ್ನು ಹೊಂದು : ಪಿರಿ ದಾಗೆ ಪುಣ್ಯದ ಪೊಱೆಯುದನೆತ್ತುವೊಡರಿದಾಗಿ ಪೊದಕುಳಿಗೊಳ್ವ ಪರಿ ಯೊಳು ಸಾಷ್ಟಾಂಗವೆಱಗಿ (ನಾಗಕು. ೦೩-೬೫); ಈ ವನದೋಳಿನ್ನು ಪುಣ್ಯಾ ಶ್ರಮಂ ಗೋಚರಿಪುದೇ . . . ಹೇಳೆಂದು ಸೀತೆ ಪೊದಕುಳಿಗೊಂಡಳು (ಕೈಬಿಭಾ. ೦೯-೦೨). **ಹೊದಕುಳಿಗೊಳ್** : ಆಶಾಪಾಶದಿಂದ ತೊಳಲಿ ತ್ತಯ್ಯ ಎನ್ನ ಕಾಯವು ಆಶೆಯಿಂದ ಹೊದಕುಳಿಗೊಂಡಿತ್ತಯ್ಯ ಎನ್ನ ಮನವು (ವಚಶಾ. I, ೨೬೩-೦೭); ತೊಲತೊಲಗು ತರುವಲಿಗೆ ರಣವಿದು ಸುಲಭವೇ ಲೋಕೈಕವೀರರು ಹಲಬರಿದಱೊಳು ಹೊಕ್ಕು ಹೊದಕುಳಿ ಗೊಂಡು ಹೋದರಲೆ (ಕುಮಾ.ಕ. ೯-೦೨) ; ಪಾಂಡವನ ಸೇನೆ ಅಟ್ಟೆ ಸುಡು ವನಲಧೂಮಜ್ವಾಲೆಗೊಡನೆ ಗೋಳಿಟ್ಟು ಹೊದಕುಳಿಗೊಂಡು ಹೊರಳು ತಿರಲು (ಕೈಬಿಭಾ. ೮-೯೦) ; ಸರ್ವಜೀವರುಗಳಂತೆ ಉತ್ಪತ್ತಿ ಸ್ಥಿತಿ ಪ್ರಳಯಂಗಳೆಂಬ ಕಷ್ಟಬಂಧನಂಗಳಲ್ಲಿ ಸಿಲ್ಕಿ ಹೊದಕುಳಿಗೊಂಬನೆ ಶಿವನು (ಅಖಂಡೇ. ೦೦೬-೬೨). **ಹೊದಕುಳಿಗೊಳು** : ಇಳೆಯ ಮೇಲಾವ ವಾದಿ ಗಳು ಹದುಳವೇಲೆಂದೆತ್ತಲಾಱದೆ ಹೊದಕುಳಿಗೊಳುತ ನೋಡುತ್ತಿರ್ದಹರು (ಬಸವ. ೩೩-೬೭) ; ದುಗುಡವ ಹೇಱಿ ಹೊದಕುಳಿಗೊಳುತಲಿರ್ದುದು ಹಸ್ತಿನಾನಗರ (ಕುಮಾ.ಕ. ೮-೩) ; ಶುನನಂತೆ ಮನೆಮನೆಗೆ ತಿರುಗಿ ದೈನ್ಯಂಬಟ್ಟು . . . ಹೊದಕುಳಿಗೊಳುತ್ತ (ತತ್ವಪ. ೨೮-೯).

[ ಪೊದಕುಳಿ + ಕೊಳ್₁ ]

**ಪೊದಕೆ₁,** ಪೊದಟ್ಕೆ₂, ಪೊದಿಕೆ, ಹೊದಕೆ₁, ಹೊದಿಕೆ₁, ಹೊದ್ದಿಕೆ₁ (ನಾ). ೧. ಮುಚ್ಚಲು ಬಳಸುವ ವಸ್ತು ; ಮುಸುಕು ; ಆಚ್ಛಾದನೆ : ಪಲವು ಪೊದಕೆಗಳ್ ಬಿಗಿದಿರ್ಪುದವಸನ್ ಮುಡಿಯಿಂದುದಮಡಿವರಂ (ಬಿದ್ದಕೃ. ೬-೯೯). ೨. ಹೊದೆಯುವ ವಸ್ತ್ರ, —ಬಟ್ಟೆ ; ಅಂಗವಸ್ತ್ರ, ಸೆರಗು ಮುಂತಾದ ಮೇಲುಹೊದಿಕೆ : ಚಿಂದಿತ ಪಾರಿಯ ಚಿಮ್ಮುರಿ ಮುಂಗಯ್ಯ ಮುಂದಣ ಪೊದಕೆಯ ಸೆಱಗು ಅಂದವಾಗಿರೆ ಕರ್ನಾಟದರಸುಗಳು ಬಂದು ಕಂಡರು ಮಾತಂಗಿಯನು (ಕುಂಠಾಸಾಂ. ೯೦-೯೩); ತರದ ಕೊಂಬಿನ ಲಾಳಿಯಂ ಮುಟ್ಟಿ

ಸದೆ ರುಚಿರತರಮಾದ ಪೊದಕೆಯಂ ನೆಬ್ಬಿಸಿಕೊಳ್ಳುದೆ ನಿರಂತರದೊಳಿರ್ಪ ತ್ರೊಂದನೆಯ ಶೀಲ (ಧಾಪೋಶ. ೨-೬೦). ೩. (ಮನೆ, ಗುಡಿಸಲು ಮುಂತಾದುವುಗಳ) ಛಾವಣಿ ; ಮೇಲ್ಛಾವಣಿ : ಮೂಳೆಯು ಕಂಭ ವಿಲ್ಲಿ . . . ತಗುಲ್ದೀಳದಮಪ್ಪ ತೋಲ್ ಪೊದಕೆ ಮಾಂಸಮೆ ಕೇರ್ಗಳಮೇಧ್ಯ ಪೂರ್ಣ ದೇಹಾಳಯಂ (ಜೀವಸಂ. ೧೩೦-೨೨) ; ಬಾಲಸತ್ಪಲ್ಲವದ ಪೊದಕೆ ಯಿಂದಿಕ್ಕುದಂಡುಂಗಳಿಂ ಕಣ್ಗೊಳಿಪಂ ನಾನಾಲತಾಂತಪ್ರಸರಸರಯುತಂಗಳ್ ಪ್ರಪಾಮಂಟಪಂಗಳ್ (ರಾಜಶೇ. ೨-೨೦) ; ಪಸುರೆಲೆಯ ಸಟ್ಟವನೆ, ಸೆಳೆಗೊಂಬಿನ ಕೇರ್, ಪಣ್ಣೆಲೆಯ ಪೊದಕೆ . . . ಅಲರ್ಜೊಂಪದ ಮೇಲ್ಕಟ್ಟು ಚೆಲ್ವಾಗೆ ಕಣ್ಗಂ ಮನಕಮಿಂಬಾದ ಪರ್ಣಕುಟಿಯನೇರ್ಪಡಿಸಿ (ರಾಮಾಶ್ವ. ೮೪೯-೦೦). ೪. (ವಸ್ತ್ರ ಮುಂತಾದುವುಗಳ) ಗಂಟು,- ಮೂಟೆ,-ಹೊರೆ : ಅಡಕೆ ೨೫ ಕತ್ತೆಯ ಬರಕಕ್ಕೆ ಪೊಂಗೆ ಅಡಕೆ ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ ಮೊಟ್ಟೆಯ ಸೀರೆಗೆ ಪೊಂಗೆ ಪಣ ೧ (ಪಾಂಡೇಣ್. ೩-೨೨ ವ ; 1047). **ಪೊದಟ್ಕೆ₂**: ೨. ಛೋಂಕೆನೆ ಪಜ್ಜಳಿಪ ತನ್ನ ಸನ್ಮುತವದನಸುಧಾಕರಬಿಂಬದಿನೊಸೆವ ಚಂದ್ರಿಕಾ ವಿಸ್ತಾರದಂತೆ ತೋರ್ಪಧಿಕಸಿತಧವಳಲೋಳಲೋಚನಂಗಳ ಬೆಳಗಿನ ಬಳಗದಿಂ ನಿಳಯಲಕ್ಷ್ಮಿಗೆ ಬೆಳ್ಪಸದನದ ಪೊದಟ್ಕೆಯನಿತ್ತು (ವರ್ಧಮಾ. ೦೩-೬೩ ವ). **ಪೊದಿಕೆ** : ೧. ಕಂಡಪ್ಪಾಂಗಪ್ರಣಾಮಂಬೆರಸು ಪರಿಸದಿಂ ನಾರದಂ . . . ಹಿಂಡೇಳ್ವಾನಂದರೋಮಾಚದ ಪೊದಿ[ಪಾಠಾಂ. ದ]ಕೆಗಳಂ ತಾಳ್ದು ನಿಂದಿರ್ದು . . . ಸ್ತೋತ್ರಮಂ ಮಾಡುತಿರ್ದಂ (೧೦೬. ೮-೯೫). ೨. ಗದಗದಿಪ ಕರಕಮಲಮಂ ಕಂಡು ದಾತಿಚರ್ಮದ ಪೊದಿಕೆಯಿಂದದಂ ಮುಚ್ಚಿ (ಶಬ್ದ. ೩೨-೦). ೩. ಕುಳಿರ್ವ ಕುಳಿರ್ವೆರ ಕೇರ್ಗಟ್ಟಿನಿಂ ಅಸುಕೆಯ ಕಿಸುದಳರ ಪೊದಿ[ಪಾಠಾಂ. ದ]ಕೆಯಿಂ ಪಜ್ಜಳಿಸುವ ಪನ್ನೀರ ಚಳೆಯದಿಂ . . . ಲೀಲೆವಡೆದ ಲತಾಗೃಹಂ ಲತಾಂತಶರಜನ್ಮಭವನದಂತಿರ್ದುದು (ದಶಕು. ೦೦-೬೨ ವ). **ಹೊದಕೆ₁** : ೧. 'ಮೇಲುಹೊದಕೆ' ಪರಾ. ೨. ಧವಳದ ಕಾಂತಿಯ ನಿಲುವೋ ರುದ್ರಾಕ್ಷಿಯ ಹಂಗು ಬೇಡವೆಂದು ಹೊದ್ದ ಚರ್ಮದ ಹೊದಕೆಯಂ ತೆಗೆದ ಗಟಿಗಟಿಜಾತ್ರದ ನಿಲವೊ (ಕೂನ್ನಸಂ. ೦೦೭-೪) ; ಹಿರಿಯ ಮೆಳೆಯಡಿಯಲ್ಲಿ ಹೊದಕೆಯಂ ಹಾಸಿ ಕುಳ್ಳಿರಿಸಿ (ಸಿದ್ಧರಾ. ೨-೩೨) ; ಕಳದರೀ ಚಂಡಾಂಶುವಂಶೋಜ್ವಲರು ಬಳಿಕಾ ಹಿಮಸಮಯವನು ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಕೆಯಲಿ (ಕೊರಚಾ. ೩-೨-೫). ೩. "ಆಚ್ಛಾದನಂ, ವಲಭಿಃ – ಈ ೨ ಮನೆಯ ಹೊ(ದಿ)ದಕೆ" (ಶಬಾಯು. ೫೦-೦೯೬); ಕರಮೆಸೆದವು ಲತೆಗಳನೆಟ್ಟರದಿಂ ಪಚ್ಚೆಲೆಯ ಹೊದಕೆ ಬೆಳ್ವಾಳದ ಬೇರ್ ಸಿರಿಖಂಡದ ಪಳಯುಂ ಕಪ್ಪುರವಳುಕಿನ ಜಗಲಿ ಕೇತಕೀರಜದ ಮಬಲ್ (ಸೂಕ್ತಿಸು. ೦೦-೬೦) ; ಹೊಂದಗಡಿನ ಹೊದಕೆಯ ಮನೆ ಬಹಳ ನೇರಂದವಡೆದ ಪಟ್ಟಶಾಲೆ ಮುಂದೆಸೆಯಲಿ ತುಳಸಿಯ ಮಂಟಪದಿ ಗೋವಿಂದನ ಕೀರ್ತಿಸುತಿಹರು (ವೋಹಶ. ೩-೩೪). ೪. ಒಂದುದಿನ ಮಡಿವಾಳ ಹೊದಕೆಯ ತಂದ ಕತ್ತೆಗೆ ಲಿಂಗವಿರದಿರೆ ಕೊಂದು ಇರಿಸಾಕ್ಷಣದಿ ಅವ ಸಹವಾಗಿ ಕತ್ತೆಯನು (ಬಿಜ್ಜ. ೫೦-೨). **ಹೊದಿಕೆ₁** : ೧. ಏಳು ನೆಲೆಯ ಕರುವಾಡದುಪ್ಪರಿಗೆಯೊಳಗೆ ಒಂದೆ ಮುತ್ತಿನ ನೆಲಗಟ್ಟಿನ ಮೇಲೆ ಭಿತ್ತಿ ಇಲ್ಲದ ರತ್ನದ ಹೊದಿಕೆಯ ಮೇಲಿಪ್ಪ ಕಳಸವ ಕಂಡವರನಾರನು ಕಾಣೆ (ಆಪವ. ಮು. ೨೩೦-೩೯೨); ಕಾಮದ ಒಡಲು ಕ್ರೋಧದ ಗೊತ್ತು . . . ಮತ್ಸರದ ಹೊದಿಕೆ ಆ ಭಾವವಟತ್ತಲ್ಲದೆ ಚೆನ್ನಮಲ್ಲಿಕಾರ್ಜುನನ ಅಜಿವು ದಕ್ಕೆ ಇಂಬಿಲ್ಲ ಕಾಣಿರಣ್ಣಾ (ಮಹಾದೇ. ಪ. ೪೪-೦೦೪) ; ಎಲುಬು ಗಳವ ಮಾಡಿ ನರದ ಬಳ್ಳಿಯಲ್ಲಿ ಬಿಗಿಯುತ . . . ಮಲಿನಚರ್ಮವನ್ನು ಹೊದಿಕೆ ಯೆಳೆದು ನಿತ್ಯ ಬೆಳೆವ ಈ ಹೊಲೆಯ ಗೂಡಿನೊಳಗೆ ಜನಿಸಲಾಜ್ ಲಕ್ಷ್ಮಿಯ ರಸನೆ (ಕೃರಂದ. ೧-೦೭೬-೨). ೨. ನೀರ ಬೊಂಬೆಯ ಚೋಹವ ತೊಟ್ಟು ಅಗ್ನಿಯ ಬಣ್ಣದ ಹೊದಿ[ಪಾಠಾಂ. ದ]ಕೆಯ ಹೊದ್ದು ಗಾಳಿಯ ಗತಿಯಲ್ಲಿ ಸುಳಿದಾಡುವ ಪ್ರಾಣಿಗಳು ದೇವರನೆತ್ತ ಬಲ್ಲರು (ಅಪವ. ೨೦೭-೯೩೦ ; ಕೂನ್ನಸಂ. ೬-೦೦ ನೋ) ; ತವುತವುಗೆ ನೆರೆದು ಬೆಚ್ಚುಂಬಿಲವ ಕುಡುಗೋಲ ಕಪ್ಪಡವನರಳಿಯಂ ತೈಲವಂ ತಾ ಬೇಗಲೆನುತಲಾತನ ಹೊದಿಕೆಯಂ ತೆಗೆದರು (ಸಿದ್ಧರಾ. ೨-೨) ; ಗಡ್ಡದ ಮುದುಕರು . . . ಕಂಗೆಟ್ಟು ಹಾಯ್ದರು ಹೊದಿ[ಪಾಠಾಂ. ದ]ಕೆ ದಂಡು ಕಮಂಡಲವ ಬಿಸುಟಟ್ಟಿಳಿದೆಸೆದೆಸೆಗೆ (ಕೊರಚಾ. ೦-೦೦-೦೨) ; ಹೊದಿಕೆಯನ್ನು ತೆಗೆದು ದೂರಕ್ಕೆ ಎಸೆದೆನು (ಪಂಬರು. ೯೯). ೩. "ಪಟಲಂ, ಛದಿಃ–೨ ಮನೆಯ ಮೇಲುಹೊದಿಕೆಯ ಪೆಸರು, ಮನೆಯ ಮೇಲುಮುಚ್ಚಳ" (ಸಿದ್ಧಾಂತಿ. ೦೦೩) ; ಹೂಡಿದೆಲು ಮಾರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರವಿನ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಸಾ. ೬೫); ಒಲೆಗಳನ್ನು. . .ಹುಲ್ಲಿನ ಹೊದಿಕೆಯ ಮನೆಗಳಲ್ಲಿ ಸುರಕ್ಷಿತವಾಗಿ ಉಪಯೋಗಿಸಬಹುದೆ? (ಅಡುಗೆ. ೨೯). ೫. (ಪುಸ್ತಕ ಮೊದಲಾದುವುಗಳ) ರಕ್ಷಾಕವಚ ; ರಟ್ಟು : "(ಅಂಚೆಯ ಮೂಲಕ ಕಳಿಸುವ ವೃತ್ತಪತ್ರಿಕೆ, ಕಟ್ಟು, ಮೊ.ಗಳ ಮೇಲಿನ) ಆವರಣ, ಸುತ್ತುಹಾಳೆ; (ಪುಸ್ತಕಗಳಿಗೆ ಹಾಕಿರುವ, ಕಳಚಲಾಗುವ) ಕವಚ, ಹೊದಿಕೆ" (Wrapper. ಇಂಕಕಾ) ; ಆ ಹೊಸಪುಸ್ತಕದ ಹೊದಿಕೆ ಹರಿದು ಹೋಗಿದೆ (ರೂಪ). **ಹೊದ್ದಿಕೆ₁**: ೧. ಮಾಸವೆರಡಲಿ ಶಿರ ಮಾಸ ಮೂರಲಿಕೊರಳಂಗ ಮಾಸ ನಾಲ್ಕಲಿ ಚರ್ಮದ ಹೊದ್ದಿಕೆ (ಕೃರಂದ. ೦-೦೫೨-೩).

[ಪೊದೆ₁ + -ಕೆ]

**ಪೊದಕೆ₂**, ಪದಿಕೆ, ಹದಿಕೆ₁, ಹದಿಗೆ₁, ಹದ್ದಿಕೆ, ಹೊದಕೆ₃, ಹೊದಿಕೆ₂ (ನಾ). ಒಂದು ಬಗೆಯ ತೆರಿಗೆ : ಬಂಮರಸದೇವನು ಶ್ರೀರಾಯ ಕೇಶವಪುರವಾದ ಮೊರಲೆಯ ಸಿದ್ದಾಯ ಪೊದಕೆ ಶ್ರೀಕೇಶವದೇವರ ಶ್ರೀ ಸಿದ್ದೇಶ್ವರದೇವರ ನಂದಾದೀವಿಗೆಯ ಸೊಡರೆಣ್ಣೆಯ ನಡಸುವಂತಾಗಿ ಕೊಟ್ಟ ಗ ೫ (ಮೈಕಂ. ೦೯೩೨, ೩೬-೨ ; 1245). **ಪದಿಕೆ** : ಗೌಡಿಕೆ ಮಾನ್ಯ ಪೇಠೆ ಪದಿಕೆ ಸಿದ್ದಾಯ ದಾಯ ಕಾರಕ ಕಣ್ಣಾವಣ ಮೊದಲ ವಿಧ್ಯ× ×ನುಂಟಾದನುಮ ಮಾಡ್ಸಿ ಕೊಣ್ಡ (ಎಕ VIII, ಸೊರಬ. ೨೬೬-೩೪; 1629 ?). **ಹದಿಕೆ₁** : ಉಪಾಧ್ಯಾಯರ್ಗೆ ಮುಂಚಿದ ಹದಿಕೆಯಲ್ಲೀವಿತಮಂ ಕೊಟ್ಟು (ಶಾಇಇ. XI-ii, ೦೬೩-೫೬ ; 1124) ; ಮೂಜಡಿ ಮಣ್ಣಿಗೆ ಅಱು ಹೊನ್ನ ತೆತ್ತು ಮಿಱಿ ಹದಿಕೆಯ ಬೇಡೆ(ಕೊಳ್ಳಿ) ನಂದೀಗ್ರಾಮದವರ ಮುಂದಿಟ್ಟು ವಿಚಾಱಿಲ್ಲ (ಸರ್ವಜ. ೦೦೪-೫೬೪); ನಲಿವ್ಮೆಯ ಹದಿಕೆಯ ನೆತ್ತುವ ಹೆಗ್ಗಡೆಗಳಾರು ಬಂದಡಂ ತಂಮ ಧರ್ಮ್ಮವಾಗಿ ಪ್ರತಿಪಾಳಿಸುವರು (ಶಾಇಇ. IX-i, ೩೪೯-೯; 1282); ಮೊಱೆದೆದ್ದು ಸಕಲ ರಾಣುವೆಯೊಂದು ಹುರಿಯಾಗಿ ಪುರವರದೊಳಿತ್ತಿ ಹದಿಕೆಯನು (ಸವ್ಯಕೌ. ೨-೫೪). **ಹದಿಗೆ₁** : ಹದಿಗೆಯಾಗಿ ಗ ೭೨× ×ದಲೂ ಯುಪ್ಪತ್ತೆರಡನೂ ತೆತ್ತು (ಎಕ IX (S). ಕುಣಿಗ. ೨೭-೦೮ ; 1563). **ಹದ್ದಿಕೆ** : ಗ್ರಾಮ ವಂದಕ್ಕಂ ಕುಳಗ ೨॥ ೦॥ ೭ ಗಂಪತಿಕುಳ ೧ ಹದ್ದಿಕೆ ೯ (ಮೈಕಂ. ೦೯೩೪, ೨೭-೦೯; 1430). **ಹೊದಕೆ₃** : ಆ ಹತ್ತು ವೃತ್ತಿಯ ಸಿದ್ದಾಯ ಸೇಸೆ ಅಳಿವು ಅನ್ಯಾಯ ಹೊದಕೆ ಮುಖ್ಯವಾಗಿ ಏನು ತೆಱುಗಡೆ ಬನ್ದಡೆಪೂ. . .ನಡಸುವನ್ತಾಗಿ. . .ಧಾರಾಪೂರ್ವ್ವಕಂ ಮಾಡಿಕೊಟ್ಟರು (ಎಕ XII, ತಕ್ಕಿಣ. ೨-೨೩ ; 1261) ; ಅವುಗೆ ಅನಾಯ ಹೊದಕೆ ಸಹಿತವಾಗಿ ಏನು ಬಂದದೂ ಸರ್ವ್ವಮಾನ್ಯವಾಗಿ ಅರಸುಗಳು ಯೇನುಬಂದದನೂ ಯಿಳಿಹಿಕೊಟ್ಟ ದರ್ಮ (ಕಇ. III-i, ೬-೪೪; 1348) ; ಆ ಪುರದ ಚತುಸ್ಸೀಮೆಯೊಳಗಣ ಅಕ್ಷೀಣಿ ಆಗಾಮಿ ನಿಧಿ ನಿಕ್ಷೇಪ ಜಲ ಪಾಶಾಣ ಸಿದ್ಧ ಸಾಧ್ಯ ಸಿದ್ದಾಯ ಹೊದಕೆ ಹದಿಕೆ ಕಾಣಿಕೆ ಕಡ್ದಾಯ . . . ಅಷ್ಟಭೋಗತೇಜಸ್ವಾಮ್ಯವನು (ಎಕ XI, ಚಿತ್ರದು. ೨-೨೨;1355). **ಹೊದಿಕೆ₂** : ಶಾಂತಿಗ್ರಾಮದ ಅಧಿಕಾರಿಗಳು ಪ್ರತಿವರ್ಷ ಸಲ್ವಂತಾಗಿ ವರದನರಸಿಂಹದೇವರ್ಗ್ಗೆ ತಂಮ ಹೊದಿಕೆಯ ಹೊಂನಿನೊಳಗೆ ಹತ್ತು ಗದ್ಯಾಣ ಹೊನ್ನನು ದೇವರ ಹೊದಿಕೆಯಂ ಧಾರಾಪೂರ್ವ್ವಕಂ

ಮಾಡಿ ಕೊಟ್ಟರು (ಕ್ನ್ಯಾಅ. ೦೯೪೦, ೩-೨೯ ; 1216); ಆ ಸೋಮನಾಥಪುರಕ್ಕೆ ಉರುತ್ಕವಾಗಿ ಬನ್ದ ಹದಿಕೆ ಹೊರಣೆ ಹೊದಿಕೆ ಮಳಬ್ರಿಯವೊಳಗಾಯಿತ್ತು (ಎಕ. III. ತಿರುಮ. ೯೬-೯೭ ; 1300) : ಅರಮನೆಯಿಂದ ಬಂದ ಹದಿಕೆ ಹೊದಿಕೆ ಮಗಮೆ × × × ಸಿದ್ದಾಯ ಮನೆವಾರ್ತೆ ಹಣಕಾಹುಕಾಣಿಕೆ (ಕ್ನ್ಯಾಅ. ೧೯೩೯, ೩೯-೨೩; 1435).

**ಪೊದಪು, ಹೊದಪು₁, ಹೊದೆಪು** (ನಾ). ಹೊದೆಯುವ ವಸ್ತ್ರ ; ಹೊದಿಕೆ ; ಮೇಲುವಸ್ತ್ರ : ಚರವೇಷದಿಂ ಶಂಭು ಬಂದು ಪೊದಪಂ ಬೇಡೆ ತರಳಾಕ್ಷಿಯುಟ್ಟುಱುವೆಯಂ ಕೊಡಲು (ಶಾಶಶ. ೬-೨೩); ಅಂಬುಜನಾಭಙಾ ಸಭಾಮಂಟಪವನುಳಿದು ಮಣಿವ್ರಜದ ದೀಪ್ತಿಯ ಬೆಳಗಿನಿಂದ ಸ್ವಮಂದಿರಕೆ ಪೋಗಿ ಪೊದಪಂ ತೆಗೆಯಲು (ಪಪೂ. ೦೭-೦೭). **ಹೊದಪು₁** : ಚಿನ್ಮಯ ಚಿದ್ರೂಪ ಚಿತ್ಪ್ರಕಾಶವೇ ತನ್ನ ಹೊದವು (ಪ್ರಕಾ. II. ೦೩೯-೦) ; ಮಱೆಯೊಳು ರಮಿಸಿದರೆನೆ ಸಾಕು ಹೊದಪಿನ ಮಱೆ ಹೋಯ್ತು ಪೂಳ ವಾಯ್ತೆಂದು ತುಱುಬಳಿದುದು ದೇಹ ಕಂಪಿಸಿತೆಂದದ ಹೂಱುಹೊವ್ವಿ ಸುವುದಾವ ಪ್ರೌಢಿ (ಶರಾ. ೦೦-೦೦೬); ಹಜಾಮನಿಗೆ ಕೆಪ್ಪಿನ ಗಣಗಳಹುವು ಕೆಪ್ಪಿನ ಹೊದಪು ಸಾಣಿ ಕಟಕಡೆ ಬಾಗಲುಯಿದು ಹಜಾಮನಿಗೆ ಸಲುವದು ಯೆನ್ದು . . . ದೇಶನಾಡಿನವರು ಗ್ರಾಮಾಧಿಪತಿಗಳು ಕರಣಿಕರು ಸಹ ಹೇಳಿದರು (ಎಕ. IX. ಕಾನಕ. ೯೦-೩೬; 1700). **ಹೊದೆಪು** : ವಿಶ್ವಭೂತಿ ಯೆಂಬಾ ಪಾರ್ವಂ ... ಒಂದುದಿನ ಪೊಡಲು ಹಿಡಿವಂತೆ ಬಾಯ್ವಾಯಿಯಾಗು ವಂದದಿಂ ಕನಸುವನಸಿನೊಳಂಬುದಂ ಕಾಣನೊಂದುದಿನಮಾಗಿಯುಂ ಮೆಯ್ಯುಂಬ ಹೊದೆ[ಪಾಠಾಂ. ದ]ವುಮಂ ಹೊದೆವುದಂ ಕಂಡಱಿಯನು (ಸುಕ್ಯಾ. ೬-೩೦). [ಪೊದೆ₁ + -ಪು₂]

**ಪೊದಯಿಸು** 'ಪೊದೆಯಿಸು' ನೋ.

**ಪೊದರ್** 'ಪೊದಱ್' ನೋ.

**ಪೊದರು₁** 'ಪೊದಱ್' ನೋ.

**ಪೊದರು₂, ಹೊದರು₂** (ನಾ). ೧. (ಮರದ) ಪೊಟರೆ ; ಡೊಗರು : ಪೊಳ್ಳು, ಪೊಟ್ಟೆ (ಹೊಟ್ಟೆ), ಪೊದರು (ಹೊದರು), ಪದರು, ಡೊಗರು (ಕಂಪುಕು. ೯೮). ೨. (ನೆಲದಲ್ಲಿರುವ) ರಂಧ್ರ ; ಕುಳಿ ; ಬಿಲ ; "ತೂತು" (ಗುಣಾಪು. ೨೦೭). **ಹೊದರು₂** : ೧. ಮರದ ಹೊದರಿನಲ್ಲಿ ಗಂಭೀರವಾದ ಘಟಸರ್ಪವಿರುವುದನ್ನು ಬೋಧರಾಯ ಅರಿತಿರಲಿಲ್ಲ ! (ರಕ್ತಕ್ರ. ೯೪); ಕಪ್ಪೆಯು ನಿದ್ದೆಯಿಂದ ಇದೇ ಎಚ್ಚತ್ತು ಸಾವಕಾಶವಾಗಿ ಕಾಲಿಡುತ್ತ ಬಿಲಪತ್ರಿಯ ಗಿಡದ ಹೊದರಿನೊಳಗಿಂದ ಹೊರಕ್ಕೆ ಬಂದಿತು (ಕುಂಹಿಂ. ೩೩). ೨. ಶಹಾಮೃಗವು ನೆಲದ ಹೊದರಿನಲ್ಲಿ ಮನೆಮಾಡುತ್ತದೆ (ಪ್ರುಂಕಾ. ೪-೮೯೯); ಆಗ ಶಾಕ್ಯಸಂಘಲಕನು ಅವನ ಶಕ್ತಿಯನ್ನು ಕಂಡು ಅವನೊಬ್ಬನ ಜೊತೆಗೆ ಬಂದು ನೆಲದ ಹೊದರನ್ನು ಹೊಕ್ಕನು (ಕಪು. ೩೦). ೩. (ಆಲಂ) ಬಿರುಕು ; ಭಿನ್ನಾಭಿಪ್ರಾಯ : ಅಂತಃಪುರದಲ್ಲಿಯೂ ಎಲ್ಲಿಯಾದರೂ ಡೊಗರು ಬಿದ್ದಿದೆಯೋ, ಹೊದರು ಕೊರಕಲು ಆಗಿವೆಯೋ ಎಂಬ ಬಗ್ಗೆ ಒಮ್ಮೆಯಾದರೂ ಪರೀಕ್ಷಿಸಿ ನೋಡಬೇಕೆಂದು ಭೂಪತಿಯ ಮನಸ್ಸಿಗೆ ಹೊಳೆದಿರಲೇ ಇಲ್ಲ (ಇಕ್ಷ್ವಕ. ೨೩೩).

[ದೇ.॥ ತಮಿ. ಪೊನ್ತರ್, ಪೊನ್ತು ; ಮಲ. ಪೊತ್ತು ; ತೆಲು. ಬೊಂದ, ಬೊತ್ತ]

**ಪೊದರೊಡೆ** 'ಪೊದಱೊಡೆ' ನೋ.

**ಪೊದರ್ಕೊದಳ್** (ನಾ). ಅತಿಶಯವಾಗಿ ಸೇರಿರುವ ಮಧುರವಾದ ಮಾತು : ಪದ ಕೊರಲಿಂಪನಪ್ಪುಕೆಯ [ಕೊಂಕು ನ]ಯಂ ಗಮಕಂಗಳಿಂ ಪೊದರ್ಕೊ[ಪಾಠಾಂ. ರ್ತೊ]ದಳೆಱೆದಿಕ್ಕಿದಂತೆ ಸುತಿಯೊಳ್ ಸಮಮಾಗಿರೆ ಜಾಣನಾಂತು ಮೆಚ್ಚಿದ ತೆಱದಾಸೆವಟ್ಟಲಸದತ್ತಿದಪೋಲ್ ದೊರೆವೆತ್ತು ದೂಱುದಾಱದ ದನಿಮುಟ್ಟೆ ಮೇಣಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಕಂಪಕಾ. ೬-೮೮). [ಪೊದಱ್ + ಕೊದಳ್₂ (< ಕೊದಲ್ಕು)]

**ಪೊದರ್ದಲೆ, ಹೊದಱುದಲೆ** (ನಾ). ೧. ಕೂದಲು ಜಡೆಗಟ್ಟಿ ಪೊದೆಯಂತೆ ಆಗಿರುವ ತಲೆ ; ಪೊದೆಗಟ್ಟಿದ ಕೂದಲುಳ್ಳ ತಲೆ : ಕಿಮ್ಮಿಸೆಯ ಜೋಲ್ವಾಯ ಪೊದರ್ದಲೆಯ ಕರ್ಬೊಗದ . . . ಜವನ ದೂಱು ಗಾಱರ ಜಂಗುಳಿ . . . ಸಡಗರದ ದೞವುೞದಿಂ ಬಂದು ಮುತ್ತಿ ಮುತ್ತಿ ಅಱಗುಲಿಜೀವಾತ್ಮನಂ ಸೆಱೆವಿಡಿದತ್ತು (ರಾಮಾಕ. ೭೯-೦೯). **ಹೊದಱುದಲೆ** : ೨. ಅನೇಕ ತಲೆಗಳ ಗುಂಪು : ಹೊದಱುದಲೆ ಹೊಕ್ಕಾಳಿ ಬೆರಳಿನ ತುದಿಯ ತುಟಿಯಲಿ ಬೊಬ್ಬಿಱುಡದಿನನದಿರೆ ದಳವುಳಿಸಿದುದು ಕೌರವ ಪಾಂಡವರ ಸೇನೆ (ಕುಭ್ಯಾ. ೭೦. ೯-೪); ಬೆದಱೆದರು ಕಂಡವನ ರೂಪನು ಹೊದಱುದಲೆಗಳ ಹೊತ್ತ ಚೋಹದ ಮದದ ಗರ್ವದ ಗಾಢಗಮನದ ಭೂತವಲಯೆನುತ ಸುದತಿಯರು ಗಡಗಡನೆ ನಡುಗಿದರು (ಕೊರಂ. ೦-೦೩-೦೨). [ಪೊದಱ್ + ತಲೆ₁]

**ಪೊದರ್ವಡೆ** (ಕ್ರಿ). ದಟ್ಟವಾಗು ; ಒತ್ತಾಗು ; ನಿಬಿಡವಾಗು : ಪೊದರ್ವಡೆದಡವಿಯ ಪಥದೊಳ್ಪಡಿದುದೊಂದು ಕೇಸರಿ ತನ್ನ ನಂದನನನು (ಕ್ವಿರಾಣ. ೨೬-೩೩). [ಪೊದಱ್ + ಪಡೆ₁]

**ಪೊದರ್ಮನೆ, ಹೊದಱುಮನೆ** (ನಾ). ಬಳ್ಳಿಮನೆ ; ಲತೆಮನೆ ; ಪರ್ಣಶಾಲೆ : ಕೊಳದೆಡೆಗೆಯ್ದಿ ತವಕದಿಂದವಲೋಕನಂಗೆಯ್ದು ಒಡನೊಡನೆ ಮರಳಿದಳ್ ಮಾಕಂದಕಂದರ್ಪತರುತಲದ ಪೊದರ್ಮನೆಗೆ (ಪಕ್ರಾಂಗ. ೩೨-೦೯೦೯). **ಹೊದಱುಮನೆ** : ಕೆಲಬಲದಲ್ಲಿ ಅವನನು ಅಱಸುತ್ತ ಕಾಣದೆ ಗಿಡಮರಗಳ ಬಳಿಯಲ್ಲಿ ಹೊದಱುಮನೆಗಳಲ್ಲಿ ಕೊಳದ ತಡಿಗಳಲ್ಲಿ ನೋಡುತ್ತ ಬಹು ಹೊತ್ತಿನ ಮೇಲೆ ಒಂದು ಹೊದಱುಮನೆಯ ಮುಂದುಗಡೆಯಲ್ಲಿ ಕಲ್ಲಱೆಯ ಮೇಲೆ ಕುಳಿತು . . . ಮನ್ಮಥಪರವಶನಾಗಿರುವ ಬಗೆಯನು ಕಂಡು (ಪಕಾ. ೨೬). [ಪೊದರ್ (< ಪೊದಱ್) + ಮನೆ]

**ಪೊದಲು** (ನಾ). (?) : [ಮಾಮಂಕಾ]ಲ ಪೊದಲು ಎರಡುಂ (ಇಅ. ೦೯೯೬, ಹಾಮಗ. ೨೯೬-೩೯ ; ?). [ ? ]

**ಪೊದಲ್ನಾಡು, ಹೊದನಾಡು, ಹೊದೆನಾಡು** (ನಾ). ಒಂದು ನಾಡಿನ ಹೆಸರು ; ೲ ಈಗಿನ ಕೋಲಾರ ಜಿಲ್ಲೆಯ ಒಂದು ಭಾಗ : ವಲ್ಲವ ಕುಲತಿಲಕ ಶ್ರೀಮತ್ × × × ರಾಜ ಪ್ರಿಥಿವೀರಾಜ್ಯಂಗೆಯೆ × × × ಭೀಮ × × × ನೆ ನಾಡು ಮೂನೂಱು ಪೊದಲ್ನಾಡಱುವತ್ತುಮನಾಳೆ (ಎಕ. X. ಶ್ರೀಐಪಾ. ೩೦-೬ ; ಸು. 880 ?) ; × × × ಪೊದಲ್ನಾಡು ದ × × ಬೆಳಙ್ಗಱ್ಗರ × ಕೊನ್ದನ್ ತುಱುಗೊಳೆಯ್ದು ಸತ್ತರ್ (ಎಕ. X. ಶ್ರೀಐಪಾ. ೦೯ ಎ-೦ ; ?). **ಹೊದನಾಡು** : ಹೊದನಾಡಿನೊಳಗಾದ ಗುಳ್ಳಹಳ್ಳಿಯ ಮುತ್ತರಸನ ಮಗ ದೇವಣ್ಣನ ಮಗ ಮರಿಯಪ್ಪನು ಮಾಡಿಸಿದ ದೀಪಮಾಲೆಕಂಬ (ಎಕ. X. ಶಿಂಕಾಮ. ೦೯೬-೩ ; 1667 ?). **ಹೊದೆನಾಡು** : ಹೊದೆನಾಡ ಒಳಗೆ ನಮ್ಮ ಮುಳುವಾಯ ನಾಚೀದೇವಿಯರಿಗೆ ಸಲುವ ಕತರಿಯ ಹಳಿಹಳಿಯ ಸೀಮೆ ಒಳಗೆ (ಎಕ. X. ಮುಳಬಾ. ೬-೯ ; 1416) ; ಶ್ರೀಮತು ಹೊದೆನಾಡ ಉತ್ತನೂರ ಮಾಡವಾಳದ ಕಾವಬ್ಬ ದೇವಿಯರ ಸ್ಥಾನಿಕನಾಯಕ . . . ಬರಸಿ ಕೊಟ ಶಾಸನ (ಎಕ. X. ಮುಳಬಾ. ೦೦೩-೩ ; 1636?). [ಪೊದಲ್₁ + ನಾಡು]

**ಪೊದಳ್** 'ಪೊದಱ್' ನೋ.

**ಪೊದಳು** 'ಪೊದಱು' ನೋ.

**ಪೊದಳ್ಕೆ** 'ಪೊದಱ್ಕೆ₁' ನೋ.

**ಪೊದಳ್ಕೆವಡೆ** 'ಪೊದಱ್ಕೆವಡೆ' ನೋ.

**ಪೊದಱ್**, ಪೊದರ್, ಪೊದರು₁, ಪೊದಱು, ಹೊದರ್, ಹೊದರು₁, ಹೊದಱ್, ಹೊದಱು₂ (ನಾ). ೧. ದಟ್ಟವಾಗಿರುವ ಗಿಡಮರಗಳ ಸಮೂಹ ; ಪೊದೆ ; ಹಿಂಡಲು : "ಕುತ್ತುಱೆಂದು ಪೊದಱ್" (ಕಶಾ. ೩೦-೮೦) ; ಆಗಳ್ ದುರ್ಯೋಧನನಾತ್ಮೀಯಸೇನಾನಾಯಕನಪ್ಪ

ಗಾಂಗೇಯಂ ಬಿದಿರ ಸಿಡಿಂಬಿನ ಪೊದಱೊಳಗೆ ಮಱೆದೊಱಗಿದ ಮೃಗ ರಾಜನಂತೆ ಶರಶಯನದೊಳೊಱಗಿದಂ (ಶಂಕಶಾ. ೧೧-೫೦ ವ); ಭಟ್ಟನೀ ಚೋದ್ಯಮಂ ನೋೞ್ಪೆನೆಂದು ಅದಱ ಕೆಲದೊಳ್ ಪರ್ವಿ ಕೊರ್ವಿ ಸುರ್ವು ಗೊಂಡ ಮಾಧವಿಯ ಪೊದಱೊಳಡಂಗಿರ್ದು ನೋೞ್ಪುದುಂ (ಶಂಕಶಂ. ೨೩೦-೭); ಬಿಡದೆ ಕುತ್ತುಱುಗಳಂ ಸೋವಿದರ್ಶೀವಿದರ್ಗಿಡಗಳ ಪೊದರ್ಗ ಳಿಂದೆಬ್ಬಿಸಿದರುಬ್ಬಿಸಿದರೊಡನೊಡನೆ ಖಗಮೃಗವ್ರಾತಮಂ ಪಾತಮಂ ಮಾಡಿದರ್ಕೂಡೆ (ಕೈಖಿಶಾ. ೨೮-೯೭). ೨. ಗುಂಪು ; ಸಮೂಹ ; ಸಂದಣಿ : ಭೋರ್ಗರೆದುವನಿತಱೊಳ್ ಸಾಳಸಾಳವಮಾ ತೇರ್ಗಳ ಪೊವಱ್ ಪೊದಳ್ದಿದುವು ಮೈಬೆವರ್ನೀರ್ಗಳೊಗೆಯಲ್ ಮಾಜಿ ರಾಜಿ ನಡೆವುದು (ಜಐಪು. ೩೦-೩೦). **ಪೊದರ್:** ೧. ಹರಿಣೇಂದ್ರನಂ ಕ್ರೂರಕಣಂಗಳಿಂದನಿಬರುಂ ಭರದಿಂದ ಪೊದರ ಬಿಟ್ಟೇಳ್ವನಿತರಲ್ಲಿ ತಟ್ಟೈರದ ಲಕ್ಷ್ಯಂ ಬಿಡದಿಸುತ್ತೆ ಬೊಬ್ಬಿಡಲ್ (ಮಹಾಪಿ. ೭-೩೦); ಗರುವ ತರುವರ ಕುಲಂ ಮೂಲಮಂ ತಿರಿಪಿ ವಿಮಾನದ ಪೋಲ್ ನೆಲಕ್ಕುರುಳ್ದುವು, ಪೊದರ್ ಗಿಡುಗಳಂ ಪುಡಿಗೈದು (ಶಕ್ರಾಂಗ. ೯೯-೧೩೦೯). **ಪೊದರು₁ :** ೧. "ಪೊದರು ಕುಂಜು" (ಕಶಠ. ೩೯); ಸುತ್ತು ಬಲೆಯನ್ನು ಬೀಸಿ ಮತ್ತೆ ಪೊದರುಗಳನರಸಿ ಕುತ್ತಿ ಕೆಡಹಿ ಮಿಗಗಳನ್ನು ಮತ್ತೆ ದೊರೆಗೆ ತೋರಿಸಲು (ಸಳಪಾ. ೧೮-೫); ಅವಳ ಹೊಂಬಣ್ಣದ ಮುಖಮಂಡಲ ಗೈರಿಕವಸನ ಗಳಿಂದ ಪರ್ವತದ ಸನಿಹಪ್ರದೇಶದಲ್ಲಿ ಕಕ್ಕೀಗಿಡದ ಪೊದರು ಹೂ ಬಿಟ್ಟದೆಯೋ ಎಂಬಂತೆ ಕುಂಡಲಿತವಾಗಿದ್ದಿತು (ಶಾಣಆ. ೯೫); ವಾಯು ಪುತ್ರನಾದ ಭೀಮಸೇನನು . . . ಆನೆಯ ಹಾಗೆ ಕಾಡಿನಲ್ಲಿ ಗಿಡಗಳನ್ನೂ ಪೊದರುಗಳನ್ನೂ ದೂರಮಾಡಿ ದಾರಿ ಮಾಡಿಕೊಂಡು ನಡೆದನು (ವ್ಯಾಸಶಿ. ೬೫). **ಪೊದಱು :** ೧. "ಕುತ್ತುಱೆನೆ ಪೊ[ಶಾಆಂ. ಹೊ]ದಱು" (ಶಕುಶಿ. ೯೨); ಇನಿತು ದಿವಸಮಿಾ ಮರಗಳ ಗಿಡುಗಳ ಪೊದಱುಗಳ ಮಱೆಗಳೊಳೀ ಪೊಱಲು ಕಂಡೆಮಿಲ್ಲೆಂದು ಮನದೊಳ್ ಬಗೆದು (ಶಬ್ದಾಶಾ. ೮೯-೨೨); ಪೊದಱು ಮರಂ ಗಿಡು ಪುಲ್ಲೆಂಬುದು ತಿರ್ಯಗ್ಜಾತಿಯೆಂಬುದಲ್ಲದೆ ನರನೆಂಬುದೆ (ಸಮಹ. ೯-೧೩೦); ಬಗಿದು ಪುಗಲ್ಕರಿದಲ್ಲಿಯುಮೊಗೆದ ಮರಂ ಪೊದಱು ಬಳ್ಳಿ ಗಿಡುವೆಂಬಿವಱಿಂ ಮಿಗಿಲೆನಿಪ ಬಲ್ಲೆ ನಗಸಾನುಗಳೊ ಳದಂತಾವ ಮೆಯ್ಯೊಳಂ ಪುದಿದಿರ್ಕುಂ (ಕಾವ್ಯಾವ. ೯೭); ಅವಳಾದ ಮಲ್ಲಿಗೆಯ ಪೊದಱೊಳಗೆ ತಿರುಗಿದೊಡೆ ತೆರಳ ಬಲ್ಲದೆ ಸಂಪಗೆಯ ಬನಕೆ ಮಱುದುಂಬಿ (ಕೈಖಿಶಾ. ೨-೫೭). ೨. ಮದಕರಿಗಳ ಮೊತ್ತ ಕದಳಿಯ ವನಗಳ ಪೊಪಱ ಕತ್ತೀಡಾಡುವಂತೆ ಕದನಗಲಿಗಳಿಂದ ಮುತ್ತಿವ ತುರುಕರ ಸದೆದೆಬ್ಬಿಸು ನೀನು (ಕಂವಶಿ. ೦೯-೫೨). **ಹೊದರ್ :** ೧. "ಕುಂಜಃ, ಕುಂಜುಃ, ಕುಂಜನಂ, ಈ ೩ ಹೊದರ್" (ಕಾಶಕ್ಕ. ೬೫); ರಾಜಕುಮಾರಿ ಬನದೊಳಲ್ಲಲ್ಲಲೆದು . . . ಮೋಣೊರ್ವ್ವ ಬಳ್ಳಿಹೊದರನೆ ಕುಟೀರಂಗೆತ್ತು ತಲ್ಲಣಿಸಿ ಮುಂ ನಡೆದು, ತಪ್ಪನರಿಯುತೆ ನಾಚಿ, ಸವ್ಯನಾಚಿಯನರಸುತಿರೆ (ಶಕ್ರಾಂಗ. ೨೦-೫೯೯). **ಹೊದರು₁ :** ೧. ಉದಕಮಂ ಕೊಳಬಂದ ಮೃಗಗಳ ಬೆದರದಂತೆಸೆಯಲ್ಕೆ ತೋಹಿನ ಹೊದರಿನೊಳು ಕಾದಿರ್ದ ಚಾಪಾಸ್ತ್ರಗಳ ಕೈಕೊಂಡು (ಅಪಂಅ. ೨-೩-೭); ಬಿದಿರುಕೊಳ್ಳಕೆ ಹೋಗಿ ಹೊದರೊಳಗೆ ಕೈಹಾಕಿ ಬಿದಿರೆಳೆಯ ಕೊಯ್ದು ನಿತ್ಯದಲಿ ಕಾಯಕವ ಬದಿಕಿಸುತಲಿದ್ದ ಸತಿಯೊಡನೆ (ಕನ್ನಶಾ. ೨೬೫); ಹೊದರೂ ಮುಳ್ಳೂ ತುಂಬಿದ್ದ ಆ ವನ ಹಿಂದೆ ಒಂದು ಕಾಲದಲ್ಲಿ ದೊಡ್ಡ ನಗರವಾಗಿ ಇತ್ತಂತೆ (ವ್ಯಾಸಶಿ. ೯೦). ೩. (ಆಲಂ) ತೊಡಕು ; ಸಿಕ್ಕು ; ತೊಂದರೆ : ಹೇಗೂ ನಾಲ್ಕು ದಿನ ಸಮಾಧಾನವಾಗಿ ನಡಕೊಂಡು ಅವರಿಗೆ ತಿಳಿವಳಿಕೆ ಕೊಟ್ಟು ಅವರನ್ನು ಈಗಿನ ಹೊದರಿಂದ ಬಿಡಿಸಿಕೊಳ್ಳೋದೇ ಸರಿ (ಶಕರಾ. ೧೧೮). ೪. ಪೊದೆಯಾಗಿ ಸಸ್ಯಗಳು ಬೆಳೆದಿರುವ ಭೂಮಿ (?): ಚಂದನಕ್ಕೆಯಿಂದಲೂ ಬೀಜ ಖ ೨ಕೆ ಖ ೮ ಉಂಬಳಿ ಹೊದರಿಂದ ಬೀಜ ಖ ೫ಕೆ ಗಡಿ ಖ ೨೦ (ವೃಆಂ. ೧೯೨೯, ೮೯-೨೭ ; 1632). **ಹೊದಱ್ :** ೧. ತುದಿಕೋಡೊಳ್ ವೇಣುಜಾಲಂಗಳ ಹೊದಱನಡರ್ದೆತ್ತುತುಂ . . . ಕಂಠದ ಬಿಣ್ಪಂ ಜೊಂಪಿಸುತ್ತುಂ ನಡೆದುದಡವಿಯೊಳ್ ದೀರ್ಘದೇಹಂ ವರಾಹಂ (ಸೂಕ್ತಿಸು. ೩-೩೯); ಹೊದಱಂ ಪುಗಿಸೆರ್ಬು ನಟ್ಟು ನಿಲ್ಸರಳಿಸ ಲಿತ್ತು ಕುತ್ತು . . . ಸಾರೆನುತಿರ್ಪ ಬೇಡ[ರ]ಬ್ಬರಕಿರದೊಂದನೊಂದೆಡ ಪುತಾಕುಳಮಾಯ್ತು ಮೃಗೀಮೃಗವ್ರಜಂ (ಮಹಾಸೇ. ೩-೧೫); ಅದಱೊಳ್ ತಾವರೆವಳ್ಳಿಯ ಹೊದಱೊಳ್ ಬಿಸನಾಳಸಾರವಂ ಸವಿದು ಸುಖಾಸ್ಪದ ದಿಂದಿರ್ದುದು ಜಾಂಬೂನದಹಂಸಂ ಮಱೆದು ತನ್ನ ಮಾನಸಸರವಂ (ವಳಶಂ. ೦೨೭). **ಹೊದಱು₂:** ೧. "ಉಲಪಃ, ಸ್ತಂಭಃ, ಗುಲ್ಮಃ, ವೀರುತ್, ವಿಟಪಃ—ಈ ೫ ಹೊದಱು" (ಜಆಯು. ೩೦-೩೭); ಇಡಿದಿರ್ದ ಹೊದಱಿ ನೊಳು ಸರಿವಿನೊಳು ವರಿವಿನೊಳು . . . ಬರುತಿರೆ (ಕಣ್ಣರ. ದೇ. ೦೨೯-೭); ಅರಣಿಯನು ಮೃಗವೆಳೆದುಕೊಂಡೀ ಹೊದಱ ಹೊಕ್ಕುದು ಬಹಳಕಾನನದ (ಕುವ್ಯಾಆ. ೨೩-೭) : ಹೊಕ್ಕು ಲೀಲಾಸರಸಿಗಳನಿರದೆ ಕಯ್ಯಿಕ್ಕಿ ಹೊದಱು ಗಳೆಡೆಯನು ಹಿಕ್ಕಿ ಹೆಮ್ಮೆಳೆಗಳನಱಸಿ ನೋಡಿದೆವದು ಸಿಕ್ಕಿದುದಿಲ್ಲೆಮ್ಮ ಕಣ್ಗೆ (ಕುರಾಸಾಂ. ೩೨-೨೪). ೨. ಬೆಳೆಗೆಯ್ದ ಹೊದಱಿನೊಳು ಮುನ್ನಾಡಿ ದೆಡೆಗಳೊಳು . . . ಮೇವ ತುಱುವಿಂಡಿನೊಳು ದಾರಿಯೊಳು ಸುತ್ತಿ ಸುಳಿದಱ ಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೩೭); ಸುಮಹಾರಥರ ಹೊದಱಲಿ ಹೊಕ್ಕನುರಿ ಬಲುಮೆಳೆಯ ಹೊಕ್ಕಂತೆ (ಕುವ್ಯಾದ್ರೋ. ೨-೩೦) ; ಹೊದಱ ರಳ್ಳಿಗಳಡಾಯುಧ ಕಯ್ಯ ಪೊಡೆ ಸರಳ ಹೊದೆಗಳಂ ತತ್ತಸ್ಥಳಂಗಳೊಳ್ ಕಟ್ಟಿ ಬಿಲ್ ಹೆದೆಯನಾರ್ಕೈದು . . . ಎಚ್ಚಾಡಿದರ್ ಬಿಲ್ಲ ಬಿನ್ನಣಿಗರಂದು (ಕಂಶ. ೯೮-೮೯).

[ದೇ.॥ ತಮಿ. ಪುತರ್, ಪುತಲ್; ತುಳು. ಪುದೆರ್; ತೆಲು. ಪೊದರು ]

**ಪೊದಱು** 'ಪೊದಱ್' ನೋ.

**ಪೊದಱುಗಟ್ಟು**, ಹೊದಱುಗಟ್ಟು (ಕ್ರಿ). ಗುಂಪುಗೂಡಂ ; ದಟ್ಟೈಸು; ಒಟ್ಟುಗೂಡು : ಕೆದಱಿ ನಾಂದಿ ಪೊವಱುಗಟ್ಟುವ ಕದಲೆಗದಿರನುರದಿನು ರವಣಿಸಿ ನೆತ್ತಿಯಿಂ ಪೊತ್ತು ನೆಗೆದು (ಅಪಂಪು. ೭-೮೦ ವ). **ಹೊದಱುಗಟ್ಟು :** ಉದಯವಾಗದ ಮುನ್ನ ಕಳನೊಳು ಹೊದಱುಗಟ್ಟಿದ ವೈರಿಸೇನೆಯು ಹದನಿವರ ಪಾಳಯಕ್ಕೆ ಬಂದುದು (ಕುವ್ಯಾಶೀ. ೮-೭).

[ ಪೊದಱು (<ಪೊದಱ್) + ಕಟ್ಟು₁ ]

**ಪೊದಱುಗೊಳ್**, ಹೊದಱುಗೊಳ್ (ಕ್ರಿ). ದಟ್ಟವಾಗು ; ಒತ್ತಾಗು :. ಪುತ್ತಡರ್ದಿರ್ದ ಮೆಯ್ ಪೊವಱುಗೊಂಡ ಜಟಾವಳಿ...ಕಷ್ಟವಮೌನಮೊಪ್ಪೆ ತ್ತಿರೆ ಜೀರ್ಣತಾಪಸಕುಲಂ ಮೆಱೆದಿರ್ಪುದು ತನ್ಮಹಾದ್ರಿಯೊಳ್ (ದಕಕು. ೯-೩೦). **ಹೊದಱುಗೊಳ್ :** ಚಲಿಪ ಬಲುಶಾಖಾಸಮೂಹವ ಬಲು ಹೊದಱುಗೊಂಡಿಹ ಪಲಾಶಾವಳಿಗಳನು ಕಾಯ್ಗಳನು ಗೊಂಚಲುಗಳನ ವಲ್ಲವನು ಇಳುಹಿ ಬೊದಲೇ ತಱಿವ ಮರದಂತಳವಡಿಸಿಕೊಂಡಿರಲು (ತಿಮ್ಮಕಾಂ. ೫-೧೧೯). [ ಪೊದಱು (<ಪೊದಱ್) + ಕೊಳ್₁ ]

**ಪೊದಱುವೆಳಗು**, ಹೊದಱುವೆಳಗು (ನಾ). ದಟ್ಟವಾದ ಪ್ರಕಾಶ ; ಗಾಢವಾದ ಕಾಂತಿ : ತ್ರಿದಶಪತಿ ಗಿರಿಗಳಂ ಕಡಿವಂದು ತೆಗೆದಿಡುವೆನೆಂದು ತಿರಿಪಿದ ಕುಲಿಶದ ಪೊದಱುವೆಳಗಿಳಿಗಿಳಿದು ವಜ್ರಮಯವಾಗಿ ನಿಂದುದೊ . . . ಪೇಳೆನಲ್ಕೋಟೆ ಕಣ್ಗೆಸೆದುದು (ಕೈಖಿಶಾ. ೧೧-೩೭). **ಹೊದಱು ವೆಳಗು :** ಮುದದಿನವನೀ ರಾಘವೇಂದ್ರನ ಪದಕೆನುತ ನಾನಾಸುರತ್ನದ ಹೊದಱುವೆಳಗಿನ ಹೊಂದೊಡವುಗಳ ಹೊಱಿಸಿ ಬೀಳ್ಕೊಟ್ಟ (ಕೂರಿಶಾ. ೯-೯-೨೦). [ ಪೊದಱು (< ಪೊದಱ್) + ಬೆಳಗು₂ ]

**ಪೊದಱೇಳ್**, ಹೊದಱೇಳ್, ಹೊದಱೇಳು (ಕ್ರಿ). ಗುಂಪುಗೂಡು ; ದಟ್ಟವಾಗು ; ಹೇರಳವಾಗು : ಇದಿರೆರ್ದು ಖಚರೇಶನೆಱಗೆ ನಾರದನಿಗೆ ಪೊವಱೆರ್ದು ಮಕುಟರತ್ನಾಂಶು ಕೆದಱಲು ಸುರಧನುವನು ಮುನಿ

ಕುಳ್ಳಿರೆ ಮೃದುವಚನದೊಳಿಂಕೆಂದ (ಪರ್ಶಕ. ೬-೦೦). **ಹೊದಱೇಳ್ :** ಘನವಿಕ್ರಮದ ಸಿರಿ ಹೊದಱೇಳೆ ಜಯವಿಕ್ರಮದೊಳಬ್ಬರಿಸಿದನು ನಿಷ್ಠುರಸಿಂಹನಾದಗಲಿ (ಕುಮಾ.ದ್ರೋ. ೦೩-೪೮); ಹೊರಳಿಗಿಡಿಗಳು ಹೊದ ಕರಿಸಿ ಹೊದಱ್ದು ರ್‍ಝಳದಲಿ ರ್‍ಝಡಿದುದಾಶಾಭಿತ್ತಿ (ಕೊರಠಾ. ೬-೨೮-೨೮); ಹೊಂದಾವರೆಗೊಳ ಹೊದಱ್ದ ತುಲಸಿಯು ನಂದನ ನಾಟ್ಯಕೀರ್ತನದಿ ಸಂದರ್ಶನದೊಳುಬ್ಬುವ ಸ್ವಾಮಿಯು ಕೂರ್ತು ಮುಂದಣ ಕೃತಿವೇಳು ಮುದದಿ (ನೋಹಕ. ೨೦-೦). [ ಪೊದಱ್ + ಏಳ್$_1$ (< ಏೞ್$_1$) ]

**ಪೊದಱೊಡೆ, ಪೊದರೊಡೆ,** ಹೊದಱೊಡೆ (ಕ್ರಿ). ೧. ಗುಂಪು ಚೆದರು; ದಿಕ್ಕಾಪಾಲಾಗು : ಪೊ[ಪಾಠಾಂ. ಹೊ]ದಱೊಡೆದು ಕುರುಸೇನೆ ತೆಗೆ ದೋಡಿದುದು ಭಯಜಲಧಿಯಲಿ ತೇಕಾಡಿದರು ಕೌರವಜನಪರೀ ಭೀಷ್ಮಾವ ಸಾನದಲಿ (ಕುಮಾ.ಶೀ. ೦೦-೦೩). **ಪೊದರೊಡೆ :** ೨. ಗುಂಪುಗುಂಪಾಗಿ ಹರಡು ; ದಟ್ಟವಾಗಿ ವ್ಯಾಪಿಸು : ಕದಳೇಕ್ಷು ನಾರಿಕೇಳು ಚೂತ ದ್ರಾಕ್ಷೆಯಿಂ ಬದರಿ ದಾಡಿಮವು ಖರ್ಜೂರ ಹೇರುಳೆ ನಿಂಬೆ ಪೊದರೊಡೆದ ಹುಳಿಸೆ ನೇರಿಲು ನೆಲ್ಲಿ ಹಲಸು ಫಲಭಾರದಿಂದೊಪ್ಪಿರ್ದುದು (ಪಪಮೋ. ೨-೬೨). **ಹೊದಱೊಡೆ :** ೧. ಮೇಲಿನ 'ಕುಮಾ.ಭೀ' ಪ್ರಯೋಗದ ಪಾಠಾಂತರವನ್ನು ನೋಡಿ. [ ಪೊದಱ್ + ಒಡೆ$_1$ ]

**ಪೊದಱ್, ಪೊದಳ್,** ಪೊದಳು, ಹೊದಳು$_1$ (ಕ್ರಿ). ೧. ಹೊರ ಹೊಮ್ಮು ; ಹೊರಸೂಸು : " ಪೊದಱ್ದುದೆನೆ ಪೊಣ್ಮಿದುದಕ್ಕು " (ಕಕುಶಿ. ೭೮); ಮನ್ಮಥಶಿಖಿಜ್ವಾಲಾಳಿ ತಳ್ತೀಱ ಬೇಯದೆ ಕಾಯ್ದೋಡಿನ ಜೋಳದಂತಲರ್ದೊಡಾ ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರೆ ಸುಯ್ ಪೊದಱ್ದು ಬಿಸಿದುಂ ಕಮ್ಮಿತ್ತುಮಾಯ್ತೀಪಳಾ (ಕಾವ್ಯಸಾ. ೩೮೮ ಕಾದ್ರಶ); ಪ್ರತಿದಿನಂ ನೃಪಚಂದ್ರನ ದಿವ್ಯದೇಹದಿಂ ಕಾಂತಿ ಪೊದಱ್ದು ಪರ್ವಿ ಗಗನಾಂತರಮುಂ ಪುದಿದಿರ್ಪುದು (ಕಾದಂಕಾ. ೬೬೮); ವಿವಿಧಾತೋದ್ಯರವಂ ಪೊದಱ್ದಖಿಳದಿಕ್ಚಕ್ರಂಬರಂ ಕೂಡೆ ಪೊಣ್ಮುವಿನಂ (ಗದಾಯು. ೮-೬೭). ೨. ಉಂಟಾಗು; ಒದಗು; ಪ್ರಾಪ್ತವಾಗು : ಮುನೀಂದ್ರನ ದಿವ್ಯ ದೃಷ್ಟಿಮಂತ್ರದೊಳೆ ಪೊದಱ್ದುದಾ ಸತಿಯರಿರ್ವರೊಳು ನವಗರ್ಭವಿಭ್ರಮಂ (ಕಂಕಠಾ. ೦-೬೩); ಮನಕ್ಕುಮ್ಮಳಂ ಪೊದಱ್ದುದೆನಗಂ ಸರೋಜದಳನೇತ್ರೆ ನಿನ್ನಿಂದದಿ (ಪುಲ್ಲಕು. ೪-೨೩); ಮುಱ ಕಂಬನಿಯಿಂ ದನಿಯಿಂ ಮೊಟಗೆಱಗಿದ ಮಕುಟದಿಂದೆ ಮಿಂಚೊಗೆಯೆ ಪೊದಱ್ದಬಲಿಂದಂ ಮುನ್ನಡಿಯೊಳ್ ಮುಱ ಗಾಲಮನಾದು ಸೂನು ತಂದೆಗೆ ತಂದಂ (ಅಪಂಪು. ೩-೪೪). ೩. ಎದ್ದು ತೋರು; ಪ್ರಕಟವಾಗು ; ನಿಚ್ಚಳವಾಗಿ ಕಾಣು : ಕಂಜದಳೋಪ ಶೋಭಿತವಿಲೋಚನದೊಳ್ ನಿಟಲಾಗ್ರದೊಳ್ ಪೊದಱ್ದಂಜನರೇಖೆ ಸೆಣ್ಗೆಸೆಯೆ (ಸುಕುಮಾ. ೧೦-೩೮); ಅಡಸಿ ಪೊದಱ್ದ ಪೆರ್ಮೊಲೆಗೆ ಕುಟ್ಮಲ ಹಾರಮನಾಂತಳಟ್ಟಿಯಿಂ (ಲೀಲಾವ. ೦೩-೦೦೦); ಪೊದಱದ ಲಜ್ಜೆ ಪಲ್ಲಟಿಸ ದಾಸನಂ . . . ಪಲ್ಲ ಕೊನೆದಾಗದ ಚುಂಬನವೆಂಬವಿಚ್ಚೆಯೊಳ್ ಪುದಿದಿರೆ ಮೆಚ್ಚಿದಳ್ ನೆರೆದು ಪೊ ಪವಳೋಪನ ಜಾಣ ಕೇಣಮಂ (ಸೂಕ್ತಿಸು. ೮-೦೩೪). ೪. ಹರಡು; ವ್ಯಾಪಿಸು; ಆವರಿಸು: ಮುಂ ತನ್ನರ್ಚೆಗಳ್ ಬಂದು ಮೊಕ್ಕಳಮೆತ್ತಂ ಸುರಿಯುತ್ತುಮಿರ್ಪ ರಸಮಂ ಮುಂ ಪೀರ್ದುಕೊಂಡಂ ಮನಂಗೊಳೆ ಸಪ್ಪಾರ್ಚೆ ಪೊದಱ್ದು ನೀಳ್ದೊಸಗೆಯಿಂದಾಪೋಶನಂಗೊಳ್ವ ಪೋಲ್ (ಕಂಕಠಾ. ೩-೪೬); ಪೊಸಜವ್ವನದೇಱ್ಗೆಯೊಳ್ ತಪಶ್ಚರಣಮಿದೇಂ ಪೊದಱ್ದಿಡಿದ ಕಾನನದೊಳ್ ಬಡದೊರ್ಬುಳಿರ್ಪುದೇಂ (ಕಾದಂಪೂ. ೬೪೮); ಸಿಂಗರವೇಱ್ಗೆಯಂ ಪಡೆಯೆ ದೇಸೆ ಪೊದಱ್ದಿರೆ ಕೊಂಕು ತೀವೆ . . . ನನೆವಿಲ್ಲನ ಬೀರಮನೊಲ್ದು ಪೇಱ್ವೆನಾಂ (ಕಬ್ಬಿಗಾ. ೦೭). ೫. ಅಧಿಕ ವಾಗು ; ಹೆಚ್ಚಾಗು ; ವೃದ್ಧಿಯಾಗು : ಕಲಿಯುನೆ ಪಂದೆ ಮಾಟ್ಟೆ ಕಡುವಂದೆಯನೊಳ್ಗಲಿ ಮಾಟ್ಟೆ . . . ತಮ್ಮೊಳಗ್ಗಲಿಸಿ ಪೊದಱ್ದು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಮದಱಿಂದಮೋಲಗಿಸಿ ಬಾಟ್ಟುದೆ ಕಷ್ಟಮಿಳಾಧಿನಾಥರಂ (ಕಂಕಠಾ. ೦೨-೪೨); ಪುಟ್ಟಿದ ನೂರ್ವರು ಮುನ್ನೊಡವುಟ್ಟಿದ ನೂರ್ವರುಮಿದಿರ್ಚೆ ಸತ್ತೊಡೆ ಕೋಪಂ ಪುಟ್ಟಿ ಪೊದಱ್ದುದು ಸತ್ತರ್ ಪುಟ್ಟರೆ ಪಾಂಡವರೊಳಿಱದು ಛಲಮನೆ ಮೆಱೆವೆಂ (ಗದಾಯು. ೩-೩೪); ಮದನನ ಬಿಲ್ಲ ಬಲ್ಮೆ ಬಲಿದಿತ್ತು ವಸಂತದ ಮೋಹನಂ ಪೊದಱ್ದುದು ಕಡುಗಾಡಿವೆತ್ತಲೆವ ತೆಂಕಣಗಾಳಿಯ ಸೋಂಕು ಸೊರ್ಕುವೆತ್ತುದು (ರರ್ಮಣಾ. ೦-೭೨). ೬. ದೊಡ್ಡದಾಗು ; ತೋರ ವಾಗು; ಸ್ಥೂಲವಾಗು : ಜಗದ ಬಡತನಮನೊರ್ಮೆಯೆ ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್ ನೆಗಟ್ದ ಬಡತನಮನದನೇಕೆ ಗಡಂ ಸೈರಿಸುವನೆನೆ ಪೊದಱ್ದುದು ಮಧ್ಯಂ (ಆದಿಪು. ೮-೩೦): ಬಿಸರುಹನೇತ್ರೆ ಯೊಳ್ನಡು ಪೊದಱ್ದುದು ದಾಂಗುಡಿಯಿಟ್ಟು ಬಾಸೆ ನೀಳ್ದಿಸದುದು . . . ಗರ್ಭದೇಱ್ಗೆಯೊಳ್ (ಕಂಕಕಂ. ೦೬೪-೧೦). ೭. ಶೋಭಿಸು ; ಕಾಂತಿ ಯುಕ್ತವಾಗು; ವಿರಾಜಿಸು: ಇದು ನಿನ್ನೀಯುಗಲ್ದಿರದೊಳ್ ಪೊದಱ್ದ ತನತೊಂದು ಜನ್ಮಮಂ ಸಫಲಂ ಮಾಟ್ಟುದಿದೆಂದು ಕುಂದದಲಶಾರದ ನೀರದನಿರ್ಮಲಂ ಭವತ್ಕೀರ್ತಿಯವೋಲ್ (ಆದಿಪು. ೦೨-೦೦೯); ಪುಸಿ ಮುಳಿಸಿಂದಂ ಪಿರಿದುಂ ಪ್ರಯತ್ನದಿಂದಮೆ ವಿರಚಿಸೆ ಕಣ್ಗೆಸೆವ ಭೀಷಣ ಭ್ರುಕುಟಿ ಪೊದಱ್ದಿರೆ (ಕಾದಂಪೂ. ೭೮೦); ಭುವನಮನಾವಗಂ ಪುದಿದು ಶೀವಿದ ತಣ್ಗದಿರ್ಗಳ್ ಪೊದಱ್ದ ಕೈರವವನಮಾದುವೆಯ್ದೆ ಪೊಸಮಲ್ಲಿಗೆ ಯಾದುವು . . . ಹಿಮಮಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯ ವಾದುದೇ (ಲೀಲಾವ. ೩-೭). ೮. ಪ್ರಸಿದ್ಧವಾಗು; ಕೀರ್ತಿಯನ್ನು ಪಡೆ; ಹೆಸರನ್ನು ಗಳಿಸು: ಜಗತ್ತ್ರಿತಯಂಗಳೊಳ್ ಜಸಕ್ಕಾಗರಮಾದ ಒದ್ದೆಗನಿನಾ ನರಸಿಂಹನಿನತ್ತ ನಾಲ್ವೆರಲ್ ಮೇಗು ಪೊದಱ್ದ ಬಾಗದೊಳವೊಂದಿದ ಬೀರ ದೊಳಂ ಗುಣಾರ್ಣವಂ (ಕಂಕಠಾ. ೦-೩೦); ಪೊದಱ್ದಧಿರಾಜಲಕ್ಷ್ಮಿಯೊಳ್ ನಿಸದಮೆ ವಿಶ್ವಭೂತಿ ವಸುಧಾಪತಿ ತಾನೊಲವಿಂದಮಿರ್ದು ಭೋಗಿಸಿದನಶೇಷ ಭೋಗಮಂ (ವರ್ಧಪು. ೦-೪೦) ; ಕ್ರಮದಿಂದೆ ಸಂಧಿ ನಾಮಂ ಸಮಾಸಮಾ ತದ್ಧಿತಂ ಪೊದಱ್ದಾಖ್ಯಾತಂ ಪ್ರಮುದಿತಧಾತುವಪಭ್ರಂಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ (ಶಮದ. ೧). ೯. ಒಂದಾಗು; ಸೇರು; ಕೂಡು : ಎಸೆವ ವಿಮಾನಘಂಟೆಗಳ ಮೆಲ್ಲುಲಿ ಕಿನ್ನರಗೇಯದೊಳ್ ಪೊದಱ್ದಿಸೆಯೆ (ಆದಿಪು. ೨-೪೦); ನುಡಿ ಪುಸಿಯೊಳ್ ಪೊದಱ್ದಿರಪು ದಾನದ ಪೊಂಪುಱ ಲೋಭದಾಸೆಯೊಳ್ತೊಡರದು (ಸಮಸ. ೬-೨). ೧೦. ಹೊಂದು; ಪಡೆ; ತಾಳಂ: ಧರಣೀಧ್ರನೋಲಗಕ್ಕಂ ಸುರಪತಿಯೊಡ್ಡೋಲಗಕ್ಕಮಿದು ಮಿಗಿಲೆಂಬೋಲ್ ಕರಮೊಪ್ಪಿರ್ದುದು ಸಭೆಯಾ ತರಳಾಕ್ಷಿಯರಿಂ ಪೊದಱ್ದ ನೂರ್ಮಡಿ ಚೆಲ್ವಂ (ಧರ್ಮಾಮ್ಯ. ೪-೦೪೬); ಮೊದಲೆರಡು ವಿಭಕ್ತಿಯೊಂ ಪೊದಱ್ಗುಮಲ್ ಕಾಲವಾಚಿಯಿಂದಿಂದುಂದೆಂಬುದುಮೇಕರೂಪಮಾಗಿರ್ಪುದು ಮೊದಲೆರಡುಂ ವಿಭಕ್ತಿಗಂ ಸಪ್ತಮಿಗಂ (ಶಮದ. ೦೨೦); ಶ್ರೀ ಚಾಮರಾಜೇಂದ್ರನೀ ಬಿರುದೆಲ್ಲಾ ಬಿರುದಂಗಳೊಳ್ಪನಿಱಕೆಯ್ದಾರ್ಪಿಂ ಪೊದಱ್ದೊಪ್ಪುಗುಂ (ಚಕಿಪ. ೨-೬). ೧೧. ಅಂಟಿಕೊಳ್ಳು; ಹತ್ತಿಕೊಳ್ಳು: ತರುಣಿಯರಂದು ಕಂಸನ ವಿಯೋಗದ ಶೋಕದೆ ಬಿಟ್ಟು ಧಾತ್ರಿಯೊಳ್ ಪೊರಳೆ ಪೊದಱ್ದ ಮೆಯ್ಯ ರಜವಶ್ರುಜಲೌಘದೆ ನಾಂದು ಕರ್ದಮಂ ಬೊರೆದವೊಲಾಗಲ್ (ಜಗಂ. ೭-೪೬). ೧೨. ವಿಶಾಲವಾಗು; ವಿಸ್ತಾರ ವಾಗು : ನಗೆಮೊಗಮುಂ ಪೊದಱ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂಬುಗಲೊಡಮಾ ತಳೋದರಿಯ ಸುಯ್ಗಳ ಬೆಂಕೆಯೊಳಿಚ್ಚೆಗೆಟ್ಟು . . . ಪಾಱದುವುನ್ಮದಾಳಿಗಳ್ (ಕಂಕಠಾ. ೩-೧೦). ೧೩. ಚೆದರು; ಚೆಲ್ಲಾ ಪಿಲ್ಲಿಯಾಗು ; ದಿಕ್ಕಾಪಾಲಾಗು : ಆ ಸತಿಯಿಕ್ಕಿದ ಕಣ್ಣ ನೀರ ಧಾರೆ ಗಳೊಳೆ ನಾಂದೆಲರ್ಚೆ ಪೊದಱ್ದೊರ್ಮೆಯೆ ಪಾಱದುವುನ್ಮದಾಳಿಗಳ್ (ಕಂಕಠಾ. ೩-೦೦). ೧೪. ಉಬ್ಬು ; ಉತ್ಸಾಹಿಸು ; ಹರ್ಷಿಸು : ವಿತತಕಳಾ ಪ್ರವೀಣತೆಯನೆಯ್ದೆ ಸರಸ್ವತಿ . . . ಪತಿಭಕ್ತಿಯಿಂ ನೆಗಟ್ದರುಂಧತಿಯೆಂದು

ಪೊದಟ್ದು ಬಣ್ಣಕುಂ ನುತ್ತವಿಜಯಾವನೀಶಸತಿಯುಂ ಸಲೆ ಪೊನ್ನಲದೇವಿಯುಂ ಜಗಂ (ವೀಬಾಶ್ರು. ೧-೨೬); ಚಂದಿರನುಂ ರೋಹಿಣಿಯೊಡನೊಂದಿ ಪೊದಟ್ದುದಿಸಿ ಬಂದನಿರುಳರೆಗಳೆದತ್ತಂದಿನವೋಲಟ್ಟಿಯಿನಾನಂದಂ ಪೊಗರೇಱೆ ಭವದೊಳಾವಿರ್ಭವಿಸಾ (ಶಕವ. ೬-೨೩೦). **ಪೊದಳ್** : ೧. ಪುದಿದ ಹಿಮಮೊಡಲೊಳೆಳಿತಂದುದರಾಗ್ನಿಯನೆಯ್ದೆ ನಡೆಪೊಯ್ದುದು ನಿಜವಲ್ಲದೊಡೆಂತು ತೋರ್ಪುದೋ ಪೇಳ್ಮೊದಲಿಲ್ಲದ ಪೊಗೆ ಪೊದಳ್ದು ಜನದಾನನದೊಳ್ (ರಾಜಶೇ. ೯-೧೬). ೨. ವಿಳಸನಮಂ ಪುದುಂಗೊಳಿಪ ನನ್ದನದೋಳಿ ಪೊದಳ್ದಳುಂಬದಿಂ ಬೆಳೆದೆಱಗಿರ್ಪ್ಪ ಶಾಳಿನವಸೌರಭಮಂ ನಯದಿಂ ದೆಸೆ × × × ನ್ವಿಳಸುವ ಗಾಳಿ (ಕ೨. V. ೨೦-೨೯ ; 1126) ; ಸ್ತ್ರೀಪುನ್ನಾಗಮೆರಡು . . . ಪೊದಳ್ದಾತುರದಿಂ ಸಮಸಂಭೋಗಕ್ರೀಡೆಯೊಳಾಲಿಂಗಿಸಿದುವು ಹೂಗಣೆಯಿಂ ಹುರಿಗೂಡಿದ ಸಂಮೋಹನಪಾಶದ ತೆಱದಿ (ಜಯುಕಾ. ೧೧-೨೮). ೩. ಮೇಲುದಿನೊಳ್ಪೊದಳ್ದ ಕುಚಭಾರದಿಂ ನಸುವಾಗಿದಂಗಲತ್ತಲಹರಿಗಳ . . . ವಿನುತಾಷ್ಟಮಹಿಷಿಯರ್ಚಾರುಚಾಮರತಾಲವೃಂತಮಂ ಪಿಡಿದಿರ್ದರಚ್ಯುತನ ಕೆಲಬಲದೊಳು (ಕೃಎಭಾ. ೬-೪೬). ೪. ಒಪ್ಪುವ ಪಂಚಮಹಾನಕಂಗಳಿಂ ಬಳಸಿ ಪೊದಳ್ದ ವಾಜಿದಳದಿಂದಮಗುರ್ವ್ವಿಪ ವೀರಕೋಟಿಯಿಂ (ಸೌಇಇ. XI-1, ೫೨-೬೪; 1007) ; ತೇಜದುಬ್ಬೆೞ್ಗೆಳುಸಮುಂ(ಮು)ದ್ರಮುಂಗಳಿಯೆ ಪಬ್ಬಿ ಪೊದಳ್ದುದು (ಇಆ. V, ೧೬-೧೮ ; 1019) ; ಚತುರಂಭೋನಿಧಿವರೆಗಂ ಚತುರಂಗಬಲಂ ಪೊದಳ್ದು ಬಿಡೆ ಪದ್ಮಜನೇಂ ಚತುರನೊ ತದ್ಭಾರಮನಹಿಪತಿ ಪೊಱಲೆಂದಂದೊಡರ್ಚಿದಂ ಬಹುಶಿರಮಂ (ರಾಜಶೇ. ೬-೨೫). ೫. ಪದತಳದೊಳ್ ತೊಡಂಕಿ ಪರಿದಾಡಿ ಪೊವಳ್ದಿಸೆವಂಗದೇಶದೊಳ್ ಪದೆದು . . . ಸರಿತ್ಸುಧಾಂಶುಗಳ್ ಪುದಿದ ತದೀಯ ಮೌಳಿಯೊಳೆ ವಿಶ್ರಮಿಸಿರ್ದುದು ದೃಷ್ಟಿ ಪಾರ್ಥನಾ (ಶಬಶಂ. ೫-೧೫). ೬. ನಡು ಪೊದಳ್ದವು ವರವಳಿತ್ರಯುವಡಗಿದವು . . . ಬೆಳ್ಪಡಸಿದವು ಮುಖಮಂಡಲಗಳಾ ಮಾನಿನೀತ್ರಯುದ (ತೊರರಾ. ೧-೬-೩). ೭. ಪೊಱಪೊಳಲೊಳ್ ಪೊದಳ್ದ ನವನನ್ದನಬೃಂದದಿಂ (ಎಇ. XIII, ೩೩೦-೨೭ ; 929) ; ಅಡಿದಳದ ಬಲ್ಸೊಂಪು ಕೆಂದಳಿರ ಪೆಂಪನವಗಡಿಸಿ ಮರನೇಱಿಸೆ ಪೊದಳ್ದುಗುರ್ ಶುಕ್ತಿಜದ ಬೆಡಗಿಂಗೆ ಭಂಗಮಂ ಸಂಗೊಳಿಸೆ . . . ಸೊಗಸನೇವಣ್ಣಿಪೆಂ (ಶದ್ಮರಾ. ೩-೨೭) ; ಸಣ್ಣನಡು ಸ್ಯನಿಮಿರೆ ತೋಳ ಮೊದಲೊಳ್ಪಸೆಯೆ ಶಿಣ್ಣ ಮೊಲೆಗಳ್ಪೊದಳೆ ... ಪೆಣ್ಣುವಿಂಡಾ ಬನದೊಳಲರ್ಗಳಂ ತಮ್ಮ ತನುವಿನ ಕಂಪಿನಿಂ ಪೊರೆದರು (ಕೃಎಭಾ. ೬-೧೬). ೮. ಸಂಗಡಿಸಿದ ಬಡತನದೆ ಕುನುಂಗಿ ಕರಂ ಪೆಸರಿನೊಂದರಿಂದುಳಿದಿರ್ದಾ ಸಂಗೀತಂ ದಿನದಿನಕಂ ಪೊಂಗಿ ಪೊದಳ್ದೇಳ್ಗೆವಡೆದುದೀ ಧಾರಿಣಿಯೊಳ್ (ಮಶಾಚ. ೯-೧೧). ೯. ಮದಗನ್ಧಶಾಳಿವನದಿಂ ಬಿಡದೊಪ್ಪುವ ಕಮ್ರ್ಮದೋಣ್ಪದಿನ್ದೊಳಗೆ ಪೊದಳ್ವ ದೇವಕುಲಸಂಕುಲದಿಂ ದ್ವಿಜಸೌಧ ಗೇಹದಿನ್ದೆಳಗೆಸೆದತ್ತು ಪಲ್ಲವಪುರಂ (ಎಕ. V, ಅರಸೀ. ೧೫೭-೬೦ ; 1185) ; ದಟ್ಟಡಿಯನಿಡೆ ರನ್ನದಂಮಗೆಯಾ ಮೆಱೆವ ದನಿ ತಾವರೆಯು ರಜದಲಿ ನೆಱೆ ಪೊದಳ್ದಳೆದುಂಬಿಮಾಲೆಯ ಕಿಱುದನಿಯುವೊಲು ಜನನ ಚರಣಾಂಬುಜದಲೊಪ್ಪಿದವು (ಶಾಳ್ಯಶಾ. ೩೩-೧೮೩) ; ಮಹೀರಮಣನ ತೇಜಮನೇನೆಂಬೆಂ ಪೊದಳ್ದ ರವಿಶತರುಚಿಯಿಂದಮರ್ದು ಪೊಱಪೞಯುಮಂ ಹೇಮಮಯಮಿದೆನಿಸಿತ್ತಜಾಂಡಮಂಡಳಮನಿತಂ (ರಾಜಶೇ. ೫-೬). ೧೦. ನಿಮಗೊಪ್ಪುವುದಾವುದದಂ ಪೊದಳ್ದುಕೊಂಬುದು ವಿಪ್ರಾ (ಶಿಷ್ಕೃ. ೨-೩-೧೩೦). ೧೪. ಕ್ಷಿತಿವಲ್ಲಭನೇಕಾಂತಸ್ಥಿತಸೌಭರಿಮುನಿಸಮೀಪಮಂ ಸಾರ್ದವನಿಂದತಿ ಸನ್ಮಾನಿತನಾಗಿಯೆ ಕೃತಾಸನಪರಿಗ್ರಹಂ ಪೊದಳ್ದಿಂತೆಂದಂ (ಶಿಷ್ಕೃ. ೪-೧-೧೪೨). ೧೫. ಬಳಕೆಯಲ್ಲಿರು ; ಉಪಯೋಗದಲ್ಲಿರು : (೬). ೧೬. ಚಾಚು ; ನೀಡು : ಪಸರಂಬೆತ್ತೆಡೆಯಾದ ನೀಡಡಿ ಪೊದಳ್ದಾಕರ್ಣವಾಕುಂಚಿತಾಸ್ತ್ರಸಮೇತೋಚ್ಚಕರಾಗ್ರಂ...ತಾನಿಸಲೊಂದೊಂದುಕುರಂಗಮಂ ಶಬರನಿಂತಿರ್ದಂ ಮಹಾರಣ್ಯದೊಳ್ (ಗಂಳ. ೧-೮೪). ೧೭. ರಭಸವನ್ನು ಹೊಂದು ; ವೇಗವನ್ನು ಪಡೆ ; ತ್ವರೆಗೊಳ್ಳು : ಕ್ರೂರೋನ್ನತಸ್ಕಂಧನಾ ತ್ರಿದಶಾರಾತಿ ಪೊದಳ್ದು ಪೊಕ್ಕನಿರುಳೊಳ್ ತದ್ಗೋವ್ರಜಸ್ಥಾನಮಂ (ಶಿಷ್ಕೃ. ೫-೩-೧೮೨). ೧೮. (?): ವಿತತಮತಿ ಬಾಷ್ಕಳಂ ಸಂಹಿತೆಗಳ್ ಮೂಱುಂ ಪೊದಳ್ದು ಬೇಱೆಸಗಿ ನಿಜಾಶ್ರಿತಶಿಷ್ಯವರ್ಗಕಾ ಸಂಹಿತೆಗಳನೋದಿಸುವಪೇಕ್ಷೆಯಿಂದಿರ್ದಾಗಳ್ (ಶಿಷ್ಕೃ. ೩-೧-೧೪೫). **ಪೊದಳು**: ೧. ಹದಿಬದೆಯು ತೋಡಿರುವ ಎದೆಯುದ್ದ ಶಿವಗುಣೆಯು ಪೊದಳಿದಾ ಒರತೆ ಕಲ್ಯಾಣಪುರದೊಳಗೆ ಕದಳಿಬನವೆಂದು ಹೆಸರಾಯ್ತು (ಕವ್ನಜಾ. ೨೬೭). **ಹೊದಳು**$_1$ : ೧೬. ವದನವಿರ್ದುದು ಹತ್ತುಯೋಜನ . . . ಹೊದಳುತಿರ್ದುದು ನಡುವೆ ನಾಲಿಗೆಮುದಿಯು ತಾ ಹನ್ನೆರಡುಯೋಜನ ರುಧಿರಬೀಜನ ಘೋರತರ ಚೀರಿಸಿತು ಹರಿಹರರ (ಅಂದಕಾ. ೪೨-೧೧೭).

[ದೇ.॥ ತಮಿ. ಮಲ. ಪೊತಿರ್ ; ತುಳು. ಪೊದಲು ; ತೆಲು. ಪೊದಲು, ಪೊದುರು]

**ಪೊದಟ್ಕೆ**$_1$, **ಪೊದಳ್ಕೆ** (ನಾ). ೧. ಹುಟ್ಟು ; ಉದಯ; ಆರಂಭ : ನುಡಿಯ ಪೊವಟ್ಕೆಯೊಳೊಳ್ನುಡಿ ನುಡಿದಂ ನಿಜಸಕಲಚಕ್ರವರ್ತಿತ್ವಕ್ಕಂದಡಿಯಿಡುವಂತೆ ನಿರಂತರಮಡಿಯಿಟ್ಟಂ ಪದ್ಮರಾಗಮಣಿಕುಟ್ಟಿಮದೊಳ್ (ಆದಿಪು. ೬-೪೦). ೨. ಹೆಚ್ಚಳ; ಆಧಿಕ್ಯ ; ಅತಿಶಯ : ಸಿರಿಯ ಶರೀರದ ರೂಪಿನ ನರರೈಶ್ವರ್ಯದ ಪೊವಟ್ಕೆಗಳ್ ಕರಗುವವೋಲ್ ಶರದಂಬುಧರಂ ಭೋಂಕನೆ ಕರಗಿದೊಡೆರ್ದೆ ಕರಗಿ ಕೊರಗಿದಂ ಧರಣೇಶಂ (ಆದಿಪು. ೪-೬೪); ಪುರುಡಿಸುವಳ್ ವಿಳಾಸದ ಪೊದಟ್ಕೆಗೆ ವಿಭ್ರಮದೇಱೆಗಂಬರಚರಿಯರೊಳಿಂದ್ರಲೋಕಲಲಿತಾಂಗಿಯರೊಳ್ . . . ಆವಗಂ ಸೆಣಸುವಳ್ ಸಲೆ ಗಾಡಿಗಮುನ್ನತಿಕ್ಕೆಗಂ (ಧರ್ಮಾಮೃ. ೬-೧೬೬); ಹೃದಯದಲಂಪು ಪೋಗೆ ಪದೆದೀಂಟದೆ ಮುನ್ನಮೆ ತನ್ನ ಕಂಪಿನಿಂ ಮದದ ಪೊದಟ್ಕೆಯಂ ಮನಕೆ ಮಾಟ್ಪ ವಿನೂತನವೃಕ್ಷಧಾನ್ಯಸಾರದೆ ಮಧುಪಾಳಿಗಳ್ ಸುಟಿಗೊಳುತ್ತಿರಲ್ (ಶಾಂತೀಶ್ವ. ೩-೬೦). ೩. ಕಾಂತಿ; ಶೋಭೆ: ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಖಶ್ರೀಯ ಪೊದಟ್ಕೆಯಂ ಬೆಳಗೆ (ಶಾಂತಿಪು. ೧-೪); ಕೊರಳ ಜನ್ನಿವರಂ ಪೊದಟ್ಕೆಯನೆಯ್ದೆ ಮಿಂಚುವ ಬೆಳ್ಪಿಯುತ್ತರಿಗೆ ಭಾಸುರಮಪ್ಪ ತೇಜಮಗುರ್ವ್ವ ಪರ್ವಿರೆ (ಧರ್ಮಾಮೃ. ೯-೨೦೬). ೪. ರಾಶಿ ; ಸಮೂಹ ; ಗುಂಪು : ಚದುರ ಪೊದಟ್ಕೆ ಸಂಪದದ ಬೊಂಬುಳಿ ಸತ್ಕದ ಬಿತ್ತರಂ . . . ಕೂಡೆ ಭೋಗದ ಕಣೆಯಾಯ್ತು ತಾಂ ತನಗೆ ಪೌರಜನಂ (ಜಗಪು. ೯-೧೧೬); ನಿಮಿರ್ಕೆವೆತ್ತ ತಣ್ಗದಿರ ಪೊದಟ್ಕೆಯಂ ಕಱೆವ ನವ್ಯಕಲಾವಿಸರಂ ಮಸುಳ್ದು ಮಾಸಿದ ಮುಕುರಂಬೊಲಂತೆ ವಿಗತಪ್ರಭನಾಯ್ತಮೃತಾಂಶುಮಂಡಲಂ (ಕುಸುಮಾ. ೪-೬೭). ೫. ಹರ್ಷ ; ಉತ್ಸಾಹ : 'ಪೊದಟ್ಕೆವಡೆ' ಪರಾ. **ಪೊದಳ್ಕೆ** : ೨. ರಾಜ್ಯಸಂಪದದ ಪೊದಳ್ಕೆ ತೇಜದ ತೆರಳ್ಕೆ ವಿರೋಧಿಯ ಬಾಳ್ಕೆ ತನ್ನದೆಂಬುದನೆ ಪೆರ್ಮೆಯಂ ತಳೆದನೋ ನ್ರಿಪರೊಳು ನ್ರಿಪತ್ರೈಲಶಾಂತರಂ (ಎಕ. VIII, ಸಾಗರ. ೧೫೯-೧೩ ; 1159) ; ತಂನೆಸೆವ ರಾಯಮುರಾರಿವೆಸರು ಪೊದಳ್ಕೆಯಿಂ ನೆಲೆಗೊಳೆ ಸೋವಿದೇವಪೃಥಿವೀಪತಿ ವಿಕ್ರಮಮಂ ನಿಮಿರ್ಚ್ಚಿದಂ (ದಾಸಕ. ೫೦-೧೧ ; 1170) ; ಪರಿವ ಪಡಂಗು ಬಲ್ದೆರೆಯ ಸಾಲ ಬೆಡಂಗು ನವೀನವಿದ್ರುಮೋತ್ಕರದ ಪೊವಳ್ಕೆ ಶುಕ್ತಿಜದಳುರ್ಕೆ . . . ಚೆಲ್ವ ಬಿತ್ತರಿಸೆ ಪೊಡರ್ಪುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಶಬಶಂ. ೧-೩೪). ೬. ಎದ್ದು ಕಾಣುವಿಕೆ; ನಿಚ್ಚಳವಾಗಿ ತೋರುವಿಕೆ ; ಪ್ರಕಟವಾಗುವಿಕೆ : (೬). ೭. ರಭಸ; ವೇಗ; ತ್ವರೆ: ಪ್ರಲಂಬಕಂಧರಂ ದುರಾಸದಂ ಪೊದಳ್ಕೆಯಿಂದೆ ಗೋಕುಳಕ್ಕೆ . . . ಬರ್ಪನಂ ಭಯಂಗೊಳುತ್ತೆ ಗೋಪಗೋಪಿಯರ್ಕಳಾಕ್ಷಣಂ ಕೊರಲ್ಚಿದರ್ (ಶಿಷ್ಕೃ. ೫-೩-೧೬೩). [ಪೊದಟು + —ಕೆ]

Δ**ಪೊದಟ್ಕೆ**$_2$ 'ಪೊದಕೆ$_1$' ನೋ.

**ಪೊದಟ್ಕೆಗುಂದು** (ಕ್ರಿ). ಹೆಚ್ಚಳವು ಕಡಮೆಯಾಗು ; ಆಧಿಕ್ಯವು ಕುಗ್ಗು : ಘನಾಘನಸ್ತನಂ ಪೊದಟ್ ಪೊದಟ್ಕೆಗುಂದಿದುದು ವಾಃಕಣ ಸಂತತಿ ಸೋರೆ ಸೋರ್ದಡಂಗಿದುದೆಳಗಾರೊಳಾ ಸಕಳಚಾತಕಪೋತತೃಷಾ ವಿಷಾದನಂ (ಶಂದ್ರಪು. ೪-೪೬). [ಪೊದಟ್ಕೆ$_1$+ಕುಂದು$_1$]

**ಪೊದಟ್ಕೆವಡೆ, ಪೊದಳ್ಕೆವಡೆ** (ಕ್ರಿ). ೧. ಹೆಚ್ಚಳವನ್ನು ಪಡೆ ; ಆಧಿಕ್ಯವನ್ನು ಹೊಂದು ; ಸಮೃದ್ಧವಾಗು : ಆ ರಾಜಕುಮಾರನನೇಕ ಕಲಾಕಲಾಪಪ್ರವೀಣನಾಗಿ ಯುವರಾಜಲಕ್ಷ್ಮಿಯೊಡನೆ ವಿಸ್ತಾರಮಂ ಕೈಕೊಂಡ ವಕ್ಷಸ್ಥಲಮುಂ ಬಂಧುಜನಮನೋರಥಂಗಳೊಡನೆ ಪೊದಟ್ಕೆವಡೆದ[ಪಾಠಾಂ. ವೆತ್ತ] ವೃತ್ತೋರುಸ್ತಂಭಂಗಳುಂ...ಆತ್ಮೀಯಯೌವನಪ್ರಾದುರ್ಭಾವಮಂ ಪ್ರಕಟಂ ಮಾಡೆ (ಆದಿಪು. ೩-೯ ವ) ; ಪೊದಟ್ಕೆವಡೆದ ಸದ್ಧರ್ಮಪೀಯೂಷ ಮಹಾಪ್ರವಾಹಂ ವಂಗಮಂಡಲದೊಳ್ ತರಂಗಂಗೊಂಡು ಕಳಿಂಗಮಂಡಲ ದೊಳ್ ಮಡುಗಟ್ಟಿ ನಿಂದು . . . ಪೆರ್ಮೆಗಾಶೀರ್ವಮಾದುದು (ಅಪಂಪು. ೧೪-೪೬ ವ). **ಪೊದಳ್ಕೆವಡೆ :** ೨. ಉತ್ಸಾಹವನ್ನು ಹೊಂದು ; ಉಬ್ಬು ; ಹರ್ಷಗೊಳ್ಳು : ಜೈನಸಮಯಾಂಬುಧಿಕೀರ್ತಿಸುಧಾಂಶುವಿಂ ಪೊದಳ್ಕೆವಡೆಯೆ ರೇಚಿರಾಜನೆಸೆದಂ ಜಸದಿಂ ವಸುಧೈಕಬಾಂಧವಂ (ಎಕ. VII, ಶಿಕಾ೦. ೧೯೭-೩೨; 1182 ?). [ಪೊದಟ್ಕೆ$_1$+ಪಡೆ$_1$]

**ಪೊದಟ್ಕೆವೆಱು** (ಕ್ರಿ). ೧. = ಪೊದಟ್ಕೆವಡೆ ೧ : ಆ ರಾಜಕುಮಾರ ನನೇಕಕಲಾಕಲಾಪಪ್ರವೀಣನಾಗಿ ಯುವರಾಜಲಕ್ಷ್ಮಿಯೊಡನೆ ವಿಸ್ತಾರಮಂ ಕೈಕೊಂಡ ವಕ್ಷಸ್ಥಲಮುಂ ಬಂಧುಜನಮನೋರಥಂಗಳೊಡನೆ ಪೊದಟ್ಕೆ ವೆತ್ತ[ಪಾಠಾಂ. ವಡೆದ] ವೃತ್ತೋರುಸ್ತಂಭಗಳುಂ . . . ಆತ್ಮೀಯಯೌವನ ಪ್ರಾದುರ್ಭಾವಮಂ ಪ್ರಕಟಂ ಮಾಡೆ (ಆದಿಪು. ೩-೯ ವ). ೨. ಶೋಭೆ ಯನ್ನು ಹೊಂದು ; ಮನೋಹರತೆಯನ್ನು ಪಡೆ : ಪೊಳೆವಲರ್ಗಣ್ಣ ನೀಳ್ದ ನಿಡುಮುರ್ವಿನ ಸುಕ್ಕಿದಮರ್ಕೆವೆತ್ತ ಕುಂತಳದ ಪೊದಟ್ಕೆವೆತ್ತಸಿಯ ಬಾಸೆಯ . . . ಅಂಗನಾವಳಿ ನೆರೆದೆಂದು ಬಂದುದು ಮನೋಜನ ತಂತ್ರದವೋಲ್ ವಿಲಾಸದಿಂ (ಧರ್ಮಾಮೃ. ೧೩-೧೬). [ಪೊದಟ್ಕೆ$_1$ + ಪೆಱು$_1$]

**ಪೊದಟ್ಚು** (ಕ್ರಿ). ಉಂಟುಮಾಡು ; ಒದಗಿಸು : ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ ಭಯಂಗೆಯೆ ಬಲ್ವೆಣಸಂ ಪೊದಟ್ಚೆ ನಾಣ್ಗಡೆ ನೆರೆ ದೂಢೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಶಂಪ್ರಪು. ೬-೯೨). [ಪೊದಟ್ + — ಚು$_1$]

**ಪೊದಟ್ತರ್** (ಕ್ರಿ). ಪೂರ್ಣವಾಗು ; ತುಂಬು : ಬೀಗಿ ಬೆನ್ನಿಂ ಬಿರಿವನ್ನಂ ಕೊರ್ವಿ ಮುಂಗಾಲ್ ಗಡಿಯೆನೆ ಕಡುಗೆಚ್ಚಲ್ ಪೊದಟ್ತಂದು ವತ್ಸೋತ್ಕರ ಮೆಲ್ಲಂ ಬಾಲವಂಬು ಕಱೆಯೆ(?) ಬಹಳರೋಮಂಥಫೇನಾವಳೀ ಪಾಂಡುರವಕ್ತ್ರಂ ಮಾಹಿಷೀಸಂತತಿ ವಿಪಿನಭವಂ ಕಣ್ಗೆಗುರ್ವಾಯ್ತು ಕಾರೊಳ್ (ಶಂದ್ರಪು. ೪-೪೯). [ ಪೊದಟ್ + ತರ್ ]

**ಪೊದಿಕೆ** ‘ ಪೊದಕೆ$_1$ ’ ನೋ.

**ಪೊದಿಸು** ‘ ಪೊದೆಯಿಸು ’ ನೋ.

**ಪೊದ್ೆ$_1$, ಹೊದ್ದು$_1$, ಹೊದ್ೆ$_1$** (ಕ್ರಿ). ಪೊದ್ದ, ಹೊದ್ದ (ಭೂತಕೃ). ಪೊದ್ದು, ಹೊದ್ದು(ಭೂತನ್ಯೂ). ೧. (ವಸ್ತ್ರ ಮೊದಲಾದುವನ್ನು) ಧರಿಸಿಕೊಳ್ಳು : ಆತನ ರತ್ನಕಂಬಳಮಂ ಪೊದೆದು ತನ್ನ ಮನೆಗೆ ಬರ್ಪೊನಂ ಕಂಡು (ವಡ್ಡಾರಾ. ೩೯-೨); ಒಂದಂಚಿಯಂ ಪೊದೆಯೊಂ[ದೊಂ] ದಂಚಿಯನುಟ್ಟು ನಿನ್ನಿರವಿದೇನಂಭೋಜಪತ್ರೇಕ್ಷಣೇ (ಕುಂಕಥಾ. ೮-೩೩); ಚಂದ್ರಾಪೀಡದೇವಂ . . . ಪಾವಿನೆರೆಯ ದೊರೆಯ ದುಕೂಲಮಂ ಪೊದೆದು (ಕಾದಂಬ. ೫೪೦): ಕರ್ಮುಗಿಲಾಗಸಮಂ ಮುಸುಂಕೆ ಕಾಲನೆಂಬ ಕಾಳರಕ್ಕಸಂ ಪೊದೆದ ನೀಲಪಟದೊಂದು ಪಾಂಗಿನೊಳೊಪ್ಪಿದುದು (ಧಾಮಕ್ಯ. ೩-೪). ೨. ಕವಿ; ಆವರಿಸು ; ಮುತ್ತು : ಶ್ರೀದುರಿತಾ ಘುದ್ಧೈಷವಮಾನ್ಕೀಟ್ತಲಱ್ ಪೊದೆದಜ್ಞಾನಶೈಲೇಂದ್ರಮಾನ್ ಪೋಟ್ದುರ ಮಿಥ್ಯಾತ್ವಪ್ರಮೂಢಸ್ಥಿರತರನೃಪನಾನ್ ವೆಟ್ಟಿ (ಎಕ. II, ೦೨-೦; ಸು. 700). **ಹೊದಿ$_1$ :** ೧. ಒಡಲಿಗ್ಹಾಕುವ ನೀನೆ ಉಡಲು ಹೊದಿಯಲು ವಸ್ತ್ರ ಕೊಡುವವ ನೀನೆ (ಪುರಂದ. ೦-೦೪೬-೨); ನಿವೀತಂ, ಪ್ರಾವೃತಂ_ೊ ಹೊದಿಯುವ ಬಟ್ಟೆ (ಸಿದ್ಧಾಂತಿ. ೨೦೩). **ಹೊದೆ$_1$ :** ೧.“ಹೊದೆ—ಆಚ್ಛಾದನೇ, ಶರಕೋಶೇ ಚ (ಬತ್ತಳಿಕೆ)” (ಶಮುಧಾ); ಆವನಾದರೇನು ಶ್ರೀಮಹಾ ದೇವನ ನೆನೆವವನ ಬಾಯ ತುಬುಲವ ಮೆಲುವೆ ಬೀಳುಡಿಗೆಯ ಹೊದೆವೆ (ಬಸವ. ೫೬೩) ; ಮುನೀಂದ್ರುನಿವೇದಕಂಗೆ ತಾಂ ಹೊದೆದುದನಿತ್ತು (ಅವಂಶ್ಯ. ೪೮-೪); ಒದೆದನಳಲನು ರೋಮಹರುಷವ ಹೊದೆದು ಹೊರೆ ಹೆಚ್ಚಿದನು (ಕುಮಾರವ್ಯಾ. ೦೯-೦೦); ಮಂಡೆ ಬೋಳಿಸಿಕೊಂಡು ಕೌಂದುಗಂಬಳಿ ಹೊದೆದು ಹಿಂಡನಗಲಿದ ಗಜದಂತೆ ಇಪ್ಪವರ ಕಂಡು ನಂಬುವದು (ಸರ್ವಜ್ಞ. ೫೦೫).

**ಪೊದ್ದುಕೊಳ್, ಹೊದ್ದುಕೊಳ್** =(ವಸ್ತ್ರ ಮೊದಲಾದುವನ್ನು) ಧರಿಸಿಕೊಳ್ಳು : ಪೊದ್ದು[ಪಾಠಾಂ. ತಾಳ್ದು, ಪೊರ್ವಿ, ಪೊದರ್ದು]ಕೊಳ್ವೊಡೆ ಧವಳೋತ್ತರೀಯಂ . . . ಒಲ್ದು ನೋಳ್ಪೊಡೆ ರಜತಾದ್ರಿಯೆಂದೆನಿಸಿ ತೋಱುತು ಮಿಱಿದ ಚಂದ್ರಿಕೋಜ್ವಳಂ (ಗಂಕ. ೪-೦೦೮) ; ಪ್ರಾವಾರಃ —ಹೊದ್ದುಕೊಂಬ ಸೀರೆ (ವಾಚರಾ. ೬).

[ದೇ. ॥ ತಮಿ. ಪೊತಿ ; ಮಲ. ಪೊತಿ, ಪೊತ್ತು, ಪುತೆ ; ತುಳು. ಪೊದೆ, ಪೊದಿ, ಪೊದ್ದಿ, ಪೊದ್ದು ; ಕೊಡ. ಪೊದ, ಪೊದಿ, ಪೊದೆ; ತೆಲು. ಪೊದುಗು, ಪೊದುವು]

**ಪೊದೆ$_2$, ಹೊದೆ$_2$** (ನಾ). ೧. ಬಾಣಗಳನ್ನಿಡುವ ಕೋಶ ; ಮೂಡಿಗೆ ; ಬತ್ತಳಿಕೆ : ಪದವಿಲ್ಲಂ ನನೆಯಂಬಿನ ಪೊದೆಯಂ ಪಿಡಿದಿರದ ಪದದೊಳಾ ನೆರ್ೞಿಡಿದೊಡಂ ಮದನಂಗಂ ಮಾನಿನಿ ದಶವದನಂಗಂ ರೂಪಭೇದ ಮೇನಾದಪುದೇ (ಶಂರಾಪೂ. ೯-೧೩೬); ಪೊದೆಯೊಳಗಿಂದಮುರ್ಚುವೆಡೆಯಲ್ಲಿ ಸರಲ್ ದಿಟಮೊಂದು . . . ಇದಿರ್ಚಿದರಂ ನಡುವಲ್ಲಿ ಲಕ್ಕಮೆಂಬುದನೆನೆ ಬಿಲ್ಲ ಬಿನ್ನಣಮನಾ ರಣದೊಳ್ ಮೆಱೆದಂ ಯುವಾಧಿಪಂ (ಶಂದ್ರಪು. ೬-೩೬); ಬರಯಿಗಳನಿಸಲನಂಗಂಗರಲಂಬಿನ ಪೊದೆಯನಖಿಳವನದೇವತೆಯರ್ ವಿರಚಿಸಿ ನೀಡಲ್ ಬಂದಂತಿರಲೆಸೆವರ್ ಪುಷ್ಪಮಾಲಿಕಾಧಾರಿಣಿಯರ್ (ಕುಶ್ಯಕೃ. ೨-೬೯); ಕೆಲದೊಳಿಳಿಪಿದಂಬಿನ ಪೊದೆಯ ಸಾರ್ಚಿ ನಿಲಿಸಿದ ಶರಾಸನದ (ರಾಜಶೇ. ೩-೦೦ ವ). ೨. ಗಿಡಮರಗಳು ಒತ್ತಾಗಿರುವ ಸ್ಥಳ ; ಹೊದರು; ಮೆಳೆ : ಮೆಯ್ಮಱೆದು ಲಜ್ಜೆಯಂ ತೊಱೆದು ಪೊದೆಯೊಳಿರ್ದ ಪೆಣ್ಗೆರಡಿ ಯುಂ ಕಂಡು ಕಾತರತನದಿಂ ಪಿಡಿದದಂ ನೆರೆಯಲ್ (ಧರ್ಮಾಕ ೩-೪೫ ವ); ಕೆಂಬೂತಂ ಪಾರಿತು ಪೊದೆಯಿಂದಿತ್ತ (ಅನೀಕೇ. ೪೯-೮); ಕುಬ್ಜಕ, ಮಲ್ಲಿಗೆ, ಕುರಂಟಕ, ನವಮಾಲಿಕೆ ಮೊದಲಾದವುಗಳ ಪೊದೆಗಳಿದ್ದವು (ಬಾಣಭ.೩೬). ೩. ರಾಶಿ ; ಹೊರೆ ; ಗುಂಪು : ಕರವಾಳ ಕೂರ್ಪಂ ನೋಡಲೆಂದು ಬಾಯ್ದಾರೆ ನಿಲೆ ಕುಮಾರಂ ಪೊಯ್ದೊಡೆ ಕೈಯಳವಿದಾರ ಕೈಯಳವಿಯೆನಲ್ ನೆಯ್ದಿಲ ಕಾವಿನ ಪೊದೆಯಂ ಪೊಯ್ದಂತೊರ್ವೊದಲೆ ಪಱಿದುದಾ ವಂಶ ವನಂ (ಶಂರಾಪೂ. ೯-೨೬); ಸುಮ್ಮಾನದಲಿ ತಱಿಗೆಲೆಯ ಪೊದೆಯೊಳು ಮೌನ ದಲಿ ಉರಗೇಂದ್ರನಿದ್ದನು ಬಲಿದ ನಿದ್ರೆಯಲಿ (ಪಳಕ. ೫-೨೬). ೪. (ಮನೆ ಮುಂತಾದುವುಗಳ) ಹೊದಿಕೆ ; ಛಾವಣಿ : (ಕ). ೫. ಕಟ್ಟು ; ಕಂತೆ ; ಹೊರೆ : (ಕ). ೬. (ಅಲಂ) ಗೋಜು ; ಸಿಕ್ಕು : ಈ ಪೊದೆಯನ್ನು ಬಿಡಿಸಿದರೆ ಹಿಂದೂಧರ್ಮದ ಮೂಲತತ್ವಗಳು ದೊರೆಯು ತ್ತವೆ (ಬಂಕಿಮ. ೪೩೮). **ಹೊದೆ$_2$ :** ೧. “ಹೊದೆ_ಆಚ್ಛಾದನೇ, ಶರ ಕೋಶೇ ಚ (ಬತ್ತಳಿಕೆ) ” (ಶಮುಧಾ); “ ಡೊಣೆ ಬತ್ತಳಿಕೆ ಮೂಡಿಗೆಯು ಮೆನಲ್ ಹೊದೆಯು ” (ಶಬ್ದಮಂ. ೪೪) ; ಕಯ್ಕ[ಂ]ಬು ತವಲು ದೇವಂಣಗೆ ಬಿನ್ನಪಂಗೆಯ್ಕಲು ಅವ್ವನ ಹೊದೆಯಂ ಕಾರುಣ್ಯಗೆಯ್ಕಲು ಮಹಾಪ್ರಸಾದ ಎಂನುತ್ತೆ ಕಾಳಗಕ್ಕೆ ಹಱಿದು (ಪ್ಕಆ೦. ೦೪೩೨, ೩೨-೩ ; ಸು. 1125) ; ಭೀಷ್ಮನಿತ್ತಲು . . . ಬಿಗಿದ ಹೊದೆಗಳ ಹಱಿದು

ಬಿಲ್ಲಿಂದುಗುಳಿಸಿದನಂಬುಗಳನು (ಕುಮಾ,ಭೀ. ೯-೭) ; ಎಸುವ ಹೊದೆಯಿಂದೆ ತೆಗೆದೆಸುವ ಬೊಬ್ಬಿಱಿದು ತೊಟ್ಟೆಸುವ . . . ಚಾಪಕಲಾಪ್ರವೀಣರೆಚ್ಚಾಡಿದರ್ (ಕವಿಕು. ೧೦-೭). ೩. ದುಷ್ಕೃತಂಗಳ ಹೊದೆಯಂ ನೆಱೆ ಮುಂದು ಮಾಡಿ ಕೈವಿಡದೆಯುಂ . . . ತಿರ್ದುವ ಚದುರಂ ಬಲ್ಲವರೆ ಬಲ್ಲರ್ (ಶಶಸಂ. ೯-೬೩). ೪. ಹೊಟಿಗೆ ಹಾಸಿದ ಹಸಿಯ ತೊಗಲ ಹೊದೆಯ ಮಾಣದೊಟಿಲಿ ಕೂಗಿಡುವ ನಾನಾಪ್ರಾಣಿವರ್ಗಮಂ ಕೊಱೆವ ಕೊಚ್ಚುವ ತಱಿವ (ಶಕಸಾ. ೧೧-೩೦). [ < ಪೊದ್$_1$./ತಮಿ. ಪುತ್ತೈ, ಪೊತಿ, ಪೊತ್ತೈ; ಮಲ. ಪುತ, ಪೊತಿ ; ತೆಲು. ಪೊದ, ಪೊದಿ ]

**ಪೊದೆಗಟ್ಟು** (ಕ್ರಿ). ಬತ್ತಳಿಕೆಯನ್ನು ರಚಿಸು : ಹೊಸ ಪೊ[ ಶಾಕಾಂ. ಹೊ]ದೆಗಟ್ಟುವಂಬುಗಳ ಕುಪ್ಪೆಯನಾವರಿಪಾರ್ದ್ರಜಾಳಮಂ ಪಸರಿಪ . . . ಪುಳಿಂದಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ (ಚಂದ್ರಕು. ೩-೩೯).
[ ಪೊದ್$_2$ + ಕಟ್ಟು$_{11}$ ]

**ಪೊದೆಗೆದಱು, ಹೊದೆಗೆದಱು** (ಕ್ರಿ). (ದಟ್ಟವಾಗಿರುವುದನ್ನು) ವ್ಯಾಪಿಸುವಂತೆ ಮಾಡು,—ಎಲ್ಲೆಡೆಗೆ ಹರಡು : ಮಾಲೆವೂವಂ ನೆಗಪಿ ಸೂಗಯಿಕುಂ ನೀಱರೊಳ್ ಪುಷ್ಪಚಾಪಂ ಗುಱಿಯೆಸಂ ತೋಱಲಂಬಂ ಪೊದೆಗೆದಱಿದವೋಲ್ ಪುಷ್ಪಲಾವೀಕದಂಬಂ (ಶಂಶಾಶ. ೦-೦೨೦) ; ಮಾಲೆಗಾರ್ತಿಯರೆತ್ತಿದ ಬೆಲೆವೂವಿನ ಸರಂಗಳನಲರಂಬಂಗೆ ಪೊದೆಗೆದಱುವಂತೆ ಕೆದಱೆ (ಚಂದ್ರಕು. ೬-೯ ವ) ; ಪೊದೆಗೆದಱಿರ್ದ ಪೂಗಣೆಯ ಕೆಂಗಱಿಯಂತೆ . . . ಪೂತ ಚೂತದ ಕೆಱುಗೊಂಬಿನೊಳ್ ನಿಱಿದಳಿರ್ ಮೆಱೆದತ್ತು (ಅಜಿತು. ೬-೮೨). **ಹೊದೆಗೆದಱು** : ಸುಶರ್ಮ ಶಲ್ಯರು ಸರಳ ಹೊದೆಗೆದಱಿ ಮೊನೆಗಣೆಯನಳವಡಿಸೆ ಗುರು . . . ಸೇನಾವನಧಿ ಗರ್ಜಿಸಲಾಯ್ತು ಸಂಕುಲಸಮರಸೌರಂಭ (ಕುಮಾ,ಭೀ. ೫-೩) ; ಬಾಣವ್ರಾತವನು ಹೊದೆಗೆದಱಿ ಹೊಸ ಹೊಗರದ್ದನಡಿಗಡಿಗೆ (ಕುಮಾ,ಕ. ೦೩-೨೨).
[ಪೊದ್$_2$ + ಕೆದಱು$_1$ (< ಕೆದಱ್$_1$)]

**ಪೊದೆದುಂಬು** (ಕ್ರಿ). (ಬಾಣಗಳು) ಬತ್ತಳಿಕೆಯಲ್ಲಿ ತುಂಬಿರು,–ಭರ್ತಿಯಾಗಿರು : ಸೆಕ್ಕಿದ ಖಂಡೆಯಂ ಬಿಗಿದ ಬಿಲ್ ಪೊದೆದುಂಬಿದ ಬೋಳೆಯಂಬು . . . ಬಾಸಿಗದಿಂ ಮೆಱೆದತ್ತು ಸಪ್ಪಿಗಳ್ (ಶಕಪು. ೨-೯೬).
[ ಪೊದ್$_2$ + ತುಂಬು$_1$ ]

**ಪೊದೆಯಿಸು, ಪೊಚ್ಚು, ಪೊದಯಿಸು, ಪೊದಿಸು, ಪೊದೆಸು, ಹೊಚ್ಚು$_1$, ಹೊದಸು, ಹೊದಿಯಿಸು, ಹೊದಿಸು, ಹೊದುಸು, ಹೊದೆಸು, ಹೊದ್ದಿಸು$_2$** (ಕ್ರಿ). ೧. ಮುಚ್ಚು ; ಆಚ್ಛಾದಿಸು : "ಪೊದೆಯಿಸು— ಆಚ್ಛಾದನೇ" (ಶಮದ) ; ಬಿಸರುಹದಳಂಗಳಿಂ ಪೊದೆಯಿಸಿರ್ದ ಹಿಮಗೃಹಮನವನಿಪಾಲಂ ಕಂಡಂ (ಕಾದಂಸಂ. ೨೦೯) ; ಪೊದೆಯಿಸಿದತ್ತೊ ಚಿತ್ರಪಟದಿಂ . . . ಎಂಬಿನಂ ತಳಿರ ಪೂವಿನ ತುಂಬಿಯ ಕಾಯ ಪಣ್ಣ ಬಣ್ಣದಿನೆಸೆದತ್ತು . . . ಬನಂ (ಜಗಪು. ೦೦-೫೫) ; ಆ ವಿಷಯದೊಳೊಪ್ಪುವ ಕಳಮಾವಳಿ ನಳನಳಿಸಿ ಬೆಳೆದು ಪಸುರೇಱಿ ಲಸದ್ಭೂವನಿತೆಗೆ ಧಾತ್ರಂ ಪರಿಭಾವಿಸಿ ಪೊದೆಯಿಸಿದ ಹರಿತಪಟದಂತಿರ್ಕುಂ (ಗಿರಿಕ. ೨-೦೨). ೨. ಮುಸುಕು; ಕವಿ; ಆವರಿಸು : ಮುಕುಂದನ . . . ಹಸ್ತದ ಕಾಂಚನವಾರಿಯಂತ್ರಮಂಕದಱ ನಿವಿಕೀರ್ಣಮೆತ್ತ ಘುಸೃಣೋದಕಧಾರೆ ನವಾರುಣಾಂಶುವೋಲ್ ಪೊದೆಯಿಸಿತಂಬುಜಾನನೆಯರೆಂಬ ನವಾಂಬುಜಿನೀಕದಂಬಮಂ (ಜಗಪು. ೦೯-೦೦೬). ೩. ವ್ಯಾಪಿಸುವಂತೆ ಮಾಡು ; ಹರಡು : ಸುಗುಡುತನಮಂ ಪುದಿದ ಚತುರಂಗದತ್ತು ಚದುರಂ ಪೊದೆಯಿಸುತೆ ಕೊಯ್ಲೆನಿಂಡರಂ ಪಣೆದದಿಂ ಮಣೆಯಿಸುತ್ತೆ (ಶಬ್ದಾ. ೯-೯೯). **ಪೊಚ್ಚು** : ೧. ಗುರುಪಾದೋದಕದಿಂದಲೆರೆದು ವಸ್ತ್ರವ ಪೊಚ್ಚಿ ವರವಿಭೂತಿಯನು ಫಾಲದೊಳಿಟ್ಟು ಮುದದಿ (ಬಸ್ವ,ಜರ. ೦೬೪-೨). **ಪೊದಯಿಸು** : ೧. ಪೆಱತೊಂದೆಡೆಯೊಳ್ ಸಹಕಾರರಸದಿಂ ತೊಯ್ದರನೇಱಿಲ ತಳಿರ್ಗಳಿಂ ಪೊದಯಿಸಿದ ಕುಳಿರ್ವ ಕಾವಣಂಗಳುಮಂ . . . ನೋಡುತ್ತುಂ ಪೋಗೆ (ಕಾದಂಉ. ೨೦೯) ; ಪೊದಯಿಸುವಂತೆ ಚಿತ್ರಪಟದಿಂ ತನುವಂ ಬಹುರತ್ನಕಾಂತಿಗಳ್ ಪುದಿಯೆ ಲತಾಂಗಿ . . . ತಳೆದಳ್ ಪುಳಕಾಂಕುರಂಗಳಂ (ಮಲ್ಲಿಪು. ೯-೬೧) ; ಪೆರ್ಮರದ ನಟ್ಟೆಗೊಂಬಿನ ಕವಲ್ದಲೆಯೊಳಿಟ್ಟ ಗೂಡುಗಳೊಳ್ ಗೂಡುಗೊಂಡಿರ್ದ ಕುಱುಳೆವಱಿಗಳ್ಗೆ ಕುಟ್ಟುಂಕನಿಕ್ಕಿ ಕಡುಗಂದಿತನದಿಂ ಕೋಡಗಱಿಯ ತುಱುಗಲೊಳ್ ಪೊದ[ಶಾಕಾಂ. ದೆ]ಯಿಸೆ (ಚಂದ್ರಪು. ೮-೪ ವ) ; ಸವುರಬಿಳಿದಂ ಬಿಗಿದುಡಿಸಿ ಬೆಳಗುವ ದುಕೂಲವಂ ಪೊದಯಿಸಿ (ಶಂಶಿರ. ೦೦-೯೬). **ಪೊದಿಸು** : ೧. ಪರಿಮಳೋದಕದಿಂದೆ ಮಹಮಜ್ಜನಕ್ಕೆಱೆದು ವರದುಕೂಲವನುಡಿಸಿ ಪೊದಿಸುತಂ (ತಿರುಕು. ದೇ. ೬-೨೦) ; ಕೋಮಳಸಿತಪಕ್ಷಮಂ ಪೊದಿಸಿ ಲಾಲಿಪ ಹಂಸೆಯ ಪುತ್ರಮೋಹಮಂ ಲಳನೆ ಸಮಂತು ಕಂಡು ಮಿಗೆ ಚಿಂತಿಸಿದಳ್ ಸುಕುಮಾರಲಾಭಮಂ (ದಶಕು. ೦-೩೬) ; ವಾಯಸಪ್ರತತಿ ಗಱಿಗಳಿಂ ಪೊದಿಸಿ ಮಗ್ಗುಲೊಳಿಟ್ಟು ಕೋಗಿಲೆಯ ಮಱಿಗಳಂ ಮೈಯೊಳ್ ಪುದುಗಿಕೊಂಡು ಮಱುಕದಿಂದೈದೆ ಪಾಲಿಸುತಿರ್ದುವು (ಕೈಬಾಶ. ೨೮-೯). **ಪೊದೆಸು** : ೧. ಬಿಳಿಯ ಪಟ್ಟಾವಳಿಯ ಪೊಸ ಸವುರವಂ ಪೊದೆಸಿ (ಅತಿರ. ದೇ. ೬೩-೯) ; ದುಗುಲವ ಪೊದೆಸುತ ನಿಱಿಯ ಸುಗಿದನು (ಶರಕ. ೧೦-೬೦). **ಹೊಚ್ಚು$_1$** : ೧. ಶರಪಂಜರವ ಖಿಳನೆಚ್ಚು ಶರದಲಿ ಕೈಟಭಾರಿಯ ಹೊಚ್ಚಿ ಬೊಬ್ಬಿರಿಯುತ್ತಲಿಂತೆಂದನು ಸರೋಷದಲಿ (ಕೋಗದು. ೦೦-೩೯) ; ಮೈಮೇಲೆ ಮೆತ್ತಗಾಗಿ ಹೊದಕೆಯೊಂದನ್ನು ಹೊಚ್ಚಿ ತಾಯಿ ದೀಪವನ್ನಾರಿಸಿದಳು (ಕಮವ. ೦೦೯) ; ಬಡವರಾದವರು ಮನೆಗಳಿಗೆ ಹುಲ್ಲು ಹೊಚ್ಚುತ್ತಾರೆ (ಮುಂಗಿಜ. ೯-೦೦೮). ೨. ಬಚ್ಚಿದವು ಕವಚವಂ ಕಚ್ಚಿದವು ಖಂಡವಂ . . . ಮೈಯೊಳಗೆ ಹೊಚ್ಚಿದವು ಹೊಗರಲಗು ಮುಚ್ಚಿದವು ನೆಣಮಸೆಯನು (ಕೈಬಾಶ. ೦೩-೦೮) ; ಮುಗಿಲ ಹೊಚ್ಚಿತು ಕಪ್ಪುಕಂಬಳಿಯ ಕತ್ತಲು (ಶಂಕಸ. ೦೯-೦೫). ೪. (ಕದ ಮುಂತಾದುವನ್ನು) ಮುಚ್ಚು : ಆ ಉಷ್ಣದಿವಸದೊಂದಿರುಳು . . . ಪಡಿಯ ಹೊಚ್ಚಿದೊಡುಬ್ಬೆ ತಾಗುವುದೆಂದು ಮಡದಿಯೆಡದ ಕೋಳೆಳೊಱಗಿ ಬಡಗಾಳಿಗೆ ಮೈಯೊಡ್ಡಿ ಸ್ವಪಾತ್ಮಜ ನಡಸಿದ ನಿದ್ರೆಯೊಳಿರಲು (ಕೇಬಸಂ. ೯-೩೬). **ಹೊದಸು** : ೨. ರೋಷಜ್ವಾಲೆ ಹೊದಸಿತು ವದನವನು ಕಣ್ಣಾಲಿ ಕಾಹೇಱಿದವು ಪಾರ್ಥಂಗೆ (ಕುಮಾ,ಕ. ೦೬-೦). **ಹೊದಿಯಿಸು** : ೧. ಭರದಿಂದ ಹೊದಿಯಿಸಲೊಡನಾ ಪೀತಾಂಬರವೆಳೆದರಂತಾಗೆ ಸುರುಚಿರಮಪ್ಪ ತವಮಾಲಲತಿಕೆಯೆನೆ ಸುದತಿ ಕಣ್ಗೊಪ್ಪವಡೆದಳು (ಕೇಬಸಂ. ೨೫-೦೬೯). **ಹೊದಿಸು** : ೧. ಕಂದನು ನೋಡುತ್ತ . . . ತಾಯಿ ಮೇಲ್ಸೆಱಗಿಂದ ಹೊದಿಸುತ ತೆಱೆವುತಂ ಹೊದಿಸುತ್ತ ತೆಱೆವುತ್ತ . . . ತಲ್ಲಣಿಸುವಳು (ಬಸಪು. ೦೫-೨೦) ; ಗುಡಿಲಂ ಹೊದಿಸಿ ಹಸವಮಾಡುವ ಕಳನ ಕೆತ್ತುವ . . . ಕುಡಿಯರುಗಳೊಳಗೊಪ್ಪವಂ ಪಡೆಮುದು (ಸಪ್ತುಳಾ. ೦-೨೯) ; ಬಿಸಿನೀರಿಂದೆ ಮೆಯ್ತೊಳೆದು ಪಕ್ಕಿಯೊಳೊಱಗಿಸಿ ವಸ್ತ್ರದಿಂ ಮುಚ್ಚಿ ಹೊದಿಸಿ (ಪೋಶಕ. ೩೦-೯೬). ಆನೆಗಳಿಗೆ ಬಟ್ಟೆಯನ್ನು ಹೊದಿಸಿರುತ್ತಾರೆ (ಕೃಪಾಳ. II. ೦೩೬) ; ಹಚ್ಚಡ ಹೊದಿಸಿದರೆ ಹುಚ್ಚು ಹೋದೀತೇ ? (ಗಾದೆ). ೨. ಅದಿರ್ದ ಖಡುಗದ ಕಾಂತಿ ಸೂರ್ಯನ ಹೊದಿಸಿದುದು (ಕುಮಾ,ದ್ರೋ. ೬೨-೬) ; ಸರಳು ಗಗನವ ಹೊದಿಸಿದವು (ಕುಮಾ,ಕ. ೯-೩೨). ೫. ಆವೃತವಾಗು; ಮುಸುಕಲ್ಪಡು : ದಿಗುಜಾಲವಂಬಿನ ಹೊರಳಿಯಲಿ ಹೊದಿಸಿದುದೆನಲು ಕವಿದೆಚ್ಚನಾ ಪಾರ್ಥ (ಕುಮಾ,ಕ. ೨೦-೨೦). ೬. ಆವರಿಸುವಂತೆ ಮಾಡು; ಕವಿಯಿಸು : ಹಿಳುಕ ಹೊದಿಸಿದನಖಿಲದೆಸೆಗಳ ನಿಲುಕಲರಿದೆನೆ (ಕುಮಾ,ದ್ರೋ. ೦೩-೩೬) ; ಪಂಚಪಾಂಡವರಡಸಿದರು ಹೊದಿಸಿದರು ಕಣೆಯಲಿ ರವಿಸುತನ ರಥವ (ಕುಮಾ,ಕ. ೦೩-೩೬). ೭. ಬಳಸು; ಸುತ್ತುವರಿ: ಆ ಕುಶದ್ವೀಪವದಱಿಂ ತುದಿಗೆ ತಿರುಗಿಹುದಿಕ್ಷುವಿಕ್ಷುವ ಹೊದಿಸಿಹುದು ತಾ ಕ್ರೌಂಚದ್ವೀಪವದು

(ಸಂಭಶ. ೧೧-೯). **ಹೊದಾಸು :** ೧. ಛತ್ರದ ಮನೆಯ ಹೊದಾಸುವದಕ್ಕೆ `೬ (ಎಕ. VII, ಶಿವಮೊ. ೭೦-೬೨ ; 1431). **ಹೊದೆಸು :** ೧. ಕೋಮಲಾಂಗಿಯರಿಗೆ ರಾಯ ತಾ ಹೊದೆದಿದ್ದ ಕ್ಷೌಮವಸ್ತ್ರವ ಹೊದೆಸಿದನು (ಭರತ. ೩೦-೧೧೪). ೨. ಹೃದಯ ಕಳವಳಿಸಿದವು ಕಂಗಳ ಹೊದೆಸಿದವು ನಯನಾಂಬು (ಕೊರಠಾ. ೨-೨-೨೬). **ಹೊದ್ದಿಸು₂ :** ೧. ಜಪ್ಪೆಯಾಹಾರವ ಜಂಗಮವನೂಡಿಸುವೆ [ತ್ವ]ಚದಾಹಾರವ ಜಂಗಮಕ್ಕೆ ಹೊದ್ದಿಸುವೆ (ಬಸವ. ೪೨೯) ; ಮಂಚದ ಮೇಲೆ ಮಲಗಿಸಿ ಹೊದ್ದಿಸಿ ಬಾಗಿಲು ಹಾಕಿಕೊಂಡು ಬಾ (ಶಂಗಾಳ್. ೨೫೯). [ಪೊದೆ₁ + — ಇಸು₃]

**ಪೊದೆವಡು** (ಕ್ರಿ). ಹೊದಿಸಲ್ಪಡು : ಪೊದೆವಟ್ಟ ಪಟ್ಟಾವಳಿಗಳಾನೆದೊವಲೆಸೆವ ಪುಲಿಸಮ್ಮವು (ಚೇರವು. ೦-೫೦). [ಪೊದೆ₁ + ಪಡು₁]

**ಪೊದೆಸೀರೆ** (ನಾ). ವಸ್ತ್ರದ ಹೊದೆಯುವ ಭಾಗ ; ಮೇಲುಸೆರಗು : ಅತಿವೇಗದೆ ಸಾರೆವಂದು ನೀರೇರುಹನೇತ್ರನಿರ್ದಿರವನೀಕ್ಷಿಸಿ ಗದ್ಗದಕಂಠನಾಗಿ ಕಣ್ಣೀರೆತ[ರೊಗೆ]ದುಣ್ಕೆ ಕಣ್ಗಡೆಗಳಿಂ ಪೊದೆಸೀರೆಯಿನೊತ್ತು ತೊಂದು ಕಾಸರವುನೆಯ್ದಿದರ್ (ವಃಹಾನೇ. ೦೬-೫೩). [ಪೊದೆ₁ + ಸೀರೆ₂]

**ಪೊದೆಸು** 'ಪೊದೆಯಿಸು' ನೋ.

**ಪೊದ್ದ** 'ಪೊದೆ₁' ಪರಾ.

**ಪೊದ್ದಿಗೆ** 'ಪೊರ್ದಿಗೆ' ನೋ.

**ಪೊದ್ದಿಸು** 'ಪೊರ್ದಿಸು' ನೋ.

**ಪೊದ್ದು₁** 'ಪೊರ್ದು' ನೋ.

**ಪೊದ್ದು₂** 'ಪೊದೆ₁' ಪರಾ.

**ಪೊನ್, ಪೊಂ, ಪೊನ್ನು, ಹೊಂ, ಹೊನ್, ಹೊನ್ನು₁** (ನಾ). ೧. ಕಬ್ಬಿಣ, ತಾಮ್ರ, ಚಿನ್ನ ಮುಂತಾದ ಖನಿಜ ; ಲೋಹ : 'ಕರ್ಬೊನ್', 'ಚೆಂಬೊನ್' ಪರಾ. ೨. ಬಂಗಾರ ; ಚಿನ್ನ ; ಸ್ವರ್ಣ : "ಪೊನ್ ಸ್ವರ್ಣಂ" (ಕರ್ಣಾಟಿ. ೨) ; ಓರಿಯ ಪೊನ್ನ ತಳಿಗೆಯು ಪಾಂಚ್ಚಮಪ್ಪಡ್ಡವಣಿಗೆಯುಮನಿಟ್ಟು . . . ತಾನೆ ಬಡ್ಡಿಸಲ್ (ವಡ್ಡಾರಾ. ೬೯-೦೨) ; ಇ[ದ] ಕಾದುಡಿದೋ[ಂ]ಗೆ ವಾರಣಾಸಿಯೊಳಾನ್ಸಿರಕವಿಲೆಯು[ಂ] ಕೋಡುಂ ಕೊಳಗುಮಂ ಪೊನ್ನೊಳ್ಕಟ್ಟಿಸಿ ದಾನಂಗೊಟ್ಟ [ಫ]ಲಮಕ್ಕು (ಸೌಇಇ. XI–i, ೩೪-೦೯ ; 926) ; ಗಗನಗಜಕ್ಕಿಕ್ಕಿದ ಪೊನ್ನ ಗಂಟೆಯೆರಡೆನಲುಮಂಬರಾಂಭೋನಿಧಿಯೊಳ್ ನೆಗೆದುರಿವೌರ್ವಾನಲದುರ್ಬುಗಳೆನಲುಂ ನೆಗೆದುವಹಿಮಹಿಮಕರಬಿಂಬಂ (ಆದಿಪು. ೩-೫೨) ; ಉದಕಂ . . . ಪೊನ್ನ ಬಣ್ಣದ ಮಣ್ಣೊಳ್ ಪರಲಾಗಿ ಕಿಂಪೆಸೆವ ಮಣ್ಣೊಳ್ ಕೃಪೆಯಾಗಿರ್ಪಂ (ಲೋಕೋಪ. ೫-೯) ; ಪೊನ್ನ ನೇಗಿಲಲುತ್ತು ಗುಳ್ಳದ ಬೀಜವಂ ನೆಱೆ ಬಿತ್ತುವಂದದಿ . . . ಲಿಂಗಪರಾಙ್ಮುಖರನಾಗಳು ಭಜಿಸಿ ಭವಬಂಧನಕ್ಕೊಳಗಾಗದೆಂಶಿಹನು (ಬಸವು. ೬೦-೫೦); ಮಿಸುಪ ಪವಳದ ಪುತ್ತಳಿ ಪೊನ್ನ ಪೊವಕೆ ರಂಜಿಸಿತು ಚಾವಡಿಯ ಚೌರಸದೆಡೆಯೊಳು (ಕೃಬಿಪಾ. ೦೭-೨೩). ೩. (ಹಿಂದೆ ಚಲಾವಣೆಯಲ್ಲಿದ್ದ) ಹತ್ತು ಹಣ ಬೆಲೆಯುಳ್ಳ ಒಂದು ಚಿನ್ನದ ನಾಣ್ಯ ; ಗದ್ಯಾಣ : "ಪತ್ತುಂ ಪಣದಿಂ ಪೊನ್ನಕ್ಕುಂ" (ವ್ಯವಹಾ. ೪-೨೩) ; ಈ ಪೊನ್ನೆನ್ದು ಕೊಡಗೆಗಾಗಿ ಅಳಿದೊನ್ . . . ಪಞ್ಚಮಹಾಪಾತಕನಕ್ಕು (ಎಕ. III, ತಿರುಮ. ೧೦೩-೬ ; ಸು. 750); ಕವಿವರರುಂ ಪೆಂಡವಾಸಧೊಳ್ಪೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತುಂ ದಮ್ಮಮುಮಂ ಪೊನ್ನುಮಂ ಕೇಳಿ ಮಾಡಿ ಮುಂದೆ ಸೂಸುತ್ತುಮೊಯ್ಯನೆದಂ . . . ಕಂಡು (ವಡ್ಡಾರಾ. ೮೪-೨); ನಿತ್ಯದಾನಕ್ಕೆ ದೇವಸಬಳದ ಪದಿನೆಂಟುಕೋಟಿ ಪೊನ್ನುಮನಿತ್ತು (ಶಂಕಭಾ. ೨-೮೪ ವ). ೪. ಸಂಪತ್ತು ; ಐಶ್ವರ್ಯ ; ನಿಧಿ : ಅರಸರ ದುಣ್ಡಗೆವೆರಸಿಟ್ಟ ಪೊನ್ನ ಕಯ್ದುಱೆಯಪ್ಪಂಗೊಪ್ಪಿಸಿಮೆನ್ದು ತನ್ದು (ಎಕ. III. ನಂಜನ. ೩೯-೦೩; ಸು. ೯೦೦); ಸಿಡಿಲ್ಹೊಡೆದವೊಲಟ್ಟಿ ಮುಟ್ಟಿ ಕಡಿದಿಕ್ಕಿದುದಾದೆಡರಂ ನಿರಂತರಂ ಕಡಿಕಡಿದಿತ್ತ ಪೊನ್ನ[ಪಾಠಾಂ. ನ್ನೆ] ಬುಧಮಾಗಧವಂದಿಜನಕ್ಕೆ ಕೊಟ್ಟ ಕೋ[ಡೆ]ಡಱದೆ ಬೇಡಿ[ಮೋ]ಡಿಮಿದು ಚಾಗದ ಬೀರದ ಮಾತು ಕರ್ಣನಾ (ಶಂಕಭಾ. ೧-೯೯); ಅರಸನುಂ . . . ಪೂಜಿಸಿ ಬಂಡಾರದ ಪೊನ್ನೆಲ್ಲಮಂ ಮುಂದೆ ರಾಸಿಮಾಡುವುದುಂ (ಧರ್ಮಾಮೃ. ೩-೨೦೫); ನಿನ್ನ ನೀನಱಿ ಸಾಕು ಮಾಯೆಯ ಗನ್ನಗತಕವ ಗೆಲುವೆ ಕನಸಿನ ಪೊನ್ನ ಕಾಣದೆ ದುಃಖಿಪಡುವರೆ (ಕುಮಾರವ್ಯಾ. ೭-೨೮). ೫. ಹಣ ; ಧನ ; ದುಡ್ಡು : ಈತಂಗೆ ಪೊಱಗೆ ನಾಡಿಲ್ಲೊಳಗೆ ಭಂಡಾರಮಿಲ್ಲೀತಂಗೆ ಪೊನ್ನೆತ್ತಣಿಂ ಬರ್ಪುದಿದನಾರಯ್ವೆಂ (ಧರ್ಮಾಮೃ. ೨-೧೦೬). ೬. (ಚಿನ್ನದ) ಒಡವೆ ; ಆಭರಣ : ತೊಟ್ಟ ಪೊನ್, ಡಿಙನಾದ ಮಿಡಿದು, ಮೇಲ್ ವಾಯ್ದು ಪೊನಲಿಟ್ಟು ಪರಿದು . . . ಮಲೆದನ್ (ಅಂತಿಗೂ. ೭-೦೦೦). ೭. ಚಿನ್ನದ ಬಣ್ಣ ; ಹೊಂಬಣ್ಣ ; ಹಳದಿಬಣ್ಣ : 'ಪೊಂದಳಿರ್', 'ಪೊನ್ನೀರ್' ಪರಾ. **ಪೊಂ :** ೨. ಅರಸುಮಗಂ ಗಡ ಕಲಿ ಗಡ ಓರಿದೀವಂ ಗಡ ಬಟಿಕ್ಕ ಜೈನು ಗಡೆನಲ್ದರಣಿಪತಿ ಕೀರ್ತಿದೇವಂ ನಿರುತಂ ಪೊಂ ಕಮ್ಮಿತಾದುದೆನಿಸಿದನಿಳೆಯೊಳ್ (ಸಮುಶ. ೦-೪೭). ೩. ಕೋಟಿ ಪೊಂಗೆ ಘಂಟೆಯಲುಗುವ ಕಿಱುಕುಳಬೊಜಂಗರುಮಂ . . . ನೋಡಿ (ಶಂಕಭಾ. ೪-೮೭ ವ); ಬುಧರಿಗೆ ಸಕಲರಿಗೆ ಪೊಂಗಳನು ಭೂಷಣವಸ್ತ್ರ ರತ್ನವನೊಲಿದು ದಾನವ ಮಾಡಿದನು ಮುಮುಕಾರಭೂಪಾಲ (ಶ್ರಶುಂ. ೩-೦೨). ೪. ಪೊಂಗೆಱಗುವ ದೀಪವರ್ತಿ ಮಣ್ಗೆಱಗುಗುಮೆ (ಸಮುಶ. ೪-೨೫). **ಪೊನ್ನು :** ೩. ದಶಪಣದಿಂದಂ ಪೊನ್ನುವೊಂದು ತಪ್ಪದು (ವ್ಯವಹಾ. ಆಮುಬಂಧ. ೯-೩೮). ೫. 'ಪೊಂಬಡೆ' ಪರಾ. ೭. 'ಪೊಂಗೇದಗೆ', 'ಪೊಂಬುಲಿ' ಪರಾ. ೮. ಶ್ರೇಷ್ಠವಾದುದು ; ಅತ್ಯುತ್ತಮವಾದುದು : 'ಪೊಂಬಸಿಱು' ಪರಾ. **ಹೊಂ :** ೨. 'ಹೊಂಗಂಟೆ', 'ಹೊಂಗಡಗ' ಪರಾ. ೩. ಅಕ್ಕಸಾಲೆ ನಾಗೋಜಂ ಹೊಂಗೆ ವೀಸ × × × [ಲೆ]ಕ್ಕದಿಂ ಕೊಟ್ಟ ಪವಣಾಯಮನಾ ಕೊತ್ತಳಿಗ [ಮಾ]ಡಿಸಿದ ಬಸದಿ ದೇವಾಲ್ಯಕ್ಕೆ . . . ಧಾರಾಪೂರ್ವ್ವಕಂ ಮಾಡಿಕೊಟ್ಟ ದಂಣಾಯ ಹೊಂಗೆ ವೀಸ ಲೆಕ್ಕ . . . ಪಚ್ಚುಕುಡುವುದು (ಕೊಲ್ಹಾಶಾ. ೩೪-೦೩ ; 1153) ; ಓಗದಾಸ್ಥಾನದಲ್ಲಿ ವಿಸುನಿಯ ಹೊಂಗಳೊಡನೊಡನುಕ್ಕಿ ಹೊಱವಡಲಂಗಣದಲದ್ಭುತರಸಂ ಮಿಗೆ ಮೂಡುತ್ತಿರೆ (ಬಸವು. ೨೩-೫೫); ನೋಟ ಸವಿಸುಖಿಕೆ ಕೋಟಿ ಹೊಂ ಬೆಲೆಯಲ್ಲ ಕೂಟಕೆ ನೋಟವನು ಸಾರೆ ವ್ಯಸನಕ್ಕೆ ಬೇಟವೆ ಮೊದಲು (ಸರ್ವಜ್ಞ. ೧೯೭೦). ೭. 'ಹೊಂಗಾಜು', 'ಹೊಂಗೇದಗೆ' ಪರಾ. **ಹೊನ್ :** ೨. "ಹೇಮ, ಸ್ವರ್ಣಂ . . . ಕರ್ಬುರಂ, ತಪನೀಯಂ–ಈ ೨೫ ಹೊನ್ (ಪೊನ್)" (ಹಲಾಯು. ೨೯-೦೯); ಸಹಸ್ರಕವಿಲೆಯುಂ ಕೋಡುವಂ ಕೊಳಗುವಂ [ಹೊನ್ನ]ಲುಂ ಬೆಳ್ಳಿಯು(ಂ)ಲುಂ ಕಟ್ಟಿಸಿ (ಸೌಇಇ. XI–i, ೬೯-೦೯; 1033); ಕವಡಿಕೆಯುಂ ಕಾಚುಂ ಸಲ್ಗುಮೆ ಹೊನ್ನವೊಲೆಲ್ಲಿಯುಮಾದೊಡಂ (ಸಮುಶ. ೩-೦೨); ಧರೆಯಱಿಯೆ ಹೊನ್ನ ಮೇಯ್ಯಾಂತಿರುತಿರ್ದುಂ ಲಜ್ಜೆಯಿಲ್ಲ ತನಗೆಂದು ಕರಂ ಸುರುಚಿರಧವಳಿಮದಿಂ ಸುರಗಿರಿಯುಂ ಹಿಮನಗದ ಚೆಲ್ವನಗದೇಕಿರ್ಕುಂ (೧೦ಶ. ೧-೫೭). ೩. ಕೊಠಾರದ ದಿವಾಕರದಂಡನಾಯಕರು ತಮ್ಮ ಕೈಯ ಹೊನ್ನ ಕೊಟ್ಟು (ಇಆ·IV, ೨೭೬-೯೬; 1184). ೭. 'ಹೊಂದಾವರೆ' ಪರಾ. ೮. 'ಹೊನ್ನುಡಿ' ಪರಾ. **ಹೊನ್ನು₁ :** ೨. "ಗೈರಿಕಂ ಕರ್ಬುರಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕು" (ಮಂಗರಾ. ೩೦-೪); ಗಿರಿಯ ಮುತ್ತಿದ ಮಿಂಚುಬುಳುವಿನ ಹೊರಳಿಯಂತಿರೆ ಹೊನ್ನ ಬರಹದ ಸರಳು ಮಱಿದವು (ಕುಮಾರವ್ಯಾ. ೩-೨೬); ಹೊನ್ನಿನ ಹೊಳೆವ ಕಠಾರಿಯ ಮೊನೆವೊಳೆ ಬೆನ್ನೊಳು ತಲೆದೋಱಿಸಲು (ಮೋಹತ. ೧೨ ೬೯); ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣಜಲವ ಕೊಂಡು . . . ಕನ್ನಿಕೆಯರು ರಾಜಿಸುವರು (ಕಂನಪಿ. ೫-೫೫). ೩. ಈ ಗೂಳಿಯು ಕೊಂದ ಪಾತಕಕ್ಕೆ

ಹದಿನೆಂಟು ಲಕ್ಷ ಹೊನ್ನಿನಲ್ಲಿ ಗೂಳಿಯು ಮಾಡಿ . . . ಕೊಟ್ಟಲ್ಲಿ ಈ ಪಾಪ ಹೋಹುದೇ (ಅವಕಂ. ೦೩೭-೭೨೦); ಪೂರ್ವ್ವಾಯದ ಪೂರ್ವ್ವಾಯದಿಂ ಬಹಾಯ ಹೊಂನು ಸಹಿತವಾಗಿ . . . ತಾಮ್ರಶಾಸನಮಂ ಕೊಟ್ಟರು (ಮೈಅಂ. ೦೯೪೦, ೦-೭೨ ; 13ನೆಯ ಶಶ ?); ತಾಳಜಂಘನು . . . ಹೊನ್ನನೊಂದನು ಭೂಮಿದೇವಿಯ ಕೆನ್ನೆಯಲಿ ತಾನಿಡದೆ ಭೂಸುರರುನ್ನತಿಯನೇ ಬಯಸುತಿಪ್ಪನು (ಸಂಭಜ. ೨೩-೩೬) ; ಆಲಕಟ್ಟಲೆಗೆ ಬರಸಿ ಕೊಟ್ಟಹ ಪ್ರಮಾಣ ರೇಖೆ ೧೫೫ ಹೊಂನಿಗೆ (ಎಕ. VII, ಶಿವಮೊ. ೭೦-೨೬ ; 1431). ೪. ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು ಎಂದು ನೆನೆನೆನೆದು (ಮಹಾದೇ. ೩. ೦೯-೩೦); ಹೊನ್ನುಳ್ಳ ಹೊಲೆಯರುತ್ತಮರು (ತ್ರಿರಂವ. ೦-೦೯೯-೪); ಮಣ್ಣು ಬಿಟ್ಟವ ದೈವ ಹೊನ್ನು ಬಿಟ್ಟವ ದೈವ (ಸರ್ವಜ್ಞ. ೦೨೭೯). ೫. ಮನೆಯಲ್ಲಿ ಮಂದಿ ಬಹಳ ಹೊನ್ನಿನ ಮೆಚ್ಚ ಘನವೆಂದು (ಕಂಪವಿ. ೬-೦೪೮). ೭. 'ಹೊನ್ನೀರು' ಪರಾ. ೮. 'ಹೊನ್ನುನಡೆ', 'ಹೊನ್ನುನುಡಿ' ಪರಾ. ೯. ಪ್ರೀತಿಪಾತ್ರರಾದವರನ್ನು ಮುದ್ದಿನಿಂದ ಕರೆಯುವ ಮಾತು : ಪುಲ್ಲಶರಾತ್ಮಸಂಭವನ ಕಣ್ಗೆಸಮದು ಹೊಲ್ಲೆಹ ಮೃಗವೆನ್ನ ಹೊನ್ನೆ (ಶೋಹಶ. ೦೯-೩೩). 'ಚಿನ್ನ$_1$' ಪರಾ.

**ಪೊನ್ನ ಪೂ, ಹೊನ್ನ ಹೂವು** = ಹೂವಿನ ಆಕಾರದಲ್ಲಿ ಚಿನ್ನದಿಂದ ಮಾಡುವ ಒಂದು ಬಗೆಯ ಕರ್ಣಾಭರಣ : ಆ ಕಿವಿಗಳಲಿ ಪೊನ್ನಪೂ [ಪಾಠಾಂ. ಹೊನ್ನ ಹೂ]ಗಳನಾ ಕಮಳಲೋಚನೆಗೆ ಕೀಲಿಸಲು (ಬಸಕೃ. ೪-೩೯); ಚೆನ್ನಾಗಿ ಲಾಲಿಸು ಚೆಲ್ವಡರಿದ ನಿನ್ನ ಕರ್ಣಾಂತರದಲಿ ಮೆರೆವ ಹೊನ್ನ ಹೂವಿಗೆ ಪರಿಮಳ ಬರೆ ಪೇಳುವೆ ಬನ್ನಣೆಗಾರ್ತಿ ಚಿತ್ತೈಸು (ಶೋಹಶ. ೨೪-೨); ಪಾಲೆ ಮೂಗುತಿ ಹೊನ್ನ ಹೂವು (ಬಿದಾಕ್ಕ. ೦೦-೩). 'ಚಿನ್ನ ಪೂ' ಪರಾ. **ಪೊನ್ನ ಬೆಟ್ಟು** = ಚಿನ್ನದ ಪರ್ವತ; ಮೇರು : ಪೊನ್ನ ಬೆಟ್ಟು ಕೈಯಂ ಕಾಲಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ (ಕಬ್ಬಿಕಾ. ೦೬೩). **ಪೊನ್ನ ಮಳೆ, ಹೊನ್ನ ಮಳೆ** = ಚಿನ್ನದ ಮಳೆ ; ಸುವರ್ಣವೃಷ್ಟಿ : ವಸುಮತಿವೆಸರನ್ವರ್ಥಂ ವಸುಧೆಗೆನಲ್ಕೆಱೆದು ಪೊನ್ನ ಮಳೆಯಂ ದಾನವ್ಯಸನಿ ದಶರಥನದೇಂ ಪೊಸಯಿಸಿದನೊ ಚೌಲೋಪನಯನಮಹಿಮೋತ್ಸವಮಂ (ಕಂರಾಘೂ. ೩-೦೪೨) ; ದಾಸನಂತೆ ತವನಿಧಿಯ ಬೇಡುವನಲ್ಲ ಚೋಳನಂತೆ ಹೊನ್ನ ಮಳೆಯ ಕಱೆಸಂಬವನಲ್ಲ (ಬಸವ. ೭೬೦). **ಪೊನ್ನ ಮೈಯವನು** = ಹಿರಣ್ಯಗರ್ಭ; ಬ್ರಹ್ಮ : ಪೊನ್ನ ಮೈಯವನು ನಮ್ಮಿಬ್ಬರಿಂಗೆ ಪೂರ್ವಾನುಕೂಲಗೈದು ಸೃಜಿಸಲು (ಪಪಮೋ. ೨೮-೦೦). **ಪೊನ್ನರ್ಧ** = ಗದ್ಯಾಣದ ಅರ್ಧಭಾಗ : "ಭರಣಂ = ಪೊನ್ನರ್ಧಂ" (ಕಾಶಕ್ಕ. ೭೩). **ಪೊನ್ನವಣ, ಹೊನ್ನವಣ** = ಚಿನ್ನದ ಒಂದು ಬಗೆಯ ನಾಣ್ಯ : ಗಳಂತಿಗೆಯುಲು ಪುಟ್ಟಿದಾಯದೊಳಗೆ ಲೊಕ್ಕಿಯು ನವಿಲುಮಾಗಿ ಪೊನ್ನವಣ ಬಿ(ಂ)ನ್ನಮುನಾಯ್ದು ಕಳೆದು (ಸೌಇಇ. IX-1, ೦೬೪-೨೮; 1098); ದೀವಿಗೆಗೆ ಗಾಣ ಒಂದು ಅಶೇಷನೇರ ಹೊನ್ನವಣ ಹೇಱಿಂಗೆ ೧೦೦ ಎಲೆಯಂ ಬಿಟ್ಟರು (ಕಇಅ. ೪೩-೬೦-೦೭; 11 ನೆಯ ಶತ). **ಪೊನ್ನುಳ್ಳವಂ, ಹೊನ್ನುಳ್ಳವಂ** = ಧನಿಕ : ಪೊನ್ನುಳ್ಳವನೆ ಕುಲೀನಂ ಚಿನ್ನಂ ಕಲಿ ಸತ್ಯವಾದಿಯೆನಿಸುಗುಂ (ಕಾವ್ಯಾವ. ೮೦); "ಧನವಾನ್, ಅಸ್ತಿಮಾನ್–ಈ ೨ ಹೊನ್ನುಳ್ಳವಂ" (ಹಲಾಯು. ೬೦-೨೦೪). **ಹೊನ್ನ ಕನಸು** = ಹೊಂಗನಸು ; ಸುಂದರವಾದ ಕಲ್ಪನೆ : ಗುರುದೇವನ ಹೊನ್ನ ಕನಸನ್ನು ಹುಡಿಗುಟ್ಟ . . . ಮೆರೆಯುತ್ತಿರುವ ನೀನು ಪರಮಪಾತಕಿ (ತುಂಗಭ. ೪೨). **ಹೊನ್ನುತಾ ಗುಬ್ಬಿಯಾಟ** = ಕೈಯ ಬೆರಳುಗಳನ್ನು ಮುಚ್ಚಿ, ಬಿಡುವ ಆಟ; ಯಾರಾದರೂ ಏನಾದರೂ ಕೊಟ್ಟರೆ ಅದನ್ನು ಅಂಗೈಯಲ್ಲಿ ಹಿಡಿದುಕೊಳ್ಳುವ ರೀತಿ ಕೈಬೆರಳುಗಳನ್ನು ಚಲಿಸುವ ಆಟ ; P ತಾ ತಾ ಗುಬ್ಬಿ, ಹೊನ್ನ ತಾ ಗುಬ್ಬಿ, ರನ್ನ ತಾ ಗುಬ್ಬಿ, ತಾ ತಾ ಗುಬ್ಬಿ, ಚಿನ್ನ ತಾ ಗುಬ್ಬಿ, ಹೊನ್ನ ತಾ ಗುಬ್ಬಿ, ತಾ ತಾ ಗುಬ್ಬಿ–ಎಂಬುದು ಮಗುವನ್ನು ಆಡಿಸುವಾಗ ಹೇಳುವ ಮಾತುಗಳು. ಗುಬ್ಬಚ್ಚಿಯು ಚಿನ್ನವನ್ನು ತಂದುಕೊಡಬೇಕೆಂಬುದನ್ನು ತಿಳಿಸುವ ಆಟ : ಕೈಸನ್ನೆಯಿಂದಾ ಮುಕ್ತಿಬಾಲೆಯಂ ಕೆಳೆತನಕೆ ಕರೆವಂತೆ ಹೊನ್ನ ತಾ ಗುಬ್ಬಿಯಾಟಂಗಳಾಡಿ (ಶಬಕೃ. ೫-೩೯). **ಹೊನ್ನ ದಾರ** = ಚಿನ್ನದ ಒಡ್ಯಾಣ; ಕಾಂಚೀದಾಮ : ಹೊನ್ನ ದಾರ ಉತ್ತಮ ವಿಸುನಿಯ ಗಂಟೆಸರಗಳಿಂದ ಮತ್ತೇಭಯಾನೆಯೊಪ್ಪಿದಳು (ಕುಂವಪ. ೯-೭೦). **ಹೊನ್ನ ಹುಳು, ಹೊನ್ನೆಹುಳ** = ಮಿಂಚುಹುಳು ; ಮಿಣುಕುಹುಳು : ಹೊನ್ನ ಹುಳು[ಪಾಠಾಂ. ೪]ವ ಕಂಡು ನರಿ ತನ್ನ ಬಾಲವ ಹುಣ್ಣ ಮಾಡಿಕೊಂಡರೆ ಹೋಲಬಹುದೆ (ಬಸವ. ೨೬೭) ; ಹೊನ್ನೆಹುಳಗಳು ಹಾರಾಡುತ್ತಿದ್ದಂತೆ ಕಾಣುವವು (ಮುಂಬಯಿ. ೬-೦೩೪) ; ಗಿಡಗಂಟಿ ಮೈಮಾನಕೆ ಹೊನ್ನೆಹುಳಗಳ ಮಿಣುಕು ಚಲಿಸುತಿಹ ದೀಪಾವಳಿ (ಶರಮು. ೪೦-೦೦) ; ಹೊನ್ನೆಹುಳ! ಹೊನ್ನೆಹುಳ! ಬೆಳಕೇಕೆ? ನಿನ್ನ ಬೆಳಕೇಕೆ? (ಚಕ್ರರ್ಮ. ೬೩).

[ದೇ.॥ ತಮಿ. ಮಲ. ಪೊನ್ ; ತುಳು. ಪೊನ್ನು; ಕೊಡ. ಪೊನ್ನ್; ತೆಲು. ಪೊನ್ನು, ಹೊನ್ನು, ಹೊಂ]

**ಪೊನಲ್**, ಪೊನಲು, ಹೊನಲ್, ಹೊನಲಂ (ನಾ). ೧. (ನದಿಯ) ಪ್ರವಾಹ ; ನೀರೋಟ : ಪರಚಕ್ರಭೂಪರಟ್ಟಿದ ಕರಿಗಳ್ಬಿಱುತಪ್ಪ ಮದದ ಪೊನಲಿಂದೆತ್ತಂ . . . ಕೆಸಱೆಕ್ಕುಂ (ಕುಂಣ. ೩-೦೬೨) ; ಕಡಲ್ ಕಡಲಂ ಮುಟ್ಟೆ ತರಳ್ದ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಶಂಶಣ. ೦೦-೯೦) ; ಎಸೆವುದು ವಳಿತ್ರಯಂಗಳಿನೆಸೆವಸಿಯಳ ತೆಳ್ವಸಿಱು . . . ತರೆಮಸಗಿದ ಲಾವಣ್ಯರಸದ ಪೊನಲೆಂಬಿನೆಗಂ (ಮಲ್ಲಿಕೃ. ೩-೬೬) ; ಪಱಿದುಗುವ ಕರ್ಬುಗಳ ತನಿರಸದ ಪೊನಲಿಂದೆ ನೆಱೆಯೆ ಬೆಳೆದುವು ಪುರದ ಕಳಮಾದಿ ನಯದಿಂದೆ (ಶಂಬರ. ೯-೦೯). **ಪೊನಲು** : ೧. ಪನ್ನೀರ ಪೊನಲೇ ಪ್ರವಾಹ ಸುದತಿಯರ ಕಡೆಗಣ್ಣ ಬೆಳಗು ಕುಡಿಮಿಂಚು (ಸೌಂದಕೃ. ೧೩-೬) ; ಅಲರ್ವಡಿವೆರಸಿ ನಲವಿನಿಂದ ಪರಿವ ಪರಿಕಾಲ್ಗಳ ಪೊನಲಲ್ಲಿ ಕುಂಕುಮರಸದಿರವಿನಂತಿಹುದು ನೋಳ್ಪರಿಗೆ (ಕುರಾಪಾಂ. ೨-೩೩). **ಹೊನಲ್** : ೧. "ಹೂರಮೆಂದು ಹೊನಲ್" (ಕಶಪ. ೬೦-೫೯೪) ; "ಹೂರಮೆನಲ್ಕದುವೆ ಹೊನಲೆನಿಕ್ಕುಂ" (ಕಬಕಂ. ೨೩೪). **ಹೊನಲು** : ೧. ವೇದವನೋದಿದ ವಿಪ್ರರು ಹೊನಲ[ಪಾಠಾಂ.ರ]ಲ್ಲಿ ಹೋದ ಕೇಡ ನೋಡಿರೇ (ಬಸವ. ೫೮೭) ; ಉಣ್ಬುವ ಶಿವಾನಂದರಸದ ಹೊನಲೊಳ ಗದ್ದು ಈಸಾಡಿ (ಬಸರ. ೩-೦೧೮) ; ಎರಡು ಗೂಳಿಗಳಲ್ಲಿ ತಮ್ಮೊಳಗುರವಣಿಸಿ . . . ಕಾದುತ್ತಿರಲು ನೆತ್ತರ ಹೊನಲು ಪರಿವುತಿರೆ (ಬಸಕೃ. ೬೨-೫೦); ಕಡುಹಿನ ಕಾಳಕೂಟದ ನದಿಗೆ ನಂಜಿನ ಹೊನಲು ಬೆರೆಸಿದರೆ ಪಾಳೆಯವೆ (ಕುವ್ಯಾಗ. ೦೪-೬೦). ೨. ತೊರೆ ; ಹೊಳೆ : ಹೊನಲು ನೂರೀ ಭಾಳ ಕಡಲನುಬ್ಬಿಸಲಿ (ಮುಂಕುಳ. ೬೪೪) ; ಆ ದೊಡ್ಡ ಕಂಬದ ಮನೆಯ ಅನತಿ ದೂರದಿಂದ ಒಂದು ಹೊನಲು ನಸುನಗುತ್ತ ಸದಾ ಸರ್ವದಾ ಹರಿಯುತ್ತಿರುತ್ತದೆ (ಕಂಬಹು. ೨).

**ಪೊನಲಾಗು, ಹೊನಲಾಗು** = ಪ್ರವಾಹದಂತೆ ಹರಿ : ಉಕ್ಕು ; ಪ್ರವಹಿಸು : ಇಂದುಮಬಿಂಬದಿಂದಮೃತಬಿಂದುಗಳೊಕ್ಕುವೆಂಬಪೋಲ್ ಮಹಾಕ್ರಂದನವೇಗದಿಂದ ಸುರಿವಶ್ರುಜಲಂ ಪೊನಲಾಗೆ (ಧಶಕು. ೬-೩೯) ; ಆ ಭವನಪಂಕ್ತಿಗಳುರಿದು ಕರಗಿದವವನಿಯಲಿ ಹೊನಲಾಯ್ತು ಪುರಜನವೈದೆ ಬೆಱಗಾಗೆ (ಕುವ್ಯಾಆ. ೯-೮೮) ; ಇದಿರಾಂತ ಭಟರ ಗೋಣ್ಗಳ ನರಿಯಲು...ಹೊನಲಾಯ್ತು ರುಧಿರಂ ಪ್ರವಾಹದಂತೆ (ಜೈಮಿ. ೬-೪೩).

[ದೇ.॥ ತಮಿ. ಪುನಲ್ ; ಮಲ. ಪುನಲ್, ಪುಣಲ್ ; ತುಳು. ಪುಣಲ್ = ತೇಲುವುದು]

**ಪೊನಲಿಡು**, ಹೊನಲಿಡು (ಕ್ರಿ). ೧. ಪ್ರವಾಹವಾಗು : ಉಕ್ಕಿ ಹರಿ ;

ಪ್ರವಹಿಸು : ತಾವ್ರುಧ್ವಜಂ . . . ಕೆಗೆದಿಸಲ್ ಬಱಸಿಡಿಲ್ವೊಡೆದು ಗಿರಿ ಜರಿವಂತಿರೆ ನಿರ್ಜರೇಂದ್ರನ ಸೂನು ಪೊನಲಿಡಲ್ ಬಿಸಿಯ ನೆತ್ತರ್ಪೊಂಪು ಸುತ್ತೆ ಮೈಮಱೆದು ಬಿದ್ದನು (ಕೈಬಿಶಾ. ೨೩-೩೩) ; ತೊಟ್ಟ ಪೊನ್ ಡಿಱ್ ನಾದ ಎಡಿದು, ವೇಲ್‌ವಾಯ್ದು ಪೊನಲಿಟ್ಟು ಪರಿದು . . . ಮಲೆದನ್ (ಅಂತಿಗೊ. ೬-೧೧೨). **ಹೊನಲಿಡು :** ೧. ಎದುಳ ಕೊಳ್ಗಸಱ ಹೊನಲಿಡುವ ರಕುತದ ಕಡಲೊಳಡಿಯಿಡಲು ಬಾರದೆಂಬಂತೆ ವಿಶ್ವಾಮಿತ್ರನು ಅಡವಿಯೊಳಗೆಯ್ದೆ ನಾನಾಭಯಂಕರವ ಸಾಲಿಡಲು (ಹತಕಾ. ೦೨-೩೪) ; ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು . . . ಹೆಣನ ಮೆದೆ ಹೇರಾಳ ರಂಜಿಸಿತು (ಕುಮಾರವ್ಯಾ. ೧೧-೬) ; ಹೇಳಲೇನದನವಳು ಮೋಘದ ಜಾಳಿಯಲಿ ಮಳೆಗಱೆದಳರುಣಜಲಾಳಿ ಹೊನಲಿಡಲಬ್ಬರಿಸುತಾಸುರವಿಕಾರದಲಿ (ತೊರಣಾ. ೦-೧೧-೦೬). ೨. ವ್ಯಾಪಿಸು ; ಹೊಮ್ಮು . ಘನರವುದ್ರದ ಘೋರವದನದ ಹೊನಲಿಡುವ ದಾಡೆಗಳ ಹೊಗರಿನ . . . ಮನದ ಕಡುಹಿನ ದೂತರೆದ್ದುದು (ಅಂದಿಶಾ. ೪-೫೨). [ಪೊನಲ್ + ಇಡು$_1$]

ಪೊನಲು 'ಪೊನಲ್' ನೋ.

ಪೊನಲುವರಿ 'ಪೊನಲ್ವರಿ$_1$' ನೋ.

ಪೊನಲೇಳ್, ಹೊನಲೇಳು (ಕ್ರಿ). ಪ್ರವಾಹ ಬರು, -ಉಕ್ಕು : ಚಟ್ಟಮಂ ಇಱಿಯೆ ವಿರೋಧಿ ಬಿದ್ದ ಸಮರಾಂಗಣದೊಳು ಶ್ರೀ ಗವುಣ್ಡಭೂಮಿಯಿಂದೊಱೆದೊಱೆದ್ದುಕ್ಕಿಯಿಂನು ಪೊನಲೇಳ್ವುದು ಭೂತಪಿಶಾಚ ಕೋಟಿಯುಂ ನೆಱೆ ತಣಿಯುಣ್ಬ (ಎಕ.XVI, ಶಿಕಾ. ೯೮-೨೩ ; 1169). **ಹೊನಲೇಳು :** ಅರುಣಜಲ ಹೊನಲೆದ್ದು ಮಗ್ಗುಲಲುನವಣಿಸಲಾರಾವ . . . ನೋಡಿದನೆನಗೆ ಕಡುಮುಳಿದು (ಕುಮಾಶ. ೯-೩೨) ; ಅನಲಾಕ್ಷನಾಣೆ ನಾರದ ಕೇಳು ರೋಹಿತ ಹೊನಲೇಳೆ ಹೊಯ್ದು ಹೊಕ್ಕವನ (ಮೋಹತ. ೩೩-೨೦). [ಪೊನಲ್ + ಏಳ್$_1$ (< ಎಟು$_1$)]

ಪೊನಲ್ಗೊಳ್ (ಕ್ರಿ). ಪ್ರವಾಹವಾಗು : ಮುಕ್ತಿಸಾರಂ ಪೊನಲ್ಗೊಂಡುದೋ . . . ಶಿವಾಂಗರುಚಿ ನದಿಯುಂಗವೆತ್ತುದೆನೆ ಸುರಗಂಗೆ ಕಣ್ಗೆ ಮಂಗಳವಾಗಿ ತೋರ್ದುದು (ಶಂದಮಾ.೧೧-೨೪). [ಪೊನಲ್ + ಕೊಳ್$_1$]

ಪೊನಲ್ನಾಡು (ನಾ). ನದಿಗಳಿರುವ ದೇಶ, -ಪ್ರಾಂತ : ಮಲೆನಾಡೆ, ಪೊನಲ್‌ನಾಡೆ, ಬಯಲ ಪೊನ್‌ನಾಡೇ, ಪಲಕಾಲಮಾನಗಲ್ದಿರ್ದನ್ (ಅಕ್ಕಾ. ೧೬-೩೫೩). [ಪೊನಲ್ + ನಾಡು]

ಪೊನಲ್ವರಿ$_1$, ಪೊನಲುವರಿ, ಹೊನಲುವರಿ (ಕ್ರಿ). ೧. =ಪೊನಲಿಡು ೧ : ಕೊರವೊಡೆ ಬೆಟ್ಟುಗಳ್ ಬಿರಿವುವುಣ್ಮುವ ಲಾಳೆಯ ಲೋಳೆಗಳ್ ಪೊನಲ್ವರಿವುವು (ಶಂಕಥಾ. ೪-೧೧೧) ; ಅಂತು ತಾಮ್ರಪಯುಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕರಗುವಂತೆ ಕರಗಿ ಪೊನಲ್ವರಿಯೆ (ಶಾಂತಿಪು. ೬-೨೪ ವ) ; ನವಮಣಿಮರೀಚಿಮಂಜರಿ ಕವಿದು ಪೊನಲ್ವರಿದು ದೆಂಬಿನಂ . . . ಜಲಜಲಿಸಿ ಪರಿವ ಬರಿವೊನಲೆಸೆಗುಂ (ಶರ್ಶು. ೧೧-೮೪). ೨. ಹರಡು; ವ್ಯಾಪಿಸು; ಹೊಮ್ಮು : ಈ ನಾಟ್ಯರಸಂ ಸಮಸ್ತ ಸುರವೃಂದಾಧೀಶನಿಂದು ಪೊನಲ್ವರಿದತ್ಯಂಬಿನಮಾಡುವಲ್ಲಿ ಮಕುಟವ್ಯಾಲಗ್ನ ರತ್ನಪ್ರಭಾಪರಿವೇಷಂ ಲಲಿತೇಂದ್ರಚಾಪರುಚಿಯಂ ಮಾಡಿತ್ತು ದಿಕ್ಚಕ್ರದೊಳ್ (ಆದಿಪು. ೬-೦೨೦). **ಪೊನಲುವರಿ :** ೧. ಆ ಮಾತಿಗೆ ಹರುಷಾಶ್ರುವಿನಿಂದ ಪೊನಲುವರಿಯೆ ಪುಳಕಾಂಬು ವನಿತೆ ಮಂಗಳಮಜ್ಜನವ ಮಾಡಿ ಸಿಂಗಾರಕನುವಾದಳು (ಕಂಶಾ. ೪-೬೮). **ಹೊನಲುವರಿ :** ೧. ವಿನುತ ಸುಕವಿಯ ಸೂಕ್ತಿ ತಾಗಿದ ಮುನಿಗಳಂತಃಕರಣದಂತಿರೆ ಹೊನಲುವರಿದವು ಚಂದ್ರಕಾಂತದ ಸಾಲುಶಿಲೆ ಕರಗಿ (ಕುಮಾರವ್ಯಾ. ೦೬-೦೬). [ಪೊನಲ್ + ಪರ್$_2$]

ಪೊನಲ್ವರಿ$_2$ (ನಾ). (ನೀರಿನ) ರಭಸವಾದ ಓಟ, -ಹರಿವು : ಪರಿವ ಪರಿಕಾಲ ಪೊನಲ್ವರಿಯೊಳಿರ್ವ್ವೊರೆದು ತಣ್ಪೆಟಲಿಕ್ಕಿದ ಮಡಿವರ್ಗದ ದುಗುಲಂಗಳುಂ (ಶರ್ಶು. ೫-೬೬ ವ). [ಪೊನಲ್ + ಪರ್$_3$]

ಪೊನಲ್ವರಿಯಿಸು (ಕ್ರಿ). ಪ್ರವಾಹವನ್ನುಂಟುಮಾಡು ; ರಭಸವಾಗಿ ಹರಿಯುವಂತೆ ಮಾಡು : ಕರಂ ಪೊನಲ್ವರಿಯಿಪ ಬಂಬಲ್ಸರಿ ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱೆದುವಿರುಳುಂ ಪಗಲುಂ (ರಾಜಶೇ. ೯-೦೦೨). [ಪೊನಲ್ವರಿ$_2$ + -ಇಸು$_3$]

ಪೊನ್ಕವಿ (ನಾ). ಒಂದು ಸ್ಥಳದ ಹೆಸರು : ಪಶ್ಚಿಮಾಯಾನ್ದಿಶಿ ಪೊನ್ಕವಿ ತಾಟುತ್ತಮಾಯರಾ ಕೆಱೆ (ಎಕ. IV, ನಾಗಮಂ.೮೫-೬೪; 776). [?]

ಪೊನ್ಕೊಳ (ನಾ). ಒಂದು ಸ್ಥಳದ ಹೆಸರು : ಶ್ರೀಮಾರಸಿಂಘದೇವ ಪೃಥುವೀರಾಜ್ಯಂಗೆಯ್ಯುತಿರೆ ಪೊನ್ಕೊಳದ ಎಮ್ಮತುಱುಗಳೊ × × × ಹಾಯ್ದು (ಮೈಆರ್. ೦೯೩೦, ೦೨-೨; ಸು. 961). [? + ಕೊಳ$_2$]

ಪೊನ್ತನ (ನಾ). ಚಿನ್ನದಂತೆ ಹೊಂಬಣ್ಣವಾಗಿರುವಿಕೆ; ಚಿನ್ನದಂತಿರುವಿಕೆ: ಒಯ್ಯನೊಯ್ಯನೆಯೆ ತುಂಬುದಿಂಗಳ ಕನಕಬಿಂಬಕ್ಕೆ, ಪೊನ್‌ತನಂ ಬಾಡಿ, ಮೂಡಿದುದು ಬೆಳ್ಳಿಯ ತನಂ (ಶ್ರೀರಾಮಾ. ೪೮೦-೦೬೩). [ಪೊನ್ + -ತನ]

ಪೊನ್ನಂಗಲ್ (ನಾ). (?) : ಪೊನ್ನಂಗಲ್ . . . ಕಣ್ಣಂದೊಬಲಿ, ಕಣ್ಣಂಬಾಳೆ (ಕಜ್ಞಾಮ. ೫೫ ಪ್ರಯೋ). [?]

ಪೊನ್ನಂಡೆ, ಹೊನ್ನಂಡೆ (ನಾ) . ಚಿನ್ನದ ಜೀರ್ಕೊಳವೆ ; ಬಂಗಾರದ ಪಿಚಕಾರಿ : ಮನ್ಮಥ ರತಿ ಪೊನ್ನಂಡೆಗಳ ತುಡುಕಿದರು (ಮೋಹತ. ೦೪-೮೦) ; ತಮತಮಗೆ ಹಸ್ತಕಳವಟ್ಟ ಜಲಯಂತ್ರ ಪೊನ್ನಂಡೆಗಳ ಗಡಣದಿಂ ನೀರಾಟಕನುವಾದರು (ಕಿರಾಪು. ೩೬-೬೫) ; ಕರದೊಳ್ ಪೊನ್ನಂಡೆಯುಂ ಜೀರ್ಕೊಳವಿಯೆಸಯೆ . . . ಕಾಂತಾಳಿ ನೀರ್ವೊಕ್ಕುದಾಗಳ್ (ರಾಜಶೇ . ೧೧-೬೦). **ಹೊನ್ನಂಡೆ :** ಕೊಂಡು ಕುಂಕುಮವಾರಿಗಳ ಹೊನ್ನಂಡೆ ಜಲಜಂತ್ರಂಗಳಲಿ ಹೊಯ್ದಾಡಿದರುಮ್ಪೋಕುಳಿಯ (ತೊರಣಾ. ೦-೦೬ ೫೩) ; ಕುಂಕುಮಜಲವ ಹೊನ್ನಂಡೆಗಳೊಳು ತುಂಬಿ ಮುಂಕೊಂಡು ಹೊಯ್ದಾಡಲು (ಮೋಹತ ೦೪-೮೦) ; ಗುಂಡಿದುಳ್ಳಾಡಿ ಸರ್ವರು ಹೊಕ್ಕು ಕೂಡೆ ಹೊನ್ನಂಡೆ ಜೀರ್ಕೊಳವೆಯೊಳ್ಮೊಗೆದು ಸುಂಡಿಲೊಳ್ಸೂಸುವಾನೆಗಳಂತೆ ಚಲ್ಲಿದರ್ಮಂಡೆ ಮ್ಯನೆಯುಲೆಲ್ಲರಿಗೆ (ಶರಕ. ೪೦-೨೪). [ಪೊನ್ + ಅಂಡೆ$_2$]

ಪೊನ್ನಂದಣ 'ಪೊನ್ನಂದಳ' ನೋ.

ಪೊನ್ನಂದಳ, ಪೊನ್ನಂದಣ, ಹೊನ್ನಂದಣ (ನಾ). ಚಿನ್ನದ ಪಲ್ಲಕ್ಕಿ ; ಬಂಗಾರದ ಶಿಬಿಕೆ : ಅಗಣಿತವಿಲಾಸಿನಿಯರುಗ್ಗಡಿಸೆ ಪಾಯವಧಾರೆನುತ್ತಲಂದು ಪರವೆ ಪೊನ್ನಂದಳವನಡರೆ (ಸೌಂದಪು. ೬-೩೨). **ಪೊನ್ನಂದಣ :** ಬಳಿಕ ಪೊನ್ನಂದಣದ ಮೇಲೆ ವೈವಾಹಮಂಗಳಮಹೋತ್ಸವಕೆ ವಿರಚಿಸಿದ ಮಂಟಪದೆಡೆಗೆ ನಳಿನಪತ್ರಾಕ್ಷಿಯಂ ತಂದರೊಸಗೆಯೊಳು (ಕೈಬಿಶಾ. ೩೦-೦೩). **ಹೊನ್ನಂದಣ :** ಹಿಂದೆ ಮುಂದಿಕ್ಕೆಲದ ನಾರೀವೃಂದವೆಯ್ತರೆ ನಡುವೆ ತಾ ಹೊನ್ನಂದಣವನೇಱಿದಳು ಸುರಕರಿಯೆಡೆಗೆ ಗಾಂಧಾರಿ (ಸಂಶಶ. ೨೦-೦೪) ; ಮಣಿಮಯದ ದಡ್ಡಿಗಳು ಹೊನ್ನಂದಣವ ಮುಸುಕಿದವು (ತೊರಣಾ. ೦-೦೬-೦೩) ; ಸಂದಣಿಸಿದರಣ್ಣಗಳು ದಾದಿಯರು ಹೊನ್ನಂದಣದೆಡದ ಭಾಗದಲಿ (ಶತಿಹತ. ೨೪-೨೩). [ಪೊನ್ + ಅಂದಳ]

ಪೊನ್ನಂದುಗೆ (ನಾ). ಚಿನ್ನದ ಕಾಲುಕಡಗ : ಉಂಗುರ ಗೆಜ್ಜೆ ಪೊನ್ನಂದುಗೆ ಪವಳಮಂ...ತಂದುಕೊಡುವರು (ಬಸಪು. ೦೪-೦೫). [ಪೊನ್ + ಅಂದುಗೆ]

ಪೊನ್ನಂಬರ 'ಪನ್ನಂಬರ' ನೋ.

ಪೊನ್ನಂಬು, ಹೊನ್ನಂಬು (ನಾ). ಚಿನ್ನದ ಬಾಣ : ಇತರ ಕುಮತಂಗಳೊಳುತ್ಪನ್ನಮತಿ ಮನಂಗೆಯ್ವುದು ಪೊ[ಪಾಠಾಂ. ಹೊ]ನ್ನಂಬಂ ನೀರೊಳೆಚ್ಚಿ ಕಿಡಿಪಂತಕ್ಕುಂ (ಸಮುಶ. ೩-೩೫) ; ಸನ್ನುತ ಜಿನಧರ್ಮಂ ನೆಱೆ ತನ್ನಿಂದಂ ತಾನೆ ಬಂದೊಡಲ್ಲದೆ ಬಿಡುಮಾತ್ರಂ ನೆಱೆ ಪೋಲ್ಕುಂ ಜಗದೊಳ್ ಪೊನ್ನಂಬಂ ನೀರೊಳೆಚ್ಚು ಕಿಡಿಸುವ ಮರುಳಂ (ರಮರ್ಮಮ್ಯ. ೩-೨೬೧). **ಹೊನ್ನಂಬು :** ಅಱಿತವರ ಮುಂದೆ ತನ್ನಱಿವನ್ನು ಮೆಱೆಯುವುದು ಅಱಿಯದರ ಮುಂದೆ ಹೊನ್ನಂಬ ತೊಱೆಯಲೆಚ್ಚಂತೆ (ಸರ್ವಜ್ಞ. ೦೪೬೪). [ಪೊನ್ + ಅಂಬು$_2$]

**ಪೊನ್ನಕ್ಕ** (ನಾ). ಒಬ್ಬಾಕೆಯ ಹೆಸರು : × × × ಸೆಟ್ಟಿಯ ಮಗ ಳ್ಪೊನ್ನಕ್ಕನ್ × × × (ಎಕ. XII. ಗುಬ್ಬಿ. ೪೪-೫: 965).
[ಪೊನ್ + ಅಕ್ಕ$_1$]

**ಪೊನ್ನಗಂಟಿ** 'ಪೊನ್ನಗನ್ನೆ' ನೋ.

**ಪೊನ್ನಗನ್ನೆ, ಪೊನ್ನಗಂಟಿ, ಹೊನಗನೆ, ಹೊನಗನ್ನೆ, ಹೊನಗೊನೆ, ಹೊನಗೊನ್ನೆ, ಹೊನ್ನಗನ್ನೆ, ಹೊನ್ನಗೊನ್ನೆ** (ನಾ). ಒಂದು ಬಗೆಯ ತರಕಾರಿ ಗಿಡ ಮತ್ತು ಅದರ ಸೊಪ್ಪು : "ಪಾಂಡುರ-ಕಾಡುದ್ದು, ಕರಿಯ ಹುರುಳಿ, ಪೊನ್ನಗನ್ನೆ" (ಚಿಕಂ. ೯೪) ; ಪೆಸರೆಸೆವ ಪೊನ್ನಗನ್ನೆಯ ರಸಮಂ ಕೊಂಡಾಡ ಪಾಲೊಳೆಳುದಿ ಮಱುಗಿಸಿ ಹಿಂಗು ಸಮೇತಂ ಕುಡಿಯಿಸೆ ಕಿದ್ದೆಸೆ ದೆಸೆಗೆಟ್ಟೋಡಿ ಪೋಗದೇಂ ನಿಂದಪುದೇ (ಲೋಕೋಪ. ೯-೦೩೩). **ಪೊನ್ನಗಂಟಿ :** ಸೊಪ್ಪುಗಳು : ಅಗಸೆ . . . ಪೊನ್ನಗಂಟಿ, ಕೀರಕಸಾಲೆ (ಪಶ್ವಾಕು. ೨೩೭). **ಹೊನಗನೆ :** ಹೊನಗನೆ ಬಹಳ ತಂಪು (ರೂಪಿ). **ಹೊನಗನ್ನೆ :** ಯಷ್ಟಿಮಧುಕ, ಹೊನಗನ್ನೆಯ ಬೇರು ಇವಿಷ್ಟನೂ ಪ್ರತ್ಯೇಕ ಒಂದು ವರಹ ತೂಕದ ಸಣ್ಣನಾಗಿ ಕತ್ತರಿಸಿ (ವೈದ್ಯಸಾ. II. ೩೫). **ಹೊನಗೊನೆ :** "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ — ೪ ಹೊನಗೊನೆಸೊಪ್ಪು" (ಸಿದ್ಧಾಂತಿ. ೦೯೪) ; ಹಳೆಅಕ್ಕಿಅನ್ನ, ಹೊನಗೊನೆಸೊಪ್ಪು . . . ಚಿಲಿಕೀರೆಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವ್ಯ. ೧೦೨). **ಹೊನಗೊನ್ನೆ :** "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ — ಈ ೪ ಹೊನಗೊನ್ನೆ" (ನಾಕರಾ. ೦೦೦) ; ಹೊನಗೊನ್ನೆ ಸಂಗಡ ಆಮ್ಲರಿಕೆ ಮುಗುಳಂ ಹಾಲಲ್ಲಿ ಅರೆದು ಕುಡಿಯೆ ಹೊಟ್ಟೆಉರಿ ಸಹ ಗುಣ (ಬಿವ್ಯಶಿ. ೯). **ಹೊನ್ನಗನ್ನೆ :** "ಮತ್ಸ್ಯಾಕ್ಷಕಃ — ಹೊನ್ನಗನ್ನೆ" (ಚಿಕಂ. ೦೦೯) ; ಹೊನ್ನಗನ್ನೆಯ ರಸಮಂ ಕೊಂಡು ಆಡಿನ ಪಾಲೊಳಗೆ ಕೂಡಿ . . . ಕುಡಿಯಲ್ ಕಿದ್ದೆಸೆಯ ಬೇನೆ ಮಾಣ್ಬುದು (ಲೋಕೋಪ. ೯-೦೩೩ ಟೀಕೆ) ; ತೊಟ್ಟ ಮುಸ್ತೆಯನುಱೆ ಚೂರ್ಣವುದುಲಿಗ ಹೊನ್ನಗನ್ನೆ ಸಮೇತಂ (ಖಮದ. ೩-೯೪). **ಹೊನ್ನಗೊನ್ನೆ :** "ವಸುಕಾಂತಿಯೆನೆ ಹೊನ್ನಗೊನ್ನೆ" (ಮಂಗರಾ. ೪೦-೩೩).

[ದೇ. ಹೆ ತಮಿ. ಪೊನ್ನಾಙ್ಙಣ್ಣಿ, ಪೊನ್ನಾಙ್ಙಾಣಿ ; ತುಳು. ಪೊನ್ನಾಂಕಣ್ಣಿ, ಪೊನ್ನಾಂಗಾಣಿ, ಹೊಣ್ಣಂಗಣಿ ; ತೆಲು. ಪೊನ್ನಗಂಟಿಕೂರ]

**ಪೊನ್ನಬ್ಬೆ** (ನಾ). ಒಬ್ಬಾಕೆಯ ಹೆಸರು : ಕೋಸಿಗರಾ ಕೋಟೆಯಮ್ಮ ಗೋಸಾಸಿಯ ಪೆಂಡತಿ ಪೊನ್ನಬ್ಬೆ (ಪ್ರೈಕಂ. ೦೯೨೯. ೭೯-೨; 964) ; ತಾಗೆ ರತ್ತಿಯ ಮಹಾಜನಕ್ಕೆ ಪೊನ್ನಬ್ಬೆ ಪೊನ್ನ ಕೊಟ್ಟು ಸಾಲೆ ನೀಡೆನ್ದು ಮುತ್ತಲಂ ಕೊಣ್ಡು (ಎಕ. VII. ಶಿಕಾ. ೬೦-೭ ; 978). [ಪೊನ್ + ಅಬ್ಬೆ$_1$]

**ಪೊನ್ನಯ್ಯ, ಹೊನ್ನಯ್ಯ** (ನಾ). ಒಬ್ಬಾತನ ಹೆಸರು : ಪೊನ್ನಸದೇವನ ಮಗ ಪೊನ್ನಯ್ಯ (ಎಕ. XII. ಪಾವುಗ. ೮೦-೧ ; ಸು. 925). **ಹೊನ್ನಯ್ಯ :** ಗೊರವರ ಹೊನ್ನಯ್ಯಂ ತುಱುವಂ ಪಿನ್ನಿಕ್ಕಿ ಪಲರಂ ಕೊನ್ದು ತಳುತ್ತಿಱಿದು ದೇವಲೋಕಕ್ಕೆ ಸನ್ದೋಂ (ಎಕ. VIII. ಸೊರಬ. ೩೪-೦೦ ; 1032).
[ಪೊನ್ + ಅಯ್ಯ$_1$]

**ಪೊನ್ನಲರ್** (ನಾ). ಬಂಗಾರದ ಹೂವು : ಮಾಣಿಕದ ಸೊರ್ಗಳಿಂ ನೇರಾಣಿಯ ಪೊನ್ನಲರ್ಗಳಿಂ ಗೀರ್ವಾಣಾರ್ಚಿತನಂ ನರೇಂದ್ರುವಧುವರ್ಚಿಸಿದಳ್ (ಮಲ್ಲಿಪು. ೯-೩೬). [ಪೊನ್ + ಅಲರ್$_2$]

**ಪೊನ್ನವಾರಗಾವುಂಡ** (ನಾ). ಒಬ್ಬಾತನ ಹೆಸರು : ಮೊಳೆಯನೂರ ದೇವಯ್ಯನುಂ ಪಾಪಯ್ಯನುಂ ಕಳ್ಳಬುಣಸೆಯ ಪೊನ್ನವಾರಗಾವುಣ್ಡನುಂ . . . ಧರ್ಮರಾಸಿಭಟಾರರ ಕಾಲಂ ಕರ್ಚ್ಚಿ ಕೊಟ್ಟ ಸ್ಥಿತಿ ಯಾವುದೆನ್ದೊಡೆ (ಎಕ. XI. ಚಿತ್ರದು. ೭೭-೨೦ ; 937).
[ಪೊನ್ನವಾರ್$_0$ + ಗಾವುಂಡ (< ಗ್ರಾಮುಂಡ)]

**ಪೊನ್ನವೂರ್** (ನಾ). ಒಂದು ಸ್ಥಳದ ಹೆಸರು : ಜಿಡೂರಾಳ್ಗೆಟ್ಟತ್ತಲಿ ನಾಟ್ಗಾವುಣ್ಡಮ್ × × × ಕಲಿಮಿಟ್ಟನೊಳೆ ವಿರೋಧವಾಗಿ ನಾಡಿನ್ದಂ ಗಂಗವಾಡಿಗೆ ಪಳ್ಳಿವೆನಿಪ್ಪೊನ್ನವೂರಲೊಳಿರೆ (ಎಕ. VIII. ಸೊರಬ. ೮೮-೬ ; 91೭). [< ಪೊನ್ + ಊರ್]

**ಪೊನ್ನಳಱು** (ನಾ). ಒಬ್ಬಾತನ ಹೆಸರು : ಕಂಚುಗರ ಗುಜಯ್ಯಂಗೆ ಪೊನ್ನಳಱು ಒಮ್ಮರ್[ತ್ತ]ಲಂ ಕೊಟ್ಟ (ಎಕ. VIII. ಸೊರಬ. ೧೦೬-೧೯ ; 986). [ ? ]

**ಪೊನ್ನಳೂರ್** (ನಾ). ಒಂದು ಸ್ಥಳದ ಹೆಸರು : ಪೊನ್ನಳೂರ್ ಬೋಯಸ್ಯ . . . ಸರ್ವ್ವಶರ್ಮ್ಮಣ (ಇಆ. VII. ೦೬೬-೯೩ ; 668). [? + ಊರ್]

**ಪೊನ್ನಳ್ಳಿ** (ನಾ). ಒಂದು ಸ್ಥಳದ ಹೆಸರು : ಪೊನ್ನಳ್ಳಿ ನಾಮಗ್ರಾಮಃ (ಎಕ. IV. ನಾಗಮಂ. ೬೩-೬೦ ; 770). [ಪೊನ್ + < ಪಳ್ಳಿ$_1$]

**ಪೊನ್ನಾಣ್ಮ** (ನಾ). ಸಂಪತ್ತಿನ ಒಡೆಯ ; ಕುಬೇರ : "ಧನಪತಿಯೊಳೆ ಪೊನ್ನಾಣ್ಮಂ" (ಕಕಾರ್ಥ. ೯೦). [ಪೊನ್ + ಆಣ್ಮ (< ಆಳ್ಮ)]

**ಪೊನ್ನಾಯ** (ನಾ). ಒಂದು ಬಗೆಯ ತೆರಿಗೆ : ಪೇಳಾಪುರದ ಬೀಡು ಚತುಶ್ಸೀಮೆ ಸುಂಕ ಪೊಂನಾಯ ಸಹಿತ ದೇವಳಿಗೆನಾಡಿಂಮೆ ಸಂದಿ ಹಂನೆರಡು (ಎಕ. V. ಬೇಲೂರು. ೫೯-೯೨ ; 1117). 'ಪನ್ನಾಯ' ಪರಾ.
[ಪೊನ್$_1$ + ಆಯ$_7$]

**ಪೊನ್ನಾಯುಗ, ಹೊನ್ನಾಯುಗ** (ನಾ). (ಕತ್ತಿಯ) ಚಿನ್ನದ ಹಿಡಿಕೆ : ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್ (ಅಜಿತಪು. ೬-೫೦). **ಹೊನ್ನಾಯುಗ :** ಹೊನ್ನಾಯುಗದ ಖಡುಗದ ಗಜಬು . . . ಮೂದಲೆಗಳ ಮಹಾಧ್ವನಿ ಬಗಿದುದ್ದೈ ತಾವರೆಯ ತನಯನ ಕರ್ಣಕೋಟರವ (ಕುಮಾಭಾ. ೨-೪) ; ಹೊನ್ನಾಯುಗದ ಖಡುಗವನಕ್ಷಯದ ಮೂಡಿಗೆಯ ದಕ್ಷಿಣದ ಹೆಗಲಿಗೇಱಿಸಿ . . . ಹೊಱವಂಟನು ರಘುಪ್ರಭವ (ತೊರವೆ. ೩-೬-೫). [ಪೊನ್ + ಆಯುಗ (< ಆಯಗ)]

**ಪೊನ್ನಾಯೋಗ** (ನಾ). ಚಿನ್ನದಿಂದ ಮಾಡಿದ ಅಲಂಕಾರವಸ್ತು,— ಆಭರಣ : ನಡೆಯ ತುರಗು ಪೊನ್ನಾಯೋಗಂಗಳಿಂದಮರ್ದಟ್ಟಿಯಿಂ (ಶಂಕಭಾ. ೯-೦೦೨). [ಪೊನ್ + ಆಯೋಗ]

**ಪೊನ್ನಾಳ್** (ನಾ). ಶ್ರೇಷ್ಠನಾದ ಯೋಧ,— ಸೈನಿಕ : ಪೋದವರಾ ಪೊನ್ನಾಳ್ಗಳ್ ಬಾರದೆ ಬಗೆ ಬೆದರುತಿಹುದು (ಶಾಂತಿಸಿ. ೦-೦೫).
[ಪೊನ್ + ಆಳ್$_3$]

**ಪೊನ್ನಿಗ, ಹೊನ್ನಿಗ** (ನಾ). ೧. ಒಬ್ಬಾತನ ಹೆಸರು : ಬದಿರೂರಲು ಬೂತುಗನಂ ತುಮ್ಬೆವಾಡಿಯ ಗಡ್ಡಯ್ಯನ ಮಗಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟಂ (ಎಕ. XII. ಕುಣಿಗಿ. ೨೭-೨೨ ; ಸು. 950). ೨. (ಕನ್ನಡದಲ್ಲಿ ಪ್ರಸಿದ್ಧನಾದ ಪೊನ್ನನೆಂಬ) ಒಬ್ಬ ಕವಿಯ ಹೆಸರು : ಪೊನ್ನಿಗ[ನಿಂ] ಮಲ್ಲಪನುಂ ಪೊನ್ನನುಮಾರ್ತಿಯೆ ಪುರಾಣಚೂಡಾಮಣಿಯಂ ಮುನ್ನಂ ಪೇಳಿಸಿದಂತೆ . . . ಪೇಳಿಸಿದಳ್ (ಅಜಿತಪು. ೦-೬೭). 'ಅರಿಗ' ಹೋ. **ಹೊನ್ನಿಗ :** ೧. ಹೊನ್ನಿಗ ಪಸುಗವೊನ್ನಮೆಣ್ಣೆ ತಮ್ಮ ಚವನಮ ಊರಳಿವನ ಸತ್ತ (ಎಕ. X (೩). ಬಾಗೇಪ. ೯೯-೨ ; 10ನೆಯ ಶತ).
[ಪೊನ್ + – ಇಗ]

**ಪೊನ್ನಿಡಿಕಿ** (ನಾ). ಒಂದು ಸ್ಥಳದ ಹೆಸರು ; ಈಗಿನ ತುಮಕೂರು ಜಿಲ್ಲೆಯ ಹೊನ್ನುಡಿಕೆ : × × × ದ ಪೊನ್ನಿಡಿಕಿಯೊಳ್ ತನ್ನ ಅರ್ತ್ತದಟಿವಿನೊಳ್ ಕಾದಿ ನಾಲ್ವರ ಕೊನ್ದು ಸತ್ತನ್ (ಎಕ. XII. ಮಧುಗಿ. ೪೦-೩ ; ಸು. 950). [ ? ]

**ಪೊನ್ನೀರ್, ಹೊನ್ನೀರು** (ನಾ). ೧. ಹೊಂಬಣ್ಣದ ಕಾಂತಿ : ಒಯ್ಯನೆ ಸುತ್ತಂ ಸೂಸಿದೀಶಾನನ ಜಡೆಗಳವೊಲ್ ಕಾಯ್ದು ಪೊನ್ನೀರ್ಗವಿಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದಹಿಮರುಚಿಗಳಂ ತಿಗ್ಮರುಚಾಲಿಬಿಂಬಂ (ಕಾದಂಬ

೬೬೪). **ಹೊನ್ನೀರು:** ೨. ಹೊಂಬಣ್ಣದ ನೀರು : ಉದಯೋನ್ಮುಖ ಸೂರ್ಯನ ರಶ್ಮಿ ವಿಕಸನವುಪ್ಪದ ಮೇಲೆ ಹೊನ್ನೀರನೆರಚಿತ್ತು (ಚೀವಕ. ೨೮); ಹೊಂಗದಿರ ಜೀರ್ಕೊಳವಿಯಿಂ ಸಂಜೆ ಜರ್‍ರೆಂದು ರಂಗೆರಚೆ . . . ಕನ್ನೆಲ ವಸಲೆಯಲಿ ಹೊನ್ನೀರ ಮಳೆ ಹೊಯ್ಕಲು (ಕನ್ಯಾಂಗ. ೨೦-೩೪೦).
[ಪೊನ್ + ನೀರ್]

**ಪೊನ್ನು** 'ಪೊನ್' ನೋ.

**ಪೊನ್ನುಗ** (ನಾ). ಚಿನ್ನದಲ್ಲಿ ವ್ಯವಹರಿಸುವವನು; ಅಕ್ಕಸಾಲಿಗ : ವಣ್ಣುಗಂ, ಪೊನ್ನುಗಂ (ಕಶಾ.ಕು. ೬೨೪ ಕ್ರ.ಯೋ). [ಪೊನ್ + -ಉಗ]

**ಪೊನ್ನುಡೆ** (ನಾ). ಜರತಾರಿ ವಸ್ತ್ರ; ಚಿನ್ನದ ಬಣ್ಣದ ದುಕೂಲ : ಪೀತಾಂಬರ : ತನ್ನ ಮನೆಯ ಮದುವೆಯೊಳು ಮಂಗಲದೊಳು ತನ್ನ ಬಾಂಧವರೆಲ್ಲರನು. ಅನ್ನಪಾನಂಗಳಿಂದಾದರಿಪುದು ಮತ್ತ ಪೊನ್ನುಡೆಯಿತ್ತು ಪೂಜಿಪುದು (ಹರಿ. ೯-೩೬); ಪೊನ್ನುಡೆಯಿರೆ ತೊವಲಂ ಕೊಳೆಯವನೆನ್ನಂ ತಾನಕ್ಕೆ ಪಶುವನೆಂದೇ ಬಗೆವರ್ (ಚಕಪ. ೦-೬೦). [ಪೊನ್ + ಉಡೆ]

**ಪೊನ್ನುಯ್ಯಲ್, ಹೊನ್ನುಯ್ಯಲ್** (ನಾ). ಚಿನ್ನದ ತೂಗುಮಣೆ,- ಜೋಕಾಲಿ : ಚೂತವಮಹೀಜದ ಕಿಬಗಣ ಪೊನ್ನುಯ್ಯಲನೇಱಿ . . . ತರಳಾಕ್ಷಿಯಾಡುತುಮಿರ್ಪಿನಂ (ರಮಾಪು. ೬-೨೭). **ಹೊನ್ನುಯ್ಯಲ್ :** ಕಾಂಚನಮಾಲೆ . . . ಕೆಳದಿಯರ ಮೇಳದಲಿ ಹೊನ್ನುಯ್ಯಲಾಡುತ ಲೀಲೆ ಯಿಂದಿರೆ (ಪಾಳ್ಕಾ. ೨೯-೦). [ಪೊನ್ + ಉಯ್ಯಲ್]

**ಪೊನ್ನೆ, ಹೊನ್ನೆ** (ನಾ). ಒಂದು ಬಗೆಯ ಮರ; ಪುನ್ನಾಗ: ಚೆನ್ನೆ ಪೊನ್ನೆ ಯರಲಂ ಕೊಯ್ದುಳ್ (ಅಪು. ೦೦-೯೯.ಅತಿಶದ್ಯ); ಪೊನ್ನೆಯ ಮುಗುಳೆ ಕ್ಕುವಳ ತನ್ನ ಕೊರಲ್ಗಸಿಯೆ . . . ಕಣ್ಗೆಸದಿರ್ದಳ್ (ಶಾಂತಿಪು. ೬-೦೭); ಕದಂಬವಮಹೀಜದೋದು ಶೋಭಾಗುಣವೊಂದೆ ಪೂತೆಸವ ಪೊನ್ನೆಗೆ ಕರ್ಮುಗಿಲೊಡ್ಡು ಬೆಳ್ಮುಗಿಲ್ಗಾಗಿರೆ ಪೋದುದಿಂತು ಜಳದಾಗಮಮಾದುದು ಶಾರದಾಗಮಂ (ಪಾಶಪು. ೯-೯೬). **ಹೊನ್ನೆ :** "ಪೀತಸಾ(ಲ)ರಃ, ಅಸನಃ- ಈ ೨ ಹೊನ್ನೆ" (ಹಲಾಯು. ೩೩-೯೬); ಹೊನ್ನೆ ಕುಟಜಂ ಕಬ್ಬುನ್ನಿ ಸೀವನ್ನಿ ತುಂಬುರುಹಂ ತಾಳಂ (ಕಾವ್ಯಸಾ. ೦೦೯೦ ಹೂಶ್ರಕ); ಉಱಿ ಬೀಡುವು ಸುರಗಿ ಹೊನ್ನೆ ಮಲ್ಲಿಗೆ ವನದೊಳ್ (ಜಗಂ. ೪-೩).

[ದೇ.೩ ತಮಿ. ಪುನ್ನೈ, ಪಿನ್ನೈ; ಮಲ. ಪುನ್ನ; ತುಳು. ಪೊನ್ನೆ, ಹೊನ್ನೆ; ತೆಲು. ಪೊನ್ನ]

**ಪೊನ್ನೆಱೆಯ** (ನಾ).=ಪೊನ್ನಾಣ್ಮ : "ಪೊನ್ನೆಱೆಯ ತಿಸುಳಿಗೆಳೆಯಂ ಕಿನ್ನರಪತಿ" (ಕರ್ಣಾ. ೦). [ಪೊನ್ + ಎಱೆಯ]

**ಪೊನ್ನೇಱರಸ** (ನಾ). ಒಬ್ಬಾತನ ಹೆಸರು : ಸಿಙ್ಗಪೋತರಸರು ಪೊನ್ನೇ ಱರಸರು ಧರ್ಮ್ಮಮಹಾದೇವಿಯರುಡಿತಿಟ್ಟು ಪೊನ್ನೇಱ ದೊಡ್ಡರೆಸ್ದು ಕಡಗವಿಟ್ಟರ್ (ಶಾಇಇ. IX-i, ೦೭-೦೨ ; ೯೦೦). [ ? + ಅರಸ$_1$]

**ಪೊನ್ನೆರಣೆ** (ನಾ). (ಸೌಭಾಗ್ಯಸೂಚಕವಾಗಿ) ಮದುವೆಯಲ್ಲಿ ಚಿತ್ರ ಬರೆದಿಡುವ ಚಿನ್ನದ ಕೊಡ : ಮದನನ ರತಿಯ ಮದುವೆಯೊಳ್ ಸಿರಿ ಸಂಪದದಿಂ ಪೊನ್ನೆರಣೆಯ ಜವಳಿಗಳಸದ ಮೇಲೊಲಿದಿಕ್ಕಿದ ಮಂದಾರದ ಮಾಲೆಯ ಮಾಳ್ಕೆಯೊಳು ಮದಯೌವನೆಯುನ್ನತಕುಚತಟದೊಳ್ ಚದುರೆಯದೊರ್ವಳ್ ನವನವರತ್ನದ ಪದಕಂಗಟ್ಟಿದಳು (ಜಯುಕಾ. ೩-೦೯).
[ಪೊನ್ + ಐರಣೆ ( < ಅಯ್ರುಣೆ)]

**ಪೊನ್ನೊಡೆಯ** (ನಾ). = ಪೊನ್ನಾಣ್ಮ : "ಪೊನ್ನೊಡೆಯಂ, ತಿಸುಳಿ ಗೆಳೆಯಂ—ಈ ೨ ಕುಬೇರಂ" (ಕಶಾ. ೪೯-೩೯); ಸಸಿಯಂ ಮೆಯ್ವೆಳಗಿಂದೆ ಪೊನ್ನೊಡೆಯನಂ ಪೆಂಪಿಂದೆ . . . ಉಬ್ಬುಸಮಂ ಮಾಡುವ ಬರ್ದುಯರ್ ಪಲಬರುಂ ಕಣ್ಗೆಂ ಬೆಡಂಗಾದರೋ (ಅಪ್ಪಕಾ. ೦೩೪). [ಪೊನ್ +ಒಡೆಯ$_1$]

**ಪೊನ್ನೊರೆ$_1$** (ನಾ). ೧. ಚಿನ್ನದ ಬಣ್ಣ,-ಮೆರುಗು,-ಕಾಂತಿ : ಪೊನ್ನೊರೆ ಗನ್ನದೀಪಮೆಱಪಂತಿರೆ ಮಾಣಿಕ್ಯಪುದಿ:ಪಮೇನೆಱಗುಗುಮೋ (ಕಂಠಾಪು. ೪-೦೬೦). ೨. ಚಿನ್ನದ ಗೆರೆ : ಧರಣೀರಕ್ಷಣಮಂತ್ರಾಕ್ಷರಮಂ ವಿದ್ವಿಷತ್ಸೈನ್ಯ ಮಾರಣಮಂತ್ರಾಕ್ಷರಮಂ ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ಪೊಗರೆಸೆಗುಂ (ಮಲ್ಲಿಪು. ೩-೦೫); ಪೊನ್ನ ಬೆಟ್ಟವ ಬಳಸಿದಂ ಸಜ್ಜನ ಗೊಂದು ಪೊನ್ನೊರೆಯನಿತ್ತುದಿಲ್ಲ (ಭಾರಕಂ. ೬-೩೬). [ಪೊನ್ + ಒರ್ಕೆ]

**ಪೊನ್ನೊರ್ಕೆ** 'ಪೊನ್ನೊಱೆ' ನೋ.

**ಪೊನ್ನೊಱೆ, ಪೊನ್ನೊರ್ಕೆ, ಹೊನ್ನೊಱೆ** (ನಾ). ಚಿನ್ನದಿಂದ ಮಾಡಿದ ಶಸ್ತ್ರಕೋಶ; ಕತ್ತಿಯನ್ನಿಡುವ ಚಿನ್ನದ ಕೋಶ : ಪೊಸದುಕುಲಂ ಬೆಡಂಗಮರ್ದ [ಪ]ಟ್ಟಿಗೆ ಪೊನ್ನೊಱೆ ಸೇತಮಾಲೆ ಬಣ್ಣಸರಮುಂದಾತ್ತ ಹಸ್ತಕಟಕಂ . . . ತಿರುಳೋಲೆ ಕರಂ ತಮಗೊಪ್ಪೆ (ಪರಪಪು. ೬-೬೩); ಪೊನ್ನೊಱೆ ಚಿಕ್ಕಗೇಣ್ ಪಟ್ಟಯ ಟೊಪ್ಪಿಗೆ (ಕೃಷ್ಣಪು. ೬-೪೦). **ಪೊನ್ನೊರ್ಕೆ:** ಎಡಕರದಿ ಪೊನ್ನೊರೆ ಕಠಾರಿಯುಮನಾಂತು (ಪಡಕೋ. ೦೭-೩೭). **ಹೊನ್ನೊಱೆ :** ನೆಱೆ ರೂಪುವಡೆದ ಮನ್ಮಥನೆಂಬ ರತ್ನಹೊನ್ನೊಱೆ ಯಿಂದಲುಗಿದ ಕೂರಸಿಯು ಮಱೆಯಬಾರದು ಮಹಾದೇವ ಸತ್ಪುರುಷರ ಹೆಜಹಿಂಗಬಹುದೆ ಬಲ್ಲವರು (ಪ್ರೋಹಪ. ೨೯-೩೩); ಬಲಗೈಯೊಳಾಂತ ಹೊನ್ನೊಱೆಯ ಕಠಾರಿಯ ಕೆಲಕೂಱೆ . . . ಕಲಿಗಳ ದೇವನೊಪ್ಪಿದನು (ಭರತ. ೦-೩೨). [ಪೊನ್ + ಒಱೆ$_2$]

**ಪೊನ್ನೋಲೆ, ಹೊನ್ನೋಲೆ** (ನಾ). ಚಿನ್ನದ ಓಲೆ : ನಿಕ್ಕುವದಿಂ ತಾಳೋಲೆಯನಿಕ್ಕುವವರ್ಪಲರೊ ನೋಡ ಪೊನ್ನೋಲೆಯನಂತಿಕ್ಕುವವರ್ಪ ಲರೊ (ರಮಾಪು. ೦-೨೦೦); ನಾಗಕುಂಡಲಂ ಪೊನ್ನೋಲೆಯೆಸೆವ ಕಱೆ ರನ್ನದಾಳಿ (ಹಕಾ. ೦-೬): ಆತನ ಮತ್ತಗಜಗಮನೆಯ ಕಿವಿಯ ಪೊನ್ನೋ ಲೆಯಂ ಕಂಡು (ಪಕಪು. ೧೦-೯೩). **ಹೊನ್ನೋಲೆ :** ಪ್ರಾಣಾಯಂಗಳ ಮುಂಗೆ ಹೊನ್ನೋಲೆಯ ಚೆನ್ನೆ . . . ಪೆಣ್ಗಳ ಪುಣ್ಯಾಕಾರೆಯುಮೆನಿಸಿ ಮನಂಗೊಳಿಸುತ್ತಿದ್ದಳು (ಉತ್ತರಿ. ೩-೩೩ ವ). [ಪೊನ್ + ಓಲೆ]

**ಪೊನ್ಬುಟ್ಟಿ** 'ಪೊಂಬುಟ್ಟಿ' ನೋ.

**ಪೊನ್ಬೆಟ್ಟು** 'ಪೊಂಬೆಟ್ಟು' ನೋ.

**ಪೊನ್ಮಿಗ** 'ಪೊಮ್ಮಿಗ' ನೋ.

**ಪೊನ್ಮುಡಿ, ಹೊಮ್ಮುಡಿ** (ನಾ). ೧. ಚಿನ್ನದ ಕಿರೀಟ : ಒದೆದೆ ಪೊನ್ ಮುಡಿಯನ್, ಒದೆದೆ ಕೌರವನ ಸಿರಿಮುಡಿಯನ್ (ಅಶ್ವತ್ಥಾ. ೪೩-೬೬೭). **ಹೊಮ್ಮುಡಿ :** ೨. (ಆಲಂ) ಶ್ರೇಷ್ಠವಾದುದು; ಘನತೆಯಿಂದ ಕೂಡಿದುದು : ಎನಿತೊಂದು ನಾಡುಗಳನಾಳಿದುದು ಸೂಸ, ಹೊಮ್ಮುಡಿಯ ನಮ್ಮ ಸೂಸ! (ಕಾರಿನ. ೩೩-೭೩೩). [ಪೊನ್ + ಮುಡಿ]

**ಪೊನ್ಮೋದಿರ, ಪೊನ್ಮೋಯಿರ** (ನಾ). ಚಿನ್ನದ ಉಂಗುರ : ಈ ಕಲ್ಲನೆತ್ತುವವರಿಗೆ ಈ ಪೊನ್‌ಮೋದಿರವನ್ನು ಕೊಡುವೆವು (ಹುಂಚಾ. ೦೬೬). **ಪೊನ್ಮೋಯಿರ :** ಅಂದು ನಾನು ನಿನ್ನ ಬೆರಳಿಗೆ ತೊಡಿಸಿದ ಪೊನ್ಮೋ ಯಿರದೊಡನೆ ನನ್ನ ಹೃದಯವನ್ನೂ ನಿನಗೆ ಕೊಟ್ಟೆ (ಪಡಿಪಾ. II, ೦೦೩೨)
[ಪೊನ್ + ಮೋದಿರ. / ಕೊಡ . ಪೊಮ್ಮೊದ್'ರ]

**ಪೊನ್ಮೋಯಿರ** 'ಪೊನ್ಮೋದಿರ' ನೋ.

**ಪೊಪ್ಪಳಿ$_1$, ಪಪುಳ್ಳಿ, ಪಪ್ಪಳಿ, ಪಾಪ್ಪಳಿ, ಪೊಪ್ಪುಳಿ** (ನಾ). ೧. (ಬೇರೆ ಬೇರೆ ಬಣ್ಣಗಳಿಂದ ಕೂಡಿದ) ಒಂದು ಬಗೆಯ ಬಟ್ಟೆ, -ವಸ್ತ್ರ : ಹಳದಿ ಪೊಪ್ಪಳಿ ಚಂದ್ರಗಾವಿ . . . ಬಿಳುಪಟ್ಟೆ ನಾನಾ ವರ್ಣದ ಜವಳಿಯ ಮಳಿಗೆಗಳೆಸೆದುವರ್ತಿಯಲಿ (ಕಂಪರ. ೬-೬೦). ೨. ಒಂದು ಬಗೆಯ ಸೀರೆ : ಪೊಪ್ಪಳಿ ಕರ್ಪಾಡಗಳೆಂಬ ಸೀರೆಗಳೊಪ್ಪಿ ಮೆಱೆಯೆ (ಅಮುಸಾಂ. ೪-೦೯); ಪೊಪ್ಪಳಿಯಾ ನಾಯಕಿ ರಂಗು ಕೊಪ್ಪಣದ ಬಣ್ಣವನುಟ್ಟು ರಾಯಸಂದಣಿಯ ನೋಡುವರು (ಸಾಂದಶಾ. ೬-೬೦). 'ಸಾರಪೊಪ್ಪಳಿ' ಪರ್ಯಾ. ೩. ಚೌಕಳಿಯ ಆಕಾರವನ್ನು ಅಚ್ಚೊತ್ತಿರುವ ಬಟ್ಟೆ; ಚೌಕಾಕಾರವಾದ ಅಚ್ಚುಗಳುಳ್ಳ ಬಟ್ಟೆ : ಅವಳು

ಉಟ್ಟಿರುವ ಹಸುರು ಪೊಪ್ಪಳಿ ಸೀರೆ ತುಂಬ ಚೆನ್ನಾಗಿದೆ (ಕೂಃ). ಪಪ್ಪುಳಿ : ೧. 'ಪಪ್ಪುಳಿಅಚ್ಚಡ' ಪರಾ. ಪಪ್ಪಳಿ : ೩. 'ಪಪ್ಪಳಿಬಟ್ಟೆ' ಪರಾ. ಪಾಪ್ಪಳಿ : ೨. ಬರೆಹದ ಪಾಪ್ಪಳಿ ಮಂಜಿಷ್ಟ ಚೌಪುಲ್ಲಿ ಮೆಟೆವಷ್ಟಗೊಳ ಚಂದ್ರಗಾವಿ (ಜ್ಞಾವಡ. ೩೭-೯೭). ಪೊಪ್ಪುಳಿ : ೧. ಬಿಳಿದು ಪೊಪ್ಪಳಿ ಚಂದ್ರಗಾವಿಗಳಿಳೆಗೆ ಪೊಸತಹ ಮಂಚಿಟಕೆ ಗುಜ್ಜರಿ ದುಕೂಲಗಳ ಅಳವಡಿಸಿ. . . ಶ್ರೀಕೃಷ್ಣನೋಲಗಶಾಲೆ ರಂಜಿಸಿತು (ಕೋಗಯ. ೩-೩೮). ೨. ಪೀತಾಂಬ್ರ ಪೊಸ ಚುದ್ರಗಾವಿ ಪೊಪ್ಪುಳಿಯ ಮಿಸುಪ ಶುಭ್ರದ ದಿವ್ಯ ದುಗುಲದ ನಿರಿಗಳ ಶಶಿಮುಖಿಯರು ರಂಜಿಸಿದರು (ಕಂಪಿ. ೨೯-೪೪); ಪೊಪ್ಪಳಿಯು ಶಿಗುಳಿ ರಾಗಾವಳಿಯ ರತ್ನಾವಳೀ ಧಾವಳ್ಯ ದಿವ್ಯತಾರಾವಳಿಯ . . . ನಾನಾವಿಧದ ಸೀರೆಗಳ ಚಿನ್ನದೆಳೆವೊಗ್ಗ ಕಂಚುಕವ ಬೇಹನಿತ ತೆಗೆದು (ಪಪಪೋ. ೦೭-೬೦). ೩. ಸುಮಂಗಲಿಯರು . . . ಬಣ್ಣಬಣ್ಣದ ಆನೆಪೊಪ್ಪಳಿ, ಕವಡೇ ಸೀರೆಗಳನ್ನುಟ್ಟು . . . ಹೊರಟರು (ಮಲಿಮಂ. ೩೯).

[ದೇ.॥ ತೆಲು. ಪೊಪ್ಪಳಿ, ಪಪ್ಪಳಿ./ಮರಾ. ಪೋಫಳೀ]

**ಪೊಪ್ಪಳಿ₃** 'ಪೊಪ್ಪಳಿ' ನೋ.

**ಪೊಪ್ಪಿಳಿ, ಪೊಪ್ಪಳಿ₂, ಪೊಪ್ಪುಳು** (ನಾ). ೧. ಒಂದು ಬಗೆಯ ಮರ : ಮಡ್ಡೀಹಂಬು , ಪೊಪ್ಪಿಳಿಮರ , ನುಣಾಮರ (ವೃಕ್ಷಿಗ. ೫೫-೦೦೯೭). ೨. (ಹಳದಿಯ ಬಣ್ಣದ ಪುಡಿಯನ್ನು ಕೊಡುವ) ಒಂದು ಬಗೆಯ ಪೊದೆ: (೬). ಪೊಪ್ಪಳಿ₂ : ೧. "ಮಡ್ಡೀಹಂಬು, ಪೊಪ್ಪಳಿಮರ, ಗುಣಾಮರ, ಮಡ್ಡಿಬನ್ನಿ, ಮಡ್ಡಿಚಕ್ಕೆ" (ಸಸ್ಯಪ. ೯೦); ಈ ವೃಕ್ಷಿಗೆ ಸಲ್ಲುವ . . . ಪೊಪ್ಪಳೀಗಿಡಗಾವಲು ಬ್ರಾಹ್ಮಣನಿವೇಶನ ಶೂದ್ರನಿವೇಶನ (ಹುಳ್ಳಿಹ. ೩); ಪೊಪ್ಪಳಿ, ಕುರುಡಿ, ಸಣಬು, ನೀಲಿ (ಪಮ್ಯಸು. ೨೩೯). ಪೊಪ್ಪುಳು : ೧. ಸೇಬು ಅಂಜುರ ಹಲಸು ಪೊಪ್ಪುಳು ಶೀತಫಲವು ಖರ್ಜೂರದ ಮರನು (ಮಂದಿರೀ. ೬-೨೭). [?]

**ಪೊಪ್ಪು** 'ಪರುಪು' ನೋ.

**ಪೊಪ್ಪುಕ** 'ಪಪ್ಪುಕ₂' ನೋ.

**ಪೊಪ್ಪುಳಿ** 'ಪೊಪ್ಪಳಿ₁' ನೋ.

**ಪೊಪ್ಪುಳು** 'ಪೊಪ್ಪಿಳಿ' ನೋ.

**ಪೊಪ್ಲಿ** 'ಪಪ್ಪಳಿ' ನೋ.

**ಪೊಮ್ಮ, ಪೊವಮ್ಮ₂, ಪೊಮ್ಮೆ** (ನಾ). ೧. ಒಂದು ಬಗೆಯ ತೆರಿಗೆ : ಸನ್ತೆಯುವೊಳಗಣ ಕೊಡದೆಣ್ಣೆ ಯೆಲೆಯ ಹೇಱುಗಳ ಪೊಮ್ಮ ಕಿಱುಕುಳ ಧಾನ್ಯಪರ್ಗ್ಗಂಗಳ ಮೊಟ್ಟೆಯ ಸುಂಕವೊಳಗಾಗಿ (ಎ೩. XIX, ೩೯-೫೦ ; 1144). ಪೊಮ್ಮು₂ : ೧. ಪಟ್ಟೆ ಪ್ರತೀರಕ್ಕೆ ಸಲತಕ್ಕ ಪೊಂಮಿನ ಹಣವನ್ನು ಕೇಳದೆ (ವ್ಯಆಂ. ೦೯೨೬, ೪೮-೦೦ ; ಸು. 1711); ಪೊಮ್ಮು ಕೈದುಡುಕುಗಳಂ ಪುಟ್ಟಿಸಿ ಪೊಣರ್ವ ಸೆಟ್ಟಿಗಳಟ್ಟುಳಿಯಂ ನಿಲಿಸಿ ಸುಂಕವಮಂ ಬಾಳಿಸಿದಂ (ಕಿಳಪ್ಯ. ೭-೩೦); ಸಂಕ್ಯಾ ಪೊಂಮು ಮಾರ್ಗ ಕರಗಪಡಿ ಸುಂಕಾ ಹತ್ತಿ ಪೊಂಮು ಅಲೆಸುಂಕಾ ಕಬ್ಬಿಣದ ಪೊಮು (ವ್ಯಆಂ. ೦೯೩೯, ೪೨-೯೩ ; 1823); ಆ ಸಿದ್ಧಾಯ ಈ ಪೊಮ್ಮು . . . ಸತ್ತ ಹೆಣಕ್ಕೂ ಕೊನೆ ಮೊದಲಿಲ್ಲದೆ ಹಣ ಹೊನ್ನು ತೆರುತಿರಬೇಕು (ಬಟ್ಟಿಅ. ೦೫೫-೭). ೨. ಹೊಗೆಸೊಪ್ಪಿನ ಮೇಲೆ ಹಾಕುವ ತೆರಿಗೆ : (೬). ಪೊಮ್ಮೆ : ೧. ಪೊಂಮೆ ಸುಂಕ ದೇವಾದಾಯ ಬ್ರಂಹಾದಾಯ ನಟ್ಟ ಕಲ್ಲು ಬಿಟ್ಟ ಬಸವ ಮೊದಲಾದುವುಗಳನು ಈ ಮಠಕೆ . . . ಕೊಡುವುದು (ವ್ಯಆಂ. ೦೯೩೦, ೦೩-೩೬ ; 1345).

ಪೊಮ್ಮಿನ ಚಾವದಿ = ಪೊಮ್ಮು ಸುಂಕವನ್ನು ವಸೂಲು ಮಾಡುವ ಚಾವಡಿ : ಪೊಮ್ಮಿನ ಚಾವಡಿ – ಇದರಲ್ಲಿ ಸೀಮೆಯಲ್ಲಿರುವ ತ್ಯಾಜಗಾರರು, ಮಾನ್ಯಗಾರರು . . . ತುರುಕರು ಮುಂತಾದ ಜನಗಳು ವ್ಯಾಪಾರವನ್ನು ತರುವಲ್ಲಿಯೂ ಕೊಡುವಲ್ಲಿಯೂ ಸರಕಾರದ ಶೀರ್ವ ಆಗದಿದ್ದ ಪದಾರ್ಥಗಳನ್ನು ತೆಗೆದುಕೊಳ್ಳುವಲ್ಲಿಯೂ ಅರ್ಧಸುಂಕವನ್ನು ತೆಗೆದುಕೊಳ್ಳುವುದೆಂದು ನಿಬಂಧನೆ ಮಾಡಿದರು (ಮಹಾವಂ. I. ೦೪೬). [ ? ]

**ಪೊಮ್ಮಗಿಲ್** (ನಾ). ಚಿನ್ನದ ಪ್ರಾಕಾರ,–ಗೋಡೆ : ಪರಿಖೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪೊಂದಾವರೆಯ ರಜದಂತೆ ನೃಪಮಂದಿರಮಂ ಬಳಸಿರ್ದ ಪೊಮ್ಮಗಿಲ್ ಸೊಗಯಿಸುಗುಂ (ಮಲ್ಲಿಶ. ೨-೭೪); ಸರಸ್ಸಮಿತಿ ಸುತ್ತಿ ಪೊಮ್ಮಗಿಲ ಸುತ್ತಲುಂ ರಂಜಿಕುಂ (ಶಂಕಾಮಾ. ೪-೦೩೦). [ ಪೊ ( < ಪೊನ್) + ಮುಗಿಲ್]

**ಪೊಮ್ಮಡಿಬೆಳ್ಳಿ** 'ಪೊಮ್ಮಡಿವೆಳ್ಳಿ' ನೋ.

**ಪೊಮ್ಮಡಿವೆಳ್ಳಿ, ಪೊಮ್ಮಡಿಬೆಳ್ಳಿ** (ನಾ). ಶುದ್ಧವಾದ ಬೆಳ್ಳಿ ; ಚೊಕ್ಕ ಬೆಳ್ಳಿ: ರಾಜಮಂದಿರದ ಮುಂದುಗಡೆ ನೆಡಿಸಿರ್ದ ತೋರಣಸ್ತಂಭಯುಗಳಕ್ಕೆ ಪೊಮ್ಮಡಿವೆಳ್ಳಿದಗಡುಗಳನು ತೊಡಿಸಿದಂದದೊಳಿರ್ಪ ಮಾಳ್ಕೆಯಿಂ ಧವಳಾಂಶುವಿಡಿಕಿಱಿದ ಪೊಸದೂವಟದ ಕಾಲ ಕುಪ್ಪಸವ ತೊಡಿಸಿದಳದೋರ್ವ ಕಾಮಿನಿ ಪರವೆನಾಚಿಗೆ (ಸೌಂದಕ. ೭-೨೯). ಪೊಮ್ಮಡಿಬೆಳ್ಳಿ: ಶ್ರೀಗಂಧ ಮಂಚ ಪೊಮ್ಮಡಿಬೆಳ್ಳಿಮಂಚ ಪಂಚರತ್ನದ ಮಂಚ ನವರತ್ನಮಂಚಗಳಂಚಿತವಾದುವಲ್ಲಲ್ಲಿ (ಶರಕ. ೦೫-೨೫); ರಂಜಿಪ ಪೊಮ್ಮಡಿಬೆಳ್ಳಿಯ ಪೂವಪರಂಜಿಯ ಪೂಗಳ ತಂದು . . . ಆದಿಜಿನಗೆ ಪುಷ್ಪಾಂಜಲಿ ಮಾಡಿದರು (ಶರಕ. ೭೦-೦೯).

[ಪೊಮ್ಮಡಿ₀ (p ← ತೆಲು. ಪಮಿಡಿ = ಚಿನ್ನ) + ಬೆಳ್ಳಿ]

**ಪೊಮ್ಮತ್ತಿ** (ನಾ). ಚಿನ್ನದ ಬಣ್ಣದ ಮಚ್ಚೆ,–ಕಲೆ: ಉತ್ತುಂಗಕುಚಾದ್ರಿಯ ಪೊಮ್ಮತ್ತಿಯ ಮೊಳೆ ಮೊಳೆತ ಜರಗಿನಂತಿರೆ ಕಾಣಲ್ಪೆತ್ತ ಸತಿಗಾಯ್ತು ಸುತನಂ ಪೆತ್ತಂತಪ್ಪೊಂದು ಸಂತಸಂ (ಅರ್ಜನಿ. ೨-೪).

[ಪೊ ( < ಪೊನ್) + ಮತ್ತಿ₃]

**ಪೊಮ್ಮದಿಲ್, ಪೊಮ್ಮದಿಲು** (ನಾ). = ಪೊಮ್ಮಗಿಲ್ : ನಿತಾಂತಮೋಲಗಿಸಲಟ್ಟಿದ ಸಾನುಮದೆತ್ತಂ ಬಂದೆಳಸಿರ್ದಪುದೆಂಬಿನಂ ಸೊಗಯಿಪ್ಪುದು ಪೊಮ್ಮದಿಲುಗ್ರಾಂಶೂದ್ಗತಮಾಗಿರೆ ಕೆಮ್ಮುಗಿಲ್ (ಕೃಷ್ಣಕೃ. ೨-೯೦) ; ವರ್ಗಪಂಚಮಕ್ಕೆ . . . ಪೊಮ್ಮದಿಲ್, ಪೊಂಮದಿಲ್ (ಶಮದ. ೦೬೦ ಪ್ರಯೋ). ಪೊಮ್ಮದಿಲು : ಇಂಬುವೆತ್ತಿಹ ರಾಜಗೃಹಲಕ್ಷ್ಮಿಯುಟ್ಟ ಪೀತಾಂಬರವೆನಿಸಿ ಪೊಮ್ಮದಿಲು ತಾಂ ಬಳಸಿಹುದವಳಿಕ್ಕಿದ ಮಕುಟ ತಾನೆಂಬಿನ ಕರುಮಾಡವಿಹುದು (ನಾಗಕು. ೨-೬೭).

[ಪೊಂ ( < ಪೊನ್) + ಮದಿಲ್]

**ಪೊಮ್ಮದಿಲು** 'ಪೊಮ್ಮದಿಲ್' ನೋ.

**ಪೊಮ್ಮರೆ, ಹೊಮ್ಮರೆ** (ನಾ). ಚಿನ್ನದ ಬಣ್ಣದ ಜಿಂಕೆ ; ಸುವರ್ಣ ಮೃಗ : ತತ್ಪರದೂಷಣರ್ಕಳಂ ಕೊಂದೆಡೆ ಪೋಗಿ ಪೊಮ್ಮರೆಯ ನೆಚ್ಚಿಡೆ ತಪ್ಪದಿದಪ್ಪುದು (ಶಂಶಭಿ. ೪-೦೯) ; ಮಱೆದು ಗಿರಿತಟದೊಳಲ್ಲಿಯ ಮೊಱಗಲೊಡಂ ಪೊರೆದು ಪೊನ್ನ ರಜದಾ ಮೆಯ್ಗಳ್ ಮಿಱುಮಿಱನೆ ಮಿಱುಗೆ ಪೊಸ ಪೊಮ್ಮರೆಯಂತಿರೆ ಪರೆವುವಲ್ಲಿ ಹರಿಣಗಣಂಗಳ್ (ಲೀಲಾವ. ೯-೪೦) ; ಪೊಮ್ಮರೆವೋಲ್ ಪೊಳೆದು ಪಾಱಿ ಪೋದಂ ಶ್ವೇತಂ (ಶಮದ. ಪ. ೨೩೩ ಪ್ರಯೋ). ಹೊಮ್ಮರೆ : ತಾ ಬಳಿಕ ಭೂಸುರನಾಲಯವ ಸಾರಿದನು ಹೊಮ್ಮರೆಯಾಕೃತಿಯ ತಾಳಿ (ಕುವ್ಯಾಆ. ೬೦೩. ೨೬-೨) ; ತೋಱಿದನು ತಾ ಬಳಿಕವಗೆ ಹದಿನಾಱುಬಣ್ಣದ ಪುಟದ ಚಿನ್ನಕೆ ನೂಱುಮಡಿಯೆನೆ ಹೊಳೆಹೊಳೆವ ಹೊಮ್ಮರೆಯ ರೂಪಕವ (ಕೊರಣ. ೩-೬-೦೪); ಕಲಿಧನ್ವಿ ಹಳುವ ಹೊಕ್ಕನು ಹೊಮ್ಮರೆಯ ಹಿಂದೆ (ಶ್ರೀರಾಮಾ. ೨೩೫-೦೯೦).

[ ಪೊಂ ( < ಪೊನ್) + ಮರೆ₃ ]

**ಪೊಮ್ಮಳೆ** 'ಪೊಮ್ಮಟೆ³' ನೋ.

**ಪೊಮ್ಮಟೆ³, ಪೊಮ್ಮಳೆ, ಹೊಮ್ಮಳೆ** (ನಾ). ಚಿನ್ನದ ಮಳೆ ; ಸುವರ್ಣ ವೃಷ್ಟಿ : ಅಲರ್ವಟೆ³ ಪೊಮ್ಮಟೆ³ ಮಂದಾನಿಳನನಿಮಿಷ ದುಂದುಭಿಸ್ವನಂ

ದಿವಿಜಮುಖರೋಚ್ಚಳಿತಾಹೋದಾನಸ್ವನವಿಲಾತಳಾ ಶ್ಚರ್ಯವಾಯು, ಪಂಚಾಶ್ಚರ್ಯಂ (ಚಂದ್ರಪ್ರ. ೦೯-೮೩); ನಿರವಿಸೆ ವಮನುಷ್ಯಧರ್ಮಂ ಪರವಾಹನೆ ಮೇಣ್ ಬಂದನಮ್ಮಂಗಳದೊಳ್ ಸುರಿಗುಂ ಪೊಮ್ಮಟ್ ಭರದಿಂ ಬರವೇಟ್ಟುಂ ಧನದನೆಟ್ಟು ಪೋಗದ ಮುನ್ನಂ (ಶಾಂ. ೬-೨೯೬). **ಪೊಮ್ಮಳೆ :** ಲೋಕವಟ್ಟುಮೆನೆ ಪೊಂಮಳೆಯುಂ ಕರೆ‌ದಂ (ಎಕ. VI. ಕಡೂರು. ೦೬೯-೨೬; 1178); ಪೊಮ್ಮಳೆಯನೀವುತ್ತ ಕೈಲಾಸ ಸೂಚಿಗೊಟ್ಟು (ಪಾರ್ಶ್ವಪು. ೯-೦-೮); ವಿಳಸದ್ಭಕ್ತಿಗೆ ಕೂರ್ತು ಸಪ್ತದಿನಪರ್ಯಂತಂ ನೆಲಂದೀವಿ ಪೊಮ್ಮಳೆಯುಂ ಪೂವಳೆಗೂಡಿ ತಾಂ ಕರೆಯಿಸುತ್ತಾಸಂತವಂ ಬೀಱನೇ (ಕೃಷ್ಣ. ೩೬-೦೨೬). **ಹೊಮ್ಮಳೆ :** ಮೆಱೆವನೆಱೆಯಂಗನಾತನ ಕರುಣಿಸಿನ ಸುತನೆಱಗಿದವರ್ಗೆ ಮಳೆಯೆಱಗಿದವೊಲ್ ಕರೆ‌ದಂ ಹೊಂಮಳೆಗಳಂ (ಎಕ. XI. ದಾವಣ. ೨೩-೨೦; 1224); ಸಿರಿಯಾಳನಂದದಲಿ ಆ ಸುತನನರ್ತಿಸೆನು ಹೊಮ್ಮಳೆ ಸೂಸವೇಳೆನು ಚೋಳನಂತೆ (ಬಸವ. ೯-೩೩); ಸುರವಾಕ್ಯ ಸುರಭೇರಿ ಹೂವಳೆ ಹೊಮ್ಮಳೆ ಸುರಭೀರವವೆಂದಿಂತು ಸುರಕೃತ ಪಂಚವೈಭವಗಳಾದುವು (ಶಶ. ೩-೦೨೦).

[ಪೊಂ (< ಪೊನ್) + ಮಳೆ]

**ಪೊಮ್ಮಾಡ** (ನಾ). ಚಿನ್ನದ ಉಪ್ಪರಿಗೆ,—ಮಹಡಿ : ಹರಿಣಾಕ್ಷಿಯಾದರ ದೊಳೀಕ್ಷಿಸುವಿಚ್ಛೆಯಿಂದ ಪೊಮ್ಮಾಡವಮಂ ಪರಿದೆಯ್ದುವಾಗ (ರಾಜಶೇ. ೦೬-೯೯); ಬಳಸಿದ ಸಾಲದ ತನೆ ದಳವೊಳಗಣ ಪೊಮ್ಮಾಡವುಮದರ್ಪ ಕರ್ಣಿಕೆ ಮಣಿಮಂಗಳಕಳಶಕಾಂತಿ ಮಧುವೆನೆ ಜಳರುಹವೆನಿಸಿದುದು ರಮೆಗೆ ಭೂವರಭವನಂ (ಕೃಷ್ಣ. ೯-೫೯). [ಪೊಂ (< ಪೊನ್) + ಮಾಡ₁]

**ಪೊಮ್ಮಿಕೆ** (ನಾ). ವ್ಯಾಪ್ತಿ; ವಿಸ್ತಾರ; ಹರಹು : ಸುಮ್ಮದದೊಳ್ಕೈತಂದು ಏಟರಾ ನೆವದಿ ಬೆಲೆಗೇಳೀ ಪೊಮ್ಮಿಕೆಯ ಜಾಣ್ಮೆಯೊಳು ಬಗೆಗಳ ನೆಮ್ಮದಿಯುನರಿಯಲ್ಕೆ (ಕೃಕರ್ಣಾ. ೯-೩೦). [ಪೊಮ್ಮು₁ + —ಇಕೆ]

**ಪೊಮ್ಮಿಗ, ಪೊನ್ನಿಗ, ಹೊಮ್ಮಿಗ** (ನಾ). = ಪೊಮ್ಮರೆ : ಪೊಮ್ಮಿಗವಿರ ದೊಯ್ದುದು ಸೀತೆಯನಗಲ್ಕಿ ನಿಲಲೀಯದಲ್ಲಿ ದಶರಥಸುತನಂ (ರಾಮಚಂದ್ರ. ೦೦೨); ಪಿಡಿಯಲ್ ಪೊಮ್ಮಿಗವೆಂದು ಪೋಗೆ ರಘುಜಂ ಭೂಪತ್ರಿ ಸಂವ್ಯಾಸಿ ಯೆಂದಡಿಯಿಟ್ಟಳ್ (ಸೂಕ್ತಿಸು. ೯೩); ರಾವಣಂ ದುರುಳ ಮಾರೀಚಂಗೆ ಪೇಳ್ಪುವಂ ಮುದದಿಂ ಪೊಮ್ಮಿಗವಾಗಿ ತೋಱಲ್ (ದಶಾವ. ೯-೨೦೬). **ಪೊನ್ನಿಗ:** ಗವಾಕ್ಷಿವರ್ಯನ ವೇಣುವಾಣಿಗೆ . . . ನರ್ತಿಸುವಂತೆ ನಲಿ ದುದಾ ಪೊನ್ನಿಗಂ (ಶ್ರೀರಾಮ. ೨೩೨-೦೨೬). **ಹೊಮ್ಮಿಗ :** ಸುಚಿದಾ ಹೊಮ್ಮಿಗವಯ್ದೆ ಸೀತೆಯ ಖಳಂ ಕೊಂಡೊಯ್ದು ತಾಂ ಬಾಟ್ಟನೇ (ಸೋಮೇಶ. ೯೨); ರಾಘವನು ಹೊಮ್ಮಿಗವೆರುಕಪಟವೆಂದಱಿಯನೇ (ಜೈಮಿನಿ. ೯-೦೩); ಇದುವೆ ಹೊಮ್ಮಿಗವಧೆಗೆ ಕೋ . . . ಎನುತಸುರ ರಾವುನನೆಟ್ಟು ಮೂಡಲಿಸಿ (ತೊರವೆ. ೩೩-೩೦).

[ಪೊಂ ( < ಪೊನ್ ) + ಮಿಗ]

**ಪೊಮ್ಮಿಣಿ, ಹೊಮ್ಮಿಣಿ, ಹೊಮ್ಮಿಳಿ** (ನಾ). ಬಂಗಾರದ ಸರಪಣಿ : ಪಿಡಿದು ಪೊಮ್ಮಿಣಿಯು ರನ್ನದ ಮಣೆಯ ಮೇಲೆ . . . ಕಡು ನೀಱೆಯೊರ್ವಳುಯ್ಯಾಲನಾಡುತಿರ್ದಳು (ರಾಜಶೇ. ೬-೨೩). **ಹೊಮ್ಮಿಣಿ :** ಮಡದಿಯರು ಹೊಮ್ಮಿಣಿಗಳನು ಕೈದುಡುಕಿ ತೆಗೆವ ಬೆಡಂಗು ಮನ್ಮಥ ಕಡುಗಿ ಬಾಳುಗಿವಂದವಾಗೆ . . . ನಲಿದೊಲೆದಾಡಿದರು ಕೋವಳೆ ಯರುಯ್ಯಾಲೆಯ (ಜೈಮಿನಿ. ೦೬-೭೦); ಬಿಗಿದ ಟೆಂಚಿಯ ಹೊಮ್ಮಿಣಿಯ ಹೊರಜೆಗಳ . . . ದಂತಿಯು ಹೆಗಲ ಹೊಂಗದ್ದುಗೆಗೆ ಬಿಜಯಂಗೈದನಾ ಭೂಪ (ಕುಮಾರ. ೦೨-೯೬); ಒಗುಮಿಗೆಯೊಲವಿಂದುಯ್ಯಲನೇಱಿದ ಮುಗುದೆಯುಲಘುಕುಚವಮಧ್ಯದ ಹೊಮ್ಮಿಣಿ ಸೊಗಯಿಸಿದುದು (ಜಯನೃ. ೦೯-೩೩). **ಹೊಮ್ಮಿಳಿ :** ಖಂಡಿಸಿ ಕಳಚಿದನು ಮೊಗರಂಬವನು ಹೊಮ್ಮಿಳಿಯು ಕಣಿಲ . . . ಮುಱಿದು ತಱಿದನು ಸುತ್ತ ಟೆಂಚೆಗಳ (ಕುಮಾರವ್ಯಾ. ೬-೩೨); ಹೊರಜೆ ಹೊಮ್ಮಿಳಿ ನಿಗಳ . . . ಕರದ ಹೊಗರಂಬದ ವಿಲಾಸದಿನೆಸೆದುದಾ ದಂತಿ (ತೊರವೆ. ೬-೨೯-೦೯).

[ ಪೊಂ (< ಪೊನ್) + ಮಿಣಿ₂ (< ಮಿಳಿ₂) ]

**ಪೊಮ್ಮಿನ್** (ನಾ). ಹೊಳೆಯುವ ನಕ್ಷತ್ರ : ಪ್ರಕಾಶಮಾನವಾದ ತಾರೆ : ಇದು ಬಾನಿಂ ಬರ್ಪ ಪೊಮ್ಮಿನ್ಗಂಬೊಣರ ತೆಱನಿದಲ್ತೊಂದ ಮಳ್ಕಿಂಚು ಮಿಂಚಲ್ಲದಿವರ್ಚಂದ್ರಾರ್ಕರೇಂ . . . ಎಂದುರ್ವಿದಲಂಪಿಂ ನೋಡೆ ಭೂಪಂ ಗಗನದಿನಿೞಿದರ್ಚಾರಣರ್ಚಾರುರೂಪರ್ (ಅರ್ಹತ್. ೨-೩೯). [ಪೊಂ (< ಪೊನ್) + ಮಿನ್₂]

**ಪೊಮ್ಮು₁, ಹೊಮ್ಮು₁** (ನಾ). ೧. ಆಧಿಕ್ಯ ; ಹೆಚ್ಚಳ : ತರುಲತಾ ಗುಲ್ಮಂಗಳ ಪೊ[ಪಾಠಾಂ. ಹೊ]ಮ್ಮಿನಿಂ ಪೆರ್ಮರಂಗೆಯ್ದು ಸೋಗೆಗಳಿಂದೆ . . . ತಂಬೆಲರಿಂದೆ ತಾವ್ವನೋಹರದ ವನವಧ್ಯದೊಳ್ ಸರಸಿ ವೆಱೆದುದು ಕೂಡೆ ಸೊಗಸುವೆರಸಿ (ಚೀರಮ. ೭-೦೮). **ಹೊಮ್ಮು₁ :** ೨. ಹುರುಪು ; ಉತ್ಸಾಹ : ಬಲುಭಟರ ಹೋಳಿಗಳ ಹೊಮ್ಮುಱಿದು ಕೊಟ್ಟನು ನಳನ ವಶಕೆ (ತೊರವೆ. ೬-೩-೦೦) ; ಹೊಸಹರೆಯದ ಹೊಮ್ಮಿನ ಬಾಲೆವಂಗಳು ಜಸವದೆದೆಸದರೇನೆಂಬೆ (ಸಂಪಾ. ೨೯-೯೦). ೩. ಜಂಬ ; ಗರ್ವ ; ಸೊಕ್ಕು : ಹೊಮ್ಮಿನಲಿ ಸಿಂಹಾಸನಾಗ್ರದ ಸೊಮ್ಮಿನಲ್ಲಿರೆ ನೀನು ನಮ್ಮವರೊಮ್ಮದೀ ಮಾತಿದನು ಮಾಡಿದ ನೋಡಿ ಬಳಿಕೆಮಗೆ (ಸಂಭವ. ೩-೦೦) ; ಕಾಗೆಕೂಟದೊಲಲ್ಲ ಕುಲಗೆಟ್ಟಾಗಲಾಡಿದ ಹೊಮ್ಮು ನೃಪನೆಡೆಗಾಗುವದೆ (ಚಿಕ್ಕಪ. ೯-೩೯). ೪. ಕಾರ್ಯವ್ಯಾಪ್ತಿ ; ನಡಾವಳಿಕೆ ; ವ್ಯವಹಾರ : ಕಮ್ಮೆಯನ ಚೇಳಿನ ಹೊಮ್ಮರಡು ಒಂದಯ್ಯ (ವಚನ. ೦೦೦೯). ೫. ಸತ್ತ್ವ ; ಶಕ್ತಿ : 'ಹೊಮ್ಮಿಱ' ಪರಾ.

**ಪೊಮ್ಮಿದ** = ಮಿಗಿಲಾದವನು : ದಿಮ್ಮಿದರಕ್ಕರಕ್ಕರವರೊಳ್ ನುಡಿಯೊಳ್ ಕಡುಜಾಣರಂದದೊಳ್ ಪೊಮ್ಮಿದರೊಂದಿ ನಿಂದ ಸಿರಿಯೊಳ್ (ಕನ್ನ. ೦೦).

[< ಪೊಣ್ಮು./ತಮಿ. ಪೊಮ್ಮಲ್ ; ತೆಲು. ಹೊಮ್ಮು, ಒಮ್ಮು]

**ಪೊಮ್ಮು₂** 'ಪೊಮ್ಮ' ನೋ.

**ಪೊಮ್ಮುಗಿಲ್** (ನಾ). ಹೊನ್ನಿನ ಮಳೆಯನ್ನು ಸುರಿಸುವ ಮೋಡ : ಎಱಗಿದ ಜನಕ್ಕೆ ಪೊಂಮುಗಿಲೆಱಗಿದವೊಲು ಲೋಕ ವಟ್ಟುವೆನೆ ಪೊಂಮಳೆಯುಂ ಕರೆ‌ದಂ (ಎಕ. VI. ಕಡೂರು. ೦೬೯-೨೬ : 1178).

[ಪೊಂ (< ಪೊನ್) + ಮುಗಿಲ್]

**ಪೊಮ್ಮೂಡಿಗೆ, ಹೊಮ್ಮೂಡಿಗೆ** (ನಾ). ಚಿನ್ನದ ಬತ್ತಳಿಕೆ : ಪೊಳೆವ ಪೊಮ್ಮೂಡಿಗೆಯ ಪೊಂಗರಿಯ ಬಾಣಗಳ ನಲವಿಂದೆ ಸಿಂಜಿನಿಗೆಯಳವಡಿಸಿ (ಶಶಿಮೌ. ೦೨-೩೬). **ಹೊಮ್ಮೂಡಿಗೆ :** ಉಗಿದನುರಗಾಸ್ತ್ರವನು ಹೊಮ್ಮೂಡಿಗೆಯೊಳಗೆ ಹೊಱಕಯ್ಯ ಗಾಳಿಗೆ ಹೊಗೆಯು ಹೊದಱಿನ ಹೊರಳಿ ಹಬ್ಬಿತು ಕೂಡೆ ಕಿಡಿಯಿಡುತ (ಕುಮಾರವ್ಯಾ. ೨೩-೯); ಹೊಮ್ಮೂಡಿಗೆಯ ಹೊದಱುಗಳ ಬಿರುದಿನ ಬೀಡುಕಾಱರು ಬೀದಿವರಿದಟ್ಟಿದರು ಬಲಿ ಮುಖರ (ತೊರವೆ. ೬-೩೬-೦೦). [ಪೊಂ (< ಪೊನ್) + ಮೂಡಿಗೆ]

**ಪೊಮ್ಮೆ** 'ಪೊಮ್ಮ' ನೋ.

**ಪೊಮ್ಮೊಗೆ** (ನಾ). ಚಿನ್ನದ ಪಾತ್ರೆ : ವೃತ್ತಕುಚಾನ್ವಿತೆಯೊಡಲ ಮಾಸಿನ ಬೀಜ ಮಾತ್ರೊಂದು ಶಿಶುವಾಗಲೆನುತ ಬಿತ್ತಲುದ್ಯೋಗಿಪ ತೆಱದಿಂದೆ ಪೂಳ್ದರು ಚಿತ್ರಾಭಿಯವೆತ್ತ ಪೊಮ್ಮೊಗೆಯು (ಮೋಹನ. ೦೬-೨೨).

[ಪೊಂ (<ಪೊನ್) + ಮೊಗೆ]

**ಪೊಯ್₁, ಪುಯಿ₁, ಪೊಯಿ, ಹುಯ್₁, ಹುಯಿ₁, ಹುಯ್ಯು₁, ಹೊಯ್₁, ಹೊಯಿ₁, ಹೊಯ್ಯು₁** (ಕ್ರಿ). **ಪೊಯ್ದು₁, ಹುಯ್ದು₁, ಹೊಯ್ದು₁** (ಭೂತನ್ಯೂ). ೧. ಹೊಡೆ ; ಬಡಿ ; ಅಪ್ಪಳಿಸು : "ಪೊಯ್—ತಾಡನೇ" (ಶಮಣಿ) ; ಕಡುಗುಣ್ಪುವೆರಸು ದಾಂಟಿ ಗಡ ಮೇರೆಯನೆಂದು ವಜ್ರವೇದಿಕೆಯುಂ ತಾಂ ತೊಡೆಸಕ್ಕೆ ಪೊಯ್ವುವೊಲ್

ಪೊಯ್ದೊಡನೊಡನುಚ್ಚಳಿಪುವಿದಱ ತುಂಗತರಂಗಂ (ಆದಿಪು. ೦೨-೦೨೪) ; ಕೆಲರಂ ದೆಸೆವಲಿಗೆಯ್ದಂ ಕೆಲರಂ ಭುಜಬಲದಿನಱಿದು ಶಿಲೆಯೊಳ್ ಪೊಯ್ದಂ (ಗದಾಯು. ೩-೦೦). ೨. ಕಡಿ ; ಕತ್ತರಿಸು : ಇಸುವಿಡುವ ಪೊಯ್ವ ಕುತ್ತುವ ಮಸೆಯಂ ಪತ್ತಿಸುವ ಕೈದುಬಿನ್ನಣವಂ ಈಕ್ಷಿಸಲು (ಪುಪುರ. ೫-೦೨೫) ; ಛಲದಿಂ ಪೂಣಿಸಿ ತಲೆಯಂ ಸೆರಗಿಲ್ಲದೆ ಪೊಯ್ಯೆ (ಧರ್ಮಾಮೃ. ೭-೦೦೭) ; ಪಶುಗಳನ್ ಪೊಯ್ದು ನೆತ್ತರನ್ ಕೋಡಿ ಕಡ ಪಿದಯ್ ! (ಅಕ್ಕ್ಯಕಾ. ೦೫-೩೦೪). ೩. ತಾಕು ; ತಗಲು : ಸೊವ ದೊಂದೊಯ್ಯನೆ ಬಂದು ಪೊಯ್ಯೆ ಮುನಿಸಿಂದಾರಯ್ದು . . . ನಿಂದೋ ರೊಂದಱೊಳ್ ತಾಗಿ ಪೋರ್ವುವು ಕಾಡಾನೆಗಳ್ (ಕಾವ್ಯಾಶ. ೩೪) ; ತಾಂ ಪೊಯ್ಯೆ ನುಣ್ಗದಂಪಂ ಕರ್ಣಕುಂಡಲಂ (ಉದ್ಭಟ. ೯-೯೮) ; ಗಂಡವುನೋ ರಂತಿರೆ ಪೊಯ್ಯೆ ಕುಂಡಲಯುಗಂ (ಕಾವ್ಯಸಾ. ೬೩೬). ೪. ಮಿಡಿ ; ಮೀಟಿಂ : ತಂತಿಯುಂ ನೀವಿ ನಿರ್ಮಳಮಂ ಮಾಡಿ . . . ಸುಸ್ಥಾನಕಂಗಳನೋರಂತಿರೆ ಪೊಯ್ದು ಪೊಯ್ದು . . . ಸುಕಂಠ ಬಾಜಿಸಿದಳಾ ಜಾಣೆ ಲಸದ್ವೀಣೆಯಂ (ಕುಸುಮಾ. ೦-೩೬). ೫. ಮೃದಂಗ, ತಬಲ ಮುಂತಾದ ವಾದ್ಯಗಳನ್ನು ಬಾಜಿಸು : “ ಸೂಳಯಿಸಿತೆನಲ್ ಪೊಯ್ದುದು ” (ಛಾರಪ. ೪೦) ; ಅತ್ತಮಿತ್ತಂ ನಿಱುವ ಕರಯುಗಂಗಳ್ ಪೊಯ್ವ ದೇವಾನಕಂಗಳ್ . . . ಬೆಡಂಗಂ ಮೆಱೆಯೆ (ಆದಿಪು. ೭-೫೨) ; ಆವುಜವುನಳವಡಿಸಿಕೊಂಡು ಝುಂಕಾರವಂ ಪೊಯ್ದು (ಶಾಂತೀಶ್ವ. ೦೩-೬೬ ವ). ೬. ದಡದಡಿಸು ; ಬಡಿದುಕೊಳ್ಳು : ಮಾರಾಧ್ವರಪಾವಕಜ್ವಾಲೆಯೆನಲು ಕುಮಾರತಿಯುಸಿರೊಳು ಪೊಯ್ಯೆ (ಮೋಹತ. ೨೮-೪೦) ; ಸೂಸುವ ಸುಯ್ ಬೆಮರೇಱೆದಾನನಂ ಪೊಡೆವರ್ದೆ ಪೊಯ್ವ ಕಿರ್ಬರಿ . . . ತೋಱೆ ಪುಳಿಂದನೈದುತೆ (ರಾಜಶೇ. ೫-೦೦೮) ; ಪೊಯ್ವೆರ್ದೆಗಳ ಸೆರಗ ಮರೆದು ಬಳಿ ವಿಡಿದು (ಕಾಲಾರ. ೦೩೦-೨೭೯). ೭. ಪೆಟ್ಟನ್ನು ಹೊಂದು ; ಹೊಡೆತಕ್ಕೆ ಒಳಗಾಗು : ಈ ಇರುಳ್ ನಡೆದುದೊಂದದ್ಭುತಂ. ಪಟ್ಟ ಪಡೆ ಪಟ್ಟಂತೆ ಪೊಯ್ದತ್ತು (ಅಕ್ಕ್ಯಕಾ. ೦-೦೨). ೮. (ಭೂತ, ಪಿಶಾಚಿಗಳಂತೆ) ಮೆಟ್ಟಿ ಕೊಳ್ಳು ; ಆವರಿಸು : ಆರೋಗಣೆಯ ಸಮಯಮಾರ್ಗೆ ಭೂತಂ ಪೊಯ್ದುದಾರನೀ ಮನೆಯೊಳಿಂತೀಗಳೇತಕೆ ಮೌನಂ (ಕೃಬಿಶಾ. ೭-೫೦). ೯. ಕೊರೆ; ಕಡೆ; ಕಂಡರಿಸು: ಕಲ್ಕುಟಿಗ ದೇಯೋಜು ಪೊಯ್ದಕ್ಕರವ್ (ಎಇ. XV, ೩೩೨-೩೮ ; 1028) ; ಚೆಣ್ಣಆಚಾರಿಯ್ಯ ಮಗಂ ಅನಿ × × ಗ × × ಜ್ಜ ಆಚಾರಿ . . . ಪೊಯ್ದ ಅಕ್ಕರವ್ (ಎಕ. IV, ಗುಂಡ್ಲುಪೇ. ೯೩-೦೫ ; 1049) ; ದಾಮರಾಜಂ ಸಾಸನಗಬ್ಬಮಂ ಪೇಳ್ದು ಬರೆದಂ ಪೊಯ್ದಂ ಸಾನ್ತೋಜನುಂ ಪದ್ಮನುಂ (ಎಕ. VII, ಶಿವಮೊ. ೦೦-೫೯ ; 1085 ?). ೧೦. ನಾಶಮಾಡು ; ಧ್ವಂಸಗೊಳಿಸು : ಭೀಮಸೇನಂ . . . ಬಾಳ್ಕೆಯ ಬೆಳ್ವನಪ್ಪ ಬನಮಂ ಕಾಡಾನೆ ಪೊಯ್ವಂತೆ ಪೊಯ್ದನಿಸುಂ ಮಾಣದೆ ನೀಚ ಕೀಚಕನಿಕಾಯಧ್ವಂಸನಂ ಮಾಡಿದಂ (ಪಂಪಭಾ. ೮-೮೦). ೧೧. [ಗಣಿತ] ಗುಣಿಸು : ತಿವಿ, ಪೊಯ್, ಪೆರ್ಚಿಸು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೦-೮). ಪುಯಿ₁ : ೧. ಬಯಿದೊಡೆ ಪುಯಿದನೆ ಪುಯಿದೊಡೆ ಯಱಿದನೆ (ಶ್ವಾವಚ. ೩೪-೮೩). ಪೊಯಿ : ೧. ಇನ್ನಿರೆನೆನ್ದು ಸಿಂಗದನ್ತಿರೆ ಹರಿ ಬೀರಲಕ್ಷ್ಮೀ ನೆರವಾಗಿರೆ ಚೋಟನ ಕೋಟೆಯೆಪ್ಪ ಸಿನ್ದುರದ ಶಿರಾಗ್ರಮಂ ಬಿರಿಯೆ ಪೊಯಿದಂ ಕದನೈಕ ಸೂದ್ರಕಂ (ಎಕ. III, ಮಂಡ್ಯ. ೪೦-೦೯ ; 950). ೧೧. ಪೊಯಿ ಗುಣಿಸು ಪೆರ್ಚಿಸೆನಲಿವು ಗುಣಕಾರಭಾಷೆಗಳ್ (ವ್ಯವಹಾ. ೦೦-೦೬). ಹುಯ್₁ : ೧. ಚಿಕ್ಕತಂಮಸು ಮೂಡಣಬೆಟ್ಟದಲ್ಲಿ ಅಸಹಾಯಸೂರನಾಗಿ ಕೊಡಲಿಯಲ್ಲಿ ಕಳ್ಳರ ಹುಯ್ದು ಕೆಡಹಿ ತಾನು ಬಿದ್ದ (ಸೌಇಇ. IX-ii, ೪೨೦-೫ ; 1386) ; ಹರಿಯೊ ಹರಿಯೋ ಹುಯ್ಯೊ ಕಪಿಗಳ (ಕೌಶಿರಾ. ೩೨-೦೩) ; ಕಡುಭರದಿ ಹತ್ತಿ ಕೋಂಟೆಯ ಮೇಲೆ ಕುದುರೆ ಕಾಲಿಡುವುದಂ ಕಂಡೆಕ್ಕಟ ಗಳೊಳಗಣಿಂ ಬಂದು ಕೆಡೆವಂತೆ ಹುಯ್ದು (ಸಮ್ಯಕೌ. ೩-೩೩). ೫. ಪ್ರಯಾಣಭೇರಿಯ ಹುಯ್ಯ ಹೇಳು (ಶೀಕೃಪು. ೩-೨೩-೩೪). ಹುಯಿ₁ : ೧. ಇವನು . . . ದಾರಿಯನ್ನು ಕಾದು ಬಂದವರನ್ನು ತಲೇ ಹುಯಿದು ಅವರ ಹತ್ತಿರ ಇದ್ದದನ್ನೆಲ್ಲಾ ಕಸಿದುಕೊಂಡು ಹೊಟ್ಟೆ ಹೊರೆಯುತ್ತಿದ್ದನು (ಶೀತಿಣಂ. XII, ೦೨). ಹುಯ್ಯು₁ : ೧. ಈ ಕೋಲನ್ನು ಹುಯ್ಯುವಾಗ ವೇಗಕ್ಕೆ ಮತ್ತು ಬಿರುಸಿಗೆ ಪ್ರಾಧಾನ್ಯ ಹೆಚ್ಚು (ಕಂಕೋ. I, ೭೦೭). ೨. ಆ ದೊರೆಯು ಇವಳ ತಲೆಯನ್ನು ಹುಯ್ಯುವ ಹಾಗೆ ಚಂಡಾಲನಾದ ವೀರಬಾಹುವಿಗೆ ಆಜ್ಞಾಪಿಸಿದನು (ಶೀತಿಣಂ. IX, ೨೯). ಹೊಯ್₁ : ೧. ಬಾಯೆದ್ದು ಬಯ್ಯಲಾಱೆ ಕಯ್ಯ ಎದ್ದು ಹೊಯ್ಯಲಾಱೆ (ಬಸವ. ೬೨) ; ಬಸುಱಂ ಹೊಸೆದು ಹೊಯ್ದು ನೆಲನಂ ತಿರುಗಿ (ತಿರುಕ. ಪೇ. ೦೮-೪) ; ಒಲೆದು ಕೇಸರಿ ಹೊಯ್ದವೋಲವ್ವಳಿಸಿ ಕರ್ಣನ ಹಯರಥವ ನಪ್ಪಳಿಸಿ ಮರಳುವ ಲಾಗಿನಲಿ ಖಂಡೆಯವ ಖಂಡಿಸಿದ (ಕುವ್ಯಾದ್ರೋ. ೬-೫೦). ೨. ಮೆಯ್ದೋಱಿ ಬುದ್ಧಿವೇಳ್ವರಸು ನಂಟರ್ಕಳಂ ಹೊಯ್ದು ನಿಕ್ಕಡಿಯಾಗೆ (ಇಹರ. ಪೇ. ೪೦-೬) ; ಸಾವಿರಕುಱಿಯ ಹೊಯ್ದರು ಪೂಜಿಸಿದರಾ ಚತುರ ಚುಡಿಕೆಯ (ಸಂಕಪ. ೦೭-೦೦೦) ; ಮದದಂತಿಗಳ ಸೊಂಡಿಲ ಹೊಯ್ದು ಸುಭಟರ ಸದೆದರೇವೇಳ್ವೆನದ್ಭುತವ (ಗಿಂಪಪ. ೩-೭೮). ೩. ಸತಿಯರು ಭೂಪನಿರವ ಕಂಡುರಿ ಹೊಯ್ದು ಹೂಗಣೆಗಳಂತಿರ್ದರು (ಹಕಣ. ೮-೭೪). ೫. ಹೊಯ್ ಡಂಗುರವನವಂ ಹೊಱಗು ಹೊಱಗೀ ಸಭೆಗೆ ಹೊಯ್ ಡಂಗುರವನಾವನಾದೊಡಂ ಹೊಱಗೆವಾಗೆ (ಪುಱಕ. ಪೇ. ೭೪-೯) ; ಹಲಾಯುಧನು ತಾಳವಂ ಹೊಯ್ದನು (ಬಸಪು. ೩೭-೪೪). ೬. ಹೊಯ್ವಳ್ಳಿಗಳ ಮುನಿಜನವ ಕಂಡರು ಪಾಂಡುನಂದನರು (ಕುವ್ಯಾಆ. ೨೨-೨೨) ; ಕಡಲಳ್ಳೆ ಹೊಯ್ವಂತೆ ಸಿಂಧು ಕಂಪಿಸಿತು (ಮೋಹತ. ೨-೭). ೯. ಗಂಗೋಜಂ ಹೊಯ್ದ ಶಾಸನಂ (ಎಕ. V, ಹಾಸನ. ೩೮-೩೮ ; ಸು. 1000 ?) ; ಆಸ್ಕಂದದೇವರು ಬರೆದ ಶಾಸನ ಕೇತೋಜ ಹೊಯ್ದ (ಸೌಇಇ. IX-i, ೨೦೫-೨೭ ; 1122). ೧೦. ನಾಳೆ ಹಗೆವನ ಹೊಯ್ವೆನೆಂಬುದ್ಬಾಳುತನ ವಿನ್ನೊಮ್ಮೆ ಭೂಪತಿಯೋಲಗಾತಿಯರಿದಿರಲಾಡಿದ ಭಾಷೆಬಿನ್ನೊಮ್ಮೆ (ಕುವ್ಯಾದ್ರೋ. ೯-೪೩). ೧೨. ಕುಟ್ಟು ; ಜಜ್ಜು : ಅಱಿಯದವ ರೊಡನೆ ಸಂಗವ ಮಾಡಿದರೆ ಕಲ್ಲ ಹೊಯ್ದು ಕಿಡಿಯ ತೆಗೆದುಕೊಂಬಂತೆ (ಮುಹಾರೇ. ಶಿ. ೬೮-೦೭೦). ಹೊಯಿ₁ : ೧. ಅರಗಿನ ಪುತ್ಥಳಿಯನುರಿಯ ನಾಲಗೆ ಹೊಯಿದು ಮಾತಾಡುವ ಸರಸ ಬೇಡ (ಬಸವ. ೬೬೦ ೮) ; ಮುಂದೆ ತ್ರಿವಿಧಮಲವಿದೆ ಆಸೆಯ ಕೆಳ ಆಳವಿದೆ ಎಡ ಬಲದಲ್ಲಿ ರೋಷ ತಾಮಸ ವೆಂಬ ಹೊಯಿಲು ಹೊಯಿವುತ್ತಿದೆ (ಸರ್ಪವ. ೮೦-೪೪೪) ; ಶಿಶುಗಳನು ಖಳ ದುರಾತ್ಮಕ ಕಂಸ ತಾನಾಗಳು [ಭರದಿ ಬಂ]ದತ್ತಲೊಯಿದತಿಮುಳಿದು ಶಿಲೆ ಯೊಳಗಸಗವೊಯಿಲನು ಹೊಯಿದು ವಿಗೆ ಕೊಂದ (ಸಾಳ್ವಭಾ. ೨೦-೩). ೫. ಹೊಯಿದ ಹೊಱೆಗೆ ಕುಣಿದಾಡುವರೆಲ್ಲ ಹಾಡಿದ ಗೀತಕ್ಕೆ ತಲೆ ದೂಗುವರೆಲ್ಲ (ಸಮೂಪ. ೬-೨೩) ; ಜಡರುಗಳಿರಾ ತೊಲಗಿ ಬೋ ಎನುತಢ ಗಡಿಗೆ ಜಯಘಂಟೆಯನು ಹೊಯಿದು (ಬಸಪು. ೨೦-೦೦). ೯. ಯಿಾ ಶಾಸನವ ಹೊಯಿದ ಹುಲಿಯೂರ ಸೋಮನಾಥನ ಮಗ ಆಲೋಜಗವುಡಗಳ ಒಪ್ಪ (ಎಕ. XII, ಕುಣಿಗ. ೦೦೮-೨೩ ; 1429) ; ಶ್ರೀ ಶಾಸನವ ಹೊಯಿದಾತ ಹೊನ್ನ ಹಲಗೆಯ ಮಗ ಕರವೀರಯ್ಯ (ಎಕ. XI, ಚಿತ್ರದು. ೦೫-೨ ; 1605). ೧೩. ಒಪ್ಪಿಕೊಳ್ಳು ; ಅಂಗೀಕರಿಸಂ ; ಸಮ್ಮತಿಸು : ನೀನಿಕ್ಕಿದ ಜೂಜಂಗೆ ಹೊಯಿದು ಗೆದ್ದ ಸಿರಿಯಾಳ (ಬಸವ. ೬೭೯). ೧೪. ಕಾಳಗ ಮಾಡು : ಕರೆಕರೆದು ಮೂದಲಿಸಿ ಕಡುಹಿನ ದುರುಳರುಬ್ಬಿನ ಮೇಲೆ ಹೊಕ್ಕುಬ್ಬರಿಸಿ ಹೊಯಿದರು ಕಾದಿ ಕೊಂಡರು ಕಾಲನರಮನೆಯ (ಕುವ್ಯಾಭೀ. ೪-೨೮). ಹೊಯ್ಯು₁ : ೧. ತಾನೀವಿ ಮಿಾಯುತ್ತಿರಲು ನಿನ್ನಯ ತೀವ್ರ ತೆರಗಳಲಿ ಓವೆನುತ ಹೊಯ್ಯಲಿಕೆ ನಿನಗೆಯು ನಾವು ನುಡಿದೆವು (ಸಂಕಪ.

೦೨-೨೯); ಚಿತ್ರಜಾ ಕಕ್ಷಿಯುಂ ಕಿತ್ತುಕೊಂಡೆತ್ತಿ ಹೊಯ್ಯುತ್ತ ಬರಲು (ಕೈಪಿಡಿ. ೨೬-೩); ಆ ಅಂಗಿಯನ್ನು ದೊಪ್ಪನೆ ಹಾಸುಗಲ್ಲಿಗೆ ಹೊಯ್ಯುತ್ತಾನೆ (ದೀಕಕ್ಕ. ೪೦). ೫. ಹೊಯ್ಯೋ ಡಂಗುರವ ಜಗದಯ್ಯನಯ್ಯ ಶ್ರೀಹರಿಯಲ್ಲದಿಲ್ಲವೆಂದು (ಶ್ರೀರಂದ. ೨-೨೦ ಪಲ್ಲವಿ); ತಪ್ಪದೆ ಗಳಿಗೆಗೊಮ್ಮೊಮ್ಮೆ ಭೇರಿಯು ಹೊಯ್ಯುತಿಪ್ಪುದದೊಂದು ಬಾಗಿಲೊಳು (ಮೋಹತ. ೨೦-೪೦). ೬. ಧಗೆ ಹೊಡೆದಳ್ಳೆ ಹೊಯ್ಯುತೆ . . . ನಾಯಿಗಳಡಸಿದುವೆಡಬಲದೆ (ಮೋಹತ. ೦೯-೦೯).

[ದೇ.॥ ಮಲ. ಪೊಯ್ಯು; ಕೊಡ. ಪೊಯ್; ಕೋತ. ಪೊಯ್, ಒಯ್]

**ಪೊಯ್$_3$**, ಹುಯ್$_2$, ಹುಯಿ$_2$, ಹುಯಿ್ಯ, ಹುಯ್ಯು$_2$, ಹೊಯ್$_2$, ಹೊಯಿ$_2$, ಹೊಯ್ಯಿ, ಹೊಯ್ಯು$_2$ (ಕ್ರಿ). ಪೊಯ್ದು$_2$, ಹುಯ್ದು$_2$, ಹೂದು, ಹೊಯ್ದು$_2$ (ಭೂತನ್ಯೂ). ೧. ಸುರಿ; ಎರೆ: ಪೊಸವುಣ್ಣಳೊಳ್ ಪೊಯ್ ಮಱುಗುವಿನಂ ಲೋಹವಾರಿಯುಂ ಮಱುಗುವಿನಂ (ಶಬ್ದಾ. ೦೨೭-೩); ಮಣಿಮಯಕುಂಭದಿನಂದು ಪೊಯ್ದೊಡೆ ಯೊರ್ವರ್ಳ್ ವಿದಳಿತಪಂಕರುಹವದನೆ ಕುಂಕುಮಜಳಮಂ (ಕಾದಂಪೂ. ೭೭); ಮದವಶೀಕರಣಶೃಂಗಾರರಸಮಂ ಪೊಯ್ವಂತೆ ಕಸ್ತೂರಿವಾರಿಯುಂ ಪೊಯ್ದುಂ (ಕುಸುಪುರಾ. ೫-೦೫೫ ವ). ೨. ವರ್ಷಿಸು; ಕರೆ: ನೆಲನಟ್ಟೆ ದೂಡುವ ಪೊಟ್ಟನೀರಲಂಬಿನಿ ಪದಕೆ ಪೊಯ್ವ ಮಟ್ಟನೀರ್ (ಶಬ್ದಾ. ಸು. ೩೨೭ ವ್ಯಾಖ್ಯಾ). ೩. ನೆಡು; ನಾಟು: ಅಗೆಯಂ ಪೊಯ್ವರ್ ಸೊಡರಂ ಪೊತ್ತಿಸುವರ್ ಸತ್ತಡೆಯೊಳ್ ತವಗುಂಜಿ ಭೀತಿಯಿಂದ ಮೂಢರ್ (ಸಮುಕ. ಅನುಬಂ. I. ೩೭೮-೨೯); ಪೊಸಬೆಳ್ಳಿದಾವರೆಗಳಾವೆಡೆಯೊಳ್ ನಡೆವಲ್ಲಿ ಪೊಯ್ದು ಪೂಗುಡಿ ಗಡ (ಶಬ್ದಾ. ೦೮೩); ಗುಡಿಯಂ ಪೊಯ್ದಾನೆಯ ಪೊಂದೊವಲಿಂದುಡಿದ ಪತಾಕಾಪಟಸಂತತಿಯಿಂದೆಡೆಪಱಿಯದ ಸರಪತಿಯುಂ ಬಿಟ್ಟು (ಜಗದುಕಾ. ೭-೨೯). ೪. ಅಚ್ಚಿಗೆ ಹಾಕು; ಎರಕಕ್ಕೆ ಹಾಕು: ಸುವರ್ಣಮನೊರೆದುಂ ಕಡಿದುಂ ಕಾಸಿಯುಂ ಪೊಯ್ದುಂ ನೋಡಿ ಪರೀಕ್ಷಿಪಂತರ್ ಪರೀಕ್ಷಿಸಿಕೊಳ್ವಂತೆ (ಧರ್ಮಾಮೃ. ೦೦-೩೯ ವ). ೫. ಸೂಸು; ಎರಚು: ಚಿಮುಕಿಸು; ಸಿಂಪಡಿಸು: ಆಗಳಂಗರಾಜಂ . . . ದುಕೂಲಾಂಬರದೊಳಿಂದಾಗಿ ಚಲ್ಲಣಮನುಟ್ಟು ಪುಡಿಗತ್ತುರಿಯ ತಲೆಯೊಳ್ ತೀವೆ ಪೊಯ್ದು (ಹರಿವಂಶ. ೦೨-೦೦೬ ವ); ಕಣ್ಣೊಳ್ ಮಳಲಂ ಪೊಯ್ದುಟ್ಟುದಂ ಕೊಂಡರೆಂಬಂತೆ (ಧರ್ಮಾಮೃ. ೬-೨೦೩); ಕೆಮ್ಮನೆ ಕೈಗಾದಿರದೋವಮುಪ್ಪನೊಲೆಯೊಳ್ ಪೊಯ್ವಂತೆ ಪಾಟೀಚರ್ ದುರ್ಜನನಂ ಬಯ್ವುದು ಬಯ್ದೊಡಲ್ಲದವನಂ ಪೇಟಬ್ ಭಾವಿಸಲ್ ಬರ್ಕುಮೇ (ಸೂಕ್ತಿಸು. ೦-೩೨). ೬. ಬೀಸು; ತೀಡು: ಕತ್ತುರಿಯ ತಗುಳ್ದು ಪೊಯ್ವ ಸೊವಡಾ ಸೊವಡೊಳ್ ಕಡುಸೊರ್ಕು ಸೊರ್ಕಿಗಾವರಿಸುವ ತುಂಬಿ ಚೆಲ್ವೆಸೆಯೆ ಕಣ್ಗೆಸೆದತ್ತು ಖಗೇಂದ್ರನೋಲಗಂ (ಅದಿಪು. ೨-೫). ೭. (ದಾನವಾಗಿ) ಕೊಡು; ನೀಡು: ಪನ್ನಿರ್ವ್ವರಾ ಏಟ್ವರಾ ಪೊಯ್ದು ಧರ್ಮ್ಮಮಿದೊವಟ್ ಕೆಡಿಸಿದೊಣ್ ಪಞ್ಚಮಹಾಪಾತ[ಕ]ನಪ್ಪೊನ್ (ಎಕ. IV, ಹಾಸುರಾ. ೩೩-೦೦; ಸು. 750); ಈ ಎನೆತುಂ ಜಡಿಯಕ್ಕೆ ಪೊಯ್ದೋದು (ಎಕ. IX, ನೆಲಮಂ. ೩೦-೦೨೭; 797); ಮನೆ ತುಂಬಿದ ಪೊನ್ನಂ ಪೊಯ್ದು ಮನಂ ತೀವಿದ ಪರಿಣಾಮತೆಯುಂ ಕೊಟ್ಟು ಅವರಂ ಕಳುಪಿ (ಪಂಪಭಾ. ೨-೯೬). ೮. ಹೊಮ್ಮಿಸು; ಉಂಟುಮಾಡು: ಮದನನಾಜ್ಞೆಗಳ್ಗದರ್ ಬೋಹಿಗಳ ಕುಲಕೆ ಹೊಱಗೆಂದು ನೂಪುರರವದೆ ನಾದಮಂ ಪೊಯ್ವರಂಗನೆಯರಲ್ಲಿ (ಶಬ್ದಾ. ೬-೯೦). **ಹುಯ್$_2$**: ೧. ಆಜ್ಯ ಹುಯ್ದರಾಗುವುದಿಲ್ಲ (ಕಾಟಿಕಾ. ೬). ೨. ವೈಡೂರ್ಯಮಣಿಯ ಬೆಳ್ಳರಿ ಹುಯ್ಯೆ (ಸಪ್ತಕಾ. ೭-೩೯); ದೈವಕೆರೆಗಳು ತನ್ನ ಪತಿಗೆರಗು ತೇಳುವವಳು ಅಂಥವಳು ಹುಯ್ಯೆನಲು ಮಳೆ ಹುಯ್ವುದು (ಕುಮಾರ. ೨೫). ೫. ಅಕ್ಕಯ್ಯೇ ಗಂಗೇ ದಡದಲ್ಲಿ—ಸರಸತಿಯ ಅಕ್ಕೀ 'ಹೂದ'ವಳಾ ಕರೆತನ್ನೀ (ಜಾನ್ಪದ. ೦೭೩). **ಹುಯಿ$_2$**: ೧. ಒಮ್ಮಾನ ಹಾಲ ಹುಯಿದದನು ಸಟ್ಟುಗದಿ ತೊಳಸಿ (ಸೂಕ್ತಿ. ೦-೯೦). **ಹುಯಿ್ಯ**: ೧. ಆ ಪಾತ್ರೆಯ ತುಂಬ ನೀರನ್ನು ಹುಯಿ್ಯ (ರೂಢಿ). **ಹುಯ್ಯು$_2$**: ೧. ನೀರ ಹುಯ್ಯೋ ಳವಳೆ ಹಣ್ಣು ಮೆಲ್ಲೋಳವಳೆ (ಜಾಪದ. ೯೩). ೨. ಹಸ್ತಮಳೆ ಎತ್ತಲಾದರೂ ಹುಯ್ಯುತ್ತೆ (ಗಾದೆ); ಹುಯ್ಯೋ ಹುಯ್ಯೋ ಮಳೆರಾಯ ಹೂವಿನ ತೋಟಕೆ ನೀರಿಲ್ಲ (ರೂಢಿ). **ಹೊಯ್$_2$**: ೧. ಅವಿಸ್ಕಿ—ಕಾಯ್ದು ಬಿಸಿಯಾಗಿರ್ದ ಹಾಲಿನಲಿ, ಆವುದಾನೊಂದು ಮೊಸರ ಹೊಯ್ದುದದಱತ್ತಣಿಂದ ಒಡೆದುದು (ಜಾತಕಾ. ೪); ಬೇವಿನ ಬೀಜವ ಬಿತ್ತಿ . . . ಜೇನುತುಪ್ಪವ ಹೊಯ್ದರೆ ಸಿಹಿಯಾಗಬಲ್ಲುದೆ ಕಹಿಯಹುದಲ್ಲದೆ (ಬಸವ. ೬೨೭); ನೀರ ಹೊಯ್ ನಂದಿಸು (ಕೊರಣ. ೫-೬-೭೩); ಒಡೆದ ಹುಳಿಮಜ್ಜಿಗೆಯ ತಿಳಿಯುಮಂ ಚೆಲ್ಲಿ . . . ಕಡುಗಟ್ಟಿಯಾದುದ ತೆಗೆದು ಮಡಕೆಯೊಳು ಹೊಯ್ದು (ಸೂಪಶಾ. ೨-೦೬). ೨. ಆರುಗಾಲ ಮಳೆ ಹೊಯ್ದರೂ ಮುತ್ತಗಕ್ಕೆ ಮೂರೇ ಎಲೆ (ಗಾದೆ); ಎಮ್ಮೆ ಮೇಲೆ ಮಳೆ ಹೊಯ್ದ ಹಾಗೆ (ಗಾದೆ). ೩. ಹಾರುವನ ಭಕ್ತಿ ಒಡಿನೊಳಗೆ ಅಗೆಯ ಹೊಯ್ದಂತೆ ಕೆಳಯಿಂಕೆ ಬೇರೂಱದು (ಬಸವ. ೪. ೨೩೭-೫೯೦). ೫. ಗುರು ಲಘುವೆಂಬವರ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ (ಬಸವ. ೫೭೭); ಕಳವಳಿಸುವ ಕಪಿಯ ಭೂತ ಹೊಡೆದು ಬೀಳೂಱೆ ಘಾಳಿಯೊಳು ನಿಂದು ಧೂಳಿಯ ಹೊಯ್ಯುತ್ತಿದೆ (ಅದವ. ೦೫-೩೨). **ಹೊಯಿ$_2$**: ೧. ಅವನ ಪುಷ್ಪತೋರಣಂಗಳಿಗೆ ದೇವತಾಸ್ತ್ರೀರು ನೀರ ಹೊಯಿವರು (ಗರಮು. ೨-೦೨-೧); ಕಾರ್ಬೋಲಿಕ್ ಆಮ್ಲದ ತೀಕ್ಷ್ಣವಾದ ದ್ರವ ಅಥವಾ ಸೀಮೆಎಣ್ಣೆ ಹೊಯಿವರೆ ಇರುವೆಗಳು ಬಾರದಂತೆ ಮಾಡಬಹುದು (ಅತುಜೀ. ೫೦). **ಹೊಯ್ಯಿ**: ೧. ಗಿಡಗಳಿಗೆ ನೀರನ್ನು ಚೆನ್ನಾಗಿ ಹೊಯ್ಯಿ (ರೂಢಿ). **ಹೊಯ್ಯು$_2$**: ೧. ಹಿಟ್ಟನ್ನು ಬೆಂಕಿಯಲ್ಲಿ ಸ್ವಲ್ಪ ಕಾಯಿಸಿ, ಅದಕ್ಕೆ ಕುದಿಯುವ ನೀರನ್ನು ಹೊಯ್ಯಬೇಕು (ಅಡುಜೀ. ೯೯); ಧಾರೇ ಹೊಯ್ಯುವಾಗ ಹೇಳುವ ಹಾಡು (ಜಾನ್ಪದ. ೦೬೨). ೨. ಬೆಳಗ್ಗೆಯಿಂದ ಒಂದೇ ಸಮನೆ ಮಳೆ ಹೊಯ್ಯುತ್ತಿದೆ (ರೂಢಿ). [ದೇ.॥ ತಮಿ. ಮಲ. ಪೊಟಿ; ತೆಲು. ಪೋಯು]

**ಪೊಯ್$_3$**, ಹೊಯ್$_3$ (ನಾ). ಹೊಡೆತ; ಏಟು; ಪ್ರಹಾರ; ಬಡಿತ: ಒರ್ಮೆಯ ಪೊ[ಜಾತಂ. ಪಾ]ಯ್ವ ಪೊಯ್ಗಳಿಂ ನೆಗೆದು ಮುಗಿಲ್ಗಳಿಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದ ಜೇನ ಪುಟ್ಟಿಗಳನೆ ಪೋಲ್ತುವು (ಶಾಂತಪು. ೦೦-೯೦); ಕುದುರೆಗಳನೊಂದೆ ಪೊಯ್ಯಿಂ ಮದಕರಿಗಳನೆರಡೆ ಪೊಯ್ಯೊಳ್ ಕಂಡಂ ಮಾಡಿದ ಖಡ್ಗಧರರ ಭುಜಬಲಮದೇಂ ನಿಮಿರ್ಚಿದುದೊ (ಗದಾಯು. ೯-೪೦); ಕೀಱುವ ಕಱಿ ಪೊಯ್ದನವನ್; ಪೊಯ್ಯೆಡೆಯೆಡೆ ಬಯ್ಬಯ್ದು ನಲಿದನವನ್ (ಅಕ್ಷಕಾ. ೬೦-೨೦೨). **ಹೊಯ್$_3$**: ಬಯ್ದು ಬಯ್ಗಳಂ ಬೇಡುವ ಹೊಯ್ದ ಹೊಯ್ಗೆ ಪುಳಕಾವಳಿ ಮೂಡುವ ಗಂಡು ಹೆಣ್ ಠಮಾಡುಗುಂ (ಅಪಂತ. ೮-೫೦); ಪವನಸಂಭವ ಹೊಯ್ದ ಹೊಯ್ಗಳ ನೆನೆದು ನಿಂದ್ರಾರಿ (ಕೌರಾ. ೦೯-೩೨); ಖಾತಿಗೊಳ್ಳದ ಮುನ್ನ ಪವನಜನೋತು ಕೊಟ್ಟನು ತನ್ನ ಹೊಯ್ಗಳನು (ಕುವ್ಯಾಸ. ೦೦-೩೬). [< ಪೊಯ್$_1$]

**ಪೊಯಲ್**, ಪುಯಲ್, ಪುಯ್ಯಲ್, ಪೊಯ್ಯಲ್, ಹುಯಲು, ಹುಯ್ಯಲ್, ಹುಯ್ಯಲು, ಹುಯ್ಲು, ಹೊಯಲು, ಹೊಲ್ಲಿ, ಹೊಯಲು, ಹೊಯ್ಯಲು, ಹೊಯ್ಲು (ನಾ). ೧. ಏಟು; ಪೆಟ್ಟು; ಹೊಡೆತ: ವಿಷಯಗಳೆಂಬ ಪೊಯಲ್ಗಳಿಂ ಸಾರಲೀಯದೆ . . . ಸಂಸಾರಮೆಂಬ ಮಹಾನದಿಯಂ ದಾಂಟುವುದು (ಧರ್ಮಾಮೃ. ೭-೨೦೯); ವೀಚಿಯ ಪೊಯಲ್ಗಳೆಡೆ ಸಿಲ್ಕುವೆಳಮೀನ್ಗಳಿಂ ವೀಚಿಗಳನೊಡೆದುರ್ಬಿ ಪರಿವ ಬಳ್ಳಿಮೀನ್ಗಳಿಂ (ಅಂದ್ರಕಟಿ. ೩-೮೪). **ಪುಯಲ್**: ೧. ಜಿನುಗುತ್ತುಂ ಭೋಂಕನೆ ಮಧುಪನಿಕಾಯಂ ಸೋಂಕೆ ತನ್ನನೇವೈಸಿ ಕರಂ ಕೊನೆವಂತಿರ್ದುದು ವನಪವನನ ಪುಯಲಿಂದೊಲೆವ ಕಂಬುಲತೆ ಸೊಗಯಿಸುಗುಂ (ಕುಸುಪುರಾ. ೯-೨೫). ೨. ಹೊಡೆದಾಟ; ಕದನ; ಕಾಳಗ:

ಹಾವಿನಂತೆ ತಾನು ಹೊಸಬಾಳನ್ನು ಹೊಗುತ್ತಿದ್ದಂತೆ ಅವನಿಗೆ ಭಾಸವಾಯಿತು (ಮುಜಪಾ. ೨೬). **ಪೊರೆಬಿಡು :** ೨. ಉದಕವು ಪೊರೆಯನು ಕಳಚುವುದಾದರೆ ಉರಗವು ಪೊರೆಬಿಡುವ ಹಾಗೆ ಬೆಳ್ಳಿ ಡೆಯಾಗುತಲಿದ್ದವು ಸತಿಯರ ನೀರಾಟ ವಾಡುವ ಮೈಗೆ (೨೦ಶಾತ. ೦೧೧-೮) ; ಪೊರೆ ಬಿಟ್ಟ ಹಾವಿನಂತೆ ದೇಹವನ್ನು ತ್ಯಜಿಸಿ ಹೊರಟುಹೋದನೆಂದರೆ ಮತ್ತೆ ಅವನಿಗೆ ಪುನರ್ಜನ್ಮವಿಲ್ಲ (ಜಗದಾ. ೩೮). ೩. (?) : ತನಿವಣ್ಣಂ ಪೊರೆಬಿಟ್ಟು ಕುತ್ತೆಸಟ್ಟಗ್ಗಳೊತ್ತೀದೋಡಿ ನಿಂದೂಡೆ ವಬ್ಬನಿಯೊಳ್ಗೋಸಗೆಯುಂಡು ಪಾಡುವಳಿಯಿಂ ಬಾಂಡಾಳಬಾಳಾಕಳಧ್ವನಿಯೊಳ್ ಮಂದ್ರತೆಯುಂ ತಗುಳ್ದು ಕಿವಿಯೊಕ್ಕೀ ಸಂಗದಿಂ ಸೌಖ್ಯಸಾಯುನಿಕಂ ತಾನೆನಿಸಿತ್ತೊ ಸಜ್ಜೆವನೆಯೊಳ್ ಸುಪ್ರಾಭಾತಗೀತಾನಿಲಂ (ಅನಂತ. ೮-೬೯). **ಹೊರೆವಿಡು :** ೨. ಹೊಡೆಯೆ ವಜ್ರಂ ಹಜಾವುದೇ ಕೀಸೆ ನೆಳಲು ಹೊರೆಬಿ [ಹೆಕೆಣಂ. ೧]ಡುವುದೇ (ಸಿದ್ಧರಾ. ೬-೪). [ಪೊರ್ೆ + ಬಿಡು₁]

**ಪೊರೆವೋಗು** (ಕ್ರಿ). ಉತ್ಸಾಹವು ಕಡಮೆಯಾಗು : ಪೊರೆವೋಗದ ಕಟ್ಟಾಯುಮುಮಂ ಒರೆವೋಗದ ಚಲಮುಮಂ . . . ನೋಟಕರಪ್ಪನಮಪ್ಪವರಿಂ ಪೊಗಟಿಸುವೆನೆಂದು ತಜಿಸಂದು (ಕಾಂತಿತ. ೯-೩೬ ವ).

[ಪೊರ್ೆ + ಪೋಗು₁ (<ಪೋ₁)]

**ಪೊರೆಸಾರ್** (ಕ್ರಿ). ಹತ್ತಿರಕ್ಕೆ ಬರು; ಸಮೀಪಿಸು: ಚಿರಕಾಲ ಬೇಟವ ಮಾಡಿ ಮುಕ್ಕಣ್ಣಂಗನೆ ಕರೆಯಟ್ಟಿದಾ ದೂತಿ ಬಂದು ಪೊರೆಸಾರ್ದು ಪೇಳ್ವಂತೆ ನೃಪನ ಕೆನ್ನೆಯೊಳೊಂದು ನರೆಯಿದ್ದುದು (ಶರಶ. ೬೬-೦೯). [ಪೊರ್ೆ + ಸಾರ್₁]

**ಪೊರೆಹುಲ್ಲು** (ನಾ). ಒಂದು ಬಗೆಯ ಹುಲ್ಲು: ಹಂಬುಹಾರಕಹುಲ್ಲು, ಪೊರೆಹುಲ್ಲು (ವೃಕಿಗಿ. ೦೯-೨೯೦). [ಪೊರ್ೆ + ಹುಲ್ಲು (<ಪುಲ್)]

**ಪೊರ್ಕು** 'ಪೊಕ್ಕುಟು' ನೋ.

**ಪೊರ್ಕುಳ್** 'ಪೊಕ್ಕುಟು' ನೋ.

**ಪೊರ್ಕುಳಿ** 'ಪೋರ್ಕುಳಿ' ನೋ.

**ಪೊರ್ಕುಳಿಗೊಳ್** 'ಪೋರ್ಕುಳಿಗೊಳ್' ನೋ.

**ಪೊರ್ಕುಳಿಯಿಕ್ಕು** 'ಪೋರ್ಕುಳಿಯಿಕ್ಕು' ನೋ.

**ಪೊರ್ಕುಳಿವಕ್ಕಿ** 'ಪೋರ್ಕುಳಿವಕ್ಕಿ' ನೋ.

**ಪೊರ್ಕುಳಿವುಗು** (ಕ್ರಿ). ಕದನಕ್ಕೆ ಇಳಿ; ಯುದ್ಧಕ್ಕೆ ತೊಡಗು : ಎಕ್ಕೆಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ಮಿಗಲ್ಕೆಕ್ಕತುಳಾ ಪೊರ್ಕುಳಿವೊಕ್ಕುಕರಂ ಪಾಡಾಪಾಡಿಯೊಳುಜಿದಿಜಿದರ್ ತವ್ಮೊಳಗೆ (ಶಮಚಂ. ೬-೨೦).

[ಪೊರ್ಕುಳಿ (<ಪೋರ್ಕುಳಿ) + ಪುಗು (<ಪೊಗು)]

**ಪೊರ್ಕುಟ್** 'ಪೊಕ್ಕುಟ್' ನೋ.

**ಪೊರ್ತು** 'ಪೊಟ್ಟು' ನೋ.

**ಪೊರ್ತುಗೀಜ** 'ಪೋರ್ಚುಗೀಸ್' ನೋ.

**ಪೊರ್ದಿಗೆ** 'ಪೊರ್ದುಗೆ' ನೋ.

**ಪೊರ್ದಿಸು**, ಪೊಂದಿಸು, ಪೊದ್ದಿಸು, ಹೊಂದಿಸು, ಹೊದ್ದಿಸು₁ (ಕ್ರಿ). ೧. ಸೇರುವಂತೆ ಮಾಡು; ಸೇರಿಸು; ಕೂಡಿಸು : ನಿನ್ನಂ ರಸಾತಲಮಂ ಪೊರ್ದಿಸದಾಯ್ತುದೇಕಳೆ ಮರುತ್ತೇಕದೊಯ್ಯದಾಯ್ತು (ಕಾದಂಪ. ೩೬೨); ಕಿಸುವಂ ಮೂಲಿಕೆಯಂ ಪೊರ್ದಿಸೆ ನಗೆಯೊಳೆ ಹೇಮಮಪ್ಪ ತೆಜದಿ ದು ಸಂಕಿಸದೆ ಪರಧರ್ಮದೊಳ್ ಕೊರ್ತೆಸಗುವನರನುಂ ವಿಶೇಷಸುಖಿಯಾಗಿರ್ಕುಂ (ಧರ್ಮಾಮೃ. ೯-೩೯). ೨. ಉಂಟುಮಾಡು : ಮೊದಲೊಳ್ ರಾಜ್ಯಾಭಿಷೇಕ ಪ್ರಬಲಜಲಮೆ ೞರ್ಚಿತ್ತು ದಾಕ್ಷಿಣ್ಯಮಂ ಹೋಮದ ಧೂಮಂ ಚಿತ್ತದೊಳ್ಪೊಟ್ಟನೆ ಮಲಿನತೆಯಂ ಪೊರ್ದಿಸಿತ್ತು . . . ಎನಲ್ ದುಷ್ಟರಪ್ಪರ್ ನೃಪಾಲರ್ (ಕಾದಂಪೂ. ೩೩೪). **ಪೊಂದಿಸು :** ೧. ರಘುಪತಿಂ . . . ಮಿತ್ರಸದ್ಭಾವದಿಂದವರವರ ನೋಡಿ ಸೌಮಿತ್ರಿಸಹಿತಾಪಮಂ ಪರಿಹರಿಸಿ ಶಾತಗುರೆ ಮಿತ್ರವಂಶೋತ್ತಮರ ಸಂಸ್ಕಾರವಿಧಿಯಿಂದ ಪೊಂದಿಸಿದನೊಂದುಗೂಡಿ (ಹಯ. ೨-೨೯). ೩. ಅಳವಡಿಸು ; ಹಚ್ಚು : ಒಂದೆಡೆಯೊಳಗೊರ್ವಗಟ್ಟಿವಳಿತಿ ಸಿರಿಗಂಧವ ವಿಟನುರದೆಡೆಗೆ ಪೊಂದಿಸಿ (ಸಂಶಪ. ೨-೩೪). **ಪೊದ್ದಿಸು :** ೨. ನಿರ್ಮಲತಪಸ್ವಿಗಳ ನಿಶ್ಚಲಹೃದಯಮಧ್ಯಪಂಕೇಜಾತದ ಗದ್ದುಗೆಯೊಳಿಸವ ಚಿದ್ರೂಪನಂ ಜಗವಜಿಯೆ ದೊದ್ದೆಯೊಳ್ಗೂಡಿ ತೀರ್ಗುದುರೆಯುಂ ಪೊಡೆವುದಂ ಪೊದ್ದಿಸಿದ ಪಾರ್ಥನಾರಿದರೊಳೆನಲು (ಜೈಮಿನಿ. ೩-೯). **ಹೊಂದಿಸು :** ೧. ಅಸಮಸದುಭಕ್ತಾಂಘ್ರಿಗಳನರ್ಚಿಸಿ ಸಮಸ್ತಾಂಗಂಗಳಂ ಹೊಂದಿಸಿ ನಮಿಸಿ . . . ಬಸವರಾಜನು ಮುನ್ನೆ ತಾಂ ಮುದ್ರಿಸಿದ ಮುಸುಕಂ ತೆಗೆಯಲು (ಬಸಪು. ೩೪-೩೬); ಹಳೆಯದರ ಅಂದವನ್ನು, ಹೊಸದರ ಚಂದವನ್ನು ಹೇಗೆ ಹೊಂದಿಸುವುದು (ಹಕ್ಕೊಕು. ೩೦೯). ೪. ಅಣಿಮಾಡಿಕೊಳ್ಳು ; ಜೊತೆಗೂಡಿಸಿಕೊಳ್ಳು : ಅವಳು . . . ಎರಡು ದೋಲಿಗಳನ್ನು ಹೊಂದಿಸಿಕೊಂಡು ಅವನನ್ನು ಸರಿಯಾದ ಸ್ಥಳಕ್ಕೆ ಕರೆದುಕೊಂಡು ಹೋಗಿ ಉಪಚರಿಸಿದಳು (ಬಂಕಿಮ. ೨೨೦) ; ಸರಸಮ್ಮ ಸಗಣಿ ಹೊಂದಿಸಿ ಅಡಿಗೆಮನೆ ಮೊದಲು ಸಾರಿಸತೊಡಗಿದಳು (ಕುಸುಕಂ. ೪೦) ; ನಾಳೆಯ ಕೆಲಸಕ್ಕೆ ನಾನು ದುಡ್ಡು ಹೊಂದಿಸಿಕೊಳ್ಳಬೇಕು (ರೂಢಿ). ೫. (ವ್ಯವಹಾರ, ಅಭಿಪ್ರಾಯಭೇದ ಮೊದಲಾದುವನ್ನು) ಇತ್ಯರ್ಥ ಮಾಡು ; ತೀರ್ಮಾನಿಸು ; ನಿರ್ಣಯಿಸು : ಈ ವ್ಯಾಪಾರವನ್ನು ನೀವೇ ಹೊಂದಿಸಿ ಕೊಡಬೇಕು (ರೂಢಿ). ೬. (ಧಾರಣೆ ಮೊದಲಾದುವುಗಳನ್ನು) ಅನುವು ಮಾಡಿಕೊಡು ; ಕುದುರಿಸು : (೬). ೭. ಸರಿದೂಗಿಸು : ಭೂಪತಿಯು . . . ಲೆಕ್ಕಪತ್ರವನ್ನು ಹೊಂದಿಸಿ ಹೋಲಿಸಿ ನೋಡುತ್ತ ಕುಳಿತು ಬಿಟ್ಟನು (ಇಶ್ಯಕ. ೩೬೯). ೮. ಒಪ್ಪವಮಾಡು ; ಅಣಿಗೊಳಿಸು : ಅವರು ಗೂಡಿನಲ್ಲಿ ಡಬ್ಬಿಗಳನ್ನು ಅಂದವಾಗಿ ಹೊಂದಿಸಿ ಇಟ್ಟಿದ್ದಾರೆ (ರೂಢಿ). **ಹೊದ್ದಿಸು₁:** ೧. ಬಿದ್ದನು ಭವಾಂಬುಧಿಯೊಳುದ್ಧರಿಸುವರ ಕಾಣೆ ಹೊದ್ದಿಸುವರಿಲ್ಲಾದಿರುದ್ರನು ನಿಮ್ಮಾಣೆ (ದೀಕ್ಷಾಬೋ. ೮-೦೪) ; ಇದ್ದರೆಯು ರಣವಿಜಯವನಿತೆಗೆ ಹೊದ್ದಿಗರು ದ್ರುಪದಾದಿರಾಯರ ಹೊದ್ದಿಸಲು ಬೇಡವರಿಗಂಜುವೆವೆನುತ ನೂಕಿದರು (ಕುಮ್ಯಾಭಿ. ೮-೨೦). ೯. ಧರಿಸುವಂತೆ ಮಾಡು ; ಧಾರಣೆ ಮಾಡಿಸು : ಇಂತಿವರು ಮುಟ್ಟಲಜಿಯರು ತತ್ವದ ನಿಜವನಜಿಯರು ಇಂತವರಿಗಿಪ್ಪಲಿಂಗವನು ಹೊದ್ದಿಸಲೇಕೆ (ವಾಲವಚ. ೦೬-೭೦). ೧೦. ಸ್ಪರ್ಶಿಸುವಂತೆ ಮಾಡು : ನಯನದಾಹಾರವ ಜಂಗಮವ ನೋಡಿಸುವೆ . . . ಜಿಹ್ವೆಯಾಹಾರವ ಜಂಗಮವನೂಡಿಸುವೆ [ತ್ವ]ಚದಾಹಾರವ ಜಂಗಮಕ್ಕೆ ಹೊದ್ದಿಸುವೆ (ಬಸವ. ೪೨೯). [ಪೊರ್ದು + — ಇಸು₃]

**ಪೊರ್ದು**, ಪೊಂದು₁, ಪೊದ್ದು₁, ಪೊಟ್ಟು, ಹೊಂದು₁, ಹೊದ್ದು₁ (ಕ್ರಿ). ೧. ಕೂಡು ; ಸೇರು : ರವಿ ಪೊರ್ದಿದನಸ್ತಶೈಲಮಂ (ಕಂಶಪಾ. ೯-೩೬) ; ಆತಂ ಕೈಕೋಂಡುದಜಿಂ ಋಷಿವೇಷಕ್ಕಗ್ರಾಮ್ಯತೆಯುಂ ಆತನಂ ಪೊರ್ದಿದ ಜವ್ವನಕ್ಕೆ ಸೌಂದರ್ಯಮುಂ... ಆದುದೆಂದು ಬಗೆಯುತ್ತಂ (ಕಾದಂಪೂ. ೬೧೦); ಒಡವುಟ್ಟಿದರಂ ಕೊಂದವರಡಗಂ ತಿಂದವರ ನೆತ್ತರಂ ಬೆಸಲಗೆಯೊಳ್ ಕುಡಿವೀ ನಿಸ್ತ್ರಿಂಶತೆಯಂ ಹಿಡಂಬಿಯಂ ಪೊರ್ದಿ ಕಲ್ತನಾಗನೆ ಭೀಮಂ (ಗದಾಯು. ೩-೨೮). ೨. ಹೊಂದಿಕೊಳ್ಳು ; ಸರಿಯಾಗು ; ಜೋಡಿಯಾಗು : ಬೇಜೆವೇಜೆ ನಿಲೆ ಕಾರಕದೊಳ್ ಕ್ರಿಯೆ ತಳ್ತು ಮುಂ ತೋಜೆ ಪೇಟ್ದವಗುಣಂ ಗುಣರೂಪದೆ ಪೊರ್ದುಗುಂ (ಶಬ್ದಾ. ೦-೦೩೪) ; ಪರಮಾರ್ಥಂ ಪೇಟಿಪಟ್ಟರ್ದಧಿಕರಣಮಿವಿಂತಯ್ದುಜೆಯೊಳ್ ಶಬ್ದಸಿದ್ಧಿಸ್ಮರಣಕ್ಕಾ ದ್ಯಕ್ಕ್ಯದಾತ್ರಪ್ರಕರಣಗಣನಾವೃತ್ತಿಯಿಂ ಪೊರ್ದಿ ನಿಲ್ಕುಂ (ಕಾವ್ಯಾವ. ೦-೬). ೩. ಹತ್ತಿರಕ್ಕೆ ಬರು; ಸಮೀಪಿಸು; ಬಳಿ ಸಾರು : "ಪೊರ್ದು-ಸಮೀಪೇ (ಹತ್ತಿರಕ್ಕೆ ಹೋಗು)" (ಶಮಧಾ); ಪಸರಿಸಿದ ಪದ್ಮರಾಗದ ಪೊಸಗೆಂಪು ಮಾಂಸಮೆಂದು ಮುಂ ಕರ್ದುಕಲ್ಕಾಟಿಸಿಯುಂ ಬಟಿಕದನುರಿಯೆಂಬ ಸಂಕೆಯಿಂ ಪೊರ್ದದಿರ್ದುವೀ ಮತ್ಸ್ಯಂಗಳ್ (ಅನಂತ. ೦೩-೦೨೨); ಕರ್ಚಿನಂತೆ ಪೊರ್ದಿದರಂ ಕಿಡಿಸುವುದು (ಧರ್ಮಾಮೃ. ೯-೦೬೩). ೪. ತಾಕು ; ತಟ್ಟು;

ತಗುಲು : ಹೀನಬಲನನಧಿಕಬಲಂ ತೊತ್ತಳದುಳಿದನೆಂಬ ಲೋಕದ ಪಟು ಪೊರ್ದವೆ ಮಾಣ್ಗೆ ಧರ್ಮಯುದ್ಧದೊಳೆನಗೆ (ಆದಿಪು. ೧೪-೧೦೨) ; ಶೀಲಾಲಂಕೃತೆಯುಂ ಗುಣಮಾಲಾಲಂಕೃತೆಯುಮಾ ಮಹಾಸತಿಯುಂ . . . ಪೆಸರ್ಗೊಳೆ ಬಾಲೆಯರಂ ಖಿಳಕಲಂಕಮೇಂ ಪೊರ್ದುಗುಮೇ (ಆದಿಪು. ೧-೭೪); [ವ]ಲ್ಮೀಕಪುರವೆಂಬುದಾದಿಯ ಪೆಸರ್ ತನಗೆ ಕಲ್ಪಿಪದ ಯುಗಧರ್ಮವೆಯ್ದೆ ಪೊರ್ದದು ತನಗೆ (ಶಂಕರ. ೯-೪). ೫. ಅಂಟು; ಹತ್ತು : ತಾವರೆ ನೀರಂ ಪೊರ್ದದಂತೆ (ಧರ್ಮಾಮೃ. ೩-೧೩೪). ೬. ಹೋಗಿ ಸೇರು ; ತಲಪು : ಅದು ಸಂಧ್ಯೋಪಾಸ್ತಿಗೆ ಪೊರ್ದಿದಪ್ಪುದು ಮಾನಸಸರಕ್ಕಮಾಗಳೆದೆಂಬುದದಿನುತ್ತರಾಶೆಯು ಪೊರ್ದಿದತ್ತು ಸಪ್ತರ್ಷಿ ಮಂಡಲಂ ಕ್ರಮದಿಂದಂ (ಕಾದಂಪೂ. ೧೩೪). ೭. ಪ್ರವೇಶಿಸು : ವಾರಿಜಷಂಡಮಂ ಪಡೆದು ಪೊರ್ದುವವೊಲ್ ಕಳಹಂಸೆ ತಿಪ್ಪೆಯುಂ ಸಾರಮಿದೆಂದು ಪೊರ್ದುಗುಮೆ (ಧರ್ಮಾಮೃ. ೪-೨೦೦) ; ಎಳಸಿ ಪಿಪಾಸೆಯಿಂ ಮೃಗಚಯಂ . . . ಶಚ್ಛರಜ್ಜುಲವಿಹಗಂಗಳೊಳ್ಪುಲಿಪುಗೇಳ್ದಿರದೊಯ್ಯನೆ ಪೊರ್ದಿ ಪೀರ್ವುವಾ ಸಲಿಲಮನೆಂದೊಡೇವೊಗಟ್ಟಿನಾ ವಿಪುಳಾತಟನೀಜಚ್ಛವಮಂ (ಕುಸುಮಾ. ೧-೯೧) ; ಕಾಯದ ನಿಜಪುಷ್ಪಸಾಯಕದಿಂದೆಸಲಾಯತಗಿಡದಾ ಸರವ ಕಾಯುವ ಪೊರ್ದಲೀಯದೆ ಚರಣದೊಳಂತ ಶ್ರೇಯಾಂಸಜನರ ವಂದಿಪನು (ಅಂಜನ. ೧-೧೧). ೮. ಆಶ್ರಯಿಸು ; ಅವಲಂಬಿಸು : ಚಂದ್ರನೊಡೆದುದಂ ಕಂಡುದಱಿಂ ಸದ್ಧರ್ಮದ ಮೊದಲ ಪೊರ್ದಿದ ಮಾರ್ಗದಿಂ ಬೆಳೆಯೊಳ್ ಪುಲ್ಗಳ್ ಪಲವಕ್ಕುಂ (ಪಶ್ಚಾ.ರಾ. ೮೬-೧೩); ಆನೆಂತು ತತ್ವಜ್ಞನಾದೆನನ್ನ ಪೊರ್ದಿವ ಜನಂಗಳುಮಿಂತೆ ತತ್ವಜ್ಞರಕ್ಕೆಂದು . . . ತತ್ವೋಪದೇಶಂಗೆಯ್ವಂ (ಸಾಪುಂಪು. ೩) ; ಅಲ್ಪಬುದ್ಧಿಗಳ್ ರಾಗಿಸಿ ಪೊರ್ದಲೇಂ ಗಳ ಕುದ್ಯೆವದೊಳಂ ಫಲಮಾಗಲಾರ್ಪುದೇ (ಧರ್ಮಾಮೃ. ೭-೭೬). ೯. ಪಡೆ ; ಗಳಿಸು : ಪಡಿವಣ್ನೋ–ಪೊರ್ದಿ [ಪಾಠಾಂ. ಳ್ದ] ದೊಂ (ಪಶ್ಚಾ.ರಾ. ೭೩-೯) ; ಮಗಳೇ ನೀನಿಂತಿವಂ ನಂಬನುಕ್ರಮದಿಂದಂ ದೊರವೆತ್ತ ಸಪ್ತಪರಮಸ್ಥಾನಂಗಳಂ ಪೊರ್ದುವೈ (ಆದಿಪು. ೩-೭೩); ಅನಂತಚತುಷ್ಟಯಮಂ ಪೊರ್ದು ಪೊರ್ದದಿರು ಸಂಸ್ಕೃತಿಯಂ (ಆದಿಪು. ೬ ೭೩). ೧೦. ಉಂಟಾಗು; ಪ್ರಾಪ್ತವಾಗು; ಒದಗು : ನೆರೆಯುತ್ತೆನ್ನ ದಯಾಪ್ರಭಾವಮನೆ ಪಾರ್ದೋರಂದದಿಂ ಜೀಮಿಪರ್ ರಥಾಂಗಪ್ರಚಯಕ್ಕೆ ಪೊರ್ದುವ ವಿಯೋಗಾವಸ್ಥೆಯುಂ ವೇಗದಿಂ ಪಿರಿದುಂ ಬಾರಿಸದೆನ್ನ ತೇಜದೊದವಿನ್ನೇ ಬಾರ್ತೆಯೆಂದೆಯ್ದೆ ತನ್ನುರು ತೀವ್ರಾಂಶುಪನಿಂತು ಬಿಟ್ಟನೆನೆ ತಣ್ಪಂ ತಾಳ್ದನಾ ಭಾಸ್ಕರಂ (ಕುಸುಮಾ. ೪-೨೨). ಪೊಂದು$_1$ : ೧. ಅಶುಚಿದೇಹಮನಿದನಿನ್ನನುಪಮಮೆಂದೆನಲಾಗದು ಜಿನಮತದೊಳ್ಪೊಂದಿಯುಮಾವಿನೊಳ್ಪೆಗಟ್ಟ ನರಂ (ಧರ್ಮಾಮೃ. ೪-೧೭೪). ೨. ಪೆರ್ಮೆಗೆಯೊಳ್ ಬಲಮೇದು ಪೊಂದುಗುಂ (ಕಷಾಯ. ೯೭); ಕರೆದವಂ ಬಂದಿಲ್ಲ ಬಂದವಂ ಪೊಂದಿಲ್ಲ (ಕಾಂಜಿ. ೩೩-೩೭). ೯. ಸುಖಮಂ ಪೊಂದೆಂದು ಪಾಟಿಸುತಿರ್ಪನುಂ (ಧರ್ಮಾಮೃ. ೬-೭೦); ಹರಿಯ ಪಾದಜೆಯಳೆರಕದಿಂ ಪಾವನಂ ಪೊಂದಿ (ಶರಪು. ೭-೩); ಪುರೋಹಿತರ ಸಂಗಡ ಬ್ರಹ್ಮಾರ್ಚನೆಯಂ ಮಾಡಿಸಿ ಆಶೀರ್ವಾದಮಂ ಪೊಂದಿ (ಪ್ರಲಿಪ. ೧೯೩೩, ೪೭-೯; 1824). ೧೦. ಕಂದರ್ಪನರ್ಧಾಂಗಿಯ ಮೇಲೆ ವೈಧವ್ಯ ಪೊಂದದೊಲ್ ಮಾಡು (ಮೋಹತ. ೯-೩೬); ಒಂದೆಡೆಯೊಳಗೊರ್ವ ನೀಚ ವಿಟನ ಮೇಲ್ಪೊಂದಿದ ಮೋಹವ ಬಿಡದೆ ಕಂದರ್ಪಕೇಳಿಯೊಳೋಲಾಡುತಿರೆ (ಕಂಪಪು. ೬-೧೩೦). ೧೧. ಸಂಭೋಗಿಸು: ಬೇಟದ ಲಲ್ಲೆಯ ಬಲ್ಮೆ ಪಕ್ಕಿ ಸುತ್ತಿಸೆ ಪುರುಡಿಬಾಕ್ಕೆಸೆ ಬಿಯಮಾಱಿಸಿ ಪೊಂದದವಂ ಬೊಜಂಗನೇ (ಆದಿಪು. ೦೨-೦೭). ಪೊದ್ದು$_1$: ೧. ವಿದ್ಯದ ಮನುಜರ ಕರೆಸೋದು ರೊಕ್ಕ ಪೊ[ಪಾಠಾಂ. ಹೊ]ದ್ದಿದ ಜನರನು ಬಿಡಿಸೋದು ರೊಕ್ಕ (ಪುರಂದ. ೨-೪೯-೩); ಬರಿಮಾತಿನಲ್ಲಿ ನೆರೆಯಲ್ಕೆಳಸಿ ಬಹಕಪಟವಿಟಂಗಳ ನಿಷ್ಪಣಮನುತ್ತಮರಿದು ಲಲ್ಲೆಯಿಂ ಬಸಿಲಿಗರಿಸಿನ ತೊಲ್ದಂತವರನೆಲ್ಲಿಯುಂ ಪೊದ್ದದ ವಿದಗ್ಧೆಯರ ಮಂದಿರಗಳಲಿ ಸಿರಿಜವ್ವನಗಳೊಪ್ಪಿರವೆ (ಶಂಕಾರಾ. ೩-೬-೪೩). ೩. ಕಳವು ಹಾದರಮೆಂಬಿವೆಮ್ಮ ಶಿವಭಕ್ತಸಂಕುಳದೊಳಗೆ ಪೊದ್ದಲರಿಯವು (ಶಂಪು. ೭-೨೪); ಹಡಪ ಕಾಳಾಂಜಿ ಪೊಂಗಟ್ಟಿಗೆ. . .ಬಿಜ್ಜಣಿಗೆಗಳ ಪಿಡಿದೂಳಿಗಗೈವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹರಿಚ. ೧-೦೬); ಕರಣಗಳ ಕಾಳಟವೆರಗದ ಗುರುಲಘುತ್ವಗಳಳಿದ ತ್ರಿಗುಣಗಳುರುಬೆ ಪೊದ್ದದ ಮಾಯೆ (ಗಗಶಾ. ೦೬-೩). ೪. ಒಳಗೆ ಭಾಳೇಕ್ಷಣನ ನೆನಹು ತೀವಿರೆ ಕರಂ ಚಳಿ ಪೊದ್ದದವರನೆಂತಿರ್ದಡಂ ಭಕ್ತರಂ (ಇಳಿಕ. ದೇ. ೩೨-೧೬). ೬. ಹೊಳಲ ಬಳಿಯ ಪೊದ್ದಲ್ಲಿರ್ದ ತುರುಕರ . . . ಸಾಸಿರಮಂಗರಿದಾಕ್ಷಣ ದಳಪತಿಯಡಿಗೊಪ್ಪಿಸಿದರು (ಕಂಪಪು. ೧೩-೩೩). ೮. ಎಲೆ ಮುನಿನಾಥ ನಾನಿನಿತು ಕಾಲಪಲ್ಲದ ಸಮಯಮಾ ಮುಂದಱಿಯದೇ ಪೊದ್ದಿ ಗತಿಗೆಟ್ಟು ಪೋದೆನು (ಸಪ್ತಾಕ್ಷ. ೯-೦೪). ೧೨. ತಳೆ; ಧರಿಸು: ರುದ್ರಾಕ್ಷಭಸಿತವನು ಹೊದ್ದಿರಲು ದೇಹದೊಳಗಿದ್ದ ಪಾಪಗಳು ಬಯಲಾಗಿ ಶಿವನು ತಾನಿದ್ದಲ್ಲಿ ಬರುವ (ಸರ್ವಜ್ಞ. ೦೨೦). ಪೊಟ್ಟು: ೧೦. ವಿಂಶದ್ಗುಣಪದ [ಪು]ದಿದೊಡಂ [ವಿ:]ತಿ [ಸಾ] x [ತ್ರ್ಥ] ದೊಳ್ ಪೊಟ್ಟುದಿನ್ತಪ್ಪೆಸಕಂ ತ್ರ್ಯಗವ್ಯರ್ಮ ಸನ್ಧತ್ರ್ಮ [ಪಾ]ಚಮಹಿಮೆಯಿಂ (ಶಾಇತಿ. XI-I, ೬೦-೩; 1024). ಹೊಂದು$_1$ : ೨. ತಮ್ಮತಮ್ಮೊಳಗೆ ಹೊಂದಿದರೆ ಸಂತೋಷದಿಂದ ವ್ಯವಹಾರ ಮಾಡಬೇಕು (ಪುಂಖಯು. ೩-೯೩) : ಗತಿಯು ತನ್ನ ಛಂದದಲ್ಲಿ ಭಾವ ತನ್ನ ಬಂಧದಲ್ಲಿ ಹರಿವೆನಿಲ್ಲ ಹೊಂದದಲ್ಲಿ ಬಲ್ಲೆ ಎಲ್ಲು ಒಂದರಲ್ಲಿ (ಅರಳು. ೦೬೪-೧೧). ೪. ಭೂಪ ಹೊಂದದು ಪಾಪವೆಮ್ಮಂ (ಬಸಪು. ೩೩-೭). ೯. ಹೊಂದುತಿಹರಾ ಪುರುಷತತ್ವದಿ ನಿಂದು ತೋರುತಲಿರ್ಪ ಭುವನವ (ಗಗಶಾ. ೯-೬೫); ಕಾಲಕ್ರಮದಲ್ಲಿ ಅದು ವಿಜಯನಗರವೆಂಬುದಾಗಿ ಬದಲಾವಣೆ ಹೊಂದಿತು (ಕೃದೇಚ. ೨). ೧೩. ಕುದುರು; ವ್ಯವಸ್ಥೆಯಾಗು: ದುಡ್ಡು ಹೊಂದಿರಲಿಲ್ಲಪ್ಪ . . . ಇವೊತ್ತು ಹಣ ಕೈಗೆ ಬಂತು (ದಊರಕ. ೦೩೨). ಹೊದ್ದು$_1$: ೧. ಇತ್ತ ಬಾ ಎನ್ನದವನ ಹತ್ತೆ ಹೊದ್ದಲು ಬೇಡ (ದೇರಾವ. ೨೮-೪೯) ; ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ಧರ್ಮ (ಮಹಾದೇ. ೩. ೦೪-೦೩); ಅರವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ (ಶಿವಾನ್ಯದ್ರೋ. ೦೪-೩೩). ೨. ಸದ್ಯಪೃತದಲಿ ಕ್ಷೀರವಾದೊಡೆ ಹೊದ್ದುವುದು . . . ಶುದ್ಧರಾಕ್ಷಸರನ್ನವಿದ ತಾ ಶುದ್ಧಭೂಸುರರುಂಬರೇ (ಸಂಭಶ. ೨೩-೦೬); ಹೊದ್ದಿ ನಿಲುವುದೆ ದರ್ಪಣದ ಮೇಲುದ್ದುರುಳಿ ಬೀಳ್ವಂತೆ ನಿಮಿಷದಿ ಬಿದ್ದು ಹೋಗುವ ಕಾಯವು (ಹುಸಾ. ೭೬). ೩. ನೋಡುವರೆ ಕಾಣ ಬರುತ್ತಿದೆ ಮುಟ್ಟುವರೆ ಕೈಗೆ ಸಿಲುಕದು ಹೊದ್ದುವಡೆ [ಪಾಠಾಂ. ಹೊದ್ದಿದರೆ] ಸಮಿಪಾಪ ಹತ್ತೆಸಾರಿದಡತ್ತತ್ತ ತೋಱುತ್ತಿದೆ (೨ವಚಂ. ೦೬೬-೬೩೦) ; ಸರಳ ಮಂಚವ ಹೊದ್ದಿ ಭೀಷ್ಮನ ಚರಣಕಮಲವ ಹಿಡಿದು ನೊಸಲಿನೊಳೊರಸಿಕೊಂಡನು ನಾದಿದನು ಕಂಬನಿಯೊಳಂಘ್ರಿಗಳ (ಶಿವಾನ್ಯದ್ರೋ. ೧-೨೦) ; ಹೊದ್ದಲೀಯದೆ ಬಾಣಂಗಳ ತಱಿದನಿರುದ್ಧ ಮಾತುಳನ ಕೊಂಡಾಡಿ . . . ಎಚ್ಚನು ಸುಭಟಪ್ರಸಿದ್ಧ ಬಾಣಾಸುರನೆದೆಯ (ಮೋಹತ. ೩೩-೩೦). ೪. ದೇಶವೆಲ್ಲವನನೃತ ಹೊದ್ದದಂದದಿ ಕೊಟ್ಟು ಕಾಶಿಯ ನಿವಾಸದೊಳು ಸತಿ ಸುತರ ಮಾಱಿ . . . ಋಣವನುತ್ತರಿಸಿದ (ಹಕಾ. ೧೧ ಸೂಚಪ) ; ಕಕ್ಕುಲಿತೆ ಕುಂದೆಡರು ಬಡತನ ಸಿಕ್ಕು ರೋಗಾದಿಗಳು ಹೊದ್ದದ ಉತ್ಕಟದ ವರವೀಯಬೇಕೆನೆ ಕೊಟ್ಟನಾ ಮುನಿಪ (ಕೌಶಿಕ. ೪೪-೩೪) ; ಜನನ ಮರಣಾದಿಗಳು ಹೊದ್ದದ ತೋಱು ತೋಱದ ಜಗದ ದೇವರ ದೇವನಿದ್ದನು ರಜತಶಿಖರಿಯಲಿ (ಕೊರಾ. ೦-೨-೦) . ೫. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು ಜಲಪದ್ಮಪತ್ರದಂತೆ ಹೊದ್ದಿಯೂ ಹೊದ್ದದಂತಿಹನು (ವಚರ. ೭) ; ಮನ ವಚನ ಕಾಯದೊಳಗೊಮ್ಮೆಯುಂ ಹುಸಿ ಹೊದ್ದ[ಪಾಠಾಂ. ರ್ದ]ವಂತೆ ನಡೆವ ಕಲಿಗಳಾರಯ್ಯ (ಹಕಾ. ೨-೩) ; ವರಿಸ್ಥಿಸಿ ಚುಂಬುಕಾಗ್ರವಿಡಿದಡೆ ಬೆರಲ್ಗಳ ಹೊದ್ದಿ

ದುವುರಿಬೊಕ್ಕೆಗೆಯ್ಯ ಬದ್ದಿಸಿ ಬಿಡದೆ ಕಾಲುವೆಯ ತಣ್ಣೀರೊಳಗದ್ದಿದರವಳ ಹಸ್ತವನು (ಕೋಹತ. ೨೮-೦೯). ೬. ಎದ್ದು ನಡೆವ ಬಲಜಲಧಿಯ ಕಡೆಯನು ಹೊದ್ದಲಾಜಿದೆ ಖಗನಿವಹ ಎದ್ದವು ಕೆಲವು ಪಕಾಶಾಗ್ರದೊಳ್ಲಿ ಬಿದ್ದವು ಕೆಲವು ನೆಲದೊಳು (ಕುಣಾಕಾಂ. ೩೭-೭೦). ೭. ದೊದ್ದ ಕೆಗೆಯಲಿ ಪಾರ್ಥ ಪವನಜರಿದ್ದರಾದರೆ ಬರಲಿ ಸಮರವ ಹೊದ್ದಲಾಪರೆ ಹೊಗಲಿ ಹರಿ ತೋಱಲಿ ಸಹಾಯತೆಯ (ಕುಣ್ಯಶೀ. ೬-೨೦) : ಹೊದ್ದಿ ಗೊಲ್ಲರ ಮನೆಯಲ್ಲಿದ್ದಪ್ಪ ಬೆಣ್ಣೆಯನು ಕದ್ದು ಮೆದ್ದುದಕ್ಕೆ ಹೊಟ್ಟೆ ತುಂಬಿತೆ (ಭೂರಂತ. ೦-೯೯-೨). ೮. ನೀನೇಕೆ ಈ ನುಡಿಯೇಕೆ ಹೊದ್ದಿದರಂ ಹೋಗೆಂಬರೆ (ಬಸಕ. ೪-೩೪) ; ಸಾಲ ಸಾವಿರದೀವಿಗೆಯ ಹಱದಾಳಿಗಳುಕದೆ ನೃಪರ ವೋಱ³ ಗಳೋಳಿಗಳ ನೆಱ³ ಹೊದ್ದಿ ಕತ್ತಲೆ ನಿಂದುದಲ್ಲಲ್ಲಿ (ಕುವ್ಯಾಶ. ೦-೦೯) : ಅಸುರರೀತನ ಹೊದ್ದಿ ಜಗದಲಿ ಹೆಸರು ಪಡೆದವರಿಲ್ಲವೇ ಭಾವಿಸಿದಡೀಯನೆ ಲೋಕಪಾಲತ್ವವನು ನೈರುತಿಗೆ (ಕೊರಣ. ೬-೮-೩೨). ೯. ಚತುರ್ವಿಧ ಪದವಿಯಂ ಹೊದ್ದದೆ ಫಲಭೋಗಂಗಳಂ ಮುಟ್ಟದೆ (ಅರಪ. ೩೦-೮೭) ; ಗದ್ದುಗೆಯೇಱ ಸತ್ಕಥೆಗೇಳಿ ಮುಕ್ತಿಯ ಹೊದ್ದುವರಾರು ನಿನ್ನಂತೆ (ಚರಷ. ೨ ೩೪). ೧೦. ಇವರಿಂದ ಪಲವು ಲೇಸವಾಗೆ ಮಿಗೆ ಹೊದ್ದಿದವು (ಸೇದರ. ದೇ. ೦೬೩-೯) : ಹೊದ್ದಿದುತ್ಪಾತಗಳನೀಕ್ಷಿಸುತ್ತಿದ್ದನಾ ಮುನಿನಾಥನು (ಉತ್ತರಾ. ೪-೯). ೧೪. ಪರಿಣಮಿಸು ; ಫಲ ಕೊಡು : ಯುಕ್ತಿ ಹೊದ್ದದ ಶಿವ ಸ್ನೇಹಿಗಳ್ ಬರುತವಿರೆ (ತಿರುರ. ದೇ. ೦೪-೦೨).

**ಹೊಂದಿಕೊಳ್ಳು**= ೧. ಸೇರಿದಂತಿರು ; ಕೂಡಿಕೊಂಡಿರು : ಪದ್ಮಬ್ಬರಸಿಯು ತಾನು ಕಟ್ಟಿಸಿದ ಬಸದಿಗೆ ಹೊಂದಿಕೊಂಡಂತೆ ಒಂದು ದಾನಶಾಲೆಯನ್ನು ಕಟ್ಟಿಸಿದಳು (ಕಶಾಶ. ೪೩೦) : ಅವರ ಮನೆ ನಮ್ಮ ಮನೆಗೆ ಹೊಂದಿಕೊಂಡಿದೆ (ರೂಢಿ). ೨. ಒಗ್ಗು ; ಹೊಂದಾಣಿಕೆಯಾಗು : ನಾರಾಯಣನಿಗೆ ಅನುಕೂಲವಾದ ಮನೆಯು ಅವಾಗಿದ್ದು ತುಂಬ ಹೊಂದಿಕೊಂಡಿತ್ತು (ಕಂಬಹು. ೦೨೩) : ಎದುರುಮನೆಯ ಮಗು ನನಗೆ ತುಂಬಾ ಹೊಂದಿಕೊಂಡಿದೆ (ರೂಢಿ).

[ದೇ.॥ ತಮಿ. ಪೊರುನ್ತು, ಪೊರುತ್ತು ; ಮಲ. ಪೊರುತ್ತು ; ತುಳು. ಪೊರ್ದು, ಪೊಂದು, ಹೊಂದು ; ಕೋತ. ಪೊತ್]

**ಪೊರ್ದುಗೆ, ಪೊಂದಿಗೆ, ಪೊಂದುಗೆ, ಪೊದ್ದಿಗೆ, ಪೊರ್ದಿಗೆ, ಪೊಟ್ದುಗೆ, ಹೋಂದಿಗೆ, ಹೊಂದುಗೆ, ಹೊದ್ದಿಗೆ, ಹೊದ್ದುಗೆ** (ನಾ). ೧. ಸಹವಾಸ ; ಸಂಬಂಧ : ಅರಮ್ಬು ನೋಡೆ ತೊಱೆಗಳ ನೀರುಂ ವಾರಿಧಿಯ ನೀರ ಪೊರ್ದುಗೆಯಿಂದಂ ಸಾರಂಗೆಟ್ಟಪ್ಪವೊಲ್ (ರಾಮಾಶ್ವ. ೨.೭೭) ; ಸಂಬಂಧಮೆಂದು ಪೊರ್ದುಗೆ (ಕಮುದ. ಶೀಕೆ. ೭ ವೃತ್ತಿ) ; ಪರವತ್ಸ ದೇಶಮೆಂಬುದ್ಧರವತ್ಸದ ನಿಬಿಡಮಾದ ಪೊರ್ದುಗೆಯಿಂದಂ ಧರೆಯೆಂಬ ಸುರಭಿಸುಖಪೆಂಪಿಂ ರು ಪರಮಾಮೃತಮನೆಯ್ದೆ ಕಱೆಯುತ್ತಿರ್ಕುಂ (ಶಾರವ. ೪ ೨೩). ೨. ಬಳಿ; ಹತ್ತಿರ; ಸಮೀಪ : "ಪೊರ್ದುಗೆ, ಪೊರೆ, ಪಕ್ಕಂ, ಸಾಹಂ, ಕೆಲಂ—ಈ ೫ ಸಮೀಪಂ" (ಕ.ಶ. ೭೪-೪೩೪) ; ಮೃಗಮೂರ ಪೊರ್ದುಗೆಯ ಬಟ್ಟೆಗೆ ಮೋಪಿನ ಕಾಪಿನಿಂ ಮರಳ್ದವು ದಿನನಾಯಕಂ ವರುಣದಿಜ್ಞಗಮಂ ಮಱೆಗೊಳ್ವ ಕಾಲದೊಳ್ (ಸೂಕ್ತಿಸು. ೮-೨೦). ೩. ಅಧೀನವಾದುವಂ : ಅಪ್ರಧಾನವಾದುದು : "ಉಪಾಗ್ರಂ, ಉಪಸರ್ಜನಂ—ಈ ೨ ಪೊ(ಹೊ)ರ್ದುಗೆ" (ಹರಾಯು ೦೨೬-೭೮). ೪. ಆಶ್ರಯ; ನೆಲೆ : 'ಪೊರ್ದುಗೆವಡೆ' ಪರಾ. **ಪೊಂದಿಗೆ** : ೨. ಮಾವನ ವಾಕ್ಯಗಳಿಗಾನಂದಪುಳಕಿತನಾಗಿ ಖಳಪತಿ ಪೊಂದಿಗೆಯ ಹೊಂಬಟ್ಟಲಲಿ ಕರ್ಪುರದ ವೀಳೆಯವ . . . ಇತ್ತು (ಅಂದಕಾ. ೦೬-೨೧). **ಪೊಂದುಗೆ** : ೧. ರಂಗಯೆಂದೆಂಬ ನೀಱೆಯ ಪೊಂದುಗೆಯೆಂದು ವಂದಪುದೊ (ಕಶಕಾಂ. ೨೯-೩೦). ೫. ಹೊಂದಾಣಿಕೆ ; ಸೇರಿಕೆ ; ಸರಿಹೊಂದಿರುವಿಕೆ : ಚಂದನಾಗರು ವಿಲೇಪ್ಯಂಗಸೌರಭ್ಯಪೊಂದುಗೆಯುಂ ಮಾಟ್ಪುದಪೂರ್ವಗಂಧಮಂ (ಕೃಷ್ಣಕು. ೩-೩೦). **ಪೊದ್ದಿಗೆ** : ೧. ಪಲವು ಪೊದ್ದಿಗೆಗಳನುಳಿದಾಸೆಯೆಂಬೆಳವಲೆಯ ಪಗ್ಗವ ಪಱಿದಿಟ್ಟು ನೆಲದೊಳೊಂದಗೆ ಕೈವಶವಾಗದೆ ಬೀಸುವೆಲರಂತೆ ತೊಡಕಿಲ್ಲದಿಹೆನು (ಕರ್ಣವೃ. ೦೦-೨೮). **ಪೊರ್ದಿಗೆ** : ೨. ಆ ನೆಲದ ಪೊರ್ದಿಗೆಯಲು ಸಿರಿಯುರದಲು ಕರಿಯ ಕೆಯಿ ಮ[ತ್ತು] × × ಪದಿನೈಯ್ದು (ತಾಶಾಶ. IX-I, ೦೩೯-೦೯; 1091). **ಪೊಟ್ದುಗೆ**: ೨. ದೇವರ ಕೆಯ್ಯ ಪೊಟ್ದುಗೆಯಲು ಬಿಟ್ಟ ಕೆಯಿ ಮತ್ತರು ನಾಲ್ಕು (ಕಶಶ. ೭೯-೮೩-೩೭; 1088). **ಹೋಂದಿಗೆ** : ೫. ಅಂದಂದಿನ ಹೊಂದಿ[ಪಾಠಾಂ. ಹೊದ್ದಿ]ಗೆಯ . . . ಕೆಡಿಸಲಱಿಯದ ಅಂಧಕರ ನೋಡಾ (ಬಸವ. ೭೬೨); ಒಂದು ಸಾವಿರವೊಂದು ಶತ ಹನ್ನೊಂದು ಪದಮೆದೆಂಬ ಪರುಷದ ಸಂದ ಶಿಲೆಯನು ಬಳಸಿದಿಪ್ಪತ್ತೈದು ಗತಿಯೆಂಬ ಹೋಂದಿಗೆಯ ಸೋಪಾನಗಳ ಬಲಿದಂಡವಿಸಿಯಲ್ಲಮನ ಕರಮಾನಂದಲೀಲಾಮೃತಸರೋವರವಾಯ್ತು ಜಗದೊಳಗೆ (ಪ್ರಭುಲಿ. ೨೩-೨೩) ; ಹೊಂದೀಗಿ ಮನಿಯಾಗ ಇರವೊಳ ಆ ರಮಣಿ ಚಂದ ಚಂದ ಪಂತ ನಡೆಸೂಳ (ಲೋಕಗೀ. ೨೨). **ಹೊಂದುಗೆ** : ೫. ಅಗಲೆ=ಹೊಂದುಗೆಯಾಗದಿರೆ (ಕಮುದ. ೬. ೦೯೩ ಟೀಕು). **ಹೊದ್ದಿಗೆ** : ೧. ರುದ್ರನ ಕಪಾಲ ತುಂಬಿ ಬುದ್ಧಿವಂತರೆಲ್ಲರು ಕಪಾಲದ ಕೊಳನುಂಡು ಬುದ್ಧಿವಂತರಾಗಿರಿ ಎನಗಾ ಹೊದ್ದಿಗೆ ಬೇಡ (ಅಲ್ಲಮ ೪. ೦೪೮-೨೬೩); ಇದ್ದ ನೆಲೆಗಳವಡುವ ಭಕ್ತಿಯ ಶ್ರದ್ಧೆಯಲಿ ವಿತ್ತಾನುಸಾರವ ಹೊದ್ದಿಗೆಯನಱಿದಱಿದು . . . ಅಳವಟ್ಟೊಡಾತನೆ ಶುದ್ಧಭಕ್ತಿಯನಱಿವನ್ನೆ (ಪ್ರಭುಲಿ. ೦೩-೩೦). ೩. "ಉಪಸರ್ಜನಮುಪಾಗ್ರಮೆನೆ ಹೊದ್ದಿ[ಪಾಠಾಂ. ದ್ದು]ಗೆಗೆ ನಾಮಮುಕ್ಕುಂ" (ಮಂಗರಾ. ೦೩೩-೨೯). ೫. ಮುದ್ದಿಸಿ ಮುಂಡಾಡುತೊಲೆದರಳೆಲೆಯನು ತಿದ್ದುವ ಕೊರಳ ದಂಡೆಯನು ಹೊದ್ದಿಗೆ ಮಾಳ್ಪನು ಮಾಗಾಯ ಮುಟ್ಟುತ ಮುದ್ದಾಡುತಿರ್ದನಾ ಮಗನ (ಚರಷ. ೨೬-೨೯). **ಹೊದ್ದುಗೆ** : ೧. ಕಿಗ್ಗಯ್ಯ ನೀರು ತಟಾಕಕ್ಕೆ ಹೊದ್ದಿದುದುಂಟೆ ಅಱಿದು ಮಱೆದವಂಗೆ ಸಮಯದ ಹೊದ್ದುಗೆ ಏನು (ಕೂಷ್ಯಸಂ. ೩೩೭-೨೨). ೬. ಸಮೀಪದಲ್ಲಿರುವ ಪ್ರದೇಶ; ನೆರೆಹೊರೆ: "ಹೊದ್ದುಗೆಯೊಳುಮುಪಹ್ವರಮೆಂದೆನಿಸಿರ್ಪುದು" (ಮಂಗರಾ. ೦೩೮-೩). [ ಪೊರ್ದು + — ಗೆ ]

**ಪೊರ್ದುಗೆವಡೆ** (ಕ್ರಿ). ೧. ಸೇರು : ಕೂಡು ; ಬೆರೆ : ಜಗದಬಳಾಜನಕ್ಕೆ ಮಿಗೆ ವರ್ತಿಪ ಗರ್ಭದ ಚಿಹ್ನಜಾಳದೊಳ್ ಬಗೆವಡೆದೊಂದುಮಾಸತಿಯ ಭಾಸುರಮಪ್ಪ ಲತಾಂಗದಲ್ಲಿ ಪೊರ್ದುಗೆವಡೆದಿರ್ದುದಿಲ್ಲ (ಚರ್ಚಾ. ೧೩-೭೭) ; ಪುಂಡವೆಣ್ಗಳೊಳು ಪೊರ್ದುಗೆವಡೆಯದೆ ನಲ್ವೆಂಡಿರೊಡನೆ ಬೆರಸುವುದು (ಹರಿವಂ. ೮-೪೭). ೨. ಆಶ್ರಯವನ್ನು ಹೊಂದು,—ಪಡೆ : ಎಮ್ಮಯ ಜನ್ಮಭೂಮಿಯಿಂತಿಲ್ಲಿ ಪೊರ್ಮುಗೆವಡೆದು ಬಾಳ್ವೆವೆಂದೆನುತೆ (ಸೌಂದರ್ಯ. ೭-೨೬). [ ಪೊರ್ದುಗೆ + ಪಡೆ$_1$ ]

**ಪೊರ್ದುಗೆವೆಱು** (ಕ್ರಿ). ಹತ್ತಿರವಾಗು ; ಸಮೀಪಗತವಾಗು ; ಸನಿಹದಲ್ಲಿರು : ಕರ್ಣಾಗ್ರದೊಳ್ ಪೊರ್ಮುಗೆವೆತ್ತ ಮುಷ್ಟಿಯುಂ ಮಂಡಳಿಸಿದ ಧನುವುಂ ದಿಟ್ಟಿಪಾಲೋಕಮುಂ ನೆಟ್ಟಗೆ ತೋಱುತಿರ್ದುವೆಂಬಂತಗಧರನಿಸುತಿರ್ದಂ (ಜಗನ. ೮-೩೧). [ ಪೊರ್ದುಗೆ + ಪೆಱು$_1$ ]

**ಪೊಲ್, ಪೊಲಿ$_1$, ಹೊಲಿ$_1$** (ಕ್ರಿ). ೧. ಹೊಲಿಗೆ ಹಾಕು : "ಪೊಲ್-ಸ್ಯೂತೇ (ಹೊಲಿ)" (ಶಮುಧಾ) ; ಅಡಿಯೊಳ್ ಪಾಸಿದ ಚರ್ಮರತ್ನಪಟಮುಂ ತಚ್ಛತ್ರರತ್ನಂ ಬೆಡಂಗಿಡಿದೋರುತಿರೆ ಮುಟ್ಟೆ ಪೊಲ್ದ ತೆಱದಿಂದಿಂಬಾಗೆ ತನ್ಮಧ್ಯದೊಳ್ ಸೊಡರಿರ್ಪಂತಿರೆ ಚಕ್ರರತ್ನಮದಱೊಳ್ ನಿಬಾಧ ಮಿಂದರ್ತತ್ತು (ಆದಿಪು. ೧೩-೭೦) ; ಸೆರೆದೆಗೆಯೆ ಸೂಜಿಯಿಂ ಪೊಲ್ತಿರ್ದ ಕಯ್ಗಳಿಂ (ಕಾದಂಬ. ೨೭೦). **ಪೊಲಿ$_1$** : ೧. ಕಾಪ್ಪಸದಂತೆ ಬೆನ್ನಂ ಪತ್ತಿ ಕೆತ್ತುವರ್ ಸಿಪ್ಪಿಗನಂತೆ ಪೊಲಿವರ್ (ರಾಮಾಶ್ವ. ೩-೭೩); ಬಾಯಂ ತೆಱೆದಿಕ್ಕಿ ಕಾಯ್ದ ಲೋಹದ ಕೆಱುಪೊಂಗಳನಡಸಿ ಪಿಡಿದು ಪೊಲಿವರ್ ಬಾಯಂ (ಶಾಂತೀಶ್ವ. ೯-೯೪). **ಹೊಲಿ$_1$** : ೧. ದಂಡಿಯೊಳ್ ಪ್ರಚ್ಛನ್ನವೇಷದ

ಖಂಡಪರಶುವೆನಲ್ ಮೆಱೆದು ಕೈಕೊಂಡು ಕೌದಿಗಳಂ ಹೊಲಿವ ಕಾಯಕವೆ ತನಗಾಗಿ (ಬಸವ. ೨೩-೩); ಬಸುಱಿ ಹೊಲಿದ ಹೊಲಿಗೆಯ ದಡಿಗ ರಕ್ಕಸರಾಯರಿದ್ದುದು ಕೋಟಿಸಂಖ್ಯೆಯಲಿ (ತೊರ. ೩-೬-೫): ನೆಲವನ್ನು ಮುಗಿಲನ್ನು ಹೊಲಿವರುಂಟೆಂದರವ ಹೊಲಿವರು ಹೊಲಿವರೆನಬೇಕು ಮೂರ್ಖನಲಿ ಕಲಹ ಬೇಡೆಂದ (ಸರ್ವಜ್ಞ. ೦೦೩೬); ಹೊಲಿಯುವವನ ಬಲಕ್ಕಿರಬೇಡ, ಅಳುವವನ ಎಡಕ್ಕಿರಬೇಡ (ಗಾದೆ). ೨. ಹೆಣೆ : ಉರುಳು ತಲೆ ಕಾಲ್‌ಬೆರಳ ಕೊನೆಯಲಿ ಮಾರಳ ಹೊಲಿದಳು ಜಡೆಯನು (ಕುತ್ತಿ. ೩೯-೦೪). [ದೇ.॥ ತಮಿ. ಪೊಲ್ಲವ್ = ಹೊಲಿಯುವುದು; ಮಲ. ಪೊಲ್ಲು; ತುಳು. ಪೊಲ್ಲು, ಪೊಲ್ಲಿಯು ; ಕೊಡ. ಪೊಲಿ, ಪೊಲ್]

**ಪೊಲ, ಹೊಲ** (ನಾ). ೧. ಬೆಳೆ ಬೆಳೆಯುವ ಭೂಮಿ ; ಜಮೀನು : ಪುನಸೂಪ್ತ್ರ್ಯಲ ನೆಲ್ಲು ಪಾಣ್ಡಯುವಳೆಪದು ಸರ್ವಪರಿಹಾರತೊಟ್ಟೊಪ [ರ್] (ಕ್ಷ್ಮಾ. ೦೯೩೦, ೩೬-೬: ೫೦೦); ದೇವಮಾತೃಕಮೆನಿಪ್ಪ ಪೊಲಂ ನವಗಂಧಶಾಳಿಯುಂ ಬೆಳೆವುದು (ಶಂಖ. ೦-೫೪); ಪೊಲಂ ಪಸುರೇಱ ಕಾಡ ಮಲ್ಲಿಗೆ ನನೆಯೇಱ (ಜಗ. ೪-೪). ೨. ಸ್ಥಳ ; ಪ್ರದೇಶ ; ಎಡೆ : ಊರ ಪೊಱಪೊಲ[ಲ] ಪೊಲದೊಳ್ ಬಟ್ಟೆದು ಕಣ್ಗೊಳ್ ರಾತ್ರಿಪ್ರತಿಮೆ ನಿಂದೊರ್ (ಶಾಸ್ತ್ರ. ೦೩೨-೦೨). ೩. ಆಶ್ರಯ; ಆಸರೆ: ಪುಸಿ ಪೊಲನಲ್ತು ನಾಲಗೆಗೆ ಪಂದೆತನಂ ಪೊಱೆಯಲ್ತು ಕೈಯ ಕೊರಸಿಗೆ (ಶಬರ. ೬-೦೦೪). 'ಅಡುಂಬೊಲ' ಪರಾ. ೪. ಕ್ಷೇತ್ರ : ಜಿನರ ಪದಸೇವೆಯಿಂದಂ . . . ಈ ವಿಭವಂ ಜನಿಯಿಸಿದುದೀಗಳಲ್ಲದೊಡನುಪಮಸುರವಿಭವಮೆನಗೆ ವಿಷಯಮೊ ಪೊಲನೋ (ಸುಕುಮಾ. ೯-೨೯). ೫. ವಿಷಯ ; ಸಂಗತಿ : ಸಕಲವಿದ್ಯಾಧರವಲ್ಲಭಸಭೆಯೊಳಿದು ಪೊಗಟ್ತೆಗೆಪೊಲನೇ (ಶಂಖ. ೫-೨೨); ವಿಳಂಗೆ ಪೊಲನಲ್ತು ಕೃತಿಯೊಳಿಲ್ಲದ ದೋಷಂ (ಕೃಷ್ಣ. ೦-೪೯). ೬. ಗೋಚರ; ಕಾಣಿಸುವಿಕೆ : ದಿಟ್ಟಿಗೆ ಪೊಲನಾದುದು ಪೊಂದೆಟ್ಟಂ (ಶಂಖ. ೦-೪೪); ಅಲೋಚನಗೋಚರೇ = ಕಣ್ಗೆ ಪೊಲನಲ್ಲದು (ಪರಿಪಾ. ೫-೨೬); ತೊಟ್ಟನೆ ಟಿಟ್ಟಿದಿರೊಳ್ ಪೊಂಬೆಟ್ಟಂ . . . ದಿಟ್ಟಿಗೆ ಪೊಲನಾದುದು (ಶಾಂತಿ. ೬-೦೨೪). ೭. ವ್ಯಾಪ್ತಿ ; ಪರಿಮಿತಿ : ನೆಲನಂ ಪೊಟ್ಟು ಪೊಲನು ಮನಱಿದು ಬಟ್ಟೆಯೊಳ್ ಪೊಸತಂ ಪಟದುಮನಱಿದು ಪರಿಯಿಸಲ್ ನೀನೆ ಬಲ್ಲಯ್ (ಶಬರ. ೫-೪೬ ವ). **ಹೊಲ** : ೧. ಸಿರಿಗಾ(ಂ)ವುಂಡನ ಹೊಲದೊಳಗೊಂದು ತೋಟಕ್ಕಂ ಹೊಲಗೇರಿಯ ಪಡುವಣ ಕರುವಗೆಯ್ಯಂದಂ ತೆಂಕಲಾಬುಮತ್ತರು ಕೆಯಿಂಗಮಱುವಣಮಾಯ್ದು ಗದ್ಯಾಣಮಂ ತಿಱುವರು (ಶ್ರೀಶಾ. XI-i, ೫೦-೦೮; 1005); ಹೊಲದಲ್ಲಿ ಅವಿಲ್ಲ ಮನೆಯಲ್ಲಿ ಕಱವಿಲ್ಲ ನೆಲಹಿನ ಮೇಲಣ ಬೆಣ್ಣೆಯಿದು ದಿಟವೋ (ಅಕಕಂ. ೦೨೬-೫೬೨); ಧರೆ ಬಿಂದಂಗನ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ (ಸೋಮೇಶ. ೨೪); ಕಡಲೆಯು ತನಗೆ ಬೇಕಾದ ಅಂಶಗಳನ್ನು ಮಾತ್ರ ಹೊಲದಿಂದ ಹೀರುತ್ತದೆ (ಜೀವಶ. ೨೨೬). ೨. ಗಹನವಲ್ಲಿ ಸಿಕ್ಕಿದ ಶಿಶುವಿನಂತೆ ಸ್ಥಾನದಪ್ಪಿ ಹೊಲಬುದಪ್ಪಿದ್ದೇನೆ ಹೊಲದ ಹೊಲಬ ಹೇಳು (ಕೋಲಶಾಂ. ೦೩-೬೦) ; ಬರುತಿರ್ದನಪ್ರತಿಮಶಿವಭಕ್ತನುರವಣಿಸಿ ಪುರದ ಹೊಲನಂ ದಾಂಟಿ (ಶಿವಶ. ದೀ. ೫೪-೨). ೮. ನಿವಾಸ ; ವಾಸಸ್ಥಾನ : ಸಿಂಹದ ಹೊಲನ ಹೊಗುವಿಭದಂತೆ ಹೊಱಕಾಲ್ಗೊಳುತಲಿರೆ ಕಂಡು (ಕುಮಾರವ್ಯಾ. ೦೨-೩೦) ; ಹಾಸ್ಯದ ಹೊಲಂ ಮರುಳಾಟದ ಮಂದಿರಂ . . . ಗಣಿಕಾಪ್ರತೋಳಿ ತಾಂ (ಹರಿ. ೨-೯೨) ; ಕರಿವಿಂಡುಗಳು ಸಿಂಹದ ಹೋದಲಿ ಬಂದು ನೆಱೆ ಮೇವ ಕೊಂಡು ಜೀವಿಪುವೆ (ಕಂಸ. ೩-೪೬). ೯. ಕೇವಲ ಮಳೆಯ ನೀರಿನಿಂದ ಬೆಳೆಯುವ ಭೂಮಿ ; ಖುಷ್ಕಿ : ಕೇವಲ ಮಳೆನೀರಿನ ಆಧಾರದಲ್ಲಿ ಆಗಬಹುದಾದ ಬೆಳೆಯುಡುವಂತಾ ಭೂಮಿಯನ್ನು ಖುಷ್ಕಿ ಅಥವಾ ಹೊಲವೆಂದು ಹೇಳುವುದು (ಕೃಷಿ. ೩೩).

**ಪೊಲಪೊಲ** (ದ್ವಿರುಕ್ತಿ): ಪಲವಂದದ ಮಾರ್ಗಗಳಂ ಪೊಲಪೊಲದೊಳ್ ಮಱಸಲೇಕೆ (ಗರುಡ. ೦೬-೩೩). **ಪೊಲನಾಗು** = ಆಶ್ರಯವಾಗು: ಪೊಗಟ್ಟು ಮಹಾತ್ಮರುಜ್ಜ್ವಲಮೆನಿಪ್ಪ ಗುಣಂಗಳನುಜ್ಜ್ವಲಪ್ರಸಿದ್ಧಿಗೆ ಪೊಲನಾಗದೆ... ಪೊಗಟ್ಟು ದುರಾತ್ಮರಂ ಪೊಗದೊಳಿರ್ದಗುಣಂ ಪೊಱಗಿಕ್ಕಲಾದ ನಾಲಗೆ ಯುವನೆತ್ತುನಾಲಗೆಯೊಳೋದಿದವಂ ಕೃತಿಯೇ ಕೃತಾರ್ಥನೇ (ಶಂಖ. ೦-೩೫). **ಹೊಲಹಾಸು** = ಪ್ರದೇಶದಲ್ಲಿ ಓಡಾಡು : ನಾಡೊಳಗೆ ತುಱುಹಟ್ಟಿಯಲಿ ಹೊಲನಾಡಿ ಹೆಚ್ಚಿದ ಗೋಕವಂಬವ ನೋಡುವುದು ನೆವ (ಕುಮಾರ. ೦೬-೨೦). **ಹೊಲಮನೆ** = ಹೊಲ ಮತ್ತು ಮನೆ ; ಜಮೀನು ಮತ್ತು ಮನೆ : ಯಿಾ ಸ್ವಾಮಿಯ ಹೊಲಮನೆಯ ಮಾತಯೆತ್ತಿ ಆಡಿದವರು ಜಾತಿವಂತನಲ್ಲ (ಎಕ. XII, ತಿಪಟೂ. ೬೬-೩ ; 1776) : ಹೊಲಮನೆಯೊಳೊಲವುಗಳ ಕಣಕಣಿಸಿ ಹೂ ಕೊಯ್ದು ಬೆಳ್ಳಗಿರ ಬೆರಲಿಂದ ಮುಡಿಯುವಳ್ ನೇದು (ಕಾಂತ. ೩೩-೩೨). **ಹೊಲ ಮಾಡು** = ವ್ಯವಸಾಯ ಮಾಡು ; ಬೇಸಾಯ ಮಾಡು : ಅವನು ಹೊಲ ಮಾಡಿಕೊಂಡು ಜೀವನ ನಡೆಸುತ್ತಾನೆ (ಆಡು).
[ದೇ.॥ ತಮಿ. ಪುಲ, ಪುಲವು; ಮಲ. ಪುಲವ್; ತುಳು. ಪುಲ; ತೆಲು. ಪೊಲ ; ಕೋಲಾ. ಪೊಲವ್]

**ಪೊಲಂಗೊಳ್** (ಕ್ರಿ). ಎಲ್ಲ ಕಡೆಗೂ ಚೆದರು ; ದಿಕ್ಕುಪಾಲಾಗು : ನೃಪರಾರುಂ ವೀರಬಲ್ಲಾಳನೊಳದಿರದೆ ಮಾಱಾಂಪರೇ. . .ಪುಲ್ಲಿವಿಂಡಂತೆ ಪೊಲಂಗೊಂಡೋಡುವರ್ (ಎಕ. V, ಬೇಲೂರು. ೦೦೨-೩೪ ; ಸು. 1220 ?).
[ ಪೊಲ + ಕೊಳ್[1] ]

Δ **ಪೊಲಂತಿ** ' ಪೊಲತಿ ' ನೋ.

**ಪೊಲಂಬಿಗ, ಪೊಲಬಿಗ, ಹೊಲಬಿಗ** (ನಾ). ೧. ದಾರಿ ತೋರಿಸುವವನು ; ಮಾರ್ಗದರ್ಶಿ : ಕುರುಡನಪ್ಪ ಪೊಲಂಬಿಗನಂ ನಂಬಿ ಗಟ್ಟಿ ದಿಟ್ಟಿಡೆಯೊಳಿರುಳ್ ದೂರದೇಶಕ್ಕೆ ಪಯಣಂಬೋಪನೇಂ ದಾಡನುಂ . . . ಬುದ್ಧಿವಂತರಲ್ಲರ್ (ಧರ್ಮಾಮೃ. ೬-೩೫). ೨. ನೆಲೆಯನ್ನು ಅರಿತವನು: ಜೋಯಿಸಿಗಂ, ಲೆಕ್ಕಿಗಂ, ಪೊಲಂಬಿಗಂ (ಶಬ್ದ. ೦೯೬ ಪ್ರಯೋ). **ಪೊಲಬಿಗ** : ೧. ವಿಜನಮಹಿಸಿ ಕಾಲೊಳ್ ಕೆರೆದ ಗುಳಿಗಳಿವೆಯೆಂದು ಪೊಲಬಿಗ ಪುಳಿಂದಾಳಿಗಳ್ ತೋಱದರ್ (ಚಂದ್ರ. ೦೦-೩೪). **ಹೊಲಬಿಗ**: ೧. ಎಲೆಯಿಲ್ಲದ ಮರದಿ ಒಂಭತ್ತು ತಲೆಗಳು ನಡೆವುತಿದೆ ಕಲಿಗಳ ಕೈಗಳ ನೋಡಿರೆ ಉಳುವಿಗೆ ಹೊಲಬಿಗರಾದವರು (ಶಬ್ದ. ೦೯೩-೪೦೬) : ಶಿವಂ ಕೇಶವ ಬ್ರಹ್ಮರುಗಳಂತು ಹೊಸ ಹೊಲಬಿಗರು ರೂಪಾಗಿ ಭೂಮಿಯೊಳಗಿಂತು ಬಸವೇಶನಾದನು (ಚೆನ್ನ. ೩೩-೬೦); ಹೊಲಬಿಗರು ಹರಿದರು ಸುರೇಂದ್ರನ ದಳದ ಮಾನ್ಯರು (ಕುಮಾರ. ೦೨-೦೨). ೨. ಹೊಲೆಯ ಹೊಲಬಿಗ ನಾದರೆ ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯ (ಬಸವ. ೦೩೫) ; ಆ ಹೊಱಗಣ ಹೊಲಬ ಕಂಡು ಆ ಹೊಲಬಿಗನ ಹೊಲನ ನೋಡಿ (ಪ್ರಭು. ೦೩೨-೫೦೦) : ಯೋಗಾವಸ್ಥೆಯಲಿ ಹೊಂದಿ ಚೆನ್ನಸಿದು ತಾನೆಂಬ ಹೊಲಬಿಗನೆನ್ನದಾವ ಕಳಂಕವಿಲ್ಲದೆ ತನ್ನೊಳದು ತಾನಾಗಿ ತಾನಿಪ್ಪಂದಮೋ ಮತ್ತೆ (ಬಸವ. ೩೫-೩೫). ೩. ದಾರಿಗ; ಪ್ರಯಾಣಿಕ: ಶಿಲೆ ಹಲವು ತೆಱದಲ್ಲಿ ಹೊಲಬಿಗರಿಂಗೆ ಹೊನ್ನಾಗಿ ಒಲವರವಿಲ್ಲದೆ ಅವರ ಭಾವದಲ್ಲಿ ನಿಲ್ಲುವುದು ಶಿಲೆಯೋ ಮನವೋ (ಸರ್ವಜ್ಞ. ೬೬-೬೫೩).
[ ಪೊಲಂಬು + —ಇಗ ]

**ಪೊಲಂಬು, ಪೊಲಬು, ಹೊಲಬು** (ನಾ). ೧. ದಾರಿ ; ಮಾರ್ಗ : ನಿಮಗಾ ಧರ್ಮದ ಪೋದ ಪೊಲಂಬದು ತಾ ನರ್ಮದೆಯಿಂ ಗೆಂಟದೇಕೆ ಕೇಳ್ದಪೆಯಮ್ಮಂ (ಯಶೋಧ. ೦-೬೪): ನಿನ್ನ ಚರ್ಮರತ್ನಂ ಪೋದ ಪೊಲಂಬು ಬಲ್ಲೊಡೆ ಪೇಟ್ಟಿಂಬುದುಂ (ಪಂಪ. ೮-೦೮೦ ವ). ೨. ರೀತಿ ; ಬಗೆ : ಎಲೆ ನೃಪ ಜೀವತತ್ತ್ವದ ಪೊಲಂಬದು (ಜಗನ್ನಾ. ೫-೬೩). ೩. ಸುದ್ದಿ; ಸಮಾಚಾರ : ಸಂಗತಿ : ನಾವದಱ ಪೊಲಂಬಂ ಬಲ್ಲುದಿಲ್ಲ ನೀವು ಬಲ್ಲಡೆ

ಪೇಳ್ಪಂ (ಪುಣ್ಯಾಸ್ರ. ೬-೩೩ ವ). ೪. ಪರಿಚಯ ; ಗುರುತು : ಜನಗಣದೊಳು ಮುನ್ನ ತನಗೆ ಪೊಲಬುಳ್ಳ ಜನರ ಕಂಡವರ ಪೂರ್ವವನು ಅನುಜರಱಿಯಲೆಂದು ಪೆಸರುಗೊಂಡೆಬಿಗುತೆ (ಜಚ. ೬೦-೩೪). **ಪೊಲಬು :** ೧. ನಡೆದು ಭರದಿಂ ಪುಷ್ಕರಿಕೆ ಪೇಚ್ಚಿ ಪೊಲಬಿಂಗಾಗಳ್ (ರಕಸು. ೦೦-೬೦) ; ಬಲ ಕೇಶವರ ಬೆನ್ನ ತಗುಳ್ದುಮವರು ಪೋದ ಪೊಲಬಱಿಯದೆ ಮುಂದೆ ಪೋಗಿ (ಕಾಂತೀಶ. ೩-೪೩). ೩. ಜಟಾಯುವಂ ಕಂಡು ಪೊಲಬಂ ಕೇಳ್ದು ಸೌಮಿತ್ರಿಸಹಿತ ನಡೆದಂ ಮುಂದೆ ರಘುನಾಥನು (ಕೈಖಿಶಾ. ೦೬-೪): ಸುಲಭಮೆ ಪೊಲಬನೆಲ್ಲ ಪರರಿಂಗರಿಪಲ್ (ಧ್ವನ್ಯಾಲೋ. ೨೬೪). ೫. ಮರ್ಮ; ರಹಸ್ಯ: ನಿಗಮವಱಿಯದು ಬೊಮ್ಮ ಚಿಂತಿಪ ನಗನಿಲಯ ಪೊಲಬಱಿಯ (ಕೃಕರ್ಣಾ. ೦-೨೪). **ಹೊಲಬು :** ೧. ಲಿಂಗದ ಪರಿಪೂರ್ಣವ ಕಾಣದಿಹ ಅಂಗಹೀನನಿಗೇಕೆ ವ್ರತಾಚಾರದ ಹೊಲಬು (ಸರ್ವಶ. ೬-೨೬) ; ಹೋಗು ತಿರ್ದಳು ಹೊಲಬ ಕೇಳುತ (ಪ್ರಭುಲಿ. ೬-೪೨) ; ಲಂಕಾಪುರದ ಸರಣಿಯ ಹೊಲಬ ತೋಱಿಸಿ ಬೀಳುಕೊಂಡನು (ತೊರರಾ. ೪-೦೦-೨೨). ೨. ಅಕ್ಕಟಾ ಪುಣ್ಯ ಪಾಪದ ಹೊಲಬನಱಿಯಿರೇ (ತಿರುರ. ದೀ. ೦೬-೩) ; ಎಲೆ ಮಹಾತ್ಮನೆ ನಿನ್ನ ಸೂತ್ರದ ಹೊಲಬಿದಲ್ಲದೆ ಸುಮ್ಮನೀ ಮರ ಸಿಲುಕಬಲ್ಲುದೆ (ಪ್ರಭುಲಿ. ೦೦-೩೦) ; ಮಾಯಾವಿದ್ಯದೇಳ್ಗೆಯ ಹೊಲಬ ತೋಱಿದಳಾಳ್ದನಿಗೆ (ಮೋಹತ. ೦೩-೪೪). ೩. ನಳನೃಪತಿಗೆ ಮುನ್ನಂ ಕಂಗೊಳೆ ಸಾರಥಿಯಾದ ಹೊಲಬನಱಿವೆಂ (ನಳಚಂ. ೬೬೦) ; ಸತ್ತವರ ಕಥೆಯಲ್ಲ ಜನನದ ಉತ್ತದಲಿ ಕುದಿಕುದಿದು ಕರ್ಮದ ಕತ್ತಲೆಗೆ ಸಿಲ್ಕುವರ ಸೀಮೆಯ ಹೊಲಬು [ಪಾಠಾಂ. ಮಾತು]ತಾನಲ್ಲ (ಪ್ರಭುಲಿ. ೦-೦೩) ; ತರುಣಿ ನೀನಱಿದುದಿಲ್ಲವೆ ನಮ್ಮ ಪಾದರಕ್ಷೆಯ ಹೋದ ಹೊಲಬನು (ಸಮ್ಯಕ್ತ್ವ. ೪-೩೩). ೪. ತರಣಿಕುಲ ಪೊರೆಯೋ ಎನುತ್ತಿರೆ ಹಿಂದು ಶಂಕಿಸಿ ಕೇಳಿದರು ಹೊಲಬುಂಟೆ ನಿನಗೆಂದು (ಕೌಶಿರಾ. ೦೪-೪೬); ನೆಲನಾವು ದಾಗಸವಾವುದೆಣ್ದೆಸೆಗಳ ಹೊಲಬಾವುದೆಂದು ತೋಱಿಸದೆ . . . ಬಾಣಾಬ್ಧಿ ಬಲಗೂಡಿ ಹರಿಯ ನುಂಗಿದುವು (ಮೋಹತ. ೪೦-೩೬) ; ನಾಲ್ಕುಮಂದಿ ಗಳೆಯರಾದ ಮಂತ್ರಿಗಳು ಅವನಂತರಂಗವೇ ಆಗಿದ್ದರೆನ್ನಬಹುದು. ಅವರ ಯೋಗ್ಯತೆಯನ್ನರಿತಲ್ಲಿ ಅರಸನ ಅಂತರಂಗದಾಳಿಕೆಯ ಹೊಲಬು ಪರಿಚೇರಿ ಗಾಗಬಹುದು (ಪಾತೋಚ. ೩೬೬). ೫. ಅಂಗದೊಳಗೆ ಬೆರಸಿಪ್ಪ ಲಿಂಗದ ಹೊಲಬನಾರೂ ಅಱಿಯರು (ಅವಚ. ೨೨-೩೪) ; ಎಲೆ ಕಿತವ ಚರ್ಮರತ್ನವ ನೊಲವಿಂದು ಕಾವುವಾಜರಿಗೆ ಕೊಟ್ಟೆನ್ನೊಳ್ ಹೊಲಬಂ ಪೇಬದೆ ನೀಂ ಸಂಕಲೆಯೊಳ್ ಬೀಟಲ್ಕೆ ಬಿಡುವೆನೆ (ಧರ್ಮಪ. ೬-೨೦೦); ನೀನತ್ವಲಕ್ಷಣದ ಹೊಲಬ ಬಲ್ಲೆ (ತೊರರಾ. ೩-೨-೨೦) ; ಮಾವನ ಮಾತಿನ ಹೊಲಬು ಬಾಬಣ್ಣನಿಗೆ ಹೊಳೆಯಿತು (ಅಭೋಕ. ೨೬). ೬. "ಸರಹದ್ದು" (ಶಬ್ದಾ. ಅಪಬಂಧ. ೨): ವೀರಪೊಡಕೆರೆಪುರದ ಹೊಲಮೇರೆಯಿಂದಾ ಹಾಯಿಕಲ್ಲು ಹೊಲಬಿನಲು (ಎಕ. XI. ಚಿತ್ರದು. ೩೦-೩ ; ಕು. 1800 ?); ಈ ದಳವಾಯಿ ಮುದ್ದಣ್ಣನು ಬಿದರಕೆರೇ ಹೊಲಬಿನಲ್ಲಿ ಸಂತೇಮುದ್ದಾಪುರದ ಗ್ರಾಮವನ್ನೂ ಅಲ್ಲಿ ಆ ಹನುಮಂತರಾಯನ ದೇವಸ್ಥಾನ, ಕೆರೆಗಳನ್ನೂ . . . ಸ್ಥಾಪನೆ ಮಾಡಿದನು (ಚಿತ್ರಶಾ. ೩೩).

**ಹೊಲಬಾಗು**=೧. ದಾರಿಯಾಗು; ದಿಕ್ಕುತೋರು : ಆ ಅರುಣನ ನೆಲೆ ಒಂದೆ ಹಲವು ಜಗಕ್ಕೆ ಹೊಲಬಾದಂತೆ ಸ್ಥಲಜ್ಞನಾದೆಯಲ್ಲಾ ಸ್ಥಲದ ನೆಲೆ ಒಂದೆನಱಿತಲ್ಲಿ ಏಕಸ್ಥಲಮೂರ್ತಿ ನೀನೆ (ಮೋಕಮಾ. ೨೦೦-೬೪೩). ೨. (ಪರಿಸ್ಥಿತಿಯು) ಅರಿವಾಗು; ಪರಿಚಯವಾಗು: ಚೀನದಲ್ಲಿ ಆರಿಸಿದ ೧೬೮ ಸ್ಥಳಗಳ ಜನರಿಗೆ ತಲಾ ಒಂದರ ೧,೪೦೦ ಕಿಲೋಗ್ರಾಂ ಉತ್ಪನ್ನವನ್ನು ಉತ್ತರಅಮೇರಿಕದ ೨೦,೦೦೦ ಕಿಲೋಗ್ರಾಂ ಉತ್ಪನ್ನದೊಡನೆ ಹೋಲಿಸಿದರೆ ಏಶಿಯದ ಜೀವನದ ಮಟ್ಟದ ಹೀನಸ್ಥಿತಿಯ ಹೊಲಬಾಗುವುದಿಲ್ಲವೆ? (ಏಶಿಸಂ. ೩೩).

[ದೇ. ॥ ತುಳು. ಪೊಲಬು, ಪುಲಬು, ಪುಲಮೆ; ತೆಲು. ಪೊಲುಪು]

**ಪೊಲಂಬುಗಿಡಿಸು. ಹೊಲಬುಗೆಡಿಸು** (ಕ್ರಿ). ೧. ದಾರಿತಪ್ಪಿಸು; ಮಾರ್ಗ ತಪ್ಪಿಸು : ತೇಜಿಗಳ ಕಾಲ ದೂಳಿ ನೆಗೆದು ಕೊಳಂಗುಳದೊಳ್ ಪಸರಿಸಿ ಬೀರರರನಱಸುವಚ್ಚರಸಿಯರಂ ಪೊಲಂಬುಗಿಡಿಸೆಯುಂ (ಕಾವ್ಯಾ. ೨೬೬). **ಹೊಲಬುಗೆಡಿಸು:** ೧. ನಿನ್ನಾಳ್ದನನು ಹೊಲಬುಗೆಡಿಸಿ. . .ಎಳೆದೊಯ್ವನು (ತ್ರಿಪುರಾಂ. ೨೦-೨೩೬); ಹೆಬ್ಬುಲ ಸಘಾಡದಲೌಕಿ ಕರ್ಣನ ಹೊಲಬುಗೆಡಿಸಿದು ದಂಬುಗಳ ಸಾರಾಯ ಸೋನೆಯಲಿ (ಕುವ್ಯಾಕ. ೦೦-೨೦); ನಾನವನ ಹೊಲಬುಗೆಡಿಸಿ ಹೋರಿ ಹೋಣವಡಿಸುವೆನು (ರಾಕುಹಿ. ೪-೩೪). ೨. ದಿಗ್ಭ್ರಮೆಯುಂಟುಮಾಡು; ಗೊಂದಲಗೊಳಿಸು: ಚಾತುರ್ಬಲವ ಸವಱಿ . . . ಹೊಲಬುಗೆಡಿಸಿ ಮಹೀಪತಿಯ ಪಡಿಮುಖಕೆ ಮಾಱಾಂತ (ಕುವ್ಯಾಕ. ೩-೩೬). [ಪೊಲಂಬುಗಿಡು (< ಪೊಲಂಬುಗೆಡು) + — ಇಸು]

**ಪೊಲಂಬುಗಿಡು** 'ಪೊಲಂಬುಗೆಡು' ನೋ.

**ಪೊಲಂಬುಗೆಡು. ಪೊಲಂಬುಗಿಡು. ಪೊಲಬುಗೆಡು, ಹೊಲಬುಕೆಡು, ಹೊಲಬುಗಿಡು, ಹೊಲಬುಗೆಡು** (ಕ್ರಿ). ೧. ದಾರಿ ತಪ್ಪಿಸಿಕೊಳ್ಳು; ಮಾರ್ಗ ಕಾಣದಾಗು : ಒಂದೊಟ್ಟೆ ಪೊಲಂಬುಗೆಟ್ಟು ಬಂದಾಡು ತ್ರಿದುರ್ಗದಂ. . . ಕಂಡು (ಶುಶತಂ. ೦೪೦-೮); ಕಾಂತಾರದೊಳ್ ಪೊಲಂಬು [ಪಾಠಾಂ. ಪೊಲ, ಪೊಲೆ]ಗೆಟ್ಟು ಸೇದವಟ್ಟು (ಶಾಂತಿಪು. ೬೪-೦೬), ಸಂಸರಣಕಾನನದಲ್ಲಿ ಪೊಲಂಬುಗೆಟ್ಟ (ಚಾರಪು. ೪-೦೩೪); ಪಿರಿದಪ್ಪಾನಾಟವಿಯೊಳ್ ಮರುಳಾಗಿ ಪೊಲಂಬುಗೆಟ್ಟು ತಿರುಗುವ ನಮಾಗಾದರದಿಂ ಪಥಮಂ ತೋಱಲ್ ಭರದಿಂ ಬಂದ್ಯೆ (ರರ್ಮಾಪ. ೦೦-೪೩). ೨. ದಿಗ್ಭ್ರಮೆಯಾಗು ; ಏನೂ ತೋಚದಂತಾಗು : ರಾಜವೀಧಿಯೊಳ್ ಸುಳಿವ ಜವ್ವನಿಗರಂ ಕಂಡು ಪೊಲಂಬುಗೆಟ್ಟು ಪುಲ್ಲೆಯಂತೆ ದೆಸೆದೆಸೆಗೆ ಬೆರ್ಚುವ (ಗಿರಿಜಾ. ೨-೦೦೩ ವ). **ಪೊಲಂಬುಗಿಡು :** ೨. 'ಪೊಲಂಬುಗಿಡಿಸಂ' ಪರಾ. **ಪೊಲಬುಗೆಡು :** ೧. ನೆಲನಾಗಸಮಾವುದೆಂಬುದನಱಿಯದೆ ಪೊಲಬುಗೆಟ್ಟನು (ಅಂಜನಾ. ೬-೦೩೪). **ಹೊಲಬುಕೆಡು :** ೧. ಮಾಯಾಪಾಶದಿ ಸಿಕ್ಕಿ ಕಡುನೊಂದೆ ಹೊಲಬುಕೆಟ್ಟೆನು ಜಗದೊಳಗೆ (ದೇಶೀಚು. ೦-೦೦). **ಹೊಲಬುಗಿಡು:** ೨. "ಹೊಲಬುಗಿಡು (ಹೊಲಬು+ಕಿಡು)–ದಿಗ್ಭ್ರಮಣೇ" (ಕಶುರಾ) ; ಜಠರದೊಳಿರ್ದು ತದ್ಬ್ರಹ್ಮಾಂಡಶತದೊಳು ಹೊಲಬುಗಿಡೆ (ಕುವ್ಯಾಉ. ೬೦೨. ೦೦-೦೪). **ಹೊಲಬುಗೆಡು :** ೧. ಹೊಲಬುಗೆಟ್ಟೆನು ಬಟ್ಟೆಯ ತೋಱಯ್ಯಾ (ಬಸವ. ೬೩); ಅಡವಿಯೊಳು ಹೊಲಬುಗೆಟ್ಟನೋ (ಹನಶಾ. ೦೨-೮೩) ; ಕಾನನದ ಕಾಡಾನೆಗಳಪೊಲು ಪಥದನುವ ಕಾಣದೆ ಹೊಲಬುಗೆಟ್ಟವು (ತೊರರಾ. ೬-೨೬-೩೩). ೨. ನೆನೆವ ಮನಂ ಹೊಲಬುಗೆಟ್ಟಪುದು (ಶಂಬರ. ೦೬ ೩). [ಪೊಲಂಬು+ಕೆಡು₁]

**ಪೊಲಂಬುದಪ್ಪು. ಹೊಲಬುತಪ್ಪು. ಹೊಲಬುದಪ್ಪು** (ಕ್ರಿ). ೧. ದಾರಿ ತಪ್ಪು; ಮಾರ್ಗ ಕಾಣಿಸದಂತಾಗು : ರವಿರಥದ ಕುದುರೆಯೊಳೊಂದು ಪೊಲಂಬುದಪ್ಪಿ ನೆಲಕ್ಕಿೞಿದುದೆಂಬಂತೆ ಚೆಲ್ವನಪ್ಪ ವಾಜಿಯ ರೂಪನಳವಡಿಸಿ (ಪುಣ್ಯಾಸ್ರ. ೩-೬೨ ವ) ; ಪೊಲಂಬುದಪ್ಪಿದ ಮಱಿಯಂ ನೆನೆದು . . . ಪಾಯ್ದುಗುತರ್ಪ ವನಮಹಿಷಿಗಳ ಪಾಲ ಧಾರೆಯಂ ಮಿಕ್ಕು ನಟ್ಟಿತೊಡ ವರ್ಪ ಕಾನನಬಿಡಾಲಂಗಳಿಂ . . . ವಿಜೃಂಭಿಸಿ (ರಾಜಶೇ. ೩-೩೩ ವ). ೨. ರೀತಿ ತಪ್ಪು; ಕ್ರಮಂ ತಪ್ಪು : ಪೊಲಂಬುದಪ್ಪಿ ಕೋಟಲೆಗೊಳಗಪ್ಪ ಪಾಟ್ಟನದ ಮಾನಸರಂ ಸುಡು ಸಂದ ಗೊಡ್ಡರಂ (ಚಂದ್ರಪ್ರ. ೬-೮೦). **ಹೊಲಬುತಪ್ಪು:** ೧. ಸಂಸಾರವೆಂಬ ಘೋರಾರಣ್ಯದಲ್ಲಿ ಹೊಲಬುತಪ್ಪಿ ಬಳಲುತ್ತಿಹೆ (ವಚರ.೪೨). ೩. ದಿಗ್ಭ್ರಾಂತವಾಗು ; ದಿಕ್ಕುತೋಚದಂತಾಗು : ಪದವಿಯ ಫಲವ ಕಾಣದೆ ಹೊಲಬುತಪ್ಪಿದೆನು (ಹಂಶಾ. ೩೪). **ಹೊಲಬುದಪ್ಪು :** ೧. ಗಹನದಲ್ಲಿ ಸಿಕ್ಕಿದ ಶಿಶುವಿನಂತೆ ಸ್ಥಾನದಪ್ಪಿ ಹೊಲಬುದಪ್ಪಿದ್ದೇನೆ (ಕೋಲಶಾಂ. ೦೩-೬೦) ; ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನ್ನೆ (ಕುವ್ಯಾಸ. ೦೩-೦೨೩) ; ನಿಜವಿರಕ್ತಿಯ ಹೊಲಬುದಪ್ಪದೆ

. . . ಅರ್ತಿಯಿಂದಾಱುಸುವರಯ್ಯ ನಿಮ್ಮ ಶರಣರು (ಶಿಸವ. ೬೦-೩೯). ೨. ಒಂದು ದ್ವಾರದಲ್ಲಿ ಬಂದ ಆತ್ಮಂಗೆ ಹಲವು ದ್ವಾರ ಉಂಟೆಂದು ಹೊಲಬುದಪ್ಪಿ ನುಡಿವವರ ನೋಡಾ (ಪ್ರೋಶವಾ. ೦-೦). ೩. ಹೊಲಬುದಪ್ಪಿದ ಮನದ ಸಖಿಯರು ಸುಳಿಯೆ ನಳನೃಪ ಬಂದನಿದೆಯೆಂದೆನುತ ಕಳವಳಿಸಿ ನಿಲುಕಿ ನೋಡುವಳು (ನಳಚ. ೩-೨). ೪. ಮಾರ್ಗವು ಕಠಿಣವಾಗು; ಗಹನವಾಗು; ಅಗಮ್ಯವಾಗು: ಹೊಲಮೇರೆಯಿಂ ಮೇರೆ ಹೊಲಬುದಪ್ಪಿದ ನಾದಕಳೆಗಳ ಮಿಱಿರ್ದ ತುರ್ಯಂಗಳ ಗುರುವಿನ ಕರುಣದ ಅನಿಮಿಷದ ಮನೆಯಲ್ಲಿ ಹೊಲಬುದಪ್ಪಿದ ಕಂಡೆ ಮಧ್ಯಮವನು (ಸಿದ್ಧಶ. ೪. ೩೪೦-೦೦೦೨). [ಪೊಲಂಬು + ತಪ್ಪು$_1$]

**ಪೊಲಂಬುದೋಱು** (ಕ್ರಿ). ಮಾರ್ಗ ಕಾಣು: ಸುಳಿವು ತೋರು: ನಂಬಿರೀ ತತ್ತ್ವವ ವ್ರತದೊಳಾಚರಿಸಿ ಪೊಲಂಬುದೋಱುವುದಾತ್ಮಸಿದ್ಧಿ (ಶರಶ. ೬೯-೪). [ಪೊಲಂಬು + ತೋಱು]

**ಪೊಲಂಬೊಗು** (ಕ್ರಿ). ಕ್ಷೇತ್ರವನ್ನು ಪ್ರವೇಶಿಸು: ಭೇದವಿಲ್ಲದೆ ತಾನೆಯಪ್ಪಂತೆ ಸವಿಕಾರ್ಯವಾದ ವಿದ್ಯೆಯ ಪೊಲಂಬೊಗಲು ತತ್ಕ್ಷಣಿಕಂಗಳಾದವಂತಾತ್ಮಚೈತನ್ಯದ ಪ್ರತಿಫಲದ ರೂಪವಹ ವಿದ್ಯೆಂಗಳಾ (ಏಕೋ್ತ.೩-೪-೨೬). [ಪೊಲ + ಪೊಗು]

**ಪೊಲಕೇಶಿ** 'ಪುಲಿಕೇಶಿ' ನೋ.

**ಪೊಲಗ, ಪೊಲೆಗ** (ನಾ). ಒಬ್ಬಾತನ ಹೆಸರು: ಬನವಾಸಿನಾಡಂ ಧಲದಂಕರಾಮ ಸಾನ್ತರನಾಳೆ ರಟ್ಟಪಳ್ಳಿಯ ಪೊಲಗನು (ಎಕ. VIII, ಹೊನ್ನಾ. ೪. ೨೯-೩; 934). **ಪೊಲೆಗ:** ಒರಿಯಮಾಗುಣ್ಡಿಯ ಪೊಲೆಗ ಉರ್ಗ್ರಾಮುಣ್ಡುಗೆಯ್ಯುತ್ತಿರೆ (ಎಕ. VIII, ಸೊರಬ. ೪೦೩-೦೬; 986); ಎಱಕನ ವರಪುತ್ರಂ ಪೊಲೆಗನೀ ಮಹೀಮಣ್ಡಳದೊಳ್ ಸ್ಥಿರಮಾಗಿರೆ (ಕ್ನಾಇ. XI-I, ೬೩ ೫೬; 1029). [?]

**ಪೊಲಗಾ** (ಕ್ರಿ). ಹೊಲದ ಬೆಳೆಯನ್ನು ಕಾಯು,-ರಕ್ಷಿಸು: ಪೊಲಗಾವ ಪಾಮರಿಯರೋಳಿಗಳ ಮೃಗಂಪ . . . ಸುಳಿವ ತಂಗಾಳಿಗಳ ಕಡುಗಂಪ ಸೇವಿಸುತೆ ಪಥಿಕರಾಸರ್ಗಳೆವರಾ ನಾಡೊಳು (ಕೃಬಿಶಾ. ೩-೬). [ಪೊಲ + ಕಾ$_1$]

**ಪೊಲಗಾಪು** (ನಾ). ಪ್ರದೇಶದ ರಕ್ಷಣೆ,-ಕಾವಲು: ಆ ಬಿಡಿನ ಪೊಲಗಾಪಿನವರ್ ಕಾಣುತೆ ಪಲರುಂ ಪರಿತಂದು (ಜೀಚಂ. ೫೯-೩೪). [ಪೊಲ + ಕಾಪು]

**ಪೊಲಗಾಹಿ, ಹೊಲಗಾಹಿ** (ನಾ). ಹೊಲದ ಬೆಳೆಯನ್ನು ರಕ್ಷಿಸುವ ವ್ಯಕ್ತಿ: ಪೊಲಗಾಹಿಯುಬ್ಬರಿಸಿ ದೀರ್ಘದಿಕ್ಕಬೊಕ್ಕು ತಾನೆಳ್ಬುತಿರಲಿರದೆ . . . ಪೆರತೊಂದೆಡೆಗೆ ಪಾಱಿ ಮಂಡಿಸುತೆ (ಕಕ್ಕ್ರಾಂಗ. ೫೩-೦೪೪೫). **ಹೊಲಗಾಹಿ:** ಹೊಲಗಾಹಿಗಳೆಲ್ಲ ಗುಡಿಸಲುಗಳಲ್ಲಿ . . . ಸೇರಿಕೊಂಡಿದ್ದರೆ (ಕೆಲುಮ. ೨-೯). [ಪೊಲ+ಕಾಹಿ]

**ಪೊಲಗಿಡಿಸು** 'ಪೊಲಗೆಡಿಸು' ನೋ.

**ಪೊಲಗಿಡು** 'ಪೊಲಗೆಡು' ನೋ.

**ಪೊಲಗೆಡಿಸು, ಪೊಲಗಿಡಿಸು** (ಕ್ರಿ). ೧. ದಿಕ್ಕು ತಪ್ಪಿಸು; ದಿಗ್ಭ್ರಮೆಯುಂಟುಮಾಡು: ಪಚ್ಚೆಯ ಕಂಬಂಗಳ ಬೆಳಗುಂ ಪೊಲಗೆಡಿಸಿದತ್ತು ಸುರರೀಕ್ಷಣಮಂ (ಶಾರಪು. ೬-೪೫). **ಪೊಲಗಿಡಿಸು:** ೧. ನೀನಂತು ಪಲವೋದನೋದಿ ಎನ್ನಂ ಪೊಲಗಿ[ಪಾಕಾಂ. ಗೆ]ಡಿಸದೆ ಉಳ್ಳುದನುಳ್ಳಂತೆ ಪೇೞು (ಶಂಶಕಂ. ೦೩೪-೯). ೨. ರೀತಿಗೆಡಿಸು; ಕ್ರಮತಪ್ಪಿಸು: ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮೆಂದೆ ಪಟಗನ್ನಡಮಂ ಪೊಲ(ಗಿ)[ಪಾಕಾಂ. ಗೆ]ಡಿಸಿ ನುಡಿವರಾಗಮಬಲಹೀನರ್ (ಕವಿರಾ. ೦-೪೮); ಪೇಜವಿಶಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲೆಂ (ಶಾಂತಿಪು. ೩-೨೩ ವ). [ಪೊಲ + ಕೆಡಿಸು$_1$]

**ಪೊಲಗೆಡು, ಪೊಲಗಿಡು, ಹೊಲಗೆಡು** (ಕ್ರಿ). ೧. ದಾರಿ ತಪ್ಪು: ಮಾರ್ಗ ತಿಳಿಯದಂತಾಗು: ಅವಧಿವಿಬೋಧದೆ ಬರೆ ಮುನಿಕ್ಕೆ ಬಗೆಯೊಳ್ ಕಂಡಂ ದಿವಿಜಪತಿ ತನ್ನ ಮುನ್ನಿನ ಭವಮಂ ಪೊಲಗೆಟ್ಟ ಬಟ್ಟೆಗಾಣ್ಬಂತಾಗಳ್ (ಶಾಂತಿಪು. ೭-೦೯); ಇರುಳ್ ನಡೆವಂ ಪೊಲಗೆಟ್ಟಲ್ಲಿಯೆ ನೇಸಱ್ಮೂಗೆವವೊಲ್ (ಚಂದ್ರಪು. ೪-೭೫); ಪೞುವಿನೊಳ್ ಪೊಲಗೆಟ್ಟು ತೊಳಲುತ್ತುಂ ಬಂದು ನಿಮ್ಮಂ ಕಂಡೆಂ (ಜೀವಸಂ. ೦೭೭-೨೧). ೨. ಭ್ರಾಂತಿಗೊಳ್ಳು; ದಿಗ್ಭ್ರಮೆಯನ್ನು ಹೊಂದು; ದಿಕ್ಕು ತೋಚದಂತಾಗು: ಶಿಶುಶ್ರೇಣಿಗಳ್ ಒಡಿಮರ್ಕಿಂ ಪೊಲಗೆಟ್ಟು ಪೊಕ್ಕು ಮೃಗಶಾಬಾನೀಕಮಂ ಕೊಂಡು (ಅರ್ಣವೇ. ೩-೫೦); ಬಳಕೋಳಾಹಳದಿಂ ವಿಯಚ್ಚರಗಣಂ ಶೇಷಂ ದಿಶಾಪಾಲಕರ್ ಪೊಲಗೆಟ್ಟೋಡೆ (ಜಗಚಿ. ೭-೪೧). **ಪೊಲಗಿಡು:** ೨. ನೆಱೆನೀತಂಗೀಯೆಡೆಯೆಂದು ತೋಱೆ ಕುಡೆ ಪೊಲಗಿಡದಱಿಂದಂ ಪರಮಪಂಡಿತಂ ಪವನಸುತಂ (ಗದಾಯು. ೬-೩೫); ಕಾದಲನೆಡೆಗೆಯ್ದೆ ಬರ್ಪ ಖಚರೀನಿಚಯಂ ಕೈದಿರ್ಪೊಗೆ ದಿಟ್ಟಿಗಳ್ ಪೊಲಗಿಡೆ ಚಿತ್ತದುಜ್ಜುಗಮುಮಂ ಮಱೆದಿರ್ದಪೊಲಿರ್ದ ನಲ್ಲಳಂ . . . ನರಪತಿ ಭಾವಿಸಿ (ವರ್ಧಪು. ೪-೭೬); ಸವನಕ್ಷೀರಂ . . . ಪರಿದುದು ದಿವಿಜರ್ ಮೇರುಮಹೀಧರಮಲ್ಲದು ತಾರಮಹೀಧರಮಿದೆಂದು ಪೊಲಗಿಡುವಿನೆಗಂ (ಅನಂಪು. ೫-೬೬). **ಹೊಲಗೆಡು:** ೧. ಮುನಿಗಳೊಳಱಿಸಿದರು ಮಾಮುಸಕದಿಂ ಪುರಜನಂ ಭೂಪನಂ ಹೊಲಗೆಟ್ಟ ಕಱು ತಾಯನಱಿಸುವಂತೆ (ಹಕಳಾ. ೮-೭೦); ಕೆಟ್ಟೆನಿನ್ನೇವೆನೆನ್ನಣುಗ ನಡವಿಯೊಳು ಹೊಲಗೆಟ್ಟನೋ (ಸಿದ್ಧರಾ. ೨-೪೫). [ಪೊಲ + ಕೆಡು$_1$]

**ಪೊಲಗೆಱೆ** (ನಾ). ಹೊಲಸು ತುಂಬಿದ ಕೆರೆ: ಪಾಪದ ಪುಂಜಂ ತೋಯಿಲ ಕುಟಿ ಪೊಲಗೆಱೆಯೆಂದಾಯತಿಯಂ ಬಗೆವರುಟಿವರಾ ಸೂಳೆಯರಂ (ಶಬಾರ. ೨೯೯). [< ಪೊಲೆ + ಕೆಱೆ]

**ಪೊಲಗೇರಿ** 'ಪೊಲೆಗೇರಿ' ನೋ.

**ಪೊಲತಪ್ಪು** (ಕ್ರಿ). ದಾರಿ ಸಿಕ್ಕದಾಗು; ಹಾದಿ ತಪ್ಪು: ಪೊಲತಪ್ಪಿದ ಹುಲ್ಲೆಯಂತಾ ಸಖಿಯರು ಪಲುಬಿ ಪಂಬಲಿಸಿ (ಅಂಜನ. ೯-೬೨). [ಪೊಲ + ತಪ್ಪು$_1$]

**ಪೊಲತಿ, ಪೊಲಂತಿ, ಹೊಲತಿ** (ನಾ). ೧. ಹೊಲೆಯರ ಹೆಣ್ಣು: ನೀಳನೆಂಬ ಮಾದೆಗಂಗು ಕೇಶಿಯೆಂಬ ಮಾದೆಗಿಗಂ ಮಗಳ್ . . . ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೭); ಬಿಡುವಂತುಟದೊಂದವಳ್ಗೆ ಪೇೞ್ ದೊರಕೊಳಲಾರ್ಪುದೋ ಪೊಲತಿಗೆ (ಕಾದಂಉ. ೭೪೭); ಪೊಲತಿಯುಣಲಿಕ್ಕೆ ಶುನಕನ ಕಳೆವರಮಂ ಪೊಕ್ಕು ಪೇಸದುಂಡಾ ಮುನಿ ನಿರ್ಮಳನಾಗಿ ಮುಕ್ತಿರಮೆಯೊಳ್ಗಲಿದಂ (ಸಮುಚ. ೦೦-೦೦೯). Δ**ಪೊಲಂತಿ:** ೧. ಪೊಲಂತಿಯರೊಳೀ ಜನಮೋಹನಮಪ್ಪ ರೂಪು ತಾಂ ನೆಲಸುಗುಮೋ (ವಿಹಾಸೇ. ೬-೩೧). **ಹೊಲತಿ:** ೧. ಬಡ ಹೊಲತಿ ಮೈಗೆಟ್ಟವಳು ನೀನು . . . ಬಾರದಿರತ್ತ ನಿಲ್ಲು (ಬಸಪು. ೫೭-೫೬); ಹೊಲಗೇರಿಲಿ ಹೊಲೆಯ ಹೊಲತಿಲ್ಲ (ಪುರಂದ. ೧-೦೦೭ ಅನುಕಲ್ಪ). ೨. "ಹೊಲೆಯುಳ್ಳವಳು, ರಜಸ್ವಲೆಯಾದವಳು" (ಬಸವ. ಕೋಶ): ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯಾ (ಬಸವ. ೭೨೯): ಹೊಲತಿ ತನ್ನ ಹೊಲೆಯ ಮಱೆದು ಶುದ್ಧನೀರ ಮಿಂದನೆಂದು ಕೆಲವರ ಮುಟ್ಟುವಂತೆ . . . ತ್ರಿಕರಣಶುದ್ಧವಿಲ್ಲದ ಪೂಜೆ (ಮೋಳಿಮಾ. ೩೯-೦೭೨). [< ಪೊಲೆ + -ತಿ$_1$ (< -ಇತ್ತಿ)./ತಮಿ. ಪುಲೈತ್ತಿ; ಕೊಡ. ಪೊಲತಿ]

**ಪೊಲದಿ** (ನಾ). ಕಾಮುಕ; ವ್ಯಭಿಚಾರಿ: "ಸಿತಗನುಂ ಪೊಲದಿಯುಂ [ಪಾಕಾಂ. ಪೊಲೆಯನುಂ]ದಕ್ಕು" (ಅಭಿಕೋ. ೬೩); "ಪೊಲದಿಯೆನೆ ಸಿತಗ" (ರಪ್ರಮಾ. ೫೯). [ದೇ. ‖ ಮಲ. ಪುಲಯಾಟಿ]

**ಪೊಲದಿಗಣ್ಣು** (ನಾ). ಕಾಮುಕ ಕಣ್ಣು; ವಿಟದೃಷ್ಟಿ: ನಿನಗೆ ಪೊಲದಿಗಣ್ಣು ಕೊಟ್ಟಾಗ, ನಿನ್ನ ಅದ್ಭುತ ರೂಪ ಸೌನ್ದರ್ಯಗಳ ಕಿರುಜವ್ವನದ

ಅಂಗೋಪಾಂಗಪ್ರದರ್ಶನಗಳ ಹಾವಭಾವವಿಲಾಸವಿಭ್ರಮಗಳ ಪ್ರಯೋಗದಿಂದ ಬಗೆಗಲಂಕಿ ಅವನನ್ನು ಮುಂದರಲೆವಿಡಿಯದೆ (ಮುಂತ್ರಕ. ೫೯-೧೦).
[ಪೊಲದಿ + ಕಣ್ಣು (< ಕಣ್)]

**ಪೊಲಬಿಗ** 'ಪೊಲಂಬಿಗ' ನೋ.

**ಪೊಲಬು** 'ಪೊಲಂಬು' ನೋ.

**ಪೊಲಬುಗೆಡು** 'ಪೊಲಂಬುಗೆಡು' ನೋ.

**ಪೊಲಮುಚ್ಚು** 'ಪೊಲಮೆಚ್ಚು' ನೋ.

**ಪೊಲಮೆಚ್ಚು**, ಪೊಲಮುಚ್ಚು (ನಾ). ತನ್ನ ನೆಲೆಯ ಮೇಲಿರುವ ಪ್ರೀತಿ,-ಸೆಳೆತ; ಸ್ವಸ್ಥಾನದ ಆಕರ್ಷಣೆ: ಅದಟರ ಚೆನ್ನಪೊಗರ ಸಬಂಗಳ ತೊಟ್ಟುಬ್ಬೆಯೊಳ್ ತೊಡಂಕಿ ನಿಲ್ಲದೆ ಪೊಲಮೆಚ್ಚು[ಪಾಠಾಂ. ಪೊಲಮುಚ್ಚು] ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ . . . ಕರ್ಬುಸುಗಳ್ ಪರಿಗೊಂಡುಮಾಱಿಯೊಳ್ (ಶಂಕಶಾ. ೯-೧೦೪). **ಪೊಲಮುಚ್ಚು**: ನಿಲೆ ಪೊಲಮುಚ್ಚು ತಮ್ಮ ಮನದೊಳ್ ಸಲೆ ಕಟ್ಟಸು ಪರ್ವಿದುರ್ವಿಯೊಳ್ ಚಲದಿಱಿದಾಂತು ಬಿಟ್ಟ ಭಟರಂತ್ರದ ತೊಂತುಳಿಯೊಳ್ . . . ಪರಿತಂದುವು ಯುದ್ಧಭೂಮಿಯೊಳ್ (ಶಂಖಶ. ೧೦-೦೨೩). [ಪೊಲ + ಮೆಚ್ಚು₁]

**ಪೊಲಮೇರೆ, ಪೊಲೆಮೇರೆ, ಹೊಲಮೇರೆ, ಹೊಲವೆರೆ, ಹೊಲವೇರಿ, ಹೊಲವೇರೆ** (ನಾ). (ಪ್ರದೇಶದ) ಗಡಿ; ಸೀಮೆ; ಸರಹದ್ದು: ಪೊಲಮೇರೆ ತಟ್ಟಗ್ಗೞಿಯ ಕಿಟ್ಕಿಱ ಪೋಗಿ (ಎಕ. II. ೩-೩೩; ಸು. 800); ಇನಿತುಮಂ ಪೊಲಮೇರೆ ಸಹಿತಂ ಇತ್ತನ್ (ಎಕ. IX. ಕಂಗಳೂ. ೬೩-೦೬; ಸು. 890); ಅಣಲಿಗೆಯೂರ ಮುಂದಣ ಪೊಲಮೇರೆಯ ಪಳ್ಳದ ತಡಿಯಲು (ಪಾಂಡೇಶ್. ೯-೩೮; 1070). **ಪೊಲೆಮೇರೆ**: ಪೂವಿನ ಪಿಪ್ಪರಗೆ[ಯ] ನಾಲ್ಕುದೆಸೆಯ ಪೊಲೆಮೇರೆಯುಂ [ನ]ಡು ಸರಿಯಾಗಿ ನಡದು[೦] (ಕಾಇಇ. XI-೧, ೯-೨೪; 862). **ಹೊಲಮೇರೆ**: "ಅವಧೀ, ಮರ್ಯಾದಾ, ಆಘಾಟಃ, ಸೀಮಾ, ಸೀಮಾ—ಈ ೫ ಹೊಲಮೇರೆ" (ಹರಾಯು. ೪೩-೦೦೪); ನಮ್ಮ ಕೂಡಲಸಂಗನ ಶರಣರ ಅನುಭಾವವಿಲ್ಲದವರ ಹೊಲಮೇರೆಯ ಹೊಂದೆ ಹೊಲನ ಬಿಟ್ಟೋಡುವೆ (ಬಸವ. ೪೪೭); ಹೊಲಮೇರೆಯಂ ಮೆಟ್ಟಲೊಲ್ಲದ ಚಲಂ ಮಿಕ್ಕು ಕಲಿಕಾಮನಲ್ಲಿ ತಿರುಗಿದನುಮ್ಮಳಂ ಮಿಕ್ಕು (ಶಂಕಾ. ದೇ. ೩೦೭-೯). **ಹೊಲವೆರೆ**: ಮೂಡಣ ಮೇರೆ ಮಂಗಳೂರ ಹೊಲವೆರೆಯೊಡವಿನ ಕೊತ್ತುರ ಹೊರೆಯಣ ಕವಿಲೆಯ ಕಲ್ (ಕಇಆ. ೭೭-೦೨-೫೨; 1170). **ಹೊಲವೇರಿ**: ಹೊನ್ನವುರದ ನಿರಗುನ್ದದ ಹೊಲವೇರಿಯ ಕಾಳಗದಲು . . . ಕಾದಿ ಸುರಲೋಕಪ್ರಾಪ್ತನಾದಲ್ಲಿ (ಎಕ. V. ಹಾಸನ. ೬೮-೪; 1174 ?); ಈಶ್ವರಪುರದ ಹೊಲವೇರಿಯ ಚಿಕ್ಕಕುಂಟೆ (ಎಕ. VII. ಶಿವಮೊ. ೨೩-೨೫೧; 1524). **ಹೊಲವೇರೆ**: ಶ್ರೀಮ[ತ್]ತ್ರಿಭುವನೇಶ್ವರ ದೇವರ ನಿವೇದ್ಯಕ್ಕೆ ದೇವಗೇರಿಯ ಹೊಲವೇರೆಯಿಂ ತೆಂಕ . . . ಬಿಟ್ಟಯೆರೆ ಮತ್ತರಯ್ದು (ಎಇ. XIX. ೦೯೨-೨೫; 1121); ಬಡಗಪೊಲದ ಹೊಲವೇರೆಯ . . . ಕೆಯಿ ಘಳೆಯ ಮತ್ತರು ೪ (ಪಾಂಡೇಶ್. ೩೫-೦೦; 1149); ಅಲ್ಲಿಂ ಪಡುಪಲು ತೆಂಕಣ ಮೇರೆ ಸಿರಿಯೂರ ಹೊಲವೇರೆಯೊಡವಿನ ಕೊತ್ತುರ (ಪಾಕಶ. ೭೪-೦೪; 1170). [ಪೊಲ + ಮೇರೆ₁]

**ಪೊಲವಾನಸೆ** (ನಾ). = ಪೊಲತಿ ೧: ಚರಿಗೆವೋಗುತ್ತುಂ ನಾನಾನೂನ ಮಃಖಪೀಡಿತಮಾನಸೆಯಾಗುತ್ತಮಿರ್ದ ಪೊಲವಾನಸೆಯಂ ಕರುಣಾಕೃಮಿಗೆ ಕಂಡು (ಸುಕುಮಾ. ೫-೨). [< ಪೊಲೆ + ಮಾನಸೆ]

**ಪೊಲವಿಡಿ** (ಕ್ರಿ). ನೆಲೆ ಮುಟ್ಟು: ಪೊಲವಿಡಿಯದು . ಬಗೆಯಮಮಾ ಬಲೆಯೊಳ್ ಕಣ್ಬಾಳೆ ತೊಡರೆ ಪಿಡುಕುಪುದಮಮಾ (ಶಶಂ. ೬-೦೭೪).
[ಪೊಲ + ಪಿಡಿ₁]

**ಪೊಲಸಂದು** (ನಾ). ಬೇರೆಬೇರೆ ಹೊಲಗಳು ಕೂಡುವ ಸ್ಥಳ: ಅನ್ನೆಬನ್ನು ಬೆಳ್ಗಲಿಯ ಇಗ್ಗಲಿಯ ಕಲ್ಸನ್ದಿನ ಮೂಜೂರ ಪೊಲಸನ್ದಿನ ಕಱಿಕೊಡಿಯನ ಕೆಱೆಯಿಂ (ಎಕ. III. ಶಂಕಶ. ೦೩೯-೨೩; 915 ?).
[ಪೊಲ + ಸಂದು₁]

**ಪೊಲಸೀಮೆ** (ನಾ). = ಪೊಲಮೇರೆ: ಮೂಜೂರ ಮುಕ್ಕೂಡಲಲ್ಲಿ ಪೊಲಸೀಮೆ ಕೂಡಿತ್ತು (ಮೈಶಿಅಂ. ೦೯೩೪. ೩೯-೨೦; 11ನೆಯ ಶಶ).
[ಪೊಲ + ಸೀಮೆ]

**ಪೊಲಸು₁, ಹೊಲಸು₁** (ನಾ). ೧. ಕೊಳೆ; ಕೊಳಕು; ಮಾಲಿನ್ಯ: ಅದ್ರಿಯುನಗೆಯೆತ್ತುವುರ್ವಿಯನಡಂಗಿಪ ಭಂಗಿಯೊಳಿಲ್ಲ ಭೇದಮಾ ಕ್ಷಯಪವನಂಗಮಾತನ ಗದಾಪವನಂಗಮದೊಂದೆ ರಕ್ತಚರ್ಚೆಯ ಪೊಲಸುಂಟಿದೈತ್ಯನ ಗದಾನಿಳನಲ್ಲದೊಡಾ ಕ್ಷಯಾನಿಳಂ (ಜಗಂ. ೯-೬೪); ಪೊಲಸಿನ ನೆರೆ ರುಧಿರದ ಕುಳಿ ವಿಲಿವಿಲಿಸುವ ಪುಳುಗಳೊಗೆವ ಪುತ್ತು ಪುರೀಷಮು ನೆಲಸಿದ ದರಿ ಕಾಮಾಹಿಯ ಬಿಲಮಂಗಜಗೃಹಮನಂಗದುರ್ಜಲಕೂಪಂ (ವೃಷಂ. ೨೯-೬೦). ೨. ಅಮೇಧ್ಯ; ಮಲ: ಪೊಲಸಿನಂತಶುಚಿಯಪ್ಪ . . . ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸುವುದೆಗ್ಗಕೆ (ಧರ್ಮಾಮೃ. ೩-೦೫೬). ೩. ಕಳಂಕ; ದೋಷ: 'ಪೊಲಸುಗೊಳ್' ಪರಾ. **ಹೊಲಸು₁**: ೧. ಹೊಲಸಱೆಯಟ್ಟ ನಾರ್ವ ನಿಜದೇಹದ ರಾಜತನೂಜನರ್ತಿಯಿಂ ತಳೆದುಪವಾಸದೊಂದು ಫಲದಿಂ ರತಿವಲ್ಲಭರೂಪನಾಗಿ ಕಣ್ಗೊಳಿಸಿ . . . ಅಮೃತೇಶನಾದಂ (ಪುಣ್ಯಾಸ್ರ. ೯-೦೭); ಬಾತ ಹೆಣ ನುಬ್ಬರದ ಹೊಲಸಿನ ಗವಲು ಕವಿದುದು ಕೂಡೆ ವನದೊಳಗೆ (ಕುಮಾ. ೧೦-೦೨); ಮೈಮೇಲೆ ಹೊಲಸು ಇದ್ದರೆ ಅದು ರೋಮರಂಧ್ರಗಳ ಬಾಯಿಗೆ ಕೂತು, ಬೆವರಿಗೆ ಅಡ್ಡಿ ಮಾಡುತ್ತದೆ (ಸುಂಜಯು. ೯-೨೪). ೨. ಹೊಲಸು ಮಾಂಸದ ಹುತ್ತ ಎಲುವಿನ ಹಂದರವು ಹೊಲೆ ಬಲಿದ ತನುವಿನೊಳಗಿರ್ದುಮದಱೊಳಗೆ ಕುಲವನಱಸುವರೆ (ಸರ್ವಜ್ಞ. ೨೦). ೪. ಕಸ; ಗಲೀಜು: ಮ್ಯುನಿಸಿಪಾಲಿಟಿಯ ಆರೋಗ್ಯಖಾತೆಯ ಟ್ರಕ್ಕೊಂದು ರಸ್ತೆಯ ಮೇಲೆ ಕೂಡಿ ಹಾಕಿದ ಹೊಲಸಿನ ರಾಶಿಯನ್ನು ತೆಗೆಯಲು ಬಂದು ನಿಂತಿತ್ತು (ಅಪೋಲೀ. ೦೦೨). ೫. (ಆಲಂ) ಹೀನವಾದ ಕಾರ್ಯ; ಕೆಟ್ಟ ಕೆಲಸ; ನೀಚಕಾರ್ಯ: ಇಂತಹ ಹೊಲಸಿನೊಳಗೆ ನಾನು ಕೈಹಾಕುವುದಿಲ್ಲ. ನನ್ನನ್ನು ಹಿಡಿದರೆ ನೀವು ಸಂಸ್ಥಾನದಿಂದ ಉಳಿಸಲು ಬರುವಿರಾ ? (ಕೊತಕಾ. ೬೦). ೬. ಅನಾಗರಿಕತೆ; ಅಸಭ್ಯತೆ: ಮಾತು ಹೊಲಸಿನ ಗಂಧವಾಗಿದೆ ಭೀತಿರಸದಲಿ ಮನ ಮುಳುಗಿತೀ ಪ್ರೀತಿ ಮಾಱಿಯ ಮುಸುಕನುಗಿವುದನಾರು ಕಲಿಸಿದರು (ಕುಮಾಸ. ೦೨-೬೬). (ಗು). ೭. ಕೊಳಕಾದ; ಅಶುದ್ಧವಾದ; ಮಲಿನವಾದ: ಹೊಲಸುಮೈಯುಪಗೇಕೆ ಹೊಸಕಸ್ತೂರಿವಾಟ ತಲೆದೋಱುವವಗೇಕೆ ದಟ್ಟಿ ಪುನುಗು (ಪುರಂದ. ೦-೦೦೦-೦); ನೆಲೆ ಇಲ್ಲದ ಕಾಯ . . . ಮಲಮೂತ್ರಂಗಳು ಕೀವು ಕ್ರಿಮಿಗಳುಳ್ಳ ಹೊಲಸು ತೊಗಲ ಮೆಚ್ಚಿ ಕೆಡಬೇಡಿರೊ (ಪುರಂದ. ೨-೦೦-೨).

**ಪೊಲಸಟ್ಟ ನಾಱು, ಹೊಲಸಟ್ಟ ನಾಱು** = ವಿಪರೀತವಾದ ದುರ್ನಾತದಿಂದ ತುಂಬಿರು: ಕಾಡ ಪಂದಿಗಳ ಬಲ್ಪೆಣದಿಂ ಪೊಲಸಟ್ಟ ನಾರ್ವ . . . ನೆತ್ತರ ಕೆಯ್ ನಡುಗಲ್ಕೆ (ಕಾದಂಪೂ. ೦೫೩); ಮೆಯ್ಯ ವ್ರಣಮುಂ ಕೀವುಂ ಪೊಲಸಟ್ಟ ನಾಱೆ (ಪುಣ್ಯಾಸ್ರ. ೬-೨೭ ಪ); ಮುಂದೆ ನೋಡದೆ ಹೊಲಸಟ್ಟ ನಾರ್ತಪುದು ಪೆರ್ಬುಲಿಯಿರ್ದಪುದಕ್ಕನುತ್ತ ಪೆರ್ಚಿದ ವನದಲ್ಲಿ ಪಜ್ಜೆವಟ್ಟೆಯಿಂ ನಡೆಗೊಂಡುದು ಭಿಲ್ಲಸಂಕುಳಂ (ದಕಕು. ೨-೧೫೦). **ಹೊಲಸಾಗು** = ಕೊಳಕಾಗು; ಗಲೀಜಾಗು: ಮೊದಲಿಗಿಂತ ನಾಲ್ಕುಪಾಲು ಹುಬ್ಬಾಗಿ ಸೀನು ಬಂದಿತು; ಮೂಗು ಇನ್ನಷ್ಟು ಹೊಲಸಾಯಿತು ! (ಸಂಚಿರು. ೩೬); ಮಗುವಿನ ಬಟ್ಟೆ ಹೊಲಸಾಗಿದೆ (ರೂಢಿ). **ಹೊಲಸು ಮಾಡು** = ೧. ಕೊಳಕು ಮಾಡು; ಮಲಿನಗೊಳಿಸು: ಅವನು ಕಸ ಚೆಲ್ಲಿ ಮನೆಯನ್ನೆಲ್ಲ ಹೊಲಸು ಮಾಡಿದ್ದಾನೆ (ರೂಢಿ). ೨. ಮಲವನ್ನು ವಿಸರ್ಜಿಸು; ಹೇಸಿಗೆ ಮಾಡು: ಮನೆಯ ಬಾಗಿಲಿನಲ್ಲಿ ನಾಯಿ ಹೊಲಸು ಮಾಡಿದೆ

(ಕೂಡ). ೩. ಕಳಂಕಗೊಳಿಸು ; ದೋಷಯುಕ್ತವನ್ನಾಗಿ ಮಾಡು : ನಿನಗೆ ಅಕ್ಕ ತಂಗಿ ಇಲ್ಲವೆ ? ಅವರ ಹೆಸರನ್ನು ಹೀಗೆ ಹೊಲಸು ಮಾಡಿದ್ದರೆ ನಿನಗೆ ಹೇಗೆ ಅನಿಸುತ್ತಿತ್ತು (ರಂಗಜೋ. ೯೯).

[ಪೊಲೆ + — ಸು₃. / ತುಳು. ಪೊಲಸ್, ಹೊಲಸ್]

**ಪೊಲಸು₂**, ಹೊಲಸು₂ (ನಾ). ಮಾಂಸ ; ಬಾಡು : ಮತ್ತಮಾನಂತೆ ಪೋಗೆವೋಗೆ ಪೊಲಸಿನ ಗಂಧಮಂ ಪೊತ್ತು ಕಿಱುಕವ್ವರೆಗೊಳ್ವ ಕೌರ ಪೊಗೆಯುನಱುಯಲಾದ ಬೇಡವಟ್ಟಮಂ ಕಂಡಂ (ಕಾದಂಸಾ. ೭೪೩) ; ಇವರವರ್ಗೆ ಕಪಟದಿಂದಂ ಸವಿನಯದಿಂದೆಱೆಯೆ ಕಳ್ಳನಾದರದಿಂ ಮತ್ತ ವರಿವರ್ಗೆ ತಂದು ಪೊಲಸಂ ಸವಿನಯದಿಂದಿಕ್ಕೆ ಕುಡಿದು ತಿಂದಂತಾಗಳ್ ಸಾವುದುಂ (ರಹೂತ್ಮ. ೨-೨೦೯). **ಹೊಲಸು₂** : ಕೊಲುವನೇ ಮಾದಿಗ ಹೊಲಸ ತಿಂಬವನೇ ಹೊಲೆಯು ಕುಲವೇನೋ ಅವಂದಿರ ಕುಲವೇನೊ (ಬಸವ. ೫೧೨) ; ಅವನ ಕಯ್ಯೊಳು ಹೊಲಸು ಮನದೊಳಮೃತಂ (ಕಬ್ಬಿ.ಕ. ಡಿ. ೦೯೯-೦೩).

[ದೇ. ॥ ತಮಿ. ಪುಲ್ಶು ; ತೆಲು. ಪೊಲುಸು]

**ಪೊಲಸುಗೊಳ್** (ಕ್ರಿ). ಕಳಂಕಿತವಾಗು ; ದೂಷಿತವಾಗು : ಕಾಯಿ ಮಡಿದವನ ಕೊಲೆಯಿಂದೆ ಪೊಲಸುಗೊಂಡೆಲ್ಲವನು (ಮುಹುರುಶಾ. ೦೦೯-೩೭೮).

[ಪೊಲಸು₁ + ಕೊಳ್₁]

**ಪೊಲಸುನಾಱು**, ಹೊಲಸುನಾರು, ಹೊಲಸುನಾಱು (ಕ್ರಿ). ಗಬ್ಬುನಾತ ಬರು ; ದುರ್ವಾಸನೆ ಬರು : ನೆತ್ತರೊಳ್ ಪೊರೆದು ನಿರಂತರಂ ಪೊಲಸು ನಾಱುವ ಮೆಯ್ಯನೆ ಕರ್ಚಲೆಂದು ಚೆಚ್ಚರವುವರಂಬುರಾಶಿಗಿೞಿವಂತೆ ಟಿದಂ ಕಮಳೈಕಬಾಂಧವಂ (ಹಂಪಶಾ. ೦೦-೫೦) ; ದೈತ್ಯನಂ ಪೊಲಸು ನಾರ್ಪನೆಗಂ ತ್ರಿಶೂಲದಿನೊತ್ತಿ ಕೊಂದ ಕುಮಾರಿ ಕೊರ್ತಲಸದಿರ್ಕೆ ಭುಜಾಸಿಧಾರೆಯೊಳಂಕಮುಳ್ಳರ ದೇವನಾ (ಕಾಬ್ಬಾ.ಕ. ೨೦೨). **ಹೊಲಸು ನಾರು** : ಕುಣಪ= ಹೊಲಸುನಾರುವ ಹೆಣ (ಗಂಗಾಪು. ೯೯). **ಹೊಲಸು ನಾಱು** : ಹೊಲಸುನಾರ್ವೆಳಜಲಚರಂಗಳು ಬೆಳಂಪು ನೆಱೆಯದ ಕಿಱುವೆಸಳ ನೆಯ್ದಿಲುಗಳೇ ಮಡದಿಯು ಕುಡಿತೆಗಂಗಳಿಗೆ ಪಡಿಯಲ್ಲ (ಬಸಪು. ೪-೨೫).

[ಪೊಲಸು₁ + ನಾಱು₁]

**ಪೊಲಸೇಳು**, ಹೊಲಸೇಳ್, ಹೊಲಸೇಳು (ಕ್ರಿ). ೧. ದುರ್ಗಂಧ ವ್ಯಾಪಿಸು.—ಹರಡು : ಶಿವಶಿವ ಇದೆಲ್ಲಿಯದ್ಭುತವೆನುತ ಪೊಲಸೇಳೆ ತಿರುಗಿ ಬಂದಗ್ಗಣಿಯುನೊಂದು ಠಾವಿನೊಳಿರಿಸಿ (ಕಬ್ಬಿ.ಕ. ದೇ. ೦೩೩-೨೦). **ಹೊಲಸೇಳ್** : ೧. ಮೇಲೆ ಮುಸುಕಿರ್ದ ಮಾಂಸಂ ಸುಲಿಯೆ ಹೊಲಸೇಳ್ದು (ಶಿ:ಕೋಶ. ಹ. ೫೦೦-೨೨). **ಹೊಲಸೇಳು** : ೨. ಕಸವು ತುಂಬಿರು ; ಗಲೀಜಾಗು : ಮನೆಯೆಲ್ಲ ಹೊಲಸೆದ್ದು ಹೋಗಿದೆ (ಕೂಡ).

[ಪೊಲಸು₁ + ಏಳು₁ (<ಏೞ್₁)]

**ಪೊಲಿ₁** 'ಪೊಲ್' ನೋ.

**ಪೊಲಿ₂**, ಹುಲಿ₂, ಹೊಲಿ₂ (ನಾ). (ಕರಾ) ಧಾನ್ಯರೂಪದ ಬಡ್ಡಿ ; ತಲವಾಸಿ : ನೂರ್ಕೊಣ್ಣುಗ ಭತ್ತ ಪೊಲಿಯು ಕೊಣ್ಣುಟ್ಟುವೊದು (ಎಕ. X, ಕೋಲಾರ. ೬-೯ ; 758) ; ಮುಡಿಗೆ ಒಂದು ಕಳಸಿಗೆ 'ಪೊಲಿ' (ಜಾಬಿ. ೩೮). **ಹುಲಿ₂** : ಗದ್ದೆ ಕೊಯ್ಲಾದ ನಂತರ ಹುಲಿ (ಬಡ್ಡಿ) ಸೇರಿಸಿ ಒಂದಕ್ಕೆ ಎರಡರಷ್ಟು ಭತ್ತವನ್ನು ಹಿಂದಕ್ಕೆ ಕೊಡಬೇಕಾಗಿತ್ತು (ಹ:ಜಪ. ೮). **ಹೊಲಿ₂** : ಅಕ್ಕಿ ಮಳೆಗಾಲದಲ್ಲಿರಿಸಿಕೊಂಡು ಹೊಲಿಗೆ ಕೊಟ್ಟರೆ ಪ್ರಯೋಜನವಿದೆ (ಮುಗಿಯು. ೬೬) ; ಎಷ್ಟೋ ಮಂದಿ ಅವರಿಂದ ಹೊಲಿಗೆ ಬತ್ತ ಹೊಂದಿಕೊಂಡಿದ್ದರು (ಪ:ಸಕೊ. ೩).

[ದೇ. ॥ ತಮಿ. ಮಲ. ತುಳು. ತೆಲು. ಪೊಲಿ]

**ಪೊಲಿಕೇಶಿ** 'ಪುಲಿಕೇಶಿ' ನೋ.

**ಪೊಲಿಗೆ** 'ಪೊಲ್ಗೆ' ನೋ.

**ಪೊಲಿಸು**, ಹೊಲಿಸು (ಕ್ರಿ). (ಹರಿದುದನ್ನು ಜೋಡಿಸಿ) ಹೊಲಿಗೆ ಹಾಕಿಸು : ಹಾಸನಟ್ಟದು ಕಂಥೆಯಂ ಪೊಲಿಸುವ (ರಹೂತ್ಮ. ೩-೨೦) ; ಸಂಜೆಗೆಂಪಿನ ತೆಳ್ಪಮರ್ದಿರೆ ಪೊರೆಯನೆತ್ತಿ ಪೊಲಿಸಿದ ತೆಱದಿಂದೊಳ್ಪಿನ ಪೊಸಟೊಪ್ಪರಂ . . . ಎಸೆದುದು (ಲೀಲಾಶ. ೯-೭೩). **ಹೊಲಿಸು** : ಹೋಳಾದ ಕವಚವ ಹೊಲಿಸಿದರು (ಕುಮಾ.ಭಾ. ೫-೩೬) ; ಚೀನಸುಗಳ ಡಾಗಗಳನ್ನು ಹೊಲಿಸಿ ತಯಾರ ಇಡೋಣ (ಮುಂಬಯ್ಯಾ. ೨೬೯).

[ಪೊಲ್ + — ಇಸು₁]

**ಪೊಲುಕೇಸಿ** (ನಾ). ಒಬ್ಬಾತನ ಹೆಸರು : ಪೊಲುಕೇಸಿಯು ಬೂದಿಗನ ಕಾಳಿಗದೊಳ್ ಪೊಲುಕೇಸಿಯೊಡತಿಹದು ಕೊಕಾಳಿನ ಕೊನ್ದು ಸತ್ತ (ಎಕ. III, ಮೈಸೂರು. ೯೯-೬ ; ಸು. ೫೦೦ ?). 'ಪುಲಿಕೇಶಿ' ಪರಾ. [?]

**ಪೊಲೆ**, ಹೊಲೆ (ನಾ). ೧. ಮೈಲಿಗೆ; ಸೂತಕ : ಮಾನವರ ಮುಖ್ಯಾಜನಂ ಪೊಲೆ ಸುರಗುರ್ಣಾಚಿತವಲ್ಲ (ಕೃಬಶಾ. ೫-೨೫). ೨. ಮುಟ್ಟು ; ರಜಸ್ಸು: "ಮುಟ್ಟವೆಯನೆ ಮಾಣಿಕವೆನೆ ಮುಟ್ಟೆನೆ ಪೊಲೆ ಸೂತಕಾಭಿಧಾನಂ" (ಶಬ್ದಾ. ೫೦); ಪೊಲೆ ಪಿಂಗದೆ ಪೊಂಗುವುದಕ್ಕಲಸುವರಾಳಿಜನಂಗಳ್ (ಪುಪ್ಪ.ಪು. ೩-೮೩). ೩. ಕೆಟ್ಟುದು ; ಒಳ್ಳೆಯದಲ್ಲದುದು : ಪೊಲೆ ಮುಳಿಸಂಬುದಾ ಮುನಿಸು ಪುಟ್ಟಿದ ಪೊಟ್ಟಜೆಳಾವನಾದೊಡಂ ಪೊಲೆಯನೆ (ಕಂಪಶಾ. ೦೦-೯೯). ೪. ಪಾಪ ; ದೋಷ ; ಕಳಂಕ : ಪೊಲೆ ಮಸಗಿ ದಿಕ್ಕುವರೆ ಗಂತಲಸದೆ ಭಾರತಮನೆಯ್ದೆ ಕಿಡೆ ಪೇಟ್ದುದಱಿಂ ಪೊಲೆಯರ ಬಸಿಱೊಳ್ಪಂ ದಮ್ಮ ಕಿನಾತ್ಮಂ ವ್ಯಾಸನೆಂಬರಿವನಿದನಱಿಯರ್ (ಸಪುಶ. ೦೦-೦೭೯) ; ನುಡಿಯೆಲ್ಲಂ ಪೊಲೆ ಸೂರುಳೊಳ್ ನಿಱಿ (ಲೀಲಾಶ. ೨-೦೦೨) ; ಪೊಲೆ ಪೊರ್ದಲ್ ಪೇಸಿ ಬೇಸರದಿ (ಎಕ. VII, ಶಿಕಪೂ. ೫-೬ ; 1218) ; ಮರ್ದಲ್ಲು ಪೊಲೆಗೆ ಪೊಲೆ (ಅಕ್ಕಾಶ್ಮಾ. ೦೫-೩೦೨). **ಹೊಲೆ** : ೧. ಹೊಲತಿ ತನ್ನ ಹೊಲೆಯ ಮಱೆದು ಶುದ್ಧನೀರ ಮಿಂದೆನೆಂದು ಕೆಲವರ ಮುಟ್ಟುವಂತೆ . . . ತ್ರಿಕರಣ ಶುದ್ಧವಿಲ್ಲದ ಪೂಜೆ (ಕೋಟಶಾ. ೩೯-೦೫೨); ಸೂರ್ಯನ ಕಿರಣ ಹೊಲೆಯನ ಚಾಚಿಸಿದರೆ ಹೊಲೆ ಹೊಱುವುದೇ (ಕುಮಾ.ಭಾ. ೩-೯೫); ಈ ದೇಹದೊಳು ನೀ ನೆರೆಸಿರಲು ಹೊಲೆಯುಂಟೆ (ಹಂಪಾ. ೯೯). ೨. ಜನನ ಮರಣದ ಸೂತಕಂ ಕೆಡುವ ತೆಱದಿ ಕೆಟ್ಟವು ಹೊಲೆಗಳಾ ದಿವಸಕೆ (ಸಿದ್ಧರಾ. ೦-೩೯). ೪. ಹುಸಿಯೆಂಬುದೇ ಹೊಲೆ (ಮುಹಾದೇ. ೩. ೫೬-೦೯೦) ; ಮುನಿಗೆ ಹೊಲೆಯಾವುದತಿ ಕೋಪ ಬದ್ಧದ್ವೇಷ (ಹಶಕಾ. ೬-೨); ನಿನಗಿನ್ನವದೆಸೆಯು ಹೊಲೆ ಹೋಯ್ತು (ಕುಮಾ.ಸ. ೦೯-೬೨). ೫. ಕೊಳಕು ; ಮಲ ; ಹೇಸಿಗೆ : ಹೊಲಸು ಮಾಂಸದ ಹುತ್ತ . . . ಹೊಲೆ ಬಲಿದ ತನುವಿನೊಳಗಿರ್ದುಮವಱೊಳಗೆ ಕುಲವನಱಸುವರೆ (ಸರ್ವಜ್ಞ. ೭೦). ೬. ಮೋಸ : ಮೂತ್ರದ ಕುಳಿಯು ಹೊಱವಡುವಾಗ ಹೊಲೆ ಮುಂತಾಗಿ ಮುದುಡಿ ಬಿದ್ದಲ್ಲಿ ಹೆತ್ತವಳು ಹೊಲತಿ ಮುಟ್ಟಿದ ಮಗುವು ಹೊಲೆಯನೆಂದು ನಿಮ್ಮ ಕುಲಗೋತ್ರ ಮುಟ್ಟಲಮ್ಮದೆ (ಸರ್ವಶ. ೦೭೫-೮೨೯).

**ಹೊಲೆಯಾಗಿರು**=(ಸ್ತ್ರೀಯು) ರಜಸ್ವಲೆಯಾಗಿರು ; ಮುಟ್ಟಾಗಿರು : (೪). **ಹೊಲೆಯಾಗು**=ಅಪವಿತ್ರವೆನಿಸು ; ಅಮಂಗಳವಾಗು : ಒಳ್ಳೇ ಕೆಲಸದ ಅರಿವು ಇರದ್ದರಿಂದ ಅವರ ಆಯುಷ್ಯವೆಂಬುದು ಹೊಲೆಯಾಗಿತ್ತು (ಗಾರಾಂಗ. ೯೬).

[ದೇ. ॥ ತಮಿ. ಪುಲ್ಶೆ ; ಮಲ. ಪುಲ ; ತುಳು. ಪೊಲೆ, ಪಿಲೆ, ಹೊಲೆ ; ಕೊಡ. ಪೊಲೆ]

**ಪೊಲೆಕೇಶಿ** 'ಪುಲಿಕೇಶಿ' ನೋ.

**ಪೊಲೆಕೇಸಿ** 'ಪುಲಿಕೇಶಿ' ನೋ.

**ಪೊಲೆಗ** 'ಪೊಲಗ' ನೋ.

**ಪೊಲೆಗಲಸು₁**, ಹೊಲೆಗಲಸು (ಕ್ರಿ). ೧. ಅಪವಿತ್ರಗೊಳಿಸು ; ಮೈಲಿಗೆಯಂಟಿಸುಮಾಡು : ಕಲ್ಲಂ ಮರನಂ ಕುಲದೈವಮೆಂದು ಪೂಜಿಸಿ ಪೊಲೆಗಲಸುವ ಪೆಂಡಿರಿಂದೆ ಬೆಳಗದು ಧರ್ಮಂ (ಸಪುಶ ೫-೯೩) ;

ಇಂದೀ ಗಳಿಗೆಯೊಳು ಹೊಲಗೇರಿಯೊಳೊರ್ವ . . . ಭಕ್ತನ ಮನೆಯೊಳಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲಸಲುಂ ಬಂದಪಂ (ಬಸರ. ೦೦-೩೦) ; ಕುಲಹೀನನೋರ್ವನಂ . . . ನಿಲಯಕ್ಕೆ ತಂದು ಕಾಲ್ತೊಳೆದು ತಜ್ಜಲವೀಂಟಿಯುಣಲಿಕ್ಕಿ ವಿಕ್ಕುದುಂಡು ಪೊಲೆಗಲಸಿದಂ (ಪದ್ಮರಾ. ೪-೪೦). ೨. ಮೈಲಿಗೆಯಾಗು ; ಅಪವಿತ್ರವಾಗು : ಪೊೞಲ ಬೇಳ್‌ಕಟ್ಟೆಗಳ್, ಮನೆಯ ಬೇಳ್‌ಕಟ್ಟೆಗಳ್, ಎಲ್ಲಮುಮವ್ ಪೊಲೆಗಲಸಿಯಿರ್ದತ್ತು, ಕೊಲೆವಿಟ್ಟ ದುರ್‌ವಿಧಿಯ ಒಯ್ದು ಪೌಸ್ ಮಗನ ಪೆಣದಿನ್ ಪರ್ದುಗಳ್ ನಾಯ್ಗಳುಮವ್ ಪಿಕ್ಕಿದರೆಯಿನ್ (ಅಂತಿಗೂ. ೪೩-೯೩೮). **ಹೊಲೆಗಲಸು :** ೧. ನಿಮ್ಮೂರ ಭೋಗಣ್ಣನೆಂಬ ಭಕ್ತಂ ಮಾಱಿ ತಮ್ಮ ಭಕ್ತಾಚಾರವೆಗ್ಗಳಂ ತಲೆಗೇಱಿ ಹೊಲೆಗಲಸಿ ನೆಲೆಗೆಟ್ಟು ಛಲವುಡುಗಿ ಕುಲಪಳಿದು ಹೊಲೆಯನೆನ್ನದೆ ಹಿರಿಯ ಭಕ್ತನೆಂದಱಿದೞಿದು (ಶೋಗರ. ಹ. ೨೭೪-೯) ; ನೀನು ದೇಶಭ್ರಷ್ಟನಾಗಿದ್ದು, ಹಿಂತಿರುಗಿ ಬಂದುದಕ್ಕಾಗಿಯೂ ನಿನ್ನ ತಂದೆಯ ಏಕಾಂತ ಭವನವನ್ನು ಪ್ರವೇಶಿಸಿ ಹೊಲೆಗಲಸಿದುದಕ್ಕಾಗಿಯೂ ತಕ್ಕ ಫಲವನ್ನು ಅನುಭವಿಸುವೆ (ಕಾರವೀ. ೦೦೦). ೨. ಬಲ್ಲಹನೆ ಕಲ್ಯಾಣಕಟಕವದೆಲ್ಲವುಂ ಹೊಲೆಗಲಸಿ ಹೋಯಿತು (ಬಸವು. ೩೩-೭) ; ಅಗ್ರಹಾರಂ ಹೊಲೆಗಲಸಿತೆನುತಾಗ್ರಹಿಸಿ ವಿಪ್ರರು ನುಡಿವುತಿರೆ (ಬಸವು. ೩೭-೩೮). ೩. ಕೆಡಿಸು ; ಹಾಳುಮಾಡು : ಹೊಲೆಗಲಸದ ಯೋಗಿ ಹೊಲೆಗಲಸದುಳಿವನೇ ಹೊಲೆಗಲಸದಿಪ್ಪ ಕಡುಮೂರ್ಖ ಶಿವಯೋಗಿ ಹೊಲೆಗಲಿಸಿ ಹೋಹ (ಸರ್ವಜ್ಞ. ೩೯೮). ೪. ಜಾತಿಸಂಕರ ಮಾಡು ; ವರ್ಣಸಂಕರ ಮಾಡು : ಸಲುವದಷ್ಟಾದಶ ವಿವರ ವರ್ಣಂಗಳಾದಿಯಲಿ ಇಳೆಯೊಳವು ತಾನೀಗಲಾದವೆ ಹೊಲೆಗಲಸಿ ಕುಲಸಂಕರವನಗ್ಗಳಿಸಿ ಈ ಕಲ್ಯಾಣಕಟಕವನಿಂತು ಕೆಡಿಸುವರೇ (ಬಸವು. ೩೩-೧೨). [ಪೊಲೆ + ಕಲಸು₁]

**ಪೊಲೆಗಲಸು₂** (ನಾ). ಜಾತಿಸಂಕರ ; ವರ್ಣಸಂಕರ : ಯುಧಿಷ್ಠಿರನಾಳ್ವ ದೇಶದೊಳ್ಕಳವು ಕೊಲೆ ಪಾದರಂ . . . ಪೊಲೆಗಲಸು . . . ಮೊಳೆದೋಱವು (ಕೃಷಿಶಾ. ೨-೩). [< ಪೊಲೆಗಲಸು₁]

**ಪೊಲೆಗಿಡಿಸು** ' ಪೊಲೆಗೆಡಿಸು ' ನೋ.

**ಪೊಲೆಗೆಡಿಸು,** ಪೊಲೆಗಿಡಿಸು, ಹೊಲೆಗೆಡಿಸು (ಕ್ರಿ). ಮಲಿನಗೊಳಿಸು ; ಅಪವಿತ್ರಗೊಳಿಸು : ಒಲವರದಿಂದಲ್ಲದುದಂ ಸಲೆ ನುಡಿದಪರಿದುವೆ ಚೋದ್ಯಮವರೊಳ್ಕರ್ಮಂ ಪೊಲೆಗೆಡಿಕುಂ ಪೊಲೆವಡಿಕುಂ ತೊಲಗಿಕುಮಪವರ್ಗಮಾರ್ಗದಿಂ ಭವ್ಯನುಮಂ (ಚಾರಿ. ೩೦೩). **ಪೊಲೆಗಿಡಿಸು :** ಪೊಲೆಯನಂಕಿಟ್ಟುವ ದೇವರುಂಟೆ . . . ನೀಂ ಬಱಿದೆ ಕೊಂಡುಯ್ದು ವೈಕುಂಠಮಂ ಪೊಲೆಗಿಡಿಸದಿರಿಂ (ರಾಮಾಶ್ವ. ೮೦-೦೦). **ಹೊಲೆಗೆಡಿಸು :** ಒಂದು ಮಾತನು ಲೋಕ ಹೊಲೆಗೆಡಿಸಿಕೊಂಡಿಹುದು, ಹೊರೆಗೆಡಿಸೆನದನು ನಾನು (ತಂಗೀತ. ೩೩-೦). [ಪೊಲೆಗೆಡು + – ಇಸು₃]

**ಪೊಲೆಗೆಡು,** ಹೊಲೆಗೆಡು (ಕ್ರಿ). ೧. ಹೀನಸ್ಥಿತಿಗೆ ಇಳಿ ; ಕೀಳಾಗು : ಕೊಟ್ಟೊಡಮೇಂ ಕನ್ನಿಕೆಯಂ ಕೊಟ್ಟೊಂಗಮಿದಾಗದೆಂದು ಕುಡೆ ಕೊಂಡೆನಗೇಗೆಟ್ಟಪುದೆಂದು ಮನಂ ಪೊಲೆಗೆಟ್ಟರೆ ಕೊಂಡಂಗಮೆನಗಮಱಿಯಲ್ಕಕ್ಕುಂ (ಶಾಂತಿಪು. ೩-೪೪) ; ಕಾಟ್ಕಬ್ಬಮಂ ಕಟ್ಟಿ ಕೋಟಲೆಗೊಂಡೂಳ್ವವನೊರ್ವನೊಲ್ದವರ ಚಾತುರ್ಯಕ್ಕೆ ಕೈವಾರಮಂ ಪೊಲೆಗೆಟ್ಟೇವವನೊರ್ವಂ (ರೀಲಾವ. ೦-೪೦). **ಹೊಲೆಗೆಡು :** ೧. ಕುಲ ಜಾತಿಗೆಟ್ಟು ಕೂಳುಣಲುಡ ಹಡೆಯದೆ ಹೊಲೆಗೆಟ್ಟು ಹುಟ್ಟು ಹೋದಳಿದು ನೆಲಹೊರದಾ ಮೆಯ್ಗೆಟ್ಟು ಸಿದ್ಧರ ಪಾದ-ಲಘುಭಕ್ತಿಯೊಳಿಱಿಗುವೆನು (ಪ್ರಭುಲಿ. ೩-೨). ೨. ಮುಟ್ಟಾಗುವುದು ನಿಲ್ಲು : ಎನ್ನ ಹರೆಯಂ ಬಿಟ್ಟು ಜರೆವಟ್ಟು ಹೊಲೆಗೆಟ್ಟು . . . ಧಾತುಗಳು ಪಲ್ಲಟವಾದವು ಇನ್ನು ನಾನೆತ್ತ ಮಗನಂ ಹಡೆವುದು (ಸಿದ್ಧರಾ. ೦-೪೦) ; ಹೊಲೆಗೆಟ್ಟು ಹೊಸಬೇಟಗೆಯ್ವ ಪಾತಕಿ ಮೊಗ್ಗೆಮೊಲೆವೆಂಗಳಿಗೆ ಪೇಳ್ದಪರೇ (ಮೋಹತ. ೧೮-೭೮). [ಪೊಲೆ + ಕೆಡು₁]

**ಪೊಲೆಗೆಯ್** (ಕ್ರಿ). ಅಪವಿತ್ರಗೊಳಿಸು ; ಕಲುಷಿತ ಮಾಡು ; ಕೆಡಿಸು : ನೆನೆಯ ಮತ್ತವನ ತಾಯ್–ಪೆಂಡತಿಯನ್ . . . ಪುರಿನೇಣಿನುಸಿರ್ದಿಱಿಪೊಲೆಗೆಯ್ದು ಬಾಟನೀಡಾಡಿದಳ್ (ಅಂತಿಗೂ. ೩-೪೪). [ಪೊಲೆ + ಕೆಯ್₁]

**ಪೊಲೆಗೆಳೆ** (ನಾ). ಕೆಟ್ಟ ಸ್ನೇಹಿತ : ಆ ಪಾಪಕರ್ಮಂ ಪೊಲೆಗೆಳೆಯುತೆಯುಂ . . . ರಾಜ್ಯಕ್ಕಾಸವಟ್ಟು ನಿನ್ನಂ ಕೊಂದಪಂ (ಶಂಶತಂ. ೯೨-೧೦). [ಪೊಲೆ + ಕೆಳೆ₂]

**ಪೊಲೆಗೇರಿ,** ಪೊಲಗೇರಿ, ಹೊಲಗೇರಿ, ಹೊಲೆಗೇರಿ (ನಾ). ಹೊಲೆಯರು ವಾಸಿಸುವ ಓಣಿ : ಪೂದೋಟ ಮತ್ತರೊನ್ದು [ಪೊ]ಲೆಗೇರಿಯ ಪಾಳರೆಮತ್ತರು (ಪಾಂಡೇಟ್. ೪-೨೦ ; 1049); ಪಟ್ಟಣಮಂ ಬಿಟ್ಟು ಪೊಲಿಗೇರಿಯೊಳ್ ಪಡುವಂತೆ (ಧರ್ಮಾಮೃ. ೦೦-೦೭೨); ಪೊಲೆಗೇರಿಯೊಳುರಿನೆಗೆದೊದವೆ (ಬಿಂಹು. ೦೪-೨೭ ರಗಳೆ). **ಪೊಲಗೇರಿ :** ಆ ಮೊಸಳೆ ತನುವಸುಱಿದು ಬಱಿಕ್ಕಾ ಪೊಲಗೇರಿಯಾಡಿನುದರದೆ ನೆಲಸಿ (ಯಶೋಧ. ೩-೪೯). **ಹೊಲಗೇರಿ :** ಹೊಲಗೇರಿಯ ಪಡುವಣ ಕರುವಗೆಯ್ಕೊಂದು ತೆಂಕಲಾಱು ಮತ್ತರು (ಸೌಇಇ. IX-I, ೩೦-೦೮; 1005); ಹೊಲಗೇರಿಯೊಳೊರ್ವಂ . . . ಹಿರಿಯ ಭಕ್ತನ ಮನೆಯೊಳಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲಸಲುಂ ಬಂದಪಂ (ಬಸರ. ೦೦-೨೯) ; ಹೊಲಗೇರಿಲಿ ಹೊಲೆಯ ಹೊಲಶಿಲ್ಲ (ಪುರಂದ. ೦-೧೦೭ ಅನುಶಿಲ್ಲಿ). **ಹೊಲೆಗೇರಿ :** ನೆಲನೋಂದೆ ಹೊಲೆಗೇರಿ ಶಿವಾಲಯಕ್ಕೆ ಜಲವೊಂದೆ ಶೌಚ ಮಜ್ಜನಕ್ಕೆ (ಬಸವ. ೯೭೮); ಶಿಲೆಯೊಳುಂಟೇ ಮೃದುವಱಿಸಲಂಬಿಲದೊಳುಂಟೇ ಬೆಣ್ಣೆ ಕರುಣಾಸುಲಭ ಹೊಲೆಗೇರಿಯೊಳಗುಂಟೇ ವೇದಘೋಷಣವು (ಬಸವು. ೩೦-೨೮). [< ಪೊಲೆಯ + ಕೇರಿ]

**ಪೊಲೆತಾಳ್ವ** (ನಾ). ಒಬ್ಬಾತನ ಹೆಸರು : × × ಸತ್ತ ಪೊಲೆತಾಳ್ವನ ಮನೆವಗತಿ ಆಡಿಶದಥ × × × (ವೈಇಂ. ೧೯೪೨, ೩-೭ ; 973). 'ಪೊಲೆತ್ತಾಳ್ವ' ಪಠಾ. [ ? ]

**ಪೊಲೆತೆಱೆ³,** ಹೊಲೆದೆಱೆ³ (ನಾ). ಒಂದು ಬಗೆಯ ತೆರಿಗೆ : ತೆಱೆ³ಯಂ ಕಿಱುದೆಱೆ³ಯುಂ ಪೊಲೆತೆಱೆ³ಯುಂ ಮಾನ್ಯಕ್ಕೆ ಬಂದ ತೆಱೆ³ಯುಂ ದೇವತ್ರೆಱೆ ವೇಳ್ಕುಮೆಂಬ ಪಾತಕನಱಿದೀಗಳೊಳಟಿಗುಂ (ಕೊಲ್ಹಾಶಾ. ೩-೪೭; 1110). **ಹೊಲೆದೆಱೆ³ :** ಬಡಗಿಕೂಟೆಯ ಮನೆದೆಱೆ³ ಹೊಲೆದೆಱೆ³ ಸಾದಂ ಬಣ್ಣಿಗೆ ಬಳಂಬೆಯ ತೆಱೆ³ ತಳಸಾರಿಗೆ ಕಾಣಿಕೆ ಕವಣಾಯ ದಣ್ಡದಾಯ ವಿನ್ನಿನಿತುಮಂ . . . ಕೊಟ್ಟರ್ (ಸೌಇಇ. IX—I, ೦೭೨-೦೮ ; 1109) ; ಶ್ರೀವೈಜನಾಥದೇವರಿಗೆ ಶಿವಪುರದ ಹಲುಗೂರ ಸುಂಕ ಆಗಂತುಕ ಹೊಲೆದೆಱೆ³ ಗಾಣದ ತೆಱೆ³ . . . ಕೈಯಾರ ಧಾರಾಪೂರ್ವ್ವಕಂ ಮಾಡಿ ಕೊಟ್ಟದತಿ (ಎಕ. XIV, ಮಂಡ್ಯ. ೦೪೦-೩ ; ?). [ಪೊಲ₇ + ತೆಱೆ³₃]

**ಪೊಲೆತ್ತಾಳ್ವ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀಮತ್ ಶ್ರೀಪುರುಷ ಮಹಾರಾಜಂ ಪೃಥ್ವೀರಾಜ್ಯಂಗೆಯ್ಯೆ ಪೊಲೆತ್ತಾಳ್ವೊರನ್ನ ಕರಿಕನಾಡ ಬದಿಕ್ಕ್ಯಲ್ಲಾಳ್ದ ಕುಕ್ಕರ ಪಾಳಿಕ್ಕಾಱಿನಾಡಿಯರ್ ತುರಿದು (ಎಕ. IX, ಬೆಂಗಳೂ. ೩೭-೨ ; ಸು. 750). [?]

**ಪೊಲೆನುಡಿ** (ನಾ). ಹೊಲಸುಮಾತು ; ಕೀಳುನುಡಿ : ಐವರೊಡವುಟ್ಟಿದರು ಸನ್ನುತರು ಲಲನೆಯೋರ್ವಳನಾಳ್ದರೆಂಬೀ ಪೊಲೆನುಡಿಗೆ ಕಿವಿಗುಡದೆ (ಸಾಳ್ವಭಾ. ೦-೪೭). [ಪೊಲೆ + ನುಡಿ₂]

**ಪೊಲೆಬೂತು** (ನಾ). (ಅಲಂ) ಕ್ಷುದ್ರವ್ಯಕ್ತಿ : ಪಾಣ್ಬುಯಪ್ಪ ಸಜ್ಜನೆಯಂತೆ ಸಿಡಿಮಿಡಿಗೊಳ್ಳದೆ ಪೊಲೆಬೂತಿನಂತೆ ಕಿಡೆನುಡಿಯದೆ . . . ನಿಂದು ಸುವ್ರತಂಗಳಂ ತಾಳ್ದಿ (ಧರ್ಮಾಮೃ. ೦೦-೩೭). [ಪೊಲೆ + ಬೂತು₁]

**ಪೊಲೆಮನೆ,** ಹೊಲೆಮನೆ, ಹೊಲೆವನೆ (ನಾ). ೧. ಸಾಮಾಜಿಕವಾಗಿ ಚಾತುರ್ವರ್ಣಗಳಿಂದ ಬೇರೆಯಾಗಿರುವವರ ಮನೆ (?) : ಅಲ್ಲಿ ಬೆಸಗೆಯ್ವ ಕಲ್ಕುಟಿಗರ ಮನೆ ೧ ಸಾವಗರಿಪ್ಪ ಪೊಲೆಮನೆ ೧ (ಇಇ. XIX, ೨೭೩-೪೦; 1064). **ಹೊಲೆಮನೆ:** ೨. ಹೆಂಗಸರಂ ಮುಟ್ಟಾದಾಗ

ಉಳಿದುಕೊಳ್ಳುವ ಮನೆ : (೬). ೩. ಹೆರಿಗೆಮನೆ ; ಸೂತಿಕಾಗೃಹ : ಅವರಿಗೆ ಒಂದು ಗಂಡುಮಗುವೂ ಆಗಿತ್ತು . . . ಹೊಲೆಮನೆಯಲ್ಲಿಯೇ ಸತ್ತು ಹೋಯಿತು (ಬಂಕಿಮ. ೬೩); ಕೃಷ್ಣನು ಹೊಲೆಮನೆಗೆ ಹೋಗಿ ನಿಶ್ಚೇತನವಾಗಿ ಬಿದ್ದಿದ್ದ ಮಗುವನ್ನು ನೋಡಿ . . . ಕೈಯಾಡಿಸಿದನು (ಬಕಥಾ. ೪೬೬). **ಹೊಲೆಮನೆ :** ೪. ಹೊಲೆಯನ ಮನೆ (?) : ಹೊಲೆಮನೆಯಿಂದಂ ಕಷ್ಟಂ ಪಲಲಮಯಂ ದೇಹಮಿದಱೊಳೊಲ್ದಿರ್ಪನ್ನಂ ಹೊಲೆಯಂ ಕಷ್ಟನದಾವಂ (ಉಸಾರ. ೪೦-೨೪೬).

[ಪೊಲೆ + ಮನೆ]

**ಪೊಲೆಮುಡಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀಮರಿಗರ ಪೊಲೆಮುಡಿ ಕೊಟ್ಟುದು ಸೊಡರು ಆಚನ್ದ್ರತಾರಕಂ (ಎಕ. VII. ಶಿಕಾ. ೪೫-೬೪ ; ಸು. 890 ?). [ಪೊಲೆ + ಮುಡಿ]

**ಪೊಲೆಮೋರೆ** 'ಪೊಲಮೋರೆ' ನೋ.

**ಪೊಲೆಯ, ಹೊಲೆಯ** (ನಾ). ೧. ಪಂಚಮವರ್ಣಕ್ಕೆ ಸೇರಿದವನು ; ಚಾಂಡಾಲ : ಎಯ್ದಿದಂ ಪೊಲೆಯನಾ ಪೊಲೆವಟ್ಟಿನೊಳಿರ್ದ ಕನ್ನೆಯಂ ಕಂಡು ಗೆಂಟಱೊಳೆ ಪೊಡೆವಟ್ಟು (ಕಾದಂಬ. ೬೪೭) ; ಪೊಲೆಯರ್ತಮ್ಮಯ ಕೇರಿಗೆ ಪೊಲೆಯರ್ಬರೆ ತುಷ್ಟಿ ಮಾಳ್ಪರ್ (ಸಮುಶ. ೪-೯೭) ; ಪಿತ್ತಳೆಯ ತೊಡವು ಪೊಲೆಯರ್ಗುತ್ತಮಮೆನಿಸಿರ್ದ ಪೊನ್ನ ತೊಡವೆನಿಸುವವೋಲ್ (ರರ್ಮಾಮೃ. ೪-೩೫). ೨. ನೀಚ ; ಕೆಟ್ಟವನು : "ಸಿತಗನುಂ ಪೊಲೆಯನೆಂದಕ್ಕು" (ಕಬ್ಬಿಗ. ೯೩) ; ನಿನ್ನಿಂದ ಬಿಟ್ಟು ಪೊಲೆಯರ್ನಿನ್ನುಮ್ಮನ್ನಾದೊಡೊಳರೆಯಿಂತೀ ಪುರದೊಳ್ (ಪುಣ್ಯಾಸ್ರ. ೬-೨೨). ೩. ಕುಲಹೀನನಾದವನು : ಕಲಿಯನೆ ಪಂದೆ ಮಾಳ್ಪ ಕಡುವಂದೆಯನೊಳ್ಗಲಿ ಮಾಳ್ಪ ತಕ್ಕನಂ ಪೊಲೆಯನೆ ಮಾಳ್ಪ ಮುಂ ಪೊಲೆಯನಂ ನೆಱೆ ತಕ್ಕನೆ ಮಾಳ್ಪ ತಮ್ಮೊಳಗ್ಗಲಿಸಿ ಪೊಮಟ್ಟು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಮದಱಿಂದಮೋಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ (ಶಂಶಭಾ. ೧೨-೯೨). **ಹೊಲೆಯ :** ೧. "ಅಂತಾವಸಾಯಿ ಚಂಡಾಳಂ ತಾ ಹೊಲೆಯಂ ಜನಂಗಮಂ ಮಾತಂಗಃ" (ಬಸ್ತುಕೋ. ೬೬-೮೭) ; ಹೊಲಸ ತಿಂಬವನೇ ಹೊಲೆಯ (ಬಸವ. ೫೯೨); ಅತಿ ಹುಸಿವ ಯತಿ ಹೊಲೆಯ (ಹಪಕಾ. ೧೪-೧೧); ಹೊಲೆಯ ಹೊಱಗಿಹನೆ ಊರೊಳಗಿಲ್ಲವೆ . . . ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ (ಪುರಂದ. ೧-೧೬೮ ಪಲ್ಲವಿ). ೨. ಹೊಲೆಯ ಹೋಗೇದ ಒಲೆ ಮುಖದಿರುಹಿದಳು ಖಾತಿಯಲಿ (ತೊರರಾ. ೫-೩-೫೫).

[ಪೊಲೆ + -ಅ₇./ತಮಿ. ಪುಲೈಯ ; ಮಲ. ಪುಲಯ ; ಕೊಡ. ಪೊಲೆಯ]

**ಪೊಲೆಯಣ್ಣ** (ನಾ). ಒಬ್ಬಾತನ ಹೆಸರು : ಮರಿಗೆಱೆಯಿಂ ಬನ್ದ ಪೊಲೆಯಣ್ಣನ ಶಿಲಾಕಮ್ಮರ್ (ಸೌಇಇ. XI-i, ೧೧-೨೬; 865). [ಪೊಲೆ + ಅಣ್ಣ₁]

**ಪೊಲೆಯಮ್ಮ, ಹೊಲೆಯಮ** (ನಾ). ಒಬ್ಬಾತನ ಹೆಸರು : ಪೊಲೆಯಮ್ಮ × × × ಲ್ಲರನೆಱಿದು ಕೊನ್ದು ಗೆಲ್ದು ಪೊನ್ದಿ ಸ್ವರ್ಗ್ಗಾಲಯಮೇಱಿದನ್ (ಎಕ. VIII, ಸೊರಬ. ೧-೬ ; 797) ; ಶ್ರೀ ಬೇಮಿಗೆ ಮುತ್ತರಸರ ಮಗನು ಪೊಲೆಯಮ್ಮನ್ಮದಕರಿಕಲ್ಲನಾಳುತ್ತುಮಿರ್ (ಎಕ. XI, ಚಳ್ಳಕೆ. ೩೩-೨೦; ಸು. 815). **ಹೊಲೆಯಮ :** ಹೊಲೆಯಮನೆಂಬ ಗೋತ್ರನಿಧಿಗಂ ಗುಣಭೂಷಣೆ ಚಂಡಿಕಬ್ಬೆಗಂ ಕುಲತಿಲಕಂ ಗುಣಾಂಬುನಿಧಿ ಪುಟ್ಟಿದಂ . . . ನೆಗಳ್ದ ಜಕ್ಕಣಂ (ಕಇ. IV, ೧೧-೩೪ ; 1121). [ಪೊಲೆ + ಅಮ್ಮ₁]

**ಪೊಲೆಯ್ಗಬ್ಬೆ** (ನಾ). ಒಬ್ಬಾಕೆಯ ಹೆಸರು : ಶ್ರೀಮತ್ ಕನ್ನಯನಬ್ಬೆಗಳ್ ಪೊಲೆಯ್ಗಬ್ಬೆ (ಎಕ. XI, ಹೊಳಲ್ಕೆ. ೩೩-೧೪ ; 965). [? + ಅಬ್ಬೆ₁]

**ಪೊಲೆವಗೆ** (ನಾ). ಕೆಟ್ಟಬುದ್ಧಿ ; ನೀಚಬುದ್ಧಿ : ಮಂದಾಂಗಾರಕರಿರ್ವರುಮೊಂದೆಡೆಯೊಳ್ ನಿಂದು ವಕ್ರಿಸಲ್ ಪಶು ಕಱೆಗುಂ ತಂದು ಪೊಲೆವನೆ(ಗೆ)ಯೊಳರಸುಗಳಂದೊರ್ವರನೊರ್ವರಿಱಿದು ಸಾ(ವರ್)ವುಗೆ ಜಗದೊಳ್ (ಜಟ್ಟಿಪು. ೭-೧೧೪). [ಪೊಲೆ + ಬಗೆ₂]

**ಪೊಲೆವಟ್ಟು** (ನಾ). ಹೊಲೆಯರ ಬೀಡು ; ಚಾಂಡಾಲರ ಕೇರಿ : ಇರದೆಯ್ದಿದಂ ಪೊಲೆಯನಾ ಪೊಲೆವಟ್ಟಿನೊಳಿರ್ದ ಕನ್ನೆಯಂ ಕಂಡು ಗೆಂಟಱೊಳೆ ಪೊಡೆವಟ್ಟು (ಕಾದಂಬ. ೬೪೭). 'ಪೊಲೆಗೇರಿ' ಪರಾ.

[ <ಪೊಲೆಯ + ಪಟ್ಟು₄ ]

**ಪೊಲೆವಡು** (ಕ್ರಿ). ಕಳಂಕವನ್ನು ಹೊರು : ಈ ಪರಮಜಿನಾಲಯಂಗಳಂ ಪೊಲೆವಟ್ಟದ್ದಾರ್ ಪಾಂಡ್ಯಚೋಳನೆಂಬ ಮಹಾಪಾತಕ ತಿವುಳನಳಿದಧೋಗತಿಗಿಳಿದ (ಎಇ. XV, ೩೪೦-೩೧; 1071); ಪೊಲೆವಟ್ಟು ಪೊಳಲಿಂ ಪೊಱಮಡಿಸಿಕೊಂಡಲಸದೊಂದಡವಿಯೊಳಿರ್ಪ ಕುಲಗೆಟ್ಟು ಬೇಡವಳ್ಳಿಯ ಹೊಕ್ಕಿರ್ದಾಖಳನೊಂದಾನೊಂದು ಪಗಲು . . . ಜೀವದನವ ಕಳ್ದೊಯ್ಯುತಮಿರಲು (ನೇಮಿಸಂ. ೭-೫೦). [ ಪೊಲೆ + ಪಡು₁ ]

**ಪೊಲೆವಾತು, ಹೊಲೆಮಾತು** (ನಾ). ಕೀಳುಮಾತು ; ಕೆಟ್ಟನುಡಿ : ಎಲೆ ಮೂಢ ಲಿಂಗಮಂ ನೀಂ ಪೊಲೆವಾತಿಂ ಬಯ್ವೆಂಬುದಕ್ಕುಮೆ (ವೃಷಶ. ೬-೧೪). **ಹೊಲೆಮಾತು :** ಹೊಲಬಱಿಯದೆ ತಾನು ರಾಯನೆಂದೆಂಬೀ ಹೊಲೆಮಾತಿಗುತ್ತರವುಂಟೆ (ಕುರಾಣಾಂ. ೧೧-೨೩); ಇಂಥ ಹೊಲೆಮಾತಾಡಿದವರ ಬಾಯಲ್ಲಿ ಹುಳು ಸುರಿಯದಿರುತ್ತದೆಯೆ (ಗೃಹಲ. ೬೩); ಇದನ್ನು ಕಂಡು ಅವನು ಕಿಡಿಕಿಡಿಯಾಗುತ್ತಿದ್ದ, ಶಪಿಸುತ್ತಿದ್ದ, ಹೊಲೆಮಾತಾಡುತ್ತಿದ್ದ (ಜೀವಬಾ. ೩೦೦). [ ಪೊಲೆ + ಮಾತು₁ ]

**ಪೊಲೆವೆಣ್, ಹೊಲೆವೆಣ್** (ನಾ). ಕೆಟ್ಟಹೆಣ್ಣು ; ನೀಚಸ್ತ್ರೀ : ಪೊಲೆವೆಣ್ಣೆನಿಪೆನಗೆಂದುಂ ನಿಲಲೊಲ್ಲದೆ ತೊಲಗಿ ಪೋಪ ಗಂಡವಿಮುಕ್ತರ್ ಮಲಧಾರಿಸ್ವಾಮಿಗಳಂ ನಿಲಿಸುವ ಸತ್ಪುತ್ರನೆನಗದೆಂದಾದಪನೋ (ಅರ್ಹವೇ. ೧-೧೧೫). **ಹೊಲೆವೆಣ್ :** ಹೊಱಮಿಂಚಿಂ ಹೊಲೆವೆಣ್ಗೆ ಸೋಲ್ವ ಕೆಱದಿಂ . . . ವಿಟವೇಶ್ಯಾಕಾವ್ಯಮಂ ಕೇಳ್ದು ಮೆಯ್ ಮಱೆವರ್ (ರತ್ನಾಕ. ೯೭).

[ ಪೊಲೆ + ಪೆಣ್ ]

**ಪೊಲೆಸೂರುಳ್** (ನಾ). ಹೀನವಾದ ಪ್ರತಿಜ್ಞೆ ; ನೀಚವಾದ ಶಪಥ : ನುಡಿಯೆಲ್ಲಂ ಪೊ[ ಪಾಠಾಂ. ಹೊ ]ಲೆಸೂರುಳ್ (ಲೀಲಾವ. ೨-೧೧೨); ಮಾತೆಲ್ಲಂ ಪೊಲೆಸೂರುಳ್ (ಛವುದ. ೫೫ ಪ್ರಯೋ). [ ಪೊಲೆ + ಸೂರುಳ್₃ ]

**ಪೊಲ್ಗೆ, ಪೊಲಿಗೆ, ಹೊಲಿಗೆ** (ನಾ). ೧. ಹೊಲಿಯುವಿಕೆ : ಗೆಕಾರಕ್ಕೆ ಉಡುಗೆ, ಪಸುಗೆ, ಪೊಲ್ಗೆ (ಶಮದ. ೨೦೦ ಪ್ರಯೋ). **ಪೊಲಿಗೆ :** ೧. "ಸೀವನಂ, ಸೀಪನಂ, ಸ್ಯೂತಿಃ — ಈ ೩ ಪೊಲಿಗೆ" (ನಾಚರಾ. ೬). ೨. ಹೊಲಿದುದು : ತಾಱಗೆ, ಮಾಱಗೆ, ಪೊಲಿಗೆ (ಶಬ್ದಾನು. ೫೭೫ ಪ್ರಯೋ). **ಹೊಲಿಗೆ :** ೧. "ಧಕ್, ಡೇಹನಂ, ಈ ೨ ಹೊಲಿಗೆ" (ಕಾಶಕ್ಕ. ೬೬); ಜೋಡು ಪೈಠಣಿಗಳ ಹೊಲಿಗೆಯ ಗರುವ ಚಿಪ್ಪಿಗಗೇರಿಯಿಹವು (ಕಂಪಬಿ. ೬-೫೫). ೨. "ಊತ ಸ್ಯೂತ ಎಂಬಿವು ನೂಲ ನೆಯ್ಗೆಯಲ್ಲಿಯೂ ಹೊಲಿಗೆಯಲ್ಲಿಯೂ ಪರ್ತಿಸುಗು" (ನಾಚರಾ. ೬); ಹಱಗಿವಿಗಳ ಕಬ್ಬಂಗಳ ಹೊಱಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ . . . ಎಕ್ಕಸಕ್ಕಮಸ್ತಂಬ್ಯಸ್ತಂ (ಗಂಕ. ೧-೨೩); ಕಲ್ಪಮೇಘದ ಹೊಲಿಗೆ ಹಱದವೊಲಾಯ್ತು ಮಾದ್ರೇಶ್ವರನ ಶರಜಾಲ (ಕುವ್ಯಾಶ. ೨-೩೭) ; ಬಸುಱಲಿ ಹೊಲಿದ ಹೊಲಿಗೆಯ ದಡಿಗರಕ್ಕಸರಾಯರಿದ್ದುದು ಕೋಟಿಸಂಖ್ಯೆಯಲಿ (ತೊರರಾ. ೩-೬-೫). ೩. ಸಂಬಂಧ ; ಹೊಂದಾಣಿಕೆ : ಕಾಯದ ಜೀವದ ಹೊಲಿಗೆಯನಱಿದವಂಗಲ್ಲದೆ ಲಿಂಗೈಕ್ಯವಿಲ್ಲ (ಮೋಳಿಮಾ. ೨೫೮-೮೦೯) ; ಕಾಯ ಜೀವದ ಹೊಲಿಗೆಯ ಅಳಿದ ಭೇದವ ತಿಳಿಯಬಲ್ಲಡೆ ನಮ್ಮ ಗುಹೇಶ್ವರಲಿಂಗದ ಅಱಿವು ಸಾಧ್ಯವಪ್ಪುದು (ಅವಶಂ. ೨೭೩-೧೨೫೭). [ಪೊಲ್ + -ಗೆ./ತುಳು. ಪೊಲಿಕೆ, ಪೊಲಿಗೆ, ಪೊಲ್ಲಿಗೆ]

**ಪೊಲ್ಲ, ಹೊಲ್ಲ** (ನಾ). ೧. ಕೆಟ್ಟುದು ; ಹೀನವಾದುದು : ಪಾಪಕರ್ಮಂ ಪೊಲ್ಲಂ (ಕವಿರಾ. ೧-೭೯) ; ಪಗೆ ಪೊಲ್ಲ ಪಾಂಡುನಂದನರೊಳ್ (ಶಂಶಭಾ. ೬-೬೫). ೨. ಕೇಡು ; ಆಪತ್ತು : ಅಪನಂ ನಂಬಿದಂದು ಪೊಲ್ಲಮಕ್ಕುಂ (ಶಂಶಶಂ. ೧೭೭-೩); ಗುರು ಪರಿವೇಷದೊಳ್ ನೆಲಸೆ ವಿಪ್ರಜನಕ್ಕದು ನಾಡೆ

ಪೊಲ್ಲ (ಆಟ್ಟಪು. ೩-೦೮). ೩. ಕೀಳುತನ : (?). ೪. ಕೆಟ್ಟಗುಣವುಳ್ಳವನು ; ಹೀನನಾದವನು : ಪೊಲ್ಲರಲ್ಲದರಂ ಪೊಲ್ಲರೆಂದು ನುಡಿದೊಡೀ ಬಾಹಾದುದು (ಶಂರಾಪ. ೦೬-೩೯ ವ) ; ಕಳ್ಳುಡಿವವರಂ ಪೊಲ್ಲರೆಂಬಂತೆ ಪಾಲ್ಗುಡಿವವರನೇಕೆ ಪೊಲ್ಲರೆನ್ನರ್ (ಧರ್ಮಾಮೃ. ೭-೯೩). ೫. ಕೇಡುಂಟು ಮಾಡುವವನು ; ಅನಿಷ್ಟಕಾರಕ : ಹಿಮಧಾಮಂ . . . ತ್ರಿರಂಧ್ರಂಗಳೊಳಶಿಶುಭವಂ ಶೇಷದೊಳ್ ಪೊಲ್ಲನಕ್ಕುಂ (ಜಾತಕ. ೧೦-೪). (ಗು). ೬. ಒಳ್ಳೆಯದಲ್ಲದ ; ಕೆಟ್ಟದಾದ : ಪದಿನಾಱು ಪೊಲ್ಲ ಕನಸುಗಳಂ ಕಂಡಂ (ವರ್ಧಮಾ. ೬೩-೨೦); ಸಂಜೆಯಂತೆ ಪೊಲ್ಲ ವಸ್ತುವಿನೊಳ್ ರಾಗಿಯಾಗದೆ (ಧರ್ಮಾಮೃ. ೩-೯೯); ಪೊಲ್ಲ ಕೆಯ್ತಮುಂ ದುರ್ಭಗತ್ವಮುಂ ಕಿವಿಗೆ ಸೊಗಯಿಸದ ಪೊಲ್ಲ ಸ್ವರಂಗಳುಂ . . . ಎಂದಿವೆಲ್ಲಮಶುಭನಾಮಂಕರ್ಮಫಲಂಗಳುಂ (ಕಸಾರ. ೩೦) ; ಪೊಲ್ಲ ಸುದ್ದಿಗಳನೊರೆತರ್ಪ್ಪನನ್ ಒಲ್ವನೊರ್ವನುಮಿಲ್ಲ (ಅಂತಿಗೂ. ೦೩-೨೭೦). ಹೊಲ್ಲ : ೧. ಬೇಡ ಬೇಡ ಅನ್ಯದೈವದ ಸಂಗ ಹೊಲ್ಲ (ಬಸವ. ೭೦೮) ; ಬಱಿಯ ವಿಚಾರ ಹೊಲ್ಲ (ಹಕಶಾ. ೮-೭೦) ; ನೆರೆ ಹೊಲ್ಲ ದುರಾಚಾರಿಗಳ (ಅಖಂಡೇ. ೦೨೮-೯೨), ಹೇಳಿ ಮಾಡುವುದು ಹೊಲ್ಲ, ಅದು ಆತ್ಮಪ್ರಶಂಸೆ (ಶಾಂಕಲಾ. ೩೭). ೪. ಪಲ್ಲವನನಲ್ಲೆಂದು ಪೆಲ್ಲನಂ ಹೊಲ್ಲೆಂದು (ಜಗಂ. ೦೭-೦೦೮ ರಗಳೆ) ; ಇಲ್ಲದಿಹ ಕಾಲಕ್ಕೆ ಶಾ ಹೊಲ್ಲನವ[ಪಾಠಾಂ. ಹೊಲ್ಲಹನು]ಜನರಿಂಗೆ ಅಲ್ಲದ ಗುಣದ ಅರಸಿಂಗೆ ಸಾಲಕ್ಕೆ ಕಲ್ಲೆದೆಯು ಬೇಕು (ಸರ್ವಜ್ಞ. ೦೯೦೭). ೭. ಅಪರಾಧ ; ತಪ್ಪು : ಹಗೆ ಹೊಲ್ಲ ದೈವದಲಿ (ಕುಮಾರರಾ. ೧-೯). (ಗು). ೮. ಕೆಟ್ಟ ಸ್ವಭಾವದ; ದುಷ್ಟ : ಕಲ್ಲಿನಲ್ಲಿ ವಲ್ಲಭನ ಕಂಡೆವೆಂದು ಬಡಿದಾಡುತ್ತಾರೆ ನೋಡಾ ಅಲ್ಲಯ್ಯಾ ಈ ಹೊಲ್ಲ ಮಾನುಜರು (ಸಿದ್ಧವ. ೪. ೨೦೩-೭೮೦) ; ಹೊಲ್ಲ ದೈವವನಿನಿತು ನೀ ನೋಡುವೆನದೆಂದರೆ ಕರವೆ ನಾನೀಗ (ಸಂಭಶ, ೮-೬೭) ; ಹೊಲ್ಲ ಜೋಗಿಯ ಮಾತ ಕೇಳಿದರು (ಸಿದ್ಧಕೃ. ೨-೩೩).

**ಪೊಲ್ಲಾಗು, ಹೊಲ್ಲಾಗು** = ೧. ಕೆಡುಕಾಗು ; ಅನಿಷ್ಟವಾಗು : ಅದು ಲೇಸಾದೊಡಂ ಪೊಲ್ಲಾದೊಡಮೆನ್ನ ಪುಣ್ಯಂ (ಅರ್ಧನೇ. ೩-೭೯ ವ); ಕಲ್ಲಾಗಲೇನು ಹೊಲ್ಲಾಗಲೇನು ಅದು ಬಲ್ಲತನಕೆ ಸಲ್ಲ ಆ ನಲ್ಲೆ ತಾನು ಇರುಪಲ್ಲೆ ನಿತ್ಯ ಇರುತಿಹನು ಒಬ್ಬ ನಲ್ಲ (ಅರಳು. ೬೩-೦೩). ೨. ಕೇಡು ಬಗೆ ; ಕೆಟ್ಟುದನ್ನು ಎಣಿಸು : ಇದಕ್ಕಾವನಾನುಂ ಹೊಲ್ಲಾಗಿರೆ × × × ಕುರುಕ್ಷೇತ್ರ ವಾರಣಾಸಿ ಸಾಯಿರಕವಿಲೆಯುಮಂ . . . ಕೊಂದ ಪಂಚಮಹಾಪಾತಕನಕ್ಕು (ಎಇ. IV, ೨೦-೦೩ ; ?).

[ದೇ. ೩ ತಮಿ. ಪೊಲವ್, ಪೊಲ್ಲಾ; ಮಲ. ಪೊಲ್ಲಾ]

**ಪೊಲ್ಲಕೆಯ್** 'ಪೊಲ್ಲಗೆಯ್' ನೋ.

**ಪೊಲ್ಲಗೆಯ್, ಪೊಲ್ಲಕೆಯ್** (ಕ್ರಿ). ೧. ಕೆಡುಕುಮಾಡು ; ಕೇಡುಂಟುಮಾಡು : ವನಜಾಕ್ಷಿ ದೋಷಿಯಲ್ಲದ ನಿನಗೆ ಕರಂ ಪೊಲ್ಲಗೆಯ್ದಂ (ಶಂಕಶಂ. ೭೭-೨೦); ಇದಾವುದು ಪೊಲ್ಲಗೆಯ್ದನೀ ಮುನಿಸವಿವೇಕಮೆಂದು ನುಡಿದಳ್ (ಶಂರಾಮಾ. ೦೦-೬೮). ೨. ತಪ್ಪು ಮಾಡು : ವಲ್ಲಭೆಯರ್ ಪೊಲ್ಲಗೆಯ್ದರಂತುಸಿರದೆ ಕುಳ್ಳಿರೆ (ಧರ್ಮಾಮೃ. ೪-೦೩೯). **ಪೊಲ್ಲಕೆಯ್** : ೧. ಎನಿತಾದೊಡಮೇಂ ಪ್ರಭು ಪೊಲ್ಲಕೆಯ್ಗುಮೇ (ಶಂಶಭಾ. ೦೦-೬೩) ; ಕಳವಂ ಮಿಥ್ಯೆಯನೇಱಿಸಿ ಕಳತ್ರದೊಳ್ ಪೊಲ್ಲಕೆಯ್ದರೆಂದಿಲ್ಲದುದಂ ಗಟಿಪಿದೊಡೆ (ಶಂರಾಮಾ. ೯-೯) ; ಇವರ ಕೊಲ್ವುದುಂ ಪುರುಷಾರ್ಥಮಲ್ಲ ಚೀ ಪೊಲ್ಲಕೆಯ್ದರಿ (ವೇಱಪು. ೪-೦೦೩ ವ). ೩. ಹಾದರ ಮಾಡು ; ವ್ಯಭಿಚರಿಸಂ : ಬ್ರಹ್ಮ ಘಾತಿಪೋದನೆಂಬುದೇಕೆ . . . ತನ್ನ ಸುತೆ ಪದ್ಮೆಯೊಳು ಪೊಲ್ಲಕೆಯ್ದನೆಂಬುದೇಕೆ (ಕಸಾರ. ೯೭೪). [ ಪೊಲ್ಲ + ಕೆಯ್$_1$ ]

**ಪೊಲ್ಲಗೆಯ್ಮೆ** (ನಾ). ಅಯೋಗ್ಯವಾದ ಕೆಲಸ; ಕೆಟ್ಟ ಕಾರ್ಯ : ಇಲ್ಲದಿರೆ, ಎಂತಕ್ಕುಮ್ ಈ ಪೊಲ್ಲಗೆಯ್ಮೆ? (ಅಕ್ಕಶಾ. ೬-೦೩೯).

[ ಪೊಲ್ಲ + ಗೆಯ್ಮೆ (< ಕೈಮೆ$_1$) ]

**ಪೊಲ್ಲದು, ಹೊಲ್ಲದಂ** (ನಾ). ೧. ಕೆಟ್ಟುದು ; ಹೀನವಾದುದು : ಒಳ್ಳಿತ್ತಾ ಕೆಯ್ವೊರಾಪೊರ್ಲ್ಲದುಮದಱನ್ನೆ (ಇಆ. X. ೬೧-೭ ; 7ನೆಯ ಶಕ); ಇದು ಪೊಲ್ಲದೊ ತಾನಿದೊಳ್ಳಿತೋ ಮೇಣದೆಂಬುವಂ ಬಗೆಯಲಾರ್ತೆನಿಲ್ಲಾಕ್ಷಣದೊಳ್ (ಕಾದಂಪೂ. ೭೬೭) ; ಒಳ್ಳಿತ್ತು ಪೊ[ಪಾಠಾಂ. ಹೊ]ಲ್ಲದೆಂಬುದನೊಳ್ಳಿತ್ತಾಗಱಿವವಂಗೆ ಜಿನವಚನಂ ತಾನೊಳ್ಳಿತ್ತು (ಸಮಪ. ೩-೩೦). ೨. ಅಹಿತವಾದುದು ; ಅಸಹ್ಯವಾದುದು : ಪೊಲ್ಲದಂ ನುಡಿದೊಡೆ ಕೇಳ್ದುಮುಣ್ಬರೆ ಸದಾಚರಿತರ್ಜಿನಭಕ್ತರೆಲ್ಲಿಯುಂ (ಸಮಪ. ೬-೨೩) ; ಮನದೊಳ್ ಪೊಲ್ಲವನೆಂತುಂ ನೆನೆಯರ್ (ಕಾವ್ಯಾವ. ೨೩೫). ೩. ಅಯೋಗ್ಯವಾದಂದು ; ಅನುಚಿತವಾದುದು ; ಸರಿಯಲ್ಲದುದು : ಈ ನೆರೆದ ಗುರುಜನಂಗಳ್ ಮಾನಿನಿಯರ ಮುಂದೆ ಕರ್ಣ ಪೊಲ್ಲದಂ ನುಡಿದೈ (ಶಂಶಭಾ. ೨-೮೦) ; ಪೊಲ್ಲದಂ ನುಡಿದನಾತನಂ ಬಿಸುಟಂ ತಕ್ಕಿಪ ನುಡಿಯ ನುಡಿವನೇ (ಗದಾಯು. ೨-೨೦) ; ಸಲ್ಲಮ ವಿಪ್ರಾಗಿಂತಿದು ಪೊಲ್ಲದು (ಸಮಪ. ೨-೩೮). ೪. ಅನಿಷ್ಟವಾದುದು ; ಕೇಡು ; ಕೆಡುಕು : ರಿಸಿಯರೊಂದಿಱುವೆಗಪ್ಪೊಡಂ ಪೊಲ್ಲದಂ ಬಗೆಯದವರೆನಗಹಿತವಂ ಬಗೆವರೆ (ವರ್ಧಮಾ. ೦೭೭-೨೭) ; ಎನ್ನ ಪುಣ್ಯೊಳಗೆ ನಿನ್ನ ರೋಮಂ ಪುಗೆ ಪೊಲ್ಲದಪ್ಪುದು (ಶಂಕಶಂ. ೦೯೩-೦೨) ; ನಿಮ್ಮಾಶ್ರಮದತ್ತಲ್ಪೋಗಿಮಿರ್ದಂದರಸರ ದೆಸೆಯಿಂ ನಿಕ್ಕುವಂ ಪೊಲ್ಲದಕ್ಕುಂ (ಸುಕುಮಾ. ೭-೯೦) ; ಭುವನಜನಕ್ಕೆ ಗೋನಿವಹಕ್ಕೆ ಪೊಲ್ಲ[ದು ಸವನಿ]ಕ್ಕು (ಅಬ್ಬಮ. ೭-೦೭). **ಹೊಲ್ಲದು** : ೩. ಕೋಲ ಬಲುಹುಂಟಾಗೆ ನಾಲಗೆ ಹೋಲ ನುಡಿಯದು ಹೊಲ್ಲದೇನಿದು ಖೂಳ ಕಟಕಿಯ ಮಾತು ಬೇಡಂಬಿನಲಿ ಮಾತಾಡು (ಕುಮಾಕ. ೯-೩೦).

[<ಪೊಲ್ಲ./ತಮಿ. ಪೊಲ್ಲತು, ಪೊಲ್ಲಾತು]

**ಪೊಲ್ಲದುಗೆಯ್, ಪೊಲ್ಲದುಗೈ** (ಕ್ರಿ). ೧. ಕೆಡುಕು ಮಾಡು ; ಕೇಡು ಮಾಡು : ಒದವುಗೆ ನಿನ್ನ ಸಂತತಿಗೆ ನೂರ್ವರುದಗ್ರಸುತರ್ಕಳೊಂದೆ ಗರ್ಭದೊಳೆನೆ ಕೆಮ್ಮನಿಂತು ಪೊಸೆದಿಕ್ಕಿದೆ ಪೊಲ್ಲದುಗೆಯ್ದೆಯ್ (ಶಂಶಭಾ. ೦-೦೩೦) ; ಪೊಲ್ಲದುಗೆಯ್ದನೆಂದು ನಹುಷಾಜಗರಂ ಪಿರಿದಪ್ಪ ದೈನ್ಯದಿಂ ಬಲ್ಲಿದನಪ್ಪಗಸ್ತ್ಯಮುನಿಯೊಳ್ ದಯೆಯಂ ಪಡೆಯಲ್ಕೆ ಬಂದವೋಲ್ (ಕಾದಂಪೂ. ೦೦೩) ; ಕರಮಿಂತೊಂದವಿವೇಕಮಂ ನೆಗಱ್ದಿರಂದೇಕಿಂತುಟಂ ಪೇಟದಿರ್ದಿರೆ . . . ಪೊಲ್ಲದುಗೆಯ್ದಿರೆಂದು ಜಡಿದರ್ ಕುಂತೀಸುತರ್ಕೊಂತಿಯಂ (ಗದಾಯು. ೦೦-೨೦). ೨. ಹೀನಕಾರ್ಯವನ್ನು ಮಾಡು; ಪಾಪ ಮಾಡು: ಭೋಗೋಪಭೋಗಂಗಳ್ಗೆ ಪೊಲ್ಲದುಗೆಯ್ವೊಲ್ಲದ ಪೆಂಡತಿಗೆ ಪೇಸಿದಂತೆ ಪೇಸಿ (ಧರ್ಮಾಮೃ. ೩-೨೦). **ಪೊಲ್ಲದುಗೈ** : ೧. ಹಿಂದು ಮುಂದರಿಯದೆ ಪೊಲ್ಲದುಗೈವನು ನರಕದ ಭಯವಿನಿಸಿಲ್ಲ (ಇಂಜಾಶ. ೦೭೯-೮೨). [ ಪೊಲ್ಲದು + ಕೆಯ್$_1$ ]

**ಪೊಲ್ಲದುಗೈ** 'ಪೊಲ್ಲದುಗೆಯ್' ನೋ.

**ಪೊಲ್ಲನುಡಿ, ಹೊಲ್ಲನುಡಿ** (ನಾ). ಕೆಟ್ಟ ಮಾತು ; ಅಹಿತವಾದ ನುಡಿ : ಶಿಶುಪಾಲನ ಪೊಲ್ಲನುಡಿಗೆ ಸೈರಿಪುದು (ಜಗಪ. ೦೭-೯೭). **ಹೊಲ್ಲನುಡಿ** : ಆಲಿಪುದುಮಾ ಹೊಲ್ಲನುಡಿಯ ಕಿಡಿಕಿಡಿವೋಗಿ (ಕೇಶಚಾ. ೩-೩೯) ; ಬಿಲ್ಲೇಶನ ಬಾಯಿಂದ ಹೊಲ್ಲನುಡಿಗಳ ಕೇಳಿ ಎಲ್ಲರು ಬೆಸಗುಗೊಂಡರು (ಸಿದ್ಧಕೃ. ೦೩-೪೭). [ ಪೊಲ್ಲ + ನುಡಿ$_3$ ]

**ಪೊಲ್ಲಬ್ಬೆ** (ನಾ). ಒಬ್ಬಾಕೆಯ ಹೆಸರು : ನಾಗುಳರ ಪೊಲ್ಲಬ್ಬೆ ಮಾಡಿಸಿದ ಬಸದಿ (ದೊಂಕಶಾ. ೦೯೩೯, ರಾಣಿಬೆನ್ನೂರ್. ೦೦೭-೨೦ ; 781).

[ಪೊಲ್ಲ$_7$ + ಅಬ್ಬೆ$_1$]

**ಪೊಲ್ಲಮಾತು** ' ಪೊಲ್ಲವಾತು ' ನೋ.

**ಪೊಲ್ಲಮಾನಸ, ಪೊಲ್ಲಮಾನಿಸ** (ನಾ). ಕೆಟ್ಟ ಮನುಷ್ಯ; ದುರ್ಬುದ್ಧಿಯುಳ್ಳವನು : ಅಧಮರ ಪೊಲ್ಲಮಾನಸರ ದುರ್ಜನರ ಜಾರಜಾತರ ವಿಜಾತಿಗಳ್ಗೆ ಯೋಗ್ಯಮಪ್ಪಯೋಗ್ಯಮಂಗೆಯ್ದರ್ (ವರ್ಧಮಾ. ೬-೦೯) ;

ದುರ್ಯೋಧನನಪ್ಪೊಡೆ ಪೊಲ್ಲಮಾನಸನಾತನುಂ ನೀಮುಮೊಂದೆಡೆಯೊಳಿರೆ ಕಿಸುಱುಂ ಕಲಹಮುಮೊಂದುಂ ಕುಂದದು (ಶಂಶಭಾ. ೨-೯೨ ವ). **ಪೊಲ್ಲ ಮಾನಿಸ :** ಪೊಲ್ಲಮಾನಿಸರ ಪೊಲ್ಲಮೊಗಂಗಳ್ (ಶಮುದ. ೧೭೭ ಪ್ರಯೋ). [ಪೊಲ್ಲ + ಮಾನಸ$_1$ (< ಮಾನುಸ)]

**ಪೊಲ್ಲಮಾನಸಿ** (ನಾ). ದುಷ್ಟಹೆಣ್ಣು : ನೀಂ ಪೊಲ್ಲಮಾನಸಿಯೆ ಎಂದು ಮನದೊಳೆ ಬಗೆದು (ವಡ್ಡಾರಾ. ೦೩-೨೬). [ಪೊಲ್ಲ + ಮಾನಸಿ]

**ಪೊಲ್ಲಮಾನಿಸ** 'ಪೊಲ್ಲಮಾನಸ' ನೋ.

**ಪೊಲ್ಲಮೆ, ಹೊಲ್ಲಮೆ** (ನಾ). ೧. ದುಷ್ಟತನ ; ಕೆಟ್ಟತನ : ಪೊಲ್ಲಮೆಯುಂ ಗುಣಮುಂ ತಮಗಲ್ಲದೆ ಪುದುವಲ್ಲ (ಕಬಿರಾ. ೩-೦೭೬); ಅವನೀನಾಥನ ಗೆಯ್ದ ಪೊಲ್ಲಮೆಮನೊಳ್ಪಿಂಗಮಿಂ ಸಕ್ಕಿಯಾಗು (ಶಂಶಭಾ. ೯-೨೭); ಪೊಲ್ಲಮೆಯೊಳೊಂದದೆ ಚಾರಿತ್ರದೊಳ್ ಕೂಡಿ ನೆಗಟ್ದ ಧರ್ಮಮೆ ಸದ್ಧರ್ಮಂ (ಧರ್ಮಾಮೃ. ೪-೧೭). ೨. ಕೆಡುಕು; ಅಹಿತ; ಕೇಡು : ಕಂಸಕೃತಾಪಚಾರದಿಂ ನಿರ್ವಿಚಾರಮೆ ಪೊಲ್ಲಮೆಯಾದುದು (ಜಗಪು. ೨-೬೦ ವ); ಆ ನಿನಗೆ ಮಾಡಿದ ಪೊಲ್ಲಮೆಯುಂಟೆ (ದಶಕು. ೦೦-೭೫) ; ಈಗಳೋ ತಾನೆ ಗೆಯ್ದ ಪೊಲ್ಲಮೆಗೆ ದೇವರ್ಗೆ ತೆತ್ತಪನ್ ಈ ದಂಡಮನ್ (ಬಿದ್ಯಶ್ರ. ೧-೦೦). ೩. ದೋಷ; ತಪ್ಪು : ಸಂಸಾರದ ಪೊಲ್ಲಮೆಯುಮನನಿತ್ಯತೆಯುಮಂ ಬಗೆದು ವೈರಾಗ್ಯಪರರಾಗಿ (ವಡ್ಡಾರಾ. ೪೩-೬) ; ಏನಾನುಮೊಂದು ಪೊಲ್ಲಮೆಯನಿಲ್ಲದುದನುದ್ಭವಿಸಿ (ವರ್ಧಪು. ೧೫-೫೪ ವ); ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ (ಹುಕೋಶ. ೨-೪೨). ೪. ಕಳಂಕ ; ಅಪವಾದ : ಇನ್ನುಮೊಂದು ಕಥೆಯುಂ ಪೇಟ್ದಿನ್ನ ಮೇಗಣ ಪೊಲ್ಲಮೆಯುಂ ಪಿಂಗಿಸಿಕೊಳ್ವಿಂ (ಧರ್ಮಾಮೃ. ೦೨-೦೩೭). ೫. ಪಾಪ : ಆದಂ ಪೊಲ್ಲಮೆಯೊಳ್ ಸಲೆ ನಡೆವರ್ ದುಷ್ಟಮುಮೆಂಬಯ್ದನೆಯ ಕಾಲದೊಳ್ (ಆದಿಪು. ೦೫-೩೭). **ಹೊಲ್ಲಮೆ :** ೧. ಅಗಲ್ಕೆಯಲ್ಲಿಯುಂ ಹೊಲ್ಲಮೆಯಲ್ಲಿಯುಂ ಪ್ರತ್ಯವಾಯಮೆಂಬುದು (ಹರಿಯು. ೦೩೭-೩೬) ; ಸ್ತ್ರೀಜೀವನದ ಹೊಲ್ಲಮೆ ಸಹ ನಯಸೇನನ ತೀಕ್ಷ್ಣವಾದ ನೋಟಕ್ಕೆ ಸಿಲುಕದೆ ಹೋಗಿಲ್ಲ (ಕಪಹಿ. ೯೫). ೨. ವಲ್ಲಭ ನಿನಗೇಗೆಯ್ದಂ ಹೊಲ್ಲಮೆಯುಂ (ನಳಚಂ. ೫೪೪). ೩. ಒಸಗೆ ತಮ್ಮದೆನೆ ಪೆರ್ಮೆಯೊಡನಾಡಿ ಹೊಲ್ಲಮೆಯು ಕೆಳಗಿಕ್ಕಿ ತಿಳಿದೆಲಚರ್ಮವ ಬಾಳ್ಗೆ ಸೊಲ್ಲೇನು ? (ಕಾಚೂರ. ೭೫-೦೩೭). ೬. ಕೆಟ್ಟ ಮಾತು ; ನಿಂದೆ : ಈ ಕಡೆಯು ಬಾಯಿಂದ ಒಳ್ಳೆಯ ಮಾತಾಡುತಿದೆ ಆ ಕಡೆಯು ಬಾಯಿಂದ ಬರಿಯ ಹೊಲ್ಲಮೆಯು ಹೊರಹೊಮ್ಮುತಿದೆ (ಬಗಾ೪. ೫೦). [ಪೊಲ್ಲ + –ಮೆ$_3$]

**ಪೊಲ್ಲಮೆಗಾಣ್** (ಕ್ರಿ). ದೋಷವನ್ನು ಕಾಣು ; ತಪ್ಪನ್ನು ಕಾಣು : ಮನಮನಗಲ್ಚಲೊಂದೆಡೆಯು ಪೊಲ್ಲಮೆಗಾಣೆನೆ ಬೇಱದೊಂದು ರೂಪಿನ ನಿಧಿ ಬೇಱದೊಂದು ಕಡುಗಾಡಿಯ ಸನ್ನಿಧಿ (ಶಾಂತಿಪು. ೬-೭೯); ಪೊಲ್ಲಮೆಗಂಡದ ನಱದುಂ ಪೊಲ್ಲನೆ ಸಯ್ತಾಗೆ ತಿರ್ದುವರ್ಸುಕವೀಶರ್ (ಧರ್ಮಾಮೃ. ೦-೪೫) ; ಪೊಲ್ಲಮೆಗಂಡವರ್ಮುಳಿದು ತಮ್ಮಯ ತೊಟ್ಟಿರನೆಂತು ಮಾಟ್ಪೊಡಂ ಸಲ್ಲದೆ (ಶೃಂಗಾರ. ೩-೫೦). [ಪೊಲ್ಲಮೆ + ಕಾಣ್]

**ಪೊಲ್ಲಮೆಗೆಯ್** (ಕ್ರಿ). ಕೆಟ್ಟುದನ್ನು ಮಾಡು ; ಕೇಡುಂಟುಮಾಡು : ಸಂಜೀವಕಂಗೆ ನೀ ಕೂರ್ಪೆಯಪ್ಪ ಕಾರಣದಿಂದಾತನೆನಿತು ಪೊಲ್ಲಮೆಗೆಯ್ದನಾದೊಡಮೊಳ್ಳಿದನೆಂದು ನುಡಿದಪೆ (ಪಂಚತಂ. ೦೦೧-೬); ಪೊಲ್ಲಮೆಗೆಯ್ಯಲಾಱದಿದು (ಶಮುದ. ೦೪-೬೦) ; ಪೊಲ್ಲಮೆಗೆಯ್ಯಲ್ಪಟ್ಟದೆಡೆಗೆ ನೆಲನೆಲ್ಲ ಮನುಜದಳಱಪ ಖಳ ನೀ ನನೆವಿಲ್ಲಂ (ಉದ್ಭಟ. ೪-೩೫). [ಪೊಲ್ಲಮೆ + ಕೆಯ್$_1$]

**ಪೊಲ್ಲಯ್ಯ** (ನಾ). ಒಬ್ಬಾತನ ಹೆಸರು : ಮಟ್ಟೂರ ಸಾಯಿರ ಒಟ್ಬಬ್ಬರುಂ ಪೊಲ್ಲಯ್ಯನ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ (ಎಕ. IV, ಎಳಂದೂ. ೪೦-೩; 982). [ಪೊಲ್ಲ ? + ಅಯ್ಯ$_1$]

**ಪೊಲ್ಲಲಿಂಗಿ** (ನಾ). (ಅನ್ಯಪಂಥದ) ಹೀನಯತಿ ; ಸಂನ್ಯಾಸಿ : ಪೊನ್ನ ತಳಿಗೆಯೊಳ್ ನಾಯ್ ತುಯ್ಯಲನುಣ್ಬುದಂ ಕಂಡುದಱಿಂ ಪೊಲ್ಲಲಿಂಗಿಗಳರ ಸರ್ಕಳಿಂದಂ ಪೂಜಿಸೆ ಪಡುವರ್ (ವಡ್ಡಾರಾ. ೮೭-೨೬). [ಪೊಲ್ಲ + ಲಿಂಗಿ$_2$]

**ಪೊಲ್ಲಮಾತು, ಪೊಲ್ಲಮೂತು** (ನಾ). = **ಪೊಲ್ಲನುಡಿ :** ಎಲ್ಲಿಯುದೀ ಸುದ್ದಿ ರಾಮು ಮಡಿದನೆಂಬ ಪೊಲ್ಲಮಾತಿದ ತಂದರಾರು (ಕುಂದಣಾಂ. ೩೭-೦೦೯). **ಪೊಲ್ಲಮೂತು :** ನಿಮ್ಮಂದಿಗರ್ವಂಶದ ಕೇಡಂ ನೋಡದೊಳ್ಪಂ ಬಗೆಯದೆ ಪಱಗಂ ಪಾತಕಕ್ಕಂ ಭಯಂಗೊಳ್ಳದೆ ಪೇೞರ್ ಪೊಲ್ಲಮೂತಂ ನುಡಿಯಲಿದು ಮನಂ ನೋಟ್ಪ ಸಂಕಲ್ಪಜಲ್ಪಂ (ಪಂಪಾಶತ. ೯-೦೭೯). [ಪೊಲ್ಲ + ಮಾತು$_1$]

**ಪೊಸ, ಹೊಸ** (ಗು). ೧. ನೂತನ; ನವೀನ : ಒರ್ವಳ್ ಪೊಸ ಶ್ರಾವಕಿ . . . ಕಲ್ತಲೆಯೊಳ್ ನಿಗ್ರ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡೆ (ವಡ್ಡಾರಾ. ೯೨-೧೧) ; ತಾವರೆಯ ರಜಂಗಳೆಂಬ ಪೊಸ ನುಣ್ಮಳಲಿಂದೆ ಪುಱಲ್ಗಳಂ ಮನೋಹರಕೃತಕಪ್ರವಾಹಿನಿಯೊಳಂಗನೆ ಮಾಡಿಸು ತಿರ್ದಳರ್ಥಿಯಿಂ (ಕಾದಂಬ. ೨೪) ; ಪೊಸ ಪೊನ್ನ ಪರಿಯಾಣದೊಳಿಸೆವ ಅಮೃತಾನ್ನವನು ನಾಯ್ತಿಂಬುದಂ . . . ನೃಪಾಳಂ ಕಂಡಂ (ಕೃಷ್ಣಾಸ್ತ್ರ. ೯-೦೪); ಪೊಸ ಜೊನ್ನಂ ತನ್ನ ಕೀರ್ತಿಪ್ರಭೆ ಪಸರಿಸತೆಂಬಂತೆ ಸೊಂಪೇಱ (ವೃಷಭ. ೨೬-೦೦). ೨. ಚೆಲುವಾದ; ಮನೋಹರವಾದ : 'ಪೊಸ ವೆಳ್ದಿಂಗಳ್', 'ಪೊಸಸಂಜೆ' ಪರಾ. ೩. ಶುಭ್ರವಾದ; ಸ್ವಚ್ಛವಾದ; ನಿರ್ಮಲವಾದ : 'ಪೊಸದಳಿಂಬ', 'ಪೊಸನೀರ್' ಪರಾ. ೪. ಚಿಕ್ಕದಾದ ; ಎಳೆಯ ವಯಸ್ಸಿನ : 'ಪೊಸನವಿಲ್' ಪರಾ. ೫. ಪಕ್ವವಾದ ; ಮಾಗಿದ: 'ಪೊಸವಣ್' ಪರಾ. ೬. ಬಿಸಿಯಾದ : 'ಪೊಸನೆತ್ತರ್', 'ಪೊಸಪಾಕ' ಪರಾ. ೭. ಮಾಸದಿರುವ ; ಅಳಿಸದಿರುವ: 'ಪೊಸಪಜ್ಜೆ' ಪರಾ. ೮. ಬೇರೆಯ ; ಮತ್ತೊಂದು: 'ಪೊಸವೆಸರ್' ಪರಾ. ೯. ಮೊದಲನೆಯ ; ಪ್ರಥಮ : 'ಪೊಸಗಾರ್' ಪರಾ. ೧೦. ಅಧಿಕವಾದ ; ಅತಿಶಯವಾದ: 'ಪೊಸಸಿರಿ' ಪರಾ. **ಹೊಸ:** ೧. ಆವರಿಸಿದುದು ಮತ್ತೆ ಹೊಸ ಮೇಳಾವದಲಿ ಕುರುಸೇನೆ (ಕುವ್ಯಾಕ. ೧೪-೩೬); ಹೊಳಲು ಹೊಸ ರೀತಿಯಲಿ ಮಿಗೆ ಕಂಗೊಳಿಸುತಿರ್ದುದು (ತೊರರಾ. ೦-೯-೦೧); ಈ ಹಳೆಯ ಹೇಳಿಕೆಗೆ ಹೊಸ ಉಸಿರು ತುಂಬಿದ್ದಾರೆ (ದ್ರಾವಿಬಿ. ೪೨). P 'ಪೊಸ' ಮತ್ತು 'ಹೊಸ' ಎಂಬ ಈ ಶಬ್ದಗಳು ಇತರ ಅನೇಕ ನಾಮಪದಗಳೊಡನೆ ಸೇರಿ ಸಮಾಸವಾದಾಗ ಬೇರೆ ಬೇರೆ ಅರ್ಥಗಳನ್ನು ಕೊಡುತ್ತವೆ.

**ಪೊಚ್ಚಪೊಸ, ಪೊಸಪೊಸ, ಹೊಚ್ಚಹೊಸ, ಹೊಸಹೊಸ** (ದ್ವಿರುಕ್ತಿ): ಪೊಚ್ಚಪೊಸ ಮಲ್ಲಿಗೆಯುಂ ಮುದದಿಂ ತುಱುಂಬಿ (ಧರ್ಮಾಮೃ. ೭-೦೭೬); ತನಿಗಂಪು ತೀವಿರ್ದ ಪೊಚ್ಚಪೊಸ ಪೂಗಳಂ ಕೊಂಡು (ಶೃಷ್ವರ.ಹ. ೫೨೩-೨೬); ಪರಿಯಾಣದಲಿ ಪೊಸಪೊಸ ಪದಾರ್ಥಶ್ರೇಣಿಯುಂ ಲೇಸಾಗಿ ಗಡಣಿಸಿ (ಬಸಪು. ೩೩-೦೧): ಹೊಚ್ಚಹೊಸ ಬೆಣ್ಣೆಗಾಸಿದ ತುಪ್ಪ (ಸಮ್ಯಕೌ. ೭-೨೪); ಹೊಚ್ಚಹೊಸ ಹೊಗರಂಬಿನಲಿ ತೆಗೆದೆಚ್ಚನು (ದೇವಿಮ. ೩-೨೭); ಆ ಅಂಗಡಿಗೆ ಹೊಸ ಹೊಸ ಬಗೆಯ ಸೀರೆಗಳು ಬಂದಿವೆ (ರೂಢಿ). **ಪೊಸವು** (ಬಹುವ): ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೫).
[ದೇ.॥ತಮಿ. ಪುತಿಯ, ಪುತು ; ಮಲ. ಪುದು; ತುಳು. ಪೊಸ, ಹೊಸ; ಕೊಡ. ಪುದಿಯದ್; ಕೋತ. ಪುದ್]

**ಪೊಸಅಡಕೆ** (ನಾ). ತಾಜಾಅಡಕೆ ; ಹಸಿಯಡಕೆ : ಪೊಸಸುಗ್ಗಿ, ಪೊಸ ಅಡಕೆ (ಭಾಷಾಭೂ. ೮೪೪ ಉದಾ); ಪೊಱಅಡಿ, ಒಳಅಟ್ಟಂ, ಪೊಸಅಡಕೆ (ಶಮುದ. ೫೬ ಪ್ರಯೋ). [ಪೊಸ + ಅಡಕೆ$_1$]

**ಪೊಸಎಲರು** (ನಾ). ಸ್ವಚ್ಛವಾದ ಗಾಳಿ ; ನಿರ್ಮಲವಾದ ವಾಯು : ಪಳವಾನೇ ! ಪೊಸಎಲರೇ ! (ಹೊಂಗಳು. ಹುರ್ಕಿ. ೧೭).
[ಪೊಸ + ಎಲರು (< ಎಲರ್)]

**ಪೊಸಒಲುಮೆ** (ನಾ). ನವೀನವಾದ ಪ್ರೇಮ,–ಭಕ್ತಿ : ಭಕ್ತರ ಚರಿತೆಗಳನಾನಂದದಿಂ ತಿರುಪಾಟ ರೀತಿಯೊಳೊಂದಿ ಪಾಡುತ ಪೊಸ ಒಲುಮೆ ಸಲೆ ಪೊಣ್ಮೆ [ಪಾಠಾಂ. ಪೊಡವಡುತಪೊಲವೊಣ್ಮೆ] ಕೀರ್ತಿಸುತ (ಬಸವು. ೨೭-೬೦).
[ಪೊಸ + ಒಲುಮೆ (< ಒಲ್ಮೆ)]

**ಪೊಸಂತಿಲ್, ಪೊಸಂತಿಲು, ಪೊಸತಿಲ್, ಪೊಸತಿಲು, ಹೊಚ್ಚಲ, ಹೊಸಂತಿಲ್, ಹೊಸಂತಿಲು, ಹೊಸತಿಲ್, ಹೊಸತಿಲು, ಹೊಸಲು, ಹೊಸಿಲು, ಹೊಸ್ತಲು, ಹೊಸ್ತಿಲ್, ಹೊಸ್ತಿಲ, ಹೊಸ್ತಿಲು** (ನಾ). ೧. ಬಾಗಿಲ ಚೌಕಟ್ಟಿನ ಕೆಳಭಾಗ; ಉತ್ತರಾಸ; ದೇಹಳಿ: "ಗೃಹಾವಗ್ರಹಣೀ. ದೇಹಳೀ—ಈ ೨ ಪೊ(ಹೊ)ಸಂತಿಲ್" (ಹಲಾಯು. ೩೦–೧೯೭) ; ಮೇರು ಪೊಸಂತಿಲ್ ಕುಡಿತೆಯ ನೀರಂಬುಧಿ ಗಗನತಳಮೆ ಕೈ ದಿವಿಜಗಣಂ ಕಾರೊಕ್ಕಲೆಂದೊಡುಟಿದವರಾರಾತನ ಮಸಪ ಮಸಕದೆಸಕಮನಿಟಿಪರ್ (ಕಾವ್ಯಸಾ. ೨೪೯ ಕೂಡ್ರಿಕ) ; ಎನಗೆ ಪೊಸಂತಿಲೀ ನೆಗೆದ ವಜ್ರದ ವೇದಿಕೆ ಗೋಪ್ಪದಂದಲೀ ವನನಿಧಿ ಪಾಯ್ದು ಮಾಗಧನನೀಗಳೆ ಕಟ್ಟುವೆನಲ್ಲಿ (ಆದಿಪು. ೧೨–೬೦) ; ನಿತ್ಯಬಿಂದುಗಂ—ಬೆಡಂಗು. . .ಪೊಸಂತಿಲ್, ಗಳಂತಿಗೆ (ಕವಿರ. ೩೭ ಕ್ರಿಯೋ). **ಪೊಸಂತಿಲು** : ೧. "ಪೊಸಂತಿಲು ದೇಹಳಿಯುಮಕ್ಕು" (ಶಬ್ದಮಂ. ೩೬). **ಪೊಸತಿಲ್** : ೧. ಪೊಸತಿಲ ಮೇಲನೊಕ್ಕಿಬಿದು ಮಿಸಲ ತುಯ್ಯಲನಟ್ಟು ಬಾಗಿಲರ್ಚಿಸಿ (ಶಬರ. ೯೬೩) ; ಪೂದೋಂಟಕ್ಕೆ ಪೋಗಿ ನಿಚ್ಚಲುಂ ಪೂಗಳು ಕೊಯ್ದುಕೊಂಡು ಮನೆಗೆ ಬರುತ್ತಾ ಮಾರ್ಗದ ಬಸದಿಯ ಪೊಸತಿಲೊಳೊಂದೊಂದು ಪೂವನರ್ಚಿಸುತ್ತಂ (ಪುಣ್ಯಾಸ್ರ. ೦–೪೨ ಪ). **ಪೊಸತಿಲು** : ೧. ಅಸುವೆಪೊರಲೊನಕೆ ಗೂಟಂ ಪೊಸತಿಲು ಮನೆಮನೆಯ ಕಂಭ . . . ದೆಯ್ವಮಿಂತಿವೆಂಬಮೂರ್ಖರ್ (ಸವುಶ. ೯–೬೨) ; ಬಸವಿಯರೊಳು ಪಾತಕಿನಿಯರೊಳು ಮತ್ತಸತಿಯರೊಳು ಕೆಳೆಗೊಳದೆ ಪೊಸತಿಲ ಪೊಜಗಡಿಯಿಡದೊಳ್ಪಿಂಡಿರ ಜಸವಳ್ಳಿ ಜಗವ ಪರ್ಬುವುದು (ಹರಿಶ. ೪–೯೩). **ಹೊಚ್ಚಲ** : ೧. ಬೆಚ್ಚನ ಮನೆಯಾ ಹೊಚ್ಚಲದೊಳಗೆ ನಿಂತರು ಭಟ್ಟರು ಹಣಕುತ ಹೊರಗೆ (ಗಂ. ೪೪–೭) ; ನೀ ಹೊಚ್ಚಲದಾಗ ಕಾಲಿಟ್ಟೇದಿ, ಹಿತ್ತಲದಾಗಿನ ತುಲಸೀಗಿಡ ಕಮರಿ ಹೋತು (ಸಮುಜ. ೭೪). **ಹೊಸಂತಿಲ್** : ೧. "ಗೃಹಾವಗ್ರಹಣೀ, ದೇಹಳೀ —ಈ ೨ ಪೊ(ಹೊ)ಸಂತಿಲ್" (ಹಲಾಯು. ೩೦–೧೯೭) ; ನುಡಿಯೆಲ್ಲಂ ಹೊಲೆ ಸೂರುಳೊಳ್ಳಿಟಿ ಹೊ[ಪಾಠಾಂ. ಪೊ]ಸಂತಿಲ್ ಪೊಂಗೊಳಲ್ ಪುತ್ತುವಾಯ್ಕುಡನೀರೊರ್ಮೆಗೆ ಕಮ್ಮನಪ್ಪ ಬಟನೀರೂರ ದೈವಂಗಳುಂ ಪಡಿಗೆತ್ತೋಡಿದುವಿಃಕೆಗಂಜಿ (ರೀಪಾವ. ೨_೦೦೨). **ಹೊಸಂತಿಲು** : ೧. ಒಂದು ಹೊಸಂತಿಲನ್ನು ದಾಟುವುದರೊಳಗಾಗಿ ಬಿಟ್ಟದೇವನೂ ಬಂದನು (ಸಪಶಿ. ೨೬೪). **ಹೊಸತಿಲ್** : ೧. "ದೇಹಳಿಯುದೊಗೆದ ಹೊಸತಿಲನಿಕ್ಕಂ" (ಮಂಗರಾ. ೩೯–೦೨). **ಹೊಸತಿಲು**: ೧. ಹೊಸತಿಲ ಪೂಜಿಸಿ ಹೊಬಿವಟ್ಟು ಹೋದ ಒಕ್ಕಲಿತಿಯಂ ತಾಯಿತ್ತನ್ನ ಭಕ್ತಿ (ಬಸವ. ೪೨೨); ಈ ಜನದ ಬದುಕಿನ ಸೊಗಸು ಸಂಸ್ಕೃತಿಯರಳಿ ಪರಿಮಳಿಸಲೆಂದು ಹೊಸತಿಲಲಿ ಹಚ್ಚಿಟ್ಟ ಹಣತೆ ಒಳಗು ಹೊರಗೂ ಕೂಡಿ ಬೆಳಗಲೆಂದು (ಪಂಪಮ. ೪–೬); ಹೊಸತಿಲಲ್ಲಿ ಅಡಿಯಿಡುತ್ತಿದ್ದ ಹಾಗೆಯೇ ಮುಕ್ತಾ ಆನಂದಭರಿತಳಾದಳು (ಅಕ್ರಮ. ೦೨೬). **ಹೊಸಲು** : ೧. ಹೋಮಶಾಲೆಯ ಹೊಸಲು, ಹೊಸದಾಗಿ ಮಾಡಿರುವ ಸಮ್ಮಾರ್ಜನೆಯಿಂದ ಶೋಭಿಸುತ್ತಿರುವುದು (ಕಾಳಿಂಕ. ೭೩–೦೭); ರೈತರೆಲ್ಲ ಮನೆಯ ಹೊಸಲಿಗೆ ಕಾಯಿ ಒಡೆದಿಟ್ಟು ಧೂಪ ಹಾಕಿ ಪೂಜಿಸುತ್ತಿದ್ದರು (ಹುಟ್ಟಿದ. ೬೨). **ಹೊಸಿಲು** : ೧. ಖೋಜಾ ನಸ್ರುದ್ದೀನ್ . . . ಹೊಸಿಲನ್ನು ದಾಟಿದನು (ಪಗಹೊ. ೨೨೯). ೨. (ಆಲಂ) ಅಂಚು ; ಗಡಿ : ನನ್ನ ಬಾಳು ಸಾವಿನ ಹೊಸಿಲನ್ನು ಮುಟ್ಟಿತ್ತು (ರಾಮಾಪ. ೪೦); ಹದಿನೆಂಟರ ಹೊಸಿಲನ್ನು ದಾಟ್ಟಿದರೂ ವಿಲಾಸಜೀವನವೇನೆಂಬುದನ್ನೇ ಅವಳು ಅರಿಯದವಳಾಗಿದ್ದಳು (ರೂಪಸ. ೨೪). **ಹೊಸ್ತಲು** : ೧. ನರಸಿಂಹರೂಪದಿಂ ದೈತ್ಯನಂ ಪಿಡಿತಂದು ಹೊಸ್ತಲೊಳಗೆ ಸಂಜೆಯೊಳ್ ತನ್ನ ತೊಡೆಯೊಳ್ ಕೆಡಪುತುಗುರ್ಗೊನೆಗಳಿಂ ಜಠರಮಂ ಬಗಿದು (ಕಬಿಥ. ೩೩–೫); ಮುಂದಣಂ ಗಣಮನೆಲ್ಲಮನುಡುಗಿ ಸಲೆ ಹೊಸ್ತಲೊಲೆಗಳಿಗೆ ಸಾರಣೆಯನೇ ಹಾಕಿ (ಮಲ್ಲಿಕ. ೨–೦೫). **ಹೊಸ್ತಿಲ್**: ೧. "ಗೃಹಾವಗ್ರಹಣೀ, ದೇಹಲೀ—ಈ ೨ ಹೊಸ್ತಿಲ ಪೆಸರು" (ವಾಚರಾ. ೮೦೪). **ಹೊಸ್ತಿಲ** : ೨. ಬಳ್ಳಾರಿ ಕನ್ನಡ ನಾಡಿನ ಹೊಸ್ತಿಲದಂತೆ (ಪುಂಗಾಪು. ೨೭). **ಹೊಸ್ತಿಲು** : ೧. ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ ಮನೆಯೊಳಗೆ ಮನೆಯೊಡೆಯ ನಿದ್ದಾನೊ ಇಲ್ಲವೊ (ಬಸವ. ೯೭); ನಡುಹೊಸ್ತಿಲನು ಮೆಲ್ಲನೆ ದಾಟಿ (ಸಂಕಕ. ೦೪–೪೦); ಬಾಪೂಜಿಯ ಚಿತ್ರವೊಂದು ಮಾತ್ರ ಅವರ ಅರಮನೆಯ ಹೊಸ್ತಿಲನ್ನು ದಾಟಿ ಒಳಗೆ ಕಾಲಿಡುವುದು ಅಸಾಧ್ಯವಾಗಿತ್ತು (ಳಂಬಹು. ೬೯).

**ಹೊಸತಿಲ ಹುಣ್ಣಿವೆ, ಹೊಸ್ತಿಲ ಹುಣ್ಣಿವೆ** = ಮಾರ್ಗಶೀರ್ಷಮಾಸದ ಹುಣ್ಣಿಮೆ ; ೧ ದೇವತೆಗಳ ಆಗಮನಕ್ಕಾಗಿ ಹೊಸ್ತಿಲನ್ನು ಪೂಜೆ ಮಾಡುವ ದಿನ : ಮಾರ್ಗಶೀರ್ಷ ಶುದ್ಧ ೧೫ನೆಯ ತಿಥಿ ಹೊಸತಿಲ ಹುಣ್ಣಿವೆ (ಭಾಹಬ್ಬ. ೦೬೪) ; ಹೊಸ್ತಿಲ ಹುಣ್ಣಿವೆಗೆ ಹೊಸ್ತಿಲ ನಡುಗಿತ್ತು ಬನದ ಹುಣ್ಣಿವೆಗೆಲ್ಲ ಬನ ನಡುಗಿದೆ (ಸಬೀ೧. ೨೩–೬೯೫). **ಹೊಸತಿಲು ದಾಟು, ಹೊಸಲು ದಾಟು** = ೧. ಮನೆಯ ಹೊಸ್ತಿಲನ್ನು ದಾಟು ; ಹೊರಗೆ ಹೋಗು : ಮನೆಯ ಹೊಸತಿಲು ದಾಟುವ ಮುನ್ನ, ಅವರು ಹಿತ್ತಲ ಕಡೆಗೆ ಹೋಗಿ, ತಮ್ಮ ಮೂಕಜೀವಗಳನ್ನು ಮಾತನಾಡಿಸಿ ಬರುವವರು (ಕಂದ್ರಕಾ. ೩೨). ೨. (ಆಲಂ) ಹದ್ದು ಮೀರು ; ಅಂಕೆತಪ್ಪು : ಬೀದಿಯವರ ಮುಂದೆ ನಾಟ್ಯವಾಡಲು ಸರಿಯಾದ ಹೊಸಲು ದಾಟಿದ ಹೆಣ್ಣು ಇವಳು (ಗೋಕುರ. ೫೦). [< ಪೊಸತು ? + ಇಲ್ಲ್]

**ಪೊಸಂತಿಲು** 'ಪೊಸಂತಿಲ್' ನೋ.

**ಪೊಸಂಬ, ಪೊಸಬ, ಹೊಸಬ** (ನಾ). ಗುರುತಿಲ್ಲದವನು; ಅಪರಿಚಿತ : ಒಂದೆಡೆಗೆ ಪಟಿಯನಿಂ ಪೊಸಂಬನೆ ಲೇಸು (ಶಂಕಕಂ. ೦೦೬–೯) ; ವಿಚಾರಿಸದುಂತೆ ಪೊಸಂಬರೆುತ್ತೆಯಂ ಕೊಳ್ವುದು ತಕ್ಕುದಲ್ತು (ಕವಿರ. ೦೫೩ ಕ್ರಿಯೋ); ಅವನಾನೊರ್ವನಾಗಲಿ ಪೊಸಂಬಂ ಬರಲ್ [ಪಾಠಾಂ. ಪೊಸಬನೆಯ್ತರಲ್] ಭಾವಜ್ಞರಾದವರ್ ಪತ್ತೆಂಟು ಪಗಲವನ ಭಾವಮಂ ನೋಡಿಯೊಳ್ಳಿದನಾದೊಡೊಳಕೊಳ್ಳಬೇಕು (ಸಮ್ಯಕ್. ೦೦–೫೦). **ಪೊಸಬ** : ಪೊಸಬರೀ ದೇಶದಳಬಳವನಟಿಯರಿ (ಸಾಂದಕು. ೬–೩೭) ; ಮಿಸುನಿವಣ್ಣದ ಮೆಯ್ ಗವಾಧಿವಕಂಧರವು ಮೆಟಿವ ಪೊಸಬನಿವನಂಬಿಗನೆನಿಸನೀಕ್ಷಿಸಲು (ಸಾಳ್ಯಭಾ. ೦೯–೩). **ಹೊಸಬ** : ಹೊಸಬರಪ್ಪ ಕೊಯ್ಲಾಳಿಗಳು ಬನ್ದೀಯೂರೊಳ್ . . . ಎರಡು ಪಣಮಂ ಕೊಟ್ಟು ಕೊಯ್ವರ್ (ಶಾಇ. XII–11, ೦೯೦–೨೦ ; 1094); ಸಂವರ್ತರುದ್ರನೊ ಹೊಸಬನಿವನಾರೆಂದು ತಲ್ಲಣಿಸಿತ್ತು ರಿಪುಸೇನೆ (ಕುಮಾ್ಯದ್ರೋ. ೦೨–೨೦) ; ವರ್ತಕನೊಬ್ಬನು ಹೊಸಬ ಗಿರಾಕಿಗೆ ಉಪದೇಶವಿತ್ತನು (೩೦ಕಾಪ. ೦೨೦–೯೦). [< ಪೊಸ + — ಬ್ಬ. / ತುಳು. ಪೊಸಬೆ]

**ಪೊಸಕಂಪು** 'ಪೊಸಗಂಪು' ನೋ.

**ಪೊಸಕನ್ನಡ** 'ಪೊಸಗನ್ನಡ' ನೋ.

**ಪೊಸಕಳ್ತಲೆ** 'ಪೊಸಗಳ್ತಲೆ' ನೋ.

**ಪೊಸಕಿಟ್ಟಳ** (ನಾ). ತಾರುಣ್ಯದ ಹೊಸಮದ,–ಸೊಕ್ಕು : ಅಸಿಯಸೆಳ ತಳದೊಳಕಿ ರಂಜಿಸೆ ಪುರ್ವವ್ಯಳಿಸೆ ಪತ್ತಸಾರ್ಮವರಂ ತರ್ಜಿಸಿ ಕಾಮನ ಪಡಿಯಟಿತಿವೊಲೆಸೆದಳ್ ಪೊಸದೇಸೆಕಾರ್ತಿ ಪೊಸಕಿಟ್ಟ [ಪಾಠಾಂ. ಳ್ದ] ಳದೊಳ್ (ಅರ್ಜುಕ. ೨–೦೩). [ಪೊಸ + ಕಿಟ್ಟಳ]

**ಪೊಸಕೆಂದಳಿರ್** 'ಪೊಸಗೆಂದಳಿರ್' ನೋ.

**ಪೊಸಗಂಪು**, ಪೊಸಕಂಪು (ನಾ). ಆಗ ತಾನೆ ಹುಟ್ಟಿರುವ ಸುಗಂಧ; ಹೊಸದಾದ ಸುವಾಸನೆ : ಮಲರ್ದಲರ್ದ ನಾಗಸಂಪಗೆಯಲರ್ಗಳೊಳ ಗ್ಗಲಿಸಿ ಬಿರಿವ ಪೊಂಬಾಳೆಯ ತಣ್ಮಲೆವ ಪೊಸಗಂಪಿನೊಳ್ ಪುದಿದಲೆವೆಲರಾಱುವುದು ಖಚರರ್ದಪತಿಶ್ರಮಮಮಂ (ಆದಿಪು. ೧-೬೬); ಕಪ್ಪುರದ ಕಂಪುಮಂ ಸೂಡಿದ ಬಾಸಿಗದ ಪೊಸಗಂಪಿನಂಬಾಗೊಗೆದಿರೆ ಮಾಡಿದುದು ಚಮರೆರುಹ ಗಂಧವಹಂ (ಶಂಶಭಾ. ೦೯-೨೫). **ಪೊಸಕಂಪು** : ಬಂದು ಮನೆಗೆಯ್ದೆ ಪೊಸಕಂಪು ಕವಿದಿರೆ ಕಂಡು ಎಂದಿನಂತಲ್ಲದೆ ನವೀನವಾಗಿರೆ ಕಂಡು (ತಿರುಪ. ದೇ. ೬-೪). [ಪೊಸ + ಕಂಪು]

**ಪೊಸಗನ್ನಡ**, ಪೊಸಕನ್ನಡ, ಹೊಸಗನ್ನಡ (ನಾ). ೧. ಹೊಸ ಬಗೆಯ ಕನ್ನಡ; ನವೀನತೆಯುಳ್ಳ ಕನ್ನಡ : ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂತಿಸಿ ಕೊಡಲಾಱದಕ್ಕಟ ಮಿಸುಕದ ಸಕ್ಕದ ಮನಿಕ್ಕುವವನುಂ ಬಯಿಯೇ (ರವಜಾಸ್ಮು. ೧-೪೦); ವಾಸುಂವಂತಿ ವರ್ಣ್ಣಿಸಿದಂ ಶ್ರೀಸಜ್ಜನತಿಳಕನೊಸೆದು ಪೊಸಗನಡದಿಂ (ಕೂರ್ಮ್ಶಾ. ೦೫-೧೦೦ ; 1186) ; 'ಪೊಸಗನ್ನಡ' ಎಂಬ ಪದಪ್ರಯೋಗ ಪ್ರಾಚೀನಕನ್ನಡಸಾಹಿತ್ಯದಲ್ಲಿಯೂ ಆಗಾಗ ಬರುತ್ತಿದೆ (ಸಾಕಮೂ. ೦). **ಪೊಸಕನ್ನಡ** : ೧. ಮುಹಾಮುನಿಮತ ಮಿಗೆ ಪೇಱ್ದನೆಸೆಯೆ ಪೊಸಕನ್ನಡದಿಂ (ಪುಂಡಿತ. ೧-೫೩). **ಹೊಸಗನ್ನಡ** : ೨. ಹಳಗನ್ನಡ, ನಡುಗನ್ನಡಗಳಿಂದ ಭಿನ್ನವಾದ ಈಗಿನ ಕನ್ನಡ : ಈಗ ನಾವು ಬಳಸುತ್ತಿರುವ ಭಾಷೆ 'ಹೊಸಗನ್ನಡ' (ಕ್ನಬಿ. ೦) ; ಕನ್ನಡವಮಾತೆಷ್ಟು ವಿಧವಾಗಿರುವದು ?. ಹೊಸಗನ್ನಡವೆಂತಲೂ ಹಳಗನ್ನಡವೆಂತಲೂ ಎರಡು ವಿಧವಾಗಿರುವದು (ಹೊಪುಗ. ೦). [ಪೊಸ + ಕನ್ನಡ$_1$]

**ಪೊಸಗಬ್ಬ** (ನಾ). ನವೀನರೀತಿಯ ಕಾವ್ಯ : ಈಗಡೀಗಡಿನ ಕಥಾನ್ವಯಕ್ಕೆ ರಸಮುಂ ಪೊಸಗಬ್ಬಮಪೂರ್ವಮಾವುವೆಳ್ಕೊಡಮವು ಪೇಱ್ದು ಸಾಧಿಸಿದ ಬಬ್ಬಮೆ ದಲ್ ಕವಿಚಕ್ರವರ್ತಿಯಾ (ಶಾಂತಿಪು. ೦೨-೭೯). [ಪೊಸ + ಕಬ್ಬ$_1$]

**ಪೊಸಗವಲು**, ಹೊಸಗವಲು (ನಾ). ಹೊಸಬಗೆಯ ವಾಸನೆ,— ಕಂಪು : ಪೊಸಗವಲು ನಾರುತಿದೆ ಬಂದು (ಕಂಕ. ೫೦). **ಹೊಸಗವಲು** : ನಱುಗೋಲನೊತ್ತಿಂದ ದಕ್ಷಿಣಗಿದಿರಾಗಿ ಮಱೆಯೆರಳೆಗಳೋಡಿ ಬಂದು ದುಱುದುಱನೀಕ್ಷಿಸಿ ಹೊಸಗವಲಿಗೆ ಬೆಚ್ಚಿ ಬಿಱುತೋಡಿದುವು ಕಂಡ ಕಡೆಗೆ (ಭರತ. ೪೭-೬೨). [ಪೊಸ + ಗವಲು (<ಗವುಲು)]

**ಪೊಸಗಳ್ತಲೆ**, ಪೊಸಕಳ್ತಲೆ (ನಾ). ಆಗ ತಾನೆ ಆವರಿಸುತ್ತಿರುವ ಅಂಧಕಾರ : ಪೊದಳ್ದ ಪೆರ್ಗಳ್ತಲೆ ನಾಲ್ದೆಸೆಗಳ್ತಲೆ ಪೊಸಗಳ್ತಲೆ ರಸೆಗಳ್ತಲೆಯೆನಿಸಿ ಕೂಡಿ ತೀವಿತು ತಿಮಿರಂ (ಗಿಂಕ. ೪-೬೩). **ಪೊಸಕಳ್ತಲೆ** : ಪೊಸಕಳ್ತಲೆಯುದು ತನುವಂ ಮುಸುಂಕೆ ಕರ್ಬಕ್ಕೆ ಗೆತ್ತಗಲ್ವುದು ಚಕ್ರಪ್ರಸರಂ (ರಾಜಶೇ. ೦೦-೦೮). [ಪೊಸ + ಕಳ್ತಲೆ (<ಕಟ್ಟಲೆ)]

**ಪೊಸಗಟಮೆ** (ನಾ). ಆಗತಾನೆ ಬೆಳೆಬಂದ ಬತ್ತ : ಪೊಸಜಾದಿಯ ಬೆಳೆದೊಱಗಿದ ಪೊಸಗಟಮೆಯ ಪೊಸತರಲ್ದ ತಾವರೆಗಳ ಕಂಪಸದಳಮೆಸೆದಿರೆ ದೆಸೆದೆಸೆಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ (ಆದಿಪು. ೦೦-೬). [ಪೊಸ + ಕಟಮೆ (<ಕಟವೆ)]

**ಪೊಸಗಾಡಿ** (ನಾ). ನವೀನವಾದ ಸೌಂದರ್ಯ ; ಹೊಸಸೊಬಗು : ಅವರಿರ್ವರ ರೂಡಿವಡೆದ ಪೊಸಗಾಡಿಯುಮಂತವರಿರ್ವರ ಬೇಟಮುಮಂತ ವರಿರ್ವರೊಳಲ್ಲದಿಲ್ಲ ಪಱತೊರ್ವರೊಳಂ (ಕಬ್ಬಿಗಕಾ. ೦೨೪) ; ಮದನಮಹಿಷಿ ಮೆಯ್ಯಗ್ಗಣ್ಣನ ಪಟ್ಟದ ಸುದತಿಯರ್ಗಿಮ್ಮಡಿಯಾದ್ಯೆಸಿರಿ ಪೊಸಗಾಡಿ ಚದುರು ಚೆಲ್ವು ವಿದಿತವಿಭವಮುಂಟೀಕೆಗೆ (ಜಗನ್ನಾ. ೩-೪೭). [ಪೊಸ + ಗಾಡಿ$_1$]

**ಪೊಸಗಾರ್**, ಪೊಸಗಾರು (ನಾ). ವರ್ಷಾರಂಭದ ಮಳೆಗಾಲ ಮತ್ತು ಆಗ ಸುರಿಯುವ ಮಳೆ ; ಮುಂಗಾರು : ಕರಮುಚ್ಚಮಪ್ಪ ಬೆಟ್ಟುಗಳ ತಟಂಗಳಿಂ ಸುರಿವ ನಿರ್ಝರಮುಂ ಪೊಸಗಾ[ಶಾಂತಿ೦.-ಕಾ]ರೊಳಿಂತು ಬೆಳ್ಪಗೆ ಪಥಿಕಾಂಗನಾಜನಮನಂಜಿಸುವಂತಿರೆ ತೋಱೆ ಸುತ್ತಲುಂ (ಕಬಿನಾ. ೦-೦೨೪); ವಿದಗ್ಧೆ ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆಗಡಿವಿಲಾಸಮಂ ತೋಱುದಳ್ (ಆದಿಪು. ೦೨-೦೪); ಪಸುರ್ವುಲ್ಲು ಮೇದು. . . ಪೊಸಗಾರೊಳ್ಬಾರಲೊಳ್ ಕಣ್ಣರೆಮುಗಿದಿರೆ ಸೃಕ್ಕಂಗಳಿಂ ಸೂಸೆ ಫೇನಪ್ರಸರಂ ಮೆಲ್ಕೊತ್ತುತುಂ ನಿಂದುದು ವನಮಹಿಷೀವೃಂದ ಮಾನಂದದಿಂದಂ (ಶಂರಾಮಾ. ೭-೦೫೬). **ಪೊಸಗಾರು** : ಪೊಸಗಾರೆನಿಸುತೆಕ್ಷನು ಗರೆವವುಪಚರದಲ್ಲಿ ಜಾನಕಿವೆರಸು ಲಕ್ಷ್ಮಣಸಹಿತಲ್ಯೆತರಲಾಗ ಘನಕಾಲ (ಜರಾಮಾ. ೦೭೬-೩೯). [ಪೊಸ+ಕಾರ್$_3$]

**ಪೊಸಗಾರು** 'ಪೊಸಗಾರ್' ನೋ.

**ಪೊಸಗಾವರ** (ನಾ). ಹೊಸದಾದ ಸ್ವರ; ನವ್ಯಧ್ವನಿ: ನುಣ್ಪೆಸೆವ ಮಾಮರ ನೊರ್ಮೊದಲಲ್ಲದುಣ್ಮುವುಯ್ಯಲ ಪೊಸಗಾವರಂ ಪುಗಿಲೊಳೀನೆಸೆದತ್ತೊ ಬಸಂತಮಾಸದೊಳ್ (ಶಂಶಭಾ. ೨-೦೨). [ಪೊಸ + ಗಾವರ]

**ಪೊಸಗು** (ಕ್ರಿ). ಲಭಿಸು ; ದಕ್ಕು : ವಸುಧೆಯೊಳುಯಿಾ ತನುವು ಯಾರು ನಂಬುವರು ಪೊಸಗಿದಯಿಾ ರಾಜ್ಯಭೋಗಗಳು ನಿಮಿಗ್ಯಾಕೆ (ಯುಶಕ. ೦೬). [ ← ತೆಲು. ಪೊಸಂಗು, ಪೊಸಗು ]

**ಪೊಸಗೆಂದಳಿರ್**, ಪೊಸಕೆಂದಳಿರ್ (ನಾ). ಎಳೆಯ ಚಿಗುರು,-ಕುಡಿ; ನವಪಲ್ಲವ : ಬಳಸಿದ ಮಾಧವಿಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳಬಳೆದೆಳದಳಿಸುವ ಪೊಸಗೆಂ[ಶಾಂತಿ೦.-ಕೆಂ]ದಳಿರ ಗೊಂದಳದೊಳ್ (ಆದಿಪು. ೦೦-೬೦ ವ). **ಪೊಸಕೆಂದಳಿರ್** : ಪೊಸಕೆಂದಳಿರ್ಗಳ ದಾಳಿಂಬ ಸಾರಮಂ ಕಟ್ಟಿ ತನ್ನ ಬಣ್ಣದೊಳದು ರಂಜಿಸೆ (ಶಾಂತಿಪು. ೯-೦೬). [ಪೊಸ + ಕೆಂದಳಿರ್]

**ಪೊಸಗೆಂಪು** (ನಾ). ಮನೋಹರವಾದ ಕೆಂಪುಬಣ್ಣ : ಪಸರಿಸಿದ ಪದ್ಮರಾಗದ ಪೊಸಗೆಂಪಂ ಮಾಂಸಮೆಂದು ಮುಂ ಕರ್ದುಕಲ್ಕಾಟಿಸಿಯುಂ (ಆದಿಪು. ೦೨-೦೨೨) ; ಪೊಸಗೆಂಪೇಱಿದ ಬಿಂಬಫಲವ ಗಿಳಿ ಮಸಗಿ ಸಂತಸದೆ ಪೀರ್ವಂತೆ (ಕಂಪಪ. ೦೦-೪೦). [ಪೊಸ + ಕೆಂಪು$_1$]

**ಪೊಸಗೆಲ್ಲ** (ನಾ). ನೂತನ ವಿಜಯ : ಸಾರಿಯಂ ನಲಿದಿಡುವಂದು ಪಲ್ಲಟಿಸೆ ಪುಟ್ಟದಂದೋ ಪೊಸಗೆಲ್ಲಮಾಂಪೆನೀ ಲಲನೆಯೊಳೆಂಬ ಸಂಭ್ರಮದಿ ನುಣ್ಪೆದುದೋ ನಗೆ ನಿನ್ನ ವಕ್ತ್ರದೊಳ್ (ಸೃಷ್ಟಿ. ೨೮-೫೫). [ಪೊಸ+ಗೆಲ್ಲ]

**ಪೊಸಗೆಱೆ**, ಹೊಸಕೆರೆ, ಹೊಸಕೆಱೆ, ಹೊಸಗೆಱೆ (ನಾ). ಹೊಸದಾಗಿ ಕಟ್ಟಿಸಿದ ಕೆರೆ ; ನೂತನತಟಾಕ : ಇದಕ್ಕೆ . . . ಆತುಕೂರ ಪೊಸಗೆಱೆಯುಂ ಬೆಲತೂರ ಇನಿಬರ ಸನ್ಮಥ ಬರದೊಂ ಶ್ರೀಧರವಮ್ಮನ್ (ಎಕ. III, ಮಂಡ್ಯ. ೦೪-೦೫; 907); ವಿದ್ಯಾದಾನಕ್ಕೆ ಪೊಸಗೆಱೆಯ ಬಟ್ಟೆಯಿಂ ಬಡಗಮಣೆಯ ವೀಸಕದಯ್ದು ಮತ್ತರ್ (ಇಕ. XIII, ೯೩-೨೬ ; 1084). **ಹೊಸಕೆರೆ** : ನಡದು ಹೊಸಕೆರೆಯ ದಂಡಿನ ಹಾದಿಯಿಂ ತೆಂಕಲು ಪಡುವಮುಖವಾದ ಲಿಂಗಮುದ್ರೆಯ ಕಲ್ಲು (ಎಕ. IV (R). ಕೃಷ್ಣ. ೬-೨೦ ; 1512). **ಹೊಸಕೆಱೆ** : ಮಿಣ್ಣಾಂಗಲ್ಲಲ್ ಪಲ್ಲವಕಟ್ಟಿನ್ನು ಹೊಸಕೆಱೆಯ[೦] ಕಟ್ಟಿಸಿ (ಎಕ. V, ೨೦೬-೯; 1047); ಈಶಾನ್ಯಕ್ಕೆ ನಡದು ಹೊಸಕೆಱೆಯ ಮೂಡಣ ಮುರಿಯ ಮಡುವಿನ ಹೆಬ್ಬಳ್ಳಮೆ (ಎಕ. III(R). ಗುಂಡ್ಲು. ೪೦-೬೩; 1320). **ಹೊಸಗೆಱೆ** : ಹೊಸಗೆಱೆಯ ಕೆಳಗೆ ಗದ್ದೆ . . . ಖ × × × ಪೂಕೆಱೆ ಕೆಳಗೆ ಖಂ (ಎಕ. IV(R). ಚಾಮರಾ. ೭೬೪-೬೨; 1484). [ಪೊಸ+ಕೆಱೆ]

**ಪೊಸಜವ್ವನ**, ಪೊಸಜೌವನ, ಹೊಸಜವ್ವನ (ನಾ). ನವಯೌವನ ; ಹೊಸ ಪ್ರಾಯ ; ಎಳಜವ್ವನ : ಪೊಸಜವ್ವನದ ಮುಂಬಣ್ಣದಂತೆ ಕರ್ಪಂ ಕೈಕೊಂಡು ಕತ್ತುರಿಯಲಿ ಬರೆದಂತಪ್ಪ ವಿಕ್ರಾಂತತುಂಗನ ವಿಜಾಸಗಳಾತನ ಶೀಪ್ರಪ್ರತಾಪಾನಳಧೂಮಲೇಖೆಯಂತಾದುವು (ಶಂಶಭಾ. ೨-೪೯ ವ) ; ಸಿರಿ ಸುರಚಾಪದಂತೆ ಪೊಸಜವ್ವನಮಿದ್ದಿಲ ಬೂದಿಯಂತೆ . . .

ಕಿಡಲಲ್ಲದೆ ತಾಂ ಸ್ಥಿರವಪ್ಪಾಗಲಾರ್ಕುಮೇ (ಧರ್ಮಾಮೃ. ೩-೦೯); ಸೌಂದರ ಮಹೀಪತಿಗೆ ಪೊಸಜವ್ವನವನಂತವಿಭವದೊಳೊಪ್ಪುತಿರೆ (ಸೌಂದರಪು. ೯-೭). **ಪೊಸಜೌವನ :** ವಸುವಂ ದ್ವಿಜನ್ಮದಾನದೆ ಪೊಸಜೌವನವಮಂ ಸ್ವದಾರ ಸಂತೋಷದೆ ನಿನ್ನಸುವಂ ಪತಿಕಾರ್ಯದೆ ವರ್ಜಿಸಿದ್ಯೆ (ಗದಾಯು. ೩-೨೨). **ಹೊಸಜವ್ವನ :** ಚಳಗತ್ತಿಯ ನಿರ್ವಾಂಸಜಂಘೆಯ ಲುಳಿಯ ಲಾಗಿನ ಲಂಘನೆಯಲವ್ವಳಿವ ಹೊಸಜವ್ವನದ ಹೊಮ್ಮರೆ ಹೊಳಕಿತಿದಿರಿನಲಿ (ಕೊರವಂ. ೩-೮-೦೩). [ ಪೊಸ + ಜವ್ವನ ]

**ಪೊಸಜವ್ವನೆ, ಪೊಸಜೌವನೆ** (ನಾ)· ನವಯೌವನವನ್ನು ಹೊಂದಿದವಳು : ನೋಡಿದರ್ ಭಾಮಿನಿ ಸಗರನನಸಿಯ ಪಸಿಯ ಪೊಸಜವ್ವನೆಯರ್ (ಅಜಪು. ೯-೩೬); ಸುಧಾವರೀಚಿಮಣಿವೇದಿಕಾಗ್ರದೊಳ್ಸ್ತ್ರಾವಿನಿಯಂ ಪಟ್ಟಿರಿಸಿ ಶಿರೋವಚಾರವಮನಸಪಸದಿಂದಾ ಪೊಸಜವ್ವನೆಯರೆಸಗುತ್ತಮಿರೆ (ಕಾದ್ಯಟಿ. ೭-೩೩ ವ). **ಪೊಸಜೌವನೆ :** ಪೊಸಜೌವನೆ ನಿನ್ನೀ ದೀರ್ಘಾಂಬಕದೆಸಕದ ಸಂಪತ್ತಿಗೆ ಮಿಗೆ ಸೋಲ್ತೀಯಸಿತೋತ್ಪಲ ದರದಳಿತಂ ತನ್ನ ಪರಾಗದ ಬಪ್ಪವನು ಬಸೆದೀಯಲ್ಬಂದಿದೆ (ಬಿಯಂಶಾ. ೨-೦೭). [ಪೊಸ+ಜವ್ವನೆ]

**ಪೊಸಜಾಗ** (ನಾ)· ಮನೋಹರವಾದ ಮರಕತಮಣಿ : ಪೊಸಜಾಗಂ ಪೂರ್ಣಕುಂಭಂ ದಧಿ ಮಧು ಸುಧೆ . . . ಮಿಸುಗಿಗೆ ಬಗೆಗೆ ಚಿಲ್ವಾದುದುದ್ವಾಹಗೇಹಂ (ವೃಷಪು. ೩-೯). [ ಪೊಸ+ಜಾಗ₁ (<ಚಾಗ₁) ]

**ಪೊಸಜಾದಿ** (ನಾ). ಅದೇ ತಾನೆ ಅರಳಿರುವ ಜಾಜಿ : ಪೊಸಜಾದಿಯ ಬೆಳೆದೊಱಗಿದ ಪೊಸಗಟಿಮೆಯ ಪೊಸತರಲ್ದ ತಾವರೆಗಳ ಕಂಪಸದಳಮೆಸೆದಿರೆ ದೆಸೆದೆಸೆಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ (ಅಜಪು. ೦೦-೩); ಪೊಸಜಾದಿ ಚಿಲ್ವನೀಯುತ್ತಿರೆ ದೇಸಿಯಿಂ ನಿವಿರ್ದ ಸೋಮರ್ಬಿಡಿಯೊಳ್ (ರಘುಕಾವ್ಯ. ೯-೦೩೭). [ಪೊಸ + ಜಾದಿ]

**ಪೊಸಜೌವನ** 'ಪೊಸಜವ್ವನ' ನೋ.

**ಪೊಸಜೌವನೆ** 'ಪೊಸಜವ್ವನೆ' ನೋ.

**ಪೊಸತಳಿರ್** 'ಪೊಸದಳಿರ್' ನೋ.

**ಪೊಸತಿಕ್ಕು** (ಕ್ರಿ) ಪ್ರಥಮಬಲಿಯನ್ನು ಕೊಡು; P"ಪೊಸತಂ+ಇಕ್ಕು= ಪೊಸತಿಕ್ಕು ; ಒಕ್ಕಣೆ ಆದ ಮೇಲೆ ಅನ್ನವನ್ನು ದಿಕ್ಕುದಿಕ್ಕಿಗೆ ಚೆಲ್ಲಿ ಬಲಿಕೊಡುವುದಕ್ಕೆ ಪೊಸತು ಎಂದು ಹೆಸರು, ಮಲೆನಾಡಿನಲ್ಲಿ ಇದು ರೂಢಿಯಾಗಿದೆಯಂತೆ" (ಶಂಶಬರ. ೩೭೭) : ಉತ್ತರನಂ ಜವಂಗೆ ಪೊಸತಿಕ್ಕುವಂತಿಕ್ಕಿ (ಶಂಶಭಾ. ೧೧-೦೦೨ ವ); ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ . . . ಪುಟ್ಟಿದವರೇಂ ಸಾಮಾನ್ಯರೇ (ಶಂರಾಮಾ. ೩-೦೬೦); ಟಕ್ಕಿಪನಂ ಸುಟಿ ಮೇಕುದೋರ್ಪನಂ ಮಾಳಚಿಗಿಕ್ಕು ಪೊಟುಟ್ ಪುಸಿವನಂ ಪೊಸತಿಕ್ಕು[ಪಾಠಾಂ. ಪೊಸೆದಿಕ್ಕು]ಗೆ ಪಚ್ಚಿಗಾಜಿಪನಂ (ಸೂಕ್ತಿಸು. ೮-೯೩೩; ೮೦೧ರವ. ೨-೦೦೭ ನೋ). [ಪೊಸತು+ಇಕ್ಕು]

**ಪೊಸತಿಲ್** 'ಪೊಸಂತಿಲ್' ನೋ.

**ಪೊಸತಿಲು** 'ಪೊಸಂತಿಲ್' ನೋ.

**ಪೊಸತು, ಹೊಸತು, ಹೊಸದ್ಮು, ಹೊಸನ್ನು** (ನಾ)· ೧. ನೂತನವಾದುದು ; ನವೀನವಾದುದು : "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ—ಈ ೬ ಪೊ(ಹೊ)ಸತು" (ಹಲಾಯು. ೦೦೬-೨೭); ನೆಲನಂ ಪೊಟ್ಟುಂ ಪೊಲನ್ನುಮನಜಿದು ಬಟಾಯೊಳ್ ಪೊಸತುಂ ಪಟದುಮನಜಿದು ಪಱಿಯಿಸಲ್ ನೀನೆ ಬಲ್ಲೆಯ್ (ಶಂಶಭಾ. ೩-೪೭ ವ); ಮುಂತೆ ಪರಿದರು ಕೇರಿಕೇರಿಗಿದು ಪೊಸತೆನುತೆ ಬಸವನ ಪ್ರಾಣಮಂ ಪರಿದಱಿಸುವಂದದಿಂ (ಬಸರ. ೯-೦೩೭); ವರಲಾಸ್ಯತಾಂಡವವೆಸೆದುದ್ಯ ರಂಭಾದಿ ನರ್ತಕಿಯರಲಿ ಪೊಸತೆನಿಸಿ (ಕುಮಾರಾರ.೭-೯೩). ೨. (ಅಲಂ) ಅಸಾಮಾನ್ಯವಾದುದು ; ಅಪರೂಪವಾದುದು : ಪೆಸರೇನಾರ್ಗೀತನೀ ಜವ್ವನಿಗ ತವಸಿ ತೊಟ್ಟಿರ್ಪ ಕರ್ಣಾವತಂಸಂ ಪೊಸತೀ ಲೋಕಕ್ಕೆ (ಕಾದಂಪೂ. ೬೬೦); ಲೋಕದೊಳ್ಸ್ವಧಿಲಿಖಿತಮನ್ನಿವಾರಿಪರುಂಟೆ ಶಿವಶಿವಾ ಪೊಸತೆಂದು ಬಿಸುಸುಯ್ದು ಬೆಱಗಾದನು (ಕೃಮಿಶಾ. ೩೦-೩೩). ೩. ಮೊದಲನೆಯ ಬಲಿ,—ನೈವೇದ್ಯ : 'ಪೊಸತಿಕ್ಕು' ಪರಾ. **ಹೊಸತು:** ೧. ಹೊಸತನು ಹಾಡುವುದೆನ್ನಿಂದಲಾಗದು ಹೊಸತಾವುದಿರುವುದು ಹೇಳು ಈ ಜಗದೊಳಗಿಹುದೆಲ್ಲವು ಹಳೆಯದು ನನ್ನ ಸುಭಾಷಿತ ಕೇಳು (ಇಂಶಾಪ. ೬೮-೨೭). ೨. ಒಸೆದಿರಿಸ ಬಾರದಿರಿಸದೆ ತೆಗೆಯಬಾರದೀ ಹಸುಳೆಯಿಂದಂ ಹೊಸತು (ಸಿದ್ಧರಾ. ೨-೩); ಮೇದಿನಿಗೆ ಹೊಸತೆನಿಸಿ ವಜ್ರವ ಕೊಂಡು ಕಾದಿದನು (ಸಂಭಪ. ಶು. ೨-೨೩). **ಹೊಸದ್ಮು :** ೧. ಆ ವರ್ಣನಾವೈಖರಿಯನ್ನು ಕೇಳಿದವರು ಹೊಸದರಲ್ಲಿ ಸಂತಸಪಡದೇ ಇರುವುದಿಲ್ಲ (ರಾಯಳ. ೯೯); ಹೊಸದರಲ್ಲಿ ಅಗಸ ಗೋಣೆಯನ್ನು ಎತ್ತಿ ಎತ್ತಿ ಒಗೆದ (ಗಾದೆ). **ಹೊಸ್ತು :** ೧. ಕಾಣಿಕೆ ಕಡ್ಡಾಯ ಬೇಡಗೊಳು ಹೊಸ್ತು ಹಳದು ಎರಡು ಎತ್ತಿನ ಹೇಱು ಮಾನ್ಯ (ಎಕ. X. ಮುಳಬಾ. ೨೦-೩ ; 1468).

**ಪೊಸತುಪೊಸತು, ಪೊಚ್ಚಪೊಸತು, ಪೊಸಪೊಸತು, ಹೊಚ್ಚಹೊಸತು, ಹೊಚ್ಚಹೊಸದು, ಹೊಸತುಹೊಸತು, ಹೊಸಹೊಸದು** (ದ್ವಿರುಕ್ತಿ): ಪೊಸತುಪೊಸತೀ ಪರಿಯೆನಲ್ಕೆ . . . ಆರೋಗಿಸುತ್ತಿರಲು (ಬಸಪು. ೬-೯೩); ಸಭೆ ಮೆಚ್ಚಿ ಪೊಚ್ಚಪೊಸತಾಯ್ತು ರಸಂ (ಅಜಪು. ೩-೩೩); ಪೊಸಪೊಸತಿಂತಿದೆಂದುಮಮೆಯಾಟಕೆ ಸ್ವರಿಸದಿಂತಿದೆಂದು ಬಣ್ಣಿಸಲರಿದಪ್ಪ ಮಯ್ಸಿರಿ (ಕಕಾಂ. ೭-೨೫೯); 'ಕಬ್ಬಿಗರ ಕಾವ' ಎಂಬ ಹೆಸರು ಕನ್ನಡ ಕೃತಿನಾಮಗಳಲ್ಲಿ ಹೊಚ್ಚಹೊಸತಾಗಿ ಕವಿಯ ವೀರವ್ಯಕ್ತಿತ್ವದ ಗುರುತಾಗಿ ನಿಂತಿದೆ (ಕವಪು. ೦೭೯); ನಿನ್ನೆ ಮೊನ್ನೆಯೊ ಏನೊ ನಿನ್ನ ನೋಡಿದ ಪೊಲಿಹುದು ಒಲುಮೆ ಹೊಚ್ಚಹೊಸದಾಗಿರಲು ಇಂದು ! (ಶಿಜದ. ೪೦-೯); ಹೊಸವರುಷಕೆ ಹೊಸಹರುಷವ ಹೊಸತು ಹೊಸತು ತರುತಿದೆ (ಗಂ. ೦೦೬-೦೦); ಅದನ್ನನುಸರಿಸುವ ರೀತಿಯೂ ಹೊಸಹೊಸದಾಗಿ ಕಂದಲಿತವಾಗಬೇಕು (ನಾಡೋಜ. ೨೨೭). **ಪೊಸತಾಗು, ಹೊಸದಾಗು, ಹೊಸ್ತಾಗು**= ನವ್ಯವಾಗು; ಹೊಸಪರಿಯಾಗು: ಪಸಂಗಿದಾ ಬಗ ಮನವಮಂ ಪೊಸತಾಗೆ ನೆಗಟ್ಟಲಱಿಯನಾ ರಚನೆಯೊಳೇಂಬಸನಂ ತನಗೆ (ಧರ್ಮಾ. ೦-೦೨); ಪೊಸತಪ್ಪ ಕಡಲಿದೆಂಬಂತೆಸೆದೊಪ್ಪಿರೆ ತಿಸುಳಿ ಬೇಗದಿಂ ಪುಟ್ಟಿಸಿದಂ ಪುಸಿವಡೆಯಂ (ಕಬ್ಬಿಗಕಾ. ೨೪೯); ಮತ್ತೆ ಮೂರನೆಯ ದಿನವೊಮ್ಮೆ ಅಳಲು ಹೊಸದಾಯಿತು (ಕಾಜೂರ. ೦೯ ಕಥಾಸಾರ); ಹೊಸ್ತಾಗಿ ದೇವಾಲ್ಯವ ಮಾಡಿದ ಸಂಮಂಧ (ಮೈಆಂ. ೧೯೨೯, ೯-೯; 1369); ಗಱುಡಗೆ ಹೊಸ್ತಾಗಿ ಉರ ಕಟ್ಟಿ (ಎಕ. IX. ಚನ್ನಪ. ೦೬೯-೬ ; 1416); ಕಾಲುವೆನೂ ಹೊಸ್ತಾಗಿ ತೆಗಸಿ (ಎಕ. XV. ಅರಸೀ. ೨-೨೩; 1515). **ಪೊಸತು ಮಾಡು**=ನವೀಕರಣಗೊಳಿಸು; ಹೊಸದನ್ನಾಗಿ ಮಾಡು : ಸತ್ಯಮಿಯೊಳ್ ಸಮನಾಗಿ ಮಾರ್ಗವಂ ಪೊಸಯಿಸಿ ದೇಸಿಯಂ ಪೊಸತು ಮಾಡಿದಳೊರ್ವಳಪೂರ್ವರೂಪದಿಂ (ಶಂಶಭಾ. ೩-೬೪). **ಹೊಸತನಿಕ್ಕು**=ಮೊದಲನೆಯ ನೈವೇದ್ಯ ಮಾಡು : ನಾಗಂಗೆ ಹೊಸತನಿಕ್ಕಿಹೆವೆಂಬರು ನಾಗ ಬಂದರೆ ಕೋಲ ಕಳೆದುಕೊಂಬರು (ಬಸವ. ೦೯೩).

[ದೇ.॥ ತಮಿ. ಪುತಿಚು, ಪುತಿತು ; ತುಳು. ಪೊಸತು]

**ಪೊಸತುಪ್ಪ, ಹೊಸತುಪ್ಪ** (ನಾ)· ಆಗ ತಾನೆ ಬೆಣ್ಣೆ ಕಾಯಿಸಿದ ತುಪ್ಪ : ಪಸುವಿನ ಪೊಸತುಪ್ಪಂ ಜಾಜಿಯ ಪೂ ಅತ್ತಿ ಆಲ ಅರಳಿ ಬಸಿರಿ ಗೋಣಿ ಈ ಮರಂಗಳ ಎಳೆಯ ತಳಿರ್ ಯಷ್ಟಿಮಧುಕಂ ಇವಂ ಬಿಸುನೀರಲ್ಲಿ ಅರೆದು ಪೂಸಲ್ ಸ್ತ್ರೀಯರ ಯೋನಿಯ ದುರ್ಗಂಧಂ ಮಾಣ್ಬುದು (ಲೋಕೋಪ. ೯-೦೭೨ ಟೀಕು); ಬಾಳೆಯ ಕಾಯ ಕಹಿದೆಗೆದದಕೆ ಪೊಸತುಪ್ಪ ನೀರುಳ್ಳಿ ಕೊತ್ತುಂಬರಿಯನಿಕ್ಕಿ ಕೆಂಪಾಗಿ ಹುರಿದು . . . ಪರಿಪಾಳಂಗಳನಿಡುವುದು (ಸೂಪಶಾ. ೯-೬೦); **ಪೊಸತುಪ್ಪದಿಂದ ತಲೆ** ಕಾಲ್ಗಳೊಳ್ ಸೊಡರಿಕ್ಕೆ (ಕಾಜೂರ. ೦೬೩-೪೦೩). **ಹೊಸತುಪ್ಪ :** "ಹಯ್ಯಂಗವೀನಂ, ಆಜ್ಯಂ—ಈ ೨ ಹೊಸತುಪ್ಪಂ" (ಹಲಾಯು. ೪೬-೦೦೯);

ಅಣ್ಣಿವಾಲೊಳು ಸೂಜಿಗೆಯಂ ನನೆಹಿಕ್ಕಿ ಬಳಿಕ ಸಣ್ಣನ[ಪ್ಪ]ಂತೆ ಕಣಿಕವ ಮಾಡಿಯದಱ ಸರಿಬೆಣ್ಣೆ ನಸುಗೆನೆಯಿಕ್ಕಿ . . . ಗಾರಿಗೆಯ ಮಾಡಿ ಹೊಸ ತುಪ್ಪದೊಳು ಬೇಯಿಸಿದೊಡೆ . . . ಸಮುದ್ರಫೇನ (ಸೂಶಶಾ. ೧-೨೩).
[ಪೊಸ+ತುಪ್ಪ]

**ಪೊಸತೇರ್** (ನಾ). ಹಳೆಯದಲ್ಲದ ತೇರು; ನೂತನವಾದ ರಥ: ಪೊಸತೇರ್ ಪಡಗಂ ನೆಗಟ್ಟಿ ಪೆರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಗಕ. ೨೦೭). [ಪೊಸ+ತೇರ್$_2$]

**ಪೊಸತ್ತಿಗಲ್ಲು** (ನಾ). ಒಂದು ಪ್ರದೇಶದ ಹೆಸರು: ಬಡಗಣ ದೆಶೆ ಪೊಣ್ಬುೞಿ ಬಡಗಣ ಪಡುವಣ ಕೋಣೊದು ಪೊಸತ್ತಿಗಲ್ಲು ಪಡುವಣ ಸೀಮೆ ಕಡಂಬಗೆಱೆಯು ಪೆರ್ವ್ವಾಗಂ (ಎಕ. III (R). ಸಂಜಪ. ೨೭೬-೬೦; 808). [ ? + ಕಲ್ಲು (< ಕಲ್$_3$) ]

**ಪೊಸದಳಿಂಬ** (ನಾ). ಶುಭ್ರವಾದ ಬಟ್ಟೆ,—ವಸ್ತ್ರ: ಕಪ್ಪುರವಳಿಕಿನ ಜಗುಲಿಯ ಮೇಗಣ ಕುಸುಮದೆಸೆಟ ಮಿಸುಗುವ ಪೊಸದಳಿಂ[ಶಾಕಾಂ. ಣಿಂ]ಬದ ಮೇಗೆ ಕಿಱುದುಬೇಗಂ ವಿಶ್ರಮಿಸಿ (ಆದಿಪು. ೧೦-೭೦ ವ).
[ಪೊಸ + ದಳಿಂಬ]

**ಪೊಸದಳಿರ್, ಪೊಸತಳಿರ್,** ಹೊಸತಳಿರು (ನಾ). ಕುಡಿಯಿಡುತ್ತಿರುವ ಚಿಗುರು; ನವಪಲ್ಲವ: ಕುಸುಮವಾಪಚಯವ್ಯಸನಾವಸಕ್ತ ಸುರಯುವತಿ ಪಾಣಿಪಲ್ಲವರಾಗ ಮುಸುಕಿದುದೆನಿಸಿದುದಸುಗೆಯ ಪೊಸದಳಿರ್ಗಳೊಳಿಸವ ಕೆಂಪು ನಂದನವನದೊಳ್ (ಆದಿಪು. ೭-೯೬); ತುಂಬಿಯ ಬಂಬಲಂ ಬೆರಲ್ಗೊಳ್ಸಿ ಪೊಸದಳಿರ್ಗೆದಮಂ ಕರತಳಂ ದನಿ ಕೋಗಿಲೆಯಂ . . . ನೆಱೆ ಪೋಲ್ತು (ಧರ್ಮಾಮೃ. ೯-೦೯೦). **ಪೊಸತಳಿರ್:** ಪೊಸತ[ಶಾಕಾಂ. ದ]ಳಿರ್ಗಳ ಬಿಜ್ಜಣಿಗೆಯನೆಸೆವೆಲರ್ಗಳಿನೊಗೆವ ಘರ್ಮಜಲಮಂ ಕೀಲ್ದಾಱಿಸಿದುವು ಕುಸುಮರಜಂಗಳ್ ಪೊಸಯಿಸಿದುವು ಬಣ್ಣಮಂ ಲತಾಂಗಿಯರ್ಗಾಗಳ್ (ಆದಿಪು. ೧೦-೭೭); ಪೊಸತಳಿರಿಂದೆ ಬೀಸಿ ಕಳೆದಂತಿರೆ ಕಾಂತೆಯ ಕಾಯ ಕಾಂತಿಯಂ (ಲೀಲಾವ. ೯-೦೨೩). **ಹೊಸತಳಿರು:** ಮಾದಲದ ಹೊಸತಳಿರು ಕರಿಬೇವು ಕೊತ್ತುಂಬರಿಯ ಸೊಪ್ಪು ಶುಂಠಿ ನೀರುಳ್ಳಿಗಳ ಚಿತ್ತಳಿಸಿ ತುಪ್ಪದೊಳು ಹುರಿದು ಪರಿಮಳಗೊಳಿಸಿ ಪೊಡ್ಡಣಿಗೆಯನು ಮಾಡುತ (ಸೂಶಶಾ. ೩-೦೯). [ಪೊಸ+ತಳಿರ್$_2$]

**ಪೊಸದಾಂಗುಡಿ** (ನಾ). =ಪೊಸದಳಿರ್: ಗುಡಿ ತುಱುಗಿ ಲತೆಯ ಪೊಸ ದಾಂಗುಡಿಯೆನಿಸಿದುದು (ಶಾಂತಿಪು. ೦೦-೭೯).
[ಪೊಸ + ದಾಂಗುಡಿ(< ದಾಂಟುಂಗುಡಿ)]

**ಪೊಸದಾವರೆ** (ನಾ). ಆಗ ತಾನೆ ಅರಳಿರುವ ತಾವರೆ; ನಳನಳಿ ಸುತ್ತಿರುವ ಕಮಲ: ತಳಿರ್ತಸಿಪೆಳವಮಾವು ತುಂಬಿ ಪೊಸದಾವರೆ ಮಲ್ಲಿಗೆ ಯೆಂಬಿವಾಂತರಂ ದೆಸೆವಲಿಗೆಯ್ವ ಪಾಳಿ ಮೊನೆಯೊಳ್ ನೆಗಟ್ಟಿರ್ದ ಬಸಂತಂ (ಕಬ್ಬಿಗಕ. ೦೭೯). [ಪೊಸ+ತಾವರೆ (<ತಾಮರೆ)]

**ಪೊಸದು** 'ಪೊಸ್ಸೆ' ಪರಾ.

**ಪೊಸದುಗುಲ** (ನಾ). =ಪೊಸದಳಿಂಬ: ಕರೆವೆರಸಿದ ಪೊಸದುಗುಲದ ತೆರಳ್ಕೆವೆತ್ತುಡೆ ಹುಟ್ಟಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಜುಂಗಿಗೆ ಯೊಳಂ ಜನಮನೇಂ ಮನಂಗೊಳಿಸಿದುದೋ (ಆದಿಪು. ೯-೩೭); ಮೆಲ್ಲುಡಿ ವೀಣಾನಾದವಂಗಪ್ರಭೆ ಪೊಸದುಗುಲಂ ಪಕ್ವಬಿಂಬೋಷ್ಠರಾಗಂ ಕಡುಚೆಲ್ವಾ ದಂಗರಾಗಂ (ಕಾದಂಪೂ. ೦೦೦೨); ಪೊಸದುಗುಲವುನೊಲವಿಂದೆ ಪೊದೆದು (ಕಬ್ಬಿಗಕ. ೩೩೯). [ಪೊಸ+ದುಗುಲ$_1$]

**ಪೊಸದೂವಟ** (ನಾ). ಹಳೆಯದಲ್ಲದ ವಸ್ತ್ರ; ಹೊಸಬಟ್ಟೆ: ಧವಳಾಂಶು ವಿಡಿಕಿಱಿದ ಪೊಸದೂವಟದ ಕಾಲ ಕುಪ್ಪಸವ ತೊಡಿಸಿದಳದೋರ್ಪ ಕಾಮಿನಿ ಪರವೆನಾಟಿಗಳವಡಿಸಿ ಚಾತುರ್ಯದಿಂದ (ಶಾಂದಪು. ೭-೨೯); ಪೊಸದೂವಟದ ಶೋಭೆಯಿಂ ಮನೋಹರದಿ ಮೋಹಿಸುವ ಭದ್ರಾಸನ ಸುಖಾಸೀನನಾಗಿರ್ದ ಶಶಿಧರ ಶ್ರೀನಂದಿನಾಥಂ (ಶಂದಿಪು. ೯-೩೩).
[ಪೊಸ + ದೂವಟ (< ದುಪ್ಪಟಿ)]

**ಪೊಸದೂವೆ** (ನಾ). ಹೊಸದಾದ ಚಿತೆ: ಪಂದಲೆಯೋಳಿದೋರಣದ ಸೀಯದರಂ ಪೊಸದೂವೆ ದೂಪ [ಶಾಕಾಂ.ದಂಬೆತೂಪ] ತೂಗುಂದಲೆ ಬಾಟ್ವಿಣಂ ಪೊಡರೆ ಬಳ್ಳುವ ಸಮ್ಮನ ಸೂಲಂ (ಕಾವ್ಯಾಶ. ೩೬); ಪರೇತವನದೊಳಗೆ ಪೊಸದೂವೆಯ ಕಿಲದೊಳ್ ಕಳೆದೊಟ್ಟಿದ ತೊಡವು ಗಳುಮಂ ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪು ದೆಂದು . . . ಬಿನ್ನವಿಸಿ (ಅರ್ಧನೇ. ೩-೯೦ ವ). [ಪೊಸ + ದೂವೆ$_1$]

**ಪೊಸದೇಶಿ** (ನಾ). ಹಿಂದೆ ಇಲ್ಲದೆ ಇದ್ದ ಬೆಡಗು,—ವಿಲಾಸ; ನೂತನ ವಾದ ಬೆಡಗು: ಪೊಸದೇಶಿ[ಶಾಕಾಂ. ಸಿ] ಪೊಂಗು ಪೊಂಗೆಸೆವೆಸಕಂ ಕಡುಗಾಡಿ ರೂಢಿಯೆಂಬಿವಱಿಂದಂ ವಸುಧೇಶನಣುಗದಪ್ಪಂ ವಸುದೇವಂ ಧರೆಗೆ ಕಣ್ಣುಮುಳ್ಳಾಗಿರ್ದಂ (ಅರ್ಧನೇ. ೯-೦೩೦). [ಪೊಸ + ದೇಶಿ$_2$]

**ಪೊಸದೇಸಿ, ಪೊಸದೇಸೆ,** ಹೊಸದೇಸೆ (ನಾ). =**ಪೊಸದೇಶಿ:** ಸಾಗೆನಿಸಲ್ಕೆ ಸಾಲ್ವ ಸಗ್ಗದ ಪೊಸದೇಸಿಯೋಳಿಗಳನೊರ್ವಳೊಱಲ್ದು ನೆಱಲ್ದುಪಾಡಿದಳ್ (ಶಂಕಪಾ. ೭-೯೦). **ಪೊಸದೇಸೆ:** ಕವಿಮಾರ್ಗದೊಳಂ ಪೊಸದೇಸೆಯ ನುಡಿಗಳೊಳಂ ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೧-೩೯); ನೆಲೆವಾಡದ ಪೊಸದೇಸೆಯ ನೆಲೆವಾಡದ ಸುರವಿಮಾನ ಮೆಯ್ದುಲಿಣಂ ಕಿಱಿಸ್ನಿಲೆಯಾದುವಿವಱ ತೆಱದಿಂ ನೆಲೆಯಾದುವೆ ಸಕಲಜನದ ಕಣ್ಗಂ ಮನಕಂ (ಮಲ್ಲಿಪು. ೨-೭೬). **ಹೊಸದೇಸೆ:** ಹೊನ್ನನ ಹೊಸದೇಸೆಯ ನುಡಿ ನೇಮಿಯ ಕನ್ನಡದೊಳ್ಪಭಿನವಪಂಪನ ಬಗೆಯೆನ್ನೀ ಪೇಳ್ದ ಕೃತಿಗೆ ಪಿರಿದುಂ ಸೇರುಗೆ ನಿರ್ವಿಘ್ನತೆಯಂ (ಜಗನ್ನಾ. ೦-೦೦). [ಪೊಸ + ದೇಸಿ]

**ಪೊಸದೇಸೆ** 'ಪೊಸದೇಸಿ' ನೋ.

**ಪೊಸದೇಸೆಕಾರ್ತಿ** (ನಾ). ತಾರುಣ್ಯವತಿಯಾದ ಸುಂದರಿ,—ಚೆಲುವೆ: ಪತ್ತೆಸಾರ್ವವರಂತರ್ಜಿಸಿ ಕಾಮನ ಪಡಿಯಱಿತಿವೊಲೆಸೆದಳ್ ಪೊಸದೇಸೆ ಕಾರ್ತಿ ಪೊಸಕಟ್ಟೆಳದೊಳ್ (ಅರ್ಧನೇ. ೨-೦೩).
[ಪೊಸ + ದೇಸೆಕಾರ್ತಿ (< ದೇಸಿಗಾರ್ತಿ) ]

**ಪೊಸದೋಂಟ** (ನಾ). ಹೊಸದಾಗಿ ಬೆಳೆಸಿದ ತೋಟ: ಬಸದಿಯ ಪಡು ವಣ ಎಳೆದೋಣ್ಬುಮುಂ ಪಡುವಣ ತೊಱೆಯ ಮೂಡಗಣೆಯ ಪೊಸ ದೋಣ್ಬುಮುಂ (ಎಕ. X. ಕೋಲಾರ. ೯೦-೯೭; 903). [ಪೊಸ + ತೋಂಟ]

**ಪೊಸನನೆ** (ನಾ). ಎಳೆಯ ಮೊಗ್ಗು; ಹೂಮೊಗ್ಗು: ಪೊಸನನೆಯೊಳ್ ಪಸುರ್ಪಲರೊಳಂ ಚಿರಮಲ್ಲದ ಬೆಳ್ಪು ಪಲ್ಲವಪ್ರಸರದೊಳೆಯ್ದೆ ಕಣ್ಗೆ ಪಸರಿಬಡೆದೊಪ್ಪುವ ಕೆಂಪು . . . ಬಗೆಗೊಳ್ವಿನಂ ಬಸಂತದೊಳ್ ಬಸದಿಯ ಬಾಗಿಲಂ ತೆಱೆದ ಮಾಟ್ಕಿಯೊಳಿರ್ದುವು ಬಂದ ಮಾವುಗಳ್ (ಆದಿಪು. ೦-೬೬); ಪೊಸನನೆಯ ಬಿರಿಮುಗುಳ ಕುಸುಮಬಾಣಂಗಳಿಂ . . . ಎಸೆವುದುಂ (ಧರ್ಮಾಮೃ. ೦೦-೩೦). [ಪೊಸ + ನನೆ$_3$]

**ಪೊಸನವಿಲ್** (ನಾ). ಎಳೆಯ ವಯಸ್ಸಿನ ನವಿಲು; ಮರಿನವಿಲು: ಸುತ್ತಲುಂ ಪರಿವ ಜರಿಪೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳೀ (ಶಂಕಪಾ. ೩-೨೨ ರಗಳೆ). [ಪೊಸ + ನವಿಲ್]

**ಪೊಸನಸೆ** (ನಾ). ೧. ಉಂಟಾದ ಬೆದೆ: ಪೊಸನಸೆಯಿಂ ಮೃಗಂ ಮೃಗಿಯ ಮಗ್ಗುಲಿಸುತ್ತಿರೆ (ಸೂಕ್ತಿಸು. ೩-೨೨೯). ೨. ಕಾಮೋದ್ರೇಕದಿಂದ ಆಗ ತಾನೆ ಸೂಸಿದ ಸುರತದ್ರವ: ಪೊಸನಸೆಯ ಸೊವಡನಾ ಘ್ರಾಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗವೆತ್ತುತ್ತೆಸೆದುದು ವೃಷಭಮುಮರರನೇಡಿಸುವವೊಲೇನುಂಟೆ ನಿಮಗವಿಮಾ ಸಂಖಿಮೆಸುತುಂ (ಲೀಲಾವ. ೩-೯೩). [ಪೊಸ + ನಸೆ$_1$]

**ಪೊಸನಾರ್** (ನಾ). ೧. ಒಣಗದಿರುವ ನಾರು; ಹಸಿಯಾದ ಕತ್ತ: ಬದಿರುದಿರ್ದಕ್ಕಿ ಪಕ್ಕಿವೊಱೆ . . . ಹೂತಿಯ ಬೆಕ್ಕು ಸೀಳ್ದ ಮುತ್ತದ

ಪೊಸನಾರ್ ಸೆಣಂಬು ಪಲವುಂ ಮೃಗವಕ್ಕಿಗಳಿಂದಮೊತ್ತಿ ಕಟ್ಟಿದ ಮರಗಂಬಿ ಜೇರ್ಗರೆವಿನಂ ಗುದುಕಿಂ ಮಗುಂಟ್ದರ್ ವನೇಚರರ್ (ಸೂಕ್ತಿ ಸು. ೩-೦೬೯) ; ಪೊಸನಾರಂ ಕಲ್ಲೊಳ್ತೆತ್ರಲ್ರಿಱಿಯಲರಲನಾಕಾಶದೊಳ್ . . . ಆ ಬರ್ದೆ ಬಲ್ಲಳ್ (ಶ್ರೃಂಗಾರ. ೨೯-೯). ೨. ಹೊಳೆಯುವ ನಾರುಮಡಿ,–ವಲ್ಕಲ : ಒರಿಯ ಮಡುಗಳ ಮಜ್ಜನಮಾಗೆ ಪೊಸನಾರ ದೇವಾಂಗವಸ್ತ್ರಮಾಗೆ (ಕಂಶಣ. ೭–೨೯). [ಪೊಸ + ನಾರ್]

**ಪೊಸನೀರ್,** ಪೊಸನೀರು, ಹೊಸನೀರು (ನಾ). ೧. ಶುದ್ಧವಾದ ನೀರು ; ನಿರ್ಮಲಜಲ : ಪೊಸನೀರಿಂ ಪೊಸಗಂಪಿನಿಂ ಪೊಸತು ಬೆಳ್ಪಾದಕ್ಕಿಯಿಂ ದೇವನಂ . . . ಅರ್ಚಿಸಿ (ಲೀಲಾವ. ೩–೯೩). **ಪೊಸನೀರು :** ೧. ಶಶಿಕಾಂತಕಲಶದೆ ಚಂದ್ರಮುಖಿಯರಾಗ ಪೊಸನೀರ ಪಥಿಕರಿಗೆಱೆಯೆ (ಕಂಸಪ. ೬-೬೬). ೨. ಮಳೆಯಿಂದ ಹೊಸದಾಗಿ ಬಂದ ನೀರು : ಪೊಸನೀರ ಹೂರದೊಳಗೆ ಮಱಿಮೀನ್ಗಳು ಮಸಗಿ ಮುಂ ಪೊಳೆದಾಡುವಂತೆ (ಕಂಸಪ. ೦೦-೩೯). **ಹೊಸನೀರು :** ೨. ಹೊಸನೀರು ಬಂದು ಹಳೆನೀರು ಕೊಚ್ಚಿಕೊಂಡು ಹೋಯಿತು (ಗಾದೆ). ೩. ಸಿಹಿನೀರು : ಗೋದಾವರಿ–ಕೃಷ್ಣ–ಈ ನದಿಗಳ ಮಧ್ಯ ಕೊಲೇರ್ ಸರೋವರವಿದೆ. ಇದು ಇಂಡಿಯಾದಲ್ಲಿ ಮುಖ್ಯವಾದ ಹೊಸನೀರಿನ ಸರೋವರ (ಭೂಗೋಳ. ೬೦).
[ ಪೊಸ + ನೀರ್ ]

**ಪೊಸನೀರು** ' ಪೊಸನೀರ್ ' ನೋ.

**ಪೊಸನುಡಿ** (ನಾ). ಅಪೂರ್ವವಾದ ಮಾತು ; ನೂತನವಾದ ಮಾತು : ಕಿವಿಯಿಂ ಬಗೆವುಗುವೊಡೆ ಕೊಂಕುವೆತ್ತ ಪೊಸನುಡಿಯೆ ಪೊಗುಗುಂ (ಅಂಪು. ೦-೦೯) ; ರಸಭಾವಂ ಗಮಕಂ ಕಾಣಿಸೆ ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ ಕುಸುರಿಯ ಬಗೆಯಿಂದಿನಿತಱಿೞಿಸಿಯದ ಕೃತಿ ಕೃತಿಯೆ ಬಗೆದು ನೋಟ್ಪೊಡೆ ಜಗದೊಳ್ (ರಾವಾಭ್ಯು. ೦-೯೦) ; ನೀಳ್ಕೊಳಿಯ ಪೊಸ ನುಡಿಯ ಕಾಳು ಕೊರಗರ್ಗೆ ಕೀೞಿಲಿನೊಳಿಪ್ಪವರ್ ತಳವೆಳಗಿನಿಂ ನುಡಿಯೆ (ಕಾಬೂರ. ೦೦೬-೨೦೯). [ ಪೊಸ + ನುಡಿ$_2$ ]

**ಪೊಸನೂಲ್** (ನಾ). ಹಸಿಯ ದಾರ ; ಹೊಸೆಯದ ದಾರ : ಮಿಸುಗುವ ಶಶಿ ರೋಹಿಣಿಯರನೆಸೆವ ಶರನ್ಮೇಘಮಾಲೆ ಬಳಸಿದವೋಲ್ಮೋಭಿಸಲಾ ಮದುಮಕ್ಕಳನುಟೆ ಪೊಸನೂಲಿಂ ಸುತ್ತಿದರ್ ಮಹೀಸುರರಾಗಳ್ (ಅದ್ಭುತ. ೮-೩೩). [ ಪೊಸ + ನೂಲ್$_2$ ]

**ಪೊಸನೆತ್ತರ್** (ನಾ). (ದೇಹದಿಂದ ಅದೇ ತಾನೆ ಹೊರಬಂದ) ಬಿಸಿರಕ್ತ : ತಿಸುಳದೊಳುಚ್ಚಳಿಪ ಪೊಸನೆತ್ತರೆ ಕೆಂದಳಿರಾಗೆ (ಕಂಶಣ. ೦-೬) ; ಚಲದಿಂ ಮಲೆವ ಮಱುವರಸರ ಪೊಸನೆತ್ತರೊಳ್ ಪೊರೆದ ನಿನ್ನ ಬಾಳಂತೆ ಕಂದ ಳರ್ಗಳಿಂ ಒಳ್ಪುವಡೆದ ಮಿಸುಗುವ ಅಸುಗೆಗಳೊಳಂ (ಆಪ್ರಾ. ೯೯).
[ ಪೊಸ + ನೆತ್ತರ್ ]

**ಪೊಸನೆಯ್** (ನಾ). = ಪೊಸತುಪ್ಪ : ಇಂತೊಂದು ಪೂಣ್ಕೆ ಎಮ್ಮನ್ನರ್ಗೆ ದಳ್ಳಿಸುವ ಬಲ್ಗಿಚ್ಚಿನೊಳೆಱೆದ ಪೊಸನೆಯ್ಗೆ ಪಾಸಟಿವಾರದೇಂ ಪೋಕುಂ (ರಾಮಾಶ್ವ. ೬೩-೪೦). [ಪೊಸ + ನೆಯ್$_2$]

**ಪೊಸನೆಲ್** (ನಾ). ಹೊಸ ನೆಲ್ಲು,–ಬತ್ತ : ಬೇಱೆವೇಱೆ ವಿಕಲ್ಪ ಸಮುಚ್ಚಯಯುಗ್ಮದೊಳ್ ತೋಱುವೆಂ ಕ್ರಮವಿಕಲ್ಪನೆಯಿಂ ಗುಣ ದೋಷಮಂ ಕೀೞ್ಕೊಂಡು ಗುಣಾವಂ ಕಳೆಗಲ್ಲಿಯ ದೋಷಮಂ ತೋೞಿ ಪಿಂಗಿಸುವವೋಲ್ ಪೊಸನೆಲ್ಲಿರೆ (ಪೊಳ್ಗ)ಳಂ (ಕವಿರಾ. ೧-೦೩೦).
[ಪೊಸ+ನೆಲ್]

**ಪೊಸನೇಣ್** (ನಾ). ಹಳೆಯದಲ್ಲದ ಹಗ್ಗ ; ಹೊಸಹಗ್ಗ : ತೆಂಗಿನ ಪೊಸನೇಣಿಂದೆಱಿದಿಂಗಳ್ವರಮಡಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ರಾವಾಭ್ಯು. ೨-೯೨) ; ಮಾತೆಲ್ಲಮಂ ಬರೆದು ಅರದ ಪೊಸನೇಣ್ಗಳಿಗೆ ಪೊಸೆಯಿಪಾಯದವರಿರವ ರೋಡಾಡುತಿಹುದು (ಕಾಬೂರ. ೨೬-೦೯).
[ಪೊಸ + ನೇಣ್$_1$]

**ಪೊಸನೇರಾಣಿ** (ನಾ). ಮಿರುಗುವ ಚಿನ್ನ,–ಅಪರಂಜಿ : ರಾಣಿಯು ವಾಸದ ಪೊಸನೇರಾಣಿಯ ಮಾಡಂಗಳೊಳಗೆ ಕೆಯ್ಗೆಯ್ದಿರೆ ರುದ್ರಾಣಿ ವರುಣಾನಿ ನೆಗಟ್ದಿಂದ್ರಾಣಿಯೆನಲ್ಕಕ್ಕು ಮಿಕ್ಕ ಮಹಿಷೀಬ್ರಂದಂ (ಶಾಂತಿಪು. ೦೦-೬೦). [ಪೊಸ + ನೇರಾಣಿ]

**ಪೊಸನೋಟ,** ಹೊಸನೋಟ (ನಾ). ನೂತನದೃಶ್ಯ ; ಹೊಸದಾದ ನೋಟ : ಹರಹರ ಎನ್ನ ಕೈಯ ಹಸಿವೋಡಲಣಂ ತನುಮಿದೆ ಪೂಜೆಯಂ ವಿರಚಿಪೆನೆಂದೊ ಕಣ್ಗಳ ಬಱಿ ತಿಳಿಯಲ್ ಪೊಸನೋಟದಿಂದೆ ಕೆಂಕರಿಸುವೆ ನೆಂದೊ (ಕಂಶಾಕ. ೪). **ಹೊಸನೋಟ :** ಎಂದಿನದೊ ಹಳೆತೋಟ ಹೊಸಬಗೆಗೆ ಹೊಸನೋಟ (ಕಾಬೂರ. ೩೬-೦೦೬). [ಪೊಸ+ನೋಟ]

**ಪೊಸಪಚ್ಚ** (ನಾ). ಉಜ್ವಲಕಾಂತಿಯಿಂದ ಕೂಡಿದ ಆಭರಣ : ರನ್ನದ ಪೊನ್ನ ಚಿತ್ರವಸ್ತ್ರದ ಪೊಸಪಚ್ಚದೊಟ್ಟಲನೆ ಕೋಶಗೃಹಂ ಬಱಿದಾಗೆ ಕೊಟ್ಟು ಮಾಣದೆ ಮಗುಳಾನೆಯಂ ಕುದುರೆಯಂ ಧರಣೀಪತಿ ಸಾಱಿ ಬೀಱಿದಂ (ಚಂದ್ರಪು. ೬-೩೦) ; ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱೆ ಸೂಚಿಸಿ . . . ಇತ್ತ ಪಸಾಯದಚ್ಚ ಮುತ್ತಿನ ಪೊಸಪಚ್ಚಮಂ ತಳೆದವೋಲದಿರ್ಮುತ್ತ ಮುಗುಳ್ಪು ದೆತ್ತಲುಂ (ಚಂದ್ರಪು. ೭-೯೦). [ಪೊಸ + ಪಚ್ಚ$_2$]

**ಪೊಸಪಜ್ಜೆ** (ನಾ). ಅಳಿಸಿ ಹೋಗಿರದ ಹೆಜ್ಜೆಯ ಗುರುತು ; ಮಾಸದಿರುವ ಹೆಜ್ಜೆಯ ಗುರುತು : ಕುಂಜರಗುರುಕುಂಭಮಂಡಳ ದಿನಲ್ಲುಗುತಂದು ಕುಳುಂಪೆಗೊಂಡ ನೆತ್ತರ ಪೊಸಪಜ್ಜೆ [ಪಾಠಾಂ. ಹೊಸವಜ್ಜೆ] ಯೊಳ್ಪದಱಿ ಕಣ್ಗೆಸೆದಿರ್ದುವು . . . ಮುತ್ತುಗಳ್ (ಪಂಪಭಾ. ೧೦-೯೯ ; ಸೂಕ್ತಿ ಸು. ೩-೭೦ (ನೋ) ; ಅಗಲ್ದ ಪೆಣ್ಣಂಚೆಯ ಪುಳಿನಸ್ಥಳದ ಕುಸುಮಾರಜದ ಪೊಸಪಜ್ಜೆವಿಡಿದಱಸಿ ಪೋಗಿ (ಗಿರಿಜಾ. ೩-೦೦೩ ವ). [ಪೊಸ+ಪಜ್ಜೆ]

**ಪೊಸಪನ್ನೀರ್** (ನಾ). ಶುಭ್ರವಾಗಿರುವ ಪರಿಮಳದ ನೀರು : ಪೊಸ ಪನ್ನೀರೊಳ್ ಲತಾಂತಸ್ತಬಕಮನೊಲವಿಂ ತೊಯ್ದು ಭರ್ತಾರನಾದಟ್ಟ ಸಖಂ (ಅದ್ಭುತ. ೪-೨೯). [ಪೊಸ + ಪನ್ನೀರ್ (< ಪನಿನೀರ್)]

**ಪೊಸಪರಿಮಳ,** ಹೊಸಪರಿಮಳ (ನಾ). ಆಹ್ಲಾದಕರವಾದ ವಾಸನೆ ; ನರುಗಂಪು : ಪೊಸಪರಿಮಳವಿಡಿದಿಹ ಕರ್ಪೂರದ ಸವಿರಸದಂಬುಲದ ಕುಟುಕಿತ್ತು ನೊಸಲೆಡೆಯನು ಚುಂಬಿಸಿ ತಕ್ಕಿಸುತ ಪರವಶೆಯಾದಳೀನ ಬಣ್ಣಿಸುವೆ (ಕಂಸಪ. ೯-೦೬೬). **ಹೊಸಪರಿಮಳ :** ಹಸನಾಗಿ ಸವಿಯಾದ ಸಂಭಾರವಿಕ್ಕಿಯವು ಮಸೆದಂದದಿ ನೇತ್ರಮಂ ಕಟ್ಟಿ ಪೊಗ್ಗರಿಸಿ ಹೊಸ ಪರಿಮಳವನಿಕ್ಕಲವು ತಾನೆ ಭಿನ್ನರುಚಿವ್ಯಂತಾಕವೆಸರಾದುವು (ಸೂಪಶಾ. ೪-೯).
[ಪೊಸ + ಪರಿಮಳ ( = ಪರಿಮಲ) ]

**ಪೊಸಪರೆಯ** 'ಪೊಸವರೆಯ' ನೋ.

**ಪೊಸಪಸಲೆ** (ನಾ). ಹಚ್ಚಹಸುರಾಗಿರುವ ಹುಲ್ಲು ; ಎಳೆಯ ಗರಿಕೆ : ನಳನಳಿಸಿ ಬೆಳೆದ ಪೊಸಪಸಲೆಯ ಮೇಲೆ ಕದಳೀದಳಂಗಳು ಕಮಲ ಪತ್ರಂಗಳು . . . ಪಾಸುತ್ತುಂ (ಗಿರಿಜಾ. ೩-೬೬ ವ). [ಪೊಸ + ಪಸಲೆ]

**ಪೊಸಪಸೆ** 'ಪೊಸವಸೆ' ನೋ.

**ಪೊಸಪಳುಕು** 'ಪೊಸವಳಿಕು' ನೋ.

**ಪೊಸಪಾಕ,** ಹೊಸಪಾಕ (ನಾ). ಆಗತಾನೆ ತಯಾರಿಸಿದ (ಸಕ್ಕರೆ ಅಥವಾ ಬೆಲ್ಲದ) ಬಿಸಿಯಾಗಿರುವ ಪಾಕ : ಕಳಿತ ಬಾಳೆಯ ಹಣ್ಣ ಸಕ್ಕರೆಯ ಪೊಸಪಾಕದೊಳಗೆ . . . ಇಳಿಹುವುದು (ಸೂಪಶಾ. ೪-೩೦). **ಹೊಸಪಾಕ :** ಕುಂಬಳದ ಕಾಯ ಕೈಸೇವಗೆಯ ಸಮವಾಗಿ ಸಂಬಳಿಸಿಕೊಂಡೊಣಗಲಿಕ್ಕಿ ತುಪ್ಪದೊಳಗಿಳಿಯಂ ಬಟ್ಟು ಹುರಿದು ಸಕ್ಕರೆಯ ಹೊಸಪಾಕದೊಳು ಕಟ್ಟುವುದು ಲಡ್ಡುಗೆಯನು (ಸೂಪಶಾ. ೦-೩೩). [ಪೊಸ+ಪಾಕ$_1$]

**ಪೊಸಪುಟ್ಟು**, ಹೊಸಹುಟ್ಟು (ನಾ). ಹಳೆಯ ಬಾಳಿನಿಂದ ಬೇರೆಯಾದ ಬಾಳು ; ಮತ್ತೊಂದು ಜನ್ಮ : ಎಳೆಯ ಕರ್ನಾಟಕಂ ಪೊಸಪುಟ್ಟು ಪುಟ್ಟುಗೆ ! (ಹೂಂಗಳು. ೪೦-೦೫). **ಹೊಸಹುಟ್ಟು** : ಹೊಸಹುಟ್ಟು ಬರುವದಿದೆ ಇನ್ನು ಮುಂದೆ ಆಗೋಣ ಆ ಜಗದ ತಾಯಿತಂದೆ (ನಾದಲೀ. ೬೬-೦೬). [ಪೊಸ+ಪುಟ್ಟು$_{1}$]

**ಪೊಸಪುಲ್** 'ಪೊಸವುಲ್' ನೋ.

**ಪೊಸಪೂ** 'ಪೊಸವೂ' ನೋ.

**ಪೊಸಪೊಡೆ**, ಹೊಸಪೊಡೆ (ನಾ). ಎಳೆಯ ತೆನೆ, –**ಹೊಡೆ** : ತೊಳಪ ಪಸುರ್ಪಣೆಯ ಬೆಳಗುಚ್ಛಳಿಸಲ್ಪನ್ನಧ್ಯದೊಳ್ವಿಜೃಂಭಿಪ ಸೂತ್ರೋಜ್ವಳ ರೇಖೆಯಂತೆ ಪೊಸಪೊಡೆಯಳವಟ್ಟಿರಲೆಸೆದುದವರ್ದ ಕಳವುಕ್ಷೇತ್ರಂ (ಅದ್ಭುಟಿ. ೩-೦೬). **ಹೊಸಪೊಡೆ** : ಉತ್ತಮದ ಹೂವು ಕಾಯ್ ಗೆಣಸುಗಳ ಹೊಸಪೊಡೆ [ಪಾಠಾಂ-ಪುಡಿ]ಯು ಮತ್ತುಳಿದವಕ್ಕೆ ಹಸವಾಡಿ ಬಟ್ಟತ್ರಿಪದ ನಿತ್ಯ ಒಗ್ಗರಿಸಿಕೊಂಡವಬವಬಿ ಹೆಸರ ಹೂರಣಬದನೆಗಾಯೆಂಬುದು (ಸೂಶಶಾ. ೪-೨೦). [ಪೊಸ+ಪೊಡೆ$_{3}$]

**ಪೊಸಪೊನ್** 'ಪೊಸವೊನ್' ನೋ.

**ಪೊಸಪೊನಲ್** 'ಪೊಸವೊನಲ್' ನೋ.

**ಪೊಸಪೊಟ್ಟುಜು್** (ನಾ). ಯೌವನದ ಕಾಲ ; ತಾರುಣ್ಯ : ಪಾಂಡವರ ಕಾರಣಂ ಕಣಕದೀ ಪೊಸಪೊಟ್ಟುಜೊಳಾದ ಕಿರ್ಚು ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ತು ಪೋಕುಮೇ (ಶಂಪಶಾ. ೨-೯೬). [ಪೊಸ + ಪೊಟ್ಟುಜು್]

**ಪೊಸಬ** 'ಪೊಸಂಬ' ನೋ.

**ಪೊಸಬಗೆ** 'ಪೊಸವಗೆ' ನೋ.

**ಪೊಸಬಣ್ಣ**, ಹೊಸಬಣ್ಣ (ನಾ). ೧. ಉಜ್ವಲವಾದ ಬಣ್ಣ ; ಸ್ವಚ್ಛ ವರ್ಣ : ಪೊಸಬಣ್ಣದೊಳೊಂದಿದ ಪಾರಿಜಾತಮಗ್ಗಳಮೆಸೆದೊಪ್ಪುವಂತೆ ತಳಿರಿಂ ಮುಗುಳಿಂ ನವಯೌವನಂ ಮನಂಗೊಳೆ (ಶಂಪಶಾ. ೨-೩೮). **ಹೊಸಬಣ್ಣ** : ೨. ಹೊಸ ಬಗೆ ; ನವೀನ ರೀತಿ : ಇಂದ್ರಚಾಪದ ಮಳೆಗಾಲದ ದಿನದಂತೆ ಬಾಳಿಗೆ ಹೊಸಬಣ್ಣವಾಗೆ ಸಂಸಾರವೆನುವುದು ಸುಖಮಯ ವೆನಿಸುತೆ ಕಳೆಯಿತು ಕಾಲವು (ಇಂಚಾಶ. ೪೨-೦೦೦). [ಪೊಸ+ಬಣ್ಣ]

**ಪೊಸಬಾಸಿಗ** 'ಪೊಸವಾಸಿಗ' ನೋ.

**ಪೊಸಬಾಸೆ** (ನಾ). (ಎದೆಯ ಮಧ್ಯಭಾಗದಿಂದ ಹೊಕ್ಕುಳ ಮೇಲು ಭಾಗದವರೆಗೆ ಇರುವ) ಮನೋಹರವಾದ ಕೂದಲ ಸಾಲಂ : ಪೊಸಬಾಸೆಯ ಚೆಲ್ವಂ ನಿಟ್ಟಿಸಲಾಂ ಮೊಲೆ ಕಾಣಲೀಯವೇದುಜು ಸುಯ್ವಂತುಸುರಂ ಪಸರಿಸಿಯುಲರೇಜಿಸಿದಳ್ ಸಿಂಧುವಾಪದಲರನ ದೊರ್ವಳ್ (ಅದ್ಭುಟಿ. ೯-೯೩). [ಪೊಸ+ಬಾಸೆ$_{1}$]

**ಪೊಸಬಿಜ್ಜಣಿಗೆ** (ನಾ). ಮಿರುಗುವ ಬೀಸಣಿಗೆ : ಬಿಸಿಲೆಸಕದಿಂದೆ ಕೊರಗಿದ ದೆಸೆವೆಣ್ಗಳ ಬಿಸುಪನಾಜಿಪಂತಿರೆ ಗಿಳಿಗಳ್ ಪಸುರೆಜಕೆಯೆಂಬ ಬಾಟಿಯ ಪೊಸಬಿಜ್ಜಣಿಗೆಗಳಿನೆಸಗಿಪುವು ತಣ್ಪೆಲರಂ (ಕಾದಂಪೂ. ೦೩೦). [ಪೊಸ + ಬಿಜ್ಜಣಿಗೆ]

**ಪೊಸಬಿಜ್ಜೆ** (ನಾ). ಹೊಸಬಗೆಯ ಮಾಯಾವಿದ್ಯೆ : 'ಪೊಸಬಿಜ್ಜೆವಳ' ಪರಾ. [ಪೊಸ+ಬಿಜ್ಜೆ]

**ಪೊಸಬಿಜ್ಜೆವಳ** (ನಾ). (ಇಂದ್ರಜಾಲವೆಂಬ) ವಿದ್ಯೆಯನ್ನು ತಿಳಿದವನು ; ಮಾಯಗಾರ : ಸಿಸುವಾಗಿ ತಾನಾಲದೆಲೆಯೊಳೊಜಿಗಿ ತನ್ನ ಬಸಿಜೊಳೀರೇಳುಲೋಕಗಳ ಪಸರವ ತೋಜಿ ಬಗೆಗೊಳಿಸುವ ಪೊಸಬಿಜ್ಜೆ ವಳಗೆಜಗುವೆನು (ಕಣಶ್ರಾ. ೦-೦೦). [ಪೊಸಬಿಜ್ಜೆ+–ವಳ]

**ಪೊಸಬಿಸಿಲ್** 'ಪೊಸವಿಸಿಲ್' ನೋ.

**ಪೊಸಬೀಡಾರ** (ನಾ). ನೂತನ ವಸತಿ ; ಹೊಸ ನೆಲೆ : ಪೊಸಬೀಡಾರ ದೊಳಿರ್ದ ಬಟ್ಟಗನವೊಲ್ ಮೋಹಾಭಿವೇಶೋದಯಂ ವಸುಧಾಧೀಶನ ಚಿತ್ತದಲ್ಲಿ ಕಿಜಿದುಂ ಮೆಯ್ದೋಜಿತಿಲ್ಲ (ಬಾಪಕೃ. ೦೨-೬೨). [ಪೊಸ+ಬೀಡಾರ]

**ಪೊಸಬು** (ನಾ). (?) : ಮುಕ್ಕಾಲು ದೀವಿಟಿಗೆ ಮುರಿಲೆ ಜನಿವರ ತುದಿಕಲಪ ಪೊಸಬು ಚಕ್ರದ ಕೊಡೆ ಅಳ × × × ಪಿಲುಚೀಕತಕಡಿದೆಡ ತಕಡಿ (ಎಕ. XVI. ಗುಬ್ಬಿ. ೬೯-೨೮ ; ೪). [< ಪೊಸತು ?]

**ಪೊಸಬೆ** (ನಾ). ಅಪರಿಚಿತೆ ; **ಹೊಸಬಿ** : ಎಳೆನಾಭಿಯೆಳೆಯಳ್ ಎಸೆವು ಡಿಯ ಪೊಸಬೆ ನುಣ್ಣನಿಯ ನೂತನೆ ಭಾಳದ ಭಾಮಿನಿ ಕರ್ಣಪಾಲಿಕೆಯ ಕಾಮಿನಿ . . . ಪೆಣ್ಗಳ ಪುಣ್ಯಾಕಾರೆಯುಮೆನಿಸಿ ಮನಂಗೊಳಿಸುತ್ತಿದ್ದಳು (ಅದ್ಭುಟಿ. ೩-೩೩ ವ). 'ಹೊಸಬಿ' ಪರಾ. [ಪೊಸಬ (< ಪೊಸಂಬ) + –ಎ$_{1}$]

**ಪೊಸಬೆಣ್ಣೆ**, ಹೊಸಬೆಣ್ಣೆ (ನಾ). ಆಗತಾನೆ ತೆಗೆದ ಬೆಣ್ಣೆ ; ನವನೀತ : ರಾಹುಗೆ . . . ಕೊಟ್ಟ ಪೊಸಬೆಣ್ಣೆವೊಲಿರ್ದುದು ಚಂದ್ರಮಂಡಲಂ (ಕಾವ್ಯಸಾ. ೯೩೮ ಚಂದ್ರಕ) ; ನನೆದ ಸೊಜ್ಜಿಗೆಯೊಳಗೆ ಪೊಸಬೆಣ್ಣೆ ಸಿಹಿಮೊಸರ ಕೆನೆ ಹಾಲ ಕೆನೆಯುಪ್ಪನಿಕ್ಕಿ ಕಣಕವ ಕುಟ್ಟಿಯನುವಾಗಿ ರೊಟ್ಟಿಯಂ ಮಾಡಿ ಒಟ್ಟೆಯ ಹಲ್ಲೆಗಳ ನಡುವೆಯಿರಿಸಿ ಹುದುಗಿ (ಸೂಶಶಾ. ೦-೦೨). **ಹೊಸಬೆಣ್ಣೆ** : ನೆಲಕೆ ಗಗನಕೆ ಸೂತ್ರವಿಡಲಂಬಿಲದೊಳಗೆ ಹೊಸಬೆಣ್ಣೆಯಂ ತೆಗೆಯಲು . . . ಬಲ್ಲ ನೆಜಿ ಜಾಣೆ (ಬಸವು. ೪೨-೨) ; ಕುಟ್ಟಿ ಕಣಕವನು ಹೆಬ್ಬೆಟ್ಟಂತ ಹೊಸೆದು ಮೂವೆಟ್ಟಗಲದೊಳಗೊತ್ತಿಯಂತದಕೆ ಹೊಸಬೆಣ್ಣೆ ವಿಟ್ಟುಮಂ ತೊಡೆದು (ಸೂಶಶಾ. ೦-೩೦). [ಪೊಸ + ಬೆಣ್ಣೆ]

**ಪೊಸಬೇಟ** 'ಪೊಸವೇಟ' ನೋ.

**ಪೊಸಬೇಸಗೆ** (ನಾ). ಆಗತಾನೆ ಪ್ರಾರಂಭವಾದ ವೈಶಾಖಮಾಸ ; ಮುಂಬೇಸಗೆ : ಪೊಸಬೇಸಗೆಯೊಳ್ ಮೃಗತತಿಯುಸುಪೆರಸಿರವೇಳ್ಕು ಮೆಂದು ಕರುಣಿಸಿ ಮಿತ್ರಂ ಬಿಸಿಲಂ ಪೀಡೊಡೆ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ (ಗಿಂಕ. ೯-೦೬). [ಪೊಸ + ಬೇಸಗೆ]

**ಪೊಸಬೋನ** (ನಾ). ಹೊಸದಾಗಿ ಮಾಡಿದ ಅನ್ನ : ಜಂಗಮಕೆ ಮಾಡಿ ದನ್ನವ ಪುತ್ರನುಣುತಿರಲು ಪಿಂಗದವಸಂ ಕೊಂದು ಮುಚ್ಚಿ ಪೊಸ ಬೋನವಂ ಸಾಂಗವಾಗಿಯೆ ಮಾಡಿ ತಜ್ಜಂಗಮಕೆ ನೀಡೆ (ರಾಜಶೇ. ೯-೦೨). [ಪೊಸ + ಬೋನ]

**ಪೊಸಮಂಜು** (ನಾ). ಶುಭ್ರವಾದ ಮಂಜು, –ಹಿಮ : ಜೊನ್ನದ ವೊಲ್ ಪೊಸಮಂಜು ವಾರ್ಧಿ ಪೆರ್ಚುಗೆಯನವರ್ಚಿ ತಾಳ್ದನುದಿತೋದ ಯಮಂ ಹಿಮಕಾಲಚಂದ್ರಮಂ (ರಾಜಶೇ. ೯-೪). [ಪೊಸ + ಮಂಜು$_{1}$]

**ಪೊಸಮಕರಂದ** (ನಾ). ಆಗತಾನೆ ಅರಳಿರುವ ಹೂವಿನ ಬಂಡು : ಪೊಸಮಕರಂದದ ಮಾಂದದ ರಸಕ್ಕೆ ಮಂದಲರೊಳೆಜಗಿದಳಿ ರಚನೆಯ ಕರ್ಪೆಸೆವಂತೆಸೆವಿನಮೇಂ ಸೊಗಯಿಸಿದುದೊ ವನಯುವತಿವದನತಿಲಕಂ ತಿಲಕಂ (ಶಾಂತಿಪು. ೭-೧೩೩). [ಪೊಸ + ಮಕರಂದ]

**ಪೊಸಮದ**, ಹೊಸಮದ (ನಾ). ೧. ತಾರುಣ್ಯದ ಸೊಕ್ಕು. ೨. ತಾರುಣ್ಯದ ಸೊಕ್ಕಿನಿಂದ ಸುರಿಯುವ (ಆನೆಯ) ಮದಧಾರೆ : ಪೊಸಮದದಾನೆಯಂ ನಸೆಯ ಪೆರ್ಬಿಡಿ ಜಂಗಮಕಲ್ಪವೃಕ್ಷಮಂ ಮಿಸುಗುವ ನಲ್ಪಕಲ್ಪಲತೆ ನೀರದಮಂ ಕುಡುಮಿಂಚು ಪೊರ್ದಿ ಶೋಭಿಸುವವೊಲ್ (ಶಾಂತಿಪು. ೭-೨೮). **ಹೊಸಮದ** : ೨. ಹೊಸಮದದ ವನದಂತಿ ಕದಳಿಯ ಕುಸುರಿದಜಿದಂದದಲಿ ಘನಪೌರುಷವ ಮಾಡಿದನೆಂದನವನೀಪಾಲನನುಜಂಗೆ (ಕುಮಾರರಾ. ೬-೨೨). [ಪೊಸ + ಮದ]

**ಪೊಸಮದವಣಿಗ** (ನಾ). ಹೊಸದಾಗಿ ಮದುವೆಯಾದವನು : ಪೊಸ ಮದವಣಿಗಂ ದೇವೇಂದ್ರನ ಶಚಿಯ ವಿಳಾಸಾವಿಷ್ಕೃತವಿವಿಧವಿಭವಮಂ ಮಸುಳಿಸಿದಂ (ಶಾಂತಿಪು. ೭-೨೨೦). [ಪೊಸ+ಮದವಣಿಗ(< ಮದುವಳಿಗ)]

**ಪೊಸಮುದವಳಿಗೆ** (ನಾ). ಹೊಸದಾಗಿ ಮದುವೆಯಾದವಳು; ನವವಧು : ಆತನ [ಮನೆಗೆ ವಂದು ಪೊಸಮುದವಳಿಗೆಯ ಕಿಲದೊಳಿರ್ದ ಪುಷ್ಪದಾಡನಂ ಕಂಡು] (ರಮಾಮೃ. ೬-೧೨೭). [ಪೊಸ+ಮದವಳಿಗೆ (<ಮದುವಳಿಗೆ)]

**ಪೊಸಮನೆ, ಹೊಸಮನೆ** (ನಾ). ಹೊಸದಾಗಿ ಕಟ್ಟಿದ ಮನೆ; ನೂತನ ಗೃಹ : ಕಿಸುರ ಕಸಗಳೆದುಮತ್ತಿಸಿ ಪೊಸಬಗೆಯಂ ಪೂಸಿ ರಾಗರಸದಿಂ ಪೊಕ್ಕಂ ಪುಸಿದಟ್ಟೆಂಡಿರ ಬೇಟಂ ಬಿಸುಟಿರ್ದೆಯಂ ಸ್ಮರನೆ ಪುಗುವವೊಲ್ ಪೊಸಮನೆ [ಶಾಂತಿ. ಪಾಟ್ಮನೆ]ಯಂ (ಅರ್ಥಸಂ. ೯-೦೯೯) ; ಮಾಡಿದ ತೋರಣಮಟ್ಟುಗಳ್ ಪೊಸಮನೆ ಸುತ್ತಲುಂ ಬಳಸಿ ಪರ್ವಿದ ಕೇದಗೆ ಪಚ್ಚವಾಗಿಲ್ (ಕಬ್ಬಿಗ. ೦೦೦). **ಹೊಸಮನೆ:** ಹೊಸಮನೆಯ ಕಟ್ಟಿದೆನು ಗೃಹಶಾಂತಿ ಮನೆಯೊಳಗೆ (ಭರತೇ. ೨-೬೦-೩) ; ಹೊಸ ಊರು ಹೊಸಮನೆಯೆನೆ ಹೊಸತಾಯಿತು ನಮ್ಮ ಜೀವನ ಸುಖವಾಗಿ (೨೦ಶಾಕ. ೩೯-೭೬). [ಪೊಸ+ಮನೆ]

**ಪೊಸಮಲ್ಲಿಗೆ** (ನಾ). ಆಗತಾನೆ ಅರಳಿರುವ ಮಲ್ಲಿಗೆ; ನಳನಳಿಸುತ್ತಿರುವ ಮಲ್ಲಿಗೆ : ಸೊಡರ್ಗುಡಿಯೊಯ್ಯನಾಗೆ ಪೊಸಮಲ್ಲಿಗೆ ಮೆಲ್ಲಗೆ ಕಂಪುನಾಱೆ (ಕಂಶಕಾ. ೯-೦೦೦) ; ಪೊಸಮಲ್ಲಿಗೆಗಮೊಲ್ಮೊಮಿಂಗಂ ಮದುವೆಮಾಡಿದಳ್ಳನದೊಳ್ (ವರ್ಧಕ. ೯-೩೬). [ಪೊಸ+ಮಲ್ಲಿಗೆ]

**ಪೊಸಮಸೆ, ಹೊಸಮಸೆ** (ನಾ). (ಮಸೆದು) ಹೊಳೆಯುವಂತೆ ಹರಿತಗೊಳಿಸಿರುವುದು : ಗಗನಮೆಡೆನೆಱೆಯದಂತಿರೆ ಗಗನೇಚರಸೈನ್ಯಮಿಸುವ ಪೊಸಮಸೆಯ ಸರಲ್ಗಳ ಧರನ ಮೇಲೆ ಪಾಯ್ದುವು (ಕಂಪಾಪಹ. ೯-೬೦) ; ದಮನನಂ ಪೊಸಮಸೆಯ ಕೂರ್ಗಣೆಗಳಿನಿಸುತುಂ (ರಾಮಾಕ್ಕ. ೯೦-೦೦). **ಹೊಸಮಸೆ** : ಹೊಸಮಸೆಯ ಹೊಗರಂಬುಗಳನೆಬ್ಬಿಸಿದನು (ಉಪ್ಪಾರೊ. ೦೩-೬೦). [ಪೊಸ+ಮಸೆ]

**ಪೊಸಮಾವು** (ನಾ). ಚಿಗುರಿದ ಮಾವಿನ ಮರ : ಮುಸುಕಿದ ತಳಿರಂ ಪೇಱದ ಪೊಸಮಾವುಗಳಿಂ ಬಸಂತಮೆಸೆದಪುದು (ಅಂಕಿ. ೦೦-೮೩) ; ತಣಿಪುವುದು ಪೊಸಮಾವೆಳಸಿದ ಪಾಂಥಪ್ರತಾನಪಂಚೇಂದ್ರಿಯಮಂ (೧೧೯. ೨-೯೩). [ಪೊಸ+ಮಾವು]

**ಪೊಸಮಿಸುನಿ, ಹೊಸಮಿಸುನಿ** (ನಾ). = ಪೊಸನೇರಾಣೆ : ಪೊಸಮಿಸುನಿವೆಸದ ತೊಡೆಗುಪ್ಪಸಮೆಸೆದುದು ಪೊಣರಲೆಂದು ಪೊಂಬಾಳೆಯೊಳಂದಸಿಯಳ ನುಣ್ದೊಡೆ ತಾಳ್ದವೊಲಸದೃಶರುಚಿ ಕನಕಕವಚಮಂ ಕಡುಪಿಂದಂ (ರಾಜಶೇ. ೦೨-೬೦). **ಹೊಸಮಿಸುನಿ** : ಹೊಸಮಿಸುನಿಯ ಚಿನ್ನದಿ ಕರುವಿಟ್ಟು ನಿರ್ಮಿಸಿದ ಪುತ್ಥಳಿಯಂದದಲಿ (ತೀವಂಕಾ. ೦-೦೬). [ಪೊಸ+ಮಿಸುನಿ]

**ಪೊಸಮೀನ್** (ನಾ). ಹೊಳೆಯುವ ಮೀನು : ನನೆಗಣೆಯನ ಮೆಯ್ಸಿಳಗೆಂಪಿನಿಗೊಳದೊಳ್ ಮೊದಲೆ ಮಿಳಿರ್ದು ನೆಗೆದಾಡಿದುವಂದೆನಸುಂ ಕಡುನೀಱೆಯ ಚೆಲ್ವನೆ ತೊಳಗುವ ಕಣ್ಗಳೆಂಬ ಪೊಸಮೀಂಬೊಣರ್ಗಳ್ (ಕಬ್ಬಿಗ. ೩೩೦). [ಪೊಸ+ಮೀನ್$_{2}$]

**ಪೊಸಮುತ್ತು, ಹೊಸಮುತ್ತು** (ನಾ). ನೂತನವಾಗಿರುವ ಮುತ್ತು : ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿದಂತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳಮೃತಕಿರಣನ ಕಾಂತಿಗಳನೀಸುವಂತಾದುವು (ಕಂಶಕಾ. ೨-೩೯ ವ) ; ಮತ್ತಗಜಮಸ್ತಕದ ಪೊಸಮುತ್ತಂ ಬಲ್ಪಿಂದೆ ತಂದೆಂ (೧೧೯. ೦-೦೦೩) ; ಪಲಪುಸುರ್ದೋರಣ ಪಳಿ ಗುಡಿ ಸಂತಸವಱೆ ಪೊಸಮುತ್ತಿನ ಬಣ್ಣಪುರಂ ಮನೆಮನೆದಪ್ಪದೆ ಶೋಭಿಸಿತು (ಜಯಂಕಾ. ೨-೩೯). **ಹೊಸಮುತ್ತು**: ಹೊಸಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು (ಅವತಂ. ೧೩೩-೬೨೯) ; ಎತ್ತಿದರು ಬಳಿಕಾರತಿಯ ಹೊಸಮುತ್ತುಗಳ ಸೇಸೆಯನು ಪರಿಕಲಿಸುತ್ತ ಹರಸಿದರಖಿಳವಿಪ್ರಸುವಾಸಿನೀನಿಕರ (ಕೊರಂ. ೦-೦೯-೨೦). [ಪೊಸ + ಮುತ್ತು$_{2}$]

**ಪೊಸಮೃಣಾಳ** (ನಾ). ತಾವರೆಯಂ ಎಳೆಯ ದಂಟು : ಎಳದೆಸಿಸಿರ್ದ ಪಾವಸೆಯ ತಣ್ಣೆಲೆಯಿಂದಮೆ ನೆಯ್ದ ಸೀರೆ ಶೀತಳಿಕೆಯ ಬಾಮರಂ ಪೊಸಮೃಣಾಳದ ತೋಳ್ಸಳೆ (ಕಾವಂಕಾ. ೪೩೯). [ಪೊಸ + ಮೃಣಾಳ (= ಮೃಣಾಲ)]

**ಪೊಸಮೆಂಡಿ** (ನಾ). ಒಬ್ಬಾತನ ಹೆಸರು (?) : ಸಿರಿಸಗರನ್ ××× ಯನ್ ಪೊಸಮೆಣ್ಡಿ ಸಗ್ಗಮೇಱಿದ (ಎಕ. IX. ಹೊಸಕೋ. ೯-೪ ; ಸು. 870). [ ? ]

**ಪೊಸಯಿಸು$_{1}$** (ಕ್ರಿ). ೧. ಹೊಸದನ್ನಾಗಿ ಮಾಡು ; ಹೊಸತಂಗೊಳಿಸು : ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಅಂಕಿ. ೯-೨೩) ; ಅಸಮಾನಮೆನಿಪ್ಪ ಲಾಸ್ಯಲೀಲೆಯುಮಂ ನಿರ್ಮಿಸಿ ತೋಱದನೊರ್ವೊರ್ದಲೆನೆ ಪೊಸಯಿಸಿದಂ ನಾಟ್ಯವಿದ್ಯೆಯಂ ಪುರುಹೂತಂ (ಶೀಮಂಕಿ. ೮-೦೬೯). ೨. ಜೀರ್ಣೋದ್ಧಾರ ಮಾಡು : ಗಂಗವಾಡಿಯ ಬಸದಿಗಳನಿತೊಳವನಿತಂ ತಾನೆಯ್ದೆ ಪೊಸಯಿಸಿದಂ (ಎಕ. II. ೬೩-೩೩ ; 1118). ೩. ಅತಿಶಯವಾಗು; ಅಧಿಕವಾಗು; ಹೆಚ್ಚಾಗು : ಸರಸಿರುಹದ ಮೇಗಾಡುವ ಸುರಸುದತಿಯರಾಟದಂದಮೆಂತೆನೆ ಸಿರಿಯಂ ಪರಿಭವಿಸಿ ತಂದು ಪೊಸಯಿಪ ಸಿರಿವಂತಿಕೆಯಿಂದೆ ಕಾಲೊಳೊದೆದಪರೆನಿಕುಂ (ಕಾಂತಿಕಿ. ೦೦-೦೬) ; ಈ ಸಮುಸ್ತವಸುಧಾತಳರಾಜ್ಯವಿಭೂತಿ ನಿಮ್ಮದೊಂದಸದೃಶಮಂತ್ರದತುಳತಂತ್ರಬಳಪ್ರಥಿತಪ್ರತಾಪದಿಂ ಪೊಸಯಿಸಿ ಸಂದುದಿಂದುವರಂ (ಶೀಮಂಕಿ. ೨-೩೯). ೪. ಅಧಿಕಗೊಳಿಸಂ ; ಹೆಚ್ಚುಮಾಡು : ಎಡೆಬಿಡುವಹಿತರಂ ಚಕ್ರಮೆ ಸಾಧಿಸಿದಪ್ಪುದು ನವನಿಧಿಗಳ್ ಪೊಸಯಿಸಿದಪ್ಪುವು ವಿಭೂತಿಯಂ ಪುರುಸುತನಾ (ಅಂಕಿ. ೦೯-೬೦). [ಪೊಸ + — ಇಸು]

**ಪೊಸಯಿಸು$_{2}$** 'ಪೊಸೆಯಿಸು' ನೋ.

**ಪೊಸರಂಗ** (ನಾ). ನೂತನವಾಗಿ ನಿರ್ಮಿಸಿದ ರಂಗಮಂಟಪ : ಪೊಸರಂಗದ ಪರಿಯಂಕಂ ಮಿಸುಕುವ ಕೌಳುಡೆ ಮರಾಳತಳ್ಪಂ ಸಿತಸದ್ವಸನದಿ ಪಚ್ಚವಡಿಸಿ ರಾಜಿಸುತಿರೆ ಕುಳ್ಳಿರ್ದನಬಲೆವೆರಸಾ ಕುವರಂ (ಶ್ರೀಪುರಾ. ೦೯-೬). [ಪೊಸ + ರಂಗ]

**ಪೊಸರಕ್ತ, ಹೊಸರಕ್ತ** (ನಾ). ೧. = ಪೊಸನೆತ್ತರ್ : ಧಾತ್ರಿಗೆ ಪೊಸರಕ್ತಪೂರಮೆಸಗಿದತ್ತು (ರಾಜಶೇ. ೩-೦೦೬). **ಹೊಸರಕ್ತ** : ೨. (ಆಲಂ) ನವಯೌವನ : ಉತ್ತಮವಾದವು ಹರೆಯದ ದಿನಗಳು ಹೊಸರಕ್ತ ಹೊಸ ಅನುರಕ್ತಿ (೨೦ಶಾಕ. ೨೦೨-೯೯). [ಪೊಸ+ರಕ್ತ]

**ಪೊಸರಜ್ಜು** (ನಾ). = ಪೊಸನೇಣ್ : ಪೊಸರಜ್ಜುಗಳಿಂ ಲಿಂಗಮನಸವಸದಿಂ ಸುತ್ತಿ ಮಾಱಿ ಘಟೆಯಾನೆಗಳಂ ಮಸಗಿ ಕಲಿ ಚೋಳವಿಭು ತೆಗೆಯಿಸೆ ದಿಟದಿಟಯೆನುತೆ ಪಱಿದು ಮುಗ್ಗಿದುವಾಗಳ್ (ಶ್ರೀಪುರಾ. ೨೦-೦೦). [ಪೊಸ + ರಜ್ಜು]

**ಪೊಸರತ್ನ** (ನಾ). ನೂತನವಾದ ರತ್ನ : ಸಾಲ ಮುತ್ತಿನ ಕುಚ್ಚಿನ ಪೊಸರತ್ನದ ಮೇಲುಪ್ಪರಿಗೆಗೆನ್ನನೊಯ್ದು ಕಾಲೋಚಿತದ ಕಲೆಗಳಿಂದ ಸೋಲಿಸಿ (ಕಂಪವಿ. ೯-೦೯೦). [ಪೊಸ+ರತ್ನ]

**ಪೊಸರನ್ನ** (ನಾ). = ಪೊಸರತ್ನ : ಪೊಸರನ್ನದ ಪೊನ್ನ ಪೊದಟ್ಟಿಸೋನೆ ಮಂದಾನಿಳನಿಚ್ಚಿ ಬೆರ್ಚಿಯೊಳಗಟ್ಟಿಱಿದಂತಿರೆ ದೇವರಾರ್ವಹೋಧ್ವಾನನಿನಾದಮೊಪ್ಪಿದುದು ರಾಜಿತರಾಜಗೃಹಾಂತರಾಳದೊಳ್ (೬೩೦ತಿಕಿ. ೬-೭೪) ; ಮಿಸುಗುವ ಕಣ್ಣ ನುಣ್ಪಳಗು ಜೊನ್ನದೊಳೊರಗೆಯಾಗೆ ಸೋಂಪು ಸಂದಿಸೆ ಪೊಸರನ್ನದಾರತಿಯನೆತ್ತಿದರಗ್ಗದ ಗಾಡಿಕಾರ್ತಿಯರ್ (ಕಬ್ಬಿಗ. ೩೯೩). [ಪೊಸ+ರನ್ನ(<ರತುನ)]

**ಪೊಸರೂಪು, ಪೊಸರೂವು** (ನಾ). ಹೊಸದಾದ ಚೆಲುವು ; ನವೀನ ರೂಪ : ಪೂಗಳಂ ತನ್ನುಮಂ ಮಱಿದಂ ನಿರೀಕ್ಷಿಸುತೆ ಮಱಿದಿರ್ದನಂ ಸತಿಯರಂಮ ಭೋಂಕನೆ ಕಂಡು ಬೆಱಗಾಗಿ ಸೋಲ್ತು ಪೊಸರೂಪಂ

ವನಂಗೊಂಡು (ಶಂಠಿಕ. ೦-೪೪). **ಪೊಸರೂವು :** ನೊಸಲ ಕತ್ತುರಿ ಬಾಗಿದ ಪುರ್ಬು ತಾವರೆಯೆಸಳನೇಳಿಪ ನಿಡುಗಣ್ಣು ಪಸರಿಪ ತಿಲಪುಷ್ಪ ನಾಸಿಕ ಸತ್ಕರ್ಣ ಪೊಸರೂವ ನೋಡಿ ಹಿಗ್ಗಿದರು (ವೋಹತ. ೦೮-೬೨).
[ಪೊಸ+ರೂವು]

**ಪೊಸರೂವು** 'ಪೊಸರೂಪು' ನೋ.

**ಪೊಸಲತೆ** (ನಾ). ಹೊಸದಾಗಿ ಚಿಗುರಿದ ಬಳ್ಳಿ : ಪೊಸಲತೆಯುಕ್ಕುವಲ್ಲ ಲತೆಗೆತ್ತಣದೀ ಸವಿಮಾತು ನೀಟ್ದ ರನ್ನಸರವುದಕ್ಕುವಲ್ಲ ಸರಕೆತ್ತಣವೀ ನವಘರ್ಮಬಿಂದುಗಳ್ . . . ಎಂದೊಸೆದು ಸಖೀಜನಂ ಪೊಗಟ್ದುದಾ ಸತಿಯಂ (ಉದ್ಭಟ. ೯-೪೦). [ಪೊಸ+ಲತೆ]

**ಪೊಸವಂದರ್** (ನಾ). ಹೊಸದಾಗಿ ಹಾಕಿದ ಚಪ್ಪರ : ಪರಿವೇಷದ ತೆಱದಿಂದನವರತಂ ಕರ್ಪೂರರಸದ ಪರಿಕಣೆ ಸುತ್ತುಂ ಪರಿಯಲ್ ಮೃಣಾಳ ಪೊಸವಂದರ ನಡುವಣ ಪೂವಿನೆಸಟ ಪಾಸಿನೊಳಿರ್ದಳ್ (ಕಾದಂಬ. ೨೨೩).
[ಪೊಸ+ಪಂದರ್]

**ಪೊಸವಗೆ, ಪೊಸಬಗೆ, ಹೊಸಬಗೆ** (ನಾ). ನವೀನರೀತಿ ; ನೂತನ ಕ್ರಮ : ಅಳಿಯರಗಿಳಿಯರಸಂಚಿಯುಮಿಳೆಯೊಳ್ ಭಾವುಕರ ಕಿವಿಗೆ ಸವಿಯಂ ಪಡೆಗುಂ ಕಳಕಂಠಕಂಠನಾಳೋದ್ಗಳಿತಸುಧಾಸಾರದಿಂಪು ಪೊಸವಗೆಯಲ್ತೇ (ಚಿಅ. ೦-೦೮). **ಪೊಸಬಗೆ :** ಪೊಸಬಗೆ ದೇಸೆವೆತ್ತು ಚಿತವಂ ಪ್ರತಿಪಾಲಿಸುವರ್ಥದೊಳ್ಪು ರಂಜಿಸೆ ರಸಭಾವದೊಳ್ ನೆಗಟ್ವಳಂಕೃತಿ ಕೈವಿಗೆ ಪೇಟ್ದು ಕಾವ್ಯಮಂ (ಪುಣ್ಯಾಸ್ತ್ರ. ೦-೨೦). **ಹೊಸಬಗೆ :** ಈ ಹೊಸಬಗೆ ಎಂದರೆ. ಕಾವ್ಯದ ವಿಶಿಷ್ಟಧರ್ಮವೆಂಬಲ್ಲಿ ಸಂಶಯವಿಲ್ಲ (ಕಾಕೋಶ. ೨೨೬); ಕಂದೆರೆಯ ಮರೆಚಿಲ್ಲು ತಂಗಾಳಿ ಪೊರೆಯೆ ಎಂದಿನದೊ ಹಳೆತೋಟ ಹೊಸಬಗೆಗೆ ಹೊಸನೋಟ ತಂದು ತೋರ್ಪುದು ಪಸಂ ಬಾಗಿಲಂ ತೆರೆಯೆ (ಕಾಊಕ. ೬೬-೧೦೬). [ಪೊಸ+ಬಗ್ಗೆ]

**ಪೊಸವಟ್ಟ** (ನಾ). ೧. ಹೊಸ ಗದ್ದುಗೆ.—ಪೀಠ : ಅದು ಚಿತ್ರಜಂಗೆ ಕುಲದೈವವಮದಂಗಜಚಕ್ರವರ್ತಿಗೆತ್ತಿದ ಪೊಸವಟ್ಟಮಂತದು ಮನೋಜನ ಕೈಪಿಡಿಯೆಂದು ಮಾಣ್ದನಾ ಸುದತಿಯ ರೂಪಿನಿಂ ಪೆಱತನೆಂದೊಡೆ ಚಿಃ ಕರಮುಗ್ಗನಾಗನೇ (ಅಜಿತ. ೨-೬೪). ೨. ಹೊಸದಾದ ಹಣೆಪಟ್ಟಿ : ಧವಳವಿಲೋಚನಂ ಧವಳಚಾಮರವಾಗೆ ಲಲಾಟಪಟ್ಟವೊಪ್ಪುವ ಪೊಸವ[ಕಾಶಾಂ. ಪ]ಟ್ಟವಾಗೆ . . . ಪೋಲ್ತು ತೋಱುವುದಸಿತೋತ್ಪಲೇಕ್ಷಣೆಯ ಯೌವನಲಕ್ಷ್ಮಿಯ ರಾಜ್ಯಲಕ್ಷ್ಮಿಯಂ (ಅಜಿತ. ೨-೩೮). [ಪೊಸ + ಪಟ್ಟ]

**ಪೊಸವಟ್ಟೆ, ಹೊಸಬಟ್ಟೆ** (ನಾ). ಹಳೆಯದಲ್ಲದ ಬಟ್ಟೆ ; ನೂತನವಸ್ತ್ರ : ಮಿಸುನಿಯ ಹಡಪ ಚಾಮರ ಕಂಚ ಕಾಳಂಜಿ ಪೊಸವಟ್ಟೆಯ ಪಾವಡೆಯ ಜಸವಟ್ಟೋಳಿಗದವರ ಮೇಳದೊಳಾಗ ವಸುಧೇಶ ಸಾರಿಗೈದಿದನು (ಶಂಪಂ. ೨೨ ೯೬). **ಹೊಸಬಟ್ಟೆ :** "ಅನಾಹತಂ, ನಿಷ್ಪ್ರವಾಣಿ, ತಂತ್ರಕಂ—ಇ ನವಾಂಬರ, ಹೊಸಬಟ್ಟೆ" (ಸಿದ್ಧಾಂತಿ. ೨೦೨) ; ಸಾಧಾರಣವಾಗಿ ಎಲ್ಲರೂ ಹಬ್ಬಗಳಲ್ಲಿ ಮಕ್ಕಳಿಗೆ ಹೊಸಬಟ್ಟೆ ತರುತ್ತಾರೆ (ರೂಢಿ).
[ ಪೊಸ + ಬಟ್ಟೆ ]

**ಪೊಸವಣ್** (ನಾ). ಮಾಗಿದ ಹಣ್ಣು ; ಪಕ್ವಫಲ : ಎಸಗುವೆಲರಿನೊಡೆ ದೊಸರ್ವ ಪೊಸವಣ್ಣ ಪಸರದಿನೆಸೆವಸಿಯ ಕೊಂಬನಿಂಬು ಮಾಡಿ ಸುಟಿದು ಗಟಿಪ್ಪವೆಳಗಿಳಿಯ ಬಳಗಕ್ಕೆ ತಮರ್ಮನೆಯಾದಿಮ್ಮಾವಿನ ಪೊದಱೊಳಂ (ಅಧ್ಯಾ. ೩೦). [ಪೊಸ+ಪಣ್]

**ಪೊಸವರೆಯ, ಪೊಸಪರೆಯ, ಹೊಸಹರೆಯ** (ನಾ). ನವಯೌವನ : ನಣ್ಣುಗುಳ ಪೊಸವರೆಯದಂಬುಜಾಸ್ಯದ ಸೂಳೆವೆಣ್ಗಳೊಡನೈದಲುಜ್ಜುಗಿಸೆ ಪಡೆ ಘೋಷಿಪ ಡಾಣ್ಗೆ ಸಂತೋಷಿಸುತ ವಂದಿಗಳು ಜಯ ಜೀಯ ಧಳರೆ ಭಾಪೆಂದುಲಿಯಲು (ಶಾವಶಂ. ೮-೪) ; ಬಸಿಱೊಳು ಬಂದ ಕುವರನಾದೊಡಮೇನು ಪೊಸವರೆಯದ ಪುರುಷನಸು ಒಸೆದು ನಿಟ್ಟಿಸಿ . . . ಬಣ್ಣಿಸಲಾಗದು ಭಾವೆಯರು (ಹರಿ. ೪-೨೨). **ಪೊಸಪರೆಯ :** ಈ ಮೂರುಲೋಕದೊಳಗಿಂತ ಚನ್ನಿಗ ಚಲ್ವ ಪೊಸಪರೆಯದಾ ಗಂಡುಸರ ನಾ ಕಾಣಲಿಲ್ಲ (ಶಶಪೋ. ೨೬-೨೪). **ಹೊಸಹರೆಯ :** ಅಲಘುಕಬರಿಯ ಕಮಲ ನಿಭವದನದ ಕಳಕಂಠಾಳಿಪದ ಹೊಸಹರೆಯದ ಲಲನೆಯರ ವಿಲಾಸಂ ನೃಪನಚಿತ್ತಮನೆಳಕುಳಿಗೊಳಿಸಿದುದು (ಕಥಾಕಾ. ೨-೩) ; ದೊರೆರಾಯನ ಸಮ್ಮುಖದೆ ಹೊಸಹರೆಯದ ತರುಣಿಯರುಗಳ ಹಸ್ತದಲಿ ಮಿಱುವ ಮಿಸುನಿಯ ಬೊಂಬಾಳದೀವಟಿಗೆಗಳ್ಸುರುಚಿರಪ್ರಭೆಯ ಸೂಸಿದುವು (ಶಂಪಂ. ೯-೨೩). [ಪೊಸ + ಪರೆಯ (< ಪರಯ)]

**ಪೊಸವಸೆ, ಪೊಸಪಸೆ, ಹೊಸಹಸೆ** (ನಾ). (ಅರಳಿದ ಹೂವಿನಿಂದ ರಚಿಸಿದ) ಮೃದುವಾದ ಹಾಸುಗೆ : ಮಿಸುಗುವ ಪೊಸವಸೆಯೊಳಸದಳ ಮೆಸೆಯೆ ಬಯಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳ್ ಬಸದಾಗಿಯುಮಸಿಯಳೆನಗಸವಸದೊಳೆ ಬೆಸೆದು ಪೋಗಿ (ಅಜಿತ. ೪-೧೨ ೮). **ಪೊಸಪಸೆ :** ಮಿಸುಪೆಸಟ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯಂ ನೀಡಾಡಿ ಪೊಳೆಪುವಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ಪಳ್ (ಕಬ್ಬಿಗ. ೩೦೫). **ಹೊಸಹಸೆ :** ಹಂಸತೂಲಸ್ಥಲದೊಳ್ ತಾಂ ಬೈತೊಡು ಮುಳ್ಗಳ ಹೊಸಹಸೆಯೊಳ್ ಬೈತೊಡಂ . . . ಸರ್ವವೊಂದಂದಮೆಂದಾಂ ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಣ್ಣಕ. ೬೫). [ಪೊಸ + ಪಸೆ]

**ಪೊಸವಳಿಕು, ಪೊಸಪಳುಕು** (ನಾ). ನೂತನಸ್ಫಟಿಕ : ಪೊಸಪಳಿಕಿನ ಸೆಲೆಯೊಳ್ ನೆಟಲೆಸೆಯೆ ಮೊಗಂಬೊಕ್ಕು ಪಾಯ್ದು ಕರಿಯುಂ ಹರಿಯುಂ ಪೊಸಪೋರ್ತಮನಱಿಯಮೆ ಪುಟ್ಟಿಸೆ ನೆಟಲೊಳ್ ಪೋರ್ದ ಸೇದೆಗಿಡುವುವು ನಗದೊಳ್ (ಶಾಂತಿಪು. ೨-೦೦೩). **ಪೊಸಪಳುಕು :** ಪೊಸಪಳುಕಿನ ಗಂಧಾಶ್ಮದಿನೆಸೆವ ಸುವರ್ಣಾದ್ರಿಯಂತೆ ಪಾಸಿದ ಸಿತಸದ್ವಸನದಿನೊಪ್ಪುವ ವಜ್ರದ ಪಸೆಪಣೆಯಿಂ ಪೊನ್ನ ಜಗುಲಿ ಕಣ್ಗೆಸೆದಿರ್ಕುಂ (ತ್ರಿಪುರ. ೦೯-೩೬).
[ಪೊಸ + ಪಳಿಕು( < ಪಟಿಕ)]

**ಪೊಸವಳ್ಳಿ, ಹೊಸವಳಿ, ಹೊಸವಳ್ಳಿ, ಹೊಸಹಳಿ, ಹೊಸಹಳ್ಳಿ, ಹೊಸಳ್ಳಿ** (ನಾ). ಒಂದು ಊರಿನ ಹೆಸರು : ವಳ್ಳಾವಿಷಯ ಪಣ್ಣಾಗ್ರಾಮೇ ಕಱಿಗಾಲೂರ್ಪೊಸವಳ್ಳಿ ಮಿಾದುಂಣ್ಡಾವಳ್ಳಿ (ಪ್ಯಅಂ. ೦೪೩೦. ೩-೦೯; ಸು. 475); ಪುಂನಾಡಱುಸಾಸಿರಮಂ ತಱಿಕಾಡು ಮಾಯ್ದಿಲೆಗೆಯುಂ ಪೊಸವಳ್ಳಿಯುಂ (ಎಕ. IV (R). ಕಾಪುರ. ೦೦೩-೩ ; ಸು. 10ನೆಯ ಶತ) ; ವೀರಸಿದ್ಧೇಶ್ವರಮಹಾದೇ[ವ]ರ್ಗ್ಗೆ ಪೊಸವಳ್ಳಿಯ ನೀರಗಾವುಣ್ಡನ ಕೆಯ್ಯಲ್ಪೊನ್ನಱ ಕೊಟ್ಟು ಮಣ್ಣಱ ಕೊಣ್ಡು (ಎಕ. I. ೪೪-೬; 1070). **ಹೊಸವಳಿ :** ಸರಗೂರು ಉಗುನೆಯ ಹೊಸವಳ[ಸಿವನ] ಹಳ . . ಚತುಸ್ಸೀಮಾಸಮನ್ವಿತವಾದ ಕಾಲುವಳಿಗಳು ಸಹಿತವಾಗಿಟ್ಟ (ಎಕ. IV(R). ಕೊಳ್ಳೇಗಾ. ೩೦-೩೬ ; 1321). **ಹೊಸವಳ್ಳಿ :** ಅಶೇಷಮಹಾಜನಂ[ಗ]ಳು ತಮ್ಮ ಶ್ರೀಹರದೆ ಕಾಲುವಳ್ಳಿ ಹೊಸವಳ್ಳಿ ಶ್ರೀರ × × ದೇವರ ಖಣ್ಡಸ್ಫುಟಿತಜೀರ್ಣೋದ್ಧಾರಕ್ಕಂ ದೇವರ ನಿತ್ಯನಿವೇದ್ಯಕ್ಕಂ . . . ಮಾಡಿ ಬಿಟ್ಟ ಎರೆ (ಎಕ. VII. ಹೊನ್ನಾಳಿ. ೧೮೩-೦೪ ; ಸು. 1250 ?). **ಹೊಸಹಳಿ :** ಚಿರುಕನ ಹಳಿಯ ಗ್ರಾಮವೊಂದಕೆ ಎಂಭತ್ತು ವರಹ ಹೊಸಹಳಿ ಗ್ರಾಮವೊಂದಕೆ ಐವತ್ತಐದುವರಹ (ಎಕ. III (R). ಗುಂಡ್ಲುಪೇ. ೦೩೦-೬೬ ; 1521) ; ಹೊಸಹಳಿಯ ರಾಯಂಣ ವಱಿಯಂಣ . . . ಯಿವರು ಮುಂತ್ತಾದ ಸಮಸ್ತರು . . . ಯಿಾ ಸಾಲವನು ಧಾರಾಪೂರ್ವ್ವಕವಾಗಿ ಕೊಟ್ಟೆವು (ಎಕ. II (R). ೩೩೨-೦೪ ; 1634); ಪಾರ್ಥಿವಕುಲ ಪವಿತ್ರನುಂ ಕೃಷ್ಣರಾಜಪುಂಗವನುಂ ಬೆಳುಗುಳದ ಜಿನಧರ್ಮ್ಮಕ್ಕೆ ಬಿಟಂಥ ಗ್ರಾಮಾದಿಗ್ರಾಮಭೂಮಿಗಳ್ ಅರ್ಹನಹಳಿಯುಂ ಹೊಸಹಳಿಯುಂ ಜಿನನಾಥಪುರಂ (ಎಕ. II (R). ೩೩೦-೨೦; 1723). **ಹೊಸಹಳ್ಳಿ:** ಹೊಸಹಳ್ಳಿಯ

ಗ್ರಾಮವನು ಕಲ್ಲ ನೆಟ್ಟು ಕೊಟ್ಟೆಉ (ಎಕ. IV (R). ಹುಂಡು. ೧೯೦-೦೬ ; 1580) ; ಮಹಿಶೂರ ಶ್ರೀಕೃಷ್ಣರಾಜವಡೆಯರ್ಯ್ಯನವರು ವೆಂಕಟರಾಮ್ಮೆಗೆ ಬರೆಸಿಕೊಟ್ಟ ಕ್ರಯ ಭೂದಾನ ತಾಮ್ರಶಾಸನದ ಕ್ರಮವೆಂತೆಂದರೆ . . . ಉಪಗ್ರಾಮ ಹರಯೂರ ಗ್ರಾಮ ೧ ಹೊಸಹಳ್ಳಿಗ್ರಾಮ ೧ (ಎಕ. III (R). ತಂಕಡ. ೧೧೯-೦೦; 1761). **ಹೊಸಳ್ಳಿ:** ಸಿಂಗಸಮುದ್ರವಂ ಕೂಡಿದ ಕೆಂಬರಲೆಯ ಹಳ್ಳವೆ ಹೊಸಳ್ಳಿಗೆ ಆ ಕಲ್ಲಿಗೆಟಿಗೆ ಆ ಸೀಮೆ ಆ ಕೆಟಿ ಹೊರಗಣ ಹಳ್ಳದಲು ಸೀಮೆ (ಎಕ. IV (R). ಹುಣಸೂ. ೩೦೬-೩೨; 1318).
[ಪೊಸ + ಪಳ್ಳಿ$_1$]

**ಪೊಸವಾಣತಿ** (ನಾ). ಆಗತಾನೆ ಹಡೆದವಳು ; ಹಸಿ ಬಾಣಂತಿ : ಒಡನೆಯು ಚಕ್ರವಾಕಿ ಪೊಸವಾಣತಿ ಕೋಗಿಲೆಯಿಾಟಿಲಿಂದು ಕೀಳ್ಗಡ ಗಿಳಿವೆಣ್ಗೆ ಪೊತ್ತಿನೊಳಗೆಯ್ದೆ ನವಿಲ್ ಮನೆದೇವಿ ಮಕ್ಕಳಂ ಪಡೆದುದು (ಅರ್ಧನೇ. ೧-೯೯) ; ಅಂತು ಮನಂಗೊಳೆ ನೋಟ್ಪಿನಮದಟ ಕೆಲನೆಲದ ಪಸುರ್ವೆಲ್ಲಂ ಮೇವುತಿರ್ದ ಪೊಸವಾಣ[ಣ]ತಿವುಲ್ಲೆ ಮುನ್ನ ತನ್ನ ನಡೆಪ ಮುದಪ್ಪುದಟಿಂ ಪರಿಚಯಕ್ಕೆಳಸಿ (ಕೃಷ್ಣಕೃ. ೩-೬೩ ವ).
[ ಪೊಸ + ಬಾಣತಿ ( < ಬಾಳಂತಿ) ]

**ಪೊಸವಾದಗ** (ನಾ). ಒಂದು ಊರಿನ ಹೆಸರು : ಶ್ರೀಮತ್ ಅನನ್ತವೀರ್ಯ್ಯಯ್ಯಂಗಳ್ಪೆಗ್ಗಡೂರುಂ ಪೊಸವಾದಗವುಮುಮನಭ್ಯನ್ತರಸಿದ್ಧಿಯಾಗೆ ಪಡೆದರ್ (ಎಕ. I (R). ೯೮-೦೦; 978). [ ಪೊಸ + ? ]

**ಪೊಸವಾವುಗೆ** (ನಾ). ಹೊಸತಾದ ಚಪ್ಪಲಿ, _ ಪಾದರಕ್ಷೆ : ಆಗಳಂಗರಾಜಂ . . . ಪಂಚರತ್ನಗರ್ಭಂಗಳಪ್ಪ ಮಂಗಳಜಳಂಗಳಂ ಮಿಂದು ಮೆಯ್ಯನಾಱಿಸಿ ದುಕೂಲಾಂಬರಮನುಟ್ಟು ಪೊಸವಾವುಗೆಯಂ ಮೆಟ್ಟಿ (ಶಂಖಾ. ೧೨-೦೦೬ ವ). [ ಪೊಸ+ಪಾವುಗೆ ]

**ಪೊಸವಾಸಣಿಗೆ** (ನಾ). ಹೊಳೆಯುವ ಮುಸುಕು: ಬಾಸಣಿಸಿದ ಚಿನ್ನದ ಪೊಸವಾಸಣಿಗೆಯ ಪೊನ್ನ ಸಿವಿಗೆ ಮಣಿಮಯಕಳಶೋದ್ಭಾಸಿ ದೆಸೆದೆಸೆಯೊಳೆಸೆಯೆ ವಿಳಾಸಂಬೆರಸಣುಗಭೋಗಿಯರ್ ಕೆಲರೆಸೆದರ್ (ಅಂಕೃ. ೦೦-೯೦).
[ಪೊಸ+ಬಾಸಣಿಗೆ$_1$]

**ಪೊಸವಾಸಿ** (ನಾ). ಅಂತಃಪುರದವರ ರಕ್ಷಣೆಗಾಗಿ ನಿಯುಕ್ತನಾಗಿರುವ ವೃದ್ಧ: "ಅಜ್ಜಂದು ಪೊಸವಾಸಿ (ಸಾವಾಸಿ)" (ಶಬ್ದ. ಪ. ಶು); "ಅಜ್ಜಂಬುದು ಪೊಸವಾಸಿ" (ಶಬ್ದ. ೦೯೦). [?]

**ಪೊಸವಾಸಿಗ, ಪೊಸಬಾಸಿಗ** (ನಾ). ನಳನಳಿಸುತ್ತಿರುವ ಹೂಮಾಲೆ,– ಸರ ; ಬಾಡಿರದ ಹೂವಿನ ದಂಡೆ : ಸುರಕುಸುಮದ ಪೊಸವಾಸಿಗ ವೆರಪುಂ ಕರತಳದೊಳೆಸೆದು ತನ್ನಯ ತೋಳೊಳೆ ದೊರೆಯೆನೆ ಬಂದತ್ತು ಸೊಯಂಬರಕ್ಕೆ ಬರ್ಪಂತೆ ದೇವಗಣಿಕಾನಿಕರಂ (ಅಂಕೃ. ೦೦-೨೦) ; ಪೊಸ ವಾಸಿಗವಂಗಜಚಕ್ರವರ್ತಿಗಂದೆತ್ತಿದ ವಿಜಾನಕೇತನಮನೊತ್ತರಿಸುತ್ತಿರೆ ಚಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರನಂದರಿಕೇಸರಿ ನಿಂದು ನೋಡಿದಂ (ಶಂಖಾ. ೯-೬೦) ; ಪೊಗಟ್ಟಾಕೆ ಮಾಣೆ ನಾಣೆನಿಸಗಲೆ ನಯಂ ಬೀಟಿ ದಿಟ್ಟನೆಯ್ದಿಲ ಪೊಸವಾಸಿಗದೊಳೆಡೆಯೆನೆ ಕುಮಾರನ ಪೆಗಲೊಳ್ ನೆಲೆ ನೆರೆಯೆ ಮಾಲೆ ಮೂಡಿದ ತೆಱದಿಂ (ಶಾಂತಿಪು. ೩-೦೩೬). **ಪೊಸಬಾಸಿಗ:** ಕಟ್ಟಿಯು ಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ (ಅನಂತ. ೦-೮೩) ; ಪೊಸಬಾಸಿಗವಂ ಬಿಸುಡುತ್ತೆ ಮಿಸುನಿಯ ಭೃಂಗಾರಿಗಳ ಘಟಂಗಳನೊಡೆವುತ್ತಸವಸದ ಕರ್ಮವಂ ತಾಪಸನುರುಮುಳಿಸಿಂದೆ ಮಾಡುತಿರಲಂತಾಗಳ್ (ಕೃಶುಶ. ೨-೯೬). [ಪೊಸ + ಬಾಸಿಗ]

**ಪೊಸವಾಳೆ** (ನಾ). ಎಳೆಯದಾದ ಬಾಳೆ : ಪಳಗಪ್ಪುರವನನೀರ್ ಪೊಸವಾಳೆಯ ಸುಳಿ ಕಮ್ಮಿದುಮಾದೆಲರೆಲೆಯಸುಗೆಯ ತಳಿರ್ . . . ಬಳಿರ್ವಣ್ಣಿನ ಬಾವನ್ನದಿನಾಳಿಯರೆಳಸಿ ಕರಂ ಸತ್ಕರಿಸಲು (ಜಯು. ೯-೪೦).
[ಪೊಸ + ಬಾಳೆ$_1$ (<ಬಾಟ$^3$) ]

**ಪೊಸವಿಲ್** (ನಾ). ಹೊಳೆಯುವ ಬಿಲ್ಲು : ಇಸಲೊಡರಿಸುವಿಂಗೋಲಿನ ಮಿಸುಗುವ ಪೊಸವಿಲ್ಲ ಜೇವೊಡೆಯ ದನಿಯವೊಲೆಣ್ದೆಸೆಯೊಳ್ ನೇವುರದುಲಿ ಪಸರಿಸೆ ಮೆಲ್ಲನೆ ಚೆಲ್ಲಗಾರ್ತಿಯರ್ ನಡೆತಂದರ್ (ಕಾವ್ಯಾ. ೯೬) ; ಪೊಸವಿಲ್ಲಂ ತೋಳ್ಬಲದಿಂ ಪಸರಿಪುದಾಳಲ್ಲ ಸುತ್ತಿ ಬಳಸುತೆ ಬೆನ್ನೊಳ್ ಮಿಸುಗುವ ಸಿಂಪುಗಳಂ ತಾಳ್ದಿಸೆವುದು ಪುಳುವಲ್ಲ ತಿಳಿದು ಪೇಳ್ ಲಲಿತಾಂಗೀ (ಶ್ರಿಕೃ. ೨೪-೦೬೩). [ಪೊಸ + ಬಿಲ್$_2$]

**ಪೊಸವಿಸಿಲ್, ಪೊಸಬಿಸಿಲ್** (ನಾ). ಎಳೆಯ ಬಿಸಿಲು ; ಹೊಂಬಿಸಿಲು : ತೆಕ್ಕನೆ ತೀವಿದ ತವಮಾಲತರುಗಳುಮಂ ಪೊಸವಿಸಿಲ ಪೊಳೆಪಿನಿಂ ನುಣ್ಣನುಜ್ಜುಳಿಪ ರನ್ನದೆಳವೆಳಗಿನ ಬಳಗದಿಂ ಬಣ್ಣಿಸಿ (ಕಾದಂಬ. ೩೩೬); ಪೊಸ ವಿಸಿಲೊಳ್ ಮುಂಗುಳ್ಗಳ್ ಸಡಿಲ್ದುಸಿರ್ವಂತೆ . . . ಬೆಳಪ್ಪನೀಗೆ ಪರಂಗಳು (ಕಾವ್ಯ. ೯೦೬). **ಪೊಸಬಿಸಿಲ್:** ಪೊಸಬಿಸಿಲಮು ಪೆಱದೆಗೆದಿರೆ ಕಿಸುಸಂಜೆಯು ಮುಡುಸಮೂಹಮುಂ ಮಿಸುಪವೊಲೇನೆಸೆದುದೊ ಪವಳಂ ಮುಕ್ತಾಮಿಸರಂ ಜಾಂಬವಜಳಂ ಪೆಡಂಮೆಟ್ಟಲೊಡಂ (ಶಾಂತೀಶ. ೬-೦೦೯). [ಪೊಸ+ಬಿಸಿಲ್]

**ಪೊಸವುಟ್ಟಿ** (ನಾ). ಹೊಸದಾಗಿ ರಸ ತುಂಬಿದ ಜೇನುಹುಟ್ಟು : ಮುಸುಱತು ಕೋಂಟೆಯುಂ ಮಸಗಿ ಜೇಂಬುಟುಗಳ್ ಪೊಸವುಟ್ಟಿಯಂತೆ (ಶಬ್ದ. ೨-೦೦೬). [ಪೊಸ + ಪುಟ್ಟಿ$_3$]

**ಪೊಸವುಣ್** (ನಾ). ಆಗತಾನೆ ಉಂಟಾದ ಗಾಯ ; ಹಸಿಯಾಗಿರುವ ಗಾಯ : ಇಱು ಕಿಱುವನೊದಱು ಕೈರಂದಱು ಮುಂಱು ನಿಟ್ಟೆಲ್ವನರಿದು ನೆಱ[ನೆ]ಡೆಗಳ್ ಬಾಯ್ದೆಱೆಯೆ ಪೊಸವುಣ್ಗಳೊಳ್ ಪೊಯಿರ್ ಮಱುಗುವಿನಂ ಲೋಹವಾರಿಯುಂ ಮಱುಗುವಿನಂ (ಪಂಪಭಾ. ೦೨೬-೩) ; ಹರಿ ಶಸ್ತ್ರ[ಹತಿಯಿಂ]ದಮಾದ ಪೊಸವುಣ್ಣೇತಂಗೆ ಮೆಯ್ಯೊಳ್ ನವಾಭರಣಂ ಶೋಭಿಸುವಂತೆ ಶೋಭಿಸುವುದು (ಶಾಂತಿಕೃ. ೯-೬೯). [ಪೊಸ + ಪುಣ್]

**ಪೊಸವುರ**, ಹೊಸಪುರ (ನಾ). ಒಂದು ಊರಿನ ಹೆಸರು : ಶ್ರೀಪುರುಷಮಹಾರಾಜರ್ ಪ್ರೀತವೀರಾಜ್ಯಂಗೆಯೆ ಲೋಕಗಾಳ್ವ ಪೊಸವುರಂ ಬ್ರಮ್ಹದೆಂ ಕೊಟ್ಟು (ಮ್ಯಆ. ೦೯೯೩, ೦೦-೩; ಶು. 788). **ಹೊಸಪುರ:** ಈ ಕಲ್ಲಿಗೆ ಬಡಗಲು ಹೊಸಪುರಕ್ಕೆ ವಾಯುವ್ಯಮೂಲೆ ಬಸವನ ಕಿಟ್ಟನ ಹೊಲದಲ್ಲಿ ನೆಟ್ಟ ಕಲ್ಲು ೧ (ಎಕ. IV (R). ಚಾಂಪಟ. ೯೯-೬೯೦; 1722).
[ಪೊಸ + ಪುರ$_2$]

**ಪೊಸವುಲ್, ಪೊಸಪುಲ್** (ನಾ). ನಳನಳಿಸುವ ಹುಲ್ಲು ; ಎಳೆಯ ಹುಲ್ಲು : ಪಳಗೊಂದೆ ಬಿಳ್ದು ಪೊಸವುಲ್ಗಳ ಪೊದಱೊಳ್ನನ್ನನೆತ್ತುವವರಿಲ್ಲದೆ ಮೇಣ್ಬಳಲುತ್ತಿರ್ದಪುದು (ವ್ಯಶು. ೦೦-೬). **ಪೊಸಪುಲ್:** ಪೊಸ ಪುಲ್ಲೊಳ್ ಕಿಚ್ಚನಿಟ್ಟೊದಿದೊಡುರಿದುರಿ ಕೂರ್ಗಾಗ್ರಮಂ ಪತ್ತಿ . . . ನಂದಿಸಲೇತಂ ಪಾಂಥನುದಾಱದೆ ನಡುಮಡುಪಂ ಪೋಗಿ ಬಿದ್ರ್ಕಿಲಿಂ ಕಂಪಿಸುತಿರ್ದಂ (ಲೀಲಾವ. ೯-೨೦). [ಪೊಸ + ಪುಲ್]

**ಪೊಸವೂ, ಪೊಸಪೂ, ಹೊಸಹೂ** (ನಾ). ಬಾಡದೆ ಇರುವ ಹೂವು ; ನಳನಳಿಸುತ್ತಿರುವ ಹೂವು : ಜಲಜಲನೊ[ಟ್ಕು]ತಿರ್ಪ ಪರಿಕಾಲ್ ಪರಿಕಾಲೊಳಳುರ್ಕೆಗೊಂಡ ನೆಯ್ದಿಲ ಪೊಸವೂ (ಶಂಖಾ. ೧-೩೨) ; ತನಗನು ರೂಪವೆಂಬಿನೆಗವೊರ್ವ ಕುಮಾರತಪಸ್ವಿ ದೇವತಾರ್ಚನೆಗೆ ಪನಕ್ಕೆ ಬಂದು ಪೊಸವೂಗಳನರ್ತಿಯೊಳಾಯ್ದು ಕೊಯ್ದು ಬೆನ್ನನೆ ಬರಲ್ (ಕಾವ್ಯಾ. ೬೯೦). **ಪೊಸಪೂ** : ಪೊಸಪೂಪಬ್ಬಿ ನಿಯೊಂದಱೊಳ್ ಸೊಗಯಿಕುಂ (ಅಂಕೃ. ೬ ೫೯). **ಹೊಸಹೂ :** ಸಿರಿಮುಡಿಗೆ ಹೊಸಹೂಗಳಂ ತಂದು ಸೂಡುತುಂ (ಶಂಶರ. ೦-೩೬). [ ಪೊಸ + ಪೂ$_2$ ]

**ಪೊಸವೂರ್**, ಹೊಸವೂರು, ಹೊಸೂರು (ನಾ). ಒಂದು ಊರಿನ ಹೆಸರು : ಇಂತಿದಕ್ಕೆ ಕಾಕಂಬಾಟ ಕಂಭಯ್ಯನುಂ ಆಸಾಗೊರ ಕನ್ನನುಂ ಪೊಸವೂರ ಬೇದಮ್ಮನುಂ . . .ಸಾಕ್ಷಿ (ಎಕ. XI, ಚಿತ್ರದು. ೬೯-೨೬; 968); ಆಯ × ಪೊಸವೂರ ತುಱುವಂ ಮಗುಟ್ಟು × × × ಐದ

ಕೊಳ್ಳಿಯು[ಣ್ಣ] ಸತ್ತು ಸುರಗತಿಗೆ ಸನ್ದಂ (ಎಕ. III (R), ಗುಂಡ್ಲುಪೇ. ೩೦-೬ ; 10ಶದು ೬೫). **ಹೊಸವೂರು :** ಹೊಸ[ವೂರು] ಅಲಗಿಕೊಂಡನ ಹಳ್ಳಿ . . . ಮುಂತಾಗಿ × × ವಟ ಚತುಸ್ಸೀಮಾಸಮನ್ವಿತವಹ ಕಾಲು ವಳಿಗಳು ಸಹಿತವಾಗಿ (ಎಕ. IV (R), ಕೊಳ್ಳೇಗಾ. ೩೦-೩೬ ; 1321). **ಹೊಸೂರು :** ಪುನರ್ವ್ವಸುನಕ್ಷತ್ರದಲು ಹೊಸೂರಾದ ಯಿಳಚಲ ಹೊದ ವಿಚಲು ಬೈರವಂಗಲದ ಅಶೇಷ ಮಹಾಜನಂಗಳು . . . ಬಿಟ್ಟು ಕೊಡಂಗೆ (ಎಕ.IV (R), ಎಳಂದೂ. ೦೩-೬ ; 1283);ಬೊಮ್ಮಿದೇವವೊಡೆಯರಿಂಗೆ ಹಜಾಹ ಹೊಸೂರ ನಾಡೊಳಗನ ಮಜಾವಕಗೊಂಕನು ಬಲಾಳಪುರವಾಗಿ ಆಚಂದ್ರಾರ್ಕಉಉ ಸರ್ವಮಾನ್ಯವಾಗಿ ಧಾರಾಪೂರ್ವಕವಾಗಿ ಕೊಟ್ಟೆಉ (ಎಕ. X, ಗೌರಿಬಿದ. ೦೬-೦೮; 1333); ಊರಿನ ಹೆಸರು 'ಹೊಸೂರು' ಆದರೂ ಜನರಲ್ಲಿ ಮಾತ್ರ ಹಳೆಯ ಸಂಪ್ರದಾಯದ ಕೊಳೆ ನಖಶಿಖಾಂತವಾಗಿ ತುಂಬಿ ಕೊಂಡಿತ್ತು (ಹೊಸೂಹ. ೦೭). [ಪೊಸ + ಊರ್]

**ಪೊಸವೆಣ್**, ಹೊಸವೆಣ್ (ನಾ). ನವಯುವತಿ : ಕಡುಚೆಲುವೊಪ್ಪೆ ಸಾರ್ದ ಪೊಸವೆಣ್ಣದನಾರಯೆ ಮುನ್ನಮೇಂ ಕರಂಬಿಡಿದೆನೊ ಮೇಣ್ ಕರಂಬಿಡಿಯೆನೋ ಎನುತಂ ಮನದಲ್ಲಿ ನಿರ್ಣಯಂಬಡೆಯದೆ (ಶಾಕುಂತ. ೬೭-೦೦೯). **ಹೊಸವೆಣ್.**

**ಪೊಸವೆಂಡಿರ್**, **ಹೊಸವೆಂಡಿರ್** (ಬಹುವ) : ಶ್ರೀಮದೆಱೆಯಪ್ಪರಸನ್ ಸಮಸ್ತರಾಜ್ಯಙ್ಗೆಯುತ್ತಮಿರೆ ಅವರ ಸಾಮನ್ತಂ ಶ್ರೀಮುತ್ತರ ಅತಿ ರಥಗಣ್ಡ ಪೊಸವೆಣ್ಡಿರಟ್ಟಿ ಬೀಸಿ ತಪ್ಪದೊನ್ . . . ಆಸನ್ನಿನಾಡನಾಳು ತಿರೆ (ಎಕ. XV, ಅರಸೀ. ೨೦೩-೯ ; ಸು. 890); ಕಳಸಂ ಕನ್ನಡಿ ಗುಡಿ ಪಜ್ಜಳಿ ಸುವ ಮಾಂದಳಿರ ತೋರಣಂ ದೆಸೆದೆಸೆಯಂ ಬಳಸಿರೆ . . . ಪೊಱಮಟ್ಟು ರೊಸಗೆಯಿಂ ಪೊಸವೆಂಡಿರ್ (ಕಬ್ಬಿಗಾ. ೩೨೩) ; ಆಧುನಿಕಕವಿತೆಯೂ ಹಸು ಮಕ್ಕಳಂತಾಡುವದು. ಹೊಸವೆಂಡಿರಂತೆ ನಗುವುದು (ಶಾಹಿ. ೯೭).

[ಪೊಸ + ಪೆಣ್]

**ಪೊಸವೆಸರ್** (ನಾ). ಬೇರೆಯಂ ಹೆಸರಂ : ಪೊಸ — ಪೆಸರ್, ಪೊಸವೆಸರ್ ; ಎಳ — ಬಿದಿರ್, ಎಳವಿದಿರ್ (ಶಬ್ದಾನು. ೩೦ ಪ್ರಯೋ). [ಪೊಸ + ಪೆಸರ್]

**ಪೊಸವೆಸಲ್** (ನಾ). ಮೊದಲನೆಯ ಹೆರಿಗೆ ; ಪ್ರಥಮಪ್ರಸೂತಿ : ಪೊಸ ವೆಸಲಾದ ಪೆಣ್ಗಳ ಜನ್ನನದ ಬಿಗುರ್ಪಟಿದು ತಿಳಿವಂತೆ ತೊಱೆವೆಂಡಿರ್ಗ ಕಿನುಬ್ಬರಮಡಂಗಿ ತಿಳಿದುದು (ಲೀಲಾವತಿ. ೬೩-೩). [ಪೊಸ + ಬೆಸಲ್]

**ಪೊಸವೆಳ್ದಿಂಗಳ್** (ನಾ). ಚೆಲುವಾದ ಬೆಳುದಿಂಗಳಂ ; ಮನೋಹರವಾದ ಬೆಳುದಿಂಗಳು: ಪೊಸವೆಳ್ದಿಂಗಳ್ ದೆಸೆದೆಸೆಗೆಸೆದುದು ಕುಮುದವನವುಲರ್ದು ದೆಂಬಂತಿರದೇನೆಸೆದುದೊ ಕಟಾಕ್ಷಮಾಲಾಪ್ರಸರಂ ಭ್ರೂಲಾಸ್ಯಸೌಂದರಂ ನರ್ತಕಿಯಾ (ಆದಿಪು. ೯-೩೪); ಪೊಸವೆಳ್ದಿಂಗಳ್ ಪಗಲೊಳಮೆಸೆವಂತಿರೆ ದಂತ ಕಾಂತಿಗಳ್ ವಿಭು ನುಡಿದಂ (ಶಾಂತಿಪು. ೮-೦೩೬); ಪೊಸವೆಳ್ದಿಂಗಳ್ಕುಸುಕಿದ ಮಿಸುಪ ಕುಳಾದ್ರಿಗಳ ತೆಱದಿ ಪೆಳಂಕಿನ ಭವನಪ್ರಸರದೊಳತಿಲೀಲೆಗಳಿಂ ದೆಸೆದಿರ್ದುವು ಸಪ್ರಮದದ ಭದ್ರಗಜಂಗಳ್ (ತ್ರಿಷಷ್ಟಿ. ೦೭-೩೪).

[ಪೊಸ + ಬೆಳ್ದಿಂಗಳ್]

**ಪೊಸವೆಳ್ಪು** (ನಾ). ಅತಿಶಯವಾದ ಬಿಳುಪು : ಪಸರಿಸಿದ ಪಯಃಪೂರದ ಪೊಸವೆಳ್ಪು ನಿಜಾಂಗರುಚಿಯ ಪೊಱಪೊಱಗೆ ಪೊದಟ್ಟಿಸದಿರೆ ಬೆಳ್ಮುಗಿಲಿಂದಂ ಮುಸುಕಿದ ಬಾಲಾರ್ಕಬಿಂಬವಿರ್ಪಂತಿರ್ದಂ (ಆದಿಪು. ೬-೮೨); ಒಳಗೆಸೆವ ವೃಷಭಸಂಗದ ಬೆಳರ್ವಣ್ಣಂ ಪೊಗೆ ತೀವಿತೆನೆ ಪೊಸವೆಳ್ಪುಜ್ಜಳಿಸಿದುದು ತನು ವಿನೊಳಳ್ಮೋಮಳೆಗೆ (ವೃಷಭ ೩-೩). [ಪೊಸ + ಬೆಳ್ಪು$_1$]

**ಪೊಸವೇಟ**, **ಪೊಸಬೇಟ**, **ಹೊಸಬೇಟ** (ನಾ). ಮೊದಲ ಪ್ರಣಯ: ಪೊಸವೇಟವೆಂಬ ಚೆಲ್ವಿಡಿದೆಳವಮಾವರಂ ಪುಳಕಮೆಂಬ ನವಾಂಕುರದಿಂ ವಿಳಾಸಮಂ ಪಡೆದು . . . ಸುಸಿಲೆಂಬ ಬಸಂತದೊಳೇಂ ಪೊಮಟ್ಟುದೋ (ಆದಿಪು ೦೨-೨೮), ಪಲ್ಲವಾಧರ ದಂತ (ಕುಚ ಪೊಗರುಗುವ) ಧಮ್ಮಿಲ್ಲದ ಮೆಱೆವ ಹೆಣ್ಣುಗಳು ಪುಲ್ಲದಳಾಕ್ಷಗೆ ಪೊಸವೇಟ ಪುಟ್ಟುವಂತೆಲ್ಲರಿಬ್ಬಗೆಯಾದ ರಾಗ (ಸೋಮೇಶ. ೦೯-೩೩); ಪೊಂಗುವ ಪೊಸವೇಟದ ಗೋಪಾಂಗನೆ ತನ್ನಳವು ಗಿಡಿಸಿ ಮುಮ್ಮೆಱೆಯಿಸಿದಾ ಮಂಗಳಮೂರ್ತಿಯ ಸಿಂಗರದಿಂಗಿತಮಂ ಕೆಳದಿಗಿಂತು ಬಗೆವುಗೆ ಪೇಟ್ದಲ್ (ನೇಮಿನಾ. ೦೦-೨೪). **ಪೊಸಬೇಟ :** ಪುತ್ತ ವೊಂದೆಡೆಯೊಳೊರ್ವಳ್ ತನ್ನನುಬಿಡದ ಪೊಸಬೇಟದಾಣ್ಮನೇಗೆಯ್ದುಂ ಪೋಗಲೀಯದ ತನ್ನೆಳವನೆ ತೋಱು (ಶಂಶಶಾ. ೯-೯೬ ವ). **ಹೊಸಬೇಟ :** ತಲೆಯಲಿ ಒರಿದು ಕೂಂದಲುಗಳೌಷಧಿಗಿಲ್ಲ ಸಲೆ ಕುಚಯುಗಳವಿಂಗಿದವು ಹೊಲೆಗೆಟ್ಟು ಹೊಸಬೇಟಗೆಯ್ಯ ಪಾತಕಿ ಪೊಗ್ಗೆವೊಲೆವಂಗಳಿಗೆ ಪೇಳ್ವವರೇ (ಸೋಮೇಶ. ೦೮-೭೮). [ಪೊಸ + ಬೇಟ (< ಬೇಂಟ)]

**ಪೊಸವೇಟಕಾರ್ತಿ** (ನಾ). ಯುವಪ್ರೇಮಿಯಾದವಳು: ಬೆಳಗಾಯ್ತೆಂ ಬೊಂದಬಲಗ್ಗಳಸಲ್ ಪೊಸವೇಟಕಾರ್ತಿಯರ ಬಿಸುಸುಯ್ಲೊಳ್ ಬೆಳಗಿದು ದೆಂಬಿನವಾಗಳದೆಂ ಕೊರಗಿದುದೊ ಕುಮುದಿನೀವಿಸ್ತಾರಂ (ಕಾದಂಬ. ೦೬೩); ಪೊಸವೇಟಕಾರ್ತಿಯರ್ತಮ್ಮ ಕನ್ನೆವೇಟಮವನೊಳಾಗದೆ ಕೆಟ್ಟೆವೆಂದು ಕಟ್ಟುಗೆಡೆಯೆಯುಂ (ಅರ್ಧನೇ. ೩-೨ ಕ).

[ಪೊಸವೇಟಕಾಱ + — ತಿ$_1$ (<—ಇತ್ತಿ)]

**ಪೊಸವೇಟಕಾಱ** (ನಾ). ಯುವಪ್ರೇಮಿಯಾದವನು: ಪುತ್ತವೊಂದೆಡೆ ಯೊಳಂದೆ ಪೊಸಯಿಸಿದ ಪೊಸವೇಟಕಾಱರಪ್ಪ ಕಡುನಲ್ಲರಿರ್ವರಿರೆ (ಅಂತ್ಯ. ೦೨-೨೬ ವ). [ಪೊಸವೇಟ + —ಕಾಱ]

**ಪೊಸವೊಗರ್**, ಪೊಸವೊಗರು, ಹೊಸಹೊಗರು (ನಾ). ಉಜ್ವಲ ವಾದ ಕಾಂತಿ: ನೇಸರೇಂ ನಗುನಗುತ ನಲ್ಮೆಗಳ ತೊಡವೆನಲ್ ಸೂಸುವಂ ಕದಿರ್ಗಳಂ ಕಳ್ತಲೆಯ ಸುಡುವಂ ಪೊಸವೊಗರ್ ಕೋದಿರ್ಪ ಪೊಳ್ತಳೆಯನೆಳೆ ಬಿಡುವ ಪೊಸೆದು ನೆಲದೊಳ್ಪುಗಳ ಬಾಳ್ವೆಳ್ಪ ತೊಡೆವಂ (ಕಾಯಕ. ೬೦-೦೨೪). **ಪೊಸವೊಗರು:** ಹಸುರು ಹೊಲದುಸಿರಾಗಿ ಬೀಸುತಿರೆ ತಂಗಾಳಿ ಸುಸಿಲು ಮೈ ವಡೆಯುತಿದೆ ಪೊಸವೊಗರ ಪೆಂಪು (ಕಾಯಕ. ೬೭-೦೦೬). **ಹೊಸಹೊಗರು :** ಹೊಸಹೊಗರ ಜವ್ವನ ಸಿರಿಯ ಜೋಡಣೆ ಜನಮನವನಾವರಿಸಿದುದು ನಿಪ್ಪಸರದಲಿ ಪಾಂಚಾಲನಂದನೆಯ (ಕುಮಾರ. ೦೩-೨೬) ; ಬಂಬಲುಗುರುಳ ಹೊಸಹೊಗರ ಕಲಿತ ಮದದುಬ್ಬುಗಳ . . . ಪುಳಿನಜಘನಸ್ಥಳದ ದಾನವಸತಿಯುರಿರ್ದರದೊಂದು ತಾಣದಲಿ (ಕೊರಂ. ೩-೨-೬೪).

[ಪೊಸ + ಪೊಗರ್]

**ಪೊಸವೊಗರು** 'ಪೊಸವೊಗರ್' ನೋ.

**ಪೊಸವೊನ್**, ಪೊಸಪೊನ್, ಹೊಸಹೊನ್ನು (ನಾ). ೧. ಹೊಳೆಯುವ ಚಿನ್ನದ ನಾಣ್ಯ,—ವರಹ : ಇನ್ನಿವಕೆ ಬಡ್ಡಿಯೊಳೇತಮನೆನ್ದು ಪತ್ತು ಗದ್ದಿನ ಪೊಸವೊನ್ನನಿತ್ತನು (ಸೌಇಇ. XX. ೩೩-೨೯; 1082). **ಪೊಸಪೊನ್ :** ೨. ಹೊಳೆಯುವ ಚಿನ್ನ,— ಬಂಗಾರ : ಪೊಸಪೊನ್ನ ವೇದಿ ನಾಲ್ಕುಂ ದೆಸೆಗಳೊಳಂ ಬೆಳ್ಳಿವೆಸದ ಬಾಗಿಲ್ವಾಡಂ ಪಸರಿಸಿದ ಸಕಳಮಂಗಳವಿಸರಂ ನಿಧಿಸಮಿತಿ ಯಕ್ಷರಕ್ಷಕರೆಸೆಗುಂ (ಚಂದ್ರಪ್ರ. ೦೩-೩೩) ; ಲಾವಣ್ಯಾಮೃತ ರಸದೊಳ್ ತೀವಿದ ಪೊಸಪೊನ್ನ ಮಿಸುಪ ಶುಕ್ತಿಕೆಗಳೆನಲ್ ದೇವಿಯ ತಾಂಬೂಲಚ್ಛಾಯಾವಿಷ್ಕೃತಮಾದ ತೆಳ್ಗದಂಪುಗಳೆಸೆಗುಂ (ಪುಷ್ಪದ. ೩-೯೬). **ಹೊಸಹೊನ್ನು : ೨.** ಹೊಗರಾಂತ ಹೊಸಹೊನ್ನ ರಸ ಕಾಯ್ದಿರೆ ಕಂಡು ಸೆಗಣಿಯೊಳೆಱೆವಂತೆ ವೊಱಿದಿ ಮೃಗಮದಗಂಧಿಯರ್ ಗೋಮಯದಿಂ ಮುದ್ದುಮಗನ ದೇಹವ ಸಾರ್ಚಿದರು (ಸೋಮೇಶ. ೦೭-೨೦) ; ಕಿವಿಯೊಳೊಪ್ಪುವ ನಾಗರ ಪಣೆ ಹೊಸಹೊನ್ನ ಸವಡಿದಾರದ ಕೊರಳುಗಳ ನವರತ್ನಭೂಷಣದಾಳ್ಗಳ ಮೇಳದ ಭುವನೇಶ್ವರನೈತಂದ (ಕಂಪಪು. ೦೨-೩೫). [ಪೊಸ + ಪೊನ್]

**ಪೊಸವೊನಲ್**, ಪೊಸಪೊನಲ್ (ನಾ). (ಕಾರ್ಗಾಲದಲ್ಲಿ) ಹೊಸದಾಗಿ ಉಂಟಾದ ಪ್ರವಾಹ, –ಹೊಳೆ : ಮುಡದಿ ನಡೆದಲ್ ಮಾನಃಪ್ರಿಯು

ನೆಡೆವರಮವರವರ ನಯನರುಚಿ ತನುರುಚಿಯೊಳ್ ತೊಡರ್ದು ಬರೆ ಪೊಸಪೊನಲ್ಗಳ ಗಡಣದಿನಪ್ಪತಿಯನೆಯ್ದುವವರ್ಣವಗೆಪೋಲ್ (ಶಬ್ದಾ. ೯-೯೩). **ಪೊಸಪೊನಲ್:** ಪೊಸಪೊನಲೊತ್ತಿ ಬಂದು ಪುಗೆ ಪುತ್ತದ ಬಾಯೊಳವಳ್ಲಿ ಪಾವುಗಳ್ ಬಸವಳಿದು . . . ಪೊಱಮಟ್ಟು ಬಂದು ಸಲೆ . . . ಪೆಡೆಯೆತ್ತಿ ದಲಾಡುತುವಿರ್ದವರ್ಥಿಯಿಂ (ಚಾರಪು. ೧೨-೩೬). [ಪೊಸ + ಪೊನಲ್]

**ಪೊಸಪೋರ್ಕ** (ನಾ). ಹೊಸಬಗೆಯ ಹೋರಾಟ,— ಕಾಳಗ: ಪೊಸವಳಿಕಿನ ಸಲೆಯೊಳ್ ನೆಟಲೆಸೆಯೆ ಮೊಗಂಬೊಕ್ಕು ಪಾಯ್ದು ಕರಿಯುಂ ಹರಿಯುಂ ಪೊಸಪೋರ್ಕಮನಱಿಯಮೆ ಪುಟ್ಟಿಸೆ ನೆಟಲೊಳ್ ಪೋರ್ದು ಸೇದೆಗಿಡುವುವು ನಗದೊಳ್ (ಶಾಂತಿಪು. ೨-೦೦೩); ನೀಪಕುಲನಾಗಿ ನೃಪ ತಿಲಕೋಪಮನೀತನನೆ ಸಾರ್ದು ಗುಣಗಣಮುಱಿದತ್ತಾ ಪೊಸಪೋರ್ಕ ಮನಘಕುಲಲೋಪಕನಂ ಪೊರ್ದಿ ಪಗೆಯನುಱಿದಂತೆ ಜಗಂ (ಶಾಂತಿಪು. ೩-೧೨೭). [ಪೊಸ + ಪೋರ್ಕ]

**ಪೊಸಸಂಜೆ** (ನಾ). ಮನೋಹರವಾದ ಸಾಯಂಕಾಲ: ಪೊಸಸಂಜೆ ಮುಗಿಲ ತುಱುಗಲ್ ಮುಸುಕಿದುದು ಪಯಃಪಯೋಧಿಯೆಲ್ಲಮನೇಬಂ ತಸದೞಮೆಸೆದುದು ಮೊಗೆವುದ್ದೆಸದೊಳೆ ತಳತಳಿಸಿ ಪೊನ್ನ ಪೊಸಕಳಸಂಗಳ್ (ಆದಿಪು. ೭-೯೩); ಪೊಸಸಂಜೆಗೆಂಪಿನೆಡೆಯೊಳ್ ನಸುತೋರ್ಪ ಶಶಾಂಕಲೇಖೆ ಯೆಂಬಿನೆಗಂ ರಂಜಿಸಿದಳರುಣಾಂಬರವನುಟ್ಟಸಿತಾಂಬುಜಪತ್ರನೇತ್ರೆ (ಉದ್ಭಟ. ೩-೩೨). [ಪೊಸ + ಸಂಜೆ]

**ಪೊಸಸಂಪಗೆ** (ನಾ). ಆಗತಾನೆ ಅರಳಿರುವ ಸಂಪಿಗೆ; ನಳನಳಿಸುತ್ತಿರುವ ಸಂಪಿಗೆ: ಸುರಗಿ ಮೊಲ್ಲೆ ಪೊಸಸಂಪಗೆಯಾ ಅರಲಿಂ ಭಕ್ತಿಯಿನಾತಂ ಪರಮಜಿನೇಶ್ವರನ ಪಾದಮಂ ಪೂಜಿಸಿದಂ (ಧರ್ಮಾಮೃ. ೩-೩೬); ಮೊಗವೆತ್ತಿ ನಿಳ್ಕಿ ಪೊಸಸಂಪಗೆಗೊಂಬಂ ಪಿಡಿದು ಪೂಗಳಂ ತಿಱಿವಾ ಪೆಣ್ಬಾಗೆಗೊಂಡಳ್ಕಡಕೆ ಬಲ್ಪಿಗೆ ಜಡಿವಂಗಜನ ಪೊಂಗಿನಿಂಗೋಲ್ವಿಲ್ಲೋಲ್ (ಉದ್ಭಟ. ೯-೩೦). [ಪೊಸ + ಸಂಪಗೆ]

**ಪೊಸಸಕ್ಕರೆ, ಹೊಸಸಕ್ಕರೆ** (ನಾ). ಆಗತಾನೆ ತಯಾರಿಸಿದ ಸಕ್ಕರೆ; ತಾಜಾ ಸಕ್ಕರೆ: ಪೊಸಸಕ್ಕರೆ, ಮನೆಸರಕು (ಶಬ್ದಾ.ಸು. ೯೯ ಪ್ರಯೋ); ಪೊಸಸಕ್ಕ[ಪಾಠಾಂ.ರ್ಕ]ರೆಯಂ ನವಮಧುರಸಮಂ ನಱುನೆಯ್ಯನೆಸೆವ ಕದಳೀಫಲಮಂ ರಸನೆಯೊಳಿಸಿದುದನೆನ್ನೊಳ್ಪಸೀಗಳೆ ನಿನಗೆ ತಂದಪೆಂ ಶಶಿವದನೇ (ವೃ.ಕ. ೯-೭೬). **ಹೊಸಸಕ್ಕರೆ:** ಕಾಯ್ದಾಱಿದೆಮ್ಮೆವಾಲೊಳಗೆ ಮುಱಿದಿರಿಸಿ ಹೊಸಸಕ್ಕ[ಪಾಠಾಂ.ಶರ್ಕ]ರೆಯಾ ಹಾಕಿ ಪರಿಮಳಗಳಂ ಪೊರೆಯಿಕ್ಕಿದದುವೆ ತುಪ್ಪದ ಪಾಯಸಂ (ಸೂಪಶಾ. ೩-೦೨). [ಪೊಸ + ಸಕ್ಕರೆ]

**ಪೊಸಸರ** (ನಾ). ಹೊಸ ರಾಗ: ಪೊಸಸರದಲ್ಲಿ ಪಾಡು ಬಿರಿದೀವನ ಕೇಳಿಯೊಳೊಂದು ಸದ್ದ್ರವಂ ಮಿಸುಗಿರೆ ಕಾಮಧರ್ಮಗುಣವೃತ್ತಿಯನಾಳ್ದರು (ಪ್ರಶಾ. ೯-೯). [ಪೊಸ + ಸರ₂]

**ಪೊಸಸಿರಿ** (ನಾ). ೧. ಹೊಸತಾದ ಚೆಲುವು,—ಸೌಂದರ್ಯ: ಕಟ್ಟುದ್ದ ಮನಾಂತು ಮಿಸುಪ ಕೊಸಗಿನ ಚೆಲ್ವೀಂ ಪುಟ್ಟಿಸಿದುದೊ ಪೊಸಸಿರಿಗೆ ಜವೆಟ್ಟನೆ ಪೂಗಣೆಯನಿರ್ಪ ನೆಲೆಮಾಡದ ಪೋಲ್ (ಕಬ್ಬಿಗ. ೦೦೭). ೨. ಅಧಿಕವಾದ ಐಶ್ವರ್ಯ,—ಸಂಪತ್ತು: ಪುಸಿನುಡಿಯ ವಿಷ ವಿಪಾಕದ ಮಸಣದೆ ಮುಖರೋಗಮಾದಪೋಲಿನಿತಾನುಂ ಬಸವಲ್ಲದುಸಿರ್ವ ರೆಂದುಂ ಪೊಸಸಿರಿಯಿಂ ಪ್ರೈಮೆವೆತ್ತ ಮಾಯ್ದು ಮನುಷ್ಯರ್ (ಕಾಂ.ಪು. ೩೬೨); ಅರರೆ ಸುಭದ್ರೆಯು ಕಣ್ಣನಗಳ ಪೊಸಸಿರಿಯೆಯೆಂದವಳು ಚುಂಬಿಪಳು (ಕರತ. ೯೦-೧೩೩). [ಪೊಸ + ಸಿರಿ]

**ಪೊಸಸುಗ್ಗಿ** (ನಾ). ಮನೋಹರವಾದ ವಸಂತಕಾಲ: ಇಲ್ಲಿ ಪುಟ್ಟಿ ಪೋಗವು ಪೊಸಸುಗ್ಗಿ ಮಾಣಗುಪಡದಿಲ್ಲಿಯ ಕೋಗಿಲೆ ಬಂದ ಮಾವು ಬೀಯದು ಕುಸುಮವಾಸ್ತ್ರನಾಜ್ಞೆ ತವದೆಲ್ಲಿಯುಮಿಲ್ಲಿಯ ನಂದನಂಗಳೊಳ್ (ಶಂಶಶಾ. ೯-೨೦); ಅನಂಗನ ಬೇಂಟೆಯ ಬಿಂದದಂದದಿಂ ಬರೆ ಪೊಸಸುಗ್ಗಿ ಕೆಯ್ಗಟಿಯೆ ಕಣ್ಗೆಸೆದಿರ್ದುವು ನಂದನಾಳಿಗಳ್ (ಶಾಂತಿಪು. ೭-೦೨೯); ಒಸಗೆಗಳ ಮೈಮುಟ್ಟಿ ಕಣ್ ಬಾಯ್ಗಳಿಂ ಕರೆವ ಪೊಸಸುಗ್ಗಿ ಕಾಲ್ಮೆಟ್ಟಿ ಸುಯಿಲಿಟ್ಟು ಕರೆಯ (ಕಾವೇರಿ. ೦೨೨-೨೩೭). [ಪೊಸ + ಸುಗ್ಗಿ]

**ಪೊಸಸುಣ್ಣ, ಹೊಸಸುಣ್ಣ** (ನಾ). ಹಳೆಯದಲ್ಲದ ಸುಣ್ಣ: ಉಪ್ಪಿಲ್ಲ ಣಂಗು ಸಾಸವೆ ತಪ್ಪಿಲ್ಲದ ಮೆಣಸು ಸುಂಟಿ ಪೊಸಸುಣ್ಣಮಿವಂ ಚಪ್ಪರಿಸಿ ಬಡಿದು ಮೆಯ್ಯಂ ಸೊಪ್ಪಾಗಿರೆ ಮೋದಿ ಪೂಸುವರ್ ನಿರ್ದಯಿಯಿಂ (ಧರ್ಮಾಮೃ. ೩-೭೦); ಪೊಸಸುಣ್ಣ ಸೂಡುಬಾಡಿರೆ ಬಸವಳಿದು ಬೞಲ್ದು ನೆಱಲ ಕಳವಳದಿಂ ಪೊಕ್ಕುಸಿಪತ್ರವನದ ಕೂರೆಲೆ ಸುಮದ ಕೊನೆ ಕೊಯ್ದು ಕೊಱೆದು ಕುಱಿದಱಿಯಪ್ಪರ್ (ಅಪಂಚ. ೯-೩೩). **ಹೊಸಸುಣ್ಣ:** ಹೊಸಸುಣ್ಣದುದಕದೊಳು ಮಾವಲದ ತನಿಪಣ್ಣ ಕುಸುರಿಗಳನಿರುಳಿರಿಸಿ (ಸೂಪಶಾ. ೩-೯). [ಪೊಸ + ಸುಣ್ಣ]

**ಪೊಸಸುಸಿಲ್** (ನಾ). ನೂತನ ರತಿಕ್ರೀಡೆ: ಮಿಸುಗುವ ಪೊಸಪಸೆಯೊಳಸದಳಮೆಸೆಯೆ ಬಯಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳ್ ಬಸದಾಗಿಯುಮಸಿಯಳೆನಗಸವಸದೊಳೆ ಬೆಸೆದು ಪೋಗಿ (ಆದಿಪು. ೯-೦೨ ಪ); ಪೊಸಸುಸಿಲೊಳಸಗೆ ರವಣಂ ಮಿಸುಗುವ ನೆಲೆಮೊಲೆಯೊಳಸವ ನುಣಿಪತಿಯನದಂ ಮುಸುಕುದೆಱೆದೆಱಗಿ ನೋಡುತ್ತ ಸವಸದಿಂ ದಾರಿದಪ್ಪುವರ್ಣೆಚರಿಯರ್ (ರಾಜಶೇ. ೦-೦೨೯); ಇಂತಿರೆ ಪೊಸಸುಸಿಲೊಳ್ ತಮ್ಮೊಂದು ಗೆಯ್ಮೆಕ್ಕೆ ಬಸವಱಿದು ಮೆಯ್ಸೋಲ್ತು ಜವ್ವನಿಗರಿರವಂತಿರೆ ಬೀರರಿರಪ್ಪುದುಂ (ರಾಜಶೇ. ೦೩೬-೦೨). [ಪೊಸ + ಸುಸಿಲ್₁]

**ಪೊಸಾಲ್ ?** (?). (?): ಪಚ್ಚಿದೋನ್ ಪೆಣ್ಬಾಮಹಾಪಾತಕಸಂಯುಕ್ತ ನಕ್ಕೆ ಪೊಸಾಲ್ಪೋಗೆ ವೃತ್ತಿ ಬ್ರಹ್ಮಕಾಪದು ಏಕಾಂಚತ್ತಿ ದೊಶಾವಮಾಪಿರ ಕನ್ಯಾಪುಲನ್ಮರಱಿದ ಪಸಲಾನ್ವಿಡಿಸಿದೋರ್ ದರಾ ದಾನ (ಎಕ. VI, ಕಳ್ಮಸ. ೯೩-೬; ಸು. ೯೦೦?). [?]

**ಪೊಸೆ₁, ಹೊಸೆ** (ಕ್ರಿ). ಪೊಸದು, ಪೊಸೆದು, ಹೊಸದು, ಹೊಸೆದು (ಭೂತನ್ಯೂ). ೧. (ಹಾಲು, ಮೊಸರು ಮೊದಲಾದುವನ್ನು) ಕಡೆ; ಮಥಿಸು: ಪೊಸೆದೊಡೆ ಪಾಲ್ಗಡಲಂ ಮಾಯ್ದಿಸುರರ್ ಪೊಸೆದಲ್ಲಿ ಕಾಳ ಕೂಟಾಂಕುರಮಂದಸದಳಮೊಗೆದಂತೊಗೆದುವು ಬಸಿಱಿಂ ನೂಱಿಂದು ಬಿಂಡಮರುಣಾಕೀರ್ಣಂ (ಶಂಶಶಾ. ೦-೦೩೦); ನೀರಂ ಪೊಸೆದುಂ ಬೆಣ್ಣೆಯನಾರಾನುಂ ಪಡೆವರೊಳರೆ (ಸಮುಶ. ೯-೦೨೯); ಕೆನೆಯ ತೆಗೆಯದೆ ಕಡೆವ ಕಳಲು ಗೋಳಕವಾಯ್ತು ಕೆನೆದೆಗೆದು ನೀರಿಡದೆ ಪೊ[ಪಾಠಾಂ. ಪಾ] ಸೆದುದೇ ಮಥಿತವೆಂದೆನಿಸಿತ್ತು (ಸೂಪಶಾ. ೨-೦೩). ೨. ಕಲಕು; ಕದಡು; ಅಲ್ಲೋಡಿಸು: (ಆ). ಕಿ. (ಹೊಟ್ಟೆಯನ್ನು) ಕಿವಿಚು; ಹಿಸುಕು: ಸಂತತಿಗೆ ಪಿರಿಯ ಮಕ್ಕಳ ನಾಂ ತಡೆಯದೆ ಪಡೆವೆನೆಂದೊಡೆನ್ನಿಂ ಮುನ್ನಂ ಕೊಂತಿಯೆ ಪಡೆದಳ್ ಗರ್ಭದ ಚಿಂತೆಯದಿನ್ನೇವುದೆಂದು ಬಸಿಱಂ ಪೊಸೆದಳ್ (ಶಂಶಶಾ. ೦-೨೯೯); ಬಿಸಿಲ ಕಡುಗಾಯ್ಪು ಭೋಂಕನೆ ಪಸರಿಸೆ ಬಿದಿ ರೊಡೆದು ಸುರಿವ ಬಿಸಿಮುತ್ತುಗಳು ಪೊಸನೀರ್ವನಿಗಳೆಂದೆದೊಸೆದೀಂಟಲ್ ಮಿಡುಕಿ ಸೋಗೆ ಪೊಸೆದುದು ಬಸಿಱಂ (ಚಾರಪು. ೯-೬೩); ಪೊಸೆದಳೊಡಲು ಕೂಡೆಕೂಡೆ ಸುತಮೋಹದಿಂದಸವಳಿದು . . . ಹಲುಬಿದಳಂಬುಜಾಕ್ಷಿ (ಕೃಷ್ಣಚಾ. ೨೦-೨೦). ೪. ತಿಕ್ಕು; ಉಜ್ಜು; ತೀಡು: ಕರತಳದಿಂ ಕಣ್ಣಂ ಪೊಸೆಯುತ್ತಮೆಟ್ದು ತಂತವ್ಮು ತಲೆವೆಸೆಯೊಳಿರ್ದ ಕರವಾಳು ಕೊಂಡು (ಗದಾಯು. ೯-೩೨ ಪ); ಜಮದಗ್ನಿಮುನಿ ಮುನಿದು ಪಕ್ಕಿಗಳಂ ಕರತಳದೊಳ್ಪೊಸೆದು ಕೊಲಲುದ್ಯೋಗಿಸುಪ್ಪುದುಂ (ಧರ್ಮಾಮೃ. ೨-೨೨೩); ಹಾ ಪುತ್ರಯೆನುತತ್ತಿಕೊಂಡು ಮುಂಡಾಡಿ ಪಣೆಗಾ

ಪಣೆಯನೊಂದಿಸಿ ಪೊಸೆದು ಚೀದರ್ುದ ಬಹಳಪ್ರಲಾಪದಿನಳಲ್ದಂ (ಕೃಬಿಶಾ. ೧೪-೩೩). ೫. ಉಜ್ಜಿ ಬೆಂಕಿಯನ್ನು ಉತ್ಪತ್ತಿಮಾಡು,—ಉಂಟು ಮಾಡು : ಪೊಸೆವಗ್ನಿಯನುಗಿದಿರ್ದಂಕುಸದಿಂದಂಜನದಿನಾ ಪ್ರಲೇಪದಿನಿದ ನಂಜಿಸಲಿಕ್ಕಿದ ಧೂಪದಿನಳ್ಕಿಸುವಾತಂ ಬೆನ್ನ ತಕ್ಕನಾತನೆ ನೃಪತೀ (ಶಾಂತಿಪು. ೩-೨೩). ೬. (ಹಗ್ಗ, ನೂಲು ಮೊದಲಾದುವುಗಳನ್ನು) ತಿರಿಚು ; ಹುರಿಮಾಡು : "ಪೊಸೆ-ರಜ್ಜುಕ್ರಿಯಾಯಾಂ (ಹಗ್ಗ ಹೊಸೆ), ಮಂಥ ದಂಡೇ ಚ (ಕಡೆಗೋಲು)" (ಶಬ್ದಾ) ; ಪುಲ್ಲ ಬೆಂಟೆಯುಂ ಪೊಸೆದು ಕಿಚ್ಚು ಮಣ್ಣಯ ಕೊಡನುಂ ಬೆಂಟೆಯುಮಂ ಕೊಂಡು ಪೋಗಿ ಭಟಾರರ ಮುಂದಿಟ್ಟು (ವಡ್ಡಾರಾ. ೦೩೩-೦೦) : ಪರಿವ ಭಂಡಿಯಂ ಕಾಲಿಂ ಕೋವರು ಮಣಲಂ ಸರವಿ ಪೊಸೆವರು ಬೆಟ್ಟಿಜ ಮಿತ್ತುಗರೆವರು ಜವನ ಮೀಸೆಯಂ ಕೀಳುವರು (ಕನ್ನಡ. IX-1. ೨೯೬-೦೮ ; 1190) ; ಪೊಸವೊಗರ್ ಕೋದಿರ್ಪ ಪೊಳ್ತಳಿಯನೆಳೆಬಿಡುವ ಪೊಸೆದು ನೆಲದೊಳ್ಪುಗಳ ಬಾಳ್ವೆಳ್ಪ ತೊಡೆವಂ (ಕಾಬೂರ. ೬೦-೧೨೪). ೭. (ತಲೆಗೂದಲು) ತೆಕ್ಕೆಗಟ್ಟಿರು ; ನುಲಿದು ಕೊಂಡಿರು : ನೆತ್ತಿಯೊಳೆಜದೆಜದಿನಿಸಜಯೊತ್ತಿ ಬಟಿಕ್ಕೆಟಿಯೆ ಪೊಸೆದು ಜಡೆಗೊಂಡಿದರ್ುದ್ವೃತ್ತ ಕುಚಯುಗೆಯು ಕೇಶಪಾನೆತ್ತಂ ಪಸರಿಸಿದ ನೆಯ್ದು ಪಸರಿಸಿದದಟಂ (ಶಂಕಭಾ. ೦೨-೦೩೯) ; ಪೊಸೆದ ಕಂಜೆಡೆಯುಂ ಪುಲಿದೋಲ ಕಚ್ಚೆಯುಂ (ಅಜಿತ. ೪೯). ೮. (ತಲೆಗೂದಲು ಮೊದಲಾದುವನ್ನು) ನುಲಿ ; ಸುತ್ತು : ಮಂದಾರಮುಖ್ಯ ಮಾದ ಅಲರ್ಗಳಂ ಮುಡಿವ ಕುರುಳಂ ಪೊಸೆದು ಜಡೆಯನಂತಳವಡಿಪರೇ ರತಿಸುಖಂಬಡೆವ ಕಾಲದೊಳ್ ಕಳೆಗೊಂಬರೇ ತಪವನು (ಕಬಕೃ. ೩೬-೮). ೯. ಸೇರಿರು ; ಕೂಡಿರು ; ಹೊಂದಿರು : ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳಕ್ಷಮಾಲೆಯೊಳೆಸೆದಂತಿರೆ ಪೊಸೆಯೆ ಮುತ್ತು ಪವಳಂಬೆರಸಿದ ಪೋಲಾಯ್ತು ಚೆನ್ನತಪಸಿಯ ಕೆಯ್ಯೊಳ್ (ಶಂಕಭಾ. ೬-೧೦). ೧೦. ಕೂಡಿಸು; ಸೇರಿಸು ; ಬೆರಸು : ಪೊಸೆದಾತ್ಮಜಳದೆ ಬೇಳೆಯ ರಸಮಂ ಕಿವಿಯೊಳಗೆ ಪಿಜಿಗೆ ಪೋಣ್ ಕಟ್ಟುಗೆ ವಾಯಸಜಂಘೆಯ ಬೇಳೆಯ ಕಿಜುಕುಸಾಲೆ ಬೇರೊಂದನಲ್ತೆ ಸೂಜ್ಜ್ವರಮಜಿಗುಂ (ಲೋಕೋಪ. ೯-೨೪). ೧೧. ಹೆಣೆ ; ಕಟ್ಟು ; ರಚಿಸು : ರಘುಮಶರಾಮಕೃತಿಯೊಳ್ ಪತ್ತೆಂಟು ಪದ್ಯಂಗಳಂ ಪೊಸವೆಂ (ಶಂರಾಪ. ೦-೩೩). ೧೨. ಉಂಟುಮಾಡು; ಉಂಟಾಗಿಸು : ಶೋಭೆಯುಂ ಪೊಸೆಯುತ್ತಿದರ್ುದು ಮೂಡಲುಂ ಪಡುವಲುಂ ಚಂದ್ರಾರ್ಕಸನ್ಮಂಡಲಂ (ಪಾರಕೃ. ೫-೬). ೧೩. ಹರಿ ; ಕತ್ತರಿಸು : ತೊಡರಂ ಪೊಸೆದು ಪಜಿವ ಮದಕರಿಯಂತೆ ಪೊಸೆದು ನೋಡಲೊಡಂ (ಶಾಂತಿಪು. ೮-೫೦ ವ); ಆ ನಾಗಪಾಶಮಂ ಜಗತೀನಾಥಂ ಪೊಸೆಯೆ ಕಟ್ಟುಗಳ್ ಬಿಟ್ಟುರೆ (ಶಾಂತಿಪು. ೮-೫೪). ೧೪. (ಹೆಜ್ಜೆಯನ್ನು) ಕೀಳು ; ತೆಗೆದಿಡು : ಪೊಸೆಯದೆ ಪಜ್ಜೆಗಳಂ ನಾಲ್ದೆಸೆಯೊಳಮೆಂಟೆಂಟು ದೆವಸಮಿರುಳುಂ ಪಗಲುಂ ಮಿಸುಕದೆ ನಿಲೆ (ಸಮಾಪ. ೧-೦೬). ೧೫. ಹೊಡೆ ; ಬಡಿ : ಇರುಳ್ ಮೊದಲ ಜಾವಮಪ್ಪನ್ನೆಗಂ ಪೊಸೆಯೆ ಸಸ್ಯಕ್ಕೆ ನಟ್ಟಿರುಳ್ವರೆಗಮಾ ಪಿಶಾಚನಿವಹಕ್ಕೆ . . . ಅಶುಭಮೆಂಗೆ ನಿರ್ಘಾತಮಂ (ಲೋಕೋಪ. ೪-೦೬); ಚಾಟಿಯೊಳ್ ಬಡಿವುತಂ ಸರಳಿನಿಂ ಪೊಸವುತಂ ಭೂತದಿಂ ಪೊಯ್ಯುತಂ . . . ಬಳಲಿಸುವರೇನೆಂಬೆನು (ಶಬಕೃ. ೫೬-೨೬). ೧೬. ಹೊಸಕು; ನಾಶಮಾಡು; ಹಾಳುಮಾಡು : ಆ[ಚಾ]ರ್ಯ ಪುರುಷ ಇಜಿದು ಬಸಪಟಿ[ಯದೆ] ಬೀಟಿಶ್ವರನ್ ತೆಜ[ಜ]ನ ಮೆಚ್ಚದೊಂ ಪಿಸುಣರ ಪೊಸೆವೊ (ಎಪಿ. XXIV,೦೯೩-೧೨; ಸು.885); ಎಲ್ಲರಂಯುಮಸುತನುಂ ಸುರೇಂದ್ರಸುತನುಂ ಪೊಸೆದೀಗಳೇ ಮುಕ್ಕಿ ತೋಜಿರೇ (ಶಂಕಭಾ. ೪-೭); ಪೆರ್ಮಾರಿಯನಾವಗಂ ಪೊಸೆದು ನೀಂ ಮುಕ್ಕೆಂಬುದೇಂ . . . ಬೀರಮೇ (ಕಬ್ಬಿಗ. ೨೪೦). ೧೭. ಕೊರೆ ; ತೂತು ಮಾಡು : ರಸಮಯಮಂ ಕೃತಿಯಂ ಸೇವಿಸಿ ವಿರಸಮನೆಯ್ದೆ ಜೋಡುಮಾಡುವ ವಿಬುಧಪ್ರಸರಂ ಪೊಸವಮಾವಂ ಸೇವಿಸಿ ಬದಿರಂ ಪೊಸೆವ ತ್ರಾಂಬಿಯೊಡನಾಡಿದರೇಂ (ಕೃಕೃತಿ. ೦-೫೬). **ಹೊಸೆ :** ೧. ವಸುಧೆಯಿಲ್ಲದ ಬೆಳಸು ರಾಜಾನ್ನದ ಹೆಸರಿಲ್ಲದ ಓಗರ ವೃಷಭ ಮುಟ್ಟದ ಹಯನು ಬೆಣ್ಣೆಯ ಹೊಸೆವರಿಲ್ಲದೆ ಕಂಡುಂಡೆ (ಅಪಕಂ. ೧೪೫-೬೬೦); ಹೊಸೆದರ್ಕೈ ಧರೆ ಗಗನ ನಡುಗಲು ಮಸಗಿ ಮಂದರದಿಂದ ದುಗ್ಧದ ರಸಗಡಲನಾ ದೇವದಾನವರಂದು (ಶಂಭಕ. ೫-೦೦೫); ಸಸಿಯನೊಕ್ಕಲಿಗನು ಹೊಸೆವಾಕೆ ಬೆಣ್ಣೆಯನು ಅಸಗ ಸೀರೆಯನು ಅಜಿವಂತೆ ಸೂಳೆ ತಾ ಹುಸಿವರಜು ದಿಹಳು (ಸರ್ವಜ್ಞ. ೦೯೦೦). ೨. ಮಿಸುಗುವ ಸುಗಂಧವಾಳೆಯ ಹಣ್ಣ ಕತ್ತರಿಸಿ ಹೊಸತುಪ್ಪಮುಂ ಕೂಡಿ ಮತ್ತಮಾ ಹಾಲೊಳಗೆ ಹೊಸೆದದಂ ಹಾಕೆ ಕದಳೀ [ಪಾಠಾಂ. ನೊಸೆದದಂ ಹಾಕೆ ಕದಳಿಯ, ವಸೆದದಂ ಹಾಕೆ ಕದಳಿಯ, ಪೊಸೆದು ಹಾಕಿದೊಡೆ ಕದಳಿಯ] ಪಕ್ವಫಲಸಾರಪಾಯಸವೆನಿಸಿಕೊಂಬುದು (ಸೂಪಶಾ. ೩-೦೪). ೩. ಸಕಳಸುಖವಿರಹಿತೆಯಪ್ಪ ರತಿದೇವಿ ನಿಂದಿರ್ದು ಬಿಸುಸುಯ್ದು ಬಸಿಜಂ ಹೊಸೆದು ಕೆಯ್ಕತ್ತಿ ದೆಸೆದೆಸೆಯಂ ನೋಡಿ (ಗಂಕ. ೬-೬೪ ವ); ಕಾಳುಮಾಡಿದನೆನಗೆ ಮುನಿಪತಿ ಠಾಳಕಾಜಿನಲಾ ಸುಡೀ ಗರ್ಭಾಳಿಗಳನೆಂದಬಲೆ ಹೊಸೆದಳು ಬಸುಜನೊಡೆಮುಜಿದು (ಕುವ್ಯಾಕಿ. ೪-೪೦); ಪುತ್ರನ[ರ]ಳಿದಪರೆಂದು ದೇವಕಿ ಹೆತ್ತ ಹೊಟ್ಟೆಯ ಹೊಸದು ಶೋಕಿಸಿ ಬಿದ್ದು ಹೊರಳಿದಳು (ಸಾಳ್ವಭಾ. ೨೧-೪); ಅಯ್ಯೋ ಎಂದು ಭೋರೆಂದು ಗೋಳಿಟ್ಟು ಹೊಟ್ಟೆ ಹೊಸೆದು ಹುಚ್ಚೆದ್ದು ಹೌಹಾರಿ ಹುಯ್ಯಲಿಟ್ಟಳು (ಸಣೇಗೀ. ೯೮-೨೨). ೪. ವಾಸನೆಯ ಕುಸುಮವ ಹೊಸೆದು ವಾಸನೆ ಹೋಗಿ ಆ ಸುವಾಸನೆಯೆಲ್ಲಡಗಿತ್ತೆಂಬುದನಜಿದಲ್ಲಿ ಶರಣನ ಶರಣಸ್ಥಲ (ಮೋಕ್ಷಮಾ. ೦೪೩-೫೪೬); ವಿಷದ ಕ್ರೂರತೆ ಲೋಕವೆಲ್ಲವ ಘಸಣಿಸುತ ಬರಲಾ ಸಮೀರಣ ಹೊಸೆದನಂಗೈತಳದಿ ಕೋಪದಿ ನೋಡಿ ಪಡಿಸಣವ (ಶಂಭಕ. ೬-೧೯) ; ನಾಗ ಕೈ ಹೊಸೆದ (ವಚನಾ. II, ೦೦೨೬). ೫. ಕಾಷ್ಠ ದೊಳಿಹುವಗ್ನಿ ಹೊಸೆದರೆ ತಾನಿರ್ದ ಕಾಷ್ಠವ ತಾನೆ ಸುಡುವುದು (ಭರತ. ೬೪-೫೨); ಹಸಿಯ ಸಮಿಧೆಯ ತಂದು ಹೊಸೆದರುಂಟೇ ಕಿಚ್ಚು (ಸರ್ವಜ್ಞ. ೯೩). ೬. ಮಳಲ ಹೊಸೆದರೆ ಹೊಸೆದಂತಲ್ಲದೆ ಸರವಿಯ ಹಡೆಯಲು ಬಾರದು (ಬಸವ. ೫೫೪); ಹೊರಜಿ ಹೊಸೆವ ತಿರುಹುವ . . . ನೆಜ ಸುಲಿವ ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೮-೨೯); ತಿಣ್ಣವಲೆ ಜೋಡುವಲೆ ಹೊಸೆದಿಕ್ಕಣ್ಣವಲೆ ಚಕ್ರವಲೆ . . . ಪೊಜಗಳು ವಿಂಧ್ಯಕನ ಕೂಡೆ (ಸಾಳ್ವಭಾ. ೫-೦೮); ಪುನಃಪುನಃ ನೀರಿನಲ್ಲಿ ಅದ್ದಿ, ಒಣಗಿಸಿ ಅತ್ಯಂತ ತಾಳಿಕೆಯುಳ್ಳದ್ದಾಗುವಂತೆ ಆ ಚರ್ಮವನ್ನು ಹೊಸೆದನು (ಬಂಗಾಹ. ೨೧). ೧೦. ಲೋಕವನು ನಾಕಕ್ಕೆ ಬೆಸೆಯೆ ನಾಕವನು ಲೋಕಕ್ಕೆ ಹೊಸೆಯೆ ಐತಂದೆ ನಾ ಭಕ್ತಿದೇವಿ! (ಶಂದ್ರಸ. ೫೦-೦). ೧೧. ಕನ್ನಡದ ಆದಿಕವಿ ಪಂಪ ತನ್ನ ಪೋಷಕನಾದ ಅರಿಕೇಸರಿಯನ್ನು ಅರ್ಜುನ ನಿಗೆ ಅಭಿನ್ನವಾಗಿ ಮಾಡಿ, ನೂತನರೀತಿಯಲ್ಲಿ ಕಾವ್ಯವನ್ನು ಹೊಸೆದುದು ಆತನ ಸಂಶೋಧನೆಯ ಪ್ರಜ್ಞಾಫಲವೆನ್ನಬಹುದು (ಸಂಶೋಧ. ೦೮೬). ೧೫. ಕೊಂಕುಸರಳಿಂ ಹೊಸೆವ ಚಕ್ರದಿಂದಿಡುವ ಕುರುಪಿಂ ಕೆರೆವ . . . ಕರಗಸದಿ ಕೊಜವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೮-೨೮). ೧೮. ನೆರಿಗೆ ಹಿಡಿ ; ಜೋಡಿಸು : ಹೊಸೆದು ಕಟ್ಟಿದ ಮುನ್ನ ಕಚ್ಚೆಯ ಬೆಸುಗೆ ಶಿಖಿಗಳ ಗಂಟು ಮಿಗೆ ಶೋಭಿಸುವ ಜನಿವಾರವು . . . ಎಸೆವ ಹೊಂಬಣ್ಣದ ಶರೀರದಿ ಮಿಸುಪ ವಾಮನರೂಪನಾಂತಾ ವಿಷ್ಣುಮುನಿ ಬಂದ (ಸಾಳ್ವಭಾ. ೦೮-೨೫). ೧೯. ಕೋಡುಬಳೆ, ಸೇವಗೆ ಮುಂತಾದುವು ಗಳ ಹಿಟ್ಟನ್ನು ಬೆರಳುಗಳಿಂದ ಹೊರಳಿಸಿ ಎಳೆಯಾಗಿ ಮಾಡು : ಹದನಾಗಿ ನಾರು ಹಜಿವಂತೆ ಕಣಕವ ಕುಟ್ಟಿ . . . ಸೇವಗೆಯಂತೆ ಹೊಸೆದು ಸಣ್ಣಕ್ಕಿವಿಟ್ಟನೊಳು ಬೆಣ್ಣೆಯನು ಕಲಸಿ ಅದಕಿಕ್ಕಿ (ಸೂಪಶಾ. ೦-೪೬). ೨೦. (ಆಲಂ) ವ್ಯರ್ಥವಾಗಿಸು ; ಪೋಲುಮಾಡು : ನಾಸೇ ಸೈನ್ಯ ತೆಗೆದುಕೊಂಡುಹೋಗಿ ಮೂರೇ ದಿನಗಳಲ್ಲಿ ಮಸೆದು ಬರುತ್ತೇನೆಂದು

. . . ಒಂದು ವರ್ಷವೆಲ್ಲ ಹೊಸೆಯುತ್ತ ಕುಳಿತೇನು (ಶಾಂಕಲಾ. ೧೯೨). ೨೧. ದುಡಿ; ಶ್ರಮಿಸು : ಹೊಸೆಯುದ ಕೈಯಿಂದ ಕುಸಿದು ಹೋಹುದು ಲೇಸು ಅಸಮಾನದವಳ ಬದುಕಿಂದ ತಿಂಗಳಲಿ ಹಸಿದಿಹುದೆ ಲೇಸು (ಸರ್ವಜ್ಞ. ೧೭೪೭).

**ಪೊಸೆದು ಮುಕ್ಕು, ಹೊಸೆದು ಮುಕ್ಕು**=ಹೊಸಕಿ ಹಾಕು ; ನಾಶ ಮಾಡು : ಈ ಮಾಬಲುಂದಿದರನೆತ್ತಿನಿಬರುಮನೊರ್ಮೆಯೆ ಪೊಸೆದು ಮುಕ್ಕುವಂ (ಶಂಕಥಾ. ೩-೧೭ ವ) ; ಅಂಘ್ರಿಯುಗ್ಮದಿಂದೊರಸುವ ಕೈಗಳಿಂ ಪೊಸೆದು ಮುಕ್ಕುವಗುರ್ವಿನ ಕುಂಭಕರ್ಣನೀ ಧರಣಿಗೆ ದಂತ ವಕ್ರನೆನಿಸಿರ್ದ(ರ್ಪ)ದನಾನಜಿವೆಂ (ಜಗ. ೧-೬೦) ; ಅನುಜರನಿತ್ತುಮಂ ಹೊಸೆದು ಮುಕ್ಕಿದನೀ ವೃಕಕುಕ್ಷಿ ನಿಂದು ಮತ್ತೆನಗಿದಿರಾಗಿ ಬಲ್ದಡಿಗೆಯುಂ ಪಿಡಿದಿರ್ದಪನು (ಕುಮಾವ್ಯಾ. ೦೩-೧೮) ; ದೆಸೆಯು ನುಣ್ಣನೆ ನುಂಗಿ ಸೂರ್ಯನ ಹೊಸೆದು ಮುಕ್ಕಿತೋ ರಾಹು (ಸಾಳ್ವಭಾ. ೫-೨).

[ದೇ.॥ ತಮಿ. ಪೊಚುಜ್ಜು ; ತುಳು. ಪೊಯಿ; ತೆಲು. ಪೊಸಗು]

**ಪೊಸೆ₂** (ನಾ). ಕಡೆಗೋಲು ; ಮಂತು : "ಪೊಸೆ_ರಜ್ಜುಕ್ರಿಯಾಯಾಂ (ಹಗ್ಗ ಹೊಸೆ), ಮಂಥದಂಡೇ ಚ (ಕಡೆಗೋಲು) " (ಶಮಧಾ); "ಪೊಸೆ ಯೆಂದುಂ ಕಡೆಯೇಮುಂ ಮಂಥಾನು'' (ಶಶಾ. ೩೩-೧೯೦). [< ಪೊಸೆ₁]

**ಪೊಸೆದು** 'ಪೊಸೆ₁' ಪರಾ.

**ಪೊಸೆಯಿಸು, ಪೊಸಯಿಸು₂** (ಕ್ರಿ). ೧. ಕೂಡು ; ಸೇರು ; ಹೊಂದು : ಪೊಸೆಯಿಸಿ ನಸುಬಿಸುಪೇಱಿದ ಬಿಸಿಲಱಿಯೆ ಬೆಮರ್ತು ಬಂದು ಬಿಡುವಪೊಲೆನಸುಂ ಪೊಸಮುಗುಳಂ ಪೊತ್ತಿಸೆದುದು ವಸಂತದೂತಿಕೆ (ಲೀಲಾವ. ೯-೬೮). ೨. ರಚಿಸು ; ನಿರ್ಮಿಸು : ವಿಮಾರ್ಗದೊಳಂ ಪೊಸದೇಸೆಯ ನುಡಿಗಳೊಳಂ ಪೊಸೆ [ಶಾಕುಂ. ಸ]ಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೧-೩೯) ; ಪುಷ್ಪಮಾಳಿಕೆಯೆಂಬಳ್ ಪಲತೆಱದಲರ ಪಸವನಂಗಳಂ ಪೊಸೆಯಿಸಿಯುಂ (ಶಾಂತೀಶ್ವ. ೦೩-೨೨೯ ವ). ೩. ಉಂಟುಮಾಡು ; ಒದಗಿಸು : ಯುವತಿಗೆ ನಿಱಿವಿಡಿದು ದುಕೂಲವ ನುಡಿಸುವ ದಿವಿಜ ಕನಕನಗಪೀಖಳೆಯುಂ ಧವಳಾಭ್ರಮಾಲೆಯುಂ ಸುತ್ತುವ ವಾರಿದಲಕ್ಷ್ಮಿಯೆಸಕವುಂ ಪೊಸೆಯಿಸಿದಳ್ (ಕೃಷ್ಣಪು. ೯-೭೨). ೪. ಮಾಡು ; ನೆರವೇರಿಸು : ಶಿಶುಗೆ ನಯನಾಂಶುದುಗ್ಧಪ್ರಸರದೆ ಜನ್ಮಾಭಿ ಷೇಕಮುಂ ಮುನ್ನೀದಂ ಪೊಸೆಯಿಸಿ ಸರೋಜದಿಂದರ್ಚಿಸುವಂತಿಂ ದ್ರಾಣಿ ನೆಗಪಿದಳ್ ಕಂದಳದಿಂ (ಚಂದ್ರಪು. ೦೨-೫೫). ೫. ಪ್ರಕಟಪಡಿಸು ; ತೋರಿಸು ; ಕಾಣಿಸು : ಏನಂ ಪೇೞ್ವೆಂ ತನ್ನ ಪಸೂನುವ ಪುಣ್ಯ ಪ್ರವಾಹಮುಂ ಗ್ರಾಹಮಹಾಮೀನಕುಳೀರಾಹಿಗಳಂದೇನುಂ ಪೊಸೆಯಿಸಿದು ವಿಲ್ಲ ನಿಜವಿಷಮತೆಯುಂ (ಚಂದ್ರಪು. ೫-೪೫). **ಪೊಸಯಿಸು₂** : ೧. ವಿಚಿತ್ರ ಪಾತ್ರಪರಿನರ್ತನಮುಣ್ಮುವ ತೂರ್ಯನಾದದೊಳ್ ಪೊಸಯಿಸೆ . . . ಲೀಲೆ ಕಣ್ಗಸವಳಮಾಗೆ ಪಾಱುವ ಮಹೀಧರನೆಂಬ ವಿಯಚ್ಚರೇಂದ್ರನಂ ಭೋಂಕನೆ ಕಂಡು (ಆದಿಪು. ೨-೪೧). ೨. ಎಸೆದಿರ್ದೆಯೊಳ್ ಪಳಂಚುವ ಕಲಧ್ವನಿಯಿಂ ಪೊಸತೆಂದು ರಾಗಮುಂ ಪೊಸಯಿಸಿ (ಆದಿಪು. ೨-೭೭) ; ಸತ್ಕವಿಯೊಳ್ ಸಮನಾಗಿ ಮಾರ್ಗಮುಂ ಪೊಸಯಿಸಿ ದೇಸಿಯುಂ ಪೊಸತು ಮಾಡಿದಳೊರ್ವಳಪೂರ್ವರೂಪದಿಂ (ಶಂಕಥಾ. ೫-೬೪) ; ಮೇವುಗಾಡಿಂ ಹಕ್ಕಿ ದಲೆಗೆ ಹರಿಯಿಡುವ ಹರಿಣೀಗಣದ ಕಡೆವಾಯೊಳರೆಮೆಲ್ದುಬಿದೆಳಗಱುಕೆ ಯೆಸಟ್ಗಳಂ ಸೆಳೆದು ತಂದು ಬಯಲೊಳ್ ಬಳ್ಳಿವಸಲೆಯುಂ ಪೊಸಯಿಸಿಯುಂ (ಚಂದ್ರಪು. ೬-೪ ವ). ೩. ಪೊಸತಳಿರ್ಗಳ ಬಿಜ್ಜಣಿಗೆಯಿನೆಸೆವೆಲರ್ಗಳಿನೊಗೆವ ಘರ್ಮಜಲಮುಂ ಪೀರ್ದಾಱಿಸಿದುವು ಕುಸುಮರಜಂಗಳ್ ಪೊಸ[ಶಾಕುಂ. ಸೊಗ]ಯಿಸಿದುವು ಬಣ್ಣಮುಂ ಲತಾಂಗಿಯರ್ಗಳ್ (ಆದಿಪು. ೧೧-೭೫) ; ರಸವೊಸರ್ವನ್ನೆಗಂ ತಗುಳೆ ಪಾಡುವವ್ಯಗಾಣರ ಗೇಯಮುಬ್ಬುಱಿಂ ಪೊಸಯಿಸೆ (ಶಂಕಥಾ. ೧೧-೪) ; ಎಸೆವ ಜಿನೇಂದ್ರಚಂದ್ರನ ಸದಚ್ಛತನುಚ್ಛವಿ ಸಾಂದ್ರ ಚಂದ್ರಿಕಾಪ್ರಸರಮದೀಕ್ಷಣೋತ್ಪಳಕಮುತ್ಸವವಾರ್ಧಿಗಮಂದಮಂದಮಂ ಪೊಸಯಿಸೆ ಹರ್ಷಸಂಪದಮಂ (ಧರ್ಮಪು. ೦೩-೯೮). ೪. ಪತಿಂವರೆಗೆ ಸೊಯಂಬರಮಂ ಪೊಸಯಿಸಿದಂ ನಿಖಿಲರಾಜಕಂ ನೆರೆಯೆ ಸಾನುಜಂ ಬಲ ದೇವಂ (ಶಾಂತಿಪು. ೪-೮೯) ; ದಾನವ್ಯಸನಿ ದಶರಥನದೇಂ ಪೊಸಯಿಸಿದನೊ ಚೌಲೋಪನಯನಮಹಿಮೋತ್ಸವಮಂ (ಶಂರಾಮ. ೩-೦೪೨) ; ಶಿಶುಗಳು ಕಾಡೆ ತೋಱೆ ಶಶಿಯಂ ಜಳಕೇಳಿಗಳಂ ವಿನೋದದಿಂ ಪೊಸಯಿಸಿ (ಪುಣ್ಯಾಸ್ರ. ೧೧-೦೨). ೫. ಧೃತವಿಷಮಬಾಣನಂ ಜಿನಪತಿ ಗೆಲ್ದಪೊಲಾತನಂ ಪ್ರಜಾಪತಿ ಧರಣೀಪತಿ ಕಾಮದೇವನಂ ಗೆಲ್ದು ತಳೆರದನಿವಾರ್ಯವೀರ್ಯಮಂ ಪೊಸಯಿಸಿದಂ (ಶಾಂತಿಪು. ೫-೫೭) ; ಬೇಗಂ ಕೂರ್ತಂತೆ ಭಕ್ತಿಯಂ ಪೊಸ ಯಿಪರ್ಕಾಲಮುಂ ಕಜ್ಜಮುಂ ಬಗೆಯುತಿರ್ಪರ್ (ಸುದತಿ. ೧೦-೭೫) ; ದೂರ ದೊಳೆಯ್ತರೆ ತುಂಬುಮೊಗವ ತೋಱೆ ಭೂರಿಲೀಲೆಗಳ ಪೊಸಯಿಸಿ (ಶಶಿ. ೬-೦೩ ಸಾಂಗತ್ಯ). ೬. ಹೊಂದಿಸು ; ಕೂಡಿಸು ; ಸೇರಿಸು : ಈ ದೂದವ ರೆಂಬ[ರ್] ಬೇಟಕಾಱರ ಬೇಟಮೆಂಬ ಲತೆಗಳಡರ್ಪಿಮಂತಿರ್ದರೆಂತಪ್ಪ ಬೇಟಂಗಳುಮವರ್ ಪೊಸ[ಯಿ]ಸೆ ಪೊಸತಪ್ಪುದು ಕಿಡಿಸೆ ಕಿಡುವುದು (ಶಂಕಥಾ. ೪-೧೦೩ ವ) ; ಅಲ್ಲಿಯ ವಯೋಧಿಕರೀಗಳುಮಾಗಳುಮಱಿವರಾದೊಡಮಿನಿಸೆ ಡೆಯಾಗಿರ್ದ ಸಂಬಂಧಮುಂ ನೀನಿರ್ದು ಪೊಸಯಿಸುವುದು (ಶಾಂತಿಪು. ೨-೭೭ ವ). ೭. ಕಡೆ ; " ಮಥಿಸು " : (ಶತುಖ. ೬. I, ೭೮). ೮. ಹೂಡು ; ಬಳಸು : ಅಸತ್ಯವಾದಮುಂ ಪೊಸಯಿಸಿ ಜೀವನಿಲ್ಲ ಮೋಱೆಯಿಲ್ಲಱನಿಲ್ಲ ಪರತ್ರಯಿಲ್ಲೆ ನಲ್ಕಸಕಳಿಯಂತೆ ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ (ಆದಿಪು. ೨-೧೧). [ಪೊಸೆ₁ + — ಇಸು₃]

**ಪೊಸ್ತಕ** ' ಪೊತ್ತಗೆ ' ನೋ.

**ಪೊಸ್ತಕಗಚ್ಛ, ಪೊಸ್ತಕಗಛ** (ನಾ). [ಜೈನ] ಮುನಿಗಳ ಒಂದು ವರ್ಗ : ಸ್ವಸ್ತಿಶ್ರೀ ಮೂಲಸಂಘದೇಶಿಯಗಣ ಪೊಸ್ತಕಗಚ್ಛದ ಕೊಣ್ಡಕುನ್ದಾನ್ವಯ ಕೊಲ್ಲಾಪುರದ ಸಾವನ್ತನ ಬಸದಿಯ ಪ್ರತಿಬದ್ಧದ ಶ್ರೀಮಾಘನನ್ದಿಸಿದ್ಧಾನ್ತ ದೇವರ ಶಿಷ್ಯರು . . . ಕೊಟ್ಟರು (ಎಕ. II, ೩೬೦-೧ ; ಸು. 1200). **ಪೊಸ್ತಕಗಛ** : ಶ್ರೀಮೂಲಸಂಘದೇಸಿಯಗಣ ಪೊಸ್ತಕಗಛ ಕೊಂಡಕುಂದಾ ನ್ವಯದ ಹೆರಗಿನ ಹರಿಶ್ಚಂದ್ರದೇವರ ಪ್ರಿಯಗುಡ್ಡುಗಳಪ್ಪ ತಾತಂಗಿಯ ಪಟ್ಟಣದ ನಖರಂಗಳು ಮಾಡಿಸಿದ ಶ್ರೀಶಾಂತಿನಾಥದೇವರು (ಎಕ. I (R). ೬-೨; 12ನೆಯ ಶತ). [< ಸಂ. ಪುಸ್ತಕ ಗಚ್ಛ]

**ಪೊಸ್ತಕಗಛ** ' ಪೊಸ್ತಕಗಚ್ಛ ' ನೋ.

**ಪೊಹಚಿ** 'ಪೌಂಚಿ' ನೋ.

**ಪೊಳ್** (ಸಪೂರೂ). 'ಪೊಳ್ಳು' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೊಳ್ನುಡಿ', 'ಪೊಳ್ಕರ' ಪರಾ. [<ಪೊಳ್ಳು]

**ಪೊಳಂಕು, ಪೊಳಕು₁, ಹೊಣಕು, ಹೊಳಕು₁** (ಕ್ರಿ). ೧. ಪ್ರಕಾಶಿಸು; ಮಿಂಚು; ಹೊಳೆ : ನದಿ ಕಣ್ದೆಱೆದಂತೆ ಪೊಳಂಕಿದ ಮೀನಂ ಮೊಸಳೆ ಪಾಯೆ ನರಪತಿಯ ವಿನೋದದ ಗುಜ್ಜ ಸಿಕ್ಕೆ ಪಿಡಿದತ್ತದನಧಿಪತಿ ಜಾಲ ಗಾಱರಿಂ ತೆಗೆಯಿಸಿದಂ (ಯಶೋಚ. ೩-೪೮). ೨. ಅಗಿದು ತಿನ್ನು; ಜಗಿ : "ಪೊಳಕು, ಪೊಳಂಕು__ಚರ್ವಣಕ್ರಿಯಾಯಾಂ (ಅಗಿಯು)" (ಶಮಧಾ). **ಪೊಳಕು₁** : ೨. ಅರೆಮುಗಿದಿರ್ದ ಕಣ್ ಮುರಿದ ವಿಹಸೆ. . .ಸುಲಿಪಲ್ ತಳತ್ತಳಿಸಿ ತಂಬುಲಮಂ ಪೊಳಕುತ್ತೆ ರಾಗದಿಂ ಪ್ರತಕೆಗೆ ಕೊಟ್ಟ ಪಂದಲೆದು ಗುಂದಲೆಯಾದುದು ಬೀರನಣ್ಮನಾ (ಅರ್ಧನೇ. ೫-೩೦). ೩. ಚಪ್ಪರಿಸು : ಪನಸಾಮ್ರಾತಕ . . . ದಾಡಿಮಫಲವ್ರಾತಂಗಳಿಂದಾಗಳುಂ ತನಿಗಂಪಂ ಮೊಗೆದೆತ್ತಿ ತೀಡುವೆಲರೊಂದಿಂಪಿಂಗೆ ಪೊಂಗೂರ್ತು ಮೆಲ್ಲನೆ ಬಾಯಂ ಪೊಳಕುತ್ತೆ ನೋಟ್ಪರಮರರ್ ತಾರಾಚಳೋದ್ಯಾನದೊಳ್ (ಅರ್ಧನೇ. ೨-೭೦). ೪. ಬಾಯಾಡಿಸು ; ನಾಲಗೆ ಹೊರಳಿಸು : ಪುತ್ರಂ ಕಾಯೋತ್ಸರ್ಗಕ್ಕೆ ಮೂವತ್ತೆರಡುದೋಷಂಗಳಪ್ಪುವವಾವುವೆಂದೊಡೆ ಕುದುರೆನಾಲಿಕ್ಕೆ

ನಿಲ್ವುದುಂ . . . ಬಾಯಂ ಪೊಳಕುತ್ತುಂ ನಿಲ್ವುದುಂ ಎರಡು ಕಯ್ಯುಂ ಪಿಡಿಕಿಸಿ ನಿಲ್ವುದುಂ (ಶಬ್ದಸ. ೩೧೨). ೫. ಚಿಮ್ಮು; ಪುಟಿ : ತಿರುವಿಂ ಪೊಳಕಿದ ಕಾಮನ ಸರಲಂತಿರೆ ಬಂದವಳ್ (ಪುಷ್ಪದ. ೯-೦೦೬) ; ಅವಗಡಿಸಿ ಪೊಕ್ಕು ಪೊಯ್ದಾಡಿದರ್ ಕೋಡಿದರ್ ನವರುಧಿರಧಾರೆಯೊಳ್ ಮುಳುಕಿದರ್ ಪೊಳಕಿದರ್ (ಚಂಪು. ೨೬-೦೮). ೬. ಸೇರು ; ಕೂಡಿ ಕೊಳ್ಳು : ಕರ್ಮದ ಬೇರ ಪಚ್ಚದರೆ ಪೊಳಕೆನೀ ಸಂಸಾರಚಿತ್ರಕೆ (ಅನಾಗ. ೧೦-೨-೧೦). ೭. ನಾಶಮಾಡು ; ಧ್ವಂಸಗೊಳಿಸು : ಪಟುನುಡಿ ಪೆತ್ತು ಪೊಲ್ತು ಧರಣಿಯಂ ತಿರೆಯಂ ಪದದೆತ್ತಿ ದೈತ್ಯನಂ ಪೊಳಕಿ ಬಲೀಂದ್ರನಂ ತಗುಳ್ದು ಮಟ್ಟಿಸಿ ದುಷ್ಟನೃಪಾಲವಂಶಮಂ (ಜಗ. ೩-೦೯೩). **ಪೊಣಕು :** ೮. ಸುಟ್ಟುಹಾಕು ; ಭಸ್ಮಮಾಡು : ಕ್ಷಣಕೆ ಕರ್ಮವ ಸುಟ್ಟ ಶಾಂತಿ ಶ್ರೀ ಜಿನರಾಜ ಪೊಣಕೆನ್ನ ಪಾಪೇಂಧನವ (ಜ್ಞಾ. ಪತ. ೪೩-೧). ೯. ಹೊಡೆ; ಬಡಿ : ಮುರಳಿಸಿದನಾ ರಥನ ಪಾಂಚಾಲರೆಂಟುಸಾವಿರರಥಿಕರೈತರಲ್ಕವರ ದೆಸೆಗಾಗಿ ಹೊಕ್ಕುರವಣಿಸಿ ಪೊಣಕಿದಂ ಪೇರಾಳದಂಬಿನಿಂ ದೆಸೆದೆಸೆಗೆ ಪರಿವಂದದಿ (ಲಕ್ಷ್ಮೀಶ. ೦-೩೦). **ಪೊಳಕು**$_1$ **:** ೧. ಬೆಳಗು ಹೊಳಕಿದ ಬಳಿಕಡಗಿತ್ತಲ್ಲಿ ಕತ್ತಲೆ (ಮನೋಂ. ೪-೨೪); ಮುಂಗಾರ ಗಗನಾಂಗಣದ ನಾಟ್ಯಕೆ ಎಂದ ಮಿಂಚಿನ ಭಣಿತೆಯುವೊಲಸುರೇಂದ್ರರಥ ಪೊಳಕಿದುದು ಕಣನೊಳಗೆ (ಕುರಂ. ೬-೨೦-೩೦). ೫. ನೊರೆಯನುಬ್ಬಿಸುತೇಳ್ವ ರಣದುಬ್ಬರದ ರಕುತದ ಹೊನಲು ಹೊಳಕಿತು [ಪಾಠಾಂ. ಮಸಗಿತು] ಪೊಳಕಿಸಿ ಪೊರಳಿದವು ಪೇರಾಳ ಹೆಣದುಂಡುಗಳು ಕಪಿಬಲದ (ಕುರಂ. ೬-೩೦-೦೪). ೭. ಕುಲಗಿರಿಗಳಲ್ಲವನೊಂದು ನಿಮಿಷದಿ ಪೊಳಕಿ ಹೊಳಕಿ ಬಿಡುವೆನ್ನ ಕುಲಿಶದಂಡವ ಪಿಡಿದೀ ಸಗ್ಗಿಗರ ಜಂಗುಳಿಸಹಿತವೆ ಬಲಿದೊತ್ತೆ (ಶ್ರೀಪಾಂ. ೭-೩). ೯. ಭೀಮನಂ ತೊಡಕಿದರು ಹೊಳಕಿದರು ತವಕಿಗರು ತಲ್ಲಣಿಸದೆ (ಕುರಂಗ. ೬೪-೨೨). ೧೦. ಝಂಕಿಸು; ಗದರಿಸು : ಅವದಿರ ನಾಡಿನೊಳಗರ್ಧವಂ ಕೊಟ್ಟು ಬಾಳೆಂದು ಧೃತರಾಷ್ಟ್ರ ಹೊಳಕಿ ನುಡಿದನು (ಕುರಂಗ. ೪೦-೦೬). ೧೧. ಜಲಿಸು ; ಅಲುಗಾಡು : ಮೃತ್ಯುವಿನಲ ಹೊಳಲೊಳಗೆ ಹೊಳಕಬಹುದಹಿಪನ ಫಣಾಮಂಡಳ ದೊಳಾಡಲುಬಹುದು ಕಾಣೆನು ಗೆಲುವ ಹದನನು ಮಗನೆ ಪದ್ಮವ್ಯೂಹ ದೊಡ್ಡಣೆಯ (ಕುಮಾರವ್ಯಾ. ೪-೩೬). ೧೨. ಅಲುಗುವಂತೆ ಮಾಡು ; ಅಲುಗಾಡಿಸು : ಕೃತ್ರಿಮದ ಸರ್ಪನ ತೊಲಗಿಸಲು ದುಂದುಭಿಯ ಹೊಯ್ದರೆ ಹೊಳಕಲಹುದೇ (ಕನ್ನರು. ೬-೦೨). ೧೩. ಅತಿಶಯವಾಗು ; ಹೆಚ್ಚು : ಮೆಲುವ ಭೂಪರ ಮನಕೆ ಹೊಸಜಕ್ಕುಳಿತೆ ಹುಟ್ಟಲು ಬಾಯ ಹಬ್ಬವು ಹೊಳಕಲಮೃತವಿದೆಂಬ ಹಾಲುಂಡೆಗಳನೋರಣದಿ ತೆಲುಗ ನಾರಿ ಯುರ್ಕಿದೆ ಬಡಿಸಿತು (ಕೌಶಿಕ. ೨-೬೨). ೧೪. ರಭಸದಿಂದ ಮುಂದುವರಿ; ಮುನ್ನುಗ್ಗು : ಉಲಿವಲಮ್ಮುವರಿಲ್ಲ ಬವರಕೆ ನಿಲುವ ಚೂಣಿಗರಿಲ್ಲ ಮುಂಬಿಗೆ ಹೊಳಕಬಲ್ಲವರಿಲ್ಲ ನಮ್ಮಯ ಬಲದ ನಾಯಕರು (ಕುಮಾರವ್ಯಾ. ಶಂ. ೨೧೦) ; ಅಲ್ಲಿಯ ಗಲಭೆಕಾಱರು ಕವಿಯೆ ಗೋಪುರಪಂಕವೀಥಿಯಲಿ ಹೊಳಕುವೀ ಕಪಿನಾಯಕರ ಗಾವಳಿಯ ಗುಮ್ಮಿದರಸ್ತ್ರಶಸ್ತ್ರಾವಳಿಯಲಿ (ಕುರಂ. ೪-೯-೨೦) ; ನಳಿನಮಿತ್ರಸುತ ಮೊಮ್ಮಗಂ ಭೀಮನೊಳ್ಕಾದಿ ಗೆಲಿದು ಮಾದ್ರೀಸುತರನೊಟ್ಟೈಸಿ ಮುಂದಕಂ ಹೊಳಕುತಿರಲರ್ಜುನಂ ಕೊಲಲು (ಕುರಂಗ. ೬೬ ಸೂಕಪ). ೧೫. ಎರಗು ; ಮೇಲೆ ಬೀಳು : ಹಳಚಿದನು ಕರ್ಬೊಗೆಯ ತೆರದಲಿ ಹೊಳಕಿದನು ಭೀರುಂಡರೂಪಿನಲಿ . . . ಮುಳಿದು ಕೊಂದನು ಕಲಿಘಟೋತ್ಕಚನಮಿತಸೈನಿಕರ (ಕೂಗರು. ೨೩-೬೩). [< ಪೊಳ್$_1$]

Δ **ಪೊಳಂಪು** 'ಪೊಳಪು' ನೋ.

**ಪೊಳಕಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಗುಳ್ಳಕೆ ಪೊಳ ಕಾಯಿ . . . ಮಹಕಂಚಿ ಮಾತಂಗಿ ಬಕ್ಕಾಯಿ ಎಲ್ಲ ನಾನಾಕದಾ ಕಲ್ಪ ದೇವತೆಗಳಿಲ್ಲದೆ ಒಲಿಸಿವರು (ಬಸವ. ೩೬-೨). [ ? ]

**ಪೊಳಕಿ** (ನಾ). ಒಂದು ಬಗೆಯ ಸಸ್ಯ : ಪೊಳಕಿ — ಸಣ್ಣಗಿಡ; ಬೈಲು ಸೀಮೆಯ ಅಡವಿಯಲ್ಲಿ ಬಹಳ (ಕರ್ನಾಗ. ೪೩). [ ? ]

**ಪೊಳಕಿಸು, ಹೊಳಕಿಸು** (ಕ್ರಿ). ೧. ಅಲುಗಾಡಿಸು ; ಹೊರಳಾಡಿಸು : ಕಾಗೆಯಂತೆ ಕಡೆಗಣ್ಣೊಳಿ ನೋಡುತ್ತುಂ ಕೀಬಿಟ್ಟ ಕುದುರೆಯಂತೆ ಬಾಯಂ ಪೊಳಕಿಸುತ್ತುಂ (ಧರ್ಮಾಮೃ. ೩-೦೩೬). **ಪೊಳಕಿಸು : ೨.** ಮುನ್ನುಗ್ಗುವಂತೆ ಮಾಡು : ಜವದಿಂದೆ ತದ್ವರೂಥವನಿರದೆ ಸೌಭರಿಯುಂ ಸುವಿಲಾಸದಿಂ ಹೊಳಕಿಸಲ್ ಮೇಘಮಾರ್ಗದೊಳ್ (ಶೀಲಕಾಸು. ೨೩-೩೩). ೩. ಹೊಳೆ ; ಪ್ರಕಾಶಿಸು : ದಿನಕರನ ಪ್ರಭೆಯಂತೆ ಹೊಳಕಿಸು ತನಮಕೋಪದಲಿ . . . ಕರಗಳ ಮುಗಿದನಾ ದ್ವಿಜನು (ಸುಂದರಕು. ೩-೦೩).

[ಪೊಳಕು$_1$ ( < ಪೊಳಂಕು) + — ಇಸು$_3$]

**ಪೊಳಕು**$_1$ 'ಪೊಳಂಕು' ನೋ.

**ಪೊಳಕು**$_2$ 'ಪೊಟಿಕು' ನೋ.

**ಪೊಳಚು, ಹೊಳಚು** (ಕ್ರಿ). ೧. ಕತ್ತರಿಸು ; ತುಂಡರಿಸು : ಕಳೆದ ರದಂ ಕಡಿದಿಕ್ಕಿದ ಸೊಂಡಿಲು ಪೊಳಚಿದ ಕಿವಿ ಕತ್ತರಿಸಿದ ಬಾಲಂ ಗಳಿನಾ ಬಲ್ಲಾನೆಯ ಬವರದ ನೆಲನತಿ ವಿಭ್ರಾಜಿಸಿತು (ಜಯಚಂ. ೬-೪೦). **ಹೊಳಚು :** ೧. ಪುಮಳಿಪ ಮಲಯಭೂರುಹವೃಕ್ಷಂಗಳಂ ಕಂಡು ಹೊಳಚಿ ತಂದಾ ಸೆಕ್ಕೆಗಳನೊಳಗೊಳಗೆ ಶೋಧಿಸಿ ತನ್ನ ಕಂಬಿಯ ನೆಲಹಿನಿತ್ತರದಲ್ಲಿ ಸುತ್ತಲು ಸೆಕ್ಕೆ ಬಿಗಿಬಿಗಿದು (ಬಸವ. ೪೩-೨೩) ; ಬಿಳಿಯುಳ್ಳಿಯ ಸುಲಿದು ಹಿಂದು ಮುಂದಂ ಚಿವುಟಿ ಹೊಳಚಿ ನಡುವಣ ದಿಂಡ ತೆಗೆದು (ಸೂಪಶಾ. ೩-೮). ೨. ಒಡೆ; ಸೀಳು : ಸ್ಫಟಿಕದ ಘಟವ ಹೊಳಚಿದಂತೆ ಒಳಹೊಱ ಗೆನ್ನದೆ ನಿರ್ಮಲ ತೋಱುವಂತೆ ಅದಱಿರವು ಸುಚಿತ್ತನಾಗಿ ನಿಂದುದು ನಿರ್ಮಾಯ (ಅನುಭವಮಾ. ಶ. ೦೩೪-೦೬೬) ; ಸತಿಸಹಿತ ಖರಕರಾಘಾತಗೈದಪುವು ಕರಿತತಿಗಳದ ಮರ್ದಿಸಲ್ಕೇಳ್ಕೆನುತ ಕರಖಡ್ಗಹತಿಯಿಂದ ಮಸ್ತಕವ ಹೊಳಚು ವನೊ ಭಾಸ್ಕರನೆಸಲ್ಕೆ ಖರಕಿರಣದಿಂದೆ (ವಂಶಾಭಾ. ೩-೬-೨೦). ೩. ಒದೆ : ಆ ರಾಮನಟ್ಟೆಯಂ ನಲವಿನಿಂ ಮಂಗುಷ್ಠದಿಂ ಕುಟ್ಟೆ ಹೊಳಚ ಲದು ಪಲವು ದಶಯೋಜನಂ ಪಾರಿ ಪೋಗಲ್ಕೆ (ಕುರಂಗ. ೩೪-೩೬). [ ? ]

**ಪೊಳಪು, ಪೊಳಂಪು, ಪೊಳೆಪು, ಹೊಳಪು, ಹೊಳಹು** (ನಾ). ೧. ಮೆರುಗು ; ಕಾಂತಿ ; ಪ್ರಕಾಶ : "ತೊಳಗು, ಬೆಳಗು . . . ಹಬೆ, ಪೊಳಪು, ಪೊಣರ್ . . . ಮಸೆ — ಈ ೧೪ ಕಾಂತಿ" (ಕಶಬ್ದಸಾ. ೩೩-೨೦೨); ಮುಡಿದು ತಂದಿಟ್ಟ ಪೊಸನೆಯ್ದಿಲ ಕಾವನಾವಗಂ ಗೆಲ್ದ ರತ್ನಕುಂಡಲಂಗಳ ಪೊಳಪನೊಳಕೊಂಡಂತೆ ನಸುನೇಲ್ದ ಕರ್ಣಾಟೀಕರ್ಣಪೂರನ ಪಾಲೆಗಳಂ (ಶಂಕರಾ. ೨-೩೯ ವ) ; ಪೊಸವಿಸಿಲ ಪೊಳಪಿನಿಂ ನುಣ್ಣನುಜ್ಜಳಿಪ ರನ್ನದೆಳ ವೆಳಗಿನ ಬೆಳಗಿನ ಬಳಗದಿಂ ಬಣ್ಣಿಸಿ ಸುರಶರಾಸನಂಗಳನೆಬ್ಬಲಿಕ್ಕಿದಂತ ನಿಮಿರ್ವ ನಿರ್ಝರಂಗಳುಮನಪ್ಪುಕೆಯ್ದು ಕೇಳೀಪರ್ವತನಿತಂಬಂಗಳೊಳಂ (ಕಾದಂಬ. ೩೨೬) ; ಸುಲಿಪಲ್ಲ ಬೆಳಗುಂ ಕಣ್ಗಳ ಕಾಂತಿಯುಂ ಮುಖದ ಶಾಂತಿಯ ಪೊಳಪುಂ . . . ದಟ್ಟೈಸಿ ಮೆಱೆಯೆ (ಬಸವ. ೪-೬೩). ೨. ನಡುಗುವಿಕೆ ; ಅಲ್ಲಾಡುವಿಕೆ: (*). ೩. ಉಯ್ಯಾಲೆ; ಜೋಕಾಲಿ; ತೂಗುಮಣೆ:(*). ೪. ಕುದುರೆಯ ಓಟದಲ್ಲಿ ಒಂದು ಬಗೆ : ಪೊಳಪು ಗತಿ ವೇಡೆ ಜೋಡಿಶಿ ಚಳಕಂ ದೂವಾಳಿಬಿಡಿಪುದಾಳಿಯರ ಮನಂಗೊಳಿಸಿರೆ ತುರಂಗಗಳ ವಾಹಳಿ ವಾಹಕರಿಂದೆ ಮೆಱೆದುದಾ ಪೊಱವೊಳಲೊಳ್ (ತ್ರಿಷಷ್ಟಿ. ೦೭-೦೬). Δ **ಪೊಳಂಪು :** ೧. ಬೀಜಪೂರಪದ ಪೂದುಱುಂಗಲ ಪೊಳಂಪಿನಿಂ (ವರ್ಧಮಾನ. ೩-೨೦ ವ). **ಪೊಳೆಪು :** ೧. "ತೊಳಗೆನೆ ಮಿನುಗೆನೆ . . . ಪೊಳೆಪು ಪೊಣರು ಮಸೆಯೆನೆ ತಳಪಮೆನಲ್ ಕವಿಗಳಿಂದೆ ಕಾಂತಿಯೆನಿಕ್ಕುಂ" (ಕಶಕು. ೦೦೦) ; ತಲದೊಳ್ ತಂಬುಲದೆಲೆಗಳ ಪೊಳೆಪವರ್ದಿರೆ ದೇವಕನ್ಯೆ ಪಾತ್ರೋರ್ವರ್ಗಳ್ ಕೋಮಲಲತೆಯ ನಿಮಿರ್ದ ಕುಡಿಯೊಳ್ ಗಿಳಿ ಪಾಯ್ದಂತೆನಿಸಿ ಸತಿಗೆ ತಂಬುಲಮಿತ್ತಳ್ (ಅಧಿಕ. ೭-೧೨) ; ಮೇಲೆ ಬೀಜ್ವ ಸಿಡಿಲಂತೆ ಬಂದೆಱಗುವ

ದುರ್ನಿರೀಕ್ಷತೀಕ್ಷ್ಣಾಯುಧಂಗಳ ಪೊಳಪುಗಳುಂ ಚಕ್ಷುರಿಂದ್ರಿಯಮನನವರತ ಮುಗಿಬುಗಿ ಮಾಡುತ್ತಿರೆಯುಂ (ಪರ್ಶು. ೧೦-೯೭ ವ). **ಹೊಳಪು :** ೧. ಪುರಹರಪ್ರಸಾದದಿಂದ ರಂಜಿಸಲ್ಕೆ ಗಂಜಿಯುಟ್ಟು ಶರಣಸಂಗದಿಂದೆ ಘಟ್ಟಿಸುತ್ತೆ ಹೊಳಪ[ಶಾಣಂ ಹ]ನೊಪ್ಪವಿಟ್ಟು (ತಿರುಕೊಂ. ದೇ. ೨೩೩-೦೯); ಬೆಳ್ಳಿಯು ಅಂದವಾದ ಬಿಳೀ ಬಣ್ಣದ ಧಾತು. ಅದಕ್ಕೆ ಹೊಳಪು ಬಹಳ (ಮುಂಬಯಿ. ೪-೦೨೦); ಗಾಜನ್ನು ತಯಾರಿಸುವುದು ಹಾಗೂ ಹೊಳಪನ್ನು ಕೊಡುವುದು ಒಂದು ಕೈಗಾರಿಕೆಯಾಗಿತ್ತು (ಕನ್ನಸ್ತ್ರಾ. ೩೦೦). **ಹೊಳಹು :** ೧. ಅಪ್ಪುವಿನ ಮಣಿಯ ಹಡುವರ್ಣದ ಟಿಪ್ಪಣದಂತೆ ತೇಜದ ಮಣಿಯ ನವಗುಣದ ಹೊಳಹಿನಂತೆ (ಸೋಮವಾ. ೧೦-೧೦); ಕಂಗಳಿನ ಮಿಂಚಿನ ಹೊಳಹಿನಲಿ ನಡೆಗೆಟ್ಟು ನಿಂದರು ಚಿತ್ತವಿಹ್ವಲರು (ಕುಮಾ.ವಿ. ೦-೨೫); ಹಳದಿಯ ಹೆಡೆಯನು ಬಿಚ್ಚೋ ಬೇಗಾ ಹೊಳಹಿನ ಹೊಂದಲೆ ತೂಗೋ ನಾಗಾ (ಕಪತ. ೨-೩೦). ೪. ದಾಟುದೀಟು ಹೊಳಹು ಹೊಮ್ಮುಚ್ಚುವೆಡೆ ಮೋಡಿ . . . ಪರತರಹವೆಂಬ ನವೀನಗತಿಗಳೊಳು ತನ್ನ ಮನವೆ ಹಯದ ತನುಗತಿಗಳಾದಂತೆ ವಾಹಕವಿನ್ನಾಣಂಗಳಂ ತೋಱುತ (ಕೃಷ್ಣಾಸ್ತ್ರ. ೭-೩೦ ವ); ಹೊಳಹು ದೂವಾಳಿಯಲಿ ಪಾರ್ಥನ ಕೆಲಕೆ ಬಿಟ್ಟನು ರಥವ (ಕುಮಾ.ಕ. ೦೪-೩೫). ೫. ಚೆಲುವು ; ಸೊಗಸು : ಸುಳಿದು ಸುಖದಲಿ ತನ್ನ ಲೀಲೆಯ ಬೆಳೆಸಬೇಕೆಂದೊಂದು ವೇಷದ ಹೊಳಹಿನಲಿ ಬರುತಿರಲು (ಕೃಭಂ. ೧೦-೩). ೬. ಸ್ವರೂಪ ; ಲಕ್ಷಣ : ಮೆಯ್ದ್ದಗೆದರಿದಱೊಳಗೆ ಹಸರೆನಗೆಯ್ದು ಬೇಕಿನ್ನೈಸಲೇಯೆಂದಯ್ದುಬಾಣವ ಕೊಂಡು ಯಂತ್ರದ ಹೊಳಹನೀಕ್ಷಿಸಿದ (ಸಂಕಪ. ೩೦-೩೨); ಪಂಡಿತನು ಪ್ರಹುಡ ತಾನೆಂಬ ಭಾಷೆಗಳಂತೆ ಕುಂಡಲಿಯ ಹೊಳಹ ಕೇಳ್ದರೆ ಕುದಿವನಂತೆ (ಕನ್ನಕ. ೨೫-೪). ೭. ರೂಪರೇಷೆ ; ಯೋಜನೆ : ಕನ್ನಡನಾಡಿನ ಚರಿತ್ರೆಯ ಚಿತ್ರಕ್ಕೆ ಅವು ಹೊಳಹನ್ನು ಹಾಕಿಕೊಟ್ಟಿವೆ (ಕನಾಕ. ೩೮); ಹೊಳಲ ಹೊಳಹನು ಹಾಕುವವರಿಗಿದು ತಿಳಿದಿತ್ತೋ ಇಲ್ಲವೋ ನಾನರಿಯೆ, ಕವಿ ಕುಡನಿಂತು (ಕರುಣ್ಣ. ೭೬-೦೩); ವ್ಯಕ್ತದ ಚೆಲುವಿನಲ್ಲಿ ಅವ್ಯಕ್ತದ ಹೊಳಹನ್ನು ಬಹುಸುಲಭವಾಗಿ ಗುರುತಿಸುತ್ತದೆ (ಸಾಂದ. ೨೧೦). ೮. [ನಾಟ್ಯ] ಕರಣಗಳಲ್ಲಿ ಒಂದು : ಮತ್ತಂ ದಿಂಡುಮುಂಡಾಸನಂ ದಪ್ಪ ಸರಣ ಒಳಗಭವರಿ ಹೊಳಹು ತಿರಿಪು ಸಮಸೂಚಿ . . . ಲಂಕಾದಹನವೆಂಬ ಪಲವುಂ ತೆಱದ ಕರಣಂಗಳಿಂ ವಿಚಿತ್ರಮಪ್ಪ ಚಿತ್ರವಿದ್ಯೆಯಿಂ ಲಾಸ್ಯ ತಾಂಡವವೆಂಬೆರಡುಂ ತೆಱದ ನೃತ್ಯಭೇದದಿಂದಾಡಿ (ಧರ್ಮಪ. ೨-೨೭ ವ).

**ಹೊಳಪಾಗು**=ಮಳೆ ನಿಂತ ನಂತರ ಬೆಳಕುಂಟಾಗು ; ಮಳೆಯು ಮೋಡವಿಲ್ಲದಾಗು ; ಹೊರವಾಗು : ಹವೆಯು ಸ್ಥಿತಿಯನ್ನೂ ಮಳೆ ಬರುವದನ್ನೂ ಹೊಳಪಾಗುವುದನ್ನೂ ಮುಂದಾಗಿ ತಿಳುಕೊಳ್ಳುತ್ತಾರೆ (ಮುಂಬಯಿ. ೩-೬೦). **ಹೊಳಹು ಹಾಕು** = ೧. ಮಿಂಚಿನಂತೆ ಸುಳಿ ; ಸ್ಫುರಿಸು : ತಿರುಗಿ ತಲೆಯಲ್ಲಿ ಹೊಳಹು ಹಾಕಿದ ಸಂಶಯ ಬಾಯಿ ಬಿಡದಾಯಿತು (ಋುರುಣಾ. ೯೬). ೨. ರೂಪರೇಷೆ ಹಾಕು ; ಯೋಜನೆ ಹೂಡು : ಏನಾದರೂ ಮಾಡಿ ಗುಂಡನನ್ನು ಮತ್ತೆ ಹುರಿದುಂಬಿಸಬೇಕೆಂದು ಅವನು ಹೊಳಹು ಹಾಕಿ . . . ಕೇಳಿದನು (ರಂಗಠೋ. ೩೦); ಇಬ್ಬರೂ . . . ಹೊಳಹು ಹಾಕಿ ಅತ್ಯಂತ ಉತ್ಸಾಹದಿಂದ ಈ ತುಣುಕುನೆಲದ ಮೇಲೆ ಒಂದು ಉದ್ಯಾನದ ಕಲ್ಪನೆಯನ್ನು ಹಬ್ಬಿಸಿ ಬಿಟ್ಟಿದ್ದಾರೆ (ಇಶ್ವಕ. ೨೨೯). [ಪೊಳೆ₁ + — ಪು₁./ಮಲ. ಪುಳಪ್ಪು]

**ಪೊಳಪೇಱು, ಹೊಳಪೇರು** (ಕ್ರಿ). ಕಾಂತಿ ಹೆಚ್ಚಾಗು ; ಕಳೆಯೇರು : ವದನಸುಧಾಮರೀಚಿಯೊಳಣಂ ಪೊಳಪೇಱೆ ವಿಲೋಚನಂಗಳೊಳ್ ಪುದಿದ ವಿಳಾಸವೇಱೆ . . . ನವಯೌವನವೇಱಿದುದಾ ಕುಮಾರನೊಳ್ (ಕಾಸುಟಾ. ೩-೦೦೯); ಪೊಸನೀರ ಹೂರದೊಳಗೆ ಮಱಿಮೀನ್ಗಳು ಮಸಗಿ ಮುಂ ಪೊಳೆದಾಡುವಂತೆ ವಿಸುಗುವ ವರಲಾವಣ್ಯಾಂಬುವಲಿ ಕಣ್ಣೆಸೆದುವು ಪೊಳಪೇಱೆ ನಗುತ (ಕಂಸಪ. ೧೦-೩೯). **ಹೊಳಪೇರು :** ಅವನನ್ನು ನೋಡಿದ ಕೂಡಲೆ ಅವಳ ಕಣ್ಣುಗಳು ಹೊಳಪೇರಿದುವು (ಕಂ೨).

[ಪೊಳಪು + ಏಱು₁ (< ಏಱ್₁)]

**ಪೊಳೆಯಿಸು** 'ಪೊಳೆಯಿಂಸು' ನೋ.

**ಪೊಳಲ್** 'ಪೊಟಲ್₂' ನೋ.

**ಪೊಳಲಿಚ** 'ಪೊಟಲಿಚ' ನೋ.

**ಪೊಳಲು** 'ಪೊಟಿಲ್' ನೋ.

**ಪೊಳವಳಿಗೆ** 'ಪಳವಳಿಗೆ' ನೋ.

**ಪೊಳವೆ** (ನಾ). ಬಿದಿರಿನ ಸೀಳು; ದೆಬ್ಬೆ : ಒಂದುದಿನ ವಿಪಿನಕ್ಕೆ ಹೊರಟ ಕೇತಯ್ಯ ಚುದದಿಂ ಬಿದಿರನುಂ ಸೋಸಿ ತರುವುದಕೆ ಹೋಗಿ ದಟ್ಟಿಯು ಕರಿದು ಪೊಳವೆ ಸೀಳುತಿರೆ ನಾಗಭೂಷಣ ಗಿರಿಜೆ ನಂದಿಯನ್ನೇರಿ . . . ಬರಲು (ಶರಂ. ೦೭೨-೦೦).

[?./ತಮಿ. ಪೋಲ್=ಬಿದಿರು ; ಮಲ. ಪೊಳ್ಳ=ಬಿದಿರು]

**ಪೊಳಸು** (ನಾ). ಸಂಬಂಧ ; ಸಂಗ ; ಕೂಟ : ಪೊಳೆವಿನಿದುಟಿಯ ವ್ಯೆಯಾರಿ ಪೆಂಪುದಳೆದ ಪಲ್ಲರಿಸಿಯ ಮೋಹನಾಕಾರೆ ಗಿಳಿದೇರನ ಕೈಕಠಾರಿ ನಿನ್ನ ಪೊಳಸಿಗೆ ಪೊಚಿಕೊಂಡಿಹಳಾ ನಾರಿ (ಮಂಡಿಕ್ಕಾ. VI, ೦೬೨೭ ಶೃಂಗಾರ ಸೂಕ್ತೋದಾಹರಣ). [?]

**ಪೊಳಿ** (ನಾ). (?) : ಆ ಸ್ಥಾನವುಮಂ ಭಳರಿಯೂರಂ ಬನ್ದ ಸಿಳ ಕೆಱ್ಬಾಯುಂ ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳಿಯುಂ ಬಳಿಕೆಱೆಯ ಕೀಟೇರಿಯ ಬೇರುಂಗಾಲಂ ಒಕ್ಕಲೊಳೊನ್ದು ಪೊಱೆಯುಂ ಕೆಯುಂ ಪದಿರ್ಕೊಳಂ ಭತ್ತಮುಂ ವಿಾಸಲು ಬಳಿವತ್ತಮುಂ ಸಲ್ವುದು (ಎಕ. III, ಶಂಜಪ. ೦೬೩-೦೦ ;977). [?]

**ಪೊಳಿಪೊನ್ ?** (ನಾ). (?) : ಸುರಿಗೆ ಸಪನ್ನುಂ ಪೊಳಿ ಪೊನ್ಗವಿ ಕೊಟ್ಟು ಪುನ್ಗಿಣಲ್ಕಟನಿ ಕೊಟ್ಟತ್ತು ಕಿಡಿಪೊನ್ಸಣ್ಣುಮಹಾಪಾತಕ (ಎಕ. XIV, ತಿರುಮ ೨೩೩-೦೨ ; ಸು. 800). [?]

**ಪೊಳೆ₁, ಹೊಳೆ₁** (ಕ್ರಿ). ೧. ಪ್ರಕಾಶಿಸು ; ಥಳಥಳಿಸು : ತುಂಗಗಿರಿಶಿಖರದಿಂದಂ ಲಂಗಿಸಿ ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ ಪೊಂಗಿ ಸೊದಗುರ್ಗಾಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಕಾ. ೦೦೦೪ ಕೂತ್ರ ಕ); ಒರಿಯ ಮುರಂಗಳೆ ಮಾಡವಾಗೆ ಪೊಳೆವೆಳದರ್ಗಳೆ ಸಜ್ಜೆಯಾಗೆ . . . ಪಣ್ಪಲವೆತ್ತಿದ ಬೋನಮಾಗೆ ಸಿರಿಯ ಮಹಿಮೆಯಂ ಮೆಱೆಯಲೇನಾರ್ತುದೊ ಬನದೊಳ್ಪಿರವಾ ಪಾಂಡವರಾ (ಕಂಶಕಾ. ೭-೨೬); ಮಧುದಾತ್ಮಜ ನಿಜರಿಪು ತಲೆಗರೆದಿರ್ದಪನಿಲ್ಲಿ ನೋಡು ಕೊಳದೊಳಗೆಂಬಂತಿರೆ ಪೊಳೆದು ತೋರ್ಪ ಜಲಚರಪರಿಕರಮಱಿದುವು ಶಾವೆ ದುರ್ಯೋಧನನಂ (ಗದಾಯು. ೬-೯೭); ಪೊಳೆಯುತಿರ್ದುದು ಬಿಸಿಲ್; ಕಂಡಕೆಳ್ಳದನಾಕೆ (ಕಜ್ಜಾಂಗ. ೩೨-೦೪೨೪). ೨. ಕಳೆಯೇರು; ಶೋಭಿಸು; ವಿಜೃಂಭಿಸು: ಬಾಗುತೆ ಬಲಿಯುತೆ ಪೊಳೆದಿನಿದಾಗುತೆ ದಳವೇಱುತಿಡಿದಿಡಿದು ಹಿಗ್ಗುತೆ ಪಣ್ಣಾಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಂಕ. ೨-೩೦). ೩. ಪ್ರತಿಬಿಂಬಿಸು; ಪ್ರತಿಫಲಿಸು: ಸುರುಚಿರ ಸಾಲಭಂಜಿಕೆ ಬೆಮರ್ತುರದೊಳ್ ಪೊಳೆಯುತ್ತಿರಲ್ಕೆ ಮತ್ಸರಿಸಿದಳ್ . . . ಮನೋಹರನನೀಕ್ಷಿಸಲಿತ್ತವುವಿಲ್ಲ ಹರ್ಷದಿಂದಿರದುಗುತರ್ಪ ಬಾಷ್ಪಮೆನಗೆಂದು ಲತಾಂಗಿಯುಬಲ್ದು ಬಾಡಿದಳ್ (ಕಾದಂಣ. ೩೨). ೪. ಹೊಯ್ದಾಡು; ಅಲುಗಾಡು ; ಚಲಿಸು : "ಪೊಳೆ–ಲುಠನೇ (ಹೊರಳು), ನನ್ನರ್ಥೇಱುಂ (ಪೊಱೆ)" (ಶಮರ್ದಾ); ಉನ್ಮತ್ತಚೇಷ್ಟೆಯಿಂದೆರೆಯಂ ತಿಂದ ಮೀನಂತೆ ಪೊಳೆಯುತ್ತುಂ (ಧರ್ಮಾಮೃ. ೩-೦೩೭) ; ನಿಮಿರ್ದುವು ಪೊಳೆದುವಳುಂಕಿದುವಮರ್ದುವು ಚುಂಬಿಸಿದುವಪ್ಪಿದುವು ಸಂಭ್ರಮದಿಂ ಸಮದೃಷ್ಟಿಯಾಗಿ ಸಿಲ್ಕಿದುವೆಮೆಯಿಕ್ಕಲ್ಕಱಿದುವವಳ ಧವಳಕಟಾಕ್ಷಂ (ಕಮರ. ೨೨೩ ಕ್ರಿಯೋ) ;

ಮೂಸಿದೊಡೆ ನಾಸಾಗ್ರವನುರ್ಚುವ ನಕ್ಕಿದೊಡೆ ನಾಲಗೆಯೊಳ್ನಡುವ ಪೊಳೆದೊಡೆ ಬೆನ್ನೊಳ್ಮೂಡುವ್ವೂರಸಿದೊಡೆ ಬರಿಯಂ ಕೊಱೆವ . . . ಫಲವುಂ ಬಗೆಯ ಗಾಣಂಗಳಂ . . . ಬರ್ಚಿ ಬೀಸಿದಾಗಳ್ (ರಾಜಶೇ. ೩-೦೦೯ವ). **೫. ಅಸ್ಥಿರವಾಗಂ ; ಚಂಚಲವಾಗು :** ದಂತಿವಾಹನಂ ದಂತಿವಾಹನನೆಂಬ ಪೆಸರನನ್ವರ್ಥನಂ ಮಾಡಿ ಪೊಳೆಯದೆ ಕಳವಳಿಸದೆ ಪಟುವಿನೊಳ್ ಪೋಗುತ್ತಂ (ಪುಣ್ಯಾಸ್ರ. ೨೩-೬ ವ). **ಹೊಳ್ಳಿ$_1$:** ೧. ಹೊಳೆವ ಕೆಂಜಡೆಗಳ ಮಣಿಮುಕುಟದ ಒಪ್ಪುವ ಸುಲಿಪಲ್ಲ ನಗೆಮೊಗದ . . . ದಿವ್ಯಸ್ವರೂಪನಂ ಕಂಡೆನಾನು (ಶುಚಾರಿ. ೬. ೩೨-೬೮); ಎಳೆಯ ರವಿರಶ್ಮಿಗಳು ರಕ್ತೋತ್ಪಲದೊಳಗೆ ಹೊಳೆವಂತೆ ಹೊನ್ನರೆ ಬಳಿದ ಹಿಳುಕನೆ ಕಾಣಲಾದುದು ಭಟನ ಕಾಯದಲಿ (ಕುಮಾವ್ಯಾ. ೬-೩೦): ಹೊಳೆವ ಕನ್ನಡಿ ಕೈಯೊಳಿರ್ದು ನೋಡದೆ ನೀರನೆಳಲಲ್ಲಿ ಮೊಗವ ನೋಳ್ಪಂತೆ (ಭರತ. ೦-೦೦೪); ಧಾತುಗಳು ರಾಜಿನಂತೆ ಹೊಳೆಯುತ್ತಿವೆ (ಕೃಂಬಯ. ೯-೬೨). ೨. ಇಂತು ನವವರ್ಣಾಕೆಯೊಳಾಗೆ ಸನ್ನುತಂ ಅಂತಃಸ್ಥ ಳದೆ ಪುಣ್ಯಶಿಶು ತೊಳಗಿ ಹೊಳೆವುತಂ (ಬಸವ. ೦-೦೨೦). **೪.** ಹೊಳೆವ ಸಿಂಧದ ಜಡಿವ ಕಹಳಾವಳಿಯ ಲಗ್ಗೆಯ ವಿವಿಧವಾದ್ಯದ ಕಳಕಳದ ಕಲಾಳ ಬೊಬ್ಬೆಯ ಬಹಳರಭಸದಲಿ . . . ಸಂದಣಿಸಿತತಿರಥರು (ಕುಮಾವ್ಯಾ. ೬-೨). **೬.** (ಮಾತಿಗೆ) ತಪ್ಪು ; ನುಣುಚಿಕೊಳ್ಳು : ಕಪಟವನು ಬಿಡರಾತ್ಮಬುದ್ಧಿಯೊಳುಪಮಗಾಣದೆ ನುಡಿದು ಹೊಳೆವರು ಚಪಲಚಿತ್ತದಿ ಮನವ ಮಱಿಸಿ ಮಾತನಾಡುವರು (ವಳಿಕ. ೩-೨೯); ಬೊಮ್ಮನೆಮ್ಮೊಡನಾಡಿ ಹೋಳೆದನೇ ಅಟಕಟ ತಮ್ಮ ಭಾಗ್ಯದ ಶರಧಿ ಬತ್ತಿ ಬಯಲಾದುದು (ಕಬಪು. ೯೯-೨೬); ಉದ್ರೇಕದಿಂ ಮುನಿಪರನೊಳಾಡಿ ತಪ್ಪಿದ ಗುರುದ್ರೋಹವೊಂದಚ್ಯುತನೊಳಾಡಿ ಹೊಳೆದ ದೈವದ್ರೋಹಮೆರಡು (ಕೃಬಿಹಾ. ೯-೨). **೭.** ಬೇರೆಯ ಕಡೆಗೆ ತಿರುಗು; ಪಕ್ಕಕ್ಕೆ ಹೊರಳು : ತಳೆದನು ಬಲಭದ್ರರಾಮನ ಗದೆಯೊರತಳದ [ಗದೆಯೇಟ ತಳೆದ] ಭೈರವನುಪಟಳಕೆ ಹೊಳೆದು ನೀಲಾಂಬರ ನೇಗಿಲ ಕೊರಲ್ಗಿಕ್ಕಿ ಸೆಳೆದವರ್ ಪೊಯ್ದಾಡಿದರು (ತೋಹರ. ೩೯-೦೯). **೮.** ವೇಗವಾಗಿ ಹೋಗು ; ಮುನ್ನುಗ್ಗು : ಕಲಿಕೆ ಹೊಳೆದವು ಕಡುಗುದುರೆ ನೆಲನಳುಕೆ ನಡೆದವು ದಂತಿ (ಕುಮಾವ್ಯಾ. ೦೨-೬). **೯.** ತೋರು ; ಕಾಣು ; ಪ್ರಕಟವಾಗು : ಮನದೊಳಗೆ ವಿಸ್ಮಯರಸಂ ತುಳುಕುತಿದೆಯೆನ್ನ ನೆಸಹಿನೊಳು ಶಿವರೂಪು ಹೊಳೆವುತಿದೆ (ಕಬಪು. ೯-೬). **೧೦.** ಸ್ಫುರಿಸು ; ಸ್ಫುಟವಾಗು : ಮಾಡಿದೆನೆಂಬುದು ಮನದಲ್ಲಿ ಹೊಳೆವರೆ ಏಡಿಸಿ ಕಾಡಿತ್ತು ಶಿವನ ಡಂಗುರ (ಬಸವ. ೨೪೯) ; ಈ ವೇಳೆಗಾಗಲೆ ಮನದೊಳು ಹೊಳೆದಂತೆ ಕನ್ನಡಕವಿತೆಯ ರಚಿಸಿ ತೋರಿದ (ಇಂಕಾಶಕ. ೨೩-೫); ಇಂತಹ ಒಂದು ಸನ್ನಿವೇಶ ಆ ಹೊತ್ತಿನಲ್ಲಿ ನಡೆಯುವುದು ಹೇಗೆ ಸಾಧ್ಯ ? ಎಂಬುದೂ ಅವರ ವಿವೇಕಕ್ಕೆ ಹೊಳೆಯದೆ ಹೋಯ್ತು (ಕನ್ನಸ. ೦-೯).

[ದೇ.॥ ತಮಿ. ಪೊಲಿ ; ಮಲ. ಪುಳೆ, ಪುಳಯು ; ತೆಲು. ಪೊಲಯು]

**ಪೊಳ್ಕೆ, ಹೊಳ್ಕೆ$_2$** (ನಾ). ಕಾಂತಿ ; ಹೊಳಪು : "ಬೆಳಗಿನೊಳ್ ಪೊಳೆಯಿಕ್ಕುಂ" (ಸಂಜೀವ. ೨೫). **ಹೊಳ್ಕೆ :** ವಜ್ರದಲ್ಲಿ ಬಟುವಾಗಿ ಕೆಂಪಾಗಿ ಹೊಳೆಯುತ್ತಿರುವ ಬಿಂದು (ಶಾಗಂಧಿ. ೩೬೯-೦). [< ಪೊಳ್$_1$]

**ಪೊಳ್ಕೆ** 'ಪೊಟೆ' ನೋ.

**ಪೊಳೆಪಿಡು** (ಕ್ರಿ). ಪ್ರಕಾಶಿಸುವಂತೆ ಮಾಡು ; ಹೊಳಪು ಕೊಡು : ವಿಳಸಿತಪುಷ್ಪದೊಂದು ಪೊಳೆಪು ತಳೆದಿರ್ದುದನಿಂದುಲೇಖೆಯುಂ ಪೊಳೆಪಿಡ ಪೇಟ್ಬುದೇ (ಜಗಪ. ೧೦-೦೦೨). [ಪೊಳೆಪು (< ಪೊಳಪು) + ಇಡು$_1$]

**ಪೊಳೆಪು** 'ಪೊಳಪು' ನೋ.

**ಪೊಳೆಪುವಡೆ** (ಕ್ರಿ). ಕಾಂತಿಯನ್ನು ಹೊಂದು ; ತೇಜಸ್ಸನ್ನು ಪಡೆ : ಮತ್ತಮೊರ್ಮೆ ಮಿಸುಪೆಸಟ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯನೀಡಾಡಿ ಪೊಳೆಪುವಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ಪಳ್ (ಚಿ್ಕಾ. ೩೦೫). [ಪೊಳೆಪು (< ಪೊಳಪು) + ಪಡೆ$_1$]

**ಪೊಳೆಯಿಸು, ಪೊಳಯಿಸು, ಹೊಳಸು, ಹೊಳೆಯಿಸು, ಹೊಳೆಸು** (ಕ್ರಿ). ೧. (ನಾಲಗೆಯ ಮಿಂಚುವಂತೆ) ಹೊರಳಿಸು ; ಆಡಿಸು : ನೀವಿವಾಗಳ್ ಪೊಟಲ್ಗೆ ಪೋಪಾಗಳ್ ನಿಮಗೆರಱ್ಕುಲಿಂಗನಾಗಂಗಳ್ ಪಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ ನೀಮೊದಱಿಯವಂ ಬಗ್ಗಿಸಿದೊಡದೃಶ್ಯಂಗಳಾಗಿ ಪೋ ೯ ಕು ೦ (ವಡ್ಡಾರಾ. ೦೦೦-೬). **೨.** (ಮಿಂಚಿನ ಹಾಗೆ) ತಿರುಗುಂವಂತೆ ಮಾಡು,–ಸುತ್ತಿಸು : ಘೋಟಕಾಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ (ಶಂಕರಪ. ೧೦-೩೦ ವ). **೩.** (ಆಯುಧ ಮೊದಲಾದುವನ್ನು ಮಿಂಚುವ ಹಾಗೆ) ಬೀಸು ; ಝಳಪಿಸು : ಪಲಗೆಗಳಂ ಪೊಳೆಯಿಸಿ ಕಡಿತಲೆಯುಂ ಜಡಿದೆಯ್ದುವಣಿಯ ವೀರರನೆಚ್ಚಂ ಪಲಗೆಯುಮುರಮುಂ ತೆತ್ತಿಸೆ ತಲೆಯುಂ ಕಡಿತಲೆಯುಮೊಡನೆ ಪಱಿಯೆ ಮುಕುಂದಂ (ಜಗಪ. ೦೨-೦೭) ; ಇಭಮನಣೆದು ಬಿಟ್ಟಕ್ಕಲೆಂದಿರ್ಪ ವಜ್ರಾಂಕುಶಮಂ ನಾನಾಪ್ರಕಾರಂ ಪೊಳೆಯೆ ಪೊ[ಪಾಠಾಂ. ಳೆ]ಯಿಸುತ್ತಿರ್ಪಮಂ ದೇವರಾಜಂ (ಜಗಪ. ೦೪-೬೬). **ಪೊಳಯಿಸು :** ೨. ಚಮ್ಮಟಿಗೆಗಳೆನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ ಕಡಂಗಿ ನಡೆಯಿಪ ಪೊಳಯಿಪ ದೂವಾಳಿವ ಪೊಜಿಮಡಿಪದಿರೇಱುಪದ್ದಂಬರಿಯಿವ ವಾಘೆಯೊಳ್ಸರಿಸಂಗೊಂಡು . . . ಶಾಳಿಹೋತ್ರನನಾಳಿಗೊಳ್ವ ಘೋಟಕಾಯಿಲರ್ ನೆರೆದು (ರಾಜಶೇ. ೬-೦೦ ವ) ; ಸುಳಿಸುಳಿದಶ್ವಮನೇಱುತೆ ಪೊಳಯಿಸಿ ಮಿಗೆ ದಂಡೆಗುಡುತಿದಿರ್ಚುತೆ ಪೆಱಕಾಲ್ಗೊಳಿಸಿ ಪೆಡಂಮೆಟ್ಟುತ್ತಿಪ್ಪಳಿಸುತ್ತೆ ಪಳಂಚಿದ ತುರ್ಗರಂಗಿಗಳದಱೊಳ್ (ರಾಜಶೇ. ೦೪-೮೫). **೩.** ತ್ರಿಜಗದ್ಭೂಷಣಮಾದ್ಯದ್ಗಜಮಂ ಬಂದೇಱಿ ಪೊಳ[ಪಾಠಾಂ. ಳೆ]ಯಿಸುತ್ತಂಕುಶಮಂ ವಿಜಿಗೀಷು ಲಕ್ಷ್ಮಣಂ ಮದಗಜದಡಕಿಲಿದೆನಿಸಿ ಪೊಕ್ಕನೊಡನರಮನೆಯಂ (ಶಂರಾಪಾ. ೦೫-೯). **ಹೊಳಸು :** ೨. ತುರಗಪ್ರಸರವನು ಜೋಳ್ಕಿಸಿ ರಥವನು ದೆಸೆದೆಸೆಗೆ ಹೊಳಸಿದನು ಲುಳಿವಡಿಸಿದ ಮಹಾರಥವ (ಕುಮಾವ್ಯಾ. ೬-೦೯). **೪.** (ಮಿಂಚಿನಂತೆ) ತಿರುಗು ; ಹೊರಳು : ಹೊಳಸಿದನು ದಿನನಾಥನಾಗಳೆ ಹೊಳೆಯಲಿಟ್ಟಳು ಜನನಿಯಿದ ನೀ ತಿಳಿದ ಕೆಲಸವೆನುತ್ತಲಪ್ಪಿದ ನೆತಡು ಕೈ ದಣಿಯೆ (ಕೃಷ್ಣಾಕಾ. ೦೨-೨೬). **ಹೊಳೆಯಿಸು: ೫.** ಪ್ರಕಾಶಗೊಳಿಸು; ಸ್ಪಷ್ಟಪಡಿಸು: ಆ ತರದ ಕ್ರಮಾಲಂಕಾರವನ್ನು ತೊಡಿಸಿದರೆ ಆ ರಾಣಿಯರ ಕುರೂಪವನ್ನು ಹೊಳೆಯಿಸಿದಂತಾಗುವುದು (ಪಾಠಕೋಶ. ೯೩); ಅವು ಕಥಾನಕದ ಸ್ಥೂಲಸ್ವರೂಪವನ್ನು ಮಿಂಚಿನಂತೆ ಹೊಳೆಯಿಸಿ ತೋರಿಸಬಹುದಾಗಿತ್ತು (ಕಪಾ. ೫೫). **ಹೊಳೆಸು : ೫.** ಗವಿಯುಳಿದ ಹೊನಲಿನಂ ಶಿವರೆನಗೆ ಹೊಳೆಸುವರು ಗುಡಿಯೆಲ್ಲೆಯನು ತಳೆದ ದೇವಳೆಯ (ಮಲೆದೇ. ೯೯-೭). **೬.** ತೋರು; ಸ್ಫುರಿಸು : ತಿಳಿದ ಮಾತೆ ಹೊಳಿಸಿದಂತೆ ಎದೆಯ ಬೀಜ ಬೆಳೆಸಿದಂತೆ (ಅರಳು. ೯೯೭-೬). [ಪೊಳ್$_1$ + –ಇಸು$_3$]

**ಪೊಳೆವಲ್** (ನಾ). ಕಾಂತಿಯುತವಾದ ಹಲ್ಲು ; ಮಿನುಗುವ ಹಲ್ಲು : ನಿಟ್ಟೆಸಳುಗುಂಗಳ ಸನಾಸಿಕದ ಪೊಳೆವಲ್ಲ ನಸುದೋಱುವ ಕಿಱುನಗೆಯ ಕದಪುಗಳ ಕುಂಡಲದ ಚೆಲ್ವಿನಿಂ ಮೆಱೆವ ಸದ್ವದನನಂ . . . ಕಂಡನವನೀಪಾಲನು (ಕೃಬಿಹಾ. ೨-೪೮). [ಪೊಳ್$_1$ + ಪಲ್]

**ಪೊಳೆವಾಳ್** (ನಾ). ಹೊಳೆಯುವ ಕತ್ತಿ,–ಖಡ್ಗ : ಬಳೆದುದು ಕೆಂದೂಳಿ ಖುರಾವಳಿಯಿನೆನಲ್ ನೆಗೆದ ತಮ್ಮ ರಜಮಂಬರದೊಳ್ ಬೆಳಗುವ ಕಿಸುಸಂಜೆಮುಗಿಲ್ ಪೊಳೆವಾಳ್[ಪಾಠಾಂ. ಪೊಳೆವೆಳೆ] ಮಿಂಚೆನಿಸೆ ಕಾದಿದರ್ ಘೋಟಕಾಯ್ಲರ್ (ಜಗಪ. ೭-೫೬). [ಪೊಳ್$_1$ + ಬಾಳ್$_3$]

**ಪೊಳ್ತಡ** 'ಪೊಟ್ಟಿಟ' ನೋ.

**ಪೊಳ್ತಡೆ** 'ಪೊಟ್ಟಿಟ' ನೋ.

**ಪೊಳ್ತರೆ** 'ಪೊಟ್ಟಿಟ' ನೋ.

**ಪೊಳ್ತಟಿ** 'ಪೊಟ್ಟಿಟ' ನೋ.

**ಪೊಳ್ಳಣಿ**೩ 'ಪೊಟ್ರಿಣಿ' ನೋ.

**ಪೊಳ್ತು** 'ಪೊಟ್ಟು' ನೋ.

**ಪೊಳ್ನುಡಿ** (ನಾ). ಮೋಸಗೊಳಿಸುವ ಮಾತು; ನಂಬಲು ಅನರ್ಹವಾದ ಮಾತು: ಪಾದರದ ಕುಂಟಣಿಯಂತೆ ಮಿಂಡನ ಪೊಳ್ನುಡಿಯಂತೆ (ಶಬ್ದಮಣಿ. ೯-೨೩ ಅವ). 'ಪೊಳ್ಳುನುಡಿ' ಪರಾ. [ಪೊಳ್ (< ಪೊಳ್ಳು) + ನುಡಿ೨]

**ಪೊಳ್ಮರ** (ನಾ). ಜಳ್ಳುಮರ; ಟೊಳ್ಳಾದ ಮರ: ಪೊಳ್ಮರನಂ ಕಿಚ್ಚುರ್ವರ್ವಂತೆ ದುಃಖಾಗ್ನಿ ತನ್ನಂ ಸುಡೆ ಪ್ರಿಯದತ್ತಸೆಟ್ಟಿ ಪಳಯಿಸಿ ಮಾಣ್ಬುದುಂ (ಧರ್ಮಾಮೃ. ೩-೨೨೭). 'ಪೊಳ್ಳುಮರ' ಪರಾ. [ಪೊಳ್ (< ಪೊಳ್ಳು) + ಮರ೧]

**ಪೊಳ್ಳಯಿಸು** (ಕ್ರಿ). ನಿಸ್ಸತ್ತ್ವವಾಗು; ಜಳ್ಳಾಗು: ಬೆಳ್ಳುಳ್ಳಿ ಬಿಸಿಲಿಂಗೆ ಪೊಳ್ಳಯಿಸಿ ಹಟಾವಂತೆ [ಪಾಠಾಂ. ಬೆಳ್ಳುಳ್ಳಿ ಪೊಡದರೆ ಹೊಳ್ಳಪ್ಪ ತೆಱನಂತೆ] ಒಳ್ಳಯ ಗುರುವಿನುಪದೇಶದಿಂ ಭವದ ಬಳ್ಳಿ ಹಟಿದಿಹುದು (ಸರ್ವಜ್ಞ. ೬೨). [< ಪೊಳ್ಳು + — ಇಸು೨]

**ಪೊಳ್ಳಾಸೆ** (ನಾ). ಬರಿಯ ಆಸೆ; ನಿರರ್ಥಕವಾದ ಬಯಕೆ: ಪೊಳ್ಳಾಸೆ ಯಿಂದವನ್ ತಿರುಳಾಯ್ಕೆಯಾಯ್ತು, ಆ ಬೀಯೋಷ್ಠಿಯದ ಬಯಲ ತಣ್ಪೊಳೆ ಆಸೋಪಷಿನ ದಡವಲ್ಲಿ ಒಳಿಗಾಲವನ್ ಮೊಂಕೆ ಬಡಿಸುವನು (ಪಾಂಚಿ. ೩೦-೬೯೦). [ಪೊಳ್ಳು + ಆಸೆ೧]

**ಪೊಳ್ಳಿಕ ?** (?). (?) : ಪತ್ತಿದರಪ್ಪ ಡವಾ ಬ್ರಾಹ್ಮಣನ ದೋಶಮವದ ನೆಯ್ದುವದು ಸವುಸ್ತ ಪ್ರಿತ್ತಿಕಾಜಿರು ಪೊಳ್ಳಿಕ ಹೊಲ್ಲವಕ ಪರಿಹರಿಸಿದಡೆ ವಾದೋಶ ತವಗಂ (ಶಾ. V. ೯೩-೭; 1113). [?]

**ಪೊಳ್ಳು**, **ಹೊಳ್ಳು** (ನಾ). ೧. ಹುರುಳಿಲ್ಲದುದು; ಸತ್ತ್ವಹೀನ ವಾದುದು; ಪೊಳ್ಳು: "ಜಳ್ಳೆನೆ ಪಾಳೆನೆ ಜರಡೆನೆ ಪೊಳ್ಳೆನೆ ತಾಂ ನಿಃಪ್ರಯೋಜನಾರ್ಥಮದಕ್ಕುಂ" (ಶಬ್ದಾ. ೩೦೯); ಕ್ರಮವಿಕಲ್ಪನೆಯಿಂ ಗುಣ ದೋಷಮಂ ಕೇಳುತ್ತೊಂಡು ಗುಣಮಂ ಕಳೆಗಲ್ಲಿಯ ದೋಷಮಂ ತೋಱಿ ಪಿಂಗಿಸುವಪೊಲ್ ಪೊಸ ನೆಲ್ಲಿರೆ ಪೊಳ್ಗಳಂ (ಕಾವ್ಯಾ. ೦-೦೩೦). ☞ ಈ ಪ್ರಯೋಗದಲ್ಲಿ ಶಬ್ದವು ವ್ಯಂಜನಾಂತವಾಗಿದೆ. ಆದರೆ ಜ್ಞಾತಿಶಬ್ದಗಳಲ್ಲಿ ಹೆಚ್ಚಿಗೆ ಸ್ವರಾಂತವೇ ಇರುವುದರಿಂದ ಸ್ವರಾಂತಕ್ಕೇ ಇದನ್ನು ಪ್ರಯೋಗವಾಗಿ ಕೊಡಲಾಗಿದೆ: ಊನಮಿಲ್ಲದೆಸಕಂ ಪೊಳ್ಳಿಲ್ಲ ದಾಪ್ಪಾರ್ಗ್ಗ್ರಮಂಜದ ವಿದ್ಯಾಮಹಿಮೋದಯಂ (ಎಇ. XII. ೨೬೦-೦೬೩; 1077); ತನ್ನ ಪ್ರೇಮವನ್ನೇ ಪೊಳ್ಳೆಂದು ಬಗೆದು ನಿರಾಶನಾದನೋ? (ರೂಪಕ. ೯೨); ನೀನು ಇದು ಪೊಳ್ಳೆಂದು ತಿಳಿಯಬೇಡ (ಪಶಾ. ೯೬). ೨. ಹೊಟ್ಟು; ತೌಡು; ಉಮಿ: ಧಾನ್ಯಮಂ ಕೊಟ್ಟು ಪೊಳ್ಳಂ ಕೊಳ್ವ ನೆಲವಾಟಂ ಬಿಟ್ಟು ತಿರಿದುಂಬ ಮರುಳಂ ಪೋಲ್ಕುಂ (ಧರ್ಮಾಮೃ. ೦೦-೯೩); ನೀರಸಂ ಶೈಥಿಲ್ಯವರ್ಣಂ ಕಾರಕವಿರಹಿತಂ ಕ್ರಿಯಾಳಂಕಾರಹೀನಮೆನಿಪ್ಪ ಪೊಳ್ಳಂ ತೂಱಿ ಕಳೆದು (ಪಶು. ೦-೦೯). ೩. ಜಳ್ಳುಕಾಳಂ; ತಿರುಳಿಲ್ಲದ ಕಾಳು: ಪೊಳ್ಳುಂ ಬಿತ್ತುಂ ಸಸಿಗಳುಮೊಳ್ಳಿದುವೆನಿಸಿರ್ಪವೆಯ್ದೆ ಫಲದೊಳ್ ತೋರ್ಕುಂ ಪೊಳ್ಳಪ್ಪುದು ಪೊಳ್ಳುಂ ಕರಮೊಳ್ಳಿದುವೆನಿಸಿರ್ದ ಬಿತ್ತು ಧಾನ್ಯಮುಮಕ್ಕುಂ (ಧರ್ಮಾಮೃ. ೩-೦೦೭). ೪. ಪೊಟರೆ; ಡೊಗರು; ಹೋರು: ಪೋಟು=ಮಾಸ ಬಂದ ಹೆಣ್ಣಾಂಗ ಮರದ ಪೊಳ್ಳುಂ (ಕಾಶ್ಯ. ೨೨೭); ಸಾಗವಾನಿ ಮಾಲು . . . ಅರಿತಿನಬ್ಬಾದ್ದಿರುತ್ತವೆ. ಹಾಂಗು ಕೊಯ್ಕುವದರಲ್ಲಿ ಸಾಫ ಬರುತ್ತದೆ. ಅದಕ್ಕೆ ಗಂಟು ಪೊಳ್ಳು ವಗೈರೆ ಡಾಗುಗಳು ಬಹಳ ಮಾಡಿ ಇರುವದಿಲ್ಲ (ಮುಂಬಯಿ. ೩೦೩). ೫. (ಆಲಂ) ಒಣ ದರ್ಪ, ಜೋರು: ಕಳ್ಳ, ಸುಳ್ಳಾಡುತೀಯಾ? ನಿನ್ನ ಪೊಳ್ಳಿಗಂಜಲು ನಾವೇನು ಮಕ್ಕಳೆಂದರಿತೆಯಾ ? (ಸಂಧ್ಯಾಕ. ೨೬-೦೭). ೬. ನಿಷ್ಪ್ರಯೋಜಕ ವಾದುದು: ನುಡಿಗಟ್ಟದ ಗಬ್ಬದುಬ್ಬರದಿಂ ನನೆಕೊನೆವೋಗಿ ಕೊನೆವೆರ್ಚಿನ ಪುರ್ಚಿನ ಪೊಳ್ಳುಬಳ್ಳು ಮುದ್ದಣಂ (ರಾಮಾಶ್ವ. ೦೩೩-೭); ಬಾಯ್ದುದುರೆವಾಯ್ಗೆ ಕಡಿವಾಣವನ್ನಿಕ್ಕಿಲವೊ ಹಂಬೇಡಿ! ಬಳ್ಳುಗುತಿದೆ ಪೊಳ್ಳುಪುಬುಕಂ ಸಿಂಗದಿದಿರಿನಲಿ ! (ಶಿಶ್ಯಾಂಗ. ೭೯-೨೦೮೦). **ಹೊಳ್ಳು**: ೧. ಸೀ ಹೊಣೆಯಲಿಕ ಹೊಳ್ಳಹುದು ದೇವಾಸುರವಹೀತಳವು (ಸಂಕಪ. ೦೭-೩೭); ಮಂದಿ ಮೆಚ್ಚಲದುವೆ ಹೆಚ್ಚೆ ? ಸುಳ್ಳು ಹೊಳ್ಳು ಆ ಸ್ತುತಿ! (ಅಶೀಸ. ೧೭-೨). ೨. ಒಕ್ಕಿದ ಮೇಟಿ ಕತ್ತಿತ್ತು ಹುಲ್ಲು ಮೆದೆಗೆ ಹೋಯಿತ್ತು, ಹೊಳ್ಳು ಗೂಡು ಬಿದ್ದಿತ್ತು (ಕೋಲೆಮಾ. ೦೯೩-೩೩೩); ಹೊಳ್ಳುಗಳ ತೂಱಿದೆವು ಹಿಡಿಹಿಡಿ ಬಿಲ್ಲ ಸುಸಿಸುರಿ ಶರವನಕಟನ್ನಲ್ಲಿ ಹೊಗುವೈ ಕಂದ (ಕುಮಾ.ದ್ರೋ. ೨-೯೭); ಅಜ ಹರಿ ಸುರಾಸುರರೆನಿಪ್ಪ ಹೊಳ್ಳುಗಳ ತೂಱುವ ಗಾಳಿಯಾ ಬಂದನು (ಶಿಶ್ಯಪು. ೨-೯-೦೬). ೩. ಹುಸಿಯನಾಡಿ ಲಿಂಗವ ಪೂಜಿಸಿದಡೆ ಹೊಳ್ಳ ಬಿತ್ತಿ ಫಲವನರಸುವಂತೆ ಕಾಣಾ (ಬಸವಾದೇ. ಬ. ೩೩-೦೯೦); ಹೊಳ್ಳನು ಹುರಿದರಳನು ಕುಱುಕುವನಂತಿದನಱಿಯೆಂದನು (ಯೋಗಾಂಗ. ೯-೩೭). ೪. ಇರುಳು ಕಗ್ಗತ್ತಲೆಯೊಳ್ ಊವ ಸರಿವಳೆಗೆ ಸಲೆ ಸೇಡುಗೊಳುತುಬ್ಬರಿಸಿ ಕೃಷ್ಣನ ನೆನೆವುತಿದ್ದನು ಮಾರನ ಹೊಳ್ಳನಲಿ (ಕುಮಾ.ಆ. ೦೯-೨೩); ಹುತ್ತಿನೊಳಗಣ ಹೊಳ್ಳು ಹಾವಿಂಗೆತ್ತ ಹೋದೊಡೆ ಸುಸರವಲ್ಲದೆ ಮತ್ತೆ ಮಿಕ್ಕಿನ ಜೀವಜಾಳಕಭೇದ್ಯವಾದಂತೆ (ಪ್ರಭುಲಿಂ. ೨೦-೨೯); ೬. ನಿಷ್ಪ್ರಯೋಜಕನಾದವನು; ಕೆಲಸಕ್ಕೆ ಬಾರದವನು: ಕೋಟಿ ಬ್ರಹ್ಮಾಂಡದ ನೆನಪಿಲ್ಲೆಸಲಂತವಱೊಳಗೊಂದಱ ಕಡೆಗೊಂಟಿನ ಹಳ್ಳಿಯ ಹೊಳ್ಳುಗಳೊಂಬತ್ತಱೊಳೊಬ್ಬನಿವನು ಬಲ್ಲನೆ ಶಿವಮ (ಜಿಂದ. ೦-೨೦); ಇಲ್ಲಿ ಬಂದಿದಿರಾಂತು ಸಾಯದೆ ಹೊಳ್ಳುಗಳಿರಾ ಹಾಱಿಸುತ್ತಾ ಬಳ್ಳಿದನು ಜಯಘಂಟೆಯೊಳು ಕುಡುಹೊಂದಿಸಿದನೊಡನೆ (ಬಸವ. ೨೦-೪೦); ಹಳ್ಳಿಯ ಹೊಳ್ಳುಗಳ ಲೆಕ್ಕಿಪನೆ (ಶಿಶ್ಯಪು. ೩-೨-೦೦). 'ಪೊಟ್ಟು' ಪರಾ.

**ಪೊಳ್ಳಾಗು**, **ಹೊಳ್ಳಾಗು** = ೧. ಸತ್ತ್ವಗುಂದು; ದೃಢತೆಯನ್ನು ಕಳೆದುಕೊಳ್ಳು: ದಿಟ್ಟತನ ಪೊಳ್ಳಾಯ್ತು ಶೌರ್ಯದ ಘಟ್ಟ ಕರಗಿತು (ಕುಮಾ.ಶಲ್ಯ. ೬-೬೨); ತಿರುಳಿಲ್ಲದೋಟೆಗಳ ತಿಂತ್ರಿಣೀಫಲದಂತೆ ಗುಣಕ ಕರ್ಕೋಟಕಾದಿಗಳೆಡಲ್ಪೊಳ್ಳಾದುವಿಱುಹೆಗಳ ಮುತ್ತಿಗೆಗೆ ಕಂಗೆಟ್ಟುವು (ಕೃಷ್ಣಾ. ೨೪-೩೩); ವೇದಶಾಸ್ತ್ರಪುರಾಣಗಳು ಸುಳ್ಳಾದುವು; ಜನರು ಪೊಳ್ಳಾದರು; ಭಗವಂತನು ಕಳ್ಳನಾದನು (ಬಿಜಾಪ. ೯೦). ೨. ಡೊಗರು ಬೀಳಂ; ಹೋರು ಉಂಟಾಗು: ಮೊದಲಿನ ದೋಣಿಯೊಂದರ ಹೊಳ್ಳಾದ ಮರದ ತುಂಡು (ಜಾಂತ್ರ. II. ೬೯೨). ೩. ವ್ಯರ್ಥವಾಗು; ಹಾಳಾಗು; ನಾಶವಾಗಂ: ಮನವೆ ಲಿಂಗ ಲಿಂಗವೇ ಮನವಾವ ಬಳಿಕ ಮಾತು ಮಾತುಗಳೆಲ್ಲ ಹೊಳ್ಳಾ[ಪಾಠಾಂ. ಹೋಳಾ]ದ ಕಾರಣ ಲಿಂಗೈಕ್ಯ ಲಿಂಗೈಕ್ಯವೆ (ಸಿದ್ಧವ. ೪೨-೨೨೯); ನಿಚ್ಚಲೋದುವ ಪುರಾಣದ ಮಾತಿನ ಮಾಲೆ ಮಚ್ಚು ನಱಿಱಾದುವು ಹೋಮನೇಮಂಜಪಸಜೆಸಮಾಧಿಗಳೆಂಬವೆಲ್ಲ ಹೊಳ್ಳಾದುವು (ಷಟ್ಸ್ಥ. ದೇ. ೩೦೭-೩). ೪. ಹುಸಿಯಾಗು; ಸುಳ್ಳಾಗು: ಅಸನೇಱಿಸಿ ನುಡಿದ ಪಾರ್ಥನ ಭಾಷೆ ಹೊಳ್ಳಾಗದು ಸುಯೋಧನ ದೇಶವನು ಬೀಳ್ಕೊಂಡೆ ನೆಂದನು ಸೈಂಧವನು ಸಭೆಗೆ (ಕುಮಾ.ದ್ರೋ. ೬-೨೦). **ಹೊಳ್ಳು ಮಾಡು** = ನಿಸ್ಸಾರವಾಗಿಸಂ; ನಿಸ್ಸತ್ತ್ವಗೊಳಿಸಂ: ಹಮಳದಿಂ ಬಲವನಿಲ್ಲವ ಹೊಳ್ಳು ಮಾಡ ಬಗೆವರೆ ಹೇಳೆನಲು (ಜೈಮಿ. ೬-೦೦); ಅಲ್ಪಜ್ಞಾನ ಮಾರ್ಗವ ಹೊಳ್ಳು ಮಾಡಿ ವಿಶುದ್ಧಪೂರ್ಣಜ್ಞಾನಮಾರ್ಗದಲಿ ಒಳ್ಳಿತಾಗಿಹ ಸುಖವ ಬಯಸಲು (ಪ್ರಭುಲಿಂ. ೩೪-೦).

[ದೇ. ೩ ತಮಿ. ಪೊಳ್ಳು, ಪೊಳ್, ಪೊಳ್ಳೈ; ಮಲ. ಪೊಳ್ಳು; ತುಳು. ಪೊಲ್ಲು, ಪೊಳ್ಳ, ಪೊಳ್ಳು; ಕೊಡ. ಪೊಳ್ಳೆ, ಪೊಳ್ಳಿ; ತೆಲು. ಪೊಲ್ಲು, ಪೊಲ್ಲ; ಪಾಯ್ಕಾ. ಪೊಲ್ಲೇ; ಪರ್ಜಿ. ಪೊಲ್, ಪೊಲ್ಕು; ಗೋಂಡಿ. ಪೊಲ್ಲುತು; ಕುಇ. ಪೊಲ್ಕು; ಕುವಿ. ಪೊರು]

**ಪೊಳ್ಳುಗಳೆ**, ಪೊಳ್ಳುಗಳೆ (ಕ್ರಿ). ೧. ವ್ಯರ್ಥವಾಗಿಸು; ಸತ್ತ್ವಗುಂದಿಸು: ಅಮಲಧರ್ಮಜನ ಕೀರ್ತಿ . . . ನಾಗೇಂದ್ರ ವರದಾಯುಧವ ಪೊಳ್ಳುಗಳೆದು ಮಥನಾಗೇಂದ್ರಧರನ ಜಾತೆಯ ನಿಲವುಗೆಡಿಸಿ ನೆಱೆ ರಾಜಿಸಿತು ಮೂಜಗದೊಳು (ಕೃಬಿಭಾ. ೨-೦೨). ೨. ತುಚ್ಛವಾಗಿ ಕಾಣು; ಜರಿ; ಮೂದಲಿಸು: ಸುಧನ್ವ ಮತ್ತೆ ಅವನ ಅಗ್ಗಳಿಕೆಯನ್ನು ಪೊಳ್ಳುಗಳೆದುಡಿದ (ಐದುರಿ. ೫೮). **ಹೊಳ್ಳುಗಳೆ**: ೧. ಮುಗುಳೆಚ್ಚು ಪುನರಪಿಯೆಚ್ಚು ಕರ್ಣನ ಹೊಳ್ಳುಗಳೆದನು ಪಾರ್ಥ ನಿಮಿಷದಲಿ (ಕುವ್ಯಾ.ಕ. ೨೩-೨೫); ಹಗೆಗೆ ಹೊಳ್ಳುಗಳೆವುದು ಹೃದಯವುಂ! (ಶ್ರೀರಾಪಟ್ಟಾ. ೫೫೯-೦೯೬). ೨. ಹೊಗಳಿ ಕೆಲವರ ಹೊಳ್ಳುಗಳೆವುತ ನಗುತ ಕೆಲವರನವರ ಮೋಹರ ತೆಗೆದು ಹೋಯಿತು (ಕುವ್ಯಾ.ಕ. ೫-೨); ಎಲ್ಲರನು ನೀ ಜಱೆದು ಝಾಡಿಸಿ ಹೊಳ್ಳುಗಳೆದೊಡೆ ನಿನ್ನಲೆನ್ನಲಿ ಹೊಲ್ಲವೊಳ್ಳಿತನಱಿವ ಮಾತಂತಿರಲಿ ಹೇಳೊಂದ ಬಲ್ಲೆಯಾದೊಡೆ ನೀನು (ಕೃಭುಂ. ೭-೬೦). ೩. ಸುಳ್ಳುಮಾಡು; ಸುಳ್ಳಾಗಿಸು: ನರನ ನುಡಿಯನು ಹೊಳ್ಳುಗಳೆವರೆ ಚರಣದಲಿ ಬೀಳುವೆವು ನಡೆಯೆಂದಿರುಳು ದ್ರೋಣನ ಮನೆಗೆ ಬಂದನು ಕೌರವರ ರಾಯ (ಕುವ್ಯಾದ್ರೋ. ೬-೫೯). [ಪೊಳ್ಳು + ಕಳೆ₁]

**ಪೊಳ್ಳುಗುಂಭ** (ನಾ). ಬರಿದಾದ ಮಂಡಕೆ; ಖಾಲಿಯು ಗಡಿಗೆ: ಬಸಿರು ಬಯಲು ಪೊಳ್ಳುಗುಂಭ ಬೀಜೆಗಾಳಿ ಅದರ ತುಂಬ (ಹೃದಸ. ೬೯-೯). [ಪೊಳ್ಳು + ಗುಂಭ₂ (< ಗುಂಬ₃)]

**ಪೊಳ್ಳುಗೆಡೆ** (ಕ್ರಿ). ಹುರುಳಿಲ್ಲದ ಮಾತನಾಡು; ಜಳ್ಳು ಮಾತನಾಡು: ಬಡವನೊಳ್ಳಿಯ ಮಾತ ನುಡಿದರಲ್ಲೆಂಬುವರು ಪೊಡವೀಶ ಪೊಳ್ಳುಗೆಡೆದರೂ ಕೈವಾರಿ ಕಡುನಗುತಲಿಹರು (ಸರ್ವಜ್ಞ. ೦೨೬೬). [ಪೊಳ್ಳು + ಕೆಡೆ₂]

**ಪೊಳ್ಳುನುಡಿ**, ಹೊಳ್ಳುನುಡಿ (ನಾ). ಹುರುಳಿಲ್ಲದ ಮಾತು; ಕೆಲಸಕ್ಕೆ ಬಾರದ ಮಾತು; ವ್ಯರ್ಥಾಲಾಪ: ಒಳ್ಳಿತೊಳ್ಳಿತು ಮದವಾರಣದೊಳಗಾಡು ಕೊಳ್ಳುಕೊಡೆಯು ಮಾಳ್ಪುದೆಂದು ಪೊಳ್ಳುನುಡಿಯಿಂದೇಕೆ ಪೋಗು (ಸೇಬಸಂ. ೦೭-೦೦೮); ಈ ಪೊಳ್ಳುನುಡಿಗೆ ಮೊದಲ ಮನಸು ನಗುತ್ತಿತ್ತು (ಎಕಸ. ೦೦೭). **ಹೊಳ್ಳುನುಡಿ**: ಸಾಕಿದೇತಕೆ ಹೊಳ್ಳುನುಡಿಗೆ ವಿವೇಕಿಗಳು ಮೆಚ್ಚುವರೆ (ಕುವ್ಯಾ.ಸ. ೨-೬೪); ಹೊಳ್ಳುನುಡಿಗಳನಾಡುತ್ತ ವೃಥಾ ಹೊತ್ತು ಕಳೆಯದೆ ಸಾಮರ್ಥ್ಯವಿದ್ದರೆ ಯುದ್ಧ ಮಾಡಬೇಕು (ರಾಜಸೂ. ೨೨). [ಪೊಳ್ಳು + ನುಡಿ₂]

**ಪೊಳ್ಳುಬೆದರಿಕೆ** (ನಾ). ಸತ್ತ್ವವಿಲ್ಲದ ಬೆದರಿಕೆ; ಸುಳ್ಳುಬೆದರಿಕೆ: ನಿಮ್ಮ ಈ ತವಡು ಕುಟ್ಟೊ ಮಾತು, ಪೊಳ್ಳುಬೆದರಿಕೆ ಕೇಳಲಿಕ್ಕಂತೂ ನನಗ ಸುತರಾಂ ಅವಕಾಶ ಇಲ್ಲ (ಹೂಸಂಸಾ. ೪೬). [ಪೊಳ್ಳು + ಬೆದರಿಕೆ (< ಬೆದಱಿಕೆ)]

**ಪೊಳ್ಳುಮರ** (ನಾ). ಒಳಗೆ ದಿಂಡಿಲ್ಲದ ಮರ; ಟೊಳ್ಳಾದ ಮರ: ಆಗಳ್ ದುರ್ಯೋಧನಂ . . . ತನ್ನೆರ್ದೆಯುಂ ಪೊಳ್ಳುಮರನಂ ಕಿರ್ಚು ಕೊರ್ವಿಂತೊಳಗೊಳಗಳುರೆ (ಪಂಪಭಾ. ೨-೬೬ ವ). [ಪೊಳ್ಳು + ಮರ₁]

**ಪೊಳ್ಳುಮಾತು**, ಹೊಳ್ಳುಮಾತು (ನಾ). ಸುಳ್ಳಾದ ಮತ್ತು ನಂಬಿಕೆಗೆ ಯೋಗ್ಯವಲ್ಲದ ಮಾತು; ಹುರುಳಿಲ್ಲದ ಮಾತು: ದ್ರೋಹ, ವಂಚನೆ, ಸುಳ್ಳು, ಸೋಗನು ಕಂಡು ಕಂಡೂ ಸಿಡಿದಿದೆ. ಪೊಳ್ಳುಮಾತಿನ ಬುರುಗು ಬೆರಗನು ಕೇಳಿ ಕೇಳಿ ಕುಸಿದಿದೆ (ಬಿಜದ. ೫೯-೯); ಅದು ಬರಿಯ ಪೊಳ್ಳುಮಾತೆಂಬುದು ಲಲಿತಳಿಗೂ ಗೊತ್ತು (ಮುರುಕು. ೫೦). **ಹೊಳ್ಳುಮಾತು**: ಹೊಳ್ಳುಮಾತಿದು ನೀತಿಯೋ (ಕುವ್ಯಾ.ಕಿ. ೯-೩೫); ಹೊಳ್ಳುಮಾತಲ್ಲ ಕೇಳಬಲೆ (ಕುರಾಕಾಂ. ೨೫-೪೬); ಅಳ್ಳೆರ್ದೆಗರನಂಜಿಸುವೊಲು ರಕ್ಕಸ ಹೊಳ್ಳುಮಾತುಗಳಾಡಬೇಡ (ಸಂಕ್ರಸಾಂ. ೬-೦೧೯). [ಪೊಳ್ಳು + ಮಾತು₁]

**ಪೊಳ್ವಂದಿ** (ನಾ). ಗಾಯಗೊಂಡ ಹಂದಿ (?); "ಓಡುವ ಹಂದಿ" (ಅಅಕಾ.ಪ. ೬೦೮); ಜಂತ್ರದ ಪಂದಿಯು ಬಾಯಂತೆ ಬಿಚ್ಚಿಬಿಲ್ಲ ಬಾಯುಂ ಬೆರಸು ನಾಲ್ಕುಂ ತಳಮುಂ ತೋಱುತ್ತುಂ ಸರಳಿಸಿ ಪಾಯ್ದು ಪೋಪ ಪೊಳ್ವಂದಿಯುಂ ಕಂಡು (ಅಂರಾಪ. ೬-೦೬ ವ). [? + ಪಂದಿ]

**ಪೊಱ**, ಹೊರ₁, ಹೊಱ (ಸಪೂರೂ). 'ಪೊಱಗು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ: 'ಪೊಱಗೋಟೆ', 'ಪೊಱದಡಿ' ಪರಾ. **ಹೊರ₁**: 'ಹೊರದೆಗೆ', 'ಹೊರಗಂಡಿ' ಪರಾ. **ಹೊಱ**: 'ಹೊಱದೆಗೆ', 'ಹೊಱವಳಸು' ಪರಾ. [< ಪೊಱಗು]

**ಪೊಱಅಡಿ** (ನಾ). ೧. ಹೆಜ್ಜೆಯ ಮೇಲುಭಾಗ: ಮನುಜಮಾಂಧಾತನ ಪೊಱಅಡಿಗಳ್ ವಿರೋಧಿಭೂಪಾಳರನಡಿಗೆಱಗಿಸಿದ ಸಂತೋಷದೊಳುನ್ನತಂಗಳಾದಂತೆ ಕೂರ್ಮೋನ್ನತಂಗಳಾದುವು (ಪಂಪಭಾ. ೨-೩೯ ವ); ಅಳವಿಗಱಿದುರುನಿತಂಬಸ್ಥಳಭಾರಮನಾಂತ ಕಾಲ್ಗೆ ಪೊಱಅಡಿಗಳೊಳ್ ಲಳಿತತುಳಾಕೋಟಿಗಳಂ ತಳೆವುದದೇವಿರಿದೊ ಮದಗಜಾಲಸಗತಿಯಾ (ಕಾವ್ಯಾವ. ೨೯೬); ಪೊಱಅಡಿ. ಒಳಅಟ್ಟಂ, ಪೊಸತಿಡಕೆ (ಕಮದ. ಪ. ೬೮ ವೃತ್ತಿ). ೨. (ಕಾರ್ಯೋನ್ಮುಖವಾಗಿ) ಮುಂದಕ್ಕೆ ಇಟ್ಟಿರುವ ಹೆಜ್ಜೆ,–ಮುಂದಿಟ್ಟ ಅಡಿ: ಆಗಳ್ ಮದನು ತಳ್ವದೆ ಕೋಲ್ಬಿಲ್ಗಳು ಕೊಂಡು ಪೊಱಅಡಿಯೊಳ್ . . . ತನ್ನ ಮುಸಿವಡೆವೆರಸು ತಪೋವನದತ್ತಣ್ಗೆಯ್ತರುತುಮಿರ್ದಂ (ರಾಮಾಕ. ೫೬-೬). [ಪೊಱ (< ಪೊಱಗು) + ಅಡಿ₁]

**ಪೊಱಂಗುಟ್ಟು**, ಪೊಱಕುಟ್ಟು (ಕ್ರಿ). ಬಹಿರಂಗವಾಗಿ ಹಿಂಸಿಸು, –ನೋಯಿಸು: ಪೆಱಗೆ ಕೇಡುಮಾಪತ್ತುಮುಱುವುಮಂ ಮಾಡದುದುಂ ಪೊಱಂಗುಟ್ಟದುದುಂ ನೊಂದು ನುಡಿಯದುದುಂ . . . ಸಾತಾವೇದನೀಯದಾಸ್ರವಮಕ್ಕುಂ (ಕಸಾರ. ೯೩). **ಪೊಱಕುಟ್ಟು**: ರಾಗದ್ವೇಷಂಗಳಿಂ ಪೊಱಕುಟ್ಟ ನುಡಿಯೆ ತನ್ನ ಮರುಳಂ ಮುಚ್ಚಿ ಕಳೆವುದು (ಕಸಾರ. ೯೮೨). [ಪೊಱ (< ಪೊಱಗು) + ಕುಟ್ಟು₁]

**ಪೊಱಂಡ**, ಪೊಱಡ (ನಾ). ಬೆನ್ನಿನ ಮೇಲೆ ಗುಬುಟೆದ್ದುಬಾಗಿರುವವನು; ಗೂನ: ಗುಜ್ಜನುಂ ಪೊಱಂಡನುಂ ಮುರುಡನುಮಾಗಿ ಬರೆ ಕಂಡವರ್ ನಗೆ (ಬಂಹಂ. ೯-೨೫ ವ). **ಪೊಱಡ**: ಹರಭಕ್ತನಿಂದಕಂ . . . ಕುರುಡನಾಗುವ ಕೋಟಿಜನ್ಮದೊಳ್ಬಳಿಕಲವ ಪೊಱಡನಾಗುವ ಸಪ್ತಜನ್ಮದೊಳ್ಬಳವನಾಗಿರುವ ಶತಜನ್ಮದೊಳ್ (ಹಶಿಂ. ೦೬-೬). [ಪೊಱಂಡು₂ + – ಅ₇]

**ಪೊಱಂಡಿ** (ನಾ). ಬೆನ್ನಿನ ಮೇಲೆ ಗುಬುಟೆದ್ದು ಬಾಗಿರುವವಳು; ಗೂನಿ: ಕಣ್ಗುರುಡಿಯುಂ ಪೊಱಂಡಿಯುಂ ಕೊಂಟಿಯುಂ ಮೆಳವೆಯುಂ ಕುಷ್ಠನಿಯುಂ ಕುಬ್ಜೆಯುಮಪ್ಪ ಮಗಳ್ದಿರಱುವರ್ (ಶಾಂತಿಪು. ೪-೬೬ ವ). [ಪೊಱಂಡ + – ಇ₂]

**ಪೊಱಂಡು₁** 'ಪೊಱಮಡು' ನೋ.

**ಪೊಱಂಡು₂**, ಪೊಱಡು₂, ಹೊಱಟು, ಹೊಱಡು₂ (ನಾ). ಉಬ್ಬಿನಿಂದ ದೇಹದ ಬೆನ್ನು ಮೊದಲಾದ ಭಾಗಗಳಲ್ಲಿ ಉಂಟಾದ ಬಾಗು,– ವಕ್ರತೆ: ಕುಱೆಯೆ ಪೊಱಂಡಾಗಿರೆಯುಂ ಕುಱದಿರೆಯುಂ ಬೆನ್ನನಿಪ್ಪಮುಮಾಳ್ಕುಂ (ಲೋಕೋಪ. ೧೧-೫೬). **ಪೊಱಡು₂**: 'ಮಾಪ್ಪೊಱಡು' ಪರಾ. **ಹೊಱಟು**: ಹೊಱಟು ಪಾಂಡ್ಯನ ಚೆಲುವಳಿದು ನೆಱೆ ಹೊಱಟು ನೆಲೆಗೊಂಡಿದ್ದ ಬೆನ್ನಿನ ಹೊಱಟು ಹೋಗಲು ಮಿಥ್ಯೆಯಾಯಿತು ಸಾಯದಿರ್ಬಹುದೆ ಹೊಱಟ ಬೆನ್ನಂತೆಂಬ ನುಡಿಯದು ಧರೆಗೆ ಕೂನನೆನಿಪ್ಪುದು ಪರಿಹರಿಸಿ ಸೌಂದರಪಾಂಡ್ಯರಾಯನೆನಲು ಪೆಸರ್ವಡೆದ (ಬಸಪು. ೫೦-೩೦). **ಹೊಱಡು₂**: "ಗಡು ಎಂದೊಡೆ ಕುಬ್ಜ, ಬೆನ್ನ ಹೊಱಡುಂ" (ಶಾಶಠಾ. ೬); ಮಂಡೆಯಲಿ ಕೈಯಿಟ್ಟು ಹೊಱಡೆಡೆಗೊಂಡುದೆಂದಿಂದಿತ್ತ ವೈದ್ಯರ ಕಂಡು ಬಲ್ಲರು ತನ್ನ ಪೂರ್ವಜರೆಂದನಸುರಾರಿ (ಜೈಭಾಗ. ೦೧-೩೭-೩೯); ಹೊಱಡಾಗದಂತೆ ನಾಲ್ಕೊಗ ಜಂತದಲಿ ಹೊಂಗರಡಿಗೆ

ಗೆಡೆದು ಕರ್ವಣಿಯ ಬಿರುದೆಯ ಬಿಗಿದಿಟ್ಟನೆಂಬಂತೆ ಬಲ್ಮೊಲೆಯೆರಡಱ ಮೊಗವು ತೋಱಿದುವು (ಶೋಕಶ. ೨೩-೨೩).

[< ಪೊಱಮಡು./ತೆಲು. ಪೊಱಡು]

**ಪೊಱಂಬೇೞು** (ಕ್ರಿ). (?) : ತಾನರುಮೆ ಮೆಚ್ಚುವೊನ್ನನ್ನ ಮೆಚ್ಚದೆ ಪೊಱಮ್ಪೇೞು ಬೊಜಙ್ಗರ (ಕ್ಷೇತ್ರ. IX-i, ೦೬-೧೫ ; ೨೬ನು ೫). [?]

**ಪೊಱಕಣ್**, **ಹೊರಗಣ್ಣು** (ನಾ). ಹೊರಗಿನ ಕಣ್ಣು ; ಬಹಿರ್ಚಕ್ಷು : ಪೊಱಕಣ್ಣಂ [ಪಾಠಾಂ. ಮಡೆಕಣ್ಣಳ್] ಮುನ್ನಂ ತಾಂ ಮಱಸಿದ ನೊಸಲೊಂದು ಕಣ್ಣುಮಾಗಳ್ ನೊಸಲಿಂ ಪೊಱಮಟ್ಟಂತಿರೆ (ಶಂಕಥಾ. ೮-೨೩). **ಹೊರಗಣ್ಣು** : ಹೊರಗಣ್ಣಿಗೆ ಕಾಣುವ ಸೃಷ್ಟಿಯು ಮೂಕವಾಗಿದೆ (ಶಾಹಿ. ೦೧೪). 'ಒಳಗಣ್' ಪರಾ. [ಪೊಱ (< ಪೊಱಗು) + ಕಣ್]

**ಪೊಱಕತ್ತರ**, ಹೊಱಕತ್ತರ (ನಾ). [ಸಂಗೀತ] ವಾದ್ಯಗಳನ್ನು ಬಾರಿಸುವ ಒಂದು ಕ್ರಮ,–ಗತ್ತು; ಹೆಬ್ಬೆರಳನ್ನುಳಿದು ಇತರ ಬೆರಳುಗಳನ್ನು ವಿರಳವಾಗಿ ಚಾಚಿ ಅಂಗೈಯನ್ನು ಹೊರಮುಖವಾಗಿ ವೇಗವಾಗಿ ತಿರುಗಿಸುತ್ತ, ಒಂದಾದ ಮೇಲೊಂದರಂತೆ ಬೆರಳುಗಳಿಂದ ವಾದ್ಯಮುಖವನ್ನು ಹೊಡೆದು ಶಬ್ದಗಳನ್ನು ಉತ್ಪತ್ತಿಮಾಡುವುದಕ್ಕೆ 'ಕರ್ತರೀ' ಎಂದು ಹೆಸರು. ಒಳಕರ್ತರಿ, ಹೊರಕರ್ತರಿಗಳು ಸಂಗೀತಶಾಸ್ತ್ರಗ್ರಂಥಗಳಲ್ಲಿ ವರ್ಣಿತವಾಗಿಲ್ಲ. ಕನ್ನಡಿಗ ಮದ್ದಳೆಕಾರರು ವಾದನತಂತ್ರದ ಸ್ವಸಮಯದಲ್ಲಿ ಅವುಗಳನ್ನು ನಿರ್ಮಿಸಿಕೊಂಡು ಹೆಸರಿಸಿರಬಹುದು. ಮೇಲೆ ಹೇಳಿರುವ ಕರ್ತರೀವ್ಯಾಪಾರವನ್ನು ಹೆಬ್ಬೆರಳು ಒಳಮುಖವಾಗಿ (ವಾದ್ಯಮುಖದೆಡೆಗೆ) ಚಲಿಸುವಂತೆ ನಡೆಸಿದರೆ ಒಳಕರ್ತರಿ. ಇದಕ್ಕೆ ವಿರುದ್ಧವಾಗಿ ಹೆಬ್ಬೆರಳು ಹೊರಮುಖವಾಗಿ (ವಾದ್ಯಮುಖಕ್ಕೆ ವಿಮುಖವಾಗಿ ಆಚೆಗೆ) ಚಲಿಸುವಂತೆ ಏರ್ಪಡಿಸಿದರೆ ಹೊರಕರ್ತರೀ ಎಂದು ಅರ್ಥ ಮಾಡಬಹುದು : ಅಳಗಂ ಸುಳಿಯುಳಗಂ ಬೊಟ್ಟಳಮೊಳಕತ್ತರಮುಮೆಸೆವ ಪೊಱ [ಪಾಠಾಂ. ಹೊಱ]ಕತ್ತರವಗ್ಗಳಿಸಿರೆ ನಾನಾಭೇದಂಗಳ ಪಹರಣೆ ತುಡುಕು ಮೋಡಿಯಂ ಬಾಜಿಸಿದಂ (ಧರ್ಮಾಶ. ೨-೨೩). **ಹೊಱಕತ್ತರ** : ಅವುಜಗ ನಾವುಜಮುನಳವಡಿಸಿಕೊಂಡು ಝುಂಕಾರವಂ ಪೊಯ್ದಳಗ ಸುಳಿಯುಳಗ ಬೊಟ್ಟಾಳಂ ಒಳಕತ್ತರ ಹೊಱಕತ್ತರ ವಿಷಮಕತ್ತರಮೆಂಬ ವಿಚಿತ್ರವಾದನದ ಬಹುಲಿಕೆಯೊಳ್ವಿಹಲನೆನಿಸಿ...ಬಾಜಿಸುತ್ತಿರೆಯುಂ (ಶಾಂತೀಶ್ವ. ೦೬-೭೭ ೪). 'ಒಳಕತ್ತರ' ಪರಾ. [ಪೊಱ (< ಪೊಱಗು) + ಕತ್ತರ[?]]

**ಪೊಱಕಾಲ್**, ಹೊರಕಾಲು, ಹೊಱಕಾಲ್, ಹೊಱಕಾಲು (ನಾ). ೧. ಕಾಲಿನ ಹೊರಭಾಗ,– ಹೊರಗು : ಕಾಲ ಪೊಱಗು, ಪೊಱಕಾಲ್ (ಶಬ್ದಾಮ. ೪೧೬). **ಹೊರಕಾಲು** : ೨. ಅಡ್ಡವಾಗಿ ಇಡುವ ಕಾಲು ; ತೊಡರುಗಾಲು : ಓಡುತ್ತಿರುವಾಗ ಕೆಂಚನು 'ಹೊರಕಾಲು' ಕೊಟ್ಟುದರಿಂದ ಶಿವುಗ ನೆಲಕ್ಕೆ ಧೊಪ್ಪನೆ ಕೆಡೆದು (ಸುಜಚಂ. ೦೦೬). **ಹೊಱಕಾಲ್** : ೩. ಓಡಲು ಸಿದ್ಧವಾದ ಕಾಲು ; ಪಲಾಯನಕ್ಕೆ ಸಿದ್ಧವಾದ ಕಾಲು : 'ಹೊಱಕಾಲ್ಗೊಳು' ಪರಾ. **ಹೊಱಕಾಲು** : ೩. ಹೊಱಕಾಲುಗಳ ಹೋರಟೆ ಕಾಣಲಾದುದು ಪರರ ಥಟ್ಟನೊಳು (ಕುಮಾ.ದ್ರೋ. ೩-೧೭). 'ಒಳಕಾಲು' ಪರಾ.

[ಪೊಱ (< ಪೊಱಗು) + ಕಾಲ್[1]]

**ಪೊಱಕಾಲ್ಗೊಳ್**, ಹೊಱಕಾಲುಗೊಳ್, ಹೊಱಕಾಲ್ಗೊಳು (ಕ್ರಿ). ೧. ಕಾಲನ್ನು ಎತ್ತಿ ಮುಂದಿಡು : ಮುಂಗಾಲ್ಗಳಂ ನೆಗಪಿ ನಿಲ್ವ ಪಿಂಗಾಲ್ಗಳಂ ಕೀಳ್ವ ದಾಂಟುವ ಪೊಱಕಾಲ್ಗೊಳ್ವ ಮರಳೆ ಪಟ್ಟುವ . . . ಅಶ್ವಂಗಳ್ (ರಾಜಶೇ. ೬-೦೦ ೪). **ಹೊಱಕಾಲುಗೊಳ್** : ೨. (ಹೆದರಿಕೆಯಿಂದ) ಪಲಾಯನ ಮಾಡು; ಓಡಲು ಸಿದ್ಧವಾಗು : ಹೊಟ್ಟೆ ನೂಕಿ ವೃಥಾಹವದ ಜಗಜಟ್ಟಿ ನೀ ಹೊಱಕಾಲುಗೊಂಡರೆ ಬಿಟ್ಟನೇ (ಕುಮಾ.ಭೀ. ೦೦-೩೪). **ಹೊಱಕಾಲ್ಗೊಳು** : ಬಿಲುಂದೆಗಹಿನಾ ಕರ್ಣಪೂರದ ಹಿಳುಕಿನನಿಲಜನಿರಲು ಸಿಂಹದ ಹೊಲನ ಹೊಗುವಿಭದಂತೆ ಪೊಱಕಾಲ್ಗೊಳುತಲಿರೆ ಕಂಡು ತೊಲಗದಿರಿ ತಮ್ಮಂದಿರಿರ . . . ಸುಭಟರು ನೀವೆನುತ ತೆಗೆದೆಚ್ಚನು (ಕುಮಾ.ದ್ರೋ. ೦೨-೩೦). [ಪೊಱಕಾಲ್ + ಕೊಳ್[1]]

**ಪೊಱಕುಳಿ**, ಹೊಱಕುಳಿ (ನಾ). ಬೇರೆಯವರ ಆಶ್ರಯದಲ್ಲಿ ವಾಸಿಸುವ ಸ್ವಭಾವವವನು : ಪೊಱಕುಳಿ [ಪಾಠಾಂ. ಪೋರ್ಕುಳಿ], ಓಡುಕುಳಿ (ಕಮವ. ಮ. ೨೦೫ ಪ್ರಯೋ). **ಹೊಱಕುಳಿ** : "ಪರಜಾತಃ, ಪರ್ಯೈಧಿತಃ—ಈ ೨ ಹೊಱಕುಳಿ" (ಕಣಾಮು. ೫೮-೦೬).

[ಪೊಱ (< ಪೊಱಗು) + –ಕುಳಿ[3]]

**ಪೊಱಕೆಯ್**, ಪೊಱಕೈ, ಪೊಱಗಯ್, ಹೊಱಕಯ್, ಹೊಱಕೆಯ್, ಹೊಱಕೈ (ನಾ). ೧. ಕೈಯ ಹೊರಭಾಗ ; ಮಣಿಕಟ್ಟಿನಿಂದ ಕಿರುಬೆರಳಿನವರೆಗಿರುವ ಕೈಯ ಹೊರಪಾರ್ಶ್ವ : "ಮಣಿಬಂಧನದಿಂದಂ ಕಿಱುಕುಣಿಕೆವರಂ ಕರಭಮೆಂಬುದಕ್ಕಂ ಪೊಱಕೆಯ್" (ವಸ್ತುಕೋ. ೬೬-೯) ; ಸಂಡೆಯ್ಯುರಲ್ ನಲವಿಂದಂ ಪೊಱಕೆಯ್ಯೊಳಾತು ಮುಗುಟ್ಟಾರ್ಪಿಂ . . . ಪೊಯ್ವು (ಪಕಶ. ೦೨-೩೪). **ಪೊಱಕೈ** : ೧. ಕೈದುಡುಕಿ ಪಿಡಿದನಂ ನೋಡವಂತಿರ್ವ ವಾಂಗಿಂ ಪೊಱಕೈಯೊಳ್ ಮೋದಿ ಕಂಸಾನುಜನನಧಿಕನಂ ಕೊಂದು (ಜಗಂ. ೬-೯೪). **ಪೊಱಗಯ್** : ೧. ಮಲಪಮಂ ಪಿಡಿಕಿಸಿ ಪೊಱಗಯ್ಯನೊರಸಿ ಕರ್ಚಿದ ತೆಱದಿಂ (ಸಮುಶ. ೦೬-೨೬). **ಹೊಱಕಯ್** : ೧. ಸೂತನ ಬಾಯ ಹೊಱಕಯ್ಯಿಂದ ಹೊಯ್ದನು ಹಡಪದವರನು . . . ತಿವಿದು ಮುಱಿದನು (ಕುಮಾ.ದ್ರೋ. ೦೯-೪). **ಹೊಱಕೆಯ್** : ೧. ದೇವ ಹೊಱಕೆಯ್ಯಿಂದ ತಟ್ಟಿ ಮರಳೀಶ್ವರನನಿಡೆ ನಗುತ (ಕಂಪು. ೩೭-೬೩). ೨. ಬೇರೆಯ ಕೈ ; ಇನ್ನೊಂದು ಹಸ್ತ : ಬಾಯೊಳುದಕಂ ಪೊಗದ ಹಾಗೊಕ್ಕಯ್ಯನಡ್ಡಂ ಚಾಚಿ ಮೇಣ್ ಹೊಱಕಯ್ಯ [ಪಾಠಾಂ. ಪೊಱಕಯ್ಯ]ಲುದಕವನೊಯ್ಯನೊಯ್ಯನವುಂಕಿ ತಿರುಹುವಳು (ಬಸಪು. ೧೩-೦೦). ೩. ಹೊರಗಡೆಗೆ (ಬೀಸಿ) ತೆಗೆದ ಕೈ : ಉಗಿದನುರಗಾಸ್ತ್ರವನು ಹೊಮ್ಮೊಡಿಗೆಯೊಳಗೆ ಹೊಱಕೆ[ಪಾಠಾಂ. ಕ]ಯ್ಯ ಗಾಳಿಗೆ ಹೊಗೆಯ ಹೊದಱಿನ ಹೊರಳಿ ಹುಬ್ಬಿತು ಕೂಡೆ ಕಿಡಿಯಿಡುತ (ಕುಮಾ.ಕ. ೨೩-೪). **ಹೊಱಕೈ** : ೧. ಭರದೊಳೊಳಕೈಯಿಂದೆ ಹೊಱಕೈಯಿಂದೆ[ಪಾಠಾಂ. ಕಯ್ಯಿಂದೆ] ಹೊಡಹೊಡೆದು (ಬಸಪು. ೨೨-೧೩); ಗದೆಯ ಕೊಂಡಪ್ಪಳಿಸಿದನು ಹೊಱಕೈಯುಲರೆದಿಟ್ಟಳಿಸಿದರನೆಡಗಾಲಲೊದೆದನು (ಕುಮಾ.ಕ. ೦೩-೦೭) ; ನಿಲ್ಲೆನುತ ಹದರಿಕ್ಕಿ ಹೆಡಕನು ಘಲ್ಲಿಸಲು ಹೊಱಕೈಯ[ಪಾಠಾಂ. ಕಯ್ಯ]ಲಾಬೆಯ ಹಲ್ಲುದುರೆ ಹೊಯ್ದೊಡದ ಮುಷ್ಟಿಯಲೆಱಗಿದನು ಬದಿಯ (ಕೃಷ್ಣರಾ. ೫-೧-೨). 'ಒಳಕೆಯ್' ಪರಾ. [ಪೊಱ (< ಪೊಱಗು) + ಕೆಯ್[1]]

**ಪೊಱಕೈ** 'ಪೊಱಕೆಯ್' ನೋ.

**ಪೊಱಗಡೆ**, ಹೊರಕಡೆ, ಹೊರಗಡೆ ಹೊಱಗಡೆ (ನಾ). ೧. ಹೊರಭಾಗ; ಹೊರಪ್ರದೇಶ : ಅಱಗುಲಿಯಂ ಮುನ್ನಮ್ಮ ಗಱಗಳು ತಱದಿಂದ್ರುನಾ ಸಗ್ಗಮನೆನ್ನೀ ಸಱದಲೆಯಂ ಪೊತ್ತಬುಜಜನ್ಮಾಂಡದ ಪೊಱಗಡೆಗಾಗಿ ನುಱಯಪ್ಪಂದದಿ ಹಾಕದೊಡನಗೇತೞ ದೊಡ್ಡಿತ್ತು (ಜಯಾಶಾ. ೦-೩೩). **ಹೊರಕಡೆ** : ೨. ಕಕ್ಕಸಂ ; ಬಹಿರ್ದೇಶ : (೬). ೩. ಮಲವಿಸರ್ಜನೆ : ಮಗುವಿಗೆ ಹೊರಕಡೆಯಾಗದಿದ್ದರೆ–ಅರ್ಧದಿಂದ ಒಂದು ಚಮಚೆವರೆಗೆ ತುಲಸೀಎಲೆಯ ರಸ ಕುಡಿಸುವುದು (ಜಕಪು. ೬). ೪. ಭೇದಿ; ವಿರೇಚನ : ಹೊರಕಡೆ ಹೋಗುವುದು ಕಡಿಮೆಯಾಗಲು ಔಷಧಿ ಕೊಟ್ಟಾಯ್ತು (ಖುಂಗಾಖು. ೦೦೩). **ಹೊರಗಡೆ** : ೧. ಹುಡುಗರೆಲ್ಲ ತರಗತಿಯ ಹೊರಗಡೆಯಲ್ಲೇ ಇದ್ದಾರೆ (ರೂಢಿ). ೫. ಹೆಂಗಸಿನ ಮುಟ್ಟು,– ರಜೋದರ್ಶನ : ಇವತ್ತು ಹೊರಗಡೆಯಾದ್ದರಿಂದ ಅವಳು ಪೂಜೆಗೆ ಬರಲಿಲ್ಲ (ರೂಢಿ). (ಗ್ರಾ). ೬. ಹೊರಭಾಗದ: ಹೊರಗಡೆ ಕೋಣೆ

ಯಲ್ಲಿ . . . ಚರ್ಚೆ ನಡೆಯಿತು (ಜಕಾ. ೦೬೦). ೭. ಪರಸ್ಥಳದ ; ಬೇರೆ ಕಡೆಯ : ಹೊರಗಡೆ ಸಂಚಾರ ಹೊರಟರೆ ಬೆಳ್ಳಿತಟ್ಟೆ, ಕ್ರಿಯಾಭಸ್ಮಘಟ್ಟಿ ಇತ್ಯಾದಿಯೊಂದಿಗೇ ಹೊರಡಬೇಕು (ಜುಗ್ಗ್. ೦೩). **ಹೊಱಗಡೆ :** ೧. ಮಂದಿರದ ಹೊಱಗ[ಪಾಠಾಂ. ಕ]ಡೆಯಲಾಡುತ್ತಿರಲು (ಸಂಚರ. ೭-೨೬ ಅಧಿಕಪಾ. ೯) 'ಒಳಗಡ್ಡೆ' ಪರಾ. [ಪೊಱ (<ಪೊಱಗು) + ಕಡೆ]

**ಪೊಱಗಣ್** 'ಪೊಱಗು' ಪರಾ.

**ಪೊಱಗಣ** 'ಪೊಱಗು' ಪರಾ.

**ಪೊಱಗಯ್** 'ಪೊಱಕೆಯ್' ನೋ.

**ಪೊಱಗು**, ಪೊರಗು, ಹೊರಗಂ, ಹೊಱಗು (ನಾ). ೧. ಹೊರಗಡೆ ; ಹೊರಭ್ಬಾಗ : ಪೊಸತೆ ಪೊಳೆತ ಧಾನ್ಯಂಗಳನಾ ಧರಣೀಶಂ ಕಿದಱಿಸಿದಂ ನಿರಂತರಂ ರಾಜಗೇಹದೊಳಗಂ ಪೊಱಗಂ (ಆಪು. ೦೩-೬) ; ಪೊಸತು ಪಟದೆಳದು ಪೊಱಗೊಳಗು ಸವುಮನಿಪ್ಪವಱೊಳ್ (ಕಾವ್ಯಾವ. ೨೩೯). ೨. ಹೊರತಾದುದು : ಇನಿತುಂ ಪುರಮೇವುದೊ ಪೌದನಪುರಮೊನ್ನಾಳ್ಕೆ ಗಿಂತು ಪೊಱಗೆನಿಪಾಗಳ್ (ಆದಿಪು. ೦೯-೨೬) ; ಸೆಟ್ಟಿಯಗ್ಗ್ರಂ ಪನ್ನಸಿಗಗ್ಗ್ರಂ ಗಾವುಣ್ಡಗಳ್ಗಂ ಬಿಟ್ಟು ಕೊಟ್ಟಣಂ ಬೇಡುಬೆಸಂ ಪೊಱಗು (ಶಾಇಶಾ. IX-೧, ೬೬-೨೬ ; ೯೯೭). ೩. ಬಹಿರಂಗ ; ಬಾಹ್ಯ : ಒಳಗಂ ಭೇದಿಸದನ್ನಂ ಚಳಬುದ್ಧಿಗೆ ಪೊಱಗು ಬೆಟ್ಟಿತಾಗಿರ್ಕುಂ . . . ಜಿನವಚನಂ (ಧರ್ಮಾ. ೬-೨೬). ೪. ಹೊರತಾದ ವ್ಯಕ್ತಿ : ಇದಂ ಮಹಾಜನಂಗಳ್ ಕಂಡರಪ್ಪೊಡೆ ಸಭಾಜನಕ್ಕಂ ಸಹಪಂಕ್ತಿಗು ಪೊಱಗೆಂದು ಸಮಯಬಾಹ್ಯನಂ ಮಾಟ್ಪರ್ (ಹರಿಹಂ. ೦೯೬-೦೬) ; ಈ ನೆಲದೊಳ್ ಪೊಱಗಾರುಮಿಲ್ಲೆನಲ್ ಮನ್ನಿಸಿ (ಜುಕ್ಕಿಪು. ೯-೧೦೯). ೫. ಉಳಿದಿರುವುದು ; ಅವಶಿಷ್ಟ : ಅಪರಾಜಿತ ನಿತ್ತ ಪರಂತಪನ ತಪಶ್ಚರಣಮೊಂದೆ ಪೊಱಗೆನೆ ನಿರ್ವೇಗಪರಾಯಣಂ ಮನಂಗೊಂಡು ಪವಿತ್ರಶ್ರಾವಕವ್ರತಂಗಳೊಳ್ಕೊಣರ್ದಂ (ಶಾಂತಿಪು. ೦-೮೬). **ಪೊರಗು :** ೧. ಒಳ್ಳಿತಂ ಸುಡುವ ಕಿಚ್ಚಂ ಪೊರಗಿನಿಂ ತಣಿಸೆ ಒಳ್ಳಿದರ ನೆಚ್ಚಿಸೆ ಒಡೆದು ಪಡುಗಿಸುಗುಂ (ಕಾಮಾರ. ೬೬-೯೦). **ಹೊರಗು :** ೧. ಹೊರಗಿನ ಕಳ್ಳನನ್ನು ಹಿಡಿಯಬಹುದು, ಒಳಗಿನ ಕಳ್ಳನನ್ನು ಹಿಡಿಯಲಾಗದು (ಗಾದೆ). **ಹೊಱಗು :** ೧. ಹೇಸುತ ಮಾಂಸಮಂ ಹೊಱಗತ್ತ ನೂಂಕಿ ಶಿವಾಲಯವಿದಪವಿತ್ರವಾಯ್ತೆನುತ ಮತ್ತೆ ಮಿಂದು (ಬಸವಪು. ೦೬-೩೯). ೨. ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱ . . . ನಿನ್ನ ಲೋಚನಕ್ಕೆಳಮಿಂಚು ಹೊಱಗು (ಸಂಚರ. ೦೯-೦೯). ೩. ಅಭೇದ್ಯಚಿತ್ತಕಾಶಂಗೆ ಒಳಗು ಹೊ[ಱ]ಗಿಲ್ಲ (ಅದು. ೯೯-೦೦೬) ; ಹೊಱಗನೆ ಕೊಯ್ದು ಹೊಱಗನೆ ಪೂಜಿಸಿದವರ ಕಂಡು ನಾಚಿದೆನಯ್ಯ (ಅವಚಂ. ೯೩-೯೦೬). ೪. ಹೊಯ್ ಡಂಗುರವನವಂ ಹೊಱಗು ಹೊಱಗೀ ಸಭೆಗೆ ಹೊಯ್ ಡಂಗುರವನಾವನಾದೊಡಂ ಹೊಱಗೆಮಗೆ (ಪ್ರಭುಲಿ. ರೀ. ೬೯-೯) ; ಐದು ತಾಪಸವೇಷವನು ಬಳಿಕ್ಕಿದು ಪರವನಿತಾವ್ಯಸನಿಗಳಿಗಾದ ಗತಿಯನು ಹೊಱುವ ಪಾಪಕೆ ಹೊಱಗು ತಾನೆಂದ (ಕೊರಾ. ೩-೯-೦೩).

**ಪೊಱಗಣ್** = ಹೊರಗಡೆ : ಪೊಱಗಣ್ಗೆ ಸಯ್ದುರೆನೆ ತಾವೊಳಗಂ ತವೆ ತೋಡಿ ತಿಂದು ರಕ್ಕಸಿಯರ ಕಂಡ ಕಂಬಳದ ಮಾಟ್ಕೆನೊಲಾಗಿರೆ (ಹರಿಶ್ಚಾ. ೯-೯೬) ; ಎಲೆಲೆ ಭಕ್ತ ಪೊಱಗಣ್ಗೆಟ್ಟಂದಂಡಲೆಯದೇಟದಿರಲುದ್ದಂಡನಿವಂ ಮೊಂಕೆನುತ್ತೆ ಒಡೆದರ್ ಕರಮು (ಅದ್ಯಲಿ. ೦೦-೩೬). **ಪೊಱಗಣ, ಪೊರಗಣ, ಹೊರಗಣ, ಹೊಱಗಣ** = ೧. ಹೊರಭಾಗದ ; ಹೊರಗಡೆಯ : ಒಳಗಂ ದಕ್ಷಿಣಸುಕರದುಷ್ಕರಮಂ ಪೊಱಗಣ ಸುಕರದುಷ್ಕರಭೇದಮಂ . . . ಎಱೆಯೊಳೊರ್ವ್ವನೆ ಚಾರಿಸಲ್ ಬಲ್ಲಂ (ಎಕ. II, ೦೩೩-೬೬ ; ೯೮೭) ; ಊರಿಂದಂ ಪೊಱಗಣ ಮಯ್ಯೊಕೊಲ್ಲು ಧರ್ಮಕ್ಕಾರಾನುಂ ಪುರಜನವಿಟ್ಟ ಧೂಮಾಂದಂ (ಜನ್ನಕೋ. ೬೨-೦೯) ; ಬಸದಿಯ ಪೊರಗಣ ಚಿತ್ತಿಲ್ಲೊ ಳ್ಳಿನಂ ಕೆಮ್ಪೊಲದೊಳು ಎಣ್ಗೋವೆಡೆ ಎಳೆನೊಮ್ಬದಿವ್ಯಯ ಮಗಂ . . . ಕೊಟ್ಟ ಮಣ್ಣು (ಎಕ. X, ಕೋಲಾರ. ೯೦-೯೦ ; ೯೦೩) ; ದರಿಯಾ ಬೀಬಿಯು . . . ಹೊರಗಣ ವರ್ತಮಾನವನ್ನು ತಿಳಿಸುತ್ತ ಇದ್ದಳು (ಬಂಕಿಪು. ೨೦೬) ; ಊರ ಹೊಱಗಣ ಮಸಣವಟ್ಟಿಗೆಯೊಳಿರಲೆಂದು ಹಾರೈಸು ತೆಮ್ಮ ಮಯ್ದುನನೊಲ್ದು ನಗುತಂದು (ಸಂಚರ. ೬-೩೩) ; ನಱುಗಬ್ಬಿನೊಳಗಣ ರಸವ ಕಾಣದೆ ಪಶು ಹೊಱಗಣೆಲೆಯ ಸವಿವಂತೆ (ಶಶಿ. ೦-೦೦೩). ೨. ಬಾಹ್ಯದ; ಬಹಿರಂಗದ : ಇವೆಲ್ಲ ಹೊಱಗಣ ಮಾತು (ಬಸವ. ೬೬೦). **ಪೊಱಗಣಂ** = ಹೊರಗಿನವನಂ ; ಅನ್ಯ ; ಪರಕೀಯಂ : ಒಳಗಣಂ, ಪೊಱಗಣಂ, ಮುಂತಣಂ (ಶಬ್ದ. ೦೦೦ ಪ್ರಯೋ) ; ಅರಿಷಡ್ವರ್ಗಮನವನೀಶ್ವರನಾಟಲೆಯ ಪೊಱಗಣರಿಗೆ ಜಯಾಂಗನೆ ಪಲ್ಮೊರೆದಪಳೆನೆ ಪರಿಮುವು . . . ರಥಗಳ್ (ಶಾಂತಿಪು. ೦೦-೧೨೯). **ಪೊಱಗಾಗು, ಹೊರಗಾಗು, ಹೊಱಗಾಗು** = ೧. ಬೇರೆಯಾಗು ; ಹೊರತಾಗು ; ಎರವಾಗು : ಕುವಳಯ ಬಾಂಧವನೆಸವನೆ ಕುವಳಯಮಂ ಬೆಳಗಿ ಕುವಳಯಂ ಪೊಱಗೆನೆ ಪಾಂಡವರೆ ಪೊಱಗಾಗೆ ನಿನಗೀ ಕುವಳಯಪತಿಯೆಂಬ ಪೆಂಪೊಡಂಬಡೆ ನೃಪತೀ (ಸಂಕಥಾ. ೯-೩೬) ; ಜೀವಂ ಪೊಱಗಾಗಿ ಪತ್ತ್ರಹಮುಮಾರಯ್ಯೆಂದು ನಿರ್ವೀರ್ಯ ಮಾಗಿರೆ (ಜಾತಿ. ೨೩-೨೬) ; ಕೊಟ್ಟ ಹೆಣ್ಣು ಕುಲಕ್ಕೆ ಹೊರಗಾದರೂ ಹೆತ್ತೊಡಲಿಗೆ ಅವಳ ಚಿಂತನೆ ತಪ್ಪಿದ್ದೆಂದು ? (ಹೊಸಕ್ಕಿ. ೦೬) ; ಮಲ್ಲೇಶ್ವರ ದೇವರಿಗೆ ಸನ್ನಿಷೇಡದಲು ಬಿಟ್ಟ ಭೂಮಿ ಹೊಱಗಾಗಿ ಮೇಲಾದ ಭೂಮಿಯ ಹಡಪಪಳಂ ದಂಡನಾಯಕಂ (ಕಇ. II, ೦೩-೦೩ ; ೧೧೩೩) ; ಹೊಗಳಿಕೆಗೆ ಹೊಱಗಾದರ್ಕವರು ವಿಗಡರದಱೊಳಗಿಬ್ಬರಿಳಿದಿಂ ಹಗೆಗಳುಳಿದರು ಮೂವರೆಂದನು ಭಾನುಸುತ (ಕುಮಾವ್ಯ. ೯-೦೬). ೨. ಮಾಡದೆ ಉಳಿದಿರು,– ಹೊರಗಾಗಿರು : ಪಾರಲ್ಕೇಂ ಜೀವಿತಸಂಧಾರಣಕಂ ಗಮನವೊಂದೆ ಪೊಱಗಾಗಿರೆ...ನಮಗಿದು ಕಾರ್ಯಂ (ಕಾದಂಬ. ೬೩೬). ೩. ಮುಟ್ಟಾಗು; ಋತುವಾಗು ; ಬಹಿಷ್ಠೆಯಾಗು : ಈ ದಿನ ಅವಳು ದೇವಸ್ಥಾನಕ್ಕೆ ಬರುವಂತಿಲ್ಲ, ಹೊರಗಾಗಿದ್ದಾಳೆ (ರೂಢಿ). **ಹೊರಗಲು** = ಹೊರಗಿನ ಕೆಲಸಗಳಿಗೆ ಬಳಸುವಂಥದು ; ಮಡಿಯಲ್ಲದುದು : ಆ ಚೊಂಬನ್ನು ಅಡಿಗೆಮನೆಗೆ ತರಬೇಡ, ಅದು ಹೊರಗಲು (ರೂಢಿ). **ಹೊಱಗಾಲಿಸು** = ಹೊರಗಡೆಯ ಶಬ್ದವನ್ನು ಆಲಿಸು,—ಕೇಳು : ತಱಗೆಲೆ ಗಱಕೆಂದೊಡೆ ಹೊಱಗನಾಲಿಸುವೆ (ಬಸವ. ೩೬೯) ; ಅಡಿಗಡಿಗೆ ಹೊಱಗನಾಲಿಸಿ ಮತ್ತೆ ಮನೆಯೊಡತಿಗಂಜಿ ಕೆಲಸವನು ಮಾಡುತ್ತಿಪ್ಪ ಪನಿತೆಗಾದಪತ್ತನಾಲಿಸದೆ ಕಿಟ್ಟು ದಟ್ಟಿಸುರು (ಹತಶಾ. ೦೨-೦೦).

[ದೇ. ೫ ತಮಿ. ಪುಱ, ಪುಱಕು, ಪುಱಕ್ಕು ; ಮಲ. ಪುಱ ; ಕೊಡ. ಪೊರಮ. ಕೋತ. ಪೊರಜ ]

**ಪೊಱಗುಂಡ**, ಹೊಱಗುಂಡ (ನಾ). ಹೊರಗಿನ ಕೆಲಸವನ್ನು ಮಾಡುವ ಆಳು, –ಸೇವಕ : ಖಂಡಿತಸ್ಮರಭಕ್ತನಳವಿಂಗೆ ಮೆಚ್ಚಿ ಶಶಿಮಂಡಲಾನನೆ ಭಕ್ತಿಯಿಂದೆಱಗಿ ಪಶುಪತಿಗೆ ಗಂಡುದೊಳ್ತಾಗಿ ನೀನಿರ್ಪುದಾಂ ನಿನಗೆ ಪೊಱಗುಂಡನಾಗಿರ್ಪೆನೆನುತೆ (ಶಮ್ಯಾ. ೩-೩೩) ; ನಿನಗೆ ನಾನು ಪೊಱಗುಂಡನಾಗಿರುವೆನೆಂದು ಶಿವದೀಕ್ಷೆಯಂ ಪಡೆದು (ಶೃರಸಂ. I, ೩೬). **ಹೊಱಗುಂಡ :** ಈ ವಿಶ್ವಮಂ ಸೃಜಿಸುವಲಿ ಶಂಭುವಿನ ಲೀಲಾವಿಡಂಬನದ ಹೊಱಗುಂಡನಾಗಿರ್ಪುದಱಿನಾ ವಿಷ್ಣುಗಾದುದು ಕಲತ್ರಾಪ್ತಿ (ಶಮ್ಯಾ. ೦೦ ೩೬).

[ಪೊಱ (<ಪೊಱಗು) + ಗುಂಡ$_0$ (ಶ ← ತೆಲು. ಗುಂಡ = ಸೇವಕ)]

**ಪೊಱಗೆ**, ಹೊರಗೆ, ಹೊಱಗೆ (ಅ). ೧. ಹೊರಗಡೆಗೆ ; ಆಚೆಗೆ : ದುರ್ಯೋಧನಂಗಿಂ ಪುಗಲ್ಕಡೆ ತ್ರೈಭೂಭುವನಂಗಳಿಂ ಪೊಱಗೆ ಮತ್ತೆಲ್ಲಿತ್ತೊ ಬಾಣಾಂತಕಾ (ಸಂಕಥಾ. ೦೩-೬೬) ; ಒಳಗೆ ಬೆಳಗು, ಪೊಱಗೆ ಕಟ್ಟಿಲೆ (ಜಾತಕಾ. ೩೯ ಉದಾ.) ; ಮಹಾವಿಭವದಿಂದಿರುತೆ ಬ್ರಹ್ಮಾಂಡದಿಂ ಪೊಱಗೆ ಶಿವಲೋಕಮಂ ನೆನೆದ ಮಾತ್ರದೊಳಾಗಿಸೆ (ಹಿಪು. ೦೩-೨೦). ೨. ಬೇರೆಯಾಗಿ ; ವ್ಯತಿರಿಕ್ತವಾಗಿ : ಅವಱಿಂ ಪೊಱಗೆ ಮಾಳಾಮೃತ್ತ

ದಂಡಕಂಗಳ್ ಮಾತ್ರಾನಿಯಮಸ್ಕಂಧಕಾದಿಜಾತಿಗಳೆಂಬಿವಕ್ಕುಂ (ಛಂದೋಂಬು. ೦-೯೬ ವ). ೩. ಬಹಿರಂಗಪಲ್ಲಿ; ಬಾಹ್ಯದಲ್ಲಿ: ಅತ್ರಿಯ ಪಣ್ಗಳಂತೊಳ ಗಶುದ್ಧನುಂ ಪಟಫಲದಂತೆ ಪೊಱಗೆ ಸೇವ್ಯನುಂ (ಧರ್ಮಾಮೃ. ೬-೬೨); ಪೊಱಗತುಳಧೃತಿಯನಾಂತಂ ನೆಱೆ ಮನದೊಳ್ ತ... ...ವ ಕುಸುಮಾ ವಳಿಯಂ (ಕುಸುಮಾ. ೧೧-೧೦೩); ಮನೋಜನಚ್ಚ ... ಪಿರಿದೊಳ ನಟ್ಟರಲ್ ಪೊಱಗೆ ತೋಱುವ ನುಣ್ಣಱಿಯಂತಿರೊಪ್ಪುಗುಂ (ಕಾವ್ಯಸಾ. ೫೯೩). ೪. ಬಳಿಕ; ಅನಂತರ: ಅಂತು ಪೊಱಮಟ್ಟು ಪೊಱಗೆ ಅವರೋಧ ಪ್ರಮದಾಕದಂಬವಿಗಳತ್ಕ್ಷೀರಸಾರಂ . . . ತೇಂಗೆ ತರಂಗಮಾಲೆ ರತಿ ಕಂದರ್ಪರ್ಗೆ ತೀವಿಟ್ಟ ಬಣ್ಣಾವುರಂ ಜಾನಿನೆ ಕಣ್ಗೆ ಮಾಡಿದುದು ಕಾಸಾರಂ ಸುಧಾಸಾರವಮಂ (ಅಜಪು. ೬-೩೦ ವ). **ಹೊರಗೆ :** ೧. ಹೀನಾವಮಾನವಾಗಿ ಬೈದು, ಹೊರಗೆ ಕಳುಹಿಸಿದರು (ಚಾಮು. ೬೨); ಅವು ಹಣ್ಣಾದ ವೆಂದರೆ ಬಿಸಲಿಗೂ ಗಾಳಿಗೂ ಅರಳಿ ಒಳಗಿನ ಹತ್ತಿ ಹೊರಗೆ ಬರುತ್ತದೆ (ಕುಂಜಾಯಿ. ೯-೨೭). ೩. ಈ ವರ್ತಮಾನವನ್ನು ಹೊರಗೆ ಹಬ್ಬಿಸದೆ (ಕುಜಾಶಂ. I. ೨೩೨). **ಹೊಱಗೆ :** ೧. ಭಾಂಡ ಭಾಜನ ಶುದ್ಧ ವಿಲ್ಲದವರ ಭಕ್ತಿ ಹಂಡದ ಮಡಕೆಯು ಹೊಱಗೆ ತೊಳೆದಂತೆ (ಬಸವ. ೦೦೯); ಇಱಿದು ಚಕ್ರವ್ಯೂಹವನು ಱಱಿದಱಿಯು ಮಾಡಿ ಕಿರೀಟಿಯದಱಂ ಹೊಱಗೆ ಹಂಸವ್ಯೂಹದಲಿ ಕೆಣಕಿದನು ಕಾಳೆಗವ (ಕುಮ್ಯಾದ್ರೋ. ೦೦-೦೯); ಹೊಲೆಯ ಹೊಱಗಿಹನೆ ಊರೊಳಗಿಲ್ಲವೆ (ಪುರಂದ. ೧-೦೭೬ ಪಲ್ಲ). ೩. ಒಳಗೆ ಕುಟಿಲ ಹೊಱಗೆ ವಿನಯವಾಗಿ ಭಕ್ತರೆನಿಸಿಕೊಂಬವರ ಬಲ್ಲನೊಲ್ಲ ನಯ್ಯಾ ಲಿಂಗವು (ಬಸವ. ೯೬); ಹೊಱಗೆ ಶಶಿಧರನಿತ್ತ ಹಸಿದೆನೆಂದೆನುತಿರಲು (ಶಿಲ.ರೇ. ೫೯-೦೮); ಒಳಗೆ ಕುಜನರು ಹೊಱಗೆ ಧರಣೀವಳೆಯ ಮಾನ್ಯರು (ಕುಮ್ಯಾಸ. ೧-೩೯). 'ಒಳಗೆ' ಪರಾ.

**ಪೊಱಪೊಱಗೆ, ಹೊಱಹೊಱಗೆ** (ದ್ವಿರುಕ್ತಿ) : ಪಸರಿಸಿದ ಪಯಃಪೂರದ ಪೊಸವೆಳ್ಳ ನಿಜಾಂಗರುಚಿಯ ಪೊಱಪೊಱಗೆ ಪೊದಟ್ಟಿಸಿದಿರೆ (ಅಂಪು. ೬-೯೨); ಅಡ್ಡಾಯುಧನಿಹತಿಯಿಂ ಹಱಿದಲೆಯವನ ದೇಗುಲದ ಹೊಱಹೊಱಗ ಬಿದ್ದುದು ಖಳನ ತಲೆ (ಬಸಪು. ೨೯-೨೭). **ಪೊಱಗಿಕ್ಕು, ಹೊಱಗಿಕ್ಕು**=೧. ಹೊರಗಡೆ ಇಡು: ತರುಣಿಮುರಾ ವಿಲಾಸಕುಸುಮಾಸ್ತ್ರನನೀಕ್ಷಿಸೆ ಕಾಮತಾಪಮಂ ತರುಣಮೃಣಾಳವಂ ತೆಗೆದು ಪೂಗೊಳದಿಂ ಪೊಱಗಿಕ್ಕಿ ದುದದಿಂ ಕೊರಗಿ (ಮಲ್ಲಿಪು. ೩-೨೯); ಕಡೆದು ಕಲಂಕಿ ಮುನ್ನಮಿಳಿವಸ್ತುಗಳಂ ಪೊಱಗಿಕ್ಕಿ ಸಂಪದಂಗಿಡಿಸಿದ ಮೇರು ದೈವದಿನಿದಿಂದೊಳಗಾಯ್ತೆನಗೆಂದು ಬಂದು ಪಾಲ್ಗಡಲಮರಾದ್ರಿಯಂ ಮುಳಿದು ಮುತ್ತಿದುದೆಂಬಿನಂ (ಪುಷ್ಪಪು. ೧೦-೩೩). ೨. ದೂರೀಕರಿಸು ; ಬಹಿಷ್ಕರಿಸು ; ತ್ಯಜಿಸು : ಮುನ್ನಂ ಪಱಿಯುರುಮನಾಪ್ಪರುಮಂ ಪೊಱಗಿಕ್ಕಿ ಪತಿಗೆ ಹಿತೋಪದೇಶಂ ಗೆಯ್ಯರ್ (ಶಂಕರಂ. ೦೩೯-೨೦); ಆ ಗುರುಗಳೆಂದೈದುಮಂತ್ರವನಾಗ ಜಪಿಸುತೆ ಚಿತ್ತದೊಳು ಲೇಸಾಗಿ ಜಿನಪದಭಕ್ತಿಯಲ್ಲದೆ ಪೆಱವ ಪೊಱಗಿಕ್ಕಿ (ಸಾಳ್ವಭಾ. ೩-೫೫); ಕುಲದ ಬೇರಿಗೆ ನೀನೆ ಗುದ್ದಲಿಗೊಳಲದೇಕೆ ಸುಪುತ್ರ ನಾಗಿದನಲಘುವಿಪ್ರರು ಕೇಳಿದಡೆ ಹೊಱಗಿಕ್ಕರೇ ನಿನ್ನ (ಬಸಪು. ೩-೫೬). ೩. ಮೇಲಕ್ಕೆ ತಳ್ಳು ; ಮೇಲಂ ಮುಖವಾಗಿ ದೂಡು: ನೀರು ಹೊಱ ಗಿಕ್ಕುವುದು ಮಂಱಿಕೆ ಬಾರಿ (ಕುಮ್ಯಾವಿ. ೩-೨೭). **ಪೊಱಗಿಡು, ಹೊರಗಿಡು, ಹೊಱಗಿಡು**= ೧. ಹೊರಗಡೆಯಲ್ಲಿ ಇರಿಸು : ಅಡಗಟ್ಟ ಮಡಕೆಯಂ ಪೊಱಗಿಡುವಂತೆ ಕೂಱನಟ್ಟು ಮಡಕೆಯನೇಕೆ ಹೊಱಗಿಡರ್ (ಧರ್ಮಾಮೃ. ೬-೯೩); ತವಮ್ಮಾಯುಷ್ಯ ಭಾಷೆಗಳಂ ಪೊಱಗಿಡುವಂತೆ ಚಪ್ಪರದ ಪೊಱಗೆ ಮೆಲ್ಲನಿಳುಪಿ (ಶಂಕರ. ೩-೫೫); ಮಳೆಯಲ್ಲಿ ಕೊಡೆ ನೆನೆದು ಒದ್ದೆಯಾಗಿದೆ. ಬಿಡಿಸಿ ಹೊರಗಿಡು (ಟೂಂ); ತಂದು ಹೊಱಗಿಟ್ಟು ಕಬ್ಬಿಲರ ಕೈವಿಡಿದು ನೀವೆಂದ ಪ್ರಸಾದವಿದೆ ಕೊಳ್ಳಿಯೆನಲು (ಸಿದ್ಧರಾ. ೫-೦೫). ೨. ದೂರೀ ಕರಿಸು : ಮುದಿಯನುಮನ್, ಮಡೆಯನುಮನ್ ನೀನ್ ಎಂಬುದೊರ್ಮೆಯೇ ಪೊಱಗಿಡದ ಮಱುನ್ನವನ್ (ಅಂತಿಗೂ. ೦೩-೨೬೯); ಬೇಡ, ತಡೆಯದಿರು, ಪೊಱಗಿಡಯನ್ ಎನ್ನ ಮುಂದಿನ ಪಾಡುಮನ್ (ಚಿಕ್ಕಶ್ರ. ೩೩-೭೦೭).

[<ಪೊಱಗು]

**ಪೊಱಗೋಟೆ, ಹೊರಕೋಟೆ, ಹೊಱಕೋಟೆ** (ನಾ). ೧. ಒಳಕೋಟೆಗೆ ಬೇರೆಯಾದ ಸುತ್ತಣ ಕೋಟೆ; ಹೊರಗಿನ ಕೋಟೆ. ೨. ಕೋಟೆಯ ಹೊರಭಾಗ : ನೊಱಂಬ ದಡಿಗ ರಾಚಮಲ್ಲ ಮಯ್ದಾಡಿ ಗುಣ್ಡಿಗೆ ×× ವಾಗಿ ಬರುಬಳಿಸಿ ಬಿಟ್ಟಡೆ ಪೊಱಗೋಟೆಯುಟ್ಟಱೆವಲ್ಲಿ ಪಲರಾ ಪಯಣದ ಮಱು[ವ]ಕಸೂರಮಾಟ್ಟಿಡಿರಕಸ ಮನುಜರಾ ದೇವನಿಱಿದು ಬಿಟ್ಟ (ಶಾಶಾ. IX-i. ೦೩-೭; ೯೦೦). **ಹೊರಕೋಟೆ :** ೧. ಮುತ್ತಿನ ಒಳಕೋಟೆ ಮುತ್ತಿನ ಹೊರಕೋಟೆ ಮುತ್ತ ಬಿಗಿಸ್ಯಾರ ಹುಲಿಮುಖಕ (ಲೋಕಗೀ. ೭೯). **ಹೊಱಕೋಟೆ :** ೧. ಮುಱಿಯಲಿಱಿದು ಹೊಱಕೋಟೆಯ ಕೊಂಡು ಮತ್ತುಮುಱಿದರೊಳಗೋಟೆಗಂದು (ಶಂಪಂ. ೦೮-೦೫೯). 'ಒಳಕೋಟೆ' ಪರಾ. [ಪೊಱ (<ಪೊಱಗು)+ಕೋಟೆ$_1$ (<ಕೋಂಟೆ)]

**ಪೊಱಡ** 'ಪೊಱಂಡ' ನೋ.

**ಪೊಱಡು$_1$** 'ಪೊಱಮಡು' ನೋ.

**ಪೊಱಡು$_2$** 'ಪೊಱಂಡು$_2$' ನೋ.

**ಪೊಱತು, ಪೊರತು, ಹೊರತು$_1$, ಹೊಱತು** (ನಾ). ಹೊರಗೆ ಉಳಿದುದು; ಬೇರೆಯಾದುದು ; ಪ್ರತ್ಯೇಕವಾದುದು : ಬರತೆಗೆದುದೊ ನೃಪನ ಗುಣೋತ್ಕರಮೆನೆ ಕಳುಪಲ್ಕೆ ಕಡೆಯ ಬಾಗಿಲ್ವಾಡಂಬರೆಗಂ ಬಂದುದು ಕಾದಂಬರಿ ಪೊಱತಾಗಖಿಳಕನ್ಯಕಾನಿಕುರುಂಬಂ (ಕಾದಂಬ. ೦೭೯). **ಪೊರತು :** ತಮ್ಮ ಜನಕಸುತೆ ಪೊರತಾಗಿ ಲಂಕಾನಗರಿಯನ್ನು ಕಿನಿಸಿಂದ ಭಸ್ಮಸಾತ್ಕೃತ ಗೈದನೇಂ ಪ್ರೌಢನೆನುತೊರೆದರಾಗಸದೊಳು (ಶಂಕಾರಾ. ೫-೮೯-೫೪); ಸಂತಾಪವನೀವ ಘೋರತರಕೋಪದಿ ಕೇಳ್ ಪೊರತಾದೆ (ಅನುಕ. ೩೭). **ಹೊರತು$_1$ :** ಹೊಳೆಯ ತೀರದ ಹಸಿರುಹುಲ್ಲುಹಾಸಿಗೆಯು ಎದೆಯ ಸೆಳೆಯುವುದು ಮನವು ಹೊರತಿಹುದು (ವಿಶಾಶ. ೦೨-೮); ಕಾಲ ದೇಶದ ಪ್ರಭಾವದಿಂದ ಎಂಥ ಮಹಾಕವಿಯಾದರೂ ಹೊರತಾಗಲಾರನು (ತಮ.೭೯). **ಹೊಱತು :** ತಂಮ್ಮ ಹಳೆ ಕೆಂಪಿತಿಯನು ದೇವಾಸ ಹೊಱತಾಗಿ (ಎಕ. VII. ಶಿಮೊ. ೯೭-೫ ; 1218); ಹರಹರಾ ಇನ್ನಾರೂ ತಂಗಿಗೆ ವರನು ವಾರಿಧಿ ವಲಯದವನೀಶ್ವರರು ನೆರೆದಿದೆ ರೂಪು ವಿಕ್ರಮವೆರಡು ಹೊಱತಾಗಿ (ಕುಮ್ಯಾಆ. ೦೯-೩೩); ತನಗೆ ನಿಮ್ಮೊಲವೆಂಬ ಭಾಗ್ಯದ ಘನತೆಯುಳ್ಳಡೆ ಸಾಕು ಹೊಱತನು ನೆನೆಯಲಾಗದು (ಕೌಶಿರಾ. ೩-೨೯).

**ಹೊರತು ಪಡಿಸು** = ಬೇರೆ ಮಾಡು ; ಪ್ರತ್ಯೇಕಿಸು : ಹಿಂದಿನ ಪೀಳಿಗೆಯ ಕತೆಗಳಲ್ಲಿಯ ಸೋಲನ್ನು ಮಾಸ್ತಿಯವರ ಕತೆಗಳನ್ನು ಹೊರತುಪಡಿಸಿಯೇ ಹುಡುಕಬೇಕಾಗುತ್ತದೆ (ಹೊಸಸ. ೨೭೬).

[ದೇ.೫ ತಮಿ. ಪುಱತ್ತು]

**ಪೊಱತೆಗೆ, ಹೊರತೆಗೆ, ಹೊರದೆಗೆ, ಹೊಱದೆಗೆ** (ಕ್ರಿ). ೧. ಇರುವ ಕಡೆಯಿಂದ ಬೇರೆ ಕಡೆಗೆ ಒಯ್ಯು,–ಸಾಗಿಸು : ಸುತರ್ ಚಿತಾರೂಢ ನಾಗಿರ್ದ ಶ್ರೀವಿಜಯಸುಮಂ ಕಂಡು ಬೇಗಮಗ್ನಿಕುಂಡದಿನುರ್ವೀಶ್ವರನಂ ಪೊಱತೆಗೆದು (ಶಾಂತಿಪು. ೬-೩೯ ವ). **ಹೊರತೆಗೆ :** ೨. ಬಹಿರಂಗ ಪಡಿಸು; ಪ್ರಕಾಶಪಡಿಸು : ಅರೆಯೊಳು ಬೈತೊಂದು ಚಾರುವಿಗ್ರಹವನು ಪರಶಿಲ್ಪಿ ಪರಿಭಾವಿಸುತ್ತ . . . ಹೊರತೆಗೆದನು ಮತ್ತೆ (ಶಂಚಾಪ. ೦೭೬-೬೬). **ಹೊರದೆಗೆ :** ೧. ನೆಕ್ಸ್ಲದೋವ್ ಚರ್ಮದ ಚೀಲವನ್ನು ಹೊರದೆಗೆದು . . . ನೋಟೊಂದನ್ನು ಕೊಟ್ಟನು (ಪುಶಸ್ತು. ೨೯೭). **ಹೊಱದೆಗೆ : ೩.** ಬೇರೆಯಾಗು ; ಹೊರತಾಗು : ಉನ್ನತದ ಸುಖದುಃಖದಲಿ ಸಂಪನ್ನ ನಾಗದೆ ಹೊಱದೆಗದು ತಾನೇಕನಾಗಿಹುದು . . . ಈ ಭವವ ದಾಟುವರೆ (ಶಿಬಾಗ. ೦೦-೫-೦೭). 'ಒಳದೆಗೆ' ಪರಾ. [ಪೊಱ (<ಪೊಱಗು)+ತೆಗೆ$_1$]

**ಪೊಱತೊಲಗು** (ಕ್ರಿ). ೧. ಹೊರಕ್ಕೆ ಹೋಗು. ೨. ಮುಟ್ಟಾಗು ; ಬಹಿಷ್ಠೆಯಾಗು : ಕಾಂತೆಯರು ಪೊಱತೊಲಗೆ ಋತುವೆನಿಕು (ಜಂಗಜಾ. ೧೩೯-೪). [ಪೊಱ (<ಪೊಱಗು) + ತೊಲಗು₁]

**ಪೊಱದಡಿ** (ನಾ). ಜಲಾಶಯದ ಆಚೆಯ ದಡ : ತೊಱೆಯ ಪೊಱದಡಿಯ ಕರಂಜಕುಂಜದೊಳ್ ಸಂದಣಿಸಿ ನಿಂದು ರೋಮಂಥ ಲೀಲಾತತ್ಪರತೆಯಿಂದರನಿಮೀಲಿತಾಕ್ಷಂಗಳಾದ ಕಾಡೆಮ್ಮೆಯ ಮೊಗದಿನುಗುವ ನೊರೆಯನುರುಳಿಗೊಂಡು ತಂದಡವಿಯ ಗಿಡುಗಳೊಳ್ ಗುಡಿಗಟ್ಟಿದಂತೆ ತೊಡರ್ಚಿಯುಂ (ಚಂದ್ರಪ್ರ. ೯-೪ ವ). [ಪೊಱ (<ಪೊಱಗು) + ತಡಿ₂]

**ಪೊಱದೋಂಟ** (ನಾ). (ಊರು, ನಗರ ಮೊದಲಾದುವುಗಳ) ಹೊರಗಡೆಯಿರುವ ತೋಟ,—ಉದ್ಯಾನವನ : ಹೊರಭಾಗದ ತೋಟ : ಕೋಂಟೆಗಳನೇಱಿದು ಪರಿಖೆಯ ಜಲಂಗಳಂ ದಾಂಟಿ ಕತ್ತಲೆಯೊಳೊರ್ವನೆ ಮಂತ್ರಿ ಪೊಳಲ ಪೊಱದೋಂಟದೆಡೆಯೊಳ್ನಿಲಿಸಿ ದಂಬಿಕಾಭವನಮಂ ಸಾರ್ದನು (ಶ್ರೀಶಂಕರ. ೩೦-೩೪).
[ಪೊಱ (<ಪೊಱಗು) + ತೋಂಟ]

**ಪೊಱನೋಟ, ಹೊರನೋಟ** (ನಾ). ಹೊರಗಿನ ನೋಟ; ಬಾಹ್ಯ ದೃಷ್ಟಿ : ಅಱಿತು ನಿಟ್ಟಿಸೆ ಗಂಡುಮಕ್ಕಳಿಂದತಿಶಯದೆಱಕದೊಳೆಸೆವ ಪೆಣ್ಗಳನು ಪೊಱನೋಟದಿಂದ ನೋಡದೆ ಪೋಲೆನಿಸದೆ ಮಱುಕವೆರಸಿ ಮನ್ನಿಪುದು(ಹದಿಬ. ೫-೦೩). **ಹೊರನೋಟ** : ಹೊರನೋಟಕ್ಕೆ ಕಾಣುವ, ಪುನರಾವರ್ತನೆಯೆಂದು ತೋರುವ ಇಲ್ಲಿನ ಕೆಲವು ಭಾಗಗಳಿಗೂ . . . ಭಿನ್ನಾಭಿಪ್ರಾಯಗಳಿವೆ (ಜಗದಾ. ೨). 'ಒಳನೋಟ' ಪರಾ.
[ಪೊಱ (<ಪೊಱಗು) + ನೋಟ]

**ಪೊಱಪಚ್ಚ, ಹೊಱಹಚ್ಚ** (ನಾ). ೧. ಮೇಲುಹೊದಿಕೆ : ನಿಚ್ಚಲಿ ಕಾರಿರುಳೊಳ್ ಪೊಱಪಚ್ಚಮನುಟ್ಟದಿರ್ದಱಿಂ ಕಕ್ಷದೊಳಾ ಪಾಟಚ್ಚರಭಯದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದಂಗಣದೊಳ್ (ಶಾಂತಿಪು. ೭-೩೩). ೨. ಹೊರಗಿನ ವೇಷ ; ಬಾಹ್ಯವೇಷ : ಅಂತಾದೊಡಾಂ ಪುರುಷ ನಲ್ಲ ನಪುಂಸಕನುಮಱಿಯದವರ್ಗೆ ಪೊಱಪೊ[ಪ]ಚ್ಚದ ಶೃಂಗಾರಮಂ ಮೆಱೆವ ಪುರುಷಾಕಾರದೊಳಿರ್ಪೆಂ (ಪುಣ್ಯಾಸ್ರ. ೫-೨೩ ವ). **ಹೊಱಹಚ್ಚ** : ೨. ಎನ್ನ ಭಕ್ತನೆಂದೆಂಬರು ಎನ್ನ ಹೊಱಹಂಚಿ[ಹಚ್ಚ]ಒಳಬೊಳ್ಳೆತನವನಱಿಯರಾಗಿ (ಬಸವ. ೩೦೫) ; ನಿಮ್ಮ ನಿಜವನಱಿಯದ ಶರಣರು ಹೊಱಹಚ್ಚ ಒಳಬೊಳ್ಳೆವೊಲ್ಲರು ಲಿಂಗೈಕ್ಯರು (ಶವಚಾ.ಸ. ೫೯೦-೭) ; ಇದಱ ವಿಶೇಷಮೇನಿದಱ ದೊಡ್ಡಿತದೇನೊಳಬೊಳ್ಳೆಯಾದ ವೇಷದ ಬಲುಹೇನಿದಕ್ಕೆ ಹೊಱಹಂಚೆಯ[ಹಚ್ಚದ]ಲೇನಹುದು (ಕಕೆ. ೩೫) ; ಶ್ರುತಿಗಳ ಮಾರ್ಗಮೊಂದು ನಡೆಯೊಂದು . . . ನಾಡೆ ಹೊಱಹಚ್ಚದ ಭಕ್ತಿಯೊಳಿರ್ಪನಾದ್ವಿಜಂ (ಪ್ರಭುಲಿ. ೨೭-೦೪೭). [ಪೊಱ (<ಪೊಱಗು) + ಪಚ್ಚ₂]

**ಪೊಱಪಾಯ್** 'ಪೊರವಾಯ್' ನೋ.

**ಪೊಱಪಾಳೆಯ, ಪೊರಪಾಳೆಯ, ಹೊಱಪಾಳೆಯ** (ನಾ). ಊರ ಹೊರಗಿನ ಸೈನ್ಯದ ಪಾಳೆಯ,—ಬೀಡು : ಕೋಂಟೆಯುಂ ಪತ್ತಿ ಪೊಱಪಾಳೆಯಮನೀಕ್ಷಿಸುತ್ತಿರ್ಪನಂ (ಕಬಿತ್ರ. ೪೨-೦೩). **ಪೊರಪಾಳೆಯ** : ಬೆದರಿದನಗಸ್ತ್ಯಂ ತ್ರಿಶಂಕು ತಲ್ಲಣಗೊಂಡ ಚದರಿ ಪೊರಪಾಳೆಯುಂ ಪಾಳಾಯ್ತು (ಚಂಗಾರಾ. ೫-೦-೨೩). **ಹೊಱಪಾಳೆಯ** : ಶಾಲಾವೀಧಿಯೊಳಗೆ ಸಂದಣಿಪ ಕಾಲಾಳುಗಳಾಯುಧವೆಳಗು ಪೇಳಲಳವೆ ಹೊಱಪಾಳೆಯದರ ಲೆಣ್ಣ ಕೀಲಿಸಿ ಕದುಽದಿಱಿದುವು (ಕಂಶರ. ೦೩-೩೨).
[ಪೊಱ (<ಪೊಱಗು) + ಪಾಳೆಯ]

**ಪೊಱಪುರ್ವು** (ನಾ). ಹುಬ್ಬಿನ ಹೊರಭಾಗ ; ಭ್ರೂಮಧ್ಯ : ಕಣ್ಣ ಪೊಱಪುರ್ವ[ಪಾಠಾಂ. ಬುರ್ವ]ಗಳ್ಗಂ ನುಣ್ಣನೆ ಭ್ರೂಮಧ್ಯಮೆಸರೆ ಹಯಶಾಸ್ತ್ರದೊಳಂ (ಅಶ್ವಶಾ. ೯-೦೭). [ಪೊಱ (<ಪೊಱಗು) + ಪುರ್ವು]

**ಪೊಱಪೊಣ್ಮು, ಪೊರಪೊಣ್ಮು, ಹೊರಹೊಮ್ಮು, ಹೊಱಹೊಮ್ಮು** (ಕ್ರಿ). ೧. ಹೊರಗೆ ಹರಿ : ಹೊರಸೂಸು : ಅಂತು ಮನದೊಳಾದ ಮೋಹರಸಮೆ ಕಣ್ಣಿಂ ತುಳುಂಕುವಂತೆ ಪೊಱಪೊಣ್ಮುವ ನಯನಜಲಂಗಳನುತ್ತರೀಯವಲ್ಕಲವಸನೋಪಾಂತದೊಳೊತ್ತುತ್ತುಂ (ಶಂಕರಾ. ೬-೨ ವ) ; ನದಿಯಿಂ ಸ್ರವಣಂ ಪೊಱಪೊಣ್ಮೆ ಮಿಕ್ಕುಪೊಕ್ಕರಣೆಯ ನಿರ್ಗಳಿರ್ಕೆ ಪೊಱಪೊಣ್ಮೆ ಘನಾಗಮದೊಳ್ ವಿನಿಂದಿತಂ (ಲೋಕೋಪ. ೪-೮೪). ೨. ಕಾಣಿಸಿಕೊಳ್ಳು ; ಪ್ರಕಟವಾಗು ; ವ್ಯಕ್ತವಾಗು : ಗುರುಕರುಣಾರಸಮದು ಮನದಿಂ ಪೊಱಪೊಣ್ಮೆ (ಶಂಕರಾ. ೦೦-೦೨೯) ; ಮನೋನುರಾಗಮೆ ತನುವಿಂ ಪೊಱಪೊಣ್ಮುವಂತೆ ಪುಳಕಕುಳಂ ಭೋಂಕನೆ ನೆಗೆಯೆ (ಶಾಂತಿಪು. ೩-೫೭); ಎದೆ ಪಿಡಿದದಂ ಮನಮಾರೆ ತಾಳ್ದನಮರತಿದುರ್ಗುಣಮನಂತಮುಖದೆ ಪೊಱಪೊಣ್ಮದಂತೆ (ಶಬ್ದರಾ. ೦೨-೦೯). ೩. ಹೊರಗೆಲ್ಲ ಹರಡು,-ಆವರಿಸು,-ವ್ಯಾಪಿಸು : ಆಕೆಯ ವಿಲಾಸಹಾಸಮೆ ಪೊಱಪೊಣ್ಮಿದಂತೆ ಬೀದಿಬೀದಿಗಳೊಳೆಡೆಗಿಱಿದು ಕಿದಱಿದ ಕುಸುಮರಜಂಗಳುಂ (ಅರಿಪು. ೭-೩೭ ವ) ; ಮುನೀಶನ ಹೃದಾತ್ಮಜ್ಯೋತಿ ಮೆಯ್ವೆರ್ಚೆ ಪಜ್ಜಳಿಸುತ್ತಂ ಪೊಱಪೊಣ್ಮಿತೆಂಬ ತೆಱದಿಂ (ಸುಕುಮಾ. ೦-೦೨೦) ; ಮಂಜೀರಕಧ್ವನಿ ಪಂಚಬಾಣಶರಾಸನಧ್ವನಿಯಂತೆ ವಿಸ್ತಾರದಿಂ ಪೊಱಪೊಣ್ಮಲ್ (ದಶಕು. ೦೨-೩೦). ೪. ವ್ಯಾಪಕವಾಗಿ ನೆರವೇರು : ರಾಜ್ಯಾಭಿಷೇಕೋತ್ಸವಂ ಪೊಱಪೊಣ್ಮುತ್ತಿರೆ ರಾಜ್ಯಮಂ ಕಂಡೆ (ಅರಿಪು. ೭-೨೩). ೫. ಹುಟ್ಟು ; ಆವಿರ್ಭವಿಸು : ತತ್ಸ್ಥಳಸ್ಥೂಲಭುಜಂಗನಿಶ್ವಸಿತಮಾ ನಗದಿಂ ಪೊಱಪೊಣ್ಮೆ ಲೋಲಕಲ್ಲೋಲಪರಂಪರಾಪರಿಗತಂ ಪಂದತ್ತು ನಗೋಪಕಂಠದೊಳ್ (ಆಪು. ೪-೩೩) ; ತುಂಬುಮೆಱೆಯಿಂ ಪೊಱಪೊಣ್ಮುವ ಜೊನ್ನದಂತೆ (ರಾಜಶೇ. ೦-೯೪). ೬. ಮೇಲಕ್ಕೆ ಚಿಮ್ಮು ; ಪುಟಿ : ಚಕಿತತರಂಗಸಂಘಹತಿಯಿಂ ಪೊಱಪೊಣ್ಮುವ ಮುತ್ತು ದಿಗ್ವಧೂನಿಕರದ ತೊಟ್ಟ ಮುತ್ತಿನೊಳೊಡಂಬಡೆ (ಜಗದಿ. ೦-೪೪). **ಪೊರಪೊಣ್ಮು** : ೨. ನಲ್ಲೆಯ ಹೃದಯಮಂದಿರದೊಳು ನಲ್ಲನು ಎನಿತನಿತೊಳಪೊಗುತಿಹನು ಪೊರಪೊಣ್ಮುತನಿತನಿತಾಕೆಯ ಕೊಡಮೊಲೆ ಸಂಕೋಚದಿಂದೆಂಬವೋಲೆ (ಶಂಕಾಕ. ೦೬೩-೨). **ಹೊರಹೊಮ್ಮು** : ೧. ಹೃದಯವು ಅರಳಿ ಪ್ರೇಮಪ್ರವಾಹವೇ ಹೊರಹೊಮ್ಮಿರುವ ಸಂದರ್ಭವು ರಾಮಾಯಣದಲ್ಲಿ ವರ್ಣಿತವಾಗಿರುವುದು(ಶೀಗಟ್ಟು. ೨೭). ೨. ಯಾವಾಗಲೂ ನಗು ಅವರ ಮುಖದಲ್ಲಿ ಹೊರಹೊಮ್ಮುತ್ತಿತ್ತು (ಕುಂಕುಮ. ೨೮) ; ಅವರ . . . ತತ್ತ್ವದರ್ಶನಗಳು ವಿಶಿಷ್ಟ ಗದ್ಯದ ವಚನವಾಗಿ ಹೊರಹೊಮ್ಮಿ ಕನ್ನಡಕ್ಕೆ ಸ್ವಾನುಭವಸಾಹಿತ್ಯದ ಸಂಪತ್ತಿಯನ್ನು ಒದಗಿಸಿದುವು (ಶವಚ. ೩೦). **ಹೊಱಹೊಮ್ಮು** : ೨. ನುಡಿವಲ್ಲಿ ಗದ್ಗದಂಗಳು ಹೊಱಹೊಮ್ಮದಿದ್ದರೆ . . . ಆನು ಡಂಭಕ ಕಾಣಿರೇ (ಬಸವ. ೩೭೯) ; ಕಾಮಾಗ್ನಿಯಿಂ ಕಾದ ಹೃದಯಸ್ಥಗಳ ಜ್ವಾಲೆ ರೋಮಕೂಪದೆ ಹೊಱಹೊಮ್ಮಿ ಧೂಮ ತಳ್ತುದು ಚಿತ್ರಲೇಖೆಯ ವರಮುಖಸೋಮಂಗೆ ಸ್ವರ್ಭಾನುವೆನಿಸಿ (ಮೋಹತ. ೨೭-೬೦). ೩. ಹರಿಯುದರದೊಳಹ ಹದಿನಾಲ್ಕುಜಗಗಳ ಪರಿಪರಿಯತುಳವಿಸ್ತಾರ ಹೊಱಹೊಮ್ಮಿ ತೋರ್ಪುದು ಒಹುಬಗೆ ಪುತ್ಥಳಿ ಮೆಱೆದುವೊಳಪ್ರಾಕಾರದಲಿ (ಕಂಶರ. ೭-೯೬). ೭. ಮುಂದೆ ಬರು ; ಹೊರಚಾಚು : ಹುಟ್ಟು ದರಿದ್ರಗೆ ಬಹಳಸಂಪದ ಪರೆ ನೆಟ್ಟನೆ ಕೊರ್ವುವಂದದಲಿ ಕಟ್ಟಾಯತಿ ಪೆತ್ತ ಸತಿಯ ತಳೋದರ ನೆಟ್ಟನೆ ಹೊಱಹೊಮ್ಮಿತಾಗ (ಮೋಹತ. ೦೭-೫).
[ಪೊಱ (<ಪೊಱಗು) + ಪೊಣ್ಮು]

**ಪೊಱಪೊಸಂತಿಲ್** (ನಾ). ಹೊರಬಾಗಿಲಿನ ಹೊಸ್ತಿಲು ; ಹೊರಗಿನ ಹೊಸ್ತಿಲು : ತುಂಬಿದ ಗುಂಬಮಂ ಪೊಱಪೊಸಂತಿಲ ಪಕ್ಕದೊಳಿಟ್ಟು (ಜಗದಿ. ೪-೩೫). [ಪೊಱ (<ಪೊಱಗು) + ಪೊಸಂತಿಲ್]

**ಪೊಱಬಳಸು, ಹೊಱವಳಸು** (ನಾ). (ಕೋಟೆಯ) ಹೊರವಲಯ : ಸುತ್ತುಮುತ್ತು : ಲಗ್ಗೆವಱೆ ಮೊಳಗಿದುವು ಕೂಗಿದುವು ತಮತಮಗೆ

ಬೊಗ್ಗು ಹೆಗ್ಗಾಳೆಗಳ್ ಬಿಡದೆ ನಡೆಗೋಂಟೆಗಳ ಪೊಗ್ಗರಂ ನೂಂಕಿದುವು ಪುರದ ಪೊಱಬಳಸಿನೊಳ್ ಪಡಿಯಟ್ಟಣಗಳಿದ್ದುವು (ಕಬ್ಬಿ. ೪೨-೨೪).
**ಹೊಱವಳಸು :** ಹೊಱವಳಸಿನಿಂ ಕುದುರೆ ಅದಱಿಂ ಹೊಱವಳಸಿನಲಿ ಆನೆ ನಿಂದವು (ಜಾಕ್ಮಾ. ೨೨-೬೬). [ ಪೊಱ (< ಪೊಱಗು) + ಬಳಸು₂ ]

**ಪೊಱಬಿಗ,** ಹೊರಬಿಗ, ಹೊಱಬಿಗ₁ (ನಾ). ಹೊರಗಿನವನು; ಸಂಬಂಧ ಪಡದವನು ; ಅನ್ಯ ; ಪರಕೀಯ : ನಂದಿತಾದುದಿನಕುಲದೇಳ್ಗೆ ಭೂವಲಯದೊಳ್ ತನ್ನ ಬಾಣಮಂ ಬಂಜೆಗೈದಪ್ಪರೆ ಪೊಱ[ಪಾಠಾಂ. ಲ]ಬಿಗರೆಂದನು (ಕೃಬಿಖಾ. ೨೦-೩೯); ಏತಕೆನೆ, ತಾವುವರ್ ಕ್ರೂರಿಗಳ್. ಪೊಱಬಿಗರನುಱದವರ್ (ಬಿಜ್ಜಕ್ಕ. ೬೯-೬೦೪). **ಹೊರಬಿಗ :** ನನ್ನ ಬಾಣವನ್ನು ಬಂಜೆಗೈಯುವುದು ಹೊರಬಿಗರಿಂದ ಸಾಧ್ಯವೇ ? (ಜಮಿನಿ. ೨೨೪). **ಹೊಱಬಿಗ₁ :** ಜಾತಿವೃತ್ತಿಗೆ ಹೊಱಬಿಗನು ತಾನಾದೆನಿನ್ನಾದರೆ ಸಲಹಬೇಕೆಂಬ ವಿಟರ ನೃಪಾಲನೀಕ್ಷಿಸಿದ (ಜೀವಂಕ. ೦೬-೬೦) ; ಅರಗಿಣಿ ವಜ್ರ ಪಂಜರದೊಳಗಿರ್ದ ಬಳಿಕ ಅಂಜಲಿಕೇನು ಕಾರಣ ಹೊಱಬಿಗರೆಂಬ ಮಂಜರ ಕೈದುಡುಕುವುದೆ (ಸೋಹಕ. ೩೦-೩೯).
[ಪೊಱಬು₀ (ಪ್ರ—ತವಿ. ಪುಱಮ್ಬು) + — ಇಗ]

**ಪೊಱಬೀಡು** 'ಪೊಱವೀಡು' ನೋ.

**ಪೊಱಮಟ್ಟು** 'ಪೊಱಮಡು' ಪರಾ.

**ಪೊಱಮಡಿಸು,** ಹೊರಡಿಸು₁, ಹೊಱಡಿಸು₁, ಹೊಱಮಡಿಸು, ಹೊಱವಂಡಿಸು₁, ಹೊಱವಡಿಸು (ಕ್ರಿ). ೧. ಹೊರಗೆ ಬರುವಂತೆ ಅಥವಾ ಹೋಗುವಂತೆ ಮಾಡು : ಈಗಳೆ ಪೋಗಿ ಪುಗೊಳಲಂ ಮುತ್ತಿ ದುರ್ಯೋಧನನಂ ಪೊಱಮಡಿಸಿ ಪಗೆಯಂ ಪಱಿಪಡಿಪುದು (ಗದಾಯು. ೬-೩೮ ವ) ; ಪೊಟಲೊಳಗೆ ಪೊಗೆಯನಿಕ್ಕಿ ಪಾವಂ ಪೊಱಮಡಿಸಿ ಕಳ್ದುಕೊಂಡೊಡವೆಯಂ ಕುಡುವೆಂ (ಶಂತಕಂ. ೦೬೬-೦೬) ; ಒಡಲೊಳಗಣ ವಾಯು ಪಸಲ್ಲೆಂದವೆ ಪೊಱಮಡಿಸಿದ ಮಾಳ್ಕೆಯೊಳರವಿಂದವಿಶಾಲವಿಲೋಚನೆಯಾ ನಿಡುಸುಯ್ಯುರ್ವರೆಪೊಪ್ಪಿದುದು (ಜಮಬಶಾ. ೪-೩೦). ೨. ಪಾರುಗಾಣಿಸು ; ಪಾರುಮಾಡು : ಸಂಸರಣಾಂಭೋರಾಶಿಯಿಂದಂ ಪೊಱಮಡಿಸೆನಗು ನೀನೆ ಹಸ್ತಾವಲಂಬಂ (ಅಂತ್ರಿ.೨-೪೪): ದುಸ್ತರಸಂಸಾರಾಬ್ಧಿಯಿಂದಂ ಪೊಱಮಡಿಸುಗೆ ಸದ್ಧರ್ಮರಾಜಾಚಾರ್ಯರೆಂದುಂ (ಸುಕುಸುಜ. ೦-೩). ೩. ಅಟ್ಟು ; ತಳ್ಳು ; ದೂರೀಕರಿಸು : ಪಡಿಯಱನಿಂದವೆಱಿಯಿಸಿ ಪೆಡತಲೆಯಂ ಒಡಿದು ನೂಂಕುತ್ತರವುನೆಯಿಂದಂ ಪೊಱಮಡಿಸಿಯಟ್ಟಿ ಕಳೆದು (ಶಬ್ದಾಂಗ. ೦೬೬-೩); ಒರ್ವ ಬೆಲೆವೆಣ್ ಕುಟಿಲತ್ವದಿಂದುಳ್ಳೊಡಮೆಯನೊಂದೊಂದು ನೆವವಿಟ್ಟೆಲ್ಲವಂ ಕವರ್ದತಿದರಿದ್ರನಂ ಮಾಡಿ ಪೊಱಮಡಿಸಲ್ (ಧರ್ಮಟಿ. ೧೦-೬೬ ವ). ೪. ಹೊರಕ್ಕೆ ಬರಲು ಸಹಾಯ ಮಾಡು : ಮತ್ತಂ ಮುತ್ತ ಕುರುಡ ತವಸಿಗಳ ಕೈಯಂ ಪಿಡಿದುಯ್ದುವರ ಗುಹೆಗಳಂ ಪುಗಿಪ ಪೊಱಮಡಿಪ ಚಪಳಕಪಿಗಳುಮಂ . . . ನೋಡಿ (ಶಂಕಶಾ. ೦-೦೦೩ ವ). ೫. ಬೀಳ್ಕೊಡು : ದೂತನಂ ಪೊಱಮಡಿಸಲಾತಂ ಬಂದು . . : ಪೇಟ (ಕೃಷ್ಣಾಕೃ. ೩-೩೩ ವ). **ಹೊರಡಿಸು :** ೧. ಸೇಕಪಾತ್ರಂ, ಸೇಚನಂ—೨ ಹಡಗಿನೊಳಹೊಕ್ಕು ಬರುವ ನೀರನ್ನು ಹೊರಕ್ಕೆ ಹೊರಡಿಸುವ ಪಾತ್ರಕ್ಕೆ ಹೆಸರುಗಳು (ಸಿದ್ಧಾಂತಿ. ೬೦); ಆಗ ಅಪ್ಪನು . . . ಸುಪ್ರಭೆಯನ್ನು ಗದರಿಸಿ ಕೊಠಡಿಯಿಂದ ಹೊರಗೆ ಹೊರಡಿಸಿದಳು (ಬೊಗ್ಗು. ೬೨). **ಹೊಱಡಿಸು :** ೩. ಘನವಾದೊಡವೆ ಕೈಸೇರುವ ಪರಿಯಂತ ಮನೆ ದೇವರೆಂದುಪಚರಿಸು ಅನಂಗೆಡಲಾತನ ಹೊಱಡಿಸಿ ಮತ್ತೊಬ್ಬ ಧನವುಳ್ಳ ಪುರುಷನ ಕರೆಕೊ (ಕಂಶಕ. ೬-೦೩೦); ಸೆಟ್ಟಿ ಕಂಡು ಹಾದರವಾಡಿದಳೆಂದು ಹೆಂಡತಿಯ ಹೊಱಡಿಸಿ ಬಿಟ್ಟನು (ಕೃಕಸೂ. I, ೦೭೨). **ಹೊಱಮಡಿಸು :** ೩.ಛೀ ಛೀ ಛೀ ಹೋಗೆಂದು ಹೊಱಮಡಿಸುವೆನಮ್ಮ (ಶಿಶಂಗೀ. ೦೫೬-೬೯೬ ವ). **ಹೊಱವಂಡಿಸು :** ೧. ಹೊಯ್ಸಣ ಮಣ್ಡಳಿಕ ಬಲ್ಪಿಂಗೆ ಹೋಗದಿರಲುವಾರಿಯುದಿಂ ಹೊಱವಣ್ಡಿಸಿದ ಸಮಯದೊಳ್ (ಶಾ. IV, ೦೭-೩ ; 1168); ಪೌರಜನವೈತರಲು ಬಂಡಿಯನೂರ ಹೊಱವಂಡಿ[ಪಾಠಾಂ. ಟಿ]ಸಿದನು (ಕುಮ್ಮಾ.ರ. ೦೦-೨೪) ; ಬಲ್ಲಿದ ವೀರಭಟರೊತ್ತಾಗಿ ಹೊಱವಂಡಿಸಿದರನಿಲಜನ (ಕುರಂಗ. ೩-೮-೨೯). **ಹೊಱವಡಿಸು :** ೧. ತೋಱಿನೊಳಗಿದ್ದವರ ಹೊಱವಡಿಸಿ ಮುಱಿದು ಕಳಗಳ ಬಲಿದು ಬಾಗಿಲ ಹೊಱಗೆ ನಿಂದರು (ಕುಮ್ಮಾ.ರ. ೦೬-೩೦) ; ಕೈಕೊಳಿಸಿ ಕಾದಿ ಕುಬೇರನನು ಹೊಱವಡಿಸಿದರು ಪುರವ (ಕುರಂಗ. ೦-೮-೨೬).

**ಪೊಱಮಡಿಸಿ ಕಳೆ** = ಹೊರಕ್ಕೆ ಹಾಕು ; ದೂರಮಾಡು ; ಬಹಿಷ್ಕರಿಸು : ಇನ್ತೀ ಧರ್ಮ್ಮವಂ ನಗರಂ ಪ್ರತಿಪಾಳಿಸುವುದು ನೈಷ್ಠಿಕರಲ್ಲದರ ಪೊಱಮಡಿಸಿ ಕಳೆವುದು (ಎಕ. VII, ಶಿಕಾ ೦೨೬-೩೨ ; 1036) ; ಅಂತವರನರಮನೆಯಿಂ ಪೊಱಮಡಿಸಿ ಕಳೆದು ಪರವಾದಿಯಂ ದಾನಸನ್ಮಾನಾದಿಗಳಿಂ ಸಂತೋಷಂಬಡಿಸಿ (ಸುಕುಸುಜ. ೨-೨೪ ವ).
[ಪೊಱಮಡು + — ಇಸು₁]

**ಪೊಱಮಡು,** ಪೊರಡು, ಪೊರಮಡು, ಪೊಱಂಡು₁, ಪೊಱಡು₁, ಪೊಱವಂಡು, ಪೊಱವಡು, ಹೊರಡು₁, ಹೊರಮಡು, ಹೊರವಡು, ಹೊರಹೊಂಡು, ಹೊಱಂಡು, ಹೊಱಡು₁, ಹೊಱವಂಡು, ಹೊಱವಡು (ಕ್ರಿ). ಪೊಱಮಟ್ಟು, ಹೊಂಟು, ಹೊರಟು₁, ಹೊರವಟ್ಟು (ಭೂತಕೃ). ೧. ಒಂದೆಡೆಯಿಂದ ಬೇರೆಡೆಗೆ ಹೋಗು,— ಚಲಿಸು,— ತೆರಳು : ಎರಡುಮ್ಬಲದ ವೀರಭಟರ್ಕಳೊಟ್ಟು ಪೊಱಮಟ್ಟು (ಎಕ. VIII, ಸೊರಬ. ೦೦-೩; ಸು. ೬೦೦); ಅಕ್ಷಯದಾನಮುಮಕ್ಕೆಂದು ಪರಸಿ ಪೊಱಮಟ್ಟು ಬಸದಿಗೆ ಪೋಪಾಗಳ್ (ಶಬ್ದಾಂಗ. ೬೯-೨೬) ; ರಾಜಮಂದಿರದಿಂ ಪೊಱಮಟ್ಟು ಬರೆ (ಶಂಕಶಾ. ೪-೭೯ ವ) ; ಕಾಮದೇವರ್ಗಳೆ ಕೊಳುಗುಳಕ್ಕೆ ಪೊಱಮಡಲಕ್ಕುಂ (ಶಾಂತೀಪು. ೯೬-೨೨). ೨. ಹೊರಕ್ಕೆ ಬರು ; ಹೊರಬರು : ಅಱಿಪಿದಂ ಗುರುಭಾರ್ಗವನಿಂತೀಯೊಡ್ಡನಿದಂ ಗೆಲುವನಂ ನೆಱಿಯುಮರ್ಕನಳುರ್ಕೆಯನೊರ್ವಂ ಪೊಕ್ಕೊಡೆ ಪೊಕ್ಕನೆ ಮತ್ತಣಂ ಪೊಱಮಡಂ (ಶಂಕಶಾ. ೦೦-೯೬) ; ಒಱಿಯಿಂದುರ್ಚದೆ ನಡುಗುಮ ನೆಱಿದೆಡೆಯುಂ ಮಿಟ್ಟುವಾಸ್ಯಕೋಶದಿನಿಸಿಸುಂ ಪೊಱಮಡದೆ ಕೊಂದು ಕೂಗಲ್ ನೆಱಿದುದು ದುರ್ಜನನ ನಿಶಿತರಸನಾಖಿತ್ತಂ (ಸೂಕ್ತಿಸು. ೦-೩೦); ಅರೆದೆಱೆವಬ್ಬದೊಳಿರುತಿರ್ದ ಮುಱಿದುಂಬಿ ಸ್ವರ ಮಾಡಿ ಪೊಱಮಡುವಂತೆ (ಧರ್ಮ. ೩-೩೭). ೩. ಹೊರಹೊಮ್ಮು ; ಹೊರಸೂಸು : ಪೊಱಮಟ್ಟಪೊಲಾದುದುಷ್ಣದೀರ್ಘೋಚ್ಛ್ವಾಸಂ (ಅಂತ್ರಿ. ೦೬-೩೯) : ಬಣ್ಣಲರ್ ನಟ್ಟು ಸುಯ್ಗಳ್ ಪೊಱಮಟ್ಟೊಂದೊಂದೆನಟ್ಟುತ್ತಿರೆ (ಕಾದಂಪೂ. ೦೯೨). ೪. (ಮಾತು) ಹೊರಬರು ; (ಧ್ವನಿಯು) ಕೇಳಿ ಬರು ; ಕಿವಿಗೆ ಬೀಳು : ಕನಸಿನೊಳವಿಪ ಕಪಿಂಜಲಮುನಿಪದನದೊಳನ್ನಿತಭಾಷೆ ಪೊಱಮಡದು (ಕಾದಂಪೂ. ೬೬೬) ; ತಣ್ಪೇಱಿದ ಪಱಿಯಂತೆ ದನಿ ಪೊಱಮಡದೆ (ರಶರೂಕ್ಕು. ೦-೦೬೮) ; ಪೊಱಮಡುವ ಸಾವದಕ್ಕರದ ಪೊಯ್ಲಿಂಗೆ ನಡುಗುವಂತೆ ಕೆತ್ತುವ ತುಟಿಯುಂ (ಅಭ್ಯಾಕ. ೩೦೦). ೫. ಹೊರಗೆ ಕಾಣಿಸಿಕೊಳ್ಳು ; ಗೋಚರವಾಗು ; ಆವಿರ್ಭವಿಸು : ಪೊಱಕಣ್ಣಂ ಮುನ್ನಂ ತಾಂ ಮುಱಿಸಿದ ನೊಸಲೊಂದು ಕಣ್ಣುಮಾಗಳ್ ನೊಸಲಿಂ ಪೊಱಮಟ್ಟಂತಿರೆ ತೋಱಿದನೆಱಕವೆ ಹರಿಗಂಗೆ ರುದ್ರನಗ್ಗಳಗಣ್ಣಂ (ಶಂಕಶಾ. ೬-೨೩) ; ದೇಶಿ ಕೇಂದ್ರಾಕಾರದಿಂದ ಲಿಂಗಮಧ್ಯದೊಳಭವ ಪೊಱಮಟ್ಟನು (ಚೌಂಡಪು. ೬-೨೬) ; ಪೆಣ್ಮೀನ ಬಸಿಱ ಬಗಿವನೆಂದೆಸುತ ಅಸಿಧಾರೆಯಲಿ ಪೊಲ್ಲರ್ದೆಯ ಬಗಿಯಲಾ ಶಿಶು ಪೊಱಮಟ್ಟುದಾಶ್ಚರ್ಯ (ಸೋಹಕ. ೦೦-೪೦). ೬. (ಸಭೆ, ಸ್ಥಳ, ದೇಶ ಮುಂತಾದುವನ್ನು) ಬಿಟ್ಟು ನಡೆ ; ತೊಲಗು : ಬಾಳದಿನೇಶಬಿಂಬದೊಂದೆಸಕದಿನಾ ದ್ವಿಜನ್ಮಸಭೆಯಂ ಪೊಱಮಟ್ಟೊಡೆ ಮಾಱಿದುಂದಮುಂ ಪಸದನದಂತೆ ಕಣ್ಗೆಸೆದು ತೋಱಿದುದಾ ಕದನತ್ರಿನೇತ್ರನಾ

(ಸಂತಕಾ. ೩-೩೦) : ಇನ್ನೆನ್ನಾಳ್ವ ದೇಶದೊಳಿರದೆ ಪೊಱಮಟ್ಟು ಪೋಗೆಂದು ಜಡಿದು ನುಡಿದೊಡೆ (ರಕರ್ಣಾಷ್ಟ. ೨-೯೬). ೬. ಬಿಡುಗಡೆ ಹೊಂದು ; ಪಾರಾಗು : ನಿಮ್ಮಡಿ ನೀವೆಮ್ಮನೀಯಪಾಯಸ್ಥಳದಿಂ ಪೊಱಮಡುವ ಪಾಯಮಂ ಮಾಡಿದಿರಪ್ಪೊಡೆ ನಿಮ್ಮ ಧರ್ಮದಿಂ ಸುಖಂಬಾಳ್ವೆವೆಂಬುದುಂ (ಹಂಕಶಂ. ೯೯-೯) ; ತಾಪದಲಿ ಸಂಸಾರಕೂಪದಲಿ ಬಿದ್ದವರು ಅಪತ್ತನಳಿದು ಪೊಱಮಡಲು ಗುರುಪದ ಸೋಪಾನವಯ್ಯ (ಶರಣ್ಣ. ೯೭). ಪೊರಡು : ೧. ನಿಲ್ಲದಲ್ಲಿಂದ ರಾಘವ ಪೊರಟು ಮುನಿಯೊಡನೆ . . . ತುರೀದಂ ಮಿಥಿಲಾಪುರಿಗೆ (ಹಚು. ೨-೯) ; ಅಲ್ಲಿಂದ ಪೊರಟು . . . ಕುಶನಾಥ ಶತವಿಶಟರಾಲಯಂಗಳಂ ಶೋಧಿಸಿದನು (ಸಂಕಾರಾ. ೩-೩-೪೨) ; ಕಳವರುಂ ಕೋಲುಲಾರಿ ಪೊರಟುರೇಂ ಪೆರ್ವರ್ (ಕಾಬೂರಿ. ೦೯೯-೩೨೭). ಪೊರಮಡು : ೧. ಕಣ್ವನಾರಾಯಣನ್ ತನ್ನ ಮನೆಯನ್ಯನ್ನವಿಟ್ಟು ಪುಗುತನ್ನೊಡೆ ಅಱಿದು ಪೊರಮಟ್ಟು ಪೋತ(ಂ)ನ್ದು ಕದಿ ತಲೆಯಿನ್ದಟ್ಟಿ ನಾಲ್ವರಾನಿಱಿದೊನ್ (ಶಾಷ್ಠಣ. IX-1, ೩-೮೦ ; ೨ನೆಯ ಶತ) ; ರಣವಧೂ ವಲ್ಲಭಂ ವಿಜಯಂ ವಿಜಯಕೇದು ಪೊರವಟ್ಟು (ಹಣ್ಣ್ಯಂಗ. ೬೦-೦೯೯೮); ಪದಟನಿಂ ಪೊರಮಡಲ್ ಕಾಲೂರ ಕಣ್ಗಳಿಂ ಪುದಿದ ಬಳಿವಿಡಿದ ಮದುಮಗನ ಮೆರವಣಿಗೆ (ಕಾಬೂರಿ. ೦೫೦-೩೨೯). ಪೊಱಂಡು₁ : ೮. ಹೊರಕ್ಕೆ ಚಾಚಿಂ; ಉಬ್ಬು : ಕಟುಗೊರಲಿಟಿದರ್ದೆ ಪೊಱಂಟ ಬೆನ್ ಬಾತ ಬೞಿಡಂಗಿದ ಜಘನಂ (ಹಚೋಕ. ೨-೩೪). ಪೊಱಡು₁ : ೧. ಗಮಿಸಿದನು ಮುನಿಯೊಡನೆ ಹರುಷೋದ್ಗಮದಲಾತನ ಬೆಂಬಳಿಯಲಾ ಕ್ರಮದಿನಾ ಸೌಮಿತ್ರಿ ಸರಾಗದಿ ತ್ವರಿತದಿಂ ಪೊಱಟ[ಹಾಠಾಂ. ಕಳುಹಿಸಿಕೊಂಡ ನಾ ನೃಪನ] (ಕೊರಚಾ. ೦-೯-೪೨). ೬. ಭೂಕಾಂತ ಬಿಜ್ಜಳನೃಪಾಲಂ ಪುರವಿಹಾರಚಿತ್ತಂ ತನಗೆ ಪುಟ್ಟಿಲರಮನೆಯನೊಲವಿಂ ಪೊಱಡೆ (ಹಚು. ೦೦-೨). ಪೊಱಿವಂಡು : ೨. ಮುಳ್ಳಂ ಸಿವುರುಗಳಂ ನೆಟ್ಟಲ್ಲಿಯೆ ಪೊಱವಂಡದಿರ್ದು ಬಾತೊಡೆ ಮತ್ತಂ ಕಲ್ಲೊತ್ತಿಗರ್ಕದುಗ್ಗದ ಮಳ್ಳಿಸಿ ಯೊಲೆಗಲ್ಲ ಸೇಕಗೆಯ್ಯಾರ್ ಮಾಣ್ದಂ (ಹೋಕೆಂಶಿ. ೯-೦೬೩). ಪೊಱವಡು : ೨. ಒಡಲಿಂದಲಸು ಪೊಱವಡುವವೋಲು ಪೊಱವಟ್ಟನಲ್ಲಿಂದ (ಹಾಳ್ಕಾ. ೫೬-೨). ೬. ತಳಿರ ಮಣಿಭೂಷಣಗಳೆಲ್ಲವ ಕಳಚಿ ಬಿಸುಟನು ಗುರುವಿ ವಂಘ್ರಿಗೆ ನಿಜನಮುಖಿ ಸಹಿತೆಱಗಿ ಪೊ[ಕಾಹಾಂ. ಹೊ]ಱವಟ್ಟನು ನಿಜಾಲಯವ (ಹಳಕ. ೯-೯೦). ಹೊರಡು₁ : ೧. ಹಿಂದೆ ಆನವೇರಿ ಹನುಮಂತದೇವರು ಹೊರಟು (ಎಕ. VII, ಶಿಮೊ. ೦೦೭-೨೪ ; 1576 ?) ; ಗರ್ವಕ್ಕೆ ತಕ್ಕ ಫಲವನ್ನು ಉಣ್ಣಲು ಸಿದ್ಧನಾಗು. ಹೊಗಡು (ಹಾಜಿ. ೯). ೨. ಒಳಗಿನಿಂದ ಹೊಗೆ ಹೊರಡುತ್ತಿದೆ, ಜನ ವಾಸವಾಗಿಲ್ಲ ಎನ್ನುತ್ತೀ ಯಲ್ಲ (ಹೊಂ). ೪. ಶಕ್ತಿಯಿಲ್ಲದ ಶಬ್ದ ಈತನ ಬಾಯಿಂದ ಹೊರಡವು (ಹಾಹಿಜ. ೦೦೦). ೫. ಬಿತ್ತಿರುವ ಕಾಳಿನ ಮೊಳಕೆ ಹೊರಡಲು ಒಂದು ವಾರ ಬೇಕಾಗುತ್ತದೆ (ಹೊಂ). ೯. (ಕಾರ್ಯ ಮಾಡಲು) ತೊಡಗು,— ಪ್ರಾರಂಭಿಸು : ಮೊದಲು ಹೊರಟಿದ್ದು ಕನ್ನಡಕಾವ್ಯದಲ್ಲಿ ಸೌಂದರ್ಯ ಸಮೀಕ್ಷೆಗಾಗಿ (ಶಾಂದಕ. I, ಮೊದಲ ಮಾತು). ಹೊರಮಡು : ೧. ಪಡಿವೇಳದಾ ಕಿರಿಯಣ್ಣನ ಹಿಂದೆ ಹೊರಮಟ್ಟನೆಂತಾದೊಡಂ ಕೋಸಲದ ರಾಣಿಯನರಸಲೆಂದು (ಶ್ರೀಹಾಮ. ೫೩೬-೬೪೪). ಹೊರವಡು : ೧. ರಾಮದೇವನು ಬೇಟೆಗೆ ಹೊರವಟ್ಟು ಹಿರಿಯ ಹನ್ದಿಗೆ . . . ತಾಗಿ ಕೊನ್ದು (ಎಕ. IX, ಶಂಗಳೂ. ೩೨-೩ ; ಸು. 1080). ಹೊರಹೊಂದು : ೧. ಆ ದೂತರು ತಮ್ಮೊಡೆಯನಿಗೆ ಅಭಿವಂದನೆಯಂಗೈದು ಹಸಾದವೆಂದು ಹೊರ ಹೊಂಟು (ಹಚೋರ. ೩೯). ಹೊಱಂಡು : ೨. ಕೊಳದಿಂ ಹೊಱಂಟು ಪುರ್ವರೆಯಾಣ್ಮನುತ್ತಮ ಷಡಕ್ಷರಿಯ ಮಂತ್ರಮಂ ಸ್ಮರಿಸುತ್ತ . . . ಮಹಾಂಡಳಿರ ಮಂಟಪದಲಿ ಕುಳಿತು (ಶೀಕಮ.೬-೩೬). ಹೊಱಡು₁ : ೧. ಎಂತು ನಾವಿಲ್ಲಿಂದ ಹೊಱಡುವ ಯತ್ನವೆಂದುತದ ಯೋಚನೆಗೈದು (ಶಂಶಾ. ೩-೦೩)

೨. ಮಿಕ್ಕ ಕೆಂಗಱಿಗೋಲ್ಗಳೊಡಲ ಹೊಕ್ಕ ಮಾತ್ರದಿ ಹೊಱಟಿದೆಯಲ್ಲಿ ರಕುತವ ಮುಕ್ಕುಳಿಸಿತು (ಹೋಹಕ. ೩೫-೩೭). ೪. ಪುರುಷರ ನುಡಿ ಹೊಱಡದ ಮುನ್ನ ಸ್ತ್ರೀಯರು ಹರಿಸದೆ ಮೇಲಿಕ್ಕುವರು (ಹೋಹಕ. ೦೦-೦೫). ೮. ಕುಸಿದ ನಡುವಿನ ಹೊಱಟ ಬೆನ್ನಿನ ಬೀಸುಗೈಗಳ ಡೊಂಕುಗಾಲುಗಳ (ಐಸಪು. ೨೦-೦೦). ಹೊಱವಂಡು : ೧. ಹೃದಯ ದೊಳ್ ಹಸ್ನಕ್ಕರ ಲಿಂಗಪ್ರಾಣಿ ಹೃದಯದಿಂದ ಹೊಱಯಿಂಕೆ ಹೊಱವಂಟರೆ ಭವಿ (ಆಪಕ. ೦೦-೦೬); ಫಲುಗುಣನ ಶಿತ್ರಿಗಮನವನು ಹೊಯ್ ಹೊಯ್ಯೆನುತ ಹೊಱವಂಟರತಿರಥರು (ಕುಮ್ಮಾದ್ರೋ. ೦೦-೦೬) ; ಮಱಿದು ಮುಲಗಿದ ಬಾಲಕಿಯು ಬಿಟ್ಟಡವಿಯಲಿ ಹೊಱವಂಟನಾ ವನವ (ಶಳಕ. ೬-೦). ೪. ಸಿಕ್ಕಿದಳಿ ಹೊಱವಂಟವಟ್ಟಂಗಳ ಬಸುಱೊಳಿರ್ದು (ಐಸಪು. ೦೨-೯೬). ಹೊಱವಡು : ೧. ಹೊಸತಿಲ ಪೂಜಿಸಿ ಹೊಱವ[ಕಾಹಾಂ. ಹೊಡವಂ, ಹೊರವಂ]ಟ್ಟು ಹೋದ ಒಕ್ಕಲಿತಿಯಂತಾಯಿತ್ತೆನ್ನ ಭಕ್ತಿ (ಬಸವ. ೯೨೨) ; ಕೋಟಿರಥಗಳು ರಣಕೆ ಹೊಱವಡಲು (ಕೌಶಿರಾ. ೨೦-೬) ; ವಿಲಸಿತರತ್ನ ಭೂಷಿತನಾಗಿ ಹೊಱವಟ್ಟ ಕಲಿಗಳ ದೇವ ಕಾಳೆಗಕೆ (ಪೋಹಕ. ೯೦-೯). ೪. ಜೀವಿತ × × × ಮಾಱಿ ಹೊಱವಟ್ಟು ಹೋಹ ಸುಂಕ ಸಹಿತ ಧಾರೆಯನೆಱೆದು ಬಿಟ್ಟರು (ಶಾಷ್ಠಣ. IX-1, ೦೯೩-೯೩ ; 1079) ; ಜನವು ಹೊಱವಡುತಿರಲು ಪದ್ಮಾವತಿ ನಿರೀಕ್ಷಿಸುತಿರ್ದಳಾ ವಿಟನ (ಶಬಂಕ. ೩-೨೬). ೬. ಹಿಂದೆ ಪರಸತಿಗಾಗಿ ಹಿಡಿವಡೆದಂದು ಭಂಗಿಸುವಲ್ಲಿ ದೃಗಂಜಲಬಿಂದು ಪೊಂದಿಂ ಹೊಱವಡದು (ಐಸಪು . ೦೯-೩೩).

[ದೇ. ೫ ತಮಿ. ಪುಱಪ್ಪಟು; ಮಲ. ಪುಱಪ್ಪೆಡು]

**ಪೊಱಮದಿಲ್** (ನಾ). ಹೊರಗೋಡೆ : ಭೂಗಧಿಪರ ಗೃಹಗಳ ಪೊಱಮದಿ ಲಂಗಣದ ಮರದ ಕೊನೆಯು ಮೇಗೆ ... ನೋಡಿದರಾ ಪೂಗಣೆಗೆಣೆಯೆಸಿಪ ಕುಮಾರನನು (ಹಚುಕಾ. ೦೦-೫೦). [ಪೊಱ (< ಪೊಱಗು)+ಮದಿಲ್]

**ಪೊಱಮಾಱು₁** (ಕ್ರಿ). ಓಡಿ ಹೋಗು ; ಹಿಮ್ಮೆಟ್ಟು ; ಪಲಾಯನ ಮಾಡು : “ಪೊಱಮಾಱು—ಪರಾಯನೇ” (ಶಮಂರಾ); ನಗೆ ಪಗೆವಾಡಿ ಗೋಗ್ರಹಣದೊಳ್ ಪೊಱಮಾಱಿದ ಬನ್ನಮೊಂದು ನೆಟ್ಟಗೆ ಮನಮಂ ಪಳಂಚಲೆಯೆ (ಹಂಹಾ. ೦೦-೦೦೦) ; ಜಯಂತಕುಮಾರಮುಖ್ಯರೆಲ್ಲಂದು . . . ಕಾದೆ ಸಸ್ಪಂದಿತಚಿತ್ತನಾಗಿ ಪೊಱಮಾಱಿದನಾರೆಯದುಗ್ರಸೈನಿಕಂ (ಶೀಜಕು . ೦೨-೨೦೩); ಪೊಱಮಾಱದೆ ನಿಂದಿಱಿದು ಸತ್ಪೊಡಾತನೆ ಬರ್ದಂ (ಶಿಂಹಂ. ೦೨-೪೦).

[ದೇ. ೫ ತಮಿ. ಪುಱಮಾಱು = ಬಲವನ್ನು ಕಳೆದುಕೊಳ್ಳು]

**ಪೊಱಮಾಱು₂**, **ಪೊರವಾರ್**, **ಪೊರವಾರ**, **ಪೊರವಾರು**, **ಪೊಱವಾಱ್**, **ಪೊಱವಾಱು**, **ಹೊಱವಾಱ್** (ನಾ). ೧. ಬೆನ್ನು ತೋರಿಸುವುದು ; ಸೋತು ಓಡುವುದು ; ಪಲಾಯನ : “ಪೊಱಮಾಱೆಂದು ಬೆನ್ನೀವುದಕ್ಕೆ ಬಿಡದಿರ್ಪ ನಾಮಂ” (ಶಬ್ದಸ್ಮೃ. ೬೮). ೨. ನಿತಂಬ; ಜಘನ. ೧, ೨ : “ಪೊಱ(ರ)ಮಾಱು[ಹಾಕಾಂ. ಱ್]ಯೆಂಬೀ (ಎರಡು) ಶಬ್ದಂ=ಬೆಂಗೊಡುವಲ್ಲಿಯುಂ, ಸ್ತ್ರೀಯರ ಪರಭಾಗದಲ್ಲಿಯುಂ” (ಹುದ. ಹು. ಹಂ); ಆ ನೃಪೋತ್ತಮನೊಳ್ ರಾಗೋತ್ಕಂಠವೆಂಬುದು ತಳಂಗಳೊಳ್ [ವೃ]ತಿಯೆಂಬುದೂರುಸ್ತಂಭದೊಳ್ ಪೊಱಮಾಱೆಂಬುದು ನಿತಂಬಸ್ಥಳದೊಳ್ . . . ಕಾಣಲ್ಕಮುದಲ್ಲದೆ ಪೆಱವು[ಯು]ಱಿದು ಮಾತ್ರವಿಲ್ಲಾ (ಐರಸಹ. ೯-೨೪ ವ). ಪೊರವಾರ್ : ೨. ಚಲನಾಲಸೆ ಯರ್ ಪೊರವಾರ್ಗಳನೀ ಕಾಮಿನಿಯರಾರ ಸೋಲಿಸದಿರ್ಪರ್ (ಧನ್ಯಾಕೋ. ೨೪೦); ಪೊರವಾರ್ಗಳಂ ಮಿಡಿವ ಹೂಮುಡಿಯ ಪಿಡಿಯಾಲಿನೆ ಸೆರಗು ದಡದಡಿಸ ಕಿರೆ ಚಲ್ವೆಯರ್ ಮಾರೆದು (ಕಾಬೂರಿ. ೦೨೪-೨೬೦). ಪೊರವಾರ : ೨. ಸೈಕತರಾಸಿಯಂತೆಸೆವ ಪೊರವಾರದ ಪೊಂಬಾಳೆಗಂಬದಂತೆ ತೋರ್ಪ ಬಟ್ಟಿದೊಡೆಯ . . . ಕೆಂದಾವರೆಗಳಂತೆ ವಿರಾಜಿಪ ಪಾಣಿತಳಂಗಳಿಂ

ಶೋಭಿಸೆ (ಶಾಂತಿಪು. ೦-೩-೨೯ ಪ); ನೀಟವಾದ ಕಣ್ಣುಗಳುಳ್ಳವಳಾಗಿ ಒಳ್ಳೇ ಪೊರವಾರಗಳುಳ್ಳವಳಾಗಿ . . . ದ್ರೌಪದಿಯು ಹುಟ್ಟಿದಳು (ಕೃಷ್ಣಾ. ೦೦೨). **ಪೊರವಾರು :** ೨. ಹುಬ್ಬುಲಿ, ಕಿರುಬುಲಿ, ಸುರುಸುರಿಗೆ ಈ ಸೊಪ್ಪುಗಳ ರಸ . . . ಪೊರವಾರಿಗೂ ಹಿಮ್ಮಡಿಪರ್ಯಂತವೂ ತೊಡಿಯಲು ಮೂರುದಿನಕ್ಕೆ ಶೀತಜ್ವರಂ ಗುಣವಕ್ಕುಂ (ಸಕವೈ. ೬೦); ಸೋಮರ್ಡಿ ಕುಚದ್ವಂದ್ವವೆಸೆವ ಪೊರವಾರುಗಳ ಪೆರ್ಮೆಗೆ ಕೊರಲ್ ಮಧ್ಯಮೂರುಗಳ್ ದಡದಡಿಸೆ (ರುಕ್ಮಾಂಗ. ೨-೦೬). **ಪೊಱವಾೞ್ :** ೨. ಕಡೆದು ಮಾಡಿದುವೆನಿಪ ಪೊಱವಾೞ ತಿಣ್ಪಿನಿಂ (ಅಜಿತಪು. ೪-೭ ವಚ); ನೇಸಱು, ಎಟ್ಟೞು, ಪೊಱವಾೞು (ಶಬರ. ೯೯ ಪ್ರಯೋ); ಚೆಲ್ವಿನೊಪ್ಪುವ ಬಾಸೆಗೆ ಹಿಂದಾದವೊದದಿರುವಂತೆಸೆವ ಪೊಱವಾರ್ಗಳಿಂದೊಪ್ಪುವಾ ಸತಿಯರಾನಂದದಿಂದಲೆಯ್ದಿಂದರು (ಶಾಪಚಂ. ೪-೨೨). **ಪೊಱವಾೞು :** ೨. ನಿತಂಬ ಮುಸುಕಿದ ವಿಪುಳಪೊಱವಾೞು ಮುಂದಗೆತಿ ಮುಸುಕಿದ ಪದುಂ (ಹರಿಶ. ೪-೬೪); ಬಿಗಿದ ಮೊಲೆಗಳ ಮೆಱೆವ ಪೊಱವಾೞುಗಳ ಬಿಂಬಾಧರದ . . . ಪದ್ಮಿನಿಯರುಗಳೆಸೆದರು ರಾಜಸಭೆಯೊಳಗೆ (ಕುಮಾರ. ೬೦೩. ೯-೮೬); ಕೊಡಪೊಱವಾೞ ಭರಕೆ ಪೊಂಬಾಳೆದೊಡೆ ದಡದಡಿಸೆ (ಕುಮು. ೦೯-೨೬). **ಹೊಱವಾೞ್ :** ೨. ಹೊಱವಾೞಲಿ ಇದ್ದ ಕುಱಿಕೆಗಳೆರಡು ಕುಕುಂದರ (ಜಾತಕ. ೬).

[ <ಪೊಱಮಾಱು₁ /ತಮಿ. ಪುಱವೂರು=ದೇಹದ ಒಂದು ಅಂಗ ]

**ಪೊಱಮಾಱು₂,** ಹೊರಮಾರು, ಹೊರವಾಱು, ಹೊಱವಾೞು (ನಾ). ೧. ಹೊರಗಿನ ಮಾರಾಟ ; ಹೊರಗೆ ಮಾರುವಿಕೆ : ಎಳ ಅಂಚೆ, ಪೊಱವಾೞು, ಪೊಱಅಡಿ (ಶಾಸಾಕೋ. ೦೯೯ ಉದಾ). **ಹೊರಮಾರು :** ೧. ಒಳಮಾರು (ಆಮದು) ಹೊರಮಾರು (ರಫ್ತು) ಸರಕುಗಳ ಮೇಲೂ ತೆರಿಗೆ ಹಾಕಿತು (ಇತ್ಯಾಂಸಂ. ೯೨). **ಹೊರವಾಱು :** ೨. ಹೊರನಾಡಿನಲ್ಲಿ ಮಾರಾಟವಾಗುವ ಸರಕುಗಳ ಮೇಲೆ ಹಾಕುವ ಸುಂಕ : ಮಗ್ಗಮುದ್ರೆ ಒಳವಾೞು ಹೊರವಾೞು ಮದುವೆ . . . ಮುಂತಾದ ಏನುಳ್ಳ ಸುಂಕ ತಳವಾರಿಕೆಗೆ ಸಲುವ ಅಂಬಲಿ (ಎಕ. VII. ಶಿಕಾಪು. ೭೦-೩೦; 1431); ಸುಂಕ ಪೊಳವಾೞು ಹೊರವಾೞು ಕಂಮಾೞದೆಱೆ . . . ಮಾದಱಿಕೆ ಮುಂತಾದ ಏನುಳ್ಳ ಸಕುಲ ಸ್ವಾಮ್ಯವನು ಆಗುಮಡಿ (ದ್ಯುಕರ್ಣಾ. ೦೪೩೪, ೭೪-೩ ; 1507). **ಹೊಱವಾೞು :** ೨. ಹೊಱವಾೞು ಉಭಯಮಾರ್ಗ ಒಳವಾೞು ಸ್ಥಲ ಕುಳವಿಸಂಚವಿಲ್ಲಾ ಎಂದು ಕೊಟ್ಟ ಚೀಟು ನಿಮ್ಮ ಕೈಹಾಳೆಯಲ್ಲಿ ಅದೆ (ಸುಂಕಐಂ. ೪. ೬೪೯-೩) ; ಒಳವಾೞು ಹೊಱವಾೞು ತಳಸಾರಿಕೆ ಆಲೆದೆಱೆ (ಎಕ. VIII, ತೀರ್ಥಹ. ೦೩೦-೪೪ ; 1404). 'ಒಳವಾೞು' ಪರಾ. [ಪೊಱ ( <ಪೊಱಗು) + ಮಾಱು₂]

**ಪೊಱಮಿಂಚು,** ಹೊಱಮಿಂಚು (ನಾ). ೧. ಹೊರಗಿನ ಬೆಳಕು,—ಪ್ರಕಾಶ. ೨. ಹೊರಗಿನ ಥಳುಕು,—ಆಕರ್ಷಣೆ,—ಸೌಂದರ್ಯ. ೩. (ಆಲಂ) ಬೂಟಾಟಿಕೆ : 'ಪೊಱಮಿಂಚುಗೈ' ಪರಾ. **ಹೊಱಮಿಂಚು :** ೨. ಜವ್ವನದ ಹೊಱಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋಱುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ (ಮಹಾದೇ. ೩. ೭೦-೦೬೩) ; ಹೊಱಮಿಂಚಿಂ ಹೊಲೆವೆಣ್ಗೆ ಸೋಲ್ವ ತೆಱದಿಂ (ರಕ್ಷಾಶ. ೬೭). [ಪೊಱ ( <ಪೊಱಗು) + ಮಿಂಚು₁]

**ಪೊಱಮಿಂಚುಗೈ** (ಕ್ರಿ). ೧. ಹೊರಗಡೆ ಬೆಳಕನ್ನು ತೋರಿಸು ; ಹೊರಗೆ ಪ್ರಕಾಶವನ್ನುಂಟುಮಾಡು. ೨. (ಆಲಂ) ಬೂಟಾಟಿಕೆ ಮಾಡು : ಪೊಱಮಿಂಚುಗೈವನಂ ಬಱುವಾತುಗಾಱನಂ ಕಱುಬನಂ . . . ತೊಱೆಯದುದೆಗ್ಗತನವಲ್ತೆ (ರಾಜಶೇ. ೦೦-೯೨).

[ಪೊಱಮಿಂಚು + ಕೆಯ್₁]

**ಪೊಱಮುಯ್ಯು** (ನಾ). ಭುಜದ ಹೊರಭಾಗ ; ಹೊರಭುಜ : ತಳ್ತಪೆರ್ಮೊಲೆ ಪೊಱಮುಯ್ಯು ಬೆನ್ನಿನಿತುಮೊರ್ವೆಯ ನಾ[ಂದಿ]ನಮುಂಕ್ಕೆ ಪೊಣ್ಮೆ ಕಣ್ಮಲರ್ಗಳಿನಚ್ಚು ಪಾಯ್ದುವರಲಂಬುಗಳಂತೆ ವಿಲೋಚನಾಂಬುಗಳ್ (ಶಾಂತಿಪು. ೪-೦೦೯) ; ಬಳೆದು ಪೊಱಮುಯ್ಯುವರೆಗಂ ತಳೆದು ಕನತ್ಕನಕಕೇಗರುಚಿಯುಂ (ಕಾದಂಪೂ. ೨೦೪) ; ಪೊಱಮುಯ್ಯಿಂ ತಾಗೆ ಬಿಲ್ಲಿಂ ತೆಗೆದೆಚ್ಚಿದು ಸರೋಜಾಕ್ಷನೆಚ್ಚ ಗ್ನಿಬಾಣಂ . . . ಉರಿಪಿದತ್ತಾ ಪುರೀಚಕ್ರಮಂ (ಜಗ. ೦೪-೦೦೬). 'ಒಳಮುಯ್ಯು' ಪರಾ.

[ಪೊಱ ( < ಪೊಱಗು) + ಮುಯ್ಯು₂ ( < ಮುಯ್ಯು)]

**ಪೊಱಮೆಯ್,** ಹೊರಮೈ, ಹೊಱಮೈ (ನಾ). ೧. ಹೊರಭಾಗ ; ಹೊರಗಡೆ : ಪೊಱಮುಮ್ಮು ವೇಷದಿರವೇತೆಱದೊಡವೇನೊ (ಕಬಸ. ೨-೬೪). **ಹೊರಮೈ :** ೧. ಭೂಮಿಯ ಹೊರಮೈಯ ಬಿರುಕಲುಗಳಲ್ಲಿ ನೀರು ಸೇರಿಕೊಳ್ಳುವುದಷ್ಟೆ (ಬಾಂಕ್ರ. I. ೦೪೬). ೨. ಪುಸ್ತಕ ಮೊಂತಾದುವುಗಳ ಮೇಲುಹೊದಿಕೆ ; ರಟ್ಟು : ಪುಸ್ತಕದ ಹೊರಮೈ ವರ್ಣರಹಿತವಾಗಿರುವುದರಿಂದ, ಗ್ರಂಥದ ಸರಳತೆಯು ಎತ್ತಿ ತೋರಿಸಲ್ಪಡುವುದು (ರೂಪಕಸಂ. ೦೯). **ಹೊಱಮೈ :** ೧. ಅದಱ ಯಿಮ್ಮಡಿ ಪ್ಲಕ್ಷದ್ವೀಪವು ಯದಱ ಹೊಱಮೈ ಸ್ವಾದುಜಲವು (ಸಂಕಪ. ೦೦-೬). 'ಒಳಮೆಯ್' ಪರಾ. [ಪೊಱ ( <ಪೊಱಗು) + ಮೆಯ್₁]

**ಪೊಱಯಿಂಕೆ,** ಪೊರಯಿಂಕೆ, ಹೊರಯಿಂಕೆ, ಹೊರಯಿಕೆ, ಹೊಱಯಿಂಕೆ, ಹೊಱಯಿಕೆ (ಅ). ಹೊರಗಡೆಗೆ ; ಹೊರಕ್ಕೆ : ಕಱುವಿನಡಗಂ ಕುದಿಸಿ ತಿಂದುಳಿದ ದೇಹಮಂ ಪೊರೆಯಕ್ಕೆ [ಪೊಱಯಿಂಕೆ] ಬಿಸುಟು (ರಾಘಶ. ೦೦-೩೬). **ಪೊರಯಿಂಕೆ :** ಈಕೆ ಮುಖಮಜ್ಜನಂಗೈದು ಭುಂಜಿಸಿ ಪೊರಯಿಂಕೆ ಬರುತಿರ್ದಳು (ಪಾಂಡಶ. ೪೦-೦೦). **ಹೊರಯಿಂಕೆ :** ಶಿರಃಪೋಲಾನಿ = ತಲೆಯಂ ಕಿವಿಯ ಕೆಳಗಣ ಗಲ್ಲದ ಕೀಲಂ, ಧಾರಯುತ್ವಾ = ಹಿಡಿದು, ವಿನಿರ್ಹರೇತ್=ಹೊರಯಿಂಕೆ ಎಳೆಯಬೇಕು (ಬಾಪಚಿ. ೨-೨-೩೬ ವ). **ಹೊರಯಿಕೆ :** ಮನೆಯ ಬದಿಕುಗಳನೊಂದೊಂದ ಹೊರಯು [ಯಿಂ]ಕೆ ತೆಗೆಯೆ ಮನೆಯೊಳಗೆ ಬಯಲೊಂದೆ ಕಡದೆ ನಿಲುವಂತೆ (ಕೈಕಶ. ೩-೦೬-೪). **ಹೊಱಯಿಂಕೆ:** ಹೃದಯದೊಳಗಿಹನ್ನಕ್ಕರ ಲಿಂಗಪ್ರಾಣ ಹೃದಯದಿಂದ ಹೊಱಯಿಂಕೆ ಹೊಱವಂಟರೆ ಭವಿ (ಅರಪ. ೦೦-೦೬); ಪಟ್ಟಿಗೆಯ ನೀಕ್ಷಿಸುತಂದು ಬೀಸಾಟನೆತ್ತಿ ಹೊಱಯಿಂಕೆ ಕೋಪಿಸುತ್ತಂದು (ಶಿಕುಪ. ದೀ. ೦೩-೬); ಭವಿ ನಮ್ಮ ಮನೆಗೇಕೆ ಬಂದೆ ತೊಲತೊಲಗೆಂದು . . . ಮಂದಿ ಮಕ್ಕಳುಗಳುಂ ಹೊಱಯಿಂಕೆ ನೂಕಲು (ಗುರುಚಾ. ೮-೪೭). **ಹೊಱಯಿಕೆ :** ತಟ್ಟುಮುಟ್ಟು ಹೊಱಯಿಕೆ ಬಿಸಾಡೆಯುಮ್ಮ (ಶಿವಗೀ. ೦೩೪-೭೪೪ ಪ); ಆ ತಟ್ಟೆಯಂ ದೇಗುಲದ ಹೊಱಯಿಕೆ ಹಾಯಿಕಿದಂ (ಏಕಾಂತ. ೩೩-೦೪); ಕಡು ಸುಖವ ಮಚ್ಚಿದ್ದ ಮನ ಹೊಱವಡಿಸಿ ಹೊಱಯಿಕೆ ಧೈರ್ಯದಲಿ ಸುಖಗಡಲೆನಿಪ ಶ್ರೀಕೃಷ್ಣಚರಣಾಬ್ಜದಲಿ ಮನವಿರಿಸಿ ಮಡಿದನು (ಅಭಾಗ. ೦೦-೩೩-೨೬). 'ಒಳಯಿಂಕೆ' ಪರಾ. [ಪೊಱ ( < ಪೊಱಗು) + ಇಂಕೆ₁]

**ಪೊಱವಂದು** 'ಪೊಱಮಡು' ನೋ.

**ಪೊಱವಡು** 'ಪೊಱಮಡು' ನೋ.

**ಪೊಱವರ್,** ಹೊರಬರು (ಕ್ರಿ). ೧. ಹೊರಕ್ಕೆ ಬರು : ಪೊಱವಂದು ನಿಂದು ಕೆಳೆಯರ್ಕಳೊಂದಿ ತಾಂ ಕಿಱುಮಾಡವೇಱೆ (ಕಪಪು. ೬-೦೪೩). **ಹೊರಬರು:** ೧. ಅವರಾಗಿ ಹೋಗೆಂದು ಹೇಳುವುದಕ್ಕಿಂತ ತಾನಾಗಿಯೇ ಹೊರಬರುವುದು ಮರ್ಯಾದೆಯೆಂದೆಣಿಸಿ . . . ತನ್ನ ಲೆಕ್ಕಪತ್ರುಗಳನ್ನು ತೀರಿಸಿಕೊಂಡು ಹೊರಬಂದನು (ಮೂರಾಪ. ೦೪೬). ೨. ಪ್ರಕಟವಾಗು ; ಪ್ರಕಾಶಗೊಳ್ಳು : ಪತ್ರಪುಸ್ತಕಮಾಲೆಯಲ್ಲಿ ಹೊರಬರುತ್ತಿರುವ ಮತ್ತೊಂದು ಪುಸ್ತಕ ಈ ಗೃಹವಿಜ್ಞಾನ (ಗೃಹು. IV. ಮುಖ್ಯು).

[ಪೊಱ ( <ಪೊಱಗು) + ಬರ್ ( <ವರ್)]

**ಪೊಱವಲಯ,** ಪೊಱವಳಯ, ಹೊರವಲಯ, ಹೊರವಳಯ,

**ಹೊಱವಳೆಯ** (ನಾ). ಹೊರಗಿನ ಪ್ರದೇಶ ; ಹೊರಭಾಗ ; ಹೊರಗಡೆ : ಪೊಳಲ ಪೊಱವಲಯದಲಿ ನಂದನಲಕ್ಷ್ಮಿ ಶೋಭಿಪಳು (ಸಾಳ್ವಭಾ. ೨-೨). **ಪೊಱವಳೆಯ:** ಇತ್ತ ವಿಶಾಖಭೂತಿಯರಸುಗೆಯ್ಯುತ್ತಿರೆ ಪೊಳಲ ಪೊಱವಳೆಯದೊಳ್ [ಪಾಠಾಂ. ಪೊಱವೊಟಲೊಳ್] . . . ವಿಶ್ವನಂದಿ ಮಾಡಿಸಿದನಂದೊಂದು ನಂದನಮಂ (ಶಾಂತಿಪು. ೬-೩೨ ವ) ; ಇಂತೆಸೆವ ಪಟ್ಟಣದ ಪೊಱವಳೆಯದೊಳ್ ಲತಾಸಂತತಿಗಳಿಂ ಕುಸುಮಶೋಭೆಯಿಂ ತರುಕುಲದ ತಿಂತಿಣಿಗಳಿಂ ಫಲಾನೀಕದಿಂ . . . ಆ ವನು ಕಣ್ಗೆಸೆದುದು (ಕಬ್ಬಿ. ೦೦-೨೦); ಅರ್ಜುನನ ಕಟಕವಿರ್ದುದು ಮಹಾಂಭೋನಿಧಿಯ ಮಸಕದಿಂ ಪೊಳಲ ಪೊಱವಳೆಯದುದ್ಯಾನವೀಧಿಗಳೊಳು (ಕೃಜಿಭಾ. ೦೬-೨೨). **ಹೊರವಲಯ :** ನಗರದ ಹೊರವಲಯ (Suburb. ಇಂಕಿ). **ಹೊರವಳೆಯ :** ವೆಂಕಮ್ಮನ ಸಂಸಾರ ಸಂಕಾಪುರದ ಹೊರವಳೆಯದ ಮಾರುತೀದೇವಾಲಯದಲ್ಲಿ ಬಹುಕಾಲ ನಡೆಯಿತು ! (ಜಗದಾ. ೦೪೭); ಅವರ ಎದುರುಗಡೆ, ಕಟ್ಟೆಗೆಯ ಕಟಕಟೆಯಿಂದ ಆವೃತವಾದ ಹೊರವಳೆಯದ ಒಂದು ಮೂಲೆಯಲ್ಲಿ ಹೈಮವತಿ (ಎಕಿ. ೦೨). **ಹೊಱವಳೆಯ :** ಪುರದ ಹೊಱವಳೆಯದೊಳು ಧರಣಿಪಂ ಪೋಗುತಂ ಸುರೆಯ ಹರವಿಯ ಮೇಲೆ ಭಸಿತವಿರೆ ಕಂಡು (ಅಕಿಪಾಂ. ೩-೩೪) ; ನಿಲಿಸಿದರು ಕೈದುಗಳ ಕರಿ ಸಂಕುಲವ . . . ಊರ ಹೊಱವಳೆಯದಲಿ (ಕೋರಣಾ. ೬-೦೩-೩).

[ಪೊಱ (<ಪೊಱಗು) + ವಲಯ]

**ಪೊಱವಳೆಯ** 'ಪೊಱವಲಯ' ನೋ.

**ಪೊಱವಾಯ್, ಪೊಱಪಾಯ್, ಹೊರಹಾಯು** (ಕ್ರಿ). ೧. ಹೊರಕೆ ಚಾಚು ; ಹೊರಬರು : ಕಣ್ಗಳ್ ಪೊಱವಾಯ್ದು ಕೋಪಶಿಖಿ ಪೊಣ್ಮೆ ತ್ತಿಂಬಿನಂ ಕಿಂಕಪಮಾದುವು (ಜಂಬಾಪು. ೯-೧೬); ಬಿಟ್ಟ ಬಾಯಕ್ಕುಳಿಸಿರ್ದ ಪುಟ್ಟಿ ಪೊಱವಾಯ್ದುರ್ದೆಯರ್ವಿಪ ಪುರ್ಪು (ಪರ್ಣಪು. ೦೫-೩೬); ಮರಣವೇ ಶರಣೆನುತ್ತೊಂದೇ ಕಠಾರಿಯಂ ಚರಿತದಿಂದೆತ್ತಿದಂ ನಿಷ್ಕೃಗುಪಕಾರಿಯಂ ಇಱಿದುಕೊಂಡಂ ಕರುಳು ಪೊಱವಾಯಲು[ಪಾಠಾಂ. ಮಾಡಲು] (ಸಿಲದ. ದೇ. ೩೦೨-೦೩). **ಪೊಱಪಾಯ್ :** ೧. ಕಣ್ಗುಬ್ಬೆಯ ಗುಳ್ಳೆಯಂತೆ ಪೊಱಪಾಯ್ವುನವಟ್ಟಲೆವೊಯ್ದೊಡೊರ್ವನಂ (ಸುಕುಮಾ. ೭-೬); ಗಣ್ಪಲ ನೆಱೆಯೆ ಕಣ್ಪೊಱಪಾಯ್ವನವೊತ್ತಿ ಮುತ್ತಿ ಬಾಯ್ಬಿಡಿಸದೆ ಮಾಣ್ಪನೆ ಸಮರದೊಳ್ಕಲಿ ಬಿಜ್ಜಲದೇವಭೂಭುಜಂ (ಎಕ. XI. ದಾವಣ. ೩೫-೨೭ ; ಕು. 1160). ೨. ಹೊರಗೆ ಹರಡು,-ವ್ಯಾಪಿಸು : ತನ್ನ ಹೀಂಗುಹಾ ವಿವಹದಿನುಣ್ಮಿ ಪೊಣ್ಮಿ ಪೊಱಪಾಯ್ದಿರದಾಗಳೆ ನೋಡಿ ನೋಡಿ (ಸುಕುಮಾ. ೦-೦೩). **ಹೊರಹಾಯು :** ೩. ಹಾದುಹೋಗು : ಭೂಭಾಗದ ಮೇಲೆ, ಬಂಗಾಳ, ಅಸ್ಸಾಂ, ಮಣಿಪುರ ಮಾರ್ಗವಾಗಿ ಹೊರಹಾಯುವ ಕಾಲು ದಾರಿಗಳು ಅನೇಕ ಇದ್ದವು (ಭಾರದ. ೩೩೪).

[ಪೊಱ (<ಪೊಱಗು) + ಪಾಯ್[1]]

**ಪೊಱವಾಱ್** 'ಪೊಱಮಾಱು' ನೋ.

**ಪೊಱವಾಱು** 'ಪೊಱಮಾಱು' ನೋ.

**ಪೊಱವೀಡು, ಪೊಱಬೀಡು, ಹೊಱಬೀಡು** (ನಾ). ಪಟ್ಟಣದ ಹೊರಗಡೆ ಹೂಡುವ ಬಿಡಾರ, -ಶಿಬಿರ, -ಠಾಣ್ಯ: ಅತಿಮನೋಹರವಾದ ವನಿವಹಿಯ ಭವನನಿವೇಶದಿಂದಮುಂದಂಬಡೆದ ಪೊಱವೀಡಂ ಸೋಮಾನ್ವಯ ಪ್ರದೀಪಂ ಪುಗುವಾಗಳ್ (ಶಾಂತಿಪು. ೦೦-೦೯೭ ವ) ; ಗೊಂದವಾಡಿಯ ಪೊಱವೀಡಿನಲ್ ಸುಖದಿಂ ರಾಜ್ಯಂಗೆಯ್ಯುತ್ತಿರೆ (ಎಕ. IV. ೨೦೯-೭; 1072): ಪೊಱವೀಡ ಮುಂದಿ ಇರ್ದ್ದೆಡೆಗಳೊಳೆ ಬಿಟ್ಟಿನ್ (ಅಕ್ಕೃಕ್ಷಾ. ೩-೯೩). **ಪೊಱ ಬೀಡು :** ಅಂಧಕಾಸುರಂ ಪೊಱಮಟ್ಟು ಪೊಱಬೀಡನುಱಿ ಬಿಟ್ಟನು (ಕಿಂಪು. ೯೭-೩೨). **ಹೊಱಬೀಡು :** ಮುಂದಣ ಪಯಣದ ನಿರ್ಧರಗೈದಾಗ ಬಂದು ಬಿಟ್ಟನು ಹೊಱಬೀಡ (ಕಂಪರ. ೦೦-೬೯).

**ಪೊಱವೀಡಂ ಬಿಡು, ಹೊಱಬೀಡ ಬಿಡು** = (ಕೋಟೆ, ಪಟ್ಟಣ ಮುಂತಾದುವುಗಳ) ಹೊರಭಾಗದ ಆವರಣದಲ್ಲಿ ಶಿಬಿರವನ್ನು ಹಾಕು,-ಪಾಳೆಯವನ್ನು ಹೂಡು : ಬೆಸವೆಟ್ಟಂ ಭುವನೈಕಮಲ್ಲನು ದಂಡಾದಿತ್ಯಂಗೆ ಕೈಕೊಣ್ಡು ಬನ್ದ ಸಹಾಯಂ ಬನವಾಸೆಯತ್ತ ಪೊಱವೀಡಂ [ಬಿಟ್ಟು] (ಸೌಇಇ. XX. ೯೯-೦೭ ; 1076 ?) ; ಜಿನೇಂದ್ರಭಕ್ತಸೆಟ್ಟಿ . . . ಜಿನಮಹಾಪೂಜೆಗಳುಮಂ ಮಾಡಿಸಿ ಪೊಱವೀಡಂ ಬಿಟ್ಟು ತನ್ನ ದೇಹಾರ ದೊಳಿರ್ದ ಬ್ರಹ್ಮಚಾರಿಗೆ ಪಂದು (ದರ್ಶನಸ್ತು. ೬-೬೪) ; ಕೂಡೆ ಹೊಱ ವಂಟುದು ಸಮಂತ್ರಕಗೂಡಿ ಸಚಿವ ಪಸಾಯಿತರು ಹೊಱಬೀಡ ಬಿಟ್ಟುದು ಮುಂದೆ ಮನ್ನೆಯ ಮಂಡಲೇಶ್ವರರು (ಕೋರಣಾ. ೨-೩-೫೦) ; ನಱುಸುಯಿ ಗಂಪಿಗೆಳು ತುಂಬಿಗಳು ಬಂದು ಹೊಱಬೀಡ ಬಿಟ್ಟವೆ (ಕವಾಶಾಂ. ೨೪-೬೦).

[ ಪೊಱ (<ಪೊಱಗು) + ಬೀಡು[2] ]

**ಪೊಱವೇಱು** (ನಾ). (ಊರಿನ) ಹೊರಗಿನಿಂದ ಬಂದ ಹೇರು : ಪೊಱ ವೆಱಂಗಳೆ ನೂಱುಮಂ ಮೆಣಸುಮನ್ನೇಲಕ್ಕಿ ಮುಖ್ಯಂಗಳಂ ನೆಱ ತಾಂ ಸೊಲ್ಲಗೆಯುಯ್ವ ತನ್ನಡಕೆಯಂ ಮತ್ತಿಲ್ಲಿ ಮಾಱೆಾದಡಂ ತೆಱುಗೆ (ಎಕ. XI. ದಾವಣ. ೫೯-೬೩ ; 1280). [<ಪೊಱ[3] + ವೇಱು[2]]

**ಪೊಱವೊಳಲ್** 'ಪೊಱವೊಟಲ್' ನೋ.

**ಪೊಱವೊಱಿಸು** (ನಾ). ೧. ಮನೆಯ ಒಳಗೆ ಬರಲು ಅನರ್ಹವೆಂದು ನಂಬಲಾದ ಪಕ್ಷಿ ; ಪಾರಿವಾಳ. ೨. (ಅಲಂ) ತಿರಸ್ಕಾರಯೋಗ್ಯ ವಾದುದು : ವಾತ್ಸ್ಯಾಯನನಂ ಪೊಱವೊಱಿಸು ಮಾಟ್ಟ ಕಂಡವರಂ ಮೂಱವಣ್ಣಂಬರಿಪ ನವವಾರವಿಳಾಸಿನಿಯರಿರುತಿರ್ಪ ನೆಲೆವನೆಗಳನೊಪ್ಪುವ ಸೂಳೆಗೇರಿ ಸೊಗಯಿಸುತಿರೆ (ಜಗದ. ೨-೦೯ ಅಂಟಿ).

[ಪೊಱ (<ಪೊಱಗು) + ಪೊಱಿಸು]

**ಪೊಱವೊಟಲ್, ಪೊಱವೊಳಲ್, ಹೊಱವೊಳಲು** (ನಾ). ಪಟ್ಟಣದ ಹೊರಭಾಗ : ಮಾಣಿಗಳ್ವೆರಸು ಪೊಱವೊಟಲೊಳ್ ಬಟ್ಟಾಡುತ್ತಿರೆ (ಪಮ್ಪಭಾ. ೬೩-೨೨); ಅದಱ ಪೊಱವೊಟಲ ವಿಶಾಳಕನಕಕೃತಕಗಿರಿಗಳಿಂ ಫಳ ಪ್ರಕೀರ್ಣತರುಗಳಿಂ (ಶಂಕರಾ. ೦-೩೯ ಕಗಳ) ; ಆ ಪುರದ ಪೊಱವೊಟಲ ವೈಹಾಳಿಯ ಬಯಲೀಡ್ಡೊಳಗೆ (ಗಂಕ. ೨-೬೩ ವ). **ಪೊಱವೊಳಲ್ :** ಪೊಱ ವೊಳಲೊಳ್ಪೊದಲ್ದ ನವನನ್ದನಬ್ಬನ್ದದಿಂ (ಎಕ. XIII. ೩೩೦-೨೭ ; 929) : ಅಲ್ಲಲ್ಲಿಗೆ ತಿಳಿಗೊಳನುಂ ಮಲ್ಲಿಗೆಯ . . . ನೋಡಲೆತ್ತಲುಂ ಪೊಱವೊಳ ಲೊಳ್ (ಸೌಇಇ. IX-i. ೨೯೭-೦೭; 1177); ಯಾದವರ ವೃಂದವೊಲವಿಂ ದ್ವಾರಕಾಪುರದ ಪೊಱವೊಳಲೊಳಿರುತ ದೂರ್ವಾಸ ಬರಲು (ಸೌಂದಪು. ೯-೩೪) ; ವಾದ್ಯರವದುಬ್ಬರದನೂನಸಂಭ್ರಮದಿಂದೆ ಕಲ್ಯಾಣಪಟ್ಟಣದ ಪೊಱವೊಳಲ್ ನೆಱೆ ಮೆಱೆದುದು (ಚೂಪು. ೦೦-೩೦). **ಹೊಱವೊಳಲು :** ಹೊಳಲು ಹೊಸ ರೀತಿಯಲಿ ವಿಗೆ ಕಂಗೊಳಿಸುತಿರ್ದುದು ಮುನಿಪತಿಗೆ ಹೊಱವ [ಪೊ] ಳಲ ರಮ್ಯೋದ್ಯಾನವೆಸೆದುದು ಚೈತ್ರರಥವಂತೆ (ಕೋರಣಾ. ೦-೯-೦೦). [ಪೊಱ (< ಪೊಱಗು) + ಪೊೞಲ್]

**ಪೊಱಸಾರು** (ಕ್ರಿ). ಹೊರಗೆ ಹೋಗು ; ಹೊರಗಡೆಗೆ ನಡೆ : ತೆಱಪ ಬಿಡಿ ಪೊಱಸಾರೆನುತ ಪಡಿಯಱ ಸುರರು ಹೊಂಗಟ್ಟೆಗೆಯ ಪಿಡಿದುಱಿ [ಕರದಿ ಕೋಲ್ಗಳ] ಬಡಿದು ಸಮ್ಮುಖ ಬಿಡಿಸಿ ನಡಸಿದರು (ಸಾಳ್ವಭಾ. ೩೩-೩೬). 'ಒಳಸಾರ್' ಪರಾ. [ಪೊಱ (<ಪೊಱಗು) + ಸಾರು[1] (<ಸಾರ್)]

**ಪೊಱಿಸು, ಹೊರಸ್ಸು, ಹೊಱಿಸು** (ನಾ). ೧. ಒಂದು ಬಗೆಯ ಪಾರಿವಾಳ ; ಅಶುಭಸೂಚಕವೆಂದು ನಂಬಲಾದ ಪಕ್ಷಿ. ಇದು ಮನೆಯ ಒಳಗೆ ಬಂದರೆ ಅಮಂಗಳವೆಂಬ ನಂಬಿಕೆಯಿದೆ : ಕೋಂಟೆಯಿಂ ಪೊಱಗಣ ದೆಸೆಯೊಳ್ ವಿದ್ಯುಚ್ಚೋರಭಟಾರರ್ ಪ್ರತಿಮಾ ಯೋಗಂ ನಿಂದೊಡೆ ದೇವತೆ ಮುಳಿದು ಪೊಱಸುಗಳನಿವಿರಿಯುವು ದಂಸ ಮಸಕಂಗಳುಂ ವಿಗುರ್ವಿಸೆ (ವಡ್ಡಾರಾ. ೦೩೯-೦೫); ಜಾದಿನೊಳ್ ಪೊಱಸಟಿ

ವಂತೆ ತಮ್ಮರಸುಗಟ್ಟು ಕಟಲ್ದೆರ್ದೆಗಟ್ಟು (ಶಂತಥಾ. ೬-೮೩) ; ೯ "ಪೊಱಸಟಿವಂತೆ-ಪಾರಿವಾಳವು ನಾಶ ಮಾಡುವಂತೆ . . . ಈ ಪದ್ಯದಲ್ಲಿ ರೇಫ ಱಕಾರಗಳ ಮಿಶ್ರಪ್ರಾಸವಿದೆ. ಪಾರಿವಾಳವು ವಿನಾಶ ಕಾರಕಪಕ್ಷಿ ಎಂಬ ನಂಬಿಕೆ ಇತ್ತು; 'ಭರತಾನ್ವಯರಾಜಭವನರಾಜ ಕಪೋತಂ' ಎಂಬ ರನ್ನನ ಪ್ರಯೋಗವನ್ನು ನೋಡಿ" (ಶಂಶಂ. ೨೯೯) ; ಓಂಗಲಿ ಪೋದಗೆ ಪೊಱಸು ಬಕಂ ಗಿಡಿಗಂ ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ವೊಡೆ ತಡೆಯದಾ ಗೃಹಂ ಪಾಟಕ್ಕಂ (ಲೋಕೋಪ. ೯-೬೩). **ಹೊರಸು** : ೧. ಗುಬ್ಬಳಿಸಿ ಪಟಪಟನೆ ಹಾರಿ ಬಹ ಹೊರಸುಗಳ ಸಮುದಯಂ (ಶತ್ರುಂಗ. ೩೩-೦೯೯೭) ; ವಾರ್ಧಕ್ಯದ ಹೊರಸು ಅವನ ದೇಹದ ಗೂಡನ್ನು ಹೊಕ್ಕುತ್ತದೆ (ಶಾಗಣ. ೦೦). **ಹೊಱಸು** : ೧. ಹಂಸೆಯೊಳಗೆ ಹೊಱಸು ಬಂದಿರ್ಪಂತೆ ಬರ್ಪುದುಂ (ರಘುಶಾಸ್ತ್ರ. ೭-೨೨೩) ; ನರೆಯೆಂಬ ಹೊಱಸು ಮೊಗಮೆಂಬರಮನೆಯಂ ಪೊಕ್ಕೊಡಂಗನಾಲೋಕನಮೆಂಬರಸಂತಿರ್ದಪಂ (ಧುಕೋಶ. ೨-೦೨) ; ಹರಡೆ ಚಿಲುವಿಲಿಗನು ಚಲುವೆ ಗಿಜುಗಿರಳೆ ಕಮ್ಮರನಸಗ ಕೊಟ್ಟಳೆ ಹೊಱಸು ಹೊಡೆಗಳೆಂಬ ಪಕ್ಕಿಗಳವಱೊಳೊಪ್ಪಿದವು (ಶಾಳ್ಕಶಾ. ೩-೨೦). ೨. ಮದನಪಕ್ಷಿ. ೩. ತಿತ್ತಿರಿಪಕ್ಷಿ. ೪. ಚಕೋರಪಕ್ಷಿ. ೫. ಹಸುಬನ ಪಕ್ಷಿ. ೬. ಮಂಜುಳವೆಂಬ ಹಕ್ಕಿ: "ಜೀವಂಜೀವಃ, ಕಪಿಂಜಳಃ, ಚಕೋರಃ, ಹಾರೀತಃ, ವಂಜುಳಃ, ಕಪೋತಃ — ಈ ೬ ಹೊಱಸು " (ಕಣಾಯು. ೯೨-೦೦೦). ೭. (ಅಲಂ) ಕ್ಷುದ್ರನಾದವನು ; ಅಲ್ಪ : ಘಟ ಹೊಱಸ ಕೇಳಲವೊ ರಾವಣ . . . ನಿನಗಾಂ ಬೊಮ್ಮರಕ್ಕಸನು (ಕೌಶಿಕಾ. ೦೦-೯೮); ಹೊಱಸ ಬೆಳ್ಳಿಯ ಗುಂಡನೆತ್ತಿದ ಗರುವ ಬೇಡವು ನಾನು ಶಿವಿದರೆ ಅಱಸು ಯೆಲುಗಳನಾಯ್ದು ಸುಡುವಂತಹುದು ನಿನ್ನವರು (ಕೌಶಿಕಾ. ೨೨-೦೬).

[ದೇ. ‖ತಮಿ. ಪುಱ, ಪುಱಾ, ಪುಱವ, ಪುಱವು; ಮಲ. ಪಿಱಾವು, ಪ್ರಾವು; ತುಳು. ಪುರ; ಗೊಂಡಿ. ಪುರಾರ್; ಕೊಂಡ. ಪೊರ್ರೊರ್ಯು; ಕುರುಖ್. ಪುರಾ; ಮಾಲ್ತೊ. ಪುರೆ]

**ಪೊಱಸುಗೆ** (ನಾ). ( ? ) : ಕಱುನೆಲ್ಲಿಯುಪ್ಪು ನೆಣವುಲಿ ತೊಱನಾಯ್ ಸತ್ತೆಡೆಯ ಮಣ್ ಶುಕಾಸ್ಯಂ ಮಧ್ಯಂ ಮುಱುದೊಂಡೆಯೆಂಬಿವಂ ಪೆಸರ ಱಯದ ಬಾಹುಗಳೊಳೊರಸೆ ಪೊಱಸಿ(ಸು)ಗೆ ಪೋಕುಂ (ಲೋಕೋಪ. ೯-೨೦೨). [ ? ]

**ಪೊಱಸುತ್ತು** (ಕ್ರಿ). ಹೊರಭಾಗದಿಂದ ಆವರಿಸು ; ಹೊರಗಿನಿಂದ ಸುತ್ತುಗಟ್ಟು : ಉರಿವ ಭಾಸ್ಕರಕೋಟಿತೇಜದ ಪೊಱಸುತ್ತಿ ಪರಿವ ಚಕ್ರವ ನುತಿಗೆಯ್ದು ತುರಿಯದಿಂದೊಳಪೊಕ್ಕು ಕಾಮದೇವನ ಮಗನಿರುವ ಶಯ್ಯಾಗೃಹದೆಡೆಗೆ (ಶೋಪಕ. ೩೦-೦೩).

[ ಪೊಱ (< ಪೊಱಗು)+ಸುತ್ತು$_1$ ]

**ಪೊಱಸೂಸು**, ಹೊರಸೂಸು, ಹೊಱಸೂಸು (ಕ್ರಿ). ೧. ಹೊರಕ್ಕೆ ತುಳುಕು ; ಹೊರಚೆಲ್ಲು : ಹಾಲ ಹಳ್ಳಪೋಲಗದ ನಡುವೆ ಮಡು ಗಟ್ಟಿ ಪರಿದು ಪೊಱಸೂಸೆ ಕಂಡು ಬಿಜ್ಜಳಂ ಕೌತುಕಂಗೊಂಡು (ಬಸರ. ೦೦-೬೬); ಬಾಹುಮೂಲದೆಡೆಗೆ ದಿಟ್ಟ ಪರಿಪರಿದು ಮೊಗಮೊಗ್ಗುಡಿಸೆ ಸರಿಸಕಳವಟ್ಟ ಜಲಧಾರೆ ಪೊಱಸೂಸೆ ಬಯಲಿಗೆ ಬಾಯ ಬಿಟ್ಟು ನಗಿಸುವರಲ್ಲಿ ತೃಷೆಯಿಂದೆ ಬಂದ ಪಥಿಕರ್ಕಳಾ ಬಾಲೆಯರನು (ಕೃಮಿಣಾ. ೩-೯). ೨. ಹರಡು; ವ್ಯಾಪಿಸು : ಚಿತ್ರದೊಳ್ ಪಡೆದವ್ಯುತಾಂಶುರೋಚಿ ಪೊಱ ಸೂಸಿ ಪೊಗಟ್ತಿಗೆ ವಂದ ಚೆಂದಮುಂ ಪಡೆದುದು (ಜಳವ. ೯-೬). ೩. ವ್ಯಕ್ತ ವಾಗು ; ಪ್ರಕಟವಾಗು ; ಕಾಣಿಸಿಕೊಳ್ಳು: ವಿಲಾಸಲ್ವಾಯ್ದೆಱ ನಗೆ ಪೊಱಸೂಸದ ಕಣ್ . . . ಮಾಸರವಪ್ಪುಯ್ವರೊಳರ್ದರ್ ಕೊಡಗೂಸುತನಂ (ಶಂದ್ರಪು. ೮-೯೯). ೪. ಪ್ರಕಟಗೊಳಿಸು ; ವ್ಯಕ್ತಪಡಿಸು : ಬಗೆ ಪೊಱಸೂಸದೆ ಕೈಯುಂ ಮುಗಿದೊಲವಿಂ ನೋಡಿ ಪೆರ್ಚುತುಂ ತಿರಿಸುಳಿಯಂ ಪೊಗಟುತ್ತೆ (ಶಬ್ದಗಾ. ೦೬೨). **ಹೊರಸೂಸು** : ೧. ಕನಕದಾಸರ ಭಕ್ತಿ ತರಂಗಿಣಿ ಅವರ ಕೀರ್ತನೆಗಳಲ್ಲಿ ಹೊರಸೂಸಿ ಹರಿದಿದ್ದಾಳೆ (ಕದಾ. ೦೬೭). ೨. ಅವು ತಮ್ಮ ಬೆಳಕನ್ನು ಎಲ್ಲಾ ಕಡೆಗಳಲ್ಲೂ ಹೊರಸೂಸುತ್ತಿರುವುವು (ಅಂತಕ. ೯೯) ; ಸೌಂದರ್ಯ ಸೌರಭ್ಯಗಳನ್ನು ಅನಂತಕಾಲ ದಿಕ್ಕುದಿಕ್ಕಿಗೆ ಹೊರಸೂಸಬೇಕು (ತುಂಗಭ. ೭). ೪. ಹರಿದಾಸರು ಮೆತ್ತನೆಯ ಧ್ವನಿಯಿಂದ ಮಮತೆಯನ್ನು ಹೊರಸೂಸುತ್ತಾ ಕರೆದರು (ಕಾವೇಂ. ೨೦) ; ಮಾತಿನಿಂದ ಹೊರಬಂದ ನಿಟ್ಟುಸಿರು ಅವನ ಹೃದಯದಲ್ಲಾಗುತ್ತಿದ್ದ ಅಸಹ್ಯವೇದನೆ ಯನ್ನು ಹೊರಸೂಸುತ್ತಿತ್ತು (ಮರಳ. ೦೬೦). **ಹೊಱಸೂಸು** : ೧. ಗಂಗೆಯುಂ ಹೊತ್ತ ಹರನೊಳ್ ಪುರುಡಿಸಿ ಶಿರೋವಮಧ್ಯದೊಳಿರಿಸಿದ ಕುಂತಳ ಕಾಳಿಂದೀನದಿ ಹೊಱಸೂಸುಗುಮೆಂಬ (ಬಸರ. ೨-೨೦); ಪೂಸಿದ ಸೀರೆ ಮಸಿಯ ತಿಲಕದ ಹೊಱಸೂಸುವ ಬಾಯ ಜೊಲ್ಲಿಂದ . . . ಮುದಿವೇಶಿಯ ರೆಡೆಯಾಡುತಿಹರು (ಕೀಪಶ. ೬-೦೯೦). ೨. ಆಸುರದ ಕಬ್ಬೊಗೆಯ ಕವಚದ ಕೇಸುರಿಗಳೊಳಬಿದ್ದುದುರಿ ಹೊಱಸೂಸಿ ಓಡಿದವು ಹಾವುಗಳ ಬಲು ಹೊವಱ ಹೊರಳಿಗಳ (ಕುವ್ಯಾಭ. ೨೦-೬೦). ೩. ತ್ರಿವಳಿ ಮೈಗರೆಯ ಹೊಕ್ಕುಳ ಗುಣ್ಪು ಹೊಱಸೂಸೆ (ಬಸರ. ೦-೦೦೭). ೫. ಹರಡುವಂತೆ ಮಾಡು ; ವ್ಯಾಪ್ತಗೊಳಿಸು : ಸಣ್ಣ ನನೆಯೊಳಗಣ ಪರಿಮಳವ ಹೊಱಸೂಸಿ ಇಪ್ಪಂಗಱುಹಿಸಬಲ್ಲುದೇ ವಾಯು (ದೇವಾಪ. ೬೬-೦೨೯) .

[ಪೊಱ (< ಪೊಱಗು) + ಸೂಸು$_1$]

**ಪೊಱಗೆ**, ಹೊರಿಗೆ, ಹೊಱಗೆ$_1$ (ನಾ). ೧. ತಲೆಯ ಮೇಲೆ ಭಾರ ವನ್ನು ಹೊತ್ತುಕೊಳ್ಳುವಿಕೆ . ೨. ಭಾರ ; ತಲೆಹೊರೆ. ೩. ಹೊಣೆಗಾರಿಕೆ ; ಬಾಧ್ಯತೆ ; ಜವಾಬ್ದಾರಿ : ಮುಂದೆ ನಮಗುರ್ವ ಕೆಲಸದ ಪೊಱಗೆಯುಂಟು ನೀನಿಂದುಹಾಸನಸಿಲ್ಲಿಗೀಗಳೊಡಗೊಂಡು ಬಾ (ಕೃಮಿಣಾ. ೩೦-೯೨). ೪. ಕೆಲಸ ; ಕಾರ್ಯ ; ವ್ಯವಹಾರ : (+). ೫. ಅಧಿಕವಾದ ಪ್ರಯತ್ನ; ಪ್ರಯಾಸ: ಮುಱುಪುದಸುರರ ಸೇನೆಯೊರ್ಮೆ ದಿವಿಜರ ದಳಂ ಪೆಱದೆಗೆವುದೊರ್ಮೆ ಪಡಿಬಲಿಸಿ ನೂಂಕುವುದೊರ್ಮೆ ಪೊಱಗೆಯಿಂ (ಶಬಪು. ೨೬-೦೯) . **ಹೊರಿಗೆ** : ೧. "ವಹಃ, ವಾಹಃ, ವಹನಂ . . . ಊಢವ್ಯಂ — ಈ ೯ ಹೊರಿಗೆ " (ಶಾಕಶ್ಕ. ೦೬೦). ೨. ಯಾ ಹೊನ್ನಗೆಯೆರಡು ಬೆಳೆಯಲು ಸಹ ವರ್ಷ ೧ಕ್ಕೆ ಬಹ ಅಕ್ಕಿ ಅಂಗಡಿಯ ಹೊರಿಗೆಯ ಬಳ್ಳ ಅಯ್ವತ್ತರ ಲೆಕ್ಕದ ಅಕ್ಕಿ ಮೂಡೆ ೨ (ಎಇ. XX ೯೯ ೯೯ ; 1556); ಹೊತ್ತರಿಗರಿವ ಹೊರಿಗೆಯನು ಬಿಡದೆತ್ತಿಕೊಂಡಾ ವಸ್ತುಗಳಿಗಂ . . . ಸಂಭ್ರೀದವೆಂಬುದು ತೋರದಂತಿಹುದು (ಏಪಶ. ೯-೨೯). ೩. ಪರಿಜನ ಸಾಮಂತ ತಳತಂತ್ರ ಮೊರ್ಬಲದ ಹೊರಿಗೆ ನಿನ್ನದು (ರುಕ್ಮಾಂಗ. ೯-೪) ; ಹೊರಿಗೆಯನು ನೋಡುವರೆ ರಾಯರಿಗೆರೆಯನೆಂಬೀ ಬಿರುದು ದುರ್ಗದ ಪಾರೆಯ ಕಾಳಗವೇಕೆ ಗಂಡ ಸೂರ್ಯನೆಂಬವಗೆ(ಕಲ್ಯಾಕ. ೨೯೭). ೫. ಎಡಬಲದೊಳೊಬ್ಬರಂ ನಿಲಗೊಡದೆ ಹೊರಿಗೆಯಿಂದಿರ್ವರೆಬ್ಬಾಡಿದರು ಖಾತಿಯಿಂದ (ತುರಂಗ. ೬೨-೦೯). **ಹೊಱಗೆ$_1$** : ೨. ಹಱಿಯ ಹೊಯ್ಲಿನಲವಾರಗಿರಿ ತಱತಱಸಿ ತೂಳಿದರಸ್ತ್ರ ಶಸ್ತ್ರದ ಹೊಱಗೆಯಲಿ ಹೂಳಿದರು ಹೊಗಿಸಿದರಾನೆಕುದುರೆಗಳ (ಕೂಠರಾ. ೩-೬-೬) ; ಹೊಱಗೆಯ ಶಬದಿನದ್ಭುತಕ್ಷಮತ್ಸದಿ ಶಾಂತ ಮೆಱೆಯ (ಶಸ್ವಾತ ೩-೯೨). ೩. ಹೊಱಗೆಯಸಮಜ್ಜೀಯವಲ್ಲಿಯೆ ಕುಱುಹಡಂಗಿರಲಱವ ತಾ ತನ್ನಱವು ಮಱದಱದೊಳಗು ಶಿವಸುಗ್ಗಿಕೆಯೊಳಿರ್ದಹನೊ (ಬಸಪು. ೩೩-೨೨) ; ಕದನದ ಹೊಱಗೆ ದೊರೆಗಳ ಮೇಲೆ ಬಿದ್ದುದು (ಕೌಶಿಕಾ. ೨೦-೦೮); ಮಱುಗಿ ಮಾಡುವುದೇನು ಮುಂದಣ ತೆಱನ ಕಾಬುದೆ ಪೌರುಷಾಂಗದ ಹೊಱಗೆ (ಕೂಠರಾ. ೬-೨೯-೪೩). ೫. ಹೊಱಗೆಯಿಂ ಹೊಱಯ ಹೊತ್ತುಂ ನಡೆದು ಬೇಸತ್ತು (ಅಶಿಶಂ. ೩೭-೦೬೯) ; ಹಱಿಯದರ್ಜುನ ನಿಂದ ಭೀಮನ ನೆಱವಣಿಗೆ ನೋಯಿಸದು ನಕುಲನ ಹೊಱಗೆ

ಯೊದಗದು ಸೈರಿಸದು ಸಹದೇವನಾಟೋಪ ಇಱಿವಡಾ ಮಾದ್ರೇಶನನು (ಕುಮಾ.ಶ. ೧-೩೦). ೬. ರೀತಿ ; ಕ್ರಮ ; ವಿಧಾನ : ಮಲೆತರನೆಱಗಿಸಿ ಕೊಂಬ ಬಲುಮಂತ್ರದ ಹೊಱಿಗೆಗಳನಱಿದು ಭೂವಲಯವನಾಳು ನೀನು (ಜೈಮಿನಿ. ೨೦-೩೩) ; ಮುಂದಣ ರಾಜಕಾರ್ಯಕ್ಕೆ ಹೊಱಿಗೆ ಯಾವುದು ಪೇೞಿಂ (ರಾಮಾ. ೦೩-೭). ೭. ಹೆಚ್ಚಳ ; ಆಧಿಕ್ಯ ; ಅತಿಶಯ : ಹೊಱಿಸುವಡೆ ದುಃಷ್ಕೀರ್ತಿ ಸಮ್ಮಲಿ ಹೊಱಿಗೆಯಾಯಿತು ನಾಥಯಿಂ ಕೆಳಗೆಱಗುವುದು ಗದೆಯಿಂದ ಸಲ್ಲದು ಶಸ್ತ್ರವಿದ್ಯೆಯಲಿ (ಕುಮಾ.ಗ. ೧೧-೩೯); ಮುಱಿದುದಗ್ಗದ ಮಹಿಮೆ ಶೋಕದ ಹೊಱಿಗೆಯಲಿ ಕಾತರಿಸಿ ನಡೆವನು ನೃಪತಿ (ಶಲ್ಯ. ೩-೧೯). ೮. ಫಲ ; ಪರಿಣಾಮ : ಕರೆದು ನುಡಿ ವಂಬರದ ವಾಣಿಯ ಹೊಱಿಗೆಯನು ನಿಶ್ಚೈಸಿ (ಕೌಶಿರಾ. ೨೯-೨೩); ಇದಱ ಹೊಱಿಗೆಯನಱಿತು ಭೂಪರು ವಧಿಸುವರು ಸತ್ತವರನಲ್ಲದಡದಕೆ ಪರಿಹಾರಾರ್ಥವನು ನಿಶ್ಯತಿಯಿಂದ ನಡಿಸಲಿಕೆ (ಮೋಹಿನಿ. ೬-೨೪). ೯. ಶ್ಲಕ್ಷ್ಣವಾದುದು ; ಕಠೋರವಾದುದು ; ಕಠಿನವಾದುದು : ಮಂಜಿನ ನೆರವಿಯುಂತಳಿವವು ಹೊಱಿಗೆಯು ತಪಕಘವವರ (ರಾಮಾ. ೨೦-೧೪೦). ೧೦. ನಂಬಿಕೆ ; ವಿಶ್ವಾಸ : ಅಱಿತು ಜಾನಕಿಯಿರ್ದ ಸೆಱೆ ವನೆಯುನದೋರ್ವರಱಿಯದಂದದೊಳಾನು ಪೊಕ್ಕು ಮಱಿಯೇನು ನೋಡಿ ಬಂದವೆನೆಂದವನೊಳು ಹೊಱಿಗೆಯ ಮಾತನಾಡಿದನು (ರಾಮಾ. ೦೪-೮೪). ೧೧. ಕ್ಲೇಶ ; ಸಂಕಟ : ನರಕಗಳ ಪರಿವಿಡಿಯು ನೋಡುತಂ ಸಾನಂದ ಬರುತಿರಲು ನುಡಿದ ಯಮನೊಂದು ಮಾತ ನರರೊಳತ್ಯಾಧಮಂ ಪಾಪಿಷ್ಠ ಜೀವಿಗಳು ಹೊಱಿಗೆಯಿಂ ಮುಕ್ತಿಯುಹರಾವ ತೆಱದಿಂದೆನಲು (ಅಶ್ವಮೇ. ೪೦-೩೩). ೧೨. ಅಂಚು ; ಎಲ್ಲೆ ; ತುದಿ : ಚಂಬಕ ಪಟಹ ಮವುರಿ ಕೊಂಬು ಕೊಳಲಿನಾಡಂಬರ ಬುರುಗು ನಪಿರಿಯ ಇಂಬಿನ ರವ ವೆಂಟುದಿಕ್ಕಿನ ಹೊಱಿಗೆಯ ಮುಂಬರಿದೊಡನೆ ಪರಿದುದು (ಕುಂಸಾ. ೧೧-೨೪). ೧೩. (?): ನಾಯಿಂದರಿಗೆ ತೆಱಿಗೆ ಹೊಱಿಗೆ ಕಾಣಿಕೆ ಕಪ್ಪ ಬಿಟ್ಟಿ ಬಿರಾಡ ಆವುದೂ ಯಿಲ್ಲಯೆಂದು ಕೊಟ್ಟ ನಾಯಿಂದರ ಶಾಸನ (ಶಾಶಾ. IX-ii, ೬೨೩-೦೨ ; 1647). [< ಪೊಱು]

**ಪೊಱಿಸು**, ಪೊರಿಸು, ಹೊರಿಸು$_1$, ಹೊಱಿಸು (ಕ್ರಿ). ೧. ಭಾರವನ್ನು ಹೊರುವಂತೆ ಮಾಡು ; ಭಾರವನ್ನು ಹೇರು : ಬಲಭದ್ರಂ ದಾಸಿ ಯನೊರ್ಬಳಂ ನಿತಾಂತಪ್ರಿಯಮಾಗಲ್ ಕೊಂಡು ಪೊಱಿಸಿದಂ ಬಲ್ಪೊಱಿ ಯಂ (ಧರ್ಮಾ. ೦೨-೦೪೯) ; ಒತ್ತರಿಪ ದನಿಗೇಳುತಾ ಪುರುಷೋತ್ತಮನು ನಂದನು ಬೆರಸಿ ಬರುತೊತ್ತಿನಲಿ ಮಡಿವಳನು ಪೊಱಿಸಿದ ಮಡಿಗಳನು ಕಂಡ (ಜಾಳ್ವಾ. ೨೨-೩೮). **ಪೊರಿಸು** : ೨. (ಅಪವಾದ ಮೊದಲಾದುವನ್ನು) ಹೇರು ; ಆರೋಪಿಸು : ನೀನು ಪರನ ತಂದಪಕೀರ್ತಿ ಪೊರಿಸಿದೆಲೆ ಮಗಳೇ (ಕಂಠೀ. ೩೨-೧) . **ಹೊರಿಸು$_1$** : ೧. ಋಷಿಯು . . . ಮಣಿನಿಕರವಂ ಶಿಷ್ಯನ ಕೈಯೊಳು ಹೊರಿಸಿಕೊಂಡು (ಶಾಗಂ. ೩೦೨-೩) ; ಗೂಡೆಗಳನ್ನು . . . ಕೆಲವರಿಗೆ ತಿಮ್ಮನು ಹೊರಿಸಿಕೊಟ್ಟನು (ಕೆಂಗಾಳ್. ೮೦). ೨. ಇಲ್ಲದ ತಪ್ಪುಗಳನ್ನು ಮೇಲೆ ಹೊರಿಸಿ ಹೇಳುವುದು (ಸಿದ್ಧಾಂತಿ. ೩೨) ; ಇಲ್ಲದ ಸಲ್ಲದ ಆರೋಪವನ್ನೆಲ್ಲಾ ಅವರ ಮೇಲೆ ಹೊರಿಸುವುದು (ಅಂಹೂ. ೬೩) ; ತಪ್ಪು ಹೊರಿಸಿದರೆ ಒಪ್ಪುವವನ್ಯಾರು ? (ಗಾದೆ) . **ಹೊಱಿಸು** : ೧. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನವ ಹೊಱಿಯ ಹೊಱಿಸದಿರಯ್ಯಾ (ಬಸವ. ೩೯೩) ; ಹೊಲು ಜನದ ಸಮಸ್ತಭುವನಾವಳಿಯ ಭರಭಾರವನು ಹೊಱಿಸಿದನಗ್ನಿದೇವರಿಗೆ (ತೊರವೆ. ೩-೬-೩೩) ; ಸೂಳೆಯಂದದಿ ನಡೆವವಳ ತಲೆ ಬೋಳಿಸಿ ಕಸಹೆಡಿಗೆ ಹೊಱಿಸಬೇಕವಳ (ಪುರಂದ. ೨-೦೪-೨). ೨. ಭಂಗವಿಲ್ಲದೆ ಬಿದ್ದ ನಿಮ್ಮಯ್ಯಂಗೆ ಹಳಿವನು ಹೊಱಿಸದಿಹ ಮನದಂಗವಣೆ ಯುಂಟಾಗೆ ಮೆಚ್ಚುವೆನು (ಕುಮಾದ್ರೋ. ೮೯-೦೪) ; ನಿಮಗೂಣಯುವ ಹೊಱಿಸುವನೊ ಕೊಱಿತೆಯ ಹಾಯ್ಮವನೊ ತನಗೆ (ತೊರವೆ. ೩-೩ ೧೨೦).

೩. ನಿರ್ವಹಿಸುವಂತೆ ಮಾಡು ; ವಹಿಸು : ಅರಸಂ ತನ್ನ ಮಗನಲ್ಲಿ ಯಾದೊಡಂ ತನ್ನ ಕುಲದಲ್ಲಿಯಾದೊಡಂ ಆವನೊರ್ವನ ಮೇಲೆ ರಾಜ್ಯ ಭಾರವಂ ಹೊಱಿಸಿಯಿಹಂ ತಾನವನೈಶ್ವರ್ಯವನಪಹರಿಸಬೇಕಾಗಿ ಮಾಡಿ ದವಂ (ಶಂಕಕಂ. ೯೬-೧೨). [ಪೊಱು + — ಇಸು$_3$]

**ಪೊಱು**, ಪೊರು, ಹೊರು, ಹೊಱು (ಕ್ರಿ). ಪೊತ್ತ$_1$, ಹೊತ್ತ (ಭೂತಕೃ). ಪೊತ್ತು$_2$, ಹೊತ್ತು$_3$ (ಭೂತನ್ಯೂ). ೧. ಭಾರವಾದ ವಸ್ತುವನ್ನು ತಲೆಯ ಮೇಲೆ ಅಥವಾ ಹೆಗಲಿನ ಮೇಲೆ ಇಟ್ಟುಕೊಳ್ಳು,–ಹೊತ್ತು ಕೊಳ್ಳು : "ಪೊಱು — ಶಿರೋಧಾರಣೇ" (ಶಬ್ದಾ) ; ಬಲದೇವನಂತೆ ಪೆಣನಂ ಪೊತ್ತು ತೊೞಲ್ವ ಕ್ಷೇತ್ರಪಾಲರಿಂ (ಕಾವ್ಯಸಾ. ೩೨೯ ಕೊಡ್ರಕ) ; ಒಡನಂದಯ್ವರುಮಂ ನಿಜಾಂಸಯುಗದೊಳ್ ಪೊತ್ತೆತ್ತಿ ತಳ್ಪೊಳ್ವ ಸೀಱುಡುಮಿಂದದ್ಭುತದಾ ಹಿಡಿಂಬವನಮಂ ಪೊಕ್ಕಂ ಮರುನ್ನಂದನಂ (ಪಂಪಭಾ. ೩-೯) ; ಬೆಟ್ಟಂಗಳಂ ಕಿತ್ತು ಪೊತ್ತಿವರನಿಟ್ಟು ಬೆನ್ನಟ್ಟಿದಪೆವು (ಜೆಬಪು. ೨೦-೨೩). ೨. ತಳೆ; ಧರಿಸು : "ಪೊತ್ತನೆನುತಂ ಅಂತನೆನೆ ಧರಿಸಿದರ್ಥಂ" (ಶಬ್ದಾ. ೦೩೪); ಸತ್ತು ಪೊತ್ತ ಕಣ್ಣಱಿಯದ ಬೆಳ್ಪನಲ್ಲಿ ನಱಿದಂ ಧವಳಾಕ್ಷಿಯ ನೋಟದಂದಮಂ (ಪಂಪಭಾ. ೪-೭೭) ; ಪೊತ್ತ ಪೂತಳಿರ್ ಬಾಡಿ ಕಱಂಗಿ ಚುಯ್ಯೆನುತುಮಿರ್ದುವು (ಕಬ್ಬಿಗಕಾ. ೩೦೪) ; ಎಳೆ ವೆಱಿಯ ಪೊತ್ತನ ಕುಮಾರನಂ ತಿನ್ನೆನುತ್ತುರಗಾಸ್ತ್ರದಿಂದೆಚ್ಚನು (ಜೆಬಪು. ೪೩-೨೨). ೩. ಪಡೆ ; ಹೊಂದು ; ತಾಳು : ಶಿಲೆಯೊಳ್ ತಾಟಿಸಿ ತನ್ನಯ ತಲೆಯಂ ಜರ್ಜರಿತಮಸ್ತಕಂ ಮಡಿದತ್ಯಾಕುಲನೀ ವರಾಹದೇಹ ಮನಲಸದೆ ಪೊತ್ತಿರ್ದ ನಮೆದಪಂ ಧರಣಿಪತೀ (ಅಂಪು. ೩-೦೭); ಕರೆಯಂ ನೆರಪಂ ವಂಶಾ ಕಱಿಯಂ ಪೊತ್ತಪ್ಪುದೆಂದು ಸಂಗರಮುಖದೊಳ್ (ಕಮದ. ೧೯ ಶ್ರಯೋ). ೪. ಕೈಗೊಳ್ಳು ; ಪರಿಗ್ರಹಿಸು : ಭವವಾರಾಶಿ ನಿಮಗ್ನರಂ ದಯೆ ದಮಂ ದಾನಂ ತಪಂ ಶೀಲವೆಂಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ (ಆದಿಪು. ೨-೭); ಆರೇನಂ ಪೇಳ್ದೊಡಂ ಕೈಮುಗಿದು ಸುಗಿದು ಪೆರ್ಬಿಟ್ಟಿಯಂ [ಶಾಕಾಂ. ಕೈಂಕರ್ಯಮಂ] ಪೊತ್ತು ಸಂಸಾರಾರಂಭಂಗೆಯ್ದು (ರಕ್ಷಾಶ. ೦೬). ೫. ಸಹಿಸು ; ಅನುಭವಿಸು : ಇನಿವಿರಿದು ಪರಾಭವಂ ಪ್ರಾಕೃತಪುರುಷಂಗಂ ಕಾಪುರುಷಂಗಂ ಪೊತ್ತು ನಿಲ್ವುದರಿದು (ಶಾಂತಿಪು. ೩-೭೭ ವ). ೬. ವಹಿಸಿಕೊಳ್ಳು : ಸಿಂಗಪೊತ್ತರ ಕಲಿ ನೊಱಿಮ್ಪದಿ ಅರಸರಾ ಪೆರ್ಮನಡಿಗಳ್ಬೆಸಗೆ ಬೆಸಂಬೆತ್ತು ಪೊತ್ತನ್ನು ಮೇಗೆಟ್ಟನ್ನು ಕಾದಿದೊ (ಎಕ. XI, ಚಳ್ಳಕೆ. ೬-೨ ; ಸು. 810 ?); ತಂಗೆವಿರ ಛತಭಾರಕ್ಕಮಡಸಿದ ಬಡತನಕ್ಕಮಡರ್ಗಮಳ್ಕದೆ ನೀಂ ಪೊತ್ತು ನಿತ್ತರಿ ಸುತ್ತುಮಿರೆ (ಶಾಂತಿಪು. ೪-೭೭ ವ). **ಪೊರು** : ೧. ದೊಡ್ಡನೊಳಬಗೆಗುದುರೆ ನಲ್ಮೆಹೇರಂ ಪೊತ್ತು ಗೊಡ್ಡದಿಂದಳ್ಕಲದಿ ನಡೆಯುಡಿಯುತಿತ್ತು (ಕಾವೂರ. ೩೨-೭೪) ; ಡೆಂಕಣಿಯ ಸಾಲ್ಗಳಂ ಪೊತ್ತು ನೆತ್ತಿಯೊಳೆಸೆವ ಕೊತ್ತಳಗಳಿಂದೆ (ಚತ್ರಾಂಗ. ೩೭-೩೩೭). ೨. ವರ್ಷಮೇಘಂ ರಮ್ಯಸುರಚಾಪಮಂ ಪೊತ್ತು ನಭದೊಳ್ ನಡೆಯುವಂತೆ ! (ಚತ್ರಾಂಗ. ೩೩_೦೯೯೩). ೪. ಪಡಿಸೆಳಲ ಪೊತ್ತು ತಾಂ ಧನ್ಯನೆಂದಾ ಕೊಳು ಜುಮ್ಮೆಂದು ಪುಳಕಿಸುವ ಮಾಳ್ಕೆ ಕಂಪಿಸಿದತ್ತು (ಚತ್ರಾಂಗ. ೩೯-೯೧೩) ; ಒಯ್ವ ಕೇಡಂ ಪೊತ್ತು ಪೆಣ್ ತೆರಳ್ಕೆಯು ತೆರಳೆ (ಕಾವೂರ. ೦೩೧-೨೭೯). ೬. ಸತ್ತವರ ಪೋಲೊಲ್ಮೆ ಯೊಂದೊಡೇಂ ಬಾಳ್ದವರ್ ಪೊತ್ತು ಚೆಲ್ವಿನೊಳರ ಕಡೆಗೆಯ್ಮೆ ಮುಗಿಸಿ ಮತ್ತವರ ಬರ್ದಿಲರ ನಾಡಿಗೆನೆ ಕಳುಹುವುದು (ಕಾವೂರ. ೦೮೦-೪೦೦). **ಹೊರು** : ೧. ವಿನೀತಃ, ಸಾಧುವಾಹಿನಃ — ಎಳೆಯಲಾಪ್ರಸ ಕುದುರೆಗಳಿಗೂ ಚೆನ್ನಾಗಿ ಹೊರಲುಳ್ಳ ಕುದುರೆಗಳಿಗೂ ಹೆಸರುಗಳು (ಸಿದ್ಧಾಂತಿ. ೨೪೯); ತನ್ನ ಬೆನ್ನಿನಲಿ ತನ್ನಕ್ಕರೆಯ ಹೊರೆಯ ಹೊತ್ತ ಹೆಮ್ಮೆಗೆ ಹಿಗ್ಗಿ (ಚತ್ರಾಂಗ. ೦೭-೪೩೩); ಹೊರಬಲ್ಲವನಿಗೆ ಆಳು ಬೇಡ, ಅಡಬಲ್ಲವನಿಗೆ ಹೆಂಡತಿಬೇಡ (ಗಾದೆ). ೫. ಹೊರಬೇಕು ಕಷ್ಟವ

ಸಹಿಸುವ ತನುವು ; ಪರದುಃಖಕೆ ಕೂಗುವ ಮನವು (ಕಲಕು. ೭-೫). ೭. (ಪಕ್ಷ) ವಹಿಸು : ಏನೇನು ಆಗಬೇಕೆಂದಿದೆಯೋ ಅದು ಹಾಗೇ ಆಗಬೇಕಾದದ್ದು ವಿಧಿನಿಯಮ ಎಂಬುದು ಅವರ ಲೆಕ್ಕ. ಅದರಿಂದ ಗಣಪತಿಯನ್ನು ಹೊತ್ತು ಮತ್ತೆ ಹೆಂಡತಿಯಲ್ಲಿ ಆವರು ಮಾತು ಎತ್ತಲಿಲ್ಲ (ಹೊಸಕ್ಷ. ೩೦).

**ಹೊಱು** : ೧. ಜಂಗಮವೆನ್ನವರೆನ್ನವರೆನ್ನವರೆಂಬವರ ಶಿರಹ ಹೊತ್ತಿರಿಸೆನ್ನನು (ಬಸವ. ೩೬೨) ; ಪೃಥಿವಿ ನೆಗ್ಗಿತು ಹೊತ್ತ ಕಮಠನ ವ್ಯಥೆಯನಾರು ಸುರುವರು (ಕುವ್ಯಾದ್ರೋ. ೨-೩೦) ; ಅಗಣಿತಲೋಕಾದಿ ಲೋಕಂಗಳುದರದಿ ಸೊಗಯಿಪ ನಾರಾಯಣನ ಹೆಗಲೊಳು ಹೊತ್ತು ಖೇಚರದೆ ಸಂಚರಿಸುವ ಖಗರಾಜ ಕರುಣಿಪುದೆಮಗೆ (ಪೋಹಕ. ೦-೧೩). ೨. ಕಕ್ಷಪುಟದಲ್ಲಿ ಕತ್ತುರಿಯ ಹೊಗರೆತ್ತುತಿರೆ ಅಕ್ಷಿಗಳು ಕರುಣರಸವಂ ಹೊತ್ತು ಬಳಲುತಿರೆ (ಬಸರ ೧-೦೦೪); ಮಹಾಪ್ರಮಥೋತ್ತಮಪುರಾತನಗಣಾಂಘ್ರಿಗಳಂ ಹೃದಯದಲ್ಲಿ ಹೊತ್ತು (ಬಸಕು. ೩೭-೩೦) ; ಹೊತ್ತ ಜೋಹದ ಜಾಳಿ ಲೇಸಾಯಿತ್ತು ನಿನಗುಪದೇಶಮಂತ್ರವನಿತ್ತವನ ವರ್ತನವದೆಂತುಟೊ (ತೊರರಾ. ೪-೪-೪೦). ೩. ತ್ರಿಣಯನನ ಬೆಸನನಾಂ ಪಡೆದೆನೆಂದುಬ್ಬಿತಂ ಪರವಶೀಭೂತನಾಗುತ್ತೆ ಮಜಹಂ ಹೊತ್ತು ಹರುಷದಿಂ ದೇವಿಯರ್ಗಿತ್ತು (ಬಸರ. ೦-೩೯) ; ಹರಿಹರ ನೆನಿಪ ಪೆಸರ ಹೊತ್ತ ಹರನಂತಕಮದಹರಂ (ಬಸಕು. ೫೪-೪೫) ; ಎತ್ತಿದೆನು ನಾನಾಶರೀರವ ಹೊತ್ತು ಹೊತ್ತಳಲಿದೆನು ಸಲೆ ಬೇಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು (ಹಂಸಾ. ೬೦). ೫. ಧನು ಮುಱಿಯೆ ದಿಟ್ಟಾಯ್ಲುತನವೀತನಲಿ ಸಾಕಿನ್ನೆನುತ ಗುರುನಂದನನು ಮುರಿದನು ಹೊಗರು ಮೋಱೆ³ಯ ಹೊತ್ತ ದುಗುಡದಲಿ (ಕುವ್ಯಾಕ. ೧೪-೩೦); ಕಂದು ಕೊಱತೆಯ ಹೊಱುವ ಹೆಣ್ಣೆ ನೀನು (ಕಂನಾ. ೬-೦೮೩). ೮. ಭಾರವಾಗಿರು ; ಹೊರೆಯಾಗಿರು : ಈ ನಾಲಗೆಯ ಸಾಲವನೀಗ ಕೈಯಲಿ ತಿದ್ದಿಕೊಡುವರೆ ಹೋಗದೇ ಹೊತ್ತಿಹವೆ ಹೇಳೆನುತೆಚ್ಚನಾ ಭೀಮ (ಕುವ್ಯಾಕ. ೨-೦೯). ೯. ಹೇರಿಕೊಳ್ಳು ; ಆರೋಪಿತಗೊಳ್ಳು : ಅದಱಿಂದಾದ ತಪ್ಪನದೆಂತು ಹೊಱುವೆನು (ಬಸಕು. ೩೯-೩೨) ; ಮನ್ನಣೆಯ ಬಿಲ್ಲ ಗುರುವಿನ ಬಿಂಕ ಬಯಲಾಯ್ತಲ್ಲಿಯೆಂಬಪಕೀರ್ತಿ ಹೊಱುವುದು ಬಲ್ಲೆನು (ಕುವ್ಯಾದ್ರೋ. ೦೩-೦೦). ೧೦. ಗರ್ಭದಲ್ಲಿ ಧರಿಸು : ಸತ್ತವರಿಗಳಲೇಕೆ ತನ್ನನು ಹೊತ್ತವರು ಹೆತ್ತವರುಗಳು ತಾ ಸತ್ತುಹೋಗುವರಲ್ಲದುಳಿವರೆ (ಹಂಸಾ. ೯೨) ; ಒಂಭತ್ತು ತಿಂಗಳು ಹೊತ್ತ ಮಾತೃಕೆಯ ಪಾದಾಂಭೋರುಹಕಲರ್ಗಱಿ³ದು (ಮೋಹಕ. ೨೪-೪೦). ೧೧. (ಋಣವನ್ನು) ಹೊಂದು : ಮಾಱಿ³ದ ತಲೆಯ ಭಂಡವ ಹೊತ್ತಿರದೆ ಕೈಕೊಳಲಿ ಕರ್ಣಾದಿಗಳು (ಕುವ್ಯಾದ್ರೋ. ೫-೯). ೧೨. ಸಂಕಲ್ಪ ಮಾಡು ; ಪ್ರತಿಜ್ಞೆ ಮಾಡು : ಹೊತ್ತ ಭಾಷೆಯೊಳಿಂಪರಿಯೊಳೆಂಬತ್ತುವರುಷಂಗಳು ಶಿವೈಕ್ಯರ ತೊತ್ತುಗೆಲಸಂ ಮಾಡಲು (ಬಸಕು. ೨೭-೬೨).

**ಪೊಱುಪೊಱು, ಹೊಱುಹೊಱು** (ದ್ವಿರುಕ್ತಿ) : ಮತ್ತೆ ಪಿಟ್ಟವ್ವೆಯ ಸುಭಕ್ತಿ ನಿಮಿತ್ತದಿಂ ಚೋಳಂಗೆ ಮಣ್ಣಂ ಪೊತ್ತು ಪೊತ್ತೊತ್ತಿದ ತಲೆಯ ಕಿಱುಕುಣಿಗಳಂದವಲಿ (ಬಸಕು. ೩೮-೫೬) ; ಎತ್ತಿದೆನು ನಾನಾಶರೀರವ ಹೊತ್ತು ಹೊತ್ತಲಸಿದೆನು (ಹಂಸಾ. ೬೦). **ಪೊತ್ತುಕೊಳ್, ಹೊತ್ತುಕೊಳ್ಳು** = ತಲೆಯ ಮೇಲೆ ಹೊರು,-ಧರಿಸು : ನಿನ್ನಂ ಪೊತ್ತುಕೊಂಡು ಪೋಪೆನೆನೆ (ಜಾಪುಂಕು. ೭೬); ನಲ್ಲಳ ಪಾದವಂ ತಲೆಯೊಳ್ ಪೊತ್ತುಕೊಂಡು (ರರ್ವಾಮ್ಯ. ೨-೧೨೪) ; ಹೊತ್ತುಕೊಂಡೊಯ್ದಿಳುಹಿದೆನು ನದಿಯೊತ್ತಿನಲಿ ತಾಂಡವನ ಬಳಿಯಲಿ (ತೊರರಾ. ೨-೫-೨೬) ; ನೀನು ಭೂಮಿಯನ್ನು ಸ್ವಲ್ಪಕಾಲ ಹೊತ್ತುಕೊಂಡರೆ ಅವನೇ ಹೋಗಿ ಚಿನ್ನದ ಸೇಬುಗಳನ್ನು ತಂದುಕೊಡುವನು (ಮಣಿಸ. ೦೦೦). **ಪೊತ್ತು ತರ್, ಹೊತ್ತು ತರು**=ಹೊತ್ತುಕೊಂಡು ಬರು : ತಮ್ಮ ಪೊತ್ತುತಂದಿಪ್ಪೆಯ ಪೂವುಮಂ ಬೇಳದ ಪಣ್ಣುಮಂ ಕನ್ನೆಯ ಮುಂದೆ ಪೊಸ್ಸು (ರರ್ವಾಮ್ಯ. ೩-೯೩) ; ಅಮಳಾಂಬುವಂ ತಾಂ ಪೊತ್ತುತಂದು ಸುಗೋಮಯದಿ ಬೆರಸುತ್ತ (ಬಸಕು. ೧೮-೩೪) ; ಹೊರಗೆ ಇರುವ ಕಟ್ಟಿಗೆ ಹೊರೆಯನ್ನು ಹೊತ್ತುತಂದು ಒಳಗೆ ಹಾಕು (ರೂಢಿ). **ಹೊತ್ತಾಡು** = ಪುರಸ್ಕರಿಸು (?) : ವಸ್ತುಕ್ರೀವಿದನಾಗಿ ನಿತ್ಯಾನಿತ್ಯವ ಹೊತ್ತಾಡಿ . . . ಮುಕ್ತಿ ನಿಶ್ಚಯವಾದಲ್ಲಿ ಪ್ರಾಣಲಿಂಗಸಂಬಂಧ (ಪೋಳವಚ. ೧೨೦-೪೭೦). **ಹೊತ್ತು ಹಾಕು** = ೧. ಕಳುಹಿಸು ; ರವಾನಿಸು : ಈ ಕಾಗದ ಪತ್ರಗಳನ್ನು ಬೇಗ ಹೊತ್ತುಹಾಕಬಾರದೇ ? (ರೂಢಿ). ೨. (ಶವವನ್ನು ಶ್ಮಶಾನಕ್ಕೆ) ಒಯ್ಯು ; ಸಾಗಿಸು : ಹೊತ್ತು ಹಾಕಲು ಜನ ಸಿಗುವುದಿಲ್ಲ, ವ್ಯಾನಿಗೆ ಹೇಳಿ ಕಳುಹಿಸು (ರೂಢಿ). [ದೇ.॥ ತಮಿ. ಮಲ. ಪೊಱು ; ಕೊಡ. ಪೊರೀ ; ಕೋತ. ಪೊರ್ ; ತೊದ. ಪೀಱ್]

**ಪೊಱುಕೆ** (ನಾ). ಹೊರುವಿಕೆ ; ಧರಿಸುವಿಕೆ : ಕಿಱುಕೆ, ತಿಱುಕೆ, ಪೊಱುಕೆ (ಶಬ್ದಾನು. ೫೫೭ ಪ್ರಯೋ). [ ಪೊಱು + — ಕೆ ]

**ಪೊಱೆ³, ಪೊರೆ₆, ಹೊರೆ₆, ಹೊಱೆ³** (ನಾ). ೧. ಒಜ್ಜೆ ; ತೂಕ ; ಭಾರ : ತುಱುಗೆಮೆ ನೀಳ್ದ ಪುರ್ವು ನಿಡುಗಣ್ ಪೊಱೆ³ಯಲ್ಲದೆ ಬಟ್ಟತಪ್ಪ ಬಾಯ್ದೆಱೆ³ (ಸಂಕಥಾ. ೦-೦೦೮) ; ಆಭರಣದ ಪೊಱೆ³ಯಂ ತಳೆವಾಭರಣಪ್ರಿಯರ ತೆಱದೆ . . . ನಿಮ್ನೋಂದಿಗರಾಭರಣದ ಪೊಱೆ³ಯನೇಕದಂ ಪೊತ್ತಿರ್ಪರ್ (ಕಾದಂಉ. ೦೦೮); ಅಲಸಪದಕ್ಕಲಕ್ತಕರಸಂ ಪೊಱೆ³ಯೆಂಬಿನಿತೊಂದು ಚಿತ್ರಮಾ ಲಲನೆಗೆ ದೇವಕೀವನಿತೆಗಾದುದು ನಿರ್ಭರಪೂರ್ಣಗರ್ಭದೊಳ್ (ಜಗಪಿ. ೨-೪೪). ೨. ತಲೆ, ಹೆಗಲು, ಗಾಡಿ ಮೊದಲಾದುವುಗಳ ಮೇಲೆ ಇಟ್ಟುಕೊಂಡು ಸಾಗಿಸುವ ಸೌದೆ, ಹುಲ್ಲು ಮೊದಲಾದುವುಗಳ ಕಂತೆ,—ಗಂಟು; ತಲೆಭಾರ : ಪುಳ್ಳಿಯ ಪೊಱೆ³ಯಂ ಪೊತ್ತು (ವಡ್ಡಾರಾ. ೭೭-೨೩); ಅಂತು ಪೊತ್ತ್ಕ ಪುಲುಪುಳ್ಳಿಯ ಪೊಱೆ³ಯನಿಳುಪಿ ಭೇರಿಯಂ ಪೊಯ್ದು (ರರ್ವಾಶ. ೨-೩೪ ವ); ಪುಲಿದೊಗಲ ಪೊಱೆ³ ಜೇನುತುಪ್ಪ ನಳಿಗೆ ಮೇಣದ ಮುದ್ದೆ (ಶಾಳ್ಯಭಾ. ೦೭-೬). ೩. ದೊಡ್ಡ ಆಕಾರವುಳ್ಳದು ; ಭಾರವಾದುದು : ಒಂದು ಪೊಱೆ³ ಜಡೆಯುಮಂ ಪಲವಂವದ ಮುದ್ರೆಯುಮನೆಯ್ದೆ ಪೊತ್ತನ್ನಂ ಬಾಯೆಂದು . . . ಕರೆಯರೆಮ್ಮ ಭಳಾರರ್ (ಶಿವುಶ. ೪-೭೯). ೪. ಹೊಣೆ ; ಜವಾಬ್ದಾರಿ : ಎನ್ನನೋವ ಕಾವ ಪೊಱೆ³ ತಮ್ಮಡಿಯೊಳೆಂದು ಕಣ್ಣೀರಿಡುವುದುಂ (ರಾಮಾಶ್ವ. ೬೫-೦೦). ೫. (ಹಣದ) ಗಂಟು : ನಿನ್ನ ಪೊಱೆ³ಗಾರ್ಪವರಿಲ್ಲಾದೊಡಮೆನ್ನ ವಿನಯಕ್ಕಲ್ಲಿವರಂ ಪಿಡಿದು ತರಲ್ವೇಟ್ಕುಂ ತನ್ನಿಮೆಂದು ಪೊಱೆ³ಯಂ ಕಳೆದುಕೊಳೆ ಕೊಟ್ಟು ನಡೆದು (ಬಂಹರಿ. ೪-೦೦ ವ). ೬. ಆಧಿಕ್ಯ ; ಹೆಚ್ಚಳ : ಪರಿಭವದ ಪೊಱೆ³ಯನಾಂತಿರ್ದರಾತಿಗಳ್ಗಳ್ಕಿ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ (ಆದಿಪು. ೦೨-೯೬). ೭. ಹೊರೆಯಂತಿರುವ ಮುಡಿ,—ತಲೆಗೂದಲು; ಕೇಶಭಾರ : ಮುಳಿದಾಟಿದೋಪರಳ್ಗಿರ್ದ ಮುಗುಳ್ತುರಿವಂತೆ ಮುಗುಳ್ತ ನಾಣ ಜಾಣೊಳಗು ಸಡಿಲ್ವಿನಂ ಪೊಱೆ³ ಸಡಿಲ್ದು ಕದಂಪು ಬೆಳರ್ತು ಬಾಡೆ (ಕಾವ್ಯಸಾ. ೭೨೫).

**ಪೊರೆ₆** : ೧. ಉಡೆಯ ಪೊರೆಯೊಡಲ ಪೊರೆಯಾಗಿ ಬೆಮರೇರೆ (ಕಾಲೂರ. ೦೫೦-೩೩೦). ೨. ಕೆಟ್ಟಳಿವ ಕಾಡಿನುರುವಲ್ಗಳಂ ಪೊರೆಯರಡ ಕಟ್ಟಿಕೊಂಡೊಯ್ದರೇಂ ಪೊಯ್ತು ಕಾಡಂದಂ (ಕಾಲೂರ. ೦೨೮-೨೭೩). **ಹೊರೆ₆** : ೧. ಧರಣಿಯ ಹೊರೆಯೊಳು ತಿಣುಕುವ ಫಣಿ ಮೇಲೆ ಹಾಯಾಗಿ ಹರಿ ಮಲಗಿಹನು (ಇಂಡಾಕ. ೦೦೪-೭); ಅಂತರಾಳದ ರಸಗಳು ನಮ್ಮ ಮನಸ್ಸು ಮತ್ತು ಜೀವನವನ್ನು ಪ್ರಚೋದಿಸಲಾರದೆ ಹೋದರೆ ಆ ಜ್ಞಾನ ನಮಗೊಂದು ಹೊರೆ (ಶಿಕ್ಷದ. ೨೩೮). ೨. ಯಿದನು ಬಾಣರಾವಿ ಕಸಬೇಗ್ರಾಮಾನು ಗ್ರಾಮಗಳ ಆಯ ಬೆಳಿಸಿ ಮದೆ ಹೊರೆ ಸೊಪೆ ಆಳಿತ್ತಿ ಕಾಳು ಹಳಗಳ ವಳಗೆ ಯಿದನ್ನು ಮಾನ್ಯಗಳು (ಎಕ. XI, ಹೊಳೆನ. ೨೫-೦೨೬; 1665); ಬ್ರಹ್ಮಋಷಿಗಳು . . . ಕುಶಾಸನಗಳಲ್ಲಿ ಕಟ್ಟಿರುವ ಅರಣಿ ಮೊದಲಾದ ಯಜ್ಞ

ಪಾತ್ರೆಗಳ ಹೊರೆಗಳಂ ಪೊತ್ತು (ಕಾಗಂಂ. ೫೦೨.೧೧). ೪. ನಾನು ಋಣ ತೀರಿಸುವ ಹೊರೆಯನ್ನು ನಿರ್ವಹಿಸುತ್ತಿರುವೆನು (ಹಾಹುತ್. ೯೦); ಈ ಕೂಸಿನ ಹೊರೆಯೆಲ್ಲಾ ನಿಮ್ಮ ಮ್ಯಾಲ ಒಪ್ಪಿಸೀನಿ (ಕಂದಯ. ೬); ಬರೀ ಮಾತಿನವ ಹೊರೆ ಹೊತ್ತಾನೇ? (ಗಾದೆ). ೮. ಗುಂಪು ; ರಾಶಿ : ಕರದ ಶೂಲದ ಪೆಣನ ಹೊರೆಗಳ ಸುರೆಯ ಘಟೆಗಳು ಮುಕ್ಕುಳಿಸಿ ಜೋಂಪಿರಿವ ಕಂಗಳ . . . ನರಕಪಾಲದ ಮಾಲೆಗಳ ಸಂಗರದ ತಾಟಕಿಯೆನಿಪ ರಕ್ಕಸಿ ಬಂದಳಾಹವಕೆ (ಅಜಂರಾ. ೧-೨೦-೨); ಅವರು ನವಗೆ ಒಂದು ಹೊರೆ ಪುಸ್ತಕ ಗಳನ್ನು ಕೊಟ್ಟರು (ಹಾರಿಹು. ೨೦೨). ೯. (ಆಲಂ) ಬೇಡವಾದ ಹೊಣೆ ಅಥವಾ ವ್ಯಕ್ತಿ : ಅವ್ಯಕ್ತರೀತಿಯಲ್ಲಿ ತನ್ನನ್ನು ಹೊರೆಯಾಗಿ ಕಾಣುತ್ತಿರು ವಂತೆ ಅವನಿಗೆ ತೋರುತ್ತಿತ್ತು (ಹಂಶಕ. ೩೦). **ಹೊಱೆ : ೧.** ನಾಗರಾಜ ನುತ್ತಮಮಣಿಮಸ್ತಕಕ್ಕೆ ಹೊಱೆ ಹಿಂಗಿದುದು (ಎಕ. XVI. ೯೬-೦೩; 1147); ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ ನಿನ್ನ ಮುಖಮಂಡಲಕ್ಕೆ ಶಶಿಮಂಡಲಮುಪ್ಪಾರತಿಯ ಪಾತ್ರೆ (ನಂಶರ. ೦೯-೦೩); ಹಸುಳೆಗಮರಾ ಚಲದ ಹೊಱೆ ಸೈರಿಸುವುದೇ ಮಱಿಹುಲ್ಲೆ ಸಿಂಹದ ಮಸಕಕಿದಿರೇ (ಕುವ್ಯಾಕಿ. ೩-೯೪); ಕ್ಷಿತಿಗೆ ಬಲುಹೊಱೆಯಾಯ್ತು ಬದುಕುವ ಗತಿಯ ಕಾಣದೆ ಸಕಲದೇವಪ್ರತತಿ ನೆರೆದೈತಂದು ಕಂಡುದು ಕಮಲಸಂಭವನ (ತೊರರಾ. ೦-೬-೯೩). ೨. ಸಾಸಿರ್ವರ್ಗಂ ಬಿಟ್ಟ ಧರ್ಮ್ಮ ಎಲೆಯ ಹೇಱಿಂಗೆ ಬೇಳೆ ಹೊಱೆಗೆ ಬೇಳೆ ಹೊತ್ತಳಕ್ಕೆ (ಕಾಇಇ. XI-ii. ೦೨೨-೦೨; 1072); ಮಣಿಮಯದ ಮೋಹಳದ ಹಿರಿಯುಬ್ಬಣದ ಸಬಳದ ಶೂಲ ಸುರಗಿಯ ಕಣೆಯ ಹೊಱೆ ಚಾಚಿದವು ಕಟಕಾಚಾರ್ಯನಿದಿರಿನಲಿ (ಕುವ್ಯಾದ್ರೋ. ೦೫-೦೯); ಕರಿಯ ಮದ್ದಿನ ಪೊಟ್ಟಣ ಕಟ್ಟದಂಬಿನ ಹೊಱೆ ಹುರಿಮರಳಿನ ರಾಶಿ ಅರೆದ ಸಾಸವೆಗೂಡ ಕಾದಡವಿಯ ಬಹುಹರವಿಗಳೊಪ್ಪಿದುವಾಗ (ಕಂಪಾ. ೦೦-೦೩೩). ೭. 'ಹೊಱೆದಲೆ' ಪರಾ.

**ಪೊಱೆಪೊಱೆ** (ದ್ವಿರುಕ್ತಿ) : ನಿನ್ನೀ ಪೊಱೆಪೊಱೆಯುಟಲ್ಗಳ ಭಾರಕೆ ನಡುಗಿದಪೆನೆ (ಐದ್ಮಶ್ರ. ೨೮-೬೦೬). [ದೇ.॥ ತದ್ವಿ. ಪೊಱ್ಱೈ ; ತುಳು. ಪುದೆ, ಹೊರೆ ; ಕೊಡ. ಪೊರೆ ; ತೊದ. ಪಱ್]

**ಪೊಱೆಕಾಱ, ಹೊರೆಕಾರ, ಹೊಱೆಕಾಱ, ಹೊಱೆಗಾಱ** (ನಾ). ೧. ಹೊರೆಯನ್ನು ಹೊತ್ತಿರುವವನು : ಪೊಱೆಕಾಱನ ಪೊಱೆಯೆಂತಂತೆ (ಚಿತಿವಾ. ೩-೫) ; ಗುಲ್ಮದಂತೊತ್ತುವರ್ ಪೊಱೆಕಾಱನಂತೆ ಬಿಗಿದು ಕಟ್ಟುವರ್ (ಧರ್ಮಾಮೃ. ೩-೭೩); ನಿಸಿಯೆಂಬ ಗಜದ ಪುರದ ಪೊಱೆಕಾಱ ನಂದೆಸೆದು ಮಱೆಯ ಸಾರೆ ಸೂರ್ಯ ವಿಷಮಕೋಪದಿ ಚಾರಿವರಿದಂತಾ ತಮ ದಶದಿಕ್ಕು ತುಂಬಿತೇನೆಂಬೆ (ಅಜಂಶ. ೩-೦೦೫). **ಹೊರೆಕಾರ : ೧.** ದಾರಿಯಲ್ಲಿ ಹೋಗುವ ಒಬ್ಬ ಸೌದೆ ಹೊರೆಕಾರನ ಜೀವನ ಇಷ್ಟು ದುರಂತ ವಾಗಿರಬಹುದೆಂದು ಯಾರಿಗೆ ತೋರಬೇಕು ? (ಸಕ್ಕ್ಷ. VII. ೯೮). **ಹೊಱೆಕಾಱ : ೧.** "ಭಾರವಾಹ, ಭಾರಿಕ—ಹೊಱೆಕಾಱ" (ಪಾತರಾ. ೬). ೨. ಹೊಣೆಯನ್ನು ಹೊತ್ತಿರುವವನು,—ವಹಿಸಿಕೊಂಡಿರುವವನು : ಮತ್ತೀಕೆ ಹುಸಿಯ ಹೊಲೆ ಹೊಱೆಕಾಱ ಕರೆದೆಯೆನೆ ತೆತ್ತ ಸಾಲದ ಭರದೊಳಱಿಯದಾಡಿದ ನುಡಿಗೆ ಹೊತ್ತ ಹುಸಿಯುಳಿಯಬೇಕೆಂದೆನಲು ನಿನ್ನ ಕುಲವಳಿದಲ್ಲದಳಿಯದೆನಲು (ಹಕಕಾ. ೧೦-೨೪); ಕ್ಷಿತಿಯ ಹೊಱೆಕಾಱಗೆ ಸೌಖ್ಯಸ್ಥಿತಿಯ ಮಾಡುವೆನಿನ್ನು ಕುರುಭೂಪತಿ ವಿರೋಧಿಯ ವಿಧಿಯನೀಗಳೆ ತೋಱುಸುವೆನು (ಕುವ್ಯಾಕಿ. ೯-೪). **ಹೊಱೆಗಾಱ : ೨.** ಮೇದಿನಿಯ ಹೊಱೆಗಾಱರೆಲ್ಲರೂ ವೇದಿಸುತ ಬೆಂಡಾಗುತಿರ್ದರು (ಸಂಶಶ. ೯-೬).

[ ಪೊಱೆ + — ಕಾಱ ]

**ಪೊಱೆಗಟ್ಟು, ಹೊರೆಕಟ್ಟು, ಹೊಱೆಗಟ್ಟು** (ಕ್ರಿ). ಹೊರೆಯಾಗಿ ಕಟ್ಟು ; ಗಂಟುಕಟ್ಟು : ಅಂತು ಪೊನ್ನಂ ಪೊಱೆಗಟ್ಟಿಕೊಂಡು ಪಾತ್ರಮಾ ಫಣಸೆಯ ಮರದೊಳ್ ಪೊಕ್ಕಡಂಗಿರ್ಪುದುಂ (ಶಂಕಕಂ. ೦೫೫-೦೮); ಪೆರ್ಬಲೆ ಬಿಡುವಾರುಗೋಡುವಲೆಯೆಂಬಿನಿತಂ ಪೊಱೆಗಟ್ಟಿ ಕಾನನಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ದಕಶು. ೨-೦೦೫). **ಹೊರೆಕಟ್ಟು :** ತೋಟಕ್ಕೆ ಹೋಗಿ ಸೋಗೆಗಳನ್ನು ಆರಿಸಿ ಹೊರೆಕಟ್ಟಿ ಕೊಂಡು ಬೇಗನೆ ಬಂದುಬಿಡು (ಊಾ). **ಹೊಱೆಗಟ್ಟು :** ಆ ಹುಲ್ಲ ಒಕ್ಕಿ ಮೆಟ್ಟಿಸಿ ತೂಱುವಾಗ ಹೊಟ್ಟು ಕಳೆದು ಭತ್ತ ನಿಂದು ಹುಲ್ಲು ಹೊಱೆ ಗಟ್ಟಿತ್ತು (ಪೋಳಿಶಾ. ೦೯೫-೫೫೩) ; ಬೆಳೆದ ಭೀಮಾಟವಿಯೆಡೆಯೊಳುಜ್ವಳ ಸುಗಂಧದ್ರುಮಮೂಲಿಕೆಗಳನಱಿಸಿ ಹೊಱೆಗಟ್ಟಿ ಹೊತ್ತು ಪಳಾಸಪುರವೆಯ್ದೆ (ಸಾಶ್ಯಶಾ. ೦೭-೪೦). [ ಪೊಱೆ + ಕಟ್ಟು$_1$ ]

**ಪೊಱೆಯಾಳ್, ಪೊಱೆಯಾಳು, ಹೊರೆಯಾಳ್, ಹೊಱೆಯಾಳು** (ನಾ). ಹೊರೆಯನ್ನು ಹೊರುವ ಆಳು, —ಸೇವಕ : ಪೊಱೆಯಾಳ್ಗ ಳೊಟ್ಟೆ ವೇಸರಮೊತ್ತು ಬಂಡಿಗಳ್ಪೆಱೆ ಕನಕಭಾರದಿಂದ್ಯೆದಿದುವು (ಕ್ರಿಪಿಶಾ. ೫-೭೩). **ಪೊಱೆಯಾಳು :** ಆಣಿಮುತ್ತಿನ ಕಂಠಮಾಲೆ ಚೌಕುಳಿ ಪೊನ್ನ ಕಾಣಿಕೆ ಪೊಱೆಯಾಳು ಸಹಿತ ಕ್ಷೋಣಿಪ ಮಧುರೆಯ ತಿರುಮಲೇಂದ್ರನ ಸುಪ್ರವೀಣಮಂತ್ರೀಶನೈತಂದ (ಕಂಸಹ. ೨೦-೬೮). **ಹೊರೆಯಾಳ್ :** ನಿಯೋಗಿ ಹೂವಯ್ಯ—ಕೆಳದಿ ಶಿವಪ್ಪನಾಯಕನ ರಾಯಭಾರಿ ಹೂವಯ್ಯನ ಪರಿವಾರದವರು ಹೊರೆಯಾಳ್ಗಳು (ಮಂಕ್ರಕ. ೯-೭). **ಹೊಱೆಯಾಳು :** ಅಗಣಿತದ ಪೆಟ್ಟಗೆಯ ಹೊಱೆಯಾಳುಗಳ ಸಂದಣಿ ನೂಕಿದುದು ಸರಕುಗಳ ಸದಳದ ಭಂಡಿಗಳು ಭಾರಿಸಿದವಿಳೆ ಝಡಿಯೆ (ತೊರರಾ. ೧-೦೭-೦೦).

[ ಪೊಱೆ + ಆಳ್$_3$ ]

**ಪೊಱೆಯಾಳು** 'ಪೊಱೆಯಾಳ್' ನೋ.

**ಪೊಱೆವೊರಕ** (ನಾ). (?): ಸುರಯಿಯ ಬಿರಿಮುಗುಳ್ಗಳ ಪೊರೆವೊರೆಯೊಳ್ ಪೊಱೆವೊರಕ[ಪಾಕಾಂ. ಪೊರೆವೊರ, ಪೊರೆವೊರೆ]ನಲ್ಲದಲ್ಲುಗುವ ರಜಂಬೊರೆದು ಪರಕಲಿಸಿದಳಿಕುಳಪರಿಕರಮುಮನತನುಶಿಖಿಯ ಕಿಡಿಗಳೆ ಗೆತ್ತಳ್ (ಶಂಶಭಾ. ೫-೫); "ಭಾರವನ್ನು ವಹಿಸುವುದು" (ಶಂಶಭಾ. ಶಬ್ದಕೋಶ); "ಭಾರದ ವ್ಯಾಪ್ತಿ" (ಶಂಶದೀ. ೦೭೯). [ ? ]

**ಪೊಟಕು, ಪೊಳಕು$_2$** (ನಾ). ಸಾಮಾನ್ಯವಾದ ಆಕಾರ ; ಸಹಜವಾದ ರೂಪು : "ಪೊಟಕು = ಸಾಮಾನ್ಯಾಕೃತಿ" (ಶಮದ. ಶಂ. ೦) ; "ಪೊಟಕೆಂದು ಸಾಮಾನ್ಯಾಕೃತಿ" (ಶಕಸಾ. ೫೯-೨೯೨) ; "ಪೊಟಕೆನೆ ಸಾಮಾನ್ಯಾಕೃತಿ" (ಶಬಳಿಂ. ೦೯೦) ; ನೋಟಪ್ಪೊಡಿಂದಿನ ಮುಂದಿನ ಖಲನ ಪೊಟಕು ಪೆಟಕಪ್ಪನೆಗಂ, ತುರಿಪದೆ ಕಾದಿ ಗೆಲ್ದು ಹಯಮಂ ತಾರದುಟಿದನಾದೊಡೆ (ರಾಪಾಶ್ರ. ೦೦೦-೦೭). **ಪೊಳಕು$_2$ :** ಕೀಳೊರೆಯೊಳಿರ್ದೊಡಂ ಪೊಳಕೆಸೆಯ ದಿಹುದೇ (ಕಾಂಊರ. ೦೨೫-೨೭೦); ಮಂಜನೊಟ್ಟಿಲದೊಂದು ಸುಳಿಸುಳಿಗಳಾಗಿ ಪೆಣಪೆಣೆದುಕೊಳುತಡರ್ದೇರಿ ಪಲಪಲವು ವಿಷಮಾಕೃತಿಗಳೀದೆ ಧುಮ್ಮಿ ಕ್ಕುತೆಲ್ಲ ಪೊಳಕುಗಳಳಿಗ್ಗಿ (ಸಂಶಕ. ೩೨-೦೯೩). [ ? ]

**ಪೊಟತ್ತೊನ್?** (ನಾ). ಒಬ್ಬಾತನ ಹೆಸರು (?) : ಮನ್ದಿರಾವನ್ನನ್ದಿ ಕೃಟ್ಟಿ ಪೊಟುತ್ತದು ಕಣ್ಗವ್ವೆದೆ ಕಟನಿಯು ಪಾಟುಂ ಮಂಗೆತ್ತಾಣಮುಂ ಸರ್ವ್ವಪರಿಹಾರಂ ಕನ್ದಪಕ್ಕೊಡಾದೊರ್ಪ್ಪಣ್ಣುಮಹಾಪಾತಕಪ್ಪಾಪ್ಪರ್ ಪೊಟ ತ್ತೊನ್ನೆತ್ತದು (ಎಕ. IX (8). ಹೂಸಕೋ. ೫-೦೫ ; 900). [ ? ]

**ಪೊಟರವ** (ನಾ). ಒಬ್ಬಾತನ ಹೆಸರಂ : ಸ್ವಸ್ತಿಶ್ರೀ ರಾಚಮಲ್ಲಪೆರ್ಮ್ಮಾನಡಿ ಪ್ರಿಥುವೀರಾಜ್ಯಗೆಯೆ ಪೊಟರವ ಬೆಸಗೆಯನ್ ಎನೆ (ಎಕ. XII. ತಿಪಟೂ. ೯೭-೦ ; ಸು. 880). [ ? ]

**ಪೊಟಲ್, ಪೊಳಲ್, ಪೊಳಲು, ಹೊಳಲು$_2$** (ನಾ). ೧. (ಹೆಚ್ಚು ಜನರು ವಾಸಮಾಡುವ) ಊರು ; ಪಟ್ಟಣ ; ನಗರ : "ಪೊಟಲೆಂದು ನಗರಂ" (ಶಕಸಾ. ೫೯-೨೯೭) ; ಪೊಟಲ ನಿಗ್ಗುಡಿ ಆಚದೊಳ್ ಎರಡು ದ್ರಮ್ಮ (ಪ್ನಲಂ. ೦೯೩೭, ೨೭-೨೦ ; 872) ; ಜಲನಿಧಿಯಂ ಪಾಯ್ದೊರ್ವನೆ ನಿಲಿಕಿ ದಶಾನನನ ಪೊಟಲನಾ ಲಂಕೆಯನಾ ಕುಲಮಿಲ್ಲದಿಱಿದು ನಿಂದಂ

(ಕಲಾ. ೩-೦೯೧); ಪಾಟಳೀಪುತ್ರಮೆಂಬ **ಪೊಟಲ್** (ಸುಕುಮಾ. ೭-೦೭ ವ); ಈಗಳಿನ್ ಪಿರಿದಾಗಿ ದೇವ್ಯಪಿಪೆನ್. ಪೊಟಲ್ಗೆಲ್ಲ ಸಾಜ಼ ಪೇಟ್ ಪೋಗು (ಅಂಕಿಗೊ. ೯-೭೨). **ಪೊಳಲ್ :** ಪೊಳಲ್ ಕುವಳಾಲವಾಗೆ (ಎಕ. VII, ಶಿಕಮೊ. ೯-೩೩ ; 1133). **ಪೊಳಲು :** ಸ್ವಸ್ತಿ ಶ್ರೀಮತು ನಾಲ್ಕುಯುಗದ ಪೊಳಲು ಕೋಗಳಿ (ಸೌಇಇ. XI-i, ೯೭-೩೦ ; 1050); ಯತಿಪನಾಜ್ಞೆಯಿಂದ ವದಿರೆಯ್ದುಂದು ಪೊಳಲಂ ಸಾರ್ದರು (ಚಕಕಾ. ೦೨-೩೭); ಸರ್ವಸಂಭ್ರಮವ ಬೀಱುತ್ತಲಾ ಪೊಳಲೊಳು ಮೆಱಿಯುತ್ತಂದ (ಕಂಪಂ. ೯-೩೯); ನಾವು . . . ದೂರದ ಪೊಳಲಿಗೆ ಯಾತ್ರೆ ಹೊರಟಿದ್ದೇವೆ (ಹಾಹುಕ. ೯೦). **ಹೊಳಲ್ಲು :** ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ (ಮಹಾದೇ. ಬ. ೪೭-೦೦೦); ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ದುದು (ಕೊರಿರಾ. ೦-೯-೦೦); ಹೊಳಲುಂಗಳ ಕಟ್ಟಿ ದೊರೆಯಾಗು ಸೊನ್ನಲಿಗೆ ಕಳ ಸಾಗಿ ಬೆಳಗಿ ಹೊಸಮಂತಕೆ (ಕಶ್ಯಪಾ. ೩೦೪).

[ದೇ.॥ ತಮಿ. ಪೊಟಿಲ್ ; ತೆಲು. ಪ್ರೋಲು]

**ಪೊಟಲಬ್ಬೆ** (ನಾ). ಒಬ್ಬಾಕೆಯ ಹೆಸರು : ಪೊಟಲಬ್ಬೆಯು ಕೊಟ್ಟ ಮಣ್ಣಯ್ಗೊಳ (ಎಕ. IV, ಎಳಂದೂ. ೨೩-೦೨ ; ಸು. 925?).

[ಪೊಟಲ್ + ಅಬ್ಬೆ$_1$]

**ಪೊಟಲಮ್ಮ** (ನಾ). ಒಬ್ಬಾತನ ಹೆಸರು : ಮತ್ತರಸರಾ ಪೊಟಲಮ್ಮನಾ ಮೇಗೆಟ್ಟು (ಎಕ. X, ಶ್ರೀನಿವಾ. ೯೦-೨; ಸು. 900). [ಪೊಟಲ್ + ಅಮ್ಮ$_1$]

**ಪೊಟಲಿಗ** (ನಾ). = ಪೊಟಲಿಚ : ಪೊಟಲಿಗಂ, ಕಾಲೂರಿಗಮಿತ್ಯಾದಿ (ಶಾಶಾಕೊ. ೦೭೩ ಶ್ರಯೋ). [ಪೊಟಲ್ + — ಇಗ]

**ಪೊಟಲಿಚ, ಪೊಳಲಿಚ** (ನಾ). ನಗರದಲ್ಲಿ ಹುಟ್ಟಿದವನು; ಪಟ್ಟಣಿಗ; ನಾಗರಿಕ : "ಪೊಟಲಿಚರ್ ಪೌರಾಭಿಧಾನಂಗಳೊಳ್" (ಶಬ್ದಾ೯ಬ. ೯೩); ಪೊಟಲಿಂದ್ರಪುರಂ ಕಾಲೂರ್ ಪೊಟಲಿಂದ್ರರ್ ಪೊಟಲ ಮಾನಸರ್ ಕಾಲುರಿಚರ್ ಪೊಟಲಿಚರೆನೆ ಸೊಗಯಿಸುವುದು ಪೊಟಲಿಂ ಕಾಲೂರ್ಗೆ ಳಿಂದಮಂತಾ ವಿಷಯಂ (ಕಾವ್ಯಾವ. ೩೩೩); ಈ ಪೊಟಲ ಪೆಂಡಿರೆಲ್ಲರಂ ಮಱಿದು . . . ಪೊಟಲಿಚರೆಲ್ಲರುಮೊಲ್ಲನುಲಿದು ಮೊಱಿಯಿಟ್ಟು (ಅರ್ಜನೇ. ೩-೭ ವ). **ಪೊಳಲಿಚ :** ಮಡಿವಳರ ಕಾಲುರಿಚ ಪೊಳಲಿಚ ದಡಿಗ . . . ಕಂಚುಗಾಱರ ಕೇರಿ ಮೆಱಿದಿಹವು (ಸಾಳ್ವಭಾ. ೨-೯).

[ಪೊಟಲ್ + — ಇಚ]

**ಪೊಟಲೊಡೆಯ** (ನಾ). ಊರಿನ ಯಜಮಾನ ; ನಗರಪತಿ : ತೊಟಲಲಾಱದಟಲನೆಯ್ದಿದ ಪೊಟಲೊಡೆಯನ ಮಗಂ (ವರ್ಧಕೃ. ೨-೯೯ ವ).

[ಪೊಟಲ್ + ಒಡೆಯ$_1$]

**ಪೊಟಲ್ಗಾಪು** (ನಾ). ಊರಿನ ಕಾವಲು; ನಗರರಕ್ಷಣೆ.

**ಪೊಟಲ್ಗಾಪಿನವರ್** = ಊರಿನ ಕಾವಲುಗಾರರು; ನಗರರಕ್ಷಕರು; ತಳವಾರರು : ಪೊಟಲ್ಗಾಪಿನವರ್ ಪೊಡಮಟ್ಟು ಪೇಟ್ದರ್ (ಅದ್ಭುತ. ೯೨-೨೦). [ಪೊಟಲ್ + ಕಾಪು]

**ಪೊಟಲ್ಚೋರ, ಪೋಳಲ್ಚೋರ, ಪೋಟಲ್ಚೋರ** (ನಾ). ನೊಳಂಬ ರಾಜರಲ್ಲಿ ಒಬ್ಬಾತನ ಹೆಸರು : ಆತನ ಮಗಂ ಪೊಟಲ್ಚೋರದೇವಂ (ಮೈಎಂ. ೦೯೩೨, ೯೮-೩; ಸು. 960); ನೊಟಮ್ಬರ ಭೀಮಂ ಪುಸಿಗೆಗೆಯ್ದೊಂ ರಾಜರಾಜಾಶ್ರಯಂ ಶ್ರೀಮತ್ಪೊಟಲ್ಚೋರದೇವಂ (ಸೌಇಇ. IX-i, ೩೦-೪೯; 965). **ಪೋಳಲ್ಚೋರ :** ಪೋಳಲ್ಚೋರನೆಮ ನೊಟಮ್ಬ ಮಹಾಸಾಮನ್ತನ್ (ಎಕ. XII, ಶಿಕಬೂ. ೯೭-೭; 880). **ಪೋಟಲ್ಚೋರ :** ಶ್ರೀವಧುಧರೆ ಪೋಟಲ್ಚೋರಾವನಿಪಂಗಗ್ರಮಹಿಷಿ ಭೂಪನಾಮ್ಬಿಕೆ (ಎಕ. X, ಮುಳಬಾ. ೩೮-೩; ಸು. 890). ☞ ಈ ಎರಡು ರೂಪಗಳೂ 'ಪೊಟಲ್ಚೋರ' ಎಂಬುದರ ಅಪಲಿಖಿತವಿರಬಹುದು.

[ಪೊಟಲ್$_?$ + ಚೋರ]

**ಪೊಟಲ್ವೀದಿ** (ನಾ). ಊರಿನ ಕೇರಿ ; ನಗರದ ರಸ್ತೆ ; ಪಟ್ಟಣದ ಬೀದಿ : ಪೆಗೆಗಳುಮಂ ಪೆಂಡಿರುಮಂ ಮಿಗೆ ಸೋಲಿಪುವವನ ಬೀರಮುಂ ಗಾಡಿಯುಮಾವಗಮಡಸಿ ತಾಗೆ ಕಣೆಯುಂ ಮುಗುಳ್ಗಣೆಯುಂ ಮೊನೆಯೊಳಂ ಪೊಟಲ್ವೀದಿಯೊಳಂ (ಕಬ್ಬಿಗಾ. ೯೮).

[ಪೊಟಲ್ + ಬೀದಿ]

**ಪೊಟವು** (ನಾ). (?): ಪೊಟವನೆ ಭಾವಿಸದೇಟಿಯುಮಿಟಿಾಯಿಯುಮಾಗಳ್ ನಖಾಗ್ರವಾಲಾಗ್ರದಿನೊಂದುಟಿಯದವಯವಮನವಯವಮುಟಿಯದು ಮನಿಸದೆ ಕುಮಾರಿ ನೋಡಿದಳನಿಸಂ (ಶಾಂತಿಕೃ. ೩-೦೦೦).

[ ? ]

**ಪೊಟಿಯೂರ್** (ನಾ). ಒಂದು ಊರಿನ ಹೆಸರು : ಪಡುವಲು ತೊಣ್ಣಾಲದ ಪೊಟಿಯೂರ ಸಂದಿ (ಮೈಎಂ. ೦೯೨೩, ೦೦೩-೯೯; 634).

[ಪೊಟಿ$_?$ + ಊರ್]

**ಪೊಟಿ, ಪೊಳ್ಳಿ$_3$, ಹೊಳ್ಳಿ$_3$** (ನಾ). ೧. ನದಿ ; ತೊರೆ ; ಹಳ್ಳ : "ತೊಟಿಯೊಳ್ ಪೊಟಿಯೇಂದು" (ಶಬ್ದಾ೯ಬ. ೬೨); ನೀರ ಪೊಟಿ ಪಾಡುವೆಡೆ ಹೊಲಗೇರಿ . . . ಎಂಬೆಡೆಗಳುಚಿತವೋಸಱಗೇಳಲ್ (ಲೋಕೋಪ. ೦೨-೩೩). ೨. ದಾರಿ; ಹಾದಿ; ಮಾರ್ಗ : "ಪೊಟಿ = ಬಟ್ಟೆ, ತೊರೆ (ಹೊಳೆ)" (ಶಮದ. ಶಂ. ೦) ; "ಪಥ ನದಿಗಳೊಳ್ ಪೊಟಿ" (ಶಬ್ದಮಂ. ೦೦೩) ; ಆ ನದಿ . . . ಅಗಸರ ಪೊಟಿಯೊಳಾಡುತಿರ್ಪ ಕಟ್ತಿಯಂ ಕಂಡು (ಶಂಕಶಂ. ೨೮೨-೨೦); ಕೊಳದ ತಡಿಯೊಳ್ ಕಾಲ್ಗೊಗಂದೊಳಿವ ಮಾನಸರಂ ಸರೋವರಮಂ ಪಾಯ್ವ ಪೊಟಿ ಯಾವುದೆನೆ (ಅರ್ಜನೇ. ೬-೦೪ ವ). **ಪೊಳ್ಳಿ$_3$ :** ೧. "ಪೊಳಿಯೆನಲ್ ಹೊಳೆ" (ಶಪ. ೬೯); ಸಂಗವದ ಸಂಗವೇಶ್ವರ × × × ಯ ಪೊಳಿಗೆ ನೂಱು ಮತ್ತ (ಸೌಇಇ. XI—i, ೦೦೩-೩೭; 1070); ಬಾವಿ ಕೆಱಿ ತೊಱಿ ಕಟ್ಟೆ ಪೊಳಿಗಳಿಂದ . . . ಸೊಗಸ ಬೀಱುವುದು (ಸೌಂದಕೃ. ೨-೩); ಉದಕಂ ಪೊಳೆಯಂತೆ ಪರಿಯಲಾದುದು (ಮಹಾಪು. ೬-೦೭). **ಹೊಳ್ಳಿ$_3$ :** ೧. ಹೊಳೆಯುಂ ನಡುವಣ ಹುದುವಿನ ಹೊರದ ಮಣ್ಣು (ಮೈಎಂ. ೦೯೩೩, ೩-೦೩; 1169); ಹೊಳೆಗಳುಱಿ ಬತ್ತಿದುವು ನಿರ್ಜರ ಜಲವಡಂಗಿದವು (ಕೊರಿರಾ. ೦-೩-೦೭); ಪೂವಲ ಹನುಮ ಪುಳಿಲನೆ ಖಾನನ ನೇಮದೆ ತೆಂಕಣ ಹೊಳೆಯ ತಡಿಯ ಬೀಡ ಬಿಟ್ಟ (ಕಂಪಂ. ೦೨-೦೩); ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದ ಹಾಗೆ (ಗಾದೆ).

[ದೇ.॥ ತಮಿ. ಪುಟ್ಟಿ; ಮಲ. ಪುಟ; ತುಳು. ಹೊಳೆ; ಕೊಡ. ಪೊಳೆ]

**ಪೊಟಿಗಟ್ಟು** (ಕ್ರಿ). ನದಿಯಾಗಿರುವಂತೆ ಮಾಡು : ಗಟಿಯಿಸುವ ತಮಂ ಮೂಡಲ್ ಪೊಟಿಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡೆಟಲೆ ಧರೆಗರ್ಧನಾರಿಯ ತಟಿವಿಡಿದಂತಾಯ್ತು ಗಗನಮಂಡಲಮಿನಿಸುಂ (ಅನಂಪು. ೭-೭೨). [ಪೊಟಿ + ಕಟ್ಟು$_1$]

**ಪೊಟಿದುಂಗೆ** (ನಾ). ಸುವಾಸನೆಯ ಹುಲ್ಲಿನ ಗೆಡ್ಡೆ ; ಪರಿಮಳ ಯುಕ್ತವಾದ ಹುಲ್ಲುಗಡ್ಡೆ : ಪಚ್ಚನೆ ಬೆಳೆದ ಹರಿತ ಶಾದ್ವಲಮುಂ ಸುತ್ತುಂ ನೀಳ್ದ ಪೊಟಿದುಂಗೆಯ ಜೊಂಪವಮುಂ ವಿರಾಜಿಸೆ (ರಾಮಾಶ್ವ. ೩೦-೨೦). [ಪೊಟಿ ? + ತುಂಗೆ$_1$ (< ತುಂಗ$_1$)]

**ಪೊಟಿಮೆಟ್ಟು, ಹೊಳೆಮೆಟ್ಟು** (ಕ್ರಿ). ಹೊಳೆಯ ನೀರನ್ನು ಪೂಜಿಸುವುದಕ್ಕಾಗಿ ನೀರಿನಲ್ಲಿ ಇಳಿ; ☞ ಬಾಣಂತಿಯು ಸೂತಿಕಾಗೃಹದಿಂದ ಈಚೆಗೆ ಬರುವ ದಿನ ಹೊಳೆಯ ನೀರಿನ ಬಳಿ ಸ್ನಾನಮಾಡಿ ಗಂಗೆಯನ್ನು ಪೂಜಿಸಿ ಬರುವ ಪದ್ಧತಿಯಿತ್ತು, ಹಾಗೂ ಇದೊಂದು ಪವಿತ್ರೀಕರಣವಿಧಿಯಾಗಿತ್ತು : ಇಟಿದೊಡೆ ಕೂರದ ಪೆಂಡಿರ ಕೆಟಗಾದಪೆವೆಂದು ರತ್ನಸೋಪಾನಕದೊಳ್ ಗಟಗಟನಿಟಿಯದೆ ಬಾಣಂತಿ ಪೊಟಿಮೆಟ್ಟುವ ತೆಱದೆ ಗುಜ್ಜುಮೆಟ್ಟಿದರರೆಬರ್ (ಅನಂಪು. ೭-೩೯). **ಹೊಳೆಮೆಟ್ಟು :** ಗಾಳಿಯೆಂಬ ಸುಕುಮಾರನಂ ಪಡೆದು ಸಂಧ್ಯಾವನಿತೆ

ಪೊಳೆವೆಟ್ಟು ಹೊದೆದ ಕಾರ್ಗಂಬಳಿಯಿಂದೊ . . . ಪೇಳ್ವೆಂಬ ವಿಸ್ತಾರದಿಂ ಕಾಳಗತ್ತಲೆಯೆಂಬ ಲತೆ ಹಬ್ಬಿ ಪರಿಕಲಿಸಿ ಮಡಲಿಱಿದುದು (ಸೋಮಕ. ೨-೬).
[ ಪೊಟೆ + ವೆಟ್ಟು₁ ]

**ಪೊಟೆವಕ್ಕಿ** (ನಾ). ಹೊಳೆಯಲ್ಲಿರುವ ಪಕ್ಷಿ; ನೀರುಹಕ್ಕಿ ; ಚಕ್ರವಾಕ : ಮಿಾನ ಕಣ್ ಪಾವಸೆ ಬಿಡುಮುಡಿ ಪೊಟೆವಕ್ಕಿ ಬಲ್ಮೊಲೆ ಸುೞಿ ಪೊಕ್ಕುೞ್ ಮಳಲೊಟ್ಟಿಲ್ ಪೊಱವಾಱ್ (ರಾಮಾಶ್ವ. ೮-೧೧). [ಪೊಟೆ + ಪಕ್ಕಿ]

**ಪೊಟ್ರ** (ನಾ). ಚಿನ್ನದ ಪಾತ್ರೆ : ಭಟಾರಾ ಪ್ರಾಸುಕಮಪ್ಪ ನೀರಂ ಪೊಟ್ರದೊ[ಪಾಠಾಂ. ೞೊ]ಳ್ ಬಂದುದಂ ಕುಡಿದು ನಿಮ್ಮ ಸೇದೆಯ ನಾಱಿಸಿಂ (ವಡ್ಡಾರಾ. ೧೦೩-೩೦); ಪಿರಿದೊಂದು ಪೊನ್ನ ಕರಗಮಂ ತೆಕ್ಕನೆ ತೀವಿಯಾದಮಾನುಂ ತಣ್ಣಿದುವುಂ ಕಮ್ಮಿದುವುಮಪ್ಪ ನೀರ್ಗಳಂ ಪೊಟ್ರದೊ[ಪಾಠಾಂ. ೞೊ]ಳ್ ಕೊಂಡು ಪೋಗಿ ಕುಡಿಯಲೆಱೆಯೆ ಕೊಳ್ದರಿಲ್ಲಂ ದೊಡೆ ಭಟಾರರೆಂದರ್ ಪ್ರಾಸುಕಮಾದೊಡಂ ಪೊಟ್ರದೊ[ಪಾಠಾಂ. ೞೊ]ಳ್ ತಂದೊಡಂ . . . ಕುಡಿಯಲುಂ ತಗದು (ವಡ್ಡಾರಾ. ೧೦೪-೩).
[ದೇ.॥ ತಮಿ. ಪೊಱ್ = ಚಿನ್ನದ, ಉತ್ತಮವಾದ]

**ಪೊಟ್ರಡ** ‘ ಪೊಟ್ಟಱ್ ’ ನೋ.

**ಪೊಟ್ರಡೆ** ‘ ಪೊಟ್ಟಱ್ ’ ನೋ.

**ಪೊಟ್ಟಱ್**, ಪೊತ್ತೆಡೆ, ಪೊತ್ತಱ್, ಪೊತ್ತಱೆ, ಪೊತ್ತಾಱೆ, ಪೊಳ್ತಡ, ಪೊಳ್ತಡೆ, ಪೊಳ್ತರೆ, ಪೊಳ್ತಱ್, ಪೊಳ್ತಱೆ, ಪೊಟ್ರಡ, ಪೊಟ್ರಡೆ, ಪೊಟ್ಟಱೆ, ಹೊತ್ತರು, ಹೊತ್ತರೆ, ಹೊತ್ತಱು, ಹೊತ್ತಱೆ, ಹೊತ್ತಾರೆ, ಹೊತ್ತಾಱೆ (ನಾ). ಪ್ರಾತಃಕಾಲ ; ಪ್ರಭಾತ ಸಮಯ ; ಮುಂಜಾವು ; ಬೆಳಗಿನ ಕಾಲ : “ ಪೊಟ್ಟಱೆಂದುದಯ ಕಾಲಂ ” (ಕರ್ಣಾ. ೧೮೨). ‘ ಪೊಸಪೊಟ್ಟಱ್ ’ ಪರಾ. **ಪೊತ್ತಡೆ :** ಸಜ್ಜವನೆಯೊಳ್ ಶುದ್ಧಾಂತಕಾಂತಾಜನಕ್ಕೆಡೆಯುಂ ಮಾಡದವೊಲ್ ಕಡುಗಿ ಬರೆ ನಿದ್ರಾಕಾಂತೆ ಕಣ್ಗೆಯ್ದೆ ಪೊತ್ತ[ಪಾಠಾಂ. ತ್ತೆ, ಟ್ರ]ಡೆ ಭೂಕಾಂತನು ಪಾತ್ತನಿತ್ಯನಿಯಮವ್ಯಾಪಾರಪಾರಾಗಮಂ (ಅಪಂಕ್ತಿ. ೩-೮೨). **ಪೊತ್ತಱ್:** ನಿಲ್ಲದ ತಣ್ಣೆಲರ್ . . . ಪೊತ್ತಱಿಂ [ಪಾಠಾಂ. ಡಿಂ]ಗಿಲ್ಲದ ಚಂದ್ರಕಾಂತಿ ನೆಲೆಗೊಂಡುದುಗಂಡುಮದೇಕೆ ಕಾವ್ಯದೊಳ್ ಬಲ್ಲ ಮಹಾತ್ಮರುಂ ನಿಲಿಸ ಲೊಲ್ಲರೊ ಭಂಗಚಲದ್ಗುಣಂಗಳಂ (ಲೀಲಾವ. ೧-೬೧). **ಪೊತ್ತಱೆ :** ಕತ್ತಲೆಗೆ ತಾರಕೆಗಳಲ್ಲದೆ ಪೊತ್ತಱೆಗೆ ತಾರಕೆಗಳೇ ಬಲುಮಿತ್ತನಿಸುವರು (ಶಂಕರಾ. ೯-೫೦). **ಪೊತ್ತಾಱೆ :** ಬಲ್ಲಂ ಕಂಡು ಪೊತ್ತಾಱೆರ್ದು [ಪಾಠಾಂ. ಪೊತ್ತಱ ಲೆರ್ದು] ಸವಣರ ಮೊಗಮಂ ಕಾಣ್ಬ ಕಾರಣಂ ಬೇಂಟೆ ದೊರೆಕೊಳ್ಳದು (ಕುಮಾರ. ೯-೨೬ ವ). **ಪೊಳ್ತಡ :** ರಾಜ್ಯಧಾರಣಶುಭದಿನದೊಳ್ಪೊಳ್ತಡದಾ ರಾಜೇಂದ್ರಂ . . . ನಿಜಾಸ್ಥಾನಮಂ ಪೊಕ್ಕು (ಪುರಾಣ. ೬-೧೧ ವ). **ಪೊಳ್ತಡೆ :** ಪೊನ್ನ ನಿಮ್ಮೊರೊಳ್ ರಂಜಿಸಿದ ಸಂಜೆಯ ಜೀವವರ್ಣಮ ನಿದೆ ! ಈ ಪೊಳ್ತಡೆಯುಂ (ಸಂಸಕ. ೯-೨). **ಪೊಳ್ತರೆ :** “ಪೊಳ್ತರೆಯೆನಲ್ ಹೊತ್ತಾರೆ” (ಕಶರ. ೬೦); ವರುಣದಿಜ್ಞಗರಿಯಿಂ ನಡೆದು ಪೊಳ್ತರೆಯಿಂದೆ ನೆಳಲೆಂಬ ದಿವಸಯಾತ್ರಿಕನು (ಚಕ್ರಾಂಗ. ೧೮-೪೮೯); ಪೊಳ್ತರೆಯ ದಾಳಿಂಬ ದರುಣಕಾಂತಿ (ಪಿನೇಗೀ. ೪೪-೧೩). **ಪೊಳ್ತಱ್ :** ನಿಮ್ಮಂಘ್ರಿಯುಂ ಪೊಳ್ತ ಱೊಳ್ದರ್ಲೋಕನಂಗೆಯ್ಕದೆ ನುತಿಸದೆ ಮೇಣ್ ಧ್ಯಾನಮಂ ಮಾಡದೆ (ಪಾಶ್ವ್ರಕ. ೩೩). **ಪೊಳ್ತಱೆ :** ಆವನೀ ಸ್ತುತಿಯಿನೆನ್ನಂ ಸ್ತೋತ್ರಮಂ ಮಾಳ್ಕುಮಿಂ ಮುದದಿಂ ಪೊಳ್ತಱೆಸಂಜೆಯೊಳ್ ವಸಿಯಿಪೆ ತದ್ಗೇಹದೊಳ್ (ವಿಷ್ಣುಪು. ೧-೨-೨೦೩); ನಿತ್ಯಮುಂ ಪೊಳ್ತಱೆ ಬೈಗಿನೊಳ್ತಪ್ಪದೆ ಮಜ್ಜನಮನೆಸ ಗುತ್ತಂ (ಭಾರತಾಂ. ೯-೩೯). **ಪೊಟ್ರಡ :** ಪೊಟ್ರಡ, ತಡಬಡ (ಶಬ್ದಾನು ೮೩ ಪ್ರಯೋ). **ಪೊಟ್ರಡೆ :** “ಪೊಟ್ರಡೆ (ಪೊಟ್ಟಱೆ) = ಉದಯಕಾಲಂ” (ಕಮುದ. ಕಾಂ. ೧); ಕಡುವೆಂಕಂಯಂ ಕಟಾಕ್ಷಂಬಿಡಿದಿಱಿವ ಲಲಾಟಕುಂಕುಮ ಸ್ವೇದಜಲಂ ಕಿಡಿಸಿದುದು ಕದಪಿನೊಳ್ ಪೊಟ್ರಡೆ ಬರೆದರಸಿಯರ ಪತ್ರ ಲೇಖಾವಳಿಯಂ (ಅದಿಪು. ೧೧-೫೨); ಬಳವಳವಣ್ಬು ಕಾಯ್ದೊವಜೆ ಬಿನ್ನಣ ಮೆಂಬಿವು ಪೊಟ್ರಡ[ಪಾಠಾಂ. ಱ]ಲ್ಲಿ ಕೈಕೊಳೆ ವನವಹ್ನಿಯಿಂ ಬಿದಿರ ಗಂಟೊಡೆ ವಂತೆ ಛಟಚ್ಛಟಸ್ವನಂ ಬಳೆದುದು ಯುದ್ಧದೊಳ್ (ಜಗಧ. ೬-೬೩); ಇನಿ ತೋದು ಬೇಗದಿಂ ಪೊಟ್ರಡೆಯೊಳೇಂ ತೇರಂ ತಂದಯ್ ? (ರಾಮಾಶ್ವ. ೨೭-೨೬). **ಪೊಟ್ಟಱೆ:** “ಪೊಟ್ರಡೆ (ಪೊಟ್ಟಱೆ) = ಉದಯಕಾಲಂ” (ಕಮುದ. ಕಾಂ. ೧); ಅಂದಿನ ಪೊಟ್ಟಱೆಯೊಳಯ್ಯನೆನ್ನಂ ಕರೆದು (ಕಾದಂಬ. ೬೨೪); ಮಹಾಪುರುಷರ್ ಪೊಟ್ಟಱೆಯಿರವಂ ದೊರೆಗೊಳಿಸಿದರೆ (ಗೀತಗೋ. ೧೧-೨೦). **ಹೊತ್ತರು :** ‘ಹೊತ್ತರೂಟ’ ಪರಾ. **ಹೊತ್ತರೆ :** ಆ ದೇವ ರಲ್ಲಿ ಬೈಗೆ ನಾಲ್ಕುಘಳಿಗೆ ಪುರಾಣ ಹೇಳುವರು ಹೊತ್ತರೆ ಅಗ್ನಿಷ್ಟಗೆಯ ಮಠದಲ್ಲಿ ನಾಲ್ಕುಘಳಿಗೆ ಶ್ರುತಿಯ ಹೇಳುವರು (ಎಕ. XII, ಚಿಕ್ಕನಾ. ೨-೬೨ ; 1261) ; ಎಳೆಯ ಬೆಳಕನು ಮೊಗೆದು ಹೊತ್ತರೆ ಬೆಳ್ಳಗೆತ್ತಲು ತುಳುಕಲು (ಇಂಗೀತ. ೦೨-೧). **ಹೊತ್ತಱು :** ಗಂಗೇಶ್ವರದೇವರ ಹೊತ್ತಱಿನ ಉಪ ಹಾರಕ್ಕಂ (ಎಕ. VI, ಕಡೂರು. ೧೫೬-೬೩ ; 1191) ; ಹೊತ್ತಱೇಳುತ ಬೈಗೆ ಮುಟ್ಟಲು ತೊತ್ತುಗೆಲಸಂಗೈಯಲದಱಿಲಿ ಬತ್ತವೊಬ್ಬಳವಲ್ಲದಿಲ್ಲ (ಬಸಪು. ೨೯-೨೯); ವಿತ್ತಮಂ ಕಳ್ದೊಯ್ವ . . . ಸಮಯದೊಳಗಾ ಹನೆ[ನಿ]ಯ ಹೊತ್ತಱೊಳಗಾ ಗಜಬಜೆಯ ಕೇಳಿ ಪುರಜನಂ ಮತ್ತಲ್ಲಿಗೆಯ್ದಲು (ಸಮ್ಯಕ್ತ್ವ. ೨-೨೩). **ಹೊತ್ತಱೆ :** ನಡುವಿರುಳ್ ಕೊಂಡು ಪೋಗಿಯವರಿರ್ಪ ಬಸದಿ ಯೊಳಗೊಂದು ಕೋಣೆಯೊಳೊಟ್ಟಿರಿಸಿ ಬಂದು ಹೊತ್ತಱೆ[ಪಾಠಾಂ. ಪೊಟ್ರಡೆ] ಅರಸಂಗಿಂತೆಂದು ಪೇಟ್ಡಂ (ವಡ್ಡಾರಾ. ೧೬೬-೬) ; ನಾನಾ ದಿನದ ಹೊತ್ತಱೆ ಪುರವ ಹೊಱವಂಟಂಬಿಕಾಪದದರುಶನಕೆ ಬಹುದುಂಟು (ಸಿಭಾಗ.೧೦-೫೮-೪೩). **ಹೊತ್ತಾರೆ :** ಉದಯದ ಹಾಲನು . . . ಕಾಸಿ ಹೊತ್ತರಿ (ಹೊತ್ತಾರೆ) ತೊಡಗಿದ, ಕೆಂಡದ ಮೇಲೆಯಿರಿಸಿ ಅಸ್ತಮಾನವಾದ ಜಾವದಲಿ ಹೆಪ್ಪ ಕೊಟ್ಟರೆ ಕೆಂಪಿನ ಮೊಸರಾಗಿಹುದು (ಸೂಪಶಾ. ೨೮); ಮಬ್ಬು ತೆರೆ ಹಿಂದುಗಡೆ ಜಾರಿದುದು ತಾರೆ ಹೆಬ್ಬಿಸಿಲ ಉಗುಳುವಂತಿಹುದು ಹೊತ್ತಾರೆ (ಕುಂಪು. ೪೪-೫); ಹೊತ್ತಾರೆ ಎದ್ದು ಹೊಲ ನೋಡು (ಗಾದೆ). **ಹೊತ್ತಾಱೆ :** ಹೊತ್ತಾಱೆ ಎದ್ದು ಕಣ್ಣ ಹೊಸೆಯುತ್ತ ಎನ್ನೊಡಲಿಂಗೆ ಎನ್ನೊಡವೆಗೆ ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ (ಬಸವ. ೭೦೪) ; ಗಂಡುಪಕ್ಷಿ ತಾಂ ಹೊತ್ತಾಱೆ ಪೋಗಿ ಕಮಲದ ತಂಡುಲಗಳ ಮೆಲ್ಲುತ್ತ (ಚನ್ನಬಸ. ೪-೩೫) ; ನಿತ್ಯವೂ ಶಿವನ ತಾ ಹೊತ್ತಾಱೆ ನೆನೆದಿಹರೆ ಉತ್ತಮದ ಗತಿಯು ತನಗಹುದು (ಸರ್ವಜ್ಞ. ೨೮೯).
[<ಪೊಱ್ತು]

**ಪೊಟ್ಟಱೆ** ‘ಪೊಟ್ಟಱ್’ ನೋ.

**ಪೊಱ್ತು**, ಪತ್ತು₄, ಪೊತ್ತು₄, ಪೊತ್ರ್ತು, ಪೊಳ್ತು, ಹೊತ್ತು₅ (ನಾ). ೧. ನೇಸರು ; ಸೂರ್ಯ ; ರವಿ : “ ತಾವರೆಗೆಳೆಯಂ . . . ನೇಸಱು, ಪೊಱ್ತು, ಸಾಸಿರ್ಗ್ಯಯಂ . . . ಗರಂಗಳಾಣ್ಮಂ – ಈ ೧೧ ಸೂರ್ಯನ ಪೆಸರ್ ” (ಕರಸಾ. ೪೮-೨೮) ; ಬಟ್ಟೆಗಂ ಗಟ್ಟದೊಳ್ ಪೊಱ್ತಂ ಮುಱುಂಗಿಸಿದಂ (ಶಬ್ದಾನು. ೫೩೬ ವ್ಯಾಖ್ಯಾ). ೨. ಸಮಯ ; ಕಾಲ ; ವೇಳೆ : “ಪೊಱ್ತು = ಸಾಮಾನ್ಯಕಾಲಂ, ಪ್ರಸವಕಾಲಂ, ನೇಸಱ್ ” (ಕಮುದ. ಕಾಂ. ೧) ; ಒರ್ವಂ ತನ್ನ ನಲ್ಲಳೊಳಿಂತೆಂದನೀ ಪೊಟ್ತೆ ಪೊಱ್ತು ನಾಳೆ ದೇವಲೋಕದ ಕನ್ಯಕೆಯ ರೋಲಗದೊಳಿರ್ಪಂ (ಶಂಕಭಾ. ೧೧-೪೪ ವ) ; ಪೊಱ್ತಿನಂತೆ ನಿಲಿಸಲರಿದ ಪ್ಪುದು (ಧರ್ಮಾಮೃ. ೪-೧೭೫) ; ತಕ್ಕ ಪೊಱ್ತಿನೊಳೆ ಬಂದುದೇನ್ ? (ಅಂತಿಗೂ. ೦೮-೩೬೪). ೪. ಹೆರಿಗೆಯ ಕಾಲ; ಪ್ರಸವಕಾಲ : “ ಪೊಱ್ತು = ಸಾಮಾನ್ಯಕಾಲಂ, ಪ್ರಸವಕಾಲಂ, ನೇಸಱ್ ” (ಕಮುದ. ಕಾಂ. ೧); ವಿದಿತಂ ಕಾಂತೆಗೆ ಪೊಱ್ತು ತೀವಿದುದು (ಜಾತಕ. ೮-೧೮). **ಪತ್ತು₄ :** ೪. ಆವರ್ತಿ ; ಸರದಿ ; ಬಾರಿ : ತಿರುವದ್ಯನ ತಿರುನಾಳಲ್ಲಿ ಆಱನೆಯ ಪತ್ತಿನ ಚಿಜಪುಯಿಲ್ಲಿ ಮುದ್ರೆಯ ಹಾಕಿಕೊಂಡು ಇಹ ಶ್ರೀವೈಷ್ಣವಗೆ

ತಿನ್ಗಳು ೧ಕ್ಕೆ ಸಮ್ಬಳ ಎರಡು ವರಹ . . . ಸಲೂದು (ಎಕ. XIV, ಶ್ರೀರಂಗ. ೨೬೯-೧೨ ; ಸು. 1585). **ಪೊತ್ತು₄ :** ೧. ''ಪ್ರಭಾಕರನೊಳಂ ಪೊತ್ತೆಂದು'' (ಕರ್ಣಾಟ. ೬೩). ೨. ಆಕೆ ನಿರುತ್ತರೆಯಾಗಿ ಎನ್ನ ದೆಸೆಯ ಮುಳಿಸನುೞಿದಂದಿಂದಿತ್ತಂಗೆ ನಿಂದು ಪೊತ್ತು ಕಾಯ್ದು ಬೇಸಱಿಸಿ ನಿರ್ವಂದ ದಿನಟ್ಟಿ ಕಳೆಯೆ (ಶಾಂತಿಪು. ೬-೬೪ ವ) ; ಮುಗಿಲಂತೆ ಪೊತ್ತಿಗೊಂದು ಬಣ್ಣ ಮಾಗದೆ (ಧರ್ಮಾಮೃ. ೫-೯೯) ; ಈಸು ಪೊತ್ತೇಕೆ ಪವಡಿಸಿವನೆಂದೆಬ್ಬಿಸಲ್ (ಶಬರ. ೬-೨೩). ೩. ಒಡನೆಯೆ ಚಕ್ರವಾಕಿ ಪೊಸವಾಣತಿ ಕೋಗಿಲೆ ಯಿಾೞಿಲಿಂದು ಕೇಳ್ಗಡ ಗಿಳಿವೆಣ್ಗೆ ಪೊತ್ತಿನೊಳೆಯ್ದೆ ನವಿಲ್ ಮನೆದೀವಿ ಮಕ್ಕಳಂ ಪಡೆದುದ ನೋಡ (ಅರ್ಧನೇ. ೦-೯೪). **ಪೊತ್ತರ್ :** ೨. ಆ ಪೊತ್ತರ್ಗಂ ಕೋಕಿಲಂಗಳುಲಿಗುಂ ಬನದೊಳು (ಎಇ. XVI, ೩-೦೩ ; 980); ಮೂಱು ಪೊತ್ತರ್ಗಂ ವರಕಾನ್ತಾಸಂಕುಳಂ ಬಂದಿರದೆ (ಎಇ. XV, ೯೦-೪೯; 1060). **ಪೊೞ್ತು :** ೧. " ಪೊೞ್ತನಲ್ ಸೂರ್ಯನಕ್ಕು " (ಶಶರ. ೭೦); ತೀಡಿತ್ತಲೆವ ತಂಗಾಳಿ . . . ಏರ್ದುದು ಪೊೞ್ತು (ಜತ್ರಾಂಗ. ೫೬-೧೫೨೫); ಪೊೞ್ತಿಗೆ ಕಯ್ಯ ಮುಗಿದು (ಕಾಲೂರ. ೦೦೬-೨೪೨). ೨. ಮದ ದಿಂದಂ ಪೊೞ್ತು[ಪಾಠಾಂ. ತ್ತು] ಪೋಗುತ್ತಿದೆ (ರಕ್ಷಾಶ. ೩೫) ; ಇನಿಸು ಪೊೞ್ತಾದೊಡಂ ಸುಖನಿದ್ರೆಗೆಯ್ವೆನೆಂಬೆನೆ (ಶಬ್ದರಾ. ೯-೬೮) ; ಇಂದೇನೊ ನಿಶಿಪೊೞ್ತಿನೊಳಗಿಂತು ಈ ಕಾಳಿಯವತಾರ ! (ವಶದಾ. I, ೪೫೦). **ಹೊತ್ತು₆ :** ೧. ಬಾನಿನ ನೆತ್ತಿಯನೇರಿತು ಹೊತ್ತು (ಮಾಂದೇ. ೦೨-೦೬); ನಿದ್ದೆ ತಿಳಿದಾಗ ಹೊತ್ತು ಏರಿತ್ತು (ಬಾಣಜ. ೨೦೫); ಹೊತ್ತು ಬಂದತ್ತ ಕೊಡೆ ಹಿಡಿ (ಗಾದೆ). ೨. ಅರಸಿಂಗೆ ಎಲ್ಲಾ ಹೊತ್ತು ಹಿತವಂ ನುಡಿವ ಮನುಷ್ಯರ್ ಹಲವರುಂಟು (ಪಂಚತಂ. ೦೦೨-೦೩); ಹೊತ್ತು ಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ತೊತ್ತುಗೆಲಸವ ಮಾಡು (ಬಸವ. ೧೭೨); ಸಾಕು ಹೆಱತೆಗೆ ಘಾಯವಡೆದವಿವೇಕಿ ಮೈಮಱೆದಿದ್ದ ಹೊತ್ತಿದು (ಕುಮಾಕ. ೮೨-೩೦); ಹೊತ್ತಲ್ಲದ ಹೊತ್ತಿನಲ್ಲಿ ತೊತ್ತು ಮೈ ನೆರೆದಳು (ಗಾದೆ).

**ಪೊತ್ತುಪೊತ್ತು, ಹೊತ್ತುಹೊತ್ತು ಹೊತ್ತೊತ್ತು** (ದ್ವಿರುಕ್ತಿ) : ಪೊತ್ತುಪೊತ್ತಿಗೆ ಪೋಗಿ ಪೂಡಮಟ್ಟು ನಸು ತಲೆಗುತ್ತಿ ನಾಣ್ಚುತ ನಲವಿನೊಳು (ಹಂಬ.೪-೮); ಹೊತ್ತುಹೊತ್ತಿಗೆ ಉಣ್ಣಬೇಕು (ಮುಂಬಯು. ೪-೩೩); ಹೊತ್ತುಹೊತ್ತಿಗೆ ಅನ್ನ ನೀರನು ಹವಣಿಸಿ ಮಕ್ಕಳ ಗಿಣಿಯಂತೆ ಸಾಕಿ (ಇಂಜಾಕ. ೦೬-೭೭); ಅವುಗಳನ್ನು ಹೊತ್ತೊತ್ತಿಗೆ ಆಡಿಸಿಕೊಂಡು ಬರುತ್ತಿದ್ದನು (ಮುಂಬಯು. ೨-೫೪). **ಹೊತ್ತಾಗು**=ತಡವಾಗು ; ವಿಳಂಬವಾಗು : ತುಂಬಾ ಹೊತ್ತಾಯಿತಲ್ಲವೇ! (ಬಟ್ಟಜೀ. ೪೫). **ಹೊತ್ತಿಗೆ ಮುಂಚೆ**=ಸಮಯವಾಗುವುದಕ್ಕೆ ಮೊದಲೆ ; ಬೇಗನೆ : ಅವರು ಹೊತ್ತಿಗೆ ಮುಂಚೆ ಊರು ಸೇರಬೇಕೆಂದು ಬೇಗ ಹೊರಟರು (ರೂಢಿ). **ಹೊತ್ತಿನರಸ** = ಸಮಯದ ಒಡೆಯ ; ಸೂರ್ಯ : ಹೊತ್ತಿನರಸ ನೆತ್ತಿಯ ಮೇಲೆ ಬಂದಾಗ ಕಟ್ಟಿಗೆಯ ಹೊರೆ ಹೊತ್ತು ಮಾರಯ್ಯ ಮನೆಗೆ ಬಂದ (ಶರಣ. ೩೮೯). **ಹೊತ್ತಿನುಲಿ** = ಸಮಯವಾಯಿತೆಂದು ಸೂಚಿಸುವ ಧ್ವನಿ : ಹೊತ್ತಿನುಲಿಯಾಗದೊಡೆ ಆಟ ಮೊದಲಾಗುವುದೆ ಹೊತ್ತೆತ್ತೋರ್ಪುದು ಸಾವಿನಾಟಗಳ ಕೊನೆಯಂ (ಕಾಲೂರ. ೮೫-೦೬೩). **ಹೊತ್ತು ಕಂತು** = ಸೂರ್ಯ ಮುಳುಗು ; ಸೂರ್ಯಾಸ್ತವಾಗು : ಹೊತ್ತುಕಂತಿ ಎರಡು ಗಳಿಗೆ ಕಳೆದಿತ್ತು (ಶಬ್ದಸ. ೦೯) ; ಹೊತ್ತು ಕಂತಿ ಎರಡುಗಳಿಗೆ ಕೂಡ ಆಗಲಿಲ್ಲವಂತೆ (ಬಟ್ಟಜೀ. ೪೯). **ಹೊತ್ತುಗೊತ್ತು** = ವೇಳೆ ಮತ್ತು ಸ್ಥಳ : ಹೊತ್ತಿದ್ದಂತೆ ಹೊತ್ತಿಲ್ಲ. ಹೊತ್ತು ಗೊತ್ತು — ಒಂದೇ ಆಗಿರುವುದೂ ಇಲ್ಲ (ಬಿಡಿಮಾ. ೨೨೫) ; ನಾವಿರಲು ಹೊಳೆವುದು ಹೊತ್ತುಗೊತ್ತಿನ ಗತ್ತು ನಾ ಮೈಯು ಎನಲು ದಿಕ್ಕಾಲ ಕಡೆ (ಮುಕ್ತಕಂ. ೪-೧೮). **ಹೊತ್ತು ತುಂಬು** = ಹೆರಿಗೆಯ ಸಮಯವಾಗು ; ಪ್ರಸವಕಾಲ ಬರು : ಹೊತ್ತು ತುಂಬಿದವಳು ತನ್ನ ನಿತ್ತರಿಸುವ ಬೇನೆಯನಱಿವಳು (ಮೋಳಿಮಾ. ೧೯-೬೫). **ಹೊತ್ತು ನೆತ್ತಿಗೇರು** = ಸೂರ್ಯ ನಟ್ಟನಡುವಿಗೆ ಬರು; ಮಧ್ಯಾಹ್ನವಾಗು : ಹೊತ್ತು ನೆತ್ತಿಗೇರಿದೆ. ಬಿಸಿಲು ಉರಿಯುತ್ತಿದೆ (ಬೆಳುವ. ೨೩೮) ; ನಾವು . . . ಮರಳಿ ಬರುವ ವೇಳೆಗೆ ಹೊತ್ತು ನೆತ್ತಿಗೇರಿತ್ತು (ಬಟ್ಟಜೀ. ೦೫೦). **ಹೊತ್ತು ಬರು** = (ಸಾವು, ಕೇಡು ಇತ್ಯಾದಿಗಳ) ಸಮಯ ಸನ್ನಿಹಿತವಾಗು, ಸಮಿಾಪಿಸು : ಕೌರವರಿಗೆ ಹೊತ್ತು ಬಂದಿದೆ ; ಅವರು ನಾಯಿನರಿಗಳ ಪಾಲಾಗಿ ಒರಗುತ್ತಾರೆ (ಪಡಭು. ೨೪೬). **ಹೊತ್ತು ಮಾಡು** = ತಡಮಾಡು ; ವಿಳಂಬಿಸು : ಹೊತ್ತು ಮಾಡಿ ಆಗಬೇಕಾದುದೇನು? ಬಹಳ ದೂರ ಹೋಗಬೇಕು (ದೇವೀಜಾ. ೩) ; ಹೊಳೆಯಲ್ಲಿ ಬಹಳ ಹೊತ್ತು ಮಾಡಬೇಡಿ (ಬಟ್ಟಜೀ. ೩೪). **ಹೊತ್ತು ಮಿಾರು** = ಅವಧಿ ತೀರು ; ತಡವಾಗು : ಹೊತ್ತು ಮಿಾರಿದೆ (ಬೆಳುವ. ೦೯೨) ; ಹೊತ್ತು ಮಿಾರಿದರೆ ತೊತ್ತು ಹೆತ್ತವಳಾದಾಳೇ ? (ಗಾದೆ). **ಹೊತ್ತು ಮುಣುಗು, ಹೊತ್ತು ಮುಳುಗು** = ಹೊತ್ತು ಕಂತು : ಹೊತ್ತು ಮುಣುಗುತ ಬಂತು ಬತ್ತಲೆಯ ಜಗಕೆಲ್ಲ (ಕನ್ನಡಾ. ೨೪೯) ; ಸೂರಪ್ಪ ಅವ. ಹೊತ್ತು ಮುಳುಗುವಾಗ ಕಳ್ಳು ಕುಡಿದು ಮಲಗಿದರೆ ಹೊತ್ತು ಮೂಡುವಾಗಲೇ ಏಳುವವ (ಮರವ. ೩೪). **ಹೊತ್ತು ಮೂಡು** = ಬೆಳಗಾಗು ; ಸೂರ್ಯೋದಯವಾಗು : ಸೂರಪ್ಪ . . . ಹೊತ್ತು ಮೂಡುವಾಗಲೇ ಏಳುವವ (ಮರವ. ೩೪). **ಹೊತ್ತು ಸಾಧಿಸು**=ಸಮಯ ಕಾಯು ; ಸಮಯ ಸಾಧಿಸು : ಅವನು ಹೊತ್ತು ಸಾಧಿಸಿಕೊಂಡಿದ್ದು ತನ್ನ ಸೇಡು ತೀರಿಸಿಕೊಂಡ (ರೂಢಿ). **ಹೊತ್ತು ಹಾರು** = (ವೇಗವಾಗಿ) ಸಮಯ ಕಳೆ : ಕನಸಿನ ಭ್ರಮೆಯಲ್ಲಿ ಹೊತ್ತು ಹಾರಿಹೋಗುವುದನ್ನು ಮರೆಯುತ್ತೇನೆ (ಜ್ಯೋತಿರ್ಲ. ೨). **ಹೊತ್ತು ಹುಟ್ಟು** = ಬೆಳಗಾಗು ; ಸೂರ್ಯೋದಯವಾಗು : ಹೊತ್ತು ಹುಟ್ಟುವುದಕ್ಕೆ ಮುನ್ನವೆ ಮಾದಣ್ಣ 'ಸ್ವಂತಮನೆ' ಯ ಮೇಲಿನಿಂದ ಹೆಂಚುಗಳನ್ನು ಕೊಡಹಿ . . . ಹಾಕುತ್ತಿದ್ದ (ಬೆಳುವ. ೦೫೨).

[ದೇ. ‖ತಮಿ. ಪೊೞುತು, ಪೋೞ್ತು, ಪೋತು ; ಮಲ. ಪೞುತು, ಪೊೞುತು, ಪೋತು, ಪೋೞ್ ; ತುಳು. ಪೊತ್ತರ್; ಕೊಡ. ಪೊೞೀದೀ, ಪೊದೀ ; ತೆಲು. ಪ್ರೊದ್ದು, ಪೊದ್ದು ; ಕೋಲಾ. ಪೊದ್ ; ನಾಯ್ಕಿ. ಪೊದ್ದ್ ; ಗೊಂಡಿ. ಪೊದ್ರ್]

**ಪೊೞ್ತುಗಳೆ, ಪೊತ್ತುಗಳೆ, ಹೊತ್ತುಕಳೆ, ಹೊತ್ತುಗಳೆ** (ಕ್ರಿ). ಕಾಲ ಕಳೆ ; ಸಮಯಹರಣಮಾಡು : ತದ್ರಾಜಹಂಸಂ ನಿರಾಕುಳಮಿಾ ಮಾಟ್ಕೆಗಳಿಂದೆ ಪೊೞ್ತುಗಳೆವಂ ಸಂಸಾರಸಾರೋದಯಂ (ಆದಿಪು. ೦-೯೪); ಮುನ್ನಮೊಳ್ಪಿನಿಂ ನೆಗಟ್ದ ಮಹಾಪುರುಷರ ಕಥೆಗಳುಮಂ ತಾಂ ಸ್ಮರಿಸುತ್ತುಂ ಪೊೞ್ತುಗಳೆಯುತೀ ತೆಱದಿಂದಂ (ಧರ್ಮಾಮೃ. ೩-೨೬೫); ಕವಿಸಂಗೋಷ್ಠಿಯಿನೊರ್ಮೆ ... ಶಸ್ತ್ರವರಾಭ್ಯಾಸದಿನೊರ್ಮೆ ಪೊೞ್ತುಗಳೆವಂ ವಿಶ್ವಂಭರೋರ್ವೀಶ್ವರಂ (ಕುಸುಮಾ. ೩-೨೪). **ಪೊತ್ತುಗಳೆ :** ಒರ್ಮೆ ಲೀಲಾವಿಲೋಕನದಿಂ ಮಾಣದೆ ಪೋಗಿ ಪೊತ್ತು[ಪಾಠಾಂ. ೞ್ತು]ಗಳೆವಂ ನಿಚ್ಚಂ (ಸುಕುಮಾ. ೯-೪೦); ಪೊತ್ತುಗ[ಪಾಠಾಂ. ಕ]ಳೆಯದೆ ತನ್ನ ತನುವನೆರಡಾಗಿ ಮಸೆವೆತ್ತ ಕರಪತ್ರದಿಂ ಸೀಳ್ವುದೆಂದಾಜ್ಞಾಪಿಸಿ (ಕ್ಷೇಮಭು. ೨೬-೫೫). **ಹೊತ್ತುಕಳೆ :** ಹೊತ್ತುಕಳೆಯಲಾರದೆ . . . ಬಟ್ಟೆಯನ್ನು ನೀರಲ್ಲಿ ಅದ್ದಿ ಒಗೆಯಲಾರಂಭಿಸಿದೆ (ಬಟ್ಟಜೀ. ೩೫). **ಹೊತ್ತುಗಳೆ :** ಒಬ್ಬನ ಮನೆಯಲ್ಲುಂಡು ಹೊತ್ತುಗಳೆವೆ ಒಬ್ಬನ ಮನೆಯಲಾಡಲೊಂದು ಗಳಿಸಿದೆ (ಬಸವ. ೭೪೧); ಹೊತ್ತುಗಳೆಯದೆ ಎನ್ನ ಕಳುಹೆಂದ (ಕುಮಾದ್ರೋ. ೪-೪೫); ಆ ಪೆಣ್ಗಳೊಡನೆ ಹೊತ್ತುಗಳೆಯಲೋಸುಗ ಕೇಳಿದಳೞುವತ್ತುನಾಲುಕು ವಿದ್ಯೆಗಳ (ಮೋಹಕ. ೨೬-೩೭). [ಪೊೞ್ತು + ಕಳೆ₁]

**ಪೊೞ್ತುಪೋಗು** (ನಾ). ಕಾಲ ಕಳೆಯುವಿಕೆ ; **ಹೊತ್ತು ಹೋಗುವಿಕೆ :** ಪೊೞ್ತುಪೋಗಿಂಗಮಟ್ಟಿಗಮಾಡುವ ತಮ್ಮುತ್ತಿರ್ವರುಂ ಪಲಗೆಗೆ ಸಾಯಿರ

ಗದ್ಯಾಣದ ಪೊನ್ನೇ ಸಾಲ್ಗುಮಗ್ಗಳಂ ಬೇಡೆಂದು ದುರ್ಯೋಧನಂ . . . ಪಾಸಂಗೆಯಂ ಪೊರಳ್ಚಿ (ಪಂಪಭಾ. ೬-೭೦ ವ) ; [ಪೊಟ್ಟುಪೋಗಿಂಗೆ . . . ಪೊನ್ನು]ಯ್ಯಲನೇಱ . . . ತರಳಾಕ್ಷಿಯಾಡುತುಮಿರ್ಪನಂ (ಧರ್ಮಾಮೃ. ೩-೨೭). [ಪೊಟ್ಟು + ಪೋಗ್ಗು]

ಪೊಟ್ಟು 'ಪೊರ್ದು' ನೋ.

ಪೊಟ್ಟುಗೆ 'ಪೊರ್ದುಗೆ' ನೋ.

**ಪೊಟ್ಟು** (ನಾ). ಒಂದು ಸ್ಥಳದ ಹೆಸರು : ಪೊಟ್ಟು ವಿನೀತೀಶ್ವರಕ್ಕುಂ ಸರ್ವ್ವ ಪರಿಹಾರಂ ಕೊಟ್ಟರ್ (ಎಕ. IV, ಹಾಮುರಾ. ೬೩-೩ ; 750); ಕಮ್ಮುಂಗಱಿ ಕಸ್ತಿಯರ್ಗ್ಗೆ ಪೊಟ್ಟುದ ಹಡದೆನನ್ದಾಕರ ಮಗನಯ್ಯಮ್ಮದೆನನ್ದಾಕರ ಮಗಂ . . . ಕೊಟ್ಟ ಮಣ್ಣು (ಎಕ. X. ಕೋಲಾರ. ೯೦-೯೯ ; 903). [?]

**ಪೋ$_1$, ಪೋಗು$_1$, ಹೋಗು$_1$** (ಕ್ರಿ). ಪೋದ, ಹೋದ (ಭೂತಕೃ). ಪೋಪ, ಹೋಪ (ಭವಿಕೃ). ೧. ಇರುವ ಕಡೆಯಿಂದ ಬೇರೆಯ ಕಡೆಗೆ ಚಲಿಸು ; ತೆರಳು ; ಮುಂದೆ ನಡೆ ; ಗಮಿಸು : ಎಲೆ ಪಿಱಿತಿನಿ ಪೋ ಮುಟ್ಟದೆ ತೊಲಗು (ಪಂಪಭಾ. ೯-೯೩) ; ಮಾರ್ಕೊಳ್ಳದೆ ಪೋ ನೀನ್ (ಧರ್ಮಾಮೃ. ೨-೧೬೮) ; ನಾಗರಹಾವೆ . . . ಎರಗುವೆ ನಿನಗೆ, ಈಗಲೆ ಹೊರಗೆ ಪೋ ಪೋ ಪೋ (ಪಂಪಶ. ೦೩೨). **ಪೋಗು$_1$** : ೧. "ಪೋಗು—ಗಮನೇ" (ಶಮದ); ಅನ್ತೆ ಸಯ್ಯನೆ ಪೋಗಿ (ಇಕ. XII, ೧೬-೯೦ ; 813) ; ಅರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಸಾ. ೧೬೮ ಕೂಡ್ರಳ) ; ನೀಂ ಬಾ ಪೋಪು (ಪಂಪಭಾ. ೦-೬೦) ; ಬೇಱೂರ್ಗೆ ಪೋದ ನಲ್ಲರ ನೆನೆದು ದೂಱಿಸುವ ನೀಱೆಯರ (ಕವ್ಯಸಾ. ೩೯). ೨. ಸಾಗು ; ಕಳೆ; ದಾಟು : ಪರಿಷಮ್ಪೋ[ಗಿ] × × × ನೆಯ ಪರಿಷ (ಸೌಇಇ. XI-I, ೭-೩ ; 837) ; ಪೋದ ಭವಂಗಳಂ ನೆನೆವಿನಂ (ಆದಿಪು. ೫ ೯೬) ; ಎನಗೀ ಜನ್ಮವಿದಿಂತೆ ಬಂಜೆತನದಿಂದಂ ಪೋಕುಮೋ (ಸುಕುಮಾ. ೯-೧೦೯). ೩. ನಿವಾರಣೆಯಾಗು ; ಪರಿಹಾರವಾಗು : ಆ ದೀನಾನಾಥರ್ಗೆ ವೃದ್ಧ ದ್ವಿಜಮುನಿನಿಕರಕ್ಕಂದೆಡರ್ ಪೋಪಿನಂ ಕಃ ಕೇನಾರ್ಥೀ ಕೋ ದರಿದ್ರಃ ಎನ್ನುತ್ತುಮನಿತುಮಂ ಧರ್ಮಜಂ ಸೂಱೆಗೊಟ್ಟಂ (ಪಂಪಭಾ. ೬-೪೦) ; ಎನಿತೆನಿತು ಚಳಿ ಪೋಗಲನಿತನಿತು ಪಸಿವಡಸೆ (ಇಳರ. ದೀ. ೩೩-೦೩). ೪. ನಾಶವಾಗು ; ಸಾಯು : "ಬೀತುದು ಸವೆದುದೆನಲ್ ಪೋದ್ದು ದೆಂಬರು" (ಶಶುಶಿ. ೦೬೦): ಈಗಲೋ ಇನ್ನಾವಾಗಲೋ ಈ ತನುವು ಪೋಗದಿರದು (ಜಗದಾ. ೯೯). ೫. ಕಾಣದಾಗು : ಉದಿಸಿದ ದಶದಿವಸದ ಶಿಶು ಪೋಪಾಗ ವಿಧಿ ವಿಧಿಯನು ವಿಮಾಱಬಹುದೇ (ಮೋಹಕ. ೪ ೯೬). **ಹೋಗು$_1$** : ೧. ನನ್ನಿಯ ಗುಂಗನ ಪರಿ ಬನ್ದು ಬೆಳ್ಗಿಱಿಯಂ ಕುನ್ದೂರು ಮನಿಱಿದು ಹೊ ಗೆ (ಎಕ. XII,ತಿಪಟೂ. ೩೩-೨; ಸು. 880); ಇದಱಿಂದವೊಂದು ಜನನು ನಿನಗೆದೊರಕಿತ್ತು ಮುಂದದಿಂದ ಹೋಗಯ್ಯ ಜನನವಂ ನೀ ಹೊತ್ತು (ಬಸರ. ೦-೬೪); ಒಗತನ ಬಿಟ್ಟು ಹೋಹಾಗ ಹಾಲಿಗೆ ಹೆಪ್ಪ ಮೊಗೆದಿಕ್ಕಿದವ ರಾರುಂಟು (ಮೋಹಕ. ೯-೦೯); ಹೋಗು ಎನ್ನಲಾರದೆ ಹೊಗೆ ಹಾಕಿದರು (ಗಾದೆ). ೨. ಆಯಿತ್ತೆ ಉದಯಮಾನ ಹೋಯಿತ್ತೆ ಅಸ್ತಮಾನ (ಅವಚಂ. ೦೦-೪೦); ಪರಿಷ ಹೋದಿಂಬಳಿಕ ವಿರೋಧಿಸಂವತ್ಸರದ ಕನ್ನೆಮಾಸ (ಮ್ಮಕಾ. ೦೯೩೩, ೪೦-೦೯; 1177); ಹೋದ ದಿವಸಂಗಳಲಿ ಕಾಳಿಗಮಾದು ದಂಡಿನ ಭೀಷ್ಮರೊಡನೆ ವಿವಾದಕಾರಣ ಬೇಡಿಕೊಳಬೇಹುದು ನದೀಸುತನ (ಕುಮಾದ್ರೋ. ೦-೦೮). ೩. ಇಂದ್ರಿಯದ ಪೂರ್ವಾಶ್ರಯವು ಗುರುವಿನಿಂದ ಹೋಗದು ಅಂಗದಿಂದ ಹೋಗದು ತನ್ನಿಂದಹುದು ತನ್ನಿಂದ ಹೋಹುದು (ಸರ್ವಪ. ೪-೦೪); ಕಾಱುವುದ್ದಿಗೆ ಹೋಹುದೇ ಕ್ಷೆಮ್ಮಸ ಪವನಿಪನ (ಕುಮ್ಮಿಕ. ೦-೮); ಹೋದುದು ಮನದುಮ್ಮಳವು ಮಧುಸೂದನಗೆ (ಕುಳ್ಳಾ. ೩೮-೬೪). ೪. ಹಗೆಯರಲಿ ಹತವಾದನೆ ಹಾ . . . ಮೊಗವ ಕಾಣದೆ ಹೋದನೇ ಎನಗೇನು ಗತಿಯೆಂದ (ಕುಮಾದ್ರೋ. ೯-೨೦); ಪುನರಪಿ ಕಾದ ಕಳುಹುವುದು . . . ರಣದಲಿ ನಿನ್ನ ಹಿರಿಯ ಮಗ ಹೋದನೆನಿಸುವೆನು (ಕೌಶಿಕಾ. ೩೬-೨). ೬. ಮರಳು ; ಹಿಮ್ಮೆಟ್ಟು ; ಹಿಂತಿರುಗು : ಬಿಟ್ಟನು . . . ಕೌರವನೃಪತಿ ರಥವನು ಹೊಟ್ಟಗರ ತೆಗೆ ಹೋಗಹೇಳೆಂದೆಚ್ಚನತಿರಥರ (ಕುಮಾದ್ರೋ. ೨-೬೦) ; ಕೆಲರು ಹಾಯಿತು ಕೆಲರು ಹೋಯಿತು ಕೆಲವರೋಡಿತು ಕೆಲವರರ್ಡತು (ಕೌಶಿಕಾ. ೩೨-೨೩); ಹೊಸ ದೋಣಿ ಯೆದಱಿ ಹೋಹೆಯು ಬೀಡಿಗೆ ಒಮ್ಮೆ ಸಾಹಸವನು ಮಾಡು (ಇಂಕಾಶ. ೬೨-೩೦). ೭. ನಂದು ; ಆರು : ಮಳೆ ಬಂದಾಗ ಹೋಗಿದ್ದ ದೀಪ ಈಗ ಬಂತು (ರೂಢಿ). ೮. ಆಗು ; ಜರುಗು ; ನಡೆ : ನಡ[ವ]ಹಾಲ ಧಾರೆಗು ಸಹ ಅಕ್ಕಿ ಮೂಡೆ ೧೧ ತಿಂಗಳು ತಿಂಗಳು ತಪ್ಪದೆ ತಿಂಗಳಲ್ಲಿ ೧೭ ಹೋಹಾಗ ನಡವ ವಾರ ೧ ಮತ್ತಂ ಇಪ್ಪತ್ತಐದು ೨೫ ಹೋಹಾಗ ನಡವ ವಾರ ೧ ಅಂತು ತಿಂಗಳಲ್ಲಿ ಯೆರಡುವಾರ ಸಮುದಾಯ ನಡವುದಕ್ಕೆ ಅಕ್ಕಿ ಮೂಡೆವು ೧೨ (ಎಇ. XX. ೯೯-೯೯ ; 1556). ೯. ನೆರೆ ; ಕೂಡು ; ಸಂಭೋಗಿಸು : ದಾಸಿಯನು ಹೋಗುವಗೆ ವೀಸ ಹತ್ತದು ಕೈಗೆ (ಸರ್ವಜ್ಞ. ೦೮೦೭).

**ಪೋಪೋಗು, ಪೋಪೋಗು, ಹೋಗಹೋಗು, ಹೋಗುಹೋಗು** (ದ್ವಿರುಕ್ತಿ): ಪುಲಿಪುಲಿ ಪರಿಪರಿ ಪೋಪೋಗು (ಕವಿರಾ. ೨-೨೬) ; ಕೈವಲ್ಯಂ ಕವಿಗೆಂದೆ ಶಿವ ಬಂದ ಪರಮಾನನ್ದಂ ದಲತ್ತಣ್ಗವಂ ಪೋಪೋಗಲ್ ಹಾ ! (ಸಂಶಕ. ೩೦-೦೦೨); ಹೋಗಹೋಗಲು ಕಾಣ್ಬೆ ಮುಂದಣ ಭಾಗದಲಿ ಲಿಂಗವಂ (ಬಸವು. ೦೮-೪) ; ಹೋಗುಹೋಗ್ಯೆ ನೀನೆಮಗೆ ಬರಲಾಗದಲ್ಲಿಗೆ (ಬಸವು. ೩೭-೦೩). **ಪೋಬರವು** = ಹೋಗಿ ಬರುವುದು : ಅರಸನ ಪುಟ್ಟಿ ದಿಂಬಟೀಯಮಿಮಾ ದಿವಿಜಾಳಿಗೆ ಮಾಣ್ದುದಿಲ್ಲ ಪೋಬರವು(ಅಂತು. ೯-೬೪). **ಹೋಗಗೊಡು** = ಹೋಗಲು ಅನುಮತಿಯನ್ನು ಕೊಡು ; **ಹೋಗಬಿಡು** : ನನಗೆ ಹೇಳದೆ ಹೋಹಿರಾದರೆ ಹೋಗಗೊ[ಡಾಕಂ. ಗು]ಡೆನು (ಸಾಳ್ವಭಾ. ೨೦-೦೦) ; ಬೀಳ್ಕೊಡು, ಕಳುಹು, ಅಪ್ಪಣೆ ಕೊಡು, ಹೋಗಗೊಡು (ಕಂಪುಹು. ೮೮). 'ಪೋಗೊಡು' ಪರಾ. **ಹೋಗಬಿಡು** = ಹೋಗಗೊಡು : ಹೋಗಬಿಟ್ಟು ಜಂಗಮವ ಹಿಂದೆಯಾಡುವನ ಬಾಯಲಿ ಮೆಟ್ಟಿ ಹುಡಿ ಹೊಯ್ಯದೆ ಮಾಣ್ಬನೆ (ಬಸವ. ೪೧೯); ಈಗಳಿರ್ದಂತಿ ಪಶುಗಳು ಹೋಗಬಿಡಿ ನೀವು (ಬಸವು. ೬೦-೨೩) ; ಅರರೆ ನರ ಪ್ರಸರಿಸಿದನೊ ಪ್ರಸರಿಸಿದನೊ ಘಡ ಹೋಗಬಿಡದಿರಿ (ಕುಮಾಕ. ೦೯-೦೩). **ಹೋಗಲಾಡಿಸು** = ೧. ಇಲ್ಲದಂತೆ ಮಾಡು ; ಹೋಗುವಂತೆ ಮಾಡು : ಪರಿಕರ್ಮನ್, ಅಂಗಸಂಸ್ಕಾರಃ—೨ ಶರೀರದ ಕೊಳೆ ಹೋಗಲಾಡಿಸಿ ಸೊಗಸು ಮಾಡುವಿಕೆ (ಸಿದ್ಧಾಂತ. ೨೦೩) ; ಎಣ್ಣೆಪಸೆಯಿದ್ದರೆ ಅದನ್ನು ಹೋಗಲಾಡಿಸಲು ಸಾಬೂನನ್ನುಪಯೋಗಿಸಬೇಕು (ಅಡುಗೆ. ೯೩). ೨. ಪರಿಹರಿಸು ; ನಿವಾರಿಸು ; **ಕಳೆ** : ಅವರವರ ಹೊಡಬಾಳು ಅವರವರೇ ಹೋಗಲಾಡಿಸಿ ಕೊಳ್ಳಬೇಕು (ಜಂಗಾಳ್ಮ. ೨೦೯). ೩. ನಾಶಮಾಡು ; ಹಾಳುಮಾಡು : ತಲತಲಾಂತರದಿಂದ ಬಂದಿದ್ದ ಆಸ್ತಿಯನ್ನು ಆತ ಅಲ್ಪಕಾಲದಲ್ಲೇ ಹೋಗಲಾಡಿಸಿಬಿಟ್ಟ (ರೂಢಿ). ೪. ಕೊಲ್ಲು ; ಸಾಯಿಸು : (೬). **ಹೋಗಲಾಡು** = ೧. ಹೋಗಗೊಡು : (೬). ೨. ಕಳೆದುಕೊಳ್ಳು ; ನೀಗು : (೬). ೩. ನಿರರ್ಥಕಗೊಳಿಸು ; ಹುಸಿಮಾಡು : ನಾರದಮುನಿ ಮಹಾರಾಯ ಹೋಗಲಾಡುವನಲ್ಲ ಮಾತ (ಮೋಹಕ. ೩೩-೨೮). **ಹೋಗಲೀಯು**=ಹೋಗಗೊಡು : ಬೆಂದ ಮನವ ನಾನೆಂತು ನಂಬುವೆನಯ್ಯಾ . . . ಎನ್ನ ತಂದೆ ಕೂಡಲಸಂಗಮದೇವನಲ್ಲಿಗೆ ಹೋಗಲೀಯದಯ್ಯಾ (ಬಸವ. ೩೩). **ಹೋಗಲೀಸು, ಹೋಗಲಿಸು**=ಹೋಗಗೊಡು : ಹೋದಹೆನೆಂದರೆ ಒಳಕಾವಲವರು ಹೊಱಕಾವಲವರು ಹೋಗಲೀಸರು (ಶಿವಪ. ೯-೨); ಭೀಮಸೇನನು ನಮಗೆದುರಾಗಿ ಬರುತಲಿದಾನೆ ; ಹೋಗಲೀಸದೆ ತಬ್ಬಿ

ಹಿಡಿದು ಸಂಹರಿಸೋಣ (ಕೃಷ್ಣಾಭೀ. ೧೦೭) ; ದುರ್ಯೋಧನನನ್ನು ಯುದ್ಧಕ್ಕೆ ಹೋಗಲಿಸಬೇಡ (ಭೀಷ್ಮಸ. ೧೫೨). **ಹೋಗಿಬರು, ಹೋಬರು**=೧. ತೆರಳು ; ಹೊರಡು ; ಬೀಳ್ಕೊಳ್ಳು : ವನಚರವೆ ನಾ. ಹೋಗಿಬಹನೇ ನಿಮ್ಮನುಜ್ಞೆಯಲಿ (ಕುಮಾ.ಆ. ೭-೧೭) ; ನನಗೆ ಅನುಜ್ಞೆಯನ್ನು ಕೊಡು ; ಹೋಗಿ ಬರುವೆನು (ಕಂಠೀ. ೪೯). ೨. ಹೋಗು ಮತ್ತು ಬರು : ಶ್ರೀಮನ್ತರ ಹರ್ಮ್ಯಕ್ಕೆ ಇರುವೆಯೂ ಹೋಬರಲಾರದಂತೆ ಮುತ್ತಿಗೆಯಿಟ್ಟು ಏತಕ್ಕಾದರೂ ಸನ್ನದ್ಧನಾಗಿರು (ಚಟ್ಟಿಆ. ೧೭೪-೧೨). **ಹೋಗಿಬಿಡು**=೧. ಇಲ್ಲವಾಗು : ಮೃಣಾಳಿನಿಯ ಮೇಲೆ ಪ್ರೀತಿ ಹೋಗಿ ಬಿಟ್ಟಿತೆಂದೂ ತಿಳಿದು ಕೊಂಡಳು (ಬಂಕಿಮ. ೧೮೦). ೨. ಸಾಯು ; ಮರಣ ಹೊಂದು : ಗಂಡನ ಕಣ್ಣುಮುಂದೆ ಹೋಗಿಬಿಡುವುದು ಹೆಂಗಸಿಗೆ ಪರಮಭಾಗ್ಯ (ವಚಭಾ. ೪೩) ; ನಮ್ಮ ಚಿಕ್ಕಪ್ಪ ಹೋಗಿ ಬಿಟ್ಟರು (ಮುರುಳು. ೧೭). **ಹೋದ ಜೀವ ಬರು**=ಹೊರಟು ಹೋದ ಪ್ರಾಣ ಮರಳಿ ಬಂದಷ್ಟು ಸಂತೋಷವಾಗು,— ಸಮಾಧಾನವಾಗು : ಅವಳು ಬಂದು ಎಲ್ಲವನ್ನೂ ಹೇಳಿದ ಮೇಲೆ ಹೋದ ಜೀವ ಬಂದಂತಾಯಿತು (ಕಾರೂಕ. ೯ ಕಥಾಸಾರ) ; ಬಿಸಿಲಿನಲ್ಲಿ ನಡೆದು ಬಂದು ಎಳನೀರು ಕುಡಿದ ಮೇಲೆ ಹೋದ ಜೀವ ಬಂತು (ರೂಢಿ). **ಹೋದ ಹೊಲಬು**=ನಡೆದು ಬಂದ ದಾರಿ ; ಸಂಪ್ರದಾಯ ; ಪರಂಪರೆ : ಹೋದ ಹೊಲಬಿಲ್ಲದಟವಿಯೊಳಗೆ ದುರ್ಭೇದತಪವೇ ಹೊಗೆವುತದೆ ಹೊಳ್ಳಾದವೆಮ್ಮ ಸಮಾಧಿ ಸ್ಮರಣೆ ಶಮದಮಾದಿಗಳು (ಕುಮಾ.ಆ. ೫-೩೦). ☞ ಈ ಧಾತು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತದೆ.

[ದೇ.॥ ತಮಿ. ಪೋ, ಪೋಕು, ಪೋಕ್ಕು ; ಮಲ. ಪೋಕ ; ತೆಲು. ಪೋವು]

**ಪೋ₂, ಹೋಗು₃** (ಅ). ಛೀ, ತೆಗೆ, ಬಿಡು ಎಂಬರ್ಥದ ಉದ್ಗಾರ ವಾಚಕಪದ : ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆನಾನ್ (ಶಂಕರಾ. ೪-೩೮) ; ಪೋ ಮಾಣ ಧರ್ಮಜಂ ಗಡ ಭೀಮಂ ಗಡ (ಗದಾಯು. ೯-೧೩) ; ಸತ್ಪಾತ್ರದೊಳ್ ಧನಮಂ ಪೋ ನಲಿವಂದದಿಂ ನಲಿವನೇ ಧನ್ಯಂ ಧನಪ್ರಾಪ್ತಿಯೊಳ್ (ಶಂರಾಪಾ. ೬-೧೦೭). **ಹೋಗು₃** : ಜನಪತಿಯ ಕಟ್ಟಳೆಯಿಯಲಿ ರವಿತನುಜನಡ್ಡೈಸಿದನು ಫಡ ಹೋಗೆನುತ ನಾರಾಚದಲಿ ಮುಸುಕಿದನರ್ಜುನಾತ್ಮಜನ (ಕುಮಾ.ದ್ರೋ. ೬-೪೯) ; ನಿನ್ನಯ ಜೋಡಿಗಾರುಂಟವರ ಕರೆ ಮಾತಾಡುವೆವು ಹೋಗೆನುತ ಗಹಗಹಿಸಿದನು ಕೈ ಹೊಯಿದು (ಅವಂರಾ. ೧-೪-೨೨). [< ಪೋ₁]

**ಪೋಂಚಿ** 'ಪೌಂಚಿ' ನೋ.

**ಪೋಂಛಾವಣೆ** (ನಾ). ಸೇರಿಸುವಿಕೆ ; ಕೂಡಿಸುವಿಕೆ ; ಜೋಡಣೆ : ಒಂದಕ್ಕೆ ನಾಲ್ಕುಮಾತುಗಳನ್ನು ಪೋಂಛಾವಣೆ ಮಾಡಿ ತಾನೂ ಅಳುತ್ತ ಕುಳಿತಳು (ಮಹಾಗ. ೨೪೦). [< ಪೌಂಚಾಯಿಸು + — ಅಣೆ₄]

**ಪೋಂತು, ಪೋತ₁, ಪೋತು, ಹೋತ₂, ಹೋತು₂** (ನಾ). ಗಂಡು ಮೇಕೆ; ಗಂಡಾಡು : ಪೋಂತಿನ ಮೂತ್ರದೊಳುಳ್ಳಿಯನರೆದು ನಸ್ಯಮಂ ಮಾಡೆ ಪಿಂಗುಗುಂ ಗ್ರಹನಿವಹಂ (ಲೋಕೋಪ. ೧೧-೪೮); ಮುನ್ನೊಗೆದಾಡಿನ ಬಸಿಱೊಳ್ ಬಂದುದು ಪೋಂತಿನ ರೂಪಿಂ ಬೆಳೆದು ಬಱಿಕ ಮದೋನ್ಮತ್ತಂ (ಯಶೋಚ. ೩-೫೩); ಸೂಕರದ . . . ಪೋಂತಿನ ವಿಗಂಧಬಂಧುರವಿಣ್ಮೂತ್ರಪ್ರಕಾರ ಗಂಧದ ಶ್ವಾನೀಕಂ ಭಯುಹಾನಿಶೋಕ ರುಜ್ಝರಣಕರಂ (ಅಶ್ವಶಾ. ೩-೨೦). **ಪೋತ₁** : 'ತಿಂಡಿಪೋತ' ಪರಾ. **ಪೋತು** : ಪೋತಿನ ಮೂತ್ರದೊಳಂ ಪರಿಮರ್ದಿಸಿ ಕುಡಿಸಲುರಗತತಿವಿಷಮುಱಿಗುಂ (ಖಮದ. ೫-೬೨); ಪೋತು ಮಂಗಂ ಮೊಲಂ . . . ನೀಡುಂ ಮೇಗಂಗಳಂ ತಾಳ್ದಪವು (ಹಾಲಾಸ್ಯ. ೪-೧೧-೫೫). **ಹೋತ₂** : ಹೋತನ ಕೊಂದು ಹೋಮವ ಬೇಳ ಚಾಂಡಾಲರಾಗ ಹೇಳಿತ್ತೇ ವೇದ (ಗಣಭಾ. ೧೩೬-೧); ಯಾತದ ಮೇಲೆ ಹೋತ ಮೇವುದ ಕಂಡೆ (ಪುರಂದ. ೨-೧೨-೨); ಮಾರಿಯ ಕಣ್ಣು ಹೋತನ ಮೇಲೆ (ಗಾದೆ). **ಹೋತು₂** : "ಅಜಃ . . . ಛಾಗಃ, ಛಗಳಕಃ, ಛಗಃ—ಈ ೬ ಹೋತು" (ಹಲಾಯು. ೪೬-೧೨೨); ತಲೆ ಬೋಳಿಸಿ ಹೋತಂ [ಪಾಠಾಂ. ಹೊಂತಂ] ಸಿಡಿದಲೆಗುಡುವರ್ (ಸಮಪ. ೯-೨೨೧); ವೇದಪುರಾಣ ಹೋತಿಂಗೆ ಮಾರಿ (ಬಸವ. ೫೭೨); ಹೋತಿನ ಕೊರಳೊಳಗೆ ಮೊಲೆ ಇದ್ದರೇನು (ಪುರಂದ. ೧-೧೩೯ ಪಲ್ಲವಿ).

**ಪೊತ್ತಿಮಕ್ಕಳ್, ಪೊತ್ತಿನ್ಮಕ್ಕಳ್, ಪೊತ್ತಿಮ್ಮರ್ಕ್ಕಳ್, ಪೊತ್ತಿಮ್ಮರ್ಕ್ಕಳು**= ಗಂಡು ಮಕ್ಕಳು (?) : ಇದೊನ್ಕೆಡಿಸಿದೊನ್ಪಞ್ಚಮಹಾಪಾತಕನಕ್ಕು ತನ್ನೊಕ್ಕಲುಳ್ ಪೊತ್ತಿಮಕ್ಕಳ್ಪುಟ್ಟದೆ ಕೆಡುಗ (ಎಕ. III, ಮೈಸೂರು. ೫೫-೨೦ ; ಸು. 740) ; ಇದಾನಱಿತ್ತೊನ್ಪಞ್ಚಮಹಾಪಾತಕನಾಗಿ ದಿಟ್ಟಗಲುಣ್ಡು ಕೊಟ್ಟತೇದು ಅಟ್ಟುವೆಣ್ಣತ್ತಲಪೂಸುವೋನಕ್ಕು ಒಕ್ಕಲುಳ್ಪೊತ್ತಿಮಕ್ಕಳ್ಪುಟ್ಟದೆ ಕೆಡುಗ (ಎಕ. III, ಮಳವ. ೨೬-೮ ; ಸು. 810) ; ಅದಾನ್ ಅಱಿತ್ತೊನ್ . . . ಸಾಸಿರಕವಿಲೆಯುಮಾನ್ ಕೊನ್ದೋನ್ ಅಪ್ಪೋನೆ ಒಕ್ಕಲುಳ್ ಪೊತ್ತಿನ್ಮಕ್ಕಳ್ ಪುಟ್ಟಿಲ್ಕಮ್ ಪುಟ್ಟದೊವುಮ್ ಪುರಿಗಂ (ಎಕ. IV, ಹುಣಸೂ. ೮೭-೧೨ ; ಸು. 700) ; ಇವಾನ್ ಕೆಡಿಸಿದೋನುಂ ದೆತ್ತೊನ್ನವು ಪೊತ್ತಿಮ್ಮರ್ಕ್ಕಳ್ ಪುಟ್ಟೆಗು ವಾರಣಾಸಿಯು ಸಾಸಿರ್ವ್ವರ ಪಾರ್ವ್ವರ ಕೊನ್ದ ಕೊಲೆ ಎಯ್ದಿ × × ಪಞ್ಚಮಹಾಪಾತಕನಕ್ಕು (ಎಕ. III, ತಿರುಮ. ೧೦೫-೬ ; ಸು. 900) ; ಪರಿಯಾರಮಾನ್ಕೆಡಿಸಿದೊನ್ಪಞ್ಚಮಹಾಪಾತಕನಕ್ಕೆ ಬಾರಣಾಸಿಯುನಱಿದ ಪಾಪಮಕ್ಕೆ ಎಱಾದೆಱ ಎತ್ತುವೊನ್ಗೆ ಬಿತ್ತುಂ ಪೊತ್ತಿಮ್ಮರ್ಕ್ಕಳು ಪುಟ್ಟಾದೆ ಕೆಡುವೊನ್ (ಎಕ. XIV, ತಿರುಮ. ೨೫೩-೧೧ ; ಸು. 800). ☞ ಕನ್ನಡದ 'ಪೋಂತು' ಪದವು ಒಂದು ಪ್ರಾಣಿಯ ಗಂಡನ್ನು ಸೂಚಿಸುವ ಹಾಗೆಯೇ ತಮಿ. ಮಲ. 'ಪೋತ್ತು', ತೆಲು. 'ಪೋತು' ಪದಗಳು ಪ್ರಾಣಿ, ಪಕ್ಷಿಗಳ ಗಂಡನ್ನು ಸೂಚಿಸುತ್ತವೆ. ಆದುದರಿಂದ 'ಪೊತ್ತಿಮಕ್ಕಳ್'— ಮುಂತಾದ ರೂಪಗಳು 'ಪೋಂತು' ಪದಕ್ಕೆ ಸಂಬಂಧಪಟ್ಟಿರಬಹುದು. **ಪೋಂತಾನೆಯಂತರ**=ಅಜಗಜಾಂತರ: ಕೇಳ್ದ ಆ ಬಣ್ಣನೆಗೆ ಕಾಣ್ಬ ಈ ಕಾಣಿಕೆಗೆ, ಸಮತೆಯೇಂ ? ಪೋಂತಾನೆಯಂತರಂ (ಶ್ರೀರಾಮಾ. ೪೨೦-೪೦).

[ದೇ.॥ ತಮಿ. ಮಲ. ಪೋತ್ತು; ಕೊತ. ಪೋತು ; ತೆಲು. ಪೋತು= ಪ್ರಾಣಿ ಅಥವಾ ಪಕ್ಷಿಗಳಲ್ಲಿ ಗಂಡು ; ಕೋಲಾ. ಪೊತ್=ಹುಂಜ ; ನಾಯ್ಕಿ. ಪೋತ್; ಪರ್ಜಿ. ಪೋತ್=ಗಂಡುಪಕ್ಷಿ; ಕೊಂಡ. ಪೋತ್=ಗಂಡುಪ್ರಾಣಿ; ಕುವಿ. ಪೋತೂ=ಕೆಲವು ಪ್ರಾಣಿಪಕ್ಷಿಗಳಲ್ಲಿ ಗಂಡು]

**ಪೋಕ, ಹೋಕ** (ನಾ). ೧. ತಿರುಗಾಡುವವನು; ಅಲೆದಾಡುವವನು; ಅಲೆಮಾರಿ : ಕಾಪಿಲರ ಮುಟ್ಟಿ ಕಾಲ್ಗೆಡಿಸಿ ಪೋಕರ ಮಾಡಿ (ಚಕುಚ. ೪-೧೪-೧೩). ೨. (ಸಮಯವನ್ನು) ಕಳೆಯುವವನು : 'ಪೊತ್ತುಪೋಕ' ಪರಾ. ೩. ನೀಚ ; ದುಷ್ಟ : "ಅವಿವೃತ್ತನೆನೆ ಪೋಕನಕ್ಕು" (ಮಂಗರಾ. ೭೩-೨೫); ಪೋಕನಿವನಿವನ ನುಡಿ ಪುಸಿ (ಚಂಕು. ೪-೧೭): ಅಂಕರಾಗಲವರು ವಿಷಯ ನೀಕಲಾಗಲವರು ಬಹಳ ಪೋಕರಾಗಲವರು (ಸುಸಾರ. ೮೬-೯); ಪೋಕನಿಗೆ ನಾಕ ಸಲ್ಲ ಮೂಕನಿಗೆ ಸ್ವಪ್ನ ಸಲ್ಲ (ಗಾದೆ). ೪. ಪೋಲಿ; ತುಂಟ : "ಪೋಕನನೆ ತುಂಟಗಭಿಧಾನವು" (ಕಚರ. ೦೨೬); ತಂದೆಯಿದಿರೊಳು ಪುಂಡರ ಪೋಕರ ನಡೆಯೋ (ಭರತ. ೨೬-೧೦೪); ಮದುವೆ ಯಾಕಾದನಿವನೂ ಪೋಕ ಪುಂಡನು (ಕಂಠೀ. ೯೩-೨). **ಹೋಕ** : ೧. 'ದಾರಿಹೋಕ' ಪರಾ. [ಪೋ₁ + — ಕ₃]

**ಪೋಕತನ** (ನಾ). ದುಷ್ಟತನ ; ನೀಚತನ : ಎಲೆ ಮರುಳೆ ಪೋಕತನವಿಲ್ಲಿ ಮೆರೆಯದು ಮರಳು (ಕುರಂಗ. ೫೨-೬). [ಪೋಕ + — ತನ]

**ಪೋಕರಿ, ಪೋಕ್ರಿ** (ನಾ). ೧. ದುಷ್ಟನಡತೆಯುಳ್ಳ ವ್ಯಕ್ತಿ; ನೀಚ ಸ್ವಭಾವದ ವ್ಯಕ್ತಿ : ಆತನು ಆವ ಕೆಟ್ಟ ಕೆಲಸವನ್ನು ಮಾಡುವುದಕ್ಕೂ

ಹೇಸದ ಪೋಕರಿ ಹುಡುಗ (ಬಿಚಾತ. ೬೦); ಪೋಕರಿ ಇವರಲ್ಲೊಬ್ಬಳು (ದೇಜೀಆ. ೦೫೦). ೨. ತುಂಟ ವ್ಯಕ್ತಿ; ಉಡಾಳ: ಪೋಲಿ: ನಾನು ಮೊದಲಿನಿಂದಲೂ ಪೋಕರಿಯೆಂಬುದು ಸರಿಯೇ ಸರಿ (ಚಾಚಿಆ. ೦೦); ನಿಮ್ಮ ತಂಗಿಯ ಮಗ ಶುದ್ಧ ಪೋಕರಿ (ಕುಚಾಗ. ೯೬). ಪೋಕ್ರಿ: ೧. ಬಹಳ ಪೋಕ್ರಿಯಮ್ಮ. ಪಕ್ಕಾ ಹೆಣ್ಣುಮರುಳ! (ಚಿ. ೬೩). ೨. ಅಜ್ಜಿ ಯಾವಾಗಲೂ ನನ್ನನ್ನು ಪೋಕ್ರಿ ಎಂದು ಬೈಯುತ್ತಾಳೆ (ಕತಂಗ. ೯೬); ನಿನ್ನನ್ನು ಕಂತ್ರಿಗಳ ಕಣ್ಣುತಪ್ಪಿಸಿ ಸಾಬೀತಿನಲ್ಲಿಟ್ಟುಕೊಳ್ಳುವುದು ತೋಮನಿಗೆ ತುಂಬ ಸುಲಭವಲ್ಲ ಈ ಪೋಕ್ರಿಗಳ ಪಟಲಾಂನಲ್ಲಿ (ಹೊಸಕ್ಕ. ೫೦). [ದೇ. ॥ ತಮಿ. ಪೋಕ್ಕಿರಿ, ಪೋಕ್ಕಿಲಿ; ಮಲ. ಪೋಕ್ಕಿರಿ; ತುಳು. ಪೋಕೆ, ಪೋಕರಿ, ಪೋಕುರಿ; ತೆಲು. ಪೋಕಿರಿ]

**ಪೋಕರಿತನ** (ನಾ). ತುಂಟತನ; ಉಡಾಳತನ: ಅಫಜಲಖಾನನು ಕ್ರೋಧದಿಂದ, ರಹಿಮನ ಪೋಕರಿತನಕ್ಕೆ ತಕ್ಕ ಶಿಕ್ಷೆ ಮಾಡಬೇಕೆಂದು ಕಣ್ಣಿಯನ್ನಿತ್ತಿದನು (ಕೋಟಿಹೊ. ೦೬). [ಪೋಕರಿ + — ತನ]

**ಪೋಕವಿದ್ಯೆ** (ನಾ). ದುಷ್ಟವಿದ್ಯೆ; ನೀಚವಿದ್ಯೆ: ಕಾಟಕುಮಾತು ಆಡಬೇಡ ಪೋಕವಿದ್ಯೆಗೆ ಹೋಗಬೇಡ (ಗಾದೆ). [ಪೋಕ + ವಿದ್ಯೆ]

**ಪೋಕವೃತ್ತಿ** (ನಾ). ಕೆಟ್ಟಸ್ವಭಾವ; ನೀಚವೃತ್ತಿ: ಏಕಾದಶಿಯ ಮಾಡಿ ಯತಿಗಳನೊಡನಾಡಿ ಪೋಕವೃತ್ತಿಗಳನೀಡಾಡಿ (ಪಾದಕೀ. ೦೩೬-೦೦). [ಪೋಕ + ವೃತ್ತಿ]

**ಪೋಕಳ** (ನಾ). ನಿಜವಲ್ಲದುದು; ತೋರಿಕೆ; ಸುಳ್ಳಾದುದು: ಸುಳ್ಳ ನಾಟಕ–ಕಂವನಿ ತಗೀತೇನಿ, ಅಂತ ಪೋಕಳ ಹುರುಪಿನ್ಯಾಗ ಬೇಡಿದರ ಏನು ಕೆಲಸ ಆಗಬೇಕು? (ಗಂಕಥಾಯಿ. ೨೯೩). [← ಮರಾ. ಪೋಕಳ್]

**ಪೋಕಾಟ** (ನಾ). = ಪೋಕತನ: ಮಾನಿನಿಯರೊಳಗೆ ಪೋಕಾಟವೇನಿದು (ಕಪಳ. ೦೯೯-೦). [ಪೋಕ + ಆಟ]

**ಪೋಕಾಟಿಕೆ** (ನಾ). ತುಂಟಾಟ; ಪುಂಡಾಟಿಕೆ: ನೀತಿಶೀಲನಾದ ವಿಮರ್ಶಾಧಿಕಾರಿಯ ಮೇಲೆ . . . ಅಪವಾದವನ್ನು ಹಾಕುವುದು ತೀರಾ ಪೋಕಾಟಿಕೆಯೆನ್ನಬೇಕು (ವಾಗ್ಭೂಷ. ೨೯೭). [ಪೋಕಾಟ + — ಇಕೆ]

**ಪೋಕ್ತ** (ನಾ). ೧. (ಉಕ) ಟಾಕುಠೀಕು; ಶಿಸ್ತು; ಠೀವಿ. ೨. ಟಾಕುಠೀಕಾದ ವ್ಯಕ್ತಿ; ಶಿಸ್ತಾಗಿರುವ ವ್ಯಕ್ತಿ: ಎರಡು ಪೋಲಿಗಳನ್ನು ಬಾಡಿಗೆಗೆ ಹಿಡಿದಿದ್ದಾನೆ. ದೊಡ್ಡ ಪೋಕ್ತನಾಗಿ ತಿರುಗುತ್ತಾನೆ (ಮೂರುದಾ. ೦೩೬); ಆಫೀಸರ ಆದ. ಇನ್ನರ ಪೋಕ್ತ ಆಗಬೇಕು ಅನ್ನೂ ಖಬರೇ ಇಲ್ಲಾ (ದೀಕಥ. II. ೨೦೯).

**ಪೋಕ್ತಾಗಿ** = ಆಡಂಬರದಿಂದ ಕೂಡಿ; ಠೀವಿಯಿಂದ; ಟಾಕುಠೀಕಾಗಿ: ಪಾಸ್ ' ಎಂದು ಪೋಕ್ತಾಗಿ ಎದೆ ತಟ್ಟಿಕೊಳ್ಳುತ್ತ ಗದ್ದಲದಲ್ಲಿ ನುಗ್ಗಿಬಿಡುತ್ತಿದ್ದೆ (ವೈಹಿ. ೪೦೬); ಆಕೆ ದಿಟ್ಟತನದಿಂದ ಎದ್ದುನಿಂತು ' ಪೋಕ್ತಾಗಿ ' ಮಾತನಾಡಿದಳು (ಸಮಜೀ. ೬೩೩). [← ಪಾರ. ಪುಖ್ತ್; ಮರಾ. ಪೋಕ್ತ್]

**ಪೋಕ್ತತನ** (ನಾ), ಗಾಂಭೀರ್ಯ; ದೊಡ್ಡತನ: ಒಂದು ಪ್ರಸಂಗವು ಮಾತ್ರ . . . ಆಕೆಯ ಹುಡುಗತನವನ್ನು ಕಳೆದು ಪೋಕ್ತತನವನ್ನು ಕಲಿಸಿಕೊಟ್ಟಿತು (ಗಂಕಥಾಯಿ. ೨೨೪). [ಪೋಕ್ತ + — ತನ]

**ಪೋಕ್ರಿ** ' ಪೋಕರಿ ' ನೋ.

**ಪೋಗುಂಡ** (ನಾ). ೧. ಅಂಗಹೀನ; ಅಂಗವಿಕಲ: " ವಿಕಲಾಂಗಃ, ಪೋಗುಂಡಃ—ಈ ೨ ಅಂಗಹೀನಂ " (ಹಲಾಯು. ೬೪-೨೩೩); ಆ ಗಂಡನ ನೆಟ್ಟಿದ ತೋಳ್ ಪೋಗುಂಡನನಪ್ಪುವಂತೆ ಮಾಡಿದ ಬದಿಯಂ ಮಾಗಂ ಕೊಯ್ದಿಟ್ಟಗೆಯೊಳ್ ಪೋಗೊರಸದೆ ಕಂಡೆನಾದೊಡೇಂ ಬಿಟ್ಟಪೆನೇ (ಧುಟೋತ. ೨-೬೨). ೨. ವಯಸ್ಸಾಗದ ಬಾಲಕ; ಪ್ರೌಢನಲ್ಲದವನು. ' [ಸಂ.]

**ಪೋಗಂಡಿಕೆ** (ನಾ). ತೋರಿಕೆಯ ಶೌರ್ಯ; ಕಳೆದಂಹೋದ ಪರಾಕ್ರಮ: ' ನಲ್ಲವೋಗಂಡಿಕೆ ' ಪರಾ. [ಪೋಗಂಡ + — ಇಕೆ]

**ಪೋಗಟ್ಟು** (ಕ್ರಿ). ಓಡಿಸು: ನೆರೆಯೊಳ್ ಸೇರಲು ಪೋರುಗ್ಗೈದು ಸತಿತಾಂ ಪೋಗಟ್ಟುವಳ್ . . . ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಾ (ಸೋಮೇಶ. ೫೦). [ಪೋಗು₁ (< ಪೋ₁) + ಅಟ್ಟು₁]

**ಪೋಗತೊಟ್ಟ್ ?** (ಕ್ರಿ). (?): ಚಿದ್ದಯ್ಯನು ಜಕ್ಕಯ್ಯನುಮೆಂಬ ಪಾತ್ರವರು ಗುಣ್ಣಮಯ್ಯಂದೋಜಿ ಎಡೆಯಾಯ್ತುತನದಿಂ ರಾಜಗಾಮಿತಂಗೆಯ್ದು ಮೆಣ್ಣೆಯತನದಲೂರನೆನ್ನದೆನ್ದು ಮೂಱುಪರಿಷದುಣ್ಬಳಿಯ ಪೋಗತೊಟ್ಟು ಣಾತಮಿಪ್ಪರ್ದಂ (ಕೌಶಾ. IX — 1, ೦೨೩-೦೬; 1059). [?]

**ಪೋಗಾಗು** (ನಾ). ಆಗುಹೋಗು; ಲಾಭ ನಷ್ಟ: ಅಂತವಟ ಪೋಗಾಗುಗಳನೊರೆದೊರೆದು ಸುಸೂತ್ರಂ ತಪ್ಪದಂತೆ ಸೇರುವೆಗಿಕ್ಕಿ ಬರೆಯಿಸಿ (ಶಬ್ದಚಿ. ೯-೨೪). [ಪೋಗು₂ + ಆಗು₂]

**ಪೋಗಾಡು**, ಹೋಗಾಡು (ಕ್ರಿ). ೧. ಕಳೆದುಕೊಳ್ಳು; ನಷ್ಟಹೊಂದು; ನೀಗು: ರಾಜ್ಯವನಿತಂ ಪೋಗಾಡಿದಂ ರಾಕ್ಷಸಂ (ಸೋಮೇಶ. ೯೩); ತನ್ನಿರ್ದ ಮನೆಯಂ ಮಾಱಿಯುವಳ್ಗೆ ಪೋಗಾಡಿ ತದನಂತರಂ ತನ್ನ ತಾಯಲ್ಲಿರ್ದಂತಪ್ಪ ವಸ್ತುಗಳಂ ಕಱಿಪುವುದೆಂದು ಪೇೞ್ದಟ್ಟಲ್ (ಪುಣ್ಯಾಸ್ರ. ೯-೦೬ ಪ); ತಂತಮ್ಮ ತಂದೆಗಳಾರ್ಜಿಸಿದ ಧನಧಾನ್ಯಂಗಳೆಲ್ಲಮಂ ಪೋಗಾಡಿ ಪರಿಕ್ಷೀಣವಾಗಿ (ಧರ್ಮಾ. ೦೬೨). **ಹೋಗಾಡು**: ೧. "ಹೋಗಾಡು (ಹೋಗು + ಆಡು) — ಪ್ರಮಾದತ್ಯಜನೇ" (ಶಮದ); ನುಡಿಯಂ ಲಱಿಯದೆ ಸಲರಾಜ್ಯಮಂ ಹೋಗಾಡಿ . . . ನಗೆಗೆಡೆಯಾದ ಪಾತಕ ಹರಿಶ್ಚಂದ್ರ (ಹಚಾ. ೦೨-೯೩); ಕದನದಲಿ ಸುತನಿಧಿಯ ಹೋಗಾಡಿದೆ ನಿಜಾನ್ವಯಕಲ್ಪತರುವನು (ಕುವ್ಯಾಕ. ೦-೪); ಇದ್ದುದನು ಹೋಗಾಡಿ . . . ಉದ್ದನ ಮರನ ತುದಿಗೇಱಿ ತಲೆಯೂಱಿ ಬಿದ್ದು ಸತ್ತಂತೆ (ಸರ್ವಜ್ಞ. ೯೩೩). ೨. (ಮಾತಿಗೆ) ತಪ್ಪು; ಮೀರು: ಒಡಲ ಹಿಡಿದಾಡದಿರು ನುಡಿಯ ಹೋಗಾಡದಿರು (ಸರ್ವಜ್ಞ. ೩೦೦); ಮಾತ ಹೋಗಾಡಿ ಬಳಿಕಾ ನೆನೆನೆನೆದು ಕಡೆಯಲ್ಲಿ ಹುಡುಕಾಡುವನೆ ಮೂರ್ಖ (ಏಕಶ. ೪೦). ೩. ಬಿಡು; ತ್ಯಜಿಸು: ಆಡುವುದು ತತ್ವಜ್ಞರೊಡನೆಡೆಯಾಡುವದು ತತ್ಸನ್ನಿಧಿಗೆ ಹೋಗಾಡುವುದು ದುಷ್ಕೃತವನು (ಶಿಭಾಗ. ೭-೩-೯೬). ೪. ಇಲ್ಲವಾಗಿಸು; ನಿವಾರಿಸು: ಮಾಡಿದೆನು ಮುಖಶತವನದು ಹೋಗಾಡಿ ಶಿಂದ್ರನನಲ್ಲಿ ತನಗೆಡೆಮಾಡಿತರಮನೆ (ಕುವ್ಯಾಆ. ೦೩-೬೪). ೫. ನೆರವೇರಿಸು; ತೀರಿಸು; ಪೂರೈಸು: ಬಾಣಹತಿಗಳ್ಕುಡಿಸಿ ರಾಜ್ಯಶ್ರೇಣಿ ಜರುಗಿತು ಶೌರ್ಯನಗರದ ವಾಣಿಯರು ಪೊಕ್ಕಿಱಿದು ಹೋಗಾಡಿದರು ಪತಿರಿಣವ (ಕುವ್ಯಾಕ. ೨೪-೯೨). [ಪೋಗು₁ (< ಪೋ₁) + ಆಡು₁]

**ಪೋಗಿಸು**, ಹೋಗಿಸು (ಕ್ರಿ). ಹೋಗುವಂತೆ ಮಾಡು; ತೊಲಗಿಸು: ಆ ಗಿರಿತಟದಿಂದವನಂ ಪೋಗಿಸಿ (ಕಬಕಂ. ೨-೦೦೨). **ಹೋಗಿಸು**: " ಜಲಯತಿ = ಬಾಯಾರಿಕೆಯಂ ಹೋಗಿಸಿದಪುದು " (ಶಾಶಕ್ಕ. ೨೩೪). [ಪೋಗು₁ (< ಪೋ₁) + — ಇಸು₃]

**ಪೋಗು₁** ' ಪೋ₁ ' ನೋ.

**ಪೋಗು₂**, ಹೋಗು₂ (ನಾ). ೧. ತೆರಳುವಿಕೆ; ನಿರ್ಗಮನ: ಆನೆ ಕುದುರೆಗಳುಂ ಮಾನಸರ ಬರುವುಮಂ ಪೋಗುವುಮಂ ಕಂಡು (ವಡ್ಡಾರಾ. ೬೯-೨೨); ಪುರಜನಗಳೆಲ್ಲಂ ನೆರೆದವರ ಪೋಗಿಂಗೆ ಸೈರಿಸಲಾಱದೆ (ಕಂಶಭಾ. ೭-೦೬ ಪ); ನಿಮ್ಮ ಪೋಗಂ ಪುರಜನಂ ಪೇಱೆ ಕೇಳ್ದು (ಧರ್ಮಾಮೃ. ೦-೯೬). ೨. ಕಳೆದುಹೋಗುವಿಕೆ; ಕೈತಪ್ಪಿಹೋಗುವಿಕೆ: ತನ್ನೊಡವೆಯ ಪೋಗಿಂಗಮುಪಳ ಪೋಗಿಂಗಂ ನಿಗ್ಗಡಿ ಬೆನ್ನನಱಿಸಿ ಪೋದಂ (ಕಂರಾಪಾ. ೬-೩೫). ೩. (ಮಲಮೂತ್ರಾದಿಗಳ) ವಿಸರ್ಜನೆ: ಮಲಮೂತ್ರದ ಪೋಗುಂ ಮಾಳ್ಕುಮದುವೆ ಜಡತೆಯನೀಗುಂ (ಕಲ್ಯಾಕಾ. ೨-೦೬). ೪.

ಕುಸ್ತಿಯ ಒಂದು ವರಸೆ,—ಪಟ್ಟು : ಕೊಂತವಾರವು ಲಾಟ ಡೊಕ್ಕರ ಪೋಗು ಬಾಣು[ಗು]ಗಳೂ . . . ತಳಹತ್ತ ಗಳಹತ್ತಂ ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಶಾಕ್ಯಣ. ೨೨-೬೩). **ಹೋಗು$_2$: ೫.** ಅಳಿವು ; ನಾಶ : ಸಂಸಾರದಾಗುಂ ಬೋ ಸಂಸಾರದ ಹೋಗುಂ ಬೋ (ಬಸವ. ೦೬೪). 'ಆಗುಹೋಗು', 'ಹೋಕು' ಪರಾ.

[<ಪೋ$_1$./ತಮಿ. ಪೋಕ್ಕೈ ; ಮಲ. ಪೋಕ್ಕು ; ತುಳು. ಪೋಕು ; ಕೊಡ. ಪೋಕ್=ಮಾರ್ಗ, ರಹಸ್ಯ ; ತೆಲು. ಪೋಕ, ಪೋಕು]

**ಪೋಗುಡು** 'ಪೋಗೊಡು' ನೋ.

**ಪೋಗುಹ** (ನಾ). ಹೊರಟುಹೋಗುವಿಕೆ ; ಕಳೆದುಹೋಗುವಿಕೆ : 'ಹರೆಯಬೋಗುಹ' ಪರಾ.

[ಪೋಗು$_1$ (<ಪೋ$_1$) + — ಹ$_2$ (< — ವ$_2$)]

**ಪೋಗೊಡು**, ಪೋಗುಡು (ಕ್ರಿ). ೧. ಹೋಗಲು ಅವಕಾಶ ನೀಡು : ಸಾರಿದರೆ ನೂರಾಗಿ ಹರಿದೋಡುತಿಹನು, ಸೇರಿದರೆ ಸೆರೆವಿಡಿದು ಮರಳಿ ಪೋಗೊಡನು (ಕುವೆಂ. ೦೦-೭). **ಪೋಗುಡು :** ೨. ಕಳೆದುಕೊಳ್ಳು ; ನೀಗಿಕೊಳ್ಳು : ಎಳನೆತ್ತರ ಕೊರ್ವಿಂ ತಲೆಯಂ ಪೋಗುಡುವೀ ನೀಂ ಮರುಳಾಗಾ ! (ರಾಮಾಶ್ವ. ೧೨-೨೭). [ಪೋಗು$_1$ (<ಪೋ$_1$)+ಕೊಡು$_1$]

**ಪೋಗೊದೆ** (ಕ್ರಿ). ದೂರ ಹೋಗುವಂತೆ ಕಾಲಿನಿಂದ ನೂಕು, –ಒದೆ : ಮಂದಸಿನ ಮುಚ್ಚುಳನುಂಗುಟದಿಂದೆ ಮಿಾಂಟಿ ಪೋಗೊದೆದು (ಜಗ. ೬-೩೦).

[ಪೋಗು$_1$ (<ಪೋ$_1$) + ಒದೆ$_1$]

**ಪೋಗೊಳಿಸು,** ಹೋಗೊಳಿಸಂ (ಕ್ರಿ). ಹೋಗಲು ಬಿಡು ; ಬೀಳ್ಕೊಳ್ಳು; ಕಳುಹಿಸಿ ಕೊಡಂ : ಒಮ್ಮೆಗೆನ್ನಂ ಪೋಗೊಳಿಸು ಮರಳಿ ನವ್ಮಾ ! (ಕುವೆಂ. ೩೨-೨). **ಹೋಗೊಳಿಸು :** ಕೆಳದಿಯರನ್ನು ಮಾಲಿಸು ತ್ತಿದ್ದು, ಶಿರಸ್ಸಂಜ್ಞೆಯಿಂದ ಹೋಗೊಳಿಸಿ . . . ಆತನಿಗೆ ಮುಗ್ಧಾಯತ ಪ್ರಾಢಿಯ ಇದಿರ್ನೋಟವನ್ನೊಡ್ಡಿರುವಳು (ಮುಂತ್ರ ಕ. ೦೯೦-೩).

[ಪೋಗು$_1$ (< ಪೋ$_1$) + ಕೊಳ್$_1$ + — ಇಸು$_3$ ]

**ಪೋಚ** (ನಾ). ಒಬ್ಬಾತನ ಹೆಸರು : ಚಿಂಗಯ್ಯನ ಚಾವಬ್ಬೆಯ ಮಗಂ ಪೋಚನ ಕಲ್ಲ × × × (ವ್ಯ.ಅಂ. ೦೯೯೨. ೨-೭: 973). [?]

**ಪೋಚಬುಕ್ಕು** (ನಾ). ರಸೀತಿ ಪುಸ್ತಕ : ಜೀನಸಗಳು ಬಂದು ದಾಖಲಾದ ಪೋಚಬುಕ್ಕಿನ ಮೇಲಿಂದ ತಪಾಸ ಮಾಡೋಣದರಲ್ಲಿ ಬಹಳೇ ಅಡಚಣಿಯು ಬೀಳುವದು (ಮುಂಬವ್ಯಾ. ೯೨).

[ ಪೋಚ್$_0$ (P ← ಮರಾ. ಪೋಂಚ್) + ಬುಕ್ಕು ]

**ಪೋಚಯ್ಯ** (ನಾ). ಒಬ್ಬಾತನ ಹೆಸರು : ದುಗ್ಗಮಾಯ್ಯನ ಮಗ ಪೋಚಯ್ಯ ಬೆಸಗೆಯ್ದುಗಲ್ಲ ನಿಱಿಸಿ (ಎಕ. IV. ಹುಣಸೂ. ೬೯-೦೯: 976).

[ ಪೋಚ + ಅಯ್ಯ$_1$ ]

**ಪೋಚಿಗಾಮುಂಡ** (ನಾ). ಒಬ್ಬಾತನ ಹೆಸರು : ಉಪ್ಪವಳ್ಳಿಯ ಪೋಚಿ ಗಾಮುಣ್ಡ ವಳಿಯೆಱಿ ಮುದ್ದ ಮಾಗುಣ್ಡಿಯೆಱಿಗೆ (ಎಕ. XV. ಬೇಲೂರು. ೩೦೬-೦೨ ; 971). [ < ಪೋಚ + ಗಾಮುಂಡ ]

**ಪೋಚು$_1$** 'ಪೌಂಚಿ' ನೋ.

**ಪೋಚು$_2$** 'ಪೋಚೆ$_2$' ನೋ.

**ಪೋಚು$_3$** (ನಾ). ಮುಂದೇನಾಗಂವುದೆಂದು ಕಾದಿರುವಿಕೆ ; ನಿರೀಕ್ಷೆ : ನೀ ಉಲಕೋಚಿತನ ಮಾಡಿ ನಡುವ ಬಾಯಿ ಹಾಕೀ !. . . ಒಳ್ಳೀ ಪೋಚಿಲೆ ಕೂತಿರಬೇಕು ನೋಡು (ತಿರು‌ಗು. ೬೫). [←ಮರಾ. ಪೋಂಚ್=ದೂರದೃಷ್ಟಿ]

**ಪೋಚೆ$_1$** 'ಪೌಂಚಿ' ನೋ.

**ಪೋಚೆ$_2$**, ಪೋಚು$_2$ (ಗು). ಅಲ್ಪವಾದ ; ತಂಚ್ಛವಾದ : ಪಾಚಿ ತೆರನಾದ ಪೋಚಿ ಸಂಸಾರದಾಲೋಚನೆ ತೋರುವದು (ವಿಶಾಸು. ೨೦-೨). **ಪೋಚು$_2$ :** ನೀಚಮಾರ್ಗವ ಬಿಡು ಮೋಹಕವಾಗಿದ್ದ ಪೋಚುಮತವ ಸುಡು ನಲಿ ನಲಿದಾಡು (ವಿಶಾಸು. ೩೭-೯). [←ಪಾರ. ಪೂಚ್ ; ಹಿಂ. ಪೋಚ್ ; ಮರಾ. ಪೋಚಟ್ ; ಗುಜ. ಪೋಚು]

**ಪೋಟ$_1$** (ನಾ). ೧. ಶರೀರದ ಯಾವುದಾದರೂ ಒಂದು ಭಾಗ ಊನವಾದವನು ; ಪೋಟು ಬಿದ್ದವನು : ಆತಂ ಶಸ್ತ್ರದಿಂ ಗಲ್ಲಮಂ ಪಾಳಿಸಿ ವ್ರಣವೆರಸಿದಕ್ಕಿಯಂ ತೆಗೆದು ಕತ್ತಿಯಿಂದೆತ್ತಿ ತೋಱುಯಿದುಂ ತಂಡುಲವ್ಯಾಧಿಯೆಂದು ಪೆಸರಿಟ್ಟು . . . ಆ ತಂಡುಲಮಂ ಹೊಣಕೆ ನುಂಗಿ ಕಳೆದನಂದದಿಂದೆನ್ನನೆಲ್ಲರುಂ ಗಲ್ಲಪೋಟನೆಂದು ಪೆಸರನಿಟ್ಟರ್ (ಧರ್ಮಾಕ. ೯-೨೬ ಪ) ; ಅಂದಿನಿಂದ ನನ್ನನ್ನು ಎಲ್ಲರೂ ಗಲ್ಲಪೋಟ ಎಂದು ಕರೆಯುತ್ತಾರೆ (ನಗಗ. ೩). ೨. (ಅಲಂ) ಪುಂಡ ; ಪೋಕರಿ ; ಸ್ವೇಚ್ಛಾಚಾರಿ : ದ್ಯೂತವನಾಡುತ್ತಿಹ ಪೋಟ ಸೂಳೆಯರೊಳೊಲ್ದಿ ರ್ಪಾಟಮಿಂತೆಲ್ಲ ಮುಂ ಸವಿಯಾಗಂತ್ಯದಿ ಕಷ್ಟವೈ (ಸೋಮೇಶ. ೨೯). ಭಂಡರಿಗೆ ಬಹುಭಾಷಿಗಳಿಗೆ ಪ್ರಚಂಡರಿಗೆ ಪರಸತಿಯ ಬೇಟೆಯ ಪುಂಡತನದಲಿ ಹೇಡಿರನು ಬಿಟ್ಟಿರ್ಪ ಪೋಟರಿಗೆ . . . ಹೇಳದಿರು ಮಱಿದೀ ಅನುಭವಾಮೃತವ (ಅಮೃ.ಕ. ೨-೨) ; ಲೀಲೆಯ ನಾಟಕವಲ್ಲ ಮಾಟಕೂಟವಿದಲ್ಲ ಪೋಟರ ಮಾತಲ್ಲ (ಹಮಹ. ೩). [ಪೋಟು (<ಪೋಟ$_1$) + — ಅ$_7$]

**ಪೋಟ$_2$** (ನಾ). ಅಂಜುಕುಳಿ ; ಹೇಡಿ ; ಭೀರು : " ಆ ಪೋಟನೆನೆ ಧುರದೊಳೋಡಿ ಬಹನಕ್ಕು" (ಮಂಗರಾ. ೮೦-೪) ; ಪೋಟರಪ್ಪಜ ಹರಿ ಸುರೇಂದ್ರರಿಗಾಟವಿಕ ದಿತಿಸುತವಿತತಿಗೀ ಕೋಟಿಯಂ ಸಾಧಿಸುವುದವಗಡಂ (ಬಸಕೃ. ೦೬-೦೩). 'ಪೋಡಿ$_1$' ಹೋ. [ಸಂ. ಪೋಟಾ]

**ಪೋಟಕ** (ನಾ). = ಪೋಟ$_1$ ೨ : ಪೋಟಕರು ವೇಶ್ಯಾಂಗನೆಯರೊಡನಾಟದೊಳು ಪಗಲಿರುಳು ಬಾಳುವ (ಹುಕೋರ. ೭). [<ಪೋಟ$_1$]

**ಪೋಟಖರಾಬು** (ನಾ). ಸಾಗುವಳಿ ಮಾಡಲಾಗದ ಜಮಿಾನು : ರಸ್ತೆಗಳು ಮತ್ತು ಕಾಲುವೆಗಳ ಮಗ್ಗುಲುಗಳಲ್ಲಿರುವಂಥಾ ಭೂಮಿಯನ್ನು ಬೇರೆ ನಂಬರು ಮಾಡಬೇಕೆಂದು ಹುಕುಂ ಆದಾಗ ಹಾಗೆ ಮಾಡತಕ್ಕದ್ದು. ಹಾಗಿಲ್ಲದೆಯಿದ್ದರೆ ಪೋಟಖರಾಬಿನಲ್ಲಿ ಸೇರಿಸಬೇಕು (ಭೂಬಿಅ. ೩೨).

[←ಮರಾ. ಪೋಟ್‌ಖರಾಬ್]

**ಪೋಟಗಲು,** ಪೋಟಗಳ (ನಾ). ೧. ಒಂದು ಬಗೆಯ ಲಾಳದ ಕಡ್ಡಿ. ೨. ಒಂದು ಬಗೆಯ ಹುಲ್ಲು ; ಜಂಬುಹುಲ್ಲು ; ಕಾಶತೃಣ. **ಪೋಟಗಳ :** ೧. "ನಡಃ, ಧಮನಃ, ಪೋಟಗಳಃ—೩ ದೇವನಾಳದ ಹೆಸರುಗಳು. ದೇವಲಾಲೀಕಡ್ಡಿಗಳಿಗೂ ಹೆಸರುಗಳು" (ಸಿದ್ಧಾಂತಿ. ೦೩೦). ೨. " ಕಾಶಂ, ಇಕ್ಷುಗಂಧಾ, ಪೋಟಗಳಃ—೩ ಜಂಬುಹುಲ್ಲು " (ಸಿದ್ಧಾಂತಿ. ೦೩೦). [ ಸಂ. ]

**ಪೋಟಗಳ** 'ಪೋಟಗಲು' ನೋ.

**ಪೋಟಗಿ** 'ಪೋಟಿಗೆ' ನೋ.

**ಪೋಟತನ** (ನಾ). ಪುಂಡಾಟ ; ಪೋಕರಿತನ : ಮುರಾರಿ ಗೋಪಿಯರಲ್ಲಿ ಹಾದರವಾಡಿ ಸಿಕ್ಕನೆ ಪೋಟತನದಿಂದ (ಬಸಕೃ. ೫೯-೯೦) ; ಪೋಟತನ ನಮ್ಮಲ್ಲಿ ಕೊಂಬುದೆ ಎನುತ ಹರಿಯೆಚ್ಚ (ಕೋಗಹು. ೨೨-೯೦). [ಪೋಟ$_1$ + —ತನ]

**ಪೋಟತೆ** (ನಾ). =ಪೋಟತನ : ಹುಸಿ ಕೊಲೆ ಕಳವು . . . ನುಸುಳು ಘಾತಕವನ್ಯಾಯ ಪೋಟತೆಗಳು ಮುಸುಳಿಹವಾ ನಾಡೊಳಗೆ (ಮೋಕ್ಷಕೃ. ೦-೩೯).

[ ಪೋಟ$_1$ + — ತೆ$_3$ ]

**ಪೋಟಲೀಸು** 'ಪೋಲ್ಬೀಸು' ನೋ.

**ಪೋಟಾಧ್ಯಾಯ** (ನಾ). (ಅಲಂ) ಸೂಳೆಗಾರಿಕೆ ; ಕಾಮಂಕ್ರೀಡೆಯ ಪ್ರಕರಣ : ಅಹಹ ಶಿವನೀ ಸೂಳೆಯೊಳ್ಸೆರೆವುದೆಂತೆನಗೆ ಸಹಜಮೆಂತೆಮಗೆ ಪೋಟಾಧ್ಯಾಯವೆಂದೆನಲು (ಶೀಕೃತಿ. ೯-೦೦-೨೭); ಶಿವಗೃಹದೊಳು ಆವ ಪೋಟಾಧ್ಯಾಯವೆಲೆ ಮುಂಡೆಯೆನೆ (ಶೀಕೃತಿ. ೯-೦-೩೮).

[ಪೋಟ$_1$ + ಅಧ್ಯಾಯ]

**ಪೋಟಾಪೋಟಿ** (ನಾ). ಸ್ಪರ್ಧೆ ; ಮೇಲಾಟ ; ಪೈಪೋಟಿ : ಮಹಾರಾಜರವರು ಅಧಿಕಾರವನ್ನು ವಹಿಸಿದ ಮೇಲೆ ಪೋಟಾಪೋಟಿಗೆ ಪ್ರಾರಂಭವಾಯಿತು (ಶಾಮಕಂ. ೩೬೯); ಇಬ್ಬರಿಗೂ ಸಂಗೀತದ ಪೋಟಾಪೋಟಿ ಬಿತ್ತು (ನಟಸಾ. ೦೯೭); ಬುದ್ಧಿಬಲಕ್ಕೂ ಬಾಹುಬಲಕ್ಕೂ ನಡೆದ ಪೋಟಾಪೋಟಿಯಲ್ಲಿ ಬಾಹುಬಲಕ್ಕೆ ಪರಾಜಯವುಂಟಾಯಿತು (ಶಾಕ್ಕ. ೭೮).
[<ಪೋಟಿ₁./ತುಳು. ಪೋಟಾಪೋಟಿ]

**ಪೋಟಿ₁, ಹೋಟಿ** (ನಾ). ೧. ಈಡು; ಸಮಾನ; ಎಣೆ : ಸಿಲುಬೆಮೊಳೆಗಳ ಉಳಿಯ, ಪೆಟ್ಟಿಗೆ ಇದಕೆ ಸಾಟಿಯೆ? ಪೋಟಿಯೆ? (ಕ್ರಾಕ್ತಾ. ೩೮-೨). ೨. ಸ್ಪರ್ಧೆ; ಮೇಲಾಟ ; ಹುರಡು : ಒಂದು ದಿನ ನಗರದ ಜನಗಳನ್ನೆಲ್ಲ ಕರೆದು ಆಯುಧಾಭ್ಯಾಸದ ಪರೀಕ್ಷೆಯನ್ನೂ ಪೋಟಿಯನ್ನೂ ಏರ್ಪಾಡು ಮಾಡಿದರು (ವ್ಯಾಸಭಿ. ೪೮); ಯಾವ ಗರಡಿಯೋರು ಪೋಟಿ ಹಾಕ್ತಾರೋ ! (ದಯ್ಯಾಮ. ೧೫). ೩. ಕೂಡಿಸುವುದು ; ಸೇರಿಸುವುದು : (೩). ೪. (ಎರಡು ಭಾಗಗಳು ಸಮವಾಗುವಂತೆ) ಸೇರಿಸುವ ತುಂಡು.— ಚೂರು : ಅದು ಕತ್ತರಿಸಿ ಹೋಗಿತ್ತು. ಪೋಟಿ ಹಾಕಿ ಜೋಡಿಸಿದ್ದಾರೆ (ರೂಢಿ). **ಹೋಟಿ** : ೧. "ಸರಿ, ದೊರೆ . . . ಹೋಟಿ, ಸಂಗಡಂ—ಈ ೧೮ ಸಮಾನಕ್ಕೆ ಪೆಸರ್" (ಕಶಸಾ. ೫೭-೨೯೦) ; ದುರ್ವಾರಂಗೆ ಸುಬಾಹು ಪಾಟಿ, ಹರ್ಯಕ್ಷಂಗೆ ನೀಲರತ್ನಂ ಹೋಟಿ(ರಾಮಾಕ್ಕ. ೧೯೪-೨). 'ಹೋಡು' ಪರಾ. [ದೇ.॥ ತಮಿ. ಪೋಟಿ, ಪೋಟ್ಟಿ; ತುಳು. ತೆಲು. ಪೋಟಿ]

**ಪೋಟಿ₂** 'ಪೋಟೆ₁' ನೋ.

**ಪೋಟಿ₃** 'ಪೊಡ್ಡಿ' ನೋ.

**ಪೋಟಿಕೆ** 'ಪೋಟಿಗೆ' ನೋ.

**ಪೋಟಿಗಾರ** (ನಾ). ಪೈಪೋಟಿಗೆ ನಿಂತವನು; ಸ್ಪರ್ಧಾಳು : ಪೋಟಿಗಾರ ಎಂದರೆ ಹೋರಾಟಗಾರ, ಸ್ಪರ್ಧಿ ಎಂದರ್ಥ (ಕಿಡಕ. ೦೦೩).
[ ಪೋಟಿ₁ + — ಗಾರ (<—ಕಾಱ) ]

**ಪೋಟಿಗೆ, ಪೋಟಗಿ, ಪೋಟಿಕೆ** (ನಾ). (ಉಕ) ಜೀವನಾಂಶ; ವರ್ಷಾಶನ: ಎರಡುನೂರುರೂಪಾಯಿಗಳ ಪೋಟಿಗೆಯನ್ನು ಗೊತ್ತುಮಾಡಿ ಈ ತಾಯಿ ಮಕ್ಕಳನ್ನು ಸಾಗಹಾಕಿದ್ದರು (ರಂಗರೂ. ೦೪); ನಿನಗೆ ಪೋಟಿಗೆ ಕೊಡುವುದು ಕಂದಾಯವನ್ನು ಪೂರ್ತಿಯಾಗಿ ವಸೂಲ್ ಮಾಡುವುದಕ್ಕೆ (ಸಾವಿತ್ರಿ. ೬೦). **ಪೋಟಗಿ** : ನನ್ನ ಪೋಟಗಿ ನನಗ ಚೆಲ್ಲು. ನಿನ್ನ ಮನ್ಯಾಗ ನಾ ನಿಲ್ಲೂದಿಲ್ಲ (ಗಂಪಶಾಯು. ೨೩೦); ನಿಮಗೆ ಮುಂದೆ ಪೋಟಗೀ ಸಿಕ್ಕೀತು (ಕಪಕ. ೦೦೦). **ಪೋಟಿಕೆ** : ಊರ ಕಂದಾಯ ಹೆಚ್ಚಿಸುವುದು ಶ್ಯಾನುಭೋಗನಿಗೆ ಲಾಭಕರವಾಗಿತ್ತು. ಅದರಿಂದ ಅವನ ಪೋಟಿಕೆ ಏರುತ್ತಿದ್ದಿತು (ಗರುಡಾ. ೦೦೨).
[←ಮರಾ. ಪೋಟಗೀ, ಪೋಟಗೇ]

**ಪೋಟಿಗೆದಾವೆ** (ನಾ). ಜೀವನಾಂಶಕ್ಕಾಗಿ ಮಾಡುವ ದಾವೆ : ಸರಕಾರದ ಮೇಲೆ ಪೋಟಿಗೆದಾವೆ ಮಾಡ್ರಿ (ಶಿರುಗು. ೬).
[ಪೋಟಿಗೆ+ದಾವೆ₁ (<ದಾವಾ)]

**ಪೋಟಿಬೀಳು** 'ಪೋಟೆಬೀಳು' ನೋ.

**ಪೋಟು** 'ಪೋಟೆ₁' ನೋ.

**ಪೋಟುಗಾರಿಕೆ** (ನಾ). ತುಂಟಾಟ (?) : ನಿಮ್ಮ ಪೋಟುಗಾರಿಕೆಯನ್ನು ಹಾರಿಸಿಬಿಟ್ಟೇನು . . . ಸುಮ್ಮನೆ ಹೋಗಿರಿ (ಕಥಾಮಂ. IV. ೦೮).
[ ? ]

**ಪೋಟುಬೀಳು** 'ಪೋಟೆಬೀಳು' ನೋ.

**ಪೋಟೆ₁, ಪೊಟ್ಟೆ, ಪೊಟ್ಟೆ₂, ಪೋಟ್ಕ, ಪೋಟು, ಹೊಟ್ಟೆ, ಹೋಟೆ₁** (ನಾ). ೧. (ಮರದ) ಪೊಟರೆ; ಡೊಗರು: "ಮರದ ಪೋಟೆಯೆ ಪೊಟಲ್" (ಸಂಕೀಶ. ೦೨); ಹುಣಿಸೆಮರದ ಪೋಟೆಯಲ್ಲಿ ದೇಹ ಬೆಂದು ಬೇಯದುದಕ್ಕಳಲೊ (ಐತ್ತೀಸ. ೪೪). ೨. ತೂತಂ ; ರಂಧ್ರ : 'ಪೋಟೆಬೀಳು' ಪರಾ. ೩. ಪೊಳ್ಳು; ಜಳ್ಳು : ಓಡು ಒಡಕು ಹುರುಳಿ ಪೋಟೆ ಹುರಿವಾಕೆಯ ಕೈಸೊತ್ತು (ಛಪವ. ೩೫-೩೨೭). 'ಪೋಟೆಗೊಂಬು' ಪರಾ. **ಪೊಟ್ಟೆ** : ೧. ನಮ್ಮ ಪೊರೆವರಾರೆಂದು ಬರಕಂಜಿ ಪೊರಮಡಲಮ್ಮದೆ ಪನ್ನೆರಡುವರುಷಂಬರಂ ಪೊಟ್ಟೆಯೊಳಿರ್ದೆವು (ಧರ್ಮಾಮ್ರಾ. ೬-೦೩೩). **ಪೊಟ್ಟೆ₂** : ೧. "ಪೊಟಲ್=ಮರದ ಪೊಟ್ಟೆ ; ಪುರಂ" (ಕಮಿತ. ಶಂ. ೦); ಪೊಳ್ಳು, ಪೊಟ್ಟೆ (ಹೊಟ್ಟೆ), ಪೊದರು (ಹೊದರು), ಪದರು, ಡೊಗರು (ಕಂಪಹು. ೮೮).' ಪೊಟ್ಟೆವೋಗು' ಪರಾ. ೩. ಪೊಟ್ಟೆಯ ನುಡಿಗಳಂತಿರಲಿ ನಾರದ (ಮೋಹತ. ೦೨-೩೩). **ಪೋಟ್ಕ** : ೨. 'ಪೋಟೆಬೀಳು' ಪರಾ. **ಪೋಟು** : ೧. ವನಪಾಲಕರು. . .ಎಲ್ಲವನು ಮಾಮರನ ಪೋಟೊಳಿಯೊಳ್[ಳ]ಹಾಕಲು (ನವಮೋ. ೨೨-೦೧). ೨. 'ಪೋಟುಬೀಳು' ಪರಾ. ೪. (ಕರಾ) ಮೈಥುನಕ್ರಿಯೆ. **ಹೊಟ್ಟೆ** : ೨. 'ಹೊಟ್ಟೆ ಹೋಗು' ಪರಾ. **ಹೋಟೆ₁** : ೧. "ಹೋಟೆ[ಪಾಠಾಂ. ಕೋಟರಂ] ಪಿತ್ತಲೆಂಬಿನಿತುಂ ನಿಷ್ಕುಟಮಕ್ಕುಂ" (ನಾನಾರ. ೦೯೩) ; ವಟವೃಕ್ಷದ ಘಟದ ಹೋಟೆಯಲ್ಲಿ ತತ್ತಿಯನಿಕ್ಕಿತ್ತೊಂದು ಗಿಣಿ (ಪುಮಗುಂ. ೪. ೨೩೬-೪೮) ; ತೋಟದ ಕಬ್ಬಿಂದ ಹೋಟೆಯು ಜೇನಿಂದ. . .ಬಲ್ಲವಳ ಕೂಟವೇ ಲೇಸು (ಸರ್ವಜ್ಞ. ೦೬೦೦). ೨. ಮಣ್ಣು ಹೋ[ಪಾಠಾಂ. ಹೊ]ಟೆ ಮಳೆಗೆ ಮುಚ್ಚುವುದಲ್ಲದೆ ಕಲ್ಲ ಹೋ[ಪಾಠಾಂ. ಹೊ]ಟೆ ಮುಚ್ಚುವುದೆ (ಗುರುತ್ಸಮಂ.೪. ೨೦೬-೩೬); ಅನಲನ ಸತಿಯು ಬಲದ ಮೂಗಿನ ಹೋಟೆಯಂ. . .ಕೊಯ್ಯುತ್ತ (ಐರಾಬ. ೦೨-೬೦). ೩. ಹೊರಗೆ ನೋಡಿದರೆ ಕೋಟೆ ಒಳಗೆ ನೋಡಿದರೆ ಹೋಟೆ (ಗಾದೆ).
[ದೇ.॥ ತಮಿ. ಪೋಟು ; ಮಲ. ಪೋಡು ; ಕೊಡ. ಪೋಟೆ ; ಕೋಲಾ. ಬೋಟ]

**ಪೋಟೆ₂** (ನಾ). ೧. ಮೀಸೆ, ದಾಡಿ ಮುಂತಾದ ಪುರುಷಲಕ್ಷಣಗಳುಳ್ಳ ಹೆಂಗಸು ; ಖೋಜಾ : "ಪೋಟಾ—ಸ್ತ್ರೀಪುಂಸಲಕ್ಷಣಾ—ಸ್ತ್ರೀಲಕ್ಷಣವೂ ಪುರುಷಲಕ್ಷಣವೂವುಳ್ಳ ಶಿಖಂಡಿಯಂಥಾವಳ ಹೆಸರು" (ಸಿದ್ಧಾಂಚಿ. ೦೬೦). ೨. ನೀರು ಹೊರುವ ಚೇಟಿ.—ಸೇವಕಿ ; ಕುಂಭದಾಸಿ : "ಪೋಟಾ . . . ದಾಸೀ, ಕುಟಹಾರಿಕಾ—ಈ ೫ ತೊಟ್ಟು" (ಪರಾಯು. ೮೦-೩೩೪) ; "ನೀರಡಿಕೆ ಪೋಟೆಯೆನಿಸಿಕ್ಕು" (ಮುಂಗರಾ. ೯೦-೪). [ಸಂ. ಪೋಟಾ]

**ಪೋಟೆಗೊಂಬು** (ನಾ). ಟೊಳ್ಳು ಕೊಂಬೆ ; ಪೊಳ್ಳಾದ ಟೊಂಗೆ : ಪೋಟೆಗೊಂಬುಗಳ ಪಳಮರದಂತೆ ತಿರುಳಿಲ್ಲದೋಟೆಗಳ ತಿಂತ್ರಿಣೀಫಲದಂತೆ ಗುಳಿಕ ಕರ್ಕೋಟಕಾದಿಗಳೊಡಲ್ಪೊಳ್ಳಾದುವು (ಕೈಐಶಾ. ೨೪-೩೫).
[ಪೋಟೆ₁ + ಕೊಂಬು₁]

**ಪೋಟೆಬೀಳು, ಪೋಟಿಬೀಳು, ಪೋಟುಬೀಳು** (ಕ್ರಿ). ತೂತು ಬೀಳು; ರಂಧ್ರವುಂಟಾಗು : ಆಕಾಶ ನೋಡಿ ನೋಡಿ ಅವನ ಕಣ್ಣು ಪೋಟೆಬಿದ್ದು ಹೋಗುತ್ತದೆ (ಹಣ್ಣಾ. ೩೦). **ಪೋಟಿಬೀಳು** : ಅವನ ತಲೆಯು ಅದರ ಏಣಿನ ಸಲಾಕೆಗಳಿಗೆ ಬಲವಾಗಿ ಬಡಿಯಲು, ಪೋಟಿಬಿದ್ದು ರಕ್ತಸುರಿಯಲಾರಂಭಿಸಿತು (ಅಂಬಿ. ೯೦). **ಪೋಟುಬೀಳು** : ಕೆಳಕ್ಕೆ ಬಿದ್ದ ರಭಸಕ್ಕೆ ಅವನ ತಲೆ ಪೋಟುಬಿದ್ದಿದೆ (ರೂಢಿ).
[ ಪೋಟೆ₁ + ಬೀಳು₁ (<ಬೀೞ್₁) ]

**ಪೋಟೆಹೋಗು, ಪೊಟ್ಟೆವೋಗು, ಹೊಟ್ಟೆಹೋಗು** (ಕ್ರಿ). ೧.= ಪೋಟೆಬೀಳು : ಕಣ್ಣು ಪೋಟೆಹೋದ ಜಡನಂತೆ (ಛಶಸ. III. ೪). **ಪೊಟ್ಟೆವೋಗು** : ೧. ಕೊಂಬೋಣಗಿರ್ದ ಪೊಟ್ಟೆವೋದೊಣಗಿದ ವೃಕ್ಷದಿಂದಱುವುದಾಯೆಡೆಯೊಳ್ ಜಳಮಾಗದೆಂಬುದಂ (ಕೋಕೋಶ. ೫-೪) ; ಪೊಟ್ಟೆ[ಪಾಠಾಂ. ಪೋದೆ]ವೋದ ಮರದಂತೆ ಕರಂ ನರೆಯೇಱಿದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜಮರ್ಮುಱುದಿಕ್ಕರೊ ಮೋಹಮಲ್ಲನಂ (ಮಲ್ಲಿಕ. ೦೩-೯೯). ೨. ಹೊಪ್ಪಳಿಯುಂಟಾಗು ; ಬೊಬ್ಬೆಯೇಳು ;

ಪುಟ್ಟಿದ ದಿನ ಮೊದಲಾಗಿ ಧರೆಯೊಳಡಿಯಿಟ್ಟಿಱಿಯರು ಬಾಲೆಯರು ಬಟ್ಟೆಯೊಳಗೆ ನಡೆಯಲು ಪಾದತಳಗಳು ಪೊಟ್ಟೆವೋಪುದು ತಾನಂದೆ (ಅಂಜನ. ೯-೯೩). **ಹೊಟ್ಟೆಹೋಗು :** ೧. ಮಂಜುನಾಥಯ್ಯನವರ ಕಿವಿ ಮರದ್ದಾಗಿದ್ದರೆ ಎಂದೇನೆ ಹೊಟ್ಟೆಹೋಗುತ್ತಿತ್ತು (ಸರಸ. ೧೦).

[ ಪೋಟೆ$_1$ + ಹೋಗು$_1$ (< ಪೋ$_1$) ]

**ಪೋಟ್ಲೀಸು** 'ಪೋಲ್ಟೀಸು' ನೋ.

**ಪೋಡಣೆ** 'ಪೊಡ್ಡಣ' ನೋ.

**ಪೋಡಿ$_1$** (ನಾ). ಭಯ ; ಹೆದರಿಕೆ : ಪೂವಿ ಏನು ಮಾಡಿಕೊಳ್ಳುವಳೋ ಎಂದು ನನಗೆ ಪೋಡಿ ಆಗುತ್ತೆ (ಹುಂಡಾ. ೦೯೩) : ಥೂತ್, ಪೋಡಿ ಪುಕ್ಕಲಗಳೇ, ಹುಟ್ಟಿದ ಮನುಷ್ಯ ಸಾಯದೇ ಕೂಡುತ್ತಾನೆಯೇ ? (ಪಾವ. ೬೦). [ದೇ. ॥ ತುಳು. ಪೋಡಿಗೆ ; ಕೊಡ. ಪೋಡಿ]

**ಪೋಡಿ$_2$** (ನಾ). ೧. ಹಣ್ಣು ಮುಂತಾದುವುಗಳ ಚೂರು, — ತುಂಡು : (?). ೨. ಅಡಕೆಯ ಚೂರು ; ಚೂರಡಿಕೆ : ಪೋಡಿಭಾಗದ ಬೆಳ್ಳೆಲೆಯ ಮೆಲ್ಲುತೆ ಸಖಿಗೂಡಿ ಬಂದಳು ದಿವಾಣಕ್ಕೆ (ಮೋಹತ. ೨೭-೭) ; ಹವರ್ಮ್ಯಗ್ರವನಡರ್ದು ಪೋಡಿಯ ಭಾಗ ಬೆಳ್ಳೆಲೆಯ ಸ್ವೀಕರಿಸಿ ಮಾತಾಡಿದಳ್ ಮಂತ್ರಿಜೆಯೊಡನೆ (ಮೋಹತ. ೨೮-೩೩). ೩. "ಪಟ್ಟೇದಾರನ ಅರಿಕೆಯಿಂದ ಅಥವ ಕೋರ್ಟು ಅಪ್ಪಣೆ ಪ್ರಕಾರ ಮತ್ತ್ಯಾವದಾದರೂ ಕಾರಣದಿಂದ ನಂಬರುವೊಡೆಯಬೇಕೆಂದು ಅಪ್ಪಣೆಯಾದರೆ ಹಾಗೆ ಪೊಡೆಯಬೇಕು. ಇದಕ್ಕೆ ಪೋಡಿಯೆಂದು ಹೆಸರು" (ಭೂವಿಅ. ೩೩). 'ಪೋಡು' ಪರಾ. [< ಪ್ರಾ. ಪೋಡಿ, ಪೋಡೀ]

**ಪೋಡು** (ನಾ). ೧. ಸೀಳುವಿಕೆ; ಕತ್ತರಿಸುವಿಕೆ: 'ಪೋಡುಂಗಾಱ' ಪರಾ. ೨. ಪಾಲು; ವಿಭಾಗ : ಜಮೀನಿನ ಪೋಡು ಮಾಡಿಸಲು ತಾಲ್ಲೋಕುಕಚೇರಿಗೆ ಹೋಗಬೇಕು (ರೂಢಿ). 'ಫೋಡ್' ಪರಾ. [< ಪ್ರಾ. ಫೋಡ್ = ಸೀಳು. / ತೆಲು. ಪೋಡು = ಜಮೀನಿನ ತುಂಡು]

**ಪೋಡುಂಗಾಱ, ಪೋಡುಗಾಱ** (ನಾ). ಸೌದೆ ಕಡಿಯುವವನು; ಮರ ಕತ್ತರಿಸುವವನು : ನೀಂ ಕೊಂಕಣನಾಡೊಳ್ ತುಂಗಭದ್ರನೆಂಬ ಪೋಡುಂಗಾಱನಯ್ ನೀಂ ಕುಮ್ಮರಿಯಂ ಸುಟ್ಟು ಪೋಗಿ ಪೊತ್ತಿಡೆ ಬಂದು ನೋಡುವನ್ನೆಗಂ (ವಡ್ಡಾರಾ. ೧೬೦-೦) ; ಬಳೆದು ಪುದುಂಗೊಳಿಸಿದ ಬದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಱನಂತೆ (ಶಂಕಶಾ. ೦೨-೦೬೭ ವ). **ಪೋಡುಗಾಱ :** ಒಂದೇ ಕುಠಾರದಿಂದಡವಿಯಂ ಕಡಿವಂತಿರೆ ಪೋಡುಗಾಱನನ್ನೊಂದೆ ಭುಜಾಸಿಯಿಂ ಶಬರಕೋಟಿಯನಿಕ್ಕಿ ಪಿಶಾಚಕೋಟಿಗಾನಂದಮನುಂಟುಮಾಟ್ಟಿಂ (ಶಂರಾಮ. ೯-೯೦). [ಪೋಡು + — ಕಾಱ]

**ಪೋಡುಗಾಱ** 'ಪೋಡುಂಗಾಱ' ನೋ.

**ಪೋಣಪಟ್ಟು** 'ಪೌಣಪಟ' ನೋ.

**ಪೋಣಕೆ** 'ಪವಣಕೆ' ನೋ.

**ಪೋಣಗೆ** 'ಪವಣಗೆ' ನೋ.

**ಪೋಣಿಸು** 'ಪವಣಿಸು' ನೋ.

**ಪೋತ$_1$** 'ಪೋಂತು' ನೋ.

**ಪೋತ$_2$** (ನಾ). ೧. ಯಾವುದಾದರೂ ಪ್ರಾಣಿಯ ಮರಿ ; ಶಾಬ : ವಿಯೋಗಿಗಣಾಕುಲಿತ ಕುರಂಗಪೋತ ಭಯಕೃತ್ಕಂಠೀರವಂ (ಅಜಪು. ೬-೯೨); ಪಕ್ಷಂಗಳೊಳ್ ಪಟ್ಟನಿತುಂ ಪೋತಂ[ಪಾಠಾಂ. ಪೊತ್ತಂ]ಗಳಂ ವೀಕ್ಷಿಸುತೆ (ಶಾಂತೀಶ್ವ. ೧೧-೯೬); ಕಲ್ಲಿಯಂ ಚೆಕ್ಕನೆ ತೂತುಗೆಯ್ದು ಗಿಳಿಗಳ್ಕರೆತಂದವು ತಮ್ಮ ಪೋತಮಂ (ಹಮ್ಮಿರ. ೪-೬೨). ೨. ಶಿಶು; ಮಗು : "ಬಾಳಃ, ಪಾಕಃ, ಅರ್ಭಕಃ, ಗರ್ಭಃ, ಪೋತಃ . . . ಡಿಂಬಃ — ಈ ೯ ಮಗುವು" (ಹಲಾಯು. ೮೩-೩೯೮); ಉರುವೈರಾಗ್ಯಂ ಸಾತಿಶಯಮೆನಿಸಿ ಬಳೆಯಲ್ ಪೋತಂ ತದ್ಬಾಲನೆನ್ನೆದೆ ಬಳೆಯುತ್ತೆಸೆದಂ (ಉದ್ಭಟ. ೧೧-೩೫). ೩. ಚಿಕ್ಕ ಹಡಗು; ದೋಣಿ; ನಾವೆ : "ಪೋತವಾ ಪ್ರವಹಣಂ ಭೈತ್ರಮೆನೆ ಹಡಗಕ್ಕು" (ಮಂಗರಾ. ೧೨೦-೯) ; ಪಲಬರರಸುಗಳ್ . . . ಧರ್ಮಪೋತಚ್ಯುತರನವಧಿಸಂಸಾರವಾರಾಶಿಮಧ್ಯಾಸ್ಪದಸರ್ವಗ್ರಾಸಿಭೀಮಾಂತಕವದನಮಹಾಗರ್ತದೊಳ್ ಮಗ್ನರಾದರ್ (ಆದಿಪು. ೯-೫೮); ಆ ತಡಿಗಿರದೊಯ್ದಿಕ್ಕುವ ಪೋತದವೋಲ್ (ಸಮುಕ. ೭-೩೮); ಪೋತಯಾತ್ರಿಕಜನಂ ಪುಗಲೊಲ್ಲದೆ ವಾರ್ಧಿಮಧ್ಯಮಂ (ಎಕ. XI. ದಾವಣ. ೪೩-೫೩; 1164). ೪. ಹತ್ತು ವರ್ಷ ವಯಸ್ಸಿನ ಆನೆಯ ಮರಿ : ಎಸೆದುದು ಬಳಸಿರೆ ಪೋತಕಲಾಪವಲ್ಲಿ ಯೂಥನಾಥಂ (ಪುಷ್ಪಪು. ೫-೯೩). ೫. ಚಿಗುರು. ೬. ಮನೆಯ ನಿವೇಶನ ಅಥವಾ ತಳಪಾಯ. [ಸಂ.]

**ಪೋತಕ** (ನಾ). ೧. ಯಾವುದಾದರೂ ಪ್ರಾಣಿಯ ಮರಿ : ಮನಂಬೆರ್ಚದೆ ಸಿಂಹಪೋತಕಮನೋವಲುವಾಕೆಯ ದೋಹಳಂ ಕರಂ ಪೆರ್ಚಿದುದು (ಶಂಕಶಾ. ೦-೦೯೨) ; ಮುತ್ತಿನ ಸೂಸಕಂಗಳಂ ಬಾಳಮೃಣಾಳಮೆಂದು ಕರ್ದುಕಲ್ ಬಗೆಗುಂ ಕಲಹಂಸಪೋತಕಂ (ಶಂರಾಮ. ೦-೦೨೭). ೨. ಎಳೆಯ ಗಿಡ; ಸಸಿ : ಚೂತಪೋತಕಂ ನನೆಯಿಂ ರಂಜಿಸುವಂತಿರೆ ತನಯಂ ರಂಜಿಸಿದಂ (ಜಗದ. ೩-೩೯). [ಸಂ.]

**ಪೋತಕಿ** (ನಾ). ಒಂದು ಬಗೆಯ ಸಸ್ಯ; ಬಸಲೆ : "ಪೋತಕಿ ಮುಂಥಗಾಳಿಯೆನೆ ಬಸಲೆಯಕ್ಕು" (ಮಂಗರಾ. ೯೯-೯೬). [ಸಂ. ಪೋತಕೀ]

**ಪೋತಗ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಚವಡಿಕೆ ಮಾರಿ ಮಸಣಿ . . . ಕೊಲ್ಲುವ ಪೋತಗನು ಕಚ್ಚಿನ ಗಡಿಗೆವ್ಮು (ಬಸವ ಪು. ೫೮-೨).

[ ? ]

**ಪೋತರ್** (ಕ್ರಿ). ೧. ಹೋಗು ; ಗಮಿಸು ; ಸಾಗು : ಅಕರ್ಣದಯಭಯವಶದಿಂ ಪಾಣ್ಬ ಪೋತಂದಳೊರ್ವಳ್ (೦೯೮ವ. ೩-೦೯) ; ಹರಿ ಪೋತಂದಡಿವಜ್ಜೆಗಳ್ ಬಯಲೊಳಿಲ್ಲಿಂದಿತ್ತವಿನ್ನಿಲ್ಲ (ಜಗದ. ೫-೩೦); ಕಲಿ ಅಜ್ಜನ್ಕಣ್ಣ ನಾರಾಯಣನ್ ತನ್ನ ಮನೆಯನ್ಕನ್ನವಿಟ್ಟು ಪುಗುತನ್ದೊಡೆ ಅಱಿವು ಪೊರಮಟ್ಟು ಪೋತ(೦)ನ್ದು ಕಡಿತಲೆಯನ್ದಟ್ಟ ನಾಲ್ವರಾನಿಱಿದೊನ್ (ಶಾಇಇ. IX—1, ೫-೦೨ ; ?). ೨. ಹೊರಗೆ ಬರು; ಹೊರಟು ಕೊಳ್ಳು ; ಮುಂಬರು : ಉಸಿರೊತ್ತಿಂ ತಿದಿಯಂತಿರೊತ್ತಿದ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ (ಶಂಕಶಾ. ೦೨-೦೫೦); ಇಡೆ ಕಾಲಂ ಬಲಿಸಿಲ್ಕಿ ಪಲ್ಗಿರಿದು ಕಣ್ಪೋತಂದು ಸುಯ್ಗಟ್ಟು ಸೀರ್ವಡಿಸುತ್ತಿರ್ದ ಧರಾಮರರ್ ನಡುಗೆ ಬಿಟ್ಟಿಲ್ಲಂ ಶರಣ್ ದೇವ ನಿಮ್ಮಡಿಯೆಂದಿರ್ಪುದುಂ (ವೀಬಪು. ೫-೨೯). [ಪೋ$_1$ + ತರ್]

**ಪೋತವಣಿಜ** (ನಾ). ೧. ಹಡಗಿನ ಮೂಲಕ (ದೇಶವಿದೇಶಗಳೊಡನೆ) ವ್ಯಾಪಾರ ಮಾಡುವವನು ; ಸಮುದ್ರವ್ಯಾಪಾರಿ : "ಸಾಂಯಾತ್ರಿಕಃ, ಪೋತವಣಿಕ್ — ಈ ೨ ಭೈತ್ರದ ವ್ಯವಹಾರಿ" (ಹಲಾಯು. ೧೦೮-೩೩) ; ಪೋತವಣಿಜರ್ತಡಿಗೆಯ್ದಿ ತೃಷಾವಿಷಾದಮಂ ಕೊಱಚೆಯ ನೀರೊಳೀಕಳೆಗುಮೆಂದೊಡೆ (ಜಕಿ. ೦-೩೭). ೨. ಹಡಗಿನ ವ್ಯಾಪಾರ ಮಾಡುವವನು. [ಸಂ. ಪೋತವಣಿಜ್]

**ಪೋತವಾಹ** (ನಾ). ಹಡಗನ್ನು ನಡೆಸುವವನು ; ನಾವಿಕ ; ಕಲಾಸಿ : "ನಿಯಾಮಕಾಃ, ಪೋತವಾಹಾಃ, ೨ ಹಡಗಿನ ಕಂಭದ ಮೇಲೆಯಿದ್ದು ಹಡಗು ನಡಿಸತಕ್ಕ ಉಪಾಯಗಳನ್ನು ಹೇಳುವವರ ಪೆಸರುಗಳು" (ಸಿದ್ಧಾಂತಿ. ೭೯). [ಸಂ.]

**ಪೋತವಾಹಿ** (ನಾ). = ಪೋತವಾಹ : "ತತ್ಪೋತವಾಹಿ ನಾವಿಕನಕ್ಕುಂ" (ವಸ್ತುಕೋ. ೨೩-೧೦). [ಸಂ. ಪೋತವಾಹಿನ್]

**ಪೋತಾಧಾನ** (ನಾ). ಮರಿಮೀನುಗಳ ಮೊತ್ತ : "ಕ್ಷುದ್ರಾಂಡಃ, ಮತ್ಸ್ಯಸಂಘಾತಃ, ಪೋತಾಧಾನಂ — ಈ ೩ ಕಿಱಿಯ ಮೀನ ಮೊತ್ತಂ" (ಹಲಾಯು. ೧೦೯-೩೯). [ಸಂ.]

**ಪೋತಿ** 'ಪೌತಿ' ನೋ.

**ಪೋತು** 'ಪೋಂತು' ನೋ.

**ಪೋತುಂಗಲ್ಲು** (ನಾ). ಒಂದು ಸ್ಥಳದ ಹೆಸರು : ತೆಂಙ್ಕಣದೆಸೆ ಗುಡ್ಡೆ ಗಲ್ಲು . . . ಪಡುವಣದೆಸೆ ಪೋತುಂಗಲ್ಲು ಕೂಮಾರುಲ ಪಟ್ರು ಕಾಮ್ರ್ಟ್ಯ ಗಿಲ ಪುಣಾಸೆ (ಎಕ. XII. ಸಿರಾ. ೩೬-೩೭ : 878). [ ? ]

**ಪೋತ್ರ** (ನಾ). ೧. ಹಂದಿಯ ಮೂತಿ,–ಮುಂಸುಡಿ : ದಬ್ಬಣದಂತೆ ನಿಬ್ಬಣವಾದ ಕೂದಲ್ಗಳೊಳ್ ಕೋದ ಪೆಣಂಗಳಿಂ ಪೋತ್ರಮೊಯ್ದುದೆ ಪಡೆಯಂ ಒಡಿದು ಪೊಡೆಯೊಳ್ಪೊಕ್ಕುವಂತೆಯುಂ . . . ಮೊಗಮನೆತ್ತಿ ಮೆಯ್ಯಂ ನಿಮಿರ್ದು ಅದಿರದಿದಿರೇಱುವೆಕ್ಕಲವಂದಿಯಂ ಕಂಡು (ಆದಿಪು. ೬-೦೪ ವ) ; ಪೋತ್ರಮನೆತ್ತುತ್ತವುತ್ತಲಿತ್ತಲುಂ ಕೆಂದದೆ ನೋಡುತಾಲಿಸುತೆ ಮಸ್ತಿನ ಕಾಯದ ಸೊಕ್ಕಿದೆಕ್ಕಲಂ ಗೊಂದಣದೊಳ್ ವಿರಾಜಿಸಲ್ (ಹಾಲಾಸ್ಯ. ೩-೦೩-೨೩). ೨. ನೇಗಿಲಿನ ತುದಿ ; ರೆಂಟೆಯ ಗುಳ : "ಹಂದಿ ನೇಗಿಲ ಮುಖಗಳೊಳ್ ಪೋತ್ರಮೆಂಬುದು" (ಮಂಗರಾ. ೦೯೩-೨೩); ಕಡುಗಾಯ್ದು ನೆಲದೊಳುಟ್ಟುಂಡೆಡೆವಡೆಯದೆ ಮೇಲೆ ಮೇಲೆ ಪರಿವುದು ಪೋತ್ರಂ (ಜೀವಂ. ೮-೨೦೦). ೧, ೨: ಆ ಮಹಾವನಂ . . . ಕ್ಷೇತ್ರಾ ಕರ್ಷದಂತೆ ಪೋತ್ರಿಪೋತ್ರಾಹತಧರಣಿತಳಮುಂ ಗೃಹೀತಗೋಲಾಂಗೂಲ ಮುಂ . . . ಆಗಿಯುಂ (ಚಂದ್ರಪು. ೫-೩೨ ವ). ೩. ಪಿಕಾಸಿ ; ಗುದ್ದಲಿ. ೪. ಸಿಡಿಲು. ೫. ಹಡಗು ; ನೌಕೆ. ೬. ವಸ್ತ್ರ ; ಉಡುಪು. [ಸಂ.]

**ಪೋತ್ರಿ** (ನಾ). ೧. ಹಂದಿ ; ವರಾಹ : "ಕೋಳಃ, ಕ್ರೋಡಃ, ಸೂಕರಃ, ವರಾಹಃ, ಪೋತ್ರೀ . . . ಕಿರಿಃ—ಈ ೮ ಹಂದಿ" (ಹಲಾಯು. ೩೬-೬೩);ಒಂದು ಪಲ್ವಲಪ್ರಾಂತದೊಳ್ ಕಾಂತಾರಕಳಭಪ್ರಾಯಪೋತ್ರಿಸಂತಾನದೊಳಗೆ . . . ಸೊಗಯಿಸಿತ್ತುತ್ಕೇಕರಂ ಸೂಕರಂ (ಚಂದ್ರಪು. ೫-೫೯ ವ) ; ಆ ಮಾಯಾಪೋತ್ರಿ ಧಾತ್ರೀಭರವುನೞಿಸಿ ತುಳ್ಕಾಡಿದಂದು (ಕಶಾಇ. IV. ೨೬೭-೦೦ ; 1380) ; ಕೌಶಿಕಂ ನಿರ್ಮಿಸಿದ ಪೋತ್ರಿಯಂ ಕಂಡು ಭಟರುಱೆ ಕೆರಳುತೆ . . . ಬೆಂಬತ್ತೆ ಸಿಕ್ಕದೆ ಬಂದು ಮುನಿಯ ಮಱೆಬಿದ್ದುದಾ ಪಂದಿ (ರಾಘಶ. ೩-೨೯). ೨. ನೇಗಿಲು ; ರೆಂಟೆ. ೧, ೨ : ಆ ಮಹಾವನಂ . . . ಕ್ಷೇತ್ರಾಕರ್ಷದಂತೆ ಪೋತ್ರಿಪೋತ್ರಾಹತಧರಣಿತಳಮುಂ ಗೃಹೀತಗೋಲಾಂಗೂಲಮುಂ . . . ಆಗಿಯುಂ (ಚಂದ್ರಪು. ೫-೩೨ ವ). [ಸಂ. ಪೋತ್ರಿನ್]

**ಪೋತ್ರಿಪ** (ನಾ). ಹಂದಿಗಳ ಸಮೂಹದ ಮುಂದಾಳು : ಭೂವರ ನಂದು ತೇರನಡರಲ್ಕೋರ್ವೆತ್ತದಂ ಪೋತ್ರಿಪಂ (ಹಾಲಾಸ್ಯ. ೩-೦೩-೯೩). [ಸಂ.]

**ಪೋಥಿ** (ನಾ). ೧. ಪುಸ್ತಕ ; ಗ್ರಂಥ. ೨. ಪವಿತ್ರಗ್ರಂಥ ; ಧಾರ್ಮಿಕ ಗ್ರಂಥ : ನನ್ನ ಕಾದಂಬರೀ ಏನು, ತುಕಾರಾಮನ ಪೋಥೀ ಅಲ್ಲಾ (ಬೀಕಶ. II. ೫) ; ಒಂದುದಿವಸ ಗಂಗವ್ವ ದೇವರ ಮುಂದೆ ಪೋಥಿ ಹಿಡಿದು ಕೊಂಡು ಕುಳಿತಾಗ (ಗಂಪಮಾಯಿ. ೨೫೦).

[←ಹಿಂ. ಮರಾ. ಗುಜ. ಪೋಥೀ ; ಬಂಗಾಲಿ. ಪುಥೀ ; ಸಿಂಧಿ. ಪೋಥೀ, ಪೋಥೂ./ಪ್ರಾ. ಪೋತ್ಥಯ]

**ಪೋಥೀಭಕ್ತಿ** (ನಾ). ೧. ಪವಿತ್ರಗ್ರಂಥದ ಮೇಲಿರುವ ಶ್ರದ್ಧೆ,–ವಿಶ್ವಾಸ : 'ಪೋಥೀಭಕ್ತಿ'ಯಿಂದಾಗಿ ಉಂಟಾಗುವ ಅ—ಪ್ರಮಾಣಿತ ಶ್ರದ್ಧೆಯು, ಮುಖ್ಯವಾಗಿ, ನಮ್ಮಲ್ಲಿ ಬೆಳೆದು ಬಂದಿರುವ ದ್ವಿಧಾಭಾವದ ಮೂಲಕಾರಣವಾಗಿದೆ (ಕರ್ನಾಟಿ. XV. ಮುನ್ನುಡಿ). ೨. (ಆಲಂ) ಮುದ್ರಿತವಿಷಯಗಳ ಮೇಲಿರುವ ಅತಿಶ್ರದ್ಧೆ. [ಪೋಥಿ+ಭಕ್ತಿ]

**ಪೋದ** 'ಪೋ₁' ಪರಾ.

**ಪೋದಗೆ₁** (ನಾ). (ಶುಭಾಶುಭಫಲಗಳನ್ನು ಸೂಚಿಸುವುದೆಂದು ನಂಬಲಾದ) ಒಂದು ಬಗೆಯ ಪಕ್ಷಿ: "ಪೋದಗೆ—ಪೋತಕ" (ಕರ್ನಕೋ. ೨೭); ಕೋಗಿಲೆ ಬಾದಗೆ ಪೋದಗೆ . . . ಬಲಾಕೆ ಲಾವುಗೆ ಸೇನಂ (ಕಾವ್ಯಸಾ. ೦೦೯೯ ಚಿತ್ರಕ); ಓಂಗಲಿ ಪೋದಗೆ . . . ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ದೊಡೆ ತಡೆಯದಾ ಗೃಹಂ ಪಾಟಕ್ಕುಂ (ಲೋಕೋಪ. ೯-೬೩); ನಲವಿಂ ಪೋದಗೆಗಳ ಪಿಂಗಲೆಗಳ . . . ದನಿಯಿಂ ಲುಬ್ಧಕರುಲಿಯಲ್ ಖಗವಿತತಿ ಬೆರ್ಚಿ ಪಾಱಿದುವಾಗಳ್ (ಶ್ರೀಕೃಪು. ೨೭-೯೮). [<ಸಂ. ಪೋತಕ]

**ಪೋದಗೆ₂** (ನಾ). ಒಂದು ಬಗೆಯ ಸಸ್ಯ ; "ಬಸಲೆಗಿಡ" (ಕಕಟ. ೬. II. ೭). [ ಸಂ. ಪೋತಕೀ ]

**ಪೋದಿಯಮ್ಮ** (ನಾ). ಒಬ್ಬಾತನ ಹೆಸರು : ಈ ಕಲ್ಲಂ ಚಿಕ(೦)ಣ್ಣ × × × ಯಂ ಪೋದಿಯಮ್ಮ ಮಾಡಿಸಿದೋನ್ (ಕಶಾಇ. XI—1. ೦೦-೩೪ ; 864). [ ಪೋದಿ₀ + ಅಮ್ಮ₁ ]

**ಪೋದೆ, ಬೋದು₂** (ನಾ). ೧. ಟೊಳ್ಳು ; ಪೊಳ್ಳು : 'ಪೋದೆವೋಗು' ಪರಾ. **ಬೋದು₂** : ೨. ಕಂಡಿ ; ತೂತು ; ರಂಧ್ರ : ಕೀಟಕವು ಸಣ್ಣದಿದ್ದಾಗ ಎಲೆಗಳಲ್ಲಿ ಬೋದು ಮಾಡುತ್ತದೆ (ಕೀಟಶಾ. ೪೯). ೩. ಸಣ್ಣ ತಗ್ಗು,—ಹಳ್ಳ : ತೋಟದಲ್ಲಿ ಮೆಣಸಿನ ಗಿಡಗಳನ್ನು ಹಚ್ಚುವದಕ್ಕೆ ಬೋದುಮಾಡಿ . . . ಆ ಬೋದಿನ ತಳದಲ್ಲಿ . . . ಅರಿಷಿಣದ ಬೀಜವನ್ನು ಊರಿ ನೀರು ಬಿಡಬೇಕು ಮತ್ತು ಬೋದು ನೆನೆದು ಹಸಿಯಾದ ಮೇಲೆ ಬೋದಿನ ತಲೆಯ ಮೇಲೆ ಒಂದೂವರೆಮೊಳ ಅಂತರವಾಗಿ ಎರಡೆರಡು ಮೆಣಸಿನ ಆಗಿಗಳನ್ನು ಹಚ್ಚಬೇಕು (ಕೃಷಿಶ್ರ. ೦೯೭). 'ಪೊಟ್ಟೆ₁' ಪರಾ. [ ದೇ. ॥ ತಮಿ. ಪೋತ್ತು, ಪೊತ್ತು ]

**ಪೋದೆವೋಗು** (ಕ್ರಿ). (ಒಣಗಿ) ಟೊಳ್ಳಾಗು ; ಪೊಳ್ಳುಬೀಳು : ಕೋಡಗದಂತೆ ಶಾಖೆಯೊಳ್ ನಡೆಯದೆ ಪೋದೆ[ ಶಾಕಾಂ. ಪೊಟ್ಟೆ ]ವೋದ ಮರದಂತೆ ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೆಃಕೆ ಮನುಜ ಪರ್ಯಾಯಱಿದಿಕ್ಕರೊ ಮೋಹಮಲ್ಲನಂ (ಮಲ್ಲಿಪು. ೦೩-೯೪).

[ ಪೋದೆ + ಪೋಗು₁ ( < ಪೋ₁ ) ]

**ಪೋದೆಸೆ** (ನಾ). ಹೋಗುವ ದಿಕ್ಕು : ನೃಪಾಳನಳವಂ ನಾವಿನ್ನು[ಟಿ] ಸ್ವೆಯ್ದು ಬಾಯ್ವಲದಿಂ ಬಣ್ಣಿಸದಿರ್ದೆ[ಳ]ಣ್ಣ ಚಲಮಂ ಕೊಣ್ಡಾಡಿ ಮಾಱಾಂತು ಮುಂ ತಲೆಸುತ್ತಲ್ಸೆಲೆವೋಗಿ ಪೊರ್ದ್ದಲ್ಪಱೇ ಕಾಲೂಱ ಲ್ನೆಲಂ ಱೆಂಬು[ದೋ]ಗಲಣಂ ಪೋದೆಸೆ ಇಲ್ಲೆನಿಲ್ಕಳಿದರಾತಿವ್ರಾತಮೋಂ ಪೇಳದೇ (ಕಶಾಇ. ೨-೨-೯೩; 1058). [ ಪೋ₁ + ದೆಸೆ₂ ]

**ಪೋದೊಱೆ** (ಕ್ರಿ). ಹೋಗಲು ಬಿಡಂ ; ಹೋಗಬಿಡಂ : ಈ ಪೊಟ್ಟು ಪೋದೊಱೆದ ಯಜ್ಞೀಯಾಶ್ವದ ಬೆಂಬೞಿವೋಗಿ ನೆರಂಗೂಡುವ ನಾಡೆಱೆ ಯರ ಕೊಟ್ಟಜಮನೊಟ್ಟಯಿಸಿಯುಂ (ರಾಮಾಕ್ಷ. ೪೭-೦).

[ ಪೋ₁ + ತೊಱೆ₁ ]

**ಪೋನಿ** (ನಾ). ಸಣ್ಣ ತಳಿಯ ಕುದುರೆ : ತನ್ನ ತಂದೆಯವರು ಐದನೆಯ ವರ್ಷದಲ್ಲಿಯೇ ಒಂದು ಪೋನಿಯನ್ನು ತಂದುಕೊಟ್ಟಿದ್ದರಷ್ಟೆ (ಜಗಹಂ. ೦೧). [ ←ಇಂ. Pony ]

**ಪೋಪ್** (ನಾ). ಕ್ರೈಸ್ತಮತದ ಮಹಾಧ್ಯಕ್ಷನಾದ ರೋಮಿನ ಧರ್ಮ ಗುರು : ಫ್ರಾನ್ಸಿನ ದೊರೆಯಾದ ಫಿಲಿಪ್ಪನು ಒಂದು ಬಾರಿ ಒಬ್ಬ ಫ್ರೆಂಚನನ್ನು ಪೋಪ್ ಪದವಿಗೆ ಏರಿಸಿದನು (ಬಾಲಶ್ರ. III. ೦೦೬೨). [ ← ಇಂ. Pop ]

**ಪೋಪ** 'ಪೋ₁' ಪರಾ.

**ಪೋಪು₁, ಹೋಹು₁** (ಕ್ರಿ). (ಹತ್ತಿರ) ಹೋಗು : "ಪೋಪು—ಆಸನ್ನ ಗಮನೇ" (ಶಬ್ದಮ). **ಹೋಹು₁** : ಪರಿಸರ್ಯೆ—ಹತ್ತಿರಿಂದ ಹೋಹದೆ ಇರುಹಂ (ನಾಶಶಾ. ೬). [ ಪೋ₁ + —ಪು₁ ]

**ಪೋಪು₂, ಹೋಹು₂** (ನಾ). ರೀತಿ ; ಮಾರ್ಗ : ಆದಾ[ ಶಾಕಾಂ. ವಾ]

ಗಲೆನ್ನನನುಭವಿಸುವುದಲ್ಲದೆ ಹೇಳಬಾರದಾರಿಗೆಯೂ ನೋಡಯ್ಯಾ ಕಾಣಬಾರದಾತಂಗೆ ಸವಿದೋಱಬಾರದ ಪೋ[ಪಾಠಾಂ. ಫಾ]ವು ನೋಡಯ್ಯಾ (ಉಂತ. ೨೯-೧೫). ಹೋಹು$_2$ : ಮೊಲೆ ಮುಡಿಯಿದ್ದುದೇ ಹೆಣ್ಣೆಂದು ಪ್ರಮಾಣಿಸಲಿಲ್ಲ. ಕಾಸೆ-ಮೀಸೆ ಕಠಾರಿಯಿದ್ದುದೇ ಗಂಡೆಂದು ಪ್ರಮಾಣಿಸಲಿಲ್ಲ. ಅದು ಜಗದ ಹೋಹು; ಬಲ್ಲವರ ನೀತಿಯಲ್ಲ (ಕರ್ನಾಕ. ೦೬೦).

[ ಪೋ$_1$ + —ವು$_2$ ]

**ಪೋಫಳಿ** (ನಾ). ಅಡಕೆ; ಕ್ರಮುಕ : ಅಡಿಕೆ (ಪೋಫಳಿ)—ಪ್ರಸಿದ್ಧ . . . ಕಾಯಿಯ ಮೇಲಿನ ತೊಟೆಯನ್ನು ಸುಲಿದು ಚಲ್ಲಿ, ಅಡಿಕೆಗಳನ್ನು ಕುದಿಸಿ ಮಾರಾಟಕ್ಕೆ ಒಯ್ಯುವರು (ಕಭಾಗ. ೩೫).

[ ← ಮರಾ. ಪೋಫಳೀ, ಪೋಫಳ್./ಪ್ರಾ. ಪೋಪ್ಫಲ, ಪೋಪ್ಫಲೀ./ ಸಂ. ಪೂಗಫಲ ]

**ಪೋಬೞಿ**, ಹೋಬಳಿ$_1$ (ನಾ). ೧. ಹೋದ ದಾರಿ,—ಮಾರ್ಗ : ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯುಂ ಪೋಬೞಿಯುಂ ದೊರೆಕೊಳಿಸಲಾಗದದಱಿಂ ಶರತತಿಯಲ್ತೆಂಬುದಿಂತು „ಧರ್ಮಾಪೋಹಂ (ಕವಿರಾ. ೩-೦೯೬); ನೆಱೆದಾಯುಷ್ಯಮೆ ಮಿಟ್ಟುಮನಱಸುವ ತೆಱದಿಂದಮವರ ಪೋಬೞಿಯನೆ ಬಂದಱಸಿ (ಶಾಂತಿಪು. ೩-೭೪) ; ಮುನಿದಂತಿರೊರ್ಮೊದಲೆ ಲೋಕಾಂತರಕ್ಕೆ ಪೋದ ನಿಜಜೀವಿತೇಶ್ವರನ ಬೞಿಸಲ್ವ ಬವಸೆಯಿಂ ಪೋಬೞಿಯನಱಸಿ ಪರಿವಂತೆ ನಿಮಿರ್ವ ಬಿಸುಸುಯ್ಗಳೊಳಂ (ವರ್ಧಪು. ೯-೩೦ ವ). ಹೋಬಳಿ$_1$ : ೧. ತಾಯ ಹೋ[ಪಾಠಾಂ. ಹೊಂ]ಬಳಿಯನಾ ವತ್ಸನಱಿವಂದದಿಂ ಆಯೆಡೆಯೊಳಱಸಿಕೊಳುತುಂ ಬಂದು (ವಂಬರ. ೧೧-೩೦); ಮನಮುಮಂ ಕಣ್ಣುಮಂ ಮೃಗದ ಹೋಬಳಿಗಿತ್ತು . . . ಬರುತಿರೆ (ಕಣ್ಣರ. ದೇ. ೦೨೯-೦೩). ೨. ನಡೆವಳಿಕೆ ; ಆಚರಣೆ ; ವ್ಯವಹಾರ : ಬ್ರಹ್ಮ ಅವ್ವೆಯ ಗಂಡನಾದ ವಿಷ್ಣು ಅಕ್ಕನ ಗಂಡನಾದ ರುದ್ರ ಕಿಱುತಂಗಿಯ ಗಂಡನಾದ ಮೂವರ ಹೋ[ಪಾಠಾಂ. ಹೊಲ]ಬಳಿಯಿಂದೇನು ಚೋದ್ಯ (ವಗವಾ. ೪. ೯೩೪-೯೯).

[ಪೋ$_1$ + ಬೞಿ$_3$]

**ಪೋರ್$_1$**, ಪೋರು$_1$, ಹೋರ್$_1$, ಹೋರು$_1$ (ಕ್ರಿ). ೧. ಸೆಣಸು ; ಕಾದಾಡು ; ಹೊಡೆದಾಡು : ಕಡುಗಡಿಯುವಪ್ಪೆರಡಾನೆಗಳ್ ತಮ್ಮೊಳ್ ಪೋರಲ್[ಪಾಠಾಂ. ಪೆಱ]ಸಾರ್ದು ಪೆಱಪಿಂಗಿ ಪೋದುದುಮುಂ . . . ಕಂಡಂ (ವಡ್ಡಾರಾ. ೯೫-೨೫) ; ಇದು ಭೀಮಂ ದೇವಧಾತ್ರೀಸುತನಿಭದೊಳಿಭಂ ಪೋರ್ವವೊಲ್ಪೋರ್ದ ತಾಣಂ (ಗದಾಯು. ೫-೨) ; ಎನ್ನೊಳ್ ಪೋರ್ದುದಿ ಧಿಂದ್ರಸಿಂಧುರದ ಕೋಡಿಂದಾದ ಪಲ್ಯಂಕದೊಳ್ . . . ಕೇಳೀತಲ್ಪದೊಳ್ ನಿದ್ರೆಗೆಯ್ (ಪಂಪಾಭಾ. ೯-೦೭೭). ೨. ಜಗಳವಾಡು ; ಕಚ್ಚಾಡು : ಪುರುಡಿಸಿ ಪೋರದೆ ಪೆಣ್ಗಾತುರಿಸದೆ ಪಿಶಿತಕ್ಕೆ ಪುದು ಕೊಲ್ಲದೆ . . . ಸುೞಿವುವು ಕರಿ ಕೇಸರಿಯೆರಳೆ ಪುಲ್ಲೆ ಮರೆ ಸಾರಂಗಂ (ಅನಂಪು. ೩-೩೭) ; ಬೇವ ಪೆಣಕ್ಕೆ ಕೋಪದಿಂ ಪೋರ್ವ ಮರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೫೩೪) . ೩. ಘರ್ಷಿಸು ; ಮಸೆ ; ತಿಕ್ಕಾಡು : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚೆ ಮಾರ್ಕಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಪಂಪಭಾ. ೧೧-೯೨). ೪. ಸ್ಪರ್ಧಿಸು ; ಪೈಪೋಟಿ ಮಾಡು ; ಹುರುಡಿಸು : ಈಶ್ವರನೆಟ್ಟಂದಿದಱಗ್ರದೊಳ್ ನೆಲಸಿ ಚೆಲ್ವಂ ಕಂಡು ತತ್ಕೌತುಕೋದ್ಧುರ ನಾಂದೋಳಿಸೆ ಮೌಳಿಯಿಂದುಗುವ ಗಂಗಾವಾರಿಯೊಳ್ ಪೋರ್ವ ನಿರ್ಝರಧಾರಾತತಿಪಾಂಡುವಿಂ ಸೊಗಯಿಸಿತ್ತಾ ಚಿತ್ರಕೂಟಾಚಲಂ (ಕುಸುಮಾ. ೧-೩೮). ೫. ತಿವಿ ; ಹಾಯು : ನೀರುಣ್ಬ ಕನಲ್ವ ಪೋರ್ವ ಮೆಲ್ಕೊತ್ತುವ . . . ಗೋರಾಜಿಯ ಲೀಲೆ ಕಣ್ಗೆ ಪಡೆದುದು ಚೆಲ್ವಂ (ಚಂದ್ರಪು. ೨-೨೭) ; ನೊಸಲ ಶೀಂಟೆ ಶೀರದೆ ಕೊಣಕಿಟ್ಟು ಮುರಿದು ಪರಿದು ಪಿರಿದಪ್ಪ ಪುತ್ತಿನೊಳೊತ್ತಿ ಪೋರ್ದು . . . ಪೊಱಮಟ್ಟ ಕಾಳರಕ್ಕಸರಂತಿರ್ಪ ಕಾಳ್ಕೋಣಂಗಳಿಂ (ಗಂಕಳ. ೧-೦೨೬ ವ) ; ತೋರ ಹೋರಿಗಳ ಡುರುಕಾರವಂ . . . ಮಾರ್ಮಲೆತು ಪೋರ್ವ ಘನವೃಷಭಶೃಂಗಾರವಂಗೂಡಿ ನಾನಾರವಂ ಕಿವಿಗಳಂ ಪೂರೈಸಿತೇವೇಳ್ವೆನು (ಜಬಪು. ೧೧-೦೭). ಪೋರು$_1$ : ೧. ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟಿದಂತಾಗೆ ಪೋರುತ್ತಿರೆ (ಪಂಚತಂ. ೭೨-೦೪) ; ಪಿರಿದು ರೋಷದಿ ಕಾದಿ ಸತ್ತು ಕೋಳಿಗಳಾಗಿ ಭರದಿಂ ಪೋರುತಲಿರ್ಪವೀಗ (ಶಾಂತೀಶ. ೫-೦೮) ; ತೊಟ್ಟು ನಿರಹಂಕೃತಿಯ ಕವಚವನು ನೀಂ ಪೋರು ಮುಟ್ಟದಿಳೆಯುಸಿ ನಿನ್ನ (ಮಂಕುಕ. ೮೦೩). ೨. ತತ್ತಬಳ[ಪಾಠಾಂ. ಳಿ]ತಾಳಗೊಟ್ಟೆಯೆನುತ್ತಾದಂ ರುಷಿಯರೊಡನೆ ಜಡಮತಿಗಳು ಪೋರುತ್ತಿಪ್ಪರ್ (ಸಮಶ. ೦೪-೦೭) ; ಅರುಣವರ್ಣದ ನೀಲವಸನದ ಕಾಂತೆ ಪೋರುತ್ತ ಮರಳಿ ಕಚ್ಚುತ ತನ್ನನೆಳವುದ ನರನು ಕಂಡಡೆ ಕನಸಿನಲಿ ಅವನಿರನು ಬೇಗದಲಳಿವನ್ನೆ (ತಿಮ್ಮಕ. ೮-೨೬); ಪುಟ್ಟಿದ ಮನೆಯೊಳು ಪೋರಿ ಪುರುಳುಗೊಂಬ ದಿಟ್ಟ ಗಂಡುಗಳಂತಿರಲಿ ಕೊಟ್ಟುದಱಿಂದ ತಣಿವ ಕುವರಿಗೆ ಮನವುಟ್ಟಿ ಕೊಡುವುದು ಕೋವಿದರು (ಹರಿಶ. ೫-೧೧). ಹೋರ್$_1$ : ೧. ಕೊಣಕಿಟ್ಟು ಮಹಾರವದಿಂದೆ ಹೋರಲೆಟ್ಬಿಟ್ಟುವ ಸೊಕ್ಕಿದಾನೆಮಕರಂಗಳನೀಕ್ಷಿಸಿದಂ ಸಮುದ್ರದೊಳ್ (ಸೂಕ್ತಿಸು. ೨-೨೫). ೬. ವಾದಮಾಡು ; ವಾದಿಸಂ ; ಚರ್ಚೆಮಾಡು : ಹಿಂದಿರ್ವರು ನಾವೆಕ್ಕೆಯೊಳಗೆ ಹೋರ್ವಂದದೆ ಸೋಮಪ್ರಭನೃಪಸಭಿನವ ಕಂದರ್ಪಂ ಜನಿಸಿದನಾದೊಡೆ (ಜಯಕಾ. ೦-೩೭). ಹೋರು$_1$: ೧. ಕೋಣನೆರಡುಂ ಹೋರೆ ಗಿಡುವಿಗೆ ಮಿತ್ತು (ಹಡಕಾ. ೨-೦೨) ; ಹೋರಿದರೆ ಹುರುಳಿಲ್ಲೆನುತ ಪರಿವಾರವೊಱಲಿತು (ಕುಮ್ಮಾಕ. ೩-೦೫) ; ಹೋರುವೆವು ಮಲ್ಲರೊಲು ಕಾಲದೊಡನೆ ಕಾಲನೆಮ್ಮಯದಾಗಿ ಆಗುವನಕ (ವಿಸೀಗೀ. x, ೧). ೨. ಮುಳಿದು ಸ...ಯರಿಬ್ಬರುಂ ಜೆಡೆಗಳಿಗೆಯೊಡಲಿಗೆ ಹೋ[ಪಾಠಾಂ. ಪೋ]ರಲ್ (ಬಸಪು ೨೮-೧೧) ; ತನತನಗೆ ನೃಪತನಕೆ ಹೋರಲಿಕಾಗ ಮಂತ್ರಿಗಳು ವಿಸಯದಲಿ ಗಜಬಜವ ಮಾಣಿಸಿ (ಸಂಭಶ. ೦೭-೭೩); ಹರಿ ವಿರಂಚಿಗಳು ತಂತಮ್ಮ ಪೆಂಪಿಗೆ ಹೋರಿ ಹವನಡಿ ಮುಡಿಗಾಣಲೆಂದು ಇರದಿಟ್ಟ ಬಟ್ಟೆಗಳೆನಲಿಹವಾ ಪುರ ಕುರುಖಾತಿಪ್ರಾಕಾರ (ಶ್ರೀಪಾರ. ೦-೭೦). ೪. ವೇದಕ್ಕೆ ಹೋರುವರೆ ವೇದಕ್ಕತೀತ ಶಾಸ್ತ್ರಕ್ಕೆ ಹೋರುವರೆ ಬಳಸಿನವನಲ್ಲ ಪುರಾಣದಲ್ಲಿ ಹೋರುವರೆ ರೂಪಿನವನಲ್ಲ (ಮೋಳಿಮಾ. ೬-೨೦) ; ಶಾರದೆ ನಿನ್ನೊಳು ವಿದ್ಯಾಕಲೆಗಳಿಂ ಹೋರಿ ಸೋತಂಜಿ ಬಸತಿಯ ಸಾರಿದಳೆನೆ ನಿನ್ನ ಜಾಣ್ಮೆಗೆ ಸೋಲದರಾರವನಿಯೊಳು (ಕುರಾಸಾಂ. ೨೪-೭೭). ೬. ಹೋರದಿರು ಹೊಗು ಬವರಕೆನಲಸುರಾರಿಯಂಘ್ರಿಯೊಳೆಱಗೆ . . . ತುಡುಕಿದನು ಧನುವ (ಕುಮ್ಮಾದ್ರೋ. ೩-೭೩); ಶಾರದೆ ಜಪರತ್ತ ಸಾರದೆ . . . ಇನ್ನು ನೀ ಜಾಱದೆ ಹೋರದೆ ನೇರದಿ ಮಾಡೀ ಕೃತಿಯ (ನಾಗಕು. ಬೀಠಿಕಾಸಂಧಿ. ೦೯). ೭. ಕಾಡು ; ಪೀಡಿಸು : ಹಾಲುತುಪ್ಪವನು ಕುಡಿದು ಮಱುದಿನ ಯಾಪನಾಳದ ಪುಡಿಯ ಕದಡನು ಕುಡಿಯಲೊಲ್ಲದೆ ಕೆಡಹಿ ಕಳೆದನು ಯಾಳಿಯಾಡುತವಳುತ ಹೋರುತಿರೆ (ಸಂಭಶ. ೦೭-೬೩); ಶ್ರಮ ಪರಿಹರಿಸೆಂದು ಹೋರರೋ ಹೋರರೋ . . . ನಮ್ಮ ಪುರಂದರವಿಠಲನ ಸೇರರೋ ಸೇರರೋ (ಪುರಂದ. ೧-೧೫೪-೩) ; ಕ್ರೂರರೈವರ ಬಾಧೆ ಹೋರುತಲಿದೆಕೊ ಆರಿಂದ ನಿರ್ವಾಹವಾಗದು (ಜಗದಾ. ೯೯). ೮. ಕಷ್ಟಪಡು ; ಬವಣೆಗೊಳಗಾಗು : ಧರೆ ಧನ ವನಿತೆಯರು ಎನ್ನವರು ತನ್ನವರೆಂದು ಹೋರಿ ಹೋರಿ ಸಾವುತ್ತಿದೆ ಜೀವ (ಬಸಹ. ೫೯-೦೭೪).

[ದೇ.॥ ತಮಿ. ಮಲ. ಪೊರು ; ತುಳು. ಪೋರಿ ; ಕೊಡ. ಪೋರ್ ; ತೆಲು. ಪೋರು ; ಗಡಬ. ಪೋರ್; ಕುಇ. ಪ್ರೂಹ್ಪ]

**ಪೋರ್$_2$**, ಪೋರು$_2$, ಹೋರು$_2$ (ನಾ). ೧. ಕಾಳಗ ; ಹೋರಾಟ ; ಸೆಣಸಾಟ : ವೈರಿಯೊಳರ್ದಿಕೊಳ್ವರಣ್ಯವಾರಣಂಗಳೊಡನೆ ಭರದಿ ಪೋರ್ಗಂ ಮೊಗಂಬುಗುವ ವೀರ ಪೇರಾನೆಗಳ ತೊಳವಿಗಗಳೊಳಂ (ಚಂದ್ರಪು. ೫-೪೦ ವ);

ಸ್ವಸ್ತಿಶ್ರೀನಿಗ್ಗುಣ್ದನ್ದಗಾವುಣ್ಡ ತಪಸಿಯು ಪೋರಿಲ್ ಇಭದೆ ಕಾದಿ ಸತ್ತೂಡೆ (ಪ್ನಶಾಂ. ೦೯೫೩, ೦೦೩-೦೨ ; ೧): ಪೋರನ್ ತಿರಿಪಿದ ಸ್ಯೂಸಿಗೆ ಬಿಟ್ಟರ್, ಕಂಚಿನ ಜೋಡನ್ ಕಾಣ್ಕೆಯೆ ಬಿಟ್ಟರ್ (ಅಂತಿಗೂ. ೭-೦೨೯). ೨. ಜಗಳ ; ಕಲಹ ; ಕಾದಾಟ : 'ಪೋರಂಗೈ', 'ಪೋರ್ನುಡಿ' ಪರಾ. **ಪೋರ್ರು₂** : ೧. "ಕಾಳಗದೊಳುಂ ಬಿಲದೊಳುಂ ಪೋರು" (ಶಬ್ದಮಂ. ೦೦೩). **ಹೋರ್ರು₄**: ೨. ತಾಯಿ ಮಕ್ಕಳ ಜಗಳ—ಕೊಟ್ಟು ಕೊಂಡವರ ವಾಗ್ವಾದ—ನಂಟರಿಷ್ಟರು—ಹೋರು ಮುಂತಾದ್ದೇನಾದರು ಉಂಟೆಂದು . . . ವಿಚಿಮಾರಿದ ದಂಡಗಳು ತರಿಸುವವನು (ಕಥಾಮಂ. IV, ೦೨೦).

[< ಪೋರ್₁ ./ತಮಿ. ಮಲ. ಕೋತ. ಪೋರ್ ; ತುಳು. ಪೊರ್ದು ; ತೆಲು. ಕುಇ. ಪೋರು]

**ಪೋರ್₃**, **ಪೋರು₃**, **ಹೋರ್₂**, **ಹೋರು₃** (ನಾ). ೧. ತೂತು ; ಬಿಲ; ರಂಧ್ರ: ಮುನಿಪಂ ಚರ್ಯೆಗೆ ಪೋಗುತಿರ್ಪ ಪದದೊಳ್ ಮೈಯಲ್ಲಿ ಪಕ್ಷಿರ್ದ ಪುತ್ತಿನ ಪೋರಿಂ ಪೊಱಮಟ್ಟು ಪೋದ ಮಧುಪಂ ತನ್ನಿಂದೆ ಕಾನಾಗಿ ಬರ್ಪಿನಂ (ಅರ್ಹನೇ. ೦-೯೦) ; ಹುಲಿ ಹೊಯ್ದು ಜರಿದ ಹೆಗಲ ಪದೆದು ಕೋಣಂ ಹೊಯ್ದ ಹೋರ[ಪಾಠಾಂ. ಹೊಡೆದ ಹೋರೆ] ಭೇರುಂಡ ನೆಱಿಗಿದ ಗಂಟುಗಳ...ಜಿಹ್ವದ ಬೇಡನಾಯಕರು ನೆರೆದರು (ಹಕಣಾ. ೫-೫); ನೇರ್ಗೋಲ ಪೋರ್ಗಳಾ ನೃಪವನಂಗದೊಳ್ಕಾಣಿಸಿದುವು ಜಾಳಂದ್ರದಂತೆ (ಕೃಖಣಾ. ೪-೩೩). **ಪೋರು₃** : ೧. "ಕಾಳಗದೊಳುಂ ಬಿಲದೊಳುಂ ಪೋರು" (ಶಬ್ದಮಂ. ೦೦೩). **ಹೋರ್₂** : ೧. "ಬಿಲಂ=ಹೋರ್" (ಶಾಕಶ್. ೪೭). **ಹೋರು₃** : ೧. ಕಲ್ಲ ಹೋರಿನೊಳಗೊಂದು ಕಿಚ್ಚು (ಅವಶಂ. ೨೭-೦೦೪) ; ಉಪ್ಪು ಮೆಣಸುಗಳ ಹಿರಿಯ ಮೂಗಿನ ಹುಟ್ಟಿತ್ತು ಕಂಡೆ ಹೋರು ತುಂಬಲು ಭರದಿ ಬಿಱಿಸಿಂದವನು ಸೀತರೆ ಗಿರಿಯು ತೋರದ ಭಟರು ತಱಿಗೆಲೆಯುತೆ ಹಾಱಿದರು (ಕೌಶಿಶಾ. ೨೪-೫) ; ಹೆಗ್ಗಣಗಳ ಹೋರುಗಳು ಅಲ್ಲಲ್ಲಿ ಮುಚ್ಚಿಕೊಂಡಿದ್ದು, ಅವು ಪಕ್ಕನೆ ಬಾಯ್ದೆರೆದಾಗ ಮನೆಯುವರೆಲ್ಲ ಅದರಲ್ಲಿ ಮಾಯವಾಗುವ ಹೆದರಿಕೆಯೂ ಹಲವೆಡೆ ಉಂಟಾಗಿದೆ (ಹುಕ್ಕಶ್ರೆ. ೦೫).

[ದೇ.॥ ತಮಿ. ಪೋರ್, ಪೋಱ್ಱೈ; ತೆಲು. ಬೊರಿಯ, ಬೊಱಿಯ, ಬೊರ್ರ; ಕೊಂಡ. ಬೊಱಿಜ್ಞ]

**ಪೋರ** (ನಾ). (ತುಂಟ) ಹುಡುಗ ; ಬಾಲಕ : ಪೋರಂ ನಾಂ ಗೆಯ್ದ ತಪ್ಪೇಂ (ವ್ಯಸೂಮ. ೨-೬೦); ಪೋರ ನಾನೆಂದು ಬಗೆಯದಿರಸುರ (ಮರಾತ್ತಿಂ. ೬-೨೯) ; ಈ ಪೋರನ ಹಣೆಯಲ್ಲಿ ಏನು ಬರೆದಿದೆಯೋ ಹಾಗೆ ಆಗಲೇ ಬೇಕಲ್ಲ (ಹೂಸಕ್ತಿ. ೨೮).

[ದೇ. ॥ ಮಲ. ಪೋಱ = ದಡ್ಡ ; ತುಳು. ಪೋರ, ಪೋರೆ ; ತೆಲು. ಪೋರಡು. /ಮರಾ. ಪೊ.ರ ]

**ಪೋರಗ** (ನಾ). ೧. ಒಂದು ಬಗೆಯ ಆಯುಧ : ಪೊಯೆ ಕಾಳವಟ್ಟದಿಂ ಪೋರಗದಿಂದೆ ಪೊಯ್ದನೆರಡುಂ ಸರಿಪೋದವು ಲಾಗುಬೇಗದೊಳ್ (ಅನಂಪು. ೦೦-೬೦) ; ಬಾಹುಪೋರಗದೆ ಪೊಯ್ದಂ ಭೂಪನಾ ವೀರನಂ (ಅನಂಪು. ೦೦-೬೨). ೨. ಖಡ್ಗಯುದ್ಧದ ಒಂದು ವರಸೆ,—ಪಟ್ಟು : ಚೀಕತಟ ವದ್ದಳಂ ಪೋರಗಂ [ಪಾಠಾಂ. ಪೊವಗಂ, ಪಾದಂಗಂ, ಪಾರಗಂ]ಗಳೆಂಬಡ್ಡ ಪೊಯಿಲಿಂ ನಿವಾರಿಸುತಿರ್ದರು (ಸೋಮಚ. ೫-೦೫). [?]

**ಪೋರಗಿ** (ನಾ). (ತುಂಟ) ಹುಡುಗಿ ; ಪೋರಿ : ತೋರಣಬಾಗಿಲ, ಸುಮ್ಮನೆ ತೆರೆಯೆ ಪೋರಗಿ (ಕೋಟಿಹೂ. ೧೦೨). [ ←ಮರಾ. ಪೋರಗೀ]

**ಪೋರಟೆ**, **ಹೋರಟೆ** (ನಾ). ೧. ಹೋರಾಟ ; ಕಾಳಗ ; ಯುದ್ಧ : ಇಳೆಯೊಡೆತನ ಪೋರಟೆಗಳಿಂ ತಣಿಯದೆ ಪಿತೃದೇವತೆಗಳ ಋಣವನುತ್ತರಿಸದೆ ರಾಯಕುವರರೆಲ್ಲ ರಣಭೂಮಿಯೊಳಡಗಿದರು (ಕರ್ಣಪ್ರ. ೯-೨೦). ೨. ಜಗಳ ; ಕಚ್ಚಾಟ : ಕೃಷ್ಣಗಜಂಗಳ ಪೋರಟೆಯಿಂದಭಿಲಿಶಿತವೃಷ್ಟಿ ಯಾಗದುದಂ . . . ಸೂಚಿಸುಗುಂ (ಪುಣ್ಯಾಸ್ರ. ೯-೦೬ ಪ) ; ಪುಸಿಗೆ ಪಿಸುಣ್ಗೆ ಪೋರಟೆಗೆ ಮಾಯೆಗೆ ಹಿಂಸೆಗೆ . . . ಪುಗದಂತಿರೆಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಂಬಡೆದಂ (ಕಕಂ. ೩-೦೫). ೩. ಪೈಪೋಟಿ ; ಹುರುಡು ; ಸ್ಪರ್ಧೆ : 'ಪೋರಟೆವೆಱು' ಪರಾ. **ಹೋರಟೆ** : ೧. "ಹೋರಟೆಯೆನೆ ಪೋರ್ಕೆಯು" (ಚಾರಿಂ. ೩೪) ; ಹೋರಟೆಗೆ ಬರಹೇಳು ಭರ್ಗನನಿವನ ಪಾಡೇನು (ಕುವ್ಯಾಅ. ೯-೪೨) ; ಹೋರಿದರು ಹರಿ ಜಂಭರಿಬ್ಬರ ಹೋರಟೆಗೆ ಹದಿನೆಂಟುಮಡಿಯೆನೆ (ತೊರಿಶಾ. ೬-೩೨-೪೬) ; ಎನಗೆ ತನಗೆಂದಮರದಾನವಜಗಕೆ ಹೋರಟೆಯಾಯ್ತು (ನಿಭಾಗ. ೯-೯-೩). ೨. ಪುರಾಣವೆಂಬುದು ಪುಂಡರ ಗೋಷ್ಠಿ ತರ್ಕವೆಂಬುದು ತಗರ ಹೋರಟೆ (ಅವಶಂ. ೦೦೩-೪೬೫) . ೪. ತಿಕ್ಕಾಟ ; ತಾಕಲಾಟ ; ಘರ್ಷಣೆ : ಕಂಬಿಯ ಕಡಿಯಣದ ಕೀಲಣದ ಹೋರಟೆಯು ಘಾರಾ ಘಾರಿಯೊಳ್ ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯಂಗುಡೆ (೧೦೪. ೬-೫೫ ಪ) ; ಅಳುವ ಶಿಶುವನು ತೆಗೆದು ತೆಕ್ಕೆಯ ಪುಳಕಜಲದಲಿ ನಾದಿ ಹರುಷದ ಬಳಿಯ ಲಜ್ಜೆಯ ಭಯದ ಹೋರಟೆಗಳುಕಿ . . . ಗಂಗಾಜಲದೊಳಗೆ ಹಾಯ್ಕಿದಳು ಜನದಪವಾದಭೀತಿಯಲಿ (ಕುವ್ಯಾಆ. ೩-೨೦) ; ಪೊಯ್ವಾಡಿ ತಲೆಯಂ ನಿವಾಳಿಸಿದರಾಳ್ದಂಗೆ ಕೈದುಗಳ ಹೋರಟೆಯು ಖಣಿಕಟಲ ರಭಸದಿಂದೆ (ಕೃಖಣಾ. ೨೨-೬). ೫. ವಿವಾದ ; ಚರ್ಚೆ : ಕಱುಹಿನ ಮಱವೆಯೊಳಗಿಪ್ಪ ವಸ್ತುವ ಕಾಬ ತೆಱನಿನ್ನಾವುದೊ ಇವೆಲ್ಲವು ಮಱವೆಯ ಮಾತಲ್ಲದೆ ಬಱಿಯ ಹೋರಟೆಗೆ ಇವರು ಬಲ್ಲವರಲ್ಲವೆಂದೆ (ವಚನಪಾ. ೬೪-೨೬೦) ; ಆಱು ಬೆಟ್ಟವನೊಬ್ಬ ಹಾಱಬಹುದೆಂದಿಹರೆ ಹಾಱ ಬಹುದೆಂದು ವಿನಬೇಕು ಮೂರ್ಖನೊಡ ಹೋರಟೆಯೆ ಸಲ್ಲ (ಸರ್ವಜ್ಞ. ೦೦೩೨). ೬. ಹೊಡೆತ ; ಪೆಟ್ಟು ; ಆಘಾತ : ಪೂಗಣೆಯ ಹೋರಟೆಗೆ ತರಹರಿಸದಬಲೆ ನೀನೀಗ ನೋಟದ ಹಂಬಲಂ ಬಿಟ್ಟು ಹೃನ್ಮಧ್ಯಕೀ ಗಾಡಿ ಕಾಱನಂ ತಂದು ನೆರೆದಪನೆಂದು ಕಣ್ಮುಚ್ಚಿ ಜಾನಿಸಿದೊಡೆ ಈ ಗಲಭೆಯೊಳ ಗಪ್ಪುದೇ (ಕಿಬಪು. ೦೯-೪೦) ; ಅಯ್ಯೊ ನಾನಾಱಿ ವಿಷಯದ ಹುಯ್ಯಲ ಹೋರಟೆಯ ಹೊಚ್ಚಹೊಸ ಕಮ್ಮರಿಯೊಳು ಕಯ್ಯೂಟ ಬಿದ್ದೆ (ಕಂಕಕಂ. ೦೦-೩೯). ೭. ಬಿರುಬು ; ರಭಸ ; ವೇಗ : ಅಳಿಕುಲಾಳಕಿ ಬಂದಳೊಬ್ಬಳೆ ಮಳೆಗೆ ಕೈಯೊಡ್ಡಿ ಬಲಿದು ಮೈ ನಡನಡುಗಿ ಹಲುಹಲು ಹಳಚಿ ನೆನೆದಳು ವಾರಿಯಲಿ ತನು ಹಳಹಳಿಸೆ ಬಳಲಿದಳು ಚರಣದ ಹೊನಲ ಹೋರಟೆಗೆ (ಕುವ್ಯಾಅ. ೯-೨೫) ; ಬಿರಿದುದುಬುಜಭವಾಂಡವಬ್ಬರ ಧುರದ ಹೋರಟೆಗೆ (ತೊರಿಶಾ. ೪-೨-೩೬). ೮. ಶ್ರಮ ; ಪ್ರಯಾಸ : ಮಿಕ್ಕ ಬೆವಸಾಯವನು ಮಾಡುವ ಹೆಕ್ಕಳದ ಹೋರಟೆಯ ಕಾಣುತಲಕ್ಕ ಱಿಂದಲಿ ನೋಡಿ (ಕೃಖಾಂ. ೦೦-೫). ೯. ಪೀಡೆ ; ಜಂಜಾಟ ; ಹಿಂಸೆ : ಹೊಕ್ಕು ಹೋರಟೆಯೆಲ್ಲವನು ಹೊಯ್ದಿಕ್ಕಿ ಸುಖಿಸುವೊಡಂತು ನಿಜಪದದಿಕ್ಕೆ ನಿನಗಹುದು (ಕೃಖಾಂ. ೦೨-೦೩); ಅಯ್ಯಯ್ಯೊ ಧ್ಯಾನದ ತುಯ್ಯಲುಂಡಾತ್ಮನೊಳುಯ್ಯಲನಾಡಿ ಸುಖಿಸದೆ ಗುಯ್ಯಲೆತ್ತುವರುತೆ ಮುಯ್ಯ ಹೋರಟೆಯೊಳು ಹುಯ್ಯಲನುಂಡೆ ನಾನು (ಶರಕ. ೭೬-೨೬).

[ಪೋರ್₁ + — ಅಟೆ ]

**ಪೋರಟೆವೆಱು** (ಕ್ರಿ). ಸ್ಪರ್ಧೆಹೂಡು ; ಪೈಪೋಟಿ ನಡೆಸು : ಪುರುಡು ಪೋರಟೆವೆತ್ತು ಜೊತ್ತು ಗತಕಂ ಗನ್ನಂ ಕಚಾಕರ್ಷಣಂ . . . ಪಿರಿದುಣ್ಮಲ್ ವಧು ನಲ್ಲನೊಳ್ ನೆರೆವುತಿರ್ದಳ್ಕಾಮಸೌರಂಭದಿಂ (ಕೃಕುಂ. ೨೪-೦೮೦).

[ ಪೋರಟೆ + ಪೆಱು₁ ]

**ಪೋರತನ** (ನಾ). ಹುಡುಗುತನ ; ಹುಡುಗುಬುದ್ಧಿ : ಇಂತಾ ಪೋರತನ ನಾನರಿಯೆ ಬೇಕೆಂದಾ ನರಪನಂತಡವಿ ಬೆನ್ನಿಗೆ ತರಿಸುವುದು ಗುಣವೆ (ದೇವಪು. ೯-೨೨೫).

[ ಪೋರ + — ತನ ]

**ಪೋರಾಟ**, **ಹೋರಾಟ** (ನಾ). ೧. ಕಾಳಗ ; ಯುದ್ಧ ; ಕದನ :

ಘನವಂತರಿಂತು ಭಾವಿಸಿದರು ತಮ್ಮಯ ಮನದೊಳಿಂತಿವರ ಪೋರಾಟ ಘನದುಃಖಹೇತು ತಮ್ಮೊಳು ಪರಸ್ಪರ ನೋಳ್ಪ ಜನಕೆ ಪಾಪಾಸ್ರುವವೆಂದು (ಶಾಂತೀಶ. ೩-೧೨). **ಹೋರಾಟ :** ೧. ಅದು ಎಲ್ಲ ರೀತಿಯಿಂದಲೂ ಅಂತಿಮಹೋರಾಟಕ್ಕೆ ಸಿದ್ಧವಾಯಿತು (ಅಶ್ವಾರ್ಥ. ೦೯೩). ೨. ಜಗಳ ; ಕಚ್ಚಾಟ : ಧಾರಿಣೀಶನ ಪಾಣಿಯೊಳು ನಿನ್ನ ಪಾಣಿಯ ಸೇರಿಸಿ ಪಿತನ ಕೈಯಿಂದ ಧಾರೆಯೆಱಸುವೆನು ನಿಮಗಿಬ್ಬರಿಗೆ ಬಂದ ಹೋರಾಟ ಹೊಳೆದು ಹೋಹಂತೆ (ಧರ್ಮ. ೯-೦೨೯). ೩. ವಾದ ; ಚರ್ಚೆ : ಮಾತಿನ ಮಾಲೆಯು ಹೆಚ್ಚು ಕುಂದಿನ ಹೋರಾಟವುಳ್ಳನ್ನಕ್ಕರ ಅದ್ವೈತಿಯಲ್ಲ (ಅದಿಪ. ೩೩-೯೭). ೪. ಒದ್ದಾಟ ; ಶ್ರಮ ; ಹೆಣಗಾಟ : ಪೇರೇರುಗಳ ಕಿಚ್ಚು ಸಿಡಿಲಿರದಿಂ ತೆಣರುತಿರೆ ಹೋರಾಟ ಬಾಳ್ವೆಯುಂ ಬೇಡೆನ್ನುತಿತ್ತು (ಕಾಲೂರ. ೦೦೩-೨೦೩) ; ಆ ಮುಗ್ಧಪ್ರಶ್ನೆಯಲ್ಲಿ ಅವನ ಬದುಕಿನ ಸಮಸ್ಯೆಯೇ ಹುದುಗಿತ್ತು . . . ಈ ವಯಸ್ಸಿಗೇ ಇಂಥ ಹೋರಾಟವೇ (ಹೊಸಕ್ಷಿ. ೩೪).

[ಪೋರ್₁+ಆಟ./ತಮಿ. ಮಲ. ಪೋರಾಟ್ಟಮ್ ; ತೆಲು. ಪೋರಾಟ]

**ಪೋರಾಣ್ಣ** (ನಾ). ದಂಡನಾಯಕ ; ದಳವಾಯಿ : ಪೋದವನಾ ಪೋರಾಣ್ಣನ್, ಪೋದವರಾ ಪೊನ್ನಾಳ್ಗಳ್ಗೆ ಬಾರದೆ ಬಗೆ ಬೆದರುತಿಹುದು (ಪಾರಸಿ. ೦.೦೪). [ಪೋರ್₁+ ಅಣ್ಣ (<ಆಳ್ಮ)]

**ಪೋರಾಳ್**, ಹೋರಾಳು (ನಾ). ಯುದ್ಧ ಮಾಡುವವನು ; ಶೂರ : ಏಷಿಯದ ಸಾಮ್ರಾಜ್ಯಕೇಂದ್ರುವೇ ! ಓ ಪರ್ಸ್ ! ಐಶ್ವರ್ಯಭೂಮಿಯೇ, ಪೋರಾಳ ತಾಯ್ ತವರೆ ! (ಪಾರಸಿ. ೦೦-೨೬೨). **ಹೋರಾಳು :** ನಿರ್ಧರವಾದ ದಿನ ಹೋರಾಳುಗಳು ಬರೇ ಚಡ್ಡಿ ಧರಿಸಿ ನಗುಮುಖದಿಂದ ಅಖಾಡಕ್ಕೆ ಇಳಿಯುತ್ತಾರೆ . . . ಹೋರಾಳುಗಳು ತಮ್ಮ ಇಷ್ಟ ದೇವರನ್ನು ಪ್ರಾರ್ಥಿಸಿದ ಮೇಲೆ, ಕತ್ತಿಗಳನ್ನು ತಾಗಿಸುತ್ತಾರೆ (ಶ್ರವಾಜ. II, ೨೮೩). [ಪೋರ್₁+ಆಳ್₃]

**ಪೋರಿ₁** (ನಾ). (ತುಂಟ) ಹುಡುಗಿ ; ಬಾಲಕಿ : ಊರಿಗುಕ್ಕೆಯ ಚಿಂತೆ ಪೋರಿಗೆ ಮದುವೆಯ ತೋರ ಚಿಂತೆ (ಜ್ಞಾಪಠ. ೦೪-೯೯) ; ನಿನ್ನೆ ಹುಟ್ಟಿ ಇಂದು ಕಣ್ಣು ತೆಗೆದ ಪೋರಿ ನೀನು (ಜೀವಕ್ರ. ೦೦೦) ; ಹಾಡು ಮುಗಿಸಿದ ತಾಯಿಯ ಮುಖವನ್ನೇ ನೋಡಿ ಆ ಪೋರಿ ನಕ್ಕಳು (ರಂಗಪ. ೦೯೭).

[ಪೋರ + — ಇ₂./ ತುಳು. ಪೋರಿ ; ತೆಲು. ಪೋರಿ, ಪೋಱಿ]

**ಪೋರಿ₂**, ಹೋರಿ (ನಾ). ೧. ಎಳೆಯ ಪ್ರಾಯದ ಬೀಜದ ದನ ; ಗಂಡು ಕರು : "ಕಱುವೆಳಗಱು ವತ್ಸ ಶಕೃತ್ಕರಿನಾಮಂ ತಿರ್ದಲಾ[ಪ] ಪೋರಿಯೆ ದಮ್ಯಂ" (ಪಮ್ಮಕೋ. ೯೯-೩) ; ಗೋಮಂಡಳದೊಳೊರ್ಮೆ ಪೋರಿಗಳಾಗಿ ರಾಜಮಂದಿರದ ಸೀಯಬಾರದೊಳ್ ಪೊಣರ್ದು (ಶಾಂತಿಪು. ೯-೯೭ ವ) ; ಆದೊಡಮಂ ಕೊಟ್ಟು ಪಯನಾವಂ ಕೊಳ್ವೆಂ ಅವರ್ಕೆ ಪುಟ್ಟಿದ ಪೋರಿಗಳಂ ತಿರ್ದಿಯಾರಂಬಂಗೆಯ್ದು (ಕಂಕಕಂ. ೦೯೭-೮) ; ಬಾಲವೃಷಭಯುಗದೊಳ್ ಪೂಡಿರ್ದಾ ರಥಮನೆಳೆಯ ಪೋ[ಪಾಕಾಂ. ಪಾ]ರಿಯನೇಱಿದ ನೃಪಪುತ್ರನಂ ನೃಪಾಳಂ ಕಂಡು (ಪುಣ್ಯಾಸ್ರ. ೯-೦೩).೨.ಆಡು, ಎಮ್ಮೆ ಮೊದಲಾದವುಗಳ ಗಂಡುಕರು : ತನ್ನಿಂದಂ ತಾನೋರಂತೆ ಕುದಿದು ಪಾಱುಗುವ ಸಾರಂಗದ ಪೋರಿಯಂದದಮಂ ನೆಱೆ ಪೋಲ್ತಂ (ಧರ್ಮಾಮೃ. ೧-೦೩೯); ಜನಕಂ ಯಶೋಧರರ . . . ಮಿಥಾನಾಡಿನ ಪೋರಿ [ಪಾಕಾಂ. ಪೋಂತು] ಪೋಂತು ಕುಕ್ಕುಟಮೆನೆ ಪುಟ್ಟಿಯುಮಿಗಳಭಯರುಚಿಯಾಗಿರ್ದಂ (ಯಶೋಚ. ೪-೩೭). **ಹೋರಿ :** ೧. "ತರ್ಣಕಃ, ವತ್ಸಃ — ಈ ೨ ಹೋ(ಱ)ರಿ" (ಹಲಾಯು. ೪೪-೦೦೯) ; ಸ್ಫಟಿಕದ ಮಧ್ಯದಲ್ಲಿ ಬಹುವರ್ಣದ ಹೋರಿಯ ತೋಱಿ ಹಿಡಿವವನಂತೆ (ಪೋಳವಾ. ೦೬೦-೧೦೦) ; ಆ ಪಶುಗಳು ಕಾಮಧೇನುಗಳಾ ಪುರದ ಹೋರಿಗಳು ನಂದಿಯ ರೂಪಿನಂತಹವು (ಐಸಭು. ೪-೩೩); ತರಿಸಿ ಹೋರಿಯ ಗವಿಯ ಗೂಳಿಯ ಬರಿಸಿದನು ಕೆಲಕೆಲವ ಕೃಷಿಕರಿಗಿರಿಸಿದನು ಗೋಲಕ್ಷವಿತ್ತನು ವಿಪ್ರಸಂಕುಲಕೆ (ಕುಮ್ಮಾಭಿ. ೦೭-೩೭). ೩. ಎತ್ತು ; ಬಸವ : ತಳಾರರ್ತಕ್ಷಕನಂ ಕನಲಪೋರಿಗಳ್ ಪೂಡಿ ಪೆಟ್ಟಮೆಟ್ಟಿದಪರ್ (ಸುಕುಮಾ. ೭-೩ ವ) ; ಹಿಡಿ ಹಿಡಿ ಬಂಡಿಎತ್ತುಗಳ ಬಗಿದ ಬಲುಹೋರಿಯ ಕೊರಳ ಜೊತ್ತಗೆಗಳಂ ಪಱಿ ಪಱಿ (ಐಸಭು. ೩೭-೨೪) ; ಭಂಡಿಯ ಹರಿದು ಸೆಳೆದೇರಿದನು ತಾ ಬಲುಹುರಿಯ ಹಗ್ಗವ ಹಿಡಿದು ಜಡಿದನು ಹೋರಿ ಕೋಣಗಳ (ಸಂಭರ. ೨೩-೬೦) ; ಹೋರಿ ನಡೆಯದಿದ್ದರೆ ದಾರಿ ಉದ್ದ ಅಂದ ಹಾಗೆ (ಗಾದೆ).

**ಹೋರಿಗರು** = ಗಂಡುಕರು : "ದಮ್ಯಃ, ವತ್ಸತರಃ—೨ ಹೊರುವದಕ್ಕೂ ಯೆಳೆಯುವದಕ್ಕೂ ಉಳುವದಕ್ಕೂ ತಿದ್ದಲ್ಪಟ್ಟ ಹೋರಿಗರು" (ಸಿದ್ಧಾಂತಿ. ೨೪೨).

[ದೇ.॥ ತುಳು. ಬೋರಿ, ಹೋರಿ ; ಕೊಡ. ಪೋರಿ ; ಕೋತ. ಪೋಯ್ರ್]

**ಪೋರಿಸು**, ಹೋರಿಸು (ಕ್ರಿ). ೧. ಹೋರಾಡಿಸು ; ಯುದ್ಧ ಮಾಡಿಸು : ನೆಗಟ್ಟಿ ಮಲ್ಲರುಮಂ ಪಿಡಿದೊತ್ತಿ ಗೆಲ್ದ ಜೆಟ್ಟಿಗರೆನೆ ಸಂದ ಮಲ್ಲರನೆ ಪೋರಿಸಲುಂ ಪಿರಿದೊಂದು ದೋಹಳಂ ನೆಗೞ್ದುದು ಗರ್ಭದರ್ಭಕನ ದೋರ್ಬಲಗರ್ವಮನಂದು ಪೇೞ್ವವೋಲ್ (ಅಜಿಪು. ೯-೪೯) ; ಭೀಮನೆಯ್ದಿ ಭರದಿಂದಂ ಯುದ್ಧಮಂ ಬೇಡಿ ಮಾಗಧನೊಳ್ ಪೋರಿಸುವಲ್ಲಿ ಶಕ್ತಿಕಳೆಯಂ ಭೀಮಂಗೆ ಕೊಟ್ಟದ್ಭುತಪ್ರಧನಾಟೋಪದೆ ಭೀಮನಿಂ ಕೊಲಿಸಿದಂ ಕೃಷ್ಣಂ ಜರಾಸಂಧನಂ (ಜಗಪು. ೦೭-೪೦). ೨. ಕಾದಾಡಿಸು ; ಜಗಳವಾಡಿಸು : ತಗರಂ ಪೋರಿಪ ಬಗೆಯಿಂ ತಗರಂ ವಿನೋದದಿಂದಂ ಪೊರೆವಂ (ಶಂಕಕಂ. ೦೭೯-೧) ; ಪಟುವೈರಿನಿರ್ಘೂರ್ತರೆನಿಪ ಜೋದರ್ಕಳುಕುಶವಿಕ್ಕಿ ಪೋರಿಸಿದರಾನೆಗಳನು (ಕಬಿಪು. ೨೪-೯). ೩. ಹಿಂಸೆಗೆ ಒಳಪಡಿಸು ; ಒದ್ದಾಡಿಸು ; ಹೆಣಗಿಸು : ಚಾರುಸುರಾಂಗನಾರತಿಸುಖಾಮೃತಸೇಚನೆಗೊಂದು ಕಾಯುಮಂ ಪೋರಿಸಿ ನೋಟದೊಳ್ಕೊಡರ್ದು ಶಬ್ದಮನಾಲಿಸಿ ಬೇವ ಬೇವಸಂ ಪೋ ರುಚಿಯಲ್ಲಂ (ಸುಕುಮಾ. ೯-೩೭). **ಹೋರಿಸು :** ೧. ಮಲ್ಲರ ಹೋರಿಸುತ್ತಿಹ ಪಗಡೆ ನೆತ್ತಗಳಾಡಿ ನಲಿವ . . . ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂಸವಿ. ೨-೭೭) ; ಶ್ರೀರಾಮ ರಾವಣನ ಹೋರಿಸುತ ಲಂಕೆಯನು ಸೂರೆ ಮಾಡಿಸಿದಂತ ಶೂರ್ಪನಖಿಯಿಂದು . . . ನರಿಯು ನೀನೆಂದು (ಕಂಸ. ೯೭-೪) ; ಕಂಡವರೆದೆ ನಡುಗುವಂತೆ ಅವರನ್ನು ಹೋರಿಸುವನು (ಕಸಾಚ. ೯೭). ೨. ನಿಮ್ಮ ಮಹಿಪನೊಬ್ಬನೆ ಹಿತವಲ್ಲ ಮಹಿಸಿಬಿಟ್ಟೆಮ್ಮ ಹೋರಿಸುತ ತಾ ನೋಡುತುತ್ಸಹದೊಳಿದ್ದಪನೆಂದಲೊಡನೆ (ಧರಚ. ೦೪-೯೭). ೩. ಅವರವರ ಕೃತಕರ್ಮಸಂಸ್ಕಾರ ಹೋರಿಸುವುದಳಿಸುವುದು ಸೌಖ್ಯಕೆ ಸೇರಿಸುವುದು (ಕುವ್ಯಾಭಿ. ೨೦-೦೭). [ಪೋರ್₁ + — ಇಸು₃]

**ಪೋರು₁** 'ಪೋರ್₁' ನೋ.

**ಪೋರು₂** 'ಪೋರ್₂' ನೋ.

**ಪೋರು₃** 'ಪೋರ್₃' ನೋ.

**ಪೋರುಗೈ** (ಕ್ರಿ). ಜಗಳವಾಡು ; ಕಲಹಮಾಡು : ನೆಲೆಯೊಳ್ ಸೇರಲು ಪೋರುಗೈದು ಸತಿ ತಾಂ ಪೋಗಟ್ಟುವಳ್ ಸಾಲಿಗರ್ ಕಲುಗುಂಡಂ ತಲೆಗೇಱಿಪರ್ ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಂ (ಸೋಮೇಶ. ೩೦).

[ಪೋರು₂ (< ಪೋರ್₂) + ಗೈ (< ಕೆಯ್₁)]

**ಪೋರುಗೊಳ್** (ಕ್ರಿ). = ಪೋರುಗೈ : ಪಳಿವವರೊಳು ಪೋರುಗೊಳದೆ ಮುಳುಗಿಯೆಚ್ಚಪರೊಳು ಮೂದಲಿಯೆಸಗದೆ ಒಳುವೆಂಡಿರೊಳ್ಪುವಡೆವುದು (ಹರಿಬ. ೪-೪೦). [ಪೋರು₂ (<ಪೋರ್₂)+ಕೊಳ್₁]

**ಪೋರೆ**, ಬೋರು₁, ಬೋರೆ₁ (ನಾ). ೧. ಸಣ್ಣಗುಡ್ಡ ; ಮೊರಡಿ ; ದಿಬ್ಬ : ಉರಿಗಳಿಂದೊರೆಯಿಂ ಪೋರೆಯಿಂ[ಪಾಕಾಂ. ಉರಿಗಳಿಂದೊರೆಗಳಿಂ ಮೊರೆಗಳಿಂ, ಜರಿಗಳಿಂದುರಿಗಳಿಂ ಪೋರೆಯಿಂ]ದಿಡಿದ ಕಮ್ಮರಿಗಳಿಂ ಕಱಿವ ಕೆಂಡದ ಮಳೆಗಳಿಂ ಗಜರ್ವ ಮರುಳ್ಗಳಿಂ ಶಾಕಿನಿಯರಿಂ ಪಾಕಿನಿಯರಿಂದವಾ ಪಥಂ ಬೆದಱಿಸುವುದು (ಕಬಿಪು. ೩೭-೨೩); ಲಲನೆಸಹಿತ

ತೆರಳಿದರು ಮುಂದಕಂ ಗಂಧಮಾದನನೆಂಬ ಗಿರಿಯನ್ನಡರ್ದೋರೆಪೋರೆಗಳ ಮುರಿಗಳಂ ಜರಿಗಳಂ ಕಳಿದು (ತುರಂಗ. ೯೯-೨೩). **ಬೋರು₁ :** ೨. ಏಟು ತಗುಲಿದುದರಿಂದ ಉಂಟಾದ ಬುಗುಟೆ,—ಊತ : ಕಿಟಕಿ ಬಾಗಿಲು ತಾಗಿ ಮಗುವಿನ ಹಣೆ ಮೇಲೆ ಬೋರು ಬಂದಿದೆ (ರೂಢಿ). **ಬೋರೆ₁ :** ೧. ಕುರುಬನ ಕಟ್ಟೆಗೆ ಮೂಡದಿಕ್ಕಿನ ಬೋರೆ ಮೇಲೆ ಹುಟುಗಲ್ಲು ೧ (ಎಕ. III, ಶ್ರೀರಂಗ. ೦೯-೦೩೯ ; 1686) ; **ಬೆಟ್ಟಕ್ಕಿಂತಲೂ** ಚಿಕ್ಕದಾದರೆ ಗುಡ್ಡ, ದಿಣ್ಣೆ, ತಿಟ್ಟು, ಮರಡಿ, ಬೋರೆ, ತೆಂಬ, ತೆವರು ಎಂಬ ಹೆಸರುಗಳು ಬರುತ್ತವೆ (ಭೂಗೋಳ. ೧೧); ರಜವಿದ್ದ ದಿನ ಮಧ್ಯಾಹ್ನ ದನಕಾಯಲು ಬೋರೆಗೆ ಹೋಗುತ್ತಿದ್ದೆ (ಧರ್ಮಶ್ರೀ. ೦೯). ೨. ಕಬ್ಬಂ ಪೊತ್ತಡೆ ಶಿರೋಭಾಗಮೂಡಿದ ಬೋರೆಗಳವೊಲು ಹೊಡದು ರಾವುಗಳು ತಾಗಿದೊರಸಿದ ಮುಸಗಿದೊತ್ತಿನ ಮೇಗಣೆಡೆಗಳು (ಬಸವು. ೩೬-೩೬); ಮಕ್ಕಳ ಮಂಡೆ ಬೋರೆ ಹೋಹಂದದಿ ಹೆಟ್ಟೆ (ನೇಮಿಸಂ. ೦೩-೦೦೬); ಹೊತ್ತ ಹೊಟೆಗಳಿಂದ ನೆತ್ತಿ ಬೋರೆಯು (ಅಮು:ಸಾಂ. ೬-೩).
[ದೇ॥. ತಮಿ. ಪೊಟ್ಟೈ, ಪೊಟ್ಟು ; ಮಲ. ಪೊಟ್ಟ ; ತುಳು. ಬೋರೆ=ಬೆಟ್ಟದ ತುದಿ]

**ಪೋರ್ಕಳ** (ನಾ). ಯುದ್ಧರಂಗ ; ರಣರಂಗ : ಕಾಳಗದ ಪುಲಿ ತಾನ್, ಕಾಳಗದ ಪುಲಿಗಳನ್ ಪೋರ್ಕಳದೆ ಕಳೆಯುನ್, ಸಾವಿಗೀಯುನ್ (ಶಾರಸಿ. ೨೩-೨). [ಪೋರ್₂ + ಕಳ₃]

**ಪೋರ್ಕಳಿ** (ನಾ). ಯುದ್ಧ ; ಕಾಳಗ ; ಹೋರಾಟ : ಈ ಬಗೆಯಲ್ಲಿ ಪೋರ್ಕಳಿ ಮುಂದುವರಿದರೆ ನಾವು ಕಾಳೆಗದಲ್ಲಿ ಗೆಲುವು ಗಳಿಸುವುದು ಪ್ರಯಾಸ (ಹುಂಡಾ. ೩೬೭). [< ಪೋರ್ಕಳ]

**ಪೋರ್ಕುಳಿ, ಪೊರ್ಕ್ಕುಳಿ, ಪೊರ್ಕುಳಿ, ಹೊರ್ಕ್ಕುಳಿ, ಹೋರ್ಕುಳಿ, ಹೋಕುಳಿ** (ನಾ). ೧. ಯುದ್ಧ ಮಾಡುವವನು; ಹೋರಾಡು ವವನಂ : ಕುಳಿ ಪ್ರತ್ಯಯಕ್ಕೆ—ಪೋರ್ಕುಳಿ[ಪಾಠಾಂ. ಪೊರ್ಕುಳಿ, ಪೊಟಿಕುಳಿ, ಹೋರುಕುಳಿ] ಓಡುಕುಳಿ (ಶಮುದ. ೨೦೩ ವೃತ್ತಿ); ಮಾಟ್ಪುದು ಶೀಲವಿಘಾತಂ ಮಾಟ್ಕುಳಿ, ಏವಂ ಅಟ್ಕುಳಿ, ಪೋರ್ಕುಳಿ (ಶಬ್ದಾನು. ೩೯೩ ವೃತ್ತಿ). ೨. ಕಾಳಗ ; ಯುದ್ಧ; ಹೋರಾಟ : ಪೂವಿನೊಳಂ ಪೋರ್ಕುಳಿ ನಮಗೇವುದೊ (ಶಂದಾಪು. ೧೨-೬೦). ೩. ಜಗಳ; ಕಚ್ಚಾಟ : ಆಗಳಾ ಗಜದ ಪೋರ್ಕುಳಿ[ಪಾಠಾಂ. ಪೊರ್ಕುಟು]ಯಿನವಯುವದೊಳಲ್ಲಲ್ಲಿಗಳವಟ್ಟ ರದನವಿಘಟ್ಟನರೇಖಾನಿಕಾಯಮುಮಂ . . . ಬೇಡಿಕೊಂದು ಚೆಲ್ವನವಟ್ಟೆಸಿ ವೀರರಸಕ್ಕಾಗರಮಾಗೆ (ಜಗಂ. ೬-೩೩ ವ); ಕಡೆಯೊಳ್ ಕೋಣನ ಪೋರ್ಕುಳಿ ಗಿಡುವಿಗೆ ಮಿತ್ತೆಂಬ ತೆಟಿದೆ (ಹುಕೋಶ. ೩-೬೮). 'ಪೋರ್ಕುಳಿವಕ್ಕಿ' ಪರಾ. ೪. ಪ್ರತಿಭಟನೆ; ವಿರೋಧ ; ಅಡ್ಡಿ : "ತಳ್ಪೊಯ್, ತಡಂಬರೆ, ಪೋರ್ಕುಳಿ . . . ಈ ೨೬ ಪ್ರತಿಹತಕ್ಕೆ ಪೆಸರ್" (ಕಕಸಾ. ೩೯-೨೯೬). ೫. [ಕಾಮಶಾ] (ರತಿಕ್ರೀಡೆಯಲ್ಲಿಯ) ಸೆಣಸಾಟ; ಪ್ರಣಯ ಕಲಹ : ವಸುಧಾವಲ್ಲಭ ಮೇಘಕಾಲವಿಟನೊಳ್ ಸಂಭೋಗಮಂ ಮಾಡೆ ಬಣ್ಣಸರಂ ಪೋರ್ಕುಳಿ[ಪಾಠಾಂ. ಪೊಕ್ಕು]ಳಿಯಿಂದಲೇ ಪಱಿದು ಸೂಸಿತ್ತಲ್ಲದಂದೆ ತೃಣಂ ಪೊಸಮುತ್ತಂ ಕಿಸುಗಲ್ಗಳುಂ ಕೆದಱಿ ಕಣ್ಗಂಬಾದುಮೆಂಬಂತ ದೇನೆಸೆದೊಪ್ಪಿರ್ದುವೊ ಸೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ (ಶಂರಾಮಾ. ೭ ೧೯೬); ಪೋರ್ಕುಳಿ[ಪಾಠಾಂ. ಪೊರ್ಕುಟು]ಯಿಂದಮೆ ಹಂತಿದಪ್ಪಿ ಕಾಟಂಬಟಿಯಂ ತೆರಳ್ದ ಕುರುಳ್ ... ಕೂಟದೊಂದು ಸವಿಯಂ ಪಿಸುಣಾ ಡುವುವೀ ಲತಾಂಗಿಯಾ (ಶಂದ್ರಕೃ. ೬-೭೨). (ಗು). ೬. ಜಗಳವಾಡುವ ಸ್ವಭಾವದ ; ಕಲಹಶೀಲ : ಸುಣ್ಣದಲೆಯನೊತ್ತೆಯಿಟ್ಟು ಮದದಾನೆ ಯುಮಮ ಮಾಣಿಕಮುಮನೊತ್ತೆವಿಡಿಸಲಟ್ಟುವ ಚಿಕ್ಕ ಪೋರ್ಕುಳಿ ಬೋಜಂಗರುಮಂ . . . ನೋಡಿ (ಶಂಕಭಾ. ೯-೬೭ ವ). **ಪೊಕ್ಕುಳಿ :** ೨. ಪೂವಿನೊಳಂ ಪೊಕ್ಕುಳಿ ಕೇಳಾವಂಗಂ ಪೊಲ್ಲದು (ಉಶಾರ. ೦೨-೭೭). ೩. 'ಪೊಕ್ಕುಳಿವಕ್ಕಿ' ಪರಾ. ೫. ಆಲಿಂಗನಂ ಪಿರಿದುಂ ಪೊಕ್ಕುಳಿ ಚುಂಬನಂ . . . ಸತ್ಕಾಮಿನೀಸುರತಕ್ರೀಡೆಯೊಳೊಪ್ಪೆ ಸೌಖ್ಯದೊದವಿಂದಿರ್ದಂ ಮಹೀವಲ್ಲಭಂ (ಕೃಕೃಚ. ೦೭-೬೬). ೭. ಜಗಳವಾಡುವ ಸ್ವಭಾವದ ಹಕ್ಕಿ; ಕೋಗಿಲೆ : ವರಫಲವನುಂಬ ಪೊಕ್ಕುಳಿಗಳಿಂ ಗಿಳಿಗಳಿಂ . . . ವನವನಂಗಳ್ ಮೆಟಿದುವು (ಜಂಪು. ೯೩-೨೩). **ಪೊರ್ಕುಳಿ :** ೨. ಪೊಣರ್ದು ಕುರುಶ್ರೇಷ್ಠನೊಳ್ ಕಾದುವಾ ಯುದ್ಧದಗುರ್ವುಂ ಪೂವಿನೊಳ್ ಪೊರ್ಕು [ಪಾಠಾಂ. ಪೊಕ್ಕು]ಳಿ ನೆಗಟ್ದವೊಲಾಯ್ತು ಮುರಧ್ವಂಸಿಗಾಗಳ್ (ಜಗಂ. ೭-೯೨). ೩. 'ಪೊರ್ಕುಳಿವಕ್ಕಿ' ಪರಾ. ೪. "ಪೊರ್ಕುಳಿಯುಂ ತಳ್ಪೊಯ್ಯುಂ" (ಕವಿಕಂ. ೦೩೬). ೫. ಆ ತಂತುವಾಯಂ ಮುನ್ನಮೆ ತನ್ನ ಪೆಂಡತಿ ಜೋಡೆ ಯೆಂದು ಸಂದೇಹಂಬಡುವಾತನವಳ ವಿಪರೀತವೇಷಂ ತನಗೆ ರೋಷ ಮನೀಯೆ ಸಾಯೆ ಸದೆಬಡಿದು . . . ಕಳ್ಳ ಸೊರ್ಕಿನೊಳಮವಳ ಪೊರ್ಕುಳಿ ಯೊಳಂ ಬಟಲ್ದು ನಿದ್ರಿತನಪ್ಪುದುಂ (ಶಂಕಕಂ. ೭೩-೦). ೮. ಪೆಟ್ಟು; ಹೊಡೆತ : ನೀರಾಟವಾಡುವ ಗಾಡಿಕಾರ್ತಿಯರ ಘನಜಘನಂಗಳ ಪೆರ್ಮೊಲೆಯ ಪೊರ್ಕುಳಿಯಿಂ ಪಱಿವಱಿಯಾದ ಪೆರ್ದೆಱೆಗಳುಮಂ ತಳೆದ ಪೂಗೊಳಂಗಳೊಳಂ (ಕಾದಂಬ. ೩೨೭). **ಹೊಕ್ಕುಳಿ :** ೨. ಎಲೆ ಪಾತಕಿ ಕಡುಹಂದೆಯ ಕೊಂದು ಹೊಕ್ಕುಳಿಯ ಗೊಂದಣದೊಳು ಹೊಕ್ಕು ಬಹುದುಃಖವಡೆವುದಂದಪಹುದೇ ಕಲಿಗಳಿಗೆ (ಶ್ರೀಪಾಂ. ೬-೬೭). 'ಹೊಕ್ಕುಳಿಗೊಳ್' ಪರಾ. **ಹೋರ್ಕುಳಿ :** ೨. 'ಹೋರ್ಕುಳಿಸು' ಪರಾ. **ಹೋಕುಳಿ :** ೨. 'ಹೋಕುಳಿಸು' ಪರಾ.

**ಪೋರ್ಕುಳಿಯಾಗು, ಪೊರ್ಕುಳಿಯಾಗು**=೧. ಯುದ್ಧವಾಗು; ಹೋರಾಟ ವಾಗು : ಪೋರ್ಕುಳಿಯಾದಡೆ[ಪಾಠಾಂ. ಯಾಡದೆ, ಯೋದಡೆ]ಹರಿಯಂ ಮಾರ್ಕೊಳ್ಳದೆ ತೆಗೆದ ಕಯ್ಯ ಬಟಿಯನೆ ಬಂದಂ ಸೊರ್ಕಿದಿಭಪತಿಯ ಕಯ್ಯೊಳ್ ಸಿಕ್ಕಿ ತೊಗಲ್ಪಾಪೆಯಂದದಿಂ ಚಾಣೂರಂ (ಅರ್ಥನೇ. ೮-೦೦೩). ೨. ಪ್ರಣಯಕಲಹವುಂಟಾಗು : ಒಡನಲಿವ ನಲ್ಲಳಚ್ಯುತನಡಿವಜ್ಜೆಗಳಲ್ಲಿ ಕೇಳಿಗೆಳಸಿದಳವನೀಯುಡಿಯೊಳ್ ಪೋರ್ಕುಳಿ[ಪಾಠಾಂ. ದನವನೀಯೆಡೆಯೊಳ್ ಪೊರ್ಕುಳಿ]ಯಾಯ್ತೆಂದಡಿಗಡಿಗಾಯೆಡೆಯನೊರ್ವಳೀಕ್ಷಿಸುತಿರ್ದಳ್ (ಜಗಂ. ೩-೨೬); ಒದವಿದಲಂಪು ಪೋಪಿನವನಂಕದ ಬೀಕದ ಪೆರ್ಚು ಪೊಚ್ಚಱಂಗದ ಸಱಿಮಿಂಡಿಯೊಳ್ ಪೊರಳಿ ಪೊರ್ಕುಳಿಯಾದೊಡೆ (ಸೂಕ್ತಿಸು. ೬-೯೩೯).

**ಪೋರ್ಕುಳಿಯಾಡು** = ಯುದ್ಧಮಾಡು; ಹೋರಾಡು : ಅಂತು ನೆಟ ಲೊಳ್ ಪೋರ್ಕುಳಿಯಾಡುವಂತೊರ್ವರೊರ್ವರಂ ಗೆಲಲ್ನೆಱಿಯದಿರೆ ದುರ್ಯೋಧನಂ ಕರಂ ಮುಳಿದು (ಗದಾಯು. ೮-೨೩ ವ); ಕಳದೊಳವರಿರ್ವ ರುಂ ಪೋರ್ಕುಳಿಯಾಡಲ್ ಧರ್ಮಯುದ್ಧದಿಂದವನಟಿಯಲ್ (ನೇಮಿಪು. ೦೦-೦೨೬). [ಪೋರ್₁ + —ಕುಳಿ₃]

**ಪೋರ್ಕುಳಿಗೊಳ್, ಪೊರ್ಕುಳಿಗೊಳ್, ಹೊಕ್ಕುಳಿಗೊಳ್** (ಕ್ರಿ). ಹೋರಾಡು ; ಯುದ್ಧಮಾಡು : ಬಂಧುರಭಟರ್ಕಳ್ ಭೂಪನೊಡನೆ ವೈರಂದೆಗೆದು ಭರದೆ ಪೋರ್ಕುಳಿಗೊಳಲ್ ತೊಡಗಿದರ್ (ಅಜಿತ. ೯-೩-೦೭). **ಪೊರ್ಕುಳಿಗೊಳ್ :** ಎನ್ನೊಳು ಪೊರ್ಕುಳಿಗೊಳ್ವುದೆನುತ ವಿಕ್ರ ಮೋನ್ನತನಿದಿರ್ವಂದು ನಿಲಲು (ನೇಮಿಸಂ. ೩೦-೯೭). **ಹೊಕ್ಕುಳಿಗೊಳ್ :** ತನ್ನೊಳು ಹೊಕ್ಕುಳಿಗೊಂಡ ಉನ್ನತಮಪ್ಪ ಗಜರತ್ನಮೆಯ್ದಿತು ತನ್ನ ತಾನಾ ನೃಪನೆಡೆಗೆ (ಶ್ರೀಪಾಂ. ೧೩-೦೦) ; ಅಂತಕನೊಳಗೆಕ್ಕೆಯೊಳಂ ಹೊಕ್ಕುಳಿಗೊಳ್ವೆನೆನಿಪ್ಪಕ್ಕತುಳದ ಭಟನಿವಹಂ ನಡೆದುದಿಳಾಧಿಪನಂ ಬಳಸಿ (ಜಯುಕಾ. ೬-೦೮). [ಪೋರ್ಕುಳಿ + ಕೊಳ್₁]

**ಪೋರ್ಕುಳಿಯಿಕ್ಕು, ಪೊರ್ಕುಳಿಯಿಕ್ಕು** (ಕ್ರಿ). ೧. ಹುರುಡಿಸು ; ಸ್ಪರ್ಧಿಸಂ : ಮುಡಿವೊಱಿಯ ವಿಷಯದೆ ಮುಱಿಗೆ ಮಂದಂಧತಮಸಮಂ ಪೆಱಗಿಕ್ಕಿ ತನ್ನೊಳ್ ಮಲೆವ ಲಲನೆಯರ ವದನವಿಧುಬಿಂಬದೊಳ್ ಕಪೋಳಸಂಭೃತಪ್ರತಿಕೃತಿಚ್ಛದ್ಮದಿಂ ಪೊಕ್ಕು ಪೊರ್ಕು[ಪಾಠಾಂ. ಪೊಕ್ಕು]ಳಿ

ಯಿಕ್ಕೆಯುಂ (ಧರ್ಮಾ. ೬-೯೩ ವ). **ಪೊರ್ಕುಳಿಯಿಕ್ಕು :** ೨. ಜಗಳ ವಾಡು ; ಕಲಹಮಾಡು : ಪೆಱರೊಳು ಪೊರ್ಕುಳಿಯಿಕ್ಕುತ್ತುಂ ಮೆಯ್ಯೊರಿಸುತ್ತುಂ ಬೊಟ್ಟುವರಿಸುತ್ತುಮಿವು ಮೊದಲಾದ ಪೆಱವುಂ ರಾಗದ್ವೇಷಹೇತುಗಳಪ್ಪುವಂ ಮಾಡುತ್ತಿರ್ಪುದುಂ (ಚಾರಿ. ೩೦೩).
[ಪೋರ್ಕುಳಿ + ಇಕ್ಕು]

**ಪೋರ್ಕುಳಿವಕ್ಕಿ,** ಪೊರ್ಕ್ಕುಳವಕ್ಕಿ, ಪೊರ್ಕ್ಕುಳಿವಕ್ಕಿ, ಪೊರ್ಕುಳಿವಕ್ಕಿ (ನಾ). ಜಗಳವಾಡುವ ಸ್ವಭಾವದ ಹಕ್ಕಿ; ಕೋಗಿಲೆ : " ಪೊರ್ಕುಳಿ[ಪಾಠಾಂ. ಪೊರ್ಕುಳಿ, ಪೊರ್ಕ್ಕುಳ]ವಕ್ಕಿಯೆಂದು ಕೋಗಿಲೆ " (ಶಬ್ದ. ಪ. ೫೦); " ಪಡಿಯಱವಕ್ಕಿ, ಪೋರ್ಕುಳಿವಕ್ಕಿ[ಪಾಠಾಂ. ಯವಕ್ಕಿ] . . . ಪರಪುಟ್ಟಂ — ಈ ೫ ಪಿಕಂ " (ಶಬ್ದಮ. ೫೫-೨೦೫). **ಪೊರ್ಕ್ಕುಳವಕ್ಕಿ :** "ಪೊರ್ಕ್ಕುಳವಕ್ಕಿ[ಪಾಠಾಂ. ಪೊರ್ಕ್ಕುಟ್ವಕ್ಕಿ] . . . ಪಡಿಯಱವಕ್ಕಿ ಕೋಗಿಲೆಯೆನಿಕ್ಕು " (ಶಬ್ದಮಂ. ೨೯) ; ಮಧುಸಮಯದೊಳಗೆ ಮಾಮರ ಚಿಗುರಲೆಳದಳಿಗ ಕರ್ದುಕಿ ಪೊರ್ಕ್ಕುಳವಕ್ಕಿ ಕೊರಳನಿಂಚರವುದಿಸೆ (ಕಾಪ್ರ. II, ೯೮೭ ಚತುರಾಚಾರ್ಯಪುರಾಣ). **ಪೊರ್ಕ್ಕುಳಿವಕ್ಕಿ :** (೯). **ಪೊರ್ಕುಳಿವಕ್ಕಿ :** ಮೇಲಿನ ' ಪೋರ್ಕುಳಿವಕ್ಕಿ ' ಉಲ್ಲೇಖದ 'ಶವಂದ' ಪ್ರಯೋಗದ ಪಾಠಾಂತರವನ್ನು ನೋಡಿ. [ಪೋರ್ಕುಳಿ + ಪಕ್ಕಿ]

**ಪೋರ್ಕೆ,** ಹೋರ್ಕೆ (ನಾ). ಹೋರಾಟ ; ಕಾಳಗ : " ಹೋರಟೆಯೆನೆ ಪೋರ್ಕೆಯು " (ಚಾರಿ. ೩೯). **ಹೋರ್ಕೆ :** (೯). [ಪೋರ್$_1$ + — ಕೆ]

**ಪೋರ್ಚುಗೀಸ್,** ಪೊರ್ತುಗೀಜ, ಪೋರ್ಚುಗೀಸ (ನಾ). ೧. ಪೋರ್ಚುಗಲ್ಲಿಗೆ ಸೇರಿದ ವ್ಯಕ್ತಿ ; ಪೋರ್ಚುಗಲ್ಲಿನವನು. ೨. ಪೋರ್ಚುಗಲ್ಲಿನ ಭಾಷೆ : ಪೋರ್ಚುಗಲ್ಲಿನ ಭಾಷೆ ಪೋರ್ಚುಗೀಸ್. ಅದು . . . ಅನೇಕ ಜರ್ಮನ್ ಮತ್ತು ಸೆಮೆಟಿಕ್ ಶಬ್ದಗಳನ್ನೊಳಗೊಂಡಿದೆ (ಕವಿಕೋ. XI, ೨೫೨). (ಗು). ೩. ಪೋರ್ಚುಗಲ್ಲಿಗೆ ಸೇರಿದ : ಈ ಪೋರ್ಚುಗೀಸ್ ಜನರು ಅನುಮಾನವಾಗದ ರೀತಿಯಲ್ಲಿ ಅವರೊಡನೆ ವರ್ತಿಸಿದರು (ಕೃಪಾ. II, ೦೯೯). **ಪೊರ್ತುಗೀಜ :** ೧. ಫ್ರೆಂಚರವೂ ಪೊರ್ತುಗೀಜರವೂ ಕೆಲವು ಪ್ರದೇಶಗಳು ಹಿಂದುಸ್ತಾನದಲ್ಲಿ ಉಂಟು (ಮುಂಬಯಿ. ೯-೦೦೩). **ಪೋರ್ಚುಗೀಸ :** ೧. ಒಬ್ಬೊಬ್ಬ ಪೋರ್ಚುಗೀಸ ಐದು ಆರು ಹೆಂಗಸರನ್ನು ಇಟ್ಟುಕೊಳ್ಳುತ್ತಿದ್ದ (ಕೃಪಾಇ. II, ೨೯೦). ' ಪುಡುತಕೇಶ ' ಪರಾ. [← ಇಂ. Portuguese./ ತೆಲು. ಬುಡುತಕೀಚು]

**ಪೋರ್ಚುಗೀಸ** ' ಪೋರ್ಚುಗೀಸ್ ' ನೋ.

**ಪೋರ್ತ** (ನಾ). ಹೋರಾಟ ; ಕಾದಾಟ : ವ್ಯಾಳವನಗಜದ ಪೋರ್ತದ ಕೇಳಿಗೆ ವಿಜಯಾರ್ಧಶೈಲಪತಿ ಸವೆಯಿಸಿ ತಂದೋಳಿಯೆ ನಿಱಿಸಿದ ಬೆಳ್ಳಿಯ ಲಾಳಾವಿಂಡಿಗವೊಲಿರ್ಪವಿವಱ ಮಡಲ್ಗಳ್ (ಶಾಂತಿಪು. ೨-೦೦೪) : ಭಾವಿಪೊಡಾಂ ಜಟ್ಟಿಯುವಂ ಗೋವಳನೆಂದಂದು ದೇವ ಪೋರ್ತದೊ[ಳ] [ಪಾಠಾಂ. ಪೋರ್ತದೊಡ, ಪಾದೋರ್ಡಮ,[ಪೋ]ರ್ದೊಡಮ]ವನ್ನಾವೆಡೆಗೆ ಪರ್ವಂ (ಧರ್ಮಾ. ೯-೬೦). 'ಪೋರ್ತಂಗೊಳ್' ಪರಾ.
[ಪೋರ್$_1$ + — ತ$_2$]

**ಪೋರ್ತಂಗೊಳ್** (ಕ್ರಿ). ಹೋರಾಡು ; ಕಾದು : ಆ ಗಜಮಲ್ಲ ನೋಳ್ಪೋರ್ತಂಗೊಂಡುದೆ ಮಲ್ಲಸಿಂಗರಂಗೆಯ್ದಂತಾಗೆ (ಧರ್ಮಾ. ೯-೯೬ ವ).
[ಪೋರ್ತ + ಕೊಳ್$_1$]

**ಪೋರ್ನುಡಿ** (ನಾ). ಜಗಳದ ಮಾತು ; ಬಯ್ಗುಳಂ ; ಮೂದಲಿಕೆ : ಪೆಣ್ಮಾಲಗೆಯೆ ನೋಡೆ ಮಸೆಗಣೆಯು ಡೊಣೆಯಲ್ತೆ . . . ಪುಣ್ಮಾರಿದ ಪೋರ್ನುಡಿಯ ಮಳೆಗರೆದುದೊರ್ಮೆ (ಚಾರಿ. ೦೨೯-೨೬೫).
[ಪೋರ್$_2$ + ನುಡಿ$_2$]

**ಪೋರ್ಮೆ** (ನಾ). ಪ್ರೇಮಕಲಹ : ಅಗಲ್ದದ ಕೂರ್ಮೆ ಪೋರ್ಮೆ ಪೊರ್ದುಗೆಯೊಗೆವಿಚ್ಚೆ ಮುಚ್ಚು ಏಟರಂ ಕೊಱಚಾಡುವ ಪಾಡು ಗಾವಡಿಯೆಂಬಗಣಿತಚೇಷ್ಟೆಗಳ್ ಮೆಱೆದಿರಲ್ ತಱಿಸಲ್ವುದು ಸೂಳೆವಿಜ್ಜೆಯೊಳ್ (ದಶಕು. ೮-೨೨). [ಪೋರ್$_2$ + — ಮೆ$_1$]

**ಪೋಲ್$_1$,** ಪೋಲು$_1$, ಹೋಲ್, ಹೋಲು$_1$ (ಕ್ರಿ). ಹೋತ$_1$ (ಭೂತಕೃ). ಹೋತು$_1$ (ಭೂತನ್ಯೂ). ಎಣೆಯಾಗು ; ಸಾಟಿಯಾಗು ; ಸದೃಶವಾಗು : "ಪೋಲ್-ಸಾದೃಶ್ಯೇ" (ಶಮ.ಧಾ) ; ಕಳ್ಳಬೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯಂ ಕಚ್ಚಿ ನೆಲಕ್ಕಿಟಿದ ರಾಹುವಂ ನೆಱೆ ಪೋಲ್ತಳ್ (ಕಾವ್ಯಸಾ. ೯೬೬ ಕಾದ್ರ೯); ಶಚಿಮಹಾದೇವಿಯನೆ ಪೋಲ್ವ ಧಾರಿಣಿಮಹಾದೇವಿಯೆನ್ನ ಕಾಲ್ಗೆಱಗಿ ಪೊಡೆವಟ್ಟಿರ್ದಳ್ (ಪಪ್ಪಾರಾ. ೬೦-೭); ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನು ಪೋಲ್ವುದಗ್ರಮಾಲ್ಯಮಹೀಜಂ (ಆದಿಪು. ೫-೩೬) ; ಪ್ರತಿಬಿಮ್ಬಂ ರೂಪಿನೊಳ್ ಪೋಲ್ಕೆಮ (ಎಕ. VIII, ಸಗರ .೩೫-೭ ; 1077). **ಪೋಲು$_1$:** ಈ ನೆಲದೊಳಾರುವಂ ಪೋಲದವರಿಂತಿವರು (ತಿರುಕ. ದೇ. ೨೬-೦೬); ಕಾಮನ ಪೋಲುವ ಸೋಮವದನನನು ಕೋಮಲಾಂಗಿಯೆ ಕರೆತರಲು ಪ್ರೇಮದಿಂ ಮುತ್ತಿನ ಹಾರವನೀವೆನು (ಕಂಪು. ೯-೯೨); ಭುವನ ಮೂರರೊಳರಸಿದೊಡೆ ನಿನ್ನುವನು ಪೋಲುವರಿಲ್ಲ (ಅಪಂಚಾ. ೦-೫-೦೩). **ಹೋಲ್ :** ಗುರುಕಚಭಾರ ನೀಳರತ್ನಂ ನಗೆ ಮಾಣಿಕವಾಗೆ ಹೋಲ್ತಳೀ ನಿರುಪಮಕಾಂತೆ ಸಾನ್ತಲೆ ಶುಧಾಂಶುಕಳಾಶ್ರಿತದುಗ್ಧವಾರ್ಧಿಯಂ (ಎಕ. XVI, ಕಳ್ಯಾ. ೯೬-೩೭, 1169). **ಹೋಲು$_1$:** ಶಬ್ದಿಯಾದಾತ ತರುಗಳ ಹೋತ ನಿಶ್ಶಬ್ದಿಯಾದಾತ ಪಾಷಾಣವ ಹೋತ (ಬಸವ. ೦೦೮-೯೯೦); ಎಲವೋ ನಿನ್ನ ಹೋಲುವರಾರು ಬಾಹಿರ ಭಂಡರವನಿಯಲಿ (ಕುಮಾದ್ರೋ. ೦೯-೨೮); ಒಂದೂವರೆ ವರ್ಷದ ಚೀನಿ ತನ್ನ ತಂದೆಯ ಮೈಕಟ್ಟು ಮುಖಭಾವಗಳನ್ನು ಹೋತು ಹುಟ್ಟಿತ್ತು (ಪಂಚಪ. ೯೬). [ದೇ.೫ ತಮಿ. ಪೋಲ್; ಮಲ. ತೆಲು. ಪೋಲು]

**ಪೋಲ್$_2$ ?** (ನಾ). (?) : ಬಲ್ಗಿಚ್ಚಿ ಪಳಿವ ಲಿಂಗಂ ಮೂಡೆ ಕಣ್ಗಟ್ಟು ಕಾಲ್ಗಣದಾದನಾ ಕಾಳ್ಗೈತಕಳ್ಕುಕೆ ತುಳಿಲ್ಗುಂದಿ ನಾಲ್ಕೊಗಂ ತಲೆಗಂಡನೇ ಶಿವನ ಬಲ್ಗಣೆಯ ಪೋಲ್ಗಾವನು (ಶಾಪಾಂ. ೩-೨೩). [?]

**ಪೋಲ್$_3$** ' —ಪೋಲ್ ' ನೋ.

**ಪೋಲಕ,** ಪೋಲಕಾ, ಪೋಲ್ಕ (ನಾ). ಒಂದು ಬಗೆಯ ಕುಪ್ಪಸ; — ರವಿಕೆ : ವತ್ಸಲೆ ಆ ದಿನದ ಪೋಲಕ ಪರಕಾರಗಳನ್ನೇ ಧರಿಸಿದ್ದಳು (ಕೃ.ಶ. ೩೬) ; ಉಷಾನ ತಾಯಿ . . . ಒಗೆದ ಪರಕಾರ — ಪೋಲಕಗಳನ್ನು ತೊಡಿಸಿದ್ದರು (ಕ್ರೇಮುಕ. ೩೦). **ಪೋಲಕಾ :** ನನ್ನ ಪೋಲಕಾದ್ಲೇ ಒರಸು (ಹೂಬಿಸಿ. ೨೦) ; ನೀ ಮುಂದಿನ ಜನ್ಮಕ್ಕ ಬರೋದರೊಳಗ ಪೋಲಕಾ, ರ್‍ಝಗಾ ಬಂದಿರತಾವೇಳು. ಕುಬಸದ ಹಂಗ್ಯಾಕ ? (ಹೊಸಂಚಾ. ೭೦). **ಪೋಲ್ಕ :** ಪೋಲ್ಕ . . . (ಹೆಂಗಸಿನ) ಗುತ್ತನಾದ (ಸಾ, ಹಣಿಗೆಯ) ನಡುವಂಗಿ (polka. ಇಂಕಪ). [← ಇಂ. Polka. / ಮರಾ. ಪೋಲಕೇ]

**ಪೋಲಕಾ** ' ಪೋಲಕ ' ನೋ.

**ಪೋಲಗಟ್ಟು** (ನಾ). (?) : ಕಡೆಯ ಪೊಡೆಯ ಗೆಜ್ಜೆ ಕಣಕಾಲ ಬಾಸಿಂಗ ಮಡೆಯ ಬದ್ದಗೆಯ ಕಿಗ್ಗಟ್ಟು ಬಿಡೆಯವಿಲ್ಲದೆ ಪೋಲಗಟ್ಟಿನ ಬಿಲ್ಲಾಳ ಪಡೆ ನಡೆಯಿತು ಬಾಣನೊಡನೆ (ಸೋಹಕ. ೯೦-೦೯). [?]

**ಪೋಲಿ$_1$** (ನಾ). ೧. ಉಡಾಳ ; ಪೋಕರಿ : ಊರಿನ ಹಿರಿಯರು ಇವರಿಬ್ಬರು ಶುದ್ಧ ಪೋಲಿಗಳೆಂದು ಭಾವಿಸಿಬಿಟ್ಟರು (ಹೊಸಹಕ. ೨೦) ; ನಿನ್ನ ಸಲಿಗೆ, ಬೇಬಿಯ ಪ್ರೀತಿ — ಇವು ಅವನನ್ನು ಪೋಲಿಯನ್ನಾಗಿ ಮಾಡಿದ್ದವು (ಮುಂಗಾರು. ೯) ; ಪೋಲೀಮುಂಡೇದಕ್ಕೆ ತಾಲೀ ಕಟ್ಟಿದರೆ ತಾಲಿ ತಾಲಿ ಪೋಲಿ ಪೋಲಿ (ಗಾದೆ) . ' ಅಪಾಪೋಲಿ ' ಪರಾ. ೨. ದುರ್ಮಾರ್ಗದಲ್ಲಿ ವರ್ತಿಸುವವನು ; ನೀತಿಗೆಟ್ಟವನು : ಅವನು ಪೋಲಿ. ಅವನ ಗಳಿಕೆಯ ಮಾರ್ಗ ಸನ್ಮಾರ್ಗವಲ್ಲ (ಕಲ್ಯಾಹು. ೩೮); ಪೋಲಿಸರೆ, ನಿಮ್ಮ ಹೆಸರಿನಂತೆ ಪೋಲಿಗಳಾಗಿ ವರ್ತಿಸಬೇಡಿರಿ (ದೀಕ್ಷು. ೩೫).

೩. ಅಸಭ್ಯ ; ಲಂಪಟ : ಆ ಪೋಲಿ ನನ್ನ ಕೈಯನ್ನೇ ಹಿಡಿದುಕೊಂಡು (ಮುಖಮು. ೦೬೬). ೪. ಇಷ್ಟ ಬಂದಂತೆ ವರ್ತಿಸುವಿಕೆ ; ಸ್ವೇಚ್ಛಾಚಾರ: ನಿನ್ನ ಹಾಗೆ ನಾವು ಪೋಲಿಪೋಲಿಯಾಗಿ ಅಲೆದುಕೊಂಡಿದ್ದರೆ ಹೇಗಾದೀತು? (ಕಂಕಥ. ೩೦). ೫. ವ್ಯರ್ಥ ; ಹಾಳು : 'ಪೋಲಿಗೈ' ಪರಾ. ೬. ಹಾದರ ; "ವ್ಯಭಿಚಾರ" (ಅಸಂವಾ). ೭. ಹೊಣೆಗೇಡಿಯಾದ ಹೆಂಗಸು : "ಪೋಲೀ ... ಕೆಲಸಗಳ್ಳಿ" (ಕಾಶಕೃ. ೯೮). (ಗು). ೮. ಹೊಣೆಗೇಡಿಯಾದ ; ಜವಾಬ್ದಾರಿಯಿಲ್ಲದ : ಅವಳ ಚಿಕ್ಕಮ್ಮ . . . ಹೇಗೋ ಕಷ್ಟಪಟ್ಟುಕೊಂಡು ತನ್ನ ಮಕ್ಕಳನ್ನು ಮತ್ತು ಪೋಲಿ ಗಂಡನನ್ನು ಸಾಕುತ್ತಿದ್ದಳು (ಪುನರು. ೯).

ಪೋಲಿದನ = ತೊಂಡುದನ ; ತುಡುಗುದನ : ಅವನ ತೋಟಕ್ಕೆ ಪೋಲಿದನ ನುಗ್ಗಿ ಗಿಡಗಳನ್ನೆಲ್ಲಾ ಹಾಳುಮಾಡಿತು (ರೂಢಿ). ಪೋಲಿಪಟಾಲಂ = ಉಡಾಳರ ಗುಂಪು ; ಪೋಕರಿಗಳ ತಂಡ : ಬಯಲಾಟ, ಪೋಲಿ ಪಟಾಲಂ ಎಂದುಕೊಂಡು ವೀರಭದ್ರ ಬಾಲ್ಯದಲ್ಲೇ ಬೀದಿಬಸವನಾದ (ಬಣ್ಣಮಾ. ೦೯೨). ಪೋಲಿ ಬೀಳು = ಹೊಣೆಗೇಡಿಯಾಗು : ಗಂಡು ಹುಡುಗರು ಪೋಲಿ ಬೀಳದೆ ಅವರವರ ಪಾಡಿಗೆ ಓದಿ ಪ್ಯಾಸ್ ಮಾಡಿ ಸಂಪಾದನೆ ಮಾಡುತ್ತಿದ್ದರೆ ನಮ್ಮ ಜವಾಬ್ದಾರಿ ಇಳಿಯಿತಪ್ಪ (ಮುಹಾಗ. ೯೬). ಪೋಲೀ ತಿರುಗು = ಸ್ವೇಚ್ಛೆಯಿಂದ ಅಲೆದಾಡು ; ಮನಬಂದಂತೆ ತಿರುಗು : ಸೌರಕುಟುಂಬದಲ್ಲಿ ಅನೇಕವೇಳೆ ಅತಿವೇಗದೊಡನೆ ಸಂಚರಿಸುತ್ತ ಪೋಲೀ ತಿರುಗುವ ವಿಷಮಗತಿಯುಳ್ಳ ಮಂಡಲಗಳೂ ಉಂಟು (ಜ್ಯೋತಿರ್. ೦೦೯); ನೀನು ಪೋಲೀ ತಿರುಗುವುದನ್ನು ಬಿಟ್ಟು ಯಾವಾಗ ಜವಾಬ್ದಾರಿ ವಹಿಸಿಕೊಳ್ಳುತ್ತಿ ? (ರೂಢಿ). [ದೇ. H ತಮಿ. ಕೊಡ. ಪೋಲಿ; ತುಳು. ಪೋಲಿ= ಸೂರೆಮಾಡುವ, ಅಸಂಬದ್ಧ ; ತೆಲು. ಪೋಲಿ]

ಪೋಲಿ₂ (ನಾ). ಗೋಧಿಹಿಟ್ಟಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ: ಪೇಣಿ ಗಾರಿಗೆ ಪೋಲಿ ವಡೆ ಕರಜಿಗಾಯಿ . . . ಮೊದಲಾದ ಬಲು ಸೊಗಸುಳ್ಳ ಪಾಕಂಗಳಂ . . . ದೇವ ನೀನಾರೋಗಿಸೈ (ಮಲ್ಲಕ. ೫-೬). [ಸಂ. ಪೋಲೀ]

ಪೋಲಿಕಾಟಿ 'ಪೋಲಿಗಾಟಿ' ನೋ.

ಪೋಲಿಗಾರ 'ಪೋಲಿಗಾಟಿ' ನೋ.

ಪೋಲಿಗಾಟಿ, ಪೋಲಿಕಾಟಿ, ಪೋಲಿಗಾರ (ನಾ). ಪೋಕರಿ ; ಉಡಾಳ : ಜಾಲಗಾಟಿನ ಕೈಯ ದೀಹದಂತೆ ಬಾಲೆಯರ ಮನದ ಸೋಲುವೆಯಂತೆ ಇಂತಿವರನಳವಾಡಿ ಸಿಕ್ಕಿಸುವ ಪೋಲಿಗಾಟಿ[ಪಾಠಾಂ. ಪೊಲೆಗಾರ, ಪೊಲ್ಲಗಾರ, ಸೋಲುಗಾಟಿ]ರಿಗೆಲ್ಲಿಯದೋ ಸತ್ಯ (ಪೋಲೀಪಮ. ೬೩-೨೬೯). ಪೋಲಿಕಾಟಿ : ಕ್ಷಯಕಾರಣವೆಂಬ ಪಟ್ಟಣಕ್ಕೆ ಲಯಕಾರಣವೆಂಬ ಅರಸು ಪೋಲಿಕಾಟಿ ಪ್ರಧಾನ ಮದೋನ್ಮತ್ತ ತಳವಾಟಿ (ಸಂಗಬಂ. ೯. ೬೬೨-೫೨). ಪೋಲಿಗಾರ: ಶೀಲರುತ್ತಮರು ನೀವಹುದು ಪೋಲಿಗಾರರಾವು (ಸಮುಮ. ೦೬).
[ಪೋಲಿ₁ + -ಕಾಟಿ]

ಪೋಲಿಗೈ (ಕ್ರಿ). ನಾಶಮಾಡು ; ವ್ಯರ್ಥಗೊಳಿಸು : ಖೂಳಬಲಿಯು ಬಿಟ್ಟ ಸರಳ ಜಾಲವೆಲ್ಲವಾ ಶೀಲ ನಿರ್ಜರೇಂದ್ರನದನು ಪೋಲಿಗೈದನು (ಸಮುಮ. ೬೯). [ಪೋಲಿ₁ + ಗೈ ( < ಕೆಯ್₁)]

ಪೋಲಿತನ (ನಾ). ೧. ಪೋಕರಿತನ ; ಪುಂಡಾಟಿಕೆ : ದೇವಯ್ಯನ ಪೋಲಿತನಕ್ಕಿಂತ ಇದು ಸಹಸ್ರಪಾಲು ಮೇಲು (ರಂಗಪ. ೨೦೬). ೨. ಹೊಣೆಗೇಡಿತನ ; ಜವಾಬ್ದಾರಿಯಿಲ್ಲದಿರುವಿಕೆ : ಅವನ ಪೋಲಿತನದಿಂದ ಅದಕ್ಕೆ ಪೋಷಣೆಯೇ ಇರಲಿಲ್ಲ (ಕಂಕಥ. ೦೩೦).
[ಪೋಲಿ₁ + -ತನ]

ಪೋಲಿಮೆ 'ಪೋಲ್ಮೆ' ನೋ.

ಪೋಲಿಯೋ (ನಾ). ಮೆದುಳಂಬಳ್ಳಿಯೊಳಗಿನ ಬೂದುದ್ರವ್ಯದ ಉರಿಯೂತ : ಪೋಲಿಯೋ ತಡೆಗಟ್ಟಲು ಲಸಿಕೆಗಳು ದೊರೆಯುತ್ತಿವೆ (ಕಂದೋ. ೬). [ಇ ಇದು ಇಂಗ್ಲಿಷಿನ 'Poliomyelitis' ಎಂಬ ಶಬ್ದದ ಸಂಕ್ಷಿಪ್ತರೂಪ]

ಪೋಲಿಸು, ಪೋಲಿಸಂ (ಕ್ರಿ). ಒಂದರೊಡನೊಂದನ್ನು ತಾಳಿನೋಡು,- ತುಲನೆಮಾಡು : ಪೋಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯನಾ ಸುರತ ಪ್ರವೀಣೆಯಂ (ಅಂಪು. ೨-೬೬) ; ಪೆಱರಾರುಮನಾ ಸತಿಯ ಪೆಮ್ಪಿನೊಳ್ ಪೋಲಿಪುದೇ (ಎಕ. II, ೦೫೯-೦೦; ಸು. ೯೬೦) ; ಸತ್ಯಾಶ್ರಯದೇವನೆ ಪೃಥ್ವೀ ವಲ್ಲಭಂ ಕಥಾನಾಯಕನಾಗನಿಲಜನೊಳ್ಪೋಲಿಸಿ ಪೇೞ್ದನೀ ಗದಾಯುದ್ಧಮಂ ಮಹಾಕವಿ ರನ್ನಂ (ಗದಾಯು. ೦-೩೦) ; ಸಿರಿಸದ ಬಾಸಿಗಮನೆಂತು ಪೋಲಿಸುವೆಂ ಸುಂದರಿಯ ಮನೋಜನ ಪಾಶದೊಳೆರಡೆರಡೆ ವರಲ್ಕೆ ಸಾಲ್ದ ಭುಜವಲ್ಲರಿಯಂ (ಮಲ್ಲಪು. ೩-೬೯). ಹೋಲಿಸು : ಆ ಕರಿಯಾಕೃತಿಯ ಸೂಕರನ ಹೋಲಿಸಿದರೆ ಆ ಕರಿಯಾಗಲರಿವುದೆ ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ ವ್ಯಾಳೇಶನಾಗಲರಿವುದೆ (ಬಸಪು. ೩೮೯); ಹೋಲಿಸು ವಡೊಪ್ಪುವ ವಸುರ್ವಟ್ಟಾಲವಟ್ಟಂಗಳೊ ಚೆಲುವನಹ ಬಾಳೆಯೆಲೆಗಳೊ (ಬಸಪು. ೨೬-೯೦); ಪಾರ್ಥಿವಜಾತಿಯಲಿ ರಣದಿಟ್ಟರುಂಟೇ ನಿಮ್ಮ ಹೋಲಿಸಲು (ಕುವ್ಯಾದ್ರೋ. ೯-೦೦) ; ಹೋಲಿಸಿ ನುಡಿದೆ ಸುರಪ ಫಲ್ಗುಣರ ಸಮರವಂ (ಕೃಮಿಚಾ. ೦೬-೫೯). [ಪೋಲ್₁ + -ಇಸು₃]

ಪೋಲೀಸ್ 'ಪೋಲೀಸು' ನೋ.

ಪೋಲೀಸು, ಪೋಲೀಸ್ (ನಾ). ೧. ಸಾರ್ವಜನಿಕರಿಗೆ ಸಂಬಂಧಪಟ್ಟಂತೆ ಶಾಂತಿಪಾಲನೆ, ರಕ್ಷಣೆಗಳನ್ನು ಕೈಗೊಳ್ಳುವ ಸರ್ಕಾರದ ಒಂದು ಖಾತೆ ; ರಕ್ಷಣಾಇಲಾಖೆ : ಇವನು . . . ಗ್ರಾಮದ ಪೋಲೀಸಿನ ಮೇಲಧಿಕಾರಿಯಾಗಿಯೂ ಇರುವನು (ಗ್ರಾಮಜೀ. ೨) ; ಅಂತೂ ಪೋಲೀಸು ನಗರಕ್ಕೊಂದು ನಯನ (ಬಿಂಬಾ. ೩). ಪೋಲೀಸ್ : ೧. ಪೋಲೀಸ್ ಅಧಿಕಾರಿಗಳಿಗೆ ನಾನು ಸಲ್ಲಿಸಿದ್ದ ಪ್ರಪ್ರಥಮ ಸಲಾಂ ಅದು (ನಾಪೋಲೀ. ೨೬). ೨. ರಕ್ಷಣಾಇಲಾಖೆಯಲ್ಲಿ ದುಡಿಯುವವನು ; ಪ್ಯಾದೆ : ನೀನು ಮಾತ್ರ ಪ್ರಾಣ ಹೋಗುವ ಪ್ರಸಂಗ ಬಂದರೂ ಪೋಲೀಸ್ ಮಾತ್ರ ಆಗಬ್ಯಾಡ (ನಾಪೋಲೀ. ೦೬).

ಪೋಲೀಸರು, ಪೋಲೀಸಿನವರು = ರಕ್ಷಣಾಇಲಾಖೆಗೆ ಸೇರಿದವರು : ನನಗೆ ಶಿಕ್ಷೆಯಾಗುವುದು ಖಂಡಿತವೆಂದೇ ಎಲ್ಲ ಪೋಲೀಸರೂ ಅಭಿಪ್ರಾಯ ಪಡುತ್ತಿದ್ದರು (ನಾಪೋಲೀ. ೯೯) ; ಪೋಲೀಸಿನವರು ತಕ್ಷಣ ಅಲ್ಲಿಗೆ ಹೋಗಿ ಕಳ್ಳನನ್ನು ಹಿಡಿಯುತ್ತಾರೆ (ಜನಾಕ. ೭೦). [← ಇಂ. Police]

ಪೋಲು₁ 'ಪೋಲ್₁' ನೋ.

ಪೋಲು₂, ಹೋಲು₂ (ನಾ). ೧. ಅಪವ್ಯಯ ; ದುಂದುವೆಚ್ಚ: ಜನಕ್ಕೆ ದೇಶಭಾಷೆಯಲ್ಲಿ ಅಭ್ಯಾಸ ನಡೆಯದ ಅಸಹಜತೆ ಪೋಲುಗಳನ್ನು ಪ್ರಧಾನವಾಗಿಯೂ ಆನುಷಂಗಿಕವಾಗಿಯೂ ಠಾಕೂರರು ಕಾಣಿಸಿದ್ದಾರೆ (ವಿಚಾರ. I, XII ಮುನ್ನುಡಿ). ೨. ನಾಶ ; ಹಾಳು : ನಾಲ್ವತ್ತು ಎಂಟು ಯೋಜನದ ಗ್ರಾಮ ಪೋಲಿನ್ನು ಕೇಳು ನಿಸ್ಸೀಮ ಮೇಲೆ ನೀ ಗಳಿಸಿರ್ದ ಹೇಮ ಮುಂದೆ ಪಾಲಿಸುವರಿಲ್ಲ ಕಲಿಭೀಮ (ಕರಿಂ. ೯೫೩-೪) ; ಪೋಲು ಆದ ವಸ್ತು ಹಾಲಿನ ಹಾಗಿದ್ದರೇನು ? (ಗಾದೆ). ಹೋಲು₂: ೩. ವ್ಯರ್ಥವಾದುದು ; ಉಪಯೋಗವಿಲ್ಲದುದು ; ಪೊಳ್ಳು: ಕೋಲ ಬಲುಹುಂಟಾಗೆ ನಾಲಗೆ ಹೋಲ ನುಡಿಯದು [ಪಾಠಾಂ. ಹೋಲುಬಾಜುವುದು, ಹೋಲ ನುಡಿವುದು, ಹೊಲ್ಲ ದೇನಿದು] ಖೂಳ ಕಟಕಿಯ ಮಾತು ಬೇಡಂಬಿನಲಿ ಮಾತಾಡು (ಕುವ್ಯಾಕ. ೯-೩೦).

ಪೋಲಾಗು = ೧. ಅಪವ್ಯಯವಾಗು ; ದುಂದುವೆಚ್ಚವಾಗು : ರಾಜ್ಯಕೋಶದ ಅಪಾರದ್ರವ್ಯ ಜೋಗಿ ಜಂಗಮರನ್ನು ಮೇಯಿಸುವುದಕ್ಕಾಗಿ ಪೋಲಾಗುತ್ತಿದೆ (ಕುಂಗಳ. ೦೬) ; ಸೊಸೈಟಿಯ ಹಣ ಪೋಲಾದ ಬಗ್ಗೆ

ಡೈರಕ್ಟರುಗಳಲ್ಲಿ ಕೆಲವರು ಬಿರುಸಾಗಿ ಚರ್ಚಿಸಿದರು (ಮರಳಿ. ೦೬೦). ೨. ವ್ಯರ್ಥವಾಗು ; ನಿರರ್ಥಕವಾಗು : ಸರಣಾಯಾತರ್ಕ್ಕಳಂ ತಾಳ್ದಿ × × ಧಾತ್ರಿಯಮನ್ನನ್ಯಪಾಚಾರಕ್ಕೆ ಪೋಲಾಗೆ ವಿಸ್ತರದಿಂ ಪಾಳಿಸೆ ಕೀರ್ತಿಯುಂ ಭುವನದೊಳು ಪ್ರಕಾಶನಂ ಮಾಡಿದಂ (ಶಾಸನ. XI-i, ೯೭-೦೭ ; 1062) ; ಬಾಲೆ ನೀನಾರೆಂದ ನಾನೀಗ ಕೇಳ್ಪಾತನೊಳಗದವಳೆಂದಳವಳು ಪೋಲಾದ ಮಾತು ನೀನೀಗ ಕೇಳ್ವನ ಪ್ರಾಣಪಾಲಕಿಯಲ್ಲವೆಯೆಂದಾ (ಶರಶ. ೪೨-೪೦); ಉದಾತ್ತವಾದ ಕಾವ್ಯಗುಣಗಳನ್ನು ಅರಿತು ಮೆಚ್ಚಿಕೊಂಡಿರುವ ನನಗೆ ಅವು ಎಲ್ಲಿ ಪೋಲಾಗಿಬಿಡುತ್ತವೆಯೋ ಎಂಬ ಹೆದರಿಕೆ ತುಂಬಿದೆ (ಅನುಳ. ೦೯೯).

**ಪೋಲುಮಾಡು** = ೧. ಅಪವ್ಯಯಮಾಡು ; ದುಂದುವೆಚ್ಚಮಾಡು : ಕಿಸೆಯ ಚಿಲ್ಲರೆಯನು ಪೋಲುಮಾಡುವುದಕೆ ಯಾರಿಗಾದರೂ ಗುರು ಬೇಕೆ (ಇಂಚಾಕ. ೨೪೨-೪೭). ೨. ವ್ಯರ್ಥವಾಗಿಸು ; ನಿರರ್ಥಕಗೊಳಿಸು ; ಹಾಳು ಮಾಡು : ಒಡವೇಲಿ ಅರ್ಧಾನ ಇವರು ಅರಮನೇಲೆ ಇಟ್ಟುಕೊಂಡಿದ್ದಾರೆ . . . ನಮ್ಮ ಅರಮನೆಗೆ ಬರಬೇಕು ಅಂದರೆ ನಾವು ಪೋಲು ಮಾಡತೇವನ್ನ ತಾರೆ (ಜಳಗಾ. ೨೩೬) ; ಸಂಸಾರ ನಡೆಸುವುದರಲ್ಲಿ ನೀವು ಯಾವಾಗಲೂ ಹಿಡಿತ. ಒಂದು ಅಕ್ಕಿಕಾಳು ಪೋಲು ಮಾಡುವುದಿಲ್ಲ (ಮಹಾಗ. ೦೯೨).

**ಪೋಲುಗ** (ನಾ). ದುಂದುವೆಚ್ಚ ಮಾಡುವವನು ; ದುಂದುಗಾರ : ಆನು ಭಕ್ತನಲ್ಲಯ್ಯಾ ಆನು ವೇಷಧಾರಿಯಯ್ಯಾ ಕಾಟುಗ ಕೆತ್ತುಗ ಪೋಲುಗ[ಪಾಠಾಂ. ಹುಲ್ಲುಗ, ಪೊಲ್ಲುಗ]ನೆಂಬರು ಎನ್ನ ಹೆಸರು (ಬಸವ. ೩೩೩).

[ಪೋಲು$_2$ + — ಗ$_2$]

**ಪೋಲುಮೆ** 'ಪೋಲ್ಮೆ' ನೋ.

**ಪೋಲೋ** (ನಾ). (ಪೂರ್ವದೇಶಗಳಲ್ಲಿ ಮೊದಲು ಬಳಕೆಗೆ ಬಂದ) ಕುದುರೆಯ ಮೇಲೆ ಸವಾರಿ ಮಾಡುತ್ತಾ ಆಡುವ, 'ಹಾಕಿ' ಆಟದಂಥ ಒಂದು ಬಗೆಯ ಚೆಂಡಿನ ಆಟ : ಬ್ರಿಟನಿನ ತರುಣರು, ಮುದುಕರು ದೋಣಿಯ ಓಟ, ಪೋಲೋ . . . ರಗ್ಬಿ ಮೊದಲಾದ ಹಲವು ಆಟ ಪಂದ್ಯಾಟಗಳಲ್ಲಿ ಮುಂದೊತ್ತಿ ಹೋಗಿರುವರು (ಚಾಂಶ್ರ. II. ೦೦೯೪). [← ಇಂ. Polo]

**ಪೋಲ್ಕ** 'ಪೋಲಕ' ನೋ.

**ಪೋಲ್ಕೆ** (ನಾ). ಸಾದೃಶ್ಯ ; ಸಾಮ್ಯ : ಶೀರ್ಣನಾಳಿಕೇರಪರ್ಣಂಗಳೊಳು ಅಮರ್ಕೆಯುಂ ಪೋಲ್ಕೆಯುಂ ಒಲ್ಪುಂ ಚೆಲ್ವುಮಾಗೆ ಗೊಜ್ಜಗೆಯ ಮುಗುಳ ಗಜ್ಜೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ವಸದನಂಗೊಂಡು (ಚಂದ್ರಪು. ೬-೦೦೩ ವ) ; ಬಿದಿರಂ ಕರ್ಬಿನ ಪೋಲ್ಕೆಗೆಂದು ಸವಿವಂತಾಯ್ತೆನ್ನ ಪುಣ್ಯೋದಯಂ (ಕಾವ್ಯಸಾ. ೫೭೬). 'ಹೋಲಿಕೆ$_1$' ಪರಾ. [ಪೋಲ್$_1$ + — ಕೆ. / ತೆಲು. ಪೋಲಿಕ, ಪೋಲಿಕೆ, ಪೋಲ್ಕಿ]

**ಪೋಲ್ಕೆಗೊಳ್** (ಕ್ರಿ). ಸಾದೃಶ್ಯವನ್ನು ಹೊಂದು : ಧರಿಸಿ ಕನಕಾಂಬರ ಮನಾ ವರವಧುವಾಮೂಲಶಿಖರಪರಿಪುಲ್ಲಸುಮೋತ್ಕರದಿಂದೆ ಪುದಿದ ನವ ಕೇಸರಲತೆಯಂ ಪೋಲ್ಕೆಗೊಂಡದೇನೊಪ್ಪಿದಳೊ (ಮರಾಕ. ೫-೬೩).

[ಪೋಲ್ಕೆ + ಕೊಳ್$_1$]

**ಪೋಲ್ಟೀಸು**, ಪೋಟಲೀಸು, ಪೋಟ್ಲೀಸಂ (ನಾ). "ಮೆಂತರೊಟ್ಟಿ, ಸೀಮೆಯುಗಸೆ, ಹಿಟ್ಟು, ಮೊ.ನ್ನು ಸಾ. ಕುದಿಯುವ ನೀರಿನಲ್ಲಿ ಹಾಕಿ ಮೆತ್ತು ಮಾಡಿ ಮಸ್ಲಿನ್ ಬಟ್ಟೆ, ಮೊ.ಗಳ ಮೇಲೆ ಹರಡಿ ಹುಣ್ಣು ಅಥವಾ ಉರಿಯೂತದ ಮೇಲಿಟ್ಟು ಕಟ್ಟುವಂಥದು" (Poultice. ಇಂಕಕ) : ಹೊಟ್ಟೆಗೆ ಪೋಲ್ಟೀಸು ಕಟ್ಟಿಸಿಕೊಂಡು ರಾಮು ಹಾಸಿಗೆಯ ಮೇಲೆ ಮಲಗಿದ್ದ (ಸಾಂಕ. ೨೬). **ಪೋಟಲೀಸು :** ಅವನಿಗೆ . . . ಕಟ್ಟುವುದಕ್ಕೆ ಪೋಟಲೀಸು ಬೇಯಿಸಿ, ನನ್ನ ಕೈಗೆ ಆಗಿರುವ ಗತಿ ನೋಡು (ಕಲ್ಲಕಾ. ೪೪). **ಪೋಟ್ಲೀಸು :** ಹುಣ್ಣಾದ ಕಾಲಿಗೆ ಜೇಡಿಮಣ್ಣಿನ್ನಾಗಲೀ ಅಥವಾ ರಾಗಿಹಿಟ್ಟಿನ ಪೋಟ್ಲೀಸನ್ನಾಗಲೀ ೪–೫ ದಿವಸಗಳು ಕಟ್ಟಿದರೆ ನೋವು ಕಡಿಮೆಯಾಗುವುದು (ಗ್ರಾಮಾಳ. ೦೯೩).

[← ಇಂ. Poultice]

**ಪೋಲ್ಮೆ**, ಪೋಲಿಮೆ, ಪೋಲುಮೆ (ನಾ). ೧. ಸಾದೃಶ್ಯ ; ಸಾಮ್ಯ : ರಾಹು ರವಿಯಂ ತುಡುಕುವಂತದರ ಪೋಲ್ಮೆಯಿಂದರಸ ನಿನ್ನಂ ಪಿಡಿವೆಂ (ತುರಂಗ. ೪೯-೦೯). **ಪೋಲಿಮೆ :** ೨. ಒಪ್ಪವಾದುದು ; ಚೊಕ್ಕಟವಾದುದು : ಸಾರಸ್ವತರ . . . ಉಡಿಗೆಗಳು ಶೇಣವೀಜನರಿಗಿಂತ ಪೋಲಿಮೆಯಾಗಿರುತ್ತವೆ (ಕಲಾಗ. ೯೯). **ಪೋಲುಮೆ :** ೧. ಅವುದರ ಪೋಲುಮೆಯು ಕೊಡಲ್ಪಡುತ್ತದೆಯೊ ಅದು ಉಪಮಾನಂ (ಶಬವಂ. ೬). 'ಪೋಲ್ವೆ' ಪರಾ. [ಪೋಲ್$_1$ + — ಮೆ$_1$. / ತಮಿ. ಪೋಲಿಮೈ]

**ಪೋಲ್ವೆ**, ಹೋಲುವೆ, ಹೋಲ್ವೆ (ನಾ). ೧. ಸಾಮ್ಯ ; ಸಾದೃಶ್ಯ ; ಹೋಲಿಕೆ : "ಸಾಟಿ ಪೋಲ್ವೆ . . . ಸಾಟಿ ಪಾಸಟಿಯೆನಲ್ಕೆ ಪತ್ತುಗುಂ" (ಕಶಾಗಿ. ೦೯) ; ತದ್ವಿದೇಹಜನತಾಸ್ವಾಂತಾರ್ಪಿತೋದ್ಭೃತ್ಯವೋದೆಯ ಸೀತೋದೆಯ ಪೋಲ್ವೆಗಿಲ್ಲ ತೊಡಿಗೆಗಳ್ ವಿಶ್ವಂಭರಾಭಾಗದೊಳ್ (ಅಂಕ. ೦-೩೪) ; ಮುತ್ತಿನ ತೋರಣಂ ಗಜದ ನೆತ್ತಿಯ ಮುತ್ತುಗಳೆಲ್ಲ ಪಲ್ಗಳೊಳ್ ಪತ್ತಿದ ಪೋಲ್ವೆಯಂ ಪಡೆವ ಗೋಪುರಪಂಚಕಮಾಸ್ಥವಾಗೆ (ಅರ್ಧನೇ. ೦-೬೬) ; ನಿನ್ನೊಂದು ಪೆಸರ ಪೋಲ್ವೆಯೊಳೆಂದಜಾಮಿಳಂ ತನ್ನ ಪಾತಕಕೋಟಿಯಂ ಪರಿಹರಿಸಿಕೊಂಡಂ (ಕೃಷಿಚಾ. ೦೩-೬೭). ೨. ಸೊಗಸು; ಸೌಂದರ್ಯ : "ಸೊಗಸುಮಲಂಪುಂ ವಿಭವಮುದೊಗೆಗುಂ ತಾವಿಂದಚಂದಮೆನೆ ಪೋಲ್ವೆಯೊಳಂ" (ಕರಿಕಂ. ೦೩೯). ೩. ಸ್ವರೂಪ ; ಆಕಾರ : ಅಯ್ದು ಮಂತ್ರಾಕ್ಷರಂಗಳನಾಹ್ವಾನಂಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೆ (ಕಂಪಕಾ. ೦-೮೯ ವ). **ಹೋಲುವೆ:** ೧. ಕೃತಾಂತನ ಹೋಲುವೆಯ ಹೊಸಬಿಗನು ಹೊಕ್ಕನು ಭೀಮನುರವಣೆಗೆ (ಕುಮಾವ್ಯಾ. ೨-೬೪); ವಜ್ರಮಾಣಿಕ್ಯದ ಹೋಲುವೆಯ ದಂತಪಂಕ್ತಿಯ . . . ಪೆಣ್ಗಳೊಪ್ಪಿದರು ನವರತ್ನಮಾಲೆಗಳ ಪಾಂಗಿನಿಂದ (ರಾಜಶೇ. ೫-೨೪); ಗಡ್ಡವಿರಲಿಲ್ಲ, ಗೆರೆಹೋಲುವೆಯ ಮೀಸೆಯಿತ್ತು (ಕೃಷರು. ೦೬೪). **ಹೋಲ್ವೆ :** ೧. ರಕ್ಕಸನು . . . ಎಲವೊ ಗೌರಿಜ ಜನಿಸಿದೀವರಿಗೆ ಹೊಕ್ಕೆ ಸಮರವ ನಿನಗೆ ಕಾಣಿಕೆ ಚಕ್ಕುಲಿಗಳಲ್ಲದರ ಹೋ[ಹೋ]ಲ್ವೆಯ ಚಕ್ರಮಿದೆ ನೋಡಿದರ ಸವಿಯನನುತ್ತ ತೆಗೆದೆಚ್ಚ (ಅಂಬಿಕಾ. ೨೮-೩೩) 'ಪೋಲ್ಮೆ' ಪರಾ. [ಪೋಲ್$_1$ + — ವೆ]

**ಪೋಲ್ವೆವೆಱು** (ಕ್ರಿ). ಸಾದೃಶ್ಯವನ್ನು ಪಡೆ ; ಸಾಟಿಯಾಗು : ಖರಕರಬಿಂಬದಿಂ ಕಿರಣಸಂತತಿಗಳ್ ಪೊಱಪೊಣ್ಮೆದಪ್ಪುವೆಂಬರ ನುಡಿ ಪೋಲ್ವೆ[ಪಾಠಾಂ. ಲ್ಮೆ]ವೆತ್ತುದೆನೆ ಬಾಣಧಿಯಿಂದಿರದುರ್ಚಿಕೊಂಡು ವಿಸ್ಫುರಿತಶರಂಗಳೆಂಟನವಟಿಳ್ ಪೊಳೆವಯ್ದುಶರಂಗಳಂ ಸುರುಳ್ದುರುಳ್ವಿನಮೆಚ್ಚ (ಕಂಪಕಾ. ೦೨-೬೩). [ಪೋಲ್ವೆ + ಪೆಱು$_1$]

**ಪೋವಣಿಕೆ** 'ಪವಣಿಕೆ' ನೋ.

**ಪೋವಿಡು** (ಕ್ರಿ). ಹೋಗಲು ಬಿಡು : ಅರಿಗಳ್ಗಱಿವಾಗದ ಮುನ್ನವೆ ಕಟ್ಟಿದ ಹಯಮಂ ಪೋವಿಟ್ಟು ಮನೆಗೆ ಪೋಪಂ (ರಾಜಾಕ್ಕ. ೦೩೩-೬)

[ಪೋ$_1$ + ಬಿಡು$_1$]

**ಪೋಶಳ** 'ಪೊಯ್ಸಳ' ನೋ.

Δ**ಪೋಶಟ** 'ಪೊಯ್ಸಳ' ನೋ.

**ಪೋಷ$_1$** 'ಪುಸ್ಯ' ನೋ.

**ಪೋಷ$_2$** (ನಾ). ೧. ಪರಿಪೋಷಣೆ ; ಸಾಕುವುದು. ೨. ಬೆಳವಣಿಗೆ ಅಭಿವೃದ್ಧಿ. [ಸಂ.]

**ಪೋಷಕ** (ಗು). ೧. ಸಲಹುವ ; ಕಾಪಾಡುವ : ಈ ಪ್ರಕಾಶನಕೆ ದೊರೆಯಬಹುದಾದ ವಾರ್ಷಿಕ, ಪ್ರೇರಕ, ಪೋಷಕ ಸದಸ್ಯರ ಸಹಾಯವೆ ಕರಾವಲಂಬನ (ಸಂಕೋಶ. VI, ಅಂಕ); ಕುಂಬಾರ ಕಮ್ಮಾರ ಕಾಯಕಗಳ

ಪೋಷಕ ದೈವತ ಅಭಿಮಾನಿದೇವತೆ 'ಪ್ರಮಿಥ್ಯೂಸ್' ಎನ್ನು ಸ್ಥಳೀಯ ಅಧೀನಿಯರು ಹಿಂದಿನಿಂದ ಪೂಜಿಸುತ್ತಿದ್ದರು (ಐಕ್ಯಕ್ರ. I. ೩೮೮). (ನಾ). ೨. ಪೂರಕವಾದುದು; ಪಾಲನೆ ಮಾಡುವಂಥದು: ಅವನ ಸಂದೇಶ ಆರ್ಯಸಂಸ್ಕೃತಿಯ ಪೋಷಕ ಎಂಬುದು ಇತಿಹಾಸಕಾರರ ಬಹುಮತ (ಹುಣ್ಣಾರ. ೦೦೩ ೩೮೪); ಈ ಮೂರು ಜಾತಿಯ ದ್ರವ್ಯಗಳನ್ನು ರಾಮಾನುಜಗೀತಾಭಾಷ್ಯದಲ್ಲಿ ಧಾರಕ, ಪೋಷಕ, ಭೋಗ್ಯಕ ಎಂದು ಕರೆದಿದೆ (ಕಾರದ. ೩೩೫). ೩. ರಕ್ಷಿಸುವವನು; ಕಾಪಾಡುವವನು: "ಭರ್ತಾ–ಪೋಷಕಂ" (ಕಾಶಕ್ಕ. ೦೬೯); ಈ ಅಂಶವನ್ನು ಶಿಕ್ಷಣಚಿಂತಕರು ಪ್ರತಿಪಾದಿಸಿದಂತೆಲ್ಲ ಪೋಷಕರಲ್ಲೂ ಆ ಬಗ್ಗೆ ಆಸಕ್ತಿ ಹೆಚ್ಚುತ್ತಿದೆ (ಶಿಕ್ಷದ. ೦೪೪). ೪. ಬೆಳಸುವವನು: ವೃದ್ಧಿಗೊಳಿಸುವವನು. [ಸಂ.]

**ಪೋಷಕಿ** (ನಾ). ಸಲಹುವವಳು; ಪಾಲನೆ ಮಾಡುವವಳು: ಅವಳ ಅಜ್ಜಿಯೇ ಅವಳ ಪೋಷಕಿಯಾಗಿದ್ದಳು (ಕ್ರಹಾಶ. ೧೧೦).
[ಪೋಷಕ + –ಇ]

**ಪೋಷಣ** (ನಾ). ೧. ರಕ್ಷಣೆ; ಪಾಲನೆ: "ತುಷ, ಹೃಷ–ಪುಷ್ಟೌ, ಪೋಷಣದೊಳ್" (ಕಾಶಕ್ಕ. ೦೯೪); ಇಷ್ಟರ ವಿಶಿಷ್ಟರ ತೋಷಣ ಪೋಷಣಂಗಳೊಳ್ಳು ಗದಮಿನ್ನು ಬಣ್ಣಿ(ಣಿ)ಸುವುದೀ ಧರೆ ಪಂಡಿತಪಾರಿಜಾತನಂ ನಾಗನಂ (ಎಇ. XXI. ೦೩–೩೩; 1260). ೨. ವಿಸ್ತಾರ; ವ್ಯಾಪ್ತಿ: ಸಂಗೀತದ ಸಾಧನ, ನಿರೂಪಣ, ಪೋಷಣ ಎಂಗಿಲಾಗಿ ಅಧಿರುಚಿ ಮತ್ತು ಪ್ರವೃತ್ತಿಗಳಲ್ಲಿ ಆಗಿರುವ ಬದಲಾವಣೆಗಳು ಗಮನಾರ್ಹ (ಕಾರದ. ೩೪೫). [ಸಂ.]

**ಪೋಷಣೆ** (ನಾ). ರಕ್ಷಣೆ; ಪೋಷಿಸುವಿಕೆ: ಸರಿಯಾದ ಪೋಷಣೆಗೆ ಬೇಕಾದ ಮುಖ್ಯ ವಸ್ತುಗಳು ಜೀವಸತ್ತ್ವಗಳು (ಕರಕೋ. XI. ೨೩೪).[ಸಂ. ಪೋಷಣ]

**ಪೋಷಾಕ** 'ಪೋಷಾಕು' ನೋ.

**ಪೋಷಾಕು, ಪೋಷಾಕ** (ನಾ). ಉಡುಪು; ಉಡುಗೆ; ತೊಡುಗೆ: ಸ್ವಯಂಸೇವಕನ ಪೋಷಾಕಿನಲ್ಲಿಯೇ ಇರುವುದರಿಂದ ಇವರ ಬಟ್ಟೆಬರೆಗಳಿಗೆ ಹೆಚ್ಚು ವೆಚ್ಚವಿಲ್ಲ (ಸೀವಾಹ. ೯೬); ಅವರು ಪೋಷಾಕನ್ನು ಗುರುತಿಸುತ್ತಾರೆ, ಮನುಷ್ಯರನ್ನು ಗುರುತಿಸುವುದಿಲ್ಲ (ಶಿಐರ. II. ೨೬೨). **ಪೋಷಾಕ**: ಆತನು ತನ್ನ ಸೂಪರಿಂಟೆಂಡೆಂಟ ಪದವಿಯ ಪೋಷಾಕವನ್ನೇ ಧರಿಸಿದ್ದನೆಂದು ಬೇರೆ ಹೇಳಬೇಕಾದ್ದಿಲ್ಲ (ಶಿಧಿಕ್ಕ. ೪೩).
[← ಪಾರ. ಹಿಂ. ಪೋಶಾಕ್; ಮರಾ. ಪೋಷಾಕ್, ಪೋಷಾಖ್, ಪೋಷಾಗ್, ಪೋಶಾಕ್, ಪೋಶಾಖ್, ಪೋಶಾಗ್]

**ಪೋಷಿತ** (ಗು). ೧. ಸಲಹಿದ; ಕಾಪಾಡಿದ. ೨. ಬೆಳೆಸಿದ; ವೃದ್ಧಿಪಡಿಸಿದ. [ಸಂ.]

**ಪೋಷಿಸು** (ಕ್ರಿ). ೧. ಸಲಹು; ಕಾಪಾಡು; ಸಾಕು: ಭಾವಶಿವದೇವ ಕ್ರಿಯಾಜೀಯ ಮಾಣಿಯಂ ಕೈಕೊಣ್ಡು ಪೋಷಿಸಿ (ಶಾಇಇ. XI–i, ೬೪–೦೭; 1028); ವಿಷಮಿಕ್ಕಿದವಗೆ ಷಡ್ರಸವನುಣಿಸಲುಬೇಕು ದ್ವೇಷ ಮಾಡಿದವನ ಪೋಷಿಸಲು ಬೇಕು (ಪುರಂದ. ೨–೬೩–೦); ಗಿಳಿಯ ಮರಿಯನು ತಂದು ಪಂಜರದೊಳಗೆ ಪೋಷಿಸಿ ಕಲಿಸಿ ಮೃದುನುಡಿಗಳನು ಲಾಲಿಸಿ ಕೇಳ್ವ ಪರಿಣತರಂತೆ (ಶಂಕ. ೨೦). ೨. ಪುಷ್ಟೀಕರಿಸು; ಸಮರ್ಥನೆ ಮಾಡು: ಜಗತ್ತಿನ ಇನ್ನೂ ಇತರೆ ಒಂದೆರಡು ಭಾಷೆಗಳಲ್ಲಿ ಈ ಪರಿವರ್ತನೆಯನ್ನು ಪೋಷಿಸುವ ಆಧಾರಗಳು ಇವೆ (ಭ್ರಾಶಿ. ೩೩೩); ಒಂದೊಂದು ಸಂಪ್ರದಾಯದವರೂ ವೇದ ಪುರಾಣಗಳಿಗೆ ತಮ್ಮ ತಮ್ಮ ಧರ್ಮಕ್ಕೆ ಅನುಕೂಲವಾಗುವಂತೆ ವ್ಯಾಖ್ಯಾನ ಮಾಡಿ ತಮ್ಮ ತಮ್ಮ ವಾದಗಳನ್ನು ಪೋಷಿಸಿಕೊಂಡಿದ್ದಾರೆ (ಕಾರದ. ೨೪೪). ೩. ಅಭಿವೃದ್ಧಿ ಮಾಡು; ಬೆಳೆಸು: ಮೂಳರಂ ಪಾಳಿಸಿಯುಂ ಕೋಶಮುಂ ಪೋಷಿಸಿಯುಂ ಇಂತು ಸಾಮ್ರಾಜ್ಯಮಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತಮುಮೆನಿಸಿದಂ (ಚಂದ್ರಪು. ೨–೬೦); ಕಾವ್ಯದಲ್ಲಿ ವರ್ಣನೆ ಯಾವ ರೀತಿಯಲ್ಲಿ ಬಂದರೆ ತನ್ನ ಸೊಗಸನ್ನೂ ಕಾವ್ಯದ ಸೊಗಸನ್ನೂ ಒಟ್ಟಿಗೆ ಪೋಷಿಸುವುದೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ (ಸಹಾಕೋ. ೧೦೨). [ಪೋಷಣ + – ಇಸು]

**ಪೋಷ್ಯ** (ಗು). ೧. ಪಾಲಿಸಬೇಕಾದ: ಸಲಹಬೇಕಾದ: ಸಾಕಲು ಅರ್ಹವಾದ: 'ಪೋಷ್ಯವರ್ಗ' ಪರಾ. (ನಾ). ೨. ಪಾಲಿಸುವಿಕೆ; ಪೋಷಣೆ: "ಪೌಷಣಂ . . . ಪೋಷ್ಯಂ, ಪೌಷ್ಯಂ, ಪೋಷಿತವ್ಯಂ – ಈ ೭ ಪೊರೆತಂ" (ಕಾಶಕ್ಕ. ೦೯೬). [ಸಂ.]

**ಪೋಷ್ಯವರ್ಗ** (ನಾ). ರಕ್ಷಿಸಬೇಕಾದ ಬಂಧುಜನರು; ಆ ತಾಯಿ, ತಂದೆ, ಗಂಡು, ಪತ್ನಿ, ಆಶ್ರಯದಲ್ಲಿರುವವನು, ಮಕ್ಕಳು, ಅಭ್ಯಾಗತ, ಅತಿಥಿ ಮತ್ತು ಅಗ್ನಿ—ಈ ಒಂಬತ್ತು ಜನ ಪೋಷ್ಯವರ್ಗಕ್ಕೆ ಸೇರಿದವರು. ಇಲ್ಲಿಯ ಹೆಸರುಗಳು ಮತ್ತು ಸಂಖ್ಯೆಗಳ ಬಗ್ಗೆ ಭಿನ್ನಾಭಿಪ್ರಾಯಗಳಿವೆ: ಕಡಲ ತಡಿಯೆಯ್ದೆ ನೆಲನಂ ಪಡೆದರ್ ಭವದೀಯ ಪುತ್ರರುಳ್ಳಳವಿಗಳೊಳ್ ಪಡೆದುದು ಬಂಧುಜನಂ ನಿಮ್ಮಡಿಗಾವೇಂ ಪೋಷ್ಯವರ್ಗದಿಂದಂ ಪೊಱಗೇ (ಆದಿಪು. ೯–೩೪); ಸಾಮಂದರವರ ಪೋಷ್ಯವರ್ಗಕ್ಕೂ ಬಂಧುವರ್ಗಕ್ಕೂ ಸೇರಿದ ಜನರು ಹೊರತು ಉಳಿದ ಇಲಾಖೆಗಳ ನೌಕರರು ೯೬೮೭ ಮಂದಿ ಇದ್ದರು (ಮೈಹಾಶಂ. II. ೦೬೬). [ಸಂ.]

**ಪೋಸ, ಪಾಸ**[2]**, ಹೋಸ, ಹೌಸ**[1] (ನಾ). [ಜೈನ]ಕತ್ತಲೆಯಾಗುವುದಕ್ಕೆ ಮೊದಲು ಆಹಾರ ಸ್ವೀಕಾರ ಮಾಡುವ ವ್ರತ, — ನಿಯಮ: ಅಚ್ಯುತ. . . ಅವರ ಮನೆಗೆ ಊಟಕ್ಕೆ ಹೋದ. ನಾಗರಾಜನಿಗೆ 'ಪೋಸ' ವಲ್ಲವೇ! (ಮುಗಿಯು. ೯೦). **ಪಾಸ**[2]: ನಾವು ಜೈನರು, ಕತ್ತಲೆಗೆ ಮುಂಚಿ ಊಟ; ನಾವು ಪಾಸದವರು (ಕಗುಳ. ೩೬). **ಹೋಸ**: ಸ್ಥೂಳಸೂಕ್ಷ್ಮಂಗಳಪ್ಪ ಪ್ರಾಣಿಗಳು ರಾತ್ರಿಯೊಳನ್ನಪಾನಾದಿಗಳಂ ಪೊರ್ದಿದೊಡೆ ಪಿಂಗಿಸಲ್ಬಾರವಪ್ಪುದಱಿಂದನ್ನಪಾನಖಾದ್ಯಲೇಹ್ಯಂಗಳಪ್ಪ ಚತುರ್ವಿಧಾಹಾರಮಂ ರಾತ್ರಿಯೊಳು ನವಶುದ್ಧಿಯಿಂ ಪರಿಹರಿಸುವುದು ಹೋಸಮೆಂಬಾಚಿನೆಯಣು ವ್ರತಮಕ್ಕುಂ (ಶಾರ. ೩೦೭); ಉತ್ತಮಗೋಷ್ಠಿಯೊಳಿರುತಿರೆ ಹೋಸದ ಹೊತ್ತಾಗಲೂಟವಾಯ್ತೊಡನೆ (ಶಿರಶ. ೩೭–೯೦); ಶರಧಿಗೆ ರವಿ ಸಾರುತಿರೆ ಕಂಡು ಹೋಸಕೆ ಸರಸಿಜಮುಖಿ ಪೋಪೆನೆನಲು (ಶಸಂ. ೯–೬೦). **ಹೌಸ**[1]: ತಾಂ ಹೌಸಕ್ಕೆ ಬೇಗೆಳ್ದು ವರಮನೆಯ ಪುಗಲಿತ್ತ ಸೂರ್ಯಂ. . . ಪಶ್ಚಿಮಾಂಬುಧಿಯ ಸಾರಿದಂ (ಶ್ರಿಧುಪು. ೯–೦೫೪).
[←ತುಳು. ಪೋಸ = ಸೂರ್ಯಾಸ್ತ, ಸಂಜೆ; ಪೋಸದಾಯೆ = ಸೂರ್ಯಾಸ್ತಕ್ಕೆ ಮೊದಲು ಆಹಾರವನ್ನು ಸ್ವೀಕರಿಸುವ ವ್ರತ]

**ಪೋಸಳ** 'ಪೊಯ್ಸಳ' ನೋ.

Δ**ಪೋಸಟ** 'ಪೊಯ್ಸಳ' ನೋ.

**ಪೋಸ್ಟ್** 'ಪೋಸ್ಟು' ನೋ.

**ಪೋಸ್ಟು, ಪೋಸ್ಟ್** (ನಾ). ೧. ಅಂಚೆವ್ಯವಹಾರವನ್ನು ನಡೆಸುವ ಕಚೇರಿ; ಟಪಾಲುಕಚೇರಿ: ಕಾಗದಗಳನ್ನು ತಂದು ಹಂಚುವುದು ಪೋಸ್ಟಿನ ಕೆಲಸ (ಶೀವಾಶ್ಕ. ೬೦). ೨. ಅಂಚೆಯ ಮೂಲಕ ಬಂದಿರುವ ಅಥವಾ ಕಳುಹಿಸಲಿರುವ ಪತ್ರ ಮುಂತಾದುವು; ಟಪಾಲು: ಆ ದಿನ ಪೋಸ್ಟಿನಲ್ಲಿ ವಾಚೊಂದು ನನಗೆ ಧರ್ಮಾರ್ಥವಾಗಿ ಪಾರ್ಸಲ್ ಆಗಿ ಬಂದಿತ್ತು (ಮುಂಗಾಮು. ೦೪). **ಪೋಸ್ಟ್**: ೨. ಅಂಚೆಯವನು 'ಪೋಸ್ಟ್' ಎಂದ ಕೂಡಲೇ ಬಾಗಿಲಿನ ಕಡೆಗೆ ಓಡಿದೆ (ರೂಢ).

**ಪೋಸ್ಟ್‌ಕಾರ್ಡು**=(ಅಂಚೆಯ ಮೂಲಕ ರವಾನಿಸುವ, ಗೊತ್ತಾದ ಅಳತೆಯ) ರಟ್ಟುಕಾಗದ: ಪೋಸ್ಟ್‌ಕಾರ್ಡನ್ನು ಮರೆಯದಂತೆ ಟಪಾಲಿಗೆ ಹಾಕು (ರೂಢ). **ಪೋಸ್ಟ್‌ಬಾಕ್ಸು**=ಅಂಚೆಯನ್ನು ಹಾಕುವ ಡಬ್ಬಿ; ಟಪಾಲುಪೆಟ್ಟಿಗೆ: ಪೋಸ್ಟ್‌ಮ್ಯಾನ್ ಬಂದು ಪೋಸ್ಟ್‌ಬಾಕ್ಸಿನಲ್ಲಿದ್ದ ಕಾಗದಗಳನ್ನೆಲ್ಲಾ ತೆಗೆದುಕೊಂಡು ಹೊರಟನು (ರೂಢ). **ಪೋಸ್ಟ್**

ಮಾಸ್ಟರು = ಅಂಚೆಕಚೇರಿಯ ಯಜಮಾನ : ಅವರು ಈ ವಿಭಾಗಕ್ಕೆ ಹೊಸ ಪೋಸ್ಟ್‌ಮಾಸ್ಟರರಾಗಿ ಬಂದಿದ್ದಾರೆ (ಲೋಕ). ಪೋಸ್ಟಾಫೀಸು = ಅಂಚೆಯ ವ್ಯವಹಾರಗಳನ್ನು ನಡೆಸುವ ಕಚೇರಿ; ಟಪಾಲು ಕಚೇರಿ : ಪೋಸ್ಟಾಫೀಸಿನ ಹತ್ತಿರವೇ ನಮ್ಮ ಮನೆ ಇದೆ (ಲೋಕ). [←ಇಂ. Post]

**ಪೋಸ್ತು** (ನಾ). ಗಸಗಸೆ ; ಅಫೀಮಿನ ಕಾಳು : ಖುರಾಸಾನಿಓಮ, ಪೋಸ್ತು, ಸೈಂಧವಲವಣ . . . ಇಷ್ಟನ್ನೂ ಸಮಚೂರ್ಣ ಮಾಡಿ . . . ಒಂದು ಗುಳಿಗೆಯನ್ನು ಅನುಪಾನವರಿತು ತೆಗೆದುಕೊಂಡರೆ ರಕ್ತಗ್ರಹಣೀ, ಹೊಟ್ಟೆನುಲಿ, ಸಂಗ್ರಹಣಿ ಸಹ ನಿಲ್ಲುವುವು (ಸಕವೈ. ಪು. ೯೮೯).

[← ಪಾರ. ಪೋಸ್ತ್ ; ಹಿಂ. ಪೋಸ್ತ್, ಪೋಸ್ತಾ]

**ಪೋಹಚಿ** 'ಪೌಂಚಿ' ನೋ.

**ಪೋಹಣಿಗೆ** 'ಪವಣಿಗೆ' ನೋ.

**ಪೋಹಣಿಸು** 'ಪವಣಿಸು' ನೋ.

**ಪೋಳ್$_1$** 'ಪೋಟ್$_1$' ನೋ.

**ಪೋಳ್$_2$** 'ಪೋಟ್$_2$' ನೋ.

**ಪೋಳ** (ನಾ). ಯೋಧ; ಸೈನಿಕ (?) : ಪೋಳರ್ ಪೂಣ[ರ್ದುಮ]ಟ್ಟಿಟ್ ಸೂ[ಳೇ]ಚಿಚಿವಲ್ಲಿ ಸಿಡಿದ ಬಾಳುಡಿ ಬಾನೊಳ್ ಕೀಲಿಸಿರೆ ಬಳ್ಳಿ ಮಿಂಚುಗಳಾಳಾಳಿ[ಗ]ಮಡರೆ ಪೊಳೆವ ತೆಱನಂ ಪೋಲ್ಕುಂ (ವರ್ಧಮಾ. ೯-೬೩).

[ ? ]

**ಪೋಳರೆ** (ನಾ). ಬಿರುಕು ಬಿಟ್ಟಿರುವ ಬಂಡೆ ; ಸೀಳಿದ ಬಂಡೆ : ಪೋಳರೆಗೆ ಓರಿಯೋಡ ತಾಟ ಪೊಳ್ತಲ್ಲದಾ ಬೋಳ ಕೈಗಾಯ್ದನೆನಲೀ ಬೋಳನಾಳಿದಂ (ಶಾಂತೀಶ. ೦೩೯-೨೯೯).

[ ಪೋಳ್$_2$ (< ಪೋಟ್$_2$) + ಅರೆ$_2$ (< ಅಱ್$_4$) ]

**ಪೋಳಲ್** 'ಪೋಟಲ್' ನೋ.

**ಪೋಳಲ್ಘೋರ** 'ಪೊಟಲ್ಘೋರ' ನೋ.

**ಪೋಳಿ** (ನಾ). ಗುಂಪು; ಪಂಗಡ; ಬಣ : ಅವನ ದಾಯಾದಿಮತ್ಸರವನ್ನು ತೀರಿಸಿಕೊಳ್ಳಲು ದಾರಿಯೊಂದನ್ನು ಹುಡುಕುತ್ತಿದ್ದ. ಊರಿನಲ್ಲಿ ಅವನು ಒಂದು ಪೋಳಿಯನ್ನು ಕಟ್ಟಿದ (ಮುಂಕ್ನಹಾ. ೦೯೩). [< ಸಂ. ಪೋಲ]

**ಪೋಳಿಗೆ$_1$**, **ಹೋಳಿಗೆ$_1$** (ನಾ). ೧. ಕಣಕವನ್ನು ಹಪ್ಪಳದಂತೆ ಲಟ್ಟಿಸಿ ಹೂರಣವನ್ನಿಟ್ಟು ಮತ್ತೆ ಲಟ್ಟಿಸಿ ಹಂಚಿನ ಮೇಲೆ ಎಣ್ಣೆ ಸವರಿ ಬೇಯಿಸುವ ಒಂದು ಬಗೆಯ ಸಿಹಿತಿಂಡಿ ; ಒಬ್ಬಟ್ಟು : "ಪೋಳಿಗೆ— ಪೋಲಿಕಾ = ಹೋಳಿಗೆ" (ಶಬ್ದಕೋ. ೨೬); ಪೂರಿಗೆಯಿಡ್ಡಲಿಗೆ ಪೋಳಿಗೆ [ಪಾಠಾಂ. ಸೋದಿಗೆ, ಸೊಂಡಿಗೆ] . . . ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿ (ವಡ್ಡಾರಾ. ೬೮-೦೬); ಡಾಕಿನಿಯರ ಕೈಯ ಪೋಳಿಗೆಯಂತೆ ರಕ್ಕಸಿಯರ ಮನೆಯ ಬೆಲ್ಲದಂತೆ (ಧರ್ಮಾಮೃ. ೦೩-೦೮೫). ೨. (ಹೋಳಿಗೆ ಮುಂತಾದ ಭಕ್ಷ್ಯಗಳನ್ನು ತಯಾರಿಸಲು ಬಳಸುವ) ಕಣಕವನ್ನು ಲಟ್ಟಿಸಿ ಮಾಡಿದ ಹಪ್ಪಳ : ಅರೆದಿಂಬಾಗಿರೆ ಬೆಂದ ಪೋಳಿಗೆಗಳಂ ತಚ್ಚೂರ್ಣಪಂಚಾಂಶಮಾಗಿರೆ ಖರ್ಜೂರಮನಲ್ಲದುಂದೆಱದ ಪಣ್ಣಂ ದ್ರಾಕ್ಷೆಯುಂ ಮತ್ತೆ ಶರ್ಕರೆಯಂ ಪೊಯ್ದು . . . ಖಂಡಲಡ್ಡುಗೆಗಳಂ ಮಾಟ್ಕೆಂದುಮಿಾ ಮಾಟ್ಕೆಯಿಂ (ಲೋಕೋಪ. ೮-೦೯). ಹೋಳಿಗೆ$_1$ : ೧. ಸೊಗಯಿಪ ಘೃತಪೂರಂ ಹೋಳಿಗೆ ಮಂಡಗೆ . . . ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ಆಜ್ಯಯುತಮಪ್ಪಪಂ ಮೆಲ್ದು (ಧರ್ಮಾಮೃ. ೦-೦೯೬); ಸೊಕ್ಕಿನೆದಿಂಬಂಗಾಡೆ ಹೋಳಿಗೆಯೆಂಬಂತೆ (ಅರ್ಧನೇ. ೬-೬೩ ಪ); ಸಮಸ್ತ ಬ್ರಾಹ್ಮಣಸಮಾಜವು ಹೋಳಿಗೆಯುಂಡಿತು (ಹಬ್ಬಬ. ೦೩); ನೆರೆಮನೇ ಹೋಳಿಗೆಗೆ ತುಪ್ಪ ಕಾಯಿಸಿದ ಹಾಗೆ (ಗಾದೆ). ೨. ಬೆಂದ ಕಳಿಲೆಯ ಹಿಟ್ಟನಿಳಿಹಿಯಾಱಿಸಿ ಹಲವು ಚೇದದ ಹಸುರು ಗಾಯ ತೆಱದಿನಾತ್ತರಿಸಿಕೊಂಡು . . . ಧೂಪವನಿಡುವುದು ಅದಱೊಳಗೆ ಬೆಂದ ಕಳಿಲೆಯ ಹೋಳಿಗೆಯ ಹೋಳನೊದವಿಸಿದ ಬಳಿಕ ಪೊಗ್ಗರಣೆಯಂ ಮಾಡುವುದು (ಸೂಪಶಾ. ೬-೯). 'ಪುಲ್ಲಿಗೆ$_2$' ಪರಾ.

**ಹೋಳಿಗೆ ತುಪ್ಪದಾಗ ಬೀಳು** = (ಆಲಂ) ಕೆಲಸವು ಕೈಗೂಡು : ಹೋಚು ಗಿಂಚು ಎಲ್ಲಾ ಮುಗಿದು ಹೋಳಿಗೆ ತುಪ್ಪದಾಗ ಬೀಳುವ ಹೊತ್ತು ಬಂದಿದೆ (ಪಾಪೋಟಿ. ೨೫೨). **ಹೋಳಿಗೆಯ ನೈವೇದ್ಯ** = (ಆಲಂ) ಹೊಡೆತ ; ಪೆಟ್ಟು : ಕೊಡುತ್ತೀರೋ ಇಲ್ಲವೇ ಎಲ್ಲರಿಗೂ ಹೋಳಿಗೆಯ ನೈವೇದ್ಯವಾಗಬೇಕೋ ? (ರಂಗರೋ. ೫). [< ಸಂ. ಪೋಲಿಕಾ]

**ಪೋಳಿಗೆ$_2$**, **ಹೋಳಿಗೆ$_2$** (ನಾ). ಹೊಪ್ಪಳೆ ; ಬೊಕ್ಕೆ : ಸ್ಫೋಟಕ, ಪೋಳಿಗೆ, ಸ್ಫಟಿಕ, ಪಳಿಕು (ಕಬ್ಬಾಪ. ೦೬೦ ಪ್ರಯೋ). ಹೋಳಿಗೆ$_2$ : "ಹೋಳಿಗೆಯೆಂದು ಸ್ಫೋಟಕಂ" (ಳಶಾ. ೬೫-೪೫೯); ಸ್ಫೋಟಕ ಶಬ್ದಕ್ಕಾದ ಹೋಳಿಗೆಯೆಂಬುದುಂ, ಲಂಪಟ ಶಬ್ದಕ್ಕಾದ ಲಂಬಳವೆಂಬುದುಂ ಱಟಿಕ್ಕೆ ಸಂದೇಹಂ (ಶಮದ. ೨೨ ವೃತ್ತಿ); ಬಸವಳಿದಂಗ ಹೋಳಿಗೆಮೂ[ಪಾಠಾಂ. ಮ್ರಾ]ಡುವ ಕಾಲ್ಬೀಸುವಾಂತು ತೀಡುವ ಸುಯ್ಲುಬ್ಬೆಗೊಂಡೊಡಲಿಂದವೆ ಪಾಡಳಿದನು ಸುಕುಮಾರ (ಶ್ರೀಪಾಂ. ೯-೫೩). 'ಹೋಳಿಗೆವಡೆ' ಪರಾ. [ < ಸಂ. ಪೋಟಿಕ, ಸ್ಫೋಟಕ ]

**ಪೋಳಿಸು** 'ಪೋಟಿಸು' ನೋ.

**ಪೋಳು$_1$** 'ಪೋಟ್$_1$' ನೋ.

**ಪೋಳು$_2$** 'ಪೋಟ್$_2$' ನೋ.

**ಪೋಳ್ಗಳೆ**, **ಹೋಳುಗಳೆ** (ಕ್ರಿ). ೧. ತುಂಡುಮಾಡು ; ಕತ್ತರಿಸಿ ಹಾಕು ; ಕಡಿ : ಹರಿಗಳು . . . ಮಿಗೆ ಪೋಳ್ಗಳೆಯಲೆರಗಿದವಮಮ ಮಸ್ತಕವ (ಅಂಬಿಕಾ. ೯೨-೬೯). **ಹೋಳುಗಳೆ** : ೧. ಹೋಳುಗಳೆದನು ಸುಭಟ ನಿಟ್ಟೆಲುಮೂಳೆಯನು (ಕುಮಾವ್ಯಾ. ೦೩-೯೦) ; ಕರಾಳಕುಜವನು ಮುಸಲ ಹತಿಯಲಿ ಹೋಳುಗಳೆದನು (ಜೈಭಾಗ. ೦೦-೫೫-೦೯) . ೨. ನಾಶಮಾಡು ; ಧ್ವಂಸಗೊಳಿಸು : ಆಯುಷ್ಯವನು ರವಿ ಹೋಳುಗಳೆಯನೆ ಹರಿಪರಾಙ್ಮುಖರಾದವರನು (ಜೈಭಾಗ. ೨-೨-೫). ೩. ನಾಶವಾಗು ; ಧ್ವಂಸವಾಗು : ಕಾಳಗದೊಳಿರಡುದಳದಲ್ಲಿ ವಂದಕ್ಷೋಣಿ ಹೋಳುಗಳೆದುದು ಮೂರುಸಂಜೆಯೊಳು (ಮರಂಗ. ೫೬-೦). ೪. ಛಿದ್ರವಾಗು ; ತುಂಡಾಗು : ಸೀಳಿಬಿದ್ದುದ್ದವು ಮದೇಭಘಟಾಳಿ ಘೋಟಕನಿಕರ ನೆಲದಲಿ ಹೋಳುಗಳೆದಿರ್ದವು (ಕೊರಡಾ. ೩-೬-೦೩). [ಪೋಳ್$_2$ (< ಪೋಟ್$_2$) + ಕಳೆ$_1$]

**ಪೋಳ್ಗುಟ್ಟು**, **ಹೋಳುಗುಟ್ಟು** (ಕ್ರಿ) . ತುಂಡಾಗುವಂತೆ ಹೊಡೆ ; ಸೀಳು : ಇದು ತಮಸ್ತೋಬ ಪರ್ವತವ ಪೋಳ್ಗುಟ್ಟುವತಿಭಿದುರಂ (ಕಪಿಸ. II. ೯೮೮ ಚತುರಾಚಾರ್ಯಕೃತಾ). **ಹೋಳುಗುಟ್ಟು** : ಬೆಟ್ಟಯ ವಜ್ರಕವಾಟವ ನೃಪ ಹೋಳುಗುಟ್ಟಿಬಿಟ್ಟನು ನಿಮಿಷದೊಳು (ಭರತ. ೨೮-೬೨).

[ಪೋಳ್$_2$ (< ಪೋಟ್$_2$) + ಕುಟ್ಟು$_{1}$]

**ಪೋಳ್ಗೆಯ್** (ಕ್ರಿ). ಸೀಳು ; ಹೋಳುಮಾಡು : ನಿಮ್ಮವಂ ಸೀಳಿ ಪೋಳ್ಗೆಯ್ದು ಕುದಿಸುತ್ತಿಹರು (ಪಶಸೋ. ೯-೩೦).

[ಪೋಳ್$_2$ (< ಪೋಟ್$_2$) + ಕೆಯ್$_1$]

**ಪೋಳ್ದಟ್ಟೆ** (ನಾ). (ವೀಳ್ಯದೆಲೆ ಹಾಗೂ) ಚೂರಡಕೆಯನ್ನು ಇಟ್ಟಿರುವ ತಟ್ಟೆ : ಫಣಿವಳ್ಳಿಯ ಪರ್ಣ ಸ್ವರ್ಣವರ್ಣದಿ ಕೀಪಣಿಸಿರ್ದ ಕಟ್ಟ ಕತ್ತುರಿಯ ಮಣಿಯೆನಲುರ್ದಿದ ಪೋಳ್ದಟ್ಟೆಯ ನಿಟ್ಟೆಣಿಸಿದರ್ ತಲೆಗಿಂಬಿನಲಿ (ವೋಪಹ. ೩೦-೫೩). [ಪೋಳ್$_2$ (< ಪೋಟ್$_2$) + ತಟ್ಟೆ]

**ಪೋಳ್ದುಂಬು** (ಕ್ರಿ). ಅಡಕೆಯ ಹೋಳನ್ನು ತುಂಬು : ಕೋಮಲವಡೆದ ಬಂದುಗವಾಯ್ಗೆ ಪೋಳ್ದುಂಬಿ ಭ್ರಾಮಕವಡೆದು ಚುಂಬಿಸಿದ (ಸೋಪಹ. ೦೬-೩೭). [ಪೋಳ್$_2$ (< ಪೋಟ್$_2$) + ತುಂಬು$_1$]

**ಪೋಟ್$_1$**, **ಪೋಳ್$_1$**, **ಪೋಳು$_1$**, **ಹೋಳ್**, **ಹೋಳು$_1$** (ಕ್ರಿ). ೧.

ಕತ್ತರಿಸು ; ತುಂಡುಮಾಡು : "ಪೋಟ್—ವಿದಾರಣೇ, ಖಂಡೇ ಚ, ವಿರಚನಾರ್ಥೇ ಚ (ವಿರ್ಪಡಿಸು)" (ಶಮಂಧಾ) ; ಅಚ್ಚಗೊಂಡದೊಳಗುರ್ವಿಸೆ ಸೀಳಿಸಿ ಮಾಣದಿಕ್ಕೆ ಪೋಟ್ಟಿರ್ವಗಿ ಮಾಡಿ ತಾಳಿಸೆ ಸುರುಳ್ಕೆನೆಗಂ ನೆಟಿ ಸಾಯಂ (ಶಾಂತಿಪು. ೬-೯೩) ; ಎನ್ನನೊದೆದ ನಿನ್ನ ಕಾಲ್ಗಳನೆನ್ನ ಮಕ್ಕಳು ಮಾನುಮೊಂದಾಗಿಯುಮೇನಾಗಿಯುಂ ಸೀಳ್ದು ಪೋಟ್ದು ತಿಂಬೆವು (ಸುಕುಮಾ. ೫-೬೪) ; ಎಟ್ಟಟ್ಟ ಪೆಣ್ಗಳನ್ ಪೋಟ್ದನ್ (ಅಕ್ಕಶಾ. ೩-೯೩). ೨. ಎರಡು ಭಾಗ ಮಾಡು; ಸೀಳು : ಪುಲಿ ಬಂದು ಪಾಯ್ದು ಬಸಿಱು ಪೋಟ್ದು ನೆತ್ತರಂ ಕುಡಿದು ತಿಗಲೆಯಂ ಪೊಟ್ದು ತಿಂಬಾಗಳ್ (ವಡ್ಡಾರಾ. ೯೮-೧೯); ಚಲದಿಂ ಕೃಷ್ಣೆಯ ಕೇಶಮಂ ಪಿಡಿದ ನಿನ್ನಿಂದಾದಬಲ್ ನಿನ್ನುರಸ್ಥಲಮಂ ಪೋಟದೆ ಪೋಪುದಲ್ತು (ಶಂಶಖಾ. ೧೨-೦೧೬); ನಸುನೆನೆದೊಯ್ಯನುಳ್ಳಲರೆ ಪೋಟ್ದಿಲೆ ಕಂಡದೆ ಕೂಡೆ ಕೆಂಪಿನಿಂ ರಸವೊಸರ್ವಂತಿರೊಕ್ಕ ನಱುದಂಬು ಲಕಂ ಕುರುಳಿಂ ಕಟಲ್ದು ಬಿರ್ದೆಸೆವಲರ್ಗಂ ಮದಾಳಿ ಮೊರೆದೆರ್ದೆಱುಗುತ್ತಿರೆ (ಅಂಬಾಪ. ೩-೦೬). ೩. ಸೀಳಿಹೋಗು ; ಬಿರಿ : ನಡುವೆನೊಡೆದಿರ್ಬಗಿ ಯಾಗಿ ಪೋಟ್ದು ನೀರೇಱಿದ ನಾಳಿಪುಣ್ಣೊಡೆದು ಸೌಳಿನೆ ಸೀಳ್ದುದು ದೋಣಿಪೋಪಿನಂ (ಸುಕುಮಾ. ೫-೦೬); ಬೞಿಕ್ಕಯ್ಯಿಂ ನೆತ್ತಿ ಪೋಟ್ವಂತಿರೆ ಪೊಡೆಯಲ್ (ದಕಕು. ೯-೩೮) ; ಪೋಟ್ಗುಂ ಬಲ್ಗಿರಿಗಳಂದು ವಜ್ರಾಹತಿಯಿಂ (ಶಬ್ದಾಮ. ೯೩೩ ಪ್ರಯೋ). ೪. ಒಡೆ ; ಪುಡಿಮಾಡು ; ಹುಡಿಗುಟ್ಟು : ಪೊದೆದಜ್ಞಾನಶೈಲೇನ್ದ್ರಮಾನ್ಪೋಟಿದು (ಎಕ. II, ೧೨೦ ; ಸು. 700); ತಿರ್ಬಿಲ್ವಾಡುವೆನೋ ಕುಲಾದ್ರಿಚಯಮಂ . . . ಬ್ರಹ್ಮಾಂಡಮಂ ಪೋಟ್ವೆನೋ (ಜಗಪು. ೬-೩೫). ೫. ನಾಶಮಾಡು ; ಧ್ವಂಸಮಾಡು : ನಿಜಾಯುಧಭುಜಾಬಲದಿಂದಿಟ್ಟನನೇಕದುರ್ಗಚಯಮಂ ಪೋಟ್ದಿಂ ರಿಪು ವ್ರಾತಮಂ (ಪಕಶಿ-೫-೪). **ಪೋಳ್₁**: ೧. ಬಡನೇಶಾ ನಿಮ್ಮ ಪಾದಾಬ್ಜಮ ನೆಲಿಲೆ ಬಿಡಂ ಸೀಳ್ದೊಡಂ ಪೋಳ್ದೊಡಂ (ರಕ್ಷಾಶ. ೯೬) ; ಓರಂತೆ ಹರ ನೊಲಿದು ತನ್ನ ಭಾಳಾಕ್ಷಿಯಿಂ ತೋರಕಿಡಿಯಂ ಬಿಡಲಾಕ್ಷಣಂ ರುಧಿರಮಂ ಪೀರಿ ಮುರಿದಜನ ಶಿರಮಂ ಪೋಳ್ದುದು (ಚಿಪು. ೧೬-೧೫) ; ಪಿರಿಯ ಪಾವಂ ಪಿಡಿದ ಕರಿಯುಂ ಸೀಳ್ವ ಸಿಂಹಮಂ ಪೋಳ್ವ ಶರಭಮಂ ಮಾಲಾ ಕಾರದಿಂ ಸಾಲ್ಗೊಂಡೆತ್ತಿ ನಭೋಮಂಡಳಕೆ ಜಿಗಿದೊಗೆದು ನೆಗೆವ ಭೇರುಂಡಂ ಗಳಿಂ (ರಾಜಶೇ. ೫-೫೫ ವ). ೨. ವೈರಿವೀರಾಪನೀಶ್ವರವಕ್ಷಸ್ಥಳಮಂ ಸ್ವಖಡ್ಗ ನಖರವ್ಯಾಘಾತದಿಂ ಪೋಳ್ದು (ವ್ಯಕಂ. ೦೯೩೪, ೦೦೬ ; 1174) ; ಜಾತಿಜಾಯಿಲಂಗಳು . . . ಉಂಗುಟದಿಂ ಭಾಳಾಗ್ರಂಬರಂ ಪೋಳ್ದೆತ್ತಿ ತನಗಿದಿರಂ ಕಾಣದೆ ಹೆಕ್ಕಳದಿಂ ಕೆಕ್ಕಳಿಸಿ ನೋಡುವ್ಯೆಲಂಗಳುಮಂ (ಶಂಬರ. ೦೬-೦೬). ೪. ಸೀಳ್ವೆನಿಳೆಯಂ ಕೀಳ್ವೆನದ್ರಿಗಳನರ್ಣವಂ ತೂಳ್ವೆನೇಳಬ್ಧಿಯಂ ಪೋಳ್ವೆನಿದಿರಾದರಂ . . . ಬ್ರಹ್ಮಾಂಡಮಂ ಪೋಳ್ವೆಂ (ಚಿಪು. ೩೦-೦೦).

**ಪೋಳು₁** : ೨. ಸುರಹೊನ್ನೆಯ ಜಿನನಂ ಸೀಳುತ್ತಂ ಅರುಹ ಪ್ರತಿಮೆಯನುಱಿ ಪೋ[ಪಾಠಾಂ. ಹೋ]ಳುತ್ತಂ (ಅರರ. ಹ. ೯೪೯-೨೯) ; ಮೃತ್ಯುಂಜಯಂ ಗಜಾಸುರನ ಪೋಳುವ ತೆಱದಿ ನೆತ್ತಿಯಂ ಸೀಳ್ದು (ರಾಶಶ. ೦೬-೩೯). **ಹೋಳ್** : ೧. ಬಳಿಗಳಿವ ಹೋಳ್ವ ಸೀಳ್ವಾಱಿಸುವ ನೆಱಿ ಸುಲಿವ ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೮-೨೯). **ಹೋಳು₁** : ೧. "ಹೋಳು . . . ತುಂಡುಮಾಡು" (ಗಂಗಾಶು. ೩೫೪). ೪. ಏಳುಕಡಲೊಡಲೆಡೆಯುಲಡಗಿರ್ದ ಶೈಲಮಂ ಹೋಳು ವರು ವಡಬಶಿಖಿ ತಣ್ಣೆತೆನೆ ಕೋಪಮಂ ತಾಳುವರು (ಸಿದ್ಧರಾ. ೧-೨೦); ಅದರ 'ರೂಕ್ಷಶಿಖರಾಗ್ರಮನ್ . . . ಮಿಂಚುರಿಯ ಪೊಯ್ಲಿಂದೆ' ಹೋಳುವಾಗ ತೂರುವಾಗ ಅದು ಭೂಗರ್ಭದಾಳಕ್ಕೆ ಉರುಳುವುದು (ಐದ್ಕೃತ 'iv, ಪಾಟಿಕತ ಪಟುಕ್ಕ). ೫. ಎನ್ನ ಜನ್ಮದ ಕೋಳಮಂ ಹೋಳಿದನೆನುತ ಸಲ್ಲೀಲೆ ಸದ್ಭಾವ ದಲಿ ನುತಿಸಿದ ದೇಶಿಕೋತ್ತಮನು (ಸಪ್ತುರು. ೨-೨೬) ; ಸಚರಾಚರಂಗಳ ಜಾಲವನು . . . ಅವನಾಜ್ಞೆಯಲಿ ಹೋಳುವನು ಹಣೆಗಿಚ್ಚಿನಲಿ ಹರನು (ಏಭಾಗ. ೬-೩-೨೬). ೬. ನಾಶವಾಗು ; ಹಾಳಾಗು : ಅಳು ನಗುವನು ಸಹಜ ನೆಚ್ಚಿ ಬಾಳುವೆಯ ಹೋಳುವೆಮ ? (ಶರಾಪ. ೫೦-೦೦).

[ದೇ. ‖ತಮಿ. ಪೋಟ್; ತೆಲು. ಪೋಂಚು; ಪರ್ಜಿ. ಪೋಟ್]

**ಪೋಟ್₂**, ಪೋಳ್₂, ಪೋಳು₂, ಹೋಳು₂ (ನಾ). ೧. ತುಂಡರಿಸಿದ ಭಾಗ ; ಚೂರು ; ತುಂಡು : ಕರ್ಪೂರಸಮ್ಮಿಶ್ರಮಪ್ಪ ನೆಲವಕ್ಕಿಯಡಕೆಯ ಪೋಟ್ಗಳುಮಂ . . . ಬ್ರಹ್ಮಯ್ಯಂಗೆ ಕೊಟ್ಟು (ವಡ್ಡಾರಾ. ೭೮-೨೩) ; ನೀ [ಪಾಠಾಂ. ಸೀ]ಳ್ದ ಮಾವಿನ ಪೋಟಂದದ ಕಣ್ಗೆ ಬಾಷ್ಪಜಲಮಂ ಚಿತ್ತಕ್ಕೆ ಸಂತಾಪಮಂ ನಿಸಗಂ ಮಾಡಿದನಾವನಾತನೆ ವಲಂ ಗಂಧೇಭವಿದ್ಯಾಧರಂ (ಶಂಶಖಾ. ೯-೬೪); ಒಂದು ಪೋಟನಿತಱೊಳಿರ್ದುದೊಂದು ಕಡಿ ಪೀತ ದೊಳಿರ್ದಪುದು (ಸಮಶ. ೯-೬). **ಪೋಳ್₂** : ೧. ಸಿರವೊಡೆದೊಡೇ ನಾಯ್ತು ಸರಸಿರುಹಸಂಭವಂ ಧುರದರಿವ್ರನೆ ಬಿರಿದ ಮಸ್ತಕದ ಪೋಳ್ಗಳಂ ವರಚತುರ್ವದನಂಗಳಂ ಮಾಡಿಕೊಂಡು . . . ಹರಿಗೆ ಮಾಱಾಂತು (ಚಿಪು. ೦೬-೯೦); ಆ ಕುಮುದ್ವತಿ ನರೇಂದ್ರಮಸ್ತದ ಪೋಳ್ಗಳನೊಂದು ಗೂಡಿ ಪಿಡಿದು (ಕೈಖಾಶಾ. ೨೬-೬೬); ಪರಿಮಳವೆರೆದ ಪೂಗೀಫಲದ ಪೋಳ್ಗಳ . . . ಸರಸವಾಡುತಲೀಯಲು (ಅಪಂಶಾ. ೦-೩-೫೦). ೨. ಬಿರುಕು ; ಸೀಳು : 'ಪೋಳರೆ' ಪರಾ. ೩. ಅಡಕೆಯ ಚೂರು : ಚುಂಬಿಸ ಲಾಣ್ಮನ ಬಾಯೊಳು ಪೋಳ್ಗಳ ತುಂಬಿದಳೆರೆಗಳಿಗೆಯೊಳು (ಮೋಹತ. ೩೨-೦೦). 'ಪೋಳ್ದುಂಬು' ಪರಾ. **ಪೋಳು₂** : ೧. ಉಡಿದು ಬಿದ್ದಿದೆ ಮಣಿಮೇಖಲೆ ಸಿಡಿಲುಱಿ ಹೊಡೆದ ರೋಹಣಪರ್ವತದ ನಿಡುಗಲ್ಲ ಪೋಳಂತೆ (ಶಂರಾಶಾಂ. ೩೯-೯೨). **ಹೋಳು₂** : ೧. ಎತ್ತಿದದುಭುತ ಕೋಪದಲಿ ಹಿಡಿನೊತ್ತಿ ಸೀಳಲು ಹೋಳು ನಿಮಿಷಕೆ ಹತ್ತಿ ಮೂದಲಿಸುತ್ತ ಬರುತಿರೆ ಭೀಮ ಬೆಱಗಾದ (ಕುಮ್ಯಾಸ. ೦೦೩. ೨-೦೩೦); ರಕುತದ ಜಿಗಿಯ ಜೋರಿನಲೆಸೆದವಾ ಹೋಳಿರಡು ರಕ್ಕಸಿಯ (ತೊರಶಂ. ೫-೦ ೨೩); ವೈರಿ ಸುಭಟನ ಗದೆಯ ಗದೆಯಲಿ ಹೊಯ್ದು ನುಗ್ಗೊತ್ತಿದನು ಸಾವಿರಹೋಳಿನಲು ಬಿದ್ದುದು ಧರಿತ್ರಿಯಲಿ (ಏಭಾಗ. ೦೦-೩೯-೦೬). ೩. ಹೋಳು ಬೆಳ್ಳಿಲೆ ಕರ್ಪುರಗಳ ತಿಂಬ ಗಯ್ಯಾಳರ ತಹುದಚ್ಚರಿಯೆ (ಶಂರಾಶಾಂ. ೨೯-೯೯) ; ತಿಳಿದು ನೋಡಲು ಮಧ್ಯರಾತ್ರಿಯನೊಂದರೆಗಳಿಗೆಯ ಮಾಡಿ ಕತ್ತುರಿಯ ಗುಳಿಗೆ ಸೇರಿದ ಹೋಳ ಕಾಂತನ ಪರಹಸ್ತನಳಿನಕ್ಕೆ ಕೊಟ್ಟಳೆಲ್ಲೆಯಲಿ (ಮೋಹತ. ೦೬-೬೬).

**ಪೋಳ್ಮಾಡು**, **ಹೋಳು ಮಾಡು**, **ಹೋಳ್ಮಾಡು** = ೧. ಸೀಳು ; ಸಿಗಿ : ಇದುಂಗಟ್ಟಿಗೆಯೊಳಿಟ್ಟು ಬಿಡದೆ ಗರಗಸದಲ್ಲಿ ನಡುನೆತ್ತಿಗಳನರಿದು ಪೋಳ್ಮಾಡುವಾಗಳಡರ್ದು ಬಿಡಿಸುವರೆ ಸತಿಸುತರು (ಗುರುಬೋ. ೦-೬೦) ; ಹುಡುಗನು ಕೋಪದಿಂದ ಗೊಂಬೆಯನ್ನು ಎಸೆದು ಎರಡಾಗಿ ಹೋಳು ಮಾಡಿ ಬಿಟ್ಟನು (ಲೂ). ೨. ಒಡೆದು ಹಾಕು ; ಪುಡಿ ಮಾಡು : ವಿಜಯಾರ್ಧಶೈಲದೊಳಿಕ್ಕಿದ ಪಡಿಯಾ ನಾಳೆ ಹೋಳ್ಮಾಡಿ ಬಿಡುವೆನೊಣಗಿದ ಬರಹಾಳಿಯನೊಡೆಯ ಹೊಯ್ವಂತೆ (ಭರತ. ೨೯-೫). **ಪೋಟಾಗು**, **ಹೋಳಾಗು** = ೧. ಸೀಳು ; ಬಿರಿ : ಪೋಟಾದತ್ತೆನ್ನ ಹೃದಯಮದು ಲಲಿತಾಂಗಿ (ಉದ್ಭಟ. ೬-೬೯) ; ನಾಗಿಗೆವಾಸವಾಲವ ಮಾರಂ ಶಶಕಂ ಮೃಗವೆಂದೆನುತ್ತ ಪೋಟಾಗಿರಾತಿರ್ಪುದೇನದು ವಿಚಾರಿಸಿ ನೋಡು ವಡಿಂದುಮಂಡಲಂ (ಧರ್ಮಾಪ. ೦-೩೬); ಹಿಳಿದ ಲೋಹದ ಸೀಸಕಂಗಳ ಬಲಿಸಿದರು ಹೋಳಾದ ಕವಚವ ಹೊಲಿಸಿದರು (ಕುಮ್ಯಾಭೀ. ೫-೩೬). ೨. ಚೂರಾಗಂ ; ತುಂಡಾಗು : ಇಳೆಗವನ ತಲೆಯನು ಬಿಸಿಕ್ಕಿದನ ಕಪಾಲ ಸಾವಿರಹೋಳಹುದು (ಕುಮ್ಯಾದ್ರೋ. ೦೯-೯೦) ; ಎರಡು ಹೋಳಾಗಿ ಬಾಳೆಯ ಕಾಯ ಸಂಬಳಿಸಿ . . . ಸಂಭಾರವಮಂ ತುಂಬಿ (ಸೂಶಖಾ. ೯-೬೨). **ಹೋಳಡಕೆ** = ತುಂಡಂಮಾಡಿದ ಅಡಕೆ; ಅಡಿಕೆಯ ಚೂರು: ಹೋಳಡಕೆ ಬಿಳಿ ಎಲೆ ನೀವೆ ಕೊಳ್ಳಿರಿ ಕೊಳ್ಳಿರಿ (ಪಾಪತ. ೦೬೩)

[ < ಪೋಟ್‌₁. / ತಮಿ. ಪೋಟ್‌ ; ಮಲ. ಪೊಳಿ, ಪೊಳುಕ್ಕ ; ತುಳು. ಪೂಳು ]

**ಪೋಟ್‌₃**, ಹೋಟ್‌ (ನಾ). ೧. ಮರದ ಪೊಟರೆ ; ಡೊಗರು : ಕಳ್ಳರಂತೆಗೆಯ್ವೆಮೆಂದೊಡಂಬಟ್ಟು ಕಳ್ಳಲ್ಲಿಯೆಲ್ಲಮೆಂಟನೆಯ ಭಾಗಮಂ ಮರದ ಪೋಟಿನೊ[ಪಾಠಾಂ. ಪೊಟಲೊ, ಪೊಳೊ]ಳಿಟ್ಟು ದಿವಸಕ್ಕಂ ಪೋಪರ್ (ವಡ್ಡಾರಾ. ೨೦-೬); ಪರ್ವರಂಗಳ ಪೋಟ್ಗಳೊಳಗಣಿಂದವೊಗೆದ ಕೇಸುರಿಗಳ ಬಳಗದಂತೆ (ಶಂಕಥಾ. ೦೦-೭೦ ವ); ಪೋಟ್ಗಳೆಡೆಯಲ್ಲಿ ಕವಲ್ಗಣೆಯಲ್ಲಿ ಸುತ್ತಲುಂ ಗಿಳಿಗಿಳ ಹಿಂಡುಗಳ್ ನೆರೆದು ಕೂಡಿಯುಮಲ್ಲಿ ಸಹಸ್ರಮುಂ ನಿರಾಕುಳಮನುರಾಗದಿಂ ಪಲವುದೇಶದೊಳಿರ್ಪುವು ಬಂದು ಭೂಪತೀ (ಕಾದಂಪೂ. ೧೨೬). ೨. ಪೊಳ್ಳು ; ಜಳ್ಳು : 'ಪೋಟ್ಮರ' ಪರಾ. **ಹೋಟ್**: ೧. "ಕೋಟರವಾಗಿ ಕೂಟವೆನೆ ಹೋಟಕ್ಕು [ಪಾಠಾಂ. ಪೊಟಲಕ್ಕು]" (ಪಂಗಿರಾ. ೩೨-೩). 'ಪೋಟ್ಕೆ' ಪರಾ.
[ದೇ. ತಮಿ. ಪುಟ್ಟು, ಪೊಳ್ಳು ]

**ಪೋಟಲ್**, ಪೋಳಲ್, ಹೊಳಲು₁ (ನಾ). ಮರದ ಡೊಗರು; ಪೊಟರೆ; ಕೋಟರ: "ಕೋಟರಾಖ್ಯಯಂ ತಾಂ ಪೋಟಲ್" (ಪಸ್ತುಕೋ. ೩೦-೬); ಪೋಟಲ ಪಾಪಡರೆ . . . ಮರದ ಮೊದಲೊಳ್ ಬೀಟಲ್ ನಿಲ್ವಂತೆ ನಿಶ್ಚಲಂ ಮುನಿ ನಿಂದಂ (ಶಾಂತಿಪು. ೯-೦೦೬); ಬಸಿಱನಪ್ಪಿದ ಮಱಿಗಳಂ ಹೊತ್ತು ಸಾಲ್ಗೊಂಡು ಮರದ ಪೋಟಲ್ಗೆ ಸಾರ್ದುವು ಕೋಡಗದ ಹಿಂಡು (ಅನಂಪು. ೯-೦೬ ರಗಳೆ); ಪೋಟಲೊಳಗಿರ್ದ ದುಷ್ಟ ವ್ಯಾಳಂ ಮುಳಿದೆನ್ನ ಕೈಯನೌಡಲ್ (ದಶಕು. ೨ ೦೦೦). **ಪೋಳಲ್**: ಪೋಳಲೊಳಗಣ ಬಾಲವಿಹಂಗಂಗಳನೆಱಂಕೆಯೊಳಱಂಕೆಕೊಂಡು ಪಾಱಲನುವಾಗಿ ತೂಱಲ್ಗೊಂಬಿನೊಳಿರ್ಪ ವಿಹಂಗಸಂಕುಳದಿಂದತಿಸೌಂದರ್ಯಮಂ . . . ಒಳಕೊಂಡಿರ್ಪುದು (೧೫೪. ೦-೦೨೬ ವ). **ಹೊಳಲು₁**: ಪುಳಯ ಫಣಿಯುಣಲ ಹೊಳಲೊಳಗೆ ಕೈಯು ನೀಡಿ ದಾಡೆಯಂ ಮುಱಿಯ ಬಡಿವಂತೆ (ಪಶಕಾ. ೬-೦೦); ಬೆರಣಿಯ ಶಿಖಿಯಂ ಹುಣಿಸೆಯ ಹೊಳಲೊಳಗಿಕ್ಕುತ ಕ್ಷಣದೊಳ್ಪೊಕ್ಕಳಿದನಸುವನಾ ಮಹರಾಜಂ (ಪಶ್ವಕಾ. ೩-೩೬).
[ಪೋಟ್‌₃ + — ಅಲ್‌₂./ತಮಿ. ಪೊಳ್ಳಲ್, ಪುಟಲ್]

**ಪೋಟಲ್ಗೋರ** 'ಪೊಟಲ್ಗೋರ' ನೋ.

**ಪೋಟಿಸು**, ಪೋಳಿಸು, ಹೋಳಿಸು (ಕ್ರಿ). ೧. ಚೂರು ಮಾಡು ; ತುಂಡು ಮಾಡು : ಈಗಳೆ ಕೊಂದು ಪೋಟಿಸಿ ತಾಳಿಸಿ ಗವ್ಯನೆ ನಿಮ್ಮ ನೆಮ್ಮ ಮಾಲಿನಿಯರ್ಗೆ ಬಲಿಗುಡುವೆಂ (ರಾಜಶೇಖ. ೦೦೨-೯). **ಪೋಳಿಸು**: ೧. ಕಂಡನಾ ಸಮಯದೊಳ್ ಕವಲಜಂ ಹರಕರದೆ ಖಂಡಿಸಿದ ತನ್ನುತ್ತಮಾಂಗಮಂ ರುಧಿರಜಲಮುಂಡು ಪೋಳಿಸಿದ ನಯನಾಗ್ನಿಯಿಂ ಪೊಗಳುತಿಹ ಸಕಲವೃಂದಾರಕರನು (ಕಬಪು. ೦೬-೦೩). **ಹೋಳಿಸು**: ೨. ಎರಡಾಗಿ ಭಾಗಮಾಡು ; ಸೀಳು : ನರಗೆ ಕೊಟ್ಟನು ಹೋಳಿಸಿದ ಕರ್ಪೂರದ ವೀಳೆಯವ (ಕುಮಾವ್ಯಾ. ೦೦-೩೭) ; ನಾರು ಬಲಿಯದ ಹುಣಸೆಕಾಯ ಮಾವಿನಕಾಯನಾರ್ಯದು ಕೆತ್ತಿ ಕಿಱಿದಾಗಿ ಹೋಳಿಸಿ (ಸೂಪಶಾ. ೩-೦೦). ೩. ಮುರಿಯುವಂತೆ ಮಾಡು ; ಒಡೆಯುವಂತೆ ಮಾಡು : ರದನದಿ ಹೋಳಿಸುವ ಖಾತಿಯಲಿ ನಾನಾವಿಧದ ಕೊಲೆಗಳಲಿ ಕಾಲನೊಗಡಿಸಿ ಕೊಲುವ ಮದಗಜಜಾಲಗಳೆಳಾರೋಹಕರು ಕೆಂಗೋಲ ಮಳೆಗಱೆದಾರಿದರು ನೃಪಸೇನೆಯೆರಡಱಲಿ (ಕುಮಾಭೀ. ೯-೬೩).
[ಪೋಟ್‌₃ + — ಇಸು₃]

**ಪೋಟ್ಗಡಿ**, ಹೋಳುಗಡಿ (ಕ್ರಿ). ಚೂರಾಗುವಂತೆ ಕತ್ತರಿಸು,— ತುಂಡರಿಸು : 'ಪೋಟ್ಗಡಿವೋಗು' ಪರಾ. **ಹೋಳುಗಡಿ** : ಹೋಳುಗಡಿದನು ಹತ್ತುವಿಶಿಖದಿ ಜೋಲುತಿರ್ದುದು ಕರುಳು ವನಸಗೆ (ಕೌಶಿರಾ. ೨೬-೪೪). [ಪೋಟ್‌₃ + ಕಡಿ₂]

**ಪೋಟ್ಗಡಿವೋಗು** (ಕ್ರಿ). ಚೂರಾಗುವಂತೆ ಕತ್ತರಿಸಿ ಹೋಗು ; ಛಿದ್ರವಾಗು : ಅಂದು ಚಂಡಿಕೆಯ ಕೂರ್ವಾಳಿಂ ಪೋಟ್ಗಡಿವೋದ ಮಹಿಷಾಸುರನ ಬಿರಿಪೊಡೆಯಿಂ ಸುರಿದ ದಂಡೆಗರುಳ್ಗೆ ಪಾಸಟಿಯಪ್ಪ ಅರೆಜರಿದ ಜಾದಿನ ಕೋಡುವೆಟ್ಟನೊತ್ತಗೊಂಡು ಸಿಂಧೂರವಿಲಿಪ್ತಮದಸಿಂಧುರಗಂಡಮಂಡಲದೊಂದು ಪಾಂಗಿನಿಂ ತೋರ್ಪ ತಟ್ಟಲಿಂ (ರಾಜಶೇಖ. ೬೨-೦೧).
[ಪೋಟ್ಗಡಿ + ಪೋಗು₁ (< ಪೋ₁)]

**ಪೋಟ್ಗಿದಱ್** (ಕ್ರಿ). ಹೋಳಾಗು ; ಬಿರಿ : ಬೀಗಿ ಬೆಳೆದು ಕೆಂಬಿತ್ತುಗಳಿಂ ಪೋಟ್ಗಿದರ್ದಿರೆ ದಾಳಿಂಬದ ತಾಟ್ಗಳ್ ನಿಟ್ಟಪರ ದಿಟ್ಟಿಗಿಟ್ಟಳ ಮೆಸೆಗುಂ (ಶಬ್ದಾಸು. ೦೯೩ ವ್ಯಾಖ್ಯಾ). [ಪೋಟ್‌₃ + ಕೆದಱ್]

**ಪೋಟ್ಮರ** (ನಾ). ಟೊಳ್ಳಾದ ಮರ ; ಜಳ್ಳಾಗಿರುವ ಮರ : ಅಲ್ಲಿ ತನ್ನಂ ಕಾಣಲೊಡನಿರ್ವಾಡಿಸಿದ ಶೋಕದಾವಾನಲನೆರ್ದೆಯೊಳ್ ಪೋಟ್ಮರದ ಕಿರ್ಚಿನಂತೆಳುರೆ ತಳಮಳಗಾಗಿ (ಶಾಂತಿಪು. ೦-೯೪ ವ); ಪಟುಗಟ್ಟಿದಟಲ ಕಿರ್ಚುಂ ಪೋಟ್ಮ [ಪಾಠಾಂ. ಪೊಳ್ಮ]ರದ ಕಿರ್ಚಿನಂತೊಳಗೊಳಗಳುರೆ (ಅರ್ಧನೇ. ೬-೦೨ ವ). [ಪೋಟ್‌₃ + ಮರ₁]

**ಪೌಂಚಾಯಿಸು** (ಕ್ರಿ). ೧. ಸೇರುವಂತೆ ಮಾಡು ; ತಲುಪಿಸು : ವೀರ ರಾಜೇಂದ್ರವಡೆಯರವರು ಸರಕಾರದ ಫೌಜಿಗೆ ರಸದು ವಗೈರೆ ಸಾಮಾನು ಪೌಂಚಾಯಿಸಿ ಕುಂಪನಿ ಕೆಲಸಕ್ಕಾಗಿ ಮೆಹನತ್ತು ಮಾಡಿದರಿಂದಾ (ರಾಜೇಂದ್ರ. ೨೩೦). ೨. ನ್ಯಾಯವಿರುದ್ಧವಾದ ಬೋಧನೆಯನ್ನು ಮಾಡು : (*).
[ ಪೌಂಚ್ನಾ (P ← ಹಿಂ. ಪಹುಂಚಾನಾ) + — ಇಸು₃ ]

**ಪೌಂಚಿ**, ಪವುಂಚಿ, ಪೊಹಚಿ, ಪೋಂಚಿ, ಪೋಚು₁, ಪೋಚಿ₁, ಪೋಹಚಿ, ಪೌಚಿ (ನಾ). ಮುಂಗೈಗೆ ತೊಡುವ ಒಂದು ಬಗೆಯ ಆಭರಣ : "ಆವಾಪಕಃ, ಪಾರಿಹಾರ್ಯಃ— ೨ ಸೂಡಗವೆಂಬ ಕಡಗ, ಚೂಡಾಲುಂ, ಪೌಂಚಿ . . . ಮುಂತಾದ ಹಸ್ತಾಭರಣ" (ಸಿದ್ಧಾಂತಿ. ೨೦೦); ಓಲೆ ಮೂಗುತಿ ಕೊಪ್ಪು ಮೇಲೆ ರನ್ನದ ಕುಸುಮ ಕೀಲು ಚಿಂತಾ ಪೌಂಚಿ ಕಡಗ ಹೊನ್ನಬಳೆಯು (ಕಠೋಲ. ೦೩೯-೯); ಮುಂಗೈಯಲ್ಲಿರುವ ರತ್ನ ಖಚಿತವಾದ ಪಟ್ಟೆಕಡಗ, ಅದರ ಮೇಲೆ ಮುದ್ದಾದ ಪೌಂಚಿ (ಹುಲ್ಲ. ೪೦). **ಪವುಂಚಿ** : (*). **ಪೊಹಚಿ** : ಕೈಯೊಳಗಿನ ಆರುತೊಲೆಯ ಪೊಹಚಿ ಕಳೆದನು (ಪುಂಜಿಕಾಯಿ. ೪-೦೯೬). **ಪೋಂಚಿ** : "ಪಾರಿಹಾರ್ಯ_ಮುಂಗೈ ಆಭರಣ; ಪೋಂಚಿ" (ಗಂಗಾಕು. ೨೦೬). **ಪೋಚು₁** : ಮುಂಗೈಗೆ ಕಟ್ಟಿದ ಪೋಚು, ಬೆರಳಿಗೆ ಹಾಕಿದ ಉಂಗುರಗಳು (ಅಹೋಳ. ೬). **ಪೋಚಿ₁** : ಮುತ್ತಿನ ಪೋಚಿಯು ಕೈಯ್ಯಾಗ . . . ಹೂವಿನ ಜರದಂಗಿ ರವಿಶಂಕರ ತೊಟ್ಟಿಹನು (ಸಿಶ್ವಕೃ. ೦೯-೬೨); ಒಂದು ಕೈಯ ಮುಂಗೈಯಲ್ಲಿ ರಿಸ್ಟ್‌ವಾಚು, ಇನ್ನೊಂದು ಕೈಯಲ್ಲಿ ಪೋಚಿ . . . ಧರಿಸಿದ್ದನು (ಕಮಜೀ. ೪೩). **ಪೋಹಚಿ**: ಕೈಯೊಳಗಿದ್ದ ರತ್ನಜಡಿತ ಪೋಹಚಿಯನ್ನು ಕೊಟ್ಟು ಅವರನ್ನು ಹಾದಿಗೆ ಹಚ್ಚಿದೆನು (ಪುಂಜಿಕಾ. ೦೦೩). **ಪೌಚಿ** : ಕೈಗಳಿಗೆ ಹಾಕಿದ ಚಿನ್ನದ ಪೌಚಿ ತಿರುವುತ್ತಾ ಅತ್ತಿಗೆ ನರಸಮ್ಮ ' . . . ಬೇಗ್ಗೆ ಬತ್ತೀನಿ ಅಂತ ಹೇಳೂ ಅಂದ್ರು' ಎಂದಳು (ಸರಸಮ್ಮ. ೦೩).
[←ಹಿಂ. ಪಹುಂಚಿ ; ಮರಾ. ಪೋಹಂಚೀ, ಪೋಂಚೀ, ಪೌಂಚೀ./ ತಮಿ. ಪೋಞ್ಚಿ ; ತುಳು. ಪೌಂಚಿ, ಪವುಚಿ ; ತೆಲು. ಪೋಂಚಿ]

**ಪೌಂಡರೀಕ** (ಗು). ೧. ಕಮಲಗಳಿಗೆ ಸಂಬಂಧಿಸಿದ. ೨. ಕಮಲಗಳಿಂದ ರಚಿತವಾದ. (ನಾ). ೩. ಒಂದು ಬಗೆಯ ಕುಷ್ಠರೋಗ. ೪. ಹನ್ನೊಂದು ದಿನಗಳವರೆಗೆ ಮಾಡುವ ಸೋಮಯಾಗ : ವಾಜಪೇಯ ಪೌಂಡರೀಕಾದಿ ಮಹಾಕ್ರತುಗಳಂ ನಿತ್ಯೇಷ್ಟಿ ಕಾಮ್ಯೇಷ್ಟಿ ಮೊದಲಾದವುಗಳಂ . . . ಕ್ಷತ್ರಿಯನಾದೊಡೆ ಅಧಿಕೃತನಾಗಿ ಮಾಳ್ಪುದು (ಮಹೀಶ. ೦೯೩). [ಸಂ.]

**ಪೌಂಡರ್ಯ** (ನಾ). (ಕಣ್ಣಿನ ರೋಗಗಳಿಗೆ ಔಷಧಿಯಾಗಿ ಬಳಸುವ)

ಫಳಾರ ತಿನಿಸಿ ಚಾ ಕುಡಿಸಿದ್ರೆ ಆತು (ಎಳೆಕ. ೧೮). **ಫರಾಳ :** ೨. ಬ್ರೆಡ್ಡು, ಬಾಳೆಹಣ್ಣು, ಪುರೀ ಭಾಜಿ ಏನೇನೋ ಗುಡ್ಡ ಎತ್ತರ ಫರಾಳ ಕಟ್ಟಿಸಿ . . . ಶೇಷಣ್ಣ ಬಂದ (ವೃ.ಪಿ. ೩) ; ಅನೇಕ ಬಗೆಯ ಫರಾಳದ ವಸ್ತು ಗಳಿದ್ದರೂ ಅದನ್ನೆಲ್ಲ ಬದಿಗೆ ಸರಿಸಿದರು (ಸ್ವ.ತಿಪ. ೨೩) ; ಅಲ್ಲಿಂದ ಚಹಾ ಫರಾಳದ ಗಡಿಬಿಡಿಗೆ ಮೊದಲಾಯ್ತು (ಅನ್ನ. ೨೮). **ಫಲಹಾರ :** ೨. ಮುದ್ರಾಧಾರಣೆಯ ಕೆಲಸವು ತೀರಿದ ತರುವಾಯ ಶ್ರೀಪಾದಂಗಳ ಫಲಹಾರವು ಮುಗಿಯಿತು (ವಾಗ್ಭೂಪ. ೩). **ಫಳಾರ :** ೨. ಸುಮಾರು ಎರಡು ತಂಬಿಗೆಯಷ್ಟು ಬಿಸಿನೀರು . . . ಒಂದೂವರೆ ರಾಗಿರೊಟ್ಟಿ – ಇವಿಷ್ಟು ಅವರ ಬೆಳಗಿನ ಹೊಟ್ಟೆ ಗಟ್ಟಿ ಮಾಡುವ ಫಳಾರಗಳು (ಪರಾಪ ೨೯) ; ನಾವು. . . ಏಕಾದಶಿ ದಿನ ಯಾರೂ ಕಾಣದಂತೆ ರಾತ್ರಿ ಫಳಾರ ಮಾಡುತ್ತಿದ್ದಿಲ್ಲವೆ ? ಬ್ರಹ್ಮನು ನಾಲ್ಕು ಬಾಯಿಗಳಿಂದಲೂ ಫಳಾರ ಮಾಡುತ್ತಿದ್ದ ! (ಕೈಲಾಕ. ೬೯). [< ಫಲಾಹಾರ]

**ಫಲಾವಾಪ್ತಿ** (ನಾ). ೧. ಇಷ್ಟಾರ್ಥವನ್ನು ಪಡೆಯುವಿಕೆ ; ಫಲ ಪ್ರಾಪ್ತಿ. ೨. ಸಂತಾನಪ್ರಾಪ್ತಿ, –ಲಾಭ : ದೇವಿಯರೊಂದಭಿಲಷಿತ ಫಲಾವಾಪ್ತಿಗೆ ದೇವ ನಿಮ್ಮ ದಯೆಗೆಯ್ದ ಫಳಂ ಕೇವಲ ಶುಭಸೂಚಕಂ (ಮಲ್ಲಿಕಾ. ೯–೩೩). [ಸಂ.]

**ಫಲಾಸಿ** ‘ಪಲಾಸಿ’ ನೋ.

**ಫಲಾಹಾರ** (ನಾ). ೧. ಹಣ್ಣುಗಳನ್ನು ಮಾತ್ರ ಆಹಾರವಾಗಿ ತೆಗೆದು ಕೊಳ್ಳುವುದು, –ಸೇವಿಸುವುದು : ಆ ವರುಷದಲ್ಲಿಯ ಜನರು ಮೂಱು ತಾಳದುದ್ದ ವರಾಗಿಕಲ್ಪವೃಕ್ಷಫಲಾಹಾರದಿಂದಿಪ್ಪತ್ತು ಸಾವಿರವರ್ಷದಾಯುಷ್ಯ ವಂತರೆನಿಸಿ . . . ಸದಾನಂದಿಗಳಾಗಿರ್ಪರ್ (ವಿವೇಕ. ೨೦೪) ; ಫಲಾಹಾರವನು ಮಾಡೂ ಪರಮಪುರುಷ ಭೂಬಲನೆ ಲಕ್ಷ್ಮೀಕಂದರ್ಪರ ಸಹಿತ (ಶ್ರೀರಂಗ. ರಾ. ೦–೦೩೦ ಪಲ್ಲವಿ). ೨. (ಉಪವಾಸ ಮಾಡುವವರು ತೆಗೆದು ಕೊಳ್ಳುವ) ಅಲ್ಪಪ್ರಮಾಣದ ತಿಂಡಿ, – ತಿನಿಸು ; ಅಲ್ಪೋಪ ಹಾರ : ಫಲಾಹಾರಕ್ಕೆ ಉಪ್ಪಿಟ್ಟು ಮಾಡುತ್ತೇನೆ (ಮಹಾಗ. ೮) ; ರಾತ್ರಿ ಫಲಾಹಾರಕ್ಕೆ ಕಡುಬು ಕಾಯಿಹಾಲು ಮಾಡಿತ್ತು (ವಾಗ್ಭೂಪ. ೨೦). [ಸಂ.]

**ಫಲಾಹಾರಮಂದಿರ** (ನಾ). ದುಡ್ಡು ತೆಗೆದುಕೊಂಡು ತಿಂಡಿ, ತೀರ್ಥ ಗಳನ್ನು ಒದಗಿಸುವ ಸ್ಥಳ ; ಹೋಟೆಲು : ಆ ಫಾಸಲೆಗೇ ಅದೊಂದು ಒಳ್ಳೆಯ ಫಲಾಹಾರಮಂದಿರವಾಗಿದೆ (ರೂಢಿ). [ಸಂ.]

**ಫಲಿ**$_1$ (ಗು). ೧. ಹಣ್ಣು ಬಿಟ್ಟಿರುವ. (ನಾ). ೨. ಹಣ್ಣು ಬಿಟ್ಟಿರುವ ಮರ : "ಫಲವಾನ್, ಫಲಿನಃ ಫಲೀ – ೩ ತತ್ಕಾಲದಲ್ಲಿ ಹಣ್ಣು ಬಿಟ್ಟಿರುವ ಮರದ ಹೆಸರುಗಳು" (ಸಿದ್ಧಾಂತಿ. ೦೦೦). [ಸಂ. ಫಲಿನ್]

**ಫಲಿ**$_2$ (ನಾ). ಒಂದು ಬಗೆಯ ಬಳ್ಳಿ ; ಪ್ರಿಯಂಗು : "ಶ್ಯಾಮಾ . . . ಫಲಿನೀ, ಫಲೀ . . . ಪ್ರಿಯಕಃ – ೧೨ ಪ್ರೇಂಖಣಗಿಡದ ಹೆಸರು, ಪ್ರಿಯಂಗು ಪ್ರಸಿದ್ಧವಾದದ್ದು" (ಸಿದ್ಧಾಂತಿ. ೦೨೪). [ಸಂ. ಫಲೀ]

**ಫಲಿತ,** ಫಳಿತ (ಗು). ೧. ಹಣ್ಣುಗಳುಳ್ಳ ; ಫಲಸಹಿತವಾದ : ಅನೇಕ ಪನಸ . . . ಕದಳೀಪ್ರಮುಖಫಲಿತಭೂಜರಾಜಿಗಳ್ (ಪುಷ್ಪಕು. ೩–೬೭ ವ) ; ಕೃತಾಂತನ ಫಲಿತ ಶಾಳೀವನವ ಮುತ್ತಿದ ಗಿಳಿಗಳೋ ಆಚಾರ್ಯನಂಬುಗಳೋ (ಕುಮಾರವ್ಯಾಸ. ೦೮–೪). (ನಾ). ೨. ಹಣ್ಣು ಗಳನ್ನುಳ್ಳುದು : ಶುಕವ್ರಜಮುತ್ಸುಕತ್ವದಿಂ ಸವಿವ ಫಲಂಗಳಿಂ ಫಲಿತಮಾಯ್ತು ಮನೋಜಮನೋರಥದ್ರುಮಂ (ಅಜಿಪು. ೬–೦೦) ; ವಧೂವರರಾಗವಿಷಯವಲ್ಲರಿ ಫಲಿತವಾದುದು (ಜಗನ್. ೨–೩೨ವ). ೩. ಪರಿ ಣಾಮ ; ಸಿದ್ಧಿ : ಆ ನೀತಿ . . . ಒಂದು ಬುದ್ಧಿಯ ಎಚ್ಚರಿಕೆಯ ಮತ್ತು ಒಂದು ಎದೆಯ ಗಟ್ಟಿತನದ ಸಯೋಗದ ಫಲಿತ (ಪಂಪಾಗ. vi ಸ್ನೇಹದ ಮಾತು). ‘ಫಲಿತಾಂಶ’ ಪರಾ. ೪. ಪರಿಣಾಮವಾಗಿ ಬಂದ ಫಲ : ಅನೇಕ ಬಲಗಳಿಗೆ ಸಮಾನವಾದ ಒಂದು ಬಲವನ್ನು ಆ ಬಲಗಳ ಫಲಿತವೆಂದು (Resultant) ಹೇಳುವರು (ಭೌತವಿ. ೯೪). **ಫಳಿತ :** ೧. ಫಳಿತ ಪನಸಾಮ್ರಸನ್ನಾತುಳಂಗ . . . ಅನೋಕಹಕುಳಂಗಳಿಂದೆಸೆವುವದಱ ಬಹಿ ರುದ್ಯಾನಂ (ವರ್ಧಪು. ೦–೩೩) ; ಫಳಿತ ಕುಜಂಗಳಿಂದಧಿಕನಂತಿರೆ . . . ದಾಡಿಮ ತರುವ್ರಜಮಾ ಬನದೊಳ್ ವಿರಾಜಿಕುಂ (ಕುಸುಮಾ. ೦–೯೦). [ಸಂ.]

**ಫಲಿತಾಂಶ** (ನಾ). ೧. ಪರೀಕ್ಷೆಯ ಪರಿಣಾಮ : ಫಲಿತಾಂಶಕ್ಕಾಗಿ ಕಾದ ವಿದ್ಯಾರ್ಥಿಯಂತೆ ವಾಸಂತಿಯ ಮನಸ್ಸಿನ ಸ್ಥಿತಿಯಾಗಿತ್ತು (ಕೇಪೋಡ. ೦೦೩) ; ನೀವು ಹೇಗೆ ಇಷ್ಟು ಒಳ್ಳೆಯ ಫಲಿತಾಂಶವನ್ನು ಪಡೆದಿರಿ (ಕಾರಮ. ೨೨೩). ೨. ಯಾವುದಾದರೊಂದು ಸಂಶೋಧನೆಯಿಂದ ತಿಳಿವಿಗೆ ಬಂದ ವಿಷಯ : ಅವರ ಮಹತ್ತರವಾದ ಸಂಶೋಧನೆಯ ಫಲಿತಾಂಶದಿಂದ ಮಾನವಕುಲಕ್ಕೇ ಉಪಕಾರವಾಯಿತು (ರೂಢಿ). [ಸಂ.]

**ಫಲಿತಾರ್ಥ** (ನಾ). ಪರಿಣಾಮದ ಫಲ : ಆತನಿದಿರೊಳಗಸುವ ಲುಲಿತ ಮೆಂದೆನಿಸಿ ಶಮನಿಲಯಮಂ ಸಾರುವೊಡೆ ಫಲಿತಾರ್ಥಮೆಂದು ತಿಳಿ (ಪಂಚಾರ. ೨–೩–೩೨). [ಸಂ.]

**ಫಲಿನ,** ಫಳಿನ (ಗು). ೧. ಫಲವನ್ನು ಕೊಡುವ. ೨. ಫಲ ಸಹಿತವಾದ ; ಸಫಲವಾದ. (ನಾ). ೩. ಹಣ್ಣು ಬಿಟ್ಟಿರುವ ಮರ : "ಫಲ ಹಿಡಿದ ಮರನಂ ಫಲಿನಮೆಂಬುದು" (ಹಲಾಯು. ೨೯–೨೪) ; "ಮರ ಗಳೊಳು ಫಲಿನಮೆನೆ ಫಲಮುಳ್ಳವಕ್ಕುಂ" (ಮಂಗರಾ. ೩೦–೧). ೪. ಹಲಸಿನ ಮರ ; ಪನಸವೃಕ್ಷ. **ಫಳಿನ :** ೩. "ಫಲಮುಳ್ಳುದು ಫಳಿನಂ" (ಪಸ್ತುಕೋ. ೩೦–೨). [ಸಂ.]

**ಫಲಿನಿ,** ಫಳಿನಿ (ನಾ). ೧. ಒಂದು ಬಗೆಯ ಬಳ್ಳಿ ; ಪ್ರಿಯಂಗು : "ಪ್ರಿಯಂಗುಃ, ಫಲಿನೀ, ಶ್ಯಾಮಾ–ಈ ೩ ಪ್ರಿಯಂಗು" (ಹಲಾಯು. ೩೨–೯೦) ; "ಪ್ರಿಯಂಗು ಶ್ಯಾಮೆ ಫಲಿನಿ" (ಮಂಗರಾ. ೩೯–೯). ೨. ಒಂದು ಬಗೆಯ ಸಸ್ಯ ; ಜಾಲಿನಿ : "ಫಲಿನಿ ಜಾಳಿನಿಯಕ್ಕು" (ಮಂಗರಾ. ೯೯–೯೯). ೩. ಒಂದು ಬಗೆಯ ಸಸ್ಯ ; ಅಗ್ನಿಶಿಖೆ : "ವಿಶಲ್ಯಾ, ಅಗ್ನಿ ಶಿಖಾ, ಅನಂತಾ, ಫಲಿನೀ, ಶಕ್ರಪುಷ್ಪೀ–೫ ಬೆಣ್ಣೆಬಿದುರುಸೊಪ್ಪು, ಅಗ್ನಿಶಿಖೆ" (ಸಿದ್ಧಾಂತಿ. ೦೯೩). **ಫಳಿನಿ :** ೧. "ಫಳಿನಿ ಶ್ಯಾಮಂ ಪ್ರಿಯಂಗುನಾಮಂ ನೆಗೞ್ಗುಂ" (ಪಸ್ತುಕೋ. ೩೩–೪). [ಸಂ. ಫಲಿನೀ]

**ಫಲಿನೀಫಲ** (ನಾ). ಪ್ರಿಯಂಗುಬಳ್ಳಿಯ ಹಣ್ಣು : ಇವು ಜಂಬೂಫಲ ಮಂಜರಿಯಿವು ಫಲಿನೀಫಲದ ಗುಚ್ಛಂ . . . ಎಂದು ತೋಱಿದನವನೀ ಪಾಲಂಗೆ ಲೀಲೆಯಿಂ ವನಪಾಲಂ (ಶಂಪ್ರಪು. ೨–೭೭). [ಸಂ.]

**ಫಲಿಯಿಸು** ‘ಫಲಿಸು’ ನೋ.

**ಫಲಿಸಿಕೆ** (ನಾ). ಹೊಂದಿಕೊಳ್ಳುವಿಕೆ ; ಪ್ರಯೋಜನಕರವಾಗಿರುವಿಕೆ ; ಕೂಡಿಬರುವಿಕೆ : ಈ ಊರಿನಲ್ಲಿ ಫಲಿಸಿಕೆಯಿಲ್ಲವೆಂದು ಅವರು ಊರು ಬಿಟ್ಟು ಬೇರೆ ಊರಿಗೆ ಹೋದರು (ರೂಢಿ). [ಫಲಿಸು + – ಇಕೆ]

**ಫಲಿಸು,** ಫಲಿಯಿಸು, ಫಳಿಯಿಸು, ಫಳಿಸು (ಕ್ರಿ). ೧. ಹಣ್ಣು ಬಿಡು ; ಫಲ ಕೊಡು : ಫಲಿಸಿತರಸಾ ನಿನ್ನ ಭಾಗ್ಯದ ಬೆಳಸು (ಕುಮಾರವ್ಯಾಸ. ೦೩–೩) ; ರಾಮ ನಿನ್ನಲಿ ಫಲಿಸಿತಗ್ಗದ ಸತ್ಕೃತರು (ತೊರರಾ. ೨–೩–೨೪) ; ಪಲ್ಲಿರಿದುಸಿರುವವೋಲ್ಫಲಿಸಿ ದಾಳಿಂಬದ ಮರಗಳೊಪ್ಪಿಹುವು (ಕಂಪನಿ. ೩–೮೦) ; ಬಾಳೇ ಅಗಿಗಳನ್ನು ಹಚ್ಚಿದ ಬಳಿಕ ಮೂರನೇ ವರ್ಷ ಫಲಿಸುತ್ತವೆ (ಕಭಾಗಿ. ೨೭೭). ೨. ಉಂಟಾಗು ; ಪ್ರಾಪ್ತವಾಗು ; ಒದಗು : ಇನ್ನಿವರಿಂ ದಿವ್ಯ ಫಲಿಕ್ಕೆ (ರರ್ಪುಣ್ಯಮ್ಮ. ೪–೯೬) ; ಸದುಗುರುಭಜನೆಂ ಫಲಿಸುವುದ ದೆಂದೋ (ಬಸವು. ೪೩–೬೨) ; ಸುಮಂತ್ರಮುಖದಲಿ ಫಲಿಸುವುದೆ ಸುತಲಾಭ (ತೊರರಾ. ೦–೩–೩) ; ಕೊನೆಯ ಗಳಿಗೆಯು ಫಲಿಸೆ ಕುಡಿ ಗಾಳಿಪಾಲು (ಬಿಜಾಪ. ೩೦–೦೩). ೩. ಪ್ರಯೋಜನವಾಗು ; ಉಪಯೋಗಕ್ಕೆ ಬರು : ಆವನೋಲೆಯಕಾಱತನ ಗಾಂಡೀವಿಯಿದಿರಲಿ ಫಲಿಸುವುದು ವೇಣಾವನದ್ಭುತ ಮಂತ್ರಶಕ್ತಿಗೆ ಮಣಿವನಸುರಾರಿ ಕಾವರಿಲ್ಲರ್ಜುನನ ಕೈಯಲಿ ಸಾವವರು

ನಾವಲ್ಲ (ಕುವ್ಯಾದ್ರೋ. ೬-೩೩); ಅವರ ಕೈಯಿಂದಲೇ ಹಿಡಿದು ಕೊಡಬೇಕು ಹಾಗಲ್ಲದಿದ್ದರೆ ಆ ದಾನವು ಫಲಿಸುವುದಿಲ್ಲ (ಹಂಗಾಳ್ವ. ೦೩೬). ೪. ಈಡೇರು; ನೆರವೇರು; ಸಿದ್ಧಿಯನ್ನು ಪಡೆ: ನುಡಿದುದು ಫಲಿಸಲರಿಯದು ದೈವಗತಿಯಲಿ ಫಲಿಸಿತಾದಡೆ ರಾಜ್ಯಲಕ್ಷ್ಮಿಗೆ ಸೂಳೆತನವಹುದೆ (ಕುವ್ಯಾಕ. ೩-೦೦); ಮಾತಿದು ಫಲಿಸದಿರ್ದರೆ ಪತಿಕರಿಸಬೇಡ (ಹೊರಾ. ೬-೧೭-೦೦); ಇನಿಯನೈತರುವ ಅವಧಿಯ ದಿನಂ, ಷಣ್ಮಾಸದ ನಿರೀಕ್ಷಣಂ ಫಲಿಸುವಾ ದಿನಂ (ಶಶ್ಯಾಂಗ. ೬೨-೦೬೦೩); ಅರ್ಜುನನು ಮಹಾಸಂಗ್ರಾಮಕ್ಕೆ ಅಣಿಯಾಗುತ್ತಾನೆ. ಹೀಗೆ ಭಗವಂತನ ಕಾರ್ಯ ಫಲಿಸುತ್ತದೆ (ಧರ್ಮಸಾ. ೧೩೪). ೫. ದೊರಕಿಸಿಕೊಡು; ಲಾಭವಾಗುವಂತೆ ಮಾಡು: ಗ ೬೦ ವರಹದ ಭೂಮಿಯಂನು ಕಂಲು ನೆಟು ಫಲಿಸಿ ಕೊಟದರಿಂದ (ಎಕ. VII, ಶಿವಮೊ. ೦೦೬-೨೨; 1558 ?).

**ಫಲಿಯಿಸು :** ೨. ತೀರ್ಥಕರನಪ್ಪ ಪುಣ್ಯಂ ಬೇಗಂ ಫಲಿಯಿಸಿತು (ಧರ್ಮಾಮೃ. ೪-೬೪); ಫಲಿಯಿಸಿದುದು ಕೆಯ್ಯೊಳ್ ಪರಲಲನಾಪರಿರಂಭವೊಲ್ಲದಿರ್ದೊಡಂ (ಲೀಲಾವ. ೦೪-೦೦೬); ಹುಂ ಎನೆಯುಂ ಅಲ್ತೆಯಲ್ತೆಯೆನೆಯುಂ ಫಲಿಯಿಸುಗುಂ ಪ್ರಶ್ನಾರ್ಥೋಜ್ಜ್ವಲಾನುಮಾನಾರ್ಥಯುಗಳಮವು (ಶಮದ. ೬೦೬). **ಫಳಿಯಿಸು :** ೧. ಫಳಿಯಿಸಲಾರ್ತುದೇ ಅಸುಕೆ (ಚಂದ್ರಪ್ರ. ೭-೯೨). **ಫಳಿಸು :** ೧. ಫಳಿಕುಂ ತ್ರಿವರ್ಗಮುಂ ಕೈಗೊಳಿಕುಂ ತತ್ಸಾಧನಂಗಳುಂ (ಜಗಪ. ೪-೭೪). [ಫಲ$_1$ + —ಇಸು$_3$]

**ಫಲೀನ** (ನಾ). ೧. ಹಣ್ಣು; ಫಲ. ೨. ಸಜ್ಜನ ; ಉತ್ತಮ ಮನುಷ್ಯ. ೩. ಮುನಿ; ಯತಿ. ೪. ಮೋಕ್ಷ; ಮುಕ್ತಿ. ೫. ತಲೆಯ ಕೂದಲು. ೬. ಕೇಸರು: "ಉತ್ತಮನುಂ ಪಂಕ ಶಿರೋರುಹಂ ಮುನಿ ಫಲಂ ಮೋಕ್ಷಂ ಫಲೀನಾಪ್ಪ್ವಯಂ" (ನಾನಾರ. ೪೬). [ ? ]

**ಫಲುಗುಣ** 'ಪಲುಗುಣ' ನೋ.

**ಫಲೋತ್ತರ** (ನಾ). ಒದಗಲಿರುವ ಫಲ ; ಬರಲಿರುವ ಪರಿಣಾಮ : ಧೌಮ್ಯಾದಿ ಋಷಿಗಳು ಹೇಳಿದರು ತಚ್ಛಕುನಸಂಗತಿಗಳ ಫಲೋತ್ತರವ (ಕುವ್ಯಾಅ. ೦೦-೦). [ಸಂ.]

**ಫಲೋತ್ಸುಕ** (ನಾ). ಫಸಲನ್ನು ಬಯಸುವವನು : ಬೇಸಬನಾಳ್ವನೇ ಬೆಳೆವ ಬಿತ್ತಿನ ಸಂಕ್ರಹುದೊಳ್ ಫಲೋತ್ಸುಕಂ (ಕೃಷ್ಣಕೃ.೩-೬೦). [ಸಂ.]

**ಫಲೋದಯ** (ನಾ). ೧. ಫಲವುಂಟಾಗುವುದು ; ಫಲಪ್ರಾಪ್ತಿ ; ಲಾಭ: ಜೀವವಿವಾದಮೆತ್ತ ಪರಲೋಕಫಲೋದಯಮೆತ್ತ (ಶಾಂತಿಪು. ೬-೦೨೯). ೨. ಫಸಲು ಉಂಟಾಗುವುದು,—ದೊರಕುವುದು : ದುಷ್ಟಪ್ರಸರದೇಳಿಗೆ ಪಾಪಿಯೋಲಗ ಹುಸಿಯ ಬಾಳುವೆ ಹುದುವಿನಾರಂಭದ ಫಲೋದಯವು ನಸಿದು ಹೋಗದೆ (ಕುವ್ಯಾಅ. ೬-೪೬). [ಸಂ.]

**ಫಲ್ಗು** (ಗು). ೧. ಚಿಕ್ಕ ; ಕ್ಷುದ್ರ ; ಅಲ್ಪವಾದ. ೨. ಸಾರವಿಲ್ಲದ ; ನೀರಸವಾದ. (ನಾ). ೩. ಚಿಕ್ಕದು ; ಸಣ್ಣದು: ಕೂಸನೆಯಿನ್ನುಂ ಶಾಸ್ತ್ರಾಭ್ಯಾಸಂ ಪಿರಿದಿಲ್ಲ ಫಲ್ಗು ಬಹುವಚನೋಪನ್ಯಾಸದೊಳಮೆಸೆದು ನೀನಿಂತೀ ಸಭೆಯಂ ಪೊಕ್ಕು ಬಾದುಗೆಯ್ಯಲ್ ನೆಱೆವೋ (ವರ್ಧಮಾ. ೦೪-೦೩). ೪. ಸಾರವಿಲ್ಲದಂದು : "ರಿಕ್ತಂ, ತುಚ್ಛಂ, ಅಸಾರಂ, ಫಲ್ಗು, ವ್ಯಷ್ಟಫಲಂ — ಈ ೫ ತುಚ್ಛಂ" (ಹಲಾಯು. ೦೨೬-೯೨). ೫. ಒಂದು ಬಗೆಯ ಸಸ್ಯ : "ಕಾಕೋದುಂಬರಿಕಾ, ಫಲ್ಗುः, ಮಲಪೂः, ಜಘನೇಫಲಾ—೪ ಕಲ್ಲತ್ತೀಗಿಡದ ಹೆಸರುಗಳು" (ಸಿದ್ಧಾಂತ. ೦೨೩). [ಸಂ.]

**ಫಲ್ಗುಣ** 'ಪಲುಗುಣ' ನೋ.

**ಫಲ್ಗುನ** (ನಾ). ೧. ಫಾಲ್ಗುಣಮಾಸ. ೨. ಅರ್ಜುನ ; ಫಲುಗುಣ. ೩. ಇಂದ್ರ. [ಸಂ.]

**ಫಲ್ಗುನಿ** (ನಾ). ಪುಬ್ಬಾ ಮತ್ತು ಉತ್ತರೆ ಎಂಬ ಎರಡು ನಕ್ಷತ್ರಗಳ **ಜೋಡಿ.** [ಸಂ. ಫಲ್ಗುನೀ]

**ಫವುಜಾಯಿಸು** 'ಪೌಂಜಾಯಿಸು' ನೋ.

**ಫವುಜು** 'ಫೌಜು' ನೋ.

**ಫಶಿ** (ನಾ). ಮೋಸ ; ವಂಚನೆ.

**ಫಶಿ ಹಾಕು** = ಮೋಸಮಾಡು : ಗಿರಾಣಿಕರು ಹಳೆಮಾಲಿಗೆ ಹೊಸಾದರ ಧಾರಣೆಯು ಕೊಟ್ಟು ಫಸಾಸುವ ಅಂದರೆ ಫಶಿ ಹಾಕುವ ಅಥವಾ ಠಕ್ಕಿಸುವ ಸಂಭವವಿರುತ್ತದೆ (ಮುಂಬಯ್ಯಾ. ೪೦). [←ಮರಾ. ಫಶಿ]

**ಫಸಗಿ** (ನಾ). = ಫಶಿ.

**ಫಸಗಿ ಹಾಕು** = ಮೋಸ ಮಾಡು: ನೀವು ನಮಗೂ ಫಸಗಿ ಹಾಕಿದ್ರೆಲ್ಲಾ (ಬಿಂಜಹು. ೦೭೬) ; ಕಾಕಾನ್ನ ಹ್ಯಾಂಗ ಫಸಗೀ ಹಾಕಿದೇ ಅಂತ (ದೀಕಹ. II, ೨೦೨). [← ಮರಾ. ಫಸಗತ್]

**ಫಸಫಸಿಸು** (ಕ್ರಿ). ಫಸಫಸ ಎಂಬ ಶಬ್ದವಾಗುವಂತೆ ನೊರೆ ಬಿಡು,— ಬುರುಗೇಳು : ಆಸಿಡ್ ಅಥವಾ ಲಿಂಬೇರಸ ಹಿಂಡಲು ಯಾವ ಜಸದ ಭಸ್ಮವು ಶಾಂತ, ಸ್ಥಿರವಾಗಿ ನಿಲ್ಲುವದೋ, ಫಸಫಸಿಸುವುದಿಲ್ಲವೋ ಅದು . . . ಶರೀರದಲ್ಲಿ ಸೇರಲು ಯೋಗ್ಯವಾಯಿತೆಂದು ತಿಳಿಯಬೇಕು (ಶಿತಧೀ. ೩೩). [ಫಸಫಸ$_0$ + —ಇಸು$_3$]

**ಫಸಲ್,** ಫಸಲು (ನಾ). ಬೆಳೆ; ಬೆಳಸು : ಮುಂದಿನ ಸಾಲಿಗೆ ತೀರ್ವೆ ಜಾಸ್ತಿ ಫಸಲ್ ಜಾಸ್ತಿ ಮುಂತಾದವುಗಳನ್ನು ಭರ್ತಿ ಮಾಡಿ ಪಟ್ಟಾ ಕೊಡಲ್ಪಡುವದು (ಗ್ರಾಪಹಾಕ. ೬೯). **ಫಸಲು :** ಬಂಗಾರದಂಥ ಫಸಲು ಬಂದು ಮನೆ ತುಂಬುತ್ತದೆ (ಕಂಡಕೋ. ೦೮೬); ಫಸಲು ಕಣಜಕ್ಕೆ ಬಂದು ಸೇರಿತೆಂದರೆ ಆಗ ಅದನ್ನು ತೂಕ ಮಾಡಿ ಬೆಲೆ ಕಟ್ಟುವುದು ಹದಕ್ಕೆ ಬರುತ್ತದೆ (ಜಿಬಿಂಧ. II, ೬) ; ಖರ್ಜೂರದ ಫಸಲು ಇನ್ನೆಷ್ಟು ಬಂದಿದೆ ಮನೆಗೆ (ಕುಟ್ಟಿರ. ೮೩). [← ಅರ. ಫಸ್ಲ್ ; ಹಿಂ., ಮರಾ. ಫಸಲ್]

**ಫಸಲಿ,** ಫಸ್ಲಿ (ನಾ). ಒಂದು ಮುಸಲ್ಮಾನ ವರ್ಷಗಣನೆ : (೬). **ಫಸ್ಲಿ:** ಹೈದರಾಬಾದಿನ ಜಹಗೀರುಗಳ (ವಿನಿಯಮದ) ಫಸ್ಲಿ ೧೩೫೫ನೆಯ ವರ್ಷದ ವಿನಿಯಮನ (ಫಸ್ಲಿ ೧೩೫೫ನೆಯ ವರ್ಷದ ೨೫ನೆಯ ವಿನಿಯಮನ) (ಭಾರಾಅನ. ೬೦೭ ಒಂಬತ್ತನೆಯ ಅನುಸೂಚಿ). ೭ ಈ 'ಫಸಲಿ' ಎಂಬ ಗಣನೆಯ ಕ್ರಮವನ್ನು ಅಕ್ಬರ್ ಉತ್ತರಭಾರತದಲ್ಲಿ ೧೫೫೬ರಲ್ಲಿ ಪ್ರಾರಂಭಿಸಿದನು. ಇದನ್ನೇ ಶಹಜಹಾನನು ೧೬೩೬ರಲ್ಲಿ ದಕ್ಷಿಣ ಭಾರತಕ್ಕೂ ಅನ್ವಯಿಸಿದನು. [←ಪಾರ. ಫಸ್ಲೀ; ಹಿಂ. ಫಸಲೀ.; ಮರಾ. ಫಸಲೀ, ಫಸ್ಲೀ]

**ಫಸಲು** 'ಫಸಲ್' ನೋ.

**ಫಸಾದ** (ನಾ). ಬಂಡು ; ದಂಗೆ : ಫಸಾದ ಮಾಡಲಿಕ್ಕೆ ನೋಡುವವರನ್ನು ಕೊತ್ವಾಲರಿಂದ ಕೋಳ ಹಾಕಿಸಿ ಬಿಡುತ್ತೇನೆ (ವಾಗ್ಲೀಐ. ೦೦೬). [←ಅರ. ಹಿಂ. ಮರಾ. ಫಸಾದ್]

**ಫಸಾಯಿಸು,** ಫಸಾಸು (ಕ್ರಿ). ಮೋಸ ಮಾಡು : ನೀವು ಹೀಂಗ ನನ್ನ ಫಸಾಯಿಸಬಾರದಿತ್ತು (ಮೂರಾಬಿ. ೨೪೦) ; ಈ ವಿಶ್ವನಾಥ . . . ಒಬ್ಬಿಬ್ಬರನ್ನು ಫಸಾಯಿಸಿದ್ದಾನೆಯೆ? (ಮೂರುದಾ. ೬೦). **ಫಸಾಸು :** ಫಸಾಸುವ ಅಂದರೆ ಫಶಿ ಹಾಕುವ ಅಥವಾ ಠಕ್ಕಿಸುವ ಸಂಭವವಿರುತ್ತದೆ (ಮುಂಬಯ್ಯಾ. ೪೦) ; ನಾಳೆ ನೀನ ಅನಬಾರದು ಕಾಕೂ ಫಸಾಸಿದರೂ ಅಂತ (ದೀಕಹ. I, ೦೭೩). [ಫಸ್$_0$ (೭←ಮರಾ. ಫಸವಿಣೇ) + — ಇಸು$_3$]

**ಫಸಾಸು** 'ಫಸಾಯಿಸು' ನೋ.

**ಫಸ್ಲಿ** 'ಫಸಲಿ' ನೋ.

**ಫಳ** 'ಫಲ$_1$' ನೋ.

**ಫಳಕ** 'ಫಲಕ' ನೋ.

**ಫಳಕಾರ** (ನಾ). ಪ್ರಯೋಜನವನ್ನು ಉಂಟುಮಾಡುವವನು ; ಉಪಕಾರಿ : ಇಳೆಯೊಳಗೆಲ್ಲ ಸಿಂಹಚೂಡನೆ ಫಳಕಾರಂ ಚಂಡಶಾಸನಂ ಬಗೆವೊಡೆ ಭೂತಳದೊಳ್ಕೃತಘ್ನಂ (ಅನಂತಪು. ೦೦-೩೩). [ಸಂ. ಫಲಕಾರ]

**ಫಳಣೆ** 'ಫಾಳಣೆ' ನೋ.

**ಫಳದಾನ** 'ಫಲದಾನ' ನೋ.

**ಫಳಪಾಕಾಂತತೆ** (ನಾ). ೧. ಫಲ ಬಿಟ್ಟೊಡನೆ ನಾಶವಾಗುವ ವಾರ್ಷಿಕಬೆಳೆಯ ಸ್ವಭಾವ. ೨. ಸಂತಾನಪ್ರಾಪ್ತಿಯಾದೊಡನೆ ತಂದೆ ತಾಯಿಂಗಳು ಸಾಯುವಿಕೆ. ೧. ೨ : ಫಳಪಾಕಾಂತತೆಯೋಷಧಿಗಳ ತೆಱದಿಂದೆಯ್ದೆ ಸಮನಿಸಿತ್ತುತ್ಕಟ ಸಂಗಳಿಸದೆ ತನಯುನ ಲೀಲಾವಿಲೋಕನ ಪ್ರಭವಸೌಖ್ಯಮಾ ದಂಪತಿಯೊಳ್ (ಚಂದ್ರಪ್ರ. ೩-೯೦). [ಸಂ. ಫಲಪಾಕಾಂತತಾ]

**ಫಳಫಳ** (ನಾ). ಒಂದು ಅನುಕರಣಪದ : ಅವಳ ಕಿವಿಯ ಓಲೆಗಳು ದೀಪದ ಬೆಳಕಿನಲ್ಲಿ ಫಳಫಳ ಎಂದು ಹೊಳೆಯುತ್ತಿದ್ದುವು (ರೂಢಿ).

**ಫಳಫಳನೆ** (ಅ). ೧. ಪ್ರಕಾಶಮಾನವಾಗಿ : ಜನವಾರವು ರಾತ್ರಿಯು ಮಿಂಚಿನಂತೆ ಫಳಫಳನೆ ಹೊಳೆಯುತ್ತಾ ಇತ್ತು (ಹುಟ್ಟಿಹ. ೬೦). ೨. ವೇಗವಾಗಿ ; ರಭಸವಾಗಿ : ಫಳಫಳನೆ ಅರ್ಭಟಿಸಿ ಭಾವುರೇ ರಾವಣನ ಬೆಳೆ ಬೆಳೆದ ನಂದನವನವ ಕಿತ್ತ (ಬಾಲಭಾ. ೨-೯೩). [ಫಳಫಳ + — ಅನೆ$_1$]

**ಫಳಫಳಿಸು** (ಕ್ರಿ). ಹೊಳೆ ; ಮಿಂಚು : ನಂದಿಯು ಪತಾಕೆಗಳ್ ಫಳಫಳಿಸೆ ಗಗನದೊಳ್ (ಹರಿಶ್ಚ. ೧೧-೨೫); ಫಣವ ಮೆಟ್ಟಿ ಬಾಲವ ಕೈಯಲಿ ಪಿಡಿದು ಫಳಫಳಿಸುತ್ತ ನಾಟ್ಯವನಾಡೆ (ಪುರಂದ ೨-೦೦೩-೨) ; ಬೆಳಕು ಅವನ ಮುಖದ ಮೇಲೆ ಬಿದ್ದು ಫಳಫಳಿಸಿದುದರಿಂದ ಅವನು ಒಳ್ಳೇ ಗೌರವರ್ಣದ ಸುಂದರತರುಣನೆಂದೂ ಹೊಳೆಯಿತು (ಕಾಬರ್ಡು. ೩). [ಫಳಫಳ + — ಇಸು$_3$]

**ಫಳಭರ** 'ಫಲಭರ' ನೋ.

**ಫಳಭಾರ** 'ಫಲಭಾರ' ನೋ.

**ಫಳಮಂಜರಿ** 'ಫಲಮಂಜರಿ' ನೋ.

**ಫಳರಸ** (ನಾ). ಹಣ್ಣಿನ ರಸ : ಫಳರಸದೆ ಬೆಳೆವ ನವಶಾಲೀವನಂಗಳ್ (ಶಿವರ. ದೇ. ೨-೧೦) ; ಫಳರಸದಿಂದೆ ಮುಂ ಬಳೆದವೆಂಬಿದಱಿಂ ನವಪುಷ್ಪವಾಟಸಂಕುಳಕುಸುಮಾಸವಂ ಪೊರೆಯೆ ತತ್ಫಳಮುಂ ಮಧುಪಾಳಿ ಮುತ್ತೆ (ಪಾರ್ಶ್ವಪು. ೦೩-೯೯). [ ಸಂ. ಫಲರಸ ]

**ಫಳವತಿ** 'ಫಲವತಿ' ನೋ.

**ಫಳವಳಿಗೆ** 'ಫಲವಳಿಗೆ' ನೋ.

**ಫಳಹೀನತೆ** (ನಾ). ಫಲವಾಗದಿರುವಿಕೆ ; ನಿಷ್ಫಲತೆ : ಅತಿರಾಗತೆಯಿಂ ಸ್ತ್ರೀಪದಹತಿಗಂ ದಳವೇೞೆಯಲರ್ದಶೋಕಂ ಫಳಹೀನತೆಗೆಡೆಯಾದುದು (ಚಂದ್ರಪು. ೭-೯೫). [ಸಂ. ಫಲಹೀನತಾ]

**ಫಳಾರ್** (ನಾ). ಒಂದು ಅನುಕರಣಪದ : ಒಂದು ತಣಿಗೆಯನ್ನು . . . ಉಜ್ಜಿದರು. ಅದು ಫಳಾರ್ ಎಂದು ಮಿಂಚಿತು (ಹುಟ್ಟಿಹ. ೭೯).

**ಫಳಾರ** 'ಫಲಾರ' ನೋ.

**ಫಳಿ$_1$** (ನಾ). ಒಂದು ಬಗೆಯ ಉತ್ತಮವಾದ ಬಟ್ಟೆ : ಫ [ಶಾಕಂ. ಪ]ಳಿಯ ಸೀರೆಯ ಪಟ್ಟೆಱವಕೆಯ ಪೆಣ್ಗಳ ತಂಡವೆಳಸಿದುದಾರಶಿವಿಡಿದು (ಶಬರಶಂ. ೪೦-೭೦) ; ಭೀಮಸೇನಂ ಥಟ್ಟನೆದ್ದನು ಫಳಿಯನುಟ್ಟು ಶೃಂಗರದಿಂದ ತೊಟ್ಟು ಕುಪ್ಪಸಗಳಂ ಹೆಣ್ಣ ರೂಪಂ ತಾಳ್ದು . . . ಪವಡಿಸಿದ (ಕುರಂಗ. ೩೫-೫೦). [ಸಂ. ಫಲಿ]

**ಫಳಿ$_2$, ಫಣಿ$_2$** (ನಾ). ೧. ಮರದಿಂದ ಮಾಡಿದ ತೆಳುವಾದ ಉದ್ದನೆಯ ತುಂಡು ; ಹಲಗೆ : ನೆಲಕ್ಕೆ ಕಟ್ಟಿಗೆಯ ಫಳಿಗಳನ್ನು ಜೋಡಿಸಿದ್ದರು (ಶಾರದಾ. ೩) ; ಶೇಷಣ್ಣ ಸಾಮಾನು ಇಡುವ ಫಳಿಯ ಮೇಲೆ ಚಾದರ ಹಾಸಿದ (ನೈಪ. ೨) ; ಫಳಿಗಳನ್ನು ಜೋಡಿಸಿ ರಂಗಭೂಮಿಯನ್ನು ರಚಿಸಲಾಗಿತ್ತು (ರಂಗಗೀ. ೦೩೮). **ಫಣಿ$_2$** : ೨. ಕೋಲು ; ದಂಡ : ಯಾವ ಕ್ಷೇತ್ರದ ಅಳತೆಯು ತಿಳಿಯಬೇಕಾಗಿರುವದೋ ಆ ನಂಬರಿನ ಮೇಲೆ ಈ ಫಣಿಯನ್ನು ಇಡಬೇಕು (ಕೃಷಿಉ. ೪೯). ೩. ಚಿಣ್ಣಿಕೋಲಾಟದಲ್ಲಿ ಬಳಸುವ ಕೋಲು ; ದಾಂಡು : ಬಣ್ಣದ ಫಣಿಯು ಉರೀ ಹಚ್ಚುವ ಕಟ್ಟಿಗೆಯಾಯಿತು (ಮುಂಬಯಿ. ೫-೨೬೮). 'ಚಿಣಿಫಣಿ' ಪರಾ. [←ಮರಾ. ಫಳೀ]

**ಫಳಿತ** 'ಫಲಿತ' ನೋ.

**ಫಳಿದ್ಯ** 'ಪಳಿದ್ಯ' ನೋ.

**ಫಳಿನ** 'ಫಲಿನ' ನೋ.

**ಫಳಿನಿ** 'ಫಲಿನಿ' ನೋ.

**ಫಳಿಯಿಸು** 'ಫಲಿಸು' ನೋ.

**ಫಳಿಸು** 'ಫಲಿಸು' ನೋ.

**ಫಳಿಹತ** 'ಪಟಿಹತ್ತ' ನೋ.

**ಫಳಿಯಕಾಱ** (ನಾ). ಗುರಾಣಿಯನ್ನು ಹಿಡಿದಿರುವವನು ; ಹಲಗೆಕಾರ : ಫಳಿಯಕಾಱುಂ, ಫಳಾವುಗಂ (ಶಬ್ದ. ೦೫ ಪ್ರಯೋ). [ಫಳಿಯ$_4$ (ಪ್ರ← ಪ್ರಾ. ಫಲಅ) + — ಕಾಱ]

**ಫಾಂಟ** (ನಾ). ೧. ಸೋಸುವುದೆ ಮೊದಲಾದ ಕ್ರಿಯೆಗಳಿಂದ ಸುಲಭವಾಗಿ ಸಿದ್ಧಪಡಿಸಿದುದು : "ಫಾಂಟಂ ಎಂಬುದು ಸುಗಮಂ" (ಹಲಾಯು. ೦೨೭-೯೯) ; ಆ ಕ್ಷಣದಲ್ಲಿ ಔಷಧಗಳ ನೀರಿನಲ್ಲಿ ನೆನೆಯಿಕ್ಕಿ ಆಗತಾನೆ ಹಿಂಡಿದ ರಸ ಫಾಂಟ—ಕಷಾಯ (ವೈದ್ಯಸಾ. I. ೦೦೫). ೨. ಕಷಾಯ ; ಅರ್ಕ : ಔಷಧದ ಚೂರ್ಣದಲ್ಲಿ ಅದರ ನಾಲ್ಕುಪಟು ಎಸರುನೀರು ಸುರಿವಿ ಸ್ವಚ್ಛವಾದ ಅರಿವೆಯಲ್ಲಿ ಹಾಕಿ ಸೋಸಬೇಕು. ಇದಕ್ಕೆ ಫಾಂಟವೆನ್ನುತ್ತಾರೆ (ಗೃಹವೈ. ೦೦). [ಸಂ.]

**ಫಾಕಡ, ಪಾಕಡ, ಪಾಕಡಾ, ಫಕ್ಕಡ, ಫಾಕಡಾ** (ಗು). ೧. ಚಾಲಾಕಾದ ; ಚತುರತೆಯಿಂದ ಕೂಡಿದ : ಫಾಕಡ ಆಸಾಮಿ ಕಾಣಪ್ಪ (ಐದುಕೈ. ೩೫). **ಪಾಕಡ** : ೧. ನೀನು ಪಾಕಡ ಆಸಾಮಿ ಅಂತ ನನಗೆ ಗೊತ್ತು (ಪಟಿಸಾ. ೫೬೯). (ನಾ). ೨. ಬುದ್ಧಿವಂತ ; ಚತುರ : ಈತ ದಕ್ಷ, ಗಟ್ಟಿಗ, ಪಾಕಡ, ಫಾಟಿ (ಜಿನ್ನೆ. ೨೨). **ಪಾಕಡಾ** : ೩. ಕಿಲಾಡಿ ; ಪಟಿಂಗ : ನಮ್ಮ ರೈಲಿನಲ್ಲಿ ಒಬ್ಬ ಪಾಕಡಾ ಇದ್ದಾನೆ (ಅಳಿ. ೨೭೩). **ಫಕ್ಕಡ** : (ಗು). ೪. ಸೊಗಸಾದ ; ಅಚ್ಚುಕಟ್ಟಾದ : ಇಂದು ಫಕ್ಕಡ ಮೊಸರು ಅವಲಕ್ಕಿ ಆಗಿ ಬಿಡಲಿ (ಕವಳೆ. ೦೩) ; ಎಂಥ ಫಕ್ಕಡ ಕನ್ನಡ ಮಾತಾಡತಾನಲ್ರೀ (ಹೊಸಸಂಜ್ಞಾ. ೦೦೨). **ಫಾಕಡಾ** : ೧. ಫಾಕಡಾ ಆಸಾಮಿ ಧೈರ್ಯ್ಯಾಟಕಮಿಾಪನರು (ಪಶ್ಚಿಮರು. ೦೬೨). [←ಹಿಂ. ಮರಾ. ಫಾಕಡಾ]

**ಫಾಕಡಾ** 'ಫಾಕಡ' ನೋ.

**ಫಾಜಿಲ್** (ಗು). ೧. ಆವಶ್ಯಕತೆಗಿಂತ ಅಥವಾ ನಿರೀಕ್ಷೆಗಿಂತ ಹೆಚ್ಚಾದ; ಮಿತಿಮೀರಿದ ; (ಕ). (ನಾ). ೨. ನಿರೀಕ್ಷಿಸಿದುದಕ್ಕಿಂತ ಹೆಚ್ಚಾಗಿ ಬಂದ ; ಉತ್ಪನ್ನ, — ಆದಾಯ : (ಕ). [←ಅರ. ಹಿಂ. ಫಾಜಿಲ್ ; ಮರಾ. ಫಾಜೀಲ್]

**ಫಾಜೀಲ** (ಗು). ಶಿಷ್ಟವಲ್ಲದ : ಅಶ್ಲೀಲವಾದ : ಈ ಕತೆಯಲ್ಲಿಯ ಅವಳ ಫಾಜೀಲ ಆಸ್ಥೆಯನ್ನು ತಿರಸ್ಕರಿಸುತ್ತ ನುಡಿದಳು ಚಂದ್ರಭಾಗಕ್ಕ (ಮೂರುದಾ. ೩೬). 'ಫಾಜೀಲತನ' ಪರಾ . [←ಅರ. ಹಿಂ. ಫಾಜೀಲ್ ; ಮರಾ. ಫಾಜೀಲ]

**ಫಾಜೀಲತನ** (ನಾ). ಅಶ್ಲೀಲತೆ ; ಅಸಭ್ಯತೆ : ತುಂಗಕ್ಕ ಬದಿಯ ಹೆಂಗಸಿನತ್ತ ಒಮ್ಮೆ ನೋಡಿ ಕಣ್ಣು ಮಿಟುಕಿಸಿದ ರೀತಿಯು ಫಾಜೀಲತನ ನೋಡಿ (ಮೂರುದಾ. ೦೯೪). [ಫಾಜೀಲ + — ತನ]

**ಫಾಜೆ, ಪಾಜೆ$_2$** (ನಾ). (ಉಕ) (ಆಟದಲ್ಲಿ) ಮುಟ್ಟಬೇಕಾದ ಸ್ಥಳ.

**ಪಾಜಿ₂** : (ಪಾನಕೋ. ೧೫).

**ಫಾಜೆಗಟ್ಟ**, **ಪಾಜೆಗಟ್ಟ**, **ಫಾಜಿಗಟ್ಟ** = **ಫಾಜಿ**: ಮತ್ತೆ ನಾವು ಇದೇ ಮಾಶಿನ ಫಾಜೆಗಟ್ಟಗೆ ಬಂದೆವು (ದೀಶೂ. ೬೦) ; ಅಡಗಿಕೊಂಡ ಚಿಕ್ಕಮಕ್ಕಳು ಕೂಗಾಡುತ್ತ ತಪ್ಪಿಸಿಕೊಂಡು . . . ಪಾಜೆಗಟ್ಟ ಮುಟ್ಟುವರು (ಕನ್ನಹ. ೩೬); ಮುಂಬಯಿಯ ಕೊನೆಯ ಫಾಜಿಗಟ್ಟಯಾದ ವ್ಹಿ. ಟಿ. ಸ್ಟೇಶನ್ನು ಬಂದಿತು (ಕಾಟಿಪ. ೬೨). [←ಮರಾ. ಫಾಂಜ್ = ಅಗಸೆಯ ಕಟ್ಟೆ]

**ಫಾಣಾಫಾಣ**, ಫಾನಾಫಾನ (ನಾ). (ಉಕ) ಅವ್ಯವಸ್ಥಿತವಾಗಿ ಚೆದುರುವುದು ; ದಿಕ್ಕಾಪಾಲು : ಎಲ್ಲರೂ ಫಾಣಾಫಾಣ ಆಗಿ, ಊರು ದಿಕ್ಕದಿವಾಳಿ ಆಗಿ ಹೋತು (ಗ್ರಾಮಾಯ. ೬೦೦). **ಫಾನಾಫಾನ** : ದುಡ್ಡು ಹೋದ ಮ್ಯಾಲ ಎಲ್ಲಾರು ಫಾನಾಫಾನಾ ಆಗೋರು (ಗಂಮಾಯ. ೦೦೦). [←ಮರಾ. ಫಾಣಾಫಾಣ]

**ಫಾಣಿ** (ನಾ). ೧. ಶುದ್ಧಗೊಳಿಸದೆ ಇರುವ ಬೆಲ್ಲದ ರಸ ; ಕಾಕಂಬಿ. ೨. ಮೊಸರಿನಲ್ಲಿ ಕಲಸಿದ ಹುರಿಹಿಟ್ಟು ; ಕರಂಭ. [ಸಂ.]

**ಫಾಣಿತ** (ನಾ). ೧. ಬೆಲ್ಲದ ಪಾಕಕ್ಕೆ ಸಂಪೂರ್ಣವಾಗಿ ಬಂದಿರದ ಕಬ್ಬಿನ ರಸ ; ಕಾಕಂಬಿ : "ಗುಡವಿಕಾರಂ ಫಾಣಿತಂ" (ವಸ್ತುಕೋ. ೯೪-೦೨) ; "ಅರ್ಧಪಾಕವಾಗಿ ಕಾಯಿಸಿದ ಕಬ್ಬಿನ ಹಾಲಿಗೆ ಫಾಣಿತವೆಂತಲೂ ಹೆಸರುಗಳು" (ಸಿದ್ಧಾಂತಿ. ೨೯೬). ೨. ಬೆಲ್ಲ : "ಮತ್ಸ್ಯಂಡಿ, ಫಾಣಿತ ಎಂದೊಡೆ ಬೆಲ್ಲದ ಪಾಕ, ಬೆಲ್ಲವೆಂದೂ ಎಂಬರು" (ಪಾಕಶಾ. ೬). ೩. ಹಾಲಿನಿಂದ ಮಾಡುವ ಒಂದು ಬಗೆಯ ತಿಂಡಿ. [ಸಂ.]

**ಫಾನಾಫಾನ** 'ಫಾಣಾಫಾಣ' ನೋ.

**ಫಾಯದೆ** 'ಫಾಯಿದೆ' ನೋ.

**ಫಾಯದೆಶೀರ** 'ಫಾಯಿದೇಶೀರ' ನೋ.

**ಫಾಯಿದೆ**, ಪಾಯದೆ, ಪಾಯಿದೆ, ಫಾಯದೆ (ನಾ). ಪ್ರಯೋಜನ ; ಲಾಭ ನಫೆ : ತಮ್ಮ ಮಿಲಾಖತಿನ ಫಾಯಿದೆಯಿಂದ ಸಂತೋಷ ಪಡಿಸಬೇಕು (ರಾಜೇಂದ್ರ. ೩೬) ; ಎಲ್ಲೋ ಫಾಯಿದೆ ಮಾಡಲು ಇನ್ನೊಂದೂರಿಗೆ ಹೋಗಿರಬೇಕು (ಮುಗಿಯು. ೩). **ಪಾಯದೆ**: ಇಂಜನೇರು ಕೆಪ್ಟನ್ ರನೆಲ್‌ಸಾಹೇಬ್ ಬಹಾದ್ದುರವರು ನಿಶಾನಿ ನಿಲ್ಲಿಸಿ, ದುರ್ಬೀನಿನಿಂದಾ ನೋಡಿ, ತಮ್ಮ ಸರಕಾರದ ಪಾಯದೆ ಕೆಲಸ ಮಾಡುತ್ತಿದ್ದರು (ರಾಜೇಂದ್ರ. ೨೪೯); ನಮ್ಮನ್ನ ಮೈಮುರೀ ದುಡಿಸಿ, ಅದರ ಪಾಯದೇಕ ತಾವು ಮಾಲಕ ರಾಗೂದು (ಬೆಂದಯು. ೪೪). **ಪಾಯಿದೆ** : ಈ ವ್ಯಾಪಾರದಲ್ಲಿ ತುಂಬಾ ಪಾಯಿದೆ ಇದೆ (ರೂಢಿ). **ಫಾಯದೆ** : ನನಗಿದೆಲ್ಲದರಿಂದ ಬಂದ ಫಾಯದೆ ಏನು ಹೇಳು (ಮೂರುದಾ. ೪೨) ; ಅವರ ಆಸ್ತಿಯ ಫಾಯದೆ ಒಂದಿಲ್ಲೊಂದು ರೀತಿಯಲ್ಲಿ ತೆಗೆದುಕೊಳ್ಳಬಹುದಲ್ಲ (ಕ್ಷಿತಿಜ. ೬೮).
[← ಅರ. ಫಾಯಿದಾ ; ಪಾರ. ಹಿಂ. ಮರಾ. ಫಾಯದಾ]

**ಫಾಯಿದೇಶೀರ**, ಫಾಯದೆಶೀರ (ಅ). ಲಾಭಪ್ರದವಾಗಿ ; ಲಾಭ ಬರುವಂತೆ : ರೋಖ ರಕಮಿನಿಂದ ಖರೀದಿ ಮಾಡುವ ಆಸಾಮಿಗಳಿಗೆ ಮಜೂರಿಯ ಖರ್ಚು ಫಾಯಿದೇಶೀರ ಬೀಳುವ ಸೂಚನೆ (ಮುಂಬವ್ಯಾ. ೪೦ ಪ್ರಸ್ತಾವನೆ). **ಫಾಯದೆಶೀರ** : ಕಿರಕೋಳಕ್ಕೆ ಫಾಯದೆಶೀರ ಬೆಲೆಯು ಸಿಗಲಿಕ್ಕಿಲ್ಲ (ಮುಂಬವ್ಯಾ. ೨೩೦). [← ಮರಾ. ಫಾಯದೇಶೀರ್]

**ಫಾಯಿಷ್** (ನಾ). ಪ್ರಕಟಣೆ ; ಜಾಹಿರಾತು : ಡಿಸ್ಟ್ರೀಕ್ಟ್ ಗೆಜೆಟಿನಲ್ಲಿ ಫಾಯಿಷ್ಮಾಡಬೇಕು (ಗ್ರಾಮೂಕ. ೮೦). [← ಮರಾ. ಫಾಯಶ್]

**ಫಾರಂ** ' ಫಾರಮ್ಮು' ನೋ.

**ಫಾರಮ್ಮು**, ಫಾರಂ (ನಾ). ೧. ಮಾಹಿತಿಯನ್ನು ಬರೆಯಲು ನಿಗದಿಯಾದ ರೀತಿಯಲ್ಲಿ ಸಿದ್ಧಪಡಿಸಿದ ಕಾಗದ : ಅವರು ಕೊಟ್ಟ ಫಾರಮ್ಮಿನಲ್ಲಿ ನನ್ನ ವಿವರವನ್ನೆಲ್ಲಾ ತುಂಬಿಸಿದೆ (ರೂಢಿ). ೨. ಶಾಲೆಗಳಲ್ಲಿಯ ತರಗತಿ,—ಇಯತ್ತೆ : ಮನೆಯ ತಾಪತ್ರಯದಿಂದಾಗಿ ಅವಳ ಓದು ಎಂಟನೆಯ ಫಾರಮ್ಮಿಗೇ ನಿಂತುಹೋಯಿತು (ರೂಢಿ). **ಫಾರಂ** : ೧. ನಡೆದ ಸಂಗತಿ ತಿಳಿದ ಕೂಡಲೆ ೩ ರಿಪೋರ್ಟುಫಾರಂಗಳುಳ್ಳ ಫಾರಂಗಳಲ್ಲಿ ಬರೆದು . . . ರವಾನಿಸಬೇಕು (ಗ್ರಾಮೂಕ. ೫೨). ೨. ನಿಮ್ಮ ಮಗಳು ಎಷ್ಟನೇ ಫಾರಂನಲ್ಲಿ ಓದುತ್ತಿದ್ದಾಳೆ ? (ರೂಢಿ). ೩. ಒಟ್ಟಿಗೆ ಮುದ್ರಿಸಲು ಚೌಕಟ್ಟಿನಲ್ಲಿ ಬಂಧಿಸಿ ಅಣಿಮಾಡಿ ಇಟ್ಟಿರುವ ಮುದ್ರಣದ ಮೊಳೆಗಳ ಜೋಡಣೆ ಮತ್ತು ಇಂತಹ ಜೋಡಣೆಯಿಂದ ಆದ ಪುಟಗಳ ಸಮೂಹ : ಹೀಗೆ ಚೌಕಟ್ಟಿನಲ್ಲಿ ಬಿಗಿ ಮಾಡಿದ ಪುಟಸಮೂಹಕ್ಕೆ ' ಫಾರಂ' ಎಂದು ಹೆಸರು (ಮುದ್ರಕ. ೪೦). [← ಇಂ. Form]

**ಫಾರೀಕತ್ತು**, ಪಾರಿಕತ್ತು, ಪಾರಿಖತ್ತು, ಪಾರೀಕತ್ತು, ಪಾರೀಖತ್ತು (ನಾ). ೧. ಪಾಲು ; ವಿಭಾಗ : ಫಾರೀಕತ್ತು ಅನಬ್ಯಾಡಪಾ. ಅವನ್ಸಂಗ್ತೀಲೆ ಫಾರಿಕತ್ತು ಮಾಡಿಕೊಂಬೋ ಹಾಂಗಿಲ್ಲಾ (ಖಂಜಹು. ೦೦೬). **ಪಾರಿಕತ್ತು** : ೨. (ಜಮೀನು, ಆಸ್ತಿ ಮುಂತಾದುವು) ಬೇರೆ ಬೇರೆಯಾದುದನ್ನು ತಿಳಿಸುವ ಪತ್ರ ; ವಿಭಜನೆಯ ಪತ್ರ : ಮುಂದಿನ ವಾರವೋ ಆ ಮುಂದಿನ ವಾರವೋ "ಹಿಸ್ಸೆ ಆಗಿ ಪಾರಿಕತ್ತಾಗ್ತದಂತೆ !" (ಕಾಮೂರು. ೩೦೮) ; ಎಲ್ಲಿ ಹುಡುಕಿದರೂ 'ಪಾರಿಕತ್ತು' ಏಕೆ ಸಿಗಲಿಲ್ಲವೆಂಬುದೂ . . . ಕೋರ್ಟಿನಲ್ಲಿ ದತ್ತು ಏಕೆ ಊರ್ಜಿತವಾಗಲಿಲ್ಲವೆಂಬುದೂ ಮುಂತಾದ ಸಾವಿರಾರು ವಿಚಾರಗಳು ನಮ್ಮ ಹಳ್ಳಿಯ ಶ್ಯಾನುಭೋಗನಿಗೆ ಗೊತ್ತು (ಗರುಡಾ. ೮೬). **ಪಾರಿಖತ್ತು** : ೧. ಇಬ್ಬರೂ ಸ್ವಂತ ಹಿಡುವಳಿದಾರರಾಗಿದ್ದರೆ ಹಿಸ್ಸೆಯ ಪಾರಿಖತ್ತು ಪತ್ರ ಛಾಪಾಕಾಗದದ ಮೇಲಾಗಿ ಅದನ್ನು ರಿಜಿಸ್ಟರು ಮಾಡಬೇಕಿತ್ತು (ಗಂಗಾಳ. ೦೩೯). **ಪಾರೀಕತ್ತು**: ೨. ಸಣ್ಣಪ್ಪ ಸತ್ತ ಮೇಲೆ ಅವನ ಮಕ್ಕಳೆಲ್ಲ ವಿಭಾಗವಾಗಿ "ಪಾರೀಕತ್ತು" ಮಾಡಿಕೊಂಡರೂ . . . ದತ್ತು ಏಕೆ ಊರ್ಜಿತವಾಗಲಿಲ್ಲ (ಗರುಡಾ. ೮೬). **ಪಾರೀಖತ್ತು**: ೧. ಮಾತೆತ್ತಿದರೆ ಪಾಲು ಪಾರೀಖತ್ತು ಎಂದು ಅಪ್ಪ ಮಕ್ಕಳು ಅಣ್ಣತಮ್ಮಂದಿರು ಹಿಸ್ಸೆ ಮಾಡಿಕೊಂಡ ಕಾರಣ ಒಂದು ಸಣ್ಣ ಮನೆ ನಾಲ್ಕಾರು . . . ಮನೆಗಳಾಗಿ ಮಾರ್ಪಟ್ಟಿದೆ (ಮಮ್ಮೂರು. ೩೦೪).
[← ಪಾರ. ಫಾರಿಗಖತೀ ; ಹಿಂ. ಫಾರಖತೀ ; ಮರಾ. ಪಾರಕತ್, ಪಾರಕತೀ, ಪಾರಖತ್, ಪಾರಖತೀ]

**ಫಾಲ** (ನಾ). ೧. ನೇಗಿಲಿನ ಗುಳ. ೨. ಹತ್ತಿ ಬಟ್ಟೆ: "ಫಾಲಂ, ಕಾರ್ಪಾಸಂ, ಬಾದರಂ—೩ ನೂಲುಬಟ್ಟೆ" (ಸಿದ್ಧಾಂತಿ. ೨೦೨). ೩. ಗಂಟಲು ; ಮೂಟೆ. ೪. ಹಣೆ ; ನೊಸಲು : ಸಂತಸಂದಳೆದಾಳಿದನ ಪದಧೂಳಿಗೆಯು ಸಿರಫಾಲವನು ಸಾರ್ಚಿ (ಗಗಶಾ. ೨೨-೦೦೪). [ಸಂ.]

**ಫಾಲದಿವ್ಯ** (ನಾ). ಕಾಯಿಸಿದ ಕಬ್ಬಿಣದ ಗುಳವನ್ನು ಹಿಡಿದು ತಾನು ಸತ್ಯವಂತನೆಂದು ಸಿದ್ಧಪಡಿಸುವ ಒಂದು ದಿವ್ಯ: ದಿವ್ಯಗಳಲ್ಲಿ ಬಹು ಪ್ರಚಲಿತವಿದ್ದುದೆಂದರೆ ' ಪಾಳದಿವ್ಯ' ಅಥವಾ 'ಫಾಲದಿವ್ಯ' (ಕಶಾಲಿ. ೩೪೮) ; [ಸಂ.]

**ಫಾಲ್ಗುಣ** ' ಪಾಲುಗುಣ ' ನೋ.

**ಫಾಲ್ಗುನ** (ನಾ). ಚಾಂದ್ರಮಾನವರ್ಷದ ಹನ್ನೆರಡನೆಯ ತಿಂಗಳು : " ಫಾಲ್ಗುನಃ, ತಪಸ್ಯಃ, ಫಾಲ್ಗುನಿಕಃ— ೩ ಫಾಲ್ಗುನಮಾಸದ ಹೆಸರುಗಳು" (ಸಿದ್ಧಾಂತಿ. ೪೦) ; ವಿಶ್ವನಾಥನಾದಿಜಿನಂ ಫಾಲ್ಗುನಬಹುಲೈಕಾದಶಿಯೊಳಮನಂತಸುಖನಿಲಯನುತ್ತರಾಷಾಢದೊಳ್ ಧ್ಯಾನಮರೀಚಿಯಿಂ ಬೆದಱಿ (ಆದಿಪು. ೧೦-೧೬). [ಸಂ.]

**ಫಾಲ್ಗುನನಂದೀಶ್ವರ** (ನಾ). [ಜೈನ] ಫಾಲ್ಗುಣಮಾಸದಲ್ಲಿ ಆಚರಿಸುವ ಒಂದು ವ್ರತ ಮತ್ತು ಆ ವ್ರತ ನಡೆಯುವ ದಿನ,—ನೋಂಪಿ: ಅನ್ನೆಗಂ ಫಾಲ್ಗುನ ನಂದೀಶ್ವರಮಾದುದಾಗಳುಭಯಬಲಮುಮುಭಯಘೋಷಣೆಯುಂ ಘೋಷಿಸಿ ಕಾಳೆಗಮನುಟಿದಿರ್ಪುದುಂ (ಶಂರಾಮಾ. ೦೪-೮೩ ವ). [ಸಂ.]

**ಫಾಲ್ಗುನಿಕ** (ನಾ). = ಫಾಲ್ಗುನ : "ಫಾಲ್ಗುನಃ, ತಪಸ್ಯಃ, ಫಾಲ್ಗುನಿಕಃ —ಇ ಫಾಲ್ಗುನಮಾಸದ ಹೆಸರುಗಳು" (ಸಿದ್ಧಾಂತಿ. ೪೦). [ಸಂ.]

**ಫಾಶಾ** 'ಫಾಸೆ' ನೋ.

**ಫಾಶಿ** 'ಫಾಸಿ' ನೋ.

**ಫಾಸಲೆ,** ಪಾಸಲೆ, ಫಾಸಿಲೆ (ನಾ). ೧. ದೂರ; ಅಂತರ : ಬೆಂಗಳೂರಿನಿಂದ ಮೈಸೂರಿಗೆ ಬರುವ ದಾರಿಯಲ್ಲಿ ೨೭ ಮೈಲಿ ಫಾಸಲೆ ಯಲ್ಲಿರುವ ರಾಮಗಿರಿ ಎಂಬ ಊರಿಗೆ ಕ್ಲೋಸ್‌ಪೇಟೆ ಎಂಬ ಹೆಸರು ಉಂಟಾಯಿತು (ಕುಹಾಪಂ. II, ೩); ನಂಜರಾಜನ ಶರೀರವು ಬಿದ್ದಿದ್ದ ಸ್ಥಳಕ್ಕೂ ರಾಜಒಡೆಯನಿದ್ದ ಸ್ಥಳಕ್ಕೂ ಅರ್ಧಮೈಲು ಫಾಸಲೆಯಿರ ಬಹುದು (ಶ್ರೀಣಾದು. ೨೦೦); ನಾಲ್ಕುಮೈಲಿ ಫಾಸಲೆಯಲ್ಲಿ ಯಾವ ಊರೂ ಇರಬಾರದು (ಅರಿಕು. ೬೬). **ಪಾಸಲೆ :** ೨. ಸುತ್ತಮುತ್ತಲ ಪ್ರದೇಶ,—ಸ್ಥಳ : ಸುಮಾರು ಹತ್ತಿಪ್ಪತ್ತು ಮೈಲು ಪಾಸಲೆ ಯೊಳಗೆ ಒಂದೇ ಒಂದು ಆಸ್ಪತ್ರೆ ಇಲ್ಲ (ಜಾರುಜಾ. ೦೯); ಈ ಪಾಸಲೆಗೆಲ್ಲ ಅವರೇ ಮೊದಲು ಗಾಡಿ ತರಿಸ್ದೋರು (ಕುರಿಕು. ೦೭೬). **ಫಾಸಿಲೆ:** ೧. ಎರಡು ಗ್ರಾಮಗಳ ನಾಲ್ಕು ಮೈಲಿ ಫಾಸಿಲೆಯಲ್ಲಿ ಮೊಕ್ಕಾಂ ಮಾಡಿದರು (ಪಡಿಮಾ II, ೯೭೨). [← ಅರ. ಹಿಂ. ಮರಾ. ಫಾಸಲಾ ]

**ಫಾಸಿ,** ಪಾಸಿ₂, ಪಾಸಿ₃, ಫಾಶಿ (ನಾ). ನೇಣು ಹಾಕಿ ಕೊಲ್ಲುವ ಶಿಕ್ಷೆ ; ಗಲ್ಲು : ಆದರೆ ಫಾಸಿಯ ಹಗ್ಗ ಒದಿರಲಿಲ್ಲ (ಬಂಗಾಹ. ೨೫) ; ಅವನಿಗೆ ಸಿಂಗಾಪುರದಲ್ಲಿ ಫಾಸಿಯಾಯಿತು (ಭಾರತಿ. ೯೦). **ಪಾಸಿ₂ :** 'ಪಾಶಿ ಸಜಾ' ಪರಾ. **ಪಾಸಿ₃ :** ದೀನಜನೋದ್ಧಾರಕನಂತೆ . . . ದೀನ ಜನರ ಕೊರಳಿಗೆ ಪಾಸಿ ಹಾಕುವವ (ತಲು. ೪೫). **ಫಾಶಿ :** ಏನು, ಯಾರಾದರೂ ಫಾಶಿಗೆ ಕೊಡಲಿರುವರೇನು ನನ್ನನ್ನ (ವಾತ್ಸಲ್ಯ. ೨೧೭) ; ಜಹಾಗೀರದಾರರಿಗೆ ಯಾವ ಶಿಕ್ಷೆ ಆಗುವುದೋ ಕೇಳಬೇಕೆಂದು ಎಲ್ಲರೂ ಆತುರರಾಗಿದ್ದಾರೆ. 'ಫಾಶಿ ಇಲ್ಲದಿದ್ದರೆ ಕಾಳಾಪಾಣಿ' ಎಂದು ಎಲ್ಲರೂ ಆಡುತ್ತಾರೆ (ಳನಕ. ೪೦) ; ಭೀತಿಯ ಅಪಾಯದ ಹಾಗೂ ಫಾಶಿಯ ಉರುಳಿನ ನೆರಳಲ್ಲೇ ನಾವು ದುಡಿಯಬೇಕು (ಆತ್ಮಾರ್ಪ. ೦೩೬).

**ಫಾಸಿ ಕೊಡು** = ಗಲ್ಲುಗಂಬಕ್ಕೇರಿಸು ; ನೇಣು ಹಾಕು : ಕಳ್ಳರನ್ನು ಪತ್ತೆ ಮಾಡದಿದ್ದರೆ ನಿನಗೆ ಫಾಸಿ ಕೊಡುವೆನು (ಶುಂಠಾಪ್ಪ. ೩೬). [← ಹಿಂ. ಫಾಂಸೀ ; ಮರಾ. ಫಾಶೀ, ಫಾಂಶೀ]

**ಫಾಸಿಕಂಬ** (ನಾ). ನೇಣು ಹಾಕುವ ಕಂಬ : ಅವನ ದೃಷ್ಟಿ ಯೆದುರಿಗೆ ಜೇಲಿನ ದೊಡ್ಡ ದೊಡ್ಡ ಗೋಡೆಗಳು ಬಂದು ನಿಂತಂತಾ ಯಿತು. ಶಿವಿಗತ್ತಿಯ ಬಂದೂಕು ಹಿಡಿದುಕೊಂಡು ಪಹರೆ ಮಾಡುವ ಪೋಲೀಸರು, ಕಲ್ಲು ಒಡೆಯುವ ಕೈದಿಗಳು, ಫಾಸೀಕಂಬ (ಮಣ್ಣುಹ. ೦೫). [ ಫಾಸಿ + ಕಂಬ₁ (< ಕಂಭ)]

**ಫಾಸಿಖಾನೆ** (ನಾ). ಗಲ್ಲಿನ ಶಿಕ್ಷೆಯನ್ನು ಕೊಡುವ ಸ್ಥಳ : ನಿನಗೆ ಈ ಬಂದೀಖಾನೆಯಲ್ಲಿ ಫಾಸಿಖಾನೆಯಿದೆಯೆಂದೂ ಮತ್ತು ನನಗೆ ಫಾಸಿ ಶಿಕ್ಷೆಯನ್ನು ವಿಧಿಸಲು ಅಧಿಕಾರವಿದೆಯೆಂದೂ ತಿಳಿದಿರುವುದೇ ? (ಕುಣಾಚಿ. ೦೯೩). [ ಫಾಸಿ + ಖಾನೆ ]

**ಫಾಸಿಲ್** 'ಫಾಸಲೆ' ನೋ.

**ಫಾಸಿಶಿಕ್ಷೆ** (ನಾ). = ಫಾಸಿ : ಮುಖಕ್ಕೆ ಫಾಸಿಶಿಕ್ಷೆ ಅನುಭವಿಸಲು ಹೋಗುವ ಖೈದಿಯ ಕಳೆ ಬರುವುದು (ಯೋಧಕು. ೭೬). [ಫಾಸಿ + ಶಿಕ್ಷೆ]

**ಫಾಸೆ,** ಪಾಸಿ₄, ಪಾಸೈ, ಫಾಶಾ (ನಾ). ೧. ಪಗಡೆ, ಲೆತ್ತ ಮೊದಲಾದುವುಗಳಲ್ಲಿ ಬಳಸುವ ದಾಳ : ಬಸಂತಿಯು . . . ಪಗಡಿಗಳನ್ನು ಇಟ್ಟು ಹಸ್ತಿದಂತ ನಿರ್ಮಿತವಾದ ಫಾಸೆಗಳನ್ನು ಕೊಟ್ಟಳು (ಮಂಜುಂಕ. ೬೨). **ಪಾಸಿ₄ :** ೨. ಪಗಡೆಯಾಟದಲ್ಲಿ ದಾಳಗಳಿಂದ ಸೂಚಿತವಾಗುವ ಸಂಖ್ಯೆ ; ಗರ : ಇಂದು ಲೆತ್ತದ ಪಾಸಿಯೇ ತಿರುವುಮುರುವಾಗಿ ಬಿಟ್ಟಿತು (ಶ್ರೀವಾಶ್ರ. ೨೬೦). **ಪಾಸೈ :** ೨. ದ್ಯೂತವಾಡುವಲ್ಲಿ ನಿಪುಣನಾದವನು ಪಾಸೆಗಳು ಹೇಗೆ ಬಿದ್ದರೂ ಖೇದ ಪಡುವುದಿಲ್ಲ (ಮಭಾರ. ೪೦). **ಫಾಶಾ :** ೧. ಪರಮಪಾಪಿ ಶಕುನಿ ತಾನು ಫಾಶಾದೊಳಗೆ ಫಕೀರನಾಗಿ ಧರ್ಮರಾಜ ಧರಣಿ ದ್ರೌಪತಿನ ಸೋತರ (ಪುಲ್ಲಗ. ೪೪). [← ಮರಾ. ಫಾಸಾ ]

**ಫಾಳ,** ಫಾಳು (ನಾ). ತುಂಡು ; ತುಕಡಿ : ಜಂಗಮೋತ್ತಮರಿಗೆಲ್ಲರಿಗು ಆ ಕನಕದ ಫಾಳವನ್ನು ತೋರಿ (ಚುಹೋರ. ೦೫೦). **ಫಾಳು :** ಆ ಚರ ಮೂರ್ತಿಗಂ ವೊಂದು ಹೇಮದು ಫಾಳನ್ನು ಕೊಟ್ಟು (ಚುಹೋರ. ೦೫೦). [ ← ಮರಾ. ಫಾಳ]

**ಫಾಳಣಿ,** ಫಳಣಿ (ನಾ). ೧. ವಿಭಾಗಿಸುವಿಕೆ ; ಬೇರ್ಪಡಿಸು ವಿಕೆ : ರೇಲವೇ ಫೀ, ಜಕಾತ, ಗಾಡಿಬಾಡಿಗೆ ಮುಂತಾದ ಖರ್ಚುಗಳ ಫಾಳಣಿ ಮಾಡಲಿಕ್ಕೆ ಅಡಚಣಿ ಬೀಳುವದು (ಮುಂಬವ್ಯಾ. ೯೦). **ಫಳಣಿ :** ೨. ಜಮೀನಿನ ವಿಭಾಗ,—ತುಂಡು : ಕೆಲವು ಹಳ್ಳಿಗಳಲ್ಲಿ ಫಳಣಿಯೆಂಬ ವಿಭಾಗಗಳಿದ್ದವು. ಒಂದು ಫಳಣಿಯೆಂದರೆ ಸುಮಾರು ೨ ಕೂರಿಗೆ ಆಗುತ್ತಿತ್ತು (ಕಹಾಗ. ೩೭೫). [← ಮರಾ. ಫಾಳಣೀ]

**ಫಾಳಿ** (ನಾ). ತುಂಡು; ತುಕಡಿ (?) : ಈ ಕ್ಷೇತ್ರಮಂ ವಿಷ್ಕಂಭದಿನಪ ಕರ್ಷಣಭಾಗಹಾರಮಾತ್ರ ಫಾಳಿಗಳಂ ಮಾಡಿಯೇಕಫಾಳಿಯಂ ತೆಗೆವುತ್ತಿರೆ ವಿಶೇಷಕ್ಷೇತ್ರಮಕ್ಕುಂ (ಕ್ಷಿಪ. ೨೦–೨೦). [← ಮರಾ. ಫಾಳೀ]

**ಫಾಳು** 'ಫಾಳ' ನೋ.

**ಫಾಳೆ** 'ಪಾಳ್ಯೆ' ನೋ.

**ಫಿಕೀರು,** ಪಿಕೀರು (ನಾ). ೧. ಆಸ್ಥೆ; ಆಸಕ್ತಿ : ಶಿವರಾತ್ರಿಯ ಹಬ್ಬದ ದಿವಸ ಮಹದೇವಪುರದಲ್ಲಿ ಬಹಳ ಫಿಕೀರಿನಲ್ಲಿ ಖುಷಿಯಿಂದ ಹಬ್ಬ ಮಾಡುತ್ತಾ ಇರುತ್ತಾರೆ (ರಾಜೇಂದ್ರ. ೦೦೪). **ಪಿಕೀರು :** ೨. ಚಿಂತೆ ; ಕಾಳಜಿ : ಕೆಂಪಿ ಕೇರೀಲಿರೋದು ಅಕ್ಕಪಕ್ಕದ ಮನೆಯೋರ್ಗೆಲ್ಲಾ ತುಂಬಾ ಪಿಕೀರಾಗಿತ್ತು (ಅನಾಮಿ. ೭೯); ಮಣಿ . . . ಏನಾಗಿ ಹೋಗಿದೆಯೋ ಅವರಿಗೆ ಎಂಬ ಪಿಕೀರಿನಿಂದ ಹೆಡ್‌ಮೇಷ್ಟರ ರೂಮಿನೊಳಕ್ಕೆ ಬಂದ (ಸ್ವಾಮಿಸ್ನೇ. ೦೬೪).
[← ಅರ. ಫಿಕ್ರ್; ಹಿಂ. ಫಿಕಿರ್, ಫಿಕ್ರ್; ಮರಾ. ಫಿಕೀರ್, ಫಿಕರ್]

**ಫಿತೂರಿ,** ಪಿತೂರಿ (ನಾ). ಕುತಂತ್ರ; "ಒಳಸಂಚು; ಸಂಚು" (ಜಾಪಕೋ. ೦೮). **ಪಿತೂರಿ :** ನಿಜಸಂಸ್ಥಾನದೊಳಿರ್ಪ ಕುಹಕಿನಿಯೋಗಿ ಗಳೊಡರ್ಚಿದ ಪಿತೂರಿ[ಪಾಠಾಂ. ಪಿತುಮೆ]ಯಿಂ ವಿಜಯಪುರವರ್ತಿ ಯೆನಿಸುವ ಮುಜಬರಖಾನು ತೆರಳ್ದ (ಕೆಳನೃ. ೯–೩೩); ಇದು ಬಂಡವಾಳ ಗಾರರ ಪಿತೂರಿ (ಅಪ್ಪಾವ. ೦೭) ; ರಾಜಕೀಯಜಾಗೃತಿ ಎರಡು ರೂಪ ಗಳನ್ನು ತಾಳಿತು; ಒಂದು ಪಿತೂರಿಯದು; ಇನ್ನೊಂದು ಸುಧಾರಣೆಯದು (ರಾಜ್ಯಕಾ. ೦೩).

**ಪಿತೂರಿ ನಡೆ** = ಒಳಸಂಚು ಆಗು ; ತಂತ್ರಕ್ಕೆ ಎಡೆಯಾಗಿರು: ಹೈದರನು ತಕ್ಷಣವೇ ಅನುಮಾನಶಕ್ತಿಯಿಂದ ಪಿತೂರಿ ನಡೆದಿದೆಯೆಂದು ಗ್ರಹಿಸಿದನು (ಒಡೆಕ. ೯೫). **ಪಿತೂರಿ ನಡೆಸು**=ಒಳಸಂಚನ್ನು ಹೂಡು ; ಸಂಚು ಮಾಡು : ಇಬ್ಬರೂ ಸೇರಿ ಪಿತೂರಿ ನಡೆಸಿದರು (ಕೂಪಿಶೇ. ೨೦೩); ನೀವೆಲ್ಲ ಕೂಡಿ ನನ್ನ ವಿರುದ್ಧ ಒಂದು ಪಿತೂರಿ ನಡೆಸಿದ್ದೀರಿ (ಬಿದುಜ. ೦೫೪). **ಪಿತೂರಿ ಮಾಡು** = ಪಿತೂರಿ ನಡೆಸು: ನಾನು ಎಷ್ಟೋ ಪಿತೂರಿ ಮಾಡಿದೆ. ಆದರೆ ದುಃಖ ಮತ್ತು ಲಜ್ಜೆ ಹೊರತು ಮತ್ತೇನೂ ದೊರೆಯಲಿಲ್ಲ (ಮಲಿಪಾ. ೦೦೨). **ಪಿತೂರಿ ಹೂಡು** = ಪಿತೂರಿ ನಡೆಸು: ಎರಡನೆಯ ಬಾಜೀರಾಯ . . . ಬ್ರಿಟೀಷರ ಮೇಲೆ ಬೀಳಲು ಪಿತೂರಿ ಹೂಡಿದನು (ಭಾರದ. ೪೨೬). **ಫಿತೂರಿಯಾಗು** = ಒಳಸಂಚಿನಲ್ಲಿ ಭಾಗಿ ಯಾಗು : ನೀನು ಫಿತೂರಿಯಾಗಿಲ್ಲವೆಂಬುದನ್ನು ಕಾರ್ಯ ಮಾಡಿ

ತೋರಿಸದಿದ್ದರೆ ನನ್ನ ವತನವನ್ನೇ ಖಲಾಸಾ ಮಾಡಿಸಿ ಬಿಡುವೆನು (ಹಳ್ಳಿಬ. ೨೭೩).

[← ಅರ. ಫುತುರ್; ಹಿಂ. ಫಿತೂರ್; ಮರಾ. ಫಿತುರೀ, ಫಿತೂರ್]

**ಫಿದವಿ**, ಫಿದಿವಿ, ಫಿದ್ವಿ (ನಾ). ೧. ಸೇವೆ; ಕೈಂಕರ್ಯ : ಗೌರ್ನರ್ ಪದವಿ ಮೇಲೆ, ಕಾರ್ಕೂನ್ ಫಿದವಿ ಕೆಳಗೆ ? ಎರಡೂ ಒಂದೆ ನನಗೆ (ಶಿರಾಂ. ೨೬-೩). **ಫಿದಿವಿ :** ೨. ಸೇವಕ ; ಆಳು: (?). **ಫಿದ್ವಿ:** ೨. (ರೈಸ್‌ಗ. II. ३३९). [← ಅರ. ಹಿಂ. ಮರಾ. ಫಿದವೀ]

**ಫಿದಿವಿ** 'ಫಿದವಿ' ನೋ.

**ಫಿದ್ವಿ** 'ಫಿದವಿ' ನೋ.

**ಫಿನಾಯಿಲ್** 'ಫಿನೈಲ್' ನೋ.

**ಫಿನೈಲ್**, ಫಿನಾಯಿಲ್ (ನಾ). ಕ್ರಿಮಿನಾಶಕವಾದ ಒಂದು ಔಷಧಿ ದ್ರವ ; ಕಾರ್ಬಾಲಿಕ್ ಆಮ್ಲ : ನೊಣಗಳ ವಿಷಯವೂ ಹೀಗೆಯೇ . . . ನಿತ್ಯವೂ ಫಿನೈಲ್ ಹಾಕಿ ನೆಲವನ್ನು ಸಾರಿಸುತ್ತಿದ್ದರೂ ಅವು ಎಲ್ಲೆಲ್ಲೂ ಕಾಣಿಸಿಕೊಳ್ಳುತ್ತವೆ (ಸಂಟಿಕು. ೪೪). **ಫಿನಾಯಿಲ್:** ಮೊನ್ನೆ ಫಿನಾಯಲ್ ಹಾಕಿದ ಬಕೆಟ್ಟಿನಲ್ಲಿ ಹುಳಿ ತಂದು ಬಡಿಸಿಬಿಟ್ಟರು ಪುಣ್ಯಾತ್ಮರು (ಅಗಸ್ತ್ಯ. ೬೩).

[← ಇಂ. Phenyl, Phenol]

**ಫಿರಂಗಿ**, ಪರಂಗ, ಪರಂಗಿ, ಪಿರಂಗಿ, ಫರಂಗಿ (ನಾ). ೧. ಐರೋಪ್ಯ ಜನಾಂಗಕ್ಕೆ ಸೇರಿದವನು : ಕಾವಲುದಳದ ಸಿಪಾಯಿಗಳು . . . ಫಿರಂಗಿಗಳ ಬಳಿಗೋಡಿದರು (ವಗಹೂ. ೦೨೬); ಫಿರಂಗಿಗಳನ್ನು ಹಿಂದುಸ್ತಾನದಿಂದ ಹೊರಗೆ ಅಟ್ಟುವುದನ್ನು ನೋಡುವುದೇ ನನ್ನ ತೀವ್ರ ಇಚ್ಛೆಯಾಗಿದೆ (ಕ್ರಾಂಂಥ. ३೬). ೨. ತೋಪು ; ದೊಡ್ಡ ತುಬಾಕಿ : ಇಡಿಸಲೆ ನಿನ್ನ ಫಿರಂಗಿ ಬಾಯೊಳು (ಬಿಜ್ಜಳರಾ. ೩-೬೭); ಪೆಟಲು ಬಾಣ ಫಿರಂಗಿ ಕೋವಿಯ ಭಟರು ಹರಿಗೆಯ ಬಿಲ್ಲಿನಲಿ ಸಂಘಟಿಸಿತಾಕ್ಷಣ (ಶರರೀ. ३३೦-೦३); ಅವರನ್ನು ಫಿರಂಗೀಬಾಯಿಗೆ ಕಟ್ಟಿ ಸಂಹರಿಸುವಂತೆ ಹೇಳು (ಮುದ್ರಾಮಂ. ೦೨೬); ಗುಂಡು ಹಾರಿಸಿದ ಫಿರಂಗಿಯಿಂದ ಹೊರಟಿದ್ದ ಕರಿನೀಲಿಯ ಹೊಗೆ ಬತೇರಿಯನ್ನು ತುಂಬಿತ್ತು (ಕೃಷ್ಣಶೂ. ೨). ೩. ಮೋಹರೋಗ : 'ಫಿರಂಗಿರೋಗ' ಪರಾ. **ಪರಂಗ :** ೧. ಸಮಸ್ತವೀರಪರಿವಾರಾ ಸಯವಾಗಿ ಗೋವೆಯ ಪರಂಗದ ಕಪಿತನ ಮೇಲೆ ದಂ[ಡು] × ಟಯೆಲ್ಲೆನ × (ಕಇ. I. ೬೮-೬; ೦೩೨೨); ಪರಂಗದವರ ರಾಜಕಾರ್‍ಯ್ಯದಲಿ ನಂಮ ಅರಮನೆಯ ಬಾಗಿಲ್ಲಿ ನಿಂ[ನ ತಂಮ] ಯೆಕಪ್ಪನಾಯಕನು ಯಿಱಿದು ಯಿ[ಱಿಯಿಸಿಕೊಂಡು] ಬೀಳಲಾಗಿ (ಕಇ. III. ೦೩-೪; 1542). **ಪರಂಗಿ :** ೧. ಹೊಯ್ಸಳ ಕೊಂಗು ಸಿಂಧು ಪರಂಗಿ ಪಾಂಚಾಲಾದಿ ನೃಪರೆಲ್ಲಂದರಳ್ಕಿಯುಲಿ (ಮದೇಶು. ४-೦३) ; ಕರೆಯುವನಿಗೆ ಬಾಧಕರಾಗಿರುವ ಪರಂಗಿಗಳ ಬಲವನುಡುಗಿಸಿ (ಕೆಳನೃ. ೬-೭) ; ಪರಂಗಿಗಳಿಂದ ಬಂದ ಶಮ್ಮೀಳದ್ರವ್ಯಂಗಳಂ . . . ಉಳಿಯಲ್ವೇಳ್ಕು (ಮಹಾಶಿ. ೧೦-೪೦). ೪. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಪಪ್ಪಾಯಿ : 'ಪರಂಗಿಗಿಡ' ಪರಾ. ೫. (ಕರಾ) ಪೈನಾಪಲ್ ಗಿಡ ; ಅನಾನಸು : 'ಪರಂಗಿಗಿಡ' ಪರಾ. **ಪಿರಂಗಿ :** ೨. ತರಕಸ ಶಾರ್ಙ್ಗ ಪಿರಂಗಿ ಭಲ್ಲೆಯ ಬಿಟ್ಟ ಬಿಜುಗಣ್ಣು ಭೀಕರಾನನವು . . . ಒಪ್ಪಲ್ಪಪ್ಪ ತುರುಕ ವಜೀರ (ಮದೇಶು. ೨೦-೬೦); ಪುರದ ಕೋಟೆಯ ಸುತ್ತಣ ಕೊತ್ತಳಗಳೊಳು ಮೆಱೆದುವು ಬಲು ಪಿರಂಗಿಗಳು (ಕಂಠವಿ. ೬-೦೬) ; ಕೊತ್ತಲಗಳ ಮೇಲೆ ಯೆತ್ತಿ ಪಿರಂಗಿಯ ಹತ್ತು ದಿಕ್ಕಿನೊಳು ಹಾರಿಸಲು (ಸೌಗಂಶ. ೨-೦೯). **ಫರಂಗಿ :** ೧. ಯಾವ ಫರಂಗಿ ಬಂದು ಹೇಳುತ್ತಾನೋ ಹೇಳಲಿ (ಶಿವಥ. ४೬) ; ಇವನನ್ನು . . . ಫರಂಗಿಯವರು ಹಿಡಿದು ಗಲ್ಲಿಗೆ ಏರಿಸಿದಾಗ ತಾಲ್ಲೂಕು ತಾಲ್ಲೂಕೇ ಅತ್ತಿತಂತೆ (ಪಪದಾ. II. ೞ೩೨); ನಡುವೆ ಫರಂಗಿಗುಂಡು ಸುತ್ತುತ್ ಫರಂಗಿ ದಂಡು (ಪಾಶದ. ೦೩೨).

[← ಇಂ. Frank./ ಹಿಂ. ಮರಾ. ಫಿರಂಗೀ. / ಸಂ. ಫಿರಂಗ]

**ಫಿರಂಗಿಉಬ್ಬೆ** (ನಾ). ಫಿರಂಗಿರೋಗದಿಂದ ಬರುವ ಹುಣ್ಣು : ಫಿರಂಗಿಉಬ್ಬೆಗೆ . . . ತಾಳಕ ೧೦ ತೂಕ, ರಸ ೨ ತೂಕ, ಕಪ್ಪಲಿಸತ್ವ ೧ ತೂಕ ನಿಂಬೇಹುಳಿಯಿಂದರೆದು ಮೂಸೆಯಲಿರಿಸಿ ಗುಳಿಗೆಯ ಮಾಡಿ ಮೂಸೆಯಲಿರಿಸಿ ಮೇಲೆ ಮರಳ ತುಂಬಿ ತುಸು ಪುಟಿಸಿಕೊಳ್ಳೆ ಹರವಹುದು (ಐವ್ಯಪಿ. ೦೬೨). [ಫಿರಂಗಿ + ಉಬ್ಬೆ$_1$? ]

**ಫಿರಂಗಿಚೆಕ್ಕೆ**, ಪರಂಗಿಚೆಕ್ಕೆ (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಬೇರು : ಫಿರಂಗಿ ಚೆಕ್ಕೆ ೧ ಸೇರು, ಇದಕ್ಕೆ ಕೊಡುವ ದ್ರವ್ಯ- ಹಿಪ್ಪಲಿ . . . ದೇವದಾರು, ಇವುಗಳು ಪತ್ರ್ರ ಗ ೨ ತೂಕವ ಚೂರ್ಣವ ಮಾಡಿ ತೆಗೆದುಕೊಳ್ಳುವುದು (ಐವ್ಯಪಿ. ४९). **ಪರಂಗಿಚೆಕ್ಕೆ :** (ಮೃಶಿ. ६೦-೦४६೬); ಪರಂಗಿಚೆಕ್ಕೆಯ ಒಣಬೇರುಗಳಿಂದ ಸಾರ್ಸಪರಿಲ ಎಂಬ ವಸ್ತು ಸಿಕ್ಕುತ್ತದೆ (ಕಂಕೋ. X. ೬೯३).

[ದೇ.॥ ತಮಿ. ಪಱಙ್ಕಿಚ್ಚಕ್ಕೈ ; ತೆಲು. ಪರಂಗಿಚೆಕ್ಕ]

**ಫಿರಂಗಿರೋಗ**, ಪರಂಗಿರೋಗ (ನಾ). ಒಂದು ಬಗೆಯ ಮೇಹ ರೋಗ ; ಉಪದಂಶ ; ಪರಂಗಿ ಹುಣ್ಣಿನ ರೋಗ : ಉಪದಂಶ ಅಥವಾ ಫಿರಂಗಿರೋಗ (syphilis)ದಲ್ಲಿ ತೀವ್ರವಾದ ಮನೋರೋಗಗಳುಂಟಾಗುವುವು (ಮನೋರೋ. ೨೯). **ಪರಂಗಿರೋಗ :** ಪರಂಗಿ ರೋಗವು ನಮ್ಮ ಇಂಡಿಯಾದೇಶದ ಹಲವು ಭಾಗಗಳಲ್ಲಿರುವ ಕುರುಡುತನಕ್ಕೆ ಕಾರಣವಾಗಿರುತ್ತೆ (ಕಿಮ್ಮಾದೃ. ೦೦३). [ಫಿರಂಗಿ + ರೋಗ]

**ಫಿರಂಗಿಶೂಲೆ** (ನಾ). = ಫಿರಂಗಿಉಬ್ಬೆ : ಫಿರಂಗಿಶೂಲೆಯಾಗಿದ್ದ ಠಾವಿಗೆ ದಿನ ಒಂದಕ್ಕೆ ಮೂಱು ಬಾರಿ ತೊಡೆದು ಮಿಾಯಲು ೫ ದಿನದ ಮೇಲೆ ಕೀವು ಬರುವುದು (ಐವ್ಯಪಿ. ೬೯). [ಫಿರಂಗಿ + ಶೂಲೆ$_1$]

**ಫಿರಂಗಿಹುಣ್ಣು**, ಪರಂಗಿಹುಣ್ಣು (ನಾ). = ಫಿರಂಗಿಉಬ್ಬೆ : ಆ ತೈಲವಂ ಪಾವಡೆಗೆ ತೊಡೆದು ಹುಣ್ಣಿಗೆ ಹಾಕಲು ಎಂಥ ಫಿರಂಗಿಹುಣ್ಣು ಮಾಣ್ಗುಂ (ಐವ್ಯಪಿ. ೬೬). **ಪರಂಗಿಹುಣ್ಣು :** ಉಪದಂಶವೆಂದರೂ . . . ಪರಂಗಿ ಹುಣ್ಣು ಎಂದರೂ ಎಲ್ಲಾ ಒಂದೇ ಜಾತಿ (ವೃದ್ಧಸಾ. II. ೦೬೭).

[ಫಿರಂಗಿ + ಹುಣ್ಣು (<ಪುಣ್)]

**ಫಿರಕ** 'ಫಿರ್ಕಾ' ನೋ.

**ಫಿರತಿ**, ಫಿರ್ತಿ (ನಾ). ಸಂಚಾರ ; ಪರ್ಯಟನ ; ಪ್ರವಾಸ : ಈ ಸಾರೆಯ ಫಿರತಿಯಲ್ಲಿ . . . ರಾಮರಾಯನ ಜೊತೆಗೆ ಕಟ್ಟಿಗೆ ಹೋಗಬೇಕಾಗಿ ಬಂದಿತು. ಅವನ ಫಿರತಿಗಳು ಹೆಸರಾಗಿದ್ದವು (ಗಂಮಾಯಿ. ೦೬೪); ಇವರು ವರ್ಷಕ್ಕೆ ಏಳು ತಿಂಗಳು ಫಿರತೀ ಮಾಡಲೇಬೇಕು (ಕಾರವ. ೬३); ಇದ್ದೂರಾಗ ಹತ್ತು ರೂಪಾಯಿ ಕಡಿಮಿ ಸಂಬಳ ಸಿಕ್ಕರೂ ಅಡ್ಡಿಯಿಲ್ಲ ಈ ಫಿರತಿ ಕೆಲಸ ಸಿಗಬಾರದು (ಶೂಜಾಕ. ೯३). **ಫಿರ್ತಿ :** ಆಗಾಗ ಫಿರ್ತಿಯ ಕೆಲಸವೂ ಬೀಳುವುದು (ಸಾವಿಉ. ೦३೦) ; ಸಾಹೇಬರೊಂದಿಗೆ ಅವರು ಹಳ್ಳಿಯ ಮೇಲೆ ಫಿರ್ತಿಗೆ ಅದೇ ಹೋಗಿದ್ದರು (ಹೇಮಂತ. ೦೬३).

[← ಮರಾ. ಫಿರತೀ]

**ಫಿರಿಕಟ್ಟು** (ನಾ). ತಡೆ; ಬಂಧನ; ಬಂದೋಬಸ್ತು: ಅವನಿಗೆ ಜಾರುಂದಾಯ ಭೂತ ಹಿಡಿದಿದೆ . . . ಆದಕ್ಕೆ ತಕ್ಕ ಫಿರಿಕಟ್ಟು ಮಾಡದಿದ್ದರೆ ಅದು ಎಲ್ಲರನ್ನೂ ರಕ್ತ ಕಾರಿಸಿ ಕೊಲ್ಲುವ ಮಹಾಭೂತ ! (ಕರಾವ. ೦४९).

[← ತುಳು. ಬಿರಿಕಟ್ಟು]

**ಫಿರಿಯಾದಿ** ' ಫಿರ್ಯಾದಿ ' ನೋ.

**ಫಿರಿಯಾದು** ' ಫಿರ್ಯಾದು ' ನೋ.

**ಫಿರ್ಕಾ**, ಫಿರಕ, ಪಿರ್ಕಾ (ನಾ). ಶಾನುಭೋಗನ ಅಧಿಕಾರಕ್ಕೆ ಒಳಪಟ್ಟ ಹೋಬಳಿಯ ಒಂದು ವಿಭಾಗ : ಸಿಲೆದಾರಿ ಫಿರ್ಕಾದಲ್ಲಿ

೨೮,೦೦೦ ಕುದುರೆಗಳಿದ್ದುವು (ಮುಕಾಪಂ. II. ೦೬); ಎರಡು ಅಥವಾ ಹೆಚ್ಚು ಗ್ರಾಮಗಳನ್ನು ಅಥವಾ ಅವುಗಳ ಭಾಗಗಳನ್ನು ಒಂದು ಫಿರ್ಕಾವಾಗಿ ಏರ್ಪಡಿಸಬಹುದು (ಗ್ರಾಪಾಕ. ೯೬); ಅವರ ಫಿರ್ಕಾದಲ್ಲಿ ಕಂದಾಯು ಯಾವಾಗಲೂ ಬಾಕಿಯಾದುದೇ ಇಲ್ಲ (ಚಿತ್ರಕ. ೨೦). **ಫಿರಕ:** (ಕ). **ಫಿರ್ಖಾ:** ಒಂದೊಂದು ಫಿರ್ಖಾದಲ್ಲಿ ತಾಲ್ಲೂಕು ಅಮಲ್ದಾರರುಗಳು . . . ಗ್ರಾಮನೌಕರರಿಗೆ ರಜಾ ಮಂಜೂರ್ಮಾಡಲು ಅಧಿಕಾರ ಹೊಂದಿರುವರು (ಗ್ರಾಪಾಕ. ೭). [← ಅರ. ಹಿಂ. ಫಿರಕಾ]

**ಫಿರ್ಖಾ** 'ಫಿರ್ಕಾ' ನೋ.

**ಫಿರ್ತಿ** 'ಫಿರತಿ' ನೋ.

**ಫಿರ್ಯಾದಿ** 'ಫಿರ್ಯಾದು' ನೋ.

**ಫಿರ್ಯಾದು, ಪಿರಿಯಾದಿ, ಫಿರಿಯಾದಿ, ಫಿರಿಯಾದು, ಫಿರ್ಯಾದಿ** (ನಾ). ೧. ತಮಗಿರುವ ತೊಂದರೆಯನ್ನು ತಿಳಿಸಿ ಪರಿಹಾರಕ್ಕಾಗಿ ಮಾಡುವ ವಿನಂತಿ; ನ್ಯಾಯಸಂಪಾದನೆಗಾಗಿ ಸಲ್ಲಿಸುವ ಅಹವಾಲು: ಈ ಕೋರ್ಟಿನ ಹಕೀಮರಲ್ಲಿ ಒಬ್ಬರ ತರುವಾಯ ಮತ್ತೊಬ್ಬರು ಅಧಿಕಾರ ವಹಿಸಿ ಹದಿನೈದು ದಿನ ಫಿರ್ಯಾದುಗಳನ್ನು ದಾಖಲ್ಮಾಡಿಕೊಂಡು ಆಮೇಲೆ ಹದಿನೈದು ದಿನ ಅವುಗಳ ವಿಚಾರಣೆ ನಡೆಸುತ್ತಿದ್ದರು (ಮುಕಾಪಂ. II. ೯೭); ಡೆಪ್ಯೂಟಿಕಮಿಷನರವರು . . . ತಮ್ಮಲ್ಲಿಗೆ ಫಿರ್ಯಾದು ಬಂದು ವಿಚಾರಣೆ ನಡೆಸಿಯಾಗಲಿ, ಫಿರ್ಯಾದಿಲ್ಲದೆ ತಾವಾಗಿಯೇ ಆಗಲಿ ಜುಲ್ಮಾನೆ ಹಾಕಬಹುದು (ಗ್ರಾಪಾಕ. ೮೯). ೨. ದೂರು: ರಷ್ಯಾನ್ಸಿಯು ರಾಜ್ಯದ ಮೇಲೆ ಅನೇಕ ಸಾಹುಕಾರರ ಅರ್ಜಿ, ಫಿರ್ಯಾದುಗಳು ಹೆಚ್ಚಿದವು (ಮುಜಾಚಂ. ೩); ಯಾವ ಕೋರ್ಟಿಗೆ ಹೋಗಿ . . . ಫಿರ್ಯಾದು ಮಾಡುವುದು ? (ಮುಜಾಚ. ೦೯೦). **ಪಿರಿಯಾದಿ:** ೩. ದೂರು ಕೊಟ್ಟವನು; ಆಪಾದನೆ ಮಾಡಿ ಅಹವಾಲು ಸಲ್ಲಿಸಿದವನು; ವಾದಿ: ಈ ವಿವರವನ್ನು ಟೀಪುಸುಲ್ತಾನರಿಗೆ ಪಿರಿಯಾದಿಯಾಗಿ ಜಾಹೀರು ಮಾಡಿದರಿಂದ (ರಾಜೇಂದ್ರ. ೩೯). **ಫಿರಿಯಾದಿ:** ೨. ಆಳುಗಳು ಪೋಲೀಸ್ ಸ್ಟೇಷನ್ನಿಗೆ ಫಿರಿಯಾದಿ ಕೊಟ್ಟರು (ಗಂಗಾಕ. ೩೯). **ಫಿರಿಯಾದು:** ೧. ಕುಹಕಿಗಳ್ ರಚಿಸಿದ ಫಿರಿಯಾದಿನಿಂ ನಿತ್ರರಿಸಲಪ್ಪುದೆ ಸ್ಥಳದಿಂ ಮುನ್ನಮೆ ತೊಲಗಿ ಪೋಗಿ (ಕಳಪ್ಪ. ೯-೯೩); ಅಮಿಲ ಶಿರಸ್ತೇದಾರರು ಹೋಗಿ ಜನರ ಫಿರಿಯಾದನ್ನು ವಿಚಾರಣೆ ಮಾಡಿ ಬಂದೋಬಸ್ತು ಮಾಡಿಸಬೇಕು (ಮುಕಾಪಂ. II. ೬೩). **ಫಿರ್ಯಾದಿ:** ೧. ನ್ಯಾಯಾಧೀಶರ ಸಭೆಯಲ್ಲಿ ಫಿರ್ಯಾದಿಯನ್ನು ಮಾಡಿದರು (ಕೃಷಿಕ್ರ. ೨೦); ಅವರು . . . ನನ್ನಿಂದ ಫಿರ್ಯಾದಿ ಬರೆಯಿಸಿದರು (ಎಡಹ. ೬೭); ನಾಳೆ ದರ್ಬಾರದಲ್ಲಿ ಫಿರ್ಯಾದಿಯನ್ನು ಕೊಡು (ಮುಂಡಾಕ. ೦೯೦). ೨. ನನ್ನ ಮೇಲಿನ ಫಿರ್ಯಾದಿಗಳನ್ನು ಕೇಳಿ ಕೇಳಿ ಬೇಸತ್ತನು (ಮುಆಮು. ೩). ೩. ಫಿರ್ಯಾದಿಯ ವಕೀಲನಿಗೆ ಮೈ ಉರಿಯಿತು (ಕಮುಕ. ೦೬೭); ಅದಕ್ಕೆ ನಾನೇ ಪ್ರಮುಖ ಫಿರ್ಯಾದಿ ಆಗಿದ್ದೆ (ಅಕವಾ. ೨); ಫಿರ್ಯಾದಿ, ಅಪರಾಧಿಗಳಿಬ್ಬರೂ ತಮ್ಮ ತಮ್ಮ ಪರವಾಗಿ ವಾದಿಸುವವರನ್ನು ನೇಮಿಸಿಕೊಳ್ಳುವ ಅಧಿಕಾರವಿತ್ತು (ಹುಟ್ಟಿಹ. ೦೬).

**ಫಿರ್ಯಾದಿ ಹೋಗು** = ನ್ಯಾಯಾಲಯಕ್ಕೆ ಅಹವಾಲು ಸಲ್ಲಿಸು: ಅವನು ನ್ಯಾಯಾಧೀಶನ ಬಳಿಗೆ ಫಿರ್ಯಾದಿ ಹೋದನು (ಮುಂಬಯಿ. ೪೦೭).

[← ಅರ. ಪಾರ. ಫರ್ಯಾದ್, ಫರಿಯಾದ್; ಹಿಂ. ಫರಿಯಾದ್, ಫಿರಿಯಾದ್; ಮರಾ. ಫಿರ್ಯಾದ್]

**ಫಿರ್ಯಾದುಕಛೇರಿ** (ನಾ). ಮೈಸೂರಿನ ಅರಸರು ಏರ್ಪಡಿಸಿದ ಅಠಾರಾ ಕಚೇರಿಗಳಲ್ಲಿ ಒಂದು; ತಕರಾರುಗಳು, ಅಹವಾಲುಗಳನ್ನು ವಿಚಾರಣೆ ಮಾಡುವ ಕಛೇರಿ: ಕಚೇರಿಗಳು ೧. ದಿವಾನ್‌ಕಚೇರಿ . . . ೧೮. ಫಿರ್ಯಾದುಕಛೇರಿ (ಮುಕಾಪಂ. II. ೩೯).

[ಫಿರ್ಯಾದು + ಕಛೇರಿ (<ಕಚೇರಿ)]

**ಫಿರ್ಯಾದುದಾರ** (ನಾ). = ಫಿರ್ಯಾದು ೩: ಫಿರ್ಯಾದುದಾರರು ಮತ್ತು ಸೆಷನ್ಸ್ ನ್ಯಾಯಾಧೀಶರೇ ನಡೆಸಬೇಕಾದ ಕೇಸುಗಳಲ್ಲಿ, ದಾವಾದ ಬಗ್ಗೆ . . . ಆರೋಪ ಹೊರಿಸಬಹುದು (ಕಂಕೋ. I. ೦೬೮).

[ಫಿರ್ಯಾದು + — ದಾರ್ೞ]

**ಫಿಲಂ** (ನಾ). ೧. ಭಾವಚಿತ್ರ ಅಥವಾ ಚಲನಚಿತ್ರಗಳನ್ನು ಮೂಡಿಸುವುದಕ್ಕಾಗಿ ಉಪಯೋಗಿಸುವ ಸೆಲ್ಯುಲೈಡಿನ ಸುರುಳಿ. ೨. ಚಲನಚಿತ್ರ; ಸಿನಿಮಾ: ಇದನ್ನು 'ಫಿಲಂ' ತೆಗೆಯಬೇಕು (ಹನ್ನೊಂದ. ೩ ಪಪ್ಪ-ಪಿಪ್ಪು ಮಾತು). [← ಇಂ. Film]

**ಫೀ, ಫೀಜು, ಫೀಸಂ** (ನಾ). ಶುಲ್ಕ: ಆ ಬದುಕಿಗೆ ಬಿದ್ದಿರುವ ಫೀಗೆ ಬಡ್ಡಿ ತಕ್ಕೊಳ್ಳಲಾಗದು (ಮುಂಬಪ್ಪಾ. ೨೨ ಪ್ರಶ್ನಾಪಹ); ವಕೀಲರ ಫೀ ಕೊಡಬೇಕಲ್ಲ ಜಿನ್ನಪ್ಪ ? (ಗ್ರಾಪಾಯ. ೨೬೩). **ಫೀಜು:** ಉಳಿದ ಒಂದು ಪಾಲು ಕಕ್ಷಿಗಾರರ ಕಡೆಯ ವಕೀಲರಿಗೆ ಫೀಜಾಗಿ ಸಲ್ಲುತ್ತಿತ್ತು (ಮುಕಾಪಂ. II. ೯೩); ಹೈಸ್ಕೂಲಿನಲ್ಲಿ ಓದುತ್ತಿದ್ದ ಇಬ್ಬರಿಗೆ ಅರ್ಧ ಫೀಜು ಕಟ್ಟಬೇಕಾಗಿತ್ತು (ಮುಹಾಗ. ೬೩). **ಫೀಸು:** ಈಗ ನಾನು ನಿಮಗೆಷ್ಟು ಫೀಸು ಕೊಡಬೇಕಾಗಿದೆ ? (ಪ್ರಪಂಚ. ೨೦೩). ☞ 'ಫೀಜು', 'ಫೀಸು' ಎಂಬ ರೂಪಗಳು ಇಂಗ್ಲಿಷಿನ 'ಫೀ' ಎಂಬುದರ ಬಹುವಚನ ರೂಪಗಳು. [← ಇಂ. Fee]

**ಫೀಜು** 'ಫೀ' ನೋ.

**ಫೀನಿಕ್ಸ್** (ನಾ). ೧. ಐದಾರು ಶತಮಾನಗಳ ಕಾಲ ಅರೇಬಿಯಾ ಮರಳುಗಾಡಿನಲ್ಲಿ ಜೀವಿಸಿದ್ದು, ಬಳಿಕ ತಾನೇ ಬೆಂಕಿಯಲ್ಲಿ ಸುಟ್ಟು ಕೊಂಡು ಮತ್ತೆ ಹೊಸ ಹುರುಪಿನೊಂದಿಗೆ ಅದೇ ಬೂದಿಯಿಂದ ಹೊರಬಂದು ಬಹುಕಾಲ ಬದುಕುವುದೆಂದು ನಂಬಲಾದ ಒಂದು ಬಗೆಯ ಪಕ್ಷಿ: ಮುಕ್ಕಿ ಮೊಗೆಯುವೆ ಕಾಲ . . . ಉಗ್ರವ್ಯಾಪ್ರನ ಹರಿತಹಲ್ಲು ಕಿತ್ತಸೆವೆ. ಪುರಾತನ ಪಕ್ಷಿ ಫೀನಿಕ್ಸ್ ತನ್ನ ರಕ್ತದ ಬೂದಿ (ಪಂಪಮು. ೬೦-೪). ೨. ಒಂದು ನಕ್ಷತ್ರರಾಶಿ: ಚಕೋರವು ಪಾಶ್ಚಾತ್ಯರ ಫೀನಿಕ್ಸ್ (ಪಕ್ಷತ್ರ. ೨೦). [← ಇಂ. Phoenix]

**ಫೀಸು** 'ಫೀ' ನೋ.

**ಫುಕ್ಕಟೆ** 'ಪುಕ್ಕಟೆ' ನೋ.

**ಫುಗಡಿ, ಪುಗಡಿ, ಪುಗುಡಿ** (ನಾ). ಪರಸ್ಪರ ಕೈಗಳನ್ನು ಭದ್ರವಾಗಿ ಹಿಡಿದು, ನಿಂತಲ್ಲೇ ಗಿರ್ರನೆ ತಿರುಗುವ ಒಂದು ಬಗೆಯ ಆಟ; ಅಪ್ಪಾಲೆ ತಿಪ್ಪಾಲೆ; ಬಗಟ್ಟಬುಗುರಿ (ಉಕ): ಇಬ್ಬರೂ ಎದ್ದು ನಿಂತು ಚಿಕ್ಕಮಕ್ಕಳು ಪುಗಡಿಯಾಡುತ್ತಾರಲ್ಲ — ಆ ರೀತಿಯಲ್ಲಿ ಕೈಯಲ್ಲಿ ಕೈಯಿಕ್ಕಿ ರಿಂಗಣಗುಣಿತ ಹಾಕತೊಡಗಿದರು (ಗಿಳಿಬಗ. ೦೩); ಪುಗಡಿಯಾಟ ನಡೆದಿತ್ತು (ಪಾತರ. ೬೦). **ಪುಗಡಿ:** ನಾನೊಮ್ಮೆ ಪುಗಡಿ ಆಡುತ್ತಿದ್ದೆ — ಗೋಯ ಕೂಡ (ಕಪಕ. ೯೬); ನಾಳೆ ತಿಳಿಯುವುದು ಬೆಳಗಾದರೆ, ಗಂಡ ಬಂದು ಪುಗಡೀ ಆಡಿಸುವಾಗ ತಲೆ ಹೇಗೆ ತಿರಗುವದೆಂಬದು (ಕಪಕ. ೯೭). **ಪುಗುಡಿ:** "ರಾಸಕ್ರೀಡಾ — ಪುಗುಡಿ" (ಕಾಕಕ್ಕ. ೦೨೦); "ಪುಗುಡಿ — ಮಕ್ಕಳ ಆಟ, ಹೆಣ್ಣು ಮಕ್ಕಳ ದುಂಡಾಟ" (ಜಾಪಕೋ. ೦೬).

**ಫುಗಡಿ ಹಾಕು** = ಅಪ್ಪಾಲೆ ತಿಪ್ಪಾಲೆ ಆಡು: ಪಗಡೆಕಾಯಿ ಕುಚಬಾಲೇರೇ ಫುಗಡಿ ಹಾಕೀರೆನ್ನ ಮುಂದೆ ತೆಗೆದುಕೊಡುವೆ ವಸ್ತ್ರವ ನಿಮಗೆ (ಕಪಕ. ೦೦೪-೯). [← ಮರಾ. ಫುಗಡೀ]

**ಫುಟ್‌ಲಾಯರಿ** 'ಫೂಟ್‌ಲಾಯರಿ' ನೋ.

**ಫುಟ್‌ಲಾಯರು, ಪೂಟುಲಾಯರು** (ನಾ). ಕಾನೂನಿನ ಪ್ರಶಸ್ತಿ ಪತ್ರ ಅಥವಾ ಸನದನ್ನು ಪಡೆಯದೆ ಹಳ್ಳಿಗಳಲ್ಲಿ ಒಬ್ಬ ವಕೀಲನ ಪರವಾಗಿ ವಕೀಲಿವೃತ್ತಿಯನ್ನು ನಡೆಸಿ ಲಾಯರ ಬಳಿಗೆ ಕಕ್ಷಿಗಳನ್ನು ಒದಗಿಸುವವನು: ಹೆಸರಾಂತ ಫುಟ್‌ಲಾಯರು ಚಿಂತಾಮಣಿಯವರ

ಕುವರಿ ಕೇವಲ ನಾಟಕದ ನರಸಿಂಹನ ಕೈಹಿಡಿಯುವುದುಂಟೇ ? (ಮಾಪುಪ. ೩೩). **ಫುಟುಲಾಯರು :** ಅವನೊಬ್ಬ ಫುಟುಲಾಯರು (ರೂಶಿ).
[<ಫೂಟು₁ + ಲಾಯರು]

**ಫುಟಾಫುಟಿ** (ನಾ). ೧. ಚೂರುಚೂರು ; ತುಂಡುತುಂಡು. ೨. ಅಸ್ತವ್ಯಸ್ತ ; ಚೆಲ್ಲಾಪಿಲ್ಲಿ : ಈ ಫರಜುಲ್ಲಾಖಾನನ ದಂಡು ಯಾವತ್ತೂ ಮುರಿದು ಫುಟಾಫುಟಿ ಆದ ವರ್ತಮಾನ ನವಾಬಹೈದರಲ್ಲಿ ಖಾನರು ಕೇಳಿ (ರಾಜೇಂದ್ರ. ೩೦). [←ಮರಾ. ಫುಟಾಫೂಟ್]

**ಫುಪ್ಪುಸ,** ಪುಪ್ಪುಸ (ನಾ). ಶ್ವಾಸಕೋಶ : ಈ ವಿಷಪದಾರ್ಥಗಳು . . . ಶ್ವಾಸದ ಮಾರ್ಗದಿಂದ ನಮ್ಮ ಫುಪ್ಪುಸಗಳಲ್ಲಿ ಸೇರಿ ಅಪಕಾರ ಮಾಡುತ್ತವೆ (ಮುಂಬಯಿ. ೩-೦೫೦) ; ಆ ನರುಗಂಪನ್ನು ಎರಡು ವರ್ಷಗಳ ವರೆಗೆ ತನ್ನ ಪುಪ್ಪುಸಗಳಲ್ಲಿ ಕಾದಿಡಲು ಪ್ರಮೀಲೆ ಹವಣಿಸಿದಳು (ನವಜೀ. ೩೫೦) ; ಹೃದಯ, ಫುಪ್ಪುಸ ತಮ್ಮ ಕಾರ್ಯವನ್ನು ರಕ್ತದ ಬೆಂಬಲದಿಂದ ಸಾಗಿಸುತ್ತಿರುವುವು (ಕದಂಬ. ೬೩). **ಪುಪ್ಪುಸ :** ಪುಪ್ಪುಸದಲ್ಲಿ ನೋವಿದೆಯೇ? (ದೇದಾಸ. ೦೨೫) ; ರವಮಾಬಾಯಿಗೆ . . . ಪುಪ್ಪುಸವಿಕಾರದ ಬಾಧೆಯಾಗಿತ್ತು (ಶ್ರೀರಂಗ. ೩೦); ಈ ಬಲಪುಪ್ಪುಸದ ಆಪರೇಶನ್ನು ಆದ ನಂತರ ಆತ ಸಂಕಟದಿಂದ ಪಾರಾದ (ಮುಕ್ತಿ. ೯). [<ಸಂ. ಪುಪ್ಪುಸ]

**ಫುರೋಕ್ತು** 'ಪುರೋಖ್ತು' ನೋ.

**ಫುಲ್ಗರ** (ನಾ). ಒಂದು ಬಗೆಯ ಜೋಳ : ಭಗವಂತಫುಲ್ಗರ, ಪಟ್ಟಣಸಾಳಿ, ಗೌರೀಕುಲು, ಬಸವನ ಪಾದ, ಫುಲ್ಗರ . . . ಕೊಡಮೂಕನ ಜೋಳ ಈ ಯೆಂಟು ಜಾತಿಗಳನ್ನು ಮುಖ್ಯ ಪೈರುಗಳಾಗಿ, ಇಲ್ಲವೇ ಬೇರೆ ಮುಂಗಾರೀ ಹಿಂಗಾರೀ ಜಾತಿಗಳ ಪೈರಿನಲ್ಲಿ ನಡುನಡುವೆ ಹಲಕೆಲವು ಸಾಲುಗಳಾಗಿ ಬಿತ್ತುವರು (ಕಜಾಗಿ. ೨೭೦). [ ? ]

**ಫುಲ್ಲ** (ಗು). ೧. ಅರಳಿದ ; ವಿಕಸಿತವಾದ : "ಫುಲ್ಲಮುದ್ಗಮನಂ ವಿಜೃಂಭಿತಂ" (ಮಂಗರಾ. ೧೩೦-೩) : ತಿಳಿಗೊಳನಂ ಫುಲ್ಲಪಂಕೇಜವಂ ನಿರ್ಮಳತಾರಾಧೀಶನಂ ಪೋಲ್ತೆಸೆಯೆ ನಗೆಮೊಗಂ ಕಾಂತೆ ಕಣ್ಗೊಪ್ಪಿ ತೋರ್ಕುಂ (ಅಕಥ. ೦-೯೦) ; ವಿಪಿನಸುಂದರಚೈತ್ರಮಾಸದ ಫುಲ್ಲಪುಷ್ಪಮಯ ಕಿಂಶುಕವೊ (ಶ್ರೀರಾಮಾ. ೩೦೩-೯೯). ೨. ಹೂವು ಬಿಟ್ಟಿರುವ ; ಹೂವುಗಳಿಂದ ತುಂಬಿದ. ೩. (ಕಣ್ಣುಗಳಂತೆ) ಅಗಲವಾಗಿ ತೆರೆದ, – ಹಿಗ್ಗಲಿಸಿದ. (ನಾ). ೪. ಹೂವು ; ಪುಷ್ಪ : 'ಫುಲ್ಲಶರ' ಪರಾ. ೫. [ನಾಟ್ಯ] ಕಪೋಲದ ಆರು ಭೇದಗಳಲ್ಲಿ ಒಂದು ; P ಕೆನ್ನೆಗಳನ್ನು ಸಂತೋಷದಿಂದ ಅರಳಿಸುವುದು. ಸಂತೋಷದಲ್ಲಿ ಇದನ್ನು ವಿನಿಯೋಗಿಸಬೇಕು" (ಅಭಿನಯದರ್ಪಣ. ಗದ್ಯಾನುವಾದ ೨೬೬): ನುತಿವಡೆದ ಕುಂಚಿತಂ ಕಂಪಿತವೊಪ್ಪುವ ಪೂರ್ಣಮೆಸೆವ ಕ್ಷಾಮಂಫುಲ್ಲಂ ಸತಿ ಕೇಳ್ ಸಮಮಿಂತಾಱುಂ ಮತದಿಂ ರಂಜಿಪುದು ಗಲ್ಲಮಂಬುಜವದನೇ (ಅಭಿನ್ನರಂ. ೩-೬೯). [ಸಂ.]

**ಫುಲ್ಲಂಬು** (ನಾ). ಹೂವಿನ ಬಾಣ : ಮಲ್ಲಿಗೆಗೋಲ್ಗಳೊ ಮರದ ಮಿಂಟಿಯೊ ಪೇಳು ಫುಲ್ಲಂಬೊ ಲೋಹದಂಬುಗಳೊ (ಭರತ. ೩೦-೩೩).
[ಫುಲ್ಲ + ಅಂಬು₂]

**ಫುಲ್ಲಕ** (ನಾ). ಹುಳು ; ಕ್ರಿಮಿ : "ಕೃಮಿಃ, ಕೀಟಃ, ನೀಲಂಗುಃ, ಫುಲ್ಲಕಃ– ಈ ೪ ಪು (ಹು)ಬು" (ಹಲಾಯು. ೦೦೫-೦೪) ; "ನೀಲಂಗು ಫುಲ್ಲಕಂ ಕ್ರಿಮಿ ಕೀಟವುಚ್ಚೈಪುಬುವಕ್ಕುಂ" (ಮಂಗರಾ. ೧೦೭-೩). [ಸಂ.]

**ಫುಲ್ಲನೇತ್ರ** (ನಾ). (ಕಮಲದ) ಹೂವಿನಂತೆ ಕಣ್ಣುಗಳುಳ್ಳವನು ; ವಿಷ್ಣು : ಫುಲ್ಲನೇತ್ರನೊಳರ್ಕನೊಳು ಶಶಿಯೊಳಾತ್ಮನೊಳು . . . ಸರೋಜದೋಳ್ ಪರಿವರ್ತಿಸಿರ್ಕುಂ ಹಂಸಾಭಿಧಾನಂ (ಮಂಗರಾ. ೦೪೬-೯೦). [ಸಂ.]

**ಫುಲ್ಲಶರ** (ನಾ). ೧. ಹೂವಿನ ಬಾಣ ; ಮನ್ಮಥಬಾಣ : ಫುಲ್ಲಶರಂ ಬಸಂತದ ಪುಗಿಲ್ ನೆಱೆದಿಂಗಳ ತಣ್ಪೆಸಿಲ್ . . . ಎಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ (ಮಲ್ಲಿಕಾ. ೦-೪೪). ೨. ಹೂವಿನ ಬಾಣಗಳುಳ್ಳವನು ; ಮನ್ಮಥ : ಫುಲ್ಲಶರಂಗಿಸುವೆಡೆಗಿವೆ ನಲ್ಲಂಬುಗಳ್ (ಅದಿಪು. ೦೦-೦೦೦) ; ಫುಲ್ಲಶರನೆಸಕಮುಂ ಹೃದಯೋಲ್ಲಾಸಮುಮಿಂದ್ರಿಯಂಗಳಿಚ್ಛೆಯ ಸವಿಯುಂ ಸಲ್ಲದೊಡಂ . . . ಅಸಾರಮೀ ಸಂಸಾರಂ (ಅಂರಾಚ. ೪-೩೩). [ಸಂ.]

**ಫುಲ್ಲಹೇತಿ** (ನಾ). = ಫುಲ್ಲಶರ ೨ : ಫುಲ್ಲಹೇತಿಯ ಭಲ್ಲೆಹಕೆ ಕಡು ನೊಂದೆ ನನ್ನಯ ನಲ್ಲನಾಗಿಯೆ ಮನ್ಮನೋರಥವೀಯಬೇಕು (ಕಾಶಿರಾ. ೩-೦೬). [ಸಂ.]

**ಫುಲ್ಲಾಬ್ಜಪುತ್ರ** (ನಾ). ಅರಳಿದ ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ : ಆ ತಾರಕಂ . . . ಉಗ್ರತಪಮಂ ಮಾಡಲಾತಂಗೆ ಫುಲ್ಲಾಬ್ಜಪುತ್ರನಿಂ ವರವ ಕೊಡಿಸಲ್ಬಂದು ನೆಲಸಿದಂ ಸರ್ವೇಶ್ವರಂ (ಪೀಠಿಕಾ. ೩-೨೦-೪೩). [ಸಂ.]

**ಫುಲ್ಲೈಸು** (ಕ್ರಿ). ಅರಳು ; ವಿಕಾಸವಾಗು : ಫುಲ್ಲೈಪ ಸರಸಸುಮನಃ ಪಲ್ಲವಸಂಗದೆ ಪೊದಱ್ದು ಪೊಂಗುವನಿತಱೊಳ್ ಮಲ್ಲೀವಲ್ಲಿಮತಲ್ಲಿಗಿದೆಲ್ಲಿಯ ಕಡುಮೆಂಕೆ ಸೋಂಕೆ ಕೊಂಕುವುದಕಟಾ (ಚಕಪ. ೬-೦೩೬).
[ಫುಲ್ಲ + < – ಇಸ್ಸು₃]

**ಫುಲ್ಲೋತ್ಪಲ** (ನಾ). ಅರಳಿದ ಕಮಲ : ಫುಲ್ಲೋತ್ಪಲಭಾವನೆಯಿಂ ನಿಲ್ಲದೆ ಕೆಯ್ಕೊಳ್ವುದೆಂದು ಸಾಂಖ್ಯಂ ಮೂಱುಂ ಕಲ್ಲಿಂದಿಡುತುಂ ಗೌರೀವಲ್ಲಭನಂ ನಚ್ಚಿ ಮಚ್ಚಿ ಪೂಜಿಸುತಿರ್ದಂ (ಪ್ರಭುಪು. ೩೪-೦೨೦). [ಸಂ.]

**ಫುಸಲತ್ತು** 'ಪುಸಲತ್ತು' ನೋ.

**ಫೂಟ್‌ಲಾಯರಿ,** ಫೂಟಲಾಯರಿ, ಫುಟ್‌ಲಾಯರಿ, ಫುಟಲಾಯರಿ (ನಾ). ೧. ಫೂಟ್‌ಲಾಯರನ ವೃತ್ತಿ,–ಕಾರ್ಯ : ಲಾ ಪಾಯಿಂಟುಗಳನ್ನೆಲ್ಲಾ ಅಷ್ಟಿಷ್ಟು ತಿಳಿದಿದ್ದ ಚನ್ನ ಫೂಟ್‌ಲಾಯರಿ ಕೆಲಸ ಮಾಡಿದ (ನನ್ನೂರು. ೨೦೫). **ಫೂಟಲಾಯರಿ :** ೨. = ಫುಟ್‌ಲಾಯರು : ಹಳ್ಳಿಯಲ್ಲಿ ಹೀಗಾದರೆ ಫೂಟಲಾಯರಿಯು ಮುಂದೆ ಬಂದು (ಮುಖಮೂ. ೮೪). **ಫುಟ್‌ಲಾಯರಿ :** ೨. ಇವನು ಕೊಂಡಾಪುರದ ಶಾಂತವೀರಯ್ಯ, ಫುಟ್‌ಲಾಯರಿಯ ಹಾಗೆ ಏನಾದರೂ ಇವನ ತಲೆಯಲ್ಲಿ ಇದ್ದೇ ಇರುತ್ತೆ ವಿಚಾರಗಳು (ಮರಳ. ೩೯). **ಫುಟಲಾಯರಿ :** ೧. ಫುಟಲಾಯರಿಯಲ್ಲಿ ಸಂಪಾದಿಸುತ್ತಿದ್ದುದು (ಕಾಮಿಣಾಂ. ೩). [<ಫುಟ್‌ಲಾಯರು]

**ಫೂಟಕೂಲ್‌ಪತ್ರಕ** (ನಾ). ಒಂದೇ ಸರ್ವೆನಂಬರಿನಲ್ಲಿ ಎರಡು ಅಥವಾ ಅದಕ್ಕೂ ಹೆಚ್ಚು ಸಾಗುವಳಿದಾರರನ್ನು ನಮೂದಿಸಿದಾಗ, ಪ್ರತಿಯೊಬ್ಬರ ವಶದಲ್ಲಿರುವ ಭೂಮಿಯು ಕ್ಷೇತ್ರ, ಕಂದಾಯ ಮೊದಲಾದುವುಗಳನ್ನು ತಿಳಿಸುವ ಕಾಗದ : (ಕೃಶ್‌ಗ. II, ೩೩೯).
[ ಫೂಟಕೂಲ್₀ ( P ← ಇಂ, Protocol) + ಪತ್ರಕ ]

**ಫೂಟಮಾಗಣಿ** (ನಾ). ಮಾಗಣಿಯ ಪೋಟುಭಾಗ,–ಹಿಸ್ಸೆ : (ಕೃಶ್‌ಗ. II, ೩೩೯). [ < ಫೂಟು₁ + ಮಾಗಣಿ₁ ]

**ಫೂಟಲಾಯರಿ** 'ಫೂಟ್‌ಲಾಯರಿ' ನೋ.

**ಫೂಟು₁,** ಪೂಟು (ನಾ). ೧. ಪ್ರತ್ಯೇಕವಾದುದು ; ಪೃಥಕ್ಕಾದುದು : ತಾಲ್ಲೂಕ್ ಅಮಲ್ದಾರರಾಗಲಿ, ಸಬ್‌ತಾಲ್ಲೂಕ್‌ಡೆಪ್ಯುಟಿಅಮಲ್ದಾರರಾಗಲಿ ಫೂಟಾಗಿ ವಿಚಾರಣೆ ಮಾಡಿ ಫೈಸಲ್ ಕೊಡತಕ್ಕದ್ದು (ಗ್ರಾಮಾಕ. ೯೩). (ಗು). ೨. ಚಿಕ್ಕ ; ಸಣ್ಣವಿಭಾಗಕ್ಕೆ ಸೇರಿದ : 'ಫೂಟು ದೊರೆ' ಪರಾ. **ಫೂಟು :** ೩. ಸಾರಾಂಶ ; ತಿರುಳು : 'ಫೂಟಜ್ಜಿ' ಪರಾ. [ ← ಮರಾ. ಫೂಟ್ ]

**ಫೂಟು₂** (ನಾ). ಒಂದು ಅಳತೆಯ ಪ್ರಮಾಣ ; ಒಂದು ಅಡಿ ; ಹನ್ನೆರಡು ಅಂಗುಲ : ಸಹ್ಯಾದ್ರಿಯು ೧೭೦೦ ಫೂಟು ಯೆತ್ತರವಾದ

ಶಿಖರಗಳು ಸಮುದ್ರತೀರಕ್ಕೆ ಹೊಂದಿರುತ್ತವೆ (ಕಭಾಗ. ೪); ಮರದ ಸುತ್ತಳತೆಯು ಹೆಚ್ಚುಕಡಿಮೆ ಎರಡು ಸಾವಿರ ಫೂಟುವೆಂಟು (ಮುಂಬಯಿ. ೨-೨೯); ಒಂಭತ್ತು ಫೂಟು ಅಂದರೆ ಒಂದು ಮಾರು ಆಗುವದು (ಕೃಶಿಕ್ಷ. ೯೩).. [←ಇಂ. Foot]

**ಫೂಟುತೀರ್ಮಾನ** (ನಾ). (ನ್ಯಾಯಾಲಯದಲ್ಲಿ ಅನಾವಶ್ಯಕವಾದ ವಿವರಗಳನ್ನು ಗಮನಿಸದೆ) ಆಗಿಂದಾಗ್ಗೆ ಕ್ಷಿಪ್ರವಾಗಿ ಕೊಡುವ ನ್ಯಾಯನಿರ್ಣಯ : ಯಾವುದಾದರೂ ಅಪೀಲನ್ನು. . . ಆ ನ್ಯಾಯಾಲಯದವರಿಗೆ ತೋರಿದ ಸಂದರ್ಭದಲ್ಲಿ ಫೂಟುತೀರ್ಮಾನ ಮಾಡುವುದಕ್ಕೆ ಉಪಬಂಧಗಳನ್ನು ಕಲ್ಪಿಸುವ ನಿಯಮಗಳು (ಕಾಧಾನ. ೭೭). [ಫೂಟು$_1$ + ತೀರ್ಮಾನ]

**ಫೂಟುದೊರೆ** (ನಾ). ಚಿಕ್ಕರಾಜ್ಯದ ಅರಸು ; ಪಾಳೆಯಗಾರ; ಮಾಂಡಲಿಕ : ಕೆಲವರು. . . ದೇಶೀಯ ಮಹಾರಾಜರನ್ನೂ ಮುಸಲ್ಮಾನ್ ದೊರೆಗಳನ್ನೂ ಅನುಸರಿಸಿಕೊಂಡು ಇದ್ದರು. ಇಂಥಾ ಫೂಟುದೊರೆಗಳು ಜರುಗಿಸುತ್ತಿದ್ದ ಅಧಿಕಾರವು ಅಲ್ಲಲ್ಲಿ ವಿಶೇಷವಾಗಿ ಭಿನ್ನಿಸಿದ್ದಾಗ್ಯೂ ನಮ್ಮ ಭರತಖಂಡದಲ್ಲಿ ಇಂಥವರು ಹೆಚ್ಚಾಗಿದ್ದಂತೆ ತಿಳಿಯಬಂದಿದೆ (ಹಾಲಿಗಾ. ೦೯). [ಫೂಟು$_1$ + ದೊರೆ$_3$]

**ಫೂತ್ಕರಿಸು** (ಕ್ರಿ). ೧. ಉಗಿ; ಉಗುಳು : ನಾಕನದೀವಾರಿಯನೀಂಟಿ ಫೂತ್ಕರಿಸಿ . . . ಪಾಲ್ಗಡಲೊಳುದ್ಯದ್ವಾಲಲೀಲಾಪ್ರವರ್ತನಮಂ ತಾಳ್ದಿಭವಕ್ತ್ರನೀ ಕೃತಿಗಜಸ್ರಂ ಮಾಳ್ಕೆ ನಿರ್ವಿಘ್ನಮಂ (ಶಬಶಂ. ೦-೬); ಅಭ್ರಮಾತಂಗ ಫೂತ್ಕರಿಸಲ್ಕೆ ಚದರಿ ಪನಿಗಳ್ಗಗನತಳದಿ ಪರಕಲಿಸಿದುವೊಯೆನಲು ನಕ್ಷತ್ರತತಿಯು ಚದುರ ಬೀರಿದವು (ಪಂಕಾಶಾ. ೩-೨-೩೩); ಸಗ್ಗಿಗರಾಣ್ಮನ ಘನಕರಿಘಟೆಗಳ್. . . ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಫೂತ್ಕರಿಸಿದಪುವೆಂಬಂತಿರೆ ಎಡೆವಿಡದೆ ಬಲ್ಸರಿ ಸುರಿಯೆ (ರಾಮಾಶ್ವ. ೩-೦೦). ೨. ಟಿಸ್ ಎಂದಂ ಸದ್ದು ಮಾಡು : ದೀಪ ನೊಂದುವಾಗ ತುಸು ಫೂತ್ಕರಿಸಿಯೆ ನೊಂದುತ್ತದೆ (ಇಕ್ಷ್ವಕ. ೦೯೩). ೩. ಹಾವಿನಂತೆ ಬುಸಂಗುಡು; ಬುಸ್ಸೆನ್ನು : ಅಗ್ನಿ . . . ಪ್ರಳಯಕಾಲದ ಮಹಾಸರ್ಪದಂತೆ ಫೂತ್ಕರಿಸಿತು (ಅಶ್ರಮ. ೦೦೯). ೪. (ಆಲಂ) ಸಿಡುಕಿನಿಂದ ಮಾತನಾಡು; ಅಬ್ಬರಿಸಂ : ನೀ ಏನ ಹೇಳುವಿ ಅದನ್ನ ? – ಗಂಗವ್ವ ಫೂತ್ಕರಿಸಿದಳು (ಅಕೋಳ. ೭೩). [ಫೂತ್ಕರಣ$_0$ + —ಇಸು$_3$]

**ಫೂತ್ಕಾರ** (ನಾ). ೧. ಸಶಬ್ದವಾಗಿ ಉಸಿರು ಬಿಡುವಿಕೆ : ಧನ್ವಿಪದಾತಿವ್ರಾತಟಂಕಾರದಿನುರುಕಹಳಾಜಾಲಫೂತ್ಕಾರದಿಂ . . . ವಿಷ್ಟಪಮಂ ಶಬ್ದಾತ್ಮಕಂ ಮಾಡಿದುದುಭಯಮಹೀಭೃಚ್ಚಮೂಚಕ್ರವಾಳಂ (ಶಂಪ್ರ ಪು. ೦೦-೬೭); ಮಾಸಂದಗಜಫೂತ್ಕಾರಗಂ ರಥಾಂಗಾಗರಥಚೀತ್ಕಾರಂ. . . ಬೆರಸಿ ಬಳೆದಾಗಸಮಂ ಮುಸುಂಕೆ (ಗಂಓಕ. ೬-೮ ವ). ೨. ಹಾವಿನ ಬುಸುಗುಟ್ಟುವಿಕೆ : ಜಹಾಂಗೀರ ಕೆಣಕಿದ ನಾಗಿನಿಯನ್ನು ತಡೆದು ಫೂತ್ಕಾರವನ್ನು ಸ್ವಾಗತಿಸುವ ಅವಿವೇಕಕ್ಕೆ ಹೋಗಲಿಲ್ಲ (ನೂರಜ. ೨೦). [ಸಂ.]

**ಫೂತ್ಕೃತಿ** (ನಾ). = ಫೂತ್ಕಾರ ೧ : ಭೃಂಗವಧೂಝಂಕೃತಿ ಶಂಖಫೂತ್ಕೃತಿರುತಂ. . . ಉದ್ಯತ್ಕೋಕಿಳರವಂ ಭೇರೀಘನಧ್ವಾನವಾಗೆ ವಸಂತಂ ಋತುಸಾರ್ವಭೌಮವಿಭವಂ ಮೆಯ್ವೆತ್ತದೇಂ ಬಂದುದೋ (ಶಂಪ್ರಪು. ೭-೩೭). [ಸಂ.]

**ಫೂಲ್‌ಸ್ಕೇಪು, ಫೂಲ್‌ಸ್ಕೇಪ್** (ನಾ). ಹದಿನೈದರಿಂದ ಹದಿನೇಳು ಅಂಗುಲ ಉದ್ದವೂ ಹನ್ನೆರಡರಿಂದ ಹದಿಮೂರುವರೆ ಅಂಗುಲ ಅಗಲವೂ ಇರುವ ಕಾಗದ : ಸಾಮಾನ್ಯವಾಗಿ ಬರೆಯಲು ಉಪಯೋಗಿಸುವ 'ಫೂಲ್‌ಸ್ಕೇಪು' ಕಾಗದಗಳಿಗೆ ಈ ಗುರುತುಗಳಿರುವುವು (ಬಾಂಶ್ರ. II. ೮೪೯). **ಫೂಲ್‌ಸ್ಕೇಪ್:** ಮುದ್ರಣಕ್ಕೆ ಉಪಯೋಗಿಸುವ ಕಾಗದಗಳು : ೧. ಫೂಲ್‌ಸ್ಕೇಪ್, ೨. ಕ್ರೌನ್ (ಮುದ್ರಕ. ೬೨). [←ಇಂ. Fool's-Cap]

**ಫೂಲ್‌ಸ್ಕೇಪ್** 'ಫೂಲ್‌ಸ್ಕೇಪು' ನೋ.

**ಫೆಳಾವುಗ** (ನಾ). (?) : ಫಳಿಯಕಾಜಿ, ಫೆಳಾವುಗಂ, ಫೇಳಿ, ಅಫಳಿಯಂ (ಕಮಂಥ. ೦೫ ಕ್ರಿಯೋ). [?]

**ಫೇಡೆ** 'ಪೇಡ' ನೋ.

**ಫೇಣಿ** (ನಾ). ಒಂದು ಬಗೆಯ ಸಿಹಿ ಭಕ್ಷ್ಯ : ಅಟುಬೋನ ಫೇಣಿ ಗಾರಿಗೆ ಇಡ್ಡಲಿಗೆ ಅವುಗು . . . ಹೂರುಂಡೆಯುನು ತೆಚುಹಿಲ್ಲನಿಸಿ ಗಡಣಿಸುತ್ತ ಗುಡ್ಡರುಗಳಿಗೆ (ಸಿರ್ಧರಾ. ೬-೬೩); ರಸವೊಸರ್ವ ಸಜ್ಜಿಗೆಯೆಣ್ಣೆವೂರಿಗೆ ಸುಫೇಣಿ ಮುಸುಕೊಡೆ ಬೆಣ್ಣೆದಟಿಗು (ಚೀರವು. ೦೦-೨೬); ಜೇನು ಸಕ್ಕರೆ ಕ್ಷೀರ ರಸವಪ್ಪ ಫೇಣಿ ಸುಖೀನುಂಡೆ ವಡೆ ಗಾರಿಗೆಯ. . . ಬಡಿಸಿದರು (ವೋಕಶ. ೩-೩೨). [ಸಂ. ಫೇಣೀ]

**ಫೇನ** (ನಾ). ೧. ನೊರೆ ; ಬುರುಗು : "ಫೇನಃ, ಡಿಂಡೀರಃ—ಈ ೨ ನೊರೆ" (ಹಲಾಯು. ೧೦೦೦-೪೩); ಸುಲಿಪಲ್ ಮಿಂಚಿನ ಗೊಂಚಲುಟ್ಟದುಗುಲಂ ಗಂಗಾನದೀಫೇನಂ (ಶಂಶಭಾ. ೦-೦೩೭); ಉತ್ಕೀರ್ಣಫೇನಂ. . . ಅಂಭೋನಿಧಾನಂ (ಜಗಮ. ೦-೨೩); ರವಿಹಯಾನನಫೇನಪುಂಜವೋ. . . ಎನೆ ತರಳತಾರಾಳಿ ಕಣ್ಗೆಸೆದುದು (ಹಕಶಾ. ೩-೭೯). ೨. ಕಡಲ ನಾಲಗೆ; ಸಮುದ್ರದ ನೊರೆ : "ಡಿಂಡೀರಃ, ಅಬ್ಧಿಕಫಃ, ಫೇನಃ — ೩ ಸಮುದ್ರದ ನೊರೆ" (ಸಿದ್ಧಾಂತಿ. ೩೦೬). [ಸಂ.]

**ಫೇನಿಲ** (ಗು). ೧. ನೊರೆಯುಳ್ಳ ; ಬುರುಗುಳ್ಳ. (ನಾ). ೨. ಅಂಟುವಾಳದ ಮರ ಮತ್ತು ಅದರ ಕಾಯಿ. ೩. ಒಂದು ಬಗೆಯ ಮರ ; ತಿಲಕವೃಕ್ಷ : "ತಿಲಕಂ ಕ್ಷುರಕಾಖ್ಯಂ ಫೇನಿಲಮುಕ್ಕುಮರಿಪ್ಪ ಶಾಖಿ" (ವಸ್ತುಕೋ. ೩೩-೨) ; "ಕ್ಷುರಕಮೆನೆ ಫೇನಿಲಮೆನಲ್ ತಿಲಕತರು ವಕ್ಕು" (ಮಂಗರಾ. ೩೭-೦೭). [ಸಂ.]

**ಫೇರಂಡ** (ನಾ). ನರಿ ; ಜಂಬುಕ : "ಜಂಬುಕಃ, ಶಿವಾ, ಫೇರಂಡಃ . . . ಮೃಗಧೂರ್ತಕಃ —ಈ ೮ ನರಿ" (ಹಲಾಯು. ೩೯-೭೭). [ಸಂ.]

**ಫೇರಣೆ** 'ಪ್ರೆರಣೆ' ನೋ.

**ಫೇರವ** (ನಾ). ೧. = ಫೇರಂಡ : "ಶಿವೆ ಮೃಗಧೂರ್ತಂ ... ನರಿ ಫೇರವಂ" (ವಸ್ತುಕೋ. ೯೦-೩) ; ಕಾಕಳಿಕಳಿತಮಪ್ಪ ಕಳಕಂಠೀಜನದ ಗೇಯ ಮೊತ್ತಲೀ ಕಠೋರಫೇರವ ಪೆಕ್ಕಾರಾರಾವಮೊತ್ತಲ್ (ವರ್ಧಮಾ. ೬-೪ ವ) ; ಹರಿಶಂಖಮಹಾಭೈರವರವಮಂದು ಕಿವಿವುಗೆ ಫೇರವರವಮೊದವೆ ರಿಪುಬಲಂ ಕೆಡೆದಿರದೇ (ಜಗಮ. ೬-೦೦೭). ೨. ನೀಚ ; ಅಧಮ. ೩. ಪಿಶಾಚಿ ; ರಾಕ್ಷಸ. [ಸಂ.]

**ಫೇರಿ, ಪೇರಿ$_1$** (ನಾ). ೧.ಪ್ರದಕ್ಷಿಣೆ ; ಸುತ್ತು : ಭೂಮಿಯು ತನ್ನ ಮೈ ಸುತ್ತು ತಿರುಗುತ್ತ ಸೂರ್ಯನ ಸುತ್ತುಮುತ್ತು ವರ್ತುಲಾಕಾರವಾಗಿ ಫೇರಿಯನ್ನು ಹಾಕುತ್ತದೆ (ಮುಂಬಯಿ. ೬-೩೯) ; ಎಂಥಾ ಮೋಜಿನ ಕುದುರಿ ಹತ್ತಿದ ಮ್ಯಾಲ ತಿರುಗುವುದು ಹನ್ನೊಂದು ಫೇರಿ (ಕಂಠಶ. ೯೭-೨) ; ಮರಿಗುದುರೆ ಫೇರಿ ತಿರುಹುತ ಬರುತಾನೆ ಬರಿಗೊಡದವ್ವಾ ಬದಿಗಾಗೆ (ಕರ್ನಾಪೂ. ೦೨೯). ೨. ಸುತ್ತಾಟ ; ಸಂಚಾರ ; ಓಡಾಟ : ಕುದುರೆಗಳು ಹಲ್ಲಣಿಸಿ ಫೇರಿ ಮಾಡಲಿಕೆಂದು ಸಂದಣಿಸಿ ನಿಂದಿರುವವು (ಕೃಕೃಪ. ೨-೩೩) ; ಅಲ್ಲಿ ನಿಂತಿದ್ದುದೂ ಜಾತಿಯಲ್ಲಿ ಕುದುರೆಯಾಗಿದ್ದರೂ . . . ಅಜ್ಜಸಾಬು ಹೇರಿಗೂ ಫೇರಿಗೂ ಬಳಸುತ್ತಿದ್ದ ತಟ್ಟಿಗಿಂತ ತುಸು ಉತ್ತಮವಾಗಿತ್ತು (ಮಲೆಮ. ೪೨೦). ೩. ಸುತ್ತುಗಳನ್ನುಳ್ಳುದು ; ಸಂಳಿ (?) : ಕಬ್ಬು ಬೆಳೆಯುವ ಸಮಯದಲ್ಲಿ ಒಂದು ಫೇರಿ ಬರುವುದನ್ನು ನೋಡಿ ಆ ಕಬ್ಬಿನ ನಾಲ್ಕೂ ಕಡೆಗೂ ಅದರ ಭಾರದ ತೂಕವನ್ನು ನೋಡಿ ಹತ್ತು ಹದಿನೈದು ಇಪ್ಪತ್ತು ಕಬ್ಬುಗಳನ್ನು ಒಂದುಗೂಡಿಸಿ . . . ಬಿಗಿದು ಕಟ್ಟಿ (ಕೃಷಿಕ್ಷ. ೦೬೪). **ಪೇರಿ$_1$** : ೨. ನಾವು ತಿರುಗೋ ಮುಕ್ಕಗಳು, ಆಗಾಗ ಒಂದು ಪೇರಿ ಹೊಡದು ಬಂದು ಬುಡ್ತೀನಿ (ಮಲ್ಲಿ. ೦೭೫). 'ಪ್ರಭಾತಫೇರಿ' ಪರಾ.

**ಫೇರಿ ಬಿಡು**=ಓಟ ಕೀಳು ; ವೇಗವಾಗಿ ಹೋಗು : ಆ ದಿವಸ ಸೈಕಲು ಹತ್ತಿ ಫೇರಿ ಬಿಟ್ಟರಾಯಿತು (ಹಹಸ. ೬೬) ; ಗಾಡಿ 'ರೋಟು' ಇದ್ದರೆ ನಾನು ಸೈಕಲ್ ಫೇರಿ ಬಿಡುತ್ತೇನೆ (ಸರಹ. ೨೬) ; ಫೇರಿ ಬಿಟ್ಟನೆಂದರೆ ಸುಬ್ಬಯ್ಯಶೆಟ್ಟರ ಜಟ್ಕ ಸುಳ್ಳು (ಶಿದಾಉ. ೭). **ಫೇರಿ ಹೊಡೆ**=ಸಂಚರಿಸು ; ಸುತ್ತು : ಹುಬ್ಬಳ್ಳಿ ಧಾರವಾಡ ಕಡೆ ಒಂದು ಫೇರಿ ಹೊಡದು ಬಂದರ ಬೇಕಾದ್ದಂಗ ಚೈನೀನ ಚೈನಿ (ಕಿಡುಗು. ೩೩). **ಫೇರೀ ಮಾಡು** = ಫೇರಿ ಹೊಡೆ : ಆಕೀ ಏನು ಸಾಂಗಲೀ ಪುಣೇದ ಫೇರೀ ಮಾಡತಿರತಾಳೇನು ? (೦೬೫ಹ. II,೦೩). [←ಹಿಂ. ಮರಾ. ಫೇರೀ]

**ಫೇರಿಸ್ತ್** 'ಫೇರಿಸ್ತು' ನೋ.

**ಫೇರಿಸ್ತಾ** 'ಫೇರಿಸ್ತು' ನೋ.

**ಫೇರಿಸ್ತು**, ಫೇರಿಸ್ತ್, ಫೇರಿಸ್ತಾ, ಫೇರೀಸ್ತು (ನಾ). ವಿವರಗಳನ್ನೊಳಗೊಂಡ ಸೂಚಿ ; ಯಾದಿ ; ಪಟ್ಟಿ : (೩). **ಫೇರಿಸ್ತ್** : (ಕೃಶಗ. II, ೩೪೮). **ಫೇರಿಸ್ತಾ** : ಮಲ್ಲಿಕಾಫರನು, ದಂಡೆತ್ತಿ ಬಂದಾಗ ಬೇಲೂರು ದೇವಾಲಯವೊಂದರಿಂದಲೇ ತೊಂಭತ್ತಾರು ಸಾವಿರ ಮಣ ಭಂಗಾರವನ್ನು ಸುಲಿಗೆ ಮಾಡಿದನೆಂದು ಅಬ್ದುಲ್ ರಜಾಕನ ಫೇರಿಸ್ತಾದಿಂದ ತಿಳಿದು ಬರುತ್ತದೆ (ಕರಹ. ೦೩೨). **ಫೇರೀಸ್ತು** : (೩).
[←ಅರ. ಪಾರ. ಫಿಹರಿಸ್ತ್ ; ಹಿಂ. ಫೇಹರಿಸ್ತ್ ; ಮರಾ. ಫೇರೀಸ್ತ್]

**ಫೇರೀಸ್ತು** 'ಫೇರಿಸ್ತು' ನೋ.

**ಫೇರು** (ನಾ). = ಫೇರಂಡ : "ಜಂಬುಕಃ . . . ಫೇರುಃ, ಕ್ರೋಷ್ಟಾ (ಚ) ಮೃಗಧೂರ್ತಕಃ — ಈ ೮ ನರಿ" (ಹಲಾಯು. ೩೬–೭೬) ; ಶ್ವಾನ ಶಾರ್ದೂಲ ಫೇರು . . . ಮುಂತಾದ ಕ್ರೂರಜೀವಂಗಳು ಸಾಯಲು (ಪ್ರಾಪಕ. ೨೯–೯೦). [ಸಂ.]

**ಫೇಲ** (ನಾ). ತಿಂದುಂ ಮಿಕ್ಕುದು ; ಎಂಜಲು ; ಉಚ್ಛಿಷ್ಟ. [ಸಂ.]

**ಫೇಲಿ**, **ಫೇಳಿ** (ನಾ). = ಫೇಲ : "ಭೋಜನಕ್ಕಾಗಿ ಮಿಕ್ಕದು ವಿಘಸ ಮುಕ್ಕುಂಡ ಭಾಜನದೊಳಿರೆ ಫೇಲಿ[ಪಾಠಾ. ಳಿ]ಯುಚ್ಛಿಷ್ಟಮೆನಿಸಿಕ್ಕು" (ಮಂಗರಾ. ೬೩–೭). **ಫೇಳಿ** : ಜಂಗುಳಿ ಪುತ್ತಳಿ ಗೋಳಿ ಫೇಳಿ ಬಟುಸಂದೇಹಂ (ಕವುದ. ೨೩). [ಸಂ. ಫೇಲೀ]

**ಫೇಲಿಕೆ**, **ಫೇಳಿಕೆ** (ನಾ). =ಫೇಲ. **ಫೇಳಿಕೆ** : "ಭುಕ್ತೋಚ್ಛಿಷ್ಟಂ, ಫೇಳಿಕಾ– ಈ ೨ ಮಡಗೂಟು" (ಹಲಾಯು. ೩೯–೭೬೦) ; "ಭುಕ್ತೋಚ್ಛಿಷ್ಟಂ ಫೇಳಿಕೆ" (ವಸ್ತುಕೋ. ೯೩–೯). [ಸಂ. ಫೇಲಿಕಾ]

**ಫೇಲಿಪಾತ್ರ** (ನಾ). ಪೀಕದಾನಿ ; ಪಡಿಗ: "ಫೇಲಿ[ಪಾಠಾಂ. ಳಿ]ಪಾತ್ರಯೆನೆ ಪಡಿಗಮೆನಿಸಿಕ್ಕು" (ಮಂಗರಾ. ೬೩–೨೩). [<ಸಂ. ಫೇಲೀಪಾತ್ರ]

**ಫೇಲು** (ನಾ). ತೇರ್ಗಡೆಯಾಗದಿರುವಿಕೆ ; ಅನುತ್ತೀರ್ಣತೆ ; ನಾಪಾಸು : ಕಳೆದ ಪರೀಕ್ಷೆಯಲ್ಲಿ ಅವನು ಫೇಲಾಗಿದ್ದುದರಿಂದ ಈಗ ಕಷ್ಟಪಟ್ಟು ಓದುತ್ತಿದ್ದಾನೆ (ರೂ೩). [ ← ಇಂ. Fail]

**ಫೇಲೆ** (ನಾ). = ಫೇಲ : "ಫೇಲಾ . . . ಉಂಡು ಮಿಕ್ಕ ಎಂಜಲು" (ಸಿದ್ಧಾಂತಿ. ೨೯೦). [ಸಂ. ಫೇಲಾ]

**ಫೇಳಿ** 'ಫೇಲಿ' ನೋ.

**ಫೇಳಿಕೆ** 'ಫೇಲಿಕೆ'ನೋ.

**ಫೈಲು** (ನಾ). ೧. ಬೇಕಾದಾಗ ನೋಡುವುದಕ್ಕೆ ಅನುಕೂಲವಾಗುವಂತೆ ಕಾಗದಪತ್ರಗಳನ್ನು ಜೋಡಿಸಿ ಇಡುವ ಸಾಧನ : ಅದಕ್ಕೆ ಸಂಬಂಧಿಸಿದ ಕಾಗದಗಳನ್ನು ಮೊದಲನೆಯ ಫೈಲಿನಲ್ಲಿ ಇಟ್ಟಿದ್ದೀನಿ (ರೂ೩). ೨. ಜೋಡಿಸಿಟ್ಟ ಕಾಗದಪತ್ರಗಳ ಕಟ್ಟು : ಕಾರಕೂನ . . . ಯಾವುದೋ ಫೈಲಿನಲ್ಲಿ ಮಗ್ನನಾದ (ಬೆಸ್ತುಹಿಂ. ೦೨) ; ಎಲ್ಲ ಫೈಲುಗಳನ್ನು ತರಿಸಿ ತಾವೇ ಪರಿಶೀಲಿಸುವುದಾಗಿ ಅಧಿಕಾರಿಗಳು ತಿಳಿಸಿದ್ದಾರೆ (ರೂ೩). ೩. ನ್ಯಾಯಾಲಯದಲ್ಲಿಯ ವಿಚಾರಣೆಗಾಗಿ ಜೋಡಿಸಿ ಇಟ್ಟುಕೊಂಡಿರುವ ದಾಖಲೆಗಳ ಕಟ್ಟು : ಸದರಿ ವ್ಯಾಜ್ಯವನ್ನು ಫೈಲಿನಿಂದ ವಜಾ ಮಾಡುತ್ತಾರೆ (ಗ್ರಾಮೂಕ. ೨೯) ; ಮೊಕದ್ದಮೆಯನ್ನು ಪೊಲೀಸಿನವರು ಫೈಲಿಗೆ ತೆಗೆದುಕೊಂಡು ತನಿಖೆ ಪ್ರಾರಂಭಮಾಡಿದರು (ಪಕದಾ. II, ೬೬೦). [ ←ಇಂ. File ]

**ಫೈಸಲ್** 'ಫೈಸಲು' ನೋ.

**ಫೈಸಲಾತಿ** (ನಾ). ತೀರ್ಮಾನ ; ನಿರ್ಣಯ : ಅವನ ಪ್ರಾಮಾಣಿಕತನವನ್ನು ಮೆಚ್ಚಿ ಸಾಲಿಗರು ಲೇವಾದೇವಿಯ ಫೈಸಲಾತಿ ಕ್ರಮಂಗಳಿಗೆ ಅವನನ್ನೇ ನೇಮಿಸಿದರು (ದಾದಾಪ. ೪೦); ಕಚೇರಿಯ ಒಂದು ಕಡತವನ್ನು ಫೈಸಲಾತಿ ಬಗ್ಗೆ ತರಬೇಕೆಂದು ಹೇಳಿ ಕಳಿಸುತ್ತೇನೆ (ಮಹಾಗ. ೦೨೩). [ < ಫೈಸಲು ]

**ಫೈಸಲು**, **ಫೈಸಲ್** (ನಾ). = ಫೈಸಲಾತಿ : ಕಮ್ಮಿ ಜಾಸ್ತಿಯ ಲೆಖ್ಖವಿದ್ದ ರಹಿತರು ಸಹಿತ ಫೈಸಲಿಗೆ ಬರುವಂತೆ ಕರಣಿಕರಿಗುಸುರು ನೀನು (ಅಕಾಲ. ೩೦–೩೬); ಈ ಮೊಕದ್ದಮೆಯ ಫೈಸಲನ್ನು ಮಾರನೇ ದಿವಸ ಹೇಳುವುದಾಗಿ ದಂಡನಾಧಿಕಾರಿ ಅಪ್ಪಣೇ ಮಾಡಿದ್ದೂ ಅಲ್ಲದೆ–ಯಾವ ಕೃತ್ಯವೂ ನಡೆಯಲಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ (ಅದೂಟ. ೦೯೩). **ಫೈಸಲ್** : ಆಗ ಫೈಸಲ್ ಆಗುವಂತೆ ತೋರಲಿಲ್ಲ (ಕಂಠೀಶ್ರೀ. ೯); ಯಾವ ಕೋರ್ಟಿನಲ್ಲಾಗಲಿ ಫೈಸಲಾಗದೆ ಬಾಕಿಯಲ್ಲಿರುವ ಇಂಥಾ ಎಲ್ಲಾ ವ್ಯಾಜ್ಯಗಳೂ ಆಯಾ ಕೋರ್ಟಿನವರಿಂದಲೇ ವಿಚಾರಿಸಲ್ಪಟ್ಟು ವ್ಯವಸ್ಥೆ ಮಾಡಲ್ಪಡಬೇಕು (ಗ್ರಾಮೂಕ. ೨೦).

**ಫೈಸಲ್ ಮಾಡು**=ತೀರ್ಮಾನಿಸು ; ನಿಕಾಲೆಮಾಡು : ಎಲ್ಲ ಫೈಸಲ್ ಮಾಡಿ ಬಿಡುತ್ತೇನೆ (ದಾಂತ್. ೨೬೦) ; ಆ ಕಾಗದಗಳನ್ನೆಲ್ಲ ನಾನೇ ಫೈಸಲ್ ಮಾಡತ್ತಿದ್ದೆನಲ್ಲ ? (ರಂಗಕ. ೨೦).
[← ಅರ. ಫೈಸ್ಲಾ ; ಹಿಂ. ಮರಾ. ಫೈಸಲ್]

**ಫೊಟ್ಟನೆ** (ಅ). 'ಫೊಟ್' ಎಂಬ ಸದ್ದಿನೊಡನೆ ; ಫೊಪ್ಪನೆ, ಧಣಮ್ಮನೆ ಫೊಟ್ಟನೆ, ಫಟಾಲನೆ (ಕಮುದ. ೦೯ ಕ್ರಯೋ). [ಫೊಟ್ + –ಅನೆ$_1$]

**ಫೊಲಲಿನಾಡು** (ನಾ). ಒಂದು ನಾಡಿನ ಹೆಸರು : ಹೊಯ್ಸಳರಲ್ಲಿ ಪಡೆದ ಊರು ಫೊಲಲಿನಾಡುಳ್ಳೊಬೆಯೂರು ಬಿರಗೂರಂ ಬಿಜಲ ಮಾದೇವಿಯಾಳುತ್ತಿರೆ (ಎಕ. XII, ಶಿರಾ. ೨೯–೩೪; ಶು. ೫೦೦). [? + ನಾಡು]

**ಫೋಟೋ** (ನಾ). ಚಿತ್ರಗ್ರಾಹಕಯಂತ್ರ (ಕೆಮರಾ)ದ ಸಹಾಯದಿಂದ ಮೂಡಿಸುವ ಚಿತ್ರ ; ಛಾಯಾಚಿತ್ರ : ಪತ್ರಿಕೆಯಲ್ಲಿ ೧೨ ವರ್ಷದ ಒಬ್ಬ ಹುಡುಗನ ಫೋಟೋ ಬಂದಿತ್ತು (ಜೀವಾಕ್ಕ. ೨೪೨); ಅಕ್ಕನ ಫೋಟೋ ಮೊಗ್ಗಾವಿಯ ಮನೆಯಲ್ಲಿ ಉಳಿದುಬಿಟ್ಟಿದೆ (ಸಮುಜೀ. ೪೬೪).
[← ಇಂ. Photo]

**ಫೋಟೋಗ್ರಫಿ** (ನಾ). ಛಾಯಾಚಿತ್ರ ತೆಗೆಯುವ ವಿದ್ಯೆ : ಫೋಟೋ ತೆಗೆಯಲು ಸ್ಥೂಲಪ್ರಕಾಶ ಬೇಕು. ಸೂಕ್ಷ್ಮಶರೀರವು ಫೋಟೋಗ್ರಫಿ ತತ್ವಕ್ಕೆ ಸಂಬಂಧಪಟ್ಟುದಲ್ಲ (ಜೀವಾಕ್ಕ. ೨೩೩). [←ಇಂ. Photography]

**ಫೋಟೋಗ್ರಾಫರ್** (ನಾ). ಛಾಯಾಚಿತ್ರಗಳನ್ನು ತೆಗೆಯುವವನು ; ಫೋಟೋ ತೆಗೆಯುವವನು : ಫೋಟೋಗ್ರಾಫರ್‌ನು ದೊಡ್ಡ ಚಿತ್ರಗಳನ್ನು ಚಿಕ್ಕವನ್ನಾಗಿಯೂ . . . ಪರಿವರ್ತಿಸಬಲ್ಲ (ಜೀವಾಕ್ಕ. ೨೨೩).
[ ← ಇಂ. Photographer ]

**ಫೋಡ್** (ನಾ). ಜಮೀನನ್ನು ವಿಭಾಗಿಸುವಿಕೆ, – ಪೋಟುಭಾಗ ಮಾಡುವಿಕೆ : (ಕೃಶಗ. II, ೩೩೯). 'ಫೋಡು' ಪರಾ.
[←ಹಿಂ. ಫೋಡಾ ; ಮರಾ. ಫೋಡ್]

**ಫೋತಿ** 'ಪೌತಿ' ನೋ.

**ಫೋನ್** 'ಫೋನು' ನೋ.

**ಫೋನು**, **ಫೋನ್** (ನಾ). ವಿದ್ಯುಚ್ಛಕ್ತಿಯ ಸಹಾಯದಿಂದ ಧ್ವನಿಯನ್ನು (ಮುಖ್ಯವಾಗಿ ಮಾತುಗಳನ್ನು) ತಂತಿಮಾರ್ಗವಾಗಿ ಸ್ಥಳ

ದಿಂದ ಸ್ಥಳಕ್ಕೆ ಸಾಗಿಸುವ ಸಲಕರಣೆ ; ದೂರವಾಣಿ ; ಟೆಲಿಫೋನು : ನನ್ನ ಫೋನಿನ ಸಂಖ್ಯೆಯನ್ನು ಆತನಿಗೆ ಶ್ರುತಪಡಿಸಿ . . . ಹಸಿದಿದ್ದ ಹೊಟ್ಟೆಯ ಕಡೆಗೆ ಈಗ ಗಮನ ಕೊಟ್ಟೆ (ನಂಬಿರು. ೦೦೩). **ಫೋನ್ :** ನಮ್ಮ ಮನೆಯಲ್ಲಿ ಫೋನ್ ಇದೆ (ರೂಢಿ).

**ಫೋನುಮಾಡು** = ದೂರವಾಣಿಯ ಮೂಲಕ ಸಂಪರ್ಕ ಬೆಳೆಸು.—ಮಾತನಾಡು : ಅಗತ್ಯವಿದ್ದರೆ ಫೋನು ಮಾಡಿ ತಿಳಿಸಿಬಿಡು (ರೂಢಿ).

[←ಇಂ. Phone]

**ಫೋನೋಗ್ರಾಫು** (ನಾ). ರಬ್ಬರ್ ತಟ್ಟೆಗಳ ಮೇಲೆ ಧ್ವನಿಸಂಗ್ರಹ ಮಾಡಿ, ಅದನ್ನು ಪುನಃ ಧ್ವನಿಯಾಗಿ ಹೊರಡಿಸುವ ಯಂತ್ರ; ಸ್ವರಲೇಖಕಯಂತ್ರ; ಗ್ರಾಮಫೋನು : ಮಹಾರಾಜರು ಅದನ್ನು ಎಡಿಸನ್ನನ ಫೋನೋಗ್ರಾಫಿನಲ್ಲಿ . . . ಧ್ವನಿ ಮುದ್ರಿಸಿಕೊಂಡರು (ಸಂಗೀತ. ೨೦) ; ಫೋನೋಗ್ರಾಫಿನಲ್ಲಿ ನಾಟಕದ ನಟಿಯರ ಹಾಡುಗಳನ್ನು ಕೇಳಿಸಿ, ಅವನು ತನ್ನ ಮಿತ್ರವರ್ಗವನ್ನು ಸಂತೋಷಗೊಳಿಸುವ (ಇತ್ಯಕ. ೩೦೦).

[←ಇಂ. Phonograph]

**ಫೋನೋಗ್ರಾಮ್** (ನಾ). = ಫೋನೋಗ್ರಾಫು : ಅವರ ಮನೆಯ ಹಳೆಯ ಕಾಲದ ಫೋನೋಗ್ರಾಮಿನಿಂದ ಹಾಡು ಕೇಳಿ ಬರುತ್ತಿತ್ತು (ರೂಢಿ).

[←ಇಂ. Phonogram]

**ಫೋರ್ಜರಿ** (ಗು). ೧. ಕೃತಕವಾದ ; ನಕಲಿ : ನಿನ್ನ ಹತ್ತಿರ ಫೋರ್ಜರಿ ನೋಟುಗಳು ಇಲ್ಲವಲ್ಲ (ಕೂಪಿಸ್ಸ. ೦೮). (ನಾ). ೨. ದಸ್ತೈವಜು ಮೊದಲಾದುವುಗಳ ಖೋಟಾ ರಚನೆ ; ಅಸಲಿನಂತೆಯೇ ಇರುವ ಸುಳ್ಳುಪತ್ರ : ಅವನು 'ಫೋರ್ಜರಿ' ತಯಾರಿಸುವುದರಲ್ಲಿ ಹೆಸರುವಾಸಿ (ರೂಢಿ). ೩. ಕಳ್ಳರುಜು.—ಸಹಿ : ಅವನು . . . ಫೋರ್ಜರಿಯ ಆಪಾದನೆಗಾಗಿ ಬಂದಿಯಾಗಿದ್ದ ತನ್ನ ತಮ್ಮನನ್ನು ನೋಡುವ ಸಲುವಾಗಿ ಅವನಲ್ಲಿಗೆ ಬಂದಿದ್ದನು (ಪುಸರು. ೦೮೯). [←ಇಂ. Forgery]

**ಫೌಜದಾರ್** 'ಫೌಜುದಾರ' ನೋ.

**ಫೌಜದಾರ** 'ಫೌಜುದಾರ' ನೋ.

**ಫೌಜದಾರಿ** 'ಫೌಜುದಾರಿ' ನೋ.

**ಫೌಜು, ಪವುಜು.** ಪೌಜು. ಫವುಜು (ನಾ). ದಂಡು ; ಸೈನ್ಯ ; ಪಡೆ : ಭಾಸ್ಕರ ಬಿಸಿಲ್ಗುದುರೆಯ ಫೌ[ಪಾಠಾ. ಪೌ]ಜನಟ್ಟಿದನು (ಪೋಹಕ. ೦೯-೯೩); ಪಾರವಿಲ್ಲದ ರತ್ನಕಾಂತಿಯಿಂ ಜ್ವಲಿಪ ಭಂಗಾರದಾಸನದಲ್ಲಿ ಮಂಡಿಸಲ್ಕಿಕ್ಕ ಪರಿವಾರ ನೃಪಸೇವೆಯೊಳ್ ನಿರತರಾಗಿರುತಿರಲು ಸುರುಟಂಗೆ ಫೌಜೊದಗಿತು (ಅಕಾರಿ. ೨೯-೩೩); ಗಾಜಿ ನೋಡಲು ಬಂದ ಜನರಿಗೂ ವಿನಾಕಾರಣ ಪೆಟ್ಟು ಸಿಕ್ಕಿ ಸರಕಾರದ ಮೇಲೂ ಪೋಲೀಸು ಫೌಜಿನ ಮೇಲೂ ಹಳ್ಳಿಯವರಿಗೆ ಸಿಟ್ಟು ಒಳಗೊಳಗೆ ಕುದಿಯುತ್ತಿತ್ತು (ಕುರುಕಾ. ೦೨೦). **ಪವುಜು :** ಭರದಿಂದಾ ಕಾಲದ ಕಾರ್ಮುಗಿಲೊಳ್ ಪಿರಿದುಂ ಮುಳಿದು ಪಳಂಚುವ ಪಾಂಗಿಂದೆರಡುಂ ಪವುಜಿನ ಪೇರಾನೆಯ ತಟ್ಟೀಟಿಯಿದಿರ್ಚಿದರು (ಜಯುಕಾ. ೬-೩೬) ; ಠಿರಿಗಳೊ ಕಲ್ಪಾಂತಮೇಘದೊಬ್ಬುಳಿಗಳ ಸರಿಗಳೊ ಕಾಲಾಳ ಪವುಜೊ . . . ಎನೆ ತುರುಕರ ಬಲವೈದಿದುದು (ಕಂಪಿ. ೦೫-೯೭). **ಪೌಜು:** "ಒಡ್ಡೆನಲ್ ಪೌಜುವೆಸರ್" (ಶಕುಹಿ. ೩೬); ತಾ ತುರಂಗದ ಮೇಲೆ ಪಶುತಮವೆಂಬ ಖಂಡೆಯವ ಪಿಡಿದು ಚಂಡಿಕಾಕಿರಣದ ಮೇಲೆ ಅಂಗೈಸಿ ಏಟಲಾಗಿ ಪೌಜು ಬೆರೆಯಿತ್ತು (ಸರ್ವವ. ೩೬-೨೯೯); ಕರಿಘಟೆಯೊಂದು ಕರಭಪೌಜು ತುರಗ ಸಾವಿರ ಹತ್ತುಸಾವಿರಮುಂದಿ ಇರಲದನೊಂದು ಪೌಜೆಂದು ಪೇಳ್ವರು (ಕುಂಠಸಾಂ. ೪೦-೬೩) ; ಮೇಳೈಸಿ ನಿಲಿಸಿದಂ ನಿಜಬಲದ ಪೌಜುಗಳ ನರ್ಥಚಂದ್ರಾಕೃತಿಯೊಳು (ಕೃಹಿಠಾ. ೨೩-೦೦). **ಫವುಜು:** ಒಡ್ಡಿದ ಫವುಜನು ದೊಕ್ಕನಂದೊಬ್ಬುಳಿ ಮಾಡಿ (ಅನಂತ. ೨೯-೩೦); ಈಗ ನಿಮ್ಮ ಫವುಜು ಕಳುಹಿಸಿ ಕೊಟ್ಟರೆ ಈ ಕೋಟೆ ನಿಮ್ಮ ಕೈವಶ ಮಾಡಿಕೊಡುತ್ತೇವೆ (ರಾಜೇಂದ್ರ. ೩).

**ಫೌಜುಫೌಜು, ಪೌಜುಪೌಜು** (ದ್ವಿರುಕ್ತಿ) : ವಾಜಿವಾಜಿಗಳ ವೈಹಾಳಿಯಂ ಮಾಡುತ್ತ ಫೌಜುಫೌಜಿಗೆ ಕೂಡಿಕೂಡಿ ಮುರವುಟರವಕೆ ಮೂಜಗವು ತಲ್ಲಣಿಪ ತೆಱದಿಂದೆ . . . ಹೊಯ್ದಾಡುತಿರಲು (ಕೃಶ್ರಿರಾ. ೦೮-೩೩); ಪೌಜುಪೌಜಾಗಿ ಬೊಬ್ಬಿಱಿದೇಱುವರಿಭಟರೋಜೆಯನೇನ ಬಣ್ಣಿಸುವೆ (ಕಂಪಿ. ೦೯-೯೭). **ಪೌಜನಿಕ್ಕು** = ಸೈನ್ಯವನ್ನು ನಿಲ್ಲಿಸು: ಕಾಳಗದಲ್ಲಿ ಪೌಜನಿಕ್ಕಿದಡೆ ಮಾಱಿದಡೆ ಅರಸೆಂಬರಲ್ಲದೆ ಬಂಟರೆಂಬುದಿಲ್ಲ (ಸೋಲೆಭಜಾ. ೨-೩); ಶೋಣಿತಪುರದ ಪಶ್ಚಿಮದಿಕ್ಕಿನಲ್ಲಿ ಶೂಲಪಾಣಿಯಾ ಪೌಜನಿಕ್ಕಿದನು (ಪೋಹಕ. ೩೭-೩೦). **ಪೌಜಾಗು** = ಗುಂಪಾಗು ; ಪಡೆಯಾಗು : ಅತಿಬಲರಖಿಲ ಧಾತ್ರೀಶರನಿಬರು ಬೇಗ ತಂತಮ್ಮಾ ಬಲವೆರಸಿ ಪೌಜಾಗಿ . . . ನಿಲೆ (ಶಾಶ್ವತಾ. ೦೮-೬೬) : ಆತನ ಯಜ್ಞಶಾಲೆಯೊಳ್ ಅಱುಸಾಸಿರಗಂಧರ್ವರೇಳುಪೌಜಾಗಿ ಮೇಳಮಂ ಕಟ್ಟಿ ನರ್ತನಮನೆಸಗುತಿರ್ಪರು (ಶಾರಕಾಂ. ೨೯-೩೦೩). [← ಅರ. ಹಿಂ. ಮರಾ. ಫೌಜ್ ]

**ಫೌಜುದಾರ,** ಪಉುಜುದಾರ, ಪೌಜುದಾರ, ಫೌಜದಾರ್, ಫೌಜದಾರ, ಫೌಜ್ದಾರ (ನಾ). ೧. ಸೈನ್ಯದ ನಾಯಕ; ಸೇನಾಧಿಪತಿ : ಯುದ್ಧಪ್ರಸಕ್ತಿ ಬಿದ್ದ ಕಾಲದಲ್ಲಿ ಅಂಥಾ ಮುಖಂಡರಿಂದ ದಂಡಿನ ಸಹಾಯವನ್ನು ಹೊಂದುತಿದ್ದರು. ಇಂಥಾ ಮುಖಂಡರಿಗೆ ಫೌಜುದಾರರು ಎಂತಲೂ ಹೆಸರಿತ್ತು (ಶಾಸಿಗಾ. ೦೬); ರಾಜನು ಹೆಚ್ಚು ಸಿಪಾಯಿಗಳನ್ನು ತರುವಂತೆ ಫೌಜುದಾರನಿಗೆ ಹೇಳಿ ಕಳುಹಿಸಿದನು (ಬಂಕಿಸು. ೩೦೨). ೨. ಪೋಲೀಸು ದಳದ ಕಿರಿಯ ಅಧಿಕಾರಿ : ಏನು ಮಾಡಬೇಕೆಂಬ ಪ್ರಶ್ನಾರ್ಥಕ ದೃಷ್ಟಿಯನ್ನು ಫೌಜುಧಾರನು ಗುಪ್ತಪೋಲೀಸನ ಕಡೆಗೆ ಬೀರಿದನು (ಪೊಕಾಶಾ. ೩೬); ಅವನು ಫೌಜುದಾರರ ಮಗ ಹುಸೇನಿ (ರಂಗರೊ. ೨೨). **ಪಉುಜುದಾರ:** ೧. ಅಮಿನಾ ಪಉುಜುದಾರ ಅಮಿರಬೇಗಸಾಹೇಬರು ಜಮಿನದಾರರು . . . ಬರಸಿ ಕೊಟ್ಟ ತಾಮ್ರದ ಶಾಸನ (ಎಕ. XII, ಕಿರಾ. ೦೦೨-೩; 1720). **ಪೌಜುದಾರ :** (೩). **ಫೌಜದಾರ್ :** ೨. ಹೆಡ್‌ಕ್ವಾರ್ಟರಿನ ಈ ಎಲ್ಲ ಪೋಲೀಸರ ಮೇಲೆ ಒಬ್ಬ ಫೌಜದಾರ್ (ಸಬ್‌ಇನ್‌ಸ್ಪೆಕ್ಟರ್) ಇರುತ್ತಾರೆ (ಪಾಕೋ೧೮.೩೩). **ಫೌಜದಾರ:** ೧. ಅದುವರೆಗೂ ಅಲ್ಲಿ ಫೌಜದಾರ ಮುಂತಾದ ಪ್ರಧಾನರಾದ ರಾಜಕರ್ಮಚಾರಿಗಳು ವಾಸಮಾಡುತ್ತಿದ್ದರು (ಕಪಾಕಂ. ೩೬). ೨. ನೆಲಕ್ಕೆ ಬಿದ್ದ ಫೌಜದಾರರನ್ನು ಉಪಚರಿಸಲು ಕೂಡ ಚಾವಡಿಯಲ್ಲಿ ಯಾರೂ ಉಳಿದಿರಲಿಲ್ಲ (ಗ್ರಾಮಾಯ. ೦೬೯); ಮಧ್ಯವಯಸ್ಸಿನ ದಷ್ಟಪುಷ್ಟ ದೇಹದ ಆ ಫೌಜದಾರರು ತಮ್ಮ ತೀಕ್ಷ್ಣದೃಷ್ಟಿಯನ್ನು ನನ್ನ ಮೇಲೆ ಹರಿದಾಡಿಸಿದರು (ಪಾಕೋ೧೮.೩೩); ಫೌಜದಾರರು ಅವರನ್ನು ಬಹು ಟಬರಿನಿಂದ ಆಮಂತ್ರಿಸಿದರು (ರಕ್ತಕ್ರ. ೨೯೭). **ಫೌಜ್ದಾರ :** ೨. ಛತ್ರದಲ್ಲಿ ಪ್ರಿಯುಪಟ್ಟಣದ ಫೌಜ್ದಾರರು ಬಿಡಾರ ಮಾಡಿಕೊಂಡಿದ್ದರೆ . . . ಅವರ ಒಬ್ಬಳೇ ಮಗಳು ಹತ್ತು ವರ್ಷದ ಹುಡುಗಿಯನ್ನು ಎತ್ತಿಕೊಂಡು ಹೋಗಿ ಬಿಟ್ಟಧಾರಂತೆ (ಕಂಗಾಳ್ಯ. ೦೨೦). [ಫೌಜು + —ದಾರ೪ ]

**ಫೌಜುದಾರಿ.** ಪೌಜುದಾರಿ, ಫೌಜದಾರಿ (ನಾ). ೧. ಆಡಳಿತ ಸೌಕರ್ಯಕ್ಕಾಗಿ ಪ್ರತ್ಯೇಕಿಸಿದ ಪ್ರಾಂತ,—ಜಿಲ್ಲೆ : ಅಲ್ಲಿಯ ನಡವಳಿಕೆಗಳನ್ನು ತಿಳಿಯಲು ಆ ಗಡಿಗಳಿಗೆ ಸಮೀಪವಾಗಿರುವಂತೆ ೬ ಫೌಜುದಾರಿ(ತುಕಡಿ)ಗಳೂ ಸ್ಥಾಪಿತವಾದುವು (ಮುಹಾಹಂ, II. ೩೬). **ಪೌಜುದಾರಿ :** ೨. ಅಪರಾಧಕ್ಕೆ ತಕ್ಕ ದಂಡನೆಯನ್ನು ವಿಧಿಸುವ ಸ್ಥಳ : ತಕ್ಸೀರು ವಿಚಾರಣೆ ಮಾಡುವ ಕಚೇರಿ,—ನ್ಯಾಯಾಲಯ: (೩). **ಫೌಜದಾರಿ :** ೧. ಪೂರ್ವದಲ್ಲಿ ಡಿಸ್ಟ್ರಿಕ್ಟುಗಳಿಗೆ ಫೌಜದಾರಿ ಎಂದು ಹೆಸರು ಇತ್ತು (ಜಾಮುವಂ. ೩೩೬). ೩. ದೊಂಬಿ ; ಜಗಳ : ರೂಪಚಂದನ ಅಪ್ಪಣೆಯ ಮೇರೆಗೆ ಅವನಿಂದ ಎಷ್ಟೋ ಫೌಜದಾರಿಗಳಾಗಿದ್ದುವು (ಜಾಜಾಪ್ಪ. ೪೦); ಇವರು ಜೀವ ಉಳಿಸಿಕೊಂಡು ಓಡಿಬರದಿದ್ದರೆ ಫೌಜದಾರಿಯಾಗುತ್ತಿತ್ತು (ಕ್ರೀಜೂತ್ರ. ೬೩). [ ←ಹಿಂ. ಮರಾ. ಫೌಜದಾರೀ ]

**ಫೌಜ್ದಾರ** 'ಫೌಜುದಾರ' ನೋ.

**ಫ್ಯಾಷನ್** 'ಫ್ಯಾಷನ್ನು' ನೋ.

**ಫ್ಯಾಷನ್ನು, ಫ್ಯಾಷನ್** (ನಾ). ಉಡುಗೆ, ತೊಡುಗೆ ಮೊದಲಾದುವು ಗಳಲ್ಲಿ ಕಾಲಕಾಲಕ್ಕೆ ಬಳಕೆಗೆ ಬರುವ ಸಂಪ್ರದಾಯ,—ರೂಢಿ: ದಿನದಿಂದ ದಿನಕ್ಕೆ ಉಡುಗೆ ತೊಡುಗೆಗಳ ಫ್ಯಾಷನ್ನು ಬದಲಾಗುತ್ತಲೇ ಇರುತ್ತದೆ (ರೂಢಿ). **ಫ್ಯಾಷನ್** : ಅವಳು ಈಗಿನ ಕಾಲದ ಯಾವ ಫ್ಯಾಷನ್ ಅನ್ನೂ ಮಾಡುವುದಿಲ್ಲ (ರೂಢಿ). [ ← ಇಂ. Fashion ]

**ಫ್ರೋಖ್ತು** 'ಪುರೋಖ್ತು' ನೋ.

**ಬ₁** (ನಾ). ೧. ಕನ್ನಡವರ್ಣಮಾಲೆಯ ನಲವತ್ತುಮೂರನೆಯ ಅಕ್ಷರ ; ಬಕಾರ : ಉತ್ತರಪದದ ಆದಿಯಲ್ಲಿರುವ ಕ, ತ, ಪ ಗಳಿಗೆ ಕ್ರಮವಾಗಿ ಗ, ದ, ಬ ಗಳು ಪ್ರಾಯಶಃ ಆದೇಶವಾಗಿ ಬರುವುವು (ಶಬ್ದಾ.ದ.೧೦). ೨. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : " ಖಥಘರವುದರದಕ್ಕು ಗಡಬಲಂ ಮೂಜಾಕ್ಕು" (ಮಂಗರಾ. ೦೦೪-೦೦).

**—ಬ₂** (ಪ್ರ). ಗುಣವಾಚಕದೊಂದಿಗೆ ಸೇರಿ ವ್ಯಕ್ತಿವಾಚಕಾರ್ಥವನ್ನು ಕೊಡುವ ಒಂದು ಪ್ರತ್ಯಯ : 'ಪಳಬ', 'ಪೊಸಂಬ' ಪರಾ.

**ಬಂಕ₁** 'ಬಂಕೆ₁' ನೋ.

**ಬಂಕ₂** 'ಪಕ್ಕ' ನೋ.

**ಬಂಕ₃** 'ಬಾಂಕು₂' ನೋ.

**ಬಂಕಂಗಡಿ** (ನಾ). ಮುಂಭಾಗದ ಎರಡೂಕಡೆಗಳಲ್ಲಿ ಜಗಲಿಗಳಿರುವ ಅಂಗಡಿ : ಅಲ್ಲಿಂದ ಹೊರಟ ವೇಣವನು, ಮೈಲಾಪುರದ ಕಾಳಾದೇವಿ ರಸ್ತೆಯಲ್ಲಿರುವ ಗೋಪಾಲನಾಯರ್‌ರ ಬಂಕಂಗಡಿಗೆ ಬಂದು ಮುಟ್ಟಿದನು (ಕಾಬರೂ.೩೩). [ ಬಂಕ₃ (< ಬಾಂಕು₂) + ಅಂಗಡಿ (<ಅಂಗಾಡಿ) ]

**ಬಂಕಣ** 'ಬೊಕ್ಕಣ₁' ನೋ.

**ಬಂಕದೆಜ಼್** (ನಾ). ಒಂದು ಬಗೆಯ ತೆರಿಗೆ,—ಸುಂಕ : ಬಂಕದೆಜ಼್ ಸಿದ್ಧಾಯ ಬಿಟ್ಟ ಕೊಟ್ಟಣವನುಪಸುಂಕ ಮುಲವದಿಕೆ ಸೊಲ್ಲಿಗೆ ಕವಣ ಕಡ್ಡಾಯ (ಸಿಂಗಿರಾ.೨೨-೨೬). [ ಬಂಕ₂ + ತೆಜ಼್₃ ]

**ಬಂಕಪುರ, ಬಂಕಾಪುರ** (ನಾ). ಒಂದು ಊರಿನ ಹೆಸರು; ಈಗಿನ ಧಾರವಾಡಜಿಲ್ಲೆಯ ಶಿಗ್ಗಾಂವಿತಾಲ್ಲೂಕಿನ ಒಂದು ಊರು: ಬ[ಙ್ಕಾ]ಪುರದ ಧೋರ ಜಿನಾಲಯದ ಚನ್ದ್ರಪ್ರಭ ಭಟಾರಾರ್ಪ್ಪ ಸುಣ್ಣಯನಭ್ಯಸ್ತರಸಿದ್ಧಿಯಾಳುತ್ತಿರೆ (ಸೌಇಇ. XI-i. ೩೪-೭; 925); ಚಕ್ರಗೊಟ್ಟವ್ವಚ್ಚಂಗಿ ವಿರಾಟನ ಪೊಲಲು ಬನ್ಕಪುರಂ ಬನವಾಸೆ (ಎಕ. XVI, ತಕ್ಕಿತಾ. ೬೨-೯ ; 1242). **ಬಂಕಾಪುರ:** ಬಙ್ಕಾಪುರದೊಳಜಿತಸೇನಭಟ್ಟಾರಕರ ಶ್ರೀಪಾದಸನ್ನಿಧಿಯೊಳ್ . . . ನೋನ್ತು (ಎಕ. II, ೩೯-೦೦೪; 974); ಬಂಕಾಪುರದ ಪಂಚಮಠಸ್ಥಾನಮುಂ (ಎಇ. XIII. ೦೭೦-೪೦; 1055); ಬಂಕಾಪುರಕ್ಕೆ ಹೋದರೆ ಡೊಂಕು ಬಿಟ್ಟೀತೇ? (ಗಾದೆ). [ಬಂಕ₂ + ಪುರ₂]

**ಬಂಕಾಪುರ** 'ಬಂಕಪುರ' ನೋ.

**ಬಂಕಿ** 'ವಂಕಿ' ನೋ.

**ಬಂಕು₁** (ಕ್ರಿ). ಬಾಗು; ಡೊಂಕಾಗು; ವಕ್ರವಾಗು: "ಬಂಕು—ಕೌಟಿಲ್ಯೇ (ವಕ್ರವಾಗು)" (ಶಮಧಾ); ಸೊವಡಿಂಗಮುಗ್ಗಿಸಿ ತುಂಬಿವೆರಸು ಕೂಂಕಿ ಬಂಕಿ ಬಿಟ್ಟು ಕುವಳಯಾಪೀಡನಂ ಕುವಳಯಾಪೀಡನಂ ಮಾಡಿ (ಅರ್ಧನೇ. ೬-೬೩ ವ); ಕೊಂಕುತೆ ಬಂಕುತೆ ಹಾರೈಸುತ್ತಂ . . . ಆಡುವ ಗುಂಡಯ್ಯನ ಹೊಸನೃತ್ಯಂ ನೋಡುವ ಶಿವನಂ ಮುಟ್ಟಿತು ಸತ್ಯಂ (ಕುಂಬಾ. ಹ. ೨೩೩-೨೦). 'ಬಗ್ಗು₁' ಪರಾ. [ ದೇ. ॥ ತಮಿ. ವಾಙ್ಕು; ಮಲ. ವಾಙ್ಙು; ತುಳು. ಬಾಂಗು; ಕೊಡ. ಬಾಂಗ್; ತೆಲು. ವಂಗು ; ಕೋಲಾ. ನಾಯ್ಕಿ. ಪರ್ಜಿ. ವಂಗ್ ]

**ಬಂಕು₂** 'ವಂಕು' ನೋ.

**ಬಂಕುಡಿ** 'ವಂಕುಡಿ' ನೋ.

**ಬಂಕುಡಿಗಾಲು, ಬಂಕುಳಿಕಾಲು** (ನಾ). ಸೊಟ್ಟಗೆ ತಿರುಗಿಕೊಂಡಿರುವ ಕಾಲು: ಒಡನೊಡಂಬಡದ ಕೆಂಪಿಡಿದ ತಲೆನವಿರ ಬಂಕುಡಿಗಾಲ ಬೆರಳುಗಳ ದೊಡ್ಡತುಟಿಯ . . . ದೂರ್ತನ ಸೊಗಸಡದಿಯಿಡುವವಳಿ ಹಸ್ತನಿ (ಅನವ. ೨-೦೬). **ಬಂಕುಳಿಕಾಲು :** ಬಂಕುಳಿಕಾಲು ಜಂಘೆಗಳು ವಳ್ಳಿಹ ಉಗುರ್ಗಳು (ಸೌಗಂ. ೪೪೪-೩).

[ಬಂಕುಡಿ (< ವಂಕುಡಿ) + ಕಾಲು₁ (< ಕಾಲ್₁)]

**ಬಂಕುರು** (ನಾ). ಒಂದು ಬಗೆಯ ಮೀನು: ಹೆಲ್ಲರಂ ಬಂಕುರಂ . . . ಗಿಡಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತ್ತಿಹ ಬೇಡರಂ ನೋಡಿದಂ ಭೂಪಾಲನು (ಹಕಅ. ೩-೪೬). [ ? ]

**ಬಂಕುಳಿಕಾಲು** 'ಬಂಕುಡಿಗಾಲು' ನೋ.

**ಬಂಕೆ₁, ಬಂಕ₁, ಬೊಂಕ, ಬೊಂಕೆ** (ನಾ). ೧. ಒಂದು ಬಗೆಯ ಅಂಟು,— ಗೋಂದು; ನಿರ್ಯಾಸ: ಬಂಕೆಯಂಟನಂದದಿ ಸ್ನೇಹ (ಕನಮು. ೪೪-೩೪). ೨. ಅಂಟು; ಜಿಗಿ : ತ್ರಿದೋಷದಲ್ಲಿ ಸಾವವನ ನಾಡಿ ಅತಿಶೈತ್ಯವಾಗಿ ತುಪ್ಪದ ತೊಡೆದ ಹಾಗೆ ನಯವಾಗಿ ಬಂಕೆ ಬೆವರಾಡುವದು (ವೈದ್ಯಸಾ. I, ೩). **ಬಂಕ₁:** ೧. 'ಬೂರಗಬಂಕ' ಪರಾ. ೩. ಸಿಪ್ಪೆ; ತೊಗಟೆ: ದಾಳಿಂಬದ ಬಂಕಮಂ ಚೂರ್ಣಿಸಿ ವಸ್ತ್ರಗಾಳಿತಮಂ ಮಾಡಿ . . . ತೆಗೆದುಕೊಳ್ಳಲು ಎಂತಪ್ಪ ಬಹುಮೂತ್ರಮುಂ ಮಾಣ್ಗುಂ (ಸಕವೈ. ೩೬೩). **ಬೊಂಕ :** ೧. "ಕೋಲಕಂ, ತಕ್ಕೋಲಕಂ, ಕೋಶಫಲಂ — ೩ ತಕ್ಕೋಲದ ಗಿಡ, ತಕ್ಕೋಲದ ಬೊಂಕ" (ಸಿದ್ಧಾಂತಿ. ೨೦೬). **ಬೊಂಕೆ :** ೧. " ಪಾಯಸಃ . . . ಸರಳದ್ರವಃ — ೫ ಸರಳದೇವದಾರುವೃಕ್ಷದ ಬೊಂಕ " (ಸಿದ್ಧಾಂತಿ. ೨೦೬). 'ಬೂರಗೆಬಂಕೆ' ಪರಾ.

**ಬಂಕೆಬೆವರು**=ಅಂಟಂಟಾದ ಬೆವರು : ಜ್ವರ ಬಿಟ್ಟು ಮಗುವಿನ ಮೈಯೆಲ್ಲಾ ಬಂಕೆಬೆವರಿನಿಂದ ತೊಯ್ದು ಹೋಗಿದೆ (ರೂಢಿ).

[ದೇ. ॥ ತೆಲು. ಬಂಕ ; ಕೋಲಾ. ಬಣ್ಕ,ಬಕ್ಕ; ನಾಯ್ಕಿ. ಬಕ್ಕ; ಪರ್ಜಿ. ಬಾಕ್ ; ಗೊಂಡಿ. ಬೊಕೆರ್]

**ಬಂಕೆ₂** 'ವಂಕು' ನೋ.

**ಬಂಕೆಯರಸ** (ನಾ). ಒಬ್ಬಾತನ ಹೆಸರು : ಬಂಕೆಯರಸರಾಳುತ್ತಿರೆ ಬಂಕೆಯಂನ ಮಗಂ ಕುನ್ದಟ್ಟ (ಎಇ. VII, ೨೦೬-೬; 874); ಮಹಾಸಾಮನ್ತ ಕಜುದೇವಯ್ಯರಾನ್ವಯದೊಳ್ ಬಙ್ಕಿಯರಸರ ಮಗಂ ಶ್ರೀಲೊಕಟಿಯರಸರ್ (ಎಕ. VII (S), ಶಿಕಾ. ೩೬೮- ೩; 902). [ಬಂಕೆ₂ + ಅರಸ₁]

**ಬಂಕೋಲು** (ನಾ). ಕೊಕ್ಕೆಕೋಲು; ದೋಟಿ: ಹಣ್ಣ ಬಂಕೋಲ ನುರೆ ಮುಂಗೈಯ್ಯಗ್ಗಳಿಡೆಯಲ್ಲಿ ಹೊಂದಿಸುತ (ಮುರಶ್ವ. ೬-೦೨).

[ ಬಂಕು₂ (< ವಂಕು) + ಕೋಲು₁ (< ಕೋಲ್₁) ]

**ಬಂಗ** (ನಾ). ೧. ಭಿನ್ನವಾದುದು: ಚೂರು: "ಬಂಗ (ಬಂಗಿ)— ಭಂಗ = ನಾಶ, ಭಿನ್ನ" (ಕದ್ಯಕೋ. ೨೭). ೨. ಕಷ್ಟ: ದುರ್ಗತಿ; ಹೀನಸ್ಥಿತಿ : ಏನೋ ನಿನ್ನ ಅಣವು ವಣವು ಬಂಗ ಬಡತನ ಎಲ್ಲಾ ಕೇಳಿಕೊಂಡು ಬಂದಾಯ್ತು (ಹುಟ್ಟಿಹಂ೩೬); ಏನೋ ಅವರ ಬಂಗ ಬಡತನಕ್ಕೆ ಒಂದಿಷ್ಟು ಕಾಯಿ ಕಸಿ ಕಿತ್ತುಕೊಂಡ್ಹೋಗಿ ಹೊಟ್ಟೆ ಹೊರಕತಾರೆ (ಪಟ್ಟೂರು. ೦೬೪) ; ಬಂಗು ಬಂದವನಿಗೆ ಬಂಗ ಬರದಿರದು (ಗಾದೆ). ೩. ಅವಮಾನ; ತೇಜೋಭಂಗ: ಅವರ ಮನೆ ಬಾಗಿಲಿಗೆ ಹೋಗಿ ಅನುಭವಿಸಿದ ಬಂಗ ಎಂದಿಗೂ ಮರೆಯಲಾರೆ (ರೂಢಿ). ೪. (ಅಲಂ) ವೃತ್ತಿ ; ಉದ್ಯೋಗ : ಆಳುಗಳೆಲ್ಲಾ . . . ವ್ಯವಸಾಯಂಗಳಿಗೂ ಬಂಗಗಳಿಗೂ ಸೇರಿಕೊಂಡರು (ಬಸ್ತಳ. ೪೧). [< ಸಂ. ಭಂಗ]

**ಬಂಗಡ** (ನಾ). ಒಂದು ಬಗೆಯ ಬಳ್ಳಿ : ಬಿಳಿತಿಗಡೆ. ಬಂಗಡಬಳ್ಳಿ (ಮೈಕೌಗಿ. ೩೬-೦೦೩೪). [ ? ]

**ಬಂಗಡೆ**, ಬಗ್ಗಡೆ (ನಾ). ಒಂದು ಬಗೆಯ ಕಡಲ ಮೀನು : ಸೀಗುಡಿ ಗೆಂಡೆ ಕುಚ್ಚು ಹಣ್ಣಲು ಬಸಿಗ ಗಿಜಿಲು ಬಂಗಡೆ ಹಾವು . . . ಮೀನ್ಗಳಂ ಗುದಿಗೆಯ್ದರು (ಹಕಶಾ. ೩-೯೩) ; ಈ ಹೊತ್ತು ರಂಪಣಿ ಹಾಕಿದ್ದರೆ ಬಂಗಡೆ ರಾಶಿಗಟ್ಟಲೆ ಬೀಳಬಹುದಿತ್ತು (ಮೂರುದಾ. ೬೩) ; ಸ್ವಾರ್ಲಿ ಮತ್ತು ಬಂಗಡೆಮೀನಿನ ಗಬ್ಬುವಾಸನೆಯೊಡನೆ ಕುದುರೆಯ . . . ಉಚ್ಚೆಯ ಕಟುದುರ್ವಾಸನೆಯೂ ಕೂಡಿದ್ದುದನ್ನು ನೋಡಿದರೆ (ಮಲೆಮ. ೯೨೦). **ಬಗ್ಗಡೆ** : ಪಂದಿಮೀನ್ಸಳಿಮೀನ್ಬಗ್ಗಡೆ ಬಣ್ಣಮೀನೆನಿಪಿವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೩-೦೦೩).

[ ← ತುಳು. ಬಂಗುಡೆ, ಬೊಂಗುಡೆ. / ಮರಾ. ಬಂಗಡ್ ]

**ಬಂಗಡ್ಡ** (ನಾ). ಒಂದು ಬಗೆಯ ಹುಲ್ಲು: (+). [ ? ]

**ಬಂಗರ$_1$** 'ಬಂಗಾರ' ನೋ.

**ಬಂಗರ$_2$** 'ಬವರಿ' ನೋ.

**ಬಂಗರಳಿ** (ನಾ). ಒಂದು ಬಗೆಯ ಸಸ್ಯ : "ಬಂಗರಳಿಯೆನೆ ಹೀಲವಕ್ಕುಂ" (ಮಂಗರಾ. ೩೬-೦೭) ; ಬಂಗರಳಿಯರಳಿ . . . ಪೇರಿಪ್ಪೆ ತುಪ್ಪೆಗಳರ್ಪವು (ಶಂಬಿವಿಜ. ೦೦-೨೬). [ ? ]

**ಬಂಗಲೆ**, ಬಂಗ್ಲೆ (ನಾ). ದೊಡ್ಡಮನೆ ; ಮಹಲು : ಕೃಷ್ಣರಾಯರು ವಾಸವಾಡುತ್ತಿದ್ದುದು ಆ ಬಡಾವಣೆಯಲ್ಲಿ ಸ್ವಂತ ಬಂಗಲೆಯಲ್ಲಿ (ಮಹಾಗ. ೦೨) ; ಮಧ್ಯಾಹ್ನ ಹೊಸಬರನ್ನೆಲ್ಲ ಬಂಗಲೆಗೆ ಬರಹೇಳಿ . . . ಹಾಜರು ಪಟ್ಟಿಯಲ್ಲಿ ದಾಖಲು ಮಾಡಿಕೊಂಡರು (ರಕ್ತರೂ. ೬೨). **ಬಂಗ್ಲೆ**: ಈ ಬಂಗ್ಲೆಯಲ್ಲಿ ಎಷ್ಟು ಕೋಣೆಗಳಿವೆ ? (ತಂದುಬಿ. ೬೬) ; ಊರ ಹೊರಗೆ ದೊಡ್ಡದೊಂದು ಬಂಗ್ಲೆ ಮಾರಾಟಕ್ಕೆ ಬಂದಿದೆ (ಹನ್ನೊಂದ. ೯೬).

[ ← ಇಂ. Bungalow / ಹಿಂ. ಮರಾ. ಬಂಗಲಾ ]

**ಬಂಗವಾಡಿ** (ನಾ). ಒಂದು ಊರಿನ ಹೆಸರು : ಬಂಗವಾಡಿಯ ಕೆಱೆಗೆ ಬಿತ್ತುಕಟ್ಟು ಬಿಟ್ಟುದು (ಎಕ. X, ಕೋಲಾರ. ೦೯೬-೦೯; ಸು. 950).

[ಬಂಗ? + ವಾಡಿ$_2$]

**ಬಂಗಳಿಚ** (ನಾ). ಬಂಗಾಳದೇಶದಲ್ಲಿ ಹುಟ್ಟಿದವನು ; ಬಂಗಾಳಿ : ವರಳಿಚಂ, ಬಂಗಳಿಚಂ (ಶಬ್ದಾನು. ೯೨೦ ವ್ಯಾಖ್ಯ). [ಬಂಗಳ$_0$ + -ಇಚ]

**ಬಂಗಾರ**, ಬಂಗರ$_1$, ಬಂಗಾಱ, ಬಿಂಗರ, ಬಿಂಗಾರ, ಬಿಂಗಾರಿ$_2$, ಭಂಗಾರ, ಬಂಗಾಱ (ನಾ). ೧. (ವಿಶೇಷವಾಗಿ ಒಡವೆಗಳನ್ನು ಮಾಡಲು ಉಪಯೋಗಿಸುವ) ಒಂದು ಬಗೆಯ ಹಳದಿಬಣ್ಣದ ಲೋಹ ; ಹೊನ್ನು ; ಚಿನ್ನ : "ಬಂಗಾರ (ಭಂಗಾರ) — ಭೃಂಗಾರ= ಚಿನ್ನ, ಚಿನ್ನದ ಹೂಜಿ" (ತದ್ಭಕೋ. ೨೬) ; ಹಳೆಯ ಬಂಗಾರದಿಂದ ಹೊಸ ಒಡವೆ ಮಾಡುವಂತೆ ಹಳೆಯ ವೈದಿಕಧರ್ಮಕ್ಕೆ ನವ್ಯಚೇತನವನ್ನು . . . ಶ್ರೀಕೃಷ್ಣನು ನೀಡಿದ್ದಾನೆ (ಭಾರದ. ೦೦೯) : ಅತ್ತಿಮಬ್ಬೆ . . . ಲಿಪಿಗಾರರಿಗೆ ಬಂಗಾರದ ಕಂಟವನ್ನು ದಾನಮಾಡಿಬಿಡುತ್ತಿದ್ದಳು (ದಾನಚಿಂ. ೦೭೩). ೨. ಚಿನ್ನದಿಂದ ಮಾಡಿದ ಹೂಜಿ : ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. ೩. ಚಿನ್ನದ ಒಡವೆ ; ಸ್ವರ್ಣಾಭರಣ : ಹಣ ಬಂಗಾರ ವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟಿ ಎತ್ತದ ಭಾಷೆ (ಬಿದವ. ೨೦-೩೨) ; ಬಣ್ಣವ ನುಡರು ಬಂಗಾರಗಳನು ತೊಡರು (ನೇಮಿಸಂ. ೬-೯೦) ; ಮೆಯ್ಯ ಬಂಗಾರಗಳ ನುಗಿದು ಮಱೆಮಾಡಿದರ್ (ಚಿಂಕೃ. ೨೯-೨೬). ೪. (ಅಲಂ) ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಬಳಸುವ ಶಬ್ದ: ನನ್ನ ಬಂಗಾರ ಬಾಪ್ಪಾ ಇಲ್ಲಿ (ರೂಢಿ). **ಬಂಗರ$_1$** : ೧. ಮುತ್ತಿನ ಕಂಠಿ ಬಂಗರದ ಕೊಡೆ (ಎಕ. VI, ತರೀಕೆರೆ. ೦೦೯-೩೬; 1717) ; ಬಂಗರವು ಬೆಂಕಿಯೊಳು ಬೀಳಲು ಬಂಗರವು ತಂಡಸದಿ ಹುಡುಕಿಯೆ ಹಿಡಿದ ತೆರನಂತೆ (ಜ್ಞಾಮಿಸಿಂ. ೦೯-೩೬). $\Delta$ **ಬಂಗಾಱ** : ೫. (ಅಲಂ) ಶ್ರೇಷ್ಠನಾದವನು : ಪರಬಳಸೂಱೆಕಾಱಂ ವೈರಿಬಂಗಾಱಂ (ಮುಂಬರಾ. X, ೨೦೯-೯; 981) : ರಿಪುರಾಯ[ರು]ವರಬಂಗಾಱಂ (ಕಾಇಶಾ. XI-ii, ೦೬೨-೭; 1112) : ಬಿರುದ ಬಂಗಾಱಂ ಶಾಮಂತ ಗಸಣಿ (ಮೈಶಿಂ. ೦೯೩೭, ೦೭-೨೯; 1196). **ಬಿಂಗರ** : ೩. ಉಂಗುರದ ಕಾಲ ಊರುತ ಜಾರುತ ಬಿಂಗರದ ನಡುವ ಬಳುಕುತ ಲಕ್ಕವ್ವ ಬಂದಳೇ (ನಾಕಪ. ೨೩). **ಬಿಂಗಾರ** : ೧. "ಬಿಂಗಾರ (ರಿ) — ಭೃಂಗಾರ" (ತದ್ಭಕೋ. ೩೦) ; ಋತ್ವಕ್ತ್ವಂ—ಋಜು—ರಿಜು . . . ಭೃಂಗಾರ—ಬಿಂಗಾರ (ಶಮದ. ೨೬೯ ಪ್ರಯೋ). ೬. ಕಾಗೆಬಂಗಾರ; ಅಭ್ರಕ : ಇದರಲ್ಲಿ ಮುಖ್ಯವಾಗಿರುವ ವಸ್ತುಗಳೆಂದರೆ ನುಣುಪಾದ ಜಿಡ್ಡಿನಂತಿರುವ ಖನಿಜದ ಪುಡಿ, ಬಿಂಗಾರ (ಟಾಲ್ಕ್) (ಕಲಕೋ. I, ೩೬).

**ಬಿಂಗಾರಿ$_2$** : ೨. (ನಂಜವ್ವೆಗೆ ಚಪ್ಪರವಿ ಮಾಡಿ, ಹೊನ್ನ ಬಿಂಗಾರಿಯನ್ನು ತೋರಿ, ಮುಗುಳ್ದು ಕೊಳ್ಳನು) (ಚಿಟ್ಟ. ೯೨-೨೩). ೭. ತೂಗು ಬಿಟ್ಟಿರುವ ಚಿನ್ನದ ಅಲಂಕಾರವಸ್ತು; ಗುಳೋಪು ; ರಸಗುಂಡು : ಬಿಗಿದ ಬಿಂಗಾರಿಗಳ ಹಸುರ್ವಂದರವ ಮುಸುಕಿ ನೆಗೆದ ಮೇಲ್ಕಟ್ಟುಗಳ ಸೂಯಾಣ ಪಂಚವರ್ಣದ ಚೂಳಿಕೆಗಳೊಪ್ಪಲು . . . ವಿವಾಹಗೃಹವೆಸೆಯಿತ್ತು (ಸಿದ್ಧರಾ. ೬-೩೩); ಬಿಗಿದ ಬಿಂಗಾರಿಗಳ ಮೇಲ್ಕಟ್ಟುಗಳ ಮಣಿಮಯಸೂಸಕದ. . .ಚಪ್ಪರದೆಡೆಯೆಡೆಯ ಚೌಕಿಗೆಯ ಚತುರಂಗದ ವಿಚಿತ್ರದ ರಚನೆ ಚೆಲುವಾಯ್ತು (ಕುಮ್ಯಾಸ. ೬-೨೩); ಬಿಗಿದ ಬಿಂಗಾರಿಗಳ . . . ಸುತ್ತಣ ಸಾಲಭಂಜಿಕೆಗಳ ವಿಲಾಸದಲಿ ಸೊಗಸುತಾ ಮಂಟಪ (ತೊರಂರಾ. ೦-೦೩-೬).

**ಭಂಗಾರ** : ೧. ವರ್ಗಚತುರ್ಥಾಕ್ಷರಂಗಳ್ಗೆ-ಘಟಾಂಯಂ . . . ಭಂಗಾರಂ, ಭಂಡಾರಂ (ಶಮದ. ೦೫ ಪ್ರಯೋ); ತೋರದ ತೋಳುಳ್ಳರ್ ಭಂಗಾರದ ಕಂಭದವೊಲಪ್ಪೊಡಂಬುಳ್ಳವರ್ (ಕಾವ್ಯಸಂ. ೦-೦೯). ೩. ಚಿನ್ನದಿಂದಾದ ಭಂಗಾರ (ಒಡವೆ) ಚಿನ್ನದ ರೂಪಲ್ಲದೆ ಮತ್ತೊಂದು ರೂಪಾಗಬಲ್ಲುದೆ ಹೇಳಾ (ಸಿದ್ಧೇವ. ೦೯-೩೨). ೮. (ಅಲಂ) ಶ್ರೇಷ್ಠವಾದುದು; ಉತ್ತಮವಾದುದು: ಭಂಗಾರದಂಥಾ ಎತ್ತೊಂದು ಮೊನ್ನೆ ಕೈಯೊಳಗಿಂದ ಹೋಯ್ತು (ಅಕೋಶ. ೯೦). $\Delta$ **ಭಂಗಾಱ** : ೫. ಮಣ್ಡಳಿಕ ಬಿರುದ ಭಂಗಾಱಂ (ಕಾಇಶಾ. XI-i, ೯೭-೭; 1062) ; ರಾಯಜಗದಳಮ[ನೋಜ] [ರತಿ]ಮಚ್ಚರಿವ ಸವತಿ ಮದಭಂಜನೆ ರಾಯಭಂಗಾಱ (ಎಇ. XXVIII, ೩೫-೩೬; 1082); ರಾಯರಾಯಪುರಸೂಱೆಕಾಱ ವೈರಿಭಂಗಾಱ (ಎಕ. II, ೦೯೩-೯೦; 1131).

**ಬಂಗಾರದ ನೀರು** = ಚಿನ್ನದ ಬಣ್ಣ ಬರುವಂತೆ ಮೆರಗನ್ನು ಕೊಡುವ ರಾಸಾಯನಿಕದ್ರವ : ಬೆಳ್ಳಿಒಡವೆಗೆ ಬಂಗಾರದ ನೀರು ಬಿಡಿಸಿದ್ದಾರೆ (ರೂಢಿ). **ಬಂಗಾರದ ಮುಲಾಮು** = ಚಿನ್ನದ ಮುಲಾಮು,— ಗಿಲೀಟು : ಅವೆಲ್ಲಾ ಬಂಗಾರದ ಮುಲಾಮು ಹಾಕಿದ ಒಡವೆಗಳು (ರೂಢಿ). **ಬಂಗಾರದವಳು**, **ಭಂಗಾರದವಳು** = (ರಾಜನ) ಉಪಪತ್ನಿ : ಪಟ್ಟದ ಹೆಂಡತಿಗೆ ಅಚ್ಯುತರಾಯನೆಂಬ ಮಗನಿದ್ದನು. ಬಂಗಾರದವಳಿಗೆ ಕೃಷ್ಣರಾಯನೆಂಬ ಮಗನಿದ್ದನು (ಕೀತಿಶಾಂ. VII, ೨೦) ; ಬಂಗಾರದವಳು. ಬಂಗಾರಕ್ಕಾಗಿ ಹೆಂಡಿರಂತೆ ಬಂದವಳು. ವೇಶ್ಯೆಯಲ್ಲ. ಮದುವೆಯಾದ ಹೆಂಡಿರಲ್ಲ (ನಮ್ಮನು. ೦೩೩) ; ದೊಡ್ಡಮ್ಮರಣಧೀರನ ಭಂಗಾರದವಳಾಗಿರಲು ಅಪೇಕ್ಷಿಪಟ್ಟು, ಅರಮನೆಗೆ ತೆರಳುತ್ತಾಳೆ (ಸಂಕಶ. ೦೦೨). **ಭಂಗಾರದ ಸ್ತ್ರೀ** = ಬಂಗಾರದವಳು : "ಭೋಗಿನ್ಯಃ, ಅನ್ಯಾಃ, ನೃಪಸ್ತ್ರೀಯಃ — ಅರಸು ಭೋಗಪಡುವದಕ್ಕೆ ಉಪಯುಕ್ತರಾಗಿ ಪಟ್ಟದ ರಾಣಿಗಿಂತಲೂ ಬೇರೆ ಸ್ತ್ರೀಯರ ಪೆಸರುಗಳು. ಇದು ಭಂಗಾರದ ಸ್ತ್ರೀಯರಿಗೂ ಹೆಸರಾಗುತ್ತೆ " (ಸಿದ್ಧಾಶಿ. ೦೬೮).

[< ಸಂ. ಭೃಂಗಾರ, ಭೃಂಗಾರೀ. / ತಮಿ. ಪಜ್ಞಾರ, ಪಜ್ಞಾರು ; ತುಳು. ಬಂಗಾರ, ಭಂಗಾರ್, ಭಂಗಾರ; ತೆಲು. ಬಂಗರ, ಬಂಗರು, ಬಂಗಾರ, ಬಂಗಾರು]

**ಬಂಗಾರಕಡ್ಡಿ** (ನಾ). ಚಿನ್ನದ ಕಡ್ಡಿಯಂತೆ ತೆಳುವಾಗಿರುವ ಒಂದು

ಬಗೆಯ ಬತ್ತ: ಈಗ ಬಂಗಾರಕಡ್ಡಿ ಬೆಲೆ ಕ್ವಿಂಟಾಲಿಗೆ ನಾನೂರೈವತ್ತು ರೂಪಾಯಿ ಆಗಿದೆ (ಜಾ). 'ಬಂಗಾರಸಣ್ಣ' ಪರಾ.
[ಬಂಗಾರ + ಕಡ್ಡಿ]

**ಬಂಗಾರಚೌಕಿ** (ನಾ). ಅರಮನೆಯ ಸ್ತ್ರೀಯರಂ ವಾಸಿಸುವ ಅಂತಃಪುರದ ಒಂದು ಭಾಗ: ಕಂಗೊಳಿಸುವ ದಿವ್ಯಕಾಂತಿಯ ತೀಡುತ ಬಂಗಾರಚೌಕಿಯೊಪ್ಪಿದುದು (ಕಂಪು. ೬-೩೪). [ಬಂಗಾರ + ಚೌಕಿ]

**ಬಂಗಾರಸಣ್ಣ** (ನಾ). =ಬಂಗಾರಕಡ್ಡಿ: ಬಂಗಾರಕಡ್ಡಿಯನ್ನೇ ಬಂಗಾರ ಸಣ್ಣ ಎಂದೂ ಕರೆಯುತ್ತಾರೆ (ಜಾ). [ಬಂಗಾರ + ಸಣ್ಣ]

**ಬಂಗಾರಹುಡಿ** (ನಾ). ಚಿನ್ನದ ಪುಡಿ: ಬಂಗಾರಹುಡೀಲೇ ಭಂಡಾರಾನ ಬೆಳಸೇನಂದಾಂವಾ (ಸಜಾಗೀ. ೯೨-೬). [ಬಂಗಾರ + ಹುಡಿ (<ಪುಡಿ)]

**ಬಂಗಾಲ**, ಬಂಗಾಳ (ನಾ). ಒಂದು ದೇಶದ ಹೆಸರು; ವಂಗ: ಬಂಗಾಲದಲ್ಲಿ ಮುತ್ತೈದೆಯರು ಶಂಖದ ಬಳೆ ಹಾಕಿಕೊಳ್ಳುತ್ತಾರೆ (ಇಶ್ವ. ೪); ಬಂಗಾಲ: ಭಾರತಉಪಖಂಡದ ಈಶಾನ್ಯಭಾಗದಲ್ಲಿರುವ ಐತಿಹಾಸಿಕಪ್ರದೇಶ (ಕಂಕೋ. XI, ೬೬೯). **ಬಂಗಾಳ**: ವಂಗ ಕಳಿಂಗ ಬಂಗಾಳ . . . ನೇಪಾಳರ್ ಮೊದಲಾದ ರಾಜಪುತ್ರರ ಪಂಕ್ತಿಗಳೊಳಂ (ಗಂಕ. ೨-೦೦೩ ವ); ಲಾಳ ಚೋಳ ವರಾಳ ಯವ ಬಂಗಾಳ . . . ವಿದರ್ಭಧರಣೀಪಾಲತತಿ ಸಂದಣಿಸಿದುದು (ಕೊರಾ. ೦-೬-೦೯); ಅಂಗಾಲಿಗೆ ತ್ರಾಣವಿದ್ದರೆ ಬಂಗಾಳಕ್ಕೆ ಹೋಗಬಹುದು (ಗಾದೆ).
[←ಹಿಂ. ಮರಾ. ಬಂಗಾಲ್. / ಸಂ. ವಂಗ]

**ಬಂಗಾಲಿ**, ಬಂಗಾಳಿ (ನಾ). ೧. ಬಂಗಾಳದೇಶಕ್ಕೆ ಸೇರಿದವನು. ೨. ಬಂಗಾಳದೇಶದ ಭಾಷೆ: ಈ ಬಂಗಾಲೀಚಿತ್ರಕ್ಕೆ ಈ ಗೌಡ ಬಂಗಾಲೀ ವಿಮರ್ಶೆ ಹೊಂದಿಕೆಯಾಗುತ್ತದೆ (ಹಾಕ. ೩೩). ೩. (ಆಲಂ) ಮೋಸಗಾರಿಕೆ; ಕುಯುಕ್ತಿ: 'ಗೌಡಬಂಗಾಲಿ', 'ಬಾರಾಬಂಗಾಲಿ' ಪರಾ. **ಬಂಗಾಳಿ**: ೨. ಬಂಗಾಳಿಯನ್ನು ಅಭ್ಯಾಸ ಮಾಡಲು ಈ ಭಾಷಾಂತರ ನೆರವಾಗುತ್ತದೆಯೆಂಬುದು ನನ್ನ ನಂಬಿಕೆ (ಶಿಶಂದ. I. xvi ಮುನ್ನುಡಿ). ೩. ಬಂಗಾಳಕ್ಕೆ ಹೋದರೂ ಗವುಡಬಂಗಾಳಿ ಬಿಡಲಿಲ್ಲ (ಗಾದೆ). ೪. ಒಂದು ಬಗೆಯ ಮರ; ಹೂವರಸಿ: ರಕ್ತವಿಪ್ಪುದು ಬಂಗಾಳಿ ರಸದಂತೆ (ಅಪ್ಯೋಕ್ತ. ೩-೨೩-೨೦); ಬಂಗಾಳಿಗಿಡದ ಬುಡಕ್ಕೆ ಕುಳಿತ ಮುದುಕಿಯ ಕಡೆಯಿಂದ ನಾಲ್ಕಾಣೆ ಪುಗ್ಗೆ ತಿಂದು ಮುಗಿಸುವಷ್ಟರಲ್ಲಿ ಶಾಲೆ ಬಿಟ್ಟಿತು (ಗಾಳಕ. ೦೬೬). ೫. [ಸಂಗೀತ] ಒಂದು ರಾಗದ ಹೆಸರು: ಸಮಸ್ತರಾಗಂಗಳೊಳಗೆ ರಾಮಕ್ರಿಯೆ . . . ಬಂಗಾಳಿ ಮಧ್ಯಮಾವತಿಯೆಂಬ ಮುವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಕೆಯಿಂದ . . . ಇರ್ಪವು (ಶಿವಕ. ೨೩೪); ಪಾಟ್ಯ ಸಾಳಂಗ ಬಹುಳಿ ಬಂಗಾಳಿ ಈ ನಾಲ್ಕು ರಾಗವಾದಿಯಾದ ಮೂವತ್ತೆರಡುರಾಗವನು . . . ಪಾಡುವರು (ಕೈರಸೂ. I, ೨೨). [← ಹಿಂ. ಮರಾ. ಬಂಗಾಲೀ]

**ಬಂಗಾಲಿತನ** (ನಾ). ಮೋಸ; ವಂಚನೆ; ಠಕ್ಕು: ಕಂಗಾಲತನವು ಹೆಚ್ಚಾದ ಕಾಲಕ್ಕೆ ಅನ್ನದ ಕೊರತೆಯನ್ನು ತತ್ತ್ವಜ್ಞಾನದ ಬಂಗಾಲಿತನದಿಂದ ಮುಚ್ಚಬೇಕಾಗುತ್ತದೆ (ಶಿಶಾಮು. ೩೪). [ಬಂಗಾಲಿ + — ತನ]

**ಬಂಗಾಳ** 'ಬಂಗಾಲ' ನೋ.

**ಬಂಗಾಳಪಚ್ಚೆ** (ನಾ). ಒಂದು ಬಗೆಯ ಔಷಧದ್ರವ್ಯ: ಬೋಳಾಮುಸ್ತಕಿ, ಬಂಗಾಳಪಚ್ಚೆ, ಪಚ್ಚೆತುತ್ತ . . . ತಾವ್ರದ ಚೆಂಬಿನಲ್ಲಿ ಮರ್ದಿಸಿ ಹುಳುಕಡ್ಡಿ ರಕ್ತ ಬರುವ ಹಾಗೆ ಕೆರೆದು ತೊಡೆಯೆ ಗುಣ (ಶಿವ್ಯಶಿ. ೧೦೪).
[ ← ತಮಿ. ವಙ್ಗಾಳಪ್ಪಚ್ಚೈ ]

**ಬಂಗಾಳವಿದ್ಯ** (ನಾ). =ಬಂಗಾಲಿತನ: ಬಂಗಾಳವಿದ್ಯದಹಮ್ಮಿನಲಿ ಬಸವನಾಡಿಗೊಡೆಯನ ಗೆಲ್ವೆ ಹಮ್ಮೊಡಗೂಡಿ ಗೃಹಕ್ಕೈದಿದನು (ಐಶ್ವಶಿ. ೬-೦).
[ಬಂಗಾಳ (<ಬಂಗಾಲ) + ವಿದ್ಯ]

**ಬಂಗಾಳಿ** 'ಬಂಗಾಲಿ' ನೋ.

Δ**ಬಂಗಾಱು** 'ಬಂಗಾರ' ನೋ.

**ಬಂಗಿ** 'ಭಂಗಿ$_1$' ನೋ.

**ಬಂಗಿಮುಕ್ಕ** 'ಭಂಗಿಮುಕ್ಕ' ನೋ.

**ಬಂಗು** (ನಾ). ೧. ಚರ್ಮದ ಮೇಲೆ ಕಪ್ಪುಚುಕ್ಕೆಗಳುಂಟಾಗುವ ಒಂದು ಬಗೆಯ ಚರ್ಮರೋಗ: ಬೀರಗೆ ಸಿದ್ಧಾರ್ಥಂ ಕಾಟ್ಪೀರಗೆ ಕರಿಯೆಳ್ಗಳಿಂಬಿವಂ ಪೂಸುಗಜಕ್ಷೀರದೊಳರೆದಾನನಪಂಕೇರುಹವಂ ಬಂಗು ಬಿಂಗುಗಂ (ಲೋಕೋಶ. ೯-೫೯); ನರವುಲಿ ಮೊಡವಿ ಬಂ[ಶಾಕಾಂ. ಭು. ಪಂ]ಗು ನೆರದಾಱನದ ಚುಬ್ಬುವೆರಸಿರ್ದ ಲಂಕುಳಿನ ನಿಡಿಯೊಡಲು (ಇಪಪ. ೦೦-೦೦); ಪಡವಲದ ಬೀಜವ ಪೂಸೆ ಬಂಗು ತೀರ್ಗುಂ (ಶಿವ್ಯಶಿ. ೯೪). ೨. ಬೂಷ್ಟು; ಬೂಜು: ಅವನುಪಕಾರಮನಾಂ ಪೇ[ಟ]ವೇಟ್ಟುದೆ ನಮ್ಮ ತಿರಿದುತಂದುಣ್ಬಶನಕ್ಕವ[ರ]ಣ್ಣೆ ಸೂಜಿವೊನೆಯನಿಸುವೆಣ್ಣೆಯುಂ ಬಂಗುವಪಾದ ಕಟಿಯುಂ ಪೇಟ್ಟುಂ (ಸುಕುಸೂ. ೨-೬೬). [ದೇ॥ ತಮಿ. ವಙ್ಕು]

**ಬಂಗುರಿಸು** (ಕ್ರಿ). ೧. 'ಬಂ' ಎಂದು ಶಬ್ದ ಮಾಡು: ಇಂಗಡಲ ತಾವರಸದಿ ಬಂಗುರಿವ ತುಂಬಿಗಳ ಗಾವರಂ ಗಾನ ಮಿಗೆ ರಂಗಿಸುತ ಕೇಳುವೆಯ ನಿಟ್ಟಿಪ ಸಮುದ್ರೇಶ (ಅಂಗಪ. ೨-೩೦). ೨. (?): ಬಾಂಬಟ್ಟೆಯೆಡೆಗೆ ಹೋಗಿ ಬೆಳೆದವ್ಯಂತಘಟವಂ ಗಣನೆಯಿಲ್ಲೆನಿಸಿ ಬಂಗುರಿಪ ಖಚರವಾನಂಗಳಿಂ ಬಿಡದೆಱೆವ ತಂಗರಗವೊ . . . ಎನಿಸಿ ಶೃಂಗಚೆಂದೆಂಗಸೆದವು (ಅಂಗಪ. ೩-೨೬). [? + — ಇಸು$_3$]

**ಬಂಗ್ಲೆ** 'ಬಂಗಲೆ' ನೋ.

**ಬಂಚ**, ವಂಚ (ನಾ). ೧. ಪೀಳಿಗೆ; ವಂಶತನ; ಕುಲ: "ವಂಶಮಂ ಬಂಚವೆನಲಕ್ಕು" (ಅಭ್ಯಕ್ತ. ೫೬); ಈ ಲಲ್ಲಾಡನಟ್ಟೊಂ ಕೊಙಾಳ್ವರ ಕೊಡುಗೂರರ ಬಂಞ್ಚಮತ್ತನ್ತೆ ಅಱುಗೆ (ಎಕ. III(R), ಹಗ್ಗಡ. ೩-೦೫; ಸು. ೨ನೆಯ ಶ೪); ಶತ್ರಕ್ಕೆ ಚತ್ತಂ . . . ವಂಶ—ಬಂಚ (ಕಪುದ. ೨೬೩ ಕ್ರಯೋ). ೨. ಕೊಳಲು: ಎರಡುಂ ಬಂಚಂಗಳಿಂದಿಂಚರಮೊಸರ್ವಿನೆಗಂ ಕಿನ್ನರದ್ವಂದ್ವಮೊತ್ತುತ್ತಿರೆ . . . ಕೇಳುತ್ತಿರ್ದ ಕಾದಂಬರಿಯನವನಿಪಂ ದೂರದೊಳ್ ಕಂಡಂ (ಕಾದಂಸಂ. ೦೬೪); ಮದನನ ಬಲ್ಲ ಜೇವೊಡೆ ವಿಪಂಚಿಯ ಬಂಚದ ನುಣ್ಪು ಕರ್ಣಪೂರದ ಪರಮಾಮ್ರತಾಂಬುವೆನೆ ನೇವುರದಿಂದುಡೆನೂಲ ತೊಂಗಲಿಂ ಮೃದುರವಮುಣ್ಮೆ (ಅಪಂಪ. ೪-೩೦); ಗೋವರ ಪೆಣ್ಗಳ್ ಬಂಚದ ಗಾವರಕುರೆ ಸೋಲ್ತು ಬಳಸಿ ನಿಲೆ (ಕವುಚಾ. ೪-೦೫೬). **ವಂಚ**: ೧. "ವಂಚಂ=ವಂಶಂ" (ಕಪುದ. ಶಂ. ೨). ೨. 'ವಂಚಿಗೆ' ಪರಾ. [<ಸಂ. ವಂಶ]

**ಬಂಚನೆ** (ನಾ). ಮೋಸ; ಕಪಟ: "ಅತಿಬಂಚನೆಯೆನೆ ಮರುಟಕ್ಕು [ಮಱಸದಕ್ಕು]" (ರನ್ನಕಂ. ೩); "ಬಂಚನೆಯೆ ವಂಚನೆ" (ಕರ್ನಾಶ. ೬೦); ಪುಸಿನಸೆ ಬಞ್ಚನೆ (ಎಕ. VI, ಕಕ್ಕಮು. ೯೪-೦೯; ಸು. 1060 ?). [<ಸಂ. ವಂಚನ]

**ಬಂಚರ** (ನಾ). ೧. ಒಂದು ಬಗೆಯ ತಂತೀವಾದ್ಯ; ತಂಬೂರಿ: ಆ ಬಂಚರವನ್ನೆತ್ತಿ ಮಿಡಿಂಟಿ ಪರೀಕ್ಷಿಸಿ, ಸುತಿ ಮಾಡಿ . . . ರಾಗಮಾಲಿಕೆಯನ್ನು ಸವಿಗರೆಯುವವಳು (ಮಂತ್ರಕ. ೫೬-೦೨). ೨. ವೀಣೆ (?): ಬಾಳ ಬಂಚರ ಮಿಡಿದು ನುಡಿಸು ಬಂಧುರ ಸುಂದರಾ! (ಕಕಪಾ. I, ೪೩೦). ೩. (?): ಚಂಚತ್ಪಂಚಶರನ ಬಂಚರದಂತೆ ಮುಂಚಿ ಪಂಚಮದಿಂಚರಂ ಪಂಚಮೆನೆ ನೆಗಳ್ದು ಸಂಗಡಿಸಿದ ಕೆಂಗಣ್ಣಾಕ್ಕಿಗಳಿಂ (ರಾಜಶೇ. ೨-೬೬ ವ); "ಭಟ್ಟಂಗಿ ಧ್ವನಿ" (ರಾಜಕೇ. ಕೋಶ). [ ? ]

**ಬಂಚರದ್ದಳಿ** ? (ನಾ): ಅಲಿನೀಜ್ಯಾಮೃದುಮಂಜಶಿಂಜಿತ ಸಮಂ ಸಣ್ಣಂಚರಂ ಬಂಚರದ್ದಳಿಯೊಳ್ಪಕ್ಕೊಡನುಣ್ಮೆ ನುಣ್ಣುರದೆ ಮಿಂಚಂ ಸೀಳ್ದ ಪೊಲ್ಮೊಣ್ಮೆ ಕಾಕಳಿಯೊಳ್ಕೂಡಿದ ಸೀಯನಪ್ಪ ರಸಗೇಯಂ ಚಿತ್ರಮಂ ತಾಗೆ (ಲೀಲಾವ. ೩-೩೧). [ ? ]

**ಬಂಚಿಸು** (ಕ್ರಿ) ೧. ಮೋಸ ಮಾಡು ; ವಂಚಿಸು : ಬಂಚಿಸಿ ತನ್ನನುಜೆಯ ಧನವಂ ಚಪಲಂ ಕೊಂಡು (ಅರಿಪು. ೫-೦೬); ಧರ್ಮ ಬುದ್ಧಿಯಧರ್ಮಬುದ್ಧಿಯಾಗಿ ಧನವಂ ಬಂಚಿಸಿ (ಶಂಕಕಂ. ೦೬೭-೨೦). ೨. ತಪ್ಪಿಸು : ಚಾಣಾಕ್ಯನ ದೃಷ್ಟಿಯಂ ಬಂಚಿಸಿ [ಪಾಠಾಂ. ಯಿಂದಂಜಿಸಿ] . . . ತುತ್ತನರಸಂ ವಿಷಮಿಶ್ರಿತಮೆಂದಱಿಯದೆ ಕೊಟ್ಟಂ (ಪದ್ಮಾರಾ. ೦೯೦–೨); ಅತ್ತ ಮನುಜಮನೋಜನುಂ ಮದನಪರಿತಾಪಕ್ಕಾಱದುಮ್ಮಳಿಸಿ ಮಧುಮಥನನ ಕಣ್ಣಂ ಬಂಚಿಸಿ . . . ಎಯ್ದಿವಂದು (ಶಂಕಭಾ. ೫-೦೦ ಪ); ನೆಣದ ಪಳ್ಳಂಗಳಂ ಪಾಯ್ದುಂ ನೆತ್ತರ ತೊಱೆಗಳಂ ಬಂಚಿ[ಪಾಠಾಂ. ಜಿ] ಸಿಯುಂ . . . ಪೋಗಿಪೋಗಿ (ಶಂಕಭಾ. ೦೬-೩೩ ಪ).
[ಬಂಚನೆ + —ಇಸು₂]

**ಬಂಜ** (ನಾ). ನಿರ್ವೀರ್ಯನಾದವನು ; ಷಂಡ : ನಿನ್ನೊಡನಿರ್ದ ಬೊಜಂಗರ್ ನಿನ್ನಂತಿರೆ ಬಂಜರಲ್ಲರದಟರ್ಕಳವರ್ (ಧರ್ಮಾಮೃ. ೨-೦೨೩) ; ಈ ಸಲೆ ಬಂಜನೆಂಬ ಸೊಲ್ಲಾದ್ರಿಯೊಳೆಂತು ಪೋಪುದು (ಉದ್ಭಟ. ೬-೩೮).
[< ಸಂ. ವಂಧ್ಯ. / ಪ್ರಾ. ವಂಝ. ಮರಾ. ವಾಂಝ್]

**ಬಂಜಗ** (ನಾ). = ಬಂಜ : ಬಂಜಗಂ ನೀನರಸ ಮುಟ್ಟದಿರು . . . ದೂರದಲಿ ನಿಲ್ಲು (ಕರಕು. ೩-೨೮). [ಬಂಜ + —ಗ₂]

**ಬಂಜರ** 'ಬಂಜರು' ನೋ.

**ಬಂಜರು, ಬಂಜರ** (ನಾ). ೧. ಏನೂ ಬೆಳೆಯದ ನೆಲ ; ಬೀಳುನೆಲ ; ಪಾಳುಭೂಮಿ : "ಊಷವಾನ್, ಊಷರಃ—೨ ಚವುಳುವಣ್ಣುಳ್ಳ ಬಂಜರುದಿಣ್ಣೆ ಪೆಸರುಗಳು" (ಸಿದ್ಧಾಂತಿ. ೯೩) ; ಅರಣ್ಯಪ್ರದೇಶವನ್ನೂ ಬಂಜರುಜಮೀನನ್ನೂ ತಾತಾ ಅವರಿಗೆ ವಶಪಡಿಸಬೇಕಾಗಿತ್ತು (ಭಾಗ್ಯಶಿ. ೭೮).

**ಬಂಜರ** : ೩. (ಆಲಂ) ವ್ಯರ್ಥವಾದುದು; ಬರಡು; ಅಪ್ರಯೋಜಕವಾದುದು : ಕೀರಂಗಳಾಡದಿಹ ಪಂಜರಂ ಬಂಜರಂ ಸಾರಸಗಳಿಲ್ಲದಿಹ ಕಾಸಾರ ನಿಸ್ಸಾರ (ವೆಂಕಾರಾ. ೦-೫-೭೦).

**ಬಂಜರಾಗು** = (ಆಲಂ) ಬರಿದಾಗು ; ಶೂನ್ಯವಾಗು : ಮನ ಬೀತು ಬಂಜರಾಯ್ತು (ಶಾಪಜೀ. ೨-೨೬). **ಬಂಜರು ಬೀಳು** = ಏನೂ ಬೆಳೆಯದಿರು ; ಫಲವಿಲ್ಲದಾಗು : ಅಷ್ಟು ದೊಡ್ಡ ತೋಟ ನೋಡಿ ಕೊಳ್ಳುವವರಿಲ್ಲದೆ ಬಂಜರು ಬಿದ್ದಿದೆ (ರೂಢಿ).
[← ಹಿಂ. ಮರಾ. ಬಂಜರ್. / ತುಳು. ಬಂಜರ = ಏನೂ ಬೆಳೆಯದ; ತೆಲು. ಬಂಜರು]

**ಬಂಜರುಗಾಡು** (ನಾ). = ಬಂಜರು ೧ : ಕುಜಗ್ರಹದ ಬಹುಭಾಗ ನೀರಿನಿಂದ ಬತ್ತಿ ಹೋದ ಮರುಭೂಮಿ ; ಬಂಜರುಗಾಡು (ಆಕಾಶ. ೨೦).
[ಬಂಜರು + ಕಾಡು₂]

**ಬಂಜರುಭೂಮಿ** (ನಾ). = ಬಂಜರು ೧ : ದೀಕ್ಷಾಗ್ರಹಣ ಮಾಡದ ಆಗಮಾನುಷ್ಠಾನವು ಬಂಜರುಭೂಮಿಯಲ್ಲಿ ಬಿತ್ತಿದ ಬೆಳೆಯಂತೆ (ಶಾರದ. ೭೩). [ಬಂಜರು + ಭೂಮಿ]

**ಬಂಜಾರ** (ನಾ). ಒಂದು ಅಲೆಮಾರಿ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ ; ಲಂಬಾಣಿ : (ಎಪಿಕ. xxv, ೧).
[← ಹಿಂ. ಬಂಜಾರಾ ; ಮರಾ. ಬಂಜಾರೀ, ವಣಜಾರಾ, ವಣಜಾರೀ]

**ಬಂಜಾವು** (ನಾ). ಕರು ಹಾಕದ ಹಸು ; ಗೊಡ್ಡಾಕಳು : ಸತ್ಯನಿಧಿ ಕಟ್ಟಿಸಿದಂ ಬಂಜಾವನು (ಎಚಿಶಾಂ. ೩೨-೯೦). [ಬಂಜು + ಆವು]

**ಬಂಜು** (ನಾ). ಬಂಜೆತನ ; ಗೊಡ್ಡುತನ : 'ಬಂಜಾವು', 'ಬಂಜುಗೆಡು' ಪರಾ. [ಬಂಜ + —ಉ₄]

**ಬಂಜುಗೆಡು** (ಕ್ರಿ.) ಬಂಜರಿಲ್ಲದಾಗು ; ಫಲವತ್ತಾಗು : ಮೊದಲ ಮೊಳಗಿಗೇ ಬಂಜುಗೆಟ್ಟಿತೋ ಭೂಮಿ ಅಣಬೆ ತಾಳಿ (ವೆಂಕಿಪದಾ. ೩-೦೦).
[ಬಂಜು + ಕೆಡು₁]

**ಬಂಜೆ** (ನಾ). ೧. ಗೊಡ್ಡು ; ಫಲವಿಲ್ಲದುದು : "ಬಂಜೆ—ವಂಧ್ಯಾ(ಧ್ಯ) = ಗೊಡ್ಡು ; ವಿಫಲ" (ಶಬ್ದಕೋ. ೨೮) ; ಬಂಜೆಯ (ಮ)ರನಂ ಆವಕೇಶಿ ಯೆಂಬುದು (ಪಲಾಯು. ೨೯-೨೪). ೨. ವ್ಯರ್ಥ; ಹಾಳು ; ನಿರರ್ಥಕ : ಮಹಾಧ್ವರಕಾಲಂ ಬರ್ಪನ್ನೆವರಂ ದಿವಸಂಗಳಂ ಬಂಜೆಯಿಲ್ಲದುತ್ತುಂಗ ದಾನಂಗಳಂ ಮಾಡುತ್ತುಮುದ್ಭಟಕ್ಷತೀಂದ್ರಚಂದ್ರಮನಿರೆಯಿರೆ (ಉದ್ಭಟ. ೯-೩೦ ವ) ; ದಿನವ ಬಂಜೆಯ ಮಾಡದಿಹ ಪರಮಿನಿಯನಹ ವರದೈವಗುರುಪೂಜನೆಯ . . . ಅನುಗೊಳಿಪನಾವನು ಮನುಜರೊಳ ಗುತ್ತಮನು (ಕುಮ್ಮಾಡ. ೩-೩೦). 'ಬಂಜೆವಡಿಸು' ಪರಾ. ೩. ಮಕ್ಕಳನ್ನು ಹಡೆಯದವಳು ; ಗೊಡ್ಡಿ : "ಬಂಜೆಯೆನೆ ವಂಧ್ಯಾಖ್ಯಂ" (ಕಬಿಕಂ. ೦೫೮) ; ಮಗನಂ ಪಡೆವಂತಿರೆ ಬಂಜೆಗೆ ಮರ್ದಂ ಮಾಟ್ಪಂ (ಸಮುಕ. ೦೨-೩೫) ; ಬಂಜೆ ಬೇನೆಯನಱಿಯಳು (ಮಹಾದೇ. ೩. ೦೯೦-೬೦೯) ; ಹೆತ್ತರಿಯದ ಬಂಜೆ ಸೂಲಗಿತ್ತಿಯೆ ಜಗದಿ? (ಗೀತಂ. ೦೦೦-೧). ೪. ಪ್ರಯೋಜನವನ್ನು ಹೊಂದದವಳು ; ಫಲವನ್ನು ಪಡೆಯದಿರುವವಳು : ಲಾವಣ್ಯದ ಬಂಜೆ ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಶಯಮಂ ಗಿರಿರಾಜಂ ಕರುಣಿಸಿ ನೋಡಿ (ಗಿಂಕ. ೯-೦೦೬ ವ). ೫. ಒಂದು ಬಗೆಯ ಸಸ್ಯ : "ನಾಗಾರಿಃ—ಗರುಡ, ಬಂಜೆ, ಮಡುವಾಗಲು" (ಓಷಧಿ. ೯೫). (ಗು). ೬. ಫಲವಿಲ್ಲದ ; ಗೊಡ್ಡಾದ : ಮೊದಲಿಲ್ಲದ ಭೂಮಿರುಹಕ್ಕೆ ಶಾಖೆಬಂಜೆವನಿತೆ ಗಾತ್ರಜಂ ಮೃತಶರೀರಿಗೆ ಜೀವಕಳಾಪ್ರವೇಶಮೆಂಬಿವು ಪರತೇನು (ಶಕಕ. ೦೫೫-೦೭). ೭. ವ್ಯರ್ಥವಾದ ; ನಿರರ್ಥಕ ; ಹಾಳಾದ : ಈಶನಂ ನೆನೆಯದ ದಿನಂ ಬಂಜೆ ದಿನವಯ್ಯ (ಪಾಗೀರ. ದೇ. ೨೬೫-೦೦).

**ಬಂಜೆ ಮಾಡು** = ಹಾಳು ಮಾಡು ; ನಿಷ್ಫಲಗೊಳಿಸು : ವಿಜಯಲಕ್ಷ್ಮಿಪೊಲೀಶನ ತೋಳ ತಟ್ಟಿನೊಳ್ ಪೊಸಯಿಸು ನಲ್ಮೆಯಂ ದಿವಸ ಲಕ್ಷ್ಮಿಯನೇಕೆಗೆ ಬಂಜೆ ಮಾಡುವೈ (ಶಂಕಾಪು. ೯-೦೬೭). **ಬಂಜೆಯಾಗು** = ೧. ಫಲವಿಲ್ಲದಾಗು ; ನಿಷ್ಫಲವಾಗು : ಅವಂಧ್ಯಃ, ಫಲೇಗ್ರಹಿಃ — ೨. ಬಂಜೆಯಾಗದೇ ಕ್ಲುಪ್ತವಾಗಿ ಫಲ ಬಿಡುವ ಗಿಡದ ಹೆಸರು, ಫಲವೃಕ್ಷ (ಸಿದ್ಧಾಂತಿ. ೦೦೦) ; ಭೂಮಿ ಯಾರೊಬ್ಬರ ಸ್ವಂತ ಆಸ್ತಿ ಆಗದಿರುವ ಪಕ್ಷಕ್ಕೆ ಅದೆಂದೂ ಬಂಜೆಯಾಗಿರುವುದಿಲ್ಲ (ಭೂಪರು. ೯೨೫). ೨. ಮಕ್ಕಳನ್ನು ಹೆರದಿರು ; ಗೊಡ್ಡಾಗು : ಕಪಿಳೆ ಎಂಬಳು ಮಕ್ಕಳಿಲ್ಲದೆ ಬಂಜೆಯಾಗಿರ್ಪುದುಂ (ಭುಜ್ಞಾಸ್ರ. ೩-೮೦ ವ) ; ಬಮ್ಮಲದೇವಿ ಬಂಜೆಯಾಗಿಯೇ ಉಳಿದಿರಲಾರಳು (ಸಪತಿ. viii, ಪ್ರಸ್ತಾವನೆ). ೩. ವ್ಯರ್ಥವಾಗು ; ನಿರರ್ಥಕಗೊಳ್ಳು : ಭಾವರತಿ ಬಲಿದು ಬಂದಂತೆ ಬಗೆದು ಕಣ್ಣೆಱೆದು ಕಾಣದೆ ಬಯಲನಪ್ಪಿದ ತೋಳ್ ಬಂಜೆಯಾಗೆ (ಗಿಂಕ. ೨-೦೦೫ ವ) ; ದಿನ ಬಂಜೆಯಾಗದೆ ಪರಮಪಾತ್ರರತರಾದ ಮುನಿಗಳಿಗನ್ನದಾನವನು ಮನ ಮುಟ್ಟಿ ಮಾಡುವ ಭಾಗ್ಯಮೆಂಬುದನಾವ ಮನುಜ ಪಡೆಯಬಹುದೆಂಬ (ಕಠಕ. ೩-೪೦); ಬಂಜೆಯಾಗದು ವಿಪ್ರರಂದೆನ್ನೊಳೆಂದ ನುಡಿ (ಕೃಮಿಶಾ. ೨೯-೩೭).
[< ಸಂ. ವಂಧ್ಯಾ. / ಪ್ರಾ. ವಂಝಾ. / ತುಳು. ಬಂಜೆ. / ಹಿಂ. ಬಂಝಾ ; ಮರಾ. ವಾಂಝ್]

**ಬಂಜೆಗೈ** (ಕ್ರಿ). ವ್ಯರ್ಥಗೊಳಿಸು ; ನಿರರ್ಥಕಗೊಳಿಸು : ತನ್ನ ಬಾಣಮಂ ಬಂಜೆಗೈದಪರೆ ಪೊಱಬಿಗರು (ಕೃಮಿಶಾ. ೩೦-೩೪).
[ಬಂಜೆ + ಗೈ (< ಕೆಯ್₁)]

**ಬಂಜೆತನ** (ನಾ). ಫಲವಾಗದಿರುವಿಕೆ ; ಗೊಡ್ಡುತನ : ಎನಗೀ ಜನ್ಮಮಿದಿಂತೆ ಬಂಜೆತನದಿಂದಂ ಪೋಕುವೋ (ಸುಕುಮಾ. ೯-೦೦೪) ; ತನ್ನ ಬಂಜೆತನಮಿಂದು ಪೋದುದು (ಕೃಮಿಶಾ. ೨೮-೩೪) ; ನಂಜುಂಡ ಜೀವದ ಬಂಜೆತನವಳಿಯಿತು (ಸಿದ್ಧಕು. ೩-೦೦). [ಬಂಜೆ + —ತನ]

**ಬಂಜೆವಡಿಸು** (ಕ್ರಿ). ವ್ಯರ್ಥಗೊಳಿಸು ; ನಿರರ್ಥಕಗೊಳಿಸು : ಸತ್ಪುರುಷ

ರದೇಕೆ ಬಂಜೆವಡಿವರ್ ಗಡ ದುರ್ಲಭಕಾಲಲಬ್ಧಿಯಂ (ಚಂದ್ರಪ್ರ. ೨-೩೬) ; ಮದಗಂಧಸಾರಸಪ್ತಚ್ಛದಂಗಳಿಂ ಪುದಿದು ಬೆಳೆದ ತಾಪಿಂಛದ ಪರ್ವೆರ್ದಲಿ ಕರಿಶಂಕೆಯಿಂ ಪಾಯ್ದುವರ್ದಳಿಗೊಳ್ ಪರಿವಿತೆತ್ತಿ ಬಂಜೆವಡಿಪುದು ಮುಳಿಸಂ (ಚಂದ್ರಪ್ರ. ೫-೩೦). [ಬಂಜೆ + ಪಡಿಸು]

**ಬಂಜೆವಾಗಲ್**, ಬಂಜೆವಾಗಲ, ಬಂಜೆಹಾಗಲ (ನಾ). ಒಂದುಂ ಬಗೆಯ ಮೂಲಿಕೆ : ವಿವಿಧವ್ರಣದೊಳ್ ಸಲೆ ಬಂಜೆವಾಗಲಂ . . . ಪೂಸುಗಾ ವಿಷಂ ಪೊಜಮಡುಗುಂ (ಲೋಕೋಪ. ೧೦-೩೯). **ಬಂಜೆವಾಗಲ** : ಬಂಜೆ ವಾಗಲದ ಗೆಣಸ ನಾಲ್ಕುವರಹತೂಕವ ನೀರಿನಿಂದಾ ಅರದು ನಸ್ಯಂ ಕುಡಿಯ ಕೊಡಲು ಸರ್ಪಯಿಲಿ ಬೆಕ್ಕು ಚೇಳು ನಾಯಿ ನರಿ ವೊದಲಾದ ವಿಷಗಳು ಶಮನವಹುದು (ವಿಷಚಿ. ೨೩-೬). **ಬಂಜೆಹಾಗಲ** : ಬಂಜೆಹಾಗಲದ ಗೆಡ್ಡೆ, ತುರುಚನ ಬೇರಿನ ತಿಗುಡು ಇವುಗಳನ್ನು ಸಮತೂಕದಲ್ಲಿ ಚೂರ್ಣಿಸಿ (ಸಕವೈ. ೮೬). [ಬಂಜೆ$_1$ + ಪಾಗಲ್$_1$]

**ಬಂಜೆವಾಗಲ** 'ಬಂಜೆವಾಗಲ್' ನೋ.

**ಬಂಜೆವಾತು** (ನಾ). ವ್ಯರ್ಥವಾಗುವ ಮಾತು ; ಫಲ ಕೊಡದ ಮಾತು: ನುಡಿಯಬಹುದೇ ಬಂಜೆವಾತನು (ಕುಮಾವ್ಯಾ. ೬-೨೬). [ಬಂಜೆ + ಮಾತು$_1$]

**ಬಂಜೆಪೊಟ್ಟು** (ನಾ). ವ್ಯರ್ಥವಾದ ಕಾಲ ; ಪ್ರಯೋಜನಕ್ಕೆ ಬಾರದಿರುವ ಸಮಯ : ಸದಮಳಪಾತ್ರಕ್ಷೇತ್ರದೊಳಿದು ಬಿತ್ತುವ ಪದದ ಪೊಟ್ಟು ಗೃಹಮೇಧಿಗದೇವುದೊ ಮಧ್ಯಾಹ್ನದ ಪೊಟ್ಟಲ್ಲದ ಪೊಟ್ಟುಂ ಬಂಜೆಪೊಟ್ಟು ತಾನದು ಪೊಟ್ಟೇ (ಅರ್ಹನೇ. ೦-೬೯).

[ಬಂಜೆ + ಪೊಟ್ಟು]

**ಬಂಜೆಹಾಗಲ** 'ಬಂಜೆವಾಗಲ್' ನೋ.

**ಬಂಟ$_1$**, ಬಟ, ಭಂಟ (ನಾ). ೧. ವೀರ ; ಶೂರ ; ಪರಾಕ್ರಮಿ : "ಘನವೀರನಪ್ಪವಂ ತುಱಿಲಾಳು ಬಂಟಂ" (ಕಬ್ಬಿಗ. ೪೨); ಕನ್ನೆಯ ಬಂಟನ ವೃದ್ಧಸ್ತ್ರೀಯ ಮೂವರ ಚಿತ್ರಕಥೆಗಳಂ ಪಟದೊಳ್ ತೋಱು (ವಡ್ಡಾರಾ. ೧೪-೦೬) ; ಮಹಾಸಾಮಂತ್ರಂ ಕನ್ನನ ಬಣ್ಣಂ ಕಟಕಪ್ರಾಕಾರಂ ನೆರೆಪೊಡೆ ಬಣ್ಣಂ (ಶಾಇಸಂ. XI-i, ೪೭-೭ ; 993). ೨. ಯೋಧ ; ಸೈನಿಕ : ಕಾಳಗದಲ್ಲಿ ಪೌಜನಿಕ್ಕಿಡದೆ ವಾಜಿಱಿಡದೆ ಅರಸಂಬ ರಲ್ಲದೆ ಬಂಟರೆಂಬುದಿಲ್ಲ (ಪೋಲೀಪಾ. ೨-೩) ; ಬವರಕ್ಕಾಗದ ಬಂಟನೇ (ಸೋಮೇಶ. ೨೨). ೩. ದಾಸ ; ಸೇವಕ : ತೊತ್ತಿಂಗೇಕೆ ಲಕ್ಷಣ ಬಂಟಂಗೇಕೆ ಆಚಾರ (ಬಸವ. ೪೬೬) ; ಬಗೆದೆನಪರಾಧವನು ಕರುಣಾಳುಗಳ ಬಲ್ಲಹ ನೀನು ನಿನ್ನಂಘ್ರಿಗಳಿಗೀ ತಲೆಬಂಟ ನೀನಿದ ಕಾಯಬೇಕು (ಕುಮಾವ್ಯಾ. ೧೦-೧೬) ; ನೆಚ್ಚಿನ ಬಂಟಂ ಹನುಮಂತಂ ಕೆಮ್ಮನಿರ್ದನೆ? (ರಾಮಾಶ್ವ. ೩೭-೮) ; ಸಮಯಕ್ಕಾದವನೇ ನಂಟ, ಕೆಲಸಕ್ಕೆ ಒದಗಿದವನೇ ಬಂಟ (ಗಾದೆ). ೪. ದಕ್ಷಿಣಕನ್ನಡದ ಒಕ್ಕಲಿಗರ ಒಂದು ಪಂಗಡ : ವ್ಯವಸಾಯಗಾರರು . . . ಬಂಟ, ದಖ್ನಿ (ತುಳುನಾ. ೦೬೦). **ಬಟ** : ೧. "ಬಟ (ಬಂಟ, ಬಂಟು)_ಭಟ" (ತದ್ಭಕೋ. ೨೮); ಸಾಂತರಸ . . . ಬೆಸಗೆಯ್ವಲ್ಲಿ ಮರಲಿ ಬಟರಿಂಗೆ ಕೊಟಾರ್ (ಎಕ. VI, ಕೊಪ್ಪ. ೩೯-೪ ; ಸು. 700?) ; ಅಚುತರಾಯಮಹಾರಾಯರೂ . . . ವೀರಬಟರಿಗೆ ದರ್ಮವಾಗಿ ವಿಟ್ಟ (ಎಕ. X (s), ಕೋಲಾರ. ೦೦೪-೩ ; 1535). ೨. ಮತ್ತಿ ಘಡದ ಚಿಕ್ಕನಾಯಕಹಳ್ಳಿಯ ಸುತ್ತಣ ಬಟರೊಂದೆಸೆಯ ಒತ್ತರಿಸಿ . . . ಏಱಿದರು (ಕಂಪಿ. ೦೪-೩೬). ೩. ನಿತಂಬಿನಿಯರಸಿಯ ಬಾಸೆಗಳಂ ಯಮರಾಜನ ಬ[ಪಾಠಾಂ. ಭ]ಟರನ್ನದೆ ಶೋಭಾಕರವೆಂದೊಡಂ (ಧರ್ಮಾಮೃ. ೭-೦೩೩). **ಭಂಟ** : ೧. ನಾವು ವೃದ್ಧರು ಬಿರುದುಗಿರುದಿನ ಲಾವಣಿಗೆ ನಮಗೇಕೆ ಹೇಳ್ಳೆ ನೀವಲ್ಲೈ ಜವ್ವನದ ಭಂಟರು ರಣದ ಧುರ ಧರಕೆ (ಕುಮಾವ್ಯಾ. ೪-೩೦) ; ಪಂಥಿಸಿದರಿಗಳ ತಲೆಯನರಿದು ಕಾಳಕಂಠಗೆ ವನಮಾಲೆಯಿತ್ತು ಭಂಟರಾಗಿಹೆವು (ಕಂಪಿ. ೮-೪೨) ; ಬಂಟ ನೀನೊಳ ಜಗಕೆ ಭಂಟ ಹೊರಜಗಕೆ (ಸಾಂಕಲ. ೬೩). ೨. ಭಂಟನಹೆ ಬಕುತರಿಗೆ (ಕುಮಾವ್ಯಾ. ೫-೮) ; ಭಂಟನಲ್ಲವೆ ನಾನು ದೀನರ ನೆಂಟನಲ್ಲವೆ ನೀನು (ಹಂಸಾ. ೬೦). ೫. ಕಾವಲುಗಾರ ; ಕಾಪಿನ ಆಳು : ಸುಡುಗಾಡಿಕ್ಕೆಗೆ ಭಂಟನಾಗನೆ ಹರಿಶ್ಚಂದ್ರಂ (ಸೋಮೇಶ. ೩೨).

**ಬಂಟರ ಬಾವ, ಬಂಟರ ಭಾವ** = ಪರಾಕ್ರಮಿಗಳನ್ನು ಸೋಲಿಸಿ, ಅವರ ಕಡೆಯ ಹೆಣ್ಣನ್ನು ಮದುವೆಯಾಗುವವನು ; ಒಂದು ಬಿರುದು : ಪರಬಲಭಯಂಕರನುಂ ಬಣ್ಟರ ಬಾವನುಂ (ಎಕ. VI, ಕಡೂರು. ೧೩೭-೫೨ ; 1191) ; ಕೊತ್ತಗಾವುಣ್ಡನ್ ತತ್ಪುತ್ರ ಕೋರಾತ್ಕ ಗಾವುಣ್ಡಂ ದುಷ್ಟಸ್ವವಾಹಕ ಪಱಿಪೊಕ್ಕೆ ಕಾಪನ್ತೆ ಬಣ್ಟರ ಭಾವಂ (ಎಕ. III, ನಂಜನ. ೦೨೨-೦೪ ; 266 ? ಕೃಶಾ) ; ಯಾಚಕಜನನಿಧಿನಿಧಾನ[ಂ] ಬಂಟರ ಭಾವಂ ಪರನಾರೀದೂರಂ ಸರಣಾಗತಪ್ರಿಯಂ (ಕಇಅ. ೪೦-೫೯-೦೦ ; 1128) ; ಗೋವನಿಕಲಂಕಮಲ್ಲ ಬಂಟರ ಭಾವ ಪರನಾರೀಸಹೋದರ (ಇಆ. V, ೪೦-೨೬ ; 1586). [< ಸಂ. ಭಟ]

**ಬಂಟ$_2$**,ಬಟ್ಟ$_4$, ಭಟ್ಟ$_1$ (ನಾ). ೧. ಹೊಗಳುವವನು ; ಸ್ತುತಿಪಾಠಕ : 'ಬಂಟಸಾಮಿ' ಪರಾ. **ಬಟ್ಟ$_4$** : ೧. 'ಹೊಗಳುಬಟ್ಟ' ಪರಾ. ೨. ವಿದ್ವಾಂಸ ; ಪಂಡಿತ : (?). ೩. ಪೂಜಾರಿ ; ಪುರೋಹಿತ : ಬಟ್ಟರಿಗೆ ಮಂತ್ರಕ್ಕಿಂತ ಉಗುಳೇ ಜಾಸ್ತಿ (ಗಾದೆ). ೪. ಅಡುಗೆಯವನು : ಈವತ್ತು ಬಟ್ಟರು ಬಂದಿಲ್ಲ (ರೂಢಿ). **ಭಟ್ಟ$_1$** : ೧. "ಭಟಃ_ಉಗ್ಗಡಿಸುವಂ" (ಕಾಶಕ. ೨೬೨). 'ಭಟಾಂಗ' ಪರಾ. [< ಸಂ. ಭಟ್ಟ]

**ಬಂಟ$_3$** (ನಾ). ಶ್ರೇಷ್ಠಜಾತಿಯ ಕುದುರೆ : ದಾಂಟಲ್ಬಾರದ ಕುಱಿಯಂ ಗೆಂಟಱಿೊಳಂ ಕಂಡು ಪಿರಿದು ಪರಿತಂದು ಮುಂದಂ ನಾಂಟಿರೆ ಲಂಘಿಸಿ ಪೋದವು ಬಂಟಂಗಳೆನಿಪ್ಪ ಕುದುರೆಗಳ್ ಕೆಲವದಱಿೊಳ್ (ಪಾರ್ಶ್ವಪು. ೦೦-೪).

[ ?./ಮರಾ. ಬಟ್ ]

**ಬಂಟಂಗ** (ನಾ). ಶೌರ್ಯದ ರೀತಿ ; ಪರಾಕ್ರಮದ ಬಗೆ : ಕಂಠೀರವ ರಾಜನಿದಿರಲಿ ಕರಿಗಳ ಬಂಟಂಗ ಮೆಱಿವುದೆ ಸ್ವಾಮಿ (ಕಂಪಿ. ೦೨-೬೨).

[ಬಂಟು + ಅಂಗ$_1$]

**ಬಂಟತನ** (ನಾ). ೧. ಪರಾಕ್ರಮ ; ಶೌರ್ಯ : ರಾವಣಗೆಂಟುಮಡಿ ಯಿಂದ್ರಾರಿ ರಣದಲಿ ಬಂಟತನದ ಪರಾಕ್ರಮಂಗಳ ಕಾಣದೇ ಲೋಕ (ಕೌಶಿರಾ. ೩೬-೨೦) ; ಅಕ್ಕಮಹಾದೇವಿಯ ವಚನವು ಅವಳ ಧೈರ್ಯ ಸಾಹಸಗಳ ನಿದರ್ಶನವಾಗಿ ನಮ್ಮಲ್ಲಿ ಬಾಳುವೆಯ ಬಂಟತನವನ್ನು ಪ್ರೇರಿಸುತ್ತದೆ (ಕವಸಂ. ೫). [ಬಂಟ$_1$ + — ತನ]

**ಬಂಟವಣ** (ನಾ). ಪರಾಕ್ರಮಿಗಳಿಂ ಸಲ್ಲಿಸಂವ ಹಣ: ಈನ್ತು ನೆಗರ್ತ್ತೆವೆತ್ತ ಬಂಟಸಾಸಿರ್ವ್ವರುಂ ದೇವರ್ಗ್ಗೆ ಬಂಟವಣಮನಾಚಂದ್ರಾರ್ಕ್ಕತಾರಂಬರಂ ಬಿಟ್ಟರ್ (ಶಾಇಸಂ. XI-ii, ೦೪೫-೬; 1098). [ಬಂಟ$_1$ + ಪಣ$_3$]

**ಬಂಟಸಾಮಿ** (ನಾ). ಹೊಗಳುಭಟ್ಟರಲ್ಲಿ ಮುಖ್ಯನಾದವನು : ಅಚ್ಚಿಗದಿಂ ಕಟ್ಟಿದ ಕಟ್ಟ ಕನ್ನಡದ ಕಾಬ್ಬಬ್ಬಗಳಂ ಬಂಟ[ಪಾಠಾಂ. ಬಟ್ಟ]ಸಾಮಿಗಳಂ ಕೇಳಿಸಿ ತಾವೆ ತಮ್ಮ ಮನದೊಳ್ಸರ್ವಜ್ಞರೆಂದಿರ್ಪ ಕಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ (ಅರ್ಹನೇ. ೧-೩೫). ☞ ಇದು ಇತರರನ್ನು ದೂಷಣೆ ಮಾಡಿ ಒಡೆಯನನ್ನು ಹೊಗಳುವವನು ಎಂಬರ್ಥದಲ್ಲಿ ಉಪಯೋಗವಾಗಿದೆ. [ಬಂಟ$_2$ + ಸಾಮಿ$_1$]

**ಬಂಟಿಕೆ** (ನಾ). ವಾರ್ತೆ; ದೌತ್ಯ (?) : ಅಂಬರೀಷಾವನಿಪಸುತೆಯ ಬಂಟಿಕೆಯ ಹರಿಗಂಬರೀಷಂ ಮುಳಿಯನೆ (ಪದ್ಮರಾ. ೦೦-೬೫).

[ಬಂಟ$_1$ + — ಇಕೆ]

**ಬಂಟು** (ನಾ). ೧. ಪರಾಕ್ರಮ; ಶೌರ್ಯ : ಸಾಸಿರ್ವ್ವರುಂ (ವ)ಆತನ ಬಣ್ಟಿಂಗೆ ಮೆಚ್ಚಿ (ಎಕ. VIII, ಸೊರಬ. ೪೬-೭; 1150); ಉಂಟಾದ ಬಲೆ ಕಾಲು ಕಣ್ಣ ನಾಯಕ ಕುನ್ನಿ ಬಂಟುಳ್ಳ ನಾಯಿ ಹುಲಿಗಳ ಅಂಟುಸಾಳುವ

ಸೇಣೆ ತಡಿಕೆ ಗಾಣಗಳಿಂದ ಉಂಟಾಗಿ ನಡೆಸಿಂದ ರಾಯ (ಹಂಶಾಂ. ೧-೬೦); ನಂಟುಂ ಬಂಟುಂ ನೆರವಿರ್ಪಿನಂ ಗೆಲ್ವುದುಮೊಲ್ವುದುಂ ನಿಮಗಕ್ಕುಂ (ರಾಮಾಶ್ವ. ೯೬-೦೭). 'ಬಂಟುತನ' ಪರಾ. ೨. ಸೇವೆ; ಕೈಂಕರ್ಯ : 'ಬಂಟುಗೆಯ್' ಪರಾ. ೩. ಪರಿವಾರ; ರಕ್ಷಕದಳ: ಕಲಿ ಮಲಪ್ರಧ್ವಂಸಕಂ ಕೇಶಿರಾಜನ ಬಂಟಂ ನಯ[ಸೇ]ನಸೂರಿಪದಪದ್ಮಾರಾಧನಾರತ್ನಚಿತ್ತನ್ (ಎಇ. XVI, ೫೩-೦೮; 1053). ೪. ಸೈನ್ಯ: ದಂಡು : ತುರಗಮುವೊಂದುಸತ್ತಿಗೆಯುಮೋದಿರೆ ಕಾಪಿನ ಬಂಟು ಸುತ್ತಲುಂ ಬರೆ (ಆದಿಪು.೧೧-೪೬ ಅಧಿಕಪದ್ಯ); ಭೂರಿ ಗೋವೃಂದವನು ಗೋಪಕುಮಾರರನು ಯಾದವರ ಬಂಟಿನ ಮೇರೆಯನು ಮಿಗೆ ಕಾದನಲ್ಲದೆ ತುಱುವ ಕಾದವನೇ (ಸಾಳ್ವಭಾ. ೨೦-೬೮). ೫. ಸೇವಕ ; ಭೃತ್ಯ ; ಊಳಿಗದವನು : ನಮ್ಮ ಬಂಟಂಗೆ [ಪಾಠಾಂ. ಎಮ್ಮ ಭಂಟಂಗೆ]ನಾವೆ ಬೆಸಕೆಯ್ವನಿತಾಯ್ತು (ಶೀವಸಂ.೨೦೦-೦೭); ಭೂತಗಣ ಬಂಟು ನೃತ್ಯ (ಕಂಡಿಮು. ೩೦-೨೪). [ಬಂಟು$_1$ + — ಉ$_4$. /ತುಳು. ಬಂಟು = ವೀರೋಚಿತವಾದ ; ತೆಲು. ಬಂಟು]

**ಬಂಟುಗೆಡು** (ಕ್ರಿ). ಶೌರ್ಯ ಕುಂದು ; ಕೆಚ್ಚಿಲ್ಲದಾಗು : ಕೂರದರ್ ನೆಲಸನೊಟ್ಟಜೆಯಿಂ ಕೊಳೆ ಕೊಟ್ಟು ಬಂಟು[ಪಾಠಾಂ. ಮುಳಿದು, ಮುಟ್ಟುಗೆ]ಗೆಟ್ಟಿನ್ನುಮರಣ್ಯದೊಳ್ ನಮೆದಪಂ ಯಮನಂದನಂ (ಪಂಪಭಾ. ೬-೫೫) ; ಕಂಠಮಂ ಕತ್ತರಿಸಲಾ ಶಿರಂ ತನ್ನೆಡೆಗೆ ಬಂಟುಗೆಡದ್ಯೆದಿದೊಡೆ (ಜೈಮಿಭಾ. ೦೩-೬೨). [ಬಂಟು + ಕೆಡು$_1$]

**ಬಂಟುಗೆಯ್** (ಕ್ರಿ). ಸೇವೆ ಮಾಡು ; ಊಳಿಗ ಮಾಡು : ದುಷ್ಕುಲಂಗಳೊಳ್ ಪುಟ್ಟಿ ಪೆಱರ್ಗೆ ಕೀಱುವೆಸಂಗೆಯ್ದುಂ ಬಂಟುಗೆಯ್ದುಂ ನವೆವುತ್ತಂ. . .ದುರ್ಗತಿಗೆ ಸಲುವರ್ (ಶಪಾರ. ೩೬೩). [ಬಂಟು + ಕೆಯ್$_1$]

**ಬಂಟುತನ** (ನಾ). ಪರಾಕ್ರಮ ; ಕೆಚ್ಚು ; ಶೌರ್ಯ : ನೆರೆದು ಪರದಾರವಂ ಕಲಿವುದೆ ಚತುರತ್ವಂ ಸೊಕ್ಕುವುದೆ ಬಂಟುತನಂ . . . ಎಂಬರ್ ಧೂರ್ತರ್ (ಕಾದಂಪೂ. ೫೬೬); ಗಱಿ ತೋಱಿ ಗಂಡರೆಂಬವರ ಕಾಣೆ ನಿಱಿ ಸೋಂಕಲು ಮುನಿಯಿಲ್ಲ ನೋಡಯ್ಯಾ ನಂಟುತನವೇನವನ ಬಂಟು[ಪಾಠಾಂ. ಟ]ತನವೇನವನ ಹುಲ್ಲ ಕಿಚ್ಚು ಹೊಲೆಯನ ಮೇಳಾಪ (ಬಸವ. ೪. ೧೦೨); ಜಗಂ ನೋಡೆ ಮಾಡಿದನತ್ಯದ್ಭುತಮಪ್ಪ ಬಂಟುತನಮಂ ಗೋವಿನ್ದದಣ್ಣಾಧಿಪಂ (ಸೌಇಇ. XX,೯೭-೪೨; ?); ಬಂಟುತನವು ಎದೆಗಾರಿಕೆ ಧೈರ್ಯ ವೀರತ್ವವನ್ನು ತಿಳಿಯಪಡಿಸುತ್ತದೆ (ತುಳುಜಾ. ೬೧).

[ಬಂಟು + — ತನ./ತೆಲು. ಬಂಟುತನ]

**ಬಂಟೆದೆ** (ನಾ). ಪರಾಕ್ರಮವುಳ್ಳ ಮನಸ್ಸು : ಇಂದು ಬೆಳಗಿನಿಂದ 'ಹೊಯ್ಸಳ ! ಹೊಯ್ ಸಳ !' ಎಂಬ ಕಡೆಯಿಲ್ಲದ ಕೂಗು ನಿನ್ನ ಬಂಟೆದೆಯ ಮುಟ್ಟಲೆಂದು ನನ್ನ ಕಿವಿಕೊಳವಿಯಲ್ಲಿ ಹೊಕ್ಕಾಡುತಿದೆ (ವಿಜಸಾ. ೪). [ಬಂಟು + ಎದೆ (<ಎರ್ದೆ)]

**ಬಂಟೇಳು** 'ಬಂಡೇಳು' ನೋ.

**ಬಂಡ$_1$** (ನಾ). ೧. ಪದಾರ್ಥ; ಸಾಮಾನು; ಸರಕು : ಪಲಂಬರ್ ಶಾಕಟಿಕಪರದರುಂಬೆರಸು ಬಂಡಿಗಳೊಳ್ ಪಟ್ಟಿಯುಂ ಧಾನ್ಯಮಂ ತೀವಿಕೊಂಡು ಪೊಱಲ್ಗೆ ಮಾಱಲೆಂದು ಪೋಪನ್ನೆಗಂ . . . ಬಂಡಮುಮೆಟ್ಟುಗಳುಂ ಮೊದಲಾಗೆಲ್ಲಮಂ ಕಳ್ಳರ್ ಕೊಂಡು ಪೋದರ್ (ವಡ್ಡಾರಾ. ೬೬-೦೪); ಬಂಡವ ತುಂಬಿದ ಹಸುಬೆ ಕೊಂಡವನ ನುಂಗಿತ್ತು (ವೋಲೀವಾ. ೨೪೩-೬೪೪); ಉರುತರ ಬಂಡವ ತುಂಬಿ ಹಡಗೇಱಿ ಹರದುಗೈಯ್ಕಲು (ನೇಮಿಸಂ. ೪-೦೩). ೨. ಮಾನವಿಲ್ಲದವನು ; ನಿರ್ಲಜ್ಜ : "ಬೂತುಗಳೆನೆ ಬಂಡರ್ [ಪಾಠಾಂ. ಬಂಡುಂ]" (ಛಪದಿ. ೨೯) ; ಕಬ್ಬಿಗರ ಜೋಡೆಯ ಬಂಡರ. . . ಬೀಣೆಗಾಱರಾಗರಮನೆ . . . ಎಸೆದಿರ್ಪುವು ಸೂಳೆಗೇರಿಗಳ್ (ಕಬ್ಬಿಕಾ. ೪೩); ಲೋಕದೊಳ್ಪೇಡುವಂ ಬಂ[ಪಾಠಾಂ. ಭಂ]ಡಂ (ಜೈಮಿಭಾ. ೨೬-೬೪) ; ಬಂಡನ ಸ್ನೇಹ ಮಾಡಿ ಇದ್ದ ಬಂಡ ಕಳಕೊಂಡ (ಗಾದೆ). ೩. ವಿದೂಷಕ ಹಾಸ್ಯಗಾರ : ಭಂಡಂ — ಬಂಡಂ (ಶಮದ. ೬. ೨೫೫ ಪ್ರಯೋ). ೪. ಹೇರಳ; ಹೆಚ್ಚಳ ; ಆಧಿಕ್ಯ : ದವಸ ಬಂಡವಾಗಿದೆ (ಚಬ್ಬಿಲ. ೨೪೦-೨೦). (ಗ್ರಾ). ೫. ನಾಚಿಕೆಯಿಲ್ಲದ ; ಲಜ್ಜೆಗೇಡಿಯಾದ : ಬಂಡವೈಷ್ಣವನೆ ಕೇಳದಱಿಂದೆ ಹರಿಯುಡಿಯು ಖಂಡಿಸಿದುದೆಂದು ಪದ್ಮಪುರಾಣವೊರೆದುದು (ಸಿದ್ಧೇಪು. ೬-೫೫).

**ಬಂಡಬಂಡವಾಗಿ** = ಹೆಚ್ಚುಹೆಚ್ಚಾಗಿ; ಅತ್ಯಧಿಕವಾಗಿ : ತೊಲೆಗಳವರೆಗೆ ಬಂಡಬಂಡವಾಗಿ ನೇಲುಬಿದ್ದ ಇಲ್ಲಣ, ಜಾಡಗಳನ್ನು ಸವರಿದರು (ರಕ್ತಧ್ವ. ೨೬೦). [<ಸಂ. ಭಂಡ. / ತಮಿ. ವಣ್ಣ, ವಣ್ಣು; ತುಳು. ಬಂಡ್, ಬಂಡು, ಭಂಡ್, ಭಂಡ, ಭಂಡೆ ; ಕೊಡ. ಬಂಡೇ; ತೆಲು. ಬಂಡ, ಬಂಡು ; ಕೋತ. ಬಂಡ್ವಾ. / ಮರಾ. ಭಂಡ್, ಭಾಂಡ್]

**ಬಂಡ$_2$** (ಗ್ರಾ). ೧. ಕುಂದುಗಳುಳ್ಳ ; ನ್ಯೂನ. ೨. ಸತ್ತ್ವಗುಂದಿದ ; ನಿರ್ವೀರ್ಯ. (ನಾ). ೩. ಬಾಲವಿಲ್ಲದ ಎತ್ತು : "ಬಂಡ-ಬಾಲ ಮೋಟಾದ ಎತ್ತು" (ಪಾಪಠಾ. ೬); ಮಾಗಧೀಭಾಷೆಯಲ್ಲಿ ಬಾಲ ಕತ್ತರಿಸಿದ ಗೂಳಿಯನ್ನು 'ಬಂಡ' ಎಂದು ಕರೆಯುತ್ತಾರೆ (ಪಾಪಠ. ೧೧). [ಸಂ.]

**ಬಂಡ$_3$**, **ಬಂಡೆ$_3$** (ನಾ). ಕುರಿಯ ತುಪ್ಪಟ ; ಉಣ್ಣೆ : ಬಣ್ಣವೇಱಂಗೆ ಅಯ್ದು ವಿಸ (ಇಆ. VIII, ೨೮೬-೫೪; 782); ಕುರುಬರ ಸಂಗವ ಮಾಡಿ ಕುರಿಗಳ ಮೆಯ್ಯೋದ ಕಲಿತು ಬಂಡ ನೂಲೋದ ಕಲಿತು (ಪಾಪವ. ೦೫೦). 'ಅಡಿಬಂಡ' ಪರಾ. **ಬಂಡೆ$_3$** : "ಊರ್ಣಾ-ಕುರೀಬಂಡೆ ಮುಂತಾದ ಕೂದಲು" (ಸಿದ್ಧಾಂತಿ. ೩೮೭). [?]

**ಬಂಡಣ**, **ಭಂಡಣ** (ನಾ). ಕಾಳಗ; ಯುದ್ಧ : "ಬಂಡಣ = ಕಾಳೆಗಂ" (ಕಮುದ. ಪಂ. ೨); ಬಂಡಣದೊಳೆನ್ನನೋಡಿಸಿ ಕೊಂಡುಯ್ದುಂ ನಿನ್ನನಾಸರಿತ್ಸುತಂ (ಪಂಪಭಾ. ೦-೬೬) ; ಚಂಡಕೋದಂಡನ ದಂಡು ಬಂಡಣಕ್ಕಿಸಲಂಡುಗೊಂಡು ನಿಂತು (ಹರಿಶ್ಚಂದ್ರ. ೩-೩೩ ವ); ಪಲಬರರಸರಂ ಬಂಡಣದೊಳ್ ಗೆಲ್ದು (ಮಾಣಿಕ. ೨-೩೬ ವ). **ಭಂಡಣ** : "ಯುದ್ಧಾಹ್ವಯಂ ಭಂಡಣಂ" (ಕರ್ಣಾಟ. ೨); ಭಂಡಣದೊಳಟಿದು ಪೆಂಡಿರ್ ಭಂಡಾರಂ ಪೋದೊಡದು ವಿಧಾತೃವಶಂ (ಅಜಿತಪು. ೧೧-೬೦); ಭಂಡಣದೊಳ್ ಜಯಾಪಜಯಮೆಂಬುದು ಸಿದ್ಧಂ (ದಶಕು. ೨-೪೪) ; ಚಂಡಪರಾಕ್ರಮದಷ್ಟಶಶಾಂಕರ್ ಭಂಡಣಮಂ ಪೊಕ್ಕಾ ನೃಪಪಂಚಕದೊಳಗೆ ಪಳಂಚಿದರು (ಜಯುಕಾ. ೬-೫೩). [<ಸಂ. ಭಂಡನ]

**ಬಂಡತನ** (ನಾ). ನಾಚಿಕೆಯಿಲ್ಲದಿರುವಿಕೆ; ಅವಮಾನದಿಂದ ಕೂಡಿರುವಿಕೆ; ನಿರ್ಲಜ್ಜೆ : ಆ ಯಮಂ ಬಂಡತನವೇ ಶ್ವೇತ ನಡೆ ನರಕಕುಂಡಕ್ಕೆ ನೀನೆಂದು ಗರ್ಜಿಸಲ್ಕೆ (ಚೆಬಿಪು. ೫೦-೨೬); ಪೈಶಾಚರಂತೆ ಹೇಸದೆ ರಕ್ತಪಾನವಮಂ ಮಾಡಿಯೊಡಲ ಪೋಷಿಸಿದೆ ಬಂ[ಪಾಠಾಂ. ಭಂ]ಡತನವಿದು (ಜೈಮಿಭಾ. ೨-೬೦). [ಬಂಡ$_1$ + — ತನ]

**ಬಂಡಬಾಳು** (ನಾ). ಮಾನವಿಲ್ಲದ ಬಾಳು; ಹೀನಬದುಕು : ಬಂಡಬಾಳನ್ನು ಬಾಳಿದ ಬಾಣಭಟ್ಟ ಏಕೆಂದು ಪರಾಧೀನನಾಗಿದ್ದಾನೆ ? (ಪಾಪಠ. ೦೦೯). [ಬಂಡ$_1$ + ಬಾಳು$_2$ (<ಬಾಟ್ಕೆ)]

**ಬಂಡಮಾತು** (ನಾ). ನಾಚಿಕೆಯಿಲ್ಲದ ಮಾತು : ಇನ್ನೊಂದು ಸಲ ಇಂಥ ಬಂಡಮಾತು ಆಡಬೇಡ (ರೂಢಿ). [ಬಂಡ$_1$ + ಮಾತು$_1$]

**ಬಂಡಲು**, **ಬಂಡಲ್ಲು** (ನಾ). ೧. ಗಂಟು ; ಮೂಟೆ : ತನ್ನ ಮೇಲೆ ಹೇರಿದ ಬಂಡಲನ್ನು ಹೊತ್ತುಕೊಂಡು ತಿರುಗುವ ಅಭ್ಯಾಸ ಮಾಡಿಕೊಳ್ಳಬೇಕಾಯಿತು (ಬಂಗಾಹ. ೩೫). ೨. ಕಟ್ಟು; ಪೊಟ್ಟಣ : ಚಹಾ ತುಂಬಿದ ಕಿಟ್ಲಿ, ಬಿಸ್ಕಿಟ ಬಂಡಲುಗಳು ಬಂದವು (ಶೀದಾವ. ೦೭). **ಬಂಡಲ್ಲು** : ೧. ನನಗ ಇರಲೀ ಅಂತ ಒಂದು ದೊಡ್ಡ ಬಂಡಲ್ಲ ತಂದು ಕೊಟ್ಟಾರ ನೋಡ! (ಬಂದಿದು. ೪೪). [←ಇಂ. Bundle]

**ಬಂಡಲ್ಲು** 'ಬಂಡಲು' ನೋ.

**ಬಂಡವಲ** 'ಬಂಡವಾಳ' ನೋ.
**ಬಂಡವಲು** 'ಬಂಡವಾಳ' ನೋ.
**ಬಂಡವಳ** 'ಬಂಡವಾಳ' ನೋ.
**ಬಂಡವಳಗಾರ** 'ಬಂಡವಾಳಗಾರ' ನೋ.
**ಬಂಡವಾಲಶಾಹಿ** 'ಬಂಡವಾಳಶಾಹಿ' ನೋ.

**ಬಂಡವಾಳ,** ಬಂಡವಲ, ಬಂಡವಲು, ಬಂಡವಳ, ಬಂಡವಾಳು, ಬಾಂಡವಲು, ಭಂಡವಲ, ಭಂಡವಲು, ಭಂಡವಾಳ, ಭಂಡವಾಳು, ಭಾಂಡವಲ, ಭಾಂಡವಲು, ಭಾಂಡವಳು (ನಾ). ೧. (ವ್ಯಾಪಾರ ಅಥವಾ ಉದ್ಯೋಗದಲ್ಲಿ ತೊಡಗಿಸುವ) ಮೂಲಧನ ; ಅಸಲು : ಇಲ್ಲಿನ ಕೈಗಾರಿಕೆಗಳಿಗೇ ಬಂಡವಾಳವಿಲ್ಲದಿರುವಾಗ. . . ಇಲ್ಲಿ ಏಳಿಗೆ ಹೇಗುಂಟಾಗಬೇಕು ? (ಹಡಶ್ರ. ೧೩೧); ಅರ್ಥಶಾಸ್ತ್ರದಲ್ಲಿ ಬಂಡವಾಳವನ್ನು ಒಂದು ಉತ್ಪಾದನಕಾರಕವಾಗಿ ಪರಿಗಣಿಸುವುದು ರೂಢಿಗೆ ಬಂದಿದೆ (ಕವಿಕೋ. XI, ೬೯೩). ೨. ಬೆಲೆ ; ಮೌಲ್ಯ : ಚಮತ್ಕಾರಗಳ ಚದುರತನಮಂ. . . ಶೃಂಗಾರದ ಬಂಡವಾಳಮಂ ತಿಳಿದವಳು (ಸೌಗಂಧಿ. ೨೨೦-೩). **ಬಂಡವಲ:** ೧. ವ್ಯವಹಾರಿಸುವಂಗೆ ಬಂಡವಲಮಿ[ಲಾಕಾಂ. ಬಂಡಮೊದವಿ]ಲ್ಲದೆಂತು ಪೋದಪ್ಪೆ (ಶಬ್ದಸ್ಮೃ. ೬-೬ ವ). ೩. (ಅಲಂ) ಸತ್ತ್ವ; ತಿರುಳು; ಸಾರ : ತಮ್ಮಲ್ಲಿದ್ದ ಬುದ್ಧಿಯ ಬಂಡವಲವನ್ನು ವ್ಯವಹಾರಕ್ಕೆ ಬಳಸಿ, ವ್ಯವಹಾರನಿಪುಣರಾಗಿದ್ದರು (ಕನಸಿ. ೧೦೯). **ಬಂಡವಲು :** ೧. ಸಂಪತ್ತಿಯನ್ನು ಹುಟ್ಟಿಸಲಿಕ್ಕೆ ಬಂಡವಲಾದರೂ ಬೇಕು (ಮುಂಬಯಿ. ೩-೨೩೦). ೩. ಆತನು ಅದೊಂದು ಕೊಡಲಿಯಿಂದ ಇಡಿಯ ಆಯುಷ್ಯದಲ್ಲಿ ಹೊಟ್ಟೆಯ ಪ್ರಶ್ನೆಯನ್ನು ಬಿಡಿಸಬಲ್ಲನು. ಅದುವೆ ಅವನ ಬಂಡವಲು (ಶಕ್ಯಾ. ೩೯); ಸುಖ ಸಿಗಲೊಲ್ಲದೆಂದು. . . ಮಡದಿ ಮಕ್ಕಳಿಂದ ಕಾಣೆಯಾಗುವದಕ್ಕಾಗಲಿ ಬಹಳ ಬಂಡವಲು ಬೇಕಿಲ್ಲ (ಬಾಳಬ. ೩೬). **ಬಂಡವಳ:** ೧. 'ಬಂಡವಳಗಾರ' ಪರಾ. **ಬಂಡವಾಳು:** ೧. ನಿಮ್ಮ ದಯದ ಬಂಡವಾಳೊಂದಧಿಕವಾಗಿರಲಿ (ಶರಕು. ೩-೨೦). **ಬಾಂಡವಲು :** ೧. 'ಬಾಂಡವಲುಶಾಹಿ' ಪರಾ. **ಭಂಡವಲ :** ೧. ಭಂಡವಲ ಹಾಕಿ ಭಂಡವಲ ತಗಿಯೋ ಕೆಲಸ (ಗಂಮೂಯು. ೨೧೮); ಭಂಡವಲ ಕೂಡಾ ಆಗ ಸ್ಥಿರವಾಗಿ ನೆಲೆಯೂರಿತ್ತು (ನಸುಕ. ೦೯). **ಭಂಡವಲು:** ೧. ಗೋದಿಯ ಒಂದೇ ವ್ಯವಹಾರದಲ್ಲಿ ಭಂಡವಲಿನ ಇಮ್ಮಡಿ ಲಾಭವಾಯಿತು (ಜಯಂತ. ೩೯೮); ಕಲಕತ್ತೆಯ ಪತ್ರಿಕೆಗಳು ಪರದೇಶದ ಭಂಡವಲಿನಿಂದಲೇ ಕೂಡಿದ್ದವು (ಶತ್ರಿಕಾ. ೨೪). ೩. ಮೂಲ ಭಂಡವಲು ಮುಗಿಯಲಿಲ್ಲ, ನಿಜ, ಬೆಳೆಯಲಿಲ್ಲ ಕೂಡ ಜ್ಞಾನವೆಲ್ಲ ಅಜ್ಞಾನದಂತೆ ಮೊದಲಿದ್ದ ಹಾಗೆ ಮೂಢ (ಅರಳು. ೨೩೯-೬). **ಭಂಡವಾಳ.** ೧. 'ಭಂಡವಾಳಗಾರ' ಪರಾ. **ಭಂಡವಾಳು:** ೧. 'ಭಂಡವಾಳುಗಾರ' ಪರಾ. **ಭಾಂಡವಲ.** ೧. ಮಲ್ಲೇಶ ನೌಕರನಲ್ಲದಿದ್ದರೂ ಗೌಡನ ಭಾಂಡವಲದಲ್ಲಿಯೆ ವ್ಯಾಪಾರ ಮಾಡುವ ಪಾಲುಗಾರನಲ್ಲವೆ? (ಶ್ರಜಸ. ೪೦). **ಭಾಂಡವಲು:** ೧. ಅವನ ಭಾಂಡವಲು ಉಪಯೋಗಿಸಿಕೊಂಡು ಇತ್ತ ಬೇರೆ ವ್ಯವಹಾರ ಸಾಗಿಸಬೇಕಾಯಿತು ! (ಶ್ರಜಸ. ೩೬); ಯಾವನೊಬ್ಬ ಸಾಹಸಿಯೂ ನಾಲ್ಕಾರು ಮಂದಿಯ ಕಡೆಯಿಂದ ಭಾಂಡವಲು ಕೂಡಿಸಿಕೊಂಡು (ಪ್ರಬಂಧ. ೨೬). ೪. ವಸ್ತು ; ಸಾಧನ: ಈಗ ಹಡಗದ ಎಣ್ಣೆ_ಮುಖ್ಯ ಭಾಂಡವಲ—ತೀರಿತು (ಅಶಸಾ. ೨೨೩). **ಭಾಂಡವಳು:** ೩. ಭಾಂಡವಳು ಅವನಲ್ಲಿಲ್ಲ (ಒಂಟಿದ. ೨೬.)

**ಬಂಡವಾಳವಿಲ್ಲದ ಬಡಾಯಿ =** ೧. ಸತ್ವವಿಲ್ಲದ ಜಂಬ; ಒಣಜಂಬ: ನಾನು ಬಂಡವಾಳವಿಲ್ಲವ ಬಡಾಯಿಯನ್ನು ಕೊಚ್ಚಿದ್ದೆ (ನಡದಾ. II, ೧೦೦೯). ೨. ಒಣಜಂಬದ ವ್ಯಕ್ತಿ: ಅವನಂಥ ಬಂಡವಾಳವಿಲ್ಲದ ಬಡಾಯಿಯನ್ನು ನಾನು ಮತ್ತೆಲ್ಲೂ ನೋಡಿಲ್ಲ (ರೂಢಿ).

[ ← ಮರಾ. ಭಾಂಡವಲ/. ತೆಲು. ಬಂಡವಲ, ಬಂಡಾಲ ]

**ಬಂಡವಾಳಗಾರ,** ಬಂಡವಳಗಾರ, ಭಂಡವಾಳಗಾರ, ಭಂಡವಾಳುಗಾರ (ನಾ). ಹಣವನ್ನು ವ್ಯಾಪಾರದಲ್ಲಿ ತೊಡಗಿಸುವವನು; ಸಾಹುಕಾರ: ಜನರನ್ನು ಹಿಂಸಿಸುತ್ತಿದ್ದ ಬಂಡವಾಳಗಾರರನ್ನು ಓಡಿಸಿದೆವು (ಶಾರಿಮು. ೬೯); ಬಂಡವಾಳಗಾರರಿಗೂ ಕಾರ್ಮಿಕರಿಗೂ ಉಂಟಾಗುತ್ತಿರುವ ಘರ್ಷಣೆಗಳ ಕಾರಣಗಳನ್ನೂ ಕುರಿತು ತರುಣವಿದ್ಯಾರ್ಥಿಗಳು ವಿಚಾರ ಮಾಡುವಂತೆ ಪ್ರಚೋದಿಸುವುದು ಆವಶ್ಯಕ (ಕ್ರಿಯೂಶಿ. ೦೩೦). **ಬಂಡವಳಗಾರ:** ಬಂಡವಾಳಗಾರರ ಮತ್ತು ಕಾರ್ಮಿಕರ, ಶ್ರೀಮಂತರ ಮತ್ತು ಬಡವರ ನಡುವಣ ಕಲಹಗಳಿಗೆ ಕಾರಣವೇ ಇರುವುದಿಲ್ಲ (ತತ್ವಶಾ. ೦೩೨). **ಭಂಡವಾಳಗಾರ :** ಚಂಪಾರಣ್ಯಜಿಲ್ಲೆಯ ಒಕ್ಕಲುಜನವನ್ನು ಸಂಘಟಿಸಿ ಆಂಗ್ಲೇಯ ಭಂಡವಾಳಗಾರರ ವಿರುದ್ಧ ಸತ್ಯಾಗ್ರಹವನ್ನು ಹೂಡಬೇಕಾಯಿತು (ರಾಜವ. ೮). **ಭಂಡವಾಳುಗಾರ :** ಅಜ್ಞಾನದ ಲಾಭ ಪಡೆದು ಅವರನ್ನು ಆಳುತ್ತಿರುವ ರೀತಿ ಭಂಡವಾಳಗಾರರ ದುಡ್ಡಿನ ಸುಲಿಗೆಗಿಂತಲೂ ನೀಚತಮವಾದದ್ದು (ಒಂಟಿದ. ೦೦೦).

[ ಬಂಡವಾಳ + — ಗಾರ (< — ಕಾಜ) ]

**ಬಂಡವಾಳಗಾರಿಕೆ** (ನಾ). ಬಂಡವಾಳವನ್ನು ಹೂಡಿ ಮಾಡುವ ಉದ್ಯೋಗ : ಹೆಚ್ಚಿನ ಹಣವನ್ನು ಉತ್ಪಾದನೆ ಮಾಡುವುದು ಬಂಡವಾಳಗಾರಿಕೆಯಾದ್ದರಿಂದ ಮೂಲದಲ್ಲಿ ಹಣವು ಅವಶ್ಯ (ಮಾವಾದ. ೦೨೩).

[ ಬಂಡವಾಳಗಾರ + — ಇಕೆ ]

**ಬಂಡವಾಳದಾರ,** ಭಾಂಡವಲದಾರ (ನಾ). = ಬಂಡವಾಳಗಾರ : ಆ ಕಂಪೆನಿಯ ಬಂಡವಾಳದಾರರಲ್ಲಿ ಭಿನ್ನಾಭಿಪ್ರಾಯವುಂಟಾಗಿ ವ್ಯಾಪಾರವೆಲ್ಲಾ ಕೆಟ್ಟು ಕಂಪನಿಯನ್ನೇ ಮುಚ್ಚಿ ಬಿಟ್ಟರು (ರೂಢಿ). **ಭಾಂಡವಲದಾರ:** ಭಾಂಡವಲದಾರ ಕೂಲಿಕಾರರ ವಿಷಯಗಳೂ . . . ಸಾಹಿತ್ಯದಲ್ಲಿ ಪ್ರತಿಬಿಂಬಿಸುವುವು (ಪ್ರಬಂಧ. ೦). [ ಬಂಡವಾಳ + — ದಾರ$_4$ ]

**ಬಂಡವಾಳಶಾಹಿ,** ಬಂಡವಾಲಶಾಹಿ, ಬಾಂಡವಲುಶಾಹಿ, ಭಂಡವಾಳಶಾಹಿ, ಭಾಂಡವಲಶಾಹಿ (ಗು). ೧. ಐಶ್ವರ್ಯದ ಮದದಿಂದ ಕೂಡಿದ: ತನ್ನ ಹಂಗಿಗೊಳಗಾಗಲಿಲ್ಲವಲ್ಲ ಎಂದು ಅವರ "ಬಂಡವಾಳಶಾಹಿ" ಬುದ್ಧಿ ಕೆರಳಿತು (ಅವತಂ. ೦೦೦). (ನಾ). ೨. = ಬಂಡವಾಳಗಾರ : ನಮ್ಮ ದೃಷ್ಟಿಯೇನೋ ಬಂಡವಾಳಶಾಹಿಯ ಕಡೆಗೆ. ಒಲವೆಲ್ಲಾ ಅವರ ಕಡೆಗೆ (ಕತ್ತಬ. ೧೨). **ಬಂಡವಾಲಶಾಹಿ :** ೨. ಬಂಡವಾಲಶಾಹಿಯ ಜತೆ ಸಾಮ್ರಾಜ್ಯಶಾಹಿಯ ಜತೆ_ಬಂಡುಹೂಡಿದ ಸ್ವಾತಂತ್ರ್ಯಪ್ರೇಮಿ (ಹಾರುಹು. ೨೨). **ಬಾಂಡವಲುಶಾಹಿ:** ೨. ನಾವೇನು ಬಡವರ ರಕ್ತ ಹೀರುವ ಬಾಂಡವಲುಶಾಹಿಗಳೇ? (ಹುಚ್ಚುಹು. ೩೨). **ಭಂಡವಾಳಶಾಹಿ:** ೩. ಬಂಡವಾಳದ ಅಧಿಕಾರ; ಐಶ್ವರ್ಯದ ದೌಲತ್ತು: ಭಂಡವಾಳಶಾಹಿಯು ನಿರ್ನಾಮವಾಗಲಿ, ಕೆಲಸಮಾಡಿದ ಕೈಯ ತುತ್ತು ಕೆಲಸ ಮಾಡಿದವನ ಬಾಯಿಗೇ ಬೀಳಬೇಕು (ಕೈಲಾಕ. ೩೬). **ಭಾಂಡವಲಶಾಹಿ :** ೨. ಭಾಂಡವಲಶಾಹಿಗಳು ಹೊನ್ನ ಹಕ್ಕಿಯನ್ನು ಉಕ್ಕಿನ ಪಂಜರದಲ್ಲಿ ಬಂಧಿಸಿಟ್ಟರು (ದತ್ತವಾ. ೩೮). [ಬಂಡವಾಳ + ಶಾಹಿ./ಮರಾ. ಭಾಂಡವಲಶಾಹೀ ]

**ಬಂಡವಾಳಿಗ,** ಭಂಡವಾಳಿಗ (ನಾ). = ಬಂಡವಾಳಗಾರ: ಅತಿರೇಕದ ಅತಿರಿಕ್ತಮೂಲ್ಯವನ್ನು ಎತ್ತಿಹಾಕುವ ನಡವಳಿಗೆ ಬಂಡವಾಳಿಗ ದಲ್ಲಾಲಿಯಾಗಿ ಮಾರ್ಪಡುವದೇ ಈ ಬೇಸಾಯದ ಬಂಡವಾಳಗಾರಿಕೆಯ ಹೆದ್ದಾಸೆಯ ಹೆದ್ದಾರಿ (ಮಾವಾದ. ೧೪೪). **ಭಂಡವಾಳಿಗ :** ಅವರ ಆಶೆ ಆಕಾಂಕ್ಷೆಗಳೆಲ್ಲ ಭಂಡವಾಳಿಗರ ದರ್ಪದ ತುಳಿತಕ್ಕೆ ಸಿಲುಕಿ ಕಮರಿಹೋಗುತ್ತವೆ (ಕಾಲಯಾ. ೩೩). [ ಬಂಡವಾಳ + — ಇಗ ]

**ಬಂಡವಾಳು** 'ಬಂಡವಾಳ' ನೋ.

**ಬಂಡಸಾಲೆ** (ನಾ). ೧. ಮಳಿಗೆ; ಕೋಠಿ; ಉಗ್ರಾಣ: ಅವರ ಬಂಡಸಾಲೆಯಲ್ಲಿ ಹಣದ ಪುರವಣೆಯನ್ನು ಮಾತ್ರ ನಾನು ಮಾಡಿಸಿ

**ಕೊಟ್ಟೆನು** (ಖಂಡ್ಯ. ೦೬೭). ೨. ದೊಡ್ಡ ಕಟ್ಟಡ; ಮಹಲು; ಸೌಧ: ಸಂಪಿಗೆಯ ಊರಲ್ಲೇ ಭಟ್ಟರು ಎಬ್ಬಿಸಿದ 'ಬಂಡಸಾಲೆ' ಸಾಮಾನ್ಯವಾಗಿ 'ವಿಲಾಯತಿ'ಯಲ್ಲೇ ನೋಡ ಸಿಗಬೇಕು (ಕಣಾವ. ೭).

[ ಬಂಡ$_1$ + ಸಾಲೆ$_4$./ತುಳು. ಬಂಡಸಾಲೆ ]

**ಬಂಡಳಿಸು** (ಕ್ರಿ). ಹೇಳಿದುದನ್ನೇ ಪುನಃ ಹೇಳು; ಪುನರಂಕ್ತಿ ಮಾಡು : ಮುಳಿವ ತಿಳಿವ ಗಂಡರ ಪೆಂಡಿರ ನುಡಿಗಳನೆ ಬಂಡಳಿಸುವ [ಪಾಠಾಂ. ಬಂದಣಿಸುವ, ಬಂಡುಳಿಸುವ, ಬಣ್ಣಿಸುವ] ಪುರುಳಿಗಳುವಂ . . . ಕೊಟ್ಟು (ಅದಿಪು. ೮–೩೪ ವ); ಪೂಗೊಂಬಿನೊಳ್ ಪಾಯ್ದು ಬಂಡಳಿಸು[ಪಾಠಾಂ. ಬಂಡಣಿಸು, ಬಂಡುಳಿಸು, ಬಂದೆಳಸು, ಮಂಡಳಿಸು]ತ್ತಿರ್ಪ ಶುಕಾಳಿ (ಅದಿಪು. ೧೧–೯೬); ಅರಗಿಳಿವಿಂಡು ಬಂಡಳಿಪ ಸಾರಿಕೆ ಚಾವಳಿಪುನ್ನದಾಳಿ ಗಾವರಿಸುವ ಸೋಗೆ ಕೇಗುವ . . . ವಿಕಾರವಿಲ್ಲದಿರೆಯುಂ ಬನಮೊಪ್ಪಿದುದು (ಪುಷ್ಪಪು. ೦೪–೨೩).

[ಬಂಡಳ್$_0$ (ಪ್ರ ←ತಮಿ. ವಣ್ಣುಟ್ಟೈ=ಅರ್ಥವಿಲ್ಲದ ಶಬ್ದ) + –ಇಸ್ಸು$_3$]

**ಬಂಡಾಟ** (ನಾ). ಅವಮಾನ ; ಸಿಗ್ಗು : ಕೂಟಕಪಟದಿಂದ ಕುಂದ ಪೊಱಿಸಿ ಬಂಡಾಟ ಬಾಹಿರನೆಂದೆನಿಸಿ (ಕಕಶಾಂ. ೧೧–೩೪). ೨. ಕಷ್ಟಪಡು ವಿಕೆ; ಹೆಣಗಾಟ; ಒದ್ದಾಟ : ಸಮುದ್ರದ ನಂಟಸ್ತನ ಉಪ್ಪಿಗೆ ಬಂಡಾಟ (ಹುಟ್ಟಿಹ. ೬೯); ಅದೇ ಬಂಡಾಟ ಸಾರ್ ಈ ಹಳ್ಳೀಲಿ (ರಂಗಕ. ೭೩); ಬಂಡಿ ಬಂಡಾಟ ಹೇರು ಹೆಟ್ಟಾಟ ತಲೆಮೊಟ್ಟೆ ಪರಮಸುಖ (ಗಾದೆ).

[ಬಂಡು$_3$ + ಆಟ]

**ಬಂಡಾಡು$_1$** 'ಬಂಡು$_2$' ಪರಾ.

**ಬಂಡಾಡು$_2$** 'ಬಂಡು$_4$' ಪರಾ.

**ಬಂಡಾಯ** (ನಾ). (ಸರ್ಕಾರ ಮುಂತಾದ) ಆಡಳಿತದ ರೀತಿಗೆ ತಮ್ಮ ಅಸಮ್ಮತಿಯನ್ನು ಸೂಚಿಸಲು ಮಾಡುವ ಪ್ರತಿಭಟನೆ; ಕ್ರಾಂತಿ : ಭಾರತದಲ್ಲಿ ಬಂಡಾಯಕ್ಕಾಗಿ ವೀರ ಉತ್ಸಾಹಿಯೋಧರು ಬೇಕಾಗಿದ್ದಾರೆ (ಆತ್ಮಾರ್ಪ. ೦೩೩); ೧೮೫೭ರ ಬಂಡಾಯದಲ್ಲಿ ನಮ್ಮ ಅಜ್ಜನನ್ನು ಹಿಡಿದೊಯ್ದು ಗಲ್ಲಿಗೇರಿಸಿದರು (ಸ್ವಾತಿಚ. ೦೩); ಪರದೇಶಿಯರನ್ನು ಬಗ್ಗುಬಡಿಯಲು ನಮ್ಮ ಹಿರಿಯರಾದ ಸೈನಿಕರು ಬಂಡಾಯವನ್ನೇ ಹೂಡಿದ ರೆಂಬುದನ್ನು ಮರೆಯಬೇಡಿರಿ (ಹಬ್ಬಶಿ. ೦೯೯). 'ಬಂಡು$_4$' ಪರಾ.

[← ಮರಾ. ಬಂಡಾಈ, ಬಂಡಾಳ, ಬಂಡಾಳೀ./ತುಳು. ಬಂಡಾಯಿ]

**ಬಂಡಾಯಗಾರ** (ನಾ). ದಂಗೆ ಮಾಡುವವನು; ಕ್ರಾಂತಿಕಾರ : ಸರ್ಕಾರಕ್ಕೆ ವಿರೋಧವಾಗಿ ಹೂಡಿದ ಹೋರಾಟದಲ್ಲಿ ಆ ಬಂಡಾಯಗಾರರು ಪ್ರಯೋಗಿಸಿದ . . . ವಿಧಾನಗಳ ಬಗ್ಗೆ ಅವನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು (ಪುನರು. ೪೯೯).

[ಬಂಡಾಯ + – ಗಾರ (< – ಕಾಱ) ]

**ಬಂಡಾಯಸಾಹಿತಿ** (ನಾ). ಸಾಮಾಜಿಕಶೋಷಣೆಗಳ ವಿರುದ್ಧವಾಗಿ ಸಾಹಿತ್ಯಸೃಷ್ಟಿ ಮಾಡುವವನು : ಬಂಡಾಯಸಾಹಿತಿ ಸಾಮಾಜಿಕ ಸಂಬಂಧಗಳ ಹಿಂದಿರುವ ಮೋಸಗಳನ್ನು ಅಮಾನವೀಯತೆಯನ್ನು ಗುರುತಿಸಿ ಸಮಾಜವ್ಯವಸ್ಥೆಯ ವಿರುದ್ಧ ಸ್ಫೋಟಿಸುತ್ತಾನೆ (ಕವಿಕೋ. XI, ೭೯೭).

[ಬಂಡಾಯ + ಸಾಹಿತಿ]

**ಬಂಡಾಯಸಾಹಿತ್ಯ** (ನಾ). ಆಧುನಿಕ ಕನ್ನಡಸಾಹಿತ್ಯದ ಒಂದು ಪ್ರಕಾರ; ರಾಜಕೀಯ, ಸಾಮಾಜಿಕ ಘಟನೆಗಳಿಂದ ಬದುಕಿನಲ್ಲಿ ಉಂಟಾದ ಬದಲಾವಣೆಯನ್ನು ಪ್ರತಿಭಟಿಸುವ ಸಲುವಾಗಿ ಸೃಷ್ಟಿಯಾದ ಸಾಹಿತ್ಯ : ಶೋಷಣೆಯ ವಿರುದ್ಧ ಶ್ರಮಜೀವಿಗಳನ್ನು ಬಂಡಾಯಕ್ಕೆ ಅನುಗೊಳಿಸುವುದೇ ಬಂಡಾಯಸಾಹಿತ್ಯದ ಗುರಿಯಾಗಿದೆ (ಕವಿಕೋ. XI, ೭೯೭).

[ಬಂಡಾಯ + ಸಾಹಿತ್ಯ]

**ಬಂಡಾರ** 'ಭಂಡಾರ' ನೋ.

**ಬಂಡಾರಿ** 'ಭಂಡಾರಿ' ನೋ.

**ಬಂಡಾರಿಗ** 'ಭಂಡಾರಿಗ' ನೋ.

**ಬಂಡಾರಿಸು** 'ಭಂಡಾರಿಸಂ' ನೋ.

**ಬಂಡಾರೆ** 'ಬಂದಾರಿ' ನೋ.

Δ **ಬಂಡಾಱ** 'ಭಂಡಾರ' ನೋ.

**ಬಂಡಾಱಕಾಱ** (ನಾ). ಖಜಾನೆಯ ಮುಖ್ಯಾಧಿಕಾರಿ; ಖಜಾಂಚಿ : ಆಳಿಕಾಱರುಂ ಬಣ್ಡಾಱಕಾಱರುಂ(ಎಕ VIII, ಸೊರಬ. ೨೬೬–೪೦; ಸು. 1245).

[ಬಂಡಾಱ (<ಭಂಡಾರ) + – ಕಾಱ]

**ಬಂಡಿ$_1$, ಭಂಡಿ$_1$** (ನಾ). ೧. ಗಾಡಿ ; ಶಕಟ ; ಚಕ್ಕಡಿ : "ಮಾಡಿಯೆನಲ್ ಬಂ[ಪಾಠಾಂ. ಗಾ, ದಂ]ಡಿ" (ಕರ್ಣಾಪ. ೩೯) ; ಶಾಕಟಿಕ ಪರದರುಂಬೆರಸು ಬಂಡಿಗಳೊಳ್ ಪಟ್ಟಿಯುಂ ಧಾನ್ಯಮಂ ತೀವಿಕೊಂಡು ಪೊೞಲ್ಗೆ ಮಾಱಲೆಂದು ಪೋಪನ್ನೆಗಂ (ವಡ್ಡಾರಾ. ೭೬–೧೧); ಅಂತು ತನ್ನ ತಂದ ಬಂಡಿಯ ಕೋಟೆಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು (ಶಂಖಪಾ. ೩–೨೪ ವ); ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ ಕಡೆಗೀಲು ಬಂಡಿಗಾಧಾರ (ದೇವಾವ. ೦–೨); ಬಾರಿಸಿದ ಬಲು ಹೊಱೆಯ ಬಂ[ಪಾಠಾಂ. ಭಂ]ಡಿಗಳೋರಣಿಸಿದವು ಪಯಣದಲಿ (ತೊರವಾ. ೦–೭–೩). ೨. ರಥ ; ತೇರು : ಕೀಲ ಕಳೆವರು ರವಿಯ ಬಂಡಿಯ (ಸಂಭಕ. ೭–೦೬) ; ನೀನಾರ ಬಂಡಿಯಂ ಪೊಡೆದಪೆ (ಕೃಷ್ಣಾಂಭ. ೨೪–೩೯). ೩. ಗಾಲಿ ; ಚಕ್ರ : (ಕ). ಭಂಡಿ$_1$ : ೧. ಧನ್ನನುಂ ಭದ್ರನುಮೆಂಬೊರಿರ್ವರ್ ಕುಡಿಯರರೊರ್ಮೆ ನಡೆವ ಭಂಡಿಗಳ್ ಶ್ರೀನದೀ ತೀರದಿಟ್ಟೆಡೆಯೊಳೊಂದೊಂದಂ ಸೋಂಕಿ ಮುಱಯೆ (ಶಾಂತಿಪು. ೯–೯೭ ವ); ತಂಬುಲಿಗರ್ವಿಟ್ಟಾಯಂ ಭಂಡಿಗೆಲೆ ನೂಱುಹೇಱಂಗೆ ನೂಱು (ಎಇ. XX, ೦೨–೩೩; 1167). ೩. "ಶಕಟಃ [ರ]ಥಾಂಗ[ಮರ]ಸಂಜ್ಞಕಮಂತದು ಭಂಡಿ ಗಂತ್ರಿ ಕಂಬಳ ವಾಹ್ಯಂ ಪ್ರಕಟಂ ಕರ್ಣೀರಥನಾಮಕಮಕ್ಕುಂ ಪ್ರವಹಣಂ ರಥಾಂಗಂ ಚಕ್ರಂ" (ವಸ್ತುಕೋ. ೬೭–೨೯); ಭಂಡಿಗಳಂತೆ ಕಣಾವ ಕಡಗಗಳಂ ಧರಿಸಿ (ಶೌಗಂಂ. ೪೯೭–೯).

**ಬಂಡಿಯ ಈಚು** = ಗಾಡಿಯ ಮೂಕಿಯ ಮರ : "ಈಷಾ = ಬಂಡಿಯ ಈಚು" (ಕಾಶಕ್ಕ. ೩೭) **ಬಂಡಿಯ ಗಾಲಿ, ಭಂಡಿಯ ಗಾಲಿ** = ೧. ಗಾಡಿಯ ಚಕ್ರ : ಪಾಂಡವಕೌರವಬಲಮುಱಿದಿರ್ದ ಭೂಮಿಯೊಳ್ ಪಣಮಂ ಬಿತ್ತುವುದುಂ ಬಂ[ಪಾಠಾಂ. ಭಂ]ಡಿಯ ಗಾಲಿಯ ಪಣವಕ್ಕುಂ (ಸಮಪ. ೦೨–೦೪); ಇದೊಂದು ಭಂಡಿಯ ಗಾಲಿಯಂತುಟನೆರಡು ಕಲಹಂಸೆಗಳ್ ಕರ್ಚಿಕೊಂಡು ಪೋದಪ್ಪುವು (ಕಂಚತಂ. ೦೫೭–೨೦) ; **ಅಱ** ಸಱ ತೋರಗಲು ಕವಣೆಗಲು ಕಣ ಭಂಡಿಯ ಗಾಲಿ ಕೆಲ್ಲೆ (ಸೌಇಇ. XX, ೦೨೬–೩ ; 1186). ೨. (ಅಲಂ) ಸೊನ್ನೆ; ಶೂನ್ಯ : ನೀನು ಹೀಗೇ ಕಾಲ ಕಳೀತಿದ್ದರೆ ಪರೀಕ್ಷೇಲಿ ನಿನಗೆ ಬಂಡಿಯ ಗಾಲಿಯೇ ಬರೋದು (ರೂಢಿ). **ಬಂಡಿಯ ಬೋಯಿಕೆ** = ರಥವನ್ನು ನಡೆಸುವ ಊಳಿಗ, – ಸೇವೆ ; ಸಾರಥ್ಯ : ಕಮಲದಳಾಯತೇಕ್ಷಣನೊಡನೆ ಬಂಡಿಯ ಬೋಯಿಕೆಗೆ ವೀಳೆಯುವ ಪಿಡಿದೆವು (ಕುಮ್ಮಾಕ. ೫–೩೭). **ಬಂಡಿಯ ಬೋವ, ಭಂಡಿಯ ಬೋವ** = ರಥವನ್ನು ನಡೆಸುವವನು ; ಸಾರಥಿ : ಕಿರೀಟಿಯ ಮನೆಯ ಬಂಡಿಯ ಬೋವನಾದನು ವೀರನಾರಯಣ (ಕುಮ್ಮಾಉ. ೦–೪೫) ; ಒಬ್ಬ ಮಾವನ ಕೊಂದ ಒಬ್ಬ ಮೈದುನಗೆ ಭಂಡಿಯ ಬೋವನಾದ (ಪುರಂದ. ೦–೦೦೭–೧). **ಬಂಡಿಯ ಬೋವಗುಲ** = ರಥವನ್ನು ನಡೆಸುವ ಊಳಿಗ ದವನ ವಂಶ ; ಸಾರಥ್ಯವನ್ನು ಮಾಡುವವನ ಕುಲ : ದೇವಕೀಸುತ ನೇನು ಬಂಡಿಯ ಬೋವಗುಲದಲಿ ಜನಿಸಿದನೆ (ಕುಮ್ಮಾಕ. ೫–೩೪). **ಬಂಡಿಯ ರ, ಬಂಡಿಯ ಱ** = ಗಾಡಿಯ ಗಾಲಿಯ ಆಕಾರದಲ್ಲಿರುವ 'ರ' ; ಶಕಟರೇಫ (ಱ) : ಹೀಗೆ 'ಟ' ಕ್ಕೆ ರಳ ಎಂದೂ 'ಱ' ಕ್ಕೆ ಶಕಟರೇಫ

ಅಥವಾ ಬಂಡಿಯು ರ ಎಂದೂ ಹೆಸರಾಯಿತು (ಕೈಬಿ. ೯) ; ರಕಾರವನ್ನು ಕೇಶಿರಾಜ ಮತ್ತು ಇತರರು ಶಕಟರೇಫ ಎಂದು ಕರೆದಿದ್ದಾರೆ. ಮತ್ತೆ ಕೆಲವರು ಇದನ್ನು ಬಂಡಿಯು ರ (ಱ) ಎಂದೂ ಉಲ್ಲೇಖಿಸಿದ್ದಾರೆ (ದ್ರಾವಿ. ೩೩೦). **ಬಂಡಿಯ ಹುಲಿ, ಭಂಡಿಯ ಪುಲಿ** = ಬೇಟೆಗಾಗಿ ಬಂಡಿಯಲ್ಲಿ ಸಾಗಿಸುವ ಸಾಕಿ ಪಳಗಿಸಿದ ಹುಲಿ : ಹಿಡಿನಾಯಿಗಳು ಹೆಗಲ ಸಾಳುವಂ ಬಂ[ಪಾಠಾಂ. ಭಂ]ಡಿಯ ಹುಲಿ . . . ಅಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಕ. ೩-೯) ; ಭಂಡಿಯ ಪುಲಿಯಂ ಮೆಲ್ಲನೆ ಕೊಂಡಿಳಿಪುತೆ . . . ಮೃಗಮಂಡಲಮಸದರ್ಕೆ ತೋಱಿ (೧೧೬-೧-೯೯). **ಬಂಡೀಕಪ್ಪು** = (ಬೇಗನೆ ಅಳಿಸಿ ಹೋಗದ) ಗಾಡಿಯ ಚಕ್ರದ ಕೀಲೆಣ್ಣೆಯ ಮಸಿ : ಅರ್ಜ ಬರೆಸುತ್ತಿದ್ದವರೆಲ್ಲ ಆತುರಾತುರದಲ್ಲಿ ಬರೆಸಿ, ಬಂಡೀಕಪ್ಪಿನ ಹೆಬ್ಬೆಟ್ಟುಗಳನ್ನು ಎಣ್ಣೆ ಸಮೇತ ಒತ್ತಿ ಒಂದೊಂದಾಗಿ ತಂದು ಕೊಟ್ಟರು (ನನ್ನೂರು. ೦೬೦). [ದೇ.॥ ತಮಿ. ಪಣ್ಣಿ, ವಣ್ಣಿ; ಮಲ. ವಣ್ಣಿ; ತುಳು. ಬಂಡಿ, ಭಂಡಿ ; ತೆಲು. ಕೋಲಾ. ಬಂಡಿ ; ಕೋತ. ವಂಡ್ಯ; ತೊದ. ಪೊಡ್ಯ. / ಪ್ರಾ. ಭಂಡೀ, ಭಂಡಿಆ]

**ಬಂಡಿ$_2$** (ನಾ). ಸೊಂಟದ ವರೆಗೆ ಬರುವ ಒಂದು ಬಗೆಯ ಅಂಗಿ ; ಕಸೆಯಂಗಿ : ಕುಬೇರನು ತನ್ನ ಬಂಡಿಯ ಜೇಬಿನೊಳಗಿಂದ ಒಂದು ಅರಿವೆಯ ಚೀಲವನ್ನು ಹೊರಕ್ಕೆ ಎಳೆದನು (ರಕ್ತಾಕ್ಷಿ. ೬). 'ಬಗಲಬಂಡಿ' ಪರಾ. [← ಮರಾ. ಬಂಡೀ]

**ಬಂಡಿಕಾರ** 'ಬಂಡಿಕಾಱ' ನೋ.

**ಬಂಡಿಕಾಱ,** ಬಂಡಿಕಾರ, ಭಂಡಿಕಾರ, ಭಂಡಿಕಾಱ (ನಾ). ೧. ಗಾಡಿ ಹೊಡೆಯುವವನು ; ಗಾಡಿಕಾರ : ಮಿಗೆ ಮಣ್ಗಲಸದೊಡ್ಡರು ಬಂಡಿಕಾಱರು ಕಲುಕುಟಿಗರಿದ್ದೆಡೆಯ ಸೊನ್ನಲಪುರಕೆ ಪ್ರಭು ಬಂದ (ಪ್ರಭುಚಂ. ೦೩-೯). **ಬಂಡಿಕಾರ :** ೧. ಬಂಡಿಕಾರಣ್ಣನ ಬಂಡಾಟ ನೋಡಿರೊ ಬಾರುಕೋಲವನ ಬಲಗೈಲಿ (ಹಳ್ಳಿಯ. ೧೬) ೨. ದೇವಾಲಯದ ರಥದ ಮೇಲ್ವಿಚಾರಕ : (೬). **ಭಂಡಿಕಾರ :** ೧. ಪೊರಮಟ್ಟು ಕಲ್ಲುಕುಟುಕರ ಭಂಡಿಕಾರರಂ ಕರಸಿದನು (ನವಮೋ. ೨೧-೦೩) **ಭಂಡಿಕಾಱ :** ೧. ಕೆಲಸಿಗಳಿಗೆ ಕಲುಕುಟಿಗರಿಗೆ ಭಾಗಿ ೨ ಭಣ್ಡಿಕಾಱಂಗೆ ೧ (ಎಕ. II, ೩೩೦-೫ ; ಸು. 1500). ೨. ಭಂಡಿಕಾಱರ ಜೀವಿತಕ್ಕೆ ವರಹ ಗ ೧ (ಎಕ. XV. ಬೇಲೂರು. ೭೦-೪೫ ; 1485). [ಬಂಡಿ$_1$ + -ಕಾಱ]

**ಬಂಡಿಬಸವ** (ನಾ). ೧. ಹಿಂದಿನ ಕಾಲದಲ್ಲಿ ಮಕ್ಕಳ ಆಟಕ್ಕಾಗಿ ಮಾಡುತ್ತಿದ್ದ ಮರದ ಅಥವಾ ಲೋಹದ ಗಾಲಿಗಳಿರುವ ಬಸವಣ್ಣನ ವಿಗ್ರಹ : ಮಗುವು ಬಂಡಿಬಸವನನ್ನು ಎಳೆದುಕೊಂಡು ಆಡುತ್ತಾ ಇದೆ (ರೂಢಿ). ೨. ಬಸವನ ಹುಳು : ಜಿಗಣೆ, ಜೇಡ, ಚೇಳು . . . ಬಂಡಿಬಸವ, ಜರಿ (ನಮ್ಮನು. ೨೧೦). [ಬಂಡಿ$_1$ + ಬಸವ$_1$]

**ಬಂಡಿಬೋವ** (ನಾ). ಗಾಡಿಯನ್ನು ನಡೆಸುವವನು ; ಗಾಡಿಕಾರ : ಕಟ್ಟಿಗೆಕಾಱರಿಂಗೆಱೆದು ಬಂಡಿಬೋವರ್ಗೆಱೆದು ನಾಯಕಮಂಡಳೀಕರ್ಗೆ ಱೆದು (ಬಸಪು. ೫೯-೨೭). [ಬಂಡಿ$_1$ + ಬೋವ (< ಬೋಯ)]

**ಬಂಡಿಮಾಳ** (ನಾ). ಗಾಡಿಗಳನ್ನು ನಿಲ್ಲಿಸುವ ಸ್ಥಳ ; ಗಾಡಿಖಾನೆ : ತೋಪು ವಿಶಾಲವಾದ ಬಂಡಿಮಾಳಕ್ಕೆ ನೆರಳನ್ನು ಕೊಡುತ್ತಿದೆ (ಸ್ವಸ್ತಿಹೂ. ೪೪). [ಬಂಡಿ$_1$ + ಮಾಳ$_3$ (=-ಮಾಲ)]

**ಬಂಡಿವರಿಯಿಸು** (ಕ್ರಿ). ಗಾಡಿಯನ್ನು ಓಡಿಸು : ಗಾಲಿಯಿಲ್ಲದೆ ಬಂಡಿವರಿಯಿಸುವ (ಧರ್ಮಾಮೃ. ೦೨-೨೯). [ಬಂಡಿ$_1$ + ಪರಿಯಿಸು]

**ಬಂಡಿಹೋಕ** (ನಾ). ಗಾಡಿಯಲ್ಲಿ ಪ್ರಯಾಣ ಮಾಡುವವನು : ಪರಸ್ಥಳದ ಬಂಡಿಹೋಕರು ಕಾಯಿಪಲ್ಲೆ ಮಾರಾಟಗಾರರು ಇವರನ್ನುಳಿದವರು ಮನೆಯಲ್ಲಿಯೇ ಇದ್ದರು (ರಕ್ತಾಕ್ಷಿ. ೨೦೯). [ಬಂಡಿ$_1$ + ಹೋಕ (< ಪೋಕ)]

**ಬಂಡು$_1$** 'ವಂಡು' ನೋ.

**ಬಂಡು$_2$** (ನಾ). ಜೇನು ; ಮಕರಂದ ; ಮಧು : "ಬಂಡು ಮಕರಂದಂ" (ಕಬಿಕಂ. ೯೬) ; ಓಗರವೂಗಳ ಬಂಡನೆಯ್ದೆ ಪೀರುತ್ತೊಡವಂದುವಿಂದ್ರವನದಿಂ ಮಱುದುಂಬಿಗಳ್ (ಶಂಬಿಥಾ. ೧೧-೯೦) ; ಬಂಡನುಂಡು ನನೆಗೊಂಬುಗಳಿಂ ಮೊರೆದೇಟ್ಟ ಭೃಂಗರ್ಝುಂಕಾರಮೆ ಮಾಟ್ಟಿದಾರ ಬಗೆಗಂವ ಎದೆನೋತ್ಸವ ಹರ್ಷಭಾರವಂ (ಶಂಬಾವಿೂ. ೦-೦೦೬) ; ಹೊಸಕಮಳಕಟ್ಟಲದ . . . ಬಂಡಂಬ ಕೊಳ್ಳಿಸಜೊಳಗೆ ಸಿಲ್ಕಿ ಜಿನುಗುವ ಮಱಿಗೆ ಸೌರಭ್ಯರಸದ ಕುಟುಕಿತ್ತು ಸಾಗಿಸುವ ಬಾಣತಿದುಂಬಿ ಮೆಱೆದುವು (ಹರಿಕಾ. ೩-೪೦).

**ಬಂಡಾಡು$_1$** = ಜೇನು ತುಂಬಿ ಸೂಸು ; ಮಕರಂದ ಹೊರ ಹೊಮ್ಮು : ಬಂಡಾಡುವ [ಪಾಠಾಂ. ಡೋಡಿದ] ಸವಕರ್ಣಿಕಾರಮತಿಮಧುರತೆಯೊಳ್ ಕೂಡಿದ ನಿಂಬಾರಾಮಂ ನಾಡೊಳಗೊಳವೆಂಬೊಡಿನ್ನದೇವರ್ಣಿಪುದೋ (ಕಾವ್ಯಾವ. ೪೭೩) ; ಬಂಡಾಡೆ ಮೇಲೆ ಮಧುಕರಮಂಡಳಿಗಳ್ ಬಿಟ್ಟು ಮಿಳಿರ್ವ ಮದದಿಯ ಮುಡಿ ಮಾರ್ಕೊಂಡುದು ಕಾಮುರ್ಗಿಲಡಿಯೊಳ್ ತಾಂಡವಮಂ ಮೆಱೆವ ಸೋಗೆನವಿಲ ಬೆಡಂಗಂ (ವರ್ಧಮಾ. ೫-೫೫).

**ಬಂಡು$_3$** (ನಾ). ೧. ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜೆ : 'ಬಂಡು ಮಾತು', 'ಬಂಡುವೋಗು' ಪರಾ. ೨. ನಾಚಿಕೆಗೇಡಿನ ನಡುವಳಿಕೆ ; ಭಂಡತನ; ಬಂಡು ಬಕ್ಕುಡಿ ಭಂಗ ಬಂಧನ ಕನಲ್ಕೆ ಕಳಕಳ ಮೆಂಬಿವು . . . ಜನದೊಳಿಲ್ಲ (ಕಬಿಪು. ೬-೪೨). ೩. ಹೆಣಗಾಟ ; ಕಷ್ಟ ; ಬವಣೆ : ಹೆಂಡತಿಲ್ಲದ ಮನೆವಾರ್ತೆ ಅವಗಂ ಬಂಡು ಕಾಣಯ್ಯ (ಸರ್ವಜ್ಞ. ೦೬೬೩). ೪. ನಾಚಿಕೆಯಿಲ್ಲದವಳು ; ಮಾನವಿಲ್ಲದವಳು : ಬಂಡು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ ಕಂಡಲ್ಲಿ ಹರಿವ ಮಗನಾದರಾ ಮನೆಗೆ ದಂಡ ತಪ್ಪುವದೆ (ಸರ್ವಜ್ಞ. ೦೬೫೫). (ಗು). ೫. ನಾಚಿಕೆಗೇಡಿಯಾದ ; ಲಜ್ಜಾಸ್ಪದವಾದ : ಬಂಡು ಭೂತಗಳಿಲ್ಲ ಕೊಂಡೆಯಮರಿಲ್ಲ ವಂಡವಿಲ್ಲಾ ಪುರದೊಳಗೆ (ಜನರಾ. ೦-೪೩).

**ಬಂಡಾಗು** = ೧. ನಾಚಿಕೆಗೇಡಾಗು ; ಅವಮಾನ ಹೊಂದು : ಭೂಮಂಡಲೇಶ್ವರನು ಕೇಳಿದೊಡೆ ದಂಡವನೆಮ್ಮವರೊಳು ಕೊಂಬನದಱಿಂ ಬಂಡಾಗುವುದೆಮ್ಮ ಕಾರ್ಯ (ಪ್ರಭುಲಿಂ. ೩-೯೬); ನಮ್ಮಿಂದೆ ಬಂಡಾಗಿ ಹೋಗದ ವೀರರಾರೆಲವೋ (ಮೋಹತ. ೩೬-೦೦); ಕಮಲವದನೆಯರ ಪೀನಸ್ತನಂಗಳ ನೋಡಿ . . . ತಲೆಗೆದರ್ದು ಬಂಡಾದಂತೆ ಪದ್ಮಚಯಮಲರ್ದೊಪ್ಪಿರೆ (ನವಮೋ. ೦೦-೪೫). ೨. ಹೆಣಗಾಡು ; ಕಷ್ಟಕ್ಕೀಡಾಗು: ಈ ಅಂದಗಾಱ ಅಣ್ಣಗಳ ಕಂಡು ಬಂಡಾದಿರಣ್ಣಾ (ಮೋಳಿಮಾ. ೦೭-೭೭). **ಬಂಡುಮಾಡು** = ಅವಮಾನ ಮಾಡು ; ನಾಚಿಕೆಗೀಡು ಮಾಡು : ದೇವೇಂದ್ರನಿದಿರಲಿ ಮುನಿಯ ಬಂಡು ಮಾಡುವೆ [ಪಾಠಾಂ. ಭಂಡನಂ ಮಾಳ್ಪೆ] (ಹರಿಕಾ. ೩-೮); ಗಂಡನುಳ್ಳ ಹೆಂಡಿರ ಕೊಂಡು ಒಯ್ದು ಅವರ ಬಂ[ಪಾಠಾಂ. ಭಂ]ಡು ಮಾಡುವನೀ ಪುರಂದರವಿಠಲ (ಪುರಂದ. ೧-೦೦೯-೫); ಧನಸೇನಸೆಟ್ಟಿ . . . ಬಂಡು ಮಾಡಿ ಸತಿಯ ಕೊಲ್ಲದೆ ತನ್ನ ಧನವ ಧರ್ಮಕ್ಕಿತ್ತು ತಾನು ತಪವನಾಚರಿಸುವುದಕ್ಕೆ ಪೋದನು (ಭೈರಸೂ. I, ೩೭೩). [ಬಂಡ$_1$ + -ಉ$_4$]

**ಬಂಡು$_4$** (ನಾ), ೧. ಬಂಡಾಯ ; ದಂಗೆ : ಮುಂದೆ ತೀವ್ರವೇ ಜಂಗಮರ ಬಂಡು ಮುರಿಯಿತು (ಮುಂಬಯಿ. ೪-೬೦). ೨. ಅಡ್ಡಿ ; ತಡೆ : ಉದ್ದಂಡ ಶಿವಮಂತ್ರವಂ ಸ್ಮರಿಸುತಿರೆ ಮಱೆದೊಮ್ಮೆ ಬಂಡು ಬರೆ ನಾಲಿಗೆಯ ಕೊಯ್ದಿಟ್ಟ (ಪ್ರಭುಪು. ೭-೨೨೭).

**ಬಂಡಾಡು$_2$** = ಬಂಡಾಯ ಹೂಡು ; ದಂಗೆಯೇಳು : ರೂಢಿಯಲಿ ಶುಂಭಾಸುರಗೆ ಬಂಡಾಡಿವನು ಖಳ ಚಂಡನೆಂಬವ (ದೇಮಿ. ೫-೯೦). **ಬಂಡುಹೂಡು** = ದಂಗೆಯೇಳು ; ಬಂಡಾಯ ಎಬ್ಬಿಸು : ಭಾರತೀಯನು ಮರ್ಯಾದಿತವಾಗಿ ಕೆಲವರು ತಿಳಿದುಕೊಂಡ ಸಂಸ್ಕೃತಿಗೆ ಬೌದ್ಧರೂ, ಜೈನರೂ ತಂತಮ್ಮ ರೀತಿಯಲ್ಲಿ ಇದಿರುಬಿದ್ದಂತೆ ವೀರಶೈವರೂ ಸ್ವತಂತ್ರವಾಗಿ ಬಂಡು ಹೂಡಿದರು (ಕವಿಸ. ೦೩); ನೀವೆಲ್ಲರು ಕೂಡಿ ನನ್ನ

ಮೇಲೆ ಬಂಡುಹೂಡಿದರೂ ನಾನು ಈ ಮಾತು ಖಂಡಿತ ಸತ್ಯವೆಂದೇ ಹೇಳುತ್ತೇನೆ (ಗಾಳಿಗು. ೩೪). [←ಮರಾ. ಬಂಡ್, ಬಂದ್]

**ಬಂಡುಕೋರ**, ಬಂಡುಖೋರ (ನಾ). ೧. (ಸರ್ಕಾರ ಮುಂತಾದ) ಆಡಳಿತಕ್ಕೆ ವಿರೋಧವನ್ನು ವ್ಯಕ್ತಪಡಿಸುವವನು ; ದಂಗೆಯೇಳುವವನು ; ಬಂಡಾಯಗಾರ : ಹಲವಾರು ಬಂಡುಕೋರರು ಒಂದಾಗಿ ಆ ಜಮೀನ್ದಾರನ ಪುಂಡಾಟವನ್ನು ಅಡಗಿಸಿದರು (ರೂಢಿ). **ಬಂಡುಖೋರ** : ೧. ನಾರಣ್ಣನು ಬಂಡುಖೋರರ ಗುಂಪನ್ನು ಸೇರಿದ್ದನ್ನು ಕಂಡು ಅವನಿಗೆ ಸಖೇದ ಆಶ್ಚರ್ಯವಾಗಿತ್ತು (ಸವಾಜೀ. ೬೭೦). (ಗು). ೨. ಬಂಡಾಯಪ್ರವೃತ್ತಿಯು : ಅವರಲ್ಲಿ ನಿಮ್ಮಂತೆ ಉಂಡಾಡಿಗತನವಾಗಲೀ ಬಂಡುಖೋರ ಮನೋವೃತ್ತಿಯಾಗಲೀ ಇರುವುದಿಲ್ಲ (ಮಾತೃಮ. ೨೦೦). [ಬಂಡು$_4$ + — ಕೋರ್$_3$./ಮರಾ. ಬಂಡ್‌ಖೋರ್]

**ಬಂಡುಖೋರ** 'ಬಂಡುಕೋರ' ನೋ.

**ಬಂಡುಗ** (ನಾ). = ಬಂಡುಕೋರ ೧ : ನೆರೆ ಮುಳ್ಳು ತುಂಟವೆಸರ ಬಂಡುಗರೆಮ್ಮ ಹೊರೆಯೊಳಗಿರಬೇಡವೆಂದು ಎರವನಪುಷ್ಪಗಳ್ಗೊಟ್ಟಿಡಿಸೆ ಬೆಳ್ದಾಳೆಯರಲೊಪ್ಪಿದುವು ವನತಟದೆ (ಶಂಪುಪು. ೩-೯೯). [ಬಂಡು$_4$ + —ಗ$_2$]

**ಬಂಡುಗಟ್ಟು** (ಕ್ರಿ). ದಂಗೆಯೇಳು ; ಬಂಡಾಯ ಮಾಡು : ಕೆಲಬಳ್ಕೂರ್ಕಂಕಣಗವರ್ಮ್ಮರ್ಮ್ಮಲೆವದಟಿಂ ಬಣ್ಡುಗಟ್ಟಿ (ಎಕ. VIII, ಸೊರಬ. ೦೫೨-೦೭ ; 1380). [ಬಂಡು$_4$ + ಕಟ್ಟು$_{11}$]

**ಬಂಡುಗಾರ** (ನಾ). ೧. = ಬಂಡುಕೋರ ೧ : ಪೂಗಾರಗೊಲಿದ ಬಂಡುಗಾರ ಗೊಲ್ಲ (ಶಿವಾಕ್ಕ. ೦೫೫-೫) : ಪುಂಡ ಪಾಳೆಯಗಾರಿಕೆಯ ಬಂಡುಗಾರರನ್ನು ಬೆಳೆಯಿಸಿ ಕೊಡುವದು ಯಾವ ದೃಷ್ಟಿಯಿಂದಲೂ ಹಿತವಲ್ಲ (ಶಿವಾಮು. ೨೦). ೨. ಬದಲಾವಣೆಯನ್ನು ಬಯಸುವವನು ; ಕ್ರಾಂತಿಕಾರ : ಇಂದಿನ ಸಾಹಿತ್ಯದ ಬಂಡುಗಾರರೇ ನಾಳಿನ ಸಮ್ಮೇಳನದ ಅಧ್ಯಕ್ಷರಾಗುವರು (ಮುಂಗಾರು. ೦೦೭). [ಬಂಡು$_4$ + — ಗಾರ (< — ಕಾಱ)]

**ಬಂಡುಗಾರಿಕೆ** (ನಾ). ದಂಗೆಯೇಳುವ ಪ್ರವೃತ್ತಿ : ಜೀವನದ ಆರಂಭದಲ್ಲಿಯೇ ಅವನು ತನ್ನ ಸ್ವಚ್ಛಂದವೃತ್ತಿಯು, ಸ್ವತಂತ್ರಬುದ್ಧಿಯು, ಉದ್ದಂಡ ಬಂಡುಗಾರಿಕೆಯು, ಮುಂಗುರುಹುಗಳನ್ನು ತೋರಿಸದೇ ಹೋಗಲಿಲ್ಲ (ವಾವಾದ. ೦೪). [ಬಂಡುಗಾರ + —ಇಕೆ]

**ಬಂಡುಗೆಡೆ** (ಕ್ರಿ). ನಾಚಿಕೆಯಿಲ್ಲದ ಮಾತನ್ನಾಡು : ತೊಂಡನಿಕ್ಕಿ ಠವಾಳತನದಲಿ ಬಂಡುಗೆಡೆ[ಪಾಠಾಂ. ಭಂಡುಗೆಲೆ]ವುತ ಮಲುಹಣಿಯ ತಾಯ್ ಮಿಂಡನಂ ಹೊಱವಡಿಸಿ (ಬಸಪು. ೪೨-೦೯) ; ಕೆಂಡದ ಕೊಂಡವ ಮಂಡೆದೊನೆದು ಪೊಕ್ಕು ಬಂಡುಗೆಡೆವುತ ಕಲ್ಗುಡಿದು (ಚಕಸಾಂ. ೦೦-೬೪). [ಬಂಡು$_3$ + ಕೆಡೆ$_2$]

**ಬಂಡುಗೆಯ್** (ಕ್ರಿ). = ಬಂಡುಗಟ್ಟು : ನೀಂ ಕಂಡುಮಂ ಕಂಡಂತೊರೆದು ಗಂಡನಲೆದು ಬಂಡುಗೆಯ್ದು ಸಬ್ಬವಂಗೊಳವೇಟ್ಪುದು (ಚಳಿಪು. ೬-೦೫೬ ವ); ಅವನೆಮ್ಮ ನಾಡೊಳ್ ದಾಳಿಟ್ಟು ತುಱುಸೆಱೆಯೊಡನೆನ್ನಣುಗರಂ ಪಿಡಿದು ಬಂಡುಗೆಯ್ದು (ಚಳಪು. ೦೩-೯). [ಬಂಡು$_4$ + ಕೆಯ್$_1$]

**ಬಂಡುಗೆಲೆ** (ಕ್ರಿ). = ಬಂಡುಗೆಡೆ : ಕೋಡಗನಂತೆ ಕಂಡಕಂಡವರಲ್ಲಿ ಹಿಂಡಿನೊಳಗೆ ಹೊಕ್ಕು ಬಂಡುಗೆಲೆಯಲೇತಕ್ಕೋ (ಪೋಲೀಸಪು. ೦೭-೬೬) ; ಪುಂಡರೆಲ್ಲರ ಕೂಡಿಕೊಂಡು ಬಂ[ಪಾಠಾಂ. ಭಂ]ಡುಗೆಲೆವುತೆಮ್ಮ ಪವುಳಿಯ ಹೊಱಗೆ ಮುಂಕೊಂಡಾಡುತಿರ್ದನುಬ್ಬಿನೊಳು (ಶಿವಾಶಾಂ. ೩೪-೩೦) ; ಮೋಟ ಮೊಂಡರಿಗೆ ಕುರುಡ ಕುಂಟರಿಗೆ ಬಂಡುಗೆಲೆವುದು ಸಹಜ (ಭೃಂಗಸೂ. I, ೪೭). [ಬಂಡು$_3$ + ಕೆಲೆ]

**ಬಂಡುಣ್** (ಕ್ರಿ). ಜೇನನ್ನು ಕುಡಿ ; ಮಕರಂದವನ್ನು ಹೀರು : ಅಲರಂ ನೋಯಿಸದೊಯ್ಯನೊಯ್ಯನಳಿಗಳ್ ಬಂಡುಣ್ಬುವು (ಕಾಪಿಕಾ. ೩-೬೦) ; ಕೊಡುತಿರ್ಪ ರಥಾಂಗಂ ನಲಿದಾಡಿ ನರ್ತಿಪ ನವಿಲ್ ಬಂಡುಂಬ ಪೆಣ್ದುಂಬಿ (ಸುಕುಸು. ೦-೬೩) ; ಮಾಳತಿಯೊಳ್ ಬಂಡುಂಡ ಮದಾಳಿಯನಳಿಮಾಲೆ ಎಱಗಿ ಬಂಡುಣ್ಬವೊಲ್ (ಗಿರಿ. ೯-೦೫೨). [ಬಂಡು$_2$ + ಉಣ್]

**ಬಂಡುಣಿ** (ನಾ). ಹೂವಿನ ರಸವನ್ನು ಆಹಾರವಾಗಿ ಉಳ್ಳದು ; ದುಂಬಿ : "ಅಲರ್ವಕ್ಕಿ, ಬಂಡುಣಿ, ಪಱಿಮೆ . . . ಮುಯ್ಯೆರಡಡಿ—ಈ ೭ ಭ್ರಮರಂ" (ಕರಸಾ. ೩೩-೦೯೮) ; ಬಂಡುಣಿಗಳೆಱಪ ಮೈಗಂಪು ಸೊಗಸಲೊರ್ಪುಳ್ಪಲೆ ಕಣ್ಗೆಸೆದಳು (ಸೌಂದಪು. ೦೭-೩೩) ; ರಾರಾಜಿಪ ಲೋಚನ ಕೈರವದೊಳು . . . ನೃಪತಿಯು ಚಾರುನಯನಮಾತಿಲಗ್ನಂಬಡೆದುವು ಬಂಡುಣಿವಱಿಯಂತೆ (ಜಯಸಾ. ೩-೦೦) ; ಅವಳಾಡಿದ ನಾಲ್ಕಾರು ಇನಿವಾತುಗಳನ್ನು ಅವನು ಬಂಡುಣಿಯಂತೆ ಅರ್ತಿಯಿಂದ ಹೀರಿದ (ಹುಂಜಾ. ೩೭). [ಬಂಡುಣ್ + — ಇ$_3$]

**ಬಂಡುಣಿಗುರುಳ್** (ನಾ). ತುಂಬಿಯಂತೆ ಕಪ್ಪಾದ ಕೂದಲು ; ಭ್ರಮರಕುಂತಳ : ಹರಿಣಿಗಣ್ಗಳ ಬಂಡುಣಿಗುರುಳ್ಗಳ ವರಪಿಕಾಲಾಪದ . . . ಆ ಲಲನೆಯನೀಕ್ಷಿಸಿದನು (ಶ್ರೀಕಂಠ. ೯-೦೯). [ಬಂಡುಣಿ + ಕುರುಳ್$_1$]

**ಬಂಡುಣಿವೆದೆಯ** (ನಾ). ತುಂಬಿಯನ್ನು ಬಿಲ್ಲಿನ ಹೆದೆಯಾಗಿ ಹೊಂದಿರುವವನು ; ಮನ್ಮಥ : "ಇಂಗೋಲ್ವಿಲ್ಲಂ, ಬಂಡುಣಿವೆದೆಯಂ . . . ಗಿಳಿದೇರಂ— ಇವು ೧೩ ಕಾಮದೇವಂಗೆ ಪೆಸರ್" (ಕರಸಾ. ೪೭-೦೩) ; ದಿಂಡುದೊಡೆಯ ಮಿಂಡಿಯರ್ ಬಂಡುಣಿವೆದೆಯನ ದಂಡಾಳ್ಗಳೆನೆ ಪಿಂಡೆಟ್ಟಲ್ಲಿಗಲ್ಲಿಗೆ ಸಂಚರಿಸಿ (ರಾಜಶೇಕ್ಕ. ೦೨೨-೨೮). [ಬಂಡುಣಿ + ಪೆದೆ + — ಅ$_7$]

**ಬಂಡುಣಿಸು** (ನಾ). ಹೂವಿನ ಜೇನಿನ ಸೇವನೆ : ಕೆಂದಾವರೆಯ ಬಂಡುಣಿಸಿಗೆಳಸಿಯ್ತಂದಿಹ ಮದಹಂಸೆಯಂತೆ (ಶಂಪುಪು. ೯-೨೨). [ಬಂಡು$_2$ + ಉಣಿಸು$_2$]

**ಬಂಡುಬಾಳು** (ನಾ). = ಬಂಡಬಾಳು : ಆತ ತನ್ನ ಬಂಡುಬಾಳನ್ನು ನೆನೆದು ದುಃಖಿಸಿದನು (ರೂಢಿ). [ಬಂಡು$_3$ + ಬಾಳು$_2$ (< ಬಾೞ್$_2$)]

**ಬಂಡುಮಾತು** (ನಾ). ನಾಚಿಕೆಯಿಲ್ಲದ ಮಾತು ; ಲಜ್ಜಾಸ್ಪದವಾದ ನುಡಿ: ಕಂಡ ನಾರಿಗಿಚ್ಛೈಸುವ ಲಂಡಗೆ ಪುರಾಣವೇಕೆ ಬಂ[ಪಾಠಾಂ. ಭಂ]ಡುಮಾತಿನ ಕವಿಯ ಬಹುಪಾಂಡಿತ್ಯವೇತಕೆ (ಪುರಂದ. ೦-೩೦-೩). [ಬಂಡು$_3$ + ಮಾತು$_1$]

**ಬಂಡುವೋಗು** (ಕ್ರಿ). ನಾಚಿಕೆಗೆ ಈಡಾಗು ; ಲಜ್ಜೆಗೊಳಗಾಗು : ಬಿತ್ತಲ್ಲದದು ಫಲದೊಳೆಱಪಿತ್ತಂಬ ನಾಣ್ನುಡಿಯಂತೆ ತಪದಿಂದಂ ಗುಣದಿಂದಂ ಪುರದೊಳ್ ಪಲವುದಿವಸಂ ಮೆಚ್ಚಾಗಿರ್ದಲ್ಲಿಯೆ ಬಂಡುವೋದ್ಯೆ (ರವಮಾಮ್ಮ. ೬-೦೨೯). [ಬಂಡು$_3$ + ಪೋಗು$_1$ (< ಪೋ$_1$)]

**ಬಂಡುಸೋನೆ** (ನಾ). ಜೇನಿನ ಮಳೆ : ಕಣ್ಮಲರ್ಗಳಿಂ ಸುರಿಯುವ ಬಂಡುಸೋನೆಗೆಣೆಯೊಂದಿದ ಕಣ್ಬನಿ (ವ್ಯಾಸೂಪು. ೪-೩೩). [ಬಂಡು$_2$ + ಸೋನೆ$_1$]

**ಬಂಡುಳಿಕೆ ?** (ನಾ). (?) : ಕೌರ್ವಿಲ್ಲ ಪಱಿವ ಪುರ್ಬುಳಿಯ ಬಂಡುಳಿಕೆಗಳ ನಿಳಿಕೆಗೈವ ಸುಕ್ಕುಗುರುಳುಗಳೆಳದಾಡೆ (ರುಕ್ಮಾಂಗ. ೩-೦೪). [?]

**ಬಂಡೆ$_1$**, ಭಂಡೆ$_1$ (ನಾ). ದೊಡ್ಡ ಗಾತ್ರದ ಕಲ್ಲು: ಆ ಕಱೆಯವೊಳಗಣ ಬಣ್ಡೆಯ × × × ಡ ಕಂಡೇಶ್ವರದೇವರ ಅಮೃತಪಡಿ (ಎಕ. XII, ಮಧುಗಿ. ೦೦೭-೯; 1503) ; ಪ್ರವಾಹದಲ್ಲಿ ಈಜಿ ಶಕ್ತಿಗುಂದಿ ತೇಲಿಹೋಗುತ್ತಿದ್ದೆ. ಈ ದಿನ ಬಂಡೆಯೊಂದು ಸಿಕ್ಕಿತು (ರಾಜೂನ. ೦೦೦). **ಭಂಡೆ$_1$** : ಬಡಗಲು ಕಲ್ಲ ಭಣ್ಡೆಯ [ಬಟ್ಟೆ]ಯೇ ಮೇರೆ (ಸೌಇಇ. XI–ii, ೦೪೦-೩೦; 1097) ; ಬಡಗ ಯಿಶಾನ್ಯ ಭಂಡೆದ ಗಡಿ (ಎಕ. VII, ಶಿವಮೊ. ೦–೦೦೨; 1513). [ದೇ. ॥ ತೆಲು. ಬಂಡ]

**ಬಂಡ್ಶ** (ನಾ). ಶೀಲವಿಲ್ಲದವಳಂ ; ಕುಲಟೆ : ರಂಡೆಗೆ ಗಂಡನಿಲ್ಲ ಬಂಡೆಗೆ ನೀತಿಯಿಲ್ಲ (ಗಾದೆ). 'ಭಂಡ್ಶಿ' ಪರಾ. [ಸಂ. ಬಂಡಾ./ಪ್ರಾ. ಭಂಡೀ]

**ಬಂಡ್ಶ** 'ಬಂಡ್ಶ' ನೋ.

**ಬಂಡೆಕಲ್ಲು** 'ಬಂಡೆಗಲ್ಲಂ' ನೋ.

**ಬಂಡೆಗಲ್ಲು**, ಬಂಡೆಕಲ್ಲಂ (ನಾ). = ಬಂಡ್ಶ : ಕೊಪ್ಪಳದ ಹತ್ತಿರ . . . ಬಂಡೆಗಲ್ಲುಗಳ ಮೇಲೆ ಅಶೋಕನ ಶಾಸನಗಳು ಇರುತ್ತವೆಂದು ಇತ್ತೀಚೆಗೆ ತಿಳಿಯ ಬಂದಿದೆ (ಕರ್ನಾಟ. ೨) ; ಬಂಡೆಗಲ್ಲಿನ ನಿವೇಶನದಲ್ಲಿ ನೀರು ಬೇಗ ಹರಿದುಹೋಗುವುದು (ಗೃಹ. ೦೫೩). **ಬಂಡೆಕಲ್ಲು** : ಅಂಗಿ ವಸ್ತ್ರಗಳನ್ನು ನೊರೆಕಾಯಿ ಹಾಕಿ ಬಂಡೆಕಲ್ಲಿನಲ್ಲಿ ಒಗೆದಾಯಿತು (ಶ್ಯಾಮ. ೪೭). [ಬಂಡ್ಶ + ಕಲ್ಲು (<ಕಲ್)]

**ಬಂಡೆಬ್ಬಿಸು** (ಕ್ರಿ). = ಬಂಡುಗಟ್ಟು : ನಿಂದ್ಯವಾದ ಸಂಗತಿಗಳ ವಿರುದ್ಧ ಬಂಡೆಬ್ಬಿಸುವ ಧೈರ್ಯವು ನಮ್ಮ ಜನಕ್ಕೆ ಬರುವವರೆಗೆ ದೇಶದ ಉದ್ಧಾರ ವಾಗಲಾರದು (ಜ್ಯೋ. ೨೩) ; ಇಡೀ ದೇಶದ ಭಕ್ತರ ದಳವು ಬಂಡೆಬ್ಬಿಸಬಹುದು (ಕೋಪ. ೬೯).
[ಬಂಡು + ಎಬ್ಬಿಸು (< ಎಬ್ಬಿಸು)]

**ಬಂಡೇಳು**, ಬಂಟೇಳು (ಕ್ರಿ). = ಬಂಡುಗಟ್ಟು : ಬಂಡೆದ್ದು ಗಿರಿಪಟ್ಟ ನೆರೆ ಸೂರೆಹೋದಾವು (ಎಂಣ. ೦೨೩-೦). **ಬಂಟೇಳು** : ಎಂಟುಸಾವಿರ ದೈನ ಅಬ್ಬರೆನಗಿಲ್ಲ ನಾಂಟಿರುತಿಹ ಪಕ್ಷದವರು ಉಂಟು ನಿಮಗೆ ಲಕ್ಷಪಕ್ಷ ನೀವದಱಿಂದ ಬಂಟೆದ್ದಿರೆಂದನಾ ಚಕ್ರಿ (ಕರಣ. ೪೩-೨೨).
[ಬಂಡು + ಏಳು (< ಏೞ್)]

**ಬಂತಿ** 'ಪಂತಿ' ನೋ.

**ಬಂತಿಗಟ್ಟು** 'ಪಂತಿಗಟ್ಟು' ನೋ.

**ಬಂತಿದಲೆಯ** (ನಾ). ಸಾಲು ತಲೆಗಳುಳ್ಳವನು ; ದಶಕಂಠ ; ರಾವಣ : ಇಂತು ಬಂತಿದಲೆಯಂ ಚಲ್ಲಣಮನಿಟ್ಟು, ದಟ್ಟಿಯಂ ಬಿಗಿದು . . . ಪೊಱಮಡುವುದುಂ (ಅದ್ಭುತ. ೪೩-೦೭).
[ಬಂತಿ (< ಪಂತಿ) + ತಲೆ + – ಅ]

**ಬಂತಿದೇರ** 'ಪಂತಿದೇರ' ನೋ.

**ಬಂದ್** 'ಬಂದು' ನೋ.

**ಬಂದ** 'ವರ್' ಪರಾ.

**ಬಂದ** 'ಬಂದು' ನೋ.

**ಬಂದಂಬಿಡು** (ಕ್ರಿ). ಬಂಧನವನ್ನು ತೊರೆ ; ವ್ಯಾಮೋಹವನ್ನು ತ್ಯಜಿಸಂ : ಮನಸಂ ಸ್ಥಿತಿಟ್ಟು ಬಾಟಬ್ಬಾಸೆಯಿಂ ಬಂದಂಬಿಟ್ಟು ವಿಮೋಹಮಂ ಬಿಸುಟು ಕಣ್ಣಂ ಮುಚ್ಚಿ (ಧರ್ಮಾಮೃ. ೪-೬೨).
[ಬಂದ (<ಬಂದು) + ಬಿಡು]

**ಬಂದಗಾವುಂಡ** (ನಾ). ಒಬ್ಬಾತನ ಹೆಸರು: ಇದಕ್ಕೆ ಸಾಕ್ಷಿ . . . ಬಿಜ ಯಿತಗಾವುಣ್ಡನುಂ ಬನ್ದಗಾವುಣ್ಡನುಂ (ಎಪಿ. XI. ಹೊಳಲ್ಕೆ. ೩೦-೦೦; 964).
[ಬಂದ + ಗಾವುಂಡ (<ಗಾವುಂಡ)]

**ಬಂದಣಿಕೆ**, ಬಂದಣಿಗೆ, ಬಂದನಿಕೆ, ಬಂದನಿಕ್ಕಿ, ಬಂದರಿಕೆ, ಬಂದಲಿಕೆ, ಬಂದಳಿಕೆ, ಬಣತಿಗೆ, ಬತಣಿಕೆ, ಬದಣಿಕೆ, ಬದನಿಕೆ, ಬಿಂದಣಿಕೆ (ನಾ). ೧. ಬೇರೊಂದು ಸಸ್ಯವನ್ನು ಅವಲಂಬಿಸಿ ಜೀವಿಸುವ ಸಸ್ಯ ; ಪರಾವಲಂಬಿಸಸ್ಯ: ಎಲವದ ಬಂದಣಿಕೆ ಯನಿಂತಲಸದೆ ಕುಡಿಸಲ್ಕೆ(ಲ್ತೆ) ನಾಯ ವಿಷಮಳಿಗುಂ (ಕಮುದ. ೦೪-೩೩) ; ಅಶ್ವತ್ಥಮೂಲವನಾದರೂ ಅದಱ ಬಂದಣಿಕೆಯನಾದರೂ ಶುಭದಿನದಲ್ಲಿ ತಂದು ಹಾಲಲ್ಲರೆದು ಋತುಸ್ನಾತೆಯಾದ ಸ್ತ್ರೀಗೆ ಕುಡಿಯ ಕೊಡಲು ಗರ್ಭ ನಿಲ್ಲುವುದು (ವೈದ್ಯಸಾ. II. ೪೪) ; ತನ್ನಂಥ ನಿಸರ್ಗವಿರೋಧಿವ್ಯಕ್ತಿಯ ಕತ್ತಿಗೆ ಆ ಬಳ್ಳಿಯೇ ಬಂದಣಿಕೆಯಾಗಲೂ ಬಹುದು (ಪಾಕ್ಸಲ್ಸಿ. ೩೦೩). ೨. ಒಂದು ಬಗೆಯ ಪರಾವಲಂಬಿಸಸ್ಯ ; ಜೀವಂತಿಕೆ : "ಬಂದಣಿಕೆ, ಜೀವಂತಿಕೆ, ವೃಕ್ಷರುಹೆ, ವಂದೆ, ವೃಕ್ಷಾದನಿ" (ಪಾಕಶಾ. ೬). ೩. ಒಂದು ಸ್ಥಳದ ಹೆಸರು : ಬನ್ದಣಿಕೆಯ ಸತ್ಯಱರ ನಾಗಾರ್ಜ್ಜುನನ ನಾರ್ಗ್ಗ ವುಣ್ಡಿಗೆಯ (ಎಪಿ. VIII. ಸೊರಬ. ೨೩೪-೬; ೨೨೨); ಬಂದಿರುಳೊಳ್ಬಾನುವರಂ ತಂದಿಕ್ಕಿದ ಪುಷ್ಪಮಾಲೆ ನಿಮಿರ್ದುದು ಪಾದಕ್ಕೆಂದೊಡೆ ಭುವನಕ್ಕಚ್ಚರಿ ಬಂದಣಿಗೆ[ಪಾಠಾಂ. ಳಿಕೆ]ಯ ಶಾಂತಿನಾಥತೀರ್ಥಾತಿಶಯಂ (ಸಮುಕ. ೨-೫೦). **ಬಂದಣಿಗೆ** : ೧. ಲೊಕ್ಕಿಯ ಬಂದಣಿಗೆಯುಮಂ ಚಕ್ಕನೆ ಪೂಸಲಿಲ್ಲ ದಿರ್ದೊಡೆರ್ಕೆಯ ಪಾಲಂ ಪೊಕ್ಕಿರಲೆಱಿ ನಿಬಿಡಮೆನಲ್ ಸಿಕ್ಕಿದ ಮುಳ್ಳಲಗು ಪಾದದಿಂ ಪೊಱಮಡುಗುಂ (ಕಮುದ. ೨-೨೦೬). ೨. "ವರರೋಹಿಣೀ – ಬಂದಣಿಗೆ(ಕೆ)" (ಚಿತ್ರಂ. ೯೩). **ಬಂದನಿಕೆ** : ೩. ಬಲ್ಲ ಬನ್ದು ಬನ್ದನಿಕೆಯ ತೀರ್ತ್ಥದೊಳ್ಬೊಱದುದಚ್ಚರಿಯಂ (ಎಪಿ. VII. ಶಿಕಾರಿ. ೨೦೪-೨೫; 918). **ಬಂದನಿಕ್ಕಿ**: ೩. ಬನ್ದನಿಕ್ಕಿಯ ನಟ್ಟಮುಣ್ಡರ್ ತಪ್ಪೊಳೆಱಿಯೆ (ಎಪಿ. VIII, ಸೊರಬ. ೩೩೦-೨; ಸು. 960 ?). **ಬಂದರಿಕೆ**: ೨. ಬಂದರೆ; ಬಂಡಾರೆ, ಹಂಗರಿಕೆ, ಬಂದರಿಕೆ (ವೃಕ್ಷಶಿ. ೩೨-೩೦೪). **ಬಂದಲಿಕೆ** : ೧. ಗಂಡಸು ಗಳಿಸಬೇಕು. ಪೆರಸೈಟ್ (ಬಂದಲಿಕೆ)ನ ಹಾಗೆ ಬದುಕಬಾರದು (ಪದುಕ. ೨೩೦). ೩. × × × ಮಾಸ ಸುದ್ದ ಗುರು ಈ ದಿನದ ಹುಣ್ಣಿವಗೆ ಬನ್ದಲಿಕೆಯಾಗಿ ಕೊಡಕಣೆಯ ಬಡಗಿ ಸಾದೋಜನ ಕಳ್ಳರು ಶಾಗಿ ತಳಿದ್ದ್ರು ಸುರಲೋಕಪ್ರಾಪ್ತನಾದ (ಎಪಿ. VIII, ಸೊರಬ; ೦೭-೩;1371). **ಬಂದಳಿಕೆ** : ೧. ವಿಜಯನಗರದ ಪ್ರೌಢ ದೇವರಾಯನ ಕಾಲದ ನೂರೊಂದು ವಿರಕ್ತರ ತರುವಾಯ ಶರಣಸುರ ಭೂಜವನಕ್ಕೆ ಮತ್ತೆ ಬಂದಳಿಕೆ ಬಂದಿತು (ಕರಣ. ೬೦೭); ಮಾನವು ಗೆದ್ದಲು ಒಲವಿನ ವೃಕ್ಷಕೆ ಚಾಡಿಯ ಮಾತು ಬಂದಳಿಕೆ (ಕಂದ್ರಪೀ. ೦೦೨-೪೫). ೨. "ವಂದಾ – ಬಂದಳಿಕೆ" (ಚಿಕಿತ್ಸೆ. ೦೪೩). ೩. ತತುಸಮಯಲ್ಲಿ ಬಂದಳಿಕೆಗೆತ್ತಿ ನಡೆದಲ್ಲಿ (ಎಪಿ. VII. ಶಿಕಾರಿ. ೦೬೦-೫; ಸು. 1160). **ಬಣತಿಗೆ** : ೧. ಒಣಗಿದ ಮರ ಎಲೆಯಿಲ್ಲದ ಬಳ್ಳಿ ಬಣತಿಗೆ ಪುಟ್ಟಿದ ವನದಲ್ಲಿ [ಪಾಠಾಂ. ಒಣಗಿದ ಮರದಲಿ ಇಲ್ಲದ ಬಳ್ಳಿ ಬಣತಿಗೆ ಹುಟ್ಟಿದವನ ತಳ್ಳಿ] (ಕೊರಂದ. ರಾ. ೪-೦೫-೩). **ಬತಣಿಕೆ** : ೨. "ವಂದಾ, ವೃಕ್ಷಾದನಿ, ವೃಕ್ಷರುಹಾ, ಜೀವಂತಿಕಾ— ಈ ೪ ಬತಣಿಕೆ" (ಪಾಕಶಾ. ೦೦೯). **ಬದಣಿಕೆ** : ೧. ವೀಳೆಯ ದೆಲೆಯ ಬದಣಿಕೆಯು ಭರಣಿನಕ್ಷತ್ರದಲ್ಲಿ ತಂದು ಕೈಗೆ ಕಟ್ಟುವುದು (ಸಕಲ. ೦೨೦). **ಬದನಿಕೆ** : ೧. ಇನ್ನೊಂದು ವರ್ಗದ ಗಿಡಗಳು ಬದನಿಕೆಯಂಥವು (ಪಾಠಶ್ರ. I. ೩೦೩); ಗಿಡಕ್ಕಂಟಿದ ಬದನಿಕೆಯಂತೆ ಬೆಳೆಬೆಳೆದು (ಹುಳ್ಳಿ. ೩). ೨. "ಬದನಿಕೆ (ಬಂದಣಿಕೆ) – ವಂದಾಕಾ" (ಕದ್ಯಕೋ. ೨೮) ; "ಕಳುಬಳ್ಳಿ, ಅಮರಬಳ್ಳಿ, ಬದನಿಕೆ . . . ಶಾವಿಗೆಬಳ್ಳಿ" (ಸಸ್ಯಪ. ೪೩); ೪. ಒಂದು ಬಗೆಯ ಗಿಡದ ಬೇರು : ಇಟ್ಟ ಕಣ್ಣಿನ ಬೊಟ್ಟು . . . ಪಸುರಿನ ಬಟ್ಟ ಗುಪ್ಪಸ . . . ಮೆಟ್ಟಿದೆಕ್ಕಡ ತೋಳ ಬದನಿಕೆ ತೊಟ್ಟ ಮಾಂದಳಿರೆಲೆಯ ಚಲ್ಲಣ ದಿಟ್ಟಗಚ್ಚರಿದೋರೆ ಬಂದರು . . . ಶಬರಕೋಟಿಗಳು (ಅನಂತಾ. ೩-೩-೩). **ಬಿಂದಣಿಕೆ** : "ಮಾರತರುಹಮ್ಮೆನಲು ಬಿಂದಣಿಕೆ [ಪಾಠಾಂ. ಮಾರತರುತರುಹವೆನೆ ಬಂದಣಿಕೆ]ಯಕ್ಕು" (ವೆಂಗಿರಾ. ೪೩-೪೦).
[<ಸಂ. ವಂದಾಕ, ವಂದಾಕಾ, ವಂದಾಕೀ./ತುಳು. ಬಂದಣಿಗೆ, ಬಂದನಿಗೆ; ತೆಲು. ಬದನಿಕ, ವದನಿಕ]

**ಬಂದಣಿಗೆ** 'ಬಂದಣಿಕೆ' ನೋ.

**ಬಂದನಿಕೆ** 'ಬಂದಣಿಕೆ' ನೋ.

**ಬಂದನಿಕ್ಕಿ** 'ಬಂದಣಿಕೆ' ನೋ.

**ಬಂದಮಿಣಿ** (ನಾ). ಕಾಲಿಗೆ ಕಟ್ಟಿಕೊಳ್ಳುವ ಹಗ್ಗ : "ಬಂದಮಿಣಿ– ಈಳಿಗರ ಈಚಲಗಿಡ ಏರುವ ಸರಹಗ್ಗ" (ಜಾನಪಕೋ. ೨೦).
[ಬಂದ(<ಬಂದು) + ಮಿಣಿ (<ಮಿೞ್ಪಿ)]

**ಬಂದರಿ** 'ಬಂದಾರಿ' ನೋ.

**ಬಂದರಿಕೆ** 'ಬಂದಣಿಕೆ' ನೋ.

**ಬಂದರು** (ನಾ). ಕರಾವಳಿಯಲ್ಲಿ ಹಡಗಿನಿಂದ ವಸ್ತುಗಳನ್ನು ಇಳಿಸುವ ಹಾಗೂ ಹಡಗಿಗೆ ತುಂಬುವ ಸ್ಥಳ; ಹಡಗುನಿಲ್ದಾಣ ; **ರೇವು** : ಹಡಗುಗಳು ನಿಲ್ಲುವುದಕ್ಕೆ ಬೊಂಬಾಯಿ ಬಳಿಯಲ್ಲಿರುವಷ್ಟು ಅನುಕೂಲವಾದ ಮತ್ತು ವಿಸ್ತಾರವಾದ ಬಂದರು ಇಂಡಿಯಾದಲ್ಲಿ ಎಲ್ಲಿಯೂ ಇಲ್ಲ (ಕೂಗಿ.೬೨); ಪರವೂರುಗಳಿಂದ ಬಂದ ಮಂಜಿಗಳು ಊರ ಬಂದರಿನಲ್ಲಿ ತಂಗುವುದು ಸ್ವಾಭಾವಿಕ (ಕಾಹುಕ್ತ.೩೬).
[←ಪಾರ., ಹಿಂ. ಮರಾ. ಬಂದರ್]

**ಬಂದರೆ** 'ಬಂದಾರಿ' ನೋ.

**ಬಂದರಿಕೆ** 'ಬಂದಣಿಕೆ' ನೋ.

**ಬಂದಳ** (ನಾ). ಅಗಲಬಾಯಿಯ ಪಾತ್ರೆ : ಬಂದಳ ಸೋರೆ ಕರಗ ಹರವಿಯು ಮೊಗೆ ಬಿಂದಿಗೆ ಗಡಿಗೆ ಗುಡಾಣ (ಅಷಯಾ. ೩-೦೩೨).
[←ತೆಲು. ಬಂದಳ, ಬಂದಲ, ಬಂದಡ]

**ಬಂದಳಿಕೆ** 'ಬಂದಣಿಕೆ' ನೋ.

**ಬಂದಾ** (ನಾ). ಚಿಲ್ಲರೆಯಲ್ಲದುದು : ಈ ಚಿಲ್ಲರೆ ಕೊಟ್ಟು ಬಂದಾ ತೆಗೆದುಕೊಂಡು ಬಾ (ರೂಢಿ). [←ಪಾರ. ಬಂದ್ ; ಮರಾ. ಬಂದಾ]

**ಬಂದಾರಿ, ಬಂಡಾರೆ, ಬಂದರಿ, ಬಂದರೆ, ಬಂದುರೆ** (ನಾ). ೧. ಒಂದು ಬಗೆಯ ಮರ : ಬೆಲ್ಲವತ ಬಂದಾರಿ ಸಾವೇರಿಯಿಂ ತಡಸು . . . ತಾಟಿ ಬೋರೆಗಳೆಸೆದವು (ಶಂಪವು. ೦೩-೦೩). **ಬಂಡಾರೆ:** ೨. ಒಂದು ಬಗೆಯ ಗಿಡ : ಬಂದರೆ, ಬಂಡಾರೆ, ಹಂಗರಿಕೆ, ಬಂದರಿಕೆ (ವೃಶಿ. ೩೨-೬೦೬). **ಬಂದರಿ :** ೨. ಅಲ್ಲಿಂದಂ ಮೂಡಲು ಬಂದರಿಗಿಡುವಿನ ಹಿಟ್ಟುಗಲ್ಲು ಬಂಡೆ (ಶಾಇ. IX-ii, ೩೩೩-೨೯; 1531). **ಬಂದರೆ :** ೨. 'ಬಂದಾರೆ' ಉಲ್ಲೇಖದ 'ಮೈಶಿಗಿ. ೩೨-೬೦೮' ಪ್ರಯೋಗವನ್ನು ನೋಡಿ. **ಬಂದುರೆ :** ೨. (ವೃಶಿ. ೬೦-೧೨೦೩).
[←ತೆಲು. ಬಂದಾರು, ಬಂಡಾರು. / ಮರಾ. ಬಂದಾಟೀ]

**ಬಂದಿ**[1] (ನಾ). ೧. ಸೆರೆ; ಬಂಧನ; ಕಟ್ಟು : ಎನಗಿಂದಿಂಗಾಱುತಿಂಗಳ್ ಸಮನಿಸಿದವುದಿಲ್ಲಲ್ಲಿಯುಂ ಬಂದಿಮಂಚಲ್ (ಶಾಂತಿಪು. ೬-೦೯); ಅಗ್ಗಳದ ಬಾಣದ ಬಂದಿಯಲಿ ಸಿಲುಕಿತ್ತು ರಿಪುಸೇನೆ (ಕುವ್ಯಾದ್ರೋ. ೦೯-೩೩) ; ರಾಘವಂ . . . ದೇವರ್ಕಳ ಬಂದಿಯಂ ಬಿಡಿಸಿ . . . ಅರಸುಗೆಯ್ಯುತಿರ್ದಂ (ರಾಮಾಶ್ವ. ೦೭-೦೯). ೨. ಸೆರೆಮನೆ; ಬಂದೀಖಾನೆ; ಜೈಲು : ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ ಬಂದಿಕಾರಾ ಶ್ರಾವಣಾ (ಗಂಗಾಕ. ೩೭-೨). ೩. ಹತೋಟಿ; ಹಿಡಿತ ; ಅಂಕೆ : ತಪವ ಮಾಡಿ ವಿಕಾರಿಗಳು ಬ್ರಹ್ಮಂಗೆ ಬಂದಿಯನಿಕ್ಕಿದರು ಬಳಿಕ (ಕುವ್ಯಾಕ. ೬-೦೩); ಮಾಯಾಗುಣವಿಕಾರದ ಬಂದಿಯಲಿ ತಲೆ ಸಿಲುಕಿ ನರಕದಲಾಳುತಿಹರು (ಶಿಭಾಗ. ೪-೪-೨೩). ೪. ಸೆರೆ ಸಿಕ್ಕಿದ ವ್ಯಕ್ತಿ; ಸೆರೆಯಾಳು : ಭೂನಾಯಕಂ ಬಿಡಿಸೆ ಬಿಟ್ಟ ಬಹು ಬಂದಿಯಂ ಕರವೆ . . . ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಪು.೪-೭ ರಗಳೆ); ಬಂದಿಯ ಹಿಡಿದಾತನ ತಂದೆಯ ತಲೆ ಹೋಹುದೆಂದು ಪಿತರಾಚಾರವೆಂದು ವೃಥಾ ಸಾವನೇ (ಶರಶ. ೦೬೩-೭೭೩); ನೀನು ಇಲ್ಲಿ ಬಂದಿ ಎಂಬುದನ್ನು ಅರಿತಿರುವಿಯಾ ? (ರಾಂಚ. ೯೩). ೫. ಸೆರೆಹಿಡಿಯುವವನು : "ಪ್ರಗ್ರಹಃ, ಗ್ರಾಹಕಃ, ವಂದೀ – ಈ ೩ ಬಂದಿ" (ಹಲಾಯು. ೦೨೩-೩೪). ೬. ತಡೆ ; ಅಡ್ಡಿ ; ಪ್ರತಿಬಂಧ : (೯). ೭. ಕೊಳ್ಳೆ; ಲೂಟಿ;. ಸೂರೆ : ಅಳಿಗಳ ದಳವುಳಂ ಬಸಂತನ ಬಂದಿ ಬಾಲಚೂತನ ಭಯಂ ಮಳಯಾನಿಳನ ಗಾಸಿ (ಗಿರಿ. ೪-೦೦೯ ವ) ; ಕಳವು ಹುಸಿ ಹಾದರ ವಿರೋಧ ಸ್ಖಲಿತವಾಡಿ ಬಂದಿ ವಳದುಳ ಬೆಳುಗವತೆಯನ್ಯಾಯ . . . ಅಡಗಿದವೀ ಯುಧಿಷ್ಠಿರ ನೃಪನ ರಾಜ್ಯದಲಿ (ಕುವ್ಯಾಸ. ೬-೦೦) ; ಕಿಸುರು ಗಾವಳಿ ಬಂದಿ ಗಳಹತನ ಮಾವಿವೇಕಮುಸಿರಲೇನಾ ಚೆನ್ನಬಸವನಿಹ ರಾಜ್ಯದೊಳ್ ವಿಸುಕಿವೇವಣ್ಣಿಸುವೆನು (ಚಬಪು. ೬-೪೦). ೮. ತೋಳಿಗೆ ಧರಿಸುವ ಒಂದು ಬಗೆಯ ಆಭರಣ; ವಂಕಿ : ನವರತ್ನದ ರವೆಯಾದ ಬಂದಿ ವಿರಾಜಿಸುತಿರ್ಪುದಪ್ಪಿಯುಗಚೆಯ ತೋಳಿಂ (ಗಿರಿ. ೩-೬೩); ಕಡಗ ಕಂಕಣ ಸೂಡಗ ಹೊನ್ನ ಬಳೆ ಬಂದಿ ಖಡೆಯ (ಕುರಾಶಾಂ. ೦-೦೦೬); ಇರೋದು ನಾಗರ ಕುಚ್ಚು, ಈ ಬಂದಿ (ಕುಬಪು. ೩೮). ೯. ಕತ್ತಿನಲ್ಲಿ ಧರಿಸುವ ಒಂದು ಬಗೆಯ ಸರ : ನಾ ತೂಗಿ ಬಾಗಿ ನೀರು ಮೊಗೆದೆ ಮಾವಯ್ಯ ಕೊಂಡಿಸಮೊದು ಬಂದಿ ಬಿತ್ತು ಘಾವಯ್ಯ (ಹಳ್ಳಿಯ. ೦೯೪); ಕತ್ತಿನಲ್ಲಿ ಅಡ್ಡಿಕೆ, ಅಸಲಿ, ಬಂದಿ, ಜೋಮಾಲೆ (ಮೃ. ೪೦). [ಸಂ. ಬಂದಿ, ಬಂದೀ]

**ಬಂದಿ**[2] (ನಾ). ೧. ಹೊಗಳುಭಟ್ಟ; ಸ್ತುತಿಪಾಠಕ : "ಬಂದಿ–ವಂದಿನ್ = ಸ್ತುತಿಪಾಠಕ" (ಕಬ್ಬಕೋ. ೨೯). ೨. **ಹೊಗಳಿಕೆ ; ಕೊಂಡಾಟ :** ಅಗ್ಗಳಿಕೆ ಮುಳಿಸು ಮುಳದಲೆ ಮೋಡಿ ಬಂದಿ ಭಾರಣೆ ಬಿಂಕ ಬೆಸೆ ಚಮತ್ಕಾರಂಗಳಿಂದೆ ಸಮವಾಗೆ ಕೈದೋಱಿದಂ ವೃಷಕೇತು ಬಭ್ರುವಾಹನನ ಮೇಲೆ (ಜೈಭಾ. ೨೩-೦೩). 'ವಂದಿ'[1] ಪರಾ.
[ಸಂ. ಬಂದಿನ್, ವಂದಿನ್]

**ಬಂದಿಕಾರ** 'ಬಂದಿಗಾಱ' ನೋ.

**ಬಂದಿಕಾಱ** 'ಬಂದಿಗಾಱ' ನೋ.

**ಬಂದಿಕಾಱತನ** (ನಾ). ಬಂಧನದಲ್ಲಿಡುವ ಗುಣ : ಕೊಂದು ಕುಟ್ಟಿ ದಂಡವ ತಕೊಳ್ಳುಂಬುವಂಗೆ ಅದು ಬಂದಿಕಾಱತನವೋ ಕೃಪೆಯೋ ಇದ ಬಂದವ ತಿಳಿಯಬೇಕು (ಮೋಣಿಮಾ. ೦೩೬-೩೦೬).
[ಬಂದಿಕಾಱ (<ಬಂದಿಗಾಱ) + – ತನ]

**ಬಂದಿಕೋಲು** 'ಬಂದಿಗೋಲ್' ನೋ.

**ಬಂದಿಖಾನ** 'ಬಂದೀಖಾನೆ' ನೋ.

**ಬಂದಿಖಾನೆ** 'ಬಂದೀಖಾನೆ' ನೋ.

**ಬಂದಿಗಟ್ಟಿಸು** (ಕ್ರಿ). ತಾಳಿಯಿರುವ ಬಂದಿಯನ್ನು ಕೊರಳಿಗೆ ಕಟ್ಟುವಂತೆ ಮಾಡು ; ಮದುವೆಮಾಡು : ಇಲ್ಲಿಗಾಪ್ತರನಟ್ಟಿ ಬಂದಿಗಟ್ಟಿಸನು ತನ್ನಲ್ಲಿಗೆ ಬರಲೆಂಬಸಮ್ಮ ಇಲ್ಲಿ ತನ್ನಂಗಲವೆಸಗಿದರದೆ ಸಾಕು ಸಲ್ಲೀಲೆಯೊಳಗೀವೆನೆಂದ (ಧರ್ಮ. ೩೭-೩೮). [ಬಂದಿ[1] + ಕಟ್ಟಿಸು]

**ಬಂದಿಗಟ್ಟು** (ಕ್ರಿ). ೧. ತಾಳಿಯಿರುವ ಬಂದಿಯನ್ನು ಕೊರಳಿಗೆ ಕಟ್ಟು : ಮದುವೆಯಾಗು : ಕರಮೆಸೆವ ಸಾಕೇತನಗರದ ದೊರೆ ಸುರಥನಿಗೆ ವಜ್ರಲೇಖೆಗೆ ನೆಱೆ ಜನಿಸಿಯೆ ಸನತ್ಕುಮಾರಗೆ ಬಂದಿಗಟ್ಟಿರ್ದ ತರುಣಿ ತಾನು ಸುನಂದೆ (ಶಶಕು. ೭-೦೩). ೨. ಮದುವೆಯನ್ನು ಮಾಡಿಸು : ಇವಳಿವನಿಗೆ ತಕ್ಕವಳಿವನಿವಳಿಗೆ ವಿವರಿಸೆ ತಕ್ಕವನೆಂದು ತವೆ ಪೂಗೊಳ್ಳಲೊಸೆದು ನಿನಗೆನ್ನನುತ್ಸವದೊಳು ಬಂದಿಗಟ್ಟಿದರು (ಕುರಾಶಾಂ. ೨೬-೦೦೩).
[ಬಂದಿ[1] + ಕಟ್ಟು[1]]

**ಬಂದಿಗಾವಲು** (ನಾ). ಸೆರೆಮನೆಯ ಕಾವಲು ; ಜೈಲಿನ ಕಾವಲು : ಮುಂದಣ ಮೆಯ್ಯಾಗಿಗೊಂದನ್ನು ಕಯ್ಯುದ್ದೀಸಿ ಹೊರನಡೆಯಿಸಿ, ಬಂದಿಗಾವಲರಿಗೆ ಕ್ಷೀಣಸ್ವರದಿಂದ ಬೆಸಗುಡುತ್ತಿರುವನು (ಶುಂಶ್ರಕ. ೦೨೭-೦೯).
[ಬಂದಿ[1] + ಕಾವಲು (< ಕಾವಲ್[1])]

**ಬಂದಿಗಾಱ, ಬಂದಿಕಾರ, ಬಂದಿಕಾಱ** (ನಾ). ೧. ಬಂಧಿಸುವವನು; ಸೆರೆಹಿಡಿಯುವವನು: ನೊಂದೆವಾ . . . ಲಿ ದೇವ ಸುರಕುಲಬಂದಿಗಾ[ಶಾಕಾಂ. ಕಾ] ಱನ ಕೈಯಲಕಟಾ (ಕೊರರಾ. ೦-೮-೩೩) ; ಅದೇಂ ಬೆಲೆವಡೆದತ್ತೊ ಚಿತ್ತಭವನಂದದ ಬಂದಿಗಾಱನಾ (ಶಕಂ. ೩-೭). ೨. ಸೂರೆ ಮಾಡುವವನು; ಕೊಳ್ಳೆಗಾರ: ಮುಂದುಂ ಪಿಂದುಂ ಸಂಧಿಸಿದ ಬಂದಿಗಾಱರ ಗೊಂದಣಮುಂ ನಂದಿಪ (ರಾಮಾಶ್ವ. ೪೦-೨೯). **ಬಂದಿಕಾರ :** ೩. ಜೈಲಿನ ಮೇಲಧಿಕಾರಿ : ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ ಬಂದಿಕಾರಾ ಶ್ರಾವಣಾ

(ಗಂಗಾಕ. ೩೬–೨). **ಬಂದಿಕಾಱ:** ೧. ಬಂದಿಕಾಱನಂತೆ ತೆಱಪುವಾರ್ದು ಪಿಡಿವ ಶಾಕಿನಿಯರಿಂ . . . ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಗಾವ್ಯಶಾ. ೩೨೯ ಕೂದ್ರಳ); ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ (ಶಂಕರಾ. ೬–೬೨ ಪ) ; ಬಂದು ಕಂಡರು ಮೇಲವರಾ ಕುದುರೆಯ ಬಂದಿಕಾಱನನು ಬೇಗದೊಳು (ಕುಠಾಷಾಂ. ೯–೭೯). ೨. ಸಂದ ಸುಭಟರು ಬನ್ನಿ ಸ್ವರ್ಗದ ಬಂದಿಕಾಱರು ಬನ್ನಿ (ಕುವ್ಯಾಳ. ೯–೪೦). ೩. ಕಳ್ಳ; **ತುಡುಗ:** ಕುತ್ಸಿತ ಕುಮಂತ್ರದ ಬಂದಿಕಾಱನು ಚಾಟು ಚವಳಿಗನೆಂದು ನಾ ಮುಂದಱಿಯೆ (ಶ್ರಕುಂೞ. ೬–೫೩). [ಬಂದಿ$_1$ + — ಕಾಱ]

**ಬಂದಿಗೃಹ** (ನಾ). ಸೆರೆಮನೆ ; ಕಾರಾಗೃಹ ; ಜೈಲು : ನನ್ನನ್ನು ಪತ್ತೆ ಹಚ್ಚುವ ಹಂಚಿಕೆ ನಿಮಗೆ ಸಿಗುವಂತಿದ್ದರೆ, ನೀವು ಈ ಪ್ರಕಾರದ ಬಂದಿಗೃಹ ರಕ್ಷಕನ—ಜೇಲರನ ಚಾಕರಿಗೆ ನಿಲ್ಲುತ್ತಿರಲಿಲ್ಲ (ಅಂಬಿಕೆ. ೨೯). [ಸಂ.]

**ಬಂದಿಗೆ** (ನಾ). ೧. ಆಯುಧದ ಹಿಡಿ : ಕಾವಿಲ್ಲದೆ ಕೊಡವಿಡಿವೆನೆಂಬಂತೆ ಬಂದಿಗೆಯಿಲ್ಲದೆ ಸುರಿಗಿವಿಡಿವೆನೆಂಬಂತೆ . . . ದೆಸೆಗಿಡಲ್ವೇಡ (ರವರ್ಮಾಪ್ಪ. ೯–೫೦). ೨. ಹಿಡಿಯುಳ್ಳ ಆಯುಧ,– ಕತ್ತಿ: ಮುಡಿಸಿದ ಶೇಷನ ಬಂದಿಗೆ ಮಾರಿಯ ಮಂಡೆಯ ನಡುಘಂಟೆಯ ಮೃತ್ಯುವಿನೊಳನರಮುರಿ ದೊಂಗಲ್ ಪಿಡಿದೊಣಗಲ್ಗರುಳುಳ್ಳ ಹಿಣಿಲ ಚಮರದ ಹಲಗೆಯ ಕಡುಂಗಲಿ ಕಣ್ಗೊಪ್ಪಿದನು (ಪೀರೇಶ. ೨–೬); ಮುಗಿಲ ಹರಿಗೆಗೆ ಮಾರುತನ ಬಂದಿಗೆಯ ಹೊಯ್ಲೆನೆ ನಕುಳನೆಚ್ಚಂಬುಗಳು ಕಿಡಿ ಸೂಸಿದವು (ಕುವ್ಯಾಳ. ೨೦–೦೯).

[ ? ]

**ಬಂದಿಗೆಕೋಲು** 'ಬಂದುಗೆಗೋಲು' ನೋ.

**ಬಂದಿಗೊಳ್** (ಕ್ರಿ). **ಸೆರೆಹಿಡಿ ; ಬಂಧಿಸಂ** : ಇನಿಯನ ಬಗೆಯ ತಿಳಿದು ಬಂದಿಗೊಂಬ ಸುಗುಣೆಯರಿಹವರದೊಳು ಸೂಱೆಗೊಂಬರು ಸೊಗದ ಸುಗ್ಗಿಯ (ಹರಿಬಿ. ೮–೫೦) ; ಹಸುವಂ ಬಂದಿಗೊಂಡ ಪೊಟಲ ತಳವಾಱ ರೊರ್ಮೆಗಂ ಕಟ್ಟೊಲಗದ ರಾಯನೆಡೆಗೆಯ್ತಂದು (ರಾಮಾಶ್ವ. ೦೧೦–೦೩). [ಬಂದಿ$_1$ + ಕೊಳ್$^1_1$]

**ಬಂದಿಗೊಳಿಸು** (ಕ್ರಿ). **ಸೆರೆಹಿಡಿ;** ಬಂಧಿಸು: ಸೌಂದರ್ಯಮನೆರ್ದೆಯೊಳ್ ಬಂದಿಗೊಳಿಸಿ (ಹಿಳ್ಳರೇ. ೦೧೩–೯). [ಬಂದಿಗೊಳ್ + — ಇಸು$_3$]

**ಬಂದಿಗೋಲ್,** ಬಂದಿಕೋಲು (ನಾ). ಅಂಗಸಾಧಕನು ಉಪಯೋಗಿಸುವ ದಂಡ: ಕಟ್ಟಿದ ದಟ್ಟಿ ಕೈದಳದ ಪೊಂಗಿಱುಗಟ್ಟಿಗೆ ರನ್ನ ಬಂದಿಗೋಲ್ . . . ಮನಂಗೊಳಲ್ (ಹಳಸಿ. ೯–೦೩೯). **ಬಂದಿಕೋಲು :** ಅಂದುಗೆ ಕಾಲೊಳು ಝಣಝಣರೆನುತಿರೆ ಬಂದಿಕೋಲನು ಕೈಯೊಳಾಂತು (ಜ್ಞಾನಕ. ೨–೫೨). [← ತುಳು. ಬಂದಿಕೋಲು]

**ಬಂದಿಗ್ರಹಣ** (ನಾ). ಕಳ್ಳನನ್ನು ಹಿಡಿಯುವುದು: ಬಂದಿಗ್ರಹಣ, ಬಲ್ಬಂದಿಕಾಱ (ಕಮುದ. ೨೫೮ ಪ್ರಹೋ) ; ವಸುಮತಿಗೆ ಬಲ್ಬಂದಿಕಾಱ ಬಂದಿ ಗ್ರಹಣ (ಕವ್ಯಕೈ. ೯೩). [ಸಂ.]

**ಬಂದಿನಿ** (ನಾ). ಸೆರೆಯಲ್ಲಿರುವವಳು ; ಬಂಧಿತಳಾದವಳು : ಅವಳೀಗ ಕೇವಲ ಬಂದಿನಿಯಾಗಿದ್ದಳು (ಅಂಬಿಕೆ. ೨೮). [ಸಂ. ಬಂದಿನೀ]

**ಬಂದಿವಡು** (ಕ್ರಿ). ಸೆರೆಯರಾಗಂ ; ಬಂಧನಕ್ಕೊಳಗಾಗು : ಸಿರಿಕಂಡದ ಕೋಟೆಕ್ಕೆಸೆಱೊಳ್ ಕಾಲ್ಕುಸಿದುಂ ಪಾಱುಗೆಯ್ತಕ್ಕೆ ಬಂದಿವಟ್ಟುಂ (ರಾಮಾಶ್ವ. ೨–೨೩). [ಬಂದಿ$_1$ + ಪಡು$_1$]

**ಬಂದಿವನೆ** (ನಾ). = ಬಂದಿಗೃಹ : ಮಹಿಶೂರನಾಡೊಳ್ ಬಂದಿವನೆ ಯೊಳಿರ್ಪವರ ಸೊಗಮಂ ಕಂಡು (ಅಶ್ರತಿ. ೦೦೬–೮). [ಬಂದಿ$_1$ + ಮನೆ]

**ಬಂದಿವರ್** (ಕ್ರಿ). ಬಂಧನಕ್ಕೊಳಗಾಗು; ಸೆರೆಯಾಗು: ಕೈಬಸದೊಳೊಪ್ಪಿಸಿ ತಪ್ಪದೆ ಬಂದಿವಂದುದೋ (ಹಳಸಿ. ೩–೦೦೩). [ಬಂದಿ$_1$ + ಪರ್]

**ಬಂದಿವಾನ** 'ಬಂದೀವಾನ' ನೋ.

**ಬಂದಿವಾೞ್** (ಕ್ರಿ). ಸೆರೆಯಲ್ಲಿರು ; ಬಂಧನದಲ್ಲಿ ಬಾಳು : ರಕ್ಕಸನೆರ್ಮೊಳ್ ಬಂದಿವಾೞ್ದಿನ್ನನೊಪ್ಪುಗೊಂಡನೆಂಬೊಂದು ಲೋಕಾಪ ವಾದದ ದೂಸಱಿಂ . . . ಕಳಿಪಿದನೈ (ರಾಮಾಶ್ವ. ೯೦–೨೫).

[ಬಂದಿ$_1$ + ಬಾೞ್$^1_1$]

**ಬಂದಿವಾೞ್ಗೆ** (ನಾ). ಸೆರೆಯ ಜೀವನ ; ಬಂಧನದ ಬದುಕು : ಪಂಜರ ನೊಂದು ಪಕ್ಕಿ . . . ತನ್ನ ಬಂದಿವಾೞ್ಗೆಯೊಳೆ ದಿನದಿನದ ಪಾಲ್ಪಣ್ಗಳ ನಿನಿದಿನಿದಾಗಿ ಸವಿಯುತುಂ ನಿಶ್ಚಿಂತಮಿರ್ಪಂತಿರೆ (ರಾಮಾಶ್ವ. ೭೯–೩೦).

[ಬಂದಿವಾೞ್ + — ಗೆ]

**ಬಂದಿವಿಡಿ,** ಬಂದಿಹಿಡಿ (ಕ್ರಿ). ೧. **ಸೆರೆಹಿಡಿ ;** ಬಂಧಿಸು : ಮನದಿಂ ಸೆಱೆಗೆಯ್ಗಂ ಲೋಚನದಿಂ ಬಂದಿವಿಡಿಗುವೆಂದುಂ ವನಿತಾಜನಂ (ಶಾಂತಿಪು. ೩–೦೦) ; ಅಮರ್ದು ಬಸವಣ್ಣನಂ ಬಂದಿವಿಡಿಯಲ್ಕೆಂದು ಬಱು ಮನದ ಹೊಱವಿಭೂತಿಯನಲ್ಲಿ ಶೀವಿಟ್ಟು (ಬಸರ. ೯–೯೨) ; ತನ್ನಬಲೆಯ ಬಗೆಯಂ ಬಂದಿವಿಡಿದು ಕೂಡಿದನಾ ಕಾದಲನು (ಜಯುಕಾ. ೯–೯೩). ೨. **ಕೊಳ್ಳೆಹೊಡೆ ;** ಸೂರೆ ಮಾಡು : ಕನ್ನಮನಿಕ್ಕುವ ಬಟ್ಟೆಗೊಳ್ವ ಸಂಚಳಿಸದೆ ಪೊಕ್ಕು ಬಂದಿವಿಡಿವಾಯಿಲಮೊಡ್ಡುವ ನಿನ್ನ ಗೊಡ್ಡಮಂ ತಿಳಿದವಧಾರಿಸು (ವರ್ಧಮಾ. ೬–೪೧) ; ಕಳಹೋದರೆ ಕನ್ನದುಳಿಯ ಹಿಡಿವೆ ಬಂದಿವಿಡಿವರೆ ನಿಮ್ಮಿಂದ ಮುಂದೆ ನಡೆವೆ ಮನಭೀತಿ ಮನಶಂಕೆಗೊಂಡೆ ನಾದರೆ ನಿಮ್ಮಾಣೆ (ಬಸವ. ೬೬೬). **ಬಂದಿಹಿಡಿ :** ೧. ಬಂದ ಹುಳುವ ಬಂದಿ ಹಿಡಿದು ಕೊಂದು ತಿಂಬುದು (ಏಕೋಗೀ. ೯೪–೦೬). [ಬಂದಿ$_1$ + ಪಿಡಿ$_1$]

**ಬಂದಿವಿಡಿಹ** (ನಾ). ಸೆರೆಹಿಡಿಯುವಿಕೆ ; ಬಂಧಿಸುವಿಕೆ : "ಗ್ರಾಹಕಂ ಪ್ರಗ್ರಹವೆನಲ್ಬಂದಿವಿಡಿಹವಕ್ಕು" (ಮುಂಗಂರಾ. ೦೩೬–೯೦). [ಬಂದಿ$_1$ + ಪಿಡಿಹ]

**ಬಂದಿಶಾಲೆ** (ನಾ). ಕಾರಾಗೃಹ ; ಸೆರೆಮನೆ : ಬಂದಿಶಾಲೆಯೊಳಕಟ ಶಿವಶಿವವೊಂದು ಕಡೆಯಲಿ ಖಚರ ಕಿನ್ನರರೊಂದು ಕಡೆಯಲಿ ಸಿದ್ಧ ವಿದ್ಯಾಧರ ಮಹೋರಗರು (ಕೌಶಿರಾ. ೦೦–೩೬) ; ಬೆಂದವಸುರನ ರಾಣಿವಾಸದ ಮಂದಿರಂಗಳು ಹಲವು ದೇವರ ಬಂದಿಶಾಲೆ ವಿಚಿತ್ರ ಕರಣಿಕ ಮಂತ್ರಿ ಕೇರಿಗಳು (ಕೌಶಿರಾ. ೩೨–೯). [ಸಂ. ಬಂದಿಶಾಲಾ]

**ಬಂದಿಸು$_1$** (ಕ್ರಿ). ಅಡ್ಡಬೀಳು ; ನಮಸ್ಕರಿಸು : ಪಿರಿದಪ್ಪ ಪೂಜೆಯಂ ಮಾಡಿಯರ್ಚಿಸಿ ಪೂಜಿಸಿ ಬಂದಿಸಿದೊಡೆ (ವಡ್ಡಾರಾ. ೭೯–೨೬) ; ಜಿನಚೈತ್ರ ಬ್ರಾತಮಂ ಬಂದಿಸು ಜಿನಪದಪದ್ಮಂಗಳಂ ದಿವ್ಯಮಪ್ಪರ್ಚನೆಯಿಂದಂ ಭಕ್ತಿ ಯಿಂದರ್ಚಿಸು (ಅಂಜ್ಞು. ೩–೭) ; ಚಂಡಮಾರಿ ಲೋಚನಗೋಚರತನುವಾಗಿ ಕುವರನಂ ಬಂದಿಸಿ (ಯಶೋಚ. ೪–೬೨). [< ವಂದಿಸು]

**ಬಂದಿಸು$_2$** (ಕ್ರಿ). ಸೆರೆಹಾಕು ; ಬಂಧಿಸು : ರಾಜದ್ರೋಹದೇವತೆ ಬಂದಿರುಳು ತನ್ನೆದೆಯ ಮೆಟ್ಟಿಯೆ ಬಂದಿಸುವಳದನೇನ ಪೇಳುವೆನು (ಜಲಂಶ. ೪–೫೦). [ಬಂದಿ$_1$ + — ಇಸು$_3$]

**ಬಂದಿಹಿಡಿ** 'ಬಂದಿವಿಡಿ' ನೋ.

**ಬಂದಿಹೊಗು** (ಕ್ರಿ). **ಸೆರೆಸಿಕ್ಕು :** ಬಂದಿಯಾಗು : ನಿಂದೆ ಹೊದ್ದದು ನಡೆವಳಿಗಳು . . . ಬಂದಿ ಹೊಗದಾಸಱು ವಿತಾಳಿಸಿ ನಿಂದಿರದು ನೆಲೆಗೊಳ್ಳದಾ ಜನವೃಂದದಲಿ ಕಟ್ಟಾಸೆ ದಶರಥನೃಪನ ರಾಜ್ಯದಲಿ (ಕೊರಿರಾ. ೧–೩–೨೬). [ಬಂದಿ$_1$ + ಹೊಗು (< ಪೊಗು)]

**ಬಂದೀಕರಣ** (ನಾ). ಸೆರೆ ; ಬಂಧನ : ಬಂದೀಕರಣ ಮಾಡಿದ ಯಾವ ವ್ಯಕ್ತಿಯನ್ನೂ ಬಂದೀಕರಣದ ಕಾರಣಗಳನ್ನು ಸಾಧ್ಯವಾದಷ್ಟು ಶೀಘ್ರವಾಗಿ ತಿಳಿಸದೆ ಅಭಿರಕ್ಷೆಯಲ್ಲಿ ಇಡತಕ್ಕುದಲ್ಲ (ಭಾಸಂವಿ. ೦೨). [ಸಂ.]

**ಬಂದೀಕರಿಸು** (ಕ್ರಿ). ತನ್ನ ವಶಕ್ಕೆ ತೆಗೆದುಕೊಳ್ಳು; ಸೆರೆಹಿಡಿ; ಬಂಧಿಸು; ಕೈದು ಮಾಡು : ಮಂದಹಾಸದ ಭಾಸಮಂ ಕೊಳಲು ಚಂದ್ರಿಕೆಯ ಬಂದೀಕರಿಸಿ ಬಾಣತತಿಯ ಕುಡಿನೋಟಂಗಳಂದಮಂ ಕಂಡು ಮುನಿವೃಂದ, ಮಾನಂದಮಂ ಪೊಂದಿದರು (ವೆಂಕಾರಾ. ೧–೦೩–೯).

[ಬಂದೀಕರಣ + — ಇಸು$_3$]

**ಬಂದೀಖಾನೆ**, ಬಂದಿಖಾನ, ಬಂದಿಖಾನೆ (ನಾ). ಸೆರೆಮನೆ; ಕಾರಾಗೃಹ : "ಕಾರಾ, ಬಂಧನಾಲಯಃ — ೨ ಸೆರೆಮನೆ, ಬಂದೀಖಾನೆ" (ಸಿದ್ಧಾಂತಿ. ೨೬೩); ಜಂಗಮಕ್ಕೆ ಸುಖಾಸನವನಿಕ್ಕದೆ ತಾನೆ ಗದ್ದುಗೆಯ ಮೇಲೆ ಕುಳಿತಡೆ ಬಂದೀಖಾನೆ[ಪಾಠಾಂ. ಬಂದಿಕಾನ]ಯಲ್ಲಿ ಕುಳಿತ ಸಮಾನ (ಕಪ್ಪಡ. ೯-೬); ಅವನನ್ನು ಬಂದೀಖಾನೆಗೆ ಹಾಕಿದ್ದೇವೆ (೬೮ರಯೋ. ೨೭). **ಬಂದಿಖಾನ** : ಬಿಡದುಪಚರಿಸಿ ನೇಮಿಯ ಕುಂಬಳಕಾಯನೊಡೆದು ಹುಟ್ಟಿದ ರಾಯನನು ತಡೆಹನಿಕ್ಕಿಸಿದನು ಬಂದಿಖಾನದೊಳಾ ಪೊಡವೀಶ್ವರ ಸುರುತಾಳ (ಕುಠಾಶಾಂ. ೦೭-೦೦೬). **ಬಂದಿಖಾನೆ** : ಮೋಹದ ಬಂದಿಖಾನೆಗೆ ಸಿಲುಕಿ ಕೆಡಬೇಡ (ಅವಂಠಾ. ೦-೫-೩೭); ಅವನ ಕಾಲಿಗೆ ಬೇಡಿ ಹಾಕಿಸಿ ಬಂದಿಖಾನೆಯಲ್ಲಿ ಮಡಗಿಸಿ (ರಾಜೇಂದ್ರ. ೦೨೦). [←ಪಾರ. ಬಂದೀಖಾನಹ್; ಹಿಂ. ಮರಾ. ಬಂದೀಖಾನಾ]

**ಬಂದೀವಾನ**, ಬಂದಿವಾನ (ನಾ). ಸೆರೆಯಲ್ಲಿರುವವನು ; ಕೈದಿ : "ಪ್ರಗ್ರಹಃ, ಉಪಗ್ರಹಃ. ಬಂದೀ — ೩ ಸೆರೆಮನೆಯೊಳಗಿರುವವನ ಹೆಸರುಗಳು, ಬಂದೀವಾನ" (ಸಿದ್ಧಾಂತಿ. ೨೬೩). **ಬಂದಿವಾನ** : ನೀನೀ ಸಮಯದಲ್ಲಿ ಬಾರದಿದ್ದಲ್ಲಿ ನಾನೂ ನನ್ನ ಪುತ್ರಿಯೂ ಕಳ್ಳರ ಬಂದಿವಾನರಾಗುತ್ತಿದ್ದೆವು (ಚತುಃಶೋ. ೬೮) ; ಸಂಕೋಲೆಗಳನ್ನು . . . ವಧ್ಯರಾದ ಬಂದಿವಾನರೆಲ್ಲರಿಗೂ ಹಾಕುವ ಪದ್ಧತಿಯಿದೆ (ಸೋಕ್ರಮ. ೯೯).

[← ಹಿಂ.ಮರಾ. ಬಂದೀವಾನ್]

**ಬಂದೀವಾಸ** (ನಾ). ಸೆರೆಮನೆ ವಾಸ ; ಜೈಲಿನ ವಾಸ : ಅವನ ಬಂದೀವಾಸದ ಸಮಯದಲ್ಲಿ ಅವನು ತನ್ನೊಬ್ಬ ಗೆಳೆಯನಿಗೆ ಚೀನಾ, ಹಿಂದೂಸ್ಥಾನಗಳ ವಿಚಾರವನ್ನು ಬಣ್ಣಿಸಿದ್ದನು (ಚಾಂಚ್ರ. III,೦೨೯೪). [ಸಂ.]

**ಬಂದು$_{1}$** 'ವರ್' ಪರಾ.

**ಬಂದು$_{2}$**, ಬಂದ್, ಬಂದ್$_{2}$, ಬಾಂದ್$_{1}$, ಬಾಂದು (ನಾ). ೧. ಬಂಧನ ; ಸೆರೆ : (*). ೨. ಬೇಡಿ ; ಸಂಕೋಲೆ. ೩. ಮುಚ್ಚಿದುದು : ನಿಲ್ಲಿಸಿದುದು ; ಕೊನೆಯಾದುದು : ನಂಬಿಗೆಯು ಇಲ್ಲದಂತಾಗಿ ಖಾತೆಗಳನ್ನು ಬಂದು ಇಡುವ ಪ್ರಸಂಗಗಳು ಬರಹತ್ತಿದವು (ಮುಂಬಿವಾ. ೬ ತ್ರಸ್ತಾವನೆ). ೪. ಹರತಾಳ ; ಸಂಪು ; ಮುಷ್ಕರ : ತಮ್ಮ ಬೇಡಿಕೆಗಳ ಪೂರೈಕೆಗಾಗಿ ಸದಾಕಾಲ ಯಾವುದಾದರೊಂದು ಪಂಗಡದವರು ಪದೇ ಪದೇ ಬಂದು ಆಚರಿಸಲು ಜನತೆಗೆ ಕರೆಯಿತ್ತರೆ ದೇಶದ ಪ್ರಗತಿಯಾದರೂ ಹೇಗೆ ಸಾಧ್ಯ ? (ರೂಢಿ). **ಬಂದ್** : ೩. ಆತು ಹೀಗಾರ. ಭಜನಿ ಬಂದ್ (ಪಾಥಾಂ. ೨೪) ; ಮುಂದಿನ ಕದ ಬಂದ್—ಗಲ್ಲಿ ಕದ ಖುಲ್ಲಾ (ಕಂಗಾ. ೦೫೪). **ಬಂದ್$_{2}$** : ೫. ಸಂಬಂಧ ; ಕಟ್ಟು ; ಬಾಂಧವ್ಯ : 'ಬಂದಂ ಬಿಡು' ಪರಾ. ೬. ಹೊಂದಿಸಿ ಕಟ್ಟಿದುದು: 'ನೆತ್ತಿಮಂದ' ಪರಾ. **ಬಾಂದ್$_{1}$**: ೭. ಜಮೀನಿನ ಎಲ್ಲೆಕಟ್ಟನ್ನು ಖಚಿತಗೊಳಿಸಲು ಹಾಕುವ ಕಟ್ಟೆ; ಒಡ್ಡು : (ಕೃಷಿಗೆ. II, ೫೪೬); ಬಾಂದ್ಹಾಕೋರು ಬರುತಾರಂತೆ . . . ಬಾಂದು ಎಂಬೋದು ಬಂಧನವಾಗಿದೆ (ನಾಶದ. ೦೪೩). **ಬಾಂದು** : ೭. ಒಂದು ಹೊಲದ ಮಣ್ಣು ಮತ್ತೊಂದು ಹೊಲಕ್ಕೆ ಹೋಗದ ಹಾಗೆ ಹೊಲದ ಬಾಂದಿನ ಹದ್ದು ಹಿಡಿದು . . . ಸುತ್ತಲೂ ಒಡ್ಡು ಹಾಕಿಸುವದು ಅವಶ್ಯವಾಗಿದೆ (ಕೃಷಿಶ್ರ. ೩೨); ಬೇಕಾದರೆ ಬೇರೆ ಬಾಂದು ಹಾಕಿ (ಮುಖಮೂ. ೦೫೫). ೮. ಗಡಿ; ಮೇರೆ: ಅಂದೇ ನನ್ನ ಕಾರ್ಯಕ್ಷೇತ್ರದ ಬಾಂದುಗಳನ್ನು ಗುರುತಿಸಿಕೊಂಡೆ (ಕಾಲಕ. ೦೪).

**P** ಈ ಪರ್ಯಾಯರೂಪದ ವ್ಯುತ್ಪತ್ತಿ ವಿಚಾರಣೀಯ.

ಬಂದಾಗು = ಮುಚ್ಚು : ಈ ರಸ್ತೆ ಬಂದಾದಂತೆಯೇ (ಅಚೋಲಿ. ೬೯); ಇಂದು ಅಂಗಡಿ ಬಂದಾಗಿದೆ (ರೂಢಿ). ಬಂದು **ಮಾಡು**=೧. ನಿಲ್ಲಿಸು; ತಡೆಹಾಕು : ನಿನ್ನ ಚಿತ್ರವ್ಯವಸಾಯವನ್ನು ಬಂದು ಮಾಡು ಶ್ಯಾಮಾ (ರಂಗರೂ. ೦೯೭) ; ಈ ಉಪದೇಶವನ್ನು ಬಂದು ಮಾಡಿರಿ ಸಾರ್ (ರಂಗರೂ. ೫೭). ೨. ಮುಚ್ಚು ; ಹಾಕು: ಹೋಗಿ ಬಹಳ ಬೇಗನೇ ಬಂದು ಮಾಡಿ ಬಾ (ಕೂಠಕಾ. ೫). ಬಾಂದಿನವರು = ಭೂಮಿಯನ್ನು ಅಳತೆ ಮಾಡುವವರು; ಮೋಜಣಿದಾರರು : ಬಾಂದಿನವರು ಬಂದರು ಕಾಣಣ್ಣಾ ನಾವ್ ಬಾಳೋದ್ ಹೆಂಗಣ್ಣಾ (ಪಾಕದ. ೦೩೪); ಈಗ ಬಾಂದಿನವರೊಬ್ಬರು ಆ ಮನೆಯಲ್ಲಿ ಬಾಡಿಗೆದಾರರಾಗಿ . . . ಇರುತ್ತಿದ್ದರು (ಸಮುಜೀ. ೦೨೩೨).

[← ಪಾರ. ಹಿಂ. ಬಂದ್ ; ಮರಾ. ಬಂದ್, ಬಾಂದೀ. / ಸಂ. ಬಂಧ]

**ಬಂದುಕ**, ಬೊಂದುಕ$_{2}$ (ನಾ). ೧. ಮೋಸಗಾರ; ವಂಚಕ; ಕಪಟಿ : "ಬಂದುಕನೆಮಲ್ ಚಲ್ಲವತ್ತನುಮೆನಲ್ ನಂಬಿಸಿಯೆ ತಿಂಬಾತನಕ್ಕು" (ಶಬ್ದಮಂ. ೪೭); ಊಕ ಪ್ರತ್ಯಯಕ್ಕೆ — ಕಟ್ಟುಕಂ . . . ಬಂದುಕಂ, ದಿಂಡುಕಂ (ಶಮದ. ೨೦೩ ಪ್ರಯೋ). ೨. ಉಪಾಧ್ಯಾಯಂ ; ಗುರು : "ಬಂದುಕನುಪಾಧ್ಯಾಯನಕ್ಕು" (ಕಕರ. ೭೨). **ಬೊಂದುಕ$_{2}$** : ೧. "ಬೊಂದುಕನೆಂದುಂ ಚೆಲ್ಲವತ್ತನೆಂದುಂ ನಂಬಿಸಿ ತಿಂಬವಂ" (ಕಕಾ. ೬೦-೩೩೬) ; "ನಂಬಿಸಿ ತಿಂಬವನಂ ಬುಧರೆಂಬರ್ ಬೊಂದುಕನು ಚೆಲ್ಲವತ್ತನುಮೆಂದುಂ" (ಕಬಿಕ. ೦೫೫). [?]

**ಬಂದುಕಟ್ಟು** (ನಾ). ೧. ಅಚ್ಚುಕಟ್ಟು; ಓರಣ : (*). **೨. ಜಾತಿ** ಪದ್ಧತಿ : (*). ೩. ನಿಯಮಕ್ಕೆ ಒಳಪಟ್ಟಿರುವುದು ; ಸಂಪ್ರದಾಯಬದ್ಧವಾದುದು: ಅಚ್ಚುಕಟ್ಟಾದ ಕೆಲಸ ಚೆಂದ, ಬಂದುಕಟ್ಟಾದ ಊಟ ಚೆಂದ (ಗಾದೆ). [ದೇ. ‖ತುಳು. ಬಂದುಕಟ್; ತೆಲು. ಬಂದುಕಟ್ಟು]

**ಬಂದುಗೆ** 'ಬಂದೂಕ$_{1}$' ನೋ.

**ಬಂದುಗೆಗೋಲು**, ಬಂದಿಗೆಕೋಲು (ನಾ). ೧. ಅಂಗಸಾಧಕನು ವ್ಯಾಯಾಮಕ್ಕಾಗಿ ಉಪಯೋಗಿಸುವ ಒಂದು ಬಗೆಯ ಸಾಧನ : ಹಡಪಿಗರೂಡುವೆಲೆಯ ಘಳಿಗೆಗಳಾ ಪಾಡಬಿದರೆಗಟ್ಟಿಕೊಳುತ ಬಂದುಗೆಗೋಲ ನೀಡುತ ತಿರುಹುತೆಯ್ದಿದರು (ಭರತ. ೬೩-೦೭). 'ಬಂದಿಗೋಲ್' ಪರಾ. **ಬಂದಿಗೆಕೋಲು** : ೨. = ಬಂದಿಗೆ ೩ : ಹಿಡಿ ಮಾರ್ಕೋಲನೆನ್ನೊಡನೆನುತ ತಿವಿದನು ಭೀಮ ಕುರುಪತಿಯ ಮೇಳವಿಸಿ ತೆರಡಂಕ ಬಂದಿಗೆಕೋಲ ಹೊಯ್ದಾಟದಲಿ ಬಳಿಕಾ ಕೀಲುಗದೆಗಳ ಹಿಡಿದು ತಬುಬಿದರಧಿಕರೋಷದಲಿ (ಕುವ್ಯಾಶ. ೭-೩೪).

[ ಬಂದುಗೆ$_{1}$ + ಕೋಲ್$_{1}$ ]

**ಬಂದುಗೆದುಟಿ** (ನಾ). ಬಂದುಗೆಯ ಹೂವಿನಂತೆ **ಕೆಂಪಗಿರುವ ತುಟಿ** : ಬಂದುಗೆದುಟಿ ತೊಂಡೆವಣ್ದುಟಿಯವರು ಮಂದಗಮನೆಯೊಳ್ಳಿದಿದರು (ಜೀವಂಶಾ. ೧೦-೪೭) ; ಬಂಧುಗೆದುಟಿಯ ಮಿಸುಪ ಬಡನಡುವಿನ . . . ಕುಮಾರಿಯ ರೂಪನದೇನಂ ಬಣ್ಣಿಪೆನು (ಜಯುಕಾ. ೩-೬೨).

[ಬಂದುಗೆ (< ಬಂದೂಕ$_{1}$) + ತುಟಿ]

**ಬಂದುಗೆಯರಲ್** 'ಬಂದುಗೆಯಲರ್' ನೋ.

**ಬಂದುಗೆಯಲರ್**, ಬಂದುಗೆಯರಲ್ (ನಾ). ಬಂದೂಕವೃಕ್ಷದ ಹೂವು : ಬಂದುಗೆಯಲರಂ ಸವಿವಪೊಲಿಂದಿಂದಿರನಾಮ್ರಫಲವನರಗಿ ನಲವಿಂ ಮಾಂದಳಿರಂ ಪಿಕನಿನಿಯಳ ಚೆಂದುಟಿಯಂ ಚುಂಬಿಸಿದನಿಳಾಧಿಪನಾಗಳ್ (ಉದ್ಭಟ. ೬-೦೧೨). **ಬಂದುಗೆಯರಲ್** : ಕೋಮಳೆಯ ಕನಕಕಾಂಚೀದಾಮದ ಕೆಂಬರಲ ನುಣ್ಗದಿರ್ ತಿಂಬಿರೆ ನಾಭೀಮಂಡಳಮಿಟಿಸಿದುದಭಿರಾಮತೆಯಿಂದುಳ್ಳರಲ್ದ ಬಂದುಗೆಯರಲಂ (ಚಂದ್ರಪ್ರ. ೧೦-೦೦೪) ; ಬಂದುಗೆಯರಲ ತೊಡರ್ (ಕಬ್ಬ. . . ೦೪೨).

[ಬಂದುಗೆ (<ಬಂದೂಕ$_{1}$) + ಅಲರ್$_{2}$]

**ಬಂದುಗೆವಾಯ್** (ನಾ). ಬಂದುಗೆಹೂವಿನಂತೆ **ಕೆಂಪಗಿರುವ ಬಾಯಿ** : ಬಲ್ಮೊಲೆಯ ನಳಿತೋಳ ಬಂದುಗೆವಾಯ ತೆಳ್ಗದಂಪಿನ . . . ಗಣಿಕೆಯರೆಸೆದರು (ಶಬ್ದಮಾ. ೬-೯೯) ; ಬಂದುಗೆವಾಯ್ದೆರೆದು ಬಂಧಕಿ ಇಂತೆಂದುತ್ತರಂಗೊಟ್ಟಳಾಗ (ಪ್ರಭಂಶ. ೩-೭೫). [ಬಂದುಗೆ (<ಬಂದೂಕ$_{1}$) + ಬಾಯ್]

**ಬಂದುಗೆವಾಯ್ದೆಜಿ** (ನಾ). = ಬಂದುಗೆದುಟಿ : ನಿಜಿಗುರುಳಿನ ತುಜುಗೆವೆಯ ಬಂದುಗೆವಾಯ್ದೆಜಿಯ ವಿಜುಗುವ ಕದಪಿನ ಪೆಜಿನೊಸಲಿನ ಪೆರ್ಮೊಲೆಯ ಪೆಣ್ಗಳ ತಂಡ (ಕುರಾಸಾಂ. ೩೯–೦೩).
[ಬಂದುಗೆ (<ಬಂದೂಕ$_1$) + ಬಾಯ್ದೆಜಿ$_2$]

**ಬಂದುರೆ** 'ಬಂದಾರೆ' ನೋ.

**ಬಂದೂಕ$_1$**, ಬಂದುಗೆ (ನಾ). ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ : ಕವಲ ಕೈರವ ಮೊಲ್ಲೆ ಬಂದೂಕ ಚಂಪಕಂ ಕವನೀಯವೆಸೆವ ಮಲ್ಲಿಗೆ (ಜಗೋಪು. ೩–೨೩). **ಬಂದುಗೆ** : "ಬಂಧೂಕಂ, ಬಂಧುಜೀವಂ—ಈ ೨ ಬಂದುಗೆ" (ಪಲಾಯು. ೩೩–೩೩) ; ಬಂದುಗೆಯ ಕುಸುಮರಸಮಂ . . . ಪೀರ್ವ ಷಟ್ಪದಂ ನೆನೆಯಿಸಿತೆಯ್ದೆಂದು ನಯದಿಂದೆ ಪತಿ ಸಾರ್ತಂದರುಣಾಧರಮನೀಂಟುವುದನಂಗನೆಯಾ (ಪಾರ್ಶ್ವಪು. ೯–೬೮) ; ಕಣಗಿಲೆಯ ಬಂದುಗೆಯ ಕಕ್ಕೆಯ ಸಣಬ ಸರಿಸದ ಕುಸುಮದಲಿ ರಿವುಗಣಭಯಂಕರನರ್ಚಿಸಿದನಂಧಾಸುರಾಂತಕನ (ಕುಮ್ಮಾ. ೬–೯೬). [< ಸಂ. ಬಂಧೂಕ]

**ಬಂದೂಕ$_2$** 'ಬಂದೂಕು' ನೋ.

**ಬಂದೂಕು**, ಬಂದೂಕ$_2$, ಬಂದೂಖು (ನಾ). ಮದ್ದಿನ ಸಹಾಯದಿಂದ ಗುಂಡು ಹಾರಿಸುವ ಸಾಧನ ; ತುಪಾಕಿ ; ಕೋವಿ : ಬಂದೂಕಿನ ಮುಂದೆ ಯಾವ ಧೈರ್ಯ ನಿಂತೀತು! (ಹಮ್ಮಿರ. ೦೬೨); ಬಂದೂಕಿನ ತೋಟವನ್ನು ಅಮುಕುತ್ತಲೇ ಗುಂಡು ಹಾರುತ್ತದೆ (ಜೀವಾತ್ಮ. ೦೯೬). **ಬಂದೂಕ$_2$** : ಕಲ್ಲಿನ ಏಟಿಗೆ ಸಿಕ್ಕಿದವರು ಮೇಲಿಂದ ಬಿದ್ದ ಬಂದೂಕದ ಏಟಿಗೆ ಸಿಕ್ಕಿ ಸತ್ತರು (ಶಂಕಿಮ. ೨೨೪); ಈ ಅಂಬಾರಿಗಳಲ್ಲಿ ನಾಲ್ಕು ಜನ ಉದ್ದನೆಯ ಬಂದೂಕಗಳನ್ನು ಹಿಡಿದು ಕುಳಿತಿದ್ದರು (ಕ್ರಪಾಇ. II, ೦೬೭). **ಬಂದೂಖು** : ಅಂತಹ ಸಂದರ್ಭಗಳಲ್ಲಿ ಬಂದೂಖು ವಗೈರೆ ಆಯುಧಗಳನ್ನು ಉಪಯೋಗಿಸುವ ಸಂಭವ ಬಂದರೂ ಸಾಧ್ಯವಾದಷ್ಟು ಮಟ್ಟಿಗೂ ಉಪಯೋಗಿಸಿ (ಗ್ರಾಪೂಕಿ. ೫೦).
[← ಅರ. ಪಾರ. ಹಿಂ. ಮರಾ. ಬಂದೂಕ್]

**ಬಂದೂಖು** 'ಬಂದೂಕು' ನೋ.

**ಬಂದೋಬಸ್ತ್** 'ಬಂದೋಬಸ್ತು' ನೋ.

**ಬಂದೋಬಸ್ತಿ** 'ಬಂದೋಬಸ್ತು' ನೋ.

**ಬಂದೋಬಸ್ತು**, ಬಂದೋಬಸ್ತ್, ಬಂದೋಬಸ್ತಿ (ನಾ). ೧. ಸರಿಯಾದ ವ್ಯವಸ್ಥೆ ; ಅಚ್ಚುಕಟ್ಟಾದ ಏರ್ಪಾಟು : ಬಂದೋಬಸ್ತುಗಳೆಲ್ಲವೂ ಲೀಲಾಜಾಲವಾಗಿ ನಡೆದುಕೊಂಡು ಹೋಗುವುವು (ಧೂಪಾತಿ. ೦೨೨). ೨. ರಕ್ಷಣೆ ; ಭದ್ರತೆ : ಕೆಲವರನ್ನು ಮಾತ್ರ ಒಳಗಡಿಯ ಬಂದೋಬಸ್ತಿಗೋಸ್ಕರ ಅವಶ್ಯಕವಾದ ಸ್ಥಳಗಳಲ್ಲಿ ಇರಿಸಿ (ಮಕಾಶಂ. II, ೦೫); ಅಲ್ಲಲ್ಲಿ ಬೇಕಾದಷ್ಟು ಮಂದಿ ಇಟ್ಟು ಬಂದೋಬಸ್ತು ಮಾಡಿಸಿ (ರಾಜೇಂದ್ರ. ೩): ಅವಳನ್ನು ನೀನು ಗಿಣಿಯಂತೆ ಮನೆಯೊಳಗೇ ಬಂದೋಬಸ್ತಿನಲ್ಲಿ ಇಟ್ಟಿರುವೆಯಾ ? (ಕಕ್ತರೂ. ೬೯). **ಬಂದೋಬಸ್ತ್** : ೧. 'ಬಂದೋಬಸ್ತ್' ಈ ಪದವು ನನಗೆ ಅತ್ಯಂತಪ್ರಿಯ (ಧೂಪಾತಿ. ೦೨೨). **ಬಂದೋಬಸ್ತಿ** : ೨. ಇದರ ಬಂದೋಬಸ್ತಿಯ ಬಗ್ಗೆ ತಮ್ಮ ಸನ್ನಿಧಿಗೆ ಬಂದಿರುವೆವು (ಕೃಪಿಕ್ರ. ೨೦).

**ಬಂದೋಬಸ್ತು ಮಾಡು** = ಭದ್ರಮಾಡು ; ಜೋಪಾನಗೊಳಿಸು : ಒಳಕ್ಕೆ ಬಾರದಂತೆ ಕೋಟೇ ಬಾಗಿಲಲ್ಲಿ ತನ್ನ ಕಡೇ ಜನಗಳನ್ನು ಇಟ್ಟು ಬಂದೋಬಸ್ತುಮಾಡಿ (ಶಾಮಕಂ. ೦೬೦); ತಪ್ಪಿದ್ದವರನ್ನು ಶಿಕ್ಷಿಸಿ ಬಂದೋಬಸ್ತು ಮಾಡುವುದು (ಮೂಲಾಪ. ೯೭). [←ಪಾರ. ಬಂದುಬಸ್ತ್, ಹಿಂ. ಬಂದೋಬಸ್ತ್ ; ಮರಾ. ಬಂದೋಬಸ್ತ, ಬಂದೋಬಸ್ತೀ]

**ಬಂದ್ರು** (ನಾ). ಒಂದು ಬಗೆಯ ಬಟ್ಟೆ (?) : ಜರತರದ ವಸ್ತ್ರ ಪಾಗಂಗಿ ಕಿಂಖಾಪು ಮೇಲ್ ಥರಥರದ ವೈಠಣೆಯ ಚಾದ್ರ ಬೂರಾನ್ಸು ರಿಯ ಪರಿಪರಿಯ ಬಂದ್ರುಗಳ ವಸ್ತದ ಖಿಲತ್ತುಗಳು (ಕೃಕ್ಷರಿ. ೩–೩೬). [?]

**ಬಂಧ** (ನಾ). ೧. ಕಟ್ಟು ; ಬಂಧನ. ೨. ಹಗ್ಗ ; ಪಾಶ : "ಹಗ್ಗವಾ ಬಂಧಂ" (ಶಬ್ದಮ. ೦೦೯–೨). ೩. ಸಂಕೋಲೆ ; ಸರಪಣಿ. ೪. ಗಾಯಂದ ಪಟ್ಟಿ. ೫. ಅಡವು ; ಒತ್ತೆ. ೬. ಸೆರೆ ಹಿಡಿಯುವುದು ; ಬಂಧಿಸುವುದು. ೭. ಸೇರಿಸುವುದು; ಕೂಡಿಸುವುದು. ೮. ಕೂಡುವುದು ; ಸೇರುವಿಕೆ ; ಯೋಗ. ೯. ಕೂಡಿಸಿದುದು ; ಜೋಡಣೆ : ಅಂತು ಸಮುದ್ರಂ ಬಹಿತ್ರಂ ಬಿದಿಜುವಂದು ತಿಟ್ಟನೆ ತಿಜಿದು . . . ಕೂವಕಂಭಂ ಮುಜಿಯೆ ಬಂಧಂ ಬಿರಿಯೆ . . . ನಾವಿಕಾಜನಮೆರ್ದೆಗೆಟ್ಟು (ಜಂಪಂ. ೪–೦೯೪). ೧೦. ಅಳ್ಳಕವಲ್ಲದುದು ; ಗಟ್ಟಿ ; ಮಂದ : ತುಜುವೆಯ ಬೇರನಿಕ್ಕಿ ತಜುಪೆರ್ಮೆಯ ವಾಲುಮಮರ್ಥಮಪ್ಪಿನಂ ಪಜುಗಿಸಿ ಬಂಧಮಾಗೆ (ರೋಕೋಕ. ೯–೦೦). ೧೧. (ಕಾವ್ಯ ಮೊದಲಾದುವುಗಳ) ರಚನೆ : ಸಮಮೆಂಬುದು ಬಂಧದೊಳವಿಷಮಂ ಮೃದುಸ್ಫುಟವಿಮಿಶ್ರವಿನ್ಯಾಸಪದಕ್ರಮದಿಂ ಮೂಜು ತೆಜು ಬಂಧಮುಂ ಯಥಾರ್ಥಾನುವೃತ್ತಿಯಿಂ ವರ್ತಿಸುಗುಂ (ಕಾವ್ಯಾಕ. ೫೦೦); ಬಂಧದೊಳು ಲಕ್ಷಣದೊಳು ಪದವಿಸರದೊಳು . . . ತಿದ್ದುವುದು (ಜಕಶಾ. ೦–೨೦); ಗತಿಯು ತನ್ನ ಛಂದದಲ್ಲಿ ಭಾವ ತನ್ನ ಬಂಧದಲ್ಲಿ ಹುಟ್ಟಿವೆನಿಲ್ಲ ಹೊಂದದಲ್ಲಿ (ಅರಳು. ೦೬೪–೦೦). ೧೨. ಅಂಚು; ಗಡಿ. ೧೩. ದೇಹ; ಕಾಯ. ೧೪. ಒಂದು ಬಗೆಯ ಸಸ್ಯ : ಸಿಡಿಗುಲಿಗೆ, ಬಂಧ (ವೃಕ್ಷಿನಿ. ೦೪–೨೫೫). ೧೫. [ತತ್ತ್ವಶಾ] ಇಹಲೋಕದ ಬಾಂಧವ್ಯ; ಲೌಕಿಕವ್ಯಾಮೋಹ: ಬಂಧಂ ಬಂಧಕಾರಣಂ ಮೋಕ್ಷಂ ಮೋಕ್ಷಕಾರಣಂ (ಪದ್ಮಾರಾ. ೬–೦೭); ದಯಿತಾಸಂಬಂಧ ಬಂಧಂ ಭವಪರಿಣತಿ ತನ್ಮೂಲಮಾ ಬೇವಸಂ ಐಶ್ವಯ ಮೆಂದಾತಂ ತೊಡರ್ವಂ ಬಿಡಿಸಿ (ಶಾಂತಿಪು. ೯–೦೪); ಧೀರ ಲಾಲಿಸು ಬಂಧ ಮೋಕ್ಷಕೆ ಕಾರಣವೆ ಮನವಹುದು (ಗಗಶಾ. ೦೬–೨೬). ೧೬. [ಕಾವ್ಯಮೀ] ಚಮತ್ಕಾರಪೂರ್ಣವಾದ ಶಬ್ದವೈಚಿತ್ರ್ಯದಿಂದ ಕೂಡಿದ ವಾಕ್ಯ ; ಚಿತ್ರಕವಿತ್ವ : ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧವೆಂದೂ' ಹೆಸರು (ಕೃಬಿಡಿ. ೨೫೪). ೧೭. [ಜೈನ] ನವಪದಾರ್ಥಗಳಲ್ಲಿ ಒಂದು : ಜೀವಮುಂ ಕರ್ಮಮುಂ ಎಂಬೆರಡಱ ಅನ್ಯೋನ್ಯಪ್ರದೇಶಾನುಪ್ರವೇಶಾತ್ಮಕಮಪ್ಪುದು ಬಂಧಂ (ತತ್ತ್ವಸೂ. ೮); ಅಜೀವಕರ್ಮಪುದ್ಗಲಗಳೊಡನೆ ಜೀವನು ಏಕೀಭೂತನಾಗುವುದೆ ಬಂಧವು (ಕೈಪಠ. ೩). ೧೮. ಸಪ್ತತತ್ತ್ವಗಳಲ್ಲಿ ಒಂದು: ತತ್ತ್ವಗಳು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷ ಎಂದು ಏಳುವಿಧಗಳನ್ನುಳ್ಳವೆಂದೂ ಹೇಳಬಹುದು (ಶಾತತ್ತ್ವ. ೨೫೭).

**ಬಂಧದ ಕಾಯಿ** = (ಬಿಡಿಭಾಗಗಳನ್ನು ಜೋಡಿಸಲು ಉಪಯೋಗಿಸುವ) ಅಂಟುಳ್ಳ ಒಂದು ಬಗೆಯ ಕಾಯಿ : ಮುಸಿ ಮೈಬಟ್ಟೆಗಳಿಗೆ ತಗುಲದಂತೆ ಹುಡುಗರಿಂದ ಬಂಧದ ಕಾಯಿ ತರಿಸಿ, ಅದರ ಅಂಟುನೀರು ಚಿಮುಕಿಸಿ ಅರೆಯಬೇಕು (ಜಾಳಿಗ. ೨೭). [ಸಂ.]

**ಬಂಧಕ** (ಗು). ೧. ಹಿಡಿಯುವ ; ಬಂಧಿಸುವ. ೨. ತಡೆಗಟ್ಟುವ ; ಪ್ರತಿಬಂಧಿಸುವ. (ನಾ). ೩. ಹಿಡಿಯುವುದು ; ಬಂಧಿಸುವುದು : ಉಳಿದ ಕರ್ಮವೆಲ್ಲವೂ ಅವನಿಗೆ ಬಂಧಕವೂ ಮಾರಕವೂ ಆದುದು (ಕತ್ತಿಂ. ೯೬). ೪. ಕಟ್ಟು ; ಬಂಧನ : ವಿಶ್ವದ ಎಲ್ಲ ಭಾಗಗಳನ್ನೂ ಒಟ್ಟಿಗೆ ಸೇರಿಸುವ ಬಂಧಕವು ಎಲ್ಲಿದೆ ? (ಮಸ್ವಾರ. ೨೬೭). ೫. ಸೆರೆ ಹಿಡಿಯುವವನು ; ಬಂಧಿಸುವವನು. ೬. ಏರಿ ; ಒಡ್ಡು ; ಅಡ್ಡಗಟ್ಟೆ. ೭. ಕೆರೆ ; ಕಟ್ಟೆ. ೮. ಒತ್ತೆ ; ಅಡವು. [ಸಂ.]

**ಬಂಧಕಿ** (ನಾ). ೧. ಹಾದರಗಿತ್ತಿ ; ಜಾರೆ : "ಪಾಂಸುಳಾ, ಬಂಧಕೀ . . . ಅಭಿಸಾರಿಕಾ—ಈ ೧೧ ಹಾದರಗಿತ್ತಿ" (ಹಲಾಯು. ೬೦-೩೪೨) ; ಸತ್ಯವಾದಿಯಂತೆ ಪೊಳೆಯದೆ ಬಂಧಕಿಯಂತೆ ಮಂದಿಗೇವೈಸದೆ (ಕೃಷ್ಣಾಸ್ತ್ರ. ೭-೫೦ ಪ) ; ಈಕೆಗೆ ಅನೇಕ ಭರ್ತೃಗಳಿರುವುದರಿಂದ ಈಕೆ ಬಂಧಕಿ (ಹಂಕೀ. ೧೮೫). ೨. ಬಂಜೆ. ೩. ಹೆಣ್ಣಾನೆ. [ಸಂ. ಬಂಧಕೀ]

**ಬಂಧಗೌರವ** (ನಾ). ಕಾವ್ಯರಚನೆಯ ಹಿರಿಮೆ,—ಪ್ರೌಢಿಮೆ : ಇನಿತು ವಿವಿರ್ಕಕೆ ಮತ್ಕೃತಿಯೊಳ್ . . . ಶಾಂತಿವರ್ಮನ ನಯಂ ಗುಣವರ್ಮನ ಬಂಧಗೌರವಂ (ಜಗಾ· ೧-೧೧). [ಸಂ.]

**ಬಂಧತಂತ್ರ** (ನಾ). ರಥ, ಆನೆ, ಕುದುರೆ ಮತ್ತು ಪದಾತಿಗಳಿರುವ ಸೈನ್ಯಸಮೂಹ; ಸಂಪೂರ್ಣವಾದ ಸೈನ್ಯ. [ಸಂ.]

**ಬಂಧನ** (ಗು). ೧. ಕಟ್ಟುವ ; ಬಂಧಿಸುವ. ೨. ತಡೆಗಟ್ಟುವ ; ವಿರೋಧಿಸುವ. (ನಾ). ೩. ಕಟ್ಟುವಿಕೆ ; ಜೊತೆಗೂಡಿಸುವಿಕೆ. ೪. ಸೆರೆಮನೆ; ಕಾರಾಗೃಹ : "ಕಾರಂ ಬಂಧನಾಖ್ಯಂ" (ಮಂಗರಾ. ೦೦೬-೦); ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆನಯ್ಯ (ಮಹಾದೇ· ಪ. ೦೪೯-೩೦೩); ರಾಮಪ್ಪಗೌಡ ಮತ್ತು ತಿಮ್ಮಪ್ಪಗೌಡ ಇಬ್ಬರನ್ನು ಸೆರೆಹಿಡಿದು, ಬಂಧನದಲ್ಲಿರಿಸಿದನು (ಸೊಳಂಬ· ೬೪). ೫. ಕಟ್ಟು ; ಬಂಧ : ಬಂಧನಂ ಕಚದೊಳ್ ವಿರೋಧಂ ಪಂಜರದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪ್ರ. ೩-೯ ಪ). ೬. ಹಗ್ಗ ; ಪಾಶ. ೭. ಸರಪಳಿ ; ಸಂಕೋಲೆ : ಬಂಧನಮಂ ಪಱಿಯುತ್ತೆ . . . ಗಂಧಮಹಾಸಿಂಧುರಮಯಿತರ್ಪಂತಿರೆ ಸೈಂಧವನೆಟ್ಟಂದು ತಾಗಿದಂ ನರಸುತನೊಳ್ (ಪಂಪಭಾ. ೦೩-೨೨). ೮. ಸೆರೆ ಹಿಡಿಯುವುದು ; ಬಂಧಿಸುವುದು. ೯. ಪಟ್ಟಿ. ೧೦. ಸೆರೆ ; ವಶ ; ಅಧೀನ. ೧೧. ನಿಗ್ರಹ ; ಅಂಕೆ ; ಹಿಡಿತ. ೧೨. ರಚನೆ ; ನಿರ್ಮಾಣ. ೧೩. [ತತ್ತ್ವಶಾ] ಐಹಿಕಬಂಧ: 'ಭವಬಂಧನ' ಪರಾ.

**ಬಂಧನ ಹಾಕು** = ಮಂತ್ರಶಕ್ತಿಯಿಂದ ಕಟ್ಟುಹಾಕು,—ದಿಗ್ಬಂಧನ ಮಾಡು : ಪ್ರೇತವನ್ನು ಹಿಡಿದು ಮನೆಗೆ ಬಂಧನ ಹಾಕಿ ಬರಬಾರದೆ ? (ಕದ್ರಸ· ೨೩೪). [ಸಂ.]

**ಬಂಧನಕಾರಿ** (ನಾ). ಕಟ್ಟಿಗೆ ಒಳಪಡಿಸುವಂತಹುದು ; ಬಂಧಿಸುವುದು : ನಾನು ಮಾಡಿದ ಹದಿನೈದು ವರ್ಗಗಳು ಅಭ್ಯಾಸಕ್ಕೆ ಅನುಕೂಲವಾಗಿವೆ. ಆದರೆ ವಿಭಾಗಗಳು ನಿರ್ದಿಷ್ಟವಾಗಿ ಹೀಗೆಯೇ ಎಂದು ಬಂಧನಕಾರಿಯಾಗಲಾರವು (ಕಾಸಮಾ· ೫೦). [ಸಂ. ಬಂಧನಕಾರಿನ್]

**ಬಂಧನಗೊಳಿಸು** (ಕ್ರಿ). ಬಿಗಿಮಾಡು ; ಸೇರಿಸು : ಬಗೆವೆತ್ತ ಬಾಗಿಲ ಕದ ವಜ್ರ ಲಾಳವಿಂಡಿಗೆಗಳ ಬಂಧನಗೊಳಿಸಿ ವಿಗೆ ವಿಶ್ವಾಸಿ ಕಠೋರ ರಾಕ್ಷಸಿಯರ ತೆಗೆಯದೆ ಕಾಪನಿಕ್ಕಿದಳು (ಮೋಹತ. ೩೩-೭೭).
[ಬಂಧನ + ಕೊಳ್$_1$ + —ಇಸು$_3$]

**ಬಂಧನಾಗಾರ** (ನಾ). ಸೆರೆಮನೆ ; ಕಾರಾಗೃಹ : ಭಿಕ್ಷುವು ತಾನು ಋಣ, ರೋಗ, ಬಂಧನಾಗಾರ, ದಾಸತ್ವ, ಕಾಂತಾರಗಳಲ್ಲಿ ಇದ್ದಂತೆ ತಿಳಿಯುವನು (ಬುದ್ಧಕ. ೧೯೩). [ಸಂ.]

**ಬಂಧನಿ** (ನಾ). ೧. ಕಟ್ಟು ; ಬಂಧನ. ೨. ಹಗ್ಗ ; ಮಿಣಿ. ೩. ಸರಪಳಿ ; ಸಂಕೋಲೆ : ಕಬ್ಬಿಣದ ಬಂಧನಿಗಳಿಂದ ಬಿಗಿದಿದ್ದ ತೇಗದ ತೊಲೆಗಳ ಬಲವಾದ ಸಾರುವೆ ಆ ಕಟ್ಟಡವನ್ನು ಸುತ್ತುವರಿದಿತ್ತು (ಕ್ರುವರು. ೫೦೭). [ಸಂ. ಬಂಧನೀ]

**ಬಂಧಮೋಚನ** (ನಾ). [ಜೈನ] ಬಂಧನದಿಂದ ಬಿಡುಗಡೆ ಹೊಂದುವ ಒಂದು ಬಗೆಯ ವಿದ್ಯೆ : ಅಮಿತತೇಜಂ ಶ್ರೀವಿಜಯಂಗೆ ಯುದ್ಧ ವೀರ್ಯಮುಂ ಪ್ರಹರಣಾವರಣಮುಂ ಬಂಧಮೋಚನಮುಮೆಂಬ ಮೂಱು ವಿದ್ಯೆಗಳಂ ಕೊಟ್ಟು (ಶಾಪುಂಕೃ. ೧೧೦). [ಸಂ.]

**ಬಂಧಮೋಚನಿ** (ನಾ). = ಬಂಧಮೋಚನ : ಮಹಾಜ್ವಾಳಿನಿ ಯುದ್ಧವೀರ್ಯೆ ಬಂಧಮೋಚನಿ ಪ್ರಹರಣಾವರಣೆ ಭ್ರಾಮರಿ ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಕೃ. ೧೯೬). [ಸಂ. ಬಂಧಮೋಚನೀ]

**ಬಂಧವಿದ** (ನಾ). (ಆಭರಣಾದಿಗಳನ್ನು) ಮಾಡುವವನು ; ರಚಿಸುವವನು : ದಿಟ್ಟಿಗೆವರೆ ಬಂಧವಿದಂ ಕಟ್ಟಿದ ಪಲತೆಱದ ಮಣಿಯ ಸೂಸಕದ ನೆಟಲ್ ಕುಟ್ಟಿಮತಲದೊಳ್ ಪೊಳೆದೆಡೆಗಟ್ಟುತ್ತಲ್ಲಲ್ಲಿ ಬಣ್ಣವುರವಂ ತೀವಲ್ (ಚಂದ್ರಪ್ರ. ೭-೯೭). [ಸಂ. ಬಂಧವಿದ್]

**ಬಂಧವಿಮೋಚಿನಿ** (ನಾ). = ಬಂಧಮೋಚನ : ಸೌಜನ್ಯಕಂದಾಂಕುರಂ ಶ್ರೀವಿಜಯಂಗೆ ಹೇತಿವಿದಾರಿಣಿಯುಂ ಬಂಧವಿಮೋಚಿನಿಯುಮೆಂಬ ಎರಡುಂ ವಿದ್ಯೆಗಳಂ ಕೊಟ್ಟು (ಶಾಂತಿಪು. ೬-೩೭ ಪ).
[ಸಂ. ಬಂಧವಿಮೋಚಿನೀ]

**ಬಂಧಸ್ತಂಭ** (ನಾ). ಆನೆಯನ್ನು ಕಟ್ಟುವ ಕಂಬ ; ಆಲಾನಸ್ತಂಭ : "ಆಲಾನಂ, ಬಂಧಸ್ತಂಭಃ—೨ ಆನೆಯನ್ನು ಕಟ್ಟಿಹಾಕುವ ಕಂಭದಂಥಾ ಗೂಟದ ಪೆಸರು" (ಸಿದ್ಧಾಂತಿ· ೨೪೬). [ಸಂ.]

**ಬಂಧಾಬಂಧಿ** (ನಾ). ಮಲ್ಲಯುದ್ಧದ ಒಂದು ವರಸೆ ; ಕೈಕೈಗಳನ್ನು ಹಿಡಿದು ವರಸೆಗಳನ್ನು ಹೂಡಿ, ಕಾದುವ ಯುದ್ಧ : ಒಡನೆ ದಂಡೆಗಳನೊಡ್ಡುತ್ತಲ್ಲಿ ಕೈಗಳಂ ಪಿಡಿದು ಬಂಧಾಬಂಧಿಯರೆರೆ ಮುಷ್ಟಾಮುಷ್ಟಿ ಬೆಡಗಿನಿಂದೊದಗಿ . . . ತೊಡಕುಗಾಳಗವ ತೊಡಗಿದರು (ಶೀಕೃಪು. ೩-೬-೩೯). [ಸಂ.]

**ಬಂಧಿತ** (ಗು). ೧. ಕಟ್ಟಿಗೆ ಒಳಗಾದ ; ಬಂಧನಕ್ಕೊಳಗಾದ. (ನಾ). ೨. ಕಟ್ಟಿಗೆ ಒಳಗಾದುದು : ಭವ್ಯಪರಂಪರೆಯ ನಾಡು ಪಾರತಂತ್ರ್ಯದ ಸಂಕೋಲೆಯಿಂದ ಬಂಧಿತವಾಯಿತು (ಅಕ್ಕಾರ್ಕ· ೨). ೩. ಕಟ್ಟಿಗೆ ಒಳಪಟ್ಟವನು ; ಬಂಧನಕ್ಕೆ ಒಳಗಾದವನು : ಅಜ್ಞಾನದಿಂದ ಆವರಿಸಲ್ಪಟ್ಟವನಾಗಿಯೂ ವಿಷಯಾದಿಗಳಿಂದ ಬಂಧಿತನಾಗಿಯೂ ಬಹಿರ್ಮುಖವಾದ ಮನಸ್ಸುಳ್ಳವನಾಗಿಯೂ ವ್ಯವಹಾರ ಮಾಡುತ್ತಿದ್ದೇನೆ (ಮುಕ್ತಾರ. ೨೬೦). [ಸಂ.]

**ಬಂಧಿಸು** (ಕ್ರಿ). ೧. ಕಟ್ಟಿಹಾಕು; ಬಿಗಿ : ಪುಸಿ ಕೊಲೆ ಕಳವು ಪರಸ್ತ್ರೀವ್ಯಸನಂ ಬಹುವಿಧಪರಿಗ್ರಹಂ ನರರಂ ಬಂಧಿಸಲೀ ಭವಾಬ್ಧಿಯೊಳಗರ್ದಿಸಲಾರ್ಕುಂ ದ್ಯೂತಮದ್ಯಮಾಂಸವ್ಯಸನಂ (ಅತಪು. ೨-೬೭); ನೊಸಲ ಸೀಸಕ ನುಗ್ಗುನುಸಿ ಬಂಧಿಸಿದ ಸರಪಣಿ ಹಿಳಿದವರಿಬಲದೆಸಕ ನಿಂದುದು ಪಾರ್ಥನೆಚ್ಚನು ವೈರಿಮೋಹರವ (ಕುಮ್ವಾದ್ರೋ· ೦೮-೩) ; ನಳಿತೋಳ ಪಾಶದೊಳಗೆ ತನ್ನನಿಯನ ಬಿಗಿದು ಬಂಧಿಸುತ (ಕಂಸಂ. ೭-೧೮೦) . ೨. ಬೇಡಿ ಹಾಕು; ಕೋಳ ತೊಡಿಸು : ತಸ್ಕರರಂ ಬಾರಿಸಿ ಕಪ್ಪರಂ ಕಡಿಸಿ ದಂಡಂಗೊಂಡು ಮಿಂಡರ್ಕಳಂ ಭರದಿಂ ಬಂಧಿಸಿ (ಧರ್ಮಾಮೃ. ೨-೬೪) ; ಹಾಸಿ ಹರಹಿದ ತೋಳನೊಬ್ಬುಳಿ ಮಾಡಿ ಬಂಧಿಸಿದ (ಕೌತಿರಾ. ೨೨-೦೦) ; ಈತನ ಹಿಡಿದು ಬಂಧಿಸಲಾಗಿ ಯದುಕುಲನಾಥನಾರಾಯಣ ಬಹನು (ಮೋಹತ. ೩೫-೬೦). ೩. ಕೂಡಿಸು ; ಜೋಡಿಸು : ಮಿಸುನಿಯಂತ್ರದ ಮಣಿಮಾಲೆಯ ತೋಳ್ಗೆ ಬಂಧಿಸಿದಳತ್ಯಂತಭಕ್ತಿಯಲಿ (ಮೋಹತ. ೯-೭೭). ೪. ನಿರ್ಮಿಸು; ರಚಿಸು : ಶಶಿಕಾಂತಶಿಲೆಯಿಂದೆ ಬಂಧಿಸಿದ ಸೋಪಾನದ ಸುಪಂಕ್ತಿಯಿಂದ . . . ಶೋಭಿಸುತಿರೆ (ಶಬಮೋ. ೬-೨೯). ೫. ಮುಚ್ಚು : ಮುಂದಕೆ ಅಡಿಯನೊಂದನಿಡೆ ಕಕ್ಕಯ್ಯ ಬಂಧಿಸಲು ತನ್ನ ಪ್ವಾರದ ಕವಾಟವನಾಗ (ಚೌಶರಾ· ೦೯-೩). [ಬಂಧನ + —ಇಸು$_3$]

**ಬಂಧಿಸ್ತು** (ನಾ). ಬಂದೋಬಸ್ತು ; ಜೋಪಾನ : ಅಳಿಯನ ಆಫೀಸಿನಿಂದ ತರಿಸಿದ ಗಟ್ಟರಟ್ಟಿನ ಫಾಯಿಲ್‌ಬೋರ್ಡಿನಲ್ಲಿ ಬಂಧಿಸ್ತು ಮಾಡಿಕೊಂಡರು (ಔಕಪಶ. II, ೦೬). [ ← ಮರಾ. ಬಂದಿಸ್ತ, ಬಂಧಿಸ್ತ್, ಬಂದೀಸ್ತ ]

**ಬಂಧು** (ನಾ). ೧. ಸಂಬಂಧ; ನೆಂಟು. ೨. (ವಿಶೇಷವಾಗಿ ತಾಯಿಯ

**ಕಡೆಯು**) ಸಂಬಂಧಿಕ : ನೆಂಟ : "ಆತ್ಮೀಯಃ, ಸ್ವಜನಃ, ಬಂಧುಃ, ಆಪ್ತಃ, ಜ್ಞಾತಿಃ, ಬಾಂಧವಃ ಈ ೬ ನಂಟರ್" (ಹಲಾಯು. ೬೪-೩೫೫) : ಉಂಬಾಗಳಿಲ್ಲನ್ನ ಉಡುವಾಗಳಿಲ್ಲನ್ನ ಬಂಧುಗಳು ಬಂದಾಗಳಿಲ್ಲನ್ನ ಲಿಂಗಕ್ಕೆ ಇಲ್ಲೆಂಬ ಜಂಗಮಕ್ಕೆ ಇಲ್ಲೆಂಬ . . . ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹೆಣ ಬಿಟ್ಟ ಹೇಳಿತ್ತೆ (ಬಸವ. ೨೨೨) ; ಕಂಸಂ . . . ಬಂಧುಗಳಬಂಧುರಪೊನೆ . . . ಕೈಕೊಳ್ಳದೆ . . . ಪಾಪಬಿಯೊಳ್ ಕೂಸನಪ್ಪಳಿಸಿ (ಜಗಪ. ೨-೫೩ ವ) ; ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ (ಗಾದೆ). ೩. ಗೆಳೆಯ ; ಸ್ನೇಹಿತ. ೪. ಒಂದು ಬಗೆಯ ಮರ : 'ಬಂಧುಜೀವ' ಪರ್ಯಾ. ೫. [ಜ್ಯೋತಿ] ಲಗ್ನದಿಂದ ನಾಲ್ಕನೆಯ ರಾಶಿ : ವ್ಯವಹರಿಪ ಸಂಜ್ಞೆ ಚತುರಸ್ರವದೆಂದಷ್ಟಮ ಚತುರ್ಥಗೃಹಕೆ ಚತುರ್ಥಕ್ಕೆ ವಲಂ ಮತ್ತಂ ಪಾತಾಳ ವೇಶ್ಮ ಸುಖ ಹಿಬುಕ ಬಂಧುವೆಂದೈದು ಪೆಸರ್ (ಜಾತಕ. ೧-೩೪).

**ಬಂಧುಚಿಂತಾಮಣಿ** = ಬಂಧುಗಳು ಕೇಳಿದುದನ್ನು ಚಿಂತಾಮಣಿಯಂತೆ ಕೊಡುವವನು ; ಒಂದು ಬಿರುದು : ಬಂಧುಚಿಂತಾಮಣಿ ಸಮಾಶ್ರಿತಜನಕಲ್ಪವೃಕ್ಷನ್ನಾರ್ಮಾದಿ ಸಮಸ್ತಪ್ರಶಸ್ತಿಸಹಿತಂ (ಶಾಇ. XX. ೪೬-೧೮; 1072). **ಬಂಧುಬಳಗ** = ನೆಂಟರು ಮತ್ತು ಪರಿಜನರು : ಅನಿಮಿತ್ತಬಂಧುವೆ ತಾಯ್ತಂದೆ ಬಂಧುಬಳಗವೆ . . . ಕಾವುದು (ಬಸವ. ೨-೫೪) ; ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ (ಪುರಂದ. ೦-೯೩-೦). [ಸಂ.]

**ಬಂಧುಕೃತ್ಯ** (ನಾ). ಒಬ್ಬನು ತನ್ನ ಬಂಧುಗಳಿಗೆ ಮಾಡಬೇಕಾದ ಕಾರ್ಯ,— ಕರ್ತವ್ಯ : ಆಳುಗೆಲಸಕೆ ಕೆಲಬರರಸನ ಖೇಳಮೇಳಕೆ ಕೆಲರು ಕೆಲಬರು ಬಾಲೆಯರ ಕೊಳುಕೊಡೆಯ ಬಳಗದ ಬಂಧುಕೃತ್ಯದಲಿ (ಕುಮಾ. ಅ. ೩-೦೪). [ಸಂ.]

**ಬಂಧುಜನ** (ನಾ). ನೆಂಟರು ; ಬಳಗ : ಕಡಲ ತಡಿಯಿಯ್ದೆ ನೆಲನಂ ಪಡೆವರ್ ಭವದೀಯ ಪುತ್ರರುಳ್ಳಳವಿಗಳೊಳ್ ಪಡೆದುದು ಬಂಧುಜನಂ ನಿಮ್ಮಡಿಗಾವೇಂ ಪೋಷ್ಯವರ್ಗದಿಂದಂ ಪೊಜಗೇ (ಅಂಕ. ೯-೯೬). [ಸಂ.]

**ಬಂಧುಜೀವ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು : "ಬಂಧೂಕಂ, ಬಂಧುಜೀವಂ—ಈ ೨ ಬಂದುಗೆ" (ಹಲಾಯು. ೩೫-೫೫). [ಸಂ.]

**ಬಂಧುಜೀವಕ** (ನಾ). = ಬಂಧುಜೀವ. [ಸಂ.]

**ಬಂಧುತನ** (ನಾ). ನೆಂಟಸ್ತಿಕೆ ; ಬಾಂಧವ್ಯ : ಬಳ್ಳಿಳ ಬಳಿವ ಬಂಧುತನವಿನಿತಾಯ್ತೋ (ಸುಕುಮಾ. ೪-೨೪) ; ನೀವೇಳನೆಯ ಭವದಲಿ ಬಂಧುತನದಲಿ ನಮ್ಮನೈದುವುದು (ಕೊರಚ. ೦-೯-೨೦) ; ಉಳಿದು ಕೌರವ ಬಂಧುತ[ಪಾಠಾಂ. ಜ]ನವನು ತೀರ್ಥಯಾತ್ರೆಗೆ ವಿದುರ ಹೊಱವಂಟ (ಭಾಗ. ೩-೦ ಸೂಚನೆ). [ಬಂಧು + –ತನ]

**ಬಂಧುತೆ** (ನಾ). ೧. ಬಾಂಧವ್ಯ ; ನೆಂಟು. ೨. ನೆಂಟರ ಗುಂಪು ; ಬಳಗ "ಬಂಧುತಾ ಅಂದರೆ ನೆಂಟರ ಗುಂಪು, ನೆಂಟತನಕ್ಕೂ ಹೆಸರು" (ಸಿದ್ಧಾಂತಿ. ೦೭೭). [ಸಂ. ಬಂಧುತಾ]

**ಬಂಧುತ್ವ** (ನಾ). = ಬಂಧುತನ. [ಸಂ.]

**ಬಂಧುರ** (ಗು). ೧. ಸಮತಟ್ಟಿಲ್ಲದ; ಏರುಪೇರಾದ. ೨. ಕೊಂಕಿದ; ವಕ್ರವಾದ. ೩. ಚೆಲುವಾದ ; ಸುಂದರವಾದ. ೪. ನೋವುಂಟುಮಾಡುವ ; ತೊಂದರೆಯನ್ನು ಕೊಡುವ. (ನಾ). ೫. ಬಾಗಿರುವುದು ; ಮಣಿದುದು : "ನತಂ, ನಮ್ರಂ, ಬಂಧುರಂ—ಈ ೩ ಎಱಗಿರ್ದುದು" (ಹಲಾಯು. ೦೨೫-೭೫). ೬. ಚೆಲುವಾದುದು ; ಸುಂದರವಾದುದು: ಅನ್ಯಗುಣಂಗಳಸಹಾಯಂಗಳ್ ಬೆರಸಿರೆ ಕನ್ನಡದೊಳ್ ಬಂಧುರಮಾಗದು ಕಾವ್ಯರಚನೆ (ಕವಿರಾ. ೦-೫೩) ; ಆನಂದವರ್ಧನನ ಜೀವನ ಸರ್ವಾಂಗಸುಂದರವೂ ತತ್ತ್ವಾನುಭವಬಂಧುರವೂ ಭಕ್ತಿನಿರ್ಭರವೂ ಆಗಿತ್ತು (ಧ್ವನ್ಯಾಲೋ. XXVII. ೬೮೦೪). ೭. ಒಂದು ಬಗೆಯ ಪಕ್ಷಿ ; ಬಾತು. ೮. ಬಂಧುಜೀವ. ೯. ರಥದಲ್ಲಿ ಸಾರಥಿಯು ಕುಳಿತುಕೊಳ್ಳುವ ಸ್ಥಳ. [ಸಂ.]

**ಬಂಧುರತೆ** (ನಾ). ಚೆಲುವು ; ಸೌಂದರ್ಯ : ತಳೋದರಿಗೆ ವೃಕೋದರ ನಾಗಿಪಂ ಕಚಬಂಧಬಂಧುರತೆಯಂ (ಗದಾಯು. ೦-೭೦) ; ವಿಶ್ವಚೇತನದಾ ಸ್ಪಂದನವೇ ಸೌಂದರ್ಯವಾದುವೆ ಜೀವನ ಮೂಲಬಂಧುರತೆ ಬೊಮ್ಮನವು (ಮಂಕುತಿ. ೪೪೬). [ಸಂ.]

**ಬಂಧುರವಡೆ** (ಕ್ರಿ). ಚೆಲುವಾಗು ; ಸುಂದರವಾಗು : ಬಂಧುರವಡೆದ ಮೋಹನಶಾಲೆಯುಂದದಯ್ತುಂದಿರಾಮಂದಿರವಿಹುದು (ಕಂಸವ. ೭-೩೭). [ಬಂಧುರ + ಪಡೆ$_1$]

**ಬಂಧುರವಿಡಿ** (ಕ್ರಿ). = ಬಂಧುರವಡೆ : ಸ್ಮರಕರಿಕರದಂತೆ ರಂಜಿಸುತಿಹ ಬಂಧುರವಿಡಿದೂರುದ್ವಯದ ಗರುವನಾರುಸಿರು (ಕಂಸವ. ೯-೧೦೭). [ಬಂಧುರ + ಪಿಡಿ$_1$]

**ಬಂಧುರಿತ** (ಗು). ೧. ಬಾಗಿದ ; ಬಗ್ಗಿದ. ೨. ಕೊಂಕಿದ ; ವಕ್ರವಾದ. (ನಾ). ೩. = ಬಂಧುರಿತಕರಣ : ಮೆಲ್ಲನೆ ಮಲಗಿರ್ದವಳು ತನ್ನ ಎರಡು ಕೈಗಳಿಂ ಕೊರಳಂ ಪಿಡಿದು ರಮಿಸಲ್ಕೆ ಬಂಧುರಿತವೆಂಬ ಕರಣಂ (ಕಾಮಕಲಾ. ೨೩೭). [ಸಂ.]

**ಬಂಧುರಿತಕರಣ** (ನಾ). [ಕಾಮಶಾ] ರತಿಕೇಳಿಯ ಒಂದು ಭಂಗಿ : ಮಗುಳ್ದೊಱಗಿ ಮೊಳಕಾಲೊಳಗೆ ಕಯ್ಯನೊಯ್ದುಬಲೆ ಬಿಗಿಗೊಂಡವನ ಕೊರಳನಪ್ಪಲವನು ಸೊಗಸೊಗೆಯಲವಳೂರುಯುಗಮಾನಮರ್ದಪ್ಪಿ ರತಿವೊಗೆಯಲದೆ ಬಂಧುರಿತಕರಣಂ (ಜನವ. ೯-೩೩). [ಸಂ.]

**ಬಂಧುರೆ** (ನಾ). ಚೆಲುವೆ ; ಸುಂದರಿ : ಲಾವಣ್ಯಸಿಂಧುವೇಳಾಲೀಲಾಯಮಾನಕೇಕರಾತಿಬಂಧುರೆಯಂ ಭರತಾಗಮಭವನವಿಹಿತಮಹನೀಯಮತಿಪ್ರದೀಪೆಯುಂ (ಎಕ. V. ಬೇಲೂರು. ೫೮-೭೩; 1117). [ಬಂಧುರ + –ಎ$_1$]

**ಬಂಧುಲ**, **ಬಂಧುಳ** (ಗು). ೧. ಬಾಗಿದ ; ಬಗ್ಗಿದ. ೨. ಸುಂದರವಾದ ; ಚೆಲುವಾದ. (ನಾ). ೩. ಗಂಡನಲ್ಲದವನಿಂದ ಹುಟ್ಟಿದವನು : "ಕಟ್ಟವಳತನುಜಂ ಬಂಧುಳ[ಪಾಠಾಂ. ೪]ನೆನಿಕ್ಕುಂ" (ಮಂಗರಾ. ೬೨-೦೦). ೪. ವೇಶ್ಯಾಮಂದಿರದ ಸೇವಕ. ೫. = ಬಂಧೂಕ : (ಮೈಕಿಬಿ. ೫೦-೦೦೨೦). **ಬಂಧುಳ** : ೨. ಬಂಧುಳಃ, ಬಂಧಕೀಪುತ್ರಃ—ಈ ೨ ಕಿಡಿಕಿಯ ಮಗಂ" (ಹಲಾಯು. ೮೨-೩೪೭). [ಸಂ.]

**ಬಂಧುವರ್ಗ** (ನಾ). ನೆಂಟರ ಗುಂಪು ; ಆಪ್ತರ ಸಮೂಹ : ತಿಳಿಹಿದನು ಧೃತರಾಷ್ಟ್ರ ಭೀಷ್ಮರ ಲಲಿತಮತವನು ಬಂಧುವರ್ಗಸ್ಖಲಿತವನು ಸ್ಥೈರಿಸುವುದೆಂದನು ವಿನಯದಲಿ ವಿದುರ (ಕುಮಾ. ಆ. ೧೭-೨೬) ; ಉರಿಯಲಳಿವುದು ಕಾಯ ಮೋಹದ ತರುಣವುಳಿವಳು ಬಂಧುವರ್ಗವು ಸರಿಗು ಹಿಂದಕೆ (ಕೌಶಿ. ೨೩-೦೯). [ಸಂ.]

**ಬಂಧುವಿಯೋಗ** (ನಾ). ನೆಂಟರ ಅಗಲಿಕೆ : ಬಂಧುವಿಯೋಗದಿನೆನಗನುಬಂಧಿಸಿದ ಮಹೋಪತಾಪಮದು ನೀಂ ಬರೆ ನಿರ್ಬಂಧದಿನಳಱುತ್ತದಱಿಂ ಬಂಧುಗಳಿಂ ನೀನೆ ಬಂಧು ಜಗತೀಬಂಧು (ಚಂದ್ರಕೆ. ೫-೨೮). [ಸಂ.]

**ಬಂಧುಸ್ಥಾನ** (ನಾ). [ಜ್ಯೋತಿ] "ಲಗ್ನದಿಂದ ನಾಲ್ಕನೆಯ ಸ್ಥಾನ" (ಜಾತಕ. ೪೦೬). [ಸಂ.]

**ಬಂಧುಹನನ** (ನಾ). ನೆಂಟರನ್ನು ಕೊಲ್ಲುವುದು ; ಆಪ್ತರ ಸಂಹಾರ : ಬಂಧುಹನನಕೆ ಮನದರಲು ಭವವಿಂಧ್ಯದಲಿ ಬೆಳ್ಳಾಗಿ ರೌರವಸಿಂಧುವಿನೊಳೋಲಾಡದಿಹನೇ ಪರಮಪಾತಕನು (ಕುಮಾ. ಭೀ. ೩-೩೭). [ಸಂ.]

**ಬಂಧುಳ** 'ಬಂಧುಲ' ನೋ.

**ಬಂಧೂಕ** (ನಾ). ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಗಿಡ;

ಬಂದುಗೆ : "ಬಂಧೂಕಂ, ಬಂಧುಜೀವಂ—ಈ ಎರಡು ಬಂದುಗೆ" (ಶಬ್ದಮ. ೩೩-೩೩); ಮುದವಂ ಜಪಾಪ್ರಸವರಕ್ತಾಶೋಕಬಂಧೂಕಶೋಣಮಣಿಜ್ಯೋತಿಗಳೆಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ (ಅನಂಪು. ೦೬-೩); ಬಂದನು ಸೂರ್ಯನು . . . ಬಂದನು ಉದಯಾದ್ರಿ ಶಿಖರದ ರತ್ನನು ಬಂಧೂಕಸುಮದ ಸನ್ನಿಭನು (ಜಂಜಾಶ. ೦೩೩-೭೦) [ಸಂ.]

**ಬಂಪು₁**, ಬೊಂಪು₁ (ನಾ). ೧. ಸಾಬೂನಿನಂತೆ ಉಪಯೋಗಿಸುವ, ಅಂಟುಅಂಟಾಗಿರುವ ಒಂದು ಬಗೆಯ ವನಸ್ಪತಿ : (?). **ಬೊಂಪು₁** : ೨. ಅಂಟು : ಜಿಗಿ : ಕಣ್ಣುಗಳಲ್ಲಿ ಶ್ಲೇಷ್ಮವೆರಸಿ ನೀರು ಬೊಂಪುಬೋಂಪಾಗಿ ಸುರಿಯಲು ಮೇವು ಬಿಟ್ಟು ಜಡನಾಗಿ ನಿಂತಿರಲು (ಅಶ್ವಶಾ. ೬೨-೯); ಬಿಳಿದಾಗಿ ನೀಟಾಗಿ ಕೊಂಚ ಬೊಂಪಾಗಿ ಪಿರಿದು ಬಲ್ಲಿತಾಗಿ ಇದ್ದೊಡೆ ಮದನಜಲಮೆಂಬುದು (ಕಾಮಶಾ. ೨೩೩).

[ದೇ.॥ ತಮಿ. ವಟುಮ್ಪು; ಮಲ. ವಟುಪ್ಪ; ತೆಲು. ಬಂಪು= ಹಲ್ಲಿನ ಮೇಲಿನ ಕೊಳೆ]

**ಬಂಪು₂**, ಬೊಂಪು₂ (ನಾ). ಒಂದು ಬಗೆಯ ಮೀನು : ಸೀಗಡಿ ಕೊರವಂ ಬಂಪು . . . ಹಂದಿಗನಾನೆಮೂಗಮದಲೆಂಬಗಣಿತಶಫರಾಳಿಗಳನೆ ತೆಗೆದರ್ ಬೇಡರ್ (ಶ್ರೀಕೃಕ. ೨೭-೯೦). **ಬೊಂಪು₂** : ಸಿಸಿಲು ಬೊಂಪು ಸವಿವಾಯು ಗೊದಳೆ ಗಜು ಮೆಟ್ಟಿವ ಕಾಗೆಂಡೆ . . . ಆನೆಮೊಗನೆಂಬ ಮೀನ್ಗಳಂ ಗುದಿಗೆಯ್ದರು (ಹಕಾಕ. ೩-೯೩). [?]

**ಬಂಬಣ** (ಅ). ಹೆಚ್ಚಾಗಿ, ಅಧಿಕವಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ. 'ಬಂಬಲ', 'ಬಂಬಳ' ಪರಾ.

ಬಂಬಣ ಬಾಡಿಸು=ಅಧಿಕವಾಗಿ ಸೊರಗಿಸು,—ಒಣಗಿಸು : ಪಗಲೊಳೊರ್ಮೆಯುಂ ತಮ್ಮನಂಡಲೆದು ಬಂಬಣ ಬಾಡಿಸಿ ಬಿಡದೆ ಕಡುಗಾಯ್ದು ಕಣ್ಣೊಳುಳ್ಕುವುಷ್ಣಕರನ ಬಿಸುಗದಿರ್ಗಳೆಯ್ದೆ ಮೆಯ್ದೆಗೆದುವೊ (ವರ್ಧಮಾ. ೬-೨೩ ವ). ಬಂಬಣಂ ಬಾಡು=ಅಧಿಕವಾಗಿ ಒಣಗು,—ಸೊರಗು : ವಿರಹಾಕುಳೆಯಲರ್ದ ಲತೆಗಳಂ ಪೊರ್ದಲಣ್ಮದೆ ತನ್ನಂತೆ ಬಂಬಣಂ ಬಾಡಿರ್ದ ಜಾದಿಯಂ ನೋಡಿ (ಪಾರ್ಶ್ವಪು. ೯-೬೯ ವ).

**ಬಂಬಲ್₁**, ಬಂಬಲು₁, ಬೊಂಬಲ್ (ನಾ). ೧. ಗುಂಪು ; ಸಮೂಹ : "ಬಂಬಲ್, ತುಱುಗಲ್ . . . ಗುಮ್ಪು, ಗೊಂದಣ (ಉಂದಲ್)—ಈ ೪೦ ಸಮೂಹಂ" (ಕಕಶಾ. ೦೦-೩೨೨); ಮದಗಜಗಂಡಸ್ಥಳಂಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳ್ ವಿಮುಖೀಭೂತಂಗಳಾದುವು (ಹಂಪಶಾ. ೯-೯೯ ವ); ಮಿಳಿರ್ದಾಡುವ ತುಂಬಿಯ ಬಂಬಲಂತೆ . . . ಸೋಲಿಸದೆ ಕಾವನ ಬೆಬ್ಬಂ (ಅಭ್ರಕಾ. ೦೯). **ಬಂಬಲು₁** : ೧. "ಬಂಬಲೆನಲು ಬಳಗಮೆನಲ್ ಶ್ರೇಣಿ" (ಕಶಕ. ೬೯); ಬಂಬಲು ತುಱುಗಲಾಗಿರೆವೊಳಿಸಿ ಪೊಱಮಡುವ ಕಾಲನವಣಗಳೊಳಮೇಂ ನವವಿಧದ ಬಿನ್ನಣಮಂ ನಿನ್ನಾಳ್ದಂಗೆ ಬಿನ್ನವಿಸು (ಅನಂತಪು. ೨-೩೦ ವ). ೨. ಒಟ್ಟಿಲು; ರಾಶಿ : ಬಸಿವ ಬಲುಜಿಗಿಯ ಕರುಳ ಬಂಬಲು (ಕುಮಾವ್ಯಾ. ೨-೫೩). ೩. ಜೊಂಪೆ; ಗೊಂಚಲು : ತಾರಗೆಗಳ ಬಂಬಲಂತೆ ತೋರಮುಡಿಯೊಳೆಳೆಮುತ್ತಿನ ಬಲೆಯ ಶೃಂಗಾರವೊಪ್ಪಿರೆ (ಶಶಿ. ೪೦-೫೦). ೪. ರಭಸ; ವೇಗ: 'ಬಂಬಲ್ವರಿ' ಪರಾ. **ಬೊಂಬಲ್** : ೨. ಪಾಲ್ಗಡಲ ತೆರೆಯ ಬೊಂಬಲ್ಗಳಂ ಜೇಂಗೊಡನ ಸಾಲ್ಗಳಂ (ಜಿಕ್ಕೃಕ. ೩-೦-೦). [ದೇ.॥ ತುಳು. ಬೊಂಬುಳ]

**ಬಂಬಲ್₂** (ಅ). ಹೆಚ್ಚಾಗಿ, ಬಹುವಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ. 'ಬಂಬಲ', 'ಬಂಬಳ' ಪರಾ.

ಬಂಬಲ್ಬಾಡು=ಅಧಿಕವಾಗಿ ಸೊರಗು,—ಬಾಡು : ಕೊಟ್ಟಡೆಯುದನಂತೆ ಬಂಬಲ್ಬಾಡುತ್ತುಂ (ಧರ್ಮಾಮೃ. ೦-೦೪೪).

**ಬಂಬಲ** (ಅ). ಅಧಿಕವಾಗಿ, ಹೆಚ್ಚಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ. 'ಬಂಬಳ' ಪರಾ.

ಬಂಬಲಂ ಬಾಡು, ಬಂಬಲ ಬಾಡು=ಅಧಿಕವಾಗಿ ಸೊರಗು,—ಬಾಡು : ಪದ್ಮೋದರಂ ಪಥಶ್ರಮದಿಂ ಪರಿಶ್ರಾಂತನಾಗಿ ಪಸಿವಳುರೆ ಬಂಬಲಂ ಬಾಡಿ ಬಟ್ಟಿಲ್ವಿದಂ (ಮಹಾಪು. ೦೬-೪೩); ಪೆಂಡಿರುಂ . . . ಅಡರ್ಪಿಲ್ಲದೆ ಕಲ್ಪವೃಕ್ಷಮಡಿದು ಕೆಡೆಯೆ ಬಂಬಲ ಬಾಡಿದ ವನಲತೆಗಳುಮಂ ಪೋಲ್ತು (ಹಂಪಶಾ. ೦೯-೯ ವ); ಉಣಲಿಲ್ಲದೆ ಪಸಿವಿಂ ಬಂಬಲ ಬಾಡಿ (ಧರ್ಮಾಮೃ. ೬-೦೬೬).

**ಬಂಬಲಿಸು**, ಬಂಬಳಿಸಂ, ಬೊಂಬಾಳಿಸು (ಕ್ರಿ). ೧. ಗುಂಪಾಗು ; ಸಂದಣಿಸು : ತುಱುಗೆಮೆಯ ತರ್ಕೆಯೊಳ್ ಬಂಬಲಿ [ಪಾಠಾಂ. ೪]ವ ಕಣ್ಬನಿಗಳೊಸರೆ (ವರ್ಧಪು. ೪-೬೨ ವ); ಹೂಗಿಡಮಲರಿಹುದೇತಕ್ಕೆ ? ತುಂಬಿಯು ಬಂಬಲಿಸಲಿ ಎಂದು (ಗಣೇಶ. ೬೩-೪). ಬಂಬಳಿಸು : ೧. ಮೇಲಿನ 'ವರ್ಧಪು' ಪ್ರಯೋಗದ ಪಾಠಾಂತರವನ್ನು ನೋಡಿ. **ಬೊಂಬಾಳಿಸು**: ೨. ಹರಡು ; ವ್ಯಾಪಿಸು : ಬಳಲಿದನು ಬೊಂಬಾಳಿಸಿದ ಭಾಸುರದ ರಕ್ತದಲಿ (ಕೊರಚಾ. ೩-೦೦-೨೮). [ಬಂಬಲ್₁ + —ಇಸು₁]

**ಬಂಬಲು₁** 'ಬಂಬಲ್₁' ನೋ.

**ಬಂಬಲು₂** (ನಾ). ಎಳನೀರಿನ ತೆಂಗಿನ ಕಾಯಿಯಲ್ಲಿರುವ ತೆಳುವಾದ ತಿರುಳು; ಗಂಜಿ: ಬಂಬಲು ಗೋರಿಕೊಡ್ಲ ಬುದ್ಧಿ! (ವಮ್ಮಕು. ೦೬೦). [?]

**ಬಂಬಲುಗರುಳು** 'ಬಂಬಲ್ಗರುಳ್' ನೋ.

**ಬಂಬಲುಗಿಡಿ** (ನಾ). ಕಿಡಿಗಳ ಗುಂಪು,—ರಾಶಿ : ಹೊಸಮಸೆಯ ಬಾಯ್ಧಾರೆಗಳ ಬಂಬಲುಗಿಡಿಯ ಬಾಣಾಳಿಗಳಲೀತನ ಹೂಳಿದನು (ಕುಮಾವ್ಯಾ. ೨೦-೨೩) ; ಕಡಲೋಳಿಡಲೊಡನೆ ಬಂಬಲುಗಿಡಿಯು ಗಡಣದಿಂ ಬಡಬನೊಡಗೂಡಿ (ಭಕ್ತಿಶ. ೦-೯). [ಬಂಬಲು₁ (< ಬಂಬಲ್₁)+ಕಿಡಿ]

**ಬಂಬಲುಗುರುಳ್** 'ಬಂಬಲ್ಗುರುಳ್' ನೋ.

**ಬಂಬಲ್ಗಡಿ** (?). (?) : ಬರಿಗಂಡಂ ಪಿಡಿಲೇಱಿ ರೋಮಮುಡಿದಿರ್ಪಿನ್ನಾಗ ಮುಂಗಾಲಗಲ್ತರೆ ಬಿರ್ಕುರ್ವೆ ಮೊಗಂ ಕರಂ ಪೆಗಲ ಬಿಣ್ಪಂ ಜೋಲ್ವ ಬಾಲಂ ಮುಂಬುಂಕಿರೆ ಬಂಬಲ್ಗಡಿವಂ ಪೊದಟ್ಟಗಸೆವೂಗೊಂಬೊಪ್ಪೆ ಕೋಟ್ಕುಟ್ಟೆ ಪೆರ್ನೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕೀಕರಂ ಸೂಕರಂ (ಚಂದ್ರಪ್ರ. ೫-೬೦). [?]

**ಬಂಬಲ್ಗರುಳ್**, ಬಂಬಲುಗರುಳು, ಬಂಬಲ್ಗರುಳು (ನಾ). ಜೊಂಪೆ ಜೊಂಪೆಯಾಗಿ ಹೆಣೆದುಕೊಂಡಿರುವ ಕರುಳು ; ದೊಂಡೆಕರುಳು : ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋೞ್ದಿಕ್ಕಿ ಬಂಬಲ್ಗರುಳ್ಗಳನಾನಲ್ಲಿ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ (ಪಂಪಭಾ. ೬-೦೨). **ಬಂಬಲುಗರುಳು** : ಅರಿದ ಕೊರಳಿನ ಬಸಿವ ಬಂಬಲುಗರುಳ ಜರಿವ ಕಪಾಲದೊಗುನೆತ್ತರ ರಣಾವನಿ ಕಱಿವುತಿರ್ದುದು ರೌದ್ರಮಯರಸವ (ಕುಮಾವ್ಯಾದ್ರೋ. ೦೫-೬೪). ಬಂಬಲ್ಗರುಳು : ಒಡಲನೊಚ್ಚತಗೊಂಡ ವಂಬಿನ ಕುಡಿಗೆ ನೆಱೆಯದು ರಕ್ತಜಲ ಬಳಿವಿಡಿದು ಕವಿವಂಬುಗಳು ಬಂಬಲ್ಗರುಳ ಸೇದಿದವು (ಕುಮಾವ್ಯಾಶ. ೦೦-೯). [ಬಂಬಲ್₁ + ಕರುಳ್]

**ಬಂಬಲ್ಗರುಳು** 'ಬಂಬಲ್ಗರುಳ್' ನೋ.

**ಬಂಬಲ್ಗುರುಳ್**, ಬಂಬಲುಗುರುಳ್ (ನಾ). ಒತ್ತಾದ ಕೂದಲು ; ದಟ್ಟವಾದ ಕೇಶರಾಶಿ : ಅಮರಾಂಗನೆಯರ ಬೀಸುವ ಚಾಮರದ ಗಾಳಿಯಲಂಪಿನೊಳಲ್ಲುಗುವ ಬಂಬಲ್ಗುರುಳ್ಗಳ ಬಂಬಲಿಂದಂ ತಳರ್ವ ಚಿನ್ನಪೂಗಳನವಯವದೊಳ್ ಸಯ್ಪುತ್ತು ಮಾಡುವ ಕೆಯ್ತುಮುಮಂ (ಅಜಿತಪು. ೪-೯ ವ) ; ಮಿಳಿರ್ವ ಬಂಬಲ್ಗುರುಳ್ಗಳೆಂಬ ತೊಡಂಕುವಲೆ ಬಸಂತನ ಕೆಳೆಯನೆಂಬೆರಲೆಯುಂ ಸಿಲ್ಕಿಸೆಯುಂ (ಅಭ್ರಕಾ. ೭೩). **ಬಂಬಲುಗುರುಳ್** : ದೀರ್ಘನಯನದ ಬಲುಮೊಲೆಯ ಬಾಸೆಗಳ ಬಂಬಲುಗುರುಳ . . . ಪುಳಿನಜಘನಸ್ಥಳದ ದಾನವಸತಿಯರಿರ್ದರ್ (ಕೊರಚಾ. ೫-೨-೬೪).

[ಬಂಬಲ್₁ + ಕುರುಳ್₁]

**ಬಂಬಲ್ಗೊಂಬು** (ನಾ). ಎಲೆಯ ಜೊಂಪೆಗಳಿಂದ ತುಂಬಿರುವ **ಕೊಂಬೆ : ಎಲೆಗಳಿಂದ ಕೂಡಿ** ದಟ್ಟವಾದ ಶಾಖೆ : ನೆಗೆದು ಲಂಬಿಸಿದ ಬಂಬಲ್ಗೊಂಬುಗಳನಿಂಬಾದಶೋಕಾನೋಕಪದಿಂಬಿನೊಳೊಂದಿ ಮಂದ ಯಿಸಿ ನೀಳ್ದು ಪರ್ವಿ ಪೆರ್ವೆರ್ಪೆತ್ತ ಕರ್ಮುಗಿಲೊಳಗೆ (ನೇಮಿಪು. ೫-೩೨ ವ). [ಬಂಬಲ್$_1$ + ಕೊಂಬು$_1$]

**ಬಂಬಲ್ಗೊಳ್** (ಕ್ರಿ). ಗುಂಪಾಗು ; ಸಾಂದ್ರವಾಗು ; ಮಂದಯಿಸು : ಚೆಂಬಾಯ್ದೆರೆಯಂ ಬಂದುಗೆಯೆಂಬಾಸೆಯಿನೊಸೆದು ಮುಸುಱಿ ಬಂಬ ಲ್ಗೊಂಬಾ ತುಂಬಿಗಳೆನೆಯೆಳಮಿಸೆಯುದೇಂ ಬಳೆದುದೊ ಚಂದುವೊಗದ ಕೞಿಗೞಿದೊರೆವೊಲ್ (ಶಬರ. ೯-೧೭೯). [ಬಂಬಲ್$_1$ + ಕೊಳ್$_1$]

**ಬಂಬಲ್ಜಡೆ, ಬಂಬಲ್ಜೆಡೆ** (ನಾ). ಹೆಣೆದುಕೊಂಡಿರುವ ಕೂದಲು ; ಜಟೆ : ನೀಳ್ದ ಬಂಬಲ್ಜಡೆ ನರೆ ಮೆರೆಯಲ್ ಸ್ಥಾಣುವೋಲ್ ನಿಶ್ಚಲತ್ವಂ ಬೆರಸಾದಂ ಸೂರ್ಯಬಿಂಬಕ್ಕಭಿಮುಖನೆನಿಪೀ ವಹಾನಿ (ಶಾಕುಂತ. ೧೦೨-೧೬೪). **ಬಂಬಲ್ಜೆಡೆ :** ಎಳಮಿಂಚಂ ಪೋಲ್ವ ಬಂಬಲ್ಜಡೆ ಬಳೆದ ಘನಶ್ಮಶ್ರು . . . ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ (ರಾಜಶೇ. ೦-೦೩೦). [ಬಂಬಲ್$_1$ + ಜಡೆ$_1$]

**ಬಂಬಲ್ಜೆಡೆ** 'ಬಂಬಲ್ಜಡೆ' ನೋ.

**ಬಂಬಲ್ದಂಬುಲ** (ನಾ). ಕಟ್ಟುವೀಳೆಯ : ಕರಂ ಮೆಯ್ವೆತ್ತು ಮುಯ್ಯಾಗವಮಾಗಡುವಮಾರ್ಗಂ ಕುಡುತಿರ್ಪ ಕಪ್ಪುರದ ಬಂಬಲ್ದಂಬುಲಂ (ಶಂಪಭಾ. ೯-೦೦೯). [ಬಂಬಲ್$_1$ + ತಂಬುಲ]

**ಬಂಬಲ್ದಗುಳ್** (ಕ್ರಿ). ದಟ್ಟಯಿಸು ; ಸಾಂದ್ರವಾಗು ; ಅಧಿಕವಾಗು : ಹೇಮಂತದೊಳ್ ಮದಮುಂ ತಗು[ಳ್ದು] ಶಿಶಿರದೊಳುಱಿದು ಮತ್ತಂ ಬಸಂತದೊಳ್ ಬಂಬಲ್ದಗುಳ್ದ ಮದನವಮದಾನೇಕಪಕ್ಕೆ ಪಕ್ಕಾದಳೀಕ (ಶಾಂತಿಪು. ೯-೫೯ ವ). [ಬಂಬಲ್$_1$ + ತಗುಳ್$_1$]

**ಬಂಬಲ್ದೆರೆ** (ನಾ). ಒಂದಾದ ಮೇಲೊಂದರಂತೆ ಬರುವ ಅಲೆ ; ತರಂಗವಾಲೆ : ಎಡೆಗುಡದೆ ನೂಂಕಿ ಮೆಲ್ಲನೆ ತಡಿಯಂ ಸಾರ್ಚಿದ ಪುದಿದಱ ಬಂಬಲ್ದೆರೆಗಳ್ (ಶಂಪಭಾ. ೫-೩೩) ; ಪಾಲ್ದುಂಬಿದ ಸಾಲ್ದೆನೆಗಳ ನೆಲ್ದಱುಗಲನೊಲ್ದು ಸೀಳೆ ಗಿಳಿ ಭಯಭರದಿಂ ಜೋಲ್ದಿಳಿಗೆಗಿಳಿವಂತಿರೆ ಬಂಬಲ್ದೆರೆಯೊಳ್ಪೊಳೆದು ಪಾಡಿಯ ನೀರೊಳ್ಪೋರ್ಕುಂ (ರಾಜಶೇ. ೨-೦೩). [ಬಂಬಲ್$_1$ + ತೆರೆ$_4$]

**ಬಂಬಲ್ದೊಱೆ** (ನಾ). ತೊರೆಗಳ ಸಮೂಹ : ಅಲರ್ವಂಡಿಂದಾದ ಬಂಬಲ್ದೊಱೆಗಳ ನಲವಿಂ ದಾಂಟ ಪೋಪನ್ನೆಗಂ (ಕಾವ್ಯಸಾ. ೦೦೩). [ಬಂಬಲ್$_1$ + ತೊಱೆ$_2$]

**ಬಂಬಲ್ನಿಱಿ** (ನಾ). ಒತ್ತಾದ ನೆರಿಗೆ ; ದಟ್ಟವಾಗಿರುವ ನಿರಿಗೆ : ಬಂಬಲ್ನಿಱಿ ಮದನನ ನನೆಯಂಬಿನ ಪೊದೆಯೆನಿಸೆ ಕಣೆಯವುಳವಟ್ಟಿರೆ ಮುಯ್ವಂ ಬಳಸಿದ ಮೇಲುದು ಕುಚಮುಂ ಬಿಗಿದಿರೆ ಗುರುನಿತಂಬ ದುಗುಲವಮನುಟ್ಟಳ್ (ಜಗಂ. ೦೦-೦೦೬). [ಬಂಬಲ್$_1$ + ನಿಱಿ$_2$]

**ಬಂಬಲ್ಮಿದುಬ್** (ನಾ). ಒಂದರೊಡನೊಂದು ತೊಡರಿಕೊಂಡಿರುವ ಮಿದುಳಂಗಳ ರಾಶಿ : ಬಂಬಲ್ಮಿದುಬ್ ಪಾಯ್ತುರೆ . . . ಕಾದಿತ್ತು ಖಡ್ಗಿಪ್ರತಾನಂ (ಜಗಂ. ೭-೩೩). [ಬಂಬಲ್$_1$ + ಮಿದುಬ್]

**ಬಂಬಲ್ಮುಡಿ** (ನಾ). = ಬಂಬಲ್ಗುರುಳ್ : ಜೋಲ್ದಿರ್ದ ಬಂಬಲ್ಮುಡಿ ಶಿಥಿಲತವೆತ್ತಿರ್ದ ನೀವೀಭರಂ ಕಣ್ಗೊಗಿಪನ್ನಂ ಲೀಲೆಯಿಂದುಪ್ಪವಡಿಸಿದಳೆ ಹೃದ್ಯಾಂಗಿ ಶಯ್ಯಾಗ್ರದಿಂದಂ (ಜಗಂ. ೨-೭೪). [ಬಂಬಲ್$_1$ + ಮುಡಿ$_3$]

**ಬಂಬಲ್ವನಿ** (ನಾ). ಎಡೆಬಿಡದೆ ಸಂರಿಯುಂವ ಹನಿ : ಪನಿತ ಮೊಲೆವಾಲ ಬಂಬಲ್ವನಿಗಳೊ ನಸುನಗೆಯೊ ಮೊಳಗಳೋ ಪೊಳೆದಪುವೆಂಬಿನಮೊಗದ ಪಲ್ಲಿಮೊಪ್ಪುವ ತನಯನ ನಗೆಮೊಗಮನೆಂದು ಪೇೞು ಕಂಡಪೆನೋ (ಅರ್ಹಶೇ. ೦-೯೯). [ಬಂಬಲ್$_1$ + ಪನಿ$_1$]

**ಬಂಬಲ್ವರಿ** (ಕ್ರಿ.) ರಭಸವಾಗಿ ಓಡು : ಧಾವಿಸು : ನೇಲ್ವ ಪೆಣಕ್ಕೆ ಪರ್ದೆಱಗೆ ಪೈರಿಯ ನಾಲ್ಕುಬಲಕ್ಕಮೊಂದೆ ಬಂಬಲ್ವರಿಯುತ್ತುಮಿರ್ದುದು ಜಯದ್ವಿರದಂ (ಕಾವ್ಯಾವ. ೬೮) ; ಬಂಬಲ್ವರಿಯುತ್ತುಂ ನೆಗೆದಂಬುದಮಂ ತೇನಮಿಱಿಯುತುಂ . . . ಅದೇಂ ಬಿನದಮನಮರಪತಿಗೆ ತೋಱಿದುದೊ ಗಜಂ (ಚಂದ್ರಪ್ರ. ೦೨-೮೪) ; ಮಸಗಿದ ಮಿಟ್ಟುವೆ ಮದಗಜದೆಸಕಮನೊಳ ಕೊಂಡುದೆನಿಸಿ ಭೀಮನ ಬಲಮಂ ದೆಸೆಗೆಡಲಱಿಯಟ್ಟುತ್ತುರ್ವಿಸಿ ಬಂಬಲ್ವರಿದು ತೊತ್ತಳದುಳಿಯುತ್ತುಂ ಬಂದು (ಮಹಾಸೇ. ೦೨-೦೩೮). [ಬಂಬಲ್$_1$ + ಪರಿ$_2$]

**ಬಂಬಲ್ವರಿಗೊಳ್** (ಕ್ರಿ). ದಟ್ಟವಾಗಿ ವ್ಯಾಪಿಸು ; ಸಾಂದ್ರವಾಗು : ಕಾಲ್ಕಿಡಿದಿರ್ದೊಡಾಂ ಚರಣಪಲ್ಲವದಿಂದೊದೆದೆತ್ತಿ ಸುತ್ತಿ ಬಂಬಲ್ವರಿಗೊಂಡು ನೀಳ್ದು ಕಿಸುವೇಱಿದ ಕೇಕರಕಾಮುಪಾಶದಿಂ ಕೊಲ್ವವೋಲ್ (೮೯೦೩ವ. ೦೯-೬೬). [ಬಂಬಲ್$_1$ + ಪರಿಗೊಳ್]

**ಬಂಬಲ್ವರಿಯಿಸು** (ಕ್ರಿ). ರಭಸವಾಗಿ ಓಡಿಸು ; ವೇಗವಾಗಿ ಧಾವಿಸು ವಂತೆ ಮಾಡು : ಎರಡುಂ ಭಾಗಂಗಳೊಳ್ ತನ್ನಣುಗಿನ ಸುತರುನ್ಮತ್ತ ನಾಗಂಗಳಂ ಜೀಂಕರಿಸುತ್ತಿಂಬಾಗಿ ಬಂಬಲ್ವರಿಯಿಸೆ (ಶಾಂತಿಪು. ೫-೩೯) ; ಕರಿಯಂ ಪಾಯ್ದೇಱಿ ಬಂಬಲ್ವರಿಯಿಸಿ ಗಿರಿಯೊಳ್ ಪೋರಿಸುತ್ತುಂ ಸರಕ್ಕೇ ಸರಿ ಕಾಸಾರಕ್ಕೆ ಕೊಂಡುಯ್ಯುಪುದಿದು (೮೯೦೩ವ. ೬-೨೪) ; ರಾಕ್ಷಸಧ್ವಜ ಬಲಕ್ಕೆ ತಾರ್ಕ್ಷ್ಯಧ್ವಜರ ಬಲಮುಗಿದು ಸುಗಿವುದುಂ ಬಲದೇವಂ ಕಂಡು ತನ್ನ ಗಂಧಗಜಮಂ ಬಂಬಲ್ವರಿಯಿಸಿ ವಿದ್ವಿಡ್ಬಲದ ವೀರರಂ ವಿನಾಶಕ್ಕೆ ತಪ್ಪುದುಂ (ಮಹಾಸೇ. ೬-೮೩ ವ). [ಬಂಬಲ್$_1$ + ಪರಿಯಿಸು]

**ಬಂಬಲ್ವೆಳಗು** (ನಾ). ದಟ್ಟವಾದ ಬೆಳಕು ; ಸಾಂದ್ರವಾದ ಕಾಂತಿ : ಜೋಲ್ವ ಮೇಲುದನಿನಿಸು ಮುಸುಕುತಲರ್ಗಣ್ಣ ಬಂಬಲ್ವೆಳಗುಗಳ ಸೂಸುತೆ (ಕದ್ಮರಾ. ೬-೨೦). [ಬಂಬಲ್$_1$ + ಬೆಳಗು$_3$]

**ಬಂಬಲ್ಸರಿ** (ನಾ). ಎಡೆಬಿಡದ ಮಳೆ ; ಜಡಿಮಳೆ : ಮೆಲ್ಸರಿ ಸೂಳ್ಸರಿ ಮುಗಿಲೊಳ್ಗಲ್ಸರಿ ತೆಳ್ಸರಿ ಕರಂ ಪೊನಲ್ವರಿಯಿಪ ಬಂಬಲ್ಸರಿ ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱಿದುವಿರುಳುಂ ಪಗಲುಂ (ರಾಜಶೇ. ೬-೦೦೨). [ಬಂಬಲ್$_1$ + ಸರಿ$_6$]

**ಬಂಬಳ** (ಅ). ಹೆಚ್ಚಾಗಿ, ಅಧಿಕವಾಗಿ ಎಂಬರ್ಥವನ್ನು ಕೊಡುವ ಒಂದು ಅನುಕರಣಾವ್ಯಯ : ಕಂಬನಿಯೊಳೋಲಾಡಿ ಬಂಬಳ ಪೊಂಗಬಾಡಿ ನೋವಿಂ ಕರಂ ಬಟಲಲು (ಜಗಂ. ೦೩-೦೦೬ ರಗಳೆ). 'ಬಂಬಲ 'ಪರಾ.

**ಬಂಬಳಂ ಬಾಡು, ಬಂಬಳ ಬಾಡು** = ಹೆಚ್ಚಾಗಿ ಒಣಗು ; ಅಧಿಕ ವಾಗಿ ಸೊರಗು,—ಬತ್ತು : ಪಸಿವಿಂದಂ ತೃಷೆಯಿಂದಂ ಪಥಶ್ರಮದಿಂ ದಾದಮಾನುಂ ಸೇದೆಗೆಟ್ಟು ಬಂಬಳಂ ಬಾಡಿರ್ಪನ್ನೆಗಂ (ವಡ್ಡಾರಾ. ೦೦೦-೨೩); ಕಾಂತೆಯರ್ . . . ನಿಜವಾಸದ ವಿಳಾಸವಿಹಗಂಗಳಂ ನೋಡಿ ಬಂಬಳಂ ಬಾಡಿ (ಕೃಷ್ಣಕ. ೦೩-೯೭ ವ) ; ಆ ಬಾಳೆ ಕಾದ ಪುಡಿಯೊಳ್ ಬಿರ್ದಳವಾಳೆ ಯಂತೆ ಬಂಬಳ ಬಾಡಿ (ಸುಕುಮಾ. ೦೨-೨೪ ವ) ; ಬಂಬಳ ಬಾಡಿದ ದೇಹ ಕಟ್ಟಳಿದ ತುಱುಂಬು ಕಂದಿದ ಮೊಗದಿಂದ . . . ಪಲುಂಬಿದರು (ಭರತ. ೭೦-೭೯). **ಬಂಬಳನೆ ಬಾಡು** = ಹೆಚ್ಚಾಗಿ ಸೊರಗು, — ಬತ್ತು : ಬಂಬಳ [ಶಾಶಾಂ. ಲ]ನೆ ಬಾಡಿ ಮಂಜುಱಿದಂಬುಜಲತೆಯಂತಿರ್ದ ಜಾನಕಿಯಂ ನೀಲಾಂಬರನೀಕ್ಷಿಸಿ (ಶಂರಾಮಾ. ೦೫-೪).

**ಬಂಬಳಿಸು** 'ಬಂಬಲಿಸು' ನೋ.

**ಬಂಬಾಳ, ಬೊಂಬಾಳ$_2$** (ನಾ). ೧. ಕಣ್ಣು ಕೋರೈಸುವಂತಹ ಬೆಳಕು ; ಅತ್ಯಂತ ಪ್ರಕಾಶಮಾನವಾದ ಪ್ರಭೆ : 'ಬಂಬಾಳದೀವಿಗೆ' ಪರಾ. **ಬೊಂಬಾಳ$_2$ :** ೧. 'ಬೊಂಬಾಳದೀಪ', 'ಬೊಂಬಾಳ ದೀವಿಗೆ' ಪರಾ. ೨. ಕಣ್ಣು ಕೋರೈಸುವ ಪ್ರಭೆಯುಳ್ಳ ದೀಪ : ಚಂದನದ ತೈಲದಿಂ ದುರಿವ ಬೊಂಬಾಳಂಗಳಿಂದೆ . . . ಇರುಳ್ಗಂಗೊಳಿಸು

ತಿರೆ (ಕೃಖಣ. ೨೪-೨೬); ಚಾರಚೋರರತ್ನಣಂ ಭೀತಿಯಣಂ ನಾಡೊಳ್ ಲ್ಲನೆ ಬಾಗಿಲಂ ಪಡಿದೆಱೆದು ಬೊಂಬಾಳಂಗಳನುರಿಯಿಸಿ ತಾಂ ನಿದ್ದೆವೋದ ಸಜ್ಜನರ ಸಜ್ಜುಗೊಂಡ ಬೀಡುಗಳ ಸಾಲ್ಗಳಿಂ . . . ಕೇರಿಗಳ್ ಸೊಗಯಿಸೆ (ರಾಮಾಶ್ವ. ೨೩-೨೦); ಮುನಿಪ ಕಾಲಂಗೆಯ್ದು ನಿನ್ನುರಿವ ಬೊಂಬಾಳ ನಂದುವಂತಿವನ ಚಿತ್ತವಿಮೋಕ್ಷವಾಯ್ತು! (ಶೃಶಾಪ. ೯೯-೬೯೪).

[ ← ಮರಾ. ಬಂಬಾಳ್, ಬಂಭಾಳ್]

**ಬಂಬಾಳದೀವಿಗೆ, ಬೊಂಬಾಳದೀವಿಗೆ** (ನಾ). ಪ್ರಕಾಶಮಾನವಾಗಿ ಉರಿಯುತ್ತಿರುವ ದೀಪ; ಪ್ರಜ್ವಲಿಸುತ್ತಿರುವ ದೀಪ: ಬಂ[ಪಾಠಾಂ. ಬೊಂ]ಬಾಳದೀವಿಗೆ ಬೆಳಗಿತು ಬಾಲಾರ್ಕಬಿಂಬಗಳೆನೆ (ಶಬರಾಶಂ. ೧೪-೩೪). **ಬೊಂಬಾಳದೀವಿಗೆ**: ಬೆಳಗಿದವು ಬೊಂಬಾಳದೀವಿಗೆ (ಶುದ್ಧಾದ್ರೋ. ೯-೪೩); ಬೆಳಗಿದವು ಬೊಂಬಾಳದೀವಿಗೆ ಲಕ್ಷಸಂಖ್ಯೆಯಲಿ (ಕೊರಡಾ. ೩-೬-೩); ಹೂವಿನ ಗೊಂಚಲೆಂಬಂದದೆ ಬೊಂಬಾಳದೀವಿಗೆ ಮಱೆದುವಿಕ್ಕಲದೆ (ಮೋಹತ. ೧೩-೬).

[ ಬಂಬಾಳ + ದೀವಿಗೆ./ಮರಾ. ಬಂಬಾಳ್‌ದೀವಾ, ಬಂಬಾಳ್‌ದಿವಾ]

**ಬಂಬಿಕನೂರ್** (ನಾ). ಒಂದು ಊರಿನ ಹೆಸರು: ಬಂಬಿಕನೂರ ಪೂರ್ವ್ವಗರ ಗೊಲುಕಿಗಾವುಣ್ಡನ ಮಗ (ಎಕ. IX, (S). ಹೊಸಕೋ. ೨೦೬-೩; ೯೮೦). [ ? + ಊರ್ ]

**ಬಂಬು₁** 'ಬೊಂಬು₁' ನೋ.

**ಬಂಬು₂, ಬೊಂಬು₂** (ನಾ). ೧. ಕೊಳವೆ; ನಳಿಗೆ: ಬಂಬಿನ ಸಹಾಯದಿಂದ ಬಾವಿಯೊಳಗಿನ ನೀರು ಮೇಲೆ ತೆಗೆಯುತ್ತಾರೆ (ಮುಂಬಯಿ. ೩-೮೦). ೨. ಗಾಳಿಯ ಒತ್ತಡದಿಂದ ಕೂಗುವ ಸಾಧನ; ಸೈರನ್ನು: ಗಿರಣಿಯ ಬಂಬು ಕರೆಯುವುದು ಏಳು! (ಸೂರ್ಯಪಾ. ೩೦-೬); ಕೋಲಾಲಂಪೂರ ರೇಲ್ವೆವರ್ಕಶಾಪದ ಬಂಬು ಕೂಗಿಕೊಂಡಿತು (ಕಮಾಗ. ೧೨೬). ೩. ದೊಡ್ಡ ಪಾತ್ರೆ; ಹಂಡೆ: ಬಂಬಿನಲ್ಲಿಯ ನೀರು ಆರಿಲ್ಲ ವಷ್ಟೆ ಎಂದು . . . ಬದಿಗ ಇಟ್ಟ ಬಂಬಿಗೆ ಕೈಹಚ್ಚಿ ನೋಡಿದಳು (ತೃಷೆ. ೯೬); ಮತ್ತೊಂದು ಮೂಲೆಯಲ್ಲಿ ಝುಗಝುಗಿಸುವ ಬಿಸಿನೀರಿನ ಬಂಬು (ಸಾವಿಶಾ. ೨). **ಬೊಂಬು₂**: ೧. "ಬೊಂಬು = ಕೊಳವೆ" (ಜಾನಕೋ. ೨೪). [←ಅರಂ. ಹಿಂ. ಬಂಬಾ; ಮರಾ. ಬಂಬ್]

**ಬಂಬುಚ್ಚು** 'ಬಂಬೂಚು' ನೋ.

**ಬಂಬೂಚು, ಬಂಬುಚ್ಚು** (ನಾ). (ಕರಾ) ತೇವದಿಂದ ವಸ್ತ್ರಗಳ ಮೇಲೆ ಬರುವ ಒಂದು ಬಗೆಯ ಕ್ರಿಮಿ: ಎಲ್ಲಕ್ಕು ಹಣ ತೆತ್ತು ಬಿತ್ತಿದರೂ ಆ ಹಂದಿ ಹರಿಣ ಮೊದಲಾದ ಕಾಡು ಪ್ರಾಣಿಗಳ ಕಾಟ ಬೇರೆ. ಬಂಬೂಚು ರೋಗವೂ ತಪ್ಪಿದ್ದಲ್ಲ (ಜಾಗಿ. ೧೦೪). **ಬಂಬುಚ್ಚು**: ಈ Racket ಕೃಷಿ departmentನವರಿಗೆ ಬಂಬುಚ್ಚು ಹಿಡಿಯಲಿ ಕ್ಕಾದೀತು (ಮುಗಿಯು. ೦೮೦). [< ಬೂಜು₁ ?]

**ಬಂಭರ** (ನಾ). ತುಂಬಿ; ಭ್ರಮರ: ಗಂಡಸ್ಥಲದ ಮದಪರಿಮಳಕೆ ಬಂದೆರಗುತಿಹ ಬಂಭರವ ಪೊಡೆವ ವಿಶಾಲಕರ್ಣಾಂಚಲದ ಮಾರುತನ (ಅನಂತಾ. ೦-೦-೪); ಮೃದುರವದಿಂದಲೆಡಬಲದಿ ನಾದಿಸುವ ಕೋಗಿಲೆ ಶುಕಾಳಿಗಳ ಭೋರ್ಗರೆವ ಬಂಭರಗಳ . . . ನೋಡುತ್ತ (ಕೀಶಾಶಾ. ೩-೪-೩೨). [ಸಂ.]

**ಬಂಭ್ರಮಿಸು** (ಕ್ರಿ). ಅತಿಶಯವಾಗಿ ಸುತ್ತು,-ತಿರುಗು: ಎಂಭತ್ತು ನಾಲ್ಕುಲಕ್ಷಗುಣಗಳೆಂಬ ಗಂಭೀರದ ನೇಣ ಬಿಗಿದು ಬಂ[ಪಾಠಾಂ. ಸಂ]ಭ್ರಮಿಸದ ಧ್ಯಾನವೆನಿಪ ನೊಗವ ಮಾಡಿ ಸಂಭ್ರಮ ಮಿಗೆ ಹೂಡಿದನು (ಕೃಶುಶಾಂ. ೦೦-೦೦೪); ಕಂಗಳು ಬಂಭ್ರಮಿಸಿ, ಹುಮ್ಮುಕ್ಕಿ ಜಂಗಮಿಸಿ ಎದೆ ಮೊಗ ಕೆಳಗಿಳಿಸಿ ನೋಡುತಿರೆ (ಕಜೀಗಿ. ೪೪-೯೦೪).

[ಬಂ₂ (ಬ ← ಸಂ. ಭ್ರಮ) + ಭ್ರಮಿಸು]

**ಬಂಹಿಮ** (ನಾ). ಹೆಚ್ಚಳ; ಆಧಿಕ್ಯ; ಅತಿಶಯ: ಬಂ [ಪಾಠಾಂ. ಬ್ರಂ]ಹಿಮವಚ್ಚಳಲಕ್ಷ್ಮಿಯ ಸಿಂಹಂಗಳನಂತಬಳನ ಪಾದಾಂತಿಕದೊಳ್ ಸಂಹತಿಗೊಂಡಿರ್ದಪುವೆನೆ ಸಿಂಹಾಸನಮೆಸೆದುದಮಳಮಣಿಖಚಿತಂಗಳ್ (ಅನಾವ. ೬-೯೬); ಅಸುರಾರಿಯ ಪೊರ್ಕುಳ ಪದ್ಮಮಂ ಖರದ್ಯೋತಿಯ ಕೆಯ್ಯ ಕಂಜಮುನಿದೆಯ್ದೆ ಸುರುಳ್ಚುಗುಮೆಂಬಿನಂ ಜಗತ್ಕೌತುಕಮಾಯ್ತು ನುಷ್ಣ ಮಹಿಮಂ (ಕುಶ್ವಕ್ಕ. ೬-೯೬). [ಸಂ. ಬಂಹಿಮನ್]

**ಬಕ** (ನಾ). ೧. (ಯುಕ್ತಿ, ಮೋಸ ಹಾಗೂ ಜಾಗರೂಕತೆಗಳಿಗೆ ಹೆಸರಾದ) ಕೊಕ್ಕರೆ ಜಾತಿಯ ಒಂದು ಬಗೆಯ ಹಕ್ಕಿ: "ಬಕಃ. ಬಕೋಟಃ— ಈ ೨ ಬಕಂ" (ಹಲಾಯು. ೪೨-೯೬); ಬಕ ಕುರರಪಕ್ಷವಿಕ್ಷಿಪ್ತಕಂಜಕಿಂಜಲ್ಕ ಪುಂಜಪಿಂಜರಿತಾಚ್ಛೋದಕ ಪರಿಪೂರ್ಣತಟಾಕಪ್ರಕರ ಸರೋನಿಕರರಂಜಿತಾಶಾವಲಯಂ (ಅಜಿಪು. ೬-೩೬); ಬೆಳುವ ಬೆಂಚಗ ಬೊಕ್ಕ ಬಕ ಮೀಂಬುಲಿಗ ಕೆಂಜರಿಗಣ್ಣ ಶಿಖಿ ಮಡಗೊಳಲೆ ಮುಖ್ಯವಿಹಂಗವಿವೆ (ಕೊಶಾ. ೬-೦-೩೬). ೨. ಕಪಟಿ; ವಂಚಕ; ಠಕ್ಕ. ೩. ಭೀಮಸೇನನಿಂದ ಹತನಾದ ಒಬ್ಬ ರಾಕ್ಷಸ: ನೇಸಱ್ ಮೂಡಿದುದು ಬಕಂಗೆ ವಿಟ್ಟು ಮೂಡುವ ತೆಱದಿಂ (ಪಂಪಭಾ. ೩-೨೬); ಬಕನಂ ಹಿಡಿಂಬನಂ . . . ಜರಾಸಂಧನನಿಕ್ಕಿ ಕೊಂದ ಬಲ್ಲಾಳ್ಗೆರುತ್ತುಂತಂ ಕೇವಳನೇ (ಗದಾಯು. ೨-೪೬); ವಿಕಟಭುಜಬಲರೇಖಚಕ್ರದೊಳಕುಟಿಲರು ಭೂಸುರರ ರಕ್ಷಿಸಿ ಬಕನ ಮುಱಿದರು (ಕುವ್ಯಾಆ. ೦೦ ಸೂಕಪ). ೪. ಕೃಷ್ಣನಿಂದ ಹತನಾದ (ಕೊಕ್ಕರೆಯ ರೂಪದ) ಒಬ್ಬ ರಾಕ್ಷಸ: ಸಂದ ಪೂತನಿ ಬಕರೆನಿಪ್ಪವರಿಂದ ಕಿಱಿಯನುದಾರವಿಕ್ರಮನಿಂದು ಬಾಲಕರಾಟವನು ಮಾಣಿಸುವೆನು (ಕಆಗ. ೦೦-೦೨-೦೬). ೫. ಒಂದು ಬಗೆಯ ಗಿಡ: "ಶಿವಮಲ್ಲೀ, ಪಾಶುಪತಃ, ಏಕಾಷ್ಠೀಲಃ, ಬಕಃ, ವಸುಃ – ೫ ಬಕಪುಷ್ಪದ ಹೆಸರು, ಕೊಕ್ಕರೇ ಹುವ್ವಿನ ಗಿಡ" (ಶಿದ್ಯಾಚಿ. ೦೩೧). ೬. ಖನಿಜಗಳನ್ನು ಸುಡುವ ಅಥವಾ ಘನಭಟ್ಟಿ ಇಳಿಸುವ ಒಂದು ಸಾಧನ: ಲಾವಾವನ್ನು ಬಟ್ಟಿ (ಬಕ)ಗಳಲ್ಲಿ ಕಾಯಿಸಿದರೆ, ಗಂಧಕವು ಕಾದು ಕರಗಿ, ಅನಿಲರೂಪವನ್ನು ತಾಳಿ, ಇನ್ನೊಂದು ಕಡೆಗೆ ಬಂದು, ಗಂಧಕವಾಗಿ ಗಟ್ಟಿಗಟ್ಟುವುದು (ಶಾಂಶ್ರ. II, ೬೩೪). [ ಸಂ. ]

**ಬಕಗ್ರೀವ** (ನಾ). ಬರವಣಿಗೆಯಲ್ಲಿ ಉದ್ಧೃತಭಾಗಗಳನ್ನು ತೋರಿಸಲು ಬಳಸುವ ಚಿಹ್ನೆ; (" "): "ಬಕಗ್ರೀವದಲ್ಲಿ" ಎನ್ನುವುದು "in inverted commas" ಎಂಬುದಕ್ಕೆ ಕನ್ನಡ! ನಮ್ಮಲ್ಲಿ ಹಿಂದಿನಿಂದಲೂ ಇರುವ "ಹಂಸಪಾದ" ಎಂಬುದರ ಮಾದರಿಯ ಮೇಲೆ, ಈ "ಬಕಗ್ರೀವ"ವನ್ನು ಅನುವಾದ ಚಿಹ್ನೆ ಎಂಬ ಅರ್ಥದಲ್ಲಿ . . . ಬಳಕೆಗೆ ತಂದಿದ್ದರು (ಶಂಬಕು. ೩೦). [ಸಂ.]

**ಬಕತರ** (ನಾ). ಲೋಹದ ಜಾಲರಿಯಿಂದ ಕೂಡಿದ ಕವಚ: ದಂತದ ಸೂನಗೆ ಸೊಂದಿಲೊಳಾಂತಸಿಮ್ಯಗಮರ್ದ ಜಿಲೆಯ ಬಕತರ ಜೂಡಾಲಂ ತೊಳಪಾನೆಯನೇರ್ದಿದಿರಾಂತಂ ಧುರಕಾ ಬರೀದಯಮಾಧೀಶಂ (ಕಕಪ್ಕ. ೨-೨೬); ಭರಿಕ್ಕೆಗಳೊಳಾಂತಸಿ ಬಕತರ ದಂತಂಗಳೊಳಮರ್ದ ಸೂನಗೆಯೆಸೆಯಲ್ ಕರಪದಮೊಗೆದೆಡೆಯಾಡುವ ಗಿರಿಕುಲಮೆನೆ ಕವಿದು ಮಾನೆವಿಂಡಿಱ್ದಿಸಯೊಳ್ (ಕಕಪ್ಕ. ೨-೨೯).

[←ಪಾರ. ಹಿಂ. ಬಕ್ತರ್, ಬಖ್ತರ್; ಮರಾ. ಬಕತರ್, ಬಕ್ತರ್, ಬಖತರ್, ಬಖ್ತರ್]

**ಬಕಧ್ಯಾನ** (ನಾ). ಬಕಪಕ್ಷಿಯು ತನ್ನ ಆಹಾರದ ಮೀನಿಗಾಗಿ ನಿಶ್ಚಲವಾಗಿರುವಂತೆ ಮಾಡುವ ಧ್ಯಾನ; **ಕಪಟಧ್ಯಾನ**: ಗೀರ್ವಾಣಭಾಷೆಯೊಳ್ ಸ್ವಸ್ತಿಯಂ ವಾಚಿಸಿದನೋಂಕಾರವೆರಸಿ, ಬಕಧ್ಯಾನಮಂ ನಿಂದಿಪೋಲಲ್ಲೆ ನಿಂದನು, ಬಗೆಯ ಬಾವಿಯಂ ರೆಪ್ಪೆವುಲ್ಲಿಂದಡಕಿ ಮುಚ್ಚಿ (ಶ್ರೀರಾಮಾ. ೨೪೩-೪೨೩). [ಸಂ.]

**ಬಕಬಂಧನ** (ನಾ). (ಬಕಪಕ್ಷಿಯನ್ನು ಹಿಡಿಯುವ) ವಿಫಲವಾದ ಪ್ರಯತ್ನ : ಹೋದ ದಾರಿಯೆ ಹೋಕೆ ! ಬಕಬಂಧನಕೆ ವೃಥಾ ಯತ್ನಿಸದಿರ್ಕೆ ಗೆಳೆಯ (ಹಪ್ಪಕ. ೧೭-೯೩). [ಸಂ.]

**ಬಕಬಂಧನಕೌಶಲ** (ನಾ). (ಆಲಂ)ಸರಳರೀತಿಯಿಂದ ಮಾಡಬಹುದಾದ ಕೆಲಸವನ್ನು ಕಠಿಣಮಾರ್ಗದಿಂದ ಮಾಡುವಿಕೆ ; ವೃಥಾಶ್ರಮ ಪಡುವಿಕೆ : ನಿಮ್ಮ ಮಾತು ಬಕಬಂಧನಕೌಶಲವೇ ಹೊರತು ಬೇರೆಯಲ್ಲ (ಕಿಪ್ಪಕೇ. ೬೦). 'ದ್ರಾವಿಡಪ್ರಾಣಾಯಾಮ' ಹೋ. [ಸಂ.]

**ಬಕರ** 'ಬಕರಾ' ನೋ.

**ಬಕರಾ, ಬಕರ** (ನಾ). ೧. ಗಂಡಾಡು ; ಹೋತ. ೨. (ಆಲಂ) ಏನೂ ತಿಳಿಯದವನು ; ದಡ್ಡ : ಈ ಕೇಶವರಾಯನಿಗೆ. ಅದೆಷ್ಟು ಮನಸ್ಸು ಚಲಿಸಲಿಲ್ಲವೆಂದರೆ ನಂಬುವ ಬಕರಾ ಯಾರು ? (ಬೆಂಗಬ. ೩೩) ; ಹತ್ತು ಗಂಟೆಗೆ ಒಬ್ಬ 'ಬಕರಾ'ನನ್ನು ಹಿಡಿಯಬೇಕಾಗಿದೆ. (ಎಡಹ. ೬೩). **ಬಕರ** : ೧. ಜೀವಣ್ಣ ಬೆದರಿದ ಬಕರನಂತೆ ಬೆಚ್ಚಿ ಹಿಮ್ಮೆಟ್ಟಿದ (ತಮಮಹ. ೦೦೯). ೨. ಅಂಗಡಿಯವನಿಗೂ ಆ ಬಿದ್ದ ಬಕರನಿಗೂ ಮಾರಾಮಾರಿಯಾಯಿತು (ವೃದ್ಧವಿ. ೬೯). [←ಹಿಂ. ಬಕರಾ ; ಮರಾ. ಬಕರಾ, ಬಕರೀ, ಬಕರೇ. / ಸಂ. ಬರ್ಕರ]

**ಬಕರೆ** 'ಬಕ್ಕರೆ' ನೋ.

**ಬಕವಿಡಂಬನ** (ನಾ). ಸೋಗು ; ಕಪಟ : ವಿಕಳರಾವಿದನೆತ್ತ ಬಲ್ಲವು ಸಕಲಗುಣಸರ್ವಜ್ಞ ನಿನಗೀ ಬಕವಿಡಂಬನವೇ (ಕುವ್ಯಾ. ೨೨-೨೦). [ಸಂ.]

**ಬಕವೃತ್ತಿ** (ನಾ). ೧. ಮೋಸಗಾರಿಕೆ ; ಕಪಟ : ಬಕವೃತ್ತಿ ಪಿಸುಣತನ ಪರನಿಂದೆ . . . ದೋಷಾಕರಗಳು (ಜೀವಂಕ. ೩-೯೯) ; ಪರಸ್ತ್ರೀವ್ಯಸನ ವತ್ಸಾಚಾರ ಬಕವೃತ್ತಿ ಕೃತವಿನಾಶನ ಡಂಭ ಹಿಂಸಾರತಿ ನಿಜಾನ್ವಯಧರ್ಮ ಕರ್ಮಚ್ಯುತಿಗಳವು ದೋಷಾಂಕುರಂಗಳು (ಕುವ್ಯಾಅ. ೦೩-೦೪). ೨. ಮೋಸಗಾರ ; ವಂಚಕ. [ಸಂ.]

**ಬಕವೇಸಿತನ** (ನಾ). ಮೋಸದ ವ್ಯಭಿಚಾರ : ಬಕವೇಸಿತನದಿಂದೊಡಲ ಸೂಡಿಂಗಿರಲಾಜಿದೆ ಪುಸಿಗೂರ್ಮೆಯಿಂದೋಪಳನಪ್ಪಿಕೊಂಡು (ಧರ್ಮಾಮೃ. ೬-೩೩). [ಬಕ + ವೇಸಿ$_1$ (<ವೇಶಿ) +—ತನ]

**ಬಕವೈರಿ** (ನಾ). ೧. ಬಕನ ರೂಪದಲ್ಲಿದ್ದ ರಾಕ್ಷಸನನ್ನು ಕೊಂದವನು; ಕೃಷ್ಣ : (*). ೨. ಬಕಾಸುರನನ್ನು ಕೊಂದವನು ; ಭೀಮಸೇನ : ಶುಕಮುನಿಯಂತೆ ಸ್ತುತಿಸಲಱಿಯೆ ಬಕವೈರಿಯಂತೆ ಧ್ಯಾನವ ಮಾಡಲಱಿಯೆ (ಶ್ರೀರಂಡ. ಧಾ. ೧-೮೦-೦) ; ಆ ನೃಪಂ ಬಕವೈರಿಗಿಂತೆಂದನು (ಕೃಮಿಶಾ. ೪-೬೦). [ಸಂ. ಬಕವೈರಿನ್]

**ಬಕವ್ರತಿ** (ನಾ). (ಮೋಸ ಮಾಡುವುದಕ್ಕಾಗಿ) ತಪಸ್ವಿಯಂತೆ ನಟಿಸುವವನು : ಸ್ವಾಮಿಕಾರ್ಯವಿಘಾತಕಂಗತಿಕಾಮುಕಗೆ ಮಿಥ್ಯಾಪ ವಾದಿಗೆ ಭೂಮಿದೇವದ್ವೇಷಿಗತ್ಯಾಶಿಗೆ ಬಕವ್ರತಿಗೆ . . . ಪರಲೋಕವಿಲ್ಲ (ಕುವ್ಯಾಅ. ೪-೨೭). [ಸಂ. ಬಕವ್ರತಿನ್]

**ಬಕಳು** (ನಾ). ಒಂದು ಬಗೆಯ ತೆರಿಗೆ (?) : ಆ ಹಳಿಗಳ ಪೂರ್ಬ್ಬಾಯ ಅಪೂರ್ಬ್ಬಾಯ ತಾಣ ಅಭೋಗ ಬಕಳು ಕತುಪೆ ಬಂಡಿ ಅರವಟ್ಟಿಕೆ ಕುದಿರೆಹದಿಕೆ ಆನೆಹದಿಕೆ (ಎಕ. IX (S). ಬೆಂಗಳೂ. ೧೬೯-೨ ; 1329). [?]

**ಬಕಾಟ** (ನಾ). ಪುರುಷನ ಜನನೇಂದ್ರಿಯ : ನೀ ಅವಡ ಕಟ್ಟಿ ಹಿಡಿದರ ಕಾಡ ಕನ್ಯಾಣಾ ಬಕಾಟ ಕಚ್ಚಿ ಹೋದೀತು ! (ಹೂಸಂಕಾ. ೨೩). [← ಮರಾ. ಬಕಟೀ]

**ಬಕಾರ** (ನಾ). 'ಬ' ಎಂಬ ಅಕ್ಷರ : ಬಕಾರಕ್ಕೆ — ನಾಂಬಂ, ಎಂಬಂ, ತಿಂಬಂ (ಶಮದ. ೨೪೨ ಪ್ರಯೋ). [ಸಂ.]

**ಬಕಾರಿ** (ನಾ). = ಬಕವೈರಿ ೨ : ಕುರುಕುಲಮಂ ಬಕಾರಿ . . . ತವೆ ಕೊಂದ ಮುಾಟ್ಕೆಯಿಂದುರುತರ ಬಾಹುವಿಕ್ರಮದೆ ನಾಂ ತವೆ ಕೊಲ್ಲದೆ ಮಾಣೆಂ (ಶಂಕಕಂ. ೨೩೪-೦೩) ; ಧರೆಯೊಳ್ ಬೀರದ ವೆಂಪಿಂ ನರನಿಂದಿರ್ಮಡಿ ಬಕಾರಿಯಿಂ ಮೂಮಡಿ ಭಾಸ್ಕರಸುತನಿಂ ನಾಲ್ವಡಿ ಶಂಕರನಿಂದಯ್ವಡಿ ನೆಗೞ್ತೆಯುದಟರ ಭೀಮಂ (ಕಾವ್ಯಾವ. ೬೦) ; ಕೀಚಕನಂ ಬಕಾರಿ ಮುಱಿದಂ (ಸೋಮೇಕ. ೩೯).

**ಬಕಾರಿನಂದನ** = ಭೀಮನ ಮಗ ; ಘಟೋತ್ಕಚ : ಆರಿವನು ಹೈಡಿಂಬನೀಚೆಯಲಾರು ಭೀಮಜನಿತ್ತಲಾರು ಬಕಾರಿನಂದನನೆನಲು ಬಲವಿರುಳಸುರಮಯವಾಯ್ತು (ಕುವ್ಯಾದ್ರೋ. ೦೬-೯೭). [ಸಂ.]

**ಬಕಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಪ್ರಕಾರ : ಮುಖ್ಯವಾದ ಕೆಲವು ಆಸನಗಳು, ಅಷ್ಟವಿನ್ಯಾಸಗಳು—೧. ಉತ್ತಾನಾಸನ . . . ೧೨. ಬಕಾಸನ (ಶಾರದ. ೦೬೬) ; ಬಕಾಸನ . . . ಬಕ' ವೆಂದರೆ ಕೊಕ್ಕರೆ. ಈ ಭಂಗಿಯಲ್ಲಿರುವಾಗ, ದೇಹವು, ನೀರಿನಲ್ಲಿ ಹಾಯ್ದು ಹೋಗುವ ಕೊಕ್ಕರೆಯ ರೂಪವನ್ನು ಹೋಲುತ್ತದಾದುದರಿಂದ ಈ ಆಸನಕ್ಕೆ ಈ ಹೆಸರು (ಯೋಗದ. ೨೨೯). [ಸಂ.]

**ಬಕಾಳ** (ನಾ). ವ್ಯಾಪಾರಿ ; ಉದ್ಯಮಿ : (*). [←ಅರ. ಹಿಂ. ಬಕ್ಕಾಲ್ ; ಮರಾ. ಬಕಾಲ್, ಬಕ್ಕಾಲ್]

**ಬಕಾಳಭಾತು** (ನಾ). (ಅಂಗಡಿಯವನು ಮಾರುವ) ಮೊಸರನ್ನ : ಈವತ್ತು ಅವರ ಮನೆಯಲ್ಲಿ ಪುಳಿಯೋಗರೆ, ಬಕಾಳಭಾತು ಮಾಡಿದ್ದರು (ರೂಢಿ). [ಬಕಾಳ + ಭಾತು]

**ಬಕೀಟು** 'ಬಕೆಟ್ಟು' ನೋ.

**ಬಕುತ, ಬಗುತ** (ನಾ). ಗುರು, ಹಿರಿಯರು, ದೇವರುಗಳಲ್ಲಿ ಭಕ್ತಿಯುಳ್ಳವನು ; ಭಕ್ತ : "ಬಕುತ (ಬಗುತ)—ಭಕ್ತ" (ಶಬ್ದಕೋ. ೨೭) ; ಬಡಿಸಿದರುಂಡು ತೇಗುವ ಬಕುತರಿಗೆ ನೂರ್ಮಡಿ ಸತ್ಫಲವನೆಯ್ದುಸುವೆ (ಸೋಹಕ. ೩೯-೯೭) ; ತ್ರಿಭುವನದೊಳಗಿಹ ಬಕುತರಿಗನುದಿನ ಶುಭಗಳನಿತ್ತು ರಕ್ಷಿಸುತ (ಕೀವಪ. ೦-೨). **ಬಗುತ** : ಬಗುತರುಗಳಂ ಚಿವುಟಿದಡೆ ಹಾಲುಗುವವೇ (ಬಸಪು. ೩೭-೬೩) ; ತದ್ದ್ರವ್ಯದೊಳಗೆನಿತು ಬಗುತರ್ ಬಂದೆರೆ ದೊಡವರ್ ಬೇಡಿದುದನಿಲ್ಲೆನ್ನದೀವಂ ಗಡ (ಶಬ್ದಕಾ. ೯-೭). [<ಸಂ. ಭಕ್ತ]

**ಬಕುತವತ್ಸಲ** (ನಾ). ಭಕ್ತರಲ್ಲಿ ಪ್ರೀತಿಯುಳ್ಳವನು ; ಭಕ್ತವತ್ಸಲ : ಬಕುತವತ್ಸಲ ಶ್ರೀರಂಗೇಶ ಸಾಹಸ್ರಮುಖನ ತಲ್ಪದೊಳೆಸೆದಿಹನು (ಕೀಪಪ. ೬-೯೩). [< ಸಂ. ಭಕ್ತವತ್ಸಲ]

**ಬಕುತಿ, ಬಗುತಿ** (ನಾ). ಭಕ್ತಿ : "ಬಕುತಿ (ಬಗುತಿ)—ಭಕ್ತಿ" (ಶಬ್ದಕೋ. ೨೭); ಸಂಪ್ರೀತಿಯುಹ ನವವಿಧದ ಬಕುತಿಗೆ ಸಿಲುಕ (ಕುವ್ಯಾಅ. ಓಂ೩. ೩-೦೩); ಆಲಿಗಳೆವೆಯಲುಗದೆ ಬಕುತಿಯಲಿ ತ್ರಿಶೂಲಿಯ ಮೇಲೆ ಕಣ್ಣನವ ಕೀಲಿಸಿದನು (ಸೋಹಕ. ೨೦-೩೩); ಅಕಳಂಕಚರಿತ ಬೆಟ್ಟದ ಚಾಮೇಂದ್ರನ ಬಕುತಿಗೆ ಮನವೊಲಿದಿಹನು (ಕಂಸಹ. ೪-೪೦). **ಬಗುತಿ** : "ಬಕುತಿ (ಬಗುತಿ)—ಭಕ್ತಿ" (ಶಬ್ದಕೋ. ೨೭). [< ಸಂ. ಭಕ್ತಿ]

**ಬಕುರ** (ನಾ). ಒಂದು ಬಗೆಯ ಊದುವ ವಾದ್ಯ ; ಕಹಳೆ : ಆ ವಾದ್ಯಗಳ ಸಮೂಹದಲ್ಲಿ . . . ನಾಡೀ, ತುರವ, ಬಕುರ ಮುಂತಾದ, ಮರು ದ್ವಾದ್ಯಗಳೂ ಹೆಸರಿಸಲ್ಪಟ್ಟಿವೆ (ಸಂಗೀಕಂ. ೦೦೪). [ಸಂ.]

**ಬಕುಶ** (ನಾ). [ಜೈನ]ಮುನಿಗಳ ಐದು ಪ್ರಕಾರಗಳಲ್ಲಿ ಒಂದು ಪಂಗಡ : ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಅಯ್ದು ಪ್ರಕಾರಗಳು (ಜೈನಧ. ೯೯). [< ಸಂ. ವಕುಶ]

**ಬಕುಳ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು; ನಾಗಕೇಸರ ; ೭ ದೋಹದಕ್ರಿಯೆ ಮಾಡುವಾಗ ಸ್ತ್ರೀಯರು ಮದ್ಯಪಾನ ಮಾಡಿ ಬಕುಳವೃಕ್ಷದ ಮೇಲೆ ಉಗುಳಿದರೆ ಅದರ ಹೂವುಗಳು ಅರಳುವುವೆಂಬುದು ಕವಿಸಮಯಗಳಲ್ಲಿ ಒಂದು : "ವಕುಳದೊಳೆ

ಬಕುಳಂ" (ಕರ್ಣಾ. ೩೫) ; ಬಕುಳದ ಪೂವಿನಕ್ಷವಳಯಕ್ಕೆ ದುಕೂಲದ ಚೆಲ್ವನಪ್ಪ ಸಾಳಿಗೆಗೆ ಪಯೋಜಸೂತ್ರನವಮುಂಜೆಗೆ ನೇತ್ರದ ಕೋವಣಕ್ಕೆ ವಿಕ್ಕಗುರುವ ಬೂದಿಗೊಡ್ಡೆ ತನುವಂ . . . ನಿಂದಳೊರ್ವಳಂ ಕಂಡು (ಶಾಂತಿಪು. ೬-೯೦) ; ಬೇಲ ಬೊಬ್ಬುಲಿ ಬಕುಳ ಶಮಿ ಕುದ್ದಾಳ . . . ಪಿಪ್ಪಲ ಮಾಲೆಯಿವ ನೋಡಬಲೆ (ಕೂಠರಾ. ೩-೧-೨೬).

**ಬಕುಳದ ಮಡಕೆ** = (?) : ಖಡುಗಿ ಹಳಚುವ ಖಳನ ಮಸ್ತಕವೊಡೆಯಲೊದೆದನು ತಿರುಗಿ ಬಕುಳದ ಮಡಕೆವೊಡೆದಂತಾಯ್ತು ಚಿಮ್ಮಿದು ದರುಣಜಲ ನಭಕೆ (ಕಿಭಾಗ. ೬-೭-೪೬) ; ಜರಿದ ಬಕುಳದ ಮಡಕೆಯಂದದಿ ಮುರಿವ ಹನುಮನು ಸತ್ವಗೆಟ್ಟುದು ಹರಣ ತಳಕೆಳಕಾಗೆ ಧರೆಯೊಳು ಬಿದ್ದನಾ ಹನುಮ (ಮೂರಿರಾ. ೫-೨೭). [ಸಂ. ಬಕುಲ]

**ಬಕೆಟ್ಟು**, ಬಕೀಟು (ನಾ). ನೀರು ಸೇದಲು, ತುಂಬಿಡಲು ಹಾಗೂ ಒಯ್ಯಲು ಉಪಯೋಗಿಸುವ ಮರದ ಅಥವಾ ಲೋಹದ ಹಿಡಿಯುಳ್ಳ ಪಾತ್ರೆ; ಬಾಲ್ದಿ (ಉಕ) : ಮೊನ್ನೆ ಫಿನಾಯಲ್ ಹಾಕಿದ ಬಕೆಟ್ಟಿನಲ್ಲಿ ಹುಳಿ ತಂದು ಬಡಿಸಿಬಿಟ್ಟರು ಪುಣ್ಯಾತ್ಮರು (ಅಗಸ್. ೭೫) ; ಟ್ರ್ಯಾಕ್ಟರ್ ಮುನ್ನುಗ್ಗಿದೊಡನೆಯೇ ಬಕೆಟ್ಟು ತುಂಬಿಕೊಳ್ಳುತ್ತದೆ (ಕರಿಕೋ. I. ೦೭೩). **ಬಕೀಟು** : ಎರಡು ಮೂರು ಬಕೀಟು ನೀರಾದರೂ ಅವನ ಮಡಿವಂತಿಕೆಗೆ ಸಾಕಾಗುತ್ತಿರಲಿಲ್ಲ (ಶಂಕಂ. ೦೭). [← ಇಂ. Bucket]

**ಬಕೋಟ** (ನಾ). ಒಂದು ಬಗೆಯ ಕೊಕ್ಕರೆ : "ಬಕಃ, ಬಕೋಟಃ— ಈ ೨ ಬಕಂ" (ಶಬಾಯು. ೪೨-೯೭); ಎಲೆಮಿನ್ ಪೊಳೆದೊಡಮೊಳವುಗದಿರ್ದುವು ಜಲಾಶಯಪ್ರಾಂತದೊಳ್ ಬಕೋಟಕುಟುಂಬಂ (ಲೀಲಾವ. ೯-೦೪). [ಸಂ.]

**ಬಕ್ಕ₁**, ಬೊಕ್ಕ (ನಾ). ೧. ಬೋಳಂ ತಲೆಯುವನು; ಬೋಡ : ಆ ಬಕ್ಕನನ್ನು ಮದುವೆಯಾಗುವುದಿಲ್ಲವೆಂದು ಹುಡುಗಿ ನಿರಾಕರಿಸಿದಳು (ಕೂಠ). ೨. ಏನೂ ಇಲ್ಲದುದು ; ಬೋಳು ; ಬರಿದು : (ಕಿ). (ಗು). ೩. ಏನೂ ಇಲ್ಲದ ; ಬೋಳಾದ ; ಬರಿದಾದ : 'ಬಕ್ಕದಲೆ' ಪರಾ. **ಬೊಕ್ಕ** : ೧. ಬೊಕ್ಕರ್ ಕಲಂಬರದಟಂ ಪಕ್ಕನೆ ನಡೆತಂದು ಚಕ್ರದಿಂ ಕೂಡಲಿಗಳಂ ಗಕ್ಕನೆ ಕಾರ್ಬೊನ್‌ದಡಿಯಿಂ ಪಿಕ್ಕುತ್ತೆ ನಿಮ್ಮಂ ಕನಲ್ದು ಬಾಧಿಸುತಿರ್ಕುಂ (ಹಾರಾಸ್ಕ. ೯-೦೫-೨೭). ೩. 'ಬೊಕ್ಕತಲೆ' ಪರಾ.

**—ಬಕ್ಕ₂** '—ಬಾಕ' ನೋ.

**ಬಕ್ಕಂಡಿ** (ನಾ). ಹಲ್ಲುಮುಡಿ.

**ಬಕ್ಕಂಡಿ ಕಚ್ಚು**=ಹಲ್ಲುಮುಡಿ ಕಚ್ಚು ; ಅವುಡುಗಚ್ಚು : ಗೋವರ್ಧನ ರಾಯರು ಬಕ್ಕಂಡಿ ಕಚ್ಚಿಕೊಂಡು ಬಿದ್ದರು (ಕಿಕ್ಕ್ಯ. ೦೯೨). [← ಮರಾ. ಬಕಂದೀ = ಮುಷ್ಟಿಯ ಹೊಡೆತ]

**ಬಕ್ಕಂಬಯಲ್**, ಬಕ್ಕಬಯಲ್ (ನಾ). ೧. ತೆರಪಾದ ಜಾಗ; ಬಯಲು ಸ್ಥಳ : ಸಿತಗೆ ಪತಿಗೆ ಮಿಗೆ ಕಾಯ್ವಳ್ ನೋಟಕ್ಕೆ ಕಡುಸೋದಿ ನಾಣಿಲಿ ಬಕ್ಕಂಬಯಲೊಳಮದಾರುಮಂ ಬಂಚಿಸುವಳ್ (ಕಾವ್ಯಾವ. ೩೩೩) ; ಬಕ್ಕಂಬಯಲ್, ಕಳ್ಳಂಗಡಲೆ (ಕಮುದ. ೦೭೨ ಸ್ಸ್ಯೂ). ೨. ಬರಿದು; ಶೂನ್ಯ : (ಕಿ). **ಬಕ್ಕಬಯಲ್** : ೧. ಅಗ್ನಿಶಿಖಾಮುಖಿಕ್ಕೆ ದೂರಮಪ್ಪ ಬಕ್ಕ[ಶಾಶಾಂ. ಬಕ್ಕಟ]ಬಯಲ ತಾಣದೊಳ್ ದೊಮ್ಮುಳಿಸಿ ನಿಂದು ಬಹುಜನಂಗಳುಮ್ಮುಳಿಸಿ ತಮ್ಮೊಳಿಂತೆಂದರ್ (ಶಂಶಾಮಾ. ೦೦-೦೫೫ ಪ) ; ಕುಟಿಯಿದು ತೆಮರಿದು ಬಕ್ಕಬಯಲಿದಾಶ್ರಯಮಿದು ಗೆಂಟಿದು ಸಾರೆಯೆಂಬ ನಿರ್ಣಯಮದಾದುದಿಲ್ಲೊದವಿ ಪುದಿದ ಮರ್ಬಿನೊಳಾರ್ಗಂ (ಕಾವ್ಯಾವ. ೭೪೬).

**ಬಕ್ಕಂಬಯಲಾಗು**, ಬಕ್ಕಬಯಲಾಗು = ೧. (ಅಲಂ) ಏನೂ ಇಲ್ಲದಾಗು ; ಕರಗಿ ಹೋಗು ; ಲೀನವಾಗು : ಅಕ್ಕ ನಿಸ್ಸಾತ್ಮಸಂಭವ ಮಗ್ಗುಲೊಳಗಿರ್ದು ಬಕ್ಕಂಬಯಲಾದ ಬಗೆಯ ಒಕ್ಕಣೆಸೆನೆಗೆಂದು ಸತ್ರಾಜಿತಸುತೆ ದುಕ್ಕವನಾಂತು ಕೇಳಿದಳು (ಪೋಷಕ. ೪-೮೬). ೨. ನಾಶವಾಗು; ಪಾಳುಬೀಳು ; ಹಾಳಾಗು : ಎಲೆಲೆ ಪಗಲ್ಗಳ್ಳ . . . ನಿನ್ನ ನಾಡು ಬಕ್ಕಂಬಯಲಕ್ಕು (ರಾಮಾಶ್ವ. ೯೭-೨೭) ; ಆ ತೋಟ ಬಕ್ಕಬಯಲಾಯಿತು (ಕೂಠ). [ಬಕ್ಕ₁ + ಬಯಲ್ (< ಪಯಲ್)]

**ಬಕ್ಕಟ** 'ಬಟಂಕಟೆ' ನೋ.

**ಬಕ್ಕಟಬಯಲು** 'ಬರ್ಕಟಬಯಲ್' ನೋ.

**ಬಕ್ಕಡ** (ನಾ). (?) : ಕರಿಗಳ ಸಂಘಟ್ಟದಿನೊಗೆವುರಿಗಳ ಬಕ್ಕಡಗಳರಿಯ ಬಕ್ಕಡಗಳ್ ಜೋದರ ಬಾಣಮಗ್ನಿಬಾಣಂ ಕರಚಕ್ರ ತಮೋರಿಚಕ್ರಮೆನಿಸಿದುದೆನಸುಂ (ಗದಾಯು. ೪-೩೭) [?]

**ಬಕ್ಕಣ₁** 'ಬೊಕ್ಕಣ₁' ನೋ.

**ಬಕ್ಕಣ₂**, ಬೊಕ್ಕಣ₂ (ನಾ). ಆಹಾರ ; ತಿನಿಸು : "ಬಕ್ಕಣ – ಭಕ್ಷಣ = ತಿನಿಸು, ತಿಂಡಿ" (ಶಬ್ದಕೋ. ೨೭) ; ಮಯ್ಯುಗಲಿಗಳ ಕಂಡದಿಂಡೆಗಳ ಬಕ್ಕಣಮಂ, ತವೆ ಮೆಲ್ದು. . . ಕೈವಚಿಯೊಳಾಡುವ ರಕ್ಕಸಿಯರ್ಕಳೊಪ್ಪಿದರ್ (ಕಬ್ಬಿಗ. ೨೬೫) ; ತಿನೆ ತವುಗುಮೆಂದು ಚಿಂತೆಯಿನಿನಿತುಂ ತಿನಲಾರದಾನೆ ಬಕ್ಕಣಮಂ ಬಯ್ಸಾನುಮಿಂ ಪೆರ್ಗಿಕ್ಕದೆ ದುಮ್ಮಾನದಿಂ ಪಸುತಿರ್ದುವರರೆ ಲೋಭಿಮರುಳ್ಗಳ್ (ಚಂದ್ರಶ್ಯ. ೫-೯೫). **ಬೊಕ್ಕಣ₂**: "ಬೊಕ್ಕಣ-ಭಕ್ಷಣ = ಬಕ್ಕಣ" (ಶಬ್ದಕೋ. ೩೨). [< ಸಂ. ಭಕ್ಷಣ]

**ಬಕ್ಕಣವಲ್ಲಕೆ** (ನಾ). ಒಂದು ಪ್ರದೇಶದ ಹೆಸರು (?) : ಬಟ್ಟೆಗೆಜಿಯ ಏರಿ ಉಳಗಾಗೆ ಬನ್ನು ಕಡೆಗೊಡೆ ಕಲ್ಬನಾಸೆಯ ಅನ್ತೆ ಬನ್ನು ಸೇರಲವದಾ ಬಕ್ಕಣವಲ್ಲಕೆಯ ಅನ್ತೆ ಬಡಗ ನೋಡಿ ಪರಿದ ಪೇರೂ ಬಿಸ್ಥಿಯ (ಎಕ. IX (೩). ಶಂಗಕೂ. ೦೫೦-೪೦ ; 828). [?]

**ಬಕ್ಕತಲೆ** 'ಬಕ್ಕದಲೆ' ನೋ.

**ಬಕ್ಕದಲೆ, ಬಕ್ಕತಲೆ, ಬೊಕ್ಕತಲೆ, ಬೊಕ್ಕದಲೆ** (ನಾ). ೧. ಕೂದಲು ಉದುರಿ ಬೋಳಾದ ತಲೆ : ಬಕ್ಕದಲೆಯ ಆ ಮನುಷ್ಯನನ್ನು ಎಲ್ಲಿಯೋ ನೋಡಿದಂತಿದೆ (ಕೂಠ). ೨. ಟೋಪಿ, ಪೇಟ ಮೊದಲಾದುವನ್ನು ಧರಿಸದಿರುವ ತಲೆ ; ಬರಿತಲೆ : ಬಳ್ಳಾರಿಯ ವಿದ್ಯಾರ್ಥಿಯೊಬ್ಬನು ನಮ್ಮ ವರ್ಗಕ್ಕೆ ಸೇರಿದನು. ತನ್ನ ಪರಿಪಾಟಿಯಂತೆ ಬಕ್ಕದಲೆಯಿಂದಲೆ ಒಳಗೆ ಬಂದನು (ಗಾಳಕ. ೦೩೩). **ಬಕ್ಕತಲೆ** : ೨. ಬಕ್ಕತಲೆಯಲಿಂತು ನೀನು ಅರಳಿದೊಂದು ಕುಸುಮದೆದುರು ನಿಂತು (ಕಿಂಕಿಣಿ. ೩೭-೪). **ಬೊಕ್ಕತಲೆ** : ೧. ಇದ್ದಕ್ಕಿದ್ದಂತೆಯೇ ಅವನ ಕಣ್ಣು ತುಂಬಿಕೊಂಡು ನಾಲ್ಕೈದು ಹನಿಗಳು ಮರಿಯಪ್ಪನವರ ಬೊಕ್ಕತಲೆಯ ಮೇಲೆ ಬಿದ್ದುವು (ಅಂಚುಕಾ. ೦೯೩). ೨. ಈಗ ಏಕೆ ಕರೆಳಿಸಿರಬಹುದೆಂಬ ತರ್ಕದಲ್ಲಿಯೇ ಕಿಟ್ಟಿ ಜೋಡು ಮೆಟ್ಟಿಕೊಂಡು ಬೊಕ್ಕತಲೆಯಿಂದ ಹೊರಟನು (ಗಂಡುಹಾ. ೯೪). **ಬೊಕ್ಕದಲೆ** : ೧. (ಕುಂಬಾಯು. ೬. ೫-೨೯೬). ೨. ಬೊಕ್ಕದಲೆಯೊಳು ಬೊಕ್ಕರಿಸುತಂ ಮುಕ್ಕರಿಕಿ ನಿಲ್ಲಲು (ಶೀಪತಿ. ೬-೭೦). [ಬಕ್ಕ₁ + ತಲೆ₁]

**ಬಕ್ಕದಾಸ** (ನಾ). ಏನೂ ಗತಿಯಿಲ್ಲದವನು ; ನಿರ್ಗತಿಕ : ದಾನಧರ್ಮವಿಲ್ಲದ ಹೀನದಾಸನು ನಾನು. . . ಬ್ಯಾನೆ ಇದ್ದಲ್ಲಿ ಬಡುವ ಬಕ್ಕದಾಸನು ನಾನು (ಪೋಕ್ಷಶೀ. ೨೭-೫) ; ಬಕ್ಕದಾಸನೊ ನಾನು ವಿಜಯವಿಠಲ ನಿನ್ನ ಲೆಖ್ಖಕ್ಕೆ ಮೊದಲು ಎನಿಸುವೆನೇನಯ್ಯ (ಏದಾಶ್ವ. ೨೫೪-೦೫೭). [ಬಕ್ಕ + ದಾಸ₁]

**ಬಕ್ಕನೆ** (ಅ). ಇದ್ದಕ್ಕಿದ್ದಂತೆ ; ಕೂಡಲೆ : ಬೆಕ್ಕು ಹಿಂದೆ ಹೋಗುತಾ, ಶಾನೆ ಹಿಂದೆ ನಿಂತ ಒಂದು ಇಲಿಯನ್ನು ಬಕ್ಕನೆ ಬಾಯಿಗೆ ಹಾಕಿಕೊಳ್ಳುತಾ ಬಂತು (ಶೀತಿಕಂ. iv ೨೭). [ಬಕ್ಕ₀ + —ಅನೆ₁]

**ಬಕ್ಕನೆತ್ತಿ**, ಬೊಕ್ಕನೆತ್ತಿ (ನಾ). = ಬಕ್ಕದಲೆ ೨: ಒಂದು ಕಾಲದಲ್ಲಿ ಟೊಪ್ಪಿಗೆ ಹಾಕುವುದು ಮಂಗಲಚಿಹ್ನವಾಗಿತ್ತು. ಇಂದು ಬಕ್ಕನೆತ್ತಿಯಿಂದ ಅಡ್ಡಾಡುವುದೇ ಐಕ್ಯದ ಕುರುಹು (ಭಾರಕಂ. ೪೩). **ಬೊಕ್ಕನೆತ್ತಿ** :

ತುಂಬಾ ಹಿಮ ಬೀಳುತ್ತಿದೆ. ಬೊಕ್ಕನೆತ್ತಿಯಲ್ಲಿ ಬರಬೇಡಿ (ರೂಢಿ).
[ಬಕ್ಕ$_1$ + ನೆತ್ತಿ]

**ಬಕ್ಕಬಯಲ್** 'ಬಕ್ಕಂಬಯಲ್' ನೋ.

**ಬಕ್ಕಬಾಗಿಲು** (ನಾ). (?) : ಯಾವತ್ತು ಕಡಂಗ ಕಂಡುಕ ಮುಂತಾಗಿ ತೆಗಸಿ ಆಳ್ವೇರಿ ಬಕ್ಕಬಾಗಿಲು ಮುಂತಾಗಿ ತಯಾರು ಮಾಡಿಸಿ (ರಾಜೇಂದ್ರ.೩). [ಬಕ್ಕ$_?$ + ಬಾಗಿಲು (< ಬಾಗಿಲ್)]

**ಬಕ್ಕಬೋರಲು**, **ಬೊಕ್ಕಬೋರಲು**, **ಬೊಕ್ಕುಬೋರಲು** (ನಾ). ಬುಡಮೇಲು ; ತಲೆಕೆಳಗು : ಒಂದು ಎಲೆ ತೆಗೆದು ಬಕ್ಕಬೋರಲಾಗಿ ಮಗ್ಗುಲಿಗೆ ಮುಚ್ಚಿ ಇಟ್ಟುಕೊಂಡ (ಗಾಳಿ. ೨೩). **ಬೊಕ್ಕಬೋರಲು** : ತಿಂಗಳ ಕಡೆಯಾದ್ದರಿಂದ ಡಬ್ಬಗಳನ್ನೆಲ್ಲಾ ಬೊಕ್ಕಬೋರಲು ಮಾಡಿ ಅಡಿಗೆ ಮಾಡಬೇಕಾಯಿತು (ರೂಢಿ). **ಬೊಕ್ಕುಬೋರಲು** : ಅದನ್ನು ಮೆಲ್ಲಗೆ ಕಿಡಿಕಿಯ ಹೊರಗೆ ಎತ್ತಿ ಬೊಕ್ಕುಬೋರಲಾಗಿ ಹಿಡಿದಳು (ಗಂಪಾಯು. ೯).

**ಬಕ್ಕಬೋರಲು ಬೀಳು**, **ಬೊಕ್ಕಬೋರಲು ಬೀಳು** = ಹೊಟ್ಟೆ ಅಡಿಯಾಗಿ ಬೀಳು ; ಮಗುಚಿಕೊಳ್ಳು: ಮೆಟ್ಟಲಿನ ಮೇಲೆ ಯಾಯಾನ ಶರೀರ ಬಕ್ಕಬೋರಲು ಬಿದ್ದಿತು (ಪಾಪಿ. ೦೦೩) ; ಎತ್ತರದ ಜಗಲಿಯಿಂದ ಮಗು ಬೊಕ್ಕಬೋರಲು ಬಿದ್ದು ಅಳುತ್ತಿದೆ (ರೂಢಿ). **ಬಕ್ಕಬೋರಲು ಹಾಕು** = ೧. ಮಗುಚಿ ಇಡು : ಡಬ್ಬಗಳನ್ನೆಲ್ಲಾ ಚೆನ್ನಾಗಿ ತೊಳೆದು ಬಕ್ಕಬೋರಲು ಹಾಕು (ರೂಢಿ). ೨. (ಆಲಂ) ನಾಶಮಾಡು ; ಹಾಳುಮಾಡು : ಚಿತ್ರಕೇತುರಾಜನ ಮನೆಯನ್ನು ನಾರದನೇ ಬಕ್ಕಬೋರಲು ಹಾಕಿದನು (ಕುಳಸೀ. ೨೩) ; ಎಷ್ಟೋ ವರ್ಷಗಳಿಂದ ಮಾಡಿಕೊಂಡಿದ್ದೆಲ್ಲಾ ಒಂದು ಕ್ಷಣದಲ್ಲಿ ಬಕ್ಕಬೋರಲು ಹಾಕಿದ್ದಾಯ್ತು (ರೂಢಿ). [ಬಕ್ಕ$_1$ + ಬೋರಲು]

**ಬಕ್ಕಬೋಳು** (ನಾ). ಬರಿದು; ಖಾಲಿ; ಶೂನ್ಯ: ಹೂಮುಡಿದುಕೊಂಡು ಹಿಗ್ಗುವುದು ಹೆಣ್ಣಿಗಷ್ಟೆ ಇರುವ ಸೌಭಾಗ್ಯ. ಗಂಡುಗಾಡಿ ಬಕ್ಕಬೋಳು (ಗಾಳಿ. ೦೦೦). [ಬಕ್ಕ$_1$ + ಬೋಳು (< ಬೋಳು)]

**ಬಕ್ಕರಸೆ** (ನಾ). (?): ನಿಯುತದ್ವಿತ್ವಕ್ಕೆ—ಪಪ್ಪುಕಂ . . . ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕೆವಂ, ಬಕ್ಕರಸೆ, ಬಕ್ಕುಡಿದಂ (ಶಮದ. ೩೭ ಪ್ರಯೋ). 'ಬಕ್ಕಸೆ' ಪರಾ. [?]

**ಬಕ್ಕರಿ** 'ಭಕ್ಕರಿ' ನೋ.

**ಬಕ್ಕರಿಸು** (ಕ್ರಿ). ತಿನ್ನು; ಕಬಳಿಸು : ಆತನು ಬಂದ ಕೂಡಲೇ ಆ ನಮ್ಮ ಬಡಪ್ರಾಣಿಯಾದ ಗೋವನ್ನು ಅಬ್ಬರದಿಂದ ಬಕ್ಕರಿಸಿ ಬಿಟ್ಟಾನು (ಉಠಾಚ. ೬೯) ; ತಿನ್ನಲು ಬೆಳೆಯದು ತುಸು ಕಡಿಕಾಳು ಬಕ್ಕರಿಸುವುದೋ ಹಂಟೆಯ ಕೂಳು ? (ಗಂ. ೦೦೯-೦೯); ಒಂದು ತಪ್ಪೇಲಿ ಅನ್ನವನ್ನು ಬಕ್ಕರಿಸುತ್ತಾರೆ! (ಮೋಹಿನೀ. ೨೬). [<ಭಕ್ಷಿಸು]

**ಬಕ್ಕರೆ**, **ಬಕರೆ**, **ಬಗ್ಗರೆ** (ನಾ). ೧. ಮಡಕೆಯ ಚೂರು; ಓಡು; ಬೋಕಿ : "ಪಕ್ಕರೆ ಬಗರಿಗೆ ಎಸೆವ ಬಕ್ಕರೆಯಕ್ಕು" (ಶಬ್ದಮಂ. ೬೩); ಕೈಯೊಳ್ ಬಕ್ಕರೆಯಲ್ಲಿ ಕೆಂಡವಂ ತೆಗೆದುಕೊಂಡು ಬಂದು (ಕುಕಸ. ೦೩); ಅಕ್ಕರೆಯಿಂದ ಕಂದನ ಸಾಕಿ, ಕೈಗೆ ಬಕ್ಕರೆ ಕೊಟ್ಟಾರೆ ? (ಜೀತಿಶಾ. X, ೨೬). 'ಬೋಕಿ' ಪರಾ. ೨. ಮುಚ್ಚುಳ ; ಶ್ರಾವೆ : ಫಲ ವಸ್ತ್ರ ತಾಂಬೂಲ ಕಾಣಿಕೆಯಿಂ ಹೊಸಬಕ್ಕರೆಯಲ್ಲಿ ಇರಿಸಿ ಮಂತ್ರಸಮನ್ವಿತವಾಗಿ...ನಿವಾಳಿಸಿ (ಜಾಂಜ. ೦೩೯-೦೭). **ಬಕರೆ** : ೧. ಕಾಡುಬೆರಣಿಗಳಲ್ಲಿ ಹೊಸ ಮಣ್ಣು ಹೆಂಚು (ಬಕರೆ) ಹೊಸ ಕೆಮ್ಮಣ್ಣುಗೆಡ್ಡೆಗಳನ್ನಿಟ್ಟು ಪುಟ ಹಾಕಿ (ಸಕಪ್ರ. ಶಂ. ೪೫೪). **ಬಗ್ಗರೆ** : ೧. ಉಡಲಿಲ್ಲುಣವಿಲ್ಲದಚುಂದುದರಾಗ್ನಿಯೊಡಲ ಸುಡಲು ಬಗ್ಗರೆಯ ಹಿಡಿದು ಪುರದ ಕೇರಿಗಳೊಳು ಭಿಕ್ಷವ ಕೊಡಿಯೆಂದು ಬೇಡುತಮಿರಲು (ಶೇಬಸಂ. ೭-೭೭); ಇರಿಸಿದನೊಂದು ದೊಡ್ಡ ಹೊಸ ಬಗ್ಗರೆಯಂತದು ತುಂಬುವಂತುಟಂ ಸುರಿದನು ಕೂಳ (ಸನ್ನಶಾ. ೬-೩೦೯).

**ಬಕ್ಕಸೆ** (ನಾ). (?) : ನಿಯತದ್ವಿತ್ವಕ್ಕೆ-ಪಪ್ಪುಕಂ...ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕೆವಂ, ಬಕ್ಕರಸೆ (ಶಮದ. ೩೭ ಪ್ರಯೋ). 'ಬಕ್ಕರಸೆ' ಪರಾ. [?]

**ಬಕ್ಕಳ** (ನಾ). ಹೆಚ್ಚು; ಅಧಿಕ; ತುಂಬ : ಬಾಯಿಯಿಂದ ಲೋಕ ಸುಧಾರಣೆಯ ತತ್ವ ಹೇಳುವುದು ಬಕ್ಕಳ. ಆದರೆ ಕೈಯಿಂದ ಕಾರ್ಯ ಕೇಳಬಾರದು (ಕಾಳರಾ. ೪೭); ತಮ್ಮ ಬಕ್ಕಣದಲ್ಲಿ ಕಾಸು ಕಪರ್ದಿಯಿಲ್ಲದಿದ್ದರೂ ಬಾಯಲ್ಲಿ ಬಕ್ಕಳ ಮಾತಿದ್ದರೆ ಸಾಕೆಂಬ ಸಂತೋಷದಿಂದ ಜನರು ಕಾಲ ಕಳೆಯುತ್ತಿದ್ದರು (ಶ್ರೀಮಾ. ೬೪). [?]

**ಬಕ್ಕಳೆ** (ನಾ). ಕೊರಳಲ್ಲಿ ಹಾಕಿಕೊಳ್ಳುವ ಹಾರ ಅಥವಾ ಚೀಲ (?) : "ಕಂಠಕಚ್ಚರದೊಳ್ ಬಕ್ಕಳೆ" (ಕರ್ಣಾಟ. ೯೪); ಮೆಯ್ಯ ಮಸಿ ಕೊರಲ ಬಕ್ಕಳೆ[ಪಾಠಾಂ. ಬಕ್ಕಂ, ಬಕ್ಕಳಿ] ಪೊಯ್ಯೆ ಪುಗಿಲ್ಗರೆವ ಕೆಯ್ಯ ಕಂಕರಿಕೆ ಕರಂ ರಯ್ಯಮೆನೆ ಪಾಡುತಿರ್ದಳನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸುತ್ತುಂ (ಕಾವ್ಯಾವ. ೩೦೯) ; ಜೆಡೆಯುಂ ಬಕ್ಕಳೆ[ಪಾಠಾಂ. ಲೆ]ಯುಮವನಾಳ್ದು (ಅರ್ಧನೇ. ೩-೯೩) ; ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ ಮಿಂಟದ ಕಣ್ಗಾಲ್ಪೆಸರಂ ಸುತ್ತಿದ ಬಾಳದುಳ್ಳಿವಿಯ ಸೊಂಟಿಗೆ ಪಂದಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ಲಲೆಯ ಬಿಂದಿಗೆ ಪಾವುಗೆ ಪಂಚಮುಸ್ಸನಂ ಬೆತ್ತದ ಕೋಲಿವೊಂದಿನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೩೬೩). [?]

**ಬಕ್ಕಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಮಾತಂಗಿ ಬಕ್ಕಾಯಿ ಎಲ್ಲ ನಾನಾಕಾದಾ ಕಳ್ಳದೇವತೆಗಳನಿಲ್ಲದೆ ಒಲಿಸಿದರು ಪೊಳ್ಳಲ್ಲದೆ ಗತಿ ಇಲ್ಲವೊ ಎಂದಿಗೂ (ಪಿಸಾಸು. ೫೬-೨). [?]

**ಬಕ್ಕಿ** (ನಾ). ಕಂಕುಳು ; ಬಗಲು : ಸಿಕ್ಕಿರ್ದ ಮರಿಗಳಂ ಬಕ್ಕಿಯೊಳಗವಚುತ್ತ ಮಿಕ್ಕಿರ್ದ ಕುರಿಗಳಂ ಚೈಯ ಚೈಚೈಯೆಂದು ಕರೆಯುತ್ತ . . . ಬೀರಪ್ಪನಂ ನೆನೆದು ಮೆರೆದಿರ್ದನಾ ಮಾಯಿಕಂ (ದುರತ್ಥ. ೬-೦೩).
[← ಮರಾ. ಬಖ್. ತೆಲು. ಬಗಿ = ಪಕ್ಕ]

**ಬಕ್ಕು** (ನಾ). ಒಂದು ಬಗೆಯ ನೀರುಹಕ್ಕಿ : ಬಕ್ಕುಗಳಂಚೆ ಕೊಂಚೆ ಜಳವಾಯಸಸಂತತಿ . . . ಸಾರಸಪಕ್ಕಿಯೆಂಬ ನೀರ್ವಕ್ಕಿಗಳಿಂ ಮನಂಗೊಳಿಸು ತಿರ್ದುದು ಪೂಗೊಳನಂಬುಜಾವಳಂ (ನಳಚಂ. ೦೦೯). [?]

**ಬಕ್ಕುಡಿ$_1$**, **ಬರ್ಕುಡಿ**, **ಬಳ್ಕುಡಿ** (ನಾ). ೧. ಬೆರಗು; ಆಶ್ಚರ್ಯ: "ಬಕ್ಕುಡಿ . . . ತಳವೆಳಗು ಮಲ್ಲಟಿಯೆನಲ್ಕೆ ಬೆಱಗಪ್ಪ ಭಾವಂ" (ಕಬ್ಬಿಗ. ೯೧). ೨. ಭಯ; ಅಂಜಿಕೆ: ಒತ್ತುವ ಕೋಡ ಕಾಳಿ ಕುಣಿವೋಜೆಗೆ ಬಾಜಿಪ ಬುಂಜೆ ಬೇಂಟೆಯಿಂದೆತ್ತಣೆನಪ್ಪ ಬಕ್ಕುಡಿಯ ಬಲ್ಲುಲಿ (ಸೂಕ್ತಿಸು. ೩-೨೦೦). ೩. ದೈನ್ಯ; ನಮ್ರಭಾವ: ಚುಂಬನಮಪ್ಪ ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ದು ಕೂಡುವಟ್ಟುಂಬರಿಯೆಂಬಿವಾಗೆ (ಅರ್ಧನೇ. ೫-೭೦); ಮಕ್ಕಳಾಟಿಕೆಯಾಯ್ತುಲಾ ಸೌಬಲನ ದೆಸೆಯಿಂದ ಮಿಕ್ಕು ನೀ ಸ್ವೈರಿಸುವುದೆಮ್ಮದು ಬಕ್ಕುಡಿಯ ಬೇಳಂಬ (ಕುಮಾವ್ಯಾಸ. ೦೫-೫೯). ೪. ತಳಮಳ; ಕಾತರ: ಬಂಡು ಬಕ್ಕುಡಿ ಭಂಗ ಬಂಧನ ಕನಲ್ಕೆ ಕಳಕಳಮೆಂಬಿವು . . . ನೋಡಲಾ ನಾಡ ಹಿರಿಯೂರ ಪಟ್ಟಣದ ಪಾಳೆಯದ ಜನದೊಳಿಲ್ಲ (ಶಬತ್ರಿ. ೬-೯೨). ೫. ವಿವಾದ; ಚರ್ಚೆ : "ವಿವಾದಃ = ಬಕ್ಕುಡಿಯುಂ" (ಸೀತಿವಾ. ೨೨-೬). 'ಬಕ್ಕುಡಿಗುಟ್ಟು' ಪರಾ. **ಬರ್ಕುಡಿ**: ೫. ನಿಮ್ಮೊಳದೇಂ ಬರ್ಕುಡಿಯೆಂದಾತನಂ ನಿವಾರಿಸಿ (ನೇಮಿಪು. ೯-೨೬೪); ಪೊನ್ನನಣ್ಣನಿಂ ನುಡಿ ನುಡಿವಂತು ಬರ್ಕು[ಪಾಠಾಂ. ಳ್ಕು]ಡಿಯೆ (ಶಾಂತಿಪ. ೨-೦೦೩); ಮುಳಿಸೆರ್ಗ್ ಸೊರ್ಕ್ ಬರ್ಕುಡಿ ಪುರುಡು . . . ನುಸುಳ್ಗಣೆಕಾಂಗನೆಯರ್ಗೆ ಶಾಶ್ವತಂ (ವೃಷಭ. ೨೮-೬೩). **ಬಳ್ಕುಡಿ** : ೨. "ಅಗುರ್ವು ಬಿಗುರ್ ಬೆಗರ್ ಬಳ್ಕುಡಿ ... ಅದಿರ್ಪು— ಈ ೧೦ ಭಯಂ" (ಕರಸಾ. ೫೭-೨೨೩) ; ಎಕ್ಕೆಕ್ಕೆ ಬಾಧಿಸುತ್ತಿದ್ದ ಸಂದೇಗವನು ಬಳ್ಕುಡಿಯನು ಸಂತರಿಸಿಕೊಳ್ಳಲು ನನಗೆ ಅನುವೊದವಿತ್ತು (ಬಿಟ್ಟಿ. ೨೦೨-೦೨).

**ಬಕ್ಕುಡಿ$_2$** (ನಾ). ಒಂದು ಬಗೆಯ ಸಸ್ಯ: ಮುಂಗರವಳ್ಳಿ : "ಮುಂಗುರವಳ್ಳಿ ವಕ್ರಿ ಬಕ್ಕುಡಿಯೆನಿಕ್ಕುಂ" (ಮುಂಗರಾ. ೯೩-೦೩). [?]

**ಬಕ್ಕುಡಿಗುಟ್ಟು**, ಬರ್ಕುಡಿಗುಟ್ಟು (ಕ್ರಿ). ಚರ್ಚಿಸು; ವಾದವಾಡು : ತನ್ನ ಧರ್ಮದವರೊಡನೆ ಪುಸ್ತಕಾದಿಗಳೊಳು ನಿನಗಿದೆನಗಿದೆಂದು ಬಕ್ಕುಡಿಗುಟ್ಟದದುಂ (ಕಸೂಪ್ರ. ೨೨೭); ಮತಿವಿಕಳ ಚಾರ್ವಾಕ ಬಱಿದೆ ಬಕ್ಕುಡಿಗುಟ್ಟುತತ್ತಿವಾದಿಪೈ (ಆರಾಕ. ೩-೭-೫); ನಿಮ್ಮ ದೈವಂ ಸ್ವತಂತ್ರನಲ್ಲಾಗಿ ಬಂಧುರತರ ಜಗತ್ಕರ್ತನೆಂತು ಬಕ್ಕುಡಿಗುಟ್ಟಬೇಡವೆಲೆ ದುಷ್ಕೃತಯುತ (ಶಾಸೋಪು. ೯-೧೭೨). **ಬರ್ಕುಡಿಗುಟ್ಟು**: ತರ್ಕದೊಳ್ ಬಾದುಂ ಬರ್ಕುಡಿಗುಟ್ಟಿ ಪೊಟ್ಟುವಡೆದಂ (ಸುಕುಮಾ. ೩-೯೩). [ಬಕ್ಕುಡಿ$_1$ + ಕುಟ್ಟು$_1$]

**ಬಕ್ಕುಡಿಗೆಯ್**, ಬರ್ಕುಡಿಗೆಯ್, ಬಳ್ಕುಡಿಗೆಯ್ (ಕ್ರಿ). ೧. = ಬಕ್ಕುಡಿಗುಟ್ಟು: ವಟುಗಳೋದನಾಲಿಸಿ ತಪ್ಪಂ ಪಿಡಿವುವುಪನ್ಯಾಸದೆ ಬಕ್ಕುಡಿಗೆಯ್ವುವು ಮುನಿಗಳೊಡನೆ ಶುಕಶಾರಿಕೆಗಳ್ (ಜಗಶಿ.೦೭-೫೦); ಕೊಱವಜ್ಜಿಯು ತಾನಾಕೆಯುಂ ಪಾಣಿಗ್ರಹಣಕ್ಕೆ ಕೆಯ್ಯನೊಡ್ಡುವಂತೆ ಕೆಯ್ಯನೊಡ್ಡಿ ಬಗೆದು ಮೊಯ್ಯನೆ ಸೋಲ್ತು ಬಕ್ಕುಡಿಗೆಯ್ದುವಂತೆ ಕೆಯ್ಯ ಪೊಯ್ದೊಡೆ (ಬಂಹರಿ. ೯-೭೭ ವ). ೨. ಆಶ್ಚರ್ಯಪಡು : ಕಯ್ವಾರದಿಂದೆ ಬಕ್ಕುಡಿಗೆಯ್ವರ್ಪಿರಿದೊಂದು ಸಮಯಮುಂ ಸಮತೆಯಿನಾರಯ್ವರ್ ಜೈನಮುನಾವೆಡೆಗೆಯ್ವಡಮತ್ಯಂತಕಲುಷಹೃದಯರದೇನೋ (ಸಮುಕ. ಅನುಬಂಧ. ೩೭೫-೬೦). **ಬರ್ಕುಡಿಗೆಯ್**: ೧. ಜಯಂತನಂ ಜಡಿದು ಬರ್ಕುಡಿಗೆಯ್ದು ಬಸಂತನಂ ಸಮುಜ್ಜಳಕುಸುಮಾಸ್ತ್ರನಂ ಜಱಿದು (ವೃಕಶಿ. ೦೭-೭). **ಬಳ್ಕುಡಿಗೆಯ್** : ೧. ಜಲಜನ್ಮಕೋರಕದ್ವಯ ಸೊಕ್ಕು ಮಿಕ್ಕಾನೆದಲೆ ಗಾಲಿವಕ್ಕಿ ಪೊಂಜೊನ್ನಲಿಗೆಗಳ ಚೆಲ್ವನಲೆದು ಮಲೆದೆಕ್ಕತುಳಗೆಡಿಸಿ ಬಳ್ಕುಡಿಗೆಯ್ದು ನೆಲೆವನೆಯ ಮುಂದೆ ನಿಂದ ಬೆಲೆವೆಂಡಿರುಗಳ ನೆಲೆಮೊಲೆಗಳ್ . . . ಎಡ್ಡಂಬಡೆದವು (ಉದ್ಯದೀ. ೯-೨೦). [ಬಕ್ಕುಡಿ$_1$ + ಕೆಯ್$_1$]

**ಬಕ್ಕುಡೆಯ**, ಬಗ್ಗಡೆಯ (ನಾ). ವಿತಂಡವಾದ ಮಾಡುವವನು : ಕಡುದುರುಳರಂ ಧೂರ್ತರಂ ಬಕ್ಕುಡೆ [ಪಾಠಾಂ. ಬಗ್ಗಡೆ, ಬಗೆಗೆಡೆ]ಯರಂ ದುರ್ನಿರೀಶರಂ ನಾಣ್ಗೆಡಿಕರಂ . . . ಕಾಯ್ಯಾಯೆಮ್ಮುವಂ (ಬಸಪು. ೩೮-೭೦). **ಬಗ್ಗಡೆಯ** : ನುಡಿದಹನು ದುರ್ಭಾಷೆಗಳನಡಿಗಡಿಗೆ ಶಿವನಿಂದೆಯನುಸುರ್ವ ಬಗ್ಗಡೆಯನಂ ಕೊಲಲಹುದು (ಬಸಪು. ೩೭-೨೯).

ಬಗ್ಗಡೆಯತನ = ಔಚಿತ್ಯ ಮೀರಿದ ವರ್ತನೆ; ಅಧಿಕಪ್ರಸಂಗ : ಹಿಗ್ಗಿ ಹಿಂದೆಮ್ಮವನು ಹಾವಿನ ಹಗ್ಗದಲಿ ಹೆಡಗುಡಿಯ ಕಟ್ಟಿದ ಬಗ್ಗಡೆಯತನ ಕಿದಕೊ . . . ಸಾವಿನ ಸುಗ್ಗಿ ನಿನಗೆನುತೆಚ್ಚನಿಂದ್ರಾರಿಯನು ಸೌಮಿತ್ರಿ (ತೊರರಾ. ೬-೯೯-೦೩). [<ಬಕ್ಕುಡಿ$_1$ + — ಅ$_7$]

**ಬಕ್ಕೆ**, ಬರ್ಕೆ (ನಾ). ೧. ಸಿಹಿಯಾದುದು; ಇನಿದು : (*). ೨. ಒಂದು ಬಗೆಯ ಹಲಸು : ಪಥಿಕರ್ಬರ್ಕೆಂದು ಭೃಂಗಂಗಳಿಂದುಲಿವಂತಿರ್ದುದು ಪಣ್ತ ಬಕ್ಕೆ (ಆದಿಪು. ೦೦-೬೭); ಬೇಗ್ಗಳಿಂ ತುಱುಗಿರೆ ಕಾಯ್ತ ಬಕ್ಕೆ (ಎಕ. XI. ದಾವಣ. ೩೫-೩೮; ಸು. 1160); ಹಲಸಿನ ಹಣ್ಣಿನ ಮಹಾ ಗಾತ್ರವನ್ನು ನೋಡಿ ಅಜ್ಜೀಸಾಬು ಕೇಳಿದನು "ಬಿಳುವನೋ ? ಬಕ್ಕೆಯೋ ?" (ಮರಿಮು. ೯೩೦). 'ಬಕ್ಕೆವಲಸು' ಪರಾ. Δ **ಬರ್ಕೆ** : ೨. ಬರ್ಕೆ[ಪಾಠಾಂ.ಕ್ಕೆ]ವಲಸುಗಳೊಳಸುರರ ತೆರ್ಕೆಯನೆಬ್ಬಿಟ್ಟಿ ಪೊಯ್ವುದುಂ ಕೋಟ್ಪಿದುಱುಂ ಬರ್ಕೆ[ಪಾಠಾಂ.ಕ್ಕೆ]ಯ ತೊಳೆಯುಂ ಸೂಸಿದುವು (ಶಂರಾಮಾ. ೦೦-೦೨೦). 'ಬರ್ಕೆವಲಸಂ' ಪರಾ.

[ದೇ.॥ ತಮಿ. ವರುಕ್ಕೈ. / ಮುಿರಾ. ಬರಕಾ]

**ಬಕ್ಕೆವಲಸು**, ಬಕ್ಕೆಹಲಸು, ಬರ್ಕೆವಲಸಂ (ನಾ). = ಬಕ್ಕೆ ೨ : "ಸ್ವಾದುಪನಸಕ್ಕೆ ಪೆಸರೊಂದುವುದು ಬಕ್ಕೆವಲಸೆಂದು" (ಶಬ್ದಮಂ. ೨೭); ಆರನೇಱಿಲ ಪೊಂಬಾಟಿಯ ಸುರಯಿಯ ಮಾಮರದ ಬಕ್ಕೆವಲಸಿನ ಪುದುವಿಂ ಪರೆದುರ್ಬಿದ ಕಟ್ತಿಲೆ ದಿನಕರಾಂಶುಗಳ್ಗಂ ಭೇದಿಸಲ್ಕರಿದು (ಕಾವ್ಯಾವ. ೨೯೮) ; ಬೇಗರ್ಗಳೊಳಗೆ ಕಾತ ಬಕ್ಕೆವಲಸುಗಳ ಪಣ್ಗೊನೆಗಳಂ... ಮುಕ್ಕಣ್ಣನೆಡೆಗೆ ವನಪಾಲಕಂ ಪೊಱಿಸಿಕೊಂಡೈತಂದನು (ಕಬಪು. ೯೫-೨೯) ; ದಾಳಿಂಬಂ ಬಕ್ಕೆವಲಸು . . . ಎಡೆಯೆಡೆಯೊಳ್ ಮನೋಹರಮಾಗಿರ್ಕುಂ (ರಾಮಾಶ್ವ. ೯-೨೫). **ಬಕ್ಕೆಹಲಸು** : ಬಕ್ಕೆಹಲಸು, ಅರಬಕ್ಕೆಹಲಸು, ಕಾವು ಹಲಸು ಹೀಗೆ ಬಗೆಬಗೆಯ ಹಲಸಿನ ಮರಗಳಿದ್ದವು (ಶ್ಯಾಮಕಾ. ೦೧); ಒಂದು ಬಕ್ಕೆಹಲಸಿನ ಹಣ್ಣನ್ನು ಕತ್ತರಿಸಿ ಮಕ್ಕಳ ಮುಂದಿಟ್ಟರು (ಶಂಜಶಂ. ೦೫). Δ**ಬರ್ಕೆವಲಸು** : ಬರ್ಕೆ[ಪಾಠಾಂ.ಕ್ಕೆ]ವಲಸುಗಳೊಳಸುರರ ತೆರ್ಕೆಯನೆಬ್ಬಿಟ್ಟಿ ಪೊಯ್ವುದುಂ ಕೋಟ್ಪಿದುಱುಂ ಬರ್ಕೆ[ಪಾಠಾಂ.ಕ್ಕೆ]ಯ ತೊಳೆಯುಂ ಸೂಸಿದುವು (ಶಂರಾಮಾ. ೦೦-೦೨೦); ಕಾಯ್ತೆಳೆದೆಂಗು ಪಣ್ತ ಬರ್ಕೆವಲಸು (ವರ್ಧಪು. ೨-೦೭). [ಬಕ್ಕೆ + ಪಲಸು]

**ಬಕ್ಕೆಹಲಸು** 'ಬಕ್ಕೆವಲಸಂ' ನೋ.

**ಬಕ್ರಬರ್** (ಕ್ರಿ). ಅಡ್ಡಿಬರು ; ತೊಡಕಾಗು : ಇ ದರ್ಮ್ಮಕ್ಕೆ ಬಕ್ರಬಪ್ಪೊಂ ಬಾರಣಾಸಿಯುಳ್ ಸಾಸಿರ್ವ್ವಪಾರ್ವ್ವರುಂ ಸಾಸಿರಂ ಕವಿಲೆಯುಂ ಕೊನ್ದ ಪಾತಕನಕ್ಕೆ (ಮ್ಯಆರ. ೦೯೩೭, ೫೩-೩೯; ಸು. 550).

[ಬಕ್ರ$_0$ (ಪ್ರ ←ಸಂ. ವಕ್ರ) + ಬರ್ (<ವರ್)]

**ಬಕ್ಶೀಸು** 'ಬಕ್ಷೀಸು' ನೋ.

**ಬಕ್ಷಿ**, ಭಕ್ಷಿ (ನಾ). ೧. ಅರಮನೆಯ ಮುಖ್ಯಾಧಿಕಾರಿ : ಮೋದೀಖಾನೀ ಬಕ್ಷೀ ವೀರಭದ್ರೈಯ (ಎಕ. XIV. ಶಾಮರಾ. ೨೦೭-೦; 1868) ; ಇಬ್ಬರು ಬಕ್ಷಿಗಳನ್ನು ಜಡ್ಜಿಗಳಾಗಿ ನೇಮಿಸಿ (ಮಹಾಮಂ. II. ೨೭); ಈ ತಳ್ಳಿಯು . . . ವಿಳಂಬವಿಲ್ಲದೆ ಅರಮನೆಯ ಬಕ್ಷಿಯ ಕೈಗೆ ಬಂತು (ಚಾಗ್ರಂಬಿ. ೨೨೭). ೨. (ಬಕ್ಷಿಯ ಹೆಸರಿನಲ್ಲಿ ಮುದ್ರಿಸಿದ) ಒಂದು ಬಗೆಯ ನಾಣ್ಯ : 'ಗೋವಿಂದಬಕ್ಷಿ' ಪರಾ. **ಭಕ್ಷಿ** : ೧. ಮುಂದಿನ ನವರಾತ್ರಿಯಲ್ಲಿ ಅವನು ಮಹಾರಾಜರ ಮುಂದೆ ಹಾಡುವುದಕ್ಕೆ ಏರ್ಪಾಡು ಮಾಡುವುದಾಗಿ ವೀಣೆ ಭಕ್ಷಿಗಳು ಅವನಿಗೆ ವಾಗ್ದಾನ ಮಾಡಿದ್ದರು (ಸುಬ್ಬಣ್ಣ. ೮) ; ಭಕ್ಷಿ ಆನಂದರಾಯನಿಗೆ ವರ್ತಮಾನವನ್ನು ಕೂಡಲೇ ಹೇಳಿ ಕಳುಹಿಸಿದನು (ಇಬಮು. ೯೯).

[ ←ಪಾರ. ಬಖ್ಶೀ ; ಹಿಂ. ಬಕ್ಷೀ. ಬಕ್ಶಿ ; ಮರಾ. ಬಕ್ಷೀ, ಬಕ್ಶೀ, ಬಖ್ಶಿ . ಬಖ್ಷೀ]

**ಬಕ್ಷೀಸ್** 'ಬಕ್ಷೀಸು' ನೋ.

**ಬಕ್ಷೀಸು**, ಬಕ್ಶೀಸಂ, ಬಕ್ಷೀಸ್, ಭಕ್ಷೀಸ್, ಭಕ್ಷೀಸಂ (ನಾ). (ಮೆಚ್ಚುಗೆಯಿಂದ ಕೊಡುವ) ಬಹುಮಾನ ; ಇನಾಮು : ಆಳುಗಳಿಗೆ ಹದಿನೈದು ರೂಬಲ್ ಬಕ್ಷೀಸು ಕೊಟ್ಟನು (ಪುವರು. ೮೦) ; ಬಕ್ಷೀಸಿನ ಆಶೆಯಿಂದ ಎಲ್ಲಾದರೂ ಇಂಥ ಕಳವುಗಳ ಪತ್ತೆಯಾಗುವುದುಂಟೇ ? (ಕಳ್ಳಕಾ. ೭). **ಬಕ್ಶೀಸು** : ಸಂಕಣ್ಣನಾಯಕನಂ ಕರಶಿ ಆಲಿಂಗನವಂ ಮಾಡಿಕೊಂಡು ಮರೆಮಾಚಿದೆಯೆಂದು ಹೇಳಿ ಸದರಿ ಬಕ್ಶೀಸನ್ನು ಕೊಟ್ಟ (ಕೆಳವಂ. ೨೦_೧೯). **ಬಕ್ಷೀಸ್** : ಅಲ್ಲಿ ಕಾಯುತ್ತಿದ್ದ ದರವಾನನಿಗೆ ಐದು ರೂಪಾಯಿಯ ನೋಟನ್ನು "ಬಕ್ಷೀಸ್" ಇತ್ತು ಬ್ರೊಹೆಯನ್ನು ಹತ್ತಿದನು (ಬಧಿವ್ಯ. ೩೯). **ಭಕ್ಷೀಸ್** : ಮೇಘದೂತದ ಶ್ಲೋಕಗಳನ್ನು ಹೇಳುವುದು ಕೇಳಿ ಎಜ್ಯುಕೇಶನಲ್ ಇನ್ಸ್‌ಪೆಕ್ಟರ್ ಕೃಷ್ಣಮೂರ್ತಿಗೆ ಒಂದು ಫೌಂಟನ್ ಪೆನ್ 'ಭಕ್ಷೀಸ್' ಕೊಟ್ಟಿದ್ದರು (ಅಸ್ಸಿಶಂ. ೩೯). **ಭಕ್ಷೀಸು** : ನಿಮಗೆ ಇದನ್ನು ಭಕ್ಷೀಸಾಗಿ ಕೊಟ್ಟಿದ್ದೇನೆ (ಕಮಳ. ೨).

[←ಪಾರ. ಬಖ್ಶೀಸ್ ; ಹಿಂ. ಬಖಶೀಸ್, ಬಖ್ಶೀಸ್ ; ಮರಾ. ಬಕ್ಷೀಸ್, ಬಖ್ಶೀಸ್, ಬಖ್ಷೀಸ್]

**ಬಖರ್** 'ಬಖರು' ನೋ.

**ಬಖರು**, ಬಖರ್, ಬಖೈರು (ನಾ). ದೇಶಭಾಷೆಯಲ್ಲಿ ಗದ್ಯರೂಪವಾಗಿ ಬರೆದ ಐತಿಹಾಸಿಕ ವಿವರಗಳನ್ನೊಳಗೊಂಡ ಗ್ರಂಥ : ನವಾಬರು ಸವಣೂರಿಗೆ ರಾಜಕುಟುಂಬವನ್ನೂ . . . ಕರೆದುಕೊಂಡು

ಹೋಗಿ ಮನ್ನಿಸಿದರೆಂದು ಆ ಸಂಸ್ಥಾನದ ಬಖರುಗಳಲ್ಲಿ ಬರೆದಿದೆ (ಸಮಜೀ. ೩). **ಬಖರ್** : ಇತಿಹಾಸಗ್ರಂಥಗಳು ಬಖರ್ ಎಂದು ಮಹಾರಾಷ್ಟ್ರದಲ್ಲಿ ಪ್ರಸಿದ್ಧವಾಗಿರುವುವು (ಆತ್ಮ.ಶಿ. ೬೮). **ಬಖೈರು**: ಪುರಾತನ ಕೈಫೀಯತ್ತುಗಳನ್ನೂ ಬಖೈರುಗಳನ್ನೂ ಕಡತಗಳನ್ನೂ ಶಾಸನಗಳನ್ನೂ ತಿಳಿದವರು ಹೊರಕ್ಕೆ ತರಬೇಕು (ಬಿಕೈರು. ೦ ಮುನ್ನುಡಿ) ; ಮರಾಟಿಭಾಷೆ ಯಲ್ಲಿ ಶಿವಾಜಿ ಮೊದಲಾದ ವೀರರ ಕಥೆಗಳೂ ಪುನೆ ಶ್ರೀಮಂತರ ಚರಿತ್ರೆಗಳೂ ಬರೆಯಲ್ಪಟ್ಟಿವೆ. ಇವುಗಳನ್ನು ಬಖೈರು ಎನ್ನುತ್ತಾರೆ (ಮುಸಂಗ. ೭). [← ಮರಾ. ಬಖರ್, ಬಖೇರ್]

**ಬಖಾರಿ** (ನಾ). ಧಾನ್ಯ ಮುಂತಾದುವನ್ನು ಬಹಳ ಕಾಲ ರಕ್ಷಿಸಿಡಲು ಮಾಡಿದ ಗೂಡು ; ಪಣತ : ಬಖಾರಿಯಲ್ಲಿ ಗೋಡೆಯ ಹತ್ತರ ಇಲ್ಲವೆ ತಳಕ್ಕೆ ಇರುವ ಚೀಲಗಳೆಲ್ಲ ಹವೆಯಿಂದ ನೀರಿನಿಂದ ತೊಯದಂತೆ ಆಗುತ್ತದೆ (ಮುಂಬವ್ಯಾ. ೬೩). 'ವಖಾರ' ಪರಾ, [ ←ಹಿಂ. ಬಖಾರ್ ; ಮರಾ. ಬಖಾರೀ ]

**ಬಖೇಡಿ** (ನಾ). ೧. ವಾಜ್ಯ ; ಕಲಹ ; ಜಗಳ : (*). ೨. ತೊಂದರೆ ; ಕಿರಿಕಿರಿ : (*). [ ←ಹಿಂ. ಮರಾ. ಬಖೇಡಾ]

**ಬಖೈರು** 'ಬಖರು' ನೋ.

**ಬಗಟು** (ಕ್ರಿ). ೧. ತೊಡೆಗಳನ್ನು ಅಗಲಿಸು : "ಬಗಟು_ ಊರುವಿಶ್ಲೇಷೇ (ಕಾಲುಗಳನ್ನು) ಅಗಲಿಸು" (ಕಮಥಾ). ೨. ಪಾಲು ಮಾಡು ; ವಿಭಾಗಿಸು : ಅರಿವುಮ ಮೂಗನಿಕ್ಕುಟಿಕೊಳೆ ಕೀಟ್ಬುದು ಪಲ್ಗಳನೇಟುಬಟ್ಟೆಯಾಗಿರೆ ಕಿಱದೆಂಟುಸೂಟುಬ್ ಬಗಟಿ ಕೊಯ್ವುದು ಮುಂಡೆಯಂ (ಸೂಕ್ತಿಸು. ೯-೩೭೬). [ದೇ. ॥ ತಮಿ. ಮಲ. ವಕು ; ತುಳು. ಬಗಟು]

**ಬಗಟೆ** 'ಬಗಡೆ' ನೋ.

**ಬಗಟೆಗೋಳ** (ನಾ). (?) : ಮುದದೆ ವೈಯೆಂಬುದೇ ನಿಶ್ಚಯಂ ಕುಂಠವೆಂಬುದೇ ತತ್ಕ್ರಿಯಾಹಾನಿ ವೈಕುಂಠಯೆನಲಾಗಿ ಮದನಪಿತನೇ ಕಾಲು ಮುಱಿದ ಕುಂಠನೆನಿಪ್ಪ ಪೆಸರು ಲೋಕಪ್ರಸಿದ್ಧಂ ಅದಱಿಂದಲವನ ಪಾದಸ್ತಂಭವಾಗೆ ಮೆಟ್ಟಿದುದು ಮೇಘದಲ್ಲಿ ನೆಲದೊಳಗೊಂದು ಕಾಲಿರಲ್ಕದು ಬಗಟೆಗೋಳ ಮಲ ಹೆಟ್ಟಿದಂತಾಗಿರ್ದನಾ ಹರಿ ನಿರೋಧದಿಂದ (ಪೀಕ್ನಕೃ. ೩-೦೪-೨೩). [?]

**ಬಗಡೆ**, ಬಗಟೆ (ನಾ). ೧. ಚೆನ್ನಾಗಿ ತಳಿಸದಿರುವ ಅಕ್ಕಿ ; ತೌಡು ಮಿಶ್ರವಾದ ಅಕ್ಕಿ : (*). **ಬಗಟೆ** : ೨. "ಅಕ್ಕಿಯ ಮೇಲಣ ತೌಡು (?) " : (ಶ್ರಶಬ್ದ).

ಬಗಡೆಯಕ್ಕಿ=ಚೆನ್ನಾಗಿ ತಳಿಸದ, ತೌಡು ಮಿಶ್ರಿತವಾದ ಅಕ್ಕಿ: ಈ ಸಲದ ರೇಷನ್ ಅಕ್ಕಿ ದನಕ್ಕೆ ಹಾಕುವ ಬಗಡೆಯಕ್ಕಿಯ ಹಾಗಿದೆ (ರೂಢಿ). [← ಮರಾ. ಬಗಡ್]

**ಬಗದತ್ತಿ** (ನಾ). (?) : ಕಟ್ಟಾಳ್ಗಾನುಸಗಣ್ಣ ಮನ್ನವ ಬಣ್ಣಸಂ ಬೀಟುಪೋಂ ಪಡೆಯಂ ಬೆಳಪ ಬಿರುದಪ್ಪವರ ಬಿರುದನೊಡ್ಡಟ್ಟಿಫೊನ್ ಬಿದ್ದ ಬಗದತ್ತಿ ಆಣಿ ಗಣ್ದುಕದ ಗಣಿ ಪೊಕ್ಕ ಅಬ್ಬೆಯ ಆಟ್ಟ (ಎಪ. XXIV, ೨೬-೦೦; ಸು. 885). [?]

**ಬಗದಳ** 'ಭಗದಾಳ' ನೋ.

**ಬಗದಾರೆ** (ನಾ). ಒಂದು ಬಗೆಯ ಹಕ್ಕಿ : ಶರ್ಕಿಪ ಬಗದಾರೆಯ ಕೂಡೆ ಬಹ ಕೊಳವರ್ಕ್ಕಿಯ ಕೆಲದಾಡಿಸುತ ದಿಕ್ಕಿಗೆ ಪೆಸರಾಂತ ಸಿಪಿಲೆಗೆ ಕವಳವನಿಕ್ಕಿ ಕಾದಿಸುತಿರ್ಪ ಮದನ (ವೋಹಕ. ೩-೩೩) ; ಜಾಣ ಮೆಲ್ನುಡಿ ಗೆಲವರೆ ಗಿಳಿ ಬಗದಾದಿ[ರೆ] . . . ಹೊಮ್ಮರಿ ಮಂಚದ ಸುತ್ತ ಠಾಣಯವಿರಲು ನೋಡಿದನು (ಮೋಹಕ. ೩೦-೪೯). [?]

**ಬಗದಾಳ** 'ಭಗದಾಳ' ನೋ.

**ಬಗನಿ** 'ಬಯಿನೆ' ನೋ.

**ಬಗನೆ** 'ಬಯಿನೆ' ನೋ.

**ಬಗನೆಕಳ್ಳು** (ನಾ). ಬಗನೆಮರದಿಂದ ತೆಗೆದ ಹೆಂಡ, — ಮದ್ಯ: ಅವನಿಗೆ ಕುಡಿಯುವ ಚಟವಿದ್ದಿದ್ದರೆ ಬಗನೆಕಳ್ಳನ್ನು ಅಥವಾ ಅಕ್ಕಿಯ ಭೋಜವನ್ನು ಕುಡಿಸುತ್ತಿದ್ದರು (ಶಂಜಶಂ. ೯೭). [ ಬಗನೆ (<ಬಯಿನೆ) + ಕಳ್ಳು (<ಕಳ್$_3$) ]

**ಬಗಬಗ** (ನಾ). ಬೆಂಕಿ, ಗಾಯ ಮೊದಲಾದುವುಗಳು ಉರಿಯುವುದನ್ನು ಹೇಳುವ ಒಂದು ಅನುಕರಣ ಪದ: ಹೊತ್ತಿಸಿದ ಜೆಡೆ ಬೆಂದು ದಳ್ಳುರಿ ಹತ್ತಿ ಬಗಬಗ [ಪಾಠಾಂ. ಭಗಭಗ] ಎನುತಲುತ್ತಮನುತ್ತಮಾಂಗಂ ಬೇವುತಿರಲು (ಬಸಪು. ೦೬-೨೩); ಗಾಯ ಬಗಬಗ ಎಂದು ಉರಿಯುತ್ತಿದೆ (ರೂಢಿ).

**ಬಗಬಗನೆ** (ಅ). ಬಗಬಗ ಎಂದು : ಬೆಳಗುವನಲಂ ಬಗಬಗನೆ [ಪಾಠಾಂ. ಧಗಧಗನೆ] ಶಕೆ ಬೆಳೆಮುರಿವುತಿಹ ಕಬ್ಬುನದ ಕಾವಲಿಯೊಳಗೆ ಕುಳ್ಳಿರ್ದು (ಬಸಪು. ೫೩-೫೩). [ಬಗಬಗ + — ಅನೆ$_1$ ]

**ಬಗರ್**, ಬಗರು$_2$ (ಅ). ಇಲ್ಲವೆ ; ಹೊರತಾಗಿ : 'ಬಗರ್ಬಡ್ಡಿ', 'ಬಗರ್ಹುಕುಂ' ಪರಾ. **ಬಗರು$_2$** : 'ಬಗರುಚಿರಾಯಿತು' ಪರಾ. [←ಅರ. ಹಿಂ. ಬಗ್ಯೆರ್; ಪಾರ. ಬಿಘ್ಯೆರ್; ಮರಾ. ಬಗರ್, ಬಗ್ಯೆರ್ ]

**ಬಗರಗೆ** (ನಾ). ೧. (ಒಣಗಿದ ನದಿಮಂಡೆಯಲ್ಲಿ ನೀರಿಗೋಸ್ಕರ ತಾತ್ಕಾಲಿಕವಾಗಿ) ತೋಡಿದ ಕುಳಿ, —ಗುಣಿ : "ಚುರೀ, ಚುಂಡೀ, ಚೂಚುಕಃ—ಈ ೩ ಬಗರಗೆ" (ಹಲಾಯು. ೦೦೩-೬೨); ಪಥಿಕರಜಲ್ಗೊಂಡು ತೋಡಿಪಱುಂಬುನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಂ (ಕಾದಂಸಾ. ೨೬೬); ಬೇಗೆ ಪರ್ವಿದ ಪರ್ವತಂಗಳ ತಾಪಮಂ ಕಳೆವೊಡವಱಿಂಮನ್ನತಂಗಳಪ್ಪ ಜಲಧರಂಗಳೆ ಕಳೆಗುಂ ಕೀೞಿದುವಪ್ಪ ತೊಱೆಯುಂ ಬಾವಿಯುಂ ಬಗರಗೆಯುಂ ಕಳೆಯಲಾಱವು (ಅರ್ಧನೇ. ೬-೨೨ ವ); ಬಗರಗೆಯೊಳ್ ಮಣಲನೆನಿತ್ತಗಟ್ಟಿರ್ ಪಾಸಸರನಿತ್ತು ನೀರೊಸರ್ಗುಂ (ನೀತಿಮಂ. II, ೨೯೬). ೨. ಹೆಂಚಿನ ಚೂರು ; ಓಡು ; ಬಕ್ಕರೆ: "ಪಕ್ಕಳೆಂಮಂ ಬಗರಗೆಯೆಂದುಂ ಬಕ್ಕರೆ" (ಕಕಸಾ. ೬೬-೪೧೦); ಕೈಯೊಳ್ ಪಿಡಿದಾ ಲಾಗುಳದ ಕೋಲೊ ಬಗರ[ಪಾಠಾಂ. ರಿ]ಗೆಯೋ (ಕಬ್ಬಿಕಾ. ೦೬೯); ಬೆಂಗಡರಿದ ಬಸುರ್ಗಳ ಕೆದರ್ದಲೆಗಳ ಕೆಂಗಣ್ಣುಗಳ ಕೋರೆದಾಡೆಯ ಸಂಗಳಿಸಿದ ಬಗರಗೆ ಬಾಳ ಕೈಯ ಭೂತಂಗಳಾ ಹುರದೊಳಿರ್ದವು ಕೇಳ (ಸೂಬಸೋ. ೯-೨೬); ಭುಗಿಭುಗಿಲ್ಭುಗಿಲೆಂದು ಕಬ್ಬೊಗೆ ನೆಗೆಯಲುರಿ ಹೊಡೆವಬುಜಜಾಂಡದ ಬಗರ[ಪಾಠಾಂ. ರೊ]ಗೆಯ ಭೇದಿಸಿತು (ಕುವ್ಯಾಕ. ೯-೪೪) ೩. (?): ಕೆಣಕಿವರೆ ಭುಗಿಲೆಂದುದೀತನ ರಣಪರಾಕ್ರಮ ವಹ್ನಿ ಕರಡದ ಬಣಬೆ ಸಿಕ್ಕಿತು ಕಾಳುಗಿಚ್ಚಿನ ಬಾಯ ಬಗರಗೆಗೆ [ಪಾಠಾಂ. ತುತ್ತಾಗೆ] (ಕುವ್ಯಾಕ. ೩-೮).

**ಬಗರಿ** 'ಬವರಿ' ನೋ.

**ಬಗರು$_1$** (ಕ್ರಿ). (ಉಗುರಿನಿಂದ) ಕೆರೆ; ಗೆಬರು ; ಗೋರು ; ತೋಡು : ಪ್ರತಿಯೊಂದನ್ನೂ ಎರಡು ಮೂರು ಬಾರಿ ಕೇಳಿ, ಕೇಳಿ, ಬಗರಿ, ಬಗರಿ ಬಿಡಿಸುತ್ತಿದ್ದರು (ಸಂಬಿಣಾ. ೬೯) ; ಇದ್ದುದನ್ನು ಬಗರಿ ಕೂಡಿಡಬಹುದು (ಶಾಸ್ತ್ರೆ. ೯೬). [ ದೇ. ॥ ತಮಿ. ಪರುಕ; ತೆಲು. ಬರುಕು ; ಕೂಇ. ಪೆರ್ಕ ]

**ಬಗರು$_2$** 'ಬಗರ್' ನೋ.

**ಬಗರುಚಿರಾಯಿತು** (ನಾ). ಸರ್ಕಾರದ ಅಪ್ಪಣೆಯಿಲ್ಲದೆ ಬೇಸಾಯ ಮಾಡುವ ನೆಲ : ಭೂಮಿ ಇಲ್ಲದ ಬಡವನಾದ ಬಗರುಚಿರಾಯಿತು ಕುಳವು ಹೆಗ್ಗಡಿಯಾಗಿ ಬಲವಾಗಿರತಕ್ಕ ಪುರುಷನ ಸಹಾಯವನ್ನು ಪಡೆಯ ಬೇಕಾಗಿತ್ತು (ಶಾಳಗಾ. ೨೦). [ ಬಗರು$_2$ (<ಬಗರ್) + ಚಿರಾಯಿತು ]

**ಬಗರ್ಬಡ್ಡಿ** (ಅ). ಬಡ್ಡಿ ಇಲ್ಲದೆ : (*). [ ಬಗರ್ + ಬಡ್ಡಿ$_3$ ]

**ಬಗರ್ಬದಲಿ** (ಅ). ಬದಲಿಯಿಲ್ಲದೆ; ವ್ಯತ್ಯಾಸವಿಲ್ಲದೆ : (*).
[ ಬಗರ್ + ಬದಲಿ₂ ]

**ಬಗರ್ರಜ** (ಅ). ರಜವಿಲ್ಲದೆ; ಬಿಡುವಿಲ್ಲದೆ : (*).
[ ಬಗರ್ + ರಜ₂ (< ರಜಾ) ]

**ಬಗರ್ಹುಕುಂ,** ಬಗರ್ಹುಕ್ಕುಂ (ಅ). ಅಪ್ಪಣೆಯಿಲ್ಲದೆ : ರೆವಿನ್ಯೂ ಜಮೀನಿನಲ್ಲಿ ಕನ್‌ವರ್‌ಷನ್ ಆಗದೆ 'ಬಗರ್‌ಹುಕುಂ' ಮನೆ ಕಟ್ಟಿದ್ದು ಸರ್ಕಾರಕ್ಕೆ ಗೊತ್ತಾದರೆ ನಿನ್ನ ಮನೆ ಪಾಯದ ಕಲ್ಲು ಕದಲಿಸಿ ಬಿಟ್ಟಾರು ! (ನಮ್ಮೂ. ೪). **ಬಗರ್ಹುಕ್ಕುಂ:** ಸರ್ಕಾರದ ಜಮೀನನ್ನು ಅಥವಾ ನೀರನ್ನು ಬಗರ್‌ಹುಕ್ಕುಂ ಉಪಯೋಗಿಸಿದ್ದಕ್ಕೆ . . . ವಿಧಿಸುವ ಜುಲ್ಮಾನೆ (ಕಲಪ. ೧೫೫). [ ಬಗರ್ + ಹುಕುಂ ]

**ಬಗರ್ಹುಕ್ಕುಂ** 'ಬಗರ್ಹುಕುಂ' ನೋ.

**ಬಗಲ್** (ನಾ). ತುಂಡು ; ಚೂರು.
**ಬಗಬಗಲ್ಮಾಡು** = ಚೂರುಚೂರು ಮಾಡು : ಯುಗಸಹಸ್ರ ಕ್ಕೊಡೆಯುಬಹುದೆ ಬಲದುರ್ಗಮಂ ಬಗಬಗಲ್ಮಾಡಿ ಮುರಿವಡಮು ರಿಪುಮಸ್ತಕವನೊಗದು ಬಿಸುಡಿದ ಪಾರ್ಥ ಪಾಶುಪತಬಾಣದಿಂ (ತುರಂಗ. ೫೬-೫೩). [ ←ಮರಾ. ಬಖಲ್ ]

**ಬಗಲ** (ನಾ). ವಿಶಿಷ್ಟ ಆಕಾರದ ಒಂದು ಬಗೆಯ ಅರಬ್ಬಿನಾವೆ : ಫತ್ತೆಮಾರಿಗಳಲ್ಲಿಯೂ ಬಗಲಗಳಲ್ಲಿಯೂ ಸರಕುಗಳನ್ನು ತುಂಬಿಕೊಂಡು . . . ಸಮುದ್ರಪ್ರಯಾಣ ಮಾಡುತ್ತಿದ್ದರು (ಮುಂಬಯಿ. ೩-೧೧೨).
[ ← ಮರಾ. ಬಗಲಾ./ತುಳು. ಬಗಲೆ ]

**ಬಗಲಂಗಿ** (ನಾ). ಗಿಡ್ಡತೋಳಿನ ಒಂದು ಬಗೆಯ ಅಂಗಿ : (*).
[ ಬಗಲು + ಅಂಗಿ₂ ]

**ಬಗಲಬಂಡಿ** 'ಬಗಲುಬಂದು' ನೋ.

**ಬಗಲಬಂಡೆ** 'ಬಗಲುಬಂದು' ನೋ.

**ಬಗಲಾಂಟ** (ನಾ). ಸುಳ್ಳು ಆಪಾದನೆ; ಮಿಥ್ಯಾರೋಪ : ಇದೇನು ಹೊಸ 'ಬಗಲಾಂಟ'ದ ಸುದ್ದಿ ತಂದಾನೊ ಎನ್ನುವಂತೆ ಮಾಸ್ತರರನ್ನು ನೋಡಿ . . . ಕೇಳಿದರು (ಮೂರುದಾ. ೩೦).
[ ←ಮರಾ. ಬಂಗಲಾಟ್, ಬಂಗಲಾತ್ ]

**ಬಗಲಿ** (ನಾ). ಕನ್ನ ; ಕಂಡಿ: 'ಬಗಲಿಪದ್ಧತಿ' ಪರಾ.
[←ಮರಾ. ಬಗಲೀ]

**ಬಗಲಿಪದ್ಧತಿ** (ನಾ). ಕನ್ನ ಕೊರೆದು ಕದಿಯುವ ಪದ್ಧತಿ : ಬಾಗಿಲಿನ ಹತ್ತಿರ ಗೋಡೆ ಕೊರೆದು ಒಳಸೇರುವುದಕ್ಕ 'ಬಗಲಿ'ಪದ್ಧತಿಯೆಂದೂ . . . ಕರೆಯುವ ರೂಢಿಯಿದೆ (ಬಂಗಾರ. ೧೫೦). [ಬಗಲಿ + ಪದ್ಧತಿ]

**ಬಗಲು** (ನಾ). ೧. ಕಂಕುಳು; ಕಕ್ಷ : ಗಂಡುಗಲಿ ಕೃತುವೀರ್ಯ ಸಂಭವಂ ಬಗಲೊಳಾಂತೊಲಪಿನಿಂ ತಿರುಗಲು (ಶರಕು. ೦೩-೩೭); ಲಲನೆ ಯರ ಮೈ ಕಂಪನಂಬಡೆದು ಬಗಲೊಳಗೆ ಜಲವಿಳಿದು ಬಾಯುರತವು (ಮಲ್ಲಿಷ. ೬-೮); ಪಾದರಕ್ಷೆಯನ್ನು ಪಟ್ಟೆಯ ವಸ್ತ್ರದಲ್ಲಿ ಮುದುಗಿಸಿ, ಬಗಲಲ್ಲಿಟ್ಟು ಬಸವಣ್ಣನವರ ಅರಮನೆಗೊಯ್ದನು (ಶರಲೀ. ೪೩೦-೭ ವ). ೨. ಮಗ್ಗುಲು ; ಪಕ್ಕ : ಪಡುವಲಾಗಿ ತಿರಿಗಿ ಬಗಲಾಗಿ ತಿರಿಗಿದ ಮುರಿದೂಬಲಾಗಿ ಕರಿಯ ಕಲ್ಲ ಮೇಲೆ ಹಾದು (ಎಕ. III, ತಿರುಮ. ೬೨-೨೦; 1622); ಹಳ್ಳಿಯ ರೈತನೊಬ್ಬ. . . ದಾರಿಯ ಬಗಲಲ್ಲಿ ಗಾಡಿ ಹೊಡೆದು ಕೊಂಡು ಹೋಗುತ್ತಿದ್ದನು (ಹೊಸರು. ೦೬೨). ೩. ಪಕ್ಷ; ಪಂಗಡ : ಒಬ್ಬೊಬ್ಬ ಸಂಪಾದಕರು ಬಗಲಿಗೆ ಇರಲಿ (ಅರಳು. ೩೪೭-೧೧).
**ಬಗಲಿಗೆ ಬೀಳು** = ಅಧೀನವಾಗು ; ವಶವಾಗು : ಶ್ಯಾಮಣ್ಣ ಬಗಲಿಗೆ ಬಿದ್ದರೆ (ಲೋಕಕ. ೦೪) ; ಕಾಕಾ ಬಗಲಿಗೆ ಬಿದ್ದರ ಅಂತ ತಿಳೀ (ದೀಪಹ. II, ೨೦೦). [←ಪಾರ. ಬಘಲ್ ; ಹಿಂ. ಮರಾ. ಬಗಲ್]

**ಬಗಲುಕಸೆ** (ನಾ). ಒಂದು ಪಕ್ಕದಲ್ಲಿ ಲಾಡಿಯನ್ನು ಗಂಟುಕಟ್ಟಿ ತೊಡುವ ಅಂಗಿ : ಮೈಯಲ್ಲಿ ಕೊಡೆಯರಿವೆಯ ಬಗಲುಕಸೆಯ ಅಂಗಿ ಯನ್ನು ತೊಟ್ಟಿದ್ದ (ಜನಪ. ೨೭). [ಬಗಲು + ಕಸೆ₂]

**ಬಗಲುಚೀಲ** (ನಾ). ಹೆಗಲಿಗೆ ನೇತುಹಾಕಿಕೊಳ್ಳುವ ಚೀಲ : ಅವನು ತನ್ನ ಬಗಲುಚೀಲದಿಂದ ಪುಸ್ತಕಗಳನ್ನು ಹೊರದೆಗೆದನು (ರೂಪ).
[ಬಗಲು + ಚೀಲ]

**ಬಗಲುಬಂಡಿ** 'ಬಗಲುಬಂದು' ನೋ.

**ಬಗಲುಬಂದು,** ಬಗಲಬಂಡಿ, ಬಗಲಬಂಡೆ, ಬಗಲುಬಂಡಿ (ನಾ). ಒಂದು ಬಗೆಯ ಅಂಗಿ : ಜಗನ್ನಾಥದಾಸರು ಬಗಲುಬಂದನ್ನು ತೊಟ್ಟು ಕೊಂಡು ಲಪ್ಪಾಟಿಯನ್ನು ಸುತ್ತಿಕೊಂಡು. . . ಮನೆಗೆ ಬಂದರು (ಕಥಾ. ೫೨೩). **ಬಗಲಬಂಡಿ :** ಶರೀಫರು. . . ಬಿಳೀ ಬಗಲಬಂಡಿಯನ್ನು ಅಚ್ಚುಕಟ್ಟಾಗಿ ತೊಡುತ್ತಿದ್ದರು (ಕಂಕ. ೬೧ ಕವಿಕಾವ್ಯಸಂಪುಟ); ಚಳಿಯ ಸಲುವಾಗಿ ಅವರು ಒಂದು ಖಾದಿಯ 'ಬಗಲಬಂಡಿ' ಯನ್ನು ಹಾಕುತ್ತಿ ದ್ದರು (ಎಧ್ರುವ. ೦೯೦). **ಬಗಲಬಂಡೆ :** ವೇದವ್ಯಾಸಾಚಾರ್ಯ ಉಟ್ಟಿದ್ದು ಅಂಚಿನ ದೋತರ, ತಲೆಗೆ ಸುತ್ತಿದ್ದು ಕೆಂಪುಬನಾತು, ಮೈಯಲ್ಲಿ ಶುಭ್ರ ವಾದ ಬಗಲಬಂಡೆ (ಉದಮ್ಮ. ೦೭). **ಬಗಲುಬಂಡಿ :** ಹಿಂದಕ್ಕೊಮ್ಮೆ ಬಗಲುಬಂಡಿಗಳನ್ನು ನಮ್ಮ ಪುರಾತನರು ಹಾಕುತ್ತಿದ್ದರು (ಮುಂಗಾರು. ೨೪).
[←ಪಾರ. ಮರಾ. ಬಗಲ್‌ಬಂದ್ ; ಹಿಂ. ಬಗಲ್‌ಬಂದೀ]

**ಬಗಲೆ,** ಬಗಳೆ (ನಾ). ೧. ತಾಂತ್ರಿಕರು ಪೂಜಿಸುವ ಒಬ್ಬ ದೇವತೆಯ ಹೆಸರು : ಈ ಎಲ್ಲಾ ಕ್ರಮಗಳೂ ಸಚ್ಚಿದಾನಂದರೂಪಿಣಿಯಾಗಿರುವ ತ್ರಿಪುರಾ, ಲಲಿತಾ, ಪರಾ, ಬಗಲಾ — ಮೊದಲಾದ ಸಾವಿರಾರು ಸಂಕೇತ ಗಳಿಂದ ಸೂಚಿಸಲ್ಪಡುವ ಶಕ್ತಿತಾದಾತ್ಮ್ಯವನ್ನು ಉಂಟುಮಾಡುವವು ಗಳಾಗಿವೆ (ಶಾರದ. ೨೨೮). **ಬಗಳೆ :** ೨. ಪಗಲಾದೇವತೆಯನ್ನು ಕುರಿತು ಹೇಳುವ ಮಹಾಮಂತ್ರಗಳಲ್ಲಿ ಒಂದು : ಬಗಳಾ . . . ಇತ್ಯಾದಿ ಮಹಾಮಂತ್ರಗಳು (ವಿವೇಕ. ೬೦). [<ಸಂ. ವಗಲಾ]

**ಬಗಸಿಗೆ** (ನಾ). ಬೊಗಸೆ ; ಅಂಜಲಿ : ಕುಂಚಿತಾಂಗುಲಿಗಳನ್ನುಳ್ಳ ಅಂಗೆಯ್ ಪ್ರಸೃತಿಯೆನಿಸುಗು. ಅದು ಕುಡಿತೆ; ಆ ಎರಡೂ ಕೂಡಿದರೆ ಅಂಜಲಿಯೆನಿಸುಗು, ಅದು ಬಗಸಿಗೆ (ನಾಚರಾ. ೬). [<ಬಗಸೆ]

**ಬಗಸು₁** 'ಬಯಸು₁' ನೋ.

**ಬಗಸು₂** (ನಾ). ೧. ಆಸೆ; ಹಂಬಲ : ಅಗಸಿಯ ತೆರಿ ನನ್ನ ಬಗಸುಳ್ಳ ತಳವಾರಾ ಬೊಗಸಿ ತುಂಬಡಕಿ ಬಿಳಿಎಲಿಯ ಕೊ(ಮಲ್ಲಗೆ. ೩೯). ೨. (?) : ಸೊಗಸಿನಿಂ ಬಗಸಿನಿಂ ಮಿಗಿಲಾಗಿ ಲಘುವಾಗಿ (ಜನಮು. ೪೮-೫೦).
[<ಬಗಸು₁]

**ಬಗಸೆ,** ಬೊಗಸೆ₁ (ನಾ). ೧. ಎರಡು ಅಂಗೈಗಳನ್ನೂ ಕೂಡಿಸಿದುದು ; ಸೇರೆ; ಅಂಜಲಿ : ಕುಡುತೆ ಬಗಸೆ ಮೊಟ ಗೆರಸಿ . . . ಮೊದಲಾದವು ಅವಮಾನಮೆಂಬುದಕ್ಕುಂ (ಶ್ರಾವಕಾ. ೫೮-೦೭); ಒಗೆದೊಗೆದು ಕಾಲ್ದಿರುಹಿ ರಕ್ತಮಂ ಬಗಸೆಯಿಂ ಮೊಗೆಮೊಗೆದು ಕುಡಿವುತಂ (ಶಕುಂತ. ೩-೭-೭೮); ಹುಡುಗಿಯರು ಗಾಡಿಗಳನ್ನು ನಿಲ್ಲಿಸದೆ ಹಾಗೆಯೇ ಮೇಲೇರಿ ಬಗಸೆ ತುಂಬ ದ್ರಾಕ್ಷಿಗಳನ್ನು ಎತ್ತಿ . . . ಹಾಕುತ್ತಿದ್ದರು (ಮಲೆನಾ. ೦೫೮). ೨. ಒಂದು ಸೇರೆಯಲ್ಲಿ ತುಂಬುವಷ್ಟು : ಯಾರಾದರು ಬಂದ ಪುಣ್ಯಾತ್ಮರು ನನ್ನ ತಲೆ ಮ್ಯಾಲೆ ಒಂದು ಬಗಸೆ ನೀರು ಆಕಬೇಕೆಂದು ಬೇಡುತ್ತೇನೆ (ಮೈಆಂ. ೦೯೨೯, ೯೭-೦೭; 1593 ?). **ಬೊಗಸೆ₁ :** ೧. ರಕ್ತವನ್ನು ಬೊಗಸೆಗಳಿಂದ ಹಿಡಿದು ಬಾರಿಬಾರಿಗೂ ಕುಡಿಯುತ (ಕೃವಾಕ. ೦೭೭); ಬೊಗಸೆಯೊಳಿರೆ ಹೂವು ಕೈಗಳನೆರಡನು ಪರಿಮಳಗೊಳಿಸುವುದಲ್ತೆ (ಇಂಚಾಪ. ೭೯-೩೩). ೨. ಆಕೆಯನ್ನು ಮೂರುಲೋಕ ಸುತ್ತಿಸಿ, ಮೂರು ಬೊಗಸೆ ನೀರನ್ನು ಕುಡಿಸದೆ ಬಿಡುವೆನೇ ? (ಲಕ್ಷ್ಮೀಶ್ರ. ೦೭೦).

**ಬಗಸೆಗಣ್**, ಬಗಸೆಗಣು, ಬಗಸೆಗಣ್ಣು, ಬೊಗಸೆಗಣ್, ಬೊಗಸೆಗಣ್ಣು (ನಾ). ಬೊಗಸೆಯಷ್ಟು ಅಗಲವಾದ ಕಣ್ಣು : ಬಗಸೆಗಣ್ಕುಡಿನೋಟವಮಮು ಪೊಸಗಾಡಿಯಂ ತೆಗೆಯೆ (ಶಬ್ದರಾ. ೩-೩೦); ಬಗಸೆಗಣ್ಗಳೊಳು ವಿಲಾಸವೆಸೆಯೆ ರಸವೊಗುವಂತೆ ಪಾತ್ರವಾಡಿದಳು (ಶರಶ. ೦೩-೬೮); ಮೊಗವನಿತುಮಂ ವ್ಯಾಪಿಸಲೆಳಸುವ ಬಗಸೆಗಣ್ಗಳಂ ಮೇರೆಯೊಳ್ ನಿಲಿಸುವೆಲ್ಲೆಗಟ್ಟೆಗಳಂತಿರ್ಪ ಪುರ್ಬುಗಳುಂ . . . ಮನಂಗೊಳೆ (ಶಕಪಂ. ೭೭-೦೪). **ಬಗಸೆಗಣು** : ಸಸಿಯನ್ನ ಮೊಗದೊಳು ಮೊಳೆವ ವಿಸಾಸೆಯು ಚೆನ್ನವಮಾಣಿಕದುಟಿ ಬಗಸೆಗಣು [ಪಾಠಾಂ. ಣ್]ತಿಂಗಳರೆನೊಸಲು (ಸಾಕ್ಶರಾ. ೪-೭). **ಬಗಸೆಗಣ್ಣು** : ಒರ್ವಳಂ ತನ್ನ ಬಗಸೆಗಣ್ಣಿಂ ಮುರಿದು ನೋಡೆ (ಶಬ್ದರಾ. ೮-೪೬);ಬಗಸೆಗಣ್ಣ ಮಲಾಂಗಿಯರ್ಶೈತಂದರು ಬಿಗಿದ ಪುರ್ಬಿನ ಪೆಣ್ಣನೊಡನೆ (ಶಂಶ್ರಸಾಂ. ೯-೦೪೦). **ಬೊಗಸೆಗಣ್**: ಬೊಗಸೆಗಂಗಳ ಬಾಲೆಯರ ತಂದಾತನ ಶ್ರೀಕೃಷ್ಣ ಎನ್ನಿರೊ (ಕನಕ. ೦೩೦-೩) ; ಭಟ್ಟನಿಯ ಬೊಗಸೆಗಂಗಳಲ್ಲಿ ಕಂಬನಿ ತುಂಬಿ ಬಂದಿತು (ಬಾಣಕ. ೩೭೬). **ಬೊಗಸೆಗಣ್ಣು** : ಬೊಗಸೆಗಣ್ಣಿನ ಮುಗುದೆಯನು ನೋಳ್ಪೆ (ಶಾಕುಂತ. ೦೮ ಅಡಿಶಬ್ದ) ; ಅವಳ ಬೊಗಸೆಗಣ್ಣುಗಳಲ್ಲಿ ತುಂಬುತ್ತಿದ್ದ ನೀರನ್ನು ನೋಡಿದಾಗ ಗಲಿಬಿಲಿಗೊಂಡ (ವಾತ್ಸಲ್ಯ. ೩೭).

[ಬಗಸೆ + ಕಣ್]

**ಬಗಸೆಗಣು** 'ಬಗಸೆಗಣ್' ನೋ.

**ಬಗಸೆಗಣ್ಣು** 'ಬಗಸೆಗಣ್' ನೋ.

**ಬಗಸೆಗೈ** (ನಾ). ಜೋಡಿಸಿದ ಕೈ ; ಸೇರೆಗೈ : ಬಗಸೆಗೈಗಳಲಿ ನೀರ್ವಿಡಿದು ಶ್ರೀರಂಗೇಶ ಸೊಗಸುಗಾತಿಯರ ಮೇಲಿಡಲು (ಕಂಪಂ. ೨೩-೦೨೩).

[ಬಗಸೆ + ಕೈ$_2$ (< ಕೆಯ್$_2$) ]

**ಬಗಳಾಮುಖಿ** (ನಾ). = ಬಗಲೆ ೧ : ಗಿರಿಗಳೊಳು ಸುರಗಿರಿಯು ಭೂಮಿಯ ತರುಗಳೊಳು ಮಂದಾರ ದೈವತದಿರವಿನೊಳು ಬಗಳಾಮುಖಿಯು (ಜ್ಞಾಪಸಿಂ. ೧-೦೩). [< ಸಂ. ವಗಲಾಮುಖೀ]

**ಬಗಳಿ** 'ಬೊಗಳಿ' ನೋ.

**ಬಗಳೆ** 'ಬಗಲೆ' ನೋ.

**ಬಗಾಟಬಗರಿ** 'ಬೊಗಾಟಬುಗರಿ' ನೋ.

**ಬಗಿ$_1$** (ಕ್ರಿ). ೧. (ಎರಡು ಭಾಗಗಳಾಗುವಂತೆ) ಸೀಳು ; ಹೋಳು ಮಾಡು : "ಬಗಿ—ವಿಶ್ಲೇಷೇ (ಭಾಗ ಮಾಡು)" (ಕವಾಪಾ); ಅಂಬರಂಬರಂ ಬಗಿದು ನಿಮಿರ್ವ [ಪಾಠಾಂ. ಬಳೆದು ಮಿಳಿರ್ವ] ತೆರೆಗಳ್ (ಆದಿಪು. ೦೨-೭೯ ವ) ; ನಿಮ್ಮುದರವ ಬಗಿದಾನು ಹೊಗುವ ಭರವೆನಗೆ (ಜಕವ. ೪೪೭) ; ಈಗಳೆ ನಿಮ್ಮನುಗಿದುಂ ಬಗಿದುಂ ದೆಸೆವಲಿಗುಡುತುಮೆನ್ನ ಚೆನ್ನ ತಮ್ಮನಂ ಕೊಳ್ವೆಂ (ರಾಮಾಶ್ವ. ೦೫೭-೨), ೨. ಕೆದಕು ; ಬೆದಕು : ಪಿರಿದಪ್ಪೆರೆಯುಂ . . . ನಿಷ್ಠುರದಿಕ್ಕಿ ಮೆಟ್ಟೆ ಪುಟುಗಳ್ ಕರಮಲ್ಲೆಡೆ ಪತ್ತಿ ಬಗಿದು ತಿನೆ ಮೆಯ್ಯಿಡಗಂ (ಧರ್ಮಾಮೃ. ೩-೭೯). 'ಬಗಿಯೇಱು' ಪರಾ. ೩. ಎರಡು ಭಾಗಗಳಾಗುವಂತೆ ತಳ್ಳಿ, ಜಾಗ ಮಾಡಿಕೊಳ್ಳು : ಮೊನೆಯಂಬಿನ ತಂಪಲೊಳರ್ಜುನನಂ ಕರ್ಣನುಮನಿನಿಸು ಕಾಣದಣಂ ಮೆಲ್ಲನೆ ಬಗಿದು ನೋಡಿ ಕುಡುಮಿಂಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ (ಕಂಶಭಾ. ೦೨-೦೮೪) ; ಸೌಂದರಪೆರುಮಾಳೆಯಿರ್ದ ವನಕ್ಕೆ ಬಂದು ಆಲ್ಲಿ ಮುಂದೆ ನೆರೆದಿರ್ದ ನೆರವಿಯಂ ಬಗಿದು ಎನ್ನ ಭಕ್ತನ ಕೂಡಿ (ವಂಶಿರ. ೭-೬೩) ; ಬಿಡುಮುಡಿಯ ಕಟ್ಟದೆ ತವಕದಲ್ಲಿ ನೋಳ್ಪೌತ್ಸುಕ್ಯದಿಂ ಮಂದಿಯ ಬಗಿದು ಚೆಲ್ವೆಗಂಗಳೊಳೀಕ್ಷಿಸುತ್ತಿರ್ದಳೊರ್ವಳಾ ಕುವರನ ಮಹೋತ್ಸವವನು (ಶಬಕೃ. ೫-೦೪). ೪. ಅಗೆ ; ತೋಡು : ಬಗಿದು ಪಾತಾಳವಂ ಮುಟ್ಟುವಗಳುದ್ದದಿಂ . . . ಎಸೆವುದಾ ಪುರವು (ಜಕಾಂಶ. ೩. ೨೮೦-೦) ; ಹೊಸಪೊಱಿತೆಯಂ ಬಗಿಬಗಿದು ತೋಡಿದಡಲ್ಲದೇ ಕೈಕೊಳ್ಳನು (ಶಿಶಕೃ. ೪೭-೦೦). ೫. ಬೇರೆ ಮಾಡು ; ಬೇರ್ಪಡಿಸು ; ವಿರಳಗೊಳಿಸು (?) : ಬಗಿವಗುಟಿಂದದಂತೆ ತೆಗೆದಾಱಿಸಿದೋಗರದೊಳ್ ಪೊದಳ್ದು ಕಮ್ಮಗೆ ಕನೆಗೊಂಡ ಗೆಡ್ಡೆಮೊಸರಂ ಸುರಿವು . . . ಕಲಸಿರ್ದ ತಣ್ಣಲಸುಗೂಟಿನಿಳಾಪತಿಗಿತ್ತಂ (೮೦೮ಶವ. ೩-೬೨) ; ನಿಡುಗೇಶವ ( ಗಿ ಬಗಿದು ಕಮ್ಮೆಣ್ಣೆಯನೊಡನೆಱಿದೊರ್ವಳವಳಿಗೆ . . . ಉಗುರ್ಗಳನಾಡಿಸಿದಳು (ಕುಂದಸಾಂ. ೨೯-೬೩). ೬. (ಅಲಂ) ನಾಶಮಾಡು ; ಇಲ್ಲವಾಗಿಸು : ಕೌರವನ ತಮ್ಮಂದಿರ ಸುಸನ್ನಾಹವ ವಿಸಂಚಿಸಿ ಬಗಿದು ಸಮಸಪ್ತಕರನೊಡೆಹಾಯ್ವಿ (ಕುಮಾ್ಯಶ. ೦೪-೨೪).

[ದೇ.॥ ತಮಿ. ವಕ್ಕೈ, ವಕು ; ಮಲ. ವಕಯು, ವಕು]

**ಬಗಿ$_2$** (ನಾ). ೧. ಸೀಳುನಿಕೆ ; ಕತ್ತರಿಸುವಿಕೆ : (?) ೨. ಹೋಳು ; ಭಾಗ : 'ಇರ್ಬಗಿ' ಪರಾ. ೩. ಸೀಳು ; ಬಿರುಕು : ಕೊಯ್ಕೊ ಪೊರೆಳ್ಚಿ ಕುತ್ತೆ ಕೊಱಿದಿಕ್ಕಿ ತಡಂಗಡಿದೊಟ್ಟೆ ನೆತ್ತಿಯಂ ಪೊಯ್ಕೆ ಬಟಲ್ದು ವೈತರಣಿಯಂ ಪುಗೆ ಕಾಯ್ದುಱಿ ಲೋಹವಾರಿ ಚುಂಚುಯ್ಯೆನೆ ಸುಟ್ಟು ಹುಣ್ಣರಳೆ ಮೆಯ್ಯನಿತುಂ ಬಗಿಯಾಗಿ ಬಾಯ್ಗಳಿಂ ಹುಯ್ಯಲನಿಕ್ಕುಪಂ ಕೊಳಱ ಕೊಳ್ಗುದಿಮುಳ್ಗುದಿಗೊಂಡು ಮುಗ್ಗುವರ್ (ಅಸಂಪು. ೯-೩೨).

[< ಬಗಿ$_1$./ ತೆಲು. ಬಗಿ = ಪಕ್ಕ]

**ಬಗಿ$_3$**, ಬಗ್ಗಿ (ನಾ). (ಉಕ) (ನಾಲ್ಕು ಚಕ್ರಗಳುಳ್ಳ, ಒಂದು ಅಥವಾ ಎರಡು ಕುದುರೆಗಳನ್ನು ಕಟ್ಟುವ) ಒಂದು ಬಗೆಯ ಕುದುರೆಯ ಗಾಡಿ ; ಸಾರೋಟು : ಜಾಗಿರದಾರರ ಮಕ್ಕಳು ವಿರಾಜಮಾನರಾಗಿ ಒಂದು ಬಗಿಯಲ್ಲಿ ಕುಳಿತುಕೊಂಡು ಆ ಶಾಲೆಗೆ ಹೋಗುತ್ತಿದ್ದರು (ಇತಿಶ್ರೀ. ೩೦) ; ಜ್ಞಾನಶಂಕರರು . . . ಬಾಡಿಗೆ ಬಗಿಯನ್ನು ಹಿಡಿದು ಮನೆಗೆ ಹೊರಟರು (ಶ್ರೀಪಾಕೃ. ೫೯). **ಬಗ್ಗಿ** : ಒಬ್ಬನು ಅಥವಾ ಇಬ್ಬರು ಸವಾರಿ ಮಾಡಬಹುದಾದ ಹಗುರವಾದ ಗಾಡಿ : ಬಗ್ಗಿ (Buggy. ಇಂಕಪ).

[←ಇಂ. Buggy. / ಅರ. ಬೋಗೀ ; ಹಿಂ. ಬಗ್ಗೀ, ಬಗ್ಘೀ ; ಮರಾ. ಬಗೀ]

**ಬಗಿನಿ** 'ಬಯಿನೆ' ನೋ.

**ಬಗಿಯೇಱು** (ನಾ). ಕೆದಕಿದುದರಿಂದ ಉಂಟಾದ ಗಾಯ : ಅರೆವೇಣಸಾದೊಡಂ ಬಿಡದೆ ಮಾಡುವ ದೀವಿಗೆಯಾಸೆಯುಳ್ಳ ಬೀರರ ಬ[ಪಾಠಾಂ. ಬಿ]ಗಿಯೇಱ ಬಾಯುಗಿಲು ಸಿಂಕಿಪ ಕಂಡದ ಸತ್ತ ರಾಜಪುತ್ರರ ವನಿತಾಜನಂ ತೊಱದು ತೋ[ಕೋ]ಳ್ಗುದಿ ಬಾಳ್ಗುದಿಯಾಗಿ ಬೇವ ದಳ್ಳುರಿಗಳ ಮಾಲೆಗೊಂಡ ಬೆಳಗಿಂ ಬೆಳಗಾಯ್ತುರಮುಂ ಬಲಂಗಳೊಳ್ (ಅಸಂಪು. ೦೦-೯೭).

[ ಬಗಿ$_1$ + ಏಱು$_4$ (<ಏಱ್$_4$) ]

**ಬಗಿಸು** (ಕ್ರಿ). ೧. ಸೀಳುವಂತೆ ಮಾಡು; ಸೀಳಿಸು: ಉದ್ರೇಕದಿಂದೀಕೆಯು ದರಮುಂ ಬಗಿಸಿದ ಸತಿದ್ರೋಹ ನಾಲ್ಕು (ಜಿಪು. ೪-೩೧). ೨. ಅಗೆಯಿಸು; ತೋಡಿಸು: ಹೊಲದ ಮಣ್ಣನ್ನೇ ಬಗಿಸಿ ತೆಗೆದು ಸಾರಿಸಿ ದೊಡ್ಡದೊಂದು ಕಣವನ್ನು ಮಾಡಿಸುತ್ತಿದ್ದರು (ಜೀಛಾ. ೬೩). [ಬಗಿ$_1$ + —ಸು$_1$]

**ಬಗೀಚಾ**, ಬಗೀಚೆ (ನಾ). ಸಣ್ಣ ತೋಟ; ಕೈತೋಟ: ಇದು ಬಂದ ಹೋದವರ ದಶಿಯಿಂದ ಮಾಡಿದ ಬಗೀಚಾ ಅಂತ ತಿಳಿದಿಯೇನು ? (ಜಾಂಡಾಯ. ೦೪). **ಬಗೀಚೆ**: ಹಿಂದೊಮ್ಮೆ ಹೇಳಿದ ಬಗೀಚೆಯೊಳಗಿನ ಬಂಗಲೆಯಲ್ಲಿ ಇಬ್ಬರೂ ಕೂಡಿ ಸುಖವಾಗಿ ಕಾಲವನ್ನು ಕಳೆಯಬಹುದಾಗಿದ್ದಿತು (ಜೆಳಗು. ೫೭).

[← ಪಾರ. ಬಾಗಚಾ; ಹಿಂ. ಬಗೀಚಾ; ಮರಾ. ಬಗಿಚಾ, ಬಗೀಚಾ]

**ಬಗೀಚೆ** 'ಬಗೀಚಾ' ನೋ.

**ಬಗುತ** 'ಬಕುತ' ನೋ.

**ಬಗುತಿ** 'ಬಕುತಿ' ನೋ.

**ಬಗುನಿ** 'ಬಯಿನೆ' ನೋ.

**ಬಗುಲಿ** (ನಾ). ಒಂದು ಬಗೆಯ ಸಸ್ಯ: ಮರಸದ, ಬಗುಲಿ, ಹಂಜರಿಕೆ ಕುಚ್ಚು, ಮರಸುತ್ತುಬಳ್ಳಿ (ಪ್ರುತಿಗ. ೦೬–೨೯೨). [ ? ]

**ಬಗುಸಾಳೆ** (ನಾ). ಬೊಗಳೆ; ಬಡಾಯಿ: ಒಂದೇ ಪೆಟ್ಟಿನಲ್ಲಿ ಹೊಡೆದು ಹಾಕಿ ಬರುತ್ತೇನೆಂದು ಬಗುಸಾಳೆ ಮಾತು ಕೊಟ್ಟ . . . ಮನೆಯ ದೂಲದ ಮೇಲೆ ಬಂದು ಕೂತುಕೊಂಡಿತು (ಕಥಾಮು. IV. ೯೬). [ ? ]

**ಬಗುಳ್$_1$**, ಬಗುಳು$_1$, ಬೊಗಳು, ಬೊಗುಳು$_1$ (ಕ್ರಿ). ೧. ನಾಯಿಯು ಕೂಗಂ,–ಧ್ವನಿ ಮಾಡು: "ಬಗುಳ್—ಕುಕ್ಕುರಧ್ವನೌ, ಸ್ಮಾರಣೇ ಚ (ಆಮಶಂಕೆಯಿಂದ ತೊಂದರೆಪಡು)" (ಕಮುಧಾ): ಪೆರ್ಬಡಿಕೆಯ ನಾತ ಮಾನೆಗಳ ಬರ್ಪ್ಪಣನಂ ಬಗುಳುತ್ತೆ ಮುತ್ತಿ ಕೀವುಡುತೆ ತಗುಳ್ವನಂ ತೆಗೆವ ವಾಯ್ಗಳಗುರ್ವಿಸುತಿರ್ಪ ತೋರ್ಪ ಪೇರಡವಿಯ ಬೇಡವಳ್ಳಿಗಳ ನೀಕ್ಷಿಸುತುಂ (ಲೀಲಾವ. ೩–೪೫); ಬಾಟ್ಟ ಮನೆಗೊಂದು ಬಗುಳ್ವುದು ಬೇಟ್ಟುಂ (ಅಕಾಪು. ೦–೯೦). ೨. ಗಳಹು; ಅಪಲಾಪ ಮಾಡು; ಹರಟು: ನ್ಯಾಯಮಿದು ಧರೆಗೆ ದುರಭಿಪ್ರಾಯದ ದುರ್ಜನನ ಮೊಟೆಯುಂ ಕಂಡೊಡೆ ಥೂ ಚೀಯೆಂಬುದುಟ್ ಬಗುಳ್ವನ ಬಾಯೊಳಗುಗುಟೆಂಬ ನಾಡ ಗಾದೆಯ ಬಲದಿಂ (ಧರ್ಮಪಾ. ೦–೬೯); ನಾಯಿ ಬಗುಳದೆ ಕೆಲಕೆ ಸಾರು (ಕೊರಡು. ೩–೩–೬). **ಬಗುಳು$_1$** : ೧. ಮುಳಿದು ಬಗುಳುವ ನಾಯ್ಗೆ ಚಂದ್ರಮನಳುಕುವನೆ (ಕುವ್ಯಾಉ. ೬೦೩. ೦೦–೦೬); ನಾಯಿಯೊಂದು . . . ಬಗುಳಿತು (ಪುಹಾಂ. ೧೦೨). ೨. ಬಗುಳುವಿವದಿರು ಹರಿಯ ಬಡಿಹೋರಿಗಳಲಾ (ಕುವ್ಯಾಸ. ೦೦–೯); ಬಾಯ ಬಡಿಕರು ಬಂದ ಬಣ್ಣಿಗೆಯಸಗಿ ಬಗುಳುವರು (ಕೃಷ್ಣಾಉ. ೦೯–೨೯). **ಬೊಗಳು**: ೧. ಆನೆ ಕಂಡು ಶ್ವಾನ ಬೊಗಳಿದ ಹಾಗೆ (ಗಾದೆ). ೨. ಶರಣ ಐಕ್ಯ ಗುರು ಚರ ಪರವೆಂದು ಬೊಗಳುವ ಕುನ್ನಿಗಳ ನೋಡಿ (ಮಹಾದೇ. ೩. ೯೭–೨೨೩); ಹುಸಿಯ ಬೊಗಳುವನೊಬ್ಬ ಹುಚ್ಚ ಹೊಲೆಯ (ಪುರಂದ. ೦–೦೬೮–೯); ಈ ಗಂಡುಹುಡುಗರು ಏನೇನೋ ಬೊಗಳುತ್ತವೆ (ರಂಗರೂ. ೯೬). **ಬೊಗುಳು$_1$** : ೩. ಒದರು; ಹೇಳು : ಯಾವ ತೋಟ ಲೂಟಿ ಹೊಡೆಯುವುದಕ್ಕೆ ಹೋಗಿದ್ದಿರಿ. ನಿಜ ಬೊಗುಳಿ (ಕಳಹು. ೩೨).

**ಬಗುಳ ಸನ್ನಿ** = ಬಗುಳುಸನ್ನಿ: ಏತರಿಂದಿವಗೀ ಪರಿಯ ಕಡುಮಾತು ಬಂದುದೊ . . . ತನುಜಾತಗಿಕ್ಕಿತು ಬಗುಳ ಸನ್ನಿ ವಿಕಾರವಕಟ (ತ್ರಿಹಾಸ. ೦೦–೯). [ದೇ.॥ ತುಳು. ಬಗುಳು, ಬಗಳ್ಳು, ಬಗುಲ್, ಬಗುಲು]

**ಬಗುಳ್$_2$** (ಕ್ರಿ). ಭೇದಿಯರಾಗು; ಆಮಶಂಕೆಯುಂಟಾಗು: "ಬಗುಳ್—ಕುಕ್ಕುರಧ್ವನೌ, ಸ್ಮಾರಣೇ ಚ (ಆಮಶಂಕೆಯಿಂದ ತೊಂದರೆ ಪಡು)" (ಕಮುಧಾ). [ ? ]

**ಬಗುಳಾಟ**, ಬೊಗುಳಾಟ (ನಾ). ಕೆಲಸಕ್ಕೆ ಬಾರದ ಮಾತು; ಹರಟೆ: ಬಂಡುಗಲೆ ಬಗುಳಾಟವಾಡುತ ಮಿಂಡರೊಡನೆ ತಿರುಗುವ ತುಂಡುವೇಶ್ಯೆಯ ತುರ್ಡುಕುಜಗಕತಿ ಭಂಡರಲ್ಲ (ಕರಿಲೀ. ೩೬೯–೩); ಬಗೆಯದೆ ಪುರುಷನ ಮಾತಾ ನಗೆಗೇಡಿತನದಲ್ಲಿ ಬಗುಳಾಟದೊಳಗಿಹ ವಿಗಡೆಯಾದರೆ ನಿನ್ನ ನೆನೆಯೆ (ಕಥೋಕ. ೦೯–೬೩). **ಬೊಗುಳಾಟ** : ಆವ ತೆರದ ಬೊಗುಳಾಟವುನ್ನುಳಿದರೀ ಭೂಪಾಲರು (ಕಠಮು. ೩–೦೯). [ಬಗುಳ್$_1$ + ಆಟ]

**ಬಗುಳಿಸು**, ಬೊಗುಳಿಸು (ಕ್ರಿ). ನಾಯಿಯು ಬಗುಳುವಂತೆ ಮಾಡು: ಆ ಹುಡುಗ ನಾಯಿಯನ್ನು ಛೂ ಬಿಟ್ಟು ಬಗುಳಿಸಿದನು (ರೂಢಿ). **ಬೊಗುಳಿಸು**: ನೀನು ಆ ನಾಯಿಯನ್ನು ಹಿಂಸೆ ಮಾಡಿ ಬೊಗುಳಿಸಬೇಡ (ರೂಢಿ). [ಬಗುಳು$_1$ (<ಬಗುಳ್$_1$ ) + –ಇಸು$_3$]

**ಬಗುಳು$_1$** 'ಬಗುಳ್$_1$' ನೋ.

**ಬಗುಳು$_2$**, ಬಳ್ಳು$_2$, ಬೊಗುಳ್, ಬೊಗುಳು$_2$, ಬೊಳ್ಳು (ನಾ). ೧. (ನಾಯಿ,ನರಿ ಮುಂತಾದ) ಪ್ರಾಣಿಗಳು ಕೂಗುವಿಕೆ,–ಅರಚುವಿಕೆ: ರಾತ್ರಿಯೆಲ್ಲಾ ಎದುರುಮನೆಯ ನಾಯಿಯ ಬಗುಳಿನಿಂದ ನಿದ್ರೆ ಮಾಡಲಾಗಲಿಲ್ಲ (ರೂಢಿ). ೨. ಗಳಹುವಿಕೆ; ಬಡಬಡಿಸುವಿಕೆ: 'ಬಗುಳುಸನ್ನಿ' ಪರಾ. **ಬಳ್ಳು$_2$**: ೧ 'ಬಳ್ಳಿಕ್ಕು', 'ಬಳ್ಳುಗೆಡೆ' ಪರಾ. **ಬೊಗುಳ್** : ೧. "ಭಂಡನಂ, ಭಂಡನೀಯಂ, ಭಂಡ್ಯಂ, ಈ ೩ ಬೊಗುಳ್" (ಕಾಶಕ. ೧೦೦). **ಬೊಗುಳು$_2$**: ೨. 'ಬೊಗುಳುಸನ್ನಿ' ಪರಾ. **ಬೊಳ್ಳು**: ೧. 'ಬೊಳ್ಳಿಡು', 'ಬೊಳ್ಳುಗರೆ' ಪರಾ. [<ಬಗುಳ್$_1$ . / ತುಳು. ಬಗಳು]

**ಬಗುಳುಸನ್ನಿ**, ಬೊಗುಳುಸನ್ನಿ (ನಾ). ಜ್ವರದ ತಾಪವು ಹೆಚ್ಚಾಗಿ, ಅಸಂಬದ್ಧವಾಗಿ ಮಾತನಾಡುವಂತಹ ಒಂದು ಬಗೆಯ ರೋಗ: "(ಟೈಫಸ್ ಜ್ವರದಲ್ಲಿಯಂತೆ) ಮಾತಾಡುವ, ಗೊಣಗುಟ್ಟುವ,–ಸನ್ನಿ; ಬಗುಳು ಸನ್ನಿ" (Typhomania. ೩೦೯೩). **ಬೊಗುಳುಸನ್ನಿ** : ಆತ ಬೊಗುಳುಸನ್ನಿಯಿಂದ ರಾತ್ರಿಯೆಲ್ಲಾ ಕೂಗಾಡಿದನು (ರೂಢಿ). [ಬಗುಳು$_2$ + ಸನ್ನಿ$_1$]

**ಬಗುಳೆ**, ಬೊಗಳೆ (ನಾ). ೧. ಕೆಲಸಕ್ಕೆ ಬಾರದ ಮಾತು; ಪೊಳ್ಳು ಹರಟೆ: "ಪೊಳ್ಳುಹರಟೆ; ಬುರುಡೆ; ಬಗುಳೆ; ಅವಿವೇಕದ ಮಾತು; ಅವಿವೇಕ" (Bosh. ३೦೯३). **ಬೊಗಳೆ**: ೧. ನಿಜವಾದ ವೀರನಿಗೆ ಇಂತಹ ಬೊಗಳೆಯು ಸರಿಯೆನಿಸದು (ಹಿಂಕಕು. ೭). ೨. ಸುಳ್ಳು: ಅದೆಲ್ಲ ಬರೀ ಬೊಗಳೆಯೆಂದೇ ನನ್ನ ಅಭಿಪ್ರಾಯ (ಪಾಕೋಲೀ. ೦೬೭). ೩. ಬಡಾಯಿ: ಅವನು ಬೊಗಳೆ ಕೊಚ್ಚಿಕೊಳ್ಳುವುದರಲ್ಲಿ ಬಲು ಗಟ್ಟಿಗ (ರೂಢಿ). ೪. ಬಡಾಯಿಕೋರ: ಈತ ಎಷ್ಟಿದ್ದರೂ ಬೊಗಳೆ (ಕಲ್ಯಾಕಿ. ೦೯೩).

**ಬೊಗಳೆ ಬಿಡು** = ಸುಳ್ಳು ಹೇಳು; ಸುಳ್ಳಾಡು: ರುದ್ರನನ್ನು ಹಿಗ್ಗಿಸಲು . . . ಸೋಮಯಾಜರು ಬೊಗಳೆ ಬಿಡುತ್ತಾರೆ (ದೇವಹು. ೦೯೦). **ಬೊಗಳೆ ಹೊಡೆ** = ಬೊಗಳೆ ಬಿಡು: ಅವನ ಹಾಗೆ ಬೊಗಳೆ ಹೊಡೆಯುವವನನ್ನು ನಾನು ಬೇರೆಲ್ಲೂ ನೋಡಿಲ್ಲ (ರೂಢಿ). [<ಬಗುಳ್$_1$]

**ಬಗೆ$_1$** (ಕ್ರಿ). ೧. ಆಲೋಚನೆ ಮಾಡು; ಯೋಚಿಸು: "ಬಗೆ–ಪರಿಭಾವೇ, ಚಿತ್ತೇ ಚ" (ಕಮುಧಾ); ಸಕ್ಕದಮುಂ ಪಾಗದಮುಮದಕ್ಕುಂ ಬಗೆದಂತೆ ಸಮಟ್ ಪೇಟಲ್ ಮುನ್ನಂ (ಕವಿರಾ. ೧–೯೦); ದಿವ್ಯಾಹಾರಮನೆಲ್ಲಾ ಕಾಲಮುಣಲ್ಪಿಲಕ್ಕುಮೆಂದು ಬಗೆದು (ವಡ್ಡಾರಾ. ೭೯–೩); ಎಂದು ತನ್ನೊಳ್ ಬಗೆಯುತ್ತಿರ್ಪನಂ (ಶಂಕಚಾ. ೦೦–೦೯ ವ). ೨. ಎಣಿಸು; ಗಣಿಸು; ಲಕ್ಷಿಸು: ಅಂತು ಬಂದ ಪಾಟಿಗಾಲಮಂ ಬಗೆಯದೆ . . . ಬರ್ಪನಂ (ಕಾದಂಬ. ३६३); ಎನ್ನನಣಂ ಬಗೆಯರೆಂಬ ಬಗೆಯನೆ ಬಗೆದಂ (ಸುಕುಮಾ. ೨–೬೧). ೩. ಅರಿ; ತಿಳಿ; ಭಾವಿಸು: ಬಗೆಯೆ ನಿರಹಂಕಾರ ಸುಜ್ಞಾನಿಗಳ ಮೇಳವನೊಲ್ಲದಾ ಪ್ರಭುವಗಲಿ ತಾನಿರಬಲ್ಲನೇ (ಪ್ರಭುಲಿ. ೬–೩೯); ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩). ೪. ಬಯಸು; ಅಪೇಕ್ಷಿಸು; ಇಚ್ಛಿಸು: ಅಟಿಯಲ್ ಬಗೆವೊಂಗೆ ಬ್ರಹ್ಮತಿಯ ಪಾಪ ಮಕ್ಕುಂ (ಎಕ. VII, ೨೦೦–೨೦; ೩೮೬); ಬಗೆದೆಡೆಯನೆಯ್ದಿ ಬಗೆದ ಬಗೆಯಂ ಬಗೆದಂತೆ ತೀರ್ಚಿ ಪೋಪ ಜೋಡೆಯರಂ ಕಂಡು (ಶಂಕಚಾ. ೯–೯೦ ವ); ಬಗೆದು ದಣಿಯರು ಯೋಗಿಗಳು (ಕುವ್ಯಾಸ. ೯–೩೭); ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ . . . ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ (ಪುರಂದ. ೦–೦೭೮–೨). [ದೇ. ॥ ತಮಿ. ವಕೈ; ತುಳು. ಬಗೆ; ತೆಲು. ವಗಚು]

**ಬಗೆ$_2$** (ನಾ). ೧. ಆಲೋಚನೆ; ಯೋಚನೆ: ಬಗೆ ಪೊಸತಪ್ಪುದಾಗಿ ಪ್ಪುದುಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು (ಶಂಕಚಾ. ೦–೮); ಇದಂ ಪಿರಿದು ಮಾಡಿ ಪೇಟ್ವೆನೆಂಬ ಬಗೆ ಮನದೊಳ್ ಮಿಗೆ ಮಾಣದೆ (ಶಂಖಕಂ. ೯೩–೬). ೨. ಅಭಿಪ್ರಾಯ; ಮತ: "ಬಗೆಯೆನಲಭಿಪ್ರಾಯಮಕ್ಕು" (ಕಕರ. ೭೯); ಮಂದಗಮನೆಯ ಕಂಡಿರೇ ಎನೆಂದು ನುಡಿದಳು ಸತಿಯ ಬಗೆಯೇನೆಂದು ಕೇಳಲು ನೃಪಗೆ ಬಳಿಕಂತೆಂದುದಾ ಪಕ್ಷಿ (ನಳಚ. ೨–೯೯). ೩. ಮನಸ್ಸು; ಚಿತ್ತ: "ಬಗೆ – ಪರಿಭಾವೇ,

ಚಿತ್ರೇ ಚ" (ಕವಿರಾ) ; ಕುಱಿತಂತು ಪೆಱರ ಬಗೆಯಂ ತೆಱೆದಿರೆ ಪೇಱ್ಗಱಿ ಪಲಾರ್ಪವಂ ಮಾತಱಿವಂ (ಕವಿರಾ. ೦-೦೫) ; ಅಬ್ಬಾ ಇಂದೆಮಗುಣಲ್ಕೆ ಬಗೆಯಿಲ್ಲುಂಪವಾಸಂಗೆಯ್ದುಪ್ಪೆಂ (ಪಂಪಭಾ. ೮೦-೪) ; ಮಾಸದ ಕೀರ್ತಿ ಕಲಿ ಹುಗದ ಹೆಸರಿಂಗದೋಜೆ ಕೊರಗದ ವರ್ಪವುಗದ ಬಗೆ ಹುಸಿ ಹುಗದ ನುಡಿ (ಪಂಪಭಾ. ೦-೪೯). ೪. ರೀತಿ ; ಮಾರ್ಗ ; ಕ್ರಮ : ಪಸರಿಸಿದಾ ಬಗೆ ಮನಮಂ ಪೊಸತಾಗೆ ನೆಗೞ್ಬಲೞಿಯನಾ ರಚನೆಯೊಳೀಂ ಜಸಂ (ಕವಿರಾ. ೦-೦೨) ; ಎನಗನುಕೂಲಮಕ್ಕೆ ಗುಣಪರ್ವನ ಜಾಣ್ನುಡಿ ಪಂಪನಿಂಪು ಪೊನ್ನನ ಬಗೆ (ಅನಂತ. ೦-೩೫) ; ಮಗಳೆ ನೀನಾತನ ಕೈವಿಡಿದಂದಿನ ಬಗೆಯ ಸುಖಂಗಳನಾಂತು ಮಿಗೆ ಜೀವಿಸು (ಮೋಹತ. ೬-೪೮). ೫. ಆಸೆ ; ಬಯಕೆ ; ಇಚ್ಛೆ : ನೀನಿದರ್ಕೇನುಮಂ ಬಗೆಯಲ್ವೇಡ ನಿನ್ನ ಬಗೆಯಂ ಬಗೆದಂತೆ ತೀರ್ಚುವೆಂ (ಶಂಶಭಾ. ೪-೭೬ ವ) ; ನುಡಿಯೊಳಗೆ ತನ್ನ ಬಗೆಯಿರೆ ಬೇಡಿದ ಪದವಿಯನೀವ ಕೂಡಲಸಂಗಮದೇವ (ಬಸವ. ೬೬೦). ೬. ಕಲ್ಪನೆ ; ಊಹೆ : ತುಂಗಭದ್ರಾಂಬೋಧದ ಬೆಳಗಿಂಗೊಳಗಪ್ಪನಿತನೆಮ್ಮ ಬಗೆ ಪುಗದು (ಅದಿಪು. ೬-೦೦). ೭. ಉಪಾಯ ; ತಂತ್ರ ; ಹಂಚಿಕೆ : ಆ ನರಿ ಬಗೆಯೊಳ್ ಪಿರಿಯನಪ್ಪುದಱಿಂ ತನ್ನ ಬುದ್ಧಿಗೆ ತಾನೇ ಮೆಚ್ಚಿ (ಶಂಪತಂ. ೩೪-೬) ; ಆವಗಂ ಕಾಣಲೀಯವು ರಾಮಣೀಯರೋಮಾವಳಿಯನುದ್ವೃತ್ತಪೀನಕುಚಯುಗಳವಿನ್ನಾವು ದಿಂತಿದಕೆ ಬಗೆಯೆಂದು ಕೂರ್ತೇಕಾಂತವಂ ಕರ್ಣದೊಡನೆ ಮಾಳ್ಪ ಭಾವದಿಂ ಪರವೆನಾಚಿಯ ಲೋಚನಂಗಳಿಂದೀವರದಳಗಳಂತೊಪ್ಪಿದವು (ಶಾಂಡಿಲ್ಯ. ೬-೫). ೮. ಗತಿ ; ದಿಕ್ಕು : ಪಿಂಡಕ್ಕೆ ಬಗೆ ಇಲ್ಲದವ ದಂಡ ಏನು ಕೊಟ್ಟಾನು ? (ಗಾದೆ). ೯. ಜಾತಿ : ಬಗೆಯ್ದು ತಣಿಯುತಿರೆ ಬಳಗಕೀಂ ಪಾರ್ತಂ (ಶಾಂಪುರಿ. ೬೪-೦೩೩) ; ಬಗೆಯೆಂಬರೆ ಜಾತಿ ; ಬಗೆಯೆಂದರೆ ರೀತಿ (ವಿಜಾಮಂ. ೫೪).

ಬಗೆಯೊಳೊಗೆದವ = ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ ; ಮನಸಿಜ : "ಬಗೆಯೊಳೊಗೆದವನೆಂದು ಬಂಡುಣಿವೆದೆಯನೆಂದು ಮುಗುಳ್ಗಣೆಯಾಳ್ಕ" (ಕಶರ. ೬೪). ಬಗೆಯೊಳೊಗೆವ, ಬಗೆಯೊಳೊಗೆವವ = ಮನಸ್ಸಿನಲ್ಲಿ ಹುಟ್ಟುವವನು ; ಕಾಮ : "ಇಂಗೋಲ್ವಿಲ್ಲಂ . . . ಬಗೆಯೊಳೊಗೆವಂ . . . ಗಿಳಿದೇರಂ — ಇವು ೧೩ ಕಾಮದೇವಾಗೆ ಪೆಸರ್" (ಕಶಸಾ. ೪೬-೦೩) ; "ಗಿಳಿದೇರ ಪೂವುಣಂಬಂ ಬಗೆಯೊಳೊಗೆವವಂ" (ಕವಿಕಂ. ೨೮).

[<ಬಗೆ1 / ತುಳು. ಬಗೆ ; ತೆಲು. ವಗ. / ಮರಾ. ಬಗಾ]

**ಬಗೆ3** (ನಾ). ಒಂದು ಬಗೆಯ ಹೂವು ಮತ್ತು ಅದರ ಗಿಡ : ಪ್ರಕಟವಂದಾರ ಬಗೆ ನಾಗಸಂಪಗೆಯಾದಿ ಸಕಲಕುಸುಮಂಗಳಂ ತಂದು (ಕಂಪು. ೪೫-೪೩). [<ಸಂ. ಬಕ. / ಪ್ರಾ. ಬಗ]

**ಬಗೆಕಾರ** 'ಬಗೆಗಾಱ' ನೋ.

**ಬಗೆಕಾರ್ತಿ** 'ಬಗೆಗಾರ್ತಿ' ನೋ.

**ಬಗೆಕಾಱ** 'ಬಗೆಗಾಱ' ನೋ.

**ಬಗೆಗ** (ನಾ). ಒಬ್ಬಾತನ ಹೆಸರು : ಮಲ್ಲಿಕಾರ್ಜುನಭಟ್ಟಾರರ್ಗ್ಗೆ ಮಾವಿನೂರೊಳ್ ಬಗೆಗನು ಕೊಟ್ಟಂ . ಸಾಸಿರಬಳ್ಳಿಯ ತೋಟ್ಟ (ಎಇ. XXVI. ೪-೦೪ ; ೯೦೬). [?]

**ಬಗೆಗಲ್** (ಕ್ರಿ). ಮನಸ್ಸನ್ನು ತಿಳಿ, — ಅರಿತುಕೊಳ್ಳು : ಅಬಲೆಯಿರ್ದಿರವಂ ಸಖಿ ನೋಡಿ ಮತ್ತಮಾ ಕಮಲದಳಾಯತೇಕ್ಷಣೆಗಿದಂ ನುಡಿದಳ್ ಬಗೆಗಲ್ವ ಬಲ್ಮೆಯಿಂ (ಜಗವ. ೦೦-೦೦). [ಬಗೆ2 + ಕಲ್1]

**ಬಗೆಗಾಣ್**, ಬಗೆಗಾಣು (ಕ್ರಿ). ೧. ಮನಸ್ಸನ್ನು ತಿಳಿ,—ಅರಿ: ಪುದುವಾಟಕ್ಕೆಯೊಳಿನ್ನ ಬಳ್ಕದಳ್ಕದ ಬಗೆಗಂಡಿರೇ (ಶಂಶಭಾ. ೦೦-೫೦). **ಬಗೆಗಾಣು** : ೨. ದಾರಿಗಾಣು; ಮಾರ್ಗವನ್ನು ಕಂಡುಕೊಳ್ಳು: ಇವನಂ ಜಯಿಸುವ ಬಗೆಗಾಣೆನು (ಕೈಪಿಭಾ. ೨೩-೬) : ಸಾಧನಕೆ ಬಗೆಗಾಣೆನೆನ್ನಬಹುದೆ ಸಾದರದಿ ಗುರುಕರುಣ ತಾ ಪಡೆದ ಬಳಿಕ (ವಿರಾಕ್ಷ. ೨೫ ಪಲ್ಲವಿ). [ಬಗೆ2 + ಕಾಣ್]

**ಬಗೆಗಾಣು** 'ಬಗೆಗಾಣ್' ನೋ.

**ಬಗೆಗಾರ** 'ಬಗೆಗಾಱ' ನೋ.

**ಬಗೆಗಾರ್ತಿ**, ಬಗೆಕಾರ್ತಿ (ನಾ). ಬೇರೆಯವರ ಮನಸ್ಸನ್ನು ತಿಳಿಯುವ ವಳು ; ಇಂಗಿತಜ್ಞೆ : ಪೊಗೆಯ ಗಂಧವನುರ್ದಿಸುತೆ ಪೂವ ಪೊರೆಯಿಸುತೆ ಬಗೆಗಾರ್ತಿಯೊರ್ವಳೆಸೆದಳ್ (ಕದ್ಯಭಾ. ೬-೪೯) ; ಪಲ್ಲವಿಗಳಿನ ಬಗುಮಿಂಗೆಯಿಂ ಬಳಯಿಸುತ ಬೆಳ್ದಿಂಗಳ ಬಗೆಗಾರ್ತಿಯರೆಯ್ದಿದರ್ (ಕುರಾಸಾಂ. ೩೬-೦೬). **ಬಗೆಕಾರ್ತಿ** : ನಗೆಕಾರ್ತಿ, ನುಡಿಕಾರ್ತಿ, ಬಗೆಕಾರ್ತಿ (ಶಬ್ದಾನು. ೨೦೦. ಕೃಯೋ). [ಬಗೆಗಾಱ + — ತಿ1 (< — ಇತ್ತಿ)]

**ಬಗೆಗಾಱ**, ಬಗೆಕಾರ, ಬಗೆಕಾಱ, ಬಗೆಗಾರ (ನಾ). ಬೇರೆಯವರ ಮನಸ್ಸನ್ನು ತಿಳಿಯುವವನು ; ಇಂಗಿತಜ್ಞ : ಆ ಬಗೆಯ ರಸಾಬ್ಧಿಯಪ್ಪ ಬಗೆಗಾಱರ ಮೊತ್ತದಿನೊಪ್ಪಿತೋಲಗಂ (ಶಾಂತೀಶ್ವ. ೨-೬೦) ; ಬೆಳ್ನುಡಿಯಿಂದ ಬಿಗುಹುಕಾಱರ ಬಲ್ಮೆಯಿಂದ ಬಗೆಗಾಱರನೆಡೆಗೆಡಿಸುವನು (ಕುರುಸಾಂ. ೪-೦೦೫). **ಬಗೆಕಾರ** : ಭಾವುಕ, ರಸಿಕ, ಚದುರ, ಬಗೆಕಾರ, ಜಾಣ, ಅರಿಗ (ಕಂನುಹು. ೮೪). **ಬಗೆಕಾಱ** : ಪಗೆಕಾಱಂ, ಬಗೆಕಾಱಂ, ನಡೆವಳಿಕಾಱಂ (ಶಾಪಾಶೂ. ೦೬೦ ಉದಾ) ; ಕಾಲುರಿಚ ಪೊಳಲಿಚ ದಡಿಗ ಬಗೆಕಾಱ ನಡೆವಣಿಗ . . . ಬಂಚುಗಾಱರ ಕೇರಿ ಮೆಱೆದಿಹವು (ಸಾಶ್ವಭಾ. ೨-೮) ; ಅಱಿಯೆಯಾ ನೀನಿದ ನಗೆಕಾಱ ಬಗೆಕಾಱ ಮಱೆಕಾಱ ಬಲುಟೌಳಿಕಾಱ (ಭರತ. ೬-೨೫). **ಬಗೆಗಾರ** : ನಗೆಯ ಮಾರಿತಂದೆ ತೋರಿಕೆಗೆ ನಗೆಗಾರನಾಗಿದ್ದರೂ ಒಳಗೆ ಅವನೊಬ್ಬ ಬಗೆಗಾರನಾಗಿದ್ದನೆಂದು ತೋರುತ್ತದೆ (ಶರಶ. ೪೮೮) ; ಕಲಾಕುಶಲನು ... ಹಳೆಯ ಮಾತನ್ನು ಹೊಸ ಮಾದರಿಯಲ್ಲಿ ನುಡಿಯುವ ಬಗೆಗಾರನು (ಭಾಚಿತ್ರ. ೫).

ಬಗೆಕಾಱಮುಖದರ್ಪಣ = ಮನಸ್ಸನ್ನು ತಿಳಿಯುವವರಿಗೆ ಕನ್ನಡಿಯಂತಿರುವವನು ; ಒಂದು ಬಿರುದು : ವರಪ್ರಸಾದಮ್ಮೂಱು [ರಾ]ಯಾಸ್ಥಾನಚಮತ್ಕಾರ ಬಗೆಕಾಱಮುಖದರ್ಪಣ (ಬೊಂಕಶಾ. ೦೪೩೬, ಸಿಂದಗಿ. ೦೦-೬ ; 978) ; ಮಹಾಲಕ್ಷ್ಮೀಲಬ್ಧವರಪ್ರಸಾದ [ಮ್ಮೂ] ಱು ರಾಯಾಸ್ಥಾನಚಮತ್ಕಾರ ಬಗೆಕಾಱಮುಖದರ್ಪ್ಪಣ ಶರಣಾಗತವಜ್ರಪಂಜರಂ (ಸೌಇಇ. XX. ೩೬-೬ ; 1056). [ಬಗೆ2 + — ಕಾಱ]

**ಬಗೆಗಿಡಿಸು** 'ಬಗೆಗೆಡಿಸು' ನೋ.

**ಬಗೆಗಿಡು** 'ಬಗೆಗೆಡು' ನೋ.

**ಬಗೆಗುಂದು** (ಕ್ರಿ). ಮನಸ್ಸು ಕುಗ್ಗು ; ನಿರಾಶೆಗೊಳ್ಳು ; ಬೇಸರ ಹೊಂದು : ಬಗೆಗುಂದಿ ಚಕ್ರಮಿಥುನಂ ಮಿಗೆ ನೊಂದು (ಗಂಕ. ೪-೬೪) ; ಪಗೆಯ ಕೆಳೆಗೊಂಡ ಪದ್ಮಿನಿ ನಗೆಗುಂದಿದಳೆಪನಡಂಗೆ ಕೋಕಾನೀಕಂ ಬಗೆಗುಂದಿದುದೆಂದಣಾದೆ ನಗುವಂತೆವೊಲಲರ್ದುದುತ್ಪಲಂ (ವೃಷಪು. ೮-೪೪).

[ಬಗೆ2 + ಕುಂದು1]

**ಬಗೆಗುಡು** (ಕ್ರಿ). ಮನಸ್ಸು ಕೊಡು ; ಚಿತ್ತವಿಡು : ಕೊಲೆಯೊಳ್ ಪೊರೆಯಿಲ್ಲದ ಪರಲುಲನೆಗೆ ಬಗೆಗುಡದ ಕಳ್ಳದುಱ ಪುಸಿಯದ ಕಾದಲಿಸಿ ವಿಷಯಂಗಳೊಳ್ ಪಂಬಲಿಸದ ಗುಣಾವ್ಮೆಯ್ದಣಾಪ್ರತಂ ಜನವೆಂತದೊಳ್ (ಶಾಂತಿಪು. ೦-೮೪). [ಬಗೆ2 + ಕುಡು1 (<ಕೊಡು1)]

**ಬಗೆಗುದಿ** (ನಾ). ಮನಸ್ಸಿನ ಚಿಂತೆ ; ಮನೋವ್ಯಥೆ : ಮತ್ತಾರು ನೀನೆ ! ಮೂದಲಿಸಿತು ಅವನ ಬಗೆಗುದಿ (ಬ್ರಿಉ. ೦೬೪).

[ಬಗೆ2 + ಕುದಿ3]

**ಬಗೆಗುರುಡುತನ** (ನಾ). ಮನಸ್ಸಿಲ್ಲದಿರುವುದು : ಸದರ್ಥಮು ಕಾಣದ ಬಗೆಗುರುಡುತನವು ಈಗಿನವರ ಪಾಲಿಗೆ ಬಂದಿರುವುದು ಇನ್ನೊಂದು ದೋಷ (ಶಾಹಿವಿ. ೬೦). [ಬಗೆ2 + ಕುರುಡು + — ತನ]

**ಬಗೆಗೆಡಿಸು**, ಬಗೆಗಿಡಿಸು (ಕ್ರಿ). ಕ್ರಮ ತಪ್ಪಿಸಂ ; ದಾರಿ ತಪ್ಪಿಸು ; ರೀತಿಗೆಡಿಸು : ಬಗೆಗೆಡಿಸಿ ಮರವೆಯುಮ . . . ಬ್ರಹ್ಮವನಗಲದೆ ತಾನೆಂದು ಭಾವಿಸಿ ಧನ್ಯನಾಗು (ಗುಶಾ. ೧೭–೪೦). **ಬಗೆಗಿಡಿಸು** : ಬಗೆಗಿಡಿಸೆ ಮೋಹನೀಯಂ ನಗಧರ ಶವಧಾರಿಯಾಗೆ ಷಣ್ಮಾಸಮದೇಂ ನೆಗಟ್ದುದೊ ಸಲೆ ಬಲದೇವನ ಪೆಗಲ ಪೆಣಂ ಕುಂದದೆಂಬ ನಾಣ್ನುಡಿ ಜಗದೊಳ್ (ಶಂರಾಮಾ. ೦೭–೩೩). [ ಬಗ್$_2$ + ಕೆಡಿಸು$_1$ ]

**ಬಗೆಗೆಡು**, ಬಗೆಗಿಡು (ಕ್ರಿ). ೧. ಬುದ್ಧಿಗೆಡು ; ವಿವೇಕವಿಲ್ಲದಾಗು: ಮಗನೆ ನೀಂ ಪಗೆಯುಂ ತಱಿದೊಟ್ಟು ನೆಟ್ಟನೆನ್ನದೆ ಬಗೆಗೆಟ್ಟು ದಾಯಿಗರೊಳಿಂ ಮಗುಟ್ದುಂ ಪುದುವಾಟ್ವುದೆಂಬರೇ (ಶಂಶಭಾ. ೦೦–೩೦); ಬಗೆಗೆಟ್ಟು ಸಾವ ಬಗೆಯಂ ಮಗಳೆ ಮಹಾಶ್ವೇತೆ ಬಗೆಯದಿರ್ (ಕಾದಂಪೂ. ೯೪೦) ; ಪಗೆವನ ಮನೆಯಂ ಬಗೆಗೆಟ್ಟು ಪೊಕ್ಕಂದು ಸಾವಕ್ಕುಂ (ಶಂಶತಂ. ೨೦೩–೦೦). ೨. ಚಿತ್ತಕ್ಷೋಭೆಯುಂಟಾಗು : ಪಾದರಿಗಂ ನಿಲ್ಲದೆ ಪೋದುದರ್ಕೆ ಬಗೆಗೆಟ್ಟದಾರ್ಕೆ ಕಣ್ಗೊಟ್ಟಿದಳ್ (ಕಬ್ಬಿಕಾ. ೬೯) ; ಬಗೆಗೆಟ್ಟು ಬಾಯ್ವಿಟ್ಟು ಜನನಿ ಜವದಿನೆಳ್ತಂದಲ್ಲಿಯಪ್ಪುಮಱಿಸಿ ಕಾಣದೆ (ರಾಜಶೇ. ೦೩–೦೦೨ ಪ) ; ಕಷ್ಟಗಳೆಷ್ಟಿದ್ದರೇನು ಸಭ್ಯರು ಬಗೆಗೆಡದೇಳ್ಗೆ ಪಡೆದಪರಲ್ತೆ (೨ಂಶಾಶ. ೨೨೦–೯೩). **ಬಗೆಗಿಡು** : ೧. ಬಗೆಗಿಡೆ ಮುಪ್ಪು ಚಪ್ಪರಿಸದನ್ನೆಗಂ . . . ಪರಮದೀಕ್ಷೆಗುಪೇಕ್ಷಿಸಿದಂ ವಿವೇಕಿಯೋ (ಶಿಸ್ತಿಶ. ೦೩–೩೪). [ಬಗ್$_2$ + ಕೆಡು$_1$]

**ಬಗೆಗೆಲ್** (ಕ್ರಿ). ಮನಸ್ಸನ್ನು ಗೆಲ್ಲು ; ಚಿತ್ತವನ್ನು ಸೆಳೆ : ಬಗೆಗೆಲಲೆಂದು ಕಾಡಿ ಪುಸಿನಿದ್ದೆಯೊಳಾನಿರೆ ಲಲ್ಲೆಗೆಯ್ದು (ಶಂಶಭಾ. ೪–೦೦೭). [ಬಗ್$_2$ + ಗೆಲ್$_1$]

**ಬಗೆಗೇಡು** (ನಾ). ದಾರಿ ತಪ್ಪಿಸುವಂತಹುದು; ಮಾರ್ಗ ಕೆಡಿಸುವಂತಹುದು : 'ನಾ ಬಲ್ಲೆ' 'ಗೊತ್ತಿಲ್ಲ' ಎಂಬ ವಾದದ ಹಾದಿ ಬಗೆಗೇಡು ನಗೆಗೇಡು ಹತಮತಿಯು (ಮುಕ್ತಕಂ. ೬–೨). [ಬಗ್$_2$ + ಕೇಡು]

**ಬಗೆಗೊಳ್**, ಬಗೆಗೊಳು, ಬಗೆಗೊಳ್ಳು (ಕ್ರಿ). ೧. ಮನಸ್ಸಿಗೆ ತಂದುಕೊಳ್ಳು; ಲಕ್ಷ್ಯಕ್ಕೆ ತೆಗೆದುಕೊಳ್ಳು : ಅದಱಿಂದ ಚಿತ್ತಮಳ್ಕದ ಮನಂ ಬಗೆಗೊಳ್ಳದ ಮೋಹಮೆತ್ತಿ ಕಟ್ಟಿದ ಜಡೆ (ಶಂಶಭಾ. ೭–೭೯); ಜಗಜ್ಜನಮಧಿಕಾನಂದಂಬೆರಸೆಯ್ದೆ ಕೀರ್ತಿಸುತ್ತಿರೆ ವಿದ್ವದ್ವ್ಯಂದಂ ಬಗೆಗೊಂಡಾಗ್ರಹದಿಂದಂ ಪೇಟಲ್ಕೆವೇಟ$^3$ (ಶಂಶತಂ. ೦೨–೭) ; ಬಗೆಗೊಂಡೋದದೆ ಕೇಳದೆಲ್ಲ ಕಳೆಯಂ ಕಾವ್ಯಜ್ಞರಿಂ ಕಲ್ಲದಚ್ಚಿಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾಟ್ಗಬ್ಬಂಗಳಂ ಬಂಟಸಾಮಿಗಳಂ ಕೇಳಿಸಿ (ಅರ್ಗಪೇ. ೦–೩೩). ೨. ಎಣಿಸು ; ನಿಶ್ಚಯಿಸು : ಆದಡಂ ಪೋಗಿ ನೋಡುವೆನೆಂದು ಬಗೆಗೊಂಡು (ಬಸರ. ೩–೩) ; ಈತನಲಿಯೊಂದು ವಿನೋದವನು ಮಾಡುವೆನೆನುತ್ತಲ್ಲಮನು ಬಗೆಗೊಂಡ (ಪ್ರಭುಲೀ. ೦೧–೭). ೩. ಮನಸ್ಸನ್ನು ಸೆಳೆ,– ಆಕರ್ಷಿಸು : ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ ಪೇಟಲಾಱರಿನಿತುಂ (ಕಬ್ಬಿಕಾ. ೦೩). **ಬಗೆಗೊಳು** : ೧. ಈರೇಳು ದ್ವೀಪಗಳಿರಲ್ ದಾಂಟುವೆನವನು ಬಗೆಗೊಳದೆ (ಕೊರರಾ. ೭–೩೭–೯೭). ೩. ಇದ್ದೊಂದು ಒಡವೆಯ ಇಬ್ಬಗೆ ಮೂವಗೆ ಬಗೆಬಗೆ ಒಡಮೂಡಿ ಬಗೆಗೊಳಲು (ಮುಕ್ತಕಂ. ೩–೩೭). **ಬಗೆಗೊಳ್ಳು** : ೧. ತ್ರಿಕರಣಶುದ್ಧನು . . . ಕುಲಾದಿ ಮದಂಗಳ ಬಗೆಗೊಳ್ಳ (ಮಹಾದೇ. ೨. ೮೩–೨೦೬) ; ಏತೆಱದಿಂ ಮೃಗಾಕ್ಷಿದಮಯಂತಿಯ ಸಂಗಮದಪ್ಪುದೆಂದು ನಿಶ್ಚೇತನನಾಗಿ ರಾಜ್ಯಸುಖಮಂ ಬಗೆಗೊಳ್ಳದೆ (ನಳಚಂ. ೩೩); ಸುತನಾಶವನು ಬಗೆಗೊಳ್ಳನು (ಕುಮಾರರ್ರಾ. ೦೬–೭೭). [ಬಗೆ + ಕೊಳ್$_1$]

**ಬಗೆಗೊಳಿಸು** (ಕ್ರಿ). ೧. ಮನಸ್ಸನ್ನು ಆಕರ್ಷಿಸು ; ಚಿತ್ತವನ್ನು ಸೆಳೆ : ಲಲಿತಮುಖಸೌರಭಕ್ಕೆಱಗುವಲಿಮಾಲೆಯಂ ಬಗೆಗೊಳಿಸಿ ತಳರ್ದುದ ಗಜಗಮನೆ (ಅದಿಪು. ೭–೨೭ ವಗಳ) ; ಸಮುಜ್ಜ್ವಳಕನಕವರ್ಣೆ ಮಿಗೆ ಬಗೆಗೊಳಿಸಿದಳುದ್ಯಾನಕೇಳಿಲೀಲಾಕ್ಷಣದೊಳ್ (ಶಾಂತಿಪು. ೮–೦೬) ; ಬಗೆಗೊಳಿಸ ತೊಡಗಿತ್ತು ಮಿಗೆ ರೂಪು ಲೋಚನಕೆ (ಪಂಬರ. ೩–೦೦). ೨. ಮನಸ್ಸಿಗೆ ತಂದುಕೊಳ್ಳು ; ಮೆಚ್ಚು : ರಾಯನುಮರಸಿಯರುಮಾನಂದವಡೆದು ಬಗೆಗೊಳಿಸೆ . . . ಪೇಳಿದೆನು ( ಹರಿಬ. ೦–೩೦). [ಬಗೆಗೊಳ್ + — ಇಸು$_3$]

**ಬಗೆಗೊಳು** 'ಬಗೆಗೊಳ್' ನೋ.

**ಬಗೆಗೊಳ್ಳು** 'ಬಗೆಗೊಳ್' ನೋ.

**ಬಗೆತ** (ನಾ). ಅಭಿಪ್ರಾಯ ; ಮನೋಗತ : ಬರೆಹ ಮಾತ್ರಕ್ಕೆ ನಾನಲ್ಲದೆ ಬಗೆತಕ್ಕೆ ಆತನೇ (ಮೂರುಉ. ೯. ಎರಡುಮಾತು) ; ನುಡಿತದಲ್ಲಿ ಮಿಂಚೂ ಇದೆ, ಬಗೆತದಲ್ಲಿ ಜೇನೂ ಇದೆ (ಚತ್ರಸ್ಕ. ೦ ಮುನ್ನುಡಿ) ; ಈ ಬಗೆತವು ಇಲ್ಲಿ ಬಲು ಚೆನ್ನಾಗಿ ಸಾಧಿಸಲಾಗಿದೆ (ಕಾಂಊರ. ೭ ತರೆಳ). [ಬಗ್$_2$ + – ತ$_2$]

**ಬಗೆತುಂಬು** 'ಬಗೆದುಂಬು' ನೋ.

**ಬಗೆದಟ್ಟು** (ಕ್ರಿ). ಮನಸ್ಸನ್ನು ತಾಗು ; ಮನವರಿಕೆಯಾಗು : ಬಗಸೆಗಣ್ ಪೊಳೆಯೆ ನಡುವಲೆಯೆ ಕಂಙಣಮುಲಿಯೆ ಬಗೆದಟ್ಟೆ ಘಟ್ಟಪಳ್ಳಿಯುರರೆದರಾ ಯುಕ್ಷಕರ್ದಮಾದಿಗಳನೊಲವಿಂ (ಶಬ್ದರಾ. ೬–೭೯). [ಬಗ್$_2$ + ತಟ್ಟು$_1$]

**ಬಗೆದರ್** (ಕ್ರಿ). ಎಣಿಸು ; ನಿಶ್ಚಯಿಸು : ಚಿಂತಾಸಮುದ್ರಾಂತರ ಪರಿವೃತನಾಗಿ ಸೈರಿಸಲಾಱದೆ ಪೊಟಲಂ ತೊಟಲ್ದು ನೋಟ್ಟಿ ಬಗೆದಂದು ರಾಜಮಂದಿರದಿಂ ಪೊಱಮಟ್ಟು ಬರೆ (ಶಂಶಭಾ. ೪–೭೯ ಪ) ; ನೋಡಿಕೊಂಬೆನೆನುತ್ತ ನುಡಿದೊಡಂಬಡಿಸಿ ಮನಮಾಡಿ ತಿರುವೆಣ್ಣೆನಲ್ಲೂರ್ಗೆಂದು ಬಗೆದಂದು ವಹಿಲದಿಂ ಪೊಱಮಟ್ಟನು (ಸೌಂದಪು. ४–೭೯) ; ಕಲ್ಪದೊಳ್ ಕುಳ್ಳಿರ್ದ ಮಂಚೊಳಗೊಂದಿದ ಮೊಲ್ಲೆಮೂಪನಾರಡಿವೊಲೆ ಭೋಗಿಸಲ್ಕ ಮುಳಿಯಲ್ಕಮಣಂ ಬಗೆದಪೊರ್ಡಾರೊ ನಾಂ (ಶಾಕುಂತ. ೭೭–೦೦೯). [ಬಗ್$_2$ + ತರ್]

**ಬಗೆದೀರ್** (ಕ್ರಿ). ಮನಸ್ಸು ತೃಪ್ತಿಯಾಗು ; ತಣಿ : ದಿವ್ಯಮುನಿಪುಂಗವರುಂ ಬಗೆದೀರ್ಪಿನಂ ನಿಜಾತ್ಮಂತಪತಿವ್ರತಾಗುಣದಿನರ್ಚಿಸಿ ಮೆಚ್ಚಿಸು ನೀಂ (ಶಂಶಭಾ. ೦–೦೦೬). [ಬಗ್$_2$ + ತೀರ್]

**ಬಗೆದುಂಬು**, ಬಗೆತುಂಬು (ಕ್ರಿ). (ಸಂತೋಷದಿಂದ) ಹೃದಯ ತುಂಬು,—ಉಬ್ಬು : ಆಂಡಯ್ಯಕವಿ 'ಕನ್ನಡನಾಡನ್ನು' ಬಗೆದುಂಬಿ ಬಣ್ಣಿಸಿದ್ದಾನೆ (ಸಾಸಪಾ. ೨೭). **ಬಗೆತುಂಬು** : ನೀಲಾಂಬಿಕೆ ಲಿಂಗೈಕ್ಯವಾದಂದು ಸೊನ್ನಲಿಗೆಯ ಸಿದ್ಧರಾಮ ಬಗೆತುಂಬಿ ಹೇಳಿದ (ಕವಾಳ. ೧೨೪). [ ಬಗ್$_2$ + ತುಂಬು$_1$ ]

**ಬಗೆದೆರು** (ಕ್ರಿ). ಮನಸ್ಸು ಕೊಡು ; ಚಿತ್ತವಿಡು : ಕಾವನು ಬಗೆದೆತ್ತು ಬರೆಯುತಿದೆ ಸುಗ್ಗಿ (ಕಾಂಊರ. ೧೨೦–೨೩೨). [ಬಗ್$_2$ + ತೆರು$_1$ (< ತೆಱು$_1$)]

**ಬಗೆದೋಱು** (ಕ್ರಿ). ೧. ಮನಸ್ಸಿನಲ್ಲಿದ್ದುದನ್ನು ಹೇಳು,–ಪ್ರಕಟಿಸು : ಇಂತಿದನೀವೆನೆಂದ[ನ]ಂ ಪುಸಿದೊಡಮಾಸೆದೋಱಿ$^3$ ಬಗೆದೋ[ಱ] [ಶಾಕಾಂ. ಱಿ]ದೊಡಂ ನೆರೆದಿದರ್ೞಡಂ . . . ಮತ್ತಮಪಾಟಿಸುವುದೆ (ಶಂಶಭಾ. ४–೯೨) ; ಅಂಗನೆ ನೀಂ ಗರ್ವಿಸಿದಪ್ಪೆಯೆಂದು ಬಗೆದೋಱಂ ನಲ್ಲನೇನೊಲ್ಲನೇ (ಅನಂಪು. ೮–೪೦). ೨. ಆಸೆಯನ್ನು ಪ್ರಕಟಿಸು; ಹಂಬಲವನ್ನು ತಿಳಿಸು : ಆ ವೇಳೆಯಲ್ಲಿ ಸಿಂಗರಗೈದು ನಿನ್ನಯ ಭಾವದ ಬಗೆದೋಱಿಯುವನ ಕಾವನಂಬಿಗೆ ಮೆಯ್ಯೊಡ್ಡಿಸಿ ಸೆಳೆದು ಸಂಭಾವಿಸು ಮೋಹರತಿಯೊಳು (ಕಂಸವಿ. ೬–೩೭). [ಬಗ್$_2$ + ತೋಱು]

**ಬಗೆಪೋಗು** (ಕ್ರಿ). ಮನಸ್ಸಿಗೆ ಹಿತವಾಗು ; ಮನದಟ್ಟಾಗು : ಬಗೆಪೋಯ್ತಿಂತಿದು ನಾಕಲೋಕವಿಭವಂ ಮದ್ವೃತ್ತಕಂ ತಪ್ಪದು (ಅದಿಪು. ೩–೬೬) ; ಬಗೆಪೋಯ್ತಾಗಳೆಲೇ ಇದಲ್ತೆ ತುಹಿನಕ್ಷೋಣಿ.ಧ್ರುದುತ್ತುಂಗಸಾನು

ಗೆಳೊಳ್ ಭೋರೆನೆ ಬಂದು ಪಾಯ್ವುದದೆ ನೋಡಾಕಾಶಗಂಗಾಜಲಂ (ಜಾಜ್ಞ.ಚ. ೯೦). [ಬಗ್$_2$ + ಪೋಗು$_1$ (< ಪೋ$_1$)]

**ಬಗೆಬರ್** 'ಬಗೆವರ್' ನೋ.

**ಬಗೆಬಿಚ್ಚು** (ಕ್ರಿ). ಅಂತರಂಗವನ್ನು ವಿವರಿಸು; ಮನಸ್ಸಿನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳು: ಬಂದುದಂ ಬಗೆಬಿಚ್ಚಿ ನುಡಿವ ರೊಮ್ಮೊವ್ವು (ಅಭಿನವ. ೯೦–೭೮). [ಬಗ್$_2$ + ಬಿಚ್ಚು$_1$ (< ಬಿಚ್ಚುರ್)]

**ಬಗೆಮುಟ್ಟು** (ಕ್ರಿ). ೧. ಮನಸ್ಸನ್ನು ತಟ್ಟು,–ತಾಗು; ಹೃದಯಸ್ಪರ್ಶಿಯಾಗು: ಬೀಣೆಯುಂ ಮಿಡಿವ ಬಂಚಮನೊತ್ತುವ ಪಕ್ಕಿವಾಜಿ ಪಾಡುವ ಬಗೆಮುಟ್ಟೆ ಪಾಡುವವರಗ್ಗದ ದೇವರೆ ಶದ್ಗಿರೀಂದ್ರದಾ ದಿವಿಜವಿಮಾನದಂತೆ ಬಳಸಿರ್ದ ವಿಶಾಳಜಿನಾಲಯಂಗಳೊಳ್ (ಶುಭ್ರಕೃ. ೧೧–೧೦೨). ೨. ಮನಸ್ಸು ಒಪ್ಪು; ಸಮ್ಮತಿಸು: ನಾವು ಆ ಮಕ್ಕಳಿಗೆ ಬಗೆಮುಟ್ಟಿ ಒಪ್ಪಿಸಿಕೊಟ್ಟಿರುವ ಈ ಉಂಬಳಿಗೆಯನ್ನು . . . ಸಾರ್ಥಕಮಾಡಿಕೊಡಬೇಕು (ಮೈಶಾ.ಶ. ೧೬–೨೬). [ಬಗ್$_2$ + ಮುಟ್ಟು$_1$]

**ಬಗೆಯಣುಗ** (ನಾ). ಮನಸ್ಸಿನಿಂದ ಹುಟ್ಟಿದವನು; ಕಾಮ: ಖಗನಾಮವಿಹುದಾವುದು ಬಗೆಯಣುಗನ ಗಜವೇಂ (ಕೃಚ. ೦–೨೬–೩).

[ಬಗ್$_2$ + ಅಣುಗ (< ಅಣುಂಗ)]

**ಬಗೆಯಳಲು** 'ಬಗೆಯಟಲ್' ನೋ.

**ಬಗೆಯಱ್** (ಕ್ರಿ). ಮನಸ್ಸನ್ನು ತಿಳಿ; ಇಂಗಿತವನ್ನು ಅರಿ: ಮುಗಮುಗಿವ ಜಾದಿ ಪೂಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಱ್ದೋಲಗಿಪುದು ಮಾಲೆಗಾಱನಂ ಪೋಲ್ತುದಗ್ರಮಾಲ್ಯಮಹೀಜಂ (ಅಜಿತ. ೩–೩೬); ಅರಸಾ ಜೊನ್ನಮನುಣ್ಬ ಪಕ್ಕಿಬಾಗಿಲೊಳ್ ಬಂದಿರ್ಪುದೆಂದು ಬಗೆಯಱಿದು ಬಿನ್ನಪಂಗೆಯ್ದು (ಕಬ್ಬಿಗ. ೦೩೦); ಮಿಕ್ಕ ಧರ್ಮದೊಳು ಬಗೆಯಱಿತೆಸಗಬಲ್ಲವರಿಗೆಂದೆಂದಿಗೂ ಮೊಗದೋಱುವ ಮೋಸಗಳು (ಹಂಪ. ೨–೨೦). [ಬಗ್$_2$ + ಅಱ್]

**ಬಗೆಯಟಲ್**, ಬಗೆಯಳಲು (ನಾ). ಮನಸ್ಸಿನ ಕ್ಲೇಶ; ಮನೋವ್ಯಥೆ: ಅದರ್ಕೆ ತಕ್ಕುದಂ ನಿಮ್ಮಡಿಗಳೆ ಬಲ್ಲಿರೆಂದು ಬಗೆಯಟಲಾಱ್ ಜೊನ್ನವಕ್ಕಿ ಬಿನ್ನಪಂಗೆಯ್ಯಲ್ (ಕಬ್ಬಿಗ. ೦೩೦). **ಬಗೆಯಳಲು**: ಅಡಿದರೇ ನನ್ನಿಯಂ ಬಗೆಯಳಲಿನಿಂ ಪಾಲ ನೀಡಿದಳ್ (ಅಭಿನವ. ೦೯೨–೩೦೬). [ಬಗ್$_2$ + ಅಟಲ್$_2$]

**ಬಗೆಯಾಣ್ಮ** (ನಾ). ಮನೋವಲ್ಲಭ; ನಲ್ಲ: ಒಂದೆಡೆಯೊಳ್ ಮನೆಯಾಣ್ಮನ ಕಣ್ಣೆಮೆಯ ಕಾಂಡಪಟಮಾಗೆಯುಂ ಬಗೆಯಾಣ್ಮನ ಕಣ್ಣೆಮೆಯ ದೂದವಿಯಾಗೆಯುಂ (ಶಂಶಕಾ. ೯–೯೦ ಪ).

[ಬಗ್$_2$ + ಅಣ್ಮ (< ಆಳ್ಮ)]

**ಬಗೆಯಿಡು** (ಕ್ರಿ). ಮನಸ್ಸಿಡು; ಆಸಕ್ತನಾಗು: ಬಟ್ಟಮೊಲೆಯ ಬಾಲೆಯ ನೊಸಲೊಳು ಬಗೆಯಿಟ್ಟು ಬಲ್ಲಹನೊಲವಿಂ ಚವುಕದ ಬೊಟ್ಟಂ ಕುಂಕುಮದಿಂದಿಡೆ (ಜಯಕಾ. ೦೯–೬೯). [ಬಗ್$_2$ + ಇಡು$_1$]

**ಬಗೆಯಿಸು** (ಕ್ರಿ). ೧. ಮನಸ್ಸನ್ನು ಸೆಳೆ,–ಆಕರ್ಷಿಸು: ಮನಕಂಪನೊಗೆಯಿಸುವ ಬಗೆಯಿಸುವ ರಾಜೋಪವನಮೆಸೆದುದು (ಕೃಬಾಳ. ೨೯–೯೬). ೨. ತಿಳಿದಂಕೊಳ್ಳುವಂತೆ ಮಾಡು; ಭಾವಿಸುವಂತೆ ಮಾಡು: ಹಗೆತನವನುಳಿದು ದಯವೆಲ್ಲ ಬೆಳೆದು ತನ್ನಂತೆ ಪರರ ಬಗೆಯಿಸುವುದು ಬಡತನ (ಶೀಪಾಹ. ೬೩). [ಬಗ್$_2$ + –ಇಸು$_2$]

**ಬಗೆಯೆಣಿಕೆ** (ನಾ). ಮನಸ್ಸಿನ ಅಭಿಪ್ರಾಯ,–ಆಶಯ: ಇದು ನಿನಗೆ ಬಗೆಯೆಣಿಕೆ, ಎನಗೆ ಏರ್ಪಡೆಂಕೆ (ಅಕ್ಕಾ. ೩೯–೨೩೮). [ಬಗ್$_2$ + ಎಣಿಕೆ]

**ಬಗೆಯೊಡೆಯ** (ನಾ). = ಬಗೆಯಾಣ್ಮ: ಗಡಣದೆ ಮಾದೇವಿಯ ಬಗೆಯೊಡೆಯನ ನೊಸಲೊಳ್ . . . ನಟ್ಟುವು ಕಾಮನಂಬುಗಳ್ ತಾವ್ಪೈದುಂ (ಕಬ್ಬಿಗ. ೩೦೬). [ಬಗ್$_2$ + ಒಡೆಯ]

**ಬಗೆವಡೆ** (ಕ್ರಿ). ತಿಳಿ; ಅರಿತುಕೊಳ್ಳು: ಆ ತೊರೆ ಸಿದ್ದೋರಿಗೆಳತ್ತಲೇ ಹರಿದು ಹೋಗುವುದೆಂಬುದನ್ನು ಬಗೆವಡೆದವು (ಪಾಕೋಶ. ೩೩೩).

[ಬಗ್$_2$ + ಪಡೆ$_1$]

**ಬಗೆವರ್**, ಬಗೆಬರ್ (ಕ್ರಿ). ಮನಸ್ಸಿಗೆ ಬರು,–ತೋಚು: ಬಗೆವಂದ ಗೊಡ್ಡಾಟವಮಾಡಲೆಂದು ದುರ್ಜನಪರಿವೃತನಾಗಿ (ಧರ್ಮಾಮೃ. ೨–೨೯). **ಬಗೆಬರ್**: ಸ್ವೈರಿಣಿ ಬಗೆಬಂದಾಗಳೆ ಮಾರಕ್ರೀಡೆಯನೊಡರ್ಚಲೆಂದುಪಪತಿಯಂ ದಾರಕನಂ ಕೊಲವೇಟ್ಟಳ್ (ಶಂರಾಪು. ೬–೫೨); ಹರನ ಭಕ್ತಿಯ ಮಾಡಿದೊಡೆ ಗೋಚರಿಸಿ ತೋಱುವನಲ್ಲಮಪ್ರಭು ಕರುಣದಿಂದಲಿ ನೀನು ಬಳಿಕಾತನಲಿ ಬಗೆಬಂದ ವರಮನೋರಥಸಿದ್ಧಿಯನು ಪತಿಕರಿಸಿ ಪಡೆವುದು (ಪ್ರಭುಲಿಂ. ೬–೩). [ಬಗ್$_2$ + ವರ್]

**ಬಗೆವಿಡಿ** (ಕ್ರಿ). ಮನಸ್ಸನ್ನು ಸೆಳೆ,–ಆಕರ್ಷಿಸು: ಬಗೆವಿಡಿದಾಹತವಾದಿಗಮಂಗಳನೊಯ್ಯನೆ ಬೀಣೆ ಬಾಜಿಪನ್ನೆಗಂ (ಶಬ್ದ. ೯–೦೦೩).

[ಬಗ್$_2$ + ಪಿಡಿ$_1$]

**ಬಗೆವುಗಿಸು** (ಕ್ರಿ). = ಬಗೆವಿಡಿ: ಏಂ ಬಗೆವುಗಿಸಿದುದೋ ಹೇಮಾಂಬುಜದ ಮರಾಳಮಿಥುನಮಂ ತನ್ಮಿಥುನಂ (ಅಜಿತ. ೬–೩೩).

[ಬಗ್$_2$ + ಪುಗಿಸು (< ಪೊಗಿಸು)]

**ಬಗೆವುಗು** 'ಬಗೆವೊಗು' ನೋ.

**ಬಗೆವೆಚ್ಚು** 'ಬಗೆವೆರ್ಚು' ನೋ.

**ಬಗೆವೆರಸು** (ಕ್ರಿ). ಮನಸ್ಸಿಗೆ ಬರು; ಮನಮುಟ್ಟು: ಬಗೆವೆರಸಿ ಸಂದಪ್ಪವಾದಡಱಿಯೆಂ ಪರೋಕ್ತಿಗಳರ್ಥಮಂ (ಹರಿಶ. ೦–೨೮); ಜಗದರಸ ರಾಮಂಗೆ ಕೈಗಳ ಮುಗಿದುಮುಗಿದು ಕೆಲಸಾರುತಿರ್ದುದಂ ಬಗೆವೆರಸಿ ಬಲ[ಪಾಠಾ. ಬಗೆಬಗೆಯ ಕಪಿ]ಪತಿಗಳೆಪ್ಪತ್ತೇಳು ಕೋಟಿಯೆನೆ (ತೊರರಾ. ೯–೮–೨). [ಬಗ್$_1$ + ಬೆರಸು$_1$ (< ಬೆರೆಯಿಸು)]

**ಬಗೆವೆರ್ಚು**, ಬಗೆವೆಚ್ಚು (ಕ್ರಿ). ಮನಸ್ಸು ಉಬ್ಬು; ಉತ್ಸಾಹಗೊಳ್ಳು: ಬಗೆವೆರ್ಚಿ ಕೇಳುತಿರ್ದಪೆ ಏಗೆ ಪೇಳ್ದಪೆನೆಲೆಲೆ ಧೂರ್ತವಿಪ್ರನೆ ಕೇಳ್ (ಗಿರಿ. ೯–೦೦೯). **ಬಗೆವೆಚ್ಚು**: ಪೊಗುತೆ ಸೈಗಡೆದೆದ್ದು ಮತ್ತಮಯ್ಯಿಕ್ಕುತಂ ಬಗೆವೆಚ್ಚಿ ಪೊಡಮಟ್ಟು ನಲಿದೆದ್ದು ನಡೆವುತಂ (ಶಂಬಸ. ೯–೦೨೨). [ಬಗ್$_2$ + ಪೆರ್ಚು$_1$]

**ಬಗೆವೆಱು** (ಕ್ರಿ). ಮನಸ್ಸಿಗೆ ಬರು; ಮೆಚ್ಚು: ಬಗೆವೆತ್ತು ಅಭವಾದಿಗಳತ್ತ ಪದವಿಗೆ ಹಗೆಗೊಂಡು ಹರಿ ಕೆಡಿಸುವವನು (ಮೋಹತ. ೩೦–೦೬).

[ಬಗ್$_2$ + ಪೆಱು$_1$]

**ಬಗೆವೇಳ್** 'ಬಗೆವೇಟ್' ನೋ.

**ಬಗೆವೇಟ್**, ಬಗೆವೇಳ್ (ಕ್ರಿ). ೧. ಮನಸ್ಸನ್ನು ತೆರೆದು ಮಾತನಾಡು; ಹೃದಯವನ್ನು ಬಿಚ್ಚಿ ಹೇಳು: ತನಯರನಟ್ಟು ಸಂತತಿಯೊಳಿಂತಮಗಂ ಬಗೆವೇಟದೇಕೆ ಪೋದನೊ (ಅರಿಕೃ. ೯–೬೬); ಬಗೆವೇಟ್ಟೊಡನ್ನ ಮೇಳದ ಕೆಳೆಯರ್ಕಳಿಲ್ಲ (ಶಂಶಕಾ. ೯–೬೯); ಸಮಧಿಕಚಿಂತೆಯಿಂ ನುಡಿಯಲುಂ ಬಗೆವೇಟಲುಮೊಲ್ಲದಾ ಶರತ್ಸಮಯದ ಸೋಗೆಯರ್ವ ತೆಱದಿಂ ಕಡುವಿನ್ನನೆ ಮಾಗುವಟ್ಟು ಖೇದಮನೊಳಗೊಂಡು ನಿಂದಬಲೆಯಿರ್ದಿರವಂ ಸಖಿ ನೋಡಿ (ಜಗು. ೦೦–೦೦). **ಬಗೆವೇಳ್**: ೨. ದಾರಿ ತೋರಿಸು: ಶಿವಭಕ್ತಾಪರಾಧದಿಂ ಸಂಭವಿಸಿತಿನಿತು ಪರಿಭವವಿದಕೆ ಬಗೆವೇಳ್ವ ನೋಡು ಮರ್ದನಯೆಂದು ದೈನ್ಯದಿಂ ಬಿನ್ನೈಸಿ (ಸೌಂದರ್ಯ. ೯–೦೫).

[ಬಗ್$_2$ + ಪೇಟ್]

**ಬಗೆವೊಗು**, ಬಗೆವುಗು (ಕ್ರಿ). ಮನಸ್ಸನ್ನು ಪ್ರವೇಶಿಸು: ನೋಟದೊಳಟ್ಟಜಂಬಡೆದು ಮೆಲ್ನುಡಿಯೊಳ್ ಬಗೆವೊಕ್ಕು . . . ಕೂಟಸುಖಂಗಳಂ ಪಡೆದಂ (ಶಂಶಕಾ. ೩–೯೨). **ಬಗೆವುಗು**: ಎಲ್ಲಮನೊಪ್ಪಿಸಿ ನಿರ್ಣಯಂ ನಯಂ ಬಗೆವುಗೆ ಮಾಡಿದರ್ಕಳುಪವೇಷಮನೊಲ್ಲದನುಪ್ರವೇಶಮಂ

(ಮಲ್ಲಿಪು. ೯-೧೩೦) ; ಶ್ರೀಕಂಠರಿಪುವಿನಸ್ತ್ರಾನೀಕಂ ಬಗೆವುಗಲದೊರ್ವ ಸತ್ರಾಜಿತ್ಕನ್ಯಾಕಾರಂ ಬಗೆವೊಕ್ಕುದು ಲೋಕಜನಸ್ತುತಿಗಳಿಂ ಗರುತ್ಮದ್ಧ್ವಜನಾ (ಜಗಂ. ೧೦-೧); ಗುಣಮಮುಮರೆ ಶಬ್ದವಣಿದರ್ಪಣಾನಾಮುಮನಿಟ್ಟು ನೆಱೆಯೆ ಕರ್ಣಾಟಕಲಕ್ಷಣಶಬ್ದಶಾಸ್ತ್ರಮಂ ಲಾಕ್ಷಣಿಕರ್ವೆಟ್ಟಿಂದು ಬೆಸಸೆ ಬಗೆವುಗೆ ವೇಟ್ಕಿಂ (ಶಮದ. ೩). [ಬಗ್$_2$ + ಪೊಗು]

**ಬಗೆಹರಿ** (ಕ್ರಿ). (ಮನಸ್ಸಿನ ಆಲೋಚನೆ, ಉದ್ದೇಶ ಮುಂತಾದುವು ನಿರಾತಂಕವಾಗಿ) ತೀರ್ಮಾನವಾಗು ; ಇತ್ಯರ್ಥಗೊಳ್ಳು ; ನಿರ್ಧಾರವಾಗು: ಕನ್ನಡಸಾಹಿತ್ಯದಲ್ಲಿ ನಾಗವರ್ಮರು ಎಷ್ಟು ಮಂದಿ ಎಂಬ ಪ್ರಶ್ನೆಯೊಂದು ಬಗೆಹರಿಯದ ಸಮಸ್ಯೆಯಾಗಿದೆ (ಸಾಹಿಸ. ೨೯) ; ಈ ದೇಶದ ಶೈಕ್ಷಣಿಕಸಮಸ್ಯೆಗಳು ಖಂಡಿತವಾಗಿಯೂ ಬಗೆಹರಿಯುವುದಿಲ್ಲ (ಸುಶರ್ಜ. ೧೦). [ಬಗ್$_2$ + ಹರಿ$_2$ (< ಪರಿ$_2$)]

**ಬಗೆಹರಿಸು** (ಕ್ರಿ). ೧. ಇತ್ಯರ್ಥಗೊಳಿಸು; ನಿರ್ಣಯಿಸು; ನಿರ್ಧರಿಸು: ಕುತ್ತಿನ ಜೀಲದ ಪ್ರಶ್ನೆಯನ್ನು ಐದು ತಲೆಮಾರು ಹಿಂದೆಯೇ ಸಮಾಜ ಬಗೆಹರಿಸಿದ್ದಿತು (ಕಾಂಯೂ. ೯೬); ಅಂತಿಮವಾಗಿ ಈ ಪ್ರಶ್ನೆಯನ್ನು ಬಗೆಹರಿಸಬೇಕು (ಹಂಹಕಹ. ೦೪೦). ೨. ತೀರಿಸು; ಸಂದಾಯ ಮಾಡು : ನೆರೆದಿದ್ದ ಅಷ್ಟು ಜನ ಸಾಹುಕಾರರ ಸಾಲದಲ್ಲಿ ಒಂದನ್ನು ಸಹ ಬಗೆಹರಿಸುವ ಪರಿಸ್ಥಿತಿಯಿರಲಿಲ್ಲ (ಕಬ್ಬಿಹೂ. ೩೯). [ಬಗ್$_2$ + ಹರಿಸು (<ಪರಿಯಿಸು)]

**ಬಗ್ಗ$_1$**, ವಗ್ಗ$_1$ (ನಾ). ಹುಲಿ; ವ್ಯಾಘ್ರ: "ಬಗ್ಗಂ ವ್ಯಾಘ್ರಾಭಿಧಾನಂ" (ಕರ್ಣಾಶಿ.೯೭); ಸುತ್ತಿದ ರೇಫೆ ದಡ್ಡಕ್ಕರವಾದುದರ್ಕೆ – ಚಕ್ರಪಕ್ಷಿ – ಚಕ್ಕವಕ್ಕಿ . . . ವ್ಯಾಘ್ರ – ಬಗ್ಗ (ಶಮದ. ೨೬೦ ಪ್ರಯೋ); ಗರ್ಜಿಸುತ್ತಿರ್ಪ ಬಗ್ಗದ ಬಲ್ಗಂಡಿಕೆಗಂಡು . . . ಶಿವಿದಂ ತತ್ಕಾಳಮೇಘಾಹ್ವಯಂ (ರಾಜಶೇ. ೩-೯೯); ಇದೆ ಬಗ್ಗನನಿಕ್ಕು ! ಮೇಣಿದೆ ಚಿತ್ರಗನಂ ತುಡು ! (ರಾಮಾಶ್ವ. ೯೪-೦೨). ವಗ್ಗ$_1$ : ಶ್ರೀಮದಾಹವಮಲ್ಲದೇವರ ವಗ್ಗ (ಎಇ·XVI, ೩೯-೫; 1067). [< ಪ್ರಾ. ವಗ್ಘ. /ಸಂ. ವ್ಯಾಘ್ರ]

**ಬಗ್ಗ$_2$**, ವಗ್ಗ$_2$ (ನಾ). ೧. ಗುಂಪು; ನೆರವಿ; ಸಮೂಹ : "ಬಗ್ಗಂ ವರ್ಗಂ" (ಕರ್ಣಾಶಿ.೯೭); ದಿತ್ವಾಗ್ರರೇಫಲೋಪಕ್ಕೆ – ವರ್ಗ – ಬಗ್ಗ (ಶಮದ. ೨೬೦ ಪ್ರಯೋ). ವಗ್ಗ$_2$: "ವಗ್ಗ (ಬಗ್ಗ) _ ವರ್ಗ" (ಶದ್ವಕೋ.೩೯). ೨. ಗ್ರಂಥದ ಪರಿಚ್ಛೇದ, – ಸರ್ಗ: ಅನೇಕ ಶಾಸನಗಳ ಕೊನೆಯಲ್ಲಿ ಕಂಡುಬರುವ ಚಿಹ್ನೆಯೊಂದು ಧಮ್ಮಪದದ ಪ್ರತಿ 'ವಗ್ಗ'ದ ಕೊನೆಯಲ್ಲಿಯೂ ಇದೆ (ಶಾರಕ.೦೯). [<ಪ್ರಾ. ವಗ್ಗ. /ಸಂ. ವರ್ಗ]

**ಬಗ್ಗ$_3$** (ನಾ). ಶಿವ; ಈಶ್ವರ : "ಬಗ್ಗನೆನೆ ಮುಕ್ಕಣ್ಣನಕ್ಕು" (ಕಕಶ.೬೩); ಬಿಳಿಯಳ್ ಸರಸತಿ, ಬಿಳಿಯಂ ಬಗ್ಗಂ (ಶಬ್ದಾಮ.೦೦೩ ವ್ಯಾಖ್ಯಾ); ವೇಗದಿಾ ಬಗ್ಗನಂಘ್ರಿಯೆಡೆಗಂ ನಡೆತಂದದನೆಲ್ಲಮಂ . . . ಪೇಳಲು (ಹಾಲಾಸ್ಯ. ೦-೬-೨೬). [<ಸಂ. ಭರ್ಗ]

**ಬಗ್ಗಂದೊವಲ್**, ಬಗ್ಗದೊವಲ್, ಬಗ್ಗದೊವಲು (ನಾ). ಹುಲಿಯ ಚರ್ಮ; ವ್ಯಾಘ್ರಾಜಿನ: ಬಗ್ಗಂದೊವಲ್, ಬಗ್ಗದೊವಲ್ (ಶಬ್ದಾಮ.೩೭೬ ಪ್ರಯೋ). ಬಗ್ಗದೊವಲ್ : ಬಗ್ಗದೊವಲಂ ಆಸವಸದೊಳುಟ್ಟನಂ ದೇವರಾದಿತ್ಯನಂ. . .ನುತಿಸಿದಂ (ಉದ್ಭಟಕೇ.೩-೩೦); ಪಾರ್ವತಿಯಾಣ್ಮಂ . . . ಬಗ್ಗದೊವಲ ಪಾಸುಗೆಯಲ್ಲಿ ಸಲ್ಲೀಲೆಯಿಂ ಮೂರ್ತಿಗೊಂಡಿರೆಯಿರೆ (ವೃಷಪು. ೦೯-೩೦ ವ); ಬಗ್ಗದೊವಲಂ ಕಂಡೊಡಂ ಬೆರ್ಚುವೆರಳೆಗಳ್ ಪರಿವ ಪೆರ್ಬುಲಿನೋಟವಮಂ ಸೊಸಲುಂಟೆ (ಶ್ರೀಶಾಮು.೦೬-೩೩). ಬಗ್ಗದೊವಲು : 'ಬಗ್ಗದೊವಲುಡಿಗೆ' ಪರಾ. [ಬಗ್ಗ$_1$+ತೊವಲ್$_3$ (<ತೋಲ್$_1$)]

**ಬಗ್ಗಡ**, ಬೊಗ್ಗಡ (ನಾ). ೧. ಮಣ್ಣು, ಕಸ, ಸೆಗಣಿ ಮುಂತಾದುವು ಕಲಸಿಕೊಂಡಿರುವ ನೀರು; ರಾಡಿ; ಕೊಚ್ಚೆ : ಆನೆ, ಕುದುರೆ, ರಥ, ಪದಾತಿಗಳಿಂದ ಆ ನೀರು ಕಲಕುವುದು, ಕದಡುವುದು, ಬಗ್ಗಡವಾಗುವುದು (ಬಿಬ್ಬಟ. ಐಕಂದ. ೯೬); ನಾವು ಕೇವಲ ಕೆಸರನ್ನೂ ಸಗಣಿಯ ಬಗ್ಗಡವನ್ನೂ ಬಳಿದಿದ್ದೇವೆ (ಶಾಂರ.II.೨೪೩). ೨. ಕೊನೆಯಲ್ಲಿ ಉಳಿದುದು; ಗಸಿ; ಗಪ್ಪು : ಮೇಲಿನ ತಿಳಿ ಖರ್ಚಾಗಿ ಬಗ್ಗಡ ಮಾತ್ರ ಉಳಿದಿದೆ (ಜೂಜಿ). ಬೊಗ್ಗಡ : ೩. (ಆಲಂ) ಕಳವಳ ; ಕ್ಷೋಭೆ : ಕಿಟ್ಟಣ್ಣನ ಮನಸ್ಸು ಕಲಕಿ ಬೊಗ್ಗಡವಾಗಿ ಹೋಗಿ ಮತ್ತೆ ತಿಳಿಯಾಗಬೇಕಾದರೆ ಎಂಟು ಹತ್ತು ದಿನಗಳು ಬೇಕಾಗುತ್ತಿತ್ತು (ಶ್ರೀಶಕ.೪). [?]

**ಬಗ್ಗಡೆ** 'ಬಂಗಡೆ' ನೋ.

**ಬಗ್ಗಡೆಯ** 'ಬಕ್ಕುಡೆಯ' ನೋ.

**ಬಗ್ಗಣೆ$_1$** (ನಾ). ೧. ಗದರಿಕೆ ; ಝಂಕಣೆ: ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ ತಾಯ್ಮ ಗುಟ್ಟುದ್ದ ನಿರ್ವಂದದಿನೆಯ್ದೆ ಬಗ್ಗಿಸುವ ಬಗ್ಗಣೆಗಳ್ಕದೆ (ಸುಕುಮಾ.೨-೬); ನಿಱಿಸು ನಿಘಾತಮಾಂಕೆ ಬಗೆ ಬಗ್ಗಣೆ ವಂಚನೆ ಬಂಧಮೆಂಬಿವಂ ಮೆಱೆವೊವಜರ್ಕಳೇಂ ಕಲಿಸುತಿರ್ಪರೊ ಚಟ್ಟರನಟ್ಟಿ ಮಟ್ಟರಂ (ಕೃಷ್ಣಕ.೨-೩೦). ೨. ಕೂಗಾಟ; ಆರ್ಭಟ: ಹೆಗ್ಗಡಲ ತೆರೆಯಂತೆ ಮೊಳಗುವ ಲಗ್ಗೆಗಳಲೋರಂತೆ ಸುಭಟರ ಬಗ್ಗಣೆಯ ಬಲುಭುಜರ ಘನತರ ಸಿಂಹನಾದದಲಿ ತಗ್ಗಿದುದು ಧರೆ (ಕಶಾಗ. ೦೦-೩೨-೯೬).

**ಬಗ್ಗಣೆ$_2$**, ಬಗ್ಗಳೆ (ನಾ). ಹಕ್ಕಿಗಳ ಕೂಗು; ಕೂಜನ : ಕಳಕಂಠಿಯ ಬಗ್ಗಣೆಯೇವುವೆಂಬ . . . ಮಧುಮಾಸದ ಗೋಸಣೆಯೇವುವೆಂಬ ಬದ್ದರ ನಱೆಯಟ್ಟೆ (ಅಶ್ವತ್ಥ.೬-೨೬); ಕೋಗಿಲೆಯ ಬಗ್ಗಣೆ ತುಂಬಿಯ ಗೇಯಮೆಂಬಿವಂ ಬಲ್ಲವರುಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ (ಮಲ್ಲಿಪು.೦-೯೯). ಬಗ್ಗಳೆ: ಪರಪುಷ್ಟಧ್ವಾನದೊಳ್ ಬಗ್ಗಳೆ ಪುರುಳಿಗೊಳಲ್ ಲಲ್ಲೆ (ಅನಂತಪು. ೦-೯೬). [ಬಗ್ಗ$_2$ + – ಅಣೆ]

**ಬಗ್ಗದೊವಲ್** 'ಬಗ್ಗಂದೊವಲ್' ನೋ.

**ಬಗ್ಗದೊವಲ** (ನಾ). ಹುಲಿಯ ಚರ್ಮವನ್ನು ಧರಿಸಿದವನು ; ವ್ಯಾಘ್ರಚರ್ಮಾಂಬರ ; ಶಿವ : ಬಗ್ಗದೊವಲಗೆ ಸೊಡರ ಹಚ್ಚುಸುವೆ ಹಾಲೆರೆವೆ (ಹಕ್ಕಿಕ. ೩-೩೦).

[ಬಗ್ಗದೊವಲ್(<ಬಗ್ಗಂದೊವಲ್) + _ಅ$_7$]

**ಬಗ್ಗದೊವಲು** 'ಬಗ್ಗಂದೊವಲ್' ನೋ.

**ಬಗ್ಗದೊವಲುಡಿಗ** (ನಾ). = ಬಗ್ಗದೊವಲ : ಬಗ್ಗದೊವಲುಡಿಗನೀರೇಳ್ಬುವನದೊಡೆಯನೆಸೆದಂ ರಾಜವಿಭವದಿಂದೆ (ಕಂಪು. ೨೯-೯೦).

[ಬಗ್ಗದೊವಲುಡೆ+_ ಇಗ]

**ಬಗ್ಗದೊವಲುಡಿಗೆ** (ನಾ). ಹುಲಿಯ ಚರ್ಮದ ಉಡುಪು ; ವ್ಯಾಘ್ರಚರ್ಮದ ಉಡುಗೆ : ಬೆಳುಗಾಯ ಕಂಜಡೆಯು ಚನ್ನಾಗಿ ಬಗ್ಗದೊವಲುಡಿಗೆ ವಿಭೂತಿ ರುದ್ರಾಕ್ಷಿಗಳು (ಶಶಮೋ. ೦೩.೦೩).

[ಬಗ್ಗದೊವಲು (<ಬಗ್ಗಂದೊವಲ್) + ಉಡಿಗೆ$_1$ (<ಉಡುಗೆ)]

**ಬಗ್ಗದೊವಲುಡೆ** (ನಾ). =ಬಗ್ಗದೊವಲುಡಿಗೆ : 'ಬಗ್ಗದೊವಲುಡೆಯು' ಪರಾ. [ಬಗ್ಗದೊವಲ್ (< ಬಗ್ಗಂದೊವಲ್)+ಉಡೆ$_1$]

**ಬಗ್ಗದೊವಲುಡೆಯ** (ನಾ). =ಬಗ್ಗದೊವಲ : "ಎಣ್ಣಯ್ಯಂ . . . ಸಬ್ಬಂ, ಬಗ್ಗದೊವಲುಡೆಯಂ, ಬಾನ್ನವಿರಂ . . . ಅಯ್ಯೊಗು — ಈ ೩೩ ಈಶ್ವರಂಗೆ ಪೆಸರ್" (ಕಕಶಾ. ೯೬-೦) ; ವೆಗ್ಗಳಿಪ ಶೀತಕರನೀರೆಂಟುಭಾಗದೊಳ್ ಬಗ್ಗದೊವಲುಡೆಯನೊಂದಂ ತಳೆದು ಚಂದ್ರನಂ ನೋಡಿ ಮತ್ತಿಂತೆಂದನು (ಕಂಪು. ೨೨-೨೬) ; ಬಗ್ಗದೊವಲುಡೆಯಂಗೆ ಪಟ್ಟಣಿಗೆಯನುಡಿಸಿ (ರಾಮಾಶ್ವ. ೦೩೦-೦೨). [ಬಗ್ಗದೊವಲುಡೆ +_ಅ$_7$]

**ಬಗ್ಗನೆ** (ಅ). ಕೂಡಲೆ ; ತಕ್ಷಣ : ಬಗ್ಗನಿಲ್ಲಿಂದ್ಯೆದಿ ನಾವು ನಮ್ಮಯ ಗಡಿದುರ್ಗದೊತ್ತಲಿ ನಿಲ್ವೆವು (ಕಂಶಪ. ೦೯-೪೯) ; ಸಗ್ಗದಿನಾಗಳೆ ಚರರಂ ದಿಗ್ಗಜಮಂ ಕರೆತರಲ್ಕೆ ಕಳಿಪಿದೊಡವರ್ಗಳ್ ಬಗ್ಗನೆ ಬಂದುಸಿರಲ್ಕೆ (ಹಾಲಾಸ್ಯ. ೦-೩-೨೬) ; ಸಗ್ಗಿಗರ ಪಿರಿಯನ್ನೆತರೆ ನೋಡಿ ಹರ್ಷದಿಂ ಬಗ್ಗನಿದಿರೆದ್ದು ಸೆಳೆದಪ್ಪಿ (ಕಂಶಾರಾ. ೨-೩೨-೩೬). [ಬಗ್$_2$+_ಅನೆ$_1$]

**ಬಗ್ಗಬರಿ** 'ಬಱು' ಪರಾ.
**ಬಗ್ಗಬಱ** 'ಬಱು' ಪರಾ.
**ಬಗ್ಗಮರಿ** (ನಾ). ಹುಲಿಯ ಮರಿ; ವ್ಯಾಘ್ರಶಿಶು : ಚಳೆಯನುರ ಚೆಲ್ಲುವವು ಬಗ್ಗಮರಿಗಳು (ಶಶಪೋ. ೬-೦೦). [ಬಗ್ಗ$_1$+ಮರಿ$_2$ (<ಮಱಿ)]
**ಬಗ್ಗರೆ** 'ಬಕ್ಕರೆ' ನೋ.
**ಬಗ್ಗವಳ್ಳಿ** (ನಾ). ಒಂದು ಬಗೆಯ ಬಳ್ಳಿ (?) : ಬಗ್ಗವಳ್ಳಿಯ ಬಳ್ಳಿ ಗಾವಣದೋಳಿಯಿಂ ಸೊಗಯಿಪ್ಪ ಸಮ್ಮಗ್ಗವಾಕ್ಷದ ವಂಕದಾರದ ಕೇತಕೀಗರ್ಗಯಿನೊಂದಿ ನಿಂದಗ್ಗಳಿಕ್ಕೆಯನೀಟ್ಟು ನೀಳ್ದ ನಿವೇಶದೊಳ್ ಮದನಂ ಮಹಿಕ್ಕೆಗ್ಗು ಪೊರ್ದದ ರೂಪಿನೊಳ್ ನೆಲಸಿರ್ದವೋಲ್ ಸುಖಿಮಿರ್ಪನಂ (ಶಾಂತಿಪು. ೩-೭೯). [ಬಗ್ಗ$_?$ + ಬಳ್ಳಿ]
**ಬಗ್ಗಸಮ್ಮ** (ನಾ). –ಬಗ್ಗಂದೊವಲ್ : ಜಡೆಗಳ ಬಂಬಲೇ ಕಲಿದೇರ್ ಫಣ ಸುತ್ತಿದ ಬಳ್ಳಿ . . . ಬಗ್ಗಸಮ್ಮದೊಳ್ಕುಡೆ ಪೊಸಚಲ್ಲಣಂ (ಕಂಕಂ. ೩-೩).
[ಬಗ್ಗ$_1$+ಸ್ವಮ್ಮ$_2$ (<ಚವ್ವ)]
**ಬಗ್ಗಳೆ** 'ಬಗ್ಗಣ್ಣೆ$_2$' ನೋ.
**ಬಗ್ಗಿ** 'ಬಗ್ಗಿ$_2$' ನೋ.
**ಬಗ್ಗಿಸು$_1$** (ಕ್ರಿ). ೧. ಬಗ್ಗುವಂತೆ ಮಾಡು ; ಬಾಗಿಸು : ತರಣಿಶತಕೋಟಿ ತೇಜದ ರತ್ನದೋಹರಿಯ ಪಿರಿಯ ಸೌಧೋತ್ತರಂಗಳ ಪ್ರಾಂಗಣಾಂಗಳೊಳು ಹರನೋಲಗದ ಸಮಯಮಂ ದ್ವಾರಪಾಲಕರ ಶಿರವ ಬಗ್ಗಿಸಿ ಕೇಳುತ ಕರಗಳಂ ಮುಗಿದು (ಗುಶತ. ೩-೯೦) ; ನೀನು ತಲೆ ಬಗ್ಗಿಸಿಕೊಂಡೇ ಕುಳಿತಿದ್ದೀಯಲ್ಲ (ಕಂಗಾಳ್. ೨೩) . ೨. ಚೆಲ್ಲು ; ಸಂರಿ : ಬೀರಕ್ಕ . . . ಕಡಾಯಿನ ನೀರನೆಲ್ಲಾ ಬಗ್ಗಿಸಿದ್ದಾಳೆ (ಶತಕಂ. IX, ೬೨) ; ಮಗ್ಗಲುತೋಟದ ಜನಗಳೆಲ್ಲಾ ಅಲ್ಲಿಗೆ ಬಂದು ನಾನು ನೀರು ಬಗ್ಗಿಸುತ್ತಿದ್ದ ಧಾಟಿಯನ್ನೇ ನೋಡುತ್ತಿದ್ದರು (ಕಂಗಾಳ್. ೬೦೭). ೩. ಸೋಲಿಸು ; ಹಿಮ್ಮೆಟ್ಟಿಸು : ಚಕ್ರವಕ್ಕಿಯಂ ಪರಿವಡದಿರ್ದ ತೋರಮೊಲೆ ಬಗ್ಗಿಸೆ ನೈದಿಲದಿನೆಯ್ದೆ ಕಣ್ಮಲರ್ ಕೊರಗಿಸೆ ನಾಡೆ . . . ಬನವಣ್ಣಿನಿವಂದದಿನೊರ್ವಳೊಪ್ಪಿದಳ್ (ಕಬ್ಬಿಗ. ೦೦೨). ೪. ಗದರಿಸು ; ಬೆದರಿಸು; ರಝುಂಕಿಸು : "ಬಗ್ಗಿಸಿದನೆನಲ್ಕೆ ಝುಂಕಿಸಿದ ನೊಳು ಪೊಟ್ಟುಗಂ" (ಶಬ್ದಾರ. ೯೩) ; ಒಸಗೆ ಮೇಣ್ ಮುನಿಗೆ ಮೇಣಾವ ರೆಲ್ಲರುಮಂತೆ ಬಗ್ಗಿಸುಗೆ ಮತ್ತುಬ್ಬಯಲಾಗದು ನೆಟ್ಟನೆ ಪೊಣ್ಣುದಂ (ಕಪುಡಾ. ೦-೭೩೭) ; ಕಿಱುಯಂದು ತಂದೆ ಬಗ್ಗಿಸಲಱುಯನೆ ತಾಯ್ ಜಡಿದು ತಿಳಿವಲ ಱುಯಳೆ (ಸುಕುಸೂ. ೨-೬೨). ೫. ಮೂದಲಿಸು ; ಹೀಯಾಳಿಸು ; ಹಂಗಿಸು : ನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ ನೀಮೊದಱುಯವಂ ಬಗ್ಗಿಸಿದೊಡದೃಶ್ಯಂಗಳಾಗಿ ಪೋಕುಂ (ಪಚ್ಛಾರಾ. ೦೦೦-೪) ; ಮುನಿಕುಮಾರರೋದುವ ವೇದವೇದಾಂಗಂಗಳಂ ತಪ್ಪಿವಿಡಿದು ಜಡಿದು ಬಗ್ಗಿಸುವ ಪದುಮರಾಗದ ಬಣ್ಣದರಗಿಳಿಗಳುಮಂ (ಹಂಸರಾ. ೦-೦೦೩ ವ) ; ಕಟಲೆ ನುಡಿದಟಲೆ ಬಗ್ಗಿಸಿ ಘಟಿಲಿನೆ ನಡೆಯೆಂದು ಜಡಿದು ಸಾರಥಿಯಂ ಪಾಂಗಟಿದು ನಿಲಲೀಯದಲ್ಲಿಂದೆಟೆದುಯ್ವಂತುಯ್ದು ಆತ್ಮವರಸಂ ನರನಂ (ಕಾವ್ಯಾಪ. ೨೬). 'ಬಾಗಿಸು$_1$' ಪರಾ.
[ಬಗ್ಗು$_1$ + — ಇಸು$_1$]
**ಬಗ್ಗಿಸು$_2$** (ಕ್ರಿ). (ಕೋಗಿಲೆ ಮೊದಲಾದ ಪಕ್ಷಿಗಳು) ಕೂಗು ; ಉಲಿ : ಕಾವ್ಯಬಂಧಮೊಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಟಿಯಿಂ ಬಟಲ್ದು ತುಂಬಿಗಳಿನೆ ತುಂಬಿ ಕೋಗಿಲೆಯಿ ಬಗ್ಗಿಸೆ ಸುಗ್ಗಿಯೊಳೊಪ್ಪು ವಂತೆವೋಲ್ (ಶಂಕರಾ. ೦-೬) ;. ಪಿರಿದುನ್ನದಾಳಿ ಬಗ್ಗಿಸುವ ಪಿಕಾಳಿ ಪುಷ್ಪಿತ ಲತಾಳಿ (ಎಕ. VIII, ಸಾಗರ. ೦೦೬-೨೬; 1042) ; ಪಾಡುವ ತುಂಬಿ ಬಗ್ಗಿಸುವ ಕೋಗಿಲೆ ನರ್ತಿಪ ನೀಲಕಂಠ (ಕಮಪು. ೩-೦೯೯).
[ಬಗ್ಗು$_2$ + — ಇಸು$_2$]
**ಬಗ್ಗು$_1$** (ಕ್ರಿ). ೧. ಕೆಳಮುಖವಾಗು ; ಬಾಗು : ಬಗ್ಗಿ ಕವಿವಂಬುಗಳ ಗಱುಗಳ ಲಗ್ಗೆಗರಿನಾಯಕರ ಕಿವಿಗಳು ನೆಗ್ಗಿದವು ಮುಗ್ಗಿದವು ಮನ ಮಾಱುಂಕದತಿರಥರ (ಕುಭಾ. ೨೦-೭) ; ಗಿಡವಾಗಿ ಬಗ್ಗದ್ದು ಮರ ವಾಗಿ ಬಗ್ಗೀತೇ ? (ಗಾದೆ). ೨. ಡೊಂಕಾಗು ; ವಕ್ರವಾಗು : ಆ ಕಿಟಕಿಯ ಸರಳುಗಳೆಲ್ಲ ಹಳೆಯವಾಗಿ ಬಗ್ಗಿವೆ (ಬೂತ). ೩. ಒಲೆಯಾಗು ; ಓಲು : ಬಿನ್ನಣದ ಗೋಪುರದ ಮುಂಟಪದ ಪೃಥುವೊಗಳು ಚೆನ್ನಾಗಿ ನಿಗುರುತಂ ಬಗ್ಗುತ್ತ. . .ನೋಡಿ (ಚಕುಪ. ೨೩-೬೩). ೪. ವಿನಯವನ್ನು ಹೊಂದು ; ವಿನೀತವಾಗು : ಭೋಗ್ಗನೊಂದೇ ದಿನದೊಳು ಕೋಟ ನಾತ್ಮನು ಬಗ್ಗಿದಾಗ್ ಬಾಗಿಲಹುದೇ (ಚಕ. ೨-೬೬) ; ಬಗ್ಗಿದವನಿಗೆ ಒಂದು ಗುದ್ದು ಹೆಚ್ಚು (ಗಾದೆ). ೫. ಮಣಿ ; ಸಗ್ಗು ; ತಗ್ಗು : ಅತಿಕಾಂಕ್ಷೆಯನಾವಂ ಮಾಳ್ಪನವಂ ಸತತಂ ಹಿಂಸೆಗೆ ಬಗ್ಗುವನಲ್ಲಂ (ಜಯುಕಾ. ೦೦-೦೬) ; ಗ್ರಾಮದ ಮುಖಂಡರು ಇಷ್ಟು ಪ್ರಯತ್ನಪಟ್ಟರೂ ಬಗ್ಗದ ಹಟವಾದಿಯು . . . ಗ್ರಾಮಸ್ಥರನ್ನು ಅಕಾರಾಧಿಗಳನ್ನಾಗಿ ಮಾಡುತ್ತಿದ್ದನು (ಜುಕ್ಕಿಪ. ೦೬). ೬. ಗದರು ; ಝುಂಕಿಸು : 'ಬಗ್ಗಣ್ಣೆ$_1$', 'ಬಗ್ಗಿಸು$_1$' ಪರಾ. 'ಬಾಗು$_1$' ಹೋ.
[ದೇ. ‖ ತುಳು. ಬಗ್ಗು ; ಕೊಡ. ಬಗ್ಗ್]
**ಬಗ್ಗು$_2$** (ಕ್ರಿ). (ಪಕ್ಷಿಗಳು) ಕೂಗು ; ಉಲಿ : 'ಬಗ್ಗಿಸು$_2$' ಪರಾ.
**ಬಗ್ಗು$_3$** (ನಾ). ಬೆದರಿಸುವಿಕೆ ; ಗದರಿಸುವಿಕೆ ; ಝುಂಕಣೆ : "ಬಗ್ಗು, ಬಿಪ್ಪಂಡಂ, ಬೆಜ್ಜ, ಚಪ್ಪರಣೆ—ಈ ೪ ಜಂಕಣೆ" (ಶಬಾ. ೩೬-೨೩೬).
[ <ಬಗ್ಗು$_1$ ].
**ಬಗ್ಗು$_4$** (ನಾ). ಪಕ್ಷಿಗಳ ಕೂಗು ; ಹಕ್ಕಿಗಳ ಧ್ವನಿ : "ಬಗ್ಗನಲ್ಕದು ಪಕ್ಷಿಗಳ ದನಿಗೆ" (ಶಪ. ೦೨೭). [<ಬಗ್ಗು$_2$]
**ಬಗ್ಗು$_5$** (ನಾ). ಐಶ್ವರ್ಯ ; ಸಂಪತ್ತು : "ಬಗ್ಗು (ಬಗ್ಗ, ಬಾಗ)—ಭಾಗ್ಯ" (ಶದ್ಪಕೋ. ೨೩) ; ಕೃತಿಯಿದು ಚದುರಕರ್ಣಾಟಕಕಲೆಯಱುವನ ಬಗ್ಗಿನ ಬೆಳೆ (ಸೂಪಕೋ. ೦-೨೨) ; ಮೂಡಿವೆರಲಳತೆಯ ಲಲನೆಯ ನೊಸಲದು ಬಗ್ಗಿನ ನೆಲೆವನೆ (ಹಾಲಾಸ್ಯ. ೦-೦೩-೦೭) ; ಪುಣ್ಯದ ರಾಶಿಯಂತೆ ಬಗ್ಗಿನ ನೆಲೆಯಂತೆ ಮೈಮೆವೆತ್ತು ಚೆಲ್ವಾದ ಪರ್ವತಂ ತೋಱುವಂದುದು (ರಾಜಶೇ. ೬೨-೦೦). [<ಪ್ರಾ. ಬಗ್ಗ./ಸಂ. ಭಾಗ್ಯ]
**ಬಗ್ಗುಬಡಿ** (ಕ್ರಿ). (ಅಲಂ) ಬಾಯಿ ಮುಚ್ಚಿಸು : ಅಡಗಿಸು ; ಸಂಮ್ಮನಾಗಿಸು : ಸಂನ್ಯಾಸಿಗಳನ್ನು ಬಗ್ಗುಬಡಿದೆವೆಂದು ಹಂಸ ಡಿಂಭರ ಅವಿನಯವು ಮತ್ತಷ್ಟು ಉಬ್ಬಿ ಹರಿಯಿತು (ಶೀಗಟ್ಟಿ. ೦೯೦) ; ತಾಯಿಯನ್ನು ಬಗ್ಗುಬಡಿದಂತೆ ಈ ಬಾರಿಯೂ ಮಾಡಬೇಕೆಂದು ನೆನೆಸಿ ಇದರ ಬಗ್ಗೆ ಮನೆಯಲ್ಲಿ ಚಕಾರಶಬ್ದ ತೆಗೆಯಲಿಲ್ಲ (ಗಂಪಾಯ. ೩೩).
[ ಬಗ್ಗು$_1$ + ಬಡಿ$_1$ ]
**ಬಗ್ಗುರಿ$_1$** (ನಾ). ಎದೆಗೂಡಿನ ಮೂಳೆ : ಕಟಕಟಾಯಿಪಾ ಮತ್ಸ್ಯವಿಲ್ಲಿರಲ್ ಜಗಕೆ ಸಂಕಟಮಪ್ಪುದಚ್ಚರಿಯೆ ನೋಡೆಂದು ಕೂಡೆ ಲಟಕಟಿಸಿ ಕಡ ಲೊಳ್ ಪೊಕ್ಕು ಗುಡಿಗುಡಿಪ ವಿಮಾನ ಬಗ್ಗುರಿಯನೊದೆದಾಂಕಿ (ಕಪಿಪು. ೨೦-೬) ; ಉಡಿದರಾಂತವರ ಬಗ್ಗುರಿಗಳಂ ದಾನವರ್ ಕುಡಿದರ ರುಣಾಂಬುವಂ ಶಾಕಿನಿಯರ್ (ಕಂಪು. ೨೯. ೨೨).
[ ದೇ. ‖ ಕೊಡ. ಬಗ್ಗರೆ = ಬೆನ್ನೆಲುಬು ]
**ಬಗ್ಗುರಿ$_2$** (ನಾ). ಜಿಂಕೆ ಮೊದಲಾದ ಪ್ರಾಣಿಗಳನ್ನು ಹಿಡಿಯುವವನು; ಬೇಡ : ಜಗದ ಪ್ರಾಣಿಗಳುಲಿದುಲಿದು ಮರಳಿ ಮತ್ತಲ್ಲಿಯೇ ಬೀಳಲು ಬಲೆಯ ನೇಣು ಬಗ್ಗುರಿಯ ಕೈಯಲಿರಲು ಬಲೆಯ ನೇಣ ಕಣ್ಣಿಯ ಕಳಚಿ ಶರಣನು ಶರಣೆನುತ್ತವೆ ನಿಂದು (ಅವಕಂ. ೬೩-೩೭೭). [< ಸಂ. ವಾಗುರಿಕ]
**ಬಗ್ಗುವೆಣ್** (ನಾ). ಸಂಪತ್ತಿನ ದೇವತೆ ; ಭಾಗ್ಯಲಕ್ಷ್ಮಿ : ಬಗ್ಗದೊವಲು ಡೆಯೊಳುಳ್ಳುಡೆ ವಿರಾಜಿಸುತಿರಲ್ ಬಗ್ಗುವೆಣ್ಣಿನಿಯನಚ್ಚಿಯ ಚೆಲ್ವಗಾಲ ಸಲಹಗ್ಗಳದ ಭೋಗವಮಲ್ಲ (ಶೀರಪು. ೭-೭೯). [ಬಗ್ಗು$_5$ + ಪೆಣ್]

**ಬಗ್ರಿಹಗ್ಗ** (ನಾ). ಎರಡು ಕೊನೆಗಳಲ್ಲೂ ಹಿಡಿದುಕೊಳ್ಳಲು ಅನುಕೂಲವಾದ ಲೋಹದ ಬಳೆಗಳನ್ನು ಹೊಂದಿರುವ ಹಗ್ಗ ; **ಟಿ** ಇದಕ್ಕೆ 'ಡಗ್ರಿಹಗ್ಗ'ವೆಂದೂ ಹೇಳುತ್ತಾರೆ : ಅವರು ಬಲೆಗಳನ್ನೆಲ್ಲಾ ಒಂದರೊಂದಿಗೆ ಒಂದನ್ನು ಗಂಟುಹಾಕಿ ಅದರ ಎರಡೂ ತುದಿಗಳಿಗೂ 'ಅಣಿ' (ಬಿದಿರಿನ ದೊಣ್ಣೆ)ಯನ್ನು ಹಾಕಿ 'ಬಗ್ರಿ' ಹಗ್ಗವನ್ನು ಕಟ್ಟಿ ಆಚೆ ಈಚೆ ಗಿಡಗಳಿಗೆ ಬಿಗಿದರು (ಕ್ಷ ಸರ್ವ. ೦೦೩) ; ಬಲೆಯ ಕೆಳಗಡೆ ಅಂಚು. ಆ ಅಂಚುಗಳ ತುದಿಯಲ್ಲಿ ಕಟ್ಟಿರುವ ಬಗ್ರಿಹಗ್ಗವನ್ನು ಹತ್ತುಹತ್ತು ಮಾರು ದೂರಕ್ಕೆ ಎಳೆದು ಬಂಡೆಗಳಿಗೂ ಕುರುಚಲುಗಿಡದ ಬುಡಗಳಿಗೂ ಕಟ್ಟಿದರು (ಹುಬ್ಬ ಹ. ೦೯). [ಬಗ್ರಿ₇ + ಹಗ್ಗ (< ಪಗ್ಗ) ]

**ಬಚಕಾನಿ** 'ಬಚ್ಚಕಾನೆ' ನೋ.

**ಬಚನಾಗ** (ನಾ). ಒಂದು ಬಗೆಯ ವಿಷಯುಕ್ತವಾದ ಔಷಧಿ ಬೇರು : ಬಚನಾಗ (ಕಡಗೋಲಮಂಡೀ ಬೇರು), ಸುಂಬಳಕಾರ ಮೊದಲಾದ ಪ್ರಸಿದ್ಧ ವಿಷಗಳು. ಇವುಗಳಿಗೆ ಯೋಗವಾಹಿ ಎಂದೂ ಹೇಳುವರು ; ಅಂದರೆ ಬೇರೆ ಔಷಧಗಳ ಕೂಡ ಬೆರಸಿದರೂ ಇವು ತಮ್ಮ ಪರಾಕ್ರಮವನ್ನು ತೋರಿಸತಕ್ಕವೆಂಬ ಅರ್ಥವು (ಗೃಹವೈ. ೬) ; ಜೀವಸಗಳು ೧. ಅಕ್ಕಲಖಾರ . . . ೧೫. ಬಚನಾಗ (ಮುಂಬವ್ಯಾ. ೦೨೨).
[← ಹಿಂ. ಬಛನಾಗ್ ; ಮರಾ. ಬಚನಾಗ್. / ಸಂ. ವತ್ಸನಾಭ ]

**ಬಚಲು** 'ಬಚ್ಚಲ್' ನೋ.

**ಬಚಾಯಿಸು** (ಕ್ರಿ). ೧. ಉಳಿಸು ; ಪಾರುಮಾಡು; ರಕ್ಷಿಸು : ಏನು ತಪ್ಪುಮಾಡಿದ್ದರೂ ಅವರನ್ನು ಬಚಾಯಿಸುತ್ತೇನೆ (ಕಂಠ. ೨೯೩) ; ಅವಳನ್ನು ಬಚಾಯಿಸುವ ಜವಾಬ್ದಾರಿ ನಿಮ್ಮದು (ಜಾರುದಾ. ೬೨) ; ನಿಮ್ಮನ್ನು ಬಚಾಯಿಸುವ ಮನಸ್ಸಿದೆ (ದೇವಹಂ. ೦೫೦). ೨. ನಿಭಾಯಿಸು ; ನಿರ್ವಹಿಸು : ಅವನು ಯಾವ ಕೆಲಸವನ್ನಾದರೂ ಬಚಾಯಿಸುತ್ತಾನೆಂಬ ವಿಶ್ವಾಸ ನನಗಿದೆ (ರೂಢಿ).

**ಬಚಾಯಿಸಿಕೊಳ್ಳು** = ಉಳಿದುಕೊಳ್ಳು; ಪಾರಾಗು; ರಕ್ಷಿಸಿಕೊಳ್ಳು: ನಿಮ್ಮೊಳಗೆ ಬಚಾಯಿಸಿಕೊಂಡೋರು ಯಾರು ? (ರಂಗವ. ೯೫) ; ಅವನಿಂದ ಬಚಾಯಿಸಿಕೊಂಡು ಹೋದರೆ ಸಾಕಪ್ಪ ಅಂತಿದ್ದೆ (ತುವರು. ೨೦೨).
[< ಬಚಾವು + – ಇಸು₃]

**ಬಚಾವ್** 'ಬಚಾವು' ನೋ.

**ಬಚಾವು**, ಬಚಾವ್ (ನಾ). ಉಳಿವು ; ಪಾರಾಗುವಿಕೆ ; ರಕ್ಷಣೆ : ಮುಂದೆ ನಡೆದ ಕೇಸಿನಲ್ಲಿ ಕಾಳೇಗೌಡನ ಬಚಾವು (ಕಂಠ. ೨೮೫) ; ಸಂಜೆಯ ಮುಂದೆ ಈ ದೃಶ್ಯದ ರಂಗತಾಲೀಮನ್ನು ಇಡುವುದರಿಂದ ಸಾರ್ವಜನಿಕರ ಕುಳ್ಳು ಕಟ್ಟಿಗೆಗಳು ಬಚಾವು ಆಗುತ್ತದೆ (ಕಂಗರೋ. ೧೨೦). **ಬಚಾವ್** : "ಬಚಾವ್ ಆದೆನಪ್ಪ" ಎನ್ನುತ್ತ ಪಾಗಾರವನ್ನಿಳಿದ ಮಾಸ್ತರರ ಮನಸ್ಸು ಬಹಳ ಕದಡಿಹೋಗಿತ್ತು (ಮೂಕಜಾ. ೬೪) ; ಈಗಿನ ದಿವಸದಲ್ಲಿ ಮಕ್ಕಳು ಕಲಿತು ಬುದ್ಧಿವಂತರಾಗದಿದ್ದರೆ ಬಚಾವೇ ಇಲ್ಲ (ಸ್ವಕೃಹೂ. ೩೬).

**ಬಚಾವಾಗು** = ಉಳಿದುಕೊಳ್ಳು; ರಕ್ಷಿಸಿಕೊಳ್ಳು; ಪಾರಾಗು : ನಿಮ್ಮ ಮಾತಿನಂತೆ ಇವತ್ತು ಬಚಾವಾದರೆ ಸಾಕು (ಮರೆ. ೦೫೨). **ಬಚಾವು ಮಾಡು** = ಉಳಿಸು ; ಪಾರುಮಾಡು ; ರಕ್ಷಿಸು : ನಿನ್ನನ್ನು ಹೇಗೋ ಬಚಾವು ಮಾಡಿದರಂತೆ (ಮಧುಪ. ೨೦೦). [ ←ಹಿಂ. ಮರಾ. ಬಚಾವ್]

**ಬಚ್ಚ₁**, ವಚ್ಚ₁ (ನಾ). ೧. ಮಗು ; ಬಾಲಕ ; ಹಸುಳೆ : "ಬಚ್ಚ—ವತ್ಸ = ಮಗು, ವೈಶ್ಯ" (ಕರ್ನಾಕೋ. ೨೮) ; ಬಚ್ಚರ ಬಯಲ ನುಡಿಗೆ ಬಗೆಯಿತ್ತೊಡೆ ಮೆಚ್ಚಿ ಮಿಗಿಲನೀಯದನೇಳಿಸಿದೊಡೆ . . . ಪುಚ್ಚಣೆಯಹುದು (ಜಯಕಾ. ೦೯–೫೦). ೨. ಹಸುವಿನ ಕರು : (೯). ವಚ್ಚ₂ : ೨. ಪಶು . . . ವಚ್ಚ ಸಹಿತ ಬಂದಿರೆ (ಮೋಹತ. ೨೨–೩೮). [< ಪ್ರಾ. ಬಚ್ಚ, ವಚ್ಚ, ವಚ್ಛ. / ಸಂ ವತ್ಸ. / ಪಾರ. ಹಿಂ. ಮರಾ. ಬಚ್ಚಾ]

**ಬಚ್ಚ₂** (ನಾ). ವ್ಯಾಪಾರ ಮಾಡುವವನು ; ಹರದ ; ವೈಶ್ಯ: ಬಚ್ಚರ ದೂಸಿಗರ ನಿಯೋಗಿಗಳಗ್ಗಳಮಪ್ಪ ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು (ವಡ್ಡಾರಾ. ೦೨೩-೯) ; ಧನದಭವನಮನಿಪ ಸಿರಿಯ ಬಚ್ಚರಾಪಣಂಗಳಿಂ ಪೊದಟ್ಟ [ಕಾವ]ಣಂಗಳಿಂ . . . ಸಮಸ್ತವಸ್ತುವಿಸ್ತಾರಹಾರಮಾಗಿರ್ದ ಹಸ್ತಿನಪುರವೆ ನಿಜವಂಶಾವಳಂಬಮಾಗೆ (ಪಂಪಭಾ. ೦–೫೮ ರಗಳೆ) ; ಬಚ್ಚರ್ ಕಿರ್ಚು ಮುಟ್ಟಿದ ತುಪ್ಪದಂತೆ ಬಲ್ಪುಗಿಡೆ (ಧರ್ಮಾಮೃ. ೨–೬೯).
[<ಸಂ. ವೈಶ್ಯ./ ತೆಲು. ಬಚ್ಚು]

**ಬಚ್ಚ₃** (ನಾ). ಮಕ್ಕಳು ಆಟಕ್ಕಾಗಿ ಬಳಸುವ ಕಲ್ಲು ಅಥವಾ ಬಿಕ್ಕರೆಯ ಚಪ್ಪಟೆಯಾದ ಸಣ್ಣ ಬಿಲ್ಲೆ,—ಹಲಪೆ ; ಚಾಪು : ಹುಡುಗಿಯರು ಬಚ್ಚ ಇಟ್ಟುಕೊಂಡು ಕುಂಟೆಬಿಲ್ಲೆಯಾಟ ಆಡುತ್ತಿದ್ದಾರೆ (ರೂಢಿ).
[← ಮರಾ. ಬಚ್ಚಾ]

**ಬಚ್ಚಕಾನೆ**, ಬಚಕಾನಿ, ಬಚ್ಚಖಾನೆ, ಬಚ್ಚಗಾನಿ (ನಾ). ೧. ಹುಡುಗರ ಬಟ್ಟೆ,—ಉಡುಪು : (೯). **ಬಚಕಾನಿ** : ೧. ಹುಡುಗರ ಸಲುವಾಗಿ ನೆಯ್ದ ರೇಶ್ಮೆಯ ಅಂಚಿನ ಸಣ್ಣದೋತರ ಜೋಡುಗಳಿಗೆ ಬಚಕಾನಿಯೆನ್ನುತ್ತಾರೆ (ಮುಂಬಯಿ. ೩-೯೯). ೨. ಬಟ್ಟೆ; ವಸ್ತ್ರ: ಅವರ ಕಣ್ಣಿಗೆ ಅಷ್ಟೊಂದು ಜರಿಪೇಟಗಳೂ ಬಣ್ಣದ ಬಟ್ಟೆಗಳೂ ಬಚಕಾನಿಗಳೂ . . . ಸೇರಿದ ಹಾಗಿತ್ತು (ಕಾಮೂರು. ೩೩೦). **ಬಚ್ಚಖಾನೆ** : ೨. ಮೈತುಂಬ ಬಚ್ಚಖಾನೆಗಳನ್ನು, ಸೀರೆ, ಕಣಗಳನ್ನು ಮದುವಣಗಿಗೆ ಹೊರಿಸಿದರು (ಮರಕು. ೦೦೩). **ಬಚ್ಚಗಾನಿ** : ೧. ಬಚ್ಚಗಾನಿ ಉಟ್ಕಂಡು ಚಿನ್ನದ ರುದ್ರಾಕ್ಷೀನ ಕೊರಳಿಗೆ ಹಾಕಿಕೊಂಡಿದ್ನಲ್ಲಾ ? (ಮರೆತು. ೫೦೯). [← ಮರಾ. ಬಚಕಣೀ]

**ಬಚ್ಚಖಾನೆ** 'ಬಚ್ಚಕಾನೆ' ನೋ.

**ಬಚ್ಚಗಾನಿ** 'ಬಚ್ಚಕಾನೆ' ನೋ.

**ಬಚ್ಚಣಿಸು** (ಕ್ರಿ). ೧. ಬಣ್ಣವನ್ನು ಹಚ್ಚು,—ಬಳಿ ; **ರಂಗನ್ನು** ಲೇಪಿಸು : ಬರೆದು ಬಚ್ಚಣಿಸಿದಂತೆನ್ನೆದೆಯೊಳಗಿರು ಗುರುವೆ (ಶರಕ. ೯–೦೨೩) ; ಮಣ್ಣಿನಿಂದ ಹೊಸದಾಗಿ ಒಂದು ದೊಡ್ಡ ಕುದುರೆಯನ್ನು ಮಾಡಿ ಬಚ್ಚಣಿಸಿ ನಿಲ್ಲಿಸಿದ್ದರು (ವಗಗ. ೯೫). ೨. ಬಳಿ ; ಲೇಪಿಸು : **ಸುಣ್ಣವ** ಮೂಗಿನಲಿ ಬಚ್ಚಣಿಸಿ ಕಳುಹುವನವರ ಮನೆಗಳಿಗೆ (ಕೃಷ್ಣಾಕಾ. ೬–೩೩).
[ಬಚ್ಚಣೆ₁ + – ಇಸು₃]

**ಬಚ್ಚಣೆ₁**, ಬಚ್ಚರಣೆ, ಬರ್ಚಣೆ (ನಾ). ೧. ಬಣ್ಣವನ್ನು ಬಳಿದು ಚಿತ್ರಿಸುವಿಕೆ ; ಬಣ್ಣದ ಕೆಲಸ : ಕಣ್ಣಿಲ್ಲದವಂಗೆ ಬಣ್ಣ ಬಚ್ಚಣೆ ಯಾಕೆ (ಪೋಳಮಾ. ೯೨–೬೬) ; ತೋಳ ದರ್ಪದಲುಬ್ಬಿ ವಾಲಿಯ ಬಾಲಕನ ಬಚ್ಚಣೆಯ ತೊಟ್ಟಿಲ[ಪಾಠಾಂ. ಬಚ್ಚರಣೆದೊಟ್ಟಿಲ]ಕಾಲ ದೆಸೆಯಲಿ ಕಟ್ಟು ವಡೆದವನೀತನಲ್ಲವಲೆ (ಕೊರಲಾ. ೬–೦೦–೫೦). ೨. ಶೃಂಗಾರ; ಅಲಂಕಾರ: ಬಣ್ಣ ಬಚ್ಚಣೆಯ ರಂಜನೆಯ ವೇಷವನೊಂದಿದಣ್ಣಗಳು ಸಹಜಸುಜ್ಞಾನಿಗಳೆನಿಪ್ಪ ಮುಕ್ಕಣ್ಣನ ಶರಣಜನಕೆ ಸರಿಯೆ (ಸಿದ್ಧೇಶ್ವ. ೨೨–೦೬೫). ೩. ಬಣ್ಣ ಹಾಕಿದ ಆಕೃತಿ ; ಚಿತ್ರ: ಪೊಳೆವ ಬಚ್ಚಣೆಯ ಹರಿಗೆ ಬಿಚ್ಚುಗತ್ತಿಯ . . . ಬಲಗಳ ಮಧ್ಯದೆ ಸರ್ವಸಂಭ್ರಮದೊಳು ಮಲೆಯಾಳದೇಶದವನೀಶ ಬಂದ (ಕಂಪಚಿ. ೨೦–೬೫). ೪. (ಅಲಂ) ವೇಷ ; ಸೋಗು : ಬನ್ನಿರೆ ಅಕ್ಕಗಳು ಹೋಗಿರೆ ಆಲದ ಮರಕ್ಕೆ ಕಚ್ಚುವುವೆ ನಿಮ್ಮ ಚಿಪ್ಪಿನ ಹಲ್ಲುಗಳು ಬೆಚ್ಚಿಸುವುವೆ ನಿಮ್ಮ ಬಚ್ಚಣೆಯ ರೂಹುಗಳು (ಶಿಸಪ. ೫೬೨) ; ತೊಲಗದ ಕಂಭದ ಹುಲಿಯ ಬಚ್ಚಣೆಯು ಗಜಮುಖದ ಭುಜಬಳಗರುಡನ . . . ಹರಿಗೆಕಾಜಿರ ಪರಿವೀಧಿಯೊಳಂ (ಗಂಳ. ೩–೫೫ ಪ). **ಬಚ್ಚರಣೆ** : ೩. ಅಂತು ಬರಹದ ಬಚ್ಚರಣೆಯ ಪೆಣ್ಣು ಕಣ್ಣೊಳ್ ತೊಲಲೆ ಧೈರ್ಯಂಗೆಟ್ಟು ಬಾಯ್ವಿಟ್ಟು ಕನ್ಯಾರತ್ನಂ ತನಗೆಂತು ಸಾಧ್ಯಮಪ್ಪುದೆಂದು ವಿಚಾರಿಸಿ (ಕುಶಾಸ್ತ್ರಿ. ೩–೯೨ ಪ) ; ಶರಭಭೇರುಂಡರೂಪಾಂಚಿತ ವಿಚಿತ್ರದ ಬಚ್ಚರಣೆಯ ಹರಿಗೆಯ . . . ಹರಿಗೆಕಾಜಿರ ಮೊತ್ತದೊತ್ತಿನುಭಯಪಾರ್ಶ್ವದೊಳು (ಹಮ್ಮಿರ.

೩-೩೩ ಪ). ೫. ಬಣ್ಣ ಬಳಿಯುವ ಕಸಬು ; ಬಣ್ಣಗಾರಿಕೆ : ಕಳಕಳಿಕ ಕೋಳಾಹಳಿಸೆ ಕದ್ದಳಿಗ ದೂಸಿಗ ಬೂಸ ಗಂಧಿಗ ಕೊಲಪ ಚಿಪ್ಪಿಗ ಬಚ್ಚರಣ ಬಳೆಗಾಱ ಬೋಗಾಱ . . . ಜಂಗುಳಿಗಗೇರಿಗಳೊಳಗೆ ರ್ಚ್ಚಾಡಿಸಿದನು ಶಿಱಾಳಿಗಳ (ಕೊರಂ. ೫-೬-೫೩). ೬. (ಅಲಂ) ಮಾಯೆ: ಬಚ್ಚರಣೆಯ ಸಂಸಾರದ ಹಚ್ಚನೆಯ ಕಂಡು ದಿಟವೆನುತಿರ್ಪ್ಪ ಕುಚ್ಚಿತಮನದಾಮಿಸಮಂ ಬೆಚ್ಚಿಸುವಡಿದೋನ್ನಮಶಿವಾ (ಶಠಕಂ. ೨೪). **ಬಚ್ಚಣೆ** : ೩. ಕೋಡ ಮೊನೆಯೊಳ್ ತಗುಳ್ಚಿದ ಸೂನಗಿಗತ್ತಿಯ ಕೊನೆಗೊಡಂಕೆಯೊಳ್ ತೂಗುವ ಬಿಳಿಯ ಚಾಮರದ ಬಿದುವೊಳ್ಪರೆದು ಬರ್ಚಿಸಿದ ಸಿಂಧೂರದ ಬರ್ಚಣೆಯ . . . ವಿಳಾಸಮುಳವಡೆ (ಶಾಶಕೀ. ೬-೦೦ ಪ).

**ಬಚ್ಚಣೆಯ ಮಾತು** = ಬಣ್ಣದ ನುಡಿ; ಗಿಲೀಟಿನ ಮಾತು : ಬಣ್ಣ ಬಚ್ಚಣೆಯ ಮಾತು ಕಲಿತು ಹೊನ್ನು ಹೆಣ್ಣು ಮಣ್ಣಿಗಾಗಿ ಅನ್ನವ ನಿಕ್ಕುವರ ಪ್ರಸಂಗವ ಹಡೆಯಬಂದ ಗನ್ನಗಾಱಂಗೇಕೆ ಅಱಿವು (ವೋಳಮೂ. ೯೪-೩೩೪).

[< ಪಚ್ಚು₃ + – ಅಣ್₄. / ತೆಲು. ಬಚ್ಚೆನ. / ಸಂ. ಪ್ರಚ್ಛನ್ನ]

**ಬಚ್ಚಣ್₂** 'ಬಚ್ಚಳೆ' ನೋ.

**ಬಚ್ಚಣೆವಾತು** (ನಾ). ಬಣ್ಣದ ಮಾತು ; ಗಿಲೀಟಿನ ನುಡಿ : ಬಚ್ಚರ ಬಯಲ ನುಡಿಗೆ ಬಗೆಯಿತ್ತೊಡೆ ಮೆಚ್ಚಿ ಮಿಗಿಲನೀಯದನೇಳಿಸಿದೊಡೆ ಬಚ್ಚಣೆವಾತಿನ ಬದಗಗೊರ್ಲಿದೊಡೆ . . . ಪುಚ್ಚಣೆಯಹುದು (ಕಯಶಾ. ೦೪-೫೦) ; ಈ ನಿಮ್ಮ ಬಚ್ಚಣೆವಾ[ಶಾಕಾಂ. ಮಾ]ತಿಗಿರದೆ ನಾನೊಡ ಬಡುವುದಿಲ್ಲ (ಸಮ್ಮಳ. ೫-೬೪). [ಬಚ್ಚಣ್₁ + ಮಾತು₁]

**ಬಚ್ಚಣೆವೆಱು** (ಕ್ರಿ). ಬಣ್ಣದ ಕೆಲಸದಿಂದ ಕೂಡಿರು ; ಚಿತ್ತಾರ ವನ್ನು ಪಡೆ : ಪಱಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ ಬಚ್ಚಣೆವೆತ್ತ ಬಿಲ್ಗಳ್ (ಕಬ್ಬಿಗ. ೨೬೩). [ಬಚ್ಚಣ್₁ + ವೆಱು₁]

**ಬಚ್ಚನಾಲಗೆ** (ನಾ.) (ಅಲಂ) ವ್ಯರ್ಥವಾದ ನಾಲಗೆ: ಅಚ್ಚ ಪಳದಿಯ ಕಾಯ ಜೋಡ ಮೇಲೊತ್ತದೊಡೆ ನಚ್ಚಿರ್ದ ಕೈಯ ಕರಿದಿನ ಹಿಂಡ ಹಿಡಿಯದೊಡೆ ಮೆಚ್ಚಿನಾಟಕ ಮೊಱೆ ಬಂದ ಕೆಂಪಿನ ಹಣ್ಣನಂಡ ಲೆದು ಬಿಡದಿರ್ದೊಡೆ ಬಚ್ಚನಾಲಗೆಯ ಬೀಳೆಂದು ಹಾಸಂಗಿಯಂ ಪಚ್ಚೆಯ ವಿದೂಷಕನುರುಳ್ಚಿದಂ ಬಾಲಿಯರ ಮಚ್ಚಿಸುವ ಕಟಕಿವಾತುಗಳ ಜಾಣ್ಮೆ ಗಳಿಂದೆ ಪಗಡೆಯಾಡುವ ನೆವದೊಳು (ಕ್ರಬಿಶಾ. ೬-೩೦). **P** ಇಲ್ಲಿಯ ಶ್ಲೇಷಾರ್ಥದಲ್ಲಿ ಸಂದೇಹವಿದೆ. [< ಬಚ್ಚಿ₁? + ನಾಲಗೆ]

**ಬಚ್ಚನೆ** (ಅ). ಇದ್ದಕ್ಕಿದ್ದಂತೆ : ತಟ್ಟನೆ; ಕೂಡಲೆ : ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಟ್ದ ನಾಣ ಪೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬಚ್ಚನೆ ಬಸಿಯುತ್ತುಂ (ಕಾವ್ಯಾವ. ೬೬೫). [ಬಚ್₆ + – ಅನೆ₁]

**ಬಚ್ಚಬಯಲ್** 'ವಯಲ್' ಪರಾ.

**ಬಚ್ಚಬಯಲು** 'ವಯಲ್' ಪರಾ.

**ಬಚ್ಚಬರಿದು** 'ಬಱಿದು' ಪರಾ.

**ಬಚ್ಚಬರಿಯ** 'ಬಱು'₂ ಪರಾ.

**ಬಚ್ಚಬಱಿದಾಗು** 'ಬಱಿದು' ಪರಾ.

**ಬಚ್ಚಬಱಿಯ** 'ಬಱು₂' ಪರಾ.

**ಬಚ್ಚರ** (ನಾ). ಒಂದು ಬಗೆಯ ರೋಗ (?) : ನೆಲದಾಳಕಲ್ಪಮಂ ಪೇಳ್ವೆ . . . ಅಕ್ಕಗಚ್ಚಿನಲ್ಲಿ ಕುಡಿಯೆ ಬಚ್ಚರಂ ಪೋಕು (ಶಿವ್ಯಶಿ. ೫). [?]

**ಬಚ್ಚರಣೆ** 'ಬಚ್ಚಣೆ'₁ ನೋ.

**ಬಚ್ಚರೆ ?** (ನಾ). ದೇವತೆಗಳ ವಾಸಸ್ಥಾನ ; ಸ್ವರ್ಗ : "ಬಚ್ಚರೆ ಬರ್ದಿಲ್ ಸಗ್ಗಮೆನಲಮರಲೋಕಂ" (ಕಬ್ಬಿಕ್ಕೆ. ೦೦೦). [ ? ]

**ಬಚ್ಚಲ್**, ಬಚಲು, ಬಚ್ಚಲು₁, ಬರ್ಚಲ್ (ನಾ). ೧. ಹೊಲಸು ನೀರು ಹರಿದುಹೋಗಲು ಮಾಡಿರುವ) ಚರಂಡಿ : ಗಟಾರ ; ಮೋರಿ: "ಕಸಱಿಗೆಯೆಂದು ಬಚ್ಚಲ್" (ಕಕಸಾ. ೬೩-೬೬೬) ; ನಿಚ್ಚಂ ನಿರ್ಮಲಜಲಮಿರೆ ಬಚ್ಚಲ ನೀರ್ಗೆಱಿವ ಕೀಟಕಂಬೊಲ್ತನ್ನಂ ನಚ್ಚಿದ ಸತಿಯಿರೆ ಬೆಲೆವೆಣ್ಗೆಚ್ಚಿಸುವುದು ನೀತಿಯೇ (ಉದ್ಭಟ. ೧೦-೭೮). ೨. (ವ್ಯವಸಾಯ ಮುಂತಾದುವಕ್ಕೆ ನೀರನ್ನು ಒದಗಿಸಲು ತೋಡಿದ) ನಾಲೆ: ಬಚ್ಚಲ್ಗಳಂ ಕಿರ್ದಿಸಲವಿರಳಘರ್ಮಾರ್ದ್ರಕಾಂತಾಜನ ಕ್ಕಾದರದಿಂ ನೀರಾಟಮಾಡಲ್ ನೆಱಿಗುವೆಸೆ ಪೊದಟ್ದತ್ತು ಚಂದ್ರಾಂಶು ಜಾಲಂ (ಕಾದಂಉ. ೪೨೨); ಬೆಲಗಸೆ ತೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲನೆಲೆದೋಂಟದೊಳ್ ಪರಿಯಿಸಲ್ ಪಱು ಗೋಲ್ಗಳನಿಕ್ಕಿ ಪಾಯಿಸಲ್ . . . ಬಗೆದುದಂದು ಜನಂ ಘನಚಂದ್ರಿಕಾಂ ಬುವಂ (ಅಜಿಪು. ೬-೪೫) ; ವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ಕಣ್ಗೆ ಸಿರವಿಸೆ (ಅಪಂಪು. ೭-೨೪ ಪ). **ಬಚಲು:** ೨. ಮುರಿದು ಬಂದ ಬಚಲ ಹೆಬ್ಬದುವಿನ ನಟ್ಟ ಕಲ್ಲು (ಬೊಂಕಶಾ. ೧೯೪೪, ಬಿಂಕಾಪುರ. ೬-೩೯ ; 1258); ನಾರಣಸೆಟ್ಟಿಯ ಬಚಲಿಂದ ತೆಂಕಲು (ಸೌಇಎ. ೧೯೩೦, ಮಂಗಳೂರು. ೫೩೪-೧೨ ; 1278) ; ಪಡುವಲು ಹರಿದ ಬಚಲಿಂದ ಮೂಡಲು (ಸೌಇಎ. ೦೯೩೨, ಉಡುಪಿ. ೩೨೩-೦೯; 1364). **ಬಚ್ಚಲು₁ :** ೧. ಬಚ್ಚಲ ನೀರು ತಿಳಿದಲ್ಲಿ ಫಲವೇನು (ಬಸವ. ೦೨೦); ಬಚ್ಚಲುದಕಂ ತಿಳಿದೊಡಾರ ಮಾಹಕ್ಕೆ ಯೋಗ್ಯಂ (ಹಕಗಾ., ೭-೦೯); ತನ್ನ ಕಾಲಂ ತೊಳೆದುಕೊಳಲ್ ಬಚ್ಚಲಿಗಳವಡುವುದೆಂದು ಪಿರಿದಪ್ಪಟ್ಟಿಗೆಯ ನೊಂದನೊಯ್ದು ನಿಚ್ಚಲುಂ ನೀರಿಂ ಕಾಲ್ಗಚ್ಚುವ ಸಮಯದಲ್ಲಿ ಮಿಸುನಿ ಯಾಗಿರ್ದುದಂ ಕಂಡು ತುಷ್ಟನಾಗಿ (ಪುಣ್ಯಾಸ್ರ. ೯-೫೨ ಪ) ; ಸಜ್ಜನರ ಸಂಗವದು ಹೆಜ್ಜೇನುಕೊಡದಂತೆ ದುರ್ಜನರ ಸಂಗದೊಡನಾಟ ಬಚ್ಚಲಿನ ರೊಜ್ಜಿನಂತಿಹುದು (ಸರ್ವಜ್ಞ. ೪೦೯). ೩. (ಮನೆಯಲ್ಲಿ) ನೀರು ಹರಿದು ಹೋಗಲು ಅನುಕೂಲವಾದ ಮೋರಿಯಿರುವ ಸ್ನಾನ ಮಾಡುವ ಕೋಣೆ; ಸ್ನಾನಗೃಹ : ನಮ್ಮ ರಾಮೂ ನಿಮ್ಮನೇ ಬಚ್ಚಲಲ್ಲೇ ಸ್ನಾನ ಮಾಡ್ತೀನಿ ಅಂತ ಹಟ ಹಿಡಿದಿದ್ದಾನೆ (ಕೂಕಸಂ. ೦೩) ; ಬಚ್ಚಲಿಗೆ ಬಗೆಯಿಲ್ಲದವ ಮಾಳಿಗೆ ಕಟ್ಟ್ಯಾನೇ ? (ಗಾದೆ). ೪. (ಮನೆಯಲ್ಲಿ) ನೀರು ಹರಿದು ಹೋಗಲು ಅನುಕೂಲವಾದ ಮೋರಿ ಮತ್ತು ಕಟ್ಟೆಗಳಿರುವ (ಸ್ನಾನ ಮಾಡುವ) ನಿರ್ದಿಷ್ಟಸ್ಥಳ: ಬಚ್ಚಲಿನ ಜಗಲಿಯ ಮೇಲೆ ತಾಮ್ರದ ಬೋಸಿ (ಬಾಳಹೂ. ೦೦೫): ಅವರು ಸ್ನಾನ ಮಾಡಲು ಬಚ್ಚಲಿಗಿಳಿದಿದ್ದಾರೆ (ರೂಢಿ). **Δ ಬರ್ಚಲ್:** ೨. ಮೂಡಣ ಕಂಚಿ ವಡ್ಡದಿಂ ಬಡಗಲುಂ ಕೆಱೆಯ ಬರ್ಚಲಿಂದ ಮೂಡಲುಂ (ಎಕ. VII, ಶಿಕಾರಿ. ೦೫೦-೬೦; 1047).

**ಬಚ್ಚಲ ಮನೆ**=ಬಚ್ಚಲು ಕೋಣೆ : ಶ್ರೀಧರನು ಆದಷ್ಟು ಬೇಗ ಬಚ್ಚಲ ಮನೆಗಾಗಿ ಹೊರಟನು (ಬಾಳಹೂ. ೦೦೪).

**ಬಚ್ಚಲು₁** 'ಬಚ್ಚಲ್' ನೋ.

**ಬಚ್ಚಲು₂** 'ಬಸಲೆ' ನೋ.

**ಬಚ್ಚಲುಕೋಣೆ** (ನಾ). ಸ್ನಾನ ಮಾಡಿದ ನೀರು ಹೊರಕ್ಕೆ ಹರಿದು ಹೋಗಲು ಅನುಕೂಲವಾದ ಬಚ್ಚಲಿರುವ ಕೊಠಡಿ; ಸ್ನಾನಗೃಹ : ಅವರ ಮನೆಯ ಬಚ್ಚಲುಕೋಣೆಯಲ್ಲಿ ದೊಡ್ಡ ಹಂಡೆಯಿದೆ (ರೂಢಿ).

[ಬಚ್ಚಲು₁ (<ಬಚ್ಚಲ್) + ಕೋಣೆ₂ (<ಕೋಣ್)]

**ಬಚ್ಚಲುಮನೆ** (ನಾ). = ಬಚ್ಚಲುಕೋಣೆ : ಬಚ್ಚಲುಮನೆ ಕಟ್ಟುವವನು ಅದರಲ್ಲಿ ತೂಬು, ಒಲೆ, ಗೂಡು ಇತ್ಯಾದಿಗಳನ್ನು ತನ್ನ ಅಭಿರುಚಿಗೆ ತಕ್ಕಂತೆ ನಿರ್ಮಿಸುತ್ತಾನೆ (ಜೀವಾತ್ಮ. ೦೭೨).

[ಬಚ್ಚಲು₁ (<ಬಚ್ಚಲ್) + ಮನೆ]

**ಬಚ್ಚಲೆ₁** 'ಬಸಲೆ₁' ನೋ.

**ಬಚ್ಚವಸರ** (ನಾ). ವೈಶ್ಯರ ಅಂಗಡಿಗಳ ಸಾಲು : ಬಾಗಿಲ್ವಾಡದ ಮುಂದಣ ಭಾಗಂಗಳ ಬಚ್ಚವಸರಮರ್ಥಿಗೆ ಕುಡುವುದೋಗದ ಪಸರವು ವಿಸ್ತೃತವಾಗವುದಿಂ ಗೆಯ್ವೊನಿಲ್ಲ ಪರದಂ ಪರದಂ (ಶಾಂತಿಪು. ೩-೦೩). [ಬಚ್ಚ₂ + ಪಸರ]

**ಬಚ್ಚಳೆ, ಬಚ್ಚಣೆ₁** (ನಾ). ೧. ಕರುವಿನ ಮೇಲೆ ಪ್ರೀತಿಯುಳ್ಳ ಹಸು ; ವತ್ಸಲೆ : ತಕಾರಕ್ಕೆ ಚತ್ವಂ . . . ವತ್ಸಳಾ—ಬಚ್ಚಳೆ, ಬಚ್ಚಣೆ (ಶಮದ. ೨೬೩ ಕ್ರಯೋ) ; ಹೊಗರೊಗುವ ಬಚ್ಚಳೆಯು ನಂದಿಯ ಮೊಗದ ಮಾಳ್ಕೆಯೊಳಿಹ ಮುಖಾಡವ ನಗುತ ಶಂಕರದಾಸಿಮಯ್ಯನ ಮುಖಕೆ ಸೇರಿಸಿದ (ಶಂಕದಾ. ೬-೩). ೨. ಪ್ರೀತಿಪಾತ್ರಳಾದ ಯುವತಿ : ಎನ್ನ ಪೊನ್ನ ಪದಗದ ರನ್ನದಾರದ ಬಚ್ಚಳೆ, ನೀಟೆ! (ರಾಜಶೇಖ. ೦೦೪-೦೦). **ಬಚ್ಚಣೆ₁** : ೧. ತಕಾರಕ್ಕೆ ಚತ್ವಂ . . . ವತ್ಸಳಾ—ಬಚ್ಚಳೆ, ಬಚ್ಚಣೆ (ಶಮದ. ೨೬೩ ಕ್ರಯೋ). [< ಸಂ. ವತ್ಸಲಾ]

**ಬಚ್ಚಾಳಿ, ಬಚ್ಚಾಲಿ** (ನಾ). ಕೆಡುಕ ; ಕೆಡಿಗೇಡಿ : ಕೆಳಗಡೆಯ ಕೋಣೆಗಳಲ್ಲಿ ಯಾರೋ ಕೆಲವು ಬಚ್ಚಾಳೀ ತರುಣರಂಥವರು ಬಾಡಿಗೆ ಗಿದ್ದರು (ಕಾ. ೩೪). **ಬಚ್ಚಾಲಿ** : ವಾಚು ಮಾರಿಯಾಗಿತ್ತು . . . ಯಾರೋ ಒಬ್ಬ ಬಚ್ಚಾಲಿಗೆ ಹದಿನೈದು ರೂಪಾಯಿಗೆ ಅದನ್ನು ಕೊಟ್ಟದ್ದೆ (ಮುಂಗಾರು. ೨೦). [?]

**ಬಚ್ಚಿಸು₁** (ಕ್ರಿ). ಬಚ್ಚಿಡು ; ರಹಸ್ಯವಾಗಿಡು : ಬಿಚ್ಚಿ ಬಿಸುಡುತ ಮಾಯೆಯ ಬಚ್ಚಿಸುತಲಗದು ಹೂಳಿಸುತ ಸಂಸಾರವಂ ಕೊಚ್ಚಿಸುತ . . . ರಂಜಿಸಿದರಚ್ಚರಿಯ ಶಿವಗಣಗಳು (ಲಿಂಗಪು. ೩೦-೦೦). [ಬಚ್ಚು₁ (<ಬಯ್ಚು) + — ಇಸು₁]

**ಬಚ್ಚಿಸು₂, ಬರ್ಚಿಸಂ** (ಕ್ರಿ). ೧. ಬಣ್ಣ ಹಾಕು ; ಚಿತ್ರಿಸು : ವರ್ಣ ವಿನ್ಯಾಸ ಮಾಡು : ಬರೆಯಲ್ಬಾರದು ಬಚ್ಚಿಸಲ್ಕರಿದು (ಅನಂಪು. ೦-೦೦೪); ಬಿತ್ತಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳಂ ಬೇಟವೇಟ ನೋಡಿ ಮೆಚ್ಚುತಿರ್ಪಾಗಳ್ (ಕಬ್ಬಿಗ. ೬೩). ೨. ಬಳಿ ; ಲೇಪಿಸು ; ಲೇಪನವಮಾಡು : ಪಚ್ಚೆಗಪ್ಪುರವನೆಚ್ಚುವನು ಗಂಧವ ಮೈಗೆ ಬಚ್ಚಿಸುವನು ಚಕ್ರನಾಥ (ಶರಕ. ೦೯-೧೩೩). Δ**ಬರ್ಚಿಸು** : ೧. ವಿಶ್ವಕರ್ಮನೆಣೆಯಾಗಿರೆ ಕಂಡರಿಸಲ್ವಿಳಾಸದಿಂ ಕರುವನೊಡರ್ಚಿ ಬರ್ಚಿಸುವ ಬಲ್ಮೆಗೆ ಬೀಗುವ ಚೀರಘಟ್ಟಿ ತಾಂ ಸರಿಯೆನಿಪಂದದಿಂ ಕರು ವಿಡಲ್ ನೆಟಿಯಂ ದ್ವಿಜರಾಜಕನ್ನೆಯಂ (ಸುಕುಮಾ. ೩-೩೬) ; ಬರೆದು ಬರ್ಚಿಸಿದಂತೆವೊಲಾಗೆ . . . ಎಸೆದುದುನ್ನಮಿತೋತ್ಸವಕೇತನಂ ಶುಭಾ ನಂದಿತಲೋಕಚೇತನಮತೀವವಿನೂತನವಾ ನಿಕೇತನಂ (ಜಗಂ. ೦೦-೯೩) ; ಮಸೆದಸಮಾಸ್ತ್ರನುನ್ಮದನಬಾಣಶಲಾಕೆ ವಿಳಾಸದಿಂದಮೋಟಿಸಿದಲರ್ವಿಲ್ಲ ನೈಕ್ಷವ ಧನುರ್ಲತೆ ಬರ್ಚಿಸಿ ಮಿನಕೇತುವೆತ್ತಿಸಿದ ಸಮುಲ್ಲಸಜ್ಝುಷಪತಾಕೆ ಯೆನಿಪ್ಪವೊಲಾಂತಳಕೆಯಾ ಪಸದನದೊಳ್ ಜಗತ್ತ್ರಿತಯಚಿತ್ತವಿಮೋಹನ ಶಕ್ತಿಯೇಟ್ಗೆಯಂ (ಚಂದ್ರಪ್ರ. ೬-೬೬). ೨. ಪಲ್ಲವಪ್ರಸರದೊಳೆಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್ ವಿಸುಗುವ ಕರ್ಪು ಬರ್ಚಿಸಿದವೊಲ್ ಬಗೆಗೊಳ್ವಿನೆಗಂ ಬಸಂತದೊಳ್ ಬಸದಿಯ ಬಾಗಿಲಂ ತೆಟಿದ ಮಾಟ್ಕೆಯೊಳಿರ್ದುವು ಬಂದ ಮಾವುಗಳ್ (ಆದಿಪು. ೦-೬೬); ಅವಿರಳವಮಾದುವಾ ಪುರದೊಳ್ . . . ತೀವುವ ಕಲಶಂಗಳರ್ಚಿಸುವ ಕನ್ನಡಿ ಬರ್ಚಿಸಿಕೊಳ್ವ ಪೆಂಡಿರಾಡುವ ರಸಲಾಸ್ಯಂ (ಅನಂಪು. ೩-೪). [<ಬಚ್ಚಣೆ₁ + — ಇಸು₁]

**ಬಚ್ಚು₁** 'ಬಯ್ಚು' ನೋ.

**ಬಚ್ಚು₂, ಬರ್ಚು, ಬೊಚ್ಚು₂** (ಕ್ರಿ). ೧. ಒಣಗಂ ; ಬತ್ತು; ಬಾಡು: ಬೂದಿಯಲ್ಲಿ ಹೊರಳುವ ಕತ್ತೆಯಂತೆ ಕಿಚ್ಚ ಹಾಯಿ[ಯು]ವವಳಂತೆ ಬಚ್ಚಿ ಹೊತ್ತಿನ ಭೋಗಕ್ಕೆ ಮಚ್ಚಿ ಹುಚ್ಚಾದಿರಲ್ಲಾ (ಸಿದ್ಧೇಶ. ೦೩೩-೪೦೦) ಬೆಚ್ಚು ಹಾಕಿದ ಗಡಗಿ ಮುಚ್ಚಿಟ್ಟ ಬನಹುಲುಸು ಬಚ್ಚಾದ ಬೆಳೆಯ ಕಣವುಕ್ಕಿ ಗುಂಡಯ್ಯ ಹೆಚ್ಚಾಯ್ತು ನಿನ್ನ ಶಿವಭಕ್ತಿ (ಕನ್ನಜಾ. ೩೦೪). ೨. ಕೃಶವಾಗಂ; ಸೊರಗು: ತಿಂಗಳೊಂದಾಯಿತು ನನ್ನ ಗಂಡು ಬಚ್ಚಿ, ಒಣಗಿ, ಕಡ್ಡಿಯಾಗಿ ಕಂಗಾಲು (ಜಾರುದಾ. ೦೨೩); ಹೊತ್ತಿಗೆ ಒಂದೊಂದು ತಂಬಿಗೆ ಕೊಡುತ್ತಿದ್ದಳು ಭಾಗೀರಥಿ. ಈಗ ಬಚ್ಚಿದೆ. ಅದಾದರೂ ಏನು ಕೊಟ್ಟೀತು ! (ಬಾಳಿಗ. ೨೦). ೩. ಬರಿದಾಗು; ಬೋಳಾಗು: 'ಬಚ್ಚು ಬಾಯಿ' ಪರಾ. Δ **ಬರ್ಚು** : ೪. ಕಡವೆಂಯಾಗು; ಕುಗ್ಗು: ಪೆರ್ಚು ವುದು ಪುಣ್ಯಿಯಿಂದಂ ಬರ್ಚುವುದದು ಕುಂದೆ ಕಿರ್ಚು ಮೋಹಾಗ್ನಿ ಕರಂ ಪೆರ್ಚುವುದರ್ಥಂ ಬರೆಯುಂ ಪೆರ್ಚುವುದದು ಬಾರದಿರೆಯುಂ (ಜೀವಸಂ. ೬೪-೦೯). ೫. (ಅಲಂ) ನಾಶಮಾಡು ; ನಿಸ್ಸತ್ತ್ವಗೊಳಿಸು: ಜವನ ಮುಳಿಸವನ ಮುಳಿಸನೆ ಜವನೇ ಬರ್ಚಿದವೊಲಿಂತು ಕುಟುದಟುದಟುದಿಂ (ಗದಾಯು. ೩-೦೭); ಪಾಂಡವಪತಾಕಿನಿಗೆ ಜವಂ ನೆಟಿ ಬರ್ಚಿದಂತೆ ಭೋರನೆ ಬಂದು . . . ಬಾಂದೊಟಿಯ ಸುತನೊಡ್ಡಿ ನಿಲೆ (ಪೇಚುಪು. ೦೨-೬೪ ವ). **ಬೊಚ್ಚು₂** : ೩. 'ಬೊಚ್ಚು ಬಾಯಿ' ಪರಾ.

**ಬಚ್ಚಿ ಬರು**=ಸೊರಗು; ಕೃಶವಾಗು : ಹತ್ತವರು ಒಂದು ವರ್ಷ ದೊಳಗಾಗಿ ಸತ್ತುಹೋದರೆಂಬ ವ್ಯಥೆಯಿಂದ ವಾಗ್ದೇವಿಯು ಬಚ್ಚಿ ಬಂದಳು (ವಾಗ್ದೇವಿ. ೦೪೦). 'ಬತ್ತು₁' ಪರಾ. [ದೇ. ॥ ತುಳು. ಬಚ್ಚು]

**ಬಚ್ಚು₃** (ನಾ). (ಮರ, ಗಿಡ ಮುಂತಾದುವು) ಬತ್ತಿ ಹೋಗಿರುವುದು; ಒಣಗಿರುವುದು : ಒಂದು ಈಚಲು ಬಚ್ಚು ತೇಲಿಕೊಂಡು ಹೋಗುತ್ತಿತ್ತು (ಪಪ್ಪೂರು. ೦೪೦). [< ಬಚ್ಚು₂]

**ಬಚ್ಚು₄** (ನಾ). ಕೋಟೆಕಾಳಗದಲ್ಲಿ ಬಳಸುವ ಒಂದು ಬಗೆಯ ಯಂತ್ರವಿಶೇಷ (?) : ವಿಚಿತ್ರವಾದ ಕೊತ್ತಲಗಳುಳ್ಳ ಕೋಟೆಗಳು ಫಿರಂಗಿಗಳು ಬಚ್ಚುಗಳು ಜವರುಜಂಗಿಗಳು . . . ಮೊದಲಾದ ಯಂತ್ರ ವಿಶೇಷಗಳು (ಕೃರಾಜ. ೦೬೪). [ ? ]

**ಬಚ್ಚುಬಾಯಿ, ಬೊಚ್ಚುಬಾಯಿ** (ನಾ). ಹಲ್ಲಿಲ್ಲದೆ ಬರಿದಾದ ಬಾಯಿ; ಬೋಡುಬಾಯಿ : ಕುಂಟುಕಾಲು, ಬಚ್ಚುಬಾಯಿ (ಕಂಕೋ. ೩೦-೬). **ಬೊಚ್ಚುಬಾಯಿ** : ಆಕೆಯ ಬೊಚ್ಚುಬಾಯಿ ಏನನ್ನೋ ಹೇಳಲು ವ್ಯಾಕುಲಿತವಾಗಿದ್ದಿತು (ಜಾಜಿ. ೫) : ಬೊಚ್ಚುಬಾಯಿ ಅದವನು ಕಬ್ಬು ಬಯಸಿದ ಹಾಗೆ (ಗಾದೆ). [ ಬಚ್ಚು₂ + ಬಾಯಿ₁ (< ಬಾಯ್) ]

**ಬಚ್ಚೆ₁, ಪಚ್ಚೆ₃** (ಗು). ೧. ಬರಡಾದ; ಗೊಡ್ಡಾದ : 'ಬಚ್ಚೆವೆಣ್' ಪರಾ. (ನಾ). ೨. ವ್ಯರ್ಥವಾದುದು ; ಹಾಳಾದುದು : "ಬಚ್ಚೆ ಯೆನಲ್ ಕೆಟ್ಟುದು" (ಕರ್ಣಾ. ೫೨). **ಪಚ್ಚೆ₃** : ೧. 'ಪಚ್ಚೆವೆಣ್' ಪರಾ. ೩. ಮಕ್ಕಳಾಗದವಳಂ; ಬಂಜೆ : "ಪಚ್ಚೆ ಬಂಜೆಯೆನೆ ವಂಧ್ಯಾಖಂ" (ಕಬಿಗಂ. ೦೫೬).

**ಬಚ್ಚೆಬಟುಗ** = ಅಪ್ರಯೋಜಕ ; ನಿರುಪಯೋಗಿ : ಸಾಸಿರಾಬ್ಬ [ಬ್ದ]ದ ಬಚ್ಚೆಬಟುಗನೊ ಪನ್ನೆರಳ್ವರುಷದ ಸುಧೀಷಣನೊ (ಕುಲೇಪು. ೩-೬). **ಬಚ್ಚೆಯಾಗು** = ಇಲ್ಲವಾಗಂ; ಹಾಳಾಗು; ನಾಶವಾಗು : ಮನೆಯೊಳೆಲ್ಲಂ ಮನೆಯೊಳುಂ ಮಾಯವಾಗುತಿರೆ ನೆನೆದುದೆಲ್ಲಂ ನೆನಹಿನೊಳ್ ಬಚ್ಚೆಯಾಗುತಿರೆ (ಶಂಕರ. ಹ. ೦೩೬-೪); ಎರಡೆಟು ಮನೋ ಮಲಿನ ಹೋಯಿತ್ತು ಕರಿಗೊಂಡು ಹುರುಡು ಮುರುಟಿತ್ತು ಮುನಿಸನು ಗೆಟ್ಟುದುಗ್ರಮತ್ಸರ ಬಚ್ಚೆಯಾಯ್ತು (ಪಕಶಾ. ೦೯-೦೩); ಮದನವಿಕಾರ ಮೊರ್ಮೊದಲೆ ಸಾರ್ಚೆ ಶಕುಂತಳೆಗಿಚ್ಚೆ ಬಚ್ಚೆಯಾದುದು (ಸೂಕ್ತಿಸು.೦೫-೩೩). [ < ಬಂಜೆ ]

**ಬಚ್ಚೆ₂** (ನಾ). ಒಂದು ನಾಡಿನ ಹೆಸರು : ಕಾವ್ಯಕ್ಕೆ ಕಾನಿತ್ತಂ ಶಾಸನ ದಗ್ರಹಾರಂ ಸಾರವೆಂಬಿನಂ ಪೆಸರಿಟ್ಟು ಕಾನೀಯೆ ಹರಿಗನ ಧರ್ಮ ಭಂಡಾರದಂತೆ ಸಾರವಮಾದುದು ಬಚ್ಚಗ್ರಹಾರವಮಾ ಬಚ್ಚೆ[ಶಾಸಂ.

ಚಚ್ಚಿ, ಚರ್ಚಿ] ಸಾಸಿರದೊಳಂ ಧರ್ಮಪುರಂ (ಹಂಕಶಾ. ೦೪-೩೭) ; "ಬಚ್ಚಿಸಾಸಿರದೊಳಂ – ಆ ಬಚ್ಚಿಸಾವಿರ ಎಂಬ ನಾಡಿನಲ್ಲಿಯೂ . . . ಬಚ್ಚಿಸಾಸಿರ : ಇದೊಂದು ನಾಡಿನ ಹೆಸರು. ಜಿನವಲ್ಲಭ ಗಂಗಾಧರನ ಶಾಸನದಲ್ಲಿ "ಸಬ್ಬಿನಾಡ ನಟ್ಟನಡುವಣ ಧರ್ಮಪುರ ದುತ್ತರದಿಗ್ಭಾಗದ ವೃಷಭಗಿರಿ" ಎಂಬಲ್ಲಿ ನಾಡಿನ ಹೆಸರು ಸಬ್ಬಿ ಎಂದು ಕಾಣುತ್ತದೆ. ಇದು ಸಬ್ಬಿಸಹಸ್ರನಾಡಾಗಿರಬೇಕು. ಬಚ್ಚಿ ಸಾಸಿರ ಸರಿಯಾದ ಹೆಸರಲ್ಲವೆಂದೂ "ಸಬ್ಬಿಸಾಸಿರ"ಎಂಬುದು ಸರಿ ಯಾದುದೆಂದೂ ಹೇಳಬಹುದಾಗಿದೆ" (ಹಂಕಂ. ೩೭೬). [?]

**ಬಚ್ಚಿಗ** (ನಾ). ಮಕ್ಕಳನ್ನು ಪಡೆಯಲಾರದವನು ; ನಪುಂಸಕ : ಮೆಚ್ಚಿದೆನು ಮೆಚ್ಚಿದೆನಿನ್ನು ಮನ ಮೆಚ್ಚಿನರಕೆಯನುಸುರಿನಲ್ಕಂಗಿಚ್ಚನಡಿ ಗೆದ್ದೆಱಗಿ ನತಸಂತಾನ ಸಂತಾನ ಬ[ಪಾಠಂ. ಬ]ಚ್ಚಿಗನುಮವನೆಂಬ ನುಡಿಯಂ ಬಿಚ್ಚಿಯೆನಿಸನೆ (ಜಗನ್ನಾ. ೩-೩). [ ಬಚ್ಚಿ$_1$ + – ಗ$_2$ ]

**ಬಚ್ಚಿವೆಣ್**, ಪಚ್ಚಿವೆಣ್ (ನಾ). ಮಕ್ಕಳಾಗದವಳು ; ಬಂಜೆ : "ಬ[ಪಾಠಂ. ಪ]ಚ್ಚಿವೆಣ್ಣಂ ಬಂಜೆ" (ಕನ್ನಕೈ. ೨೭). **ಪಚ್ಚಿವೆಣ್** : "ಪಚ್ಚಿವೆಣ್ಣಂದು ಬಂಜೆ" (ಕಶಾ. ೬೨-೬೭೫) ; "ಪಚ್ಚಿವೆಣ್ ಬಂಜೆಯ್ನ ನಿಸುಗು" (ಕನ್ನಕುಂ. ೭೪). [ ಬಚ್ಚಿ$_1$+ಪೆಣ್ ]

**ಬಚ್ಚಿವೋಗು** (ಕ್ರಿ). ವ್ಯರ್ಥವಾಗು; ಹಾಳಾಗು; ನಾಶವಾಗು : ಬಚ್ಚಿ ವೋಗದ ರಾಮಬಾಣಂಗಳಂ ನಡುವೆ ನುಚ್ಚುನೂಱಾಗೆ ಕತ್ತರಿಸಿ (ಕೃಪಾಶಾ. ೨೦-೩೪). [ ಬಚ್ಚಿ$_1$ + ಪೋಗು$_1$ (< ಪೋ$_1$) ]

**ಬಚ್ಚೋಡಿಮ್ಯ** (ನಾ). (?) : ಕೆಂಪಿನ ಸೀರೆ, ಬಿಳಿಯ ಸೀರೆ, ಇವು ಕೆಡುವುದಕ್ಕೆ—ಬಿಳಿದಾಸಾಳದ ಹೂ ಕೆಂಪಿನ ದಾಸಾಳದ ಹೂ ಕರಿಹತ್ತಿಯ ಹೂ ಈ ಎಳಗಾಯಿ ಇವಂ ನೀರಲ್ಲಿ ಕುದಿಸಿ ಕೈಯಲ್ಲಿ ಕಿವಿಚಿ ನೀರ ಬಸಿದು ಕೊಂಡು ಬಿಳಿಯ ವಸ್ತ್ರವ ಸುಟ್ಟು ಕರಿಯ ಹಾಕಿ ಗೋಪಿಚಂದನ ಸಹ ಹಾಕಿ ಕದಡಿ ಬಚ್ಚೋಡಿಮ್ಯೆಯವಳಿಗೆ ಒಂದು ಬಟ್ಟಲು × × × ಮೈಯೊಳಗೆ ಅರೆಬಟ್ಟಲು ಮೇರೆಯಲ್ಲಿ ಎಂಟುದಿನ ಕುಡಿಯ ಕೊಡಲು ಕೆಂಪಿನ ಸೀರೆ ಬಿಳಿಸೀರೆ ಕೆಡುವುದು ಸಹ ಮಾಣ್ಗಂ (ಸಕಶ್ಯ. ೦೪೪).

[ ಬಚ್ಚೋಡಿ$_1$ + ಮ್ಯ (< ಮಯ್$_2$) ]

**ಬಚ್ಚಾಲಿ** 'ಬಚ್ಚಾಳಿ' ನೋ.

**ಬಜಂತ್ರಿ** 'ಬಾಜಂತ್ರಿ' ನೋ.

**ಬಜರಂಗಬಲಿ** (ನಾ). ಹನುಮಂತ; ಆಂಜನೇಯ; ಮಾರುತಿ : ಬಜರಂಗಬಲಿಯ ಮೂರ್ತಿಯನ್ನೂ ಕುಸ್ತಿಮಲ್ಲರ ಚಿತ್ರಗಳನ್ನೂ ಅವನು ತನ್ನ ಗೋಡೆ ಮುಚ್ಚಲು ಮಾತ್ರ ಇಚ್ಛಿಲ್ಲ (ದೇಶಕ್ಕೆ. ೬೨).

[ ← ಹಿಂ. ಮರಾ. ಬಜರಂಗಬಲೀ. / ಸಂ. ವಜ್ರಾಂಗಬಲಿನ್ ]

**ಬಜಾಯಿ** (ನಾ). ಒಂದು ಬಗೆಯ ಚರ್ಮವಾದ್ಯ : 'ಬಜಾಯಿಆನೆ' ಪರಾ. 'ಬಾಜಾ' ನೋ. [ ← ಹಿಂ. ಮರಾ. ಬಾಜಾ]

**ಬಜಾಯಿಆನೆ** (ನಾ). ಬಜಾಯಿ ಮುಂತಾದ ವಾದ್ಯಗಳನ್ನು ಹೊತ್ತು ಕೊಂಡು ಹೋಗುವ ಆನೆ : ೧೦೦೦೦ ನಿಶಾನೆಆನೆಗಳೂ ೨೦೦೦ ಬಜಾಯಿ ಆನೆಗಳೂ ಇದ್ದುವು (ಅಕ್ಕರು. ೦೩). 'ನಿಶಾನೆಆನೆ' ಪರಾ.

[ ಬಜಾಯಿ + ಆನೆ$_1$ ]

**ಬಜಾಯಿಸು** (ಕ್ರಿ). ೧. ವಾದ್ಯವನ್ನು (ಜೋರಾಗಿ) ಬಾರಿಸಂ,– ನುಡಿಸು : ವಾದ್ಯಗಾರರು ಭಯಂಕರವಾಗಿ ವಾದ್ಯವನ್ನು ಪುರೈಸಿ ಡೋಲು ಬಜಾಯಿಸುತ್ತಾರೆ (ಗರುಡಾ. ೬೦). ೨. ಕಟ್ಟುನಿಟ್ಟಾಗಿ ಹೇಳು ; ಅಪ್ಪಣೆ ಮಾಡು : ಮಿಟಾದೋಲೆಕಾರರ್ ಭೀಮಗೆ ದಾಟು ದಾಟು ಬಜಾಯಿಸುವರಿಲ್ಲ (ಕರ್ನಾಶಾ. ೦೭); ಮನ್ನಾಗ ಆ ಮೂಳಗೋಳಿಗೆ ಸಲಗೀ ಕೊಡಬ್ಯಾಡಾ ಸಲಗೀ ನಾಯಿ ತಲೀಗೇರ್ಯಾವು ಎಂದು ಬಜಾಯಿಸಿದ್ದರು (ಹೂಂಕಲು. ೨೨). ೩. ಜಾರಿಮಾಡು ; ಚಲಾಯಿಸಂ : ಇನ್ನೂ ಒಂದು ಹೊಸ ಚಾಳಿಯು ಇವರಿಗೆ ಇತ್ತಿತ್ತ ಅಂಟಿತ್ತು. ಏನೂ ಕಾರಣವಿಲ್ಲದೇ ಉಳಿದವರ ಮೇಲೆ ಅಧಿಕಾರ ಚಲಾಯಿಸುವುದು (ಪೂರ್ಣಕುಡಾ. ೬೦); ರಂಗಕ್ಕ ಯಜಮಾನರಿಗೆ ಸಸ್ತಮನಾಯಿ ಹುಕುಂ ಬಜಾಯಿಸಿದರು (ದೇಶಹ. II. ೩೦೫). [ಬಜಾವಣೆ + – ಇಸು$_1$]

**ಬಜಾರ್** 'ಬಾಜಾರ' ನೋ.

**ಬಜಾರ** 'ಬಾಜಾರ' ನೋ.

**ಬಜಾರಿ** 'ಬಾಜಾರಿ' ನೋ.

**ಬಜಾರು** 'ಬಾಜಾರ' ನೋ.

**ಬಜಾವಣೆ**, ಬಾಜವಣೆ (ನಾ). ೧. ಚರ್ಮವಾದ್ಯ ಮೊದಲಾದುವು ಗಳನ್ನು ಬಾರಿಸುವಿಕೆ : ತಾಳಮಾನ ಸರಿಸವನಱಿಯ ಓಜೆಬಜಾವಣೆ [ಪಾಠಂ. ಣೆ]ಯ ಲೆಕ್ಕವನಱಿಯೆ (ಬಸವ. ೪೪೪) ; ವಾಳಿಗೆಯೊಳಗಣ ಸೊಡರ್ಗುಡಿ ಡಾಳಂಬಡೆದಂತೆ ರಂಗರಕ್ತೆಯೊಳಮರ್ದುಂ ಪಾಳಿಕೆವಡದು ಬಜಾವಣೆ ಮಾಳವಸಿರಿಯೆಂಬ ರಾಗವುಂ ಚಾಳಿಸಿದಂ (ಹುಕೋಜ. ೨-೩೦); ಜಾಯ ಬಜಾವಣೆ ಗಮಕವಸೆಯೆ ಪಾಡಲಾಯುತವಾದರು ಕೂಡೆ (ಶರಶ. ೫-೩೭). ೨. ಕಾಯಿದೆ ಮೊದಲಾದುವುಗಳನ್ನು ಜಾರಿ ಮಾಡು ವುದು, –ಚಲಾವಣೆ ಮಾಡುವುದು : ಅಮೃತದ ಬಟ್ಟಲಿರುವ ತಟ್ಟೆ ಯಲ್ಲಿ ಟೆಂಗಿನ ಸೂಟ್ಟೆ ಸೇರಿಸಿದಂತಾಗುವುದೆಂದು ಬಜಾಯಿಸಿದ್ದಾನೆ. ಆದರೆ ಈ ಬಜಾವಣೆ ತಿಳಿದವರಿಗೆ ಮಾತ್ರ (ಹುಶಾಹಿ. ೨೪). **ಬಾಜವಣೆ** : ೧. ಚಂಡೆಮದ್ದಳೆಗಳ ಬಾಜವಣೆಯಲ್ಲಿ ಕೈ ನುರಿತ ಮೇಳಗಾರರೂ ನಮ್ಮಲ್ಲಿದ್ದರು (ಜಾನಪಸು. ೪೪).

[←ಮರಾ. ಬಜಾವಣೇ, ಬಜಾವಿಣೇ = ವಾದ್ಯವನ್ನು ಬಾರಿಸು, ಕಾಯಿದೆಯನ್ನು ಜಾರಿಗೆ ತರು]

**ಬಜೆ** (ನಾ). ಕಟುವಾದ ವಾಸನೆಯುಳ್ಳ ಒಂದು ಬಗೆಯ ಸಸ್ಯ ಮತ್ತು ಉಪಯುಕ್ತ ಔಷಧೀಯ ಗುಣವುಳ್ಳ ಅದರ ಬೇರು ; ಉಗ್ರಗಂಧಿ : "ಉಗ್ರಗಂಧಿಯೆನೆ ವಜೆ ಬಜೆಯ [ಪಾಠಂ. ವಚೆಯೆಂದ] ನಿಕ್ಕಂ" (ಮಂಗರಾ. ೪೧-೩೪) ; ಬಜೆ ಸಂವರ್ಚಲ ಹಿಂಗತಿಬಜೆ ಕೊಡಸಿಗೆಯೆಂಬಿವಿನಿತುಮಂ ಕುಡಿಯಿಸಲುಷ್ಣಜಲಾನ್ವಿತಮದು ಕಿಡಿಸುಗು ಮಜಸ್ರಮೆನೆ ನಡೆವ ನುಣ್ಪುಮಂ ನೇತ್ರರುಜಮಂ (ಲೋಕೋಪ. ೯-೦೨೦) ; ಬಜೆಯ ಚಿತ್ರ್ಯಸೊಂದೆ ಪೆಟ್ಟಿಗೆ ಕುಡಿದ ಬಜೆಯನು ಕಾರಿಸುವೆ (ಸಾಕ್ಯಾಶಾ. ೨೨-೬೭); ಬಜೆ . . . ಇದು ಜವುಗುಪ್ರದೇಶದಲ್ಲಿ ಬೆಳೆಯು ತ್ತದೆ. ಇದಕ್ಕೆ ಗುಪ್ತಕಾಂಡವಿದೆ. ಮಕ್ಕಳ ಅಜೀರ್ಣಕ್ಕೂ ಅತಿಸಾರಕ್ಕೂ ಇದರ ಬೇರಿನ ಕಷಾಯವನ್ನು ಉಪಯೋಗಿಸುತ್ತಾರೆ (ಸಸ್ಯಶಾ. ೦೪೭). 'ಅತಿಬಜೆ' ಪರಾ.

**ಬಜೆಬೆಣ್ಣೆ** = ತೇದ ಬಜೆ ಮತ್ತು ಬೆಣ್ಣೆಗಳ ಮಿಶ್ರಣ ; ವಿಶೇಷವಾದ ಔಷಧೀಯಗುಣವುಳ್ಳ ಈ ಮಿಶ್ರಣವನ್ನು ಎಳೆಯ ಮಕ್ಕಳಿಗೆ ತಿನ್ನಿಸುವ ವಾಡಿಕೆ ಇದೆ : ತೊಟ್ಟಿಲೊಳ್ ವಿಷ್ಣುವಂ ಮಲಗಿಸಿದಳಕ್ಕೆ ಬಜೆಬೆಣ್ಣೆಯಂ ಸುರಕೋಟಿ ಕೈಮುಗಿವೊಲು (ಹರಕು. ೦೫-೪೩); ಸ್ವಧರ್ಮದ್ರೋಹಿಯ ಮುಖವು ಕಾಣಬರುತ್ತಲೇ ಪ್ರತಾಪನಿಗೆ ಹುಟ್ಟಿದಾಗ ಇಟ್ಟಿದ್ದ ಬಜೆಬೆಣ್ಣೆಯು ಕೂಡ ತೊಳಸಿ ಕೊಂಡು ಮೇಲಕ್ಕೆ ಬಂದದ್ದರಿಂದ ಒಡನೆ ಅವನು ತನ್ನ ಬರ್ಚಿಯನ್ನು ಗುರಿಯಿಟ್ಟೆಸೆದನು (ಕಚ್ಚೋಚಿ. ೦೪೭). [<ಸಂ. ವಚಾ./ತಮಿ. ವಚಮ್, ವಚಮ್ಪು ; ಮಲ. ವಯಮ್ಪು ; ತುಳು. ಬಜೆ; ತೆಲು. ವಚ, ವಸ]

**ಬಜೆ$_2$** 'ಭಜಿ' ನೋ.

**ಬಜೆಕರಕು** 'ಬಜೆಕರುಕು' ನೋ.

**ಬಜೆಕರುಕು**, ಬಜೆಕರಕು (ನಾ). ಬಜೆಯನ್ನು ಸಂಸ್ಕಾರ ಮಾಡಿದ ಪುಡಿ (?) : ಪರ್ಪಾಟಕ, ಬಜೆಕರುಕು . . .ಕಷಾಯ ಹಾಕಿ ಕೊಡಲು. . .ಸಕಲ

ಜ್ವರಗಳೂ ನಿಲ್ಲುವುವು (ಸಕಕ್ಕ. ೦೦೦.). **ಬಜೆಕರಕು** : ರೇಣುಕೆ, ಗಲಜರವೇರು, ಬಜೆಕರಕು, ಜಟಾಮಾಂಸಿ . . . ಇವಂ ಕಷಾಯಂ ಕಾಯಿಸಿ ಕೊಟ್ಟರೆ ವಾತಜ್ವರಂ ಕೆಡುಗುಂ (ಸಕಕ್ಕ.೬೯).

[ಬಜೆ$_1$ + ಕರುಗು$_1$ < ಕರಿಂಗು]

**ಬಜೆಟ್** 'ಬಜೆಟ್ಟು' ನೋ.

**ಬಜೆಟ್ಟು, ಬಜೆಟ್** (ನಾ). ವಾರ್ಷಿಕ ಆಯವ್ಯಯದ ಅಂದಾಜುಪಟ್ಟಿ : ಅಧ್ಯಯನತಂಡಗಳು ಸಾಮಾನ್ಯವಾಗಿ ತಮ್ಮದೇ ಆದ ಬಜೆಟ್ಟು (Budgets)ಗಳನ್ನೂ . . . ಹೊಂದಿರುವ ಸ್ವತಂತ್ರ ಅಂತರಸರ್ಕಾರಿ ಸಂಸ್ಥೆಗಳಾಗಿವೆ (ಅಂಕಷಾಂ. ೦೯೦). **ಬಜೆಟ್** : ಆಯವ್ಯಯಪತ್ರ, ಮುಂಗಡಪತ್ರ, ಬಜೆಟ್ (Budget. ಕಶ್ರೀ.ಶ. ೦೦). [← ಇಂಗ್ಲಿ. Budget]

**ಬಜ್ಜರ** (ನಾ). ೧. ನವರತ್ನಗಳಲ್ಲಿ ಒಂದು; ವಜ್ರ; ಹೀರ : "ಬಜ್ಜರಮೆಂದು ವಜ್ರಂ" (ಶಬ್ದಮ. ೩೦-೬೦); ನಿಡಿದಾದ ಬಾಹುಬಳ ಮುನ್ನದಸಿಂಧುರಕಂಧರಕ್ಕೆ ಬಜ್ಜರದಮುಳ್ಗಂಬಮಾದ ತೊಡೆ . . . ಜಗದೊಳ್ಪೆಣೆಗುಂ ನೃಪೇಂದ್ರನಾ (ಅಪಂತು. ೨-೨); ಎಳಿಮುತ್ತಿನಂತೆ ಮೈವಣ್ಣ ಬಜ್ಜರದಂತೆ ಸುಲಿಪಲ್ಲ ಪಂಕ್ತಿ . . . ನವೀನಪ್ರವಾಳದಂತೆ ಪೊಳೆವ ಪದತಳವೊಪ್ಪೆ (ಶ್ರಾಂರತ್ನ. ೦೨-೬); ಪಳಿಕಿನಜಗಿಯ ಭಿತ್ತಿಯಿಂ, ಬಜ್ಜರದ ಜಂತೆಯಿಂ . . . ಮದನಗೈಯ ಬಾಗಿಲ್ವಾಡದ ಸಿಂಗರದೊಂದಾ ದೇಗುಲಂ ಕಣ್ಗೆದ್ದಮಾಗಿ ರಂಜಿಕುಂ (ರಾಸುಕ್ತ. ೫೯-೨೦). ೨. ಇಂದ್ರನ ಆಯುಧ; ವಜ್ರಾಯುಧ : "ಬಜ್ಜರಮೆಂದು ವಜ್ರಾಯುಧಂ" (ಶಬ್ದಮ.೯೬-೨೦); ಅಲರ್ವಿಲ್ಲಿಲ್ಲದಂಗಜನಂತೆ. ಬಜ್ಜರದಲಗಿಲ್ಲದಮರೇಂದ್ರನಂತೆ ಕಲಿಯಿಲ್ಲದಿಂದುವಿನಂಗಲ್ಲಿಗೆಯ್ದುಂದನಲಘುವಿಕ್ರಮ ರಾಮನಾಥ (ಕುರಾಕಾಂ. ೨೦-೦೦೩). [< ಸಂ. ವಜ್ರ]

**ಬಜ್ಜರಕವಾಟ**(ನಾ). ವಜ್ರದ ಬಾಗಿಲು,—ದ್ವಾರ : ವಿವಿಧತರಚಿತ್ರಿತದ ಬಜ್ಜರಕವಾಟದಿಂ . . . ಶಿವನಿರ್ಪ ಲೋಕ ಜ್ಯೋತಿರ್ಲೋಕಮೆರಡನೀ ಲವಲವಿಕೆ ಧಿಕ್ಕರಿಸುತಿದೆ (ಸಂಕಾರಾ. ೩-೨-೩). [ಬಜ್ಜರ + ಕವಾಟ]

**ಬಜ್ಜರಕೇರಿ** (ನಾ). ವಜ್ರದ ಮಾರಾಟ ಮಾಡುವ ಬೀದಿ : ಸಾಲುಮನೆ ಗಳ ಕೇರಿ ಪವಳ ಬಜ್ಜರಕೇರಿ (ಸಿದ್ಧ ಕಾ. ೦೩-೩೩). [ಬಜ್ಜರ + ಕೇರಿ]

**ಬಜ್ಜರಗಂಬ** (ನಾ). ವಜ್ರದ ಕಂಬ,—ಸ್ತಂಭ : ಬಜ್ಜರಗಂಬಮಿಂದ್ರ ನೀಲದ ತೊಲೆ (ಲೀಲಾ. ೦೩-೦೫); ನಿಮಿರ್ಚಿದ ಬಜ್ಜರಗಂಬ[ಜಾಕಾಂ. ಭ] ಮಿಂಬುಗೊಂಡುತ್ತಮನೀಲಪುತ್ರಿಕೆ ವಿರಚಿತಮಾಯ್ತು ವಿವಾಹ ಗೇಹದೊಳ್(ರಾಜಶೇ. ೬-೨). [ಬಜ್ಜರ + ಕಂಬ$_1$ (< ಕಂಭ)]

**ಬಜ್ಜರದುಂಬಿ** (ನಾ). ವಜ್ರದಷ್ಟು ಕಠಿಣವಾದ ಮೂತಿಯನ್ನು ಹೊಂದಿರುವ ತುಂಬಿ,—ಭ್ರಮರ : ಶಿವನ ನಿರ್ಮಾಲ್ಯವಜ್ಞಾನದಿಂದ ನಾಕಪತಿ ಏರಿಯ ಮಸ್ತಕಕ್ಕೆ ಹಾಕಲು ಪೂವಿನಾ ಕಂಪಿಗೆಬಗೆ ಬಜ್ಜರದುಂಬಿ ಗಳು ತಾಳದಾ ಕುಸುಮಮಾಲೆಯನು ತೆಗೆದು ನೆಲಕಿಕ್ಕಿ ಕಾಲಿಂದೊರ ಸುತಿರಲುಮದನು (ರಾಶಶ. ೦೨–೯೩). [ಬಜ್ಜರ+ತುಂಬಿ$_1$]

**ಬಜ್ಜರವಂಕಿ** (ನಾ). ವಜ್ರದ ವಂಕಿ; ತೋಳುಬಂದಿ : ಕುಚಿಸುಚಿಪೂರ್ಕು ಚಿಕೊರ್ಳಿಸಿ ಸುತ್ತಿದ ಪಟ್ಟೆಯ ದಟ್ಟಿ ಪಕ್ಕಮಂ ಕೆಳಗೊಳೆ ಸಿಕ್ಕಿದೊತ್ತರದ ಬಜ್ಜರವಂಕಿ ತೊಡಂಕು ಸೊನ್ನೆನೂಲ್ ತಳತಳೆನಿಪ್ಪ ಸಣ್ಣಪೊಸ ಪೊನ್ನುಡೆ ಬಿಕ್ಕೊಡೆ ಬಿಂಕವೆತ್ತ ಮೆಲ್ದೊಳಿರಡಿಕೆಂದಳಂ ತೊಳಗುಗೆನ್ನೆರ್ದೆ ಯೊಳ್ ಯದುಶೈಲನಾಥನಾ (ಶಶಿಶಿ. ೩-೯೦). [ಬಜ್ಜರ + ವಂಕಿ]

**ಬಜ್ಜರವಸರ** (ನಾ). ವಜ್ರಗಳನ್ನು ಮಾರುವ ಅಂಗಡಿ: ದೆಸೆಗಳ್ ನಿಜಾಂಶುವಿಂ ರಂಜಿಸುತಿರೆ ಪುಂಜಿಸಿದ ಪೊನ್ನ ಪುಂಜಿಕೆಯಿಂದಂ ಕೊಸಗಿನ ಮರದುಂಬುಗಲರಲ್ದೆಸೆವಂತೆಸೆದಿರ್ಪುದಲ್ಲಿ ಬಜ್ಜರವಸರಂ (ಜಗಾ. ೯–೦೦೬). [ಬಜ್ಜರ + ಪಸರ]

**ಬಜ್ಜರಿ** (ನಾ). (?) : ಪದೆದೊದವೆ ವೀರಸಿರಿಯುಪ್ಪಿದ ತೋಳ್ಪುತ್ತನಿಪ ರನ್ನವಟ್ಟೆಯ ರುಕ್ಮಪಂಜರದ ಮಂಜರಿಪೊಲ್ ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್ (ಅಶಂತು. ೩-೩೦). [?]

**ಬಜ್ಜರೋದಕ** (ನಾ). ವಜ್ರದ ಕಾಂತಿ : ದಂತಿಕುಂಭವ ವಿದಾರಿಸಿ ಸೂಸಿಹ ಮುತ್ತು ತತ್ತಳಿರ್ದಾವವು ಬಜ್ಜರೋದೀಮೆ ಪುಷ್ಪಸರಂ ಸುರ ಗಿರಿಯಗ್ರಶೃಂಗಗಳ್ ತೀವಿದ ಕೋಡಾಗೆಸೆಯೆ ಮಾಮರಮದ್ರಿಯವೊಲ್ ರಾಜಿಕುಂ (ಭೃರತು. ೩-೨೬). [ಬಜ್ಜರ + ಉದಕ$_2$]

**ಬಜ್ಜಿ$_1$** (ನಾ). ಬದನೆಕಾಯಿ ಮೊದಲಾದ ತರಕಾರಿಗಳನ್ನು ಸುಟ್ಟು ಅಥವಾ ಬೇಯಿಸಿ, ಸೌತೆಕಾಯಿ, ಕ್ಯಾರೆಟ್, ಟೊಮ್ಯಾಟೋ ಮೊದಲಾದ ತರಕಾರಿಗಳನ್ನು ಹಸಿಯಾಗಿ ಮೊಸರಿನೊಂದಿಗೆ ಸೇರಿಸಿ, ಒಗ್ಗರಿಸಿ ಮಾಡುವ ಒಂದು ಬಗೆಯ ವ್ಯಂಜನ : ಕೆಲವಕ್ಕೆ ಬದನೆಯ ಬಜ್ಜಿ ಕೆಲವಕ್ಕೆ ಕತ್ತರಿಸಿದೆಳೆಕೀರೆ ಚಿಲುಕೆ (ಸೂಶಕಾ. ೯-೨೦); ಗೋದುವೆಯ ಸಜ್ಜಿಗೆದೆಗೆದೆಳೆವೆಳುಕಿನಲೊಪ್ಪುವ ಕಜ್ಜಾಯಕೆ ವೃಂತಾಕದ ಸೊಬಗಿನ ಬಜ್ಜಿಯ ಮುಖಾಖಿಳಶಾಖಾಮೃತಗಳ ನೀಡಿದರಬಲೆಯರು (ಮುದೇತು. ೦೯-೩೭); ಮರಿಚೇಲಕ್ಕೀರುಳ್ಳಿಯ ಕರಿಬೇವುಂ ಕಾರಗೆಣಸು ಕೊತ್ತುಂಬರಿಯೊಪ್ಪಿರುತಿಹ ಕ್ಷೀರಂ ತಿಂತ್ರಿಣಿವೆರಸಿದ ವಾರ್ತಾಕ ಬಜ್ಜಿಯಮರರ್ಗುಂಟೇ (ಶೀಚಾ. ೩೩೦). [ದೇ.॥ ತುಳು. ತೆಲು. ಬಜ್ಜಿ]

**ಬಜ್ಜಿ$_2$** 'ಭಜಿ' ನೋ.

**ಬಜ್ಜಿಸು** 'ಭಜ್ಜಿಸು' ನೋ.

**ಬಜ್ಜಿಗುಂಟಣಿ** (ನಾ). ಗಟ್ಟಿಗಿತ್ತಿಯಾದ ಕುಂಟಲಗಿತ್ತಿ : ಬಜ್ಜಿಗುಂಟಣಿ ಸಜ್ಜೆವನೆಯ ಬಾಗಿಲಂ ಪತ್ತಿ ಮಣಿಗೇಳುತ್ತಿರ್ದೊಳಗಂ ಪೊಕ್ಕು (ಕಂದ್ರತು. ೬-೩೯ ಪ). [ಬಜ್ಜಿ? + ಕುಂಟಣಿ]

**ಬಟ** 'ಬಂಟ$_1$' ನೋ.

**ಬಟಮಾನ್ಯ** 'ಭಟಮಾನ್ಯ' ನೋ.

**ಬಟರಿ** 'ಭಟಾರಿ' ನೋ.

**ಬಟವಡೆ** 'ಬಟವಾಡೆ' ನೋ.

**ಬಟವಾಡೆ, ಬಟವಡೆ, ಬಟ್ವಾಡೆ** (ನಾ). (ಸಂಬಳ, ಕೂಲಿ, ಪತ್ರ ಮೊದಲಾದುವುಗಳನ್ನು) ಹಂಚುವುದು; ವಿತರಣೆ ಮಾಡುವುದು : ಸೇನಾಜನರುಗಳಿಗೆ ತಲಬಿನ ಬಟವಾಡೆಯಾಗುತ್ತಿತ್ತು (ಮುಹಾಕಾ. II. ೦೬); ಚಿಕ್ಕನವಾಬರು ತಾವೇ ಸ್ವತಃ ಕೂಲಿಯವರಿಗೆ ದುಡ್ಡು ಬಟವಾಡೇ ಮಾಡಿ . . . ಬರುವಾಗ (ಹುಬ್ಬಿಹ. ೬೬); ಅತ್ತ ಬಟವಾಡೆಯಾದ ಹಣವೆಲ್ಲವೂ ಮರುದಿನ ಈ ಉಪಾಯದಿಂದ ಹೈದರನ ಬೊಕ್ಕಸಕ್ಕೆ ಬಂದು ಸೇರಿತು (ಒಶಶ. ೬೨). **ಬಟವಡೆ** : ಪಗಾರ ಬಟವಡೆಯ ಕೆಲಸ ಸುರುವಾಗಿ ಮೂರು ನಾಲ್ಕು ತಾಸಿನವರೆಗೂ ಹಾಗೇ ನಡೆಯಿತು (ಅಕ್ಷ. ೨೦೯); ವಾರಕ್ಕೊಂದಾವರ್ತಿ ಕೊಡುವ ಬಟವಡೆಹಣ ಅರಹೊಟ್ಟೆಗೆ ಮಾತ್ರ ಆಧಾರ (ಕೊಶಶೇ. ೩೨); ಅಂಚೆಯ ಹಸಿಬೆಯನ್ನು ಹೆಗಲಿಗೇರಿಸಿ ಬಟವಡೆಗೆ ಹೊರಟ (ಲೀಕಶ.II, ೬೩). **ಬಟ್ವಾಡೆ** : ಪೂಜೆ ಮುಗಿದು ವನಿವಾರ ಬಟ್ವಾಡೆಯ ಸಮಯ ಅವನಿಗೆ ವಿಠೋಬನ ನೆನಪು (ಚಿಕ್ಕೋತಿ. ೫); ಬಟ್ವಾಡೆಯಾದ ತಾರೀಕು ಇನ್ನೂ ಎರಡು ದಿನ ಮುಂದಿನದ್ದಾಗಿ (ಕ್ಷೀರುಕಾ. ೭); ಮೊದಲು ಟಪ್ಪಾಲುಕಚೇರಿಯಲ್ಲಿ ಕಾಗದಪತ್ರಗಳ ಬಟ್ವಾಡೆ ಮಾಡುತ್ತಿದ್ದ (ಹುಕ್ಕಹು. ೨೨). [← ಹಿಂ. ಬಟವಾರಾ . ಮರಾ. ಬಟವಾಡಾ]

**ಬಟಾಟೆ** (ನಾ). (ನೆಲದ ಅಡಿಯಲ್ಲಿ ಬೆಳೆಯುವ, ತರಕಾರಿಯಾಗಿ ಬಳ ಸಲ್ಪಡುವ) ಗೆಣಸಿನಂಥ ಒಂದು ಬಗೆಯ ಗೆಡ್ಡೆ; ಆಲೂಗೆಡ್ಡೆ : ಬಟಾಟೆ ಗಿಡದಲ್ಲಿ ಕೆಲವು ಉತ್ತಮತರದ "ಬೀಜ"ಗಳನ್ನು ಆಯ್ದು ಅವುಗಳನ್ನು ಮುಂದಿನ ಋತುವಿನಲ್ಲಿ ಬೆಳೆಸಿದನು (ಸಕ್ಕಶ. ೨೪); ನಮ್ಮ ಆಳುಮನುಷ್ಯ ಪೇಟೆಯಿಂದ ಬಟಾಟೆ ತರುವುದು ಮೂರು ಸೇರು (ಕುಂಹಿ. ೯).

[←ಮರಾ. ಬಟಾಟಾ, ಬಟಾಟೇ./ತುಳು. ಬಟಾಟೆ./ಇಂ. Batata, Potato ; ಪೋರ್ಚು. ಸ್ಪ್ಯಾನಿಷ್. ಬಟಾಟಾ]

**ಬಟಾಣಿ**, ಬಟ್ಟಾಣಿ, ವಟಾಣಿ (ನಾ). (ಕಡಲೆಯ ಜಾತಿಗೆ ಸೇರಿದ) ಒಂದು ಬಗೆಯ ದ್ವಿದಳಧಾನ್ಯ : ಬಟಾಣಿಬೀಜಗಳನ್ನು ಹಸಿಯಾಗಿರುವಾಗ, ಒಣಗಿದಾಗ ಉಪಯೋಗಿಸಲಾಗುವುದು . . . ಬಟಾಣಿಯಲ್ಲಿ ರುಚಿಯ ಜೊತೆಗೆ ಶರೀರಪೋಷಕ ಸಾರವಸ್ತುವಿದೆ (ಕಠಿ. ೯೦). 'ಬಟ್ಟಗಡಲೆ' ಹೋ. **ಬಟ್ಟಾಣಿ** : ಕಿತ್ತು ಕಿತ್ತ್ರಿತ್ತ್ರ ಕೆಡದ ಹಾರಂಗಳೊಳ್ಮುತ್ತುಗಳ್ಕಾರಿನೊಳ್ಪೊಲದೊಳಗೆ ಬಿತ್ತಿದೊತ್ತ್ರೊತ್ತ್ರಾದ ಜೋಳ ಬಟ್ಟಾಣಿಗಳ ಬೀಜಂಗಳೆಂಬಂತೆ ಕಾಣಿಸಿದುವು (ಚಂಪಾ. ೯-೩). **ವಟಾಣಿ** : ಸ್ವಲ್ಪ ಕಪ್ಪು ಅಥವಾ ಕೇಸರಿ ನೆಲವಾದರೆ . . . ಹಿಂಗಾರಿಯ ಧಾನ್ಯ ವಟಾಣಿ ಮೊದಲಾದ ಕಟಾಣಿಜಿನಸುಗಳು ಕಡಲಿಯ ಧಾನ್ಯಗಳು ಇವುಗಳನ್ನು ಬೆಳೆಯಬಹುದು (ಕೃಶಿಶ್ರ. ೯೨). [ದೇ.೩ ತಮಿ. ಮಲ. ಪಟ್ಟಾಣಿ ; ತುಳು. ಬಟಾಣಿ ; ತೆಲು. ಬಟಾನಿ. / ಮರಾ. ವಾಟಾಣಾ. / ಸಂ. ವಟಧಾನ್ಯ]

**ಬಟಾಯಿ** (ನಾ). ೧. ಬೆಳೆಗಾರನಿಂದ ಹೊಲದ ಒಡೆಯನಿಗೆ ಸಲ್ಲುವ ಧಾನ್ಯದ ಅಂಶ,–ಭಾಗ ; ವಾರಪಾಲು ; ಕೋರು : (ಕೃಸಂಗ. II. ೩೯೯) : ವೆಂಕಟರಾಯನು ಗಿರಿಯಮ್ಮನೆಂಬ ಪವಾಡಗಿತ್ತಿಯು ಮಾಡುವ ಸಮಾರಾಧನೆಗೆ ಬಟಾಯಿ ಧಾನ್ಯವನ್ನು ಉಪಯೋಗಿಸಿ ರಾಜದ್ರೋಹ ಮಾಡಿದ್ದಾನೆ (ಕಥಾ. ೩೬೬). ೨. "ಸರ್ಕಾರದ ಪರವಾಗಿ ಮಾಡುವ ವ್ಯವಸಾಯ" (ಕಂಡ. ಕೋಶ) : ಇವುಗಳಲ್ಲಿ ಕೆಲವು ಬಟಾಯಿ — ಅಂದರೆ ವೃತ್ತಿದಾರರಾದ ಇನಾಂದಾರರ ಸ್ವಂತ ಅನುಭವ ಅಥವಾ ವಹಿವಾಟನಲ್ಲಿದ್ದವು (ಕಂಡ. ೨೩೯).
[←ಹಿಂ. ಮರಾ. ಬಟಈ., ಬಟಾಈ]

**ಬಟಾಯಿಭೂಮಿ** (ನಾ). ವಾರಕ್ಕೆ ಕೊಟ್ಟಿರುವ ಭೂಮಿ ; ಕೋರಿ ಜಮೀನು : ಅರಮನೇ ಚಾಕರರಲ್ಲದವರು ಅನೇಕರು ಸರ್ಕಾರದ ಬಟಾಯಿಭೂಮಿಗಳನ್ನು ವ್ಯವಸಾಯ ಮಾಡುತಾ . . . ಜೀವಿಸಿಕೊಳ್ಳುತ್ತಿದ್ದರು (ಸುಮಾಚ. ೨). [ಬಟಾಯಿ+ಭೂಮಿ]

**ಬಟಾರ**$_1$ 'ಭಟಾರ' ನೋ.

**ಬಟಾರ**$_2$ (ನಾ). ಗೋಣೀಚೀಲ : ಅದನ್ನು ಚನ್ನಾಗಿ ಬಿಸಿಲಲ್ಲಿ ಹಾಕಿ ಒಣಗಿಸಿ ಬಟಾರಗಳಲ್ಲಿ ತುಂಬಿ ಇಟ್ಟು ರಂಗು ನೋಡಿ ಮಾರಾಟ ಮಾಡುತ್ತಾರೆ (ಕೃಶಿಶ್ರ. ೯೨). [?]

**ಬಟಾರಿ** 'ಭಟಾರಿ' ನೋ.

**ಬಟು**$_1$ 'ಬಟ್ಟು' ನೋ.

**ಬಟು**$_2$ (ನಾ). ಬ್ರಹ್ಮಚಾರಿ ; ವಟು : "ಬಟು — ವಟು = ಹುಡುಗ, ಬ್ರಹ್ಮಚಾರಿ" (ಕರ್ನಾಕೋ. ೨೬) ; ಪೊಱವಾಗಿಲೊಳ್ ಮುನಿಯೋರ್ವಂ ಬಟುವೆರಸು ಬಂದಿರ್ಕುಂ (ರಾಮಾಶ್ವ. ೦೦-೦). [<ಸಂ. ವಟು]

**ಬಟುಗಲ್ಲು** (ನಾ). ಗುಂಡಗಿರುವ ಕಲ್ಲು ; ದುಂಡಾದ ಶಿಲೆ : ನಿಡಿಗಲ್ಲು ನಿಶಿತ ಹಾಸಱೆಗಲ್ಲು ಚೌಕದ ಬಡಿಗಲ್ಲು ಬಟುಗಲ್ಲು ಬೀಳೆ ತುಡುಕಿದ ವಜ್ರಮಾರ್ಗಣದಿಂದ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಯಿಸಿದ (ವೋಹಕ. ೯೦-೭೩). [ಬಟು$_1$ (<ಬಟ್ಟು) + ಕಲ್ಲು (<ಕಲ್$_3$) ]

**ಬಟುಮೊಲೆ** 'ಬಟ್ಟಮೊಲೆ' ನೋ.

**ಬಟುವು** 'ಬಟ್ಟು' ನೋ.

**ಬಟುವುದಿಂಬು** (ನಾ). ಗುಂಡಾಗಿರುವ ದಿಂಬು ; ದುಂಡನೆಯ ದಿಂಬು : ಬಿಳಿಯ ಬಟ್ಟೆಗಳಿಂದ ಕಟ್ಟಿ ಪೊಲಿದಿರುವ ಮನ್ಮಥನ ವಂದು ತೊಡೆಯ ಬಟುವುದಿಂಬುಯಿದೆಂಬಂತೆ (ಶಿಗಂಧ. ೦೯೭-೯).
[ಬಟುವು (<ಬಟ್ಟು) + ದಿಂಬು$_2$]

**ಬಟುಹು** 'ಬಟ್ಟು' ನೋ.

**ಬಟ್ಟ**$_1$ 'ಬಟ್ಟು' ನೋ.

**ಬಟ್ಟ**$_2$ (ಸಪೂರೂ). 'ಬಟ್ಟಿತು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಟ್ಟಗಲ್', 'ಬಟ್ಟವೆಱೆ' ಪರಾ. [<ಬಟ್ಟಿತು]

**ಬಟ್ಟ**$_3$ (ಸಪೂರೂ). 'ಬಱಿದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಟ್ಟತಲೆ' ಪರಾ. [<ಬಱಿದು]

**ಬಟ್ಟ**$_4$ 'ಬಂಟ$_2$' ನೋ.

**ಬಟ್ಟಕೆಱೆ** (ನಾ). ಒಂದು ಊರಿನ ಹೆಸರು (?) : ಸಾದೇವಂ ಬಟ್ಟಕೆಱೆಯಂ ಅೞಿದಂ (ಎಕ. XIII, ೦೬೯-೩ ; 880). 'ಬಟ್ಟಕೆಱೆ' ಪರಾ. [ಬಟ್ಟ$_?$ + ಕೆಱೆ]

**ಬಟ್ಟಗಡಲೆ** (ನಾ). ದುಂಡಗಿರುವ ಒಂದು ಬಗೆಯ ಕಡಲೆ : "ಕಲಾಯಃ, ಖಂಡಿಕಃ, ಸಾತೀನಃ — ಈ ೩ ಬಟ್ಟಗಡಲೆ" (ಶಠಾಪು. ೯೩-೯೨೬) ; ಕರಿಹಸ್ತಚರ್ಮಮಂ ಪೋಲ್ತ್ ಕರಿದಂತವನರೆದು ಬಟ್ಟಗಡಲೆಯ ಪಿಟ್ಟಂ ಬೆರಸಿಕ್ಕುಗೆ ಮೊದಲೊಳ್ ತಾವರೆಯಲರಲ್ಲಾದ ಸುರಭಿಗಂಧಮನಾಳ್ಗಂ (ಲೋಕೋಪ. ೬-೩೨). 'ಬಟಾಣಿ' ಹೋ.
[ಬಟ್ಟ$_2$ ( <ಬಟ್ಟಿತು ) + ಕಡಲೆ]

**ಬಟ್ಟಗಡಸು** (ನಾ). ಮೈ ತುಂಬಿಕೊಂಡಿರುವ ಕಡಸು : ಬಟ್ಟಗಡಸು ಕೆಂದ ಹುರಿಗ ಕಾರಿಯ ಬೆಳ್ಳ ನೆಟ್ಟ ಕೊಂಚಿನಕಾರಿ ಜಾಲೆ (ಪುರೇಸಾಂ. ೦-೯೦). [ಬಟ್ಟ$_2$ (< ಬಟ್ಟಿತು) + ಕಡಸು$_1$]

**ಬಟ್ಟಗದ್ದ** (ನಾ). ದುಂಡನೆಯ ಗದ್ದ : ತಳತಳಿಪೊಳ್ಪೊಸಲ್ . . . ಮೊಲ್ಲೆವಲ್ ಪೊಳೆವ ಮೆಲ್ಲಗೆ ಮಟ್ಟದ ಬಟ್ಟಗದ್ದದಿಂ ಬಳೆಯಿಪುದೊಳ್ಪೊಗಂ ಸೊಬಗಿನಿಂ ಬಗೆಗಾರ್ತಿಯರ್ಗಾಸೆಯುಟ್ಟಿಯಂ (ಶಕಂ. ೩-೬).
[ಬಟ್ಟ$_2$ (< ಬಟ್ಟಿತು) + ಗದ್ದ$_1$]

**ಬಟ್ಟಗಲ್**, ಬಟ್ಟಗಲ್ಲು (ನಾ). ಗುಂಡಗಿರುವ ಕಲ್ಲು ; ದುಂಡುಗಲ್ಲು : ಬಟ್ಟಗಲ್ಲಿಂತು ವರ್ತುಳದಿಂದೆ ಚೆಲ್ವಾಗಿ ಪುಟ್ಟುವುದೆ ಪೊಸತು (ಕೃಬಾಲಾ. ೨೬-೨೩). **ಬಟ್ಟಗಲ್ಲು** : ಅಂತೆ ಬರೆ ಒಟ್ಟಿಯೊಳಗಣ ಬಿಳಿಯ ಬಟ್ಟಗಲ್ಲು (ಪ್ರಭು. ೦೯೨೦, ೦೦-೦೫೬ ; 977) ; ಬಟ್ಟಗಲ್ಲಿನ ಮ್ಯಾಲ ತುಪ್ಪ ಸುರುವಿದಂಗ ಏನಾರ ಆತ ನನ ಮಗಳ (ಲೋಕಗೀ. ೨೦೦).
[ಬಟ್ಟ$_2$ (< ಬಟ್ಟಿತು) + ಕಲ್$_3$]

**ಬಟ್ಟಗಲ್ಲು** 'ಬಟ್ಟಗಲ್' ನೋ.

**ಬಟ್ಟಗಾಣ** (ನಾ). ಗುಂಡಾಗಿ ಸುತ್ತುವ ಗಾಣ : ಅಯ್ಯಾ ಮನದ ರಜದ ಮಣ್ಣ ಕಳೆದು . . . ಅದನೊಂದೆಡೆಗೆ ತಂದು ಬಟ್ಟಗಾಣದಲಿಕ್ಕಿ ಹಿಳಿವೆನಯ್ಯಾ (ಸಿದ್ಧವ. ೩೦೩-೦೦೨೬). [ಬಟ್ಟ$_2$ (<ಬಟ್ಟಿತು) + ಗಾಣ$_1$]

**ಬಟ್ಟಗುತ್ತ** (ನಾ). ೧. (ಅಲಂ) ಮೋಸ ; ವಂಚನೆ : ಬಟ್ಟಗುತ್ತದ ವಿದ್ಯವಿವರಿಗೆ ಕೊಟ್ಟರುಂಟೆಲೆ ಮಂತ್ರಿ ಕೇಳ್ ಮನಮುಟ್ಟಿ ನುಡಿಯಲಿ ಭಾವಿಸದೆ ಸದ್ಧರ್ಮಮಾರ್ಗದಲಿ (ಕೊರಠಾ. ೨-೨-೩೯). ೨. ಮೋಸಗಾರ ; ವಂಚಕ : ಸೂಜಿಗಾಱನಂತೆ ಪೆಱರಂ ಕ್ಲೇಶಂಗೊಳಿಸದೆ ಬಟ್ಟೆ [ಟ್ಟ] ಗುತ್ತನಂತೆ ಉಪವಾಸಮಂ ತೋಱಿ ಕಾಡದೆ (ಧರ್ಮಾಮೃ. ೩-೯೯). 'ಬಟ್ಟೆಗುತ್ತ' ಹೋ. [ಬಟ್ಟ$_?$ + ಗುತ್ತ$_2$ (< ಗುಪ್ತ)]

**ಬಟ್ಟಗುತ್ತತನ** (ನಾ). ಮೋಸಗಾರಿಕೆ ; ವಂಚನೆ : ಕಾಯುವ ದಂಡಿಸಿ ಆತ್ಮನಿಗ್ರಹವ ಮಾಡಿ ಬಟ್ಟಗುತ್ತತನವ ಹಣ್ಣಿ ತಗಹಿನಲ್ಲಿ ಕುಳಿರ್ದು ಬೇಡಿಕೊಂಬ ತಪ ತಾನೇಕೆ (ಶನ್ಯಸ. ೯. ೩೨೩-೬೩೩) ; ಅಹಹ ಕುಡುವೆನೆಂಬ ಬುದ್ಧಿ ಚಿತ್ತದೊಳಗೆ ಬೇಗ ಹೊಳದು ಕೊಟ್ಟೆನೇಳು ತಂಗಿ ಬಟ್ಟಗುತ್ತತನವಿದೇವುದು (ಕೃಜಾರ. ಹ. ೨೬೩-೩). [ಬಟ್ಟಗುತ್ತ + –ತನ]

**ಬಟ್ಟಗೆ** (ಅ). ದುಂಡಗೆ ; ಗುಂಡಾಗಿ : ಬಾಳಾಂತು ಬಳಸಿ ಬಟ್ಟಗೆ ಬಂದು ಸುತ್ತುರೆಗಾಳಿಯಂತೊದಗಿ ಸುತ್ತುವರು ಏಳೆಂಟು ಹದಿನಾಱು ಹಾರ

ಹರಿಣನಂತೆ ಸಾಲಾಗಿ ಸರಳಿಸುತಿಹರು (ಭರತ. ೬೩-೩೦).

[ಬಟ್ಟ₂(<ಬಟ್ಟಿತು) + —ಅಗ್ಗೆ]

**ಬಟ್ಟಗೆಯ್ದು, ಬಟ್ಟಗೈದು** (ನಾ). ಗುಂಡನೆಯ ಆಯುಧ ; ಚಕ್ರಾ ಯುಧ : "ಬಟ್ಟಗೆಯ್ದು[ಪಾಠಾಂ. ಗೈದು]ವೆನೆ ಚಕ್ರಂ" (ಶಬ್ದಮ. ೬೨). 'ಬಟ್ಟಗೆಯ್ದು' ಪರಾ. ಬಟ್ಟಗೈದು : "ಪಾಱುಂಬಳೆ, ಬಟ್ಟಗೈದು—ಈ ೨ ಚಕ್ರಂ" (ಶಬ್ದಾ. ೪೭-೦೦); ತನ್ನಿಂ ತಾನೆ ಚತುರ್ಭುಜನಕ್ಕುಂ ಸಂಕಿನ ಬಟ್ಟಗೈದಿನ ಗಜೆಯ ತಾವರೆಯ ಸೊಬಗಿನ ಪೊರ್ದುಗೆಯಿನೆಸೆಗುಂ (ರಾಮಾಶ್ವ. ೬೪-೦೦).

ಬಟ್ಟಗೈದುಗೈಯವ = ದುಂಡಗಿರುವ ಆಯುಧವನ್ನು ಹಿಡಿದಿರುವವನು ; ಚಕ್ರಪಾಣಿ ; ವಿಷ್ಣು : "ಬಟ್ಟಗೈದುಗೈಯವನೆಸಲ್ಕಿಂದಿರಾಪತಿಯ ನಾಮಂ" (ಶಬ್ದ. ೬೨). [ಬಟ್ಟ₂ (< ಬಟ್ಟಿತು) + ಕೆಯ್ದು]

**ಬಟ್ಟಗೈದು** 'ಬಟ್ಟಗೆಯ್ದು' ನೋ.

**ಬಟ್ಟಗೊಡೆ** (ನಾ). ಗುಂಡಗಿರುವ ಕೊಡೆ, —ಛತ್ರಿ : ಬಟ್ಟಗೊಡೆ ಚಂದ್ರಕಾಂತಿಯನಟ್ಟುಂಬರಿಗೊಳೆ (ಶಂಕಚಾ. ೬-೯) ; ಒಗೆಯೆ ಕವಿಲ್ತ ಕಾಸೆ ಪೊಸಜನ್ನಿವರಂ ಶಿಖಿ ಕೋವಣಂ ಕರಂಡಗೆ ಕಿಸುವೊನ್ನ ಬಟ್ಟಗೊಡೆ. . . ಬಗೆವುಗೆ ಬಂದನಂದು ಬಲಿಯಲ್ಲಿಗೆ ವಾಮನನಾಗಿ ಕಾಮದಂ (ಅರ್ಧನೇ. ೬-೨೩) ; ಎಸೆದುದು ಬಿಳಿಯ ಬಟ್ಟಗೊಡೆ ನಾರದನಾ (ಜಗಂ. ೦೦-೦೦). [ಬಟ್ಟ₂ (< ಬಟ್ಟಿತು) + ಕೊಡೆ₂]

**ಬಟ್ಟಚಕ್ರ** (ನಾ). = ಬಟ್ಟಗೆಯ್ದು : ಬಿಟ್ಟಳಾಸುರಕರ್ಪೂವ ಶುಕ್ರದೇವರು ಕೊಟ್ಟ ವೈಷ್ಣವಮಂತ್ರದಿಂದೆ ಬಟ್ಟಚಕ್ರವ ಬಲಗೊಂಡು ಪ್ರಾರ್ಥಿಸಲಾಗಿ ತಟ್ಟನೆ ಪಥವ ಪಾಲಿಸಿತು (ಪೋಹಕ. ೨೯-೩೩).

[ಬಟ್ಟ₂ (< ಬಟ್ಟಿತು) + ಚಕ್ರ₁]

**ಬಟ್ಟಚ್ಚಿ** (ನಾ). ಗುಂಡಾಗಿರುವ ಕಣ್ಣು : ಕೆಮ್ಮೀಸೆಯ ಪೊದರ್ದಲೆಯ ಬಟ್ಟಚ್ಚಿಯ ಕಟ್ಟುಜಿಡ ಡಗೆಯ ಪೇರೊಡಲ ಗೋರರೂಪಿನ ದಾನವಂ (ರಾಮಾಶ್ವ. ೦೦೦-೩೦). [ಬಟ್ಟ₂ (<ಬಟ್ಟಿತು) +ಅಚ್ಚಿ]

**ಬಟ್ಟಜವ್ವನ** (ನಾ). ದುಂಡಗಿರುವ ಮೊಲೆ ; ವೃತ್ತಸ್ತನ : ಬಟ್ಟಜವ್ವನದೆಡೆಗಳೊಳ್ ವಿಟರ ದಿಟ್ಟಿಗಳ್ ನಟ್ಟಂತೆ ನಿಲೆ (ಶಬಶ. ೦೦-೦೬) ; ಬಟ್ಟಜವ್ವನದ ಬಿಪ್ಪೋದರಿಯರಂ ಪೆಗಲೊಳ್ ಪೆಂಪಿಂ ತಳೆದು ತಳರ್ವ ವಿಪುಳ ವಿದ್ಯಾಧರರ್ಗೆ ಸಹಾಯವಾಗಿ . . . ಕಳುಪಲ್ (ರಾಜಶೇ. ೦-೦೩೩ ವ).

[ಬಟ್ಟ₂ (< ಬಟ್ಟಿತು) + ಜವ್ವನ]

**ಬಟ್ಟಜವ್ವನೆ** (ನಾ). ದುಂಡಗಿರುವ ಮೊಲೆಗಳನ್ನು ಹೊಂದಿದವಳು ; ವೃತ್ತಸ್ತನೆ : ಉಟ್ಟುದು ತೊಟ್ಟುದೆಲ್ಲವ ಮುಕ್ತಿಯೆಂದೆಂಬ ಬಟ್ಟಜವ್ವನೆಗೆ ವತ್ತೆಯನು ಅಟ್ಟಿ ನಿಂದಂತೆ ನಿರ್ಗ್ರಂಥಮಿರದೆಯಳವಟ್ಟುದು ತನ್ನನಿಪಶಿಗೆ (ಶ್ರೀಜಿ. ೦-೩೩) ; ಮುಟ್ಟದೊಡಸು ನಿಲ್ಲದೆನುತೊರ್ವ ತೊಲಗಿದು ಬಟ್ಟಜವ್ವನೆಯನಪ್ಪಿದನು (ಪೋಹಕ. ೦೬-೩೩); ಬಟ್ಟಜವ್ವನೆಯರಂ ಶಿಂತಾವರೆಂದು ಬಾಯ್ಬಿಟ್ಟನ್ನು ನುಡಿಯಲದೇಕೆ (ಭರತ. ೦-೩೦).

[ಬಟ್ಟಜವ್ವನ + —ಎ₂]

**ಬಟ್ಟತಲೆ**(ನಾ). ಬೋಳುತಲೆ ; ಕೂದಲಿಲ್ಲದ ತಲೆ : ಬಟ್ಟತಲೆಯವನಾದರೆ ಹೆಡಿಗೆ ಹೊತ್ತಾನೇ ? (ಗಾದೆ). [ಬಟ್ಟ₃ (<ಬಱಿದು) + ತಲೆ₁]

**ಬಟ್ಟದಲೆ** (ನಾ). ಗುಂಡಗಿರುವ ತಲೆ : (ಮುಂಬಯಿ. ೬. ೩-೩೦).

[ಬಟ್ಟ₂ (<ಬಟ್ಟಿತು) + ತಲೆ₁]

**ಬಟ್ಟದುಱುಂಬು** (ನಾ). ಗುಂಡಗಿರುವ ತುರುಬು; ದುಂಡಾದ ಮುಡಿ : ಮಲ್ಲಿಗೆ ಮೊಲ್ಲೆ ಜಾಜಿ ಕೇತಕಿ ಮೊದಲಾದ ಕುಸುಮಕುಲಮನಾಂತು ಮೆಱೆವ ಬಟ್ಟದುಱುಂಬಿನ . . . ಬಸವರಾಜಂ (ಬಸವ. ೨-೦೬).

[ಬಟ್ಟ₂ (<ಬಟ್ಟಿತು) + ತುಱುಂಬು₁]

**ಬಟ್ಟದೆನೆ** (ನಾ). ವೃತ್ತಾಕಾರವಾದ ಕೋಟೆಯ ತೆನೆ : ಪಳಿಕಿನ ಕೋಂಟೆ ಬಟ್ಟದೆನೆ ಬೇವಿನ ದಂಡೆ ನಭಕ್ಕೆ ವಿಱುವಟ್ಟಳೆ . . . ಮೆಱೆಗುಂ ಪುರದೊಳ್ ನಿರಂತರಂ (ಗಿಂಶ. ೨-೬೯); ಹೊಸ ಹೊಂಗೋಂಟೆಯ ಬಟ್ಟದೆನೆಯ ರಂಜಿಸುವ ದಳಾವಳಿ (ಜಯಕಾ. ೦-೩೩).

[ಬಟ್ಟ₂ (<ಬಟ್ಟಿತು) + ತೆನೆ₁]

**ಬಟ್ಟದೊಡೆ** (ನಾ). ದುಂಡಗಿರುವ ತೊಡೆ ; ಪುಷ್ಟವಾಗಿರುವ ತೊಡೆ : ಬಲ್ಲಿದಲೆಯಂ ತೋಳ್ಗೀಳ್ದನಗಲ್ದುರದಂ ಬಟ್ಟದೊಡೆಯುವಂ ಕೆಂಗಣ್ಣಂ . . . ಒಲ್ದೊಲಿಸುಗುಮೆಸೆವ ಬೀರಸಿರಿಯಂ ಧುರದೊಳ್ (ಕಾವ್ಯಾ. ವ. ೨೩೬); ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ ನಿನ್ನ ಕಿಱುದೊಡೆಗೆ ಕಾಮನ ದೊಣೆ ತೋಣೆಯಲ್ಲಂ (ಸಂಬಿರ. ೦೯-೦೬). [ಬಟ್ಟ₂(<ಬಟ್ಟಿತು) + ತೊಡೆ₂]

**ಬಟ್ಟದೊಡೆಯ** (ನಾ). ದುಂಡಗಿರುವ ತೊಡೆಗಳುಳ್ಳವನಂ : ಅತ್ತಕ್ಕೆ-ಅಲರ್ಗಣ್ಣಂ, ಬಟ್ಟದೊಡೆಯಂ (ಶಮದ. ೦೮೬ ಪ್ರಯೋ).

[ಬಟ್ಟದೊಡೆ+ —ಅ₇]

**ಬಟ್ಟನೆ** (ಅ). = ಬಟ್ಟಗೆ : ಪುಟ್ಟುವ ಗಾಳಿಯ ಬಱಿಯನೆ ಬಟ್ಟನೆ ಸುಱಿಗೊಳೆ ಮರುದ್ವಿವಮಾನಪ್ರಕರಂ ತಿಟ್ಟನೆ ತಿರಿಯೆ ನಿಶಾಚರನಿಟ್ಟನದೊಂದುಗ್ರಗದೆಯಿನಸುರಾಂತಕನಂ (ಜಗಂ. ೦೨-೪೩) ; ತಿಟ್ಟನೆ ಬಟ್ಟನೆಯೆಂಬಿವ ಱಿಗೊಳ್ ಭ್ರಮಾರ್ಥಂ (ಶಮದ. ೪೦೭) ; ಅಬಲೆಯ ಬಟ್ಟನೆಸೆವ ಬಲ್ಮೊಲೆಯೆಂಬೆರಡುಂ ಬೆಟ್ಟದ ತಪ್ಪಲ ನಡುವಣೆಱುಂಬಿನೊಳಡಗಿ . . . ನೀಱಿನ ಬಗೆ . . . ನಡೆಯುತ್ತಿರೆ (ಜಯಕಾ. ೪-೦೦).

ಬಟ್ಟನೆ ವರ್, ಬಟ್ಟನೆ ಬರ್ = ಸುತ್ತುವರಿದು ಬರು,—ತಿರುಗು, ಚರಿಸು : ಪೊಡಶಯುತ್ತ್ವಿಜರ್ಗಿತ್ತುದರ್ಕೆ ಬಾಯ್ಬಿಟ್ಟರೆ ವಿಪ್ರಕೋಟಿ ಮಡಗಲ್ಕೆಡೆಯಿಲ್ಲದೆ ಪೊನ್ನ ರಾಶಿಯಂ ಬಟ್ಟನೆ ಬಂದು ಕಾಯೆ ಯಮನಂ ದನನೇಂ ತೊದಳಿಲ್ಲದಿತ್ತನೋ (ಶಂಕಚಾ. ೬-೩೯) ; ಎನಿತಂ ಬೆದವೆದ ಬೆಂದಪಯ್ . . . ಎನಿತಂ ಭವಗಹನದೊಳಗೆ ಬಟ್ಟನೆ ಬರ್ಪಯ್ (ಅಜಪು. ೨-೬೨); ಎರೆಯಂ ಕರ್ಚಿ ಬಲಕ್ಕೆ ಪೋಗೆ ಶುಭದಂ ಪೆಣ್ಗಾಗೆ ಪೋಣಂತ್ರದಂಬರದೊಳ್ ಬಟ್ಟನೆ ಬರ್ಪೊಡತ್ಯಧಿಲಾಭಂ (ರೋಕೋಶ. ೦೨-೨೦) ; ಸುಱಿದನೆಂದು ಸಂಚಲಿಸಿದನುಂ ಬಟ್ಟನೆವಂದನುಮಕ್ಕುಂ (ಶಮದ. ವ. ೩೩ ವೃತ್ತಿ) ;

[ಬಟ್ಟ₂(<ಬಟ್ಟಿತು) + —ಅನೆ₂ (< —ಅನೆಯ₂)]

**ಬಟ್ಟಬಯಲ್** 'ವಯಲ್' ಪರಾ.

**ಬಟ್ಟಬಯಲು** 'ವಯಲ್' ಪರಾ.

**ಬಟ್ಟಬಾಣ, ಭಟ್ಟಬಾಣ** (ನಾ). (?) : ಅಭವನಿಂ ಕರಜಲರುಹಂಗಳು ಬಟ್ಟಬಾಣಂಗಂಕುರಿಸಿದವೊಲು ಪೃಥುಳೋನ್ನತಕರಾಂಬುಜಯುಗಂ ಚೆಲುವಾಯಿತಯ್ಯಂಗೆ (ಬಸವಪು. ೩೬-೩೯). ಭಟ್ಟಬಾಣ : ಲಲಿತ ಕರಪಲ್ಲವಂಗಳ್ ಶೋಭಿಸಿದುವು . . . ಭಟ್ಟಬಾಣಂಗೀಶಪೂಜೆಯಂ ಫಳಿಲನೆಸಗಲ್ ಕರಯುಗಂ ಜನಿಸಿದಂತೆವೊಲ್ (ಅರಾಕ. ೨-೩-೦೬). [?]

**ಬಟ್ಟಬೈಲು** 'ವಯಲ್' ಪರಾ.

**ಬಟ್ಟಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ ; ದುಂಡುಮಲ್ಲಿಗೆ : ಬಿಟ್ಟನಖಿಲಭೋಗವನೆಂಬ ವ್ರತಿಕರ ತೊಟ್ಟಿಸಲೆಂದಾ ಮದನ ಮಿಟ್ಟಿಯಂಬುಗಳ ಮಾಡಿಸಿದಂತುಟಹವಲ್ಲಿ ಬಟ್ಟಮಲ್ಲಿಗೆಯ ಮೊಗ್ಗೆಗಳು (ಅಂಜತ. ೨-೯೦). [ಬಟ್ಟ₂ (<ಬಟ್ಟಿತು) + ಮಲ್ಲಿಗೆ]

**ಬಟ್ಟಮುತ್ತು** (ನಾ). ಗುಂಡಗಿರುವ ಮುತ್ತು ; ದುಂಡಾದ ಮೌಕ್ತಿಕ: ಆ ದೇವಿ . . . ರಾಯನ ಮಕುಟಕಳವಟ್ಟು ಮೋದಿಸುವ ಬಟ್ಟ ಮುತ್ತಂ ದೊಗೆದ ಚಿಪ್ಪು ಬರಲಾದರಿಪುದೇಯೆಂಬ ಮಾಳ್ಕೆಯಿಂ ಸುಮ್ಮನಿರದೊಂದನಂತಾ ದಕ್ಷನು (ಶೀಕೃಪು. ೩-೨-೦೨); ಬಟ್ಟಮುತ್ತಿನ ಪದಕಹಾರನೆ ಬಾಹುಹಸ್ತಚತುಷ್ಟನೆ (ಕುರಂದ. ೦-೩-೨); ಬಟ್ಟಮುತ್ತುಗಳು ಕೇವಣಿಸಿರ್ದ ಪಾರಿಯ ಪಟ್ಟಾವಳಿ ಚಲ್ಲಣವ ತೊಟ್ಟು (ಪೋಹಕ. ೦೨-೪೩).

[ಬಟ್ಟ₂ (<ಬಟ್ಟಿತು) + ಮುತ್ತು₁]

**ಬಟ್ಟಮೊಗ** (ನಾ). ದುಂಡಾದ ಮುಖ: ಕರಮೆ ತತ್ಪುರನಾರಿಯರ ಬಟ್ಟಮೊಗದ ಮೆಯ್ಸಿರಿಗಂಡು ಕಱುಬಿ ಕಱಿಕಱಿಗಂದಿದನೊಯೆನಲ್ ಹರಿಣಾಂಕನುದರದ ಕಲಂಕಮೊಪ್ಪಿದುದು (ಪದ್ಮರಾ. ೯-೭೩); ನಗೆಮೊಗದ ವರಾ ಸಿರಿಮೊಗದವರು . . . ಬಟ್ಟಮೊಗದವರು ನಲ್ಮಗೆವೆತ್ತು ನಡೆದರೊಗ್ಗಿನಲಿ (ಮೋಹತ. ೨೪-೧೩); ಬಟ್ಟಮೊಗಕ್ಕೆ ಕಟ್ಟಿದಿರೊಳಿಸೆವ ಬಟ್ಟಮೆಱಿಯ ದಿಟ್ಟಿತಾಗದಂತೆ ಮುಱಿಗೆಯ್ದು (ರಾಜಶೇ. ೪-೧೪೮).

[ಬಟ್ಟ₂ (<ಬಟ್ಟಿತು) + ಮೊಗ]

**ಬಟ್ಟಮೊಲೆ,** ಬಟುಮೊಲೆ (ನಾ). ದುಂಡಾಗಿರುವ ಕುಚ ; ವೃತ್ತಸ್ತನ : ಬಟ್ಟಮೊಲೆಯಂತೆ ಕೊರಲೊಳ್ ಕಟ್ಟಿಕ್ಕಲ್ ನರಕಕೂಪದೊಳ್ ಮುಳುಗಲೊಡಂ ಬಟ್ಟೊಡನೆ ಸಗ್ಗವೇಱುವ ಬೆಟ್ಟಿಲ್ಲವೆಯೊಲ್ಲದಿರ್ದೊಡನ್ಯಾಂಗನೆಯಂ (ಅನಾಥ. ೧೪-೧೦೯); ಬೆಟ್ಟಿತಪ್ಪ ಬಟ್ಟಮೊಲೆಯಿಟ್ಟೆಡೆಯೊಳ್ ತೊಟ್ಟನೆ ಸಿಲ್ಕಿದ ಕಣ್ (ಕಬ್ಬಿಗ. ೭೮). **ಬಟುಮೊಲೆ :** ಚಟುಲ ಕಾಮೋದ್ದೀಪನದಿಂದೆ ಕಡುಧೂರ್ತವಟುಗಳು ರಸಿಕುವರಿಯರ ಬಟುಮೊಲೆಗಳ ಕೈದುಡುಕಿದುದು (ಮೋಹತ. ೭-೧೩).

[ ಬಟ್ಟ₂ ( < ಬಟ್ಟಿತು ) + ಮೊಲೆ₁ ]

**ಬಟ್ಟಲ್, ಬಟ್ಟಲು** (ನಾ). ೧. ಗುಂಡಗಿರುವ ಸಣ್ಣ ಪಾತ್ರೆ ; ಕಟೋರ : ಪಿರಿದೊಂದು ಕಾಜಿನ ಬಟ್ಟಲೊಳ್ ಕಮ್ಮಿತಪ್ಪ ನೀರಂ ತೀವಿ ಚಂದ್ರಬಿಂಬಮಂ ನೀರೊಳ್ ಕಾಣ್ಬಂತಿರೆ ಮಾಡಿ (ವಡ್ಡಾರಾ. ೦೬೭-೦೭) ; ಸೋರೆಯ ಬಟ್ಟಲಂ ನಂಬಿ ಕಂಚಿನ ಬಟ್ಟಲನೊಡೆವ ಗೊರವನುಮಂ (ದಶಕುಮ. ೯-೩೦); ವಾರುಣಿ ಕಳ್ಳನೀಂಟಿ ಮಱಿದಿಕ್ಕಿದ ಬಟ್ಟಲೊ . . . ಪೇಱಿನಲ್ಕೆ ನೀಹಾರಮಯೂಖಮಂಡಲಮದೇನೆಸೆದಿರ್ದುದೊ ಪಶ್ಚಿಮಾದ್ರಿಯೊಳ್ (ಅನಾಥ. ೩-೩). **ಬಟ್ಟಲು :** ೧. ಕರಿದಂ ಬಿಳಿದಂ ಬಿಳಿದಂ ಕರಿದಾಗಿರೆ ಮಾಟ್ಟಿ ಪೋಪ ಬಟ್ಟಲುಗಳನಂಬರದೊಳ್ನಲಿಪ . . . ಇಂದ್ರಜಾಲಿಗರಕ್ಕುಂ (ಸಮಯ. ೦೨-೦೯). ೨. ತಟ್ಟೆ ; ತಳಿಗೆ : ಉಂಬ ಬಟ್ಟಲು ಬೇಱೆ ಕಂಚಲ್ಲ ನೋಡುವ ದರ್ಪಣ ಬೇಱೆ ಕಂಚಲ್ಲ (ಬಸವ. ೫೭೦) ; ಹೊನ್ನ ಬಟ್ಟಲೊಳಾತಗಳಿಗೊಲಿದಿತ್ತನೈ ಕರ್ಪುರದ ವೀಳೆಯವ (ಕುಮಾರರಾ. ೪-೧೧) ; ಜಯರಾಮು ಮನೆ ಸೇರಿದಾಗ ಅವನ ತಂದೆ ಊಟಕ್ಕೆ ಕುಳಿತುಕೊಂಡಿದ್ದರು . . . ತಾಯಿ, ಮಗನಿಗೂ ಬಟ್ಟಲಿಟ್ಟಳು (ರಂಗಪ. ೦೩೭). ೩. ಮಂಡಿಯ ಚಿಪ್ಪು : ಬಟ್ಟಲು ಕಟಲ್ದ ಮೊಣಕಾಲ್ಗಳುಂ ಮೊಟ್ಟನೆ ಮುಱಿದ ನಿಟ್ಟೆಲುಗಳುಂ . . . ಕುಣಿದಾಡುವ ಮರುಳ್ಗಳುಂ ಮಹಾಭಯಂಕರಮಾಗೆ (ಮಹಾಶೇ. ೦೨-೩೪ ವ).

**ಬಟ್ಟಲಗಣ್ಣು, ಬಟ್ಟಲ ಕಣ್ಣು** = ಬಟ್ಟಲುಗಣ್ಣು : ಮುಟ್ಟು ಮೈಲಿಗೆ ಇಲ್ಲ ಬಟ್ಟಲಗಣ್ಣನ ದಿಟಯೋಗಿ ತಾ ಮಲಗಿಹನು (ಸಿದ್ಧಕೃ. ೩-೪) ; ಕಟ್ಟಾಣಿ ಕಟ್ಟಾಳ ಕಟ್ಟೀ ಮ್ಯಾಲೆ ನಿಂತಾಳ ಬಟ್ಟಲ ಕಣ್ಣ ತಿರುವ್ಯಾಳ (ಜನಪ. II, ೦೦೫೨). **ಬಟ್ಟಲ ತಂಬುಲ** = ಗೌರವಾರ್ಥವಾಗಿ ತಟ್ಟೆಯಲ್ಲಿ ಕೊಡುವ ವೀಳೆಯ : ಬಟ್ಟಲ ತಂಬುಲಂಬಡೆವ(ಂ)ನ್ತೀ ಮುರ್ಯಾದೆಯೆಲ್ಲ(ಂ)ಮಾಯ್ತು ಮರ್ವರಸರ ಮಾಡಿಸಿದೆರಡುನ್ದೇಗುಲಂ (ಶಾಸನ. IX-i, ೭೭-೩೩ ; 992).

[ದೇ. II ತಮಿ. ವಟ್ಟಿಲ್ ; ಮಲ. ವಟ್ಟ ; ತುಳು. ಬಟ್ಟಲ್, ಬಟ್ಲೊಳು ; ಕೊಡ. ಬಟ್ಟ ; ತೆಲು. ಬಟ್ಲ]

**ಬಟ್ಟಲು** 'ಬಟ್ಟಲ್' ನೋ.

**ಬಟ್ಟಲುಗಣ್ಣು** (ನಾ). ಗುಂಡಗಿರುವ ಕಣ್ಣು : ಕಟ್ಟಾಣಿ ಕಟ್ಟ್ಯಾಳು ಕಟ್ಟೆ ಮೇಲೆ ನಿಂತಾಳು ಬಟ್ಟಲುಗಣ್ಣು ತಿರುವ್ಯಾಳು (ಹಮಾಪ. ೦೦).

[ ಬಟ್ಟಲು (< ಬಟ್ಟಲ್) + ಕಣ್ಣು (<ಕಣ್) ]

**ಬಟ್ಟವಂಜರ** (ನಾ). ಗುಂಡಗಿರುವ ಪಂಜರ ; ದುಂಡಾದ ಪಂಜರ : ರತಿದೇವಿಯ ಕೇಳಿಗಿಟ್ಟ ಸುಣ್ಣಳುಕಿನ ಬಟ್ಟವಂಜರದ ಕೋಗಿಲೆಯಂಗೆಲೆವಂದುದಿಂದುಮಂಡಳದ ಕಳಂಕಲೇಖೆಯುಮರೇಂದ್ರವಧೂಮುಖಪತ್ರವಿಭ್ರಮಂ (ಅನಾಥ. ೨-೦೦).　[ ಬಟ್ಟ₂ (<ಬಟ್ಟಿತು) + ಪಂಜರ₁ ]

**ಬಟ್ಟವಕ್ಕಿ** (ನಾ). ಚಕ್ರವಾಕಪಕ್ಷಿ : ಬಟ್ಟವಕ್ಕಿಗಳಂಚೆ ಕೊಂಚೆ ಸಂಚರಿಸಿ ಬೊಬ್ಬಿಟ್ಟುದ ಕೇಳಿ ತಾಪಸರು ಕೆಟ್ಟರು (ಮೋಹತ. ೭-೦೯).

[ ಬಟ್ಟ₂ (<ಬಟ್ಟಿತು) + ಪಕ್ಕಿ ]

**ಬಟ್ಟವಟ್ಟು, ಬಟ್ಟವೊಟ್ಟು** (ನಾ). ಗುಂಡಾದ ಬಟ್ಟು,—ತಿಲಕ : ಮಿಸುಪ ಬಯ್ತಲೆಗಳಿಂ ಹ್ರಸ್ವಕೇಶಂಗಳಿಂ ನಿಸದಮಾ ಗುಲ್ಫಲಂಬಿತ ಚೇಲನಿಕರದಿಂದೆಸೆದಿರ್ಪ ಬಟ್ಟವಟ್ಟುಗಳಿಂದೆ . . . ಎಸೆಯುತ್ತಿರಲ್ (ಅರಾಕ. ೩-೬-೭). **ಬಟ್ಟವೊಟ್ಟು :** ಪುರಾಣೋಕ್ತ . . . ಅರಸುಗಳ್ಗಂ ವೈಶ್ಯತತಿಗಮತಿಶಯಮಾಗಿ ಸುರುಚಿರವಿಭೂತಿಯಿಂದಂ ಬಟ್ಟವೊಟ್ಟೆಂದು ನಿರವಿಕುಂ (ಅರಾಕ. ೦-೨-೦೩).　[ಬಟ್ಟ₂ (<ಬಟ್ಟಿತು) + ಬಟ್ಟು ]

**ಬಟ್ಟವಡೆ** (ಕ್ರಿ). ದುಂಡಾಗಿರು ; ವೃತ್ತತೆಯನ್ನು ಹೊಂದಿರು : ಬಟ್ಟವಡೆದ ರತ್ನಪವಳಮುತ್ತುಗಳ ಮೇಲ್ಕಟ್ಟು ಕಣ್ಮನಕೆ ರಂಜಿಸಿತು (ಮೋಹತ. ೨೭-೦೪).　[ ಬಟ್ಟ₁ (< ಬಟ್ಟು) + ಪಡೆ₁ ]

**ಬಟ್ಟವನಿ** (ನಾ). ಗುಂಡಗಿರುವ ಹನಿ ; ದುಂಡಾದ ತೊಟ್ಟು : ವನಜದಳಗಳಲ್ಲಿ ನಿಂದಮೃತದ ಬಟ್ಟವನಿಗಳೊ ಬಟ್ಟಮುತ್ತುಗಳೊ . . . ಎಂಬಂತೆ ಜನಪಗಕ್ಷರ ತೋಱುತಿಹುವು (ಶರಶ. ೦೮-೦೪).

[ ಬಟ್ಟ₂ (<ಬಟ್ಟಿತು) + ಪನಿ ]

**ಬಟ್ಟವಾಲು** (ನಾ). ಕಾಸಿ ಗಟ್ಟಿಯಾದ ಹಾಲು : ಕಾದಿಳಿಪಿಯಾಱಿದ ಬಟ್ಟವಾಲಿನಂತೆ . . . ಅತಿರುಚಿಯ ಪಡೆದುದು (ಸೂಪಶಾ. ೦-೭); ಬಟ್ಟವಾಲನು ಚಿಲುಪಾಲನು . . . ತನಿವಾಲ ಬಟ್ಟಜವ್ವನೆಯೆಡೆಮಾಡಿದಳರಸಗೆ ಬಟ್ಟಲು ಬಟ್ಟಲು ತುಂಬಿ (ಶರಶ. ೦೦-೩೪) ; ಚಿಲುಪಾಲು ತಂಬಾಲು ಕೆನೆವೆರಸಿದ ಪಾಲು ಸುಲಲಿತ ಬಟ್ಟವಾಲುಗಳ . . . ಲಲನೆಯರುಣಬಡಿಸಿದರು (ಕಂಪಪ. ೯-೯೦). 'ಬಟ್ಟಳೆ' ಪರಾ.

[ ಬಟ್ಟ₂ + ಪಾಲು₁ (<ಪಾಲ್₁ ) ]

**ಬಟ್ಟವಾವುಗೆ** (ನಾ). (ಮುಂಭಾಗದಲ್ಲಿ) ಗುಂಡಗಿರುವ ಹಾವುಗೆ ; ದುಂಡಾದ ಪಾದುಕೆ : ಶೈಲಪದ್ಮದ ಬಟ್ಟವಾವುಗೆಗಳನು ಪೊಂಬಾಳೆಯ ನಿಡುಚವರಗಳಾ ಲೀಲೆಗಾತಿಯರೊಯ್ಯುತಿರೆ (ಶರಶ. ೪೭-೪೩).

[ ಬಟ್ಟ₂ (<ಬಟ್ಟಿತು) + ಪಾವುಗೆ ]

**ಬಟ್ಟವುತ್ತ** (ನಾ). (?) : ಕಮ್ಮಟನಂಬು ಕಮ್ಮಟಂಗೆಂಬಂತೆ ಬಟ್ಟವುತ್ತರ ಬಾಳಂತೆ ತನ್ನ ಕೊಂಬೆ ತನಗೆ ಘಾತಕವಾಗೆ (ಅರ್ಥನೀ. ೯-೩೩ ವ). [?]

**ಬಟ್ಟವೆಱೆ** (ನಾ). ಗುಂಡಗಿರುವ ಚಂದ್ರ ; ಪೂರ್ಣಚಂದ್ರ ; ಹುಣ್ಣಿಮೆಚಂದ್ರ : ಬಟ್ಟವೆಱೆಯಂತೆ ಮೊಗ . . . ಭೂಪಾಲಕನ ಪಟ್ಟದಾನೆಯ ಕುಂಭದಂತೆ ಜಘನಂ ಸೊಂಪುವೆಟ್ಟಿರ್ದ ವಾರನಾರಿಯರು ನಡೆತಂದರು (ಸೌಂದಕು. ೭-೩೨) ; ಬಟ್ಟವೆಱೆಯ ಬೆಳ್ದಿಂಗಳ ಹೊಂದಾವರೆವಟ್ಟಲೊಳ್ ಸೋದಿಪರುಂಟೇ (ಮೋಹತ. ೦-೨೪) ; ಬಟ್ಟಮೊಗಕ್ಕೆ ಕಟ್ಟಿದಿರೊಳಿಸೆವ ಬಟ್ಟವೆಱೆಯ ದಿಟ್ಟಿ ತಾಗದಂತೆ ಮುಱಿಗೆಯ್ದು (ರಾಜಶೇ. ೪-೦೪ ವ).　[ಬಟ್ಟ₂ (<ಬಟ್ಟಿತು) + ಪೆಱೆ]

**ಬಟ್ಟವೊಟ್ಟು** 'ಬಟ್ಟವಟ್ಟು' ನೋ.

**ಬಟ್ಟಸಾಣೆ** (ನಾ). ಗುಂಡಗಿರುವ ಸಾಣೆಕಲ್ಲು : ಚಂದ್ರಮಂಡಲಮೆಸೆದುದು ಕಿಸುಗಲ್ಲ ಬಟ್ಟಸಾಣೆಯ ಪಾಂಗಿಂ (ದಶಕು. ೩-೩೪).

[ಬಟ್ಟ₂ (<ಬಟ್ಟಿತು) + ಸಾಣೆ₁]

**ಬಟ್ಟಳೆ** (ನಾ). ಗಟ್ಟಿಮಜ್ಜಿಗೆ : ಇಟ್ಟು ನವಸಪ್ತಾರ್ಚಿಗೇಹದಗ್ರದಿ ನಿಮಿರ್ದ ಬಟ್ಟಳೆಯ ಕಾಸುತಂ ಕ್ಷಾರಪ್ರಮಾಣದಿಂ ಪಿಟ್ಟನಿತ ಕೈಗೊಳಿಸಿ ಜೀರಗೆ ಮರೀಚಮಂ ದಟ್ಟಮಾಗರವೆಱಿವುತ ಚಟ್ಟಿಯೊಳು ಘೃತವಿಂಗು ಪಯಫೇನಮಂ ನೀಡಿ (ಅಂಗಕು. ೯-೨೯).　[ಬಟ್ಟ₁ + ಅಳೆ₂]

**ಬಟ್ಟಱೆ** (ನಾ). ಹಾಸುಗಲ್ಲು ; ಚಪ್ಪಟೆಯಾದ ಕಲ್ಲು ; ಶಿಲಾಪಟ್ಟಕ : ಸಸಿಗಲ್ಲ ಬಟ್ಟಱೆಗಳ ಮೇಲಿರಳೆಗಳು ನಸುನಿದ್ರೆಯಿಂದೊಱಗಿರಲು (ಶಬ್ದಮ. ೯-೧೬). 'ಪಟ್ಟಱೆ' ಪರಾ. [ಬಟ್ಟು$_?$ (<ಪಡು$_1$)+ಅಱೆ$_4$]

**ಬಟ್ಟಾಡಿಸು** (ಕ್ರಿ). ಹನಿಸು ; ಸುರಿಸು : ಮಗಳಂ ಮುದ್ದಾಡಿಸದೆ ಕಣ್ಣ ನೀರಂ ಬಟ್ಟಾ [ಪಾಠಾಂ. ಬೀಱಾ]ಡಿಸುವುದುಂ (ರಾಜಾವ ೭-೩೯ ವ). [ಬಟ್ಟು + ಆಡಿಸು]

**ಬಟ್ಟಾಡು, ಬೊಟ್ಟಾಡು** (ಕ್ರಿ). ೧. ದುಂಡಗಿರುವ ವಸ್ತುಗಳಾದ ಚೆಂಡು, ಗೋಲಿ, ಬಚ್ಚ ಮೊದಲಾದುವುಗಳಿಂದ ಆಡು ; ಚೆಂಡಾಟ, ಗೋಲಿಯಾಟ ಮೊದಲಾದುವುಗಳನ್ನು ಆಡು : ತನ್ನೋರಗೆಗಳಪ್ಪ ಪಲಂಬರ್ ಮಾಣಿಗಳ್ವೆರಸು ಪೊಱವೊಟಲೊಳ್ ಬಟ್ಟಾಡುತ್ತಿರೆ (ಪಮ್ಪಭಾ. ೭೩-೨೨); ವಟ್ಟಂದೆತ್ತುದು ಬೆಳ್ಳಿಯ ಬೆಟ್ಟಂ ಬಿಣ್ಪಂಗೆನಿಪ್ಪ ಕೋಟಿಕಶಿಲೆಯಂ ಬಟ್ಟಾಡಿದ ಬಾಹಾಬಳವಿಟ್ಟಳವೆಂಟನೆಯ ಕೇಶವಂಗಿದಿರುಂಟೇ (ಸುಕುಮಾ. ೦೨-೬೮); ಹೇಮಾಚಳವುಂ ಬಟ್ಟಾಡುವೀಶಪ್ರಮಥಸಮಿತಿ ಬಂದತ್ತು ಸಂರಂಭದಿಂದಂ (ಜಗನ್ನಾ. ೦೯-೦೦). ೨. (ಕಣ್ಣೀರು) ತೊಟ್ಟಿಕ್ಕು ; ಹನಿ : ಇಟ್ಟ ಮುಸುಕಿಳಿದ ಸುಯ್ ನಯನದೊಳು ಹೊಳೆಹೊಳೆದು ಬಟ್ಟಾಡುವುದಕ (ಹರಿಶ್ಚ. ೫೦ ೨೦೯) ; ಸುಟಿಗೊಂಡೇಟ್ವಮುದಶ್ರು ಪಕ್ಷ್ಮಪುಟದೊಳ್ ಬಟ್ಟಾಡೆ (ಅನಂತ. ೨-೫೨) ; ಗಜಹಯಂಗಳ ಕಣ್ಣೊಳು ಬಟ್ಟಾಡಿದುವು ಕಂಬನಿಗಳು (ಶಬ್ದಮ. ೩೫-೦೯). **ಬೊಟ್ಟಾಡು**: ೨. ಏಣಾಂಕನಿಭವದನೆಯರು . . . ದಿಟ್ಟಿಗಳೊಳಗಶ್ರುಗಣ ಬೊಟ್ಟಾಡಲು ತೊಟ್ಟನೆ ಬಳ್ಳಳಲಿದರು (ಶ್ರೀಪಾಂ. ೬-೩೮). [ಬಟ್ಟು+ಆಡು$_1$]

**ಬಟ್ಟಾಣಿ** 'ಬಟಾಣಿ' ನೋ.

**ಬಟ್ಟಾನೆ** (ನಾ). (?) : ಮೇಲ್ವಾಯ್ದ ಸಿಂಗಂಗಳೆಲ್ಲಮಾದಿಯ ಪಂದಿಯಂ ಪೇಱದ ಗ್ರಾಮಸಿಂಹಂಗಳಂತಿರ್ದುವು ಪೆಳಱ ಬೆಂಗುಡುವ ಬಟ್ಟಾ [ಪಾಠಾಂ. ಟ್ಟು] ನೆಗಳಂ ಮಣಿಯೇಱಂದಿಱದಿತ್ತಿದಲ್ಲಿ ಮದದ ಮಸಿಯುಂ ಮಳೀಮಸಮಾದ ಮುಸುಂಬು ಮುಸುವಿನ ಮುಸುಂಬಿನಂತೆ ಕಡಲಂ ಕಟ್ಟಲೆಂದು ಬೆಟ್ಟಮಂ ಕಿಟಿತ್ತಿದ ಸುಗ್ರೀವನಂತಿರ್ದುದು (ಅರ್ಜುನ. ೫-೦೦೩ ವ). [ ? ]

**ಬಟ್ಟೆ$_1$** (ನಾ). ೧. ಹೊಟ್ಟೆ ; ಉದರ ; ಬಸಿರು : ಬಟ್ಟೆಯೊಡೆವಂತೊಱಲುವವರು ನಗುತಂ ನಲಿವು ಹುಟ್ಟಿಯಾನಂದಮಯರಾಗೆಲ್ಲರುಂ . . . ಪರಸುತ್ತಿರ್ದರು (ಸಿದ್ಧರಾ. ೯-೨೬) ; ಮೊಗರಸ ರಾಗವೇಱೆ ನೊಸಲಟ್ಟತರಂ ಪೊರೆಯೇಱೆ ಗಾತ್ರದಿಂದೊಗೆದು ಮುದಶ್ರು ಜಾಱೆ ತೆಳುವಟ್ಟೆ [ಟ್ಟೆ] ಯೊಳೊಯ್ಯನೆ ಸೂಲೆದೋಱಲ್ (ಕಾವ್ಯಸಾ. ೩೩೯). ೨. ಒಂದು ಬಗೆಯ ಹೊಟ್ಟೆಯ ರೋಗ ; ಅಂಡವಾಯು : 'ಬಟ್ಟೆಕಟ್ಟು', 'ಬಟ್ಟೆಬೀಳು' ಪರಾ.

[ದೇ. ॥ ಮಲ. ವಟ್ಟ ; ತುಳು. ಕೊಡ. ಬಟ್ಟೆ]

**ಬಟ್ಟೆ$_2$, ಭಟ್ಟೆ$_1$** (ನಾ). ಧಾನ್ಯಗಳನ್ನು ಅಳೆಯುವ ಒಂದು ಅಳತೆ,–ಪರಿಮಾಣ : ಅದನ್ನು ವಾರಕ್ಕೆ ಮಾಡುತ್ತಿದ್ದವರು ಎಲ್ಲಾ ಕಳೆದು ವರ್ಷಕ್ಕೆ ನಾಲ್ಕು ಬಟ್ಟೆ ಬತ್ತ ಕೊಡುತ್ತಿದ್ದರು (ಶುಕಶೋ. ೬) ; ಒಂದು ಎರಡು ಮೂರು ಎಂಬಾಗ ಸಾವಿರ ಬಟ್ಟೆ ಭೂಮಿಯನ್ನು ನಟ್ಟೂ ಆಯಿತು (ಪಾಕನೀ. ೯೦). **ಭಟ್ಟೆ$_1$** : ನಮ್ಮ ಸೀಮೆಯಿಂದ ಏಳು ಸಾವಿರ ಭಟ್ಟೆ ಅಕ್ಕಿಯನ್ನು ಮೂರು ತಿಂಗಳ ಒಳಗೆ . . . ಜಮಾಯಿಸಿ ಕೊಟ್ಟೇವು (ರಾಜೇಂದ್ರ. ೦೨೯).

[ ದೇ. ॥ ತಮಿ. ವಟ್ಟೆ; ಕೊಡ. ಬಟ್ಟೆ = ಎಂಬತ್ತು ಸೇರಿನ ಅಳತೆ ]

**ಬಟ್ಟೆ$_3$** 'ಭಟ್ಟೆ$_2$' ನೋ.

**ಬಟ್ಟೆ$_4$** (ನಾ). (?) : ಬಾವಿಯ ಕೇರ(ಱ) ನಿಟ್ಟಗೆಯೆ(ಯು) ಕಟ್ಟಿಸು ಸುಣ್ಣಮನಿಕ್ಕು ಕಲ್ಲೊಳಾ ಪಾವಡೆಗಳೊಳ್ಪದಂತಿರಿಸು ಕಟ್ಟುಗೆ(ಗು) ಕಿಟ್ಟ ನೋಳಿಕ್ಕು ಮತ್ತಮಾ ಬಾವಿಯ ಬಟ್ಟೆ ನೀಳ್ದಗುಱೆ ಕಲ್ಗಳನೊಳ್ಪತನಿಕ್ಕಿ ಮತ್ತೆ ನೀಂ ಬಾವಿಯ ಸುತ್ತಲುಂ(ಮುಂ) ಮದಿಲನಿಕ್ಕಿಸು ಮಾಡಿಸು ನೀ(ಧ)ರ ಭಾಗ(ರ)ಕಂ (ಚಟ್ಟಮ. ೦೦-೬೧). [?]

**ಬಟ್ಟೆ$_5$** (ನಾ). (?) : "ಬಟ್ಟೆಯುದು ಸಡ್ಡೆಯಾಕ್ಕುಂ [ಪಾಠಾಂ. ಪೊಟ್ಟಲದು ಪಟ್ಟೆಯಾಕ್ಕು]" (ಮಂಗರಾ. ೧೦೨-೩). [?]

**ಬಟ್ಟೆಕಟ್ಟು** (ಕ್ರಿ). (ಬಾಧೆಯುಂಟು ಮಾಡುವ) ಹೊಟ್ಟೆಯೊಳಗಿನ ವಾಯುವನ್ನು ನಿಲ್ಲಿಸು ; ಅಂಡವಾಯುವನ್ನು ತಡೆ : ಬಟ್ಟೆ ಬಿದ್ದು ಬಹಳ ತೊಂದರೆಯಾಗಿದೆ, ಬಟ್ಟೆಕಟ್ಟಬೇಕು (ರೂ). [ಬಟ್ಟೆ$_1$ +ಕಟ್ಟು$_1$]

**ಬಟ್ಟೆಗೆ** (ನಾ). ಬಣ್ಣ ಬಳಿಯುವ ಕುಂಚ : ಕೂಡ ಬಟ್ಟೆಗೆಯನ್ ತಿಟ್ಟವಿಡಲ್ಕಿದೇನ್ನರೆದನೇ (ಎಕ. V. ಅರಕ. ೯೯-೬; 1079); ಮದನನೆ ಬಟ್ಟೆಗೆಯೊಳ್ ತಿಟ್ಟವಿಟ್ಟವೊಲ್ ನೃಪನೆಸೆದಂ (ಶಬ್ದಮ. ೬-೦೨೬) ; ಪಳಿಕಿನ ಪಲಗೆಯುಮಂ ಬಣ್ಣವಣ್ಣಿಗೆಯ ಬಟ್ಟೆಗೆಗಳಂ ತಾನೆ ತಂದು ಕೊಟ್ಟು (ರಾಜಾವ. ೭-೬೮ ವ). [<ಸಂ. ವರ್ತಿಕಾ./ತಮಿ. ವಟ್ಟಿಕೈ]

**ಬಟ್ಟೆಗೆವಲಗೆ** (ನಾ). ಚಿತ್ರವನ್ನು ರಚಿಸುವ ಹಲಗೆ,–ಫಲಕ : ಬರೆಯಲೆಂದು ಬಟ್ಟೆಗೆವಲಗೆಯಂ ತರಿಸಿ ತಿಟ್ಟವಿಟ್ಟು ಬರೆವನ್ನೆಗಂ (ಆದಿಪು. ೯-೬೩ ವ); ಶರತ್ಕಾಲದ ಜಳಧರಮುಂ ಕಂಡದಱ ದೊರೆಯ ಚೈತ್ಯಾಲಯಮುಮಂ ಮಾಡಿಸುವೆನೆಂದು ಬಟ್ಟೆಗೆವಲಗೆಯಂ ತರಿಸಿತದಾಕಾರಮುಂ ಬರೆಯೆ (ಪಾರ್ಶ್ವಪು. ೨೩); ಬಟ್ಟೆಗೆವಲಗೆಯೊಳಾಗಳೆ ದಿಟ್ಟಿಗೆ ನೇರ್ಪಟ್ಟು ತೋಱೆ ನೆಟ್ಟನೆ ಭೂಪಂ ತಿಟ್ಟವಿಡಲ್ (ಪಾರ್ಶ್ವಪು. ೯-೬೬). [ಬಟ್ಟೆಗೆ+ಪಲಗೆ]

**ಬಟ್ಟೆಜಾರು** (ಕ್ರಿ). = ಬಟ್ಟೆಬೀಳು: ಬಟ್ಟೆಜಾರಿ ಬಹಳ ತೊಂದರೆಯಾಗಿದೆ (ರೂ). [ಬಟ್ಟೆ$_1$+ಜಾರು$_1$ (<ಜಾಱು$_1$)]

**ಬಟ್ಟೆಡು, ಬೊಟ್ಟೆಡು** (ಕ್ರಿ). ೧. ಕಸ್ತೂರಿ, ಚಂದನ, ಕುಂಕುಮ ಮೊದಲಾದುವುಗಳಿಂದ ಹಣೆಯ ಮೇಲೆ ಗುಂಡಾದ ಗುರುತನ್ನು ಇಡು,–ತಿಲಕವಿಡು : ದಿಟ್ಟೆ ಹತ್ತೀತೆಂದು ಬಟ್ಟೀಡಱಿದ್ದೆ ಭಸಿತದ ಹಣೆಮೇಲೆ ಸುಟ್ಟುಹೋಗಲೆಂದು ಕೆಟ್ಟಗಣ್ಣ (ಸಿದ್ಧಪು. ೯-೯೯). ೨. (ಕಣ್ಣೀರು) ತೊಟ್ಟಿಕ್ಕು; ಹನಿ : ಬಟ್ಟಿಡುವಾನಂದಾಶ್ರುವಿನೊಳಗಂಪು ತೊಟ್ಟನೆ ಸಖಿಯ ಕೇಳಿದಳು (ಅಂಶಾ. ೯-೦೦೦). **ಬೊಟ್ಟಿಡು** : ೧. ಕಳ್ದೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು (ಶಂಕರಾ. ೪-೬೬ ವ) ; ಪಟ್ಟಮಂ ನೆರೆದು ಕಟ್ಟಿ ಬೊಟ್ಟಿಟ್ಟರ್ . . . ಆತನಾ ಪಿನವ್ರನಿಟಿಲಾಗ್ರದೊಳ್ (ಅನಂತ. ೯-೫೯). ೩. ಹಣೆಯ ಮೇಲೆ ತಿಲಕವಿಟ್ಟುಕೊಳ್ಳು : ರೋಷವ ಹಿಡಿದರೀಗಳೆ ಸುಟ್ಟು ಬೊಟ್ಟಿಡುವನು ಜಗತ್ರಯವ (ಶಬ್ದಮ. ೦೬-೦೬); ಬೆಟ್ಟ ಕರ್ಪುರವುಂದು ಬೊಟ್ಟಿಡಲು ಬೂದಿಲ್ಲ (ಸರ್ವಜ್ಞ. ೦೦೦). [ಬಟ್ಟು+ಇಡು$_1$]

**ಬಟ್ಟಿತು, ಬಟ್ಟಿತ್ತು** (ನಾ). ೧. ಗುಂಡಗಿರುವುದು; ದುಂಡಾದುದು; ವರ್ತುಲಾಕಾರವಾದುದು : "ಸೊನ್ನಲಿಗೆಯೆನೆ ಬಟ್ಟಿತಕ್ಕು" (ಶಕ್ಕೃ.೯೬); ತುಱುಗೆಮ ನೀಳ್ದ ಪುರ್ವ ನಿಡುಗಣ್ ಪೊಱೆಯಲ್ಲದೆ ಬಟ್ಟಿತಪ್ಪ ಬಾಯ್ದೆಱೆ (ಶಂಕರಾ. ೦-೦೦೯) ; ಅನಿಲಹತಿಯಿಂದಂಬರಕೆ ನೆಗೆದ ವನಧಿ ಮಧ್ಯದ ಬಟ್ಟಿತಪ್ಪ ಚಿಪ್ಪೊ . . . ಎನಲೆಸೆದುದಸ್ತಾದ್ರಿಯೊಳ್ ಚಂದ್ರಮಂಡಲಂ ಮುನ್ನೇಸಱಾಗಮದೊಳು (ಶಬ್ದಮ. ೫೦-೫೦). (ಗು). ೨. ಗುಂಡಾದ ; ವರ್ತುಲಾಕಾರವಾದ : ಬಟ್ಟಿತು ಮೊಲೆ, ಬಟ್ಟಮೊಲೆ (ಶಬ್ದಸ. ೩೦೯ ಪ್ರಯೋ). **ಬಟ್ಟಿತ್ತು** : ೧. "ನಿಸ್ತುಲಂ, ವರ್ತುಳಂ ವೃತ್ತಂ–ಈ ೩ ಬಟ್ಟಿತ್ತು" (ಕರ್ಣಾಟ. ೦೨೯–೬೯).

ಬಟ್ಟಿತಾಗಿ, ಬಟ್ಟಿತ್ತಾಗಿ=ಗುಂಡಾಗಿ ; ದುಂಡಾಗಿ : ವರ್ತುಲಾಕಾರವಾಗಿ : ಬಟ್ಟಿತಾಗಿಯೆ ಹಣೆಗೆ ಸುಣ್ಣದ ಬೊಟ್ಟಸಗಿ . . . ದಾಸಿಯರಿಟ್ಟಣಿಸಿದರು ಸಂಜೆಯಲಿ ಪುರವರದ ಮಧ್ಯದಲಿ (ಅನಂತ. ೮೬-೬); ಬಟ್ಟಿತಾಗಿಯೆ ಬೊಟ್ಟನಿಟ್ಟು ಒಪ್ಪುವ ಪ್ರೈಸ ನೆಟ್ಟನೆ ಸ್ವರ್ಗ ಪಡೆಯುವದ

ಸಾಣೆಕಲ್ ಕೆಟ್ಟ ಕೇಡೇನು (ಸರ್ವಜ್ಞ. ೧೦೨೦); ನೀನಪ್ಪೊಡೆ ಬಹುಭಾಷಿ ತುಂಬಿದ ಸಿದ್ದಿಗೆಯಂತೆ ರಥದ ಗಾಲಿಯಂತೆ ಬಟ್ಟಿತ್ತಾಗಿರ್ಪ ನಿನ್ನನೆಂತುಯ್ಯಲ್ಪರ್ಕುಂ (ಶಂಕಚಂ. ೦೩೦-೨೦); ಕೈವಾರವಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ (ಶಬ್ದ.೦೭ ವೃತ್ತಿ). ಬಟ್ಟಿದಂ=ದುಂಡಾದ ಶರೀರವುಳ್ಳವನು ; ಗುಂಡಗಿರುವವನು : ಸದಯಂ ಕಿಚ್ಚನೆ ಪೆಂ ಬಟ್ಟಿದನತಿಚಪಳಂ ಸಖಿಪ್ರಿಯಂ ಸಸಿಯೆನಿಕುಂ (ಶಾಕಚಿ. ೨-೨೦). ಬಟ್ಟಿದುವು (ಬಹುವ) : ಮೊಲೆಗಳ್ ಬಟ್ಟಿದುವಾಗಿ ಕರ್ಗಿದ ಕುರುಳ್ ಕೊಂಕಾಗಿ ಕಣ್ಗೆಯ್ದ (ಶಂಕಚಾ. ೪-೬೪); ಸಿಂಹದ ಕಟಿಯಂತೆ ಬರ್ಪ ಮಾತ್ರಾಂತಂಗಳಾಗಿ ಬಟ್ಟಿದುವಾದ ಕಟಿತಟಂಗಳುಂ (ಚಾರವ. ೨-೩ ವ).

[ <ಬಟ್ಟು ]

**ಬಟ್ಟಿತ್ತು** 'ಬಟ್ಟಿತು' ನೋ.

**ಬಟ್ಟಿಬೀಳು** (ಕ್ರಿ). ಹೊಟ್ಟೆಯಲ್ಲಿ ಗಾಳಿ ತುಂಬಿಕೊಂಡು ನೋವಾಗು; ಅಂಡವಾಯು ಕಟ್ಟು : ಬಟ್ಟಿಬಿದ್ದು ಬಹಳ ತೊಂದರೆ ಕೊಡುತ್ತಿದೆ (ರೂಢಿ). [ಬಟ್ಟಿ$_1$ + ಬೀಳು$_1$ (<ಬೀೞ್) ]

**ಬಟ್ಟಿಸುಂಕ** 'ಭಟ್ಟಿಸುಂಕ' ನೋ.

**ಬಟ್ಟು**, ಬಟು$_1$, ಬಟುವು, ಬಟುಹು, ಬಟ್ಟ$_1$, ಬೊಟ್ಟು$_2$ (ನಾ). ೧. ವೃತ್ತ; ಮಂಡಲ; ಬಿಂಬ : "ಬಟ್ಟೆಂದು ಮಂಡಲಂ" (ಕಶಶಾ. ೪೬-೨೪); ಹುಣ್ಣಿಮೆಯ ಸಸಿಯ ಬಟ್ಟೊಸರ್ದು ಪರಿತರ್ಪ ದಿವ್ಯಾಮೃತದ ತೊಱೆಯೊ . . . ಈ ಕೃತಿಯ ರಸವೂ ಪೇಳೆಂದೆಲ್ಲ ರಸಿಕರಾನಂದಿಪಂತೆಸಗುವುದು (ಕದ್ಯರಾ. ೦-೩೦); ನೆಱೆದಿಂಗಳ ಬಟ್ಟ ಕಟ್ಟಿದಿರೊಳು ಕಂಡಱಿತ ಚಕೋರಿಯಂತವಳು ಉಱೆ ಪೆರ್ಚಿದಳಿದೆಯೊಳಗೆ (ಕುರಾಶಾಂ. ೩೨-೦). ೨. ಗುಂಡಾಗಿರುವ ವಸ್ತು, ಆಕೃತಿ ಮುಂತಾದುವು : ಭ್ರಮದ್ಭ್ರಮರಸಂಕುಳಂ ಬನದೊಳಟ್ಟಿಯಿಂ ದಾಡುತಿರ್ಪ, ಮನ್ಮಥನ ಪೊನ್ನ ಬಟ್ಟುಗಳ ಪೋಲ್ವೆಯಂ ಪುಟ್ಟಿಕುಂ (ಸುಕುಮಾ. ೯-೩೦); ಪಳುಕಿನ ಬಟ್ಟುಗಳ್ ಗಗನದಿಂದುದಿರ್ದಪ್ಪುವು ಚಿತ್ರಮೆಂಬಿನಂ ಫಳಫಳನಭ್ರದಿಂದ ಮಿಡುಕುಂಬನಿ ಸೂಸೆ (ಜಗಾ. ೪-೦೮); ಕರಂ ಕಾಯ್ದ ಕಬ್ಬೊನ್ನ ಬಟ್ಟು ಸೀವರದ ಪನಿಯೊಳಾೞುಗುಮೆ (ಜೀಷಂ. ೩೦-೦೦ ವ). ೩. ಒಂದು ಬಗೆಯ ಗುಂಡಾದ ಆಭರಣ : ಪುಳಿಯೊಳಲೆದ ಪವಳದ ಬಟ್ಟಿನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮನಂಗರಾಗರಸದುರುಳಿಯಂತಾದುದು (ಶಂಶಚಾ. ೨-೩೪ ವ). 'ಬೈತಲೆಬಟ್ಟು' ಪರಾ. ೪. ಗುಂಡಾಗಿರುವ ಗುರುತು; ದುಂಡಾದ ಚಿಹ್ನೆ : ಹಣಚಿಬಟ್ಟಿನ ಕೈಯ ಒತ್ತಿ ಹಿಡಿಯಲು ಬ್ಯಾಡ ನೆತ್ತರೀಳಿದಾವು ಬೆರಳೀಗೆ (ಕನ್ನಜಾ. ೦೨೦). ೫. ಹಣೆಯಲ್ಲಿ ಇಟ್ಟುಕೊಳ್ಳುವ ಕಸ್ತೂರಿ, ಕುಂಕುಮ, ಗಂಧ, ಸಾದ ಮೊದಲಾದುವುಗಳ ದುಂಡನೆಯ ಗುರುತು; ತಿಲಕ : ಹಾರ ಮನಿಕ್ಕಿ ಪೊಚ್ಚಪೊಸಮಲ್ಲಿಗೆಯಂ ಮುದದಿಂ ತುಱುಂಬಿ ವಿಸ್ತಾರದಿನಿಟ್ಟು ಚಂದನದ ಬಟ್ಟಂ (ರಹೂಕು. ೭-೦೭೬) ; ಪುರಸ್ತ್ರೀಯ ಮುಖಕ್ಕಿಟ್ಟ ಬ[ಶಾಣಾಂ. ಬೊ]ಟ್ಟೋಯೆನಿಸಿ ಭೂಪಾಲಗೇಹಂ ವಿರಾಜಿಸುವುದು (ಕದ್ಯರಾ. ೩-೨೩); ಧೂರಮಣಿಯ ಪೆಱೆನೊಸಲ ರತ್ನದ ದಿವ್ಯಚಾರುತರದ ಬಟ್ಟವಂತೆ ಶ್ರೀರಂಗಪಟ್ಟಣವೆಸೆದಿಹುದು (ಕಂಪಂ. ೨-೨೪). ೬. ಆಟದಲ್ಲಿ ಉಪಯೋಗಿಸುವ ದುಂಡಾದ ಬಿಲ್ಲೆ ಮತ್ತು ಅದರಿಂದ ಆಡುವ ಆಟ : ಮಣೆಯೊಂದು ಬಟ್ಟಿನ ಮೇಗೆ ಪದಿನಾಲ್ಕು ಬಟ್ಟನೊಂದೊಂದಱ ಮೇಗೋಳಿಯೊಳಿಟ್ಟಾಡುತ್ತಿರ್ಪನ್ನೆಗಂ (ಪಚ್ಚಾರಾ. ೬೩-೨೪); ದುರ್ಯೋಧನಪ್ರಭೃತಿಗಳ್ ನೂರ್ವರುಂ ಧರ್ಮಪುತ್ರಾದಿಗಳಯ್ವರುಂ . . . ಗುಳ್ಳಿಗೊಟ್ಟಿ ಬಟ್ಟುಳಿಸೆಂಡುಂ ಪೊಡಸೆಂಡೆಂಬಿವನಾಡುತ್ತೊಡವಳೆದರ್ (ಶಂಶಚಾ. ೨-೩೦); ಕಮಳಮುಖಿ . . . ಮಿಱುಗುವ ನೀಲದ ಬಟ್ಟಂ ತಿಱೆಕಲ್ಗಳನಾಡುವಂತೆ ಕಣ್ಗೆಸೆದಿರ್ದಳ್ (ಚಾರಂಚ. ೨೭). ೭. ತೂಕ ಮಾಡಲು ಉಪಯೋಗಿಸುವ ಗುಂಡಗಿರುವ ಲೋಹದ ಬಿಲ್ಲೆ; ತೂಕದ ಬಿಲ್ಲೆ : ಒಂದೊಂದು ವಿಧವಾದ ತೂಕದ ಬಟ್ಟುಗಳೂ ಅಳತೆಯ ಸಾಧನಗಳೂ ವ್ಯವಹಾರದಲ್ಲಿದ್ದುವು (ಶಾಗ್ಯಶಿ. ೩); ವಾಣಿಜ್ಯಜೀವಿಗಳಾದ ಈ ನಗರದ ನಿವಾಸಿಗಳು ಬಟ್ಟುಗಳ ತೂಕವನ್ನು ಕರಾರುವಾಕ್ಕಾಗಿ ನಿರ್ಣಯಿಸತಕ್ಕದ್ದು ಸಹಜವೇ ಆಗಿದೆ. ಕೆಲವು ಬಟ್ಟುಗಳ ತೂಕ ಒಂದಕ್ಕಿಂತ ಒಂದು ಇಮ್ಮಡಿಯಾಗಿದೆ (ಗಕಿಜ. ೬೩). ೮. ಗುಂಡಗಿರುವ ನಾಣ್ಯ : ಆತಗೊಂದುಸಾವಿರ ಹೊನ್ನ ಪ್ರತಿಮಾಸವಿಕ್ಕುವೆವ ದೊಂದುದಿನಕರ್ಥಕಹ ಬಟ್ಟಿಲ್ಲದೆಂತಿದಱ ಕಾರಣವ ಸಾಮಭೇದದಿಂದಱಿಯದಡೆ (ಸಿಂಗಿರಾ ೩೦-೦೦). ೯. ಹಪ್ಪಳ, ಚಪಾತಿ ಮೊದಲಾದುವನ್ನು ಲಟ್ಟಿಸಲು ಮಾಡುವ ಕಣಕದ ಸಣ್ಣ ಉಂಡೆ : ಕುಟ್ಟಿ ಕಣಕದೊಳು ಸರಿಬೆಣ್ಣೆಯಾಱೆಯೊಳೊಂದು ಬಟ್ಟವಾಲೆರೆಯಿಕ್ಕಿ ಮಿದಿದು ಬಟ್ಟಂ ಮಾಡಿ ದಟ್ಟತೆಂದೆನಿಸಿ ಲತೆಯಿಱಿದು ಹಂಚಿನೊಳಿಕ್ಕಿ ಸುಟ್ಟು ಪರಿಯಣಕೆ ತೆಗೆದು (ಸೂಶಾ. ೦-೦೦); ಹಪ್ಪಳದ ಹಿಟ್ಟು ಕಲಸಿ ಬಟ್ಟನ್ನು ಮಾಡುತ್ತಿದ್ದರು (ದಅಶ. ೨೪೪). ೧೦. ನೀರು ಮುಂತಾದ ದ್ರವ ಪದಾರ್ಥಗಳ ಹನಿ; ತೊಟ್ಟು : "ಕಾಳು, ಹನಿ, ತಟಕು, ತೊಟ್ಟು, ಬಟ್ಟು, ಅಗಳು" (ಕಂಪಹು. ೪೦). ೧೧. (?) : ಇಟ್ಟ ನಿಸಾಂತ ಹೇತುಗಳಿನಾದಮುಗುಬ್ಬೆಸಿ ಬಟ್ಟು ಬೀಱುವೊಲ್ಲೊಟ್ಟನೆ ಸೊನ್ನ ಬೀಟ್ಸೆಡೆಯ × × × ಗೊಣ್ಡು (ಎಕ. II, ೦೩೪-೦೭; ಸು. ೯೪೦). **ಬಟು$_1$** : ೨. ಆಗಸದ ಗುಣವೆ ಬಯಲು . . . ರೂಪೆ ಬಟು ಕುಱುಹೆ ಬಿಂದು ವಿನೀತಲ್ಲೆ ಗರುವ ಕೇಳ್ಸದಾಶಿವನೆಯಧಿದೈವ (ಏಕಕೃ. ೬-೩-೪೪); ಈ ಬಟುವಿನ ಭೂಮಿಯಂ ಹಗ್ಗದಿಂದ ಸುತ್ತಣ ವಳಯವನಳೆದು . . . ಬಂದುದು ಕಂಭದ ಲಬ್ಧ (ಕ್ಷೇತ್ರಗ. ೦೩-೩). **ಬಟುವು** : ೨. ಕೊರೆ ಕೊರೆದಾಣೆಗೈದಿಹ ಚಂದ್ರಕಾಂತದ ಶಿಲೆಯ ಬಟುವುಗಳೋ (ಶರಾಷಾ. ೦೩೧-೪೦) ; ೧೮ ಚೌಕದ ಕಮಲ ೧ ರತ್ನಕಂಬಳೀ ಬಟುವು ೧ ಕಾರ್ವೆ ಭಾರಕಿ ೧ ಮಾಮುಚಾಮು ಭಾರಕಿ (ಎಕ. XIV, ಪಂಜನ. ೨೪೩-ಫುಟ. ೦೪೩; 1847). 'ಬಟುವುದಿಂಬು' ಪರಾ. **ಬಟುಹು** : ೨. "ಅಮೃತದಲಿ ಬಟುಹಿನಲಿ ದೈತ್ಯರಲಿ . . . ದೃಢದಲ್ಲಿ ಮೇಣ್ ವೃತ್ತಸಾಮಮೆನಿಕ್ಕು" (ಚುಂಗರಾ. ೦೩೪-೬೩); ಬೆರಲ ದಪ್ಪದೊಳು ಬಟುಹಾಗಿ ಕಳಿಲೆಯನ್ನುತ್ತರಿಸಿಕೊಂಡು (ಸೂಶಾ. ೬-೩). **ಬಟ್ಟ$_1$** : ೧. ಇಂತಿರ್ದುದಿದು ತೊಳಪ ನೇಸಱಾ ಬಟ್ಟಮುದು ನಡುಬಾನನ್ ಅಡರ್ದು ನಿಲ್ವನ್ನೆವರಮ್ (ಅಂತಿಗೂ. ೨೦-೪೦೩). 'ಬಟ್ಟವಡೆ' ಪರಾ. **ಬೊಟ್ಟು$_2$** : ೩. ಮುತ್ತಿನ ಬೊಟ್ಟು ಬುಗುಡಿಯ ಚಕ್ರ ನವರತ್ನ ಕೆತ್ತಿದ ತೋಳ ಪಡಿಕರವು (ಶಾಂತೀಶ. ೩-೬೪); ರನ್ನದೋಲೆ ಮುತ್ತಿನ ಬೊಟ್ಟು ಪೊಳೆವ ಮೂಗುತಿ ಕಂಠಮಾಲೆ . . . ಕಂಕಣಂಗಳಂ ಲಲನೆಯರ್ ಗಿರಿರಾಜಸುತೆಗೆ ಸಿಂಗರಿಸಲ್ (ಕಂಪು. ೩೭-೯); ಎಸೆವ ರತ್ನದ ಬೊಟ್ಟಿನ ಹರಳೋಲೆಯ . . . ಬಿಸಜಗಂಧಿಯರ್ಸೆದಿದರು (ಕಂಪಪ. ೨೦-೦೪). 'ತಾಳಿಬೊಟ್ಟು', 'ಬೈತಲೆಬೊಟ್ಟು' ಪರಾ. ೫. "ತಿಳಕಂ, ತಮಾಳಪತ್ರಂ . . . ಲಲಾಟಿಕಾ – ಈ ೬ ಬೊಟ್ಟು" (ಹಲಾಯು. ೪೪-೩೪೭); ಕಳ್ಳೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು (ಶಂಶಚಾ. ೪-೪೭ ವ); ನೊಸಲೊಳಿರಿಸಿದ ವಿಭೂತಿಯ ಬೊಟ್ಟು ಬೆಳಗುತಿರೆ (ಇಹರ. ದೇ. ೩೨-೯); ಹಣೆ ತುಂಬ ಚಂದ್ರನಂತಹ ಕುಂಕುಮದ ಬೊಟ್ಟು ಇತ್ತು (ಅಬೋಲೀ. ೭೭). ೧೦. ಬೊಟ್ಟನನಿತು ಸುಖಕಾಗಿ ದುಃಖವನೊಂದು ಬೆಟ್ಟದನಿತನುಂಬರಕಟಾ (ಶರಶ. ೬೩-೩೭); ಜೈನಸಾಮ್ರಾಜ್ಯದಲ್ಲಿ ಧರ್ಮದ ಹೆಸರಿನಲ್ಲಿ ಒಂದು ಬೊಟ್ಟೂ ರಕ್ತಪಾತವಾಗಲಿಲ್ಲ (ಶಾರಕ. ೦೭೭); ಖಂಡುಗ ಹಾಲಿಗೆ ಒಂದೇ ಬೊಟ್ಟು ಹೆಪ್ಪು (ಗಾದೆ).

ಬಟ್ಟಸಂಬು = "ದುಂಡಾದ ಮೊನೆಯುಳ್ಳ ಬಾಣ" (ಶಂಶದೀ. ೫೦೩); ಅರಿಗನ ಬಟ್ಟಸಂಬುಗಳ ಬಲ್ಸರಿ ಸೋಂಕುಗುಂ (ಪಂಪಭಾ. ೧೨-೨೦೭).

ಬಟ್ಟುವಾಗಿ = (ಅಲಂ) ಪೂರ್ಣವಾಗಿ : ಆ ಹತ್ತು ಸಹಸ್ರವರಹಗಳನ್ನು . . . ಈಗಲೇ ಕಯ್ಯೊಳಿಸಿ ಕುಡಬೇಕು . . . ಒಂದೇ ಗಂಟಿನಲ್ಲಿ? ಬಟ್ಟುವಾಗಿ ? (ಬಿಟ್ಟಿಕ. ೧೯೪-೩).

[<ಸಂ. ವೃತ್ತ./ಪ್ರಾ. ವಟ್ಟ./ತಮಿ. ಮಲ. ಪೊಟ್ಟು, ವಟ್ಟ, ಪಟ್ಟು; ತುಳು. ಬೊಟ್ಟು; ಕೊಡ. ಬೊಟ್ಟ್; ತೆಲು. ಬೊಟ್ಟು, ಬಟುವು]

**ಬಟ್ಟುಗುರ್** (ನಾ). ಗುಂಡಗಿರುವ ಉಗುರು ; ದುಂಡಾದ ನಖ : ಚಂದ್ರನೆಸೆದತ್ತುದಯಾವನಿಭೃತ್ತ್ರಿವಿಕ್ರಮಂ ನೆಗಪಿದ ಪಾದದುಂಗುಟದ ಬಟ್ಟುಗುರೆಂಬಿನಮಂಬರಾಗ್ರದೊಳ್ (ಚಕಪು. ೬-೨೨).

[ಬಟ್ಟು + ಉಗುರ್1]

**ಬಟ್ಟುಗೆಯ್** (ಕ್ರಿ). ದುಂಡು ಮಾಡು; ಉಂಡೆ ಮಾಡು : ಸಿಡಿಲಂ ನೆಟ್ಟಗೆ ಬಟ್ಟುಗೆಯ್ದು ತೆಱಿನಪ್ಪು ದಿಟ್ಟಿಯುಂ (ಶಾಂತೀಶ್ವ. ೩-೫).

[ಬಟ್ಟು + ಕೆಯ್1]

**ಬಟ್ಟುಗೆಯ್ದು** (ನಾ). ದುಂಡಗಿರುವ ಆಯುಧ; ಚಕ್ರ : 'ಬಟ್ಟುಗೆಯ್ದು' ಪರಾ.

ಬಟ್ಟುಗೆಯ್ದುಗಯ್ಯ = ಚಕ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನು; ವಿಷ್ಣು : "ಸಿರಿಯುರಸನಿಂಗಡಲಳಿಯು ಸೌರಿ . . . ಕಾವನಯ್ಯಂ ಬಟ್ಟುಗೆ[ಪಾಠಾಂ. ಗ]ಯ್ದುಗಯ್ಯಂ ಭಾವಿಸೆ" (ಕಬ್ಬಿಗಂ. ೬).

[ಬಟ್ಟು + ಕೆಯ್ದು]

**ಬಟ್ಟುವೆಱು** (ಕ್ರಿ). ದುಂಡಾಗು; ವೃತ್ತಾಕಾರವನ್ನು ಪಡೆ : ಬಟ್ಟುವೆತ್ತ ಮೌಕ್ತಿಕದ ಛತ್ರ ಸೂರೆಪಾನ ಘಟಿಸಿ ನಿಂದಿವೆ (ಕೃಷ್ಣಪ. ೨-೨೯).

[ಬಟ್ಟು + ಪೆಱು1]

**ಬಟ್ಟುವೊಱಗು** (ನಾ). ಗುಂಡಗಿರುವ ದಿಂಬು.—ಲೋಡು : ಮಡಿಸಿ ಹಚ್ಚಡಿಸಿ ರತ್ನದ ಬಟ್ಟುವೊಱಗ ಸಂಗಡಿಸಿದರತಿಮುದದಿಂದ (ಕಂಪಸಾ. ೬-೦೩).

[ಬಟ್ಟು + ಒಱಗ್ಗು]

**ಬಟ್ಟೆ1** (ನಾ). ಹಾದಿ; ಮಾರ್ಗ; ದಾರಿ : "ಅಧ್ವಾ, ಪಂಥಾಃ . . . ಪದ್ಯಾ, ನಿಗಮಃ—ಈ ೧೨ ಬಟ್ಟೆ" (ಶಬ್ದಮ. ೯೩-೦೦೫); ಬಟ್ಟೆಯೊಳೊರ್ವನಂ ಪೆಡಂಗಯ್ಯುಡಿಯೆ ಕಟ್ಟಿ ಒಂದೆವಱಿಗುಟ್ಟಿ ಪೊಟಲ ಜನಂಗಳ್ ಮುಸಱಿಕೊಂಡು ನೋಡುತ್ತಮೊಡವರೆ (ವಡ್ಡಾರಾ. ೦೩-೨೯) ; ಗದಾದಂಡಮಂ ಕೊಂಡೊರ್ವನೆ ವೈಶಂಪಾಯನಸರೋವರದ ಬಟ್ಟೆಯಂ ನಡೆಗೊಂಡು (ಪಂಪಭಾ. ೦೩-೬೦ ವ); ಯುಮನಂದನನ ಪಾರ್ಥನ ಕಾಲೊಡೆದು ಬಸಿವರುಣಜಲದಲಿ ಬಟ್ಟೆ ಕೆಸಱಾಯ್ತು (ಕುಮ್ಯಾಕ. ೯-೦).

ಬಟ್ಟೆಯಂ ಬಡಿ, ಬಟ್ಟೆಯ ಬಡಿ = (ಅಲಂ) ದಾರಿಹೋಕರನ್ನು ಹೊಡೆ; ದರೋಡೆ ಮಾಡು : ಭರದಿಂದ ಬಟ್ಟೆಯಂ ಬಡಿದು ಹರದರ ಕೆಯ್ಯ ಶರನಿಧಿಯ ಮುತ್ತುಮಂ ತಂದು (ಸಮ್ಯಕ್. ೦೦-೨೯); ಬಟ್ಟೆಯ ಬಡಿವ ಕಳ್ಳಂಗೆ ಬೇಹು ಸಂದು ಕಳವು ದೊರಕಿದಂತೆ (ಅಪಶಂ. ೨೦೯-೯೧೦); ಬಟ್ಟೆಯ ಬಡಿದ ಕಳ್ಳಬಂಟನ ಭೂಪಾಲರು ಬೇಹನಿಕ್ಕಿ ಹಿಡಿತರಿಸಿ ನಾಳೆ ಶೂಲಕ್ಕೆ ತೆಗೆಸುವರೆ (ಭಸಪ. ೬-೫). ಬಟ್ಟೆಯ ಕಣ್ = ದಾರಿಯ ಎದುರು,—ಮುಂಭಾಗ : ಬಟ್ಟೆಯ ಕಣ್ಣೊಳಡ್ಡಂ ಬಿಟ್ಟಿರ್ದ ವೃದ್ಧವಾನರನಂ ಕಂಡು (ಪಂಪಭಾ. ೯-೩೦ ವ). ಬಟ್ಟೆಯ ಬಾಧೆ = ದಾರಿಯಲ್ಲಿ ಕಳ್ಳಕಾಕರಿಂದ ಉಂಟಾಗುವ ಹಿಂಸೆ,—ತೊಂದರೆ : ಕವಿಳಾಸಪುರದಲ್ಲಿ ಸುಂಕ ಸಾದ ತಳಸಾರಿಗೆ ಬಟ್ಟೆಯ ಬಾಧೆ ಗ್ರಾಮಬ್ರಯನಿಧಿ . . . ವಿವರ (ಎಇ. XXI, ೨-೬೨; 1260). ಬಟ್ಟೆಯ ಬೊಮ್ಮ = ಕಾಲುದಾರಿಯಲ್ಲಿರುವ ಕ್ಷುದ್ರದೇವತೆಯ ವಿಗ್ರಹ : ಚಿಂಜೆ ಮಕ್ಕಳ ಬಯಸಿ ಬಟ್ಟೆಯ ಬೊಮ್ಮಂಗೆ ಹರಸಿಕೊಂಡಂತಾಯಿತ್ತಯ್ಯ (ಭಸಪ. ೨೦-೦೭). ಬಟ್ಟೆಯರ್ = ದಾರಿಹೋಕರು : ವಿವಿಧದೇವಗೃಹದಾಟಪಾಟದಿಂ ಮಱುಗಿ ಬಟ್ಟೆಯರ ನೋಟ್ಪ ನೋಟದಿಂ . . . ನೆಱಿಯೆ ಸೊಗಯಿಪಾಯೇಕಚಕ್ರಮಂ ಮೆಚ್ಚಿದಂ ಹರಿಗನವಿಮತವಿಕ್ರಮಂ (ಪಂಪಭಾ. ೩-೨೨).

[<ಪ್ರಾ. ವಟ್ಟ,ವಟ್ಟಾ./ಸಂ. ವರ್ತ್ಮನ್./ಹಿಂ. ಮರಾ. ವಾಟ,/ತುಳು. ಕೊಡ. ಬಟ್ಟೆ]

**ಬಟ್ಟೆ2** (ನಾ). ೧. ವಸ್ತ್ರ; ಅರಿವೆ: "ಪಥದೊಳಗಱಿವೆಯೊಳು ಬಟ್ಟೆಯು" (ಕಬ್ಬಿಗಂ. ೯೦); ಬಟ್ಟೆಯ ನೀರೊಳಗದ್ದಿ ಒಣಗಿಸಿ ಉಟ್ಟುಕೊಂಡರೆ ಅದು ಮಡಿಯಲ್ಲ (ಪುರಂದ. ೦-೦೦೯-೦); ಬದುಕಿಗೆ ಅಗತ್ಯವಾದ ಅನ್ನ ಬಟ್ಟೆಗಳನ್ನು ಒದಗಿಸುವ ವೃತ್ತಿಗಳು ಕೆಲವು (ಹಜಕ್ರ. ೪). ೨. (ಅಲಂ) ಋತುಸ್ರಾವ: 'ಬಟ್ಟೆಗುತ್ತೆ' ಪರಾ.

ಬಟ್ಟೆಬರೆ = ವಸ್ತ್ರ ಮುಂತಾದುವು ; ಅರಿವೆ ಅಂಚಡಿ : ಉಳಿಕೆ ಬಟ್ಟೆಬರೆ ದವಸಧಾನ್ಯ (ರಾಜೇಂದ್ರ. ೨೫); ತನಗಾಗಿ ಬಟ್ಟೆ ಬರೆಗಳನ್ನೂ ಒಡವೆಗಳನ್ನೂ ಕೊಂಡುಕೊಂಡಳು (ಅಕ್ರಮ. ೩೭); ಕಂದಾಯಕ್ಕಾಗಿ ಕೊಟ್ಟು ಬಡ್ಡಿ, ಬಟ್ಟೆಬರೆಗೆ ಕೊಟ್ಟು ಮಿಕ್ಕರೆ ಹೊಟ್ಟೆಪಾಡಿಗಾಗುತ್ತಿತ್ತು (ಹುಟ್ಟಿಹ. ೭೪). ಬಟ್ಟೆಬೊಂತೆ = ಬಟ್ಟೆಬರೆ : ಬಟ್ಟೆಬೊಂತೆಗಳು ಕಾಲುಮಣೆಗಳ ಮೇಲೆ ಚೆಲ್ಲಾಡಿದ್ದುವು (ಮಲೆಪಾ. ೮೭). ಬಟ್ಟೆಹೋಗು=ಋತುಸ್ರಾವವಾಗು; ರಕ್ತಸ್ರಾವವಾಗು : ಈ ಸಾರಿ ವಿಪರೀತ ಬಟ್ಟೆಹೋಗಿ ಅವಳು ತುಂಬ ದುರ್ಬಲಳಾಗಿದ್ದಾಳೆ (ರೂಢಿ).

[<ಪ್ರಾ. ಪಟ್ಟ./ತುಳು. ಕೊಡ. ಬಟ್ಟೆ; ತೆಲು. ಬಟ್ಟ./ಸಂ. ಪಟ್ಟ]

**ಬಟ್ಟೆಕೆಱಿ** (ನಾ). ಒಂದು ಊರಿನ ಹೆಸರು ; ಧಾರವಾಡ ಜಿಲ್ಲೆಯ ಈಗಿನ ಬೆಟಗೇರಿ : [ನಾ]ಗಧೋರನೆಂಬೋ ಬಟ್ಟೆಕೆಱಿಯ [ಧಾಱಿಗೆ] ಮುಱಿಯುವಡದ ಪೊಲ (ಕಇಇ. XI-i, ೨೦-೫; 893). 'ಬಟ್ಟೆಕೆಱಿ' ಪರಾ. [ಬಟ್ಟೆ1 + ಕೆಱಿ]

**ಬಟ್ಟೆಗ** (ನಾ). ಹಾದಿಯಲ್ಲಿ ನಡೆಯುವವನು ; ದಾರಿಗ; ಪ್ರಯಾಣಿಕ : ಗಾಡಿಕಾರ್ತಿಯರ ಗಾಡಿಗೆ ಸೋಲ್ತು ನಿಲ್ವ ಬಟ್ಟೆಗರ . . . ಬಿಡದೆ ಬಗ್ಗಿಪ ಕೋಗಿಲೆಗಳ ಚೆಲ್ವನೊಳಕೊಂಡಿರ್ಪುದು (ಕಬ್ಬಿಗಕಾ. ೦೪) ; ಬಟ್ಟೆ ಬಟ್ಟೆಯ ಕಿಲಕಿಲದೊಳ್ ನೀರರವಟ್ಟಿಗೆಯಿಟ್ಟಿರಲಲ್ಲಿ ಬಟ್ಟಜವ್ವನೆಯಿರಿರಲು ನೋಡಿ ಬಟ್ಟೆಗರಿಟ್ಟಣಿಸಿಯೆ ನಿಂದಿಹರು (ಅಂಜಪ. ೨-೦೦೫) ; ತೊಲಗೆ ನೀರಾಸೆ ತೊಲಗದೆ ನೀರೆಱಿವಾ ಲಲನೆಯರಾಸೆ ಬಟ್ಟೆಗರು ಸಲೆ ನೋಡುತವರ ನೀರೀಂಟುತಿಹರು (ಕುಮಾಸಂ. ೨-೯೦). [ಬಟ್ಟೆ1 + —ಗ್ಗ]

**ಬಟ್ಟೆಗಟ್ಟು** (ಕ್ರಿ). ದಾರಿಯನ್ನು ಕಟ್ಟು ; ಅಡ್ಡಗಟ್ಟು ; ದರೋಡೆ ಮಾಡು; ಸುಲಿ : ಅಡವಿಯೊಳ್ ಕಳ್ಳರ್ ಬಟ್ಟೆಗಟ್ಟ ಮೇಲ್ವಾಯ್ದುಱಿದೊಡೆ (ವಡ್ಡಾರಾ. ೬೭-೦೩) ; ನೆತ್ತಿ ತಱಿಂಟಾಗೆ ಪುಳ್ಳಿಯನಡಕುವ ಬಡವರ್ಗಂ ಬಟ್ಟೆಗಟ್ಟಿ ಬಡಿವ ಬೇಡರ್ಗಂ ಸಿರಿಯೇಕಾಗದು (ಧರ್ಮಾಮೃ. ೬-೦೩೩). [ಬಟ್ಟೆ1 + ಕಟ್ಟು1]

**ಬಟ್ಟೆಗಾಣ್** (ಕ್ರಿ). ಹಾದಿಯನ್ನು ಕಾಣು ; ದಾರಿಯನ್ನು ತಿಳಿ ; ಮಾರ್ಗವು ಗೋಚರವಾಗು; ನಿಮ್ಮನಾಭಿಮಂಡಳಮನೊಳಪೊಕ್ಕು ಒಳಗೆ ಶೀವಿದ ಪುಡಿಗತ್ತುರಿಯ ಸುಟ್ಟುರೆಯನಸಿದನೆ ಬೇಱಿೊಂದು ಬಾಸೆಯೆಂಬಂತೆ ನೆಗಪಿ ಮೇಗೊಗೆದು ಬಟ್ಟಮೊಲೆಯಿಟ್ಟೆಡೆಯೊಳ್ ಬಟ್ಟೆಗಾಣದೆ ಬಳಸಿ ಸುೞಿದಾಡಿಯುಂ (ಚಂದ್ರಪ್ರ. ೬-೪ ವ); ನಭಂಬರಂ ಪೊದಟ್ದುದವಿದ ಕೋಂಟೆಯಂ ನುಗುಳ್ದು ಪೋಗಲಹಃಪತಿ ಬೇಱಿ ಬಟ್ಟೆಗಾಣದೆ ತಡೆದಿರ್ಪನಲ್ಲಿ ಪೊಣರ್ವಕ್ಕಿಗೆ ಸಂತಸವಾಗೆ ಸಂತತಂ (ಕೃಷ್ಣಕೃ. ೨-೬೪).

[ಬಟ್ಟೆ1 + ಕಾಣ್]

**ಬಟ್ಟೆಗಾರಕ** (ನಾ). (?) : ಬಟ ಬಟ್ಟೆಗಾರಕದ ತೆರನು (ಎಕ. VII. ಶಿಕಪೂ. ೩-೨೫ ; 1671). 'ಬಟ್ಟೆವರಿಯಂ' ಪರಾ. [?]

**ಬಟ್ಟೆಗಾವಲ್** (ನಾ). ಪ್ರಯಾಣದ ದಾರಿಯಲ್ಲಿ ಬರಬಹುದಾದ ವಿಪತ್ತಿನ ವಿರುದ್ಧವಾದ ರಕ್ಷಣೆ,–ಕಾವಲು : ಮಹೇಶ್ವರನ ಬಟ್ಟೆಗಾವಲ್ಗೆ ಕರ್ಣಜ ಮೇಘನಾದರಂ ಕೊಟ್ಟು (ಕೈಬಿಸಾ. ೪-೬೯). [ಬಟ್ಟೆ$_1$ + ಕಾವಲ್$_1$]

**ಬಟ್ಟೆಗುತ್ತೆ** (ನಾ). ಋತುಸ್ರಾವಕ್ಕೆ ಸಂಬಂಧಿಸಿದ ರೋಗವುಳ್ಳವಳು (?) : ಕೆಟ್ಟ ಜಾತಿಯನಾರನಾವಡೆ ಮುಟ್ಟಿಕೊಂಬರು ಹಣ ವಿನಾಸಗೆ ಬಟ್ಟೆ[ಪಾಠಾಂ. ಬಟ್ಟು, ಬಟ್ಟಿ, ಬಿಟ್ಟಿ]ಗುತ್ತೆಯರಿಂತು ವಾರ ಪುರಂಧ್ರಿಯರು (ಬಸವ. ೧೦-೩೬). 'ಬಟ್ಟಗುತ್ತೆ'ನೋ.
[ಬಟ್ಟೆ$_2$ + ಕುತ್ತ + – ಎ$_2$]

**ಬಟ್ಟೆಗೆಡು** (ಕ್ರಿ). ದಾರಿತಪ್ಪು ; ದಿಕ್ಕುಗೆಡು : ತಿಳಿಸಿದರೆ,ಕತ್ತಲಲಿ ಮಿಂಚು ಹೊಳೆದಂತಾಗಿ, ಬಟ್ಟೆಗೆಡುವುದು, ಕುರುಡು ದಟ್ಟೈಸಿ ! (ಚಂದ್ರಸ. ೨೦-೧೯) ; ಒಂದು ಕಡೆ ಸ್ವಾತಂತ್ರ್ಯ, ಒಂದು ಕಡೆ ಮಾಧುರ್ಯ ನಡುವಿಹೆನು ಬಟ್ಟೆಗೆಟ್ಟು (ಅಗ್ನಿಹಂ. ೬). [ಬಟ್ಟೆ$_1$ + ಕೆಡು$_1$]

**ಬಟ್ಟೆಗೊಡು** (ಕ್ರಿ). ಹಾದಿಯನ್ನು ಕೊಡು ; ದಾರಿ ಮಾಡಿಕೊಡು ; ಅವಕಾಶ ಕೊಡು : ವ್ಯಾಪನಲ್ಲದನ್ಯದೈವಕ್ಕೆ ನಮಿಸಿದಡೆನ್ನ ಹೊಡೆದು ಮುಕ್ಕುವುದು ದಾವಾಗ್ನಿ ಮೇಣಲ್ಲದಿರ್ದಡೆ ಬಟ್ಟೆಗೊಟ್ಟಪುದು (ಹಕಶಾ. ೦೦-೨೩) ; ರಘುಜರಾಮನ ಮನದ ಕೋಪದುಜುಬೆಗೆ ಬಟ್ಟೆಗೊಟ್ಟುದಂ . . . ನೆನೆನೆನೆದು ನಿಟ್ಟುಸಿರ್ವಿಟ್ಟು ಸುಯ್ವಂತುದಧಿ ತೆರೆ ಪೆರ್ಚುಗೆಯೊಳಿರ್ದುದು (ಕೈಬಿಸಾ. ೬-೨). [ಬಟ್ಟೆ$_1$ + ಕೊಡು$_1$]

**ಬಟ್ಟೆಗೊಲೆ** (ನಾ). (ಓಡಾಟವಿರುವ) ಹಾದಿಯಲ್ಲೇ ಕೊಲ್ಲುವುದು : ಇನಿತವಸ್ಥೆಯ ಬಟ್ಟೆಗೊಲೆಯುಲ್ಲದೆಲೆಯಣ್ಣ ಇನಿತವೆಯ್ದದೆ ಮೇಲೆ ಮಾಳ್ಪ ವಧೆಗಳಿವಣ್ಣ (ಶಾಸಂತ. ೪-೦೬೩). [ಬಟ್ಟೆ$_1$ + ಕೊಲೆ$_2$]

**ಬಟ್ಟೆದಪ್ಪು** (ಕ್ರಿ). ಹಾದಿ ತಪ್ಪು ; ದಾರಿ ತಪ್ಪು : ಕಲ್ಪಿಗೆಡೆ ಯಾವುದೊ ಪಾಟಿಸು ಬಟ್ಟೆದಪ್ಪಿ ಮುಂ ನೆಗೆಟ್ಟಿಡೆಯಿಲ್ಲ. ಪೋಗು ಜಯ ಮಕ್ಕೆ ಶುಭಂ ನಿಮಗಕ್ಕೆ ಮಂಗಳಂ (ಶಂಶಕಾ. ೬-೨೦); ಮನುಜತೆವೆತ್ತ ದಣಿಗೊಳಮುಪಶಾಂತಿಯ ಬಟ್ಟೆದಪ್ಪಿ ಕಡೆಯೊಳ್ ಕುಯೋನಿಯೊಳ್ ಮತ್ತಾಟ್ಗುಂ (ಚಂದ್ರಪು. ೬-೨೦) ; ವೃತ್ರನೆನಿಸಿದನಾ ಭಯಂಕರನೇತ್ರನು . . . ಅಟ್ಟಹಾಸವ ಮಾಡಿದಡೆ ಕಂಗೆಟ್ಟರಮರರು . . . ಬಟ್ಟೆದಪ್ಪಿದರಿನ ಶಶಿಗಳು (ಶಿಶಾಗ. ೬-೯-೦೧). [ಬಟ್ಟೆ$_1$ + ತಪ್ಪು$_1$]

**ಬಟ್ಟೆದೆಗೆ** (ಕ್ರಿ). ಓಡಿ ಹೋಗು ; ಪಲಾಯನ ಮಾಡು : ಬಟ್ಟೆದೆಗೆದೆವು ನಿಮ್ಮ ರಕ್ಕಸಘಟ್ಟೆಯರ ಗಾಢಣೆಗೆ ಸೈರಿಸದೆ (ಕೊರಂ. ೩-೭-೩೦) ; ಬಟ್ಟೆದೆಗೆದನು ಬಳಿಕ ಕಮಲಜನಿಷ್ಟದೇವತೆಯೆನಿಪ ದನುಜಘರಟ್ಟನತಗೆ ಜಯತು ಜಯ ಜಗದೀಶ ಜಯಯೆನುತ (ಶಿಶಾಗ. ೯-೬-೭). [ಬಟ್ಟೆ$_1$ + ತೆಗೆ$_1$]

**ಬಟ್ಟೆದೋಱಿಸು** (ಕ್ರಿ). ದಾರಿಯನ್ನು ತೋರಿಸು ; ಮಾರ್ಗವನ್ನು ತೋರು : ಉಱಿದೊಡಮಱಿದೊಡಂ ಬಟ್ಟೆದೋಱಿಪ ರಸಭರಿತಂ ಚರಿತಮೈಸೆ (ರಾಮಾಶ್ವ. ೪-೨೦). [ಬಟ್ಟೆ$_1$ + ತೋಱಿಸು]

**ಬಟ್ಟೆದೋಱು** (ಕ್ರಿ). = ಬಟ್ಟೆದೋಱಿಸು : ಗುಣಾರ್ಣವಭೂಭುಜಂಗೆ ಕಟ್ಟಿದಿರೊಳೆ ಬಟ್ಟೆದೋಱುವವೊಲಂದೊಗೆದಂ ಕಮಲೈಕಬಾಂಧವಂ (ಶಂಶಕಾ. ೪-೦೦೦) ; ಪುರೂರವನೆಂಬ ಬೇಡಂ ಸಾಗರಸೇನಮುನಿವರರ್ ದಿಶಾಮೂಢರಾಗಿ ಪೊಲಗೆಟ್ಟಿರ್ದಂದು ಬಟ್ಟೆದೋಱಿ ಧರ್ಮಮಂ ಕೇಳ್ದು . . . ದೇವನಾಗಿರ್ದ (ಶಾಪುಂಪು. ೦೬೩). [ಬಟ್ಟೆ$_1$ + ತೋಱು]

**ಬಟ್ಟೆನಡೆ** (ಕ್ರಿ). ಹಾದಿಯಲ್ಲಿ ನಡೆ ; ಮಾರ್ಗವನ್ನು ಕ್ರಮಿಸು ; ಪ್ರಯಾಣವನ್ನು ಮುಂದುವರಿಸು : ಜಾನಪದಾಂಗನಾಜನದ ಗಾಡಿಗೆ ಸೋಲ್ತು . . . ಪಥಿಕರ್ ಮಱಿದಿಲ್ಲೆನಲ್ ಪರಿಮ್ಲಾನತೆ ಸೈತು ಬಟ್ಟೆನಡೆಯಲ್ಪಡೆಯರ್ ವಿಷಯಾಂತರಾಳದೊಳ್ (ಮಲ್ಲಿಪು. ೨-೨೬).
[ಬಟ್ಟೆ$_1$ + ನಡೆ$_1$]

**ಬಟ್ಟೆಪಾಟು** (ನಾ). ಹಾದಿಯಲ್ಲಿ ಹಾಡುವ ಹಾಡು : ಹಂದರದ ಬೇರೊಂದು ಮಗ್ಗುಲಿನಲ್ಲಿ ಬಟ್ಟೆಪಾಟು ಓಲಪಾಟುಗಳನ್ನು ಹಾಡಿಕೊಂಡು ಬಂದ ನಾಲ್ವರು ಕೊಡವರು ದುಡಿ ಬಡಿಯುತ್ತ . . . ಮುಹೂರ್ತ ಪಾಟನ್ನು ಹಾಡಲು ಪ್ರಾರಂಭಿಸಿದರು (ಹುಂಶಾ. ೨೦೨).
[← ಕೊಡ. ಬಟ್ಟೆಪಾಟ್]

**ಬಟ್ಟೆಬೆಂತರ** (ನಾ). ದಾರಿಯ ದೆವ್ವ ; ಮಾರ್ಗದಲ್ಲಿನ ಪಿಶಾಚಿ : ದೊರೆಯಿಂತು ಚಿತ್ತವೈಕಲ್ಯದಿಂ . . . ಕಳ್ತು ನವಿರಂ ಶರೀರಮಂ ವಸನಂಗಳಂ, ಚರಿಸೆ ಬಟ್ಟೆಬೆಂತರನಂತೆ (ಶ್ರೀರಾಮಪ. ೧೪-೪೪೪). [ಬಟ್ಟೆ$_1$ + ಬೆಂತರ]

**ಬಟ್ಟೆಯಱಿ** (ಕ್ರಿ). ದಾರಿಯನ್ನು ತಿಳಿ ; ಮಾರ್ಗವನ್ನು ಅರಿ : ಹುಟ್ಟುಗುರುಡನು ಕೆಟ್ಟ ಕಣ್ಣವನ ಕೈಹಿಡಿದು ಬಟ್ಟೆಯಱಿಯದೆ ಗುಳಿಯ ಬಿದ್ದವನ ತೆಱನಹುದು (ದೀಕ್ಷಾಬೋ. ೦೮-೦೨) ; ವರತತ್ತ್ವದ ಬಟ್ಟೆಯಱಿದವರೆಲ್ಲರ ವರಮುಕ್ತಿಕನ್ನೆ ಮೋಹಿಸುವ ಪರವಶ್ಯದ ವ್ರತಗಳನೊಂದೊಂದನು ವರವೀವುದೆಂದು ನುಡಿದರು (ಜೀವಂಸಾಂ. ೨-೦೦).
[ಬಟ್ಟೆ$_1$ + ಅಱಿ]

**ಬಟ್ಟೆಯುರುಳಿ** (ನಾ). ಬಟ್ಟೆಯ ಉಂಡೆ ;- ಅರಿವೆಯ ದೊಂದೆ : ಶ್ರೀರಂಗರಾಯನ ಶಿರಸ್ಸನ್ನು ಮೆಲ್ಲನೆತ್ತಿ ಇಳಿಹಿ, ಆತನ ಚುದಿಯ ಬಾಯ್ಗಟ್ಟನ್ನು ಬಿಚ್ಚಿ ಬಿಸುಟು, ಗಿಡಿವಟ್ಟ ಬಟ್ಟೆಯುರುಳಿಯನ್ನೆತ್ತಿ ಬಿಸಾಡಿ, ಕಯ್ಕಾಲ್ಗಳ ಬಿರುಗಟ್ಟುಗಳನ್ನು ಬಿದುರ್ಚುತ್ತಿರುವನು (ಮಂತ್ರಶ. ೦೦೩-೨೪). [ಬಟ್ಟೆ$_2$ + ಉರುಳಿ$_1$]

**ಬಟ್ಟೆವರ್** (ಕ್ರಿ). ಹಾದಿಯಲ್ಲಿ ನಡೆ ; ಪ್ರಯಾಣ ಮಾಡು : ಭಟಾರಾ ನಿನ್ನ ಬಟ್ಟೆವಂದುಪವಾಸಂಗೆಯ್ದು ಸೇದೆವಟ್ಟರ್ (ವಡ್ಡಾರಾ. ೧೦-೨೩).
[ಬಟ್ಟೆ$_1$ + ಬರ್ (<ವರ್)]

**ಬಟ್ಟೆವರಿಯ ?** (ನಾ). (?) : ಅಱುವದಿಂಬರ್ಗ್ಗಂ ಕೊಟ್ಟ ವ್ಯವಸ್ಥೆ ಯಾವುದೆನ್ದೊಡುಕ್ಕಿಗೆರಡು ವರಿಸ ಬಟ್ಟೆವರಿಯರ ಪತ್ತುವರಿಸಂಬಱಂ ಮತ್ತ ವ್ರ್ಣಂ (ಕ್ಕಾಇ. XI-i, ೪೩-೦೬; 870). 'ಬಟ್ಟೆಗಾರಕ' ಪರಾ. [?]

**ಬಟ್ಟೆವಿಡಿ** (ಕ್ರಿ). ದಾರಿಯನ್ನು ಹಿಡಿ ; ಮಾರ್ಗವನ್ನು ಅನುಸರಿಸು : ಬೆಳ್ದಿಂಗಳಂ ಬಿತ್ತರಿಸಿದಂತಿರ್ದ ದಶಪುರದ ಬಟ್ಟೆವಿಡಿದು ನಡೆಯುತ್ತ (ಕಾದಂಉ. ೪೨೬) ; ಶರನಿಧಿಯ ತೀರದ ಪಟ್ಟಣವ ಪಡಿತಳಿಸಿ ಪಾರಾವಾರ ದೋರಣದ ಬಟ್ಟೆವಿಡಿದೆಡಕಿಕ್ಕಿ ಮೇರುವಿನಿಟ್ಟಣೆಯ ಜನಪದದ ರಾಯರ ಕಟ್ಟಿ ಕೇಳುತ ಕಂಡ ಮ್ಯೆಯಲಿ ಹರಿದುದಗಲದಲಿ (ಕೊರಂ. ೪-೬-೨೩) ; ಬಟ್ಟೆವಿಡಿದವರಿರ್ವರುಂ ಮಯೂರಧ್ವಜನ ಪಟ್ಟಣಕೆ ನಡೆತಂದರ್ (ಕೈಬಿಸಾ. ೨೬-೪). [ಬಟ್ಟೆ$_1$ + ಪಿಡಿ$_1$]

**ಬಟ್ಟೆವೋಗು** (ಕ್ರಿ). = ಬಟ್ಟೆವಿಡಿ : ಆರಾನುಂ ಬಟ್ಟೆವೋಪರ್ ಬೇಡಂ ಬಿಟ್ಟಿರ್ದರ್ (ವಡ್ಡಾರಾ. ೬೯-೩) ; ವಿನಯದಿನಾವಿಗಾ ಭುವನೈಕನಾಥನಂ ಸಲ್ಗೆವೆರಸು ಬೇಡುತ್ತಿರೆ ಬಂದನುವಿಸುವ ನಿಮ್ಮ ಮುದುಗಣ್ಣನದೊಳಿದೇನುಂತೆ ಬಟ್ಟೆವೋಪೊಡೆ ಪೋಗಂ (ಆದಿಪು. ೯-೦೦೬); ಬಟ್ಟೆವೋಪರ್ಬಟಲ್ಗೆ ಗಱಿದುದನಱಿಪುವ ಬಾಡುಂದಳಿರ ಪಾಸಿಕೆಗಳುಮಂ (ಕಾದಂಉ. ೨೬೬).
[ಬಟ್ಟೆ$_1$ + ಪೋಗು$_1$ (<ಪೋ$_1$)]

**ಬಟ್ವಾಡೆ** 'ಬಟವಾಡೆ' ನೋ.

**ಬಡ** (ಸಪೂರೂ). 'ಬಡವು' ಎಂಬ ನಾಮಪದವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ. ೧. ಸೊರಗಿದ ; ಕ್ಷೀಣವಾದ : 'ಬಡಗುದುರೆ' ಪರಾ. ೨. ಸಣ್ಣದಾದ ; ಚಿಕ್ಕದಾದ : 'ಬಡಗಣ್$_1$' ಪರಾ. ೩. ಅಲ್ಪಶಕ್ತಿಯ ; ಅಸಮರ್ಥವಾದ : ಬಡವಿರಾಟನನಾರು ಬಲ್ಲರು ದ್ರೋಣನಿದಿರಿಸಲಿ (ಕುಮ್ಕಾದ್ರೋ. ೧೭-೧೦). ೪. ಬಡತನದಿಂದ ಕೂಡಿದ ; ದಾರಿದ್ರ್ಯದಿಂದ ಇರುವ : ಸಿರಿವಂತರನಿತ್ತ ಬಸ್ಸಿಪೊಂದಾವರದಿಂ ಕರೆವ ಬಡಜೈನನಾದೊಡೆ ಕರೆಯದ ದುರ್ಗವಿರ್ಜೈನನೆನಿಕುಮ ಕಷ್ಟಂ (ಸಮಕ. ೪ ೩೩).

**ಬಡಬಡಾಗು** = ೧. ಅತಿಬಡವಾಗು ; ಸೊರಗು ; ಕೃಶವಾಗು : ಮಯ್ಯುನಿರ್ವರುಮುಱೆ ನೋಂತಭಯಮನರಾಗಿಯುಂ ದುರಿತಭೀತಿಯಿಂ ನಡುಗಿ ಬಡಬಡಾದಂತಾದರ್ (ಶಾಂತಿಪು. ೬-೭೦) ; ತಳೆದನಶನಾದಿ ತಪದಿಂ ಕಳೇವರಂ ಬಡಬಡಾಗಿ ಗಿಡಿಗಿಡಿಜಂತ್ರಂ ಮಿಳಿಮಿಳಿಗಣ್ಗಳಿನಲ್ ನೋಂತಳ್ (ಸುಕುಮಾ. ೯-೮) ; ಬಡಬಡಾದುದು ನಿನ್ನಂಗವಲ್ಲರಿ (ಶ್ರೀಪಾಂ. ೧೧-೯೦). ೨. ಅತಿ ಚಿಕ್ಕದಾಗು ; ಹ್ರಸ್ವವಾಗು : ಕಾದಲರ ಪುರುಡಿ ನೆಸಕದೊಡನೆ ಇರುಳ ಬಳಗಂ ಬಡಬಡಾಗೆಯುಂ (ಚಂದ್ರಪ್ರ. ೬-೬೨ ವ). **ಬಡ ಮಾಡು** = ಬಡವಾಗುವಂತೆ ಮಾಡು ; ಸೊರಗಿಸು ; ಕೃಶಗೊಳಿಸು : ಆ ಕೋಡಗಂ . . . ಬ್ರತೋಪವಾಸಂಗಳಿಂ ಮೆಯ್ಯಂ ಬಡಮಾಡಿ [ಪಾಠಾಂ. ದಂಡಿಸುತ್ತಂ] ಸಲ್ವುದೊಂದು ದಿವಸಂ . . . ಮುನಿವರರ ಪಕ್ಕದೆ ಬಿರ್ದತ್ತು (ವಡ್ಡಾರಾ. ೧೬೩-೨೯) ; ತನುವಂ ಬಡ ಮಾಡಿ ಕಾಡಿ ದಂಡಿಸಿದಪನಂಗಜನ್ಮನ ಕವರ್ತೆಯ ದಂಡದ ಪಾಂಗಿದೆಂತುಟೋ (ಸಂಕಥಾ. ೫-೦೩). [ <ಬಡವು ]

**ಬಡಕ$_1$** (ನಾ). ೧. ಬಡಕಲಾಗಿರುವುದಂ; ಸಣಕಲು : ಪ್ರಹ್ಲಾದನೆಂದರೆ ಪ್ರತ್ಯಕ್ಷ ಆಹ್ಲಾದಮೂರ್ತಿ...ಅಶಕ್ತನಲ್ಲದಿದ್ದರೂ ಮೈ ಬಡಕ (ಪಿರಾಥ. ೭೭). ೨. ಬಡಕಲಾಗಿರುವವನು ; ಸಣಕಲವ್ಯಕ್ತಿ : ಕ ಪ್ರತ್ಯಯಕ್ಕೆ— ಬಡಕಂ, ನಿಡುಕಂ (ಶಮದ. ೨೦೫ ಪ್ರಯೋ) ; ರಣಜಿತಸಿಂಗಮಹಾರಾಜನು ಗಿಡ್ಡನೂ ಬಡಕನೂ ಆಗಿದ್ದನು (ಜಂಸಂ. ೨೦೯) ; ಗೋದೀ, ನಾನು ಬಡಕ ಹುಟ್ಟಾ ಇದ್ದೀನಿ. ಚಹದಿಂದ ಬಡಕಾಟಿ ಆಗಿಲ್ಲ (ರಕ್ತರ್ಕ. ೦೬೯).
[ ಬಡ (<ಬಡವು) + — ಕ$_3$ ]

**—ಬಡಕ$_2$** '—ಬಡಿಕ$_2$' ನೋ.

**ಬಡಕಟ್ಟಿ** (ನಾ). ಕೃಶವಾಗಿರುವವಳು ; ಬಡಕಲಾಗಿರುವವಳು : ನಿಮಗೇನು ಜಡಾ ಗಿಡಾ ಆಗಿತ್ತೇನ್ರೀ ? ಬಾಳ ಬಡಕಟ್ಟಿ ಆಗಿ ಕಾಣ್ತೀರಿ (ಪುರಿಮ. ೨೨). [ಬಡ (<ಬಡವು) + ಕಟ್ಟು$_2$ + —ಇ$_2$]

**ಬಡಕಬೆ** (ನಾ). (?) : ಮೂಱನೆಯ ವರಿಸಕೆ ಪ ೩ ಬಡಕಬೆ ನೂಱಕೆ ಪ ೨ ಕಿನ್ನಗಿನಿ ನೂಱಕೆ ಪ (ಎಕ. XIV, ತಿರುಮ. ೬೨-೨೦; 1309). [?]

**ಬಡಕರಿಸು** (ಕ್ರಿ). ಕೃಶವಾಗು ; ಸೊರಗು ; ಒಣಗು : ಬಸಿರ್ಬತ್ತಿ ಬಾಯ್ಬತ್ತಿ ಬಡಕರಿಸಿ. ಪಲ್ದೋಱೆ[ಪಾಠಾಂ. ಬಾಯ್ಬತ್ತಿ ಪಲ್ದೋಱೆ] ಬೆನ್ನು ಕುಸಿದು ಮೊಗವೊಣಗಿ ಕಣ್ಗಂದಿ ಕಾವುಳಂ ಕವಿದೊಡಂ (ಅರರ. ಹ. ೯೩೬-೨೭). [< ಬಡ + — ಇಸು$_3$]

**ಬಡಕಲ** (ನಾ). ಕೃಶನಾಗಿರುವ ವ್ಯಕ್ತಿ : ಅವನೊಬ್ಬ ಬಡಕಲ (ರೂಢಿ).
[ಬಡಕಲು + — ಅ$_7$]

**ಬಡಕಲು** (ನಾ). ೧. ಸೊರಗಿದುದು ; ಕೃಶವಾದದಂ : ಖಾಯಿಲೆಯಿಂದ ನರಳಿ ಬಡಕಲಾಗಿದ್ದ ಅವಳ ಮೈಯನ್ನು ನೋಡಿ ನನ್ನ ಮನಸ್ಸಿಗೆ ತುಂಬಾ ಸಂಕಟವಾಯಿತು (ಶ್ರಪಾಪ. ೯೯). (ಗು). ೨. ಸೊರಗಿದ ; ಕೃಶವಾದ; ಒಣಗಿದ : ಒಂದು ಬಡಕಲು ಕುದುರೆಯ ಮೇಲೆ ಅವಳನ್ನೇರಿಸಿ . . . ನಟಿಸುತ್ತಿದ್ದನು (ಕಬಿಕ. ೫೦); ಆವಳ ತಾಯಿಯು . . . ಒರಟುಒರಟಾದ ಬಡಕಲು ಹೆಂಗಸು (ಮಹಾಶ್ವೆ. ೮೯). ೩. (ಆಲಂ) ಸತ್ತ್ವವಿಲ್ಲದ ; ನಿಸ್ಸಾರವಾದ : ಅಕ್ಕಿ ತೀರ ಬಡಕಲು ಆಹಾರ (ಅಡುಗೆ. ೭೯).
**ಬಡಬಡಕಲು** (ದ್ವಿರುಕ್ತಿ) : ಅಮಾಂಸಃ, ದುರ್ಬಲಃ, ಛಾತಃ—೩ ಬಡಬಡಕಲು ಮೈಯುಳ್ಳವನು, ನರಪೇತಲವನು, ಬಲವಿಲ್ಲದವನು, ಅಶಕ್ತನು (ಸಿದ್ಧಾಂತಿ. ೦೮೦). [ಬಡಕು + —ಅಲು (<—ಅಲ್$_2$)]

**ಬಡಕಾಟಿ, ಬಡಕಾಣಿ** (ಗು). ೧. ಸೊರಗಿದ; ಬಡಕಲಾದ : ಕೋಟಿ ಕೋಟಿ ಬಡಕಾಟಿ ದಂಪತಿಯ ಮಾಡಿ ನಾಡ ಲೂಟಿ (ಶಲಾವ. ೬೦-೯). (ನಾ). ೨. ಬಡಕಲು ಮನುಷ್ಯ; ಕೃಶವಾಗಿರುವವನು; ಸೊರಗಿದವನು : ಗೋದೀ, ನಾನು ಬಡಕ ಹುಟ್ಟಾ ಇದ್ದೀನಿ. ಚಹದಿಂದ ಬಡಕಾಟಿ ಆಗಿಲ್ಲ (ರಕ್ತರ್ಕ. ೦೬೯). **ಬಡಕಾಣಿ** : ಧನಪತಿ ರವಿಗಂ ನೋಡಿ ಬಡಕಾಣಿ ಸೊಡರಂ ನೀಡುವೊಲ್ಪುಡಿದೆಯ್ದರದೆ ನಡೆನಡೆಯೆಂದರ್ (ಹರಿಶ್ಚ. ೨-೦೦೮). [ಬಡ(<ಬಡವು) + ಕಾಟ್$_6$]

**ಬಡಕಾಣಿ** 'ಬಡಕಾಟಿ' ನೋ.

**ಬಡಕಾಯ್** 'ಬಡಗಾಯ್' ನೋ.

**ಬಡಕಾಯಿಸು** (ಕ್ರಿ). ೧. ಏಳಿಗೆ ಹೊಂದು ; ಅಭಿವೃದ್ಧಿಯನ್ನು ಹೊಂದು : ಆ ಮಾಧವ ಒಬ್ಬನನ್ನು ಬಿಟ್ಟರೆ, ತಂದೆ ಮಕ್ಕಳೆಲ್ಲ ತುಂಬ ಬಡಕಾಯಿಸಿದ್ದಾರೆ (ಜಾರುದಾ. ೦೬೭). ೨. ಬೆಳೆಸು ; ಅಭಿವೃದ್ಧಿಪಡಿಸಂ: ಅವನು ಸಣ್ಣದಾಗಿ ಅಂಗಡಿ ಹಾಕಿಕೊಂಡು ವೃತ್ತಿಯನ್ನು ಆರಂಭಿಸಿ, ಅದನ್ನು ಈಗ ಬಡಕಾಯಿಸಿ ದೊಡ್ಡದ ಮಾಡಿದ್ದ (ಊರುಕ. ೬೯).
[ಬಡಕ$_0$ (ಪ್ರ ← ಹಿಂ. ಬಢನಾ) + —ಇಸು$_8$]

**ಬಡಕು** (ನಾ). ೧. ಕೃಶವಾದುದು : ಬಡವಾದುದು. ೨. ಬಡತನ. ೧, ೨ : ಕೊಂಕು ಬಡಕೆಂಬ ನುಡಿಯಾ ವಾಡ ಮಡದಿಯರವಯವಗಳೊಳಲ್ಲದೆ ಬಿಱುನುಡಿಯಿಲ್ಲ (ಕಂಪಬಿ. ೨-೧೯). ೩. ದರಿದ್ರ ; ಬಡವ.
**ಬಡಕು ಭಗ್ಗ** = ಬಡವರು ಮುಂತಾದವರು ; ಬಡಬಗ್ಗರು : ಊರೊಳಗೆ 'ಬಡಕು ಬಗ್ಗ' ಉಳಿಯಬೇಕೋ ಬೇಡವೊ? (ಕಳುಹು. ೦೦೨).
**ಬಡಬಡಕನೆ** = (ಆಲಂ) ಮೆಲ್ಲನೆ ; ನಿಧಾನವಾಗಿ : ಬಡಬಡಕನೆ ಸುಳಿದುದು ಸುರಭಿಸಮೀರಂ ಬಂದ ಬಸಂತದ ಸಮಯದೊಳು (ಜಯುಕಾ. ೦೦-೯). [ಬಡಕ$_1$ + —ಉ$_4$]

**ಬಡಕ್ಕು** 'ಬಡಗು' ನೋ

**ಬಡಗ$_1$** 'ಬಡಗು' ನೋ.

**ಬಡಗ$_2$** (ನಾ). ೧. ಉತ್ತರದಿಕ್ಕಿನವನಂ : ನಿನ್ನಂಬೆಯಂ ಕೊಲ್ಲಿಸಿದ ತವಸಿಯಂ, ಮೋಣ್ ಕೊಂದ ಆ ಬಡವು ಬಡಗನುಂ ತವಿಯದೊಳರಿನ್ನುಂ (ಶ್ರೀರಾಪಾ. ೨೦೯-೨೨೯). ೨. ನೀಲಗಿರಿಬೆಟ್ಟದ ಪ್ರದೇಶದಲ್ಲಿ ವಾಸಿಸುವ ಒಂದು ಜನಾಂಗ : ಕುಡಗರು ತುಳುವರು ತೊಡವರು ಬಡಗರು (ಅರಳು. ೩೦೯-೬); ಬಡಗರು ಆಡುವ ಭಾಷೆ ದ್ರಾವಿಡಭಾಷೆ (ದ್ರಾಬಿಬಿ. ೦೯೫). ೩. ದ್ರಾವಿಡಭಾಷೆಗಳಲ್ಲಿ ಒಂದು; ನೀಲಗಿರಿಯ ಬಡಗರು ಆಡುವ ಭಾಷೆ : ಬಹಳಜನ ವಿದ್ವಾಂಸರು ಇಂದಿಗೂ ಬಡಗಭಾಷೆಯನ್ನು ಪ್ರತ್ಯೇಕವಾಗಿ ಪರಿಗಣಿಸದೆ ಕನ್ನಡಭಾಷೆಯ ಒಂದು ಉಪಭಾಷೆಯಾಗಿಯೇ ನೋಡುವರು. ಆದರೆ ಬಡಗಭಾಷೆಯನ್ನೂ ಒಂದು ಪ್ರತ್ಯೇಕ ದ್ರಾವಿಡ ಭಾಷೆಯೆಂಬಂತೆ ಸಮೀಕ್ಷಿಸುವುದು ಅಗತ್ಯವೆಂದು ತೋರುತ್ತದೆ (ದ್ರಾಬಿಬಿ. ೦೯೩). [ಬಡಗು + —ಅ$_7$]

**ಬಡಗಣ್$_1$** (ನಾ). ಸಣ್ಣ ಕಣ್ಣು : ನಿಡಿದಪ್ಪಂಗುಲಿ ಕೆಂಪುವೆತ್ತ ವಿಪುಳಶ್ರೋತ್ರ (ಸ್ರೋತಂ) ಲ(ರ)ಸತ್ಪುಷ್ಕರಂ . . . ಬಡಗಣ್ಣೊಪ್ಪುವ ದಕ್ಷಿಣೋನ್ನತರದಂ ತಾನಾಗೆ ಪೂಜ್ಯಂ ಗಜಂ (ಲೋಕೋಪ. ೦೦-೬೬).
[ಬಡ(<ಬಡವು) + ಕಣ್]

**ಬಡಗಣ್$_2$** 'ಬಡಗು' ಪರಾ.

**ಬಡಗಣ** 'ಬಡಗು' ಪರಾ.

**ಬಡಗದೆಸೆ** (ನಾ). ಉತ್ತರದಿಕ್ಕು ; ಬಡಗಲು : ಸೀತಾತಗನಿಯ ಬಡಗದೆಸೆಯ ವರಪುಷ್ಕರಾವತೀ ಜನಪದದೊಳ್ (ವರ್ಧಪು. ೦೦-೨೭) ; ಬಡಗದೆಸೆಯ ಬೀಡಿಳಿದಿರ್ದ ಮೊರಸರ ಪಡೆ ಹನುಮನ ನೇಮದಲಿ ತುಡುಕಿ . . . ಬೊಬ್ಬಿಱಿದೇಱಿದರು (ಕಂಪಬಿ. ೦೯-೩೭). 'ತೆಂಕದೆಸೆ' ಪರಾ.
[ಬಡಗ$_1$ (<ಬಡಗು) + ದೆಸೆ$_2$]

**ಬಡಗದೇಶ** (ನಾ). =ಬಡಗನಾಡು ೧ : ಬಡಗದೇಶದೊಳೊರ್ವ ಮಲ್ಲಯ್ಯನೆಂದೆಂಬ ಮೃಡಭಕ್ತನುಂಟು (ಸೌಂದಪು. ೯-೨೯).
[ಬಡಗ$_1$ (<ಬಡಗು) + ದೇಶ]

**ಬಡಗನಾಡು** (ನಾ). ೧. ಉತ್ತರದ ದೇಶ ; ಬಡಗಣ ನಾಡು : ದರ್ಶನಜ್ಞಾನಚಾರಿತ್ರಂಗಳಂ ಪ್ರಕಿಪಾಳಿಸಿ ಬಡಗನಾಡ ಪಸವು ತಿಳಿದುದೆಂಬುದನಾ ನಾಡಿಂದಂ ಬಂದರ್ ವೇಟಿ³ (ವಡ್ಡಾರಾ. ೯೦-೦೬); ಬಡಗನಾಡ ಮಧುರಾಪುರದೊಳ್ ವೈಶ್ಯಕುಲಪ್ರಧಾನಂ ಜಿನದತ್ತನೆಂಬ ಶ್ರಾವಕಂ (ಜೀವಸಂ. ೯೦-೨೦); ಸಮಸ್ತಗೌಡಪ್ರಭುಗಳು ಬಡಗನಾಡ ತಿಕಿಸರಿ ಗಡಸುಬರ ಚಿಕವಿಠಪಂಗಳ ಮಗ ವಿಠಪಂಗಳಿಗೆ . . . ಸರ್ವಮಾನ್ಯವಾಗಿ ಧಾರೆಯನ್ನೆರೆದುಕೊಣ್ಣ ವುಡುಗೊಟಿ³ ಗ ೨ ಎರಡು ಹೊನ್ನು (ಮೈಇಂ. ೦೯೩೦, ೬೯-೮ ; 1396). ೨. ಉತ್ತರದಿಕ್ಕಿನಿಂದ ದಕ್ಷಿಣಕ್ಕೆ ಬಂದು ನೆಲಸಿದ ಬ್ರಾಹ್ಮಣರ ಒಂದಂ ಪಂಗಡ : ಆಚಾರ್ಯ. . .ಅಷ್ಟಸಹಸ್ರಂ, ಬಡಗನಾಡು, ಬಾರದೇಶಿಕಾರ (ತುಳುನಾ. ೧೭೦).
[ಬಡಗ₁ (<ಬಡಗು) + ನಾಡು]

**ಬಡಗನ್ನಿಕೆಟಿ³** (ನಾ). ಒಂದು ಊರಿನ ಹೆಸರು (?): ತನ್ನರಸಿ ಚಿಕ್ಕಬ್ಬೆಗೆ ಬಡಗನ್ನಿಕೆಟಿ³ಯ ಬಡಗಣ ಬನರಿಯು ಪಿನ್ನಣ ಕೆಟಿ³ಯುಮ್ಬಿಟ್ಟ ದೇವರ್ಗೆ (ಎಕ. VII, ಶಿವಮೊ. ೯೬-೦೯ ; ಸು. 915). [<ಬಡಗ₁? + ಕೆಟಿ³]

**ಬಡಗಬಾಗಿಲು** 'ಬಡಗವಾಗಿಲು' ನೋ.

**ಬಡಗಮುಖ** (ನಾ). ೧. ಉತ್ತರದಿಕ್ಕು ; ಬಡಗು. ೨. ಉತ್ತರದಿಕ್ಕಿಗೆ ಮುಖ ಮಾಡಿದವನು : ವಸುಭೂತಿಯುಂ ಬಡಗಮುಖನಾಗಿ ಕುಳ್ಳಿರಿಸಿ (ಧರ್ಮಾಮೃ. ೦-೦೯೦). 'ತೆಂಕಮುಖ' ಪರಾ.
[ಬಡಗ₁ (<ಬಡಗು) + ಮುಖ]

**ಬಡಗಮೊಗ** (ನಾ). = ಬಡಗಮುಖ ೧ : ವಿಜಯಾರ್ಧಾಚಲ ಕಟಕಾಭಿಮುಖೀಕೃತನಿಜವಿಜಯಕಟಕನಾಗಿ ಬಡಗಮೊಗದೆ ನಡೆದು (ಆದಿಪು. ೦೩-೯೬ ವ) ; ತಣ್ಣೆಯದ ಮುಕ್ಕೂಡು ಬಡಗಮೊಗದೆ ಪೋಗಿ (ಮೈಇಂ. ೦೯೩೯, ೩೯-೮ ; 11ನೆಯ ಶತ) ; ಬಡಗಮೊಗದಿಂದೆ ಮೂಜಗದೊಡೆಯಂ ಕುಳ್ಳಿರ್ದಂ (ವರ್ಧಪು. ೦೫-೭). [ಬಡಗ₁ (<ಬಡಗು) + ಮೊಗ]

**ಬಡಗಲ್** 'ಬಡಗು' ಪರಾ.

**ಬಡಗಲು** 'ಬಡಗು' ಪರಾ.

**ಬಡಗಲೆ**, ಬಡಗಲೈ (ನಾ). [ವಿಶಿಷ್ಟಾ] ವಿಶಿಷ್ಟಾದ್ವೈತಿಗಳಲ್ಲಿ ಹಣೆಯ ಮೇಲೆ 'U' ಆಕಾರದ ನಾಮವನ್ನು ಹಚ್ಚುವ ಪಂಗಡ ; ರಾಮಾನುಜಾಚಾರ್ಯರ ಪಂಥೀಯರ ಒಂದು ವರ್ಗ : (ಕ). **ಬಡಗಲೈ**: ಶ್ರೀವೈಷ್ಣವಮತದ ಈ ತತ್ತ್ವ ಕ್ರಮೇಣ ಬಡಗಲೈ ತೆಂಕಲೈ (ಉತ್ತರ ದಕ್ಷಿಣ) ಭಾಗಗಳಾಗಿ ಒಡೆದವು (ಶಾರದ. ೨೯೭). 'ತೆಂಗಲೆ' ಪರಾ. [←ತಮಿ. ವಟಕಲೈ]

**ಬಡಗಲೈ** 'ಬಡಗಲೆ' ನೋ.

**ಬಡಗವಾಗಿಲು**, ಬಡಗಬಾಗಿಲು (ನಾ). ಉತ್ತರದಿಕ್ಕಿನ ಬಾಗಿಲು ; ಉತ್ತರದ್ವಾರ : ಎಡೆಗೇರಿಯ ಬಡಗವಾಗಿಲ ಶ್ರೀಲಕ್ಷ್ಮೀನಾರಾಯಣ ದೇವರಂಗಭೋಗಕ್ಕಂ . . . ಬಿಟ್ಟಪಡಿಕೆ ತೋಂಟ (ಸೌಇಇ. IX-i, ೨೬೭-೬೦; 1160). **ಬಡಗಬಾಗಿಲು** : ಆ ಪುರದ ಬಡಗಬಾಗಿಲ್ಗೀಪವಣಂ ತಿಳಿಯಲೊಂದು ಕೂಗಳತೆಯೊಳಂ ತಾಪಂಗಳನುರ್ಚುತಂ (ಶ್ರೀಮುಪು. ೦೦-೩). [ಬಡಗ₁ (<ಬಡಗು) + ಬಾಗಿಲು (<ಬಾಗಿಲ್)]

**ಬಡಗಸಂಡಗೆ** (ನಾ). ಒಂದು ಬಗೆಯ ಸಂಡಗೆ ; 'ಕುಂಬಳ ಸಂಡಗೆ' (ಸೂಶಾ. ೪-೦ ಟೀಕು) ; ಪ "ಗದ್ಯಸೂಪದಲ್ಲಿ . . . ನೆಲ್ಲಿಯ ಸಂಡಗೆ . . . ತದುಕಿನ ತಿರುಳು ಇವು ಸಂಭಾರವಸ್ತುಗಳು ಎಂದಿದೆ" (ಸೂಶಾ. ೪-೦ ಟೀಕು): ಹುರಿಯುಕ್ಕಿಯೆಳ್ಳು . . . ಕರಿಬೇವು ಬಡಗಸಂಡಗೆಯಿಂಗು ಕಡಲೆವಿಟ್ಟರಿಸನದ ಹುಡಿ . . . ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಶಾ. ೪-೦). [ಬಡಗ₁ + ಸಂಡಗೆ]

**ಬಡಗಾಯ್**, ಬಡಕಾಯ್, ಬಡಗೈ, ವಡಗಯ್, ವಡಗಾಯ್ (ಗು). ೧. ಉತ್ತರದಿಕ್ಕಿನ ; ಬಡಗಣ : ಪೆರ್ಗೊಲ್ಲಿಯುಳ್ಕೂಡಿತ್ತು ಪೆಟ್ಟಿಗೆಯ ಮೊದಲುಳ್ ಬಡಗಾಯ್ಪೆರ್ಗೊಲ್ಲಿಯೆ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV, ಎಳಂದೂ. ೬೦-೬೬ ; ಸು. 890). **ಬಡಕಾಯ್** : (ನಾ). ೨. ಉತ್ತರದಿಕ್ಕು : ಪ್ರತಿಚಿದೆಸೆ ಪೆದ್ದಾಣ ಎ ವಾಯವ್ಯಾ ದೆಸೆ ಪೆಟ್ಟಿಣ್ಣಲಿನ್ನಡಕಾಯ್ಕೂಕು ಉದಿಚಿದೆಸೆ ಕೆಟಿ³ಯಿನ್ನೀಗ್ಗೊರೆ ವಟ್ಟ (ಎಕ. X (೪). ಮುಳಬಾ. ೩೨೮-೩೨; ಸು. 650). **ಬಡಗೈ**: ೧. ಕೆಟಿ³ಯಿನ್ತೆಂಕ್ಕೆ ನಟ್ಟ ಕಲ್ಲೆ ಪೆರ್ಗ್ಗಟನಿಯಿನ್ ಬಡಗೈ ನಟ್ಟ ಕಲ್ಲೆ (ಎಕ. X (೪). ಶಕ್ಕೊ. ೬೬-೦೭ ; ಸು. 850). **ವಡಗಯ್** : ೧. 'ವಡಗಯ್ಯೇರಿ' ಪರಾ. **ವಡಗಾಯ್** ೧. ಮುಚ್ಚಸ್ನಿನ್ನಡಗಲ್ಲೆ ಪಡುವಯಾಲೆ ತಾಯುನ್ದಕೆಟಿ³ಯೆ ವಡಗಾಯ್ನುಡುಗಲ್ಲೆ ಕೊತ್ತನ್ದೆ ಕೆಟಿ³ಯೆ (ಎಕ. X (೪), ಶಕ್ಕೊ. ೦೦೬-೬೩ ; 850); ತೆನನ್ದಾಕಕೆಟಿ³ ಎ ಪೆಂಮರ್ಗುಗಗೆಟಿ³ ಎ ವಡಗಾಯ್ ಸನ್ದು ಕಿಟಿ³ಮಾಮಿಪಂಳಮೆ (ಎಕ. IV, ಎಡತೊ. ೬೦-೬೯ ; ಸು. 890). 'ತೆಂಕಾಯ್' ಪರಾ.
[ಬಡಗು + —ಆಯ್ಕ್./ತುಳು. ಬಡಕಾಯಿ, ಬಡಕ್ಕಾಯಿ]

**ಬಡಗಾಳಿ** (ನಾ). (?) : ಒಡವೆಳೆದೆಳೆಯ ಲತೆಯ ಕೆಂದಳಿರ್ಗಳ್ ಬಡಗಾಳಿಯ ಸೋಂಕಿಂ ಪೊಸಪಲಸಿನ ನಿಡುವಣ್ಣಂ ಪೊಡೆಯುತ್ತಿರೆ (ಜಯನೃ. ೦೦-೭).
[ಪ ಇದು 'ಪಡುಗಾಳಿ' ಎಂದಿರಬಹುದೆ ?]

**ಬಡಗಿ**, ಬಡಾಯಿ₁, ಬಡಿಗ, ಬಡಿಗೆ₂, ಬಡ್ಡಗಿ, ಬದ್ದಗಿ, ಬದ್ದಿ (ನಾ). ೧. ಪಂಚಕಾರುಕರಲ್ಲಿ ಒಬ್ಬ ; ಮರಗೆಲಸ ಮಾಡುವವನು ; ತಕ್ಷ : "ತ್ವಷ್ಟಾ, ಕಾಷ್ಠತಟ್, ತಕ್ಷಾ, ರಥಕಾರಃ, ವರ್ಧಕೀ—ಈ ೫ ಬಡಗಿ" (ಹಲಾಯು. ೯೬-೪೩೩) ; ನೃಪತಿ ತನ್ನ ಬಡಗಿಗಳ್ ವಿಶ್ವಕರ್ಮನುಂ ವಿಶ್ವಮತಿಯುಮೆಂಬೊರಂ ಕರೆಯಿಸಿ (ವಡ್ಡಾರಾ. ೦೯೭-೯) ; ಬಡಗಿಯಂತೆ ಕೆತ್ತುವರ್ ಅಗಸನಂತೆ ಬೀಸಿ ಪೊಯ್ವರ್ (ಧರ್ಮಾಮೃ. ೩-೬೩). **ಬಡಾಯಿ₁** : ೧. ನಾಲ್ವತ್ತು ಆಳಿನಲ್ಲಿ ಹತ್ತು ಹನ್ನೆರಡು ಅಕ್ಕಸಾಲೆ ಬಡಾಯಿ ವಗೈರೆಯವರು (ರಾಜೇಂದ್ರ. ೬೩). **ಬಡಿಗ** : ೧. ಒಬ್ಬ ಬಡಿಗನಿಂದ ಆವುದಾನೊಂದು ಗಳೆಯ ಹಾಸಿಕೊಂಡೊಯಿದು ಹೋಗಿ ಭೂಮಿಯಲ್ಲಿ ಹೂಡಿ ಹೊಡೆದರೆ ನೀಟವಾಗಿ ನಡೆದರೆ ಹೂಡುವರು (ವಚಸಂ. ೦೨೭-೦೦೭); ಹಡಗು ಗಾಳಿಗೆ ಲೇಸು ಗುಡುಗು ಮಳೆ ಬರೆ ಲೇಸು. . .ಊರಿಂಗೆ ಬಡಿಗ ಲೇಸು (ಸರ್ವಜ್ಞ. ೦೦೯೦) ; ಬಡಿಗರ ಮಾನಪ್ಪನು ನಮಗೆ ಈ ಪೆಟ್ಟಿಗೆಯನ್ನು ಮಾಡಿಕೊಟ್ಟನು (ಕಶಕೃ. ೪-೩). **ಬಡಿಗೆ₂** : ೧. ತನ್ನ ಬೇಳೆಯ ಬಳಂ ಬಡಿಗೆಯ ಹೊಲದೊಳಗೆ ರುದ್ರಶಕ್ತಿದೇವರ ಕಾಲಂ ಕರ್ಚ್ಚಿ ಧಾರಾಪೂರ್ವಕಂ ಮಾಡಿ ಬಿಟ್ಟ ಮತ್ತರೆರಡು (ಕಇ. I, ೨೯-೯೯ ; 1148). ೨. ಬಡಗಿಯ ವೃತ್ತಿ,—ಕೆಲಸ : ಹಿರಿಯೂರ ಬಡಿಗೆ ಕಂಪಾಜಿಕೆ ಅಕಸಾಲಿಕೆ ಪಂಚಾಳ ಕೊಲವರ್ತನೆ (ಎಕ.IX (೩), ಕಾನಕಾ. ೬೩-೦೭ ; ಸು. 1380). **ಬಡ್ಡಗಿ** : ೧. "ಬಡಗಿ (ಬಡ್ಡಗಿ, ಬಡಿಗಿ, ಬಡಿಗ)__ವರ್ಧಕಿ" (ಕದ್ಯಕೋ. ೨೮); ಚಿತ್ತಾರಿ ಕೇತೋಜನ ಮಗಂ ಬಡ್ಡಗಿ ಆಯ್ಕೋಜಂ ಈ ಶಾಸನದ ಕಲ್ಲಂ ಗೆಯ್ದಂ (ಮೈಇಂ. ೦೯೩೦, ೬೯-೬೩ ; 1053) ; ವರ್ಧಕಿ__ಬಡ್ಡಗಿ, ಬಡಗಿ (ಕಮುದ.೨೬೩ ಪ್ರಯೋ). **ಬದ್ದಗಿ**: ೧. 'ಅರಬದ್ದಗಿ' ಪರಾ. **ಬದ್ದಿ** : ೧. ಪೂರ್ವಕ್ಕೆ ತಾಳಾಗಿ ಉತ್ತರಕ್ಕೆ ತಲೆಬಾಗಿ ಬಿದ್ದ ಮರನ ತಂದು ಬದ್ದಿಯ ಕಾರುಕನ ಕೈಯಲ್ಲಿ ಸುಬದ್ಧಿಸಿ ಬಂಧಿಸಿ ಸುದ್ದಯಿಸಿ (ಸರ್ವವ. ೦೦೩-೩೬೭). [← ಪಾಲಿ. ವಡ್ಢಕಿ./ ಪ್ರಾ. ವಡ್ಢಇ./ಸಂ. ವರ್ಧಕಿ./ ಹಿಂ. ಬಢಈ ; ಮರಾ. ಬಢಈ, ಬಢಾಈ]

**ಬಡಗಿವೆಸ** (ನಾ). ಬಡಗಿಯ ಕೆಲಸ : ಐದು ದೇಗುಲಂಗಳ ಬಡಗಿವೆಸದೊಳ್ ಹಡಿಸಲಿಸುವ ಮಂಡಳಿಕ ಮಾಣಿಕಾಚಾರಿ ಹೊಂನೋಜ (ಎಕ. VIII, ಸಾಗರ. ೦೦೯-೬೯ ; 1042). [ಬಡಗಿ + ಬೆಸ₁]

**ಬಡಗಿವೊಲ** (ನಾ). ಬಡಗಿಗಾಗಿ ಬಿಟ್ಟ ಹೊಲ : ಬ[ಡ]ಗಿವೊಲದ ಸಂದಿನಲೀಶಾನ್ಯದ ಗುಡ್ಡೆ (ಸೌಇಇ.XX, ೦೮-೩೯; 980). [ಬಡಗಿ + ಪೊಲ]

**ಬಡಗು**, ಬಡಕ್ಕು, ಬಡಗ್ಗ, ವಡಗಂ (ನಾ). ಉತ್ತರದಿಕ್ಕು; ಬಡಗಣ ದೆಸೆ : ಅಟ್ಟುದಿಲ್ಲಿಳೆ ತೇಂಕಿರ್ದುದು ಭಾರದಿಂ ಬಡಗೆನಲ್ ಪೆಂಪಾರ್ಗ ಗಸ್ತ್ಯಂಬರಂ (ಶಂಕಿಪ. ೪-೨೦) ; ಅವರ ಆಳ್ವಿಕೆ ಬಡಗಿನಲ್ಲಿ ಕೃಷ್ಣಾನದಿಯಿಂದ ಹಿಡಿದು ತೆಂಕಲದಲ್ಲಿ ಭವಾನಿನದಿಯ ತನಕ ಪಸರಿಸಿತ್ತು (ಹಾಹುಕ್ತ. ೫) ; ತೆಂಕು, ಬಡಗು, ಪಡು ದಿಕ್ಕುಗಳಲ್ಲಿಯೂ ಬೆಳಕು ಹರಡುವುದನ್ನು ಕಂಡಿದ್ದೇವೆ (ಕಿಣಂ. I, ೪೪೪). **ಬಡಕ್ಕು** : ಪುಳಿಯಿ[ಂ] ಬಡಕ್ಕು ಪೋದ ಪೇರೊ[ಂಗೆ] (ಎಇ. X, ೬೭-೬೩; 893). **ಬಡಗ್ಗ** : ಬಡಗ ಗಾವುಣ್ಡುಗಳ ಪಸುಗೆಯು ಪೊಲನ್ (ಇಇ. XVIII, ೩೪-೨೯; 999). **ವಡಗು**.

**ಬಡಗಣ್** = ಉತ್ತರ ದಿಕ್ಕು : ಮೇರು ಪಡುವಣ್ಗೆ ಸೀತಾತೀರಂ ತೆಂಕಣ್ಗೆ ನೀಲಗಿರಿ ಬಡಗಣ್ಗಾ ತಾರು ದ್ರಾವಣರಣವಕ್ಷಾರಂ ಮೂಡಣ್ಗೆ ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೦೨) ; ಪಡುವಣ್ಗೆ, ಬಡಗಣ್ಗೆ (ಛಾಹಾಪು. ೫೭ ಪ್ರಯೋ) ; ಬಡಗಣಿನೊಗೆದತ್ತದೊಂದು ದೀಪ್ರಪ್ರಸರಂ (ವರ್ಧಪು. ೦೦-೨೨). ಬಡಗಣ, **ವಡಗಣ** = ಉತ್ತರದಿಕ್ಕಿನ : ಎಳ ಗೊವನೂರ ಬಡಗಣ ಸಿ(ಸೀ)ಮೆಯುಳ್ ಕು(ಕೂ)ಡಿ (ಇಇ. XVIII, ೩೬೭-೨೩ ; ೩ನೆಯ ಶತ) ; ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್ (ಆದಿಪು. ೩-೬ ವ); ತೆಣ್ಕಣ್ಣಾ ಸೀಮೆ ನೆಯ್ದಿಲ್ಗೆರೆಟಿಯಾ ಏಟಿ ಮೂಡಣ್ಣಾ ಸೀಮೆ ಇಡೆವೆಟ್ಟದಾ ವಡಗಣ್ಣಾ ನೀರಿಬಗ (ಎಇ. XXI, ೨೯-೦೨ ; ಸು. ೩ನೆಯ ಶತ). **ಬಡಗಣಂ** = ಉತ್ತರ ದಿಕ್ಕಿನವನು : ಅಕಾರಕ್ಕೆ — ಮೂಡಣಂ, ತೆಂಕಣಂ, ಬಡಗಣಂ (ಕವಿರಾ. ೦೦೦ ಪ್ರಯೋ) ; ಪಡುವಣಂ, ಬಡಗಣಂ (ಶಬ್ದಾನು. ೪೨೦ ಪ್ರಯೋ). **ಬಡಗಲ್**, **ಬಡಗಲು** = ಉತ್ತರ ದಿಕ್ಕು; ಬಡಗು : ತದ್ದವಾಡಿಗೆ ತೆಂಕಲ್ ತೊಱಗಲೆಗೆ ಬಡಗಲಿರ್ದುದು ನೆಱೆಯೆ ಸುಮೋದ್ದೀಪಮೆನಿಸಿ ಬೆಳುಗಲಿದೇಶಂ (ಆದಿಪು. ೦೨-೯೭) ; ನೈರಿತಿಯೊಳ್ಬರವುಲಿಗೆಱೆಯ ತೆಂಕಣ ಕೊಡಿಯಿಂ ಬಡಗಲ್ಬರೆಯೆರದ ಕೊಳನುಂ ಬೂದಿವಾಳುಂ (ಸೌಇಇ XI-i, ೩೨-೫೭; 1007) ; ಸುರರೆಲ್ಲಂ ಬಡಗಲು ನೆರೆದಿರೆಯಾ ದೆಸೆ ಕುಸಿದು ತೆಂಕ ನೆಗೆದೊಡೆ (ಸಮಪ. ೦೦-೦೦೪); ಬಡಗಲುತ್ತರಕುರುನರೇಂದ್ರರ ನಡುಗಿಸಿದರು (ಶುಭ್ಯಾಸ. ೦೪-೩೯).

[ದೇ.೩ ತಮಿ. ಮಲ. ವಟಕ್ಕು; ಕೊಡ. ಬಡಕ್; ತೆಲು. ವಡಕು]

**ಬಡಗುದುರೆ** (ನಾ). ಸೊರಗಿದ ಕುದುರೆ; ಕೃಶವಾದ ಅಶ್ವ : ಏನನೆಂ ಬೆನು ಬಸವ ನೀನೀವಾನೆವಾಱಗಳು ಬಡಗುದುರೆಗಳನೂನಸತಿಯರು ವರುಣ ವೃತ್ತಿಕೆ ಕೆಂಪಿನೆಱುವೆಗಳು (ಬಸಪು. ೨೨-೩೩); ಲಶುನವುಮೋವು ಮನುಪ್ಪಂ ಮೊಸರುಮನೊಡಗೂಡಿಕೊಂಡು ಬಡಗುದುರೆಗೆ ಸಂಕಿಸದೊಂದು ಪಕ್ಷಮಿಕ್ಕುಗೆ ವಿಶೇಷದಿಂ ಫಲಮನೀವುದದು ನಿಶ್ಚಯದಿಂ (ಅಶ್ವಶಾ. ೬-೫೦).

[ಬಡ (< ಬಡವು) + ಕುದುರೆ]

**ಬಡಗೊಂಟು** (ನಾ). = ಬಡಗುದುರೆ : ಉಡಿದ್ಯೆ ಬಂಡಿಯನೇನಗುರ್ವೊ ಮಗುಟ್ಟುಂ ವಿಕ್ರಾಂತದಿಂ ಕಾಗೆಯಂ ಪಿಡಿದ್ಯೆ ಸಂಕಿಸದೆರ್ದು ಕತ್ತೆ ಬಡಗೊಂಟೆಂದಿಂತಿವಂ ನೋಪಿನಿಂ ಬಡಿದ್ಯೆ . . . ಇದೇನಾಶ್ಚರ್ಯಮೊ ಸಾಹಸಂ (ಶಿಂಪು. ೬-೬೩). [ಬಡ (<ಬಡವು) + ಗೊಂಟು]

**ಬಡಗೆಲಸ** (ನಾ). ಸಣ್ಣ ಪುಟ್ಟ ಕೆಲಸ; ಚಿಲ್ಲರೆ ಕೆಲಸ: ಬೆಸಸುತಂ ತವೆ ಬಟ್ಟೆಯಂ ಮಾಡಿಸಿಕೊಳುತ ಬಡಗೆಲಸವಂ ಸಂತಸದಿ ಮಾಡಿಸೆ ಮಾಡಿ ಬದುಕುವೆವು (ಬಸಪು. ೫೩-೦೪). [ಬಡ (<ಬಡವು) + ಕೆಲಸ]

**ಬಡಗ್ಗೆ** 'ಬಡಗಾಯ್' ನೋ.

**ಬಡಗೊಂಡಿ** (ನಾ). ಕೃಶವಾದ ಕೊಂಡಿ; ಸವೆದ ಸರಪಳಿಯ ತುದಿ : ಬಣಜಿಗನ ಬಳಕೆಯಂತೆ ಕೊತ್ತಳಂ ಬಱಿದಾಗಿ ಬಟಲ್ದ ಬಡಗೊಂಡಿಯಂತಿ ರಾಳ್ವೇರಿಯುಱಿದು ಕಡುಗೊಯ್ಕಲಾದ ಕೆಯ್ಯಂತೆ ತೆನೆ ಮುಱಿದು (ಅಪಂಪು. ೦೦-೬೩ ವ). [ಬಡ (<ಬಡವು) + ಕೊಂಡಿ ]

**ಬಡತನ** (ನಾ). ೧. ಸೊರಗಿರುವಿಕೆ ; ಸಣ್ಣಗಾಗಿರುವಿಕೆ ; ಕೃಶತೆ : ಸರಳತೆಯುಂ ಬಡತನಮುಮುಮಬಳಾಮಧ್ಯದೊಳ್ (ಎಇ. XIII, ೩೩೨-೪೨; ೪೨೨); ಬಡತನವಂ ಬಡುತಿರ್ಪುದು ನಡು (ಕಾದಂಪು. ೪೦೫); ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನ ಉಂಟೆ (ಕೂಕ್ಕಸಂ. ೨೨೬-೬). ೨. ದರಿದ್ರತೆ; ದಾರಿದ್ರ್ಯ; ನಿರ್ಗತಿಕತನ : ಜಗದ ಬಡತನವನೊರ್ವೆಯೆ ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್ ನೆಗಲ್ದ ಬಡತನವಂನದನೇಕೆ ಗಡಂ ಸ್ಥಿರಿಸುವನೆನೆ ಪೊದಟ್ಟುದು ಮಧ್ಯಂ (ಆದಿಪು. ೪-೩೦); ಎಂತಾನುಂ ಪಡೆದ ಧನಮನಸದ್ವ್ಯಯಂಗೆಯ್ದೊಡೆ ಬಡತನಮಕ್ಕುಂ (ಶಂಕಿಸಂ. ೩೦೦-೨); ನಿನ್ನಯ ಸಿರಿಯೆ ಸಿರಿ ಬಡತನವೆ ಬಡತನ (ಶುಭ್ಯಾಸ. ೦೪-೨೦). ೩. ಕೊರತೆ; ಅಭಾವ : ಒರಿದಹ ನರಕಹಿಂಸೆಗಳನಡಸಿ ಸ್ವರ್ಗವನೀವ ಕರ್ಮದ ಕಡುವಿಸಂಪದದಿಂದೆ ಜ್ಞಾನದ ಬಡತನವೆ ಮಿಗೆ ಲೇಸು (ಗಗಶಾ. ೦೬-೯೭); ದುಡಿಯದೆ ನಮ್ಮ ದೇಶದಲ್ಲಿ ಆಹಾರಕ್ಕೆ ಬಡತನ ಬಂದಿದೆ (ದೂಶಿ).

[ಬಡ (<ಬಡವು) + — ತನ]

**ಬಡತರ್ಪ್** 'ಬರೆತರಪು' ನೋ.

**ಬಡತಾವು** (ನಾ). ಏನೂ ಇಲ್ಲದ ಜಾಗ; ನಿರ್ಗತಿಕ ಸ್ಥಳ; ಕುಗ್ರಾಮ : ದೊಡ್ಡೊಡೆಯ ತನ್ನಯ ಮಂತ್ರಿಸುಖರಾ ಬಡತಾವಿಗಟ್ಟನಟ್ಟಿದರೇನು ನಮ್ಮ ಚಿಕ್ಕೊಡೆಯನಲ್ಲಿಗೆ ಬಂದೆವು (ಛಶ. ೯೮-೯೭).

[ಬಡ (<ಬಡವು) + ತಾವು]

**ಬಡತಿ**, **ಬಡ್ತಿ** (ನಾ). (ಸಂಬಳ, ಹುದ್ದೆ ಮೊದಲಾದುವುಗಳಲ್ಲಿ) ಏರಿಕೆ; ಹೆಚ್ಚಳ : ಸರಕಾರೀನೌಕರಿಯ ಬಗ್ಗೆ ಸಂಬಳ, ಬಡತಿ, ಭತ್ಯೆ, ಪಿಂಚಣಿ, ಪದವಿ ಇವೇ ಆ ವರ್ಗದ ಪಂಚಪ್ರಾಣಗಳಾದವು (ದೂವಾದ. ೯೩); ಬಹು ಮಾನದ ಜೊತೆಗೆ ಕೆಲಸದಲ್ಲಿ ಬಡತಿ ದೊರೆಯುತ್ತದೆ (ಪಗಪೊ. ೦೬೨); ನಿಮ್ಮ ಉತ್ತಮಕೆಲಸದ ಸಲುವಾಗಿ ನಿಮಗೆ ಯೋಗ್ಯವಾದ ಬಡತಿ ಸಿಗುವ ವೇಳೆ ಇದೇ ಅಲ್ಲವೇ ? (ಕಳ್ವಶಾ. ೫೨). **ಬಡ್ತಿ** : ಕಚೇರಿಯ ಮಾತು, ಮೇಲಿನ ಅಧಿಕಾರಿಗಳ ವಿಶ್ವಾಸಸಂಪಾದನೆ, ಮುಂದಿನ ಬಡ್ತಿ ಯಾವಾಗ ಬರುತ್ತದೆ? —ಈ ಮಾತುಗಳೆಲ್ಲ ನಡೆದುವು (ಮಹಾಪ. ೦೪); ನನಗೆ ಬಟ್ಟಿಗೆ ಇಪ್ಪತ್ತು ರೂಪಾಯಿ ಬಡ್ತಿ ಸಿಕ್ಕಿದೆ (ಶಂಕ್ಕ. ೫೦).

**ಬಡ್ತಿ ನೀಡು**=ಮೇಲಿನ ಹುದ್ದೆಗೆ ಏರಿಸು: ಮೇಲಿನ ಅಧಿಕಾರಿಗಳು ಅವರಿಗೆ ಮೊದಲ ದರ್ಜೆಯ ಗುಮಾಸ್ತರಾಗಿ ಬಡ್ತಿ ನೀಡಿದರು (ದೂಶಿ). **ಬಡ್ತಿ ಹೊಂದು** = ಮುಂದಿನ ಹುದ್ದೆಗೆ ಏರು: ಕಾಲಕ್ರಮದಲ್ಲಿ ಬಡ್ತಿ ಹೊಂದಿ ಮೇಲಕ್ಕೆ ಬರಬಹುದು (೫ಗಸಂ. ೦೪). [←ಹಿಂ. ಮರಾ. ಬಢತೀ]

**ಬಡತಿಗೆ** (ನಾ). ಕೋಲು; ದೊಣ್ಣೆ; ಬಡಿಗೆ : ಆಗ ಶಂಭಯ್ಯನವರ ತಲೆಗೆ ಬಡತಿಗೆಯಿಂದ ಹೊಡೆದಂತಾಯಿತು (ಸಂಬಪಾ. ೬); ಎಸೆದ ಬಡತಿಗೆಯಷ್ಟು ಉದ್ದವಾದ ಮಾವಿನ ಕೊಂಬೆ ಉರಿಯುತ್ತಿತ್ತು (ಕ್ರಕ್ಕ. ೯೩). 'ಬಡಿತ' ಪಾಠ. [<ಬಡಿಗೆ ]

**ಬಡನಡು** (ನಾ). ಸಣ್ಣಗಿರುವ ನಡು; ಕೃಶವಾದ ಸೊಂಟ : ಪಾಲ್ಗಡ ಲೊಳಮುಮರ್ದಿನೊಳಂ ಪುಟ್ಟಿದ ಕಳ್ವಸೊರ್ಕಿನೊಳಮುಂತೆ ನಡುಗುವ ಬಡನಡುಗಳ್ಗೆ ನಡುಕಮುಮಂ . . . ಕೆಯ್ಗೆಯ್ದು (ಶಂಕಿಪ. ೬-೦೬ ವ); ನೆಲೆಮೊಲೆಯ ಬಣ್ಣಂಗೆ ಬಡನಡು ಬಳ್ಕೆ (ಗಂಳ. ೨-೦೦೩ ವ); ಕರಿಕುಂಭ ಜಘನ ಬಡನಡು ಬಟ್ಟಬಲ್ಮೊಲೆ ಕಂಬುಕಂಧರವುದುರಾಜಮುಖವು ಪದ್ಮಿನಿಗೆ (ಸೋಹಕ. ೦೬-೩೪). [ಬಡ (<ಬಡವು) + ನಡು]

**ಬಡನುಡಿ** (ನಾ). ದುರ್ಬಲವಾದ ಮಾತು ; ಸತ್ತ್ವವಿಲ್ಲದ ನುಡಿ : ಮನದೊಳಿದ್ದುದನೆಹಗೆ ಹೇಳದೆಯೆನುತ ಪಡೆದಾ ದೊಡ್ಡಹೊಟ್ಟೆಯನೆನುತ ಬಡನುಡಿಯಂ ನುಡಿವರೇ ಭಕ್ತರೊಳಗೆನುತ (ಬಸಪು. ೫೯-೦೪); ಜಲಬಿಂದು ಶುಕ್ತಿಕೆಯೊಳು ಬೀಳೆ ಮುತ್ತಾಗಿ ಬೆಲೆವಡೆವಂತನ್ನ ಬಡನುಡಿ ಬೆಲೆವಡೆಯದೆ ಮಾಣ್ಬುದೆ (ಪ್ರಕುಶಿ. ೦-೦೪); ಬಡನುಡಿ ಬಲ್ನುಡಿ ಬಡದೈವಕಲ್ಲದೆ ಬಡಕಬ್ಬ

ನಿನ್ನ ಪೊಂದುವದೆ (ಕಶಾಂ. ೬೨-೬೩). [ಬಡ (<ಬಡವು) + ನುಡಿ₂]

**ಬಡಪ**, ಬಡಹ (ನಾ). ಎಡಬಿಡದೆ ಸುರಿಯುತ್ತಿರುವ ಮಳೆ; **ಜಡಿಮಳೆ**: ಕಿತ್ತಂಬಿನ ಬಡಪಮಿದೆನಿಸಿ ಪಾಂಡ್ಯನಂಬಂ ಕಱಿದು (ಶಂಕಥಾ. ೩೨-೮೦) ; ತಂದಲೆಸ್ನೋನೆ ನಟ್ಟ ಬಡಪಮೆನಲ್ಸುರಿದುವು ಬಿಡದೆ ಮಱಿಗಳಿರುಳುಂ ಪಗಲುಂ (ಜಗು. ೪-೩೨); ಬಡಪಂ ಬೆಂಬತ್ತೆ ಮೇಪಂ ಮಱಿದು ಬಿಡದೊಡಲ್ ಕೋಡ . . . ನಿಂದಿರ್ದುದೋರೊಂದೆಡೆಯೊಳ್ ಹಾಱಲ್ಗೆಯೊತ್ತೇಬಿಡಿದು ಮೃಗಮೃಗೀವೃಂದಮೋರಂದದಿಂದಂ (ಶಂಕ್ರ.ಶು. ೪-೪೭). **ಬಡಹ** : ಪೋದುದಾಗಳಂತಡವಿಡದಿರ್ದ ಶಕ್ರಧನುವಾ ಬಡಹಂ ಬರೆ ಮೇಘಕಾಲದೊಳ್ (ಕುಸುಶಾ. ೬-೩೪); ಬಡಹಂ ಕೈಕೊಂಡು ದುರ್ವಿನೀತಳಮದು ನೆಱಿ ಜೌಗೆಬ್ದು . . . ಕಂಪಲ್ಮಸಗೆ (ಶಾಂತೀಶ್ವ. ೧೨-೫೬); ಮುಗಿಲೇಱಿ ಸುರಿದುದು ಬಡಹವಾ ಜೇವಂಜಸೆಯು ಕಣುನೀರೊಗುವ ತೆಱದಿ (ಶಾಸ್ತ್ರಶಾ. ೩೦-೬). [<ಪ್ರಾ. ವಡಪ್ಪ]

**ಬಡಪಟ್ಟು** ' ಬಡಪೆಟ್ಟು ' ನೋ.

**ಬಡಪಡು** ' ಬಡವಡು ' ನೋ.

**ಬಡಪತ್ತು** (ನಾ). =ಬಡತನ ೨ : ನಾನೂ ಬಡವನೇ : ಬಡಪತ್ತಿನಲ್ಲಿ ಹುಟ್ಟಿ ಬೆಳೆದವನು, ವಾರಾನ್ನದಿಂದ ಪರೀಕ್ಷೆ ಪಾಸು ಮಾಡಿದವನು (ಹಸ್ತ್ಯಶು. ೧೧೧). [←ತುಳು. ಬಡವತ್ತ್]

**ಬಡಪಶು** (ನಾ). ಅಸಹಾಯಕಸ್ಥಿತಿಯಲ್ಲಿರುವ ಪಶು ; ದುಃಸ್ಥಿತಿಯಲ್ಲಿರುವ ಪ್ರಾಣಿ : ಕೆಸಱಲ್ಲಿ ಬಿದ್ದ ಬಡಪಶುವಿನಂತೆ ಆನು ದೆಸೆದೆಸೆಗೆ ಬಾಯಿ ಬಿಡುತ್ತಿದ್ದೆನಯಪ್ಪ (ಅಸವ. ೪. ೫೨). [ಬಡ (< ಬಡವು) + ಪಶು]

**ಬಡಪಾಯಿ** (ನಾ). ೧. ದುರ್ಬಲ ; ಅಸಮರ್ಥ ; ಅಶಕ್ತ: ನಮ್ಮಂತಹ ಬಡಪಾಯಿಗಳು ಇಂತಹ ಕೆಲಸಕ್ಕೆಳಿದರೆ ಕಾರ್ಯ ಸಫಲವಾಗಬಹುದೆನ್ನುವ ನಂಬಿಕೆ ಇಲ್ಲ (ಕಾರುಣ. ೬೪); ಬಡಪಾಯಿಗಳು ಹೋರಾಡುತ್ತಿರುವ ಸಾಮ್ಯವಾದಿ ಸಮಾಜರಚನೆಯೇ ಇದು (ರಷ್ಯಾ. ೧೨) ; ಈ ನೆಲವೆಲ್ಲವು ಕಾಗದವಾದರೆ ಜಲವೆಲ್ಲವಾದರೆಶಾಯಿ ಮರ ಗಿಡವೆಲ್ಲವು ಲೆಕ್ಕಣಿಯಾದರೆ ಬಡಪಾಯಿ ಸಾಕು ಬಡಾಯಿ (ಇಂಕಾಶ. ೦೫೬-೬೦). ೨. ನಿರ್ಗತಿಕ; ದರಿದ್ರ : ಅಯ್ಯೋ ತಾನು ಬಡಪಾಯಿ ಹೇಗೆ ಅಂಥ ಸುಖ ಸಿಕ್ಕೀತು ? (ಜೀವರಂ. ೬೨); ನನ್ನಂಥ ಬಡಪಾಯಿಯನ್ನು ಯಾರೂ ಕೇಳುವುದೇ ಇಲ್ಲ (ಕೇಪೋಕ. ೩೯); ಆ ಬಡಪಾಯಿಯ ಅಂತರಂಗದಲ್ಲಿ ಏನೇನು ಅಡಗಿದೆಯೋ ದೇವರೇ ಬಲ್ಲ ! (ಏಕಯೋ. ೮೬). (ಗು). ೩. ಸೊರಗಿದ; ಕೃಶವಾದ; ಒಣಗಿದ : ಆ ಬಡಪಾಯಿ ಪ್ರಾಣಿ ಬಾಯಾರಿಕೆಯಿಂದ ಈ ಅಮೃತಸರೋವರಕ್ಕೆ ಬಂದಿತ್ತು (ಶಾಕು. ೩೦); ಬಡಪಾಯಿ ಕೇಟಬಿಯ ದೇಹದಲ್ಲಿ ಉಳಿದಿದ್ದ ಚಟುವಟಿಕೆಯೂ ತೀರಿ ಹೋಯಿತು (ರಕ್ತಗೋ. ೩೫). [ಬಡ (<ಬಡವು) + ಪಾಯ್₁]

**ಬಡಪಾರ್ವ**, ಬಡಹಾರುವ (ನಾ). ದರಿದ್ರನಾದ ಬ್ರಾಹ್ಮಣ; ನಿರ್ಗತಿಕನಾದ ಬ್ರಾಹ್ಮಣ : ಎಮ್ಮಂ ಬಡಪಾರ್ವರನರಸರೆ ನೀವಿಾಗಳಱಿ ವಿರಱಿಯಿರೊ ಪೇೞಿಂ (ಶಂಕಥಾ. ೨-೬೩); ಈ ಕುಲಾಂಗನೆಯುರೀ ಬಡಪಾರ್ವನ ನುಡಿರಾಗರೇ (ಅಶಕು. ೧೧-೫೨); ಬಡಪಾರ್ವರೊಳ್ ಬೆಳೆದು ಬಾಯ್ ಬಡಿವುದನ್ ಕಲ್ತೆ (ಅಕ್ಕಶ್ರಾ. ೪೩-೬೪೪). **ಬಡಹಾರುವ** : ಈ ಋಷಿಗಳೇ ಬಿಣಗುಗಳು ಬಡಹಾರುವರು (ಕುಪ್ರಾಕ. ೬-೩೩). [ಬಡ (<ಬಡವು) + ಪಾರ್ವ]

**ಬಡಪೆಟ್ಟು**, ಬಡಪಟ್ಟು (ನಾ). ಬಡಿಯ ಏಟು; ದೊಣ್ಣೆಯ ಹೊಡೆತ. **ಬಡಪಟ್ಟು**.

**ಬಡಪೆಟ್ಟಿಗೆ**, **ಬಡಪಟ್ಟಿಗೆ**=(ಅಲಂ) ಸುಲಭವಾಗಿ; ಸರಾಗವಾಗಿ; **ತೊಡಕಿಲ್ಲದೆ** : ಆಫೀಸ್ ಕೆಲಸ ಬಡಪೆಟ್ಟಿಗೆ ಆಗೋಲ್ಲ (ಕುಸುಮ. ೨೦೯); ಅರಮನೆಯ ಜನ,ಗುರುಜನ,ಬಡಪೆಟ್ಟಿಗೆ ಅಂಥದಕ್ಕೆ ಒಪ್ಪಿಗೆ ಕೊಡುತ್ತಿರಲಿಲ್ಲ (ಚಾವು.೬೫); ರಂಗಣ್ಣ ಬಡಪಟ್ಟಿಗೆ ಮನೆಯಿಂದ ಹೊರಡುತ್ತಿರಲಿಲ್ಲ(ಕಶ್ಯಪು. ೨೩೦) ; ಆನಂದ ವಸಂತರ ನಡುವೆ ಚರ್ಚೆ ಪ್ರಾರಂಭವಾದರೆ . . . ಬಡಪಟ್ಟಿಗೆ ಮುಗಿಯುತ್ತಿರಲಿಲ್ಲ (ದೂರನ. ೨೪). [< ಬಡಿ₃ + ಪೆಟ್ಟು₂]

**ಬಡಬ** (ನಾ). ೧. ಸಮುದ್ರದ ಒಳಗಿರುವ ಬೆಂಕಿ ; ವಡಬಾಗ್ನಿ; **ಕಡಲ್ಗಿಚ್ಚು** : ಕಡಲೊಳಿಡಲೊಡನೆ ಬಂಬಲುಗಿಡಿಯ ಗಡಣದಿಂ ಬಡಬನೊಡಗೂಡಿತು (ಅಜಿತ. ೦-೯); ಕಣ್ಗೊಪ್ಪಿ ಬಂದತ್ತಿಭೇಂದ್ರಂ . . . ಬಡಬನಳುರ್ಕೆಯೊ ಭೈರವನಡರ್ಪೊ ವಿಾಳ್ತುವಿನ ದರ್ಪಮೋ . . . ಎಂದೆನೆ ಕಱುತ್ತು ತಾಗಿತ್ತಾಗಳ್ (ಶಾಂತೀ. ೬-೮೨). ೨. [ಕಾಮಶಾ] ಸ್ತ್ರೀಯರಲ್ಲಿ ಒಂದು ಗುಂಪು : ಬಡಬಜಾತಿ ಸ್ತ್ರೀಯಾಗಲಿ ಹರಿಣಿಜಾತಿ ಸ್ತ್ರೀಯಾಗಲಿ . . . ಕಾಮೋತ್ಸವಕ್ಕೆ ಪ್ರಿಯಳು (ಕಾಮಶಾ. ೨೦೬). [ಸಂ.]

**ಬಡಬಜ್ವಾಲೆ** (ನಾ).= ಬಡಬ ೧ : ಬಡಬಜ್ವಾಲೆಯ ವಿಸ್ಫುಲಿಂಗತತಿಯಂ ಬಂತಿರ್ಪ ಕಣ್ ಚಕ್ರದಿರ್ಕಡೆಯಂ ಬಾಯೊಳಿಱುಂಕಿದಂತೆ ಪೊಳೆಬಂ ಕೊಂಕಿರ್ದ ಕೊದಾಡೆ (ಕಜಕಂ. ೪-೪). [ಸಂ. ಬಡಬಜ್ವಾಲಾ]

**ಬಡಬಡ₁** (ನಾ). ತ್ವರಿತ, ಶೀಘ್ರತೆ, ನಿರರ್ಥಕತೆ ಇತ್ಯಾದಿಗಳನ್ನು ತಿಳಿಸುವ ಒಂದು ಅನುಕರಣಶಬ್ದ : ಪರಲು ಪರಿವಾರ ಬಡಬಡೆನಲು ಮುಗುಳುನಲಿ ನಗುತ್ತ (ಎಕ. VIII. ಸಾಗರ. ೦೦೯-೦೦; 1250 ?).

**ಬಡಬಡ₂** (ಅ). ಬೇಗನೆ, ಶೀಘ್ರವಾಗಿ ಎಂಬ ಅರ್ಥದ ಒಂದು ಅನುಕರಣಾವ್ಯಯ : ಎಷ್ಟನೆಯ ಪಾಠ ಅಂತ ಹೇಳಿಬಿಡಿರಿ. ಬಡಬಡ ಅಂದು ಬಿಡುವೆ (ಅಕ್ಕಮೀ. ೯); ಹೋಗಿ ಬಡಬಡ ಬೇರ್ಮನೆ (ವರನಿರುವ ಮನೆ) ಯಿಂದ ಮದಲಿಂಗನನ್ನು ಕರೆಕೊಂಬರ್ರಿ (ಸುಪಸಂ. ೫೨).

**ಬಡಬಡಕ** (ನಾ). ಬಡಬಡ ಎಂದು ಮಾತನಾಡುವವನು : ಬಡಬಡಕರನು ಹೇಳದಿರು ಮನ ನಡುಗುತಿರ್ದುದು ಮದನಹರನೆದೆ ಮಿಡುಕುತಿರ್ದುದು (ಕೊಶಿಶಾ. ೬-೪೬-೪೦). [ಬಡಬಡ₁ + – ಕ₃]

**ಬಡಬಡಕನೆ** ' ಬಡಕು ' ಪರಾ.

**ಬಡಬಡಗುಟ್ಟು** (ಕ್ರಿ). ವ್ಯರ್ಥವಾದ ಮಾತನ್ನಾಡು ; ವಟಗುಟ್ಟು ; ಗಳಹು : ಬಡಬಡಗುಟ್ಟಿ ಬಾಯೂಱಿ ಬಹಳ ಕಾಲ ಗೊಡೆಗುಟ್ಟಿ ಶಾಸ್ತ್ರಿಗಳಹರ ನಡೆಯ ನಗುತ ಕ್ಷಣದೊಳು ಶಾಸ್ತ್ರವಾರ್ಧಿಯ ಕಡೆಗಂಡ ಕುಶಲನೆಯ್ದಿದನು (ಭರತ. ೬೨-೬೨). [ಬಡಬಡ₁ + ಕುಟ್ಟು₁]

**ಬಡಬಡನೆ** (ಅ). ಜಾಗ್ರತೆಯಾಗಿ ; ತ್ವರಿತವಾಗಿ : ಹತ್ತೇ ರೂಬಲ್ ಸಾಕು ಎಂದವಳು ಬಡಬಡನೆ ನುಡಿದಳು (ತ್ರಿಪರು. ೦೯೪). [ಬಡಬಡ₁ + – ಅನೆ₁]

**ಬಡಬಡಾಗು** ' ಬಡ ' ಪರಾ.

**ಬಡಬಡಿಕೆ** (ನಾ). ಗಳಹುವಿಕೆ ; ಹರಟುವಿಕೆ ; ವ್ಯರ್ಥಾಲಾಪ : ಬಿಡುಗಡೆಯು ಬಂದಿತೆಂಬ ಬಡಬಡಿಕೆ ನಿಲಿಸೊ ಹುಂಬ (ಶಿಂಕ್ಷ. ೪೪) ; ಬಾದಷಹನ ಬಡಬಡಿಕೆಗೆ ಶಿವಾಜಿಯು ಬೆದರಿ ಬೆಂಡಾಗತಕ್ಕವನಲ್ಲ (ಹಿಂಕರು. ೪೦). [ಬಡಬಡ₁ + – ಇಕೆ]

**ಬಡಬಡಿಸು** (ಕ್ರಿ). = ಬಡಬಡಗುಟ್ಟು : ನುಡಿಯಲೇನುಳಿದವರನೆಣಿಕೆಯೊಳಿಡುವೆನೇ ಲೋಕತ್ರಯವನೆಂದೊಡನೊಡನೆ ಬಡಬಡಿಸಿ ಮಿಾಸೆಯ ಮುರಿದನಸುರೇಂದ್ರ (ಅಶಂಕಾ. ೧-೫-೩) ; ಮುದುಕಿ ಬನುವನನ್ನು ಮುಂದೆ ನಿಲ್ಲಿಸಿಕೊಂಡು ಅದೇನನ್ನೋ ಬಡಬಡಿಸುತ್ತಿದ್ದಳು (ಬಶಸಿ. ೩೫). [ಬಡಬಡ₁ + – ಇಸು₃]

**ಬಡಬಶಿಖಿ** (ನಾ). = ಬಡಬ ೧ : ಬಡಬಶಿಖಿಯನು ಕರದಿ ನಂದಿಪ . . . ರಕ್ಕಸಪಡೆಯ ಕೊಡಿದು ರಣಕೆ ಸಿಂಗರಗೈದು ಹೊಱವಂಟ (ಕೌಶಿಕಾ. ೩೫-೩) ; ಬಡಬಶಿಖಿಯಲ್ಲಿ ಪರ್ಬುವ ಪೊಡರ್ಪನೊಳಕೊಂಡು ಮೇಲೆ ಮೇಲೆ ತರ್ಪನ್ನೊಡಲುರಿಯನವಧರಿಸು (ರಾಜಶೇ. ೦೩-೦೪೬). [ಸಂ. ಬಡಬಶಿಖಿನ್]

**ಬಡಬಾಗ್ನಿ** (ನಾ). = ಬಡಬ ೧ : "ಕಡಲ್ಗಿಚ್ಚು ಬಡಬಾಗ್ನಿಯಕ್ಕು" (ಶಬ್ದಮಂ. ೦೩) ; ಜಿನಭಾವನೆಯೆಂಬ ಬಡಬಾಗ್ನಿಯಿಂ ವಿಷಯಸಾಗರಮಂ ಪೀರದೆ . . . ಶಾಶ್ವತಸುಖಿಂ ದೊರೆಕೊಳ್ಳದು (ಧರ್ಮಾಮೃ. ೬-೯೭) ; ಬಡಬಾಗ್ನಿ ನೊರಜಿನ ದಾಳಿಗಳುಕುವುದುಂಟೆ (ಕುಮಾರವ್ಯಾ. ೨-೭೯). [ ಸಂ. ]

**ಬಡಬಾನಲ**, ಬಡಬಾನಳ (ನಾ). ೧. = ಬಡಬ ೧ : ಬಡಬಾನಲಂಗೆ ಸೆಡೆದಿಂಗಡಲೆ ಸರಕ್ಕೊಕ್ಕುದಮರಶ್ಮೆಲಮಂ (ಶಂಕಾಪು. ೦-೦೦೩). ೨. ಒಂದು ಬಗೆಯ ಮಂತ್ರಾಸ್ತ್ರ ; ಆಗ್ನೇಯಾಸ್ತ್ರ : ಹರಿ ಬಡಬಾನಲವ ತೊಡೆ ದನುಜ ಕೈದುವ ಬಿಸುಟು ನಿಂದನು ತನಗೆ ಬಂದುದು ಮರಣ ವೆಂದೆನುತಾಗ ಕೈಮುಗಿದು (ಕೌಶಿಕ. ೩೩-೬೩). **ಬಡಬಾನಳ** : ೧. ಅಗುರ್ವುರಿವರಿಯುತ್ತುಮಿರ್ಪಣಿ ಬೃಹದ್ಬಡಬಾನಳನಂತೆ ತೋಱೆ (ಹಂಶಭಾ. ೯-೯೯) ; ಬಡಬಾನಳನ ಶಿಖಾವಳಿ ಕುಡಿಯಿಟ್ಟುದು (ಶಾಂತೀಶ. ೦೩-೦೦) ; ವಾಳಿಗೆ ಮೊಗದಿರುಹುವುದೆ ಬಡಬಾನಳನು (ಕುಮಾರವ್ಯಾ. ೩-೩೬). [ ಸಂ. ]

**ಬಡಬಾನಳ** 'ಬಡಬಾನಲ' ನೋ.

**ಬಡಬಿಜ್ಜೆ** (ನಾ). ಕಡಮೆಯಾದ ವಿದ್ಯೆ ; ಅಲ್ಪವಿದ್ಯೆ : ಮಗನೆ ಕಡು ಗುದುರೆಯುಂ ಬಡಬಿಜ್ಜೆಯುಂ ಸಮಂ ಮಗನೆ ನಾಣ್ನುಡಿ ತಪ್ಪದೆಂಬು ದಿಂತೀ ಕ್ರಮಂ (ಶಂಭರ. ೦೯-೦೦೯). [ಬಡ (< ಬಡವು) + ಬಿಜ್ಜೆ]

**ಬಡಬೆ** (ನಾ). ೧. ಹೆಣ್ಣುಕುದುರೆ : ಬಡಬೆಯು ಬೆನ್ನೊಳ್ ನರನಟು ದೊಡಮುಂತಾ ಬಡವೆ[ಬೆ] ಸಮರದೊಳ್ ಶರಹತಿಯಿಂ ಮಡಿವೊಡಮೆಂತುಂ ಸ್ವರ್ಗಂಬಡೆಗುಮೆ ತತ್‌ಕ್ಷಣದಿನವನಧೋಗತಿಗಿಟಾವಂ (ಅಶ್ವಶಾ. ೨-೩೨). ೨. = ಬಡಬ ೨ : ಬಿಡದೆ ಮೃಗಿಯು ವೃಷನು ಬೆರಸೆ ಬಡಬೆ ಹಯನು ಬೆರಸೆ ಈ ಎರಡು ನಿಧಾನಿಸುವೊಡೆ ಉಚ್ಚತರವು (ಶಸವ. ೯-೨೩) ; ಹರಿಣಿ ಬಡಬಾ ಕರಿಣೀ ಯಿಾ ಮೂರು ಪ್ರಕಾರ ಸ್ತ್ರೀಜಾತಿಯಿಹುದು (ಕಾಗಂಂ. ೯೯೩-೯). [ಸಂ. ಬಡಬಾ]

**ಬಡಮತಿ** (ನಾ). ಅಲ್ಪವಾದ ತಿಳಿವಳಿಕೆ : ಇನಿತು ಬಡಮತಿಯಿಂ ಬಸವ ರಾಜನ ಕೃತಿಯ ನಾನೆಂತು ರಚಿಸುವೆನು (ಬಸಪು. ೦-೦೯). [ಬಡ (< ಬಡವು) + ಮತಿ]

**ಬಡಮದುವೆ** (ನಾ). ಕಡಮೆ ವೆಚ್ಚದಲ್ಲಿ ಮಾಡುವ ಮದುವೆ : ಬಡತನದ ಲಗ್ನ : ಈ ಸುತಂಗೊಂದು ಬಡಮದುವೆಯಂ ಮಾಳ್ಪೆ (ಶಬ್ದಮ. ೦೩-೩). [ಬಡ (< ಬಡವು) + ಮದುವೆ]

**ಬಡಮನ** (ನಾ). ೧. ಹುರುಳಿಲ್ಲದ ಮನಸ್ಸು ; ಅಲ್ಪಮನಸ್ಸು : ಇಲ್ಲವೆಯು ಮೇಲೆ ಕಂಚೊಡೆದಂತೆ ಬಡಮನವೆನ್ನ ಕಾಡಿತ್ತಯ್ಯಾ (ಶಸವ. ೨೮೭) ; ಮುಱುಗಿ ಮನದೊಳ್ ಮುನಿದು ಕೆಲದ ಕಡುನೀಱಿರನಡರೆ ನೋಟ್ಪ ಬಡ ಮನದ ಮಂಡಳಿಕಮಂಡಳಿ (ವರ್ಧಕೊ. ೯-೪೩ ಪ) ; ಈ ಬಡಮನದ ವಿಪ್ರನದೇನ ಬೇಡಿದ (ಸಂಭಶ. ೦೦-೨೦). ೨. ಹೇಡಿ ; ಧೈರ್ಯಗೇಡಿ : ಡಮರುಗ ಹಸ್ತ ಭಸ್ಮಾಸುರಗಳ್ಕಿ ಬಡಮನನಾಗಿ ನಡನಡುಗಿ ಡಮರುಗವಾತವೆತ್ತನ ನೋವಿದ ಚಂಡಮಹಿಮಗಾನೆಱಿಗುವೆನು (ಕಶಕಾಂ. ೬೦-೩೩). [ಬಡ (< ಬಡವು) + ಮನ]

**ಬಡಮಲ್ಲ** (ನಾ). ಅಸಮರ್ಥನಾದ ಮಲ್ಲ : ಬಡಮಲ್ಲರನೆಲ್ಲರುಮಂ ಪಡಲಿಟ್ಟೈ ಕಂಸನುಜಿದೆ ಮಱಿದಿರ್ದೆಡೆಯೊಳ್ ಮಡಿಪಿದೆಯದಿನ್ನು ನಡೆ ಯದು ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ (ನೇಮಿಪು. ೦೦-೯೯). [ಬಡ (< ಬಡವು) + ಮಲ್ಲ]

**ಬಡಮಾತು** (ನಾ). = ಬಡನುಡಿ : ಬಡಮಾತನಾಡಿದೆ ತವ ಪಂಚಬಾಣಕ್ಕೆ ಪ್ಪುಡ ವಿಧಿ ವಿಷ್ಣು ದೇವೇಂದ್ರ ಒಡಲೊಳು ಪೆಣ್ಣುದ್ರವೆತ್ತರು (ಮೋಹತ. ೩-೪೮). [ಬಡ (< ಬಡವು) + ಮಾತು$_1$]

**ಬಡರು** (ಕ್ರಿ). ಗಾಬರಿಯಿಂದ ಬೆದರಂ.- ಬೆಚ್ಚು.

ಬಡರು ಬೀಳು, ಬಡರಿ ಬೀಳು = ಗಾಬರಿಯಿಂದ ಬೆದರಿ ಬೀಳು.- ಬೆಚ್ಚಿಬೀಳು : ನಿದ್ರಿಸುತ್ತಿದ್ದ ಪೀಂಚಲು ಏನೋ ದುಃಸ್ವಪ್ನದಿಂದ ಎಚ್ಚರುವಂತೆ ಬಡರು ಬಿದ್ದಿದ್ದಳು (ಮಲೆಗಳು. ೨೬೩) ; ತತ್ತರಿಸಿದ್ದ ಸಲಗ ಮತ್ತೆ ಬಡರಿ ಬಿದ್ದು ಎದ್ದು ಓಡಲು ಪ್ರಯತ್ನಿಸುತ್ತಿದ್ದಂತೆಯೇ . . . ಅದನ್ನು ಹೊತ್ತುಕೊಂಡು ಮನೆಯ ಕಡೆಗೆ ಇಳಿದರು (ಮಲೆಗಳು. ೦೨೩) ; ಕಲ್ಲು ತೆಗೆದುಕೊಳ್ಳುವಂತೆ ನೆಲಕ್ಕೆ ಕೈಯಿಟ್ಟು ಬಾಗಲು, ನಾಯಿಗಳು ಬಡರಿ ಬಿದ್ದು ಹಿಂದಕ್ಕೋಡಿದವು (ಕಾಹೂರು. ೯೬೨). [< ಬೆದುಱು$_1$]

**ಬಡವ** (ನಾ). ೧. ಕೃಶನಾದವನು ; ಸೊರಗಿದವನು : "ಬಡವನೆನಲ್ ಕೃಶಂ" (ಕರ್ಣಾಶ. ೬೭) ; ಕಾಮಸಂತಾಪದೆ ಬೆಂದವಂಗೆ ಬಡವಂಗದವಂಗತಿದುಃಖಿತಂಗೆ ಧಾತ್ರೀಪತಿಕೋಪದೊಳ್ಪೊಡರ್ದವಂಗೆ ಶರಣ್ಪೆಱತಿಲ್ಲ (ಸಮುತ. ೦-೦೯೨) ; ಬಡಿವೆತ್ತ [ಬಡವ]ನಂತೆ ಶಕ್ತಿ ಗೆಟ್ಟು (ಧರ್ಮಾಮೃ. ೦-೦೬೪). ೨. ಯಾವ ಆಧಾರವೂ ಇಲ್ಲದವನು ; ನಿರ್ಗತಿಕ ; ದರಿದ್ರ : "ಕ್ಷುದ್ರಃ, ದಂದ್ರಃ . . . ದುರ್ಗತಃ — ಈ ೬ ಬಡವಂ" (ಹಲಾಯು. ೩೭-೦೯೩) ; ನೀಚಜಾತಿಗಳುಂ ಬಡವರುಂ ಸದ್ಧರ್ಮಮಂ ಕೈಕೊಂಡು ನೆಗಟ್ದರ್ (ವಡ್ಡಾರಾ. ೯೭-೩) ; ಪಸಿದುಣ ವೇಡಿದಂ ಬಡವನಾನುಣಲಿತ್ತಂ (ಹಂಶಭಾ. ೩-೬೨) ; ದೈವದೊಳ್ಕೆ ಯಿರಲಾ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ (ಸೋಮೇಶ. ೩೩) ; ಬಡವನ ಕೋಪ ದವಡೆಗೆ ಮೂಲ (ಗಾದೆ).

ಬಡವ ಬಗ್ಗುಗಳು = ಅತ್ಯಂತ ದರಿದ್ರರು : ಬಡವ ಬಗ್ಗುಗಳೂರ ನಾಡನು ಗ್ರಾಮಕಾರ್ಯದಲಿ ಕೆಡಿಸಿದತಿಪಾಪಿಷ್ಠ (ಕೃಷ್ಣಾ.ಕ.೯-೯೭). ಬಡವರು ಬಗ್ಗರು, ಬಡಬಗ್ಗರು = ಬಡವಬಗ್ಗುಗಳಂ : ಬಡವರು ಬಗ್ಗರನ್ನು ಕಂಡರೆ ಕರುಣೆಯಿಂದ ವರ್ತಿಸಬೇಕು (ರೂಢಿ) ; ಚಂದ್ರಶೇಖರನು ಬಟ್ಟೆ ಬರೆ ಪಾತ್ರೆ ಪರಟಿಗಳನ್ನು ಬಡಬಗ್ಗರಿಗೆ ದಾನಮಾಡಿದನು (ಶಂಕಮ. ೦೯೩) ; ಗಾಂಧೀಜಯಂತಿಯಂದು ಅವರು ಬಡಬಗ್ಗರಿಗೆ ವಸ್ತ್ರದಾನ ಮಾಡಿದರು (ರೂಢಿ). [ಬಡವು + — ಅ$_1$]

**ಬಡವಡು**,- ಬಡಪಡಂ (ಕ್ರಿ) ೧. ಕೃಶವಾಗು ; ಸೊರಗು ; ಬಡವಾಗು : ತನ್ನೊಳಾದ ಬೇಟದೊಳ್ ಬಡವಟ್ಟುಮೋಟ್ಟಿವಾಡಿವದ ಸಸಿಯಂತೆ ಸೊಗಯಿಸುವಶಿಯುಳಂ ಕಂಡು (ಹಂಶಭಾ. ೩-೦೩ ಪ) ; ತಪದಿಂದಂ ಬಡವ[ಪಾಠಾಂ. ಪ]ಟ್ಟ ನಿಟ್ಟೊಡಲನಂ . . . ವಸು ಕೂರ್ಗೋಡಿಂದೆ ಕೋದೆತ್ತಿ (ವರ್ಧಕೊ. ೩-೬) ; ನೋಂತ ಬಡವ[ಪಾಠಾಂ. ಪ]ಟ್ಟೊಡಲಂ ಸಲ್ಲೇಖನದಿಂದಿಟಾಪದೊಡಲ್ಲದುದೇಂ ದೇವನಾಗಲೆನಗಂ ನಿನಗಂ (ಅನಂಪು. ೯-೬). ೨. ಬಡತನವನ್ನು ಹೊಂದು ; ನಿರ್ಗತಿಕನಾಗು ; ದರಿದ್ರನಾಗು : ಬಡವಟ್ಟಂಗೆ ಮಹಾನಿಧಿದ್ವಯಮೆ ಕೈಸಾರ್ದಂತೆ . . . ಉತ್ಸಾಹವಿರ್ಮಡಿಸುತ್ತಿರ್ಪಿನಮಿರ್ಪನೀಕ್ಷಿಸುತುಮಾ ಭೂಪೋತ್ತಮಂ ಪುತ್ರರಂ (ಶಾಂತೀಶ. ೬-೬೩). **ಬಡಪಡು** : ೧. ನೀಮಿಂತೇಕೆ ಕರಂ ಬಡಪಟ್ಟಿರ್ದಿರಿ (ವಡ್ಡಾರಾ. ೦೦೬-೯) ; ಬಡಪಟ್ಟು ಬೆಟ್ಟದೊಳ್ ಪೋಗಿ ತೊಟಲ್ದು ನಾರ್ಗಳನುಡಲ್ ತರುತಿರ್ದೆಲೆ ಮಾಡಲಾರ್ತ ನಿಲ್ಲಾಗಳೆ ಕೋಪಮಂ ನಿನಗೆ ಸಂಚಿತಶೌರ್ಯಧನಂ ಧನಂಜಯಂ (ಹಂಶಭಾ. ೬-೪೭) ; ನಾಯಟ್ ಬಡಪಟ್ಟು ದುಃಖದೊದವಿಂ ಬಾಯ್ವಿಟ್ಟು ಪೋಟಱಿಟ್ಟು . . . ಸತ್ತಿತ್ತಂತೆ ಕಾಲಾಂತದೊಳ್ (ಸುಕುಮಾ. ೩-೨೦). ೨. ಬಡಪಟ್ಟು ಬೇಡಿದವರ್ಗ್ಗೀವಡೆ ಜಂಗಮಕಲ್ಪವೃಕ್ಷಮೆಂಬುದು (ಎಇ. XVI. ೩೩-೦೮ ; 1102) ; ಒಂದುದಿವಸಂ ನಾಭಿರಾಜನಲ್ಲಾ ಪ್ರಜೆಗೂಡಿ ಬಂದು ಬಡಪ[ಪಾಠಾಂ. ಪ]ಟ್ಟರಿವರ್ಗೆ ಗ್ರಾಸವಿಲ್ಲೆಂದೀಶಂಗೆ ತೋಱಿದೊಡೆ (ಭುಜಬಲಿ. ೦೦-೯೭ ಪ). [ ಬಡ ( < ಬಡವು ) + ಪಡು$_1$ ]

**ಬಡವಾನಳ** (ನಾ). = ಬಡಬಾನಲ : ಒಳಗಿರ್ದ ವೈರಿಗಳ್ ಮೊಕ್ಕಳ ವಿಷಯರ್ ಪೆರ್ಚಲಧಿಕವಿಭವರ್ಕಳುಮಂ ತಳರದೊಡನಿರ್ದು ಬಡವಾ[ಹಾಂ.ಬಾ] ನಳನೆಂದುಂ ಪೆರ್ಚಲೀಯದುದುತಂಬುಧಿಯಃ (ಕವಿರಾ. ೩-೦೯೮). [ಸಂ. ಬಡವಾನಲ]

**ಬಡವಿ** (ನಾ). ಯಾವ ಆಧಾರವೂ ಇಲ್ಲದವಳು; ನಿರ್ಗತಿಕಳಾದವಳು; ದರಿದ್ರೆ: ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು ಬಳಸಿಕೊಂಡೆವದನೆ ನಾವು ಅದಕು ಇದಕು ಎದಕು (ನಾಕರೀ.೩೯-೦); ನನ್ನ ಹತ್ತಿರ ಅಷ್ಟು ರೂಪಾಯಿ ಎಲ್ಲಿಂದ ಬರಬೇಕು ? ನಾ ಬಡವಿ (ನಾಘೋರೀ. ೩೦೫). [ಬಡವ + — ಇ$_2$]

**ಬಡವು** (ನಾ). ೧. ಕೃಶವಾಗಿರುವಿಕೆ ; ಸೊರಗಿರುವಿಕೆ : (೩). ೨. ಸೊರಗಿದುದು ; ಕೃಶವಾದುದು ; ತೆಳುವಾದುದು : ನಖದೊಳಿರ್ದಪೆಯುವು್ದದುಂದೆ ನಿನ್ನನಾನನುವಿಪೆನೆನ್ನ ಮೆಯ್ ಬಡವೂ ನಲ್ಲನ ಮೆಯ್ ಬಡವೋ ನಿಶಾಕರಾ (ಅಂಪು. ೧೨-೧೦). ೩. ಏನೂ ಇಲ್ಲದಿರುವಿಕೆ ; ನಿರ್ಗತಿಕತನ ; ದಾರಿದ್ರ್ಯ : (೩). ೪. ಕಿರಿದು ; ಚಿಕ್ಕದು ; ಅಲ್ಪವಾದುದು : ನಿರ್ಜರಪತಿ ವಿಷ್ಣು ಬಾಗಿಲ ಕಾದಿರ್ಪ ಸಜ್ಜನಸಂಪತ್ತು ಬಡವೆ (ಹರಿಹರ. ೩೦-೦೩). ೫. ಅಶಕ್ತನಾದವನು ; ಅಸಮರ್ಥನಾದವನು ; ದುರ್ಬಲ : ಬೇಡ ಒಂಸಿಸಬೇಡ, ಆ ಬಡವು ಗೋಪವನನ್ (ಅಕ್ಕಿಕ್ಕಾ. ೬-೯೬) ; ನಿನ್ನುಂಬೆಯುಂ ಕೊಲ್ಲಿಸಿದ ತವಸಿಯುಂ, ಮೇಣ್ ಕೊಂದ ಆ ಬಡವು ಬಡಗನುಂ ತವಿಯದೊಳರಿನ್ನುಂ (ಶ್ರೀರಾಮಪಾ. ೨೦೯-೨೨೪).

**ಬಡವಾಗು** = ೧. ಕೃಶವಾಗು ; ಸಣ್ಣನಾಗು ; ಸೊರಗು : ಆತನ ಮಹಾದೇವಿ ಮಂದೆಯಂಬೊಳಾಕೆಗೆ ಗರ್ಭಮಾಗಿ ಚಂದ್ರನಂ ನುಂಗುವ ಬಯಕೆಯಾಗಿ ಬಡವಾದೊಡೆ (ವಡ್ಡಾರಾ. ೦೫೬-೦೦) : ಬಡವವ್ಪೊಡೆ ಮೇಯದೆ ನೀರ್ಗುಡಿಯದೆ ಮಲ್ಕಿರ್ಬಯದಿರ್ಪೊಡೋರಂತಿರೆ ಕೊಡುವುದು ಸೇವಿನ ಕಷಾಯಮಂ (ಲೋಕೋಪ. ೯-೨೦೬). ೨. ನಿರ್ಗತಿಕನಾಗು ; ದಾರಿದ್ರ್ಯವನ್ನು ಹೊಂದು : ಧನ ಸವೆದು ಬಡವಾದರೆ ಆ ಭಕ್ತನು ಆ ಲಿಂಗಕ್ಕೆ ಪೂಜೆಯುಹನು (ಬಸವ. ೦೫೦) ; ಬಡವಾದಿರರಸ ಕಾಲೊಳ್ ನಡೆದಪಿರೊಡನಾರುವಿಲ್ಲ ಕಡಲೆಗಳೇ ನಿಮ್ಮಡಿಯೊಳಗೆ ಪಡುವ ದೇಗುಲ ದೆಡೆಯಾವುದು ಕುಡದ ನಿವಾಗಮಾಯೆಡಡಬಾಯ್ತೋ (ಕಮರ. ೦೦೨ ಕ್ರಹೋ); ಕಾಣೆಯ ಬೀಯದಲಿ ಬಡವಹುದೆ ಕನಕಾಚಲ (ಕುಮಾರ್ಯರಾಮ. ೦-೦೬).

**ಬಡವುಗಳ್** = ಅಸಹಾಯಕವಾದ ಪ್ರಾಣಿ ಮುಂತಾದುವು : ಕರಿ ಕಳಭಂಗಳ ಶಿಶುಕೇಸರಿಗಳ ಬಟಿಯುಂ ತಗುಳ್ದು ಬಡವುಗಳನದಂ ತಿರಿಪಿ ಓಡಿಯುತ್ತುಮರಿಗಂ ಪರಿದಾಡುವ ಸವುವಯ[ಸ್ಕರೊ]ಳ್ ಸೊಗಯಿಸಿದಂ (ಹಂಪನಾ. ೨-೦೦): ಅಧಿಕಾರಿಗಳೆನೆ ಸ್ವೈರಿಸವಧಿಕಾರಿಗಳಾಗಿ ಬಾಳ್ವಿಗ್ಗಿ ಬಡವುಗಳವಗಾರ್ಯಯುಧಭಾರಮೇಕೆ (ಗದಾಯು. ೩-೩೩). **ಬಡವು ಬಗ್ಗುಗಳ್** = ಬಡಬಗ್ಗರು : ಬಡವುಬಗ್ಗುಗಳ ಕರೆಕರೆದು ಕೈಹಾರದಲಿ ಮನವರಿಸಿ ಸೂಜಿಯ ಬಿಟ್ಟು ತೆಜಿಗೆಯ ಬರಹಗಳ ನೆಜಿ ತೊಡಿಸಿ ಸಂತಸವಡಿಸಿದನು ಜನವ (ತೋರಣಾ. ೬-೯೬-೨೭).

**ಬಡವೆ** (ನಾ). = ಬಡವಿ : ಕುಡುವ ಬೊಜಂಗನಂ ಪಡೆದ ಕುಂಟಣಿಯಂತೆ ಸಿರಿವಂತನ ಕಯ್ಯುಂ ಪಿಡಿದ ಬಡವೆಯಂತೆ (ರಪರ್ಹಾಸ್ಯ. ೩-೦೨೩) : ನಾನು ಬಡವೆ, ತಿರಕೊಂಡು ತಿಂಬೋಳು (ಹುಬ್ಬುಹ. ೦೬೬). [ಬಡವ + — ಎ$_4$]

**ಬಡವೆಣ್** (ನಾ). ಹೆಚ್ಚು ತಿಳಿಯದ ಹೆಂಗಸು ; ಮುಗ್ಧಸ್ತ್ರೀ : ಕಡು ನಾಣ್ಚೆಯುಂಜಿ ಕಣ್ಮುಚ್ಚಿ ಕಂಪನಗೊಂಬ ಬಡವೆಣ್ಣಳೀ [ ಹಾಹಾಂ. ಎಡವೆಣ್ಣಳೀ, ಮಡದಿಯರೀ] ಕೃತಿಗೇಳೆ ಎಡಬಲದವರೇಳಿಸದಂತೆ ಮನದ್ನರೊಡವೆ ಬಾಳುವರದನೋಳು (ಹರಿ. ೦-೩೩). [ಬಡ (< ಬಡವು) + ಪೆಣ್]

**ಬಡವೆಟ್$^3$**, ಬಡವೆಟಿ$^3$ (ನಾ). ಚಿಕ್ಕದಾಗಿರುವ ಚಂದ್ರ; ಬಾಲಚಂದ್ರ: ಭಾಳದೊಳಿಕ್ಕಿದ ಬಡವೆಟಿವ್ಪೊಟ್ಟಂ ಸ್ಥೂಲಪಯೋಧರಕಿಕ್ಕಿದ ತಾರಾ ಮಾಲೆಗಳಂ ಬಾಲೆಯುತರೆಬರೆಸಿದರ್ (ಜಯುಕು. ೦೨-೦೦). **ಬಡೆಹೆಟಿ$^3$** : ಹರನ ಜಡೆಯ ಬಡಹೆಟಿಯುಂ ವಾಣೀವರನ ಬೆರಲ ಕಂಠವನಂಬುರು ಹೋದರನ ಕರದ ಕಂಬುವನು . . . ತರಿಸಿ (ಜಯುಕು. ೦-೬೪). [ಬಡ (< ಬಡವು) + ಪೆಟಿ$^3$]

**ಬಡವೊಡಲ್**, ಬಡವೊಡಲು (ನಾ). ಕೃಶವಾದ ಶರೀರ ; ಸೊರಗಿದ ಮೈ : ಬಡವೊಡಲಂತೆ ಜೋಲ್ದು ಪರ್ವಡದ ಪಂದೆಯಂತೆ ತಲ್ಲಣಿಸಿ (ರಪರ್ಹಾಸ್ಯ. ೦-೦೬೬) ; ಸೀರಂತೆವೋಲ್, ತುಂತುರಾಗದೇವಿ ನನ್ನ ಬಡವೊಡಲ್ ? (ಶ್ರೀರಾಮಪಾ. ೩೦೩-೬೩). **ಬಡವೊಡಲು** : ಬಡವೊಡಲು ನಾಸಿದಟಿ ಬಿಗುಹಂ ಸಡಿಲಿದಡೆ ನೀ ಮಾತ್ರ ಮುಂದಕ್ಕಡಿಯನಿಡಬಾರದೆ ನಿಲುವೆ (ಬಸವು. ೯೯-೯). [ಬಡ (< ಬಡವು) + ಒಡಲ್]

**ಬಡವೊಡಲು** 'ಬಡವೊಡಲ್' ನೋ.

**ಬಡಹ** 'ಬಡಪ' ನೋ.

**ಬಡಹಾರುವ** 'ಬಡಪಾರ್ವ' ನೋ.

**ಬಡಹುರಿ** (ನಾ). ಕೃಶವಾದ ಹಗ್ಗ ; ತೆಳುವಾದ ಹುರಿ : ಹಿಡಿದು ಕಜುಗಳನೆಳೆವವೊಲವಗಡಿಸಿ ಕಟ್ಟಿದನೇಳನೊಂದೇ ಬಡಹುರಿಯ ನೇಣಿನಲಿ (ಕಿರಾಗ. ೦೦-೬೮-೩೨). [ಬಡ (< ಬಡವು) + ಹುರಿ$_3$ (< ಪುರಿ$_3$)]

**ಬಡಹೆಟಿ$^3$** 'ಬಡವೆಟಿ$^3$' ನೋ.

**ಬಡಾ** (ಗು). ೧. ದೊಡ್ಡ ; ಹಿರಿಯ : ಇಂಥಾ ದುರ್ಘಟಸಮಯದಲ್ಲಿ ಬಡಾಫಕೀರರಿಲ್ಲವೇ ಎಂಬುದು ಎಲ್ಲರಿಗೂ ಆಶಂಕೆ (ದೌಂಡ್. ೮೦). (ನಾ). ೨. ವಿಸ್ತಾರವಾದುದು : 'ಬಡಾಯಿಸು', 'ಬಡಾವಣೆ' ಪರಾ. [← ಹಿಂ. ಬಡಾ]

**ಬಡಾಯಿ$_1$** 'ಬಡಗಿ' ನೋ.

**ಬಡಾಯಿ$_2$** (ನಾ). ದೊಡ್ಡಸ್ತಿಕೆ ; ಒಣಜಂಬ; ಹೆಮ್ಮೆ : ಅವಳ ತಾಯಿ ತಂದೆ ಇದ್ದಿದ್ದರೆ ಎಷ್ಟು ಸಂತೋಷಪಡುತ್ತಿದ್ದರೋ? ಸ್ವಲ್ಪವೂ ಜಂಬ, ಬಡಾಯಿ ಇಲ್ಲ (ದೂರಸ. ೦೦೩); ಒಣಸಾಹಸದ ಬಡಾಯಿಯಲ್ಲ; ಅವನು ಬಹುಶ್ರುತನಾಗಿದ್ದನು (ಶಿಂಶಿಪ. ೯೯೨). [← ಹಿಂ. ಮರಾ. ಬಡಾಈ, ಬಢಾಈ. / ತುಳು. ತೆಲು. ಬಡಾಯಿ]

**ಬಡಾಯಿಕೊಚ್ಚು** (ಕ್ರಿ). ಜಂಬ ಹೊಡೆ : ನಾನದನ್ನು ಬಲ್ಲೆ, ಬಲ್ಲೆ ಎಂದು ಯಾರು ಬೇಕಾದರೂ ಬಡಾಯಿಕೊಚ್ಚಬಹುದು (ಸಕಂಅ. ೦೪೬); ಕೃಷ್ಣಭಟ್ಟರು ಬಡಾಯಿಕೊಚ್ಚಿಕೊಳ್ಳುತ್ತಿದ್ದರು (ಕ್ರಾಂತಿಸು. ೦೬). [ಬಡಾಯಿ$_2$ + ಕೊಚ್ಚು$_1$]

**ಬಡಾಯಿಗಾರ** (ನಾ). ಒಣಜಂಬದವನು : ಅವನು ಚಮತ್ಕಾರಶೂನ್ಯವಾದ ಬಡಾಯಿಗಾರ ಮಾತ್ರವಲ್ಲ . . . ಆಡಂಬರವ್ಯಕ್ತಿಯೆಂದು ಆಗ ಪ್ರತಿಯೊಬ್ಬರಿಗೂ ಮನದಟ್ಟಾಯಿತು (ಪುಶರು. ೩೩೩). [ಬಡಾಯಿ$_2$ + — ಕಾರ$_1$ (< — ಕಾಱ)]

**ಬಡಾಯಿಸು** (ಕ್ರಿ). ೧. ದೊಡ್ಡದಾಗು ; ಹೆಚ್ಚು ; ಅಧಿಕವಾಗು: ಮೈಸೂರವರು ಬಡಾಯಿಸಿ ಕೊಡಗಿನ ಶೀಮೆ ವಳನುಗ್ಗಿ ಬಂದರು (ರಾಜೇಂದ್ರ. ೩). ೨. ವಿಸ್ತರಿಸು; ಹೆಚ್ಚಿಸು: ಅಧಿಕಗೊಳಿಸು : ಈ ಬಾರಿನ ಸಂಖ್ಯೆಯನ್ನು ೮,೦೦೦ಕ್ಕೆ ಬಡಾಯಿಸಿದರು (ಮುಹಾಶಂ. 11. ೦೯); ನಾಲೆಯನ್ನು ಮೈಸೂರವರೆಗೂ ಬಡಾಯಿಸಿ ಭಾರಿಯಾಗಿ ಕಾಲುವೆ ಮಾಡಿಸಿದರು (ಮುಸುಗ. ೯೯); ಹುಡುಗ ವ್ಯಾಪಾರ ಮಾಡಿಕೊಂಡು ಹೋಟೆಲ್ ಬಡಾಯಿಸಿದ (ಕಪಸಂ. ೦೯೮). [ಬಡಾ + — ಇಸು$_2$./ತೆಲು. ಬಡಾಯಿಂಚು]

**ಬಡಾಯಿಹೊಡೆ** (ಕ್ರಿ). = ಬಡಾಯಿಕೊಚ್ಚು : ನಾನಾಸಾಹೇಬ ನಕ್ಕು "ನಾನು ಅಷ್ಟು ಹೆಡ್ಡನೇ. ಅಷ್ಟು ಯೋಚಿಸುವ ಸಾಮರ್ಥ್ಯವುಂಟು

ನನ್ನಲ್ಲಿ" ಬಡಾಯಿಹೊಡೆಯುವವನಂತೆ ನನ್ನ ಹತ್ತಿರ ಹೇಳಿದ (ಐರುಜ. ೦೭೩). [ಬಡಾಯಿ₂ + ಹೊಡೆ₁ (< ಪೊಡೆ₁)]

**ಬಡಾವಣೆ** (ನಾ). ೧. ಕಟ್ಟಡ, ನಗರ ಮೊದಲಾದುವುಗಳನ್ನು ವಿಸ್ತರಿಸುವಿಕೆ.–ವಿಶಾಲಗೊಳಿಸುವಿಕೆ: ಹತ್ತಿಪ್ಪತ್ತು ವರ್ಷಗಳ ಹಿಂದೆ ಬೆಂಗಳೂರಿನ ಸುತ್ತಲೂ ತರಕಾರಿ ತೋಟಗಳಿದ್ದವು. ಅವುಗಳನ್ನು ನಗರ ಬಡಾವಣೆಗಾಗಿ ಆಕ್ರಮಿಸಿಕೊಳ್ಳಲಾಗಿದೆ (ಕರಿಕೆ. ೭೩); ದೊಡ್ಡಗಳ ಕಟ್ಟಡವನ್ನು ಕಟ್ಟಿಸುವದಕ್ಕೂ ಕಟ್ಟಡವನ್ನು ರಿಪೇರಿ ಬಡಾವಣೆ ಮಾಡುವುದಕ್ಕೂ ಹೀಗೆ ಖರ್ಚಾಗಿ ಉಳಿದ ಹಣವನ್ನು . . . ಕೊಡಲ್ಪಡತಕ್ಕದ್ದು (ಗ್ರಾಪಂಕಾ. ೦೦೦). ೨. ಕಟ್ಟಡ, ನಗರ ಮೊದಲಾದುವುಗಳ ವಿಸ್ತರಿಸಿದ ಭಾಗ,–ವಿಸ್ತರಣ: ನಮ್ಮ ಮನೆಯಿರುವುದು ಬೆಂಗಳೂರುನಗರದ ಜನಭರಿತ ಬಡಾವಣೆಯೊಂದರಲ್ಲಿ (ನಾಡಗೇ. ೦೬೯). [ಬಡಾ+–ಅಣೆ₄]

**ಬಡಿ₁** (ಕ್ರಿ). ೧. ಹೊಡೆ; ಏಟುಹಾಕು; ತಾಡಿಸು: "ಬಡಿ– ತಾಡನೇ, ಸ್ವಲ್ಪದಂಡೇ ಚ" (ಶಮದ); ಮೊಗಮಂ ಸುಡು ಬಡಿ ಬಡಿ ನಿಮಿರ್ದಿಜಿ ಬಯಸ್ ಕಡಂಗಿ ನುಂಗೆಂದು ಮುಸುಜಿ ನಾರಕರಾಗಳ್ . . . ಕುತ್ತುವುದುಂ (ಪಂಪಭಾ. ೦೨೭-೯); ಕರಿಘಟೆಗಳನಾದುರ್ಡಿಯೆ ಬಡಿದಾನೆವೆರಸಾಗಡೆ ಕೊಂದಂ ಕ್ಷೇಮಧೂರ್ತಿಯಂ ಪವನಸುತಂ (ಹಂಪಭಾ. ೦೨-೭೮); ಹುತ್ತವ ಬಡಿದೊಡೆ ಹಾವು ಸಾಯುಬಲ್ಲುದೆ (ಬಸವ. ೦೦೭); ತಾಯೆ ಬಾರೌ ತಂಗಿ . . . ಸಾಯಲವದಿರ ಬಡಿದು ತಾ (ಕುಮಾವ್ಯಾ. ೯-೦೦). ೨. (ಕಬ್ಬಿಣ ಮೊದಲಾದುವುಗಳನ್ನು ಕಾಯಿಸಿ) ಚಚ್ಚಿ ಉದ್ದ ಮಾಡು; ಸಾಗುಹಾಕು: ಕಮ್ಮಾಜನಂತೆ ಕಾಸಿ ಬಡಿವರ್ ಮೇದನಂತೆ ಸೀಳ್ವರ್ (ಧರ್ಮಾಮೃ. ೩-೭೩); ಕಾದಿರುವಾಗ ತಾನೆ ಕಬ್ಬಿಣವನ್ನು ಬಡಿಯಬೇಕಾಗುವುದು (ಹೃದ. ೯೯). ೩. (ಕೈ ಮೊದಲಾದುವುಗಳನ್ನು) ತಟ್ಟು: ಬರೆದ ಬರೆಹವಿದೆಂದು ಕಯ್ ನೊಸಲ ಬಡಿದಂ (ಶಾಂತಿಪು. ೦೩೩-೨೬೯); ಎರಡೂ ಕೈಗಳನ್ನು ಬಡಿದು ಧೂಳನ್ನು ಜಾಡಿಸಿ (ಚಮ್ಮಟ. ೨). ೪. (ರಭಸವಾಗಿ) ತಾಗು; ತಗಲು: ನನ್ನ ಕಾಲು ಕುರ್ಚಿಗೆ ಬಡಿದು ಬೆರಳಿನಲ್ಲಿ ರಕ್ತ ಬರುತ್ತಿದೆ (ರೂಢಿ). ೫. ಅವಯವಗಳನ್ನೇ (ಅಸಹಾಯಕವಾಗಿ) ಅಲುಗಾಡಿಸು; ಒದರು; ಚಲಿಸುವಂತೆ ಮಾಡು: ಮುಸುಕಂಗುಂದಿದ ಮೆಯ್ ವಲಂ ಬಡಿವ ಕಾಲ್ (ಹಂಪಭಾ. ೦೨-೦೫೦); ಬಲೆಯೊಳ್ ಕಪೋತಂಗಳಸಂಖ್ಯಾತಂ ಸಿಲ್ಕಿ ತಲೆಯುಮನೊಡಲುಮಂ ಬಡಿಬಡಿದು ಬಲಲುತಿರ್ಪುದುಂ (ಹಂಪಹಂ. ೨೬೬-೦೯); ಉಡು ಮೊಲ ನರಿ ಹುಲ್ಲೆ ಮರೆಸಾರಗಗಳ ಕಂಗಿಡಿಸುವ ಜಂಘಾಲಿಗಳು ನಡುವಿನ ರತ್ನಮೇಖಲೆಯಾಂತು ಬಾಲವ ಬಡಿಯುತೆ ನಡೆದುವೊಗ್ಗಿನಲಿ (ಸೋಹಕ. ೧೯-೦೨). ೬. (ಹರೆ, ನಗಾರಿ, ತಮಟೆ ಮೊದಲಾದ ಚರ್ಮವಾದ್ಯಗಳನ್ನು) ಬಾರಿಸು; ನುಡಿಸು: ಕೂಟಿಲ್ಲದೆ ಮದ್ದಳೆಯಂ ಬಡಿವ (ಧರ್ಮಾಮೃ. ೦೨-೨೪); ಸಿಡಿಲ ಕಡುಹಿನಿಂದ ಬ್ರಹ್ಮಾಂಡಭೇರಿಯ ಬಡಿವವೊಲಾನೆಯ ಮೇಲೆ ಹೊಡೆವ ಡಮಾಮಿಗಳಬ್ಬರ ಗಗನವ ತುಡುಕಿತು (ಕೊಪಬಿ. ೦೦-೨೩); ಸುಡುಮರೆ ಪಂಜಿಹುದು ಬಡಿಯೆ ಭೇರಿಯು ಇಹುದು (ಸರ್ವಜ್ಞ. ೨೪೭). ೭. (ಸಿಡಿಲು ಮೊದಲಾದುವುಗಳು) ಎರಗು; ಹೊಡೆ; ಅಪ್ಪಳಿಸು: ತೆಜಹು ಗೊಟ್ಟೊಳಹೊಗಿಸಿ ತದೆದನು ಬಜಸಿಡಿಲು ಬಡಿವಂತೆ (ಪಳಕ. ೯-೩೦). ೮. ಗ್ರಹ, ದೃಷ್ಟಿ, ರೋಗ ಮೊದಲಾದುವು ತಾಗು,–ಹಿಡಿ,–ಆವರಿಸು: ಅಚ್ಚರಿಗೊಂಡುಗ್ರಬಾಹು ಕಂಡು ಬೆಚ್ಚಿಬಿದ್ದನು ತನಗೆ ಬಡಿಯಬು ರಾಹು (ಸೌಗಂಧಿ. ೬೪-೫); ದೃಷ್ಟಿ ಬಡಿದಿದೆ, ಅದಕ್ಕೆ ಮದ್ದು ಮಾಡಿ ನೋಡ್ತೀನಿ (ಮಹೋಸಂ. ೩೩೫). 'ಗರಬಡಿ' ಪರಾ. ೯. (ಕೆಟ್ಟವಾಸನೆ ಮುಂತಾದುವು) ಬರು,–ಉಂಟಾಗು: ಹೋತದಲ್ಲಿ ಅದರಲ್ಲೂ ಬೆದೆಹತ್ತುವ ಕಾಲವಲ್ಲಿ ತಡೆಯಲಾಗದ ಹೊಲಸುನಾತ ಬಡಿಯುವುದು (ಕಂಕೋ. I. ೭೨೭); ಕಾಕಾ ಅವರಿಂದ ಕಾಗದ ಬಂದ ವಾಸನಿ ಅವಂಗ ಬಡಿದವ (ದೇಕಪ. II. ೦೦೩). ೧೦. [ಗಣಿತ] ಗುಣಿಸು; ಗುಣಾಕಾರ ಮಾಡು: ತಿಪಿ ಪೊಯ್ ಚರ್ಚಿಸು . . . ಅಣೆ ಬಡಿ ಮೋದು . . . ಬೆಳೆಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೦).

ಬಡಿದಾಟ=ಹೊಡೆದಾಟ; ಘರ್ಷಣೆ; ಹೋರಾಟ: ಕೋಮುವಾರು ಘರ್ಷಣೆಗಳಾಗುವ ಸೂಚನೆ ಕಾಣಿಸಿತು . . . ಆದರೆ ಬಡಿದಾಟಕ್ಕೊಂದು ಕುಂಟುನೆಪ ಬೇಕಲ್ಲ? (ಐದ್ಯಾಕ. ೦೬೮); ಸಹಸ್ರಾರು ಜನರು ತಮ್ಮ ಉದ್ದೇಶ ಸಾಧನೆಗಳಿಗಾಗಿ ಬಡಿದಾಟ ನಡಿಸುವರು (ಮಹಾಕಾವ್ಯ. ೩೯). **ಬಡಿದಾಡು**= ಹೊಡೆದಾಡು; ಹೋರಾಡು: ಕಡಿದಾಡಿದರ್ ಕತ್ತಿ ಕೈದುವಿಂ ಗದೆಗಳಿಂ ಬಡಿದಾಡಿದರ್ (ಕಬಿಕೃ. ೨೯-೬); ಪಶುಗಳನ್ನು ಸಾಕಿದವರು . . . ಹೆಚ್ಚಿನ ಬೆಳೆಯ ಪಾಲಿಗೆ ಪಾತ್ರರೆಂದು ಬಡಿದಾಡಹತ್ತಿವರು (ಮೂವಾದ. ೭೨). **ಬಡಿದುಕೊಳ್ಳು** =೧. ಹೊಡೆದುಕೊಳ್ಳು; ತಾಟಿಸಿಕೊಳ್ಳು: ತಲೆಯಂ ಕಾಲ್ಗಳಂ ಪಾಷಾಣವೃಕ್ಷಂಗಳೊಳ್ ಶತಚೂರ್ಣಮಾಗೆ ಬಡಿದುಕೊಂಡು . . . ಪ್ರಳಾಪಂಗೆಯ್ದು (ಪಂಪಭಾ. ೪೬-೨೯). ೨. ಆವರಿಸು; ಹಿಡಿದುಕೊಳ್ಳು: ಪ್ರಾಚೀನಕಾಲದಲ್ಲಿ ದೇವತೆಗಳಿಗೆ ಅಲ್ಲದಿದ್ದರೆ ರಾಕ್ಷಸರಿಗಾದರೂ ನೆಗಡಿ ಬಡಿದುಕೊಳ್ಳುತ್ತ ಇದ್ದಿರಬೇಕು (ದೇಕಪ್ರ. ೦೭); ಇವನ ಅಜ್ಜನಿಗೋ ಅಜ್ಜಿಗೋ ಇದ್ದಿತಂತೆ ಈ ದಮ್ಮಿನ ರೋಗ. ಆದರೆ ಇವನಿಗೆ ಹನ್ನೆರಡನೆಯ ವರ್ಷಕ್ಕೇ ಬಡಿದುಕೊಳ್ಳಬೇಕೇ? (ಮೂರುದಾ. ೬೩).

▶ ಈ ಧಾತುವು ಹಲವು ಶಬ್ದಗಳ ಜೊತೆಗೆ ಸೇರಿ ವಿಶಿಷ್ಟವಾದ ಧಾತುವಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ: ಕಾಲ್ಬಡಿ, ಗರಬಡಿ, ಬಾಯ್ಬಡಿ, ಸಿಡಿಲ್ಬಡಿ ಇತ್ಯಾದಿ.

[ದೇ.॥ ಮಲ. ವಟಿ; ತುಳು. ಕೊಡ. ಬಡಿ]

**ಬಡಿ₂** 'ಬಟಿ₁' ನೋ.

**ಬಡಿ₃** (ನಾ). ೧. ಹೊಡೆಯುವುದು: (೯). ೨. ಪೆಟ್ಟು; ಏಟು: (೯). ೩. (ಹೊಡೆಯಲು ಉಪಯೋಗಿಸುವ) ಕೋಲು; ದೊಣ್ಣೆ; ಬಡಿಗೆ: "ಸ್ವಲ್ಪದಂಡ ತಾಡನಗಳೊಳ್ ಬಡಿಯೆನಿಕ್ಕುಂ" (ಅಭಿಮಂ. ೯೩); ಮಿಡಮಿಡಮಿಡುಕುವಿನಂ ಬಡಿಯೊಳೊಡೆಯೆ ಪೊಡೆ ಪೆಡತಲೆಯಂ (ಪಂಪಭಾ. ೦೨೭-೮); ಜೂದಿನ ಗೆಲ್ಲದೊಳಾದೀ ಮೇದಿನಿಯಂ ಕಂಡು ಕಜ್ಜಮಂ ಕಾಣದೆ ದುರ್ಯೋಧನನದೇನದೇಂ ಮರುಳಾದನೊ ಬಡಿಗಂಡನಿಲ್ಲ ಪಾಲನೆ ಕಂಡಂ (ಹಂಪಭಾ. ೭-೦೯); ಬೆಕ್ಕು ಪಾಲನಲ್ಲದೆ ಮೇಲಣ ಬಡಿಯಂ ಕಾಣದು (ಧರ್ಮಾಮೃ. ೬-೦೨೮).

[ <ಬಡಿ₁/ತಮಿ. ಮಲ. ವಟಿ; ತುಳು. ಬಡು; ತೆಲು. ಬಡೆ; ಕೋಲಾ. ಬಡ್ಯ]

**ಬಡಿಕ₁** (ನಾ). (ವಾದ್ಯ ಮೊದಲಾದುವುಗಳನ್ನು) ಬಡಿಯುವವನು,–ಬಾರಿಸುವವನು: ಮದ್ದಳೆಯ ಬಡಿಕರ ಬಿಂಕ ಮೇಳವವಿಲ್ಲಲಾ ನಿನಗೆ (ಕುಮಾವ್ಯಾ. ೩-೨೨). [ಬಡಿ₁ + —ಕ₂]

–**ಬಡಿಕ₂**, –ಬಡಕ₂,– ಬಡುಕ (ಪ್ರ). ಲಂಚ, ಮಾತಂಗಾರಿಕೆ, ಆಹಾರಸೇವನೆ ಮುಂತಾದುವುಗಳಲ್ಲಿ ಅತಿಯಾದ ಪ್ರವೃತ್ತಿಯುಳ್ಳವನು ಎಂಬರ್ಥದಲ್ಲಿ ಬರುವ ಪ್ರತ್ಯಯ: 'ಕೂಟ್ಬಡಿಕ', 'ಬಾಯ್ಬಡಿಕ' ಪರಾ. -ಬಡಕ₂: 'ಬಾಯಿಬಡಕ', 'ಲಂಚಬಡಕ' ಪರಾ. – ಬಡುಕ: 'ಬಾಯಿಂಬಡುಕ' ಪರಾ. [<ಬಡಿ₁]

**ಬಡಿಕೆ** 'ಬಡಿಗೆ₁' ನೋ.

**ಬಡಿಕೋಲ್** 'ಬಡಿಗೋಲ್' ನೋ.

**ಬಡಿಕೋಲ್** 'ಬಡಿಗೋಲ್' ನೋ.

**ಬಡಿಕೋಲು** 'ಬಡಿಗೋಲ್' ನೋ.

**ಬಡಿಗ** 'ಬಡಗಿ' ನೋ.

**ಬಡಿಗಲ್ಲು** (ನಾ). ೧. ಹೊಡೆಯಲು ಉಪಯೋಗಿಸುವ ಕಲ್ಲು:

**ಇಡುಗಲ್ಲು :** ನಿಡಿಗಲ್ಲು ನಿಶಿತ ಹಾಸಱೆಗಲ್ಲು ಚೌಕದ ಬಡಿಗಲ್ಲು ಬಟು ಗಲ್ಲು ಬೀಳೆ (ಕೋಹಕ. ೪೦-೬೩). ೨. (ಕಬ್ಬಿಣ ಮೊದಲಾದುವು ಗಳನ್ನು ಬಡಿಯಲು ಆಧಾರವಾಗಿ ಇರಿಸಿಕೊಳ್ಳುವ) ಅಡಿಗಲ್ಲು; **ಅಡೆಗಲ್ಲು :** ಮೇಳವದಿ ನೃಪರೊಗ್ಗಿನಿಂದಾ ಸ್ಥೂಳಚಾಪವ ತುಡುಕಲಾ ಧನು ಮೇಲೆ ಬಡಿಗಲ್ಲುರುಳಿದಂತಿರಲು (ಜೈಮಿ.ಕ. ೧೫-೨೬); ಕುಂಭೀನಸಿಯು ಇದನ್ನೇ ಯೋಚಿಸುತ್ತ ಬಡಿಗಲ್ಲ ಮೇಲೆ ಕುಳಿತಿದ್ದಳು (ಶ್ರೀರಾಪ. ೯೧). ೩. ಆಕರ್ಷಣೆಗಾಗಿ ಇಟ್ಟಿರುವ ತಿಂಡಿಯನ್ನು ಇಲಿಯು ಮುಟ್ಟಿದ ಕೂಡಲೆ ದಪ್ಪಕಲ್ಲು ಮೇಲೆ ಬೀಳುವಂತೆ ಅಳವಡಿಸಿರುವ, ಇಲಿ, ಹೆಗ್ಗಣಗಳನ್ನು ಹಿಡಿಯಲು ಉಪಯೋಗಿಸುವ ಒಂದು ಬಗೆಯ ಸಾಧನ; **ಬೋನು :** ಒಡಲ ಕಿಚ್ಚಿಗೆ ಪೋಗಿ ಬಡಿಗಲ್ಲು ಕೆಡಹಿಕೊಂಡ ಡಗಿದ ಮೂಷಕನಂತಾದೆ (ಕುಕುಂದ. ೦-೦೦೮-೨); ಬಡಿಗಲ್ಲಿನಲಿ ಹೆಗ್ಗಣ ಮಿಡುಕುವಂದದಿ ಮದನಶರವಾಯಾಪ್ರಬಂಧದಲಿ ತೊಡರಿ . . . ಅಡಿಯಿಡಲಾಱನವನು (ಅಮೃತ. ೨-೬೨). ೪. (ಆಲಂ) ಕಷ್ಟ; ತೊಂದರೆ ; ತಾಪತ್ರಯ : ಏನು ಮಾಡುವುದು ! ತಾನು ಹೋಗು ವುದು ಒತ್ತಟ್ಟಿಗಿರಲಿ, ನಿಮಗೆ ಬಡಿಗಲ್ಲು ತಂದನು ! (ಶೂ.೦ಖಿ. ೦೬೬).
[ ಬಡಿ$_1$ + ಕಲ್ಲು (<ಕಲ್$_3$) ]

**ಬಡಿಗುಂಡು** (ನಾ). ಹೊಡೆಯಲು ಉಪಯೋಗಿಸುವ ಕಲ್ಲು; **ಇಡು ಗುಂಡು :** ಪಿಡಿಗುಂಡು ಬಡಿಗುಂಡು ಜಡಿದು ಪೊಯಿವ ಗುಂಡು ಒಡನೆತ್ತಿ ಹಾಕುವ ಗುಂಡು ಗಡಣಿಸಿ ಕೊತ್ತಳದಪ್ಪದೆ ತನೆಗಳಿಂದೆಡೆಯೊಳಿರ್ದವು ಗುಂಡುಗಳು (ಅಪಂಕ. ೦೬-೪೬). [ಬಡಿ$_1$ + ಗುಂಡು$_1$]

**ಬಡಿಗೆ$_1$**, ಬಡಿಕೆ (ನಾ). ಬಡಿಯುವ ಸಾಧನ; ಕೋಲು; ದೊಣ್ಣೆ : ಬಡಿವ ಬಡಿಗೆಗಳೆ ಕೋಳೊಳ್ ತೊಡೆಯದು ಸಲೆ ಪೊಟ್ಟುಗೊಡೆದು ಕಡಿವಡೆ ದೆತ್ತಂ (ಸುಕುಮಾ. ೫-೦೫) ; ಹೊಡೆಸಿದ ಮರಳಿ ವಿಶ್ವಾಮಿತ್ರನಾಕಳ ಹಸಿಯ ಬಡಿಗೆಯಲಿ (ಸಂಕಿಶ. ೨೪-೬೯); ಬಡಿಗೆಯಲಿ ಹುತ್ತ ಹೊಡೆಯ ಲಡಗಿಹ ಸರ್ಪ ಮಡಿದಿಹುದೆ (ಸರ್ವಜ್ಞ. ೫೯೩). **ಬಡಿಕೆ :** ಹಾಳುಮುಂಡೇ ದಕ್ಕೆ ದೊಣ್ಣೇನೆ ಸೈ ಅಂತಾ, ಒಂದು ಬಡಿಕೆ ತಗೊಂಡು ಜಪ್ಪ್ದೆ (ಮಲಿಮ. ೫೩); ನಾಲ್ವತ್ತರ ಮೇಲೆ ನಡಿಕೆ, ಎಂಭತ್ತರ ಮೇಲೆ ಬಡಿಕೆ (ಗಾದೆ). [ಬಡಿ$_1$ + — ಗೆ]

**ಬಡಿಗೆ$_2$** 'ಬಡಗಿ' ನೋ.

**ಬಡಿಗೆಕಾಱ** (ನಾ). ಕೋಲು ಹಿಡಿದಿರುವವನು; ಕೋಲುಕಾರ : ಮುಂತಣ ಮಾವಂತರ ಪಿಂತಣ ಬಡಿಗೆಕಾಱರ ನಡುವಣ ವೀರ ಜೋದರ . . . ಕೋಳಾಹಳದಬ್ಬರಮುಬ್ಬರವಾಗೆ (ಗಿರಿಜ. ೬-೫೫ ವ).
[ಬಡಿಗೆ$_1$ + _ ಕಾಱ]

**ಬಡಿಗೆಕೊಳ್** 'ಬಡಿಗೆಗೊಳ್' ನೋ.

**ಬಡಿಗೆಗೊಳ್**, ಬಡಿಗೆಕೊಳ್ (ಕ್ರಿ). ೧. (ಹೆದರಿಸಿ ಓಡಿಸಲು) ದೊಣ್ಣೆ ಯನ್ನು ಹಿಡಿ ; ಕೋಲನ್ನು ಹಿಡಿದುಕೊಳ್ಳು : ಮರ್ಕಟಂಗಳ ಪಡೆಯನಟ್ಟಿದ ಹಿಂಡು ದನವಿಗೆ ಬಡಿಗೆಗೊಂಡಂತೆ (ಕೌಶಿರಾ. ೩೫-೦೪). **ಬಡಿಗೆಕೊಳ್ :** ೨. ದೊಣ್ಣೆಯಿಂದ ಹೊಡೆ : ನೆಲ್ಲಿಯ ಕಾಯ್ಗಳಂ ಬಡಿಗೆಕೊಂಡವೊಲೆತ್ತಿದ ತೋರಹಸ್ತದಿಂ ಜಲ್ಲನೆ ತುಂಬಿಗಳ್ ಕೆದಱಿ ಬಂದುವು ಬಿಂಕದಿನಂಕದಾನೆಗಳ್ (ಕಬ್ಬಿಗಕಾ. ೨೦೩). [ಬಡಿಗೆ$_1$ + ಕೊಳ್$_1$]

**ಬಡಿಗೆಗೋಲು** (ನಾ). = ಬಡಿಗೆ$_1$ : ಕೈಗಳ ಸಕಲದನುಜರು ಹಿಡಿದು ಜೋಲಲು ನೆಗೆದು ಹಾಱುತ ಕೊಡಹಿ ಬಡಿದನು ಬಾಲದಿಂದವ ಬಡಿಗೆ ಗೋಲಂತೆ (ಕೌಶಿರಾ. ೦೯-೫೨). [ಬಡಿಗೆ$_1$ + ಕೋಲು$_1$ (<ಕೋಲ್$_1$)]

**ಬಡಿಗೆವಲೆ** (ನಾ). ಒಂದು ಬಗೆಯ ಬಲೆ : ಹಾಱುವಲೆ ಜಾಱುವಲೆ ಬಡಿಗವಲೆ . . . ಮಂದಸಿನವಲೆಯ ಹೊಱೆಗಳ ಬೇಡವಡೆ ನೆರೆದುದು (ಹಕಾ. ೫-೬). 'ಬಡಿವಲೆ' ಪರಾ. [ ಬಡಿಗೆ$_1$ + ಬಲೆ$_1$ ]

**ಬಡಿಗೊಳ್**, ಬಡಿಕೊಳ್ (ಕ್ರಿ). ೧. ದೊಣ್ಣೆಯನ್ನು ಹಿಡಿ; ಕೋಲನ್ನು ತೆಗೆದುಕೊಳ್ಳು : ಬಡಿಗೊಂಡು ಗೋಣಿವಣ್ಣಂ ಬಡಿವಂತಿರೆ ಪವನಸೂನು . . . ಬಡಿದನನಿಬರಂ ಕೌರವರಂ (ಗದಾಯು. ೩-೦೦) ; ನರನು ಬಿಲುಗೊಂಡೊಂದುದೆಸೆಯಲಿ ಮರುತಿ ಬಡಿಗೊಂಡೊಂದುಕಡೆಯಲಿ . . . ಎರಡುಮೂಱಡಿಯಿಡುತ ನಿಂದರು (ಜೈಮಿ.ಕಾ. ೩೦-೬೨). ೨. ಬಡಿಗೆ ಯಿಂದ ಬಡಿ, —ಹೊಡೆ : ಬಡಿಗೊಳೆ ಬಿದು ಬಬ್ಬರಬಂದೊಡನುಗೆ ಪೊಸ ಮುತ್ತು (ಶಂಕಲ. ೦೦-೦೦೩); ಬಡಿಯಿಂ ಬಹ್ಮಾವುಲಕದ ಫಳವುಂ ಬಡಿ ಗೊಳಲುದಿರ್ವಂದದಿ ಬೀಳ್ತಹ ಬಲ್ವಡೆ (ಜಯುಕಾ. ೬-೫೨). ೩. ಬಡಿಗೆಯ ಏಟು ತಿನ್ನು,—ಪೆಟ್ಟುತಿನ್ನು : ಕೆಲರ್ . . . ಸೌಜನ್ಯಕಂದಾಂಕುರನ ಶರಕ್ಕಳ್ಕಿ ಬೆ[ ಳ್ಕಿ ] ತೋರ್ಣಡೆಯುಂ . . . ಬಡಿಗೊಂಡ ಪೊಲದಂತೆಯುಂ ತಲೆಕೆಟಗಾಗಿ ಬಿಟ್ಟರ್ (ಶಾಂತಿಪು. ೪-೩೦ ವ); ಬಡಿಗೊಂಡು ಪಣ್ ಪಱಿದು ಬೀಟ್ (ಶೀಬಿಪು. ೧-೯೯). **ಬಡಿಕೊಳ್:** ೨. ಬಡಿಕೊಳೆ ಕಾಯುಂ ಪಣ್ಣುಂ ತೊಡಂಬೆ ಪಱಿದುದಿರ್ವ ಮಾಟ್ಕೆಯಿಂ ಕಱಿವಿರಿಯರ್ ಮಡಿವರನ ಕ್ರಮದಿಂ (ಶಂರಾಮ. ೦-೯೩). ೩. ರಿಪುಸೇನೆ ಬಱಲ್ದು ನಿದ್ರೆಯಿಂ ಬಡಿ ಕೊಂಡ ನೆಲ್ಲಿಯಂತೆ ನೆಲಕ್ಕೆ ಬೀೞ್ವುದುಂ (ಧರ್ಮಾಮೃ. ೧೩-೧೨೯); ಬಡಿಕೊಂ [ಪಾಠಾಂ. ಗೊಂ]ಡ ನೆಲ್ಲಿಯ ಕಾಯಂತಾ ಬಲವೊಡನೆ ಚೆಲ್ಲಿತು ಕಂಡ ಕಡೆಗೆ (ಕುಮಾರಾಂ. ೪೦-೩೫). [ ಬಡಿ$_2$ + ಕೊಳ್$_1$ ]

**ಬಡಿಗೋಲ್**, ಬಡಿಕೋಲ್, ಬಡಿಕೋಲು, ಬಡಿಗೋಲು (ನಾ). ಬಡಿ ಯಲು ಉಪಯೋಗಿಸುವ ಕೋಲು, —ಲಾಠಿ: "ದಂಗೆಯ ಬಡಿಗೋಲ ಪೆಸರ್" (ಕವಿಕಂ. ೯೩); ಏಱಿನ ಮೇಲೆ ಬಡಿಗೋಲ್ ಕೋಲೆಯ ಮೇಲೆ ಕವರ್ತೆಯೆಂಬಂತೆ ಸಂತಾಪದ ಮೇಲೆ ಸಂತಾಪಮಂ ಮಾಟ್ಪ ನಿನ್ನ ನೋಂಪಿಯೆಂಬ ಗರಗಸಕ್ಕೆನ್ನಮೆಯ್ಯನೊಡ್ಡಲಾಱೆಂ (ಧರ್ಮಾಕ್ಕು. ೦-೦೬೨). ಓಡಿವ ಮಿಗಂಗಳ ಬಿಡದಿರೆ ಬಾಯೊಳು ಬಡಿಗೋಲ್ಗಳನಿಕ್ಕಿ ಕಿವಿಯ ಒಡೆ ಮುರಿಹಿದೊಡೊದಱುವ ಶಬ್ದವಿಪಿನದೊಳೆಡೆಗೊಂಡುದು (ಮೋಹಕ. ೧೪-೨೦). **ಬಡಿಕೋಲ್:** ನುಲಿ ನೇಣ್ ಬಡಿಕೋಲ್ ಬಲೆ . . . ಇದಿರೊಳ್ ಬರೆ ಕಾಣಲುಮಾಗದು (ಕೋಕೋಹ. ೦೨-೦೦); ಬಡಿಕೋಲಂ ಸಮಮಾಡಲಕ್ಕುಂ . . . ಕಡುಮೂರ್ಖಂ ಹಿತ ಕೇಳ್ವನೇ (ಸೋಮೇಶ. ೪೯); ತಿರುಗೆ ತಿರು ಗುತ್ತುಂ ಸಂಗಡಿಸಿ ಪರಿದುಬುಬೆನುತ್ತುಂ ಬಡಿಕೋಲಿಂದಿಟ್ಟನಧಿಕಬಲನಾ ಮೊಲನಂ (ಗಿರಿಜ. ೦-೮೬). **ಬಡಿಕೋಲು :** ಚಾಳಿಸಿದ ಹದವಿಲ್ಲುಗಳ ಬಡಿ ಕೋಲುಗಳ ಬೇಟೆಗಾಱರು ಬಳಸಿದರು ಶಿವನ (ಕುವ್ಯಾ.ಪ. ೫-೩೩) : ಭ್ರೂಲತೆಯ ಹದವಿಲ್ಲುಗಳ ಹೊಳೆವಾಲಿಗಳ ಹೊದೆಗೋಲುಗಳ ನಳಿತೋಳ ಬಡಿಕೋ[ ಪಾಠಾಂ. ಗೋ]ಲುಗಳ . . . ಬೇಟೆಕಾತಿಯರೈದಿದರು ವನವ (ಕೊರಾ. ೦-೫-೩೯); ಓಡಿ, ತಡೆಗಟ್ಟ; ಬಡಿಕೋಲನಿಡಿ! (ಚಂದ್ರಕ. ೨೯-೩). **ಬಡಿಗೋಲು :** ಮನಸಿಜನ ಬಡಿಗೋ[ ಪಾಠಾಂ. ಕೋ]ಲೋ ಶಿವನು ಸೂಡಿರ್ದ ಚಂದ್ರನ ಭಾಗವೋ . . . ಎನಲರ್ಧಚಂದ್ರನಂ ಬಣ್ಣಿಸು ವೊಡರಿದು ಕಾವ್ಯಂಗಳೊಳಗೆ (ಹಕಾ. ೩-೯೨); ಗುಪ್ತಿಯವರೂ, ಬಡಿ ಗೋಲಿನವರೂ, ಹಣೆವಟ್ಟದ ದೊಣ್ಣೆಯವರೂ, ಸಿದ್ಧವಾಗಲಿ (ಶೀಬಿಪಾ. ೩). [ ಬಡಿ$_1$ + ಕೋಲ್$_1$ ]

**ಬಡಿಗೋಲು** 'ಬಡಿಗೋಲ್' ನೋ.

**ಬಡಿಣ** 'ಬಡಿನ' ನೋ.

**ಬಡಿತ** (ನಾ). ಹೊಡೆಯುವಿಕೆ; ಏಟು; ಪೆಟ್ಟು: ಬಸಿವ ನೆತ್ತರ ಬಾಳ್ವೆಯೊಳ್ ಬಡಿತ ಕಡಿತಗಳನೆಸಗಿದವನಲ್ಲ (ಕಾಂಶಿ. ೦೬೨-೩೫೯); ಅವರ ತಲೆ ತಬಲೆಯ ಬಡಿತಕ್ಕೆ ಸರಿಯಾಗಿ ತೂಗುತ್ತಿತ್ತು (ಅಬೋಲೀ. ೦೬೬). 'ಬಡಿತಂಗಾಸಂ' ಪರಾ. [ ಬಡಿ$_1$ + _ ತ$_2$ ]

**ಬಡಿತಂಗಾಸು** (ಕ್ರಿ). (ಲೋಹವನ್ನು) ಬಡಿಯುವುದಕ್ಕೆ ಹದ ವಾಗುವಂತೆ ಕಾಯಿಸು,_ಬಿಸಿಮಾಡು: ಬಾಱೆವಾಱ ಕಿದಿಯುಗಿವರುಂ

ಮಿಡುಮಿಡುಕೆ ಬಡಿತಂಗಾಸುವರುಂ [ ಪಾಠಾಂ. ಬಡಿತಂಗೊಂಡು ಕಾಸಿ ಸುಡುವರುಂ] ನೋಡೆನೋಡೆ ಕಣ್ಗಳಂ ಮಿಟುಕುವರುಂ (ಆದಿಪು. ೩-೬೫ವ); ಸುಜ್ಜಿಸುಜ್ಜಿನೆ ಬಡಿತಂಗಾಸುವುದುಂ ಕರ್ಕಶಕ್ಷಾರವಾರಿಯಂ ತಂದು ಸಜ್ಜಿಸಜ್ಜಿನೆ ಪೂಸುವುದುಂ (ಸುಕುಮಾ. ೧೦-೪೭ ವ). [ಬಡಿತ + ಕಾಸು₁ ]

**ಬಡಿತಂಗೊಳ್** (ಕ್ರಿ). ಪೆಟ್ಟುಹಾಕು ; ಏಟುಹೊಡೆ: ಬಾಟೆವಾಟೆ ತಿದಿಯುಂಗಿವರುಂ ಮಿಡುಮಿಡುಕೆ ಬಡಿತಂಗೊಂಡು ಕಾಸಿ ಸುಡುವರುಂ [ ಪಾಠಾಂ. ಬಡಿತಂಗಾಸುವರುಂ ] (ಆದಿಪು. ೩-೬೫ ವ). [ಬಡಿತ + ಕೊಳ್₁]

**ಬಡಿದಂಟು** (ನಾ). ಕೋಲಿನಂತಿರುವ ಕಾಂಡ ; (ಗರಿಗಳಿಲ್ಲದೆ) ಬರಿದಾಗಿರುವ ಕಡ್ಡಿ : ಗೊಡ್ಡೆಮ್ಮೆಯ ಮುಂದೆ ಬಡಿದಂಟು ಒಗೆದಂತೆ ಗಿರಾಕಿಗಳ ಮುಂದೆ ಒಂದೆರಡು ಪತ್ರಿಕೆಗಳನ್ನು ಅವರು ಒಗೆದಿರುತ್ತಾರೆ (ಗಾಳಿಕ. ೭೭). [ ಬಡಿ₃ + ದಂಟು ]

**ಬಡಿನ, ಬಡಿಣ** (ನಾ). ಬಡಿಸಿದುದು; ಆಹಾರ; ಎಡೆ: ಬಳಾರಿಗಿತ್ತ ಬಡಿನಂ ಹಾರ್ದ್ದಿದ ಹದ್ದಿಂಗೆ ಬಿದ್ದುರ್ದ್ದ ವೃಕಕ್ಕೆತ್ತಿದ ಬುತ್ತಿಯೆಂದೊಡ ಹಿತರ್ ಮೆಯ್ದೊಳಿ ಮಾಜಿಪಾಂಪರೇ (ಪುಂಪುರಾ. X, ೨೨೩-೪೦ ; 1205); ಅವಯವುದಿನೆಯ್ದಿ ಬಲಮಂ ಜವಂಗೆ ಬಡ್ಡಿಸಿದ ಬಡಿನಮೆನೆ ಶರಹತಿಯಿಂ ತವೆ ತಱಿವುತ್ತಿರ್ಪುದುಮಾ ಕುವರಂ ಶತಖಂಡಮಾಯ್ತು ತನ್ನ ಪಸ್ಯನ್ಯಂ (ಪುಹಾಸೇ. ೧೨-೧೦೬). **ಬಡಿಣ:** ಬಡಿಣಮನೊಲ್ಲದಂತಿರಿಸಿ ಭಿಕ್ಷಕೆ ಪೋಪ ವನಂತ ಕೂಡೆ ಕೂಡೊಡನಿರುತಿರ್ಪ ಮುಕ್ತಿಸುಖಭೋಗಮನೊಲ್ಲದೆ . . . ಕೋಟಲೆಗೊಳುತ್ತಿಹರಾ ಮರುಳರ್ (ಶಶಕ. ೯೬).

[ < ಬಡ್ಡಿಸು. / ತಮಿ. ವಟ್ಟವ್; ತೆಲು. ವಡ್ಡನ, ವಡ್ಡನ ]

**ಬಡಿಮಣೆ** (ನಾ). (ನೆಲ ಮೊದಲಾದುವುಗಳನ್ನು) ಬಡಿದು ಸಮ ಮಾಡುವ ಸಾಧನ ; ದಮ್ಮಸು : ಬಡಿಮಣೆಯಿಂದ ಬಡಿದು ಸಮ ಮಾಡಿ (ಮುಂಬಯು. ೯-೦೦೭). [ಬಡಿ₁ + ಮಣೆ]

**ಬಡಿವಡೆ, ಬಡಿಹಡೆ** (ಕ್ರಿ). ಹೊಡೆತವನ್ನು ಪಡೆ ; ಏಟು ತಿನ್ನು : ಊರ ಸೀರೆಗೆ ಅಸಗ ಬಡಿವಡೆದಂತೆ [ಪಾಠಾಂ. ತಡಬಡಗೊಂಬು, ತಡಬಡಿಹಡೆ, ಬಡಿಹಡೆದಂತೆ] ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ (ಬಸವ. ೩೦೯ ; ಗುಬಸಾ. ೯೨-೬ ನೋ); ಮನವಿಲ್ಲದವ ಮುಟ್ಟೆ ಬಡಿವಡೆದ ತೆಱನೆನಗೆ (ಕಲ್ಮಠ. ಹ. ೯೯-೩) ; ವೀರವಾನರನ ಲಾಂಗೂಲದಿಂ ಬಡಿವಡೆದು ರಕ್ಕಸರ ನೆರವಿ ಹೇರಾಳದಿಂ ಪುಡಿವಡೆದು ಬಯಲಾಗೆ (ಕೈಪಿಹಾ. ೦೬-೯೨). **ಬಡಿಹಡೆ :** ಲೋಹಸಂಗದಿ ಕಿಚ್ಚು ಬಡಿಹಡೆದುದೆಂಬಂತೆ . . . ಬೇಹುದೊಂದಳವಟ್ಟ ಬಳಿಕ ಬಿಡಲಾಗದು (ಸಿದ್ಧರಾ. ೯-೪೦).

[ಬಡಿ₃ + ಪಡೆ₁]

**ಬಡಿವರ** 'ಬಡಿವಾರ' ನೋ.

**ಬಡಿವಲೆ** (ನಾ). ಒಂದು ಬಗೆಯ ಬಲೆ : ಪಿಡಿವಲೆ . . . ಬಡಿವಲೆ ಬಲುವಲೆಗಾಱರು ಕೂಗಿ ಬೊಬ್ಬಿಡುತ್ತಲೈದಿದರು ಮುಂಗಡೆಯ (ಮೋಹಕ. ೧೯-೦೬); ಪಿಡಿವಲೆಯ ಕಾಲ್ಗಣ್ಣಿಗಂಪಿಲ ಬಡಿವಲೆಯ . . . ಕಿ[ಪಿ]ಡಿದು ಕಾಮುರ್ಗಿಲಂತೆ ಕವಿದುದು ಶಬರಸಂದೋಹ (ಅನಂರಾ. ೩-೩-೩). 'ಬಡಿಗೆವಲೆ' ಪರಾ, [ಬಡಿ₁ + ಬಲೆ₁]

**ಬಡಿವಾರ, ಬಡಿವರ** (ನಾ). ಒಣಜಂಬ ; ಬಡಾಯಿ ; ಡಂಭ : ಬಿಡದಹಂಕಾರ ಬಲುಬಡಿವಾರದಲ್ಲಿ ಸುಖಬಡಿವೆನು ದುರುಳನಡತೆಗಳಾಚರಿಸಿ (ಮೋಕ್ಷರಿ. ೦೬-೧) ; ಬಿಡದೆ ಮಿಡಿಮಿಡಿಯೆಂದು ಬಡಿವಾರಮಂ ಮಾಡಿ (ಮಲ್ಲಿಕ. ೨-೨೨) ; ಅಟ್ಟಕ್ಕೆ ಹಾರದ ಬೆಕ್ಕು ಬೆಟ್ಟಕ್ಕೆ ಹಾರುವೆನೆಂದು ಬಡಿವಾರ ಕೊಚ್ಚಿಕೊಂಡಂತಾಗುತ್ತದೆ (ಶಶಕ. ೨೩೯). **ಬಡಿವರ :** ಎನ್ನೊಡನೆ ಬಂದೊಡೀಗಳ ಕನ್ನೆಗೆ ಪೊಕ್ಕುವನನೊಲ್ದು ತೋಱಿದಪೆಂ ನೀವೆನ್ನಂ ಬಿಡಿ ಪರಸೇವೆಯೊಳೆನ್ನರುಮೇನಾಗರೆನ್ನ ಬಡಿವರಮೇನೋ (ದಾಕು. ೯-೯೯). [← ಪಾರ. ಮರಾ. ಬಡಿವಾರ್]

**ಬಡಿವೆಱು** (ಕ್ರಿ). = ಬಡಿವಡೆ : ಬಡಿವೆತ್ತ [ಬಡವ]ನಂತೆ ಶಕ್ತಿಗೆಟ್ಟು (ರಹರ್ಷಪು. ೦-೦೬೮) ; ಊರ ಸೀರೆಗಸಂ ಬಡಿವೆತ್ತನೆನಿಪ್ಪ ಜನದ ನಾಟ್ಯಡಿ ನಿನಗೆ (ಜಗಶು. ೬-೬). [ಬಡಿ₃ + ಪೆಱು₁]

**ಬಡಿವೋರಿ, ಬಡಿಹೋರಿ** (ನಾ). ಹೊಡೆತ ತಿಂದು ಕೆಲಸಮಾಡುವ ಎತ್ತು : ಎಂದಿನ ಕೊಂಗರ್ಕೈಸೆ ಬಡಿವೋರಿಗಳೀ ಪಟಗೂಟ ಪಂದೆಗಳ್ (ಜಕಪ. ೩-೯೫). **ಬಡಿಹೋರಿ :** ಒಡೆಯ ಬಂಟನಿಗೆ ಬಡಿಹೋರಿಯಾದ (ವಗಮಾ. ೪. ೯೨೬-೩೭) ; ಬಗುಳುವಿವದಿರು ಹರಿಯ ಬಡಿಹೋರಿಗಳಲಾ ಜಗವಱಿಯದೇ (ಕುಮ್ಯಾಸ. ೦೦-೯) ; ಕೊಡಗು ಕೊಂಕಣ ಕೊಂಗ ಮಲೆಯಾಳ ರಾಜ್ಯದ ಬಡಿಹೋರಿಗಳು ಮನನಡುಗಿ ಒಡನೆ ಕಾಣಿಕೆಯ ನಿತ್ತಾನೆಯ ಸಜ್ಜಾರ ನಡುಕೇರಿಯೊಳಗೊಪ್ಪುತಿಹುದು (ಕಂಠಪ. ೬-೩೨).

[ಬಡಿ₁ + ಪೋರಿ₂]

**ಬಡಿಶ** (ನಾ). (ಮೀನು ಮೊದಲಾದುವುಗಳನ್ನು ಹಿಡಿಯಲು ಉಪಯೋಗಿಸುವ) ಗಾಳ ; ಕೊಕ್ಕೆ : "ಬಡಿಶವೆಂಬುದು ಮೀನ ಗಾಳಂ" (ಶಬ್ದಮ. ೧೨೭-೭೯) ; ಝಷನಿಚಯಂ ಆಮಿಷಲೋಭದಿಂ ಬಡಿಶಮಾಂಸವನಾಸ್ವಾದಿಸಿ ಸಿಲ್ಕಿ ಸಾವನೆಯ್ದುಗುಂ (ಕಶ್ಯಕೃ. ೩೩೦) ; ಕರಮೆ ಭುಕ್ತ್ಯಾಶೆಯಿಂ ಬಡಿಶಂಗಳೊಳ್ಕಿಡವ ಪಿರಿಯ ಮೀನ್ಗಳ ತೆಱದೆ . . . ರಾಜಿಸುವಿಂದ್ರಿಯಂಗಳಿಂದಂ ಶಿವಧ್ಯಾನತತ್ಪರರೆಯ್ದೆ ರಂಜಿಸಿದರು (ಅರಾಕ. ೩-೩-೨೫) ; ಬಡಿಶಗತಝಷ ಮತ್ಸ್ಯದಂದದಿ ಕೆಡೆದು . . . ಱಿಕ್ಕೆಯ ಕಡಿದ ಪಕ್ಷಿಯ ತೆಱದೊಳಡಿಯಿಡಲಾಱನವನು (ಅಮೃತ. ೨-೬೨).

[ಸಂ.]

**ಬಡಿಸ** (ನಾ). = ಬಡಿಶ : "ಬಡಿಶಂ ಮತ್ಸ್ಯಬಂಧನಂ . . . ಅದು ಕಿಱಿದಾದಡೆ ಬಡಿಸವೆಂಬುದು" (ಪಾಪರಾ. ೦೦೦) ; ಜಲದೊಳಗಣ ನಿಮಿಷಾವಳಿ ಬಲೆಗಾಱನ ಬಡಿಸದಲಿ [ಪಾಠಾಂ. ಸರಳ್ಗೆ] ಸಿಕ್ಕಿಹ ಮಾಂಸಕ್ಕೆಳಸಿ ತನುವಳಿವ ತೆಱದಿಂ ಲಲನೆಯರ್ಗಂ ಹೇಮಭೂಮಿಗೆಳಸಲ್ ಕೆಡುವರ್ (ವನ್ನಜಾ. ೩-೬೮)₂ [< ಸಂ. ಬಡಿಶ]

**ಬಡಿಸು₁** (ಕ್ರಿ). ಹೊಡೆಯಿಸು ; ಏಟು ಕೊಡಿಸು : ಸೊಕ್ಕಿರ್ದರ ಮದಮಿಂತಲ್ಲದುಡುಗದೆಂದು ಸಾಯೆ ಬಡಿಸುವಂ (ರಹರ್ಷಪು. ೫-೬೩) ; ಹೊಟ್ಟೆಯನು ಕಟ್ಟುವುದು ಬಟ್ಟೆಯುಲಿ ಬಡಿಸುವದು ಕಟ್ಟಾಳ ಭಂಗಪಡಿಸುವದು ಗೇಣುದ್ದ ಹೊಟ್ಟೆ ಕಾಣಯ್ಯ (ಸರ್ವಜ್ಞ. ೦೯೮೩). [ಬಡಿ₁ + — ಇಸು₁]

**ಬಡಿಸು₂** 'ಬಡ್ಡಿಸು' ನೋ.

**ಬಡಿಹ** (ನಾ). ಹೊಡೆತ ; ಪೆಟ್ಟು ; ಪ್ರಹಾರ : ಬಡಿಹದ ಮಾಕ್ಕಳಂತೆ ಅಟಲ್ವೆಯೊಳಂ ನೀರ್ ಮುಟ್ಟದ ಕೆಂಡದಂತುಪಶಮದೊಳಂ . . . ನೆರೆದಿರ್ಪುದುಂ (ರಹರ್ಷಪು. ೩-೦೫೩) ; ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಒಡೆಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು (ಬಸವ. ೨೫೦) ; ಮರ್ಕಟಂಗಳ ಬಡಿಹ ಮಾಣಿಸು ದೇವ (ಕೌಶಿರಾ. ೦೫-೮). [ಬಡಿ₁ + — ಹ₂ (< — ಪ₂)]

**ಬಡಿಹಡೆ** 'ಬಡಿವಡೆ' ನೋ.

**ಬಡಿಹೋರಿ** 'ಬಡಿವೋರಿ' ನೋ.

**ಬಡು₁** (ನಾ). ಪ್ರಾಣಿಗಳ ಹೆಣ, —ಶವ : ಜಾಕಿ, ಓಬಯ್ಯ ಇಬ್ಬರನ್ನು ಜೊತೆಗೆ ಕರೆದುಕೊಂಡು ಕೋವಿಗಳೊಡನೆ 'ಬಡು' (ದನದ ಹೆಣ) ಬಿದ್ದಲ್ಲಿಗೆ ಹೊರಟನು (ಕಾಹೂರು. ೨೭೯) ; ದನವನ್ನು ಹುಲಿ ಹಿಡಿದು... ಹಳುವಿನಲ್ಲಿ ಬಡುವನ್ನು ಕಾಡಿಗೆ ಎಳೆದುಕೊಂಡು ಹೋಗಿ . . . ಮುಚ್ಚಿಟ್ಟಿತ್ತು (ಹುಲಿಪು. ೦೯೧). [ದೇ.॥ ತೆಲು. ಬಡುಗು]

**ಬಡು₂** (ನಾ). (ಸಾಮಾನುಗಳನ್ನು ಇಡಲು) ಗೋಡೆಯಲ್ಲಿ ಮಂಚದಂತೆ ಕೊಂಡಿರುವಂತೆ ಉದ್ದವಾಗಿ ಕಟ್ಟಿರುವ ಕಲ್ಲು, ಸಿಮೆಂಟು, ಮರ ಮುಂತಾದುವುಗಳ ಕಟ್ಟೆ: ಸಾಮಾನು ಇಡುವ ಮೇಜು (ಅಂತಸ್ತು

ಗಳುಳ್ಳ) ನಿಲುವು, ಬಡು, ಅಡ್ಡಣಿಗೆ (Kitand. ೩೦೪೩) ; ಅಡಿಗೆಮನೆಯ ಒಂದು ಬಡುವಿನ ಮೇಲೆ ಕಂಚಿನ ಗೌರಿಯ ಪ್ರತಿಮೆಯೊಂದಿತ್ತು (ಹೂಕಣ್ಣು. ೭೦).

**—ಬಡುಕ** '—ಬಡಿಕ್ಕ' ನೋ.

**ಬಡುಗುಲಿ** (ನಾ). (?) : ಪಾತಕಜೀವಂಗಳ್ ಎಳ್ಳಿನಂತೆ ಗಾಣಕ್ಕೆ ವಂದು . . . ಮಱಿಯ್ಯಿಲ್ಲದೊಕ್ಕಲಂತೆ ಬಡುಗುಲಿಗೆ ವಂದು . . . ತಿಱ್ಱನೆ ತಿಂಪವು (ಧರ್ಮಾಮೃ. ೩-೭೬). [?]

**ಬಡೇಜಾವು** (ನಾ). (ಉಕ) ಒಣಜಂಬ ; ಡೌಲು ; ಬಡಾಯಿ : ಆತನ ಶಾಸನ ಮಾಡುವುದು ಒತ್ತಟ್ಟಿಗೆ ಉಳಿದು, ಆತನ ಬಡೇಜಾವು ನಡೆದದೆ ! (ಭಕ್ತಕ. ೦೩೬) ; ಆ ಸಣ್ಣ ಹುಡುಗನ ಮುಂದೆ ಯಾಕ ನಿನ್ನ ಬಡೇಜಾವ (ನಹಕ. ೩೧). [← ಮರಾ. ಬಡೇಜಾವ್, ಬಡೀಜಾವ್]

**ಬಡೇಸೋಪು** (ನಾ). ಜೀರಿಗೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : ಗೊರಟೇಬೇರು, ಹಸರಾಣಿ, ಬಡೇ ಸೋಪು ಇವು ಯಾವಾಗಲೂ ಹಸಿಯವೇ ಉಪಯೋಗಿಸಲ್ಪಡಬೇಕು (ಗೃಹವೈ. ೨). [←ಹಿಂ. ಬಡೀಶೋಫ್; ಮರಾ. ಬಡೀಶೇಪ್, ಬಡೀಶೋಪ್]

**ಬಡ್ಡ** (ನಾ). ತಿಳಿಗೇಡಿ ; ದಡ್ಡ ; ಮಂದಮತಿ : ದುಡ್ಡು ಕೊಟ್ಟಣ್ಣನು ಬಡ್ಡನಾಗುವನಯ್ಯ ಬಡ್ಡಿಗೆ ಬಡ್ಡಿ ಗಂಟಿಕ್ಕಿದಾ ಹಣವು ದೊಡ್ಡರಾಯನ ಪಾಲು (ಕಾಲಸಂ. ೬೪-೯೦) ; ಅಡ್ಡೇಟು ತಗಲಿದರೆ ಬಡ್ಡನಾದರೂ ಗೆದ್ದಾನು (ಗಾದೆ). [ಬಡ್ಡು$_{1}$ + —ಅ$_{7}$. / ತುಳು. ಬಡ್ಡ]

**ಬಡ್ಡಗಿ** 'ಬಡಗಿ' ನೋ.

**ಬಡ್ಡಗಿವಾಳ** (ನಾ). ಮರಗೆಲಸವನ್ನು ಮಾಡುವವನು ; ಬಡಗಿ : ಮಾಚಿಗಾವುಣ್ಡ ಜಕ್ಕೋಜಗೆ ಕಮ್ಮಬವಾಳ ಕೊಟ್ಟ ಕಯಿ ಮತ್ತ ೫ ಬಡ್ಡಗಿ ವಾಳ ಬಿಕ್ಕೋಜಗೆ ಕೊಟ್ಟ ಮತ್ತ ೫ (ಕೌಶಾಇ-IX—I, ೦೨೩-೨೭ ; 1059). [ಬಡ್ಡಗಿ (< ಬಡಗಿ) + —ವಾಳ$_{2}$ ( <—ವಳು)]

**ಬಡ್ಡಿ$_{1}$** 'ಪೊಡ್ಡಿ' ನೋ.

**ಬಡ್ಡಿ$_{2}$, ವಡ್ಡಿ, ವಿದ್ದಿ** (ನಾ). ೧. ಹೆಚ್ಚಳ; ಅಧಿಕ್ಯ: ವಿಘಾತಿಯು ಬಡ್ಡಿಗಿನ್ನಕ ಬದುಕಿದೆನು (ಕುವ್ಯಾಸ. ೦೨-೯೩). 'ಬಡ್ಡಿವಡೆ' ಪರಾ. ೨. ಸಾಲವಾಗಿ ಕೊಡುವ ಅಥವಾ ಪಡೆಯುವ ಹಣದ ಮೇಲೆ, ಪಡೆಯುವ ಅಥವಾ ತೆರುವ ಹೆಚ್ಚಿನ ಹಣ ; ವೃದ್ಧಿ : ಕಡನುಂ ಬಡ್ಡಿಯುಮೆಂದವಳೊಡಮೆ ಯನವಳೀಯೆ ಕೊಳ್ಗೆ ಪುಸಿಸಾಲಕ್ಕಂ (ಜುದತ. ೧೧-೬೫) ; ಕಾಸಿಗೆ ವೀಸವ ಬಡ್ಡಿ ಗಳಿಸಿಕೊಂಡು ಶೇಷಗಿರಿಯ ಮೇಲೆ ವಾಸವಾಗಿದ್ದೇನೆ (ಕುಂದ. ೨-೩೨-೦) ; ಇವೊತ್ತು ನಿನ್ನ ಸಾಲವನ್ನೆಲ್ಲಾ ಬಡ್ಡಿಸಹಿತವಾಗಿ ತೀರಿಸಿಬಿಡುತ್ತೇನೆ (ವಕಹಾ. ೨೯೭). ವಡ್ಡಿ : ೨. ನೀನೂ ತೆಱುವ ಸಿದ್ದಾಯ ಎರಡು ಹಣ ಯಿಶಾ ಪೊಣ್ಣಗಳ ಬೆಮ್ಮಳಿಯ ವಡ್ಡಿ × × × ಗವುಡ ಸುಂಕ ಮಗ್ಗ...ಸರ್ವಮಾನ್ಯವಾಗಿ (ಎಕ. X. ಮುಳಬಾ. ೨೦-೨ ; 1468) ವಿದ್ದಿ : ೧. "ವಿದ್ದಿ (ವದ್ದಿ), ವೃದ್ಧಿ=ಏಳಿಗೆ; ಹೆಚ್ಚಳ" (ಕಶ್ಯಕೋ. ೯೦); ಋತ್ವ ಕೃತ್ಯಂ—ಋಜು—ರಿಜು...ವೃದ್ಧಿ—ವಿದ್ದಿ, ಶೃಂಗಾರ—ಸಿಂಗಾರ (ಶಮದ. ೨೬೮ ಪ್ರಯೋ).

[< ಪ್ರಾ. ವುಡ್ಡಿ. /ಸಂ. ವೃದ್ಧಿ. /ತಮಿ. ಮಲ. ವಟ್ಟಿ ; ತುಳು. ಬಡ್ಡಿ ; ತೆಲು. ವಡ್ಡಿ]

**ಬಡ್ಡಿಕಾಱ** (ನಾ). ಬಡ್ಡಿ ವ್ಯವಹಾರವನ್ನು ಮಾಡುವವನು : ಬಡ್ಡಿ ಕಾಱನಂತೆ ಒಂದು ಕೊಟ್ಟು ಎರಡು ಪಡೆವ ಜಡಜೀವಿಗಳ ಭಕ್ತರೆನ ಬಹುದೇನಯ್ಯ (ಅಹಂಚೇ. ೬೩-೯೯). [ಬಡ್ಡಿ$_{2}$ +— ಕಾಱ]

**ಬಡ್ಡಿಗುಡು** 'ಬಡ್ಡಿಗೊಡು' ನೋ.

**ಬಡ್ಡಿಗೊಡು, ಬಡ್ಡಿಗುಡು** (ಕ್ರಿ). ೧. ವೃದ್ಧಿಯಾಗು ; ಬೆಳೆ : ಒಡ್ಡಿದನು ಕರತಳವನಗಲಕೆ ಬಡ್ಡಿಗೊಡುವ ವಿಷಾನಲಾಗ್ರುವನಡ್ಡವಿಸಿ ಘಡ ಹೋಗದಿರು ಹೋಗದಿರು ನಿಲ್ಲೆನುತ ಖಡ್ಡಿಸುತ (ಕರ್ಣಾಗ. ೮-೭-೪೪). ೨. ಬಡ್ಡಿಯನ್ನು ಸಲ್ಲಿಸಬೇಕೆಂಬ ಕರಾರಿನಿಂದ ಸಾಲ ಕೊಡು; ಬಡ್ಡಿ ವ್ಯವಹಾರ ಮಾಡು : ತನ್ನ ನಡಯಿಸಿದ ಬಳಿಕಿನ್ನಿಂದುವರ ಬಡ್ಡಿ ಗೊಟ್ಟು ಪೆರ್ಚ್ಚಿಸಿ ಪೊನ್ನಂ . . . ಶ್ರೀಸಾನ್ತಿಸೆಟ್ಟಿ ಪರಿರಕ್ಷಿಸಿದಂ (ಕೌಶಾ. XX. ೩೩-೩೨ ; 1082); ಹರದನ ಬಡ್ಡಿಗೊಟ್ಟೊಡವೆ ರಾಜಕುವರಾರನ ತೇಜದೇಟ್ಗೆ ನಾಣ್ಚ್ಬರುದಿನ ಚಿತ್ರವಿದ್ಯೆ (ಅನಂಪು. ೮-೪೯) ; ಆ ಕುಸೀದಕನು . . . ವೃದ್ಧ್ಯಾಜೀವನೆನೆ ಬಡ್ಡಿ ಗೊಡುವನಕ್ಕುಂ (ಶಬ್ದಸಾ. ೦೦೨-೦). ೩. ತೆಗೆದುಕೊಂಡ ಸಾಲದ ಹಣಕ್ಕೆ ಬಡ್ಡಿಯನ್ನು ತೆರು. ಬಡ್ಡಿಗುಡು : ೨. ದ್ವೈಗುಣಿಕಃ . . . ಕುಸೀದಕಃ — ಈ ೪ ಬಡ್ಡಿಗುಡುವವಂ (ಹಲಾಯು. ೪೩-೪೦೭) ; ಹತ್ತೆಂಟು ಪಣಮಂ ಕಡಂಗೊಟ್ಟು ಬಡ್ಡಿಗುಡುಗುಂ (ಕಾವ್ಯಾಚಿ. ೯೪-೬).

[ಬಡ್ಡಿ$_{2}$ + ಕೊಡು$_{1}$]

**ಬಡ್ಡಿಗೊಳ್** (ಕ್ರಿ). ಬಡ್ಡಿಯ ಹಣವನ್ನು ಪಡೆ: ಸಾಲವಿಮಾಯದೆ ಬಡ್ಡಿಗೊಳ್ವೆನೆಂಬ [ಪಾಠಾಂ. ಸಾಲಿಸದೆ ಬಡ್ಡಿವೇಟ್ಕೆಂಬ]. . . ಮರುಳನಂತೆ (ಧರ್ಮಾಮೃ. ೦೨-೨೪) ; ಕಡಗೊಂಡನೊ ಬಡ್ಡಿಗೊಂಡನೊ (ಶಮದ. ೦೬೭ ಪ್ರಯೋ). [ಬಡ್ಡಿ$_{2}$ + ಕೊಳ್$_{1}$]

**ಬಡ್ಡಿಮಗ** 'ಪೊಡ್ಡಿ' ಪರಾ.

**ಬಡ್ಡಿಯಿಕ್ಕು** (ಕ್ರಿ). ಬಡ್ಡಿಯನ್ನು ಕೊಡು : ಬಡ್ಡಿಯಿಕ್ಕುವಂ ಮೊದಲಂ ಕೊಟ್ಟು ಪತ್ರಮಂ ಸೀಳಿಸುವಂತೆ (ಧರ್ಮಾಮೃ. ೦೪-೦೦೪). [ಬಡ್ಡಿ$_{2}$+ಇಕ್ಕು]

**ಬಡ್ಡಿಯುಣ್** (ಕ್ರಿ). ಬಡ್ಡಿವ್ಯವಹಾರದಿಂದ ಜೀವಿಸು : ಕುಸೀದನೆನೆ ಬಡ್ಡಿಯುಂಬಂ (ಶಬ್ದಸಾ. ೦೦೨-೦). [ಬಡ್ಡಿ$_{2}$ + ಉಣ್]

**ಬಡ್ಡಿವಡೆ** (ಕ್ರಿ). ಹೆಚ್ಚಾಗು; ಅಧಿಕಗೊಳ್ಳು: ಆ ಧಾತುವಿನ ಮೂಲಾರ್ಥವೇನೆಂಬುದನ್ನರಿತರೆ, ಬಡ್ಡಿವಡೆಯುತ್ತಾ ಬಂದ ಮತ್ತಿನ ಪದಗಳ ಹೊಲಬು ತಾನಾಗಿ ಕಂಗೊಳಿಸಬಹುದು (ಪಾಡೋಜ. ೩೩೮). [ಬಡ್ಡಿ$_{2}$+ಪಡೆ$_{1}$]

**ಬಡ್ಡಿವೇಡು** (ಕ್ರಿ). ಬಡ್ಡಿಯನ್ನು ಅಪೇಕ್ಷಿಸು,-ಬಯಸು : ತನ್ನಂ ತಪದಿಂ ನೋಯಿಸದುನ್ನತಿಯಂ ದಿವ್ಯಭೋಗವಂ ಬಯಸುವ ಗಾಂಪಂ ನೆಱೆ ಪೋಲ್ಕುಂ ಸಾಲಿಸದಿನ್ನಳಿಪಿಂ ಬಡ್ಡಿವೇಡಿ ಮಱುಗುವ ಮರುಳಂ (ಧರ್ಮಾಮೃ. ೬-೦೫೬). [ಬಡ್ಡಿ$_{2}$ + ಬೇಡು$_{1}$]

**ಬಡ್ಡಿಸು, ಬಡಿಸು$_{2}$** (ಕ್ರಿ). ಊಟಕ್ಕೆ ನೀಡು,—ಹಾಕು; ಉಣಬಡಿಸು: ಈತಂಗೆ ನೀಂ ಬಸಿಱ್ ತೀವೆ ಬಡ್ಡಿಸದಿರ್ (ವಡ್ಡಾರಾ. ೭೭-೬); ಮಾಳತಿಕೆಯುಂ ಬಡ್ಡಿಸಲುಮುತ್ತಳಿಕೆಯುಂ ಕೈಘಟ್ಟಿ ನೀಡಲುಂ . . . ಪೇಟ್ಬಾಗಳ್ (ಅರಪು. ೬-೨೦ ವ) ; ಬಡ್ಡಿಸಿದಿಡ್ಡಲಿಗೆಯ ಮುಂದೆ ಕುಳ್ಳಿರ್ದು . . . ಉಂಬುವ ಕಾರ್ಯವ ಬಿಟ್ಟು ದೊಡ್ಡಕಾರ್ಯವನೆಣಿಸಿದಿರಿ (ವೇಬಸಂ. ೨೩-೨೭೫). ಬಡಿಸು$_{2}$: "ಬಡಿಸು — ಓಲಗಕ್ರಿಯಾಯಾಂ (ಊಟಕ್ಕೆ ಬಡಿಸು)" (ಕಮಂರಾ) ; ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನವನಟ್ಟು ಬಡಿಸು ನಾಮಱಿಯದೆನಸುಂ ಸವಿಯಂ (ಕವಿರಾ. ೨-೦೯೭); ಅನಂತಕಾಲ ಮಾಡುವ ಲಿಂಗಪೂಜೆಯು ಒಂದು ದಿನ ಬಡಿಸಿದ ಜಂಗಮತೃಪ್ತಿಗೆ ಸರಿಯಲ್ಲ (ಷಷ್ಠಸ. ೪. ೩೩೦-೦೦೪೨) ; ಘಡ ತೊಲಗು ಪವಮಾನಸುತ ನಿನ್ನೊಡಲನೀ ಶಾಕಿನಿಯ ಬಳಗಕೆ ಬಡಿಸುವೆನು (ಕುವ್ಯಾದ್ರೋ. ೦೩-೩೨).

[ದೇ.॥ ತಮಿ. ವಟ್ಟು ; ತುಳು. ಬಳಸು ; ತೆಲು. ವಡ್ಡಿಂಚು]

**ಬಡ್ಡು, ಬೊಡ್ಡು** (ನಾ). ೧. ಮೊಂಡು ; ಹರಿತವಿಲ್ಲದುದು ; ತೀಕ್ಷ್ಣತೆಯನ್ನು ಕಳೆದುಕೊಂಡಿರುವುದು : 'ಬಡ್ಡುಗಟ್ಟು' ಪರಾ. ೨. ಮಸಂಕಾಗಿರುವಿಕೆ ; ಕಾಂತಿಹೀನತೆ : 'ಬಡ್ಡುಹಿಡಿ' ಪರಾ. ೩. ತಿಳಿಗೇಡಿ ; ಬುದ್ಧಿಯಿಲ್ಲದ ವ್ಯಕ್ತಿ : ಮಱೆಯೊಳಗೆ ಪ್ಯಗರೆದ ವೀರರಂ ಸಂಹರಿಸುತ ಬಡ್ಡು ಬಣಗುಗಳನೋಡಿಸಿ . . . ಪುರವನೊಳ ಪೊಗುತ್ತಿದ್ದರು (ಚಿಬಕ್ಕಿ. ೯೨-೨೮) ; ಕಲಿಯಲಿಕ್ಕೆ ಸ್ವಲ್ಪ ಬಡ್ಡು. ಅವಳು ಶಾಲೆ ಬಿಟ್ಟು ಎರಡು ವರ್ಷವಾಯಿತು (ಗೋಬಾಳು. ೬೯.) (ಗಂ). ೪.

ಮೊಂಡಾದ; ಹರಿತವಿಲ್ಲದ: 'ಬಡ್ಡುಗತ್ತಿ' ಪರಾ. ೫. ಮಸುಕಾದ; ಮಂಕಾದ ; ಕಾಂತಿಹೀನವಾದ : ಮೊಳಕಾಲಿನವರೆಗಿನ ಕೊಳಕುಪಂಚೆ, ತಲೆಗೆ ಸುತ್ತಿದ್ದ ಬಡ್ಡು ಕೆಂಬರು ವಸ್ತ್ರ (ಮಲೆಮ. ೯೯). ೬. ತಿಳಿಗೇಡಿಯಾದ ; ದಡ್ಡತನದಿಂದ ಕೂಡಿದ : ಅವನೊಬ್ಬ ಬಡ್ಡು ಮನುಷ್ಯ. ಅವನಿಗೆ ಯಾರ ಮಾತೂ ಪಥ್ಯವಾಗುವುದಿಲ್ಲ (ರೂಢಿ). **ಬೊಡ್ಡು** : ೧. ಚಕ್ರವು ತೀರ ಬೊಡ್ಡಾದುದರಿಂದ ನೀರಿನ ಶಕ್ತಿಯು ಎಷ್ಟೋ ವ್ಯರ್ಥವಾಗುತ್ತಿತ್ತು (ಪಾಠಶ. I. ೯೦); ಬಾಕಿ ಯಾವುದರಲ್ಲಿ ಬೊಡ್ಡಾದರೇನು. ಇಂತಹ ವಿಷಯಗಳಲ್ಲಿ ಮಾತ್ರ ನಮ್ಮ ಜನರ ಕಲ್ಪನಾಶಕ್ತಿ ಹರಿತ ಅಲ್ಲವೆ! (ಹುಲಿಯುದಾ. ೦೯೦) ; ಹಾರೆ ಪೋಟು, ಗುದ್ದಲಿ ಬೊಡ್ಡು, ಗೈಯುವವನಿಗೆ ಒಕ್ಕೈ (ಗಾದೆ). ೭. ಒರಟು ; ನಾಜೂಕಿಲ್ಲದುದು : ಅವರ ಕೆಲಸಗಳೆಲ್ಲ ಬೊಡ್ಡು (ಪಾಠಶ. II. ೬೦೦). ೮. ಒರಟಾದ : ನಾಜೂಕಿಲ್ಲದ: ಉಳುವುದನ್ನಾಗಲಿ, ನೇಯುವುದನ್ನಾಗಲಿ, ಬಲು ದೊಡ್ಡ ಉಪಕರಣಗಳಿಂದ ಪೂರೈಸುವರು (ಪಾಠಶ. II. ೬೦೦).

[ದೇ. ‖ ತುಳು. ಬಡ್ಡ್]

**ಬಡ್ಡುಕುದುರೆ** (ನಾ). ಚುರುಕಿಲ್ಲದ ಕುದುರೆ : ಬಡ್ಡುಕುದುರೆಗೆ ಬಡಿತವೇ ಮದ್ದು (ಗಾದೆ). [ಬಡ್ಡು + ಕುದುರೆ]

**ಬಡ್ಡುಗಟ್ಟು** (ಕ್ರಿ). ಮೊಂಡಾಗು ; ತೀಕ್ಷ್ಣತೆಯನ್ನು ಕಳೆದುಕೊಳ್ಳು: ತನ್ನ ರಾಜನೀತಿಯ ಭೇದೋಪಾಯದ ಕನ್ನದ ಮೊನೆ, ಬಡ್ಡುಗಟ್ಟುತ್ತಾ ಬರುವುದು ಅವನಿಗೆ ಗೊತ್ತಾಗದಿರಲಿಲ್ಲ (ಕಾಶೀಗು. ೦೦೨).

[ಬಡ್ಡು + ಕಟ್ಟು$_1$]

**ಬಡ್ಡುಗತ್ತಿ, ಬೊಡ್ಡುಕತ್ತಿ** (ನಾ). ಮೊಂಡುಕತ್ತಿ ; ಹರಿತವಿಲ್ಲದ ಕತ್ತಿ : ಬಡ್ಡುಗತ್ತಿಯಲಿ ಹುಡುಗರ ತಲೆಯ ನೀನಡ್ಡಾದಿಡ್ಡಿಯಲಿ ಕೆರೆವೆ (ಕ್ಯಾ ಪಕ. ೦೩-೦೩). **ಬೊಡ್ಡುಕತ್ತಿ** : ಎಳಚಿತ್ತಾಯರು . . . ತುರಿಸುತ್ತಿದ್ದ ಕಾಲಿನ ಮಿಾನಕಾಂಡಗಳನ್ನು ಕೈಯ ಬೊಡ್ಡುಕತ್ತಿಯಿಂದ ಹೆರೆದುಕೊಂಡರು (ಜಗುಳ. ೬೩). [ಬಡ್ಡು +ಕತ್ತಿ]

**ಬಡ್ಡುಹಿಡಿ** (ಕ್ರಿ). ನಯವಿಲ್ಲದೆ ಕಾಂತಿಯನ್ನು ಕಳೆದುಕೊಳ್ಳು,— ಮಂಕಾಗು : ಬಡ್ಡುಹಿಡಿದು ಕೆದರಿದ್ದ ಕೂದಲನ್ನು ಬಿಾಯಿಸಿ ಎಣ್ಣೆ ಕಾಣಿಸಿ ಬಾಚಿ ಸರಿಮಾಡಿದ್ದಳು (ಮಲೆಮ. ೯೦).

[ಬಡ್ಡು + ಹಿಡಿ$_1$ (< ಪಿಡಿ$_1$)]

**ಬಡ್ತಿ** 'ಬಡತಿ' ನೋ.

**ಬಣ$_1$** (ನಾ). ಶೂನ್ಯತೆಯನ್ನು ಕುರಿತಂತೆ ಬಳಸುವ ಅನುಕರಣಶಬ್ದ: 'ಬಣಗುಟ್ಟು' ಪರಾ.

ಬಣಬಣ (ದ್ವಿರುಕ್ತಿ) : ಮದುವೆಗೆ ಬಂದ ನೆಂಟರೆಲ್ಲಾ ಹೊರಟು ಹೋದಮೇಲೆ ಮನೆ ಬಣಬಣ ಎನಿಸುತ್ತಿದೆ (ರೂಢಿ).

**ಬಣ$_2$** 'ಬಣ್ಣ' ನೋ.

**ಬಣ$_3$** (ನಾ). ಒಂದು ದೇಶದ ಹೆಸರು : ಸೇನ್ದ್ರ ಕಬಣೋಭಯದೇಶದಾ ವೀರಾಪುರುಷ ಸಮಕ್ಷದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತಜಯನಾ ವಿಜಅರಸನ್ಗೆ . . . ಕೊಟ್ಟಾರ್ (ಮೈಆ. ೦೯೩೩. ೨೩-೦೦; ಸು. 450). [?]

**ಬಣಂಜ** 'ಬಣಜ' ನೋ.

**ಬಣಂಜಿಗ** 'ಬಣಜಿಗ' ನೋ.

**ಬಣಂಜಿಸು** 'ಬಣಜಿಸು' ನೋ.

**ಬಣಂಜು** 'ಬಣಜು' ನೋ.

**ಬಣಂಜುಧರ್ಮ** (ನಾ). ೧. ವರ್ತಕರ ಧರ್ಮ : ಬಣಂಜುಧರ್ಮವನೆ ಪಾಳಿಸಿ ಭೀತರನೆಯ್ದೆ ಕಾದು ನಿರ್ಮ್ಮಳತರಕೀರ್ತಿಯಂ ಪಡೆದಲಾರ್ಪ್ಪಡಿ ವೆಣ್ಣಲ ಸೆಟ್ಟಿಕವ್ವೆಯೊಳ್ (ಕಇ. IV, ೦-೩೯ ; 1204). ೨. ವರ್ತಕರ ಧರ್ಮವನ್ನು ಪಾಲಿಸುವವನು : ಉದಗ್ರಪುಣ್ಯರಾದರಿತವಿಶಿಷ್ಟರೆಂಬುದಿದು ಸಂಸ್ತುತಿಯಲ್ತು ಬಣಂಜುಧರ್ಮ್ಮರ (ಎಳ. VII. ಶಿಕಾ. ೦೦೯-೬೫ ; 1181). [ಬಣಂಜು (<ಬಣಜು) + ಧರ್ಮ]

**ಬಣಂಜುಪಟ್ಟಣ** (ನಾ). ವ್ಯಾಪಾರ ನಡೆಯುವ ನಗರ ; ವ್ಯಾಪಾರ ಕೇಂದ್ರ : ಮಲ್ಲಿಸೆಟ್ಟಿಯರು ಮುಂನಂ ಶ್ರೀಮದುದನಾದಿಯ ಬಣಂಜುಪಟ್ಟಣಂ ಕುಱುಪ್ಪೆಟ್ಟಿದಲು . . . ಸಮಸ್ತಶಾಸನಿಗರ ಮುಂದಿಟ್ಟುಕೊಂಡು (ಎಇ. XIX, ೨೫-೯೯ ; 1246) ; ಕರಪೊಸೆದಿಪ್ಪ ತದ್ದವಡಿಸಾಸಿರದಾ [ಬ]ಣಂಜುಪಟ್ಟಣಂ ಸಿರಿಗೆ ನಿವಾಸ ದೇಸಿಯ ತವರ್ಮನೆ (ಕೊಲ್ಹಾ. ೨೦-೫ ; 1265). [ಬಣಂಜು (<ಬಣಜು) + ಪಟ್ಟಣ]

**ಬಣಂಜುಸಮಯ** (ನಾ). = ಬಣಂಜುಧರ್ಮ ೧ : ಧರೆಗೆಸೆ[ವೀ]ಬಣಂಜುಸಮಯಪ್ರತಿಪಾಳನವರ್ತ್ತಿಯಿಂದೆ ದುರ್ದ್ಧರತರಮಪ್ಪ ಚಂಡಿಕೆಯ ವೆಣ್ಣಲೆ ನಾರಿಯೆನಿಪ್ಪ ನಾಮಮಂ ಧರಿಯ್ಸಿ(ಯಿಸಿ) (ಕಇ. IV. ೦-೫೫ ; 1204). [ಬಣಂಜು (<ಬಣಜು) + ಸಮಯ]

**ಬಣಂಬೆ, ಪಣಂಬೆ, ಬಣಬೆ, ಬಣವೆ, ಬಣೆವೆ, ಬಳಂಬೆ** (ನಾ). ೧. (ಹುಲ್ಲು, ಮೇವು ಮುಂತಾದುವುಗಳ) **ಮೆದೆ, –ರಾಶಿ, –ಒಟ್ಟಿಲು**: "ಕುತ್ತಱ ಬಣಂಬೆ" (ಶಂಗರಾ. ೦೦೯-೨) ; ಕರುಳ ಮೆದೆಯಂ ಪಿಕ್ಕಿ ಪರಪಿ ನೋಡಿಯುಂ ಪಲ್ಗಳ ಬಣಂಬೆಗಳೊಳ್ ಪರವಸಂಗೊಂಡು ಮೆಟ್ಟಿಯುಂ . . . ಎಲ್ಲಿಯುಂ ದುರ್ಯೋಧನನನಱಸಿ ಕಾಣದೆ (ಗದಾಯು. ೬-೨೯ ವ) ; ಪೆಣದ ಬಣಂಬೆಗಳುಂ ಕೋಟ್ಮಿದುಟ ಕೋಟ್ಕಿ ಸೆಱುಮಂಗುರ್ವುಪಡೆಯೆ (ಶಂರಾಮಾ. ೦೩-೫೯ ವ); ಪೆಣನ ಬಣಂಬೆಯುನಡರ್ದು ಬಿಸುನೆತ್ತರ ಕಾಲನೀಱಿದು . . . ನಲಿವ ಕಾಗೆಗೂಗೆಗಳುಂ (ರಾಮಾಶ್ವ-೯೭-೦೫). ೨. ಹುಲ್ಲು, ಮೆದೆ ಮೊದಲಾದುವನ್ನು ಒಟ್ಟುವ ಸ್ಥಳ : ಮನೆಯಗೇರಿಯುಮಂ ಬಣಂಬೆಯುಮನೊಂದು ತೋಂಟಮುಮಂ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಕಇ. II. ೦೯-೬೫ ; 1123) ; ಪನ್ನೆರಡು ಕೆಯ್ಯ ಬಣಂಬೆ (ಬೊಂಕಶಾ. ೦೯೯೩, ಹುಕ್ಕೇರಿ. ೯-೦೦ ; 1195). **Δ ಪಣಂಬೆ** : ೧. ಒಡಲಿದಱಿಂದಮಂ ಬಗೆದು ನೋಟ್ಪೊಡೆ ಪೇಲ ಪಣಂಬೆ ಕುತ್ತವಿರ್ಪ್ಪೆಡೆ (ಧರ್ಮಾಮೃ. ೬-೬೬). **ಬಣಬೆ** : ೧. ನೆಣನಬಣ[ಶಾಕಾಂ. ಣಂ]ಬೆ [ಶಾಕಾಂ. ಪಳ್ಳಂ]ಗಳೊಳ್ ಕೈದುಗುತ್ತಿ ನೋಡಿಯುಂ (ಗದಾಯು. ೬-೨೯ ವ) ; ಮಡಿದು ಕೆಡೆವ ವೀರರ ಪೆಣದ ಬಣ[ಶಾಕಾಂ. ಣಂ]ಬೆಯಂ ಮೆಟ್ಟಿ . . . ಪೊಱಮಡುವಾಗಳ್ (ಜಗ. ೬-೯೭ ವ) ; ದ್ರುಪದನಂದನೆಯಳಲ ಶಿಖಿಗಿಂಧನವಲೇ ಕುರುಕುಲದ ಕರಡದ ಬಣಬೆ ಕಾದುಱುಹುವುದು (ಕುವ್ಯಾಕ. ೨-೩೨). **ಬಣವೆ** : ೧. ಕೊಟ್ಟದ್ದು ಬರಲಿಲ್ಲ ತಂದದ್ದು ಬಿಡಲಿಲ್ಲವೊಟ್ಟಿರ್ದ ಬಣವೆಗಳುಮೊಂದಿಲ್ಲ (ಹುಲ್ಲುಕ. ೬-೯) ; ಯಂತ್ರದ ಮುನ್ನಡೆಗೋಸ್ಕರ ಯುದ್ಧ ಬೇಕೆನ್ನುವುದು ಅರಳಿಗಾಗಿ ಭತ್ತದ ಬಣವೆಯನ್ನು ಸುಟ್ಟ ಹಾಗೆ (ಶಿಲ್ಪಶಾ. ೦೬೩). **ಬಣೆವೆ** : ೧. ಬಣೆವೆಗಳ ದಹನವು ಎಲ್ಲರಿಗಿಂತ ಅರ್ಧ ತಾಸು ಮುಂಚಿತವಾಗಿ ರಾಘಪ್ಪನಿಗೆ ಗೊತ್ತಿರುತ್ತಿತ್ತು (ಗಂಹುಯು. ೫೫). **ಬಳಂಬೆ** : ೧. ಬಳಂಬೆಯ ತೆಱಿ ತಳಸಾರಿಗೆ ಕಾಣಿಕೆ ಕವಣಾಯ ದಣ್ಡಾದಾಯವಿನ್ತಿನಿತುಮಂ . . . ಕೊಟ್ಟರ್ (ಸೌಇ. IX-1, ೦೬೨-೦೫; 1100) ; ಪಳ್ಳದೊಳಗಣ ಬಳಂಬೆಯಂತೆ ದ್ರೋಹನ ನಿತ್ತರಣೆಯಂತೆ . . . ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ಧರ್ಮಾಮೃ. ೯-೨೩) ; ಪೆರ್ಬಣದ ಬಳಂಬೆ ಪೆರ್ಗ್ಗರುಳ ತಿಂತಿಣಿ ನೆತ್ತರ ಪೆರ್ಬೊನಲು (ಎಳ. VIII, ಸೊರಬ. ೦೨-೬; 1155 ?). ೨. ಬಳಂಬೆ ನಿವೇಸಣಂ ಮೂಡಣ ಬೆಳದೊಳಾಗಳೆಯೊಳಗಲಂ (ಇಇ. XIX, ೨೬೩-೩೯ ; 1054); ಒನ್ದು ಮನೆಯೊನ್ದು ಬಳಂಬೆ (ಎಇ. XIII, ೩೨೦-೨೩ ; 1126). [ದೇ. ‖ ತುಳು. ಬಣಬೆ]

**ಬಣಕಮೆಂಡಿಗವುಂಡ** (ನಾ). ಒಬ್ಬಾತನ ಹೆಸರು (?) : ಕಿಸುಕಾಳದ ಬಣಕಮೆಣ್ಡಿಗವುಣ್ಡ ತುಱುಗಳ್ಗೆಳ್ಗಿ ಮಂದು ವಿನೀಳವುಟ್ಟಿ ಕದಿ ಸತ್ತು ಸ್ವರ್ಗ್ಗಿ

ಯದಂ (ಪ್ರೌಆಂ. ೧೯೯೦, ೬೯-೦೦; ೯51). [?+ಗವುಂಡ (<ಗಾವುಂಡ)]

**ಬಣ್ಣಕಾರ** 'ಬಣ್ಣಗಾಱ' ನೋ.

**ಬಣಗ$_1$** 'ಬಳಗ$_1$' ನೋ.

**ಬಣಗ$_2$** (ನಾ). ಅಲ್ಪವ್ಯಕ್ತಿ; ಕ್ಷುದ್ರ; ಹೀನ : ಬಣಗರಂದದಲೆನ್ನನೆಂದರೆ ಹಣೆಯ ಕಣ್ಣಿನ ಕಿಡಿಯ ಕೆದಱುವೆನು (ಕೃಕುಂ. ೦೩-೨೯); ಬಣಗರ ತೊಲಗ ಹೇಳೆನುತ ಮುಮ್ಮಡಿರಾವಣನಂತೆ ನಿಂದು ಗರ್ಜಿಸಿದ (ಮೋಹತ. ೦೨-೯೪). [ ಬಣಗು$_2$ + — ಅ$_7$ ]

**ಬಣಗಾರ** 'ಬಣ್ಣಗಾಱ' ನೋ.

**ಬಣಗು$_1$** (ಕ್ರಿ). ಹರಟು; ಗಳಹು (?) : ಕಲ್ಲುಗೊಳ್ಳುವ ಕೆಲರು ಹಲ್ಲು ಕಿಸಿಯುವ ಕೆಲರು ಬಲ್ಲವರು ಬಲ್ಲಂತೆ ಬಣಗುತಿಹರು (ವವಿ. ೬-೬). [<ಬಣಗು$_2$ ?]

**ಬಣಗು$_2$** (ನಾ). ೧. ಅಲ್ಪವ್ಯಕ್ತಿ; ಕ್ಷುದ್ರ; ಹೀನ : ಬಣಗಿನಂತೆ ನೇರಿತಲ್ಲದು ಬಗೆವಂದೀ ಶರೀರಂ ಕಷ್ಟಂ (ಧರ್ಮಾಪು. ೯-೦೬೩); ನಿಮ್ಮ ತಂದೆ ಕೀರ್ತಿಧರಮಹಾರಾಜಮುನೀಂದ್ರನಂ ನಿಮ್ಮ ತಾಯಿ ಬಣಗೆಂದು ಪೊಱಮಡಿಸಿದುದಕ್ಕೆ ಎನಗತಿದುಃಖಮಾದುದು (ಕುಣ್ಯಾಸ್ರ. ೬-೬೦ ಪ); ಬಣಗುಗಳು ಭೀಮಾರ್ಜುನರು ಕಾರಣಿಕ ನೀ ನಡುವಾಯಿ (ಕುವ್ಯಾಗ. ೬-೩೯). ೨. ತಿಳಿಗೇಡಿ ; ಮಂದಮತಿ : ಬಣಗು ನೀನಕಟಕಟ ಭೀಮನ ಕೆಣಕಿ ಬದುಕಿದೆ (ಕುವ್ಯಾಶ. ೨-೨೦) ; ಬಣಗೆ ಬೆಱತಿರದೇಳು . . . ಮಣಿದು ಬದುಕುವುದುಚಿತ (ಕೌರಂ. ೯-೬) ; ಉಣ ಬಂದ ಜಂಗಮಕೆ ಉಣಬಡಿಸ ಲೊಲ್ಲದಲೆ ಉಣದಿಪ್ಪ ಲಿಂಗಕುಣಬಡಿಸಿ. ಕೈಮುಗಿವ ಬಣಗುಗಳ ನೋಡ (ಸರ್ವಜ್ಞ. ೨೦೦). ೩. ಬಡವ ; ದೀನ ; ದರಿದ್ರ : ಬಱದ ನಾಡಿಂದ ಬಂದ ಬಣಗುಗಳಂತೆ ಮತ್ತಿಕ್ಕುವರೋ ಇಕ್ಕರೋ ಎಂದು ಒಟ್ಟೈಸಿಕೊಂಡು ತಿಂದು ಮಿಕ್ಕುದ ಬಿಸುಡುವ ಕುನ್ನಿಗಳ ಮೆಚ್ಚುವನೆ ನಮ್ಮ ಕೂಡಲಚನ್ನ ಸಂಗಮದೇವ (ಶಸ್ನಪ. ೪. ೩೭೯-೬೯೯) ; ಪಣಮಿಲ್ಲದೆಯುಟಮುಟಿಸುವ ಬಣಗುಗಳಂ ನೆವವನಿಟ್ಟು ಬಿಟ್ಟು . . . ಪಣವಂ ಸಾಧಿಸುವಳಾವಳವಳೇ ಪೆಲೆವೆಣ್ (ಉದ್ಯಟ. ೦೦-೬೬). ೪. ಪಿಶಾಚಿ ; ಭೂತ : ಬಣಗುಗಳೊರ್ವ ಋಷಿಯ ಪೊಟ್ಟೆಯಂ ವಿದಾರಿಸಿ ಬಸುಱೊಳಗಿರ್ದ ಶಿಶುವಂ ತೋಡಿ ತಿನುತಿರ್ಪುದಂ (ಕುಣ್ಯಾಸ್ರ. ೯-೦೯ ಪ). (ಗು). ೫. ಕೀಳಾದ ; ನಿಕೃಷ್ಟವಾದ : ಬಲವು ಬಲವೇ ನಿನ್ನ ಬಲವಲ್ಲದೆ ಮಿಕ್ಕ ಬಲಗಳುಂಟೆ ಬಣಗು ಗ್ರಹಗಳಿಂದ (ಪುರಂದ. ೨-೬ ಪಲ್ಲ) ; ಗುಣವೆ ಭೂಷಣವಭಿಮಾನವೆ ವಸ್ತ್ರವೆಂದೆಣಿಸಿ ಕೈವಿಡಿದಿಹವಮಗೆ ಬಣಗುದೊಡಿಗೆಯಾಸೆದೋಱಬೇಡ (ಭರತ. ೦೯-೬೦). ೬. ಕೆಲಸಕ್ಕೆ ಬಾರದ ; ಅಪ್ರಯೋಜಕನಾದ : ಧನು ತನಗೆ ನೆಗಹಲ್ಕೆ ಕೃಷ್ಣಾಜಿನವೊ . . . ಬಣಗುವಿಪ್ರನ ನೆನಹ ನೋಡಿರೆ (ಕುವ್ಯಾಆ. ೦೩-೦೬) ; ಭೂರಿಭುವನದ ಬಹಳ ಭುಜಬಲಧಾರಕರು ನಾವೀ ನೆಲೆಗೆ ನವಗಾರು ಸರಿ ನಾವಂಜಲೇಕೀ ಬಣಗುಭೂಪತಿಗೆ (ಕೊರಂ. ೬-೦-೩೦). 'ಬಿನಂಗು$_1$' ಪರಾ. [ದೇ.೩. / ಮರಾ. ಭಣಗ, ಭಣಂಗ]

**ಬಣಗುಕವಿ** 'ಬಣಗುಗವಿ' ನೋ.

**ಬಣಗುಗವಿ, ಬಣಗುಕವಿ** (ನಾ). ಅಸಮರ್ಥನಾದ ಕವಿ ; ಕುಕವಿ : ಭಂಡಗವಿ ಬಣಗುಗವಿಗಳ ಕೊಂಡುಂ ಕೊನೆದೂಳುತಿರ್ಪ ಕುಕವಿಗಳಂ ತಾಂ ತೊಂಡರನೆ ಸುಯಿನಿಪ್ಪನೆ ಚಂಡಾಲರ ನೋಡಿ ನಗುವ ಕವೀಂದ್ರಂ (ಛಂದೋಂಬು. ೦-೨೯ ಅವ). **ಬಣಗುಕವಿ** : ಬಣಗುಕವಿಗಳ ಲೆಕ್ಕಿಪನೆ . . . ಕವಿ ಕುಮಾರವ್ಯಾಸ (ಕುವ್ಯಾಆ. ೦-೦೬) [ಬಣಗು$_2$+ಕವಿ$_5$]

**ಬಣಗುಟ್ಟು** (ಕ್ರಿ). ಬರಿದಾಗಿ ಕಾಣು ; ಶೂನ್ಯವಾಗಿ ತೋರು : ಒಂದಾವೊಂದು ದಿನ ಶಿರುಗಾಟವನ್ನು ನಿಲ್ಲಿಸಿದರೆ, ಆ ದಿನವೆಲ್ಲ ಹಕ್ಕಿಯು ಪೆನ್ನನ್ನು ಕರೆದಂತಾಗಿ ಮನವು ಬಣಗುಟ್ಟುತ್ತಿತ್ತು (ಶಿಂಆ. ೬೦). [ಬಣ$_1$ + ಕುಟ್ಟು$_1$]

**ಬಣಜ, ಬಣಂಜ, ಬಳಂಜ** (ನಾ). ೧. ವರ್ತಕ ; ಹರದ; ವ್ಯಾಪಾರಿ: 'ಬಣಜು' ಪರಾ. ೨. ವರ್ತಕರ ಗುಂಪು,–ಸಮೂಹ : ಬಣಜಮುಂ ನಾನಾದೇಸಿಯುಂ ಬಿಟ್ಟಿಯು × × × (ಪ್ರೌಆಂ. ೦೯೩೩, ೩-೦೫ ; 1160). ೩. (ವ್ಯಾಪಾರಿಯ) ಸರಕು ; ಸಾಮಗ್ರಿ : ಜಾತ್ರೆಗರೂ, ಕಡುಬೆಬ್ಬಳದ ಆತುರತೆಯಿಂದ ತಂತಮ್ಮ ಬಣಜಗಳನ್ನು ಸಂವರಿಸಿಕೊಂಡ ಬೇಹಾರಿಗರೂ ಇತರರೂ . . . ಗುಡಿಯೊಳಗೆ ಸೇರಿಕೊಳ್ವರು (ಬರೆಗಂ. ೦೨-೦೬). **ಬಣಂಜ** : ೩. ದೇಗುಲದುಪಕರಣಂಗಳೊಳಂ ಪರದರ ಬಣಂಜದೊಳಂ ಮತ್ತಮೇಂ ದಂಡದೊಳಂ ಕವರ್ತೆಯೊಳಂ ತೀರದೆ ದಂದುಗಂಗೊಂಬುದೆನಿತಾನುಮುಂಟು (ಶಶಪಂ. ೯೫-೦೪). **ಬಳಂಜ:** ೨. ಗಂಗವಾಡಿ ತೊಮ್ಬತ್ತಱುಸಾಸಿರವುಂ ಬಾಣರವಾಡಿ ಪನ್ನಿರ್ಚ್ಛಾಸಿರದ ಬಳಂಜಮೆಲ್ಲ ನೆರೆದು (ಎಕ. X (S), ಮುಳಬಾ ೩೦೬-೩ ; ಸು. 950). [ < ಸಂ. ವಣಿಜ ]

**ಬಣಜಿಗ, ಬಣಂಜಿಗ, ಬಳಂಜಿಗ** (ನಾ). ೧. ವ್ಯಾಪಾರಿ ; ವರ್ತಕ : ತಳದ ಬಣಜಿಗರೊಳಗಾಗಿ ಭತ್ತಮುಂ . . . ಕೊಟ್ಟರು (ಸೌಇಇ. XVII, ೨೯೩-೯೮; 1162); ಬಣಜಿಗನ ಬಟಿಕೆಯಂತೆ ಕೊತ್ತಳಂ ಬಱದಾಗಿ ಬಟಲ್ದ ಬಡಗೊಂಡಿಯಂತಿರಾಳ್ವೇರಿಯುಱದು (ಅವಂಪು. ೧೦-೯೩ ವ) ; ಬಳ್ಳಮಾನದ ಬಣಜಿಗರ ಪುತ್ರಿಯರೆ ನಾವೆಲ್ಲ ಶೂದ್ರತಿಯ ಸುತೆಯರೆ ಸಲ್ಲದೆಂಬೆವೆ ಪಟ್ಟ (ಭರತ. ೩೬-೦೨೦). ೩. [ವೀಶೈ] ವೀರಶೈವರಲ್ಲಿ ಒಂದು ಒಳಪಂಗಡ : ಬಣಜಿಗನೇಸು ಭಕ್ತನಾದರೆಯೂ ಒಟ್ಟಿಲ ಬೆನಕನ ಹಂಗ ಬಿಡ (ಬಸವ. ೯೫೦); ಹಗಲು ಹಾರುವನಾಗಿ ಇರುಳು ಬಣಜಿಗನಾಗಿ ಅರಸಾರ ಮಗನಾಗಿ ತಿರುಗಿ ನಿದ್ದೆಗೆಡಬೇಡ (ಹಳ್ಳಬಾ. ೬೯). **ಬಣಂಜಿಗ** : ೧. ಇಂತೀ ಧರ್ಮ್ಮಮಂ ನಗರಮಹಾಜನಂ ಪಂಚಮಠಮಲ್ಲಿಯ ತಳದ ಬಣಂಜಿಗರುಮೆರಸುಂ ಪ್ರತಿಪಾಳಿಸುವರು (ಸೌಇಇ. XX, ೬೩-೨೬; 1123); [ನೆರೆದು ಬ]ಣಂಜಿಗಮ್ಮರ್ಯ್ಯದದೆ ಕಟ್ಟಿದೊಡ[ಂತರ] ಪಟ್ಟವರ್ತ್ತಿಯಿಂದವರ ಬ[ಬಾ]ಪ್ಪವೆಂದನೆ (ಸೌಇಇ. XV, ೨೩೩-೩೦; 1216); ಬೇರದವಸರದಿಂ ಮೆಯ್ದೆಗೆದು ಬಣಂಜಿಗರ ನೆರವಿ ತಮತಮಗೆ ಪೊಸವರದಿನೆಣಿಕೆಯೊಳಿರೆಯುಂ (ರಾಮಾಶ್ವ. ೨೨-೦೯). ೨. ಸಂಗರರಂಗದೊಳ್ ವೆಲಮ ಕಮ್ಮೆ ತೆಲುಂಗ ಬಣಂಜಿಗರ್ ಕರಂ ಭಂಗದೆ ಬೆಂಗುಡರ್ (ಶಶಪ. ೫-೫೦). **ಬಳಂಜಿಗ** : ೧. ಕರಮುದ್ವೃತ್ತತೆಯಿಂ ಬಳಂಜಿಗರ ಪೊಂಗು ಮಯ್ಮೆಗಂ (ಶೋಂಕಶಾ. ೦೯೩೩, ಶಾಸಂ. ೦೨೯-೨೨; 941); ಇ ಧರ್ಮ್ಮಮಂ ದಯಸಿಂಗಸೆಟ್ಟಿಯುಂ ವಲ್ಲಿಯ ತಳದ ಬಳಂಜಿಗರು ನಡೆಯಿಸುವರ್ (ಸೌಇಇ. XX, ೬೦-೨೬ ; 1088) ; ಸೊಂಟಿಗೆಯುಕ್ಕಿ ಮತ್ತಂ ತಳದ ಬಳಂಜಿಗರುಂ ನಾನಾದೇಶಿಗಳು ವಿಟ್ಟು ಕೊಟ್ಟರ್ (ಸೌಇಇ. IX-i, ೦೭೨-೧ ; 1106). [ಬಣಜು + — ಇಗ / ಸಂ. ವಣಿಜಕ]

**ಬಣಜಿಗವಾಗ** (ನಾ). ವರ್ತಕರಿಗೆ ಸೇರಿದ ಭಾಗ (?) : ಅಂತಾ ಮತ್ತರಾಱಕ್ಕಂ ಸೀಮಾಸಂಮ[ಬ]ಂಧವಾವುದೆಂದಡೆ . . . ಮೂಲಸ್ಥಾನ ದೇವರ ಕೆಯಿಂ ತೆಂಕಲು ಬಣಜಿಗವಾಗದಿಂ ಮೂಡಲು ಬಾಚಗಾವುಂಡನ ಹಾಗದಿಂ ಪಡುವಲು (ಕೊಲ್ಹಾಶಾ. ೦೫ ೬೬ ; 1186). [ಬಣಜಿಗ+ ಬಾಗ]

**ಬಣಜಿಗಿತಿ** 'ಬಣಜಿಗಿತ್ತಿ' ನೋ.

**ಬಣಜಿಗಿತ್ತಿ, ಬಣಜಿಗಿತಿ** (ನಾ). ವರ್ತಕರ ಹೆಂಗಸು : ಸೋಪೂರುಮ್ಮ ಬಣಜಿಗಿತ್ತಿಯ ಕಾಲು ಕೀಲಸಿನ್ಮಾಡಿ ಕಡಿಸಲದೇಕೆ (ಸಮ್ಯಕೌ. ೫-೨೬). **ಬಣಜಿಗಿತಿ** : ನಮ್ಮ ಗೆಣೆಕಾತಿ ಹೊಸೂರ ಬಣಜಿಗಿತಿ . . . ನಮ್ಮ ಹಂಬಲವ ಮರತಳೆ (ನಾಡಪ. ೬೯). [ಬಣಜಿಗ+ — ಇತ್ತಿ]

**ಬಣಜಿಸು, ಬಣಂಜಿಸು** (ಕ್ರಿ). ವ್ಯಾಪಾರ ಮಾಡು ; ಕ್ರಯವಿಕ್ರಯ **ಮಾಡು** : ಆಂ ತೆಂಕನಾಡತ್ತ ಬಣಜಿಸಿ ಧನಂಬಡೆದು ಬಂದಪೆನೆಂದು ಪೆತ್ತತಾಯುಂದೆಗಳಿಗೆ . . . ಬಿನ್ನೈಸಲು (ಸೋಬಾ. ೦-೯೫); ಭಕ್ತನೋರ್ವ

ನೂರೂರ್ಗಳೊಳ್ ಬಣಜಿಸಿರುಳಾಗ್ಗೆಯಾತಂ ಬಂದಾ ಪುರವ ಪೊಕ್ಕು ನೋಡ ಲೆಲ್ಲಿಯ ಜನನ ಮಂದಿರವೆ ಘನವಾಗಿ (ಸಿದ್ಧೇಪು. ೬-೩೪). **ಬಣಂಜಿಸು:** ಬಣಂಜಿಸುವವಂ ವಿಪಣಿಕಂ ನೈಗಮಂ ವಣಿಜನಕ್ಕು (ಮಂಗರಾ. ೦೦೨-೧).
[ಬಣಜು + — ಇಸು₃]

**ಬಣಜು, ಬಣಂಜು, ಬಳಂಜು, ಬಟಿಂಜು** (ನಾ). ವ್ಯಾಪಾರ; ಮಾರಾಟ; ಕ್ರಯ ವಿಕ್ರಯ : ಬಣಂಜು - ಬಣಜು (ಶಬ್ದಾ.ಸು. ೮೦ ಕ್ರಯೋ); ಬಣಜಿತವುಗೆ ಸಾಜಮಪ್ಪ ಕಜ್ಜಮೆಂದೆಣಿಸಿ . . . ಮಾರಾಟದ ಬೇಹಾರಮಂ ನಡೆಯಿಸುವ ಕಡುಜಾಣೆಯರ್ (ಪುರಾಕ. ೦೯೬-೦೬). **ಬಣಂಜು:** ಬೇಹಾರಂಗೆಯ್ವ ಪಡುಗುವರದರ ಕಲಕಲದಿಂ ತೀವಿದ ಬಣಂಜಿನ ಘಟ್ಟಮುಮಂ ನಿಟ್ಟಿಸಿ (ಪುರಾಕ. ೦೯೬-೨೬). 'ಬಣಂಜುಧರ್ಮ' ಪರಾ. **ಬಳಂಜು:** 'ವೀರಬಳಂಜು' ಪರಾ. Δ **ಬಟಿಂಜು:** 'ವೀರಬಟಿಂಜು' ಪರಾ.
[ಬಣಜ + — ಉ₄]

**ಬಣತ** 'ಪಣತ' ನೋ.

**ಬಣತಿಗೆ** 'ಬಂದಣಿಕೆ' ನೋ.

**ಬಣದುರ್ಗಿ** (ನಾ). ಒಂದು ಬಗೆಯ ಮರ : ಬಣದುರ್ಗಿ —ಧಾರವಾಡ ಜಿಲ್ಲೆಯಲ್ಲಿ ಅತಿ ಸಾಧಾರಣವಾದದ್ದು. ಇದರ ಎಲೆಯ ಮೇಲೆ ಹಳದೀಬಣ್ಣದ ಅಂಟು ಮೆತ್ತಗಿರುತ್ತದೆ (ಕಭಾಗೆ. ೪೪). [?]

**ಬಣಬಣ** 'ಬಣ್ಣ₁' ಪರಾ.

**ಬಣಬೆ** 'ಬಣಂಬೆ' ನೋ.

**ಬಣವೆ** 'ಬಣಂಬೆ' ನೋ.

**ಬಣಿತೆ** (ನಾ). ೧. ಮಾತು; ಉಕ್ತಿ; ವಚನ: "ಬಣಿತೆ—ಭಣಿತ (ತಿ) = ಮಾತು" (ಶಬ್ದಕೋ. ೨೮); ಆನು ಪೇಳಿದ ಕಾರ್ಯದ ಬಣಿತೆಗಿನ್ನಾವುದುತ್ತರ (ಸೌಂದಪು. ೪-೭೬); ನೆನಹು ಮಾತ್ರದಿಂದೆ ಜಗವ ಸೃಷ್ಟಿಸಿದೆನೆಂಬ ಭಾವ ಬಣಿತೆಯವನಲ್ಲ (ಸಿದ್ಧೇಪ. ೮-೨೫). ೨. ಚಾತುರ್ಯದಿಂದ ಕೂಡಿದ ಮಾತು; ಜಾಣ್ನುಡಿ; ಚತುರೋಕ್ತಿ: ಬಾಣದೊಳ್ಬಣಿತೆಯೊಳ್ . . . ಪರಾಕ್ರಮದ ಪಂಥದೊಳ್ಕಾಣೆನಪರಿರ್ವರ್ಗೆ ಸಮರಾದ ಕಲಿಗಳಂ (ಕೈಬಾಭಾ. ೨೨-೦೨). ೩. ಹೇಳಿದುದು; ಉಕ್ತವಾದುದು : ಎಣಿಸಲಿವು ತತ್ಸಮವೆನಿಪ್ಪ ಶಬ್ದಂಗಳವನಣಿಯುರಂ ಲಾಕ್ಷಣಿಕ ಕವಿಮಾರ್ಗದೊಳೆ ತಂದು ಬಣಿತೆಯಾಗಿರ್ಪುದಾಹರಣಂಗಳಿಂ ತಿಳಿದುಕೊಳ್ವುದು (ಶಬ್ದಮಂ. ೭೮); ಕರಣಿಕೆಯನಿತ್ತು ಸಿಸ್ಸಿನ ಬರಹಗಳಿಂದಾಯಬೀಯುಮಂ ಬಣಿತೆಗೆ ತಂದುರುದುದುವ್ರ್ಯಯಂಗಳಂ ತಾಂ ವಿರಚಿಸದಾರ್ಜಿಸಿದನೊಪ್ಪವಗಣಿತಧನಮಂ (ಕೆಳನ್ನ. ೭-೩೩). ೪. ಮೂದಲಿಕೆ: ಶಬರನಸುಗೊಂಡು ಪೋಪೆಯೊ ನಿಲ್ಲುನಿಲ್ಲೆನುತ ಕರುಚಿಟ್ಟಿಯಂ ಬಣಿತೆಯಿಂ ಬಾಯೊಳಿಡೆ ತಲೆಯೊಳದು ಛಟ್ಟುಗಿಯೆ (ಚಕಪು. ೨-೧-೨೭); ಪೊಣರಿ ಚೀಳೀಳೆಂದು ಮುಡುಹ ತಟ್ಟುತ ತೊಡೆಯ ಬಣಿತೆಯಿಂ ಚಪ್ಪರಿಸಿ ಪುರ್ಬುಗಳ ಗಂಟಿಕ್ಕುತೆಣಿಕೆಗೊಳ್ಳುತ ವಿಾಸೆಯಂ ತಿರ್ದಿ ಕಣ್ಣ ಕೆಂಚಲೆ ಮಾಡಿ ಕುಬುಬಿರಿಯಲು (ಚಕಪು.೩-೭-೩೪). ೫. ಚತುರತೆ; ಜಾಣ್ಮೆ: ಗುಣದೊಳಗೆ ಶೀಲದಲಿ ವಾಹಿನ ಬ[ಪಾಕಾಂ. ಭ] ಣಿತೆಯಲಿ . . . ಶರ್ವಾಣಿ ರತಿಯರಿಗೆಣೆಯೆನಿಪ ಸುಂದರಿಗೆ ವಿಕ್ಕಿನ ಬಣಗುಸತಿಯರು ಸರಿಯೆ (ನಳಚ. ೧-೩೪); ಬಣಿತೆಯಿಂ ರುದ್ರಾಕ್ಷೆ ಪವಳ ಮೌಕ್ತಿಕದ ಕೇವಣಿಸಿರ್ದ ಕಂತೆ (ಸಿದ್ಧೇಪು. ೧೬-೪೮). ೬. (ಅಲಂ) ಆಕರ್ಷಣೆ; ಅಂದ; ಚೆಲುವು (?) : ಕುಣಿಸುವತಿಸದ್ಗುರುನಿತಂಬದ ಮಣಿಯ ಶ್ರುತಿಕುಂಡಲದ ಕಾಂತಿಯ ಬಣಿತೆಯೊಳು ಜಗಜಗಿಸಿ ರಂಜಿಸಿತಾ ಮಹಾಶಕ್ತಿ (ಅಂಬಿಕಾ. ೦೯-೬೦); ಸತ್ವದ್ಮಪೀಠವದು ಬಣಿತೆಯಾಗಿರ್ದುದಾ ಸಿಂಹಾಸನಾಗ್ರದುರುಮಧ್ಯದೊಳನಂತಸೊಬಗಿಂ (ಕುಶಾಪು. ೦-೫೭). ೭. [ಸಂಗೀತ] ಹಾಡಿನ ಸೊಗಸು (?) : ಒಂದು ಪೊಸ ಕೊಳಲಂ ಕೊಳುತ್ತಂದು. . ಬಣಿತೆ ಗಮಕವುನುಗುಳಿ ಗಮಕವರಿದಂತೊಡರೆ ಅಣಕ ನಯದೊಳ್ಮೊಳಿಯೆ . . . ಪಂಚಮುಖಿದೊಳಗೆಲ್ಲ ಕೊಳಲ ದನಿ ತೊಳಗುತಿರೆ (ಅನಾರ. ಹ. ೦೩೦-೨೩); ಇಂಪು ಸೊಂಪು ಬಣಿತೆ ಬೆಡಂಗು. . .ಕಾಲವಘಾನಸ್ಥಾನವಿಧಿಯೊದವೆ ಬಾಲೆಯರ್ ಕೇಳಿಸಿದರಾರ್ಯನಂ ರಸವೊಸರ್ವವೋಲ್ ಬೆರಲೆರಡಜಂ (ಶಬ್ದರಾ. ೯-೬೦); ಧಾತು ನಯ ನೇವಣಿಬಜಾವಣಿಯ ಬಣಿತೆಯಿಂ . . . ಭೂತೇಶನಂ ಮೆಚ್ಚಿಸಿದನಮಲ ತುಂಬುರಂ (ಲಂಗಪು. ೩-೪೭). [<ಸಂ. ಭಣಿತ]

**ಬಣಿತೆಗಾಜುಕೆ** (ನಾ). ಮಾತಿನ ಚಾತುರ್ಯ : ಬಣಿತೆಗಾಜುಕೆಯೊಳುಂ ಮರುಳ ವೇಷವ ತೊಟ್ಟು . . . ಪ್ರಭುದೇವ ಬರಲು (ಪ್ರಭುಪು. ೯-೩೪).
[ಬಣಿತೆ + — ಕಾಜಿ + — ಇಕೆ]

**ಬಣಿವೆ** 'ಬಣಂಬೆ' ನೋ.

**ಬಣ್ಣ, ಪಣ್ಣ₂, ಫಣ್ಣ₂, ಬಣ್ಣ₂, ವಣ್ಣ** (ನಾ). ೧. ರಂಗು; ವರ್ಣ: "ಸಲೆ ಬಣ್ಣಂ ವರ್ಣದೊಳ್" (ಕರ್ಣಾಟ. ೪೪); ಶುಭಲಕ್ಷಣಾಂಕಿತಮಾಗಿ ಕೆಂದಾವರೆಯ ಬಣ್ಣದಂತಪ್ಪ ತಳಮುಮಂ ಕಂಡು (ಪದ್ಮರಾ. ೦೪೮-೦೫); ಬಣ್ಣಂ ಪೊನ್ನ ಬಣ್ಣಕ್ಕೆಣೆಯೆನೆ ಗರುಡಂ ವಾಹಮಾಗಿರ್ಪ ಚಕ್ರೇಶ್ವರಿ ಭಾಸ್ವದ್ಧರ್ಮಚಕ್ರಾಕ್ರಮಿಂಗಳನಲೆದಾಟಿಕ್ಕೆ ವಿಕ್ರಾಂತದಿಂದಂ (ಆದಿಪು. ೦-೭); ಸುಣ್ಣದ ತುಯ್ಕಲ ಬಣ್ಣವೊಂದೆ ಎಂದರೆ ನಂಟತನಕ್ಕೆ ಉಣ್ಣಬಹುದೆ (ಬಿಸವ. ೦೨೦). ೨. ಕೆಂಪುಬಣ್ಣ; ಕೆಂಬಣ್ಣ 'ಬಣ್ಣದುಟಿ' ಪರಾ. ೩. ಚಿತ್ರ, ಗೋಡೆ ಮುಂತಾದುವಕ್ಕೆ ಹಚ್ಚಲು ಬಳಸುವ, ಬೇರೆ ಬೇರೆ ವರ್ಣಗಳಲ್ಲಿರುವ ದ್ರವಪದಾರ್ಥ : ವಸ್ತುಗಳ ಮೇಲ್ಮೈಗೆ ಸಾಪೇಕ್ಷವಾಗಿ ತೆಳುಪೊರೆಯಲ್ಲಿ ಹಚ್ಚಬಹುದಾದ . . . ಆರ್ದ್ರ ದ್ರವ ಪದಾರ್ಥವೇ ಬಣ್ಣ (ಪೇಂಟ್) (ಕವಿಕೋ. IX. ೮೨೦). ೪. ಬೇರೆ ಬೇರೆ ಬಣ್ಣಗಳಿಂದ ಕೂಡಿದ ಚಿತ್ರ; ವರ್ಣಚಿತ್ರ: ಬಿತ್ತಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳಂ ಬೇಟವೇಟ ನೋಡಿ ಮೆಚ್ಚುತಿರ್ಪಾಗಳ್ (ಕಬ್ಬಿಗಕಾ. ೬೩); ಬಣ್ಣವನು ಬರೆವ ಸತಿ ಹೊಲ್ಲ (ಸರ್ವಜ್ಞ. ೦೬೪೦). ೫. ರಂಗು ರಂಗಾದ ವಸ್ತ್ರ, ಸೀರೆ ಮುಂತಾದುವು : ಕಕ್ಕರವಟೆಯಿಗೆಯ ಚಿತ್ರಾವಟಿಯ ಪಟೀವೆಡೆಯ ತುಟೀವೆಡೆಯ ನೇಟಲಪಾಣಿಯ ಬಣ್ಣದ ಕಣದ ಬಣ್ಣವಣ್ಣಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ); ಬಣ್ಣವನುಡರು ಬಂಗಾರಗಳನು ತೊಡರುಣ್ಣರಂಗವನೋಸರಿಸರು ಕಣ್ಣ ಸವಿಗೆಯಾತನ ರೂಪ ನೋಡಿದ ಹೆಣ್ಣೆಲ್ಲರಾ ಪುರದೊಳಗೆ (ನೇಮಿಸಂ. ೯-೪೦); ಬಣ್ಣವಿಲ್ಲದ ಮದುವೆ ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆ ಹೊಯ್ದುದಂತೆ (ಸರ್ವಜ್ಞ. ೦೬೮೪). ೬. ರಂಗುರಂಗಾದ ಹೂವು, —ಪುಷ್ಪ : 'ಬಣ್ಣಗೋಲ್', 'ಬಣ್ಣಗೋಲ' ಪರಾ. ೭. ಬಗೆ; ವಿಧ; ಪ್ರಕಾರ : ಇಂಬಾಗಿರೆ ಮುದದಿಂ ಪಲವುಂ ಬಣ್ಣದ ಭಕ್ಷ್ಯರಾಶಿವೆರಸಾಕಂಠೋಷ್ಮಂಬರಮುಂಡು (ಶಂಕಚ. ೦೯೫ ೨೫). ೮. ಸ್ವರೂಪ; ನಿಜರೂಪ : ಪಾಪಪುಣ್ಯಮೆಂಬೆರಡಱ ಬಣ್ಣವಾವುದು ಅವಂ ಬಲ್ಲವರಾರ್ (ಧರ್ಮಾಚ. ೩-೦೫ ವ); ಆಕೆಯ ಬಣ್ಣ ಬೆಳಗಲು ತಾಯಿಮಹಿಮೆಯನು ನೋಡಿರೆಂದೆಲ್ಲಾ ಬಣ್ಣಿಸಲು (ಬಜ್ಜ.ಪು. ೭-೦೬); ದುರಾಸೆಗೆ ಬಿದ್ದವರ ಬಣ್ಣ ಅವರು ಗುರುತಿಸಿದ್ದು ಈಗಲೇ (ಹೊಸಕ್ಕ. ೨೭). ೯. ಅಂದ; ಚೆಂದ; ಚೆಲುವು : ಕಿಸುಗಾಡ ನೆಲಗಳೆಳದಳಿರ ಬಣ್ಣಮಂ ಕೆಯ್ಕೊಂಡು ವಿರಹಿಗಳ ಮನಮನೊನಲಿಸುವಂತೆ ಜಲಜಲನೆ ಪರಿವ ಜರಿವೊನಲ್ಗಳುಮಂ ಕಂಡು (ಶಂಕಪಾ. ೭-೨೫ ವ); ಬಾಲೆಯರ ಬಣ್ಣಕ್ಕೆ ಸೋಲದೆ ಕಾಳುಶರೀರವೆಂಬ ಒತ್ತರಂಗೊಳ್ಳದೆ. . .ಮಲ್ಲಿಕಾರ್ಜುನನಲ್ಲಿ ಸರ್ವಾಂಗದಲ್ಲಿ ನಿರ್ಲೇಪವಾದುದೇ ಶರಣಸ್ಥಲ (ಮೋಳಿಗಮಾ. ೦೦೦-೪೭೬). ೧೦. ಹೊಳಪು; ಕಾಂತಿ: ಪೊನ್ನಂ ಬೆಳಗುವವೋಲ್ ಕರ್ಬೊನ್ನಂ ಬೆಳಗಿದೊಡೆ ಬಣ್ಣವೇನೆಸಗುಮೆ (ಸಮುಚ. ೦೪-೬೨); ದ್ವಿಗುಣಿಸೆ ಬಣ್ಣವಿಂದುಮಣಿಮಂಡಪಕಾಂತಿಗಳಿಂ

ಮುಗುಳ್ತ ಮಲ್ಲಿಗೆಗೆ (ಪುಷ್ಪಪು. ೨-೬೦). ‘ಬಣ್ಣಂಗೆಡು’ ಪರಾ. ೧೧. ತೋರಿಕೆ; ಸೋಗು; ನಟನೆ: ‘ಬಣ್ಣಗಾಱ’, ‘ಬಣ್ಣಗಾಱಿಕೆ’ ಪರಾ. ೧೨. ತೋರಿಕೆಯ ಮಾತು; ಬೂಟಾಟಿಕೆಯ ನುಡಿ; ಬಣ್ಣಾಚಾರ : ಚಕ್ರ ಕಳುಹೆ ಬಂದು ಬಣ್ಣವ ನುಡಿಯುವ್ವೈ ವಕ್ರವನಱಿದೆ ಹೋಗು (ಶರಷ. ೯೮-೩೦). ೧೩. ಗುಣಗಾನ; ಸ್ತುತಿರೂಪವಾದ ಹಾಡು; ಬಣ್ಣವಾಡು : ಕಿನ್ನರಿಯರ್ ಪಾಡುಗೆ ನಿನ್ನದೊಂದು ಪಲವುಂ ಬಣ್ಣಂಗಳಂ (ಶಂಖಾ. ೦೯-೩೬). ೧೪. ಯೋಗ್ಯತೆ; ಸತ್ತ್ವ : ನಾನು ಚೌಡಿಯ ಮಂತ್ರವನ್ನು ಜಪಿಸದಿದ್ದರೆ ಆಗ ಕಾಣುತ್ತಿತ್ತು ನಿಮ್ಮ ಧೈರ್ಯಸಾಹಸದ ಬಣ್ಣವೆಷ್ಟೆಂಬುದು (ಅಂದಿ. ೬). ‘ಬಣ್ಣಗಾಣ್’ ಪರಾ. ೧೫. ಮೇಲು ಮಟ್ಟಕ್ಕೆ ಸೇರಿದವನು; ಮಿಗಿಲಾದ ವ್ಯಕ್ತಿ : ಬಿಗಿಪುಗಿಡದಮರ್ದು ಬಗೆಗೆಸೆವ ಗದ್ಯವಿರಚನೆಗೆ ಬಾಣನಿ[ಂ]ದಂ ಬಣ್ಣಂ...ನಾಗವರ್ಮಕವೀಂದ್ರಂ (ವರ್ಧಮಾ. ೧-೨೬). ೧೬. ಚಿನ್ನ, ವಜ್ರ ಮುಂತಾದುವುಗಳಲ್ಲಿರುವ ಶುದ್ಧತೆಯ ಪರಿಮಾಣ; ಕ್ಯಾರೆಟ್ಟು : ಕಟ್ಟಣೆಯೊಳಗಣ ಕಾಂಸ್ಯದಂತೆ . . . ಚಿನ್ನದೊಳಗಣ ಬಣ್ಣದಂತೆ . . . ಎನ್ನಲ್ಲಿ ಭಿನ್ನವಿಲ್ಲದೆ ಇರ್ದೆಯಲ್ಲಾ ಸೌರಾಷ್ಟ್ರಸೋಮೇಶ್ವರಾ (ಆದವ. ೨-೬); ಪದಿನೇೞು ತೂಕದ ಗಟ್ಟಿ ಹತ್ತುವರೆ ಬಣ್ಣಂ ಹತ್ತು ಗದ್ಯಾಣ ತೂಕದೆಂಟುಂ ನೆಱೆ ಹಾಗ ಬಣ್ಣದ ಪತ್ತೊಂಭತ್ತುಂ ಪೊನ್ನು ತೂಕ ಮತ್ತದು ಮತ್ತಂ ಪದಿಮೂಱು ಬಣ್ಣವನೆ ತಾನಾಗಿರ್ದುದು ಪೊನ್ನೆಲ್ಲಮಂ ಪದುಳಂಗೂಡಿ ಸಮಂತದಂ ತರಂಸಲು ಬಣ್ಣಮಂ ಪೇೞ್ದಂ (ವ್ಯವಹಾ. ೬೨-೨೯); ಒರೆಗೆ ಬಣ್ಣಕ್ಕ ಬೆರಸಿ ವೇದೋಚ್ಚರಿತ ಧರ್ಮವನಱುಹಿದನು ಭೂಸುರಗೆ ಧರ್ಮವ್ಯಾಧನೆಂಬನ ಕಥೆಯ ಕೇಳು (ಕುಮಾವ್ಯಾ. ೦೯-೯೮). ೧೭. ಯೋಗ್ಯವಾದುದು; ಉಚಿತವಾದುದು ; ತಕ್ಕುದು : ನೀನೇಕೆ ಮರುಳಪ್ಪುದಣ್ಣ ಈಗ ಜಾನಕಿಯನು ಬಿಟ್ಟುಕೊಡುವುದೇ ಬಣ್ಣ (ಪಾರ್ತಿಸು. ೮೬). ೧೮. ಜಾತಿ ; ವರ್ಣ : ಮಿಕ್ಕಾದ ಮೂಱುಂ ಬಣ್ಣದವರಂ ಚೆನ್ನಾಗಿ ದಂಡನೆಗೆಯ್ದು ರಾಜ್ಯಮಂ ಪರಿಪಾಲನೆಯನೆಸಗಬೇಕು (ಚಾರಶಾಂ. ೬೩-೦೯); ನಾವು ಅಕಸಾಲೆಗಳು ಕೋಮಟಿಗರು ಮುನ್ತಾದ ಹದಿನೆಣ್ಟುಬಣ್ಣದಲ್ಲೂ ಯಲು ಮಾಲಗ ಮಾಡಿದಾಗ (ಎಕ. XIV, ಶ್ರೀರಂಗ. ೦೬೦-೦೩; 1801). ೧೯. [ಸಂಗೀತ] ಇಂಪು : ಭಣಿತೆ ಬೆಡಂಗು . . . ನೇವಣೆ ಕಣೆ ಬಣ್ಣದೊಡ್ಡವಣೆ . . . ಕಳೆಯೆಂಬವಂ ಮೆಱೆದು ಬಾಜಿಸಿದಂ ಮುರವೈರಿ ಮಾಸಮಂ (ಜಗದಿ. ೩-೩). ಪಣ್ಣ₂: ೧೮. ತಿರುಮಲರಸರಾದ ಮದ್ದ ಹೆಗ್ಗಡೆಯವರು ಅವರ ನಾಳಿನವರು ಗಣ ಪಣ ಸಾವನ್ತರು ಕಾಪಿನ ರಾಜ್ಯವನು ಪ್ರತಿಪಾಳಿಸುತ್ತಿರ್ದ್ದ ಕಾಲದಲು (ಎಇ. XX, ೬-೨೭; 1556) ; ನಮ್ಮ ದೇಶದಲ್ಲಿರುವ ಪಣಗಳು – ಹದಿನೆಂಟುಪಣ, ಒಂಬತ್ತು ಪಣಗಳು —ತಮ್ಮಲ್ಲಿ ದೇಶದ ಪ್ರಜೆಯ ಬಹುಭಾಗವನ್ನು ಒಳಕೊಂಡಿವೆ . . . ಇವುಗಳನ್ನು ಬಟ್ಟು ಮಿಕ್ಕವೆಲ್ಲ ಈ ಪಣದ ವ್ಯವಸ್ಥೆಗೆ ಒಳಪಟ್ಟಿವೆ (ಕರ್ನಾಸಂ. ೯). ‘ಪಣಕಟ್ಟು₂’ ಪರಾ. ಫಣ₂ : ೧೮. ‘ಫಣಕಟ್ಟು’, ‘ಫಣಸ್ತ’ ಪರಾ. ಬಣ₂ : ೧೮. ಬ್ರಾಹ್ಮಣ ಬ್ರಾಹ್ಮಣೇತರ . . . ಎಂದು ಮುಂತಾದ ಬಣ ಬಣಗಳೊಳಗಿನ ಸಂಘರ್ಷಣೆಗಳು ಬ್ರಿಟಿಶರ ಪ್ರೇರಣೆಯಿಂದ ಮೆಲ್ಲಗೆ ತಲೆಯೆತ್ತಿದುವು (ಯುಕ್ತಕೃ. ೨೦). ೨೦. ಪಕ್ಷ; ಪಂಗಡ; ತಂಡ : ಸ್ವಾರ್ಥಪರಾಯಣರ್ ಬಣಗಳಂ ಮಾಡಿ ಬಿಡದೆ ಕೆಡಿಸುವರೂರನು (ಮಹಾಂತೇ. ೦೦_೬); ಹಗೆಗಳ ಬಣದವರು ಕೈಯೊಳಗೆ ಸಿಕ್ಕರೆ ಅವರನ್ನು ಸಂರಕ್ಷಿಸಬೇಕು (ಮುಂಬಯಿ. ೩-೦೨೨); ಇಕ್ಕಡಿಯ ಬಣದವರೂ . . . ಜೀವದ ಪರಿವೆಯಿಲ್ಲದೆ ಕಾದಿದೆವು (ಕಮಂ. ೯). ವಣ್ಣ : ೧. ಪ್ರಿಯಸೇನೆಯುಂ ಕೆಂದಾವರೆಯ ವಣ್ಣದೊಳೋರಂತಪ್ಪ ಮೆಯ್ಯನೊಡೆಯ ಪದ್ಮಾವತಿಯೆಂಬ ಪಿಡಿಯಾಗಿ ಪುಟ್ಟಿದಳ್ (ವಡ್ಡಾರಾ. ೩೬-೩); ಮಿಸುನಿಯ ವಣ್ಣಕೆ ನಾನಾಬಗೆ ಪಟಕ ಸುಭೃಪಜ್ಯಕೆ ನರರ ರಸನೆಯ ಸವಿಗೆ ನಾಪೆಂದಾಗ ಫಲ ಸಹಿತೆಸೆವ ಜಂಬೀರಗಳಿಹುವು (ಕಂನವಿ. ೫-೮೯).

ಬಣ್ಣವಣ್ಣ, ಬಣ್ಣಬಣ್ಣ (ದ್ವಿರುಕ್ತಿ) : ಸ್ತ್ರೀಕುಚಕುಂಭಕುಂಕುಮರಜಃಕಲ್ಲೋಲದಿಂ ಬಣ್ಣವಣ್ಣದ ಚೆಲ್ವಂ ಗೆಡೆಗೊಂಡು ಚಿತ್ರಿತ ಪತಾಕಾಲೀಲೆಯಂ ತಾಳ್ದಿ ನಿಂದುದು ಗಂಗಾನದಿ (ಆದಿಪು. ೦೦-೦೫೦) ; ಬಣ್ಣಬಣ್ಣದ ಪೂಗೊಯ್ದು ಹೊಂಬಾಳೆಯ ವರ್ಣದೆ ಪೊಟ್ಟಣಗಟ್ಟಿ . . . ಕಾಂತೆಯರೊಡತಿಗೆ ಬಿನ್ನಣಗೆಯ್ದು ತೋಱಿದರು (ಮೋಹತ. ೨೯-೬೮); ಬಣ್ಣಬಣ್ಣದ ಬಟ್ಟೆಯ ಚೂರುಗಳನ್ನು ನೇರವಾಗಿ ಕತ್ತರಿಸಿ ಸೇರಿಸಿ ಹೊಲಿದ ದಟ್ಟಗಳನ್ನು ನೆಲದ ಮೇಲೆ ಎಲ್ಲೆಲ್ಲೂ ಹಾಸಿದಂತೆ ಕಾಣಿಸುವ ಹೊಲಗದ್ದೆಗಳು (ವಂಟರು. ೦೩೦). **ಬಣ್ಣದ ಕೋಲು** = (ಕೋಲಾಟವಾಡಲು ಬಳಸುವ) ಬಣ್ಣ ಬಳಿದ ಕೋಲು : ನಾಯಿ ಬಡೀಲಿಕ್ಕ ಬಣ್ಣದ ಕೋಲೇ ? (ಗಾದೆ). **ಬಣ್ಣದ ಬೀಸಣಿಗೆ** = ೧. ರಂಗು ಹಚ್ಚಿದ ಬೀಸಣಿಗೆ : ಆ ಅಂಗಡಿಯಲ್ಲಿದ್ದ ಬಣ್ಣದ ಬೀಸಣಿಗೆಗಳೆಲ್ಲಾ ಒಂದೇ ದಿನದಲ್ಲಿ ಮಾರಾಟವಾಗಿ ಹೋದವು (ರೂಢಿ). ೨. (ಆಲಂ) ಒಯ್ಯಾರಿ; ಒನಪುಗಾತಿ : ಬಣ್ಣದ ಬೀಸಣಿಗ್ಯಂತೆ ಹೆಣ್ಣು ತಿರುಗೋದು ಕಂಡು ಕಣ್ಣುಸನ್ನೆಯ ಮಾಡಿ ಕಣ್ಣಲಿ ಕೆಂಡವಾ ಚೆಲಿಕೊಂಬೆ ಮನವೆ (ಪುರಂದ. ೯-೫೨-೧). **ಬಣ್ಣದ ಮಾತು** = ತೋರಿಕೆಯ ನುಡಿ ; ಬೂಟಾಟಿಕೆಯ ಮಾತು : ಕಣ್ಣು ಕಾಣದ ಹಕ್ಕಿ ಹಣ್ಣ ಮೆಲಬಂದಡೆ ಹಣ್ಣು ಹಕ್ಕಿಯ ನುಂಗಿ ಉಗುಳದಿನ್ನೆಂತೋ ಸಣ್ಣ ಬಣ್ಣದ ಮಾತಿನ ಅಣ್ಣಗಳೆತ್ತ ಬಲ್ಲರು (ಸರ್ವವ. ೨೬-೦೩೦): ಪತಿಗೆ ಬಣ್ಣದ ಮಾತನಾಡ್ಯಾಳೊ ಅವಳು ಮಿತಿಯಿಲ್ಲದೆ ಮೆಚ್ಚ ಮಾಡ್ಯಾಳೊ (ಪುರಂದ. ೦-೦೬೨_೦). **ಬಣ್ಣದ ಸೀರೆ** = ಚಿತ್ರ ಬರೆಯಲು ಉಪಯೋಗಿಸುವ ವಸ್ತ್ರ : ಬಣ್ಣದ ಸೀರೆ ಮೇಘವಣ್ಣಿಗೆಯ ರ್ಷುಳಂಬಮೆಂಬಿವಳಪಟ್ಟಿರೆ ಭೂಭುಜನಿರ್ದ ಚಿತ್ರಶಾಲೆಗೆ ನಡೆತಂದನಂದು ನವಯೌವನಸೌರ್ವನಪೂರ್ವಚಿತ್ರಿಕಂ (ಮಲ್ಲಿಪು. ೩-೯೯). **ಬಣ್ಣಬಚ್ಚಣೆಯ ಮಾತು** = ತೋರಿಕೆಯ ಮಾತು ; ಸೋಗಿನ ನುಡಿ : ಬಣ್ಣಬಚ್ಚಣೆಯ ಮಾತು ಕಲಿತು ಹೊನ್ನು ಹೆಣ್ಣು ಮಣ್ಣಗಾಗಿ ಅನ್ನವನಿಕ್ಕುವರ ಪ್ರಸಂಗವ ಹಡೆಯಬಂದ ಗನ್ನಗಾಱಂಗೇಕೆ ಅಱುವು (ಮೋಳಿಮಾ. ೬೯-೩೩೯). **ಬಣ್ಣ ಬದಲಾಯಿಸು** = ೧. ರಂಗನ್ನು ಬೇರೆ ಮಾಡು ; ವರ್ಣವನ್ನು ವ್ಯತ್ಯಾಸಗೊಳಿಸು : ಗೋಸುಂಬೆಯು ತನಗೆ ಬೇಕಾದಾಗ ತನ್ನ ಬಣ್ಣ ಬದಲಾಯಿಸಿಕೊಳ್ಳುತ್ತದೆ (ರೂಢಿ). ೨. (ಆಲಂ) (ಸ್ವಾರ್ಥದಿಂದ ವ್ಯವಹಾರ, ನಡವಳಿಕೆಗಳಲ್ಲಿ ಇದ್ದಕ್ಕಿದ್ದಂತೆ) ನೇರಮಾರ್ಗವನ್ನು ಬಿಡು ; ಧೋರಣೆಯನ್ನು ವ್ಯತ್ಯಾಸ ಮಾಡಿಕೊಳ್ಳು : ಸಂಬಾರದ ವಸ್ತುಗಳನ್ನು ತುಂಬಿಕೊಂಡ ನಂತರ ಗಾಮಾ ತನ್ನ ಬಣ್ಣ ಬದಲಾಯಿಸಿದ (ಶ್ರವಾಇ. II, ೨೩೩). **ಬಣ್ಣ ಬಯಲಾಗು** = ನಿಜಸ್ವರೂಪವು ಪ್ರಕಟವಾಗು; ಮೋಸ ಹೊರಬೀಳು : ಅವನು ಮಾಡಿದ ಉಪಾಯದಿಂದ ಆ ಮೋಸಗಾರನ ಬಣ್ಣ ಬಯಲಾಯಿತು (ರೂಢಿ). **ಬಣ್ಣ ಬಿಡು** = ಬಣ್ಣವನ್ನು ಬಿಟ್ಟುಕೊಡು ; ರಂಗನ್ನು ಕಳೆದುಕೊಳ್ಳು ; ಮಾಸಲಾಗು : ರೇಯಾನ್, ಉಣ್ಣೆ ಬಟ್ಟೆಗಳು ಬಣ್ಣ ಬಿಡುವುದಾದರೆ, ಕಡೇ ಸಲ ಜಾಲಾಡುವ ನೀರಿಗೆ ಸ್ವಲ್ಪ ವಿನೆಗರ್ ಹಾಕುತ್ತಾರೆ (ಗೃಹವಿ. ೯೯). **ಬಣ್ಣಮಾಗು, ಬಣ್ಣವಾಗು** = ೧. ರಂಗನ್ನು ಹೊಂದು : ಬಣ್ಣವನ್ನು ತಳೆ : ಪಚ್ಯೋತಿಯಂತೆ ಪಲವುಂ ಬಣ್ಣಮಾಗಿ...ತೇಱಸಂತಲ್ಲಾ ಪಱಗಮೊಳಗಾದ್ಯೆ (ಧರ್ಮಾಮೃ. ೨-೦೦೫). ೨. ಕೆಂಪಾಗು : ಹಣ್ಣು ಬಲಿದು ಬಣ್ಣವಹುದಕ್ಕೆ ಮೊದಲೆ ಕೊಂಬು ಮುಱಿಯಿತ್ತು (ಮೋಳಿಮಾ. ೮. ೬೦೯-೨೧೯೧). **ಬಣ್ಣ ಹಚ್ಚಿ ಹೇಳು** = (ಆಲಂ) ಇರುವ ಸ್ವಲ್ಪ ವಿಚಾರವನ್ನು ಅತಿಶಯವಾಗಿ ವರ್ಣಿಸಿ ಹೇಳು :

ಉತ್ಪ್ರೇಕ್ಷೆ ಮಾಡಿ ಹೇಳು : ಬಹಳ ಮಟ್ಟಿಗೆ ಅದನ್ನು ಕಾಣದಿದ್ದವರು ಬಣ್ಣ ಹಚ್ಚಿ ಹೇಳುವ ಮಾತುಗಳಿಂದಲೇ ನಮ್ಮಲ್ಲಿ ಭಯ ಹುಟ್ಟುವುದು (ಮೂಕಜ್ಜ. ೬೩). **ಬಣ್ಣ ಹಾಕು** = ಚಿತ್ರ. ಬಟ್ಟೆ ಮುಂತಾದುವಕ್ಕೆ ಬಣ್ಣವನ್ನು ತುಂಬು.– ರಂಗನ್ನು ಕೊಡು : ಬಣ್ಣಗಾರರು ನೂಲಿಗೆ ಬಣ್ಣ ಹಾಕುವ ಕಾಯಕ ನಡೆಯಿಸುತ್ತಾರೆ (ಕಕಪು. ೬–೧೨); ದಾರಕ್ಕೆ ಬಣ್ಣ ಹಾಕುವವರು. ಕೊಂಡ ದಾರದಿಂದ ಬಟ್ಟೆ ನೇಯುವವರು ಎಲ್ಲರೂ ಶ್ರಮಪಡಬೇಕು (ಹಣಶ್ರ. ೮). [< ಸಂ. ವರ್ಣ]

**ಬಣ್ಣಂಗುಂದು**, ಬಣ್ಣಗುಂದು (ಕ್ರಿ). ೧. ಕಾಂತಿಹೀನವಾಗು ; **ಕಳೆ** ಗುಂದು : ಮಂಕಾಗು : ಏಂ **ಕೇಳ್ದಟಿಯೆವೆ** ದಾನವರುಮಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂಱಿದ ಬರ್ದಿಲರ್ಗೆ ನಾರಾಯಣಂ . . . ಸೈತಿಟ್ಟು ಮರಲ್ಚಿದ ತೆಱನಂ? (ರಾಮಾಶ್ವ. ೦೪–೬). **ಬಣ್ಣಗುಂದು** : ೧. ಬಣ್ಣಗುಂದಿದ ದೇಹದೊಳಗೆಳವೆಣ್ಣುಗಳ ಸೌಖ್ಯವನು ತೊಱೆದಳು ಮದನನೆಸುಗೆಯಲಿ (ವಕಶ. ೧–೩೮); ಜೀವಿತೇಶ್ವರನ ವಿರಹದೊಳು ಸೆಜ್ಜೆಯ ಭಾವಿಸಿ ಬಣ್ಣಗುಂದುವಳು (ಹರಿಬ. ೭–೬). ೨. **ಕಳೆಗೆಡು** ; ತೇಜೋಪಧೆಯಾಗು : ಕಣ್ಣು **ಕೆಟ್ಟವೋಲೆ** ಕಡುರೂಪ ಚಲ್ವಿಕೆಯೆ ಬಣ್ಣಗುಂಡಿದ ಮೇಲೆ ಬಹುಮಾನವೆ (ಕನಕ. ೩೬–೧). [ಬಣ್ಣ + ಕುಂದು$_1$]

**ಬಣ್ಣಂಗೆಡು**, ಬಣ್ಣಗೆಡು (ಕ್ರಿ). ೧.= ಬಣ್ಣಂಗುಂದು ೧ : ಬಂದು ನಿಂದುದು ಮುಂದೆ . . . ಮಹಾಬೃಹನ್ ಮೇಷಿ! ಮಿಂಚಾತಿರೆ ಪೊನ್ನುಣ್ಣೆ ಸುತ್ತಣದಗ್ನಿ ಬಣ್ಣಂಗೆಡಲ್. ಯೋಜನದೀರ್ಘ ಕಾಲಾಯಸದ ಖಡುಗದಿನದಂ ತುಂಡರಿಸಿದನು (ಶ್ರೀರಾಮಾ. ೭೦೬–೨೦೭). **ಬಣ್ಣಗೆಡು** : ೧. ಕಾಯೊ ಕರುಣಾಕರನೆ ಕಡುಪಾಪಿ ನಾನು . . . ಬಣ್ಣಗೆಟ್ಟಡವಿಯಲಿ ತಪಸು ಮಾಡಿದವನಲ್ಲ (ಕವಕ. ೦೩೩–೦); ತಿಣ್ಣವಡೆದ ಖಾಸನ ಸುದ್ದಿ ಜಪವಾಗಿ ಬಣ್ಣಗೆಟ್ಟುದು ಲೋಕವೆಲ್ಲ (ಕಂಸವಿ. ೦೦–೩೪); ಬೆಟ್ಟದ ಅರಸು:– (ಬಣ್ಣಗೆಟ್ಟು, ಅಧೋಮುಖನಾಗುವನು) (ಬಟ್ಟಿಅ. ೩೩–೦೨). ೨. ರಂಗು ಹಾಳಾಗು ; ವರ್ಣವಿಲ್ಲದಾಗು : ಎಂದೆಂದಿಗೂ ಬಣ್ಣಗಡದ ಕೃತಕ ಪುಷ್ಪಹಾರವೊಂದು ನೇತಾಡುತ್ತಿತ್ತು (ಕನರು. ೦೪೦). ೩. ದಾರಿ ತಪ್ಪು: ಕಣ್ಣಿಲದ ಕುಪಥನವೊಲು ಮನ ಬಣ್ಣಗೆ[ಶಾಕಾಂ. ಬಿ]ಡುತಿದೆ (ಕೊರರಾ. ೩೮–೧೩). [ಬಣ್ಣ + ಕೆಡು$_1$]

**ಬಣ್ಣಂಬಡಿಸು** (ಕ್ರಿ). ಬಣ್ಣವನ್ನು ಲೇಪಿಸು : ರಂಗನ್ನು ಹಚ್ಚು : ತಿಳಿನೀರ್ಸರಿಯೊಳ್ಮಿಂದ ಸೀತಾದೇವಿಯ ಸಿರಿಯೊಡಲ ಕುಂಕುಮದಿಂ ಪೊಂಬಣ್ಣಮಾದ ಧನುಷ್ಕೋಟಿತೀರ್ಥೋದಕದಿಂ ಸಿರಿರಾಣಗರಿಸಿನದಣ್ಪಂ ಬಣ್ಣಂಬಡಿಪುದೆಂದುಂ (ಶಕಪಂ. ೧೦೮–೮). [< ಬಣ್ಣಂಬಡೆ + –ಇಸು$_3$]

**ಬಣ್ಣಂಬಡೆ**, ಬಣ್ಣವಡೆ (ಕ್ರಿ). ೧. (ಆಕರ್ಷಕವಾದ) ಬಣ್ಣವನ್ನು ಹೊಂದು : ಪಡೆದೊಡೆ ಕಂಪಂ ಬಣ್ಣಂಬಡೆಯವು ಬಣ್ಣಮನೆ ಪಡೆದು ವಪ್ಪೊಡೆ ಕಂಪಂ ಪಡೆಯವುಟಿದಲರ್ಗಳೆರಡುಮನೊಡವೆಳೆದೀ ಚಂಪಕಕ್ಕೆ ಪೂಗಳ್ ದೊರೆಯೇ (ಅಂಪು. ೦೦–೦೦೪); ಅರನೇಱಿಲ್ವಣ್ಣ ಬಣ್ಣಂಬಡೆದ ತನು ಪೃಥುಶ್ರೋಣಿ ನೀಲಾಳಕಂ . . . ಕೊಂಕಾಂತ ಪುಬ್ಬೊಂದಿರೆ ನಾನಾಶಕ್ತಿಯರ್ ಬೇಡಿತಿಯರೆಸಕಮಂ ತಾಳ್ದು ಕಣ್ಗೆಡ್ಡಮಾದರ್ (ಶರಶಂ. ೩–೭). ೨. **ಶೋಭಿಸು; ಮೆರೆ** : ತಿರುಮಲೆಯಾರ್ಯನುಮವನ ಪಡಿನೆಲಂತೆ ಎಲ್ಲಾ ವಿದ್ಯೆಗಳೊಳಂ ಬಟಿಸಂದು ಬಣ್ಣಂಬಡೆದಂ (ಶಳಪಂ. ೦೬೬–೨೦); ಮೊದಲೊಳ್ ಹರಿಹರ ಬುಕ್ಕರ್ ಮೊದಲೆನಿಸಿದರರಸು ಗೆಯ್ದು ಪಸರಿಸಿ ಜಸಮಂ ಪದಪಿಂ ಕುಱುಂಬರಾಯರ್ ಪದಿಮೂವರ್ ಬರ್ದಿಲವೇಱಿ ಬಣ್ಣಂಬಡೆವರ್ (ಶಕಪಿ. ೨–೦೩). **ಬಣ್ಣವಡೆ** : ೨. ಅಣ್ಣ ನಿರ್ದನು . . . ಬಣ್ಣಪಡೆವ ಗದ್ದುಗೆಯೊಳು (ಶರತ. ೩೮–೦೦). ೩. **ಅರ್ಹ** ವಾಗು ; ಯೋಗ್ಯವಾಗು : ಬಿಳುವಕ್ಕಿಯ ಬೀಳಗೆಡಹಿದ ಬಿಂಕವೀ ಬಳಿಯೊಳು ಬಣ್ಣವಡೆಯದು (ಹರಿಬ. ೨–೪೨). [ಬಣ್ಣ + ಪಡೆ$_1$]

**ಬಣ್ಣಕ** (ನಾ). ತೋರಿಕೆಯ ಮಾತನ್ನಾಡುವವನು : ಬೂಟಾಟಿಕೆಯ ವ್ಯಕ್ತಿ : ಅನ್ಯಸಂಗಂಗಳಿಗೆ ಎಳಸಿ ಬಳಸಿ ಬಣ್ಣಕರಪ್ಪರೆ ಶರಣರು (ಉಂಶಿ. ೦೪೪–೨೦೬); ಬಣ್ಣಕರು ಬಣ್ಣದೊಳಗಾಳುವದನೆ ಕಂಡು ಅಣ್ಣ ನಗುತಿರ್ದನಯ್ಯಾ ಯೋಗಿನಾಥಾ (೦ಂಗರೀ. ೬೨–೦೦).
[ ಬಣ್ಣ + –ಕ$_3$. / ಸಂ. ವರ್ಣಕ ]

**ಬಣ್ಣಕಟ್ಟು** 'ಬಣ್ಣಗಟ್ಟು' ನೋ.

**ಬಣ್ಣಗಂಬಿ** (ನಾ). (ಬಣ್ಣ ಬಳಿದ) ಬರೆಯುವ ಕಡ್ಡಿ ; **ಲೆಕ್ಕಣಿಕೆ** : ಚಾಪದಿಗವಿತೆ ಬಣ್ಣಗಂಬಿಯ ಪುಸ್ತಕಲಿಖಿತಜ್ಞರು ಕನ್ನಡಕವ ತಾಳ್ವಿಹರು (ಮೋಹಕ. ೩–೪೦). [ ಬಣ್ಣ + ಕಂಬಿ$_1$ ]

**ಬಣ್ಣಗಟ್ಟು**. ಬಣ್ಣಕಟ್ಟು (ಕ್ರಿ). ೧. ಕಾಂತಿಗೂಡು ; ನಳನಳಿಸಂ : 'ಸಾದಾ' ಮೇವು ತಿಂದು, ಜೊತೆಗೆ ಬಿಟ್ಟಿ ದೊರೆಯುವ ಸರಾಯಿ ಕುಡಿದರೆ ಸಾಕು. ಹೋರಿ ಬಣ್ಣಗಟ್ಟುತ್ತವೆ (ಬೆಳುಮ. ೦೬೭). **ಬಣ್ಣಕಟ್ಟು** : ೨. ರಂಗುಹಾಕು : ಆ ಹುಡುಗಿ . . . ನೇಯ್ಗೆಯುವನು . . . ಬಟ್ಟೆ ನೇಯುವ್ದು. ಬಣ್ಣಕಟ್ಟಿ ಹಿಗ್ಗುವಂತೆ, ತನ್ನ ಮುಂದಿನ ರಾಜ್ಯವನ್ನು ಕಲ್ಪಿಸಿಕೊಂಡು ಹಿಗ್ಗುತ್ತಿದ್ದಳು (ಜಾಗವ. ೩). ೩. ಸುಗಂಧದ್ರವ್ಯ ಗಳನ್ನು ಸೇರಿಸು; ವಾಸನೆ ಕಟ್ಟು.

ಬಣ್ಣಕಟ್ಟದ **ಅಡಕೆ** = ಏಲಕ್ಕಿ, ಲವಂಗ, ಸಕ್ಕರೆ, ಕೊಬ್ಬರಿ ಮುಂತಾದುವುಗಳೊಂದಿಗೆ ಮಿಶ್ರಮಾಡಿದ ಪುಡಿಅಡಕೆ : ಬಣ್ಣಕಟ್ಟದ ಅಡಕೆ. ಮೈಸೂರು ವೀಳ್ಯದೆಲೆ ಇದ್ದರೆ ತಾಂಬೂಲ ಹಾಕಿಕೊಳ್ಳಲು ಚೆನ್ನ (ರೂಢಿ). ಬಣ್ಣಕಟ್ಟಿ **ಹೇಳು** = ಅತಿಶಯವಾಗಿ ಹೇಳು ; ಉತ್ಪ್ರೇಕ್ಷೆ ಮಾಡಿ ವರ್ಣಿಸು : ನೀನು ಈ ಕನಸನ್ನು ಸತ್ಯಾ ಅಂತ ಬಣ್ಣಕಟ್ಟಿ ಹೇಳೋದೂ ಅಲ್ಲ; ನಾನು ನಿಜಾ ಅಂತ ನಂಬಿ ಕೇಳೋದೂ ಅಲ್ಲ! (ಹೇಮಾಕೂ. ೩). [ಬಣ್ಣ + ಕಟ್ಟು$_1$]

**ಬಣ್ಣಗತೆ** (ನಾ). ಸ್ವಾರಸ್ಯವಾದ ವರ್ಣನೆಯಿಂದ ತುಂಬಿದ **ಕತೆ** : ಶ್ರೀರಾಜಒಡೆಯ ಮಹಾಸ್ವಾಮಿಯವರಿಗೆ ಸವನಿಸಿದ ಆ ಪ್ರಕರಣದ ವಿಷಯವಾಗಿ . . . ನೂರಾರು ಬಣ್ಣಗತೆಗಳು ಮಸಗುತ್ತಿರುವುವು (ಮಂತ್ರಕ. ೦೬೭–೦೮). [ ಬಣ್ಣ + ಕತೆ ]

**ಬಣ್ಣಗನಸು** (ನಾ). ಸುಂದರವಾದ ಸ್ವಪ್ನ: ಸವಿಗನಸು : ನಿನ್ನ ಪ್ರತಿಮೆಯನೊಂದು ನನ್ನ ಜೀವನದಿಂದೆ ರೂಪುಗೊಳಿಸೆ. ನನ್ನ ಮಣ್ಣಿನಾ. ಮನೋರಥಗಳನು ಮತ್ತೆಲ್ಲ ಬಣ್ಣಗನಸನು ಭ್ರಾಂತಿಗಳನು ತಂದೆ (ವೆಲಮು. ೪೦–೪). [ ಬಣ್ಣ + ಕನಸು ]

**ಬಣ್ಣಗಬ್ಬ** (ನಾ). ವರ್ಣನೆಗಳಿಂದ **ಕೂಡಿದ ಕಾವ್ಯ**: ನವರಸದ ತನಿರಸ ಮೊರೆವ ಬಣ್ಣಗಬ್ಬಮಂ ಪೊಳ್ಳೆಂದೊರೆವ ನಿನಗಮೇಂ ನಿರಹಂಕೃತಿಯೊ ನಿನ್ನಾ ಜಾಣ್ಮೆಯೊಳ್ (ರಾಮಾಶ್ವ. ೦೬೮–೭). 'ಬಣ್ಣಗಬ್ಬಿಗ', 'ಬಣ್ಣ ವಾಡು' ಪರಾ. [ಬಣ್ಣ + ಕಬ್ಬ$_1$]

**ಬಣ್ಣಗಬ್ಬಿಗ** (ನಾ). (ವಿಸ್ತಾರವಾಗಿ) ವರ್ಣಿಸುವ ಕವಿ : ನೀನೋ ವರ್ಣನಪೂರ್ವಂ ಬಣ್ಣಗಬ್ಬಿಗರ ಬಲ್ಲಹಂ ಗಡ (ರಾಮಾಶ್ವ. ೬೦–೨೪).
[ ಬಣ್ಣಗಬ್ಬ + – ಇಗ ]

**ಬಣ್ಣಗರಡಿಗೆ** (ನಾ). ಕೆಂಬಣ್ಣದ ಭರಣಿ, – ಸಂಪುಟ : ಬಿರಿದ ಪೆರ್ಗಾಯಿಪಡೆದಿರ್ಪುದಱಿಂ ಶೌಂಗಲಂಕರಿಸಲ್ಕೆ ಬಣ್ಣಗರಡಿಗೆಯುಂ ಮುಚ್ಚುಳ್ದೆಗೆದು ರನ್ನಸರವಂ ನೆಗಟ್ಟುವ ಭಂಡಾರಿಗರಂತೆ ಬಗೆವಡೆದ ದಾಡಿಮಂಗಳುಂ . . . ಮನಂಗೊಳೆ (ಶಕಪಂ. ೦೦೨–೨೦).
[ ಬಣ್ಣ + ಕರಡಿಗೆ (< ಕರಂಡಿಗೆ) ]

**ಬಣ್ಣಗಲ್ಲು** (ನಾ). ಬಣ್ಣದ ಹರಳು ; ರತ್ನ : ಸಂತತ ಬಣ್ಣಗಲ್ಲು ಗಳ ಕೇವಣಿಸಿರ್ದ ಚಿಂತಾಕ ಬಲುಹನಿಕ್ಕಿದರು (ಸೋಮೇಶ. ೨೩–೩೮).
[ ಬಣ್ಣ + ಕಲ್ಲು (< ಕಲ್$_3$) ]

**ಬಣ್ಣಗಳ** (ನಾ). ಚೆಲುವಾದ ಕುತ್ತಿಗೆ ; ಅಂದವಾದ ಕೊರಳು : ಸಣ್ಣಗಳ ನುಣ್ಗೊರಳು ಸವಿಗಳ ಬಣ್ಣಗಳವೋ ಕಂಬುಕಂಠವೊ ಬೆಣ್ಣೆಗಳವೋ (ಕರಾಚಾ. ೧೩೨-೩೦). [ಬಣ್ಣ+ಗಳ$_2$ ( = ಗಲ)]

**ಬಣ್ಣಗಾಣ್** (ಕ್ರಿ). ಸತ್ತ್ವವನ್ನು ತಿಳಿ ; ಯೋಗ್ಯತೆಯನ್ನು ಅರಿ : ಅರೆವನಯ್ಯಾ ಸಣ್ಣವಹನ್ನಕ್ಕ ಒರೆವನಯ್ಯಾ ಬಣ್ಣಗಾಣ್ಬನ್ನಕ್ಕ (ಬಸವ. ೬೮೬). [ಬಣ್ಣ+ಕಾಣ್]

**ಬಣ್ಣಗಾರ** 'ಬಣ್ಣಗಾಱ' ನೋ.

**ಬಣ್ಣಗಾರಿಕೆ** 'ಬಣ್ಣಗಾಱಿಕೆ' ನೋ.

**ಬಣ್ಣಗಾಱ**, ಬಣಕಾರ, ಬಣಗಾರ, ಬಣ್ಣಗಾರ (ನಾ). ೧. ಬೂಟಾಟಿಕೆ ಮಾಡುವವನು ; ಸೋಗುಗಾರ : 'ಬಣ್ಣಗಾಱಿಕೆ' ಪರಾ. **ಬಣಕಾರ** : ೨. (ಮರದ ಸಾಮಾನು, ಬಟ್ಟೆ ಮುಂತಾದುವಕ್ಕೆ) ರಂಗು ಹಚ್ಚುವ ಜನಾಂಗಕ್ಕೆ ಸೇರಿದವನು ; ರಂಗಾರಿ : ಬಣಕಾರ ಫಕೀರಪ್ಪನಲ್ಲಿ . . . ವಿವರಗಳನ್ನು ಚರ್ಚಿಸಿ ಆಯಿತು (ಗಂಧಾಯು. ೨೦೭) ; ಬಣಕಾರರು . . . ಕೊಟ್ಟವನ್ನೂ ತಂಬಾಕಿನ ಕಡ್ಡಿಪುಡಿಯನ್ನೂ ಅಣಿ ಮಾಡಿದರು (ಸುಕಸಂ. ೩೦). **ಬಣಗಾರ** : ೩. (ಚಿತ್ರ ಬರೆದು) ಬಣ್ಣ ಹಚ್ಚುವವನು : ಆನಿ ಮ್ಯಾಗಿರುವ ಶಿವದಾರ ಮೊಗ್ಗಿಯು ಯಾವ ಬಣಗಾರ ಬರೆದಾನ (ಲೋಕಗೀ. ೬೨). **ಬಣ್ಣಗಾರ** : ೨. ಹೊಸಮನೆಯ ಗೋಡೆಗಳಿಗೆ ಬಣ್ಣ ಹಚ್ಚಲು ಅವರು ನಾಲ್ಕು ಜನ ಬಣ್ಣಗಾರರನ್ನು ಕರೆಸಿದ್ದರು (ಕೂಶಿ). [ಬಣ್ಣ+ –ಗಾಱ (< –ಕಾಱ)]

**ಬಣ್ಣಗಾಱಿಕೆ**, ಬಣ್ಣಗಾರಿಕೆ (ನಾ). ೧. ಬೂಟಾಟಿಕೆಯ ನಡವಳಿಕೆ ; ಬಣ್ಣಾಚಾರ ; ತೋರಿಕೆಯ ವರ್ತನೆ : ನಾ ತಪ್ಪ ನುಡಿದಡೆ ಒಪ್ಪವಿಟ್ಟುಕೊಳ್ಳಿರಣ್ಣಾ ಕಣ್ಣನಲ್ಲಿ ಕಸ ಹೊಕ್ಕರೆ ಕೈ ಹಗೆಯೆ ಅಯ್ಯಾ ಇದು ಬಣ್ಣಗಾಱಿಕೆಯಲ್ಲ ಸನ್ನದ್ಧರಿರವು (ಮೋಳಿಗೆ. ೩೩-೦೪೬) ; ಜಡಪಾತ್ರವೆಂದು ನಮ್ಮತ್ತ ನೋಡದೆ ತನ್ನ ಹಡಪವೆಂಗಳ ನೋಡುತಿದ್ದ ಕಡೆಗೀಗ ಬಣ್ಣಗಾಱಿಕೆಗೆ ಕರೆಸಲಾತನೆಡೆಗೆ ನಾವೆಂತೆಯ್ದುಬಹುದು (ಭರತ. ೦೪-೩೮). **ಬಣ್ಣಗಾರಿಕೆ** : ೧. ಕಣ್ಣಿಗೆ ಇಚ್ಛೆಯಾಗದ ನಮ್ಮನ್ನು ಈಗ ಬರಿಯ ಬಣ್ಣಗಾರಿಕೆಗೆ ಕರೆವುದು ಏಕೆ ? (ಮೂಮಲ್ಲ. ೦೦೨). ೩. ಬಣ್ಣ ಹಚ್ಚುವಿಕೆ ; ರಂಗು ಬಳಿಯುವಿಕೆ : ವರ್ಣಕ್ರಿಯಾವಿಸ್ತಾರಗುಣವಚನೇಷು, ಬಣ್ಣಗಾರಿಕೆಯೊಳಂ, ಬಿತ್ತರದೊಳಂ, ಕೊಂಡಾಟದೊಳಂ (ಶಾಶಕ್ಕ. ೨೯೦). [ಬಣ್ಣಗಾಱ + – ಇಕೆ]

**ಬಣ್ಣಗುಂದು** 'ಬಣ್ಣಂಗುಂದು' ನೋ.

**ಬಣ್ಣಗುದುರೆ** (ನಾ). ಮುಖವೂ ಕಾಲೂ ಬೆಳ್ಳಗಿದ್ದು, ಮಿಕ್ಕ ಭಾಗವು ಬೇರೆ ರಂಗುಗಳಿಂದ ಕೂಡಿದ ಕುದುರೆ ; ಪಂಚಕಲ್ಯಾಣಿ : ಇಂತು ಮುಂಟಿ ಬಂದ ಶರತ್ಕಾಲದೊಳ್ ರಾಘವನ ಜನ್ನದ ಬಣ್ಣಗುದುರೆ ತೆಂಕಲ್ಗೆ ಮೊಗಮಿಕ್ಕಿ ನಡೆಯುತುಮಿರ್ಪುದುಂ (ರಾಮಾಶ್ವ. ೬೩-೦೮) ; ಏವೂರ ನಿಗಳದೊಂದು ಬಣ್ಣಗುದುರೆ (ರಾಮಾಶ್ವ. ೬೪-೨೩). [ಬಣ್ಣ+ಕುದುರೆ]

**ಬಣ್ಣಗುರುಡ** (ನಾ). ಬೇರೆ ಬೇರೆ ಬಣ್ಣಗಳನ್ನು ಕಂಡುಹಿಡಿಯಲಾಗದ ದೃಷ್ಟಿದೋಷವುಳ್ಳವನು : ಬಣ್ಣಗುರುಡರಲ್ಲಿ ಕೆಲವಟ್ಟಿಗಾದರೂ ಕೆಲವು ಬಣ್ಣಗಳನ್ನು ಗುರುತಿಸುವಷ್ಟು ಸಾಮರ್ಥ್ಯ ಇದ್ದೇ ಇರುತ್ತದೆ (ಕವಿಕೋ. XI, ೮೩೩). [ಬಣ್ಣಗುರುಡು + – ಅ$_7$]

**ಬಣ್ಣಗುರುಡು** (ನಾ). ಬೇರೆ ಬೇರೆ ಬಣ್ಣಗಳನ್ನು ಕಂಡು ಹಿಡಿಯಲಾಗದಿರುವ ಒಂದು ಬಗೆಯ ಕಣ್ಣಿನ ದೋಷ : ತಂಬಾಕು ಮತ್ತು ರಾಸಾಯನಿಕವಸ್ತುಗಳ ಸೇವನೆಯಿಂದ ದೃಷ್ಟಿಪಟಲದ ನರಕಣಗಳು ಶಿಥಿಲಗೊಂಡು ಬಣ್ಣಗುರುಡನ್ನುಂಟುಮಾಡಬಲ್ಲವು (ಕವಿಕೋ. XI, ೮೩೩). [ಬಣ್ಣ + ಕುರುಡು]

**ಬಣ್ಣಗುರುಡುತನ** (ನಾ). = ಬಣ್ಣಗುರುಡು: ಬಣ್ಣಗುರುಡುತನದಲ್ಲಿ ಎರಡುಬಗೆಯುಂಟು (ಕವಿಕೋ. XI. ೮೩೩). [ಬಣ್ಣ+ಕುರುಡುತನ]

**ಬಣ್ಣಗೂಡು** (ಕ್ರಿ). ರಂಗೇರು ; ಹೊಳಪುಂಟಾಗು : ಆ ಬೆಳವಲಗಿಡಕ್ಕೆ ಹೊಸ ಚಿಗುರೆಲೆ ಮೂಡಿ ಬಣ್ಣಗೂಡಿ ಮಿರಿಮಿರಿ ಮಿಂಚಹತ್ತಿದ ದಿನ ತಿಳಿಯುತ್ತಿದ್ದೆ . . . ವಸಂತಾಗಮನ ಆಗಿದೆ ಎಂದು (ಇಕ್ಕ. ೪೩೬). [ಬಣ್ಣ+ಕೂಡು$_1$]

**ಬಣ್ಣಗೂಳ್**, ಬಣ್ಣಗೂಳು (ನಾ). (ದೃಷ್ಟಿದೋಷ ಮುಂತಾದುವುಗಳ ನಿವಾರಣೆಗಾಗಿ ಚೆಲ್ಲುವ) ಅರಿಸಿನ, ಕುಂಕುಮ ಮುಂತಾದುವುಗಳನ್ನು ಬೆರಸಿದ ಅನ್ನ ; ಬಣ್ಣದ ಅನ್ನ : ಭೂತಸಂತುಷ್ಟಿಯಪ್ಪಂತೆ ಕುಱಿಕೋಣಂಗಳಂ ಪೊಯ್ಸಿ ಬಣ್ಣಗೂಳಂ ಪಸರಿಸಿ (ಕೈಬಿಶಾ. ೩-೬೨) ; ಚರಿಗೆ ಚರಿಗೆಯಲಿ ಚರುಬೆಟ್ಟವಿಳ್ದುದು ಬಣ್ಣಗೂಳ್ (ಶ್ರೀರಾಮಾ. ೬೬೮-೨೦೦). **ಬಣ್ಣಗೂಳು** : ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಳಿ ಪೊಂಬರಿವಾಣಗಳ ತುಂಬಿ ಸುಳಿಹೆತ್ತಿ ಚೆಲ್ಲಿಸಿದಳು ದೆಸೆದೆಸೆಗೆ (ಮೋಹಕ. ೩೦-೩೬) ; ಧರ್ಮರಾಯ . . . ಭೂತಸಂತುಷ್ಟಿ ಆಗುವ ಹಾಗೆ ಕುರಿ – ಕೋಣಗಳನ್ನು ಹೊಯ್ಸಿ ಬಣ್ಣಗೂಳನ್ನು ಚೆಲ್ಲಿಸಿದ (ಬದುಕಿ. ೨೩). [ ಬಣ್ಣ+ ಕೂಳ್ (<ಕೂೞ್$_1$) ]

**ಬಣ್ಣಗೂಳು** ' ಬಣ್ಣಗೂಳ್ ' ನೋ.

**ಬಣ್ಣಗೆಡಿಸು** (ಕ್ರಿ). (ಭಯದಿಂದ) ಸತ್ತ್ವಹೀನವಾಗುವಂತೆ ಮಾಡು; ದುರ್ಬಲಗೊಳಿಸಂ : ಪೆರ್ವುಲಿ . . . ಕೊಳ್ಳಿವಣ್ಣನ ಬಣ್ಣಗೆಡಿಸಿದುದು (ಕಾಳ್ಕರಾ. ೩-೩೩). [ಬಣ್ಣಗೆಡು (<ಬಣ್ಣಂಗೆಡು ) + – ಇಸು$_2$]

**ಬಣ್ಣಗೆಡು** 'ಬಣ್ಣಂಗೆಡು' ನೋ.

**ಬಣ್ಣಗೇಡು** (ನಾ). ಮಾನಗೇಡು ; ಮಾನಹಾನಿ : ಬಾಯಿ ಬಿಟ್ಟರೆ ಬಣ್ಣಗೇಡು (ಗಾದೆ). [ಬಣ್ಣ +ಕೇಡು]

**ಬಣ್ಣಗೊರಲ್** (ನಾ). ಸೊಗಸಾದ ಕಂಠ; ಇಂಪಾದ ಧ್ವನಿ : ಬಣ್ಣಗೊರಲ್ಬೆದೆಯರ್ ಸೋಬನವಾಡಂ ಪಾಡುಗೆ (ಶಕವಂ. ೦೪೮-೮). [ಬಣ್ಣ +ಕೊರಲ್ ]

**ಬಣ್ಣಗೊಳ್** (ಕ್ರಿ). ಸ್ವಾರಸ್ಯದಿಂದ ಕೂಡಿರು ; ರಸವತ್ತಾಗಿರು : ಬಾಲ್ಯ, ಮದುವೆ, ವನವಾಸವು, ವಿರಹ, ಚಿಂತೆ, ವಿಧಿ, ರೋಷವು ಬಣ್ಣಗೊಂಡು ನಲಿದಿವೆ (ಸ್ವದರ್ಶ. ೩೪ ). [ಬಣ್ಣ + ಕೊಳ್$_1$]

**ಬಣ್ಣಗೊಳಿಸು** (ಕ್ರಿ). ರಂಗಾಗುವಂತೆ ಮಾಡು; ವರ್ಣಮಯವಾಗಿಸು : ಕೆರೆ ಕೆರೆಯ ಹರಹಿನೊಳು ಜಲಹಾಸವನು ಮೆರಸಿ ತಿರೆ ಬಣ್ಣಗೊಳಿಸುವೀ ಬಿಸಿಲ ನಲವು (ಕುಲದೇ. ೦೮-೪). [ ಬಣ್ಣಗೊಳ್ + – ಇಸು$_2$ ]

**ಬಣ್ಣಗೋಗಿಲೆ** (ನಾ). ಚೆಲುವಾದ ಕೋಗಿಲೆ : ಅರಸಂಚೆ ಸೋಗೆನವಿಲು ಬಣ್ಣಗೋಗಿಲೆ ಹರಿರಥಾಂಗದ ಪ್ರತಿಮೆಗಳು ಮೆಱೆದುವು ಚೌದೆಸೆಯುಪ್ಪರಿಗೆಗಳೊಳು (ಕಂವಿವಿ. ೬-೨೮). [ ಬಣ್ಣ+ ಕೋಗಿಲೆ ]

**ಬಣ್ಣಗೋರಟೆ** (ನಾ). ಒಂದು ಬಗೆಯ ಸ್ಫಟಿಕದ ಗಿಡ ಮತ್ತು ಅದರ ಹೂವು : "ರಾಜಶರ್ಯಕಃ – ಬಣ್ಣಗೋರಟೆ" (ಓಷಧಿ. ೧೩೮). [ಬಣ್ಣ + ಗೋರಟೆ (< ಗೋರಂಟೆ) ]

**ಬಣ್ಣಗೋಲ್** (ನಾ). ೧. (ಕೋಲಾಟವಾಡುವಾಗ ಬಳಸುವ) ಬಣ್ಣ ಬಳಿದ ಕೋಲು : ಜಡೆಕೋಲಾಟದ ಸುನ್ದರಿಯನ್ನು ಒಡ್ಡಿಸಿ . . . ಗೆಜ್ಜೆಯ ಬಣ್ಣಗೋಲ್ಗಳನ್ನು ಹಂಚಿಸುತ್ತಿರುವಳು (ಕಬ್ಬಿಶ. ೦೬೪-೦೪). ೨. ರಂಗುರಂಗಿನ ಹೂವುಗಳಿಂದಾದ ಬಾಣ : 'ಬಣ್ಣಗೋಲ' ಪರಾ. [ಬಣ್ಣ + ಕೋಲ್$_1$]

**ಬಣ್ಣಗೋಲ** (ನಾ). ರಂಗುರಂಗಿನ ಹೂವುಗಳಿಂದಾದ ಬಾಣವನ್ನುಳ್ಳವನು; ಮನ್ಮಥ : ಬಣ್ಣಗೋಲನ ತೋಳ ಸಾವಿನ ನುಣ್ಣಗಂಭವೊ

ಗಾನಕಾಯತ ಸಣ್ಣ ಕೋವುಲ ಸೀತೆಗಳವಹುದೆಂದಳಿಂದುವುಂಖ (ಜಗಾಜಾ. ೧೬೨-೫೦). [ಬಣ್ಣಗೋಲ್ + – ಅ]

**ಬಣ್ಣಟಿ ?** (ನಾ). (?) : ವಂಪೂಡಣ ಹೆಗ್ಗದ್ದೆ ಅದಱ ವೇಗಣ ಕೊಡಂಗೆ ಎರಡಱಲ್ಲಿಯೂ ಮೂಡೆ ೨ ಬಂಣಟಿ ಮೂಡೆ ೨ (ಎಇ. XXVII. ೦೬೨-೯೯; 1266) [?]

**ಬಣ್ಣದಳೆ** (ಕ್ರಿ). ರಂಗನ್ನು ಪಡೆ; ರಂಗೇರಂ : ಬಣ್ಣದಳೆದ ರನ್ನವಾವುಗೆ ಎಡೆದೆಳಗ್ಗಣ್ಣವಳಿರ್ದಲೊತ್ತಿನಲಿ (ಮೋಹತ. ೯-೦೩). [ಬಣ್ಣ + ತಳೆ]

**ಬಣ್ಣದುಟಿ** (ನಾ). ಕೆಂಪಾದ ತುಟಿ; ಚೆಂದುಟಿ : ಆ ರಸಭರಿತ ವಿಚಿತ್ರದ ಚಿತ್ರದ ನಾರಿಯ ಬಣ್ಣದುಟಿಯು ಬಂದುಗೆಯೊಳು . . . ನೃಪತಿಯು ಚಾರುನಯನವುತಿಲಗ್ನಂಬಡೆದುವು ಬಂಡುಣಿವಱಿಯಂತೆ (ಜಯುಕಾ. ೩-೦೦) ಎಣ್ಣೆಗಂಟುಗಳ ತಡಹುತ ಬಣ್ಣದುಟಿಯ ಭಾವವ ಬೀಱುತ ಮುಂದ್ದು ವೆಣ್ಣುಗಳೈತಂದರಾಗ (ಕಂಶಿಚ. ೨೦-೭೪). [ಬಣ್ಣ + ತುಟಿ]

**ಬಣ್ಣದೋರು** 'ಬಣ್ಣದೋಱು' ನೋ.

**ಬಣ್ಣದೋಱು, ಬಣ್ಣದೋರಂ** (ಕ್ರಿ). ೧. ಬೆಡಗು ಮಾಡು; ಥಳಕು ತೋರಿಸು : ಕಣ್ಣ ಮೊದಲಲ್ಲಿ ಕುಳ್ಳಿರ್ದು ಬಣ್ಣದೋಱುವ ಪರಿಯ ನೋಡಾ ಬಣ್ಣವಿಲ್ಲದ ಬಣ್ಣವನುಟ್ಟು ಸುಳಿದ ಅಜಗಣ್ಣನ ಯೋಗಕ್ಕೆ ಬೆಱಗಾದೆನು (ಶೂನ್ಯಸಂ. ೨೬-೦೯). **ಬಣ್ಣದೋರು** : ೨. ಯೋಗ್ಯತೆಯನ್ನು ವ್ಯಕ್ತಪಡಿಸು : ಇನ್ನುಳಿದುದು ಸಹೃದಯಹೃದಯನಿಕಷದಲ್ಲಿ ಬಣ್ಣದೋರಬೇಕು (ಮುಕುಂದಚ. ೫-೦೯). [ಬಣ್ಣ + ತೋಱು]

**ಬಣ್ಣನಿದಿಗೆ?** (ನಾ). (?) : ಕುದುರೆಯ ಕೊಟ್ಟಲ್ಲಿ ಪಣ ೧ ಕೊಂಡಲಿ ಪಣ ಬಂಣನಿದಿಗೆಗೆ ಸೊ ೨ ಕಂಚಿಗನ ನಾಯಕಟಿಯಲಿ ಗದೆ ಖ ೩ ಕಯಿ ಖ (ಎಕ. IX (8). ದೊಡ್ಡಬ. ೩೦-೪೯ ; ಕ. 1260). [?]

**ಬಣ್ಣನೆ, ಬನ್ನಣೆ** (ನಾ). ೧. ವರ್ಣಿಸುವುದು ; ವರ್ಣನೆ : "ಬಣ್ಣನೆ—ವರ್ಣನಾ (ಕದ್ಯಕೋ. ೨೩); ಅಣ್ಣಕೇ ಕೀತಗಳ ಮಾತಿನ ಬಣ್ಣನೆಗಳಂತಿರಲಿ ಭೂಮಿಯು ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ಕೊಕರಾ. ೬ ೨-೨೦); ಬಣ್ಣನೆಯ ನುಡಿಜಾಣ್ಮೆಗವಸರವಲ್ತು (ಚಾಕುಶ್ಯ. ೨೯-೬). ೨. ಸ್ತುತಿ; ಹೊಗಳಿಕೆ : 'ಬಣ್ಣಿಸಂ' ಪರಾ. ೩. ತೋರಿಕೆ; ಸೋಗು ; ನಟನೆ : ಬಣ್ಣನೆ[ನೆ]ಯ ಕುಸುರಿ ವಾತುಗಳಣ್ಣಂದಿರ ತೆಱದೆ[ದಿ]ನನ್ನದಿನ್ನದೆನುತ್ತಾಂ ಬಣ್ಣಿಸಲಱಿಯೆಂ (ರಹುಶಾ. ೦-೬೦). **ಬನ್ನಣೆ** : ೧. ರಾಯನೊಡವೆಯ ಸವಿಸವಿದು ವೊಂದಾಯತ್ತಿಕೆ ನಿನಗಹುದು ಸಭೆಯಲಿ ಬಾಯ ಬನ್ನಣೆಯಧಿಕ ವೀರಾಳಾಪ ನಿನಗಹುದು (ಕುಮಾರ್ತ್ರೋ. ಕು. ೨೯೯); ವೀರಾಳಾಪದ ವಿಪುಳ ಪ್ರತಾಪದ ಬನ್ನಣೆಯ ಬಿನ್ನಣದ . . . ಹರಿಗೆಕಾಱರ ಮೊತ್ತದೊತ್ತಿನು ಭಯುವಾರ್ಶ್ವದೊಳಿಂಬುಗೊಂಡು (ಹರಿಶ್ಚಂ. ೩-೩೩ ಪ). 'ಬನ್ನಣೆಗಾಱ' ಪರಾ. ೩. ಪುರುಷರನು ಬೆಗಡುಗೊಳಿಸುವ ಬನ್ನಣೆಯ ನುಡಿಯ ಭಾವೆಯರು ಬರುತಿದ್ದರು (ಪಶಪೋ. ೨೯-೦೩). ೪. ಚೆಲುವು; ಸೌಂದರ್ಯ : 'ಬನ್ನಣೆಗಾರ್ತಿ' ಪರಾ. ೫. ವರ್ಣಲೇಪನ : ತನ್ನ ಚಿಂತೆಯದೊಂದು ದೈವದ ಗನ್ನಗತಕವದೆರಡು ಭಾವದ ಬನ್ನಣೆಯ ಬಗೆ ಮೂಱು ದೈವದ ಭಿನ್ನಿಮುಖ ನಾಲ್ಕು (ಕುಮಾ. ೩-೩); ಬಯಲ ಬನ್ನಣೆ ಸಂಸಾರಾಯಿದ ಭಾವಿಸಿ ನೋಡಲು ಘೋರ (ಕತ್ರ. ೩೬-೨). ೬. ಅಲಂಕಾರ; ಶೋಭೆ : ನನ್ನಿಯಿಂ ಭೂಕಾಂತೆಯೆನುತ ಲೋಷಧಿಯರಸ ಮನ್ನಿಸುತ ಪಸುರುಡಿಗೆಗೊಟ್ಟನೋಯೆನೆ ಕಳವು ಬನ್ನಣೆಯೊಳಾ ಪುರವ ಬಳಸಿರ್ದುದೇನೆಂಬೆ ಸಂಭ್ರಮ ವಿಜೃಂಭಣೆಯನು (ವಂಕಾರು. ೦-೩-೪೯). [<ಸಂ. ವರ್ಣನ]

**ಬಣ್ಣನೆಗಾರ, ಬನ್ನಣೆಗಾಱ** (ನಾ). ವರ್ಣಿಸುವವನು; ಬಣ್ಣನೆ ಮಾಡುವವನು : 'ಬಣ್ಣನೆಗಾರ್ತಿ' ಪರಾ. **ಬನ್ನಣೆಗಾಱ** : ಬನ್ನಣೆಗಾಱರೊಳ್ಳುಂಚರಕ್ಕರಿಗರ್ ಕೆಳೆವಾರ್ವ ಮಕ್ಕಳುಂ ತನ್ನೊಡನಾಡೆ ನಾಡೆ ನಲಿಗುಂ ಚಿಕದೇವನೃಪಂ (ಚಕಾ. ೩-೦೦೦). [ಬಣ್ಣನೆ + – ಗಾರ (< – ಕಾಱ)]

**ಬಣ್ಣನೆಗಾರ್ತಿ, ಬನ್ನಣೆಗಾರ್ತಿ** (ನಾ). ೧. ಬಣ್ಣಿಸಂವವಳಂ: "ವರ್ಣನೆ ಮಾಡುವವಳಂ" (ಶ್ರಕ). **ಬನ್ನಣೆಗಾರ್ತಿ** : ೨. ಚೆಲುವೆ; ಸುಂದರಿ : ಚೆನ್ನಾಗಿ ಲಾಲಿಸು ಚೆಲ್ವದರಿದ ನಿನ್ನ ಕರ್ಣಾಂತರದಲಿ ಮೆಱೆವ ಹೊನ್ನ ಹೂವಿಗೆ ಪರಿಮಳ ಬರೆ ಪೇಳುವೆ ಬನ್ನಣೆಗಾರ್ತಿ ಚಿತ್ತೈಸು (ಮೋಹತ. ೨೯-೨). [ಬಣ್ಣನೆಗಾರ + – ತಿ (< – ಇತ್ತಿ)]

**ಬಣ್ಣನೆನುಡಿ, ಬನ್ನಣೆನುಡಿ** (ನಾ). ಹೊಗಳಿಕೆಯ ಮಾತು; "ವರ್ಣನೋಕ್ತಿ, ಸ್ತುತಿವಚನ" (ಶ್ರಕ). **ಬನ್ನಣೆನುಡಿ** : ಅಲ್ಲಿ ನೆರೆದಿರ್ದ ಪಾರ್ಥಿವರಿದೆ ತಳವೆಳಗಾಗೆ ರಾಯನ ಕುವರಿ ಬಳಿಸಲ್ವ ದಾದಿಯ ಬನ್ನಣೆ ನುಡಿಗೆ ವೆರ್ಕಳಿಸುತ್ತಿದಿದಳಾ ಸಭೆಗೆ (ಕರ್ಣ. ೩-೦೨); ಪ್ರಾರ್ಥನಳಸಿಂಗ ರಾರ್ಯಂ ರೂಢಿಗೆ ಬರ್ವಣಂತುಟುಸಿರ್ದ ಬನ್ನಣೆನುಡಿಯೊಳ್ ಪ್ರೌಢಿಗೆ ಪಿಟ್ಟುಗ್ರತ್ತರಸಂ ಗಾಢೋತ್ಸುಕನಾದನಾತ್ಮಜಾಲೋಕನದೊಳ್ (ಚಕಾ. ೯-೫೯). [ಬಣ್ಣನೆ + ನುಡಿ]

**ಬಣ್ಣನೆವಾತು, ಬನ್ನಣೆವಾತು** (ನಾ). ಹೊಗಳಿಕೆಯ ಮಾತು ; ಕೊಂಡಾಟದ ನುಡಿ : [ಬಣ್ಣನೆ] [ಪಾಠಾಂ. ಬನ್ನಣೆ]ವಾತಾಡುವ ಪರಿಹಾಸಗೈವ ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೂರ್ಮೆಯೊಳು (ಹರಿ. ೦-೦೬). **ಬನ್ನಣೆವಾತು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಬಣ್ಣನೆ + ಮಾತು]

**ಬಣ್ಣನೆವೆಱು** (ಕ್ರಿ). ಕೊಂಡಾಟವನ್ನು ಪಡೆ ; ಹೊಗಳಿಸಿಕೊಳ್ಳು : ಪತಿಪಾದಭಕ್ತೆಯೆರೆನಿಸಿ [ಬಣ್ಣನೆ]ವೆತ್ತ ಸತಿಯರೊಳಿದು ಸಮನಿಸುವ ಪತಿಶುಶ್ರೂಷೆಯ ಬಗೆಯನಱಿತು ಸಂಗತಿಗೈದದನು ಬಣ್ಣವೆನು (ಹರಿ. ೩-೩). [ಬಣ್ಣನೆ + ಪೆಱು]

**ಬಣ್ಣಬಂಟ ?** (ನಾ). (?) : ಅತ್ತಿಗೆಯೊಬ್ಬಳ ಕೂಡ್ಯಾಡಿ ಬಾಹೋದು ಕಂಡೆ ಸತ್ಯವ ಮಾಡುವೆ ಸಾರನೆಂಟ ಬಣ್ಣಬಂಟ ನೋಟಂಟ ಬಿಡು ಎನ್ನ ಗಂಟ (ಕವಿ. ೩೩-೨). [?]

**ಬಣ್ಣಬಣ್ಣಿಗೆ** 'ಬಣ್ಣವಣ್ಣಿಗೆ' ನೋ.

**ಬಣ್ಣಬಾಸಿಗ** 'ಬಣ್ಣವಾಸಿಗ' ನೋ.

**ಬಣ್ಣಮೀನ್** (ನಾ). ಒಂದು ಬಗೆಯ ಬಣ್ಣದ ಮೀನು : ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬುಗದೆ ಬರ್ಚಿ ಬೀಸಿದಾಗಳ್ . . . ಪಂದಿಮೀನ್ ಪೆಱಮೀನ್ ಬಗ್ಗಡೆ ಬಣ್ಣಮೀನೆನಿಪವೆಲ್ಲಂ ಬೀಳ್ಪುವಾ ತಾಣದೊಳ್ (ರಾಜಶೇ. ೩-೦೦೩). [ಬಣ್ಣ + ಮೀನ್]

**ಬಣ್ಣವಟ್ಟಿಗೆ** (ನಾ). (ಕದಕ್ಕೆ ಹಾಕುವ) ಕೆತ್ತನೆ ಕೆಲಸ ಮಾಡಿದ ಅಡ್ಡಪಟ್ಟಿ : ಮಣಿಸತ್ತಿಗೆಯ ಮೊಗವಂಟಪದ ಬಣ್ಣವಟ್ಟಿಗೆಯ ಅವುಳಗುಟಿಯ . . . ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ರಾಮಾಶ್ವ. ೩೯-೨೯). [ದೇ. ೩ ತುಳು. ಬಣ್ಣಟಿಗೆ, ಬಣ್ಣಾಟಿಗೆ]

**ಬಣ್ಣವಡೆ** 'ಬಣ್ಣಂಬಡೆ' ನೋ.

**ಬಣ್ಣವಣ್ಣಿಗೆ, ಬಣ್ಣಬಣ್ಣಿಗೆ, ಬಣ್ಣಾಬಣ್ಣಿಕೆ, ಬಣ್ಣಾವಣ್ಣಿಗೆ** (ನಾ). ೧. ಬಣ್ಣ ಬಣ್ಣಗಳಿಂದ ಕೂಡಿದಂದು; ನಾನಾವರ್ಣಗಳಿಂದ ಕೂಡಿದುದಂ : ಸೂಸೂಸೂಬದೇಂ ಸವಿದುವೊ ಬಣ್ಣವಣ್ಣಿಗೆಯ ಪೂಗಳ ಸೌರಭವಂ ಮದಾಳಿಗಳ್ (ಅದಪು. ೦೦-೦೨೬); ಬಣ್ಣಪುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯ ನೀರ್ವೂಗಳ ರಜಂಗಳುಮನೊಳ ದೊಂಡಿನ ಪಾಲ್ಗಳುಮಂ ಪೀರ್ದು (ಕಾದಂಬ. ೩೩೬); ಗಗನತಳಂಗಳೊಳ್ ಖಚಿತರತ್ನಕದಂಬದ ಕಾಂತಿ ಬಣ್ಣವಣ್ಣಿಗೆಯ ಮುಗಿಲ್ಗಳಂ ಕಿಡಱ (ಅಸಂಪು. ೯-೬೩). ೨. ಬಣ್ಣ ಬಳಿಯಂವುದು; ಚಿತ್ರಣಕಾರ್ಯ: ಪಳಿಕಿನ

**ಪಲಗೆಯುಂವಂ** ಬಣ್ಣವಣ್ಣಗೆಯ ಬಟ್ಟಗೆಗಳಂ ತಾನೆ ತಂದು **ಕೊಟ್ಟು** (ಲೀಲಾವ. ೬-೮೯ ವ): ಅವನ ಬಣ್ಣವಣ್ಣಗೆಯ ಸ್ಪರ್ಶ ಸ್ಪರ್ಶಕ್ಕೂ ಚಿತ್ರದ ರೂಪು ಕಣ್ಣ್ಬರೆಯುವಂತಿತ್ತು (ಸಿಂಹಕ. ೨೯). **೩. ಅನೇಕ ವಿಧವಾದುದು ; ಬಗೆಬಗೆಯಾದುದು :** ಬೆಣ್ಣೆಗಳ್ಳನ ನಚ್ಚಿ ಹಣ್ಣ ಶಿವವಿರಹಿತಂ ಬಣ್ಣವಣ್ಣಗೆಯ ದೈವವೆ ನೆರಪಲು (ಶಾಪಂಕ. ೨-೬೭). **೪. ಹೊಗಳಿಕೆ ; ಸ್ತುತಿ : ಕೊಂಡಾಟ :** ಪರಿಪರಿಯ ಬಣ್ಣವಣ್ಣಗೆಗಳಿಂ ಜಪಿಸುತುತ್ತರದಿಜ್ಮುಖಕೆ ನಡೆವುತೆ (ಪದ್ಮರಾ. ೬-೩೪). **೫. ಸೊಗಸು ; ಅಂದ :** ಬಣ್ಣಸರವ ಪಸರವನಿಕ್ಕಿ ದಂತೆಲ್ಲ ಬಣ್ಣವಣ್ಣಗೆಯಲ್ಲಿ ಕುಳಿತು ಸಣ್ಣದನಿಯೆಸೆಯೆ ಬಸದಿ ತುಂಬಿರೆ **ಕೂರ್ತು** ಬಣ್ಣಿಸಿದರು ಪುರುಜನಸ (ಭರತ. ೦೮-೬೨). **೬. ಬೆಡಗಿನ ವರ್ತನೆ ; ಬಣ್ಣಾಚಾರ ; ಬಿನ್ನಾಣದ ನಡವಳಿಕೆ :** ಹೆಚ್ಚಿದುದು ನಿನ್ನ ರಾಣಿವೆಯುದಱನವರೊಳಗೆ ಮಚ್ಚರವ ಮಾಡಬೇಡೆಂಬುದನೆ ಬಿಟ್ಟು ನಿನ್ನಿಚ್ಚೆಗತನದಿ ಬಣ್ಣವಣ್ಣಗೆಯ ಮಾತನಾಡುವುದು ನನಗಾದುದಿಲ್ಲ (ಸಮ್ಯಕ್ತ್ವ ೦-೪೩). **ಬಣ್ಣಬಣ್ಣಗೆ : ೧.** ಕಣ್ಣಪ್ಪನಂ ತಂದು ಗಣಪದವಿಯಂ **ಕೊಟ್ಟು** ಬಣ್ಣಬಣ್ಣಗೆಯ ಪೊಸಬೀಳುಡೆಗಳಂ ಕೊಟ್ಟು (ಕಣ್ಣಪ. ದೇ. ೦೩೦-೦೪). **ಬಣ್ಣಾಬಣ್ಣಕೆ : ೩.** ಹಕ್ಕಿ ಪುಕ್ಕಗಳಿಂದ ನಿರ್ಮಿತವಾದ ಬಣ್ಣಾಬಣ್ಣಕೆಯಾದ ಅವರ ವೇಷ . . . ಅವರ ಆನಂದವನ್ನು ಸೂಚಿಸುತ್ತವೆ (ಶಾರದ. ೩೬೪). **ಬಣ್ಣಾವಣ್ಣಗೆ : ೧.** ಬಣ್ಣಾವಣ್ಣಗೆಯ ದುಃಖವನೆಯ್ದಿ ಕುದಿದೇದು . . . ಭವರೋಗಶರಧಿಯಂ ದಾಂಟಿ ನೀಗುವೆವೆಂದು ನೆನೆವುತಿರಲು (ಶಾಪಂಕ. ೪-೬೨ ರಗಳೆ). [ಬಣ್ಣ + ಬಣ್ಣಗೆ$_1$]

**ಬಣ್ಣವಳಿ** (ಕ್ರಿ). ಸೊಗಸಂ ಕೆಡು ; ಅಂದಗೆಡು : ಪಣ್ಣ ಬಾಯಿನವಂ ಬಣ್ಣವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು (ಗಂಧಕ. ೨-೬೦ ವ).
[ ಬಣ್ಣ + ಅಳಿ$_1$ (< ಅೞ್$_1$) ]

**ಬಣ್ಣವಳ್ಗು** (ಕ್ರಿ). ಕಾಂತಿಗುಂದು ; ಕಳಾಹೀನವಾಗು : ಮುದ್ದಾ ಜಮ್ಮಣ್ಣ :— (ಬಣ್ಣವಳ್ಗಿ, ತುಟಿಗಚ್ಚಿ . . . ಕೀಲ್ಗದವನ್ನೆಳೆದು ಕಿರುಗಂಡಿಗೆ ನಿಲಿಸಿಕೊಳ್ಳುವಳು). (ಜಬ್ಬಕ. ೬೭-೦೦).
[ ಬಣ್ಣ + ಅಳ್ಗು (<ಅೞ್ಗು) ]

**ಬಣ್ಣಪಾಡು** (ನಾ). ವರ್ಣನೆಯಿಂದ ಕೂಡಿದ ಸ್ತುತಿರೂಪವಾದ ಹಾಡು : ವೀಣೆದಳೆದು ಬಣ್ಣಪಾಡುಗಳಂ ಬಾಜಿಪೋಜೆಯೊಳೊರ್ವ ನುಣ್ಚರವೆತ್ತಿ ಪಾಡುವ ಬಿಡಯದೊಳೊರ್ವ . . . ಬರ್ದಿಲನಾಡೊಳ್ ಬಾಟ್ದಂ (ಕಕಶಂ. ೩೩-೨೦) ; ದೊಡ್ಡಮ್ಮ . . . ಬಣ್ಣಪಾಡಿನ ರಸಗೇಯದ ರಾಗಮಾಲಿಕೆಯನ್ನು ಸವಿಗರೆಯುವಳು (ಮಂತ್ರಕ. ೩೬-೧೪). 'ಬಣ್ಣಗಬ್ಬ' ಪರಾ. [ಬಣ್ಣ + ಪಾಡು$_2$]

**ಬಣ್ಣಪಾಡುಗೆಯ್** (ಕ್ರಿ.) ವರ್ಣನೆಯಿಂದ ಕೂಡಿದ ಸ್ತುತಿರೂಪವಾದ ಹಾಡನ್ನು ರಚಿಸು : ಆ ವಾದ್ಯವಿದ್ಯಾಧಿಕರ್ . . . ಕಾಮತಂತ್ರದ ವೈಶಿಕಪ್ರಕರಣಮಂ ಬಣ್ಣಪಾಡುಗೆಯ್ದು ಪಾಡಿದರ್ (ಕಕಶ. ೬-೦೩೪ ವ).
[ಬಣ್ಣಪಾಡು + ಕೆಯ್$_1$]

**ಬಣ್ಣಮಾತು** (ನಾ). ತೋರಿಕೆಯ ನುಡಿ ; ಬಣ್ಣಾಚಾರ ; ಸೋಗಿನ ಮಾತು : ಕಣ್ಣೊಳು ನೋಡಿ ಮನದೊಳು ಮಚ್ಚರವನು ಹಣ್ಣುವ ರಾಯರ ಗಂಡ ಬಣ್ಣಮಾತಲ್ಲ ನಿನ್ನಾಣೆ ಮೂಲೋಕದ ಕಣ್ಣುದಯಿಸಿದೆ ನೋಡೇಳು (ಕುರಾಸಾಂ. ೨೯-೩೩) ; ನಿನ್ನಾ ಬಣ್ಣಮಾತಿಗೆ ಮಾರುಹೋದೆಂ (ರಾಮಾಶ್ವ. ೦೬೩-೨). [ಬಣ್ಣ + ಮಾತು$_1$]

**ಬಣ್ಣಪಾವುಗೆ** (ನಾ). ಬಣ್ಣದ ಹಾವುಗೆ ; ವರ್ಣಮಯವಾದ ಪಾದರಕ್ಷೆ : ಆ ವೇಳೆಯೊಳ್ ಮೆಟ್ಟಿದ ಬಣ್ಣಪಾವುಗೆಯ . . . ಬೆಡಂಗಿನ **ಬಾಲೆಯೊರ್ವಳ್** . . . ಪೊಂಬಟ್ಟಲನೆತ್ತಿ ಬರುತುಮಿರ್ದಳ್ (ರಾಮಾಶ್ವ. ೪೯-೦೬). [ಬಣ್ಣ + ಪಾವುಗೆ]

**ಬಣ್ಣವಾಸಿಗ, ಬಣ್ಣಬಾಸಿಗ** (ನಾ). ೧. ಬಣ್ಣಬಣ್ಣದ ಹೂವುಗಳ ದಂಡೆ,—ಮಾಲೆ : ನಮೇರು ಮಂದಾರ ಪಾರಿಜಾತದ ಬಣ್ಣವಾಸಿಗಂಗಳುಂ . . . ಬಿಡುಮುತ್ತಿನ ಸೇಸೆಗಳುಂ ಬೆರಸು ಮಹತ್ತರದೇವಿಯರ್ ಬಂದು ಪೊಡೆವಟ್ಟು (ಆದಿಪು. ೨-೬೭ ವ) ; ಅದಿಮೂರ್ತಿಯ ವಕುಲದ . . . ಕುಂದದ ಬಣ್ಣವಾಸಿಗಂಗಳನುದಾತ್ತಮಾಲ್ಯಂಗಮುಹಿರುಹು ಕುಡುತಿರ್ಕುಂ (ಶಾಂತಿಪು. ೬-೦೦೨); ಸುರಚಾಪಂಗಳನಿಂದ್ರಂ ಮುರಿದಿಟ್ಟಂತಭ್ರಪಥದೊಳಿಗಳ ಬಳಗಂ ಬೆರಸೆಸೆವ ಬಣ್ಣವಾಸಿಗವೆರಡಂ ಚಲದಮಲಕಮಳಲೋಚನೆ ಕಂಡಳ್ (ಸೂಕ್ತಿಸು. ೬-೩೯). **ಬಣ್ಣಬಾಸಿಗ : ೨.** ಮದುಮಕ್ಕಳ ಹಣೆಗೆ ಕಟ್ಟುವ (ಬಣ್ಣದ ಕಾಗದ, ಬೆಂಡು ಮುಂತಾದುವುಗಳಿಂದ ಮಾಡಿದ) ಒಂದು ಬಗೆಯ ಅಲಂಕಾರ : ಕರುಳ ತೊಂಡಲು ಖಂಡದ ಬಣ್ಣಬಾಸಿಗ ನರದ ಹಂಜರ ಚಪ್ಪರದಲಿ ನೆರೆದು ಶಾಕಿನಿಯರು ಮದುವೆಯ ಮಾಡುತ ಮೆಱೆದರು. (ಕಂಸವ. ೦೩-೬೩). [ಬಣ್ಣ + ಬಾಸಿಗ]

**ಬಣ್ಣವಿಕ್ಕು** (ಕ್ರಿ). ಬೂಟಾಟಿಕೆಯ ಮಾತನ್ನಾಡು : ಅಣ್ಣನಲ್ಲೆ ಮಗಾತ ನೊಡೆಯನ್ನೆ ನೀನಿಂತು ಬಣ್ಣವಿಕ್ಕದಿರು ಸಾಕು (ಭರತ. ೪೮-೨೩).
[ಬಣ್ಣ + ಇಕ್ಕು]

**ಬಣ್ಣವಿಡು** (ಕ್ರಿ). ೧. ಬಣ್ಣವನ್ನು ಲೇಪಿಸು ; ರಂಗು ಹಚ್ಚು : ಕರುವಿಟ್ಟಂ ಕಾಮದೇವಂ ರತಿಯತಿಶಯದಿಂ ಬಣ್ಣವಿಟ್ಟಳ್ . . . ಎನಲ್ಕಾಂತೆ ಕಣ್ಗೆಡ್ಡಮಾದಳ್ (ಲೀಲಾವ. ೩-೪೬) ; ತದ್ವಸಂತಂ ಪದೆಪಿಂದಂ ಬಣ್ಣವಿಟ್ಟಂಗಜನೃಪತಿಯ ಗೂಡಾರಮೋ ಶಾನಿದೆಂಬಂದದೆ . . . ಇರ್ದತ್ತು ಚೂತಂ (ಕುಸುಮಾ. ೪-೪೩). **೨. ಚಿತ್ರವನ್ನು ರಚಿಸು :** ದೊಡ್ಡಮ್ಮ :—(ಬಣ್ಣವಿಡುತ್ತ ಮೆಲ್ಲಮೆಲ್ಲಗೆ ಹಾಡಿಕೊಳ್ಳಲಾರಂಭಿಸುವಳು) (ಮಂತ್ರಕ. ೩೦-೦೩). **೩. ಹೊಗಳು ; ಪ್ರಶಂಸಿಸು :** ಮರುಳೆ ನೀ ಬಲು ಬಣ್ಣವಿಡೆ ಖದ್ಯೋತ ರವಿಯಹುದೆ (ಕೌಶಿಕಾ. ೨೦-೨೦). **೪. ಮೆರುಗು ಕೊಡು ; ಒಪ್ಪವಿಡು ; ಅಂದಗೊಳಿಸು :** ಭಾವದ ಬಯಲಿಂಗೆ ಬಣ್ಣವಿಟ್ಟನೆಮ್ಮ ಬಸವಯ್ಯನು (ಶೀಲವ. ೪. ೪-೪) ; ಕೌರವನು. . . ನೆನೆದ ಮತವನು . . . ಅನುಜಮತದಲಿ ವಿಸ್ತರಿಸಿ ಮೈದುನನ ನುಡಿಯಲಿ ಬಣ್ಣವಿಟ್ಟನು ಜನಪನಪಕೀರ್ತ್ಯಂಗನೆಗೆ ತೊಡಿಸಿದನು ಭೂಷಣವ (ಕುವ್ಯಾಉ. ೨-೨೨); ಅಗಣಿತಮತಿಗಳಾದವರೀ ಕೃತಿಯನು ಮಿಗೆ ತಿರ್ದಿ ಬಣ್ಣವಿಡುವುದು (ಅಂಜಕ. ೦-೦೦೬). [ಬಣ್ಣ + ಇಡು$_1$]

**ಬಣ್ಣವಿಳಿ** (ಕ್ರಿ). ಕಾಂತಿಹೀನವಾಗು; ಕಳೆಗುಂದು : ಕರುವಿಯನ್ :— (ಬಣ್ಣವಿಳಿದು, ತುಟಿಗಚ್ಚಿಕೊಂಡು, ಹೊರಡುವನು) (ಮಂತ್ರಕ. ೨೯-೧೬).
[ ಬಣ್ಣ + ಇಳಿ$_1$ (< ಇೞಿ) ]

**ಬಣ್ಣವುರ** (ನಾ). ೧. ವಿಧವಿಧವಾದ ಬಣ್ಣಗಳಿಂದ ಕೂಡಿದ ವಸ್ತು, ಚಿತ್ರ ಮುಂತಾದುವು : "ಬಣ್ಣವುರಮೊಂದು ವರ್ಣಪೂರಂ" (ಕಕಶಾ. ೬೩-೪೦೬); ಬಣ್ಣವುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಗೆಯ ನೀರ್ವೂಗಳ ರಜಂಗಳುಮನೊಳದೊಂ[ದಿಂ]ಡಿನ ಪಾಲ್ಗಳುಮಂ ಪೀರ್ದು (ಕಾದಂಬ. ೩೨೬); ಅಲಂಕೃತವಾದ ಬಣ್ಣವುರದ ಗೋಡೆಗಳನ್ನೂ . . . ತುಂಗರಾಯನು ಪರೀಕ್ಷಿಸುತ್ತಿರುವನು (ಜಬ್ಬಕ. ೪೮-೩). **೨. ಸಿಂಧೂರ,** ಬುಕ್ಕಿಹಿಟ್ಟು ಮುಂತಾದ ಬಣ್ಣದ ಹಾಗೂ ಸುಗಂಧದ ಪುಡಿ : ಸಿರಿಗನ್ನಡಿ ಬಣ್ಣವುರು ಕಳಿ[ಯೆ]ಳ್ ಬಳಿಯರಳೆ [ಮ]ಧು ಮೊಸರ್ ನೆ[ಲ್ಲ]ಜೋತ್ಕರಮೆಂದಶೇಷಮಂಗಳಪರಿಕರಮೊಸೆದುದು ವಿವಾಹವೇದಿಯ ಕೆಲದೊಳ್ (ವರ್ಧಮಾ. ೩-೮೩); ಗೋರೋಚನಂ ಲಾಜೆ ಬಣ್ಣವುರಂ . . . ಕಾಶ್ಮೀರಮೆಂಬಿವಱಿಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುವು (ಜಗಂ. ೧೦-೯೮); ಲಾಜೆಯುಂ ಸಮೆವ ಬಣ್ಣವುರಂಗಳನೊಪ್ಪೆ ಮಾಡ್ಪಿ ನಾನಾವಿಧಮಂಗಳಾಚರಣದಕ್ಷೆಯರಿಂ . . . ತೀವಿ (ವರ್ಧಪು. ೭-೩). **೩. ಬಣ್ಣವನ್ನು ತುಂಬುವುದು ; ರಂಗು ಹಾಕುವುದು :** ಕವಿ

ಸುಟ್ಟುಂಬೆಯಿಂದೆ ಸತ್ಕಂ ತೋರ್ಪನಾ ಅವಸರಕೆ ಸೌನ್ದರ್ಯತತ್ತ್ವಮವ ತರಿಸಿಕೊಳ್ವವನೊಲ್ಪಾರ್ಪ ರೂಪಾರಂ ಮೆಯ್ಸಿರಿ ಬಣ್ಣವುರಂ ಬಾಳ್ಕೆಗಳಿ ನ್ನೊಪ್ಪಿಸಿಯದುದು ಕಾಣ್ಕೆ ಮಾರ್ಕ್ಯಂ (ಸಂಸಕ. ೧೦-೬೯). ೪. ರಂಗವಲ್ಲಿ; ಹಸೆ : ಭವಲಾಲಾಟವಿಲೋಚನಾಗ್ನಿಶಿಖೆಯಿಂ ಬೆಂದಳ್ಕಿ ಮತ್ತಂ ಮನೋ ಭವನೆಟ್ಟಿ ಕ್ರೊಡೆ ಕಾಮಕಾಂತೆ ಬಟ್ಟೆಯಿಂ ತನ್ನಿಚ್ಚೆಯಿಂ ಮೆಚ್ಚಿ ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂದಂಗಳಿಂದಿಂದ್ರಗೋಪವಿಳಾಸಂಗಳಿ ನಾಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ (ಕಂಕಳಾ. ೬-೨೯); ☞ "ಬಣ್ಣವುರಂ ತೀವಿದ = ವರ್ಣಪೂರ ಎಂಬ ವಸ್ತ್ರದಿಂದ ಮುಚ್ಚಿದ . . . ಬಣ್ಣವುರ < (ಸಂ) ವರ್ಣಪೂರ ಎನ್ನುತ್ತಾನೆ ಕೇಶಿರಾಜ; ಅರ್ಥ ಅನಿರ್ದಿಷ್ಟ; ಬಣ್ಣಬಣ್ಣದ ಜಮಖಾನೆ, ನೆಲಕ್ಕೆ ಹಾಸಂವ ಬಟ್ಟೆ ಎಂಬರ್ಥವಿರಬಹುದು" (ಕಂಕಳಂ. ೨೧೬); ಬಳಭಿಚ್ಛಾಪಲತಾವಳಿ ಬಳಸಿದ ಬೆಳ್ಮುಗಿಲ ಮುಚ್ಚಿಯಿಂದೆನೆ ಬಣ್ಣವುರಂ ಬಳಸಿರ್ದೊಡೆ ಸೊಗ ಯಿಸಿದುದು ಪಳಿಕಿನ ಪಟ್ಟವಣೆ ವೇದಿಕಾಧಿತ್ಯಕದೊಳ್ (ಚಂದ್ರಪ್ರ. ೬-೩೨); ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಯಚಾ. ೨-೩೯).

[< ಸಂ. ವರ್ಣಪೂರ]

**ಬಣ್ಣವೆರು** (ಕ್ರಿ). (ನಾಚಿಕೆಯಿಂದ) ಕೆಂಪಾಗು : ತಿಮ್ಮಾಜಮ್ಮಣ್ಣಿ :— (ಬಣ್ಣವೆತ್ತು, ಹಿಂದಣ್ಣಿ ಹುದುಗುವಳು) (ಚಿಬ್ಬಿಅ. ೧೦೦-೧೦).

[ಬಣ್ಣ+ಪೆರ್ು₁ (< ಪೆಱು₁)]

**ಬಣ್ಣವೆರ್ಚು** (ಕ್ರಿ). ಕಾಂತಿಯಂ ಹೆಚ್ಚಾಗು; ಥಳಥಳಿಸಂ : ಪಾಂಡ್ಯ ನಾರಿಯರ ಮೆಯ್ಯ ಪಚ್ಚದ ಪೊಸವೂಗರಿಂ ಬಣ್ಣವೆರ್ಚಿ ಮಿಱುಗುವ ಸೌಧಂಗಳಿಂ ರಂಜಿಸಿ . . . ತೋರ್ಪ ಕಾಂಚೀಪುರಮುಂಟು (ರಾಜಶೇಖ. ೬೯-೦೫).

[ಬಣ್ಣ + ಪೆರ್ಚು₁]

**ಬಣ್ಣವೇರು** 'ಬಣ್ಣವೇಱು' ನೋ.

**ಬಣ್ಣವೇಱಿಸು** (ಕ್ರಿ). ಶೋಭಿಸಂವಂತೆ ಮಾಡಂ; ಕಳೆಯೇರುವಂತೆ ಮಾಡಂ : ಬಣ್ಣವೇಱುವುಕ್ಕವದ ಪೆರ್ಕಳಮಂ ನಿಟ್ಟಿಸಾ (ಬಸವ್ರಗೋ. ೮-೨೦).

[ಬಣ್ಣವೇಱು + – ಇಸು₃]

**ಬಣ್ಣವೇಱು**, ಬಣ್ಣವೇರು (ಕ್ರಿ). ೧. ರಂಗೇರಂ; ಬಣ್ಣಬರು. ೨. ಶೋಭಿಸು; ಸೊಗಸಾಗು : ಭಸಿತಕ್ಕೆ ಬಣ್ಣವೇಱುವಂತೆ ರುದ್ರಾಕ್ಷಿಗೆ ಸೌಂದರ್ಯಂ ಸಾರುವಂತೆ . . . ಬಾಲ್ಯವಿಮೋಚನವಾಗಿ ಯೌವನ ವಾಲಿಂಗಿಸೆ (ಬಸವ. ೨-೦೦); ಮಿಗೆ ಬಾಸೆ ಬಣ್ಣವೇಱಿತು ಸೊಗಯಿಸಿದುದು ಮೊಗರಸಂ . . . ಮೇನಕೆಯಾ (ಗಂಗ. ೩-೩೯). ೩. (ಅಲಂ) ಸಡ ಗರದಿಂದ ಕೂಡಿರು; ಸಂಭ್ರಮಿಸಂ : ಕೆಲದೊಳಿರ್ಪಳು ಗೆಲ್ಲಗೊಂಬಳು ನೇಹವ ಬಲಿವಳು ಬಣ್ಣವೇಱುವಳು (ಹರಿ. ೬-೯೬). ೪. ಹೆಚ್ಚಾಗು; ಅಧಿಕಗೊಳ್ಳು : ಸತಿಯರೀ ಕೃತಿಯನಾಲಿಸಿದೊಡಂದಂದಿಗೆ ಪತಿಭಕ್ತಿ ಬಣ್ಣವೇಱುವುದು (ಹರಿ. ೦-೩೨). ಬಣ್ಣವೇರು : ೧. ಆ ಮಾತನ್ನು ಕೇಳಿದ ಕೂಡಲೆ ಅವನ ಮುಖ ಬಣ್ಣವೇರಿತು (ರೂಢಿ).

[ಬಣ್ಣ + ಏಱು₁ (< ಏಱು₁)]

**ಬಣ್ಣವೋಡು** (ಕ್ರಿ). ಕಳೆಗುಂದು; ಕಾಂತಿಯನ್ನು ಕಳೆದುಕೊಳ್ಳು : ನೇಸಱುರಿವುರಿಯಿಂದೆ ಸುಟ್ಟು ಕರಿಮುರಿಯೋಗಿ ಚೆನ್ನಮೆಯ್ದೊಗಲ್ ನಿನತು ಬಣ್ಣವೋಡುವುದು (ಶಿವತ. ೨-೨೬).

[ಬಣ್ಣ+ಓಡು₁]

**ಬಣ್ಣಸರ₁** (ನಾ). ೧. ಬಣ್ಣಬಣ್ಣದ ಮಣಿ, ಹೂವು ಮುಂತಾದುವು ಗಳ ಮಾಲೆ, – ಹಾರ : "ಬಣ್ಣಸರ—ವರ್ಣಸರ = ಬಣ್ಣದ ಮಾಲೆ" (ಶಬ್ದಕೋ. ೨೮); ಅಂದುಗೆ ಕಂಕಣಂ ಸರಿಗೆ ಬಣ್ಣಸರಂ ಕಟಿಸೂತ್ರಮೆಂದಿ ವೊಂದೊಂದಱೊಳೊಂದ[ವಿಂ]ದೆಯೆನೆ ತೊಟ್ಟು (ಧರ್ಮಾ. ೩-೬೮); ಸುಗುಮಬಂಧದ ಬಣ್ಣಸರದೋಳಿಗಳ ಕಂಬದ ವಜ್ರಮಯಧಾರೆಗಳಲೆಸೆ ದುದು ಭದ್ರಮಂಟಪವಮುಲವಣಿಮೆಯದ (ಶಬರಶಂ. ೦೨-೦೨); ಸಣ್ಣ ಪವಳ ಕೈಕಟ್ಟಿನ ಪವಳಗಳ್ ಬಣ್ಣಸರದ ಜಾತಿಪವಳ ತಿಣ್ಣವಡೆದ ಪವಳದ ಪಸರಗಳಾಗ ಕಣ್ಣ ಕೊಕ್ಕರಿಸುತೊಪ್ಪಿದುವು (ಕಂಸಂ. ೬-೬೬). ೨. ರಂಗಿನ ಬಾಣ, — ಸರಳು : ವರ್ಣಶರ—ಬಣ್ಣಸರ (ಶಮದ. ೨೬೮ ಕೃಯೋ). ☞ ಸಂಸ್ಕೃತದ 'ಶರ' ಮತ್ತು 'ಸರ' ಎಂಬ ಎರಡು ಶಬ್ದಗಳಿಗೂ 'ಬಾಣ' ಎಂಬರ್ಥವಿದೆ.

[< ಸಂ. ವರ್ಣಸರ. / ತೆಲು. ಬಣ್ಣಸರ, ಬನ್ನಸರ, ಬನ್ನಸರಿ]

**ಬಣ್ಣಸರ₂** (ನಾ). ೧. [ಸಂಗೀತ] ರಂಜನೆಯಿಂದ ಕೂಡಿದ ಹಾಡು ; ಸಂಶ್ರಾವ್ಯವಾದ ಗೀತ : ಬಾಯ್ದೆಱೆಯದೆ ಬಣ್ಣಸರಮನುಚ್ಚರಿಸುವ ನೆಱೆವೆಱೆವೊಗದಬಳೆಯ ನುಣ್ಗೊರಲತಿರಂಜನೆವಡೆಯಿತ್ತು (ಜಯಚಾ. ೬-೫೦); ದೇಗುಲಗಳೊಳಗೆ ಮೊಳಗುವ ಸಮಸ್ತವಾದ್ಯಧ್ವನಿಯಕಾರವಂ ಗಳವುವ ಸಂಗೀತಕಾಜಿರ ಬಣ್ಣಸರಗಳಾ ಪೊಳಲೊಳೆಡೆವಿಡದೆ ಘೂರ್ಣಿಸಿದುವು (ಸಮ್ಯಕ್. ೦೨-೪). ೨. [ನಾಟ್ಯ] ವರ್ಣದ ಸ್ವರಗಳ ಲಯಕ್ಕನುಗುಣವಾದ ನರ್ತನ (?) : ಪೆಸರಱಿಯದಮರತೂರ್ಯ ಪ್ರಸರಂಗಳ ಜತಿಗೆ ತೊಡರದಿನಿಸಱಲದೆ ಬಣ್ಣಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದೇನವಳ ಪರಿಣತೆಯೋ (ಅಂತು. ೯-೫೦); ಎಸಟ ಮೊನೆ ಕೂರಿತಡಿಗೆಂಬ ಸಂಕೆಯಿಂ ಮೆಟ್ಟದಂತೆ ಮುಟ್ಟದೆ ಕುಣಿದಾಗಸಮೆಂಬ ರಂಗ ದೊಳ್ ಬಣ್ಣಸರಮನಾಡಿದರನೇಕರಮರಾಂಗನೆಯರ್ (ಶಾಂತಿಪು. ೦೦-೦೬); ಮ್ಯ ಪೊಳೆವ ಮಿಂಚಂ ಪೋಲೆ ಚೆಲ್ವಾಗಿ ಬಣ್ಣಸರಂ ಕಾಟ್ಟುರಮೇಱಿ ರಾಕಳಿ ನಭೋರಂಗಾಗ್ರದೊಳ್ ನಿಚ್ಚಲಾಡಿಸುವಂ ಪಾಡಿಸುವಂ ವಿಯಚ್ಚರಿ ಯರಂ ವಾಗ್ಗೇಯವಿದ್ಯಾಧರಂ (ಅರ್ಜನ. ೨-೯೬). 'ಜತಿಸ್ವರ' ಪರಾ.

[<ಸಂ. ವರ್ಣಸ್ವರ]

**ಬಣ್ಣಸರಂಗೊಳ್** (ಕ್ರಿ). ಬಣ್ಣದ ಮಣಿಸರವನ್ನು ತೆಗೆದುಕೊಳ್ಳು : ಪೆಸರಱಿಯದಮರತೂರ್ಯಪ್ರಸರಂಗಳ ಜತಿಗೆ ತೊಡರದಿನಿಸಱಲದೆ ಬಣ್ಣ ಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದೇನವಳ ಪರಿಣತೆಯೋ (ಅಂತು. ೯-೫೦).

[ಬಣ್ಣಸರ₁+ಕೊಳ್₁]

**ಬಣ್ಣಾಂತರ** (ನಾ). [ಗಣಿತ] ಹದಿನೆಂಟು ಬಗೆಯ ಗುಣಿಸಂವ ಲೆಕ್ಕ ಗಳಲ್ಲಿ ಒಂದು : ಅಡಿಕೆ ಸೂತ್ರಾ ಬಣ್ಣಾಂತರಾ ಇವು ಮೊದಲಾದ ಲೆಕ್ಕಾ ಚಾರಗಳು ಗುಣಿಸಿ ಭಾಗಿಸುವ ವಿವರ (ಧಾನ್ಯರ. ೦-೪); ಮುಗ್ಗಿಗಣಿತ . . . ಕ್ಷೇತ್ರಗಣಿತಮಂಗುಳಿಅಳತೆ ರಾಜನೀತಿ ಬಣ್ಣಾಂತರ ಪದ್ಮನಾಭ . . . ಉತ್ಕಳಿತಗುಣಿತವುಂ ಅಷ್ಟಾದಶಗುಣಿತಂಗಳು (ಕ್ಷೇತ್ರಗ. ೨-೪).

[?. / ತಮಿ.ವಣ್ಣಮ್ = ಗುಣಿಸುವ ಸಂಖ್ಯೆ]

**ಬಣ್ಣಾಚಾರ** (ನಾ). ಸೋಗಿನ ನಡೆವಳಿಕೆ; ತೋರಿಕೆಯ ವ್ಯವಹಾರ : ಪರಿಚಿತರು ಯಾರೂ ಅವನ ಬಣ್ಣಾಚಾರಕ್ಕೆ ಮರುಳಾಗುವುದಿಲ್ಲ (ರೂಢಿ).

[ಬಣ್ಣ+ಆಚಾರ]

**ಬಣ್ಣಾಬಣ್ಣಿಕೆ** 'ಬಣ್ಣವಣ್ಣಿಗೆ' ನೋ.

**ಬಣ್ಣಾವಣ್ಣಿಗೆ** 'ಬಣ್ಣವಣ್ಣಿಗೆ' ನೋ.

**ಬಣ್ಣಿಕೆ** 'ಬಣ್ಣಿಗೆ₁' ನೋ.

**ಬಣ್ಣಿಗ** (ನಾ). ಕಾಂತಿಯುಳ್ಳವನು ; ಶೋಭಾಯಮಾನನಾದವನು : ನಳನಳಿಪ ಲಾವಣ್ಯದಿಂದೆಸೆವ ಬಣ್ಣಿಗಂ . . . ತಾನಾಗಿ ಬಾಲಲೀಲೆಯ ಬಸವನೊಪ್ಪಿದಂ ಬಳೆದೋಳ ಭಾಗ್ಯನಿಧಿ ಹುಲಿಯುಗುರ ಸುಲಭಗಂ (ಬಸವ. ೦-೧೩೨).

[ಬಣ್ಣ+—ಇಗ]

**ಬಣ್ಣಿಗೆ₁**, ಬಣ್ಣಿಕೆ (ನಾ). ೧. ರಂಗು ; ವರ್ಣ ; ಬಣ್ಣ : ಐದುಬಗೆ ಅಕ್ಕಿಯಂ ಐದು ಬಣ್ಣಿ[ಕಾಶಾಂ. ಣ]ಗೆಯ ಪುಷ್ಪಂಗಳಿಂದೈದುಪರಿಯಾಣ ದೊಳೈದುಪರಿಯ ಭಕ್ಷ್ಯಂಗಳಂ ಚರುವಿಟ್ಟು (ಪುಣ್ಯಾಸ್ರ. ೬-೩೦ ೫); ಎಸೆ ವಪರಂಜಿಯ ತಗಡ ಬಣ್ಣಿಗೆಯನು . . . ಅಸಿಯಳಂಗಕೆ ಹೋಲಿಸುವೆನು (ಶೀಬಸಂ. ೨೩-೨೦೬); ರತ್ನಮಯಪೀಠಗಳ ನಾನಾಬಣ್ಣಿಗೆಯ ಲೋಡುಗಳು

ರಂಜಿಪವು (ಆಪಂಚಾ. ೧-೩-೨೯). ೨. ಕೆಂಪುಬಣ್ಣ; ಅರುಣವರ್ಣ: 'ಬಣ್ಣಿಗೆದುಟಿ' ಪರಾ. ೩. ಬಗೆಬಗೆಯ ಬಣ್ಣಗಳಿಂದ ಕೂಡಿದುದು; ವರ್ಣಮಯವಾದುದು: ನೆಟ್ ವಣ್ಣ ಮೆದ್ದುದರದಿ ಜಗಂಗಳ ಬಣ್ಣಿಗೆಯ ಚಿತ್ರವನು ತಾಯಿಗೆ ಬಾಯೊಳಗೆ ತೋರ್ದ (ಜಭಾಗ. ೧೦-೩೨-೨೭); ಬಣ್ಣಿಗೆಯ ಚಿತ್ರಾನ್ನ ಪಾಯಸಂಗಳಂ (ಹರಿಚ. ೨೨-೦೬). ೪. ಬಣ್ಣ ಬಳಿಯುವಿಕೆ; ಲೇಪನ: 'ಬಣ್ಣಿಗೆವಡೆ' ಪರಾ. ೫. (ಚಿತ್ರಕ್ಕೆ ಬಣ್ಣ ತುಂಬಲು ಬಳಸುವ) ಕುಂಚ: ವಿನೋದಾಸ್ಪದವಾದ ಈ ಚಿತ್ರವು ಅರ್ಧ ಬರೆಯಲ್ಪಟ್ಟಿದೆ...ಬಣ್ಣಿಗೆಯನ್ನು ತೆಗೆದುಕೊಂಡು ಬಾ (ಶಾಕುಂತ. ೬೯-೬). ೬. ಚಿತ್ರ ಮುಂತಾದುವನ್ನು ಬರೆಯಲು ಬಳಸುವ ಬಣ್ಣ; "ಮಸಿ" (ಶ್ರಕಣ್ಣ). ೭. ವಿವರಣೆ; ವರ್ಣನೆ: ಬಾಂಧವನೆಂದು ಮುರಹರನ ಕಣ್ಣು ಕಂಡಜೆಯದಡೆ ಹಿರಿಯರ ಬಣ್ಣಿಗೆಯ ಲಜ಼ಿತವೆ (ಜಭಾಗ. ೧-೧೦-೩೦). ೮. ಹೊಗಳಿಕೆ; ಸ್ತುತಿ; ಸ್ತೋತ್ರ: ಯದುಕುಲಪರಂಪರೆಯಿಂ ಪೂಜೆಗೊಂಡ ಶ್ರೀಮನ್ನಾರಾಯಣನಂ ಪೂಜಿಸುವ ವಸುದೇವನೋ... ಎಂದಿಂತು ಪೊಣ್ಮುವ ಬಣ್ಣಿಗೆಗಳಿಂದಳವಡುವ ಹೃದಯಮಂ ಪದುಳಂಗೊಳಿಸಿ (ಜಗೀಚ. ೬೦-೦೨). ೯. ಸೋಗು; ತೋರಿಕೆ: ಗೊಹೇಶ್ವರಲಿಂಗದಲ್ಲಿ ಈ ಬಣ್ಣಿಗೆಯ ಮಾತು ಸಲ್ಲದು ಕೇಳಾ (ಅಪಶಂ. ೨೨೩-೧೦೦೯); ಪಾಂಡುಪುತ್ರರು ದಾಯಿಗರು ನಗುವಂದವಾದುದು ಬಾಯ ಬಡಿಕರು ಬಂದ ಬಣ್ಣಿಗೆಯೆಸಗಿ ಬಗುಳುವರು (ಕೃಷ್ಣಾಭಾ. ೦೭-೨೯). ೧೦. ರೂಪ; ಆಕಾರ; ಸ್ವರೂಪ: ಬಣ್ಣಿಗೆಯ ನೋಡಿದರೆ ಮಾದಲ ಹಣ್ಣನಾಕೃತಿ ಛಾಯವಿಡಿದಿಹುದು (ಕೃಷ್ಣಾಭಾ. ೬-೩೭). ೧೧. ಸೊಗಸು; ಅಂದ: ಬಣ್ಣತೇನೆಮಗೆ ನಿಮಗೆ ಬಂಧುತನದೊಂದು ಬಣ್ಣಿಗೆಯಿರಲಿ (ಚಿಕಚ. ೩೫-೮೩). ೧೨. ಅಲಂಕಾರ; ಶೃಂಗಾರ: ಆವ ಪರಿಯ ದೇಸಿಯಾಣ್ಮಂಗೆ ಬಗೆವರ್ಪುದಾ ವಿಧಗಳನಾರ್ಕೆದು ಭಾವಿಸಿ ತಿಳಿದುಟ್ಟು ತೊಟ್ಟು ಬಣ್ಣಿಗೆಯಿಂದ ಭಾವವ ಬಂದಿಗೊಳುವುದು (ಹರಿಚ. ೩-೦೬). ೧೩. ಬಣ್ಣಬಣ್ಣದ ಗೌಸಿನ ಬಟ್ಟೆ (?): ಛತ್ರವಂ ತವನಿಧಿಗೆ ಕವಿಲೆಯಂ ಕಟಿವೆಡೆಗೆ ಎತ್ತುಗಳ ಬಣ್ಣಿಗೆಯ ಹಿಂಡಿಗೆಂದಟಿಲ ನೃಪರೋಲ್ಕೆಸೆ (ಸಿದ್ಧರಾ. ೯-೯೩). ಬಣ್ಣಿಕೆ: ೧೧. ವೃಷವಾಹನಂ... ಈಶ್ವರನ ರೂಪಂ ವಿಗುರ್ವಿಸಿ ಬಂದಿರ್ಪುದುಂ ಪುರದವರೆಲ್ಲಂ... ಬಣ್ಣಿಕೆಯ ಪೂಜೆಗಳಂ ಮಾಡಿ ಪೊಡೆವಡುತಿರ್ಪನ್ನೆಗಂ (ಧರ್ಮಾಮೃ. ೫-೨೨೭). [<ಸಂ. ವರ್ಣಿಕಾ]

**ಬಣ್ಣಿಗೆ$_2$** (ನಾ). ಒಂದು ಬಗೆಯ ತೆರಿಗೆ: ಊರಲೊಕ್ಕಲಲೊನ್ದು ಪೊಟಿಯುಂ ಪತ್ತುಕೊಳಗಭತ್ತಮುಂ ಒನ್ದು ಕಂತೆಯು ಬಣ್ಣಿಗೆ ಮೂಗುಳಮಂ ಕಪ್ಪಡಕ್ಕೆ ಪಟ್ಟಿಯುಂ ಬ್ರಹ್ಮಲಿಂಗಿಬಟರ್ಗೆ ಕೊಟ್ಟುದು (ಎಪಿಕ. ೦೯೪೩, ೨೯-೨೮; 1032); ದೇವರ ಗಾಣಕ್ಕೆ [ತೆ]ಟ್ ಬಣ್ಣಿಗೆ ಡೊಂಕೆ ಬೀರವಣ ಸರ್ವಬಾಧಾಪರಿಹಾರವಾಗಿ ಬಿಟ್ಟರು (ಕಾಇಇ. XI-ii, ೦೫೬-೨೭; 1109); ನಿಧಿನಿಕ್ಷೇಪ ಜಳ ಪಾಶಾಣ ತರುಮಾಳಾಸಮನ್ವಿತ [ಸುಂ] ಕ ಸಾದ ಬಣ್ಣಿಗೆ (ಕಾಇಇ. XV, ೦೫೫-೫೭; 1206). [?]

**ಬಣ್ಣಿಗೆಯ್ದು** (ನಾ). ಬೇರೆ ಬೇರೆ ಆಕಾರದ ಆಯುಧ: ಓರ್ವರೋರ್ವರಂ ಬಣ್ಣಿಗೆಯ್ದುವಂ ಪಿಡಿದು ನಾಡಕರೋವದೆ ಕುತ್ತಿ ಕೊಯ್ದೊಡಂ... ತನು ಮುನ್ನಿನ ಮಾಟಕ್ಕೆಯಕ್ಕುಂ (ಶಾರ್ಕ್ಕರತಿ. ೬-೯೩). [ಬಣ್ಣಿಗೆ + ಕಯ್ದು (<ಕೆಯ್ದು)]

**ಬಣ್ಣಿಗಾಲು** (ನಾ). ಬಣ್ಣ (ಅಲಕ್ತಕ) ಬಳಿದ ಕಾಲು: ಬಾಳೆದೊಡೆಯ ಬಣ್ಣಿಗಾಲಾ...ಮನೋಹರರೂಪದ ನೀಟಿಯ ನವಲಾವಣ್ಯದ ಸಿರಿಯನದೇನಂ ಬಣ್ಣಿಪೆನು (ಜಯಚಂ. ೩-೬೩); ಬಡನಡುವಿನ ಬಣ್ಣದೊಡೆಯ ಬಣ್ಣಿಗಾ[ಪಾಠಾಂ. ಕಾ]ಲ ನಿಡಿದೋಳಿನರಿವೆಟಿನೊಸಲ... ಬೆಡಗಿನ ಪೆಣ್ಗಳಲ್ಲಿಹರು (ಶಂಕ್ರಸಾಂ. ೦-೨೦೦). [ಬಣ್ಣಿಗೆ$_1$ + ಕಾಲು$_1$ (<ಕಾಲ್$_1$)]

**ಬಣ್ಣಿಗೆಗೊಳ್, ಬಣ್ಣಿಗೆಗೊಳು** (ಕ್ರಿ). ಹೊಳೆ; ಶೋಭಿಸು: 'ಬಣ್ಣಿಗೆಗೊಳಿಸಂ' ಪರಾ. ಬಣ್ಣಿಗೆಗೊಳು: ಬಣ್ಣಿಗೆಗೊಳುವ ಬಗೆಯ ಪೊಸವರೆಯುದ ಪೆಣ್ಣಿನೊಲುಮೆಯಾ ಪೆರ್ಚಿಪುದು (ಹರಿಚ. ೬-೨೦). [ಬಣ್ಣಿಗೆ$_1$ + ಕೊಳ್$_1$]

**ಬಣ್ಣಿಗೆಗೊಳಿಸು** (ಕ್ರಿ). ಶೋಭಿಸುವಂತೆ ಮಾಡು; ಹೊಳಪುಂಟುಮಾಡು: ಪೊನ್ನದೊಳ್ತಪ್ಪುಗೊಳಿಸಿ ಚೆಂಬೊನ್ನ ಕರ್ವಣಿಯ ಪೊರ್ಗರ್ಗಳಿಂ ಬಣ್ಣಿಗೆಗೊಳಿಸಿರಿವಚ್ಚದ ಪಚ್ಚವಣಿಗಳ ಬೆಳಗಿನೊಳ್ಪೆರಸಿ (ಚಿಕಪಂ. ೧೨೩-೦೬). [ಬಣ್ಣಿಗೆಗೊಳ್ + -ಇಸು$_3$]

**ಬಣ್ಣಿಗೆಗೊಳು** 'ಬಣ್ಣಿಗೆಗೊಳ್' ನೋ.

**ಬಣ್ಣಿಗೆದಪ್ಪು** (ಕ್ರಿ). (ಅಲಂ) ಗೌರವಕ್ಕೆ ಕೆಡುಕುಂಟುಮಾಡು; ಹಿರಿಮೆಗೆ ಹಾನಿತರು: ಹೆಣ್ಣು ಬೇಕಾದರೆ ಬರಬೇಕು ನಾವೆಮ್ಮ ಬಣ್ಣಿಗೆದಪ್ಪಿ ಕೊಡುವೆವೆ (ಭರತ. ೩೭-೯೪). [ಬಣ್ಣಿಗೆ$_1$ + ತಪ್ಪು$_1$]

**ಬಣ್ಣಿಗೆದುಟಿ** (ನಾ). ಕೆಂಪಾದ ತುಟಿ; ಚೆಂದುಟಿ: ಬಾಲಪಲ್ಲವವನೇಳಿಪ ಬಣ್ಣಿಗೆದುಟಿಯ (ಶ್ರೀಭಂಜ. ೯-೦೯); ಬಡನಡುವಿನಬಲೆ ಬಣ್ಣಿಗೆದುಟಿಯ ಚೆನ್ನೆ (ಸಮ್ಯಕೌ. ೩-೫). [ಬಣ್ಣಿಗೆ$_1$ + ತುಟಿ]

**ಬಣ್ಣಿಗೆಬವಣ್** (ನಾ). ೧. ಅಲಂಕಾರದ ಪ್ರಮಾಣ. ೨. ವರ್ಣನೆಯ ಪ್ರಮಾಣ. ೧, ೨: ಕೊನಬುಗಾರ್ತಿಯ ಸೊಗಸಂ ಪಡೆಗುಂ ಕೃತಿಯುಂ ಪದಪಿಂದೆಡೆಯೆಡೆಯೊಳ್ತಕ್ಕತಕ್ಕ ಬಣ್ಣಿಗೆಬವಣಂ (ಚಿಕಪ. ೧-೦೬). [ಬಣ್ಣಿಗೆ$_1$ + ಪವಣ್]

**ಬಣ್ಣಿಗೆವಡಿಸು** (ಕ್ರಿ). ಬಣ್ಣ ಬಳಿ; ಒಳ್ಳೆಯದಾಗಿರುವಂತೆ ಚಿತ್ರಿಸು: ಬನ್ನಣಿಗೆಯುದ್ದು ಬಟಿದ ಬಣ್ಣಿಗೆವಡಿಸದಿರು (ಗೀತಗೋ. ೨೫-೯೪). [ಬಣ್ಣಿಗೆ$_1$ + ಪಡಿಸು]

**ಬಣ್ಣಿಗೆವಡೆ** (ಕ್ರಿ). ೧. ಬಣ್ಣ ಹೊಂದು; ರಂಗೇರು: ಬಾಲಾತಪದಿಂದ ಬಣ್ಣಿಗೆವಡೆದಿಂದ್ರನೀಲಾದ್ರಿಯನಿಳಿಗೆಯ್ವ ನೀಲನೀರದ ನಿಭಕಾಯಗೆ... ಆನೆಜಗುವೆನು (ಕರ್ಣಪ್ರ. ೦-೨೬); ಬಳ್ಳಿಮಿಂಚುಗೆಯಿಂದ ಬಣ್ಣಿಗೆವಡೆದಿರ್ದ ಕಾರ್ಮುಗಿಲ ಮೋಹರದಂತೆ (ಕಾರಕಾಂ. ೩೯೯-೫೦). ೨. ಕೊಂಡಾಟಕ್ಕೆ ಒಳಗಾಗು; ಹೊಗಳಿಸಿಕೊಳ್ಳು: ಪೊಡವಿಯ ಬಲ್ಲೋಜರಿಯನಿಟಿತಿ ಬಣ್ಣಿಗೆವಡೆವರ್ (ಅಕ್ರಂ. ೨-೦೬). [ಬಣ್ಣಿಗೆ$_1$ + ಪಡೆ$_1$]

**ಬಣ್ಣಿಗೆವೆಳಗು** (ನಾ). ಥಳಥಳಿಸುವ ಕಾಂತಿ; ಸೊಗಸಾದ ಹೊಳಪು: ಪೊಗರೇಜುವ ಮೊಗಸಿರಿಯುಂ ಬಗೆಗೊಳಿಸುವ ಬಗಸೆಗಣ್ಣ ಬಣ್ಣಿಗೆವೆಳಗುಂ ಮಿಗೆಯೊಸಗೆವೇಟಲೀಪರಿ ನೆಗಟ್ದಿಯ್ದಿದ ತನ್ನ ಭಾಗ್ಯದೇವತೆಗೆತ್ತಂ (ಚಿಕಪ. ೯-೩೯). [ಬಣ್ಣಿಗೆ$_1$ + ಬೆಳಗು$_2$]

**ಬಣ್ಣಿಗೆವೆಜು** (ಕ್ರಿ). ೧. ವರ್ಣನೆಯನ್ನು ಹೊಂದು,-ಪಡೆ: ಭೇದಿಸಿ ಕಾಣ್ಬ ತತ್ತ್ವದಿರವುಣ್ಮಿಪ ಬಣ್ಣಿಗೆವೆತ್ತ ಬಿನ್ನಣಂ (ಚಿಕಪ. ೩-೦೨೨). ೨. =ಬಣ್ಣಿಗೆವಡೆ ೧: ಸುಳಿವ ಮಿಂಚಿನ ಬಣ್ಣಿಗೆವೆತ್ತ ಕಣ್ಮಲರ್ ಮಾರ್ಮಲೆದಾರ್ಪಿನಂ (ಕವಿಮಾ. ೨-೦೯೩). [ಬಣ್ಣಿಗೆ$_1$ + ಪೆಜು$_1$]

**ಬಣ್ಣಿಸು, ವಣ್ಣಿಸು** (ಕ್ರಿ). ೧. ಬಣ್ಣ ಹಾಕು; ರಂಗೇರುವಂತೆ ಮಾಡು; ಬಣ್ಣ ಕಟ್ಟು: ಅರಿಸಿನವ ಬೆರಸಿ... ಎಣ್ಣೆಯೊಳು ಮೊದಲು ಕಲಸಿದ ಬೋನದೊಳಗಿಕ್ಕಿ ಬಣ್ಣಿಸಿಯುದಂ ಕಲಸಿ ಬಿಳಿಯುಪ್ಪ ನಿಕ್ಕಲದು ಸಾಸುವೆಯ ಕಟ್ಟೋಗರ (ಸೂಪಶಾ. ೩-೨೦). ೨. ಹೊಳೆಯುವಂತೆ ಮಾಡು; ಮೆರುಗು ಕೊಡು: ಪೊಸವಿಸಲ ಪೊಳಪಿನಿಂ ನುಣ್ಣನುಜ್ಜಳಿಪ ರನ್ನದೆಳವೆಳಗಿನ ಬಳಗದಿಂ ಬಣ್ಣಿಸಿ ಸುರಶರಾಸನಂಗಳ ನೆಟ್ಟಿಲಿಕ್ಕಿದಂತೆ ನಿಮಿರ್ಪ ನಿರ್ಝರಂಗಳುಮಂ (ಕಾದಂಬ. ೫೨೬); ಬಣ್ಣಿಸಿ ನುಣ್ಣಿಸಿದ ಕರ್ಮಣಿಗಲ್ಲ ಕೈಗನ್ನಡಿಯಂತಂತು ತಳತಳಿಪ ಗಂಡಮಂಡಲಂ (ರಾಜಶೇಕ. ೦೯೩-೨೯). ೩. ಅಲಂಕರಿಸು; ಶೃಂಗಾರ ಮಾಡು: ಕಣ್ಣಿಗೆ ಕಜ್ಜಳವೆಚ್ಚು ಬಣ್ಣಿಸಿ ಸೊಡರ್ವೆಟ್ಟನಿಟ್ಟು

ಪಾಲೆಚಿ೯ದೋವಿ ಚಿಣ್ಣನ ಪಕ್ಕೆಗೈದಿದಳು (ವೋಚಹ. ೪-೬೪). ೪. ವಿಸ್ತಾರವಾಗಿ ಹೇಳು ; ವಿವರಿಸು ; ವರ್ಣಿಸು : ಸೌಧರ್ಮೇಂದ್ರಂ ನಿಮ್ಮ ರೂಪನಾದವಾನಂ ನಚ್ಚಿ ಬಣ್ಣಿಸಿದೊಡಿಂದ್ರನ ಮಾತಂ ನಂಬದೆ ನಿಮ್ಮಂ ನೋಡಲ್ ಬಂದೆಂ (ವಡ್ಡಾರಾ. ೬೭-೮) ; ಎಸಲಂ ಮುಟ್ಟಲೊಡಂ ತನ್ನ ಸೌರಭಂಗೆಟ್ಟು ನೆಗಟ್ಟ ಕಸ್ತೂರಿ ಮಣ್ಣಂ ಮಸಿಗಮೆಣೆಯಪ್ಪುದೆನೆ ಬಣ್ಣಿಸುವಂ ಕೇದಗೆಯ ಕಂಪನೇವಣ್ಣಿಸುವಂ (ಆದಿಪು. ೧೧-೧೧೭) ; ಅರಸ ಬಣ್ಣಿಸಲಳವೆ ನರನ ಮಹಾಸ್ತ್ರನಾಟಕವ (ಕುಮಾವ್ಯಾ. ೦೪-೬). ೫. ಹೊಗಳು ; ಕೊಂಡಾಡು ; ಸ್ತುತಿಸು : ದೇವರ್ಕಳೆಲ್ಲಮಾತನ ಶೀಲ ಪ್ರಭಾವಮಂ ಬಣ್ಣಿಸೆ (ಶಾಪುಂಶಿ. ೬೦) ; ಬಣ್ಣಿಪುದಿಳಾವಳೆಯಂ ಸಲೆ ಕಂಚಿಕಬ್ಬೆಯಂ (ಸೌಇಇ. XI—i, ೬೩-೪೦ ; 1028) ; ಭೀಷ್ಮಂಗೆ ಸಮರ ಸಮಾನಭಟನಿನ್ನಾವನೆಂದು . . . ಕೌರವರಾಯ ಬಣ್ಣಿಸಿದ (ಕುಮಾವ್ಯಾಭೀ. ೦-೩೩). **ವಣ್ಣಿಸು:** ೧. ಗಳ್ಳಿಕಣ್ಕುತ ಮುಂಸುಕಿ ಮುಂಬರಿವ ಶುನಿಗಳು ಎಸೆದುವಾ ದಂಡಿನೆಚ್ಚಱಿಕೆಯ ಕಾವಲೊಂದೆಸಕವಸೇನ ವಣ್ಣಿಸುವೆ (ಕಂಪಮ. ೦೮-೨೪). ೫. ಪಿರಿದನೀವ ನೆಗಟ್ತೆಯ ದಾನಿಯೆನ್ನು ನಾನಾ ವಿಧದಿನ್ದೆ ವಣ್ಣಿಪುದಿಳಾವಳಯಂ ಜಗದೇಕದಾನಿಯಂ (ಎಕ. VII, ಶಿಕಾಂ. ೦೫೦-೨೫ ; 1047). [ಬಣ್ಣನೆ + — ಇಸು₃]

**ಬತ್ತ₁** 'ಬ್ರತ' ನೋ.

**ಬತ್ತ₂** (ನಾ). [ಗಣಿತ] ಸಂಕಲನ ಮಾಡುವಿಕೆ ; ಕೂಡುವಿಕೆ : "ಯುತಂ, ಯುಕ್ತಂ . . . ಕೂಡು, ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು" (ಕೃವಚಾ. ೦೦-೨೦). [?]

**ಬತಗೆಡಿಸು** (ಕ್ರಿ.) ವ್ರತದಿಂದ ಭ್ರಷ್ಟನಾಗುವಂತೆ ಮಾಡು ; ವ್ರತಗೆಡಿಸು : ವ್ರತವುಳ್ಳವರ ಬತಗೆಡಿಸಿತ್ತು ನೋಡಾ ಮನವು (ಅಬಂವ. ೨೫೬-೦೦೪). [ಬತಗೆಡು + — ಇಸು₃]

**ಬತಗೆಡು** (ಕ್ರಿ). ವ್ರತಭ್ರಷ್ಟನಾಗು : ಗುಡಿ ತನಕ ಹೋಗಿ ಬರ್ತೇನೆ ಅಂದಿತ್ತಂತೆ ಒಂದು ಬತಗೆಟ್ಟ ಮುಂಕ್ಕ! (ಬೆಉಮು. ೪೫); ಹೆಣ್ಣು ಕಾಣದೆ ಬತಗೆಟ್ಟಿರುವನೇನು ? (ಕಾಗಳ. ೬೮). [ಬತ₁ (<ಬ್ರತ) + ಕೆಡು₁]

**ಬತಗೇಡಿ** 'ಬ್ರತಗೇಡಿ' ನೋ.

**ಬತಣಿಕೆ** 'ಬಂದಣಿಕೆ' ನೋ.

**ಬತಾರೀಕು** (ನಾ). ಆ ದಿನಾಂಕ ; ಆ ತೇದಿ : ಪೂಜೆ ಪಡಿತರ ದೀಪಾರಾಧನೆ ವಗ್ಯೆರೇ ಬಗ್ಗೆ ಬತಾರೀಕು ಯಿನಾಮು . . . ನಡಸಿಕೊಣ್ಣು ಬರುವದು (ಎಕ. VI, ಕೊಪ್ಪ. ೪೬-೬೬; 1811). [←ಪಾರ. ಮರಾ. ಬತಾರೀಖ್]

**ಬತಾಸು** 'ಬತ್ತಾಸು' ನೋ.

**ಬತೇರಿ,** ಬತ್ತೇರಿ (ನಾ). ಕೋಟೆಯ ಗೋಡೆಗಳನ್ನು ಎತ್ತರಿಸಿ ತುಪಾಕಿಗಳನ್ನಿಟ್ಟು ಶತ್ರು ಸೈನ್ಯಗಳಿಗೆ ಸಾವು ನೋವುಗಳನ್ನುಂಟು ಮಾಡುವಂತೆ ಏರ್ಪಡಿಸಿರುವ ದುಂಡನೆಯ ಪ್ರದೇಶ ; ಕೋಟೆಯ ಮೇಲಿನ ತೋಫ್‌ಖಾನೆ : ಹೆಡವಳಿ ಮಾರ್ಗದಿಂದ ಆ ಬೆಟ್ಟ ಕೋಟೆ ನುಗ್ಗಿ, ಮೂರು ನಾಲ್ಕು ಬತ್ತೇರಿಯನ್ನು ಆಕ್ರಮಿಸಿಕೊಂಡು (ರಾಜೇಂದ್ರ. ೫೦) ; ಬಲವಾದ ಬತೇರಿಗಳನ್ನು ಬಹು ಚಮತ್ಕಾರವಾಗಿ ಸುತ್ತಲೂ ಕಟ್ಟಿದಾರೆ (ಶಾಳಗಾ. ೯೬) ; ಅವರ ಸ್ಥೂಲಕಾಯ . . . ದಪನಾದ ಕೋಲು—ಒಂದೊಂದೂ ಬೆಟ್ಟದ ಮೇಲೆ ನಿಂತ ಬುರುಜು, ಬತೇರಿಗಳಂತೆ ಚಿತ್ರದುರ್ಗದ ಜನಕ್ಕೆ ಪ್ರೀತಿಪಾತ್ರವಾಗಿವೆ (ಹಂಗೀತ. ೫). **ಬತ್ತೇರಿ :** ಪಟ್ಟಣದ ಕೋಟೆ ಮುಂದೆ ಯೆರಡು ಹೊಳೆ ಮಧ್ಯ ಬತ್ತೇರಿಗಳ ತಯಾರು ಮಾಡಿಸಿ ಆ ಬತ್ತೇರಿಗಳ ವಳಗೆ ತಮ್ಮ ಫೌಜನ್ನು ನಿಲ್ಲಿಸಿ (ರಾಜೇಂದ್ರ. ೨೮) ; ಕುಂತ್ತರಿಗೆ ಬೆಂಕಿ ಹತ್ತಲು ಬತ್ತೇರಿಗೆ ಓಡಿದರೆ ನಂದೀತ ? (ಗಾದ). 'ಬುರುಜು', 'ಬ್ಯಾಟರಿ' ನೋ.
[←ಇಂ. Battery]

**ಬತ್ತ,** ಭತ್ತ₁, ವತ್ತ (ನಾ). ಒಂದು ಬಗೆಯ ಧಾನ್ಯ ; ನೆಲ್ಲು : ಜಗದ್ಗೃಹನೆಂಬೊಂ ತನ್ನ ಬತ್ತಮಂ ಚಂಪಾನಗರಕ್ಕೆ ಮಾಱಲೆಂದು ಕೊಂಡು ಪೋಗಿ ಬತ್ತಮುನಳೆವಲ್ಲಿಯಾ ಮೂವರ ದೋಷಂಗಳುಂ ಪ್ರಕಟವಾಗಿ (ವಡ್ಡಾರಾ. ೨೦-೦೬) ; ಅಗ್ಗಳದ ಬತ್ತದ ಪೆರ್ವೆಳಸಿಂದೆ . . . ದೊರೆವೆತ್ತುದು ವೆಂಗಿಮಂಡಲಂ (ಆಶ್ಕೆ. ೦-೨೨) ; ಗಂಧಶಾಲಿಯ ಬತ್ತದೊಳಗಿರ್ದ ಕಳೆಯ ಕೀಳ್ವಂದದೆ ಖಳರ ಶೀರ್ಕಣಿಸಿ (ಪೋಚಹ. ೪೨-೬೩). **ಭತ್ತ :** ಭತ್ತಮುಮವತ್ ಕವಿಲೆಯ ಪಾಲು ಎಱ್ಱಂ (ಎಕ. VI, ಕೊಪ್ಪ. ೬೭-೨; ಸು. 675 ?) ; ವಿಂಕ್ಕ ದೇವರ ಮನೆಯ ಭತ್ತಮಂ ಕೊಟ್ಟಣಕ್ಕಿಕ್ಕ ಬರುತಿರೆ (ಸಿದ್ಧರಾ. ೬-೦೨) ; ಕನಸಿನ ಭತ್ತಕ್ಕೆ ಗೋಣಿಯನಾಂಪ್ಯೆ ನೃಪತೀ (ಕಾವ್ಯಸಾ. ೫೮೦) ; ಒಂದು ಪಡಿ ಭತ್ತಕೆ ಬಾಯ ಬಿಡಿಸ್ಯಾಳಣ್ಣ (ಪುರಂದ. ೦-೦೬೨-೨). **ವತ್ತ₁ :** ಇಪ್ಪತ್ತಯ್ಗಣ್ಡುಗಂ ವತ್ತ ತೆಱುವೊದು (ಎಕ. XIV, ತಿರುಮ. ೨೫೩-೬ ; ಸು. 800).

**ಭತ್ತದರಳು**=ನೆಲ್ಲನ್ನು ಹುರಿದು ಮಾಡಿದ ಅರಳು ; ಲಾಜೆ : ಕನ್ನೈದಿಲೆಗೆಡ್ಡೆ, ಖರ್ಜೂರ ಇವುಗಳನ್ನೆಲ್ಲಾ ಕಷಾಯವಿಟ್ಟು . . . ಭತ್ತದರಳಿನ ಚೂರ್ಣವನ್ನು ಹಾಕಿ ತೆಗೆದುಕೊಳ್ಳಲು . . . ಕಾಮಾಲೆ ಸಹ ಗುಣವಾಗುವುವು (ಸಳವ್ಯ. ೯೩).

[<ಪ್ರಾ. ಭತ್ತ=ಅನ್ನ./ಸಂ. ಭಕ್ತ=ಅನ್ನ./ತಮಿ. ವತ್ತ=ಅನ್ನ ; ಮಲ. ವತ್ತ; ತುಳು. ಬತ್ತ್=ಅನ್ನ]

**ಬತ್ತಂಗುಟ್ಟು,** ಬತ್ತಕುಟ್ಟು, ಬತ್ತಗುಟ್ಟು (ಕ್ರಿ). ೧. ಅಕ್ಕಿ, ಅವಲಕ್ಕಿ ಮುಂತಾದುವನ್ನು ಮಾಡಲು ಒರಳಿನಲ್ಲಿ ನೆಲ್ಲನ್ನು ಹಾಕಿ ಕುಟ್ಟು,—ಕೊಟ್ಟಣಕ್ಕೆ ಹಾಕು : ಬತ್ತಂಗುಟ್ಟುವರಂತೆ . . . ದರ್ಶನಮುಂ ನಿಶ್ಶಂಕೆಯುಮೆಂಬೆರಡುಮಂ ಲೇಸು ಮಾಡುವುದು (ಧರ್ಮಾಮೃ. ೨-೪). **ಬತ್ತಕುಟ್ಟು :** ೧. ಹಿಂದಿನ ಕಾಲದಲ್ಲಿ ಮನೆಯಲ್ಲೇ ಬತ್ತ ಕುಟ್ಟಿ ಅಕ್ಕಿ ಮಾಡಿ ಬಳಸುತ್ತಿದ್ದರು (ರೂಢಿ). ೨. (ಆಲಂ) (ಭಯ, ಆತಂಕ ಮೊದಲಾದುವುಗಳಿಂದ ಹೊಟ್ಟೆಯಲ್ಲಿ) ತಳಮಳವಾಗು : ಪರೀಕ್ಷೆ ಹತ್ತಿರ ಬಂದಂತೆಲ್ಲಾ ನನ್ನ ಹೊಟ್ಟೆಯಲ್ಲಿ ಬತ್ತ ಕುಟ್ಟಲು ಮೊದಲಾಯಿತು (ರೂಢಿ). **ಬತ್ತಗುಟ್ಟು :** ೧. ಮೃತ್ಯು ಮಾರಿಯರೆನ್ನ ಮನೆಯಲಿ ಬತ್ತಗುಟ್ಟುವರು (ಕೌಶರಾ. ೧೦-೬೦). [ಬತ್ತ + ಕುಟ್ಟು₁]

**ಬತ್ತಕುಟ್ಟು** 'ಬತ್ತಂಗುಟ್ಟು' ನೋ.

**ಬತ್ತಗುಟ್ಟು** 'ಬತ್ತಂಗುಟ್ಟು' ನೋ.

**ಬತ್ತಲಿಕೆ** 'ಪತ್ತಲಿಕೆ₁' ನೋ.

**ಬತ್ತಲಿಗ,** ಬೆತ್ತಲಿಗ (ನಾ). ೧. ಬಟ್ಟೆಯನ್ನು ಧರಿಸದಿರುವವನು; ನಗ್ನ; ದಿಗಂಬರ : ಆ ನಿರ್ಲಜ್ಜಂ ಬತ್ತಲಿಗನಪ್ಪ ಸವಣನಲ್ಲಿಗೆ ಪೋಗಿ ಕಂಡು ನುಡಿದು ಕಾಡಿ ಬರ್ಪಂ ಬಾ ಮಗಳೆ (ವಡ್ಡಾರಾ. ೨೨-೨೨). ೨. ಜೈನಸಂನ್ಯಾಸಿ : ಬತ್ತಲಿಗರ ಮಾತಂ ಕೇಳ್ದುತ್ತಮುಮೆನಿಸಿರ್ದ ಕುಲಮನಟಿದೈ (ಧರ್ಮಾಮೃ. ೮-೯೩). **ಬೆತ್ತಲಿಗ :** ೨. ಬೆತ್ತಲಿಗರ ನುಡಿಗೇಳಿ ರಾಜ್ಯಸಂಪತ್ತ ತೋರದೀಡಾಡೆ (ಅದಿಪ. ೦೦-೫). [ಬತ್ತಲೆ₁ + — ಇಗ]

**ಬತ್ತಲಿರ್,** ಬತ್ತಲಿರು, ಬತ್ತಲೆಯಿರ್ (ಕ್ರಿ). ಮೈಮೇಲೆ ಬಟ್ಟೆಯಿಲ್ಲದಿರು; ನಗ್ನವಾಗಿರು ; ವಿವಸ್ತ್ರವಾಗಿರು : ಕೃತ್ತಿವುಡೆಯನ್ನಿತ್ತಮೆ ನೀಂ ಬತ್ತಲಿರಲೇಕೆ (ಬಸಪು. ೦೮-೦೪). **ಬತ್ತಲಿರು :** ಬತ್ತಲಿದ್ದವಗೆ ಭಯವಿಲ್ಲ (ಸರ್ವಜ್ಞ. ೫೫೦). **ಬತ್ತಲೆಯಿರ್ :** ಬತ್ತಲೆಯಿರ್ಪುದರಿದೋ ಸೀರೆಯುಟ್ಟಿರ್ಪುದರಿದೋ (ಧರ್ಮಾಮೃ. ೬-೬೦); ಬತ್ತಲೆ ಪೂಜ್ಯಮಲ್ಲದೊಡೆ ಬತ್ತಲೆಯಪ್ಪ ದಿನೇಶಬಿಂಬಮಂ ಬತ್ತಲೆಯಿರ್ಪ ಮಕ್ಕಳುಗಳಂ . . . ಕಂಡು ಮಾನಿಸರ್ಸತ್ತವರಾರೊ (ಧರ್ಮಾಮೃ. ೯-೬೬).
[ಬತ್ತಲೆ₁ + ಇರು₁ (<ಇರ್₁)]

**ಬತ್ತಲಿರು** 'ಬತ್ತಲಿರ್' ನೋ.

**ಬತ್ತಲಿಸು** (ಕ್ರಿ). ಬರಿದಾಗಿರು ; ಬೋಳಾಗಿರು : ಎಲೆಗಳೆದು ಬತ್ತಲಿಸಿ ನಿಂದ ತರುಕುಲದಂತೆ (ವಾಗೀಶ. ದೇ. ೨೩೪–೦೬); ಅಜ್ಞಾನವೇ ಸುತ್ತ ಬತ್ತಲಿಸಿದೆ (ಗಂಗಾತ. ೩೨–೦೬).

[ಬತ್ತಲು$_2$ (<ಬತ್ತಲೆ$_1$) + — ಇಸು$_3$]

**ಬತ್ತಲು$_1$** (ನಾ). ಒಣಗಿದ ತರಕಾರಿ, ಹಣ್ಣು ಮುಂತಾದುವು ; ತಳಲು : ಮಾವಿನ ಬತ್ತಲು ಹುಣಸೆಯ ಹಣ್ಣು . . . ತದುಕಿನ ತಿರುಳು ಇವು ಸಂಭಾರವಸ್ತುಗಳು (ಸೂಶಶಾ. ೪–೦ ಅ೩೬).

[ಬತ್ತು$_1$ + —ಅಲು ( < —ಅಲ್$_2$ ) ./ ತಮಿ.ವಟ್ಟಲ್]

**ಬತ್ತಲು$_2$** 'ಬತ್ತಲೆ$_1$' ನೋ.

**ಬತ್ತಲೆ$_1$**, ಬತ್ತಲು$_2$, ಬೆತ್ತಲೆ$_1$ (ನಾ). ೧. ಮೈಮೇಲೆ ಬಟ್ಟೆ ಮೊದಲಾದುವುಗಳ ಹೊದಿಕೆಯಿಲ್ಲದಿರುವುದು; ನಗ್ನತೆ : ಬತ್ತಲೆ ಪೂಜ್ಯಮಲ್ಲದೊಡೆ . . . ಬತ್ತಲೆಯಿರ್ಪ ಮಕ್ಕಳುಗಳಂ . . . ಕಂಡು ಮಾನಿಸರ್ ಸತ್ತಮರಾರೊ (ಧರ್ಮಾಮೃ. ೪–೭೬); ಬತ್ತಲೆಯ ಬಾಳ್ವೆಣಂಗಳು ಸುತ್ತ ಮುತ್ತಿರಲು (ವಾಗೀಶ. ದೇ. ೨೩೩–೦); ಎಲೆ ಮಗಳೆ ನಿಮ್ಮ ಸವಣರ್ ಸತ್ತು ದೇವಲೋಕದೊಳು ಬತ್ತಲೆಯ ಸವಣರಾಗಿ ಪುಟ್ಟುವರ್ (ಪುಣ್ಯಾಸ್ರ. ೩–೪೬ ವ). ೨. ಬರಿದಾದುದು; ಶೂನ್ಯವಾದುದು; ರಿಕ್ತವಾದುದು : ಹೊತ್ತು ಮುಣುಗುತ ಬಂತು ಬತ್ತಲೆಯ ಜಗಕೆಲ್ಲ (ಕನ್ನಶಾ. ೨೪೪). ೩. ದಿಗಂಬರಸಂನ್ಯಾಸಿ; ಜೈನಭಿಕ್ಷು : ಪುತ್ತುಂ ಬತ್ತಲೆಯುಂ ಬಱಿದಿಲ್ಲೆಂಬೀ ನಾಣ್ನುಡಿಯುಂಟಪ್ಪುದು (ಧರ್ಮಾಮೃ. ೮–೬೦); ಎಲೆ ದೇವರೆ ಪುತ್ತುಂ ಬತ್ತಲೆಯುಂ ಬಱಿದಿಲ್ಲದೆಂಬರ್ (ಜುಹೋಕ. ೪–೦೩). (ಗು). ೪. ನಗ್ನವಾದ ; ಬರಿಮೈಯಿಂದಿರುವ : ತದಾಮ್ರವನದೊಳೊರ್ವಂ . . . ಬ[ಪಾಠಾಂ. ಬೆ]ತ್ತಲೆ ಮರುಳಂತೆ ತನ್ನೊಳೆ ಮಿನುಕುತ್ತುಂ ಮೋನದೊಳಿರ್ಪಂ (ಧರ್ಮಾಮೃ. ೮–೨೬); ಎತ್ತಿದ ಕಯ್ಯ ಕತ್ತಿಗೆ ಭಯಂಗೊಳ್ . . . ಬಪ್ಪ ಬತ್ತಲೆ ಮರುಳ್ಗಳ್ ತಂಡದಿನೇಂ ಮಹೋಗ್ರಮೋ (ಶಂಹು. ೨–೦೭). **ಬತ್ತಲು$_2$** : ೨. 'ಬತ್ತಲಿಸು' ಪರಾ. **ಬೆತ್ತಲೆ$_1$** : ೫. ಮುಚ್ಚುಮರೆಯಿಲ್ಲದುದು; ನಿಚ್ಚಳವಾದುದು : ಇದೂ ನಾಟಕವಲ್ಲ . . . ಕೇವಲ ನಿಜ, ಬೆತ್ತಲೆಯ ಸತ್ಯ (ರಂಗಪಾ. ೦೭೨). ೬. ಮುಚ್ಚುಮರೆಯಿಲ್ಲದ; ನಿಚ್ಚಳವಾದ : ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು (ವರಮು. ೩೦–೦).

**ಬತ್ತಲೆಗುದುರೆ**=ಜೀನು ಹಾಕಿರದ ಕುದುರೆ: ಗಂಡ ಮಾದೇವರಾಯ ಹತ್ತಿದ ಬತ್ತಲೆಗುದುರಿ ಹತ್ತಿದ ಬತ್ತಲೆಗುದುರಿ ಹೊಂಟಾನತ್ತೆಯ ಮನೆಗೆ (ಕನ್ನಜಾ. ೬೨–೦೪).

[ದೇ.॥ ತುಳು. ಬತ್ತಲೆ, ಬೇತಲ್, ಬೇತಾಳ್; ತೆಲು. ಬತ್ತಲ]

**ಬತ್ತಲೆ$_2$**, ಬೆತ್ತಲೆ$_2$ (ಅ). ಮೈಮೇಲೆ ಬಟ್ಟೆಯಿಲ್ಲದೆ ; ನಗ್ನವಾಗಿ ; ವಿವಸ್ತ್ರವಾಗಿ : ಬೇಡಿದ ಭೂಷಣಂಗಳಂ ಬತ್ತಲೆ [ಪಾಠಾಂ. ಳೆ] ಬಾಂಗಿತಾಂಗುವಳೆ (ಮಲ್ಲಿಕಾ. ೭–೮೦); ಒರ್ವಳ್ ನೀಱೆ ಮೈಯೊಡ್ಡಿ ಬತ್ತಲೆ ನಿಂದಿರ್ದಳೆರಲ್ಗೆ ತೀರ್ದ ರತಖೇದಶ್ರಾಂತಿಯಿಂ ಬಿಚ್ಚತಂ (ಸೂಕ್ತಿಸು. ೦೪–೭೪); ಬತ್ತಲೆ ತಿರುಗುವ ಜನರಿರುವೆಡೆಯೊಳು ಅಗಸನು ಮಾಡುವುದೇನು (ಇಂಪಾಶ. ೦೩೬–೭೮). **ಬೆತ್ತಲೆ$_2$** : ಎಲೆ ಯತಿ ಮುಕ್ತಭಾವ ನೀನೇಕೆ ಬೆತ್ತಲೆ ಬಂದೆ (ಶೇಟಿಸಂ. ೦೪–೦೩) ; ಹುತ್ತವನೇಱಿದವರು ಹುಲ್ಲುಗಳ ಕಚ್ಚಿ ಬೆತ್ತಲೆ ನೀರ ಹೊಕ್ಕವರು ಕತ್ತಿ ಕಠಾರಿಯ ಬಿಸುಟ ಕಾಲಾಳಿನ ಮೊತ್ತವನೇನ ಬಣ್ಣಿಸುವೆ (ಕಂಪಚ. ೦೩–೯೭). [<ಬತ್ತಲೆ$_1$]

**ಬತ್ತಲೆಗ**, ಬೆತ್ತಲೆಗ (ನಾ). ೧. ದಿಗಂಬರಸಂನ್ಯಾಸಿ ; ಜೈನಭಿಕ್ಷು: ಈ ನಿನ್ನರ್ಥಗಪ್ಪಡದ ಯತಿಯರ ಧರ್ಮಮೊಳ್ಪಿತಲ್ತಿವರುಟ್ಟರುಮಲ್ಲರ್ ಬತ್ತ[ಪಾಠಾಂ. ರ್ಬೆ]ಲೆಗರುಮಲ್ಲರ್ (ವಡ್ಡಾರಾ. ೯೩–೦೨) ; ತಲೆವಱಿದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಬೆವೆಂಬ ಬತ್ತಲೆಗರ ಮಾತುಗೇಳದಿರು (ಅದಿಪು. ೨–೪) ; ಸತ್ತು ಸಗ್ಗದ ಸತಿಯರನು ಕೂಡುವೆನೆಂಬ ಬತ್ತಲೆಗರ ಮಾತು ಕೇಳಿ ಉತ್ತಮ ರೂಪವತಿಯರ ಭೋಗಂಗಳನೊತ್ತರಿಸುವೆನೆನಬಹುದೆ (ಶೇಟಿಸಂ. ೩೪–೩೪). **ಬೆತ್ತಲೆಗ** : ೨. ಬೆತ್ತಲೆಯಾಗಿರುವವನು ; ನಗ್ನ : ಉಡಿಗೆ ತೊಡಿಗೆ ಇಟ್ಟವರು ವೇಸಿಯಂ ಸೋಂಕಲೊಡನೆ ಬೆತ್ತಲೆ[ಪಾಠಾಂ. ಲಿ]ಗರಾಗಿಹರು (ಗೂಮ್ಯಕ. ೨–೦೦೦).

[ಬತ್ತಲೆ$_1$ + — ಗ$_2$]

**ಬತ್ತಲೆಗಣ್ಣು**, ಬೆತ್ತಲೆಗಣ್ಣು (ನಾ). ೧. (ಆಲಂ) ಜ್ಞಾನದ ಪ್ರಭಾವವಿರದ ಕಣ್ಣು : ಕತ್ತಲೆಯು ಗವಿಯಯ್ಯ ಕವಿಹೃದಯದಾ ಗುಹ್ಯ; ಬಯಲು ಬತ್ತಲೆಗಣ್ಣಿಗದು ಅಸಹ್ಯ (ಅಶೀಕೇ. ೨–೦೨). **ಬೆತ್ತಲೆಗಣ್ಣು** : ೨. ಕನ್ನಡಕದ ಸಹಾಯವನ್ನು ಹೊಂದದ ಕಣ್ಣು ; ಬರಿಗಣ್ಣು : ಆ ಮಹಾರತ್ನದ ಪ್ರಭೆ ಅವನ ಬೆತ್ತಲೆಗಣ್ಣಿನ ಮೇಲೆ ಬಿದ್ದೊಡನೆಯೇ ಅವನು ಕುರುಡನಾದನು. (ಯೋರಕ್ಕ. ೬೮). [ಬತ್ತಲೆ$_1$ + ಕಣ್ಣು(<ಕಣ್)]

**ಬತ್ತಲೆಯಿರ್** 'ಬತ್ತಲಿರು' ನೋ.

**ಬತ್ತಳಿಕೆ** 'ಪತ್ತಳಿಕೆ$_1$' ನೋ.

**ಬತ್ತಳಿಗೆ** 'ಪತ್ತಳಿಕೆ$_1$' ನೋ.

**ಬತ್ತಾಯ**, ಭತ್ತ$_2$, ಭತ್ತಾಯ, ಭತ್ತೆ, ಭತ್ಯ (ನಾ). ೧. ಬತ್ತದ ಬೆಳೆಯಿಂದ ಬರುವ ಉತ್ಪನ್ನ,–ವರಮಾನ : ಕಾಡರಂಬ ನೀರಾರಂಬಕೆ ಸಲುವ ಕೆಱೆ ಕುಂಟೆ ಕೊಣನು ಅಬೆ ಅಚುಕಟುದರೆ ನೆಡಳೆ ಸಕಳಾ ಬತ್ತಾಯ (ಎಕ. X (S), ಕೋಲಾರ. ೩೦೪–೦೩ ; 17ನೆಯ ಶತ). ೨. ಜೀವನನಿರ್ವಹಣೆಗಾಗಿ ಕೊಡುವ ಹಣ ; ಜೀವನಾಂಶ : "ಬತ್ತಾಯ–ಭೃತ್ಯಾ=ಅಶನಾರ್ಥ" (ಶಬ್ದಕೋ. ೨೮) ; ಆಂ ಬಂದ ದಿನಮೊದಲಿಂದು ತನಕೆನ್ನ ಹಿಂದುಳಿದ ಬತ್ತಾಯ ಬಂದುದು (ಹಪಕಾ. ೦೦–೮). **ಭತ್ತ$_2$** : ೩. "ಸರ್ಕಾರಿ ನೌಕರರಿಗೆ ನೀಡುವ ಹೆಚ್ಚುವರಿ ಸಂಬಳ ; ನ್ಯಾಯಾಲಯವು ಸಮನ್ಸುಗಳನ್ನು ಜಾರಿ ಮಾಡುವಾಗ ತಾತ್ಕಾಲಿಕ ನೌಕರರಿಗೆ ಕೊಡುವ ಹಣ, ಕಚೇರಿ ಕೆಲಸದ ಮೇಲೆ ಮಾಡುವ ಪ್ರಯಾಣದ ಖರ್ಚಿಗಾಗಿ ಸಿಬ್ಬಂದಿಗೆ ಕೊಡುವ ಹಣ ಮುಂತಾದುವು" (ಕೃಸಗ. ೩೪೪). **ಭತ್ತಾಯ** : ೧. ಆ ದೇವರ್ಗ್ಗೆ ಬಯ್ಗಿನ ನಿವೇದ್ಯಕೆ ಭತ್ತಾಯ ಹೇರ್ಗೆ (ಎಕ. VII, ಶಿಕಾ. ೨೬೭–೩ ; 1147): ಅರಸರ ಸಿದ್ಧಾಯ ಭತ್ತಾಯದೊಳ × × ವದಲು . . . ನಿ[ವೇ] ದ್ಯದ ತುಪ್ಪಕ್ಕೆ ಕೊಟ್ಟರು (ಸೌಇಇ. XI — ii, ೨೦೬–೦೨ ; ? ). **ಭತ್ತೆ** : ೩. ಸಂಬಳ, ಬಡತಿ, ಭತ್ತೆ ಪಿಂಚಣಿ, ಪದವಿ ಇವೇ ಈ ವರ್ಗದ ಪಂಚಪ್ರಾಣಗಳಾದವು (ಮೂವಾದ. ೯೩) ; ಮಾರಾಟದ ಉತ್ಪನ್ನದ ಮೇಲೆ ಭತ್ತೆ . . . ಪ್ರವಾಸದ ಸೌಕರ್ಯ ಇವೆಲ್ಲ ಇದ್ದುವು (ವಾತ್ಸಲ್ಯ. ೩೩). **ಭತ್ಯ** : ೩. ಇಲಾಖೆಯಲ್ಲಿದ್ದಾಗ ನೂರೆಪ್ಪತ್ತೈದು ರೂಪಾಯಿಗಳ ಸಂಬಳ ಬರುತ್ತಿತ್ತು. ಮೇಲೆ ಭತ್ಯ ಬರುತ್ತಿತ್ತು (ರಂಗಳ. ೩) ; ಸುಲ್ತಾನನ ರಾಜ್ಯದಲ್ಲಿ ಹೋದ ಕಡೆಯಲ್ಲೆಲ್ಲಾ ನಮಗೆ ಬೇಕಾದ ಭತ್ಯವನ್ನೂ ಒದಗಿಸಿ ಕೊಡಬೇಕೆಂದು ಅಪ್ಪಣೆಯಾಗಿತ್ತು (ಶ್ರವಾಇ. II, ೬೭). 'ಭತ್ತಾದಾಯ' ಪರಾ. [ಬತ್ತ$_1$ +ಆಯ$_7$ ./ ಹಿಂ. ಭಾತ್; ಮರಾ. ಭತ್ತಾ. / ಸಂ. ಭೃತ್ಯಾ. / ಲ್ಯಾಟಿನ್ . ಬಸ್ತುವಮ್. / ಇಂ. Batta]

**ಬತ್ತಾಸ** 'ಬತ್ತಾಸು' ನೋ.

**ಬತ್ತಾಸು**, ಬತಾಸು, ಬತ್ತಾಸ (ನಾ). ಸಕ್ಕರೆಯ ಪಾಕದಿಂದ ಮಾಡುವ ಬಗೆಬಗೆಯಾಕಾರದ ಬಗೆಬಗೆಯ ಬಣ್ಣದ ಒಂದು ಸಿಹಿ ತಿಂಡಿ : ಆ ರೊಕ್ಕ ಕೊಟ್ಟು ಬೆಂಡು, ಬತ್ತಾಸು ತಕ್ಕೊಂಡು ತಿನ್ನುವ (ಮುಂಬಯಿ. ೪–೪೪) ; ಅವರು ಮಂಡಕ್ಕಿ, ಹುರಿಕಡಲೆ, ಬೆಂಡು, ಬತ್ತಾಸು ಕೊಂಡುಕೊಂಡರು (ಕಶಕ್ಕ. ೩–೨೩). **ಬತಾಸು** : ಗೋದುವೆ ತಂಡುಲಾದಿ ಬಹುಚೂರ್ಣಂಗಳೊಡೆವೆರಸಿ ಸಕ್ಕರೆಯ ಪರಿಪಾಕದಡಿಗೆಯಿಂ ಘೃತದೊಡನೆ

ಗೈದ ಲಡ್ಡಿಗೆ ಬತಾಸು . . . ಕೊಡುತ (ಸಕಪೋ. ೦೬-೬೦); ಗಂಡು ಹೆಣ್ಣಿನ ಮೇಲೆ . . . ಕಾಳು, ಬತಾಸು ಮುಂತಾದ ಸಿಹಿತಿಂಡಿಗಳನ್ನು ಎಸೆಯುತ್ತಾರೆ (ಕೃಜಾಇ. II. ೯೯೬). **ಬತ್ತಾಸ** : ಸಕ್ಕರೆಯ ಬೆಂಡು ಬತ್ತಾಸಗಳ ಪರ್ವತವೇ ಬಿದ್ದಿತು (ಹಸ್ಯಾಬ. ೬೦) ; ಬಂದ ಮುತ್ತೈದೆಯರಿಗೆ, ಕುವಾರಿಯರಿಗೆ . . . ಪೇಢೆ, ಬತ್ತಾಸಗಳನ್ನು ಹಂಚುತ್ತಾರೆ (ಶಾಹಕ್ಕ. ೬೨). [←ಹಿಂ. ಬತಾಸಾ, ಬತಾಶಾ; ಮರಾ. ಬತ್ತಾಸಾ, ಬತಾಸಾ]

**ಬತ್ತಿ** (ನಾ). ೧. (ದೀಪಕ್ಕೆ ಹಾಕುವ) ಹುರಿ ಮಾಡಿದ ಹತ್ತಿಯ ಎಳೆ, —ತಿರಿ; ವರ್ತಿ : ಸೊಡರೊಳ್ ಬತ್ತಿಯುಮೆಣ್ಣೆಯುಮೊಡನಟ್ಟುದ ವೊಲ್ವಾಯುವುಂ ಶರೀರಮು[ಮು]ಮಳಂತೊಡದವೆ ನೋಂತಂ ಮುನಿ ಮುನ್ನೊಡವೃಟ್ಟಿದುವೊಡನೆ ತವುವುದಾಚಿತ್ರಮೆನಲ್ (ಶಾಂತಿಪು. ೯-೦೦೯); ಪಣತೆಯೂ ಇದೆ ಬತ್ತಿಯೂ ಇದೆ ಜ್ಯೋತಿಯ ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೋ (ಅವಪಂ. ೦೯-೬೮) ; ಬತ್ತಿ ಹೆತ್ತುಪ್ಪವನ್ನು ಹೊತ್ತಿಸಿದ ಫಲವೇನು ಮತ್ತೊಂದು ದೈವಕೆಜಿಗುವನ ಶಿವಪೂಜೆ ಹತ್ತಿಗೇಡು (ಸರ್ವಜ್ಞ. ೦೬೨). ೨. ಸಿಡಿಮದ್ದನ್ನು ಹತ್ತಿಸಲು ಬಳಸುವ ಒಂದು ಬಗೆಯ ಸಾಧನ : ದಾದಲ್ಯಾ. . .ಖಾಡಿಯ ಬಾಯಿಗೆ ಮದ್ದು ಜಡಿದು, ಬತ್ತಿ ಸೇರಿಸುವ ಸನ್ನಾಹ ಮಾಡತೊಡಗಿದ (ದೀಪಕ. II. ೦೬೭); ಬತ್ತಿ ನೂಕಲಾರದ ಬಂಟ ದಳ ನಡಿಸ್ಯಾನೇ ? (ಗಾದೆ). 'ಜಾವಿಗೆಬತ್ತಿ' ಪರಾ. ೩. ಕಂದೀಲು; ವೋಂಬತ್ತಿ: (+). ೪. ವಿರೇಚನಚಿಕಿತ್ಸೆಗಾಗಿ ಔಷಧದಲ್ಲಿ ಅದ್ದಿ ಗುದದಲ್ಲಿ ಇಡುವ ವೈದ್ಯಕೀಯ ಸಾಧನ ; ಔಷಧಿಯಲ್ಲಿ ಅದ್ದಿ ತೆಗೆದ ಹತ್ತಿಯ ತಿರಿ : ಸುರದಾರು ಸೊರೆಯ ಬೀಜಂ ಸುರವಾರುಣಿ ಬೆಲ್ಲಮೆಂಬಿವಿನಿತುಮನೊಂದಾಗಿರೆ ಮಿದಿದು ಮಾಡಿ ಬತ್ತಿಯನಿರಿಸುಗೆ ಗುದದೊಳಗೆ ಕಳೆಗುಮರಿಸೆಯ ಮೊಳೆಗಳ್ (ಲೋಕೋಪ. ೯-೦೯೯) ; ಪುಣಸೆಯ ಪಣ್ಣ ಬತ್ತಿಯೊಳ್ ಸೈಂಧವಮಂ ಬೆರಸಿ ಗುದಮುಖದೊಳಿಡೆ ಬಾಹಿರಮಕ್ಕುಂ ಕಠಿನಮಾಗಿ ಬಿಗಿದಿದ್ದ ಮಲಂ (ಅಶ್ವಶಾ. ೦೦-೨೬). ೫. ಸುಗಂಧವನ್ನು ಲೇಪಿಸಿರುವ ಕಡ್ಡಿ : 'ಅಗರುಬತ್ತಿ', 'ಊದುಬತ್ತಿ' ಪರಾ. ೬. ಹೊಗೆಸೊಪ್ಪು ಸೇದಲು ಎಲೆಯನ್ನು ಸುತ್ತಿ ಮಾಡಿದ ಸುರುಳಿ ; ಬೀಡಿ, ಚುಟ್ಟಾ ಮುಂತಾದುವು : ಬದುವಿನ ಮೇಲೆ ನಾಗಣ್ಣ ಬತ್ತೀ ಸೇದುತ್ತ ಕುಳಿತಿದ್ದ (ಪೀಐಮ. ೫) ; ಮಂದೀ ನಗಿಯೊಳಗ ಬತ್ತೀ ಕಮರಿನ ಹೋಗೀ ಎತ್ತ್ಯ. ಇದೇನು ಖಾಟ ನಮ್ಮವ್ವಾ ! (ಹೊಸಂಸಾ. ೮೯). ೭. (ಆಲಂ) ಎಳೆಯ ಮಗು ; ಹಸುಳೆ ; ಹಸಂಗೂಸಂ : "ಕುಡ—ಬಾಲ್ಯೇ, ಹಸುಳೆತನದೊಳ್ . . . ಕುಡು=ಬತ್ತಿ" (ಶಾಕಕ್ಕ. ೨೨೯) ; ತನ್ನ ತೊಡೆಯ ಮೇಲೆ ಮಗನನ್ನು ಕೂಡಿಸಿಕೊಂಡು ಹತ್ತು ತಿಂಗಳ ಬತ್ತಿಗೆ ಉಣ್ಣಿಸುವಂತೆ ಉಣ್ಣಿಸುವಳು (ವೃಪ. ೦೯೦). ೮. (ಹತ್ತಿಯ) ಚೂರಂ ; ತುಂಡು : ದೇವಾರ್ಚನೆಗಳಾದಿ ವಿಧಾನದೊಳು[ಳ] ಗಾಚರಿತರಾಗಿಹರಲ್ಲದುಣುವಾಗ ಪೀನಘಂಟೆಗಳುಳಿದು ಬತ್ತಿಗಳಾನಿಸುತ ಕರ್ಣದಲಿ (ಬಸವಪು. ೬-೨೯) ; ಕಿವಿಯ ಕುಳಿಗಳಲ್ಲಿ ಪಚ್ಚೆಕಪ್ಪುರದ ಬತ್ತಿಗಳನಿತ್ತು (ಶೌಗಂಂ. ೫೦೬-೦).

**ಬತ್ತಿಕೊಡು** = (ಆಲಂ) ಮೋಸ ಮಾಡು ; ದಗಾ ಹಾಕಂ : ಈ ಹಾಳು ಸುಳಾಲಿ ಇವೊತ್ತು ಬತ್ತಿ ಕೊಟ್ಟ (ಬೆಳವು. ೦೬೬) ; ನನ್ನ ದೋಸ್ತಿಗಳೇ ನನ್ನ ಬುಡಕ್ಕೆ ಬತ್ತಿ ಕೊಟ್ಟರು (ಕಂಗೂಶ. ೯೫). **ಬತ್ತಿಯಿಡು** =ಕೆಡಕು ಮಾಡುವುದಕ್ಕಾಗಿ ಚಾಡಿಹೇಳು: ಹೊಟ್ಟೆಕಿಚ್ಚಿನಿಂದ ಕೆಲವರು ಬತ್ತಿಯಿಟ್ಟು ಅವರ ಸಂಸಾರವನ್ನೇ ಹಾಳು ಮಾಡಿದರು (ರೂಢಿ). **ಬತ್ತಿ ಹಚ್ಚು** = ಆಸ್ಫೋಟನೆಯನ್ನುಂಟುಮಾಡು : ನಾಲ್ಕಾರು ಜನರ ಮಧ್ಯೆ ಓಡಾಡಿ ಬತ್ತಿ ಹಚ್ಚುವುದೇ ಅವನ ಸ್ವಭಾವ (ರೂಢಿ).

[← ಹಿಂ. ಬತ್ತೀ. / ಸಂ. ವರ್ತಿ]

**ಬತ್ತಿಕೋವಿ** (ನಾ). ಹತ್ತಿಯಿಂದ ಬೆಂಕಿ ಹಚ್ಚುವ ಸಿಡಿಮದ್ದಿನ ಬಂದೂಕ : ಬತ್ತಿಕೋವಿ, ಭರ್ಜಿ, ಈಟಿ, ಉದ್ದಗತ್ತಿ, ಬಿಲ್ಲುಬಾಣಗಳ ಸಾಹಸಿಗಳೂ ಅಲ್ಪ ಸ್ವಲ್ಪ ಇರುತ್ತಿದ್ದರು (ಪುಲಿಪು. ೬೫).

[ಬತ್ತಿ + ಕೋವಿ₁]

**ಬತ್ತಿಗೆ** (ನಾ). ನೀರು ಮುಂತಾದ ದ್ರವಪದಾರ್ಥಗಳನ್ನು ತುಂಬಿಡಲು ಹಾಗೂ ಸಾಗಿಸಲು ಬಳಸುವ ಚರ್ಮದ ಚೀಲ; ತಿತ್ತಿ: ನಾನಾವಿಧ ಪಾನಕದ ತುಂತುರುಗಳಿಂದ ಕೆಂಪಾಗಿರುವ ಗೋಚರ್ಮದ ಬತ್ತಿಗೆಯಂ ಪಿಡಿದು (ಕೃವಾಂ. ೫). [< ಸಂ. ಭಸ್ತ್ರಿಕಾ]

**ಬತ್ತಿಸು** (ಕ್ರಿ). ೧. ನೀರಿಲ್ಲದಂತೆ ಮಾಡು ; ಒಣಗಿಸಂ ; ಇಂಗಿಸಂ : ಬತ್ತಿಸಿದನಂದಹಿತಸುಭಟರ ವೀರಶರನಿಧಿಯ (ಕುಮಾವ್ಯಾ. ೨-೨೬) ; ಉಗ್ರನೇಜುವ ಮಹಾವಾಹನದ . . . ನಾಲ್ಕುಪಾದಾಗ್ರಹತಿಗೇಳ್ವ ಕೆಂಧೂಳ್ ಬತ್ತಿಸಿತು ಗಗನಗಂಗಾನದೀಜಲವನು (ಕೆಂಪು. ೯೯-೦೦) ; ಈ ಖಳಬಲಸಾಗರವನು ಕುಂಭಜನ ಆಗಮದಂದದೆ ಬತ್ತಿಪೆ (ಕಂಸಪ. ೦೨-೯೬). ೨. (ಬೆಂಕಿ, ದೀಪ ಮುಂತಾದುವನ್ನು) ಆರಿಸು ; ನಂದಿಸು : ಬಡಬಾಗ್ನಿಯ ಬಾಯನೆಯ್ದೆ ಬತ್ತಿಸುವುದು ತೇಜಂ (ಎಕ. VII. ಶಿಕಪೂ. ೯-೬೩ ; 1122) ; ಬತ್ತಿಯ ಬತ್ತಿಸಗೊಡದಲೆ, ಸುಡುತಿರಲು ಬೆಳಕಿನ ಕುಡಿಯಾಗಿ ಮೆರೆಯುವದು (ಹಲಗೀ. ೩೯-೯೮). ೩. ದ್ರವಪದಾರ್ಥವನ್ನು ಕುದಿಸಿ ಇಂಗಿಸು ; ಅಟ್ಟಿಸು : ಕಷಾಯವನ್ನು ಬತ್ತಿಸುವುದರಲ್ಲಿ ತುಸು ಹೆಚ್ಚು ಕಡಿಮೆಯಾದರೆ ಗಾಬರಿಯಿಲ್ಲ (ಮುಕಪು. ೨). ೪. ಅಡಗಿಸಂ; ಇಲ್ಲವಾಗಿಸು ; ನಾಶಮಾಡು : ಬತ್ತಿಸಿ ನೃಪಾಲರಾಟೋಪಮಂ ಕೋಪದಿಂ (ಜಕ್ಕಾಂಗ. ೬೨-೦೯೬). [ಬತ್ತು₁ + —ಇಸು]

**ಬತ್ತೀಸ** (ನಾ). ಒಂದಂ ಸಂಖ್ಯೆ ; ಮೂವತ್ತೆರಡು : ಕಂಬಳಿಯ ಹಚಿಕನಲ್ಲಿ ಬತ್ತೀಸಕೋಟಿ ದೇವರ್ಕಳೆಲ್ಲರು ಸಿಕ್ಕಿ ಅಳಲುತ್ತ ಬಳಲುತ್ತಲೈದಾರೆ (ಮೋಪಪಪ. ೯-೨೯) ; ಮಾದಿರಾಜಂ ಮತ್ತೆ ಬತ್ತೀಸಾದಿ ರಾಗಂಗಳ ಗನಿತು ದಂಡಿಗೆಗಳಂ ರಚಿಸಿ ವೇದಿಸಲು (ಬಸವ. ೦೯-೬) ; ಈ ವಚನಗಳು . . . ಅಂದು ಬಳಕೆಯಲ್ಲಿದ್ದ 'ಬತ್ತೀಸ' ಎಂದರೆ ೩೨ ರಾಗಗಳಲ್ಲಿ ಹಾಡಲ್ಪಡುತ್ತಿದ್ದವು (ಕಂಗೀಶಂ. ೭೯).

[< ಪ್ರಾ. ಬತ್ತೀಸ. / ಹಿಂ. ಮರಾ. ಬತ್ತೀಸ್. / ಸಂ. ದ್ವಾತ್ರಿಂಶತ್]

**ಬತ್ತೀಸಕಡಿ** (ನಾ). (?) : ಬತ್ತೀಸಕಡಿಯ ಬಾಹರಪುಟದ ಗುಳವದ ಕಣಂಗಳ ಕುಳಿಶದಳಂ (ಅವಂಪು. ೦೯-೬ ಪ). 'ಬತ್ತೀಸಾಯುಧ' ಪರಾ.

[ಬತ್ತೀಸ + ಕಡಿ₁]

**ಬತ್ತೀಸಕಲೆ** (ನಾ). [ವೀರಶೈ] ಮೂವತ್ತೆರಡು ಕಲೆಗಳು ; P "ಮೂವತ್ತೆರಡು (ಬತ್ತೀಸ) ಕಳೆಗಳು : ಸದಾಚಾರ, ಸದ್ಭಕ್ತಿ, ಸಮ್ಯಕ್‌ಜ್ಞಾನ, ಸತ್ಕ್ರಿಯೆ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ, ಅಕ್ರೋಧ, ಸತ್ಯವಚನ, ಕ್ಷಮೆ, ದಮೆ, ಭವಿಭಕ್ತಭೇದ, ಸತ್ಪಾತ್ರದ್ರವ್ಯಾರ್ಪಣ, ಗೌರವಬುದ್ಧಿ, ಲಿಂಗಲೀಯ, ಜಂಗಮಾನುಭಾವ, ದಶವಿಧಪಾದೋದಕ, ಏಕಾದಶಪ್ರಸಾದ, ಷೋಡಶಭಕ್ತಿನಿರ್ವಾಹ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ, ತ್ರಿವಿಧ ಷಡ್ವಿಧ ನವವಿಧ ಜಪ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಿತ, ಚಿದ್ಭೂತಿ ಸ್ನಾನ ಧೂಳನಧಾರಣ, ಸರ್ವಾಂಗದಲ್ಲಿ ಚಿದ್ರುದ್ರಾಕ್ಷಧಾರಣ, ತಾ ಮಾಡುವ ಸತ್ಯಶುದ್ಧ ಕಾಯಂಕ, ತಾ ಬೇಡುವ ಸದ್ಭಕ್ತಿ ಭಿಕ್ಷೆ, ತಾ ಕೊಟ್ಟು ಕೊಂಬುವ ಭೇದ, ತಾನಾಚರಿಸುವ ಸತ್ಯ ನಡೆನುಡಿ, ತಾ ನಿಂದ ನಿರ್ವಾಣಪದ —ಇಂತಿವು ೩೨ ಕಲೆಗಳು" (ಶಸಸ. ೪. ೯೦೮) : ಷೋಡಶಭಕ್ತಿಯ ಮಾರ್ಗವ ತಿಳುಹಿ ಬತ್ತೀಸಕಲೆಯ ನೆಲೆಯನರುಹಿ . . . ನಿರೂಪವ ಕೊಡಲು (ಶಸಸ. ೪. ೩೩೪-೬೬೬). [ಬತ್ತೀಸ + ಕಲೆ₁]

**ಬತ್ತೀಸಪುತ್ಥಳಿ** (ನಾ). ಮೂವತ್ತೆರಡು ಗೊಂಬೆಗಳು,—ವಿಗ್ರಹಗಳು. **ಬತ್ತೀಸಪುತ್ಥಳಿಕಥೆ, ಬತ್ತೀಸಪುತ್ಥಲಿಕತೆ** = ವಿಕ್ರಮಾದಿತ್ಯರಾಜನ ಸಿಂಹಾಸನದ ಎರಡು ಬದಿಗಳಲ್ಲೂ ಅಳವಡಿಸಿದ್ದ ಮೂವತ್ತೆರಡು ಗೊಂಬೆಗಳು ಸಜೀವವಾಗಿ, ಭೋಜರಾಜನಿಗೆ ಹೇಳಿದುವೆಂದು ಭಾವಿಸಲಾದ ಮೂವತ್ತೆರಡು ಕಥೆಗಳು : ವಿಚಿತ್ರವಸ್ತುಗಳನ್ನು ಕೇಳುವುದೆಂದರೆ ಮಕ್ಕಳಿಗೆ ಆನಂದ . . . ಬತ್ತೀಸಪುತ್ಥಳಿಕಥೆಗಳು ಈ ಮಾದರಿಯವು (ಶಾಂಕ್ರ. I, ೨೦೯) ; ಓದುವಾಗ . . . ಅದು ಬತ್ತೀಸ ಪುತ್ಥಲಿಕತೆಯಾದರೂ ಸರಿಯೆ ; ಯುವನಯಾಮಿನಿಕಥೆಗಳಾದರೂ ಸರಿಯೆ ಮನಸ್ಸಿಗೆ ಸಂತೋಷವಾಗುತ್ತದೆ (ಮೂಕಜ್ಜಿ. ೩). [ಬತ್ತೀಸ + ಪುತ್ತಳಿ]

**ಬತ್ತೀಸರಾಗ** (ನಾ). [ಸಂಗೀತ] ಪ್ರಸಿದ್ಧವಾದ ಮೂವತ್ತೆರಡು ಬಗೆಯ ರಾಗಗಳು ; ☞ "ರಾಗಗಳು — ೮ ಪುರುಷರಾಗಗಳು : ಭೈರವಿ, ಭೂಪತಿ (ಭೂಪಾಲ), ಶ್ರೀರಾಗ, ರಾಗಪಂಜರ, ವಸಂತ, ಮಾಲವ, ಬಂಗಾಲ, ನಾಟಕ (ನಟ್ಟ) ; ೨೪ ಸ್ತ್ರೀರಾಗಗಳು : ಭೈರವಿಗೆ : ದೇವಕ್ರಿಯಾ, ಮೇಘರಂಜೀ, ಕುರಂಜೀ; ಭೂಪಾಲಕ್ಕೆ : ಬೇಲಾವುಲೀ, ಮಲಹರಿ, ಭೌಲೀ ; ಶ್ರೀರಾಗಕ್ಕೆ : ಅಂಧಾಲೀ, ಭಲಾತೀ, ಮಾಹುರೀ; ರಾಗಪಂಜರಕ್ಕೆ: ದೇಶೀ, ಲಲಿತಾ, ತೋಡೀ; ವಸಂತಕ್ಕೆ : ರಾಮಕ್ರಿಯಾ, ವರಾಲೀ, ಕೌಶೀ ; ಮಾಲವಕ್ಕೆ : ಗುಂಡಕ್ರಿಯಾ, ಘೂರ್ಜರೀ, ಗೌಲೀ ; ಬಂಗಾಲಕ್ಕೆ : ಕರ್ಣಾಟ ಗೌಲಿಕಾ, ಧನ್ಯಾಸಿಕಾ, ಕಾಂಭೋಜೀ ; ನಟ್ಟವಿಗೆ : ದೇಶಾಕ್ಷೀ, ಆಹರೀ, ನಾರಾಯಣೀ (ಅಭಸಂ. ೧೦೧೪-೧೦೨೪)" (ಶ್ರೀವತ್ಸ. ೩೬೫) : ಎನ್ನ ಕಾಯುವ ದಂಡಿಗೆಯ ಮಾಡಯ್ಯಾ . . . ಬತ್ತೀ[ಶಾಕಾಂ. ಕ್ತ]ಸರಾಗವ ಹಾಡಯ್ಯಾ (ಬಸವ. ೩೦೦) ; ಶಿವನ ಮೂರ್ತಿಯನೊಲಿದು ಪಾಡುತಂ ಬತ್ತೀಸರಾಗಂಗಳಿಂದೆ (ರಾಶಶ. ೨-೦೯). [ಬತ್ತೀಸ + ರಾಗ]

**ಬತ್ತೀಸಲಕ್ಷಣ** (ನಾ). ಮೂವತ್ತೆರಡು ಬಗೆಯ ಗುರುತುಗಳು,—ಚಿಹ್ನೆಗಳು ; ☞ "(ಅ) ಲಕ್ಷಣ — ೩೨ (ಅ) ಮಹಾಪುರುಷಲಕ್ಷಣ (ಬತ್ತೀಸಶುಭಲಕ್ಷಣ) — ೩೨ : ಪಂಚಸೂಕ್ಷ್ಮಗಳು : ತ್ವಕ್, ಕೇಶ, ಅಂಗುಲಿ, ದಂತ, ಅಂಗುಲಿಪರ್ವ ; ಪಂಚದೀರ್ಘಗಳು : ಭುಜ, ನೇತ್ರ, ಹನು, ಜಂಘೆ, ನಾಸಿಕ ; ಸಪ್ತರಕ್ತಗಳು—ಹಸ್ತತಲ, ಪಾದತಲ, ಅಧರೋಷ್ಠ, ನೇತ್ರ, ತಾಲು, ನಾಲಗೆ, ಉಗುರು ; ಷಡುನ್ನತಗಳು—ವಕ್ಷಃಸ್ಥಲ, ಕುಕ್ಷಿ, ಕೇಶ, ಸ್ಕಂದ, ಹಸ್ತ, ಬಾಯಿ ; ಪೃಥುತ್ರಯಗಳು—ವಕ್ಷಸ್ಥಲ, ಕಟಿ, ಲಲಾಟ ; ಲಘುತ್ರಯಗಳು—ಗ್ರೀವಾ, ಜಂಘಾ, ಶಿಶ್ನ ; ಗಂಭೀರತ್ರಯಗಳು—ಸ್ವರ, ಕರ್ಣ, ನಾಭಿ (ಬೌದ್ಧಧರ್ಮಾನುಸಾರಸಂಗ್ರಹ — ಸಂ. ೨೨೪-೫). (ಆ) ಸಾಮುದ್ರಿಕಲಕ್ಷಣ — ೩೨ : ಛತ್ರ, ಕಮಲ, ಮನುಷ್ಯ, ರಥ, ವಜ್ರ, ಕಚ್ಛಪ, ಅಂಕುಶ, ವಾಪಿ, ಸ್ವಸ್ತಿಕ, ತೋರಣ, ಚಾಮರ, ಸಿಂಹ, ವೃಕ್ಷ, ಚಕ್ರ, ಶಂಖ, ಹಸ್ತಿ, ಸಮುದ್ರ, ಕಲಶ, ಪ್ರಾಸಾದ, ಮತ್ಸ್ಯ, ಯವ, ಸ್ತಂಭ, ಸೂರ್ಯ, ಕಮಂಡಲ, ಪರ್ವತ, ಚವರೀ, ದರ್ಪಣ, ವೃಷ, ಪತಾಕಾ, ಲಕ್ಷ್ಮೀ, ಪುಷ್ಪಮಾಲಾ, ಮಯೂರ (ಹಸ್ತಸಾಮುದ್ರಿಕ ಶಾಸ್ತ್ರ — ಸಂ. ೨೨೫-೨೨೬). ಸ್ವಶರೀರ, ಕುಲಿಶ, ದ್ವೀಪ, ಸಮುದ್ರ, ಭವನ, ವಿಮಾನ, ಬಾಣ, ಗೋಪುರ, ಇಂದ್ರಕೇತು, ಶಂಕ, ಪತಾಕ, ಮುಸಲ, ಹಯ, ರವಿ, ಶಶಿ, ಸ್ವಸ್ತಿಕ, ದಾರು, ಕೂರ್ಮ, ಅಂಕುಶ, ಸಿಂಹ, ಗಜ, ವೃಷಭ, ಮತ್ಸ್ಯ, ಛತ್ರ, ಶಯ್ಯಾ, ಆಸನ, ವರ್ಧಮಾನ, ಶ್ರೀವತ್ಸ, ಚಕ್ರ, ಅನಲ, ಕುಂಭ (?) (ಶಾಸ್ತ್ರಸಾರಸಮುಚ್ಚಯ)" (ಶ್ರೀವತ್ಸ. ೩೯೦). [ಬತ್ತೀಸ+ಲಕ್ಷಣ]

**ಬತ್ತೀಸಶಸ್ತ್ರ** (ನಾ). = ಬತ್ತೀಸಾಯುಧ : ಕಲಿಗೆ ಮುಖದರ್ಪಣ ಬತ್ತೀಸಶಸ್ತ್ರಶಾಸ್ತ್ರಪ್ರವೀಣ (ಕೊಲ್ಹಾಶಾ. ೯-೩೭ ; 1171) ; ಬತ್ತೀಸಶಸ್ತ್ರಗಳಲಿಟ್ಟು ಬೊಬ್ಬೆಯನಿಟ್ಟು . . . ಬಿತ್ತರದ ಪರಿಘಂ ಪೊಡೆಯೆ (ವೆಂಕಾರಾ. ೩-೦೩-೭). [ಬತ್ತೀಸ + ಶಸ್ತ್ರ]

**ಬತ್ತೀಸಾಯುಧ** (ನಾ). ಮೂವತ್ತೆರಡು ಬಗೆಯ ಅಸ್ತ್ರಗಳು ; ☞ ಈ ಆಯುಧಗಳ ವಿವರದ ಬಗ್ಗೆ ಬೇರೆ ಬೇರೆ ಗ್ರಂಥಗಳಲ್ಲಿ ವ್ಯತ್ಯಾಸಗಳಿವೆ. "ಆಯುಧ—೩೨ (ಬತ್ತೀಸಾಯುಧ) : ಚಕ್ರ, ಭಿಂಡಿವಾಳ, ಭೃಶುಂಡಿ, ದ್ರುಘಣ, ದಂಶಕಂಟಕ, ಇಳಾಹಸ್ತ, ಇಷು, ಮುಸಲ, ಮೌಷ್ಟಿಕ, ಮಯೂಖ, ಲಗುಡ, ಲವಿತ್ರ, ಪರಿಘ, ಪ್ರಾಸ, ಪಾಶ, ಶಕ್ತಿ, ಶತಘ್ನಿ, ಸೀರ, ಸ್ಥೂಣ, ತೋಮರ, ಗದಾ, ಗೋಶೀರ್ಷ, ಅಮುಕ್ತವಜ್ರ, ಆಸ್ತರ, ಅಸಿಧೇನುಕ, ಪಟ್ಟಸ, ಮುದ್ಗರ, ಪಿನಾಕ, ಕುಂತ, ಕಾಳರಾತ್ರಿ, ಯಾಪನ, ನಳಿಕಾ (ನೀತಿಪ್ರಕಾಶಿಕಾಸಂಖ್ಯಾರತ್ನಮಾಲಾ. ಪು. ೨೯೦); ಖಡ್ಗ, ಕರಾಚೂರಿ, ಕಕ್ಕಡ, ಕಡುಗತ್ತಿ, ಸಣೆಗತ್ತಿ, ಸಬಳ, ಈಟಿ, ಇದುರಂಗತ್ತಿ, ಉಬ್ಬಣ, ಕಬ್ಬಿ(ಣ)ಕೋಲು, ಚಕ್ರ, ಚಂಡು, ಪೋತಿ, ಚಲ್ಲಹ, ಬಲ್ಲಿಹ, ಬಂಕು, ಬಾಣ, ನೆದೆ, ನರಾದಿ, ಶೂಲ, ಶಿರಾದಿ, ಚೂರಿ, ಚಿಕ್ಕತಾರಿ, ಕಿರಸೆ, ಪರಶು, ಪಾಶ, ಪಟ್ಟೆಯ, ಮಟ್ಟ, ಅಂಕುಶ, ವಂಕಿ, ಲೌಡಿ, ಜವದಾಡೆ (?) (ವಿಚಿಂ. ೧೬೩-೨೬೩. ೬-೪೩೪) : ಬಾಣ, ಖಡ್ಗ, ತೋಮರ, ಸ್ತೋಮ, ಸೃಗ, ಚೇರಿ, ಶಕ್ತಿ, ಯಷ್ಟಿ, ಭಿಂಡಿವಾಲ, ಪರಿಘ, ಪರಶು, ಗದೆ, ಪ್ರಾಸ, ಮುದ್ಗರ, ಮುಸಲ, ಶೂಲ, ಪಾಶ, ಚಕ್ರ, ಮುಸುಂಡಿ, ವಜ್ರ, ದಂಡ, ಹಲ, ಅಶನಿ, ಕುಂತ, ಅರಿಷ್ಟ, ಕ್ರಕಚ, ಪರಶು, ಶಂಕು, ತೋತ್ರ, ವೇಣು, ತ್ರಿಶೂಲ, ಕುಸೂಲ (ವಿದ್ಯಾಕ. ೧೩)" (ಶ್ರೀವತ್ಸ. ೩೩) : ಬತ್ತೀಸಾಯುಧದಲ್ಲಿ ಅಭ್ಯಾಸವ ಮಾಡಿದರೇನು ಹಗೆಯ ಕೊಲುವರೆ ಒಂದಲಗು ಸಾಲದೆ (ಬಸವ. ೬೩೪) ; ಬತ್ತೀಸಾಯುಧಂಗಳು ಮೆಱೆವ ಕರಗಳಲಿ ತೊನೆವ ಶ್ರೀಮೂರ್ತಿಯನು ನರಹರಿ ದನುಜಗಾಗಳೆ ತೋಱುತಿರಲು (ಸಂಭಪ. ೮-೯೯) ; ಜಡಿವ ಬತ್ತೀಸಾಯುಧಂಗಳ ಸುಭಟರ ಬೆಡಗಿನ ನಿಕರವೊಪ್ಪಿಹುವು (ಕಂವಿ. ೬-೩೯). [ಬತ್ತೀಸ + ಆಯುಧ]

**ಬತ್ತು₁** (ಕ್ರಿ). ೧. ಒಣಗು ; ಆರು ; ಇಂಗು : "ಬತ್ತು—ನಿರ್ದ್ರವೇ" (ಶಮದ) ; ಕೆಮ್ಮುಂ . . . ಬಾಯ್ ಬತ್ತುವುದುಂ (ಪಮ್ಯಾರಾ. ೩೩-೩) ; ಒಡಲುರಿಗುಂ ಮನಂ ಮಱುಗುಗುಂ . . . ಬಾಯ್ಬಿಡದೆ ಬತ್ತುಗುಂ (ಆದಿಪು. ೦೨-೯೦) ; ಕುರುಪತಿ ನಿನ್ನ ಪೊಕ್ಕ ತೊಱೆಗಳ್ಮೊದಲಾಗಿರೆ ಬತ್ತಿದಪ್ಪುವು (ಗದಾಯು. ೬-೦೨) ; ಸಾಗರ ಬತ್ತಲೆಡೆಯಲಿ ನಿಂದ ನೀರ ಪೊಲಾಯ್ತು ಕುರುಸೇನೆ (ಕುವ್ಯಾಶ. ೨-೭). ೨. ಬರಿದಾಗು ; ಶೂನ್ಯವಾಗು ; ಖಾಲಿಯಾಗು : (•). ೩. ಗೊಡ್ಡಾಗು ; ಬರಡಾಗು : ಹತ್ತುಮತ್ತರದ ಭೂಮಿ ಬತ್ತುವ ಹಯನು ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು (ಬಸವ. ೨೨೩). ೪. ಸೊರಗು; ಜೋಲು; ಕುಗ್ಗು : ತಾಪತ್ರಯದೊಳೆ ಕುದಿದೆಂ ಬತ್ತಿದೆಂ ಬಾಡಿದೆಂ ಯಾತನೆಗೊಂಡೆಂ (ರಕ್ಷಾಶ. ೪-೨೨); ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ನಱುಕಿದ ನರೆತ ಮೀಸೆಯ. . . ಮುಪ್ಪಿನ ಮುಗುದನೀತನ ಕಾದ ಹೇಳಿದು ನಗೆಯ ಸುರಿದೈ (ಕುವ್ಯಾಭೀ. ೦-೩೩); ಬತ್ತಿರ್ದ ಮೊಲೆಯ ಕುಪ್ಪುಸದೊಳಱುವೆಯ ಚಿಂಡನೊತ್ತಿ ಬಿಗಿದುಂ . . . ಹಣ್ಣುಮುದುಕಿಸೂಳೆಯರೆಸೆದರು (ಚಬಪು. ೦೦-೬೬). ೫. ಮಂಕಾಗು; ಕಂದು; ಕಾಂತಿಯಿಲ್ಲದಿರು : ಬತ್ತಿರ್ದ ವಕ್ತ್ರಾಂಬುರುಹಂ ಮಿಂಚಾಗಲಿರ್ಪಂ ತೊಡೆದು (ದಶಕು. ೮-೦೯೭); ಬಾಗಿದೊಡಲಿನ ಬತ್ತಿದಾನನದ. . . ಶಬರಿಯ ಸುಪ್ರಸಿದ್ಧೆಯ ಸಾರ್ದರೊಲವಿನಲಿ (ತೊರರಾ. ೩-೦೨-೨೯). ೬. (ಧ್ವನಿಯು) ಕುಗ್ಗು : ಕಡಮೆಯಾಗು : ಚೀಱದೆ ಬತ್ತದೆ ಜತಿ

ಜಾತಿ ಕಟ್ಟಣೆ ಜಾಱದೆ . . . ಸವಿದೋಱ ಹಾಡಿದರು ಗಾಯಕರು (ಧಶ. ೬-೯೨). ೭. ದ್ರವಪದಾರ್ಥವು ಕುದಿದು ದ್ರವಾಂಶವು ಕಡಮೆಯಾಗಿ ಗಟ್ಟಿಯಾಗು : ಅಟ್ಟು : ಕಾಯ ಬತ್ತಿದ ಹಾಲು ಚೆಲುವಾಲನಿಕ್ಕು (ಸುಂಗರಾ. ೬೪-೨); ಎಳೆಯ ಹಲಸಿನ ಕಾಯ ಕುದಿಸಿ ಮತ್ತೊಮ್ಮೆ ಹಾಲೊಳಗುಪ್ಪನಿಕ್ಕಿಯದ ಬತ್ತುವಂದದಿಯಟ್ಟು (ಸೂಶಾ. ೪-೪೬). ೮. ಇಲ್ಲವಾಗು ; ಮಾಯವಾಗು : ಕುಮುದಂಗಳ ನಗೆ ಬತ್ತಿದುವು ಪಾಯ್ದು ನೇಸಱನಾಗಳ್ (ಲೀಲಾಪ. ೩-೫). 'ಬಚ್ಚು$_3$' ಪರಾ.

[ದೇ. ‖ ತಮಿ. ಮಲ. ವಱ್ಱು; ತುಳು. ಬತ್ತು; ಕೊಡ. ಬತ್ತ್; ತೆಲು. ವತ್ತು, ವರುಟು; ಕೋಲಾ. ವತ್ ; ಪರ್ಜಿ. ವೆತ್, ವೆಟ್; ಗಡಬ. ವಟ್; ಗೊಂಡಿ. ವತ್ತಾನಾ; ಕುರುಖ್. ಬತ್ತಾನಾ]

**ಬತ್ತು$_2$** (ನಾ). ಒಣಗಿದುದು; ಒಣಕಲು; ಶುಷ್ಕವಾದುದು.

ಬತ್ತಾಗು = ಒಣಕಲಾಗು ; ಬಾಡು : ಬಿತ್ತು ಮರ ಪಲ್ಲವಿಸಿ ಫಲವಾಯ್ತು, ಕಳಿತ ಮರ ಬತ್ತಾಯ್ತು. . . ಬತ್ತಿದುವು ಕೆರೆ ಭಾವಿ ಹರಿ ಚಕ್ರವಂ ತುಡುಕಲು (ಕುಕಂಗ. ೨೨-೪೦). [< ಬತ್ತು$_1$]

**ಬತ್ತುಂಬಯ** 'ಬತ್ತುಂಬಯನ್' ನೋ.

**ಬತ್ತುಂಬಯನ್**, ಬತ್ತುಂಬಯ (ನಾ). ಹಾಲು ಕೊಡುವುದನ್ನು ನಿಲ್ಲಿಸಿದ ಹಸು; ಗೊಡ್ಡಾಕಳು: ಬತ್ತುವುದು ಪಯನ್, ಬತ್ತುಂಬಯನ್ (ಶಬ್ದಾ.ಸು. ೩೩೩). ಬತ್ತುಂಬಯ : ಬಕಾರಕ್ಕೆ–ಬತ್ತುಂಬಯಂ, ಬತ್ತುಂಬಟ್ (ಶಮದ. ೧೭೦ ಪ್ರಯೋ). [ಬತ್ತು$_1$ + ಪಯನ್]

**ಬತ್ತುಂಬಟ್** (ನಾ). ಒಣಗಿದ ಬಟ್ಟೆ; ಆರಿದ ಅರಿವೆ : ಬಕಾರಕ್ಕೆ – ಬತ್ತುಂಬಯಂ, ಬತ್ತುಂಬಟ್, ಅಟ್ಟುಂಬರಿ (ಶಮದ. ೧೭೦ ಪ್ರಯೋ).

[ಬತ್ತು$_1$ + ಪಟ್]

**ಬತ್ತುಗೆ** (ನಾ). ತೇವವನ್ನು ಕಳೆದುಕೊಳ್ಳುವಿಕೆ; ಒಣಗುವಿಕೆ : ಸುರಿವ ಬಾಷ್ಪಜಳಂ ಕರುಣಾದ್ರ್ರಹಾರವಂ ಬಳಿಯಿಸೆ ಬಾಯ ಬತ್ತುಗೆಯ ನಿಂತೆರ್ದೆಗೆಟ್ಟಿಟುತುಂ . . . ಬಿಟ್ಟಳಂದಜಿತಸೇನೆ (ಶಂಪ್ರಭು. ೫-೧೧).

[ಬತ್ತು$_1$ + – ಗೆ]

**ಬತ್ತುವಸುರು** (ನಾ). ತೆಳ್ಳಗಿರುವ ಹೊಟ್ಟೆ; ಒಳಸೇರಿದ ಹೊಟ್ಟೆ : ಲೀನಾಖ್ಯ ಲೀನವೆಂಬ ಪೆಸರ್ವಡೆದ ಗರ್ಭದಲ್ಲಿ–ಬತ್ತುವಸುರಿನಲ್ಲಿ (ಪಾಶಾ. ೨-೨-೨೦ ವ). [ ಬತ್ತು$_1$ + ಬಸುರು (<ಬಸಿಱು) ]

**ಬತ್ತುವಾಲ್** (ನಾ). ಕುದಿಸಿ ಇಂಗಿಸಿದ ಗಟ್ಟಿಯಾದ ಹಾಲು; ಕೆನೆಹಾಲು : ನವಿರಕ್ಕಿಯೋಗತಂ ಕೂಡಿದ ಬತ್ತುವಾಲ್ ವಿಸುಪ ಗಲ್ಲೆವೊಸರ್ ಮೊದಲಾದವೆಲ್ಲಮುಂ ಜೋಡಿಸಿ (ಪಾಶಾಸ. ೧-೬-೫).

[ಬತ್ತು$_1$ + ಪಾಲ್$_1$]

**ಬತ್ತೆ** (ನಾ). (ಔಷಧಿ, ಅಡಕೆ ಮುಂತಾದುವನ್ನು) ಅರೆಯಲು ಅಥವಾ ಕುಟ್ಟಲು ಬಳಸುವ ಕಲ್ಲಿನ ಅಥವಾ ಲೋಹದ ಒರಳು ಮತ್ತು ಗುಂಡು : ಕಬ್ಬಿಣದ ತರತರದ ಜೀನಸಗಳು_೧. ಅಡಕೊತ ಗಳು . . . ೫೭. ಬತ್ತೆಗಳು (ಖಲಬತ್ತೆ) (ಮುಂಬಿಪ್ಪಾ. ೧೧೨). 'ಕಲಬತ್ತು' ಪರಾ. [← ಪಾರ. ಬತ್ತಾ; ಮರಾ. ಬತ್ತಾ, ಬತ್ತಾ]

**ಬತ್ತೆಮ್ಮೆ** (ನಾ). ಹಾಲು ಕೊಡದಿರುವ ಎಮ್ಮೆ; ಗೊಡ್ಡೆಮ್ಮೆ : ತಂದ ಬತ್ತೆಮ್ಮೆಗಳು ಕರು ಹಾಕಿದುವು. ಹಾಲು ಮಾರಿದನು (ಪಗುಪ. ೯೭). [ ಬತ್ತು$_1$ + ಎಮ್ಮೆ (<ಎರ್ಮೆ) ]

**ಬತ್ತೇರಿ** 'ಬತೇರಿ' ನೋ.

**ಬತ್ವ** (ನಾ). 'ಬ' ಎಂಬ ಅಕ್ಷರ; ಬಕಾರ : ಸವನಿಸುಗುಂ ಬತ್ವ ಕೊರ್ಮೆ ವತ್ವಮುಂ ವತ್ವದೆಡೆಗೆ ಬತ್ವಂ ಬಹುಳಂ (ಶಮದ. ೨೫೪).

[ಸಂ.]

**ಬದಂಗ** 'ಬದಗ' ನೋ.

**ಬದಗ**, ಬದಂಗ, ಬದೆಗ (ನಾ). ೧. ವಿಟ ; ಜಾರ; ವ್ಯಭಿಚಾರಿ : ಜಾತಿಸೂಳೆಗೆ ರಣಭೀತನ ಪುಸಿನುಡಿವಾತನ ಖಳನ ಕಳೆಯನ ಬದಗನ ಬೂತಿನ ಮಾತು ದಿಟಮಲ್ತು (ಲೀಲಾಪ. ೨-೩೪) ; ಬಚ್ಚಣೆವಾತಿನ ಬದಗ ಗೊರ್ಲಿದೊಡೆ. . . ಪುಚ್ಚಣೆಯಹುದೆನುತೊರ್ವಳ್ ಮುಗ್ಧೆಗೆಯುಸಿರಿ ದಳು ವಿದಗ್ಧೆ (ಶಯುಶಾ. ೧೪-೫೦); ಒದವಿಸಿಯಾ ವಿಷಯಂಗಳ ಜೀವರ ಬದಗರ ಮಾಡುವಹಾ ಮಾಯೆ (ಶಶ್ಯಪ. ೧೩೦-೪). ೨. ಕೆಳದರ್ಜೆಯ ಸೇವಕ ; ಕೀಳಾಳು ; ಊಳಿಗದವನು : "ಬದಗನೆಂದು ಕೀೞಾಳ್" (ಶಶಾ. ೬೦-೩೫೫); ಬಡಿಕೋಲಂ ಪಿಡಿದು ಪರಿವ ಬದಗರುಮಂ ಬಟ್ಟರ ನಾಂತು ಪರಿವೊಟ್ಟಜೆಕಾಱರುಮಂ . . . ಕಂಡು (ಲೀಲಾಪ. ೫-೧೧೪ ವ) ; ಬಿದ್ದಿನರ ವೀಳಯದ ಬದಗರು ಭಟರ ವೋಡಿಯಲಿ ಹೊದ್ದಿದೊಡೆ ಹುರುಳಹರೆ (ಕುಪ್ಪಾಶ. ೧೪-೨೫); ದನುವ ಕಾಯುವ್ವಿಕ್ಕಿರ್ಪ ಬದಗನೇಂ ಕಟ್ದು ಕಡಿದನೊ (ಸಿದ್ಧೇಶ್ವ. ೯-೩೭). ೩. ದಡ್ಡ; ಮೂರ್ಖ; ತಿಳಿಗೇಡಿ : ಜಾಣ ಜಾಣೆಯರಾಟವೆಂಬುದು ಚದುರಂಗದಾಟದಂತಿಹುದು ಬದಗರ ಲೀಲೆಯಹುದು ಟೊಳ್ಳಗವಡೆಯ ಕೆದರ್ವ ಸೋಗಳೆಯಾಟದಂತೆ (ಶರಶ. ೧೧-೧೪). ಬದಂಗ : ೧. ಜಡಿದೊಡೆ ಪೊಂಗಿ ಪಂದೊವಲ ಪೊರ್ಲ್ವೊಟೆಯೇಱುವ . . . ಮೊಕ್ಕಳಂಬಡುವ ಬದಂಗನಂ ಬೆಸ[ಪಾಠಾಂ. ಬದಂಗಿ ದುರ್ಬೆಸ]ನಿಯಲ್ಲದಳಾತನನೊಟ್ಟೆ ಸುಟ್ಟಪಳ್ (೧ಲೀಲಾಪ. ೨-೩೭). ಬದೆಗ : ೩. ಬದೆಗರಂದದಿ ಹೋರಲೇತಕೆ ಗೆಲವು ನಿನ್ನದು ಸೋಲವೆನಗೆ ಹೋಗು (ಶರಶ. ೫೦-೬೩). ೪. ಅಲ್ಪವ್ಯಕ್ತಿ; ಕ್ಷುದ್ರ; ನೀಚ : ಇದು ತನಗೆ ಪರಿಣಾಮವಾಯ್ತಲೆ ಬದೆಗ ಹುಸಿವವರರಸ (ತಿಶಾಗ. ೫-೭-೧೫); ಬದೆಗ ದಶಮುಖನೊರಜು ಬಾಡಬನುದರವರಿವುದೆ (ಶಾಕ್ತಿ. ೨೩-೧೪).

[ಬದಗು + – ಅ. / ತಮಿ. ಪತಕ. / ಸಂ. ಪಾತಕ = ಪಾಪ ]

**ಬದಗಿ** (ನಾ). ೧. ಊಳಿಗದವಳು ; ಸೇವಕಿ ; ದಾಸಿ : ಏಕೆ ಕೆಣಕಿದೆ ಕರ್ಣ ಬೂತಿನ ಬೀಕಲಿನ ಬದಗಿಯನು (ಕುಪ್ಪಾಸ. ೧೫-೧೪): ಕರ್ಣ, ಈ ಬದಗಿಯನ್ನೇಕೆ ಕೆಣಕಿದೆ ? ಯುದ್ಧದಲ್ಲಿ ಈಕೆಯ ಭೀಮನು ನನ್ನನ್ನು ಮುರಿಯುತ್ತಾನಲ್ಲವೆ? (ಗಾಕಸೂ. ೧೧೩). ೨. ಏನೂ ತಿಳಿಯದವಳು; ಮುಗ್ಧೆ : ನೋಡುವುದೆನ್ನೆರ್ದೆಯೋ ಕಣ್ಣೋ . . . ಕಾ ಸೂಕಗಳೆ ಗೀಡಹುದಾತ್ಮನೊ ಪರಮನೊಯೆಂದಳ್ ಬದಗಿಯವೊಲ್ ಚದುರೆ (ಅಧ್ಯದೇ. ೪-೨೭). [ಬದಗ + – ಇ./ತಮಿ. ಪತಕಿ]

**ಬದಗಿಗ** (ನಾ). ನೀಚ ; ಕೀಳುಮನಷ್ಯ : ಈಕಗೆ ಭೂತಚೇಷ್ಟೆಯೊ . . . ಬದಗಿಗರು ಸ್ಪರಿಸದೆ ಕೂನ್ಯಗಳನೆಸಗಿದರೊ (ಪ್ರಭುಪು. ೫-೪೦); ಮುಟ್ಟದಿರು . . . ಪಾಳ್ಕೊರೆಗೊಡಂಬಡುವ ಬದಗಿಗು[ಗ]ಯೆಂದು ಯೆದೆಯೊಳನಿತುಂ ದಯಂಗೊಡದೆ ಕಳಕಳಿಸುವಳ ನೋಡುತಿರಲು (ಪ್ರಭುಪು. ೯-೧೩೯). [ಬದಗು + – ಇಗ]

**ಬದಗು** (ನಾ). ೧. ಹಾದರ; ವ್ಯಭಿಚಾರ : ಎತ್ತಿದ ಬರ್ದೊ ಮೇಣ್ ಬದಗೊ[ಪಾಠಾಂ. ಬೆಜಗೊ] ಪೇಟಿವಿದೀಕೆಯ ಕೂರ್ಪೊ ಮೆಲ್ಪೊ (ಲೀಲಾಪ. ೨-೭೮); ಎನ್ನ ಮಾಟ್ಪ ಬದಗೇಂ ಪೆಱತಾದುದೆ ಬೇಡ ಕೆಮ್ಮಗಂ ಮನೆಗುಸುಟೇಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಟ್ಟೆಯೋ (೧ಲೀಲಾಪ. ೨-೧೧೪). ೨. ತೊತ್ತುಗೆಲಸ; ಊಳಿಗ; ಸೇವೆ : 'ಬದಗುಗೆಯ್' ಪರಾ. ೩. ಮೋಸ; ವಂಚನೆ; ಠಕ್ಕು : "ಬದಸು. ಬದಗು– ಕೌಟಿಲ್ಯಂ " (ಶಮದ. ಕಂ. ೨). ೪. ದಡ್ಡತನ; ಮೂರ್ಖತನ : ಲಿಂಗಾಂಗದ ಪುರುಳಱಿಯದ ಮರುಳೇ ತಿಳಿವಿಸಿಲ್ಲದ ಬದಗಿನ ತಿರುಳೇ ಕೇಳು (ಅಧ್ಯದೇ. ೩-೭೯). ೫. ವ್ಯಭಿಚಾರಿ ಎಂಬರ್ಥದ ಒಂದು ಬಯ್ಗುಳು: ಬೆದರುಪುಲ್ಲೆಯ ತೆರದೊಳವಳು ಕೆಟ್ಟೋಡಿ ನಡಗುತ್ತ

ಗುಡಿಯ ಕದಗಳಂ ಗಳಗಳನೆ ಮುಚ್ಚಿಯುಗುಳಿಯ ಜಡಿಯೆ ಎದೆಗುಂದಿ ಭೂತಂಗಳೋಡೆ ಸಿದ್ಧರ್ ನೋಡೆ ಬದಗು ಹೋಲೆಮಾಲೆ ನೀನೊಳ ಪೋಗಲ್ಪಿಡುವೆನೆ ಭಲರೆ ಎಂದಾರ್ದನೊಲಿದು (ಕತುಕ. ೬-೦-೨೨).

**ಬದಗುಗೆಯ್** (ಕ್ರಿ). ತೊತ್ತುಗೆಲಸ ಮಾಡು; ಊಳಿಗ ಮಾಡು : ಅರಸರ ದೆಸೆಯಿಂ ಮನೆಯುಂ ಕವರ್ತೆವೋಪುದುಂ ಪೆಱರ್ ಕೀೞಲೊ ಳೆಮ್ಮಬ್ಬೆಯುಂ ಮುತ್ತಬ್ಬೆಯುಂ ಸಾರ್ದು ಬದಗುಗೆಯ್ದುಣ್ಬೆ (ಅರಿಕೃ. ೬-೩೯ ವ); ಪೆಱರ ಕೀೞಲಂ ಸಾರ್ದೆಮ್ಮಬ್ಬೆಯುಂ ಮುತ್ತಬ್ಬೆಯುಂ ಬದಗುಗೆಯ್ದುಣುತಿರ್ಪನಂ (ಜಾತ್ಯಂತ. ೦೮). [ಬದಗು + ಕೆಯ್$_1$]

**ಬದಗುಳಿಗ** (ನಾ). ಊಳಿಗ ಮಾಡಿ ಜೀವಿಸುವವನು ; ತೊತ್ತು : ಬದಗುಳಿಗನ ತೋಳ್ಮುಟ್ಟಿದ ಸುದತಿಯೊಳಿಂಬಾಗದಂತೆ ಕೆಟ್ಟುದು ಪುೞು ಮುಟ್ಟಿದ ದುಗ್ಧದಂತೆ . . . ಪತಿಗೆ ಶಯ್ಯಾತಳದೊಳ್ (ಜುಕೋಶ. ೨-೫೯). [ಬದಗು + — ಉಳಿಗ$_1$]

**ಬದಜಾತ** (ನಾ). ಕ್ಷುದ್ರವ್ಯಕ್ತಿ; ಅಲ್ಪ; ನೀಚ : ಈ ಬದಜಾತನನ್ನು ಹೊಡೆದು ಓಡಿಸೋ! (ಶಂಕರಮು. ೯೬೯). [← ಪಾರ. ಹಿಂ. ಬದ್‌ಜಾತ್]

**ಬದಣ** ' ಬದನೆ ' ನೋ.

**ಬದಣಿಕೆ** 'ಬಂದಣಿಕೆ' ನೋ.

**ಬದಣೆ** ' ಬದನೆ ' ನೋ.

**ಬದಣೆಗಾಯಿ** 'ಬದನೆಕಾಯ್' ನೋ.

**ಬದಣೆಗುಪ್ಪೆ, ವದಣೆಗುಪ್ಪೆ** (ನಾ). ಒಂದು ಸ್ಥಳದ ಹೆಸರು : ಬದಣೆಗುಪ್ಪೆ ನಾಮ ಅವಿನೀತಮಹಾಧಿರಾಜೇನ ದತ್ತೇನ ಪಡಿಯೇೞಿಟಿೞೊಳಂ ಊರೊಳ್ಪನ್ನಿರ್ಕಣ್ಣುಗಜ್ಗಿಯ್ದು (ಎಕ. I. ೦-೦೯; ೪೬೦). **ವದಣೆಗುಪ್ಪೆ :** ಪುನ್ನಾಡುಎಡೆನಾಡುವಿಷಯೆ ವದಣೆಗುಪ್ಪೆ ನಾಮ ಗ್ರಾಮಃ (ಎಕ. III (B). ತಂಜನ. ೨೭೬-೫೩; 808). [ಬದಣೆ (< ಬದನೆ) + ಕುಪ್ಪೆ$_1$]

**ಬದನಾಮಿ** ' ಬದ್ನಾಮಿ ' ನೋ.

**ಬದನಿಕೆ** ' ಬಂದಣಿಕೆ' ನೋ.

**ಬದನಿದಿ** (ನಾ). ಒಂದು ಸ್ಥಳದ ಹೆಸರು : ಮೂಡನ ಸೀಮೆ ಕಳ್ಳಿವೆಟ್ಟನ ಮೂಡಣ ಪೊರೆಯೆ ಮೂೞುಬೆಟ್ಟು ಒಳಗು ಮೂಡಣ ಬಡಗಣ ಕೊನ್ನೆಡು ಬಿದನಿದಿಯ ಬಡಗಣ ಒಳ್ವೆ (ಮೈಆ. ೦೯೨೭. ೦೨೨-೬೩; 800). [?]

**ಬದನೆ, ಬದಣೆ, ಬದಣೆ** (ನಾ). ೧. ಒಂದು ಬಗೆಯ ತರಕಾರಿ ಗಿಡ ಮತ್ತು ಅದರ ಕಾಯಿ : ಬದನೆಯ ಪೊಸ ಬಿತ್ತಂ ತೋಡಿ ಬಯ್ತುಟ್ಟು ಕೂಷ್ಮಾಂಡದ ಫಲದೊಳದಂ ಮಧ್ವಾಜ್ಯದಿಂ ಮುಚ್ಚಿಸಲ್ ಪಣ್ತೊದವಿ ದೞೊಳೆ ಬಿತ್ತಂ ಕೊಂಡು ಬಿತ್ತಲ್ ವಿಚಿತ್ರಂ ಬದನೆಯ ಫಲಮುಕ್ಕುಂ ಬಳ್ಳಿ ಕೂಷ್ಮಾಂಡಮುಕ್ಕುಂ (ಲೋಕೋಪ. ೬-೫೫); ಕೂಷ್ಮಾಂಡವವರೆ ಬದನೆಗಳಿಂ ಲೇಸಾಗಿರೆ ಮಾಡಿದ ಸವಿವೇಲೋಗರಮಂ ತಂದು ಬಡಿಸಿದರ್ ಕಾಂತೆಯರ್ (ರರ್ಮಪು. ೨-೫೫). ೨. (ಅಲಂ) ಹುರುಳಿಲ್ಲದುದು; ಪ್ರಯೋಜನಕ್ಕೆ ಬಾರದುದು: ಪಂಪ ಹುಟ್ಟಿ ಭಾರತವ ಕಟ್ಟಿ ಹಿರಿ ಸಿದ್ಧಪದವ ಮುಟ್ಟಿ ನಿರ್ಜರೆಯ ಪಡೆದ . . . ತೀಡಿದರು ಅದನೆ ಅದನೆ ಯಾರಾರೊ ಎಂದು ರಸವಾರಿ ಹೋಗಿ ಪುಸ್ತಕವೆ ಆಯ್ತು ಬದನೆ (ಮುಕ್ತ್ಯಂ. ೨೯-೦೨). **ಬದಣೆ :** ೧. “ಬದಣೆ— ವಾರ್ತಾಕಿ, ಭಂಡಾಕಿ, ಹಿಂಗುಲಿ, ಸಿಂಹಿ, ದುಷ್ಪ್ರಧರ್ಷಣಿ”(ಜಾತಕಾ. ೩); ಆ ಕ್ಷೇತ್ರದವೊಳಗಾದ ಅಡಕೆ . . . ಬದಣೆ ಕಬ್ಬು ಕಾರೆಗೆಣಸುಯೇನುಂಟಾದುದನು ಆ ಕ್ಷೇತ್ರಕ್ಕೆ ಸಲುವ ನಿವೇಸನ ೧೫ ಅರೆ x (ಎಕ. III (B). ತಂಜನ. ೨೯೨-೦೫; 1527). **ಬದಣೆ :** ೧. “ವಾರ್ತಾಕವೆಂಬುದು ಬದಣೆ” (ಶಬ್ದಾಮು. ೨೭-೩೦); ಇಂತು ಬದಣೆಯ ಕಾಯಿ ಲಿಂಗವಾಗುತ್ತಮಿರೆ (ಬಸರ. ೯-೬೯); ಸತಿ ಕದ್ದಳೊಂದು ಬದಣೆಯ ಕಾಯನು (ಸಿದ್ಧೇಶ. ೦೯-೭).

[ದೇ. II ತಮಿ. ವಟುತುಣೈ, ವಟುತಲೈ; ಮಲ. ವಟುತಿನ, ವಟುತಿನಿ; ತುಳು. ಬದನೆ; ತೆಲು. ವಂಗ; ಕೋಲಾ. ವಂಗೆ; ಮಾಲ್ತೊ. ಬಟಂಗೊ. / ಹಿಂ. ಬೈಂಗನ್, ಬೈಂಗನೀ; ಮರಾ. ಬೈಂಗಣ್, ಬೈಂಗನ್. / ಸಂ. ವೃಂತಾಕ ].

**ಬದನೆಕಾಯ್**, ಬದಣೆಗಾಯಿ, ಬದನೆಕಾಯಿ (ನಾ). ಒಂದು ಬಗೆಯ ಕಾಯಿಪಲ್ಲೆ; ವೃಂತಾಕ : ‘ತುಳಂಪಬದನೆಕಾಯ್’ ಪರಾ. **ಬದಣೆಗಾಯಿ :** ಬದಣೆಗಾಯಂ ಸಹಜಲಿಂಗಮಂ ಮಾಡಿದಂ ಬಸವಂ (ಕಂಪು. ೫೭-೯೦). **ಬದನೆಕಾಯಿ :** ಬದನೆಕಾಯಿ ಬೀಜವನ್ನು ಡಿಸೆಂಬರ್ ನಿಂದ . . . ಮೇ ತಿಂಗಳವರೆವಿಗೂ ಸಸಿ ಮಾಡಿ ನೆಡಬಹುದಾಗಿದೆ (ಕಠಶ. ೨೦); ಪುರಾಣ ಹೇಳೋದು, ಬದನೆಕಾಯಿ ತಿನ್ನೋದು (ಗಾದೆ). [ಬದನೆ + ಕಾಯ್$_4$]

**ಬದನೆಕಾಯಿ** ‘ಬದನೆಕಾಯ್’ ನೋ.

**ಬದನೆಕುತ್ತಿ** (ನಾ). ಬದನೆಗಿಡದಲ್ಲಿ ಮೊದಲ ಸಲ ಬೆಳೆ ತೆಗೆದ ಮೇಲೆ ಉಳಿಯುವ ಬುಡ; ಗುತ್ತಿ: ಬೆಳಗಿನ ಜಾವ ಎದ್ದೊಡನೆ, ಹೊಗೆಸೊಪ್ಪಿನ ಹಿತ್ತಲಿನಲ್ಲಿ ಉಳಿದ ಹರಿವೆ, ಬದನೆಕುತ್ತಿಗಳಿಗೆ ನೀರೆರೆಯುವ ಸಂಭ್ರಮವಾಯಿತು (ಮರಳು. ೫೬೯). [ಬದನೆ + ಕುತ್ತಿ$_1$]

**ಬದಮಾಷ್** ‘ಬದ್ಮಾಶ್’ ನೋ.

**ಬದರ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಬೋರೆ; ಎಲಚಿ : ತ್ರಿದ್ವ್ಯೇಕದಿನಾಂತರಿತ ಬದರಾಕ್ಷಾಮಲಕಪ್ರಮಾಣಾ ಹಾರಂಗಳುಮಪ್ಪ ಮಿಥುನಂಗಳ್ಗೆ ಸಂಭೋಗ್ಯಮಾಗಿ ಸಲೆ ಜಘನ್ಯಭೋಗ ಭೂಮಿಯು ಕಡೆಯ ಪಲಿತೋಪಮದೊಟನೆಯ ಭಾಗಮುೞಿದುದು (ಆದಿಪು. ೬-೯೬ ವ); ಆತತಪರಿಖಾವಳಯಂ ಸುತ್ತಲುಮನುಪಮ ಬದರಾಶೋಕ ಮಹೀಜಂ (ಸುಕುಮಾ. ೦೦-೫೬ ರಗಳೆ); ವಂಗುವಿನ ಮೊಳಿವಲ್ಗಳೂರಿದ ಬದರವನಿನಿಯನಿಗೀವಳು ಕಾಂತೆ (ಗಾಥಾಸ. ೫೦-೦೦೦). [ಸಂ.]

**ಬದರಿ** (ನಾ). ೧. = ಬದರ: “ಬದರೀ, ಕುವಲೀ, ಕರ್ಕಂಧೂಃ— ಈ ಮೂಱುಂ ಬೋರೆಗಿಡದ ಪೆಸರ್” (ಹಲಾಯು. ೬೨-೯೦); ಬದರಿಯ ವೃಕ್ಷದ ಮೂಲದೊಳುದಕಂ ಮಧು ಮಧುಕವೆಳ್ಗೇಬಿವನರೆದಿಕ್ಕಿದೊಡದು . . . ಮಧುರಫಲನೆಱಗುಗುಮಧಿಕಂ (ಲೋಕೋಪ. ೬-೩೭); ತೆಂಗು ತಾೞ್ ಬದರಿ ದಾಡಿಮ (ಪರ್ಶಪು. ೨-೩). ೨. ಹತ್ತಿಗಿಡ. ೩. ಹಿಮಾಲಯದ ಉತ್ತರದಲ್ಲಿ ಅಲಕನಂದಾ ನದಿಯ ದಡದಲ್ಲಿರುವ ಒಂದು ಪುಣ್ಯ ಕ್ಷೇತ್ರ: ಧರೆಯೊಳಗೆ ಶ್ರೀಪುರಂದರವಿಠಲರೇಯನ ಪರಮಭಾಗವತರ ಉದರ ಬದರಿ (ಪುರಂದ. ೨-೨೭-೩); ಅರ್ಭಕತನದೊಳ್ಳೆದಿ ಬದರಿಯಲಿ ಮಧ್ವಮುನಿ ನಿರ್ಭಯದಿ ಸಕಲಶಾಸ್ತ್ರವ ಪಠಿಸಿದ (ಕಠಶ. ೩೯). [ಸಂ. ಬದರೀ ]

**ಬದರಿಕಾಶ್ರಮ** (ನಾ). = ಬದರಿ ೩: ಮುನ್ನೆ ಬದರಿಕಾಶ್ರಮದೊಳ್ ಆ ಯತಿಯಿಂದಂ ನರ ನಾರಾಯಣರೆನೆ ನೆಗಟ್ದಿಪರಿಗ ನಾವಿರ್ವರುಂ(ಶಂಕಗಾ. ೩೯-೯೪ ವ); ಬದರಿಕಾಶ್ರಮದಿ . . . ಮಹಾನುಭಾವರ ಪಿತನು ನಡೆತಂದ (ಸಂಭಕ. ೩-೦); ಬದರಿಕಾಶ್ರಮಕೆ ಪುನರಪಿಯ್ಯೆದಿ ವ್ಯಾಸಮುನಿಪದಕೆರಗಿ . . . ಬ್ರಹ್ಮತ್ವವೈದಿದ ಮಧ್ವಮುನಿರಾಯಗಭಿವಂದಿಪೆ (ಕಠಶ. ೩೫). [ಸಂ.]

**ಬದರಿಕೆ** (ನಾ). ೧. ರಕ್ಷಕ; ಕಾವಲುಗಾರ; ಪಹರೆಯವನು : (೩). ೨. ರಕ್ಷಣೆ; ಕಾಪಾಡುವಿಕೆ: ಗ್ರಾಮನೌಕರಿಗಳನ್ನು ನೋಡುವವರು ಇಡುವ ಲೆಕ್ಕಗಳ ಮತ್ತು ಇತರ ಕಾಗದಪತ್ರಗಳ ಬದರಿಕೆ, ಅವುಗಳನ್ನು ಹಾಜರ್ ಮಾಡೋಣ ಮತ್ತು ವರ್ಗಾಯಿಸೋಣ (ಗ್ರಾಪಾಠ. ೦೦೦). [← ಪಾರ. ಮರಾ. ಬದರಕಾ, ಬದ್ರುಕಾ ]

**ಬದಲಾಯಿಸು** ‘ಬದಲಿಸು’ ನೋ.

**ಬದಲಾವಣೆ** (ನಾ). ಮಾರ್ಪಾಡು; ವ್ಯತ್ಯಾಸ: ಚಿಕ್ಕಪ್ಪನ ಮುಖದಲ್ಲಾದ ಗಮನಾರ್ಹ ಬದಲಾವಣೆಯನ್ನು ಗುರುತಿಸಿ ಯಶೋದೆ ಹೇಳಿದಳು (ವಾತ್ಸಲ್ಯ. ೩೭); ಸರಿಯಾದ ಲೆಕ್ಕವಿದ್ದರೆ ನಿಮ್ಮ ಅವಶ್ಯಕತೆಗಳಿಗೆ ಸರಿಯಾಗಿ ಅಂದಾಜು ಪತ್ರದಲ್ಲಿ ತಕ್ಕ ಬದಲಾವಣೆಗಳನ್ನು ಮಾಡಲು ಸುಲಭವಾಗುವುದು (ಅರ್ಥಶಾ. ೦೨೩). [ಬದಲಾಯಿಸು (<ಬದಲಿಸು) + — ಅಣೆ$_4$]

**ಬದಲಿ$_1$** (ಗು). ೧. ಬದಲಾದ; ಬೇರೆಯಾದ: ನಾನು ಕಾಲಕಾಲಕ್ಕೆ ಕೊಂಡ ಹಲವಾರು ಕೊಡೆಗಳು ಹೀಗೆ ಒಂದೊಂದು "ಬದಲಿ ಇಸಮು" ಇಟ್ಟು ಓಡಿಹೋದುದರಿಂದ ನನಗೀಗ ಒಂದು ಹಳೆ ಕೊಡೆಗಳ ಅಂಗಡಿ ಇಟ್ಟರೆ ಹೇಗೆ ಎಂಬ ವಿಚಾರ ಬರತೊಡಗಿದೆ (ದೇಶಕ್ಷ. ೬೨). (ನಾ). ೨. ಒಂದು ವಸ್ತುವಿಗೆ ಪ್ರತಿಯಾಗಿ ಬರುವ ಮತ್ತೊಂದು ವಸ್ತು ಅಥವಾ ಒಬ್ಬ ವ್ಯಕ್ತಿಗೆ ಪ್ರತಿಯಾಗಿ ಬರುವ ಮತ್ತೊಬ್ಬ ವ್ಯಕ್ತಿ: ನೀನು ಕೊಟ್ಟ ಪುಸ್ತಕಕ್ಕೆ ಬದಲಿಯಾಗಿ ಈ ಪುಸ್ತಕವನ್ನು ಇಟ್ಟುಕೊಂಡಿರು (ರೂಢಿ). [← ಹಿಂ. ಮರಾ. ಬದಲೀ]

**ಬದಲಿ$_2$** (ಅ). ಪ್ರತಿಯಾಗಿ; ಬದಲಾಗಿ: ರಶೀದಿಗಳನ್ನು ಕೊಡದೆ ಇದ್ದರೆ ಆ ಶೇಕದಾರ ಶ್ಯಾನುಭಾಗರಿಗೆ ನಶಿಹತ್ತು ಮಾಡಿ ಅವರಿಗೆ ಬದಲಿಯಿತಬಾರಿ ಶೇಕದಾರ ಶ್ಯಾನಭಾಗರನ್ನ ಮೊಕರರಮಾಡಿಟ್ಟು . . . ನಡೆದುಕೊಳ್ಳುವದು (ಮೈಹುಸಂ. II, ೬೬). [< ಬದಲ್$^1$]

**ಬದಲಿನೇಮಕ** (ನಾ). ಒಬ್ಬ ವ್ಯಕ್ತಿಗೆ ಬದಲಾಗಿ ಮತ್ತೊಬ್ಬ ವ್ಯಕ್ತಿಯನ್ನು ಗೊತ್ತುಮಾಡುವಿಕೆ,—ನಿಯಮಿಸುವಿಕೆ: ಕಾರ್ಯನಿರ್ವಾಹಕನೇಮಕ, ಬದಲಿನೇಮಕ (Acting appointment. ಶಬ್ದಾ. ೨). [ಬದಲಿ$_2$ + ನೇಮಕ]

**ಬದಲಿಭತ್ಯ** (ನಾ). (ಬದಲಿ ಕೆಲಸಕ್ಕಾಗಿ ಕೊಡುವ) ಹೆಚ್ಚಿನ ಹಣ: ಬದಲಿಭತ್ಯ, ಕಾರ್ಯನಿರ್ವಾಹಕ ಸಂಭಾವನೆ (Acting allowance. ಶಬ್ದಾ. ೨). [ಬದಲಿ$_2$ + ಭತ್ಯ (<ಬತ್ತಾಯ)]

**ಬದಲಿರಜೆ** (ನಾ). ರಜಾದಿನವೊಂದರಲ್ಲಿ ಕೆಲಸ ಮಾಡಿದ ಪ್ರಯುಕ್ತ ಅದರ ಬದಲಿಗೆ ಬೇರೊಂದು ದಿನ ಸಿಗುವ ರಜೆ: ನಿನ್ನೆ ಬದಲಿರಜೆ ಹಾಕಿದ್ದೆ (ರೂಢಿ). [ಬದಲಿ$_2$ + ರಜೆ (<ರಜಾ)]

**ಬದಲಿಸು**, ಬದಲಾಯಿಸು (ಕ್ರಿ). ೧. ವ್ಯತ್ಯಾಸಗೊಳ್ಳು; ಮಾರ್ಪಾಡು ಹೊಂದು; ಬದಲಾಗು: ಈ ತಾರೆಗಳ ಸ್ಥಾನಗಳು ಯಾವಾಗಲೂ ಬದಲಿಸುತ್ತವೆಂದು ಅವನಿಗೆ ತಿಳಿಯಿತು (ಮುಂಬಯಿ. ೩-೦೬೪); ಸುಂದರಿಯ ಮನಸ್ಸಿನ ಸ್ಥಿತಿಯೇ ಬದಲಿಸಿತು (ಹಳ್ಳಿಹಾ. ೦೦೯). ೨. ವ್ಯತ್ಯಾಸಗೊಳಿಸು; ಬದಲಾಗುವಂತೆ ಮಾಡು; ಮಾರ್ಪಡಿಸು: ಕೇವಲ ಪ್ರೇಮ ಹಾಗೂ ಮರಣಗಳು ಮಾತ್ರ ಸಕಲವನ್ನೂ ಬದಲಿಸಬಲ್ಲವು (ಕೃಪಾಕೋ. ೩೯); ತನ್ನಭಿಮತವನು ಬದಲಿಸದಾತನು ಹೊಂಡದ ನೀರಿನಂತಹನು (ಇಂಚಾತ. ೦೧೬-೨೦). **ಬದಲಾಯಿಸು**: ೧. ಆ ಹತ್ತು ವರ್ಷಗಳ ಹರವಲ್ಲಭನ ಸಂಸಾರವು ಬದಲಾಯಿಸಿ ಬಹಳ ಹೀನಸ್ಥಿತಿಗೆ ಬಂದಿದ್ದಿತು (ದೇವೀಚ. ೬೦); ಹುಡುಗರು ಎಷ್ಟು ಬೇಗ ಬದಲಾಯಿಸುತ್ತಾರೆ ಅನ್ನುವುದೇ ವಿಚಿತ್ರ (ಚಾರಿವು. ೦೦೦). ೨. ಶ್ರೀಪುರಂದರದಾಸರು . . . ಪ್ರಚಾರದಲ್ಲಿದ್ದ ಪಾಠಪದ್ಧತಿಯನ್ನು ಬದಲಾಯಿಸಿ . . . ಪಿಳ್ಳಾರಿಗೀತವನ್ನು ಸೃಷ್ಟಿಸಿದರು (ಜಗದಾ. ೬೩); ಮಾತು ಬದಲಾಯಿಸಲು ಸಂಗಾಯಿ ನುಡಿದಳು (ವಚನ. II, ೯೬೬). ೩. ಒಂದು ವಸ್ತುವಿಗೆ ಪ್ರತಿಯಾಗಿ ಬೇರೊಂದು ವಸ್ತುವನ್ನು ಕೊಡು; ವಿನಿಮಯ ಮಾಡು: ಎಣ್ಣೆಯು ಸೋರ ಹತ್ತಲು . . . ವ್ಯಾಪಾರಿ ಜನರು ಬದಲಾಯಿಸಿ ಕೊಡುವದಿಲ್ಲ (ಮುಂಬಯಿ. ೩೯ ಕೃಗಾ.ಪದ). [ಬದಲು$_2$ + — ಇಸು$_3$]

**ಬದಲು$_1$** (ಕ್ರಿ). ವ್ಯತ್ಯಾಸಗೊಳ್ಳು; ಬದಲಾಯಿಸು; ಬೇರೆಯಾಗು: ಬೋಳನ ಆಲೋಚನೆಯು ಆಕಾಶದ ಬಣ್ಣವು ಬದಲುತ್ತಾ ಇದ್ದಂತೆ ನೋಯುತ್ತಾ ತನ್ನ ಮನೆಗೆ ಹೋದನು (ಕಾಂಟಿರ. ೦೨ ಕಥಾಸಾರ). [←ಅರ.ಪಾರ. ಹಿಂ. ಮರಾ. ಬದಲ್]

**ಬದಲು$_2$** (ನಾ). ೧. ಬದಲಾವಣೆ; ಮಾರ್ಪಾಡು; ಪರಿವರ್ತನೆ. ೨. ಪ್ರತಿಯಾದುದು; ಒಂದಕ್ಕೆ ಬದಲಾಗಿ ಮತ್ತೊಂದು ಇರುವುದು: ಗ ೩ನೂ ಅರಮನೆಗೆ ಪಟಿಸಿಕೊಂಡು ಆ ಬದಲಿಗೆ ಗ ೩ . . . ತೆಗೆದುಕೊಂಡು (ಎಕ. VII, ಶಿಮೊ. ೨೯-೨೬; 1712); ಕ್ರತುವೀರ್ಯಸಂಭವನ ಕೀರ್ತಿಯುಳಿದಿನ್ನೊಂದು ಬದಲಿಲ್ಲವೆಲೆ ಮಗಳೆ (ಶರಸಂ. ೬-೨೨); ಈ ರೂಪಿಗೆ ಬದಲಿಲ್ಲ (ಪಕಶಾ.೩೬). ೩. ಪ್ರತಿಯಾಗಿ ಹೇಳುವ ಮಾತು; ಮಾರ್ನುಡಿ; ಪ್ರತ್ಯುತ್ತರ: ನಿನ್ನಭರ್ಥಕಂ . . . ವಿದಿತೋಪಚಾರದಿಂದುರೆ ತೃಪ್ತಿಗೊಳಿಸಿಹಂ ಬದಲುಂಟೆ ಸಾಕೆನುತ ಪರಸೆ (ಶರಸಂ. ೯-೯೩); ಸುವೇಳೆಯ್ಯೆ ಧರ್ಮಜನೆ ಬದಲನು ಪೇಳಬೇಡ (ಶವಶಾ. ೦೯-೯೩); ಈ ಬದಲನ್ನು ಧೈರ್ಯವಾಗಿಯೆ ಹೇಳಿಬಿಟ್ಟರಾದರೂ ಒಳಗೊಳಗೆ ಹೆದರಿಕೆ (ಹಸುಹೂ. ೬೩). ೪. ವಿನಿಮಯ; ಅದಲುಬದಲು: ಪಟ್ಟಣಗಳಲ್ಲಿಯೂ ಅನೇಕ ಸಣ್ಣಸಣ್ಣ ಪದಾರ್ಥಗಳನ್ನು ಪದಾರ್ಥದ ಬದಲಿಗೆ (Barter) ಬೆಲೆಕೊಳ್ಳುವ ವಾಡಿಕೆಯುಂಟು (ಹಶಸ್ತ. ೦೯). ೫. (ಕೆಲಸ ಮುಂತಾದುವಕ್ಕೆ) ಒಬ್ಬನಿಗೆ ಪ್ರತಿಯಾಗಿ ಬರುವ ಮತ್ತೊಬ್ಬ ವ್ಯಕ್ತಿ: ಎಬ್ಬಿಸಲು ಕೋಪಮಂ ಧರಿಸುವನೊ . . . ಏಳಿಸಲ್ಕೊಬ್ಬರಂ ನಾ ಕಾಣೆ ಬದಲನೆಂದಳಲಿದಳು (ಕುರಂಗ. ೩-೩೩). 'ಬದಲಿ$_1$' ಪರಾ.

ಬದಬದಲು (ದ್ವಿರುಕ್ತಿ): ಬೆಚ್ಚು ಬಿಲ್ಗಡದೆ ಬದಬದಲು ಧನುವಿಡಿಯಲದನೊಡನೊಡನೆ ಪಿಡಿಗೊಡದಲ (ಶಶಮು. ೨೬-೩೩). **ಬದಲಾಗಿ** = ಪ್ರತಿಯಾಗಿ: ಒಂದು ಬಗೇ ಜಿನುಸು ಕೊಟ್ಟು ಅದಕ್ಕೆ ಬದಲಾಗಿ ಮತ್ತೊಂದು ಬಗೇ ತೆಗೆದುಕೊಳ್ಳುವಿಕೆ (ಸಿದ್ಧಾಂತಿ. ೨೯೭); ಗೋಚರಮಾಯ್ಯು ಸಮರವೀವ ಸುಭಟರ ಮೋಹರಕೆ ಬದಲಾಗಿ . . . ಮದುವೆ ದಿಬ್ಬಣದೊಸಗೆ ಮೆರವಣಿಗೆ! (ಶಶ್ಯಾಂಗ. ೬೭-೨೦೦೬). **ಬದಲಾಗು** = ವ್ಯತ್ಯಾಸಗೊಳ್ಳು; ಪರಿವರ್ತನೆಯಾಗು: ಬನಸಿರಿ ತೊಟ್ಟ ಪೊಂದೊಡವಿಂಗೆ ಬದಲಾಯ್ತು (ಶ್ರೀರಾಕ. ೯೦ ೬೬೩೪); ನನ್ನಿಂದಲೆ ಲೋಕ ಉಳಿಯುವುದು; ನನ್ನಿಂದಲೆ ಯುಗ ಬದಲಾಗುವುದು (ಅಕ್ಷಮೇ. ೩೯). **ಬದಲುಹೇಳು** = ಉತ್ತರಕೊಡು; ಪ್ರತ್ಯುತ್ತರ ಹೇಳು: ನಾನು ಏನು ಹೇಳಿದರೂ ಏನು ಮಾಡಿದರೂ ಬದಲು ಹೇಳೊಲ್ಲ (ದೂಪಟ್ಟ. ೦೨೦). [<ಬದಲು$_1$]

**ಬದಲು$_3$** (ಅ). ಪ್ರತಿಯಾಗಿ; ಬದಲಾಗಿ: ನಾನು ನಿನ್ನನ್ನು ಪ್ರೀತಿಸುವುದನ್ನು ನಿಲ್ಲಿಸಿಬಿಟ್ಟಿದ್ದೇನೆ. ಅದರ ಬದಲು ಇದೀಗ ನಾನು ನಿನ್ನನ್ನು ತಿರಸ್ಕರಿಸುತ್ತೇನೆ (ಅಕ್ರಪು. ೨೯); ದಿನ ದಾಟಿ ದಿನ ಬಂದರೂ ಬರಬೇಕಾದ ದಿವಸಗಳು ಬರಲೊಲ್ಲವು. ಬದಲು ನದಿ . . . ಬಾವಿಗಳ ನೀರು ಅದೆಲ್ಲಿ ಮಾಯವಾಗುತ್ತಿದೆಯೋ ತಿಳಿಯದು (ಕಲಾಪ. ೦). [<ಬದಲು$_1$]

**ಬದಲುಗೈ** (ಕ್ರಿ). ಅದಲುಬದಲು ಮಾಡು; ಬದಲಾಯಿಸು: ವನವಾಸಮೆನಗೆ ನಿಯಮಿತಮಾದುದುರೆ ಧರ್ಮದಿಂದಿಳೆಯ ನೀಂ ಪೊರೆಯವೇಳ್ಕುಮಂತಿರಲೀರ್ವಗಾದ ಬದಲುಗೈದೊಡಾ ತಂದೆ ಬಾನೆಡೆಯಿಂದ ಬೀಳ್ವನಲ್ತೆ (ಭರತ. ೩-೨೬). [ಬದಲು$_2$ + ಗೈ (<ಕೆಯ್$_1$)]

**ಬದಲುಜವಾಬು** (ನಾ). ಎದುರುತ್ತರ; ಮಾರ್ನುಡಿ: ಅವರೇನಾದರೂ ಕೋಪಿಸಿಕೊಂಡರೆ ಬದಲುಜವಾಬು ಕೊಡಬೇಡ (ಮುಹಾಪ. ೦೩೬). [ಬದಲು$_2$ + ಜವಾಬು]

**ಬದಲುತ್ತರ** (ನಾ). = ಬದಲುಜವಾಬು: ರಾಜಸತಿಗಾನಂದ ಮಿಗೆ . . . ಸಾರ್ಥಕಕೆ ಮನದಂದನಧಿಪತಿಯೆನಲು ಬದಲುತ್ತರವನುಸುರಿದಳು (ಅಸಂಹಾ. ೨-೦-೨೦). [ಬದಲು$_2$ + ಉತ್ತರ]

**ಬದಲುಮಾತು** (ನಾ). = ಬದಲುಜವಾಬು : ಬದಲುಮಾತದು ಮಾಣು ! (ವರದಾ. 1, ೯೦೬); ಬದಲುಮಾತಾಡುವವನು ಬೆದರಿಸಿದರೆ ಬಿಟ್ಟಾನೆ ? (ಗಾದೆ). [ಬದಲ್ಲು₂ + ಮಾತ್ತು₁]

**ಬದವು** 'ಬದುವು' ನೋ.

**ಬದಸಾಟ** (ನಾ). ಮೋಸ; ವಂಚನೆ; ಕುಯುಕ್ತಿ: ಆಃ ಪತಟಿಕೊಂದು ಬದಿಯ ಬದಸಾ[ಪಾಠಾಂ. ಗಾ]ಟಮೊ ! ತನಗಯ್ಯನೆಂದಱದನಪ್ಪೊಡೆ ಕುಶಂ ವಿಶಿಖಮನಿಸುವನೆ ? (ರಾಮಾಶ್ವ. ೦೬೦-೦೩). [ಬದಸು + ಆಟ]

**ಬದಸು** (ನಾ). ಮೋಸ; ಕುಟಿಲತೆ: "ಬದಸು, ಬದಗು – ಕೌಟಿಲ್ಯಂ" (ಶಮದ. ಶಂ. ೨). 'ಬದಗು', 'ಬದಸಾಟ ಪರಾ. [?]

**ಬದಸ್ಸೂರ್** 'ಬದಸ್ಸೂರು' ನೋ.

**ಬದಸ್ಸೂರು**, ಬದಸ್ಸೂರ್ (ಅ). ಹೇಗೆ ಇದೆಯೋ ಹಾಗೆ; ಯಥಾವತ್ತಾಗಿ : ಆನೆಗೆ ಅಲಂಕಾರಕ್ಕೆ . . . ೩ ಆನೆಗೆ ಹಳದೀ ಬನಾತಿನ ಬಬ್ರೀ ಜೂಲು ರೇಶ್ಮೆ ಜಾಲರು ಸಹ ೧ ಬದಸ್ಸೂರು ಲೋಕಸಿದಿ ೧ ಕತ್ತಿಗೆ ಕಟ್ಟುವ ಪಟ್ಟೆ ಬದಸ್ಸೂರು ೧ ಸಹ (ಎಕ. XIV. ಪಂಜವ. ೨೯೨-ಘುಟಿ ೧೯೨ ; 1847); ತಾವೂ ಕೋಟೆ ವಳಗೆ ಹೋಗಿ ಬದಸ್ಸೂರು ಆನೆಕಲ್ಲನು ಬಲ ಕಾಯಿಸಿ (ಹೈದಃ. ೪೬); ಬದಸ್ಸೂರು ಒಂದೊಂದು ಹೋಬಳಿ ಶೇಕ ದಾರನು . . . ಶ್ಯಾನುಭಾಗನ ರುಜು ಸಹ ಮಾಡಿ ರಶೀದಿ ಕೊಡುತ್ತಾ ಬರುವದು (ಮಹಾಪಂ. II, ೬೬). **ಬದಸ್ಸೂರ್:** ಡಿಕ್ರಿಯ ಅಮಲ್ದಾರಿಯ ಬಗ್ಗೆ ನಡೆಯುವ ಹರಾಜಿನೊಳಗೆ . . . ಕ್ರಯದಾರನಿಂದ ತರಲ್ಪಡುವ ಬದಸ್ಸೂರ್ ದಾವೆ (ನ್ಯಾಮೂಶ. ೦೬೨). [←ಪಾರಂ. ಹಿಂ. ಬದಸ್ಸೂರ್]

**ಬದಹು** 'ಬದುವು' ನೋ.

**ಬದಾಮಿ** 'ಬಾದಾಮಿ' ನೋ.

**ಬದಾಮು** 'ಬಾದಾಮಿ' ನೋ.

**ಬದಿ₁** (ನಾ). ೧. ಪಕ್ಕ; ಮಗ್ಗಲು; ಪಾರ್ಶ್ವ: "ಬದಿಯೆನೆ ಪಾರ್ಶ್ವ" (ಶಶರ. ೬೩); ಕಾಳ್ಪಿವಿಗಳೆರಡು ಬದಿ ಗಗನಭುವನವೇ ಗೃಹವು (ಶಿವಾಲ. ೦೮೦-೪೯೭) ; ಬಲದ ಬದಿ ವೇದಾಂತಿಗಳ ಭಾಗ ಎಡದ ಬದಿ ಪಂಡಿತರ ಭಾಗಂ (ಬಸವು. ೩೩-೦೬); ಬಲದ ಬದಿಯಲ್ಲಿ ಭವಹರನೆಂಬ ಗಣೇಶ್ವರನೆನಿಸಿರ್ಪಿರಿ ಅಯ್ಯ (ಸಿದ್ದೇಶ.೬೮-೦೮೬). ೨. ಪಕ್ಕೆ; ಅಳ್ಳೆ; ಬರಿ: "ಬದಿಯೆ ಪಕ್ಕೆಯೆನಿಸ್ಕು" (ಕಬ್ಬಿಗ. ೩೦); ಹೆಡೆ ಬೇವ ಸರ್ಪ ಬದಿ[ಪಾಠಾಂ.ರಿ] ಬೇವ ಸಾರಂಗ . . . ದೆಸೆಗೆಟ್ಟು ಕವಿದವು ಹರಿಶ್ಚಂದ್ರಭೂಪತಿಯ ಮೇಲೆ (ಹಕಾ. ೦೦-೯); ಕುಣಿದವಿಬ್ಬರ ಮುಷ್ಟಿಯಿಬ್ಬರ ಹಣೆಯಲಿ . . . ಕಂದ ದಲಿ ಶಿರದಲಿ ಬದಿಯಲುದರದಲಿ (ಕುವ್ಯಾಶ. ೨-೦೦೬); ತುಟಿಸಿಕೊಳು ತಿದ್ದೆಸೆಯು ಬಗೆಗಳ ಹೊಟಗನಾಲಿಸುತ . . . ಹರಿಬದಾಜಿಯು ಹೊಱಗೆ ವಾಳರ ಬರವ ಬಯಸುತ್ತಿರ್ದನಾ ಹನುಮ (ತೊರರಾ. ೩-೩-೨). ೩. ಹತ್ತಿರ ; ಸನಿಹ; ಸಾಮೀಪ್ಯ: ಇದನು ಪಠಿಸೆ ಸದಾ ಭಾಗ್ಯವಕ್ಕು . . . ಬದರನಿವಾಸ ವಿಜಯವಿಠ್ಠಲ ಬದಿಯಲ್ಲೆ ಬಂದೊದಗುವ (ವಿದಾಕೃ. ೯೩-೯); ಇದೆ ರಾಮನೆನುತ ಬಯಲನ್ನಪ್ಪಲೊರ್ಮೆ . . . ಬದಿಯೊಳಿಹನೆಂದ ರಸಿ ತಕ್ಕೈಸಲೊರ್ಮೆ ... ವಿಶ್ವರೂಪಾಂತು ಸುದತಿಯರ ಕಂಗಳಿಗೆ ತೋರ ಲಿಡೆಯಾಡಿದರು (ವೆಂಕಾರಾ. ೨-೨೦-೦೦); ಮಾದಯ್ಯನು . . . ಅವಳ ತಲೆಯು ಬದಿಯಲ್ಲಿ ನಿರ್ವಿಣ್ಣನಾಗಿ ಕುಳಿತಿದ್ದನು (ಶ್ರೀರಾಯ. ೦೦೦).

**ಬದಿಬದಿ** (ದ್ವಿರುಕ್ತಿ): ಬೀದಿಯ ಬದಿಬದಿಗೆ ಚದುರಂಗವುದುರ್ಯಾವು (ಜೂಜಾದಿ. ೮೯-೦). **ಬದಿಗಾಗು**=ಪಕ್ಕಕ್ಕೆ ಜರುಗು; ಅರುಗಾಗು; ಕೆಲ ಸಾರು: ನೀರಾಗೆ ನಿಂತಿರುವ ನೀಲೀಪಾವುಡದಣ್ಣ ನೀರು ಕೆಟ್ಟಾವು; ಬದಿಗಾಗೊ (ಜಾಮತ. ೨೦). **ಬದಿಗಿಡು** = ೧. ಪಕ್ಕಕ್ಕೆ ಸರಿಸು; ಪಕ್ಕದಲ್ಲಿ ಇಡು: ಈ ಪಾತ್ರೆಯನ್ನು ಆ ಬದಿಗಿಡು (ರೂಢಿ). ೨. (ಆಲಂ) ಗಮನಿಸದಿರು ; ಗಣನೆಗೆ ತೆಗೆದುಕೊಳ್ಳದಿರು ; ಅಲಕ್ಷಿಸು : ಅವಳ ಮನಸ್ಸನ್ನು ನೋಯಿಸಬಾರದೆಂದು ತಮ್ಮ ಎಲ್ಲ ಅನಾನುಕೂಲತೆಗಳನ್ನೂ ಬದಿಗಿಟ್ಟು . . . ಶಿಕ್ಷಣ ಕೊಡಿಸಿದ್ದರು (ಕುಂಕುಮ. ೩೯) ; ಪಾದ್ರಿಯೂ ಮೊದಲಿನ ಸಂಕೋಚ ಬದಿಗಿಟ್ಟು ಬಹುಗಂಭೀರರೀತಿಯಲ್ಲಿ ಹೇಳಿದರು (ಆಬೋಲಿ. ೨೬). **ಬದಿಗಿರಿಸು** = ೧. ಪಕ್ಕದಲ್ಲಿಡು : ಅದನ್ನು ಅವನ ತಟ್ಟೆಯ ಬದಿಗಿರಿಸಿ ತಾನು ಅವನ ಎದುರು ಕುಳಿತುಕೊಂಡಳು (ಮಹಾತ್ಮಾ. ೦೬). ೨. = ಬದಿಗಿಡು ೨ : ತಮ್ಮ ವೈಯಕ್ತಿಕ ಆಶೋತ್ತರಗಳನ್ನೂ ಮನೋಧರ್ಮವನ್ನೂ ಬದಿಗಿರಿಸಿ, ಮಕ್ಕಳ ಬೆಳವಣಿಗೆಗೆ ಸೂಕ್ತವೆನಿಸುವಂತೆ ವರ್ತಿಸುವರು (ಶಿಕ್ಷದ. ೯೯೯) ; ನಿನ್ನ ಸಮಾಧಾನಕ್ಕಾಗಿ ನನ್ನ ದುಃಖವನ್ನು ಬದಿಗಿರಿಸಿ ಬರೆಯಲು ಕುಳಿತಿದ್ದೇನೆ (ಕುಂಕುಮ. ೬೨). **ಬದಿಗೊತ್ತು** = ಬದಿಗಿಡು ೨ : ಬಪ್ಪ ಕರ್ಮಗಳ ಬದಿಗೊತ್ತಿ ಬೊಮ್ಮನೊಳಗಿಪ್ಪವನೆ ಯೋಗಿ (ಸರ್ವಜ್ಞ. ೩೦೨); ಈ ಗ್ರಂಥಗಳಲ್ಲಿ . . . ಜಾತಿ ಕುಲ ಗೋತ್ರಗಳನ್ನು ಬದಿಗೊತ್ತಿ ಭಕ್ತಿಗೆ ಕೊಟ್ಟ ಪ್ರಾರಮ್ಯ, ಅತಿಶಯ ಬೆಲೆಯುಳ್ಳದ್ದು (ಭಾರದ. ೩೯೬). 'ಬರಿ'₁ ಪರಾ.

[ದೇ. ॥ ತುಳು. ಬದಿ]

**ಬದಿ₂** (ನಾ). ಕೆಸರು ; ಪಂಕ ; ರಾಡಿ : "ಪಕ್ಕೆ ಕೆಸಱುಗಳೊಳಂ ಬದಿ" (ಶಬ್ದಮಂ. ೯೯) ; ಬದಿಗಳೊಳಗೆ ಬಿದ್ದು ಹೊರಳಿದವರು ನೆಱೆ ಕೆದಱದ ತಲೆಯಿಂದಲಾಗ ಗದಗಾಪುಗೊಳುತ ಹೋಗಲು ದೆಸೆ ಕಾಣದೆ ಸದೆಯಿಸಿಕೊಂಡರೇನೆಂಬೆ (ಕಂಪಪು. ೦೬-೮೩) ; ಗದ್ದೇ ಬದೀಲಿ ಬಿದ್ದು ಮಂಡೀಯು ನೊಂದವು ಮುಂಗೈ ಕಿತ್ತೂ (ಹುಟ್ಟಿಹ. ೯೨) ; ನದೀ ದಾಟಿ ಬದೀಲಿ ಬಿದ್ದ ಹಾಗೆ (ಗಾದೆ). [ದೇ. ॥ ತಮಿ. ವತಿ ; ತೆಲು. ಬಾಡಿ, ಬಾಡೆ]

**ಬದಿಕೆಱೆ** (ನಾ). ಒಂದು ಕೆರೆಯ ಹೆಸರು : ಬದಿಕೆಱೆಯ ಕೀೞ್ಕೇರಿಯ ಬೇರುಂಗಾಲುಂ ಒಕ್ಕಲೊಳೊನ್ದು ಪೊಱೆಯುಂ . . . ಬಳಿವತ್ತುಮುಂ ಸಲ್ವದು (ಎಕ. III (R), ಪಂಜವ. ೨೯೮-೦೦ ; 977). [ಬದಿ₂+ಕೆಱೆ]

**ಬದಿಪಾರು** (ಕ್ರಿ). ಅಕ್ಕಪಕ್ಕ ನೋಡು : ಪೊಸಗವಲಿದೆತ್ತಣದಿದೆಂದು ಬದಿಪಾರಲು (ಇಂದ್ರಕೀ. ೩೦). [ಬದಿ₁ + ಪಾರು₁ (< ಪಾರ್₁)]

**ಬದಿಯೆಲು** (ನಾ). ಪಕ್ಕೆಯ ಮೂಳೆ : ತಿವಿದನು ತಿರುಗಿ ಬದಿಯೆಲು ನುಗ್ಗುನುಸಿಯಾಗೆ (ಕುವ್ಯಾಶ. ೧೦-೩೮); ನಿಳಿನಿಳಿಲುನಿಟಿಲೆಂದು ಬದಿಯೆಲು ಕಳಚಿ (ತೊರರಾ. ೩-೦-೨೦). [ಬದಿ₁+ಎಲು(<ಎಲ್ವು)]

**ಬದಿರಿ** (ನಾ). ಒಂದು ವಂಶದ ಹೆಸರು (?) : ಸಾಕ್ಷಿ ಕೊಡಲೂರ್ ಪೊಜ್ಜುಲರು ಎಳ್ಳಡಿಯರು ಬದಿರಿಯರುಮ್ ಮದುಗರುಮ್ (ಪ್ರಸಂ. ೦೯೧೬, ೦೩-೯ ; 726). [?]

**ಬದಿಶೂಲೆ** (ನಾ). ಪಕ್ಕೆನೋವು ; ಅಳ್ಳೆನೋವು : ತಲೆನೋವು ನಾಯ್ಗೆಮ್ಮು, ಬದಿಶೂಲೆ, ಕಾಲೊಡಕ, ವಾತಪಿತ್ತಗಳೆಲ್ಲ ಭೈರವನ ಸೆರೆಗೈದು ಪೀಡಿಸುಗೆ! (ಜಗಾಳ. ೯೬-೬). [ಬದಿ₁ + ಶೂಲೆ₁]

**ಬದಿಹುಲ್ಲು**, ಬದೆಹುಲ್ಲು (ನಾ). ಒಂದು ಬಗೆಯ ಹುಲ್ಲು : ಬದಿಹುಲ್ಲು, ಕಂಡಬತ್ತದ ಹುಲ್ಲು, ಪರಿಹುಲ್ಲು (ಪ್ರಮಶಿಗ. ೩೦-೩೮೦); **ಬದೆಹುಲ್ಲು :** ಬದೆಹುಲ್ಲು . . . ಕರಡ, ಅಂಜಿಹುಲ್ಲು (ಪ್ರಮಶಿಗ. ೨೬-೩೦೯). [ಬದಿ₁ + ಹುಲ್ಲು (<ಪುಲ್)]

**ಬದು** 'ಬದುವು' ನೋ.

**ಬದುಂಕು** 'ಬರ್ದುಂಕು' ನೋ.

**ಬದುಕಿಸು** 'ಬರ್ದುಂಕಿಸು' ನೋ.

**ಬದುಕು₁** 'ಬರ್ದುಂಕು' ನೋ.

**ಬದುಕು₂** 'ಬರ್ದುಕ್ಕು₂' ನೋ.

**ಬದುಕುವಂತ** (ನಾ). ಕೆಲಸವಂತ ; ಕಷ್ಟಜೀವಿ : ಸಣ್ಣಸಾಹ್ಕಾರ್ರು ಒಳ್ಳೆ ಬದುಕುವಂತರು (ಚಿಲುಮ. ೦೩೬). [ಬದುಕು₂ (<ಬರ್ದುಕ್ಕು₂) + — ವಂತ]

**ಬದುಬೆ** 'ಬಾದುಬ್ಬೆ' ನೋ.

**ಬದುವು, ಬದವು,** ಬದಹು, ಬದು, ಬದುಹು (ನಾ). ೧. ಎಲ್ಲೆ ; ಮೇರೆ ; ಗಡಿ ; ಸೀಮೆ : ಪಡುವಂ ಶಂಖದ ಬಸದಿಯ ಪೊಲದ ಮೇರೆ ವಾಯುಬ್ಯದಲು ಪಳ್ಳದ ಪಡುವಣ [ಬ]ದುವಿನ ಕೊತ್ತುರೊಳಗಣ ಉಳಿಮುಖದ ಕಿಂನರಿಗಲ್ಲು (ಶಾಇ. XX. ೬೯–೩೩ ; 1112). ೨. (ಹೊಲ, ಗದ್ದೆಗಳಲ್ಲಿ ನೀರು ನಿಲ್ಲುವುದಕ್ಕಾಗಿ ಹಾಕುವ) ಮಣ್ಣಿನ ಎತ್ತರವಾದ ಕಟ್ಟೆ,–ದಂಡೆ ; (ಹೊಲ, ಗದ್ದೆಗಳ ಅಂಚಿನಲ್ಲಿ ರಚಿಸಿದ) ಮಣ್ಣಿನ ಒಡ್ಡು : ಹೊಲಗಳ ಗುಂಟ ಬೈಲುದಾರಿ ಹಿಡಿದು ಗದ್ದೆಯ ಬದುವುಗಳ ಮೇಲೆ ಹಾಯ್ದು . . . ಒಕ್ಕಲ ಮಕ್ಕಳು ಗ್ರಾಮಗ್ರಾಮಾಂತರಗಳಿಗೆ ಹೊರಟಿದ್ದಾರೆ (ಜಕ್ಕ. ೩೩) ; ರೈತರ ಹೆಂಗಸರು ಕೆರೆಯಿಂದ ನೀರ ತಂದು ಸಗಣಿಯನ್ನು ಕಲಸಿ ಹೊಲಗಳ ಬದುವಿನಲ್ಲಿ ಬೆರಣಿ ತಟ್ಟುತ್ತಿದ್ದರು (ಕೃಸಜ. ೦೩) ; ಒಂದು ಹೋರಿಯು . . . ಬದುವಿನಲ್ಲಿ ಮೇಯುತ್ತ ನಿಂತಿದ್ದ ಆಕಳನ್ನು ನಿಟ್ಟಿಸುತ್ತಿತ್ತು (ಜಾಂಶ. ೩೯). **ಬದವು :** ೩. (?) : ಪಾರಿಸ್ಸಸೆಟ್ಟಿಯರಿಂಗೆ ಕೊಟ್ಟ ಸಿಲಾಸಾಸನದ ಕ್ರಮವೆಂತೆಂದಡೆ ಪಟ್ಟಣದ ಬೇಹಾರಿಗಳಿಂಗೆ ಮನೆವಣವು × ಯಕ್ಕೆ ಪ ೫ ಯದಿವಮಕ್ಕೆ ಪ ೫ ಬದವಿಂಗೆ ಪ ೩ (ಎಕ. XI (8), ಚಾಶಣ. ೬೯–೦೩ ; 1319). **ಬದಹು :** ೪. (ಕೆರೆ, ಕುಂಟೆ ಮುಂತಾದಂವುಗಳ) ಏರಿ : ಚಿಕ್ಕ ಕುಂಟೆಯು ಒತ್ತಿರಿಣ ಬದಹು (ಎಕ. VII. ಶಿವಮೊ. ೨೬–೨೩೨; 1524). **ಬದು :** ೧. ಬೆಟ್ಟದ ತಪ್ಪಲುಗಳೂ, ಗೋಮಾಳಗಳೂ, ಹೊಲದ ಬದುಗಳೂ ಹೇರಳವಾಗಿದ್ದವು (ಹುಬ್ಬ. ೬೯); ತಾಕುಗಳ ಸುತ್ತಲೂ ಬದುಗಳನ್ನು ಹಾಕಬೇಕು (ಕೃಷು. ೬೦). ೩. ಈ ಹಿತ್ತಿಲನೂ ಅ ಳ ಮುಡಿ ಗದೆಯನೂ ಬದು ೧೨ ಮುಡಿ ಅಕ್ಕಿಯನೂ ೧ ನಂದಾದೀವಿಗೆಯನೂ ನಡಸಿ . . . ಬಾಳುವರು (ಶಾಇ. IX–ii, ೪೪೪–೨೫; 1433). ೪. ಉದ್ದಕ್ಕೂ ನಾಲೆ ಏರಿಯ (ಬದು) ಮೇಲೆಯೇ ಗಾಡಿಯ ರಸ್ತೆ (ಗಕುದಾ. ೨೨). **ಬದುಹು :** ೧. ಶ್ರೀರಾಮನಾಥದೇವರ ತೋಟದ ಮೂಡಣ ಬದುಹಿನ ಬಡಗಣ ಕಲ್ಲು (ಎಕ. VI. ತರೀಕೆ. ೬೩–೫೦; 1230 ?); ಅರಳಿಯ ಕೊಳದ ಮೂಡಣ ಬದುಹು ಅಲ್ಲಿಂ ಬಡಗಲು ಹಾದಿಯ ದಾರಿ (ಎಕ. XII. ತಿಪಟೂ. ೪೦–೩೬; 1286). ೨. "ಬದುಹು ಪಾಳಿ" (ಮಂಗಶಾ. ೦೦೯–೨); ಮೂಡಲು ಏರೆಯ ಕೆಯ್ಯ ದೊಡ ಬದುಹು (ಎಕ. XI, ಹೊಳಲ್ಕೆ. ೫೬–೭೫; 1220). ೪. ಬೆಂಚಿಗಟ್ಟ ನಾಯಕರ ಗುಯ್ಯಲ ಹಳುಗಿನ ಹಳ್ಳದ ಮೂಡಣ ಬದುಹಿನ ನಟ್ಟ ಕಲು ಮೇರೆ (ಶಾಇ. IX–i. ೪೪೩–೫೬; 1226). 'ಬರುಹಂ' ಪಠಾ.

**ಬದುಹು** 'ಬದುವು' ನೋ.

**ಬದೆಗ** 'ಬದಗ' ನೋ.

**ಬದೆಹುಲ್ಲು** 'ಬದಿಹುಲ್ಲು' ನೋ.

**ಬದ್ದ** (ನಾ). ೧. ಗಾಢವಾದಂದು; ದೃಢವಾದುದು: "ಬದ್ದಂ=ಗಾಢಂ" (ಶಮದ. ಶಂ. ೨). ೨. ಸತ್ಯ; ದಿಟ; ನಿಜ : "ಕೆಸರೊಳಿಡಿದ ಹೆಜ್ಜೆಯೊಳು ನಿಶ್ಚಯದೊಳುಂ ಬದ್ದಮೆನಿಕುಂ" (ಕಜಕ. ೭೩); ಕದ್ದ ಕಳ್ಳನ ಮಾತು ಬದ್ದವಾದರೆಯೇನು (ಜಾಪನ. ೩೯); ನನ್ನ ಹತ್ರ ಸುಳ್ಳು ಹೇಳ್ತಿಯಲ್ಲಾ ! ಸುಳ್ಳೋ ಬದ್ದೋ ? ಹೇಳು ! (ಮರಿಮು. ೨೦). [<ಸಂ. ಬದ್ಧ]

**ಬದ್ದಗಿ** 'ಬಡಗಿ' ನೋ.

**ಬದ್ದಣ** 'ಬದ್ದವಣ$_1$' ನೋ.

**ಬದ್ದನೆ** (ನಾ). ನಿಯಮಿತವಾಗಿ ಒಂದು ಕಾರ್ಯವನ್ನು ನಡೆಸಿಕೊಂಡು ಹೋಗುವುದು; ವರ್ತನೆ : ಯಿಾ ಹುಳಿಯಾರ ಸುಂಕದಲ್ಲಿ ನಾನಾದಿನಶಿನ ನಡೆಗಳಿಗೆ ಬದ್ದನೆ ಪ್ರಕಾರಾ ಲೆಕ್ಕಾ ಹಕಿಕೊಳುತ್ತಯಿದ್ದಾರೊ ಅದೆ ಪ್ರಕಾರಕ್ಕೆ ಬದ್ದನೆ ನಿಂತ್ತ ನಡೆ ೧ಕ್ಕೆ ಕಣ್ಬರಾಯಿ ೮೦೦೦೦ (ಎಕ. XVI. ಚಿಕ್ಕನಾ. ೪೦–೦೬; 1802). [<ಸಂ. ವರ್ತನ]

**ಬದ್ದಬದಸು** (ನಾ). ಅತಿಶಯವಾದ ಮೋಸ; ಅಧಿಕವಾದ ವಂಚನೆ : ಅಂತು ಮಱಿವೊಕ್ಕು ಬಂದ ರಾಯನಂ . . . ಅಡಿಗಡಿಗೆ ಬದ್ದಬದಸಿಂ ಪಗೆದು (ರಾಮಾಕ್ಕ. ೭೨–೦೦). [ಬದ್ದ + ಬದಸು]

**ಬದ್ದರ, ಬದ್ದ್ರ** (ನಾ). ೧. ಶುಭವಾದುದು; ಮಂಗಳಕರವಾದುದು. ೨. ಗಟ್ಟಿಯಾದುದು; ಬಿಗಿಯಾದುದು; ಭದ್ರವಾದುದು : ಬಿಗಿದ ದಡ್ಡಿಯ ಬದ್ದರದ ಬೀಯಗದ ರಾಣೀವಾಸದಂದಣ ತೆಗೆದು ನಡೆದುದು ಮುಂದೆ ಸಂತೋಷದಲಿ ಯದುಸೇನೆ (ಕುವ್ಯಾದಿ. ೦೦–೬೩). ೩. ಒಂದು ಬಗೆಯ ಆನೆ,–ಗಜ : (?). ೪. ಎತ್ತು; ವೃಷಭ. ೫. (ಕೋಟೆ ಕಾಳಗದಲ್ಲಿ) ಆತ್ಮರಕ್ಷಣಾರ್ಥವಾಗಿ ಬಳಸುತ್ತಿದ್ದ ಒಂದು ಬಗೆಯ ಸಾಧನ,–ಉಪಕರಣ : ಪಾಯ್ವ ಕುರ್ಗಣೆಗೆ ಬದ್ದರವೊಡ್ಡುವ ಕೋಂಟೆ ಗಾವಗಂ ಕೆಡವುವ ಗಗ್ಗೆ ವಂಕದರದಿಂ ಪೊಱಮಟ್ಟೞಿವಾಳ್ಗವಾಂಕೆಯಾಳ್ ಗಡಣಿಸೆ ಕಾದುತಿರ್ದುದು ಮಹೇಂದ್ರವದಾತಿನಿ ಮುತ್ತಿ ಸುತ್ತಲುಂ (ಶಂಪ್ರಕು. ೫–೦೦೬); ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಲೆ ವೀರಸೇತು ನಡೆಸಾರಂ ಬದ್ದರಂ . . . ಪಡಿಗೋಂಟೆಯೆಂಬ ಬಹುಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಪೇಣಂ ಸಾರ್ದು ಸೂಳೈಸಿದಂ (ಅಶಂಪು. ೦೦–೬೩); ಬಲದ ಬದ್ದರದೊಟ್ಟದಂಬಿನ ಹೊಳೆವ ಹೊದೆಗಳ ಸೂತರುರವಣೆಗಳ ಸುರೇಖೆಯ ಗತಿಯ ವಾಜಿಯ ರಥವ ನೋಡಿದರು (ಕುವ್ಯಾಆ. ೦೦–೦೭). **ಬದ್ದ್ರ :** ೧. ಒಸಗೆ ಬದ್ದರವಾಗೆ ಶಿಶುವೇಷದಿಂದ ರಂಜಿಸಿದ ಕಾರಣಿಕನು (ಕೃರಹೂ. ೦೬೩). ೫. ಜೋಡನೊಡೆ ಹಾಯ್ದಂಬು ಧರಣಿಯೊಳಾಡಿದವು . . . ಬದ್ದರಂಗಳ ಬಾದಣವ ಕೊಱೆದು ಈಡಿಱಿದವು (ಕುವ್ಯಾಭೀ. ೫–೪೭); ಉರುಶತಘ್ನಿಯ ರಾಯ ಚಿಮ್ಮುವ ಭರದ ಭೈರವ ಬದ್ದರದ ನಡೆಸರದ ಡಬ್ಬುಕ ಡೆಂಕಣಿಗಳನು ತೂಱಿದರು ನಭಕೆ (ಕೊರಶಾ. ೬–೦೦–೦೪).

ಬದ್ದರದ ಬಂಡಿ, ಬದ್ದ್ರದ ಬಂಡಿ = ಬದ್ದರವೆಂಬ ಸಾಧನವನ್ನು ಹೊಂದಿರುವ ರಥ : ತವಕದಲಿ ಬದ್ದರದ ಬಂಡಿಗಳವುಚಿದವು (ಕುವ್ಯಾದ್ರೋ. ೨–೨೫); ಒಗ್ಗಿನಿಂ ಬದ್ದರದ ಬಂಡಿವಿಂಡ್ಯೆದಿದುವು (ಜಾತು. ೪೨–೨೪); ಕೋಲ ಕೋಲಾಹಳಕೆ ಸ್ವೈರಿಸದಾಳ ನಾಯಕವಾಡಿ ಹರಿಗೆಯ ಚಾಚಿದರು ಬಲು ಬದ್ದರದ ಬಂಡಿಗಳ (ಕುವ್ಯಾಭೀ. ೬–೪೪). [<ಸಂ. ಭದ್ರ]

**ಬದ್ದವಣ$_1$, ಬದ್ದಣ** (ನಾ). ೧. ಶುಭಸಮಾರಂಭದಲ್ಲಿ ಬಾರಿಸುವ ವಾದ್ಯ; ಮಂಗಳವಾದ್ಯ : "ಬದ್ದವಣಮೆಂದೊಸಗೆವಱೆ" (ಕಶಜಾ. ೬೩–೪೦೩); ವಸಂತಕನದೇಂ ಗುಡಿತೋರಣ ಶೋಭೆ ಪೊಯ್ಯ ಬದ್ದವಣ ಮಳುಂಬಮಾದುದೊ ನಿಕೇತನದಲ್ಲಿ ಮನೋಜರಾಜನಾ (ಅದಿಪು. ೦೦–೦೦೪); ಆ ಪುರದೊಳ್ ಗುಡಿಗಳಂ ಕಟ್ಟ ಬದ್ದವಣಂಗಳಂ ಬಾಜಿಸಿ ಪಿರಿದಾಗಿರ್ದೊ ಸಗೆಯಂ ಕೊಂಡಾಡುತ್ತುಮಿರಲ್ (ಜಾಕಥ . ೪–೩೬ ಶ); ಕೊಂಬು, ಕಾಳೆ, ಜೇಗಟೆ, ಮದ್ದಳೆ ಮುಂತಪ್ಪ ಬದ್ದವಣಂಗಳ ಬಿರುಸರಂ ಎಲ್ಲೆಡೆಯೊಳಂ . . . ಮಾರ್ದನಿಗುಟ್ಟದುದು (ಅದ್ಭುತ. ೬೨–೦೦). ೨. (?) : ಅತ್ತಿಗೆ ಕೇಳ್ ಪೇಟರೆ ನೈಮಿತ್ತಕರೆನವೇಡ ಪೇಟ್ಟೆವಿವಾ ಬದ್ದವಣಕ್ಕೆತ್ತಿದ ಕೆಯ್ಯನೆ ಬಾಸಿಱಿಂಗೆತ್ತುವೆಯಿದು ಕೂಡದಂದು ಕಾಡೆಲೆ ಕುಲಟೇ (ಅರ್ಥಶಾ. ೬–೩). **ಬದ್ದಣ :** ೧. "ಬದ್ದಣಮೆನಲೊಸಗೆಯ ಪಱೆ" (ಕಶುಜ. ೪೭); ಎತ್ತಲುಂ ಬದ್ದಣದ ದನಿ (ಶ್ರೀಚಾಕ. ೪೦–೩೬); ಬದ್ದಣಂ ಮೊಳಗಿತ್ತಾಗಳ್ ಬಾನೊಳ್ ಸುರರ ಕೇಳಿವೊಲ್ (ಶಾಚಂದ. ೨–೫೪).

ಬದ್ದವಣರ್=ಶುಭಸಮಾರಂಭದಲ್ಲಿ ಮಂಗಳವಾದ್ಯವನ್ನು ಬಾರಿಸುವವರು : ಬಾಜಿಸಲಿರ್ದ ಬದ್ದವಣರಿಂ ಘಳಿಗೆವಟ್ಟರಿಂ ಪರಿವೇಷ್ಟಿಸಿರ್ದ ನಕ್ಷತ್ರಪಾಠಕರಿಂ ಕಿಕ್ಕಿಱಿಗಿಱಿದ ವಿವಾಹಮಂಟಪಮುಂ . . . ನೋಡುತುಂ (ಶಂಚರ. ೬–೩೬).

[< ಸಂ. ಭದ್ರವಣವ]

**ಬದ್ದವಣ್ಣ** (ನಾ). ೧. ಬೆಳೆಯುವಿಕೆ; ಉತ್ಕರ್ಷ : ವರ್ಧಮಾನ–ಬದ್ದವಣ (ಶಮದ. ೨೪೬ ಶ್ರಹೋ). ೨. ಒಂದು ಬಗೆಯ ಗಿಡ ಮತ್ತು ಅದರ ಕಾಯಿ; ತುರಳು; ಔಡಲ: "ಬದ್ದವಣ (ಬದ್ದಣ)–ವರ್ಧಮಾನ–ಮಂಗಳವಾದ್ಯ, ಒಂದು ಗಿಡ" (ಕದ್ಮಕೋ. ೨೩). ೩. (?) : ಇದಿರಿರೆ ಪೂತ ಮರದ್ರುಮದಿದುವುಗಳೊಳ್ ಬದ್ದವಣದ ಪುಡಿವೊಲ್ ಬೆನ್ನೊಳ್ ಬಿಡದಲುಗೆ ಕುಸುಮಕುಲರಜಮಡರ್ದುದು ಸುರಗಿರಿಯನಿಂದ್ರರುಂದ್ರ ಗಜೇಂದ್ರಂ (ಅಂತ್ಯ. ೭–೭೩). [< ಸಂ. ವರ್ಧಮಾನ]

**ಬದ್ದವಣಂಬೊಯ್** (ಕ್ರಿ). ಮಂಗಳವಾದ್ಯವನ್ನು ಬಾರಿಸು: ಮುನೀಶನಾದೇಶಂಗೆಯ್ದು ಪೋಗೆಂದು ಕಳುಪಿದೊಸಗೆಗೆ ಮನದೊಳಿ ಗುಡಿಗಟ್ಟಿ ಬಗೆಯೊಳ್ ಬದ್ದವಣಂಬೊಯ್ದು . . . ಬನಮಂ ಪೊಕ್ಕು (ಜಗಪ. ೧೦–೨೫ ವ). [ಬದ್ದವಣ್ಣ + ಪೊಯ್₁]

**ಬದ್ದವಣಂಬೊಯಿಸು** (ಕ್ರಿ). ಮಂಗಳವಾದ್ಯವನ್ನು ಬಾರಿಸುವಂತೆ ಮಾಡು : ಅಂತಸ್ತಮಯವಾಗೆ ಸ್ಯಂಧವನುಂ . . . ಪೊಚ್ಚ ಬದ್ದವಣಂ ಬೊಯಿಸಿದಂ (ನೇಮಿಕೌ. ೦೨–೩೨ ವ). [ಬದ್ದವಣ್ಣ₁ + ಪೊಯಿಸು]

**ಬದ್ದಿ** 'ಬಡಗಿ' ನೋ.

**ಬದ್ದಿಗೆ** 'ಬದ್ದುಗೆ' ನೋ.

**ಬದ್ದು₁** 'ಬಾಟು₁' ಪರಾ.

**ಬದ್ದು₂** 'ಬರ್ದು₄' ನೋ.

**ಬದ್ದು₃** (ನಾ). ೧. ಹಳ್ಳ; ಗುಣಿ : ಕಿಕ್ಕಿರಿವ ಬಾಣಗಳು ತೆನೆತನೆಗಿಕ್ಕಿ ಕಟ್ಟಿದ ತೊಲೆಗಳಗಣಿತ ಕಕ್ಕುದರಿ ಬದ್ದುಗಳಲೊಪ್ಪುವ ತಳ್ಳುವಲಗೆಗಳು ಮಿಕ್ಕಿರುವ ಕೈದುಗಳು . . . ದಿಕ್ಕುದಿಕ್ಕಿಲಿ ತಿಂತಿಣಿಸೆ ರಚಿಸಿದನು ಪಟ್ಟಣವ (ಕೃಷ್ಣಾತ. ೪–೩೮). ೨. ಚೆಣ್ಣಿಕೋಲು, ಗೋಲಿ ಮುಂತಾದ ಆಟಗಳನ್ನಾಡುವಾಗ ನೆಲದಲ್ಲಿ ತೋಡುವ ಗುಳಿ, –ಕುಣಿ : ಗೋಲಿಯನ್ನು ಬದ್ದಿಗೆ ಸರಿಯಾಗಿ ಬೀಳುವಂತೆ ತೀಕು (ಲೋ). [?]

**ಬದ್ದುಗೆ, ಬದ್ದಿಗೆ** (ನಾ). ೧. (ಸೀರೆ, ಪಂಚೆ ಮೊದಲಾದುವುಗಳ) ಸೆರಗಿನ ತುದಿಯಲ್ಲಿ ನೇಯದೆ ಬಿಟ್ಟ ವಸ್ತ್ರದ ಎಳೆ; ಕರೆ; "ಸೀರೆಯ ಸೆರಗಿನ ದಡಿ" (ಚಾಕಕೋ. ೨೦). ೨. ಸೊಂಟಕ್ಕೆ ಕಟ್ಟಿಕೊಳ್ಳುವ ಪಟ್ಟಿ; ನಡುಕಟ್ಟು : ಉಡಿಯ ಬದ್ದುಗೆಯ ಕಠಾರ ಹಿಡಿದ ಹರಿಗೆಯೆಕ್ಕತುಳದ ತುಳುವರೊಗ್ಗು ನಡೆತಂದುದರಸನೋಲೈಸಿ (ಕ್ರೀಶಾಂ. ೦೪–೭೯); ಕಡೆಯ ಪೆಂಡೆಯ ಗೆಜ್ಜೆ ಕಣಕಾಲ ಬಾಸಿಂಗಮಡೆಯ ಬದ್ದುಗೆಯ ಕಿಗ್ಗಟ್ಟು ಬಿಡೆಯವಿಲ್ಲದೆ ಪೊಲಗಟ್ಟಿನ ಬಿಲ್ಲಾಳ ಪಡೆ ನಡೆಯಿತು ಬಾಣನೊಡನೆ (ಪೋಹಕ. ೪೦–೦೪). **ಬದ್ದಿಗೆ** : ೧. ಜವಳಿಯೆಳೆಗಳ ಬದ್ದಿಗೆಯ ಸೀರೆಯಾ ಸೆಱಗು ಸುವಿರಾಜಿಸುತ್ತಿರ್ದುದು (ಗುರುಚಾ. ೦೪–೩೩). ೨. ಕಟ್ಟಿದ ಕಠಾರದ ಬದ್ದಿಗೆಯ ತೊಂಗಲ್ದೆಗದು ಬಿಗಿದೆಬಲ್ಲ ಬಾಲಗಚ್ಚೆಯ ವಿಳಸದ ಸೆಱಗಂ ಸೆಳೆದಳ್ಳಿಱಿಯೆಯುಂ (ಅಕಂಕೃ. ೦೦–೮೫ ವ). 'ಬದುವು' ಹೋ.
[ದೇ.॥ ತೆಲು. ಬದ್ದೆ]

**ಬದ್ದುಗೆದಾರ** (ನಾ). ನಡುಪಟ್ಟಿಯ ದಾರ: ಉಟ್ಟ ಪಟ್ಟಾವಳಿಯ ಮೇಲಳವಟ್ಟ ಬದ್ದುಗೆದಾರದೊಂಗಲ ಕಟ್ಟ ಮೆಱೆವ ಕಠಾರಿಗಳ ಹೊಂಗಟ್ಟುಗಳು (ಶಸಕ. ೬೦–೨೬); ವೈರಿಬಾಹುದ್ವಯವ ಬದ್ದುಗೆ ದಾರದಲಿ ಕಟ್ಟಿದನು (ಕುಪ್ಪಾತ. ೨೨–೩೭); ಆಳವಡಿಕೆಯಲಿ ಪೀತಪಟ ಸಮ್ಮಿಳಿತ ಬದ್ದುಗೆದಾರವನು ಬಲಿದಲೆವ ಜಡೆಗಳನೊಬ್ಬುಳಿಸಿ ಬಿಗುಹಿಕ್ಕಿ (ಕೊರಚಾ. ೬–೨೫–೦೬). [ಬದ್ದುಗೆ + ದಾರ₁]

**ಬದ್ದೆ₁** 'ಬರ್ದೆ' ನೋ.

**ಬದ್ದೆ₂** (ನಾ). ಕೆಳಹೊಟ್ಟೆ; ಕಿಬ್ಬೊಟ್ಟೆ : ತುಸುವೆ ಉಬ್ಬಿದಂತಿದ್ದ ತನ್ನ ಬದ್ದೆಯ ಭಾಗವನ್ನು ನೋಡಿಕೊಂಡು ಮುಗುಳುನಗುತ್ತಾ ಏನನ್ನೊ ಸವಿಯುವಂತೆ ಕ್ಷಣಕಾಲ ನಿಂತಳು (ಮರಳು. ೩೮೮). [?]

**ಬದ್ದೆಗ** 'ಬರ್ದೆಗ' ನೋ.

**ಬದ್ದೆದಲ್ಲಟ** (ನಾ). ಪ್ರೌಢೆಯರನ್ನು ತನ್ನ ಸೌಂದರ್ಯಾದಿಗಳಿಂದ ಸೋಲಿಸಿಂಪವನು ; ಪ್ರೌಢಸ್ತ್ರೀಯರಿಗೆ ತವಕವನ್ನುಂಟುಮಾಡುವವನು : ನೋಟದೊಳಟ್ಟುಜಂಬಡೆದು . . . ಕೂಟದೊಳುಣ್ಮಿದ ಬೆಚ್ಚತಟ್ಕೆಯೊಳ್ ಕೂಟಸುಖಂಗಳಂ ಪಡೆದನೇಂ ಚದುರಂ ಗಳ ಬದ್ದೆದಲ್ಲಟಂ (ಶಂಕಪು. ೩–೮೨). [ಬದ್ದೆ₁ (< ಬರ್ದೆ) + ತಲ್ಲಟ]

**ಬದ್ದೆವಜ್ಜೆ** (ನಾ). "ಪ್ರೌಢಿಮೆಯುಳ್ಳ ಹೆಜ್ಜೆ ಗುರುತು" (ಶಂಕಪು. ೦೪೬) : ಪದಮುಮನಿಂಬುಮನಣಮುಱಿಯದದೇವುದು ಬದ್ದೆ ಬೆಳ್ಪಿಗಂ ಪಜ್ಜೆ ದಲೆಂಬುದನೆರಡುಮನಱಿಪಾತನೆ ಚದುರಂ ಚದುರಂಗೆ ಬದ್ದೆವಜ್ಜೆಗಳೊಳವೇ (ಶಂಕಪು. ೫–೯೩). ☞ ಇದು 'ಬದ್ದೆ' ಮತ್ತು 'ಪಜ್ಜೆ'ಗಳೆಂಬ ಭಿನ್ನಶಬ್ದಗಳಿರಬಹುದು.
[ಬದ್ದೆ₁ (< ಬರ್ದೆ) + ಪಜ್ಜೆ]

**ಬದ್ದೆವೆಣ್** (ನಾ). ಚತುರೆ ; ಪ್ರೌಢಸ್ತ್ರೀ : ನುಡಿಯೊಳು ನಗಿಸುವ ಸರಸಕಾತಿಯರು ಮೇಲುಡಿಸಿ ತೊಡಿಸುವ ನೀಱೆಯರು ಮಿಡಿದು ವೀಣೆಗಳ ಬಾಜಿಪ ಬದ್ದೆವೆಂಡಿರು ಕಡುಹಗೆಯಾದರವಳಿಗೆ (ವರ್ಧಕ. ೫–೦೨).
[ಬದ್ದೆ₁ (< ಬರ್ದೆ) + ಪೆಣ್]

**ಬದ್ಧ** (ಗು). ೧. ಕಟ್ಟಿದ ; ಬಿಗಿದ. ೨. ಬಂಧನಕ್ಕೊಳಗಾದ; ಅಧೀನವಾದ. ೩. ಕ್ರಮಕ್ಕೆ ಅನುಗುಣವಾದ; ವಿಧಿವತ್ತಾದ; ನಿಯಮಾನುಸಾರವಾದ. ೪. ಹೆಣೆದ : ಕೂಡಿಕೊಂಡ ; ಸೇರಿದ : 'ಬದ್ಧಭ್ರುಕುಟಿ', 'ಬದ್ಧಾಂಜಲಿ' ಪರಾ. ೫. ಆವರಿಸಿದ ; ಸಂತೃಪ್ತಿವರಿದ : ಸಕಲ ಬದ್ಧಾಶ್ರವನಿರೋಧದಿನಯೋಗಿಕೇವಲಿಗುಣಸ್ಥಾನಮಂ ಪೊರ್ದಿ ಸಮುಚ್ಛಿನ್ನಪ್ರಾಣಾಪಾನಪ್ರಚಾರಂ ಸಮುಚ್ಛಿನ್ನಕ್ರಿಯಾಪ್ರವೃತ್ತಿಧ್ಯಾನಪ್ರವರ್ತನಾಪರನಾಗಿ (ಶಂಶಾಪು. ೦೬–೭೯ ವ) ; ಬದ್ಧಾಷ್ಟಕರ್ಮಮಂ ನಿಜಬುದ್ಧಿಯ ಬಲದಿಂದನಂತಚಾತುಷ್ಟಯದಿಂದುದ ತರಿಪುಗಳನುರಿಸಿದ ಸಿದ್ಧರ್ ಲೋಕಪ್ರಸಿದ್ಧರೀಗೆಮಗೊಳ್ಪಂ (ಅಬ್ಬಿಮ. ೦–೨). ೬. ತಡೆದ ; ಹೊರಬರದ ; ಕಟ್ಟಿಕೊಂಡ : 'ಬದ್ಧಮಲ' ಪರಾ. ೭. ಹತ್ತಿಕ್ಕಿದ ; ಹತೋಟಿಯಲ್ಲಿಟ್ಟುಕೊಂಡ : 'ಬದ್ಧೇಂದ್ರಿಯ' ಪರಾ. ೮. ಗಾಢವಾದ ; ದೃಢವಾದ ; ತೀವ್ರವಾದ : 'ಬದ್ಧದ್ವೇಷ', 'ಬದ್ಧವೈರ' ಪರಾ. ೯. ಕುಂದಣಿಸಿದ ; ಕೆಚ್ಚಿದ. ೧೦. ರಚಿಸಿದ ; ಕಟ್ಟಿದ. ೧೧. ತೊಟ್ಟ ; ಧರಿಸಿದ : ಇನ್ನೆನ್ನುಮನೊಲ್ಲುಮೊಲ್ಲಳೆವಳೆಂಬಾಶಂಕೆ ಪುಟ್ಟಿತ್ತು ಚಿತ್ತದೊಳಾಬೇಗದೊಳುರ್ವರಾಸ್ಯತಿಲಕಂಗತ್ಯುನ್ನತಂ ದಕ್ಷಿಣಾಂಸದ ಬದ್ಧ ಶ್ಲಥಬಾಹುಕೀರ್ತಿ ಕಳೆದತ್ತೆಂದಾದ ಸಂದೇಹಮಂ (ಶಾಂತಿಕೃ. ೫–೦೪೮). ೧೨. (ನಾ). ಕಟ್ಟು ; ಪಾಶ ; ಬಂಧನ : ಮುಕ್ತಿ ಬದ್ಧಗಳೆರಡು ತಾವತಿಪ್ರಕಟವಾಗಿಯೆ ಸತ್ಯವೆಂಬರ ಮುಕುತಿಯಲ್ಲೊಬ್ಬಾತಗೆರಡು ಸಂಗ ದೊರಕುವದೆ (ನಿಶಾಗ. ೦೦–೦೬–೭) ; ಬದ್ಧವೆಂಬುದು ಮುಕ್ತವೆಂಬುದು ಬುದ್ಧಿಗೇ ಸರಿಯಾತ್ಮಕಿಲ್ಲೆಲೆ (ಅಮೃತ. ೬–೦೪೦). ೧೩. ಕಟ್ಟಿ ಹಾಕಿದುದು ; ಬಂಧಿಸಿದುದು : "ಬದ್ಧಂ, ಪಿನದ್ಧಂ, ಅಮುಕ್ತಂ, ಅಪಿನದ್ಧಂ–ಈ ೪ ಕಟ್ಟಲ್ಪಟ್ಟುದು" (ಕಣಾಯು. ೦೫೩–೬೨). ೧೪. ಹಿಡಿತ ; ಹತೋಟಿ; ನಿಯಂತ್ರಣ : 'ಬದ್ಧಗೊಳಿಸು' ಪರಾ. ೧೫. ಸತ್ಯ ; ದಿಟ; ನಿಜ : ನೀನು ಹೇಳುವಂಥಾದ್ದು ಸಟೆಯೋ ? ದಿಟವೋ ?. . . ಬದ್ಧವೇ ಸರಿ. ಪರೀಕ್ಷೆ ಮಾಡಬೇಕು (ರಾಜೇಂದ್ರ. ೦೦೬). ೧೬. ಕಟ್ಟಳೆ ; ನಿಯಮ : 'ಬದ್ಧಭೋಜನ' ಪರಾ. ೧೭. ಯಾವುದಾದರೊಂದು ಕಟ್ಟಿಗೆ ಒಳಪಟ್ಟವನು : "ಬದ್ಧಃ, ನದ್ಧಃ, ಸಂಯುತಃ – ಈ ೩ ಕಟ್ಟುಪಟ್ಟವಂ" (ಕಣಾಯು. ೩೬–೦೬೫) ; ಬದ್ಧನಲ್ಲ ಮುಕ್ತನಲ್ಲ ಎರಡಿಲ್ಲವಾಗಿ ಸಹಜಭರಿತನಯ್ಯಾ (ಅದವ. ೪. ೦೪೭–೨೬೭). ೧೮. [ವಿಶಿಷ್ಟಾ]

ನಿತ್ಯ, ಮುಕ್ತ, ಬದ್ಧರೆಂಬ ಮೂರುಂ ಬಗೆಯಂ ಜೀವಾತ್ಮರಲ್ಲಿ ಒಂದು ಬಗೆ ; ಸಂಸಾರಿ : ಈ ಜೀವಾತ್ಮತತ್ತ್ವವು ನಿತ್ಯ, ಮುಕ್ತ, ಬದ್ಧ ಎಂದು ಮೂರು ವಿಧ . . . ಈಗ ಪ್ರಕೃತಿಸಂಬಂಧದಲ್ಲಿರುವವರು ಬದ್ಧರು (ಹಿಂದಸಾ. ೨೯೭). ೧೯. [ಸಂಗೀತ] ತಾನದಲ್ಲಿ ಒಂದು ಪ್ರಕಾರ : ಪ್ರಾಚೀನಸಂಗೀತದಲ್ಲಿ ತಾನ, 'ಬದ್ಧ' ವೆಂದೂ 'ಅಬದ್ಧ' ವೆಂದೂ ಎರಡು ರೀತಿಯಲ್ಲಿತ್ತು (ಸಂಗೀಶಂ. ೬೮). 'ಬದ್ಧತಾನ' ಪರಾ. ೨೦. [ನಾಟ್ಯ] ನರ್ತನದಲ್ಲಿ ಒಂದು ಪ್ರಕಾರ ; ನೃತ್ಯದಲ್ಲಿ ಹೆಜ್ಜೆ ಹಾಕುತ್ತ ಮುಂದಕ್ಕೆ ಚಲಿಸಂವ ಒಂದು ಬಗೆಯಂ ಗತಿ : ಒದವಿದಪ ಸ್ಯಂದಿತವುಗ್ಗದ ಬದ್ಧಂ ಜನಿತವುಮೆಸೆವೂರೂದ್ವೃತ್ತಂ ಸುದತಿ ಪದಿ ನಾಟು ಭ್ರಾಮಂ ವುದಿದೆಸೆವೀ ಚಾರಿಯೆಂಬ ಪೆಸರಸೆದಿರ್ಕುಂ (ಲಾಸ್ಯರಂ. ೬-೪). [ಸಂ.]

**ಬದ್ಧಕ** (ನಾ). ಬಂಧನಕ್ಕೆ ಸಿಲುಕಿದವನು : ಆ ಜಂಗಮ ಹೆಣ್ಣ ಬೇಡಿದರೆ ಸಂಸಾರಿ ಎಂದು ಹೊನ್ನ ಬೇಡಿದರೆ ಆಶಕನೆಂದು ಮಣ್ಣ ಬೇಡಿದರೆ ಬದ್ಧಕನೆಂದು ಇಷ್ಟಕ್ಕೆ ನೊಂದ ಮತ್ತೆ ಭಕ್ತಿವಾಸಿಗೆ ಹೋರಲೇಕೆ (ಪೋಳವಪಾ. ೩೩-೨೦೬). [ಸಂ.]

**ಬದ್ಧಕಂಕಣ** (ನಾ). ತನ್ನ ಗುರಿಯನ್ನು ನೆರವೇರಿಸಲು ಸಂಕಲ್ಪ ಮಾಡಿದವನು ; ಕಂಕಣಬದ್ಧ : ಬಲದೇವನು . . . ವರ್ಣಚಿತ್ರಕಲೆ (oil Painting) ಯನ್ನು ಮುಂದಕ್ಕೆ ತರಬೇಕೆಂದು ಬದ್ಧಕಂಕಣನಾದನು (ಕಲಾಸಾ. ೩೩). [ಸಂ.]

**ಬದ್ಧಕತನ** (ನಾ). ಬಂಧನಕ್ಕೊಳಗಾಗಿರುವಿಕೆ : ಕಾಯದೊಳ ಗುಂಟೆಂದರೆ ಕರ್ಮಕಾಂಡಿಯಲ್ಲ ಜೀವದೊಳಗುಂಟೆಂದರೆ ನಾನಾಯೋನಿ ಯವನಲ್ಲ . . . ಅದು ಇದ್ದಿಲು ಶುಭ್ರವಾದ ತೆಜನುತೆ ಹೊದ್ದದಾಗಿ ಬದ್ಧಕತನವಿಲ್ಲವೆಂದೆ ನಿಃಕಳಂಕಮಲ್ಲಿಕಾರ್ಜುನಾ (ಪೋಳವಪಾ. ೩-೮).

[ಬದ್ಧಕ + — ತನ]

**ಬದ್ಧಕೋಣಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ ; ᴘ "ಬದ್ಧವೆಂದರೆ ಕಟ್ಟಲ್ಪಟ್ಟ, ತಡೆಯನ್ನು ಹೊಂದಿದ ಎಂದರ್ಥ. 'ಕೋಣ' ವೆಂದರೆ ಮೂಲೆ. ಈ ಭಂಗಿಯಲ್ಲಿ, ನೆಲದ ಮೇಲೆ ಕುಳಿತು, ಹಿಮ್ಮಡಿಗಳನ್ನು ಗುದ ಗುಹ್ಯಸ್ಥಾನಗಳ ನಡುತಾಣಕ್ಕೆ (perineum) ಅಳವಡಿಸಿ ಪಾದಗಳನ್ನು ಹಿಡಿದು, ಮಂಡಿಯ ಭಾಗಗಳು ಎರಡು ಕಡೆಗಳಲ್ಲಿಯೂ ನೆಲ ಮುಟ್ಟುವವರೆಗೂ ತೊಡೆ ಗಳನ್ನಗಲಿಸಬೇಕಾಗಿದೆ" (ಯೋಗದೀ. ೦೦೨) : ಅಷ್ಟವಿನ್ಯಾಸಗಳು ೧. ಉತ್ತಾನಾಸನ ೨. ಚತುರಂಗದಂಡಾಸನ . . . ೩೨. ಟಿಟ್ಟಿಭಾಸನ ೩೩. ಬದ್ಧಕೋಣಾಸನ (ಭಾರದ. ೦೬೭). [ಸಂ.]

**ಬದ್ಧಗೊಳಿಸು** (ಕ್ರಿ). ಹಿಡಿತಕ್ಕೆ ತರು ; ಹತೋಟಿಯಲ್ಲಿಡು ; ನಿಯಂತ್ರಣಗೊಳಿಸು : ಹಾದಿಯಿಲ್ಲದೆ ಹರಿವ ಮರುಳು ಮನವನು ನಿನ್ನ ಬುದ್ಧಿಬಲದಿಂದಲೇ ಬದ್ಧಗೊಳಿಸಿ (ವಚಲ್ಲಿ. ೬೭-೪).

[ ಬದ್ಧ + ಕೊಳ್$_1$ + — ಇಸು$_3$ ]

**ಬದ್ಧತಾನ** (ನಾ). = ಬದ್ಧ ೧೯ : ಬದ್ಧತಾನ ತಾಳಗತಿಯನ್ನು ಅನುಸರಿಸಿ, ಅಬದ್ಧತಾನ, ತಾಳಗತಿಯನ್ನನುಸರಿಸದೆ ಹಾಡಲ್ಪಡುತ್ತವೆ. ಬದ್ಧತಾನ ಈಗ ಬಳಕೆಯಲ್ಲಿಲ್ಲ (ಸಂಗೀಶಂ. ೬೮). [ಸಂ.]

**ಬದ್ಧತೆ** (ನಾ). ೧. ಕಟ್ಟಳೆ ; ನಿಯಮ : ಯಾವನೊಬ್ಬ ನಾಗರಿಕನೂ . . .ಸರ್ವಜನರು ಸೇರುವ ಸ್ಥಾನಗಳನ್ನು ಉಪಯೋಗಿಸುವ ಸಂಬಂಧದಲ್ಲಿ ಯಾವುದೊಂದು ನಿರ್ಯೋಗ್ಯತೆ, ಬದ್ಧತೆ, ನಿರ್ಬಂಧ ಅಥವಾ ಷರತ್ತಿಗೆ ಒಳಪಟ್ಟರತಕ್ಕುದಲ್ಲ (ಭಾಧಾಸ. ೬). ೨. (ಮಲವು) ಹೊರಬರದೆ ಕಟ್ಟಿಕೊಳ್ಳುವಿಕೆ : 'ಮಲಬದ್ಧತೆ' ಪರಾ. [ಸಂ. ಬದ್ಧತಾ]

**ಬದ್ಧದ್ವೇಷ** (ನಾ). ಕಡು ಹಗೆ ; ಗಾಢ ವೈರ : ಅರಸ ಕೇಳಾಯುಷ್ಯ ಭಾಗ್ಯಗಳೆರಡು ಕೆಡುವವು ತಪ್ಪದವನೀಸುರರ ಬದ್ಧದ್ವೇಷ ಲೇಸಲ್ಲೆಂದನಾ ವಿದುರ (ಕುಪ್ಯಾಉ. ೩-೧೮) ; ವೀರೇಂದ್ರಸಿಂಹನಿಗೂ ಮಾನಸಿಂಹನಿಗೂ ಬದ್ಧದ್ವೇಷ (ಏಂಕಿಮ. ೦೪೭). [ಸಂ.]

**ಬದ್ಧಪದ್ಮಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ ; ᴘ "ಬದ್ಧಪದ್ಮಾಸನ . . . 'ಬದ್ಧ' ವೆಂದರೆ ಕಟ್ಟಲ್ಪಟ್ಟ ಅಥವಾ ಬಿಗಿತಕ್ಕೆ ಒಳಗಾದ. ಈ ಭಂಗಿಯಲ್ಲಿ ಕೈಗಳನ್ನು ಬೆನ್ನ ಹಿಂದೆ ಎದುರುಬದುರು ದಿಕ್ಕಿನಲ್ಲಿ ಅಡ್ಡಗಿಸಿ, ಅವುಗಳಿಂದ ಕಾಲಿನಂಗುಟ (ಹೆಬ್ಬೆರಳು)ಗಳನ್ನು ಹಿಂಗಡೆಯಿಂದ ಬಿಗಿಹಿಡಿಯುವುದು. ಮುಂಗಡೆ ಅಡ್ಡಗಿಸಿದ ಕಾಲುಗಳೂ ಮುಂಗಡೆಯಲ್ಲಿ ಅದೇ ಬಗೆ ಯಲ್ಲಿ ಕೈಗಳೂ ಈ ಮಧ್ಯೆ ದೇಹವು ಇವುಗಳ ಹಿಡಿತಕ್ಕೆ ಒಳಪಟ್ಟಿ ರುವುದರಿಂದ, ಈ ಭಂಗಿಗೆ ಈ ಹೆಸರು" (ಯೋಗದೀ. ೦೦೭): ಮುಖ್ಯವಾದ ಕೆಲವು ಆಸನಗಳು . . . ೧೪. ಬದ್ಧಪದ್ಮಾಸನ ೧೫. ಯೋಗಮುದ್ರಾಸನ (ಭಾರದ. ೦೬೭) ; ಮುಕ್ತಪದ್ಮಾಸನ, ಬದ್ಧಪದ್ಮಾಸನ ಇವು ಧ್ಯಾನಕ್ಕೆ ಅನುಕೂಲವೆಂದೂ . . . ಹೇಳಲ್ಪಟ್ಟಿದೆ (ಮನೋವಿಜ್ಞಾ. ೩೦೩). [ಸಂ.]

**ಬದ್ಧಭೂಮಿಕ** (ನಾ). ಸಮಮಾಡಿ ಸಿದ್ಧಗೊಳಿಸಿದ ವೇದಿಕೆ, — ನೆಲಗಟ್ಟು : "ಕುಟ್ಟಿಮಂ, ಬದ್ಧಭೂಮಿಕಂ — ಈ ೨ ನೆಲಗಟ್ಟು" (ಹಲಾಯು. ೪೯-೦೩೯). [ಸಂ.]

**ಬದ್ಧಭೋಜನ** (ನಾ). (ದೇವಸ್ಥಾನದಲ್ಲಿ) ಕಟ್ಟಳೆಯ ಪ್ರಕಾರ ಹಾಕುವ ಊಟ,—ಭೋಜನ : ದನಿಯರು ತಮ್ಮ ಬದ್ಧಭೋಜನ ನಡವಂತಾಗಿ ಯಿಕ್ಕಿಕೊಂಡು (ಶಾಇ. IX-ii, ೪೦೮-೨೩ ; 1365). [ಸಂ.]

**ಬದ್ಧಭ್ರುಕುಟಿ** (ನಾ). ೧. ಗಂಟಿಕ್ಕಿದ ಹುಬ್ಬು ; ಹುಬ್ಬುಗಂಟು : ಕಾಜಿದವು ಕುಡಿಮಿಸೆ ಕಾದುದು ಮೋಟ ಬದ್ಧಭ್ರುಕುಟಿಯಲಿ ಹುರಿ ಯೇಜಿತಧಿಕ ಕ್ರೋಧತಾಮಸ ನಿಮ್ಮ ದಳಪತಿಯ (ಕುಪ್ಯಾಕ. ೨೫-೩) ; ದಾಶರಥಿ . . . ಸಿಗ್ಗಿಂದೆ ಬದ್ಧಭ್ರುಕುಟಿಯಿಂದೆ ನೋಡುತಿರ್ದನ್ ಬಿಲ್ಲು ವೆರಗಾಗಿ (ಶ್ರೀರಾಮಾ. ೩೦೩-೦೨೩). ೨. ಹುಬ್ಬುಗಂಟಿಕ್ಕಿದವನು : ಭೀಮಸೇನನುದ್ದಾಮಕೋಪಾಟೋಪಚಿತ್ತದಿಂ ಬದ್ಧಭ್ರುಕುಟಿಯಾಗಿ (ಗದಾಯು. ೭-೯ ವ) ; ಬದ್ಧಭ್ರುಕುಟಿ ಸೆರೆ ಬಿಗಿಯುವೋಲೌಡುಗಚ್ಚಿ, ನಿದ್ದೆಯನೊದ್ದು, ಸೀಳ್ದು ದುಃಸ್ವಪ್ನಮಂ, ಕುಳಿತೆದ್ದನಬ್ಬರಿಸಿ (ಶ್ರೀರಾಮಾ. ೨೭೩-೨೭೮). [ಸಂ.]

**ಬದ್ಧಮಲ** (ನಾ). ಕಟ್ಟಿಕೊಂಡಿರುವ ಮಲ ; ಹೊರಬರದಿರುವ ಮಲ: ಸಂವತ್ಸರಲವಣ, ಇಂಗು, ಶುಂಠಿ ಎಂಬೀ ಔಷಧಿಗಳನ್ನು ಶುಂಠಿಯ ಕಷಾಯದ ಬಿಸಿನೀರಿಂ ಕುಡಿಯೆ . . . ಬದ್ಧಮಲ ಬಿಡುವುದು (ಬಿಸ್ತ್ರಿ. ೨೦). [ಸಂ.]

**ಬದ್ಧಮೂಲ** (ನಾ). ೧. ಬಲವಾಗಿ ಬೇರೂರಿದುದು ; ಗಾಢವಾಗಿ ನೆಲಸಿದುದು : ಒಂದು ಸಾರಿ ಪ್ರಣಯವು ಹುಟ್ಟಿ ಬದ್ಧಮೂಲವಾದರೆ— ಆಮೇಲೆ ರೂಪವಿರಲಿ ಹೋಗಲಿ ಪ್ರಣಯವು ನಡೆದುಕೊಂಡು ಹೋಗು ವುದು (ಏಂಕಿವು. ೬೦). ೨. ಗಟ್ಟಿಯಾಗಿ ನೆಲಸಿದವನು ; ಸ್ಥಿರವಾಗಿ ನಿಂತವನು : ಆ ಸುಖದಲ್ಲಿ ನಾವೆಲ್ಲರೂ ಇಹಸಂಸಾರದಲ್ಲಿ ಬದ್ಧಮೂಲ ರಾಗಿ, ಎಂದರೆ, ಬಲವಾದ ಬೇರನ್ನು ಬಿಟ್ಟುಕೊಂಡವರಾಗಿದ್ದೇವೆ (ಕಥಾಕುಂ. ೦೨೩). [ಸಂ.]

**ಬದ್ಧರ** 'ಬದ್ದರ' ನೋ.

**ಬದ್ಧರಸ** (ನಾ). ೧. ಸ್ನೇಹಭಾವದಿಂದ ಕೂಡಿದವನು. ೨. ಪಾರಜ ವನ್ನು ಲೋಹದಲ್ಲಿ ಬೆರಸಿದವನು. ೧, ೨ : ಬಿನ್ನಪಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದನುಮಾದ ರಸವಾದಿಯಂತೆ ಜ್ವಲನಜಟ ರಾಗಿಸಿ (ಶಾಂತಿಪು. ೩-೩೭ ವ). [ಸಂ.]

**ಬದ್ಧರೂಪ** (ನಾ). [ಭಾಷಾಶಾ] ಬೇರೊಂದಕ್ಕೆ ಹೊಂದಿಕೊಂಡಿರುವಂಥ ಶಬ್ದರೂಪ : ಪ್ರತ್ಯಯಗಳು ಯಾವಾಗಲೂ ಪ್ರಕೃತಿಗಳೊಡನೆ ಕೂಡಿಕೊಂಡೇ ತೋರಿ ಬರುವುದರಿಂದ . . . ಪ್ರತ್ಯಯಗಳನ್ನು ಬದ್ಧರೂಪಗಳೆಂದೂ (ಬಾಂಡ್‌ಫಾರಂ) ಕರೆಯುವುದುಂಟು (ಕವಿಕೋ. I. ೬೮೫). [ಸಂ.]

**ಬದ್ಧವಿಘಾತಿ** (ನಾ). ಕೆಡುಕಿಗೆ ಸಂಬಂಧಿಸಿದುದು : (ಖಂಡಿತವಾಗಿ) ಕೇಡನ್ನುಂಟು ಮಾಡುವುದು : ದೇವಿ ನೇಮಿಸಲಜೀಯೆನಂದೊಡಿದಾವ ಧರ್ಮವು ಶಿವಶಿವೀ ಹದ ಸಾವನವರಿಗೆ ತಹುದು ಬದ್ಧವಿಘಾತಿಯಿದು ಬಲುಹು (ಕುವ್ಯಾಕಿ. ೩-೯). [ಸಂ.]

**ಬದ್ಧವಿರೋಧ** (ನಾ). ತೀವ್ರವಾದ ದ್ವೇಷ ; ಕಡುಹಗೆ : ಮೊದಲೊಳ್ ಬದ್ಧವಿರೋಧದಿಂ ನೆಗಟ್ದ ಕುಂತೀಪುತ್ರರೊಳ್ ಭೀಮನಂಕದ ಗಾಂಧಾರಿಯ ಪುತ್ರರೊಳ್ಮೊದಲಿಗಂ ದುರ್ಯೋಧನಂ ಧರ್ಮಯುದ್ಧದೊಳಂತಾತನನಿಕ್ಕಿ ಕೊಂದಂ (ಗದಾಯು. ೧-೩೩). [ಸಂ.]

**ಬದ್ಧವೈರ** (ನಾ). ಅತಿಯಾದ ದ್ವೇಷ ; ಕಡುಹಗೆ ; ಬದ್ಧವಿರೋಧ : ಆ ಬದ್ಧವೈರದಿನಿನಿತು ಕಟುಪ್ಪುಂ ಕಾಯ್ಪುಂ ನಿನಗಾದುದು (ಶಾಂತಿಪು. ೯-೯೧ ವ) ; ಆ ಮರ್ಕಟಂಗಳೆರಡರ್ಕಂ ಏಕದ್ರವ್ಯಾಭಿಲಾಷೆಯಿಂ ಬದ್ಧವೈರಂ ಬಳೆದು (ಶಂಚರಿತಂ. ೨೬೬-೮) ; ಒರೊರ್ವರ ನೆಜಂಗಳುಮನನ್ಯೋನ್ಯಬದ್ಧವೈರಕಾರಣಂಗಳುಮಂ ಮೂದಲಿಸುತ್ತುಂ (ಸುಕುಮಾ. ೧೧-೯೩ ವ). [ಸಂ.]

**ಬದ್ಧಾಂಜಲಿ** (ನಾ). (ನಮಸ್ಕಾರ ಮಾಡಲು) ಜೋಡಿಸಿದ ಕೈ ; ಮುಗಿದ ಕೈ : ನೀಂ ಪೋಗಿ ಕಾದಂಬರೀದೇವಿಗೆ ಬದ್ಧಾಂಜಲಿಯಾಗಿ ಪ್ರಣಾಮಪುರಸ್ಸರಮಪ್ಪೆನ್ನ ಬಿನ್ನಪಮಂ ಪೇಳ್ವುದು (ಕಾದಂಬ. ೩೯೯) ; ಉದ್ಧರಿಸಿದನಶ್ರಮದಿಂ ಸಿದ್ಧಶಿಲೋಚ್ಚಯಮನೊಂದೆ ಕರತಲದಿಂ ದರ್ಪೋರ್ಕೀದ್ಧರಣಸಹಿತಮಮರರ್ ಬದ್ಧಾಂಜಲಿಯಪ್ಪಿನಂ ಸುಮಿತ್ರಾಪುತ್ರಂ(ಶಂರಾಮಾ. ೧೧-೩೦) ; ಆ ನೀತಿಭೂಷಣಮಂತ್ರಿಪಂ . . . ರಾಜಶೇಖರ ರಾಜೇಂದ್ರಂಗೆ ಮಣಿಮಕುಟಮಂ ಮಣಿದು ಬದ್ಧಾಂಜಲಿಯಾಗಿ ನಿಂದಿರ್ದಂ (ರಾಜಶೇ. ೬-೦೩೨ ವ). [ಸಂ.]

**ಬದ್ಧಿಸು** (ಕ್ರಿ). ನಿಯಮಿಸು ; ನಿಶ್ಚಯಿಸು : ಉದ್ಯೋಗಿಸಿದರಾಗಮನದಲ್ಲಿ ಹವನವ ತಿದ್ದುತೆ ದಾನದಕ್ಷಿಣೆಯ ಶುದ್ಧಿಯ ಮಾಡಿದು ಮನೆಯ ಸುಲಗ್ನದಿ ಬದ್ಧಿಸಿದರು ಮಹೌಹೂರ್ತಿಕರು (ಮೋಹತ. ೧೬-೯೨). [ಬದ್ಧ + — ಇಸು₂]

**ಬದ್ಧೇಂದ್ರಿಯ** (ನಾ). ಇಂದ್ರಿಯಂಗಳನ್ನು ನಿಗ್ರಹಿಸಿದವನು,-ಹತೋಟಿಯಲ್ಲಿಟ್ಟುಕೊಂಡಿರುವವನು ; ಜಿತೇಂದ್ರಿಯ : ಶುದ್ಧವಾಗಿರ್ದಧ್ವದೋಳ್ ಶಿವಂಪತಿಯಾಗಿ ಬದ್ಧೇಂದ್ರಿಯಂ ತಾನನಂತೇಶ್ವರಂ (ಏಕ್ಕಪು. ೬-೨-೯೨). [ಸಂ.]

**ಬದ್ನಾಮಿ**, ಬದನಾಮಿ (ನಾ). ಕೆಟ್ಟ ಹೆಸರು ; ಅಪಯಶಸ್ಸು ; **ಅಪಖ್ಯಾತಿ** : ಹಾಗೆ ಮಾಡಿದ್ರೇ ಆದರೆ ನಮ್ಮೂರಿಗೇ ಫುಂಡುಕೋಪಿಯೆಂಬ ಬದ್ನಾಮಿ ಬರುತ್ತೆ (ಕಲಿಪ. ೨೦೦). **ಬದನಾಮಿ** : ಅದ ಕಾಣದಾದಭವ ಮದನನಂ ಕೊಂಡು ತಾಂ ಮೊದಲೆ ಮನಮಂ ಕೊಲ್ಲದೆಮಗೆ ತಂದ ಬದನಾಮಿ ಸಾಕು (ಮನೋಹಿ. ೧-೨೧) ; "ಕೋಟಲೆ" (ಮನೋಚಿ. ೫೪೯). [←ಪಾರ. ಹಿಂ. ಮರಾ. ಬದನಾಮಿ]

**ಬದ್ಮಾಶ್**, ಬದಮಾಷ್, ಬದ್ಮಾಷ್ (ಗು). ೧. ಕೀಳಾದ; ಕೀಳುಮಟ್ಟದ. (ನಾ). ೨. ನೀಚ ; ಕೀಳುಮನುಷ್ಯ : ಬದ್‌ಮಾಶ್ ನನ್ನ ಕೈ ಹಿಡಿಯಲು ಪ್ರಯತ್ನಿಸುತ್ತಿದ್ದ (ಕಲಿಶ. ೧೧೧). **ಬದಮಾಷ್** : ೨. ಬ್ಲಾಟೋ ದುಂಡು ಕುಡುಕ, ಲಫಂಗ, ಬದಮಾಷ್ (ಕುಂಹಿಂ. ೦೨೦) ; ಬಂಗಾರದಂಥ ಕಾಯಿಗಳನ್ನು ಹಾಳುಮಾಡಿದಿ ಬದಮಾಷ್ (ರಂಗರೋ. ೯೦). **ಬದ್ಮಾಷ್** : ೧. ಅವಳು . . . ಯಾರೋ ಬದ್ಮಾಷ್ ಜನರ ಗುಂಪಿನವರೊಳಗಿನವಳಿರುವಂತೆ ತೋರುತ್ತದೆ (ಕೃಕಳ್ಳ. ೫೦). ೨. ಬದ್ಮಾಷ್, ನಿನ್ನ ಬಾಪ್ತಿಸ್ಮಾ ಹೇಗಾಗುವದೋ ನೋಡುತ್ತೇನೆ (ಸ್ವ.ಶಿಶ. ೩೩೩) ; ಕೆಲಸ ಮಾಡಾಕ ಬಂದಿದ್ದಿಯೋ, ತುಡುಗು ಮಾಡಾಕ ಬಂದಿದ್ದಿಯೋ ಬದ್ಮಾಷ್ (ಪಾಪೋಲೀ. ೦೨೦). [← ಅರ. ಪಾರ. ಹಿಂ. ಮರಾ. ಬದಮಾಶ್]

**ಬದ್ಮಾಷ್** 'ಬದ್ಮಾಶ್' ನೋ.

**ಬಧಿರ** (ನಾ). ಕಿವಿ ಕೇಳಿಸದವನು ; ಕಿವುಡ ; ಕೆಪ್ಪ : "ಬಧಿರನೇಡಂ ಕಿವುಡನೆನಿಸಿಕ್ಕು" (ಪಂಗರಾ. ೦೦೯-೫) ; ಕುಬ್ಜ ವಾಮನ ಬಧಿರ ಮೂಕ ಕಿರಾತೋನ್ಮತ್ತ ಜಡಜನಂಗಳುಮಂ . . . ಕೊಟ್ಟು (ಆದಿಪು. ೪-೫೪ ವ) ; ಕರುಣವಿಲ್ಲದನ ಕಾಪುರುಷನ ವಿಕಾರಿಯ ಬಧಿರನ ಪೆಂಡಿರು ಪರರ ಪೆಂಡಿರಲ್ತೆ (ಜನವ. ೦೨-೪೯) ; ನಮೆವ ದೀನಾಂಧಬಧಿರರಂ ದಾನಧರ್ಮಂಗಳಿಂ ಪಾಲಿಸುತ್ತುಂ (ರಾಮಾಶ್ವ. ೦೫-೦೯). [ಸಂ.]

**ಬಧಿರತೆ** (ನಾ). ಕಿವಿ ಕೇಳಿಸದಿರುವಿಕೆ ; ಕಿವುಡು : ಘೋಷಘಂಟಾರವಂ ದಿಗ್ರದನೀಶ್ರೋತ್ರಕ್ಕೆ ಸಂಪಾದಿಸೆ ಬಧಿರತೆಯಂ . . . ಬಂದುದಂದನ್ಯಚಕ್ರಕ್ಕಿದು ಕಲ್ಪಾಂತಾಭ್ರಮೆಂಬಂತುದಿತರಿಪು ಮನೋದೈನ್ಯಮುಗ್ರೇಭಸೈನ್ಯಂ (ಪುಷ್ಪಪು. ೫-೯) ; ಕಟಿತಟಕಾಂಚಿ ಪದನೂಪುರಾಳಿಸ್ವನಂ ದಿಗ್ಗಜಂಗಳ್ಗೆ ಬಧಿರತೆಯನೋಲೈಸೆ ಬರುತಿರ್ದುದಾ ಭವಾನಿಯ ಸಖೀನಿವಹಂ (ಶಬರ. ೩೭-೩೩). [ಸಂ. ಬಧಿರತಾ]

**ಬಧಿರತ್ವ** (ನಾ). = ಬಧಿರತೆ : ಪರರ ಪಟುತನವಾದದಲಿ ಮೂಗರವೊಲಿಹ ಪರವಚನದುತ್ಕಟವೊರೆಗೆ ಬಧಿರತ್ವವನು ವರಗುಣದೋಷದರುಶನವು ದೊರಕಿದೊಡೆ ಜಾತ್ಯಂಧನೆನಿಸುವ ಪುರುಷನಾವವನವನು ಸಾಕ್ಷಾತ್ಪರಮ ಪುರುಷೋತ್ತಮನಲೇ (ಕುವ್ಯಾಉ. ೪-೭೦). [ಸಂ.]

**ಬಧಿರಿತ** (ಗು). ಕೇಳಿಸದಂತೆ ಮಾಡಿದ ; ಕಿವುಡುಗೊಳಿಸಿದ : ಅನ್ನೆಗಂ ಗಂಭೀರತರತುರಗಹೇಷಾರವಬಧಿರಿತಸಕಲಭುವನವಿವರನುಂ . . . ಆಗಿ (ಆದಿಪು. ೩-೯೦ ವ) ; ಚಂಚಚ್ಚಾಪಚಪೌರ್ವೀರವಬಧಿರಿತದಿಕ್ಚಕ್ರಮಂ . . . ನಿರ್ಜನವನಮನಿದಂ ಬಂದು ನೀನೆಂತು ಪೊಕ್ಕೈ (ಶಂಚರಿತಂ. ೫೭-೨). [ಸಂ.]

**ಬನ₁**, ಬನವು (ನಾ). ೧. ಕಾಡು; ಅಡವಿ; ಅರಣ್ಯ : "ಬನಮೆಂದು ವನಂ" (ಶಬ್ದಸ. ೫೪-೦೭೦) ; ಮುನಿ ವೀತರಾಗನೆಂದುಂ ಬ[ಕಾಡಂ. ಜ]ನಮಂ ಸಾರ್ತರ್ಕ್ಕುಂ (ಕವಿರಾ. ೦-೭೯) ; ಬನಕಂ ಪೊಲಕಂ ನಡೆಯಲ್ಕಿನಿಸಾಜಿದೆ ಮಜುಗುವಾರ್ಯರಂ ಕಂಡು ಮನೋಜನಿತದಯಂ ಕರಿ ಹರಿ ವಾಹನಂಗಳಂ ಪಡೆದು ವಿಮಲವಾಹನನಾದಂ (ಆದಿಪು. ೬-೫೮) ; ನವಿಲ್ ಕಾರ್ಗಾಲಮಂ ಹಂಸೆ ಸರೋವರಮಂ ಮದಧಾನೆ ಬನಮಂ . . . ನೆನೆವಂತು ಜನಪದಾಂಭೋಜಂಗಳಂ ನೆನೆಯುತ್ತುಂ (ಧರ್ಮಾಮೃ. ೩-೦೯೦). ೨. ತೋಟ ; ಉದ್ಯಾನ ; ನಂದನ : "ಬನಮೆಂದೆನಲ್ಕುದ್ಯಾನಮಕ್ಕು" (ಕಶಬ. ೭೨) ; ಬನದ ತಳಿರ್ ಕಳಿಕೆ ಮುಗುಳ್ ನನೆ ಬಿರಿಮುಗುಳಲರ ಗೊಂಚಲೆಂಬಿವು ವನಜಾನನೆಯರ ಪೂದುಡುಗೆಗೆ ಮಟ್ಟನಾದುವೇಂ ಪೆಂಪೊ ಭರತನಂತಃಪುರದಾ (ಆದಿಪು. ೧೧-೦೨೫) ; ಚಂಪಕ ಮಾಲತಿ ಮುಡಿವಾಳಗಳಿಂ ಬನವೆಸೆದುದು (ತ್ರಿಭುತಿ. ೨-೨೧) ; ಮಲ್ಲಿಗೆಯ ವನಸಂಪಿಗೆಯ ಬನವೆಲ್ಲ . . . ವ್ಯಥಾ ನೆಲನಿಲ್ಲ ನಳನ ರಾಜ್ಯದಲಿ (ನಳಚ. ೪-೦೫). ೩. ಮರಗಳ ಗುಂಪು,—ಸಮೂಹ ; ತೋಪು : "ತೋಪು—ಬನಂ" (ಕಾಶಳ್ಯ. ೨೯) ; ಅಲರ್ದ ಪೊಂದಾವರೆಯ ಹಂತಿಯೊ ತಳಿತ ಮಾವಿನ ಬನವೊ (ಕುವ್ಯಾಆ. ೬-೦೨). **ಬನವು** : ೧. ತೆರಳಿದರು ಶೃಂಗಾರನಿಧಿಗಳು . . . ಕಳಾವಿದೆಯರುಗಳಾ ಮುಸುಯಿಪ್ಪ ಬನವಿಗೆ (ಕೌಶಿರಾ. ೦-೯೩).

ಬನದ ಊಟ, ಬನದೂಟ = ಹುಣ್ಣಿಮೆದಿನಗಳಲ್ಲಿ ವಿಹಾರಾರ್ಥವಾಗಿ ತೋಟದಲ್ಲಿ ಮಾಡುವ ಊಟ ; ವನಭೋಜನ : ಚಿಕ್ಕದೊಡ್ಡ ಹೆಣ್ಣುಮಕ್ಕಳು ಬನದ ಊಟನಾಡುವರು (ಕನ್ನಡಾ. ೦೯೨) ಹೆಣ್ಣು

ಮಕ್ಕಳು ಬನದೂಟವನ್ನು ಸೌರಿಸುವರು (ಕನ್ನಜಾ. ೧೬೭). ಬನದಂಬಿಕೆ = ಪಾರ್ವತಿಯ ಒಂದು ಅವತಾರ : ಬನಶಂಕರಿ : ವನದೇವಿ : ಭಕ್ತಜನಪ್ರಸನ್ನೆ ವಿಸ್ತಾರವಿಚಿತ್ರಮೂರ್ತಿ ಬನದಂಬಿಕೆ ಮಾಟಿಕ್ಕಿಮಗಿಪ್ಪ ಸಿದ್ಧಿಯುಂ (ವಳಶಂ. ೪). **ಬನದಬ್ಬೆ** = ಬನದಂಬಿಕೆ : ನೆಲನೆಲ್ಲಂ ಕೊಂಡಾಡುವೆಕ್ಕಲವಿರಿಯುಂ ಬನದಬ್ಬೆಯುಂ ಮಹಾಲಕ್ಷ್ಮಿಯುಂ . . . ಪೊಲೆಯರ ದನಿಯುಪ್ಪೊಡಂ ಕೇಳದಂತು ಕಂಚುವಱೆವೆರಸು ಲೇಸುನುಡಿ ಲೇಸುನುಡಿಯೆಂಬ ಮಹಿಮೆಯಿಂದುಣ್ಬರ್ (ಧರ್ಮಾಮೃ. ೯-೧೦೦); ಬನದಬ್ಬೆ ಬಳರಿ ಬಾದು...ಮನೆದೈವಮೆಂಬಿವೆಲ್ಲಂ ಜಿನಭಕ್ತಂಗೆಡದ ಕಾಲ ಕಿಪ್ಪಿಂ ಕಷ್ಟಂ (ಕಸಾರ. ೪೬೯). **ಬನದ ಶಂಕರಿ** = ಬನದಂಬಿಕೆ : ದಿನಪಸುತನ ದೂತರು ಬಂದು ಎಳೆವಾಗ ಬನದ ಶಂಕರಿ ಎತ್ತ ಹೋದಳೆ ಮೂಳಿ (ಪುರಂದ. ಧಾ. ೩-೦೨೭-೭). **ಬನದ ಹುಣ್ಣಿವೆ** = ಪುಷ್ಯಮಾಸದ ಹುಣ್ಣಿಮೆ : ಬನದ ಹುಣ್ಣಿವೆ ದಿನ ಬಾಗಿಲ ತೋರಣವನು ಕಟ್ಟಿ ಬಱಿದೆ ಪಲ್ಲಿಯುವ ಬೀಱ (ಪುರಂದ. ಧಾ. ೩-೦೨೭-೭) : ಪೌಷ್ಯಮಾಸದ ೧೫ನೆಯ ತಿಥಿ ಬನದ ಹುಣ್ಣಿವೆ . . . ಬನಶಂಕರಿಯೇ ಈ ಹಬ್ಬದ ಅಧಿದೇವತೆ (ಶಾಹಬ್ಬ. ೧೬೯).

[<ಸಂ. ವನ]

**ಬನ್$_3$** (ನಾ). ಒಂದು ಬಗೆಯ ಬೆಲೆ ಬಾಳುವ ಬಟ್ಟೆ.—ಉತ್ತಮವಾದ ವಸ್ತ್ರ : ಮಣಿಕನಕಭಾಜನಂಗಳೊಳ್ ಪಟ್ಟಸೂತ್ರದ ನೇತ್ರದ ಬನದ ಮಹಾಚೀನದ ದೇವಾಂಗದ ಮಂಗಳಜವಳಿಗಳನಾಂತು ಬರ್ಪ ಕಾಂತೆಯರ್ ಚಿತ್ರಪಟಚಿಹ್ನಾವಳಂಬಿತ ವಿಜಯಕೇತನಂಗಳಾಗೆಯುಂ (ವರ್ಧಪು. ೭-೨ ವ).

[?]

**ಬನಂಬಿಡಿ** (ಕ್ರಿ). ವನವನ್ನು ಆಶ್ರಯಿಸು : ಒಳ್ದಳರ ಕೈಪೊಡೆ ಕರ್ಬಿನ ಬಿಲ್ ತವಗ್ರದೊಳ್ ಮಿಳಿರ್ವ ತಮಾಳಪಲ್ಲವದ ಚಾಮರದುಪ್ಪರವಟ್ಟ ಮೊಪ್ಪೆ ಬಂದಲೆದಿಸುವ್ರೊಂ ಬನಂಬಿಡಿದು ಪಾಂಥರನಾ ಪರಿಪಂಥಿಮನ್ಮಥಂ (ಚಂದ್ರಪು. ೮-೧೦೦). [ಬನ್$_1$ + ಪಿಡಿ$_1$]

**ಬನಕಾಜಿ** (ನಾ). (ಮರದ ಸಾಮಾನು. ಬಟ್ಟೆ ಮುಂತಾದವಕ್ಕೆ) ಬಣ್ಣ ಹಚ್ಚುವವನು : ಬಣ್ಣಗಾರ : ಪಲವುಂ ಮರನನಿಟ್ಟು ಲೇಸಾಗಿ ಮಾಳ್ಪನ್ನಾಗಿ ಬನಕಾಜಿ ಚವುಂಡೆಯಂಗೆ ಸರ್ವನಮಸ್ಯವಾಗಿ ಬಿಟ್ಟ ಮಾಣಿಕೇಶ್ವರದ ಕೋಲ ಮತ್ತರು ಪನ್ನೆರಡು ಮಂನಿಕಮ್ಮ ನಿವೇಶನ . . . ಬನಕಾಜಿ ನನ್ನಯಂಗೆ ಮತ್ತಱು ಆಱುಗೆಯ್ಯ ನಿವೇಶನ (ಸೌಇಇ. XX. ೦೭೩-೩೭ ; 1190).

[ಈ ಇದು 'ಬಣ್ಣಗಾಜ' ಎಂಬುದರ ಅಪಲಿಖಿತವಿರಬಹುದು]

**ಬನಗತ್ತಲೆ** 'ಬನಗಳ್ತಲೆ' ನೋ.

**ಬನಗಳ್ತಲೆ.** ಬನಗತ್ತಲೆ (ನಾ). ದಟ್ಟವಾದ ಕತ್ತಲೆ: ಕಗ್ಗತ್ತಲೆ : ಗಾಢಾಂಧಕಾರ : ಪಸುರೆಲೆಮುಱುಗಿದ ಬನಗಳ್ತಲೆಯೊಳಗೆಸವ ವಸಂತಂ ... ಆ ಕಂಗಣ್ವಕ್ಕಿಯ ಸರಮೆಂಬ ಪೊಸ ಗಂಟೆಯನಲುಗಿಸೆ (ಜಯಕಾ. ೦-೩೦): ಬನಗಳ್ತಲೆಯುಂ ಕಮಳಾಪ್ತನ ಕದಿರುಂ ಕಾದಿ ಮಡಿವುತಳಿಯುಂ ಚಾಂಪೇಯ ನಿಕಾಯಮಾಮಪಲ್ಲದೊಡೆನುಸುಂ ತದ್ವಯಕೆ ಪಗೆತನಂ ಸಮನಿಪ್ಪುದೇ (ರಾಜಶೇ. ೨-೩೪). **ಬನಗತ್ತಲೆ :** ನಿಬಿಡನೀರಪಕಾನನಾಂತರಂ ನಡುವಗಲ ಮಾರ್ತಾಂಡನುರವಣೆಯನಡಗಿಸುತೆ ತಂಪು ಬನಗತ್ತಲೆಯ ಘೀಷ್ಮಸಮ್ಮೋಹನದ ಮೆರೆದತ್ತು ಚಿತ್ರಗತವಾದಂತೆವೋಲ್ ನಿಶ್ಚಲಂ (ಶತ್ರುಂಗ. ೩-೩೭).

[ಬನ್$_1$ + ಕಳ್ತಲೆ (<ಕಱ್ತಲೆ)]

**ಬನಗಾಹು** (ನಾ). ತೋಟದ ಕಾವಲು, -ರಕ್ಷಣೆ.

ಬನಗಾಹಿನವರು = ತೋಟವನ್ನು ಕಾಯುವವರು : ತೋಟದ ಕಾವಲುಗಾರರು : ವನಿತೆ ಸತ್ಯೆಯು ಮೋಹದಾ ನಂದನವ ಹೊಗದಿರಿ ಮುಂದು ಬನಗಾಹಿನವರಾಡಲು (ಸಾಳ್ವಭಾ. ೩೦-೩೦).

[ಬನ್$_1$ + ಕಾಹು$_1$ (< ಕಾಪು)]

**ಬನಗಾಳಿ** (ನಾ). ಕಾಡಿನಲ್ಲಿ ಬೀಸುವ ಗಾಳಿ : ಓ! ಓ! ಬನಗಾಳಿ ಇದೇನೀ ತೆಱದೂಱಿಗಂ! (ರಾಮಾಶ್ವ. ೯-೪). [ಬನ್$_1$ + ಗಾಳಿ$_1$]

**ಬನಗುತ್ತಿಗೆ** (ನಾ). ತೋಟದ ಗುತ್ತಿಗೆದಾರನಿಂದ ಬರುವ ಹಣ.—ವರಮಾನ : ಆ ಪೂಜಾರಿ ಡಾವಣ್ಣ ಚಿಕ್ಕಜಂನ್ನಕಲ್ಲಿಗಳಿಗೆ ಕೊಟ್ಟ ಶಿಲಾಶಾಸನದ ಕ್ರಮವೆಂತೆಂದಡೆ ಮಣಲಿಗೆ ನಾಡೊಳಗಣ . . .ತೋಟ ಮನೆ ಕಡಿಗುತ್ತಿಗೆ ಆಱುವಣಪನೂ ಬನಗುತ್ತಿಗೆ . . . ಆಗುವಮಾಡಿಕೊಂಬದು (ಮೈಆಂ. ೧೯೪೨. ೩೭-೩೯ ; 1360). [ಬನ್$_1$ + ಗುತ್ತಿಗೆ (<ಗುತ್ತಗೆ)]

**ಬನದುರ್ಗ** (ನಾ). (ಶತ್ರುಗಳು ಪ್ರವೇಶಿಸಲು ಸಾಧ್ಯವಾಗದಂತೆ) ದಟ್ಟವಾದ ಕಾಡಿನ ನಡುವೆ ಕಟ್ಟಿದ ಕೋಟೆ; ವನದುರ್ಗ : ಗುಡಿಯ ಗುಂಟಗಳಿಗೆ ಬನದುರ್ಗ ಮೇಲವರೆಡಿಗೆಯ ಗುಂಡಿಗೆ ದುರ್ಗ ಕುಡಿವ ನೀರಿಗೆ ಜಲದುರ್ಗ ಪಾಳಾದುವಾ ಪಡೆಗೆ ಪಗೆಗಳಿದಿರುಂಟೆ (ವರ್ಧಕ. ೬-೩೪). 'ಜಲದುರ್ಗ' ಪರಾ. [ಬನ್$_1$ + ದುರ್ಗ]

**ಬನಪಶ್ಯ** (ನಾ). ಔಷಧಿಯಾಗಿ ಉಪಯೋಗಿಸುವ ಒಂದು ಬಗೆಯ ವನಸ್ಪತಿ : ೩೨೨ ಬಾದಾಮಹಲವ, ೩೨೩ ಬನಪಶ್ಯ (ಮುಂಬವ್ಯಾ.೦೬೬).

[← ಪಾರ. ಬನಫ್‌ಶಹ್ : ಹಿಂ. ಬನಫ್‌ಶಾ, ಬನಫಶಾ]

**ಬನಪು** (ನಾ). ಒಂದು ಬಗೆಯ ದೊಡ್ಡ ಜಾತಿಯ ತೇಗದ ಮರ: (೬).

[←ತುಳು. ಬನಂಪು. ಬರಾಂಪು. ಬಣುಪು, ಬಣ್ಪು]

**ಬನವಂದಿ** (ನಾ). ಕಾಡುಹಂದಿ : ಇಭಂ ಬನವಂ[ಪಾಠಾಂ.ಪಂ]ದಿ ತರಕ್ಷು ಖಡ್ಗಿ . . . ಮರವಾವುಗಳಿಂಬಿವಾಗಳುಂ ಕರಮೊಸೆದಿರ್ಪನ್ನಂ ಮೆಱೆದುದಾ ವಿಪಿನಂ (ಶಬಶಂ. ೩-೩೪). [ಬನ್$_1$ + ಪಂದಿ]

**ಬನವಕ್ಕಿ** (ನಾ). ಕಾಡಿನಲ್ಲಿರುವ ಪಕ್ಷಿ : ಕಾಡುಹಕ್ಕಿ : ಎಚ್ಚಱಿಸಿ ಪೋಯ್ತುನಿತಱೊಳು ಕೊಳರ್ವಕ್ಕಿ ಬನವಕ್ಕಿಗಳು ಸರಗೆಯ್ಯೆ (ಸಾಳ್ವಭಾ. ೦೬-೩೯). [ಬನ್$_1$ + ಪಕ್ಕಿ]

**ಬನವಟ್ಟೆ** (ನಾ). ಕಾಡುದಾರಿ : ಅರಣ್ಯಮಾರ್ಗ : ನಾಡೊಳಗಣ ಚೋರರ ಪರಿಯಲ್ತಾ ಬೀಡಿನ ಬನವಟ್ಟೆಯ ಪೊಯ್ಲಂ (ಉದ್ಭದೇ. ೨-೨೭); ಅರಣ್ಯಗೋಚರರೊರೆಯೆ ಪಣ್ವಲಂ ಪೂಗಳ್ಗೆ ತಾಂ ದಿನದಿನಂ ನಡೆದು ಸಮೆದ ಬನವಟ್ಟೆಯಂ (ಶ್ರೀರಾಮಾ. ೦೬೯-೯೨). [ಬನ್$_1$ + ಬಟ್ಟೆ$_1$]

**ಬನವತಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಬನವತಿ ಮಾರೆಮ್ಮನ ನಂಬಿದ ಹಾಗೆ (ಗಾದೆ). [?]

**ಬನವಸೆ** 'ಬನವಾಸಿ' ನೋ.

**ಬನವಳಿಗ** (ನಾ). ತೋಟದ ಕಾವಲುಗಾರ ; ವನಪಾಲಕ : ಮದನ ಮಂತ್ರಿ ಬನವಂ ಪುತ್ತಿದಂ . . . ತರಹಂಸಲಿದು ದರಹಸಿತಾಸ್ಯ ಗಾಳಿಧಾಳಿಯು ಬಂದವೆಂದು ಬನವಳಿಗನರಸಗೆ ದೂಱಿದಂ (ಚೇರಮ. ೭-೪).

[ಬನ್$_1$ + — ವಳಿಗ$_2$]

**ಬನವಾಶಿ** 'ಬನವಾಸಿ' ನೋ.

**ಬನವಾಸಿ.** ಬನವಸೆ. ಬನವಾಶಿ, ಬನವಾಸೆ (ನಾ). ೧. ಒಂದು ದೇಶದ ಹೆಸರು : ನಲ್ಲರೊಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರ ನೋಟಱೊಡಾವ ಬೆಟ್ಟುಗಳೊಳವಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮); ಶ್ರೀವಿಷ್ಣುಪದಸೇಕರಂ ಬನವಾಸಿವಿಷಯಾಧೀಶ್ವರಂ ಮಹೇಶ್ವರಭಕ್ತಂ (ಎಕ. III (R). ಹೆಗ್ಗಡ. ೦೨೩-೦೨; 1079); ಬನವಾಸಿಗೆ ಹೋದರೂ ಬರಗಾಲ ತಪ್ಪಲಿಲ್ಲ (ಗಾದೆ). ೨. ಒಂದು ನಾಡು ಅಥವಾ ಪಟ್ಟಣದ ಹೆಸರು. ೩. ಒಂದು ಬಗೆಯ ನಾಣ್ಯ: ಬ್ರಿಟಿಶ ಸರಕಾರದ ಅಮಲಿನ ಆರಂಭದಲ್ಲಿ . . . ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು . . . ೧೦. ನವಲಗುಂದೀ, ೧೧. ಬನವಾಸೀ, ೧೨. ಶಮಶೇರಿ (ಕಜಾಗ. ೨೪೦). **ಬನವಸೆ :** ೨. ಬನವಸೆ ಹಾನುಂಗಲುಗೊಂಡ ಭುಜಬಳವೀರಗಂಗ

ಪ್ರತಾಪವಹೊಯ್ಸಳಬಲ್ಲಾಳದೇವರು . . . ರಾಜ್ಯಂಗೆಯ್ಯುತ್ತಿರೆ (ಎಕ. II (R). ೩೬೩-೨೭ ; 1173) ; ಸಕಲಸೌರಭದಲಿ ಸೊಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು (ಶ್ರಶುಶ. ೩ ೨). **ಬನವಾಶಿ. ಬನವಾಸೆ :** ೨. ರಾಜಧಾನಿ ಬನವಾಸೆಪುರದ ಜಯಂತಿ ಮಧುಕೇಶ್ವರದ ಮೊಗಸಾಲೆಯುಮಂ . . . ಮಾಡಿಸಿ (ಕ್ರಾಇ. XI-i, ೧೦೩-೨೪; 1068 ?); ಬಂಕಪುರಂ ಬನವಾಸೆ ಕೊಯತುರ್ತುರ್ಗಂಗಪರಾಕ್ರಮಂ ವಿಜಯರ್ವರ್ಧನನೀ ಕಲಿ (ವಿ)ವಿಷ್ಣುವರ್ಧನಂ (ಎಕ. XVI, ತಕ್ಕಸಾ. ೬೨-೯; 1242).

**ಬನವಸೆ ಪನ್ನಿರ್ಚ್ಛಾಸಿರ, ಬನವಾಶಿ ಪನ್ನಿರ್ಚ್ಛಾಸಿರ, ಬನವಾಸಿ ಪನ್ನಿಚ್ಛಾಸಿರ** = ಹನ್ನೆರಡುಸಾವಿರ ಗ್ರಾಮಗಳಿಂದ ಕೂಡಿದ ಬನವಸೆಯೆಂಬ ನಾಡು : ಬನವಸೆ ಪನ್ನಿರ್ಚ್ಛಾಸಿರಮುಂ ಬೆಳ್ವೊಲ ಮೂನೂಱುಂ . . . ಬಾಗಿನಾಡೆಪ್ಪತ್ತುಮಂ ಬೂತುಗಂಗೆ ಕನ್ನರದೇವಂ ಮೆಚ್ಚುಗೊಟ್ಟಂ (ಎಕ. III, ಮಂಡ್ಯ. ४०-३०; 950); ಶ್ರೀಕನ್ನರದೇವಂ ಪೃಥ್ವೀರಾಜ್ಯಂಗೆಯ್ಯೆ ಬಪ್ಪುವ್ವಂ ಬನವಾಶಿ ಪನ್ನಿರ್ಚ್ಛಾಸಿರದ ಪಟ್ಟವಮನಾಳೆ (ಮೈಆ. ೧೯೨೯, ೬೩-೯; 964); ಜಾ[ವು]ಣ್ಡ ರಾಯರಸರ್ ಬನವಾಸಿ ಪನ್ನಿಚ್ಛಾಸಿರಮನಾಳುತ್ತುಮಿರಲ್ (ಎಇ. IV, ೦೬೯-೧೦; 1048). [< ಸಂ. ವನವಾಸೀ]

**ಬನವಾಸೆ** 'ಬನವಾಸಿ' ನೋ.

**ಬನವು** 'ಬನ₁' ನೋ.

**ಬನವೆಂಕಿ** 'ಬನವೆಂಕೆ' ನೋ.

**ಬನವೆಂಕೆ,** ಬನವೆಂಕಿ (ನಾ). ಕಾಳ್ಗಿಚ್ಚು; ಕಾಡಿನ ಬೆಂಕಿ; ದಾವಾನಲ: "ಬನವೆಂಕೆಯೆಂದು ದಾವಾಗ್ನಿ" (ಕಶಸಾ. ೩೦-೬೨). **ಬನವೆಂಕಿ :** "ಬನವೆಂಕಿಯೆ ದಾವಾನಲಂ" (ಕಶಂ. ೩೬). [ಬನ₁ + ಬೆಂಕಿ]

**ಬನವೆಣ್ಣು** (ನಾ). ಕಾಡಿನಲ್ಲಿ ವಾಸಿಸುವವಳು ; ಕಾಡಿನ ಹೆಣ್ಣು ; ಅನಾಗರಿಕಸ್ತ್ರೀ : ನಿಷ್ಕರುಣಿ ಎನ್ನದಿರ್, ಬನವೆಣ್ಣೆ (ಚತ್ರಾಂಗ. ೨೯-೬೬೨). [ಬನ₁ + ಪೆಣ್ಣು (< ಪೆಣ್)]

**ಬನಶಂಕರಿ** (ನಾ). ಕಾಡಿನ ಅಧಿದೇವತೆ; ಪಾರ್ವತಿಯ ಹೆಸರುಗಳಲ್ಲಿ ಒಂದು : ಬನಶಂಕರಿಯೇ ಈ ಹಬ್ಬದ ಅಧಿದೇವತೆ. ಈ ದೇವತೆ ಪಾರ್ವತೀದೇವಿಯ ಒಂಬತ್ತು ಅವತಾರಗಳಲ್ಲಿ ಆರನೆಯವಳು . . . ಈಕೆ ವನಶಂಕರಿ, ವನದೇವತೆ ಎಂದು ಸ್ಪಷ್ಟವಾಗುವಂತಿದೆ (ಕಾಹಬ್ಬ. ೦೬೯); ಕಾಡಿನ ಕವಿಗಳೆ ಓ ಕಲೆಗಾರರೆ . . . ಬನಶಂಕರಿಯನು ಕೀರ್ತಿಸಿರಿ ! (ಕರುಹ್ರಾ. ೬೪-೯). [ಬನ₁ + ಶಂಕರಿ]

**ಬನಶಿ** 'ಬನಸಿ' ನೋ.

**ಬನಶಿಗೋದಿ** 'ಬನಸಿಗೋದಿ' ನೋ.

**ಬನಸಂಪಗೆ** (ನಾ). ಕಾಡುಸಂಪಗೆ ಮರ ಮತ್ತು ಅದರ ಹೂವು : ಪಚ್ಚೆಯ ಬೆಟ್ಟುಗಳೊಳ್ ಮೆಯ್ವೆಚ್ಚಿದ ವೈಡೂರ್ಯಮಣಿಕದಂಬಮೊ ತಾನೆನೆ ಬಿಚ್ಚಳಿಸಿದ ಬನಸಂಪಗೆಯಚ್ಚಳಿಯದ ಮಲರ್ಗಳಿಂದ ಸೊಗಯಿಕುಮನಿಶಂ (ಹಾಲಾಸ್ಯ. ೦-೯-೬೪). [ಬನ₁ + ಸಂಪಗೆ]

**ಬನಸಿ,** ಬನಶಿ, ಬನ್ಸಿ (ನಾ). ದಪ್ಪವಾಗಿಯೂ ನಸುಹಳದಿಬಣ್ಣದಿಂದ ಕೂಡಿಯೂ ಇರುವ ಒಂದು ಬಗೆಯ ಗೋದಿ : 'ಬನಸಿ ಗೋದಿ' ಪರಾ. **ಬನಶಿ :** 'ಬನಶಿಗೋದಿ' ಪರಾ. **ಬನ್ಸಿ :** 'ಬನ್ಸಿರವೆ' ಪರಾ. [ ← ಮರಾ. ಬನಸೀ, ಬನಶೀ, ಬನ್ಸೀ ]

**ಬನಸಿಗೋದಿ,** ಬನಶಿಗೋದಿ, ಬನ್ಸಿಗೋಧಿ (ನಾ). = ಬನಸಿ : ತೊಗರಿ, ಕಡ್ಲಿ, ಬನಸೀಗೋದಿ, ಸಾಸವಿ (ಮುಂಬವ್ಯಾ. ೨೮). **ಬನಶಿಗೋದಿ :** ಬನಶೀಗೋದಿಯು ಕಾಳು ದೊಡ್ಡದಿದ್ದು ಮತ್ತು ಬಣ್ಣದಿಂದ ದಪ್ಪ ಅರುಷಣವಂತ ಇರಬೇಕು (ಮುಂಬವ್ಯಾ. ೩೦). **ಬನ್ಸಿಗೋಧಿ :** ಬನ್ಸಿಗೋಧಿಯಿಂದ ತಯಾರಿಸಿದ ರವೆಯು ತುಂಬ ಚೆನ್ನಾಗಿರುತ್ತದೆ (ಅದೇ). [ ಬನಸಿ + ಗೋದಿ₁ ( < ಗೋದುಮೆ) ]

**ಬನಸಿರಿ** (ನಾ). ೧. ಕಾಡಿನ ಸಿರಿ ; ಅರಣ್ಯಸಂಪತ್ತು : ಕಾಡಿನಲ್ಲಿ ಮರ ಕಡಿಯಬೇಕಾದರೆ, ಬನಸಿರಿಯನ್ನು ಉಪಯೋಗ ಮಾಡಿಕೊಳ್ಳಬೇಕಾದರೆ ಸರ್ಕಾರದ ಸನ್ನದು ಆವಶ್ಯಕ (ಹಸುಹೂ. ೨೪೦). ೨. ವನದೇವತೆ ; ವನಲಕ್ಷ್ಮಿ : ಬನಸಿರಿ ಸುರವರಲೋಕದ ಬನಸಿರಿಗುಱಿ ತೋಱಲೆಂದು ನಿಜವಿಭವಮನಂದನುನಯದಿಂ ಕಟ್ಟಿದ ಕಾಂಚನತೋರಣಮೆನಿಸಿ ಕರ್ಣಿಕಾರಂ ಮೆಱೆಗುಂ (ರಾಚಶ. ೯-೬೬). [ಬನ₁+ಸಿರಿ]

**ಬನಹಿಪ್ಪಲಿ** (ನಾ). ಹಿಪ್ಪಲಿಯಲ್ಲಿ ಒಂದು ಬಗೆ ; **ಕಾಡುಹಿಪ್ಪಲಿ :** ತಗರ ಕೋಡು, ಬನಹಿಪ್ಪಲಿ, ತಲೆನವಿರು, ಕಾಲುಗುರು, ಬಜೆಯಿವಂ ಧೂಪವಿಕ್ಕುವುದು (ಶಾಂಶ. ೦೨೬-೨೦). [ಬನ₁+ಹಿಪ್ಪಲಿ]

**ಬನಾತ** 'ಬನಾತು' ನೋ.

**ಬನಾತು,** ಬನಾತ (ನಾ). ಬಣ್ಣಬಣ್ಣದ ಉಣ್ಣೆಯ ಬಟ್ಟೆ ; ಸಕಲಾತಿ : ದವಾಸಿನ ವೃಷಭಧ್ವಜಗಳೂ × × × ಬನಾತಿನ ತೆರೆಗಳೂ (ಎಕ. XIV, ನಂಜನ. ೨೯೨-೦೯೨ ಪುಟ; 1847) ; ಒಂದು ಬಾರಿ ರೋಮನ್ ಚಕ್ರವರ್ತಿಯು ಬಹಳ ಹಸನಾದ ಬನಾತಿನ ಅಂಗಿಯನ್ನು . . . ಕಳುಹಿಸಿದನು (ಕೈಗಂಬ. ೦೨೩) ; ಅಂಗಳದ ಮಧ್ಯದಲ್ಲಿ ಬನಾತಿನ ನಡೆಮುಡಿಯು ಹಾಸಲ್ಪಟ್ಟಿದ್ದಿತು (ಶ್ರೀರಾಹು. ೪೪). **ಬನಾತ :** ವಾರಿನ ಮೇಲೆ ಕಿಮ್ಮತ್ತು ಆಗತಕ್ಕ ಕಪಡಾ ಜೀನಸಗಳು. ೧. ಬನಾತ, ೨. ಕಾಸ್ಮೀರಿ (ಮುಂಬವ್ಯಾ. ೦೪೦). [ ← ಹಿಂ. ಮರಾ. ಬನಾತ್]

**ಬನಾವಟ್** 'ಬನಾವಟಿ' ನೋ.

**ಬನಾವಟ** 'ಬನಾವಟಿ' ನೋ.

**ಬನಾವಟಿ,** ಬನಾವಟ್, ಬನಾವಟ (ಗಂ). ೧. ಕೃತ್ರಿಮವಾದ ; ನಿಜವಲ್ಲದ : ಬನಾವಟಿ ಪತ್ರಗಳನ್ನು ಕಳುಹಿಸಿ ನಿಮಗೆ ಮೋಸಗೊಳಿಸಿರುವ ಆರೋಪದ ಮೇಲೆ ನನ್ನನ್ನು ಈಗಲಾದರೂ 'ಮಾವನ ಮನೆ'ಗೆ ಕಳುಹಿಸಬೇಕೆಂಬ ನಿಮ್ಮ ಬಯಕೆಯು ಈಡೇರುವಂತಿಲ್ಲ (ಕಿಂಸಾ. ೪೩). (ನಾ). ೨. ಕೃತ್ರಿಮವಾದುದು ; ನಕಲಿಯಾದುದು : ಇಲ್ಲಿ ಬನಾವಟಿಯ ಮಾಲವನ್ನು ತಯಾರ ಮಾಡುತ್ತಾರೆ. ಅದಕ್ಕೆ ಇಲ್ಲಿ ಸುಮಾರ ಮಾಲೆಂದೆನ್ನುತ್ತಾರೆ (ಮುಂಬವ್ಯಾ. ೬೬). **ಬನಾವಟ್ :** ೧. ಹಾಗೆ ಕಲಾಸೃಷ್ಟಿಯಾಗುವಂತಿದ್ದರೆ ಅದು ಕೃತಕವಸ್ತು. ಅಂಥವು ಅನುಕರಣೆಗಳು, ಬನಾವಟ್ ಮ್ಹಾಲುಗಳು ! (ಕರಿದ. ೦೦೬). **ಬನಾವಟ :** ೧. ಈ ಬನಾವಟ ಮುತ್ತಿನ ಹಾರ ಅಲ್ಲಿರಿಸಿ ಅದನ್ನು ತಂದುಕೊಡಿರಿ (ಗರ್ಭಗು. ೪೬). ೨. ಅಚ್ಚಖರೆ, ಖರೆ ಮತ್ತು ಸುಳ್ಳ ಇವುಗಳ ಮಿಶ್ರಣದಿಂದ ತಯಾರಾಗಿದ್ದದ್ದು ಹಾಂಗು ಕೃತ್ರಿಮ ಅಂದರೆ ಬನಾವಟ ಈ ಪ್ರಕಾರ ಮೂರು ತರದು ಇರುತ್ತವೆ (ಮುಂಬವ್ಯಾ. ೩೨ ಪ್ರಸ್ತಾವನೆ). [←ಹಿಂ. ಬನಾವಟ್, ಬನಾವಟೀ; ಮರಾ. ಬನಾವಟ್, ಬನೋಟ್]

**ಬನಾವಣೆ** (ನಾ). ೧. ಕೃತಕವಾಗಿ ತಯಾರುಮಾಡುವುದು ; ಅನಧಿಕೃತವಾಗಿ ಸಿದ್ಧಪಡಿಸುವುದು : ನಾಣ್ಯವನ್ನು ಬನಾವಣೆ ಮಾಡೋಣ ೭ ಸಂವತ್ಸರಗಳು (ಗ್ರಾಮಾಕ. ೦೬೩). ೨. ಪರಸ್ಪರ ಹೊಂದಾಣಿಕೆ—ಸಾಮರಸ್ಯ : ದೇಹಕ್ಕೂ ಮನಸ್ಸಿಗೂ ಬನಾವಣೆಯಿಲ್ಲ ಎನ್ನಿಸಿತು (ಶಿಬಿಂಪ. II, ೦೬೯). ೩. ಕಲ್ಪನೆ; ಊಹೆ : ಆವರ ಕಕ್ಷಿಗಾರರ ಬಚಾವು ಈ ಕೇಸು ಕೇವಲ ಪೋಲೀಸಿನವರ ಬನಾವಣೆಯೆಂದು (ಕಲಶ. ೬೬೨). ೪. ಕೃತಕವಾದುದು ; ಕೃತ್ರಿಮವಾದುದು ; ಖೋಟಾ : ಬನಾವಣೆಯಾದದ್ದು ಎಂದು ತಿಳಿದು ಮತ್ತೊಬ್ಬನಿಗೆ ಕೊಟ್ಟರೂ ಇಟ್ಟುಕೊಂಡರೂ ೫ ಸಂವತ್ಸರಗಳ ಪರ್ಯಂತ (ಗ್ರಾಮಾಕ. ೦೬೬). 'ಬನಾವಟಿ' ಪರಾ. [←ಮರಾ. ಬನಾವಣೀ]

**ಬನಿ₁** (ನಾ). ೧. ಸಾರ ; ಸತ್ತ್ವ ; ತಿರುಳು : ಇವುಗಳಲ್ಲಿ ಜನಪದ ಸಾಹಿತ್ಯದ ಬನಿ ಅಷ್ಟಾಗಿ ಕಂಡುಬರುವುದಿಲ್ಲ (ಕಜಕಾ. ೨೬ ಪ್ರಸ್ತಾವನೆ).

೨. (ಹಾಲು, ಮೊಸರು, ಕಲಸಿದ ಹಿಟ್ಟು ಮುಂತಾದುವುಗಳಲ್ಲಿರುವ) ಜಿಗುಟು ; ಅಂಟು ; ಸೊಗಡು : ಅವರು ಪರೀಕ್ಷಿಸಿದ ಯಾವ ಹಸುವೂ ಅವರಿಗೆ ತೃಪ್ತಿಯನ್ನುಂಟುಮಾಡಲಿಲ್ಲ. . . ಐದನೆಯದರ ಹಾಲು ನೀರು, ಅದರಲ್ಲಿ ಬನಿಯಿಲ್ಲ (ಕಿವಾಂ. ೧೩); ಹಸುವಿನ ಬೆಣ್ಣೆಯಲ್ಲಿ ನಶ್ಯವನ್ನು ಮಿದಿಯುತ್ತಿದ್ದರು. ಹಾಗೆ ಮಿದ್ದರೆ ಅದಕ್ಕೆ 'ಬನಿ' ಬರುತ್ತದೆ (ಪಮ್ಮಕು. ೧೯೨). ೩. ಕಳೆ ; ತೇಜಸ್ಸು ; ಹೆಣ್ಣುಡುಗೆಯುಟ್ಟ ಹರೆಯದ ಹೆಣ್ಣು ಚಾಮರಿ ಹೆಣ್ಣುತನದ ಆ ಬನಿಯನ್ನು, ಚೆಲುವನ್ನು ತಳೆಯುತ್ತಿದ್ದಳು (ಸಪತಿ. ೩೬).

ಬನಿ₂, ಬನ್ನಿ₂ (ನಾ). ೧. ಒಂದು ಬಗೆಯ : ತೆರಿಗೆ ಶ್ರೀಮತ್ತುರಗವೆಡೆಂಗಂ ಕಾಳೆಗಕೆ ನಡವುತ್ತು ರೋಣದ ಮಹಾಜನಕೆ ಬನಿಯಂ ಬಿಟ್ಟಾರ್ (ಎಇ. XIII, ೧೯೬-೩; ಸ್ಸ್₄. 876) ; ಸೋಮೇಶ್ವರಪಂಡಿತ ದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಬನಿಯಂ ಬಿಟ್ಟನು (ಶಾಇಇ. XX, ೦೩೬-೬ ; 1174). ಬನ್ನಿ₂ : ೧. 'ಹುಲ್ಲುಬನ್ನಿ' ಪರಾ. ೨. (ಹೊಲ, ಗದ್ದೆಗಳಲ್ಲಿ) ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಕೂಲಿಯಾಳಿಗೆ ಕೊಡುವ ಬೆಳೆದ ಧಾನ್ಯದ ಒಂದು ಭಾಗ : (೬).

[ ದೇ. ಶಿ. ತುಳು. ಬಣಿ./ಹಿಂ. ಬನಿ, ಬನ್ನೀ ]

ಬನಿಗೊಳ್ಳು (ಕ್ರಿ). ಸತ್ತ್ವಯುತವಾಗು ; ಸಾರವತ್ತಾಗು : ಜೀವಂತವಾದ, ದಿನದಿನವೂ ಬೆಳೆಯುತ್ತಿರುವ, ಬನಿಗೊಳ್ಳುತ್ತಿರುವ, —ಬನಿಗೊಳ್ಳಬೇಕಾಗಿರುವ— ಈಗಿನ ಭಾಷೆಯ ಗತಿಗೆ ತಡೆಯಾಗಿ ತಂದೊಡ್ಡದೆ ಕವಿತೆಯಲ್ಲಿ ಕೇವಲ ಸಂಪ್ರದಾಯಬದ್ಧವಾದ ಶಬ್ದರೂಪಕ್ಕೂ, ಸಂಧಿ ನಿಯಮಗಳಿಗೂ, ಕಡೆಗೆ ನಿರ್ದುಷ್ಟತೆಗೂ ಮೀರಿದ ಗುಣವೊಂದಿದೆ (ಪಸೀಗೀ. V ಮುಮ್ನುಡಿ). [ಬನಿ₁ + ಕೊಳ್ಳು₁ (<ಕೊಳ್₁)]

ಬನಿಯ, ಬನಿಯಾ (ನಾ). ವ್ಯಾಪಾರ ಮಾಡುವವನು ; ವರ್ತಕ ; ವೈಶ್ಯ : ವ್ಯಾಪಾರಸ್ಥರು . . . ಬಣಜಿಗ, ಬನಿಯ (ತುಳುನಾ. ೦೬೨) ; ಬನಿಯಾ: ಚಂದ್ರಗುಪ್ತ ದಾಸೀಪುತ್ರ; ಗಾಂಧೀಜಿ ಬನಿಯಾ (ಯುಕ್ಷತ್ರ. ೦೩೮).

[←ಹಿಂ. ಮರಾ. ಗುಜ. ಬನಿಯಾ. ಪ್ರಾ. ವಣಿಅ. / ಸಂ. ವಣಿಜ]

ಬನಿಯನ್ನು 'ಬನೀನು' ನೋ.

ಬನಿಯಾ 'ಬನಿಯ ' ನೋ.

ಬನೀನು, ಬನಿಯನ್ನು (ನಾ). ಅರ್ಧತೋಳಿನ ಒಳಅಂಗಿ ; ₱ ಇಂಡಿಯಾದೇಶಕ್ಕೆ ಬಂದ ಆಂಗ್ಲರು ಗುಜರಾತಿನಲ್ಲಿ ವರ್ತಕರು ಉಪಯೋಗಿಸುತ್ತಿದ್ದ ಅರ್ಧತೋಳಿನ ಅಂಗಿಯನ್ನು ಮೆಚ್ಚಿಕೊಂಡರು. ಆದುದರಿಂದ ಗುಜರಾತಿನ 'ವಾನಿಯ=ಬನಿಯ' ಎಂಬುದು ಇಂಗ್ಲಿಷಿನಲ್ಲಿ ಗುಣವಾಚಕವಾಗಿ ಬನಿಯನ್ ಎಂದಾಯಿತು. ಆ ಬಳಿಕ ಇದು ನಾಮಪದದ ಅರ್ಥವನ್ನು ಪಡೆಯಿತು. ಸಂಸ್ಕೃತದ 'ವಣಿಜ' ಎಂಬುದು ಇದರ ಮೂಲವೆಂಬುದು ಸ್ವಾರಸ್ಯಕರವಾಗಿದೆ : ರಾಯರು ಒಳ್ಳೆಯ ಒಂದು ಬಿಳೀಪಂಚೆಯನ್ನುಟ್ಟು, ಉದ್ದವಾದ ಬನೀನನ್ನು ತೊಟ್ಟು . . . ನಿಂತಿದ್ದರು (ರಾಯುಕ. ೬೦); ಈ ಹುಡುಗನ ಮೈ ಮೇಲಿದ್ದ ಬಟ್ಟೆಯೆಂದರೆ ತುಂಡು ಬನೀನೊಂದು (ಭುವರು.೦೪೦). ಬನಿಯನ್ನು: ಪಾಯಿಜಾಮದ ಮೇಲೆ ಬನಿಯನ್ನು ಹಾಕಿದ್ದಾನೆ (ನಕದಾ I. ೩೬೩); ಹೊಲಸು ವಸ್ತ್ರವನ್ನು ಬದಲಿಸಿ ಚೊಕ್ಕವಾದ ಚಡ್ಡಿ, ಬನಿಯನ್ನು ತೊಟ್ಟುಕೊಂಡ (ದೀವಹಂ. ೬೩).

[← ಇಂ. Banian. ಹಿಂ. ಬನಿಯಾಇನ್ : ಮರಾ. ಬನಿಯನ್, ಬನ್ಯಾನ್ ; ಗುಜ. ಬನಿಯಾ=ವೈಶ್ಯ./ಸಂ. ವಣಿಜ=ವೈಶ್ಯ]

ಬನೂರ್ 'ಬನ್ನೂರ್' ನೋ.

ಬನ್ನ (ನಾ). ೧. ಅವಮಾನ; ಅಪಮಾನ; ಭಂಗ : "ಬನ್ನಮೆಂದು ಭಂಗಂ" (ಶಶಸಾ. ೬೩-೪೬೨) ; ಪೆಜಿರಾ [ನಾ] ವಂ ಧರಾಚಕ್ರಕ್ಕೆಜಿಯಂ ಕೆಳೆಯಪ್ಪವಂನೆಜ ಯಾರಣೆಯಂಬನ್ನಂ ಕಜತಬ್ಬಿಗೆ ಬನ್ನಮಂ (ಕಹಿಂ. ೨-೦೨೬); ನಿನ್ನ ಪೆಡಗೆಯ್ಗ[ಟ್ಟಂ] ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ ಬನ್ನವಿನ್ನವೆಂಬುವು ಮೊಳವೇ (ಹಂಶಭಾ. ೬-೩೩); ಅನುಜನ ನೆತ್ತರನೀಂಟಿದವನ ನೆತ್ತರ ಜೀವಸಹಿತ ಮೀಂಟದೆ ದುರ್ಯೋಧನನೆಂಬ ಪೆಸರ್ಗೆ ಮುಯ್ಯಾಂಪೆನೆ ದುಶ್ಶಾಸನನ ಬನ್ನಮಂ ನೀಗುವೆನೇ (ಗದಾಯು. ೩-೮). ೨. ಸೋಲು; ಪರಾಜಯ; ಪರಾಭವ : ತನ್ನೊಳಗಣ ಪನ್ನಗನಂ ಮುನ್ನೀಂ ಪಿಡಿದೊಗೆಯೆ ಕಾಯಲಾಱದೆ ಪಿರಿದುಂ ಬನ್ನದ ಕರ್ಪೆಸೆದುದು ತೊಱಗಿನ್ನುಂ ಹರಗಳ ತಮಾಳನೀಳಚ್ಛವಿಯಿಂ (ಹಂಶಭಾ. ೩-೩೪); ಬನ್ನದಿಂದಂ ಮಹಾನಾಭನುಱುಬೆಗೆ ಮುರಿದು ಬೆನ್ನ ಹಿಂದಡಗಿದ ಸಮಸ್ತದಿಕ್ಪಾಲರಂ . . . ಕಂಡೊಡನೆ ಪನ್ನೆರಳ್ನಯನದಿಂ ಕಿಡಿ ಸುರಿಯೆ ಕಲ್ಪಾಂತಹರನಂತೆ ಗುಹನೆಸೆದನು (ಕಂಪು.೩೪-೧೮); ಏಸು ಸಲ ತಪವಗ್ಗಿದೇಸು ಬನ್ನವನಾಂತು ಕೌಶಿಕಂ ಬ್ರಹ್ಮರ್ಷಿಪದಕರ್ಹನಾದನ್ ? (ಹಂಕುಕ. ೬೪೪). ೩. ನಾಶ; ಅಳಿವು : ಉನ್ನತಬಲಗೂಡಿ ಬಂದಾಗ ತುರುಕರ ಬನ್ನಕ್ಕೆ ತಂದುದೇನೆಂಬೆ (ಕಂಪಾ. ೦೪-೩೪). ೪. ಕಷ್ಟ; ಬಾಧೆ ; ಸಂಕಟ ; ತೊಂದರೆ: ಪರಿಭವದೊಂದು ತುತ್ತತುದಿ ಕೃಷ್ಣೆಯ ಬನ್ನದೊಳಾಗೆ ಜೂದಿನೊಳ್ ಪೊರಸಟ್ಟವಂತೆ ತವ್ಮರಸುಗೆಟ್ಟು ಕಟಿಲ್ದೆರ್ದೆಗೆಟ್ಟರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಿಂ ಮಗುಟ್ದುಂ . . . ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೇ (ಹಂಶಭಾ. ೯-೬೩); ವರ್ಣಧರ್ಮದ ರಕ್ಷೆಗವನಿಯ ಬನ್ನವನು ಬಿಡಿಸಲಿಕೆ ತಾನುತ್ಪನ್ನನಾದನು ಯದುಕುಲದಲಿಲೆ ಭೂಪ (ಶಿಭಾಗ. ೦೦-೩೨-೦೮) ; ಎನಗೇತಕೆಯೋ ಮದುವೆಯ ಬನ್ನ ! (ಗಹೀಕ. ೩-೦೦೮). ೫. ದುಃಖ ; ಅಳಲು : ನಿನ್ನ ಮೊದಲು ನಿನ್ನಾಣೆ ನಿನ್ನನು ಕಾಣದನ್ನಪಾನಂಗಳಿಳಿಯದೆ ಬನ್ನದೊಳಾಳದೆ ನಾನು (ಕಂಪಾ. ೨-೦೦೪). ೬. ಕೊರತೆ ; ಚ್ಯುತಿ ; ಕುಂದು : ಮುಂ ಪೂಣ್ದಂ ನನ್ನಿಗೆ ಬನ್ನಂ ಬರಲೀಯದಾರ್ತಸಗಿದೀ ವಿಖ್ಯಾತಿಯುಂ ಕೀರ್ತಿಯುಂ ಮುಗಿಲಂ ಮುಟ್ಟಿದುದಲ್ತೆ (ಹಂಶಭಾ. ೦-೬೦). ೭. ಅಡ್ಡಿ; ತಡೆ; ವಿಘ್ನ : ಕನ್ಯೆದಿಲಡ್ಡಮೋಱಯೊಳಿರುವುದಱಿಂದ ಬನ್ನವೊಂಟೆ ಪ್ರಭಾಕರಗೆ (ಭರತ. ೨೦-೦೦೬); ಬಱದನ್ನ ತಪಸಿಗೆ ಬನ್ನ ಮೆಸಗದೆ ಎಹಗೆ ಬಂದೈ ಅಹಗೆ ಪಿಂದಿರುಗೈ (ಅದ್ಭುತ. ೬-೦೦) ; ಗಣಪತಿಯೆಂದರೆ ಬನ್ನಗಳನ್ನು ಪರಿಹರಿಸುವ ದೇವನು (ರೂಪಸಂಪು. ೬೬). ೮. ಮುರಿಯುವಿಕೆ; ಸೀಳುವಿಕೆ : (೬).

ಬನ್ನದ ಕೂಟ್=ಕಷ್ಟದಿಂದ ಪಡೆದ ಆಹಾರ; ಭಂಗದ ಕೂಳು : ಪನ್ನೆರಡುಬರಿಸಮಲಸದೆ ಬನ್ನದ ಕೂಟುಂಡು ಬರ್ದಬಲ್ವಿಂಗಲೊಡಂ ತನ್ನಿಂ ಕಾಳಿಕೆ ಪಿಂಗಿದ ಪೊನ್ನಿನ ತೆಱನಂತೆ ಕಾಂತೆ ಕರಮೆಸೆದಿರ್ದಳ್ (ಗದಾಯು. ೯-೬೧); ನೀಂ ನಿನ್ನ ನನ್ನಿಯನೆ ಕಾದು ನಿನ್ನನುಜರ್ ಬನ್ನದ ಕೂಟನುಂಡರ್ (ಹಂಶತಂ. ೨೦೮-೦೩). [<ಸಂ. ಭಗ್ನ./₱ 'ಬನ್ನ' ಶಬ್ದಕ್ಕೆ ಇರುವ ಅರ್ಥಗಳು ಸಂಸ್ಕೃತದ 'ಭಂಗ' ಶಬ್ದಕ್ಕೂ ಇದ್ದು ಈ ಶಬ್ದದ ಉಪಯೋಗದಲ್ಲಿ ಸಂಸ್ಕೃತದ 'ಭಂಗ', 'ಭಗ್ನ' ಎಂಬೆರಡೂ ಶಬ್ದಗಳ ಪ್ರಭಾವವು ಇರಬಹುದೆಂದು ಕಾಣುತ್ತದೆ ]

ಬನ್ನಂಗ (ನಾ). ಕಷ್ಟ; ಬವಣೆ ; ಸಂಕಟ : ಮುಂಗಾರುಮಳೆ ಆರಂಭವಾಯಿತು . . . ಕಾರಿಗೆ ಮುಂಚೆ ಹೊರಟ ಪಡೆ ದಾರಿಯಲ್ಲಿ ನೀರಿಗಾಗಿ ಬನ್ನಂಗ ಪಡಬಾರದು ಎಂದು ಅವನ ಇಷ್ಟ (ಸಪತಿ. ೦೪೩).
[< ಬನ್ನ./₱ 'ಬನ್ನ' ಮತ್ತು 'ಬಂಗ' ಎಂಬ ಎರಡು ಪದಗಳ ನಡುವಣ ಉಚ್ಚಾರಣಾಸಂಬಂಧದಿಂದ ಈ ಶಬ್ದದ ಉಪಯೋಗವಾಗಿರಬಹುದು]

ಬನ್ನಂಗಾಯಿ (ನಾ). (ಕರಾ) ಅರ್ಧ ಬಲಿತ ತೆಂಗಿನಕಾಯಿ : ಒಂದು ಅರ್ಧ ಮುಡಿ ಅವಲಕ್ಕಿ, ಇಪ್ಪತ್ತು ಬನ್ನಂಗಾಯಿ, ನೂರು ಬಾಳೇಹಣ್ಣು ಇವಿಷ್ಟು ತಯಾರಾಗಲಿ ! (ಪೊಮುಗು. ೦೦).

[←ತುಳು. ಬನ್ನಂಗಾಯಿ. ಬಣಂಗಾಯಿ, ಬಣ್ಣಂಗಾಯಿ]

**ಬನ್ನಂಬಡಿಸು**, ಬನ್ನಪಡಿಸು, ಬನ್ನಬಡಿಸು, ಬನ್ನವಡಿಸು (ಕ್ರಿ). ೧. ಅವಮಾನಗೊಳಿಸು; ತೇಜೋವಧೆ ಮಾಡು : ಭಂಗಪಡಿಸು : ಅಂತು ಮುನ್ನಂ ತನ್ನಂ ಬನ್ನಂಬಡಿಸಿದುನ್ನತತೇಜನಂ ವಿಶ್ವನಂದಿಯುವ ರಾಜನಂ . . . ಮೂದಲಿಸಿದಂ (ವರ್ಧ. ೩-೧೪ ವ) : ನಿನ್ನ ಪದಭೃತ್ಯ ಪೌರುಷರ್ದನ್ನಂ ಗೆಲ್ದಂ ಕಿರಾತನೀತನನೀಗಳ್ ಬನ್ನಂಬಡಿ[ಪಾಠಾಂ. ಬಿಡಿ]ಸುತೆ ಸೋಲಿಪ ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ (ಹರಿಹ. ೪-೧೧೪). ೨. ಹಿಂಸೆಪಡಿಸು ; ಬಾಧೆಗೊಳಗುಮಾಡು ; ಸಂಕಟವನ್ನುಂಟು ಮಾಡು : ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದೆನೆ ಸಿರಿಯೊಳರಸುಗಳ್ ಮೆಯ್ಯಱಿಯರ್ (ಕಾದಂಪೂ. ೫೬೩). **ಬನ್ನಪಡಿಸು** : ೨. ದೇವರು ಅನೇಕಾನೇಕವಿಧದಲ್ಲಿ ಭಕ್ತರನ್ನು ಬನ್ನಪಡಿಸಿ ದೃಢತೆಯನ್ನು ಪರೀಕ್ಷಿಸಿ ಒಲಿಯುವಂತೆ ನನಗೀಗ ನೀವೊಲಿದಿರಿ (ಶಿಲುಶಾ. ೧೧೩). **ಬನ್ನಬಡಿಸು**: ೧. ಮಗನೆ ಹೋಗದಿರು ಮಱೆದು ವಿಶ್ವಾಮಿತ್ರನಾಶ್ರಮಕ್ಕೆ . . . ಮುನಿ ಬನ್ನಬಡಿಸಿಯೆ ಕಾಡಿದಪನಱಿದಿರು (ಹಕಾ. ೫-೬೩) : ಅಂಜನಾಸುತನು ಮುದದಿ ಪನ್ನಗಾರಿಧ್ವಜನ ಪವನಶಿಖಿರುತಿಗಳ ಬನ್ನಬಡಿಸಿದ ಬಿರುದನುಪ್ಪಡಿಸಿ ಬಾಲರಂ ಚೆನ್ನಾಗಿ ಶಿಕ್ಷಿಸುವ ಮಾಗಧರ ಕೇರಿಯಂ ಕಂಡು ವಿಸ್ಮಿತನಾದನು (ಜೈಭಾರ. ೫-೬-೨೫) ; ನನ್ನ ಜನ ನಿಮ್ಮ ಬನ್ನಬಡಿಸಿದೊಡೆ, ಆಗ ಇಂತೆ ಮೊರೆದು ಹೇಳುವೆನು (ಶಿಲುತ್ತ. ೨೪-೧). ೨. ನಿರಪರಾಧಿಯನು ಬನ್ನಬಡಿಸುವುದುಚಿತವೇ (ಐಶಕ್ಕ. ೩೮-೩೦) ; ಮಾಯೆ ಬನ್ನಬಡಿಸಿದಳಿಂತು ಜಗವನು (ಶಿಶಾಗ. ೨-೧-೧೧) ; ಕಣ್ಣು ಕಾಣದೆ ಅರಣ್ಯದಲಿ ಬಿದ್ದಂತಿಹೆ ಬನ್ನಬಡಿಸುವುದು ನಿನ್ನ ಧರ್ಮವಲ್ಲ (ಶಿದಾಸ್ಯ. ೫-೬). **ಬನ್ನವಡಿಸು** : ೨. ಎನ್ನ ರಾಘವ ಸತ್ಯನಾದೊಡೆ ಬನ್ನವಡಿಸಿದ ನಾಯ ಹರಣವ ತಿನ್ನು ತಿನ್ನೆನುತಾರಿ ಬಾಣವ ಬಿಟ್ಟ ಸೌಮಿತ್ರಿ (ಕೌಶಿರಾ. ೩೬-೭೩).

[ಬನ್ನಂಬಡು + — ಇಸು₁]

**ಬನ್ನಂಬಡು**, ಬನ್ನಪಡು, ಬನ್ನಬಡು, ಬನ್ನವಡು (ಕ್ರಿ). ೧. ಅಗೌರವಕ್ಕೆ ಈಡಾಗು ; ಅವಮಾನಕ್ಕೊಳಗಾಗು ; ಭಂಗಹೊಂದು : ನಿನ್ನ ಗುರು ವರ್ಧಮಾನಂ ಬನ್ನಂಬಡುವಂತೆ ಮಾಡುವೆಂ ನಡೆ ಪೋಪಂ (ವರ್ಧಪು. ೧೬-೧೪). ೨. ಕಷ್ಟಕ್ಕೆ ಗುರಿಯಾಗು ; ತೊಂದರೆಗೆ ಈಡಾಗು ; ಬಾಧೆಗೊಳಗಾಗು : ಮುನ್ನಿನ ಭವದೊಳ್ ಗೊರವನಾಗಿ ಕಾಂಚೀಪುರದೊಳ್ ತಿಱಿದು ಪಲವುಕಾಲಂ ಬನ್ನಂಬಟ್ಟು ಪೊನ್ನಂ ಪಡೆದು (ಶಂಕಶ. ೩೧೧-೨೦) ; ಎನ್ನೊಡೆಯನ ಬಲ್ಪಂ ನೀವಿನ್ನುಂ ಕಂಡಱಿದುದಿಲ್ಲ ಬಿದಿಯೆಂಬಣ್ಣಂ ಬನ್ನಂಬಟ್ಟುದನಱಿಯನೆ (ಶಬ್ದಶಾ. ೧೬೬). ೩. ಸೋಲು ; ಪರಾಭವ ಹೊಂದು; ಹಿಮ್ಮೆಟ್ಟು : ಬನ್ನಂಬಟ್ಟೆನ್ನ ಮುನ್ನಿನ ಬನ್ನಮುಂ ಪಿರಿದದೆ ನೆವಂಗೊಂಡಾನಿಂದಿಲ್ಲಿ ನೀಗದೆ ಮಾಣ್ಬನೇ (ಶಂಶಾ. ೧೨-೧೪); ತನ್ನೊಳ್ ತನೆ ಪೆರ್ಚೆ ಮಹಿಶೂರಾಣ್ಮಂ ಪೊಣರ್ಪನ್ನೆಗಂ ಬನ್ನಂಬಟ್ಟೆವು ಬಣ್ಣಗೆಟ್ಟೆವು (ಶಳಶ. ೨-೩೮). ೪. ದುಃಖಪಡು ; ಖೇದಗೊಳ್ಳು ; ಸಂಕಟಪಡು : ಕ್ಲೇಶನ್, ಕ್ಲೇಶಕಃ, ಈ ೨ ಬನ್ನಂಬಡುವಂ (ಕಾಶಕ್ಕ. ೨೪೪). **ಬನ್ನಪಡು** : ೨. ಆಸ್ತಿ ಉಳಿಯುವಂತಾದರೆ ನಿನ್ನ ಮಗಳೂ ಮೊಮ್ಮಕ್ಕಳೂ ಹೊಟ್ಟೆಗಿಲ್ಲದೆ ಮುಂದೆ ಬನ್ನಪಡುವುದನ್ನು ತಡೆದಂತಾಗುವುದು (ಶ್ಯಗಸು. ೬೪). **ಬನ್ನಬಡು** : ೨. ಎನ್ನದಾನೆಂಬೆರಡಱಿಂದವೆ ಬನ್ನಬಡುವನು ಜೀವನು (ಶಿಬ್ಯಾರ್ದ್ರೀ. ೭-೨೪) ; ಮುನ್ನ ಭೂಸುರ ಶಾಪದಿಂದೆ ಪಲರಳಿದುಳಿದು ಬನ್ನಬಟ್ಟವರುಂಟು (ಕೈಶಿಭಾ. ೫-೪೦) ; ಅಧಿಕಾರಿಗಳ ಒಟ್ಟಳೆ ಕಾನೂನುಗಳಿಂದ ಪ್ರಜೆಗಳು ಬನ್ನಬಡುತಿದ್ದರು (ಹಾಹುತ್ತ. ೪೪). ೪. ಚಿನ್ನ ಕರುವಿಗೆ ಬನ್ನ ಬಡುವೆವು, ಕಣ್ಣ ನೀರನು ಮಿಡಿವೆನು (ಶಿಬಕ. ೧೮-೬). ೫. ನಾಶವಾಗು ; ಅಳಿದು ಹೋಗು : ತನ್ನ ಸಹಾಯದಿಂದಸುರಾಧೀಶ್ವರನೆನ್ನ ಮೊಮ್ಮನನು ಬಂಧಿಸಿದ ಮುನ್ನ ಹಿರಣ್ಯಕ ಮೊದಲಾದ ದೈತ್ಯರು ಬನ್ನಬಟ್ಟುದ ಬಲ್ಲರೆಲ್ಲ (ಶೋಹಶ. ೩೬-೧೩).

**ಬನ್ನವಡು** : ೨. ನಿನ್ನ ಕೊಂದವ ನಾನು ಮಾತಿನ ಭಿನ್ನಭಾವ ವನಱಿಯದಕಟಾ ಬನ್ನವಟ್ಟೆ ತಂದೆ (ಕೌಶಿರಾ. ೩೬-೩೦) ; ಕನಕಲತೆಯೆಂಬವಳ್ . . . ವಿರಹದಿಂದೆನಸುಂ ಬನ್ನವಡುವ ಭೂಮೀಶ್ವರ ತನುಜೆಯ ನೋವಂ ಪಿಂಗಿಸಿ (ಜಚುಶಾ. ೪-೪೩). ೫. ಬನ್ನವಟ್ಟಹ ಕಪಿಕುಲಂಗಳ ಮುನ್ನ ಸತ್ರಾಣಿಸುವೆ . . . ಎನುತ ಸಂತೈಸಿದನು ನೊಂದವರ (ಕೌಶಿರಾ. ೨೫-೨೬). [ಬನ್ನ + ಪಡು₁]

**ಬನ್ನಂಬಡೆ** (ಕ್ರಿ). ೧. ಅವಮಾನ ಹೊಂದು ; ಭಂಗಕ್ಕೊಳಗಾಗು : ಈಶ್ವರಂ . . . ಆನಿಟ್ಟ ಪುಲ್ಲನೆತ್ತಿದನೆ ದನುಜರ ಗೆಲ್ದವಂ ಎನುತೊಂದು ಪುಲ್ಲನಿಡೆ . . . ಉಳಿದ ಸುರರುಂ ಆ ಪ್ರಕಾರದಿನಾತ್ಮಶಕ್ತಿಗಳಿನೆತ್ತಿ ಮೇಣ್ ಕ್ಷಿಪ್ರದಿಂ ಬನ್ನಂಬಡೆದರ್ (ಶದ್ಯಶಾ. ೧೧-೨೫೦) ; ಎನ್ನಂ ಸೆಱೆಯಂ ಬಿಡಿಸಿದೆ ಬನ್ನಂಬಡೆದುಳಿದೆನೆಂದು . . . ಶ್ರುತಿಕನ್ನಿಕೆ ಮಾಧವನ ಹರ್ಷದಿಂ ನುತಿಯಿಸಿದಳ್ (ದಶಾವ. ೨-೨೪). ೨. ಸೋಲು ; ಪರಾಭವಗೊಳ್ಳು : ಪೆಱನಾಡೆಱೆಯಂ ನಿನ್ನ ಕೈಯೊಳ್ ಬನ್ನಂಬಡೆದು ಕಿನ್ನನಾಗೆ (ಶಬ್ದಶಾ. ೪೪).

[ಬನ್ನ + ಪಡೆ₁]

**ಬನ್ನಂಬೆಱು** (ಕ್ರಿ). ೧. = ಬನ್ನಂಬಡೆ ೧: ಹರಿಯಿಂದಂ ಮಂದರಂ ಮಂದರಮಥನದಿನಂಭೋಧಿಯಂಭೋಧಿಯಿಂದಂ ಧರೆ ಬನ್ನಂಬೆತ್ತುವು (ಎಕ. VII. ಶಿಕಾಂ. ೧೧೪-೨೨; 1069); ಮುನ್ನುಱೆ ಬನ್ನಂಬೆತ್ತನಂ ಪುಷ್ಕಲಪುರದ ಹಯಗ್ರೀವನಂ ಕರ್ಮದಿಂದಂ ಮಱೆದಾಂ ಮೆಯ್ವೆಟ್ಟು ನಿದ್ರಾಸುಖದಿನಟಲೆ ಬಂದು . . . ಎನ್ನೀವಳಂ ಕೊಂಡು ಪೋದಂ (ಶಿಕ್ಷಶಿ. ೬-೩). ೨. ದುಃಖವನ್ನು ಹೊಂದು ; ಕಳವಳಪಡು : ಬನ್ನಂಬೆತ್ತನ್ನಯ ಬಿನ್ನಪಮಂ ಮನ್ನಿಸು (ಉದ್ಯರೀ. ೩-೨೪). [ಬನ್ನ + ಪೆಱು₁]

**ಬನ್ನಂಬೊಂದು** (ಕ್ರಿ). = ಬನ್ನಂಬಡೆ ೧: ನಿಲ್ಲೆಲೆಗೇ ಎನುತ್ತೆ ಗುರುಶಿಷ್ಯಂ ಕೋಪದಿಂ ಗರ್ಜಿಸಲ್ ಬನ್ನಂಬೊಂದುತೆ (ಶಾಕುಂತ. ೬೫-೧೪೦).

[ಬನ್ನ + ಪೊಂದು₁ (< ಪೊರ್ದು)]

**ಬನ್ನಗೆಡು** (ಕ್ರಿ). ಕಷ್ಟಪಡು; ತೊಂದರೆಗೀಡಾಗು : ತನ್ನ ಗಾತ್ರದೊಳು ಮೇಣನ್ಯರಂಗದೊಳಕಟ ಬನ್ನಗೆಟ್ಟಾ ಚಕ್ರದಿಂದೆ ಸುಡಲು ನನ್ನಿ ನರಕಕ್ಕೆ ವನೆನ್ನನಾದೊಡಮೆಂದ ಧನ್ಯವಪ್ಪಾ ಸೂತಸಂಹಿತೆಯದಂ (ಶಾಸಂಶ. ೨-೧೫೨).

[ಬನ್ನ + ಕೆಡು₁]

**ಬನ್ನಣೆ** ‘ಬಣ್ಣನೆ’ ನೋ.

**ಬನ್ನಣೆಗಾರ್ತಿ** ‘ಬಣ್ಣನೆಗಾರ್ತಿ’ ನೋ.

**ಬನ್ನಣೆಗಾಱ** ‘ಬಣ್ಣನೆಗಾರ’ ನೋ.

**ಬನ್ನಣೆಗೆಯ್**, ಬನ್ನಣೆಗೈ (ಕ್ರಿ). ೧. ವರ್ಣಿಸು: ವಿವರಿಸು : ಬನ್ನಣೆಗೆಯ್ವ ಬಱಿದೆ ಬಣ್ಣಗೆವಡಿಸದಿರು (ಗೀತಗೋ. ೨೫-೨). **ಬನ್ನಣೆಗೈ** : ೨. ಅಲಂಕರಿಸು : ಶೃಂಗಾರಮಾಡು : ಪನ್ನೀರೆರೆದಂಗಿಯನಿಕ್ಕಿ ಕಸ್ತೂರಿಯಿಟ್ಟು ರನ್ನದ ತೊಡವನು ತೊಡಿಸಿ ಬನ್ನಣೆಗೈದಳು ಪರನಂದಿನಿಯು (ಶವಾಣ. ೨೨೦). [ಬನ್ನಣೆ (< ಬಣ್ಣನೆ) + ಕೆಯ್₁]

**ಬನ್ನಣೆಗೈ** ‘ಬನ್ನಣೆಗೆಯ್’ ನೋ.

**ಬನ್ನಣೆನುಡಿ** ‘ಬಣ್ಣನೆನುಡಿ’ ನೋ.

**ಬನ್ನಣೆವಾತು** ‘ಬಣ್ಣನೆವಾತು’ ನೋ.

**ಬನ್ನಪಡಿಸು** ‘ಬನ್ನಂಬಡಿಸು’ ನೋ.

**ಬನ್ನಪಡು** ‘ಬನ್ನಂಬಡು’ ನೋ.

**ಬನ್ನಬಡಿಸು** ‘ಬನ್ನಂಬಡಿಸು’ ನೋ.

**ಬನ್ನಬಡು** ‘ಬನ್ನಂಬಡು’ ನೋ.

**ಬನ್ನವಂತ** (ನಾ). (ರೋಗದ) ಬಾಧೆಯನ್ನು ಹೊಂದಿರುವವನು ; ರೋಗಿ ; ವ್ಯಾಧಿಗ್ರಸ್ತ : “ರೋಜನ್, ರೋಜಕಃ, ರುಷ್ಟಃ, ರುಷ್ಟವಾನ್, ರೋಗೀ, ಈ ೫ ಬನ್ನವಂತಂ” (ಕಾಶಕ್ಕ. ೨೨೨). [ಬನ್ನ + — ವಂತ]

ಬನ್ನವಡಿಸು 'ಬನ್ನಂಬಡಿಸು' **ನೋ.**

ಬನ್ನವಡು 'ಬನ್ನಂಬಡು' **ನೋ.**

**ಬನ್ನಿ$_1$** (ನಾ). ಸಣ್ಣ ಸಣ್ಣ ಎಲೆಗಳು ಹಾಗೂ ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಮರ; ಶಮೀವೃಕ್ಷ ; ಹಿಂದೂಗಳು ಈ ಮರವನ್ನು ಪೂಜ್ಯವೆಂದು ಭಾವಿಸಿದ್ದಾರೆ. ನವರಾತ್ರಿಯಲ್ಲಿ ವಿಜಯದಶಮಿಯಂದು ಬನ್ನಿಯ ಮರವನ್ನು ಪೂಜಿಸಿ, ಅದರ ಎಲೆಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡು ಶುಭಾಶಯಗಳನ್ನು ನುಡಿಯುತ್ತಾರೆ : "ಶಮಿಯೆನೆ ಬನ್ನಿಯಕ್ಕು" (ಮಂಗರಾ. ೩೬-೧೩) ; ಮುಳ್ಳಿಲ್ಲದ ಬನ್ನಿಯ ಮರನುಳ್ಳೆಡೆಯೊಳಂ . . . ಒಂದು ಪುರುಷದೊಳ್ ನೀರಕ್ಕುಂ (ಲೋಕೋಪ. ೫-೧೦); ಅನಿಬರು . . . ಅಖಿಳಕ್ಕೆದುವನೊಂದು ಹೆಣನಾಕಾರದಲಿ ಬಿಗಿದೊಂದು ಬನ್ನಿಯ ಮರನ ತುದಿಯಲಿ ಕಟ್ಟಲೇಱಿದರು (ಕುಮಾ.ವಿ. ೧-೧೨); ಆಲ ಮುಳ್ಮುತ್ತುಗ ಕೊಡಸಿಗೆ ಬನ್ನಿಗಳ್ಮೇಲಕಡರಿ ಮುಸುಕಿಹುವು (ಕಂಪರಾ. ೧೬-೩೬).

**ಬನ್ನಿಮಂಟಪ**=ಶಮೀವೃಕ್ಷದ ಸುತ್ತಲೂ ಕಟ್ಟೆಹಾಕಿ, ಕಟ್ಟಿರುವ **ಮಂಟಪ :** ಹಿಂದೆ ವಿಜಯದಶಮಿಯಂದು ಮೈಸೂರು ಮಹಾರಾಜರು ಮೆರವಣಿಗೆಯಲ್ಲಿ ಬನ್ನಿಮಂಟಪಕ್ಕೆ ಹೋಗಿ ಪೂಜೆ ಸಲ್ಲಿಸುತ್ತಿದ್ದರು (ರೂಢಿ). **ಬನ್ನಿಮಹಾಕಾಳಿ**=ಬನ್ನಿಯ ಮರದ ಬಳಿಯ ದುರ್ಗೆ : ವಂಶಾವಳಿಯ ಕರಣಿಕನು ಬನ್ನಿಮಹಾಕಾಳಿಯ ಆಶೀರ್ವಾದದ ಪಟ್ಟಿಯನ್ನೋದಿ ಒಪ್ಪಿಸಲು . . . ವಸ್ತ್ರಾಭರಣಗಳಂ ಕೊಡಿಸಿ (ಮಹಾವಂ. I, ೩೯). **ಬನ್ನಿಯ ಕಟ್ಟೆ**=ಬನ್ನಿಮಂಟಪ : ಬನ್ನಿಯ ಕಟ್ಟೆಯ ಸಾರ್ದನಾ ರಾಯ (ಜೈಮಿ. ೨೨-೬); **ಬನ್ನಿಯ ಬೆನಕ** = ಬನ್ನಿಯ ಕಟ್ಟೆಯ ಮೇಲೆ ಪ್ರತಿಷ್ಠೆ ಮಾಡಿರುವ ಗಣಪನ ವಿಗ್ರಹ : ಗುಂಡದೇವಪೆದ್ದಿ ಬನ್ನಿಯ ಬೆನಕನಲ್ಲಿ ಶ್ರೀಧರದೇವರ ಕಯ್ಯಂ ಬಡಗ ನಾಕಱ ಹಸುಗೆಯಲು ಕೊಟ್ಟ ಮತ್ತರು ನಾಲ್ಕು (ಸೌಇಇ. IX—i, ೩೩೩-೪೯; 1215); ಇನ್ತೀ ಚತುಸ್ಸೀಮೆಯಲು ನಾಡು ನಟ್ಟು ಕೊಟ್ಟ ಕಲ್ಲುಗಳಿಂದೊಳಗಣ ಕ್ಷೇತ್ರವನೂ ಹೊನ್ನಹುಣಿಸೆಯಿಂದವೂ ಬಡಗಲು ಬನ್ನಿಯ ಬೆನಕನಿಂದಲೂ (ಎಕ. IX, ಚನ್ನಪ. ೧೨-೨೦ ; 1286). **ಬನ್ನಿಯ ಮರದ ಮಂಟಪ** = ಬನ್ನಿಮಂಟಪ : ಇನ್ನು ಕೆಲವು ಆಯುಧಗಳನ್ನೂ ಸಂಗಡ ಇರಿಸಿ ಉತ್ತರದಿಕ್ಕಿನ ಬನ್ನಿಯ ಮರದ ಮಂಟಪಕ್ಕೆ ಪಟ್ಟದಾನೆ ಕುದುರೆಗಳ ಸಹಿತವಾಗಿ . . . ಕಳುಹಿಸಿ ಕೊಟ್ಟರು (ಮಹಾವಂ. I, ೩೯). [ದೇ॥. ತಮಿ. ಮಲ. ವನ್ನಿ]

**ಬನ್ನಿ$_2$** 'ಬನ್ನಿ$_2$' ನೋ.

**ಬನ್ನು** (ನಾ). ಮೃದುವಾದ ಒಂದು ಬಗೆಯ ರೊಟ್ಟಿ : ಆ ಮೂಲೆಯಂಗಡಿಯಲ್ಲಿ ಬ್ರೆಡ್ಡು, ಬನ್ನು ಸಿಕ್ಕುತ್ತವೆ (ರೂಢಿ). [←ಇಂ. Bun]

**ಬನ್ನೂರ್**, ಬನೂರ್ (ನಾ). ಒಂದು ಸ್ಥಳದ ಹೆಸರು : ಬನ್ನೂರ್ವರಿಯ ಮಗ ಪಾಲ ಬಲ್ಲದ ತುಱುಗೊಳೊ ಕಾದಿ ತುಱುವನಿಕ್ಕಿಸಿ ಸ್ವರ್ಗ್ಗಿಯಾದ (ಎಕ. X, ಮುಳಬಾ. ೯೪-೪ ; ಸು. 970). **ಬನೂರ್ :** ತೈಲಪದೇವಂ ರಾಜ್ಯಂಗೆಯೆ ಬನವಾಸಿ ಅರಸುಗೆಯೆ ಬನೂರಯ್ಯ ಮಾಡಿಸಿದ ಕಂಭ (ಎಕ. VIII, ಸೊರಬ. ೫೨೯-೬ ; 985). [ಬನ್ನಿ$_1$+ಊರ್]

ಬನ್ಸಿ 'ಬನಸಿ' ನೋ.

ಬನ್ಸಿಗೋಧಿ 'ಬನಸಿಗೋದಿ' ನೋ.

ಬನ್ಸಿರವೆ (ನಾ) . ಬನಸಿಗೋದಿಯಿಂದ ಮಾಡಿದ ರವೆ : ಬನ್ಸಿರವೆಯಿಂದ ಉಪ್ಪಿಟ್ಟು, ಸಜ್ಜಿಗೆ ಮಾಡಿದರೆ ಉದುರುದುರಾಗಿಯೂ ಮೃದುವಾಗಿಯೂ ಇರುತ್ತದೆ (ರೂಢಿ). [ಬನ್ಸಿ( <ಬನಸಿ) + ರವೆ]

ಬಪ್ಪ$_1$ 'ವರ್' ಪರಾ.

**ಬಪ್ಪ$_2$**, ಬೊಪ್ಪ (ನಾ). ೧. ತಂದೆ : ನ್ಯಾಯಂ ಮಂತ್ರಿಗಳುಕ್ತಿ ಬಪ್ಪನ ಮತಂ ಕಾಲೋಚಿತಂ ನಿಮ್ಮಭಿಪ್ರಾಯಂ ನೆಟ್ಟನಲಂಘ್ಯಂ (ಅಜಿತಪು.೧೩-೬೨) ; ಎಲೆ ಮಗನೆ ಬಪ್ಪನನ್ನೊಡಗೊಂಡು ಬಪ್ಪೆ ನಾಂ ಪರಿಣಯಕೆ (ಜೈಮಿ. ೬-೧೩). **ಬೊಪ್ಪ :** ೧. ಅಂತು ತನೂಭವಂ ಜನಿಸಿಯಾಕ್ಷಣದೊಳ್ಪರಿದೆಯ್ದೆ ಬೊಪ್ಪ ನಾನೆಂತು ಬರ್ದುಂಕುವೆಂ ಬೆಸಸಿಮೆಂದೊಡೆ (ಧರ್ಮಾಮ. ೬-೨೯) ; ಆ ಶಿಶುತ್ವದಲೆಮ್ಮ ಬೊಪ್ಪನು ವಾಸವನ ಪುರಕೈದಿದನು (ಕುಮಾ.ದ್ರೋ. ೯-೪೯) ; ಬೊಪ್ಪ ಕಳುಪಿದ ವಸ್ತುಗಳನೆಲ್ಲವ ರಾಮನೊಪ್ಪಿಸಿಕೊಂಡು ದುರ್ಗವನು ವೊಪ್ಪವಿಟ್ಟನು ಸಮರಣೆಯಿಂದ (ಕುಮಾರಾಂ. ೯೨-೩೪). ೨. ತಾತ ; ಪಿತಾಮಹ : "ಬೊಪ್ಪಂ ತಾತನೊಳಂ" (ಕರ್ಣಾಶ.೩) ; ಅಪ್ಪನು ನಮ್ಮ ಮಾದರ ಚೆನ್ನಯ್ಯ ಬೊಪ್ಪನು ನಮ್ಮ ಡೋಹರ ಕಕ್ಕಯ್ಯ (ಬಸವ. ೩೪೮). ೩. ಮಕ್ಕಳನ್ನು ಪ್ರೀತಿಯಿಂದ ಸಂಬೋಧಿಸುವಾಗ ಹೇಳುವ ಮಾತು : ಕವಡಿಕೆ ಭಾಳದಂಡದೊಳೊಡಂಬಡೆ ದಾದಿಯರಿಕ್ಕಲಂಗಳೊಳ್ ಸವಡಿಸಿ ಸಾರ್ಚಿ ದಟ್ಟಡಿಯೊಳೆಟ್ಟುರುತಿರ್ದನನಾರ ಬೊಪ್ಪನೀ ಕವಡೆಯ ಬೊಪ್ಪನೆಂದು ನಡೆ ನೋಡಿದರ್ (ಸೂಕ್ತಿಸು. ೬-೬೬); ಬಾರೆನ್ನ ಬೊಪ್ಪಯೆಂದಡಿಗಡಿಗೆ ಮುದ್ದಿಸುತ್ತ ಕೇರಳನ ಹರುಷದಿಂ ಲಾಲಿಸುತ್ತ (ಕೇರಮು. ೧೦-೬೮) ; ಬಾರಣ್ಣ ಬಾರೋ ಕಾರುಣ್ಯಮೂರ್ತಿ ಬೊಪ್ಪ ಬಾರೊ (ಕಲುಪು. ೨೫). ೪. ಒಬ್ಬಾತನ ಹೆಸರು : ಕಲಿಗಂಗನಗ್ರತನಯಂ ಶ್ರೀಬೊಪ್ಪದಂಡಾಧಿಪಂ (ಎಕ. II, ೩೬೪-೩೩ ; 1135). ೫. (ಆಲಂ) ಪ್ರಪಂಚಕ್ಕೇ ತಂದೆಯಾದವನು ; ಪರಮಾತ್ಮ ; ಕೃಷ್ಣ : ಈ ಬೊಪ್ಪಂ ದೇವಕಿಗಾದಾ ಬೊಪ್ಪಂ ತಪ್ಪದಪ್ಪನಱಿದಂ (ಶಾಕಪುಂ. ೦೬೫-೯೩೭ ; 1181).

**ಬಪ್ಪನಂಕಕಾಱ** = ಒಂದು ಬಿರುದು : ರಿಪುರಾಯಕುವರಬಂಗಾರಂ ಬಪ್ಪನಂಕಕಾಱಂ [ಕುಮಾರ]ಂಕಭೀಮಂ (ಸೌಇಇ. XX, ೭೦-೯ ; 1109). **ಬಪ್ಪನ ಗಂಧವಾರಣ, ಬೊಪ್ಪನ ಗಂಧವಾರಣ** = ಒಂದು ಬಿರುದು : ಈ ನರಸಿಂಹಭೂಭುಜಂ ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗಂಧವಾರಣಂ (ಎಕ. V, ಬೇಲೂರು. ೦೯೩-; 1161 ; ಶಾಕಪುಂ. ೩೩೭ ನೋ); ಗಡಿಯಂಕಮಲ್ಲ ಬೊಪ್ಪನ ಗಂಧವಾರಣ ಕಲಿದೇವ ಗೋಪಾಳದೇವರ ದಿಬ್ಯಶ್ರೀಪಾದಪದ್ಮಾರಾಧಕರುಂ (ಎಕ. VIII, ತೀರ್ಥಹ. ೨೫-೪ ; 1260).

[<ಪ್ರಾ. ಬಪ್ಪ./ಸಂ. ವಪ್ತೃ. ಹಿಂ./ಬಪ್ಪಾ, ಬಾಪ್ ; ಮರಾ. ಬಾಪ್]

**ಬಪ್ಪ$_3$** (ನಾ). ೧. ಬೆಟ್ಟದ ಮಗ್ಗುಲು ; ಸಾನು ; ತಪ್ಪಲು. ೨. ದಡ ; ತೀರ ; ತಟ : "ಬಪ್ಪ—ವಪ್ರ=ತಪ್ಪಲು, ದಡ" (ಕರ್ನಾಟಕಶ.೨೯); ವಪ್ರ, ಬಪ್ಪ (ಶಬ್ದಮ. ೧೫೪ ಸೂತ್ರಯೋ) ; ಪತ್ರಿಕೆ – ಹತ್ತಿಗೆ, ವಪ್ರ – ಬಪ್ಪ (ಹೊಸಗ. ೦೦೬). ೩. "ಅಗುಸೇ ಬಾಗಿಲು" (ಕೃಕೋ).

[ <ಪ್ರಾ. ವಪ್ಪ./ಸಂ. ವಪ್ರ]

**ಬಪ್ಪಣ** (ನಾ). ಮಕ್ಕಳನ್ನು ತೊಟ್ಟಿಲಲ್ಲಿ ಮಲಗಿಸಿ ಆಡಿಸುವ ಒಂದು ರೀತಿ, — ಬಗೆ : ರೂಢಿಯ ಕೈಯಾಗ ಆರೂಢ ಸಿಕ್ಕಿಹನು ಜೋಡಾಗಿ ಬಪ್ಪಣ ಆಡಿಸುತ ಕಂದನ ಸಡಗರದಿ ತೂಗಿರೆ (ಸಿದ್ಧಶಿ. ೩-೩೩). [?]

**ಬಪ್ಪವ್ವ** (ನಾ). ಒಬ್ಬಾಕೆಯ ಹೆಸರು : ಬಪ್ಪವ್ವಂ ಬನವಾಶಿ ಪನ್ನಿರ್ಚ್ಛಾಸಿರದ ಪಟ್ಟಮನಾಳೆ (ಪ್ರೌಇಶಿ. ೦೯೨೯, ೭೮-೪ ; 964).

[ಬಪ್ಪ$_2$ + ಅವ್ವ$_1$ (< ಅವ್ವೆ)]

**ಬಪ್ಪಸೆಟ್ಟಿ** (ನಾ). ಒಬ್ಬಾತನ ಹೆಸರು : ಬಪ್ಪಸೆಟ್ಟಿಯ ಮಗಂ × × ಮಂ ಅಮ್ಮಣಸೆಟ್ಟಿ(ಎಕ. III (R), ಗುಂಡ್ಲುಪೇ. ೩೭-೦ ; ೧೦ನೆಯ ಶತ).

[ಬಪ್ಪ$_2$ + ಸೆಟ್ಟಿ]

**ಬಬಿಯಮ್ಮ** (ನಾ). ಒಬ್ಬಾತನ ಹೆಸರು : ನೀತಿಮಾರ್ಗ್ಗ ಪೆರ್ಮ್ಮಾನಡಿಗಳ್ ಸ್ವರ್ಗ್ಗಮೇಱಿದನ್ದು ಮಱಪೂರ ಬಬಿಯಮ್ಮಂ ಕಿಚ್ಚುವೊಕ್ಕಂ (ಎಕ. V, ಅರಕ. ೨೭-೧೨ ; ಸು. 915). [? + ಅಮ್ಮ$_1$]

**ಬಬ್ಬರ**, ಬೊಬ್ಬರ (ನಾ). ಸುಸಂಸ್ಕೃತನಲ್ಲದವನು ; **ಅನಾಗರಿಕ :** "ಬಬ್ಬರಂ ಬರ್ಬರಾರ್ಥಂ" (ಕರ್ಣಾಶ. ೫೨). ೨. ಒಂದು ದೇಶದ

ಹೆಸರು; ಬರ್ಬರ : "ಬಬ್ಬರ—ಬರ್ಬರ—ಪಾಮರ, ದೇಶಭೇದ" (ಶಬ್ದಕೋ. ೨೯). **ಬೊಬ್ಬರ :** ೨. ಮಲಯ ಬೊಬ್ಬರ ಮತ್ತೆ ಮಗಧ ಬಂಗಾಳವು (ದೇವಾಂಕು. ೩-೪೦). [ < ಸಂ. ಬರ್ಬರ ]

**ಬಬ್ಬರಿ** (ನಾ). ಒಂದು ಬಗೆಯ ಮದ್ಯ, — ಹೆಂಡ : ಸಿರಿಸಿಂಬಿ ತಂಪುಗೆ ಬಬ್ಬರಿ ಗಂಗಾಸಾಗರಂ ಸುರಾಳಂ ಸೋಮಂ . . . ಎಂಬ ಕೆಲವು ಪೆಸರಿನ ಕಳ್ಳಂ ತುಂಬಿರ್ದನೇಕಘಟನಿಕುರುಂಬಮನನುರಾಗದಿಂದೆ ತಂದಿ ಟ್ಟಿಪಿದೊಡೆ (ಚಾರಕು. ೧೧-೦೨೬). [ ? ]

**ಬಬ್ಬರಿಗ** (ನಾ). ಒಂದು ದೇಶದ ಹೆಸರು : ಪಾಂಡ್ಯ ಲಾಳ ನೇಪಾಳ ತುರುಷ್ಕ ಬಬ್ಬರಿಗ ಕೇರಳ ಪಲ್ಲವಮಂಗ ವೆಂಗಿ ಪಾಂಚಾಳ ಕಳಿಂಗ ಸಿಂಧು ವಿಷಯಾಧಿಪರಾಳ್ವೆಸಗೆಯ್ಯೆ (ಕಇ. I, ೩೦-೦೬; 1222). [ < ಬಬ್ಬರ ]

**ಬಬ್ಬಾಗಿಲ್** (ನಾ). ಒಂದು ಸ್ಥಳದ ಹೆಸರು (?) : ಮುರಿದು ಕಿಡಿವ ಗುಣ್ಡಿಯ ಬಬ್ಬಾಗಿಲ ದ್ವಿಸನ್ಧಿಯ (ಎಕ. III (B). ತಂಜಾವ. ೨೬೨-೨೪; 969). [ ? ]

**ಬಬ್ಬಾಟ** 'ಬೊಬ್ಬಾಟ' ನೋ.

**ಬಬ್ಬುಲಿ, ಬಬ್ಬುಳಿ, ಬೊಬ್ಬುಲಿ, ಬೊಬ್ಬುಳಿ$_1$** (ನಾ). ಒಂದು ಬಗೆಯ ಮುಳ್ಳುಗಿಡ; ಜಾಲಿ; ಗೊಬ್ಬುಳಿ : ಪಲಸಾಲಂ ತಡಸಾಸು ತೇಗು ತದುಕಿಂಚಿಲೊಪ್ಪನ್ನೆ ಚೆನ್ನಂಗಿ ಬ[ಪಾಠಾಂ. ಬೊ]ಬ್ಬುಲಿ . . . ಎಂಬೀ ಮರದುಱುಗಲಿಱುಂಬಿನಿಂದತಿಗಹನವೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೦೨-೩೯); ವನಜವನದಲಿ ತುಱುಚಿ ಕಬ್ಬಿನ ಬನದಿ ಕಡಸಿಗೆ ಚೂತಮಯ ಕಾನನದಿ ಬ[ಪಾಠಾಂ. ಬೊ]ಬ್ಬುಲಿ ಭೀಮಸೇನನಯಿರವು ತವ್ಮೊಳಗೆ (ಕುವ್ಯಾ. ೬-೩); ಈಗ ಊರು ಇದ್ದ ಸ್ಥಳದಲ್ಲಿ ಮೊದಲು ಬಬ್ಬುಲಿ (ಜಾಲಿ)ಯ ಬನವಿದ್ದು ತುಡುಗರಿಗೆ ಆಶ್ರಯವಾಗಿತ್ತು (ಬಿಜಾಪ. ೦೨). **ಬಬ್ಬುಳಿ :** ಬಬ್ಬುಳಿಯ ಮುಳ್ಳ ಮೆಳೆಯಲಿ ನಿಲ್ಲೆ (ಗೀಬಿಂ. ೬೩-೪). **ಬೊಬ್ಬುಲಿ :** ಬೊಬ್ಬುಲಿಯ ವನಕ್ಕೆನಿಸು ಕೂರ್ಮೆಯಿಂ . . . ನೀರ ನೆಱೆದೊಡಂ ಮಾವಿನ ವನದಂತೆ ಫಲಮಾಗಲಾರ್ಕುಮೆ (ಧರ್ಮಾಮೃ. ೭-೭೭); ಚಂದನದ ಸನ್ನಿಧಿಯಲಿ ಪರಿಮಳ ತಾಗಿ ಬೇವು ಬೊಬ್ಬುಲಿ[ಪಾಠಾಂ. ಬಬ್ಬುಲಿ, ಬೊಬ್ಬುಳಿ] ತಱೆಯ ಗಂಧಂಗಳಾಗವೆ (ಬಸವ. ೦೪೦) ; ಹಿರಿಯ ಬೊಬ್ಬುಲಿಮರದ ನೆಳಲಿದು (ಬಸಪು. ೨೦-೦೦). **ಬೊಬ್ಬುಳಿ$_1$ :** ವನಜದಲರನುಳಿದಾಱಡಿಗೆ ಬೊಬ್ಬುಳಿಯ ಪೂವಿನೊಳ್ಮಧುವುಂಟೆ (ಕೃಬಶಾ. ೦೪-೦೨) ; ಹಾವಸೆ, ಬೊಬ್ಬುಳಿಮರದ ತಿಗುಡು ಇವೆರಡನು ಕುಟ್ಟಿ . . . ಸಕ್ಕರೆವೆರಸಿ ತೆಗೆದುಕೊಳ್ಳೆ ದಾಹಂ ಮಾಣ್ಗುಂ (ಸಕವ್ಯ. ೨೬೨). [ < ಸಂ. ಬಬ್ಬುಲ, ಬಬ್ಬೂಲ ]

**ಬಬ್ಬುಳಿ** 'ಬಬ್ಬುಲಿ' ನೋ.

**ಬಬ್ರ** (ಗು). (?) : ಆನೆಗೆ ಹಳದೀ ಬನಾತಿನ ಬಬ್ರೀಜೂಲು ರೇಶ್ಮೆ ಜಾಲರು ಸಹ ೧ (ಎಕ. XIV, ತಂಜಾವ. ೨೯೨-೦೯೨ ಪುಟ; 1847). [ ? ]

**ಬಭ್ರು** (ಗು). ೧. ಕಂದುಬಣ್ಣದಿಂದ ಕೂಡಿದ. (ನಾ). ೨. ಕಂದು ಬಣ್ಣ; ಪಿಂಗಳವರ್ಣ : "ಪಿಂಗಂ ಕಪಿಳಂ ಬಭ್ರು ಪಿಶಂಗಂ . . . ಹರಿತಂ" (ಪಟ್ಟಕೋ. ೦೦೯-೬೩); ಭ್ರುಕುಟಿಕುಟಿಲಭ್ರೂಲತಾಬಭ್ರುರೋಚಿಯಿಂ ರುಚಿರತಾಂಬೂಲಾರುಣಾಧರಮರೀಚಿಯಿಂ . . . ರೌದ್ರಭಾವಂ ನೆಲಸಿ ನಿಲೆ (ಕಾದಂಬಾ. ೨೬೦) ; ಅರಣ್ಯಂ . . . ಮದವತ್ಕುಂಜರಗಾತ್ರದಂತೆ ವಿಳಸದ್ಬಭ್ರೂಪ್ರಭಾವಿಭ್ರಮಂ (ಕುಶ್ಮಕು. ೩-೬೯). ೩. ಮುಂಗುಸಿ; ಮುಂಗುಲಿ : "ಮುಂಗುರಿಯಲ್ಲಿಯುಂ ಬಭ್ರುವೆಂಬುದು" (ಹಲಾಯು. ೦೩೬-೩೦); ಹರಿ ಕರಿಗಳೊಂದಾಗಿ ಬೆರೆದು ಬಭ್ರೂರಗವನೆರಳೆ ಪುಲಿಯೊಂದೆನಿಸಿ ಮರೆದು ನಿಜವೈರಗಳ ವರಮುನಿಯ ದಿವ್ಯಪ್ರಭಾವದಿಂದೊಪ್ಪಿರ್ಪವಾ ತಪೋಧನನೆಡೆಯೊಳು (ವಂಕಾರಾ. ೧-೬-೮). ೪. ಅಗ್ನಿ : ಬಭ್ರುಸದ್ಭ್ರುಲಷ್ಟ ಚಿತ್ರಭ್ರಾಂತಿಕೃಲ್ಲುಠತ್ ಪ್ರಭ್ರಾಜಿತೋದ್ಯತ್ಕಕುಭ್‍ಭ್ರಮಿತ ಘೃಣಿಚಯಾದಭ್ರಸ್ಫುಲಿಂಗವಮಿವಿಭ್ರಮವಿಭೃತ್ ಖಡ್ಗ ಶುಭ್ರದಕ್ಷಕರಕ್ಷತಾ (ಶಬ್ದಮಾ. ೦-೭). ೫. ವಿಷ್ಣು : "ವಿಷ್ಣುಃ, ಕೃಷ್ಣಃ . . . ಬಭ್ರುಃ, ಹರಿಃ . . . ವನಮಾಲೀ, ಗದಾಧರಃ — ಈ ೪೫ ನಾರಾಯಣನ ಪೆಸರ್" (ಹಲಾಯು. ೩-೨೪). ೬. ಶಿವ. ೭. ಕುದುರೆಯ ಹುಬ್ಬು : ಅಕ್ಷಿಕೂಟದಿಂ ಪೊಱಗಣ ಪುರ್ಬುಗಳ್ಗೆ ಬಭ್ರುವೆಂಬ ಪೆಸರಕ್ಕುಂ (ಅಶ್ವಶಾ. ೮೭-೨೩). [ಸಂ.]

**ಬಮರ** 'ಬವರ$_2$' ನೋ.

**ಬಮರಿ** 'ಬವರಿ' ನೋ.

**ಬಮೆಗೊಳ್** 'ಬೆಮೆಗೊಳ್' ನೋ.

**ಬಮೋಜೀಬ್** (ಅ). ಅದಕ್ಕನುಗುಣವಾಗಿ ; ಅದಕ್ಕನುಸಾರವಾಗಿ : ಅದರ ತರುವಾಯ ನಡೆಯುವ ಅಪಾದನೆಗೆ ಅಯಿವತ್ತುರೂಪಾಯಿಗೆ ವಿಶಾರದ ಜುಮರ್ಾನೆಗೂ ಗುರಿಯಾಗತಕ್ಕದ್ದು ಬಮೋಜೀಬ್ ಹುಕ್ಕುಂ (ಗ್ರಾಮಾಕ. ೪ ಖಲಕ). [ ← ಪಾರ. ಬಮೂಜಬ್ ; ಹಿಂ. ಬಮೂಜಬ್, ಬಮೂಜಿಬ್ ; ಮರಾ. ಬಮುಜಿಬ್, ಬಮೂಜಿಬ್, ಬಮೊಜಿಬ್, ಬಮೋಜೀಬ್]

**ಬಮ್ಮ** 'ಬೊಮ್ಮ' ನೋ.

**ಬಮ್ಮಡಿ** 'ಬೊಮ್ಮಡಿ' ನೋ.

**ಬಮ್ಮಯ್ಯ** 'ಬೊಮ್ಮಯ' ನೋ.

**ಬಮ್ಮೇತಿ** 'ಬೊಮ್ಮಹತಿ' ನೋ.

**ಬಯ್$_1$, ಬೈ** (ಕ್ರಿ). ಬಯ್ತು, ಬೈತ (ಭೂತಕೃ). ಬಯ್ತು, ಬೈತು (ಭೂತನ್ಯೂ). ೧. ಅಡಗಿಸು ; ನಿಕ್ಷೇಪಿಸು ; ಮುಚ್ಚಿಡು ; ಬಚ್ಚಿಡು : "ಬಯ್ ನಿಕ್ಷೇಪೇ (ಬಚ್ಚಿಡು)" (ಕವಿರಾ) ; ದಂಡಕನೃಪಂ ಲೋಭಾಭಿಭೂತಂ ವಿಷಾವಿಲದಂಷ್ಟ್ರಂ ಶ್ವಯುವಾಗಿ ಪುಟ್ಟಿ ಸುಟಿಗುಂ ಮುಂ ಬಯ್ತ ಭಂಡಾರದೊಳ್ (ಆದಿಪು. ೨-೦೩) ; ಕಮಲಜನಿಲ್ಲಿ ಬಯ್ತ ನೊಲವಿಂ ಕುಮುದೇಕ್ಷಣ ವಜ್ರದಂತವಿದ್ರುಮರದನಚ್ಛದಂಗಳಿನಮರ್ಚಿದ ಜಂಗಮನೀಲಪುತ್ರಿಕಾಸಮಿತಿಯನೆಂಬಿನಂ . . .ಪುಳಿಂದಿಯರಿರ್ದರದೊಂದು ತಾಣದೊಳ್ (ಜಗಖ. ೦೬-೦೭) ; ಬರೆದಂತೆ ಪೋಲ್ತಂತೆ ಬಯ್ತಂತೆ ಬೆಚ್ಚಂತೆ ಇರಿಸಿದಂ ಶಿವಮೂರ್ತಿಯಂ ಚಿತ್ತದೊಳಗಿಂತೆ (ಸೋದರ. ದೇ. ೬೬-೨೩). **ಬೈ$_1$ :** ೧. ಎರ್ದೆಯೊಳ್ ಬೈತಿಚ್ಚೆಯೊಳ್ ಕೂರ್ಮೆ ತಳ್ತಿರವಿಂ ಮುಚ್ಚುಗೆವೆತ್ತ ಪತ್ತುಗೆಯಿನಂತಾ ನಾಲ್ವರಂದಿರ್ವರಿರ್ವರೆ ಯುಗ್ಮದ್ವಯಮಾದರೇಂ ಸಫಲಮೋ ಸತ್ಪಾತ್ರದಾನೋದಯಂ (ಶಾಂತಿಪು. ೬-೦೨೩) ; ಓವಿ ಫಳತರುಗೆ ನೀರ್ಗಳನೀವುದುಮಂ ಬೈತು ಬಿತ್ತನೊಲವಿಂ ಬೆಳೆಗೈಗೇವುದುಮಂ ಸತ್ಪಾತ್ರಕ್ಕೀವುದುಮಂ ದಾನಮೆಂಬ ನಾಣ್ಣೆಕೆಯುಂಟೇ (ಅರ್ಧನೇ. ೪-೪೯) ; ಆಭರಣಗಳೆಲ್ಲಮಂ ಬೈತು ತಾಂ ಬೇಗದಿಂ ವರಸಖಿಂ ಬೆರಸು ಖೇಚರಚಕ್ರವರ್ತಿ ಬೇಡರ ರೂಪನಾಂತು (ಧರ್ಮಪ. ೩-೨). ೨. ಪ್ರತಿಷ್ಠೆಮಾಡು : ಬರೆದರೂ ಬೈತರೂ ಪೊಲ್ದರೂ ಪೊರೆದರೂ . . . ಕಡೆದರೋ ಎನೆ ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ (ಗಂಕ. ೩-೦೦೨). ೩. ಸೇರಿಕೊಳ್ಳು : ಹಂಸತೂಲಸ್ಥಲದೊಳ್ ತಾಂ ಬೈತೊಡಂ ಮುಳ್ಗಳ ಹೊಸ ಹಸೆಯೊಳ್ ಬೈ[ಪಾಠಾಂ. ಸ್ಯೆ]ತೊಡಂ ಸ್ನೇಹದಿಂದಂ ನಲವಿಂದಂ ಸ್ತೋತ್ರಮಂ ಮಾಡಿದೊಡೆ ಪಳಿದೊಡಂ ಸರ್ವಮೊಂದಂದಮೆಂದಾಂ ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೭೩). ೪. ಬಂಧಿಸಿ ಇಡು ; ಅಲುಗಾಡದಂತೆ ಇರಿಸು : ಬೇಸಗೆಕಾಲಮೆಂಬಬಳೆ ಬೆಟ್ಟುಗಳೆಂಬೊಲೆಗಲ್ಗಳಲ್ಲಿ ಬೈತೀ ಸಕಳೋರ್ವಿಯೆಂಬ ಪೊಸಗಾವಲಿಯಂ ರವಿವಹ್ನಿಯಿಂದೆ ತೋಯಾಶಯಮೆಂಬ ಸಂಪಣಮನರ್ಪಿಸಿ ತಳ್ತುರಿಯಲ್ಕೆ ಕಾಷ್ಠಗಳ್ ದೋಸೆಯನಟ್ಟುವೊಲ್ ಮಳಲರಾಶಿಗಳೊಪ್ಪಮನಾಳ್ದುವಾಕ್ಷಣಂ (ಚಾರಕು. ೪-೭೮).

[ದೇ.॥ ತಮಿ. ವೈ ; ಮಲ. ವೆಕ್ಕ ; ಕೊಡ. ಬೆಯ್ ; ತೆಲು. ವೇಯು; ಕೋತ. ವಯ್ ; ತೊದ. ಪೊಯ್]

ಬಯ್‌₂, ಬಯ್ಯು, ಬೈ₂, ಬೈಯು (ಕ್ರಿ). ೧. ಕೆಟ್ಟ ಮಾತನ್ನಾಡು ; ಕಠಿಣವಾಗಿ ನುಡಿ : ಅದನಾತಂ ಬಯ್ದೊನಲ್ಲ ನಾಂ ಬಯ್ದಂ (ಪಪ್ಪುರಾ. ೬-೩) ; ಕಿಱಿಯವನಱಿಯದೆ ಕೆಡೆನುಡಿದಡಪ್ಪೊಡಂ ನೋಱುವರಂ ನೆಱೆ ಸಲಿಸುವುದೆಂದುದನಾಂ ಮಱೆವೆನೆ ಬಯ್ ಬಯ್ಗೆ ಸಲಿಸುವೆಂ ನೋಱುವರಂ (ಹರಿಶ. ೬-೬೦) ; ಪಡುವಲಿಳಿಯದ ರವಿಯ ಬಯ್ವುತ ನಡೆದನಾ ಕುರುರಾಯನು (ಕುಮಾವ್ಯಾ. ೧೯-೯೫). ೨. ಮೊರೆದಲಿಸು ; ಹೀಗಳೆ: ಪೊಯ್ವ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ಬಯ್ವ ಬರುದಿನ ಕಹಳೆ ತಿತ್ತಿರಿಗಳಲ್ಲಲ್ಲಿ (ಜಕವ. ದೇ. ೩೭-೨೨) ; ಪೊಱಪೊಱಲ ಬನದ ಕಟ್ಟಲೆ ಮಱಿದುಂಬಿಗಳಿಂದೆ ಬಯ್ದು ಪಾಡಿಸಿ ಸಾರ್ತಂದುಱದೊಡ್ಡಿ ದರ್ಕಬಿಂಬದ ತುಱುಗಲದೆನಿಸುವುದು ಕಾಂಚನಪ್ರಾಕಾರಂ (ಪುಷ್ಪ.ಪು. ೨-೬೬); ಕಿದಱಿದವು ನಿಸ್ಸಾಳ ಬಱಸಿಡಿಲದುಭುತಧ್ವನಿಯಲಿ ನಿರಂತರವೊದಱಿ ಬಯ್ದವು ಕಹಳೆ ಬಿರುದಾವಳಿಯಲತಿರಥರ (ಕುಮಾವ್ಯಾ. ೬೪-೦೩). ಬಯ್ಯು: ೧. ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯದಂತೆ ಮಾಡು (ಜಕವ. ೩೩) ; ಬಯ್ಯಲೞವೆ ದುರುಕ್ತಿ ಶರದಲಿ ಮೆಯ್ಯನೆಸುವೆಯೊ ಮೇಣು ಮಾರ್ಗಣೆ ಕಯ್ಯಲುಂಟೇ ನಿನಗೆ ಸಂಬಳವೇನು ಸಮರದಲಿ (ಕುಮಾವ್ಯಾ. ೦೫-೫೩). ಬೈ₂ : ೧. ಜಯಾವತಿ . . . ಸಿದ್ಧಾರ್ಥರಿಷಿಯರ ಮೇಗೆ ಕ್ರೋಧಮಂ ಭಾವಿಸಿ . . . ದಯೆಯಿಲ್ಲದೊಂ ನಿಷ್ಕರುಣೆ ಎಂದು ಬೈದ[ಪಾಠಾಂ. ಬಯ್ದ]ಳ್ (ಪಪ್ಪುರಾ. ೪೫-೦೨) ; ನನೆಯಂಬಂ ತಗೆದೆಚ್ಚನಂಗಜನ ತಪ್ಪೇನಾನುಮಂ ತೋಱೆ ಕಾಣ್ಬನಿತಂ ಮಾಡದೆ ಪದ್ಮಜಂ ಮದನನಂ ಬೈದಂತುಟೇ ಬೇಡವಿಱಿಬಿನದಂ (ಹರಿಶ. ೪-೬೪) ; ಕನಲಿ ವಿಧಿಯನು ಬೈವಳೋ ಕಂಬನಿಯ ಸುರಿವಳೊ ಶೋಕದಲಿ ನಿಜತನುವ ಬಿಡುವಳೊ ಕಾಂತೆಯೆಂತಿಹಳೆನುತ ನಡೆತಂದ (ಜಕವ. ೩-೨). ೨. ಬೈದವು ಬಹುವೊಗದೊಳು ಕಹಳೆಗಳೀರ್ಬೈದುಮೊಗದನ ಸೈನ್ಯದೊಳು (ಅಜಕವ. ೦೨-೬೦). ಬೈಯು : ೧. ಚಾಪಳೆಯರಾಲೋಚಿಸುತ ಕಡುಪಾಪಿಯಂಗಜನೆಂದು ಬೈಯು [ಪಾಠಾಂ. ಬಯ್ಯು]ತ ತೋಪಿನೆಡೆಗಿರದೈದಿ ತಂದರು ಸತಿಯ ಸಂತೈಸಿ (ಜಕವ. ೦-೪೦); ಯಾರೂ ಹುಡುಗರನ್ನು ಹೊಡೆಯಲಿಲ್ಲ ಬೈಯಲಿಲ್ಲ (ಕಳಕು. ೫೩).

ಬೈಬೈ (ದ್ವಿರುಕ್ತಿ) : ಅಗಿದು ಮೈದೆಗೆದು ಸಿಗ್ಗಾಗಿ ತಮ್ಮಿಂ ತಾವೆ ತೆಗಳಿ ಬೈಬೈದು ಬಾಯಳಿದು ಶೋಕಿಸಿ ತಾವೆ (ಜಾಸಂಕ. ೪-೨೫೬); ಸಾಲ ಹೆಗ್ಗಹಳೆಗಳು ರಿಪುಭೂಪಾಲಕರ ಬೈಬೈದು ಗಜಱಿದವಾಳುತನದಾಳಾಪ ಬೀಱಿತು ಬೆಱಗನಹಿತರಿಗೆ (ಕುಮಾವ್ಯಾ. ೬-೫೨). ಬೈದಾಟ=ಒಬ್ಬರನ್ನೊಬ್ಬರು ಬಯ್ಯುವಿಕೆ,—ತೆಗಳುವಿಕೆ : ನುಡಿ ನೋಟ ಬಾಯೂಟ ಬೈದಾಟ ಕಲಹ ಕಾಲ್ವಿಡಿತವಿಲ್ಲದ ಕಾಂತೆಯರಿಗೆ ಕಡುರಸಿಕರು ಲೇಸು ಮಾಡರೆಂದೊರ್ವಳು ನುಡಿದಳೆಳೆಯಳಿಗೊರ್ವಳಿಗೆ (ಕುರಾಪಾಂ. ೨೬-೯೨); ಪಾರಿವಗಳ ದನಿ ಕೊಳರ್ವಕ್ಕಿಯ ಲಲ್ಲೆ ಕೀರವಱಿಗಳ ಬೈದಾಟ (ಕಂಪಹ. ೦೦-೯೩). ಬೈದಾಡು = ಮೊರೆದಲಿಸು ; ಹೀಗಳೆ : ಸೇನಸು ಮಿಗಲೊಳಗೊಳಗೆ ಖತಿಯಲಿ ಕೆಣಕಿ ಬೈದಾಡಿದರು ಸಮರಾಂಗಣಭಯಂಕರ ಶಲ್ಯ ಭಾಸ್ಕರಸುತರು ರಥದೊಳಗೆ (ಕುಮಾವ್ಯಾ. ೯ ಸೂಚನೆ).

[ದೇ.॥ ತಮಿ. ವೈ ; ಕೊಡ. ಬಯ್‌₁]

ಬಯ್‌₃, ಬೈ₃, ಬೈಯು (ನಾ). ಸಂಜೆ; ಬೈಗು: (ಶ). ಬೈ₃: ಉಪಾಯವಿಲ್ಲದೆ ಹೊತ್ತು ಬೈಯಾಗುವಾಗ . . . ಹೊರಟೆ (ಶುಂಗಮು. ೪). ಬೈಯು : ಕೈಯಡಿಗಳ್ ಕಂಗಳ್‌ಕಡೆಯೊಯ್ಯನೆಯುಗುರ್ದಾಡೆ ಜಿಹ್ವೆ ಕೀಲ್ವಟ್ಟವೇಳುಂ ಬೈಯುದ ಕೆಂಪುಗಳಾಗಿರಲಯ್ಯಂ ತಾನೀವನತುಳಸುಖಸಂಪದಮಂ (ಪಾಲಾಸ್ಕ. ೦-೦೨-೩೪). 'ಬಯ್ಗು' ಪರಾ.

ಬಯ್ಪಕ=ಸಂಜೆಯವರೆಗೂ; ಸಾಯಂಕಾಲದ ತನಕ : (ಶ).

[ದೇ.॥ ತುಳು. ಬಯ್ಯ, ಬೈಯ, ಬೈಯ್ಯ]

ಬಯ (ನಾ). ಹೆದರಿಕೆ; ಭಯ ; ದಿಗಿಲು : "ಬಯಮೆನಲು ಭಯದೊಳಗಕ್ಕು" (ಕಶಪ. ೭೫); ಭೋಗಿ, ಬೋಗಿ, ಭಯ, ಬಯ (ಶಬ್ದಾನು. ೦೪೩ ಕ್ರ ಹೋ). 'ಬಯಂಗೊಳ್', 'ಬಯಂಬಡಿಸು' ಪರಾ. [<ಸಂ. ಭಯ]

ಬಯಂಗೊಳ್ (ಕ್ರಿ). ಹೆದರು ; ಭಯಪಡು ; ದಿಗಿಲುಗೊಳ್ಳು : ಇಂದ್ರಿಯಂಗಳ ದೆಸೆಗೆ ನಾಡೆಯುಂ ಬಯಂಗೊಂಡು (ಧರ್ಮಾಮೃ. ೩-೨೬).

[ಬಯ+ಕೊಳ್₁]

ಬಯಂಬಡಿಸು (ಕ್ರಿ). ಹೆದರುವಂತೆ ಮಾಡು ; ಭಯಪಡಿಸು ; ದಿಗಿಲುಗೊಳಿಸು : ತಿಬ್ಬವೊಗಂ ಬಯಂಬಡಿಪ ತೇಜಮನುಳ್ಳ ದೃಢಾಂಗವಾಯತಂ ಗಬ್ಬಿಗರಿಂ ನಿರೀಕ್ಷಿಸಲಗಮ್ಯಮದಾದುದದೊಂದುಮಾಯುಧಂ ನಿಬ್ಬರವಾದ ಚಂಡಮೆನಿಕುಂ ಧರೆಯೊಳ್ (ಪಾಲಾಸ್ಕ. ೦-೦೩-೪೬).

[ಬಯ + ಪಡಿಸು]

ಬಯಕಾಱ (ನಾ). ೧. ಸಂಗೀತಗಾರ : ಮಧ್ಯಮಪಾಂಡ್ಯವರಾಯ ಶಸ್ತ್ರಶಾಸ್ತ್ರಪ್ರವೀಣ ಬಯಕಾಱಕಾಮುಕ . . . ಶ್ರೀ ವೀರ ಅರಗದ ಹರಿಯಪ್ಪಒಡೆಯರು ಸುಖಸಂಕಥಾವಿನೋದದಲು ರಾಜ್ಯಂಗೆಯುತಿರ್ಪಲ್ಲಿ (ಎಕ. VI. ಕೊಪ್ಪ. ೫೬-೦೩; ಸು. 1380?); ಅಚ್ಯುತದೇವರಾಯ ಮಹಾರಾಯರ ಮನೆಯ ಬಯಕಾಱ ರಾಮಪ್ಪಯ್ಯನವರು ಬೂದಿಹಾಳ ಸೀಮೆಯ ಮದುವೆಯ ಸುಂಕವನು ಬಿಟ್ಟು ಕೊಟ್ಟ ಧರ್ಮಶಾಸನದ ಕ್ರಮವೆಂತೆನ್ನೆಂದರೆ (ಎಕ. XII. ಪಾವ. ೫-೬; 1535); ವರವೈಣಿಕ ಬಯಕಾಱರು ಹರುಷದೆ ಕೊರಳ ಬೆರಸನೊಂದುಗೂಡಿ . . . ಪಿರಿದಾಗಿ ಪಾಡುತೊಪ್ಪಿದರು (ಕಂಪಹ. ೬-೩೪). ೨. ವೈಣಿಕ : ತುಱುಗಿ ನಡೆವಾಗಳ್ ಸೋಲಿವಡೆದವುದೆಂಬ ಭೀತಿಯಿಂ ಪೆಗಲಿಂ ತೆಗೆದು ಬೀಣೆಯಂ ದೃಢಮುಷ್ಟಿಯಿಂ ನೆಗಪಿ ಪಿಡಿದಡಿಗೊಳ್ವ ಬಯಕಾಱರ ತೆರಳ್ಕೆಯಿಂ (ಅಜಕೀ. ೦೨-೦೦೩ ಪ); ಹರಿಸಂ ಮಿಗೆ ಚಿಕದೇವಂ ಸರಸಾಗ್ರಣಿ ವೀಣೆ ಬಾಜಿ ಪೋಜೆಗಳಂ ಮುಂಬರಿದು ಕುಡೆ ದೇವರಾಯನ ಚರಣಕೆ ಬಯಕಾಱರಂದು ಬಣ್ಣಿಸೆ ನೆಗಟ್ದರ್ (ಚಿಕ. ೪-೦೦೦). [←ತೆಲು. ಬಯಕಾಂಡು, ಬಯಕಾರಿ]

ಬಯಕೆ₁ 'ಬಯ್ಕೆ₁' ನೋ.

ಬಯಕೆ₂, ಬಯಕ್ಕೆ, ಬಯ್ಕೆ₂, ಬವಕೆ (ನಾ). ೧. ಇಚ್ಛೆ; ಆಸೆ; ಅಪೇಕ್ಷೆ: "ಇಚ್ಛೆ ಕಾಂಕ್ಷೆ ಸ್ಪೃಹೆಯು ಆಶಂಸಾ ರುಚಿ ಕಾಮ ವಾಂಛೆ ಈಪ್ಸಿತಮೆನಲು ಬಯಕೆ" (ಕಂಗರಾ. ೦೨೯-೦೦) ; ನಿಯಮಿತಾಕ್ಷರದಿಂದುಪಮಾಪ್ರತಿಜ್ಞೆಯನೆತಿರ್ದುವುದಟ್ಟಿಯನಿರ್ದುಮಾ ಬಯಕೆ ತೀರದ ಕಾರಣದಿಂ ವಿಪರ್ಯಯವಿದಭ್ಯುಪಮೋಕ್ತ್ಯುಪದೂಷಣಂ (ಕಾರಾ. ೦-೦೯೫) ; ಆತನಂ ಸಾಮದಿಂದಮುಳವಡಿಸಿ ನೋಡುವೆಂ ಸಾಮದೊಳಂ ಪದವಡದೊಡೆ ಬಟಿಸಿರ್ದುಕ್ಕೆದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ (ಅಜಪು. ೦೪-೯೩); ಅಂತೆ ನಾವಾದೊಡಂ ಜಾತಿಜೋಗಿನಿಯಲ್ಲು: ಬಗೆಯೊಂದು ಬಯಕೆಯಂ ಪಡೆಯೆನೋಂತಿಹೆನಿಂತು (ಪಕ್ಷ್ಯಾಂಗ. ೩೬-೯೬೫). ೨. ಬಸಿರಿಯರಿಗೆ ಉಂಟಾಗುವ ಆಸೆ,—ಹಂಬಲ : ನೀನುಂ ಮನೆಯಿಂದಂ ಪೊಱಮಟ್ಟು ಪೋಗಿ . . . ಕೆಲವುದಿವಸದಿಂ ಸತ್ತು ಶ್ರೀಮತಿಯ ಗರ್ಭದೊಳ್ ನೆಲೆಸಿರೆಯಾಕೆಗೆಲ್ಲಾಜೀವಂಗಳಂ ದಯೆಗೆಯ್ವ ಬಯಕೆಯಾದುದು (ಪಪ್ಪುರಾ. ೦೫೦-೦೫); ಗರ್ಭಿಣಿಗಳಪ್ಪ ಕಾಮಿನಿಯರ್ ಬಯಸುವ ಬಯಕೆ ದೋಹಲಂ ದೌಹೃದಮುಮಂ (ಪದ್ಮನಕೋ. ೫೪-೦೪); ಬಳಿಕ ಬಯಕೆ ಪೆರ್ಚಿದುದು . . . ನಳಿನದಳಾಕ್ಷ ನರಸಿಂಹನ ಮೂರುತಿ ಬಳೆಯಲಂಗನೆಯ ಗರ್ಭದಲಿ (ಕಂಪಹ. ೪-೬೦). ೩. (ಅಲಂ) ಸ್ತ್ರೀಯರಿಗೆ ಸೀಮಂತ, ಬಾಣಂತನ ಮುಂತಾದ ಸಂದರ್ಭಗಳಲ್ಲಿ ವಿಶೇಷವಾಗಿ ಕಣ್ಣಿಗೆ ಹಚ್ಚುವ ಕಾಡಿಗೆ,—ಕಪ್ಪು : "ಅಂಜನಮೆ ಬಯಕೆ" (ಕರ್ಣಾ. ೦೫೩).

**ಬಯಕ್ಕೆ :** ೧. ನಿನ್ನ ಕೊಟ್ಟುದನೆ ಪಸಾದಮೆಂದು ಪೊಡೆವಟ್ಟು ಮನೋಮುದದಿಂದೆ ಕೊಂಡು ಬಾಳ್ಬುದುವೆ ಬಯಕ್ಕೆ ಮುಂ ನಿನಗದಂ ಕಿಡಿಪಂದಿಲೆ ಕರ್ಣ ಕೇಳುವುದುದು ನಿನಗಾ ವೃಕೋದರನ ಕಾಯ್ಪುನೆ ಪೊತ್ತಿಸಿದೆನ್ನ ಕಾಳೆಗಂ (ಪಂಪಭಾ. ೧೩-೬); ಭವವಾರ್ಧಿ ಪ್ರತಿಮುಗ್ನ ಜೀವನಿವಹಂ . . . ಭವಸಂತಾನಂಗಳೊಳ್ ಕೂರ್ಪ ಕೂಡುವ ತಟ್ಟಿರ್ಪ ಬಯಕ್ಕೆಯಿಂ ಬಯಸುಗುಂ (ಶಾಂತಿಪು. ೯-೭). ೨. ಜಿನಮಜ್ಜನಂಗಳಂ ಮಾಟ್ಟ ಜಿನೇಂದ್ರಪೂಜೆಯನೆ ಮಾಟ್ಟ . . . ಚತುರ್ವಿಧಮಪ್ಪ ದಾನಮಂ ಮಾಟ್ಟ ಬಯಕ್ಕೆ[ಪಾಠಾಂ. ಯಂಕೆ]ಯಾಯ್ತು ಜಿನದತ್ತೆಗೆ ಭವ್ಯನ ಮೇರು ಗರ್ಭದೊಳ್ (ಅರ್ಕಸಾ. ೨-೨೫); ❡ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. **ಬಯ್ಕೆ₂ :** ೧. ಚದುರರ ಮೆಚ್ಚು ಭಾವುಕರ ಕೈಪಿಡಿ ಜಾಣರ ಬಯ್ಕೆ ಸತ್ಕಲಾವಿದರ ವಿಲಾಸಮುಕ್ಕರಿಗರಾಭರಣ . . . ತಾನೆನಿಪ್ಪ ಸಮುದ್ರದೊಳೆ ಬಣ್ಣಿಕುಂ ಧರಣಿ ಸತ್ಕವಿಮಲ್ಲನ ಕಾವ್ಯ ಸಾರಮಂ (ಸೂಕ್ತಿಸು. ೧-೨೫) ; ಕೇಳದಿರು ; ತಿಳಿಯಮೇಟ್ಕಿಂಬ ಬಯ್ಕೆಯುಂ ಬೇಡ (ಬಸ್ವಪು. ೨೬-೩೬೬). ೨. ಒಯ್ಯೋಳರ ಹಾದಿ ಗಳೊಂದೆಸೆಯೊಳು ಬಯ್ಕೆಯು ಸತಿಯರ ಸಾಲೊಂದೆಸೆಯೊಳು (ತಿರುಪಾ. ದೇ. ೨೨೨-೨೦). **ಬವಕೆ :** ೨. ಒಡಲೊಳ್ ಶಿಶುವುದಯಿಸಿ ಬಳೆಯುತ್ತಿರಲೊಡವಾವ್ರುದ ಪಣ್ಣುಣ್ಪ ಬವಕೆ[ಪಾಠಾಂ. ಸ] ತನಗಡಸಿತು (ಶಬರಶಾ. ೨-೩೦).

ಬಯಕೆ ಮಾಡು = (ಚೊಚ್ಚಲುಬಸುರಿಗೆ) ಸೀಮಂತವನ್ನು ಮಾಡು; ಬಯಕೆಯನ್ನು ಪೂರೈಸು : ನಿನಗೆ ಮದುವೆ ಮಾಡಿದೆವು, ಅವಳಿಗೆ ಬಯಕೆ (ಸೀಮಂತ) ಮಾಡಿದೆವು (ಸೋಲು. ೦೦). **ಬೈಕೆಗಪ್ಪು** = ಸ್ತ್ರೀಯರಿಗೆ ಸೀಮಂತ, ಬಾಣಂತನ ಮುಂತಾದ ಸಂದರ್ಭಗಳಲ್ಲಿ ವಿಶೇಷವಾಗಿ ಕಣ್ಣಿಗೆ ಹಚ್ಚುವ ಕಾಡಿಗೆ,—ಕಪ್ಪು : "ಅಂಜನಮೆನೆ ಬೈಕೆಗಪ್ಪು" (ಕಕುಶ. ೬೩).

[< ಬಯಸು₁ + —ಕೆ. / ತಮಿ. ವಯುಮ್, ವಯಾವು ; ತುಳು. ಬಯಕೆ, ಬೈಕೆ; ತೆಲು. ಬಯಂಕ, ಬಯ್ಯಂಕ]

**ಬಯಕೆಗವಿ** (ನಾ). ಮಹತ್ತ್ವಾಕಾಂಕ್ಷೆಯನ್ನು ಹೊಂದಿರುವ ಕವಿ : ಅಹಂಕಾರದೊಳ್ ಬಾತು ಬಲ್ಮೆಗೆ ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್ (ಅಂಬಾವ. ೧-೨೪). [ಬಯಕ್ಕೆ₂ + ಕವಿ]

**ಬಯಕೆವಟ್ಟಲ್** (ನಾ). ಬಯಸಿದುದನ್ನು ಕೊಡುವ ಬಟ್ಟಲು ; ಅಕ್ಷಯಪಾತ್ರೆ : ಪೊಡವಿ ಬಯಕೆವಟ್ಟಲ್ ; ಮಾರಿಯ ಕೋಡಿವಲ್ಲಂ ಮುಜೀವ, ಭೈರವನ ನಿಡುಜಡೆಯಂ ಪಿಡಿವ, ಕಾಳರಕ್ಕಸಿಯ ಕೂರ್ವಾಳಂ ಸೆಳೆವ ಪಡೆವಳರೊಳರ್ . . . ಮೇಣೇತಲು ಚಿಂತೆ (ರಾಜಶೇಖ. ೦೨-೫). [ಬಯಕ್ಕೆ₂ + ಬಟ್ಟಲ್]

**ಬಯಕೆವೆಣ್** (ನಾ). ಬಯಕೆಯುಂಟಾದ ಗರ್ಭಿಣಿಹೆಂಗಸು : ಕಂಡಕಂಡರೆಲ್ಲಂ . . . ಬಯಕೆವೆಂಡಿರಂತಾಗುಟಿತ್ತುಂ . . . ಪಗರಣಮಂ ನೋಡುವರಂತೆ ನಗುತ್ತುಮಿಂತೆಂದರ್ (ಧರ್ಮಾಮೃ. ೪-೬೬).

[ ಬಯಕ್ಕೆ₂ + ಪೆಣ್ ]

**ಬಯಕ್ಕೆ** 'ಬಯಕ್ಕೆ₂' ನೋ.

**ಬಯಗು** (ಕ್ರಿ). = ಬಯಸು (?) : ಶ್ರೀಕೇಸಿಗ × × × ತಲೆನೆಜಿಯಲು ಕಟ್ಟಿನ್ ಕಟ್ಟುವುದರ್ಕ್ಕೆ ಕೊಟ್ಟ ಸ್ತಿತಿಕ್ರಮಮೆನ್ತೆಪೆನ್ನೊಡೆ ಒನ್ದರಣೆಯ ನೀರ ಬಯಗಿದ ಮರಿಸ ಮೆತ್ತೊನ್ದಿ ಎರಡನೆಯ ಮರಿಷಮೆಟಳವಿ ಮೂಜನೆಯ ಮರಿಷದನ್ದಗೆ ಅಯ್ದುಳವಿ ಎಲ್ಲಾ ಕಾಲಕ್ಕಂ ಎಲ್ಲಿಟ್ಟುಬಲು ಸಲ್ಗುಂ (ಎಕ. III, ಶ್ರೀರಂಗ. ೦೧೯-೦೬ ; 904 ?).

[❡ ಇದು 'ಬಯಸು' ಎಂಬುದರ ಅಪಲಿಖಿತವೆ ? / ತುಳು. ಬಯಕು]

ಬಯನಿ 'ಬಯಿನೆ' ನೋ.

**ಬಯಲ್** 'ವಯಲ್' ನೋ.

**ಬಯಲಾಟ.** ಬೈಲಾಟ (ನಾ). ಮೈದಾನದಲ್ಲಿ ಅಟ್ಟಣೆ ಹಾಕಿ ಆಡುವ, ಯಕ್ಷಗಾನದ ಒಂದು ಪ್ರಕಾರ ; ಜಾನಪದ ನಾಟಕ ಪ್ರಕಾರಗಳಲ್ಲಿ ಒಂದು ಬಗೆ : ಈ ನಾಟಕದಲ್ಲಿ ಅಂಕಗಳ ವಿಭಾಗವಿಲ್ಲ . . . ಆಕಾಶದ ಕೆಳಗೆ ಬಯಲಾಟ (ಕಟಪಾ. ೦೬೪) ; ಬಯಲಾಟದ ವೇಷ ಕುಣಿದು ಬೆಳಗು ಬರಲು ದಣಿದವು (ಪಂಚಮು. ೨೪-೨೩). **ಬೈಲಾಟ :** ಹಾವಭಾವ ತುಂಬಿದ ನಮ್ಮ ಹಳ್ಳಿಗರ ಕುಣಿತಗಳು ಭರತಮುನಿಯ ನೃತ್ಯಗಳನ್ನು ಅನೇಕ ಸಂದರ್ಭಗಳಲ್ಲಿ ಹೋಲಬಹುದು . . . ಉತ್ತರ ಕರ್ನಾಟಕದಲ್ಲಿ 'ಮೂಡಲಪಾಯ' ಬೈಲಾಟಗಳಲ್ಲಿಯ ಕುಣಿತಗಳೇ ಇದಕ್ಕೆ ಬಲವಾದ ಸಾಕ್ಷಿ (ಕಸ್ತೂಪ. ೩೪) ; ಬೈಲಾಟದಾಗಿನ ಸೋಗು ಮಾತಾಡಿ ದಾಂಗ ಮಾತಾಡತೀಯಲ್ಲೋ ಮಾವಾ ! (ಹುಚ್ಚುಹ. ೯೩).

[ಬಯಲು (<ವಯಲ್) + ಆಟ]

**ಬಯಲಿಗ** (ನಾ). ಶೂನ್ಯದಲ್ಲಿ ಒಂದಾಗುವವನು, — ಐಕ್ಯ ಹೊಂದುವವನು : ಸಚ್ಚಿದಾನಂದ ನಿತ್ಯಪರಿಪೂರ್ಣವಪ್ಪ ನಿಃಕಲಲಿಂಗವು ಧ್ಯಾನಪೂಜೆಗಳಲ್ಲದೆ ನಿರವಯದಲ್ಲಿ ಬಯಲಿಗನಾಗಿ (ಷಟ್ಸ್ಥಸಂ. ೦-೨೨) ; ಬನ್ನಬಡದನ ಬಯಲಿಗನನೆ ಮಿಾರ್ವರ್ಗೆಯುಂ ಕೆನ್ನಮಿಕ್ಕದನ ಸತತಂ . . . ನೋಡಿಯಾಡಿಸುತವಗೆ ಚಿನ್ನ ನವರನ್ನದೊಡಿಗೆಯನಿಕ್ಕಿ ಕಣ್ದುಂಬಿ ನೋಡ ಬೇಕೆಲೆ ಪ್ರಿಯನೆ (ಶ್ರೀಕೃಷ್ಣ. ೩-೦೨೬).

[ಬಯಲ್ (<ವಯಲ್) + —ಇಗ]

**ಬಯಲು** 'ವಯಲ್' ನೋ.

**ಬಯಲುಗ** (ನಾ). [ಬೌದ್ಧ] ಶೂನ್ಯವಾದಿ : ತಮ್ಮ ಯೋಗಗ್ರಂಥಾರಂಭದ ಗುರುಮಣಿಯದ ಮೂಢಂ ಬಯಲುಗನಪ್ಪ ಸನತ್ಕುಮಾರಂ ಶೂನ್ಯಹೃದ ಯಾಂಧಂ (ಪಾಷಂಡ. ೩೩ ಪ. ಕಥಾಗರ್ಭ ಸಂ೦); ಕೀಟದಿರು ಚಾರ್ವಾಕ . . . ಮಿಾಟದಿರು ಪ್ರಭಾಕರಿಗ ಮುಖದೋಟದಿರು ವೇದಾಂತಿ ಬಯಲುಗ ಹೋರದಿರು (ಪಾಷಂಡ. ೯-೦೦೯).

[ ಬಯಲು(<ವಯಲ್) + —ಗ₂ ]

**ಬಯಲುಗೈ** (ಕ್ರಿ). ಪ್ರಕಟಗೊಳಿಸು; ಹೊರಗೆಡಹು : ಸಿಡಿಲ ಪಳಗಿಸು ಪರಿವು ರವಿಯ ಸರೆಹಿಡಿವರಿವು . . . ಬಾನ ಜಾಲಾಡುತ್ತ ತಾರೆಗಳನಳೆವರಿವು ಸೂಕ್ಷ್ಮಾತಿಸೂಕ್ಷ್ಮವನು ಬಯಲುಗೈವರಿವು (ಹುಲಿಕಾ. ೪೬-೪).

[ಬಯಲು (<ವಯಲ್) + ಗೈ (<ಕೆಯ್₁)]

**ಬಯಲುಗೊಳಿಸು** 'ಬಯಲ್ಗೊಳಿಸು' ನೋ.

**ಬಯಲುದೊರೆ** 'ಬಯಲ್ದೊಱೆ' ನೋ.

**ಬಯಲುದೊಱೆ** 'ಬಯಲ್ದೊಱೆ' ನೋ.

**ಬಯಲುನಾಡು** 'ಬಯಲ್ನಾಡು' ನೋ.

**ಬಯಲುಬಂಡಿ** (ನಾ). ಕಮಾನಿಲ್ಲದ ಬಂಡಿ; ಕೊಲ್ಲಾರಿಯಿಲ್ಲದ ಚಕ್ಕಡಿ: ಏಳುಹರದಾರಿ ದೂರ ದಿಬ್ಬಣವೆಲ್ಲ ಎತ್ತಿನ ಬಂಡಿಯಲ್ಲೇ ಹೊರಟಿತ್ತು. ಕೆಲವು ಸವಾರಿ ಬಂಡಿಗಳು, ಇನ್ನು ಕೆಲವು ಬಯಲುಬಂಡಿಗಳು (ಸ್ವಚಿಅ. ೨೨೬). [ಬಯಲು (<ವಯಲ್) + ಬಂಡಿ₁]

**ಬಯಲುರಂಗಭೂಮಿ** (ನಾ). ಮೈದಾನದ ಆವರಣದಲ್ಲಿ ಚಾವಣಿ ಯಿಲ್ಲದ, ರಂಗವು ಮಧ್ಯದಲ್ಲಿಯೂ ಪೀಠಪಂಕ್ತಿಗಳು ಸುತ್ತಲೂ ಇರುವಂಥ ರಂಗಭೂಮಿ; ❡ "ಇಂತಹ ವೃತ್ತಾಕಾರವಾದ ರಂಗ ಭೂಮಿಗಳು ಗ್ರೀಸ್ ಮತ್ತು ಇಟಲಿ ದೇಶಗಳಲ್ಲಿ ಅನೇಕ ಕಡೆಗಳಲ್ಲಿ ಇದ್ದುವು. ಈಗ ನಮ್ಮ ದೇಶದಲ್ಲಿ ಪಂದ್ಯಪ್ರದರ್ಶನಗಳನ್ನು ನಡೆ ಸಲು ಕಟ್ಟಿಸುವ ಸ್ಟೇಡಿಯಂಗಳನ್ನು ಇದೇ ಮಾದರಿಯಲ್ಲಿ ಕಟ್ಟಿಸು ತ್ತಾರೆ" : ಊರಿನ ಒಂದು ಮೂಲೆಯಲ್ಲಿ ಬಯಲುರಂಗಭೂಮಿ ಇತ್ತು (ಕಕಶ. ೩-೦೯೯). [ಬಯಲು (<ವಯಲ್) + ರಂಗಭೂಮಿ]

**ಬಯಲುಸೀಮೆ** (ನಾ). ಮೈದಾನದಿಂದ ಕೂಡಿದ ಪ್ರದೇಶ; ಬಯಲು ಪ್ರದೇಶ : ಕಳಸಾಪುರದ ಮಲೆನಾಡು ಬಯಲುಸೀಮೆ ಸಂಧಿಸುವ ಜಾಗದಲ್ಲಿದೆ (ಕಳಹು. ೯೨); ಬಯಲುಸೀಮೆಯವರಾದ ನಮಗೆ ರೊಟ್ಟಿಯಿಲ್ಲದಿದ್ದರೆ ಹೊಟ್ಟೆಯೇ ತುಂಬದು (ಬಂಗಾರ. ೯೦). 'ಗಿಡಸೀಮೆ' ಪರಾ.
[ಬಯಲು (<ವಯಲ್) + ಸೀಮೆ]

**ಬಯಲೊಲ್ಮೆ** (ನಾ). ಕಪಟಪ್ರೇಮ; ಸೋಗಿನ ಪ್ರೀತಿ : ಕೊಟಚಾಟ ಹೋರಟೆ ಕಲಹ ಬಱುಗಾತ್ರ ಬಯಲೊಲ್ಮೆಗಳ ಮಾಡೆ ಬೆಲೆವೆಣ್ಗೆ ತೆಱುವರೆ ಧನವ ಬಲ್ಲವರು (ಕುರಾಸಾಂ. ೨೮-೬೯). [ಬಯಲ್ (<ವಯಲ್) + ಒಲ್ಮೆ]

**ಬಯಲ್ಕಡೆ. ಬೈಲುಕಡೆ** (ನಾ). (ಆಲಂ) ಶೌಚ ಮುಂತಾದ ಪ್ರಾತರ್ವಿಧಿ; ಮಲವಿಸರ್ಜನೆ; ಬಹಿರ್ದೇಶ: ಮೊಲ ಬರುವಾಗ ನಾಯಿ ಬಯಲ್ಕಡೆಗೆ ಕೂತುಕೊಂಡಿತು (ಗಾದೆ). **ಬೈಲುಕಡೆ** : ಬೈಲುಕಡೆ ಹೋಗೋದು ಹಿಡಕೊಂಡು ಹೆಂಡರು ಮಕ್ಕಳು ಮನೀಮಾರು ಎಲ್ಲಾ ಆ ಜನಕದಾಸರು ಹೇಳಿಧಾಂಗ ಒಂದು ಗೇಣು ಹೊಟ್ಟೆ ದಶಿಂದ ನೋಡಪಾ (ಶಿರುಗು. ೪೦).
[ಬಯಲ್ (< ವಯಲ್) + ಕಡೆ$_3$]

**ಬಯಲ್ಗಾಳಿ** (ನಾ). (ಮೈದಾನದ ಕಡೆಯಿಂದ) ತಡೆಯಿಲ್ಲದೆ ಬೀಸುವ ಗಾಳಿ : ಇಂದವನ್, ನಾಳೆ ನಾನ್ ಏನ್ ಪಾಡೊ ಆಳ ಬಾಟುಗ್; ಬೀಸುವ ಬಯಲ್ಗಾಳಿ, ಪರಿದಡಗುವ ನೆಟಿಪ್ (ಅಶ್ವತ್ಥಾ. ೬-೧೧೦).
[ಬಯಲ್ (<ವಯಲ್) + ಗಾಳಿ$_1$]

**ಬಯಲ್ಗೆಡೆ** (ಕ್ರಿ). (ಆಲಂ) ವ್ಯರ್ಥವಾದುದೆಂದು ಹೀನಾಯವಾಗಿ ನುಡಿ,– ಅವಮಾನಿಸು : ಪರತತ್ತ್ವವೆಂದೇಕ ವರರುದ್ರನೆಂದೊರೆದ ಪೊರೆದಥರ್ವದ ಶಿರದ ಸತ್ಕಾರ್ಥಮಂ ಬಱಿ ಬಯಲ್ಗೆಡೆದು ನೆಱೆ ಉಱಿವೊಳ್ವ ಬೌದ್ಧವ್ಯಾಧರದೆತ್ತಲಱಗು ಶೂನ್ಯಾತ್ಮರಯ್ಯೋ (ಸಾಮಂಶ. ೨-೧೬೮).
[ಬಯಲ್ (<ವಯಲ್) + ಕೆಡೆ$_2$]

**ಬಯಲ್ಗೊಳಿಸು. ಬಯಲುಗೊಳಿಸು** (ಕ್ರಿ). ಸಾವಿಗೆ ಒಳಗು ಮಾಡು,– ಗುರಿಮಾಡು; ಸಾವಿಗೀಡುಮಾಡು : ದಕ್ಷಯಾಗದಿ ವಪುವ ಬಯಲ್ಗೊಳಿಸಿ ಮೇನಕೆಯ ಕುಕ್ಷಿಯಿಂ ಸಂಜನಿಸಿ ಬೆಳೆಯೆ (ನವಮೋ. ೬-೦೮). **ಬಯಲುಗೊಳಿಸು** : ತ್ರಿಜಗದಾಂಬೆ ಗೌರಾಂಬಿಕೆಯು ದಕ್ಷಯಾಗದಿ ತನುವಂ ಬಯಲುಗೊಳಿಸಲು (ನವಮೋ. ೬-೦೭).
[ಬಯಲ್ (<ವಯಲ್) + ಕೊಳ್$_1$ + –ಇಸು$_3$]

**ಬಯಲ್ಚು** (ಕ್ರಿ). ಪ್ರಕಟಮಾಡು ; ತೋರಿಸು ; ಹೊರಗೆಡಹು : ರಾಘವಾಸ್ತ್ರಜ್ಯೋತಿ ತನ್ನ ಪಕ್ಷಕೆ ತಾನೆ ವಿದ್ರೋಹಿಯಾಮದೆನೆ ವಾನರವ್ಯೂಹಸ್ಥಿತಿಯನಂತೆ ದಶರಥನ ಸುತಸರ್ಕದಾಣವುಂ ತೋರ್ದುದು ಬಯಲ್ಚಿ ಆ ತಾರಾಕ್ಷಿವಲ್ಲಭಗೆ (ಶ್ರೀರಾಪಾ. ೬೩೭-೦೯೮).
[ಬಯಲ್ (<ವಯಲ್) + –ಚು$_1$]

**ಬಯಲ್ದಾವರೆ** (ನಾ). ನೀರಿನ ಆಶ್ರಯವಿಲ್ಲದೆ ಬೆಳೆಯುವ ತಾವರೆ; ನೆಲದಾವರೆ : ಕಿರಣಂಗಳೆ ಕಾಪುಗಳೆನೆ ಹರಿವಸ್ತ್ರಂಗಳೆ ಪಸುರ್ತ ಪಸುರೆಲೆಯೆನೆ ತೋರ್ಪರುಣದಿನಮಣಿ ಬಯಲ್ದಾವರೆಯನೆ ಪೋಲ್ತಿರ್ದನಪರಗಿರಿಪರಶಿರದೊಳ್ (ಕಾವ್ಯಸಾ. ೮೮೦ ಉದ್ಧೃತ); ಅರೆದುಱುಗಿರ್ದ ಬಯಲ್ದಾವರೆಯೊಲೆಗೊಡೆಯುಡುವಿನಲ್ಲಿ ಸುಖದಿಂ ಕಣ್ಗೆಯ್ದಿರೆ ಹಂಸಮಿಥುನಮಂ ನಿಜಚರಣಾಬ್ಜದೆ ನೂಂಕೆ ನೃಪಸುತಂ ಕುಳ್ಳಿರ್ದಂ (ಕಾದಂಬ. ೨೮೨); ಅರಮನೆಯೊಳತ್ತಲಿತ್ತಂ ಚರಿಯಿಪ ದೇವಿಯರ ಪದತಳಾಂಶು ಬಯಲ್ದಾವರೆಯೆಸಱನೆಸಗಿದುವು ನೂಪುರತತಿ ಬೀಱಿದುವು ಮದನಮಂತ್ರೋರ್ಮಿಗಳಂ (ಕೃಷ್ಣಕೃ. ೯-೬೨).
[ಬಯಲ್ (<ವಯಲ್) + ತಾವರೆ (<ತಾಮರೆ)]

**ಬಯಲ್ದೊರೆ** 'ಬಯಲ್ದೊಱೆ' ನೋ.

**ಬಯಲ್ದೊಱೆ$^3$, ಬಯಲುದೊರೆ. ಬಯಲುದೊಱೆ$^3$. ಬಯಲ್ದೊರೆ**(ನಾ). ೧. ಮೈದಾನದಲ್ಲಿ ಹರಿಯುವ ನದಿ.–ಹೊಳೆ : ಕಣ್ಣನೀರ್ಗಳ ಪೊನಲ್ ಕರೆಗಣ್ಮಿ ಕಪೋಲದೊಳ್ ಬಯಲ್ದೊಱೆಯನೊಡರ್ಚೆ ಚಂದ್ರನಖಿ ಶೋಕರಸಾಕುಳಚಿತ್ತೆಯಾಗಿ ಮೆಯ್ಯಱಿಯಳೆ ಚಿತ್ರಮಲ್ತು (ಶಂರಾಪಾ. ೯-೩೦); ವಸುದೇವನೆಂತಾನುಮಾ ರಾಕ್ಷಸರಕ್ಷಿತಪ್ರಸೂತಿಕಾನಿಳಯದಿಂ ತಳರ್ದು . . . ಮಧುರಾಪುರಮಂ ಪೊಱಮಟ್ಟು ಬಯಲ್ದೊಱೆವರಿವ ಬಟ್ಟೆಯೊಳುದ್ದೇಶಕ್ಕೆ ಬರ್ಪಲ್ಲಿ (ಜಗಂ. ೩-೮೮) : ಮಿಱುಮಿಱನಾದ ಮೈಹೊಳಹಿಂದ ತೆರೆಗಟ್ಟಿ ನಿಱಿದೇಳ್ವ ಹೊಂಗಾಸೆಯಿಂದ ಕುಱುಕುಱುಮೆಟ್ಟಿರಂಗದೊಳು ತಂಪಿನ ಬಯಲ್ದೊಱೆ ಹೊಳೆವಂತೆ ಹೊಳೆವರು (ಹರಿ. ೦೩-೧೦೦). ೨. ಬಿಸಿಲಿನಲ್ಲಿ, ನೀರಿಲ್ಲದಿದ್ದರೂ ನೀರಿರುವಂತೆ ಕಾಣುವ ಭ್ರಮೆಯ ನೋಟ ; ಬಿಸಿಲುಗುದುರೆ ; ಮರೀಚಿಕಾಜಲ : "ಬಯಲ್ದೊಱೆ ಬಿಸಿಲ್ಗುದುರೆಯೆನಲುಂ ಗಡ ಮರೀಚಿಕಾಜಳ" (ಕಬ್ಬಿಗ. ೦೦) ; ಸಿರಿ ಸುರಚಾಪದಂತೆ ಪೊಸಜವ್ವನಮಿದ್ದಿಲ ಬೂದಿಯಂತೆ . . . ಪೆಂಡಿರ ಸುಖಮುಣ್ಮಿ ಪೊಣ್ಮುವ ಬಯಲ್ದೊಱೆಯಂತೆ . . . ಕಿಡಲಲ್ಲದೆ ತಾಂ ಸ್ಥಿರಮಾಗಲಾರ್ಕುಮೇ (ಧರ್ಮಾಮೃ. ೫-೧೮); ದೇವಾ ಬಯಲ್ದೊಱೆಯ ನೀಸುತಿರ್ದಂ ಗುರುವೆ ದೇವಾ ಕನಿಷ್ಠರೊಡನೊದಱುತಿರ್ದಂ ಪ್ರಭುವೆ (ವಾಗೀಶ. ದೇ. ೨೬೦-೨೦) : ವನಜಂತುಗಳ್ ಬಯಲ್ದೊಱೆಗೆ ಮರುಳ್ಗೊಂಡುವು (ರಾಮಾಶ್ವ. ೫೨-೫). **ಬಯಲುದೊರೆ** : ೨. ಪ್ರೇಮಸಾಗರದಮೃತ ಬಯಲುದೊರೆಯಾಯ್ತೆ ? (ಇಂಗೀತ. ೬೩-೨೦). **ಬಯಲುದೊಱೆ$^3$** : ೨. ಕಯ್ಯ ನೀರಂ ಚೆಲ್ಲಿ ಬಯಲುದೊಱೆಗೆಸಲೆ ಪರಿವನೆಂತಂತೆ ಹುಲುಮೃಗದ ಸತ್ತ್ವದಿಂ ಬಲುಸಿಂಹದೊಳ್ ಕದನಮಂ ಮಾಡಿಕೊಂಡವನ ನೆಲೆ ನಿನ್ನೊಳಾದುದು (ಲಶಿಶಂ. ೦೮-೬). **ಬಯಲ್ದೊರೆ**: "ಬಯಲ್ದೊರೆಯೆನಲ್ ಮರು ಮರೀಚಿಕೆಯನಾಮಂ" (ಕಹಿ. ೬೩).
[ಬಯಲ್ (< ವಯಲ್) + ತೊಱೆ$_2$]

**ಬಯಲ್ನಾಡು. ಬಯಲುನಾಡು** (ನಾ). ಗುಡ್ಡ, ಬೆಟ್ಟ ಮುಂತಾದುವುಗಳಿಲ್ಲದೆ, ಮೈದಾನಗಳಿಂದ ಕೂಡಿದ ನಾಡು ; ಬಯಲುಸೀಮೆ : ಬಯಲ್ನಾಡಿನೊಳ್ವಿಗ್ರಹವಾದ ದಿವಸಂ ಬಯಲ್ನಾಡಂ ಬನ್ದು ಕೊತ್ತಮಙ್ಗಲಮನಿಱಿದು ತುಱುವಂ ಕೊಣ್ಡು ಪೋಗುತ್ತಿರೆ (ಎಕ. IV. ಹೆಗ್ಗಡ. ೦೦೩-೬ ; ಸು. 910). **ಬಯಲುನಾಡು** : ನೀಳಗಿರ ಹಡಿಯ ಘಟ್ಟಂ ಯೇಳುಂ ಮಲೆ ಕಂಚಿ ತುಳುವ ರಾಜೇಂದ್ರಪುರಂ ಕೋಳಾಲ ಬಯಲುನಾಡುಮನಾಳ್ವಪದೆ ಕೊಂಡ ವಿಷ್ಣುವರ್ಧನದೇವಂ (ಎಕ. VII. ಶಿವಮೊ. ೪೦-೫೨ ; 1181). [ಬಯಲ್ (<ವಯಲ್) + ನಾಡು]

**ಬಯಲ್ನುಡಿ** (ನಾ). ಸಂಳ್ಳುನುಡಿ ; ವ್ಯರ್ಥಾಲಾಪ : ಆದೊಡೆ ಬಯಲ್ನುಡಿಯೇಂದಾನಿದನಿನ್ನೊರೆಯೆಂ (ಅದ್ಭುತ. ೪೦-೦೨).
[ಬಯಲ್ (<ವಯಲ್) + ನುಡಿ$_1$]

**ಬಯಲ್ಪಡಿಸು** (ಕ್ರಿ). ಪ್ರಕಟಗೊಳಿಸು, ಹೊರಗೆಡಹು : ಅಮ್ಮ ಅಪಕಾರವನ್ನು ಮಾಡಿದರೂ ಅದನ್ನು ಬಯಲ್ಪಡಿಸಿದರೆ ಕೆಟ್ಟ ಹೆಸರು ಬಾರದಿರದೆಂದೆಣಿಸಿ ಬಿಟ್ಟಿಟ್ಟೆನು (ಲಕ್ಷ್ಮೀಶ್ರ ೦೦೬).
[ಬಯಲ್ (< ವಯಲ್) + ಪಡಿಸು]

**ಬಯಲ್ಬೀೞ್** (ಕ್ರಿ). ನೆಲವು ಗೋಚರಿಸು ; ತಳ ಕಾಣು : ಆ ಕುಮಾರಂ ಬಿಟ್ಟಿ ಭರದಿಂದೆ ವಾರಿಯೊರಟಿ್ದಸೆಗಂ ಪಚ್ಚು ಸೂಸೆ ಕೊಳದೊಳಗೆ ಬಯಲ್ಬಿೞ್ದುದು ತದ್ರುಭಸಕುರ್ಚಿಟ್ದು ಕಡಂಗಿದುವು ಜಳಚರಪ್ರಕರಂಗಳ್ (ಚಂದ್ರಕೃ. ೫-೪೩). [ಬಯಲ್ (< ವಯಲ್) + ಬೀೞ್]

**ಬಯಲ್ವುಗು** (ಕ್ರಿ) ಕಾಣದಾಗು ; ಇಲ್ಲವಾಗು : ಇಂತಾಕೆವಾಳರ ಬೀರಮಂಬಿಯ್ಯಾಡೆ, ಸೋಕರ್ಗ ಸೋರೆ, ಆಳವೊಳವಾೞ್, ಚಲಂ ನೆಲಗಿಡೆ, ಬಲಂ ಬಯಲ್ವುಗೆ, ಕೊಂಚೆಗೋಂಟೆ ದೂಳಿಗೋಂಟೆಯಪ್ಪುದುಂ (ರಾಮಾಶ್ವ. ೪೬-೨೦). [ಬಯಲ್ (< ವಯಲ್) + ಪುಗು (< ಪೊಗು)]

**ಬಯಲ್ಪೊನಲ್** (ನಾ). = ಬಯಲಲ್ದೊಟಿ ೨ : ಬಯಲ್ಪೊನಲಂತೆ ಕಿಡುವಂತಪ್ಪ ಪರಿವಂಬಿನಂತೆ ಕಡಿವಪ್ಪ . . . ಸಂಸಾರವಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸುವುದೆಗ್ಗಿಕೆಯೆಂದು ವ್ರತ ಪರಿರಕ್ಷಣೋಪಾಯಮಂ ಚಿಂತಿಸುತ್ತಿರ್ದಳ್ (ಧರ್ಮಾಮೃ. ೩-೧೫೬).
[ಬಯಲ್ (< ವಯಲ್) + ಪೊನಲ್]

**ಬಯಸಿಕೆ** (ನಾ). ಇಚ್ಛಿಸುವಿಕೆ ; ಬಯಸುವಿಕೆ: ಬಯಕೆಯೊಳೇ ಬಾಳ್ ಕಳೆವುದು ಬಯಕೆಯುಂ ದೊರೆತ ಚಣ ಬಯಸಿಕೆಯನೆ ಬಯಸುವ ತೆರವೇಕಹುದೆನ್ನ ಮನ (ಗೋಕುಹ. ೨೪-೩). [ಬಯಸು$_1$ + — ಇಕೆ]

**ಬಯಸು$_1$** (ಕ್ರಿ). ೧. ಹಂಬಲಿಸು ; ಇಚ್ಛಿಸು ; ಅಪೇಕ್ಷಿಸು : ಕದಪಿನ ಕಣ್ಣ ಸಾರ್ಕೆಯನಳಂಕೃತಮಪ್ಪ ಗಳಪ್ರದೇಶಮಂ . . . ಮೃದುರಸನಾಗ್ರಮಂ ಬಯಸಿ ಚುಂಬಿಸಿದರ್ (ಕಾವ್ಯಾ. ೬೬೩ ಉದ್ಧೃತ); ನಿನ್ನ ಪ್ರಾಣವಲ್ಲಭೆ ನಿನ್ನನೆಯಱಸಿ ಬಯಸುತಿರ್ಪಳ್ (ಪದ್ಮಾರಾ. ೪೦-೨) ; ರಾಜಹಂಸಿ ಮಾನಸಸರೋವರವನಲ್ಲದೆ ಪೆಱತನೇಕೆ ಬಯಸುಗುಂ (ಶಂತಕಾ. ೪-೩೪ ವ) ; ಪ್ರೇಮಲತೆ ಬಾಯಾರಿ ಕಾತರಿಸಿತಾವುದನೊ ತಾನರಿಯದುದ ಬಯಸಿ (ಶಕ್ತ್ಯಾಂಗ. ೭-೧೬). ೨. ಕೋರು; ಹಾರೈಸು : ಪರರ ಕೇಡು ಬಯಸಿ ಗುರುಹಿರಿಯರನ್ನು ನಿಂದಿಸುತ್ತ . . . ಪರಮನಿಷ್ಕೃಮೌನಿಯಂತೆ ಧರೆಯ ಮೇಲೆ ಡಂಭ ತೋಱಿ ಹರಿವ ನೀರಿನ ತೀರದಿ ಕುಳಿತರೇನು ಬಕಧ್ಯಾನದಿ (ಪುರಂದ. ೦-೦೬೦-೨) ; ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ (ಗಾದೆ). [ದೇ. ॥ ತುಳು. ಬಯಸು, ಬಯಕು]

**ಬಯಸು$_2$** 'ಬಯಿಸಂ' ನೋ.

**ಬಯಸುಹ** (ನಾ). = ಬಯಸಿಕೆ : ತನ್ನೊಳು ಮೋಕ್ಷನಂ ಬಯಸುಹವದೇ ಕೇಳ್ ಪಾರಮಾರ್ಥಿಕ ಜೀವನನುವಂತವು (ಸದ್ಗುರು. ೪-೦೬).
[ಬಯಸು$_1$ + — ಹ$_2$ (< — ಪ$_2$)]

**ಬಯಸ್ಕೋಪು, ಬಯಾಸ್ಕೋಪು** (ನಾ). ಚಲನಚಿತ್ರ; ಸಿನಿಮಾ : ಇಂಗ್ಲಿಷ್ಇತಿಹಾಸಕ್ಕೆ ಸಂಬಂಧಿಸಿದ ಕೆಲವು ಕತೆಗಳು ಸ್ಟೆಂಡರ್ಡ್ ಬಯಸ್ಕೋಪುವುಂದಿರಕ್ಕೆ ಬರಲಿವೆಯೆಂದು ಗೊತ್ತಾಯಿತು (ಸ್ವಕೃಹೊ. ೦೬೪). **ಬಯಾಸ್ಕೋಪು :** ಬಯಾಸ್ಕೋಪಿಗೆ ಹೋಗಿದ್ದವರೆಲ್ಲರು ಬಂದರು (ಕುಣಾಯಿ. ೦೦೭). [← ಇಂ. Bioscope]

**ಬಯಾನು** (ನಾ). ತಿಳಿಯಪಡಿಸುವುದು ; ವಿವರಣೆ : ಅವರ ವರ್ಗದ ಅರ್ಜಿಯಲ್ಲಿ ನನಗೆ ಅವರ ಮೇಲೆ ಕ್ರೋಧವಿರುವುದಾಗಿಯೂ . . . ನನ್ನ ಕೋರ್ಟಿನಲ್ಲಿ ಅವರಿಗೆ ನ್ಯಾಯ ದೊರೆಯುವುದಿಲ್ಲವೆಂತಲೂ ಬಯಾನು ಮಾಡಿದ್ದರು (ಕಂಠ. ೨೨೨). [← ಪಾರ. ಹಿಂ. ಬಯಾನ್ ; ಅರ. ಬೈಆನಾ; ಮರಾ. ಬಯಾಣ, ಬಯಾಣಾ]

**ಬಯಾಸ್ಕೋಪು** 'ಬಯಸ್ಕೋಪು' ನೋ.

**ಬಯಿನೆ, ಪೈನೆ, ಬಗನಿ, ಬಗನೆ, ಬಗಿನಿ, ಬಗುನಿ, ಬಯನಿ, ಬೈನಿ, ಬೈನೆ** (ನಾ). ೧. ತಾಳೆಜಾತಿಗೆ ಸೇರಿದ ಒಂದು ಬಗೆಯ ಮರ : ಊರ ತರುಣನೊಬ್ಬ . . . ತೆಂಗಿನ ನಾರಿನ ಹಗ್ಗ, ಬಿತ್ತರದ ತೋಳುಕಟ್ಟು, ಬಯಿನೆಹಲಗೆ—ಇವನ್ನು ಜೋಡಿಸಿ ಮನೆಯ ಸಾವಿರ ಬಟ್ಟೆ ಹೊಲವನ್ನು ಸೇರುತ್ತಾನೆ (ಜಾತಗೀ. ೯೦). **ಪೈನೆ :** ೧. ಬಗನಿ, ಪೈನೆ, ಬೈನೆ, ಬೈರಿ (ಶ್ಯಾಶಿಗಿ. ೦೬-೩೨೭). **ಬಗನಿ :** ೧. ಹೆಂಗಸರು ಗೆಣಸು ಹರಡುವುದೂ, ಗಂಡಸರು ಬಗನಿಹೆಂಡವನ್ನು ಇಳಿಸುವುದೂ, ಹಸಿವಾದಾಗ ಬಗನಿಯ ಕಬ್ಬನ್ನೇ ಆಹಾರವನ್ನಾಗಿ ಸಿಗಿದು ಆಯಾಸ ಪರಿಹಾರ ಮಾಡಿಕೊಳ್ಳುವುದೂ ಈ ಜನರ ಅಭ್ಯಾಸ (ಅಪಜ. ೯೬); ಎತ್ತರವಾಗಿ ಬೆಳದಿದ್ದ ಆ ಬಗನಿಯ ಮರದ ನೆತ್ತಿಯಲ್ಲಿ ಅದರ ಹೂವಿಗೆ ಕಟ್ಟಿದ್ದ ಕಳ್ಳಿನ ಮಡಕೆಯ ಕರಿಯ ಗೋಳವು ನೇತಾಡುತ್ತಿತ್ತು (ಕಾಕಊರು. ೯೯). **ಬಗನೆ :** ೧. ಅವನು ಕೈಯಲ್ಲಿ ಕರಿಯ ಬಣ್ಣದ ಬಗನೆಯ ಕೋಲನ್ನು ಹಿಡಿದಿದ್ದನು (ಶಂಕಕಂ. ೨೩). **ಬಗಿನಿ :** ೧. ಸುರೆ ಬಗಿನಿಯಿಚಲೋಲೆಯ ಮರಗಳಾದಿ ಮುತ್ತಿರದೆಸೆವ ಗಂಗಸಾಗರ ಮುಖ್ಯ ರಕ್ಕಸರ ಪರಿಪರಿಯ ಭೋಜನದ್ರವ್ಯಂಗಳಿಡಿದ ಭಂಡಿಗಳೈದೆ ಬರುತಿರ್ದುವು (ಜಜಿ. ೧೭-೪೨). ೨. ಒಂದಂ ಬಗೆಯ ಬಳ್ಳಿ : ಸೌದೆಯ ಹೊರೆಯನ್ನು ಕಟ್ಟಲು ಬಗಿನಿಯ ಬಳ್ಳಿ ಬಿಗಿಯಾಗಿರುತ್ತದೆ (ಕೂಶಿ). **ಬಗುನಿ :** ೧. ಬೇಲ ಬಗುನಿಯು ತದುಕು ತಪಸಿ ಕವಳೆಯು . . . ಕಿಕ್ಕಿರಿವ ಕಾನನದೊಳು (ಕವಕೋ. ೯-೯); ಸೊಗಸು ಚಂದನ ಸೊಂಪು ಚಂಪಕ ಅಗರು ಅಂಬಟೆ ಅತ್ತಿ ಮತ್ತಿಯು ಬಗುನಿ ಬೆಳೆದಿಹ ತೆಂಗು ದಾಡಿಮ ಬಾಳೆ ರಸ ಬಾಳೆ (ಕರೇ. ೦೬-೩). **ಬಯನಿ :** ೧. ಪ್ರಳಯಗಾಳಿಯ ತೆಱದಿ ತೆಂಗನು ಹಲಸು ಖದಿರವು ಬಯನಿ ಮರಗಳನೆಳೆಯ ನೇಱಾಳು ನುಗ್ಗೆ ಮಾವನು ಕೋಪದಿಂದುಡಿದ (ಕೌಶಿಕ. ೦೦.೦೬); ಆತ ಆ ಬಯನಿಮರದ ಎತ್ತರದಿಂದ ನಾಲ್ಕು ಸುತ್ತಲೂ ನೋಡಿ . . . ಅಲ್ಲಿಂದ ಕೆಳಕ್ಕೆ ಇಳಿದ (ಮೂಕಜ್ಜ. ೫೪). **ಬೈನಿ :** ೧. ಬೈನಿ (ಬೆರ್ಲಿ).—ಕಟ್ಟಿಗೆ ನಾರುಳ್ಳದ್ದು, ಬಿರುಸು, ಗಳೆಯ ಕೆಲಸಕ್ಕೆ ಬರುತ್ತದೆ . . . ರಸದಿಂದ ಆರ್ಕ ತೆಗೆದು ಸರಾಯ ಮಾಡುವರು (ಕವಾಗ. ೯೬); ಪ್ರಿಯದಿಂ ನಿಮ್ಮಂಘ್ರಿಯಂ ಪೂಜಿಸದ ನರನ ಕೈ ಭಾವಿಸಲ್ ಭಾವುರೆ ಬೈನಿಯ ಕೈ (ಶಂಕಕ. ೬೧೬೪. XVII). **ಬೈನೆ :** ೧. ಬಗನಿ, ಪೈನೆ, ಬೈನೆ, ಬೈರಿ (ಶ್ಯಾಶಿಗಿ. ೦೬-೩೨೭).
[ದೇ. ॥ ತಮಿ. ಪಯಿನಿ . ತುಳು. ಬಯಿನೆ, ಬೈನ, ಬೈನಿ ]

**ಬಯಿಲ** 'ಬೈಲ' ನೋ.

**ಬಯಿಸಣಿಗೆ, ಬೈಶಣಿಗೆ, ಬೈಸಣಿಗೆ$_1$, ಬೈಸನಿಗೆ, ಭಸಣಿಗೆ, ವೈಸಣಿಗೆ** (ನಾ). ೧. (ವೃತ್ತಿಸಂಘದವರು ಒಟ್ಟಾಗಿ ಕುಳಿತು ನಡೆಸುವ) ಸಭೆ : ಸಮಸ್ತ ನಖರಂಗಳುಂ ಹಿರಿಸಿಂಗಿಯಲು ಶ್ರೀಮತು ಹಬ್ಬೇಶ್ವರ ದೇವರ ದೇವಾಯತದೊಳಕೇಶಂ ಬಯಿಸಣಿಗೆಯಾಗಿರ್ದ್ದ ಯಾ ಹಬ್ಬೇಶ್ವರ ದೇವರ ದೇವಕಾರ್ಯಾರ್ತ್ಥವಾಗಿ . . . ಬಿಟ್ಟ ಎತ್ತುಱುವತ್ತಯ್ದು (ಕೊಲ್ಹಾಶಾ. ೦೫-೯೬ ; 1186). ೧. **ಬೈಶಣಿಗೆ :** ನಾಗರಸರ ಮಗ ಬೊಂಮರಸ × × × ಗಳು ಸಮಸ್ತ [ಪಾ]ತ್ರಿಗರು ನೆರೆದ ಬೈಶಣಿಗೆಯ ಲಾ × × × (ಶ್ರೀಇ. XV, ೦೫೬-೦೪ ; 1207). **ಬೈಸಣಿಗೆ$_1$ :** ೨. ಖಡ್ಗಯುದ್ಧದಲ್ಲಿ ಕುಳಿತುಕೊಳ್ಳುವ ಒಂದು ವರಸೆ,—ಪಟ್ಟು : ಸಮಪಾದದಿಂದ ನಿಂತು ಹಾರಿ ಮುಂದುಗಡೆಯಲ್ಲಿ ಕುಳ್ಳಿರುವದು ಯಾವದುಂಟು ಅದು ಬೈಸಣಿಗೆಯೆಂದು ಖಡ್ಗಶಾಸ್ತ್ರವ ಬಲ್ಲವರಿಂದ ನುಡಿಯಲ್ಪಡುವದು (ಖಡ್ಗಲ. ೪-೩೨). **ಬೈಸನಿಗೆ :** ೩. ಪೀಠ; ಆಸನ: 'ವಜ್ರಬೈಸನಿಗೆ' ಪರಾ. **ಭಸಣಿಗೆ :** ೩. 'ವಜ್ರಭಸಣಿಗೆ' ಪರಾ. **ವೈಸಣಿಗೆ :** ೩. 'ವಜ್ರವೈಸಣಿಗೆ' ಪರಾ.

**ಬೈಸಣಿಗೆಯಿಕ್ಕು**—ಸಭೆ ಸೇರು : ಸಾದಲಿಯ ನಾಡ ರಾಮೇಶ್ವರದ ಗ್ರಾಮದಲು ಯಿಕ್ಕಿಸಿದ ಸನ್ಥೆ . . . ಆ ಬೈಪಿಸಿಟ್ಟವೊಳಗಾದ ಸಾಲುಮೂಲೆಯ ಸಮಸ್ತ ಹಲರುಗಳು ಬೈಸಣಿಗೆಯಿಕ್ಕಿ ಮಾಡಿದನ್ತಾ ಸನ್ಥೆಯ ಹೊಕನ್ತ ಭಣ್ಡಕ್ಕಿ ವರುಷ ಪರಿಯಂತರ ಸಬ್ಬುವಮಾನ್ಯ (ಎಕ. X. ಶಿಡ್ಲ. ೦೦೨-೩೪ ;1378). [← ಮರಾ. ಬೈಸಣಾ = ಕುಳಿತುಕೊಳ್ಳುವಿಕೆ, ಬೈಸಣೀ = ಕುಳಿತುಕೊಳ್ಳುವ ಪೀಠ ; ಹಿಂ. ಬೈಸನಾ=ಕುಳಿತುಕೊಳ್ಳು]

**ಬಯಿಸಿಕೆ, ಬಯಿಸಿಗೆ** (ನಾ). (?): ಪಟಲಿರಪಿ ಕಿನ್ನರಂ ಕಿಂಪುರುಷ ಮಹೋರಗ ಗಂಧರ್ವ ಯಕ್ಷರಾಕ್ಷಸ ಭೂತ ಪಿಶಾಚರೆಂಬ ಅಷ್ಟವಿಧವ್ಯಂತರ ಪರಿಶೋಭಿತಂಗಳಪ್ಪ ಎಂಟು ಬಯಿಸಿಕೆವಡಲಿಗೆಗಳುಮಂ (ಶ್ರೀಕೊ. ೨೦-೯). **ಬಯಿಸಿಗೆ :** ಅಸುರನಾಗ ವಿದ್ಯುತ್ಸುಪರ್ಣ ಅಗ್ನಿವಾತ ಸನ್ನಿತೋದಧಿ ದ್ವಿಪದ್ದಿಕ್ಕುಮಾರರೆಂಬ ದಶವಿಧಭವನವಾಸಿಗವಿರಾಜಿತಂಗಳಪ್ಪ ಪಸ್ತ್ರಂ ಬಯಿಸಿಗೆಯ ಶ್ರಾವೆಗಳುಮಂ (ಶ್ರೀಕೊ. ೨೦-೩). [ ? ]

**ಬಯಿಸಿಗೆ** 'ಬಯಿಸಿಕೆ' ನೋ.

**ಬಯಿಸು, ಬಯಸು₂** (ಕ್ರಿ). ೧. ಮುಚ್ಚಿಡು ; ಅಡಗಿಸು; ಬಚ್ಚಿಡು: ಕೂಡಲಸಂಗಮದೇವಾ ಆನು ಮಾಡಿದುದಲ್ಲದೆ ಬಯಿಸಿದ ಬಯಕೆ ಸಲುವುದೆ ಅಯ್ಯಾ (ಬಸವ. ೭೨೨). **ಬಯಸು₂** : ೨. ಅದ್ದು ; ಹುದುಗಿಸು ; ಮುಳುಗಿಸು : ನೇಜಿಲ ಪಣ್ಣಂ ತಿಳಿಯೆಣ್ಣೆಯೊಳ್ ಬಯಸಿ ತೊಯ್ದಂತಪ್ಪ ನುಣ್ಗುರ್ಪ ಪೆರ್ಮೊಲೆ ಚೆಲ್ವಾಗಿರೆ ನಿಂದ ಬೇಡಿತಿಯರಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೭). 'ಬಯ್ಚು' ಪರಾ. [ಬಯ್$_1$ + — ಇಸು$_3$]

**ಬಯ್ಕನೆ** (ಅ). ಬೇಗನೆ, ಶೀಘ್ರವಾಗಿ ಎಂಬರ್ಥದ ಒಂದು ಅನುಕರಣಾವ್ಯಯ : ಭೋಂಕನೆ, ಚಿಕ್ಕನೆ, ಭೋರನೆ, ಪಯ್ಕನೆ, ಬಯ್ಕನೆ (ಶಬ್ದಾಮ. ೨೦ ಕ್ರಿಯೋ). [? + — ಅನೆ$_1$]

**ಬಯ್ಕೆ$_1$, ಬಯಕೆ$_1$, ಬೈಕೆ** (ನಾ). ೧. ಬಚ್ಚಿಟ್ಟುದು ; ನಿಧಿ ; ನಿಕ್ಷೇಪ : "ಕಡವರಮೆ ಬಯ್ಕೆಯೆಂಬರ್ ಕವಿಗಳ್" (ಕಂಕಂ. ೨೩೩) ; ತನ್ನ ಮುನ್ನಿನ ಬಯ್ಕೆಯ ಕಿಲದೊಳ್ಪುಲಿಯಾಗಿ ಪುಟ್ಟಿದಂ (ಚಾವುಂಪು. ೨೩) ; ಬುದ್ಧಿವಂತನಪ್ಪ ಮಗಂಗೆ ಬಯ್ಕೆಯಂ ತೋಱುವಂತೆ (ಧರ್ಮಾಮೃ. ೦೦-೩). ೨. ಗುಟ್ಟು ; ರಹಸ್ಯ : ಬಗೆಯ ಬಯ್ಕೆಯ ನೊಪ್ಪಿಸುವಾಗಳ್ ನೀನೆ ವಲಂ ದೊರೆ ಪೇೞ್ದಪೆಂ ಬಗೆದು ಕೇಳ್ (ಆದಿಪು. ೩-೬೩); ಬಗೆಯ ಬಯ್ಕೆ[ಪಾಠಾಂ. ಬೈಕೆ]ಗೆ ನಾಲಗೆ ಪಿಸುಣನೆಂಬಂತೆ (ಲೀಲಾವ. ೯-೬೩ ವ) ; ಭಾವಕರ ಬಗೆಯ ಬಯ್ಕೆಯುನಗೆಯೆತ್ತಿ ಸೂಱೆಗೊಳ್ವ ಕಳಕಳಾಪ್ರೌಢಿಯೊಳಂ (ಅನಂತಪು. ೦೦-೨೭ವ). **ಬಯಕೆ$_1$** : ೧. ಕವರಲ್ಬಂದಂಗೆ ಬಯಕೆಯಂ ತೋಱಿದರೆಂಬಂತೆ ಕಳಲ್ಬಂದಂಗೆ ಕೈಯೆಡೆಗೊಟ್ಟರೆಂಬಂತೆ (ಧರ್ಮಾಮೃ. ೨-೦೯೯) ; ಸತ್ತ ಹೆಣ ಕೂಗಿದುದುಂಟು ಬೈಚಿಟ್ಟ ಬಯಕೆ ಕರೆದುದುಂಟು (ಮುಹಾದೇ. ೩. ೦೦೨-೨೯೯). **ಬೈಕೆ** : ೧. ಮದನನ ಬೈಕೆಯಿಂದು ಪೊಱಪೊಣ್ಮಿತೊ ಕಾಮನ ಬಾಣಸಂಕುಳಂ ಸುದತಿಯರಾಗಿ ಪುಟ್ಟಿದುದೊ . . . ತಿಳಿಯಲ್ಕಗೋಚರ ಮೆನಲ್ ನಡೆದತ್ತಬಳಾಕದಂಬಕಂ (ವಳಹಂ. ೦೨೮) ; ಬಾಯ ಭಂಡಾರದಲಿ ಸರ್ವವ ಕಾಯದೇ ಭಂಜಿಸುಗು ಬೈಕೆಯ ಬೀಯವನು ಸಂಗ್ರಹವ ಮಾಡದು . . . ರಾಯ ಕೇಳಗ್ನಿಯ ಗುಣಂಗಳಿಂದಿವರಲಱಿದುದನು (ಖಭಾಗ. ೦೦-೧೩ ೦೩೯). [ಬಯ್$_1$ + —ಕೆ]

**ಬಯ್ಕೆ$_2$** 'ಬಯಕೆ$_2$' ನೋ.

**ಬಯ್ಗಳು** 'ಬಯ್ಗುಳ್' ನೋ.

**ಬಯ್ಗಿರುಳ್** (ನಾ). ರಾತ್ರಿಯ ಕೊನೆಯ ಸಮಯ ; ಬೆಳಗಿನ ಜಾವ: ಬಯ್ಗಿರುಳಿನ ಮನೋಹರಿಯೆಂಬ ಜಾವದಾಗಳ್ ಬಿಳಿದಪ್ಪ ಕಾಡಾನೆಯಂ ಕಾಣ್ಬುದುಂ (ವರ್ಧಮಾ. ೦೩೭-೦೩) ; ಇಂದಿನ ಬಯ್ಗಿರುಳಿನ [ಪಾಠಾಂ. ಬೆಳಗಪ್ಪ] ಜಾವದೊಳ್ ಪದಿನಾಱು ಕನಸುಗಳಂ ಕಂಡೆಂ (ಆದಿಪು. ೦೩-೨೩ವ); ಬಟ್ಟೆವಿಡಿದು ಮುನ್ನಿನಂತೆ ಪೂರ್ವನೆ ನಡೆದು ನೇಸಱ್ ಪಟ್ಟಲ್ಲಿಯೆ ವಿಶ್ರಮಿಸಿ ಬಯ್ಗಿರುಳೆಬ್ದು ಪಯಣಃಬೋಪಾತಂ (ಜೀವಸಂ. ೩೭-೩೮ವ).

[ಬಯ್ಗು + ಇರುಳ್]

**ಬಯ್ಗು, ಬಯ್ಗೆ, ಬೈಗು, ಬೈಗೆ$_1$** (ನಾ). ೧. ಇಳಿಹೊತ್ತು ; ಸಾಯಂಕಾಲ ; ಸಂಜೆ : ಇಲ್ಲಿರಿಸಿ ಪೋಗು ಕಳ್ಳಂ ಮೆಲ್ಲನೆ ಬಯ್ಗಿಂಗೆ ಕುಡಿವಂ (ಧರ್ಮಾಮೃ. ೦೩-೦೯೩) ; ಬಯ್ಗಾದ ಪೊತ್ತು ನಾಲ್ಕಾನೆಯಂ ತಂದು ಸೂಳೆಗೇರಿಯ ಬೀದಿಯ ಕಡೆಯೊಳಾರುಮಂ ಪೋಗಲೀಯದಂತಪ್ಪಂ ನಿಲಿಸಿ (ಬಂಹು. ೩-೬೯ ವ); ಹೊತ್ತಾಱೆ ಬಯ್ಗಿಂಗೆ ಮತ್ತೆ ಬಾ ಎಂದೆನುತ ಹೊತ್ತನೆ ಕೊಂದು ಹುಸಿಯುವನಿಗಿಂದಲು ಸತ್ಯಾತ ಲೇಸು (ಸರ್ವಜ್ಞ. ೬೬೨). ೨. ಬೆಳಗು ; ನಸುಕು ; ಅರುಣೋದಯ : 'ಬಯ್ಗಿರುಳ್' ಪರಾ. **ಬಯ್ಗೆ** : ೧. ಪೇೞೀಗಳೊ ಬಯ್ಗೆಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ (ಆದಿಪು. ೩-೬೩) ; ಮಗಮಗಿಪ ಪುಷ್ಪವಾಟಾಳಿಗಳೆಗಳ್ವೆರಸು ಪೀಠದೊಳ್ ನಿಲೆ ಪೊಗಸುಂ ಪಗಲುಂ ಬಯ್ಗೆಯುಮರಲಲ್ಲುಗೆ ಸೊಗಯಿಪನಲ್ಪ ಕಲ್ಪತರುಗಣೆಯಾದಂ (ಶಾಂತಿಪು. ೦೦-೦೦೦) ; ನಿಯತಂ ಬೇಸಗೆಯೊಳ್ ಬಯ್ಗೆಯುಮಾ ಪಗಲುಮೊಂದು ದಿವಸಮಂತರಿಸದೆ ಮಾಗಿಯೊಳಬ್ದಕಾಲದೊಳ್ ಭೂಮಿಯೊಳಂ ಪದನಱಿತು ನೀರನೆತ್ತುಗೆ ಬಲ್ಲರ್ (ಲೋಕೋಪ. ೭-೮). **ಬೈಗು**: ೧. ಇಂದು ಬೈಗಿಂದೊಳಗೆ ರಾಸಿ ಹೊನ್ನಂ ಕೊಡುವೆನೆಂದು ಭಾಷೆಯನಿತ್ತನು (ಹಕಶಾ. ೦೦-೭) ; ಶಿರವನರಿವೆಸು ನಾಳೆ ಬೈಗಿಂದೊಳಗೆ ಸೈಂಧವನ (ಕುವ್ಯಾದ್ರೋ. ೮-೩೭) ; ನಸುಕು ಬೈಗು ಬೆಳಕು ಮಬ್ಬು ಕಲೆತು ಬೆರೆತು ಆಡುತ ಎತ್ತೊ ಹೊತ್ತಿನತ್ತ ನುಗ್ಗುತಿಹವು ಯುಗವ ದೂಡುತ (ಅರಳು. ೯೯-೧೩). ೨. ಬೈಗಿನ ಪೊೞ್ತಱೊಳ್ ದೇವರ್ಕಳ್ ಬಂದು ಸುಕುಮಾರಸ್ವಾಮಿಯಂ... ಪೊಗೞ್ವ ಕಳಕಳಧ್ವನಿಯುಮಂ ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ (ವರ್ಧಮಾ. ೨೯-೨೦) ; ಬೈಗಿನ ನೈವೇದ್ಯಕ್ಕಂ ಬೈಗಿನ ಪೂಜೆಗಂ . . . ಚತುಸ್ಸೀಮೆಸಹಿತಂ ಧಾರಾಪೂರ್ವಕ ಮಾಡಿ ಬಿಟ್ಟರು (ಸೌಇಇ. IX-11, ೨೦೨-೦೭; 1126). **ಬೈಗೆ$_1$** : ೧. ಹೊತ್ತಾಱೆ ಪೂಜಿಸಲು ಬೇಡ ಕಂಡಾ ಬೈಗೆ ಪೂಜಿಸಲು ಬೇಡ ಕಂಡಾ (ಅವಹಂ. ೯೮-೨೦೩); ಶಿವಲಿಂಗಪೂಜೆಯಂ ಮಾಡಿ ಹರುಷಂ ಮಿಕ್ಕು ಆಡಿ ಹಾಡುತ್ತಲ್ಲಿ ಬೈಗೆವರಮಿರುತಿರ್ದು (ಚನ್ನರ. ೮೨-೦೪). 'ಬಯ್$_3$' ಪರಾ.

**ಬೈಗಾಗು** = ಸಂಜೆಯಾಗಂ ಸಾಯಂಕಾಲವಾಗು; ಹೊತ್ತು ಮುಳುಗಂ : ಬೈಗಾಗಿ ಗೋವೆಲ್ಲವಂ ಕೂಡಿ ಹೊಡೆತಂದು (ಅಭಾಕ. ದೀ. ೦೮೩-೦೦); ತರುಣಭಿಕ್ಷಾಂದೇಹಿ ನಾವೀ ಬರುತ ಬೈಗಾಯ್ತಲ್ಲಿ ಬಂದೆವು ತಾಯಿ ನೀಡು (ಕೌತಿರಾ. ೬-೪೦).

[ದೇ. ॥ ತಮಿ. ವೈಕಲ್]

**ಬಯ್ಗುಂಬೊಳ್ತು** 'ಬಯ್ಗುಂಬೊೞ್ತು' ನೋ.

**ಬಯ್ಗುಂಬೊೞ್ತು, ಬಯ್ಗುಂಬೊಳ್ತು, ಬಯ್ಗುಪೊೞ್ತು, ಬೈಗುಂಬೊೞ್ತು, ಬೈಗುಂಪೊಳ್ತು** (ನಾ). ಸೂರ್ಯನು ಮುಳುಗುವ ಹೊತ್ತು; ಸಂಜೆಯ ಸಮಯ; ಸಾಯಂಕಾಲ : ಅಂತು ನೇಸಱ್ ಪಡಲೊಡಂ ಬಯ್ಗುಂಬೊೞ್ತರಸಂ ನೀಳ್ದುರ್ಗಂಪದಿಂ ಪೊಱಮಟ್ಟು (ಕಾದಂಬ. ೯೬೨). **ಬಯ್ಗುಂಬೊಳ್ತು** : ಪೋದ ಬಯ್ಗುಂಬೊಳ್ತು ಕೆಡೆದ ಉಳ್ಕೆಯ ಅಶುಭವಂ ಪರಿಹರಿಸಲೆಂದು ಪರಮೇಶನಂ ಪ್ರಾರ್ಥಿಸಲ್ ಬಂದೆನಯ್ (ಶ್ರೀರಾಮಾ. ೯೬೭-೬೦೩). **ಬಯ್ಗುಪೊೞ್ತು** : ರವಿ ಬಯ್ಗು [ಪಾಠಾಂ. ಯ್ಗು] ಪೊೞ್ತಲಂಪಿಕ್ಕುವ ಕುಂಕುಮರಜದ ಪೊಟ್ಟಳಿಕೊತ್ತಿದನೆಂಬ ಪೊಲರಗಿನ ಮುದ್ರೆಯನೆಸೆದುವು ಮಧುಯಂತ್ರಮುಕುಳಿತಾಂಬುಜಂಗಳೊಳಳಿಗಳ್ (ವರ್ಧಪು. ೯-೨೩). **ಬೈಗುಂಬೊೞ್ತು** : ನಿಜಜನನೀಗೃಹದೊಳ್ ಮಜ್ಜನ ಭೋಜನಾದಿಗಳಂ ಮನವಲ್ಲದ ಮನದೊಳಗೆ ಮಾಡಿ ಬೈಗುಂಬೊೞ್ತಪ್ಪುದುಂ ನಿಜಭವನಕ್ಕೆ ಬಂದು (ಕಾದಂಬ. ೨೬೩); ಸಂಪ್ರಾಪ್ತಮಾದ ವರ್ಷಾಕಾಲದೊಳೊಂದುದಿವಸಂ ಬೈಗುಂಬೊೞ್ತನೊಳೆಂದಿನಂತಿರೋಲಗಂ ಪರಿಯ (ರಾಮಾಶ್ವ. ೯-೬). **ಬೈಗುಪೊಳ್ತು** : ಸೂಚಿತಪಥಂಬಿಡಿದು . . . ಬೈಗುಪೊಳ್ತಿನ ಕಡೆಗೆ ಸಾರ್ತಂದರಾಶ್ರಮಕೆ ಶರಭಂಗನಾ (ಶ್ರೀರಾಮಾ. ೦೮೩-೦೮೮).

[ ಬಯ್ಗು + ಪೊೞ್ತು ]

**ಬಯ್ಗುಕೆಂಪು, ಬೈಗುಗೆಂಪು** (ನಾ). ಸೂರ್ಯನು ಮುಳುಗುವ ಹೊತ್ತಿನಲ್ಲಿ ಅಥವಾ ಸಾಯಂಕಾಲದ ಸಮಯದಲ್ಲಿ ಆಕಾಶದಲ್ಲಿ ಉಂಟಾಗುವ ಕೆಂಪು ಬಣ್ಣ ; ಸಾಯಂಕಾಲದ ಕೆಂಪುಕಾಂತಿ ; ಸಂಜೆಗೆಂಪು : ಅಂಜನೇಭದ ಸಿಂದುರವೊ . . . ಸಂಜೆವೆಣ್ಣುಟ್ಟ ರಕ್ತಾಂಬರವೊ ಪೇಳೆನಲ್ಕಾ ಬಯ್ಗುಕೆಂಪೆ[ಪಾಠಾಂ. ಬೈಗುಗೆಂಪೆ]ಸೆದುದು (ಕೃಷಿಖ. ೮-೯೬). **ಬೈಗುಗೆಂಪು** : ಆಗ ತಾನೆ ಸೂರ್ಯನು

ಬೈಗುಗೆಂಪನ್ನು ಚೆಲ್ಲಿ ಪಡುಗಡಲ ತೆರೆಯಲ್ಲಿ ಇಳಿದಿಳಿದು ಮಾಯ ವಾದನು (ಸಕಸ್ವ. VIII. ಕೃಸ್ತಾಪಜ) ; ಬೈಗುಗೆಂಪುರಿಯಲ್ಲಿ ಸುಡಲಿ ಸಂಶಯವಲ್ಲಿ ! ಹುಣ್ಣಿಮೆಯ ರಾತ್ರಿಯಲಿ ಹೊರಗೆ ಬಾ ನೋಡು ! (ಜಾಂಜಕ. ೫೦–೭). [ಬಯ್ಗು + ಕೆಂಪು$_1$]

**ಬಯ್ಗುವೊಟ್ಟು** 'ಬಯ್ಗುಂಬೊಟ್ಟು' ನೋ.

**ಬಯ್ಗುಳ್**, ಬಯ್ಗುಳು, ಬಯ್ಗುಳ, ಬಯ್ಗುಳು, ಬೈಗಳು, ಬೈಗುಳ್, ಬೈಗುಳ, ಬೈಗುಳು (ನಾ). ೧. ಜರಿಯುವಿಕೆ ; ತೆಗಳಿಕೆ : "ಶಾಪಃ, ಆಕ್ರೋಶಃ, ಆಕ್ಷೇಪಃ, ಕ್ಷಾರಣಾ, ವಿರೂಕ್ಷಣಾ — ಈ ೫ ಬಯ್ಗುಳ್" (ಕಣಾಯು. ೩೫–೦೯೬); ನಿನ್ನ ತಮ್ಮನಪ್ಪ ವಾಯುಭೂತಿಯ ಜೀವಂ ಅಭಿಮಾನಂ ಕಾರಣ ಮಾಗೆಮ್ಮನುಜದೆ ಪರಿಭವಿಸಿ ಬಾಯ್ಗೆ ವಂದುದನೆ ಪೊಲ್ಲಮೆಯ ಬಯ್ಗುಳಿಂ ಬಯ್ದುಂ (ವಡ್ಡಾರಾ. ೦೩–೩); ಪರಮಾರ್ಥಂ ನಿಜಜನಕರ್ ಪರಸಿದ ಪರಕೆಗಳು ಬಯ್ದ ಬಯ್ಗುಳ್ ಮಕ್ಕಳ್ಗಿರದೆಯ್ದುಗುಂ (ಕಾದಂಬು. ೯೩೭) ; ಸತ್ಪ್ರೂಜಾಭಂಗಮೆಂಬ ಬಯ್ಗುಳಿಂ ಸದ್ದರ್ಶನಾಲಸ್ಯಮೆಂಬ ಕೊಂತಂಗಳಿಂ . . . ಬೀಟಿ ಮೋದುತ್ತುಂ ದಂಡಣೆಯಂ ಮಾಡುತ್ತುಂ (ಧರ್ಮಾಮೃ. ೦೦–೯೭ ಅಡಿಟಿಪ್ಪ). **ಬಯ್ಗಳು** : ೧. ಕೊತವಾಲನ ಬಾಯಿಂದ ಹೊರಟ ಬಯ್ಗಳನ್ನು ನಿಚ್ಚಳವಾಗಿ ಕೇಳಿದರು (ಕೊತಕಾ. ೬೮). **ಬಯ್ಗುಳ** : ೧. ದಾಂಡಿಗ ಬಂಡಿಗಾರ ಯಜಮಾನನ ಅನ್ಯಾಯದ ಬಯ್ಗುಳಕ್ಕಾಗಿ ಕೋಪದಿಂದ ಹುಬ್ಬುಗಂಟಿಕ್ಕಿದನು (ಕೃಷರು. ೯೯೦). **ಬಯ್ಗುಳು**: ೧. ಹರಿಯ ಬಯ್ಗುಳು ಬೆದಱಿಸಲು . . . ತರತರದ ಕೈದುಗಳ ಸುಭಟರ ಕಂಡುದಮಳಾಸ್ತ್ರ (ಕುವ್ಯಾದ್ರೋ. ೦೯–೯೦). **ಬೈಗಳು** : ೧. "ಬೈಗಳಿನೆ ಪರಿಕಿಸಲ್ ನಿಂದೆಯಾದು" (ಕಕರ. ೦೨೯); ಕೊಟ್ಟವರು ಬಂದೆನ್ನ ನಿಷ್ಟುರಂಗಳನಾಡ ಕೆಟ್ಟ ಬೈಗಳ ಬೈದು ಪುನದಣೆಯಲು ದಿಟ್ಟತನವನು ಬಿಟ್ಟು ಕಳೆಗುಂದಿದೆನಯ್ಯ (ಕೃಕಂದ. ೦–೦೨೭–೦) ; ನಾ ಹುಟ್ಟಿ ಆಯ್ತೆರಡು ಮಾಸಂ ಬಯಸೆ ಬೈಗಳು ಬಾರವೆನ್ನೊಳೇಂ ದೋಷಂ? (ಕುಕ್ಕಿ. ೦೩–೬). **ಬೈಗುಳ್** : ೧. "ಶಾಪಮಾಕ್ರೋಶಂ ವಿರೂಕ್ಷಣಂ ಕ್ಷಾರಣಾಕ್ಷೇಪಮೆನೆ ಬೈಗುಳೆನಿಸಿಕ್ಕು" (ಮುಂಗರಾ. ೨೬–೫); ಆ ವೈಶಂಪಾಯನಂ ತಂದೆಯ ಮುನಿಸಿನ ಬೈಗುಳ್ಗಳಿಂದಂ . . . ಗಿಳಿಯ ಬಸುಱೊಳೀಯಂದದಿಂ ಬಂದನಲ್ತೆ (ಕಾದಂಬು. ೬೯೯) ; ಪೆಱರ ಬೈಗುಳಂ ಸೈರಿಸುವುದರಿದೋ ಪೆಱರೊಡನೆ ಬಾಯಂ ಬಡಿವುದರಿದೋ (ಧರ್ಮಾಮೃ. ೭–೮೦). **ಬೈಗುಳ** : ೧. ಕೆಲವರು ಇತರ ಮಕ್ಕಳೊಡನೆ ಕಿತ್ತಾಟ, ಜಗಳ, ಹೊಡೆದಾಟ, ಬೈಗುಳ, ಇತ್ಯಾದಿಗಳಲ್ಲಿ ಮನಃತೃಪ್ತಿ ಪಡೆಯುವವರು (ಶಿಕ್ಷದ. ೯೯೯) ; ಯಾವುದಾದರೂ ಉಪಾಯದಿಂದ ಬೈಗುಳ ತಪ್ಪಿಸಿಕೊಳ್ಳುತ್ತಿದ್ದ (ಕಾಲೆಮ. ೫೦), **ಬೈಗುಳು** : ೧. ನಾಯಕರ ಕೆಡೆನುಡಿವ ಬೈಗುಳ ಬಾಯ ಬೊಬ್ಬೆಯ ಕೈಯ ಹೊಯ್ಗುಳ ದಾಯಿಗರಲೇ ಎನುತ ಮೂದಲಿಸಿದನು ತಮ್ಮೊಳಗೆ (ಕುವ್ಯಾಕ. ೨–೦೩). ೨. ಮೂದಲಿಕೆ; ಹೀಗಳೆಯುವುದು : ನಡೆದುದುರು ಸನ್ನಾಹದಲಿ ಸೂಳಡಸಿ ಮೊಱೆವ ಗಭೀರಭೇರಿಯ ಕಡುರವದ ರಿಪುಭಟರ ಬೈಗುಳ ಗೌರುಗಹಳೆಗಳ . . . ಕಳಕಳವಾಯ್ತು ರಣದೊಳಗೆ (ಕುವ್ಯಾದ್ರೋ. ೯–೦೨). [ಬಯ್$^2_2$ + –ಗುಳ್$_2$. /ಕೊಡ. ಬಯ್ಗುಳ]

**ಬಯ್ಗುಳ** 'ಬಯ್ಗುಳ್' ನೋ.

**ಬಯ್ಗುಳು** 'ಬಯ್ಗುಳ್' ನೋ.

**ಬಯ್ಗೆ** 'ಬಯ್ಗು' ನೋ.

**ಬಯ್ಚು**, ಬಚ್ಚು$_1$ (ಕ್ರಿ). ಮುಚ್ಚಿಡು ; ನಿಧಿಯಾಗಿರಿಸು ; ನಿಕ್ಷೇಪ ಮಾಡು : "ಮುಚ್ಚು, ಮುತ್ತು, ಬಯ್ಚು (ಬಚ್ಚು) . . . ಹುದುಗಿಸು, ಅಡಗಿಸು" (ಕಂಪುಟು. ೯೦) **ಬಚ್ಚು$_1$**: ಕಿಚ್ಚಿನಂತುಜ್ವಲಿಸೆ ತೇರಿನೊಳ್ದನು ಶರವ ಬಚ್ಚಿದಂ ಮಿಕ್ಕಿದಂ ಧಾರುಣೆಗೆ ಓಡಿದಸಿಯ ಕೊಚ್ಚಿದಂ ಸವರಿದಂ ಪರಿಪರಿದು ಕುರುಬಲಂ ನಡುನಡುಗಿ ತಲ್ಲಣಿಸಲು (ತುರಂಗ. ೬೩–೦೨) ; ದೌಲತ್ತನ್ನು ಬಚ್ಚಿ—ಬಂಧನದಲ್ಲಿಟ್ಟು ಬೇಡದ ನಗರವನ್ನು ಬಿಟ್ಟುಕೊಟ್ಟಿದ್ದಾನೆ (ದೌಲತ್. ೮೫).

**ಬಯ್ಚಿಡು**, ಬಚ್ಚಿಡು, ಬೈಚಿಡು = ೧. ಅಡಗಿಸಿ ಇಡು ; ನಿಧಿಯಾಗಿರಿಸು ; ನಿಕ್ಷೇಪಿಸು : ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು (ಶಿಕವ. ೦); ಬೇವು ಫಲವಾಗಲದು ಸೇವಿಸಲು ಯೋಗ್ಯವೇ ಧನವು ಘನವಾಗಿ ಬಯ್ಚಿಟ್ಟ ಠಾವಿಲೇ ಪೋಕು (ಸರ್ವಜ್ಞ. ೬೯೯) ; ಅಯ್ಯ ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಕಂಡು ಒಳಗೆ ಬಚ್ಚಿಟ್ಟುಕೊಂಡೆನಯ್ಯ (ಚೆನ್ನಸಂ. ೨೨೦–೫೨) ; ಕೊಳ್ಳೆ ಹೊಡೆದುಕೊಂಡು ಬಂದ ಸ್ವತ್ತುಗಳನ್ನು ಅಲ್ಲೇ ಒಂದು ಮೂಲೆಯಲ್ಲಿ ಇಟ್ಟುಬಿಟ್ಟು ಮತ್ತೊಂದು ಕಡೆ ಅವರು ಬಚ್ಚಿಟ್ಟುಕೊಂಡರು (ವ್ಯಾಸಪಿ. ೩೭) ; ಜಾಲಗಾಱನ ದೋಣಿಯಂತೆ ಬಳಸುವ ಹುಟ್ಟಿನಂತೆ ಬೈಚಿಟ್ಟ ನೆಲೆಯಂತೆ ಇದ್ದಡೇನು ಭೋಗಿಸಲರಿಯೆವಾಗಿ (ಮೋಳಿಗೆಮಾ. ೩೦–೧೨೯) ; ಕೊಟ್ಟಿದ್ದು ತನಗೆ ಬೈಚಿಟ್ಟದ್ದು ಪರರಿಂಗೆ ಕೊಟ್ಟದ್ದು ಕೆಟ್ಟತೆನಬೇಡ ಮುಂದಕ್ಕೆ ಕಟ್ಟಿಹುದು ಬುತ್ತಿ (ಸರ್ವಜ್ಞ. ೬೦೭). ೨. ಗುಟ್ಟಾಗಿಡು ; ರಹಸ್ಯವಾಗಿರಿಸು : ಸುಳ್ಳನ್ನು ಬಚ್ಚಿಟ್ಟು ಕೊಳ್ಳುವುದು ಮಹಾ ಅಪರಾಧ (ರಂಗರೂ. ೯) ; ಸಾವಿತ್ರಮ್ಮ . . . ಯಾವ ವಿಚಾರವನ್ನೂ ಬಚ್ಚಿಡಲಿಲ್ಲ (ಕೊವಿಶೇ. ೨೦೬) ; ಲಲಿತಸುಖಿ . . . ವಿಟನೊಲಿದೊಡೊಲಿಯಲು ಬೆರಸಿ ಬೆರಸದೆ ಮನವ ಬೈಚಿಡುತ ನಳಿನಮುಖಿ ಬೇಟದೊಳು ಬೇಗೆಯ ಬಳೆಯಿಪಳು (ಕುವ್ಯಾಕಾ. ೬೦೨. ೮–೫೭).

[ಬಯ್$^1_1$ + –ಚು$_1$. / ತೆಲು. ವಯಿಚು, ವೈಚು]

**ಬಯ್ತ** 'ಬಯ್$^1_1$' ಪರಾ.

**ಬಯ್ತಲೆ**, ಬೈತಲೆ (ನಾ). ತಲೆಯ ಮೇಲ್ಭಾಗದಲ್ಲಿ ಕೂದಲನ್ನು ಎರಡುಕಡೆಗೂ ಬಾಚಿದಾಗ ಮಧ್ಯೆ ಗೆರೆಯಂತೆ ಕಾಣುವ ನೇರವಾದ ಸ್ಥಳ,—ಜಾಗ : "ಸೀಮಂತಮೆಂಬುದು ಬಯ್ತಲೆ" (ಕಣಾಯು. ೬೭–೩೬೫) ; ಮೊದಲೊಳ್ ಕಟ್ಟಿದ ಮಂಡೆಯುಟ್ಟುಡಿಗೆ . . . ತಿರ್ದಿದ ನುಣ್ಬಯ್ತಲೆ ಲೀಲೆಯಿಂ ಸವಿದ ತಾಂಬೂಲಂ ಜಲಂ ಮಿಂದುದಲ್ಲದೆ ಮತ್ತೇನುಮನೊಲ್ಲದಿರ್ದಬಲೆ ಚಿತ್ರಾಕಾರದಿಂ ತೋಱಿದಳ್ (ಪಶಸಂ. ೬೩೯); ಗಗನಮಣಿ ಪಶ್ಚಿಮಾಂಗನೆಯ ಬಯ್ತಲೆ[ಪಾಠಾಂ. ಬೈತಲೆ]ಯ ರಂಗು ಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿಮಸ್ತಕದೊಳು (ಕೈಐಚ. ೯–೮೫). **ಬೈತಲೆ** : "ನೀಳ್ದ ಬೈತಲೆ ಸೀಮಂತ ಸಮಾಹ್ವಯಂ" (ವಸ್ತುಕೋ. ೭೦–೨೦); ಕರಮಿಂಬಾಗಿರೆ ತಿರ್ದಿ ಬೈತಲೆಯಂ . . . ಬರ್ಬರಮಂ ಪೂಸಿ ತೊಱಲ್ದರ್ (ಪಮಪ. ೬–೩೭) ; ನಿಮಿರ್ದ ವೇಣಿ ಬೈತಲೆಗಳವಟ್ಟ ಸಿಂದುರಮಾಳಂಕಯೊಳ್ಚಿದ ಕಜ್ಜಳಂ . . . ಚಲನಯನಂಗಳೊಪ್ಪೆ ನಟನಗೆಯೆ ಪಿಂದನೆ ಬಂದನಾಕ್ಷಣಂ (ಧಕಳು. ೬–೧೦೦); ಪರಿಗೆ ಕೇಪಿನ ರ್ಥಂಗೆ ಸುರಾಂಗನೆಯರಿಗೆ ಸುಭಟವ್ರಜಕೆ ಕುಂಟಣಿ ವರದಿಗಂಗನೆಯರಿಗೆ ಬೈತಲೆ ಗೆಸೆವ ಸಿಂಧೂರ . . . ಎನಲುರವಣಿಸಿ ಕೆಂದೂಳಿ ನಭವುಪ್ಪರಿಸೆ ಹೊಯ್ದಾಡಿದರುಭಯಚತುರಂಗಬಲ ಹಳಚಿ (ಕುವ್ಯಾಭೀ. ೯–೭).

**ಬಯ್ತಲೆಯ ಸೌಭಾಗ್ಯ** = ಮುತ್ತೈದೆತನ : ಮಱೆಯ ಮಾಯಾಶಿರವಿದೀಗಿದು ಮಱುಗಬೇಡೆಲೆ ತಾಯೆ ನಿನ್ನಯ ನೊಸಲಲಿಹ ಬಯ್ತಲೆ [ಪಾಠಾಂ. ಬೈತಲೆ] ಯ ಸೌಭಾಗ್ಯಕಳಿವುಂಟೆ (ತೊರರಾ. ೬–೦೨–೩೯).

[ ದೇಶ. ತುಳು. ಬಕ್ತಲೆ, ಬಗುತಲೆ, ಬಗ್ತಲೆ; ಕೊಡ. ಬವ್ತಲೆ ]

**ಬಯ್ತಲೆದೆಗೆ**, ಬೈತಲೆದೆಗೆ (ಕ್ರಿ). ಕೂದಲನ್ನು ಬಾಚಿ ಇಬ್ಭಾಗ ಮಾಡು : ಇಂಬಾದಿದಱಿರ್ಪಡಿಯ ಬಿಸಂ ಬಯ್ತಲೆದೆಗೆದ ಕೇಶವನಮೆನಿಸೆ ಪರಾಗಂಬೊರೆದ ಸಿಂಧು ಸೀಮಂತಂಬೊಲಿಳಾಕಾಂತೆಗಧಿಪ ಮಿಗೆ ಸೊಗಯಿಸುಗುಂ (ಪಾರ್ಶ್ವಕ. ೯–೬). **ಬೈತಲೆದೆಗೆ** : ಕಿಱುವೆರಲುಗುರಿಂದೆ ಬೈತಲೆ

ದೆಗೆದಾಗ ಮಱಿದುಂಬಿಗುರುಳ ಮಾನಿನಿಗೆ ತುಱುಬನಿಕ್ಕಿದರು (ಕೋಟಕ. ೨೩–೨೪). [ಬಯ್ತಲೆ + ತೆಗ್ೞ]

**ಬಯ್ತಲೆವಣಿ,** ಬೈತಲೆವಣಿ (ನಾ). ೧. ಬೈತಲೆಯಲ್ಲಿ ಧರಿಸುವ ಆಭರಣ : (ಕಯ್ಪರೆಗುಟ್ಟುತಿದ್ದು, ಬೆರಲ್ವಿಣಿದುಕೊಂಡು, ಬಯ್ತಲೆ ವಣಿಗೆತ್ತಿ ಊರ್ಧ್ವಮುಖಿಯಾಗಿ ಗದ್ಗದಸ್ವರದಿಂದ) . . . (ಫೊಳ್ಳೆಂದು ನಕ್ಕು ಲಲಿತಾಟ್ಟಹಾಸವನ್ನಾಲಾಪಿಸುತ್ತಿರುವಳು (ಪುಂತ್ರಕ. ೨೯–೨೨). **ಬೈತಲೆವಣಿ:** ೧. ಮುತ್ತಿನ ಭುಜಕೀರ್ತಿ ಹರಳೋಲೆ ಮೂಗುತಿ . . . ಉತ್ತಮವಜ್ರದ ಬೈತಲೆವಣಿಗಳನಿತ್ತನವಳಿಗಸುರೇಂದ್ರ (ಕುರಾಸಾಂ. ೯೦–೩೬); ಕಲಿಗಂಟು ಕೆಲವರಿಗೆ ಜಡೆ ಕೆಲವರಿಗೆ ಮತ್ತೆ ಕೆಲರಲ್ಲಿ ತುಱುಬನಿಕ್ಕಿದರು ಅವರು ಚವಲಿ ಬೈತಲೆವಣಿ ಮುತ್ತಿನ ಬಲೆಯಿಲ್ಲ ಬಂದರೊಪ್ಪದೊಳು (ಕಕಕ. ೦೬–೨೩). ೨. (ಅಲಂ) ಆಭರಣಪ್ರಾಯವಾದ ವ್ಯಕ್ತಿ ; ಶ್ರೇಷ್ಠವ್ಯಕ್ತಿ : ದ್ಯೂತಕೇಳಿಯೊಳಜ್ಞಾತವಾಸದೊಳಂದು ಧಾತುಗುಂದದೆ ಪಾಂಚಾಲಿ ಓತು ಪಾಂಡವರನೊಲಿಸಿ ಹದಿಬದೆಯರ ಬೈತಲೆವಣಿಯೆನಿಸಿದಳು (ಹದಿಬ. ೩–೯೮). [ಬಯ್ತಲೆ + ಮಣಿ$_2$]

**ಬಯ್ತು** 'ಬಯ್$_1$' ಪರಾ.

**ಬಯ್ತುಗ** (ನಾ). (?) : ಲಲನಾಮುಖೇಂದು ಲಾವಣ್ಯಲೀಲೆಯಂ ಪಡೆವ ಬಣ್ಣದಿಂ ಕಂಪಿಂದೇನಲೆದುದೊ ಬಯ್ತುಗ [ಪಾಠಾಂ. ಪೈತಿಕ, ಪೈತಿಗ, ಬೈತುಗ].ದಂತಿರೆ ತಲೆಗೇಱುವ ಕುಸುಮನಿಚಯುಮಂ ಕಾಶ್ಮೀರಂ (ಅಂಪು. ೦–೧೨೪). [?]

**ಬಯ್ದಕೂರ್** (ನಾ). ಒಂದು ಊರಿನ ಹೆಸರು : ಮದಿರೆಗೊಣ್ಣ ಕೊಪ್ಪರಗೇಶರಿವರ್ಮ್ಮಂಗೆ ಪರಿಷಮಿಪ್ಪತ್ತೊಮ್ಬತ್ತಱಿೊಳ್ಬಯ್ದಕೂರ ರಾವಿನಾಡ ಮಾರ್ಕ್ಕಮ್ಮ ಮಮ್ಮ ಗಣಿಪ ರಾಮ ತುಱುವನಿಕ್ಕಿಸಿ ಅಱ್ಕಿ ಸತ್ತನ್ (ಎಕ. X. ಮುಳಬಾ. ೨೦೩ — ೨೨ ; 934). [ ? + ಊರ್]

**ಬಯ್ದುಂಬು** (ನಾ). ಒಂದು ಊರಿನ ಹೆಸರು ( ? ) : ಸ್ವಸ್ತ್ಯನೇಕ ಸಮರಾಸಂಘಟ್ಟಣೋಪಲಬ್ಧ ಜಯಲಕ್ಷ್ಮೀಸಮಾಲಿಂಗಿತವಕ್ಷಸ್ಥಲ ಗಂಡತ್ರಿಣೇತ್ರ ಶ್ರೀ ಬಯ್ದುಂಬ ಮಹಾರಾಜರ್ ಪೃಥಿವೀರಾಜ್ಯಂಗೆಯೆ (ಎಇ. XXIV. ೨೬–೩ ; ಕು. 886). [ ? + ತುಂಬು$_2$ (< ತೂಂಬು) ]

**ಬಯ್ಯ** (ನಾ). ಒಂದು ಜಾತಿಯ ಹೆಸರು (?) : ಅನ್ತಿಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ ಬಯ್ಯರ ಜೋಗನುಂ ಇನ್ತಿನಿಬರುಂ ಸಾಕ್ಷಿಯಾಗೆ ಕೊಟ್ಟರ್ (ಎಕ. XI. ಹೊಳಲ್ಕೆ. ೩೦–೦೩ ; 964). [ ? ]

**ಬಯ್ಯಿ** (ನಾ). ( ? ) : ಕೈಯಣ ಗಿಂಡಿಯು ಕೊಂಕುಳ ಪೆಟ್ಟಿಗೆ ಕಲ್ಲಿಯ ಹದು ತಲಕಟ್ಟು ಬಯ್ಯಿಗಳೆಂಬವು ಪರಿಪರಿ ನೋಡಲು ಕೋಕಿ ಹಾರಿಕೆ ಅಳವಟ್ಟು (ಶರಾಕೋ. ೯೨-೩). [ ? ]

**ಬಯ್ಯಿಸು**, ಬಯಂಸ್ಸು, ಬೈಸಂ$_1$ (ಕ್ರಿ). ಬಯಂಸ್ಸುವಂತೆ ಮಾಡು : ಜರೆಯುವಂತೆ ಮಾಡು ; ದೂಷಣೆಗೊಳಗಾಗಿಸು : ನೀನು ಒಪ್ಪುವುದಾದರೆ ನಾನು ನಿಮ್ಮ ಮನೆಗೆ ಬರುತ್ತೇನೆ. ನೀನೂ ಬಯ್ಯಿಸಿಕೊಳ್ಳುವ ಹಾಗಿಲ್ಲ (ಪಾಲಬು. ೩೩); ನಾನು ಯಾರಿಂದಲೂ ಹಾಗೆ ಬಯ್ಯಿಸಿಕೊಂಡವನಲ್ಲ (ಕಂಗಾರ. ೨೪೩). **ಬಯ್ಸು** : ಭಟ್ಟಾರಾ ನಿಮ್ಮಂ ಪಂಚಮಹಾಪಾತಕನ ಮನೆಗೊಡಗೊಂಡು ಪೋಗಿ ಬಯ್ಸಿದಂ (ವಡ್ಡಾರಾ. ೬–೩). **ಬೈಸು$_1$** : ಅಪ್ಪನ ಕಡೆ ಬೈಸಿಕೊಳ್ಳೋದು ತಪ್ಪಿತು (ಅತಪಾ. ೬೯); ಬಯಕೆ ಕೊಟ್ಟರೂ ಬೈಸಿಕೊಂಬುದು ತಪ್ಪಲಿಲ್ಲ (ಗಾದೆ). [< ಬಯ್$_2$ + — ಇಸು$_3$]

**ಬಯ್ಯು** 'ಬಯ್$_2$' ನೋ.

**ಬಯಿರುಬತ್ತ** (ನಾ). ಕೆಳತರಗತಿಯ ಒಂದು ಬಗೆಯ ಬತ್ತ : (?). [ದೇ.II ತುಳು. ಬೈತರಿ, ಬಯಿತ್ತರಿ]

**ಬಯ್ಸಿಕೆ** 'ಬೈಸಿಕೆ' ನೋ.

**ಬಯ್ಸು** 'ಬಯ್ಯಿಸು' ನೋ.

**ಬರ್** 'ವರ್' ನೋ.

**ಬರ$_1$** 'ಬಱ' ನೋ.

**ಬರ$_2$** 'ವರ$_1$' ನೋ.

**ಬರ$_3$** (ನಾ). ಅನುಗ್ರಹ ; ವರ : "ಬರ__ವರ = ಅನುಗ್ರಹ" (ಕಕೋ. ೨೯); ನಾಲ್ಕು ಲಾವಗೆಗಳಗ್ನಿಸೂಕ್ತಂಗಳನೋದುತ್ತುಮದಿರದಿರಂ ಬಕೆ ಮೆಚ್ಚಿ ಬರವನಗ್ನಿದೇವಂ ಬೇಡಿಕೊಳ್ಳಿಮೆಂದೊಡೆಮ್ಮನ್ವಯಕ್ಕೆ ನೀನೆ ಪಣ್ಣದೆಯಾಗೆಂದು ಬೇಡುವುದುಂ (ಕಂಕಥಾ. ೫–೦೦೦ ಪ) ; ಮೃಡನಿಂ ಬರಂಗಳಂ ಪಡೆದನೆಂಬರ್ ಕಣಾ! (ತ್ರಿಲಾಪಾ. ೩೦–೫೦). [ < ಸಂ. ವರ]

**—ಬರ$_4$** '_ವರಂ' ನೋ.

**—ಬರಂ** '_ವರಂ' ನೋ.

**ಬರಂಗಿ** (ನಾ). ( ? ) : ಅಂತು ಖಂ ೬೪ ರೊಕ್ಕ ಗ ೧೧೫ ಭೂಮಿ ಬರಂಗಿ ಖಂ ೨೮ ಮಾರ × × × ರುಹ ಗ ೬ ಅಡಕೇ ಸುಂಕ ಗ ೧ ಉಪಾಧಿಗೆ ಮಾವಿನ ಕೊಡಗಿ ಖಂ ೨೬ ವೊರಹ × × × (ಎಕ. VIII, ತೀರ್ಥಹ. ೦೯–೯೨ ; 1578). [ ? ]

**ಬರಂಪಿಡಿ** (ಕ್ರಿ). ವರವನ್ನು ಸ್ವೀಕರಿಸು ,—ಹೊಂದು : ವಿರೋಧಿ ಗಂಟಿರ್ದೆಯ ಮಾಱುವ ವೈರಿಗೆ ಮಾರುಕಂಣೆ ಮಾನ್ಯ್ಡವನೇಂ ಚತುರ್ಬುಜನೆ ಮಚ್ಚರಿಪಂಣಲೆಬವ್ಯಾನೊಳ್ ಬರಂಪಿಡಿದನೆ ಮಾಱಿ ಬಾಳ್ವಡವನೇಂ ಜವನೇ ಕಡಿಕೆಯಿದು ಕಾದಲೆಂದೊಡರಿಸುವಾತನೇಂ ಭುಜಗಮರ್ದ್ದನನೇ ಕಲಿಗೋಣಭೂಪನೊಳ್ (ಎಕ. VIII, ಸಾಗರ. ೦೦೯–೩೬ ; 1042). [ ಬರ$_3$ + ಪಿಡಿ$_1$ ]

**ಬರಂಬಡೆ** (ಕ್ರಿ). ವರವನ್ನು ಹೊಂದು ; ಅನುಗ್ರಹವನ್ನು ಪಡೆ : ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ ಮಕ್ಕಳಂ ಪಡೆವಂತು ಪರಾಶರಮುನೀಂದ್ರನೊಳ್ ಬರಂಬಡೆದಳ್ (ಕಂಕಥಾ. ೦–೦೦೬ ಪ) ; ನಡುನಡಪಿತ್ತು ತನ್ನನೆನೆ ಮೆಯ್ ಬಡವಾದುದು . . . ತೋಳ್ಗಳೊಳ್ ಬರಂಬಡೆದವೊಲೆಯ್ದೆ ಸುಯ್ ಸರಳವಾದುದು (ಕಂದ್ರಪ್ರ. ೫–೦೨೯) ; ಬರಂಬಡೆವನ್ನವಾರಾಧಿಸಿದಂ (ಕಪುರ.ಪ. ೨೫೮ ತ್ರಯೋ). [ಬರ$_3$ + ಪಡೆ$_1$]

**ಬರಕ$_1$** 'ಬರ್ಕ' ನೋ.

**ಬರಕ$_2$** (ನಾ). ಹೊರೆ ( ? ) : ಪೆಜ್ಜುಂಕಕ್ಕೆ ದ್ರಮ್ಮ ೧ ಆ ಬಳಿಯ ಅಡಕೆ ೨೫ ಕತ್ತಿಯ ಬರಕಕ್ಕೆ ಪೊಂಗೆ ಅಡಕೆ ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ . . . ಅನ್ತಿಲ್ಲಿಯ ಎಣ್ಣಾರಾಯಿಗರುಂ ನಾಗೇಶ್ವರ ದೇವರ್ಗ್ಗೆ ೫೦ ಮತ್ತರಲು ತಂತಮ್ಮಾಯುವಂ ಬಿಟ್ಟರು (ಸಾಂದೇಶ್. ೩-೨೨ಪ; 1047) ; ಅರೆಮನಸ್ಸಿನಿಂದಲೇ ಅಪ್ಪಯ್ಯನ ಹಿತ್ತಲಿಗೆ ಹೋದಳು. ಅಪ್ಪಯ್ಯ ಆ ವೇಳೆಗೆ ಹುಲ್ಲು ಕಿತ್ತಾಗಿತ್ತು, 'ಬರಕ'ದಲ್ಲಿ ಕಟ್ಟುತ್ತಿದ್ದ (ಕೀರು. ೬೯). [ ದೇ.II ತೆಲು. ಬರಕ=ಹತ್ತಿಯ ಹೇರು]

**ಬರಕಂದಾಜ** (ನಾ). ಬಂದೂಕು ಅಥವಾ ತುಪಾಕಿಯನ್ನು ಹಿಡಿದಿರುವ ಸೈನಿಕ,—ಸಿಪಾಯಿ: ಇಂಗ್ಲಿಷ್ ಸೇನೆ ಅಂದು ದೇವಿಯ ಹಡಗಿಗೆ ಮುತ್ತಿಗೆ ಹಾಕುವ ಸಂಗತಿ ಅವರಿಗೆ ತಿಳಿದು ಅವರಿಬ್ಬರೂ ಬರಕಂದಾಜ ಸೇನೆಯನ್ನು ತೆಗೆದುಕೊಂಡು ಬಂದಿದ್ದರು (ಕಂಕಿಪು. ೨೬೯).[←ಪಾರ. ಹಿಂ. ಬರಕಂದಾಜ್, ಬರ್ಕಂದಾಜ್ ; ಮರಾ. ಬರಕಂದಾಜ್, ಬರ್ಕಂದಾಜ್]

**ಬರಕತ್ತು**, ಬರಖತ್ತು, ಬರ್ಕತ್ತು, ಭರಕತ್ತು (ನಾ). ಏಳಿಗೆ; ಅಭಿವೃದ್ಧಿ : ಆ ಮೂರುಮುಕ್ಕಾಲಿನ ಮಾಸ್ತರುಗಳು ಕ್ಲಬ್ಬಿನಲ್ಲಿ ತುಂಬಿರುವಷ್ಟು ದಿವಸ ಕ್ಲಬ್ಬು ಬರಕತ್ತಿಗೆ ಬರಲಾರದಯ್ಯ (ಪುಗಿಪು. ೨೦೬); ಯಾವ ಯಾವ ಒಕ್ಕಲುಗಳನ್ನು ತಂದು ಹಾಕಿ ನೋಡಿದೆ; ಬರಕತ್ತಿಗೆ ಬರಲಿಲ್ಲ (ಚಿಟ್ಟಿ. ೦೮). **ಬರಖತ್ತು** : ನೀಯತ್ತಿದ್ದವರಿಗೇ ಬರಖತ್ತು ಎಂದು ತುರುಕರು ಹೇಳುವುದು ನಿಜ (ಕಪಿಸಂ. ೦೯೯). **ಬರ್ಕತ್ತು** : ಬಡವರಿಗೆ ಯಾವಾಗಲೂ

ಬರ್ಕತ್ತಿಲ್ಲ (ಜಾಗ. ೦೩); ಆಕೆಗೆ ಈ ಮದುವೆಯಿಂದ ಬರ್ಕತ್ತಿಲ್ಲ ಎಂದು ಅನಿಸಿತ್ತಂತೆ (ಕೃಶಾಂಕ: ೬). **ಭರಕತ್ತು** : ಹಿರಿಯರಾದವರು "ಇದು ಹಿಂದುಗಳ ಜಾಗ, ಇಲ್ಲಿ ನಮಗೆ ಭರಕತ್ತು ಇಲ್ಲ" ಎನ್ನುತ್ತಾರೆ (ಗಕುಜಾ. ೦೬೩). [←ಅರ. ಬರಕತ್; ಹಿಂ. ಬರಕತ್, ಬರ್ಕತ್; ಮರಾ. ಬರಕತ್, ಬರಖತ್, ಬರ್ಕತ್]

**ಬರಕಾಸ್ತು** 'ಬರಖಾಸ್ತು' ನೋ.

**ಬರಖತ್ತು** 'ಬರಕತ್ತು' ನೋ.

**ಬರಖಾಸ್ತ** 'ಬರಖಾಸ್ತು' ನೋ.

**ಬರಖಾಸ್ತು**, ಬರಕಾಸ್ತು, ಬರಖಾಸ್ತ, ಭರಕಾಸ್ತು, ಭರಖಾಸ್ತು (ನಾ). ೧. ಕೊನೆ ; ಮುಕ್ತಾಯಂ : ಸಾವಿರ ಬಗೆಯ ಭಯದ ಕಲ್ಪನೆಯ ಮೂಲಕ ಬುದ್ಧಿಯನ್ನು ಆರಂಭದಲ್ಲಿಯೇ ಬರಖಾಸ್ತು ಮಾಡಿ ಕುಳಿತಿದ್ದೇವೆ (ಖಾಂರ. I, ೪೬೬). ೨. ಓಲಗ, ಸಭೆ ಮುಂತಾದುವುಗಳನ್ನು ಸಮಾಪ್ತಿಗೊಳಿಸುವುದು: ವೆಂಕಣ್ಣ ಸಭೆಯನ್ನು ಬರಖಾಸ್ತು ಮಾಡಿದ (ಸಾಖಾ. ೪೦). ೩. ಕಚೇರಿ ಮುಂತಾದುವುಗಳನ್ನು ಮುಚ್ಚುವುದು : ನ್ಯಾಯಾಧಿಕಾರಿಯು ಕೋರ್ಟು ಬರಖಾಸ್ತೆಂದು ಹುಕುಂ ಮಾಡಿದನು (ಕಥಾಕುಂ. IV, ೯೩). **ಬರಕಾಸ್ತು** : ೨. ಸಭೆ ಬರಕಾಸ್ತಾಯಿತು (ಅಪ್ನಪ. ೨೯) ; ದರಬಾರ ಬರಕಾಸ್ತು ಮಾಡಿ ಹುಕುಂ ಆದ್ದು ಬೆಳಿಗ್ಗೆ ದರಬಾರು ಆಗುತ್ತೆ (ಕುಡಕ. ೩–೪). **ಬರಖಾಸ್ತ** : ೨. ಪಾನ–ಸುಪಾರಿಯ ಪೇಶ್ವಾಯಿ ದರಬಾರ ನಡೆದು ಬರಖಾಸ್ತ ಆಯಿತು (ಬೀಕಹ. II, ೩೩೫). **ಭರಕಾಸ್ತು** : ೨. ಸಭೆ ಭರಕಾಸ್ತಾಯಿತು (ಖೂಖಚ. ೬೭); ಸಭೆ ಚರುವು ಖಾಲಿ ಎಂದು ತಿಳಿದಾಗಲೇ ಭರಕಾಸ್ತಾಗಿ ಬರಿದಾಗಿತ್ತು (ವೃದ್ಧಶಿ. ೦೦೦). **ಭರಖಾಸ್ತು** : ೨. ಸಭೆಯು ಭರಖಾಸ್ತಾಯಿತು (ಶ್ರೀರಾಯ. ೨೫೯) ; ಈ ದರಬಾರು ಭರಖಾಸ್ತಾಗಲಿ (ಚಾಂಚ್. ೩೪೫). [← ಪಾರ. ಬರ್‌ಖಾಸ್ತ್, ಬರಖವಾಸ್ತ್ ; ಹಿಂ. ಮರಾ. ಬರಖಾಸ್ತ್, ಬರ್ಖಾಸ್ತ್]

**ಬರಗ** 'ಬರಗು' ನೋ.

**ಬರಗರಗ** 'ಬರಗರುಗ' ನೋ.

**ಬರಗರುಗ**, ಬರಗರಗ (ನಾ). ಒಂದು ಬಗೆಯ ಸಸ್ಯ; ಗರುಗದಲ್ಲಿ ಒಂದು ಬಗೆ : ಅಳಲೆಕಾಯಿ ತಾರೆಕಾಯಿ . . . ಅಮರದ ವಳ್ಳಿ, ಬರಗರುಗ ಇವಂ ಕಷಾಯಮಿಟ್ಟು ಸೇವಿಸೆ ಶ್ಲೇಷ್ಮಜ್ವರಂ ತೀರ್ಗುಂ (ಸಕವೈ. ೯೯). **ಬರಗರಗ**: ಹಿತ್ತಾಳೆ ಶುದ್ಧಿ : ಹೊನ್ನುಗೊನ್ನೆ ಸೊಪ್ಪು ಬರಗರ [ಬರಗರಗ] ಸೊಪ್ಪು ತುಂಬೆ ಯಿ ೩ ರಸಗಳನ್ನು ಸಮ ಮಾಡಿ ೭ ದಿನ ಇದರಲ್ಲಿ ಉನೇ ಹಾಕಿ ತೊಳದು . . . ಸ್ವಲ್ಪ ರಸ ಹಾಕಿ ಕರಗಿಸಲು ಬಣ್ಣ ಬರುವುದು (ಗಂರತ್ನ. ೦೯–೩). [ಬರ್$_1$(<ಬಱ) + ಗರುಗ]

**ಬರಗಲೆ** (ನಾ). ಒಂದು ಬಗೆಯ ಆಭರಣ : ಸಂಗೆಗಿವು ಲಂಬಣಕ್ಕಿವು ಬರಗಲೆಗಿವು [ಪಾಠಾಂ. ಬರಗಲ್ಗಿವು] ಮುಗುಳ್ಗಳಿವು ಮೇಖಲೆಗಿವು ನೂಪುರ ರಚನೆಗಿವೆಂದವನಾದರದಿಂದಂ ಕೊಯ್ದುರಾಯ್ದು ದಿವಿಜಾಂಗನೆಯರ್ (ಆದಿಪು. ೬–೬೯) ; ಬರಗಲೆಯುಂ ಕೊಪ್ಪುಂ ನೂಪುರಮುಂ ಲಂಬಳಮುಮಲ್ಲಿ ಮಲ್ಲಿಗೆಯ ಮುಗುಳ್ ಬಿರಿಮುಗುಳೆಂಬಿವು ತನಗಾಗಿರೆ ದೇಸೆಯ ಮಾಸ ರಿಕ್ಕೆಯಂ ಪೊಸಯಿಸಿದಳ್ (ಶಾಂತಿಪು. ೯–೨೨). [?]

**ಬರಗಾಡು** (ನಾ). ನಿಸ್ಸಾರವಾದ ಕಾಡು–ಅಡವಿ ; ಬಂಜರುಭೂಮಿ: ಭೂಮಿ ಬರಗಾಡು ನಿಸ್ಸಾರ (ಘೂಖವ. ೪೦೪). [ಬರ್$_1$ (<ಬಱ)+ಕಾಡು$_2$]

**ಬರಗಾಲ** 'ಬಱಗಾಲ' ನೋ.

**ಬರಗಿ** 'ಪರಗಿ' ನೋ.

**ಬರಗಿನಹುಲ್ಲು** (ನಾ). ಒಂದು ಬಗೆಯ ಹುಲ್ಲು; ಬರಗು: "ಕೋದ್ರಹುಲ–ಬರಗಿನ ಹುಲ್ಲು" (೬ಕಧ. ೪೦). [<ಬರಗು$_2$+ಹುಲ್ಲು (<ಪುಲ್)]

**ಬರಗು$_1$** (ಕ್ರಿ). ಬಾಚು ; ಗೋರು : ಬಯಲಿಂಗೆ ಕೈ ಬಿಚ್ಚಿ ಬರಗುತ ಭೀಮ ಬಾ ಸಹಸ ಬಳಲಿದೆಯಲಾಯೆಂದು ಮೋಹದಿಂದ ಕಿಚ್ಚುಗೆದರುತ ಮನದಿ ಕರೆಯಲ್ಪಕಾರಿಯಂ ಅಚ್ಯುತನು ಹಿಂದಿರಿಸಿ . . . ಉಕ್ಕಿನೋಳ್ಮಾಡ್ದ ಭೀಮನಂ ನಿಲಿಸಿದರು ತಂದು ಮುಂದೆ (ಕುಸಂಗ. ೬೭–೨೨); ಕಾವ್ಯವೆಂದರೆ ನಮ್ಮಂಥ ಜೀವಿಯೇ ಅಲ್ಲದಿರುವಲ್ಲಿ ಅದರೊಳಗೆ ಆತ್ಮವನ್ನು ತುಂಬಿಸುವುದೆಂದರೆ . . . ಬಾನನ್ನು ಬರಗುವಂತೆಯೇ ಸರಿ (ಪಾಕೋಶ. ೩೩೯).

**ಬರಗು$_2$**, ಬರಗ (ನಾ). ೧. ಒಂದು ಬಗೆಯ ಧಾನ್ಯ ; ಹಾರಕ : "ಸ್ಯಾಮಕಾಹ್ವ ಬರಗುವದಕ್ಕುಮಂತಾ ಪ್ರಿಯಂಗು ಕಂಗು ಸಮಾಖ್ಯಂ" (ಶಸ್ತುಕೋ. ೪೯–೦೬); ನೀವಿಕ್ಕುವ ಕೀರೆಗಂ ಬರಗಿನೋಗರಕ್ಕಂ ಪುಟ್ಟಿದವನಲ್ಲ (ಪಂಚತ. ೨–೩೩); ಆದರದೆ ಜ್ಯೇಷ್ಠದಪರದ ಬೂದಿಯ ಮೃಗಶಿರದೆ (ರಾದಿ) ಕೊಂಡ ಮಟಿಯಿಂ ಬೆಳೆಗುಂ ಮೇದಿನಿ ಪೊಱಗಣ(ಪರ) ನಾಲ್ಕು ಱೊಳಾದಡೆ ಪಾರಕ್ಕು ಬರ(ಱ)ಗು ಬೆಳೆಗುಂ ಸ್ವಲ್ಪಂ (ಅಟ್ಟಿಶು. ೯–೦೩೬). ೨. ಬೆಟ್ಟಗಳಲ್ಲಿ ಬೆಳೆಯುವ, ಬರೆಯುವ ಲೇಖನಿಯನ್ನು ತಯಾರಿಸಲು ಉಪಯೋಗಿಸುವ ಒಂದು ಬಗೆಯ ಕಡ್ಡಿಯಾಗುವ ಹುಲ್ಲು : 'ಬರಗಂಕಡ್ಡಿ' ಪರಾ. **ಬರಗ** : ೧. ಬರಗದ ಅನ್ನ ತಿನ್ನುವವ ಹೂರಿಗೆ ಬಯಸಿದ ಹಾಗೆ (ಗಾದೆ).

[ದೇ.॥ ತಮಿ. ವರಕು; ಮಲ. ವರಗು; ತೆಲು. ವರಗ, ವರಿಗೆ. / ಸಂ. ವರಕ, ವರುಕ./ಮರಾ. ಬರಗ]

**ಬರಗುಕಡ್ಡಿ** (ನಾ). ೧.=ಬರಗು$_2$ ೨ : ಕತ್ತೃಣಂ, ಪೌರಂ, ಸೌಗಂಧಿಕಂ, ಧ್ಯಾಮಂ . . . ರೌಹಿಷಂ — ೬ ಕಾಚೀಹುಲ್ಲು. ಕಾಚೀಕಡ್ಡಿ, ಹಂಚೀ ಕಡ್ಡಿ, ಬರಗುಕಡ್ಡಿ ಇವುಗಳೆಲ್ಲಕ್ಕೂ ಪೆಸರುಗಳು (ಸಿದ್ಧಾಂತಿ. ೦೫೦). ೨. ಬರಗಿನ ಹುಲ್ಲಿನ ಕಡ್ಡಿಯಿಂದ ಮಾಡಿದ ಲೇಖನಿ : (•).

[ಬರಗು$_2$ + ಕಡ್ಡಿ]

**ಬರಗೂರ್** (ನಾ). ಒಂದು ಊರಿನ ಹೆಸರು; ✱ ಬಳ್ಳಾರಿ ಜಿಲ್ಲೆಯ ಈಗಿನ ಬರಗೂರು : ಶ್ರೀ ಮಹೇನ್ದ್ರಾಧಿರಾಜನಾತಂ ಚೋರವ್ಮೊದಲಾದ ಶೇಷಾದಾಯಿಗರ ನಿಮರ್ೂಲಂ ಕಿಡಿಸಿ ಪೃಥ್ವೀರಾಜ್ಯಂಗೆಯ್ಯುತ್ತ ಬರಗೂರೆೊಳ್ಬೀಡಂ ಬಿಟ್ಟು (ಎಕ. XII. ಶಿರಾ. ೨೪–೨; ಸು. 900); ಶ್ರೀ ಪ್ರಿತುವೀವಲ್ಲವ ಪಲ್ಲವಕೊಲತಿಲಕ ಶ್ರೀಮನ್ಮಯ್ದುಮ್ಮರಸಪ್ರಿ[ಥ]ತುವೀರಾಜ್ಯಂಗೆಯ್ಯುದ್ದ ಬರಗೂರೊಳಿರೆ (ಸೌಇಇ. IX–i, ೪೦–೯; 977).

[ಬರಗು$_7$ + ಊರ್]

**ಬರಗೆಡು** (ಕ್ರಿ). ಏನೂ ಇಲ್ಲದಂತೆ ಆಗಿ ಕಂಗೆಡು; ಗತಿಗೆಡು : ಆ ಬರಗೆಟ್ಟ ಬಡ ಹುಡುಗರು ಉಣ್ಣುವ ಸಂಭ್ರಮ ನೋಡಿ ಆ ಧಾರ್ಮಿಕ ವೈದ್ಯನಿಗೆ ಪರಮಸಂತೋಷವಾಯಿತು (ಖುಂಖಯ. ೪–೬೮); ಈ ನಂಜೇ ಲಿಂಗಭಟ್ಟನು ಬರಗೆಟ್ಟು ಅಲ್ಲಿದ್ದ ತಿಂಡಿಗಳನ್ನು ತಿಂದನು (ಹೀತಿಹಾ. II, ೬).

[ಬರ್$_1$ ( < ಬಱ) + ಕೆಡು$_1$]

**ಬರಟು** (ನಾ). (ಉಕ) ಹೂವು, ಕಾಯಿಗಳು ಆಗದಂಥ ತೊಗರಿಯ ಹಸಿಯ ಗಿಡ : ಬರಟಿನಿಂದ ಕಣದ ಕಸ ಹೊಡೆದು ತೆಗೆ (ಜೂಶಿ). 'ಬಱಲು' ಪರಾ. [?]

**ಬರಡಕೆಱೆ** 'ಬರಡಗೆಱೆ' ನೋ.

**ಬರಡಗೆಱೆ**, ಬರಡಕೆಱೆ (ನಾ). ಒಂದು ಕೆರೆಯ ಹೆಸರು (?) : ಅನ್ತ ಬನ್ದು . . . ಇಶನ್ಯದಿಶಿ ಒಳಿಗೆಱೆಯ ಬರಡಗೆಱೆಯೊಳ್ಕುಡಿತ್ತು (ಎಕ. XVI, ತಿಪಟೂ. ೦೪೦–೬೩: ಸು. 900). **ಬರಡಕೆಱೆ** : ಕೆಡಸೂರ್ ಪೂರ್ಬ್ಬಸ್ಯಾನ್ದಿಶಿ ಬರಡಕೆಱೆಯ ಮೂಡ ಕಡೆ ಗೋಡೆಬಳ್ಳವಗೆಱೆಯ (ಮ್ಯಆಂ. ೦೯೦೯, ೦೦–೬೯; 900). [ಬರಡ ? + ಕೆಱೆ]

**ಬರಡಾ**, ಬರಡೀ, ಭರಡಾ (ನಾ). ಒಂದು ಬಗೆಯ ಅಡಕೆ ; ಹಣ್ಣು ಅಡಕೆ : ಬರಡಾಅಡಕೆ—ಬಹಳ ದೊಡ್ಡದಾಗಿ ಹಾಂಗೂ ಸಣ್ಣದಾಗಿರ

ಬಾರದು, ಮಧ್ಯಮ ಇರತಕ್ಕದ್ದು . . . ಇಂಥಾ ಮಾಲವೂ ಒಂದನೇ ನಂಬರದ ಬರಡಾಅಡಿಕೆ ಎಂದೆನಿಸಲ್ಪಡುತ್ತದೆ (ಮುಂಅಧ್ಯಾ. ೪೪). **ಬರಡೀ:** ಅಡಿಕೇಕಾಯಿ ಹಣ್ಣಾಗುವವರೆಗೆ ಬಿಟ್ಟರೆ ಅದರೊಳಗೆ ಮೇಲಾದ ಬರಡೀ ಅಡಿಕೆ ಹೊರಡುತ್ತದೆ; ಯೆಳಕಿನ ಕಾಯಿಯಲ್ಲಿ ಚಿಕಣೀಅಡಿಕೆ ಹೊರಡುತ್ತದೆ (ಕಭಾಗ. ೨೬೪). **ಭರಡಾ:** ಅವಳು . . . ಭರಡಾಅಡಿಕೆಯನ್ನು . . . ಮುಂದೆ ಹಿಡಿದಳು (ರಕ್ತರ್. ೨೦೭). [ ← ಮರಾ. ಬರಡಾ, ಬರಡೀ ]

**ಬರಡಿ** 'ಬಱಿಡಿ' ನೋ.

**ಬರಡೀ** 'ಬರಡಾ' ನೋ.

**ಬರಡು** 'ಬಱಿಡು' ನೋ.

**ಬರಡುಗಾಲ** (ನಾ). ಕ್ಷಾಮದ ಕಾಲ: ವಚನಸಾಹಿತ್ಯದ ದೃಷ್ಟಿಯಿಂದ ಹದಿಮೂರು ಹದಿನಾಲ್ಕನೇ ಶತಮಾನಗಳು ಬರಡುಗಾಲವೆಂದೇ ಹೇಳಬೇಕು (ಕೊಪ್ಪಳಶು. ೦೪). [ಬರಡು ( <ಬಱಿಡು ) + ಕಾಲ]

**ಬರಡುಗೊಳಿಸು** (ಕ್ರಿ). ವ್ಯರ್ಥಗೊಳಿಸು ; ನಿಷ್ಪ್ರಯೋಜಕವನ್ನಾಗಿ ಮಾಡು : ಕಣ್ಣು ಗುಡ್ಡಿಯೆ ಆಗಿ ಕುರುಡುಗೊಳಿಸುವೆಯಾ ? ನೆರಳು ನೀಡುತ ಸಸಿಯು ಬರಡುಗೊಳಿಸುವೆಯಾ? (ಪಪ್ಪರ್. ೭–೦೩). [ಬರಡು (<ಬಱಿಡು) + ಕೊಳ್$_1$ +– ಇಸು]

**ಬರಡುತನ** (ನಾ). ಮಕ್ಕಳಾಗದಿರುವಿಕೆ; ಬಂಜೆತನ : ಕೆಲವೊಮ್ಮೆ 'ಇ' ಜೀವಾತಿನ ಅಭಾವದಿಂದ ಹೆಣ್ಣುಮಕ್ಕಳಲ್ಲಿ ಮತ್ತು ಗಂಡಸರಲ್ಲಿ ಕೂಡ, ಬರಡುತನ ಬರಬಹುದು (ಆಡುಶಾ. ೬೬). [ಬರಡು (<ಬಱಿಡು)+– ತನ]

**ಬರಡುಭೂಮಿ** (ನಾ). ಬಂಜೆನೆಲ ; ಪಾಳುಭೂಮಿ ; ಬಂಜರು : ಬರಡುಭೂಮಿ ಬಂಗಾರದ ಭೂಮಿಯಾಗುತ್ತದೆ (ಪಪಡಿ. ೩೦). [ಬರಡು (<ಬಱಿಡು) + ಭೂಮಿ]

**ಬರಡುಮರ** (ನಾ). ಫಲ ಬಿಡದ ಮರ : ಎಲ್ಲಿಂದಲೋ ಸುಳಿಗಾಳಿ ತಾಕಿ ಬರಡುಮರದ ಒಂದೆರಡು ಎಲೆಗಳೂ ಉಳಿಯುವಂತೆ, ಅವಳ ತಲೆಯಲ್ಲಿ ಒಂದೆರಡು ವಿಚಾರಗಳು ಗುಜುಗುಜು ಮಾಡಹತ್ತಿದ್ದವು ((ಶಿಕಾಳ. ೫೦). [ಬರಡು(<ಬಱಿಡು) + ಮರ$_1$]

**ಬರಡುಮಾತು** (ನಾ). ವ್ಯರ್ಥವಾದ ಮಾತು : ಸುಮ್ಮನೆ ಬರಡು ಮಾತಿನಿಂದೇನು ಲಾಭ ? (ರೂಢಿ). [ಬರಡು (<ಬಱಿಡು) + ಮಾತು$_1$]

**ಬರಡೆ** 'ಬಱಿಡೆ' ನೋ.

**ಬರಣ** (ನಾ). (?) : ಕೇಶವ ದೇವರಿಗೆ ಒನ್ದು ವರಹ ಕುಳದ ದಾಸರಿ ಬರಣ ತಿಪ್ಪ ಒನ್ದು ಬರಣ ತೋಟವನೂ ದೇವಸ್ವವಾಗಿ ಧಾರೆಯನೆಱದು ಕೊಟ್ಟೆವಾಗಿ (ಎಕ. VIII. ಸೊರಬ. ೫೨೬–೦೦ ; 1515). [ ? ]

**ಬರಣೆ** (ನಾ). ಕರಡಿಗೆ ; ಕರಂಡಕ : ಏಂ ಬಱದೆ ಪರಪುಪ್ಪೆ ಪಲವುಂ ಬರಣೆಯನಿರಿಸು ಕೆಲಕೆ ನೆಲವೆಲೆ ಪೇಟಾ ಪೊಂಬರಣೆಗಳೆರಡರ್ಕಂ ಚೆಂಬರಣೆ ಗವಿನಿತಱಂದೆ ತಣಿದಪವೀಗಳ್ (ಜಕಪ. ೬–೫೦) ; ಅರಣೆ ಕಡಿದರೆ ಬರಣೇ ಮದ್ದು ಸಾಲದು (ಗಾದೆ).

[<ಸಂ. ಭರಣೀ./ತಮಿ. ಮಲ. ಪರಣಿ ; ತುಳು. ಬರಣೆ, ಬರಣೆ ; ಕೊಡ. ಬರಣಿ ; ತೆಲು. ಬರಣಿ, ಬರಿಣೆ]

**ಬರತ$_1$** 'ಭರತಿ' ನೋ.

**ಬರತ$_2$** (ನಾ). ಒಂದು ಬಗೆಯ ವ್ಯಂಜನಪದಾರ್ಥ ; ಬಜ್ಜಿ : ತೆಳ್ಳನ್ನ ಎಂಟುಹತ್ತು ರೊಟ್ಟಿಯು ಮಾಡಿ ಬದನೀಕಾಯಿಯು ಸುಟ್ಟು ಬರತವ ಚೂಡಿ ಅಲ ಮಾಗಣಿಬೇರು ಹುಣ್ಣಗಂಟಿಯು ಕಾಯಿ ಸಲಸಂದರೊಂದ್ಮುತ್ತು ಸಲಸಿದೆನೊ ಶಿವನೆ (ಲೋಕಗೀ. ೯೩). [ ? ].

**ಬರತರಫು** 'ಬರತರಫು' ನೋ.

**ಬರತರಫ್** 'ಬರತರಫು' ನೋ.

**ಬರತರಫು**, ಬಡತರ್ಫ, ಬರತರಫು, ಬರತರಫ್, ಬರತರ್ಫು, ಬರತರ್ಫು, ಬರ್ತರಫ್, ಬರ್ತರ್ಫ, ಭರತರ್ಫು (ನಾ). ಉಚ್ಚಾಟನೆ ; ರದ್ದತಿ; ವಜಾ; ಕೆಲಸದಿಂದ ತೆಗೆದುಹಾಕುವಿಕೆ : ಪಾರ್ಲಿಮೆಂಟಿನವರು ಅರಸನಿಗೆ ಹಣ ಕೊಟ್ಟು ಬಕಿಂಗ್‌ಹಮನನ್ನು ಬರತರಫು ಮಾಡಬೇಕೆಂದು ಮತ್ತೆ ಹೇಳಿದರು (ಇಂಗ್ಲಂಡ. ೦೪೦); ೪೦೦೦ ಕುದುರೆ ಬರತರಫು ಮಾಡಿಸಿ (ಹೈದರ. ೩೪). **ಬಡತರ್ಫ** : ಕೆಲವು ದಿವಸಗಳ ಕೆಳಗೆ ನಾನು ನಮ್ಮ ಬಡತರ್ಫ (dismiss) ಮಾಡಿದ ಆಳುಮಗನಿಗೂ ಒಂದು ತುಣುಕು ಮಾನಪತ್ರವನ್ನು ಕೊಟ್ಟೆನು (ಶಿವಾಶ. ೦೪೭). **ಬರತರಫು** : ಅವನು ಆ ಮಣೆಗಾರನನ್ನು ಬರತರಫು ಮಾಡಿಸಿದನು (ಕಥಾಮು. IV, ೩೦). **ಬರತರಫ್** : ಮೊದಲು ಹೈದರನು ನಾಲ್ಕು ಸಾವಿರ ಕುದುರೆಯ ವರನ್ನು ಈ ರೀತಿ ತೊಲಗಿಸಿ ಅವರ ಸೈನ್ಯವನ್ನು ಬರತರಫ್ ಮಾಡಿಸಿದನು (ಒಡೆಕ. ೭೨) ; ಇನ್‌ಸ್ಪೆಕ್ಟರು . . . ನನ್ನನ್ನು ಬರತರಫ್ ಮಾಡಿಬಿಟ್ಟರು (ಕ್ರೀಕಥ. ೭೬). **ಬರತರ್ಫು** : ಸಸ್ಪೆಂಡು, ಬರತರ್ಫು ಎಂದ ಕೂಡಲೆ 'ದಮ್ಮಯ್ಯ ಮಾಫಿ ಮಾಡಿ' ಎಂದು ವಿಧೇಯತೆಯನ್ನು ತೋರಿಸುವುದು (ಗರುಡಾ. ೯೩): **ಬರತರ್ಫು** : ಅಂಥಾ ನೌಕರನನ್ನು ಸಸ್ಪೆಂಡ್ ಮಾಡಬಹುದು, ಬರತರ್ಫು ಮಾಡಬಹುದು (ಗ್ರಾಮಶಿ. ೬೮). **ಬರ್ತರಫ್** : (ಕೃಸಗ. II, ೫೯೩). **ಬರ್ತರ್ಫ** : ಜ್ವರ ನಿಂತರೆ ಬರ್ತಫ್ ಮಾಡುತ್ತಾರಲ್ಲಾ ಜ್ವರಾನೂ ಉಳಿಸಿಕೊಂಡು ಬಿದ್ದು ಕೋಡೇ ಇರೋಣ, ಅಂತ ಅನ್ನಿಸುತ್ತದೆ (ಕಂಗೂಂ. ೦೦೦) ; ಸೋಮು ಪ್ಯಾಸ್ ಆಗಲಿಲ್ಲ. ಆದುದರಿಂದ ತಂಡದಿಂದ ಅವನಿಗೆ ಬರ್ತರ್ಫ ಆಯಿತು (ಸ್ವಾಮಿನ್ನೇ. ೦೨೯). **ಭರತರ್ಫು** : ಪರಾರತ್ತು ಮಾಡಿದವರು ಭರತರ್ಫಾಗಿ ಹೋಗುವಲ್ಲಿ ಮಾರ್ಗದಲ್ಲಿ ಅವರನ್ನೆಲ್ಲಾ ಲೂಟೀ ಮಾಡಿ (ಹೈದರ. ೩೪). [←ಹಿಂ. ಬರತರಫ್ ; ಮರಾ. ಬರತರಫ್, ಬರತರ್ಫ, ಬರ್ತರ್ಫ]

**ಬರತರ್ಫು** 'ಬರತರಫು' ನೋ.

**ಬರತರ್ಫು** 'ಬರತರಫು' ನೋ.

**ಬರದೆ** (ನಾ). ಒಂದು ನದಿಯ ಹೆಸರು ; ವರದಾನದಿ : ಮೂಡಲು ತಮ್ಮುಗೆಯ ಕಳ್ಳವೊಳೆ ಮೊದಲಾಗಿ ಬರದೆಯಿಂ ತೆಂಕ ಪೋಪ ಭಣ್ಡಕ್ಕೆ (ಎಇ. XIX, ೦೬೫–೦೬ ; 1075). [<ಸಂ. ವರದಾ]

**ಬರನು** 'ಬಱ' ನೋ.

**ಬರಪ** 'ಬರೆಪ' ನೋ.

**ಬರಬತ್ತ** (ನಾ). ಖುಷ್ಕಿ ನೆಲದಲ್ಲಿ ಬೆಳೆಯುವ ಬತ್ತ : ಪುಣಜಿ ಬತ್ತ : ನೀರಾವರಿ ಇಲ್ಲದ ಕಡೆ ಹೊಲಗಳಲ್ಲೇ ಬರಬತ್ತ ಬೆಳೆಯುತ್ತಾರೆ (ರೂಢಿ). [ಬರ್$_1$ (<ಬಱ) + ಬತ್ತ]

**ಬರಬಿಸಿಲು** (ನಾ). (ಹಸಿಯನ್ನು) ಒಣಗಿಸುವಂತಹ ಬಿಸಿಲು ; ಅತಿ ತಾಪದ ಬಿಸಿಲು : ಬರಬಿಸಿಲಿಂದ, ಹೊದೆಯದ ಅವನ ಮೈ ಬಾಡಿ ಬೆಂಡಾಗಿತ್ತು (ಹೇಮಸೂ. ೫೪). [ ಬರ್$_1$ (<ಬಱ)+ಬಿಸಿಲು (<ಬಿಸಿಲ್)]

**ಬರಬು** ' ಬರಂಹು ' ನೋ.

**ಬರಮ** 'ಬೊಮ್ಮ' ನೋ.

**ಬರಮಪ್ಪ** (ನಾ). ಬೊಮ್ಮ ; ಬ್ರಹ್ಮ : ಡೋಳಿನ ಮ್ಯಾಲ್ ಕೈ ಬರಮಪ್ಪ ಹಾಕ್ಯಾನು ತಾಳವ ಶಿವನಪ್ಪ ತಟ್ಯಾನ್ಯಾ ಒಳ್ಳೊಳ್ಳೆ ಪದ ಗಳು ಹನುಮಪ್ಪ ಹಾಡ್ಯಾನು ಚೆಲುವ ಕನಕಪ್ಪ ಕುಣಿದಾನ್ಯಾ (ಕಪಕ. ೦೨೦–೦೨). [ಬರಮ ( <ಬೊಮ್ಮ) + ಅಪ್ಪ$_1$]

**ಬರಮೋಡ** (ನಾ). ಅಕಾಲದ ಮೋಡ ; ನೀರಿಲ್ಲದ ಮೋಡ : ವಸಂತಪೂರ್ಣಿಮಿಯು ಭೃಗುವಾರದಾ ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ ; ನೋಡೊಂದೆ ಬರಮೋಡ ಬಾನಗಲ ಚಾಚಿ ನೋಹನ ಕಾಲದಾ ಪ್ರಲಯಮೇಘವೆನೆ ಮುಚ್ಚಿಹುದು (ಗೂಳ್ಯೋಕಾ. ೦೦–೨೬೩). [ಬರ್$_1$ (<ಬಱ)+ ಮೋಡ]

**ಬರಲು** 'ಬಱಲು' ನೋ.

**ಬರಲುಕಡ್ಡಿ** (ನಾ). ಪೊರಕೆಯನ್ನು ಕಟ್ಟಲು ಉಪಯೋಗವಾಗುವ ಗಿಡಗಳ ಒಣಗಿದ ಕಡ್ಡಿ: (ಪ್ರಕಿಗಿ. ೦-೯).
[ಬರಲು (<ಬಱಲು) + ಕಡ್ಡಿ]

**ಬರಲುಕೊಂಬೆ** (ನಾ). ಎಲೆಗಳು ಉದುರಿ ಬೋಳಾದ ಕೊಂಬೆ: ಕಿಟಕಿಗೆದುರುಬದುರಾಗಿ ಉದ್ದವಾದೊಂದು ಮರದ ನೆರಳು ಬಿದ್ದಿತ್ತು. ಅದರ ಬರಲುಕೊಂಬೆಗಳ ಜಟಿಲಪ್ರತಿರೂಪ . . . ನುಣ್ಣುಗಲ್ಲು ನೆಲದ ಮೇಲೆ ಸ್ಪಷ್ಟವಾಗಿ ಮೂಡಿತ್ತು (ತ್ರಿಸರು. ೦೩೩).
[ಬರಲು (< ಬಱಲು) + ಕೊಂಬೆ$_1$]

**ಬರಲುಗಿಡ** (ನಾ). ಎಲೆಗಳು ಉದುರಿ ಒಣಗಿದ ಗಿಡ: ಒಂದು ಕವಲ ತುದಿಗೆ ಒಂದು ಗಿಡವು ಶೋಭಾಯಮಾನವಾಗಿ ಬೆಳೆದಿದ್ದು . . . ಇನ್ನೊಂದು ಕವಲಿನ ಮೇಲೆ ಒಂದು ಬರಲು ಗಿಡವು ಬೆಳೆದಿತ್ತು (ರಕ್ಕಗ್ಗ. ೦೬೨). [ಬರಲು (<ಬಱಲು) + ಗಿಡ (<ಗಿಡು)]

**ಬರಲುವೋಗು** (ಕ್ರಿ). ಎಲೆಗಳು ಉದುರಿ ಬೋಳಾಗಿರು: ಮಾಗಿಗೆ ಬರಲುವೋದ ಬೂರುಗಮರಂ ಕೋಡುಕೋಡಿನ ಕವಲ್ಗಣೆಗಳಿಂ ಮಲೆ ತಲೆಗೆ ಕೋಡು ಮೂಡಿದ ಕೆರನ ತೋರ್ಪಂತೆ (ಶ್ರೀರಾಮಾ. ೨೩೦-೮೯).
[ಬರಲು (< ಬಱಲು) + ಪೋಗು$_1$ (<ಪೋ$_1$)]

**ಬರವಣ** (ನಾ). "ಬರವಣಿಗೆ" (ಗಿಶಂ. ಕೋಶ): ಹಸುರು ಮಸಿಯಿಂ ಬರೆದುದಿದರ ಬಿನ್ನಣಮೇಂ ? ನಿನ್ನ ಕವನಕೆ ಕಾಲನಿಟ್ಟ ಟಿಪ್ಪಣಮೇಂ ? ಮುನ್ನನಿಂದಿಗೆ ಸಾಲವಿತ್ತ ಬರವಣಮೊ ? ನಿಚ್ಚತೆಗೆ ನಮ್ಮನೋಲಯಿಸುವವುತಣಮೊ ? (ಗಿಶಂ. ೨೭-೨೩).
[ಬರ್$_1$ + — ಅಣ]

**ಬರವಣಿಗ** (ನಾ). ಬರೆಯುವವನು; ಲಿಪಿಕಾರ: ಬಿರುದರು ಬರವಣಿಗರುಂ ಗವಟಿಗಳುಂ ಗಾತ್ರಿಗರುಮಯ್ವತ್ತೊಕ್ಕಲುಂ ಸಮಸ್ತ ನುರಂಗಳುಂ . . . ಪಾಮಶಕ್ತಿದೇವರಿಗೆ ಧಾರಾಪೂರ್ಬ್ಬಕಂ ಮಾಡಿ (ಕೊಲ್ಹಾ ಶಾ. ೦೩-೬೬; 1186). [ಬರ್$_1$ + — ವಣಿಗ$_2$ (< — ವಳಿಗ$_2$)]

**ಬರವಣಿಗೆ, ಬರವಣಿಗೆ**(ನಾ). ೧. (ಬರೆದ) ಅಕ್ಷರ; ಲಿಪಿ: "ಲಿಪಿಃ, ಲಿಬಿಃ — ೨ . . . ಬರೆಯಲ್ಪಟ್ಟ ಅಕ್ಷರಗಳ ಆಕಾರಸ್ಥಿತಿಗೆ ಹೆಸರು ಶಾಸನದ ಲಿಪಿ ಮುಂತಾದ್ದು, ಬರವಣಿಗೆಗೂ ಹೆಸರುಗಳು" (ಸಿದ್ಧಾಂತಿ. ೨೩೯). ೨. ಬರೆಯುವಿಕೆ: ಇಗೊರ್ ಅಲೆಕ್ಸಾಂಡ್ರೊವಿಚ್ ಬರವಣಿಗೆ ಮುಗಿಸಿ ಕನ್ನಡಕವನ್ನು ತೆಗೆದಿಟ್ಟು "ಕುಳಿತುಕೊಳ್ಳಿ, ಕುಳಿತುಕೊಳ್ಳಿ" ಎಂದರು (ಶಾಲಿಕು. ೦೬೩). **ಬರವಣಿಗೆ**: ೩. ಬರೆದುದು; ಬರಹ; ಲೇಖನ: ಪಂಡಿತರ ಬರವಣಿಗೆಗಳಲ್ಲಿ ಸಂಸ್ಕೃತಪ್ರಚುರವಾದ ಭಾಷೆಯಿತ್ತು (ಕಸಾಇ. ೮೦).
[ಬರ್$_1$ + — ವಣಿಗೆ]

**ಬರವಸ** 'ಭರವಸ' ನೋ.

**ಬರವಸಿಗ** 'ಭರವಸಿಗ' ನೋ.

**ಬರವಿಗ** (ನಾ). ಬರುವವನು; ಆಗಮಿಸುವವನು: ಅನತಿ ದೂರದೊಳೊರ್ವಳ್ ಕೂರಿಸಿದ ಬರವಿಗನ ಬರವಿಂಗೆ ಶಯ್ಯಾಸನಮಂ ರಯ್ಯಂ ಮಾಡಿರಿಸೆ ಪೀಠಮರ್ದಕಂ ಸಾರ್ದು ನೋಡಿ (ಶಂಧ್ರುಪು. ೬೩-೬೦೫). [ಬರವು (<ವರ್$_1$) + — ಇಗ)]

**ಬರವು** 'ವರ್$_1$' ನೋ.

**ಬರವುಲಿಕ** (ನಾ). ಒಂದು ಸ್ಥಳದ ಹೆಸರು: ಪೂರ್ವ್ವಸ್ಯಾಂ ದಿಶಿ ಬರವುಲಿಕ ಸೀಮೆ (ಇಇ. VII, ೨೦೯-೪೪; ಸು. 10ನೆಯ ಶತ). [?]

**ಬರಷಣ** 'ಭರಷಣ' ನೋ.

**ಬರಸಿಡಿಲು** 'ಬಱಸಿಡಿಲ್' ನೋ.

**ಬರಸು$_1$** 'ವರಿಸು$_1$' ನೋ.

**ಬರಸು$_2$** 'ಬರೆಯಿಸಂ' ನೋ.

**ಬರಸು$_3$** (ನಾ). ಬರೆಯುವಂತೆ ಮಾಡುವಿಕೆ; ಬರೆಸುವಿಕೆ: ಮನೆಯೆ ಸಾಲೆಯಾಗಬೇಕಾದರೆ ಈ ಬರಸುಗಳ ಅಗತ್ಯವೇನು ? (ರಂಗರೋ. ೦೨೬).
[ಬರ್$_1$ + — ಸು$_3$]

**ಬರಹ** 'ಬರೆಪ' ನೋ.

**ಬರಹಗಾತಿ** (ನಾ). ಬರೆಯುವವಳು; ಲೇಖಕಿ: ಬರಹಗಾತಿಯರ ಲೆಕ್ಕಣಿಕೆಗೆ ಇರುವ ಬಂಧನ ಇದೀಗ ಇಲ್ಲದಾಗಿದೆ (ಕನ್ನಕು. ೦೯೩೩-೩೯; ೦-೬೦). [ಬರಹ (<ಬರೆಪ) + — ಕಾತಿ$_1$]

**ಬರಹಗಾರ** 'ಬರೆಪಕಾಱ' ನೋ.

**ಬರಹಗಾರ್ತಿ** (ನಾ). = ಬರಹಗಾತಿ: ಮಹಿಳಾಬರಹಗಾರರು; ಅರ್ಥಾತ್ 'ಬರಹಗಾರ್ತಿ'ಯರು (ರೂಶಕಂ. ೪೩).
[ಬರಹಗಾರ (< ಬರೆಪಕಾಱ) + — ತಿ$_1$ (<— ಇತ್ತಿ)]

**ಬರಹು$_1$** 'ಬರೆಪು' ನೋ.

**ಬರಹು$_2$** 'ಬರುಹು' ನೋ.

**ಬರಾಕು** (ನಾ). ತ್ವರೆ; ಜೋರು; ರಭಸ: ರಾಮನ ಕಾಲುಗಳು ತಿರುಗಿ ಆಲಸ್ಯ ಗೊಳ್ಳಲಿಲ್ಲ. ಅವು 'ಬರಾಕಿ'ನಿಂದ ಮನೆಯ ಕಡೆಗೆ ಸಂದುವು (ಮರಮು. ೪೬೨); ವೆಂಕಮ್ಮ . . . ಬರಾಕಿನಿಂದ ಗುಡಿಯತ್ತ ನಡೆದರು (ಕದ್ದಸ. ೨೨೮). [← ಮರಾ. ಭರಾಕಾ]

**ಬರಾತ$_1$** 'ಪರಾತ' ನೋ.

**ಬರಾತ$_2$** 'ವರಾತ$_1$' ನೋ.

**ಬರಾಬರಿ$_1$**, ಬರಾಬ್ಬರಿ, ಬರೋಬರಿ$_1$, ಬರೋಬ್ಬರ, ಬರೋಬ್ಬರಿ, ಭರಾಭರಿ (ನಾ). ೧. ಸಮನಾದುದು; ಸರಿಯಾದುದು; ಉಚಿತವಾದುದು: ಈಗ ಬರಾಬರಿ ಆಯ್ತು ನೋಡು (ಶಂದುಬಿ ೩೨); ನೀನನ್ನೋದೂ ಒಂದು ರೀತಿಯಿಂದ ಬರಾಬರಿ (ಧರ್ಮಕಿ. ೬೬). ೨. ಸುವ್ಯವಸ್ಥೆ; ಓರಣ; ಅಚ್ಚುಕಟ್ಟು: ಬಿಡಿಸುತಲಾಗ ಬರಾಬರಿಯನು ಸರ್ವರೊಡಗೂಡಿ ನಿಂದು ಕೊಂಡಿರಲು (ಹ್ಯಾಶಕ. ೪೦-೩೪); ರಕ್ಕಸೇಶ್ವರ ಬರಲ್ಕೆಲಬಲದಿ ಕರಕ ಕರದೀಪಿಕೆಗಳು . . . ಆಭರಣಂಗಳಾರವಂಗಳು ಬರಾಬರಿಯ ಬಿಡಿಸುತ ಮುಂದೆ ಧೋರಣೆಯೊಳೈತರುತಮಿರ್ದುದು (ನಂಕಾರಾ. ೫-೬-೨೬). **ಬರಾಬ್ಬರಿ**: ೧. ಬರಾಬ್ಬರಿ ಏನೇ ಆದರೂ ಮದವಿ ಇದೇ ಊರಾಗ ಮಾಡೂದು (ತಿಹುಗು. ೩೪). **ಬರೋಬರಿ$_1$**: ೧. "ಬರೋಬರಿ" ವ್ಯೆಲುದ್ದ ಹೆಸರಿನ ಸೋಮಯಾಜಿಗಳು ಉತ್ತರಿಸಿದರು (ನಡಿದಾ. II ೯೦೦); ಅಂತೂ ನನ್ನ ಮಾತು ನಿನಗೆ ಬರೋಬರಿ ಅನಿಸಿತಲ್ಲ (ಕಾಗೆಕ. ೬೯). **ಬರೋಬ್ಬರ**: ೧. ಬರೋಬ್ಬರ ಆತು (ಧಲಿಸಂ. ೬೦). **ಬರೋಬ್ಬರಿ**: ೧. ನಮ್ಮ ಡಾಕ್ಟರ ಹುಣಸೀಕಟ್ಟೆಯವರಲ್ಲಿ ಹೋದರ ಎಲ್ಲಾ ಬರೋಬ್ಬರಿ ಆಗತದ (ಅಶಪಾ. ೦೨೯); ನಿಮ್ಮ ಪ್ರೊಸೀಜರ ಬರೋಬ್ಬರಿ ಇರಬೇಕು (ಗಂಮೂಯಿ. ೪೨). **ಭರಾಭರಿ**: ೨. ತತ್ಸಭೆಯೊಳಾ ನಂದಿಯುಮ್ಮಹಾಕಾಳರ್ ಭರಾಭರಿಗಳಂ ಮಾಡುತಿರ್ದರತಿಭಕ್ತಿಯಿಂದೆ (ಕಶಿಪು. ೨-೨೬). 'ಭರಾಭರಿಗೊಡು' ಪರಾ.
[← ಹಿಂ. ಬರಾಬರ್, ಬರಾಬರೀ, ಬರೋಬರ್; ಮರಾ. ಬರಾಬರ್, ಬರಾಬರೀ, ಬರೋಬರ್, ಬರೋಬರೀ]

**ಬರಾಬರಿ$_2$**, ಬರೋಬರಿ$_2$, ಬರೋಬ್ಬರ್ (ಅ). ಸರಿಯಾಗಿ; ಸಮನಾಗಿ; ತಕ್ಕುದಾಗಿ: ಈಗ ನನ್ನ ಮನಸ್ಸು ಬರಾಬರಿ ಇಲ್ಲ (ಸಮುಜ. ೦೨೬); ನನ್ನ ಖೋಲಿ ಕಸ ಉಡುಗಿ ಟೇಬಲ್ಲೊರಸಿ ಎಲ್ಲಾ ಸಾಮಾನು ಬರಾಬರಿ ಇಟ್ಟು ಬಾ (ಧನಂಜ. ೫). **ಬರೋಬರಿ$_2$**: ಹಾಗಾದರೆ ಉತ್ತರ ಹೇಗೆ ಬರೋಬರಿ ಬಂತು? (ಶಿರಾಥ. ೬೬): ದಾದಲ್ಯಾ ಬರೋಬರಿ ಹೇಳಿದ ನೋಡ ಶಕೀ (೦ಃಶಹ. 11, ೩೦). **ಬರೋಬ್ಬರ್**: ಸೀಪು

ಬರೋಬ್ಬರ್ ಕುಲಕರ್ಣಿ ಅನ್ರುಪ್ಪ ಸಾಕು (ವೃದ್ಧಿ. ೪೦). [< ಬರಾಬರಿ$_1$]

**ಬರಾಬರಿಗೆಯ್,** ಬರಾಬರಿಗೈ (ಕ್ರಿ). ೧. ವ್ಯವಸ್ಥೆಗೊಳಿಸು ; ಸರಿಗೊಳಿಸು : ಗಲಭೆ ಬೇಡ . . . ವಿಸುಕದಿರಿ ಎಂದು ಸಲೆ ವೇತ್ರಕರ್ ಬರಾಬರಿಗೆಯ್ಯುತ್ತಿರ್ದರಾ ಭಾಳನೇತ್ರನ ಸಭೆಯೊಳು (ಪಂಚತಂ. ೫-೩೬). **ಬರಾಬರಿಗೈ :** ೨. (ಆಲಂ) ಇಲ್ಲವಾಗಿಸು : ಮೇರು ಮಂದರಗಳೆನೆ ಬರುವ ಪೆರ್ದೆರೆಗಳನ್ನೂರುವೇಗದಿ ಬರಾಬರಿಗೈದು ನೀರಧಿಯ ಪೀರುವವೊಲ್ಪೈತಪ್ಪ ಮಾರುತಿಯ ನಿಟ್ಟಿಸುತ (ಪಂಚಾರಾ. ೫-೦-೨೬).
[ಬರಾಬರಿ$_1$+ಗೈ (<ಕೆಯ್$_1$)]

**ಬರಾಬರಿಗೈ** 'ಬರಾಬರಿಗೆಯ್' ನೋ.

**ಬರಾಬರಿಗೊಳಿಸು** (ಕ್ರಿ). ಸರಿಮಾಡು ; ನೇರಗೊಳಿಸು ; ವ್ಯವಸ್ಥೆಗೊಳಿಸು : ದನುಜವನಚರರ ನೆರವಿಯು ಬರಾಬರಿಗೊಳಿಸಿ ರುಜುಪಥಂಗೈದರಾಗ (ಪಂಚಾರಾ. ೬-೩೩-೦೪). [ಬರಾಬರಿ$_1$+ಕೊಳ್$_1$+ – ಇಸು$_1$]

**ಬರಾಬ್ಬರಿ** 'ಬರಾಬರಿ' ನೋ.

**ಬರಾಯಿಸು** 'ಭರಾಯಿಸು' ನೋ.

**ಬರಾರ** (ನಾ). ಒಂದು ಬಗೆಯ ತೆರಿಗೆ : ಚಾಂದಬೀಬಿಯು ಬಹು ಶೌರ್ಯದಿಂದ ಅದನ್ನು ರಕ್ಷಿಸಿದಳು ; ಬರಾರವನ್ನು ಕೊಟ್ಟು ಅಕಬರನ ಕೂಡ ಒಪ್ಪಂದ ಮಾಡಿಕೊಂಡಳು (ಹಿಂದುಇ. ೦೬೪).
[← ಪಾರ. ಹಿಂ. ಬರಾರ್]

**ಬರಾವರ್ದು**(ನಾ). ೧. ಗಣನೆ; ಲೆಕ್ಕಾಚಾರ. ೨. ವಂಶಪಾರಂಪರ್ಯವಾದ ಹಕ್ಕನ್ನು ನಮೂದಿಸುವ ಸರ್ಕಾರಿ ಲೆಕ್ಕ : ಆಗ ಗೌಡರ ಬರಾವರ್ದು ಉಳಿಸಲಿಕ್ಕೆ ಮತ್ತು 'ಸಸ್ಪೆನ್ಸಿ' ಡಿಸ್ಮಿಸಿ ತಪ್ಪಿಸುವುದಕ್ಕೆ ಗೌಡರ ರುಜುವನ್ನು ಶಾನುಭೋಗರು ಫೋರ್ಜರಿ ಮಾಡಿದ್ದುಂಟು (ಪವನ್ನಾರು. ೦೫೪); ಛತ್ರ, ದೇವಸ್ಥಾನ, ಮಠ . . . ಇವು ಮೊದಲಾದ ಮುಜರಾಯಿ ಬಾಬುಗಳನ್ನು ಖಾವಂದರವರು ವಿಚಾರಿಸಿ ಅಭಿವೃದ್ಧಿಪಡಿಸಿ ಇದರ ಸಂಬಂಧವಾದ ಬರಾವರ್ದುಗಳನ್ನೆಲ್ಲ ಆಯಾ ಫೌಜುದಾರರು ತರಿಸಿಕೊಂಡು ತನಿಖೆ ಮಾಡಿ . . . ನೋಡಿಕೊಳ್ಳಬೇಕೆಂತಲೂ ಸನ್ ೧೮೨೭ರಲ್ಲಿ ಹುಕುಂನಾಮ ಸಾದರ್ಮಾಡಿದರು (ಮಹಾಪಂ. II, ೫೬).
[← ಹಿಂ. ಬರಾವರ್ದ್; ಮರಾ. ಬರಾವರ್ದ್, ಬರಾವರ್ದೀ]

**ಬರಾವರ್ದುದಾರ** (ನಾ). ಬರಾವರ್ದಿನ ಪಟ್ಟಿಯಲ್ಲಿ ಹೆಸರು ನಮೂದಾಗಿರುವ ವ್ಯಕ್ತಿ : ಆಖೈರ್ ಬರಾವರ್ದುದಾರರ ಅಥವಾ ಅವರ ಕುಟುಂಬದವರ ಪೈಕಿ ಯಾರಿಗೆ ಹೆಚ್ಚು ಯೋಗ್ಯತೆಯುಂಟೆಂದು ಡೆಪ್ಯುಟಿ ಕಮಿಷನರವರಿಗೆ . . . ತೋರುತ್ತದೆಯೋ ಅಂಥಾವರನ್ನು . . . ಚುನಾಯಿಸತಕ್ಕದ್ದು (ಗ್ರಾಪಠಾ. ೮೭); ಬರಾವರ್ದುದಾರ ಶ್ಯಾನುಭೋಗ ವಸೂಲಾದ ಕಂದಾಯದ ಹಣವನ್ನು ದಸು, (ದುರುಪಯೋಗ) ಮಾಡಿದ್ದಾನೆಂದು, ಅವನನ್ನು ಸಸ್ಪೆಂಡ್ ಮಾಡಿ ನಂಜಪ್ಪನೆಂಬುವನನ್ನು . . . ನೇಮಿಸಿದ್ದರು (೪೦೫. ೦೬೩). [ಬರಾವರ್ದು + – ದಾರ$_4$]

**ಬರಿ$_1$** (ನಾ). ೧. ಪಕ್ಕ; ಬದಿ; ಪಂಗ್ಗುಲು : 'ಕುನ್' (ಗುಡ್ಡ)+ಬರಿ (ಪಕ್ಕ) ಎಂದರೆ 'ಗುಡ್ಡದ ತಪ್ಪಲು' ಎಂಬುದಾಗಿ ಸಾರ್ಥಕತೆಯೊಡನೆ ಆ 'ಕುಮ್ಮರಿ' ಪದವು ರೂಪುಗೊಂಡಿರಬೇಕು (ಪಾಡೋಕ. ೨೪೬). ೨. ಪಕ್ಕೆ; ಅಳ್ಳೆ : "ಬರಿ ಪಕ್ಕಮುದಕ್ಕು" (ಕಂಕಂ. ೦೪೦); ಪಱಿದವು ಬರಿ ಮುಱಿದ × × ನಿಟ್ಟೆಲ್ವೆರಡು ತೆಱೆದವು (ಎಕ. IV, ಹಗ್ಗಡ. ೦೦೬-೦೪; ಸು. ೪೩೦); ಅಂತು ಚಾತುರ್ದಂತವೊಂದೊಂದಱೊಳ್ ತಾಗಿ ತಳ್ತುಱುವಲ್ಲಿ ತಲೆಗಳ್ ಪಱಿಯೆ ಬರಿಗಳ್ ಮುಱಿಯೆ ತೊಡೆಗಳುಡಿಯೆ (ಹಂತಪ. ೦೫-೫೬ ವ); ಧರಣಿಪಾಲನ ತೆಗೆದು ಭೀಮನ ಬರಿಯನೆಚ್ಚನು. . . ಜವಗೆಡಿಸಿದನು ನಿನ್ನಾತನನಿಲಜನ (ಕುಮ್ಮಾಕ. ೦೪-೨). 'ಬದಿ'$_2$ ಪರಾ.
[ ದೇ. ॥ ತುಳು. ಕೊಡ. ತೆಲು. ಬರಿ ]

**ಬರಿ$_2$** 'ಬಱು$_2$' ನೋ.

**ಬರಿಕೆಯ್** 'ಭರಿಕೆಯ್' ನೋ.

**ಬರಿಕ್ಕೆ$_1$** 'ಬಱುಗೆಯ್$_2$' ನೋ.

**ಬರಿಕ್ಕೆ$_2$** 'ಭರಿಕೆಯ್' ನೋ.

**ಬರಿಕೋಲು** (ನಾ). ರಸ ಹೀರಿದ ಕಬ್ಬು; ರಸವಿಲ್ಲದ ಕಬ್ಬು : ಆಲೆಗವ್ಮಿಕ್ಷುದಂಡವನಿಕ್ಕಿ ತಿರುಹಿ ಮರುಕೋಲುಗಳನಿಕ್ಕಿ ಬರಿಕೋಲುಗಳ ಬಿಸುಟವೋಲ್ತಳುವಿನೋಳ್ಪೆಳದ ಫಲಜಾಲವನ್ನುಳುಪಿದಂ (ಕುರಂಗ. ೮೦-೬).
[ ಬರಿ$_2$ (<ಬಱಿದು)+ಕೋಲು$_1$ (<ಕೋಲ್$_1$) ]

**ಬರಿಗಂಡ** (ನಾ). ಪಕ್ಕೆಯ ಮಾಂಸಖಂಡ : ಬರಿಗಂಡಂ ಪಿಣಿಲೇಱೆ ರೋಮಮುಡಿದಿರ್ದಿರ್ಪನ್ನಾಗೆ ಮುಂಗಾಲಗಲ್ಚಿರೆ ಬಿರ್ದಿರ್ಪ . . . ಕೋಟ್ಟುಟ್ಟಿ ಪೆರ್ನೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕ್ರೋಶರಂ ಸೂಕರಂ (ಕಂದ್ರಪ್ರ. ೫-೬೦). [ಬರಿ$_1$ + ಕಂಡ$_1$]

**ಬರಿಗಡಗ** (ನಾ). ಕುದುರೆಯ ಪಕ್ಕೆಗಳ ಸುತ್ತ ಹಾಕುವ ತಂಗು,— ಚರ್ಮದ ಸುತ್ತುಪಟ್ಟಿ : ಬರಿಗಡಗ ಕೀಳ್ಕಂಬಿ ದುಕ್ಕುಡಿಯುುರುಗು ಗಡಿಯಣ ಮೊಗವಡಂಗಳು ತುರಗವದನದಲೊಪ್ಪಿರಲು ತಾ ಪಕ್ಕೆಯನಳವಡಿಸಿ. . . ಪರಿಪರಿಯ ಹಕ್ಕರಿಕೆಯಲಿ ಬೀಸಿದರು ಚೌರಿಗಳ (ಕುಮ್ಮಾಶಿ. ೪-೪೮) [ಬರಿ$_1$ + ಕಡಗ$_1$]

**ಬರಿಗಾಲು** 'ಬಱಿಗಾಲು' ನೋ.

**ಬರಿಗೆಱೆ** 'ಬಱುಗೆಱೆ' ನೋ.

**ಬರಿಗೈ$_1$** 'ಬಱುಗೆಯ್$_1$' ನೋ.

**ಬರಿಗೈ$_2$** 'ಬಱುಗೆಯ್$_2$' ನೋ.

**ಬರಿಚು** (ನಾ). ಬರ್ಚಿ; ಬರ್ಜಿ; ಈಟಿ : ಮುಂದಿಟ್ಟ ಬರಿಚಿನಿಂ ವ್ಯತ್ಯಾಪಿನ ಸುರುಚಿಯಿಂ ರಚಿಸಿದೊಲು ರಂಜಿಸಿತು ರಣಮಂಡಲ (ಕರಕಂ. ೨೬-೨೮). [< ಬರ್ಚಿ]

**ಬರಿದಲೆ** 'ಬಱುದಲೆ' ನೋ.

**ಬರಿದು** 'ಬಱಿದು' ನೋ.

**ಬರಿದೆ** 'ಬಱಿದೆ' ನೋ.

**ಬರಿಮನ** 'ಬಱುಮನ' ನೋ.

**ಬರಿಮಾತು** ' ಬಱುಮಾತು ' ನೋ.

**ಬರಿಮೈ** ' ಬಱಿಮೆಯ್ ' ನೋ.

**ಬರಿಯ$_1$** (ನಾ). ದೇವಸ್ಥಾನದ ಸೇವಕ : ದೇವಸ್ಥಾನದ ಸೇವಕರು (Temple servants) ಅಂಬಲವಾಸಿ, ಬರಿಯ, ದೇವಡಿಗ, ದೇವಾಳಿ . . . ಸ್ಥಾನಿಕ, ವಾರಿಯರ್ (ಕುಳುಜಾ. ೦೬೨). [?]

**ಬರಿಯ$_2$** ' ಬಱಿದು ' ಪರಾ.

**ಬರಿಯಾಟ** ' ಬಱಿಯಾಟ ' ನೋ.

**ಬರಿಯಿಸು** ' ಪರಿಸು$_1$ ' ನೋ.

**ಬರಿಯೂರ್** (ನಾ). ಒಂದು ಊರಿನ ಹೆಸರು : ಮಾದೆಯೂರ ಸಾನ್ನಿಧ್ಯಮ್ಮಿಂ ಬರಿಯೂರನಿಱಿಯೆ ಬಳಗಾಟಿರ ಕೋಕರಂ ಪನುವಲವಳ್ಳಿಯುಳಿದ್ದು ಪುಯ್ಯಲಂ ಪರಿದು ಮಾರ್ಬಲಮಂ ತಳ್ತಿಱಿದು ಸ್ವರ್ಗಾಲಯಕ್ಕೆ ಸನ್ದಂ (ಎಕ. VIII, ಸೊರಬ. ೫೩-೫; ೯೭೪). [ಬರಿ$_1$ + ಊರ್]

**ಬರಿಯೆಲ್** ‹ ಬರಿಯೆಲ್ವು › ನೋ.

**ಬರಿಯೆಲುವು** ‹ ಬರಿಯೆಲ್ವು › ನೋ.

**ಬರಿಯೆಲ್ಬು,** ಬರಿಯೆಲ್, ಬರಿಯೆಲುವು (ನಾ). ಪಕ್ಕೆಯ ಎಲುಬು ; ಪಕ್ಕೆಯ ಮೂಳೆ : ವನಿತೆಯ ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾಗನೆ ಭಗದತ್ತನಾವೆ ಬರಿಯೆಲ್ಬುಡಿವನ್ನೆಗವೊತ್ತೆ ಗಂಡನಾಗನೆ (ಗದಾಯು. ೩-೨೬) ; ಮುನಿಪತಿಯ ತೋರ್ಪ ಬರಿಯೆಲ್ಬಿನ

ಪುದುಮಿಂ ಬೂದಿವಾಱುತಿರ್ಪಿರಪಿಂ ಕಾಪಿನ ಸುಟ್ಟ ಕಾಡಿವೆನೆ ಕರ್ಗನೆ ಕಸತುದು ಪಾಲದ ಪುಸಿಯ ಪುಸಕದಿನಂಗಂ (ಅರ್ಜನ. ೦ ೯೬). **ಬರಿಯೆಲ್** : ಮೂಱೆಯ ಕಂಭಮಿಲ್ಲಿ ಸಿಡುಯೆಲ್ಪಿನ ಬೆಮ್ಮರನೇಕಿ ಪತ್ತಿ ಕೊಂಡೋಳಿಯಿ ಸೀಳ್ದು ಸಂದ ಬರಿಯೆಲ್ . . . ಅಮೇಧ್ಯಪೂರ್ಣ ದೇಹಾಳಯಮಿಂತಶುದ್ಧಂ (ಜೀವಸಂ. ೦೬೦–೨೨). **ಬರಿಯೆಲುವು** : ಉರದ ಬರಿಯೆಲುವನೆಸಪಂತಿರಲಲರಿಂ ನಡುಗುತಂ ತಪಸ್ವಿಯು ಕೊರ ಲೊಳ್ ಕರಮೆಸೆದು ತೋಱುದುದು ತಾವರೆದಂಟನ ಮಿಸುಪ ನೂಲ ಪೊಸ ಜಸಿವಾರಂ (ಕಾದಂಪೂ. ೨೦೭); ಖಿರ ನಕರಸಕರದಿಂ ಬರಿಯೆಲುವ ನುಗ್ಗೊತ್ತಿ ಕರುಳ ಮಾಲೆಯ ಸೀಳಿ ತೆಗೆವ ಪುಲಿಯಂ (ತ್ರಿ. ಷಸಂ. ೯–೭೪).

[ಬರಿ₁+ಎಲ್ವು]

**ಬರಿವದಣೆ** 'ಬರಿವದನೆ' ನೋ.

**ಬರಿವದನೆ**, ಬರಿವದಣೆ, ಬರುವದಣೆ, ಬಲಿವದನೆ (ನಾ). ಒಂದು ಬಗೆಯ ಔಷಧೀಸಸ್ಯ,—ವಂೂಲಿಕೆ ; "ನೆಲಗುಳ್ಳ" (ಲೋಕೋಪ. ೯–೨೦ ಟೀಕೆ) : ಬರಿವದನೆಯುವ್ಯುತಲತೆ ನಾಗರಮೆಂಬಿವಿನಿತಱ ಕಷಾಯಮಂ . . . ಕುಡಿಯೆಸುಗೆ (ಲೋಕೋಪ. ೯–೨೦); ಸುಂಟಿಯುಮ ಮ್ದುರ್ಮಳ್ಳಿಯುಂ ಪುಷ್ಕರಮೂಲಮುಂ ಬರಿವದನೆಯುಂ ಜ್ವರದ ಕೇಡು (ರಸರತ್ನಾ. ೯–೦೦೯). **ಬರಿವದಣೆ** : ಒದವಿದರೆ ಬೀಳಿದೆನಿಪ ಬರಿವದಣೆಯ ಕಿಱುದೆಂಗು ನೆಲ್ಲಿಯೆಂಬಿನಿತಱ ಮೂಲದಿನಿರ್ಕೆಯ್ಮೆಡೆಯೊಳ್ ತೆಂಕದೆಸೆ ಯೊಳಱ . . . ನೀರಕ್ಕಂ (ಲೋಕೋಪ. ೩–೦೭); ಬರಿವದಣೆ ಲೊಕ್ಕಿ . . . ವಿಷನಾಗರ ಲಶುನಂಗಳೊಳ್ಪುಂ ಬೆರಸುಗೆ ಪವಣಱಗೆ ಪಿಂಡ ಮಾರೋಗ್ಯಕರಂ (ಅಶ್ವಶಾ. ೭–೩೩). **ಬರುವದಣೆ** : ಬರುವದಣೆ ತುಱುಚಿಯಾಸಡಿಯೆರನ ಫಲಂ . . . ಕಣ್ಗೆಸಲ್ ವಿಷಮಪಱಗುಂ (ಖಸುರ. ೬–೨೬). **ಬಲಿವದನೆ** : ನೆಗ್ಗಿಲು, ಬಲಿವದನೆ, ಪುಷ್ಕರಮೂಲ—ಇವು ಪ್ರತ್ಯೇಕ . . . ನಾಗಳ ನೀರಿನಲ್ಲಿ ಹಾಕಿ . . . ಕಾಸಿ (ಸಕವೈ. ೨೫೬).

[?+ಬದನೆ]

**ಬರಿವೊನಲ್**, ಬರಿವೊನಲು (ನಾ). ದಡ ಸೂಸಿ ಹರಿಯುವ ಪ್ರವಾಹ; ದಡವನ್ನು ಮಿೀರಿ ಹರಿಯುವ ಪ್ರವಾಹ : ಕಿಱುಮಟಲ ದಿಣ್ಣೆಯೊಳ್ ಪರಿವ ಬರಿವೊನಲೆಸೆದುವೋರೊಂದು ತಾಣದೊಳ್ (ಅನಂಪು. ೯–೦೭ ರಗಳೆ). **ಬರಿವೊನಲು** : ಕಲ್ಪಮೇಘದ ತಡೆಯ ಬಿಟ್ಟಂತೆ ಬರಿವೊನಲು ಪರಿವು ತೆಯ್ದುದು (ಸೌಂದಕಾ. ೨–೭೩). 'ಪರಿವೊನಲ್' ಪಠಾ.

[ಬರಿ₁+ಪೊನಲ್]

**ಬರಿವೊನಲು** 'ಬರಿವೊನಲ್' ನೋ.

**ಬರಿವೊಯ್ಲು** (ನಾ). ಪಕ್ಕೆಯು ಮಿಡಿಯುವಿಕೆ; ಪಕ್ಕೆಯ ಮಿಡಿತ : ಪೆತ್ತ ಜೀರ್ಕೊಳವಿಪೋಲ್ ಮೂಗೊತ್ತೆ ರಕ್ತಾಂಬುವಂ ಬರಿವೊಯ್ಲುವೆ ನಿಮಿರ್ಚೆ ಬಿಕ್ಕುಳಿಕೆ (ರಸರ. ೯–೦೯೦).

[ಬರಿ₁ +ಪೊಯ್ಲು(<ಪೊಯಲ್)]

**ಬರಿಸ**, **ವರಿಶ**, ವರಿಷ, ವರಿಸ, ವರುಶ, ವರುಷ, ವಾರಿಷ (ನಾ). ೧. ಸಂವತ್ಸರ ; ವರ್ಷ : "ಬರಿಸಮೆಂದು ವರ್ಷಂ" (ಕಶಬ್ದಾ. ೩೭–೨೯೭); ಸ್ಮರಿಯಿಪನಿರ್ಪತ್ತಿರ್ಛ್ಛಾಸಿರಬರಿಸ [ಶಾಕಾಂ. ವರ್ಷ]ಕೊರ್ಮೆ ಮನ ದೊಳುಣಿಸಂ (ಅದಿಪು. ೬–೦೭); ಬರಿಸ ಪನ್ನೆರಡಾದ ಬಳಿಕಾರೊಳಮೊಂದುಮೆರ ಸದೆ ಪೆಱದೆಗೆದಿಹುದು (ಹರಿಶ. ೯–೩೯); ತಱಗೆಲೆಯುಂಡು ಮೂಱು ಬರಿಸಂ . . . ಗಾಳಿಯನುಂಡು ಮೂಱು ಬರಿಸಂ, ನಿರಾಹಾರಂ ಮೂಱು ಬರಿಸಂ, ಕಟ್ಟುಗ್ರಂ ತಪಂಗೈವಂ (ರಾಮಾಶ್ವ. ೩೩–೦೯). ೨. ಮಳೆ ; ವೃಷ್ಟಿ : "ಬರಿಸಮೆನೆ ವೃಷ್ಟಿಯೊಳ್ ವರ್ಷದೊಳ್ ಸಲೆ ಬಕರ್" (ಕಶರ. ೬೦). **ವರಿಶ**: ೧. ಸ್ವಸ್ತಿ ಸತ್ಯವಾಕ್ಯನ ಪೆರ್ಮ್ಮನಡಿಗಳ ಪಟ್ಟಂಗಟ್ಟಿದ ಪದಿ ನೆಯ್ದು ವರಿಶದನ್ದು ಮಱಿಯರ ಬೂವಯ್ಯನ ಮಗಂ ಬದಿಯಾಯ್ತು ತುಱುವಸಿಕ್ಕಿಸಿ ಕಾದು ಸತ್ತು (ಎಕ. II, ೩೯೪ ೭ ; ೩೩೩ ೪). **ವರಿಷ** : ೧. ದುರ್ಮ್ಮತಿ ಎನ್ಬ ವರಿಷಂ ಪ್ರವರ್ತಿಸೆ (ಬೊಂಕಶಾ. ೦೯೩೯, ೨೦೧೩೩೦. ೦೭ ೩:೫೭೩); ಶಕ ನೃಪಕಾಲಾತೀತ ಸಂವತ್ಸರಙ್ಗಳೆಣ್ಟೂಱ ಎಣ್ಬತ್ತೊನ್ದು ವರಿಷದನ್ದು ಸಿಂಘರಗಣದ ನಾಗನಾಣ್ಮಾಚಾರ್ಯ್ಯರ್ಪ್ಪಡೆದೋರತ್ತಿಗೇರಿಯ ಬಟ್ ಇದಕ್ಕೆ ಸಾಕ್ಷಿ (ಕಇ. II, ೩–೦೦; ೫೫೯). **ವರಿಸ** : ೧. ಸ್ವಸ್ತಿ ಸಕ ನ್ರಿಪಕಾಲಮೆಣ್ನೂಱ ಪನ್ನೊನ್ದನೆಯ ವರಿಸವಾಗೆ (ಎಕ. VI, ತಂಕೆ. ೬೭–೩ ; ೫೫೫) ; ನಿಜಾಯುರವಧಿ ಪದಿನಾಲ್ಕು ವರಿಸಮು ಮೇಱುತಿಂಗಳುಮಯ್ದು ದಿವಸಮುಂಟೆನಲ್ (ಸುಕುಮಾ. ೯–೦೦ ವ); ಒಂದೆರಡು ವರಿಸಂ ನಳನಳಿಸಿ ಬೆಳವುತಿಪ್ಪ ಅರಳೆಲೆಯಮರಸಂ (ಬಸರ. ೦೦–೦೦೪). **ವರುಶ** : ೧. ಸ್ವಸ್ತಿಶ್ರೀ ಜಯಾದ್ಭುದಯ ಶಾಲಿವಾಹನ ಶಕ ವರುಶ ೧೪೦೪ ಸಂದು ವರ್ತಮಾನ ಶುಭಕ್ರುತು ಸಂವತ್ಸರದ ಕಾರ್ತಿಕ ಶು ೧೨ಲು . . . ಕೊಟ ಮುತ್ತಗಾನೆಯ ಗ್ರಾಮ (ಮೈಆಂ. ೦೯೩೯, ೯–೩; 1482). **ವರುಷ**: ೧. ಈ ನಾಡೊಳ್ ಪನ್ನೆರಡುವರುಷಂಬರೆಗಮನಾವೃಷ್ಟಿ ಯಾಗಿ ದುರ್ಭಿಕ್ಷಮಾದಪ್ಪುದು (ವಡ್ಡಾರಾ. ೬೩–೨೦); ಇಂತು ತೊಂಬತ್ತೈದು ವರುಷದೊಳು ಹರನಾಣೆಯಂ ತಾಳ್ದು ಬಾಳ್ದಿಪ್ಪ ಸಮಯದೊಳು (ಹರಿರ. ದೀ. ೦೦–೩); ಪುರವ ವಿರಚಿಸಿ ದಿವ್ಯ ಸಾಸಿರ ವರುಷ ಕೈಗೂಡಿದರೆ ಒಂದೇ ಸರಳಲಾವವನೆಚ್ಚಡಾಗಳೆ ನಿಮಗೆ ಕಡೆಗಾಲ (ಕುವ್ಯಾಕ. ೬–೬). ೨. ಸರಳ ಮಳೆಯಲಿ ನನೆದು ಕರಿಘಟೆಯುರುಳಿದವು ಕಲ್ಪಾಂತವರುಷದೊಳುರುಳು ವದ್ರಿಗಳಂತೆಯೆಸೆದವು ವೈರಿದಂತಿಗಳು (ಕುವ್ಯಾಕ. ೨–೨೦); ತುರುಕರಾಣ್ಯ ದೊಳಗನಾವೃಷ್ಟಿದೋಷಾ ಬಂದು ಪಸರಿಸೆ ಪವಾಡದಿಂದೆ ವರುಷವಂ ಸುರಿಸಿ . . . ಮಳೆಯ ಮಲ್ಲೇಶನೆಂದೆಂಬ ನಾಮವನಾಂತನು (ಕಬಕಿ. ೦–೦೯). **ವಾರಿಷ** : ೧. ಏಟ್ನೂಱಪತನೆ ವಾರಿಷಂ ಪ್ರವಾರ್ತ್ತಿಸುತಿರೆ (ಎಕ. XVI, ಸಿರಾ. ೦೨೩–೪; 788). [<ಸಂ. ವರ್ಷ]

**ಬರಿಸದೆಱ** (ನಾ). ವಾರ್ಷಿಕ ತೆರಿಗೆ,— ಸುಂಕ: ಬೇಱವೇಱ ಬರಿಸದೆಱ ಹಿರಿಯ ಹಾಗವೊಂದು (ಎಇ. XIII, ೨೦–೩೩; 1294). [ಬರಿಸ+ತೆಱ₃]

**ಬರಿಸವಳ** (ಅ). ಪ್ರತಿವರುಷ; ವರುಷಂಪ್ರತಿ : ಅನ್ನನಿಬರು ಸುಂಕಿಗರು ಎಬ್ದು ಇ(ಈ) ಕೆಂಗೆಱಗೆ ಬರಿಸವಳ ಅಱು ಪೇಟ ಸುಂಕವಂ ಬಿಡುವರು (ಎಇ. XVI, ೬೯–೪೦; 1037). [ಬರಿಸ+ ?]

**ಬರಿಸು** 'ವರಿಸಂ₁' ನೋ.

**ಬರಿಹ** 'ಬರುಹ₁' ನೋ.

**ಬರು** 'ವರ್' ನೋ.

**ಬರು₂** 'ಬಱು₂' ನೋ.

**ಬರು₃** (ನಾ). ಒಂದು ಬಗೆಯ ಹುಲ್ಲು : ಚಿನಾಯಿ ಜೀನಸು, ಕಾಗದ ಬೆಳ್ಳಿ ವ ಭಂಗಾರ ಪರ್ಣದ್ವು, ಕಾಚ, ಕೊಳಾಂಜನ, ಛತ್ರಿ, ಪಚ್ಚಕರ್ಪೂರ ಬರು, ಮೇಣ, ಸಕ್ಕರಿ (ಮುಂಬಿವ್ಯಾ. ೦೫೭).

[ ←ಮರಾ. ಬರೂ, ಬೊರೂ./ಪ್ರಾ. ಬರುಅ ]

**ಬರುಕ್ಕೆ** (ನಾ). "ಹದವಿಲ್ಲದಿದ್ದರೂ ಒಣಗಿದ ಭೂಮಿಯನ್ನು ಗಿಡ ಗಂಟೆ ಹೋಗುವುದಕ್ಕಾಗಿ ಉಳುವ ಉಕ್ಕೆ" (ವನ್ನೂರು. ಕೋಶ) : "ಹಳೇ ತೋಟಕ್ಕ ಬರುಕ್ಕಿಗೆ ಆರು ಕಟ್ಟಬೇಕು" ಎಂದು ಕೊಟ್ಟಿಗೆಗೆ ಹೋದ (ವನ್ನೂರು. ೩೦೨). [ಬರ₁ (<ಬಱು) + ಉಕ್ಕೆ (<ಉಱಕ್ಕೆ) ]

**ಬರುಗನಸು** (ನಾ). ವ್ಯರ್ಥವಾದ ಕನಸು; ನಿಷ್ಪ್ರಯೋಜಕವಾದ ಕನಸು : ಕಲ್ಪನೆ ಮಾತ್ರವಿದ್ದರೆ ಲಘುವಾಗುತ್ತದೆ; ಭಾವ ಮಾತ್ರವಿದ್ದರೆ ಬರುಗನಸಾಗುತ್ತದೆ (ಭಾವಗೀ. ೩೦); ನಂಬಿ ಬರುಗನಸೊಂದನಾ ಮೇಲೆ ಕೋಳು ಹೋಗದಿರು (ಶಿತ್ರಾಂಗ. ೩೭–೯೯೨).

[ಬರು₂ (< ಬಱಿದು) + ಕನಸು ]

**ಬರುಗಯ್** 'ಬಱುಗೆಯ್' ನೋ.

**ಬರುಗಲ್ಲು** 'ಬಱುಗಲ್ಲು' ನೋ.

**ಬರುಗಾಲು** 'ಬಱಿಂಗಾಲು' ನೋ.

**ಬರುಗೆ** (ನಾ). ಕೆನ್ನೆ ಮತ್ತು ಕಿವಿ ಸೇರುವ ಭಾಗ; ಕೆಪರು: ಇನ್ನೊಂದು ಕಲ್ಲಿನಿಂದ ಅವರ ಎಡದ ಕಿವಿಯ ಬರುಗೆಗೆ ಗುರಿಯಿಟ್ಟು ಹೊಡೆದ (ಶಂಗಾಳ್ಮ. ೩೬೪). [ ? ]

**ಬರುದಲೆ** 'ಬಱುದಲೆ' ನೋ.

**ಬರುಬು** 'ಬರಂಪು' ನೋ.

**ಬರುಮ** 'ಬೊಮ್ಮ' ನೋ.

**ಬರುಮರುಕ** (ನಾ). ತೋರಿಕೆಯ ಕನಿಕರ; ಸೋಗಿನ ದಯೆ: ಈ ಮೇಳದ ಮಸಕವು ಸರ್ವನಾಶದ ಬರುಮರುಕವಾಗಿ, ಕಣ್ಣಿಂದ ನೆತ್ತರನ್ನು ಹಿಂಡುತ್ತ ಬಾಯಳಿಯಿಸುವ ಆಗ-ನನ್ನ ಮಾತಿನ ಬೆಲೆಯು ನಿಮಗೆ ಅರ್ಥವಾಗುವುದು! (ಮಂತ್ರಶ. ೭೪-೧೪).

[ ಬರು$_3$ (<ಬಱಿದು) + ಮರುಕ (<ಮಱುಕ)]

**ಬರುವದಣೆ** 'ಬರಿವದನೆ' ನೋ.

**ಬರುವಳಿ** (ನಾ). ನಿಷ್ಪತ್ತಿ; ಮೂಲ: ಕನ್ನಡಮಾತುಗಳ ಬರುವಳಿ (ಕನ್ನನು. I, ೨೩೮; ೧೯ ೩೮). 'ಹುಟ್ಟುವಳಿ' ಹೋ.

[ ಬರು$_1$ (<ವರ್) +– ವಳಿ$_3$]

**ಬರುವೆ** (ನಾ). ಒಂದು ಬಗೆಯ ಪಕ್ಷಿ: ಶುಕ ಮಯೂರ ಮರಾಳ ವಾಯಸಂ ಬಕಪಕ್ಷಿ . . . ವೃಕ ಬರುವೆ ಸಾಳುವಂ ಮರಗೊರಲೆ ಕಾಬು ರಲೆ ವಿಹನು ಗವುಜಗ ಗುಬ್ಬಿ ಚಿಲಿಮಿಲಿಗ ಕೆಂಬೂತ ಶಿಚುಕ ಮರಕುಟಕ ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿದಗ್ನಿ ದಹಿಸಿತು (ತುರಂಗ. ೧೬-೩೭).

**ಬರುಹ$_1$** (ನಾ). ಬರುವಿಕೆ: ನಾಯ ಬಾಲವಂ ಕಾಸಿ ತಿರ್ದುಹವುಂ ಸಾಳುಮಣ್ಣನಲ್ಲಿ ಮಱೆಬರುಹವುಂ . . . ಮೂರ್ಖನಂ ಬುದ್ಧಿವಂತ ನೋಲ್ಪೈಸುಹವುಂ ಇವಱೋಪಾದಿ (ಶಂಶತಂ. ೧೩೬-೧೧); ಕಿವಿಗಳನೊತ್ತಲ್ ರಕ್ತಂ ಬರುಹ ಕಣ್ಗಳ್ ಚೆನ್ನಾಗಿ ತೋಱುಹ . . . ಸಸಿನಮಾಗಿ ಹಿಂಭಾಗ ಮುಂಭಾಗಂಗಳ್ ಅಗಲಮಾಗಿರುಹ ಈ ಲಕ್ಷಣಂಗಳನುಳ್ಳ ಕುದಿರೆ ಸಂಪೂರ್ಣ ಮಪ್ಪಾಯುಷ್ಯಮನುಳ್ಳುದೆಂದು ಪೇೞಿಸಿಕೊಳ್ವುದು (ಲೋಕೋಶ. ೧೧-೭೫ ೮೪).

[ಬರು$_1$ (< ವರ್) + – ಹ$_2$ (< –ಪ$_2$)]

**ಬರುಹ$_2$** (ನಾ). ನವಿಲಿನ ಪುಕ್ಕ,—ಗರಿ; ಬರ್ಹ: ಅರ್ಹಂ, ಅರುಹಂ; ಬರ್ಹಂ, ಬರುಹಂ; ಗಾರ್ಹಪತ್ಯಂ, ಗಾರುಹಪತ್ಯಂ (ಭಾಷಾಭೂ. ೦೨೫ ಪ್ರಯೋ). [<ಸಂ. ಬರ್ಹ]

**ಬರುಹಿ$_1$**, ಬರಿಹಿ (ನಾ). ನವಿಲು; ಮಯೂರ: ಸೂಕರನ ತುಂಬಿಯ ಮರಾಳನ ಭೇಕವೈರಿಯ ಕಾರುರಗ ಕಪಿ ಕೋಕಿಲನ ಬರುಹಿ [ಪಾಠಾಂ. ಬರ್ಹಿ] ಯ ಸುಧಾಕಿರಣನ ದಿನಾಧಿಪನ . . . ರತ್ನಾಕರನಲೊಂದೊಂ [illegible]ಣ ವಿರಬೇಕು (ಕುಮ್ಯಾ.ಸ.೧-೬೪); ಕಂಗೊಳಿಸುವ ಗವಾಕ್ಷಾವಳಿಯಲಾಡುವ ಬರುಹಿ ಪಾರಾವತ ಮೃದುಸ್ವನದ . . . ಮರಗಳ ತಿಂಥಿಣಿಯ ಶೀತಳತರುಚ್ಛಾಯೆ ಯಲಿ ಮೆಱೆವಾ ಪುರವರವ ಕಂಡ (ಐಭಾಗ. ೧೧-೩೬-೩೦); ಬರುಹಿ ಕಂಕ ಶಶಾದ . . . ಭರದ್ವಾಜಾದಿ ಖಗವಿರೆ ಕಂಡನಸುರೇಂದ್ರ (ಉರರಾ. ೯-೪). **ಬರಿಹಿ**: ಹರನಂತೆ ಗಂಗಾಧರತ್ವದಿಂದಂ ಮತ್ತೆ ಹರಿಯ ಧೈರ್ಯತೆಯಂತೆ ಕರಿಯ ರೇಖೆಗಳಿಂ . . . ಇಂದ್ರನಂದದೆ ಪಾಱುವ ಬರಿಹಿಗಳ ಪಿಂಛಾಂಗ ದಿಂ . . . ಆ ಮಹಾಗಿರಿ ಮೆಱೆದುದೈ (ವೀಕ್ಷೆ ಪು. ೩-೯-೬).

[< ಸಂ. ಬರ್ಹಿನ್]

**ಬರುಹಿ$_2$** (ನಾ). ೧. ಒಂದು ಬಗೆಯ ಹುಲ್ಲು; ಕುಶ: ಚರು ತಿಲದ ರಾಶಿಗಳ ಸ್ರುಕ್ ಸ್ರುವ ಬರುಹಿಗಳ ಬಲುಹೊಱೆಗಳಾಜ್ಯೋತ್ಕರದ ಪತ್ರಾವಳಿಯ ನಿರ್ಮಳಸಾರ ಸಮಿಧೆಗಳ . . . ವಿವಿಧದ್ರವ್ಯಮಯ ಬಂಧುರದಲೆಸೆದಂದು ಯಜ್ಞವಾಟಿಕೆ ರಾಜಸೂಯದಲಿ (ಕುಮ್ಯಾಸ. ೭-೩೦); ಬರುಹಿಯಿಧ್ಮಸವಿತ್ರ್ಯಣೀತಾವರಣಿ ಘೃತಪಾತ್ರಾದಿ ಮುಖಪರಿಕರವ ಮೇಳೈಸಿದರು ತತ್ಕ್ರತುಕುಂಡವಳಯದಲಿ (ಕೂರರಾ. ೦-೭-೩೪). ೨. ಬೆಂಕಿ; ಅಗ್ನಿ: ಧರಣಿ ರೇಣುವದಾಗೆ . . . ಸಾಗರಗಳೇ ತುಂತುರ್ವನಿಗಳಾಗಲು ಮಹಾಪ್ರಳಯಬರುಹಿ ಕಿಱುಗಿಡಿಯಾಗಲಚ್ಯುತ ಸರಸಿಜೋದ್ಭವರಣುವೆನಿಸಿ ಭಾಸ್ಫುರಣಜ್ಯೋತಿರ್ಲಿಂಗವಾದೀಶಂಗೆ ವಂದಿಸುವೆ (ಶಂಕದಾ. ೩-೦). [< ಸಂ. ಬರ್ಹಿ]

**ಬರುಹು**, ಬರಬಂ, ಬರಹು$_2$, ಬರಬು (ನಾ). ೧. (ಹೊಲ, ಗದ್ದೆಗಳಲ್ಲಿ ನೀರು ನಿಲ್ಲುವುದಕ್ಕಾಗಿ) ಅಂಚಿನಲ್ಲಿ ಹಾಕುವ ಮಣ್ಣಿನ ದಂಡೆ; ಕಟ್ಟೆ; ಬದುವು: ನಾಲ್ಕುಸೀಮೆಯೆಂತೆಂದಡೆ ಮೂಡಣಸೀಮೆ ಹುಪ್ಪವಳ್ಳಿಯ ಸೀಮೆ . . . ತೆಂಕಣ ಸೀಮೆ ಅರಳಿಯ ಗದ್ದೆಯ ಬಡಗಣ ಬರುಹು ಮೇರೆ (ಸೌಇಇ. XV, ೨೩೩-೭೦; 1216). ೨. ಎತ್ತರವಾದ ಪ್ರದೇಶ; ದಿಬ್ಬ; ದಿಣ್ಣೆ: ಪಡುವಣ ಸೀಮೆ ಕರಿಯ ರಾಮಣನ ಹಕ್ಕಲ ಬರುಹು ಬಡಗಲು ಮಲ್ಲನಹಳ್ಳಿಯ ಹೊಲನ ಸೀಮೆ ಮೇರೆ (ಕಇ. V, ೩೨-೭೬; 1215). **ಬರಬು**: ೨. ಆ ಯಲಚಿಯ ಕುಣ್ಟೆಯ ಮೂಡಣಕೋಡಿಯ ಅರಳಿಯ ಮರ ಮೇರೆಯಾಗಿ ಹೊಲದ ಬರಬಿನ ಮೇಲೆ ದರ ಹುಣಿಸೆಯ ಸರಿತದಲು (ಎಕ, X, ಮುಳಬಾ. ೭-೬; 1416); ತೆಂಕಣ ಕೋಡಿ ಸ್ಥಳದಲೂ ಮೂಡಲಿಗೆ ಕಂಭದ ಮಾನ್ಯದ ಹೊಲ ಮೇರೆ ತೆಂಕಲಿಗೆ ದಶಕಸ್ಥಳದ ದೊಡ್ಡ ಬರಬು ಮೇರೆ (ಎಕ. IX (S), ಬೆಂಗಳೂ. ೩೦-೬; 1532); ಬರಬುಗಳನ್ನು ನೆಲಮಟ್ಟದಿಂದ ಸ್ವಲ್ಪ ಎತ್ತರವಾಗಿರುವಂತೆ ಕಟ್ಟಿ, ಗಟ್ಟಿಯಾಗಲು ಚೆನ್ನಾಗಿ ತೊಯಿಸಿ ತುಳಿಯಬೇಕು (ಕರಬ. ೬೭). **ಬರಹು$_2$**: ೨. ತೊಪ್ಪೇನ ಘಟ್ಟದ ಬಲ್ಲವತ್ತದ ಕಟ್ಟೆಯ ಬಿತ್ತಿರಿಣ ಹಕ್ಕಲ ಬರಹು (ಎಕ. VII, ಶಿವಮೊ. ೨೬-೨೫೪; 1524). **ಬರುಬು**: ೩. ಕೆರೆ, ಕುಂಟೆ ಮುಂತಾದುವುಗಳ ಏರಿ: ಕಾಲುವೆಗಳ ಮೇಲೂ ಬರುಬುಗಳ ಮೇಲೂ ತಿರುತಿರುಗಿ (ಕಥಾಮಂ. IV, ೦೩೦). 'ಬದುವು' ಪರಾ.

[ ದೇ.॥ ತಮಿ. ವರಪ್ಪು, ವರಮ್ಪು, ವರೈಪ್ಪು; ಮಲ. ವರಮ್ಪು; ತುಳು. ಬರಬು; ತೆಲು. ವರುಜು]

**ಬರೆ$_1$**, ವರೆ$_1$ (ಕ್ರಿ). ೧. ಲೇಖಿಸು; ಅಕ್ಷರದಲ್ಲಿರಿಸು: ಕೈಲಾಸಪಣ್ಡಿತಬ್ಬರೆದ ಈ ವಣ್ಣನಳಿದೋಂ (ಎಕ. IX, ಬೆಂಗಳೂ. ೪೦-೦೩; ಸು. 820); ಗುಣ ಸೌಂದರಿಯೊಂಬೊಳ್ . . . ಒಂದೋಲೆಯನಿಂತೆಂದು ಬರೆದಳ್ (ವಡ್ಡಾರಾ. ೦೬೩-೮); ವಿಷಯೆ ಮೋಹಿಸುವಂತೆ ಕೊಡುವುದೆಂಬೀ ಲೇಖವಿಷಯವಿದು ವಿಧಿಕೃತವೊ ತನ್ನ ಮೋಸವೊ ಬರೆದವನ ಮಱೆಹೊ (ಜೈಮಿಭಾ. ೩೧-೩೬). ೨. (ಬರೆದುದರ ಮೇಲೆ ಅಭ್ಯಾಸಕ್ಕಾಗಿ) ತಿದ್ದು; ತೀಡು: ಬರೆಯದೆ ಬಂದ ಸುದ್ದಗೆಯ ಸೂತ್ರಮನೊಂದೆ ಮುಹೂರ್ತಮಾತ್ರದಿಂ ಬರಿಸಿದುದು (ಶಂಶಭಾ. ೭-೩೪). ೩. ಕಾವ್ಯರಚನೆ ಮಾಡು: ತರಲಾಪಾಂಗ ವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ್ ಮುನ್ನಂ ಬರೆದತನುಚರಿತಮಾಗಳ್ ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ (ಆದಿಪು. ೪-೦೪); ವಿಪರೀತಂ ಬರೆಯುತ್ತುಮೊಂದನಲೆವುತ್ತುಂ ಗದ್ಯಮಂ ಮಾಡೆ (ಛಂದೋಂಬು. ೦-೩೦ ಅಶುದ್ಧ); ಬರೆದಾಹ ಬರೆದೆ ಭಾಪುರೆ ಬರೆದಕ್ಕಟ ಬರೆದೆ ಲೇಸು ಬರೆದೆ ಯೆನುತ್ತುಂ ಬಱಿದೆ ತಲೆತೂಗುವುದಱಿಂ ಬಱಿದಪ್ಪುದು ಕಾವ್ಯಮಱಿಯು ದರ ಜಾಣಿಂದಂ (೧೧ಕ. ೧-೨೮). ೪. ಚಿತ್ರಿಸು; ರೇಖಿಸು: ಇಂತು ಬರೆಯಲ್ ಬ್ರಹ್ಮಂಗಮೇಂ ಬರ್ಕುಮೇ ಎಂದು ಮುನ್ನಂ ವಿಚಿತ್ರಚಿತ್ರ ವಿದ್ಯಾಕೌಶಲಮನತಿಕುತೂಹಲೋತ್ತಾರಿತಲೋಚನನಾಗಿ ನೀಡುಂ ಭಾವಿಸಿ ನೋಡಿ (ಆದಿಪು. ೪-೪); ಬರೆದ ಬನಮಿರ್ಕೆ ನೋಡೀ ಕರುಮಾಡದ ಕೆಲದೆ ಬೆಳೆದ ಪೂದೋಂಟಮಂ (ಕಬ್ಬಿಕಾ. ೮೪); ನೆನೆದು ಬರೆದಳು ನಳನ ರೂಪ ವನನುನಯದಿ ಚಿತ್ರದಲಿ (ನಳಚ. ೦-೩೬). ೫. ಗೆರೆಯನ್ನು ಎಳೆ; ಗೀಟು ಹಾಕು; ಗೀರು: ಗಿಳಿಯಂ ಸಾಕ್ಷಿಮಾಡಿ ಇರ್ವರುಂ ಚದುರಂಗ

ಮಾಡುತ್ತಿರೆ ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯಂ ಬರೆಗುಮರಸನರಸಿಯಂ ಗೆಲ್ದೊಡೆ ಒಂದೆ ಬರೆಯಂ ಬರೆಗುಂ (ವಡ್ಡಾರಾ. ೧೦೬-೨೭); ತನ್ನ ಮುನ್ನಿನ ಜನ್ಮಂಗಳನಿಂತೆಂದು ಬರೆದು ತೋರ್ಪಂತೆ ನೆಲನಂ ಬರೆಯುತ್ತಮುಪಗತಮುಖಮುದ್ರೆಯಾಗಿ (ಆದಿಪು. ೬-೭೨ ವ); ಸುರನರನಾಗಲೋಕದಿಂ ನರ್ತಿಸುವ ಸೌಂದರವೆಣ್ಣು ಬಾಣನಂದನೆಯು ಸರಿಯಿಲ್ಲವೆಂದು ಮೂವೆರಲಿಂದೆ ರತಿರಾಜ ಬರೆದಂತೆ ತಿವಳಿ ರಾಜಿಸಿತು (ಸೋಮಕಥ. ೨೩-೨೦). ೬. ಕಾದ ಲೋಹದಿಂದ ದೇಹದ ಮೇಲೆ ಗೆರೆಯನ್ನು ಎಳೆ; ಬರೆಹಾಕು ; ಬರೆಎಳೆ : ಮೃದುನಾಭಿಯ ನಿಟ್ಟೆಲುವಿನ ಹೃದಯದ ಮೇಲಡಸಿ ಬರೆಯಲಾಗದು ವಿಧ್ಯಾವಿದರೆತ್ತಾನುಂ ಬರೆದಂದದು ಮಾಟ್ಕುಮುಪಾಯಮುಮಂ ಮನಸ್ಸಾಪವುಮುಮಂ (ಅಶ್ವಶಾ. ೧೦-೨೬); ಏತರವೂ ದಂಡೆಗಳು ಕೊರಳಲಿ ಭೂತಬರೆಗಳಿದೇನು ಮೆಯ್ಯಲಿ ವಾತರೋಗಕೆ ಬರೆದ ಬರೆಯೇನೆರಡುಮುಡುಹಿನಲಿ . . . ಎಂದು ದಾನವನಾಥ ಜರೆದೀಡಾಡುತಿರಲು (ಕೃಷ್ಣಾ.ಕ. ೦೩-೪೪). ೭. ದಾಖಲೆಯಾಗು : ಮಲ್ಲ, ನಿನ್ನ ಶೌರ್ಯ ಸಾಹಸಗಳು ಬರೆದು ಹೋಗಿವೆ. ನಿನಗೆ ಗೌರವ ಸಿಗುವುದು ನಿಶ್ಚಯ (ಮಣಿಮ. ೦೯೭). **ವರೆ**$_1$ : ೧. ಕುಮ್ಬಿ ಊರನ್ ವರೆದನ್ (ಎಕ. X, ಕಂಕಾಪು. ೦೨೬ ಬ-೭; ಸು. 800); ಮರಮ್ಮ ವರೆದ ಲಿಕಿತಂ (ಎಕ. VIII, ಸೊರಬ. ೨೨-೦೦; ಸು. 800); ಬೋನರಿ ವರದೋಮ್ (ಮೈಎಂ. ೦೯೩೭, ೯೨-೦೩ ; ೪).

**ಬರೆದ ಬರೆಹ**=(ಹಣೆಯ) ಬರೆಹ; (ಅದೃಷ್ಟದ) ಲಿಖಿತ: ಕೊರಗನರಿದಂ ತನ್ನ ಮನೆಗೆ ಮಾರಬಿದ್ದಂತೆ ಬರೆದ ಬರೆಹವಿದೆಂದು ಕಯ್ ನೊಸಲ ಬಡಿದಂ (ಕಾಂಊರ. ೦೩೩-೨೯೯). **ಬರೆದಿಟ್ಟುಕೊಳ್ಳು** = ೧. ಗುರುತು ಹಾಕು ; ಗುರುತಿಸು : ನಿಮ್ಮ ಹಣದ ಪೆಟ್ಟಿಗೆಯಲಿ ಎಷ್ಟು ಹಣವಿದೆಯೆಂದು ಬರೆದಿಟ್ಟುಕೊಳ್ಳಿ (ಅಡುಕ್ಕಿ. ೦೨೩); ನಾನು ಓದಿದ ಭಾಗದಲ್ಲಿ ಅಗತ್ಯವೆಂದು ತೋರಿದ ಮುಖ್ಯವಿಷಯಗಳನ್ನು ಸೂಕ್ಷ್ಮವಾಗಿ ಬರೆದಿಡುತ್ತಿದ್ದೆ (ಮುಂಗಾರು. ೦೪). ೨. (ಆಲಂ) ನಿರ್ಧಾರವಾಗಿ ತಿಳಿ : ನೀನು ಪಾರಾಗಲಾರೆ. ಇದನ್ನು ಬರೆದಿಟ್ಟುಕೊ (ರೂಢಿ). **ಬರೆದುಂಡಿಗೆ** = ಬರೆದು ಮುದ್ರಿಸಿದಂದು ; ಗೊತ್ತುಮಾಡಿದುದು : ಬರೆದುಂಡಿಗೆಯ ಚೆಲ್ವೆ ಹೂವೀಡಿನಿಂ ಕರೆಯೆ ತೆರೆದೆಗೆಯಲರಿಂದಂ ಬೇಡಂಬ ಬಗೆಗೆ (ಕಾಊರ. ೦೬೬-೯೨೯). **ಬರೆದು ಕೊಡು** = ೧. (ಆಸ್ತಿ ಮೊದಲಾದುವುಗಳನ್ನು) ದಾಖಲೆಯ ಸಹಿತ ಕೊಡು; ದಾಖಲೆ ಮಾಡಿ ಕೊಡು : ಅರರೆ! ಬಿರುಮನೆ! ಮರೆಯದಿರು ಮನೆ, ಮರಿಯ ಮಕ್ಕಳ ಮಡದಿಯಾ . . . ಬರೆದುಕೊಡುವೆನು ಸ್ಥಿರ ಚರಾಸ್ತಿಯ ಉಂಬಳಿ (ಕುವು. ೨೦-೯೦). ೨. (ಆಲಂ) ನಿರ್ಧಾರವಾಗಿ ತಿಳಿಸು: ಸುಡುಗಟ್ಟು ಚಟಚಿಟಸುತ್ತಡೆಯೆಡೆಯನೊಡಗೊಂಡು ಬಿಡುಸಾಲಗೆಯೊಳೇನೊ ತಿಳಿಯಹುದ ಬರೆದುಕೊಡುವ ನೆಲದೆಡೆಗೆ ಬಾನ್ ಬಿಡದೆ ಬೀಸುವ ಗಾಳಿ (ಕಾಊರ. ೦೬೯-೪೦೭). **ಬರೆದುಕೊಳ್** = ೧. ಬರೆದಿಟ್ಟುಕೊಂಡಿರು : ಪೊಲದ ಸೀಮೆಯೆಲ್ಲಮಂ ಓಲೆಯೊಳ್ ಬರೆನ್ದು × × ಕಲ್ಲುಸಾಸನಮಾಗೆ ಬರೆದುಕೊಣ್ಡೆಮು (ಎಕ. III, ನಂಜನ. ೦೩೯-೩೦; 915 ?). ೨. (ನಾಮದ) ಗೆರೆಯನ್ನು ಎಳೆ. ೩. ಕಾದ ಲೋಹದಿಂದ ದೇಹದ ಮೇಲೆ ಬರೆಯನ್ನು ಎಳೆದುಕೊಳ್ಳು,– ಹಾಕಿಕೊಳ್ಳು. ೨, ೩. ನೆಚ್ಚನಯ್ಯ ಹರಿ ಮೆಚ್ಚನಯ್ಯ . . . ತೊಗಲಿನ ದೇಹಕೆ ಗೋಪಿ ಗಂಧ ತೇದುಕೊಂಡು ರೋಗ ಬಂದೆಮ್ಮೆಯ ಹಾಗೆ ಬರೆದುಕೊಂಬ ಮನುಜನಿಗೆ (ಪುರಂದ. ೨-೬೪-೨)

[ದೇ.॥ ತಮಿ. ವರಿ, ವರ್ರೈ; ಮಲ. ವರಿ, ವರೆ; ತುಳು. ಬರಿ, ಬರೆ; ತೆಲು. ವ್ರಾಯು, ರಾಯು]

**ಬರ್ಕೆ** (ನಾ). ೧. ಗೆರೆ; ಎಳೆ; ರೇಖೆ: ಗಿಳಿಯಂ ಸಾಕ್ಷಿ ಮಾಡಿ ಇರ್ವರುಂ ಚದುರಂಗಮಾಡುತ್ತಿರೆ ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯಂ ಬರೆಗುಂ (ವಡ್ಡಾರಾ.೦೦೬-೨೭); ಕಿಱುಕುಣಿಕೆಯ ಬೆರಲಿಂದೆಡೆವಱಿಯದೆ ಸುಟ್ಟುಂಬೆವರೆಗಮೆಯ್ದಿದ ಬರೆಯಿಂ ನೆಱೆ ನೂಱು ವರ್ಷಂ (ಲೋಕೋಪ. ೦೦-೦೬). ೨. ಎಲ್ಲೆಯ ಗುರುತು; ಸೀಮಾರೇಖೆ : ಕೋಟದಧಿವಾಸದಿಯಿಕ್ಕಿದ ಕಲ್ಲಿಂದಂ ಎತ್ತಿದ ಬರೆಯಿಂದ ತೆಂಕಲಿಯಿಂತೀ ಚತುಸ್ಸೀಮೆಯಮೊಳಗುಳ್ಳ ಬಾಳು ಬೆಟ್ಟು . . . ಯಿಂತಿಷ್ಟನೂ ಮೂಲಕ್ರಯಕೆ ಸಲುವ ಅರ್ಥವನು ಕೊಂಡು (ಸೌಇಇ. IX — ii, ೪೩೦-೨೭; 1406). ೩. ಕಾದ ಕುಳದಿಂದ ಮೈಮೇಲೆ ಎಳೆದ ರೇಖೆ,– ಗೆರೆ : ತುಪ್ಪಮನಾ ಬರೆಯೊಳ್ ಪೂಸುವುದು ಬರೆದ (ಯ) ಪುಣ್ ತೀವ್ರವಿನಂ (ಅಶ್ವಶಾ. ೦೦-೨೭); ಅಭಕ್ಷಣೆ ವತ್ಸರಹಿತೆ ರುಜೆ ಸಲೆ ಶಕ್ತಿಹೀನೆ ವಿಕಟಾಂಗಿ ಬಹುಭಕ್ಷೆ ಬರೆಗೊಳಗಾದುದತ್ಕಂಗಹೀನೆ ನಿರ್ವೀರ್ಯೆ ಮಧ್ಯಾದ್ಯ ಲಕ್ಷಣಪಶುಗಳಂ ಕಳೆದು (ಚಿಐವು. ೬೦-೯); ನಾನು ಮರೆತರೂ ಹೊಟ್ಟೆಯ ಮೇಲಿನ ಬರೆಯಂತೂ ನೆನಪು ಕೊಡಲು ಇದ್ದೇ ಇದೆಯಲ್ಲ (ಹುಚ್ಚುಹು. ೪೮) ೪. (?) : ಕುವರಿಯ ಪರಮಸೌಂದರಸಿಂಧುವಾ ಬರೆಹವಣಲ್ಲ ನರಗಿರರಿಂಗೆ (ಸೋಮಕಥ. ೨೪-೨೭).

**ಬರೆ ಕೊಡು** = ಕಾದ ಕುಳದಿಂದ ಮೈಮೇಲೆ ಗೆರೆ ಎಳೆ,– ಸುಡು : ಅವರಲ್ಲೊಬ್ಬನು ರೊಚ್ಚಿನಿಂದ ಬರೆ ಕೊಟ್ಟು ಈತನ ಎರಡೂ ಕಣ್ಣುಗಳನ್ನು ಕಳೆದನು (ಮುಂದಾಕಿ. ೦೫೬); ಅವನ ಒಂದೊಂದು ಮಾತೂ ಒಳಗೆಲ್ಲೋ ಬರೆ ಕೊಡುತ್ತಿದ್ದಂತೆನಿಸಿ ಕುಳಿತಲ್ಲೇ ಚಡಪಡಿಸಿದ (ಮೂರುದಾ. ೦೬೧). **ಬರೆ ಹಾಕು** = ಬರೆ ಕೊಡು : ಸರಕಾರವು ಬರೆಖಾತೆಯನ್ನು ಕೂಡಲೇ ನೇಮಿಸಿ ವ್ಯಾಕ್ಸಿನೇಶನ್ ಮೈಲಿಗಳನ್ನು ಹಾಕಿಸಿದಂತೆ ಎಲ್ಲರಿಗೂ ಮನೆಮನೆಗೆ ಬಂದು ಬರೆ ಹಾಕುವ ಏರ್ಪಾಟು ಮಾಡಲೇಬೇಕು(ಹುಚ್ಚುಹು. ೩೦); ಗುಳ ಕಾಸಿ ಬೇಗ ಬರೆ ಹಾಕಿದರೆ ಬದುಕುತ್ತಾನೆ (ಕಥಾಮಂ. IV. ೦೦); ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದರಂತೆ (ಗಾದೆ). [<ಬರ್ಕೆ$_1$]

**ಬರ್ಕೆ** (ನಾ). ಕಡಿದಾದ ಬೆಟ್ಟ,– ಗುಡ್ಡ : ಎಲ್ಲಿ ನೋಡಲು ಸರಿ ಜರಿ ಹಳ್ಳ ಬರೆಗಳು . . . ಮುಳ್ಳುಮರದ ಬೇರೆಡಹುಗಲ್ಲುಗಳಿಂದ ನಿಲ್ಲದೊಪ್ಪಿದುದು ಕಾಂತಾರ (ಕಂವಿ. ೦೮-೪೩); ಆ ದಾರಿಯಿಂದಲೇ ಬರೆಯನ್ನು ಹತ್ತಿ ಕಾಳೂರಿಗೆ ಹೋಗಬೇಕು (ಹರ್ಷ.ಕ. ೨೩). [ದೇ.॥ ತುಳು. ಬರೆ]

**ಬರೆಕೋಲು** 'ಬರೆಗೋಲು' ನೋ.

**ಬರೆಗುಡುಹು** (ನಾ). = ಬರೆಗುಳ : ಕುಱುಬನುಱೆ ಮುಳುಗತ್ತಿಯಿಂ ತಿರಿಯುಱುವೆಗಳುಂ ಬರೆಗುಡುಹುಮುಡಗಿದ ಕುಱಿದೊವಲ ತಿದಿಯೊಸೆಯೆ . . . ಕೆಲವಾಡುಗಳನಾ ಬೊಬ್ಬುಲಿಯ ಮರನಿಪ್ಪ ನೆಪ್ಪಿಗಾತನು ಹೊಡೆದು (ಚಿತ್ರ. ೨೦-೧೨). [ಬರ್ಕೆ$_1$ + ಕುಡುಹು (<ಕುಡುಪು)]

**ಬರೆಗುಳ** (ನಾ). (ದನಕರುಗಳ ರೋಗನಿವಾರಣೆಗಾಗಿ) ಬರೆಯನ್ನು ಹಾಕುವ ಕಬ್ಬಿಣದ ಸಲಾಕೆ : ಬರೆಗುಳವನ್ನು ಚೆನ್ನಾಗಿ ಕಾಯಿಸಿ ಎತ್ತಿಗೆ ಬರೆಹಾಕಿದರು (ರೂಢಿ). [ಬರ್ಕೆ$_1$+ಕುಳ$_1$ (<ಕುಱು)]

**ಬರೆಗೊಳ್** (ಕ್ರಿ). ೧. ಬರೆಯನ್ನು ಹೊಂದು; ಸುಡಿಸಿಕೊಳ್ಳು. ೨. (ಆಲಂ) ಏಟುತಿನ್ನು; ಘಾಸಿಹೊಂದು; ಕಷ್ಟವನ್ನು ಅನುಭವಿಸು : ಏಱೆ ಬರೆಗೊಂಡ ಜೂದುಂಗಾಱನಪೊಲ್ ಲಗ್ಗೆ ಮಾಡಲೊಲ್ಲದೆ ಪಡೆಯುಂ ಸಾಱಿಸಿ ಮುಂದಂ ಪಿಂಗುವ ನೀಱಿಯೆವೊಲ್ ತೆಗೆಯುವೇಟ್ದನಾ ವಸುಷೇಣಂ (ಅವಂಪು. ೦೨-೨೭). [ಬರ್ಕೆ$_1$+ಕೊಳ್$_1$]

**ಬರೆಗೋಲು**, ಬರೆಕೋಲು (ನಾ). = ಬರೆಗುಳ : (೬). ಬರೆಕೋಲು: ಲೆಕ್ಕಣಿಕೆ ಕೋಲಹುದು, ಕಾಗದವು ಹಗೆಗಳೆದೆ, ಬರಹವೇ ಬರೆಕೋಲ ಗಾಯಗಳಾಗುವುವು (ವಚನ. I. ೪೩೩); ನನ್ನ ತಾಯಿ ಆರಿದ ಬರೆಕೋಲನ್ನು ಹಿಡಿದುಕೊಂಡು ಪ್ರವೇಶಿಸಿ ಅದನ್ನು ಕೆಂಡದಲ್ಲಿಟ್ಟಳು (ಮುಂಗಾರು. ೬೬).

[ಬರ್ಕೆ$_1$+ಕೋಲು$_1$ (<ಕೋಲ್$_1$)]

**ಬರೆಪ**, ಬರಪ, ಬರಹ, ಬರೆಹ (ನಾ). ೧. ಬರೆದುದು; ಬರವಣಿಗೆ; ಲೇಖನ: ಶ್ರೀಮಾತ್ ಜಕ್ಕಿಮಯ್ಯನ ಮಾರ್ಗಂ ಮಹಾದೇವಯ್ಯನ ಬರೆಪಂ (ಸೌಇಇ. IX-i, ೬೪-೪೦; 1049); ಹೊಸವುರ ವೊರಕೇಸ್ವರ ದೇವರ ಓಜನ ಮಗ ಸಿಂಗೋಜನ ಪುತ್ರ ಗಣದೋಜನ ಬರೆಪಂ (ಸೌಇಇ. XI-i, ೫೦-೩೯; 1138); ಕೊರಲೊಳೆಸೆವ ಕೂಜಿತದ ಸುಮಂತ್ರದಿ ಬೆರಲ ಕೊನೆಯ ಬರೆಪದ ಬಾಸುಳ ಬಂಧುರಯಂತ್ರದಿ . . . ತರುಣಿಯ ಮೆಯ್ಯಾಲಸ್ಯದ ರುಚಿಯುಂ ಪಿರಿದುಂ ಪಿಂಗಿಸಿದಂ (ಜಯನೃ. ೮-೫೬). ೨. ಚಿತ್ರಣ; ಚಿತ್ರ: ಬರೆಪದ ಕನ್ನೆ ಭವಾಂತರಪರಿಚಯದಿಂ ಮೋಹಮೂರ್ಛೆಯುಂ ಪುಟ್ಟಿಸಿದಳ್ (ಶಂಪುರಾ. ೪-೯೬); ಬರೆಪದ ಪೆಣ್ಣಂ ಭೂಪ ಕುಸುಮಕಾಂಡಂ ಕಂಡಂ (ಕುಸುಮಾ. ೯-೬೪); ಬರೆಪದೆ ಬಣ್ಣವು ಪರೆಯೆ ಕಪೋಲದಿಂದುರುಳಿದ ಕಂಬನಿ ಗುರುತಿದೊ (ಶಾಕುಂತ. ೮೯ ಅಡಿ). ೩. ಕಾವ್ಯಾದಿಗಳ ರಚನೆ: ಬರೆಪದ ಬಲ್ಮೆ ಬಾಜನಿಯ ಬಿನ್ನಣಂ (ಎಕ. VII, ಶಿಕಾ. ೧೨೪-೨೯; 1077); ಬರೆಪಂ ಬಾಜನೆ ಗಂಡಯುಕ್ತಿ ಗಣಿತಂ . . . ಎಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪ. ೪-೫೯). **ಬರಪ:** ೧. ವಾಸ್ತುವಿಧ್ಯಾ(ದ್ಯಾ)ಧರಂ ಕಾವೋಜನ ಬರಪ (ಇಕ. XIII, ೯೩-೪೦; 1084); ಜಕ್ಕಣನ ಬರಪ ಮರುಳೋಜ ಮಾದೋಜನ ಕಂಡರಣೆ (ಕಇ. IV, ೧೧-೬೦; 1121). **ಬರಹ:** ೧. ಶ್ರೀಮಾತು ಕನಕನಂದಿತ್ರೈವಿದ್ಯದೇವರ ಗುಡ್ಡಂ ಸೇನಬೋವ ಭೋಗದೇವನ ಬರಹ (ಎಕ. VII, ಶಿವಮೊ. ೮೯-೩೪; 1111); ಎರಡರಸನಾನದು ಧರಣಿಯೊಬ್ಬನ ಶಿರದ ಬರಹವ ತೊಡೆವೆನಿದೆಯೆಂದೆನುತ ತೆಗೆದೆಚ್ಚ (ಕುವ್ಯಾಕ. ೧೩-೪೨); ಅದರ ಮೇಲಿದ್ದ ಬರಹ ಸ್ಪಷ್ಟವಾಗಿ ಗೋಚರಿಸುತ್ತಿರಲಿಲ್ಲ (ಹಾಹುತ್ತ. ೧೦೩). ೨. ಅಂತು ಬರಹದ ಬಚ್ಚರಣೆಯ ಪೆಣ್ಣು ಕಣ್ಣೊಳ್ ತೊಳಲೆ . . . ಮನದೊಳ್ ಚಿಂತಿಸುತ್ತಮಿರಲ್ (ಕುಮ್ಯಾಸ್ರ. ೩-೪೨ ವ); ಎಸೆವ ಬೊಂಬೆಯ ಬರಹದ ಪಟ್ಟೆಪೀತಾಂಬರ ಪೊಸ ಚಂದ್ರಗಾವಿ ಪೊಪ್ಪಳಿಯ . . . ದಿವ್ಯದುಗುಲದ ನಿಱಿಗಳ . . . ಶಶಿಮುಖಿಯರು ರಂಜಿಸಿದರು (ಕಂಪವಿ. ೨೪-೪೪). **ಬರೆಹ:** ೧. ಮಱುಗಲಿನ್ನೇಕರಸ ಬಿಡು ವಿಧಿ ಬರೆದ ಬರೆಹವ ತಪ್ಪಿಸಲು ಹರಿಹರವಿರಿಂಚಾದಿಗಳಿಗಳವೇ ನಮ್ಮ ಪಾಡೇನು (ನಳಚ. ೫-೩); ಈ ಶಾಸನಗಳು ದೊಡ್ಡವಲ್ಲ, ಎಲ್ಲ ಪುಟ್ಟ ಪುಟ್ಟ ಕಲ್ಲಿನ ಬರೆಹಗಳು (ದ್ರಾಶಿಶಿ. ೫೬). [ಬರೆ$_1$+—ಪ$_2$]

**ಬರೆಪಂಬೊಗು** (ಕ್ರಿ). ಬರಹಕ್ಕೆ ಸಾಧ್ಯವಾಗು; ಬರವಣಿಗೆಗೆ ಶಕ್ಯವಾಗು: ಅಕ್ಕರಮುಂ ವರ್ಣಮುಮೆಂದಕ್ಕುಂ ಶುದ್ಧಾಕ್ಷರಕ್ಕೆ ನಾಮಂ ಬರೆಪಂಬೊಕ್ಕುಚ್ಚರಿಸಲ್ ಬಾರದುವಕ್ಕರಮಲ್ತು (ಕಮದ. ೨).
[ಬರೆಪ+ಪೊಗು]

**ಬರೆಪಕಾಱ**, ಬರಹಗಾರ (ನಾ). ಬರೆಯುವವನು; ಲೇಖಕ: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇಟ್ದ ಬೆಳ್ಗಳ ಕೃತಿಬಂಧಮುಂ ಬರೆಪಕಾಱರ ಕೈಗಳ ಕೇಡು (ಶಂಪಶಾ. ೧-೧೨). **ಬರಹಗಾರ:** ತನ್ನ ಲೇಖಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿಕೊಂಡಿದ್ದ ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಶನಾ. ೧೧); ಮುಂದಕ್ಕೆ ಬರುವಷ್ಟರಲ್ಲಿ ಆ ನನ್ನ ಬರಹಗಾರ ಗೆಳೆಯನೇ ಆವನು ಆಗಿದ್ದ! (ಗಾಳಿಗು. ೧೬). [ಬರೆಪ+—ಕಾಱ]

**ಬರೆಪು**, ಬರಹು$_1$ (ನಾ). ಬರವಣಿಗೆ; ಬರಹ: ಕೃಷ್ಣ — ವಿಲೇಖನೇ, ಉಳ್ಕೆಯೊಳ್; ಕರ್ಷತಿ = ಉಳ್ತಪುದು . . . ಕಾರ್ಷ್ಯಂ—ಬರೆಪು (ಶಾಶಕ್ಯ. ೫೮). **ಬರಹು$_1$:** ಅಂದವ ಆತಪಂನುಹಕೆ ಬರಕೊಟ್ಟ ಬರಹು (ಎಕ. VII, ಶಿವಮೊ. ೧೧೮-೪೨ : 1568 ?); ಸೇನಭವರಮಪ ಬರದ ಬರಹು (ಎಕ. VII, ಶಿವಮೊ. ೯೩-೩೯; ?). [ಬರೆ$_1$ + — ಪು$_2$]

**ಬರೆಯಿಡು** (ಕ್ರಿ). ಕಾದ ಲೋಹದಿಂದ ಮೈಮೇಲೆ ಗೆರೆಯನ್ನು ಎಳೆ; ಬರೆಯೆಳೆ; ಬರೆಹಾಕು: ಬರೆಯಿಡುವೊಡೆ ಪೆಱವೆಡೆಯೊಳ್ ಖರಕಿರಣಾಸಚ್ಚಶಾಂಕರೇಖಾಕೃತಿಯಿಂ ಬರೆಯಿಡುವುದು (ಅಶ್ವಶಾ. ೧೧-೨೬); ಅಷ್ಟು ಬರೆಯಿಟ್ಟಾಗಲೂ ಗೋಳಿಡಲಿ (ಹೊಸಬ. ೨೨). [ಬರೆ$_2$ + ಇಡು$_1$]

**ಬರೆಯಿಸು**, ಬರಸು$_1$, ಬರೆಸು (ಕ್ರಿ). ೧. ಬರೆಯುವಂತೆ ಮಾಡು; ಲಿಖಿತಗೊಳಿಸು: ಗರ್ವದೆ ಬರೆಯಿಸಿದಂ ಪೆಸರನಖಿಳದಿಗ್ಭಿತ್ತಿಗಳೊಳ್ (ಶಂಶಶಾ. ೦-೨೦); ತನಗೆ ಪರಮವಿಶ್ವಾಸಮುಳ್ಳ ಲೇಖಕನಿಂ ಸೂರ್ಯಮಿತ್ರಂಗೆ ವಿನಯಪತ್ರಮಂ ಬರೆಯಿಸಿ (ಸುಕುಮಾ. ೨-೪೩ ವ); ಏನೋ ಕಾಗದ ಬರೆಯಿಸಿ ಕೊಟ್ಟರು ಎಂದೂ ಹೇಳಿದ (ಶಂಗಾಳ್ಯ. ೪೬೦). ೨. ಕಾವ್ಯ ರಚನೆ ಮಾಡಿಸು; ಕೃತಿಯನ್ನು ರಚಿಸುವಂತೆ ಮಾಡು: ಶಾಂತಿಪುರಾಣಮನಿದನೋರಂತಿರೆ ಬರೆಯಿಸುವ ಕೂಡೆ ಪರೆಯಿಸುವ ಜನಕ್ಕಿಂತಾರ್ ನೋಂತರ್ (ಶಾಂತಿಪು. ೦-೩೯); ಪೊನ್ನಿಗನಿಂ ಬರೆಯಿಸಿದರ್ ಸಕಳೋರ್ವಿಗೆ ಪರೆಯಿಸಿದರ್ ಸಲೆ ಪುರಾಣಚೂಡಾಮಣಿಯಂ (ಅಜಪು. ೦-೩೪); ಕಾವ್ಯಗಳನ್ನು ಬರೆಯಿಸುವ ಮನೋಧರ್ಮ ಅತ್ತಿಮಬ್ಬೆಗೆ ತಂದೆಯ ಮನೆಯಿಂದಲೇ ಬಂದಿತೇನೋ (ಸಶಾಪೋ. ೧೫೬). ೩. (ಅಧಿಕಾರಕ್ಕೆ) ನೇಮಿಸು; ನೇಮಕಮಾಡು: ಎನ್ನ ಭಂಡಾರಕ್ಕೆ ಬರೆಯಿಸುವೆನೀತನಂ (ಏಕರ. ೫-೧೧೧). **ಬರಸು$_1$:** ೧. ಆಚಂದ್ರಾರ್ಕತಾರಂಬರಂ ಬರಸಿ × × × ಕೊಟ್ಟ ಧರ್ಮ (ಎಕ. VII, ಶಿವಮೊ. ೬೨-೧೯; 1292); ಬರಸಿದವು ಬಳಿಕೋಲೆ ಮಣಿಹಾಱರಿಗೆ ಹೇಳಿಕೆಯಾಯ್ತು ಶಿಷ್ಟರ ಪರುಟವಿಸಿ ಕಳುಹಿದನು ಪುರಗಳಿಗೆ (ಕೊರಣಾ. ೦-೬-೯). ೪. ಹೇಳಿಕೊಡು; ಬೋಧಿಸು: ದ್ರೋಣ ಬರಸಿದ ಭಾಷೆಯೆಂದೇ ಕ್ಷೋಣಿಪತಿ ಬಗೆಯದಿರು (ಕುವ್ಯಾಕ. ೦೩-೫೬). **ಬರೆಸು:** ೧. ಓಲಗಕೆ ನಡೆತಂದು ಬರೆ[ಪಾಠಾಂ. ರ]ಸಿದನೋಲೆಗಳ ಕಳುಹಿದನು ಧರಣೀಪಾಲಕರ ಬರಹೇಳೆನುತ ಹೊಯಿಸಿದನು ಡಂಗುರವ (ನಳಚ. ೩-೪). ೨. ಒಳ್ಳೆಯ ಸರಸರೂಪಕಗಳನ್ನು ಬರೆದು, ಬರೆಸಿ, ಆಡಿ, ಆಡಿಸಿ, ಪ್ರಚುರಪಡಿಸಬೇಕು (ಶಾಹಿಚಿ. ೬೮).
[ಬರೆ$_1$ + — ಇಸು$_3$]

**ಬರೆಯೆಳೆ** (ಕ್ರಿ). = ಬರೆಯಿಡು: ನಾಗಣ್ಣನ ಕರುಳಿಗೆ ಒಮ್ಮೆಲೆ ಬರೆಯೆಳೆದಂತಾಯಿತು (ಜನಪ. ೪೮); ಭುಸುಗುಡುತ್ತ ಆಕಾಶಕ್ಕೆ ಬೆಂಕಿಯ ಬರೆಯೆಳೆದು ಕಣ್ಮರೆಯಾಗುವ 'ಸುರುಸುರ್' ಬಾಣ (ಮೂರುದಾ. ೨೦೬).
[ಬರೆ$_2$ + ಎಳೆ$_1$ (< ಎೞ್$_1$)]

**ಬರೆವಣಿಗೆ** 'ಬರವಣಿಗೆ' ನೋ.

**ಬರೆಸು** 'ಬರೆಯಿಸು' ನೋ.

**ಬರೆಹ** 'ಬರೆಪ' ನೋ.

**ಬರೋಬರಿ$_1$** 'ಬರಾಬರಿ$_1$' ನೋ.

**ಬರೋಬರಿ$_2$** 'ಬರಾಬರಿ$_2$' ನೋ.

**ಬರೋಬ್ಬರ್** 'ಬರಾಬರಿ$_2$' ನೋ.

**ಬರೋಬ್ಬರ** 'ಬರಾಬರಿ$_1$' ನೋ.

**ಬರೋಬ್ಬರಿ** 'ಬರಾಬರಿ$_1$' ನೋ.

**ಬರ್ಕ**, ಬರಕ$_1$ (ನಾ). (ಕರಾ) ಒಂದು ಬಗೆಯ ಕಾಡುಪ್ರಾಣಿ: ಹಿಂದೆ ಬರ್ಕ, ಕೆಮ್ಮ, ಕಡವೆ ಯಾವಾಗಲೂ ಕಾಣಲಿಕ್ಕೆ ಸಿಗುತ್ತಿತ್ತು (ಮೂಕಜ್ಜ. ೫೦); ದನ, ಎತ್ತು . . . ಕುರ್ಕ, ಬರ್ಕ, ಮೊಲ, ಮುಂಗುಸಿ, ನವಿಲು, ಹೊರಸಲು, ಕಾಜಾಣ ಪಿಕಳಾರ, ಕಾಡುಕೋಳಿ, ಕಣೆಹಂದಿ ಮೊದಲಾದ ಜಂತುಗಳಂತೆ ಸ್ಥಳೀಯವಾಗಿರಲಿಲ್ಲ (ಮರಳು. ೪೨೦). **ಬರಕ$_1$:** ಕಾಡುಕುರಿ, ಕಾಡುಹಂದಿ . . . ಬರಕ, ಮೊಲ, ಮುಸಿಯ, ಹುಲಿ, ಕರಡಿ, ಕುರ್ಕ ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ವಿಂತಿಯೇ ಇರಲಿಲ್ಲ (ಶಂಜಶಂ. ೨).
[?./ ತುಳು. ಬರಿಂಕ = ಒಂದು ಬಗೆಯ ಸಣ್ಣಗಾತ್ರದ ಜಿಂಕೆ]

**ಬರ್ಕಟ** 'ಬಚುಕಟೆ' ನೋ.

**ಬರ್ಕಟಬಯಲ್**, ಬಕ್ಕಟಬಯಲು (ನಾ). ೧. ಏನೂ ಇಲ್ಲದುದು ; ಶೂನ್ಯ ; ಬರಿದಾದುದು: ತವಮಾಗಳ್ ಬರ್ಕಟಬಯಲಾದುದರ್ಕನು ದಯಿಸುವಾಗಳ್ (ಗಂಶ. ೩-೩). **ಬಕ್ಕಟಬಯಲು** : ೧. ನೀನೆತ್ತ ನಾನೆತ್ತ ಲೆಂದು ಬೊಮ್ಮ ಬಕ್ಕಟಬಯಲು (ಅಶಕಂ. ೩೬೦-೧೦೫೦) ; ಬಯಲ ಪುರುಷ ಬಯಲಾಕಾರ ಬಕ್ಕಟಬಯಲರೂಪನೆ (ಭರತ. ೬೭-೧). ೨. (ಆಲಂ) ಹಾಳು ; ನಾಶ : ಅಕ್ಕಟಕ್ಕಟ ದೊರಕಿದ ನಿಧಿಯಿಂದಿನೊಳ್ ಬಕ್ಕಟಬಯಲಾಯಿತಿಂತು (ಅಂಜಚ. ೩-೧೯೪).

[ಬರ್ಕಟ (< ಬಚುಕಟೆ) + ಬಯಲ್ (< ವಯಲ್)]

**ಬರ್ಕತ್ತು** 'ಬರಕತ್ತು' ನೋ.

**ಬರ್ಕರ** (ನಾ). ಪ್ರಾಣಿಗಳ ಮರಿ : "ಎಲ್ಲಾ ಪಶುಗಳ ಮರಿ ಬರ್ಕರ ವೆಂಬುವುದು" (ಪರಾಯು. ೯೬-೧೨೩). [ಸಂ.]

**ಬರ್ಕುಡಿ** 'ಬಕ್ಕುಡಿ₁' ನೋ.

**ಬರ್ಕುಡಿಗುಟ್ಟು** 'ಬಕ್ಕುಡಿಗಂಟ್ಟು' ನೋ.

**ಬರ್ಕುಡಿಗೆಯ್** 'ಬಕ್ಕುಡಿಗೆಯ್' ನೋ.

**ಬರ್ಕೆ₁** (ನಾ). (ಕರಾ) ಕಡಮೆ ಅಂತಸ್ತಿನ ಮನೆತನ : ಗುತ್ತು ಬರ್ಕೆಗಳ ಯಜಮಾನರನ್ನೂ ಆಮಂತ್ರಿಸಿ ಚೆನ್ನಾಗಿ ಸತ್ಕರಿಸಿದ್ದರು (ಬಿನ್ನ. ೩೦). 'ಗುತ್ತು₄' ಪರಾ.

[← ತುಳು. ಬರ್ಕೆ = ಬಂಟರ ಒಂದು ಬಿರುದು]

Δ **ಬರ್ಕೆ₂** 'ಬಕ್ಕೆ' ನೋ.

Δ **ಬರ್ಕೆವಲಸು** 'ಬಕ್ಕೆವಲಸು' ನೋ.

Δ **ಬರ್ಚಣೆ** 'ಬಚ್ಚಣೆ' ನೋ.

Δ **ಬರ್ಚಲ್** 'ಬಚ್ಚಲ್' ನೋ.

**ಬರ್ಚಿ**, ಬರ್ಜಿ, ಭರ್ಚಿ, ಭರ್ಜಿ (ನಾ). ಒಂದು ಬಗೆಯ ಆಯುಧ ; ಈಟಿ ; ಸಬಳ : ಕೊಳುಗುಳದಿ ಮದವೇರಿ ರೋಷದಿಂದುಭಯಬಲ ಹಳಚಿದುದು ಬರ್ಚಿಯಿಂ ಶೂಲದಿಂ ಶಕ್ತಿಯಿಂದಲೆ ಕೃಪಾಣಂಗಳಿಂದೆರ ಡೊಡ್ಡಿನೋಳ್ಕಾದಿತುಭಯತರ ಬಲ ಮಡಿದುದು (ತುರಂಗ. ೩೬-೬) ; ತನ್ನ ಶಕ್ತಿಯಲಿ ನಿನ್ನ ಸುತ್ತಿರುವುದಾವ ಬೆಂಕಿಉರಿಯು? ಪಾಲಿಸುತ್ತಿರೆಯು ಬರ್ಚಿನಾಲಗೆಯು ಚಾಚಿ ಕಾಯುತಿರೆಯು (ಅರಳು. ೦೬೭-೦೦) ; ದೊಣ್ಣೆ, ಕೋಲು, ಬರ್ಚಿ ಮುಂತಾದ ಸಮಯಕ್ಕೆ ಸಿಕ್ಕ ಆಯುಧಗಳನ್ನು ತೆಗೆದು ಕೊಂಡು, ಮುಸಲ್ಮಾನರು ಹಿಂದೂಜನರ ಮನೆಗಳನ್ನು ಮುಗ್ಗಿದರು (ಶುಂಠಾಕ. ೬೯). **ಬರ್ಜಿ** : ಬರ್ಜಿಯಿಂದ ಸಂದಿಯಲ್ಲಿ ತಿವಿದಾಗ ಹಾವು ಹೊರಬಂತು (ಊ). **ಭರ್ಚಿ** : ಕೆಲವು ಸಮಾಜಗಳಲ್ಲಿ ಭರ್ಚಿಯನ್ನು ಗುರಿಯಿಟ್ಟು ದೂರದಿಂದ ಎಸೆದು ಪ್ರಾಣಿಗಳನ್ನು ಕೊಲ್ಲುತ್ತಿದ್ದರು (ತಂತ್ರಾ. ೨೦). **ಭರ್ಜಿ** : ಗಂಡುಕೊಡಲಿ, ಭರ್ಜಿ, ಗುರಾಣಿ ಎಲ್ಲವನ್ನೂ ಧರಿಸಿದ್ದ (ಅರ್ಜುಕ. ೩೨) ; ಕಾಸರ್ ಸಿಪಾಯಿಯೊಬ್ಬನು ತನ್ನ ಬಂದೂಕ ವನ್ನೂ ಭರ್ಜಿಯನ್ನೂ ಕೈಯಲಿ ಹಿಡಿದುಕೊಂಡು ಕೆಲವು ಸಮಯದಲ್ಲಿ ಆ ಬಾಗಿಲನ್ನು ಕಾಯುತ್ತಾ ನಿಂತಿರುತ್ತಾನೆ (ಮುಕಪಾ. ೨೩).

[← ಹಿಂ. ಬರಛಾ, ಬರಛೀ ; ಮರಾ. ಬರಚೀ, ಬರಛೀ, ಬರಶೀ]

**ಬರ್ಚಿಗಾರ** (ನಾ). ಈಟಿಯನ್ನು ಹಿಡಿದಿರುವವನು ; ಬರ್ಜಿಯಿಂದ ಹೋರಾಟ ನಡೆಸುವ ಸೈನಿಕ : ಬರ್ಚಿಗಾರರ ಬಲವೆ ಬೀಡಾರ ಬಿಟ್ಟಂತೆ ಒಟ್ಟಿಲದಲಿ ಜೋಳದ ಸೆಲುವು (ಸರ್ವಗೀ. ೨೨-೩).

[ಬರ್ಚಿ + — ಗಾರ (< — ಕಾರ)]

Δ **ಬರ್ಚಿಸು** 'ಬಚ್ಚಿಸು₂' ನೋ.

Δ **ಬರ್ಚು** 'ಬಚ್ಚು₂' ನೋ.

**ಬರ್ಜಿ** 'ಬರ್ಚಿ' ನೋ.

**ಬರ್ತರಫ್** 'ಬರತರಫು' ನೋ.

**ಬರ್ತರ್ಫ್** 'ಬರತರಫು' ನೋ.

**ಬರ್ದ** (ನಾ). ಜಾಣ್ಮೆಯುಳ್ಳವನು ; ಬುದ್ಧಿವಂತ : ರತಿಪತಿಯ ರಾಜಧಾನಿಯ ಚತುರೆಯರೊಳ್ ಸುಖಿಪ ಬರ್ದನೀ ಗ್ರಾಮ್ಯೆಯನೇಂ ಕ್ಷಿತಿಪಾಲ ನೆನೆಗುಮೋ ಮಾಳತಿಗೆರಗಿದ ತುಂಬಿ ನೆನೆಗುಮೇ ಮಿಕ್ಕಲರಂ (ಚಿಣ್ಣ. ೦೦-೦೯). [ಬರ್ದು₄ + — ಅ₇]

**ಬರ್ದಂಡು** 'ಭರದಂಡು' ನೋ.

**ಬರ್ದಿಲ** (ನಾ). ೧. ಸಾವಿಲ್ಲದವನು; ಅಮರ ; ದೇವತೆ : "ಆಗಸ ವಟ್ಟೆಗರು ಸಗ್ಗಿಗರು ಬರ್ದಿಲ [ಪಾಠಾಂ. ದುರ್ಗ]ರೈದೆ ಯಾ ಪೆಸರು ಸಲ್ವುದು ಸುರರ್ಗೆ" (ಶಬ್ದಮಂ. ೦೦) ; ಸಗ್ಗಮಂ ಸಾರ್ದು ಮುಗಿಲ್ದೇರ ನನಟ್ಟಿ ಬರ್ದಿಲರಂ ಸೋಲಿಸಿ, ಕನ್ನೆವೆಣ್ಗಳಂ ಸೆರೆವಿಡಿವಂ (ಅದ್ಭುತ. ೨೯-೦೯) ; ಬಲುಂಗಬ್ಬಿಗನೊಬ್ಬನೆ ಬಾಳ್ವ ಬರ್ದಿಲಂ (ಗಿರಿಜಾ. ೦೦೬-೬). ೨. ದೇವತೆಗಳ ಲೋಕ ; ಸುರಲೋಕ ; ಸ್ವರ್ಗ : "ಬರ್ದಿಲಂ, ಸಗ್ಗಂ —ಈ ೨ ಸ್ವರ್ಗದ ಪೆಸರ್" (ಕರ್ಣಾ. ೯೬-೦೭) ; ಬರ್ದಿಲಂ ಸಗ್ಗಕ್ಕೆ ಪೆಸರ್ (ಶಮದ. ೯೩) ; ಶ್ರೀರಂಗರಾಜಂ ಅಪುತ್ರನಾಗಿ ಬರ್ದಿಲಮನೈದ ಲೊಡಂ (ಚಿಕಪಂ. ೨-೦೩).

ಬರ್ದಿಲರ ಬಡಗಿ = ದೇವತೆಗಳ ಬಡಗಿ ; ವಿಶ್ವಕರ್ಮ : ಪೆಸರ್ ನಳಂ. ಬರ್ದಿಲರ ಬಡಗಿಗೆನಗೆ ಪುಟ್ಟಿದಾತಂ (ಶ್ರೀ ರಾಮಾ. ೩೩೭-೯೩).

[ಬರ್ದು₃ + — ಇಲ]

**ಬರ್ದಿಲನಾಡು** (ನಾ). = ಬರ್ದಿಲ ೨: ಪಗೆದೊರೆಗಳುಮೊಂದಿದರಾ ಬರ್ದಿಲನಾಡ ಬಾಟ್ಟೆಯ ಸಿರಿಯಂ (ಅಶ್ವತ. ೦೭-೯೯) ; ಕರ್ವಟ್ಟುಗಳೀಗಳ್ ಪೂರ್ವವೈರಮಂ ಬಗೆದು ಬರ್ದಿಲನಾಡಿಂಗೆ ದಾಟಿಡಲ್ಕೆ ದಂಡೆತ್ತಿ ಪೋಪು ವಕ್ಕುಂ (ರಾಮಾಶ್ವ. ೩-೩). [ಬರ್ದಿಲ + ನಾಡು]

**ಬರ್ದಿಲವಟ್ಟೆ** (ನಾ). ಸ್ವರ್ಗದ ದಾರಿ ; ದೇವಲೋಕದ ಮಾರ್ಗ ; ಆಕಾಶ : ಬರ್ದಿಲವಟ್ಟೆಯೊಳೈತರುತಲಿರ್ದ ಹನುಮಂನಂ . . . ತಿಳಿದಳಾ ಸಿಂಹಿಕೆ (ಶ್ರೀರಾಮಾ. ೯೦೦-೨೦೯). [ಬರ್ದಿಲ + ಬಟ್ಟೆ₁]

**ಬರ್ದಿಲಾಣ್ಮ** 'ಬರ್ದಿಲಾಳ್ಮ' ನೋ.

**ಬರ್ದಿಲಾಳ್ಮ**, ಬರ್ದಿಲಾಣ್ಮ (ನಾ). ದೇವಲೋಕದ ಒಡೆಯ ; ಸ್ವರ್ಗದ ರಾಜ : "ಬರ್ದಿಲಾಳ್ಮ[ಪಾಠಾಂ. ಣ್ಮ] ಸಗ್ಗಿಗರೆರೆಯ . . . ಸುರಪತಿಯ ನಾಮಮಕ್ಕುಂ" (ಶಬ್ದಮಂ. ೦೦). **ಬರ್ದಿಲಾಣ್ಮ** : ಬರ್ದಿಲಾಣ್ಮನಾಗಿರ್ದೊಡಲ್ಲದೆಯೆ ಓರೊರ್ವನುಂ ಬೇಗುದಿಯಳೊಂದೆ ಬಗೆ ತೊಟಲ್ವಪನ್ (ಐದ್ಧಶ್ರ. ೩-೩೭). [ಬರ್ದಿಲ + ಆಳ್ಮ]

**ಬರ್ದಿಸು** (ಕ್ರಿ). ತಾಳಿಸಂ ; ಬಾಡಿಸು ; ಹುರಿ : ತತ್ತಟಗುದಿದು ಕಾಯ್ದು ಕಾಯ್ಗೊಂಡದೆಣ್ಣೆಯೊಳರ್ದಿ ಬರ್ದಿಸುತ್ತುಮಾಪಾದಮಸ್ತಕಂ ಬರಂ ವ್ಯತ್ತಿಸಿ ಪತ್ತಿತಿದಿಯುಂಗಿಯುತ್ತೆ (ಅಪಪು. ೧೦-೦೦ ವ).

[ಬರ್ದು₁ + — ಇಸು₃]

**ಬರ್ದು₁** (ಕ್ರಿ). ೧. ಸಾಯು ; ಮರಣವನ್ನು ಹೊಂದು : "ಬರ್ದು—ಮರಣೇ" (ಶಮಧಾ) ; ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೦೦೦೯ ಶೂದ್ರಕ) ; ಅತಿ ಶೋಕಾಗ್ನಿಯೊಳರ್ದು ಬರ್ದು [ಪಾಠಾಂ. ಟ್ಟು] ಪುದಿದಾತ್ಮಧ್ಯಾನದಿಂ . . . ದುರಂತದುಃಖಿಮನುಣಲ್ಬೇಡ (ಆದಿಪು. ೩-೩೭). ೨. ನವೆ ; ಬಾಡು ; ಸೊರಗು : ಪರಮಮಿತ್ರಾ ಇಂತೇಕೆ ಬರ್ದಿ[ಪಾಠಾಂ. ಬಿಟ್ಟು] ಬಂಬಳಂ ಬಾಡಿ ಪಾಡಟಾದುಬ್ಬೆಗಂಬಟ್ಟಿರ್ದೆ (ವರ್ಧಮಾ. ೩೯-೩).

[ದೇ. ॥ ತಮಿ. ವರುನ್ತು]

**ಬರ್ದು₂** 'ಬಾಟು₁' ಪರಾ.

**ಬರ್ದು₃** (ನಾ). ೧. ಸಾವು ; ಮರಣ : "ಬರ್ದನಲ್ ಸಾವು" (ಶಬ್ದಮಂ. ೯೩) ; ಎನ್ನೊಳ್ ಕೂರ್ತಿರಪ್ಪೊಡೆ ಬರ್ದಿನ ಪೂರ್ದಿನ ಮುನ್ನಮೆ ಶ್ರೀರಘನಾಯಕಂ ಕಣ್ಣಾರೆ ಕಂಡು ಧನ್ಯನಪ್ಪಂತು ವರಮಂ ಕರುಣಿಪುದು (ರಾಮಾಶ್ವ. ೧೧೧೦-೧೧). ೨. ಸಾವು ಇಲ್ಲದ ಸ್ಥಳ ; ಸ್ವರ್ಗ : "ಬರ್ದನೆ ಸ್ವರ್ಗಮೆಂದೆನಿಪುದುಂ" (ಕಶಿರ. ೭೨). [<ಬರ್ದು₁]

**ಬರ್ದು₄, ಬದ್ದು₂** (ನಾ). ಜಾಣ್ಮೆ ; ಪ್ರೌಢಿಮೆ ; ಕೌಶಲ : "ಬರ್ದನೆ ಪ್ರೌಢಿಯೊಳಕ್ಕುಂ" (ಕಶಾಸಿ. ೧೭) ; ಉಪರಿಚರಮಹಾರಾಜನಿಂದಗ್ಗಳಂ ಪೆಱರಾರುಮಿಲ್ಲವಿಾ ಸಂಸಾರದೊಳ್ ಬರ್ದ ಬಾೞನೀತನೆ ಬರ್ದನೆಂದು ಪೊಗೞ್ದೊಡೆ (ವಡ್ಡಾರಾ. ೦೬೭-೨೦) ; ಮಸೆದ ಮದನನ ಪೊಳೆವಲರ್ಗಣೆಗಳಂತೆ ಕಣ್ಗಳೊಳ್ ಬೆಳೆದೆಳಸಿ ಬಂದಿರ್ದ ಪಾಟದಾಟದ ಮುಂದ್ದಿನ ಬರ್ದಿನ ಪರಿವಾರದೇವಿಯರುಮಂ . . . ಕಂಡು (ಅದಿಪು. ೨-೬೩ ವ) ; ಆ ಸರಸತಿ ಕೂರ್ಮೆಯಿಂದೊಸೆದು ಮಾಡುಗೆ ಕಬ್ಬದ ಬರ್ದಿನೇೞ್ಗೆಯಂ (ಕಬ್ಬಿಗ. ೩) ; ಅಧರಾಮೃತಮಂ ನಿಚ್ಚಂ ತಣ್ಣನೆ ಸವಿವ ಬರ್ದುಳ್ಳರ್ಗೆ ಬರ್ದಿಲರೇಂ ಪಾಸಟಿಯೆ ? (ರಾಮಾಶ್ವ. ೬೦-೦೮). 'ಬರ್ದುಗ' ಪರಾ. **ಬದ್ದು₂** : ಆತನಂ ಕಾಣಲೊಡಂ ಕರಂ ಬಯಸಿ ತಾಮೆೞ್ದಟ್ಟುಪರಟ್ಟಿ ಕೂಡೆಯುಂ ನಾ[ಣ]ಲಿವನ್ನರಾದರೆನುತೊಂದು ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಳಕಿಯೆಯೆಂತುಗೆ ಕೂಡುತೆ ಗೆಲ್ದೆಯಾತನಂ (ಜಿಂಶಂ. ೩-೬೦). [ ? ]

**ಬರ್ದುಂಕಿಸು, ಬದುಕಿಸು, ಬರ್ದುಕಿಸು** (ಕ್ರಿ). ೧. ಕಾಪಾಡು ; ರಕ್ಷಿಸು : ನಿನ್ನೊಳಗೀಕೆ ತಾನೆಯೊಲವೆತ್ತಾ ಪಾಂಗುಮಂ ಪೆಂಡಿರೊಳ್ ಸರಿಗಂಡೀಕೆಯ ನೀಂ ಬರ್ದುಂಕಿಪುದು (ಶಾಕುಂತ. ೩೬-೯೩). ೨. ಮುಕ್ತಗೊಳಿಸು ; ಬಿಡುಗಡೆ ಮಾಡು : ವಿಜಯನೆಂಬ ಕುಮಾರನುಂ ಓರಿದು ತಂತ್ರಂಬೆರಸು ಪೋಗಿ ಏನಾನುಮೊಂದುಪಾಯದಿಂದೊದ್ದಾಯನನ ಸೆಱೆಯಂ[ಯಿಂ] ಬರ್ದುಂಕಿಸಿ ರಾಜಗೃಹಕ್ಕೊಡಗೊಂಡು ಪೋದೊಡೆ (ವಡ್ಡಾರಾ. ೦೬೩-೦೭). **ಬದುಕಿಸು** : ೧. ಸದ್ಭಾವನೆಯೆ ಪ್ರಸನ್ನವಾಗಿ ಚಿದ್ಬಿಂದುವಿನೊಳು ಪ್ರತಿಬಿಂಬಿಸುತ್ತಿಪ್ಪ ಚಿದ್ಬ್ರಹ್ಮವನೊಳಕೊಂಡ ಮಹಾಶರಣರ ತೋಱಿ ಬದುಕಿಸಾ ಎನ್ನ (ಅದವ. ೦೭-೪೨) ; ಶಿವಾಚಾರ ಶಿವಭಕ್ತಿ . . . ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯ ಎನ್ನ (ಅಖಂಡೇ. ೧೯೯-೦೯೩) ; ಬದುಕಿಸು ನನ್ನೊಡೆಯನ ದಮ್ಮಯ್ಯ (ಕೋಣಗಿ. ೩೦-೩). ೩. ಬದುಕುವಂತೆ ಮಾಡು ; ಜೀವವುಳಿಸು : ಅಂದು ಮೃತಸಂಜೀವಿಯೌಷಧಿಯಿಂದ ಬದುಕಿಸಿ ಮನೆಗೆ ತಂದನು (ಸಂಕಶ. ಶಂ. ೨-೦೩) ; ಅಮೃತ್ಯುಯ್ಯನಿಗೆ ಮರಣಸಂಭವವಾದರೆ ಮಾರ್ಕಂಡೇಯನಂತೆ ಈಶ್ವರನನ್ನು ಮೆಚ್ಚಿಸಿ ಬದುಕಿಸಿಕೊಳ್ಳುವೆನೆಂಬ ಭರವಸೆ (ಹಂಗಾಳ್ವ. ೩೨). **ಬರ್ದುಕಿಸು** : ೧. ಅವರೆಸ್ಸಂಖ್ಯದ್ರವ್ಯಯದೊಳೆಱಗಿ ಬರ್ದುಕಿಪುದೆಂದರ್ (ವಶಕು. ೬-೦೯೩). [ಬರ್ದುಂಕು + — ಇಸು₁]

**ಬರ್ದುಂಕು, ಬದುಂಕು, ಬದುಕು₁, ಬರ್ದುಕು₁, ಬಟ್ದುಂಕು** (ಕ್ರಿ). ೧. ಜೀವಧಾರಣೆ ಮಾಡು; ಪ್ರಾಣವನ್ನುಳಿಸಿಕೊಳ್ಳು; ಜೀವಿಸು : ಕರ್ಮಕೆಕ್ಕೋಡಿ ಬರ್ದುಂಕಲ್ಕುಮಱಿವರಾರ್ ಭೂತಳದೊಳ್ (ಕಂಡಾ. ೦-೬೨); ಪಗೆವರೊಕ್ಕಲೊಳೋವೆನಲೊರ್ವರಿಲ್ಲದಂತಿರೆ ತವೆ ಕೊಲ್ಲುಮಂತುಮರಿಕೇಸರಿಗಾಂತು ಬರ್ದುಂಕಲಕ್ಕುಮೇ (ಶಂಕಖಾ. ೯-೩೬); ನಲ್ಲರ ಕೂಡು ವಾಸೆಯೆ ಬರ್ದುಂಕುವುದರ್ಕೆ ನಿಮಿತ್ತಮಾಗದೇ (ಕಾದಂಉ. ೩೨೯). ೨. ಜೀವನವನ್ನು ನಡಸು; ಬಾಳನ್ನು ಸಾಗಿಸು ; ಹೊಟ್ಟೆಹೊರೆ : ಸೇವಕಂ ಮೊದಲೊಳರಸಂಗಂ ತದನಂತರಂ ಪ್ರಧಾನರ್ಗಂ . . . ಭೀತನಾಗಿರಲ್ವೇೞ್ಕುಂ . . . ಇಂತು ಲಘುತರಮಪ್ಪ ಸೇವೆಯಿಂ ತನ್ನಿಚ್ಛೆಯೊಳ್ ಬರ್ದುಂಕುವ ಶುನಕಂ ಲೇಸು (ಪಂತಕಂ. ೩೨-೨೦); ಹರಹರ ಕರ್ಮದೊಳ್ ಬಳಲದಿಂತು ಬರ್ದುಂಕಿದೆನ್ನೆ ಸದಾಶಿವಾ ನರಪರ ಸೇವೆಯೊಳ್ ಕುದಿಯದಿಂತು ಬರ್ದುಂಕಿದೆನ್ನೆ(ಶಂಶಾಕ. ೨೩). ೩. ಬಿಡುಗಡೆಯನ್ನು ಹೊಂದು; ಮುಕ್ತವಾಗು : ಆಕೆ ಮದನನ ಕೆಯ್ಯಿಂ ಬರ್ದುಂಕಿದರಲಂಬು ಬರ್ಪಂತೆ ಬಂದು (ಶಂಕಖಾ. ೩-೦೯ ವ); ಬಂದುದು ಮದನನ ತಿರುವಿಾ ಬರ್ದುಂಕಿದ ಲರಂಬಿನವೋಲ್ (ಸುಕುಮಾ. ೯-೦೦೬); ಸೆಱೆಯಿಂ ಬರ್ದುಂಕಿದಂ (ರಾಜಾಶೂ. ೧೦ ಉದ್ಧಾ). ೪. ಸಾರ್ಥಕತೆಯನ್ನು ಹೊಂದು ; ಕೃತಾರ್ಥವಾಗು ; ಧನ್ಯತೆಯನ್ನು ಪಡೆ : ಬಂದ ಭವಂಗತಿಸುಖಮುಖದಿಂದಂ ಮೆಯ್ಯಿಕ್ಕಿ ಹರ ಬರ್ದುಂಕಿದೆವೆನುತುಂ (ಗಿರಿಕ. ೦೦-೦೯). ೫. ಜಾರು ; ನುಂಸುಳು; ತಪ್ಪಿಸಿಕೊಳ್ಳು : ಆದಂ ತರ್ಪರಗೀಳಿಯನೊಂದು ಗಿಡುಗನೆಡೆಗೊಂಡು ಜಗುನೆಯಂ ಪಾಯ್ವಾಗಳುಗಿಬಗಿಮಾಡಿದಾಗಳದೞ ಕೈಯಿಂ ಬರ್ದುಂಕಿ ತೊೞೆಯೊಳಗೆ ಬಿೞ್ದೊಡೆ (ಶಂಕಖಾ. ೦-೬೫ ವ) ; ತತ್ಫಲಂಗಳ ಸಮ್ಯತೋಪಮಂಗಳನಾರೋಗಿಸುತ್ತುಂ ಸುಖದಿನಿರ್ದೊಂದುದಿವಸಂ ತನ್ನ ಕೈಯಿಂದಂ ಬರ್ದುಂಕಿದ [ಪಾಠಾಂ. ಬಿದಿರ್ದ] ಪಣ್ಣೊಂಬೋಧಿಮಧ್ಯದೊಳ್ ಬೀೞ್ವುದುಂ (ಶಂಕಕಂ. ೨೭೭-೦೭). **ಬದುಂಕು** : ೧. ಈ ನೃಪನಂ ಕಾವವನಾವ ಅಚನೃಪನಮೆನಿಯಿಸೆ ಬದುಂಕುವನ್ನರುಮೊಳರೇ (ಶ್ರೀಇ. XI-೧. ೬೯-೦೦; 1083); ನಿನ್ನೊಳಂ ತೊಡರ್ದು ಕಾದಿ ಬದುಂಕುವನೇಂ ತ್ರಿನೇತ್ರನೋ (ಎಕ. VI. ಕಡೂರು. ೦೯೯-೯೭; 1205). ೪. ರುದ್ರುರಿರ ನಾನಾವ ಕಾಲದೊಳದ್ರಿಜೇಶನ ಪದಯುಗವನುದ್ದಧ್ವರ್ತಿಯೊಳರ್ಚಿಸಿ ಬದುಂಕುವ ಪುಣ್ಯವಾದವುದೊ (ಬಸವು. ೯೩-೯೬). **ಬದುಕು₁** : ೧. ತಳವಱ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬದು[ಪಾಠಾಂ. ರ್ದು]ಕಿ ಬಂದಂದ ಮಿದಾರಳವೀಗಳುಂಬಂ (ಸುಕುಮಾ. ೭-೨೪); ಸೂನು ಬದುಕಿದೊಡಿಂದು ನಿನ್ನಂ ನೋಂನುವೆವು (ಬಸವು. ೯೮-೦೯); ವಿಷದ ಹುಟ್ಟಿಯೊಳೆಱಗಿ ನೊಣ ಜೀವಿಸುವುದೇ ಶಿವಶಿವ ಕುಮಾರನ ಮುಸುಡ ಮುಂದಕೆ ಬಿದ್ದು ಬದುಕುವು ದುಂಟೆ ಭಟನೀರ (ಕುಮಾರವ್ಯಾ. ೬-೪೦). ೨. ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟು ಸುರಕ್ಷಿತವ ಮಾಡುವ ಭರವ ನೋಡಾ . . . ಸಂಗಮದೇವನ ಪೂಜಿಸಿ ಬದುಕುವೋ ಕಾಯವ ನಿಶ್ಚಯಿಸದೆ (ಬಸವ. ೧೬೨); ತೊತ್ತಿರೂೞೀ ತಳೋದರಿ ಬೆರೆಸಿ ಬದುಕಲಿ ಕರ್ಣ ಕಳುಹಿವಳ (ಕುಮಾರವ್ಯಾ. ೦೩-೮). ೪. ನೀನೊಲಿದ ವಿಭೂತಿಯ ನಾನು ಧರಿಸಿ ಬದುಕಿದೆನು ಕಾಣಾ (ಅದವ. ೦೬-೪೪); ನೀವೆನ್ನ ಮಂದಿರದೊಳಾರೋಗಿಸಿ ದೊಡಾನಿಂದು ಬದುಕುವೆನು (ಬಸವು. ೬೦-೨) ; ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು (ಕಶಕ. ೬೩-೯೭ ಪಲ್ಲವಿ). **ಬರ್ದುಕು₁** : ೧. ನೀನುನ್ನುಡಿದು ಬರ್ದುಕಿದ್ಯೆ ಪೆಱರೆನ್ನುದಿರೊಳ್ ನುಡಿದು ಕರ್ಣನಂ ಬರ್ದುಕುವರೇ (ಶಂಕಖಾ. ೦೭-೨೭); ಓರಿದಪ್ಪಾಪತ್ತೆಲ್ಲಮಂ . . . ಬಿದಿರ ಗಂಟಂ ಕಡಿವಂತಿರೆ ಕಡಿದು ಬರ್ದುಕಿ ಬಂದ್ಯೆ (ಧರ್ಮಾಮೃ. ೩-೨೪೭ ; ಈಮು ಲರ್ವಿಜ್ಜಣಿಗೆಯನಿನಿತಾಯಾಸದೆ ಬೀಸಲೀಕೆ . . . ಈಯೆಲರಿಂ ಬರ್ದುಕ ಲೆಂತುಮಾನಾರ್ತಪೆನೇ (ಚಂದ್ರಪ್ರ. ೮-೪೦). ೨. ಜನಪತಿಗಳ್ ನುಡಿಯಲ್ ಪಾರ್ದನಿಯಂತನುಮದಿಸಿ ಬರ್ದುಕಲೊಲ್ಲದೆ ಮಾರ್ಕೊಂಡನುಚಿತಮಿದೆಂದು ಮಾಣಿಪ ಮನುಜೋತ್ತಮರೆಲ್ಲಿಯಾನುಮಿರ್ಪರ್ ಜಗದೊಳ್ (ಕಾದಂಪೂ. ೩೯೨) ; ಖಳನಂ ಗುಣಗಣದಾವಾನಳನಂ . . . ಸಮಗ್ರದೋಷಾವಿಳನಂ ಪೆಸರ್ಗೊಂಡು ಬರ್ದುಕುವನ್ನನದಾವಂ (ಕೃಷ್ಣಪು. ೦-೩೨). ೩. ನೀಲಾಂಜನೆ ಕರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿತ್ತೆನಿಸುತ್ತೊಳ ಪೊಕ್ಕಳ್ (ಅದಿಪು. ೯-೦೯); ಸಲ್ಲಲಿತಗಾತ್ರಯೊರ್ವಳ್ . . . ಮನೋಜನ ಬಿಲ್ಲಿಂ ಬರ್ದುಕಿದ ಶರಾಳಿಯಂತಿರೆ ಬಂದಳ್ (ಧರ್ಮಾಮೃ. ೭-೧೪೯). ೪. ನೆಳಲಾದುದು ಧಮ್ಮಿಲ್ಲಂ . . . ಶೀತಳತರ ಜಳಮಾದುದು ಕೋಮಳೆಯಧರಮರೀಚಿ ಪಾಂಥನೇಂ ಬರ್ದುಕಿದನೋ (ಗಿರಿಕ. ೨-೨೦); ಪರಮಗುರು ಪವನಡಿವಿಡಿದು ಬರ್ದುಕಿಂ (ಶಬ್ದಮ. ೮-೬೩); ಅಧಿಕಪರವಸ್ತುವಂ ಕಂಡ ಪರಡಿವಿಡಿದು ಬರ್ದುಕು (ಬಾಶಶಂ. ೩-೨೮). ೫. ಬೀಸುವ ಚಾಮರಾಳಿ

ಸುಂದರಿಯರ ಕೆಯ್ಗಳಿಂ ಬರ್ದುಕಿ ಬಿಟ್ಟುವು (ಶಂಕಥಾ. ೬-೨೯). ೬. ಸಂರಕ್ಷಿತವಾಗಿರು; ನೆಮ್ಮದಿಯಿಂದಿರು : ಪ್ರಿಯವನಿತಾಘನಸ್ತನದಿ ಬುಬಿನೊಳು . . . ಪಿಸುಪುವಾ ಗಭೀರನಾಭಿಯೊಳೊಳವೊಕ್ಕು ಕಾಮುಕ ಜನಂ ಬರ್ದುಕಿರ್ದುದು ಬಂದ ಮಾಗೆಯೊಳ್ (ಕಸಾಪುಪು. ೬-೨೨); ವಾರಿಜ ಭವ ಶಕ್ರಾದಿ ದೇವತೆಗಳು ನಾರಿಯ ಕುಚಮಂಡಲವ ಸೇರಿ ಬರ್ದುಕಲೆಂದು ಮದನನ ಮುಂಗಡೆ ಮೋರ ಹೆಗ್ಗಾಳೆ ಸಾಱುದುದು (ಕೋಹಕ. ೬-೦೬).
Δ ಬಟ್ಟುಂಕು : ೧. "ಬಟ್ಟುಂಕಿದಂ = ಜೀವಿಸಿದಂ; ಬಿಡಲ್ಪಟ್ಟಂ" (ಶಬ್ದ. ಶಂ. ೧).
[ದೇ.॥ ತುಳು. ಬದ್ಕ್, ಬದುಕು; ಕೊಡ. ಬದೀಕ್; ತೆಲು. ಬತುಕು, ಬದುಕು, ಬ್ರತುಕು, ಬ್ರದುಕು; ಕೋತ. ವದ್ಕ್; ಕುವಿ. ಬತ್ಕ್; ಕೋಲಾ.ಪರ್ಜಿ. ಬದ್ಕ್]

**ಬರ್ದುಕಾಡು** (ಕ್ರಿ). ತಪ್ಪಿಸಿಕೊಳ್ಳು; ಪಾರಾಗು : ನಲ್ಲಳ ಮುಖಾಂ ಬುಜಮಂ ನಡೆ ನೋಡಿ ನೋಡಿ ಸಾಯದೆ ಬರ್ದುಕಾಡಿದಂ ಜವನ ಬಾರಿ ಯೊಳಂ ಬರ್ದುಕಾಡದಿರ್ಕುಮೋ (ಅಂಕೃ. ೦೨-೨೫); ಅಟ್ಟಿದ ನಿಮ್ಮ ಪೆರ್ಗಡೆ ಬರ್ದುಂಕಿದನೆಂಬುದನಿಂದ್ರಜಾಲಮಂ ತೊಟ್ಟನೆ ತೋಱಿ ಬಂದು ಬರ್ದುಕಾಡಿದಂ (ಶಂಕಥಾ. ೯-೫೯).
[ಬರ್ದುಕು$_1$ (< ಬರ್ದುಂಕು) + ಆಡು$_1$]

**ಬರ್ದುಕಿಸು** 'ಬರ್ದುಂಕಿಸು' ನೋ.

**ಬರ್ದುಕು**$_1$ 'ಬರ್ದುಂಕು' ನೋ.

**ಬರ್ದುಕು**$_2$, ಬದುಕು$_2$ (ನಾ). ೧. ಬಾಳು; ಜೀವನ : ಕಱುದವರ್ಗಟ್ಟುದ ಟ್ಟೊಡವರೆಟ್ಟೊಡಮಂತವರಿಂ ಬಱಿಕ್ಕೆ ಕಾಮುಟೂಪೊಡಮೋಟರಂತ ವರಣಂ ತಮಗಂ ಬರ್ದುಕಿಲ್ಲ (ಶಂಕಥಾ. ೨-೨೬); ಕಡೆಗಿಪನ ಬರ್ದುಕು ನೀರೊಳ್ ನೆರೆಯದಿರದೆಂದು ಪೊಡವಿಯಾಡುವ ಮಾಶಿಗೆಡೆಯಾಗಿ ರವಿ ಪಡುವಕಡಲೊಳಾಹಾ ಬಿಳ್ದನು (ಭಾಪಶಂ. ೩-೯೭). ೨. ಆಸ್ತಿ; ಸಂಪತ್ತು : ಗುರು ಸುಂದರನಂ ಸಲೆ ಕೀರ್ತಿವರ್ಗ ಬಂಧುರತರ ವಸ್ತು ರಾಜಿಗಳನೀವುತ . . . ಬರ್ದುಕದೆಲ್ಲಮುಮಂತೆ ಸಮಾಪ್ತಿಯಾಗಲ್ (ಜಾಜಾಶ. ೩-೦೦-೩). ಬದುಕು$_2$ : ೧. ಗಣಿಸುವೊಡೆ ಎಮ್ಮಿರವು ಬದುಕು ಹರಹಾವು ನಿಮ್ಮ ಕರುಣವಲಾ (ಬಸಕೃ. ೩೦-೨೯); ಹಸನಾಗಿ ಇದೆ ಬದುಕು ಸಾಯಲಾಱೆನು ಎನಲು ಕುಸುರಿದಱಿಯದೆ ಬಿಡರು ಮುನುವವರು ಅಗ (ಪುರಂದ. ೨-೬೦-೩); ಹಳೆಯ ಭಾವನೆಗಳನ್ನು ಬೇರು ಸಹಿತ ಕಿತ್ತಿಸೆದು ಬದುಕನ್ನು ಹೊಸದೃಷ್ಟಿಯಿಂದ ನೋಡುವುದನ್ನು ಕಲಿ (ಜೂಆಟ್ಟ ೦೬೯). ೨. ಆತನು ಹಿರಿಯ ಮಗನಿಗೆ ತನ್ನ ಬದುಕು ಎಲ್ಲ ಕೊಟ್ಟು ಚಿಕ್ಕವನಿಗೆ ಚನ್ನಾಗಿ ವಿದ್ಯೆ ಕಲಿಸಿದನು. (ಹಿರಿಯ ಮಗನು) ಕೆಲವು ದಿವಸಗಳಲ್ಲಿ ಆ ಬದುಕೆಲ್ಲ ಹಾಳುಮಾಡಿ, ಬಡವನಾದನು (ಮುಃಂಖಯು. ೦-೬); ಗಳಿಸಿದ ಬದುಕು ಧರ್ಮಕಾರ್ಯದಲ್ಲಿ ವ್ಯಯಗೊಳಿಸದಿದ್ದರೆ, ಅದು ಬೆಂಕಿಯಿಂದಾಗಲಿ, ಕಳ್ಳರಿಂದಾಗಲಿ, ರಾಜನಿಂದಾಗಲಿ ಅಪಹರಿಸಲ್ಪಡು ತ್ತದಂತೆ ! (ಬಟ್ಟಪೂ. ೩೩). ೩. ಸರಕು; ಸಾಮಗ್ರಿ; ವಸ್ತು : ಅವರ ಅರಮನೆಯಲ್ಲಿ ಇರುವಂಥಾ ಬದುಕು ಸರ್ವಸ್ವವನ್ನು ಲೂಟಿ ಮಾಡಿಕೊಂಡು ಬಾ (ರಾಜೇಂದ್ರ. ೪೯); ಕೆಲವರು ಕಳ್ಳರು ಕೂಡಿ ಒಂದು ರಾತ್ರಿ ಒಬ್ಬ ಸಾವುಕಾರನ ಮನೆಯ ಕನ್ನ ಕೊರೆದು ಸಿಕ್ಕ ಬದುಕು ತೆಕ್ಕೊಂಡು ಹೋಗಿ (ಮುಃಂಖಯು. ೩-೯೧). ೪. ಕೆಲಸ; ಕಾರ್ಯ : ರಮಾವಲ್ಲಭನ ದರ್ಶನಕೆ ಮಾತೆಯಂ ಕರೆಯಲವಳೊಲ್ಲೆ ನಾನಿಲ್ಲಿರದೊಡೀ ಬದುಕ ಸಾಗಿಸುವ ರಾರೆಂದು ಚಂಡಿಗೊಳಲು (ಕೃಬಿಖಾ. ೯-೬೫); ಎರಡು ಆಳಿನ ಬದುಕನ್ನು ಒಬ್ಬನೆ ಮಾಡಿ ಸ್ವಲ್ಪಮಟ್ಟಿಗೆ ಸಣ್ಣಸಿದ್ದಾನೆ (ಶೆಳುಮು. ೪೦): ಈ ಹೊಲದ ಬದುಕು ಹದಗೊಳಿಸೋಣ ರಂಟೆಕುಂಟೆಯ ಹಿಡಿದು ಬೆವರು ಹರಿಸಿ (ಕಂಬಾಬು. ೦೯-೨೦). ೫. ಕಸುಬು; ಉದ್ಯೋಗ; ವೃತ್ತಿ : ಇದುವೆ ಜೀವನವೀ ಕುಟುಂಬಕ್ಕಿದು ಉಪಾರ್ಜನೆ ಬದುಕಿದೆಂದೆನ್ನದೆ ಮೃಡನ ಕಲ್ಪಿತದಿನಹ ಬಡಕಾಯಕದೊಳಿಂತು ಒದಗಿ ಪಡಿಯಂ ಕೊಡುತಿರಲು (ಬಸಕೃ. ೯೭-೩).
[<ಬರ್ದುಂಕು./ತಮಿ. ವತುಕ್ಕು; ತುಳು. ಬದ್ಕ್; ತೆಲು. ಬ್ರತುಕು; ಕೊಡ. ಬದೀಕೇ; ಕೋತ. ವದ್ಕ್]

**ಬರ್ದುಕುಗೆಯ್** (ಕ್ರಿ). ಜೀವನವನ್ನು ಸಾಗಿಸು ; ಬಾಳು: ಆಮಿನ್ನ ಟ್ಟುಂಡು ಬರ್ದುಕುಗೆಯ್ವುದು ದಿಟಮೋ (ಕಬ್ಬಿಸು. ೨೦೫ ಪ್ಯಾಟ್ಯ).
[ಬರ್ದುಕು$_2$ + ಕೆಯ್$_1$]

**ಬರ್ದುಗ** (ನಾ). ಜಾಣ; ನಿಪುಣ; ಪ್ರೌಢ : "ಬಿತ್ತಿಗನೆಂದುಂ, ಬರ್ದುಗ ನೆಂದುಂ ಪ್ರೌಢಂ" (ಕಶಶಾ. ೬೦-೩೩೬); ಪಗೆ ಕೆಳೆಯೊಳ್ ಕೆಳೆ ಪಗೆಯೊಳ್ . . . ನಂಬುಗೆ ಚಲ್ಲವತ್ತರೊಳ್ ಬರ್ದುಗರೊಳ್ ಜಬರ್ಗಮುಂಟು ಮಾಡವೆ ಕೇಡಂ (ಶಾಶಿಪಮಂ. I, ೦೦೫). [ಬರ್ದು$_4$ + – ಗ$_3$]

**ಬರ್ದುಗಾರ್ತಿ** (ನಾ). ಜಾಣೆ; ನಿಪುಣೆ; ಪ್ರೌಢೆ : ಬರ್ದುಗಾರ್ತಿಯರ ಬಹಿರಂಗಣಂಗಳೊಳ್ ಅಳವಟ್ಟ ಕಂಭಂಗಳಲ್ಲಿ ನೆಗಟ್ಟೆಗೆತ್ತಿ ತೆತ್ತಿಸಿದ ಸೌಭಾಗ್ಯಘಂಟೆಗಳೊಳಂ (ಪುಷ್ಪಪು. ೨-೬೬ ಪ).
[ಬರ್ದು$_4$ + < –ಕಾಱ + – ತಿ$_1$ (< – ಇತ್ತಿ)]

**ಬರ್ದುಗೆ** (ನಾ). ಸಾವು; ಮರಣ : "ಬರ್ದುಗೆಯೆನೆ ಸಾವು" (ಕೇಶಾಶ. ೦೬); ಎಳಮಾವೇ ತಳಿರುಯ್ಯಲೇ ಕೊಳೆ ತಗುಳ್ದಿಂದೊಳಮೇ . . . ಕರಂ ಬರ್ದಿದೆಂಗಳ ನಿಮ್ಮೆಲ್ಲರುಮೆನ್ನ ಬರ್ದುಗೆಯನಾ ನಲ್ಲಂಗೆ ಪೇಱಿಂ (ಕಾಬ್ಯಾವ. ೦೨೯); ಜನಪಂಗೆ ತತ್ಬೌದ್ಧಮುನಿಯ ಬರ್ದುಗೆ ಸುದ್ದಿ ವೇಳೆ (ಆರಾಕ. ೯-೨-೨) ; ಆತನ ಬರ್ದುಗೆಯ ಶಾಂತಿಗೆಂದಾತಗೆ ಮಾಳಯುಮೆನೆ ನೀಂ ಮಾಟ್ಟ ಜನ್ನದ ಹಸುವಂ ಪಿಡಿದೊಡೆ ನಿಮಗೆ ಮುನಿಸಾಯ್ತೆ ! (ರಾಮಾಕ್ಕ. ೦೦೩-೬). [ಬರ್ದು$_3$+ – ಗೆ]

**ಬರ್ದುಗೆಡು** (ಕ್ರಿ). ಪ್ರೌಢಿಮೆಯಿಲ್ಲದಿರು : ಮನ್ಮದಲೀಪಿಂ ತಮಾಳಲತಿ ಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂಚನಲತಿಕಾಂಗಿಯರ್ ಬಯಸೆ. . . ಸಂದ ನಿನ್ನ ಮುನ್ನಿನ ಚರಿತಂಗಳಂ ನೆನೆಯದಿರ್ (ಅಂಕೃ. ೨-೯೬).
[ಬರ್ದು$_4$ + ಕೆಡು$_1$]

**ಬರ್ದುನುಡಿ** (ನಾ). ಜಾಣ್ಮೆಯಿಂದ ಕೂಡಿದ ಮಾತು; ಪ್ರೌಢೋಕ್ತಿ : ಒಪ್ಪಂಬೆತ್ತಿನಿದಾದ ಬರ್ದುನುಡಿಯುಂ ತಳ್ಪೋಜೆಯುಂ ನಿಲ್ವಿನಂ. . . ಪಲರೆಲ್ಲರ್ ತಿರ್ದಿದೀ ಕಬ್ಬಮೆಂತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದುಂ ಕೊರಲ್ಗೊಳ್ಳದೇ (ಕಾಬ್ಯಕಾ. ೩). [ಬರ್ದು$_4$ + ನುಡಿ$_3$]

**ಬರ್ದುವೆಣ್** (ನಾ). = ಬರ್ದುಗಾರ್ತಿ : ಅಲರ್ಗಳನಾಂತ ಪಾದರಿ ಗಳೊಳ್ ತರದಿಂದೆಱಗಿರ್ದ ತುಂಬಿಗಳ್ ಪಲವು ಬಸಂತನೊಲ್ದೊಲಿಸಿ ಕಾಡುವ ರೂಢಿಯ ಬರ್ದುವೆಂಡಿರಂ ನಿರೆ ಸೆಱಗೆಯ್ವೆನೆಂದು ಪಲವಾಗಿರೆ ಮಾಡಿದ ತನ್ನ ಬಳ್ಳಿಸಂಕಲೆಗಳೆಂಬಿನಂ ಬಗೆಯನಿರ್ಕುಳಿಗೊಂಡುವು (ಕಬ್ಬಿಕಾ. ೩೩).
[ಬರ್ದು$_4$ + ಪೆಣ್]

**ಬರ್ದೆ**, ಬದ್ದೆ$_1$ (ನಾ). ೧. ಪ್ರೌಢೆ; ಜಾಣೆ ; ನಿಪುಣೆ : ವ್ಯಾಳಗಜಂಗಳು ಮನಂಕದ ಬರ್ದೆಯರುಮುನುಗಿಬಗಿಮಾಡಿದ ಸಂತೋಷದೊಳ್ ಬಳ್ವಳಬಳೆದ ವಿಕ್ರಾಂತತುಂಗನ ನಿಡುದೋಳ್ಗಳ್ ಗಣಿಕಾಜನಕ್ಕೆ ಕಾಮಪಾಶಂಗಳುಮರಾತಿ ಜನಕ್ಕೆ ಯಮಪಾಶಂಗಳುಮಾದುವು (ಶಂಕಥಾ. ೨-೬೯ ಪ) ; ಬಯಸಲ್ ತಕ್ಕಂದದ ಬರ್ದೆಯರೊಲವಿಂ ಬಯಸಿ ಬಂದೊಡಂ ಬಗೆಯದ ಬಲ್ಮೆಯ ನುಳ್ಳ ಸುಭಗನ್ನೆ (ಅಜಾಪ. ೯-೩೬) ; ಸಸಿಯುಂ ಮೆಯ್ಸೊಳಗಿಂದೆ. . . ಮೆಯ್ಗಣ್ಣನಂ ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೆಟ್ಟಂತುಬ್ಬಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗೆಂ ಬೆಡಂಗಾದರೋ (ಕಬ್ಬಿಕಾ. ೦೬೯); ದಾದಿಯರುಂ ಬರ್ದೆಯರುಂ ಬೀದಿಯ ಮನೆಯೊಳ್ ಪೊಗಟ್ಟೆವೆತ್ತೊಪ್ಪುವ ಮುತ್ತೈದೆಯರುಮಂತಪುರದೊಳ್

. . . ಸಂದಣಿಸಿರ್ಪರ್ (ಶಕ. ೪-೨೫). ೨. ಮಧ್ಯವಯಸ್ಸಿನವಳು; ನಡುಪ್ರಾಯದವಳು; ಪ್ರಬುದ್ಧೆ : ಕೆಳದಿಯರಿಂದು ಪಿಂದೆಗೆದು ಮೋನದೊಳೊಂದಿರೆ ಬದ್ದ ಬರ್ದೆಯರ್ಕಳನುವಿನಿಂದೊಡಂಬಡಿಸೆಯುಂ ಬಗೆಗೊಳ್ಳದೆ. . . . ಬೇವಸಂಗೊಳುತಿರೆ (ಶಕ. ೩-೨೮). ೩. ವಯಸ್ಸಾದವಳು; ವೃದ್ಧೆ; ಮುದಿಕಿ : ರಸಭಾವಂ ಪಿಂಗೆ ಶೈಥಿಲ್ಯಮಾದವಯವದೊಳ್ತೀವೆ . . . ಶಯ್ಯೆಗಿಂಬಾಗಿ ರಾರಾಜಿಸದಾದಂ ಬರ್ದೆಯಂ ಪೋಲ್ತ ಧಮಕೃತಿ ರಸಜ್ಞರ್ಗನಾದೇಯಮಲ್ತೇ (ವೃಶಂ. ೦-೪೬); ತಡಿಗಳೊಡೆಯರ್ಕಳಾಗಳೆ ಬಿಡದೊಡನೆಯ್ತಂದು ಬರ್ದೆಯಂ ಪೀಡಿಸೆ . . . ಸುಂದರೇಶನ ಗುಡಿಗೆಯ್ದುತೆ ಶೋಕದಿಂದ ಪೊಡೆಗೆಡೆದುಸಿರ್ದಳ್ (ಹಾಶಾಸ್ತ್ರ. ೪-೦೩-೨೨). ೪. ಸೂಳೆ; ಗಣಿಕಾಸ್ತ್ರೀ; ವೇಶ್ಯೆ : ಅಡರ್ದ ಕುಚದ್ವಯಂ ದಯಿತೆ ಬಿರ್ದುವಿದೇಕೆನೆ ಬರ್ದೆಯೆಂದಳಿಂತಡಿಗಡಿಗೋಪ ನೀಂ ಸರಸಕಾವು ನಿವಾಸದೊಳಿಟ್ಟ ಕಯ್ಗಳಿಂ ಪಿಡಿದಿರೆ ತಮ್ಮೊಳಿಟ್ಟು ಸವಿದೋಱಿದ ದೂಸಱಿನೊಂದಹರ್ನಿಶಂ ಕೆಡೆದಪುವು (೦೬೭ವ. ೨-೦೦೯). ೫. ತಲೆಹಿಡುಕಿ; ಕುಂಟಣಗಿತ್ತಿ : ಪೊಸನಾರಂ ಕಲ್ಲೊಳಿತ್ತಲ್ ತಿಱಿಯಲರಲನಾಕಾಶದೊಳ್ ಗಾಳಿಯಂ ಖಂಡಿಸಲ್ . . . ಆ ಬರ್ದೆಬಲ್ಲಳ್ (ವೃಶಂ. ೨೯-೪). ಬದ್ದೆ$_1$ : ೧. ಬೇಟಕಾರ್ತಿಯರಿವರೀಕೆಗಳ್ ಬಸನಿಗಳ್ ಕಡುಬದ್ದೆಯರೆಂದುಮಿಾಲತಾಂಗಿಯರೆನಿಸಿರ್ದರಂ ನಯದೆ ನೋಡಿದನಪ್ರತಿವೇಶ್ಯಸಂಭವಂ (ಶಂಹಂ. ೩-೪೮); ಬದ್ದೆಯರುಡಿಸಿದೊಡುಡಕಲ್ತ ಕೊಮರನಭಿನವಮದನಂ (ಅಶಂಪು. ೦-೫೮). ೪. ಕೋಳ್ಗಗ್ಗಳಮಾದ ಮನೆಗಂ ತೋಳ್ಗಗ್ಗಳಮಾದ ಬದ್ದೆಗಂ ಬೇಸತ್ತು (ಶಾಂತಿಪು. ೮-೬೮ ವ); ಮತ್ತಿನ ಗಂಡರ್ಮೊಱೆಯಲ್ಲರೆಂದು ಮನದೋಗೆ ಬಱಿನೀರ್ಗುಡಿದ ಬದ್ದೆಯರೀ ಭವಮಿಾತೆ ಪೋದುದು ಮಱುಭವದೊಳಾದೊಡಮಿಾತನೊಳೆ ಬೇಟಮಕ್ಕೆಂದು ಪಱಿಸಿ ಪರಿಚ್ಛೇದಿಸಿ ಕಾಮಾಗ್ನಿಯಂ ಪುಗೆಯುಂ (ಅರ್ಧನೇ. ೫-೨ ವ).

ಬದ್ದೆಮನೋಹರ = ಚತುರೆಯರನ್ನು ಆಕರ್ಷಿಸುವವನು ; ೯ ರಾಷ್ಟ್ರಕೂಟಚಕ್ರವರ್ತಿ ನೃಪತುಂಗನ ಒಂದು ಬಿರುದು : ವೈರಿಭಯಂಕರಂ ಬದ್ದೆ(ಡ್ಡೆ?)ಮನೋಹರಂ ಅಭಿಮಾನಮನ್ದಿರಂ (ಇಆ. XII. ೨೦೮-೦೨; 814); ಅವೋಘರಾಮಂ ಬದ್ದೆಮನೋಹರಂ (ಎಇ. VII. ೨೦೬-೦೨; 866). [ಬದರ್$_4$ + —ಎ$_2$]

ಬರ್ದೆಗ, ಬದ್ದೆಗ (ನಾ). ಒಬ್ಬಾತನ ಹೆಸರು : ಬರ್ದೆಗಂ ಕದಂಬಳಿಗೆ ಸಾಯಿರಮುಮನಾಳುತ್ತಿರೆ (ಎಕ. XI. ದಾವಣ. ೦೦೯-೩; 930). ಬದ್ದೆಗ : ಶ್ರೀಮಾನ್ಸಧಿಬ್ಬದ್ದೆಗ ಭೂಮಿಭರ್ತ್ರುಸ್ತಂನ್ಪ್ರಾಧಿ ಪಾಲೋಜನಿ ನಾಗವರ್ಮಾರ್ಯ್ಯಃ (ಕಇಆ. ೨೫-೮-೯೬; ೯೫ಯ ೫೫); ಅವಾರ್ಯವೀರ್ಯಂಗೆ ಬದ್ದೆಗಂ ಪಿರಿಯ ಮಗಂ (ಶಂಶಾ. ೦-೨೩). [< ಭದ್ರ + —ಗ$_2$]

ಬರ್ದೆಗೆಯ್ತ (ನಾ). ಪ್ರೌಢಿಮೆಯುಳ್ಳವಳು ಮಾಡುವ ಕೆಲಸ : ಬಿರುದರ ಬಿಂಕಮಂ ಪೊಗಟ್ಟೆ ಕೂಟಣಿತೋಳ್ಗೆಳಸಿರ್ಪ ಸೂಳೆವೆಂಡಿರ ಸೊಬಗಿಂಗೆ ಮೈಮಱಿದು ಮೆಚ್ಚುವ ಬಿಂಕದ ಬರ್ದೆಗೆಯ್ತದೊಳ್ ಬೆರಸಿದೊಡಂದೆ ಬರ್ದೆನೆನುತಿರ್ಪ ಭುಜಂಗನ ತೋಳೊಳ್ಕೆ (೦೬೭ರ. ೨-೬೨). [ ಬರ್ದೆ + ಕೆಯ್ತ ]

ಬರ್ನರು (ನಾ). ಉರಿಯುವ ಅನಿಲದ ಅಥವಾ ಸೀಮೆಯೆಣ್ಣೆಯ ದೀಪಗಳಲ್ಲಿ ದೀಪದ ಜ್ವಾಲೆಗೆ ಆಕಾರವನ್ನು ಕೊಡುವಂಥ ಭಾಗ ; ಜ್ವಾಲಕ : ಒಮ್ಮೆ ಹೊಗೆಗಟ್ಟುವುದೊಮ್ಮೆ ಭುಗ್ಗೆನುವುದು ಬರ್ನರು ಕೆಟ್ಟ ಲಾಟೀನು (ಇಂಕಾಶ. ೨೧೫-೬೫). [←ಇಂ. Burner]

ಬರ್ಫೆ 'ಬರ್ಫಿ' ನೋ.

ಬರ್ಫ 'ಬರ್ಫು' ನೋ.

ಬರ್ಫಿ, ಬರ್ಪೆ, ಬರ್ಫೆ (ನಾ). ಒಂದು ಬಗೆಯ ಸಿಹಿತಿಂಡಿ ; ಮಿಠಾಯಿ : ಬರ್ಫಿ : ಪದಾರ್ಥಗಳು : ಒಂದು ರಾತಲು ಹಾಲಿನ ಹುಡಿ : ೧/೪ ರಾತಲು ಸಕ್ಕರೆ . . . ಗೇರುಬೀಜದ ಚೂರುಗಳು (ಅಡುಗೆ. ೦೦೦). ಬರ್ಪೆ : ವೇಡೇ ಬರ್ಪೆ ತಕ್ಕೊಂಡು (ಶುಂಬಯ. ೬-೯೮); ಚೊಕ್ಕಟವಾದಂತ ಬೆಂಡುಬೆನಕ ಬರ್ಪೆ ತುಕ್ಕಡಿ ಕಲ್ಯಾಣಶಾವಿಗೆಳು (ಜಶಗೀ. ೪೬). ಬರ್ಫೆ : ಮಸಾಲೆ ಮಿಶ್ರಿತ ಕೇಶರಬರ್ಫೆ ಪೇಡೆ ಮೊದಲಾದ ಖಾದ್ಯಪದಾರ್ಥಗಳನ್ನು ಇಟ್ಟಿದ್ದರು (ಶುಂಬಳ. ೨೦). [←ಪಾರ. ಬರ್ಫೀ, ಬರಫ್ ; ಹಿಂ. ಮರಾ. ಬರ್ಫೀ, ಬರಫೀ]

ಬರ್ಫು, ಬರ್ಫ (ನಾ). ಮಂಜಿನ ಗಡ್ಡೆ ; ಹಿಮ : ನಗುವಾಗ್ಗೆ ಆಕೆಯ ತುಟಿಗಳೆರಡೂ ತೆರೆದು ಹಲ್ಲುಗಳು ಚಮಕಿಸಿದವು. ಅವು ಬರ್ಫಿನ ತುಂಡುಗಳಂತೆ ಶುಭ್ರವಾಗಿದ್ದವು (ಕಂದುಬ. ೯೮) : ಈ ಭಾಗದಲ್ಲಿ ಯಾವಾಗಲೂ ಬರ್ಫು ಇದ್ದು ಚಳಿಯು ಬಹಳಿದ್ದುದರಿಂದ ದಿಕ್ಕಿ ಬೆಳೆಯಲನುಕೂಲವಿಲ್ಲ (ಕೃಶಾಸ. ೨೦). ಬರ್ಫ : ಉಗಿಯು ಪುನಃ ಘನವಾಗಿ ಮಳೆ, ಬರ್ಫಗಳ ರೂಪದಿಂದ ಕೆಳಗೆ ಬೀಳುತ್ತದೆ (ಶುಂಶಿಯ. ೬-೦೬೪) ; ನಿಂತಲ್ಲಿಯೇ ಅವರ ಕೈಕಾಲು ನೀರಿನಲ್ಲಿ ಬರ್ಫಕ್ಕಿಂತ ತಣ್ಣಗಾದವು (ಸಪಜೀ. ೪೪೫). [←ಪಾರ. ಬರ್ಫ್ ; ಹಿಂ. ಮರಾ. ಬರಫ್, ಬರ್ಫ್ ]

ಬರ್ಫೆ 'ಬರ್ಫಿ' ನೋ.

ಬರ್ಬರ (ನಾ). ೧. ಸುಸಂಸ್ಕೃತನಲ್ಲದವನು ; ಅನಾಗರಿಕ : "ಪಾಮರಂ ಪ್ರಾಕೃತಂ ಬರ್ಬರಂ" (ಪುಂಗರಾ. ೬೮-೮) ; ಒಂದಾನೊಂದು ಕಾಲದಲ್ಲಿ ಸಂಯಮಹೀನ ಬರ್ಬರರಾಗಿದ್ದವರು ಇಂದು ಮಾನವರಾಗಿದ್ದಾರೆ (ಶಬಂಠ. II. ೨೬೫) ; ಸೌಂದರ್ಯಪೂರ ಪ್ರಳಯಕ್ಕೆ ದೂರ ಬರ್ಬರನು ಕೈಯ ಚಳ್ಳಿ ಮಣ್ಣಾಗಿ ಹೋದ ; ಸಂಹಾರಕಾಲ ಕಲ್ಲಾಗಿ ನಿಂತಿಲ್ಲಿ (ಸೂರ್ಯಕಾ. ೫೬-೩). ೨. ಸುಸಂಸ್ಕೃತವಲ್ಲದಂದಂ : ಯಾರೂ ಬಂಗಾಳಿಯನ್ನು ಸಡ್ಡೆ ಮಾಡುತ್ತಿರಲಿಲ್ಲ. ಸಂಸ್ಕೃತಪಂಡಿತರಿಗೆ ಅದು ಗ್ರಾಮ್ಯ, ಇಂಗ್ಲಿಷ್ ತಿಳಿದವರಿಗೆ ಬರ್ಬರ (ಬಂಕಿಮ. X. ಕುಮ್ಮ). ೩. ನೇರವಾಗಿ ಅರ್ಥವಾಗದುದು ; ಅಸ್ಪಷ್ಟವಾದುದು : ನಷ್ಟ ಪಟಿಪೀಠದೊಳ್ ಕುಳ್ಳಿರಲ್ ಕೇಳ್ದೆ ನಾನ್ ಪಕ್ಕಿಗಳ್ ಕರಳ್ಬುಱಿದ ಪುರ್ಚಿಂದೆ ಚೀಱಿಡುವ ಬರ್ಬರದ ಮಱಿನುಡಿಯನ್ (ಅಂತಿಗೂ. ೪೫-೯೨೫). ೪. ಹಳದಿಬಣ್ಣದ ಶ್ರೀಗಂಧ : "ಹರಿಚಂದನಂ ಮತ್ತೆ ಬರ್ಬರ ಮಕ್ಕು" (ಕುಂಗರಾ. ೪೯-೨೨). ೫. ಒಂದು ಬಗೆಯ ಗಂಧಕದ್ರವ್ಯ ; ಗೋರೋಚನ : "ಪೂತಿಗಂಧಃ — ಗಂಧಕ, ಬರ್ಬರ" (೬೫೦. ೦೦೦). ೬. ಒಂದು ಬಗೆಯ ಗಿಡ ; ಅಜಗಂಧಿಕೆ ; ನಾರುಂಬೇಳೆ : "ಬರ್ಬರಾ . . . ಅಜಗಂಧಿಕಾ — ೫ ನಾರಂಬ್ಯಾಳೇಗಿಡದ ಹೆಸರುಗಳು" (ಸಿದ್ಧಾಂತ. ೦೪೪). ೭. ಮುಳ್ಳಿನಿಂದ ಕೂಡಿದ ಒಂದು ಬಗೆಯ ವೃಕ್ಷ : ಬೊಬ್ಬುಲಿ ; ಜಾಲಿ : ಬರ್ಬರಂ = ಬಬ್ಬುರಂ, ಬಬ್ಬುರವೊಂದು ನಾಱುವ ಬೇಳೆಯುಂ, ಬೊಬ್ಬುಲಿಯುವೊಂದು ದೇಶಮುಮಕ್ಕುಂ (ಕಶಬ್ದ. ೪. ೨೬೦ ಕೃತಿ). ೮. ಆರ್ಯರಲ್ಲದವರಿಗೆ ಸೇರಿದ ಒಂದು ದೇಶ ಮತ್ತು ಅಲ್ಲಿಯ ಜನಾಂಗ : ಬರ್ಬರ ಪಾರಸೀಕ ಪಾರಿಯಾತ್ರ ಹಮ್ಮಿರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕ ರಸಮುಂ . . . ನೆಗಱುತ್ತುಮಿರೆ (ಜಗಂ. ೨-೩೯ ವ) ; ತುರುಕ ಬರ್ಬರ ಪಾರಸೀಕರ ತುರಗವೈಸಾವಿರ ಸಹಿತ ಮೋಹರಿಸಿ ನಿಂದನು ಶಕುನಿ (ಕುಮ್ಯಾಗ. ೦-೪) ; ನಡೆದುದು ಗೂರಿಬಲ . . . ಬರ್ಬರದ ದೂಹಾರಿ ಜೋನಗ ಮಿಂಧ್ಯ ಬೋಟಕ ಪಾರಶಿಕ ಸಾಂಬ್ರಾಣಿ ಹುರುಮಂಜಿಗಳ ಬಳಿವಿಡಿದು (ಕೂರಶಾ. ೪-೯-೪). ೯. ನೀಚ ; ಪಾಮರ. ೧೦. ದಡ್ಡ ; ತಿಳಿಗೇಡಿ. [ಸಂ.]

ಬರ್ಬರತೆ (ನಾ). ಒರಟುತನ ; ಕ್ರೌರ್ಯ : ಮರದ ಪಟ್ಟಿಗಳಂಥ ಸ್ವಲ್ಪವೂ ಪಾತಿಲ್ಲದ ಅಚಲವಸ್ತುಗಳನ್ನು ಬಿಟ್ಟು ಮತ್ತಾವುದರ ಮೇಲೂ

ಆ ಬರ್ಬರತೆಗಳನ್ನೆಲ್ಲಾ ಪ್ರಯೋಗಿಸುವ ಅವಕಾಶ ಆ ದುರ್ಬಲ ವಯಸ್ಸಿನಲ್ಲಿ ನನ್ನ ಸ್ವಾಧೀನದಲ್ಲಿರಲಿಲ್ಲ (ಶಿಶಿಂಥ. II, ೫೦). [ಸಂ. ಬರ್ಬರತಾ]

**ಬರ್ಬುರ** (ನಾ). ಒಂದು ಬಗೆಯ ಮುಳ್ಳಿನ ಮರ ; ಜಾಲಿ ; ಬೊಬ್ಬುಳಿ : ಮಾಕಂದಶಾಲಿ ಶುಕಶಿಶುವೀ ಕಂದಿದ ಬರ್ಬುರವನು ಸೇರ್ವುದೆ (ಶಂಕಶ. ೬-೨೬). [ಸಂ.]

**ಬರ್ಬೂರ** (ನಾ). ಜಾಲಿಮರ ; ಬೊಬ್ಬುಳಿ : ದೀರ್ಘಕ್ಕೆ ಹ್ರಸ್ವಂ — . . . ಬರ್ಬೂರ, ಬರ್ಬೂಲ — ಬೊಬ್ಬುಲಿ, ಬಬ್ಬುಲಿ (ಶಬ್ದಮ. ೨೭೩ ವೃತ್ತಿ) ; ಗುರುವೆ ನಿಮ್ಮಂಘ್ರಿಯುಂ ಬಿಡಲಾಟಿಸೆಂದೊಱಲುತಿರೆಯಂತೆ ಗೆಯ್ಕೊಂದು ತಂದೊಂದು ಬರ್ಬೂರಧರಣೀಜದಡಿಯೊಳಗಿರಿಸಿ (ಪದ್ಮರಾ. ೨-೨೩). [< ಸಂ. ಬರ್ಬುರ]

**ಬರ್ಮು** 'ಬೊಮ್ಮು' ನೋ.

**ಬರ್ಲು** 'ಬಱಲು' ನೋ.

**ಬರ್ಷಣ** 'ಭರಷಣ' ನೋ.

**ಬರ್ಹ** (ನಾ). ೧. ನವಿಲು ಮುಂತಾದ ಪಕ್ಷಿಗಳ ಗರಿ, -ಸೋಗೆ : "ಕಲಾಪಃ, ಬರ್ಹಃ — ಈ ೨ ಸೋಗೆ" (ಹಲಾಯು. ೪೦-೯೯) ; ಮದನನ ಪಂಚರತ್ನಮಯಖೇಟಕದಂತಿರೆ ಬರ್ಹಿ ಬರ್ಹಮಂ ಪದೆದು ನವಿಲ್ಗಳಾಡೆ (ಹಿಗಂ. ೯-೩೦). ೨. ಎಲೆ ; ಪರ್ಣ ; ಪತ್ರ : "ಬರ್ಹಂ, ಪರ್ಣಂ, ದಳಂ, ಪತ್ರಂ, ಪಲಾಶಂ, ಛದನಂ, ಛದಃ — ಈ ೭ ಮರದ ಎಲೆ" (ಹಲಾಯು. ೩೦-೩೦) ; ಬರ್ಹಂಗಳಿಂದಂ ಪೊರೆದಾಶಾಭಿತ್ತಿಯುಂ ತನ್ನಯ ಪಸುರ್ಮೆಳಗಿಂ ಪೂಸುತಿರ್ಪಂತೆ ಚೆಲ್ವಾಗಿರೆ ಮುಂದೊಂದಂ ಲತಾಮಂಟಪ ವನವನಿವ್ಯಂದಾರಕಂ ಕಂಡಂ (ಕಾದಂಬ. ೪೯೦). ೩. ಪರಿಜನ ; ಪರಿವಾರ. ೪. ಒಂದು ಬಗೆಯ ಸುಗಂಧದ್ರವ್ಯ : "ಗ್ರಂಥಿಪರ್ಣಂ, ಶುಕಂ, ಬರ್ಹಂ . . . ಕುಕ್ಕುರಂ — ೬ ಸ್ಥೌಣೇಯಕವೆಂಬ ಗ್ರಂಥಿದ್ರವ್ಯದ ಹೆಸರುಗಳು" (ಸಿದ್ಧಾಂತಿ. ೧೯೨). [ಸಂ.]

**ಬರ್ಹಿ₁** (ನಾ). ೧. ಬೆಂಕಿ ; ಅಗ್ನಿ. ೨. ಯಜ್ಞ, ಯಾಗಾದಿಗಳಲ್ಲಿ ಬಳಸುವ ಒಂದು ಬಗೆಯ ಮೊನಚಾದ ಹುಲ್ಲು ; ಕುಶ : "ಬರ್ಹಿಃ ಕುಶಂ . . . ದರ್ಭೆಯದು" (ಶೃಂಗರಾ. ೩೪-೯) ; ಬರ್ಹಿಗಳ ಹೊಱೆಗಳಿಂ ಸ್ರುಕ್ಸ್ರುವಾದಿಗಳ ಸಂದೋಹದಿಂದೆ . . . ದಕ್ಷನಧ್ವರಶಾಲೆ ಕಣ್ಗೆಸೆದುದು (ಶಿಪು. ೩೦-೨೪). [ಸಂ. ಬರ್ಹಿಸ್]

**ಬರ್ಹಿ₂** (ನಾ). ನವಿಲು ; ಮಯೂರ : ಗಿರಿಯ ತೊಱೆದು ಬರ್ಹಿ ಪುಲ್ಲ ಮೊರಡಿಗಳಸಬಹುದೆ (ಮಹಾದೇ. ಐ. ೦೫೨-೩೪೦) ; ಕೀರುರಗ ಕಪಿ ಕೋಕಿಲನ ಬರ್ಹಿಯ ಸುಧಾಕಿರಣನ . . . ರತ್ನಾಕರನಲೊಂದೊಂದು ಗುಣವಿರಬೇಕು ನೃಪರಿಗೆ (ಅಣ್ಣಾ. ಸ. ೦-೫೪). [ಸಂ. ಬರ್ಹಿನ್]

**ಬರ್ಹಿಣ** (ನಾ). = ಬರ್ಹಿ₂ : "ಕೇಕೀ, ಶಿಖೀ . . . ಬರ್ಹಿಣಃ, ಕಲಾಪೀ, ಸರ್ಪಾಶನಃ, ಮಯೂರಃ, ಶಿಖಾವಳಃ, ಶ್ಯಾಮಕಂಠಃ — ಈ ೧೧ ನವಿಲ್" (ಹಲಾಯು. ೪೦-೬೬) ; ಜಗತ್ಪ್ರಣೂತ ಭೂತಳಾಧಿನಾಥನರ್ಥಿಸಂಘಾತನವ ಬರ್ಹಿಣಾನಂದಕರಣಪ್ರತ್ಯಗ್ರಜಲಧರಾಗಮಂ (ಸುಕುಮಾ. ೦-೬೯ ವ) ; ಎಳಸುತಿರ್ಪುಂ . . . ಉದ್ಯಾನಂಗಳೊಳ್ ಬರ್ಹಿಣಕಚಭರೆಯರ್ಕೇಳಿ ಮೇಳಕ್ಕೆ ನಿಚ್ಚಂ (ಅರ್ಧನೇ. ೦-೬೩). [ಸಂ.]

**ಬರ್ಹಿಣವಾಹನ** (ನಾ). ನವಿಲನ್ನು ವಾಹನವಾಗಿ ಉಳ್ಳವನು ; ಷಣ್ಮುಖ : "ಗೌರೀಪುತ್ರಃ, ಷಣ್ಮುಖಃ . . . ಬರ್ಹಿಣವಾಹನಃ, ಮಹಾಸೇನಃ, ಮಹಾತೇಜಾಃ, ಶರಜನ್ಮಾ (ಚ ಕಥ್ಯತೇ) — ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೫-೫೦). [ಸಂ.]

**ಬರ್ಹಿಣಿ** (ನಾ). ಹೆಣ್ಣುನವಿಲು : ತಾನಾ ಪುರುಪಕೇಕಿ ಬರ್ಹಿಣಿಯ ಸಮ್ಮುಖದಿ ಬಿರ್ಚುತೆ ಕಲಾಪಮೋಚಕಸಹಸ್ರಂಗಳಂ (ಹಿತ್ತಾಂಗ. ೫೯-೧೪೬೩). [ಬರ್ಹಿಣ + — ಇ₂]

**ಬರ್ಹಿರ್ಧ್ವಜ** (ನಾ). ೧. ನವಿಲನ್ನು ಪತಾಕೆಯಲ್ಲಿ ಉಳ್ಳವನು ; ಷಣ್ಮುಖ. ೨. ಒಬ್ಬ ರಾಜನ ಹೆಸರು ; ಮಯೂರಧ್ವಜ : ಇವಂ ಬರ್ಹಿರ್ಧ್ವಜನ ತನುಜನನಸೂಯಕಂ ಧೀರನು (ಜೈಮಿಭಾ. ೨೩-೦೩). [ಸಂ.]

**ಬರ್ಹಿರ್ಮುಖ** (ನಾ). ಅಗ್ನಿಯ ಮೂಲಕ ಹವಿಸ್ಸನ್ನು ಸೇವಿಸುವವನು ; ದೇವತೆ : ಹವಿರ್ಭೋಜನದ ಬರ್ಹಿರ್ಮುಖರು ನೆರೆದುದು ನೀರದಾಧ್ವದಲಿ (ತೊರವೆ. ೦-೬-೪೦). [ಸಂ.]

**ಬರ್ಹಿಷ್ಕೇಶ** (ನಾ). ಬೆಂಕಿಯ ಅಧಿದೇವತೆ ; ಅಗ್ನಿ [ಸಂ.]

**ಬರ್ಹಿಷ್ಠ** (ಗು). ೧. ದೊಡ್ಡದಾದ ; ಬೃಹತ್ತಾದ. ೨. ದೃಢವಾದ ; ಬಲವಾದ. (ನಾ). ೩. ಒಂದು ಬಗೆಯ ಸುಗಂಧದ್ರವ್ಯ ; ಮುಡಿವಾಳ : "ಬಾಲಂ, ಹ್ರೀಬೇರಂ, ಬರ್ಹಿಷ್ಠಂ, ಉದೀಚ್ಯಂ, ಕೇಶಾಂಬುನಾಮ — ೫ ಮುಡುವಾಳದ ಹೆಸರುಗಳು" (ಸಿದ್ಧಾಂತಿ. ೧೯೦). ೪. ಒಂದು ಬಗೆಯ ಸಸ್ಯ ; ಶೈಲಪರ್ಣಿ ; "ಉಶೀರಾವೀರಣ" (ಶಂಖಿತ. ೨೬೦). [ಸಂ.]

**ಬಲ್₁, ಬಲಿ₁** (ಕ್ರಿ). ಬಲ್ತ, ಬಲಿತ, ಬಲಿದ (ಭೂತಕೃ). ಬಲ್ತು, ಬಲಿತು, ಬಲಿದು (ಭೂತನ್ಯೂ). ೧. ದೈಹಿಕವಾಗಿ ಸಾಮರ್ಥ್ಯವನ್ನು ಪಡೆದಿರು ; ಸಮರ್ಥವಾಗಿರು ; ಬಲಿಷ್ಠವಾಗು : ಗೋಮೂತ್ರಮಂಡಲ ಮುಮಾಕಾಶಂ ಪೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೂಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ವ) ; ಕೊಳನ ತಡಿಯಲ್ಲೊಂದು ಹೊಱಸು ಕುಳ್ಳಿರ್ದರೇನು ಕಳಹಂಸಿಯಾಗಬಲ್ಲುದೆ (ಬಸವ. ೯೯) ; ಡೊಂಬನ ಬಿನುಗುನುಡಿಯಂತಿರಲಿ ಬಲ್ಲಡೆ ಮೊನೆಗಣೆಯಲೇ ಮಾತನಾಡು (ಕುಮಾವ್ಯಾ. ೬-೦೫). ೨. ತಿಳಿ ; ಅರಿ : ಬವರದೊಳೇಂ ಬಲ್ಲಂ ಕರಮೊಪ್ಪಜಾಗೆಯಲ್ (ಶಂಕಶ. ೦೨-೩) ; ಸಾವ ಪೊತ್ತನಾವಂ ಬಲ್ಲಂ (ಧರ್ಮಾಮೃ. ೦-೨೦೧) ; ಬ್ರಹ್ಮ ವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು ಇವರೆತ್ತ ಬಲ್ಲರು ಲಿಂಗದ ನಿಜವ (ಅಲ್ಲಮ. ೨-೪). ೩. ವೃದ್ಧಿಯಾಗು ; ಹೆಚ್ಚಾಗು ; ಅಧಿಕಗೊಳ್ಳು : ಚದುರಿಲ್ಲಿಂದಮ ಪರ್ವಿತಲ್ಲ ಜಗತಂ ಜಾಣ್ಪೊಂಗಿದತ್ತಿತ್ತಣಿಂ ಪದುರೀ ತಾಣದೆ ಬಲ್ತುದು (ಕಶಪ. ೬-೬೫).

**ಬಲಿ₁** : ೧. ನೀಮುಮಿಗಾಗಳ್ ವನಸಿಂಹನ್ಯಾಯದಿಂ ದುರ್ಗದೊಳೆ ಬಲಿದು ನಿಂದಲ್ಲಿ ಬಂದೊತ್ತಿ ಚಕ್ರೇಶನ ತಂತ್ರಂ ನಿಲ್ಕುಂ (ಆದಿಪು. ೦೪-೫೬) ; ಗಱೆ ಪಾಱಲ್ಕಿಲ್ಲ ಕಾಲುಂ ಬಲಿಯವು (ಕಾದಂಬ. ೧೯೦) ; ಬೀದಿವೀದಿಗಳೊಳಾರು ಮಂ ಸುಟಿಯಲೀಯದೆ ಬಗ್ಗಿಸುತ್ತೆ ಬಲಿದು ಕಾಪುಗೊಂಡು ಬಳಸಿದ ತಳಾಱನಾಯಕರುಮಂ . . . ಈಕ್ಷಿಸುತ್ತುಂ (ಪರ್ಣಪು. ೯-೫೬ ವ) ; ಕುಲ ಗಿರಿಗಳೆಲ್ಲವನೊಂದುನಿಮಿಷದಿ ಹೊಳಕಿಹೊಳಕಿ ಬಿಡುವೆನ್ನ ಕುಲಿಶದಂಡವ ಓಡಿದೀ ಸಗ್ಗಿಗರ ಜಂಗುಳಿ ಸಹಿತವೆ ಬಲಿದೊತ್ತೆ (ಶ್ರೀಕಾಂ. ೬-೫). ೩. ಬಲದ ಬಲಿದ ಕಳಕಳಮಂ ಕೇಳ್ದು (ಶಾಂತಿಪು. ೦೦-೬೩) ; ಭವಪೂಜೆ ಬಲಿದು ಪುರುಷಾಕಾರವಾದಂತೆ (ಬಸವ. ೩-೦೫೨) ; ಬಲಿದ ತೋಳಿಕೆಗಳ . . . ರ್ಥೊಮ್ಮಿನ ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ (ಕುಮಾವ್ಯಾ. ೦೬-೪). ೪. ಹಣ್ಣು, ಸಸ್ಯ ಮುಂತಾದಂವು ಪೂರ್ಣವಾಗಿ ಬೆಳೆ : ಒಂದು ವೃಕ್ಷದಲ್ಲಿ ಹುಟ್ಟಿದ ಫಲ ಮೊದಲೇ ಎಳೆಯದಾಗಿ ತದನಂತರದಿಂ ಮಿಗಱೆ ಬಲಿದಲ್ಲದೆ ಬೀಜಕಂಕುರವಿಲ್ಲ (ಸರ್ವಜ. ೦೦೩-೫೬೦) ; ಮೊಳೆಯಲೇ ಮುರುಡಿಸಲು ಬೇಹುದು ಬಲಿದ ಬಳಿಕದು ನಿನ್ನ ಹವಣೇ (ಕುಮಾವ್ಯಾ. ೯-೦೯) ; ಹತ್ತಿಯ ಕಾಯಿಗಳು ಬಲಿತು ಹಣ್ಣಾಗಲಿಕ್ಕೆ ಹೆಚ್ಚು ಕಡಿಮೆ ಎರಡುತಿಂಗಳು ಬೇಕಾಗುತ್ತವೆ (ಮುಂಬಯಿ. ೪-೨೬). ೫. ದಪ್ಪವಾಗು ; ದೊಡ್ಡದಾಗು : ಲತಾಂಗಿಯ ಜಠರವದು ದಿನದಿನಕೆ ನುಣ್ಪಿಂ ಪೆಂಪುಮಿಂಪುಂ ಕೊನರ್ದು ಬಲಿದೊಂಬತ್ತುತಿಂಗಳು ತುಂಬಿ ಸಂದೀಶ . . . ಬೆಳೆದನು (ಬಸಪು. ೩-೪). ೬. ಹೆಪ್ಪುಗಟ್ಟು ; ಘನರೂಪವನ್ನು ಪಡೆ : ನೀರು ತಾ ಅನಿಲನಿಂದಲಿ ಬಲಿದು ವಾರಿಕಲ್ಲೆಂದೆನಿಸಿತು (ಶಿವಗೀ. ೩೨-೦೯೯) ; ವಾರಿ ಬಲಿದು ವಾರಿಕಲ್ಲಾದಂತೆ ಶೂನ್ಯವೇ ಸ್ವಯಂಭುವಾಯಿತ್ತು (ಅಲ್ಲಮ.

೧೬೩-೬೪೭) ; ಒಂದೊಂದು ರಜ್ಜುವಿಂ ಕಟಗೊಂದೊಂದಿರ್ದಪುವು ನಾರಕರ ಪಾಪರಜಂ ಮಂದಯ್ಸಿ ಬಲಿದು ನೆಲನಾದಂದದೆ ದುಸ್ಪರ್ಶವಿಷಮನರಕಾವನಿಗಳ್ (ಧರ್ಮಪು.೧೧-೨). ೭. ಒರಟಾಗು; ಬಿರುಸಾಗು : ಮೆಲ್ಪುಗೆಟ್ಟು ಬಲಿದಿರೆ ಮೆಯ್‌ ಕಣ್ ಪತ್ತೆ ಕರಿದಾಗೆ ನಾಲಗೆ ಸತ್ತಪುದಾ ವಾಜಿ (ಅಶ್ವಶಾ. ೬-೪೦) ; ಶರ ಸಡುಗೆವ್ಯ ಬಲಿಯೆ ಹುಬ್ಬುಗಳುಜಿ ಬಿಗಿಯೆ . . . ವೀರಾವೇಶದಲಿ ಮಸಗಿದನು ಕಲಿಭೀಮ (ಕುಮಾ.ಭಾ. ೧೨-೧೧). ೮. ಮಂಲೆ ; ಸೊಕ್ಕು ; ಗರ್ವಿಸು : ಮದೋದಯದೊಳ್ ದೇವ ಬಾಹುಬಲಿ ಬಲಿದಿರ್ದಂ (ಆದಿಪು. ೧೪-೧೮) ; ಆಳ್ವಲಮುಳ್ಳಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳಡಂ ತೋಳ್ವಲಮಿಲ್ಲ ಭೃತ್ಯಹಯದೋರ್ಬ್ಬಲಮುಳ್ಳಡ ಮೋರ್ವ್ವಲಗಳಿಲ್ಲಾಳ್ವೆಸಗೆಯ್ಯದೇಕೆ ಬಲಿವಮ್ರ್ಮಲೆಪರ್ (ಎಕ. VII, ಶಿಕಾ. ೧೯೬-೨೬ ; 1068). ೯. ನಿಲ್ಲು ; ಸ್ಥಿರವಾಗು ; ನೆಲೆಗೊಳ್ಳು : [ನಿಡು] ಜಾಗರದೊಳ್ ತೊಡರ್ದೇಕಪಾದದೊಳ್ ಬಲಿದುಪವಾಸದೊಳ್ ನವೆದು ನೋಂಪಿಗಳೊಳ್ ನಿಯಮಕ್ರಮಂಗಳಂ ಸಲಿಸಿದರಂತು ನೋನದೆ ಗುಣಾರ್ಣವನಂ ಪಡೆಯಲ್ಕೆ ತೀರ್ಗುಮೋ (ಶಂಕರಾ. ೧-೧೩೬) ; ಇದು ಕಲಿಭೀತಿಯಿಂ ಕೃತಯುಗಂ ಬಲಿದಿರ್ದಪುದೆಂಬ ಸಚ್ಚರಿತ್ರದಿನೆಸೆದು . . . ಪೆರ್ಮೆಯಿಂ ವಿದಸೆಯೆಂಬುದು ಸಚ್ಚಿನ ರಾಜಧಾನಿಯಾದುದು (ಕಾದಂಪೂ. ೧೩); ಗುರು ಕರುಣದಿಂದೊದಗಿದ ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದಲ್ಲಿ (ಶೂನ್ಯಸಂ. ೧೬-೩೬). ೧೦. ದೃಢಮನಸ್ಕನಾಗು ; ಹಟ ಹಿಡಿ : ಆರು ನುಡಿಯಲು ಸರ್ವಥಾ ಖಳನಾರಿಯನು ಕೈಕೊಳ್ಳನೆಂದೇ ವೀರ ಬಲಿದನು (ಕುಮಾ.ಆ. ೯-೨೩). ೧೧. ರಚಿತವಾಗು ; ನಿರ್ಮಾಣವಾಗು : ಬಲಿದುದನಿತಕೆ ಕೋಟೆ ಪರಿಖಾವಳಯರಚನೆಯಲಾಳುವೇರಿಯ ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ (ತೊರರಾ. ೧-೧೩-೨). ೧೨. ಪ್ರಕಟಗೊಳ್ಳು ; ವ್ಯಕ್ತವಾಗು : ಪಂಚಮುದ್ರಾನ್ವಿತಂ ಪಂಚಾಕ್ಷರೀಪ್ರಿಯಂ ಪಂಚವರ್ಣಂ ಒಗೆವೊಡೀ ಬಸಿಱ ಶಿಶುವೆಂದು ಪಂಚಿಸದೆ ಪೇಳ್ವಂತೆಯುಯ್ಯುದ್ದತಿಂಗಳಲಿ ನವಮಾಸಚಿಹ್ನಂ ಬಲಿದುದು (ಸಿದ್ಧರಾ. ೧-೩೧) . ೧೩. ಆಕಾರವನ್ನು ಹೊಂದು ; ರೂಪವನ್ನು ತಾಳು : ನೀತಿ ಬಲಿದುದೊ ಶಾಂತಿ ರೂಪಾಯ್ತೊ ಸದ್ಗುಣವ್ರಾತವೇ ಮುನಿಯಾಯ್ತೊ (ಹರಿಶ. ೩-೬೭) ; ಇಂದುರುಚಿ ಬಲಿದುದೋ ಹರಸ್ಮೇರ ದಿವಿಯೊಳಾಕಾರವಾಯ್ತೊ . . . ಎನೆ ರಜತಾದ್ರಿ ರಂಜಿಪುದು (ಬಸವು. ೧-೩೮). ೧೪. ತುಂಬು ; ಹರಡು ; ವ್ಯಾಪಿಸು : ಹಸನದೀಧಿತಿ ಮಿಗೆ ರಜತಗಿರಿ ವಸುಗಳಭಿನವಮಾಯಿತೆನಲಾಗಸದೊಳೆಲ್ಲೆಡೆಯೊಳು ಬಲಿದು ಬೆಳೆದಿಂಗಳಗ್ಗಳಿಸೆ (ಬಸವು. ೧೨-೩೭) ; ಅಂಬರದೊಳೊಮ್ಮೊಮ್ಮೆ ಕಾದುವರ್ ಧರೆಗಿಳಿವುತಂ ಬಿಡದೆ ಸೆಣಸುವರ್ ಧರೆಯೊಳೊರ್ವರ್ ಗಗನಮಂ ಬಲಿವರೊರ್ವರಿರದೆಟ್ಟಾಡುವರ್ (ಜೈಮಿ. ೨೩-೨೨) ; ಹೊಲೆ ಬಲಿದ ತನುವಿನೊಳಗಿರ್ದಮದಱೊಳಗೆ ಕುಲವನಱಸುವರೆ (ಸರ್ವಜ್ಞ. ೨೦). ೧೫. ನಿಯಮಕ್ಕೆ ಒಳಪಡು,— ಒಳಗಾಗಂ : ದೇಗುಲಕೆ ಸಾರದೆ ಹೆಗಲ ಕಂಬಿಯನಿಳುಹದೆಲ್ಲಿಯುನಿಲ್ಲದಡಿಯಿಡಬಾರದಿಂತಪ್ಪ ಬಲಿದವಸ್ಥೆಯೊಳೆಯ್ದೆ ಸಂಕಟಗೊಳಲದೇತಕೆ (ಬಸವು. ೪-೧೩). ೧೬. ಕ್ಲಿಷ್ಟವಾಗು ; ದುಸ್ಸಾಧ್ಯವಾಗು : ಬಲಿದು ದಾಹವ ಮತ್ತೆ ಚಾತುರ್ಬಲ ಭಡಾಳಿಸಿ ಕಾದುತಿರ್ದುದು ಮುಳಿದು ಶಲ್ಯನ ಕೂಡೆ ಪಂಚದ್ರೌಪದೀಸುತರು (ಕುಮಾ.ಶ. ೩-೩೦). ೧೭. ಮುಚ್ಚು ; ಬಂಧಿಸು : ಕೆಟ್ಟೆನಕಟಾ ಎಂದು ಮನದೊಳಗೆ ಮಱುಗುತ್ತ . . . ಎದ್ದು ತಾ ಕವಾಟವ ಬಲಿಯೆ (ತ್ರಿಶರಾ. ೨-೩೪). ೧೮. ಚುಚ್ಚು ; ನಾಟು : ಆ ಕರಸ್ಥಲವೆಂಬ ರಥಕ್ಕೆ . . . ದಶವಾಯುಗಳೆಂಬ ಪಾಶಮಂ ಬಂಧಿಸಿ ಷಡಂಗಗಳೆಂಬ ಮೊಳೆಗಳಂ ಬಲಿದು (ಅನಸಂ. ೨೬೦-೧೧೯೬) ; ಲಲನೆಯರುಪಚಾರದ ನುಡಿ ಕಿವಿಯೊಳು ಬಲಿದ ಬಲ್ಲೆಹವಾಯಿತಾಗ (ಶಂಗಶ. ೯-೧೬೩). ೧೯. ಹೆಚ್ಚಿಸು ; ವೃದ್ಧಿಗೊಳಿಸು : ರಕ್ಕಯಾಳ್ಗಳಂ ಲೆಕ್ಕಿಸಿ ನೋಡಿ ಕಿಲಂಬರೆಂಬುದನಱಿದು ನಾಡೆಯುಂ ನಲಿದು ಮೆಲ್ಲಮೆಲ್ಲನೆ ತನ್ನ ಬಲಮಂ ಬಲಿದು (ಧರ್ಮಪು. ೨-೩೮ ವ) ; ಪೊಳಲ ಪೆರ್ಬಾಗಿಲ್ಗಳಿಕ್ಕಿದವು ಕೋಟೆಕೊತ್ತಳದ ಕಾವಲ್ಗಳಂ ಬಲಿದರಲ್ಲಲ್ಲಿ ಗಜಬಜವಾಯ್ತು ನಗರದೊಳಗೆ (ಕೃಷ್ಣಾಭ್ಯು. ೯-೧೬) ; ಬಳಸಿಹ ರಿಪುನೃಪಮನ್ನೆಯರಿವರಗ್ಗಳಿಕೆಗೆ ಕಂಗೆಟ್ಟಾಗ ಇಳೆಯಾಳ್ವ ತಿರುಮಲರಾಜನ ಮಱೆ ಹೊಕ್ಕು ಮುಳಿಸ ಬಲಿದರಾತನಿಗೆ (ಕಂನಪಿ. ೩-೧೮). ೨೦. ಬಿಗಿಗೊಳಿಸು ; ಬಿಗಿಯಾಗಿ ಜೋಡಿಸು : ತನ್ನ ಕಯ್ಯ ಕಳಶಮಂ ಬಳ್ಳಿಯೊಳ್ ಱಟ್ಟಿ ನೀರಂ ತೆಗೆವಾಗಳದಂ ಪುಲಿ ಪಿಡಿದು ನೇಲ್ವುದುಮದು ಕಯ್ಗೆ ಬಿಣ್ಣಿತ್ತಾದೊಡದಂ ನೋಟಪ್ಪೆನೆಂದು ಬಲಿದು ಪಿಡಿದು ಮೆಲ್ಲನೆ ತೆಗೆಯೆ (ಶಂಕಶಂ. ೧೧೯-೩) ; ಸೂತ್ರದ ಕೀಲ್ಗಳಂ ಬಲಿದು ಕ್ರಮದಿನಾಡಿಪ ಬಡಗಿ ತಾನೇ (ಬಸವು. ೨೦-೨೯); ತಡಿಯ ಬಲಿಸುವ ಗುಳನ ಜಂಚಿಗು ಗಡಣಿಸುವ ಹಕ್ಕರಿಕೆಗಳನಾಯ್ದಡಸಿ ಹೊಲಿಸುವ ಕಬ್ಬಿಗಳ ಕೊಂಡಿಗಳ ಮಿಗೆ ಬಲಿವ. . . ಬೆಟ್ಟದ ಗಾಲಿಗಚ್ಚನು ತೊಡಿಸುತಿರಲು (ಕುಮಾ.ಭೀ. ೩-೩೭) ; ಬಲಿದು ಮಕುಟಾವಳಿಯ ಶೋಣಿತ ಪಳಿಯ ರಕ್ಕಸದೇಶಿಯಲಿ ಬಿಗಿದೆಳೆವ ಹಾಹೆಯನೋಜೆಗೊಳಿಸಿಕ್ಕಲಿಸಿ ಪದಯುಗವ (ತೊರರಾ. ೧-೧೩-೧೯). ೨೧. ಗಟ್ಟಿಗೊಳಿಸು : ತನ್ನ ಕೆಳದಿಗೆ ಪೇಟ್ದು ಮನಮಂ ಬಲಿದು ತನ್ನಂ ತಾನೆ ಸಂತಯಿಸಿದಳ್ (ಶಾಂತಿಪು. ೬-೧೧೭ ವ) ; ಧನುವನೊದಱಿಸಿ ಸಕಲಸುಭಟರು ಮನವ ಬಲಿದೊಗ್ಗಾಗಿ ಸರಳಿನ ಜಿನುಗುವಳೆಯಲಿ ನಾದಿದರು ನಾರಾಯಣಾರ್ಜುನರ (ಕುಮಾ.ದ್ರೋ. ೧೪-೩೦). ೨೨. ಭದ್ರಪಡಿಸು ; ಸುರಕ್ಷಿತಗೊಳಿಸು : ಉಗ್ರಸೇನನೆಂಬ ದಂಡಾಧಿಪಂ ಕೋಂಟೆಯಂ ಬಲಿದು ಕಾದುವ ಸಮಕಟ್ಟೆಂದಿರ್ಪುದುಂ (ಧರ್ಮಾಮೃ. ೪-೨೪೦) ; ಅಂದು ಚಕ್ರವ್ಯೂಹವನು ನಲವಿಂದ ಬಲಿದನು (ಕುಮಾ.ದ್ರೋ. ೯-೧೯) ; ಜಲಧಿ ಮೇರೆಯ ಮೀಱಿ ಕಟ್ಟೆಯ ಬಲಿದು ತಡವವರಾರು (ಉತ್ತರಾ. ೭-೩೯). ೨೩. ನೆಲೆಗೊಳಿಸಂ; ಸ್ಥಾಪಿಸು : ಪಶ್ಚಿಮಪದ್ಮಾಸನದಲ್ಲಿ ಕುಳ್ಳಿರ್ದು ನಿಟ್ಟೆಲುವ ನೆಟ್ಟನೆ ಮಾಡಿ ಅಧೋಮುಖಕಮಲವ ಬಲಿದು ಊರ್ಧ್ವಮುಖವ ಮಾಡಿ (ಶೂನ್ಯಸ. ೪. ೪೨೩-೯೯೯) ; ಮನಕಲಿತ ಪ್ರಾಣಮಂ ಹೃದ್ದೇಶದೊಳು ಬಲಿದು ವನಜಬಾಂಧವ ಪ್ರತೀಕಾಶವದನದೆ ವೀರವನು ತುಳುಕಿ ತನುವನೊನೆದಡೆ ಶೈಲ ಸೆಳೆಮಂಚದಂತಾದುದು (ಚಂಕಾರಾ. ೩-೧-೧೧). ೨೪. ನಿಗ್ರಹಿಸು ; ಸಂಯಮಿಸು ; ತಡೆ : ಬಿಂದುವನು ಬಲಿದಾತ ವಂದ್ಯನಹ ಜಗಕೆಲ್ಲ (ಸರ್ವಜ್ಞ. ೪೦೨). ೨೫. ಪ್ರವೇಶವಿಲ್ಲದಂತಾಗು ; ಮುಚ್ಚಿಹೋಗಿರು : ಆ ಕಡೆಗೆ ಹೋಗುತಿರೆ ಗೋಪುರದಾ ಕದವು ಕಡುಬಲಿದಿರಲು ನಿವ್ಯಾಕುಲರಿಗಾಕುಲತೆ ತೋಱಿದುದು (ಸಾಳ್ವಭಾ. ೨೦-೧೮). ೨೬. ನೆರವೇರಿಸು ; ಪೂರ್ಣಗೊಳಿಸು : ಕಳಿದುದೊಂದಪಮೃತ್ಯುವೆನೆ ನೃಪತಿಲಕ ನುಡಿದನು ನಿನ್ನ ಭಾಷೆಯು ಬಲಿದೆ ನಿನ್ನಯ ಬಿರುದ ಸಲಿಸಿದೆ ನವಗಿದೇನೆಂದ (ಕುಮಾ.ದ್ರೋ. ೧೩-೩). ೨೭. ಪ್ರಚೋದಿಸು ; ಉತ್ತೇಜಿಸು : ಏಳು ತಾಯೆ ಸರೋಜಮುಖಿ . . . ನಿನ್ನವರಾಳಿಗೊಂಡಂದವನು ಬಲ್ಲೆನು ನಿನ್ನ ಹಂಬದಲಿ ಕಾಳೆಗವನೇ ಬಲಿದು ತಹೆನು (ಕುಮಾ.ಅ. ೬-೧೨).

**ಬಲ್ಲ**$_1$ = ತಿಳಿದವನು ; ಚತುರ ; ಜಾಣ : ತಡೆಯದೆ ಮಹಾಧ್ವಕೃತಿಗಳನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ (ಶಬ್ದಾ. ೧-೧೬) ; ಬಲ್ಲರಿಂದಾನು ಕೇಳಿದುದಕೆ ಪೆರ್ಚು ಕುಂದಿಲ್ಲದಂತೆಚ್ಚಱುಗೂಡಿ . . . ಸೊಲ್ಲಿಸುವೆನು (ಹರಿಚ. ೧-೪೪). **ಬಲ್ಲಂತಿಕೆ** = ತಿಳಿವಳಿಕೆ ; ಅಱಿವು : ಬೇಡಿದಿಷ್ಟವ ಕೊಟ್ಟಾತನು ಭೂತವೋ ಆತ್ಮನೋ ಬಲ್ಲರೆ ನೀವು ಹೇಳಿರಣ್ಣಾ ನಿಮ್ಮ ಜ್ಞಾನದ ಮುಸುಕ ತೆಱೆದು ನಿಮ್ಮ ಬಲ್ಲಂತಿಕೆಯ ಕಾಣಬಹುದು (ಸರ್ವವ. ೬೪-೪೬೪). **ಬಲ್ಲತನ** = ೧. ಶಕ್ತಿ ; ಸಾಮರ್ಥ್ಯ : ತನ್ನ ಮುನ್ನಿನ ನಲ್ಲರೂಪನೆ ತಾಳ್ದು ನಿನ್ನೊಳು ಬಲ್ಲತನಮಂ ನೋಡಲೆಂದಿಂತಾದೆ ನಾನು (ಬಸವು. ೨೦-೩). ೨. ತಿಳಿವಳಿಕೆ ; ಜ್ಞಾನ : ಕಲ್ಲು ಪಾಣ್ಯ

ಮರದಲ್ಲಿ ದೇವನಿದ್ದಹನೆಂದು ಎಲ್ಲಿಯೂ ತೊಳಲುತಿಪ್ಪ ಅಣ್ಣಗಳು ಕೇಳಿರೊ ಅದನಲ್ಲಲ್ಲಿಟ್ಟು ಬಲ್ಲತನದ ಕುಜುಹಲ್ಲದೆ ಸೊಲ್ಲಿಂಗಶೀತನಜಿಯ (ಪ್ರೋಢದೇ. ೨೩-೯೨) ; ಇದೇಂ ಬಲ್ಲತನವೇ ಪೆಂಪೆ ಗರುವಿಕೆಯ ಗಂಭೀರ ವೃತ್ತಿಯೇ (ಶಬ್ದ್ಮಣಿ. ೩-೩೦): ಬಲ್ಲರ ಬಲ್ಲಹ = ಶೂರರಲ್ಲಿ ಶೂರ ನಾದವನು : ಅಂಗಡಿವೀಧಿಯೊಳಿಸೆದೆಯ್ದುಂದಂ ತನ್ನೊಡನೆಯ್ದುರೆ ಪರಿಮಿತಮಿತ್ರಾವಳಿ ಬಲ್ಲರ ಬಲ್ಲಹನು (ಜಯನೃ. ೦೪-೨೦). ಬಲ್ಲರಿಕೆ = ತಿಳಿದಿರುವ ವಿಷಯ : ಶಿರವನೆತ್ತದ ರೀತಿಯೊಳು ಪೇರುರಿಕೆ ತಿವಿತಿವಿದೌಂಕುಪದು ಬಲ್ಲರಿಕೆ ಪ್ರಾಜ್ಞರಿಗರಿಯದೀಗವರಲ್ಲಿ ಕದನವನು ನೆರೆವೆನೆಂಬುದ ಮರೆ (ಜನಲ್ಕ. ೩೬-೪೩). ಬಲ್ಲರೊಳ್ ಬಲ್ಲಹ = ಬಲ್ಲರ ಬಲ್ಲಹ : ಬಿರುದೆಂತೆಂಬರ ಗಂಡನಪ್ರತಿಮವೀರಂ ಬಲ್ಲರೊಳ್ಬಲ್ಲಹಂ (ಅಪ್ರತಿ. ೦೩-೪). ಬಲ್ಲವ₁ = ತಿಳಿದವನು; ಜಾಣ: "ಚತುರಃ, ಕ್ಷೇತ್ರಜ್ಞಃ . . . ಪ್ರವೀಣಃ - ಈ ೧೧ ಬಲ್ಲವಂ "(ಹಲಾಯು. ೩೩-೧೫೦); ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಂ ಕೇಳುತಂ . . . ಸರ್ವಜ್ಞನಪ್ಪಂ ನರಂ (ಸೋಮೇಶ. ೦): ಬಲ್ಲವನೇ ಬಲ್ಲ ಬೆಲ್ಲದ ಸವಿಯ (ಗಾದೆ). ಬಲ್ಲವಿಕೆ = ಬಲ್ಲತನ : ನೀವೆಮಗೆ ಹಿರಿದು ಬಲ್ಲವಿಕೆಯಲಿ ವಾಕ್ಯ ತುರಿಯವನು ರಚಿಸಿದೊಡೆ ನಂಬುಗೆ ದೊರಕುವುದೆ ನಮಗೆ (ಪ್ರಭುಲೀ. ೧೨-೦೬); ಭಾವಾಜಿ ನಿನ್ನ ಚಿತ್ತವ ನಾವು ನೋಯಿಪುದಾವ ಬಲ್ಲವಿಕೆ (ಭರತ. ೩೩-೪೬). ಬಲ್ಲವಿಕೆತನ = ಬುದ್ಧಿವಂತಿಕೆ ; ಜಾಣ್ಮೆ : ಇವಳ್ಬಲ್ಲ ಗರ್ವವ ಮುಱಿಯದಿರ್ದಡೆ ಸಲ್ಲದೆನಗೀ ಪೆಸರೆನುತ್ತಲಿ ನಿಲ್ಲಿಸಲು ಗಜವ ಬಲ್ಲವಿಕೆತನವಲ್ಲವರಸಿನವುಲ್ಲಸದ ವನಕೇಳಿಗೆಡರಹುದಲ್ಲ ನಮಗಿದು ನೀತಿ ಯುಂದಳದೊರ್ವ ನೆಱೆ ಜಾಣೆ (ನಾಗಕು. ೪-೨೨).

[ದೇ.॥ ತಮಿ. ವಲಿ, ವಲ್ಲು ; ಮಲ. ವಲ್ಲುಕ; ತುಳು. ಬಲಾಟಿನಿ; ತೆಲು. ಬಲಿಯು]

ಬಲ್₂, ಬಲು (ಸಪೂರೂ). 'ಬಲ್ಲಿತು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ. ೧. ಬಲಯುಕ್ತ; ಶಕ್ತಿಯುತ: 'ಬಲ್ಗಯ್' ಪರಾ. ೨. ದೊಡ್ಡ; ದಪ್ಪ : 'ಬಲ್ದಲೆಯ' ಪರಾ. ೩. ಬಹಳ; ಅಧಿಕ; ಅತಿಶಯ: 'ಬಲ್ಗಣ್ಣ₁', 'ಬಲಿರ್ಪುದು' ಪರಾ. ೪. ವಿಶಾಲ ವಾದ: ವಿಸ್ತಾರವಾದ; 'ಬಲ್ದೊಱೆ' ಪರಾ. ೫. ಗಾಢವಾದ; ದಟ್ಟ ವಾದ; 'ಬಲ್ಗತ್ತಲೆ', 'ಬಲ್ಲಡವಿ' ಪರಾ. ೬. ಜೋರಾದ; ಅಬ್ಬರದ: 'ಬಲ್ದನಿ', 'ಬಲ್ಸರ' ಪರಾ. ೭. ಒತ್ತಾಯದಿಂದ ಕೂಡಿದ ; ಬಲಾತ್ಕಾರದ: 'ಬಲ್ಮೆ' ಪರಾ. ೮. ಬಿರುಸಾದ : ಒರಟಾದ ; 'ಬಲ್ನುಡಿ' ಪರಾ. ೯. ಬಿಗಿಯಾದ; ದೃಢವಾದ : 'ಬಲ್ಗಣ್ಣ' ಪರಾ. ೧೦. ಕೊಬ್ಬಿದ; ಬಲಿಷ್ಠವಾದ: 'ಬಲ್ಗಱಿ', 'ಬಲ್ಗೂಳಿ' ಪರಾ. ೧೧. ಸಮರ್ಥನಾದ; ದಕ್ಷನಾದ : 'ಬಲ್ಮಂತ್ರಿ', 'ಬಲ್ಮೆ ವಂತ' ಪರಾ. ೧೨. ಗಡುಸಾದ; ಗಂಭೀರವಾದ : 'ಬಲ್ಮೊಗ' ಪರಾ. ೧೩. ಗಟ್ಟಿಯಾದ; ಸಾಂದ್ರವಾದ : 'ಬಲ್ಮೊಸರ್' ಪರಾ. ೧೪. ಶ್ರೇಷ್ಠವಾದ; ಉತ್ತಮವಾದ : 'ಬಲ್ಲಡಗು' ಪರಾ. ಬಲು : ೧. 'ಬಲುಗಣೆ' ಪರಾ. ೨. 'ಬಲುಗುಂಡು' ಪರಾ. ೩. ಹಣ ಮುಳ್ಳಂ ಹೆಣನಾದೊಡಂ ಮಮತೆಯಿಂ ತಾನಾವಗಂ ಬಿಟ್ಟಿರಲ್ ಕ್ಷಣ ಮಾತ್ರಂ ಬಲುಬೂಟಕಂ ಗಟಿಪಿ (ಸೋಮೇಶ. ೬೨); ಹುಲಿಮುಖ ಬಲು ಭಯಘೋಂಕಾರವ ಬೀಱುವುವು (ಕೆಂಪನಾ. ೨-೬೪). ೪. 'ಬಲುಗಡಲು' ಪರಾ. ೫. 'ಬಲುಗತ್ತಲೆ', 'ಬಲುಗೆಂಪು' ಪರಾ. ೮. 'ಬಲುಬಿದಿರು' ಪರಾ. ೧೪. ಪರದೇವತೆಯೆಂದು ಭಕ್ತಿಗೈವುದು ಬಲುದೊರೆಯೆಂದುಪ ಚರಿಸುವುದು (ಹಾಟ. ೩-೪೦). ೧೫. ಉಗ್ರವಾದ : 'ಬಲುಬೇಸಗೆ' ಪರಾ. [< ಬಲ್ಲಿತು₁]

ಬಲ₁ (ನಾ). ಎಡಭಾಗವಲ್ಲದುದು; ದಕ್ಷಿಣ ಪಾರ್ಶ್ವ: "ಅಪಸವ್ಯಂ, ದಕ್ಷಿಣಂ - ಈ ೨ ಬಲಂ" (ಹಲಾಯು. ೦೨೪-೬೧); ಬಲದ ಕಯ್ಯೊಳ್ ಭೈಕ್ಷದ ಭಾಜನಮಂ ಪಿಡಿದು ತೊಟಲ್ದು ಭೈಕ್ಷಮಂ ಬೇಡಿ ಮಡಗಿಟ್ಟು ಪಗಲುಣ್ಣಂ (ವಡ್ಡಾರಾ. ೯೨-೦೬); ಬೇಡಿದೊಡೆ ಬಲದ ಬರಿಯುವು ನೀಡಾಡುಗುಮುಗಿದು ಕರ್ಣಂ (ಪಂಪಭಾ. ೦-೦೦೦); ಇದಿರೊಳಾನಿಹೆ ಶಲ್ಯ ನೆಡವಂಕದಲಿ ಬಲದಲಿ ಕೃಪನಪರಭಾಗದಲಿ ನೀ ಬಂದೆಸು ಕುಮಾರನ ಕರದ ಕಾರ್ಮುಕವ (ಕುಮಾವ್ಯಾದ್ರೋ. ೬-೨೮); ಅಳುವವನ ಎಡಕ್ಕಿರಬೇಡ, ಹೊಲಿಯುವವನ ಬಲಕ್ಕಿರಬೇಡ (ಗಾದೆ).

ಬಲಗೊಡತಿ = (ಮದುವೆಯಲ್ಲಿ) ಹೆಣ್ಣಿನ ಬಲಭಾಗದಲ್ಲಿ ಜೊತೆ ಯಾಗಿರುವವಳು. ಬಲಗೊಡೆಯ = (ಮದುವೆಯಲ್ಲಿ) ಗಂಡಿನ ಬಲ ಭಾಗದಲ್ಲಿ ಜೊತೆಯಾಗಿರುವವನು : ಹಾಳುನಾಯಿ . . . ಇದೊಂದು ಯಾವಾಗಲೂ ನನ್ನ ಬಲಗೊಡೆಯ. ಬಸವನ ಹಿಂದೆ ಬಾಲ ಬಂದ್ಹಂಗೆ (ಹುಲಿಮ. ೩೯೨). ಬಲದಂ = ದಕ್ಷಿಣ ಪಾರ್ಶ್ವದಲ್ಲಿರು ವವನು : ಬಲಮಗ್ಗುಲಲ್ಲಿರುವ ವ್ಯಕ್ತಿ : ದಕಾರಕ್ಕೆ ಕೆಲದಂ, ಬಲದಂ, ಅಲ್ಲಿದಂ, ಇಲ್ಲಿದಂ, ಎಲ್ಲಿದಂ (ಶಮದ. ೦೦೦) ಪ್ರಯೋ. ಬಲದ ಕಯ್ = ಬಲಗಡೆ: ಬಲಭಾಗ; ಬಲಪಕ್ಕ: ಎರಡುಂ ಬಲದ ವೀರಭಟರ್ಕಳೊಟ್ಟು ಪೊಱಮಟ್ಟು ಬಿಲ್ವಿಲ್ಲಳ್ ಕುದುರೆ ಕುದುರೆಯೊಳ್ ಕಿಟ್ಟಿ ಅತಿತುಮುಲಕಾಳಗ ಪೆಟ್ಟಿ ಬಲದ ಕಯ್ಯಂ ಚಿತ್ರವಾಹನನೊತ್ತಿ ಪುಗುತ್ತನ್ದು ಕಾದಿಸೆ ಕಣ್ಣು ಕುಲಮುದ್ದ ನೀನೀ ಕಯ್ಯ ಪೊಕ್ಕು ಕಾದೆಸ್ದು ಬೆಸಸೆ (ಎಕ. VIII, ಸೊರಬ. ೦೦-೬; ಸು. 800). ಬಲದ ಕಯ್ಯ ಭಂಡಾರ = ಬಲಗೈ ನೀಡಿದೊಡನೆಯೇ ಹಸ್ತ ಗತವಾಗುವ ಐಶ್ವರ್ಯ ; ಒಂದು ಬಿರುದು : ಬಸವಯ್ಯ ದಂಣಾಯ್ಕರು ರಾಜ್ಯವ ಪ್ರತಿಪಾಲಿಸುವ ಕಾಲದಲು ಅವರ ಬಲದ ಕಯ್ಯ ಭಂಡಾರವೆನಿಪ ಗಣಪತಿಮ ವಿಷ್ಣುವರ್ದ್ಧನಪ್ರತಾಪಹೊಯಸಳ ಭುಜಬಳ ದೇಶದೊಳಗೆ ಕಾವೇರಿಯ ದಕ್ಷಿಣಭಾಗದ ಅಧಿಕಾರವ ಮಾಡುವ ಕಾಲ ದೊಳು (ಎಕ. IV(R), ಕಾಮರಾ. ೨೬೦-೬ ; 1368) : ಶ್ರೀಮನ್ಮಹಾ ಪ್ರಧಾನಂ ಮಗಪ್ಪದಣ್ಣಾಯಕರ ಬಲದ ಕಯ್ಯ ಭಂಡಾರವೆನಿಪ ಅಚಂಣ ವೊಡೆಯರು ಹೊಣಸಳದೇಶವನಾಳುತಿವ್ದಲ್ಲಿ (ಎಕ. IV(R), ಕಾಮರಾ. ೨೬೧-೪; 1397). ಬಲವಾಗು = ಬಲಭಾಗಕ್ಕೆ ಬರು; ಬಲಕ್ಕೆ ತಿರುಗು : (೬);

[ದೇ.॥ ತಮಿ. ಮಲ. ವಲವು ; ತುಳು. ಬಲತ್ ; ತೆಲು. ವಲ, ವಲನು ; ಕೋತ. ವಲ್ ; ಪರ್ಜ. ವೆಲ]

ಬಲ₂ 'ಮಲ₁' ನೋ.

ಬಲ₃ . ಬಳ₂ (ನಾ). ೧. ಪರಾಕ್ರಮ; ಕಸುವು ; ಶಕ್ತಿ ; ಸಾಮರ್ಥ್ಯ : "ಪ್ರಾಣಃ, ಸ್ಥಾಮ, ಬಲಂ . . . ತರಃ, ಸಹಃ - ಈ ೮ ಬಲ್ಪು (ಬಲುಹು)" (ಹಲಾಯು. ೧೨೦-೩೮) ; ತ್ರಿದಶ ನರಾಸುರೋರಗಣ ಪ್ರಭು ನಿಶ್ಚಿತ ತತ್ತ್ವ ಯೋಗಿ ಯೋಗದ ಬಲಮುಣ್ಮೆ ಪೊಣ್ಮೆ ನಿಲೆ (ಪಂಪಭಾ. ೦-೮೩) ; ಬಲದಿ ಕುತ್ಸಿತದಾನದ ಫಲದಿಂದೆತ್ತಾನುಮೊರ್ವ ಸಿರಿ ಸಮನಿಸುಗುಂ (ಧರ್ಮಾಮೃ. ೦೦-೬೦). ೨. ಸೈನ್ಯ ; ದಳ ; ಪಡೆ : "ಸೇನೆ ಧ್ವಜಿನಿ ವರಪತಾಕಿನಿ . . . ಬಲಂ ಚಮುವೆಸಲು ಪಡೆಗೆ ನಾಮಂ" (ಮಂಗರಾ. ೮೬-೨೯) ; ಅಗ್ಗಳಾಅರಸರಾ ಬೆಸಸಿದೊಡೆ ಬೆಸನ ಪೆತ್ತುರ್ಬ ಬಲಮಾನಾತ್ಸ್ಥೆ ಎಱೆದು ಬಿಟ್ಟಿರ್ (ಎಕ. X (ಕ), ಕೋಂಗ್. ೮೬-೬ ; ಸು. ೩20) ; ಆಜಾಂಬಲಂ ಗಳ್ವಿರಸೊದವಿದ ಸಂಗ್ರಾಮಸಂರಂಭದಿಂದಂ ಬಗೆಯ ಪ್ರಾಣಪ್ರಿಯಸ್ತ್ರೀ ಜನತನಯ ಧನವ್ರಾತದೊಳ್ ಮಾಡದಾಶಾರ್ಜಿಗೆ ಬಂದೊಡ್ಡಲ್ಕೆ (ಅಜಿತ. ೦೪-೯೨) ; ಆ ಮೋಹರದ ಜೋಕೆಯ ಹಿಂದೆ ಲಕ್ಷಕಳಿಂಗಘಟೆಗಳು ಸಂದಣಿಸಿದವು ದ್ರೋಣ ನಿಂದನು ಬಲದ ಕಾಹಿನಲಿ (ಕುಮಾವ್ಯಾದ್ರೋ. ೨-೨೨). ೩. ಪ್ರಭಾವ ; ವರ್ಚಸ್ಸು : ನಿನ್ನ ದಯೆಯಿಂದಮರಿನೃಪರನ್ನೆಱೆ ಕೊಂದೆಮಗೆ ಸಕಳರಾಜ್ಯಶ್ರೀಯುಂ ನಿನ್ನ ಬಲದಿಂದೆ ಸಾರ್ದುದು (ಪಂಪಭಾ. ೦೪-೩೬) ; ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯಾನ

ಜ್ಯೋತಿಯು ಬಲದಿಂದ ತಮಂಧದ ಕೇಡ ನೋಡಯ್ಯಾ, ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯಾ (ಬಸವ. ೮೪೦). ೪. ನೆರವು ; ಸಹಾಯ : ಕೋಪದಲು ರೇಣುಕೆಯು ಭೂಪನ ಕೋಪವನು ನೆಚಿ ಕಂಡು ಬೇಗದಿ ಪಾಪ್ತಿಗೆ ಬಲವಾಗಿ ಬಂದಳು ರಾಮನಿದ್ದೆಡೆಗೆ (ಸಂಭಕ. ೨೩-೨೪). 'ಜನಬಲ' ಪರಾ. ೫. ಕೃಷ್ಣನ ಅಣ್ಣನಾದ ಬಲರಾಮ ; ಬಲಭದ್ರ : "ಬಲನೇಕಕುಂಡಲಂ . . . ಕಾಮಪಾಳಂ ರಾಮಂ" (ವಸ್ತುಕೋ. ೫-೨೫) ; ಪಲವುಂ ಪ್ರಕಾರದಿಂದಂ ಪ್ರಲಾಪಿಸುತ್ತುಂ ಗುಣಂಗಳಂ ಗಣಿಯಿಸುತಂ ; ಬಲನನುಜಸ್ನೇಹದೆ ವಿಹ್ವಲತೆಯನೆಯ್ದಿರ್ದ ನವನಿಯೊಳ್ ಬಿದ್ದಾಗಳ್ (ಶಾಂತೀಶ್ವ. ೯-೬೭) ; ದಾಡೆಗಳಿಂದ ಕಂಠೀರವ ಮದದಂತಿ ಕೋಡುಗಳಿಂದಲೆಂತಂತೆ ಕೂಡಿದ ಬಲ ನಾರಾಯಣರಿಂದಲಿ ನಾಡೊಡೆಯನು ರಂಜಿಸಿದನು (ಪರ್ವತ. ೯-೫೦). ೬. ಆಕಾರ ; ಆಕೃತಿ ; ರೂಪು. ೭. ಇಂದ್ರಿಯ ; ವೀರ್ಯ ; ರೇತಸ್ಸು : "ಶುಕ್ಲಂ, ವೀರ್ಯಂ, ಬಲಂ, ಬೀಜಂ, ಇಂದ್ರಿಯಂ, ರೇತಃ – ಈ ೬ ಇಂದ್ರಿಯಂ" (ಶಬ್ದಾಯು. ೧೦೫-೦೬). ೮. ಕಾಗೆ : "ಕಾಗೆ ಯಲ್ಲಿಯುಂ ಬಲನೆಂಬುದು" (ಶಬ್ದಾಯು. ೦೬೫-೨೬). ೯. ಇಂದ್ರನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : 'ಬಲದಲನ' ಪರಾ. ೧೦. ಭದ್ರ ; ಬಿಗಿ ; ಗಟ್ಟಿ : ಅವನು ಓಡಿಹೋಗದಂತೆ ಬಲವಾಗಿ ಹಿಡಿದುಕೊಂಡರು (ರೂಢಿ). ೧೧. ಒಬ್ಬ ನಿಘಂಟುಕಾರನ ಹೆಸರು : ನಿಜಗೋಪಾಲ ಧನಂಜಯು . . . ಅಮರ ಶಬ್ದಮಂಜರಿ ಬಲಾದ್ಯುಕ್ತಾಭಿಧಾನಾರ್ಥಮಂ ದ್ವಿಜವಂಶಾರ್ಣವಪೂರ್ಣಚಂದ್ರನೆನಿಪೀ ದೇವೋತ್ತಮಂ ಪೇಳೆ ಸೂರಿಜನಂ ಮೆಚ್ಚಲು ಸೇವ್ಯಮಾಯ್ತು ಜಗದೊಳ್ನಾನಾರ್ಥರತ್ನಾಕರಂ (ನಾನಾರ್. ೩). ೧೨. ಬಲಿಷ್ಠವಾದುದು ; ಬಲಶಾಲಿಯಾದುದು : ಶೇಷನಿಂ ಬಲವಿಲ್ಲ ಮೋಸದಿಂ ಕಳವಿಲ್ಲ ನೇಸಱಿಂ ಜಗಕೆ ಹಿತರಿಲ್ಲ ಪರದೈವ ಈಶನಿಂದಿಲ್ಲ (ಸರ್ವಜ್ಞ. ೨೨೮) ; ಸರಕಾರ ಬಹಳ ಬಲ ಅಲ್ಲವೇ ? (ಮುಯುಹು. ೨೪). ೧೩. ಯುದ್ಧ. ೧೪. ಆಹುತಿ ; ಬಲಿ : "ರಕ್ಕಸನೊಳಾಹುತಿಯೊಳಿಂದ್ರಿಯದೊಳಾಜಿಯೊಳು ನೀರ್ಕಾಗೆಯೊಳು ಶಕ್ತಿಯೊಳು ಮುಸಲಿಯೊಳು ಬಲವೆನಿಕ್ಕು" (ಮಂಗರಾ. ೦೯೬-೫೯). ೧೫. ಆಕಾಶ, ಗಗನ. ೧೬. ನೀರು. ೧೭. ಕಪ್ಪು : "ಅಸಿತ ಸಹಾಯಮಿಂದ್ರಿಯ ರಣಾಹುತಿ ದಕ್ಷಿಣ ಸೈನ್ಯ ಶಕ್ತಿವಾಯುಸಮುಸಿತಾಂಬರಂ ದನುಜ ರೂಪು ವಿಹಾಯಸ ವಾರಿ ದೊಡ್ಡಿತೆಂಬಿವರೋಳ್ ಬಲಾಖ್ಯ" (ನಾನಾರ್. ೦೫). ೧೮. [ಜ್ಯೋತಿ] ಗ್ರಹಗಳು ಜಾತಕನಿಗೆ ನೀಡುವ ಬೆಂಬಲ,– ಸಹಾಯ : 'ಕಂಕಣಬಲ' ಪರಾ. ೧೯. [ವಿಶಿಷ್ಟಾ] ಪರಮಾತ್ಮನ ಆರು ಗುಣಗಳಲ್ಲಿ ಒಂದಂ : ಶುದ್ಧಸತ್ತ್ವವೆಂಬುದು... ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸೆಂಬ ಭಗವಂತನ ಆರುಗುಣಗಳಿಗೂ ಪ್ರಕಾಶಕವಾಗಿರುವುದರಿಂದ ಷಾಡ್ಗುಣ್ಯಮಯವು (ಹಿಂದಶಾ. ೨೩೪). ೨೦. [ದ್ವೈತ] ನಲುವತ್ತು ವಿಧವಾದ ಗುಣಗಳಲ್ಲಿ ಒಂದು : ರೂಪ, ರಸ, ಗಂಧ, ಸ್ಪರ್ಶ . . . ಭಯ, ಬಲ, ಲಜ್ಜೆ . . . ಶೌರ್ಯ, ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಶಾ. ೨೬೬). ಬಳ್ಳ : ೧. ಅಂತು ವಸುಷೇಣನಾ ಲೋಕಾಂತಂಬರಮಾಳವಿ ಬಳಿಯ ಬಳದೆಸಕಮದೋರಂತೆ ಜನ[ಂಗಳ] ಕರ್ಣೋಪಾಂತದೊಳೊಗೆದೆಸೆಯೆ ಕರ್ಣನೆಂಬನುಮಾದಂ (ಕಂಶಶಾ. ೦-೯೬) ; ಸಕಷಾಯಕುಜಂಗಳ ದಂತಕಾಷ್ಠದೊಳ್ ಬೋಟ ಕೌಂಗುವಾದ್ಯ(ಚ್ಯ) ಲವಂಗೋದಕ ಚೂರ್ಣಮೆಂಬಿವಂ ತೊಯ್ದುಕೊಂಡು ಪಲ್ಲುಲಿಯೆ ದಂತ ಬಳಮಂ ಪಡೆಗುಂ (ಲೋಕೋಪ. ೬-೩) ; ಭರತಂ ಷಟ್ಖಂಡವಸುಂಧರೆಯುಮನೊರ್ವೊದಲೆ ಬಿಟ್ಟು ಜಿನಸದ್ರೂಪಂ ಧರಿಯಿಸಿದನೆಂದೊಡುಱಿದರ ಸಿರಿಯುಂ ಸಂಪತ್ತುಮಳವು ಬಳವುಂ ಪಿರಿದೇ (ರಮಾರ್ಣವ. ೬-೦೩೩) . ೨. "ಬಳಮೆನೆ ಸೈನ್ಯಮಕ್ಕು" (ಶಶ. ೬೪) ; ಬಳ ಮೆರಡುಂ ತನ್ನನೆ ಮಿಳಮಿಳ ನೋಡೆ ನರೇಂದ್ರನೊಂದೆ ರಥದಿಂದ ಸುಹೃದ್ಬಳಮನಿರದೆಯ್ದಿ ಭೀಷ್ಮರ ಚರಣಯುಗಕ್ಕೆಱಗಿ ನಿನಗೆ ಜಯಮ ಕ್ಕೆಂದಂ (ಪಂಪಭಾ. ೧೦-೬೦) ; ಬಳೆದುದೊ ಭೂತಳಂ ಸುರಿದುದೋ ನಭಮಿಾಂದುದೊ ದಿಕ್ತಟಂ ಬಳಂಗಳನೆನೆ ಪರ್ವಿದಾ ಪಡೆಯ ತೊಟ್ಟುಟಿಯಿಂ ಗಿಡುಬಳ್ಳಿ ಭೂರುಹಾವಳಿ ಪೊದೆ ಜುಳ್ಳ ಬಲ್ಲಡವಿ ಪರ್ವತಯಲಾಯ್ತು (ಪ್ರಸ್ತುತು. ೫-೯೬) ; ತೊಳದ ಬೆಳ್ಳಗಿಲ ಪೊಗ್ಗರದಂತೆ ಸಾಲುಗೊಂಡಳ ವಟ್ಟು ಪುರದಿಂದಲ್ವಿದಿ ಸಲಿಲಮನೀಂಟಿ ಮರಳಿ ಪೋಪ ತೇಜಿಯ ಬಳ ವೊಪ್ಪಿದುವು (ಕಂಸವ. ೨-೫೫). ೩. ಮಾಳೆಗಱಿವುದು ಬೆಳೆ ಪೆರ್ಚುವುದಿಳೆ ತಳಕಿಳಿದು ಪೋಗದೆ ತಡೆದಿಹುದು ಪಳಿವಿಲ್ಲದ ಪತಿವ್ರತೆಯರ ನಡತೆಯ ಬಳದೊಳೆಂಬರು ಬಲ್ಲವರು (ಹರಿಶ. ೨-೯). ೫. ಬಳನಂ ನಚ್ಚುವೊಡೀ ಕೃಷೀವಳನುಮಿಾ ಜೂದಾಳಿಯುಂ ಗಾಳಿಗಾದಟೀಯಾಳೀ ಬಳೆದೊಟ್ಟ ನಟ್ಟುವನುಮಿಾ ಗೋಪಾಳರಪ್ಪೀ ಯಮಳ್ಗಳೆ ದಲ್ ಚಂಡಭುಜರ್ (ಪೇಯುಕೃ. ೦೦-೧೦೦) ; ಎನಿತೊಂದು ಪದೆಪು ಮೋಹಂ ವನಜಾಕ್ಷನೊಳನಿತು ಪದೆಪು ಮೋಹಂ ಬಳನೊಳ್ ತನಗಾಗೆ ನಂದವಧು ತತ್ತನಯದ್ವಯಕೇಳಿಯಿಂದೆ ಸುಖಮಂ ಪಡೆದಳ್ (ಜಗಶ. ೩-೪೪) . [ಸಂ./ ತಮಿ. ವಲವನ್, ವಲ್ಲಮೈ, ವಲ್ಲಮೈ, ವಲ್ಲೈ ; ಮಲ. ವಲವನ್ ; ತುಳು ಬಲ ; ತೆಲು. ವಲಮು, ವಲಮು ; ಕೋತ. ವಲ್]

**ಬಲಶುದ್ಧಿ**, ಬಳಶುದ್ಧಿ (ನಾ). [ಜೈನ] ಎಂಟು ಬಗೆಯ ಶುದ್ಧಿಗಳಲ್ಲಿ ಒಂದು; ☞ "ತಪಃಶಕ್ತಿಯಿಂದ ಅಪರಿಮಿತವಾದ ಮನೋವಾಕ್ಕಾಯ ಬಲಗಳುಂಟಾಗುವುದು" (ಕೃಷಕೋ. ೦೪೪) : ಭಾವನೆಯೊಳಾದ ಬುದ್ಧಿ ತಪೋವಿಕ್ರಿಯೌಷಧಿರಸಬಲಾಕ್ಷೀಣಾಭಿಧಾನಸಪ್ತರ್ಧಿಗಳೊಳಂ ನೆಱೆದು (ಅಂಕೃತ. ೬-೩ ವ) ; ಬುದ್ಧಿಕ್ರಿಯಾವಿಕ್ರಿಯತಪೋಬಲೌಷಧರಸಕ್ಷೇತ್ರಭೇದದಿಂ ಋದ್ಧಿಪ್ರಾಪ್ತ್ಯಾರ್ಯರಷ್ಟವಿಧಂ (ತತ್ತ್ವಸೂ. ೦೬೩) ; ಮನ ವಚನ ಕಾಯ ಭೇದದಿಂ ಬಲಋದ್ಧಿ ಮೂಱು ತೆಱಂ (ಶಸಾರ. ೬೪೯). **ಬಳಋದ್ಧಿ** : ಮನೋಬಳಂ ವಾಗ್ಬಳಂ ಕಾಯಬಳಮೆಂದು ಮೂಱುಂ ತೆಱನಾದ ಬಳಋದ್ಧಿಯೊಳಂ . . . ನೆಱೆದು (ಶಂಪ್ರಕೃ. ೦೪-೩೦ ವ): 'ಬುದ್ಧಿಋದ್ಧಿ' ಪರಾ. [ಸಂ.]

**ಬಲಂಗೆಡು** (ಕ್ರಿ). ಶಕ್ತಿಗುಂದು ; ಬಲಹೀನವಾಗು : ಅರಣ್ಯದಾ ಭೀಳತೆಗಂ ಕೋಡದೆ ಕೊಂಕದೆ . . . ಬೆಚ್ಚದೆ ಬೆದಱದೆ ಬಲಂಗೆಡದೆ ಮನಂಗುಂದದೆ ಕೆಲನಂ ಸಾರದೆ ಸಹಾಯಮಂ ಪಾರದೆ ಮಹಾವಟವೃಕ್ಷದ ಕೆಳಗೆ ವಿಪುಳತಪದಿಂದಪರ್ಣಯೊಪ್ಪುತ್ತುಮಿರೆಯಿರೆ (ಗಿಂಕ. ೯-೫೮ ವ).

[ ಬಲ₃ + ಕೆಡು₁ ]

**ಬಲಂಗೊಳ್**, ಬಲಗೊಳ್, ಬಲಗೊಳ್ಳು (ಕ್ರಿ). ಬಲಭಾಗದಿಂದ ಸಂತ್ತು ಹಾಕು ; ಪ್ರದಕ್ಷಿಣೆ ಮಾಡು : ತನ್ನ ನಾಲ್ವರ್ ತಮ್ಮಂದಿರೊಡನೆ ಮಂಗಳವಸದನಂಗೊಂಡು ಮಂಗಳಪ್ರಧಾನೋಚಿತವಿಜಯಗಜಮನೇಱ ವಿದ್ಯೋತಮಾಗಿ ದಕ್ಷಿಣಾವರ್ತಮಪ್ಪ ಹೋಮಾಗ್ನಿಯಂ ಬಲಂಗೊಂಡು (ಕಂಶಶಾ. ೯-೯೩ ವ) ; ಶಬಳಂ ರತ್ನದ ಕೇಜಮುನ್ನುಮಥಿದೆಯ್ದಿಂ ಶಂಕಿದೀ ಯುರ್ಗ್ಗ ಚಂದ್ರಬಳಂ ಬ್ರಹ್ಮಜನೇಂದ್ರಗೇಹಮೆನುತಂ ಬಂದತ್ತಿಯಿಂ ಸೇಸೆಗೊಣ್ಡು ಬಲಂಗೊಣ್ಡು ಸಮನ್ತು ಪೋದನೆಸಪೀ ಗ್ರಾಮಾಧಿಪಂ... ಮೂಱು ಪವ್ವಂಗಳೊಳ್ (ಕೌಶಿಲಾ. XI–i, ೫೨-೬೫ ; 1007) ; ತ್ರಿಲೋಕ ಸ್ವಾಮಿಯಿರ್ದ ಗಂಧಕುಟಿಯಂ ವಾಸುದೇವಪ್ರಮೊದಲಾದ ಯಾದವರೆಲ್ಲರುಂ ಮೂಮ ಬಲಂಗೊಂಡು ರೋಮಾಂಚಕಂಚುಕಿತಶರೀರರಾಗಿ ನಿರ್ವಾಣ ಸೀಮಂತಿನೀಪ್ರಿಯಂಗೆ ಸರ್ವಾಂಗಪ್ರಣತರಾಗಿ (ಕೇಚಂಪು. ೦೩-೯೯ ವ). **ಬಲಗೊಳ್** : ಭಟ್ಟಾರರ್ ಬಸದಿಯಂ ಬಲಗೊಂಡು ಕಾಲಂ ಕರ್ಚೊಳಗಂ ಪೊಕ್ಕು (ವಡ್ಡಾರಾ. ೬೯-೧); ಶ್ರೀಮಜ್ಜಿನಭವನಮಾನಖಿಲಾಮರವರಹಿಚರಚಕ್ರ

ವರ್ಶಿಸ್ತುತವಮಂ ಮೂಮೆ ಬಲಗೊಂಡು ಭವ್ಯಶಿಖಾಮಣಿಯೆನಿಸಿದ ಸರಸ್ವತೀ ಮಣಿಹಾರಂ (ಅಂಥು. ೮–೧) ; ಉದ್ಭಟಯ್ಯನ ಮಯೂರನ ಕಾಳಿದಾಸನ . . . ಭಲ್ಲಟನ ಭಾರವಿಯ ಪದವ ನೆನೆದು ಬಲಗೊಂಡು ತೊಡಗಿದೆನೀ ಮಹಾಕೃತಿಯಂ (ಹವಳ. ೧–೧೪); ಚಕ್ರಿ . . . ಬಲಗೊಂಡಸುಜಿ ಮೂಜು ಬಾರಿ ತನ್ನೊಳು ತಾನು ಗೆಲವೇಜಿ ಮುನಿಗಳಿರ್ವರಿಗೆ (ಶರಶ. ೩–೬೦). **ಬಲಗೊಳ್ಳು :** ಹಾಡಿಸಲ್ಲಿ ಅಕ್ಕಮಹಾದೇವಿ, ಕೆರೂರ ರಾಚಯ್ಯ, ದ್ರೌಪದಿ, ಸುಭದ್ರೆ, ದೇವಕಿ ಇವರನ್ನೆಲ್ಲ ಕವಯಿತ್ರಿ ಬಲಗೊಳ್ಳುತ್ತಾಳೆ (ಕರ್ನಾಕ. ೩೯೩); ತುತ್ತು ಮುತ್ತನು ನೀಡು ಸರಸತಿ ಲಕುಮಿ ಕಾಳಿಕೆ ಅಂಬೆ ಪಾದಪದ್ಮಂಗಳಿಗೆ ಜೀವದ ಹಂಸನಾ ಬಲಗೊಂಬೆ (ಅರಳು. ೦೩–೦೨). [ಬಲ$_1$ + ಕೊಳ್$_1$]

**ಬಲಂಬೆರಸು** (ಅ). ಸೈನ್ಯವನ್ನು ಕೂಡಿಕೊಂಡು; ಸೇನಾಸಮೇತವಾಗಿ: ದ್ರೌಪದಿಯ ಕೊಟ್ಟ ನಣ್ಪುಮಂ ದ್ರೋಣನೊಳಾದ ಪರಿಭವಮುಮಂ ನೆನೆದೊಂದಕ್ಷೋಹಿಣೀಬಲಂಬೆರಸು ದ್ರುಪದಂ . . . ನೆಲಂ ಮೂರಿ ವಿಟ್ಟಂತೆ ಬಲವಕ್ಕದೊಳ್ ನಡೆಯೆ (ಪಂಪಭಾ. ೯–೬೫ ವ); ಕೆಲವು ದಿವಸದ ಮೇಲೆ ವಿಶ್ವಾನುಲೋಮನುಂ ತಾನುಂ ತಂತಮ್ಮ ಬಲಂಬೆರಸು ಪರದೇಶಕ್ಕೆ ಪೋಗಿ ಕಳ್ದು ಬಹುದ್ರವ್ಯಂ ಬಸಮಾದುದಜಿಂ ಪೆರ್ಚಿ (ಧರ್ಮಾಮೃ. ೨–೦೮೩). [ಬಲ$_3$ + ಬೆರಸು$_3$]

**ಬಲಂಬೆಜು** (ಕ್ರಿ). ಶಕ್ತಿಯನ್ನು ಪಡೆ; ಸಾಮರ್ಥ್ಯವನ್ನು ಹೊಂದು; ಬಲಿಷ್ಠವಾಗು : ಮದೀಯಮಾಗ್ವಿಭವವಿನ್ಯಾಸಂ ಬಲಂಬೆಸ್ತುದಿನ್ನಿರು ಬಲ್ಲಿತ್ತಜ ಕೋಡು ಕೂರಿತದನಂತಿಂತುಂತೆನಲ್ಪರ್ಕುಮೋ (ಅಂಥು. ೦–೨೫); ಬಲಂಬೆತ್ತೊಡಾ ದಿವಿಜೇಜ್ಯಂ ಸ್ವಗೃಹಂಗಳೊಳ್ ನಿಲೆ ಸುವರ್ಣಂ ಪೂರ್ಣಮಪ್ಪಾ ಗೇಹದೊಳ್ (ಜಾತತಿ. ೪–೦೫). [ಬಲ$_3$ + ಪೆಜು$_1$]

**ಬಲಂಬೊಯ್** (ಕ್ರಿ). ಶಕ್ತಿಯನ್ನು ಕೊಡು; ಸಾಮರ್ಥ್ಯವನ್ನು ಎರೆ,—ನೀಡು : ಲೋಕಜ್ಞರು ಸೇವಾವಿಚಕ್ಷಣರುಮಪ್ಪುದಜಿಂದಮಾ ಕುಕ್ಕುಟಯುದ್ಧನಿರೀಕ್ಷಣರಸಕ್ಕೆ ಭಂಗಂಮಾಡದೆ ವಿದ್ಯಾಸಾಮರ್ಥ್ಯದಿನಿಪರ್ಕೆ ಬಲಂಬೊಯ್ದು ತಾಮುಮಾ ನೆರವಿಯೊಳದೃಶ್ಯರಾಗಿ ನೋಡುತ್ತುಮಿರ್ದರ್ (ಶಾಂತಿಪು. ೯–೩೩ ವ ). [ಬಲ$_3$ + ಪೊಯ್$_2$]

**ಬಲಕನಾಡು** (ನಾ). ಒಂದು ಪ್ರದೇಶದ ಹೆಸರು : ಶ್ರೀಸಾಮಿಯಬ್ಬೆ . . . ಬಲಕನಾಡ ಸುಳ್ಳಿಗೋಡವ್ ದೇವಾರಕ್ಕೆ × × ಭಟಾರರ್ಗ್ಗೆ ಬಟೀಯಂ ನಟ್ಟ ಬಸದಿಗಂ ದೇವಾರ ಕೊಟ್ಟಳ್ (ಎಕ. VIII, ನಗರ. ೪೫–೦೦; ಸು. 950). [ಬಲಕ$_0$ + ನಾಡು]

**ಬಲಕಾಯಿಸು** (ಕ್ರಿ). ೧. ಶಕ್ತಿಯನ್ನು ಪಡೆ; ಬಲವಾಗು: ವೆಲೂರಿಗೆ ವೋಡಿ ಹೋಗಿ ಕಿಲ್ಲೆ ಬಲಕಾಯಿಶಿಕೊಂಡದ್ದರಿಂದ ಆರ್ಕಾಡ ದವಲತ್ತು ಅನಾಯಕವಾದ ವರ್ತಮಾನ . . . ತಿಳಿದು (ಹೈದರ. ೨೪). ೨. ಬಲಪಡಿಸು; ಸುಭದ್ರಗೊಳಿಸು : ಆ ಕೋಟೆಯನ್ನು ಮೈಸೂರವರು ತೆಗೆದುಕೊಂಡು ತಮ್ಮ ಮಂದಿ ಠಾಣ್ಯಯಿಟ್ಟು ಬಲಕಾಯಿಸಿಕೊಂಡರು (ರಾಜೇಂದ್ರ. ೪). ೩. ಏರು ; ತೀವ್ರವಾಗು : ಒಳಗೊಳಗೆ ಮಾತು ಬಲಕಾಯಿಸಿತು (ಪುರುಷಾ. ೦೨೪). ೪. ಕಳೆಗಟ್ಟು ; ವಿಜೃಂಭಿಸು : ಇದರಲ್ಲಿ ಸಾಧಾರಣವಾಗಿ ಒಕ್ಕಲಿಗರೇ ಗೆಲ್ಲುವವರಾದುದರಿಂದ ಈ ಉತ್ಸವ ಬಹಳ ಬಲಕಾಯಿಸುತ್ತದೆ (ಗರುಡಾ. ೦೬೦). [ಬಲಕ್ಕಾ (ಪ್ರ ← ಹಿಂ. ಬಲಕನಾ, ಬಲಕಾನಾ) + — ಇಸು$_3$./ತುಳು. ಬಲಕಾಯಿಸ್, ಬಲಕಾಯಿಸು]

**ಬಲಕುಟಿಕೆ** 'ಬಲುಗುಣಿಕೆ' ನೋ.

**ಬಲಕೆಯ್** 'ಬಲಗೆಯ್' ನೋ.

**ಬಲಖರ್ವೀಕೃತ** (ನಾ). (ದೈವಬಲದ) ಶಕ್ತಿಗುಂದಿದವನು; ಬಲಹೀನ: ಶ್ರೀಕೃಷ್ಣಂ ಕಂಸಪುರಾಲೋಕನಕೌತುಕರಸೋದಯಂ ವೀರರಸೋದ್ರೇಕ ಕ್ಕೆಡೆಗುಡೆ ಬಲಖರ್ವೀಕೃತನಾ ದೈತ್ಯ ಖಳನ ಪೊಟಲ್ಗೆಯ್ದುಂದಂ (ಜಗಂ. ೬–೧). [ಸಂ.]

**ಬಲಗಟ್ಟು** (ಕ್ರಿ). ಎಡಗಡೆಯಿಂದ ಬಲಗಡೆಗೆ ಅಡ್ಡಲಾಗಿ ಹೋಗು : (ಕ). [ ಬಲ$_1$ + ಕಟ್ಟು$_1$ ]

**ಬಲಗಡೆ** (ನಾ). ಎಡಭಾಗವಲ್ಲದ ಕಡೆ; ಬಲಪಕ್ಕ; ದಕ್ಷಿಣಪಾರ್ಶ್ವ : ಬಲಗಡೆಯಲ್ಲಿ ಬಸಂತನೊಲವಿನಿಂ ಕುಳ್ಳಿರೆ ತನ್ನೆಡದೆಸೆಯೊಳ್ ಸೊಬಗಿ ಯರಿರೆ ಕಡುಚೆಲ್ವಂ ಪಡೆದನಾವಗಂ ಸನೆಗೆಣೆಯಂ (ಕಬ್ಬಿಕಾ . ೧೪೭); ಬಲಗಡೆಗಾಗಿ ಬಾಗಿ ಬಿಗಿವಟ್ಟುಜಿ ಬಟ್ಟತೆಂಬಿನಂ ಮಲರ ಸರಂಗಳೊತ್ತರಿಸೆ (ಶಶಿಪ. ೫–೭). [ಬಲ$_1$ + ಕಡೆ$_3$]

**ಬಲಗಯ್** 'ಬಲಗೆಯ್' ನೋ.

**ಬಲಗರ್ವ** (ನಾ). ಸಾಮರ್ಥ್ಯದ ಬಗೆಗಿರುವ ಸೊಕ್ಕು,—ಮದ : ಆ ಶಿಶುಪಾಲನಳವದೆಂತೆಂದೊಡೆ ಬಲದ ಬಲಗರ್ವದಿಂ ತೋಳ್ವಲದ ಕರಂ ಚಲದಳುರ್ಕೆ[ಯಿಂ] ಸುರರೊಳ್ ಮಾರ್ವಲೆವಂ (ಜಿಂಹಂ. ೭–೫೪); ಬಲರಿಪು ತನ್ನದೊಂದು ಬಲಗರ್ವದಗುರ್ವಿನೊಳಿಪ್ಪೊಜಂಕೆಯಂ ಕುಲಿಶದಿ ನೊರ್ವೆ ಖಂಡಿಸಿದಂ (ಕಾವ್ಯಸಾ. ೪೭೪). [ಸಂ.]

**ಬಲಗರ್ವಿತ** (ಗು). ಸಾಮರ್ಥ್ಯದ ದರ್ಪವುಳ್ಳವನು : ಬಲಗರ್ವಿತ ಪ್ರತಾಪಿಗಳಲಂಘ್ಯರಪ್ರತಿಮರಖಿಳಭೂಭೃತ್ಪ್ರಭುಗಳ್ ಬಲದೇವ ವಾಸುದೇವರ್ ನೆಲೆಗೆಟ್ಟೇಕಾಕಿಯಾದರುಟಿದವರಳವೇ (ಜಿಂಹಪು. ೦೪–೨೮); ದುರುಳನವ ಭಗದತ್ತ ಬಾಹ್ಲಿಕ ನರಕ ವೃದ್ಧಕ್ಷತ್ರ ಮೊದಲಾದರಸುಗಳು ಬಲಗರ್ವಿತರಸಂಖ್ಯಾತರಹರು (ಕುವ್ಯಾಸ. ೨–೩೦). [ಸಂ.]

**ಬಲಗಾಲ್**, ಬಲಗಾಲು (ನಾ). ಬಲಗಡೆಯ ಕಾಲು; ದಕ್ಷಿಣ ಪಾದ : ಬಲಗಾಲ್ ಸ್ಯೆತೊಪ್ಪೆ ವಾಮಂ ಕೆಲಕೆ ತೊಲಗೆ. . . ಲೀಲಾಲಲಿತಾಸ್ಯ ಕ್ರಾಂತದಿಂ ನಿಂದಮರನರಸಭಾಚಿತ್ತದೊಳ್ ಕಾಂತೆ ನಿಂದಳ್ (ಲೀಲಾವ. ೯–೦೩೩); ಬಲಗಾಲ್ಪಿಂದೆಸೆಗಾಗೆ ವಾಮಪದವಂ ಮುಂದಿಟ್ಟು. . . ಕೋಮಲೆ ನಿಂದು (ರಾಜಶೇ. ೫–೯೯). **ಬಲಗಾಲು :** ಆವ ಬಿಂಕವೊ ಎಡಗಾಲ ಗದ್ದುಗೆಯ ಮೇಲೋವಿ ಮಡಿದು ಮತ್ತೆ ಕೆಳಗೆ ಹಾವುಗೆಯೊಳು ಪೆಂಡೆಯುದ ಬಲಗಾಲೂಜಿ ಠೀವಿಯೊಳೆಸೆದನಾ ರಾಯ (ಶರಶ. ೦–೬೦).

**ಬಲಗಾಲು ಮುಂತಾಗಿ ಹೊಗು**=(ಶುಭಲಕ್ಷಣವಾಗಿ) ಬಲಗಾಲನ್ನು ಮುಂದಿಟ್ಟು ಪ್ರವೇಶಿಸು : ನಾನವನ ಮನೆಯುಮಂ ಬಲಗಾಲು ಮುಂತಾಗಿ ಹೊಕ್ಕ ದಿನದಿಂದ ಬಲುಗೆಲಸವಲ್ಲದೆ ಯಿನಿಸು ತಲೆಯ ತುಜಿಸುವೊಡೆ ಹೊತ್ತಂ ಕನಸಿನಲ್ಲಿ ಕಾಣೆ (ಸಪ್ತಸೌ. ೫–೦೪). [ಬಲ$_1$ + ಕಾಲ್$_1$]

**ಬಲಗಾಲು** 'ಬಲಗಾಲ್' ನೋ.

**ಬಲಗಿ** 'ಬಲಿಗೆ' ನೋ.

**ಬಲಗುಂದು** (ಕ್ರಿ). ೧. ಶಕ್ತಿಯು ಕಡಮೆಯಾಗು; ಸಾಮರ್ಥ್ಯವು ಕುಗ್ಗು. ೨. ಶಕ್ತಿಯನ್ನು ಕಳೆದುಕೊಳ್ಳು; ಬಲಹೀನವಾಗು : ಅವನು ವಯೋಧರ್ಮದಿಂದ ಬಲಗುಂದಿದ್ದಾನೆ (ರೂಢಿ). [ ಬಲ$_3$ + ಕುಂದು$_1$ ]

**ಬಲಗುಡು** (ಕ್ರಿ). (ಪೂಜಾವಿಧಿಯಲ್ಲಿ) ಬಲಭಾಗದಿಂದ ಸುತ್ತು; ಪ್ರದಕ್ಷಿಣೆ ಹಾಕು : ಸಡಗರದಲಿ ಕಂತುಸುತಸಂಪಾವಧು ಬಲಗುಡುತೆ ಕುಂಭಾಂಡಜೆ ಸಹಿತ ಪೊಡಮಟ್ಟರು ರುಕ್ಮಿಣಿ ಸತ್ಯಭಾಮೆ ಪೆಣ್ಣಾಡಣಕ್ಕೆ ರತಿದೇವಿಯರಿಗೆ (ಮೋಹತ. ೪೨–೬೬). [ಬಲ$_1$ + ಕುಡು$_1$ (<ಕೊಡು$_1$)]

**ಬಲಗುಣಿಕೆ** 'ಬಲುಗುಣಿಕೆ' ನೋ.

**ಬಲಗೂಡು** (ಕ್ರಿ). ಸೈನ್ಯದೊಂದಿಗೆ ಇರು; ಸೇನಾಸಮೇತವಾಗಿರು : ತೋರಿಯ ಮಣಿಪೀಠದಲಿ ಮಂಡಿಸಿ ರಾಯಭಾರಿಗಳ್ಕೈಯಿಂದೆ ಕರೆಸಿ ವಾರಿಜದಳನೇತ್ರ ಬಲಗೂಡಿ ಪ್ರಸ್ಥಾನಭೇರಿಯ ದನಿಮಾಡಿಸಿದ (ಮೋಹತ.

೩೬–೨೬): ಶಿವಭಕ್ತಜನವ್ರಜಂ ವಿಜೃಂಭಿಸಿ ನೆಲಸಿರ್ದ ಪಟ್ಟಣಮಿಂದಿಂತಿದಱೊಳ್ ಬಲ [ಪಾಠಾಂ. ಳ]ಗೂಡಿ ಗಾಡಿ ರಂಜಿಸೆ ಪೊಸವಾಜಿಯೇಱಿ ವಿಹರಿಪ್ಪುದು ಬಲ್ಲತನಕ್ಕೆ ತಕ್ಕುದೇ (ರಾಜಶೇ. ೦೩–೪). [ಬಲ$_3$ + ಕೂಡು$_1$]

**ಬಲಗೆಯ್, ಬಲಕೆಯ್, ಬಲಗಯ್, ಬಲಗೈ** (ನಾ). ೧. ಬಲಭಾಗದ ಕೈ; ದಕ್ಷಿಣ ಹಸ್ತ : ಬಲದ ಸುಟಿವೆರಸಿದರ್ಚಿಯ ವಿಳಾಸದಿಂದಗ್ನಿರಾಜಿ ನೀರಾಜನದೊಳ್ ಬಲಗೆಯ್ಯೊಳ್ ಚಕ್ರಿಗೆ ದೋರ್ವಲವಿಜಯಮನೀವ ತೆಱದಿನೇಂ ಸೊಗಯಿಸಿತೋ (ಶಾಂತಿಪು. ೦೦–೪೨); ಇನಿರಸವಾಂತ ಕರ್ವಿಲ್ಲಿಗೆ ಭ್ರಮರ ಸಿಂಜಿನಿಗೈದೆಡದ ಹಸ್ತದಲಿ ದನಿಗೆಯ್ಯುತಿರೆ ಬಲಗೆಯ್ಯ ಪೂಸರ ದೊರ್ವ ವನಿತೆ ನಿಂದಿರ್ದಳುತ್ಸವದಿ (ಮೋಹತ. ೫–೩೭). ೨. ಬಲವಾದ ಸಹಾಯ,–ನೆರವು : ಪಡಲಿಟ್ಟಂತೆಪೊಲಾಯ್ತು ಕೀಚಕಬಲಂ. . . ಪೆಱವೇಣ್ಗೊಲ್ದಂಗಮೇನಾಗದಿಂದುಡಿದತ್ತಾಗದೆ ಮತ್ಸ್ಯನೊಂದು ಬಲಗೆಯ್ಯೆಂದಕ್ಕಟಾ ಎಂಬುದಂ ನುಡಿಯಲ್ಕಾರ್ತರುಮಿಲ್ಲ ಪಾರದರದೊಳ್ ಸತ್ತಂಗಱಲ್ವನ್ನರಾರ್ (ಕಂಪಭಾ. ೯–೮೦). **ಬಲಕೆಯ್ :** (೬). **ಬಲಗಯ್ :** ೧. ಅಕ್ಕರವಂ ಬಲಗಯ್ಯೊಳು[ಪಾಠಾಂ. ಗೈಯೊಳ್] ಲೆಕ್ಕಮನೆಡಗಯ್ಯೊಳಭವನನುಲೋಮವಿಲೋಮಕ್ಕೆ ನೆಲೆಯಾಗಿ ಮಾಡಿ ಜಗಕ್ಕಱಿಪಿದ ನೋಜೆಯಿಂದಮಾದಿಬ್ರಹ್ಮಂ (ಸಮಪ. ೨–೦೪). **ಬಲಗೈ :** ೧. ವಿವಿಧವಿಧ ನವನಾಟಕಮಹೋತ್ಸವಸಮುಚ್ಚಯವೆಸೆಯೆ ಏಕಾಂತವಿಭು ಬಲಗೈಯಲಗೆಡದ ಕರದಲಿ ಶಿರಂ ಮೆಱೆಯೆ (ಬಸಪು. ೫೨–೪೦); ಬಲಗೈ ಬೆರಳನೊರ್ವನಿಗಿತ್ತೆ ಮೊಣ್ಣಯೊಂದುಲಿದು ಭಂಗಿಸರೆ ಕಂಡವರು (ಕಂಪವಿ. ೬–೦೮೪). ೨. ಭಕ್ತಿಯ ಬಲಗೈಯತುಳವಿರಕ್ತಿಯ ಮನೆ . . . ಎನಲಾ ಪರಶಕ್ತಿಯ ಮಣಿಭವನಮೆಸೆದುದು (ಉದ್ಭಟ. ೭–೯೫); ರಾಯರ ಬಲಗೈ ನಾನು . . . ಅವರು ಯಾವ ಕೆಲಸಕ್ಕೆಂದರೂ ಅದಕ್ಕೆ ತಯಾರಾಗಿರುತ್ತಿದ್ದೆ (ರಾಯಕ. ೬); ಆಚಾರ್ಯರು ಮಾಲವೀಯರ ಬಲಗೈಯಾಗಿದ್ದರು (ನಮ್ಮಜೊ. ೪೩).

**ಬಲಗೈಯವನು**=ಹೊಲೆಯರಲ್ಲಿ ಉತ್ತಮಜಾತಿಯವನು : ಊರ ಹೊರಗೆ ಬಲಗೈಯವನಳಿದರೆ ಹಾರುವನಿಂಗೂರೊಳಗಿಹಗೇತಕೆ ಮೀರಿದ ಸೂತಕ (ಭಕ್ತಸ. IV, ೦೦-೩). 'ಎಡಗೆಯ್' ಪರಾ. [ಬಲ$_1$ + ಕೆಯ್$_2$]

**ಬಲಗೆಲ** (ನಾ).= ಬಲಗಡೆ : ಬಲಗೆಲದೆಡೆಯೊಳು ಗರ್ಭಂ ನಿಲೆ ಪುರುಷಂ ವಾಮಭಾಗದಿಂ ಸ್ತ್ರೀಯೆರಡುಂ ಕೆಲದೊಳಮಳ್ಗಳು ನಡುವಣ ನೆಲೆಯಿಂದಂ ಷಂಡರಾಗಿ ಪುಟ್ಟುವರೆಂದುಂ (ಮದತಿ. ೦–೮೪) : ಆ ಶಚಿ ಮಾಯಾನಿದ್ರೆಯನಾ ಶಶಧರವದನೆಗಿತ್ತು ಬಲಗೆಲದೊಳ್ ಮಾಯಾಶಿಶುವ ನಿರಿಸಿ ಪಾಣಿಕುಶೇಶಯಯುಗದಿಂದೆ ನೆಗಪಿದಳ್ ಜಿನಶಿಶುವಂ (ವರ್ಧಪು. ೦೩–೯೫). [ಬಲ$_1$ + ಕೆಲ$_1$]

**ಬಲಗೈ** 'ಬಲಗೆಯ್' ನೋ.

**ಬಲಗೈಬಂಟ** (ನಾ). ತುಂಬ ಸಹಾಯವನ್ನು ನೀಡುವವನು ; ಅತ್ಯಂತ ಆಪ್ತನಾದವನು : ತಾನು ಚಕ್ರವರ್ತಿಯ ಬಲಗೈಬಂಟನೆಂದು ಸುಖಾರುವಿಗೆ ಹೆಮ್ಮೆ (ಮಜಿಸ. ೫೨) ; ವಿಲಿಂಗ್ಡನ್ನರು . . . ಕಾಂಗ್ರೆಸ್ಸಿನೊಡನೆ ಒಪ್ಪಂದಮಾಡಿ ಜನತೆಯ ಕೇಳಿಕೆಯನ್ನು ಮನ್ನಿಸಿದುದು ಬಲಗೈಬಂಟರಾದ ಹಲವಾರು ಸರಕಾರಿ ನೌಕರರಿಗೆ ಒಳಗಿಂದೊಳಗೆ ಚೇಳು ಕುಟುಕಿದಂತಾಗಿತ್ತು (ಕುರುಕಾ. ೦೩೨).
[ಬಲಗೈ (<ಬಲಗೆಯ್) + ಬಂಟ$_1$]

**ಬಲಗೊಳ್** 'ಬಲಂಗೊಳ್' ನೋ.

**ಬಲಗೊಳಿಸು$_1$** (ಕ್ರಿ). ಬಲಗಡೆಯಿಂದ ಸಂತ್ತು ಬರುವಂತೆ ಮಾಡು ; ಪ್ರದಕ್ಷಿಣೆ ಹಾಕಿಸು : ಪೂಜೆ ಪೂರಿತವಾಗೆ ವಾದ್ಯಾಳಿ ನಿಂದುದಾ ರಾಜ ನಂಬಿಕೆಯ ಮುಂದಿಟ್ಟು ಓಜೆಯಿಂದರುಹನ ಬಲಗೊಳಿಸಿದನು ತನೂಜರ ತಾನೊಡನೆಯ್ದಿ (ಭರತ. ೫೯–೨೫).
[ಬಲಗೊಳ್ (<ಬಲಂಗೊಳ್) + – ಇಸು$_3$]

**ಬಲಗೊಳಿಸು$_2$** (ಕ್ರಿ). ಶಕ್ತಿಶಾಲಿಯಾಗುವಂತೆ ಮಾಡು ; ಪುಷ್ಟಿಗೊಳಿಸು : ವ್ಯಾಯಾಮವು ದೇಹವನ್ನು ಬಲಗೊಳಿಸುತ್ತದೆ (ರೂಢಿ).
[ಬಲ$_3$ + ಕೊಳ್$_1$ + – ಇಸು$_3$]

**ಬಲಗೊಳ್ಳು** 'ಬಲಂಗೊಳ್' ನೋ.

**ಬಲಗೋಲು, ಬಲಗೋಳು** (ನಾ). ೧. (ನೊಗ ಅಥವಾ ಗಾಡಿಯ) ಬಲಭಾಗ ; ದಕ್ಷಿಣಪಾರ್ಶ್ವ : ಜ್ಞಾನಚಕ್ಷುವೆಂಬ ನೊಗದ ಉಭಯದ ಕೊನೆಯಲ್ಲಿ ಎಡಗೋಲಿನಲ್ಲಿ ಕಾರಿಯ ಹೂಡಿ ಬಲಗೋಲಿನಲ್ಲಿ ಬೆಳ್ಳಿಯ ಹೂಡಿ ಆಡಿ ಕೆತ್ತುವಂತೆ ಥಾಯೆಂದು ಹೊಡೆಯಲಾಗಿ (ಸಕವ. III, ೪೮–೯೮); ಇನ್ನೊಂದು ಗಳಿಗೆ ಇನ್ಯಾರ ನೆನೆಯಾಲಿ ಬಲಗೋಲಲ್ಲಿರುವ ಬಸವಣ್ಣನ ನೆನೆದಾರೆ ಬಂದಷ್ಟು ಪಾಪ ಪರಿಯಾರ (ಕಜಕಾ. ೫). ೨. (ನೊಗ ಅಥವಾ ಗಾಡಿಯ) ಬಲಭಾಗಕ್ಕೆ ಹೂಡುವ ಎತ್ತು : ಈ ಎತ್ತು ಬಲಗೋಲು (ರೂಢಿ). 'ಎಡಗೋಲು' ಪರಾ. **ಬಲಗೋಳು:** ೧. ಒಮ್ಮನದೊಳದ್ದಿದುವು ಹುಟ್ಟುಗಳು, ಉಪ್ಪುನೀರ್ ತುಳ್ಕಿ ತಳ್ಳೊಯ್ಯೆ, ಬಲಗೋಳು ಮುಂದಾಗಿ ನೂಂಕಿದುದು ನಾವೆ ಬಲಮೆಲ್ಲ, ಒಗ್ಗಿನಲಿ (ಪಾರಸಿ. ೦೬–೩೫೯). [ಬಲ$_1$ + ಕೋಲು$_1$ (<ಕೋಲ್$_1$)]

**ಬಲಗೋಳು** 'ಬಲಗೋಲು' ನೋ.

**ಬಲಘಟ್ಟನ** (ನಾ). ಸೇನೆಯಂ ತುಳಿತ,–ಪದಾಘಾತ : ಬಲಘಟ್ಟನದಿಂ ಪುಟ್ಟಿದ ಖಳಧೂಳಿಯಿನಾಗಸಂ ಮಲೀಮಸಮಾಗಲ್ ಸಲೆ ರಜನೀಶಂಕೆಯಿನುಜ್ಜ್ವಳಕರಮಂ ಕೆದಱಿತಿಲ್ಲ ರವಿ ದಿಕ್ಕುಳದೊಳ್ (ಚಾಥಪು. ೦೦–೫೦).
[ಸಂ.]

**ಬಲಚೋರಿ** (ನಾ). ಬಲಭಾಗದ ಎತ್ತು: ನೊಗದ ಬಲಗಡೆಗೆ ಕಟ್ಟುವ ಎತ್ತನ್ನು ಬಲಚೋರಿ ಎಂದೂ ಹೇಳುತ್ತಾರೆ (ರೂಢಿ). 'ಎಡಚೋರಿ' ಪರಾ. [ಬಲ$_1$ + ಚೋರಿ ?]

**ಬಲಜ, ಬಳಜ** (ನಾ). ೧. ಪಟ್ಟಣದ ಬಾಗಿಲು ; ಪುರದ್ವಾರ. ೨. ಹೊಲ ; ಕ್ಷೇತ್ರ. ೩. ಸುಂದರವಾದ ಆಕೃತಿ. **ಬಳಜ :** ೪. ಬಾಗಿಲು ; ದ್ವಾರ : ತಿವುರಿ ಗುಡಿ ಗೂಡಾರಂ ಝಂಪಾಳಿ ಚೌಕಿಗೆ ಜಂಪೆ ಮಂಡವಿಗೆ ಬಳಜಂ ಬಾಗಿಲ್ವಾಡಂ ಬನಂ ಮೊಗಸಾಲೆಯೆಂಬಿವಱ ಪಸುರಿಂ ಕರ್ಪಿಂ ಕೆಂಪಿಂ ಬಸಂತನ ಬೀಡಿನಿಂತವಱ ಪೊಱವೀಡೆತ್ತಂ ಮಾಡಿತ್ತು ಕಣ್ಗನುರಾಗಮಂ (ಅನಂಪು. ೦೩–೭೩). [ಸಂ.]

**ಬಲಜೆ** (ನಾ). ೧. ಚೆಲುವೆ ; ಸುಂದರಿ. ೨. ಭೂಮಿ. ೩. ಒಂದು ಜಾತಿಯ ಮಲ್ಲಿಗೆ. [ಸಂ. ಬಲಜಾ]

**ಬಲಜ್ಯಾಯ** (ನಾ). ೧. ಬಲಶಾಲಿಯಾದವನು ; ಬಲಿಷ್ಠ. ೨. ಬಲರಾಮನನ್ನು ಅಣ್ಣನನ್ನಾಗಿ ಉಳ್ಳವನು ; ಕೃಷ್ಣ. ೧, ೨ : ಶ್ರೀಯ ಮನಃಪ್ರಿಯಂ ಜನಿತಕಾಮನಿಳಾಪ್ರಿಯನಬ್ಜಶಂಖಲಕ್ಷ್ಮಾಯತಹಸ್ತನಾತ್ತವಿಜಯಂ ದ್ವಿಜರಾಜಸುಸೇವಿತಂ ಬಲಜ್ಯಾಯನಭೇದ್ಯಮನ್ತ್ರಕುಶಲಂ ಬಲಿಬನ್ಧನನನ್ತೆ ರಾಯನಾರಾಯಣನೆಮ್ಬುದುರ್ವ್ವಿ ನರಸಿಂಹ ನರೇನ್ದ್ರನ ಮನ್ತ್ರಿ ಬೂಚನ (ಎಕ. V, ಅರಸೀ. ೦೬೨–೨೮; 1163).
[ಸಂ. ಬಲಜ್ಯಾಯಸ್]

**ಬಲತಂಗಿ** 'ಮಲತಂಗಿ' ನೋ.

**ಬಲತಮ್ಮ** 'ಮಲತಮ್ಮ' ನೋ.

**ಬಲತಾಯಿ** 'ಮಲದಾಯ್' ನೋ.

**ಬಲದಲನ** (ನಾ). ೧. ಸಾಮರ್ಥ್ಯವನ್ನು ನಾಶಮಾಡಿದವನು. ೨. ಬಲನೆಂಬ ರಾಕ್ಷಸನನ್ನು ಕೊಂದವನು ; ಬಲಧ್ವಂಸಿ ; ಇಂದ್ರ. ೧, ೨ : ಕುಲಗೋತ್ರವೈರಿಯುಂ ಬಲದಲನನುಮೆಂದಮರಪತಿಯನೊಲ್ಲದೆ ಪೋದರ್ ಕುಲಗೋತ್ರವೀರಭಟರುಂ ಬಲನಾಥರುಮುಂತುಮಮರರೇ ನೋಡುವರೇ (ಜಗವಿ. ೦೩–೭೯). [ಸಂ.]

**ಬಲದಾಯಿ** 'ಮಲದಾಯ್' ನೋ.

**ಬಲದೃಪ್ತ** (ನಾ). ಶೌರ್ಯದಿಂದ ಸೊಕ್ಕಿದವನು ; ಪರಾಕ್ರಮದಿಂದ ಅಹಂಕಾರವನ್ನು ಹೊಂದಿದವನು : ಬಲದೃಪ್ತರಾದ ಕ್ಷತ್ರಿಯರು ಒಬ್ಬೊಬ್ಬರಾಗಿ ಹತೋದ್ಯಮರೂ ಹತಾಶರೂ ಆದ ಬಳಿಕ . . . ಅರ್ಜುನನು . . . ಹೋಗುತ್ತಿರುವುದನ್ನು ನೋಡಿ ಎಲ್ಲರೂ ಗುಲ್ಲೆಬ್ಬಿಸಿದರು (ಭೀಷ್ಮಪ. ೮೦). [ಸಂ.]

**ಬಲದೇವ,** ಬಳದೇವ (ನಾ). ೧. ಕೃಷ್ಣನ ಅಣ್ಣ ; ಬಲರಾಮ : "ಬಲದೇವಃ, ಬಲಭದ್ರಃ . . . ಕಾಮಪಾಲಃ, ಹಲಾಯುಧಃ— ಈ ೧೮ ಬಲದೇವನ ಪೆಸರ್" (ಹಲಾಯು. ೬-೨೯). ೨. ಒಬ್ಬಾತನ ಹೆಸರು : ಬಲದೇವಾಚಾರ್ಯರ ಪಾಉಗ್ಗವಣ (ಎಕ. II (R). ೯೨; ೩೫೦ಟು ೪೪) ; ಚಲದಿಂ ತೇಜದಿನೊಳ್ಪಿನಿಂ . . . ಗಾಂಭೀರ್ಯ್ಯದಿಂ ಸೌರ್ಯ್ಯದಿಂ ಬಲದೇವಂಗೆ ಸಮಾನಮಪ್ಪರೊಳರೇ ಮತ್ತನ್ಯದಂಡಾಧಿಪರು (ಎಕ. II (R), ೦೭೯-೨೭ ; 1139). ೩. [ಜೈನ] ಅರುವತ್ತುಮೂವರು ಶಲಾಕಾಪುರುಷರಲ್ಲಿ ಒಂದು ಗುಂಪು ; ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ ಮತ್ತು ಪದ್ಮ ಎಂದು ಒಂಬತ್ತು ಮಂದಿ ಬಲದೇವರು : ಬಲದೇವನಂತೆ ಪೆಣನಂ ಪೊತ್ತು ತೊಟಿಲ್ದ ಕ್ಷೇತ್ರಪಾಲರಿಂ . . . ಸೋಂಬಸಂ ಮೆಚ್ಚಿ ಬೇಟಿಗೆ ಪೋದ ಸೂಳೆಯಂತುಯ್ಯಲಾಡುವ ರಣದೇವತೆಯರಿಂ ದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಕೂದ್ರಕ) ; ಶ್ರೀವರ್ಮನುಂ ವಿಭೀಷಣನುಮೆಂಬ ಪೆಸರೊಳ್ ಬಲದೇವ ವಾಸುದೇವರೆನಿಸಿ ಬಳೆಯೆ (ಆದಿಪು. ೩-೩೦ ವ) ; ಬಲದೇವಂ ದುಃಖಾಗ್ರುಜ್ವಲನಾಹತನಾಗಿ ಪೊತ್ತು ತಮ್ಮನ ಪೆಣನಂ ಪಲವಾಡುತ್ತ ತೊಟಲ್ದಪೊನಲಂಘ್ಯತರಗಹನದಲ್ಲಿ ಯೆಂಬುದನಱದಂ (ಬಂಹಂ. ೦೯-೯೮). **ಬಳದೇವ : ೨.** ಬಳ [ಶಾಕಾಂ. ಲ] ದೇವಂ ಭೀಮನ ಭುಜಬಳದೇವಂ ಮನಮನಲೆಯೆ ಕುರುಪತಿಯಂ ಮಾರ್ಕೊಳೆ ಪರಿಭವಿಸಿದನೆಂದೇನಲ್ಲದೆ ಮುಳಿದು ಕೆಳದರ್ ಕಿರ್ಚಿದರ್ಗಾಗಳ್ (ಗದಾಯು. ೮-೪೬). ೩. ಬಳದೇವವಾಸುದೇವರನಿಟುಪುದು ಗುಣದೊಳ್ಪು ರಾಮಲಕ್ಷ್ಮಣರಂ ಪೆಂಪಿಟುಪುದು ಭೀಮಾರ್ಜುನರುಮನಿಟುಪುದು ಮಲ್ಲಪನ ಪೊನ್ನಮಯ್ಯನ ಚರಿತಂ (ಅಜಿತಪು. ೦-೩೩). [ಸಂ.]

**ಬಲದೊಡ್ಡಿ,** ಬಲಲೊಡ್ಡಿ (ನಾ). ಒಂದು ಬಗೆಯ ಸಸ್ಯ : (ಸಸ್ಯಕೋ. ೦೨೯). ಬಲಲೊಡ್ಡಿ : ಬಲಲೊಡ್ಡಿ, ಬುಡಿಗಾನೆ, ಲೊಡ್ಡುಗಿನ ಮರ (ವೃಕ್ಷಕೋ. ೭೩-೦೯೯೦). [?]

**ಬಲದೋಳ್ತಲೆ** (ನಾ). ಬಲಭುಜ ; ಬಲಹೆಗಲು : ನನೆಯಂಬನೆಯ್ದೆ ನೆಲನಂ ಬಲದೋಳ್ತಲೆಯಲ್ಲಿ ತಾಳ್ದಿದಂ (ಕಬ್ಬಿಗ. ೯೬).

**ಬಲದೋಳ್ತಲೆಯಾಳ್** =ಬಲಭುಜದಂತಿರುವವನು ; ಆಪ್ತನಾದ ಬಂಟ : ಒಡನವನೊಡೆಯಂ ಬಲದೋಳ್ತಲೆಯಾಳಟುದುದರ್ಕೆ ಸುರ್ಕಿ ಚಾಮುನೃಪಾಲನೊಳೊಪೆವೆರೆದಾಮುಟಿಯುಳ್ವೇಟ್ಟುದೆಂದು ನಿರವಿಸಿ ಮುದಿಯಂ ಸೀಮೆಯುಟಿಯೆ ತಂದಿತ್ತಂ ರಾಮಯ ಲಿಂಗಾಖ್ಯಗಜಮನಶ್ವಪ್ರಜಮಂ (ಶಕಪು. ೨-೬೨). [ಬಲ$_1$ + ತೋಳ್ + ತಲೆ$_1$]

**ಬಲಧ್ವಂಸಿ** (ನಾ). ಬಲನೆಂಬ ರಾಕ್ಷಸನನ್ನು ಸಂಹಾರಮಾಡಿದವನು ; ಇಂದ್ರ : ಸುರಸತಿಯು ಸಂತೈಸಿ . . . ಅರಮನೆಗೆ ಬಂದನು ಬಲಧ್ವಂಸಿ (ಕುಮಾರ. ೮-೯೯). [ಸಂ. ಬಲಧ್ವಂಸಿನ್]

**ಬಲಪಕ್ಕ** 'ಬಲವಕ್ಕ' ನೋ.

**ಬಲಪಡಿಸು** (ಕ್ರಿ). ಹೆಚ್ಚುಮಾಡು ; ವೃದ್ಧಿಗೊಳಿಸು : 'ಬಿಲ್ಹಾನ್' ಎಂಬ ಪೂರ್ವದ ಹಳಗನ್ನಡದ ಛಾಯೆಯುಳ್ಳ ರೂಪವೂ . . . ಕುತೂಹಲವನ್ನು ಬಲಪಡಿಸುತ್ತವೆ (ಸಮಾಲೋ. ೦೪೯) ; ಅಪಥ್ಯವು ರೋಗವನ್ನು ಬಲಪಡಿಸುತ್ತದೆ (ರೂಢಿ). [ಬಲ$_3$ + ಪಡಿಸು]

**ಬಲಪ್ರದರ್ಶನ** (ನಾ). ಶಕ್ತಿಯನ್ನು ತೋರ್ಪಡಿಸುವಿಕೆ : ಸಾಮರ್ಥ್ಯವನ್ನು ಪ್ರದರ್ಶಿಸುವಿಕೆ : ಇಂದು ಅವರ ಸಂಘದಲ್ಲಿ ಬಲಪ್ರದರ್ಶನದ ಸ್ಪರ್ಧೆಯನ್ನು ಏರ್ಪಡಿಸಿದ್ದಾರೆ (ರೂಢಿ). [ಸಂ.]

**ಬಲಪ್ರಯೋಗ** (ನಾ). ೧. ಒತ್ತಾಯ ; ನಿರ್ಬಂಧ : ಒಂಟಿಕೋಣೆಗೆ ಹೋಗುವುದಿಲ್ಲವೆಂದು ವಾಸಿಲ್ಯೇವ್ ಹಠಮಾಡಿದನು. ಕಾವಲುಗಾರರು ಬಲಪ್ರಯೋಗ ಮಾಡಬೇಕಾಯಿತು (ತ್ರಿಪಥ. ೨೦೬). ೨. ಒತ್ತಡ ; ಒತ್ತರ : ವಿದ್ಯುತ್ಪ್ರವಾಹವು ಕಾಂತದ ಮೇಲೆ ಬಲಪ್ರಯೋಗ ಮಾಡುವುದನ್ನು ನೋಡಿದರೆ ಆ ಪ್ರವಾಹಕ್ಕೆ ಸಂಬಂಧಿಸಿದ ಕಾಂತಕ್ಷೇತ್ರವಿದೆಯೆಂದು ಕಂಡುಬರುವುದು (ಭೌತಶಾ. ೩೩೦). [ಸಂ.]

**ಬಲಬವರಿ** (ನಾ). ಬಲಭಾಗಕ್ಕೆ ತಿರುಗುವ ಒಂದು ಪಟ್ಟು : ತಿವಿದನಣಸಿನಲೂಱ ಮೊನೆಯಲಿ ಸವಡಿಯಾನೆಯನೆತ್ತಿದನು ಬಲಬವರಿಯೆಡಬವರಿಯಲಿ ತಡೆಗಾಲ್ವೊಯ್ದನಾ ಭೀಮ (ಕುಮಾಗ. ೦-೩೬). [ಬಲ$_1$+ಬವರಿ]

**ಬಲಭಂಜನ** (ನಾ).=ಬಲಧ್ವಂಸಿ : 'ಬಲಭಂಜನಾರಿ' ಪರಾ. [ಸಂ.]

**ಬಲಭಂಜನಾರಿ** (ನಾ). ಇಂದ್ರನ ವೈರಿ ; ಇಂದ್ರಜಿತು : ಬಲಭಂಜನಾರಿ [ಶಾಕಾಂ. ಜಂಬಾರಿಜಿತು, ಜಂಭನಾರಿ] ಮಹೀಲತಾಂಗಿಯ ಮಗಳ ರೂಪಿನ ಕಪಟಕಾಮಿನಿಯ ಬಾಳಿನಲಿ ಬಱಕ್ಕೈದು ಬವರಕೆ ತಾಳಲಾಱದೆ ಹನುಮನಲಿ ಸೇನಾಳಿ ಸಹಿತೋಸರಿಸಿ ನಿಂದನು ಪುರದ ಬಾಹೆಯಲಿ (ತೊರರಾ. ೬-೯೨-೦). [ಸಂ.]

**ಬಲಭದ್ರಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : "ವಾರ್ಷಿಕಂ, ತ್ರಾಯಮಾಣಾ, ತಾಯಂತ್ರೀ, ಬಲಭದ್ರಿಕಾ—ಳ ನೀರಾಮೆಬಳ್ಳಿ" (ಸಿದ್ಧಾಂತಿ. ೦೯೭). [ಸಂ. ಬಲಭದ್ರಿಕಾ]

**ಬಲಭರ** (ನಾ). ೧. ಸೈನ್ಯದ ಹೆಚ್ಚಳ ; ಸೇನೆಯ ಆಧಿಕ್ಯ : ಬಲಭರಸಂಕ್ಷೋಭಭಯಂದಳೆದಂಬರಕೊಗೆದ ನದಿಗಳೆನೆ ನಿಖಿಲದಿಶಾಕುಲಮಂ ಬಾಸಣಿಸುಗುಮುತ್ಪಲಬಾಂಧವವಧವಳಮೆನಿಸಿದೀ ಧ್ವಜಪಟಲಂ (ಕಾದಂಪೂ. ೬೦೦). ೨. ಸೈನ್ಯದ ಭಾರ : ಬಲಭರದಿಂ ನೆಲಂ ಕುಸಿಯೆ ಶೇಷನ ಪೆರ್ಬೆಡೆ ತರ್ಗಿ ಕಂಠಕಂಧರದೊಳಗಟ್ಟಡಂಗಿದುದು (ಪುಷ್ಪಪು. ೩-೩೬). [ಸಂ.]

**ಬಲಭೇದಿ** (ಗು). ೧. ನಿಶ್ಶಕ್ತಿಗೆ ಕಾರಣವಾದ. (ನಾ). ೨.=ಬಲಧ್ವಂಸಿ. ೧, ೨ : ಉಳಿಗಳೆ ವಿಷಾದವನುಸಿರ ವೇಗವನಂತೆ, ಮೇಲೆ ಮುಂಬರಿವುದದು ಬೇಡವಿನ್ನು ಗುರುಕಂಪ ನಿನಗೇಕೆ ; ಬಲಭೇದಿ ಜೃಂಭಿತವು ? ಇಲ್ಲಿ ಬಾರಾ ವತ್ಸ ! ನನ್ನ ಜತೆಗೆ (ಧ್ವನ್ಯಾಲೋ. ೯೯). [ಸಂ. ಬಲಭೇದಿನ್]

**ಬಲಮತ್ತ** (ಗು). ೧. ಪರಾಕ್ರಮದಿಂದ ಕೊಬ್ಬಿದ ; ಸಾಮರ್ಥ್ಯದಿಂದ ಸೊಕ್ಕಿದ : ಬಲಮತ್ತ ವ್ಯಕ್ತಿ ಏನು ಮಾಡಲೂ ಹೇಸುವುದಿಲ್ಲ (ರೂಢಿ). (ನಾ). ೨. ಪರಾಕ್ರಮದಿಂದ ಕೊಬ್ಬಿದ ವ್ಯಕ್ತಿ ; ಸಾಮರ್ಥ್ಯದಿಂದ ಸೊಕ್ಕಿದ ವ್ಯಕ್ತಿ : ಅವನು ಕಾಮರೂಪಿಯಾಗಿ ಆಕಾಶದಲ್ಲಿ ಸಂಚರಿಸುತ್ತ ಬಲಮತ್ತನಾಗಿ ದೈತ್ಯರನ್ನೂ ದೇವತೆಗಳನ್ನೂ ಮುತ್ತಿ ಅವರ ರತ್ನಾದಿ ಐಶ್ವರ್ಯಗಳನ್ನು ಹೊತ್ತು ತರುತ್ತಿದ್ದನು (ವಚಭಾ. ೪೦೪). [ಸಂ.]

**ಬಲಮಥನ** (ನಾ). = ಬಲಧ್ವಂಸಿ : ಬಲಮಥನ ಹೊಗಳಲು ಹರುಷದುಬ್ಬಿನಲನುಜನೊಡಗೂಡಿ ಪೃಥುಳಬಲ ತೊರವೆಯ ಹಿರಣ್ಯಕಮಥನ ತಿರುಗಿದನಿತ್ತಲಧಿಕಪ್ರಥಿತ ವಿಜಯಾಭ್ಯುದಯದೇಳಿಗೆಯಿಂದ ಪಾಳಯಕೆ (ತೊರರಾ. ೬-೩೯-೮೦). [ಸಂ.]

**ಬಲಮರ್ದು,** ಬಳಮದ್ದು, ಬಳಮರ್ದು (ನಾ). ೧. ಶ್ರೇಷ್ಠವಾದ ಮದ್ದು ; ಉತ್ತಮವಾದ ಔಷಧ : "ಬಲಮರ್ದನಲಂಕದೌಷಧಂ [ಶಾಕಾಂ. ಬಲಮುದಮರ್ದನಲಂಕದೌಷಧಂ] ತಾನಕ್ಕುಂ" (ರನ್ನಕಂ. ೪) ;

"ಬಳಮರ್ದು, ಬಲಮರ್ದು – ಅಂಕದೌಷಧ" (ಕಮದ. ಕಂ. ೨).

**ಬಳಮದ್ದು** : ೧. "ಬಳಮದ್ದೆನಲ್ಕಂಕ[ಪಾಠಾಂ. ಅಮರ್ದನಲಂಕ, ಬಳಮರ್ದನಲಂಕ, ಬಳವರ್ದನಲಂಕ] ದೌಷಧಂ" (ಕಬ್ಬಿಗ. ೮೩). **ಬಳಮರ್ದು** : ೧. "ಬಳಮರ್ದನಲ್ಕಂಕದೌಷಧಮೆಂದೆನಿಕು ಸಂತತಂ" (ಶಬ್ದಮಂ. ೯೦). ೨. ಅತಿಯಾದ ಮತ್ತನ್ನು ಬರಿಸುವಂಥ ದ್ರವ್ಯ; ಉಗ್ರವಾದ ಮಾದಕದ್ರವ್ಯ : ಪರಿಮಳಲೋಭದಿಂ ಮುಸುಂಬಿ ಮುತ್ತುವ ತುಂಬಿಗಳೊಳ್ಗುರುಳ್ಗಳೊಳ್ ಬೆರಸುವಿನಂ ಮಗುಟ್ಚುವ ದಳಂಗಳೊಳಂ ನಱುಸುಯ್ಯ ಕೆಂಪುಗಳ್ ಬೆರಸುವಿನಂ ಕದಕ್ಕದಿಸಿ ಪೆರ್ಮೊಲೆಗಳ್ ಬಳಮರ್ದನಂಗಜಂಗರೆವವೊಲೀಳೆ ಸಾಂದರೆವರಿಂಬಳವಟ್ಟಿರೆ ಘಟ್ಟಿವಳ್ತಿಯರ್ (ಮಲ್ಲಿಪು. ೨–೬೦) ; ಕಡೆಗಣ್ಣೊಂಟಣೆವಾತು ದೂದವಿ . . . ತನ್ನ ಬರ್ದುಬಳಮರ್ದೊಪ್ಪಾಯಿಲಂ ಕೂರ್ಮೆ (ಲೀಲಾವ. ೨–೯೬). 'ಬಳಮರ್ದಿಕ್ಕು', 'ಬಳಮರ್ದುಕಾಟಿ' ಪರಾ. [ಬಲ$_3$ + ಮರ್ದು]

**ಬಲಮಾಪಕ** (ನಾ). [ಭೌತವಿ] (ಪ್ರಾಣಿ, ಯಂತ್ರ, ಯಾಂತ್ರಿಕಬಲ ಮೊದಲಾದುವುಗಳಿಂದ ವೆಚ್ಚವಾದ) ಶಕ್ತಿಯನ್ನು ಅಳೆಯುವ ಒಂದು ಸಲಕರಣೆ ; **ಶಕ್ತಿಮಾಪಕ** : (D— -meter. ಪಾಂಶಿ. ೩೩). [ಸಂ.]

**ಬಲಮುರಿ** (ನಾ). ೧. ಬಲಭಾಗಕ್ಕೆ ತಿರುಗಿದುದು ; ಬಲಕ್ಕೆ ಹೊರಳಿದುದು ; ಬಲಸುತ್ತು : ಗರುವರ ಚಿತ್ರವನೊಲಿಸಿಕೊಂಬ ಬಲೆಯ ವರಗೃಹವಾ ಬಲಮುರಿಯು ಸುರುಚಿರಶಂಖವ ಹೂಳಿದ ಭೂಮಿಯ ಸರಿ ಕೇಳು (ಪ್ರಭುಸಂ. ೦೦–೬೦) ; ಒಬ್ಬರೊಬ್ಬರು ಬಲಮುರಿಯೆಡಮುರಿಯಾಗಿ ಸಬ್ಬವದೊಳು ಚಾಳಿವರಿದು ಇಬ್ಬರ್ರು ಸುಳಿದಾಡಿ ನಿಂದಳೊಬ್ಬಳು ಹಿಂದೆವೊಬ್ಬಳಾಡಿದಳು ರಂಗದೊಳು (ಭರತ. ೧೨–೬೯). ೨. ಬಲಗಡೆಗೆ ಬರುವಂತೆ ಬಿಟ್ಟ (ಸೊಂಟಪಟ್ಟಿಯ) ಚುಂಗು : ವರನಿಭಾರಿಯ ಬಳವಿನಲಿ ಬಲಮುರಿಯ ಬಿಗಿದನು ಪದಮುಖಿಕೆ ಮುಂಜೆಜಿಗ ಬಿಟ್ಟನು ಬಿಗಿದ ಬದ್ದುಗೆದಾರಗೊಂಡೆಯವ (ಕುವ್ಯಾಸ. ೮–೦೭). ೩. ನದಿಯು ಬಲಗಡೆಗೆ ಬಾಗಿರುವ ಸ್ಥಳ ; **P** ಕೊಡಗಿನ ವಿರಾಜಪೇಟೆತಾಲ್ಲೂಕಿನಲ್ಲಿರುವ ಒಂದು ಪವಿತ್ರಕ್ಷೇತ್ರ : ಕಾವೇರಿ . . . ಕನಕೆಯೊಂಬಾ ನದಿಯುದಿರಾಗಿಯೆ ಬಂದು ವಿನಯದೆ ಭಾಗಮಂಡಲದೆ ಘನಸಂತೋಷದೆ ಸಂಗತೆಯಾಗೆ ಕಾನನದೆ ಬಂದಳು ಬಲಮುರಿಗೆ (ಕಾಪಪು. ೩–೯೦). ೪. ಒಂದು ಬಗೆಯ ಸಸ್ಯ ಮತ್ತು ಬಲಕ್ಕೆ ತಿರುಗಿಕೊಂಡಿರುವಂತೆ ಬಿಡುವ ಅದರ ಕಾಯಿ : "ಪಾನೀಯವಲ್ಲೀ — ಬಲಮುರಿ, ಚಿತ್ರಮೂಲ" (ಓಷಂ. ೯೩) ; ಕಾಡರಿಸಿನ, ಮುಸುಕುಜೋಳದ ಬೇರು, ಬಲಮುರಿಯ ಕಾಯಿ . . . ಹುಳಿ, ಎಣ್ಣೆ ಕೂಡಿ ಭರಣಿಯೊಳಗೆ ಹಾಕಿಸಿ ಎಲಚಿಸೌದೆಯಿಂದ ಅಡುವುದು (ಪ್ರಪ್ರಿ. ೯೮) ; ಕಾಯಿ ಐದುಮುರಿಯಾಗಿ ಬಲಕ್ಕೆ ಸುತ್ತಿರುತ್ತದೆ, ಇದರಿಂದಲೇ ಬಲಮುರಿ ಎಂಬ ಹೆಸರು . . . ಸಂಸ್ಕೃತದಲ್ಲಿ ಮೃಗಶೃಂಗ ಎನ್ನುತ್ತಾರೆ (ಹಸುಹೂ. ೩೯).

**ಬಲಮುರಿಯ ಶಂಖ**=ಬಲಮುರಿಶಂಖ : ಬಲಮುರಿಯ ಶಂಖಗಳ ಗಂಧದ ಬಲುಹೊಚಿಯ . . . ಹೇಮಘಟಸಂತತಿಯನೊಟ್ಟಿದರು (ಕುವ್ಯಾಸ. ೩–೯೭). [ಬಲ$_1$ + ಮುರಿ$_3$ (<ಮುರಿವು)]

**ಬಲಮುರಿವೊಕ್ಕುಳ್** (ನಾ). ಬಲಸುಳಿಯಿರುವ ಹೊಕ್ಕುಳು,–ನಾಭಿ: ಈ ಬಲಮುರಿವೊಕ್ಕುಳ್ಗೊಳನೈಸೆ ತನ್ನೊಳ್ಪೆಳೆದ ತಾವರೆಯಿಂ ನಾಲ್ಮೊಗನಂ ನಿರ್ಮಿಸಿ ಜಗತ್ಕಾರಣತ್ವಮಂ ನೆಲೆಗೆಯ್ದುದು (ಚಕಮಂ. ೦೨೭–೦). [ಬಲಮುರಿ + ಪೊಕ್ಕುಳ್]

**ಬಲಮುರಿಶಂಖ** (ನಾ). ಬಲಭಾಗಕ್ಕೆ ತಿರುಗಿದಂತಿರುವ ಸುಳಿಗಳುಳ್ಳ ಶಂಖ; **P** ಅಪೂರ್ವವಾಗಿ ದೊರೆಯುವ ಇಂಥ ಶಂಖದಿಂದ ಅದೃಷ್ಟ ಉಂಟಾಗುವುದೆಂಬ ನಂಬಿಕೆಯಿದೆ : ಬಲಮುರಿಶಂಖ [ಪಾಠಾಂ. ಮುರಿಯ ಶಂಖ] ಧಿಗಿಲುಭುಗಿಲೆಂದು ಝಂಕರಿಸಿತೇದು ಕಿಟಿಯೊಳಗಣ ಗುಳ್ಳಿ ಕೀಚುಕೀಚೆಂದಂತೆ (ಛಸವ. ೩೩–೨೩). [ಬಲಮುರಿ + ಶಂಖ]

**ಬಲಮುರಿಸಂಕು** (ನಾ). = ಬಲಮುರಿಶಂಖ: ಬೆಳ್ದಿಂಗಳಂತೆ ಪಸರಿಪ ನಗೆಯುಂ ಬಲಮುರಿಸಂಕಿನಂತೆ ಗುಜ್ಜುಗೊಂಡು ರಂಜಿಪ ಕೊರಲುಂ . . . ಅಟ್ಟಜಮಂ ಪುಟ್ಟಿಪವು (ಅದ್ಭುತ. ೬–೦೮).
[ಬಲಮುರಿ + ಸಂಕು$_1$ (<ಸಂಕ$_1$)]

**ಬಲಮೆಂಡಿಗಮುಂಡ** (ನಾ). ಒಬ್ಬಾತನ ಹೆಸರು: ಬಲಮೆಣ್ಡಿಗಮುಣ್ಡನ್ ಅಟಿಗೊಳೆ (ಮೈಲಂ. ೧೯೨೭, ೯೯–೬ ; 10 ನೆಯ ಶತ). [ಬಲಮೆಂಡಿ$_?$ + ಗಮುಂಡ$_9$ (<ಗಾಮುಂಡ)]

**ಬಲಯುತ, ಬಳಯುತ** (ಗು). ೧. ಶಕ್ತಿಶಾಲಿಯಾದ; ಸಮರ್ಥನಾದ: ಅತಿರಥನಾತಂ ಗಡ ಬಲಯುತ ಸಮರಥನನ್ನೊಳಧಿಕಬಲವಂತಂ ಮಾರುತಿ ಗಡ ಮಹಾರಥಂ ಮಾರುತಿಯುಂ ತದ್ರಥದ ಗಾಲಿಗಳ್ದೊಡ್ಡಿದುವೇ (ಗದಾಯು. ೩–೨೩); ಬಲಯುತ ಶ್ರೀಕಾಂತನಾಜ್ಞೆಯು ನಿಲೆ ನಿಖಿಲಭೂಪರ ಮುಕುಟದಲಿ . . . ತನ್ನೊಂದು ಚೆಲುವಿಕೆ ನಿಲೆ ವಧೂಹೃದಯದೊಳು ನಿಂದನು ಚಕ್ರಿ ರಾಜ್ಯದಲಿ (ಸಾಳ್ವಭಾ. ೫೭–೬೨). (ನಾ). ೨. ಶಕ್ತಿಶಾಲಿಯಾದವನು; ಸಮರ್ಥ : ಬಲಯುತನಾದೆ ಪಗೆವಂ ಕೊಲಲಾಱಂ ಕಾಳಿಯುಂ ಗಡಿನ್ನಾರ್ಪವರಾರ್ ಸಲೆ ಕೊಲಬಾರದ ಪಗೆಯುಂ ಗೆಲಬಾರದದೆಂದು ಮೆಂತುಮೆಂಬದು ಪದನೇ (ಅರ್ಜವೇ. ೬–೫೨). ೩. ಬಲರಾಮನನ್ನು ಕೂಡಿಕೊಂಡಿರುವವನು ; ಬಲಭದ್ರಸಹಿತನಾದವನು. ೨, ೩: ಹರಿಯಂತೆ ಬಲಯುತಂ ಶಿವನಂತೆ ರಾಜಶೇಖರಂ ... ಅಮೃತಾರ್ಚಿಯಂತೆ ವಿಸ್ತರಿತಕುವಲಯನೆಂದು ಧರ್ಮಜನ ಧರೆ ಪೊಗಳುತಿರೆ (ಕೃಷ್ಣಭಾ. ೨–೦೩).

**ಬಳಯುತ** : ೨. ಚಟ್ಟಸಾಮಂತಮಲ್ಲಂಗನುಜಂ ತಾಂ ಗೋವಿದೇವನಧಿಕ ಬಳಯುತಂ ವಿಷ್ಣುಲೋಕೈಕನಾಥಂ ತನಯಂ ತಾನಾಗೆ ಚಲುವಂ ಪಡದುದು ವಿಭವಂ ಮಂಗಳ ಶ್ರೀವಿಳಾಸಂ (ಎಕ. XVI. ಶಕ್ಯಾ. ೬೨–೩೩; 1242); ಬಳಯುತನಪ್ಪ ಚೇರಮನೃಪಾಳನ ನಿರ್ಮಳಕೀರ್ತಿ ಲೋಕಮಂ ಬಳಸಿ ದಿಶಾಗಜಂಗಳನಿತಂ ಬಿಳಿದಾಗಿರೆ ಕಂಡು (ಶ್ರೀಪುಂ. ೩–೯) [ಸಂ.]

**ಬಲರಕ್ಕಸಿ** 'ಬಲರಾಕ್ಷಸಿ' ನೋ.

**ಬಲರಾಕ್ಷಸ** 'ಬಲರಾಕ್ಷಸಿ' ನೋ.

**ಬಲರಾಕ್ಷಸಿ**, ಬಲರಕ್ಕಸಿ, ಬಲರಾಕ್ಷಸ, ಬಲರಾಕ್ಷಿ, ಬಲಾರಾಕ್ಷಸಿ, ಬಲಾರಾಕ್ಷಿ, ಬಲ್ಲರಕ್ಕಸಿ, ಬಾಲರಾಕ್ಷಸ, ಬಾಲರಾಕ್ಷಸಿ, ಬಾಳರಾಕ್ಷ (ನಾ). ಒಂದು ಬಗೆಯ ಸುವಾಸನೆಯ ಗಡ್ಡೆಗಳನ್ನು ಬಿಡುವ ಕುರುಚಲು ಗಿಡ : "ರಾಕ್ಷಸೀ . . . ಗಣಹಾಸಕಃ— ೬ ಕರೀಕಚೋರ, ರಾಕ್ಷಸೀ ಗಡ್ಡೆ" (ಸಿದ್ಧಾಂತ./ ೦೯೦). **ಬಲರಕ್ಕಸಿ** : ಬಲರ ಪರಮುಟಬೇರು (ವೈದ್ಯನಿ. ೬೦–೦೨೦೯). **ಬಲರಾಕ್ಷಸ**: ಬಲರಾಕ್ಷಸಗಡ್ಡೆ, ಕಳ್ಳಂಗಡಲೆ . . . ನಾವಲಗೆಡ್ಡೆ ಇವಿಷ್ಟು ಪ್ರತ್ಯೇಕವಾಗಿ ಹತ್ತು ಪಲಂಗಳು . . . ತೂಕ ಸೇರಿಸಿ (ಸಕವ್ಯ. ೭೨). **ಬಲರಾಕ್ಷಿ** : (ಸಸ್ಯಶಿ. ೯). **ಬಲಾರಾಕ್ಷಸಿ** : (೬). **ಬಲಾರಾಕ್ಷಿ** : (ವೈದ್ಯನಿ. ೩–೭೯). **ಬಲ್ಲರಕ್ಕಸಿ** : ತಿಲವಿಷ್ಟ . . . ಕರಿಬೇವು, ಬಲ್ಲರಕ್ಕಸಿಗಡ್ಡೆ, ರಾಸ್ನೆ . . . ಇವೆಲ್ಲವಂ ಚೂರ್ಣವಂ ಮಾಡಿ (ಸಕವ್ಯ. ೨೩೩). **ಬಾಲರಾಕ್ಷಸ** : ಅಂಟು ತೊಗರಿ, ಬಾಲರಾಕ್ಷಸ (ಸಸ್ಯಶಿ. ೦೦೨). **ಬಾಲರಾಕ್ಷಸಿ**: ಬಲರಕ್ಕಸಿ . . . ಬಾಲರಾಕ್ಷಸಿ (ಸಸ್ಯಶಿ. ೦೦೨). **ಬಾಳರಾಕ್ಷ**: ಮಾನಕ, ಕರಿಮಣಸಂಗಿ, ಬಲರಕ್ಕಸಿ, ಬಾಳರಾಕ್ಷ (ಸಸ್ಯಶಿ. ೯).

[?. / ತೆಲು. ಬಲುರಕ್ಕಸಿ, ಬಲುರಕ್ಕಸ. **P** ಇದು '**ಬಾಳ = ಲಾಮಂಚ**' ಎಂಬುದಕ್ಕೆ ಸಂಬಂಧಪಟ್ಟಿರಬಹುದು]

**ಬಲರಾಕ್ಷಿ** 'ಬಲರಾಕ್ಷಸಿ' ನೋ.

**ಬಲರಾಸಿ** (ನಾ). ಸೇನಾಸಮೂಹ; ಸೇನೆಯ ಗುಂಪು: ಜಱಿದುದೀ

ಸಾಧನ : ಸೞಗ ರಕ್ಕಸ ಕಿಂಕರರು ಬೊಬ್ಬಿಱಿದು ಬಲುಸನ್ನೆಗಳಲುಕ್ಕಿನ ತುಱುಬುಗಳಲೆತ್ತಿದರು ತೇರಿಗೆ ತಗ್ಗಲವನಿತಳ (ಕೊರರಾ. ೩-೬-೬).
[ಬಲು (<ಬಲ್ಲಿತು$_1$) + ಸನ್ನೆ$_1$]

**ಬಲುಸರಳು** (ನಾ). ಅಧಿಕಸಂಖ್ಯೆಯ ಬಾಣ : ಮಳೆಗೆ ತೆರಳದೆ ಕೋಡ ಬಾಗಿಸಿ ಕಲಿವೃಷಭ ಹೊಗುವಂತೆ ದ್ರೋಣನ ಬಲುಸರಳ ಸರಿವಳೆಗೆ ದಂಡೆಯನೊಡ್ಡಿ ದಳವುಳಿಸಿ . . . ಕಟ್ಟಳವಿಯಲಿ ಹೊಕ್ಕನು ಭೀಮ ಬೊಬ್ಬಿಱಿದು (ಕುಮಾ.ದ್ರೋ. ೦೩-೦೨).
[ಬಲು (<ಬಲ್ಲಿತು$_1$) + ಸರಳು$_1$ (<ಸರಲ್$_1$)]

**ಬಲುಸರಿ** 'ಬಲ್ಸರಿ' ನೋ.

**ಬಲುಸಾಸಿಗ** (ನಾ). ಬಹಳ ಶೂರ ; ಮಹಾಸಾಹಸಿ : ಹೊಯ್ಸಿದನು ಡಂಗುರವ . . . ಈಶದತ್ತ ಮಹೋಗ್ರತರ ಬಾಣಾಸನವ ತೆಗೆದೇಱಿಸುವ ಬಲುಸಾಸಿಗರು[ಶಿಶಾಂ. ಳು]ಬಹುದೆಂದು ಸೂರ್ಯಾಸ್ತಮಯ ಸಮಯದಲಿ (ಕೊರರಾ. ೦-೦೩-೦೨). [ಬಲು$_1$ (<ಬಲ್ಲಿತು$_1$) + ಸಾಸಿಗ]

**ಬಲುಸೂಱ್** 'ಬಲ್ಸೂಱ್'ನೋ.

**ಬಲುಸೆಱ್** 'ಬಲ್ಸೆಱ್' ನೋ.

**ಬಲುಹಳಿ** 'ಬಲ್ಪಳಿ'ನೋ.

**ಬಲುಹು** 'ಬಲ್ಪು'ನೋ.

**ಬಲುಹುಗುಂದು** (ಕ್ರಿ). ಬಲಗುಂದು ; ಶಕ್ತಿಗುಂದು : ನಲಿದು ದೈತ್ಯರ ಪಡೆಯನೆಲ್ಲವ ಬಲಿಹರಣ ಮಾಡುತಲು ನೋಡುತ ಬಲಹುಗುಂದದ ರಿಪು ಹಿರಣ್ಯಕಶಿಪುವ ನರಹರಿಯು . . . ನೋಡಾಯೆನುತಲಗಲಕೆ ಚರಣಹತಿ ಮಾಡೆ (ಸಂಛಶ. ೬-೦೦೦). [ಬಲುಹು (<ಬಲ್ಪು) + ಕುಂದು$_1$]

**ಬಲುಹುರಿ** (ನಾ). ಬಹಳವಾಗಿ ಹುರಿಗೊಳಿಸಿದುದು ; ಬಹಳ ಬಿಗಿಯಾದಂದಂ : ಹರುಷ ಮಿಗೆ ಹರಿತಂದು ಬಂಡಿಯ ಶಿರದ ಹಲಗೆಯ ನಡರಿದನು ಬಲುಹುರಿಯ ಹಗ್ಗವ ಹಿಡಿದು ಜಡಿದನು ಹೂಡಿದೆತ್ತುಗಳ (ಕುಮಾ.ಅ. ೦೦-೨೬). [ಬಲು (<ಬಲ್ಲಿತು$_1$) + ಹುರಿ$_3$ <ಪುರಿ$_3$)]

**ಬಲುಹೊಱ್** 'ಬಲ್ಪೊಱ್' ನೋ.

**ಬಲೂತಿ** (ನಾ). ವಂಶಪಾರಂಪರ್ಯವಾಗಿ ಗ್ರಾಮಕ್ಕೆ ಸೇವೆ ಸಲ್ಲಿಸುವ ಕಸುಬು : ಹಳ್ಳಿಗಳ ಬಲೂತಿದಾರರಲ್ಲಿ ಒಬ್ಬ ಕುಂಬಾರನಿಗೆ ಬಲೂತಿ ಇರುತ್ತದೆ (ಕಹಗ. ೦೯೪). 'ಬಾರಾಬಲೂತಿ'ಪರಾ.
[← ಮರಾ. ಬಲುತೇ, ಬಲೋಂತೇ]

**ಬಲೂತಿದಾರ** (ನಾ). ಹಳ್ಳಿಯಲ್ಲಿ ವಂಶಪಾರಂಪರ್ಯವಾಗಿ ಬಂದ ಕಸುಬನ್ನು ನಡೆಸಿ ದವಸ ಇತ್ಯಾದಿ ವರಮಾನಗಳನ್ನು ಪಡೆಯುವ ಹಕ್ಕನ್ನು ಹೊಂದಿರುವವನು ; ಇವರಲ್ಲಿ ಹನ್ನೆರಡು ಬಗೆ. 'ಬಾರಾಬಲೂತಿ' ಪರಾ : ಹಳ್ಳಿಗಳ ಬಲೂತಿದಾರರಲ್ಲಿ ಒಬ್ಬ ಕುಂಬಾರನಿಗೆ ಬಲೂತಿ ಇರುತ್ತದೆ (ಕಹಗ. ೦೯೪) ; ಜೋಯಿಸ, ಸೊನ್ನೆಗಾರ, ನಾದಿಗ, ಅಗಸ, ಮುಂತಾದ ಬಲೂತಿದಾರರು ಊರತನದ ಕೆಲಸಕ್ಕೆ ಪೂರ್ವದಲ್ಲಿ ಸಹಾಯ ಮಾಡುತ್ತಿದ್ದರು (ಬಿಜಾಕೂ. ೩೩).
[ಬಲೂತಿ + – ದಾರ್$_4$./ಮರಾ. ಬಲುತೇದಾರ, ಬಲೋತೇದಾರ]

**ಬಲೂನು**, ಬೆಲೂನು (ನಾ). ೧. "ಸರಿಸುಮಾರು ಗುಂಡಾಗಿರುವ, ಗಾಳಿತೂರದ ಪಟ್ಟೆಯ ಚೀಲದಲ್ಲಿ ವಾಯುವಿಗಿಂತಲೂ ಹಗುರವಾದ ಅನಿಲವನ್ನು ತುಂಬಿ, ತಾನಾಗಿ ಮೇಲಕ್ಕೇರುವಂತೆ ಮಾಡಿರುವ ಸಾಧನ : ಆಕಾಶಬುಟ್ಟಿ" (Balloon. ಇಂಕಶ). ೨. ಮಕ್ಕಳು ಬಾಯಿಂದ ಊದಿ, ಗಾಳಿಯನ್ನು ತುಂಬಿ ಆಡಲು ಬಳಸುವ ಬಣ್ಣಬಣ್ಣದ ತೆಳುವಾದ ರಬ್ಬರಿನ ಚೀಲ : ಉಸುರುಬುರುಡೆ : ಮಗು ಬಲೂನು ಊದಲು ಬಾರದೆ ಅಳುತ್ತಿದೆ (ಜೂಪ). ಬೆಲೂನು : ೨. ನಾವು ಸೂರ್ಯನಷ್ಟು ಗಾತ್ರದಬೆಲೂನನ್ನು ಮಾಡಿದರೆ ಅದರಲ್ಲಿ ಒಂದು ಮಿಲಿಯ ಭೂಮಿಗಳನ್ನು ಹಿಡಿಸಬಹುದು (ಅಣುಕ. ೯).
[← ಇಂ. Balloon]

**ಬಲೆ$_1$** (ನಾ). ೧. ಪ್ರಾಣಿ, ಪಕ್ಷಿ ಮೊದಲಾದುವನ್ನು ಹಿಡಿಯಲು ಬಳಸುವ, ನೂಲು ಅಥವಾ ಹುರಿಯಿಂದ ಮಾಡಿದ ಸಣ್ಣಸಣ್ಣ ಕಂಡಿಗಳುಳ್ಳ ಹೆಣಿಕೆಯ ಸಾಧನ ; ಜಾಲ : "ಅನಾಯಃ, ಜಾಳಃ, ಕುವೇಣೀ, ಮತ್ಸ್ಯಬಂಧಿನೀ – ಈ ೪ ಬಲೆ" (ಹಲಾಯು. ೯೬-೪೪೦) ; ಎಮ್ಮ ಪಾಸಿದ ಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಳಗುಂಗಳಾಗಳೆ ತೊಡರ್ಗುಂ (ಅದಿಪು. ೩-೯೯ವ) ; ಜಗದಗಲದ ಬಲೆಯನಗಲ ಬಲ್ಲವರ ಕಾಣೆ ಮುಗಿಲುದ್ದಂಬರವನುಗಿಯ ಬಲ್ಲವರ ಕಾಣೆ (ಅದಪ. ೦೪-೩೦); ಬಿಡು ನಾಯಂ ಪೊಸಪುಲ್ಲೆಗೊಡ್ಡು ಬಲೆಯಂ. . . ಎಂದು ಬೊಬ್ಬೆಗುಡುತುಂ ಬಂದರ್ ಪಲರ್ ಧೀವರರ್ (ಕಾದ್ವಟಿ. ೨-೩೦). ೨. ಕೇಶಾಲಂಕಾರಕ್ಕಾಗಿ ಉಪಯೋಗಿಸುವ ಬಲೆಯಂತಹ ಒಂದು ಅಲಂಕಾರಸಾಧನ : ಮುಡಿಯ ಮುತ್ತಿನ ಬಲೆ ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ . . . ಕಡುಚೆಲುವೆಯರೆಸೆದಿಹರು (ಕಂಪವಿ. ೩-೦೦೪). ೩. (ಅಲಂ) ಮೋಸ; ವಂಚನೆ ; ಕಪಟ : ಈ ಪುಲಿಯುಮತ್ಯಾಚಾರಮಾಗಿರ್ದುದು ಇದಱ ಬಲೆಯೊಳ್ ಸಿಲ್ಕವೇಡ (ಹಂಕಕಂ. ೨೩೩-೬); ಈಗಳೀ ದಾನವನ ಬಲೆಯಲಿ ತಾಗಿ ಸಿಲುಕಿತು ನಮ್ಮ ಮೋಹರ (ಕುಮಾ.ದ್ರೋ. ೦೬-೨೯); ನೆರೆದಿಳಾಮಂಡಲದ ರಾಯರು ಬೈದು ಭಂಗಿಸುತಾ ವಿದೇಹಜನ ಬಲೆಯನೊಡ್ಡಿದನಿವನು ಲುಬ್ಧಕತಿಲಕನೋ ನೃಪರುಚಿಯೊ ಸಾಕಿವನೊಳಗೆ ಮಾತೇಕೆನುತ ಮಿಗೆ ಮೊಱೆದೆದ್ದರಲ್ಲಲ್ಲಿ (ಕೊರರಾ. ೦-೦೩-೨೯).

ಬಲೆಗೆ ಬೀಳು = ೧. ಬೇಟೆಗಾಗಿ ಹರಡಿದ ಬಲೆಯಲ್ಲಿ ಸಿಕ್ಕಿಕೊಳ್ಳು : ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನ್ನೆ (ಕುಮಾ.ಸ. ೦೪-೦೨೨); ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾಗೆ ನಳನೃಪ ತಿಲಕನೆಂದನು ಮನದ ದುಗುಡದಿ ತನ್ನ ನಿಜಸತಿಗೆ (ನಳಚ. ೪-೩೬). ೨. ಪ್ರಭಾವಕ್ಕೆ ಒಳಗಾಗು : ದ್ರೋಹಿಗಳ ರಹಸ್ಯವನ್ನೆಲ್ಲ ತಿಳಿದ ಮೊನೆಗಾರ, ಗುಂಡಪ್ಪನಿಗೆ ನಂಬಿಕೆಯುಂಟಾಗುವಂತೆ . . . ಮಾತನಾಡಿದಾಗ, ಗುಂಡಪ್ಪನು ಆ ಬಲೆಗೆ ಬಿದ್ದು, ತನ್ನ ಪಕ್ಷದವರ ಮಂತ್ರ ತಂತ್ರಗಳನ್ನೆಲ್ಲ ಮೊನೆಗಾರನ ಕಿವಿಗಳಿಗೆ ಪ್ರಕಟಮಾಡುವನು (ಸಂಸಳ. ೦೦೦); ನಿಪುಣಿಕೆ ಈ ಜನಗಳ ಬಲೆಗೆ ಬಿದ್ದಿರಬಹುದೆಂದು ನನಗೆ ಸಂದೇಹವಾಗಿತ್ತು (ಬಾಣಭ. ೦೩೨). ಬಲೆಯ ಬೀಸು = ವಶಪಡಿಸಿಕೊಳ್ಳಲು ಪ್ರಯತ್ನಿಸು; ಸ್ವಾಧೀನಕ್ಕೆ ತಂದುಕೊಳ್ಳಲು ಹಂಚಿಕೆ ಹೂಡು : ನುಡಿವವಧಿ ಹದಿಮೂಱು ವರುಷದ ಹೆಡತಲೆಯನೊದೆದೆದ್ದು ನಮ್ಮಾ ಪೊಡವಿಯರ್ಥಕೆ ಬಲೆಯ ಬೀಸದೆ ಬಿಡುವರೇ ಬಳಿಕ (ಕುಮಾ.ಅ. ೨೦-೨೩). ಬಲೆಯಲ್ಲಿ ಬೀಳು = ೧. ಬೇಟೆಗಾಗಿ ಹರಡಿದ ಬಲೆಯಲ್ಲಿ ಸಿಕ್ಕಿಕೊಳ್ಳು : ಬಹಳ ಮೀನುಗಳು ಬಲೆಯಲ್ಲಿ ಬಿದ್ದಿವೆ (ಜೂಪ). ೨. ಜಾಲದಲ್ಲಿ ಸಿಕ್ಕಿಕೊಳ್ಳು : ಮುಗ್ಧನಾದ ಬಾಲಕ ವಂಚಕರ ಬಲೆಯಲ್ಲಿ ಬಿದ್ದನು (ಜೂಪ).
[ದೇ.॥ ತಮಿ. ವಲೈ; ಮಲ. ತೆಲು. ವಲ; ಕೋತ. ವಲ್; ತೊದ. ಪಲ್ ; ಕೊಡ. ತುಳು. ಬಲೆ ; ಗದಬ. ವಲ್ಲ ; ಗೊಂಡಿ. ಒಲ್ಲ]

**ಬಲೆ$_2$**, ಬಳೆ$_3$ (ನಾ). ಒಂದು ಬಗೆಯ ಸಸ್ಯ; ಕಳ್ಳಂಗಡಲೆ: "ವಾರಾಹೀ-ಬಲೆ" (೬ಕಂ. ೦೪೪): "ಹೆತ್ತುತ್ತಿ, ಹೆತ್ತುಟ್ಟಿ, ಕಿಸಂಗಿ, ವಿಷಗುಂಬಳ, ಬಲೆ, ಬಿಟ್ಟರಳು, ಬೆಣ್ಣೆಗರಗ, ಭೇದ" (ಸಸ್ಯಶಿ. ೦೨೦). ಬಳೆ$_3$ : ಬಳೆಯಂ ಬಱೆಯುಮನೊಂದಿರೆ ತಿಳಕ್ಕಲದೊಳಟ್ಟು ಪೂಸಿ ತಿಮಿರ್ವುದು ಬಱೆಯಂ ಬಟೞಿಯಂ ಮಿಸಿಸುವುದಂತಾ ಬಳೆಯ ಕಷಾಯಮನೆ ಬಾಲಕಂಗೆ ಮಾಣ್ಗುಂ (ಲೋಕೋಪ. ೬-೦೯೯). [ ಸಂ. ಬಲಾ ]

**ಬಲೆಗಣ್** (ನಾ). ಬಲೆಯಲ್ಲಿರುವ ಕಣ್ಣು; ಜಾಲದ ರಂಧ್ರ : ಪಲ

ವಾಳಾಪದೊಳೇನೊ ಚೆಲ್ವಣುಗನಂ ಕಟ್ಟಿಳ್ಕಟಿಂದೆತ್ತಿ ಪೊಪಲರ್ಪನ್ನಂ ಬಿಗಿದವ್ವದಿರ್ದ ಸಳಿತೋಳ್ಗಾಂ ಬಂಜದೋಳ್ಗೋಡದಿರ್ಪಲರ್ಗಣ್ಗಾಂ ಬಲೆಗಣ್ (ವ್ಯಶಪ. ೨-೩೨). [ಬಲೆ₁ + ಕಣ್]

**ಬಲೆಗಾರ** 'ಬಲೆಗಾಱ' ನೋ.

**ಬಲೆಗಾಱ**, ಬಲೆಗಾರ (ನಾ). ೧. ಜಾಲವನ್ನು ಬಳಸುವವನು; ಬೆಸ್ತ: "ಜಾಲಿಕ, ವಾಗುರಿಕ_ಬಲೆಗಾಱ" (ನಾಚಿರಾ. ೯); ವರ ಕವಂಠ ಮತ್ಸ್ಯಂಗಳಂ ನಿಜಕರದಿನೇಕೋದಕದೊಳೊಡರಿಚಿ ಓರಿಯ ಗಾಳವನಿಕ್ಕುವಾ ಬಲೆಗಾಱನುಂ ತಾನೆ (ಬಸಪು. ೫೦-೨೯); ಸಮ್ಮಗಾಱರ ಬಲೆಗಾಱರ ಪರದರ ಕ್ಷತ್ರಿಯರ ಪಾರ್ವರ ನಾಡಿಗರೊಂದು ಜಂಗುಳಿ (ರಾಮಾಶ್ವ. ೬೯-೧೪). **ಬಲೆಗಾರ** : ೧. "ಕೈವರ್ತಃ,ದಾಶಃ,ಧೀವರಃ_ಮೀನುಗಳನ್ನು ಹಿಡಿಯುವ ಬೆಸ್ತರವರ ಹೆಸರು, ಮೀನಿನ ಬಲೆಗಾರರು ಅಂದರೆ ಪಾಶವಾರ" (ಸಿದ್ಧಾಂತಿ. ೬೧). ೨. ಬಲೆಯಿಂದ ಮೃಗ, ಪಕ್ಷಿಗಳನ್ನು ಬೇಟೆಯಾಡುವವನು ; ಬೇಡ : "ವಾಗುರಿಕಃ, ಜಾಲಿಕಃ . . . ೨ ಮೃಗದ ಬಲೆಗಾರನ ಪೆಸರು" (ಸಿದ್ಧಾಂತಿ. ೩೦೨). [ಬಲೆ₁ + -ಕಾಱ]

**ಬಲೆಗ್ರಾಮ** (ನಾ). ಒಂದು ಊರಿನ ಹೆಸರು : ಗೋಪರಾಷ್ಟ್ರ ವಿಷಯಾನ್ತ[ಃ] ಪಾತಿ ಬಲೆಗ್ರಾಮಃ ಸೋದ್ರಙ್ಗಃ (ಇಆ. IX, ೧೨೪-೦೯; 7ನೆಯ ಶತ). [ಬಲೆ₇ + ಗ್ರಾಮ]

**ಬಲೆದೊಡಕು** (ನಾ). ಜಾಲದಿಂದ ಸಿಕ್ಕಿ ಬೀಳಿಸುವ ಬಂಧನ : ಸಂಯೋಗದ ಸುಖ ಮೈಯುಂಡವಂಗೆ ಲೋಕದ ನಚ್ಚುಮಚ್ಚಿನ ಬಲೆದೊಡಕು ತಪ್ಪದು (ಮದೀವ. ೨೯೭-೬೯). [ಬಲೆ₁+ತೊಡಕು₃(<ತೊಡಂಕು₃)]

**ಬಲೆಬೆತ್ತ** (ನಾ). ಒಂದು ಬಗೆಯ ಬೆತ್ತ : "ನಾಯಿಬೆತ್ತ, ಬಲೆಬೆತ್ತ" (ಸಸ್ಯಶ. ೨೬); ಬಲೆಬೆತ್ತ, ನಾಯಿಬೆತ್ತ (ವೃಕ್ಷಾಗಿ. ೦೩-೨೬೦). [ಬಲೆ₈ + ಬೆತ್ತ]

**ಬಲೆಮಣಿ** (ನಾ). ತುರುಬಿನ ಬಲೆಯಲ್ಲಿ ಪೋಣಿಸಿರುವ ಅಲಂಕಾರದ ಮಣಿ : ವೀರಮುದ್ರಿಕೆ ನೂಪುರ ಕಾಂಚಿಯು ದಾಮ ಹಾರ ಪದಕ ಹತ್ತ ಕಟ್ಟು ತೋರಮುತ್ತಿನ ಬೊಟ್ಟು ತುಱುಬಿನ ಬಲೆಮಣಿ ಸೇರಿ ಕಣ್ಗೆಸೆದು ಮೆರೆಗಿ (ಕುರುಕಾಂ. ೩೬-೦೩೭). [ಬಲೆ₁ + ಮಣಿ₂]

**ಬಲೆವಱಿ** (ಕ್ರಿ). ಬಲೆಯನ್ನು ಕತ್ತರಿಸು; ಜಾಲವನ್ನು ಹರಿದು ಹಾಕು: ದ್ರವ್ಯಲಿಂಗಿಯಾಗಿರ್ದ ಪುಷ್ಪದಾಡನೆಡೆವೆತ್ತು ರಾಗಿಸಿ ಬಲೆವಱಿದ ಕೊಂಕನಂತೆ ಮನೆಯೆ ಗುಱಿಯಾಗಿರ್ಪುದುಂ (ಧರ್ಮಾಮೃ. ೭-೧೬೯). [ಬಲೆ₁ + ಪಱಿ₁]

**ಬಲೆವೀಸು** (ಕ್ರಿ). (ಮೀನು, ಪ್ರಾಣಿ, ಪಕ್ಷಿ ಮೊದಲಾದುವನ್ನು ಹಿಡಿಯಲು) ಬಲೆಯನ್ನು ಹರಡು ; ಜಾಲವನ್ನು ಒಡ್ಡು : ಬಲೆವೀಸಿ ಪುಲ್ಲೆಯಂ ಕೆಡಪು ಕಡಂಗಿ ಪೊಯ್ಯ ಪುಲಿಯಂ . . . ಎಂಬ ರವಂ ಪಿರಿದಾಯ್ತರಣ್ಯದೊಳ್ (ರಾಜಶೇ. ೫-೬೪); ಸಂಜೆವರೆಗಂ ನೀರುಳ್ಳ ತಾಣಂಗಳೊಳ್ ಬಲೆವೀಸುತ್ತ ನವೀನಮೀನಮುನದೆಂತುಂ ಕಾಣದೆ . . . ಪುರಪೂರ್ವಾಶಾನದೀವಾರಿಯೊಳ್ ಜಾಲಮನಿಕ್ಕುತುಂ ಸೆಳೆಯ (ವ್ಯಶಪ. ೧೬-೪೨). [ಬಲೆ₁+ ಬೀಸು₁]

**ಬಲೆಹುಲ್ಲು** (ನಾ). ಒಂದು ಬಗೆಯ ಹುಲ್ಲು : "ಬಲೆಹುಲ್ಲು, ಮರ ಹಾಸ್ತಿ" (ಸಸ್ಯಶ. ೦೨೬). [ಬಲೆ₈+ ಹುಲ್ಲು (<ಪುಲ್) ]

**ಬಲೋದ್ಧತೆ** (ನಾ). ಬಲದಿಂದ ಉಂಟಾದ ಗರ್ವ: ಪರಾಕ್ರಮದಿಂದ ಉಂಟಾದ ಸೊಕ್ಕು : ತಾಯೆ ನೀನವಧರಿಸು ಪೇಳ್ದ ನುಡಿ ಪುಸಿಯಲ್ಲ ಮಾಯೆ ಎನ್ನಾಧೀನ ಮದ್ಬಲೋದ್ಧತೆಯಿಂದೆ ಪ್ರೀಯಮಪ್ಪಂತೆಸಗಿ ಮೋಹಿಸುವುದಿದು ತಥ್ಯ ಮತ್ತೆೀರಣೆಯು ಮೀರದೆ (ವಂಗಾರಾ. ೨-೩೪-೩೯). [ಸಂ. ಬಲೋದ್ಧತಾ]

**ಬಲೋದ್ಬಂದಿ** (ನಾ). ಹಿಂಸೆ : ತೊಂದರೆ : ಮಹಾಕೋಪೋದ್ರೇಕದಿಂದ ಬಲೋದ್ಬಂದಿ ಜುಲುಂ ಮಾಡೋಣ ೩ ತಿಂಗಳ ಪರ್ಯಂತರ ಅಥವಾ ೫೦೦ ರೂಪಾಯಿ ಜುಮ್ಮಾನೆ (ಗ್ರಾಮಸ. ೧೯೩). [←ಮರಾ. ?]

**ಬಲೋನ್ಮತ್ತ**, **ಬಳೋನ್ಮತ್ತ** (ನಾ). ಪರಾಕ್ರಮದಿಂದ ಗರ್ವಿಷ್ಠನಾದವನು ; ಸಾಮರ್ಥ್ಯದಿಂದ ಸೊಕ್ಕಿದವನು : 'ಬಲೋನ್ಮತ್ತತೆ' ಪರಾ. **ಬಳೋನ್ಮತ್ತ** : ಚಳಾವರ್ತರ್ . . . ತಿಳಿನೀರಂತಪರಜರ್ ಬಳಾವಷ್ಟಂಭಂಗೆಟ್ಟಡಿಗೆಱಗಿ ಕಂಡರ್ ಪಿರಿಯನೊಳ್ ಬಳೋನ್ಮತ್ತಂ ದಲ್ ದುರ್ಬಳಮಿಭಹಯಾನೂನರಬಳಂ (ಶಾಂತಿಪು. ೦೧-೩೫). [ಸಂ.]

**ಬಲೋನ್ಮತ್ತತೆ** (ನಾ).=ಬಲೋದ್ಧತೆ : ಭೀಮನ ಈ ಬಲೋನ್ಮತ್ತತೆಯನ್ನೂ ಬಾಹುಗರ್ವವನ್ನೂ ನೋಡಿ ಹನುಮಂತನು ಮನಸ್ಸಿನಲ್ಲಿಯೇ ನಕ್ಕು . . . ಎಂದನು (ವಕಭಾ. ೦೫೨). [ಸಂ. ಬಲೋನ್ಮತ್ತತಾ]

**ಬಲೌಘ** (ನಾ). ಸೈನ್ಯದ ಗುಂಪು ; ಸೇನೆಯ ಸಮೂಹ : ಕಾಲಾಗ್ನಿಯಂತೆ ಇಟ್ಟಣಿಸುತ್ತೈದುವ ಸುವೇಗನ ಬಲೌಘಕಿದಿರಿಟ್ಟು ನಿಂದಂ ಭೀಮನುತ್ಸಾಹದಿಂದೆ (ಕೈಮಿಭಾ. ೪-೨೯); ಕುಶಂ ಬಳಿಕ ನಿಜ ಹಸ್ತಲಾಘವದೊಳಲ್ಲಿರ್ದರಂ ಸದೆದು ಲವನಂ ಬಲೌಘಮೊತ್ತಾಯದಿಂ ಮುತ್ತಿಕೊಂಡಿರ್ದ ಕೋಲಾಹಲವನಾಲಿಸಿದನು (ಕೈಮಿಭಾ. ೨೦-೬೦). [ಬಲ₃+ ಓಘ]

**ಬಲ್ಕಣೆ₁**, ಬಲುಕಣೆ (ನಾ). ೧. ಬಹಳ ಶೂರನಾದವನು ; ಮಹಾಪರಾಕ್ರಮಿ: ಬಲಿಷ್ಠ: ಸಮರ್ಥ : ಕಣೆಯಂ ಶೌರ್ಯಾಭಿಮಾನಕ್ಕೆಡಱಿದ ರಿಪುಸೈನ್ಯಕ್ಕೆ ಸಂಗ್ರಾಮದೊಳ್ ಬಲ್ಕಣೆಯಂ . . . ಸಾಮಂತಚೂಡಾಮಣಿಯನಣಿಯರಂ ಬಂದು ಕಂಡಂ ಸುರೇಂದ್ರಂ (ಶಂಖಪು. ೬-೯೫); ಗುಣನಿಧಿ ನಂದಿವರ್ಧನನ ನಾಡುಮನಾಳ್ವಿಸಕಯ್ಸಿ ವಿಶ್ವಧಾರಿಣಿಯುಮಜ್ಜೆಗೆಯ್ಯದೆ ನಗಂ ಬೆಸಕೆಯ್ವೊಡೆ ಪಾಳಿಸಾಂತ ಬಲ್ಕಣೆಯನಘಾರಿಯಂ ತವಿಪ ಕಾಲಮದಿನ್ನೆನಗೆ (ಶಾಂತಿಪು. ೯-೧೦೪); ಫಣಿರಾಜಂ ಬಾರಿಯಿಟ್ಟಟ್ಟಿದೊಡನುದಿನದಿಂ ಬರ್ಪ ಸರ್ಪಂಗಳಂ ಬಲ್ಕಣೆ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ (ಕಾವ್ಯಾವ. ೯೦೦). ೨. ನಿಪುಣ ; ನಿಷ್ಣಾತ ; ಪರಿಣತ : ನಾಲ್ಕುಮುಪಾಯದ ನುಡಿಗಳ ಸಿಲ್ಕಾಸಿಲ್ಕಿಗಳನೆಯ್ದೆ ನುಡಿದೈ ಕ್ರಮದಿಂ ಬಲ್ಕಣೆಯೈ ನಯದೊಳ್ನುಡಿಯಲ್ಕೊಂಕಂ ಕಲ್ತುದಲ್ತೆ ನಿನ್ನೊಂದಿಗರೊಳ್ (ಶಾಂತಿಪು. ೩-೯೧); ನಾಲ್ಕೆಂಬ ವೀಥಿಯೆಡೆಯೊಳ್ ನಾಲ್ಕಱ ಮಾಱಿಱಿಕೊಳೆ ಮಾಱಱಿಂದಂ ಕೊಳ್ ನೀಂ ಸಿಲ್ಕಿಲ್ಲದೆ ಕೂಡಯ್ದಂ ಬಲ್ಕಣೆ ನೀನಯ್ದುಗೆಯ್ದು ಕಳೆ ಪಡೆದನಿತಂ (ಜಟ್ನಮ. ೧೨-೫೦). ೩. ಬಲಿಷ್ಠವಾದುದು; ಸಮರ್ಥವಾದುದು; ಪ್ರಬಲವಾದುದು : ಗುಣವಂತಂ ಸತ್ವಗುಣಾಗಣಿತಂ ನಿರ್ಮಳಿನದಶನನಾಯುಷ್ಯಂ ಬಲ್ಕಣೆಯಿರ್ಪತ್ತಯ್ದಬ್ದದೆ ಕ್ಷಣಮಾತ್ರಕ್ಕಱಿವುವು (ಅಕ್ಷಣ. ೬-೨೫). ೪. ಪವಿತ್ರವಾದ ಸ್ಥಳ: ಅಣಿಮಿಣಿಗೆಯ್ದಾ ಧರ್ಮ್ಮವನಣೆಯರಮಳಿದೊಂಗೆ ಪೆಱಗು ಗತಿಯಿಲ್ಲಾ ಬಲ್ಕಣೆ ವಾರಣಾಶಿಯೊಳ್ಪಸುವುಂ ಬ್ರಾಹ್ಮಣರನಳಿದನಜಿಗುಜಿಗಿಳಿದ (ಶಾಇಇ. XX, ೦೯-೫೬; 1015); ಪೆರತು ಗತಿಯಿಲ್ಲಾ ಬಲ್ಕಣೆ ವಾರಣಾಸಿಯಲ್ ಬ್ರಾಹ್ಮಣರುಂ ಪಸುಗಳ್ಮನಳಿದನಜಗುಜಗಿಳಿದಂ (ಎಕ. VII, ಶಿಕಾ. ೦೫೩-೫೫; 1039). ೫. ಪರಾಕ್ರಮ; ಸಾಮರ್ಥ್ಯ : ನೀನಿನಿಸಾನುಂ ಬಲ್ಕಣೆಯ ಗಂಡನೆ (ಬಂಹರಿ. ೬-೫೦ ಪ). ೬. (?) : ನಿನ್ನಂ ಕೊಟಿದ ದಕ್ಕ ಬಲ್ಕಣೆಯನೊತ್ತಿದಂತೆ ನುಗ್ಗು ಮಾಡಮಂ ಬಾಯೆನೆ (ಬಂಹರಿ. ೬-೫೦ ಪ). **ಬಲುಕಣೆ** : ೨. ಬಲುಕಣೆಗಳಿವದಿರನು ಕರಿ ಮುಂಕೊಳಿಸಿ ಕೆಡಹಿತು (ಕುಮಾದ್ರೋ. ೩-೨೪); ಫಣಿವಿಭೂಷಾ:ಧಾಸುರರ ಬಲುಕ[ಶಾಶಾಂ. ಗ]ಣೆಯ ಬವರವನಸುರಕುಲಭೀಷಣ ಹಿರಣ್ಯಕರದಟು ಮಿಕ್ಕುದು (ಕೊರಂಗ. ೬-೦೭-೩೯). ೭. ಆಶ್ರಯವಾಗಿರುವವನು ; ನೆಲೆಯಾದವನು: ಗುಣಜಳನಿಧಿ ತೇಜದ ಬಲುಕಣೆ . . . ಸಾಮಾಸಿಗವಂಶಾಗ್ರಣಿಯೆನೆ ವಿಭುಮಲ್ಲಿಕಾರ್ಜ್ಜುನಂ ರಂಜಿಸುವಂ (ಶಾಇಇ.

XX, ೨೯೬-೨೩; 1228).

[ಬಲ್₂(<ಬಲ್ಲಿತು₁)+ಕಣ್₆./ತುಳು. ಬಲ್ಕಡಿ, ಬಲ್ಗಡಿ]

**ಬಲ್ಕಣಿ₂** (ನಾ). ಒಂದು ಬಗೆಯ ಮರ (?) : ಪುನದಕ್ಷಿಣಸ್ಯ ದಿಸಿ ಬಹುಶ್ಶುಹಿಯ ಬಲ್ಕಣಿ ವೃಕ್ಷವು ಪುನಪಶ್ಚಿಮ ಮುಖದೆ ಸನ್ನ ಬಹು ಮೂಲಿಕಪನ್ನಿಯ . . . ಕೂಡಿತ್ತು ಸೀಮಾನ್ತರಂ (ಎಕ. I, ೦-೨೯ ; 466). [?]

**ಬಲ್ಕಣಿತನ** (ನಾ). ೧. ಶೌರ್ಯ ; ಪರಾಕ್ರಮ : ಅಣೆದಾರ್ದು ತೋಱಿ ಬಿಡೆ ಬಲ್ಕಣಿತನದಿಂದಭಿನಿಷಾದಿಗಳ್ ಜವದಿಂದಂ ಮಣಿಗಳಿಱಂಕೆಗಳಾಗಿರೆ ರಣಾಗ್ರದೊಳ್ ಪಿಡಿದು ಮನ್ಮನದ್ವಿರದಂಗಳ್ (ವರ್ಧಮಾ. ೪-೭೨). ೨. ರಭಸ ; ಜೋರು : ಕಣಿಕಮನಾಜ್ಯದಿಂ ತೊಡೆದು ಮೋದಿಸಿ ದಿದ್ದಮು ಮಾಗೆ ಪೊಯ್ದು ಬಲ್ಕಣಿತನದಿಂದಮೊತ್ತಿ ಮಿದಿದು (ಲೋಕೋಪ. ೬-೦೫). ೩. ಧೈರ್ಯ : ತತ್ಕುಮಾರತಾಪಸರ್ ತಾವುಮೊಳಗಱಿಯದೆ ತಱಿಸಂದು ನಿಂದು ನಿರವಧಿಧೈರ್ಯನಿಧಿಯಪ್ಪ ನಾಭಿನಂದನನ ನಿಯಮದವಸಾನವಂ ಬಲ್ಕಣಿತನದಿಂ ಕೆಲವು ದೆವಸಂಬರಂ ಪಾರ್ದು ತೀರ್ವುದುಂ (ವರ್ಧಪು. ೦೦-೪೦ ವ). [ಬಲ್ಕಣಿ₁ +– ತನ]

**ಬಲ್ಕೆ**, ಬಲಿಕೆ (ನಾ). ೧. ಜೋರು ; ರಭಸ : ಭೂರಮಣ . . . ಹತ್ತಿರಕೆ ಬಂದು ತಾಗಿದ ಸರಳ ಬಲ್ಕೆಯಿಂ ಕಿತ್ತು ಸಗ್ಗಳೆಯುಡಕದಿಂದ ಜೋರಿಡುತಿರ್ದ ನೆತ್ತರಂ ತೊಳದೊರಸಿ ಮೃಗವಹರೆ ಮಾನಿಸರು ಕ್ರೀಡೆಯಿಂ ನೊಂದಿರ್ದಂ (ಕುರಂಗ. ೦೦-೧೯). ೨. ದೊಡ್ಡದಾದುದು ; ಹಿರಿದಾದಂದು : 'ಬಲ್ಕೆವೆಱು' ಪರಾ. **ಬಲಿಕೆ : ೩.** ಹೆಚ್ಚಳ ; ಆಧಿಕ್ಯ : "ಬೃಂಹಸ್, ಬೃಂಹೀ, ಬೃಂಹುಃ, ಬೃಂಹಣಂ, ಬೃಂಹಿತಂ, ಈ ೫ ಬಲಿಕೆ" (ಕಾಶಕ್ಕ. ೬೬) ; ಮಲಂ ಪಿಂಗಿದಂಗದೊಳು ಸಕ ಮೂಲಮಲಮಿಹುದು ಮೇಣ್ಮಲ ತೊಲಗಲಾ ದೇಹದ ಹಂಗು ಮತ್ತೇಕ ಮಲಬಲಿಕೆಯಿಂ ರಾಜಿಸಿರ್ಪಂಗಕ್ಕೆ ಲಿಂಗಸಮವಾದ ರುದ್ರಾಕ್ಷಿ ಭಸಿತಂಗಳಂ ಧರಿಸಿಯಾ ದೇಹ ಸಹ ನೀವು ತಲ್ಲಿಂಗವ ಪಿಡಿಯಲಕ್ಕುಮೆ (ಬಸೋಪು. ೭-೬೩). ೪. ಬೆಳವಣಿಗೆ ; ಅಭಿವೃದ್ಧಿ ; ಏಳಿಗೆ : ಇಕ್ಷುದಂಡ ಬಲಿವುದಕ್ಕೆ ಮೊದಲೆ ತನಿರಸ ಬಹುದೇ ನಾನು ನೀನೆಂಬುದಕ್ಕೆ ಸ್ಥಾಣುವಹುದಕ್ಕೆ ಭಾವದ ಬಲಿಕೆ ಇನ್ನಾವುದೋ (ಮೋಳಿಮಾ. ೩೨-೨೦೫) ; ಶಿಲೆಯ ಪ್ರತಿಷ್ಠೆಯ ಮಾಡಿ ತನ್ನ ಒಲವರ ವಿಶ್ವಾಸದಿಂದ ಬಲಿಕೆಯನಱಿವುದು ಶಿಲೆಯೊ ಮನವೊ (ಅಂಪಿವ. ೪೦೦-೦೫೦೫) ; ಬೆಳೆದೆ ನೀನಾ ಸೂತಕವ ಹೊತ್ತು ಉದರದೊಳು ಬಳಿಕ ಹೊಲೆ ಮಾದುದಾಕೆಗೆ ನಿನ್ನ ಬಲಿಕೆಯೊಳು (ದೀಕ್ಷಾಬೋ. ೪೩-೨೦). ೫. ಬಲಿತಿರುವಿಕೆ; ಗಟ್ಟಿಯಾಗಿರುವಿಕೆ ; ಬಿರುಸಾಗಿರುವಿಕೆ : ಬಲಿಕೆಗೆ ಮೊದಲು ಅಡಕೆ ಮೆದುವಾಗಿರುತ್ತದೆ (ರೂಢಿ). 'ಬಲಿಕೆಅನ್ನ' ಪರಾ. ೬. ಪರಿಣತಿ; ಪ್ರೌಢಿಮೆ: ನಲಿದಾಡುತೆಯ್ತಂದು ಸಹಪಾಠಿಜನೆಂಬುದೊಂದೆ ಳೆಗೂಸು ಕೈಯೊಳು ಪಿಡಿದು ಗಿಲಿಕೆಯ ಕೋಲನಿತ್ತಯ್ಯಗೆಱಗಿತಿದು ಬಲಿಕೆಯು ಮೆಚ್ಚಲೈಯೆಂದ (ಶರಶ. ೪೭-೦೨೬) ; ಪರರಂ ಜಯಿಸ ಬೇಕೆಂದೇ ಕಲಿತಿರಲ್ಲದೆ ನೀವು ಮುಕ್ತಿಗೆ ಕಲಿತುದಿಲ್ಲಂ ನಿಮಗೆ ಶಾಸ್ತ್ರದ ಬಲಿಕೆಯುಳ್ಳವರೆನಿಸಿಕೊಂಬುದೆ ಮುಕ್ತಿಯೆಂದಿಹಿರಿ (ಶಂಕದಾ. ೦೨-೬). 'ಬಲಿಕೆವಂತ' ಪರಾ. ೭. ರಚನೆ ; ಮಾಟ; ನಿರ್ಮಾಣ: ಅದು ತೃಣದ ಲೆಪ್ಪದ ಬಲಿಕೆಯೊ ತನ್ನ ಚಿತ್ರದ ಬಲಿಕೆಯೊ (ಬಲೀಕ್ಕ. ೦೬೬); ದಳವಾಡಸಹಿತ ಬೈಚಪ್ಪ ದುರ್ಗವ ಹೊಕ್ಕು ತಳುವದದಱ ಬಲಿಕೆಯನು [ಶಾಪಾಂ. ಬಳಿಕಿನ್ನು] ಬಳಸಿ ಬಳಸಿ ನೋಡಿ ದುರ್ಗಸೌರಣೆಯನಂದಲಸದೆ ಮಿಗೆ ಮಾಡಿಸಿದನು (ಕುರಾಸಾಂ. ೩೭-೩೦).

ಬಲಿಕೆಯಾಗು = ೧. ಗಟ್ಟಿಯಾಗು ; ಬಲಿ ; ಬಿರುಸಾಗು : ಬಲಿಕೆಯಾಗದ ಅಡಕೆ ಬಣ್ಣಾ ಕಟ್ಟಲು ಚೆನ್ನಾಗಿರುತ್ತದೆ (ರೂಢಿ). ೨. ಬಿಗಿಯಾಗು ; ಬಲವಾಗು ; ಭದ್ರವಾಗು: ಕ್ಷಣದೊಳಗೆ ಪಾವೊಂದ ನರರೆ ತೆಗೆದಲ್ಲಿ ನೆಱೆ ಬಿರಿದ ಕುಕ್ಷಿಯುಂ ಸಸಿನೆ ಮಾಡುತ ಕಟ್ಟಿದಂ ಬಲಿಕೆ ಯಪ್ಪಂದದೆ (ಶೀಕೃಪು. ೩-೪-೨೮).

[ಬಲ್₂ (<ಬಲ್ಲಿತು₁)+ – ಕೆ./ ತುಳು. ಬಲಿಕೆ]

**ಬಲ್ಕೆಲೆ** (ಕ್ರಿ). ಬಹಳ ಮಾತನಾಡು : ಲೋಚನಯುಗ್ಮದಿಂದೆಡಬಲಂಗಳ ನೀಕ್ಷಿಸಿ ತನ್ನ ನಲ್ಲನಂ ಸೂಚನೆಗೈದು ಕೂಡೆ ಕರೆದೊಯ್ಯನೆ ಬಲ್ಕೆಲೆಯುತ್ತು ಮಾತನೊಳ್ (ಉದ್ಭಟ. ೨-೪೦). [ಬಲ್₂ (<ಬಲ್ಲಿತು₁) + ಕೆಲೆ]

**ಬಲ್ಕೆವೆಱು** (ಕ್ರಿ). ಹಿರಿದಾಗು ; ದೊಡ್ಡದಾಗು : ನಿಲ್ಕಡೆವೆತ್ತಂದಿ ನಾಯುಷ್ಯಮೆಂಭತ್ತನಾಲ್ಕು ಲಕ್ಷಾಂಕಪೂರ್ವಗಳು ಬಲ್ಕೆವೆತ್ತಾ ಪೂರ್ವ ಯೆಂದರೆಷ್ಟೆಂಬುದ ಸಿಲ್ಕಾಗದಂತೆ ಪೇಳುವೆನು (ಭರತ. ೭೭-೭).

[ಬಲ್ಕೆ + ಪೆಱು₁]

**ಬಲ್ಕೇಡಿಗ** (ನಾ). ಬಹಳ ಕೇಡಾಳಿಯಾದವನು ; ಅತಿ ದುಷ್ಟಸ್ವಭಾವ ದವನು : ಕೇಡಿಗರೊಳವನೋರ್ವನೇ ಬಲ್ಕೇಡಿಗನು (ಜಗನ್ನಾಥ. ೫೪೦-೪೩).

[ ಬಲ್₂ (<ಬಲ್ಲಿತು₁) + ಕೇಡಿಗ ]

**ಬಲ್ಗಂಡ**, ಬಲುಗಂಡ (ನಾ). ಬಹಳ ಶೂರನಾದವನು ; ಅತ್ಯಂತ ಪರಾಕ್ರಮಿಯಾದವನು : ಪರಾಂಗನಾಪುತ್ರಂ ಮಲೆಗೆ ಮಾರ್ತಾಂಡಂ ಗಜಕೆ ಬಲ್ಗಂಡಂ ಹಯವತ್ಸರಾಜಂ (ಎಕ. VII, ಶಿಕಾ. ೫೭-೦೦ ; 1027) ; ಚೋಳಕುಳಕಾಳದಣ್ಡಂ ಸಬರೆ ಬಲ್ಗಂಣ್ಡಂ ಕಲಿಗಳಾರಾಧ್ಯನಾಗ್ಗ್ರ ಮಸಾಧ್ಯಂ (ಸೌಇಇ. XI-i, ೯೭-೬; 1062); ಉದಾರಮಹೇಶ್ವರಂ ಚಲಕೆ ಬಲ್ಗಣ್ಡಂ ಶೌರ್ಯ್ಯಮಾರ್ತ್ತಣ್ಡಂ . . . ಶ್ರೀಮನ್ಮಹಾಮಣ್ಡಳೇಶ್ವರಂ ಲಕ್ಕರಸರ್ (ಸೌಇಇ. XX, ೯೭-೭ ; 1074) **ಬಲುಗಂಡ :** ಯಾದವ ಕುಳಾಮ್ಬರದ್ಯುಮಣಿ ಸಮ್ಯಕ್ತ್ವಚೂಡಾಮಣಿ ಮಲಪರೊಳ್ಗಣ್ಡ ಚಲಕೆ ಬಲುಗಣ್ಡ . . . ತಳಕಾಡುಗೊಣ್ಡ (ಎಕ. II, ೦೯೩-೨೦ ; 1131).

[ಬಲ್₂ (<ಬಲ್ಲಿತು₁) + ಗಂಡ₁]

**ಬಲ್ಗಂಡಿಕೆ** (ನಾ). ಬಹಳ ಶೂರತನ ; ಅತ್ಯಂತ ಪರಾಕ್ರಮ : ಒಳಕೆ ಯ್ಯೊಳಿರ್ದು ಪಲ್ಗಿರಿದೊಳವಾಲಂಗೊಂಡು ಮೊರೆವ ಭಪಕನ ತೆಱದಿಂದೊಳ ಪೊಕ್ಕು ದುರ್ಗಮಂ ಸಂಚಳಚಿತ್ತಂ ನುಡಿಗುಮೆಮಗೆ ಬಲ್ಗಂಡಿಕೆಯಂ (ಕಾವ್ಯಾವ. ೨೪೪) ; ಈತನಲ್ತೆ ಮುಳಿದೆನ್ನನಿಲ್ಲಿ ಪೊದಱಿರೊಳ್ ಬಲ್ಗಂಡಿಕೆ ಯಿನಾಳಿಮೆಟ್ಟದೊನೆಂದೊಡರ್ಜುನನಾ ಬಂದಾತನನೀಂತೆಂದಂ (ಪಂಪಭಾ. ೦೦-೫೦ ವ). [ಬಲ್₂ (< ಬಲ್ಲಿತು₁) + ಗಂಡಿಕೆ₁]

**ಬಲ್ಗಂಡಿಕೆಗಾಣ್** (ಕ್ರಿ). ಅತಿಶಯವಾದ ಶೌರ್ಯವನ್ನು ಕಾಣು ; ಅತ್ಯಂತ ಪರಾಕ್ರಮವನ್ನು ತಿಳಿ : ಪೊದಱಿಂದಂ ಪೊಱಮಟ್ಟು ಕಟ್ಟಿದಿ ರೊಳಾರ್ಪಿಂ ಗರ್ಜಸುತ್ತಿರ್ಪ ಬಗ್ಗದ ಬಲ್ಗಂಡಿಕೆಗಾಡು ಗಂಡುಗಲಿ ಬೇಡಂ ಖಡ್ಗದೆ ಬೆನ್ನೊಳ್ ಮೊನೆದೋಱೆಮಿಱಿ ತಿವಿದಂ ತತ್ಕಾಳ ಮೋಘಾಪ್ಪಯಂ (ರಾಜಶೇ. ೫ ೯೯). 'ಗಂಡಿಕೆಗಾಣ್' ಪರಾ.

[ಬಲ್ಗಂಡಿಕೆ + ಕಾಣ್]

**ಬಲ್ಗಂಡು** (ನಾ). = ಬಲ್ಗಂಡಿಕೆ : ಗಂಡುಡೆಯುಟ್ಟು ಕೈದುವಿಡಿದುವ್ವು ಳಮಂ ನಿನಗುಂಟುಮಾಟ್ಟ ಬಲ್ಗಂಡಿನ ದೇವ ಮಾನವ ವಿಯಚ್ಚರ ರೊರ್ವರುಮಿಲ್ಲ (ಶಂಖಾಪಮಾ. ೯-೦೫೪). [ಬಲ್₂ (< ಬಲ್ಲಿತು₁) + ಗಂಡು]

**ಬಲ್ಗಂದ** (ನಾ). ಬಹಳವಾದ ಪರಿಮಳ ; ಅತಿಶಯವಾದ ಸುವಾಸನೆ : ಹಯತತಿಗೆ ಮೊಗರಂಬ ಕಡಿಯಣಂಗಳನಿಟ್ಟು ಪಲ್ಲಣದ ಬಿಗುಹುಗಳ ತಾಪಣೆಯ ಲೀವೆಗಳನಳವಡಿಸಿ ಬಲ್ಗಂದವಿಡಿದು ನಮಿಸಿ ನೆಗೆದಡರಿ. . . ಕಾದುತ್ತಲಿರ್ದರಿರ್ಬಲದ ಘೋಟಾರೂಢರಾಹವದೊಳು (ಚವಿಪು. ೪೯-೩೦).

[ಬಲ್₂ (< ಬಲ್ಲಿತು₁) + ಗಂದ]

**ಬಲ್ಗಂಬ** (ನಾ). ಬಲವಾದ ಕಂಬ ; ಬಲಿಷ್ಠವಾದ ಸ್ತಂಭ : ರಾಜಾಂಗಣದ ಬಯಲ ಬಲ್ಗಂ[ಶಾಪಾಂ. ಬಾಲ್ಗಂ]ಬಂಗಳೊಳ್ ಸೆಱೆಗೆ ಯ್ದಿರ್ದ ಜಾವದಾನೆಗಳ ಮೇಲಿಡೆಗೆಡೆದು ಮೂವಳಸಾಗಿ ಮುಸುಂಕಿ

ತದ್ಗಜಂಗಳ್ಗೆ ಪಾಲ್ಗಡಲ ನಡುವಣೈರಾವತದ ಲೀಲೆಯನೋಲಗಿಸಿಯುಂ (ಚಂದ್ರಪ್ರ. ೬-೪೪ ವ) ; ಸಪ್ತಮದಾವಸ್ಥೆಯಿಂ ಮುಂದುಗಾಣದೆ ಬಲ್ಗಂಬ [ಪಾಠಾಂ. ಭ]ಮಂ ಮುಱಿದು ಸಿಗಳಮಂ ಪಱಿದು ಸಿಟ್ಟೋಟದಿಂ ಬೀದಿವರಿದು (ರಾಜಶೇ. ೬-೧೧ ವ).

[ಬಲ್$_2$ (< ಬಲ್ಲಿತು$_1$) + ಕಂಬ$_1$ (< ಕಂಭ)]

**ಬಲ್ಗಜ್ಜ**, ಬಲುಕಜ್ಜ, ಬಲುಗಜ್ಜ (ನಾ). ಬಹಳವಾದ ಕಾರ್ಯ ; ವಿಶೇಷವಾದ ಕೆಲಸ: ಮತ್ಪ್ರಾಣಾಧೀಶಂ ತಾಮ್ಮೊದಲುಜ್ಜುಗಿಸಿದ ಬಲ್ಗಜ್ಜಮೆ ನೇಮುವೆ ತನಗೆನುತವೆ ತನುವಿನದೊಂದಾಸೆಗೆ ಬಗೆಗುಡದೆ ಸಾಮಜಗಮನೆ ಸುಲೋಚನೆಯಾವುದ್ದಾಮ ನದಿಯು ಪೆಮ್ಮಡುವಂ ಪೊಕ್ಕಳ್ (ಜಯಕಾ. ೯-೨೮). **ಬಲುಕಜ್ಜ** : ಉಲುಪೆಯೇನಧಿಕವೈ ಪರತಸು ಮುಂದಿನ್ನು ಬಲುಕಜ್ಜವುಂಟದಱಿಂದ ತೊಲಗದೆಮ್ಮೊತ್ತಿನೊಳಿರು (ಭರತ. ೨೭-೨). **ಬಲುಗಜ್ಜ** : ಹಲವು ಕೋಶಕೆ ಕಡಿಮೆಯಿಲ್ಲವಿಾ ಚತುರಂಗಬಲದೊಳೆರ ಡಿಲ್ಲವಿಂದೆನ್ನೆಡೆಗೆ ನೀಂ ಬರ್ಪ ಬಲುಗಜ್ಜಮಾವುದುಂಟೆನೆ (ಚಂಪು. ೪-೨೦).

[ಬಲ್$_2$ (< ಬಲ್ಲಿತು$_1$) + ಕಜ್ಜ]

**ಬಲ್ಗಟ್ಟೆ** (ನಾ). ದೊಡ್ಡ ಅಣೆಕಟ್ಟು : ಬುಕ್ಕರಾಜಂ ಹರಿದ್ರಾನದಿಯುಂ ಬಲ್ಗಟ್ಟೆಯಂ ಕಟ್ಟಿಸಿ . . . ಅಖಿಲಜನಕೆ ಸಂಜೀವನೋಪಾಯಮುಮಂ ಮಾಡಿದಂ (ಎಕ. XI. ದಾವಣ. ೨೯-೬, 1424)

[ಬಲ್$_2$ (< ಬಲ್ಲಿತು$_1$) + ಕಟ್ಟೆ$_1$]

**ಬಲ್ಗಡಣೆ** (ನಾ). ದೊಡ್ಡ ಸಮೂಹ, – ರಾಶಿ : ಕಡಲ ಮುನ್ನಱಿಯದ ಪೆಂಗಳಚ್ಚರಿವಟ್ಟು ನಿಡುಬೆರಳಿಟ್ಟು ನಾಸಿಕಕೆ ಮುಡಿಯೊಲೆದೊಲೆದು ನೋಡಿದರದಱೊಂದು ಬಲ್ಗಡಣೆಗೆ ಬಗೆಯೊಳು ಮೆಚ್ಚಿ (ಭರತ. ೨೩-೯೩).

[ಬಲ್ (< ಬಲ್ಲಿತು$_1$) + ಗಡಣೆ$_1$ (< ಗಡಣ) ]

**ಬಲ್ಗಡಲ್**, ಬಲುಗಡಲು (ನಾ). ದೊಡ್ಡ ಸಮುದ್ರ ; ವಿಶಾಲವಾದ ಸಾಗರ: ಅಡಿಗಡಿಗಾನಂದವೆಂಬ ಸಾಗರವನೊಕ್ಕುಡಿತೆಯ ಮಾಡಿ ಸೇವಿಪನು ಒಡನೊಡನೀಂಟದಪ್ಪಕೆ ಹೆಚ್ಚಿ ಕಡಲು ಬಲ್ಗಡಲಾಗುತಿಹುದು (ಭರತ. ೦೮-೬೦). **ಬಲುಗಡಲು** : ಬಗೆವುದೇ ಬಲುಗಡಲು ಮಂಜಿನ ಮುಗಿಲವಳಿಯನು (ಕುಮಾ. ೧೦-೧೦).

[ಬಲ್$_2$ (< ಬಲ್ಲಿತು$_1$) + ಕಡಲ್$_2$]

**ಬಲ್ಗಣೆ**, ಬಲುಗಣೆ (ನಾ). ಬಲವಾದ ಬಾಣ ; ಶಕ್ತಿಯುತವಾದ ಬಾಣ : ಕೋಲ್ಗಾರರೊಳ್ ಸುರಿವಾಲಿವರಲ್ಗಳವೊಲ್ ನೆತ್ತಿಯೊಡೆಯ ಮುತ್ತುಗಳೆತ್ತಂ ಗಲ್ಗಲನೆ ಸುರಿಯೆ ಜೋದರ್ ಬಲ್ಗಣೆಯಿಂದೆಚ್ಚರದಟಿನಿಂದಾನೆಗಳಂ (ಕಬ್ಬಿಗಕಾ. ೨೯೨) ; ಬಲ್ಪಿಚ್ಚ ಪಳಿವ ಲಿಂಗಂ ಮೂಡೆ ಕಣ್ಣೆಟ್ಟು ಕಾಲ್ಗಾಣದಾವನಾ ಕಾಳ್ಗೆಯ್ಯಕಳ್ಕುತೆ ತುಳಿಲ್ಗುಂದಿ ನಾಲ್ಮೊಗಂ ತಲೆಗಂಡನೇ ಶಿವನ ಬಲ್ಗಣೆಯ ಪೋಲ್ಗಾವನು (ಶಾವಚಂ. ೩-೨೬). **ಬಲುಗಣೆ** : ಅಣದಣದು ಹೋಹವನ ಗಗನಾಂಗಣದ ಮಾರ್ಗಿಯ ಮಾಡದಿರೆ ಬಲುಗ[ಪಾಠಾಂ. ಕ]ಣೆಯ ಭಟನೇ ತಾನೆನುತ ಹೊಱವಂಟ ಸಾಹವಕೆ (ತೊರವೆ. ೪-೩-೪).

[ಬಲ್$_2$ (< ಬಲ್ಲಿತು$_1$) + ಕಣೆ$_1$]

**ಬಲ್ಗಣ್ಣೆ** (ನಾ). ಬಿಗಿಯಾದ ಹಗ್ಗ : ಮರೆಗೀಂತೊಡ್ಡೊಡ್ಡು ಬಲ್ಗಣ್ಣೆಯ ಬಲೆಗಳನಂತೊತ್ತುಗೊಳ್ಳೊತ್ತುಗೊಳ್ಳೀ ಸರದಿಂ. . . ಎಂದೆನುತ್ತಾತುರ ದಿಂದೋರೊರ್ಬರೊಳ್ ಸಾಱುವ ಶಬರರ ತೀವ್ರಸ್ವನಂ ಪರ್ಬಿತಾಗಳ್ (ಕುಮುದಾ. ೦೪-೨೮) ; ಅಣ್ಣದೇವನೊಳಿಡಿದ ವಾತ್ಸಲ್ಯಮೆಂಬ ಬಲ್ಗಣ್ಣೆಯೊಳ್ಕಟ್ಟುವಡೆದಲ್ಲೆನಲಱಿಯದೆ ನಿರ್ವಿಣ್ಣಭಾವದೊಳಂದು ಲಕ್ಷ್ಮಣಂ. . . ಇಂತೆಂದನು (ಕೈಮಿಭಾ. ೦೮-೬೦).

[ಬಲ್$_2$ (< ಬಲ್ಲಿತು$_1$) + ಕಣ್ಣೆ]

**ಬಲ್ಗತ್ತಲೆ**, ಬಲುಗತ್ತಲೆ (ನಾ). ದಟ್ಟವಾದ ಕತ್ತಲೆ ; ಕಗ್ಗತ್ತಲೆ : ಕಾದಿ ಕಾದಿ ಶತಮಾಯನುಱಿ ಬೇಸತ್ತಡರ್ದಂಬರಾಂಗಣದೊಳಿರ್ದು ಬಲ್ಗತ್ತಲೆಯನೊತ್ತಿ ಕವಿಸಿ ಮೋಸದೊಳ್ ಬಿಲ್ಲಂಬುಗಳ ಸದ್ದು ಪುಟ್ಟ ದಂತೋಸರಿಸದೆಸುತಿರ್ದಂ (ಶಬಪು. ೯೯-೩೪) ; ಕೆತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುಮೆಳಗಂ ಬೇಱೆ ತೋರ್ಪರಾರ್ (ಕೈಮಿಭಾ. ೨-೦೬).

**ಬಲುಗತ್ತಲೆ**: ಲೇಸೆನಿಪ ಕೈದೀವಿಗೆಗಳ ವಿಭಾಸದಿಂ ಮಿಗೆ ಪಿಡಿದುಕೊಂಡು ಲ್ಲಾಸವೆತ್ತಾಳ್ವರಿಯ ಮೇಲಿಂತಿರುಳು ತಿರುಗುತಿರೆ ಆ ಸರವಿಗಳು ಸವೆಯೆ ಪರಿತಂದಾಸುರದಿ ಬಲುಗತ್ತಲೆಯ ಮಱೆಯಾಸೆಯಲಿ ಹಗೆಯಂತು ಹೊಗುವರೊ: (ಬಸಪು. ೦೬-೨೩); ಬಿಲವಮುಖದೊಳುತ್ತರಿಸಿ ಬಲುಗತ್ತಲೆ ಯೊಳದವಿಯ ಮಾರ್ಗದಲಿ ಕಲುಮುಳುಗಳೊಳು ಕಾವಥಕೆ ಕೋಮಳ ಚರಣಗಳ ಕೊಡುತ ತೊಳಲಿದರು (ಕುಮಾ. ೬-೯೩).

[ಬಲ್$_2$ (< ಬಲ್ಲಿತು$_1$) + ಕತ್ತಲೆ$_1$ ( < ಕಟ್ಟಲೆ)]

**ಬಲ್ಗತ್ತಿ**, ಬಲುಗತ್ತಿ (ನಾ). ಬಲವಾದ ಕತ್ತಿ; ಬಲಿಷ್ಠವಾದ ಖಡ್ಗ: ಎತ್ತಿ ಬಪ ಸತ್ತಿಗೆಯ ಮೊತ್ತಂಗಳೆತ್ತಲುಂ ಕತ್ತಲಿಸೆ ಪೊತ್ತ ಮಸೆವೆತ್ತ ಬಲ್ಗತ್ತಿಗಳ ಕೆತ್ತು ಭಟರೆತ್ತಿ ಜಡಿಯುತ್ತಿರಲ್ಕೆ (ಕೈಮಿಭಾ. ೪-೦೪). **ಬಲುಗತ್ತಿ** : ತತ್ತನೂಜನ ಗಂಟಲಲಿ ಬಲುಗತ್ತಿಯಂ ಘಿತನೊತ್ತಿ ವಾಗಳೆ ಕೃತ್ತಿವಾಸಂ ಜಾಣನಾದಡೆ ಮೆಚ್ಚಿ ಕೊಡಬೇಡಾ (ಬಸಪು. ೨೫-೨೫).

[ಬಲ್$_2$ (< ಬಲ್ಲಿತು$_1$) + ಕತ್ತಿ]

**ಬಲ್ಗನ್ನ** (ನಾ). ಬಹಳವಾದ ಮೋಸ; ಅತಿಯಾದ ವಂಚನೆ : ಸಾಂಬನಂ ಜಾಂಬವತಿಯಣುಗನಂ ಸ್ತ್ರೀವೋಲ್ ತೆಱಂಬೊಳೆಯೆ ಸಿಂಗರಿಸಿ ತನ್ಮುನಿಗಳೆಡೆಗೆ ತಂದೇಂ ಬಣ್ಣಿಪೆಂ ನಮಿಸಿ ಭಾವಿಕಾರ್ಯಂಗೇಳ್ವೆವೆನುತೆ ಬಲ್ಗನ್ನ ದಿಂದೆ ಡಂಬಕರ್ ಕೇಳ್ದರೀ ಪುತ್ರಕಾಮಿಯ ಬಭ್ರುವೆಂಬವನ ಪೆಂಡಿರಿವ ಳೀಸಂ ಪೆಱುವಳೆಂಬುದಂ (ಕರ್ಣಾಭಾ. ೧೦-೦೪೬).

[ಬಲ್$_2$ (< ಬಲ್ಲಿತು$_1$) + ಗನ್ನ$_1$]

**ಬಲ್ಗಯ್** 'ಬಲ್ಗೆಯ್' ನೋ.

**ಬಲ್ಗಯ್ಯ** 'ಬಲ್ಗೆಯ್ಯ' ನೋ.

**ಬಲ್ಗರ**, ಬಲುಗರ$_2$ (ನಾ). ೧. ಬಲವಾದ ಗ್ರಹ: ಅರಸುಮಕ್ಕಳಿಲ್ಲವಾ ಬಿಲ್ಲಂ ಕಂಡು ಬಲ್ಗರಂ ಪೊಡೆದಂತೆ ಪೆಡಂ ಮಗುಳೆ (ಶಂಕಾವಿಮಾ. ೩-೬೨ ವ); ನುಡಿದಪೆಯಿಲ್ಲ ನೀಂ ಮಗಳೆ ನಿನ್ನನಿದೇಂ ಪೊಡೆದತ್ತೊ ಬಲ್ಗರಂ ಪಿಡಿದುದೊ (ಲೀಲಾವ. ೨-೧೦೬); ಬಯಲುಗನಪ್ಪ ಸನತ್ಕುಮಾರಂ ಶೂನ್ಯ ಹೃದಯಾಂಧಂ ಕಣ್ಮುಚ್ಚಿ ಗೋಣಂ ನಿಮಿರ್ಚಿ ಬಲ್ಗರಂ ಪೊಡೆದಂತೆ ಬೆಬ್ಬನೆ ಬೆಱಗಿರೆ (ಸಾನಂಕ. ಶಕಾಗರ್ಭಸಂಧಿ. ೨೩ ವ). **ಬಲುಗರ$_2$** : ೧. ಪಾರ್ಥ ಬಲುಗರವವಚಿದಂತಿರೆ ಮೂಕನಾದನು ಬೆರಳ ಮೂಗಿನಲಿ (ಕುಮಾಭೀ. ೬-೩೬). ೨. ಗ್ರಹಚಾರ: ಬಲುಗರವಿದೆತ್ತಣದೊ ಕಾರುಣ್ಯನಿಧಿಗೆನುತ ನಡನಡುಗಿ (ಕೈಮಿಭಾ. ೦೮-೩೦).

[ಬಲ್$_2$ (< ಬಲ್ಲಿತು$_1$) + ಗರ$_2$]

**ಬಲ್ಗರು** (ನಾ). ಎರಕದ ದೊಡ್ಡ ಬೊಂಬೆ : ತಿಳಿಜೊನ್ನದೆಱಕದ ಪುರುಷರೋ ಬೆಳ್ಳಿಯ ಥಳಥಳಿಸುವ ಬಲ್ಗರುಗಳ ಪೊಳಪೊಯೆಂದೆನೆ ಧವಳಾಂಬರದಿಂ ಖಾಸರೆಳಸಿದರೇನ ಬಣ್ಣಿಪೆನು (ಕುಂಬಾಸಾಂ. ೦೬-೩೫).

[ಬಲ್$_2$ (< ಬಲ್ಲಿತು$_1$) + ಕರು$_2$]

**ಬಲ್ಗರುಳ್**, ಬಲುಗರುಳು (ನಾ). ದೊಡ್ಡದಾದ ಕರುಳು,- ಅಂತ್ರ: ದಂತದಂಡಹತಿಯಿಂ ಬಿಸುನೆತ್ತರ ಧಾರೆಗಳ್ ಭುಗಿಲ್ಭುಗಿಲೆನೆ ಪಾಯ್ದು ಪೊಣ್ಮದುವು ಕೋಟ್ಟಿಮುಳೊಕ್ಕುವು ಬಲ್ಗರುಳ್ಗಳ್ (ಶಂಕಾವಿಮಾ. ೦೩-೬೦). **ಬಲುಗರುಳು** : ಅವನ ನೂಱುಂಬುಗಳ ಕಡಿದವನವಯವವ ಕೀಲಿಸಿದಡಾ ಕ್ಷಣವವನಿಯಲಿ ಬಲುಗರುಳು ಬಿದ್ದವು ಭಟನ ಕಿಬ್ಬರಿಯ (ಕುಮಾದ್ರೋ. ೩-೯೬).

[ಬಲ್$_2$ (< ಬಲ್ಲಿತು$_1$) + ಕರುಳ್]

**ಬಲ್ಗಲಿ** (ನಾ). ಮಹಾಶೂರ; ಪರಾಕ್ರಮಿ : ಅಳವನಱಿದು ಬೇಗಿಱಿವ ಬಲ್ಗಲಿಗಳುಮಂ . . . ಮತ್ತಮಣ್ಣೆ ನಡೆದಿಱಿವ ನಡೆಗಲಿಗಳುಮಂ ನೋಡಿ ರುದ್ರಾವತಾರಂ . . . ಹಿಮವತ್ಪರ್ವತಕ್ಕೆ ಪೋಪುದುಂ (ಗದಾಯು. ೬-೩೪ ವ). [ಬಲ್$_2$ ( < ಬಲ್ಲಿತು$_1$) + ಕಲಿ$_2$]

**ಬಲ್ಗವಣೆ**, ಬಲುಗವಣೆ (ನಾ). ಕಲ್ಲನ್ನು ಬೀಸಿ ಎಸೆಯಲು ಮಾಡಿರುವ

**ದೊಡ್ಡದಾದ ಜಾಳಿಗೆಯ ಸಾಧನ ; ದೊಡ್ಡ ಕವಣೆ :** ಸೂಸಿದರ್ ಕೆಂಡಮಂ ಬಲ್ಗವಣೆಕಲ್ಗಳಂ ಬೀಸಿದರ್ (ಚಬಶ. ೪೨-೩೬). **ಬಲುಗವಣೆ :** ಶ್ರವಣ ಮನನದ ಬೀಸುವಲೆ ಶಾಂಭವ ಸುವೇದಾದೀಕ್ಷೆಗಳ ಬಲುಗವಣೆಗಳ . . . ನವವಿಧಾಮಲ ಭಕ್ತಿಗಳ ರಣತವಕ ದೀಹದ ಹುಲ್ಲೆಗಳ ಮೃಗ ಭವವಿದಾರಣ ಸುಭಟರೈದಿತು ಶಿವನ ನೇಮವಲಿ (ಕುವ್ಯಾಅ. ೫-೩೫).

[ಬಲ್$_2$ (< ಬಲ್ಲಿತು$_1$) + ಕವಣೆ$_1$]

**ಬಲ್ಗಱಿ** (ನಾ). ೧. ದೊಡ್ಡ ರೆಕ್ಕೆ : ಮುಂಚುವೆಱಂಕೆಯಾಗೆ ನಿಡಿದೋಳ್ಗಳ್ . . . ನಖರಾವಳಿ ಬಲ್ಗಱಿಯಾಗೆ ನಾಸಿಕಂ ಚುಂಚುವ ದಾಗಲಾಗಳೆ ನರಾಕೃತಿ ಗಕ್ಕನೆ ಪೋಗಿ ರಾಜಕೀರಾಂಚಿತಜನ್ಮವೆನ್ನಮರ್ದಪ್ಪಿದುದು (ಉದ್ಭಟ. ೫ ೦೦೫). ೨. ದೊಡ್ಡದಾದ ಬಾಣದ ಗರಿ,– ಪುಕ್ಕ: ಒದೆದೆಡೆಗೊಂಡ ಬಿಲ್ಲ ತಿರುವಂ ಮೊಱೆದೆಳ್ತರದಿಂ ಪಳಂಚಿ ಪೇಗದೊಳಿದಿರಾಂತು ಬಲ್ಗಱಿಯ ಗಾಢಮೊಡಂಬಡೆ . . . ಪಿಂಗದೆ ಪೊಗರಾಂತ ಕೂರ್ಗಣೆಗಳೇಂ ಪರಿತಂದುವೊ ಪಾಂಡುಪುತ್ರನಾ (ಶಬಶಂ. ೪-೪೨).

[ಬಲ್$_2$ (< ಬಲ್ಲಿತು$_1$) + ಗಱಿ]

**ಬಲ್ಗಾಡಿ** (ನಾ). ವಿಶೇಷವಾದ ಸೊಗಸು ; ಅತಿಶಯವಾದ ಸೌಂದರ್ಯ : ತಾವರೆಗೊಳಂ ತಣ್ಗೊಳಂ ಮೆಱೆದುವೆಂತೆನಲ್ ಭೂಮಿವನದ ಬಲ್ಗಾಡಿಯಂ ನೋಡಲೆಂದೆಳಸಿ ಪಲಗಣ್ ಮರಲ್ಗಳಂ ಪಡೆದೀಕ್ಷಿಪನುವೊ ಬಳಿಕೆ ಕಮ್ಮರಲ್ಗಯ್ದುಗಾಱನೆಂದೆಂಬ ಪಟುಭಟನ ಕಣೆಗಳ ಡೊಣೆಗಳೋಯೆಂಬಿನಂ (ಪದ್ಮರಾ. ೮-೩೬).

[ಬಲ್$_2$ (< ಬಲ್ಲಿತು$_1$) + ಗಾಡಿ$_1$]

**ಬಲ್ಗಾಡು** (ನಾ). ದೊಡ್ಡದಾದ ಕಾಡು ; ದಟ್ಟವಾದ ಅರಣ್ಯ : ಶಶಿಯಂತೆ ಶಶಪಟ ವಲ್ಮೀಕಾಶ್ರಯ ವಸುಧಾಧಿಪಬಲದಂತೆ ಮುಸುಗಿದ ಖಡ್ಗ ಕರೀಂದ್ರಗಳಿಂ ಕಣ್ಗೆಸೆದಿಹುದಾ ಬಲ್ಗಾಡು (ಶ್ರೀಪಾಲ. ೭-೦೨).

[ಬಲ್$_2$ (< ಬಲ್ಲಿತು$_1$) + ಕಾಡು$_1$]

**ಬಲ್ಗಾಪು**, ಬಲುಗಾಹು$_1$ (ನಾ). ಬಲವಾದ ಕಾವಲು ; ಭದ್ರವಾದ ಪಹರೆ: ಅಂತರ್ಸಚ್ಚೂಪುಷ್ಪ ದರ್ಶನರತ್ನಮಂ ಸಂಶಯಚೋರರ್ ಪುಗದಂತು ನುಬುಗೆಯೆಂಬ ಬಲ್ಗಾಪನಿಕ್ಕಿ ಮನಮೆಂಬ ವಜ್ರದೋವರಿಯೊಳಿರಿಸಿ (ಧರ್ಮಾಮೃ. ೨-೨). **ಬಲುಗಾಹು$_1$ :** ಅಕ್ಕಱಿಂದಲ್ಲ ನೀನೋಡಿ ಹೋದಹೆಯೆಂಬ ಕಕ್ಕುಲಿತೆಗೇಱಿಂದೆನ್ನೆಸೆಯೆನೆ ಬಲುಗಾಹನಿಕ್ಕಯ್ಯ ಎನೆ . . . ನಡೆದಂ (ಹಕಶಾ. ೬-೬೮). [ಬಲ್$_2$ (<ಬಲ್ಲಿತು$_1$)+ಕಾಪು]

**ಬಲ್ಗರ** (ನಾ). ೧. ಆರ್ಭಟ ; ಗರ್ಜನೆ : ಕೇಸರಿಯ ಬಲ್ಗರ ಕಂಜ ವಿಶೇಷಗಜವ್ರಾತಂದು ಶಬರರ ವಾಸವನು ಕಂಡಲ್ಲಿ ಮರೆಗೊಂಡಿರಲು (ಜನಪಾ. ೪೦-೩೦). ೨. ಉದ್ಘೋಷ ; ಬಲವಾದ ಧ್ವನಿ : 'ಬಲ್ಗಾರಿಕೆ' ಪರಾ. 'ಉದ್ಗಾರ' ಹೋ. [ಬಲ್$_2$ (<ಬಲ್ಲಿತು$_1$)+ ?]

**ಬಲ್ಗಾರಿಕೆ** (ನಾ). = ಬಲ್ಗಾರ ೨: ಆಱು ಖಂಡದ ಪ್ರಜೆಗಳಿಗೆ ನಿನ್ನಯ ರೂಪ ತೋಱಿ ಕೃತಾರ್ಥರ ಮಾಡಿ ಮೂಱು ಚೋಟೆಂದಾಱು ಖಂಡವ ಕಂಡು ಬಲ್ಗಾರಿಕೆಯೊಳು ಬಹವೇಳು (ಭರತ. ೨೦-೦೩) ; ಆಱು ಖಂಡವ ತನ್ನ ವಶವಮಾಡಿಕೊಂಡೊಡನಾರಂಗಸೇನೆಯೋಲೈಸೆ ಮೂಱು ಲೋಕವ ದಾಂಟಿ ಕೀರ್ತಿಯನಟ್ಟಿ ಬಲ್ಗಾರಿಕೆಯೊಳು ಬರುತಿರ್ದ (ಭರತ. ೪೪-೩೬).

[ಬಲ್ಗಾರ + – ಇಕೆ]

**ಬಲ್ಗಾಳೆಗ,** ಬಲುಗಾಳೆಗ (ನಾ). ಬಲವಾದ ಕದನ : ಅಂತು ಬಲ್ಗಾಳೆಗವೆನಿಪ ಬಲ್ಗಾಳೆಗವಂ ನೀಡುಂ ಕಾದುವನ್ನೆಗಂ (ಶಾಂತಿಪು. ೪-೩೩ ವ). **ಬಲುಗಾಳೆಗ :** ಬಲುಗಾಳೆಗವ ಭೀಮಂಗೆ ಸೇರಿಸಿ ಪಾಳೆಯಕೆ ತಿರುಗಿದರು ಕೃಷ್ಣಾರ್ಜುನರು ದುಗುಡದಲಿ (ಕುವ್ಯಾಕ. ೦೬-೦).

[ಬಲ್$_2$ (<ಬಲ್ಲಿತು$_1$) + ಕಾಳೆಗ]

**ಬಲ್ಗಿಚ್ಚು**, ಬಲುಗಿಚ್ಚು, ಬಲ್ಗಿರ್ಚು (ನಾ). ದೊಡ್ಡ ಉರಿ; ಅಧಿಕವಾದ ಬೆಂಕಿ : ಮಿಱುಪ ಮಿಂಚುಗಳ ಬಂಬಲ್ಗಳಗ್ಗಳ ಮೊಗಳಮರ್ದುಗ್ಗೆಯ ವರ ನೇಸಱ ಪಲವ ಜಗಜಗಿಸುವ ಬಲ್ಗಿಚ್ಚ ಪಳಿವ ಲಿಂಗಂ ಮೂಡೆ (ಭಾವಚಂ. ೩-೨೬) ; ಪೆರ್ಚಿದ ಕಂಬನಿಯ ಕಡಲೊಳಗೆ ಡಾವರಿಪ ಬಡಬಶಿಖಿಯೆಂಬಿನಂ ಕಾಣಿಸುವ ಬ[ಶಾಕಾಂ. ೪]ಲ್ಗಿಚ್ಚಿಗಪನೊಡಲ ನಿಂಬುಗೊಟ್ಟಂ (ಚೈವಿಭಾ. ೦೩-೫೯). **ಬಲುಗಿಚ್ಚು :** ಉತ್ತಮದ ತಱಪಿನೆಮ್ಮೆಯ ಹಾಲನೊಲೆಯ ಮೇಲೆತ್ತಿ ಸೋದಿಸಿಕೊಂಡು ಬಲುಗಿಚ್ಚ ನೆಳಿಸದೆ ಹೊತ್ತದಂದದೊಳು . . . ಕಾಸಿ (ಸೂಶಶಾ. ೨-೧) ; ಸುರಂಗಗಳೊಳಗೆ ಕರಿಯಮದ್ದನು ತುಂಬಿ ಹತ್ತಿಸೆ ಬಲುಗಿಚ್ಚು ತರಣಿಮಂಡಲವ ಮುಟ್ಟಿದುದು (ಕಂನವಿ. ೧೮-೦೫೫). **ಬಲ್ಗಿರ್ಚು :** ಹಿಂದಣ ಹಿತತನದಿಂದೀ ವಿರಹದೊಳೊಂದಿದ ಬಲ್ಗಿರ್ಚಿಗೆ ವೇದನೆಯಂ ತಂದೆನ್ನಂ ಭಸ್ಮೀಕರಿಸದೆ ತಾಂ ನಿರ್ನೆರಮಿಹುದಲ್ಲ ಎಂದಾವೊಡುಲೊಳಗಣವಾಯುವನಲ್ಲಿಂದವೆ ಪೊಱಮಡಿಸಿದ ಮಾಳ್ಕೆಯೊಳರವಿಂದವಿಶಾಲವಿಲೋಚನೆಯಾ ನಿಡುಸುಯ್ಕರವೊಪ್ಪಿದುದು (ಜಯಶಾ. ೪-೩೦). [ಬಲ್$_2$ (<ಬಲ್ಲಿತು$_1$) + ಕಿಚ್ಚು]

**ಬಲ್ಗಿರ್ಚು** 'ಬಲ್ಗಿಚ್ಚು' ನೋ.

**ಬಲ್ಗುಂಡು**, ಬಲುಗುಂಡು (ನಾ). ೧. ದೊಡ್ಡ ಗುಂಡು ; ಭಾರಿಯಾದ ಕಲ್ಲು,–ಬಂಡೆ : ಎತ್ತುಗಲ್ ಪಿರಿಯ ಡೆಂಕಣಿ . . . ಬಲ್ಗುಂಡು ಪೆರ್ದೊಲೆ . . . ಇಡುಗಲ್ಲ ಮೊತ್ತವಾಪುರದೊಳಿಲ್ಲ (ಪದ್ಮರಾ. ೩-೨೦). **ಬಲುಗುಂಡು :** ೧. ಬಿಲ್ಲಂಬ ಬಿಸುಟನು ಸುಗತಿದಾಣಮನಿಂಬಱಿದ್ದು ತಾನೇಱುವಂತೇಱಿದನು ಬಲುಗುಂಡ (ಶಾಕ್ಯಭ. ೫-೪೧). ೨. ತುಪಾಕಿಯಲ್ಲಿ ಹಾರಿಸುವ ದೊಡ್ಡದಾದ ಗುಂಡು ; ಫಿರಂಗಿಗೆ ಹಾಕಂವ ದೊಡ್ಡ ಗೋಲಿ : ನಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಱಿದೆಡೆಗೆ ಸಿಡಿವ ಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಕುಮಾರಾಂ. ೪೨-೩೯).

[ಬಲ್$_2$ (<ಬಲ್ಲಿತು$_1$) + ಗುಂಡು]

**ಬಲ್ಗುದುರೆ,** ಬಲುಗುದುರೆ (ನಾ). ಶಕ್ತಿಯುತವಾದ ಕುದುರೆ ; ಬಲಿಷ್ಠವಾದ ಕುದುರೆ : ಬಲ್ಗುದುರೆಯೊಳ್ ಕೂಡಿ ಮಱುಗೋಡಿಂದು ಕವಣೆಯಿಂ ಬಲದಿಂದಶ್ವಾಧಾರಿಯೊಪ್ಪುವಂತೆ . . . ಸುವ್ರತಂಗಳಿಂ ಭವ್ಯರುಮೊಪ್ಪುವೆರಸಿರ್ಪುದು (ಧರ್ಮಾಮೃ. ೦೨-೫). **ಬಲುಗುದುರೆ :** ಅಳಿದುದೈನೂಱರಸುಗಳು ಮುಮ್ಮುಳಿತವಾಯ್ತೈವತ್ತುಸಾವಿರ ಬಲುಗುದುರೆ ನುಗ್ಗಾದುದೊಂಬೈನೂಱು ಭದ್ರಗಜ (ಕುವ್ಯಾದ್ರೋ. ೦೦-೨೦) ; ಮುಸುಕಿ ದೆಸೆಯ ಖುರಪುಟಧೂಳಿ ಬಿಡದೆ ಮಾಮುಸಕಿ ವಾಹಕರೇಱಲಂದು ಬಿಸಿಲ ಕುದುರೆಯಂತುಭಯಬಲದೊಳು ಕಣ್ಗೆಸೆದವು ಬಲುಗುದುರೆಗಳು (ಕುಮಾರಾಂ. ೦೨-೪೦). [ಬಲ್$_1$ (<ಬಲ್ಲಿತು$_1$) + ಕುದುರೆ]

**ಬಲ್ಗುರುಜು** (ನಾ). ದೊಡ್ಡದಾದ ಮಂಟಪ,—ಅಟ್ಟಳೆ : ನಿಳಯ ನಿಳಯದ ಮುಂದೆ ಬಲ್ಗುರುಜುಗಳ್ ನಡುವೆ ತೊಳಪ ಮಣಿಗುಡಿ ತೋರಣಂಗಳಿಂ ಪನ್ನೀರ ಚಳೆಯದಿಂದಗರುಧೂಪದ ಹೊಗೆಗಳಿಂ ಬೀದಿ ಬೀದಿಗಳ್ ಚೆಲ್ವಾದುವು (ಚಬಶು. ೫-೨).

[ಬಲ್$_2$ (<ಬಲ್ಲಿತು$_1$) + ಕುರುಜು]

**ಬಲ್ಗುಱಿ** (ನಾ). ಬಲಿಷ್ಠವಾದ ಕುರಿ ; ಕೊಬ್ಬಿದ ಮೇಷ : ದೈವಮಾ ಕುಱಿಯಿರ್ದೊಂದೆಡೆಗೆಯ್ದಿ ಒಂದೆರಡು ಮೂಱುಂ ನಾಲ್ಕುಮಯ್ದಾಱು ಬಲ್ಗುಱಿಯ ತಿಂದೊಡೆ ಕಾಪಿನಾಳ್ಬಡಿಗುವೋ ನಾಯ್ಮಿಂಗುಮೋ (ಪಸಾರ. ೪೬೭). [ಬಲ್$_2$ (<ಬಲ್ಲಿತು$_1$) + ಕುಱಿ$_3$]

**ಬಲ್ಗೂದಲ್** (ನಾ). ಹೇರಳವಾದ ಕೂದಲು ; ಕೇಶರಾಶಿ : ಕೆನ್ನವಿರ್ ಮುಡಿ ಕೆದರಿತಾ ರಾಕ್ಷಸಗೆ, ದೆಸೆದೆಸೆಗೆ ಜಡೆಜಡೆಯ ಬಲ್ಗೂದಲಂ ಕೊಡಹಿ (ಶ್ರೀರಾಮಪೂ. ೬೮೭-೨೩೯).

[ಬಲ್$_2$(<ಬಲ್ಲಿತು$_1$) + ಕೂದಲ್ (< ಕೂಂದಲ್)]

**ಬಲ್ಗೂಳಿ**, ಬಲುಗೂಳಿ (ನಾ). ಬಲಿಷ್ಠವಾದ ಎತ್ತು ; ಕೊಬ್ಬಿದ ವೃಷಭ : ಅಡೆಯಾಂ ಕೋಡೆತ್ತುತುಂ ವಾರ್ದನಿಗೆ ಮಸಗುತುಂ . . . ಪಾಯ್ದು ಪಿಂಡಂ ಕಲಕಿ ಕೆಲೆಯುತುಂ ಬೆರ್ಚೆ ಬಲ್ಗೂಳಿಗಳ್ಪಿಂಗುಡೆ ಗಂಡಂ ಸೂಳುತುಂ ಬಂದುದು ಮದವಿದಳತ್ಪಿಂಗಳಾಕ್ಷಂ ಮಹೋಕ್ಷಂ (ಲೀಲಾವ. ೫-೯೭). **ಬಲುಗೂಳಿ** : ರಕ್ಕಸರೇಳಿಗೆಗೆ ಕಡುಭಂಗವೊದವಿತು ಕೀಳುತ್ತರದಾ ಹುಲುನರರು ಬಲುಗೂಳಿಯಾದರಲಾ (ರಾಮಾಸಂ. ೩-೩-೨೭).

[ ಬಲ್$_2$ (< ಬಲ್ಲಿತು$_1$) + ಗೂಳಿ$_1$ ]

**ಬಲ್ಗೆಂಡ** (ನಾ). ದೊಡ್ಡದಾದ ಕೆಂಡ ; ಪ್ರಖರವಾದ ಇಂಗಳ : ಬಲ್ಗೆಂಡಂಗಳನಾಯ್ದು ತಂದು ಪುಟವಪ್ಪಂತೂದಿ . . . ಧೂಪಮಂ ನಲ್ಗಂಪುಣ್ಮಿರಲಾಗಳರ್ಚಿಸಿದನಾ ಗಂಗಾಧರಂಗಟ್ಟಿಜಿಂ (ಉದ್ಭಟ. ೧೧-೭೯).

[ ಬಲ್$_2$ (< ಬಲ್ಲಿತು$_1$) + ಕೆಂಡ ]

**ಬಲ್ಗಯ್**, ಬಲುಗಯ್, ಬಲುಗೆಯ್, ಬಲುಗೈ, ಬಲ್ಗಯ್, ಬಲ್ಗೈ (ನಾ). ೧. ಶಕ್ತಿ ; ಬಲ ; ಪರಾಕ್ರಮಂ : 'ಬಲ್ಗಯ್ಯ' ಪರಾ. **ಬಲುಗಯ್** : ೧. ವೀರ ವಿದ್ಯುನ್ಮಾಲಿಯೊಡನೆ ಬರ್ಪ ಕಲಿಮಹಾನಾಭ . . . ಜಂಭ ಮುಂತಾದ ಬಲುಗಯ್ಯ ರಕ್ಕಸರ್ ಕೋಂಟೆಯಂ ಪತ್ತಿರ್ದ ದಿವಿಜರಂ ಸದೆಬಡಿದರು (ಶಂಕ. ೯೩-೨) **ಬಲುಗೆಯ್**: ೨. ಬಲಿಷ್ಠವಾದ ಕೈಗಳನ್ನುಳ್ಳವನು ; ಶೂರ ; ಪರಾಕ್ರಮಿ : ಅಭಿಮನ್ಯುವರ್ಜುನನ ಕುವರನಿವ ಮಗುವಲ್ಲ ಬಲುಗೆಯ್ಯವನ ಮೋಹರದೊತ್ತಿನಲಿ ನಿಂದವರು ಸಾತ್ಯಕಿ ಚೇಕಿತಾನ ಪ್ರಮುಖ ನಾಯಕರು (ಕುಮಾ.ಭೀ. ೨-೧೪). **ಬಲುಗೈ** : ೨. ಎಲೆ ಧನಂಜಯ ಸೇನೆ ಬಲಗೈಯುಳಿದವರು ರಣಖೇಡರೇ (ಕುಮಾ.ಕ. ೦೪-೪೦). ೩. ಶಕ್ತಿಯುತವಾದ ಹಸ್ತ : ಜಗವ ಹೂಡುವ ಹೊರೆವ ಬಲುಗೈಯುಗಧರಂಗೀ ನೃಪರ ಕುಱಿವಿಂಡುಗಳ ಕುಮ್ಮರಿಗಡಿತಕಾವುದು ಬೇಕು ಭುಜಸತ್ವ (ಕುಮಾ.ಸ. ೦೦-೧೧). ೪. (ಆಲಂ) ಬೆಂಬಲನಾದವನು : ಸರ್ವರಿಗೆ ಬಲುಗೈ ಸಮೃದ್ಧ ಚತುರ್ವರ್ಗಾನ್ವಿತಸುರು ಕೃಪಾನಿಧಿ ಶರ್ವನನು ಭಜಿಸಿದನು ಕಾಮಿಸಿ ಯಾದವರ ಜಯುವ (ನಿಜಾಗ. ೧೧-೯೦-೦೬). **ಬಲ್ಗಯ್** : ೧. ಬಲ್ಗಯ್ಯ ನೃಪರಂಜಿ ತಡೆಯದೆ ರಘೂದ್ವಹನ ಸೊಲ್ಗೋಳಿ ನಮಿಸಲಿಳೆಯೊಳ್ಚರಿಸುತಧ್ವರದ ನಲ್ಗುದುರೆ ಬಂದು . . . ಪೊಕ್ಕುಡೆ (ಜೈಮಿಭಾ. ೨೦-೫). **ಬಲ್ಗೈ** : ೧. 'ಬಲ್ಗೈಗಲಿ' ಪರಾ.

**ಬಲುಗಯ್ಯತನ** = ಶೌರ್ಯ ; ಪರಾಕ್ರಮ : ಬಲುರಾವುತರ ಮೈಯೊಳಗೆ ಬಲ್ಲೆಹವನು ಬಲಿದನು ಸೆಲದ ರಾವುತರ ಸೆಲವನಿಕ್ಕಿದನಂತಕನ ಮೇಲ್ ರಾಮನ ಬಲುಗಯ್ಯತನವನೇನೆಂಬೆ (ಕುಂರಾಸಾಂ. ೦೬-೪೨).

[ ಬಲ್$_2$ ( < ಬಲ್ಲಿತು$_1$) + ಕೆಯ್$_2$ ]

**ಬಲ್ಗೆಯ್ತ** (ನಾ). ೧. ಬಹಳ ಕಾರ್ಯ ; ಅನೇಕ ಕೆಲಸ : ಮನಮಂ ಬೆಟ್ಟಿತು ಮಾಡಲೆಂದೆ ಪಡುವಳ್ ಬಲ್ದೋಂಟಿಯಿಂ ಬೇಂಟದೊಳ್ ಮನಮಂ ಬೇಂಟಮನಾಗಳಂತೆ ಒಳೆವಳ್ ಬಲ್ಗೆಯ್ತದಿಂದೊತ್ತೆಯಾಣ್ಮನೊಳಂ ಮೆಯ್ಯನೆ ಮಾಡುವಾಕೆ ಭವಮಂ ಪೇಟ್ಮಾಡಳೇ (ಲೀಲಾವ. ೨-೧೦೩). ೨. ಒಳ್ಳೆಯ ಕೆಲಸ : ಕಾಲ್ಗಾಪಿನ ಬಲ್ಲಣೆಯೊಳ್ಬಲ್ಗೆಯ್ತದಿ ನಿಱಿದು ಮಡಿಯೆ ನೆತ್ತರ ತೊಱೆಗಳ್ಗಲ್ಗಲನೆ ಪರಿಯೆ ಕರುಳ ಪಿಣಿಲ್ಗಳ್ ತೆಪ್ಪಂಗಳಾಗೆ ತೇಂಕಿದರರೆಬರ್ (ಶಂರಾವಿಜ. ೦೩-೭೯).

[ ಬಲ್$_2$ (< ಬಲ್ಲಿತು$_1$) + ಕೆಯ್ತ$_1$ ]

**ಬಲ್ಗೆಯ್ದು**, ಬಲುಗೈದು, ಬಲ್ಗೈದು (ನಾ). ಬಲವಾದ ಆಯುಧ ; ಬಲಿಷ್ಠವಾದ ಶಸ್ತ್ರ : ಪುಸಿವಾತಿಗೆ ಬಾಯ್ದೆಗೆಯದ ವೈರಿಗಳಿಱಿತದ ಬಲ್ಗೆಯ್ದಿಗೆ ಸುಗಿಯದ ಯತಿಕುಲತಿಲಕನನವನೀಪತಿ ಕಂಡಂ (ಜಯಕಾ. ೯-೪೫). **ಬಲುಗೈದು** : ಕೈದುವೇಕೆ ಪ್ರಳಿಂದ ನಮ್ಮೊಡನೈದಿಸಾ ಭುಜಯುದ್ಧದಲಿ ಬಲುಗೈದುವಿದೆಲಾ ಮುಷ್ಟಿ (ಕುಮಾ.ಅ. ೬-೨೩) ; ತೋರ್ಪಿರ್ಕೈದು ತಲೆಗಳ ಬೈತಿರಿಸಿ ಬಲುಗೈದುಗಳ ಬಿಸುಟಡಗಿಸೀ ರಾಕ್ಷಸಕಳೇವರವ ಐದು ತಾಪಸವೇಷವನು (ತೊರರಾ. ೩-೯-೦೩). **ಬಲ್ಗೈದು** : ಬಲುಸಲ್ವ ಕರ್ಮರಿಪುವಂ ಗೆಲ್ವೆಂದು ಬಲ್ಗೈದುವಾವುದೊ ಸದ್ದರ್ಶನದೀಕ್ಷೆ (ಅನಂತ. ೯-೪೪) ; ಬಲ್ಗೈದುಗಳ್ಚಲಚರಂಗಳಂತಿರೆ ಭಟರ ಬೊಬ್ಬೆಯುಬ್ಬರವಾಗೆ ಪಡಗುಗಳ ಪರಿಜನಾಂತಿರೆ ಪತಾಕಾನ್ವಿತ ರಥಂಗಳಾಪಡೆ ನೋಡೆ ಕಡಲೆನಿಸಿತು (ಕೇಶರಾ. ೧೧-೧೨).

[ಬಲ್$_2$ (< ಬಲ್ಲಿತು$_1$) + ಕೆಯ್ದು]

**ಬಲ್ಗೆಯ್ಯ**, ಬಲುಗಯ್ಯ, ಬಲುಗೆಯ್ಯ, ಬಲುಗೈಯ, ಬಲ್ಗಯ್ಯ (ನಾ). ೧. ವಿಶೇಷವಾದ ತೋಳ್ಬಲವನ್ನುಳ್ಳವನು ; ಮಹಾ ಪರಾಕ್ರಮಿ ; ಸಮರ್ಥ : "ಪರಾಕ್ರಮಂ ಪ್ರಥಿತಂ ಬಲ್ಗೆ[ಪಾಠಾಂ. ಲ್ಗೈ]ಯ್ಯಂ" (ಶಮದ. ೧೦೫-೫೦) ; ಮೆಯ್ಯ ದಂಡಿಸಿದನೆ ಭಿಕ್ಷೆಗೆಂದೊರ್ವರ್ಗೆ ಕೆಯ್ಯೊಡ್ಡಿದನೆ ಚಕ್ರಧರನು ಉಯ್ಯಲ ತೂಗಿದಂತವ್ಯತಕೆ ಸಂದ ಬಲ್ಗೆಯ್ಯನಲ್ಲವೆ (ಶರಷ. ೭೮-೫೪). **ಬಲುಗಯ್ಯ** : ೧. ಎಲಗೆ ನಾ ಬೇಡಲೀಯದೆ ನಿನ್ನ ನಿಮ್ಮಣ್ಣ ತಲೆಗೊಟ್ಟನಿನ್ನು ನಿನ್ನುವ ಕಾವ ಬಲುಗಯ್ಯ [ಪಾಠಾಂ. ಗೈಯ] ನಾರು ಹೇಳು (ಸೊಬಸೋ. ೭-೫೭) ; ಚಲದಂಕ ಕಾಟ ಕಬ್ಬಿಲ ನಾಗ ಬುಕ್ಕಣ್ಣ ಬಲುಗಯ್ಯ ತಿಮ್ಮಣ್ಣ ವರದ ಕೊಲೆಗೇಡಿ ಮಾದಿಗ ಹಂಪನೆಂದೊಬೀ ಬಲುತರದವರೆಯ್ದಿದರು (ಕುರಾಸಾಂ. ೧೯-೯೦). ೨. ಶ್ರೇಷ್ಠನಾದವನು ; ಜ್ಞಾನಿ : ಬಲ್ಲೆನೆಂಬ ಬಲುಗಯ್ಯ [ಪಾಠಾಂ. ಗೈಯ]ರ ನುಂಗಿತ್ತು ಮಾಯೆ ಅಱಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ (ಮಹಾದೇ. ಬ. ೦೭-೨೫) ; (ವಚಸಂ. ೫೯-೨೦ ನೋ). **ಬಲುಗೆಯ್ಯ** : ೧. ಮೆಯ್ಯ ದಂಡಿಸದೆ ಚಿತ್ತವನೆ ದಂಡಿಸಿ ತನ್ನೊಳೊಯ್ಯನೆ ನಿಂದು ಕರ್ಮಗಳಾ ಉಯ್ಯ ನುಗ್ಗೊತ್ತಾವಂತೊತ್ತಿಬಿಟ್ಟಾ ಬಲುಗೆಯ್ಯನೆದ್ದನು ತನ್ನ ಪುರಕೆ (ಶರಷ. ೬೨-೭೦). **ಬಲುಗೈಯ** : ೧. ಬಲುಗೈಯ[ಪಾಠಾಂ. ಗಯ್ಯ]ನೊಡನೆ ಹಗೆವಡೆದು ಕೊಲೆಗಂಜಲೇಕೆ (ಮೋಕ್ಷಮೂ. ೪೦-೦೭೭) ; ಜರೆಯನಿಪುದಭಿಧಾನವೆನ್ನದು ವರ ಜರಾಸಂಧಕನಿವನು ಸುರನರರೊಳಗೆ ಬಲುಗೈಯ [ಪಾಠಾಂ. ಯ್ಯ] ನಹಸೆಂದಿತ್ತಳರ್ಭಕನ (ಕುಮಾ.ಸ. ೨-೪೯). **ಬಲ್ಗಯ್ಯ** : ೧. ಬಲ್ಗಯ್ಯಂ, ಮೆಲ್ಗಯ್ಯಂ (ಶಬ್ದಾಮ. ೩೩೦ ಪ್ರಯೋ).     [ಬಲ್ಗಯ್ + – ಅ$_7$]

**ಬಲ್ಗೆರ್ಚು** (ನಾ). (ಮರದ) ವಿಶೇಷವಾದ ಕೆಚ್ಚು,—ಸತ್ತ್ವ ; ಹೇರಳವಾದ ಸಾರ: ಮಂದರದೊಳಂದಂಬಡೆದು ನಿಂದ ಬಲ್ಗೆರ್ಚ[ಪಾಠಾಂ. ಚ್ಚ]ನ ಮುಂಡಿಗೆಯಂ ಮುಱಿದು ಪಿಂಗಾಲ್ಗೆ ತೊಡರ್ಚಿದಗ್ಗದಗ್ಗರಣೆಯಂ ಛಟಛಟನೆ ಕೀಳ್ತು (ರಾಜಶೇ. ೬-೧೧ ವ).   [ಬಲ್$_2$ (< ಬಲ್ಲಿತು$_1$) + ಕೆರ್ಚು]

**ಬಲ್ಗೆಱೆ**, ಬಲುಗೆಱೆ (ನಾ). ದೊಡ್ಡದಾದ ಕೆರೆ : ಕಡಲುಗಳಾ ನಾಡ ಸಿರಿಯ ಮೊಗವ ನೋಡೆ ಬಿಡದೆಯ್ತಂದು ವೆಂಬಂತೆ ಕಡೆಗೋಡಿಗಳಿಂದ ಮೆಱೆವ ಬಲ್ಗೆಱೆಗಳಾ ಪೊಡವಿಯೊಳೆಸೆದಿರುತಿಹವು (ಕುರಾಸಾಂ. ೨-೩೪). **ಬಲುಗೆಱೆ** : ಬಲುಗೆಱೆಗಳು ಬಱತವು ಪೊಕ್ಕ ತೊಱೆಗಳು ತೊಲಗಿಸಿದವು ಜೀವನವನು ಶಿಲೆಗಳೊಟ್ಟಿಲು ಪುಡಿಪುಡಿವೊಡವೆನಲಾ ಬಲದ ಬಹಳವನೇನೆಂಬೆ (ಕುರಾಸಾಂ. ೪೦-೭೬).     [ಬಲ್$_2$ (< ಬಲ್ಲಿತು$_1$) + ಕೆಱೆ]

**ಬಲ್ಗೇಣ್** (ನಾ). ಬಲಿಷ್ಠವಾದ ಸಣ್ಣ ಕತ್ತಿ : ಬಾಣ ಸವೆಯೆ ಬಾಣಾಸನ ಮುಱಿಯೆ ಬಲ್ಗೇಣಿಂದ ಪೊಕ್ಕಿಱಿದಾಡಿ ಪ್ರಾಣವನುಳಿದು ಬಿಲ್ವಡೆ ಸಗ್ಗದೊಳು ಪೋಗಿ ಕಾಣಿಸಿಕೊಂಡರೆಂದೊಸೆದು (ಕುರಾಸಾಂ. ೦೨-೬೦).

[ಬಲ್$_2$ ( < ಬಲ್ಲಿತು$_1$) + ಗೇಣ್]

**ಬಲ್ಗೈ** 'ಬಲ್ಗಯ್' ನೋ.

**ಬಲ್ಗೈಗಲಿ** (ನಾ). ಕರಕೌಶಲವುಳ್ಳ ವೀರ ; ಬಹಳ ಪರಾಕ್ರಮಿ : ಬಿಲ್ಗಾಱಿಕೆಯೊಳ್ ಬಲ್ಗೈಗಲಿಗಳನೆಸಗಿ. ಪಾಟವಮಾಟಮುಪ್ಪಂತು ಕಲಿಸಲೊಡಂ . . . ಕಳೆಳಿಂ ಬೆಳಗಿದರ್ ಯಮಳರ್ (ರಾಮಾಕ. ೦೫೧-೧೭).

[ಬಲ್ಗೈ (< ಬಲ್ಗಯ್) + ಕಲಿ$_8$]

**ಬಲ್ಗೈದು** 'ಬಲ್ಗೆಯ್ದು' ನೋ.

**ಬಲ್ಗೊಲೆ** (ನಾ). ಭೀಕರವಾದ ಕೊಲೆ,—ಹತ್ಯೆ : ಸೂಸಿದರ್ ಕೆಂಡಮಂ . . . ಮಾಸಿದರ್ ಕಾರ್ಬೊಗೆಯ ಪರ್ಬಿನಿಂ ಬಲ್ಗೊಲೆಗೆ ಹೇಸಿದರ್ (ಚಂಪೂ. ೧೨-೩೬); ನೆಗೆವತ್ತು ಕಯ್ಗೆ ಬಾಳ್ ಬಲ್ಗೊಲೆಗಳ್, ಬಾಳ್ಗಳೆಡೆವೊಕ್ಕು ಸಂತೈಸದಿರೆ ಕೃಷ್ಣನ್ ಎಲ್ಲಿ ಅಶ್ವತ್ಥಾಮನ್ ? ಒರೆವು ದೊಂದಿರ್ಕುಂ (ಅಶ್ವತ್ಥಾ. ೩೦-೩೮೦). [ಬಲ್₂ (<ಬಲ್ಲಿತು₁)+ಕೊಲೆ₂]

**ಬಲ್ಗೋಂಟೆ** (ನಾ). ಬಲವಾದ ಕೋಟೆ ; ಭದ್ರವಾದ ದುರ್ಗ : ತಂತ್ರ ಪಾಲನಂತೆ ಗುಣಪಾಲನುಂ ಬಲ್ಗೋಂಟೆಯಂತೆ ವಿಘ್ನಾತ್ವಕ್ಕಭೇದ್ಯನುಂ ಮುತ್ತಿನ ಸತ್ತಿಗೆಯಂತೆಲ್ಲಾ ದೆಸೆಯೊಳ್ ಸೇವ್ಯನುಂ . . . ರಾಜಸೇವಕ ನಂತಡಕವಂತನುಮಪ್ಪುದು (ಧರ್ಮಾಮೃ. ೩-೯೯); ಆವ ಪೆರ್ಗಡಲ್ ಅಗಳು, ಆವ ಮಲೆ ಬಲ್ಗೋಂಟೆ, ಅದರ ಮುಂಬಾಯ್ವುರಿವು ಮೊಗಗಟ್ಟು ನಿಲಲು ? (ಶಾರಸಿ. ೬-೧೨೩). [ಬಲ್₂ (< ಬಲ್ಲಿತು₁) + ಕೋಂಟೆ]

**ಬಲ್ಗೋಲ್**, ಬಲುಗೋಲು (ನಾ). ಶಕ್ತಿಯುತವಾದ ಬಾಣ : ಕೋಶಿ ವಡೆಯುಮವಾಳ್ಬಲಮುಂ . . . ಬಿಬೀಚಣಂ ಮುಂತಪ್ಪ ಬೀರರ ಕೂಟಮುಂ, ಬಲ್ಗೋಲ ರಭಸಮಂ ತಡೆಯಲಾಱದೆ . . . ಮುನ್ನಂ ಪೊಱಮಟ್ಟ ತಂತಮ್ಮೆಡೆಯಂ ಸಾರ್ದುದು (ಅದ್ಭುತ. ೯೮-೧೩). **ಬಲುಗೋಲು :** ಬೀಳಲವನೀಪತಿಗಳಶಿಹೀಹಾಳಿಯಲಿ ಸಾತ್ಯಕಿ ಮುಳಿದು ಬಲುಗೋಲಿನಲಿ ಗಂಗಾಕುಮಾರನ ಸಾರಥಿಯನೆಸಲು (ಕುಮಾ.ಭಾ. ೬-೭). [ಬಲ್₂ ( < ಬಲ್ಲಿತು₁) + ಕೋಲ್₁ ]

**ಬಲ್ಚರ** 'ಬಲ್ಸರ' ನೋ.

**ಬಲ್ದಗರ್** (ನಾ). ಬಲಿಷ್ಠವಾದ ಟಗರು ; ಕೊಬ್ಬಿದ ಟಗರು : ಆತನ ಕಲದೊಳ್ ಚಂಡವ್ರಾತಂ ಸಿಡಿಲೇಳ್ಗೆಯೇಳ್ವ ಬಲ್ದಗ[ಶಾಶಂ. ಬಲುದಗ] ರೇಱದ್ದಾತಂ ಸಕಳಜಗದ್ವಿಖ್ಯಾತಂ ಹುತವಹನೆನಿಪ್ಪನು (ಗಿರಿಜಾ. ೬-೩೮). [ಬಲ್₂ (< ಬಲ್ಲಿತು₁) + ತಗರ್₂]

**ಬಲ್ದಡಿಗ**, ಬಲುದಡಿಗ (ನಾ). ೧. ಅತಿಬಲಿಷ್ಠನಾದವನು; ಮಹಾಬಲ ಶಾಲಿ; ಪತ್ತೆಂಟುಸಾಸಿರಮಾನೆಯುಂ ಪಡಲ್ವಡಿಸಿಯುಂ ಸೈರಿಸಲಾಱದೆ . . . ಬಲ್ದಡಿಗಂ ಬೀಸಿಯುಮೊಂದುಕೋಟಿವರೆಗಂ ಕೊಂದಂ ಮದೇಭಗಳಂ (ಶಂಕರಾ. ೧೦-೧೦೯). ೨. ಬಹಳಗಾತ್ರವಾದ ಶರೀರವುಳ್ಳವನು : ನಿಡಿಯರ್ ಬಲ್ಲಾಯದ ಬಲ್ದಡಿಗರ್ ವಂದಿರ್ದರಯ್ವರಾಲದ ಕೆಟಗಿಂ ತೊಡರ್ದರ್ ನಮ್ಮಯ ಭಕ್ಷದೊಳಡು ಪಣ್ಣಡು ಪೋಗು ನೀನುಮಾನುಂ ತಿಂಬಂ (ಶಂಕರಾ. ೬-೧೨); ತಡೆಯ್ದುನೆ ಮೇಲೆತ್ತಲ್ ಬಲ್ದಡಿಗರ್ ಬಲದಿಂದೆ ಕೆಡೆಯೆ ನೂಂಕಲುಮೆಂತುಂ ಗಡ ಬಾರದೆನಿಪ ಬೆಟ್ಟಂಗಡಹಡಿಸದೆ ನೋಡಿ (ಧರ್ಮಾಮೃ. ೧೯-೨೪). (ಗು). ೩. ಅತಿಬಲಿಷ್ಠವಾದ ; ಅತ್ಯಂತ ಬಲ ವುಳ್ಳ : ಮನಂಗೆಡಿಪ ಪುಲಿಯಿಂ ರೌದ್ರಾಕಾರಂಗಳಿಂ ಬಿಡೆ ಪಾಯ್ವ ಬಲ್ದಡಿಗ ಮರುಳಿಂ . . . ಇವು ಮೊದಲಾದನೇಕೋಪಸರ್ಗಂಗಳು ಮಾಡಿಯುಂ (ಧರ್ಮಾಮೃ. ೨-೨೨೯). ೪. ತುಂಬಿದಪ್ಪವಾದ : ಪೆರ್ಮರದ ದಿಮ್ಮಿಗಳ್, ಬಲ್ದಡಿಗ ವೇಣುಗಳ್ . . . ನುಣ್ಮಳಲ್ವೆಟ್ಟುಗಳ್ ಮೆರೆದಿರ್ದ ವಲ್ಲಳ್ಳಿ (ಶ್ರೀರಾಮಾ. ೯೩೩-೨೬೪). **ಬಲುದಡಿಗ :** ೨. ತಲೆಯಂ ಬಲುದಡಿ ಗರ್ಕಟಿ ನಿಲಲಾಱದೆ ಸುಂಟಿದಿಂದ ಕೋಡಗದಂತುಮ್ಮಳಿಸಿ ಕಳವಳಿಸಿ . . . ಕಡಮೆ ಮಱುಗಿ ತಳವೆಳಗಾದಂ (ಧರ್ಮಾಮೃ. ೦-೧೪೦). [ಬಲ್₂ (< ಬಲ್ಲಿತು₁) + ದಡಿಗ]

**ಬಲ್ದನಿ** (ನಾ). ಜೋರಾದ ಸ್ವರ ; ಗಟ್ಟಿಯಾದ ಧ್ವನಿ : ಪಾಮರಿ ಚರಿಸುತ್ತಾ ವನಕೆ ಸಾಲ್ದೆಸೆಯಿನೊಸೆದು ಬಂದೆಱಪ ಗಿಳಿವಳಗಂ ಕಯ್ಮುತ್ತಿ ರಯ್ಯುಮಾಗಿ ಬಲ್ದನಿವೆರಸು ಸೋವೆ (ಪದ್ಮರಾ. ೯-೧೭); ಬಲ್ದನಿಯ ಚಪ್ಪಳಿ ಗಳುಣ್ಮುವೋಲಪ್ಪಳಿಸಿ ತೋಳ್‌ಗಳಂ (ಶ್ರೀರಾಮಾ. ೩೯೨-೨೨೭). [ಬಲ್₂ (<ಬಲ್ಲಿತು₁) + ದನಿ₁ ]

**ಬಲ್ದಲೆ** (ನಾ). ದೊಡ್ಡ ತಲೆ ; ದಪ್ಪ ತಲೆ : ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ . . . ನೆತ್ತರ ತಳ್ತ ಬಲ್ದಲೆಯ ಬಿಂದಿಗೆ ಪಾವುಗೆ ಪಂಚಮಸ್ವನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೩೩೩). 'ಬಲ್ದಲೆಯ' ಪರಾ. [ಬಲ್₂ ( < ಬಲ್ಲಿತು) + ತಲೆ₁]

**ಬಲ್ದಲೆಯ** (ನಾ). ೧. ದೊಡ್ಡ ತಲೆಯನ್ನುಳ್ಳವನು : ಬಲ್ದಲೆಯಂ ತೋಳ್ನೀಳ್ದನಗಲ್ದುರದಂ ಬಟ್ಟದೊಡೆಯವಂ ಕೆಂಗಣ್ಣಂ ನೀಲ್ದ ಕವಿಯಾತ ನೆನಿಸುವನೊಲ್ದೊಲಿಸುಗುಮೆಸೆವ ಬೀರಸಿರಿಯಂ ಧುರದೊಳ್ (ಕಾವ್ಯಾವ. ೨೫೬); ಅತ್ವಕ್ಕೆ—ಅಲರ್ಗಣ್ಣಂ . . . ಬಲ್ದಲೆಯಂ, ಅಗಲ್ದುರದಂ (ಕವಿರ. ೧೮೬ ಪ್ರಯೋ). ೨. ಸಮರ್ಥನಾದವನು; ಬಲಿಷ್ಠನಾದವನು; ಪರಾಕ್ರಮಿ : ಗೆಲ್ದಾರೆ ಜನಕಸೇನೆ ಸಡಿಲ್ದಗಿಯೆ ಕಿರಾತಸೇನೆ ದಶರಥ ರಾಮಂ ಬೆಲ್ದಗೆದಿಸೆ ಮಾರ್ಪಡೆಯೊಳ್ ಬಲ್ದಲೆಯರ್ ಶಬರನಾಯಕರ್ ಪಡಲಿಟ್ಟರ್ (ಶಂರಾಮಾ. ೯-೭೪). [ಬಲ್ದಲೆ + — ಅ₇]

**ಬಲ್ದಸಿ**, ಬಲುದಸಿ (ನಾ). ಮರ ಅಥವಾ ಲೋಹದ ಚೂಪಾದ ದೊಡ್ಡ ಗೂಟ,— ಶೂಲ : ಬಿಡುವುರಿಯೆಣ್ಣೆ ಸೂಸುವ ಕನಲ್ಗಿಡಿ. . . ಕಡೆಸಿರಗೆಯ್ದು ನೂಂಕುದಳಿಯಿಕ್ಕುವ ಬಲ್ದಸಿ ಭೀತಿಯಂ ಮನಕ್ಕೊಡರಿಸೆ (ಶಂಪ್ರಭು. ೩-೧೦೩); ಹುರಿವ ಮಳಲಿನ ಕಾಸುವಂಬಲಿಯು . . . ಮರುಳ ಕೈಗಳ ನೆಟ್ಟ ಬಲ್ದಸಿಗಳ ಪರಿಪರಿಯು ಗುಂಡುಗೋವಿಯು. . . ಪಂದಿವಲೆಯ ಮೊತ್ತಂಗಳಾಳ್ವೇರಿಯೊ ಳ್ ಪಸರಿಸಿದುವು (ಚಂಪೂ. ೧೨-೧೧). **ಬಲುದಸಿ :** ಎಸೆವ ಕೋಂಟೆಯ ತೆನೆಗಳಲಿ ಕಟ್ಟಿಸಿ ಪತಾಕೆಗಳಂ ಬಸಿದ ಬಲುದಸಿಗಳಂ ಮಲಗಿಸಿ ಮಾರಂಗಳನಿರಿಸಿ ಎಡೆಗೆಡೆಗೆ . . . ಪೊಸದುರ್ಗವಂ ಪಾಟಿಸಿ ಪಿರಿಯ ನತಬಾವಿಗಳನಗುಳಿಸಿದನದಱೊಳಗೆ (ಬಸವಪು. ೦೬-೧೧); ಬಲೆ ಕಾಲ್ಮಣ್ಣೆ ಗುನ್ನಲುಗೂಡಿಡಿಸಲು ಬಲುದಸಿಯುರುಳುಳಿಯಿಂದ ನೆಲಗಪ್ಪುಗಳಿಂದ ಮೃಗಗಳ ಹರಣವ ತೊಲಗಿಸುವರು ಬೇಡರಲ್ಲಿ (ರಾಮಾಭಿ. ೦೩-೬೯). [ ಬಲ್₂ (<ಬಲ್ಲಿತು₁) + ದಸಿ ]

**ಬಲ್ದೆರೆ**, ಬಲುತೆರೆ (ನಾ). ದೊಡ್ಡದಾದ ಅಲೆ,—ತರಂಗ : ಕುದುರೆಯ ತಟ್ಟುಗಳ್ ನೆರೆದ ಬಲ್ದೆರೆಯಂ ಪಿಡಿದಿರ್ದ ಬಾಳ್ಗಳುಣ್ಮಿದ ನಿಡು ವಾಳೆಯಂ . . . ಪೊಸತೇರ್ ಪಡಗಂ ನೆಗೆಟ್ಟಿ ಪೆರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕದ್ಭಕಾ. ೨೦೭); ತುಂಬಿದ ಸಂಗೀತ ರಸದ ಬಲ್ದೆರೆಯೊಂದು ತುಂಬನುಚ್ಚಿದರೋ ಎಂಬಂತೆ ತುಂಬುರುವೀಣೆ ಯೊಳೊಲ್ದು ಪಾಡಿದರೆಂದು ತುಂಬುಜವ್ವನೆಯರು (ಭರತೇ. ೩-೭೨); ವಾರ್ಧಿಗಳ ಬಲ್ದೆರೆಗಳೊಂದೊಂದನಣಿವಂತೆ ದುರ್ಧರದ ರಾವುರಿಱು ದಾಡಿದರ್ (ಚಂಪೂ. ೨೯-೯). **ಬಲುತೆರೆ :** ಜಲಪಾನಕ್ಕೈದುವ ಕುದುರೆಯ ಸಾಲುಗಳ್ ಬಲುತೆರೆ ಬೆಳುಗೊಡೆ ನೊರೆಯು ಕೊಳಿಪ ಚಾಮರ ರಥಂ ಗಳಾಗಲಾ ಪುರ ಜಲರಾಶಿಯಂತೆ ರಾಜಿಸಿತು (ಕಂರಾವಿ. ೬-೩೩). [ ಬಲ್₂ (<ಬಲ್ಲಿತು₁) + ತೆರೆ₄ ]

**ಬಲ್ದೊಱೆ** (ನಾ). ವಿಶಾಲವಾದ ತೊರೆ : ನಿತ್ತರಿಸದೆ ಬಲ್ದೊಱೆ ಯೊಳ್ ಮತ್ತೆನಿಸದೆ ಬಿದ್ದೊರ್ಡಣ್ಣ ಸಹವಾಸಿಯೆ ಬಂದೆತ್ತುವುದುಳಿದವ ರಜಸಿಯುಮೆತ್ತಲ್ ಕೇಳಾಗದೆಂಬ ನಿಯಮಮುಮುಂಟೇ (ಧರ್ಮಾಮೃ. ೦-೧೨೩); ಉತ್ತುಂಗಶಿಲೆಗಳಿಂ ಭರದಿಂ ಬಿಳ್ದು ಪರಿವ ಬಲ್ದೊಱೆಯಾತಿ ಬಂಧುರವಡೆಯಿತ್ತು (ಜಯಂನಾ. ೯-೧೧). [ ಬಲ್₂ (<ಬಲ್ಲಿತು₁) + ತೊಱೆ₂ ]

**ಬಲ್ನಗೆ** (ನಾ). ಅತಿಯಾದ ನಗು; ದೊಡ್ಡನಗೆ : ಆ ಸಮಯದೆ ದೇವಿಯುವಗೆ ಮೋಹದ ರತಿಯಾಸೆಯ ಪುಟ್ಟಿಸಲಾಗ ಸೂಸುತ ರೂಪ ಜಯಂತ ಬಲ್ನಗೆಯ ವಿಲಾಸದೆ ಸಮರೋಳಿಂತೆಂದ (ಕಂರಾವಿ. ೦೦-೯). [ ಬಲ್₂ (<ಬಲ್ಲಿತು₁) + ನಗೆ ]

**ಬಲ್ನನೆ** (ನಾ). ದಪ್ಪವಾಗಿರುವ ಮೊಗ್ಗು : ನನೆಯಂ ಮುಂಡಾಡುತೆ

ಬಲ್ನನೆಯುಂ ಬಲವಂದು ಮುಗುಳನಾಲಿಂಗಿಸಿ ಕಂಪಿನ ಬಿರಿಮುಗುಳಂ ಚುಂಬಿಸಿಯುನುನಯದಿಂದಲರನಲೆದು ಶೀವಿದುವಳಿಗಳ್ (ಗಂಕ. ೨-೬೬); ಮಿಳಿರ್ದಾಡುವ ನುಣ್ಣಲಿರೆಲ್ಲಿಯುಲ್ಲಿ ಬಲ್ನನೆಗಳವೆಲ್ಲಿಯುಲ್ಲಿ ... ಪಣ್ಗೊನೆಗಳವೆಲ್ಲಿಯುಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಗಾ. ೬೨).
[ ಬಲ್ $_2$ (<ಬಲ್ಲಿತು$_1$) + ನನೆ$_3$ ]

**ಬಲ್ನಿಡಿದು** (ನಾ). ಬಹಳ ದೊಡ್ಡದಾದುದು; ಅತಿ ವಿಶಾಲವಾದುದು. ಬಲ್ನಿಡಿಯುವು (ಬಹುವ) : = ವೈಡೂರ್ಯಮಯುಮುಂ ಕಾಂಚನಮಯುಮುಂ ಸ್ವರ್ಣರತ್ನಮಯುಮುವಾಗಿ ಯುಥಾಕ್ರಮದಿನೆಂಟುಂ ನಾಲ್ಕುಂ ನಾಲ್ಕುಂ ಬಲ್ನಿಡಿಯುವಪ್ಪ ಮೂಱುಂ ಪೀಠಂಗಳ ಮೇಗೆ ... ನೆರೆದು (ಆಪು. ೬-೨೨೦ ವ). [ಬಲ್ $_2$ (<ಬಲ್ಲಿತು$_1$) + ನಿಡಿದು$_1$]

**ಬಲ್ನಿಱು** (ನಾ). ಹೆಚ್ಚಿನ ನೆರಿಗೆ ; ತುಂಬ ನಿರಿ : ಎಲೆ ಸುಕುಮಾರ . . . ಗೆಜ್ಜೆ ಮೆಲ್ಲುಲಿಗುಡೆ ಬಂದು ಬಲ್ನಿಱಿಯನಪ್ಪದೆ ತಳ್ವಿದೆಯ್ಯೆ ತನೂಭವಾ (ರಾಜಶೇ. ೦೩-೦೦೨) ; ತಮಾಲದೊಳ್ಪಲಿರುಡೆ ತಳ್ತ ಪೀಲಿಯ ತರಂಗದ ಬಲ್ನಿಱಿಗಟ್ಟು... ಪಸಿರ್ವುವೆತ್ತ ಪಟ್ಟಳಿಯ ನಿಱೋಳಮೊಪ್ಪಿರೆ ಪುಳಿಂದಿಯುರಾದರಮರ್ತ್ಯಕಾಂತೆಯರ್ (ಶಬಶಂ. ೩-೯).
[ ಬಲ್ $_2$ (<ಬಲ್ಲಿತು$_1$) + ನಿಱಿ$_2$ ]

**ಬಲ್ನುಡಿ** (ನಾ). ಬಿರುಸಾದ ನುಡಿ; ಒರಟಾದ ಮಾತು : ಬಡಿಹೋರಿ ಬಲ್ಪಂಟನೆಂಬ ಬಡನುಡಿ ಬಲ್ನುಡಿ ಬಡಧೈರ್ಯವಲ್ಲದೆ ಬಡಶಬ್ದ ನಿನ್ನ ಪೊಂದುವದೆ (ಶಶಾಂ. ೬೨-೬೩); ಕೊಡೆದಳೆಯುಂ ಮಾನವನುಂ ಪಿಡಿವಂ ಮಳೆ ಬಿಸಿಲ ದೆಸೆಗೆಯುದಜಂತೀಗಳ್ ಬಡದೊರೆಗಳ್ ಚಂಡನ ಬಲ್ನುಡಿಗೊಳಗಾಗಿಂತು ಕೆಟ್ಟತನಮುಂ ನೆಗಳ್ದರ್ (ಹರಿಶ್ಚಾರ. ೩-೨೨).
[ ಬಲ್ $_2$ (<ಬಲ್ಲಿತು$_1$) + ನುಡಿ$_2$ ]

**ಬಲ್ನೆಣ** (ನಾ). ಹೆಚ್ಚಾದ ಕೊಬ್ಬು; ಅತಿಯಾದ ಮೇದಸ್ಸು : ಕಾದ ಪಂದಿಗಳ ಬಲ್ನೆಣದಿಂ ಪೊಲಸಟ್ಟ ನಾರ್ವ ಜೇವಡೆಗಳ ಪುಣ್ಗಳಿಂ ತೊರೆವ ನೆತ್ತರ ಕೆಯ್ ನಡುಗಲ್ಕೆ ನೀಡಿ ಕೀಱಿಡೆಯುಡೆ ಗಂಟಲೀ ಮುಱಿದ ನೊಱೆಯ ನಿರ್ಘ್ಯಣನೆನ್ನ ತಂದೆಯುಂ (ಕಾದಂಪೂ. ೦೬೪).
[ ಬಲ್ $_2$ (<ಬಲ್ಲಿತು$_1$) + ನೆಣ ]

**ಬಲ್ನೆಲೆ** (ನಾ). ಬಲವಾದ ನೆಲೆ ; ಸ್ಥಿರವಾದ ಆಶ್ರಯ : ನಿತ್ಯಯೋಗ ನಿಷ್ಕಂಪಮುವಂಗೆ ಶಾಂತಮುನುತಾಪಮುನಾಱಿಸಿ ತಂ[ದುದಂ]ದು ಬಿರ್ದೊಗಂ ಪರೆದಿರ್ದವೋಲ್ ಮುನಿಗೆ ಕಲ್ನೆಲೆ ಬಲ್ನೆಲೆಯುಂ ನಿದಾಘದೊಳ್ (ಶಾಂತಿಪು. ೯-೦೦೬). [ ಬಲ್ $_2$ (<ಬಲ್ಲಿತು$_1$)+ನೆಲೆ$_1$ ]

**ಬಲ್ಪಂಥ** (ನಾ). ಅತಿಶಯವಾದ ಹಟ ; ಬಹಳವಾದ ಛಲ : ಸ್ವಲ್ಪ ದಿನವುಳಿಯುತ್ತಿ ಒಂದು ಸಾಧನ ಕಾಣೆ ಕಲ್ಪಾಯು ನಿನಗಿಲ್ಲವಲ್ಲೊ ಬಲ್ಪಂಥಗಳ ಮಾಡಿ ಭೋಗಪಡದಿರು (ಪಿದಾಶ್ಯ. ೪೬-೯).
[ ಬಲ್ $_2$ (<ಬಲ್ಲಿತು$_1$) +ಪಂಥ$_1$ (<ಪಂತ$_1$) ]

**ಬಲ್ಪಳಿ, ಬಲುಪಳಿ** (ಕ್ರಿ). ಬಲಗುಂದು ; ಶಕ್ತಿಹೀನವಾಗು : ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ ತಕ್ಕಳಿದು ತಡವಾಗಿ ಹೊರೆಯೇಱಿ ನೋಡುತುಂ (ಸಂಬಿರ. ೬-೦೨೯) ; ದೆಸೆದೆಸೆಗೆ ಕರೆಕರೆದು ಬಾಯಾಱಿ ಬಲ್ಪಳಿದು ನಿಂದಿರ ಲಾಱದೆ ಕಾಲ್ ಕುಪ್ಪಳಿಸಿ ಭೋಂಕನೆ ಕುಳ್ಳಿರ್ದು (ಗಂಕ. ೬-೬೬ವ); ನೋಡಿ ಮರೀಚಿಕಾಜಲಮನಂಬುವಿದೆಂದೆಳಸುತ್ತ ಬಂದು ಕೈನೀಡಿ ಕಲಂಕಿ ಪೊಕ್ಕು ತೆಗೆದಿಕ್ಕುತ ಪುಷ್ಕರಮಂ ನಿಜಾಸ್ಯದೊಳ್ ಬಾಡಿ ಬಳಲ್ದು ಬಲ್ಪಳಿದು . . . ಬೀಳ್ದುದರ್ಕಕರಕಲ್ಪಿತಸಂಜ್ವರನೊಂದು ಕುಂಜರಂ (ರಾಜಶೇ. ೩-೩೯). ಬಲುಹಳಿ : ಮಂಗಳ ಮಂಗಳ . . . ಕುಲವಳಿದು ಛಲವಳಿದು ಬಲುಹಳಿದು ನಿಲಲು ಸೂತ್ರದ ಜಂತ್ರ ದವಳಿಯೊಲು ಫಲಸಿದ್ಧಿ ಎನಿಸಿ ನಿಷ್ಫಲಸಿದ್ಧಿಯನೆ ಬಿಟ್ಟು ಭಕ್ತ್ಯಂಗನೆಯ ಮರ್ತ್ಯಕ್ಕೆ ತಂದಿತ್ತವಂಗೆ (ಅಪಶಂ. ೨೪೯-೦೩೦೦) ; ಎನ್ನನ್ನೇಕೆ ಕಾಡುಮಿರಿ ಎಲೆ ತಂದೆಗಳಿರಾ ಬಲುಹಳಿದು ಭವಗೆಟ್ಟು ಛಲವಳಿದಂ ಭಕ್ತೆಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ (ಶುಹಾದೇ ಪ. ೦೩೦-೨೪೪).
[ ಬಲ್ಪು+ಅಳಿ$_1$ (<ಅಟಿ$_1$) ]

**ಬಲ್ಪಾವು** (ನಾ). ದೊಡ್ಡಹಾವು : ಅವನವುರಪದವಿಯುಂತ್ಯದೊಳವನಿಗೆ ಬಲ್ಪಾವದಾಗಿ ಬೀಳ್ವನಂ (ಹಾಲಾಸ್ಯ. ೦-೨-೩೪).
[ ಬಲ್ $_2$ (< ಬಲ್ಲಿತು$_1$) + ಪಾವು$_1$ ]

**ಬಲ್ಪಿಡಿ$_1$** 'ಬಲ್ವಿಡಿ$_1$' ನೋ.

**ಬಲ್ಪಿಡಿ$_2$** 'ಬಲ್ವಿಡಿ$_2$' ನೋ.

**ಬಲ್ಪಿಲಿ** (ನಾ). ಬಲವಿಲ್ಲದಂದು ; ನಿರ್ಬಲವಾದುದು : ಒಡಲಿದು ಬಲ್ಪಿಲಿಯುಕ್ಕುಂ (ಸೌಖಂಡ. ೯-೦೦). [ಬಲ್ಪು+ —ಇಲಿ$_3$]

**ಬಲ್ಪು, ಬಲುಪು, ಬಲುಹು** (ನಾ). ೧. ಬಲ; ಶಕ್ತಿ; ಸಾಮರ್ಥ್ಯ; ಪರಾಕ್ರಮ : "ಪ್ರಾಣಃ ... ತರಃ ಸಹಃ—ಈ ೮ ಬಲ್ಪು (ಬಲುಹು)" (ಕಲಾಯು. ೦೨೦-೩೯) ; ಬಲ್ಪಂ ಕೂರ್ಪುಮಾರ್ಪುಂ ನಿರಂತರಮೊಪ್ಪಲ್ (ಎಇ. XIII, ೩೨೯-೩; 929) ; ಮಾಣಿಕಂ ಸೂಸೆ ಬಲ್ಪಿಂದೊದೆದಂ ಸಾರ್ತಂದು ದುರ್ಯೋಧನನ ಮಕುಟಮಂ ಕೋಪದಿಂ ಭೀಮಸೇನಂ (ಶಂಶಭಾ. ೦೩-೯೮); ಕೆಡೆದಿರ್ದ ಶಬರಂ ಕಕ್ಕಡವಂದಿಯನೀಕ್ಷಿಸುತ್ತ ಶಬರ ಸಮೂಹಂ ಬಿಡೆ ಕೊಂಡುಕೊಳೆನೆದು ಬಲ್ಪಂ ನುಡಿಯುತ್ತಿರ್ಪನ್ನಂ (ಗಂಕ. ೦-೦೦೦). ೨. ಬೆಳೆಯುವಿಕೆ; ಬಲಿಯುವಿಕೆ : ಎಳವಾಳೆ ಬಲ್ಪಿಗೆ ಬಂದರೆ ಸೀಗೆಯು ಮೆಳೆಯೊಳು ಮಥನವೆ (ಮೋಹಶ. ೩೯-೨೪). ೩. ದೃಢತೆ; ಸ್ಥಿರತೆ : ಪಿಡಿದೀ ವ್ರತಮಂ ನಾಂ ಸಾವೊಡೆ ಸಾವೆಂ ಬಿಡುವೆವಲ್ಲವೆಂದೊಡೆ ಮೂರ್ಖಿಂ ಮಡಿಪದೆ ಮಾಣಂ ಬಲ್ಪಿಂ ಪಿಡಿವೆಂ ಜಿನಪದಮನಿದುವೆ ಕಜ್ಜಂ ಪೆಱತೇಂ (ಧರ್ಮಾಮೃ. ೩-೦೦೦): ಪಿಂಗಿದ ನೀಱರ ಬಲ್ಪು ಪಾಱಿ ಪಾದರಿಗರ ನಾಣ್ಗಳುರ್ಕುಗಿಡೆ . . . ಜೇವೊಡೆಯ ಬಲ್ಲುಲಿ ನೀಳ್ದುದು ಕರ್ವುವಿಲ್ಲನಾ (ಕಬ್ಬಿಗಾ. ೩೦೦) ; ವಿರಚಿಸಿದಂ . . . ಲಕ್ಷ್ಮೀಶನೆಂಬೊರ್ವನು ಹೃದ್ವನಜದೊಳ್ದೇವಪುರದ ಲಕ್ಷ್ಮೀಶನ ಪದದ್ವಯವನಾವಗಂ ಧ್ಯಾನಿಸುವರಡಿಗಳು ಸದ್ವಿನಯದಿಂ ಭಜಿಪ ಬಲ್ಪಿಂದೆ ವಿಮಲ ಜೈಮಿನಿಭಾರತದ ಕಥೆಯನು (ಕೃಮಿಭಾ. ೦-೦೦). ೪. ಗಾಢತೆ; ಬಿಗುಹು; ಬಿಗಿ: ಕಲ್ಪಲತೆಗಳೆಡಬಲದಲ್ಲಿ ಹಬ್ಬಿದ ಕಲ್ಪವೃಕ್ಷವೊಯೆಂಬ ಸೊಬಗ ಕಲ್ಪಿಸುತ್ತಿದ್ದನಾ ರಾಯನಾ ಪೆಣ್ಗಳ ಬಲ್ಪಿನೊಳಮರ್ದಪ್ಪಿದಾಗ (ಛಶಿ. ೬-೩೩). ೫. ಬಲಾತ್ಕಾರ; ಬಲವಂತ ; ಒತ್ತಾಯ : ಸಮಸುಖದುಃಖಮಂ ತಳೆವ ರೋಹಿಣಿ . . . ಎನ್ನಯ ಮೋಹದ ಮರ್ತ್ಯರೂಪದಿಂದಮೆ ಬಱಸಂದಳೊಲ್ದು ಮುಗುಟ್ದುಂ ಬರೆ ಪಿಂತೆಯ ಮತ್ತ ಬಲ್ಪಿನಿಂಗಮೆ ನಿಲಿಸಿಟ್ಟನೆಯ್ದೆ ನಿಜಲೋಕದೊಳಾಕೆ ಯನಲ್ಲಿ ಕಂಡಪೈ (ಕಾದಂಬು. ೬೦೪) ; ಕೆಲಬರ್ ಸಿಂಗಮನೊತ್ತಿ ಪಲ್ಲಣಿಸಿ ಬಲ್ಪಿಂದೇಱುತುಂ ಬೇಗದಿಂ . . . ನಡೆದರೆತ್ತಂ ಬೀರರಾ ಪಾಡಿಯೊಳ್ (ಕಬ್ಬಿಗಾ. ೨೩೩) ; ಕಂತೆ ಕಟ್ಟಿಗೆ ಕಪ್ಪರಂಗಳನಿಭಾಸುರನ ವಿಷ್ಣುವಿಧಿಗಳ ಸದೆದು ಬಲ್ಪಿನಿಂ ಸೆಳೆದುಕೊಂಡ್ಯೆ (ಭಾಪಶಂ. ೯-೦). **ಬಲುಪು** : ೧. ಬಲುಪಿನೊಳಂ ತೇಜದೊಳಂ . . . ರೂಪಿನೊಳಂ ಸಲ್ಲಲಿತವಪ್ಪಱತದೊಳಂ ಗೆಲುವವನ್ನಗ್ಗಣಿ ರೇವಗೌಂಡಂಗಳೆಯೊಲ್ (ಸೌಇಇ. IX-i, ೨೪೯-೩೭; 1147); ಕಲಿತನದ ಬಲುಪಿನಾರ್ಪಿಂ ಕೂರ್ಪಿಂ ಧರೆಗೆಸೆವ ಪಂಚಲಿಂಗನ ಚರಣಾಬ್ಜಪರಪ್ರಸಾದ ತೋಟಿಗರಿತ್ತರ್ವರ್ಷಂಪ್ರತಿ ಕಂಡಗೆಯುಂ . . . ರಂಗಭೋಗಕ್ಕೆಂದುಂ (ಕಇ. I, ೩೦-೩೩; 1222); ಮೆಲುಪು ಬಲುಪಿನ ಶಕುತಿಗಳುಡುಗಲಿ ನೆನಪು ಮರಳದೆ ತೊಡೆದು ಹೋಗಲಿ (ಪಿಸೀಗೀ. ೦೦೪-೯). ೫. ಹೆಡಗುಡಿಯ ಕಟ್ಟಿಮುಖಿಯಾವ ನಡೆಯುಲಿ ಹಱುಗೋಲಿನಲ್ಕೆಯುಂಬಿಗನಾಗಂ ಪಿಡಿದು ಕೋಡಗವ ದ್ವಿಜನಂ ಕಡುಬಲುಪಿಂ ಪಿಂತೆ ತೆಗೆದು ಕಟ್ಟಿದ ಕರಮುಂ (ವನ್ಯಾಶಾ. ೨-೦೪೪). **ಬಲುಹು** : ೧. "ಪ್ರಾಣಃ, ಸ್ಥಾಮನ್, ಬಲಂ . . . ಸಹಃ—ಈ ೮ ಬಲ್ಪು (ಬಲುಹು")

(ಕಲಾಯು. ೦೨೦-೩೬); ಜನನಮರಣಕ್ಕೊಳಗಾಗದನ ಬಲುಹನೇನ ಬಣ್ಣಿಪೆನವ್ವ (ಮಹಾದೇ. ಬ. ೦೦-೬); ಕುಬೇರನ ಗರ್ವಭೂರುಹವ ಬೇರುಳಿಯದೆ ಕಿತ್ತು ಬಿಸಾಡುವೆನೀಶನ ಭಾರಿಯ ಬಲುಹ ಮುಱಿವೆನು (ಕೃತೃಶಾಂ. ೦೦-೧೨೬); ಎಲೆ ಕುಮಾರಕ ಹರಕುಮಾರಂಗಳವಿಯಲಿ ನಿಲಲರಿದು ಕೊರಳಿನ ಬಲುಹನಱಿಯದೆ ಗಿರಿಯ ಹೊಜಲಂಘ್ಯಿಸುವರೆ ಭಟರು (ಕುಮ್ಮಾದ್ರೋ. ೪-೩೪). ೩. ಬೇಂಟೆಗೆಯ್ದುಂದ ಭೂಪಾಲಕನನೆಳೆತಟಂ ಮಾಡಿ ತೆಗೆದೆನ್ನಾಶ್ರಮಕ್ಕೊಯ್ದು ಬಳಿಕ ನೋಡುವೆನವನ ಸತ್ವಗಿತ್ವದ ಬಲುಹನೆಂದ ವಿಶ್ವಾಮಿತ್ರನು (ಹಕಶಾ. ೩-೦೦); ಅನಘನಪ್ಪಾ ಮಾದಿರಾಜನ ಮನದ ಬಲುಹಂ ನೋಡಿದಪೆ ನಾನು (ಬಸವು. ೦೯-೯೫). ೪. ವಸ್ತುವ ಬಹಳವಾಗಿ ಧರಿಸು ಸಜ್ಜೆಯ ಬಲುಹಾಗಿ ಕಟ್ಟು ಶಿವದಾರವ ಬಲುಹಿನಲಿ ಸುತ್ತೆಂದು ಹೇಳುವುದು ಉಪದೇಶವೇ ಬೇಱೆ ಕಟ್ಟುವ ಠಾವುಂಟಾಗಿ (ಕನ್ನವ. ೫. ೩೨೬-೦೧೩೩); ಆಗಳತಿಸಾಕಾರರೂಪವದಾಗೆ ನಡನಡುಗುತ್ತ ಹತ್ತಿರೆಗಾಗ ಕೈಸನ್ನೆಯಲಿ ಕರೆವುತ್ತೊಡೆಯ ನಂಬಿಯನು ಆಗ ತನ್ನುಡೆಗೆಚ್ಚಿಯನು ಬಲುಹಾಗಿ ಓಡಿಸುತ್ತಾತನಂ ತಲೆವಾಗಿಸುತ್ತಂ ಭಯದ ಬಿತ್ತಂ ಬಿತ್ತಿ ಚಿತ್ತದಲಿ (ಬಸವು. ೨೬-೨೫). ೫. "ಹಠಃ, ಪ್ರಸಭಂ — ಈ ೨ ಬಲುಹು (ಬಲ್ಪು)" (ಕಲಾಯು. ೦೨೫-೬೪); ಕಂಗಳಲಿ ಕಟ್ಟಿದ್ದ ಮುಸುಕ ನಭಂಗನಾಗ ತೆಗೆದು ಬಿಸುಟು ನಮನಂಗಳಂ ಬಲುಹಿಂದ ತೆಱೆದುಱೆ ನೋಡಲು (ಬಸವು. ೫೦-೯೦); ಕಾಂಚೀದೇವಿ . . . ಬಲುಹಿನಲಿ ಭೂಸುರನ ಚಿತ್ತವ ಶಿಳುಹಿ ಬಂಡಗಳು ಮನೆಗೆ (ಕುಮ್ಮಾ.ಆ. ೦೦-೨೦); ಆನೆಯನುಣಿಸುವಂತಾ ಕಾಂತೆ ಬಲುಹಿಂದ ತಾನುಣಿಸಿದಳಾತ್ಮಪತಿಯ (ಶರಚ. ೧೦-೫೭). ೬. ಬಲವುಳ್ಳದು; ಬಲಿಷ್ಠವಾದುದು ; ಸಮರ್ಥವಾದುದು : ತಲೆ ಇಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು . . . ಬಲುಹೆನಿಸಿದ ಕರಡಿ ಹಾಡಿ ಹರಸಿ ಬೆಳೆಯಿತ್ತು (ಅದವ. ೩೬-೦೦೩); ದೇವಿ ಸೇವಿಸಲಱಿಯೆನೆಂದೊಡಿದಾವ ಧರ್ಮವು ಶಿವಶಿವೀ ಹದ ಸಾವನವರಿಗೆ ತಹುದು ಬದ್ಧವಿಘಾತಿಯಿದು ಬಲುಹು (ಕುಮ್ಮಾ.ಪ. ೩-೪). ೭. ಬಲವುಳ್ಳವನು ; ಬಲಿಷ್ಠನಾದವನು ; ಸಮರ್ಥ : ಒಲಿವನಿತನಾರೋಗಿಸಿದಪೆಂ ನಿಲಿಸಲಾಪ್ಪೆ ಎನ್ನನೆನುತಂ ಬಲುಹಲಾ ನೀನಿದಕೆ ನಾನೇನಱಿಯೆನೇ ಎನುತ (ಬಸವು. ೫೯-೦೩); ಈತ ಧವನುವಿನರ್ತಿತ ಖಡ್ಗದಲೀತ ಪರಿಘದಲೀತ ಕುಂತದಲೀತ ಬಲುಹೆಂದಂಥ ಭೂಪತಿಗಳುಹಿದನು ವಿದುರ (ಕುಮ್ಮಾ.ಆ. ೭-೨೪). ೮. ಅಧಿಕನಾದವನು ; ಮಿಗಿಲಾದವನು ; ಉತ್ತಮ : ಬಲುಹದಾರ್ಯೆ ತಾಟಕಿಗೆ ವೆಗ್ಗಳರದಾರು ಸುಬಾಹುವಿಗೆ (ತೊರರಾ. ೩-೭-೪೨). ೯. ಹೆಚ್ಚಾದುದು ; ಅಧಿಕವಾದುದು : ಭಟನುಱುಚಿ ಬಲುಹೋದಿಟ್ಟನಿವ ಕೌರವರ ಥಟ್ಟಿನಲಿ (ಕುಮ್ಮಾ.೪. ೨೦-೦೭); ನೆಲಹುಗಳಾ ಮೊಸರನುಂಡನು ನಿನ್ನ ಕಂದನ ಗಸಣಿ ಬಲುಹು ಯಶೋದೆ (ಸಾಳ್ವಭಾ. ೨೦-೯೯). ೧೦. ಬೆಂಬಲ ; ಒತ್ತಾಸೆ : ನರನ ನುಡಿ ಹೊಳ್ಳಿಗದಾ ಪುರಹರನ ಬಲುಹುಳ್ಳನ್ನಬರ (ಕುಮ್ಮಾದ್ರೋ. ೬-೬೩); ಜನರ ಪರಿಪರಿ ದೂಷ್ಯ ಭೂಷ್ಯವ ನೆನೆವೆನೇ ತಮ್ಮಡಿಯ ಸಂಭಾವನದ ಬಲುಹಿರಲಾವ ಭಯ ಮೇಕೆಂದು ಕೈಮುಗಿದ (ಗಗಚಾ. ೦೭-೬೪). ೧೧. ಕಟ್ಟು ; ಆನಿಕೆ : ಕಾಂತಾಚಭಾರದಿಂದೆ ನುಣ್ಗೊರಲು ಮುಂದೆಂತಹುದೆಂದು ಸಂದೆಗದ ಸಂತತ ಬಣ್ಣಗಲ್ಲುಗಳ ಕೀವಣಿಸಿರ್ದ ಚಿಂತಾಕ ಬಲುಹನಿಕ್ಕಿದರು (ಚೋಹಕ. ೨೩-೩೦). ೧೨. ಕಠಿಣವಾದುದು ; ಕಷ್ಟಕರವಾದುದು : ದೇವ ಕಾಳಿಗ ಬಲುಹು ಬಿಸಿಲಿನ ಡಾಫರಕೆ ರಥತುರಗವತಿಸಿರ್ಜೀವಿಯಾದವು (ಕುಮ್ಮಾದ್ರೋ. ೦೦-೨೭); ಬಲಹೀನ ಸೀನಾ ಖಿಳನ ಕೊಲುವುದೆಂತೆನೆ ಕೋಪಿಶನಾಗಿ ತನಗಿದು ಬಲುಹೆಯೊಂದವನುಸುರಿದನು (ಜೈಮಿಂಸಾಂ. ೦೫-೯೭); ವರಕಾಮುವೃಷ್ಟಿಯೆಸಿಪ ಗೃಹಪತಿರತ್ನ ಪರಿಪರಿ ಗೃಹವಸ್ತುಗಳನು ನೆರಪುವುದನೊಂದು ವಿಭವವ ಮಾಳ್ಪನೆಂದರೆ ತಡಬಡವುಂಟೆ ಬಲುಹ (ಶರಚ. ೦೬-೦೦೩). ೧೩. ಮಹಿಮೆ ; ಪ್ರಭಾವ : ಎನಲು ತಾ ನರವರವಸಿಷ್ಠಂಗಿನಿತು ಸತ್ವವಿದೇನದೆಂದರೆ ಘನವನಱಿಯಲು ಪಾರ್ಥ ರುಷಿಗಳ ತಪದ ಬಲುಹುಗಳ ತನತನಗೆ ಮುನಿವರರು ದೇವರ ಜನವ ಶಾಪಿಸಲೊಬ್ಬರೊಬ್ಬರಿಗನುಸರಿಸಿ ಗಜಱಿಸಿತು ತತ್‌ಕ್ಷಣ ಪಾರ್ಥ ಕೇಳೆಂದ (ಸಂಭರ. ೨೪-೩೭). ೧೪. ಹಿರಿಮೆ ; ಘನತೆ ; ಪ್ರೌಢಿಮೆ : ವಿದ್ಯದ ಬಲುಹನೆ ತೋಱಿ ಬುದ್ಧಿಯ ಪೆಱಿಪವನಲ್ಲ ನಿರ್ಧರ್ಮಳಿ ಜನ್ಮ ನಿಜಗುಣಯೋಗಿ ಕಂಡಯ್ಯ (ಶಿವಗೀ. ೧೨೯-೬೮೨). ೧೫. ಬಿರುಸು ಮಾತು : ಕೆಲಸ ಮಾಡಲು ನಿಮ್ಮ ಭವನದ ನಳಿನಮುಖಿಯರ ಕಳುಹು ಸುರಪತಿ ಬಲುಹ ನುಡಿದರೆ ನಿನ್ನ ಕತನದಿ ಕೆಡುವುದಾ ಲೋಕ (ಸಂಭರ. ೨೦-೫೫). (ಗು). ೧೬. (ಆಲಂ) ಹೊರಗೆ ಮಾತ್ರ ಬಲವಾಗಿರುವಂತೆ ಕಾಣುವ ; ಅಶಾಶ್ವತವಾದ : ನಂಬದಿರು ಈ ದೇಹ ನಿತ್ಯವಲ್ಲ . . . ಒಳಗೆ ಮಲ ಮೂತ್ರಾದಿ ಕ್ರಿಮಿಗಳಿರವು ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು ಬಲುಹು ದೇಹವ ನೆಚ್ಚಿ ಕೆಡಬೇಡ ಮನುಜ (ತ್ರಿಂದ. ೦-೨೭-೦).

**ಬಲುಹು ಮಾಡು** = ೧. ಬಲಪ್ರಯೋಗ ಮಾಡು ; ಶಕ್ತಿಯನ್ನು ಉಪಯೋಗಿಸು : ಬಲುಹು ಮಾಡಿಕೊಳಲ್ಕೆ ಹರಿಯಜ ಬಲಹರರ ಪವಣಲ್ಲ ಎಂದಡೆ ಅಳವಿಯೋ ನಿಮಗೆವ್ಮೊಡನೆ ಮಾಜಿಸಾಂಕು ಕೆಡಬೇಡ (ಬಸವು. ೫೯-೩೭). ೨. ಒತ್ತಾಯ ಮಾಡು ; ಬಲಾತ್ಕಾರ ಮಾಡು : ಮನೆವೆಂಡಿತಿಯೊ ನಾನೊತ್ತೆಸೂಳೆಯೊ ನಿನಗೆ ಸೋದರವತ್ತಿಗೆಯೊ . . . ನಿನ್ನವರ ಒತ್ತಿ ನೀನೆನ್ನಂ ಬಲುಹು ಮಾಡುತ್ತ ಕಾಡಲದೆಂತು ಬಹುದು (ಬಸವು. ೪೦-೪೭).

**ಬಲ್ಪಾಗು, ಬಲುಪಾಗು, ಬಲುಹಾಗು** = ೧. ಹೆಚ್ಚಾಗು ; ಅಧಿಕವಾಗು ; ಬಹಳವಾಗು : ಮುಪ್ಪು ಬಲ್ಪಾಗೆ ಶಿಥಿಲನಕ್ಕುಂ (ಮಂಗರಾ. ೪೦-೦೦); ಭರ್ತೃರುರವಣೆ ಪಿರಿದಾಯಿತ್ತು ಭಕ್ತರ ತೇಜಂ ಬಲುಹಾಯಿತ್ತು (ಬಸರ. ೬-೯೦); ವೇಡತನ ಬಲುಹಾಯ್ತು ನಿಮ್ಮನು ಕಾಡುವವರಾರು (ಸಂಭರ. ೭-೩೦); ಅಜವು ತಲೆಕೆಳಗಾಯ್ತು . . . ಮಜವೆ ಗಱಿಗಟ್ಟಿತು ಮನೋಭವ ನಿಱಿಗೆಲಸ ಬಲುಹಾಯ್ತು (ಕುಮ್ಮಾ.ಪಿ. ೨-೦೨). ೨. ಬಲ ಬರು ; ಸಾಮರ್ಥ್ಯವುಂಟಾಗು : ಬಡವಂಗೆ ಹಣ ದೊರಕಿದಂತೆ ಕತ್ತಲೆಗೆ ಬಲುವಾದಂತೆ ಗಿರಿಗೆ ನಡೆ ದೊರಕಿದಂತೆ ಬಣಗುರಕ್ಕಸರಿಗೀಶ್ವರನಿರೂಪಿತದಿಂ ದ್ರುಹಿಣ ಕೊಟ್ಟ ವರದ ಬಲದಿಂ ಲೋಕಗಳನೆಲ್ಲ ಹಣಿದವಾಡಲ್ಕಮರರೆರ್ದೆಗುಂದಿತು (ಚಿಹಿಶಂ. ೦೭-೯). ೩. ಬಲವುಳ್ಳುದಾಗು ; ಬಲಿಷ್ಠವಾಗು : ಕುಂಬಳಕಾಯಿಗೆ ಕಬ್ಬುನದ ಕಟ್ಟ ಕೊಟ್ಟರೆ ಕೊಳೆವುದಲ್ಲದೆ ಬಲುಹಾಗ ಬಲ್ಲುದೇ (ಬಸವ. ೯೨). ೪. ಬಲಿಷ್ಠನಾಗು; ಸಮರ್ಥನಾಗು: ಆದಡಿದ ಕೊಳ್ಳೆನುತ ಸಾತ್ಯಕಿ ಕೋದನಭ್ರುವನಂಬಿನಲಿ ಬಲುಹಾದನ್ಯ ಮರ್ಝು ಎನುತ ಕಡಿದನು ಸೋಮದತ್ತಸುತ (ಕುಮ್ಮಾದ್ರೋ. ೦೯-೪). ೫. ಉಗ್ರವಾಗು; ಪ್ರಚಂಡವಾಗು : ನಡುಹಗಲು ಪರಿಯಂತ ಕಾಳಗ ಬಿಡದೆ ಬಲುಹಾಯ್ತುಖಿಳವೇಗದ ಕದಗುದುರೆ ಬಳಲಿದವು (ಕುಮ್ಮಾದ್ರೋ.೦೦-೨೨).

[ಬಲ್$_2$ (< ಬಲ್ಲಿತ್ತು$_1$) + —ಪು$_2$]

**ಬಲ್ಪುಗಿಡು** 'ಬಲ್ಪುಗೆಡು' ನೋ.

**ಬಲ್ಪುಗುಳ್** (ನಾ). ದಪ್ಪವಾದ ಗುಳ್ಳೆ; ಭಾರಿಯಾದ ಬೊಬ್ಬೆ: ಪುಷ್ಪಕೋಮಲಲಿಂಗಾಂಗದೊಳಾಯ್ತು ಬಲ್ಪುಗುಳಿದನ್ನಿಂ ಮುನ್ನಮೇಗೈವೆನೆಂದು ಲಸತ್‌ಚಿತ್ತದೆ ತನ್ನ ಗೋಣ್ಕೊಱೆಯ (ವೃಷಂ. ೯-೬೩).

[ಬಲ್$_2$ (< ಬಲ್ಲಿತ್ತು$_1$) + ಪುಗುಳ್$_2$]

**ಬಲ್ಪುಗೆಡು, ಬಲ್ಪುಗಿಡು** (ಕ್ರಿ). ಬಲವನ್ನು ಕಳೆದುಕೊಳ್ಳು; ಸಾಮರ್ಥ್ಯವನ್ನು ಕಳೆದುಕೊಳ್ಳು; ಶಕ್ತಿಗುಂದು : ಕಡವಗಲೊಳ್ ನಿಜಾಂಗನಾಂತಿರಕ್ಕದೊಳೊಪ್ಪಿರೆ ಬಲ್ಪುಗೆಟ್ಟು ತೇರ್ ಪೊಡೆಗೆಡೆಯಲ್ . . .

ಇನನೆಯ್ದಿದನಸ್ತಶೈಲಮಂ (ದಶಕು. ೨-೩೯). **ಬಲ್ಪುಗಿಡು :** ಎಂತು ಪೆಱಗಿಕ್ಕಿ ನಳನಂ ನೀಂ ತಱಿಸುದಂತೆ ಬಲ್ಪುಗಿಡದಣ್ಮಿಣ್ಮಂದಂತಕನೆ ಮಸಗಿ ಮೇಲೆಟ್ಟಿಂತೆವೊಲಿರ್ದಂ ಪ್ರಹಸ್ತನಪ್ರತಿಮಬಲಂ (ಶಂರಾಪೂ. ೦೩-೮೮); ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ ಬಚ್ಚರ್ ಕಿರ್ಚು ಮುಟ್ಟಿದ ತುಪ್ಪದಂತೆ ಬಲ್ಪುಗಿಡೆ (ಧರ್ಮಾಮೃ. ೨-೬೯).

[ಬಲ್ಪು+ಕೆಡು$_1$]

**ಬಲ್ಪುಚ್ಚು** (ನಾ). ಬಲವಾದ ಹುಚ್ಚು; ಅತಿಯಾದ ಬುದ್ಧಿಭ್ರಮಣೆ : ಬಲ್ಪುಚ್ಚಾದಂ ಪೆರ್ಚಿದವೊಲ್ಪೊಳೆಯಿಸುತಂದು ರಾತ್ರಿ ದರ್ಪಕಶಿಖಿ ಪೊಂಗಲ್ಪದ್ಮಾವತಿ ಜುಣುಗಿರೆ ನಲ್ಪೊಂಬಾಗಿಲ್ಗೆ ಬಂದನಾ ಕವಿರಾಜಂ (ಉದ್ಭಟ. ೦೨-೫೫). [ಬಲ್$_2$ (< ಬಲ್ಲಿತು$_1$) + ಪುಚ್ಚು$_1$ (< ಪುಚ್ಚು)]

**ಬಲ್ಪುದೋಱಿಸ್** 'ಬಲ್ಪುದೋಱು' ನೋ.

**ಬಲ್ಪುದೋಱಿಸು** (ಕ್ರಿ). ಶಕ್ತಿಯನ್ನು ತೋರಿಸು; ಸಾಮರ್ಥ್ಯವನ್ನು ಪ್ರದರ್ಶಿಸು : ಮತ್ತಂ ಮಲೆತು ನೀಂದು ಅಖ್ಖಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿಸಿದ ಮಲ್ಲನನುರ್ಬುತ್ತುಯ್ಯನೊಳಪೊಕ್ಕು ಮಿಕ್ಕು ಪಱಿದಿಕ್ಕಿ ಮುರಿವ . . . ಮಲ್ಲರ ನೆರವಿಗಳೊಳಂ (೧೦೬. ೨-೦೦೫ ವ). [ಬಲ್ಪುದೋಱು + — ಇಸು$_3$]

**ಬಲ್ಪುದೋಱು, ಬಲ್ಪುದೋಱ್** (ಕ್ರಿ). = ಬಲ್ಪುದೋಱಿಸು: ಏಱಿನೆ ಸೂಱಿಗೊಂಡು ನುಡಿವೀ ನುಡಿಯಲ್ಲದೆ ಮತ್ತಮಾಸನುದ್ದೋಱುವ ಬಲ್ಪುದೋಱುವೆರ್ದೋಱುವ ಕಯ್ಪುಸರುಗಳೆಮ್ಮನುಂತೀಱುವು (ಶಂಶಶಾ. ೬-೨೦). **ಬಲ್ಪುದೋಱ್ :** ಪಗಲಿರುಳೆನ್ನದೆನ್ನೊಳೆ ಕಡಂಗುವನೆನ್ನೊಳೆ ಬಲ್ಪುದೋರ್ಪಂ . . . ಕರಂ ಮುಳಿಸಿಲ್ಲ ಕಾಯ್ದು ಕೆಮ್ಮಗೆ ಬಳಸಂದು ಕೊಂದಪನಕಾರಣದಿಂ ಮೊಱಿಯೋ ಮನೋಭವಾ (ಆದಿಪು. ೧೨-೩೯).

[ಬಲ್ಪು + ತೋಱು]

**ಬಲ್ಪೊಂಬಳೆ** (ನಾ). ಅಡಕೆ, ತೆಂಗು ಮುಂತಾದ ಮರಗಳಲ್ಲಿ ಬಿಡುವ ದೊಡ್ಡ ಹೊಂಬಾಳೆ,–ಹೂಗೊಂಚಲು: ಬಲ್ಪೊಂಬಳೆಯಿಂ ಬಳ್ಕಿತ್ತು ಕೌಂಗು . . . ಕಂಜಕಿಂಜಲ್ಕದಿಂ ಕಣ್ಗೊಳಿಸಿತ್ತಬ್ಜಾಕರಂ ತಂಪಲೆವ ಮಲಯಮಂದಾನಿಲಾಂದೋಳದಿಂದಂ (ಕಾದಂಅ. ೬೬೮).

[ಬಲ್$_2$ (< ಬಲ್ಲಿತು$_1$) + ಪೊಂಬಳೆ (< ಪೊಂಬಾಳೆ$_1$)]

**ಬಲ್ಪೊಱೆ**, ಬಲುಹೊಱೆ (ನಾ). ಬಹಳವಾದ ಹೊರೆ ; ಅಧಿಕವಾದ ಭಾರ: ಪೊಡವಿಯ ಪೊತ್ತ ಬಲ್ಪೊಱೆಯನೊಲ್ದಿೞಿಪಲ್ ಸಬಲಂ ಖಳರ್ಕಳಂ ಕಡಿಕಡಿದೊಟ್ಟಿ ಮೆಟ್ಟಿ ಜಿಂಹಗನಂ ವಿಜಯಾಂಶುವೃದ್ಧಿ ದಾಂಗುಡಿಯಿಡೆ (೩ಕವಿ. ೨-೦೦); ಬಡಗಣ ಗಡಿಗಾಪಿನವರ್ ಗುಡುಗಾಡಿಸಿ ಗೋಲಕೊಂಡ ವಿಜಯಾಪುರಮಂ ಕಡಿದು ಮರಾಟರ ಪಡೆಯಂ ಪೊಡವಿಯ ಬಲ್ಪೊಱೆಯನಿೞಿಪಿ ಬಣ್ಣಿಗೆವಡೆವರ್ (ಅಕ್ರತಿ. ೨-೦೮). **ಬಲುಹೊಱೆ:** ತೋಳ ಬಲುಹೊಱೆಗಲಸಿ ಕೆಲಬರು ಮೇಲೆ ನಮ್ಮಯ ಹಗೆಗೆ ಕೆಲಬರು ಕಾಳಗದ ಕಾಮುರ್ಕನೃಪಾಲರ ನೆರವಿಯುದೆಯೆಂದ (ಕುಮಾ.ಈ. ೩-೦೯); ಬಾರಿಸಿದ ಬಲುಹೊಱೆಯ ಬಂಡಿಗಳೋರಣಿಸಿದವು ಪಯಣದಲಿ ಕರ್ಪೂರ ಕಸ್ತೂರಿ ಕುಂಕುಮದ ಪೆಟ್ಟಿಗೆಯ ಸಾಲಿನಲಿ (ತೊರರಾ. ೦-೬-೩).

[ಬಲ್$_2$ (< ಬಲ್ಲಿತು$_1$) + ಪೊಱೆ]

**ಬಲ್ಪೊಟ್ತು** (ನಾ). ಬಹಳ ಕಾಲ; ಹೆಚ್ಚು ಸಮಯ : ಒಂದು ಮಾತಾಡದಯೆ ಕುಳ್ಳನ್ ಬಲ್ಪೊಟ್ತು (ಅಶ್ವಶಾ. ೦೩-೨೬೬).

[ಬಲ್$_2$ (< ಬಲ್ಲಿತು$_1$) + ಪೊಟ್ತು]

**ಬಲ್ಬಂಟ** (ನಾ). ಮಹಾ ಪರಾಕ್ರಮಿ,--ಯೋಧ: "ಉರ್ಕಾಳ್, ಕೂರಾಳ್, ತುಱುಗಾಳ್, ಬಲ್ಲಾಳ್, ಬಲ್ಬಂಟಂ–ಈ ೫ ಪರಾಕ್ರಮಮುಳ್ಳಂ" (ಶಶಸಾ. ೫೮-೨೬೯) ; ಪುಣ್ಯದಿಂ ದೊರೆಕೊಂಡ ಜೈನಧರ್ಮಮನೊಲ್ಲದೆ ಬಿಟ್ಟೊಡೆ . . . ಪುಲ್ಬಂಟನಂ ನಂಬಿ ಬಲ್ಬಂಟನಂ ಬಿಡುವ ಪಗೆಗಾಱನುಮಂ . . . ಪೋಲ್ವೆನೆಂದು ಪರಿಚ್ಛೇದಿಸಿ (ಧರ್ಮಾಮೃ. ೮-೫೦); ಬಡಿಹೋರಿ ಬಲ್ಬಂಟನೆಂಬ ಬಡನುಡಿ ಬಲ್ನುಡಿ ಬಡದೈವಕಲ್ಲದೆ ಬಡಶಬ್ದ ನಿನ್ನ ಪೊಂದುವವೆ (ಶಶಸಾಂ. ೬೨-೬೫); ಬೂತುಗ ಮತ್ತು ಅವನ ಮಗ ಮಾರಸಿಂಹರಂತಹ ನಚ್ಚಿನವರಾದ ಬಲ್ಬಂಟರು ಆ ಸಾಮ್ರಾಜ್ಯವನ್ನು ಎತ್ತಿ ಹಿಡಿಯಲು ಪ್ರಯತ್ನ ಮಾಡಿದುದರಿಂದ ರಾಷ್ಟ್ರಕೂಟರ ಪಟ್ಟವು ಮುಂದೆ ಕೆಲವು ವರುಷ ಜೀವ ಹಿಡಿದುಕೊಂಡಿತು (ಕಶಿರ. ೩೯). [ಬಲ್$_2$ (< ಬಲ್ಲಿತು$_1$) + ಬಂಟ$_1$]

**ಬಲ್ಬಂಡಿ** (ನಾ). ದೊಡ್ಡ ಗಾಡಿ : ಬಡಿಕೋಲ್ ಕಿಗ್ಗಟ್ಟು . . . ಸಾಳುವಂ ಕೂಳಿ ಗಾಳಂ ಗಿಡುಗಂ ಬಲ್ಬಂ [ಪಾಂಠಾ. ಲ್ಬಿಂ]ಡಿಯೊಳ್ ದೀಹದ ಪುಲಿ ನಿಶಿತಾಸ್ತ್ರಂಗಳಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ಮೃಗಾಟವಿಗೆ ನಡೆದುದುದ್ಯತ್ಕಿರಾತಪ್ರಜಾತಂ (೧೦೬. ೦-೬೯).

[ಬಲ್$_2$ (< ಬಲ್ಲಿತು$_1$) + ಬಂಡಿ$_1$]

**ಬಲ್ಬಂದಿ** 'ಬಲ್ವಂದಿ$_2$' ನೋ.

**ಬಲ್ಬಂದಿಕಾಱಿ** 'ಬಲ್ವಂದಿಕಾಱಿ' ನೋ.

**ಬಲ್ಬಗೆ** 'ಬಲ್ವಗೆ$_2$' ನೋ.

**ಬಲ್ಬಜ** (ನಾ). ೧. ದನಗಳು ತಿನ್ನದ ಒಂದು ಬಗೆಯ ಒರಟುಹುಲ್ಲು : "ಹೆಚ್ಚುಲಿಹುಲ್ಲು, ಬಲ್ಬಜ, ಗಂಜಳದ ಹೂ" (ಸಸ್ಯಶಿ. ೫೯); ನೊದೆ ನಾಣಲ್ಪತ್ತ ಬಲ್ಬಜ ಧನ್ವಂಗಳುಂ ಮಿಗಿಲಾಗಿ ಸಂಗ್ರಹಂಗೆಯ್ಯಬೇಕು (ಶಾರಶಾಂ. ೫೬೮-೮೮). ೨. (ಆಲಂ) ಕೆಲಸಕ್ಕೆ ಬಾರದುದು : ನಿರುಪಯುಕ್ತವಾದುದು : ಈ ಬಲ್ಬಜಕ್ಕೆ ಮನಸ್ಸಿನ ಶಾಂತಿ ಕಳೆದುಕೊಳ್ಳಬಾರದು (ರೂಢಿ). [ಸಂ.]

**ಬಲ್ಬಜೆ** (ನಾ). (?) : ಕುಜನಸಂಗದಿ ಕೇಡು ಸುಜನರ್ಗೆಂಬಾ ನೀತಿ ತ್ರಿಜಗವಱಿಯೆ ಕಾಣಲಾಯ್ತು ಮರುಷ ಪ್ರಾಣಘ್ರಾಣದೊಳ್ನಿಜವಿದೆ ಇದಕೆ ಬಲ್ಬಜೆಯೇಕೆ (ಭೈಕವೇ. ೦-೨೨೯); ಹೊರಳಿ ಬಲ್ಬಜೆಯಿಂದ ತನ್ನಯ ಬಿರಿದ ಬಿಡಿಸುವೆನೆನುತ ಭೋಂಕನೆ ಪರಿದು ಬಂದರು ಭಾಳನೇತ್ರರ ಮಹಿಮನಿದ್ದೆಡೆಗೆ (ಶಂಕದಾ . ೦೯-೩). [?]

**ಬಲ್ಬಯಕೆ** (ನಾ). ಅತಿಯಾದ ಅಪೇಕ್ಷೆ; ಬಹಳವಾದ ಆಸೆ; ಹೆಬ್ಬಯಕೆ : ದಣಾಯಕರೆ, (ಬಲ್‌ಬಯಕೆಯಿಂದ) ಮತ್ತೆ ನನ್ನ ಶ್ರೀವಿರೂಪಾಕ್ಷನ ಪಂಪಾಪುರಕ್ಕೆ ಹೋಗಬೇಕೆಂಬ ತುಡಿತ ದಿನದಿನಕ್ಕೂ ಬಲಿಯುತ್ತಿದೆ (ತುಂಗಭ. ೦೩); ಬಹುದಿನದ ಬಲ್ಬಯಕೆ ಈಡೇರಿತು (ಬೆಳುಮ. ೨೨೦).

[ಬಲ್$_2$ (<ಬಲ್ಲಿತು$_1$) + ಬಯಕೆ$_2$]

**ಬಲ್ಬಱ** (ನಾ). ಭೀಕರವಾದ ಬರಗಾಲ ; ಬಹಳವಾದ ಕ್ಷಾಮ ; ದುರ್ಭಿಕ್ಷ : ಬಹುಧನಧಾನ್ಯಾವಳಿಯನೊಪ್ಪಿಸನೆ ಬಲ್ಬಱದೊಳ್ ಘನಶರಣತತಿಗೆ (ವೃಷಭ. ೬-೩೬). [ಬಲ್$_2$(<ಬಲ್ಲಿತು$_1$) + ಬಱ]

**ಬಲ್ಬಟಲ್** (ಕ್ರಿ). ಅತಿಯಾದ ಆಯಾಸವನ್ನು ಹೊಂದು ; ಬಹಳ ದಣಿ: ಸಪ್ತಾಶ್ವಂ ನಿಚ್ಚವಯಣದೊಳ್ ಬಲ್ಬಟಲ್ದಶ್ವಸಪ್ತಕಮಂ ಕಡಲೊಳ್ ಮುಯ್ಗರ್ಚಿ ನೀರ್ಗುಡಿಸಲ್ಕೆಂದು ಸಾರಥಿಯ ನೇರ್ಪಡಿಸಿ ತಾಂ ತೇರಿನಿೞಿದನೆನೆ ಪಡುವಟ್ಟೆನೆಡೆಯೊಳ್ ಮೆಲ್ಲನೆ ಮೊಯ್ಗರೆಯಲೊಡಂ (ರಾಜಶೇಖ. ೨೨-೩). [ಬಲ್$_2$ (<ಬಲ್ಲಿತು$_1$) +ಬಟಲ್$_1$]

**ಬಲ್ಬಿಗುರ್** (ನಾ). ಅತಿಯಾದ ಭಯ ; ಬಹಳವಾದ ಅಂಜಿಕೆ : ಬಲ್‌ಬಿಗುರೊ ಎನ್ನೆರ್ದೆಯನಿಱಿಗುಂ (ಐದ್ಯಶ್ರ. ೦೦-೨೨೨); ಬಲ್‌ಬಿಗುರಿಂದಂ ಮತಿಗೆಟ್ಟವಳನ್ ಕಾಡಿಪುದು ? (ಐದ್ಯಶ್ರ. ೩೦-೬೫೩).

[ಬಲ್$_2$(<ಬಲ್ಲಿತು$_1$) + ಬಿಗುರ್$_2$]

**ಬಲ್ಬಿರುದು** (ನಾ). ದೊಡ್ಡ ಬಿರುದು ; ಪ್ರಸಿದ್ಧವಾದ ಹೆಸರು : ಸುರರ ಸೂಳೆಯರನೆಲ್ಲರಂ ಸೆಱೆವಿಡಿದು ತನಗೆ ಸರಿಯಿಲ್ಲೆಂದು ಬಲ್ಬಿರುದಿನ ಕಾಳೆಯಂ ಪಿಡಿಸಿ ಬಲದಿಂ ಚತುಸ್ಸಾಗರದ ವೇಳೆಯ ಧರಾಮಂಡಲಂಗಳಂ ಸಂತಸದೊಳಾಳೆಯಂಧಾಸುರಂ (ಚಿಬಪು. ೫೭-೦೨); ಪುರದ ಲಗ್ಗೆಗೆ ಬಿಟ್ಟು

ತುರುಕರನಿಱಿದು ಬಲ್ಬಿರುದ ಮೆಱೆದ ನರಸೇಂದ್ರ (ಕಂಸವಿ. ೧೯ ಸೊಹವಿ).
[ಬಲ್$_2$(<ಬಲ್ಲಿತು$_1$)+ಬಿರುದು]

**ಬಲ್ಬಿಸಿಲ್** 'ಬಲ್ವಿಸಿಲ್' ನೋ.

**ಬಲ್ಬಿಸಿಲು** ' ಬಲ್ವಿಸಿಲ್ ' ನೋ.

**ಬಲ್ಬು** (ನಾ). ವಿದ್ಯುತ್ತನ್ನು ಬೆಳಕನ್ನಾಗಿ ಮಾರ್ಪಡಿಸಿ ಹೊರಚೆಲ್ಲುವ ಗಾಜಿನ ಬುರುಡೆ ; ವಿದ್ಯುದ್ದೀಪದ ಬುರುಡೆ : ಈ ತಾವ್ರುದ ತಂತಿಗಳ ತುದಿಗಳು ಬಲ್ಬಿನ ಹೊರಗೆ ಇರುವ ಎರಡು ಸೀಸದ ಬೊಟ್ಟುಗಳಿಗೆ ಸಂಬಂಧಿಸಿವೆ (ಭೌತವಿ. ೩೯೩); ಬೆಳಕು ಬೆಳಕನು ಕೂಡಿ ಆಡುತಿರೆ ಬಲ್ಬು ಹೊರೆ ; ಈಗ ಬಲ್ಬಿಗೆ ಬಲ್ಬು ಕಾತರಿಸಿತು (ನವಿಲು. ೯೨-೧೫).
[←ಇಂ. Bulb]

**ಬಲ್ಬೆಟ್ಟು,** ಬಲುಬೆಟ್ಟು (ನಾ). ದೊಡ್ಡ ಬೆಟ್ಟ ; ಅಗಾಧವಾದ ಪರ್ವತ : ಮರಳಿ ಕವಿದುದು ಸೇನೆ ಮಂಜು ಬಲ್ಬೆಟ್ಟಮಂ ಪರಿವೇಷ್ಟಿ ಪಂದದಿಂ (ಕಬಪು. ೨೮-೨೫). **ಬಲುಬೆಟ್ಟು :** ಮತ್ತಿದೇನಂಬುಧಿಯೊಳಗೆ ತಲೆಯೆತ್ತುತ್ತಿದೆ ಬಲುಬೆಟ್ಟುವಿದು ತಾ ಕೃತ್ರಿಮವೊ ಸಹಜವೊ (ತೊರರಾ. ೫-೦-೮); ಒಡನೆ ಕಪಿ ಬಲುಬೆಟ್ಟುವನು ಸಿಡಿಲೆಱಗುವವೊಲೆಱಗಿದನು ರಕ್ಕಸನ (ತೊರರಾ. ೬-೨೨-೦೬). [ಬಲ್$_2$(<ಬಲ್ಲಿತು$_1$)+ಬೆಟ್ಟು$_1$]

**ಬಲ್ಬೆಡಗು,** ಬಲುಬೆಡಗು (ನಾ). ವಿಶೇಷವಾದ ಅಂದ ; ಅತಿಯಾದ ಸೊಗಸು : ವ್ರಾಕ್ಕಿಕಗಳ ಮುಡಿವಲೆ ಮೆಱೆವ ಬಾವುಲಿಯ ನಿಡು ಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಬೆಡಗಾಗಿ ಮೆಱೆದರರ್ತಿಯಲಿ (ಕಂಸವಿ. ೨೯-೯೨). **ಬಲುಬೆಡಗು :** ನಾನಾ ಬಗೆ ಷಡುರಸಾನ್ನಗಳ ಪಾಕಗಳ ಕಡುಚೆಲ್ವ ಗೃಹಗಳಂದರವುನೆಯೊಳು ಬಲುಬೆಡಗ ಬೀಱಿದುವರ್ತಿಯಲಿ (ಕಂಸವಿ. ೭-೯೭). [ಬಲ್$_2$(<ಬಲ್ಲಿತು$_1$) +ಬೆಡಗು$_1$ (<ಬೆಡಂಗು)]

**ಬಲ್ಬೆದೆ** (ನಾ). ಅತಿಯಾದ ಕಾಮಾತುರ ; ಬಹಳವಾದ ಕಾಮೋಚ್ಛೆ : ಇತ್ತ ಸೆಳೆದೊಯ್ಯುವುದು, ಹತ್ತಿರಕೆ ' ಬಾ ' ಎಂದು ಚಿತ್ತವನು ಬಲ್ಬೆದೆಯು ತೆರೆ ಅದೊಂದು (ಸಾದೀ. ೦೨-೬). [ಬಲ್$_2$ (<ಬಲ್ಲಿತು$_1$)+ಬೆದೆ]

**ಬಲ್ಬೆಱಗು** (ನಾ). ಬಹಳವಾದ ಆಶ್ಚರ್ಯ ; ಅತಿಶಯವಾದ ಸೋಜಿಗ : ದಿಟವೆಮೊರೆವೆ ಬಲ್‌ಬೆಱಗನೊಂದನ್ (ಅಂತಿಗೂ. ೦೦-೨೨೯).
[ಬಲ್$_2$ (<ಬಲ್ಲಿತು$_1$) + ಬೆಱಗು$_1$]

**ಬಲ್ಬೊಬ್ಬೆ,** ಬಲುಬೊಬ್ಬೆ (ನಾ). ಬಹಳವಾದ ಗದ್ದಲ ; ಅತಿಯಾದ ಚೀರಾಟ,—ಕೋಲಾಹಲ : ನಿಬ್ಬರದೆ ಬರ್ಪ ಹಯಬಲದಬ್ಬರಣೆಗೆ ಕೊರ್ಬುಗಳೆದುದಿರ್ಕೆಱಿಗೆ ಬಲ್ಬೊಬ್ಬೆಗೆ ಸೀರೆಯ ಮುಂ ತವೆ ತಬ್ಬಿಬ್ಬಂ ಶಾಳ್ದಿ ತೂಟ್ಟಿತಾಳ್ದನ ಸಿರಿಯಂ (ಜಕಚಿ. ೨-೯೭). **ಬಲುಬೊಬ್ಬೆ :** ಬಲುಬೊಬ್ಬೆಯಲಿ ನೆಲನದಿರ ನಡೆದುದು ಸೇನೆ ಕಲಶೋದ್ಭವನ ನೇಮದಲಿ (ಕುವ್ಯಾದ್ರೋ. ೯-೦೩) ; ಬಲುಬೊಬ್ಬೆ ಸಿಡಿಲು ಖಡ್ಗಗಳ ತೊಳಪು ಮಿಂಚು ಸಲೆ ತುರಗದ ದನಿ ಗುಡುಗು (ಕಂಸವಿ. ೦೯-೦೦೦).
[ಬಲ್$_2$ (<ಬಲ್ಲಿತು$_1$) + ಬೊಬ್ಬೆ$_2$]

**ಬಲ್ಭಾರ,** ಬಲುಭಾರ (ನಾ.) ಹೆಚ್ಚಾದ ಭಾರ ; ಅತಿಯಾದ ತೂಕ : ಹೆಮ್ಮರನರ್ದೆನದಱಿಂದಲೆತ್ತಬಹುದೇ ಬಲ್ಭಾರಮಂ ಸನ್ನೆ ಸಾವಿರ ಕಾಲಾಳಿನ ಸತ್ತ್ವವೈ (ಸೋವೀಕ. ೭೬). **ಬಲುಭಾರ :** "ಭಾರಣೆಯೆನೆ ಬಲುಭಾರಂ" (ಶಾರಶ. ೫೯). [ಬಲ್$_2$ (<ಬಲ್ಲಿತು$_1$) + ಭಾರ]

**ಬಲ್ಭುಜ** (ನಾ). (ಆಲಂ) ಹಿರಿಮೆ; ಔನ್ನತ್ಯ: ಭುಜಬಲಿಯೋಗೀಂದ್ರ ನೆಂತಿರ್ದನೆಂದನು ರಜತಗಿರಿಯ ಬಿಟ್ಟು ಬೇಱೆ ಗಜವಿಪಿನದೊಳಿರ್ದ ನಾತನ ತಪದ ಬಲ್ಭುಜವ ಚಿತ್ತೈಸೆಂದರವರು (ಶರಶ. ೫೯-೯).
[ಬಲ್$_2$ (<ಬಲ್ಲಿತು$_1$) + ಭುಜ]

**ಬಲ್ಮಂತ್ರಿ** (ನಾ). **ಸಮರ್ಥನಾದ** ಮಂತ್ರಿ : **ದೂರದರ್ಶಿಯಂತೆ** ಮೇಲನಸಱಿವನುಂ **ಬಲ್ಮಂತ್ರಿಯಂತೆ** ಪ್ರಮಾದರಹಿತನುಂ . . . **ರಾಜ** ಸೇಪಕನಂತಡಕವಂತನುಮಪ್ಪುದು (ಧರ್ಮಾಮೃ. ೫-೯೯).
[ಬಲ್$_2$ (<ಬಲ್ಲಿತು$_1$) + ಮಂತ್ರಿ]

**ಬಲ್ಮತ್ತಿ** (ನಾ). ಒಂದು ಬಗೆಯ ಮತ್ತಿಮರ : ಪಾದರಿ ತಾಱಿ ತಂಡಸು ಚಿಳಿಲ್ ಬಲ್ಮತ್ತಿ [ಪಾಠಾಂ. ಬಿಳಿಲ್ಬಿಲ್ಮತ್ತಿ] ಬೇವತ್ತಿ . . . ಕಕ್ಕಿಮ್ಮರಂ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೦೨-೫೮). 'ಬಿಳಿಮತ್ತಿ' ಪಠಾ.
[ ? + ಮತ್ತಿ$_1$ (<ಮಱ್ಱಿ) ]

**ಬಲ್ಮನುಶ್ಯ,** ಬಲುಮನುಸ್ಯ (ನಾ). = ಬಲುಂಮಾನಿಸ : ಬೆ(ಂ)ಣ್ಣೆ ಯೂರ್ಪ್ಪ(ಂ)ನ್ನೆರಡೞ ಬಳಿಯ ಬಾಡಂ ಹಱಿಹೆಯಿಂ ಬಡಗಲು ಪಾಂಡ್ಯ ದೇವನ ಬಲ್ಮನುಶ್ಯರು ಬೆ(ಂ)ಣ್ಣೆಯೂರ ಚಂದುಗಿದೇವನುಂ ಕಾಳಗೌಡನುಂ (ಸೌಇಇ. IX–i, ೩೩೭–೯ ; 1220). **ಬಲುಮನುಸ್ಯ :** ಆ ರಾಯನ ಮನೆಯ ಸಂಧಿವಿಗ್ರಹಿ ಲಖಣ್ಣನವರ ಬಲುಮನುಸ್ಯ ದೇವಪ್ಪ ಹರಿಯಪ್ಪನವರು ಹಡವಳಿಕೆ ನಾಡಿಂಗೆ ಸರ್ವ್ವಾಧಿಕಾರಿಗಳಾಗಿದಲ್ಲಿ (ಎಕ. VII, ಶಿವಮೊ. ೦೯-೬ ; 1309). [ಬಲ್$_2$ (<ಬಲ್ಲಿತು$_1$) + <ಮನುಷ್ಯ ]

**ಬಲ್ಮನೆ** (ನಾ). ದೊಡ್ಡದಾದ ಮನೆ ; ಮಹಾಸೌಧ : ಚಂದಳಿರಾಂತಶೋಕೆ ಮಣಿಮಂಟಪಂ . . . ಎಳೆಮೊಗ್ಗೆಗಳೊಪ್ಪುವ ಮಲ್ಲಿಕಾ ತಾವೃಂದಮೆ ಮುತ್ತು ತೆತ್ತಿಸಿದ ಬಲ್ಮನೆ ಕೇತಕಿ ಸುತ್ತುವೇಲಿ ಕಕ್ಕುಂದರಿಯಾಂತ ಕೋಟೆ ಮದನಂಗೆನೆ ಕಂಗೊಳಿಸಿರ್ದುದಾ ವನಂ (ನೃಕಪು. ೯-೩೯).
[ಬಲ್$_2$ (<ಬಲ್ಲಿತು$_1$) + ಮನೆ]

**ಬಲ್ಮನ್ನೆಯ** (ನಾ). ಹೆಚ್ಚು ಮನ್ನಣೆಯನ್ನು ಪಡೆದ ವ್ಯಕ್ತಿ ; ದೊಡ್ಡ ಮುಖಂಡ : ಸಲೆ ಪೋಪ ಬರ್ಪ ಬಲ್ಮನ್ನೆಯರ ಕನ್ನೆಯರ ಸುಳಿಸುಳಿದು ಕಣ್ಗೊಪ್ಪುವಂದಣದ ಗೊಂದಣದ ಕಳಕಳದ ವಾದ್ಯರವದಬ್ಬರದ ನಿಬ್ಬರದಳಾ ಪುರಂ ರಂಜಿಸಿದುದು (ಶಬಕ. ೦೦-೩೫).
[ಬಲ್$_2$ (<ಬಲ್ಲಿತು$_1$) + ಮನ್ನೆಯ]

**ಬಲ್ಮರ,** ಬಲುಮರ (ನಾ). ದೊಡ್ಡದಾದ ಮರ ; ಮಹಾವೃಕ್ಷ : ದಾಡೆಯಂ ಮಸೆದು . . . ಮಿಡಿದುಡುತ್ತೆ ಕಂದಂಗಳಂ ಕೆಡಪುತ್ತಂಗದೊಳಾರ್ದು ಬಲ್ಮರಗಳಂ ಬಂದತ್ತದೊಂದೆಕ್ಕಲಂ (ರಾಜಶೇ. ೫-೯೯). **ಬಲುಮರ :** ಸಿಡಿದು ಹಾಱಿದ ಹಸ್ತದುಱುಬೆಗೆ ಬುಡಸಹಿತ ಬಲುಮರ ಧರಾತಳಕುಡಿದು ಬಿದ್ದುವು (ತೊರರಾ. ೦-೦೦-೦೯).
[ಬಲ್$_2$ (<ಬಲ್ಲಿತು$_1$) + ಮರ$_1$]

**ಬಲ್ಮಳೆ,** ಬಲುಮಳೆ (ನಾ). ದೊಡ್ಡಮಳೆ ; ಭಾರಿ ಮಳೆ : ಎಱಂಕೆವನಿ ಬಲ್ಮಳೆಯವೊಲೊಪ್ಪುವುದು (ಎಇ. XIII, ೩೩೦-೫೦ ; 929) ; ಮಹಾರಥ ತುರುಗ ಕಾಲಾಳಿಂದ ಶಸ್ತ್ರಾಸ್ತ್ರಗಳ ಬಲ್ಮಳೆಯು ಸುರುಯುತಿದೆ (ದೇಶೀವು. ೩-೦೩). **ಬಲುಮಳೆ :** ಕೋಲ ಬಲುಮ[ಪಾಠಾಂ. ವ]ಳೆಗೊಡ್ಡಿ ಹರಿಗೆಯ ಮೇಳಯುವ ಮಱೆಗೊಂಡು ಖೇಚರರಾಳು ನಿಂದೆಚ್ಚಿತು ನಿಹಾರದಲರ್ಜುನನ ರಥವ (ಕುವ್ಯಾಕ. ೨೦-೨೩) ; ಬಲುಬೊಬ್ಬೆ ಸಿಡಿಲು . . . ಸಲೆ ತುರಗದ ದನಿ ಗುಡುಗು ಖುರರವಯುವ ಕಾಲಮೇಘವಂಬಿನ ಬಲುಮಳೆಗಳ ಕರೆದುವು (ಕಂಸವಿ. ೦೮-೦೦೦).
[ಬಲ್$_2$ (<ಬಲ್ಲಿತು$_1$) + ಮಳೆ (<ಮೞೆ) ]

**ಬಲ್ಮಾವಂತ** (ನಾ). ದಕ್ಷನಾದ ಮಾವುತ : ತೊಟ್ಟನೆ ಪೊಂದಿದ ಕುದುರೆಯ ತಟ್ಟಂ ಕಂಡಣೆದು ಸೂಂಕಿ ಬಲ್ಮಾವಂತರ್ ಬಿಟ್ಟಿಕ್ಕಿದರಾನೆಗಳಂ (ಕಬ್ಬಿಕಾ. ೨೮೦). [ಬಲ್$_2$ (<ಬಲ್ಲಿತು$_1$) + ಮಾವಂತ]

**ಬಲ್ಮಿಂಚು** (ನಾ). ೧. ಹೆಚ್ಚಿನ ಪ್ರಕಾಶ. ೨. (ಆಲಂ) ತುಂಬ ಕಾಂತಿಯಿಂದ ಕೂಡಿದ ವ್ಯಕ್ತಿ : ವಂಚಿಸಿ ಬಲೆಯೊಳ್ ಪ್ರಪಂಚವೆಲ್ಲ ಸೆಳೆದು ಕಂಚಿಪಟ್ಟಣದಿ ಬಲ್‌ಮಿಂಚಾಗಿದ್ದನೆ (ಪುರಂದ. ೨-೩೨-೨).
[ ಬಲ್$_2$ (<ಬಲ್ಲಿತು$_1$) + ಮಿಂಚು$_2$ ]

**ಬಲ್ಮಿಡಿ** (ನಾ). ದೊಡ್ಡದಾದ ಮಿಡಿ : ತುಱುಗಿರ್ದ ಬಲ್ಮಿಡಿಯ ತೂಗುಂ ಗೊಂಬಿನೊಳ್ ಪಾಯ್ದು ಬಂಡಳಿಸುತ್ತಿರ್ಪ ಶುಕಾಳಿ ತಮ್ಮ ಬೆಸದೊಳ್ ಕಂತಮ್ಮ ಠಾಣಾಂತರಂಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದು ವಿಮ್ಮಾವುಗಳ್ (ಆದಿಪು. ೧೧-೯೪) ; ಆಲರೆಸವೆಳದಳಿರೆಲೆಯಾರಲಿಲೆ ಬಲ್ಮಿಡಿ ವಿಸುಪ ಪಚ್ಚೆಗೊಂಡಲವುಳಿ ಕಜ್ಜಲತಿಲಕವೊಗೆ ತೋರ್ಪುದು ಸಲೆ ಸೊಗಯಿಸಿ ಬಾಲನಂದದಿಂ ಮಾಕಂದಂ (ಸುಕುಮಾ. ೫-೩೬).

[ಬಲ್$_2$ (<ಬಲ್ಲಿತು$_1$) + ಮಿಡಿ$_4$ ]

**ಬಲ್ಮಿಣಿ** 'ಬಲ್ಮಿಳಿ' ನೋ.

**ಬಲ್ಮಿಳಿ**, ಬಲುಮಿಣಿ, ಬಲ್ಮಿಣಿ (ನಾ). ದೊಡ್ಡದಾದ ಮಿಣಿ ; ಬಲವಾದ ಹಗ್ಗ : ಅಳವಱಿಯದೆ ಕೋಟೆಯ ತೆನೆಗಳೊಳೆತ್ತಂ ಸುತ್ತಿ ನೇಲ್ವ ಬಿರುದರ ಕರುಳಂ ತಳದಿಂ ಪಿಡಿದಡರ್ದರ್ ಬಲ್ಮಿಳಿ [ಪಾಠಾಂ. ಲ್ಮೆಳಿ] ಯಂ ಪಿಡಿವಡರ್ವ ಮಾಟ್ಕೆಯಿಂ ಮೆಯ್ಗಲಿಗಳ್ (ಜಾಸ್ಮಿಪು. ೩-೧೫೦). **ಬಲುಮಿಣಿ :** ಈಸ ಬಲಿ ಬಲುಮಿಣಿಯ ಬಿಗಿಯೆನುತ ಮೇಲೆ ಮೇಲಬ್ಬರದ ಘೋಳಾಘೋಳಿ ಘಲ್ಲಿಸೆ ದೆಸೆಯಲತಿರಥಜಾಲ ಕವಿದುದು ಕದನಕೌತೂಹಲರ ಕೇರಿಯಲಿ (ಕುಮ್ಯಾಭಾ. ೮-೦೨) ; ಎತ್ತಿದಿರಿ ಬಲುಮಿಣಿ[ಪಾಠಾಂ. ಳಿ]ಯಲಿವನನು ಸುತ್ತಿ ಸಿಂಧುರಘಟೆಗಳಿಂದೆಳೆಸುತ್ತ ಕೊಂಡೊಯ್ಯೆನಲು ಹಮ್ಮಿದರಾನೆಯಲಿ ಕಪಿಯ (ತೊರರಾ. ೫-೬-೩). **ಬಲ್ಮಿಣಿ :** ಬಹಳ ಪಾಶಂಗಳಂ ಬೀಸಿ ತೊಡಗಿ ಕೆಡಪಲ್ವೇಳ್ಕುಮೆಂದು ಬಲ್ಮಿಣಿಗಳಂ ತವುತವಗೆ ಕೆಯ್ಕೊಳುತ್ತು . . . ಕೋಳಾಹಳದೊಳುಱು ಬಿದರ್ ವೃಷಪತಿಯಾಸು (ಕಬಪು. ೯೯-೦೫).

[ಬಲ್$_2$ (<ಬಲ್ಲಿತು$_1$) + ಮಿಳಿ$_2$]

**ಬಲ್ಮುಗುಳ್** (ನಾ). ದೊಡ್ಡದಾದ ಮೊಗ್ಗು ; ದಪ್ಪವಾದ ಕುಟ್ಮಲ: ನೆಗಟ್ಟುದು ದೇವಮಂದುಭಿರವಂ ಸುರನಂದನದಿಂ ಪೊದಟ್ಟ ಬಲ್ಮುಗುಳ್ಗಳ ತಂದಲಂದು ಕವಿತಂದುದು (ಶಂಕಪು. ೦೪-೦೯) ; ಅಸುಗೆಯ ನಾಗಕೇಸರದ ಬಲ್ಮುಗುಳಂ ಬಿಱಿಯೊತ್ತಿ ತುಂಬಿ ಚುಂಬಿಸೆ (ಜಾಂತಿಪು. ೬-೫೩) ; ನೆಗೆದುಡು ಜಾಲದಂತೆ ಪೊಸಮಲ್ಲಿಯ ಬಲ್ಮುಗುಳೊಪ್ಪೆ . . . ಮಾರ್ಧಿ ಪೆರ್ಚುಗೆಯ ನಮುರ್ಚೆ ತಾಳ್ದನುದಿತೋದಯಮಂ ಹಿಮಕಾಲಚಂದ್ರಮಂ (ಶಾಂತಿ. ೯-೪).

[ಬಲ್$_2$ (<ಬಲ್ಲಿತು$_1$) + ಮುಗುಳ್$_2$]

**ಬಲ್ಮುಡಿ**, ಬಲುಮುಡಿ (ನಾ). ೧. ಕೂದಲಿನ ದೊಡ್ಡ ಗಂಟು ; ದೊಡ್ಡ ತುರುಬು : ಸಾರ್ದೆಳಸಿ ಪಗಿಲ್ತ ಕೇಕಿಯೆನೆ ಬಲ್ಮುಡಿ ತೋಱೆ (ಕಬಕಂ. ೩-೦೫) ; ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು (ಶಶಪೂ. ೨೪-೧೯). ೨. ದೊಡ್ಡದಾದ ಜಟೆ : ದಟ್ಟವಾದ ಕೂದಲು : ಬಾಂಬೊಳೆ ತಳ್ತ ಕೆಂಜಡೆಯ ಬಲ್ಮುಡಿ ತಾಳ್ದ ಶಶಾಂಕಲೇಖೆ . . . ಬಗೆಗೊಳ್ವ ಸುಣ್ಣರೆ ವರಾಭಯಶೂಲಮೃಗಾಂಕಪಾಣಿಯುಂಕಂ ಬಿಡದೊಪ್ಪ ವದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ (ಕಬಕಂ. ೧-೬೪). **ಬಲುಮುಡಿ :** ೧. ನಿಱಿಗುರುಳ್ ಸಿವಿರ್ದ ಕಣ್ಬಲುಮುಡಿ . . . ಸಳಿ ತೋಳಸಿಯ ನಡು ಮೆಱೆಯೆ ಮೆಱೆವಳಾ ನೀಱೆ (ಕುಂಣಾಪಾಂ. ೨೯-೦೦೬).

[ಬಲ್$_2$ (<ಬಲ್ಲಿತು$_1$) + ಮುಡಿ$_3$]

**ಬಲ್ಮುತ್ತು** (ನಾ). ದೊಡ್ಡದಾದ ಮುತ್ತು: ದಪ್ಪವಾದ ಮೌಕ್ತಿಕ : ಬಲ್ಮುತ್ತಿನ ಬಳಗಮಣಂ ಮೆಲ್ಮುಗುಳಾದಂತೆ ಪೊಳೆವ ಬೆಳ್ಬಸಿವಲಗೊಂ ಬಲ್ಮುಸುಕಿ ಪರಿಮಳದ ಗೊಂಬಲ್ಮುಸುಕಿದುದಲ್ತೆ ಮಾಧವಿಯ ಪಾದಪದೊಳ್ (ಶಾಂತೀಶ್ವ. ೫-೦೦೦). [ಬಲ್$_2$ (<ಬಲ್ಲಿತು$_1$) + ಮುತ್ತು$_3$]

**ಬಲ್ಮುನಿಸು**, ಬಲುಮುನಿಸು (ನಾ). ಅತಿಯಾದ ಕೋಪ; ಬಹಳವಾದ ಸಿಟ್ಟು : ಮತ್ತಿನ ಮಾನ್ಯರೊರೆದ ಕೃತಿಯಾ ಸಲ್ಲಲಿತಮನೇನೆನ್ನದೆ ತಮ್ಮಯ ಬಲ್ಲತನವನೇ ಮೆಱೆವಣ್ಣಂಗಳ ಬಲ್ಲತನದ ಬಾಯೊಳಃ ಬಳಹಂ ಬಲ್ಮುನಿಸುದಳೆದು ಹೊಗಲಿ (ಜಮ್ಮಾ. ೦-೦೬). **ಬಲುಮುನಿಸು :** ಹಲವು ಪರಿಯಿಂದಿಂತು ನವಿಸುವನಲಸುವಂ ಪ್ರಾರ್ಥಿಸುವಂ . . . ಬಲುಮುನಿಸು ನಿಮ್ಮಿಂದವಲ್ಲದೆ ತಿಳಿಯದೆನುತಂ ಬಾಲಲಿಂಗನವಸ್ಥೆಗೊಳುತಿರಲು (ಬಸಪು. ೯೬-೯೬) ; ಎನ್ನೊಳು ಬಲಿದ ಬಲುಮುನಿಸನೆಲ್ಲವ ಕಳೆದು ಸಲಹೆಂದೆನುತ ಸಂಪ್ರಾರ್ಥನೆಯ ಮಾಡಿದನು (ತಿಪ್ಪೇ. ೦-೦೦೯). 'ಬಲ್ಮುಳಿಸು' ಪರಾ. [ಬಲ್$_2$ (<ಬಲ್ಲಿತು$_1$) + ಮುನಿಸು$_2$]

**ಬಲ್ಮುಸು** (ನಾ). ಒಂದು ಬಗೆಯ ದೊಡ್ಡ ಆಕಾರದ ಕಪಿ,–ಮುಸಂ : ತಳಿವರ್ತ್ತಗೆ ಕಪಲ್ಗೊಂಬು ಠವಣಿಕೋಲಳಿ ಶುಕ ವಟುತತಿಯಾಗಿ ಬಳಸಿರಲೊಂದು ಬಲ್ಮುಸು ನರೆಗಡ್ಡವ ತಳೆದ ದೀಕ್ಷಿತನಂತಾಯ್ತು (ಕ್ರೀಪಾಂ. ೬-೨೪). [ಬಲ್$_2$ (<ಬಲ್ಲಿತು$_1$) + ಮುಸು$_2$]

**ಬಲ್ಮುಸುಡು** (ನಾ). ದೊಡ್ಡದಾದ ಮೂತಿ ; ಹಿರಿದಾದ ಮುಖ : ಕುಸಿದ ಸಿರಂ ಕೆಲಕ್ಕೊಲೆದ ಬಲ್ಮುಸುಡುರ್ಬಿದ ಮೆಯ್ಕ ರೋಮಂ . . . ತಳ್ತಗುರ್ವಿಸೆ ಮುಲೆದುರ್ಕಿ ಗರ್ಜಿಸಿ ಕರಂ ಪರಿತಂದುದು ಪಂದಿ ಕಾಯ್ಪಿನಿಂ (ಕಬಕಂ. ೪-೯). [ಬಲ್$_2$ (<ಬಲ್ಲಿತು$_1$) + ಮುಸುಡು]

**ಬಲ್ಮುಳಿಸು** (ನಾ). = ಬಲ್ಮುನಿಸು : ಪಗೆ ಕೆಯ್ಗೆವಂದು ಬದರ್ಕಾಡಿದ ಬಲ್ಮುಳಿಸಿಂ ವೃಕೋದರಂ ಅಂತು ಕಳಿಂಗರಾಜ ಮತ್ತಮಾತಂಗಘಟೆಗಳ ಮೇಲೆ ಮುಳಿಸಂ ಕಳೆವೆನೆಂದು ಸಿಂಹನಾದದಿನಾರ್ದು . . . ದಿಗ್ಗಜಮಂ ಪೋಲ್ವ ಗಜಂಗಳಂ ಪಲವುಮಂ ಕೊಂದಂ ಮರುನ್ನಂದನಂ (ಕೃಕಪು. ೧೦-೦೦೦) ; ಇನ್ನೆಮಗಗಮ್ಯನಲಕ್ಷ್ಯನದೃಶ್ಯನಾಗಿ ನಿ ನೆನಸುಮುಗಲ್ದ ಬಲ್ಮುಳಿಸು ನಲ್ಲನೆ ಕಾಲ್ವಿಡಿಯಲ್ಕೆ ಮಾಣ್ಗುಮೇ (ಜಗಂ. ೬-೦೦೩) ; ಬಿರಯಿಗಳಂಡೆ ಕೂಡದರ ಕಲ್ಲೆರ್ದೆ ಪವ್ವನೆ ಸೀಟೆ . . . ಬಲ್ಮುಳಿಸಿಂದಮುಗಲ್ಕೆವೆತ್ತ ನಲ್ಲರ ಬಗೆ ಬಳ್ಕೆ ಜೇವೊಡೆಯ ಬಲ್ಲುಲಿ ನೀಳ್ದುದು ಕರ್ಪುವಿಲ್ಲನಾ (ಕಬ್ಬಿಗಾ. ೩೦೦). [ಬಲ್$_2$ (<ಬಲ್ಲಿತು$_1$) + ಮುಳಿಸು$_2$]

**ಬಲ್ಮುಱಿ** (ನಾ). ಬಹಳ ಚೂರಂ ; ಅನೇಕ ಚೂರು : ಬಾಳ ಬಲ್ಮುಱಿಯುಂ ನೆತ್ತರ ಪೂರಮುಂ ನೆಗೆದು ಕಣ್ಗೆಂಬಾಯ್ತು ಬಾನೆಂಬ ಕೆಂಗೆಱೆ ಬೆಂಡೆದ್ರ್ ಕಲಂಕೆ ಮಿನ್ನಿಡುಕುಮಂತತ್ಯುಗ್ರಸಂಗ್ರಾಮದೊಳ್ (ಅಸಂಪು. ೦೪-೯). [ಬಲ್$_2$ (<ಬಲ್ಲಿತು$_1$) + ಮುಱಿ$_2$]

**ಬಲ್ಮೆ**, ಬಲುಮೆ (ನಾ). ೧. ಬಲ; ಶಕ್ತಿ; ಸಾಮರ್ಥ್ಯ; ಪರಾಕ್ರಮ : ಇನಿತೊಂದು ನುಡಿದ ಬಲ್ಮೆಯೆ ನಿನಗಿಲ್ಲದೊಡೆ ಕೆ ನಿನ್ನನಾಳ್ದಂ ನಿನ್ನಂ ಮನವೊಲ್ದು ನಟ್ಟಯಟ್ಟಿದನಾಕಳಂ ದೂತನಿಂತು ನುಡಿಯಲ್ವೇಟ್ಕುಂ (ಆದಿಪು. ೦೪-೬೫) ; ಜೀವಮದೊಂದೆ ದೇಹವೆರಡಿಂತಿವರ್ಗೆಂಬಭಿಶಂಕೆಯಂ ಧರಿತ್ರೀವಳಯಕ್ಕೆ ಮಾಡುವುದು ತಮ್ಮೊಳವಂದಿರ ನಲ್ಮೆ ಬಲ್ಮೆ ಶೋಭಾವಹ ಮೂರ್ತಿ ಕೀರ್ತಿ . . . ಸದೃಶಸ್ವರೂಪದಿಂ (ಶರ್ಧಪು. ೩-೩೫) ; ಮೊಱೆಗೆಳ ಮಥನನು ಸಂಗ್ರಾಮದೊಳಿಂದು ತಱಿದು ಬೇಡರ ಬಲ್ಮೆಯನು ಮುಱೀವೆ ವೀಳೆಯವ ತಾರೆಂದವನರಸನ ನೆಱೆ ಧೀರನಾಗಿ ಬೇಡಿದನು (ಜೀವಂಧರಾ. ೮-೨೫). ೨. ಪರಿಣತಿ ; ನೈಪುಣ್ಯ ; ಪ್ರಗಲ್ಭತೆ : ಈ ಬರೆದ ಶ್ಲೋಕವಂ ಚಾಣಾಕ್ಯನೊಂದು ದಿವಸಂ ಕಂಡಿದು ನೀತಿಶಾಸ್ತ್ರದ ಬಲ್ಮೆಯಲ್ತೊಂದದಂ ಸೀಂಟಿ ತಾಸಿಂತೆಂದು ಬರೆದಾ (ಶಬ್ದಾರಾ. ೦೬೪-೦೩) ; ತಪ್ಪದೀ ಲಲನೆ ತತ್ಸ್ವಯಂಪ್ರಭೆಯೆ ನೋಟಿಸ್ಪಡೀ ಚಿತ್ರಮಿಂತಿದಾಕೆಯದೆ ಬಲ್ಮೆ ಪೇಟ್ಟ್ ಪೆಱರ್ಗಮಿಂತುಟೊಂದಕ್ಕುಮೇ (ಆದಿಪು. ೯-೬) ; ಕವಿಮಾರ್ಗದೊಳಂ ಪೊಸ ದೇಸೆಯ ನುಡಿಗಳೊಳಂ ಪೊಸೆಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೦-೩೯). ೩. ಶ್ರೇಷ್ಠತೆ ; ಉತ್ತಮಿಕೆ: ಪೊಸದೇಸೆಯೊಳೊಂದಿದ ಮಾರ್ಗಮೊಳ್ಪುವೆತ್ತಸದಿರೆ ಪೇಟ್ಟು ರಂಜಿಸದೆ ಕೆಮ್ಮನೆ ಬಲ್ಮೆ [ಪಾಠಾಂ. ಲ್ಮೆ]ಗೆ ಮುಯ್ಯನಾಂಪುದೇ (ಸುಕುಮಾ. ೦-೧೯). ೪. ಹಿರಿಮೆ; ಮಹಿಮೆ: ಪತಿತರ ಪಾವನವೆನಿಸುವ ಬಲ್ಮೆಯೊಳತಿಶಯವಡೆದ ತೀರ್ಥಗಳು ಸತಿಯರ ಪಾದಸಂಸ್ಪರ್ಶದಿಂ ತಮ್ಮ ದುಷ್ಕೃತವ ಕಳೆಯಲೆಳಸುವುವು (ಕಬಾ. ೨-೬). ೫. ಏಳಿಗೆ; ಉನ್ನತಿ ;

ಅಭಿವೃದ್ಧಿ : ಅನುದಿನವು ತನ್ನ ದೇಶದ ಬಲ್ಮೆಗಾಗಿ ತನು ಮನ ಧನಗಳನು ಅರ್ಪಿಸುತ ಭಕ್ತಿಯಿಂದ (ಕಾಪು. ೦೫-೩). ೬. ಶ್ರೇಷ್ಠವಾದುದು; ಉತ್ತಮವಾದುದು; ಮೇಲಾದುದಂ : ಕವಿಯೇ ಸರ್ವರೊಳುತ್ತಮಂ . . . ರಸಗಳೊಳ್ ಶೃಂಗಾರವೇ ಬಲ್ಮೆ (ಸೋಮಶ. ೯). ೭. ಬಲಾತ್ಕಾರ; ಒತ್ತಾಯ ; ಜುಲುಮೆ : ಸುಖಾಸನಾರೂಢ ತನ್ನನಿಯನ ಬಲ್ಮೆಯಲ್ಲದ ನಲ್ಮೆಯ ಪರಮಪದಮನೋರೊರ್ವರೊಳ್ ನುಡಿವ ಕೆಳದಿಯರ ನುಡಿಯ ನಾಲಿಸುತ್ತುಂ ನಿಜನಿವಾಸಕ್ಕೆ ಬಿಜಯಂಗೆಯ್ದು (ಪುಲ್ಲಶ. ೯-೯೬); ನಿಷ್ಠುರ ಕೋಪಂ ಪಿಡಿದೊತ್ತಿ ಸೂಳೆಯರೊಳುಗ್ರಾಟೋಪದಿಂ ಬಲ್ಮೆಯಿಂ ನೆರೆವಂ ಭೂಭುಜನಂದನಂ (ರಸಾಸ್ವ. ೩-೩೮). ೮. ಬೆಂಬಲ : ಒತ್ತಾಸೆ : ಗಂಡನ ಬಲ್ಮೆಯೊಳತ್ತೆಮಾವಂದಿರ ಗಂಡನನವರ ಬಲ್ಮೆಯೊಳು ಅಂಡಲೆಯುದೆಯನಿಬರನನುಸರಿಸುವ ಪೆಂಡಿರ ಜಸ ಪೆರ್ಚುವುದು (ಹರಿಬ. ೯-೫). ೯. (ಅಲಂ) ಔಚಿತ್ಯ ; ಯೋಗ್ಯವಾಗಿರುವಿಕೆ : ಕನ್ನೈದಿಲಲರ್ಗೆ ಯಾಱಿಡಿಗೆ ಶಶಿಬಿಂಬಕ್ಕೆ ರನ್ನಕ್ಕೆ ಪೊನ್ನ ಕಳಸಕ್ಕೆ ತಿಳಿಗೊಳಕೆ ಮಿಗೆ ಚೆನ್ನೆಸೆವ ಬಗಸೆಗಣ್ಣಳಕವಾನನಮಧರಕುಚಯುಗ್ಮಮೆಸೆವ ನಾಭಿ ಮುನ್ನಮೇ ಸರಿಯೆಂಬ ಬಲ್ಮೆ ಪೊಱಮಾಱಧಿಕವೆನ್ನಲುಚಿತಂ ತಥ್ಯವೆನಲೆಸೆದಳಾ ಚೆಲ್ವ ಕನ್ನೆ (ರಾಜಶಂ. ೩-೯೬). ಬಲುಮೆ : ೧. ಬಲುಮೆ ಮಿಗೆ ಜನಬಸದಿಗಳ ಮೇಲಳವಡಿಪ ಶಿಖರಂಗಳಂ ಭೂತಳಕಿಳಿಯ ನೂಕಿಸುತಿವೆಲ್ಲಂ ನುಚ್ಚುನುಱಿ ಮಾಡಿ (ಬಸಪು. ೫೦-೬೨) ; ಬಲುಮೆಯಿಂ ನೂಂಕಿ ದಟ್ಟಿಪೆವೆಂದೊಡೆಮ್ಮಿಂದ ಬಲವಂತರಿಲ್ಲ (ಸೌಂದಪು. ೯-೬೦) ; ಬಲುಮೆಯುಳ್ಳಡೆ ಕಾದು ನಿನ್ನಂ ಕೊಲದೆ ಬಿಡೆನು (ಅಪಂಚಾ. ೦-೯-೨೩). ೨. ರಾಯ ನಿನಗಾವಿಂದು ದಿಟ ಸಿದ್ಧಾಯವನು ನಾವ್ಮತ್ತೆವಲ್ಲದೆ ವಾಯುಜನ ಫಲುಗುಣನ ಬಿಲ್ಲಿನ ಬಲುಮೆ ಗಂಜಿದೆವೆ (ಕುವ್ಯಾಸ. ೬-೩೦) ; ಕಿಳುಹು ಧರ್ಮಜ ಸಕಲಧರ್ಮಾವಳಿಯ ಸಾರವನೆನಲು ಯಕ್ಷನ ಬಲುಮೆಗವನೀಪಾಲನತಿಪರಿತೋಷದಲಿ ನುಡಿದ (ಕುವ್ಯಾಅ. ೨೩-೩೯). ೩. ಜಲಮಣೆಯ ಬೆಡಗನಿಕ್ಕಬಹುದೆ ಬಯಲ ಬಂಧಿಸಬಹುದೇ ಬಲುಮೆಯ ರಸಿಕಕ್ಕೆ ಸಲೆ ನಿಲಯ ಉಂಟೇ ಇದು ಸಲ್ಲಲಿತ ಇದಱ ಬಲುಮೆಯ ಹೇಳಾ (ಸೋಮವಾ. ೦೮-೪೬೯) ; ಗಿರಿಜೆಯರ ಸಂಗಱಿಯಬಾರದ ಪರಮಮಾಹೇಶ್ವರರ ವಿಸ್ಮಯಚರಿತವಂ ವರ್ಣಿಸುವ ದಾನೇತಱವನಂತಾಗಿ ಸರಸದಿಂ ಕೀರ್ತಿಸಿದೆನಾ ಭಕ್ತರನೆ ಮತ್ತನ್ಯತವನಱಿಯೆನು ನಿರುತದಿಂದೀವೊಂದು ಬಲುಮೆಯೊಳಾದ ಪೆಂಪಿಂದ (ಬಸಪು. ೩೦-೬೬). ೭. ಜಲದೊಳಾಡುತ್ತಿರಲು ಕಂಡನು ನಳಿನವದನೆಯನಾ ಗುಹಾಸುರ ಬಲುಮೆಯಲಿ ರಮಿಸಿದನು (ಸಂಹಶ. ೨೬-೦೦೩) ; ಎಲ್ಲವನು ಅಱಿದಿಹರೆ ಬಲ್ಲೆನೆಂದೆನಬೇಕು ಅಲ್ಲಲ್ಲಿಗೊಂದನಱಿದುಲಿಯೆ ಬಲುಮೆಗೆ ಕಲ್ಲು ಹೊತ್ತಂತೆ (ಸರ್ವಜ್ಞ. ೪೫೨). ೮. ಎನ್ನ ದೇಹದಲಿ ಒಲಿದು ನೀನಿರೆ ನಿನ್ನ ಸಲುಗೆಯ ಬಲುಮೆಯಲಿ ಬರಸೆಳೆವೆ ಮುಕ್ತಿಯ ಲಲನೆಯನು ತಳುವಿಲ್ಲ (ಹಂಸಾ. ೫೯). 'ಬಲುಮೆವಿಡಿ' ಪರಾ.

ಬಲ್ಮೆ ಮಾಡು, ಬಲುಮೆ ಮಾಡು = ೧. ಭದ್ರಗೊಳಿಸಂ ; ಬಿಗಿಗೊಳಿಸು ; ಬಲಪಡಿಸು : ಪುರದುರ್ಗಂಗಳ ಬಲ್ಮೆ ಮಾಡದೆ ಪ್ರಜಾಕ್ಷೋಭಂಗಳಂ ನೋಡದೆ . . . ಮದನಂಗಾಳಾಗಿಹಂ ಲೋಕದೊಳ್ ದೊರೆಯೇ ಸೊಕ್ಕಿದ ಕೋಣನೈ (ಸೋಮಶ. ೫೩). ೨. ಬಲಾತ್ಕಾರ ಮಾಡು ; ಒತ್ತಾಯ ಮಾಡು : ನಮ್ಮ ಮೇಲೆಯೇ ಇಷ್ಟು ಬಲುಮೆ ಮಾಡಲಿಕ್ಕೆ ನಾವೇನು ಅಂಥಾದ್ದು ಆತನಿಗೆ ಮಾಡಿದ್ದೇವು (ಮುಂಬಯಿ. ೪. ೨-೪೫). [ಬಲ್$_2$ (<ಬಲ್ಲಿತು$_1$) + – ಮೆ$_1$]

**ಬಲ್ಮೆಕಾಱ** 'ಬಲ್ಮೆಗಾಱ' ನೋ.

**ಬಲ್ಮೆಗಾರ** 'ಬಲ್ಮೆಗಾಱ' ನೋ.

**ಬಲ್ಮೆಗಾಱ, ಬಲುಮೆಕಾಱ, ಬಲುಮೊಗಾಱ, ಬಲ್ಮೆಕಾಱ, ಬಲ್ಮೆಗಾರ** (ನಾ). ೧. ಬಲವುಳ್ಳವನು ; ಪರಾಕ್ರಮಿ : ಇರ್ಮಡಿ ಬಲ್ಮೆಗಾಱರುಂ ಕೆಱಿದು ಕೀಱ್ಗಿಯ್ದುದಱಿಂ ಹೊಂತಕಾಱರ್ಗಳನಿಬರುಂ ಪಿಂದೆಗೆಯೆ (ಜಗಪಂ. ೦೬೯-೬). **ಬಲುಮೆಕಾಱ** : ೧. ಅಳುಕಿದರು ಮನುಮಥನ ಗರುಡಿಯ ಬಲುಮೆಕಾ[ಶಾಕಾಂ. ಮೆಗಾ]ಱರು ಬಂದಳಗ್ಗದ ನಳಿನಮುಖಿ ಬಹುಜನದ ಮನಕಚ್ಚರಿಯನೊದವಿಸುತ (ಕುವ್ಯಾವಿ. ೦-೨೬); ತೊಲೆಗಳೊಳಗೆ ದಸಿಗಳ ಪೆಟ್ಟಿ ಲಂಘಿಪ ಬಲುಮೆಕಾಱರ ಮೇಲೆ ನೂಕೆ ತಲೆ ಮೈ ಕೈ ಕಾಲೊಳು ಗೂಟಗಳು ಮೂಡಿ ಸಲೆ ತೊಱೆದರು ಜೀವಗಳನು (ಕಂಸಾ. ೧೯-೬೦). **ಬಲುಮೊಗಾಱ** : ೧. ಎಲೆ ಧರ್ಮಸುತ ಕೇಳಿಂತೊರ್ವನೆ ರಾಜಬಲವನೆಲ್ಲವ ಬಱಿಕೆಯ್ಕೆ ಬಲುಮೊಗಾಱರ ಬಲ್ಲಹನು ಜರಾಸಂಧನೊಳಿದು ಕರ್ಣನ ಕರೆಸಿದನು (ಕರ್ಣಪ. ೬-೧). **ಬಲ್ಮೆಕಾಱ** : ೨. ಶ್ರೇಷ್ಠನಾದವನು ; ಮಹಿಮಾವಂತ : ತೋಱಿದ ಚಿಂತೆಯ ನಿಮಿಷಮಾತ್ರದಿ ಕಡೆಗಾಣಿಸುವತಿಶಯರೂಪಾ ಜಾಱದೆ ನನ್ನಂತರಂಗದೊಳಿರು ಬಲ್ಮೆಕಾಱಾ ಚಿದಂಬರಪುರುಷಾ (ಭರತ. ೫೮-೦೦೬). ೩. ಚತುರನಾದವನು ; ಚಾಣಾಕ್ಷ: ತಾಂಬೂಲವಸ್ತ್ರಭೂಷಣವಿತ್ತು ನಮಿರಾಜ ತುಂಬಿದ್ದ ಜನವ ಬೀಳ್ಕೊಟ್ಟು ಮುಂಬಾಗಿಲೆಡೆ ಮುಟ್ಟ ಹೋಗಿ ತಿರುಗಿ ಬಂದನೇಂ ಬಲ್ಮೆಕಾಱನೊ ಮಂತ್ರಿ (ಭರತ. ೩೮-೩೮). **ಬಲ್ಮೆಗಾರ** : ೩. ನಿನಗಿನ್ನೂ ಸಿದ್ಧಿಸದಿರುವುದು — ಬಲ್ಲ ಬಲ್ಮೆಗಾರನ ಉತ್ಕಟೋಪಭೋಗದ ಪ್ರಥಮಸಮಾಗಮ (ಮುಂತ್ರಶ. ೨೯-೦೦). [ಬಲ್ಮೆ + – ಗಾಱ (< – ಕಾಱ)]

**ಬಲ್ಮೆಗೈ** (ಕ್ರಿ). ಒತ್ತಾಯ ಮಾಡು; ಬಲವಂತ ಮಾಡು : ಅಂಜಲೇತ ಕೆಲೆ ಬಸವಣ್ಣ ನೀಂ ಕೊಟ್ಟ ಘನಲಿಂಗಮಂ ಕೊಂಡಡಂಗಿದನಿಮಿಷನಂದ ಮೆನಗಿಲ್ಲ ಬಲ್ಮೆಗೈವವನಲ್ಲವೀ ಲಿಂಗಲಕ್ಷಣಂಗಳನಾದೊಡೆ ಎನಗೆ ತಿಳಿಪು (ಶಿಬಪು. ೩-೬). [ಬಲ್ಮೆ + ಗೈ (< ಕೆಯ್$_1$)]

**ಬಲ್ಮೆದೆ** (ನಾ). ದೊಡ್ಡ ಮೆದೆ : ನೆಲ್ಲ ರಾಶಿಗಳಷ್ಟು ಹೊನ್ನ ರಾಶಿಗಳುಂಟು ಹುಲ್ಲ ಹೆಬ್ಬೆಣಬೆಗಳಷ್ಟು ಜಲ್ಲಿಪಟ್ಟೆಗಳ ಬಲ್ಮೆದೆಯಿದ್ದುವವನೊಂದು ಹುಲ್ಲಿಗೆ ಕಡೆಗಂಡು ಬಿಟ್ಟ (ಭರತ. ೬೦-೦೨). [ಬಲ್$_2$ (< ಬಲ್ಲಿತು$_1$) + ಮೆದೆ$_1$]

**ಬಲ್ಮೆಯ್** (ನಾ). ದೊಡ್ಡ ದೇಹ ; ನಿಡಿದಾದ ಶರೀರ : ಬಱಿದೋಱದ್ದೆಯ ಬಳ್ವಳಬಳೆದಾ ಬಲ್ಮೆಯ್ಯ ಕೂಡೆ ಪೆರ್ಚಿದ ಕೈಯುಂ ಒಳವುಗಿಸಲೆನ್ನ ಕಂತ್ತರ್ದೆಗೊಳಗಕ್ಕಿಮ ಖರ್ವತನುವ ಕರುಣಾಹಸ್ತಂ (ಶಸ್ತ್ರಶಂ. ೩೦). [ಬಲ್$_2$ (<ಬಲ್ಲಿತು$_1$) + ಮೆಯ್$_2$]

**ಬಲ್ಮೆವಂತ** (ನಾ). ೧. ಶಕ್ತಿವಂತ; ಬಲಶಾಲಿ; ಸಮರ್ಥ : "ಶಕನ್, ಶಕಾನಃ, ಶಕ್ತಃ, ಶಕ್ತವಾನ್, ಈ ೪ ಬಲ್ಮೆವಂತಂ" (ಕಾಶಕ್ಕ. ೨೦೯). ೨. ಚತುರ; ನಿಷ್ಣಾತ; ಜಾಣ : ಬಲ್ಮೆವನ್ತನ ಮುದ್ದುನುಡಿಗಳ ಕಟ್ಟಳಸಿನ ತುಮುಲಕೋಲಾಹಲದ ವಿಕಾರಾಭಾಸವನ್ನು ಸೂಳಕ್ಕುತ್ತಿದು (ಮುಂತ್ರಶ. ೦೯೦-೯). [ಬಲ್ಮೆ + — ವಂತ]

**ಬಲ್ಮೆಳೆ, ಬಲುಮೆಳೆ** (ನಾ). ಗಿಡಬಳ್ಳಿಗಳ ದಟ್ಟವಾದ ಪೊದೆ; ಒತ್ತಾಗಿ ಬೆಳೆದ ಗಿಡ ಮರಗಳ ಗುಂಪು, — ಪೊದರು : ನೆವವಿಟ್ಟು ಮೊಲೆವಣಗಳಂ ತವಕದಿನಂದಱಿಸುವಂತೆ ಬಲ್ಮೆಳೆಗೊಲ್ದುತ್ಸವದಿಂ ಮೆಲ್ಲನೆ ಪೋದಂ ಯುವತಿಯನೊಡಗೊಂಡು ಶಬರಕಾಮುಕನೊರ್ವಂ (ಉದ್ಭಟ. ೨-೬೮). **ಬಲುಮೆಳೆ** : ಸುಮಹಾರಥರ ಹೊದಱಲಿ ಹೊಕ್ಕನುರಿ ಬಲುಮೆಳೆಯ ಹೊಕ್ಕಂತೆ (ಕುವ್ಯಾದ್ರೋ. ೨-೩೦). [ಬಲ್$_2$ (<ಬಲ್ಲಿತು$_1$) + ಮೆಳೆ]

**ಬಲ್ಮೊಗ** (ನಾ). ಗಡುಸಾದ ಮುಖ; ಗಂಭೀರವಾದ ಮುಖ : ಅತಿಬಳಮಹಾರಾಜಂ . . . ಪೆಱರ ಮಾರ್ಗದೊಳಿರ್ದಡಲ್ಲದೆ ತಱಿಸಂದು ನೆಗೞರೆಂದು ಮೇಲ್ಮೆಗೆಯ್ಕದೆ ಬಲ್ಮೊಗಂ[ಶಾಕಾಂ. ಬಲುಮೊಗಂ] ಮಾಡಿ ತನ್ನಳಿಯಂದಿರ ಮೊಗಮಂ ನೋಡಿ . . . ಎಂಬುದುಂ (ಚುಕುಪು. ೨-೫೩ ಪ). [ಬಲ್$_2$ (< ಬಲ್ಲಿತು$_1$) + ಮೊಗ]

**ಬಲ್ಮೊರಡಿ** (ನಾ). ದೊಡ್ಡ ಪರ್ವತ; ಭಾರಿ ಬೆಟ್ಟ.

ಬಲ್ಮೊರಡಿಯ ಕನ್ನೆ = ಪರ್ವತರಾಜನ ಮಗಳು ; ಗಿರಿಜೆ; ಪಾರ್ವತಿ : ಮುನ್ನೀರಣುಗಿ ಮುರಾರಿ ಬಲ್ಮೊರಡಿಯ ಕನ್ನೆ ಕಪರ್ದಿ ವಾಗ್ದೇವಿಸ ನ್ನುತಬಿದಿಗಳೊಪ್ಪಿದವೋಲೊಪ್ಪಿದರತ್ಯನ್ನತಿಕೆಯೊಳಾ ಪ್ರಿಯರು (ಶ್ರೀಪಾ. ೧೧-೩೬). [ಬಲ್$_2$ (<ಬಲ್ಲಿತು$_1$) + ಮೊರಡಿ$_1$]

**ಬಲ್ಮೊರೆ** (ಕ್ರಿ). ಜೋರಾದ ಝೇಂಕಾರವನ್ನು ಮಾಡು : ಮಿಸು ಪಲರಂಬುಗಳುರ್ಕಿಂ ಬೆಸಕೆಯ್ಯುಡೆ ಮಲೆವ ಬೀರರಂ ಪರಿದೆಂಟುಂದೆಸೆ ಗಳೊಳಂ ಕಾಣೆವೆನಿಪ್ಪ ಸರದೆ ಬಲ್ಮೊರೆವುವೀಗಳಾಜಿಡಿ ನೆವದಿಂ (ಕಬ್ಬಿಗಾ. ೦೬೫). [ಬಲ್$_2$ (< ಬಲ್ಲಿತು$_1$) + ಮೊರೆ$_1$]

**ಬಲ್ಮೊಲೆ**, ಬಲುಮೊಲೆ (ನಾ). ತುಂಬಿದ ಸ್ತನ ; ತೋರವಾದ ಕುಚ : ನೆಟ್ಟನೆ ಮೊಗ ನೋಡಿ ಮುದ್ದಿಪ ತರಳನ ಪುಟ್ಟ ಕೈಗಳ ತಂದು ತನ್ನ ಬಟ್ಟ ಬಲ್ಮೊಲೆಗಡರ್ಚುವಳು (ಜೀಚಿತ. ೧೦-೩೬); ಅಡರ್ದ ಬಾಸೆಯ ಬಲ್ಮೊಲೆ ಗಳ ಥಳಥಳಿಪ ನುಣ್ಗೊರಲ . . . ತುಂಬಿಗಳ ಪೋಲ್ವ ಸುಳಿಗುರುಳ್ಗಳ ಪೆಣ್ಗಳಿರ್ದರಂದರಸಿನೊಡ್ಡೋಲಗದೊಳು (ಜಿಪು. ೬-೨೨). **ಬಲುಮೊಲೆ** : ಬಲುಮೊಲೆಯ ಸೋಂಕಿನಲಿ ಶಾಂತರ ತಲೆಕೆಳಗ ಮಾಡುವವು ಕಡೆಗಣ್ಣಲ ಗಿನಲಿ ಕೊಯ್ದುತ್ತುವವು ವಿಜಿತೇಂದ್ರಿಯರ ಮನವ (ಕುಮ್ಮಾ. ೦೬-೦೪); ಬಲುಮೊಲೆಯ ಬಾಸೆಗಳ . . . ಪುಳಿನ ಜಘನಸ್ಥಳದ ದಾನವಸತಿಯರಿರ್ದರ ದೊಂದು ತಾಣದಲಿ (ಕೊರಂ. ೫-೨-೬೯); ನಳಿತೋಳ ಸೆಳೆನಡು ಬಲು ಮೊಲೆಯ . . . ಮುತ್ತುದೊಡವಿನ ಚೆಲುವೆ ವಾಗುರಿ ಮಡದಿಯಾ ವಿಂಧ್ಯಕಗೆ (ಸಾಳ್ವಭಾ. ೫-೦೦). [ಬಲ್$_2$ (< ಬಲ್ಲಿತು$_1$) + ಮೊಲೆ$_1$]

**ಬಲ್ಮೊಸರ್** (ನಾ). ಗಟ್ಟಿಯಾದ ಮೊಸರು : ಅಜ್ಜಯುತಮಪ್ಪುವಂ ಮೆಲ್ಲು ತೊಟಿಯೊಳ್ ಪೋಪವಂಗೆ ತೆಪ್ಪವನಿಕ್ಕಿದಂತಿಕ್ಕಿದ ಗಟ್ಟಿಗೊಂಡ ಬಲ್ಮೊಸರಂ ಕೊಂಡು ಪುದುಳಿಸಿ ನಿಂದ ಬಟಿಕ್ಕಂ (ರಚೂಡಾ. ೦-೦೯೬). [ಬಲ್$_2$ (< ಬಲ್ಲಿತು$_1$) + ಮೊಸರ್]

**ಬಲ್ಮೊಳಗು** (ನಾ). ಜೋರಾದ ಗುಡುಗು : ಪೊಳೆವ ಮಿಂಚುಗಳೆಸೆ ಕೇಜಿಗಳೆಪಲ್ಲ ಬಲ್ಮೊಳಗುಗಳೆಸೆ ರಥಚಕ್ರಧ್ವನಿಗಳಲ್ಲ . . . ಕಂಗೊಳಿಪ ಕಾರ್ಮುಗಿಲ್ಗಳೆಸೆ ಕೃಷ್ಣನಲ್ಲಿಂಬವೋಲ್ಮೊಳುಗುಳಿಕೆ ಮೈದೋಱಿ ಕಂಡು ಕಲಿಸಿಂಹದಂತಿದಿರಾದನನುಸಾಲ್ವನು (ಕೃಬಿಭಾ. ೬-೩೦). [ಬಲ್$_2$ (< ಬಲ್ಲಿತು$_1$) + ಮೊಳಗು$_3$ (< ಮೊಟಗು$_2$) ]

**ಬಲ್ಯುಪಹಾರ** (ನಾ). ಬಲಿಯಾಗಿ ಅರ್ಪಿಸುವ ನೈವೇದ್ಯ : ಈ ಚತು ಸ್ಸೀಮೆಯಬಾನೊಳಗಾಗೆ ಒಡೆಯ ದೊಡ್ಡವಾಡಿಯ ಕಿಬ್ಬ ಬಾಳಿಟಿತ್ರಿ ಭಟಾರಿಗೆ ಬಲ್ಯುಪಹಾರಕ್ಕೆ ದೇವಭೋಗವಾಗಿ ಕೊಟ್ಟುದು (ಎಕ. IX (8), ಹೆಂಗಳೂ. ೦೫೦-೫೧; 828). [ ಸಂ. ]

**ಬಲ್ಲ$_1$** ‘ ಬಲ್$_1$ ’ ಪರಾ.

**ಬಲ್ಲ$_2$** ‘ ಬಲ್ಲೆಯ ’ ನೋ.

**ಬಲ್ಲ$_3$** (ನಾ). ಒಂದು ಊರಿನ ಹೆಸರು ; ಈಗಿನ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನಲ್ಲಿದೆ : ಸ್ವಸ್ತಿಶ್ರೀ ಇಱಿವ ನೊಳಂಬ ಪೃಥಿವೀರಾಜ್ಯಂಗೆಯ್ಯುತ್ತಿರೆ ಬಲ್ಲದ ತುಱುಗೊಣ್ಡೋಡೆ ಕೊಬ್ಬೆಯಯ್ಯರಿದುಂ ಬಲಿವಯುಂ ತುಱುವನಿಕ್ಕಿ (ಎಕ X, ಮುಳಬಾ. ೩೨-೨ ; ಸು. 950); ಬಲ್ಲದ ಲೆನ್ಕ ಮನೆಮುದ್ದಮಲ್ಲಯುಂ . . . ತುಱುವಂ ಕಟ್ಟ ಕಾದು ಸತ್ತು ಸಗ್ಗಿಯಾದಂ (ಮೈಅಂ. ೦೪೨೬, ೯೬-೩; 10ನೆಯ ಶತ). [?]

**ಬಲ್ಲಂಕ** (ನಾ). ದೊಡ್ಡ ಯುದ್ಧ : ತಳಿಯಾಗಲೆ ಹೂಡಿ ಬಲ್ಲಂಕವಾದುದು ಬಲುಹಾದುದು ಪಿಳ್ಳೆಗೋಂಟೆ ಎಲುವಿನ ಕಟ್ಟಿನ ಸೊಡರು ತಿಂಥಿಣಿಯಾಗಿ ತಳತವು ತೆನೆತೆನೆಗಳಲಿ (ನಾಗಕು. ೦೬-೩). [ಬಲ್$_2$ (<ಬಲ್ಲಿತು$_1$) + ಅಂಕ$_2$]

**ಬಲ್ಲಂಗಿ** (ನಾ). ಒಂದು ಬಗೆಯ ಸಸ್ಯ : (ಮೈಡಿಗಿ. ೬೩-೦೨೬೦); (ಸಸ್ಯಶಿ. ೦೦೬). ‘ಬಲ್ಲಗಿ’ ಪರಾ. [?]

**ಬಲ್ಲಂತಿಕೆ** ‘ ಬಲ್$_1$ ’ ಪರಾ.

**ಬಲ್ಲಕುಂದ**, ಬಲ್ಲಕುಂದೆ (ನಾ). ಒಂದು ನಾಡಿನ ಹೆಸರು : ಶ್ರೀಮತ್ತ್ರೈ ಲೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮಾನಡಿದೇವರು ಕೊಂಗಳಿಯ ಯ್ಯೂಱುಂ ಕದಂಬಳಿಗೆಸಾಸಿರಮುಂ ಬಲ್ಲಕುನ್ದ ಮೂನೂಱುಂ . . . ಸುಖಸಂಕಥಾವಿನೋದದಿನಾಳುತ್ತುಮಿರೆ (ಎಕ. XI, ದಾವಣ. ೨೦-೪; 1045). **ಬಲ್ಲಕುಂದೆ** : ಶ್ರೀಮದಿಱಿವ ನೊಳಂಬಾಧಿರಾಜಂ ನೊಳಂಬವಾಡಿ ಮೂವತ್ತಿಚ್ಛಾಸಿರಮುಂ ಕೆಂಗಟಿಯ್ಯೆನೂಱುಂ ಬಲ್ಲಕುನ್ದೆಮೂನೂಱುಂ . . . ಸುಖದಿನಾಳುತ್ತುಮಿರೆ (ಎಇ. XVI, ೨೯-೦೨; 1010). [ ? + ಕುಂದ$_3$ ]

**ಬಲ್ಲಕುಂದೆ** ‘ ಬಲ್ಲಕುಂದ ’ ನೋ.

**ಬಲ್ಲಗ** ‘ ಬಲಿಗೆ ’ ನೋ.

**ಬಲ್ಲಗಿ** ‘ ಬಲಿಗೆ ’ ನೋ.

**ಬಲ್ಲಡಗು** (ನಾ). ಉತ್ತಮವಾದ ಅಡಗು ; ಶ್ರೇಷ್ಠವಾದ ಮಾಂಸ : ಬಲ್ಲಡಗಿಲ್ಲದೊಡುಣಸಣಮಿಲ್ಲೀ ಪ್ರಭುಗೆನುತಮಾವನ ತೊಡೆಯಡಗನೆ ತಳ್ವಿಲ್ಲದಮಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿ. ೬-೯೬). [ಬಲ್$_2$ (<ಬಲ್ಲಿತು$_1$) + ಅಡಗು$_3$]

**ಬಲ್ಲಡವಿ** (ನಾ). ಗಹನವಾದ ಅರಣ್ಯ; ದಟ್ಟಡವಿ: ಬೀಡಿಂಗೆ ಬೀಡುವಿಡಲ್ ನೆಲನುಮೊಲೆಗಲ್ಗಳ್ಗೆ ಬೆಟ್ಟುಗಳುಂ ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ . . . ಆ ಪಡೆಗೆ ನೆಱಿಯುವೆನಿಸಿ . . . ಬಂದು (ಶಂಶಭಾ. ೯-೦೦೯ ವ); ತಾಂಗಿದುದು ಗಾಳಿಯುಂ ದೆಸೆಯುಂ ಗವಸಣಿಸಿದುದು ಮೇಗೆ ಮೊಗೆದಾ ಗಸಮುಂ ನುಂಗಿದುದೆನೆ ಕಟ್ತಲಿಸಿ ಕಱಂಗಿದ ಬಲ್ಲಡವಿ ಕಣ್ಗೆ ಪಡೆದು ದಗುರ್ವಂ (ಶಂಪುಮಾ. ೬-೦೦೪). [ಬಲ್$_2$ (<ಬಲ್ಲಿತು$_1$) + ಅಡವಿ]

**ಬಲ್ಲಣಿ** (ನಾ). ದೊಡ್ಡ ಸೈನ್ಯ; ಭಾರಿ ದಂಡು : ತುರಗದಟಂಗಳ ನೊಡ್ಡಿದ ಕರಿಘಟೆಯಂ ಪಿರಿಯ ನೆರ[ವಿ]ಯುಂ ಬಲ್ಲಣಿಯುಂ ಧುರದೆಡೆಯೊ [೪]ಱಿದು ಗೆಲ್ದಂ (ಎಇ. X. ೦೩೦-೦೦ ; 915); ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ಲಣಿಗಳ್ ಪಳಂಚಿ ಪಾಯಿಸುವ ದಟಕ್ಕಗುರ್ವೆಸೆಯೆ ನೂಂಕಿವ ಬಲ್ಲಣಿಗೆತ್ತಮೆಯ್ದೆ . . . ತುಱುಗಾಱಿರಂದಿನಿಸು ಬಲ್ವಲನಾ ದುದದೊಂದು ಕಾಳಗಂ (ಶಂಶಭಾ. ೬-೯೩); ಕಾಲ್ಗಾಪಿನ ಬಲ್ಲಣಿಯೊಳ್ ಬಲ್ಗಯ್ದುದಿನಿಱಿದು ಮಡಿಯೆ ನೆತ್ತರ ತೋಱಿಗಳ್ ಗಲ್ಗಲನೆ ಪರಿಯೆ (ಶಂಪುಮಾ. ೦೩-೬೪). [ಬಲ್$_2$ (<ಬಲ್ಲಿತು$_1$) + ಅಣಿ$_3$]

**ಬಲ್ಲತನ** ‘ಬಲ್$_1$’ ಪರಾ.

**ಬಲ್ಲಹ** (ನಾ). ಒಬ್ಬಾತನ ಹೆಸರು : ಶ್ರಿಧರಯ್ಯ ಬರೆದ ಪೇಣಿಗಳಂ . . . ಮೋಣಿಗಳಂ ಪೋಗಿ ಪೊಗಟಕೆಲ್ಲಂಗೆಱಿಯೊಳ್ ತಾಜ್ಞಾಡಕೊಳ್ವೆನೆಸ್ದು ಬಲಗವ್ವದೆ ಬಲ್ಲಪನಲ್ಲಿಗೋಗಿ ಕಾಯ್ವೊಱ್ಗಿಡೆಯಾಗದನ್ತು ನುಡಿದಾಪ್ಪನ ಮೆಚಿಸಿಕೊಣ್ಡಾರ್ (ಎಕ. V, ಬೇಲೂರು. ೦೨೩-೩೦; 952); ಸ್ವಸ್ತಿಶ್ರೀ ಸಕ ನೃಪ ಕಾಲಾತೀತ ಸಂವತ್ಸರಂಗ ೯೦೮ ನೆಯ ವರ್ಷದ ವ್ಯಯಸಂವತ್ಸರ ಪ್ರವರ್ತಿಸೆ ಬಲ್ಲಪಂ ಗಂಗವಾಡಿಗೆ ಬನ್ದ ಕಾಲದೊಳಗೆಯುರಿಂ ರಾಜ್ಯಂಗೆಯೆ (ಎಕ. III, ಮುಳಶ. ೨೫-೩; 986). [ ? + ಅಪ (<ಅಪ್ಪ$_1$) ]

**ಬಲ್ಲಭ** ‘ಬಲ್ಲಹ$_1$’ ನೋ.

**ಬಲ್ಲಯ್ಯ** (ನಾ). ಒಬ್ಬಾತನ ಹೆಸರು : ಸುಜ್ಜಿದ ಬಲ್ಲಯ್ಯಂ ದೇಗುಲಕ್ಕೆ ಕೊಟ್ಟ ಪನ್ನೆರಡು ಮತ್ತರು ಕೆಯ್ಯುವ . . . ಕೊಟ್ಟು ಬಿಡಿಸಿದೋಂ (ಸಾಇಇ. XI-i,- ೪೨-೨೦; 971); ಬಲ್ಲಯ್ಯ ಅಮ್ಮಯ್ಯ ರಾ ಯ್ಯ ಕೇಸವ ಸಾಹಣಿಯ ಸಿರಿಯಣ್ಣ (ಎಕ. VII, ಶನ್ನಗಿ. ೩೨-೫೫; ಸು. 1050?). [ ? + ಅಯ್ಯ$_{61}$ ]

**ಬಲ್ಲರಕ್ಕಸಿ** ‘ಬಲರಾಕ್ಷಸಿ’ ನೋ.

**ಬಲ್ಲರಿಕೆ** ‘ಬಲ್$_1$’ ಪರಾ.

**ಬಲ್ಲಲಮರ** (ನಾ). ಒಂದು ಬಗೆಯ ಮರ : ಕೆಂಪುಂಣುಪೂಣೆಯೆ

ವೊಳಗೆ ಬಲ್ಲಲವುರನ ಅಡಿಯುಲು (ಎಕ. VIII. ತೀರ್ಥಹ. ೨೦೮-೨೭. 1415).
[? + ವುರ$_1$]

**ಬಲ್ಲವ$_1$** 'ಬಲ್$_1$' ಪರಾ.

**ಬಲ್ಲವ$_2$** (ನಾ). ೧. ಅಡಿಗೆಯವನು. ೨. ಅಜ್ಞಾತವಾಸದ ಕಾಲದಲ್ಲಿ ಭೀಮನು ವಿರಾಟನಗರದಲ್ಲಿ ಅಡುಗೆಯವನಾಗಿದ್ದಾಗ ಹೊಂದಿದ್ದ ಹೆಸರು : ಭೀಮನು ನಾನು 'ಬಲ್ಲವ' ನೆಂಬ ಹೆಸರಿಟ್ಟುಕೊಂಡು ವಿರಾಟನ ಹತ್ತಿರವಿರೋಣವೆಂದಿದ್ದೇನೆ . . . ಎಂದನು (ವಚಭಾ. ೦೮೪). [ಸಂ.]

**ಬಲ್ಲವತಿ** (ನಾ). ಒಂದು ಊರಿನ ಹೆಸರು (?) : ತೈಲಪನ ಪ× × ×ನ ಕಳೆಗದಲ್ ಬಲ್ಲವತಿಯು ಬ್ರಹ್ಮನೊಡನೆ ಕ× × × ಪಂಚಲ ದೇವನ್ ಸಾಲ್ಲಿ ಬ್ರಹ್ಮನಂ ಕಟುಪಿ (ವ್ಯಅಂ. ೦೯೪೨; ೨-೪; 973). [?]

**ಬಲ್ಲವರಸ** (ನಾ). ಒಬ್ಬಾತನ ಹೆಸರಂ : ಸ್ವಸ್ತಿ ಶ್ರೀಪುರುಷಮಹಾರಾಜರ್ ಪೃಥುವೀರಾಜ್ಯಂಕೆಯೆ ಬಲ್ಲವರಸರ ಬಾಳದುಳ್ ಸೀಯು × × × ರಣಾಧ್ವರ × ಸಳಿನಾಡಾ ಬಾಗೆಯುವೆಱಿದು ವಿಟ್ಟಾನ್ (ಎಕ. XVI, ತುಮಕೂ. ೯೩-೩; ಸು. 780) ; ಬಲ್ಲವರಸರ್ ರೋಣದ ಮಹಾಜನಕೆ (ಎಇ. XIII, ೦೯೩-೭; 874). 'ವಲ್ಲವರಸ' ಪರಾ. [<ವಲ್ಲಭ + ಅರಸ$_1$]

**ಬಲ್ಲವಿಕೆ** 'ಬಲ್$_1$' ಪರಾ.

**ಬಲ್ಲವಿಕೆತನ** 'ಬಲ್$_1$' ಪರಾ.

**ಬಲ್ಲಸಿ** (ನಾ). ಬಲವಾದ ಕತ್ತಿ : ಖಾರವುರಂ ಮೂಱೂರ ಮುಕ್ಕೂಡಲಲ್ಲಿ ಪೊಲಸೀವೆ ಕೂಡಿತ್ತುಂ ಕಡೆಕೊಳಂದ ಮಣ್ಣಗಪ್ಪೊಂಜ್ಗಲಂ ಕೊಡಲಿಯುಂ ಬಲ್ಲಸಿಯ ಕವ್ಮಱಂ ಮುಟ್ಟಗೆರಿಯೊಡೆಯೊಂ ಓದಲ ಪೋಲೆಯಂ ಮಜ್ಗಳಂ (ವ್ಯಅಂ. ೦೯೩೪, ೩೮-೨೨; 11ನೆಯ ಶತ).
[ಬಲ್$_2$ (<ಬಲ್ಲಿತು$_1$)+ ಅಸಿ$_8$]

**ಬಲ್ಲಹ$_1$, ಬಲ್ಲಭ, ವಲ್ಲಹ** (ನಾ). ೧. ಒಡೆಯ ; ಯಜಮಾನ : "ಅಣ್ಮಂ, ಎಱೆಯಂ, ಬಲ್ಲಹಂ— ಈ ೩ ಅಧಿಪತಿಗೆ ಪೆಸರ್" (ಕಶಸಾ. ೬೦-೩೨೦) ; ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಗಂ ಲೆಕ್ಕವಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಱಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ (ಪಂಭಾ.೦೪-೫೫) ; ತ್ರೂತ್ರಿಂಗೆ ಬಲ್ಲಹನೆಂಗಿರೆ ಪದವಿಯ ಮಾಡದೆ ಮಾಣ್ಬನೆ (ಬಸವ. ೪೭೪). ೨. ರಾಜ ; ದೊರೆ : ಬಲ್ಲಹನ ಬೆಸದೊಳೊಱಟರ ಮಲ್ಲಂ ದಲ್ಲನ ತನೂಭವಂ ಕರಹಟದಿಂ ಮಲ್ಲಪನು ಬೆನ್ನಟ್ಟಿದ ಬಲ್ಲಾಳ್ತನದಿಂ ನಿಜೇಶನಂ ಮೆಚ್ಚಿಸಿದಂ (ಅಜಿಪು. ೦-೪೫) ; ಬಲ್ಲಹನುಂ ಸಾಮಂತರುಮೆಲ್ಲಾ ಪ್ರಜೆಯುಂ ಶಿವಂಗೆ ಭಕ್ತರೆ ಜೈನಂ ಪೊಲ್ಲಪ್ಪ ಕತದೆ ಕೈಕೊಳಲೊಲ್ಲ ನರ್ಾಡವರ್ಗಳದಱಿನೆಂಬವರ್ಮೂರ್ಖರ್ (ಸಮಶ. ೦೩-೦೫) ; ಹಲಸಿಗೆ ನಾಡು ನಾಡುಗಳು ಬಲ್ಲಹನುತ್ತಮವಸ್ತುವಿಸ್ತೃತಂ (ಎಇ. XIII, ೩೦೭-೮೫; 1125). ೩. ಪರಾಕ್ರಮಿ ; ಸಾಹಸಿ ; ವೀರ ; ಶೂರ : ಪರಪು ಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ . . . ಇದಾರರಸನಿದಾರ ಬಲ್ಲಹನಿದಾರ ಕರೀಂದ್ರನಿದಾರ ಸಿಂಹವೆಂದಿರದಮರ್ದಪ್ಪಿದಳ್ (ಜಗಪು. ೩-೩೯). ೪. ಗಂಡ ; ಪತಿ : ಬರುತಾ ಬಲ್ಲಹನೇಱಿದ ಗಾಲಿಯ ಸರದ ಶಕುನಿವಂಚದ ಮೇಲೆ . . . ಒಪ್ಪಂಬಡೆದಿರ್ಪ ಅರಸಂಚೆಯ ಕಿಱುದುಪ್ಪುಳುವಾಸಂ ಹರಿಸದಿನೇಱಿದಳಂಗೋದ್ಭವನಡರ್ದರಗಿಳಿ ಹೂಡಿದ ಹೂದೇರೇಱುವ ರತಿಯೆಂಬಂದದೊಳು (ಜಯುಕಾ. ೨-೫೨) ; ಜಲನಿಧಿಯೆಂದು ಸಂದ ಪೊಱೆವೆಣ್ಗಳ ಬಲ್ಲಹನೆಂದುಮೋಱೆಗ್ಯಂ ತಳೆದಿರೆ (ಶಿಕವಿ. ೦-೩೭). ೫. ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಲ್ಲಹಂ ಪ್ರಿಥುವಿರಾಜ್ಯಜಿಗ್ಯೆಯ್ಕೆ (ಎಇ. VI, ೦೬೭-೦ ; 793) ; ಸ್ವಸ್ತಿಶ್ರಿ ಕನ್ನರ ಬಲ್ಲಹ ದಳಿಗವಱಗೆಯನಾನೆ (ಎಕ. X (S), ಮುಳಬಾ. ೦೮೭-೨ ; ಸು. 850) ; ನೆಲದ ನೇಷಱ ಉಳ್ಳನೆಗ ಬಿಟ್ಟ ಇದು ಬಲ್ಲಹನ ದತ್ತಿ (ಸೌಇಇ. IX-I, ೫೪-೭ ; ಸು. 9ನೆಯ ಶತ) . **ಬಲ್ಲಭ :** ೫. ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದಂ ಪದಡಕ್ಕೆ ದಳಧ್ವಜ ಸಾಮ್ರಾ × × × ಮಹಾಮಹಾ ಸಾಮನ್ತಾಧಿಪತಿ ಶ್ರೀ ಬಲ್ಲಭ× × × ಹಾ ರಾಜಾಧಿರಾಜ (ಎಕ. II, ೩೫-೨ ; ಸು. 800). **ವಲ್ಲಹ :** ೫. ಸ್ವಸ್ತಿಶ್ರೀ ಶ್ರೀಪುರುಷ ರಾಜಂಕೆಯೆ ಸಿಯುಗೆಲ್ಲರಾ ಮನೆಮಗತ್ತಿನ್ ಬಲ್ಲಹನಾ ಬೆಸಸಿ ಗಂಗರ ವಲ್ಲಹ × × ಮಾನಿಱಿದು ಸತ್ತ (ಎಕ. XVI, ತುಮಕೂ. ೮೮-೮ ; ಸು. 775) ; ಶ್ರೀ ಶಿವಮಾರ ಸೀಯುಗೆಲ್ಲಕ್ಕಾರ್ಗಿವೊಗೆ ಊರೊಳ್ ವಲ್ಲಹನಂ ಬಾಳದುಳ್ ಕಮ್ಮುತುರ್ವರುಂ × × ಎಱಿದು ವಿಟ್ಟಾನ್ (ಎಕ. XVI, ತುಮಕೂ. ೮೯-೨; ಸು. 780). ಬಲ್ಲಹರ ಬಲ್ಲಹ=ಒಡೆಯರಿಗೆ ಒಡೆಯನಾದವನು ; ಮಹಾಪ್ರಭು : ಬಲ್ಲಹರ ಬಲ್ಲಹನವಿರ ತೋತ್ಪಲ್ಲವಮುಖಕಮಳಂ (ಬಸವು. ೮-೧) ; ಬಲ್ಲಹರ ಬಲ್ಲಹನೆ ನೀನೇ ಬಲ್ಲೆ ಕರುಣಿಪುದೆವಗೆ ಲಕ್ಷ್ಮೀವಲ್ಲಭನ ಲೀಲಾವತಾರಕಥಾಪ್ರಸಂಗವನ್ನು (ಬಭಾಗ. ೦೦-೦೯). [<ಪ್ರಾ. ವಲ್ಲಹ. / ಸಂ. ವಲ್ಲಭ]

**ಬಲ್ಲಹ$_2$** (ನಾ). (?) : ಒಂದು ಕಲ್ಲಿನ ಗವಿಯಿಂದ ಬಲ್ಲಹವಾದೀತು ದಿವ್ಯಸಾಲೆ ಪಟ್ಟದ ಬಿದುನೂರು ಹೊಟ್ಟಾಗಿ ಹೋದೀತು ದಿವ್ಯಸಾಲೆ ಮುಂದೆ ಪಟ್ಟಕ್ಕೆ ವೀರವಸಂತನು ಬರುತಾನೆ ದಿವ್ಯಸಾಲೆ (ಕಾಲಸಂ. ೮೦-೨೦). [ ? ]

**ಬಲ್ಲಳತಟ್ಟೆ** 'ಬಲ್ಲಾಳದಟ್ಟೆ' ನೋ.

**ಬಲ್ಲಳದಟ್ಟೆ** (ನಾ.) ಒಂದು ಬಗೆಯ ಬಟ್ಟೆ : ಕಟ್ಟುವಣ್ಣದ ಪಟ್ಟೆ ಬಲ್ಲಳದಟ್ಟೆ [ಪಾಠಾಂ. ವಟ್ಟೆ] ಭೂಸಲೆ ಮೇಘವಣ್ಣದ ಪಟ್ಟೆ . . . ಇವು ಮೊದಲು ಥರಥರದೊಳಂದೆಮ್ಮವರುಗಳು ಪಡೆದೊದವಿಸಿದಯಿಾ ವಿವಿಧ ಪಟ್ಟಾವಳಿಗಳುಂಟು (ಬಸವು. ೦೦-೨೭). [ಬಲ್ಲಳ ? + ದಟ್ಟೆ$_1$]

**ಬಲ್ಲಾಣಿಕಾಱ** (ನಾ). ಶ್ರೇಷ್ಠನಾದ ರತ್ನಪರೀಕ್ಷಕ : ವಾಣಿ ವಹಿಯುಂ ಬರೆವಳ್ . . . ಕ್ಷೋಣಿ ವಿಶ್ವಾಸಿಯಾಗಿಹಳ್ ವ್ಯೋಮದೊಳಗೆ ಬಲ್ಲಾಣಿಕಾಱ ಧನಂಜಯ ಜಯಕ್ಕೀಶಾನ್ಯ ಹೂಣಿಗನೆನಲ್ಕದುಕ್ರಾತ್ಯತನ ಗೃಹಾಂತರದಿ ನಡೆವನ್ನುಡಿವರುನ್ನತ (ಸಿಂಗಿರಾ. ೪-೦೭).
[ಬಲ್$_2$ ( < ಬಲ್ಲಿತು$_1$) + ಅಣಿಕಾಱ]

**ಬಲ್ಲಾಣೆಪೊಱಲ್** (ನಾ). ಒಂದು ಊರಿನ ಹೆಸರಂ : ಬಲ್ಲಾಣೆಪೊಱಲ ಪೊಲ ನಡದ ಪುರುಷರ್ ಕೆಱೆಗೋಡ ರಣವಿಕ್ರಮಗಾವುಣ್ಡರುಂ . . . ಬಿರದರುಂ ಇ ಪೊಲನಂ ನಡಯಿಸಿದೋರ್ (ಎಕ. XVI, ಗುಬ್ಬಿ. ೭೫-೫೪; 733). [ಬಲ್ಲಾಣೆ ? + ಪೊಱಲ್$_2$]

**ಬಲ್ಲಾತ** (ನಾ). ಒಂದು ಬಗೆಯ ಮರ ; ಗೇರುಮರ : ನೀ ಬಲ್ಲಾತ ನಾದೊಡರಣ್ಯದೊಳಗೆ ಕುಜಾತನಾಗಿರದಿಲ್ಲಿಗೇತಕೆ ಬಂದೆ ಪೇಳೆನಲು (ಶಂಕದಾ. ೦೦-೨೦). ☞ ಇಲ್ಲಿ 'ಬಲ್ಲ + ಆತ' ಎಂಬರ್ಥದ ಶ್ಲೇಷೆಯಿದೆ. [<ಸಂ. ಭಲ್ಲಾತ]

**ಬಲ್ಲಾನೆ** (ನಾ). ಬಲಿಷ್ಠವಾದ ಆನೆ; ಭಾರಿ ಆನೆ : ಬಲ್ಲಾನೆಯ ಮೆಟ್ಟಿನಡಿಯ ತೆಂಗಿನಕಾಯಂತೆ ರಥಂಗಳ್ ಜಜ್ಜರಿವೋದುವು ಪಡಿದಟ ದೊಳ್ (ರಾಮಾಶ್ವ. ೧೩೦-೦೭). [ಬಲ್$_2$ (<ಬಲ್ಲಿತು$_1$) + ಆನೆ$_1$]

**ಬಲ್ಲಾಯ** (ನಾ). ಮಿಗಿಲಾದ ಪರಾಕ್ರಮ ; ಹೆಚ್ಚಾದ ಸಾಮರ್ಥ್ಯ : ನಿಡಿಯರ್ ಬಲ್ಲಾಯದ ಬಲ್ಲಡಿಗರ್ ಮಂದಿರ್ದರಯ್ವರಾಲದ ಕೆಱಗಿಂತೊಡರ್ದರ್ ನಮ್ಮಯ ಭಕ್ಷದೊಳಡು ಪಣ್ಣಡು ಪೋಗು ನೀನುಮಾನುಂ ತಿಂಬಂ (ಪಂಪಭಾ. ೩-೦೨). [ಬಲ್$_2$(<ಬಲ್ಲಿತು$_1$) + ಆಯ$_3$]

**ಬಲ್ಲಾಳ್** (ನಾ). ಬಲಿಷ್ಠನಾದವನು ; ಶೂರ ; ಪರಾಕ್ರಮಿಂ : "ಉಕರ್ಾಳ್ . . . ಬಲ್ಲಾಳ್, ಬಲ್ಪಂಟಂ — ಈ ೫ ಪರಾಕ್ರಮ ಮುಳ್ಳಂ" (ಕಶಸಾ. ೫೮-೨೭೪); ಈ ಗಿರಿದುರ್ಗಮಂ ದಾಂಟಿ ಬಂದ ಬಲ್ಲಾಳ್ದಿವ್ಯನಕ್ಕೆ ದಿವ್ಯಪ್ರಭಾವನಕ್ಕುಮಮೋಘನಕ್ಕುಮದಟನೀತನೊ

ದಿರ್ಘ ಕಾದುವ ಮರುಳ್ಗನಂ ಬೇಡ (ಆದಿಪು. ೧೩-೩೭ ವ): ಚಾವಡಿಯ ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪತಾಕಾವಳಿಯ ಸೂಳಱಿದು . . . ಭೂಮಿ ಬೆಸಲಾದಂತೆ ಭೂಚಕ್ರಮಂ ತೆಕ್ಕನೆ ತೀವಿದ ಪದಾತಿಬಲದೊಳಂ (ಗಂಳ. ೬-೩೩ ವ); ಊರಾಳ ಬಲ್ಲಾಳ ಪೆರ್ಗಡೆ ಮಾಸಾವಂತ ಮನ್ನೆಯ ರಾಯರ್ ಮುಂತಪ್ಪ ನಾಡೊಡೆಯರ್ . . . ತಾಮುಂ ಪಡೆವೆರಸಿ ಕುದುರೆಯ ಕಾವಲ್ಗೊಡವಿ ಪೋದರ್ (ರಾಘವಾಂಕ. ೫೦-೦೩). [ಬಲ್₂ (<ಬಲ್ಲಿತು₁)+ಆಳ್₃]

**ಬಲ್ಲಾಳ** (ನಾ). ಅರಸನ ಕೈ ಕೆಳಗಿನ ಒಬ್ಬ ಅಧಿಕಾರಿ : ಈಗ ಹಳ್ಳಿ ಹಳ್ಳಿಗಳಲ್ಲಿ ಪಟೇಲರು ಇರುವ ಹಾಗೆ ಆ ಕಾಲದಲ್ಲಿ ಗ್ರಾಮಕ್ಕೊಬ್ಬ ಗುರಿಕಾರನಿದ್ದನು. ಇಂಥ ನಾಲ್ಕಾರು ಮಂದಿ ಗ್ರಾಮ ಗುರಿಕಾರರ ಮೇಲೆ ಮತ್ತೊಬ್ಬ ಅಧಿಕಾರಿ ಇದ್ದನು, ಇವನಿಗೆ ಬಲ್ಲಾಳ ಎಂದು ಹೆಸರು (ಕೋಟಿಚೆ. ೦); ಪಂಜುರ್ಲಿಭೂತ . . . ಒಂದು ದಿನ ಸಂಜೆಯಾಗುವ ತನಕ ಕಾದು ಕುಳಿತಿತು, ಆ ಊರಿನ ಬಲ್ಲಾಳರ (ಜೈನ ಶ್ರೀಮಂತರು) ಮನೆಗೆ ಸಂಜೆಯ ವೇಳೆ ದನ ಕರುಗಳನ್ನು ಅಟ್ಟಿಕೊಂಡು ಹೋಗುವ ಸಮಯವನ್ನು ಹೊಂಚುಹಾಕಿತು (ತುಳುಪ. ೬೨). [< ಬಲ್ಲಾಳ್]

**ಬಲ್ಲಾಳಗಿತ್ತಿ** (ನಾ). ಗಟ್ಟಿಗಿತ್ತಿ ; ಗಡುಸುಗಾರ್ತಿ : ಗಂಡನಿಕ್ಕಿದ ಪಡಿಯನೊಲ್ಲದೆ ಬೆಲ್ಲಗೂಳಿಗಾಸೆ ಮಾಡಿ ನೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಶಿವಶ. ೨೦-೦೩).
[<ಬಲ್ಲಾಳ್ + — ಗಿತ್ತಿ]

**ಬಲ್ಲಾಳದಟ್ಟಿ, ಬಲ್ಲಳತಟ್ಟಿ, ಬಲ್ಲಾಳದಡ್ಡಿ, ಬಲ್ಲಾಳ್ದಟ್ಟಿ** (ನಾ). ೧. ಒಂದು ಬಗೆಯ ತೆರೆ,—ಪರದೆ ; **P** ಹೊಯ್ಸಳಸಂತತಿಯ ಬಲ್ಲಾಳರಾಜರ ಕಾಲದಲ್ಲಿ ಪ್ರಸಿದ್ಧವಾಗಿದ್ದ ಒಂದು ಬಗೆಯ ತೆರೆಯಿರಬಹುದು: ಅಂತು ಬಂದು ಈರ್ವರುಂ ಬಲ್ಲಾಳದ[ಪಾಠಾಂ. ತ]ಟ್ಟಿಯ ದ್ವಾರವಟ್ಟದೊಳ್ ನಿಂದಿರ್ದು ದೌವಾರಿಕಂಗೆ ದಾರನುಂ ಶಿವನುಂ ಎಂಬ ಬೇಡರ್ ಬಂದಿರ್ದಪರೆಂದರಸಂಗಱಿಪೆನಲ್ (ಪುಣ್ಯಾಸ್ರ. ೬-೬೪ವ); ಲಾಮಂಚ ಬಲ್ಲಾಳದಟ್ಟಿಯಿಂ ವಿರಚಿಸಿದ ಪಾನೀಯಶಾಲೆ (ಕೀಶಚ. ೫-೦೩). **ಬಲ್ಲಳತಟ್ಟಿ** : ಸೌಂದರಗೆ ಕೈಗೊಟ್ಟು ತುಂಬುರ ಮಹಾಮಂತ್ರಿ ಸಂದಣಿಯ ತೊಲಗಿಸುತ ತದ್ಗೃಹದ ಮಾಂದಳಿರ ಪಂದಲಂ ಪೊಕ್ಕು ಲಾಮಂಚದ ಬಲ್ಲಳತಟ್ಟಿ[ಟ್ಟಿ]ಯಾ ಮಱಿಯೊಳುಱಿ ಬೆವರುತ ನಿಂದಿರ್ದ ಪರವೆಯಂ ಕಾಣಿಸಲು (ಸೌಂದಪು. ೬-೬೮). **ಬಲ್ಲಾಳದಡ್ಡಿ** : ಮೇಲುಕಟ್ಟಿನ ದಿವ್ಯಚಿತ್ರದುಕೂಲನಿಚಯದ ಲಾಮಚದ ಬಲ್ಲಾಳದಡ್ಡಿ ಗಳೆಡೆಗೆಡೆಗೆ ರಂಜಿಸುವ ಪಟ್ಟೆಗಳ ಮೇಲುಪೊದಕೆಯ ಕರ್ಪುರದ ಹೊಂಬಾಳೆ ಗಳ ಮಲಯಜದ ಕಂಬದ ಸಾಲುಗಳಲೊಪ್ಪಿದುದು ಚಪ್ಪರವೆರಡು ಯೋಜನದ (ಕುಮಾ.ರಾ.೧೨-೦೦); ಮಂಟಪದ ಚಾಮೂಲೆಯಗಲದ ಲಾಮಚದ ಬಲ್ಲಾಳದಡ್ಡಿಯ ಬಹಳರತ್ನವಿತಾನದುಬ್ಬರದ ಮೇಲುಕಟ್ಟಿನ ಮಲಯಜ ಸ್ತಂಬಾಳಿಗಳ ಮಣಿಪುತ್ರಿಕೆಯ ಸಮಪ್ರಾಳಿಯಲಿ ಸೊಗಸಿದುದು ಚಪ್ಪರವೆರಡುಯೋಜನದ (ಕೂರಂರಾ. ೦೩-೦೬). **ಬಲ್ಲಾಳ್ದಟ್ಟಿ** : ಚೆಲ್ವಿಂಗಡರ್ಪಾದ ಪಾದರಿಯೊಳ್ ಕೋದು ಬಳೆದ ಪೊಂಗೇದಗೆಯ ಬಲ್ಲಾಳ್ದಟ್ಟಿಯಿಂದೊಳಗೆ . . . ಅಶೋಕಭೂಜರಾಜಿಯಂ ರಾಜವಿದ್ಯಾಧ ರನಲಂಕರಿಸುವುದುಂ (ಶಬ್ದಮ. ೯-೨೯ ವ). **P** ತಟ್ಟಿ ಮತ್ತು ದಡ್ಡಿ ಎಂಬ ಶಬ್ದಗಳು ಒಟ್ಟಾಗಿಯೇ ಬರಬೇಕಾಗಿದ್ದರೂ ಬೇರೆ ಬೇರೆ ಯಾಗಿ ಉಲ್ಲೇಖಿತವಾಗಿವೆ. ಅವುಗಳ ಜ್ಞಾತಿಶಬ್ದಗಳಂ ಒಂದೇ ಆಗಿರುವುದರಿಂದ ಇಲ್ಲಿ ಈ ಶಬ್ದಗಳನ್ನು ಒಟ್ಟಾಗಿಯೇ ಕೊಡಲಾಗಿದೆ. [ಬಲ್ಲಾಳ್+ತಟ್ಟಿ₁]

**ಬಲ್ಲಾಳದಡ್ಡಿ** 'ಬಲ್ಲಾಳದಟ್ಟಿ' ನೋ.

**ಬಲ್ಲಾಳಿಕೆ, ಬಲ್ಲಾಳ್ಕೆ** (ನಾ). ೧. ಶೌರ್ಯ ; ಸಾಮರ್ಥ್ಯ; ಪರಾಕ್ರಮ: ಕೆಡುವಂತಿದ್ದೀತೇ ಕೌರವನ ರಾಜ್ಯ ಮುಡಿವಂತಿದ್ದೀತೆ ರಾವಣನ ಬಲ್ಲಾಳಿಕೆ ಪರಸ್ತ್ರೀ ಲಕ್ಷ್ಮೀದೇವಿಗೊಲಿದು ಒಂದು ನಿಮಿಷದಲ್ಲಿ ಮಡಿದ (ಸಕಪಾಶ. ೯-೦೩); ಕಲಿತನದಿಂ ಕಡೆದಂತೆ ಗರುವಿಕೆಯಿಂ ಕರುವಿಟ್ಟಂತೆ ಗಂಡಗರ್ವದಿಂ ಕಂಡರಿಸಿ ದಂತೆ ಬಲ್ಲಾಳಿಕೆಯಿಂ ಬಣ್ಣವಿಟ್ಟಂತೆ ತಿಣ್ಣಮಾದೊಡ್ಡುಂ (ಅಜಿತಪು. ೨-೨೬ಅ). ೨. ಬಲವಂತ; ಒತ್ತಾಯ : ಬಲಾತ್ಕೃತಂ—ಬಲ್ಲಾಳ್ಕೆ (ಳಿಕೆ) ಯಿಂ ಮಾಡಲ್ಪಟ್ಟುದುಂ (ಕೇಶಿರಾ. ೨೭-೦೦); ಕೊಲುವುದಾ ವಿಷವುಂಡವರನೇ ಕೊಲುವುದಿದು ನಿರನುಜ್ಞೆಯಲಿ . . . ಬಲುಹು ಬಲ್ಲಾಳಿಕೆಯಲುಂಡಡೆ ಕೊಲುವುದಿಪ್ಪತ್ತೊಂದು ಕುಲವನು (ಶಿಶಾಗ. ೦೦-೪೩-೪೬). **ಬಲ್ಲಾಳ್ಕೆ** : ೨. ಬಲಾತ್ಕಾರಸ್ವಭಾವಃ — ಬಲ್ಲಾಳ್ಕೆಯಿಂ ಮಾಳ್ಪ ಸ್ವಭಾವಂ (ಕೇಶಿರಾ. ೬-೩೪).
[ಬಲ್ಲಾಳ್ + — ಇಕೆ]

**ಬಲ್ಲಾಳ್ಕೆ** 'ಬಲ್ಲಾಳಿಕೆ' ನೋ.

**ಬಲ್ಲಾಳ್ತನ** (ನಾ). ೧. ಶೌರ್ಯ ; ಪರಾಕ್ರಮ ; ಸಾಮರ್ಥ್ಯ : ಮೇಗಿಲ್ಲದ ಬಲ್ಲಾಳ್ತನದಾಗರಮೆನೆ ನೆಗಟ್ದ ತತ್ಪ್ರಧಾನಂದನರುದ್ಯೋಗದ ಚಾಗದ ಯಾಗದ ಭೋಗದ ಮೈಮೆಗೆ ಸುಯೋಧನಂ ಬೆಱಗಾದಂ (ಪಂಪಭಾ. ೬-೬೬); ಮಲ್ಲಾಮಲ್ಲಿಯೊಳಾನ್ತರಿಮಲ್ಲರನಾಹವದೊಳೊತ್ತಿ ಗೋಲ್ಕೂರಿ ಗೊಳ್ಳೀ ಬಲ್ಲಾಳ್ತನದಿನ್ದಾಹವಮಲ್ಲನ ಭುಜಾದಣ್ಡಮೆನಿಸಿ ಧ(ಂ)ಲ್ಲಿಂ ನೆಗಟ್ಟಂ (ಶಾಸನ. XI–i, ೩೨-೮; 1007); ಕಾಣಿರೆ ತನ್ನ ಬಲ್ಲಾಳ್ತನಮಂ (ರಾಮಾಶ್ವ. ೩೬-೮). ೨. ಬಲಾತ್ಕಾರ; ಬಲಪ್ರಯೋಗ; ಒತ್ತಾಯ: ಸುಬಾಹುವೆಂಬ ತನ್ನ ಪಿರಿಯ ಮಗಂ ತನ್ನೊಡನೆ ತೊಱೆಯಲ್ ಬಗೆ ದಿರ್ದೊನಂ ಬಾರಿಸಿ ಬಲ್ಲಾಳ್ತನದಿಂ ರಾಜ್ಯಪಟ್ಟಂಗಟ್ಟಿ (ವಡ್ಡಾರಾ. ೧೯೯-೨೨); ಬಲ್ಲಾಳ್ತನದೊಳೆನ್ನನನುಭವಿಸಲ್ ಬಂದೊಂ ನೀನುಂ ವರ್ಣಾ ಶ್ರಮಗುರುವಯ್ ಎನ್ನಂ ಕಾವುದೆಂದೆನಲೊಡಂ (ಶಾಂತಿಪು. ೬-೬೫ವ); ನಿಷ್ಕರುಣೆಯಾಗಿ ಪೋಪೆನೆಂಬ ಬಗೆಯುಳ್ಳೊಡನಿಬರುಮಂ ಕೊಂದು ಪೋಗೆಂದು ಮರದಾನೆಯುಂ ಕಂಬಕ್ಕೆ ತರ್ಪಂತೆ ಲಲ್ಲೆಗೆಯ್ದು ಬಲ್ಲಾಳ್ತನದಿಂ ಪಟ್ಟಮಂ ಕಟ್ಟಿ (ಧರ್ಮಾಮೃ. ೦೦-೦೩೩).
[ಬಲ್ಲಾಳ್+ — ತನ]

**ಬಲ್ಲಾಳ್ತನಂಗೆಯ್** (ಕ್ರಿ). ಬಲಾತ್ಕಾರ ಮಾಡು ; ಒತ್ತಾಯಮಾಡು : ಎನಗಾರ್ಬಲ್ಲಿದರೆಂದು ಗಂಡುಗೆಡದೋರ್ವಂ ದೇವ ಠಕ್ಕಿಕ್ಕಿ ಸಾಧನಸಮ್ಮೋಹನದಿಂದಮೆನ್ನ ಮಗಳಂ ಬಲ್ಲಾಳ್ತನಂಗೆಯ್ದು ನಿನ್ನ ನರಾಧೀಶ್ವರನಕ್ಕೆ ಬರ್ಕೆ ಕುಡೆನೆಂದೊಟ್ಟೈಸಿ ಕೈಕೊಂಡು ನಿಂದು (ಸುಕುಮಾ. ೬-೯೨). [ಬಲ್ಲಾಳ್ತನ + ಕೆಯ್₁]

**ಬಲ್ಲಾಳ್ದಟ್ಟಿ** 'ಬಲ್ಲಾಳದಟ್ಟಿ' ನೋ.

**ಬಲ್ಲಿಗೆ** (ನಾ). ಸಂಕೋಲೆ (?) : ತೊಡರೆಡಗಾಲೊಳೊಪ್ಪುವುದು ಬಲ್ಲಿಗೆಯುಂ ಮದಧನ್ವಿಗಿಕ್ಕಿ ಬಲ್ಪೊಡರಿಸುವೊಂದು ಭಂಗಿಯೊಳೆ ಪೊದೊಡ ರೊಳ್ ತೊಡರ್ದಿರ್ದ ಪಾಪಿಗಳ್ ತೊಡರ ತೊಡರ್ಪಿನೊಳ್ ತೊಡರಲ್ಣಾದ ಭಾಷೆಯಮಾತ್ಕಲಂಜಿ ಕಾಲ್ವಿಡಿದಪೊಲಿರ್ಪ್ಪುದೇಂ ಕುವರಲಕ್ಷ್ಮಿಚಮೂಪತಿ ಗಿಂತಿದೊಪ್ಪದೇ (ಎಕ. V, ಚೆಲಾರು. ೦೦೨-೬೦ ; ಸು. 1220 ?); ಮೇಲೆ ಸಾಱುವ ದೌಡೆಯ ದನಿಗು ಕೆಳಗೆಸೆಯ ತೆಮಳ್ದು ಕುಪ್ಪಳಿಸು ವಂದುಗೆಯ ತೊಡರ ಬಲ್ಲಿಗೆ ಬಲ್ಲುಲಿಗಂ . . . ರಾಜಾಂಗಣದೊಳ್ ಪಣ್ಣಿ ಬಂದು, ನಿಂದ ಯಾಮಸಾಮುಹಸ್ತೋಮಮನಿತುಂ ಬಾಯ್ದುಟ್ಟು ಬೆದಱಿ ಬೆಸಗೆಟ್ಟೋಡೆಯುಂ (ಅನಂತಪು. ೨-೨೯ ವ).
[ ? . /ತಮಿ. ವಲ್ಲಿಕ್ಕೈ = ೧. ಒಂದು ಬಗೆಯ ಕಿವಿಯ ಆಭರಣ. ೨. ಕುದುರೆಯನ್ನು ಕಟ್ಟುವ ಹಗ್ಗ]

**ಬಲ್ಲಿತು₁, ಬಲ್ಲಿತ್ತು₁** (ನಾ). ೧. ಗಟ್ಟಿಮುಟ್ಟಾದುದು ; ಬಲಿಷ್ಠವಾದುದು : ಪ್ರಬಲವಾದುದು : ಕಲಹಂಸೆಗಳ್ ಬಲ್ಲಿತಪ್ಪುದೊಂದು

ದಕ್ಕಂ ತಂದದಱಿರಡು ಕಡೆಯುಂಮಂ ತಾವಡಸೆ ಕರ್ಚಿ . . . ಬರುತ್ತುಂ (ಶಂಕಕಂ. ೦೫೭-೦೫) ; ತಲೆ ಬಲ್ಲಿತೆಂದು ಕಲ್ಲನೆ ಹಾಯ ಬೇಡ ಹೋಗೆಲೊ ಪಾಪಿ ಮನ್ಮಥ ಮನೆಗೆ(ಮೋಹತ. ೭-೨೩); ತಲೆ ಬಲ್ಲಿತೆಂದು ಕಲ್ಲಂ ಪಾಯ್ವೆಲಾ ಕಲಿಯಾಗಿ ಸಮರದೊಳ್ಕಾದಿದೊಡೆ ನಿನಗಿಲ್ಲಿ ಗೆಲವಹುದೆ (ಕೃಪಂಭಾ. ೪-೦೯) ; ೨.ದೃಢವಾದುದು ; ಸ್ಥಿರವಾದುದು : ಅದೃಢಂ ಮಾರ್ತಂಡನಿಂ ನಿಪ್ಪೊಸತು ಹಿಮಗುವಿಂ . . . ಬೆಂದುದಂಗಾರನಿಂ ಚಿತ್ರದ ಮಾಟಂ ಸೌಮ್ಯನಿಂ ಬಲ್ಲಿತು ಸುರಗುರುವಿಂ ಸುಂದರಂ ಶುಕ್ರನಿಂ ತಟ್ಟಿದುದಕ್ಕುಂ ಮಂದನಿಂ (ಶಾಕಶ. ೪-೦೨). ೩. ಶ್ರೇಷ್ಠವಾದಂದು ; ಉತ್ತಮ ವಾದುದು ; ಒಳ್ಳೆಯಂದು : ಪಿರಿಯರ ನುಡಿಯಂ ಬಲ್ಲಿತೆನೆ ನಂಬಿ ಬೇಂಟೆಯನೊಲ್ಲದೆ ಬಿಟ್ಟಿರ್ದ ಬಿಯದರೊಪ್ಪಿದರ್ (ಕಬ್ಬಿಕಾ. ೨೨೩). ೪. ಸಾಂದ್ರವಾದುದಂ ; ದಟ್ಟವಾದುದಂ ; ನಿಬಿಡವಾದುದು : ಬಲ್ಲಿತಪ್ಪಡವಿಯೊಳು ಸೀಳ್ನಾಯಿ ಕೊಲ್ಲಲಾರ್ಯಸ್ಮರಣೆಯಿಂದಿರೆ ಮಲ್ಲಿಕಾರ್ಜುನ ಕಾಯ್ದೊಯ್ದನು ಮಹಾಕಟೊಟಪುರವರಕೆ (ಮರೇಶೃ. ೭-೮). ೫. ಕಠಿಣವಾದಂದು ; ಕಷ್ಟಕರವಾದುದು : ಕಿರಳ ಕರಿ ಕೈಕೊಂಡಃದರೆಯಟ್ಟಿತು ಮಹಾರಥರ ಚೆಲ್ಲಿತಿದು ದೆಸೆದೆಸೆಗೆ ಚೌಪಟಮಲ್ಲಗಿಲ್ಲರ ಪಾಡೆ ನಮ್ಮದು ಬಲ್ಲಿತಹುದುಸುರಿಲ್ಲದೊಡಲಿನ ಚೆಲುವು ಫಲವೇನು (ಕುಮ್ಮಾದ್ರೋ. ೩-೨೩). ಬಲ್ಲಿತ್ತು₁ : ೧. ಪಡೆದಂ ಬ್ರಹ್ಮೇಂದ್ರುತೆಯಂ ಗಡಮಾತಂ ಬಗೆದು ನೋಡೆ ನಾರಕನೆತ್ತಲ್ ಗಡ ದೇವನೆತ್ತ ಕರ್ಮುವೆ ಕಡು ಬಲ್ಲಿತ್ತುದಱ ತಿರಿವದೇಂ ಬಹು ವಿಧವೋ (ಅಂಪು. ೫-೯೭); ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ ಎಂದೆಂದೂ ಅಳಿಯನೆಂದು ಗುಡಿಗಟ್ಟದೆಯಲ್ಲಾ (ಬಸವ. ೦೬೩); ಜಳಸಂಭೂತದೊಳೆಂತು ಹಸ್ತಿಮಕರಂ ಬಲ್ಲಿತ್ತಿಳಾಭಾಗದೊಳು ಸ್ಥಳ ಸಂಭೂತದೊಳೆಂತೆ ಕೋಟಿಭಟಸತ್ತ್ವೋದುಭಾಸಿ ಭೇರುಂಡನಿಂದಿಳೆ ಭೇರುಂಡನಿನಗ್ಗಿಕಂ (ಕ್ಷ. I. ೨೫-೯೩; 1186). (ಗು). ೬. ಬಲಿಷ್ಠವಾದ ; ಶಕ್ತಿಶಾಲಿಯಾದ ; ಬಲವುಳ್ಳ : ತುಕಾರ ದುಃಕಾರಂಗಳೆ ಕಡೆಯಾಗಿ ಪಲವು ಗುಣವಚನಂಗಳೊಳವು ಅವಱೊಳ್ ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ದೊಡ್ಡಿತ್ತು : ಬಲ್ಲಿತ್ತು — ಎಂಬಂತೆ ನೋಡಿಕೊಳ್ವುದು (ಶಮದ. ೭೭ ಪ್ರಯೋ) ; ಒಳ್ಳಿತ್ತ ಕೆಯ್ದೊರಾಪ್ಪೊರ್ಗಿಲ್ಲದುಮದಱನ್ತ ಬಲ್ಲಿತ್ತು ಕಲಿಗೆ [ವ] ವಿಪರೀತಾ ಪರಾಕ್ರಮ ಮಿಲ್ಲಿ ಸನ್ನಿಕ್ಕುಮದು ಬನ್ನ (ಇಕ. X. ೬೦-೭ ; ಸು. 7ನೆಯ ಶತ).

**ಬಲ್ಲಿತಾಗಿ = ಚೆನ್ನಾಗಿ;** ಉತ್ತಮವಾಗಿ ; ಶ್ರೇಷ್ಠವಾಗಿ : ವಿಪುಲ ವಿದ್ಯಮಂ ಬಲ್ಲಿತಾಗಿಯೆ ಶಿಕ್ಷಿಪಾತ ಬಂದುಕನೆನಲ್ (ಕಬ್ಬಿಮಂ. ೯೭). **ಬಲ್ಲಿತ್ತುಟ ಕೋಡು ಕೂರಿತು, ಬಲ್ಲಿತ್ತುಟ ಕೋಡುಂ ಕೂರಿತು** = (ಎತ್ತು) ಬಲಿಷ್ಠವಾದಂದರ ಕೊಂಬು ಚೂಪಾಗಿರುವುದಂ,—ಮೊನಚಾಗಿರಂ ವುದಂ; ಬಲಿಷ್ಠರಾದವರಂ ಹೇಗೆ ನಡೆದುಕೊಂಡರೂ ಅದನ್ನು ಪ್ರಶ್ನಿಸುವಂತಿಲ್ಲ ಎಂಬ ಭಾವ : ಗುರು ದೇವೇಂದ್ರ ಮುನೀಂದ್ರ ನಿಂದ್ರನಮಿತಂ ದೇವಂ ಕಥಾನಾಯಕಂ ಪುರುದೇವಂ ಕಥೆಯುಂ ತದಾದಿ ಪುರುಷಪ್ರಸ್ತುತ್ಯಜನ್ಮಾಳಿ ಬಂಧುರಮೆಂದಂದೆ ಮದೀಯ ವಾಗ್ವಿಭವವಿನ್ಯಾಸಂ ಬಲಂಬೆತ್ತುದಿನ್ನಿರು ಬಲ್ಲಿತ್ತುಱ ಕೋಡು ಕೂರಿತದನಂತಿಂತುಂತೆನಲ್ಪ ರ್ಕುಮೇ (ಆದಿಪು. ೦-೨೫) ; ತಱಿಸಂದು ಚಕ್ರವರ್ತಿಗೆ ನೆಱದಾಂತಂ ವಾಸುದೇವನುಜದಿರು ಬಲ್ಲಿತ್ತುಱ ಕೋಡು ಕೂರಿತಾರಿದಱಿಯದರಾರಳ ವನಂತವೀರ್ಯನ ಶೌರ್ಯಂ (ಶಾಂತಿಪು. ೪-೯೫) ; ಉಱದಿ ಮರನಾಂತು ತಱಿಸಂದಿಜೀವರುವಿಲ್ಲಿವರು ಪೊಯ್ವ ವಸ್ತುವುಮದು ತಾಂ ಪೆಱರದಣ ಮಲ್ಲ ಬಲಿತ್ತುಱ ಕೋಡುಂ ಕೂರಿತದಱನದಾರ್ ಒಡಿವರ್ (ಜೀಬಿಪು. ೦೦-೦೦೫). **ಬಲ್ಲಿತ್ತು ಮಾಡು** = ೧. ಬಲಪಡಿಸು; ಬಲಿಷ್ಠಗೊಳಿಸು; ಶಕ್ತಿಶಾಲಿಯನ್ನಾಗಿ ಮಾಡು : ಬಡಕಪ್ಪಡಿ ತನ್ನಿಪ್ಪ ಗುಡಿಸಂ ಬಲ್ಲಿತ್ತು ಮಾಟ್ಪನೆಲ್ಲಂದದಿನೆಂದೊಡೆ ದೇವನಗಲದಿಪ್ಪ ಪಶುವಂ ಕೆಡೆಯಲ್ಕನ ವಿನಾಯದಂತು ರಕ್ಷಿಸವೇಡಾ (ಸಮಶ. ೯-೬೨). ೨. ದೃಢಗೊಳಿಸಂ; ಸ್ಥಿರಪಡಿಸಿಕೊಳ್ಳು; ಗಟ್ಟಿಮಾಡಿಕೊಳ್ಳು: ಬಳಸಂಪನ್ನರನಾಸೆಗೆಯ್ಗೆ ಚತುರಂಗಾನೀಕಮಂ ಕೂಡಿ ಕೊಳ್ಗೆ ಳಮಂ ಗಂಡುಮನಪ್ಪ ಕೆಯ್ಗೆ ಮನಮಂ ಬಲ್ಲಿತ್ತು ಮಾಟ್ಕೆಂದುಮಾನೆಳೆಯಂ ಕಾದಿದೊಡಲ್ಲದೀಯೆನಱದಿರ್ಕೆ (ಶಂಕಶಾ. ೯-೯೦). **ಬಲ್ಲಿದ** = ೧. ಬಲಿಷ್ಠನಾದವನು; ಪರಾಕ್ರಮಿ : "ಬಲವಾನ್" ಅಂಸಳಃ —ಈ ೨ ಬಲ್ಲಿದಂ" (ಹಲಾಯು. ೩೭-೨೨೬) ; ನಿಮ್ಮಂ ಕರಂ ನಚ್ಚಿ ಸಂಗರಮಂ ಬಲ್ಲಿದರೊಳ್ ಪೊಣರ್ಚಿದಂ (ಶಂಕಶಾ. ೦೦-೯); ಬಲ್ಲಿದರೊಡನೆ ಬವರವಾದರೆ ಗೆಲಲುಂಟು ಸೋಲಲುಂಟು (ಬಸವ. ೦೫೦); ಹೇಳಲಱಿಯೆನು ನಿನ್ನವನ ಕಟ್ಟಾಳುತನವನು ದೇವ ದೈತ್ಯರ ಕಾಳೆಗದಲಿವನಂತೆ ಬಲ್ಲಿದರಿಲ್ಲ ಬಲ್ಲಿಸಲಿ (ಕುಮ್ಮಾಕ. ೦೩-೦೪೦). ೨. ಧನವುಳ್ಳವನು; ಶ್ರೀಮಂತ; ಧನಿಕ : ಸ್ವಾಮಿ ಭೃತ್ಯಸಂಬಂಧದ ದೆಸೆಯುಂ ಬಡವರ್ ಬಲ್ಲಿದರೆಂಬ ದೇಶಭಾಷೆಯುಂ . . . ಅಪಮೃತ್ಯುವಿನ ಸತ್ವಬಾಧೆಯ ಗಂಧಾಗಂಧಮು ವಿಲ್ಲ (ಶಾಂತಿಪು. ೬-೦೦೨ ವ); ಬಲ್ಲಿದನ ಹಗೆಹ ತೆಗೆವನ್ನಬರ ಬಡವನ ಹರಣ ಹೋದ ತೆಱನಂತಾಯಿತ್ತು (ಮಹಾರೇ. ಬ. ೩೩-೭೦) ; ದೈವದೊಲ್ಮೆ ಯಿರಲಾ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ (ಸೋಚಮೇಕ. ೩೫) ೩. ತಿಳಿದವನು; ಜ್ಞಾನಿ : ವರಾಂಗರಸನಾ ವೃಷಣೇಕ್ಷಣ ಶುಕ್ಲಸತ್ತ್ವ ಮಾಧ್ಯಂತರಮಾವ ಲಕ್ಷಣಮುಮಿಂತಿವೆ ಬಲ್ಲಿದನೋದಿನಿಷ್ಟದೊಳ್ (ಲೋಕೋಕ. ೦೦-೬೩); ಬಲ್ಲಿದರೆಂಬ ಅಱುಹಿರಿಯರೆಲ್ಲ ತಾಮಸಕ್ಕೊಳಗಾಗಿ ಮೀನಕೇತನನ ಬಲೆಗೆ ಸಿಲುಕಿ ಮಾಯೆಯ ಬಾಯ ತುತ್ತಾದರಲ್ಲಾ (ಅವಚಂ. ೦೬೫-೭೯೬); ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ ಬಲ್ಲಿದರು ಇದ್ದು ಬಲವಿಲ್ಲ (ಸರ್ವಜ್ಞ. ೨೯). ೪. ಶ್ರೇಷ್ಠನಾದವನು; ಉತ್ತಮನಾದ ವನು; ಮಹಾತ್ಮ : "ಅಗ್ಗಳೆಯನೆನಲ್ ಬಲ್ಲಿದಂ" (ಶಾಕಶ. ೦೭) ; ಪೊಲ್ಲದುಗೆಯ್ದೆನೆಂದು ನಹುಷಾಜಗರಂ ಪಿರಿದಪ್ಪ ದೈನ್ಯದಿಂ ಬಲ್ಲಿದನಪ್ಪಗಸ್ತ್ಯ ಮುನಿಯೊಳ್ ದಯೆಯಂ ಪಡೆಯಲ್ಕೆ ಬಂದವೋಲ್ . . . ಎಲ್ಲರ ಚಿತ್ತದೊಳ್ ಪಿರಿದುಮೊಂದಭಿಶಂಕೆಯನುಂಟುಮಾಡುಗುಂ (ಕಾದಂಪೂ. ೦೦೩) ; ನೀನು ಜಗಕ್ಕೆ ಬಲ್ಲಿದನು ಆನು ನಿನಗೆ ಬಲ್ಲಿದನು ಕಂಡಯ್ಯಾ (ಬಸವ. ೯೦೩); ಅಲ್ಲಿಗಧಿಪತಿ ಭೀಮನೃಪ ಗುಣದಲ್ಲಿ ನಯದಲಿ ವೀರ್ಯ ವಿತರಣದಲ್ಲಿ ಚಾತುರ್ಯದಲಿ ಸೌಭಾಗ್ಯದಲಿ ಧೈರ್ಯದಲಿ ಬಲ್ಲಿದನು ತಾನಾಗಿ (ನಳಕ. ೦-೨೮). (ಗು). ೫. ಬಲಿಷ್ಠವಾದ; ಶಕ್ತಿಶಾಲಿಯಾದ : ಭಲ್ಲರ ರಭಸಕೆ ನಿಲ್ಲದೆ ಬಲ್ಲಿದ ಕಲಿಪಂದಿಯೊಂದು ಕಟ್ಟುಬಟ್ಟೆಯಿಂ ಮೆಲ್ಲನೆ ಪೊಱಡುತ್ತಿರೆ (ಹಮ್ಮಿರ. ೪-೪೪). ೬. ಉತ್ತಮವಾದ; ಶ್ರೇಷ್ಠವಾದ; ಒಳ್ಳೆಯಂದಾದ : ಬಲ್ಲಿದಾಹಾರ ಭಯ ಶಾಸ್ತ್ರಿನ್ನಲ್ಲಿ ಭೇಷಜವೆಂಬವಿವು ಎಲ್ಲಕಾದಿಯ ದಾನಮಾರ್ಗ (ಜಿಕ್ಕಪು. ೬೭-೩೩). ೭. ಉತ್ತಮನಾದ; ಶ್ರೇಷ್ಠನಾದ : ನಲಿದು ಮುಂದೆ ಬುದತಿರಥನಪ್ಪ ನಂಬಿಯಣ್ಣನಂ ನಡುವೆ ಕುಳ್ಳಿರಿಸಿ ನೀನರಸು ನಾವೆಲ್ಲಂ ಪರಿವಾರವೆಂದಲ್ಲಿಯ ಬಲ್ಲಿದ ಬೆವಹಾರಿಗಳ ಮಕ್ಕಳೆಲ್ಲಂ ನೆರೆದು . . . ಪುರದ ತಿರುವೀಥಿಯೊಳು ನಡೆತಪ್ಪಾಗಳು (ಶಂಬರ. ೨-೦೯). **ಬಲ್ಲಿದೆ** = ತಿಳಿದವಳಂ; ಪಂಡಿತೆ; ಜ್ಞಾನಿ : ಘಟಿಕಾಶತ (ಒಂದು ಗಂಟೆಗೆ ನೂರು) ಶ್ಲೋಕಗಳನ್ನು ರಚಿಸುವಲ್ಲಿಯೂ ಅವರು ಬಲ್ಲಿದೆಯರಾಗಿದ್ದರು (ಕರ್ಣಾಕ.೪ -೦).

[ < ಬಲ್₁ ]

**ಬಲ್ಲಿತು₂, ಬಲ್ಲಿತ್ತು₂** (ಅ). ೧. ಬಲವಾಗಿ; ಹೆಚ್ಚಾಗಿ; ಅತಿಶಯ ವಾಗಿ : ಒಲ್ಲೆವೆಂದರು ಬೇಡವೆಂದರವರು ನೀನು ಬಲ್ಲಿತು ಮಿಗೆ ೮ರೆವಾಗ ವಲ್ಲಭಗದಿರುತ್ತರವ ಕೊಡಲಾಗದೆಂದೆಲ್ಲರೆಱಗಿದರು ನೃಪತಿ (ಕಶಕ. ೯-೨೩). **ಬಲ್ಲಿತ್ತು₂** : ೨. ಬಿಗಿಯಾಗಿ; ಭದ್ರವಾಗಿ : ಆ ಮಹಾತ್ಮರ್ಂ . . . ವಿಚಿತ್ರವಸ್ತ್ರಂಗಳಂ ತೆಗೆದುಕೊಂಡು . . . ಕಂಬದೊಳೆ ಬಲ್ಲಿತ್ತುಗಟ್ಟಿ

ಬಱಿಯುಮುದನಾ ಮಾಡದ ಪೆಱಗಸ್ಸೆಱಿಯಲಿಕ್ಕಿ (ಸುಕುಮಾ. ೧೦-೮೩ ವ).
[ < ಬಲ್ಲಿತು₁ ]

**ಬಲ್ಲಿತುದೋಱು** (ಕ್ರಿ). ಶೌರ್ಯವನ್ನು ತೋರು : ಸಾಮರ್ಥ್ಯವನ್ನು ಪ್ರದರ್ಶಿಸು : ಎಲ್ಲರು ತಪಸಿಗೆಯ್ದಿದರು ನೀನೊಬ್ಬ ನಮ್ಮೆಲ್ಲರರ್ತಿಯ ಸಲಿಸಣ್ಣಾ ಬಲ್ಲಿತುದೋಱಿದಿರಣ್ಣನಿಗೆಱಗೆಂದು ಗಲ್ಲವ ಪಿಡಿದಲುಗಿದಳು (ಭರತ. ೩೦-೦೭). [ಬಲ್ಲಿತು₁ + ತೋಱು ]

**ಬಲ್ಲಿತ್ತು₁** 'ಬಲ್ಲಿತು₁' ನೋ.

**ಬಲ್ಲಿತ್ತು₂** 'ಬಲ್ಲಿತು₂' ನೋ.

**ಬಲ್ಲಿದ** 'ಬಲ್ಲಿತು₁' ಪರಾ.

**ಬಲ್ಲಿದೆ** 'ಬಲ್ಲಿತು₁' ಪರಾ.

**ಬಲ್ಲುಗ** (ನಾ). ೧. ಒಬ್ಬಾತನ ಹೆಸರು : ಸಾಹಸಮೇನನೂನವೋ ಬಸದಿ ಯೋಜರ್ ಹೆಲಯಾಮ್ಮೋಜರಾ ಮಗಂ ಬಲ್ಲುಗಂ ಮಾಡಿದಂ (ಎಕ. V, ಬೇಲೂರು. ೦೨೩-೮೯; 952); ಕಾಮಲೆನಾರಿ ಸಕಳಕಳಾಮಹಿತೆಗೆ ನೆಗಳ್ದ × ರಗಂ ಬಲ್ಲುಗನೆಂಬೀ × × × ಧೈರ್ಯ್ಯಕರಖಳದಿಶಾಮಂಚಳದತ್ತ ಕೀರ್ತ್ತಿಗಳ್ ನುತರಾದರ್ (ಎಕ. VII, ಶಿವಮೊ. ೩೩-೬೭; 1167). ೨. ಒಂದು ಸ್ಥಳದ ಹೆಸರು (?) : ಸಾನ್ತಳಿಗೆಯ ಬೀರ ಸಾನ್ತರನ ಮೇಲೆ ನಡೆವಯ್ವುತ್ತ್ತ ನಾಡೊಳಗಣ ಬಲ್ಲುಗದೊಳ್ಬಿಟ್ಟಿದ್ದನ್ದು ಗೆದೆಯ ಪನ್ನೆರಡಱ ನಾಟ್ಯಾಗ್ವುಣ್ಣ ಸೀಬಳ್ಳಿಯಱಿಹಯ್ಯನ ಜೇಷ್ಠಪುತ್ರ ನಂಗಮ್ಮನ ಮಗ ಜೋಗಯ್ಯಂಗೆ ದಯುಗೆಯ್ದು ಕೊಟ್ಟ ಸ್ಥಿತಿ ಯಾವುದೆನ್ದಡೆ (ಎಕ. VIII, ಸೊರಬ. ೪೭೭-೦೭; 991). [<ಬಲ್₁]

**ಬಲ್ಲುಜ್ಜುಗ** (ನಾ). "ಮಹೋದ್ಯೋಗ, ದೊಡ್ಡ ಕಾರ್ಯ"(ಶ್ರಕಣ್ಣ). 'ಬಲ್ಲುಜ್ಜುಗಿ' ಪರಾ. [ಬಲ್₂(<ಬಲ್ಲಿತು₁)+ಉಜ್ಜುಗ]

**ಬಲ್ಲುಜ್ಜುಗಿ** (ನಾ). ದೊಡ್ಡ ಕಾರ್ಯವನ್ನು ಮಾಡುವವನು ; ದೊಡ್ಡ ಕೆಲಸವನ್ನು ಮಾಡುವವನು : ಕಡುಚಾಗಿ, ಕಡುಗೆಲಸಿ, ಪುಸಿಬಾದಿ, ಬಲ್ಲುಜ್ಜುಗಿ (ಶಬ್ದಾ. ಸು. ೩೧೯ ಪ್ರಯೋ). [ಬಲ್ಲುಜ್ಜುಗ+ —ಇ₃]

**ಬಲ್ಲುಲಿ** (ನಾ). ೧. ಬಲವಾದ ಧ್ವನಿ; ಜೋರಾದ ಶಬ್ದ : ಕೋಗಿಲೆಗಳ್ ಪೊಸಮಾಮರಂಗಳೊಳ್ ಬಲ್ಲುಲಿಯಿಂದೆ ಬಗ್ಗಿಸುತುಮಿಂತಿದೆ ಬಂದುದು ಸುಗ್ಗಿ(ಕಬ್ಬಿಗಕಾ. ೬೩); ಬಱಿಸಿಡಿಲ ಬಲ್ಲುಲಿಯವೊಲು ಬೊಬ್ಬಿಱಿದು ಬಿಡುಬಿಡು . . . ಆಯುಧವಿಲ್ಲದನ್ನೊಡನೊಱಗಿದನ ಕದ್ದೊಯ್ವುದಧಟೇ ಯೆಂದು ತಾಗಿದಳು (ಸಾಳ್ವಭಾ. ೦೬-೩೩); ಘುಘೂಘೂ ಎಂದು ಪೂರಯಿಪ ಶಂಖದ ಧಟಂ ಧಟಂ ಧಟಮೆಂದು ಮೊಱಗುವ ಭೇರಿಯ ತುತ್ತ್ತುತ್ತೆಂದು ಸೂಳಯಿಪ ಪೆರ್ಗಾಳೆಯ ಬಲ್ಲುಲಿಯೊಳ್ ಮಾಪೂಜೆ ಸಮನಸಂದುದು (ರಾಮಾಶ್ವ. ೭೭-೬). ೨. ಪ್ರಸಿದ್ಧವಾದ ಮಾತು ; ಹೊಗಳಿಕೆಯ ಮಾತು : ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ ನೆಲನಂ ಮತ್ತಿನ ಮಾನಿಸರ್ ಪೊಗಟಲೇನಂ ಬಲ್ಲರೆಂಬೊಂದು ಬಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮನಿಪ್ಪಾ ನಾಡು ಚೆಲ್ವಾಯ್ತು (ಕಬ್ಬಿಗಕಾ. ೦೯). [ಬಲ್₂(<ಬಲ್ಲಿತು₁)+ಉಲಿ₂]

**ಬಲ್ಲೆ₁** (ನಾ). ದಟ್ಟವಾದ ಮೆಳೆ,—ಪೊದೆ : ಬಿಗಿದು ಪುಗಲ್ಕರಿದಲ್ಲಿಯು ಮೊಗೆದ ಮರಂ ಪೊದಱು ಬಳ್ಳಿ ಗಿಡುಮೆಂಬಿವಱಿಂ ಮಿಗಿಲೆಸಿಪ ಬಲ್ಲೆ ನಗ ಸಾನುಗಳೊಳದಂತಾವ ಮೆಯ್ಯೊಳಂ ಪುದಿದಿರ್ದು (ಕಾವ್ಯಾವ. ೯೭); ಆ ಮರಗಳನ್ನು ಸುತ್ತಿ, ತಾವೂ ಗಗನಕ್ಕೇರಿ, ಎಲೆಗಳನ್ನು ಬಿಡಿಸಲು ಯತ್ನಿಸು ತ್ತಿರುವ ಬೀಳಲುಗಳಿಂದ, ಕಾಡು ಒಂದು ದೊಡ್ಡ ಬಲ್ಲೆಯಾಗಿ ಕಾಣು ವುದು (ಚಾಂಕ್ರ. I, ೬೦); ಒಂದೆಡೆ ಎದುರಿಗೆ ಬಲೆಯಂತಹ ಸೀಗೆಯ ಬಲ್ಲೆ, ಇನ್ನೊಂದೆಡೆ ಕೊಡೆ ಆಕಾರದ ಬಳ್ಳಿಗಳು (ಚಾಳಿ. ೬೩). [ದೇ.॥ ತಮಿ. ವಲ್ಲೈ; ತುಳು. ಬಲ್ಲೆ]

**ಬಲ್ಲೆ₂** 'ಬಲ್ಲೆಯ' ನೋ.

**ಬಲ್ಲೆ₃** (ಅ). ಬಳಿಕ; ಮತ್ತೆ; ಅನಂತರ : ಮತ್ತೆಂಬರ್ಥದೊಳುಸಿರ್ವರ್ ಬಿತ್ತಗರಾ ಬಲ್ಲೆ ಬಱಿಗಳಂ (ಶಮದ. ೩೦೯). [?]

**ಬಲ್ಲೆತ್ತು** (ನಾ). ಬಲಿಷ್ಠವಾದ ಎತ್ತು; ಬಲವಾದ ವೃಷಭ: "ಮಹೋಕ್ಷಃ, ಉಕ್ಷತರಃ—ಈ ೨ ಬಲ್ಲೆತ್ತು" (ಹಲಾಯು. ೪೪-೧೦); ಎಲ್ಲರ ಸುಂಕ ಯೆತ್ತು ತೊತ್ತು ಭಂಡಿ ಬಲ್ಲೆತ್ತು ಎನ್ನ ಸುಂಕ ಎಲ್ಲರ ಪರಿಯಲ್ಲ (ಸುಂಕಬಂ. ಶ. ೬೪೯-೦೬೪೩) ; ಬಲವದುಕ್ಷೇಶ್ವರನ ರೂಪಗ್ಗಳಿಪ ಬಲ್ಲೆತ್ತುಗಳನೇ ಹೆಗಲ್ಗೊಳಿಸಿ ಬಂಡಿಯೊಳಗ್ರದಲಿ ಕೇಳಿಕೆಗಳೊಡಗೂಡಿ (ಬಸವು. ೩೭-೬). [ಬಲ್₂(<ಬಲ್ಲಿತು₁) +ಎತ್ತು₂ (<ಎಱ್ದು₁)]

**ಬಲ್ಲೆಯ₁**, ಬಲ್ಲ₂, ಬಲ್ಲೆ₂, ಬಲ್ಲೆಹ, ಭಲ್ಲೆಯ, ಭಲ್ಲೆಹ(ನಾ). ಒಂದು ಬಗೆಯ ಆಯುಧ ; ಈಟಿ ; ಭಲ್ಲೆ : ಮೂದಲಿಸಿ ಬಂದ ಮನ್ನೆಯ ರಾವುತರಂ ಬಲ್ಲೆಯ ಪಟ್ಟಸದೊಳುಂಡಿಗೆಯೊತ್ತಿಬಿಟ್ಟು ನಿಚ್ಚಟದ ರಾವುತರು ಲಚ್ಚಣಂದೆಗೆದು ಮುಂಗುಡಿಯ ರಾವುತರಂ ಭಂಗಿಸಿ ತಿವಿದು (ಮುಕ್ತಿ.ಹ ೨೨೭-೦೯); ತೂಗುತ್ತಿಹ ತೋಮರಂ ಜಡಿವ ಕಕ್ಕಡೆ ಸಲ್ಲೆಹ ಬಲ್ಲೆಯಂ[ಪಾಠಾಂ. ಸಲ್ಲಿಪ ಬಲ್ಲೆಹಂ]ಗಳತ್ಯುತ್ಕಟಮಾಗೆ ಬಂದು ಸಮರಾಂಗಣದೊಳ್ ತಲೆ ಮಟ್ಟುದಂದು ಮೂವತ್ತೆರಡಾಯುಧಂಬೆರಸು ವಾರಣವಾಹನ ವೀರ ಸಾಧನಂ (ಪುಣ್ಯಾಸ್ರ. ೨-೩೭); ಕರದ ಬಲ್ಲೆಯ [ಪಾಠಾಂ. ಹ]ದಿಂದ ವಾಲಿಯ ವರಕುಮಾರನ ತಿವಿಯೆ ಹಲಕಿನ ಸರಿಸದಲ್ಲಿ ಮೊನೆದೋಱಿತುಗುಳುವ ರಕುತ ಧಾರೆಯಲಿ (ತೊರರಾ. ೬-೩೦-೩೦). **ಬಲ್ಲ₂** : ಇವನಿನ್ನುಂ ನೆರೆದಪ್ಪನೆನ್ನಿದಿ ರೊಳಾತ್ಮಶ್ರೀಯನೆಂದಾರ್ಪಿನಿಂದಮೆರೆಬ್ಬಲ್ಲದಿನಬ್ಜನಾಭನಿಸೆ (ಜಗಪ. ೦೮-೦೦೦). **ಬಲ್ಲೆ₂** : ಹೂಡಿದ ತೇರು ಕೂಡಿದ ಆನೆ ಕುದುರೆಯು ಗಾಢದ ರಾಯ ರಾವುತರು ನೀಡಿದ ಹರಿಗೆ ಕರದ ಬಿಲ್ಲು ಈಟಿಯ ಜೋಡಿಸಿ ತೊಟ್ಟ ಬಲ್ಲೆಗಳು (ಹಂಸಾಂ. ೦-೬೩). **ಬಲ್ಲೆಹ** : ಓಡ ಕುದುರೆಯ ಮೇಲೆ . . . ದೆಸೆವರಿವ ಅಸುರಾವುತ ಚೊಲ್ಲೆಹವ ಬಲ್ಲೆಹವ ಹಿಡಿದು ಮುಗುಳುನಗೆ ಯುವಳಲ್ಲಿ ಎಱೆ ತಿವಿಯೆ ಚೊಲ್ಲೆಹದ ಬಲ್ಲೆಹ ಮುಱಿದು . . . ಅವಳ ಕಿಸಲಯುರಸಕ್ಕೊಳಗಾದ (ಕೋಲಶಾಂ. ೨೪-೦೦); ನಿಲ್ಲೆಲೆಗೆ ಸ್ಯರಂಧ್ರಿ ಕಾಮನ ಬಲ್ಲೆಹದ ಬಲುಗಾಯ ತಾಗಿತು ಬಲ್ಲೆ ನೀನೌಷಧಿಯ ರಕ್ಷಿಸಿಕೊಂಬು ದೆನ್ನೊಡಲ (ಕುಮ್ಮಾವಿ. ೨-೦೯); ಲಲನೆಯುರುಪಚಾರದ ನುಡಿ ಕಿವಿಯೊಳು ಬಲಿದ ಬಲ್ಲೆಹವಾಯಿತಾಗ (ಕಂಸವ. ೯-೦೭೩). **ಭಲ್ಲೆಯ** : ವರ್ಗ ಚತುರ್ಥಾಕ್ಷರಂಗಳ್ಗೆ ಘಟಿಯಿಂ . . . ಭಲ್ಲೆಯಂ, ಭಾವಂ (ಶಮದ. ೦೩ ಪ್ರಯೋ); ಅಲಗಿನೊರಸೊರಸಿಲ್ಲ ಕೈಮ್ಮೈಗಳಲ್ಲಿ ಮುಳುಗಿದ ಬಾಣವಿಲ್ಲಗ್ಗಳಿಸಿ ನೊಸಲಲಿ ಮುಱಿದ ಭಲ್ಲೆಯವಿಲ್ಲ . . . ನೀ ಮುನ್ನಳುಕಿ ಕೈದುವ ಹಾಯ್ಕಿದ್ಯೆ ಸರಿಯಲ್ಲ ನಿನಗೆಂದ (ಕುಮ್ಮಾಭೀ. ೩-೩೩); ಬಲ್ಲವರ್ ಹರಿಗೆ ಪಟ್ಟೆಯ ಶೂಲ ಶಲ್ಲೆಹ ಭಲ್ಲೆಯ ಬಲವಂತೆಯರ ಎಲ್ಲರ ತಱಿಬಿಹರ್ನ್ಯವ ಹತ್ತಿ ಹೇಳ್ದಳು ಪುಲ್ಲಶರಾತ್ಮಸಂಭವಗೆ (ಮೋಹತ. ೩೩-೩೯). **ಭಲ್ಲೆಹ** : ಅಂತರಾಂತರದ ಬಾಗಿಲ ಚಾವಡಿಯೊಳು ತಿಂತಿಣಿಸುವ ಪಟುಭಟರು ಕುಂತ ಕಠಾರಿ ಭಲ್ಲೆಹ ಖಿಡುಗವನಾಂತು ಸಂತಸದಲಿ ಕಾದಿಹರು (ಕಂಸವ. ೨-೬೭) ; ಕುಂತ ತೋಮರ ಖಡ್ಗ ಸುರಗಿ ಭಲ್ಲೆಹಗಳ ಕಾಂತಿ ಮುಸುಕಿ ಚೌದೆಸೆಯು ಹೊಂತಕಾಱಿಗಳಾಗ ರಾಯ ಮೋಹರದಲ್ಲಿ ಪಂತದೊಳೆಸೆದರುಬ್ಬಿನಲಿ (ಕಂಸವ. ೦೩-೨೦). [<ಸಂ. ಭಲ್ಲ./ ತಮಿ. ವಲಯ, ವಲ್ಲೈಯ್ಯ ; ತೆಲು. ತುಳು. ಬಲ್ಲೆ]

**ಬಲ್ಲೆಹ** 'ಬಲ್ಲೆಯ' ನೋ.

**ಬಲ್ಲೆಹಕಾಱ** (ನಾ). ಮಾತಿನ ಯುದ್ಧ ಹೂಡುವವನು ; ವಿತಂಡ ವಾದಿ : ಸೊಲ್ಲಿನ ಮಾತಿಗೆ ಬಲ್ಲೆನೆಂದು ಹೋರುವ ಬಲ್ಲೆಹಕಾಱ ರಿಗೆಲ್ಲಿಯದೋ ಮುಕ್ತಿ (ಪೋಲವಾ. ೦೦೩-೪೦೨). [ಬಲ್ಲೆಹ (< ಬಲ್ಲೆಯ) + — ಕಾಱ]

**ಬಲ್ಲೆಳೆ** (ನಾ). ಗಟ್ಟಿಯಾದ ಎಳೆ ; ಬಿಗಿಯಾದ ದಾರ : ಮಾತೆಸಹಿತಂ

ಬೆಚ್ಚು ನೀರೆಱೆದೋತು ಲಿಂಗವ ಧರಿಸಿ ಶಿಶುವಿಗೆ ಮಾತೆಯುಂ ಬಳ್ಳಿಯನು ಪಿಡಿಯಿಸಿ ಸೂತಕೃತೆಯುದನು ಬಲ್ಲೆಳೆಯೊಳೆಳೆಯುದೊಲು ಬಂಧಿಸಿ . . . ಚೂರ್ಣವ ಕಲಸಿ ಕುಡಿಸಿದಳು (ಪಾದೇಶ. ೦೬-೦೯).

[ಬಲ್$_2$ (<ಬಲ್ಲಿತು$_1$) + ಎಳೆ$_2$ (<ಎೞೆ$_2$)]

**ಬಲ್ಲೇರಿ** (ನಾ). ಕೆರೆಗೆ ಅಡ್ಡವಾಗಿ ಕಟ್ಟಿರುವ ದೊಡ್ಡದಾದ ಏರಿ,—ಕಟ್ಟೆ : ನೂರ್ಮ್ಮಡಿ ಅಯ್ಯಹರಸಂ ಬಮ್ಮಿಸೆಟ್ಟಿಗೆಗೊಟ್ಟ ಶಾಸನದ ಪೊಲದ ಸೀಮೆ . . . ಅನ್ತೆ ಬರೆ ಒಡಿಲ ಗೆಱೆಗೆ ಬನ್ದಬಾಗೆ ಆ ಕೆಱೆಯೊಳಗಣ ಬಲ್ಲೇರಿಯೆ ಆ ಕೆಱೆಯ ತೆಂಕಣ ಕೋಡಿಯೆ (ಎಕ. XI. ದಾವಣ. ೦೯-೦೭ ; 1043). [ಬಲ್$_2$ (<ಬಲ್ಲಿತು$_1$) + ಏರಿ$_1$]

**ಬಲ್ಲೇಱು** (ನಾ). ಬಲವಾದ ಪೆಟ್ಟು ; ಜೋರಾದ ಹೊಡೆತ : ಅಸಮಾಸ್ತ್ರಂ ತೆಗೆದೆಚ್ಚ ಕೂರ್ಗಣೆಯ ಬಲ್ಲೇಱಿಂಗೆ ಸಕ್ಷಾರನೇಕಸಮಾನಂ ಕಡುಕೆಯ್ದು ಕಾದಲರ ಮಾತು (ಅನಂಪು. ೮-೯೩).

[ಬಲ್$_2$ (<ಬಲ್ಲಿತು$_1$) + ಏಱು$_4$]

**ಬಲ್ವಂದಿ$_1$** (ನಾ). ಬಲಿಷ್ಠವಾದ ಹಂದಿ ; ಬಲಶಾಲಿಯಾದ ವರಾಹ : ಮುನಿಸಿಂ ಬೊಬ್ಬಿಱಿದುಬ್ಬಿಯುಬ್ಬರಿಸಿ . . . ಬಲ್ವಂದಿ ಬಲ್ವಂದಿಕಾಱನ ವೋಲ್ ಪಿಂಡೊಡೆದೊಂದೆ ಪೋಯ್ತು ಮಲೆದಂತಿಂತಿಕ್ಕಿಲಕ್ಕಿಕ್ಕಲಂ (ಸೂಕ್ತಿಸು. ೩-೦೩೩). [ಬಲ್$_2$ (<ಬಲ್ಲಿತು$_1$)+ಪಂದಿ]

**ಬಲ್ವಂದಿ$_2$**, ಬಲ್ಬಂದಿ (ನಾ). ಬಲವಾದ ಸೆರೆ ; ಬಲಿಷ್ಠವಾದ ಬಂಧನ : 'ಬಲ್ವಂದಿಗೊಳ್' ಪರಾ. ಬಲ್ಬಂದಿ : 'ಬಲ್ಬಂದಿಕಾಱ' ಪರಾ.

[ಬಲ್$_2$ (<ಬಲ್ಲಿತು$_1$)+ಬಂದಿ$_1$]

**ಬಲ್ವಂದಿಕಾಱ**, ಬಲ್ಬಂದಿಕಾಱ (ನಾ). ಕೈತಪ್ಪಿ ಹೋಗದಂತೆ ಸೆರೆ ಹಿಡಿಯುವವನು; ಪರಾಕ್ರಮಿ: ಮುನಿಸಿಂ ಬೊಬ್ಬಿಱಿದುಬ್ಬಿಯುಬ್ಬರಿಸಿ... ಬಲ್ವಂದಿ ಬಲ್ವಂದಿಕಾಱನ ವೋಲ್ ಪಿಂಡೊಡೆದೊಂದೆ ಪೋಯ್ತು ಮಲೆದಂತಿಂತಿಕ್ಕಿಲಕ್ಕಿಕ್ಕಲಂ (ಸೂಕ್ತಿಸು. ೩-೦೩೩); ಬಂದಿಗೆ-ಬಂದಿಗ್ರಹಣ,ಬಲ್ವಂದಿಕಾಱ (ಶಮದ. ೨೯೮ ಪ್ರಯೋ). **ಬಲ್ಬಂದಿಕಾಱ**: ೧. "ವಸುಮತಿಗೆ ಬಲ್ಬಂ[ಪಾಠಾಂ. ಲ್ವಂ]ದಿಕಾಱ ಬಂದಿಗ್ರಹಣ" (ಕಬ್ಬಿಕೈ. ೯೯).

[ಬಲ್$_2$ (<ಬಲ್ಲಿತು$_1$) + ಬಂದಿಕಾಱ (<ಬಂದಿಗಾಱ) ]

**ಬಲ್ವಂದಿಗೊಳ್** (ಕ್ರಿ). ಬಲವಾದ ಸೆರೆಯನ್ನು ಹಿಡಿ ; ಬಲಿಷ್ಠನಾದವನನ್ನು ಬಂಧಿಸು : ಯುದ್ಧಮಲಿನರಾಗಿರುವ — ಲಿಂಗರಾಜನ, ಕರುಮಿಯನ್ ಚೋಳಿವೇಂಕಯ್ಯಂದಿರನ್ನು ಬಲ್ವಂದಿಗೊಂಡೆಳೆತರುವ ಸೈನಿಕರ, ಪ್ರವೇಶ (ಮುಂತ್ರಶ. ೨೦-೨೨). [ಬಲ್ವಂದಿ$_2$+ಕೊಳ್$_1$]

**ಬಲ್ವಗೆ$_1$**, ಬಲುವಗೆ (ನಾ). ೧. ಬಲಿಷ್ಠನಾದ ಹಗೆ ; ಬಲಶಾಲಿಯಾದ ಶತ್ರು : ದಾಳಿಯುಂ ಕಂಡರಂತೆ ಪುಗುಟ್ಟೋಡುತ್ತುಂ ಬಲ್ವಗೆಯುಂ ಕಂಡಂತೆ ಮೊಗಂದಿರಿಪುತ್ತುಂ (ಧರ್ಮಾಮ್ಮ. ೯-೭೭). ೨. ಅಧಿಕವಾದ ಅಸೂಯೆ ; ಬಲವಾದ ದ್ವೇಷ : ನಿಗಡಂ ಸೊಕ್ಕಾನೆಯೊಳ್ . . . ಕಂಟಕಂ ಹರ್ಷದೊಳ್ ಬಲ್ವ[ಪಾಠಾಂ. ಲ್ಬ]ಗೆ ಕಾವ್ಯಪ್ರೌಢರೊಳ್ ತಳ್ತಿಱುವುದೆಮೆಯೊಳುಂಟಲ್ಲಿ ಬೇಱಿಲ್ಲ ನಾಡೊಳ್ (ಅನಂಪು. ೦-೮೩). **ಬಲುವಗೆ** : ೧. ಹಗೆಗಳೀ ಕೌರವರು ತೆಗೆ ಬಲುವಗೆ ಕಣಾ ಕಾಮಾದಿರಿಪುಗಳು (ಕುವ್ಯಾಸ. ೦೩-೩೭). ೨. ಅದೇಕೆ ಬಲುವಗೆ ಬರಲು ಶಂಕಿಸೆ (ತಿಮ್ಮಶಾಂ. ೭-೪೮). [ಬಲ್$_2$ (<ಬಲ್ಲಿತು$_1$)+ಪಗೆ$_2$]

**ಬಲ್ವಗೆ$_2$**, ಬಲ್ಬಗೆ (ನಾ). ಅನೇಕ ರೀತಿ ; ಬಹಳ ವಿಧ : ಇಂತು ಬಲ್ವಗೆಯಿಂ ಪೊಗಟ್ಟಿ ರಾಮನಂ ನೋಡುತೆ ಸೀತೆಯಿಂತೆಂದಳ್ ! (ಅದ್ಭುತ. ೩೯-೦೨). **ಬಲ್ಬಗೆ** : ಇಂತು ಕೆಯ್ಯೋಡಿಸುತೆ ಬಲ್ಬಗೆಯಿಂ ಬೇಡಿಕೊಳ್ವ ಮುನಿಯ ಕಿಬ್ಬಗೆಗೆ ನಕ್ಕು, ದೇವ . . . ಮನ್ನಿಸಿ ಕಳುಪಿದಂ (ಅದ್ಭುತ. ೦೦-೦). [ಬಲ್$_2$ (<ಬಲ್ಲಿತು$_1$) +ಬಗೆ$_2$]

**ಬಲ್ವಜ** (ನಾ). ಒಂದು ಬಗೆಯ ಹುಲ್ಲು ; ಗಂಜಳದ ಹುಲ್ಲು :"ಉಲಪಃ, ಬಲ್ವಜಃ— ಈ ೨ ಗಂಜಳದ ಪುಲ್" (ಹಲಾಯು. ೩೨-೩೭). [ಸಂ.]

**ಬಲ್ವಡಿ** (ನಾ). ಬಲವಾದ ಕದ : ಭದ್ರವಾದ ಬಾಗಿಲು : ನಡೆನಡೆ ಕೇರ್ಗಳಂ ಕೆಡಪು ಬಲ್ವಡಿ [ಪಾಠಾಂ. ಡೆ]ಯಂ ಮುಱಿಪೊಕ್ಕು ಗೇಹದೊಳ್ಪುಡುಕು . . . ಎನುತುರ್ಬಿ ಬೊಬ್ಬಿಱಿದು ಮುತ್ತಿದರಾ ಗೃಹಮಂ ದ್ವಿಜಾಧಮರ್ (ವೃಷಭ. ೩೯-೮). [ಬಲ್$_2$ (<ಬಲ್ಲಿತು$_1$)+ಪಡಿ$_2$]

**ಬಲ್ವಡೆ** (ನಾ). ಬಲವಾದ ಸೈನ್ಯ ; ದೊಡ್ಡ ದಂಡು : ಕಳಕುಳವಾಗೆ ಪಂಚಲನ ಬಲ್ವ[ಪಾಠಾಂ. ಲ್ಪ]ಡೆ ಪಂಚಲನಶ್ವಸಂಕುಲಂ ಕಳಕುಳವಾಗೆ (ಆದಿಪು. ೦-೪೯) ; ಬಡಿಯಿಂ ಬಹ್ವಾಮಲಕದ ಫಳವಂ ಬಡಿಗೊಳಲು ದಿರ್ವಂದದಿ ಬೀಳ್ತಹ ಬಲ್ವಡೆಯುಂ ಕಾಣುತ್ತುಂ (ಜಯುಕಾ. ೬-೫೨) ; ನಾಲ್ವತ್ತು ಸಾಸಿರಂ ಕಡುಗಾಲ್ವೆತ್ತೊಳ್ವಾರುವಂಗಳಾಳ್ಮೊಲಕ್ಕಂ ಸಲ್ವಾನೆ ಸಾಸಿರಂ ಬರೆ ಬಲ್ವಡೆಯುಂ ತಂದನವುವು ಕೆಂಗೆಯ ಹನುಮಂ (ಕಳಿ. ೨-೯೩).

ಬಲ್ವಡೆ ಸುದ್ರಕನ್ = ಬಲವಾದ ಸೈನ್ಯವನ್ನು ಎದುರಿಸುವುದರಲ್ಲಿ ಶೂದ್ರಕನಂತಿರುವವನು ; ಬಹಳ ಪರಾಕ್ರಮಿ ; ಒಂದು ಬಿರುದು : ಉರ್ಬ್ಬಿಯೊಳ್ಸಕಲದೊಳೊರ್ಬ್ಬನೆ ಗಣ್ಡ ಶ್ರೀಚನ್ನಮನೆನ ವೊಳ್ಪಡೆಯನ್ ಗೊನ್ತಿಸುತರಿಂ ಪರಾಕ್ರಮನ್ ಬಲ್ವಡೆ ಸುದ್ರಕನ್ ಪ್ರಳಯಧನಿ ಮುತ್ತಿ ಆಣೆಯಂ ಅಟ್ಟುವಂಗಂ ಕುಡಲಪೊಂಗಂ ಒರ್ಬ್ಬನೊ ಆಚಾರ್ಯ್ಯಂ (ಎಇ. XXIV. ೨೩-೭; ಸು. 885).

[ಬಲ್$_2$ (<ಬಲ್ಲಿತು$_1$) + ಪಡೆ$_2$]

**ಬಲ್ವನಿ** (ನಾ). ದೊಡ್ಡದಾದ ಹನಿ ; ದಪ್ಪವಾದ ಬಿಂದು : ಸ್ವಾತಿ ಬಲ್ವನಿ ಬಿಂದು ಶುಕ್ತಿಗರ್ಭದಿ ಬಿದ್ದ ಮಾತ್ರದೊಳ್ತನ್ನ ಪೂರ್ವದ ಗುಣವನುಳಿದಮಳಜ್ಯೋತಿ ಮುತ್ತಾದಂತೆ (ನವಮೋ. ೬-೪).

[ಬಲ್$_2$ ( <ಬಲ್ಲಿತು$_1$ ) + ಪನಿ$_2$]

**ಬಲ್ವರವಿ** (ನಾ). ದೊಡ್ಡದಾದ ಹರವಿ; ದಪ್ಪದಾದ ಗಡಿಗೆ,—ಮಡಕೆ : ಕೆಲಕೊಱಗಿರ್ದ ಬಲ್ವರವಿಯುಂ ಬಲಗೈ ಜಡಿದೊಪ್ಪಿ ತೂಗೆ. . . ಒಪ್ಪಿದರ್ ಕೆಲಬಲದೂರ್ಗೆ ಪೋಗಿಯುಳಿ ಮಾಱಿ ಮಗುಟ್ಟಿರುತಿರ್ಪ ಗೋಪಿಯರ್ (ಲೀಲಾವ. ೫-೦೦೦). [ಬಲ್$_2$ (<ಬಲ್ಲಿತು$_1$)+ ಪರವಿ]

**ಬಲ್ವರಿಕೆ** (ನಾ). ದೊಡ್ಡ ಧಾಳಿ : ಬಲ್ವರಿಕೆಯೊಳರನ್ನಪರ ಪಡಲ್ವಡೆ ತಳ್ತಿಱಿದು ರಣದೊಳಾ ವಿಕ್ರಮಮಂ ಸೊಲ್ವಿನವಮಾವರ್ಜಿಸಿದಂ ನಾಲ್ವತ್ತೆರಡಱಿಕೆಗಾಳೆಗಂಗಳೊಳೀತಂ (ಶಂಶಾ.೦-೨೫).

[ಬಲ್$_2$ (<ಬಲ್ಲಿತು$_1$) + ಪರಿಕೆ$_1$]

**ಬಲ್ವಲ** (ನಾ). ೧. ಬಲಿಷ್ಠವಾದ ಸೈನ್ಯ; ಗೆಲ್ಲಲು ಅಸಾಧ್ಯವಾದ ಸೈನ್ಯ : ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ಲಣಿಗಳ್ ಪಳಂಚಿ. . . ಚೋದಿಸುವ ರಥಕ್ಕೆ ಪೆಪ್ಪಳಿಸದೊರ್ವರಿನೊರ್ವರೆ ಮಿಕ್ಕು ಪಾರ್ದು ಸಾರ್ದಿಸೆ ತುಱುಗಾಱರುಂದಿನಿಸು ಬಲ್ವಲನಾದುದದೊಂದು ಕಾಳೆಗಂ (ಶಂಶಾ. ೯-೯೩); ಗೆಲಲೆನಗೆ ರಿಪುಬಲಂ ಬಲ್ವಲಮಾದೊಡೆ ಸಿಂಹನಾದಮಂ ಮಾಟ್ಪಿಂ ಬೆಂಬಲವಾಗಿ ಬರ್ಪುದೆಂದೀ ಬಲದೇವಂಗಱಿಪಿ ವಾಸುದೇವಂ ಪೋದಂ (ಶಂಶಾಮ. ೯-೯೭). ೨. ಅತಿಶಯವಾದುದು; ಶ್ರೇಷ್ಠವಾದುದು : ಬಿಲ್ವಿಡಿದಿವನಂ ಧರೆಯೊಳ್ ಗೆಲ್ದನ್ನರ್ ಚಾಪಕುಶಲರಿಲ್ಲೆನೆ ಕಂಸಂ ಬಲ್ವಲ[ಪಾಠಾಂ. ಬಲುವಲ]ನಾದಭ್ಯಾಸದೆ ಸಲ್ವಿನಂ (ಶೀಲಾಶ. ೫-೭೬). ೩. ಬಹಳ ರಭಸದಿಂದ ಕೂಡಿದುದು; ಅತಿ ವೇಗವನ್ನುಳ್ಳುದು; ಮಹಾಬಲಶಾಲಿಯಾದುದು: ಬಲ್ವಲನಲ್ಲದೀಯಲೆಯುತಿರ್ದುದು ತೆಂಕಣಗಾಳಿ ಕಾಮನೀ ಕೊಲ್ವನೆ ಚಂದ್ರನಿ ಕೊಱೆಯ ಪಿಂಬನೆ ನಿನ್ನೊಡ ಗೂಡವೇಟ್ಟಾ ನೀನೊಲ್ವುದು ಮೊಗ್ಗೆ ಕಾಡುವುದು ಕಾವುದನಾಥೆಯನೆನ್ನಂ (ಲೀಲಾವ. ೦೦-೩೩).

ಬಲ್ವಲಾಗು = ಅಧಿಕವಾಗು : ಜಾಗದ ಬಲ್ವಲಾದ ಪೊಸರಿಂ

ಬಳೆದೊಪ್ಪುವ. ನಾಳಿಕೇರದಿಂ ಪೂಗವನಂಗಳಿಂದಲೆಯು ಬಳ್ಳಿಗಳಿಂ... ನಿರಂತರಂ ಸೊಗಯಿಸಿರ್ಪುವು ಪೆರ್ಗೆಚಿಗಳ್ನಿರಂತರಂ (ಮಲ್ಲಿಪು. ೨-೪೩); ಪಾವುಗೆತ್ತು ಪತ್ತುವ ಮುಂಗುಲಿಗಳಂತೆ ಬಾಲಮಂ ಬದಿರುತ್ತೆ ಮಣಿಕು ವರೆದರ್ದವ ತುದಿಗೋಟುಗಳ ಕೊನೆಯೊಳ್ ಕವಲ್ತು ಪಾಲ್ವಚಿಯ ಬಲ್ವಲಾದ ಕಿಚಿಗೊಂಬುಗಳೊಳಂ (ಅಂಜನಾ. ೩-೪೦ ವ).
[ಬಲ್$_2$ (<ಬಲ್ಲಿತ್ತು$_1$) + ಬಲ್ಲ$_3$]

**ಬಲ್ವಲಿಕೆ** (ನಾ). ಬಹಳವಾದ ಸಾಮರ್ಥ್ಯ; ಅತ್ಯಂತ ಪರಾಕ್ರಮ : ಬಲ್ವಲಿಕೆಯಿಂದಿದಿರ್ಚಿದ ಬಲ್ಲಾಡ ತನ್ನೆಚ್ಚ ನಿಶಿತಶರಸಂಹತಿಯಿಂದೆಲ್ಲಾಡ ಗಾಯ್ತು (ಕಾವ್ಯಾವ. ೩೯). [ಬಲ್$_2$ (<ಬಲ್ಲಿತ್ತು$_1$) + ಬಲಿಕೆ (<ಬಲ್ಕೆ)]

**ಬಲ್ವಿಡಿ$_1$**, ಬಲುವಿಡಿ$_1$, ಬಲ್ಪಿಡಿ$_1$ (ಕ್ರಿ). ಬಲವಾಗಿ ಹಿಡಿ; ದೃಢವಾಗಿ ತಿಳಿದಂಕೊಳ್ಳು : ಬಲ್ವಿಡಿದಾಳಿಯುಂ ಸಖಿಯರೆಂದುದುಗೇಳದೆ ಗೆಂಟು ಮಾಟ್ಪುದುಂ (ಮಲ್ಲಿಪು. ೬-೬೬); ಕರ್ಮೇಂಧನಂಗಳಂ ಸುಡಲುಂ ಜಿನ ಚರಣಮಂ ಬಲ್ವಿಡಿಯಲುಂ ಸನ್ಮಾರ್ಗಮಂ ಪೊರ್ದಲುಂ ಮನಂದಂದು (ರಚನಾಗು. ೭-೨೩೬); ಏಳೇಳಲ್ಬುರ ಕೈವಿಡಿದಳು ಕುಳಿತೇಳದೆ ಕೈಗಳ ನೀಡ ಚಾಳಿಸಿ ಪೋಪೆವೆಂದತ್ತಿತ್ತಲೊಲೆದರು ಬಾಲೆ ಬಲ್ವಿಡಿದು ತೆಗೆದಳು (ಶರಶ. ೪೦-೬೪). **ಬಲುವಿಡಿ$_1$** : ಕೋಟಲೆಗಳೀಯೆರಡರೊಳಗವ ಬೇಟವನೆ ಬಲುವಿಡಿದು ಹೂಡಿದ ಘೋಟಕದ ಹೊಂದೇರಿನಲಿ ಹೊಚಿವಂಟನರ ಮನೆಯ (ಕೊರಣಾ. ೩-೬-೨೨); ವಸುದೇವನಂದನನಂಘ್ರಿಯನು ದೃಢಭಾವದಲಿ ಬಲು[ಪಾಠಾಂ. ಲ]ವಿಡಿದು ದಾಂಟು ಭವಾಂಬುಧಿಯ (ವಿಠಾಗ. ೪-೦೩-೨೪). **ಬಲ್ಪಿಡಿ$_1$** : ಈ ಕಮನೀಯಕಾವ್ಯಮಂ...ಬಲ್ಪುಸಿರ್ದಂ ಬುಧರ್ಕಲಾವಲ್ಲಭರ್ಕೆದೆ ಕೇಳ್ದು ಗುಣಮೊಂದನೆ ಬಲ್ಪಿಡಿದಿರ್ಪುದಾವಗಂ (ಅದ್ಭುಟಿ. ೦೨-೦೪೪); ಪವನವೇಗವ ಕೀಲ್ಪಿಡಿಸಿ ದುವಾಳಿಪ ಜವಗಾತಿಯು ಬೆನ್ನೊಳಿರ್ದು ಕುವರ ಕಂಗೆಟ್ಟು ಬಿದ್ದಪೆನೆಂದು ತಕ್ಕೆಗೊಂಡವಳ ನುಣ್ಮೊಲೆಯ ಬಲ್ಪಿಡಿದ (ಪೋಹಕ. ೩೦-೨೬). [ಬಲ್$_2$ (<ಬಲ್ಲಿತ್ತು$_1$) + ಪಿಡಿ$_1$]

**ಬಲ್ವಿಡಿ$_2$**, ಬಲುವಿಡಿ, ಬಲ್ಪಿಡಿ$_2$ (ನಾ). ೧. ಬಲವಾದ ಹಿಡಿತ; ದೃಢವಾದ ಹಿಡಿತ : ಬಲ್ವಿಡಿವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ (ಅಜಪು. ೨-೩೬); ಒಡಲುಂ ಪ್ರಾಣಮುಮೆಂಬಿವು ಕಿಡಲಾದುವು ಜಸಮದೊಂದೆ ಕಿಡದದನಾಂ ಬಲ್ವಿಡಿವಿಡಿದು ನೆಗಟ್ದಿಂ (ಶಂಕರಾ. ೦೨-೦೪೦). **ಬಲುವಿಡಿ$_2$** : ೧. ಬಲುವಿಡಿಯ ಬಿಲು ವಾಮದಲಿ ಬೆರಳೊಳಗೆ ಸವಡಿಸಿ ಸನಿಡಿಸಿ ತೆಗೆವ ತಿರುವಿನ ಹಿಳುಕು ನಿವಿರಿದ ತೋಳ ತೋಚಿಕೆ ಬಲದ ಭಾಗದಲಿ (ಕುವ್ಯಾಕ ೨೬-೨೩). **ಬಲ್ಪಿಡಿ$_2$** : ೧. ಬಲ್ಪಿಡಿಪಿಡಿದಿರ್ದುದಂಗಜನ ಕಯ್ಪಿಡಿಯುಂ ಪಿಡಿಯುಂ ಮತಂಗಜಂ (ಪುಷ್ಪದ. ೩-೪೦). ೨. ಬಲಿಷ್ಠವಾದ ಮುಷ್ಟಿ; ಬಿಗಿಮುಷ್ಟಿ : ಕಡೆಯೊಳ್ ಪ್ರತಾಪಾಗ್ರ್ಯಂ ದಮುನನ ಬಲ್ಪಿಡಿ ಗುರ್ದಿಂಗೆ ನಿದ್ದೆವೋದಂ (ರಾಜಶೇಕ್ಕ. ೧೨-೯).
[ಬಲ್$_2$ (<ಬಲ್ಲಿತ್ತು$_1$) + ಪಿಡಿ$_2$]

**ಬಲ್ಪಿಣಲ್$_1$** (ನಾ). ಹೇರಳವಾಗಿದ್ದು ತೆಕ್ಕೆಗೊಂಡ ಕೇಶರಾಶಿ : ಗುಡಿಜಲವುನಕ್ಕೆ ಮೇಣ್ ಮಾರುಡಫಲದೊಳ್ ತಿರುಳನಕ್ಕೆ ತಲೆಪೂಸಲೊಡಂ ಜಡಿಗೊಂಡ ತಲೆಯ ಬಲ್ಪಿಣಲೊಡದು ಮೃದುಸ್ನಿಗ್ಧಸರಳತರಮಾಗಿರ್ಕುಂ (ಕೊಂಕೋಕ. ೪-೩೩). [ಬಲ್$_2$ (<ಬಲ್ಲಿತ್ತು$_1$) + ಪಿಣಲ್$_2$]

**ಬಲ್ಪಿಣಲ್$_2$** (ನಾ). (ಕೆಲವು ಪ್ರಾಣಿಗಳ ಬೆನ್ನಿನ ಮೇಲಿರುವ) ದೊಡ್ಡದಾದ ಡುಬ್ಬ,—ಎತ್ತರವಾದ ಭಾಗ : ಮಾನವಲೋಕಾಧೀಶ್ವರನಾ ಹೇರಾನೆಯ ಬಲ್ಪಿಣಲೇಚಿ ಸಾನುರಾಗದಿ ಬಂದನಾ ಪುಂಡರೀಕಿಣಿಗಾ ನರಪತಿಬಲಸಹಿತ (ಶ್ರೀಪಾಂ. ೦೩-೨೪). [ಬಲ್$_2$ (<ಬಲ್ಲಿತ್ತು$_1$) + ಪಿಣಲ್$_3$]

**ಬಲ್ವಿವೇಕ** (ನಾ). ಉತ್ತಮವಾದ ತಿಳಿವಳಿಕೆ,— ಯಂಕ್ತಾಯಂಕ್ತ ಪರಿಜ್ಞಾನ : ಗೆಲ್ವೆವೆಂಬುದು ಬಲ್ಲೆವಂಕಸನ್ನದ್ಧದಿ ನಿಲ್ವುದುತ್ತಮವೆಂದೆ ಪೊಡೆಯು ಬಲ್ವಿವೇಕಕೆ ಗುರು ನೀನೇನ ಕಂಡುದ ಚೆಲ್ವೆಂದು ಪೊಗಳುತೆ ಯಿದ್ದರು (ಶರಶ. ೩೦-೩೦). [ಬಲ್$_2$ (<ಬಲ್ಲಿತ್ತು$_1$) + ವಿವೇಕ]

**ಬಲ್ವಿಸಿಲ್**, ಬಲುಬಿಸಿಲು, ಬಲ್ಪಿಸಿಲ್, ಬಲ್ಪಿಸಿಲು (ನಾ). ಬಹಳವಾದ ಬಿಸಿಲು ; ಅತಿಯಾದ ಸೂರ್ಯನ ತಾಪ : ಬಂದ ಬಸಂತ ಬನಕೆ ಬಲ್ವಿಸಿಲೊಳ್ (ಜಯುಕಾ. ೦೦-೪೯). ಬಲುಬಿಸಿಲು: ಬಲುಬಿಸಿಲು ಬಾಯ್ಗಾಂತ ಚಂದ್ರಿಕೆವೆಳಗೆನಲು ಘನರೋಷವಹ್ನಿಯ ಬೆಳಗು ಬೀತುದು ಚಕಿತ ಚಂದ್ರುಮನಾದ ದೂರ್ವಾಸ (ಕುವ್ಯಾಕ. ೦೬-೨೪) : ಗಾಳಿ ಘರ್ಮಾಂಬು ಪೊತ್ತುದು ಭೂಮಿ ಬಿಕ್ಕನೆ ಸೀಳಿತು ಕೂರ್ಮನ ಬೆನ್ನು ಹೋಳಿಗೆವಡದುದು ಬಲುಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಪೋಹಕ. ೦೯-೯೬). **ಬಲ್ಪಿಸಿಲ್** : ಇದು ಮಟಿಯಿಂದು ಚಳಿ ಬಲ್ಪಿಸಿಲಿದು ಕಟ್ಟಲೆಯೆಂದು ನೋಡದೋಹಿಲನಗರಂ ಮುಂದದಿಂ ತಂದಾ ಸೌರಾಷ್ಟ್ರದ ಸೋವೇಶಂಗೆ ನಿಚ್ಚಮರ್ಪಿಸುತಿರ್ದಂ (ಅದ್ಭುಟಿ. ೦೦-೯೩). **ಬಲ್ಪಿಸಿಲು** : ಕ್ಷೋಣಿಯೊಳೀ ಬಲ್ಪಿಸಿಲಿಂದೆ ಕಡುಗಾದ ಬಾಣಲಿಯೆಣ್ಣೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ವುದು ವನಚರಶ್ರೇಣಿ ಬೆಂಡದ್ದು ತೇಲಿದುವು (ಪೋಹಕ. ೦೯-೪೩).
[ಬಲ್$_2$ (< ಬಲ್ಲಿತ್ತು$_1$) + ಬಿಸಿಲ್]

**ಬಲ್ವಿಸುಪು** (ನಾ). ಬಹಳವಾದ ಶಾಖ ; ಅತಿಯಾದ ತಾಪ, — ಉಷ್ಣ : ಒಡಲಾಂತ ತನುವೀತನ ನೆವದಿಂದೆಂದು ಕಡುಗಳಲ್ದಾಕಾಶವೆಂಬ ಮೃಡ ನುರಿಗಣ್ಣಾ ತೆಚಿದವೊಲು ನಡುನೇಸಜಿಡಸಿದಂದು ಬಲ್ವಿ[ಪಾಠಾಂ. ಲ್ಪಿ]ಸುಪ (ಶ್ರೀಪಾಂ. ೪-೩೪). [ಬಲ್$_2$ (< ಬಲ್ಲಿತ್ತು$_1$) +ಬಿಸುಪು (<ಬಿಸುರ್ಪು)]

**ಬಲ್ವೆಣ** (ನಾ). ದೊಡ್ಡದಾದ ಹೆಣ ; ಭಾರಿ ಶವ : ಪೆಣದಿನಿಗಳ ತಂಡಂ ಬಲ್ವೆಣಗಳನಜಿಸುತ್ತುಮಲ್ಲಿ ಬರೆವರೆ (ಗದಾಯು. ೪-೦೩) ; ಬಲ್ವೆಣನುರ್ಚಿ ಕೋಡೂಳಿರೆ ನೆತ್ತರುರೋವುಣಿಯಿಂ ನೆಲಕ್ಕೆ ಬಾನಲ್ವರಿವನ್ನೆಗಂ ಪ್ರಹತ ದಿಂದಿಚಿದತ್ತಿದೊಡೆ (ಕಾವ್ಯಾವ. ೬೬) ; ಆನೆಯೊಂದನ್ ತಟ್ಟಿ, ಭೀಮ ಸೇನಂಗೆತ್ತು . . . ಎಲ್ಲಿ ತೋಚಿಂದದರ ಕಾಲ್ಮುಚಿದು, ಬಲ್ವೆಣನನೊದೆ ದೊದೆದು, ಬಿಸುಟನ್ (ಅಶ್ವಶಾ. ೪-೩೩).
[ಬಲ್$_2$ (< ಬಲ್ಲಿತ್ತು$_1$) + ಪೆಣ]

**ಬಲ್ವೆಣಸು** (ನಾ). ಅಧಿಕವಾದ ಪ್ರಯತ್ನ: ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ ಭಯಂಗೆಯ್ದೆ ಬಲ್ವೆ[ಪಾಠಾಂ. ಲ್ಪೆ]ಣಸಂ ಪೊದಟ್ಟು ನಾಣ್ಗಿಡೆ ನೆರೆದೂಢೆಯ ಪ್ರಥಮಸಂಗಮದೊಳ್ ಕುವರಂ ಮರುಳ್ಗಿದಂ (ಕೊಂದ್ರಕು. ೬-೮೩). [ಬಲ್$_2$ (< ಬಲ್ಲಿತ್ತು$_1$) + ಪೆಣಸ್ಸು]

**ಬಲ್ವೆಚಿ** (ನಾ). ಪೂರ್ಣಚಂದ್ರ : ಬರುತಿದೆ ಬಲ್ವೆಚಿ ಬಂಡುಣಿ ವಸುಳೆಯ ತಿರುವಿಲ್ಲಾಚಿನ ಪಳವಿಗೆಯೆಳವಿಮಾನೆರಡಂ ಕೊಂಡೆಲೆ ಸಖಿಯೆನ ಗುಳ್ಳವವ ಹೊಡೆನೂಂಕೆನುತ ತರುಣಿವಿಕಲವಚನವನಾಡಿದಳ್ ವಿರಹದ ವೇದನೆಯೊಳ್ (ಜಯುಕಾ. ೪-೩೪). [ಬಲ್$_2$ (< ಬಲ್ಲಿತ್ತು$_1$) + ಪೆಚಿ]

**ಬಲ್ವೇಟ** (ನಾ). ಅತಿಯಾದ ಶೃಂಗಾರ ; ಬಹಳವಾದ ಪ್ರಣಯ : ಒಡನುಟ್ಟ ಪಟ್ಟೆಯ ಚಲ್ಲಣ ಮೋಹನವಡೆದ ಪದಕ ಪೈಠಣಿಯ ಕಡು ಸೊಬಗಿನ ಬಲ್ವೇಟದ ಸುಕುಮಾರ ನಡೆದನು ಸುಖ ಮೇಳದಲಿ (ಕಂಸವ. ೦೦-೩೦). [ಬಲ್$_2$ (< ಬಲ್ಲಿತ್ತು$_1$) + ಬೇಟ$_1$ (<ಬೇಂಟ)]

**ಬಲ್ವೊನಲ್**, ಬಲುವೊನಲು (ನಾ). ಹೆಚ್ಚಾದ ಹೊನಲು ; ಅತಿಶಯವಾದ ಪ್ರವಾಹ : ಪುರಮಂ ಪೊಕ್ಕು ಪುರಂಧ್ರಿನಿಕಾಯದ ತರಳ ಕಟಾಕ್ಷರುಚಿಯ ಬಲ್ವೊನಲೊಳಗುರುಮುದದಿಂ ತೇಂಕಾಡಿ ನಡೆದು ರಾಜಾಗಾರಮನೆಯ್ದಿ (ಜಯುಕಾ. ೯-೦೯). **ಬಲುವೊನಲು** : ಪ್ರಣದ ಬಲುವೊನಲೊಳಗೆ ತಲೆಗಳು ಕುಣಿದವರ್ಜುನನಂಬಿನುಚುಬೆಗೆ ಹೆಣನ ದಾವಣಿ ಹಾಸಿದವು ಸೂಸಿದವು ದೊಂಡೆಗಳು (ಕುವ್ಯಾದ್ರೋ. ೦೦-೩).
[ಬಲ್$_2$ (<ಬಲ್ಲಿತ್ತು$_1$) + ಪೊನಲ್]

**ಬಲ್ವೊಯಿಲ್** (ನಾ). ಬಲವಾದ ಹೊಡೆತ ; ಜೋರಾದ ಏಟು : ಬಲ್ಲರಿಗಳ ಸಂಪ್ರಮುಕ್ಕಂ ಬಿಚುವಳೆಯ ಬಲ್ವೊಯಿಲ್ಗಂ ಪೆರ್ಮಳೆಯ

ಧಾರೆಗಂ . . . ಬೆಚ್ಚದೆ ಬೆದಱದೆ ಬಲುಂಗೆಡದೆ . . . ಮಹಾವಟವೃಕ್ಷದ ಕೆಳಗೆ ವಿಪುಳತಪದಿಂದವರ್ಣಯೊಪ್ಪುತ್ತುಮಿರೆಯಿರೆ (ಗಂಗ. ೯-೫೮ ವ). [ಬಲ್‌$_2$ (< ಬಲ್ಲಿತು$_1$) + ಕೊಯಿಲ್]

**ಬಲ್ಸರ**, ಬಲುಚರ, ಬಲ್ಚರ (ನಾ). ಗಟ್ಟಿಯಾದ ಸ್ವರ; ಜೋರಾದ ಧ್ವನಿ: ಕಡೆಯುಬೇಡಿನ್ನೆನ್ನನೆಂದು ಬೊಮ್ಮಗೆ ಮೊಱೆಯಿಡುವ ಬಲ್ಸರ ವಿದೇಬಂತೆ ಕಡು ಸೊಗಯಿಪ ಘುಳುಘುಳುರವದಿಂದಾ ಕಡಲು ಕಣ್ಗೆಸೆದಿರುತಿಹುದು (ಕುಂದಾ. ೨-೩). **ಬಲುಚರ** : ಆಗಸದ ಬಲುಚರಂ ಮೃತ್ತಿಸ್ವರವ ಪಕ್ಷಿಸನಲಂತುಗೆಯ್ಮಲು ಬಂದುವಸುವು (ರಾಶಕ. ೩-೨೦). **ಬಲ್ಚರ** : ಬಲ್ಚರದಿನವಳ ಸದ್ಗುಣಗಳಂ ಕೊಂಡಾಡಿ . . . ಶೋಕಂ ದಳೆದರಾ ಸಖಿಯರು (ರಾಶಕ. ೬-೦೦೭). [ಬಲ್‌$_2$ (< ಬಲ್ಲಿತು$_1$) + ಸರ$_2$]

**ಬಲ್ಸರಿ**, ಬಲುಸರಿ (ನಾ). ಭಾರಿಯಾದ ಮಳೆ; ಅತಿಯಾದ ವೃಷ್ಟಿ: ಅತ್ತ ಕಱಿವಂಬಿನ ಬಲ್ಸರಿಯಿಂದಮಾ ದಿಶಾವಳಿ ಮಸುಳ್ದಿಂತು ನೀಳ್ದಪುದು (ಕುಕಥಾ. ೧೦-೧೦); ಅವರ್ದಿನ ಬಲ್ಸರಿ ಸುರಿದಪುದೆನಲವನೀಶ್ವರಂಗಿರುಳ್ ತನ್ನ ಕಂಡ ಕನಸಂ ಪೇಟ್ದಳ್ (ಶಂರಾಮಾ. ೬-೯೦); ತುಂಬಿಕೆಯೊಳಿಂಬುಗೊಂಡ ತುಂಬುನೀರುಂ ಪೂತ್ಕರಿಸಿದಪುವೆಂಬಂತಿರೆ ಎಡೆವಿಡದೆ ಬಲ್ಸರಿ ಸುರಿಯೆ ಮೞೆಗಾಲಂ ಚೆಲ್ವಾಯ್ತು (ರಾಪಾಶ್ವ. ೩-೦೨). **ಬಲುಸರಿ** : ಮಿಗೆ ಹೊಳೆಹೊಳೆವ ಮಹಿಪರ ಮಕುಟರತ್ನದ ಬಳ್ಳಿ ಮಿಂಚುಗಳ ಬಲುಸರಿಯ ನಾರಾಚಜಾಳದ ಮಳೆಯ ನೆತ್ತರ ಹೊನಲುಗಳ ರೌಕುಳದ ಮಳೆಗಾಲದಲಿ ಹೆಚ್ಚಿತು ಭಟರ ಶೌರ್ಯಶಿಖಿ (ಕುವ್ಯಾದ್ರೋ. ೦೫-೨೯). [ಬಲ್‌$_2$ (< ಬಲ್ಲಿತು$_1$) + ಸರಿ$_1$]

**ಬಲ್ಸಾಸಿ** (ನಾ). ಮಹಾ ಸಾಹಸಿ; ಅತ್ಯಂತ ಶೌರ್ಯಶಾಲಿ: ಇವರ್ಗೆ ಬಾಲಮೊಂದಿರ್ಕುಂ ಪೆರ್ವಡೆಮೆರಸು ಬಂದಿರ್ಪರ್ ಬಲ್ಸಾಸಿಗಳ್ ಕಣಾ! (ಅದ್ಭುತ. ೮೨-೨೩). [ಬಲ್‌$_2$ (< ಬಲ್ಲಿತು$_1$) + ಸಾಸಿ]

**ಬಲ್ಸಿಡಿಲ್** (ನಾ). ಬಲವಾದ ಸಿಡಿಲು : ಬಲ್ಸಿಡಿಲಂತಂತಿರೆ ಗರ್ಜಿಸುತ್ತಡರ್ದ ತತ್ಕುಂಭಮಂ ಸೀಳ್ದು (ಶಬಶಂ. ೩-೬೦). [ಬಲ್‌$_2$ (< ಬಲ್ಲಿತು$_1$) + ಸಿಡಿಲ್$_2$]

**ಬಲ್ಸಿರ** (ನಾ). ದೊಡ್ಡದಾದ ತಲೆ : ತುರಗಗಳನು ಬೀಳಲಿಱಿದು ರಾವುತರ ಬಲ್ಸಿರಗಳ ಮೆಟ್ಟಿ ಮೂಗರಿದ ದರಗಲಿಗಳ ಕಡು ಭಾಪು ಶಾಬಾಸೆಂದು ತುರುಕರು ಕೊಂಡಾಡಿದರು (ಕಂಪಿಪ. ೦೮-೦೦೩) [ಬಲ್‌$_2$ (< ಬಲ್ಲಿತು$_1$) + ಸಿರ$_2$]

**ಬಲ್ಸುಕ** (ನಾ). ಬಹಳವಾದ ಸುಖ ; ಅತಿಶಯವಾದ ನೆಮ್ಮದಿ : ಸಕಲ ವಜೀರರು ಸಹಿತ ಚಕಿತ ಪರಾಕ್ರಮಿ ರಣಧೂಳಿಖಾನ ಬಲ್ಸುಕದೊಳಿರ್ದನು (ಕಂಪಿಪ. ೦೬-೫೩). [ಬಲ್‌$_2$(<ಬಲ್ಲಿತು$_1$) + ಸುಖ$_1$ (<ಸೊಗ)]

**ಬಲ್ಸೂಱೆ**, ಬಲುಸೂಱೆ (ನಾ). ಬಹಳವಾದ ಸೂರೆ ; ಅಧಿಕವಾದ ಕೊಳ್ಳೆ, – ಲೂಟಿ : "ದಟದುಟಂ (ದಟವುಟು) – ಬಲ್ಸೂಱೆ" (ಕಶಬ್ದ. ಕಾ. ೧) ; ನೆರೆದ ಮಹಾನರನಾಯಕಸಭೆಯೊಳಗರೆಬರ ಬುದ್ಧಿಯನೆಳಕುಳಿಯಾಡುತ್ತರೆಬರಹಂಕಾರವನೋವದೆ ಬಲ್ಸೂಱೆಗೊಳುತ (ಜಯಚಾ. ೫-೩೦). **ಬಲುಸೂಱೆ** : ಮೇರೆಯಿಲ್ಲದ ತೈಲ ಘೃತ ಬೆಳಸೂರ ಹರದರ ಹಾರುವರ ಬೇಹಾರಿಗಳ ಬಲುಸೂಱೆಯಾದುದು ಕೇರಿಕೇರಿಯಲಿ (ಕೆರರಾ. ೫-೬-೯). [ಬಲ್‌$_2$ (<ಬಲ್ಲಿತು$_1$) + ಸೂಱೆ]

**ಬಲ್ಸೆರೆ** (ನಾ). ದೊಡ್ಡದಾದ ನರ, – ರಕ್ತನಾಳ : ಬತ್ತಿದ ಬಡ ಪೊಱವಾಱ ಬಲ್ಸೆರೆ ಸುತ್ತಿ ಹತ್ತಿದ ಹಿಳ್ಳಿಗಾಲುಗಳ ಕೊತ್ತಿಗಣ್ಗಳ ಕೋತಿ ಮುಸುಡಿನ . . . ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ನೇಮಿಸಂ. ೭-೦೦೪). [ಬಲ್‌$_2$ (<ಬಲ್ಲಿತು$_1$) + ಸೆರೆ$_4$]

**ಬಲ್ಸೆಱೆ**, ಬಲುಸೆಱೆ (ನಾ). ಬಲವಾದ ಸೆರೆ ; ಬಿಗಿಯಾದ ಬಂಧನ : ಅಂ ಮೆಯ್ಮುಱಿದಿರ್ದನಪ್ಪೊಡಿವನಂ ತಮ್ಮಯ್ಯನಂ ಪೋಲ್ತು ಬಲ್ಸೆಱೆಯಿಂ ಕಿಂಗಿದುದೊಂದು ಗಂಧಗಜದಂತಾದಾಗಳೇಗೆಯ್ವನೋ (ಸುಕುಮಾ. ೦೦-೯೨). **ಬಲುಸೆಱೆ** : ಕಡುಹುವಗ್ಗದ ಕಾಲಕೇಯರ ಗಡಣವಡಗಿತು ಸುರರ ಬಲುಸೆಱೆ ಬಿಡಿಸಿದವು ಬಳಿಕಾಯ್ತು ಕಡುಸುಮ್ಮಾನ ಸುರಕುಲಕೆ (ಕುವ್ಯಾಅ. ೦೨-೫೩). [ಬಲ್‌$_2$ (<ಬಲ್ಲಿತು$_1$) + ಸೆಱೆ$_2$]

**ಬಲ್ಸೆಱೆಗೆಯ್** (ಕ್ರಿ). ೧. ಬಲವಾಗಿ ಬಂಧಿಸು, – ಸೆರೆಹಿಡಿ. ೨. (ಅಲಂ) ಬಲವಾಗಿ ಸೆಳೆ ; ಆಕರ್ಷಿಸು : ನಗೆಗಣ್ ಸೂಸೆ ವಿಳಾಸಮಂ . . . ಸ್ಮರಮಂತ್ರದೇವತೆಯುಪೋಲ್ ಬಾಹಾಲತಾಂದೋಳನಂ ಬಗೆಯಂ ಬಲ್ಸೆಱೆಗೆಯ್ಕೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ (ಶಂರಾಮಾ. ೫-೯೨); ನಗವಾಯಿಂ . . . ಘಣ್ಪೆಯಿಂ ಬಗೆಯಂ ಬಲ್ಸೆಱೆಗೆಯ್ವ ಪುತ್ರಳಿಗಳಿಂ ರಂಗಸ್ಥಳೀಸ್ತಬ್ಧಮಾವಗಮೊಪ್ಪುತ್ತಿರೆ ರಂಜಿಕುಂ ಹರಿಹರಶ್ರೀ ದೇವತಾಮಂದಿರದ (ಎಕ. XI, ದಾವಣ. ೨೫-೭೭ ; 1224 ). [ಬಲ್ಸೆಱೆ + ಕೆಯ್$_1$]

**ಬಲ್ಸೆಱೆವಿಡಿ** (ಕ್ರಿ). (ಅಲಂ) ಆಕರ್ಷಿಸು : ಎಳನೀರಿಂ ನಾಳಿಕೇರಂ ಬಳಯಿಸೆ ಕದಳೀಷಂಡಮಂ ತುಂಬಿಯಂ ಪೂಗೊಳದಿಂ ಪೂಗದ್ರುಮಂ ಬಲ್ಸೆಱೆವಿಡಿಯೆ . . . ಸೊಗಯಿಕುಂ ತತ್ಪುರೋದ್ಯಾನಷಂಡಂ (ಮಲ್ಲಿಕೃ. ೨-೩೪) ; ಕಾಲ್ಸಮನಿಸೆ ಪೊಸ ಬಂಡಿನ ಮೆಲ್ಸರಿಯಂ ಸುರಿಯುತಿರ್ಪ ಸಂಪಗೆವೂಗಳ್ ಬಲ್ಸೆಱೆವಿಡಿವಂತಿರ್ದುವು ಮೆಲ್ಸರದಿಂ ಪಾಡುತಿರ್ಪ ಪೆಣ್ದುಂಬಿಗಳಂ (ಕ್ಮಕಾ. ೬೦). [ಬಲ್ಸೆಱೆ + ಪಿಡಿ$_1$]

**ಬವ$_1$** (ನಾ). ಹುಟ್ಟು ; ಜನ್ಮ : 'ಬವಸಿ೦' ಪರಾ. [<ಸಂ. ಭವ]

**ಬವ$_2$** (ನಾ). [ಜ್ಯೋತಿ] ಪ್ರಸಿದ್ಧವಾದ ಏಳು ಬಗೆಯ ಚರಕರಣಗಳಲ್ಲಿ ಮೊದಲನೆಯದು ; ▶ "ಚರ ಮತ್ತು ಸ್ಥಿರ ಎಂದು ಕರಣ ಎರಡು ವಿಧ. ಬವ ಬಾಲವ ಕೌಲವ ತೈತುಲೆ ಗರಜೆ ವಣಿಜೆ ಭದ್ರೆ ಈ ಏಳು ಚರಕರಣಗಳು. ಶುಕ್ಲ ಪಕ್ಷದ ಪ್ರಥಮಾತಿಥಿಯ ಉತ್ತರಾರ್ಧದಿಂದ ಕೃಷ್ಣ ಪಕ್ಷದ ಚತುರ್ದಶಿತಿಥಿಯ ಪೂರ್ವಾರ್ಧ ಪೂರ್ತಿ ಈ ಚರಕರಣಗಳು ಕ್ರಮವಾಗಿ ಒಂದು ತಿಂಗಳಿನಲ್ಲಿ ಎಂಟು ಸಲ ಬರುತ್ತವೆ" (ಜಾತಕ. ಶಂ. ೦. ೩೬೮ ಅಡಿ): ಬವ ಬಾಲವ ಕೌಲವ ತೈತುಲ ಗರಜ ವಣಿಜ ಭದ್ರಗಳೆಂಬವೇಳು ಚರಕರಣಂಗಳುಂ (ವಿವೇಕ. ೨೬೨). [ಸಂ.]

**ಬವಕರಣ** (ನಾ). = ಬವ$_2$: ಭ[ಬ]ವಕರಣಕ್ಕೆ ತಿರಂ ೨೬ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೬೦-೪). [ಸಂ.]

**ಬವಕೆ** 'ಬಯಕೆ$_2$' ನೋ.

**ಬವಣಿ** 'ಬವಣೆ' ನೋ.

**ಬವಣಿಗ** (ನಾ). (ಸಂಸಾರದ) ಬವಣಿಗೆ ಒಳಗಾದವನು ; ಕಷ್ಟಕ್ಕೆ ಸಿಲುಕಿದವನು ; ತೊಂದರೆಗೆ ಗುರಿಯಾದವನು : ಮಾನಸರೆಂತಂತು ಬಸಿಱೊಳ್ ಪುಟ್ಟಿಯುಂ, ಬವಣಿಗರೆಂತಂತು ಕಾಡಂ ತೊಟಲ್ದುಂ . . . ಬಾಟ್ಟು ರಾಮಂ ದೇವನೆ ! (ರಾಪಾಶ್ವ. ೦೦೦-೧೨). [ಬವಣಿ + –ಇಗ]

**ಬವಣಿಗೆ**, ಬವಳಿಕೆ (ನಾ). ೧. ಸಂತ್ಯಾಟ ; ಸಂಚಾರ : ಇಂತಪ್ಪ ನೆಗೞ್ತೆಯ ಪೊಗೞ್ತೆಯುಮಂ ಪ್ರತ್ಯಕ್ಷಂ ಮಾಡುವೆನೆಂದೊಂದು ದಿವಸಂ . . . ವಂದಿಮಾಗಧರ್ಕಳ್ ಪೊಗೞೆ ಪೊಟಲ ಜೇಂಕಾರದ ವಾದ್ಯಂಗಳ್ ನೆಗೞೆ ಬವಣಿಗೆಗೆ ಪೊಱಮಟ್ಟು (ಶಬಶಂ. ೦-೩೯ ವ) ; ಬ[ಕಾಶಂ ಭ]ವಣಿಗೆಯ ಬಂದಡವಿಯಲಿ ಪಾಂಡವರು ನವೆದರು (ಕುವ್ಯಾವಿ. ೦೦-೯೦). ೨. ಸುತ್ತುವುದು ; ಪ್ರದಕ್ಷಿಣೆ : ಬವಣಿಗೆ ಜಿನೇಂದ್ರಪೂಜೋತ್ಸವದೊಳ ಮೊಡ್ಡೋಲಗಂ ಜಿನಾಸ್ಥಾನದೊಳಾ ದಿವಿಜೇಂದ್ರಂಗಾದುದು ಗೀತಿ ವಾದ್ಯ ನೃತ್ಯಪ್ರಸಂಗಮಜಿತನ ಕೆಲದೊಳ್ (ಅಜಿತ. ೫-೬೩). ೩. ಕಷ್ಟ ; ತೊಂದರೆ ; ಪರಿಶ್ರಮ : ಬವಣಿಗೆಯು ಕಳೆಯಲಾಱದೆಯಾಯಾಸಂ ಬಟ್ಟಪನಂ ದೈವಮೆಂತಪ್ಪನು (ಹಾಸೋಶು. ೯-೦೦೩); ಈಸು ಪರಿಯಲಿ ಪಟ್ಟ ಬವಣಿಗೆಯನು ನೀ ಮರೆದು ಮೈಸಿರಿಗೆ ಬೆರತೆಯಲ್ಲೋ ಆತ್ಮ (ತತ್ವಸ. ೨೯-೩). ೪. ತೊಳಲಾಟ ; ಹೊಯ್ದಾಟ : ಅವನಿಪತಿ ದುಗುಡದಲಿ

ಮೋಱೆಯುಲವುಚಿದನು ಕರತಳವ ಚಿತ್ತದ ಬವಣೆಗೆಯು ಭಾರಣೆಯು ಕಡು ಶೋಕದಲಿ ಮೈಮಱೆದ (ಕುಮಾ.ದ್ರೋ. ೧-೪). **ಬವಳಿಕೆ :** ೫. ತಲೆ ತಿರುಗುವಿಕೆ ; ತಲೆಸುತ್ತು ; ಬವಳಿ ಬರುವುದು : ಆ ಜನರ ಹೆಸರಿಲ್ಲದ ಮುಖ . . . ಶಾಂತರೀತಿಯಿಂದ ಕೆಲಸ ತೆಗೆದುಕೊಳ್ಳುತ್ತಿರುವ ಆ ಹಳ್ಳಿಯ ಗೌಡನ ಧೈರ್ಯಪೂರ್ವಕವಾದ ಓಡಾಟ, ಇಷ್ಟು ನೋಡಿದ ಕಣ್ಣುಗಳು ಬವಳಿಕೆಯು ಬೇನೆಗೀಡಾಗಬೇಕು ! (ಮರುಜ. ೧೯) ; ಕಾರಗತ್ತಲೆಯೊ ಬವಳಿಕೆಯೋ ಮನ ತುಂಬಿ ತೋರದಲೆ ಹೋಯ್ತು ಕಣ್ಮುಂದೆ (ಕನ್ನಡಾ. ೨೬೬). [< ಸಂ. ಭ್ರಮಣಿಕಾ]

**ಬವಣೆಗೊಳ್** 'ಬವಣೆಗೊಳು' ನೋ.

**ಬವಣೆಗೊಳಿಸು** (ಕ್ರಿ). ಸಂತ್ರಿಸಂ ; ತಿರುಗಿಸು : ಬಱಿವಿಡಿದು ತಱುಬಿ ದೊಡಮವಳ ಕೈಗೆ ಸಿಲ್ಕದಂಗಳದೊಳ್ ಬಳಬಳಸಿ ಬವಣೆಗೊಳಿಸಿ ಬಳಲಿಸುವ ಬಲ್ಪಂ . . . ನಿರವಿಸಿ ರಾಯಂ (ಜಕವಿ. ೪-೯೯).
[ಬವಣೆಗೊಳ್ (< ಬವಣೆಗೊಳು) + – ಇಸು₃]

**ಬವಣೆಗೊಳು** 'ಬವಣೆಗೊಳಂ' ನೋ.

**ಬವಣೆಗೊಳ್ಳು** ' ಬವಣೆಗೊಳು ' ನೋ.

**ಬವಣೆಬಡು** ' ಬವಣೆಬಡು ' ನೋ.

**ಬವಣೆಯೇಱು** (ಕ್ರಿ). ತಲೆಸಂತ್ರು ಉಂಟಾಗು ; ತಲೆತಿರುಗು ; ಕಣ್ಣು ಕತ್ತಲಿಡು : ಖಂಡಪರಶುಗಳಿಲ್ಲದ ತಾಂಡವದಿಂ ಬವಣೆಯು ಱಿಯೊಡನ ದನಿಱಿಪಲ್ ಪಿಂಡುವ ನಿಂಬೆಯ ಪಣ್ ವಿಧುಮಂಡಲವೆಂಳಜೊನ್ನಮೆಱಿವ ನೀರ್ವೊನಲೆನಿಕುಂ (ಜಕವಿ. ೬-೨೩).
[ ಬವಣಿ (< ಬವಣೆ) + ಏಱು₁ (< ಏಱ್₁) ]

**ಬವಣೆ,** ಬವಣಿ, ಬವಳಿ (ನಾ). ೧. ಸುತ್ತಾಟ ; ಸಂಚಾರ ; ಅಲೆತ : ಗವಿಯೊಳೆಳೆಯೆಲರುಂಬ ಭುಜಗಸಂದೋಹಕಂದವಿರಳದ ನಿಶ್ವಾಸ ಮರುತನ ಬಲಾಹಾರ ಬವಣೆಯಿಂದಮಜೀರ್ಣವಾಗಿ ವಮನಂಗೆಯ್ಯೆ (ವಂಶಾರಾ. ೩-೧-೧೨) ; ಪ್ರಚಂಡಮಾರುತನ ಬವಣೆಗೆ ಸಮೀಪದ ಊರಿನ ಮನೆ ಹೆಂಚುಗಳು ಗಾಳಿಗೆದ್ದು ಹಾರಾಡಿದವು (ಸಿಡಿಲು. ೬೩). ೨. ಕೋಟಲ ; ಕಷ್ಟ ; ತೊಂದರೆ : ಸ್ವಸ್ತಿ ಶ್ರೀಮನ್ಮಹಾ ಪ್ರಚಂಡದಂಡನಾಯಕ ಬಾಹತ್ತರನಿಯೋಗಾಧಿಪತಿ ಪರಮವಿಶ್ವಾಸಿ ಬಲವೊಳಡಣ್ನಾಯಕರ ಬವಣೆಯಲು ಕೊಮಾರನ ಬೀಡಿನ ಕೊಟ್ಟಗೆಯ ಮಾರೆಯನಾಯಕನ ಮಗ ದೇಪಮಯನಾಯಕನು ಬಯನಾಡ ಬವರದಲು ಕಾದಿ ಹಲರಂ ಕೊಂದು ಸುರಲೋಕಕ್ಕೆ ಸಂದ (ಮೈ.ಆಂ. ೦೯೩೬, ೪೦-೬; 1223); ಒರ್ವ ಪಾರ್ವಂ . . . ಭಿಕ್ಷಾನ್ನಕ್ಕೆ ಪಡಿಯಾಗಿ ಕೈಯೋಗರಮಂ ತಾನೆ ತಂದೀವಂ ಇಂತಾಗೆ ಬಡಪಾರ್ವನ ಕೌಶಿಕನ ಬವಣೆ ನಿಲ್ಲುದು (ಅದ್ಭುತ. ೦೬-೨೨); ಅವಳು ಸೀತೆ ಅನುಭವಿಸಿದ ಬವಣೆಗಳನ್ನು ತನ್ನವೆಂದು ಭಾವಿಸಿ ಕಣ್ಣೀರು ಸುರಿಸಿದಳು (ಹಾಹುತ್. ೬೩). **ಬವಣಿ :** ೧. " ಬವಣಿ(ಳ)–ಭ್ರಮಣಿ = ಸುತ್ತಾಟ ; ತಲೆತಿರುಕ" (ತದ್ಭಕೋ. ೨೯); ನಳಿನಭವ ನಳಿನಾಕ್ಷರಿರ್ವರುಂ ಕೈಗಳಂ ಸಲೆ ತೋಱಿ ತೋಱುತೆ ಕುಲಾಲಚಕ್ರದ ಬವಣಿಯೊಲುವೊಂದುಯಾಮಮಾತ್ರಂ ತಿರುಗಿದರೆ ದಿಶಾಮಂಡಲ ತಿರುಗುತಿರಲು (ಜಬಿತ್. ೦೬-೩೬); ಬೇಸಱದೆ ಬಾಂದಳದೊಳಾವಗಂ ನಡೆವ ಬ[ಪಾಠಾಂ. ಭ]ವಣಿ ಸಾಕೆಂದು ನಿದ್ರೆಗೈದನೊ ಸೋಮನೆನೆ . . . ಮಲಗಿಹ ಚಂದ್ರಹಾಸನಂ ಕಂಡು ವಿಸ್ಮಿತೆಯಾದಳು (ಕೈಮಿಭಾ. ೩೦-೨೦) ; ಅಂಬರದ ಬವಣಿ ಪ್ರತಿದಿನ ಬಿಡದು . . . ಎಂದು ರವಿ ವೇಗದಿಂ ಸಂಭ್ರಮದೊಳ್ಳೆದಿ ಪಶ್ಚಿಮಗಿರಿಯ ಸಾರುವನ ದೆಂಬಂತೆ ತವಕದಿಂ ಮೆಲ್ಲಮೆಲ್ಲನೆ ನಭವನಿಳಿದನಾ ಗಿರಿಯು ತಟಕೆ (ವಂಶಾರಾ. ೩-೨-೦೬). ೨. ಏನು ಮತ್ಸ್ಯಕುಮಾರ ಬ[ಪಾಠಾಂ. ಭ]ವಣಿಯಿಂದೇನು ನಿನಗೆ (ಕುಮಾ.ರಿ. ೬-೬೩); ಕಂಡುದಿಲ್ಲವೆ ನಿನ್ನ ಗಂಡನಾಟವ ನಮ್ಮ ಭಂಡು ಮಾಡುವ ಬವಣಿಯುನು (ಶಿರಿಹ. ೯. ೬೩) ; ಸಾಕಿದಱ ಬವಣಿಯೇತಕೆ ನಮಗೆ ಕಾದುವೆಯೊ ತುರಗವಂ ಬಿಟ್ಟಪೆಯೊ ಪೇಳೆಂದನು (ಕೈಮಿಭಾ. ೨೩-೩೨); ಈ ಎಂಟು ವರ್ಷ ಗಂಗವ್ವ ಸೋಸಿದ ಬವಣಿ ಅವಳಿಗೇ ಗೊತ್ತು (ಗಂಪಾದು. ೦).

೩. ತಲೆ ಸಂತ್ರುವಿಕೆ ; ಕಣ್ಣು ಕತ್ತಲಿಡುವಿಕೆ ; ತಲೆ ತಿರುಗುವಿಕೆ : ಬವಣೆ ತಲೆಬೇನೆಗಳ್ ಸ್ವೇದವೃದ್ಧಿ ಮುಖರೋಗಮಕ್ಷಿರೋಗಂ ಕಫವಾತ ವಿಕಾರಂ ಪಿಂಗುಗುವಾದವೆ ನಸ್ಯಂಗೆಯ್ಯೆ ಶುಂಠಿಯಂ ಬೆಲ್ಲಮುಮಂ (ಲೋಕೋಪ. ೯-೦೫); ಅವನಿಪನ . . . ತಲೆಯ ಪಿತ್ತದ ಬವಣಿ [ಪಾಠಾಂ. ಭವಳಿ, ಬವಳಿ] ಬಲಿದುದು (ತೊರಬಾ. ೨-೩-೧೨). **ಬವಳಿ :** ೩. ಮಾನಂ ಮಿಗುವತಿಸಾರಂ ಬವಳಿಯುಮೊಗೆದಿರ್ಕುಂ ವಾತಪಿತ್ತಜನಿತಜ್ವರದೊಳ್ (ಕಲ್ಯಾಕಾ. III, ೦೦) ; ಬೇನೆಯಿಂದ ಕ್ಷೀಣಕಾಯನಾಗಿದ್ದ ಅವನಿಗೆ ಆ ದುಃಖಾವೇಗವು ಸಹನವಾಗದೆ, ಸ್ವಲ್ಪ ವೇಳೆ ಬವಳಿಯೂ ಬಂತು (ಸ್ಕೂಲಿಮಿ. ೦೫೫).

ಬವಣಿ ಬರು, ಬವಳಿ ಬರು = ೧. ತಿರುಗು ; ಸುತ್ತು ; ಅಲೆ : ಭವವೆಂಬ ಬಲುಬಿಂಜದೊಳು ಬಹುದಿನದಿಂ ಬವಣಿ ಬಪ್ಪ ಬೇಸಱನು ತವಿಸುವೆನೆಂದು (ಶ್ರ ಥಂಜ. ೦-೦೬); ಇರುಳು ಹಗಲುಮೆನ್ನದೆಯಳ್ತಿಕಾಱರು ವೆರಸಿ ಬವಣಿ ಬರುತಿರಲು ಪುರವನಿತೆಯರೆಲ್ಲ ಕೈಗೆಲಸವ ಬಿಟ್ಟು ಪರಿದು ಬಂದವನ ನೋಡುವರು (ವೇಮಿಸಂ. ೮-೬೦). ೨. ಕಣ್ಣು ಕತ್ತಲಿಡು ; ಮೂರ್ಛೆಯುಂಟಾಗಂ : ಧೃತರಾಷ್ಟ್ರನು . . . ಎರಡು ಮಾತನಾಡಿದ್ದರಿಂದಲೇ ಆಯಾಸವಾಗಿ ಬವಳಿ ಬಂದಿತು (ವಚಭಾ. ೩೬೯) ; ನಾಲ್ಕು ಹೆಜ್ಜೆ ನಡೆದು ಹೋಗುವುದರೊಳಗೆ ಬವಳಿ ಬಂದಂತಾಗಿ ಕುಳಿತುಬಿಟ್ಟನಂತೆ (ಅಶೋಲ. ೬೮). [<ಸಂ. ಭ್ರಮಣ, ಭ್ರಮಣೀ]

**ಬವಣೆಗೊಳು,** ಬವಣೆಗೊಳ್, ಬವಣಿಗೊಳು,, ಬವಣೆಗೊಳ್ಳು, ಬವಣೆಗೊಳ್ಳು, ಬವಳಿಗೊಳ್ಳು (ಕ್ರಿ). ೧. ಕಷ್ಟಪಡು; ತೊಂದರೆಗೊಳಗಾಗು : ಅವಳು ಆ ಕಟ್ಟುಗ್ರಶಿಕ್ಷೆಯುಲಿ ಬವಣೆಗೊಳುತಿಹಳಯ್ಯೊ ಗೋಳಿಟ್ಟು! (ನಡಿದಾ. I, ೪೩೪); ನಿಂತಿಹೆನು ನಾ ನಿನ್ನ ಬಾಗಿಲೆಡೆ ನಮ್ರನಾಗಿ ನುಡಿ ತುಯ್ದು ಬವಣೆಗೊಳೆ ಭಾವಗಳ ಭಾರದಿಂ ತಲೆಯ ಬಾಗಿ (ಮಲೆದೇ. ೯-೦೦). **ಬವಣೆಗೊಳ್ :** ೧. ಧರ್ಮರಾಯಾ ಏನು ಕಾರಣವಾಗಿ ನೀನೀ ರೀತಿಯಲ್ಲಿ ವೇದಮನೋದಿ ವೇದಾರ್ಥಮಂ ತಿಳಿಯದಿರ್ಪ ಜಡಮತಿಯಾದ ಪಾರ್ವನಂತೆ ಬಱಿದೆ ಬವಣೆಗೊಂಡು ಪಂಬಲಿಸುತಿರ್ಪೆ (ಕಾರಕಾಂ. ೦೦-೪೪); ಗಾಂಪನಿಗೆ ಬಡತನದೊಳು ಬಲು ಬವಣೆಗೊಂಬವನಿಗೆ ಕೊಡಲಾಗದು ಕುವರಿಯನು (ಹರಿಬಿ. ೩-೦೮). ೩. ಸುತ್ತುತ್ತಿರುಗು ; ಚಲಿಸು : ಕಡುಗಿ ಖಾತಿಯೊಳೀತನೊಂದು ಸರಳಂ ಪೂಡಿ ಬಿಡಲೂರ್ಮಿಳಾವಲ್ಲಭನ ತೇರೆರಡು ಗಳಿಗೆ ಬಿಡದೆ ತಿರುಗಿತು ಬವಣೆಗೊಂಡು ರಥವಾಜಿಗಳ್ಬೊಡೆ ಗೆಡೆದುವು (ಕೈಮಿಭಾ. ೨೦-೩೩); ನೇಸರ್ವೆಱಗಳಿರಾ ನೀಮಿಾಸು ದಿನಂ ಬವಣೆಗೊಂಡಿರಿಂ ಪದುಳಮಿರಿಂ (ಅಶ್ರತಿ. ೪೦-೦೬). **ಬವಣೆಗೊಳು :** ೨. ತವಕವಾಡುವ ತತ್ತರಿಪ ತಲ್ಲಣಿಸುವ ಬವಣೆಗೊಳುವ ಬಂಬಲಿಡುವ ಕವಿವ ಕಾತರಿಪ ಕರಗುವ ಕಾಲೂಱುವ ಸವಿನೋಟಗಳ ಸಮನಿಪ್ಪುದು (ಜಕವಿ. ೬-೦೫೬ ಸಾಂಗತ್ಯ). **ಬವಣೆಗೊಳ್ಳು :** ೨. ರುದ್ರಂಗೀಲ್ದಂದುಪದ್ರವ ಪರಿಹರಿಸೆ ಕಾಮೋದ್ರೇಕದಿಂ ಹಾಸ್ಯವೆತ್ತು ತದ್ರತಿಯುಂ ಬವಣೆಗೊಳ್ಳುತ್ತಿರೆ ಕಾಯಿದದ್ರಿಧರನೆ ರಂಗ ಶರಣು (ಕಕಸಾಂ. ೬-೩೪). **ಬವಣೆಗೊಳ್ಳು :** ೧. ಹಗಲಿನಂದಿನ ರೂಪು ತಂದಿತು ಬಗೆಗೆ ಸಾವಿನ ಚಿಂತೆಗಳನು ನಗೆಯನಣಕಿಸಿ ಸೊಗವ ಜರೆಯುತ ಬವಣೆಗೊಳ್ಳುವ ಭಾವವ (ಪಾಂಚಾ. ೨೯-೨೦). **ಬವಳಿಗೊಳ್ಳು :** ೧. ದಿಕ್ಕುಗೇಡಿಯ ಹಾಗೆ ಏನೊಂದು ತೋಚದೆ ಬವಳಿಗೊಂಡಳು ನಲ್ಲೆ ಬರಿದೆ (ಇಂಚಾಪ. ೩೨-೯೬). ೩. ಮೈಮೇಲಿನ ಎಚ್ಚರ ತಪ್ಪು ; ಅರಿವು ತಪ್ಪು; ಮೂರ್ಛೆಹೋಗು : ಆ ವೇಳೆಗೆ ತಲೆಯ ಮೇಲೆ ಬಿದ್ದ ಪೆಟ್ಟಿನಿಂದ

ಬವಣೆಗೊಂಡಿದ್ದ ಇನ್ನೊಬ್ಬ ರಾಜಪುತ್ರನು ಮೆಲ್ಲಗೆ ಚೇತರಿಸಿಕೊಂಡು. . . ಕೆಳಗೆ ಬಿದ್ದಿದ್ದ ತನ್ನ ಜೊತೆಗಾರನಿಗೆ ಸಹಾಯ ಮಾಡಲು ಹೋದನು (ಛಾರಂಶೀ. ೦). [ಬವಣೆ + ಕೊಳು (< ಕೊಳ್$_1$)]

**ಬವಣೆಗೊಳ್ಳು** 'ಬವಣೆಗೊಳು' ನೋ.

**ಬವಣೆಪಡು** 'ಬವಣೆಬಡು' ನೋ.

**ಬವಣೆಬಡು,** ಬವಣಿಬಡು, ಬವಣೆಪಡು (ಕ್ರಿ). ಕಷ್ಟಪಡು ; ತೊಂದರೆಪಡು : ದನುಜಮನುಜರ್ಗೆ ಭವಜಲಧಿಯೊಳಗಾಳುತೇಳುತ ಬವಣೆ [ಪಾಠಾಂ. ಣಿ]ಬಡುತಿಹರೀಶ್ವರನ ಕೃಪೆ ಸವನಿಸುವ ಪರಿಯಂತ ಗತಿಯನು ಕಾಣರವರೆಂದ (ಅಮ್ಮಕ. ೨-೪೭). **ಬವಣಿಬಡು** : ನಾವೆಲ್ಲರೂ ಇಷ್ಟೆಲ್ಲ ಬವಣಿಬಡುವುದು ಏತಕ್ಕಾಗಿ ? ನಮ್ಮ ದಿವ್ಯಧ್ಯೇಯವಾದ ಪ್ರೇಮವು ಮಾಗಲೆಂದು (ಸಮಾಜ. ೩೬೬). **ಬವಣೆಪಡು** : ಆ ಸ್ತಂಭವು, ಬವಣೆಪಡುತ್ತಿರುವ ಇವರ ಕಡೆಗೆ ಬೆನ್ನುಮಾಡಿ ರಾಕ್ಷಸನಂತೆ ನಿಂತಿತ್ತು (ಪುಷಾಚಕ್ಕಾ. ೦೯೯); ಮುಖ್ಯೋಪಾಧ್ಯಾಯರಾದ ಮಾಧವರಾಯರು ಜೀವನದಲ್ಲಿ ಸಾಕಷ್ಟು ಬವಣೆಪಟ್ಟವರಾದುದರಿಂದ ಅವರ ಒಲವು ಬಡಪಾಯಿಗಳ ಮೇಲೆ ವಿಶೇಷವಾಗಿತ್ತು (ಕುರುಕಾ. ೬೩). [ಬವಣೆ + ಪಡು$_1$]

**ಬವನ** (ನಾ). ವಾಂತಿ; ವಮನ : ಸುತ್ತುಂ ಪಿಶುನಂ ಪೆರ್ಜಿಗುರ್ಪುಪತ್ತಂ ಮಾಡದಿರನೆಂದು ಮಱುಗಿದಪುದು ಮಚ್ಚಿತ್ತಂ ಮೃತಮಾಷಮುಖಂ ಮತ್ತನಿಸದೆ ಬವನಮಿಯ್ದಿಪವೊಲುಂಬವನಂ (ಅಲಾಪ. ೦-೩೭). [< ಸಂ. ವಮನ]

**ಬವನಾಶಿ,** ಬವನಾಸಿ, ಬೋನಾಶಿ, ಬೋನಾಸಿ, ಭವನಾಸಿ (ನಾ). (ಸಾಮಾನ್ಯವಾಗಿ ದಾಸರು ಉಪಯೋಗಿಸುವ) ಒಂದು ಬಗೆಯ ಭಿಕ್ಷಾಪಾತ್ರೆ : ಮಗ್ಗುಲಲ್ಲಿ ಅವಳಿಂದ ಹೊರಲಾರದಷ್ಟು ದೊಡ್ಡದಾದ ಜೋಳಿಗೆ ಬಿದ್ದಿದೆ . . . ಹಿತ್ತಾಳೆಯ ಒಂದು ಬವನಾಶಿಯಿದೆ (ಅಳು. ೬೩). **ಬವನಾಸಿ** : ಬ್ರಾಹ್ಮಣನು ಬವನಾಸಿಯನ್ನು ಹಿಡಿದು ಜೀವಿಸುವವನು (ಕೀತ್ಮಕ. ೦೬೦); ದಾಸಯ್ಯನು ಒಂದು ತುತ್ತೂರಿ ಊದಿ. ಬವನಾಸಿ ತುಂಬಾ ಭತ್ತ ತುಂಬಿಕೊಂಡು ಹೋಗುತ್ತಿದ್ದನು (ಹುಟ್ಟಿಕ. ೬೩). **ಬೋನಾಶಿ** : "ಬವನಾಸಿ (ಬೋನಾಶಿ) ಭಿಕ್ಷಾಪಾತ್ರೆ, ಸಾರು ಬಡಿಸುವ ಮೂತಿಯುಳ್ಳ ಪಾತ್ರೆ" (ಸಂಕೋ. ೩೭೨). **ಬೋನಾಸಿ** : ಹಿಂದೆ ದಾಸರಿಗೆ ಬೋನಾಸಿ ತುಂಬಾ ಭಿಕ್ಷೆ ಹಾಕುತ್ತಿದ್ದರು (ರೂಪಿ). **ಭವನಾಶಿ** : ತಂಬೂರಿ, ಭವನಾಶಿಗಳು ವಂಶೀಕರ ಪೂಜ್ಯ ಪದಾರ್ಥಗಳಾಗಿವೆ (ಕಶಶಿ. ೩೬೦); ದಾಸಯ್ಯನ ಜಾಗಟೆ, ಭವನಾಶಿ . . . ಅವರು ನಡೆಸುವ ಆಚರಣೆಯ ಸಾಧನ ಸಲಕರಣೆಗಳು (ಕಶಕೋ. I. ೦೯). [<ಬೋನ + ?]

**ಬವನಾಸಿ** 'ಬವನಾಶಿ' ನೋ.

**ಬವರ$_1$** (ನಾ). ೧. ಯುದ್ಧ ; ಕಾಳಗ ; ಸಂಗ್ರಾಮ : "ಬವರಮೆನಲ್ ಸಂಗ್ರಾಮಂ" (ಶಶುಪ. ೧೬೦); ಕಾವೇರೀ ಬವರದೊಳೀಗಳಾನಿವನನೆಂದು ನೃಪಂ ದಯೆಯಿಂದಮ್ಮಾ ಯುಯುತ್ಸುವನೊಡಗೊಂಡು ಬಿಧಿದಂ (ಶಂಕಶಾ. ೦೦-೬೩); ಬವರ ಮುಱಿದುದು ವಿಜಯಲಕ್ಷ್ಮಿಯ ಸವತಿ ಸೇರಿತು ಸುಭಟರಿಗೆ ಬಳಿಕವನಿಪತಿಯೇ ತಱುಬಿ ನಿಂದನು ಭಾನುನಂದನನ (ಕುಮ್ಮಾಕ. ೦೦-೪೦); ಕಕ್ಕಸದಿಂದೊಂದು ಬವರ ಬಂದಡಸಿತು ಒಕ್ಕಣಿಸಲು ಬಂದೆ ನಿನಗೆ (ಮೋಹತ. ೦೦-೭). ೨. ಜಗಳ; ಕಲಹ; ವಾದ : ಧರ್ಮಾಧಿಕರಣರ್ ನಡೆಯಿಂ ನಿಮ್ಮಿರ್ವರ ಬವರಮಂ ತಿರ್ದುವಮೆಂದು ವಟವೃಕ್ಷದ ಸಮಿಪಕ್ಕೆ ವಂದು (ಶಂಕಶಂ. ೦೬೬-೨); ಬಲ್ಲಿದರೊಡನೆ ಬವರವಾದರೆ ಗೆಲಲುಂಟು ಸೋಲಲುಂಟು (ಬಸವ. ೦೩೦); ಆ ನಾರಿ ಅವಿರಳಕೋಪವ ತಾಳಿ ಮರ್ಮವ ಪೇಳಿ ಬವರವನೆಸಗಿದಳಾಗ (ಕಂಪಶಾ. ೩-೦೬೯). ೩. ಸ್ಪರ್ಧೆ; ಹುರುಡು; ಪೈಪೋಟಿ: ಅಂತೂ ನಾಗೋಲಿಯ ದಿವಸದ ಹಾಡಿನ ಬವರಕ್ಕೆ ಅನ್ನಪೂರ್ಣೆ ಹಾಜರಾದಳು (ಪಾಶಸ. ೩೩). ೪. ಕಷ್ಟ ; ತೊಂದರೆ ; ಸಂಕಟ : ಎನಗೆ ಬಂದ ಬವರಕೇಕೆ ನಿಮಗೆ ಬಂಧನ (ಪುಹಾರೀ. ಬ. ೦೩೩-೩೪೨); ಬವಗದಲಿ ಸಿಲುಕಿದುದ ಹವಣರಿದು ತೋಳ ನೆವನವರಿಯುತ ಹೇಳ್ದ ನಿಲ್ಲೆಲವೊ ! ಖೂಳ! ಅವಸರದಿ ನಿನ್ನಪ್ಪನೆಂಬುದನೆ ಮರೆದೆ (ಕಂಪ್ತ. ೦೩-೭).

**ಬವರದಲ್ಲಣ**=ಯುದ್ಧದಲ್ಲಿ ಶತ್ರುವಿಗೆ ತಲ್ಲಣವನ್ನುಂಟುಮಾಡುವವನು ; ಒಂದು ಬಿರುದಂ : ಬಾವನ್ನವೀರ ಬವರದಲ್ಲಣ ಮಾಯಿದೇವ ರಾವುತನೆಯ್ದಿದನು (ಕಂಠಾಸಾಂ. ೦೦-೬೨). [ದೇ.॥ ತೆಲು. ಬವರ]

**ಬವರ್,** ಬಮರ (ನಾ). ಕಪ್ಪುಬಣ್ಣದ ದೊಡ್ಡ ದುಂಬಿ ; ಭ್ರಮರ : "ಅಲರ್ವಕ್ಕಿ, ಬಂಡುಣಿ. ಪಱಿಮೆ. ಮಲ್ಲಿಲು. ಮೆಳಂಬಂ, ಬವರಂ, ಮುಯ್ಯೆರಡಡಿ__ಈ ೭ ಭ್ರಮರಂ" (ಕಶಸಾ. ೩೩-೦೯೬) ; ಪರಿವೃತರೇಫಲೋಪಕ್ಕೆ – ಕ್ರೇಣಿ – ಕೇಣಿ . . . . ಭ್ರಮರ – ಬವರ (ಕಮಂಪ. ೨೬೦ ಪ್ರಯೋ) ; ಸುರವರದಂದುಭಿಧ್ವನಿ ವಿರಾಜಿಸ ಬಾಂದೆಳದೊಳ್ ಮರಲ್ ಸರಿ ಪ್ರರುಚಿರಮಾಗಿ ಸೂಸೆ ಬವರಂಗಳ ಝೇಂಕೃತಿಯುತ್ತುಲುಣ್ಮಿರಲ್ . . . ಪರತರ ಸುಂದರೇಶ ಘನತೇಜದೊಳೊಂದಿದನೂರ್ಜಿತಪ್ರಭಂ (ಪಾಠಾಸ್ಕ. ೩-೭-೪೫). **ಬಮರ** : "ಬಮರಂ ಭ್ರಮರಮಕ್ಕು" (ಕಶರ. ೭೩). [ <ಸಂ. ಭ್ರಮರ ]

**ಬವರಂಗೆಯ್** (ಕ್ರಿ). ಯುದ್ಧ ಮಾಡು ; ಕಾಳಗ ಮಾಡು ; ಹೋರಾಡು : ಬವರಂಗೆಯ್ವಮ[ಪಾಠಾಂ. ಯ್ಯುದ]ಮೋಘಮೆಂಬ ಬಗೆಯಿಂ ನೀಮೆಲ್ಲಮಾದಂ ರಣೋತ್ಸವದಿಂ ನಿನ್ನೆಯ ಪೋದ ಗೋಗ್ರಹಣದಂದೇನಾದಿರ್ (ಶಂಕಶಾ. ೯-೩೬) ; ನೀವಿರ್ವರುಮಿಲ್ಲಿರ್ದು ಬವರಂಗೆಯಲ್ವೇಡ ತಕ್ಕರ ಸಮಿಪಕ್ಕೆ ಪೋಗಿ ವಿಚಾರಂಗೆಯ್ದು ಅವರ್ ಪೇಳ್ದಂತೆ ಕೇಳಿಮೆನೆ (ಶಂಕಶಂ. ೨೨೭-೭) ; ಮಾಹಿಷ್ಮತೀವಲ್ಲಭಂ ಬವರಂಗೆಯ್ದು ದಶಾನನಂಗೆ ರಣದೊಳ್ ಸೋಲ್ತೀವದಿಂ . . . ಜಿನದೀಕ್ಷೆಗೊಂಡು (ಶಂಠಾಪಪಾ. ೨-೬೩). [ ಬವರ$_1$ + ಕೆಯ್$_1$ ]

**ಬವರಂಗೊಳ್** (ಕ್ರಿ). = ಬವರಂಗೆಯ್ : ರಾಯುಮನ್ನೆಯರ್ ವಿಧವಱಿಯಲ್ಕೆ ಸಾಲದವರುಂ ಬವರಂಗೊಳಲಿರ್ದಪರ್ (ಶಕಪಿ. ೩-೪೦). [ ಬವರ$_1$ + ಕೊಳ್$_1$ ]

**ಬವರಗಂಡ** (ನಾ). ಕಾಳಗದ ಕಲಿ ; ರಣವೀರ : ಚಿಕ್ಕಕಾಟಯ್ಯ ಸರ್ಗ್ಗತನಾಗೆ ಬಳನೆತಲಾಗ ಜಯಿಸಿ ಸತ್ತ ಮುನವೆಳೆ ಕಳಿಹಿ ಬವರಗಣ್ಡ ತಟಱವುಕಯ್ಯ ಕಲ್ಲ ನಿಲ್ಲಿಸಿದ ಮುಯ್ದುನ ಪಲ್ಲಯ್ಯ (ಎಕ. V, ಶುಂಜಶಾ. ೩೦-೩ ; 1034). [ ಬವರ$_1$ + ಗಂಡ$_1$ ]

**ಬವರಗಲಿ** (ನಾ). ರಣವೀರ ; ಶೂರ : ಬವರಗಲಿ ನಾಟ್ಯಮಹಿತಂಡಿವೆರಸು ದಿವ್ಯಾನಕಂಗಳುಲಿವುತ್ತಿರೆ ದಿವ್ಯವಿಮಾನಂ ಬೆಳಗುತ್ತುತ್ಸವದಿಂದಂ ರಜತಗಿರಿಗೆ ಬಂಡತ್ತಾಗಳ್ (ತ್ರಿಪುರ. ೩೦-೦೯) ; ಬವರಗಲಿ ಬಂದೆಯ ಸಮಿರನ ಕುವರ ಮುಖ್ಯಪ್ರಾಣ ಬಾರೈ ಭುವನಪಾವನಚರಿತ ಬಾರೆಂದಪ್ಪಿದನು ರಾಮು (ಕಾಂಪಸೀ. ೩೨). [ ಬವರ$_1$ + ಕಲಿ$_2$ ]

**ಬವರಗಾರ** (ನಾ). ಯುದ್ಧ ಮಾಡುವವನು ; ಸೈನಿಕ; ಯೋಧ : ಬವರಗಾರರ ದೇವನೆನಬಹುದು . . . ಎಂದು ನೃಪ ಪೊಗಳೆ (ಕಕಾಗಶಾ. ೦೯). [ ಬವರ$_1$ + – ಗಾರ (< _ಕಾಱ) ]

**ಬವರಮುಖ** (ನಾ). ಯುದ್ಧರಂಗ ; ರಣಮುಖ : ಅಂಬುಜಾನನೆ ದನುಜೆ ಕಾಡಿದೆಡೆ ನೋಡಿತ್ತಲಂಬಿಂ ಸಹೋದರಂ ಮಾನಗಳೆದಿರ್ಪ ತಾಣಂ ಬವರಮುಖದಿ ಖಳರಱಿದ ನೆಲೆ (ಶ್ರೀರಾಮು. ೩-೪೦). [ಬವರ$_1$ + ಮುಖ]

**ಬವರಿ,** ಬಂಗರ್ಯ, ಬಗರಿ, ಬಮರಿ, ಬುಗರಿ, ಬುಂಗುರಿ, ಬೊಗರಿ, ಬೊಗರೆ, ಬೊಹರಿ, ಭಗರಿ (ನಾ). ೧. ಕಪ್ಪುಬಣ್ಣದ ದುಂಬಿ ; "ಬವರಿಯೆನಲ್ ಭ್ರಮರಿ" (ಕಾಠಿ. ೪೨) ; ತಣ್ಣೀರೊಳಿಟ್ಟಿದ ತನಿ

ಗೆಂಡಕ್ಕೆ ದೊರೆವರ್ವ ಬವರಿಗಳ ಗಾವರಕ್ಕೆಟ್ಟಿತ್ತು ಗೂಡನುಬಿಡದು . . . ನಲಿವ ಪಕ್ಕಿಗಳ್ಗೆ (ರಾಜಶೇ. ೦೦೦-೦೩). ೨. ತಿರುಗುವಿಕೆ ; ಸುತ್ತುವಿಕೆ ; ಭ್ರಮಣ : 'ಬವರಿಗೊಳು' ಪರಾ. ೩. (ಯುದ್ಧದಲ್ಲಿ) ಹೊಡೆತವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ವರ್ತುಲಾಕಾರವಾಗಿ ತಿರುಗುವ ಒಂದು ಬಗೆಯ ಪಟ್ಟು,—ವರಸೆ : "ಬವರಿ ಕರ್ತರಿಯಕ್ಕು" (ಮಂಗರಾ. ೬೩-೨೬) ; ಅಡಸಿ ಹೊಯ್ದೊಡೆ ಬವರಿಯಲಿ ಟೊಣದೌಕಿದೊಡೆ ಮಡಮುರಿಯದೊಳಹೊಕ್ಕು ಸವಡಿಮುಂದರದಂತೆ ಕೀಚಕ ಪವನಸುತರೊಪ್ಪಿದರು (ಕುಮಾವ್ಯಾ. ೩-೯೯) ; ಚಾರಿಯನುಚಾರಿಗಳ ಮಯಗತಿಯೋರೆಪೋರೆಯ ಬವರಿಗಳ ಸಂಚಾರಣೆಯಲಬ್ಬರಿಸಿ ತಿವಿದನು ರಾಘವೇಶ್ವರನ (ಕೂರಾ. ೬-೨೮-೪೯). ೪. ದಾರವನ್ನು ಸುತ್ತಿ ಆಡಿಸುವ ಗುಂಡನೆಯ ಆಟಿಕೆ ; ಭ್ರಮರಕ : ಕುಂಭಾರನ ಚಕ್ರದಂತೆ ಮಕ್ಕಳಿಟ್ಟ ಬವರಿಯಂತೆ[ಪಾಠಾಂ. ಹರಿಯಟ್ಟೆಯ ನೂಲಿನಂತೆ]ಜೂಟಣದ ಮೊಗವೆಯಂತೆ . . . ಅಳಿವುವಂತಕ್ಕುಮೆಂದು ಕಳಕಳಿಸಿ ನಕ್ಕು (ಧರ್ಮಾಮೃ. ೯-೨೩). ೫. ವರ್ತುಲಾಕಾರವಾದ ಒಂದು ಬಗೆಯ ಕರ್ಣಾಭರಣ : ಉಡೆಸುತ್ತಿನ ದಿವ್ಯಾಂಬರ ಶಿರದೊಳು ಕಡಗ ಕುಂಡಲ ಯಜ್ಞಸೂತ್ರ ಎಡನರೆ ಬವರಿ ಮುತ್ತಿನ ಚಿಂತಿ ಕುಲ್ಲಾವಿ ಬೆಡಗುಗಾಣಿಸುತಿರಲು (ಹಾಗಳು. ೨೯-೫). ೬. ಕೆನ್ನೆಯ ಮೇಲಿನ ಗುಂಗುರುಕೂದಲು; ಪನ್ನ: ವಿಟವೇಷದಿಂ ಬಂದಂ . . . ಮೊಳೆವ ತುಪ್ಪುಳುಮೀಸೆ ತೊಳಪ ಬ[ಪಾಠಾಂ. ಭ]ವರಿಗಳಿಂದ ಬೆಳಗುತಣ್ಣೆಸೆಗಳಿಗೆ ಪರಿವ ಕಣ್ಬೆಳಗಿಂದೆ (ಶಿವಸಂ. ೦೬೯-೪೩) ; ಮುಗುಳ್ನಗೆ ಮೇಳವಿಸುವ ಮುಖಪ್ರಸನ್ನತೆ ಪೀಳ ಬವರಿಯ ಗಡ್ಡವೊಪ್ಪುತ್ತಿರೆ ಜಗತ್ತ್ರಯವ ಪಾಲಿಸುವ ಮುನಿವಲ್ಲಭಂ . . . ಇಂತೆಂದಂ (ಜಗಪ್ರ. ೩-೨೬) ; ಉಬ್ಬಿ ಬೆಳೆದು ಬಾಗಿತಿಲ್ಲ ರೇಖೆಗೆ ಬಂದು ಹುಬ್ಬಿನಂತೆಸೆವಳೆಮೀಸೆ ಹುಬ್ಬು ಮೀಸೆಯ ನೋಡಿ ನಲಿವ ಬವರಿ ಕಣ್ಣ ಹಬವ ಮೂಳ್ಪನೆಲ್ಲರಿಗೆ (ಕೀಶ. ೧-೪೦) ; ಕೆಲವಾತಗಳ ಮುಖಗಳಿಗೆ ಗಡ್ಡ ಬವರಿ ಮೀಸೆ ಜುಲ್ಪಿ ಹಣೆಯ ಉಂಗುರುಗುರುಳು — ಇವುಗಳಲ್ಲಿ ಒಂದೋ ಕೆಲವೋ ಅನಿತುವೋ ಇದ್ದರೆಯೇ ಸಲಕ್ಷಣಸೌನ್ದರ್ಯ (ಮಂತ್ರಕ.೯೦-೨). ೭. ಕುದುರೆಯ ನಡಿಗೆಯ ಗತಿಗಳಲ್ಲಿ ಒಂದು ಬಗೆ ; ಮಂಡಲಾಕಾರವಾದ ನಡಗೆ : ಭ[ಬ]ವರಿ ಭಂಜನೆ ಅಳಿಲುಳಿತ ವರ ತರಹಮೆಂಬ ನವೀನಗತಿಗಳೊಳು ತನ್ನ ಮನಮ ಹಯದ ತನುಗತಿಗಳಾದಂತೆ ವಾಹಕವಿನ್ನಾಣಂಗಳಂ ತೋಜುತ (ಕುಮಾಸ್ತ್ರ. ೬-೩೦ ಪ). ೮. (?) : × × × ಬಾಣಗಾವುಣ್ಡನ ಕೆಱೆಯ ಬವರಿಯಂ ಬಾಳುವಲಿ(?)ರಾಜಂ ಅರುವತ್ತೈದು ಊರ್ಗಂ (ಮೈಶಾ. ೦೯೨೫.೯೨-೪; ?). ಬಂಗರ<sub></sub>: ೪. ಇಷ್ಟೆಲ್ಲ ಮಾತು ನಡೆಯುತ್ತಿರುವಲ್ಲಿ ಚೋಮನ ಬುದ್ಧಿ ಬಂಗರದಂತೆ 'ಓಡುತ್ತಿತ್ತು (ಚೋಮ. ೩೪೮). ಬಗರಿ : ೪. ನಾ ಬಗರಿ ಆಡಿ ಬಂದು ತಿಂತೇನಿ (ಮೇಲಮ. ೨೯). ಬಮರಿ : ೧. ಕುಳಿರ್ವೆಟ್ಟಿಜೆಯುನ ಕುವರಿಯನ್ನೆಮೊಗನೊಲವೆನಿಪಂಬುಜಕೆಱಗುವ ಬಮರಿಯಂ (ಕವಿಶ. II, ೦೦೯ ಕಾಮಾಸ್ತೋತ್ರ ಷಟ್ಪದ). ಬುಗರಿ : ೪. ನಿನ್ನ ಎದಿ ಮ್ಯಾಲ ಕುಚಾಗಳು ಬುಗರಿ ನಿಂತವು ನಿಗರಿ (ಮಂಜ್ಯಹ. ೪೩). ೯. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಎಲಚಿ : ಬುಗರಿ ಈಯಿ ಶಬರಿ ಕಾಯ ರಾಮನಿಲ್ಲಿ ಬಂದನೆ? (೧೪ಪಿಂ. ೮೦-೦೫). ೧೦. ಭ್ರಮರಕದ ಆಕಾರದ ಕಾಯಿಗಳನ್ನು ಬಿಡುವ ಒಂದು ಬಗೆಯ ಮರ : ಲಾಲ್‌ಬಾಗಿನಲ್ಲಿ ಬುಗರಿ ಮರಗಳು ಬೇಕಾದಷ್ಟಿವೆ (ಜೀಕೊ). ೧೧. ಒಂದು ಬಗೆಯ ಗಿಡ: "ಅಸ್ಕಂಧಮನಲಾ ಬುಗ[ಪಾಠಾಂ. ಗು]ರಿ" (ಮಂಗರಾ. ೩೫-೦೫). ಬುಗುರಿ : ೪. ತಿಗುರಿಯುಂ ಬುಗುರಿಯುಂ ಜಾತಿಯುಂ ಭೀತಿಯುಂ ಆಗೆ ಪರಿವಾಗಳ್ (ಧರ್ಮಾಮೃ. ೬-೧೦೪) ; ಯಾದವ ನೀ ಬಾ . . . ಚೆಂಡು ಬುಗುರಿಯನಾಡುತ ಸಣ್ಣ ಸಣ್ಣ ಗೋವಳರೊಡಗೂಡಿ (ಪುರಂದ. ೦-೦೩-೨); ಸೂರ್ಯನಿಗೆ ಒಂದು ಬಾರಿ ಬುಗುರಿಯಂತೆ ಒಂದು ಸುತ್ತು ಸುತ್ತುವುದಕ್ಕೆ ೨೫ ದಿವಸಗಳು ಬೇಕಾಗುವುದು (ಅಕಾಶ. ೦೦). ೧೦. ಹೂವರಸಿ, ಜೋಗಿಯರಳೆ, ಬುಗುರಿ (ವೃಕೋ. ೬೪-೦೫೨೦). ೧೧. ಮೇಲಿನ 'ಬುಗರಿ' ಉಲ್ಲೇಖದ 'ಮಂಗರಾ. ೩೫-೧೫' ಪ್ರಯೋಗದ ಪಾಠಾಂತರವನ್ನು ನೋಡಿ. ಬೊಗರಿ : ೪. ಮದನನ ಕೈಯೊಳಗಾಡುವ ಪೊಸ ಚಿನ್ನದ ಬೊಗರಿಯನಿನಿವಿರಿದುಂ ನಗುವಂದದೆ ಹೊಗರಿಸೆವ ಮುಕುಳ್ಮೊಲೆಯೊಪ್ಪಿದುವಾ ನೃಪನಂದನೆಗೆ (ಜಮಾ. ೦೩-೦೨): ಕೇತಕಿಯೆಸಳ ಜಜೆವ ಬೆಳ್ಳುಗುರಿಂದ ಶಾತಕುಂಭದ ಬೊಗರಿಗಳ ರೀತಿಯ ಬಲ್ಮೊಲೆಗಳ ಮೇಲೆ ನಿನ್ನಯ ನೂತನನಖರೇಖೆ ದೋಱೆ (ಕುಶಾ. ೯-೦೯೩); ಕಲ್ಪನೆಯ ಬೊಗರಿ ತುದಿಬೆರಳ ತಿಗರಿ ೬ ಆಡುತ್ತಿತ್ತು ನಿದ್ದೆ (ಅರಳು. ೪೦೦-೪). ೯. ಶಬರಿ ಇತ್ತೆಳಚಿಯಂ ರಾಮನಿದೊಮೆಲ್ಲಲಿಲ್ಲಾ ? ನಮ್ಮ ತಿನಿಸೊ ಶಬರಿಯ ಬೊಗರಿ ! (ಹಕ್ಕಿ. ೩೯-೨೨೫).

ಬೊಗರೆ : ೪. ಗಂಡುಮಕ್ಕಳು ಚೆಂಡು, ಗುಂಡು, ಬೊಗರೆ ಮೊದಲಾದ ಗುರಿ ಕಲಿಸುವ ಆಟಗಳನ್ನು ಆಡುತ್ತಾರೆ (ಕನ್ನಡಾ. ೪೬); ಅತ್ತ ಚೆಂಡಿದು ಇತ್ತ ಬೊಗರೆಯು (ಗಂ. ೪೯-೨); ಭೂಮಿಯು ಒಂದೇ ನಿಟ್ಟಿಗೆ ಒರಗಿದ ಬೊಗರೆಯಂತೆ ಡೊಂಕಾಗಿ ನಿಂತು ತಿರುಗುತ್ತದೆ (ಖಗೋಳಶಾ. ೫೬).

ಬೊಹರಿ: ೪. ಸೆಂಡು ಜಿಹಲ್ಲೆ ಬೊಹರಿಗಳಾಟದಲ್ಲಿ ಮನಗೊಂಡಾಡಿ ಬೆಳೆದು ಜವ್ವನನಾಗಿ ಬಾಳ್ವೆಯಿಲ್ಲದೆ ಕೆಟ್ಟು ಹೋದೆಯಲ್ಲಾ (ಸಮ್ಮೇ. ೦೦-೯).

ಭಗರಿ : ೪. ಕುಣಿಯೋಣು ಬಾರ . . . ಚಿಗರ್ಯಾಗಿ ತಿಗರ್ಯಾಗಿ ನಿದ್ದಿಯ ಭಗರ್ಯಾಗಿ ಗಾಳೀಗು ಹಗುರಾಗಿ (ಗಂ. ೦೨೪-೬). ೧೨. (ಆಲಂ) ವೃಷಣ : ಪುಣ್ಯಕ್ಕೆ ಹೆಣ್ಣುಮಕ್ಕಳಿಗೆ ಗೋವಿಂದಭಟ್ಟನ ಭಗರಿಯ ಅರ್ಥವಾಗಲಿಲ್ಲ (ದೀಶಹ. II. ೩೬೬). 'ಭ್ರಮರಿ' ಪರಾ.

ಬೊಗರೆಜಲ=ಸುಳಿಯಿರುವ ನೀರು ; ಜಲಾವರ್ತ : ಒಗರುಫಲ ತಿನಹೊಲ್ಲ ಬೊಗರೆಜಲ ಹೊಗಹೊಲ್ಲ ಬೊಗಳುವ ನಾಯ ನೆರೆ ಹೊಲ್ಲ ಮನೆಯಲಿ ಜಗಳವೇ ಹೊಲ್ಲ (ಸರ್ವಜ್ಞ. ೦೦೬೦).

[<ಸಂ. ಭ್ರಮರಿ./ತಮಿ. ಪವುರಿ; ತುಳು. ಬುಗುರಿ, ಬೊಗರಿ, ಬೊಗೊರಿ; ತೆಲು. ಬವರಿ, ಬವಿರಿ, ಬವಿರೆ, ಬೊಂಗರ, ಬೊಮ್ಮರ./ಮರಾ. ಭೋವರಾ, ಭೋಂವರಾ]

**ಬವರಿಗ** (ನಾ). ಭಟ; ಸೈನಿಕ ; ಯೋಧ : ಬವರಿಗರು ನೀವೆ ವಿಪ್ರವೇಷದ ಜವನಿಕೆಯ ಜಾಣಾಯ್ಲತನದಿಂದವಗಡಿಸಿ ಹೊಕ್ಕರಿಯಪದ್ವಾರದಲಿ ನೃಪಸಭೆಯ (ಕುಮಾವ್ಯಾ. ೨-೬೯); ಗಜೆಯ ಗಾಳಿಯ ಬೊಬ್ಬೆ ಬವರಿಗರ ಬಲುರಭಸ . . . ಕಿವಿ ಕಿವುಡುಗೊಂಡುದಜಾಂಡಮಂಡಲದ (ಕೂರಾ. ೬-೪೦-೩೪); ಜವದಾಡೆ ಜಲ್ಲಿಯ ಬಿಲ್ಲು ಕೈಗತ್ತಿಯ ಬವರಿಗರತಿಹರುಷದಲಿ. . . ಒಪ್ಪಿಹರು (ಕಂಸಾ. ೦೦-೦೦೬); ಬವರಿಗರಾದ ನೀವು ಬಹಳ ಜಾಣತನದಿಂದ ವಿಪ್ರವೇಷವನ್ನು ಧರಿಸಿದ್ದೀರಿ (ರಾಜಸೂ. ೦೯).

[ಬವರ$_1$+–ಇಗ]

**ಬವರಿಗಡ್ಡ**, **ಬೊಗರಿಗಡ್ಡ** (ನಾ). ಮುಖಕ್ಕೆ ಶೋಭಿಸುವಂತೆ ಕತ್ತರಿಸಿರುವ ಗಡ್ಡ : ರಂಜಿಸಿತು ಯುವ್ವನದಿರವು ನಿಮ್ಮಯ್ಯಂದಿರಿಗೆ ಕುಡಿವರಿವ ಮೀಸೆಯ ಕಪ್ಪುದೋಱುವ ಬವರಿಗಡ್ಡಗಳ. . . ಹೊಗರಿನಲಿ ಸದರಿಂದುದಿನೇಶರಂದದಲಿ (ಕೂರಾ. ೪-೦-೦); ಭಂಡಿಯಲಿ ಕುಳಿತಿರುವ ಕಪಿಯನುಗೊಂಡ ರೂಪಿಗು ಬವರಿಗಡ್ಡದ ಚಂಡಿಕೆಗು ವಾಲ್ಮೀಕಿನಿಂದಲಿ ಬೀಸಿಕೊಳುತಿರಲು (ಜಯಮಾ. ೩೬೯-೦೪) ; ಗುಜ್ಜುರೂಪನು ಬೊಜ್ಜೆ ಹೊಟ್ಟೆಯು ತನಿಗೆ ಮೋಟಾದ ಕೈಗಳು ಮಿಾಟದ ಮೀಸೆ ಬವರಿಗಡ್ಡವು ತನಿಗೆ (ಜುಜಳ. ೦೩೦). **ಬೊಗರಿಗಡ್ಡ** : ದ್ರೋಣನದ ದಿಟ್ಟಿಸುತ ಬೊಗರಿ ಗಡ್ಡವನೆಳೆದು ಭಟರಿಗಂ ನೇಮಿಸಿದ (ಕುರಂಗ. ೫೬-೪).

[ಬವರಿ+ಗಡ್ಡ$_1$./ತೆಲು. ಬವರಿಗಡ್ಡ, ಬವಿರಿಗಡ್ಡ]

**ಬವರಿಗೊಡು** (ಕ್ರಿ). (ಬುಗುರಿಯಂತೆ) ವೇಗವಾಗಿ ಸುತ್ತು,—ತಿರುಗು :

ಲೋಲಭ್ರುವುರಂ ಭ್ರುವುರೀಮಾಲೆ ತೆಱಂದಿಱಿಯೆ ತಾಂ ತೆಱಂದಿಱಿವ ವೊಲುನ್ಮೀಲಿತವುನನವುರೀಸವುಲೀಲಂ ಹರಿ ಬವರಿಗೊಟ್ಟನಾಟ್ದು ಬೆಡಂಗಿಂ (ಶಾಂತಿಪು. ೧೦-೬೩); ಒಬ್ಬರ ನೋಡುವಾಗ ಅಱುವತ್ತು ವುನುಷ್ಯರ ನೋಡುವ ಹಾಗೆ ಆಗುತ್ತಿದೆ ಶೂನ್ಯಸಿಂಹಾಸನ ಬವರಿಗೊಡುತ್ತಿದೆ ಪ್ರಾಣ ಹೆಡತಲೆಯಲ್ಲಿ ಹೋಗುತ್ತಿದೆ (ಅವಶಂ. ೨೯೬-೦೦೨೩). [ಬವರಿ+ಕೊಡು$_1$]

**ಬವರಿಗೊಳು** (ಕ್ರಿ). ಸುತ್ತಿಸು; ತಿರುಗುವಂತೆ ಮಾಡು : ವೃಕೌಘವುಂ ಬಡಿದು . . . ಪುಲ್ಲೆಯುಂ ಬವರಿಗೊಳುತ್ತೆ ಬೇಡವಡೆಯಾಡಿದುದಗ್ಗದ ಬೇಂಟೆಯುಂ (ರಾಜಶೇ. ೩-೦೦೬). [ಬವರಿ+ಕೊಳು (<ಕೊಳ್$_1$)]

**ಬವರಿದಿರುಗು, ಬೊಗರಿದಿರುಗು** (ಕ್ರಿ). ಗಿಂಡಗೆ ಸುತ್ತು; ತಿರುಗು : ನಾಯ್ಗಳುವೆರಸಿ ವುುಕ್ಕುಱಿಕ್ಕಲು ವೆಲ್ಲನೊಲೆದುಬ್ಬಿ ಪುಟನೆಗೆದು ಗಜಱಿ ಗರ್ಜಿಸಿ ವುಳಿಂದರ ವೇಲೆ ಬವರಿದಿರುಗಿ . . . ಎಲ್ಲರೊಡಲ ಕಳವಳಿಗೆಯ್ದು ಬೀದಿವರಿದೊಕ್ಕಲಿಕ್ಕಿತ್ತುರಕ್ತಸಮಿಗಂ ಕಾಡೊದಱಲು (ಹಕಶಾ. ೬-೭);ಬವರಿ ದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಧವರಿಸುವ . . . ಕರಿನಿವಹ ವತ್ಸಾಡಂಬರಂ ಮಿಕ್ಕು ಹಣ್ಣಿ ನಿಂದವು ಬಲದ ನಟ್ಟನಡುವೆ (ಸೋಕುಶ. ೩-೨೯). **ಬೊಗರಿದಿರುಗು** : ಬಿರುದಿನಂಕದ ಭಟರು ಭೋರೆಂದು ಬೊಬ್ಬೆ ಗೈದು . . . ಬೊಗಂದಿರುಗಿ ವುುತ್ತಿ ಕಾದುವಲ್ಲಿ (ರಕಾಂಶ. ೩-೦೯೬ ಪ).
[ಬವರಿ + ತಿರುಗು$_1$]

**ಬವರಿರೇಖೆ** (ನಾ). ವರ್ತುಲಾಕಾರದ ಅಲಂಕಾರದ ರೇಖೆ : ಇಂದುವಿನ ಪರಿವೇಶದಂದಕೆ ಕುಂದನೆನಿಸುವ ಬವರಿರೇಖೆಯ ಹೊಂದಿಕೆಯ ಶಿಂಗಾಡಿಯೆನೆ ಹುರಿಕೊಂಡ ವಿಾಸೆಗಳ ಚಂದದಿಂ ಲಾವಣ್ಯಮೂರ್ತಿ ಗಳೆಂದೆನಿಸಿ ಚಾಪಾಸ್ತ್ರಹಸ್ತಗಳಿಂದ ರಾಜಸದೊಡನೆ ಕುಳ್ಳಿರ್ದರು ಸತೇಜದಲಿ (ಅಜಂರಾ. ೩-೬-೩೬). [ಬವರಿ + ರೇಖೆ]

**ಬವರಿವರಿ** (ಕ್ರಿ). ವೇಗವಾಗಿ ಸುತ್ತು,–ತಿರುಗು : ತಿವಿವ ತಿರುಗುವ ಲಾಗಿಸುವ ಚಿವ್ಮುವ ನಿಬಂಧದಲಡರಿ ವುಂಡಿಸಿ . . . ಬವರಿವರಿದುಪ್ಪರಿಸಿ ಲಂಘಿಸಿ ನಿವಡಿಸಾರದಲೆಱಗಿ ಜಾಱುವ ಜವಳಿಬಿನ್ನಾಣದಲಿ ಕಾದಿದರೊಬ್ಬ ರೊಬ್ಬರಲಿ (ಅಕ್ರೂಶ. ೬-೬೩); ದುಂಡಿಪ ದಿಂಡುವಾಯ್ದು ಬವರಿವರಿವ ಚಿವ್ಮುಟಿಗೆಗೆ ಚಳಿಯದ ಕಡಿಯಾಣವುಂ ಕೈಕೊಳದ ಬಗೆಯಂ ಬಗೆಯದಂತೆ ಕಂಡು (ರಾಜಶೇ. ೬-೦೦೫); ಆಗಳೆಚ್ಚಂಬಂ ಬಗೆಗೊಳದೆ ಕನಲ್ಕೆಯಿಂ ಬಳಸಂದು ಬವರಿವರಿದು ತಱುಗಿ ತುಡುಂಕುವ ಜಾಯಿಲಂಗಳಂ ಲೆಕ್ಕಿಸದೆ (ಶಬಶಂ. ೪-೦೭೪). [ಬವರಿ + ಪರ್$_2$]

**ಬವರಿವಿಂಡು** (ನಾ). ತುಂಬಿಗಳ ಸಮೂಹ, –ಗುಂಪು: ತಂಡತಂಡದಿಂ ತೇಂಕುತ್ತೈತಂದು ವುಂದ್ಯೆಸಿದಲರ್ಜೊಂಪವುಂ ಕಂಡು ಪಿಂಡೆಱಗಿ ಪೊಸ ಜೇನನುಂಡು ಱಕ್ಕೆಯಂ ಬಿದಿರ್ಚಿ ಮೊರೆದೆಟ್ದು ವೇಣಾಂ ಮುಂಬರಿವ ಬವರಿವಿಂಡಿಂ . . . ಬನಂ ವುನಂಗೊಂಡುದು (ರಾಮಾಶ್ವ. ೩೯-೩).
[ಬವರಿ+ಪಿಂಡು$_2$]

**ಬವರಿಸು$_1$** (ಕ್ರಿ). ೧. ಯುದ್ಧಮಾಡು; ಹೋರಾಡು : ಚಿವ್ಮಿದು ದರುಣಜಲ ನಭಕೆ ಒಡಲು ಬಾಂದಣಗೊರದು ನೆತ್ತರ ಕಡಲು ಕರುಳು ಗಳೆಱಗಲು ಬಗೆಯುದೆ ಬಿಡನೆ ಬವರಿಸಿದನು ಬಲಾಧಿಕನಾ ನೃಸಿಂಹನಲಿ (ಶಿಶಾಗ. ೭-೭-೯೬). ೨. ಸ್ಪರ್ಧಿಸು; ಹುರುಡಿಸು : ಅಂಗರುಹ ಕೇಶ ವಾಲಚಯಂಗಳೆ ನಿಡಿಯುವು ಕಷಾಯವರ್ಣಂಗಳ್ ದಂತಂಗಳ್ಗೆ ಬವರಿಸುವ ದಂತಂಗಳೆ ವುಲಿನಂಗಳಾಗೆ ವರ್ಧದ್ವಿತಯಂ (ಅಕ್ಕ ಶಾ. ೩-೦೩).
[ಬವರ$_1$ + – ಇಸು$_1$]

**ಬವರಿಸು$_2$** (ಕ್ರಿ). ಅಲೆದಾಡು ; ತಿರುಗು : ಇವು ಪಱಿದೀಡಾಡಲ್ಕೆಕ್ಕುವೆ ತುಂಬಿಯ ಬಂಬಲೆಂಬ ಪಂಬಲನಾರ್ಗಂ ಬವರಿಸುವ ನೃಪನ ಕುಂತಳ ನಿವಹಂಗಳೆ ಬಹಳ ವ್ಯಾಗವುದಾವೋದಂಗಳ್ (ಸುಕುಪ. ೦೦-೩೯).
[ಬವರಿ + – ಸು$_1$]

**ಬವರಿಸು$_3$** (ಕ್ರಿ). ೧. ಸವರಿ ತೆಗೆ : ನವವಧುವ ಶಂಕೆಯಂ ಕಳೆವ ವಿದಗ್ಧ ವಿಟಂಬೊಲಲೆವ ತೆರೆಗಳ್ ಮೆಲ್ಲಂ ಬ[ಪಾಠಾಂ. ಬೆ]ವರಿಸಿ ಸೋಂಕುತ್ತುಂ ಕಳೆದುವು ಘನಕುಚಕಳಶಕುಂಕುಮಸ್ಥಾಸಕವುಂ (ಅಜಿಪು. ೦೦-೦೪೦) : "ಸುತ್ತುಗಟ್ಟು" (ಅಜಿಪು. ಕೋಶ) ; ಪವನ ಪ್ರಕ್ಷೋಭಾಂಬುಧಿರವವುನೆ ಪಟುಪಟಹಶಂಖಭೇರೀರವದೊಳ್ ಬವರಿಸಿ ಗಗನವುನಂತಾ ರವವಾವರಿ ಸಿತ್ತು ದಶದಿಶಾವಧಿವರೆಗಂ (ಮಹಾಪು. ೦೩-೦೦೬); "ಸುತ್ತುವಂತೆ ಮಾಡಂ; ತಿರುಗಿಸು" (ಮಹಾಪು. ಕೋಶ). [ಬವರು + – ಇಸು$_1$]

**ಬವರಿಸು$_4$** (ಕ್ರಿ). ಉಂಟಾಗು; ಪ್ರವರ್ತಿಸು : ಮತ್ತವಱ ವಿಪರ್ಯಯ ವೃತ್ತಿಯೆ ಬವರಿಸುಗುಮುದೀಚ್ಯಮಾರ್ಗದೊಳ್ ಪ್ರಚುರತೆಯಿಂ (ಕಾವ್ಯಾವ. ೩೨೦); ವೀರರಸ ಬವರಿಸುಗುವುುದಾರೋತ್ಸಾಹಪ್ರವೃತ್ತಿಕಾರಣಕಾರ್ಯಂ ದಾರುಣರೋಷಾವೇಶವಿಕಾರಭವಂ ರೌದ್ರಮೆಂಬ ರಸಮದು ನೆಗಟ್ಗುಂ (ಕಾವ್ಯಾವ. ೪೦೬); ಭುವನನುತಶ್ರುತದೇವಿಯನಪಯವದಿಂದೊಲಿಸಿ ಮತ್ತೆ ವೊಟೆಗಿಡರಿವರೆಂಬ ವಿಶುದ್ಧಕೀರ್ತಿ ಬವರಿಪ ಕವಿಪರವೇಷ್ಠಿಗಳ ಕರುಣ ವುಮುಗಾಭರಣಂ (ಧರ್ಮಾಮ. ೦-೨೯) ; ವಿವಿಧ ಬುದ್ಬುದನಿಕರವೇಕಾರ್ಣವದ ಕಡೆಯಲಿ ತೋಱಿ ತಮ್ಮೊಳು ಬವರಿಸಿದಡಳಿದಡೆ ವುಹಾರ್ಣವವಱಿಯ ದಂತಂತೆ . . . ಇರ್ದನವಧೂತ (ಶಭಾಗ. ೩-೪-೦೭). [? + – ಇಸು$_1$]

**ಬವರು** (ಕ್ರಿ). ಸವರಿ ತೆಗೆ : ಮುತ್ತೀನ ಗುದ್ಲೀಲಿ ಅಗೆಸ್ಯಾರು ಅರಸಣವ ಬೆಳ್ಳಿ ಮಂಕ್ರೀಗೇ ಬವರ್ಯಾರು ಅರಸಣವ ತುಂಡು ತುಂಡಾಗಿ ಕಡಿಸ್ಯಾರು (ಜುಟ್ಟಪ. ೦೬೩).

**ಬವಸ** 'ಬೆವಸಾಯ' ನೋ.

**ಬವಸಿಗ** (ನಾ). ವ್ಯವಸಾಯ ಮಾಡುವವನು; ಬೇಸಾಯಗಾರ : ಆ ಗದ್ದೆಗೆ ಹಿರಿಯ ದೇವಧರ ಫ್ಯಸಾಸರು ಕೊಟ್ಟ ಗದ್ಯಾಣ ೧ ... ಬವಸಿಗ ಕಲ್ಲಿಸೆಟ್ಟಿ ಕೊಟ್ಟ ಗದ್ಯಾಣ ೧ ಸೇನಬೋವ ಬಲದೇವಂ ಕೊಟ್ಟ ಗದ್ಯಾಣ ೧ (ಶಾಇಇ. XX,೬೨–೨೩; 1122). [ಬವಸು (<ಬೆವಸಾಯ) + – ಇಗ]

**ಬವಸು** 'ಬೆವಸಾಯ' ನೋ.

**ಬವಸೆ$_1$** 'ಬೆವಸಾಯ' ನೋ.

**ಬವಸೆ$_2$** (ನಾ). ಬಯಕೆ ; ಅಪೇಕ್ಷೆ ; ಇಚ್ಛೆ ; ಆಸಕ್ತಿ : ಜಿನದತ್ತಾದೇವಿ ದಾನಂಗುಡುವ ಬ[ಪಾಠಾಂ. ಬೆ]ವಸೆಯೊಳ್ಗಾಲವಿಾ ಕಾಲಮಾರಂ ಮನೆ ಯೊಳ್ ಸೂನಂಗಳಂ ಸಂಧಿಸದಿರಿವಿರಿವಾಚಾರದಿಂದೆಂದು ಪೃಥ್ವೀಜನಕೆಲ್ಲಂ ಸಾಱುವಂತೇನೊಗೆದುದೋ ಮಿಗೆ ವುಧ್ಯಾಹ್ನ ಶಂಖಪ್ರಣಾದಂ (ಅರ್ಹಪ್ರ. ೦-೬೩); ಭಾರತೀದೇವಿ ತನ್ನಾದರದಿಂದಂ ಪ್ರೀತಿಯಂ ಪುಟ್ಟಿಸುವ ಬೆ[ಬ]ವಸೆಯಿಂದೆಯ್ದೆ ಮಾತಾಡಿದಳ್ (ಜಾರಪು. ೬-೯೦). [<ಬಯಸು$_1$]

**ಬವಸೆಗಾಣ್** (ಕ್ರಿ). ಇಷ್ಟಪಡು ; ಇಚ್ಛಿಸು ; ಬಯಸು : ಎನ್ನಯ ಚಿತ್ತದೊಳಿನ್ನು ವಾಕೆಯಲ್ಲದೆ ಪೆಱತಾವುದುಂ ಪುಗದು ಮಾಣ್ದಿರ್ದೆಯಂ ಗುಱಿಮಾಡಿ ಲೇಸನಲ್ಲದೆ ಪೆಱತಾವುದಂ ಬವಸೆಗಾಣವು ಕಾಮನ ಹಸ್ತಶಾಖೆ ಗಳ್ (ಲೀಲಾಪ. ೩-೬೭). [ಬವಸೆ$_2$ + ಕಾಣ್]

**ಬವಸೆಗೆಯ್** 'ಬೆವಸಾಯಂಗೆಯ್' ನೋ.

**ಬವಳಿ** 'ಬವಣೆ' ನೋ.

**ಬವಳಿಕೆ** 'ಬವಣಿಗೆ' ನೋ.

**ಬವಳಿಗೊಳ್ಳು** 'ಬವಣೆಗೊಳು' ನೋ.

**ಬವಳಿವರಿ** (ಕ್ರಿ). ವರ್ತುಲಾಕಾರವಾಗಿ ಸುತ್ತು ; ತಿರುಗು : ತಾನುಂ ಹಿಡಿಂಬೆಯುಮವನ ಬರಿಯ ನರವಿನಡಗಿನಿಡುವಿನೆಡೆಯ ಕಿನ್ನೆತ್ತರೊಳೊ ವರ್ರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ಬವಳಿವರಿದುಂ ಬಾನಂ ಗುಟಿಗೆವಱಿದುಂ ಸೂಟ್ಯರಿದುಮಾಡುವಾಗಳುಭಯಬಲಂಗಳ್ ಬೆಕ್ಕಸಂ ಬಟ್ಟು ನೋಡಿ (ಪಂಪಭಾ. ೦೨-೦೩೪ ವ). [ಬವಳಿ (<ಬವಣಿ)+ ಪರ್$_2$]

**ಬವಿ** (ನಾ). ಹುಟ್ಟು ಸಾವುಗಳಲ್ಲಿ ತೊಳಲುವವನು ; ಭವಿ :

"ಬವಿ – ಭವಿ = ನರಕಜೀವಿ" (ಕರ್ಣ್ಕೋ. ೨೯) ; ಭಕಾರಕ್ಕೆ ಬಕಾರಂ – ಆರಂಭ – ಆರಂಬ, ಭವಿ – ಬವಿ, ಭಂಡ – ಬಂಡ (ಶಮದ. ೨೫೫ ಕ್ರ ಯೋ).
[<ಸಂ. ಭವಿನ್]

**ಬವಿಸು** (ಕ್ರಿ). ಹುಟ್ಟು ; ಜನ್ಮತಾಳು : ಶಿವನೆ ಬಳಿಕಂತಿದಕ್ಕೆಂತೆನು ತಲನಸೂಯೆ ವಿವರಿಸಲು ದೇವಪೂಜೆಗೆ ತಂದ ದೂರ್ವೆಯೊಳು ಬವಿಸು ವೆನೆನುತ್ತೊಡಂಬಟ್ಟು ದೂರ್ವಾಸನಾದನು ಪದ್ಮಸಂಜಾತನು (ಸೌಂದಕ. ೯–೩೦). [ಬವ$_1$ + – ಇಸು$_3$]

**ಬವ್ವ**, ಬವ್ವು, ಬವ್ವುತ (ನಾ). (ಮಕ್ಕಳ ಮಾತಿನಲ್ಲಿ) ಗುಮ್ಮ ; ಗೊಗ ಯ್ಯ (?) : ಯೌವನವೊದಗಿದಾಗ ಏನೆಂದರು ಅಪ್ಪ ಅವ್ವಣ್ಣ ನೆಂದು ನಸುನಗುತ ಗವ್ವಳಿಕೆ ವೃದ್ಧಾಪ್ಯ ಬಂದೊದಗಲು ಇವನ ಬವ್ವನ ತೆರದಲಾಡಿಪರೋ ಪ್ರಾಣಿ (ವಿರಾಕ್ಷ. ೯೮–೩). **ಬವ್ವು** : ಬವ್ವು ಬಂದಿತ್ತಲ್ಲ ರಂಗಯ್ಯ ಬವ್ವು ಬಂದಿತಲ್ಲ (ಪುರಂದ. ೯–೧೫೩ ಪಲ್ಲವಿ). **ಬವ್ವುತ**: ಹಾವು ಕೊರಳಲಿಟ್ಟು ಹುಲಿಯ ಚರ್ಮವ ಹೊದ್ದು ಸುತ್ತಲಿ ಬರು ಬರುತಿದೆ ಬವ್ವುತನ ದಂಡು (ಪುರಂದ. ೯–೧೫೩–೨). [ ? ]

**ಬವ್ವು** 'ಬವ್ವ' ನೋ.

**ಬವ್ವುತ** 'ಬವ್ವ' ನೋ.

**ಬಷ್ಕಯಣಿ** (ನಾ). ಬಹುಕಾಲದ ಮೇಲೆ ಕರು ಹಾಕಿದ ಹಸು : "ಬಷ್ಕಯಣೀ, ಪ್ರೌಢವತ್ಸಾ – ಈ ೨ ಕಡೆಗಂದಿ" (ಹಲಾಯು. ೯೩–೦೦೯); "ಚಿರಸೂತಾ – ಬಷ್ಕಯಣೀ – ೨ ಬಹುಕಾಲಕ್ಕೆ ಈಯಲಾದ ಆಕಳಿಗೂ ಈಯಲಾದರೂ ಬಹುಕಾಲ ಹೆರಿಗೆ ಇಲ್ಲದೇ ನಿಂತ ಆಕಳಿಗೂ, ಬಹುಕಾಲಕ್ಕೆ ೧ ಸಾರಿ ಯಿಯ್ಯುವ ಆಕಳಿಗೂ ಹೆಸರುಗಳು, ಕಡೆಗಂದಿನ ಆಕಳು" (ಸಿದ್ಧಾಂತಿ. ೨೯೩). [ಸಂ. ಬಷ್ಕಯಣೀ]

**ಬಷ್ಪಿಗೆ** 'ಭಾಷ್ಪಿಗೆ' ನೋ.

**ಬಸ$_1$** (ನಾ). ೧. ವಶ ; ಅಂಕೆ ; ಸ್ವಾಧೀನ : "ಬಸಂ ವಶದೊಳಂ" (ಶಬ್ದಾನು. ೮೨) ; ಆನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿ ಯೇಱುಯಂಕುಸಮಂ ಪೊಳೆಯಿಸುತ್ತಮರಸಿಯಲ್ಲಿಗೆ ವಂದು (ವಡ್ಡಾರಾ. ೩೯–೦೭) ; ಆಂ ನಡೆ ನೋಡೆ ನೋಡೆ ನೀಂ ಕರಗಿದೆಯೆಂತುಮೆನ್ನ ಸುಶರೀರದೊಳಿರ್ದುದು ಜೀವವಿಸಾಯೊಡಲ್ ಕರಗಿದುದಿಲ್ಲದೆನ್ನ ಬಸಮ ಲ್ಲೊಡಲಿಂದೆಮ ಶೋಕದೊಳ್ ಮನಂ ಕರಗಿದುದೆಯ್ದೆ ವಾರದಿರ್ಪುರ್ದೆ ಡೆಯಿಂ ಲಲಿತಾಂಗವಲ್ಲಭಾ (ಆದಿಪು. ೩–೦೯) ; ತನು ಬಸಮಲ್ತು ಮತ್ತಮಿಗೆ ಮನ್ಮಥನನ್ನನೆನಿಪ್ಪ ತನ್ನುಮಂ ನೆನೆದಪಳೊರ್ಮೆ (ಕಾದಂಬ. ೦೬೩). ೨. ಸಾಧ್ಯತೆ ; ಶಕ್ಯತೆ : ನೋಟಕ್ಕೊಡಿಂತೀ ಪೊಚ್ಚಮುಂಗಿಗುದು ರೆಯನೊಳಕೊಂಡ ಕಡಲ ಗುಣ್ಪೆಂದೆಸೆಗುಂ, ಪುಗಲೆಮಗಂ ಬಸಮಲ್ತು (ರಾಮಾಶ್ವ. ೦೨೦–೨). ೩. ತಲ್ಲೀನವಾಗಿರುವಿಕೆ ; ಪರವಶತೆ : ಮಿಸುಗುವ ಪೊಸವಸೆಯೊಳಸದಳಮೆಸೆಯೆ ಬಯಸಿ ಪೊಸಯಿಸಿದ ಪೊಸಸುಸಿಲ ಮುಸಕದ ಬಸದೊಳ್ ಬ[ಪಾಠಾಂ. ಪ]ಸದಾಗಿಯುಮುಸಿ ಯಳೆನಗಸವಸದೊಳೆ ಬೆಸೆದು ಪೋಗಿ (ಆದಿಪು. ೯–೦೨ ವ). ೪. ಪ್ರಭಾವ ; ಶಕ್ತಿ ; ಬಲ : ಕೊಳದ ತಡಿವಿಡಿದು ಬೆಳೆದೆಳದಳಿರ್ಗಳಶೋಕೆಗಳ ಲತೆಯ ಮನೆಗಳೊಳೆ ತೆಱಂಬೊಳೆವಲರ ಬಸದೆ ಸುಬ್ಬಾವಳಿಗಳ ಬಳಗದ ದನಿಗೆ ಕಿವಿಸಿ ಕಿಂಕಿಱುವೋದಳ್ (ಶಂಶಭಾ. ೩–೯) ; ಕುಸುಮಾಸ್ತ್ರಗಜಂ ಬೆಂಕೊಳೆ ಬಿಸುಟಂ ಕಡಿಕೆಯ್ಯೆ ತಪಮನೊಳಕೊಂಡಿರ್ದಿರ್ದೆಸೆಯೊಳಡಂಗದೆ ಬಸನದ ಬಸದಿಂ ತಲೆದೋಱಿ ತೋಱಿದಿರ್ಕುಮೆ ಕೊಲೆಯಂ (ಅಜಿತ. ೨–೬೭) ; ಸಸಿಯಿರ್ದ್ದಪನಮುಪಾಸೆಯು ಬಸದಿಂ ಕಾಣಲ್ಕೆ ಬಾರದಂತಿರೆ ಜನೆರಂ ವಸುಧೆಯೊಳಿರ್ದಪರಿರ್ದುಂ ಮಿಸುಕುವ ಕಲಿಗಾಲ ದೆಸಕದಿಂ ತಲೆದೋಱಿರ್ (ಧರ್ಮಾಮೃ. ೩–೦೯೯). ೫. ಅಧೀನದಲ್ಲಿರುವವನು (?) : ಶ್ರೀಮನೆನೆಗಂ ಕ್ರಿಯದ ದೇವ ಬಸದ (ಎಕ. II, ೯೭೦–೩ ; ಶ ೨. 1000).

**ಬಸಂ ಮಾಡು** = ವಶ ಮಾಡಿಕೊಳ್ಳು : ಅಧೀನದಲ್ಲಿಟ್ಟುಕೊಳ್ಳು : ಮನಮಂ ನುಡಿಯಂ ಮೆಯ್ಯಂ ತನಗೆ ಬಸಂ[ಪಾಠಾಂ. ವಶಂ] ಮಾಡಿ ಗುಪ್ತಿಗುಪ್ತಂ ಮುನಿಯೆಂಬಿನೆಗಂ ನೆಗಟ್ದಂ (ಆದಿಪು. ೬–೨೯); ಎಲ್ಲೆಡೆಗಳುಮಂ ತನ್ನಟ್ಟಿದೋಲಗಮಿಟ್ಟುಂಡಿಗೆಗಂ ಬಸಂ ಮಾಡಿದ ನನೆವಿಲ್ಲ ಬಲ್ಲಹಂ ನಿಮ್ಮಡಿ ಗಳ ಪೆಸರಂ ಪಲಂಬರಿಂ ಕೇಳ್ದು ಕೆಳೆತನಮಂ ಬಳೆಯಿಸುವಿಚ್ಚೆಯಿಂದೆನ್ನಂ ಕಳಿಪಿದಂ (ಚಂದ್ರಕಾ. ೧೬೯). 'ಬಶ' ಪರಾ. [<ಸಂ. ವಶ]

**ಬಸ$_2$** (ನಾ). ವೃಷಭ; ಎತ್ತು : "ಬಸ–ವೃಷ=ಎತ್ತು" (ಕರ್ಣ್ಕೋ. ೨೯); ವಸುಧೆಗೆ ಯುಗಭಾರವಾಂಪರೆ ಪೆಱತಿಲ್ಲ ಬಸುಱ ಮಗನೆ ದಿಟವೆಂದು ಉಸುರುವಂದದಿ ಕೆಲವುತಲಿರ್ದ ಬೆಳ್ಪಿನ ಬಸದ ಕನಸುಗಂಡಳಬಲೆ (ವರ್ಧಮ. ೦೦–೯೭). [<ಸಂ. ವೃಷ]

**ಬಸಂಗೆಡು**, ಬಸಗಿಡು, ಬಸಗೆಡು (ಕ್ರಿ). ೧. ಶಕ್ತಿಗುಂದಿರು : ಬಲಹೀನ ವಾಗು : ಬೇಟದ ಸೂಡಿಂ ಬಾಡಿ ಬಸಂಗೆಟ್ಟುದನಿಂದು ನಿಂದು ಕಾಂತಂ ಗೆಱಿಪಿ ಬಱಿಯುಟ್ಟುವೆವನಿತೊಂದು ಪೊಱ್ತು ಸೈತಿರ್ಪುದೆಂದು ಸಂಶಯಿಸಿ ದೂದುಪೋಪವೆನೆ ಮುಯ್ಯಾರಡಿಗಳೋಡೆ (ರಾಮಾಶ್ವ. ೨೨–೦೦). **ಬಸಗಿಡು** : ೧. 'ಬಸಗಿಡಿಸು' ಪರಾ. **ಬಸಗೆಡು** : ೨. ಚಿಂತೆಗೆ ಒಳಗಾಗು : ತನ್ನ ಜೊತೆಗೆ ಇರಬೇಕೆಂಬಾಸೆಗೆ ಧರ್ಮದ ಹೆಸರಿಟ್ಟು ಸತಿ ಪಡುತಿಹ ಹಿರಿಯಾಯಸ ನೋಡಿದ ರಾಘವ ಬಸಗೆಟ್ಟು (ರಾಮಾನ. ೬–೦೨). [ಬಸ$_1$+ಕೆಡು$_1$]

**ಬಸಂಗೆಯ್** (ಕ್ರಿ). ವಶಪಡಿಸಿಕೊಳ್ಳು ; ಸ್ವಾಧೀನಪಡಿಸಿಕೊಳ್ಳು : ಕೈಯು ಕೈದುಗಳ ನೀಟ್ದಾನೆ ಕುದುರೆಗಳಂ ಬಸಂಗೆಯ್ದು ಅವರೊಳ್ಕಟ್ಟರಸು ಗಳಂ ಕೈಸೆಱೆಗೊಳಲು (ಶಿಶುಮ. ೯೦). [ಬಸ$_1$+ಕೆಯ್$_1$]

**ಬಸಂಗೊಳಿಸು** (ಕ್ರಿ). = ಬಸಂಗೆಯ್ : ಪಾಳೆಯಗಾರರಂ ಕಾಳಗ ದೊಳ್ಗೆಲ್ದು ನರಸಿಂಹಪುರಂ ಮೊದಲಪ್ಪವರವರ ರಾಜ್ಯಂಗಳಂ ಬಸಂ ಗೊಳಿಸಿ ಪಲವುಂ ಬಿರುದುಗಳಂ ಪಡೆದು (ಮುರಾಕ. ೨–೯ ವ). [ಬಸ$_1$+ಕೊಳ್$_1$+—ಇಸು$_3$]

**ಬಸಂತ**, ಬಸವಂತ, ವಸವಂತ (ನಾ). ೧. ಚೈತ್ರ ಮತ್ತು ವೈಶಾಖ ಮಾಸಗಳಲ್ಲಿ ಅಂದರೆ ಮಾರ್ಚಿ ತಿಂಗಳ ಮಧ್ಯದಿಂದ ಮೇ ತಿಂಗಳವರೆಗೆ ಬರುವ ಒಂದು ಋತುವಿನ ಹೆಸರು ; ವಸಂತಮಾಸ : " ಬಸಂತಂ, ಸುಗ್ಗಿ, ಹೂವಿನ ಹಬ್ಬಂ_ಈ ೩ ವಸಂತಂ " (ಕಶಿಕಾ. ೩೯–೦೭೨) ; ಪೊಸತಲರ್ದ ಕೊಸಗು . . . ತಳಿರಿಂ ಮುಸುಕಿದ ನನೆಯಂಪೇಱಿದ ಪೊಸಮಾವುಗಳಿಂ ಬಸಂತಮೆಸೆದಪುದಿದ ಱಿಗೊಳ್ (ಆದಿಪು. ೧೦–೮೩) ; ವಿಯೋಗಿಜನಮಾರಣಯಜ್ಞಮನೊಡ್ಡಿ ಚಿರ್ದಾ ಮದನನ ವಿಪ್ರನಂತೆಸೆದುದಿಂತು ಬಸಂತದ ಬಂದ ಮಾಮರಂ (ಕುಸುಮಾವ. ೩–೩೭). ೨.(ಅಲಂ) ಸಂತೋಷಭರಿತವಾದುದು : ಆನಂದ ದಾಯಕವಾದುದು: ಧರೆ ನಿರ್ದಾಯಾದ್ಯಮೆಂದಾ ಸುಯೋಧನನಾಳುತ್ತಿರೆ ಸಂದ ಹಸ್ತಿನಪುರಂ ಸಂತಂ ಬಸಂತಂ ಕರಂ (ಶಂಶಭಾ. ೬–೩೨); ಕೆಲ್ಲಂ ಗೆಱಿಯಂದಮಿಂದು ನಮರಾವತಿಯನ್ತೆ ಬಸನ್ತವಾಗಳುಂ (ಎಕ. V. ಅರಸೀ. ೦೦೭–೩೦ ; 1161); ಸನ್ದ ಮಾಧವಪುರಂ ಸನ್ತಂ ಬಸನ್ತಂ ಕರಂ (ಎಕ. VI. ಕಡೂರು. ೦೨೬–೯೯ ; 1218). **ಬಸವಂತ** : ೩. ಓಕುಳಿ : 'ಬಸವಂತ ಗೊಳಿಸು ' ಪರಾ. **ವಸವಂತ** : ೧. ವಸವಂತನೈತರಲು ವನಗೊರಡು ಚಿಗುರ್ದಪವು (ವಚಮೋ. ೬–೩೪). ೩. ಕಸವನ ಕಣುಮೆಯಲ್ಲಿ . . . ನೆತ್ತರದ ವಸವಂತನಾಡ್ಯಾರು (ಕಾಲಿಕಂ. ೦೯೦–೩೭). ೪. [ಸಂಗೀತ] ಒಂದು ರಾಗದ ಹೆಸರು : ರಾಗ. ವಸವಂತ–ಉದಾ: ಭಯ ಭಕ್ತಿ ಕರುಣ ಕಿಂಕುರ್ವಾಣ ದಾಸೋಹ ನಯ ಭೃತ್ಯಭಾವ ಸಜ್ಜನ ಸತ್ಯ ಸಮತೆ ಸದ್ವಿನೆಯ ಗುಣನಿಷ್ಠೆ ಸಾಹಿತ್ಯ (ಶರಗೋ. ೦೩–೬೨). [<ಸಂ. ವಸಂತ]

**ಬಸಂತಕುಮರ** (ನಾ). ಒಬ್ಬಾತನ ಹೆಸರು : ಬನವಾಸಿಯಾ

ಆಪೆಸೆಟ್ಟಿಯು ಅಳಿಯ ಬಸನ್ತಕುಮರ ಎಡೆವೊಟಲ್ನಾಡ ಸಲವುಗೆಯು ಕೊಟ್ಟ ಶಾಸನವು ಪಡೆದು (ಎಕ. VIII, ಸೊರಬ. ೫೭೦-೨೬; 698). [ಬಸಂತ+ಕುಮರ$_1$ (<ಕುವರ$_2$)]

**ಬಸಂತಮಾಸ** (ನಾ). ವಸಂತಋತುವಿನ ಕಾಲ; ಮಧುಮಾಸ; ಚೈತ್ರ : ಕುಕಿಲ್ವ ಕೋಗಿಲೆ ನನೆದೋಱಿ ನುಣ್ಪೆಸೆವ ಮಾಮರನೊರ್ಮೊದಲಲ್ಲ ದುಣ್ಮುವುಣ್ಮುಲ ಪೊಸಗಾವರಂ ಪುಗಿಲೊಳೇನೆಸೆದತ್ತೊ ಬಸಂತಮಾಸದೊಳ್ (ಶಂಕಣಾ. ೨-೦೨). [ಬಸಂತ+ಮಾಸ$_1$]

**ಬಸಂತಸಮಯ** (ನಾ).= ಬಸಂತಮಾಸ: ವನಸಾಯಂತನ ಮಲ್ಲಿಕಾಮುಕುಳಕೋಟ್ಯಗ್ರಂಗಳೊಳ್ ಕೂಡೆ ನೂತನ ಸದ್ಗಂಧಿಗಳೊಳ್ ಮದಾಂಧ ಮಧುಪಂ ಪ್ರತ್ಯೇಕಮಳ್ಳಾಱುವಾಱ ನವಾರ್ದ್ರಧ್ವನಿ ಪಾಯ್ದು ಪಾಯ್ದೂಣೆಸುವಂತಾಯ್ತಾತ್ಮಸೌರಭ್ಯಭಾಜನಸರ್ವಸ್ವಮನೇಂ ಬಸಂತಸಮಯಂ ಸೌಖ್ಯೈಕಸರ್ವಸ್ವಮೋ (ಕಾಂತಿಪು. ೬-೦೨೮). [ಬಸಂತ+ಸಮಯ$_1$]

**ಬಸಕ್ಕನೆ** (ಅ). ತಕ್ಷಣ ; ಕೂಡಲೆ : ನರ್ಸಿ ಬಸಕ್ಕನೆ ಅತ್ತುಬಿಟ್ಟಳು (ಬಿತ್ತಿ. ೫೦). [ಬಸಕ್$_0$ + — ಅನೆ$_1$]

**ಬಸಗಡಿ** (ಕ್ರಿ). ಅಂಕೆ ತಪ್ಪಿಸು ; ಹತೋಟಿ ತಪ್ಪಿಸು : ಬೇವಸಕೆ ಮರುಳ್ಪನಕ್ಕೆ ಕಳವಿಂಗೆ ಕನಲ್ಗೆ ಠಕ್ಕು ಠೌಳಿಗಂ ಬಸಗಡಿದೀಟ್ವ ಕಾಟ್ಬಿಸನ ದಟ್ಟುಳಿಗಂ ಪುಗದಂತಿರಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಬಡದಂದೊಡದೇವಭೂಪರಂ (ಜಕಪು. ೩-೦೫). [ಬಸ$_1$ + ಕಡಿ$_2$]

**ಬಸಗಿಡಿಸು** (ಕ್ರಿ). ಶಕ್ತಿಗುಂದಿಸು ; ಬಲಹೀನವಾಗಿ ಮಾಡು : ಗುಡುಗುಸಿದು ಕಿವಿಯೊಡೆವ ಗುಡುಗಾಟದಾರ್ಭಟಂ, ಕಣ್‌ಗೆಡಿಸಿ ಎರ್ದೆಗಿಡಿಸಿ ಬಸಗಿಡಿವ ಮುನ್ನಂ, ಈಗಳಿನ್ನಿರದೆ ನೀವ್ ಅಡಿಯೆತ್ತಿಮೋಟ್ (ಪರ್ವಕ್ರ. ೫೬-೦೨೫೦). [ಬಸಗಿಡು (< ಬಸಂಗೆಡು) + — ಇಸು$_3$]

**ಬಸಗಿಡು** 'ಬಸಂಗೆಡು' ನೋ.

**ಬಸಗೆಡು** 'ಬಸಂಗೆಡು' ನೋ.

**ಬಸಗೈ** (ಕ್ರಿ). ವಶಮಾಡಿಕೊಳ್ಳು ; ಸ್ವಾಧೀನಪಡಿಸಿಕೊಳ್ಳು : ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ ಗಾರುವಡೆಯದೆ ತನುಮನಗಳ ತನ್ನ ಬಸಗೈದು ದೈನ್ಯವ ಕೊನರಿಸಿ ತಂಪುಗೂಳಿಪುದು (ಹರಿಭ. ೩-೨೩) ; ಉಸುರ್ಗಂಪಿಗೆರಗುವ ದುಂಬಿಯ ಗಾನವು ಪೊಸವೇದಪಾರಾಯಣವು ಹುಸಿದು ನೀನಾಡುವ ಸವಿಯೊಗುವಿನಿವಾತು ಬಸಗೈವ ಬೀಜಾಕ್ಷರವು (ಕರ್ಣಾಕ. ೨೨೦). [ಬಸ$_1$ + ಗೈ (< ಕೆಯ್$_1$)]

**ಬಸತಿ** 'ಬಸದಿ' ನೋ.

**ಬಸದನ** (ನಾ). (?) : ಸುರಯಿಯ ಮುಗುಳ್ಗಳೊಳುರುವಳಿದಳಿಪತಿ ಬರಯಿಸೆ ಬೆರಸುವ ಬಸದನ ಬೆಸನಿರೆ ಸುರತ ಸುರಭಿರಸ ಪರಿಮಳಮಿಟಾತರ ಬೆರಸಿದನರವುಗನರಸಿಯೊಳೆಸದಿರೆ (ಕರ್ಣಕ. ೬-೬). [?]

**ಬಸದಿ**, ಬಸತಿ, ಬಸ್ತಿ$_1$, ವಸದಿ, ವಸ್ತಿ$_2$ (ನಾ). [ಜೈನ] ಜೈನ ದೇವಾಲಯ ; ಜಿನಗೃಹ ; ಚೈತ್ಯಾಲಯ : "ವಸತಿಃ, ಜಿನಾಶ್ರಯಃ—ಈ ೨ ಬಸದಿಯ ಹೆಸರು" (ನಾಚಿರಾ. ೧೦೩) ; ಶಿವಮಾರನ ಬಸದಿ (ಎಕ. II, ೪೦೫-೨ ; ಸು. 810) ; ಅರಸನುಮಂ ಮಹಾದೇವಿಯುಮಂ ಕರ್ಮಕ್ಷಯಮುಮುಕ್ಷಯದಾನಮುಮಕ್ಕೆಂದು ಪರಸಿ ಪೋಱಮಟ್ಟು ಬಸದಿಗೆ ಪೋಪಾಗಳ್ (ವಡ್ಡಾರಾ. ೬೬-೨೬) ; ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯಂ ಪೇಟಿನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯಂ ಪೇಟ್ವುದೇಂ ? (ರಾಪಾಶ್ಚ. ೬-೨). ಬಸತಿ : ದೇಗುಲಂ ಬಸತಿಯೆ ಜಿನನೆ ತಾಂ ಮೇಗೆ ದೈವವು (ಜಿನಶ. ೯೯-೦೨) ; ಶಾರದೆ ನಿನ್ನೊಳು ವಿದ್ಯಾಕಲೆಗಳಿಂ ಹೋರಿ ಸೋತಂಜಿ ಬಸತಿ [ಜಾಂ. ದಿ]ಯ ಸಾರಿದಳೆನೆ ನಿನ್ನ ಜಾಣ್ಮೆಗೆ ಸೋಲದರಾರವನಿಯೊಳು (ಶಾಜಾಕಾ. ೨೫-೬೬).

**ಬಸ್ತಿ$_1$** : ತೆಂಕಲೂ ಹರಿದ ಅವಳೆ ಗಡಿ ಪಡು ಬಸ್ತಿ ಗಡಿ . . . ಯಿಂತೀ ನಾಲ್ಕುಗಡಿಯಿಂದ ಒಳಗುಳ್ಳ ಮೂವತ್ತು ಹಾನೆ ಗದ್ದೆಯನೂ ಪಾರ್ಶ್ವ ದೇವರ ಪಡಿಗೆ . . . ಬಿಟ್ಟದು (ಕಇ. I, ೯೧-೩೦: 1417) ; ಬಸ್ತಿಗಳ ನೋಡೆದು ಲಿಂಗಾಗಾರಮೆನಿಸಿ ನತಮಸ್ತಕರ ಬೌದ್ಧರಂ ಭಕ್ತರಂ ಮಾಳ್ದವರ ಮಸ್ತಕದೊಳಭಯವಿತ್ತೆಸೆದನೇಕಾಂತರಾಮಯ್ಯ (ಮರಪು. ೨೫-೫) ; ಮೇಲಣ ಬಸ್ತಿಯೊಂದು ನೋಡಲು ಉಳಿದುದರಿಂದ ಎಲ್ಲರು ಅಲ್ಲಿಗೆ ನಡೆದೆವು (ಕಕಪು. ೬-೩೨). ವಸದಿ : ಇವರ್ಗಳ್ ಜೀವಸಸನವಾಗೆ ನಾಗೂಳ ವಸದಿಗೆ ಕೊಟ್ಟ ಮ [ಣ್ಣು] (ಕೆ೨. II, ೫-೦೯ ; 859). ವಸ್ತಿ$_2$: ನರಸಿಂಹಸರಸ್ವತಿಗಳ ಜನ್ಮಸ್ಥಳವಾದ ಕಾರಂಜಾದಲ್ಲಿಯೂ ಜೈನರ ವಸ್ತಿ ಇದೆ (ಮಹಾಜಿ. ೨೨).

**ಬಸದಿಯಣುಗಿ** = (?) : ಅಸವಾಸ್ಯನನಾ ಶುಭದಿನದೊಳಗಾ ಬಸದಿಯಣುಗಿಯೊಲವಿಂ ಪಡೆವಂದದಿ ಶಿಶುವಂ ಶಶಿಮಂಡಲಲಲಿತಾನನೆಯರು ಮುದದಿಂ ಪೆತ್ತ ಒಸಗೆಗಳಾ ಪುರದೊಳಗೆಳ್ದುವು ಪಲ ಪಸುರ್ದೋರಣ ಪಳಿಗುಡಿ ಸಂತಸವಱ ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಯಜಾ. ೨-೫೯). [ < ಸಂ. ವಸತಿ./ಪ್ರಾ. ವಸಇ ]

**ಬಸದು** (ನಾ). ವಶ; ಅಂಕೆ ; ಸ್ವಾಧೀನ : ಪೊಸಸಸಿಲ ಮಸಕದ ಬಸದೊಳ್ ಬಸದಾಗಿಯುಮುಸಿಯಳೆನಗಸವಸದೊಳೆ ಬೆಸೆದು ಪೋಗಿ (ಅದಿಪು. ೯-೦೨ ವ) ; ನಸುಸೋಂಕಿಂ ಬಾಲೆಯೆರಂ ಬಸದಾಗಿಸಿ ನೆನೆದು ಸೀತೆಯಂ ರಾಮಂ ದೂರಿಸಿದಂ ಚಂದ್ರಿಕೆಯಂ ಸೇವಿಸಿದ ಚಕೋರಕ್ಕೆ ಬಾಟಿಯೇ ತುಹಿನಕಣಂ (ಶಂರಾಮಾ. ೧೦-೯೦) ; ಅಂತು ಸಹಸ್ರಲೋಚನನುಮಂ ಬಸದಾಗಿಪ ರಂಭೆಯಾಟಮುಂ . . . ಕುಮಾರನ ಮನಂಬುಗಲಾಱವೆ (ಲೀಲಾವ. ೯-೦೩೬). [ <ಬಸ$_1$ ]

**ಬಸನ** 'ಬೆಸನ$_2$' ನೋ.

**ಬಸನಗಾಱ** (ನಾ). ದುಶ್ಚಟಗಳಿಗೆ ಒಳಗಾದವನು : ಜೂಜುಗಾಱಗೆ ಠೌಳಿಗಾಱಗೆ ಬಸನಗಾಱಗೆ ಮೋಹಿಸಿದ ಅಸಿಯಳಿಗಿನ್ನು ಬೇಱುಂಟೆ ಸಾವು (ಶಂಕ್ರಶಾ. ೦೯-೦೩೯). [ ಬಸನ (< ಬೆಸನ$_2$) + — ಗಾಱ (< — ಕಾಱ) ]

**ಬಸನಿ** 'ಬೆಸನಿ' ನೋ.

**ಬಸನಿಗ** 'ಬೆಸನಿಗ' ನೋ.

**ಬಸನಿಗತನ** (ನಾ). ದುಶ್ಚಟದ ಸ್ವಭಾವವನ್ನು ಹೊಂದಿರುವಿಕೆ; ಕೆಟ್ಟ ನಡವಳಿಕೆಯನ್ನು ಹೊಂದಿರುವಿಕೆ : 'ನಾಯ್ಬಸನಿಗತನ' ಪರಾ. [ ಬಸನಿಗ ( < ಬೆಸನಿಗ ) + — ತನ ]

**ಬಸನಿಗೆ** (ನಾ). ಇನಿಯನನ್ನು ಕಾಣಲು ಆತುರವುಳ್ಳವಳು; ವಿರಹಾತುರೆ : ಬಸನಿಗೆಯರೊಸಗೆ ಮುತ್ತಿನ ಹಸಿತಂ ಬೆಳ್ವಳಗಿನುರುಳಿ ಬೆಳ್ದಿಂಗಳ ಬೆಳ್ಪಸದನಮೆನಲೇಂ ಬಿರಿದುದೊ ಪೊಸಮಲ್ಲಿಗೆ ಜಸದ ಬಿಟ್ಟು ಕುಸುಮಾಯುಧನಾ (ಲೀಲಾವ. ೯-೦೯೯). [ಬಸನಿಗ (<ಬೆಸನಿಗ) + —ಎ$_2$]

**ಬಸಬಸ** (ನಾ). ಒಂದು ಅನುಕರಣ ಶಬ್ದ: 'ಬಸಬಸನೆ' ಪರಾ.

**ಬಸಬಸನೆ** (ಅ). ಬಸಬಸ ಎಂಬ ಶಬ್ದದೊಡನೆ : ಸೋಮ ಮಾತಾಡಲಾರದೆ ಅಡ್ಡ ಬಿದ್ದು ಹೂವಯ್ಯನ ಕಾಲು ಹಿಡಿದುಕೊಂಡು ಬಸಬಸ ಬಸನೆ ಅಳತೊಡಗಿದನು (ಕಾನೂರು. ೫೩೦). [ಬಸಬಸ + — ಅನೆ$_1$]

**ಬಸಬಸಾವಣೆ** (ನಾ). ಬಸಬಸ ಎಂಬ ಶಬ್ದ : ಆ ಗಾಳಿಯ ಬಸಬಸಾವಣೆ ಮಾತ್ರ ಆ ಶಾಂತತೆಗೆ ಅಷ್ಟಿಷ್ಟು ಭಂಗ ಮಾಡುತ್ತಿತ್ತು (ಹಗಂ. ೩೯). [ < ಬಸಬಸ ]

**ಬಸಮುಟಿ**, ಬಸವಳಿ, ಬಸವಟಿ (ಕ್ರಿ). ೧. ಶಕ್ತಿಗುಂದು; ಬಲಹೀನವಾಗು : ಒರ್ವರ್ ಋಷಿಯರ್ ನೀರಟಿಕೆಯಿಂದಂ ಕರಂ ಸೇದೆಗೆಟ್ಟು ಬಸಮುಟಿದಿರ್ದೋರಂ ಕಂಡು (ವಡ್ಡಾರಾ. ೦೦೯-೯); ಅಂತೆರಡುಂ ಬಲದ

ದಟಂಗಳ್ . . . ಕಾದಿ ಬಸವಟ್ಟಿದು ಪೆಱಪಿಂಗಿ ನಿಂದಾಗಳ್ (ಶಂಕಪು. ೧೦-೬೦ ವ). ೨. ಎಚ್ಚರ ತಪ್ಪು; ಮೂರ್ಛೆಹೋಗು ಇಱಿದು ಬಸವಟ್ಟಿ[ಯದೆ] ಬೀಟ್ಕ್ವೊರನ್ ತೆಱಿ(ಱ)[ನ] ಮೆಚ್ಚಿದೊಂ (ಎಕ. XXIV. ೦೯೩-೦೨; ಸು. 885); ಬಸವಟ್ಟಿವಿನೆಗಂ ಮನಸಿಜನಿಸೆ ನಿನ್ನ ಕೆಲಕ್ಕೆ ವಂದೊಡೆನ್ನಂ ಬಿಡೆ ಬಗ್ಗಿಸೆ ಮಧುವಿಕಾರಿ ಕೋಗಿಲೆ ಕಿಸುಗಣ್ಣುವೆ ನೀಂ (ಪುಲ್ಲಕು. ೬-೬೯). ಬಸವಳಿ : ೧. ಪೊಱವಡುವ ಭೂಪಾಲನಂ ಕಂಡು ಕಂಗೆಟ್ಟು ಮುಱುಗಿ ಬಸುಱಂ ಹೊಸೆದು ಬಸವಳಿದು . . . ಮಿಡುಮಿಡನೆ ಮಿಡುಕಿತ್ತು ಪೌರಜನವು (ಶಕಕಾ. ೯-೩): ಬಸವಳಿ ದಾಳುಗಳ ದೇವನು ಮಹಾಹವದೊಳಗೆ ಪವಡಿಸಿದ (ಕುಮಾರವ್ಯಾ. ೬-೬೦). ೨. ತಲೆ ತಿರುಗಿ ತುಟಿಯೊಣಗಿ ಕಂಗಳ ಬಳೆ ಮರಳಿ ಬಸವಳಿಯೆ ಸಾರಥಿ ತೊಲಗಿಸಿದನಾ ರಥವನು (ಕುಮಾರವ್ಯಾ. ೩-೬೩): ಅಸವಸದಿ ಕಣ್ದೆಱೆದು ರಮಣನಿನ್ನೆಲ್ಲಿ ಪೋದನೊಯೆನುತ ಬಸವಳಿದಳು (ಸೌಂದಪು. ೬-೨೮). ೩. ಕುಗ್ಗು; ಕಂಸಿ : ಕುಸುಮಕುಲಕ್ಕೆ ಬಸವಳಿದು ಮಂದಾನಿಳಂಗೆ ಮದವುಡುಗಿ ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ . . . ಅಖಂಡಿತವಾಗೆ (ಗಿರಿ. ೯-೦೦೯ ವ); ಪರಶಿವಪದಧ್ಯಾನದನುಸಂಧಾನವೆಡೆವರಿದ ಶಿವಯೋಗಿಯಂತೆ ಸೌಂದರನ ಕಾಣದೆ ಪರವೆ ಬಸವಳಿದಳು (ಸೌಂದಪು. ೧೩-೦೯). ೪. ಕಷ್ಟಪಡು; ಶ್ರಮಪಡು; ಆಯಾಸಪಡು : ಮುಪ್ಪಿನ ತಂದೆಯು ಬಸವಳಿದ ಬಾಳಿಗೆ ಮತ್ತೊಂದು ಉಪಸರ್ಗ ಬಂದು ಸೇರಿಕೊಂಡಿತು (ಬಾಣಜ. ೦೯); ಬಲು ಬಳಲಿ ಬಸವಳಿದು ಬಂದೆ, ಬಾ ! (ಕಲ್ಯಾಣ. ೬೦-೦೬). ೫. ಸಾಯು; ಮರಣ ಹೊಂದು : ಜವನುಂಡು ಕಾಱುದಂದದಿನ ವಂದಿರಂ ಕೊಂದು ಬಿನವ ತಾಂ ಬಸವಳಿಯಲುಕವನಂ ವಿಮಾನದಲು ವಾಸವನ ಪುರಕವೊಯಿದರಮರಗಣಕೆಯಿರೊಲವಿಂ (ಎಕ. VIII. ಸೊರಬ. ೨೨೯-೦೨; 1810). ಬಸವಟು : ೧. ಕಾದಿ ಬಸವಟ್ಟಿದ ಸಾತ್ಯಕಿಯಂ ಭೂರಿಶ್ರವಸನ್ತ್ರಮದೊಳ್ ನೆಲಕಿಕ್ಕಿ ಗಂಟಲಂ ಮೆಟ್ಟಿ ತಲೆಯನರಿವಾಗಳ್ (ಶಂಕಪು. ೧೧-೧೧೦ ವ); ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬಿಸರಕ್ಕೆ ಬಸವಟ್ಟಿದು, ಬಾಯಾಱಿ, ಮುನ್ನೀರ ನೀರಂ ಕಂಡು, ಪಿಂಡುಗೊಂಡು ಬಂದು (ಬಾಚುನಾ. ೬-೬); ಬಸವಟ್ಟಿದನೇ ಮರುಳ್ವು ನಮ್ಮ ಕಲಿ! (ಅಜಿತಾ. ೦೯-೨೩೩). ೨. ಇದಿರಾಂತು ಕಾದಿ ಸತ್ತ್ವ ವಾಯುಸವೀರನಿಕಾಯ ಮುಮನಲ್ಲಿಯೆ ನೊಂದು ಬಸವಟ್ಟಿದಿರ್ದ ಬಲಿಭುಗ್ಬಲಪ್ರಧಾನರಂ ಕಂಡು (ಶಂಕಪು. ೨೦೩-೦೯); ಅಂತು ಬಸವಟ್ಟಿದು ಬೀಟ ಪೊಯ್ದುದುಂ ಮೂರ್ಛೆವೋದನಂ ಗತಪ್ರಾಣನೆ ಗೆತ್ತು ಮಾಯಾವಿ ಮಗುಟ ಪೋಪುದುಂ (ಶಂಚಾಕಾ. ೧೦-೨೬ ವ). ೪. ಬಱಿಯ ವಿಷಯದ ಸವಿಗೆ ಬಸವಟ್ಟದು ಸೊರ್ಕಿ ಮದ್ಯಂಱಿತು ಬೆಜ್ಜನೆ ಬೞಿತು ಮಿತಿಗಿಡುವೆನೊಮ್ಮೆ (ಗೀತಗೋ. ೬೨-೨). [ಬಸ್ಸ + ಅಟ್ಟು]

ಬಸಮುಱು (ಕ್ರಿ). ಸ್ವಾಧೀನ ತಪ್ಪು : ಕಾಲಡಿಯಿಂ ಕೊರಲ್ವರೆಗವಿಂದಗಿ ಯೆಚ್ಚ ಫಣೀಂದ್ರಸಾಯಕಂ ಕೀಲಿಸಿದಂತವೋಲ್ ಬಗಿಯ ಸುತ್ತುವುದುಂ ಬಸಮುತ್ತು ಮುಚ್ಚಿ ಕಣ್ಣಾಲಿಗಳಚ್ಚಿಗೆಟ್ಟು ಕಪಿಕೇತನನಾಗಳೆ ಮುಚ್ಚೆ ವೋಗೆ (ಶಂಚಾಕಾ. ೦೬-೦೯೯). [ಬಸ್ಸ + ಉಱು]

ಬಸಯಿಸು (ಕ್ರಿ). ವಶಪಡಿಸಿಕೊಳ್ಳು; ಹಿಡಿತದಲ್ಲಿಟ್ಟುಕೊಳ್ಳು : ಬಸಯಿಸಲಿಂಬುಕಿಯಲೊಳಪೊಯ್ಸಲೊಡಯಿಡಿಸಲ್ ಪ್ರಮೋದಮಂ ಪೊಸಯಿಸಲಾಱಿಸಲ್ ನೆರೆದುಮೊಲ್ಲದ ಚಿತ್ರಮುಂದಾತ್ರಚಿತ್ತಿಯಾ (ಶಾಂತಿಪು. ೬-೦೦೩). [ಬಸ್ಸ + — ಇಸು]

ಬಸರಾಯಿ (ನಾ). ಒಂದಂ ಬಗೆಯು ಬಾಳೆ : ಉತ್ತಮಜಾತಿಯ ಈ ಹಣ್ಣುಗಳಲ್ಲಿ 'ಬಸರಾಯಿ' ಎಂಬುದನ್ನು ನಾವು ಮರೆಯಲುಂಟೆ ? (ಅಮೃತಬು. ೬೦). [← ಮರಾ. ಬಸರಾಈ]

ಬಸರಿ, ಬಸಿರ್ಕಿ, ಬಸುರ್ಕಿ (ನಾ). ೧. ಒಂದು ಬಗೆಯ ಮರ : "ಬಸರಿ ಪರ್ಕಟೀ ಪ್ಲಕ್ಷಃ" . . . (ಶಬ್ದಕೋ. ೩೩-೨); ಅತ್ತಿಯ ಬಸರಿಯ ಗೋಳಿಯ ಮತ್ತರಳಿಯ ವಟದ ಪಣ್ಣನಡಗಂ ಜೇನಂ ಬಿತ್ತರ ಮದ್ಯಮನಾಗೆಂಬುತ್ತಮ ಸಂಸೇವ್ಯ ಮೂಲಗುಣಮಿಾಯೆಂಬುಂ (ರತ್ನಾಕರ. ೩-೦೩೨); ಬಸರಿಯಿನಶ್ವಕೋಟಿಕದಳೀ(ದು)ಮದಿಂ ಕುಱಿ ಹಸ್ತಿ ಕರ್ಣ ದಿಂದೆಸಗುವ ದಂತಿ (ಅಭಿನವ. ೯-೦೫). ಬಸಿರ್ಕಿ : ೧. ಸಂಪಗೆ ಬಸಿರಿ ನೇಱಲೆ ಲವಂ ಕೌಂಗು ಸುರಹೊನ್ನೆ ಹೊನ್ನೆಯಿಂದಾ ಬನಂ ಕಣ್ಗೆಸೆದುದು (ಶಂಬರಶಾ. ೩-೦೮). ಬಸುರ್ಕಿ : ೧. "ಪರ್ವಟಕನಲು ಬಸುರಿಯಕ್ಕು" (ಶಬ್ದಗಕಾ. ೩೬-೨೦): ಇನವಾರದಂದು ಬಸುರಿಯ ಕೊನೆಯಂ ಕೊಂಡೆಡದೆ ಬಟ್ಟದು(ಳಸಿ) ಕೆಸಱಿಸಿಳದಂ ಪೂಟ್ಟನಿತಱಿಸಿಳಾ ನರವುಲಿಯೆನಿತನಿತು ಮವಿರ್ದೆಡೆಯನಱಿಯುದಂತಿರೆ ಪೋಕುಂ (ಲೋಕೋಪ. ೯-೦೬೦); ಅರಳಿ; ಬಸುರಿಯ ಪಾಲೇಱಿದ ಕೊಂಬನುಡಿದು ಮಧುವಿಶ್ರಿತದಿಂದಾಲೋಚಿಸ ದಿರ್ಕ್ಕುವುದಾ(ದೀ)ರೇಟು ದಿನಂಬರ ಹಯಕೆ ಖಾಸವಿನಾಶಂ (ಅಶ್ವಶಾ. ೧೦-೩೨). 'ಕಬ್ಬಸಂರಿ' ಪರಾ. ೨. ಜಟಿ ಎಂಬ ವೃಕ್ಷಗಳು ಬೆಳೆದಿರುವ ಭೂಮಿ : ತನ್ನಾಳ್ವ ಮುಳ್ಳಿನಾಡ ಕೋಡೂರಲ್ಲಿ ಊರ ಮೂಡಣ ಬಸುರಿಯಂ ರಾಜಗೋವಿಂದನು ಧಾರಾಪೂರ್ವಕಂ ಮಾಡಿ ಕೊಟ್ಟರು (ಸೌಇಇ. IX-i. ೨೬೩-೦೬; 1182); ಸೆಟ್ಟಿಯ ಕೆಱಿಯ ಮೊದಲೇರಿಯಂ ಮೂಡಲು ಬಸುರಿಯ ನಟ್ಟ ಕಲ್ಲು ಗಡಿಯಾಗಿಯಾ ಗಡಿ ಬಡಲು ಗದ್ದೆ ಕಂಬ ೧೫೦ (ಎಕ. XI. ಹೊಳಲ್ಕೆ. ೦೨೯-೬೦; 1208?).

ಬಸಲ್ಕೆ, ಬಚ್ಚಲು, ಬಚ್ಚಲೆ, ಬಸಳೆ (ನಾ). ೧. (ತರಕಾರಿಯಾಗಿ ಬಳಸುವ) ಒಂದು ಬಗೆಯ ಸಸ್ಯ : "ಕಂಬಿ, ಮಹೋದಕಾ ಇದು ಬಸಲೆ" (ಶಾಕಕಾ. ೦೦೨); ಓಡ ಕುದುರೆಯ ಮೇಲೆ ಮಸಿಯ ಹಲ್ಲಣವ ಹಾಕಿ ಬಸಲೆಯ ಹಂಬ ಬಾಯಿಗೆ ಕಟ್ಟಿ (ಕೋಲಾಟಾ. ೨೯-೦೦); ಕುಪ್ಪಿ ಸೋರೆ ಬಸಲೆ ನುಗ್ಗೆ ಉಯಿಕೀರೆ ನಱುವಲು ಹಱುಹೆ ಮೊದಲಾದ ಹಸುರು ಸೊಪ್ಪು . . . ಬೇಱಿಬೇಱಿ ಕಡುವಿರಿದು ಹಸನಾಗಿ ಕೊಣಬಂ ಕಾಸಿ ತಾಳಿಸಿ ಬದನೆಗಾಯಿಗಳನಿಡುವುದು (ಸೂಪಶಾ. ೯-೩೬). ೨. ಬಾಯಿಯಲ್ಲಿ ಏಳುವ ಬೊಕ್ಕೆ,-ಗುಳ್ಳೆ; ಬಾಯಿಹುಣ್ಣು : ಕ್ರಿಮಿಕುಲಮುಬ್ಬುಗು ಮೇಱಿನೊಳಮೋಘ[ಮನೆ] ಬಾಯ ಬಸಲೆಯುಂ ಸಂಭವಿಸಂ (ಖಚುವ. ೦೩-೯೬); ಹೊಮ್ಮುಗಳು :—ಇದಂ ನಿಂಬೇಹುಳಿಯಲ್ಲಿ ತೇದು ತೊಡೆಯಲು ಬಾಯ ಬಸಲೆ(?) ಮಾಣ್ಗುಂ (ಅಶ್ವವೈ. ೯). ಬಚ್ಚಲು : ೧. 'ಕಾವುಬಚ್ಚಲು' ಪರಾ. ಬಚ್ಚಲೆ : ೧. 'ಕಾವುಬಚ್ಚಲೆ' ಪರಾ. ಬಸಳೆ : ೧. ಉಪೋದಿಕೆ (ಬಸಳೆ)ಯು ಮದನಾಶಕವು (ಕರ್ಣಾಂಗ. ೦೩೬-೬೨); ಬಸಳೆಸಪ್ಪು ಮೆಣಸಿಗೆಸಪ್ಪು ತೊಗರಿಬೇಳೆ ಕಡಲೆಬೇಳೆ . . . ಇವಿಪ್ಪು ಶೋಣಿತವಾತಕ್ಕೆ ಶಮನ (ದ್ರವ್ಯಗುಣ. ೩-೩); ಬಸಳೆಯ ಚಪ್ಪರ ನಿಜವಾಗಿಯೂ ದೊಡ್ಡದಿತ್ತು, ಅತ್ತಿತ್ತ ಬಸಳೆಯ ಬುಡಿಗಳು ನೇತಾಡಿಕೊಂಡಿದ್ದುವು (ಚಿಚುಕ. ೦೯೬). ೨. ಬಿದ್ದು ನಾಲಗೆ ಬಾಯ ಬಸಳೆಗಳೆದ್ದು ನಡೆನುಡಿಯುಡುಗಿ . . . ಹಲುಗಡಿದೆದ್ದು ಕಣ್ಣು ಗಳುಸುರು ಭೋರಿಟ್ಟುದ ಕೇಳುತಲಿಹನು ನರನೀ ಪರಿಯ ಮರಣದಲಿ (ಕೃಷ್ಣಾಕ. ೬-೬೩).

ಬಸಲೆಯ ಬಾಡು = ಬಸಲೆಯಂ ಸೊಪ್ಪಿನಿಂದ ತಯಾರಿಸಿದ ವ್ಯಂಜನ ಪದಾರ್ಥ : ಮಸಣದ ಬೂದಿಯಂ ತಳಿದರೋ ತಲೆಸೀಸಗೆ ಮಿಂಡರೊತ್ತಿಯೋಂ ಬಸಲೆಯ ಬಾಡೊ (ಸೂಕ್ತಿಸು. ೬-೯೩೧).

[ದೇ.॥ ತಮಿ. ಪಚಳ್ಳೈ, ಪಚಿರಿ, ಪಯಿರಿ, ವಚಳ್ಳೈ, ವಚಳ್ಳೈ, ವಯಲ್ಳೈ; ಮಲ. ಪಚಳ, ಪಸಳ, ವಸಳ, ವಯಲ; ತುಳು. ಬಸಲೆ, ಬಚ್ಚಲೆ, ಬಚ್ಚಳೆ; ತೆಲು. ಬಚ್ಚಲಿ]

ಬಸಲ್ಕೆ (ನಾ). (?) : ಕೊಂಡೆಗಿತ್ತಿಯರು ಎಕ್ಕಸಕ್ಕೆಯರವರವರುಗಳ

ನಕ್ಕು ಬಸಲೆಯರುಗಿದು ತಿಂಬಾ ರಕ್ಕಸಿಯರಾಶಾಪಿಶಾಚಿಯರಿಚ್ಚೆಗಾತಿಯರು (ಬಸಪು. ೪೦-೫೨). [?]

**ಬಸವ** (ನಾ). ೧. ಗೂಳಿ; ಹೋರಿ : "ಉಕ್ಷಾ, ಭದ್ರಃ . . . ಸೌರಭೇಯಃ, ಗೌಃ—ಎತ್ತುಗಳ ಹೆಸರು, ಬಸವನಿಗೂ ಹೆಸರು, ವೃಷಭ" (ಸಿದ್ಧಾಂತಿ. ೨೬೨); ಬಸವಂ ಪತ್ರಿರ್ದಡೆ ಸಂತಸದಿಂದಂ ಮಾಸಿ ಪೂಜಿಸುತೆ ಭಂಡಿಯೊಳೇಱಿಸಿ ಸುತ್ತಿ ಪೂಗಳಂ ಪಾಡಿಸುತೆ ಕೊಂಡೊಯ್ದು ಪೊಟ್ಟುವಿಮಾವಮೂರ್ಧರ್ (ಸಮಚ. ಅನುಬಂಧ ೩೮೦); ಕೊಳನಂ ತಾವರೆಯಂ ಕಳಿರ್ತ ವನಮಂ . . . ಬಸವನಂ ಬೆಳ್ಳಕ್ಕಿಯಂ . . . ದೇವರ್ಕಳಂ ತುಂಬಿಯಂ ತಿಳಿಯಲ್ ಸ್ವಪ್ನದಿ ಲೇಸು (ಸೋಮೇಶ. ೬೯); ಬಸವನ ಹಿಂದೆ ಬಾಲ (ಗಾದೆ). ೨. ಶಿವನ ವಾಹನವಾದ ನಂದಿ; ವೃಷಭ : "ಬಸವನೆನೆ ಗೊಂದೆಯೆನೆ ಚಾರುತರ ವೃಷಭನೊಳ್ವೆಸರಕ್ಕು" (ಶಬ್ದಮಂ. ೬). ೩. ದೇವತೆಗಳ ಪ್ರೀತ್ಯರ್ಥವಾಗಿ ದೇವಸ್ಥಾನಗಳಿಗೆ ಮೀಸಲು ಬಿಟ್ಟ ಗೂಳಿ,—ಹೋರಿ : ಬೀದಿಯ ಬಸವಂಗೆ ದೇಗುಲದ ಪಶುವಿಂಗೆ ಹುಟ್ಟಿದ ಕಱು ಹೋರಿಗಳು ಬಸವಗಳಪ್ಪವೆ ಲಿಂಗಮುದ್ರೆಯನೊತ್ತದನ್ನಕ್ಕರ (ಷಟ್ಸ್ಥ. ೪. ೦೯೨-೪೨೪); ದೇವರ ಹೆಸರಿನ ಮೇಲೆ ಬಿಟ್ಟ ಬಸವ, ಬಸವಿಗಳು ಕಾಲಗತಿಯನ್ನು ಹೊಂದಿದರೆ ಅವುಗಳನ್ನು ಕೊಂಬು ತಮಟೆ ವಾದ್ಯ ಸಮೇತ ತೆಗೆದುಕೊಂಡು ಹೋಗಿ ಸಮಾಧಿ ಮಾಡಿ ಅದರ ಮೇಲೆ ಗಿಡವನ್ನು ನೆಡುತ್ತಿದ್ದರು (ಹುಟ್ಟಿಹ. ೬೦). ೪. ಶಿವನ ಪ್ರಮಥಗಣದಲ್ಲಿ ಒಬ್ಬ : ಆ ಪ್ರಣವಸ್ವರೂಪರಾದ ಬಸವಾದಿ ಅಸಂಖ್ಯಾತ ಪ್ರಮಥಗಣಂಗಳು . . . ನಮಸ್ಕಾರವ ಮಾಡೆ (ಶವಪ. ೫೨-೪೫). ೫. ವೀರಶೈವಧರ್ಮಪ್ರವರ್ತಕ ಮತ್ತು ಪ್ರಸಿದ್ಧ ವಚನಕಾರನಾದ ಒಬ್ಬಾತನ ಹೆಸರು ; ಬಸವಣ್ಣ: ಬಸವನಿರವ ನಿಱಿದು . . . ಬಸವನ ಬಯಲ ವಿಚಾರವ ತಿಳಿದು ಭ್ರಮೆಯನಳಿದು ಆನು ಬದುಕಿದೆನಯ್ಯಾ (ಶೀಲಸಂ. ೪. ೨೩-೬೯); ದೇವ ಮಮಗುರು ಲಿಂಗ ಜಂಗಮದೇವಯೆನುತಂ ಬಸವನಾ ಪ್ರಭುದೇವರ ಶ್ರೀಪಾದಪದ್ಮಕ್ಕರ್ಚನೆಯ ಮಾಡಿ (ಬಸಪು. ೮-೦೩). ೬. (ಆಲಂ) ಗೂಳಿಯಂತೆ ತಿರುಗುವವನು; ಗುರಿಯಿಲ್ಲದೆ ಸಂತಿರುವವನು : (*).

**ಬಸವತೃಣ** = ದೂರ್ವೆ ; ದರ್ಭೆ (?) : ಹಸುಮಕ್ಕಳಾಗಿ ಕುಳ್ಳಿರ್ದ ಹರ ಹರಿಯಜರಿಗೆ . . . ಮೂವರೆನ್ನ ಸುತರಾಗಿಯೆನೆ ಶಶಿಧರಂ ಯಜ್ಞಕರ ದೂರ್ವಿಜಂ ದೂರ್ವಾಸವೆಸರಾದವೊಲು ಬಸವತೃಣಕೆ ಪೆಸರಿಟ್ಟವನ ಚರಣಾಂಬುಜಕ್ಕೆ ಶರಣು (ರಾಶಿಪು. ೩೩-೩೩). **ಬಸವನ ಕಣ್ಣು** = ಕಣ್ಣಿನ ಅಂತರ್ದ್ರವವನ್ನು ಶೋಧಿಸುವ ಜರಡಿಯಲ್ಲಿ ಉಂಟಾಗುವ ದೋಷ; ಕಣ್ಣಿನ ಒಂದು ಬಗೆಯ ರೋಗ : ಬಸವನ ಕಣ್ಣುಗಳು ಈಗಲೂ ಒಂದು ಕಠಿನ ಸಮಸ್ಯೆಯಾಗಿಯೇ ಉಳಿದಿದೆ (ವೈದ್ಯ. ೬೫). **ಬಸವನ ಕೊಂಬಿನ ಹುಳ** = ತಲೆಯ ಮೇಲೆ ಕೊಂಬಿನ ಆಕಾರದ ರಚನೆಯಿರುವ ಒಂದು ಬಗೆಯ ಹುಳು; ಶಂಬುಕ : (*). **ಬಸವನ ಕೋಡಿನ ಹುಳ** = ಬಸವನ ಕೊಂಬಿನ ಹುಳ : (*). **ಬಸವನ ನೋಂಪಿ** = ನಂದಿಯನ್ನು ಕುರಿತು ಆಚರಿಸುವ ವ್ರತ,—ನೇಮ : ಬಸವನ ನೋಂಪಿಯನ್ನೋಂತು ಧೈರ್ಯದಿಂದೆ ಚಿತ್ರಚಾರಿಯನೊಲಿಸಿ ಗಂಡನಸುವಂ ಪಡೆದು (ಚಿಬಸಪು. ೫೫-೪೫). **ಬಸವನ ಪೂಜೆ** = ಬಸವನ ನೋಂಪಿ : ಹಸುಮಗಳು ಚನ್ನವ್ವ ಬಸವನ ಪೂಜೆಯ ಮಾಡಿ ಬಸವಂತಿ ಎಂಬ ಮನೆ ಮಾಡಿ . . . ನಿನ್ನಯ ಪ್ರಾಣ ಪಡೆದವಳು (ಜಗೀತೆ. ೦೨೦). **ಬಸವನ ಬಿಡು, ಬಸವ ಬಿಡು** = ದೇವರ ಹೆಸರಿನಲ್ಲಿ ಹೋರಿ, ಕುದುರೆ, ಕುರಿ ಮೊದಲಾದುವುಗಳನ್ನು ಮೀಸಲಾಗಿ ಬಿಡು : ಆ ಕುದುರೆಯನ್ನು ಗೊಂಡೇನಹಳ್ಳಿಯ ಶನಿ ಮಹಾತ್ಮನ ದೇವಸ್ಥಾನಕ್ಕೆ ಬಸವನ ಬಿಟ್ಟಿದ್ದರು (ಪಟ್ಟಿರು. ೩೦೨); ನಮ್ಮ ದೇಶದಲ್ಲಿ ದೇವಸ್ಥಾನಗಳಿಗೆ ಗಂಡೆತ್ತನ್ನು 'ಬಸವ' ಬಿಡುತ್ತಾರೆ (ಜಾಶಾಸ್ತ್ರ. II, ೬೬೪). **ಬಸವನ ಮುದ್ರೆ** = ದೇವಸ್ಥಾನಗಳಿಗೆ ಮೀಸಲು ಬಿಡುವ ಮೊದಲು ಹಾಕುವ ಮುದ್ರೆ,—ಠಸ್ಸೆ : ಹೊದ್ದಿ ಮೆಲ್ಲನೆ ಸನ್ನೆ ಮಾಡಿ ಕರೆವ ಈ ಬುದ್ಧಿಯು ಒಳ್ಳೇದೇನೆ ಗೋಪಿ ಮುದ್ದು ಮಾಡಿ ಸಾಕಿ ಮಗನಿಗೆ ಬಸವನ ಮುದ್ರೆಯ ಒತ್ತಿದ್ಯೇನೆ (ಪುರಂದ. ೩-೨೦೬-೩). **ಬಸವನ ಮುದ್ರೆ ವರಹ** = (ಬಸವನ ಮುದ್ರೆಯನ್ನು ಹೊಂದಿರುವ) ಐದು ರೂಪಾಯಿ ಬೆಲೆ ಬಾಳುವ ಒಂದು ಚಿನ್ನದ ನಾಣ್ಯ : (*). **ಬಸವನ ಹುಳು** = ಬಸವನ ಕೊಂಬಿನ ಹುಳು : ಎವರ್‌ಗ್ಲೈಡ್ ಹದ್ದುಗಳು ಬಸವನ ಹುಳುಗಳನ್ನು ಮಾತ್ರ ತಿನ್ನುತ್ತವೆ (ಪಕ್ಷಿ. ೩೨); ಅವಳು ಹೋದ ಜನ್ಮದಲ್ಲಿ ಬಸವನ ಹುಳು ಆಗಿದ್ದಿರಬೇಕು ! (ಶಾಂತಲಾ. ೨೪೪). [< ಸಂ. ವೃಷಭ / ತೆಲು. ಬಸವ]

**ಬಸವಂತ** 'ಬಸಂತ' ನೋ.

**ಬಸವಂತಕಲ್ಲು** (ನಾ). ಬಸವನ ಗುರುತಿರುವ ಕಲ್ಲು (?) : ಅಲ್ಲಿ ಬಹ ವರ್ತ್ತನೆಯನು ತುಳುವೇಶ್ವರದೇವರಿಗೆ ನಡೆಸಿ ಬಹುದು ದೇವರ ಬಸವಂತ ಕಲ್ಲ ಮುಂದೆ ನಾಲ್ವರು ನಾಲ್ವಾಡರು . . . ನಡಸುವಂಥಾ ಸೀಮೆ ಸ್ವಾಮ್ಯಉ (ಸೌಇಇ. IX-ii, ೪೫೬-೦೪; 1456). [ಬಸವಂತ (< ಬಸವ) + ಕಲ್ಲು (<ಕಲ್$_3$)]

**ಬಸವಂತಗೊಳಿಸು** (ಕ್ರಿ). ಓಕುಳಿ ಎರಚು : ಜೋಡು ಜರಿದು ಬಿತ್ತರಿಸಿದುವಂಬುಗಳು ಮೆಯ್ಯೊಳು ಬಿಸಿನೆತ್ತರ ಬಸವಂತಗೊಳಿಸಿ (ಮೋಹತ. ೩೮-೫೨). [ಬಸವಂತ (<ಬಸಂತ) + ಕೊಳ್$_1$ + —ಇಸು$_3$]

**ಬಸವಂತಿ** (ನಾ). ೧. ಬಸವಿ; ಸೂಳೆ : ನೀನು ಬಸವಂತಿ ಇರುವೆ. ಯಾರಿಂದ ಆಯಿತು ಹೇಳು . . .ಎಂದು ಬೆದರಿಕೆ ಹಾಕಿದರು (ಹೊಲಮ. ೬೦). ೨. (?) : ಹಸುಮಗಳು ಚನ್ನವ್ವ ಬಸವನ ಪೂಜೆಯ ಮಾಡಿ ಬಸವಂತಿ ಎಂಬ ಮನೆ ಮಾಡಿ . . . ಚನ್ನವ್ವ ನಿನ್ನಯ ಪ್ರಾಣ ಪಡೆದವಳು (ಜಗೀತೆ. ೦೨೦). [< ಬಸವಿ ?]

**ಬಸವಡು** (ಕ್ರಿ). ವಶವಾಗು ; ಅಧೀನವಾಗು : ಬಸವಟ್ಟುದು ಚೆನ್ನಪಟ್ಟಣಂ ಪೊಸತಾಂಧ್ರಂಗೆ ಪೊದಟ್ಟುದಿಟ್ಟೞಂ ಅಸಿದಾದುದವಂಗೆ ಮಂಗಲಂ ಬೆಸದಿಂ ಪಿಂಗಿತು ನಾಗಮಂಗಲಂ (ಚಕಪ. ೨-೬೬). [ಬಸ್$_1$ + ಪಡು$_1$]

**ಬಸವಡೆ** (ಕ್ರಿ). = ಬಸವಡು : ತುರುಕರ ಬಸವಡೆದಾ ದುರ್ಗವಿಟ್ಟೊಡೆ ಪಿರಿದಾಯಸ ಮುಂದಕಹುದು (ಕಂಪವಿ. ೦೬-೩೩). [ಬಸ್$_1$ + ಪಡೆ$_1$]

**ಬಸವಣ** 'ಬಸವಣ್ಣ' ನೋ.

**ಬಸವಣ್ಣ, ಬಸವಣ** (ನಾ). ೧. ಎತ್ತು; ಹೋರಿ: ಬಸವಣ್ಣ ಭೂಮಿ ಉಳುತ್ತಾನೆ, ಭೂಮಿತಾಯಿ ಬೆಳೆ ಕೊಡುತ್ತಾಳೆ (ಕಪಪು. ೨-೮೨); ನಮ್ಮೂರಿನ ರೈತರ ಮೇಲೆ ಬೀಳುವುದಕ್ಕಿದ್ದ ಅನೇಕ ವಿಧವಾದ ಕತ್ತಿಯ ಪೆಟ್ಟುಗಳಿಗೆ ಕಾಲುನಡೆಯು ಬಲವಾದ ಗುರಾಣಿಯಾಗಿದ್ದಿತು. ಆದ್ದರಿಂದಲೇ ಕೆಟ್ಟರೂ ಬಸವಣ್ಣನಿಂದ, ಬದುಕಿದರೂ ಬಸವಣ್ಣನಿಂದ ಎಂದು ಅನ್ನುತ್ತಿದ್ದರು (ಹುಟ್ಟಿಹ. ೬೦). ೨. ಶಿವನ ವಾಹನ ; ನಂದಿ : ನಮ್ಮ ಮನೆಯ ಹತ್ತಿರ ಬಸವಣ್ಣನ ದೊಡ್ಡ ಗುಡಿ ಇದೆ (ರೂಢಿ). ೩. ವೀರಶೈವಧರ್ಮಪ್ರವರ್ತಕನೂ ಪ್ರಸಿದ್ಧ ವಚನಕಾರನೂ ಆದ ಒಬ್ಬಾತನ ಹೆಸರು : ಬಸವಣ್ಣನ ಮನೆಯ ಮಗಳಾಗಿ ಬದುಕಿದೆನಾಗಿ ತನ್ನ ಕರುಣಭಕ್ತಿ ಪ್ರಸಾದವ ಕೊಟ್ಟನು (ಮುಹಾದೇ. ಪಿ. ೬೮-೦೯೮); ಎನ್ನುವಂ ಪದುಳದೊಳಿರಿಸಿ ಪೊರೆ . . . ಕಲಿಯುಗದೆರಡನೆಯ ಮುಕ್ಕಣ್ಣ ಬಸವಣ್ಣ (ಬಸಪು. ೦-೮). ಬಸವಣ : ೩. ಸೊಕ್ಕಿ ಬಸವಣನೆನ್ನ ಮೂರಿಗೆ[ಪಾಠಾಂ. ಮಾತಿಗೆ] ಸಿಕ್ಕಿದನಲಾ ಎನುತ (ಬಸಪು. ೩೦-೦೩). [ಬಸವ + ಅಣ್ಣ$_1$]

**ಬಸವನ ಗಿಡ** (ನಾ). ಒಂದು ಬಗೆಯ ಮರ ; ನಂದಿ : "ತುನ್ನಃ

. . . ನಂದಿವೃಕ್ಷೇ– ೬ ನಂದಿ ಎಂಬುವ ಮರದ ಹೆಸರು, ಬಸವನ ಗಿಡ" (ಸಿದ್ಧಾಂತಿ. ೧೯೦). [< ಬಸವ+ಗಿಡ ( < ಗಿಡು)]

**ಬಸವನ ಪತ್ರೆ** (ನಾ). ಗರಿಕೆ. ಬಿಲ್ವ ಮುಂತಾದ ಎಲೆ ; ಎಸಳು : ಕಣದಲ್ಲಿ 'ಶಂಕರಗಂಡ'ನ ರಾಸಿಯ ಸತ್ತಲೂ . . . ಬಸವನ ಪತ್ರೆಯ ಬಣವೆಗಳ ಕೋಟೆಕಾವಲು (ಬೆಳಬು. ೨೩೬). [< ಬಸವ + ಪತ್ರೆ]

**ಬಸವನ ಪಾದ** (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಬಸವನ ಪಾದ, ಕುಳಿಆಚಲು (ವೃ ಶಿಗ. ೦೨–೨೦೯); ಬಸವನ ಪಾದ ಗಂಟೆಹೂ. ತುಂಬೆ ಮತ್ತು ಚೆಂಡುಹೂಗಳನ್ನು ಅಂದವಾಗಿ ಜೋಡಿಸಿದ್ದರು (ಕಕಥ. IV, ೩೬). ೨. ಒಂದು ಬಗೆಯ ಮರ : ಬಸವನ ಪಾದ, ವಿಸ್ತಾರವಾಗಿ ಬೆಳೆಯುತ್ತದೆ. ಕಟ್ಟಿಗೆಯು ಕೆಲಸಕ್ಕೆ ಬರುವುದಿಲ್ಲ (ಕಭಾಗ. ೪೪). ೩. ಒಂದು ಬಗೆಯ ಜೋಳ : ಬಸವನ ಪಾದ, ಫುಲ್ಗರ . . . ಕೊಡಮೂಕನ ಜೋಳ ಈ ಯೆಂಟು ಜಾತಿ (ಜೋಳ)ಗಳನ್ನು . . . ಬಿತ್ತುವರು (ಕಭಾಗ. ೨೬೦). [< ಬಸವ+ಪಾದ]

**ಬಸವನ ಸುಳಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ಇರುವಂತಿಗೆ ಬಸವನ ಸುಳಿ ಪರಿಮಳಿಸುವ ಪಚ್ಚೆದವನ . . . ಬಂದುಗೆ ಪರಿಪರಿಯ ಸುಗಂಧಕುಸುಮದಳಕುಳವಿಕರ್ಸುಂ (ಹರಿಶ್ಚಾರ. ೬–೯೬). [< ಬಸವ + ಸುಳಿ$_2$ (< ಸುಟ್ಟಿ)]

**ಬಸವನ ಹಳ್ಳಿ** (ನಾ). ಒಂದು ಊರಿನ ಹೆಸರು : ಮಣ್ಣಂ ಬಳಸಿದ ಪ್ರಭುಗಳ್ ಪೆರ್ಮ್ಮಾಡಿಗಾಮುಣ್ಣ ಮುಗುಳಿಯ ನಾಗಯ್ಯ ಬಸವನ ಹಳ್ಳಿಯ ಬಸವಯ್ಯ (ಎಕ.XV, ಬೇಲೂರು. ೩೦೮–೦೦; 971). ▶ ಇದು 'ಬಸವನ ಪಳ್ಳಿ' ಎಂಬುದರ ಅಪಲಿಖಿತವಿರಬಹುದೆ? [< ಬಸವ+ಹಳ್ಳಿ (< ಪಳ್ಳಿ$_1$)]

**ಬಸವಯ್ಯ** (ನಾ). ಒಬ್ಬಾತನ ಹೆಸರು: ಪೊಙ್ಕುನ್ದದ ಬಾರಾನ್ದರವಯ್ಯ ತಗಡೂರ ಕೆಳೆಯ ಕಾಳೆಗದೊಳೆ ಬಸವಯ್ಯನ ಮುನ್ದೆ ಕಾದಿ ಸತ್ತು ಸಗ್ಗೆಯದ (ಎಕ. X, ಬಂಗಾರ್. ೪೪–೬; ಸು. 950); ಮಣ್ಣಂ ಬಳಸಿದ ಪ್ರಭುಗಳ್ ಪೆರ್ಮ್ಮಾಡಿಗಾಮುಣ್ಡ ಮುಗುಳಿಯ ನಾಗಯ್ಯ ಬಸವನ ಹಳ್ಳಿಯ ಬಸವಯ್ಯ (ಎಕ. XV, ಬೇಲೂರು. ೩೦೮–೦೦ ; 971). [ ಬಸವ + ಅಯ್ಯ$_{61}$ ]

**ಬಸವಸೆಟ್ಟಿ** (ನಾ). ಒಬ್ಬಾತನ ಹೆಸರು: ಬಸವಸೆಟ್ಟಿಯ ಮಗಂ ಚಬ್ಬಿಸೆಟ್ಟಿ (ಎಕ. IX, ದೊಡ್ಡಬ. ೯–೬; 918); ನಲ್ಲಮುರುಗಸೆಟ್ಟಿಯ ದೊಗ್ಗಬ್ಬೆಯ ಮಗಂ ಸುಪುತ್ರಂ ಪುಟ್ಟಿದ ಬಸವಸೆಟ್ಟಿ (ಎಕ. III (R), ಹೆಗ್ಗಡ. ೫೯–೯; 1020). [ಬಸವ + ಸೆಟ್ಟಿ]

**ಬಸವಳಿ** 'ಬಸವುಳಿ' ನೋ.

**ಬಸವಳಿಸು** (ಕ್ರಿ). ಆಯಾಸಗೊಳ್ಳುವಂತೆ ಮಾಡು; ಬಳಲಿಸು; ದಣಿಸು: ಬಸವಳಿಸದೆ . . . ಹಸಗೆಡಿಸದೆ ಹುದುಗಿಸದೆ ಬಸಿಚಿರ್ಪೊಳು ಬಂದ ಪೆಣ್ಮಕ್ಕಳ ಮಜುಕವ ಸೊಸೆಯರೆಡೆಯೊಳಿಸಗುವುದು (ಹರಿಬ. ೪–೨೫); ವಿಚಾರ ತರಂಗಗಳು ಮುತ್ತಿ ಬಸವಳಿಸಿದವು (ಜಿಂದಹೇ. ೬೬). [ಬಸವಳಿ (< ಬಸವುಳಿ) + –ಸು$_1$]

**ಬಸವಳಿ** 'ಬಸವುಳಿ' ನೋ.

**ಬಸವಿ** (ನಾ). ೧. ದೇವರ ಹೆಸರಿನಲ್ಲಿ ದೇವಾಲಯದ ಸೇವೆಗಾಗಿ ಮೀಸಲು ಬಿಟ್ಟ ಹುಡುಗಿ; ▶ ತಂದೆತಾಯಿಗಳು ತಮಗೆ ಒದಗಿದ ಯಾವುದೋ ದುರ್ಭರಸಂದರ್ಭದಲ್ಲಿ ತಮ್ಮ ಮಗಳನ್ನು ದೇವರಿಗೆ ಅರ್ಪಿಸುವುದಾಗಿ ಹರಕೆ ಹೊತ್ತು ಚಿಕ್ಕಂದಿನಲ್ಲಿಯೇ ಮೀಸಲು ಬಿಡುತ್ತಾರೆ. ಈ ದೇವದಾಸಿ ಸಂಪ್ರದಾಯವು ಪ್ರಾಚೀನವಾದುದು. ಕೆಲವು ಕಡೆ ಇಂತಹವರನ್ನು 'ದೇವದಾಸಿ'ಯರೆಂದೂ 'ಜೋಗಿತಿ'ಯರೆಂದೂ ಕರೆಯುತ್ತಾರೆ. ಇಂದು ಈ ಪದ್ಧತಿಯು ಶಿಥಿಲಗೊಂಡು ತನ್ನ ಗೌರವವನ್ನು ಕಳೆದುಕೊಂಡು ಹೀನಾಯದ ಸ್ಥಿತಿಗೆ ಇಳಿದಿರುವುದನ್ನು ಕಾಣಬಹುದು : ಹಾಡುವ ಮಹಾದೇವಿ ತಾಳದ ಮಾಕಜ್ಜ ದೇವರ ಬಸವಿಯರು (ಎಕ. XII, ಗುಬ್ಬಿ. ೨೯–೯೬; 1470); ಬಸವಿಯರೊಳು ಪಾತಕಿನಿಯರೊಳು ಮತ್ತಸತಿಯರೊಳು ಕೆಳೆಗೊಳದೆ ಪೊಸತಿಲ ಪೊಱಗಡಿಯಿಡದೊಳ್ಳೆಂದಿರ ಜಸವಳ್ಳ ಜಗವ ಪರ್ಬುವುದು (ಹರಿಬ. ೪–೯೩). ೨. ಸೂಳೆ; ವೇಶ್ಯೆ : ಇದ್ದೊಬ್ಬ ಮಗಳು ಊರ ಬಸವಿಯಾದಳು (ಸಕದಾ. II, ೯೩೬); ನಾಕೇ ನಾಕು ದಿವಸದಾಗೆ ಈ ಕಾಸಿಂಬೀನು ಬಸವಿ ಆಗಿ, ಬಿಕಾರಿ ಆಗಿ ರೋಗದಿಂದ ಸಾಯ್ತಾಳಲ್ಲ ಅಂತ ಎದೆ ಮಿಡುಕಿತು (ಬಂಗಾ. ೦೬೯). 'ಊರುಬಸವಿ', 'ಬೀದಿಬಸವಿ' ಪರಾ. ೩. ದೇವರ ಹೆಸರಿನಲ್ಲಿ ಮೀಸಲು ಬಿಟ್ಟ ಹಸು: ಬಸವಿ ಬಸವನ ಕೊಂದ ಪಾಪಕೆ ಹೋಹರು ಯಂದು ಬರದ ಸಾಸನ (ಎಕ. IX, ಕನ್ಕ ಪ. ೬೬–೨೯; 1661); ದೇವರ ಹೆಸರಿನ ಮೇಲೆ ಬಿಟ್ಟ ಬಸವ, ಬಸವಿಗಳು ಕಾಲಗತಿಯನ್ನು ಹೊಂದಿದರೆ ಅವುಗಳನ್ನು ಕೊಂಬು ತಮಟೆ ವಾದ್ಯಸಮೇತ ತೆಗೆದುಕೊಂಡು ಹೋಗಿ ಸಮಾಧಿ ಮಾಡಿ ಅದರ ಮೇಲೆ ಗಿಡವನ್ನು ನೆಡುತ್ತಿದ್ದರು (ಹುಟ್ಟಿಹ. ೬೦).

**ಬಸವಿ ಬಿಡು** = ಅವಿವಾಹಿತತರುಣಿಯನ್ನು ದೇವರ ಸೇವೆಗಾಗಿ ಮೀಸಲಾಗಿಡು; ದೇವದಾಸಿಯನ್ನಾಗಿ ಮಾಡು : ನಿನ್ನನ್ನು ಬಸವಿ ಬಿಡುವುದಾಗಿ ಹೇಳಿದ್ದೇನೆ (ದೇವಹಂ. ೦೦೬).

[ಬಸವ + –ಇ$_2$./ ತಮಿ. ವಚವಿ; ತೆಲು. ಬಸಿವಿ]

**ಬಸವಿತ್ತಿ** (ನಾ). = ಬಸವಿ ೧ : ಆ ಮಠವ ಬೋಹರಿಸುವ ಬಸವಿತ್ತಿಯ ಜನ ಒಂದಕ್ಕಂ ವರಿಸ ಒ[ಂದ]ಕ್ಕಂ ಅಕ್ಕಿ ಮೂಡೆ ಎರಡೂ ಹಾನೆ ಹತ್ತು (ಕೌಇಇ. IX-ii, ೪೦೬–೩೬; 1378). [ಬಸವ + – ಇತ್ತಿ]

**ಬಸವೆ** (ನಾ). = ಬಸವಿ ೧ : ಇವಳು ಬೈತಲೆ ಕಲಕದಂತೆ ತಿದ್ದಿಕೊಳುತ್ತ ಮಿಮಳು ಹಗಲೆಲ್ಲ ತೊಳೆವುತ ತೀಡಿಕೊಳ್ಳುವಳು ಸೂಳೆ ಬಸವೆಯ ತೆರದೆ (ಮಲ್ಲಿಕ. ೨–೨೦); ಈ ಹನುಮಂತದೇವರಿಗೂ ಅನೇಕ ಕಸಬೆಯರೂ, ಬಸವೆಯರೂ ತಾಳಿಯನ್ನು ಕಟ್ಟಿಕೊಳ್ಳುತ್ತಾರೆ (ಕನ್ನಜಾ. ೯೦); ಬೀದಿಬೀದಿಗೆ ಬಸವೇರಲ್ಲ ಕಸಬೇರೋ ಅವರು ನಾಯಿಪಾಡಿನ ನರಕದ ಕಿಂಡಿ ಅವರ ತವರೂರು (ಅರಳು. ೨೭೯–೦೯). [ಬಸವ + –ಎ$_2$]

**ಬಸವೇಱು** (ಕ್ರಿ). ಪರವಶತೆಯು ಅಧಿಕವಾಗು : ಎಟ್ಟು ನಿಂದೆಣೆಗೊಂಡು ಪೊರ್ದಿ ಕೈಲಾಗಿತ್ತು ತೋಳ್ತೋಳ್ಗಳ ತೊಡಕಿನೊಳ್ ಬಾಟ್ಟಿ ಸೊಗಕೆ ಮೆಯ್ಯಬಸವೇಱಿದಂತೆ ಪೊದಟ್ಟು ಕದುಬುದಾಳ್ತುದ್ದುವುದು (ಚಳಿವ. ೬–೦೫೬ ಸಾಂಗತ್ಯ). [ಬಸ$_1$ + ಏಱು$_1$ (< ಏಱ್$_1$)]

**ಬಸಳೆ** 'ಬಸಲೆ$_1$' ನೋ.

**ಬಸಿ$_1$** (ಕ್ರಿ). ಬಸಿದು$_1$ (ಭೂತಕೃ). ೧. ಒಸರು; ಸ್ರವಿಸು; ಜಿನುಗು: ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಟ್ಟು ನಾಣ ಪೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬೆಚ್ಚನೆ ಬಸಿವಿಂದುಕಾಂತಕರಸಂಕುಳವೊಯ್ಯನವುಂಕೆ ಸೋಂಕೆ (ಆದಿಪು. ೪–೯೯). ಬಸಿಯೆ ಜಳಬಿಂದು ಕೇಶಪ್ರಸರಮನೆಡಗೆಯ್ಯೊಳಡಸಿ ಪಿಡಿದೆಸೆದುದು ಕಾಱಿಸುವಪೊಲಂಗಜನಸಿಯುಬ್ಬಸಮಾಗಿರೆ ಪೀರ್ದ ವಿರಹಿಜನಜೀವನಮಂ (೦೬೦ಶವ. ೦೪–೬) ; ಆ ಘರ್ಮದಿಂ ಬಸಿವಾಗು ಪಣೆಗೊಂಡು ಪತ್ರಿದಳಕಾನೀಕಂ . . . ಚೆಲ್ವಂ ಬೀಱಿತ್ತು (ಕಂಸುವಿಜಾ. ೦೦–೦೫೦) ; ೨. ಪಾತ್ರೆಯನ್ನು ನಿಧಾನವಾಗಿ ಬಗ್ಗಿಸಿ ಅದರಲ್ಲಿರುವ ಬೆಂದ ಅನ್ನ, ತೊಳೆದ ಅಕ್ಕಿ ಹಾಗೂ ತರಕಾರಿ ಮುಂತಾದುವುಗಳು ತಳದಲ್ಲೇ ನಿಂತು ಮೇಲಿನ ಗಂಜಿ, ನೀರು ಮುಂತಾದುವನ್ನು ಸೋರಿ ಹೋಗುವಂತೆ ಮಾಡು : "ಬಸಿ–ಗಲನೇ (ಬಸಿಯು), ಶಾತ, (ಹರಿತ ಮಾಡು), ದಂಡಮಧ್ಯಯೋಃ (ದಂಡಿಗೆಯ ಮಧ್ಯಭಾಗ)" (ಕವಿಭಾ); ಚಳಿಸಿ ರಾಜಾನ್ನದಕ್ಕಿಯನು . . . ಅಕ್ಕಿಗಚ್ಚಂ ಬಸಿದು (ಸೂಪಶಾ. ೩–೨) ;

ಪಾತ್ರೆ ತುಂಬ ನೀರಿಟ್ಟು ಅಕ್ಕಿ ಹಾಕಿ ಬೆಂದ ಅನಂತರ ನೀರನ್ನೆಲ್ಲ ಬಸಿದು ತೆಗೆಯುವುದು ಸಾಮಾನ್ಯವಾಗಿ ಅನ್ನ ತಯಾರಿಸುವ ವಿಧಾನವಾಗಿದೆ (ಅಡುಗೆ. ೬೪). ೩. ಧಾರೆಯಾಗಿ ಬೀಳು ; ಸುರಿ : ಪೆರ್ಗೆಸಱಿಗಿರ್ಪುದು ಬಟ್ಟೆ ಪೋದವಿದಱೊಳ್ ಪೆರ್ಬಂದಿಗಳ್ ನೆತ್ತರುಂ ಬಸಿವುತ್ತಿರ್ಪುದು ಪೋದ ಎಕ್ಕ ಮಾಱಿಯುಂ ಪುಲ್ಲಟ್ಟೆಯೊಳ್ ಪುಲ್ಲೆಗಳ್ (ಕಾದಂಪೂ. ೦೫೬); ಬಸಿವ ಸೊರ್ಕಿಂದಾನೆಗಳ ವಾಜಿವದನದಿಂದೊಸರ್ವ ಲಾಲಾಜಲದಿಂದ ಬೆಸವುಕ್ಕಿ ಳೊಗುವ ವ್ಯೈಬೆವರಿಂದಾ ಬೀದಿ ಕೆಸರ್ವಡೆದಿಹುದನವರತ (ಕುರಾಸಾ. ೪-೦೦೬). ೪. ಬೆವರು ಸುರಿ : ರಿಪುಬಂದಿಕಾಱನೊಳೇಱ ಸೂಱಿಗೆ ಬಂದು ಬಸಿವುತ ಹೋದರನಿಬರು ಬೈದು ರವಿಸುತನ (ಕುವ್ಯಾದ್ರೋ. ೬-೩೦); ಭೂ ಸುರರು ಮಧ್ಯಾಹ್ನಕಾಲದಲಿ ಹಸಿದು ಬಸಿದು ಬಂದರೆ ಮನೆಗೆ ಬೇಸತ್ತು ನಮಗೆ ಗತಿಯಿಲ್ಲ ಹೋಗೆಂದು ಹಸನಾಗಿ ಉಂಬುವುದು ಅದು ಮಡಿಯೊ (ಪುರಂದ.ರಾ. ೫-೬೨-೪). ೫. ಸುರಿಸು : ಈ ಬಾಳ ಮೇಲ್ ಬಿಟ್ಟು ನೆತ್ತರನ್ ಬಸಿವನನ್, ಬಂದು ಮೊದಲೆತ್ತಲ್ ಏಕಲವ್ಯಂಗಱಿಪೆ ಅಟ್ಟು ಆರಾನುಮನ್ (ಅಶ್ವತ್ಥಾ. ೩೩-೬೪೬). ೬. ತೊಡೆ ; ಒರೆಸು : ಎಮೆದುಱುಗಲಿನಿೞಿವ ತೋರ ಕಣ್ಬನಿಗಳಂ ಬಸಿಯುತ್ತಮನ್ನನಿಂತೆಂದಂ (ಕಾದಂಪೂ. ೬೪೬). ೭. (ಅಲಂ) ಕುಗ್ಗು ; ಕಡಮೆಯಾಗು : ವೈರಾಗ್ಯದೇೞ್ಗೆಯಂತೆಯುಂ ಶ್ರೀವೈಷ್ಣವರ ಭಾಗ್ಯದಂತೆಯುಂ ತೋರ್ಪ ಶ್ರೀರಾಮಾನುಜರಡಿಗೆಱಗಿ ನೇಸಱ ತೇಜದೊಳ್ಬಸಿಯದ ತಣ್ಪಂ ಬೆರಸಿದಂತಿರ್ಪ ಮೆಯ್ವೊಗರುಂ . . . ಆಗಿ (ಚಕವಂ. ೦೦೬-೦೦). ೮. ಇಲ್ಲದಂತೆ ಮಾಡು ; ನಾಶವಾಗಿಸು : ಅದಱಿಂದೆ ಎಂದಿಂಗಮೆಡೆವಱಿಯದೀ ನೋವು ಎರ್ದೆಗೊಱಿದು ಬಸಿದಪುದು ಬಲ್ಮೆಯನ್ (ಬಿದ್ಯಶ್ರ. ೨-೩೨).

ಬಸಿದುಕೊಳ್ಳು = ೧. ಪಾತ್ರೆಯ ಬುಡದಲ್ಲಿರುವ ಗಟ್ಟಿಯಾದ ಪದಾರ್ಥಗಳ ಮೇಲೆ ನಿಂತ ನೀರು, ಎಣ್ಣೆ ಮೊದಲಾದ ದ್ರವ ಪದಾರ್ಥಗಳನ್ನು, ನಿಧಾನವಾಗಿ ಪಾತ್ರೆಯನ್ನು ಓರೆ ಮಾಡಿ ಸುರಿ : ಬೇವಾಗ ಗಂಜಿಯ ಬಸಿದುಕೊಂಡು . . . ಮೃದುವಾಗಿ ಮಾಡಿದುದು ತಾ ಶುದ್ಧಮಪ್ಪೋದನಂ (ಸೂಶಾ. ೩-೨) ; ಪುತ್ರಜೀವಿಶಿರುಳನ್ನು ಚೆನ್ನಾಗಿ ಕುಟ್ಟಿ . . . ಇದರೆಂಟು ಮಡಿ ನೀರು ಹುಯ್ದು . . . ಹದವ ನೋಡಿ ಬಸಿದುಕೊಂಡು (ಸಕವೈ. ೬೦). ೨. ದ್ರವಪದಾರ್ಥವನ್ನು ಕುಡಿ : ಹಣಮಂತ . . . ಹೊಟ್ಟೆಗೆ ಏನೂ ಬಸಿದುಕೊಳ್ಳಲಿಲ್ಲ (ಕರಿಸಂ.೦೯); ಬಂದ ತಪ್ಪಿಗೆ ಒಂದಿಷ್ಟು ಕಾಫಿಯನ್ನಾದರೂ ಬಸಿದುಕೊಂಡು ಹೋಗೋಣವೆಂದು ಕೊಂಡು ಕುಳಿತುಕೊಳ್ಳಲು ಸ್ಥಳ ಹುಡುಕಿದೆ (ಆರಿಹೂ. ೨೪). ಬಸಿದು ಬೀೞ್, ಬಸಿದು ಬೀಳು = ೧. (ರಕ್ತ ಸುರಿದು) ನಿಶ್ಶಕ್ತಿಯಿಂದ ಕುಸಿದು ಬೀಳು : ಪರಾಂಗನೆಯೆಂದೊಡೆ ಸಾಮ್ಯಮಲ್ಲಮೆಂದೊಡೆ ತಲೆ ಹೋಗಿಯುಂ ಬಸಿದು ಬೀೞದೆ ಸ್ವೈರಿಸರಲ್ತೆ ಕಾಮುಕರ್ (ಅಸಂಕ. ೦೦-೩೩); ಬಸಿದು ಬೀಳ್ವ ಕಬಂಧದಲಿ ಹೆಣವಸರೊದುದು ನೆಲನಿದೆಲ್ಲಿಯ ವಿಷಮ ವೀರರೂ ಮರ್ಚ್ಛಯೆನುತ ಮಾರೀಚ ಬೆಱಗಾದ (ತೊರಾ. ೦-೦೧-೧೪). ೨. ಉಕ್ಕಿ ಹರಿ : ಒಸೆದು ನಿನ್ನವರೆಂದು ಬಗೆವರೆ ಬಸಿದು ಬೀಳುವ ಕೃಪೆಯ ನೀ ತೋಱಿಸೆಯಿದೇನ್ಯೆ ಕೃಷ್ಣಯೆಂದೊಱಲಿದಳು ನಳಿನಾಕ್ಷಿ (ಕುವ್ಯಾಸ. ೧೪-೧೨೬). ೩. ಕಳಚಿ ಬೀಳು : ಒಡಲು ಬೀಳಲಿ ಮೇಣು ತಮ್ಮದಿರಡವಿಯಲಿ ಹಾಯಿಕ್ಕಿ ಹೋಗಲಿ ಮಡದಿ ಮುನಿಯಲಿ ಬಸಿದು ಬೀಳಲಿ ಧರಣಿ ಕುರುಪತಿಗೆ (ಕುವ್ಯಾಅ. ೪-೧೨). ಬಸ್ತು ಎಸರು = ಬೇಳೆ ಅಥವಾ ಕಾಳಿನೊಂದಿಗೆ ತರಕಾರಿ, ಸೊಪ್ಪು ಮುಂತಾದುವನ್ನು ಬೇಯಿಸಿ, ಅದರ ಸಾರವನ್ನು ಬಸಿದುಕೊಂಡು ಮಾಡುವ ಸಾರು : ಹಸಿ ಅವರೆಕಾಳು, ಸೊಪ್ಪು ಸೇರಿಸಿ ಮಾಡಿದ್ದ ಬಸ್ತು ಎಸರು ಮುದ್ದೆಗೆ ಬಹಳ ರುಚಿಯಾಗಿತ್ತು (ರೂ). ಬಸ್ತು ಸಾರು = ಬಸ್ತು ಎಸರು : ರಾಗಿ ಮುದ್ದೆ, ಅವರೆಕಾಳು ಬಸ್ಸಾರು ಮಾಡಿದ್ದೀನಿ (ರೂ).

[ದೇ.॥ ತಮಿ. ವಡಿ, ವಟ್ಟಿ, ವಟು; ತುಳು. ಬಸಿ, ಬಚ್ಚು; ತೆಲು. ವಡಿಯು]

ಬಸಿ$_{2}$ (ಕ್ರಿ). ೧. ಹರಿತಗೊಳಿಸು; ಚೂಪು ಮಾಡು ; ಮಸೆ : "ಬಸಿ–ಗಲನೇ (ಬಸಿಯು) ಶಾತ, (ಹರಿತ ಮಾಡು) ದಂಡಮಧ್ಯಯೋಃ (ದಂಡಿಗೆಯ ಮಧ್ಯಭಾಗ)" (ಶಮದ); ಆತನಂ ಶ್ಮಶಾನಕ್ಕೆಟ್ಟಿದುಕೊಂಡು ಪೋಗಿ ದರ್ಕಂ ಬಸಿದು ಸೂಲದೊಳಿಕ್ಕುವಾಗಳ್ (ವಡ್ಡಾರಾ. ೧೨೪-೨೯); ಬೆತ್ತಗಣ್ಣವಲೆಯಂ ಸಮುಕಟ್ಟುವ ಬೆಟ್ಟುಗೂಂಟಮಂ ಬಸಿವ ಪುಳಿಂದಸಂಕುಳದ ಪೆರ್ಗಣದಿಂದೆಸೆ ದತ್ತು ಪಕ್ಕಣಂ (ಚಂದ್ರಪು. ೫-೫೪). ೨. ಚೂಪಾಗಿರು; ಹರಿತವಾಗಿರು : ಒಡಲುರಿವನ್ನೆಗಂ ಬಸಿದ ಶೂಲದೊಳಿಕ್ಕಿ (ಧರ್ಮಾಮೃ. ೦೨-೨೩೬); ಬಸಿದಸಿಯ ದಸಿಯನನುಕರಿಪ ಸೂಜಿಗೊಂಬುರ್ಚಿ ಸೀಳ್ದ ಬಸುಱಿಂ ನಿಸದಂ ಬಿಸುನೆತ್ತರ ಪೊನಲುಂ ಕರುಳ ಸೋಗೆಯುಂ ಕವಿದುವವನಿಗಾ ಯತಿಪತಿಯಾ (ವರ್ಧಪು. ೩-೬); ಬಸಿದ ಕೋಡಿನ ಸಲಗನೆಸೆವ ಕೋಣಂಗಳಂ ಮಸಗಿ ವಿಸಟಂಬರಿದು ಕರ್ಚುವುಷ್ಟ್ರಂಗಳಂ (ಸಾವಂಶ. ೪-೦೩೯ ರಗಳೆ).

ಬಸಿ$_{3}$ (ನಾ). ೧. (ಮರ, ಲೋಹ ಮೊದಲಾದುವುಗಳಿಂದಾದ) ಗೂಟ, ಶೂಲ ಮುಂತಾದ ಹರಿತವಾದ ಸಾಧನ : ಪೊಱಿಸಿದ ಗಾಲಿಯೊಳಂ ನಿಱಿಸಿದ ಬಸಿಯೊಳಂ ಪೂಸಿದ ಡೆಂಕಣೆಯೊಳಂ . . . ಕೈಗೆಯ್ದು (ಅವಂಪು. ೦೦-೩೨ ವ). ೨. ಮುಳ್ಳು ; ಕಂಟಕ : ಪರಮಂಗೆ ಗುಗ್ಗುಳದ ಕಂಬಿಯಂ ತರುತಿರಲು ಚರಣವಂ ಬಸಿ ತಾಗಲು ಹರ ಶಬರವೇಷದಿಂ ಬಂದು ಬಸಿಯಂ ಕೀಳೆ (ರಾಶಚ. ೯-೫೪ ವ). ೩. ತಕ್ಕಡಿಯಲ್ಲಿರುವ ದಂಡಿಗೆಯ ಮಧ್ಯಭಾಗ : "ಬಸಿ–ಗಲನೇ (ಬಸಿಯು) ಶಾತ, (ಹರಿತ ಮಾಡು) ದಂಡಮಧ್ಯಯೋಃ (ದಂಡಿಗೆಯ ಮಧ್ಯಭಾಗ)" (ಶಮದ). [<ಬಸಿ$_{2}$./ತಮಿ. ವಡಿ, ವಯ್ ; ತೆಲು. ವಸಿ ; ಕೊತ. ವಚ್; ಗೊಂಡಿ. ವಾಯ]

ಬಸಿ$_{4}$ (ನಾ). ಬಟ್ಟಲಿನಲ್ಲಿರುವ ದ್ರವವು ಕೆಳಗೆ ಚೆಲ್ಲದಂತೆ ಬಟ್ಟಲಿನ ಅಡಿಯಲ್ಲಿ ಇಡುವ ಸಣ್ಣ ತಟ್ಟೆ ; ಸಾಸರು : ಏಡು ಬರಿದಾದ ಕಪ್ಪು ಬಸಿಗಳನ್ನು ತಕ್ಕೊಂಡು ಒಳಗೆ ಹೋದನು (ಕಂದುಟ. ೯೬); ಅಮೇರಿಕದಲ್ಲಿ . . . ಮಕ್ಕಳು ಹೋಟೇಲಿನಲ್ಲಿ ಕಪ್ಪು, ಬಸಿ ತೊಳೆದು ಹಣ ಸಂಪಾದಿಸಿ, ಅದರಿಂದ ಓದುತ್ತಾರಂತೆ (ಸ್ವಪ್ನಹೂ. ೦೬೪).

[← ಮರಾ. ಬಸೀ, ಬಶೀ./ಪೋರ್ಚು. ಬಸಿಯಾ]

ಬಸಿಗಲ್ಲು (ನಾ). ಚಂದ್ರನ ಪ್ರಕಾಶದಿಂದ ಕರಗಿ ನೀರು ಬಿಡುವು ದೆಂದು ನಂಬಲಾದ ಕಲ್ಲು; ಚಂದ್ರಕಾಂತಶಿಲೆ : ಬೆಳುದಿಂಗಳಲ್ಲಿ ಬಸಿಗಲ್ಲ ನೀಡಿ ತಿಂಗಳನು ತಣಿಸಬಹುದೆ ? (ಮುಕ್ತಕಂ. ೦೮-೦೪).

[ ಬಸಿ$_{1}$ + ಕಲ್ಲು (< ಕಲ್$_{3}$) ]

ಬಸಿಗಳ್ (ನಾ). ಒಂದು ಬಗೆಯ ಮದ್ಯ ; ತಿಳಿಹೆಂಡ : ರಸವಣಿಯ ನುಂಡ ಗೊರವಿತಿ ಪೊಸತಾಶೀರ್ವಾದವುಳ್ಳದೊಂದೆಂದಾಗಳ್ ಬಸಿಗಳ್ಳಂಗೆ ಮಹೇಶರ ಪಸಾದ ಸುರುಕವಡೆ ಕವಡೆ ಹರಿವೋ ಎಂದಳ್ (ಸೂಕ್ತಿಸು. ೦೩-೨೦). [ಬಸಿ$_{1}$ + ಕಳ್$_{3}$]

ಬಸಿಗೆ 'ಬೈಸಿಕೆ' ನೋ.

ಬಸಿತ (ನಾ). (ರಕ್ತವು) ಧಾರೆಯಾಗಿ ಇಳಿಯುವಿಕೆ : ಕಂದ ನೆತ್ತರ ಬಸಿತ ಹಿಂಚಿಹುದೆ ? ಉಸಿರೆ ಏತಕೊ ? (ಹಬ್ಬರ. ೪೦-೦೫೩).

[ಬಸಿ$_{1}$ + – ತ$_{2}$]

ಬಸಿದಲೆ (ನಾ). ನೆತ್ತರು ಸುರಿಯುತ್ತಿರುವ ತಲೆ : ಅಲ್ಲೊಬ್ಬ ತರುಣಿ ವಕ್ಕಯ್ಯ ಕತ್ತಿ ಬಸಿದಲೆಯೊಂದು ಕರದಿಂ ಬೀಳೆ ಬತ್ತಲಿರಲು (ತೋರಾ. ೬-೨೯). [ ಬಸಿ$_{1}$ + ತಲೆ$_{1}$ ]

ಬಸಿದು$_{1}$ 'ಬಸಿ$_{1}$' ಪರಾ.

ಬಸಿದು$_{2}$ (ನಾ). ೧. ಹರಿತವಾದುದು ; ತೀಕ್ಷ್ಣವಾದುದು : "ಬಸಿದೆಂದು ಕೂರಿತಕ್ಕುಂ" (ಶಬ್ದಮಂ. ೫೦). ೨. (ಅಲಂ) ತೀಕ್ಷ್ಣವಾದ

ನಡೆವಳಿಕೆ : ಬ[ಹಾಡಂ. ದಿ]ಸಿದುಮಸಿದುವುಂ ತೋಱಿ ನುಡಿದೊಡಂ ಬಡಸಿದಲ್ (ಅಜಿತ. ೨-೧೦೪ ಪ).

ಬಸಿಯಂ = ಉಗ್ರನಾದ ವ್ಯಕ್ತಿ ; ಕ್ರೂರಿ: ಅಸಿಯಂ, ಬಸಿಯಂ, ಕರಿಯಂ (ಕವಿರ. ೦೫೨ ವೃ.ಟೀ.). [<ಬಸಿ₂]

**ಬಸಿಮೂಗ** (ನಾ). ಯಾವಾಗಲೂ ನೀರು ಸೋರುತ್ತಿರುವ ಮೂಗುಳ್ಳವನು : ಬಸಿ[ಹಾಡಂ. ಸೆ]ಮೂಗಂ ಪಿತ್ತವಿತ್ತಭೋಗಿ ಕುನಖಂ ಮೆಲ್ಪಿಂದೆ ಬಲ್ಪಿಂದೆ ಸಾಧಿಪ ಸಾಧ್ಯಂ ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗೇಹಜಂ (ಜಾತಕ. ೦೬-೯).

[ಬಸಿ₁+ಮೂಗು + — ಅ₇]

**ಬಸಿರಾನು** 'ಬಸಿಱಾನ್' ನೋ.

**ಬಸಿರಿ₁** 'ಬಸಿಱ್' ನೋ.

**ಬಸಿರಿ₂** 'ಬಸರಿ' ನೋ.

**ಬಸಿರು** 'ಬಸಿಱ್' ನೋ.

**ಬಸಿರ್ಕುತ್ತ**, ಬಸಂಗುತ್ತ (ನಾ). ಅತಿಯಾಗಿ ಭೇದಿಯಾಗುವ ಒಂದು ಬಗೆಯ ರೋಗ ; ಅತಿಸಾರ : "ಬಸಿರ್ಕು[ಹಾಡಂ. ಬಸುರ್ಕು]ತ್ತಮತಿಸಾರವಕ್ಕು" (ಶಬ್ದಮ. ೦೦೪-೩) ; ಅತಿಸಾರಕಿಯೆಂ(ಬವನಂ) ಬಾದು ಬಸಿರ್ಕುತ್ತವುಳ್ಳವಂ (ಹರಿಯು. ೯೪-೪೩೨). **ಬಸುಗುತ್ತ** : ಕೋಣನ ಹೇಱಿಂಗೆ ಕುನ್ನಿ ಬಸುಗುತ್ತಬಡವಂತೆ ತಾವು ನಂಬರು ನಂಬುವ ವಡ ನಂಬಲೀಯರು (ಬಸವ. ೬೬೩) ; ನಿನ್ನೆ ಕಮ್ಮಾರ ಚಂದನ ಮನೆಯೊಳ್ಟು ಸೂಕರವುದ್ಮವನನುಂಡ ಬಳಿಕ ಬಸುಗುತ್ತದಿಂದಣಿಯರಂ ಬಳಲುತಿಹೆ. ಬಸಿರು ನೋನೋಯುತಿದೆ (ಕೃಷಿಪಾ. ೬೬-೬). [ಬಸಿಱ್ + ಕುತ್ತ]

**ಬಸಿರ್ಪೂಸು** (ಕ್ರಿ). ಮಗುವು ಗರ್ಭದಲ್ಲಿರುವಾಗಲೇ ಹೊಟ್ಟೆಯನ್ನು ಸವರುತ್ತ ಇಂತಹವರಿಗೇ ಮದುವೆ ಮಾಡಿಕೊಡುವುದಾಗಿ ಮಾತು ಕೊಡು : ಏನಂಗೋದ್ಭೂತ ಮಾತಾಪಿತೃಗಳೆ ನಿನಗೆನ್ನಂ ಬಸಿರ್ಪೂಸಿ ಪೆತ್ತರ್ (ಶಾಂತಿಪು. ೦೪-೩೪) ; ಆಕೆಯಂ ನಿನಗೆ ಬಸಿರ್ಪೂಸಿ ಪೆತ್ತು ನಿನ್ನಂ ಆಣಿದೀಗಳ್ ನಿಮ್ಮಮ್ಮನ ಪಿರಿಯರುಸಿ ಸತ್ಯಭಾವೆಯೆಂಬಳಾಕೆಯ ಮಗಂ ಭಾನುಕುಮಾರಂಗೆ ಕಂಡಲೆಂದು ಮಹಾವಿಭೂತಿಯಿಂದೊಯ್ದಪ್ಪೊರ್ (ಅಂಹರಿ. ೯-೩ ವ) ; ಓವೋವೆನ್ನಂ ಕುರುನ್ನಪದೇವಿ ಬಸಿರ್ಪೂಸಿ ಪೆತ್ತೊಡಾ ತಂಗೇನುದ್ಯಾವೋಗ್ರದುರಿತಫಲದಿಂದಾ ವಿಭು ಗೆಂಟಾದೊಡಾಗೆ ಮಱುಗುತ್ತಿರ್ದೆಂ (ಅಂಹರಿ. ೯-೯) ; ಎಡೆಯೊಳ್ ಕೂಡಿದ ನಣ್ಪೆ ಮುನ್ನಮೆ ಬಸಿಱ್ಪೂಸಿರ್ದು ಕಾ[ಪಿಂದವಿಂ]ತ್ತೊಡೆ (ಅಂಹರಿ. ೦೪-೬).

[ಬಸಿಱ್ + ಪೂಸು₁]

**ಬಸಿರ್ಪೆಂಡತಿ** (ನಾ). ಗರ್ಭಿಣಿಯಾದ ಹೆಂಗಸು ; ಬಸಿರಿ : ಒರ್ವಳ್ ಪೊಸಸ್ರಾವಕಿ ಬಸಿರ್ಪೆಂಡತಿ ವೇಳಾಸ್ನಾಮಿನಿಯೆಂಬೊಳ್ ಕರ್ದಿಂಗಳಿರುಳೊಳ್ ಕಟ್ಟಲೆಯೊಳ್ ನಿರ್ಗ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡಾಕೆಗೆ ಬಸಿಱ್ಟಿದತ್ತು (ವಡ್ಡಾರಾ. ೯೩-೩೦).

**ಬರ್ಸಿಪೆಂಡಿರ್** (ಬಹುವ) : ಇದನಱಿದೊಂ . . . ಸಾಸಿರ್ವ್ವರ್ಬಸಿಪ್ಪೆಣ್ಡಿರುಮ ಸಾಯಿರಕೆಱಿಯುಮನಱಿದೊನ ಲೋಕಕ್ಕೆ ಸಲ್ಗು (ಕೌಶ್ಶಾ. IX-1, ೪೦-೦೪ ; 977). [ ಬಸಿಱ್ + ಪೆಂಡತಿ (< ಪೆಂಡಿತಿ) ]

**ಬಸಿವನಿ** (ನಾ). ಸೋರುವ ಹನಿ, — ತೊಟ್ಟು : ಬಟ್ಟ ಜಡೆಕೇಶದಿಂ ತೊಟ್ಟಿಡುವ ಬಸಿವನಿಯ ನಟ್ಟನೆ ಸ್ವಾತಿ ನೀಲ್ಮೇಘದಿಂ ಸುರಿವುತಿಹ ಬಟ್ಟವ ಶುಕ್ತಿಕಗಳ ಬಲ್ಪಿಂದುಗಳೆಣಿಯನಲುಯಿಳಿವುತಿರಲ್ಕೆತರುತ್ತೆ (ಜಕವೋ. ೦೩-೪೪). [ಬಸಿ₁ + ಪನಿ₂]

**ಬಸಿವಾಯ್** (ನಾ). (ರಕ್ತ, ಜೊಲ್ಲು ಇತ್ಯಾದಿ) ದ್ರವ ಒಸರುತ್ತಿರುವ ಬಾಯಿ : ಹಾಯಿದವು ನರಿ ನಾಯಿಗಳು ಕಟವಾಯಲೆಳಲುವ ಕರುಳಿನಲಿ ಬಸಿವಾಯ ರಕುತದಲೋಡಿದವು ರಣಭೂತ ದೆಸೆದೆಸೆಗೆ (ಉತ್ತಾದ್ರೋ. ೦-೨೦). 'ಬಸಿವಾಯು' ಪರಾ. [ ಬಸಿ₁ + ಬಾಯ್ ]

**ಬಸಿವಾಯ** (ನಾ). ಯಾವಾಗಲೂ ಜೊಲ್ಲು ಸುರಿಯುತ್ತಿರುವ ಬಾಯುಳ್ಳವನು : ಬಸಿ[ಹಾಡಂ. ಸ್ರ]ವಾಯಂ ಕವಿ ವಾಗ್ಮಿ ದೀರ್ಘ ಮುಖಕಂಠಂ ಧಾರ್ಮಿಕಂ . . . ಧನುರ್ಗೇಹಜಂ (ಜಾತಕ. ೦೬-೯).

[ಬಸಿವಾಯ್ + — ಅ₇]

**ಬಸಿಱ್**, ಬಸಿರು, ಬಸಿಱು, ಬಸುರು, ಬಸುಱ್, ಬಸುಂಱು (ನಾ). ೧. ಹೊಟ್ಟೆ ; ಉದರ ; ಜಠರ : "ಬಸಿಱುದರಂ ಜಠರಂ ಕುಕ್ಷಿ ಸಮಾಖ್ಯಂ" (ಚಿಟ್ಟುಕೋ. ೬೪-೬); ಈತಂಗೆ ನೀಂ ಬಸಿಱ್ ಶೀವೆ ಬಡ್ಡಿಸದಿರ್ (ಪಣ್ಣಾರಾ. ೬೬-೩); ಬಸಿಱ ತೆಳ್ಪಳಿದತ್ತು ಮೊಗಂ ಬೆಳ್ಪೇಱಿದುದೇ ಕುಚಚೂಚುಕಂ ಮಸುಳ್ದುವೇ (ಆದಿಪು. ೬-೫೦); ದುಷ್ಟಬುದ್ಧಿ . . . ಕಟ್ಟೆನೆಂದು ಬಾಯಂ ಬಸಿಱಂ ಪೊಯ್ದುಕೊಂಡು . . . ನುಡಿಯೆ (ಹಿಂಹರಿ. ೦೬೦-೬). ೨. ಭ್ರೂಣವನ್ನು ಒಳಗೊಳ್ಳುವ ಕೋಶ ; ಗರ್ಭ : ಖಳನಿಲ್ಲೀ ಮಸುಮತಿಯೊಳ್ಗಾಂಧಾರಿಯ ಬಸಿಱಂ ಮೇಣ್ಮಗುಟಿ ಪೋಗಿ ಪೊಕ್ಕಿರ್ದಪನೋ (ಗದಾಯು. ೬-೨೦); ಆ ತಪಸ್ವಿ ಕಂಡು ಮುಂಬಿದೆನಗೆ ಪಶುವಿನ ಬಸಿಱೊಳ್ ಬರ್ಪುದೆಂದು ಶಾಪಮನೀಯೆ (ಹಿಂಹರಿ. ೬೦-೦೩); ಬಸಿರ್ವೊಕ್ಕು ಬಣ್ಣವೇಱುವ ಬಿಸಜಾಕ್ಷನಿನಮೃತಮಾಂಬೆ ಪೆಂಪಿಡಿದಸೆದಲ್ (ಜಗನ. ೯-೫). ೩. ಗರ್ಭವನ್ನು ಧರಿಸಿರುವ ಸ್ಥಿತಿ; ಗರ್ಭಿಣಿಯಾಗಿರುವಿಕೆ : ಪಾಯದಿರೊತ್ತಿ ಮೂಱುತಿಂಗಳ ಬಸಿಱ್ಕೆ ಪಾಯ್ಸೆಯನಗಿರ್ಪಣ ಮೋಡಿದುದಿಂದು ನೋಡ ಬಾಯಟಿದುದು ಹಾರದಿರ್ ಮೊಗಮನಿತ್ತುತುಂ ಬೆಱಗಾಗೆ ಕೂಡಿದಲ್ (ಶಾಕ್ಯಸಾ. ೪೪೪ ಪೂರ್ವ); ಇನಿತುಂ ಪೊಟ್ಟುಂ ಬಸಿಱ್ಕೊಳಪ್ಪ ಬಯಕೆಗಳ್ಗಿವೆ ಕಾರಣಂಗಳೆನ್ನಿಸಲ್ಕೆ ಬಯಕೆಗಳಂ ಬಯಸುತಿರ್ದಳ್ (ಪುಶ್ಯಪು.೩-೪೪ ಪ). ೪. ಅಂತರ್ಯ ; ಅಂತರಂಗ ; ಒಳಗು: ಬಸಿಱೊಳ್ ಜಗತೀತ್ರಯಮುಮನೊಸದಿಟ್ಟೋರಂತೆ ಕಾದ ಪೆಂಪಿನ ನಿಮ್ಮಾ ಬಸಿಱಂ ಪೊಕ್ಕಮ್ಮಯ್ಯರನಸುರಕುಳಾಂತಕ ಕಡಂಗಿ ಕಾವುದು ಪಿರಿದೇ (ಹಿಂಹರಿ. ೯-೦೩). ಬಸಿರು : ೨. ಕೊಲೆಗೀಡುಮಾಡಬೇಕಾದ ಮಕ್ಕಳನ್ನು ಹೆರುವ ಬಸಿರು ಬೇಡ (ಜಾನಪ್ಪ. ೩೯). ೪. ನಿರಾಶೆಯ ಬಸಿರಿನಲ್ಲಿಯೇ ಆಶೆಯ ಬೀಜವಿದೆ – ಬಿತ್ತಿ ನೋಡು ! (ಕಟ್ಟೋಲಿ.೪೨-೬); ಪಡುವಲ ಕಡಲಿನ ಮಿಂಚನು ಗುಡುಗನು ನುಂಗಿ ಬಸಿರಿನಲಿ, ಮುಡಿಗೆದರಿ ಮುಂಗಾರಸುರಿಯು ರಕ್ಕಸವೆಜ್ಜೆಗಳಿಕ್ಕುತ ಬಂದಳು ಬಲುಗದರಿ! (ಪಕ್ಷಿಕಾ. ೩೪-೦). **ಬಸಿಱು** : ೨. ದಾಕ್ಷಾಯಣಿ ತನ್ನ ಬಸಿಱೊಳ್ ಬರ್ಪ ವರಮಂ ಬಯಸಿ ಮೇನೆ ತಪದೊಳಿರಲ್ (೧೧೪. ೦ ಅಕಾಗರ್ಗ) ; ಬಸಿಱೊಳಗೆ ಶಿಶುವನು ಅದಾರು ಸಲಹಿದವರು (ಭೂರಿಂದ. ೨-೪೬ ೩). ೪. ಸಿಸುವಾಗಿ ತಾನಾಲದೆಲೆಯೊಳೊಱಗಿ ತನ್ನ ಬಸಿಱೊಳೀರೇಳುಲೋಕಗಳ ಪಸರವ ತೋಱಿ ಬಲ್ಲರ ಬಗೆಗೊಳಿಸುವ ಪೊಸಬಜ್ಜೆವಳಗೆಱುಗುವೆನು (ಕಣಕ್ಕ. ೬-೩೦). ೫. ವಂಶ; ಮನೆತನ : ಧರೆಯ ಕುಡಿಯರ ಕುಲಶಿರೋಮಣಿಗೆನಿಪ ಗೌಡರ ಬಸಿಱೊಳೊಗೆ[ದ] ಸುಮುಹೂರ್ತದೊಳು (ಸಿದ್ಧರಾ. ೦-೩೨). **ಬಸುರು** : ೨. ಬಸುರಿನಿಂ ಪಡೆಯಲಾರದೆ ವ್ಯಥೆಯೊಳಿಪ್ಪ ವಧುಗೆವೆ ಸುತನಂ ನಿಜಪದೋದೇದವಿಮಾವುತಂ (ಪುಹಾರಿ. ೬-೦ ಪೂರ್ವ). ೩. ಬಸುರು ಬಂದಾಕ್ಷಣ ಹಸುರುಶಾಲೆ ಸಿಕ್ಕೀತೇ? (ಗಾದೆ). ೬. ಭ್ರೂಣ ; ಪಿಂಡ : "ಗರ್ಭ ೧, ಭ್ರೂಣ ೩ – ೨ ಗರ್ಭದ ಪೆಸರು, ಬಸುರು" (ಸಿದ್ಧಾಂಶಿ. ೦೩೪). 'ಬಸುರಿಳಿ' ಪರಾ. **ಬಸುಱ್** : ೧. ಮನುಷ್ಯರ ಪಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದೆ ಕಾಡಾಡದ ಕೊಳಂಬಲಿಯನಾಯ್ದು ಕುಱುಕುವ ಹೇಸಿದೈವಂಗಳ ಬೆ.ಡಬೇಡಿ ನಿರರ್ಥಕೆಡಬೇಡ (ಬಸವ. ೫೩೬). ೨. ಪುಟ್ಟಿದ ತಾಣಕ್ಕಾಯುಮಂ ಪುಟ್ಟಿಸಲೊಡರಿಸುವ ಕಿಚ್ಚು ತೇಜಿ ಕ್ರಿಮಿ ಕುತ್ತುಂ ಪುಟ್ಟುವವೊಲ್ ದುಷ್ಕೃತದಿಂ ಪುಟ್ಟಿದವೀ ಪಾಪಕರ್ಮನೆನ್ನಯ ಬಸುಱುಂ (ಕಾದಂಬ. ೪೩೨). **ಬಸುಱು** :

**ಬಹೂದಕ** (ನಾ). ಹಂಸ, ಪರಮಹಂಸ, ಕುಟೀಚಕ ಮತ್ತು ಬಹೂದಕ ಎಂಬ ಸಂನ್ಯಾಸಿಗಳ ನಾಲ್ಕು ಗುಂಪುಗಳಲ್ಲಿ ಒಂದು ಗುಂಪಿಗೆ ಸೇರಿದವನು; ತೀರ್ಥಯಾತ್ರಾಕ್ಷೇತ್ರಗಳಿಗೆ ಪ್ರವಾಸ ಮಾಡುವ ಸಂನ್ಯಾಸಿ; ಪರಿವ್ರಾಜಕ: ಈಶ್ವರಧ್ಯಾನತತ್ಪರನಾಗಿ ಏಕಾನ್ನವನೊಲ್ಲದೆ ಬಂಧುಪುತ್ರಾದಿ ಗೃಹಮಂ ಪುಗದೆ ಬೇಱೆ ಏಳುಮನೆಯುಲ್ಲಿಯು ಭಿಕ್ಷಾನ್ನಮಂ ತಂದನು ಭವಿಸುತ್ತ ಸಹಜಮಯನಾಗಿರ್ಪಾತನೇ ಬಹೂದಕನಪ್ಪಂ (ಶಬ್ದಾನು. ೦೨೬).
[ಸಂ.]

**ಬಹೂಪಮಾನ** (ನಾ). [ಕಾವ್ಯಮೀ] ಒಂದಕ್ಕಿಂತ ಹೆಚ್ಚು ಉಪಮಾನಗಳನ್ನು ಕೊಡುವ ಒಂದು ಅಲಂಕಾರ: ಮಲಯರುಹ ಶಿಶಿರಕರ ಶೀತಲಿಕಾಕರಕೇಂದುಕಾಂತಜಲಶೀತಳಮಿ ಲಲನಾಲಿಂಗನಸುಖಕರವಿಲಾಸವೆಂಬುದು ಬಹೂಪಮಾನವಿಕಲ್ಪಂ (ಕವಿರಾ. ೩-೯೦). [ಸಂ.]

**ಬಹೂಪಮೆ** (ನಾ). = ಬಹೂಪಮಾನ: ಬಹೂಪಮೆಗೆ—ಶರದಂಬುದಮಂ ಗಂಗಾತರಂಗಮಂ ಸಿಂಧುವಾರಕುಸುಮಶ್ರೀಯುಂ ಹರಹಾಸವಿಳಾಸ ಮನಸುಕರಿಸುವುದತಿವಿಶದಕೀರ್ತಿ ತೋಳ್ಕೊಪ್ಪುವನಾ (ಕಾವ್ಯಾವ. ೬೬೩).
[ಸಂ. ಬಹೂಪಮಾ]

**ಬಹ್ವಾರಂಭಪರಿಗ್ರಹ** (ನಾ). [ಜೈನ] ಪಂಚಮಹಾಪಾತಕಗಳಲ್ಲಿ ಒಂದು; ಬಹಳ ಪ್ರಯತ್ನದಿಂದ ಧನವನ್ನು ಸಂಗ್ರಹಿಸುವುದು : ಬಹ್ವಾರಂಭಪರಿಗ್ರಹವಿಹ್ವಲನಿಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರದೊಳಗಿರುಳಿನ ಚಕ್ರಾಹ್ವದವೊಲ್ ಮಱುಗದೇಂ ಸುಖಿಂಬಡೆದಪನೇ (ಆದಿಪು. ೩-೬೬).
[ಸಂ.]

**ಬಹ್ವಾರಂಭಪಾರಿಗ್ರಹ** (ನಾ). = ಬಹ್ವಾರಂಭಪರಿಗ್ರಹ : ಆ ಜೀವಘಾತಾನೃತವಚನ ಪರಾರ್ಥಾ ಪಹಾರಾನ್ಯನಾರೀಗಮಬಹ್ವಾರಂಭಪಾರಿಗ್ರಹಮೆನಿಸುವವಯ್ದುಂ ಮಹಾಪಾತಕಂಗಳ್ಗೆ ಮನಂದಂದೊಂಗೆ ಸಂಸೃತ್ಯುದಧಿ ತಟಮದ್ಧಾಸನ್ನಂ (ಸುಕುಮಾ. ೫-೯೩). [ಸಂ.]

**ಬಹ್ವಾಶಿ** (ನಾ). ೧. ಅತಿಯಾಗಿ ತಿನ್ನುವವನು; ಹೊಟ್ಟೆಬಾಕ: (೩.) ೨. ಅತಿಯಾಗಿ ತಿನ್ನುವಂತಹುದು: ಬಹ್ವಾಶಿಯಪ್ಪ ತುರಗಂ ವಿಹ್ವಲನಾಗಿರ್ದು ಮೇಯದಿರ್ದೊಡಂ . . . ಮರಣಭಯಂ (ಅಶ್ವಶಾ. ೩-೯೨). [ಸಂ. ಬಹ್ವಾಶಿನ್]

**ಬಳ₁** 'ಬಳ್ಳ' ನೋ.

**ಬಳ₂** 'ಬಲ'₃ ನೋ.

**ಬಳ₃** (ನಾ). ಒಂದು ಬಗೆಯ ಕೊಡುಗೆಯ ಭೂಮಿ (?) : ಬಮ್ಮಗಾವುಣ್ಡನ ಬಳದಿಂ ಬಡಗ (ಶಾಇಶಾ. XI–ii. ೦೦೯-೫೦; 948); ಮೂನೂಱುಮತ್ತು ಮತ್ತರ್ಕಿಸುಕಾಡುಮನ್ನು ಬಳಕ್ಕೆ ಸಾಯಿರದ ನೂಱುಮತ್ತರಾಗಿ (ಶಾಇಶಾ. IX–i. ೬೬-೦೯; 992); ಅದಱ ಹತ್ತಸಿನ ತನ್ನ ಬಳದೊಳಗೆ ಬಮ್ಮರ್ಯ್ಯಂ ವಿದ್ಯಾದಾನಕ್ಕೆ ಕೊಟ್ಟ ಮತ್ತರ್ಪನ್ನೆರಡು (ಶಾಇಶಾ. IX–i. ೦೦೯-೦೯; 1046); ಗುರುಗಳ ಮನೆಯ ಸ್ಥಳ ಬಯಿಲ ಕೇಶಿಸೆಟ್ಟಿಯ ಬಳದಲು ಮನೆ ಎಡು ಮುದ್ದಯ್ಯನ ಬಳದಲು ಮನೆ (ಎಕ. XI, ಹೊಳಲ್ಕೆ. ೫೬. ೬೯; 1220). [?]

**ಬಳಬುದ್ಧಿ** 'ಬಲಬುದ್ಧಿ' ನೋ.

**ಬಳಂಜ** 'ಬಣಜ' ನೋ.

**ಬಳಂಜಿಗ** 'ಬಣಜಿಗ' ನೋ.

**ಬಳಂಜು** 'ಬಣಜು' ನೋ.

**ಬಳಂಬೆ** 'ಬಣಂಬೆ' ನೋ.

**ಬಳಕೆ** 'ಬಟಕೆ' ನೋ.

**ಬಳಕೆಗಾರ** 'ಬಳಕೆಗಾಱ' ನೋ.

**ಬಳಕೆಗಾಱ**, ಬಳಕೆಗಾರ (ನಾ). ೧. ಹೆಚ್ಚು ವ್ಯವಹಾರದಲ್ಲಿರುವವನು; ನಾಡಾಡಿ; ಸಾಮಾನ್ಯಮನುಷ್ಯ : ಆ ಕ್ಷತ್ರಿಯಕುಲರತ್ನಗಾಹಾರವುಂಟು ಮಲವಿಲ್ಲ ಮೂತ್ರವಿಲ್ಲೆಂದರೀ ಲೋಕದ ಬಳಕೆಗಾಱರ ಪೇಳ್ವ ತೆಱನೆ (ಚೆಕ. ೧-೨೩); ಅವನ ನೆಲೆ ಮೋಕ್ಷಗಾಮಿಗೆ ಗಮ್ಯವಲ್ಲದೆ ನಾಡ ಬಳಕೆಗಾಱಂಗೆ ಗೋಚರವೆ (ಚೆಕ. ೪೧-೦೬). **ಬಳಕೆಗಾರ** : ೨. ಪದಾರ್ಥಗಳನ್ನು ಕೊಂಡುಕೊಳ್ಳುವವನು; ಗ್ರಾಹಕ : ಬಳಕೆಗಾರರ ಅನುಕೂಲಕ್ಕಾಗಿ ರಜಾದಿನಗಳಲ್ಲೂ ಆ ಅಂಗಡಿಯನ್ನು ತೆರೆದಿರುತ್ತಾರೆ (ರೂಢಿ).
[ಬಳಕೆ (< ಬಟಕೆ) + –ಕಾಱ]

**ಬಳಕೆಮಾತು** 'ಬಳಕೆವಾತು' ನೋ.

**ಬಳಕೆವಾತು**, ಬಳಕೆಮಾತು (ನಾ). ೧. ಆಡುಮಾತು ; ರೂಢಿಯ ಮಾತು: ಆಂಡಯ್ಯನ ಭಾಷೆ ಕನ್ನಡಜಿಲ್ಲೆಗಳ ಬಳಕೆವಾತಿಗೆ ಸಂಬಂಧಪಟ್ಟದು (ಕಪಾ. ೦೨೯); ಈ ರೀತಿ ಬಳಕೆವಾತಿನಲ್ಲಿ ತಿಳಿವಿನ ತುತ್ತತುದಿಯನ್ನು ಮುಟ್ಟಿದ ಈ ವಚನಕಾರರ ವಾಗ್ವಿಲಾಸ ಕನ್ನಡಕ್ಕೆ ವಿಶಿಷ್ಟವಾದ ಕಾಣಿಕೆಯೇ ಸರಿ (ಸುವರ್ಣ. ೦೦೫). ೨. ಪರಿಚಯದ ಮಾತು,-ನುಡಿ ; ಸಲುಗೆಯ ಮಾತು : ನಂಟನ ಬಳಕೆವಾತಿನ [ಪಾಠಾಂ. ನಂಜಿನ ಬಳಗವೀತನ] ಬಂಧುಕೃತ್ಯದ ಬಳವಿಗೆಯೊಳೀ ನಿನ್ನ ಮಗನನು ಬೇಡಿಕೊಳಲೇಕೆ (ಕುಮಾವ್ಯಾ. ಓದ್ಯೋ. ೦೦-೦೬). **ಬಳಕೆಮಾತು** : ೧. ಬಳಕೆಮಾತಿನಲ್ಲಿರುವ ಎಷ್ಟೋ ಶಬ್ದಗಳು ನಿಘಂಟಿನಲ್ಲಿ ಸೇರಿಸಲಾಗದೆ ಕಾಲಕ್ರಮೇಣ ಅವುಗಳು ಮರೆಯಾಗಿ ಬಿಡುತ್ತವೆ (ರೂಢಿ).
[ಬಳಕೆ (< ಬಟಕೆ) + ಮಾತು₁]

**ಬಳಕೆವೆರು** (ಕ್ರಿ). ರೂಢಿಯಾಗು ; ಅಭ್ಯಾಸವಾಗು : ನೋಡೆ ರಹಸ್ಯದೊಳ್ ಬಳಕೆವೆತ್ತೀ ಚಿತ್ರದಭ್ಯಾಸದಿಂ ದಹನಾಕ್ರಾಂತಮೆನಿಪ್ಪ ಮಂದಿರದವೋಲ್ ಕಾಣ್ಬಂ ಜನಾಕೀರ್ಣಮಂ (ಶಾಕುಂತ. ೬೯-೦೦೦).
[ ಬಳಕೆ (< ಬಟಕೆ) + ಪೆರು₁ (< ಪೆಱು₁) ]

**ಬಳಗ₁**, ಬಣಗ₁ (ನಾ). ೧. ಗುಂಪು; ಸಮೂಹ: " ಬಂಬಲ್. . . ಬಳಗಂ . . . ಗೊಂದಣಿ (ಉಂದಲ್) ಈ ೧೪ ಸಮೂಹಂ " (ಶಬ್ದಮ. ೩೬-೨೨೨); ಅಟ್ಟಿದಟ್ಟಿದ ಕರಿಘಟೆಗಳ ಬಳಗದಿನುಚ್ಚಳಿಸಿ ಮೊರೆವ ನೆತ್ತರ ತೆರೆಗಳ್ (ಪಂಪಭಾ. ೧೧-೩೬); ಕರುಳನಣಲೊಳಗಡಸಿ ನಲಿದುದು ಮರುಳ ಬಳಗ (ಕುಮಾವ್ಯಾ. ಶ-೩೨). ೨. ರಾಶಿ; ಒಟ್ಟಿಲು : ಎಳದಳಿರ ಬಳಗದೊಳ್ ಪೊರಳ್ದು ಪೊರಳ್ದು (ರಾಜಶೇ. ೩-೦೦೩ ವ). ೩. ಒಂದು ಮನೆ ಅಥವಾ ಒಂದು ವಂಶಕ್ಕೆ ಸೇರಿದವರು ; ನೆಂಟರಿಷ್ಟರು; ಪರಿಜನ : ದೇವದೇವ ಅನಾಥನಾಥ ಅನಿಮಿತ್ತಬಂಧುವೆ ತಾಯ್ತಂದೆ ಬಂಧು ಬಳಗವೆ (ಬಸವ. ೨-೫೯); ಜ್ವಳನಕೊಂಡವನಿಕ್ಕಿಕೊಂಡೀ ಬಳಗವೆಲ್ಲಂ ಒಂದು ಪೇರುರಿಯೊಳಗೆ ಬೀಳುವೆವು (ಚಕ್ರ. ೫೬-೨೬) ; ಕಾಗೆಯುಗುಳನು ಕಂಡು ಕೂಗುವದು ಬಳಗವನು (ಸರ್ವಜ್ಞ. ೬೬೬೬); ಮದುವೆಗೆಂದು ಪರಊರಿನ ನಮ್ಮ ಸಮಿಪದ ಬಳಗದವರೆಲ್ಲ ಬರಹತ್ತಿದರು (ಆಪೋಲೀ. ೯೦). ೪. ದಟ್ಟಣೆ; ಸಾಂದ್ರತೆ : ಕಾದಲರ ಪುರುಡಿನೆಸಕದೊಡನೆ ಇರುಳ ಬಳಗಂ ಬಡಬಡಾಗೆಯುಂ (ಪಂಪ್ರಶ್ನೆ. ೬-೬೨ ವ). **ಬಣಗ₁**: ೧. ಮಿಗೆ ಮನೋಹರಮಾದ ಬೆಳ್ಳಕ್ಕಿಗಳ ಬಣಗಮೋಯೆನಲು ತೋರಿತ್ತಗಣಿತಾಮಲತಾರಕಾ ಸಂದೋಹವಂಬರದಿ (ಕೃಷ್ಣರಾ. ೯-೫೩). [ದೇ.॥ ತಮಿ. ವಲಙ್ಕ=ದೊಡ್ಡ ಕುಟುಂಬ ; ತುಳು. ಬಳಗ ; ತೆಲು. ಬಲಗ]

**ಬಳಗ₂** (ನಾ). ನೊಗದಿಂದ ಎತ್ತು ನುಣುಚಿಕೊಳ್ಳುವಿಕೆ; ತಪ್ಪಿಸಿಕೊಳ್ಳುವಿಕೆ : ' ಬಳಗವಿಕ್ಕು ' ಪರಾ.

ಬಳಗ ಹಾಕು = ನೊಗದಿಂದ ಎತ್ತು ತಪ್ಪಿಸಿಕೊಳ್ಳು : ಎತ್ತು ಬಳಗ ಹಾಕಿ ನಿಂತು ಬಿಟ್ಟಿತು (ರೂಢಿ). ಬಳಗಾ ತೆಗೆ = ಬಳಗ ಹಾಕು ; " ಹೆಗಲು ಕೊಡದಿರು " (ಜಾನಪದಕೋ. ೨೧).
[ ದೇ.॥ ತಮಿ. ವಟುಕ್ಕು ]

**ಬಳಗಜವಳಿ** (ನಾ). ನಂಟರಿಷ್ಟರಿಗೆ ಕೊಡುವ ಬಟ್ಟೆಯ ಉಡುಗೊರೆ: ಬಳಗಜವಳಿಗೆಂದು ಬಂದ ಚೀನದುಕೂಲದ ಹಾರಾವಳಿಯ ಪಲವು ದಿಂಡುಗಳುಮಂ (ಧರ್ಮಾಮೃ. ೩-೨೫೨). [ಬಳಗ$_1$+ಜವಳಿ$_1$]

**ಬಳಗದೊತ್ತು** (ನಾ). [ವೀಶೈ] ಶರಣಸಮೂಹಕ್ಕೆ ದಾಸನಾದವನು: ಬಳದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯಾ (ಬಸವ. ೩೫೩). [ಬಳಗ$_1$+ತೊತ್ತು (<ತೊಟ್ಟು)]

**ಬಳಗಧಾರೆ** (ನಾ). ಒಂದು ಬಗೆಯ ವಿವಾಹವಿಧಿ ; ಮದುವೆಯಲ್ಲಿ ಕನ್ಯಾದಾನ ಮಾಡುವಾಗ ನಂಟರಿಷ್ಟರೆಲ್ಲ ಸೇರಿ ಎರೆಯುವ ನೀರಿನ ಧಾರೆ : ಒಕ್ಕಲಿಗರಲ್ಲಿ ಬಳಗಧಾರೆಯ ಪದ್ಧತಿಯುಂಟು (ರೂಢಿ). [ಬಳಗ$_1$+ಧಾರೆ]

**ಬಳಗವಿಕ್ಕು**, ಬಳಗವಿಕ್ಕು (ಕ್ರಿ). ನೊಗದಿಂದ ಎತ್ತು ತಪ್ಪಿಸಿಕೊಳ್ಳು : ಆ ಧೂರ್ತನೆಟ್ಟನಂದವನೆ ಮಾಡಿ ಮರ್ಯಾದೆಯೊಳೊರ್ಮೆಯೊಡಂಬಟ್ಟುಂ ಒಮ್ಮೆಯೊಡಂಬಡದೆಯುಂ ಬಳಗವಿಕ್ಕಿ ಕಾಡಿದೊಡೆ (ಶಂಕರ. ೫೩-೦೨). **ಬಳಗವಿಕ್ಕು** : ನಡವೆಟ್ಟುಗಳ್ ಬಳಗವಿಕ್ಕಿರೆ ಕಳ್ಳಿರಿ ನಕ್ಕುಮಚ್ಚಿಗಂ (ಅಭ್ಯಪು. ೯-೩೦). [ಬಳಗ$_2$+ ಇಕ್ಕು]

**ಬಳಗವಿಕ್ಕು** 'ಬಳಗವಿಂಕ್ಕು' ನೋ.

**ಬಳಗಾರ** 'ಬಳೆಗಾಱ' ನೋ.

**ಬಳಗಾಱ** 'ಬಳೆಗಾಱ' ನೋ.

**ಬಳಗಾಱಗಣ** (ನಾ). [ಜೈನ]ಶ್ರವಣರ ಪಂಗಡಗಳಲ್ಲಿ ಒಂದು : ಬಳಗಾಱಗಣದ ಮೇಘನನ್ದಿಭಟ್ಟಾರಕರ ಶಿಷ್ಯರಪ್ಪ ಕೇಶವನನ್ದಿ ಅಷ್ಟೋಪವಾಸಿ ಭಳಾರರ ಬಸದಿಗೆ . . . ಕೊಟ್ಟ ಗಟಿಕ್ದಿ ಮತ್ತರಯ್ದು (ಇಇ. IV, ೦೬೦-೦೩; 1048). [ಬಳಗಾಱ (<ಬಳೆಗಾಱ)+ಗಣ]

**ಬಳಚು** 'ಬಟ್ಟು' ನೋ.

**ಬಳಜ** 'ಬಲಜ' ನೋ.

**ಬಳತ** 'ಪಣತ' ನೋ.

**ಬಳದಡಿ** (ನಾ). ಒಂದು ಬಗೆಯ ಆಯುಧ ; ದೊಡ್ಡ ಬಡಿಗೆ : ಹೇಱುವ ಬಿಱುಗಲ್ಲು ಬಳದಡಿ ಪರಶಕ್ತಿ ಪಾಱುಂಬಳಿ ಶೂಲದಿಂದೆ ಏಱುಗಾಣಿಸಿ . . . ಗಾಱುಮಾಡಿದರು ರಕ್ಕಸರು (ಜೋಹಕ. ೩೯-೨೩); ಬಿಲ್ಲಂಬು ಬಾಕು ಬಳದಡಿ ಕೊಡಲಿ ಮೊರಗತ್ತಿ (ಗುರುಚಾ. ೩-೩೦). [ಬಳ್$_2$(=ಬಲ್$_3$)+ದಡಿ$_1$]

**ಬಳದೇವ** 'ಬಲದೇವ' ನೋ.

**ಬಳಪ**, ಬಳಹ (ನಾ). ೧. ವಿಗ್ರಹ ಪಾತ್ರೆ ಮುಂತಾದುವುಗಳನ್ನು ಮಾಡಲು ಬಳಸುವ ಒಂದು ಬಗೆಯ ಮೃದುವಾದ ಬಿಳಿ ಕಲ್ಲು: "ಬಳಪವಮದು ಶುಭ್ರೋಪಲಂ" (ಶಂಗರಾ. ೦೦೬-೦೫) ; ತಂಬುಲದ ಸೊರ್ಕು ದೊರೆಕೊಳೆ ತಿಂಬುದು ಬಳಪಮಂ (ಲೋಕೋಪ. ೦೦-೯೯) ; ಬೆಳ್ಳಿವಿರ್ ತುಱುಗಿ ನಿರಂತರಂ ಬಳಪವುಂ ತೊಡೆದಂತಿರೆ (ಸೂಕ್ತಿಸು. ೩-೩೭). ೨. ಕಪ್ಪುಹಲಗೆಯ ಮೇಲೆ ಬರೆಯಲು ಮೃದುವಾದ ಬಿಳಿಯ ಕಲ್ಲಿನಿಂದ ತಯಾರಿಸುವ ಲೇಖನಸಾಧನ : ಪಡದ ಧನಕ್ಕೆ ಲೆಕ್ಕವಿಡಲಿಂದ್ರನಗಂ ಬಳಪಂ ಧರಾತಳಂ ಕಡಿತಮಹೇಶ್ವರಂ ತಗುಳೆ ಬಾಚಿಸುವೊಂ (ಶಾಂತಿಪು. ೯-೦೪೭) ; ನಿರ್ಮಳಫಳಕಂ ನೇರಿರ್ದೊಡಂತದು ತೆಗೆದದಱೊಳ್ ಬಳಪದಿನಾಗಳ್ ಬರೆದಂ ಲಳನೆಯ ರೂಪಾತಿಶಯಮಮಂ (ದಶಕು. ೬-೩೦೦); ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ (ಕುಮಾರ. ೦-೦೫). **ಬಳಹ** : ೧. "ಶ್ವೇತಧಾತುಃ—ಬಳಹ" (ಒಶಂ. ೦೩೦) ; ಕಾಕಿಣೀ ಹಿರಣ್ಯಯೋರ್ವಾ = ಬಳಹಮುಂ ಪೊನ್ನುಮೆಂಬವಱ ಮುಟ್ಟುಹಂ ಸೂರುಳ್ (ನೀತಿವಾ. ೨೭-೩೨). ೨. ಸ್ಮರತಾಪದಿಂ ಬೆದಱಿ . . . ಧಾತ್ರಿಯೊಳ್ಬಳಹದಿಂ ಬರೆದಂ ಸತಿರೂಪನೊಪ್ಪುವಂತಿರೆ (ಧರ್ಮಪ. ೬-೨೨).

ಬಳಪದ ಕಲ್ಲು = ಬರೆಯುವ ಸಾಧನ, ಒಡವೆ, ಮೂರ್ತಿ ಮುಂತಾದುವುಗಳನ್ನು ಮಾಡಲು ಉಪಯೋಗಿಸುವ ಮೃದುವಾದ ಬಿಳಿಕಲ್ಲು : ನೀಲಗಿರಿಯಿಂದ ತರಿಸಿದ ಹಸರುಕಲ್ಲು, ಅಮೃತಶಿಲೆ, ಬಳಪದ ಕಲ್ಲು . . . ಬ್ರಿಕ್ಕಿಯ ಇತ್ಯಾದಿ ಶಿಲೆಗಳಿಂದ ಆಭರಣಗಳನ್ನು ತಯಾರಿಸುತ್ತಿದ್ದರು (ಭಾರದ. ೦೯) ; ಈ ಬಳಪದ ಕಲ್ಲಿನ ಮುಚ್ಚಳದ ಮೇಲಿನ . . . ಲಿಪಿಯಿಂದ ಹೊರಡುವ ಅರ್ಥದ ವಿಚಾರದಲ್ಲೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ (ದ್ರಾಶಿಶಿ. ೩೦). ಬಳಪದೋಲೆ, ಬಳಹದ ಓಲೆ, ಬಳಹದೋಲೆ = ಬಳಪದ ಕಲ್ಲಿನಿಂದ ಮಾಡಿದ ಕರ್ಣಾಭರಣ : ಜಾದಿಯಂ ಮುಡಿದು ಮುತ್ತಂ ತೊಟ್ಟು ಬೆಳ್ಮಡಿಯನುಟ್ಟು ಬಳಪದೋಲೆಯನಿಟ್ಟು . . . ಕೈಗೈಯೆ (ಲೀಲಾವ. ೭-೩೩ ವ); ಬೆತ್ತದ ಕಂಕಣಂ ಬಳಪದೋಲೆ ಕುರುಳ್ಗಳವಟ್ಟ ಕಾಡ ಹೂ. . .ಮಾನಂಗೊಳೆ ಪುಳಿಂದಿಯರೊಪ್ಪುವರಾ ಮಹಾದ್ರಿಯೊಳ್ (ದಶಕು. ೯-೨೭) ; ಹಳದಿಯ ಸೀರೆಯನುಟ್ಟು ಬಳಹದ ಓಲೆ ಕಿವಿಯಲ್ಲಿ ಇಕ್ಕಿ (ಸರ್ವಪ. ೬೭-೯೬೯); ಕಿವಿಯಲಿಕ್ಕಿದ ಬಳಹದೋಲೆ ಹಳದಿಯ ಉಡುಗೆ (ಬಸರ. ೯-೦೦೦).

[ದೇ.॥ ತಮಿ. ಪಲಪ್ಪಮ್, ವಲಪ್ಪಮ್; ಮಲ. ವಲಪ್ಪಮ್ ; ತುಳು. ಬಳಪು, ಬಲವು; ತೆಲು. ಬಲಪ, ಬಲ್ಪ]

**ಬಳಪಂಗೊಳ್** (ಕ್ರಿ). ಲೇಖನದ ಸಾಧನವನ್ನು ಹಿಡಿದು ಕಾವ್ಯ ಮುಂತಾದುವನ್ನು ರಚಿಸು : ಸವಣಂ ಬಳಪಂಗೊಳೆ ಗಾಂಡಿವಿ ಬಿಲ್ಗೊಳೆ . . . ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ (ಶಬ್ದಮ. ೦೬೭ ಪ್ರಯೋ). [ಬಳಪ + ಕೊಳ್$_1$]

**ಬಳಪಂದೊಡೆ** (ಕ್ರಿ). ಬಳಪದ ಕಲ್ಲಿನಿಂದ ಬಿಳಿಯ ಬಣ್ಣವನ್ನು ಲೇಪಿಸು : ಕತ್ತುರಿಸಿದ ಗಡ್ಡಮಿಟ್ಟ ತಿಲಕಂ ಬಳಪಂದೊಡೆದೋಲೆ ದೇಸೆಯಂತಿರೆ ಸುಲಿಪಲ್ ತಳತ್ತಳಿಸಿ ತಂಬುಲಮಂ ಪೊಳಕುತ್ತೆ (ಅರ್ಜನೀ. ೫-೩೦). [ಬಳಪ + ತೊಡೆ$_1$]

**ಬಳಬಳ$_1$** (ನಾ). (ದ್ರವಪದಾರ್ಥವು ಮೇಲಿನಿಂದ ಕೆಳಕ್ಕೆ ಬೀಳುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : 'ಬಳಬಳನೆ' ಪರಾ.

**ಬಳಬಳ$_2$** (ಅ). ಅಧಿಕವಾಗಿ; ಅತಿಶಯವಾಗಿ : ಪರಿಪಕ್ವಫಳಪ್ರಚಾರದಿಂ ಬಳಬಳ ಬಳ್ಕುವಾಂಬ್ರವನದಿನ್ದೆ . . . ಈಕ್ಷಿಪರ್ಗ್ಗತಿಮನೋಹರವಲ್ತೆ (ಸೌಇಇ. IX-i, ೨೯೭-೦೫; 1177).

**ಬಳಬಳನೆ** (ಅ). ಒಂದು ಅನುಕರಣಾವ್ಯಯ: ಸಂದುಕಳಾಸಂಗಳು ತಪ್ಪಿ ಅಸ್ಥಿಗಳು ಬಳಬಳನುದುರಲು (ಕನ್ನಪ. ಕ. ೬೯-೦೯೦); ನೃಪನರಮನೆಗೆ ಬಳಬಳನಾಗಳೆ ಸ್ವರ್ಗಲೋಕದ ಹೂಮಳೆಗಱೆದುದು ಚೆಲ್ಲಿದಂತೆ (ಛರಕ. ೩-೦೦೬). [ಬಳಬಳ$_1$ +— ಅನ್$_1$]

**ಬಳಬಳಿಕೆ**, ಬಳಬಳಿಕ್ಕೆ (ನಾ). [ನಾಟ್ಯ] ಒಂದು ಬಗೆಯ ನೃತ್ಯಭಂಗಿ : ಆ ನಿಲವಿನ ನಿರ್ವಾಹಮಂ ಗತಿಯ ಗಾರವಮಂ ಚಾರಿಗಳ ಚೆಂದಮಂ . . . ಬಳಬಳಿಕೆಯ ಚಂಚುರತೆಯಂ . . . ತೋಱುತ್ತುಮಿರೆ (ಕುಸುಮಾ. ೭-೩೩ ವ). **ಬಳಬಳಿಕ್ಕೆ** : ಚಾಳೆಯದೋಜೆಗಳ್ ಬಳಬಳಿಕ್ಕೆಗಳಾಂತಿರೆ. . . ಸಂದುದು ರಂಭೆಯ ಲಾಸ್ಯವಿಭ್ರಮಂ (ಅನಂಪು. ೯-೯೦). [?]

**ಬಳಬಳಿಕ್ಕೆ** 'ಬಳಬಳಿಕೆ' ನೋ.

**ಬಳಮದ್ದು** 'ಬಲಮರ್ದು' ನೋ.

**ಬಳಮರ್ದಿಕ್ಕು** (ಕ್ರಿ). ಉಗ್ರವಾದ ಮಾದಕದ್ರವ್ಯವನ್ನು ಕುಡಿಸು : ತದ್ದುಮಿತಾರಿಯ ಬಲದ ತೋಳ್ಪೆಱೆದು ಬೀ[ಟ್ವಂ]ತಾತಂ ಬೀ[ಟ್ವು]ದುಮಂಬರಚರಶ್ರೀಕಾಂತೆಗೆ ಬಳಮರ್ದಿಕ್ಕುವಂತಾತನಿಕ್ಕುವುದಂ ಕಂಡು (ಶಾಂತಿಪು. ೯-೨೩ ವ). [ಬಳಮರ್ದು ( < ಬಲಮರ್ದು ) + ಇಕ್ಕು]

**ಬಳಮರ್ದು** 'ಬಲಮರ್ದು' ನೋ.

**ಬಳಮದುರ್ಕಾಜಿ** (ನಾ). ಉಗ್ರವಾದ ಮಾದಕದ್ರವ್ಯವನ್ನು ತಯಾರಿಸುವವನು : ಕಾಮುದೇವನೆಂಬ ಬಳಮದುರ್ಕಾಜಿನ ಮಾಡಿದ ಮರ್ದಿನಂತೆ ಬಳಿದು ವಳಂಬಡೆದು (ಸಂಶಭಾ. ೯-೯೭ ವ). [ಬಳಮದುರ್ (< ಬಲವುದುರ್) +– ಕಾಜಿ]

**ಬಳಯಿಸು** 'ಬಳಿಯಿಸು' ನೋ.

**ಬಳಯುತ** 'ಬಲಯಂತ' ನೋ.

**ಬಳರಿ** 'ಭಟಾರಿ' ನೋ.

**ಬಳಲ್** 'ಬಟಿಲ್' ನೋ.

**ಬಳಲಕೊಪ್ಪ** (ನಾ). ಒಂದು ಊರಿನ ಹೆಸರು : ಸಂನಕೊಪ್ಪದ ಬಸ್ತಿಯಿನ್ಬಾ ಬಡಗಲು ಬಳಲಕೊಪ್ಪದ ಕೆಱೆ × × ಕಲು ಸರುಹ ಸಹ ಬಿಟ್ಟರು (ಎಕ. VII, ಶಿವಮೊ. ೦೦೯-೩೦; 950 ?). [? + ಕೊಪ್ಪ]

**ಬಳಲಿಕೆ** 'ಬಟಿಲ್ಕೆ' ನೋ.

**ಬಳಲಿಸು** 'ಬಟಿಲಿಸು' ನೋ.

**ಬಳಲು** 'ಬಟಿಲ್' ನೋ.

**ಬಳಲುಗಚ್ಚೆ** (ನಾ). ಜೋತಾಡುವಂತೆ ಕಟ್ಟಿದ ಕಚ್ಚೆ : ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುವ್ಯಾ.ಆ. ೦೩-೦೫); ಉಟ್ಟ ಧೋತ್ರದ ಬಳಲುಗಚ್ಚೆಯ [ಪಾಠಾಂ. ತಳಿರುಗಾಸೆಯ] ಸೃಷ್ಟಿಗಚ್ಚರಿರೂಪಿನಲಿ . . . ಬಂದನಾ ಋತುಪರ್ಣನೋಲಗಕೆ (ಶಕಶ. ೬-೨೯). [ಬಳಲು (< ಬಟಿಲ್) + ಕಚ್ಚೆ]

**ಬಳಲುಗೈ** (ನಾ). ತೂಗಾಡುವ ಕೈ : ಮಣಿಮಯಭದ್ರಭವನಾವಳಿಗಳ ನಿಲಜನ ಬಳಲುಗೈಸೋಂಕಿನಲಿ ನೆಲಕಪ್ಪಳಿಸಿ ಬಿದ್ದವು (ತೊರವ. ೩-೭-೦೭). [ಬಳಲು (<ಬಟಿಲ್) + ಕೈ₂ (< ಕೆಯ್₂)]

**ಬಳಲುಗೊರಳು** (ನಾ). ಜೋತುಬಿದ್ದ ಕೊರಳು,– ಕುತ್ತಿಗೆ : ಬಳಲುಗೊರಳಲಿ ಬೀಳುತಿರ್ದವು ಬೆಳುವ ಗಿಳಿ ಕಬ್ಬಕ್ಕಿ . . . ಕೊಂಚೆಗಳವನಿಯಾಗಲದಲಿ (ತೊರವ. ೩-೩-೦೮). [ಬಳಲು (<ಬಟಿಲ್) + ಕೊರಳು (< ಕೊರಲ್)]

**ಬಳಲುಡಿಗೆ** (ನಾ). ಜೋಲುವ ಉಡಿಗೆ; ನೇತಾಡುವ ಬಟ್ಟೆ : ಆ ಸಮಯದಲಿ ಬಂದನೊಬ್ಬನು ಭೂಸುರನು . . . ಬಾಸರದ ಬಳಲುಡಿಗೆ ವಟ್ಟೆಯ ಧೂಸರದ ಮೈದೊಡಿಗೆ ಮೆಱೆಯೆ (ಕುವ್ಯಾ.ಆ. ೨೦-೦೩). [ಬಳಲು (< ಬಟಿಲ್) + ಉಡಿಗೆ (< ಉಡುಗೆ)]

**ಬಳಲುನೋಟ** (ನಾ). ದಣಿದ ದೃಷ್ಟಿ; ಆಯಾಸಗೊಂಡ ನೋಟ : ಬಳಲುನೋಟಗಳೋರೆನೋಟವಾಗವೆಂದೊಳುನೋಟವರಸಿ ಪಾಡಿದಳು (ಶರಷ. ೦೦-೩೦). [ಬಳಲು (<ಬಟಿಲ್) + ನೋಟ]

**ಬಳಲುಮುಡಿ** 'ಬಟಿಲ್ಮುಡಿ' ನೋ.

**ಬಳಲುಹೆಜ್ಜೆ** (ನಾ). ದಣಿದ ಹೆಜ್ಜೆ; ಸೋತ ಹೆಜ್ಜೆ : ನೀಲಿಕನ್ನಡಕದ ಮುದುಕ ಬಳಲುಹೆಜ್ಜೆ ಹಾಕುತ್ತ ಹೊರಗೆ ನಡೆದನು (ಕುಸರು. ೨೨೯). [ಬಳಲು (< ಬಟಿಲ್) + ಹೆಜ್ಜೆ₁ (< ಪಜ್ಜೆ)]

**ಬಳಲೊಡಲ್** (ನಾ). ತೆಳ್ಳಗಿರುವ ಶರೀರ; ಕೃಶೋದರ : ಬಳಲೊಡಲ ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಚುಶ್ಯ. ೯೬-೨೯). [ಬಳಲ್ (< ಬಟಿಲ್) + ಒಡಲ್]

**ಬಳಲ್ಕೆ** 'ಬಟಿಲ್ಕೆ' ನೋ.

**ಬಳಲ್ಕೆಗಳೆ** 'ಬಟಿಲ್ಕೆಗಳೆ' ನೋ.

**ಬಳಲ್ಗಾಮಿಲೆ** (ನಾ). ಹೆಚ್ಚು ಆಯಾಸವನ್ನುಂಟುಮಾಡುವ ಒಂದು ಬಗೆಯ ಕಾಮಾಲೆರೋಗ : ಮೂಕತ್ವ, ಕಾಮಾಲೆ, ಊದುಗಾಮಿಲೆ, ಬಳಲ್ಗಾಮಿಲೆ, ಕುಂಭಕಾಮಿಲೆ (ಶುಕಶ. ೩೨೭). [ಬಳಲ್ (<ಬಟಿಲ್) + ಕಾಮಿಲೆ (< ಕಾಮಾಲೆ)]

**ಬಳಲ್ಗಿವಿ** (ನಾ). ಜೋತು ಬಿದ್ದ ಕಿವಿ : ಪಡೆ ಗೋಳಿಟ್ಟುದಾನೆಕುದುರೆಗಳೊರೆವ ಕಂಬನಿ ಬಳಲ್ಗಿವಿಗಳಿಂ ಜೋಲ್ದವು (ಕೃಬಿಹಾ. ೦೩-೩೦). [ಬಳಲ್ (< ಬಟಿಲ್) + ಕಿವಿ₁]

**ಬಳಲ್ಚು** (ಕ್ರಿ). (ದ್ರವ ಮುಂತಾದುವನ್ನು) ಬಳಿದುಕೊಳ್ಳು; ಬಳಿದಂ ಕೂಡಿಸು; ಬಾಚು: ವಿಸುಪ ಮಿಂಚಿನೊಳಗೆ ಸುಳಿವ ಬಣ್ಣಮಂ ಬಳಲ್ಚಿಕೊಂಡು ಚಿತ್ರಕಾಶರಾಶಿಯೆನಿಪ . . . ವಿಭೂತಿ (ಜಜೂರ. ೯-೫); ಎಳವಳಕೆಟ್ಟೆ ಬೆಳ್ಳಿಳಗಂ ಬಳಲ್ಚಿ ಶಶಿರುಚಿಯೊಳೆರೆಯಿಟ್ಟಂದದಿನೇಂ ತೊಳಗಿದುದೊ . . . ಸದ್ಯೋಜಾತವದನಂ (ಚಪಕಾ. ೫-೩). [ಬಳಲ್ ? + – ಚು₁]

**ಬಳಲ್ದುಱುಬು** (ನಾ). ಜೋತಾಡುವ ಮುಡಿ : ಪೂಗಳು ಮುಡಿಯುದ ಬಳಲ್ದುಱುಬು . . . ಸಿಂಗರಕೆ ಮಿಗಿಲಾಯ್ತನಿಸುತೆಗೆ ಋತುಮತಿಯಾಗಲು (ಕೃಬಿಹಾ. ೦೮-೨೫). [ಬಳಲ್ (< ಬಟಿಲ್) + ತುಱುಬು₂ (< ತುಱುಂಬು₂)]

**ಬಳಲ್ನಡು** (ನಾ). ಸಣ್ಣ ಸೊಂಟ; ಬಡನಡು : ಬಿಣ್ಮೊಲೆಯ ಬಡವಾಸೆಯ ಬಳಲ್ನಡುವಿನ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಚುಶ್ಯ. ೯೬-೨೩). [ಬಳಲ್ (< ಬಟಿಲ್) + ನಡು₁]

**ಬಳಲ್ನುಡಿ** (ನಾ). (ಅಲಂ) ನೋವಿನಿಂದ ಕೂಡಿದ ಮಾತು : ಕೊಟ್ಟ ಬಳಿಕಲ್ಲದೆ ಮಾತಾಡೆನೆಂಬ ಬಳಲ್ನು [ಪಾಠಾಂ. ಬಳಲುನು, ಅಳಲ್ನು, ನಳಲನು]ಡಿಯುಂ ಕೇಳ್ದು ಶಿವಂ ಕೌತುಕಂಬಟ್ಟು (ಸಂಬಶ. ೦೨-೬೮). [ಬಳಲ್ (< ಬಟಿಲ್) + ನುಡಿ₂]

**ಬಳಲ್ಮಿಡಿ** (ನಾ). ತೂಗಾಡುವ ಹೀಚು ಕಾಯಿ : ಬಳಲ್ಮಿಡಿಗಳಲ್ಲಿ ಬಲ್ಮಿಡಿಕಾಯ್ಗಳ್ . . . ತನಿವಣ್ಣೊಳಿಪ್ಪಾವಸೆದುದು (ಶೀಕೃತು. ೨-೩-೦೫). [ಬಳಲ್ (< ಬಟಿಲ್) + ಮಿಡಿ₄]

**ಬಳಲ್ಮುಡಿ** 'ಬಟಿಲ್ಮುಡಿ' ನೋ.

**ಬಳಲ್ಮೊಗ** (ನಾ). ಆಯಾಸಗೊಂಡಂತಿರುವ ಮುಖ : ಎಸೆವ ಬಳಲ್ಮೊಗಮುಷ್ಣಮನುಸಿರ್ವುಸಿರನುರಾಗವೇಱುವಕ್ಷಿದ್ವಿತಯಂ . . . ತನುಮನೋಹರಂ ಮಾನಿನಿಯಾ (ಗಂಶ. ೨-೨೦). [ಬಳಲ್ (< ಬಟಿಲ್) + ಮೊಗ]

**ಬಳವಂತ** 'ಬಲವಂತ' ನೋ.

**ಬಳವಡಿಕೆ** (ನಾ). ಒಂದು ಬಗೆಯ ಸಸ್ಯ : ಅಡಕುಪುಟ್ಟನ ಗಿಡ, ಬಳವಡಿಕೆ . . . ರಕ್ತಪುನರ್ನವ (ಕೃಮಶಿ. ೦೩-೨೩೦). [?]

**ಬಳವತ್ಸೈನ್ಯ** 'ಬಲವತ್ಸೈನ್ಯ' ನೋ.

**ಬಳವದ್ವೈರಿ** 'ಬಲವದ್ವೈರಿ' ನೋ.

**ಬಳವಳಿಸು** (ಕ್ರಿ). (?) : ಜಳಲವಮಿರ್ದ ಬೆಂಚೆಗೆ ತುಷಾತುರದಿಂ ಪರಿತಂದು ತೀರದೊಳ್ ಘಳಿಲನೆ ಕಾಲನೂಱೆ ಮೊಗಮಂ ನೆಱೆ ನೀಡಿ ತದೀಯ ಪಂಕವಾಷ್ಪುಳದ ಮಹೋಷ್ಣವೋಷ್ಣಪುಟಮಂ ಸುಡೆ ಸಾರ್ದು ಬಿದಿರ್ಚೆ ಮೋಱೆಯಂ ಬಳವಳಿಸುತ್ತುಮಿರ್ದುದು ಸಮಂತು ಮೃಗೌಘಮದಾ ನಿದಾಘದೊಳ್ (ಕುಕುಮಾ. ೬-೦೨೬ ; ಶಾಂತೀಶ್ವ. ೦೨-೨೩ ನೋ.). 'ಅಳವಟಿಸಂ' ಹೋ. [P ಇದು 'ಕಳವಳಿಸು' ಎಂಬುದರ ಅಪಲಿಖಿತವಿರಬಹುದೆ ? ]

**ಬಳವಿ** (ನಾ). ೧. ಬೆಳವಣಿಗೆ ; ವೃದ್ಧಿ : ತಿಂಗಳ ಬಳವಿಯನುಚ್ಚತರಂಗಾಂಬುಧಿ ಬಳೆವ ತೆಱದಿನನುದಿನದಿಂದಂ ತಿಂಗಳ ಬಳವಿಯನಂತಾ ಶೃಂಗಾರಾಂಬುಧಿಗೆ ಗರ್ಭವೆಂ ಬಳೆದತ್ತೊ (ಸುಕುಮಾ. ೦೦-೦೩) ; ತನುಜನ ಬಳವಿಯನೆ ನೋಡಿ ಜನಕಂ ನಲಿದಂ (ಶಮದ. ೨೦೮ ಪ್ರಯೋ) ; ಮಾಡಿದುದು ಚಿಂತಾಕ್ರಾಂತತ್ರಯನೆಮಗೀ ಮಗಳ ಬಳವಿ (ಪರ್ಣಪು. ೯-೩೯). ೨. ವ್ಯಾಪ್ತಿ; ಹರಹು : ಕಮ್ಮನೂರ ಬಳವಿಯೊಳು ಅಯ್ಗಣ್ಣುಗಂ ಬೆಟ್ಟಲೆ (ಎಕ. XIV, ಎಡತೊ. ೯೬-೦೦ ; 1079) ; ಬೆಳತಿಗೆಗಣ್ಣ ಬಳವಿಗಿದುವೆ ಗುಱು

ಯೆಂದು ಕುಟುಪನಿಕ್ಕುವಂತೆ ಕೊನೆಗೊಡಂಕೆಯೊಳ್ ತೋರಮುತ್ತಿನ ಮುಗುಳೇ ತೆಗಳ್ಚಿಯುಂ (ಚಂದ್ರಪ. ೬-೬೩ ವ). ೩. ಆಕ್ರಮಣ; ಮುತ್ತಿಗೆ : ಜಾನ್‌ಕಸ್ತೂರಿಯು ಕೊಡಗುಜನರ ಬಳವಿಗೆ ಸಿಕ್ಕಿ ಜಗಳವಾಡಿ ಬಹಳ ಜನಕ್ಕೆ ಜಾಯ ಜಖಮಿ ಆದ್ದರಿಂದ ಲಾಚಾರಾಗಿ (ರಾಜೇಂದ್ರ. ೪೦).

[ ಬಳ್$_1$ + — ವಿ$_1$ ]

**ಬಳವಿಗೆ** (ನಾ). ೧. ಬೆಳವಣಿಗೆ ; ವೃದ್ಧಿ : "ಸಚರ ನರರಲ್ಲಿ ಬಳೆದಂ ಬಳವಿ ಬಳವಿಗೆಯೆ ರುಚಿರಮಕ್ಕುಂ" (ಸಂಜೀವ. ೨೬) ; ಮಕ್ಕಳಂ ಪಡೆದವರ ಕೂಸಾಟಮವರ ಬಳವಿಗೆಯವರ ಹರೆಯದ ವಿಳಾಸಮುಂ ನೋಡಲಿವು ಮೂಱು ಮುನ್ನಂ ನೋನದವರ್ಗೆಂತು ಸಂಭವಿಪುದು (ಸಮ್ಯಕ್ತ್ವ. ೩-೦೦). ೨. ಅಭಿವೃದ್ಧಿ ; ಏಳಿಗೆ ; ಶ್ರೇಯಸ್ಸು : ಭಕ್ತನ ಬ[ಶಾಶಾಂ. ಬೆ]ಳವಿಗೆಯ ಮಾಡಿದನುಪೋಯೆಂದುದು ಸುರಸ್ತೋಮ (ಉಪ್ಯಾಖ. ೬-೦೯). ೩. ಅತಿಶಯ ; ಆಧಿಕ್ಯ ; ಹೆಚ್ಚಳ : ಇಳೆಯ ಸುಧರ್ಮಮಾರ್ಗದಲ್ಲಿ ನಲವಿಂದ ಪಾಲಿಸುತಿರ್ದರು ಹರಿಭಕ್ತಿ ಬಳವಿಗೆಯೊಳು ನಲಿದಾಗ (ಶಂಪಂ. ೩-೦೫).

[ಬಳವಿ + — ಗೆ]

**ಬಳವಿವಡೆ** (ಕ್ರಿ). ಹೆಚ್ಚಳವನ್ನು ಹೊಂದು ; ಅಧಿಕವಾಗು : ಕೆಚ್ಚು ವಿರ್ದ ಮಚ್ಚುಮನುರ್ಚಿಪೋದ ಮೇಳಮುಮನಳವಿಗಟಿಂದಲಂಪುಮಂ ಬಳವಿವಡೆದಟ್ಕಟುಮನೋಽರ್ವರೊಳ್ ನೆಟಿದು (ಆದಿಪು. ೯-೩೨ ವ).

[ಬಳವಿ + ಪಡೆ$_1$]

**ಬಳವೈರಿ** 'ಬಲವೈರಿ' ನೋ.

**ಬಳಸಿಗ** (ನಾ). ಕವಚವನ್ನು ತೊಟ್ಟವನು : "ಬಳಸಿಗಂ — ಕುಪ್ಪಸಿಗಂ" (ಕವುದ. ವ. ೩೬ ಅಡಿ) ; ಬಳಸಿಗಂ ಮೊಳೆ ತಾಳಂ . . . ಯಿಱುಕುಳಿಯಿಂವಾದಿಯಾಗಱ ಕುಳನಂ (ಕವುಧ. ೨೬). [ಬಳಸು$_3$ + — ಇಗ]

**ಬಳಸು$_1$** (ಕ್ರಿ). ೧. ಸುತ್ತುವರಿ ; ಸುತ್ತುಗಟ್ಟು : ಶ್ರೀ ತಳ್ಪುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ (ಕಬಿರಾ. ೦-೦) ; ಪಲವು ವಿಮಾನಂಗಳಂ ವಿಗುರ್ವಿಸಿ ಕ್ಷಪಣಕನ ವಿಮಾನದ ಮುಂದೆ ಬಳಸಿಯುಂ ಪೋಪಂತು ಮಾಡಿಯಾಕಾಶಮೆಲ್ಲಮಂ ವಿಮಾನಮಯಮಾಗೆ ವಿಗುರ್ವಿಸಿ (ವಡ್ಡಾರಾ. ೬೯-೬) ; ನೆರೆದರಸುಮಕ್ಕಳ ನಿಡುಗಣ್ಗಳ ಬಳಗಮೆಱಗೆ ತನ್ನಯ ಮೆಯ್ಯೊಳ್ ನಡೆ ಬಳಸಿ ಪಲರುಮಂಬಂ ತುಡೆ ನಡುವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ (ಶಂಶಭಾ. ೩-೫೦) ; ಆಗಳಾ ಕೊಳನ ಬಳಸಿ ಬಂದು ನಿರ್ಭರವಾಗಿ ಬೊಬ್ಬಿಱಿದಬ್ಬರಂಗೆಯ್ಯೆ (ಗದಾಯು. ೬-೦ ವ). ೨. ಸುತ್ತುಹಾಕು ; ಅಲೆ : "ಬಳಸು — ಭ್ರಮಣ, ಕಂಚುಕಾಂಗಯೋಃ (ಯುದ್ಧಕವಚ)" (ಕವುಧಾ) ; ಅವರೋದುವ ಕ್ಷೇತ್ರದೆ ಬಳಸಿಯುಂ ನೋಡಿಸುವುದೆಂದು ಪೇಟ್ದೊಡೆ (ವಡ್ಡಾರಾ. ೦೬೬-೨೨). ೩. ತಿರುಗು ; ಹೊರಳು : ಹೊಳೆಯ ಸುಳಿಯಲ್ಲಿ ಸಿಕ್ಕಿದ ಹುಲ್ಲು ಬಳಸುವದಲ್ಲದೆ ಅಳಿವುದಿಲ್ಲ ಮುಳುಗುವುದಿಲ್ಲ (ಕೋಳಿಶಾ. ೦೩೦-೫೦೬). ೪. ಸುತ್ತಿ ಹೇಳು : ಮುನ್ನವೆ ಮುಟ್ಟಿ ನುಡಿಯದೆ ಪೊಱಪೊಱಗನೆ ಬಳಸಿ ಕನ್ನೆಯ ಶಂಕೆಯಂ ಕಿಡಿಸಿ ಮತ್ತಮಿಂತೆಂದಳ್ (ಶಂಶಭಾ. ೯-೬೩ ವ).

ಬಳಸುಬಳಸು, ಬಳಬಳಸು (ದ್ವಿರುಕ್ತಿ) : ಹಲವು ಸೂಳ್ ಕೈ ಮುಟ್ಟಿ ನಮಿಸುತ ಬಳಸಿಬಳಸಿ ಬಳಿಕ ಹೊಡವಡುತ (ಬಸವ. ೫೮-೨೩) ; ಅನಿರೀಕ್ಷಿತವಾಗಿ ಅನೇಕಾನೇಕ ವಿಷಯಗಳು ಅವನ ಮನಸ್ಸನ್ನು ಬಳಬಳಸಿ ಹಾದು ಹೋದುವು (ನಿಕಲು. ೦೫೦). ಬಳಸಿ ಹೇಳು = ಸುತ್ತಿ ಹೇಳು; ನೇರವಾಗಿ ಹೇಳದಿರು : ಹಾಗ್ಯಾಕೆ ಬಳಸಿ ಹೇಳ್ತೀಯೋ ಮುನಿಯ ? (ವಚದಾ. II, ೧೦೫). [ಬಳ್$_2$ + — ಸು$_1$./ತುಳು. ಬಲೆಪು, ಬಳೆಪು]

**ಬಳಸು$_2$** 'ಬಟಿಸು$_1$' ನೋ.

**ಬಳಸು$_3$** (ನಾ). ೧. ಆವರಿಸುವಿಕೆ ; ಮುತ್ತುವುದು ; ಸುತ್ತುವರಿಯುವಿಕೆ : ಅಶ್ವತ್ಥಾಮಂ ಭೀಮೋದ್ದಾಮಶಾಮಜಳಧರವಿಮುಕ್ತ ಶರಾವಳಿಯ ಬಳಸಂ ಕಂಡು ಮುಗುಳ್ನಗೆ ನಕ್ಕು (ಶಂಶಭಾ. ೦೨-೬೬ ವ) ; ಬೆಳಗುಗಳ ಬಳೆದ ಬಳಗದ ಬಳಸುಗಳೊಳಗೊಳಗೆ ತೊಳಗಿ ಪೊಳೆ ಪೊಳೆದೊಳಗುಚ್ಚಳಿಸಿ ...ತಳರ್ದತ್ತಾಗಳ್ (ಕಾವ್ಯಾವ. ೨೩). ೨. ಸುತ್ತುವಿಕೆ ; ಭ್ರಮಣ : ಚಾಪಂ ಕುಟಿಲತೆಗೆಟ್ಟು ಚಕ್ರವಳಯದ ಬಳಸಂ ಮಾಂಕರಿಸಿ ಬಿಲ್ಲ ಕೊಪ್ಪು ಕೊಡಂಕೆಯ ಕೊಪ್ಪಿನವೊಲಮರೆ (ಶಾಂತಿಪು. ೯-೯೩). ೩. ಸುತ್ತುಗಟ್ಟುವಿಕೆ: ಎಳವಳ್ಳಿಯ ಬಳಸಿಂಗೊಳಗಾದಸುಗೆಯ ಚೊಂಪಂಗಳೊಳ್ (ಕಬ್ಬಿಗಕಾ. ೦೨೫) ; ದಂತಪಂಕ್ತಿಯ ನಡುವೆ ಎಂತಿಪ್ಪದದು ಜಿಹ್ವೆ ಅಂತು ದುರ್ಜನರ ಬಳಸಿನಲಿ ಸಜ್ಜನನು ನಿಂತಿಹನು (ಸರ್ವಜ್ಞ. ೬೨೧). ೪. ಸುತ್ತಿ ಕಟ್ಟುವ ಸಾಧನ : ಎಂಟುಂ ದೆಸೆಯ ದೇವತೆಗಳೆ ಗೊಳಸಾಗಿಯು ವಾಸುಗೆಯೆ ಬಳಸಾಗೆಯುಂ (ಕಇ. IV, ೫೦-೦೦ ; 1000 ? ) ; ಲೋಕಪಾಳಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ ಫಣಿಕುಳಂಗಳೇ ದಾರವಾಗಿ (ಎಕ. VII. ಶಿಕಾಂ. ೦೦೬-೩೦ ; 1054). ೫. ಸುತ್ತುಮುತ್ತು ; ಆಸುಪಾಸಂ : ಮಾಧವಿಯ ಮಂಡಪದ ಬಳಸಿನೊಳಗೆ ಪಳುಕಿನ ಕುಂಭದೊಳಂ . . . ಕಪ್ಪುರದ ಬೀಯದ ಬಾಯಿನದ ವಿಲಾಸಮಚ್ಚರಿಯಾಗೆ (ಅನಂತಪು. ೬-೩ ವ) ; ಸಡಗರದಿ ಮಹಿಳಾನಿಕರ ಬಂದುದು ಸತಿಯ ಬಳಸಿನಲಿ (ಜೈಮಿನಿ. ೬-೩೦). ೬. ಆವರ್ತ ; ಸುತ್ತು : 'ಮೂವಳಸು' ಪರಾ. ೭. ನೇರವಾಗಿ ಹೇಳದಿರುವಿಕೆ ; ಸುತ್ತು ಮಾತು : ನೇರವಲ್ಲದ ಮಾತು : ಬಳಸಿನೊಳೇಂ ತಿಂಬುದು ಮಾತುಳುಂಗಪತ್ರಪ್ರಯುಕ್ತಮಧುಮಂ ಬೇಗಂ ಕಳೆಗುಂ ಮಸಗಿದಪಾನಾನಿಳನಂ (ಕೋಕೋಶ. ೯-೦೯೬) ; ಎತ್ತುವುದೆ ಮಂತ್ರಮಿನ್ನಾ ಸುತ್ತುಂಬಳಸುಗಳ ನುಡಿಯವು (ಸುಹಾಸೀ. ೦೦-೬೬) ; ಸುತ್ತೇಕೆ ಬಳಸೇಕೆ ನೆಟ್ಟನೆ ಮಾತಾಡು (ಇಂಕಾಶ. ೨೩೯-೬೬). 'ಸುತ್ತುವಳಸು' ಪರಾ. ೮. (ಊಟ ಮೊದಲಾದ ವಿಷಯಗಳಲ್ಲಿ) ಸರದಿ ; ಸಲ ; ಬಾರಿ : ಅವರ ಮನೆಯ ಔತಣದಲ್ಲಿ ನಾಲ್ಕು ಬಳಸು ಬಡಿಸಿದರು (ರೂಢಿ). ೯. ಕವಚ ; ಚಿಲಖತ್ತು : "ಬಳಸು ಭ್ರಮಣ, ಕಂಚುಕಾಂಗಯೋಃ (ಯುದ್ಧಕವಚ)" (ಕವುಧಾ).

[ < ಬಳಸು$_1$ ]

**ಬಳಸು$_4$** 'ಬಟಿಸು$_2$' ನೋ.

**ಬಳಸುಗ** (ನಾ). ಸುತ್ತಾಡುವವನು ; ತಿರುಗುವವನು : "ವ್ರೀಣ, ಪ್ರಯಾಣಃ — ಈ ೨ ಬಳಸುಗಂ" (ಕಾಕಶ. ೦೯೯). [ಬಳಸು$_1$ + — ಗ$_2$]

**ಬಳಸುಗೆಯ್ಮೆ** (ನಾ). ಸುತ್ತಿ, ಬಳಸಿ ಮಾಡುವ ಕೆಲಸ ; ನೇರವಾಗಿ ಮಾಡದ ಕಾರ್ಯ : ನಿನ್ನ ಸೇನೆಯನೆನಗೆ ತೋರ್ದು, ನಾನದಂ ದೊರೆಗೊರೆವ ಬಳಸುಗೆಯ್ಮೆಗೆ ಬರಿದೆ ದಣಿಯದಿರ್ (ತ್ರೀಶಾಶು. ೬೦೬-೦೬೬).

[ಬಳಸು$_1$ + ಗೆಯ್ಮೆ ( < ಕೈಮೆ$_1$)]

**ಬಳಸುದಾರಿ** (ನಾ). ಸುತ್ತಾದ ಹಾದಿ ; ಹತ್ತಿರವಲ್ಲದ ಮಾರ್ಗ ; ನೇರವಲ್ಲದ ದಾರಿ : ಬಳಸುದಾರಿಯಲಿ . . . ಮುಂಬರಿಯುತಿದೆ ರಾಯನ ಸವಾರಿ ! (ಚಿಚದ. ೯-೪) ; ದಿಬ್ಬಿಗಳನ್ನು ಅಲ್ಲಿಂದ ಸಾಗಿಸುವ . . . ಉದ್ದೇಶದಿಂದ ಬಳಸುದಾರಿಯನ್ನು ತುಳಿದಿದ್ದ (ಬಳಜ. ೯೯).

[ಬಳಸು$_1$ + ದಾರಿ]

**ಬಳಸುದೊಂಗಲ್** (ನಾ). ಸುತ್ತಿರುವ ಕುಚ್ಚು, — ಗೊಂಡೆ : ದೇವಿಯರ್ಗೇಂ ಕೊಱತೆ ಪಾಂಡ್ಯಸತಿಯರ ತೊಂಡಲ್ದೀವಿದ ಘನರತ್ನಂಗಳ್ ಪಾವುಗೆಗಳ ಬಳಸುದೊಂಗಲೆಡೆಯೊಳ್ ತೋರ್ಕುಂ (ಚಿಕದ. ೩-೩೬).

[ಬಳಸು$_1$ + ತೊಂಗಲ್]

**ಬಳಹ** 'ಬಳಪ' ನೋ.

**ಬಳಹರಿ** 'ಭಟಾರಿ' ನೋ.

**ಬಳಾಕ** 'ಬಲಾಕ' ನೋ.

**ಬಳಾಕೆ** 'ಬಲಾಕೆ' ನೋ.

**ಬಳಾಢ್ಯ** 'ಬಲಾಢ್ಯ' ನೋ.

**ಬಳಾಧ್ಯಕ್ಷ** 'ಬಲಾಧ್ಯಕ್ಷ' ನೋ.

**ಬಳಾರ** 'ಭಟಾರ' ನೋ.

**ಬಳಾರಿ** 'ಭಟಾರಿ' ನೋ.

**ಬಳಾಹಕ** 'ಬಲಾಹಕ' ನೋ.

**ಬಳಾಹಿತ** (ನಾ). ಇಂದ್ರ ; ದೇವೇಂದ್ರ : ಬಳಾಹಿತಮುಖಾಮರನತೇ ಗಳಾನ್ವಿತಹಲಾಹಲಭಿಲೇಶಯ ಕಳೇಪರವಿಳಾಸದೆ ಕಳಂಕರಹಿತೇ (ರಾಜಶೇ. ೧೦-೧೧೦). [ಸಂ. ಬಲಾಹಿತ]

**ಬಳಿ$_1$** 'ಬಟಿ$_1$' ನೋ.

**ಬಳಿ$_2$** 'ಬಟ್ಬಿ$_3$' ನೋ.

**ಬಳಿ$_3$** 'ಬಲ್ಲಿ$_3$' ನೋ.

**ಬಳಿಕ** 'ಬಟಿಕು' ನೋ.

**ಬಳಿಕಜಿ** (ನಾ). ಒಂದು ಊರಿನ ಹೆಸರು : ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳಿಯುಂ ಬಳಿಕಜಿಯ ಕೀಟೇರಿಯ ಬೇರುಂಗಾಲಂ ಒಕ್ಕಲೊಳೊನ್ದು ಪೊಜಿಯುಂ ಸಲ್ವದು (ಎಕ. III, ನಂಜನ. ೧೬೩-೦೦ ; 977). [ಬಳಿ$_1$ + ಕಜಿ]

**ಬಳಿಕೋಲು** (ನಾ). ಬಿಲದೊಳಗೆ ಹೊಕ್ಕ ಪ್ರಾಣಿಗಳನ್ನು ಈಚೆಗೆ ಬರುವಂತೆ ಮಾಡಲು ಆ ಪ್ರಾಣಿಗಳು ಹೋದ ಕಡೆ ಹಾಕಿ ತಿವಿಯುವ ಕೋಲು : ಬಳಿಕೋಲು ಹಾಕಿ ನೋಡಿದಾಗ ಒಳೇಲಿ ಗೊತ್ತಾತು ! (ಮಲೆವು. ೬೬). [ಬಳಿ$_2$ (<ಬಟ್ಬಿ$_3$) + ಕೋಲು$_1$ ( < ಕೋಲ್$_1$)]

**ಬಳಿಕ್ಕ** 'ಬಟಿಕಂ' ನೋ.

**ಬಳಿಕ್ಕಂ** 'ಬಟಿಕಂ' ನೋ.

**ಬಳಿಗಳುಹಿಸು** (ಕ್ರಿ). ಊರಿಗೆ ಬಂದ ಆಪ್ತೇಷ್ಟರನ್ನು (ಊರಿನ ಹೊರಗಿನ ಜಲಾಶಯದ ವರೆಗೆ ಜೊತೆಯಲ್ಲಿ ಕರೆದುಕೊಂಡು ಹೋಗಿ) ಬೀಳ್ಕೊಡು : ಲಲಿತಲತಾಂಗಿ ಶಶಿಪ್ರಭೆಯನು ಬಳಿಗಳು ಹಿಸಿ ಜಯವರ್ಮನೃಪತಿ ಲಲನೆ ಜಯಶ್ರೀದೇವಿ ಸಹಿತ ತನ್ನ ಪೊಳಲ ಪೊಕ್ಕನು (ಶಂಶ್ರುಕಾಂ. ೧೩-೬೫). [ಬಳಿ$_2$ (< ಬಟ್ಬಿ$_3$) + ಕಳುಹಿಸು]

**ಬಳಿಗೆಲಸ** (ನಾ). ಹತ್ತಿರವಿದ್ದು ಮಾಡುವ ಸೇವಾಕಾರ್ಯ ; ಉದಾಹರಣೆ : "ಸೇವನಂ, ಸೇವನೀಯಂ, ಸೇವಿಃ, ಸೇವ್ಯಂ, ಸೈವ್ಯಂ — ಈ ೫ ಬಳಿಗೆಲಸಂ" (ಕಾಶಕ್ಕ. ೧೧೫); ಹಲವು ಸೂಳೋರಂತೆ ನುಬಿಯು ಬಳಿಗೆಲಸವ ಮಾಡಲಾಬದೆ (ಬಸಕೃ. ೧೬-೦೨) ; ಬಾರ್ಯೆ ಬಳಿಗೆಲಸ ಕಿನ್ನಾರು ನೀನೆಮಗಲ್ಲದಾಪ್ಪುರಲಿ (ಕೂರರಾ. ೫-೩-೬). [ಬಳಿ$_2$ (< ಬಟ್ಬಿ$_3$) + ಕೆಲಸ]

**ಬಳಿಗೆಲಸಿ** (ನಾ). ಹತ್ತಿರವಿದ್ದು ಸೇವೆ ಮಾಡುವ ವ್ಯಕ್ತಿ : ನಂಬಿಯು ಸಂಗಡಿಗನೋ . . . ಬಳಿಗೆಲಸಿಯೋ ಮಲ್ಲಿಕಾರ್ಜುನಪಂಡಿತರ ಮನೆಯು (ಬಸಕೃ. ೯೬-೩೬). [ಬಳಿಗೆಲಸ + — ಇ$_3$]

**ಬಳಿಗೆಲಸಿಗ** (ನಾ). = ಬಳಿಗೆಲಸಿ : "ವಾಸಯನ್ = ಬಳಿಗೆಲಸಿಗಂ" (ಕಾಶಕ್ಕ. ೨೬೫). [ಬಳಿಗೆಲಸ + — ಇಗ]

**ಬಳಿಗೊಳ್** 'ಬಟಿಗೊಳ್' ನೋ.

**ಬಳಿಚಿಸು** 'ಬಟ್ಚಿಸು' ನೋ.

**ಬಳಿಚು** 'ಬಟ್ಚು' ನೋ.

**ಬಳಿಜಸ** (ನಾ). ವಂಶದ ಕೀರ್ತಿ : ಪಗೆ ಪಳಿಗಳಿರಡಂ ತೀರ್ಚಿ ಬಳಿ ಜಸವನೆನ್ನ ಪೌರುಷತೇಜಮಂ ಬಿಡದೆ ಸಾಧಿಸಿರ್ಪೆನ್ (ಶ್ರೀರಾಮಪಾ. ೯೪೨-೯೦೫). [ಬಳಿ$_2$ (< ಬಟ್ಬಿ$_3$) + ಜಸ$_1$]

**ಬಳಿತ** (ನಾ). ಬಳಿಯುವಿಕೆ ; ಲೇಪಿಸುವಿಕೆ : "ಲೇಪನಂ, ಲೇಪನೀಯಂ . . . ಲಿಪ್ತಿಃ — ಈ ೫ ಬಳಿತಂ" (ಕಾಶಕ್ಕ. ೨೦೯). [ಬಳಿ$_1$ (< ಬಟ್ಬಿ$_1$) + — ತ$_2$]

**ಬಳಿದಪ್ಪು** 'ಬಟಿದಪ್ಪು' ನೋ.

**ಬಳಿದೊತ್ತು** 'ಬಟಿದೊಟ್ಟು' ನೋ.

**ಬಳಿದೊಳ್ತು** 'ಬಟಿದೊಟ್ಟು' ನೋ.

**ಬಳಿನಕಲು** (ನಾ). ಮೂಲಪ್ರತಿಗೆ ಹತ್ತಿರವಾದ ಪ್ರತಿ : ಬಹು ಸಂಖ್ಯೆಯ ಸ್ವಹಸ್ತ ಪ್ರತಿಗಳು ಇಲ್ಲವೆ ಅವುಗಳ ಬಳಿನಕಲುಗಳು ಅಥವಾ ಪ್ರಾಚೀನಪ್ರತಿಗಳು ನಾಶವಾಗಿ ಬಿಟ್ಟದ್ದು (ಭಾರತ. ೩೮). [ಬಳಿ$_2$ ( < ಬಟ್ಬಿ$_3$) + ನಕಲು]

**ಬಳಿನಡೆ** (ನಾ). ವಂಶಪಾರಂಪರ್ಯವಾದ ನಡವಳಿಕೆ ,— ಆಚರಣೆ : ಆಚಣ್ಣದೇವಣ್ಣಗಳು ಬಳಿನಡೆಗೆ ಕೊಟ್ಟ ಗ ೩ ಪು× ×ಯಮ್ಮೆ ಬಳಿನಡೆಗೆ ಕೊಟ್ಟ ಗ ೬ (ಎಕ. VI, ಕಡೂರು. ೫೫-೦೦; 1217). [ಬಳಿ$_2$ (<ಬಟ್ಬಿ$_3$) + ನಡೆ$_2$]

**ಬಳಿನೀರ್** 'ಬಟಿನೀರ್' ನೋ.

**ಬಳಿನೀರು** 'ಬಟಿನೀರ್' ನೋ.

**ಬಳಿನೀರ್ಗುಡಿ** 'ಬಟಿನೀರ್ಗುಡಿ' ನೋ.

**ಬಳಿನೀರ್ಗೊಳ್** (ಕ್ರಿ). = ಬಟಿನೀರ್ಗುಡಿ : ಮೊಲೆಯೆಂಬ ಲಿಂಗಮಂ ಮುಟ್ಟಿಯಧರಾಮೃತವನೊಲಿದು ಬಳಿನೀರ್ಗೊಂಡ ತಪ್ಪಿಂದಲರೆ ಮೆಯ್ಯನಾದ (ಶೀರಮ. ೮-೦). [ಬಳಿನೀರ್ ( < ಬಟಿನೀರ್) +ಕೊಳ್$_1$]

**ಬಳಿಬರು** 'ಬಟಿವರ್' ನೋ.

**ಬಳಿಭುಕ್ಕು** 'ಬಲಿಭುಕ್ಕು' ನೋ.

**ಬಳಿಮಾರಿ** (ನಾ). ವಂಶಕ್ಕೆ ಮಾರಕವಾದ ವ್ಯಕ್ತಿ : ಉಳಿದರ್ಗೀಯಾದೆ ತಾನೇ ಕಾಲಯಮನಂತತ್ಕುಗ್ರಮಂ ತಾಳ್ದಿದಾ ದಳವಾಯೀ ಬಳಿಮಾರಿಯ್ಯೆ (ಸೋಮಶೇಕ. ೬೯). [ಬಳಿ$_2$ (<ಬಟ್ಬಿ$_3$) + ಮಾರಿ$_2$]

**ಬಳಿಮುಖಿ** 'ಬಲಿಮುಖಿ' ನೋ.

**ಬಳಿಯು** 'ಬಟಿಯು' ನೋ.

**ಬಳಿಯುಂ** 'ಬಟಿಕಂ' ನೋ.

**ಬಳಿಯುಟ್ಟು** 'ಬಟಿಯುಟ್ಟು' ನೋ.

**ಬಳಿಯುಣ** 'ಬಟ್ಬಿ$^3$' ಪರಾ.

**ಬಳಿಯಿಸು, ಬಳಿಸು** (ಕ್ರಿ). ೧. ಕಸವನ್ನು ಗುಡಿಸುವಂತೆ ಮಾಡು ; ನೆಲವನ್ನು ಸ್ವಚ್ಛ ಮಾಡಿಸು. ೨. (ಬಣ್ಣ ಮೊದಲಾದುವನ್ನು) ಹಚ್ಚುವಂತೆ ಮಾಡು; ಹಚ್ಚಿಸು : ಏಳು ರೇಷ್ಮೆ ಬಟ್ಟೆಯ ತುಂಡುಗಳ ಮೇಲೆಯೂ ಸಪ್ತರಂಜನದ ಏಳು ಬಣ್ಣಗಳನ್ನು . . . ಬಳಿಯಿಸಿ (ಜ್ಯೋತಿರ್ವಿ. ೨೪೪). **ಬಳಿಸು :** ೧. ಹರಿಯ ದಾಸರಿಗಿನ್ನು ಸರಿಯುಂಟೆ . . . ಮುಸಣಿಯೂ ಕೈಯ ಕಸ ಬಳಿಸುವರು (ಪುರಂದ. ೦-೦೪೫-೦). [ಬಳಿ$_1$ (<ಬಟ್ಬಿ$_1$) + — ಇಸು$_3$]

**ಬಳಿರಿಪು** 'ಬಲಿರಿಪು' ನೋ.

**ಬಳಿವಟ, ಬಳಿವತ್ತ** (ನಾ). ಒಂದು ಬಗೆಯ ತೆರಿಗೆ (?) : ಆ ಶಾಂತಿ ಗ್ರಾಮದ ಸಿದ್ಧಾಯದ ಮೊದಲ ಹೊಂನೊಳಗೆ ಆಯ್ದು ಹೊಂನನು ಆವಳ ಸಮಸ್ತ ಬಳಿವಟ ನೋಡಿ (ಪ್ಪಅರಿ. ೧೯೪೦,೩-೨೯; 1216). **ಬಳಿವತ್ತ:** ಒಕ್ಕಲೊಳೊನ್ದು ಪೊಜಿಯುಂ ಕಯ್ಯುಂ ಪದಿಕ್ಕೊಳುಂ ಭತ್ತಮುಂ ವಿಷಾಸಲಂ ಬಳಿವತ್ತಮುಂ ಸಲ್ವದು (ಎಕ. III,ನಂಜನ. ೦೬೩—೦೦; 977). 'ಬಳಿ$_3$' ಪರಾ. [?]

**ಬಳಿವತ್ತ** 'ಬಳಿವಟ' ನೋ.

**ಬಳಿವರ್** 'ಬಟಿವರ್' ನೋ.

**ಬಳಿವರಿ** (ಕ್ರಿ.) ಸಮೀಪಕ್ಕೆ ನುಗ್ಗು; ಹತ್ತಿರಕ್ಕೆ ಧಾವಿಸು : ಚೆಲ್ಲಿದರೆ ಬಳಿವಂದು ಚೌಪಟಮಲ್ಲ ಹೊಕ್ಕನು ಹೊಯ್ದು ಗದೆಯಲಿ ಘಲ್ಲಿಸಿದನು (ಕುಮಾ.ದ್ರೋ. ೧೩-೩೦). [ಬಳಿ$_{2}$ (<ಬಟ್ಟಿ$_{3}$) + ವರಿ$_{1}$]

**ಬಳಿವರು** 'ಬಟಿವರ್' ನೋ.

**ಬಳಿವಿ** (ನಾ). (?) : ವಿವಿಧಮಣಿಕಿರಣಚಯದಿಂದವನಿಪನಂ ಬಳಿದು ಕೊಟ್ಟ ನರ್ಥಿಜನಕ್ಕಾ ದಿವಿಜೇಂದ್ರಂ ಬಳಿವಿಯ ಮಂತ್ರವಾದಿಯೆನೆ ನೆರೆದ. ಮಕುಟ ಬದ್ಧಸಮಾಜಂ (ಶಾಂತಿಪು. ೧೦-೧೦).

[ಽ ಇದು 'ಜಳವೆ = ದಂಡ' ಎಂಬುದರ ಅಪಲಿಖಿತವಿರಬಹುದು]

**ಬಳಿವಿಡಿ** 'ಬಟಿವಿಡಿ' ನೋ.

**ಬಳಿವೆಳಗು** (ನಾ.) ಹತ್ತಿರದ ಬೆಳಕು : ಬಳಿವೆಳಗಿನ. . .ಬೆಳ್ವೆಳಗಿನ ಬೆಳಸಿನ ಸಿರಿಯೆನೆ ತೊಳತೊಳಗಿದುದು ಮೂರ್ತಿ ಚಂದ್ರಪ್ರಭನಾ (ಕಬ್ಬಿ.ಸು. ೦೯೦ ಪ್ರ.ಪ್ರ.). [ಬಳಿ$_{2}$ (<ಬಟ್ಟಿ$_{3}$) + ಬೆಳಗು$_{2}$]

**ಬಳಿವೊರ್ದು** (ಕ್ರಿ). ಸಮೀಪಿಸು ; ಜೊತೆಗೂಡು : ರಾಹು ತೊರೆದೊಡನೆ ಶಶಿಯಂ ರೋಹಿಣಿ ಬಳಿವೊರ್ದಿದಂತೆ . . . ಸೇರ್ದೆಯೆನ್ನಯ ಬಳಿಯಂ (ಶಾಕುಂತ. ೦೦೯-೦೮೩). [ಬಳಿ$_{2}$ (<ಬಟ್ಟಿ$_{3}$) + ಪೊರ್ದು$_{1}$]

**ಬಳಿಶರ** (ನಾ). ಒಂದರ ಹಿಂದೆ ಒಂದು ಬರುವ ಬಾಣ : ನೂಱುಶರದಲಿ ಬಳಿವಿಶಿಖ ನಾನೂಱಱಲಿ ಬಳಿಶರಕೆ ಬಳಿಶರವಾಱುಸಾವಿರದಿಂದ ತಱಿದನು ಪಾರ್ಥನಿರಿಬಲವ (ಕುಮಾ.ಗ. ೨-೦೯).

[ಬಳಿ$_{2}$ ( < ಬಟ್ಟಿ$_{3}$ ) + ಶರ ]

**ಬಳಿಸರಳು** (ನಾ). = ಬಳಿಶರ : ಸರಳನೆಚ್ಚನು ಸರಳನಾ ಬಳಿಸರಳು ಮುಂಚಿದುದಾ ಸರಳ ಬಳಿಸರಳು ಮುಂಚಿದುದು (ಕುಮಾ.ಕ. ೩-೦೯); ಬಳಿಸರಳ ಸಂಧಾನದಲಿ ಬಳಿಕುಳಿಕಲಿನ ರಕ್ಕಸರ ಜವಪುರದೊಳಗೆ ಹೊಗಿಸಿದನು (ತೊರರಾ. ೦-೧೦-೨೨).

[ಬಳಿ$_{2}$ (<ಬಟ್ಟಿ$_{3}$) + ಸರಳು$_{1}$ (<ಸರಲ್$_{1}$)]

**ಬಳಿಸಲ್** 'ಬಟಿಸಲ್' ನೋ.

**ಬಳಿಸಲಿಸು** (ಕ್ರಿ). ಹಿಂದೆ ಬರು; ಅನುಸರಿಸು : ರಿಪುಜಾಲವನು ನೀ ಖಂಡಿಗಳೆ ಬಹೆವಾವು ಬಳಿಸಲಿಸಿ (ಕುಮಾ.ದ್ರೋ. ೬-೨೭).

[ಬಳಿ$_{2}$ (<ಬಟ್ಟಿ$_{3}$) + ಸಲಿಸು]

**ಬಳಿಸಾರ್**, ಬಳಿಸಾರು (ಕ್ರಿ). ಹತ್ತಿರ ಬರು ; ಸಮೀಪಿಸು : ತುಂಬಿ ಕವಿವಾವ್ರುಮನಭ್ರಮೆ ಗೆತ್ತು ಕೇಕಿಮಂಡಳಿ ಬಳಿಸಾರ್ದು ನರ್ತಿಸುಗುಂ (ಶಬಶಂ. ೨-೪೭); ಅಕ್ಕಟಾ! ಎಂದೊಬ್ಬನಳಲಿ ಬಳಿಸಾರ್ದು . . . ಕರೆದಂ (ಶಾಬೂರ. ೯೩-೦೯೭). **ಬಳಿಸಾರು :** ಏನನೊ ನುಡಿಯುತಲಿರುವಳದೇನೆಂದು ಬಳಿಸಾರಿ ಮೆಲ್ಲನೆ ಕೇಳು (ಇಂಶಾಕ. ೧೭೭-೨೪).

[ಬಳಿ$_{2}$ (<ಬಟ್ಟಿ$_{3}$) + ಸಾರ್$_{1}$]

**ಬಳಿಸಾರು** 'ಬಳಿಸಾರ್' ನೋ.

**ಬಳಿಸಾಲು** (ನಾ). ಅಕ್ಕಪಕ್ಕದ ಪಂಕ್ತಿ ; ಸಮಾನಾಂತರದ ಸಾಲು : ಹರಗಬಲ್ಲೆನು ಬಿತ್ತಬಲ್ಲೆನು ಅರಿದು ಬಳಿಸಾಲುಗಳ ಹೊಡೆವೆನು (ರೀವಶಾ. ೦-೦೯). [ಬಳಿ$_{2}$ (<ಬಟ್ಟಿ$_{3}$) + ಸಾಲು$_{2}$ (<ಸಾಲ್$_{3}$)]

**ಬಳಿಸು** 'ಬಳಿಯಿಸು' ನೋ.

**ಬಳಿಸೇರು** (ಕ್ರಿ). = ಬಳಿವೊರ್ದು : ಆ ವ್ರತಕ್ಕೆ ದೀರ್ಘಾಯುವಾದ ನೀವು ಬಳಿಸೇರಿ ತಮ್ಮನ್ನು ಆದರಿಸಬೇಕೆಂದು ದೇವಿಯರು ಆಜ್ಞಾಪಿಸುವರು (ಶಾಕುಂತ. ೨೯-೫). [ಬಳಿ$_{2}$ (<ಬಟ್ಟಿ$_{3}$) + ಸೇರು$_{1}$ (<ಸೇರ್)]

**ಬಳಿಸೇವೆ** (ನಾ). = ಬಳಿಗೆಲಸ : ರಾಜಂಗೆ ಬಳಿಸೇವೆಗೆಯ್ವರೊಳು ನಚ್ಚಿನವರಾರು (ಶಾರಶಿ. ೦೭-೩೯೯). [ಬಳಿ$_{2}$ (<ಬಟ್ಟಿ$_{3}$) + ಸೇವೆ$_{1}$]

**ಬಳಿಹರ** 'ಬಲಿಹರ' ನೋ.

**ಬಳು** (ನಾ). ಒಂದು ಅಳತೆ (?) : ಮೂಡಣ ಹೆಗ್ಗಡ್ಡ ಅದಱ ಮೇಗಣ ಕೊಡಂಗೆ ಎರಡಱಲ್ಲಿಯು ಮೂಡೆ ೨ ಬಂಣಟೆ ಮೂಡೆ ೨ ಮುಂಡಿನ ಮಾಡುವ ಬಳು ಮೂಡೆ ೧ ಚಿಕ್ಕಬಿಟ್ಟುವ ಕೊಡಂಗೆ ಮೂಡೆ ೧ (ಎಪಿ. XXVII, ೦೬೨-೪೯; 1266). [?]

**ಬಳುಂಕು** 'ಬೆಳ್ಕು$_{1}$' ನೋ.

**ಬಳುಕಿಸು** 'ಬಳ್ಕಿಸು' ನೋ.

**ಬಳುಕು$_{1}$** 'ಬೆಳ್ಕು$_{1}$' ನೋ.

**ಬಳುಕು$_{2}$** 'ಬೆಳ್ಕು$_{2}$' ನೋ.

**ಬಳುಕುನಡೆ** (ನಾ). ತೊನೆಯುತ್ತಾ ನಡೆಯುವುದು : ವಿಲಸಿತದ ವಿಭುವಿಂಗೆ ದಟ್ಟಡಿ ಬಳುಕುನಡೆ ಮೆಲ್ನಡೆಗಳೆಂಬಿವು ತಿಳಿವವರ ಮನಸಿಂಗೆ ಮಱೆ ತಾನಲ್ಲವೇ (ತೊರರಾ. ೦-೮೭). [ಬಳುಕು$_{1}$ (<ಬೆಳ್ಕು$_{1}$) + ನಡೆ$_{2}$]

**ಬಳುಕುನೀರು** (ನಾ). ಒಂದು ಬಗೆಯ ತೆರಿಗೆ : ಕಳುವಡೆ ನಾರಡೆ ಬಳುಕುನೀರು ಊರಸಂತೆ ಮೊದಲಾದ ಹಲ ಉಪಾಧಿಗಳು ಸಹ . . . ಅನುಭವಿಸಿಕೊಂಡು (ಸೌಇಇ. IX–ii, ೯೬೬–೬; ಸು. 1471). [?]

**ಬಳುಕುಮೈ** (ನಾ). (ಒಯ್ಯಾರದಿಂದ) ತೊನೆಯುವ ಶರೀರ : ಕೈಮುಗಿವ ಪ್ರಮದೆಯರ ಕಂಕಣಗಳಲುಗುತ್ತ ಕುಂಬಿಡುವ ಬಳುಕು ಮೈಗೆಚ್ಚರಿಕೆಯುಲಿಯೆ (ಮಲೆದೇ. ೩೦-೪).

[ಬಳುಕು$_{1}$ (<ಬೆಳ್ಕು$_{1}$) + ಮೈ (<ಮೆಯ್$_{2}$)]

**ಬಳುವಟ್ಟೆ** (ನಾ). ಕಾಡುದಾರಿ : ನಾಯಿಗಳ ಹಾಗೆ ಬಳುವಟ್ಟೆ ತಿರುಗಾಡಿಕೊಂಡು ಇರುವುದು (ಮುಕ್ತಕ್ಕ. ೨೭). [< ಪಳುವಟ್ಟೆ]

**ಬಳುವಳ** 'ಬಳ್ವಳಂ' ನೋ.

**ಬಳುವಳಿ** 'ಬಟಿವಟಿ$_{1}$' ನೋ.

**ಬಳುವಳಿಕೊಡು** 'ಬಟಿವಟಿಗೊಡು' ನೋ.

**ಬಳುವಳಿಗೊಡು** 'ಬಟಿವಟಿಗೊಡು' ನೋ.

**ಬಳುವೆ** (ನಾ). (?) : ಸುಳಿದವಾರತಿ ಕರ್ಪೂರದ ಪ್ರಜ್ವಲಿಪ ಮಾಣಿಕದೀಪ್ತಿಗಳ ಪಸು[ಪಾಠಾಂ. ಬಲು]ಗಳವೆಗೂಳಿನ ಬಳುವೆಗಳಲುಪ್ಪುಗಳ [ಪಾಠಾಂ. ಬಳುವೆಯುಪ್ಪರತಿಯ] ಸೂಸಿಕೆಯು ಕಳಕಳದೊಳೊಪ್ಪಿದುದು ಪಾರ್ಥಿವನಿಳಯವು (ತೊರರಾ. ೬-೫೫-೦೬); "ಭೀತರ ಸೋಂಕು ತೆಗೆಯುವ ಒಂದು ವಿಧಿ" (ತೊರರಾ. ಕೋಶ). [?]

**ಬಳೆ$_{1}$**, ವಳೆ$_{1}$ (ಕ್ರಿ). ೧. (ಮಾನವ, ಪ್ರಾಣಿ, ಪಕ್ಷಿ ಮೊದಲಾದಂವು ಶಾರೀರಿಕವಾಗಿ ಅಥವಾ ವಯಸ್ಸಿನಲ್ಲಿ ಅಥವಾ ಮಾನಸಿಕವಾಗಿ) ವೃದ್ಧಿಯಾಗು; ವರ್ಧಿಸು : ಕೂಸಿಂಗೆ . . . ಎರಟ್ಮೂಱುತಿಂಗಳಿಂಗೆ ತಾಯ್ ಕಟಿದೊಡೆ ಬಂದ ನಂಟರೆ ನಡಪೆ ಬಳೆದೊಡೆ (ವಡ್ಡಾರಾ. ೭೬-೦೭); ಆ ಕಾಲದೊಳ್ ನಾನೆನ್ನ ಮಾವಂ ಕೊಂತಿಭೋಜನ ಮನೆಯೊಳ್ ಬಳೆವಂದು (ಪಂಪಭಾ. ೦-೦೦೬ ವ); ಆ ಕಪಿ ಕಾಂ ತಾಪಸರ ಸಮೀಪದೊಳೆ ಬಳೆದ ಕಾರಣದಿಂ ತತ್ತ್ವವೇದಿಯಪ್ಪುದಱಿಂ (ಪಂಚತಂ. ೦೯೩-೦೪); ಫಳರಸದಿ ಬೆಳೆವ ನವಶಾಲೀವನಂಗಳಿಂ ತನಿವಾಲನುಂಡು ಬಳೆವರಗಿಳಿಗಳುರ್ಕಿನಿಂ (ಹರಿಶ. ದೀ. ೨-೦೦); ಶಶಿ ಮೂಡಿ ಬಳೆದನಾಗಸದೊಳು (೪ಂಸಪ. ೯-೦೬೯). ೨. ಗಿಡ, ಮರಗಳು ವೃದ್ಧಿಯಾಗು; ಸಸ್ಯಗಳು ಬೆಳೆ : ದೆಸೆಗಳಂ ತಡವರಿಸಿಕೊಳ್ವಂತೆ ಬಳ್ವಳ ಬಳೆದು ಸೊಗಯಿಸುವ ಪೆಮ್ಮರಂಗಳಿಂದಂ . . . ಅತಿಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು (ಪಂಪಭಾ. ೬-೨೯ ವ) ; ಬಾನುದ್ದಂ ಬಳೆದಿರ್ದ ಪೆಮ್ಮರದ ತುಟ್ಟತುದಿಯ ಕೊಂಬನೆತ್ತಿ ಇಟ್ಟಾಯಾಸದಿಂದಂ (ಶಾರಶಾಂ. ೯೬-೦೦). ೩. ಹುಟ್ಟು ; ಮೊಳೆ ; ಅಂಕುರಿಸು : ವಿರೋಧಿಮದೇಭಮಸ್ತಕಸ್ಥಳಜಳರಾಶಿಯೊಳ್ ಬಳೆದ ನಿರ್ಮಳನಿರ್ವ್ರಣವೃತ್ತಮೌಕ್ತಿಕಾವಳಿಯನೆ ತರ್ಪುದು (ಪಂಪಭಾ. ೧೦-೪೭); ಎಳವೆಱೆ ಬಳೆಯುದ ಗಗನಸ್ಥಳಿ (ಮಲ್ಲಿ. ೩-೦೦೦). ೪. (ಭಯಂ, ಕೋಪ, ಆಶ್ಚರ್ಯ, ಅನುರಾಗ ಇತ್ಯಾದಿ

ಭಾವನೆಗಳು) ಉಂಟಾಗು; ಮೂಡು : ಬಗೆಯೊಳಗೆ ಬಳೆದ ಭೀತಿಯಿ ವಿಗೆ ಭವದಾಸ್ಥಾನಭೂಮಿಯಂ ಪುಗುಗೆ (ಆದಿಪು. ೧೪-೨೨); ಆದ ಮುಳಿಸಿಂದಮಾಗಳ್ ಮೋದುವ ಬಗೆ ಬಳೆಯೆ (ಶಂಕಪು. ೨-೬೨); ಬಳೆದ ಹೃದಯಾನುರಾಗದಿನಿಳೇಶನಾಗಳ್ ನಿಜಪ್ರಧಾನಂ ಪ್ರಜ್ಞಾಬಳನ ತನಯಂಗೆ ಮೇಧಾವಿಳನೆಂಬುಚಿತಾಭಿಧಾನಮಂ ತಾನಿತ್ತಂ (ಕಂಸುಚಪು. ೬-೦೦೭); ಆ ಮುಕುಂದನ ದಿವ್ಯನಾಮಪ್ರೇಮರಸಕಿದು ಸಿದ್ಧಿಯೆಂದೆನಲಾ ಮಹಾಸ್ಥಾನದಲಿ ಬ[ಶಾಂ]. ಬೆಳೆದುದು ಬೆಟಗು ಬಿಂಕದಲಿ (ಕುವ್ಯಾ.ಕ. ೦೩-೩). ೫. (ಗಾತ್ರದಲ್ಲಿ) ಬೆಳವಣಿಗೆಯನ್ನು ಹೊಂದು; ದೊಡ್ಡದಾಗು ತೋರವಾಗು : ನಿನ್ನನಾ ತನ್ವಿಯೆತ್ತಂ ಬಳೆದುತ್ತುಂಗಸ್ತನಂ ವರ್ಣ್ದರದೆ ಬಳಸಲ್ (ಆದಿಪು. ೪-೨೦); ಎನಿತ್ತನಿತ್ತಂಬುಜಪತ್ರನೇತ್ರೆಯಾ ಘನಸ್ತನಂಗಳ್ ಬಳೆಗುಂ ಕಿರಾತೆಯಾ (ಕಾವ್ಯಾ.ಶ. ೩೩೪); ಚೊಚ್ಚಂಗಂ ತರ್ಗಿದವು ನಾಭಿ ಪೊಚಿಪೊಣ್ಮಿತಸಿಯ ನಡುವುಂ ಬಳೆದುದು (ಕಂಪು. ೪-೦೦). ೬. ಪೈರಿನಿಂದ ತುಂಬು : ಬಹುಪೋಷದಿವ್ಯಾವಿವ ಸಹಕಾರದ ಸೊನೆಯು ಸೋನೆ ಬಳೆಯಿಸೆ ಬಳೆಗುಂ ಮಹಿ (ಕಾಂತಪು. ೦-೬೦); ಪಸಿದೆಮ್ಮ ಬಳೆದ ಕೆಯ್ಯಂ ಪೊಕ್ಕಂತೆ (ಧರ್ಮಾಮೃ. ೭-೮೩). ೭. ಎತ್ತರವಾಗು; ನೀಳವಾಗು; ಔನ್ನತ್ಯವನ್ನು ಹೊಂದು: ಬಳೆಯಲ್ಕಣ್ಮದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ಮೆ ಮುಕ್ಕಳಿಸಲ್ಕಂಬುಧಿ ಸಾಲ್ದುದಿಲ್ಲ (ಶಂಕಪು. ೪-೨೦); ಆವ ನಗಂ ಮತ್ತಮುಮಮದೆಂದು ಬೀಗಿ ಬಳೆದಂತಿರ್ಕುಂ ಜಿನಸ್ನಾನಪಾವನಪಾ ನಿರ್ಜರನಿರ್ಜರೋಜ್ವಲಮಣಿ ಶ್ರೀಕಂದರಂ ಮಂದರಂ (ಅರ್ದನೇ. ೦-೫೩); ಮಾಯಕಾಂತನ ಮೂಲಶಕ್ತಿಯ ತೋಟಿನೆ ಬಳೆದು ತೋಱಿಸಿದ (ಸೋಹಕ. ೦೦-೬೭); ಅಗಲಕೆ ಭೂಮಂಡಲ ಕಿಱಿದುಬ್ಬಲು ಮಿಗೆ ತಾಳದಷ್ಟದಿಕ್ಕೆಂದು ನಗುತಾಗ ಮೇಲಕ್ಕೆ ಬಳೆದೋಲು ಹೊಂಗೋಂಟೆ ಗಗನವುಂಡಲವ ಮುಟ್ಟಿಹುದು (ಕಂಪ. ೬-೪). ೮. ಉದ್ದವಾಗು ; ಲಂಬವಾಗು ; ಚಾಚು : ಬಳೆದ ಜಡೆ ನಿಮಿರ್ದ ಬಳ್ಳಿಗಳೊಳೆ ಪಣೆದು ವಿಷೋರಗಾನಲಾರ್ಚಿಗಳಿಂದಂ ವಿಳಿರ್ದುವು (ಆದಿಪು. ೦೪-೦೪೨); ಪೆಗಲ್ವರಂ ಬಳೆದು ರಂಜಿಸುಗುಂ ಜಡೆಗಳ್ಮೃಗಾಕ್ಷಿಯಾ (ಕಾದಂಪು. ೬೬೪); ಬೋಳಾದ ತಲೆಯ ರೋಮಂ ಮೇಲೆನಿಸಿದ ಬೆರಲ ಮುಱಿದ ಸೆಳ್ಳುಗುರುಂ ಸಲ್ಲೀಲೆಯೊಳೆ ಬಳೆವ ತೆಱದಿಂ (ಧರ್ಮಾಮೃ. ೪-೪೦); ಬಳೆದೆಸೆದಿರ್ಪ ಸೆಳ್ಳುಗುರ ಮೆಯ್ಯೊಳಿಪಿಂ ಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದಳಾಕೆ (ಕಬ್ಬಿಗ. ೬೪). ೯. ಹೆಚ್ಚಾಗು ; ಅಧಿಕವಾಗು : ಬಳೆದ ತಮವೆಂಬ ಕರಡವು(?) ನಳವಲ್ಲದೆ ಸುಟ್ಟು ಕಿಡಿಸಲೆಂದು . . . ಅರ್ಕನುದಯಂಗೆಯ್ದಂ (ಕಾವ್ಯಸಾ. ೬೭೦ ಸೂರ್ಕ್ರ); ಅನಲಂ . . . ನೀಳ್ದು ಬಳೆದರ್ವಿಸೆ ಪರ್ವಿದನಾ ವನಾಂತಮಂ (ಶಂಕಪು. ೫-೮೩); ದಿವದಿವಸಂಗಳಿಂ ಕುಂದುವುವಲ್ಲದೆ ಬಳೆಯವಾಯುವುಂ ವಪುವುಂ (ಅಕಪು. ೨-೬೪); ಬೇಸಗೆಯಿಂದ ಬಳೆದ ಬಿಸಿಲಿನೊಳು ಬೆಂದು . . .ನಿಂದನು ಮರದ ನೆಳಲೊಳು (ಹಂಬ. ೨-೩೨). ೧೦. ಹೆಚ್ಚಿಸು; ಅಧಿಕಗೊಳಿಸು; ದೇವಮಾತೃಕವೆನಿಪ್ಪ ಪೊಲಂ ನವಗಂಧಶಾಳಿಯಂ ಬೆಳೆವುದು ರಮ್ಯನಂದನ ವನಾಳಿ ವಿಯೋಗಿಜನಕ್ಕೆ ಬೇಟಮಂ ಬಳೆವುದು ನಾಡ ಕಾಡ ಬೆಳಸಿಂ ಬೆಳಸಾವಿಷಯಾಂತರಾಳದೊಳ್ (ಶಂಕಪು. ೦-೩೪). ೧೧. ಹಬ್ಬು ; ವ್ಯಾಪಿಸು ; ಹರಡು : ಕೆಯ್ಬತ್ತಿ ನಿಂದಿರೆ ಪತ್ತಿತ್ತು ಸಮಸ್ತಧಾತ್ರಿವಳಯಕ್ಕೆಂದುಂ ದಿಶಾದಂತಿಗಳ್ವರೆಗಂ ತಂದೆಯ ಕೀರ್ತಿಯೇ ಬಳೆದುದೋ (ಗದಾಯು. ೦-೦೨); ಸಕಲಲೋಕಂಗಳೊಳ್ ಶಿವಭಕ್ತಿ ಬಳವುತಿರ್ಪುದು ದಿನದಿನಕ್ಕೆ (ಕಪು. ೩-೬). ೧೨. ಅಭಿವೃದ್ಧಿಯಾಗು ; ಏಳಿಗೆಯನ್ನು ಹೊಂದು ; ಪ್ರಗತಿ ಹೊಂದು : "ಬಳಿ-ಪ್ರವೃದ್ಧೌ, ಕಾಚಭೂಷಣೇ ಚ" (ಶಮಧಾ) ; ಇಂಚೆಯ ಪಸವಿನ ಬಱದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದಂ ವಿರಂಚಿಯ ಕೆಯ್ಪಿಡಿಯವೊಲಾದುವಾ ನಾಡರ್ಗಳ್ (ಶಂಕಪು. ೬-೫೦); ಪೆಣ್ಣ ಪೆತ್ತವರ ಬಳಗ ಬಳೆವುದು ಬೇಗ ಪೆಣ್ಣ ಪೆತ್ತವರು ಪೆರ್ಚುವರು (ಹರಿಬ. ೩-೪). ೧೩. ನೆರವೇರು ; ಈಡೇರು : ಬೆಳೆದುದು ಹಿಮವರ್ಷದೆ ರಾತ್ರಿಳಕೆಯೆನಲ್ ಬಳೆದುವಿರುಳ್ಗಳೊಳ್ ಸುರತಂಗಳ್ ಬಳೆದುವು ದಂಪತಿಶತದೊಳ್ ಬಳಿವಿನೆಗಂ ಮದನನಾಜ್ಞೆಯುಂ ಭುಜಬಲಮುಂ (ಜಗಪು. ೦೪-೦೭) ; ಎಲೆ ಸಖಿ, ನಿನಗೆ ಸುಖಮಜ್ಜನ ಬಳೆಯುತ್ತ ? (ಗಾಕುಂತ. ೫೦-೦೩). ೧೪. ಸಂಪಾದಿಸು ; ಪಡೆ ; ಹೊಂದು : ಇಳೆಯೊಳಿದ ಹೇಳುವರ ಕೇಳ್ವರ ಬಳಗವಾಕ್ಷಣ ಪುಣ್ಯರಾಶಿಯ ಬಳೆವುದೆಂಬುದನಱಿದು ಭಾರತಕೃತಿಯ ಹೇಳುವೆನು (ಸಂಶಕ. ೦-೨೮).

ವಳೆ₁ : ೨. ಎಟ್ಟದಿನ್ವರು ನರಮೊಕರಮನೊಡೆದೊಡೆಪ್ಪಡೆತ್ತುದು ಪುಣಿಸೂರ್ಪ್ನಲ ನೆಲ್ಲುಪಾಣ್ಡಿಯು ವಳೆವದು (ಪ್ಸ.ಅಂ. ೦೪೩೦, ೩೬-೮; ೩ನೆಯ ಕತ).

ಬಳೆವಳೆ (ದ್ವಿರುಕ್ತಿ) : ತನ್ನ ಹಾಶಿಶಯವಿಶುದ್ಧಗರ್ಭಾವಾಸದೊಳಾ ಸಮುಸ್ತಗುಣನಿವಾಸಂ ನೆಲಸಿ ಬಳೆವಳೆಯೆ (ವರ್ಧಪು. ೦೩-೬೫ ವ).

☞ 'ಬಳೆ' ಮತ್ತು 'ಬೆಳೆ' ಎಂಬ ಎರಡು ಧಾತುಗಳ ಬಗ್ಗೆ ಕನ್ನಡದಲ್ಲಿ ಪೂರ್ವಕವಿಗಳು, ವಿದ್ವಾಂಸರು ಅನುಸರಿಸುತ್ತಿದ್ದ ಒಂದು ಪದ್ಧತಿಯಿದ್ದಂತೆ ಕಾಣುತ್ತದೆ. ಕೇಶಿರಾಜನು–"ಬೆಳೆಯೆಂಬ ಧಾತು ಸಸ್ಯಾವಳಿಯೊಳ್ ಬಳೆಯೆಂಬ ಧಾತು ಮಿಕ್ಕೆಡೆಯೊಳ್ ಸಂಗಳಿಕುಂ" ಎಂದು ಹೇಳಿದ್ದಾನೆ. ಅದೇ ಅಭಿಪ್ರಾಯವನ್ನು 'ಕರ್ನಾಟಕ ಸಂಜೀವನಂ' ಎಂಬ ನಿಘಂಟಿನ ಕರ್ತೃವಾದ ಶೃಂಗಾರಕವಿಯು "ಅಚರಂಗಳಲ್ಲಿ ಬೆಳೆದುದು ಬೆಳಸೆನಿಕ್ಕುಮಾ ಸಚರನರರಲ್ಲಿ ಬಳೆದಂ ಬಳವಿ ಬಳವಿಗೆ ರುಚಿರಮಕ್ಕುಂ" ಎಂದು ವಿವರಿಸುತ್ತಾನೆ. ಶೃಂಗಾರಕವಿಯ 'ರುಚಿರಮಕ್ಕುಂ' ಎನ್ನುವ ಶಬ್ದ ಗಮನಾರ್ಹ. ಆದರೆ ಈ ಎರಡು ಶಬ್ದಗಳ ನಡುವೆ ಇದ್ದಿರಬಹುದಾದ ವ್ಯತ್ಯಾಸವು ಬಹುಕಾಲದ ಹಿಂದೆಯೇ, ಅಂದರೆ ವಡ್ಡಾರಾಧನೆ ಮತ್ತು ಪಂಪಭಾರತಗಳ ಕಾಲದಿಂದಲೂ ಮರೆಯಾಗಿರಬೇಕು. ಆದರೆ ಕೇಶಿರಾಜನ ಹೇಳಿಕೆಯನ್ನು ಗಮನದಲ್ಲಿಟ್ಟುಕೊಂಡು 'ಬಳೆ' ಮತ್ತು 'ಬೆಳೆ' ಉಲ್ಲೇಖಗಳನ್ನು ಬೇರೆಬೇರೆಯಾಗಿ ಕೊಟ್ಟಿದೆ. 'ಬೆಳೆ₁' ಪರಾ. [ದೇ.॥ ತುಳು. ಬಳಂಪುನಿ]

**ಬಳೆ₃, ವಳೆ₃** (ನಾ). ೧. ವರ್ತುಲ ; ಮಂಡಲ ; ವೃತ್ತ : 'ಅಗ್ಗಿವಳೆದೆಣ್ಣೆ', 'ಬಳಸು₁', 'ಬಳೆಗೆಜ್' ಪರಾ. ೨. ಕೈಗೆ ತೊಡುವ (ಗಾಜು, ಚಿನ್ನ ಇತ್ಯಾದಿಗಳ) ವರ್ತುಲಾಕಾರದ ಆಭರಣ ; ಕಂಕಣ : "ಬಳಿ-ಪ್ರವೃದ್ಧೌ, ಕಾಚಭೂಷಣೇ ಚ" (ಶಮಧಾ) ; ಬಳೆಯ ಪೇಱನಾನೆ ಮೆಟ್ಟಿದಂತೆ ನುರ್ಬುನೂಱಿಪ್ಪ ನಮವುಂಕಿ (ಶಂಕಪು. ೬-೬೭ ವ) ; ಬಳೆಯೆ ಸರ್ವವಿಭೂಷಣಕ್ಕೆ ಮೊದಲ್ಕೆ (ಸೋಮೇಶ. ೦೪) ; ಕಿಣಿಕಿಣಿಕಿಣಿರೆಂಬ ಕರದ ಕಂಕಣ ಬಳೆ (ಪುರಂದ. ೨-೬೨-೨). ೩. ಕಾಲಿನಲ್ಲಿ ಧರಿಸುವ ಕಡಗ : 'ಕಾಲ್ಬಳೆ' ಪರಾ. ೪. ತೋಳಿಗೆ ಧರಿಸುವ ಆಭರಣ ; ತೋಳು ಬಂದಿ ; ವಂಕಿ : ತೊಟ್ಟು ತೀವಿ ಬಳೆಯಂ ನಿಡುದೋಳ್ಗಳೊಳ್ (ಕಾವ್ಯಾ.ಶ. ೩೬೨) ; ಖಿವಖಿವಿಸುವ ತೋಳ ಬಳೆಯ ಕುವಲಯನೇತ್ರೆಯರೆಸೆದರು (ಕಂಪಪ. ೨೪-೪೩). 'ತೋಳ್ವಳೆ' ಪರಾ. ೫. ಗಂಟಲ ಮೂಳೆ,–ಎಲುವು: ಪಗೆವರ ಗಂಟಲ ಬಳೆಯನೊಡೆದು ಕಳೆವುದನನುಕರಿಸುವಂತೆ ತೀವಿ ತೊಟ್ಟ ಮುಂಗೈಯ ಬಳೆಗಳನೊಡೆದು (ಶಂಕಪು. ೬-೦೦೦ ವ). ೬. ಕತ್ತಿನ ಸುತ್ತಲೂ ಇರುವ ವಳಯಾಕಾರದ ಮೂಳೆ : ಕರಿಗಳ ಗಡಣ ಕೆಡೆದವು ಮಸ್ತಕದ ಬಳೆ ಹಱಿದು ಕಳಚಿದವು (ಕುವ್ಯಾದ್ರೋ. ೬೦೨. ಶಂ. ೨೬೦-೩) ; ಮತ್ತೆ ಕೊರಳಾ ಬಳೆಯೊಳು ಬಳೆಯಂತೆ ತಿರಿಗಿಸಿ ರಾಯನ ತಲೆದೂಗಿಸಿದರು ಗಾಯಕರು (ಭರಕ. ೦೨-೪೬). ೭. ಪರಿಧಿ ; ವಲಯಂ; ಸುತ್ತು;

ತಲೆ ತಿರುಗಿ ತುಟಿಯೊಣಗಿ ಕಂಗಳ ಬಳಿ ಮರಳಿ ಬಸವಳಿಯೆ ಸಾರಥಿ ತೊಲಗಿಸಿದನಾ ರಥವನು (ಕುಮ್ಮಾದ್ರೋ. ೩-೩೩). ೮. ವರ್ತುಲಾಕಾರದ ಒಂದು ಬಗೆಯ ಆಯುಧ; ಚಕ್ರ: 'ಪಾಟುಂಬಳೆ' ಪರಾ. ೯. ರಥ, ಬಂಡಿ ಮೊದಲಾದುವುಗಳ ಚಕ್ರದ ಹೊರಭಾಗಕ್ಕೆ ತೊಡಿಸುವ ಕಬ್ಬಿಣದ ವರ್ತುಲಾಕಾರದ ಸಾಧನ, – ಕಬ್ಬಿಣದ ಪಟ್ಟಿ: ಜೋಲ್ವ ಬಳ್ಳಿಗೊಂಬಿನ ಬಳಿ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವೆನೆ ನಡೆತಂದುವಂದಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ (ಕಬ್ಬಿಗ. ೨೧೩); ಕೀಲಚ್ಚು ಬಳಿ ಮೊಳೆಯನಾರೈದು ಸಿಂಧವಂ ನೆಗಪಿ ... ಸೂತನಿದಿರಾಗಿ ತಂದಿರಿಸಿದ ತೇರ ತೇಜಿಗೆ ನಮಿಸುತ (ಕಂಪು. ೪೬.೩೩); ಮೊಳೆ, ಕೊಂಡಿ, ಬಳಿ ಮುಂತಾದ ಸಾಮಾನು ಕಮ್ಮಾರರು ಮಾಡುತ್ತಾರೆ (ಮುಂಬಯಿ. ೯-೦೦೩). 'ನೇಮಿ₂' ಪರಾ. ೧೦. ಆನೆಯ ಕೋರೆಗಳಿಗೆ ಅಥವಾ ಎತ್ತು ಮುಂತಾದ ಪ್ರಾಣಿಗಳ ಕೊಂಬುಗಳಿಗೆ ತುದಿಯಲ್ಲಿ ತೊಡಿಸುವ ಅಲಂಕಾರದ ಸಾಧನ; ಅಣಸು: ಇದಿರಾದರಿಭೂಪಾಲರ ಮದದಾನೆಯ ಕೊಂಬಿನೆಸವ ದಂತದ ಬಳೆಯಂ ಬಿದುವಿನ ಮುತ್ತಿನ ಹಾರವನೊದವಿಸಿ ಜಯಸಿರಿಗೆ ತುಡಿಸುವಂ ನರಸಿಂಗಂ (ಸೂಕ್ತಿಸು. ೦-೦೩). 'ಬಳೆವೊಗಂ' ಪರಾ. ವಳ್ಕೆ: ೧೧. (ಕುದುರೆಯ ತುಂಟುತನವನ್ನು ತಡೆಹಿಡಿಯಲು ಕಟ್ಟುವ) ಸೊಂಟಪಟ್ಟಿ; ತಂಗುಪಟ್ಟಿ: "ವಳೆಯೆನಲ್ ಕುದುರೆವಳೆಯಂ" (ಕಬ್ಬಿತಂ. ೪೨).

**ಬಳೆಯಾಕೆ** = (ಬಂಗಾರದ) ಕಂಕಣ ಇತ್ಯಾದಿ ಆಭರಣಗಳನ್ನಿಟ್ಟು ಒಲಿಸಿಕೊಂಡವಳು; ಬಂಗಾರದವಳಂ: ತೊಲಾಪ್ರುರುಷ ಸಾನ್ತರನ ಬಳೆಯಾಕೆ ತಮ್ಮಬ್ಬೆಯು ಸನ್ಯಾ × × ಛತ್ರಂ ಈ ಕಲ್ಲ ಬಸದಿಯುಂ ಒನ್ದು ದೇಪಾರಪುಂಮಂ ಮಾಡಿಸಿದಳ್ (ಎಕ. VIII, ನಗರ. ೪೩-೩; ಸು. 950). [ದೇ.॥ ತಮಿ. ವಳ್ಳೈ, ವಳ್ಳೆಯಲ್; ಮಲ. ವಳ; ತೊದ. ಪಳ್; ಕೊಡ. ತುಳು. ಬಳಿ]

**ಬಳೆ₃** 'ಬಲ್ಲೆ₂' ನೋ.

**ಬಳೆಕಣ್** 'ಬಳೆಗಣ್' ನೋ.

**ಬಳೆಗ** (ನಾ). (?): ಪುತ್ತೂರುಡೆ ಶಿವಮಾರಮ್ಮಂ ದುಣ್ಡಗೆರ್ಗಂ ನಲ್ಲತ್ತೂರೊಡೆ ಒಗ್ಗಮನೆ ಬಳೆಗಮುಂ ಅಯ್ದೂಮ್ಬು ಮೆದಕಟನಿಯು ಎಟ್ಟೂಮ್ಬು ಬಾಳೆ ತೊಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೦-೪; ಸು. 800 ?). [?]

**ಬಳೆಗಣ್, ಬಳೆಕಣ್** (ನಾ). ೧. ಒಳಭಾಗದಲ್ಲಿ ವೃತ್ತಾಕಾರವಾದ ಬಿಳಿಯ ರೇಖೆಯುಳ್ಳ ಕುದುರೆಯ ಕಣ್ಣು: ಬಳೆಗಣ್ಣಂಬರ್ ಪಾಟುಂಬಳೆಯುಂದದ ಬಿಳಿಯ ರೇಖೆ ಕಣ್ಗೊಳ್ ತೋಱಲ್ ಬಳಸಿರೆ ಲೋಚನಯುಗಳಂ ಬಳೆಗಣ್ಣಾದಂದು ಶುಭದಮೊಂದಱೊಳಶುಭಂ (ಅಶ್ವಶಾ. ೨-೩೬). **ಬಳೆಕಣ್**: ೨. ಸಂತ್ತಲೂ ಹಳ್ಳ ಬಿದ್ದಿರುವ ಕಣ್ಣು; ಗುಳಿಗಣ್ಣು (?): ಬಳೆಕಣ್ಬೆರ್ದುವು ಕಣ್ಪಾಪ್ಪುಳಿಯಾಯ್ತು ಬರ್ದಿಯಳಿವು ವೆತ್ತುದ [ಟ?]ವೋಪಿನೆಗಂ ಬಳಸಿ ಬಲವಂದು ನೋಡುವಯೆಳವೆಂಡಿರನವರೊಳಜ್ಜ ನಿನಗೇಂ ಲಜ್ಜಂ (ಅಡಪು. ೨-೯೩). [ಬಳೆ₂ + ಕಣ್]

**ಬಳೆಗಳೆ** (ಕ್ರಿ). ಗಂಟಲ ಮೂಳೆಯನ್ನು ನೆಗ್ಗು: ಕುಳಿಯೊಳಿಕ್ಕುವ ಮುದುಡಿ ಮುಚ್ಚಿ ಮುಗ್ಗುವ ಮುಳಿವ ಬಳೆಗಳೆವ ಹೋಳ್ವ ಸೀಳ್ವಾಱುವ ... ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೯). [ಬಳೆ₂ + ಕಳೆ₁]

**ಬಳೆಗಾತಿ** (ನಾ). ಬಳೆಯನ್ನು ಮಾರುವವಳಂ: ಬಳೆಗಳ ಕುಱುಹು ಕಂಡುದು ಚಿತ್ರ ನೀವೇನು ಬಳೆಗಾತಿಯರೊಯೆಂದಳೊಲಿದು (ಭರತ. ೩೨-೨೦). [ಬಳೆ₂ + – ಕಾತಿ]

**ಬಳೆಗಾರ** 'ಬಳೆಗಾಱ' ನೋ.

**ಬಳೆಗಾರ್ತಿ** (ನಾ). = ಬಳೆಗಾತಿ: ಮಾಲೆಗಾರ್ತಿ, ಬಳೆಗಾರ್ತಿ, ಗೆಲ್ಲಗಾರ್ತಿ (ಶಾಕಾಭೂ. ೦೪೯ ಉದಾ); ಮಾಲೆಗಾರ್ತಿ . . . ಹಾಲಗಾರ್ತಿ, ಬಳೆಗಾರ್ತಿ (ಶಮದ. ೨೦೯ ಪ್ರಯೋ). [ಬಳೆಗಾಱ + – ತಿ₁ (< – ಇತ್ತಿ)]

**ಬಳೆಗಾಱ**, ಬಳಗಾರ, ಬಳಗಾಱ, ಬಳೆಗಾರ (ನಾ). ೧. ಬಳೆಯನ್ನು ಮಾರುವವನು: ಹರಿಬಲರಲ್ಲಿಂ ತಳರ್ದಾದರದಿಂ . . . ಬಳೆಗಾಱರ ತಂಬುಲಿಗರ ಮಣಿಗಾಱರ ಗಂದಿಗರಾಪಣಂಗಳೊಳ್ ನಡೆತಂದರ್ (ಹರಿಪ. ೬-೦೪); ಎಳವೆರಲ್ಗಳ ಚಿಟುಕೊತ್ತಿ ಕೈದೊಡಿಸುವ ಬಳೆಗಾಱರಿರ್ದರಿಕ್ಕೆಲದಿ (ಪೋಲಕ. ೩-೨೩). ೨. [ಜೈನ] ಒಂದು ವಂಶದ ಹೆಸರು; ? ಶ್ರವಣರ ಪಂಗಡಗಳಲ್ಲಿ ಒಂದಾದ ಬಳಗಾರಗಣದ ಗುರುಗಳನ್ನು ಹೊಂದಿದ ಒಂದು ವಂಶವೆಂದು ಒಂದು ಅಭಿಪ್ರಾಯವಿದೆ: ಬೆಳುಗರೆನಾಡೊಳ್ ಪುಟ್ಟಿದ ಬಳೆಗಾಱರ ಕುಲದೊಳೆಱೆದಜಿತಶಾಸನಮಂ ಬೆಳಗುವ ಚಕ್ರೇಶ್ವರಮಂಡಳೇಶ್ವರಂ ಬೆಸಸೆ (ಅಜಪು. ೧೨-೪೪). **ಬಳಗಾರ**: ೨. ಶ್ರೀಮತ್ತಶ್ವಕುಲತಿಲಕಂ ಬಳಗಾರಮಹೋದಧಿ ಕುರುಳಕಾಮಸೆಟ್ಟಿ (ಕೌಇಇ. IX – i, ೬೦-೯; 931); ಬಡಗಲು ಬಳಗಾರ ಬಳಿಯವರ ಗಡಿಯಿಂದಂ (ಕೌಇಇ. IX – ii, ೪೨೪-೦೩; 1401). **ಬಳಗಾಱ**: ೩. ಒಂದು ವಂಶದ ಹೆಸರು; ಬಳೆಗಾರರ ಮನೆತನ: ಬಳಗಾಱರ ಕೋಕರು ಪುನುವಲವಳ್ಳಿಯಲಿಟ್ಟು ಪುಯ್ಯಲಂ ಪರಿದು ಮಾರ್ಬಲಮಂ ತಳ್ತಿಱಿದು ಸ್ವರ್ಗಾಲಯಕೆ ಸನ್ದಂ (ಎಕ. VIII ಸೊರಬ. ೩೩೦-೩; 979). **ಬಳೆಗಾರ**: ೧. ಬಳೆಗಾರ ಮಣಿಗಾರ ಬಿಚ್ಚೋಲೆಯನ್ನು ಮಾರುವರು (ನವನೋ. ೨-೪೭); ಬಳೆಗಾರಸೆಟ್ಟಿ ಹೋಗಯ್ಯ ನನ್ನ ತವರಿಗೆ (ಜಾಪದ. ೬೯);ಬಳೆಗಾರನ ಅಂಗಡೀಲಿ ಬಾಳೇಹಣ್ಣು ಸಿಕ್ಕೀತೇ? (ಗಾದೆ). [ಬಳೆ₂+-ಕಾಱ]

**ಬಳೆಗಾಱಿಕೆ** (ನಾ). ಬಳೆಯನ್ನು ಮಾರುವ ಉದ್ಯೋಗ: ಓಲೆಕಾಱಿಕೆ, ಕಂಚಗಾಱಿಕೆ, ಬಳೆಗಾಱಿಕೆ (ಶಬ್ದಮ. ೪೩೦ ವ್ಯಾಖ್ಯಾ). [ಬಳೆಗಾಱ +–ಇಕೆ]

**ಬಳೆಗೈ** (ನಾ). ಬಳೆಗಳನ್ನು ಧರಿಸಿದ ಕೈ: ಬಳೆಗೈಯೆತ್ತಿ ಬಗಸೆಗಣ್ಗಳ ಕೋಮಲೆಯುರ್ವಱಿಸುತೀಕ್ಷಿಪ ಕಡೆಗಣ್ಬೆಳಗೆಸೆದುವು (ಜಯುಣ. ೦-೪೦). [ಬಳೆ₂+ಕೈ₂ (<ಕೆಯ್₂)]

**ಬಳೆಗೊಯ್** (ಕ್ರಿ). ಕೊರಳ ಸುತ್ತಲೂ ಇರುವ ಮೃದ್ವಸ್ಥಿಯನ್ನು ಕತ್ತರಿಸು: ಊರುರ ಮೂಳೆಯಂ ತಿಂಬಗುರು ಪಯುಗರಿಯ ತನಿಗೊಂಬಂ ಬಳೆಗೊಯ್ಕಲ್ ಪೂಣ್ದು ತುದಿಯೊಳೊಡಿ ಪೋಪ ಧೀರುವಪ್ಪ ಪಣಿದ ಕಾಱನಂತೆ (ಶಾಂತಿಪು. ೮-೪೯ ವ). [ಬಳೆ₂+ಕೊಯರ್]

**ಬಳೆಗೋ** (ಕ್ರಿ). ೧. ಬಳೆಯನ್ನು ತೊಡಿಸಂ, – ಹೊಂದಿಸಂ. ೨. (ಆಲಂ) ಸೋತು ಹೋಗು; ಸೋಲೊಪ್ಪು: ತಗಯುಲ್ ಚೈಮಿನಿ ತಿಪ್ಪಿಕೊಣ್ದು ಪರಿಯಲ್ ವೈಶೇಷಿಕಂ ಪೋಗದುಣ್ದಗೆಯೊತ್ತಲ್ ಸುಗತಂ ಕಡಂಗಿ ಬಳೆಗೋಯಲ್ ಕಕ್ಷಪಾದಂ . . . ತೂಳ್ದಿತು ಗೋಪಣನ್ದಿ ದಿಗಿಭಪ್ರೋದ್ಭಾಸಿ ಗಂಧದ್ವಿಪಂ (ಎಕ. II, ೬೬-೪೪; ಸು. 1100). ೩. ವಶಪಡಿಸಿಕೊಳ್ಳು; ಹತೋಟಿಗೆ ತರು: ಬಳೆಗೋದುದು ಕೀರ್ತಿದಿಶಾಕಳಭಂಗಳ ನಿಗ್ಗವಂಗಳೊಳ್ ರಿಪುಕಾಂತಾವಳಿಯೊಳ್ ಭವತ್ಪ್ರತಾಪಂ ಬಳೆಗಳೆಯಿಸೆ ತಾನದಕ್ಕೆ ಮಚ್ಚರಿಸುವವೊಲ್ (ಯಶೋಚ. ೩-೪). [ಬಳೆ₂+ಕೋ₁]

**ಬಳೆತೊಡಿಸು** 'ಬಳೆದೊಡಿಸು' ನೋ.

**ಬಳೆತೊಡು** 'ಬಳೆದೊಡು' ನೋ.

**ಬಳೆದೊಡಿಸು**, ಬಳೆತೊಡಿಸು (ಕ್ರಿ). ೧. ಕೈಗೆ ಬಳೆಗಳನ್ನು ತೊಡಿಸಂ. ೨. ವೇಶ್ಯೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಮೊದಲು ಕೈಗೆ ಬಳೆತೊಡಿಸುವ ವಿಧಿಯನ್ನು ಆಚರಿಸಂ: ಪೆಱರ ಪೆಂಡಿರ್ಗೆ ಬಳೆದೊಡಿಸುವ ಪೆಂಡಿರಂ ಕೊಟ್ಟು ಮಾನ್ಯಂಬಡೆವ . . . ಕಟ್ಟಿಗ್ಗರಂತೆ (ರಾಮಾಶ್ವ. ೯-೦೩೨); ಬಳೆದೊಡಿಸಲೆಂದು ಸುದತಿಯು ಕೆಳೆಯನದೊರ್ವಂ ಕರಕ್ಕೆ ಕೆಯ್ನಾಡೆ (೧೧೪. ೯-೦೩೬). **ಬಳೆತೊಡಿಸು**: ೩. ಚೊಚ್ಚಲುಗರ್ಭಿಣಿಯಾದವಳಿಗೆ

ಏಳನೆಯ ತಿಂಗಳಲ್ಲಿ ನಡೆಸುವ ಸೀಮಂತಸಮಾರಂಭವನ್ನು ಆಚರಿಸು: ಆಗ ನಾನು ಚೊಚ್ಚಲ ಬಸಿರು . . . ಬಳೆತೊಡಿಸುವ ಶಾಸ್ತ್ರಮಾಡಿ ನಮ್ಮ ತಾಯಿ ನನ್ನನ್ನು ಕಳಿಸಿದರು (ಕುಂಕುಮ. ೬೭). [ಬಳ್ಕೆ+ತೊಡಿಸು]

**ಬಳೆದೊಡು,** ಬಳೆತೊಡು (ಕ್ರಿ). ೧. ಕೈಗೆ ಬಳೆಗಳನ್ನು ಹಾಕಿಕೊಳ್ಳು: ಎಳೆಯಂ ಕೋಳ್ಪಟ್ಟಂ ಮುಂ ಬಳೆದೊಟ್ಟಂ ಮುಟ್ಟುಗೆಟ್ಟುವಿರ್ದೀಗಳ್ ಒಳ್ಪಳನೆ ನುಡಿದವುದೆ (ಕಂಪಹಾ. ೧೩-೧೬೭); ಗಂಡುಗೆಟ್ಟು ಬಳೆದೊಟ್ಟು ಬೃಹನ್ನಳೆಯಾಗಿ ಪಾರ್ಥನಿರ್ದಿರವುವೆನಲ್ಕೆ ಪಾರ್ಥನದು ರಂಭೆಯ ಶಾಪಮೊ ತನ್ನ ಪಾಪಮೋ (ಗದಾಯು. ೩-೩೦) ; ಕ್ರಿಯಾಸಮಾಸಕ್ಕೆ - ಬಳೆದೊಟ್ಟಂ ; ಕೆಳೆಗೊಂಡಂ (ಶಮದ. ೦೬೭ ವೃ.ಯೋ) ; ಹಲವು ಬಳೆಗಳ ಕೈಯೆ ಫಲಘಲಿರೆನುವುದು ಒಂಟಿ ಬಳೆದೊಟ್ಟ ಕೈ ಮೌನಿ (ಇಂಶಾಶ. ೨೦೦-೯೦). **ಬಳೆತೊಡು :** ೧. ನಿನ್ನಯ್ಯನೇಂ ಬಳೆತೊಟ್ಟು ನಟ್ಟುಪನೊ ? ದಿಟ್ಟನಿಂದೆಂದಾದೊಡಂ ಪಂದೆ ಪುಟ್ಟುವುದೆ ? (ಶಕ್ರಾಂಗ. ೬೦-೨೦೯೪). ೨. (ಆಲಂ) ಸೋಲನ್ನು ಒಪ್ಪಿಕೊಳ್ಳು : ನಾನೇನು ಬಳೆತೊಟ್ಟು ಕೂತಿಲ್ಲ (ಜೂ). [ಬಳ್ಕೆ$_2$+ತೊಡು$_1$]

**ಬಳೆದೋಳ್** (ನಾ). ಬಳೆಯ ಆಕಾರದ ಆಭರಣವನ್ನು ಧರಿಸಿದ ತೋಳು : ವನಲಕ್ಷ್ಮಿಗೆ ಸಕಲವಿಲಾಸಿನಿಯರ್ ಬಳೆದೋಳ್ಗಳಿಂದೆ ಚಾಮರವಿಕ್ಕಲ್ (೧೦೬. ೨-೯೬); ನವನರ್ತನದ ಹಸನಿಗಂ ಬಳೆದೋಳ ಭಾಗ್ಯನಿಧಿ ಹುಲಿಯುಗುರ ಸುಲಭಿಗಂ (ಬಸರ. ೦-೧೫೦). [ಬಳ್ಕೆ+ತೋಳ್]

**ಬಳೆಮುರಿ** (ನಾ). ಒಂದು ಬಗೆಯ ಸಕ್ಕರೆ : ಸೂಟ್ಟಿ ಸಕ್ಕರೆ ಬೆಲ್ಲ ಬಳೆಮುರಿ ತವರಾಜ . . . ದ್ರಾಕ್ಷಿವಣ್ಣಳ ಹೊಚಿ ಸಾಲಿಟ್ಟವು ಕೊಟ್ಟಿಗೆ ಯೊಳಗೆ (ಕುರಾಶಾಂ. ೪೦-೩೩); ಬಳೆಮುರಿ ಸಕ್ಕರೆಯನು ಬಟ್ಟವಾಲೊಳು ಕಲಸಿ ಹೊಂಬಟ್ಟಲನೆತ್ತಿ ಲಲನ ನಲ್ಲನ ಕೈಗೆ ನೀಡುವಳು (ಭರತ. ೦೦-೫೦). [ ? ]

**ಬಳೆಯವಾಡ** (ನಾ). ಒಂದು ಪ್ರದೇಶದ ಹೆಸರು : ಒನ್ನವಾಡ ಗಂಗ ವಾಡ ಒಳೆಯವಾಡರೆನ್ನಾಡಾಳ ಸಿಯಾಳಾಜಿಸಾಮಿ ಸರ್ವರಸ ಕೊಟ್ಟೋರ್ (ಘೃ೩ಐಂ. ೦೯೨೯, ೦೦೪-೦; ಸಂ. 820). [ ? + ಬಾಡ$_1$ ]

**ಬಳೆಯಿಸು,** ಬಳಯಿಸು, ಬಳೆಸು (ಕ್ರಿ). ೧. ಗಿಡ, ಮರಗಳು ವೃದ್ಧಿಯಾಗುವಂತೆ ಮಾಡು; ಬೆಳೆಸು : ಬಹುಪೋಷಣದಿಮ್ಮಾ ವಿನ ಸಹಕಾರದ ಸೊನೆಯ ಸೋನೆ ಬಳೆಯಿಸೆ ಬಳೆಗಂ ಮಹಿಯೆನೆ ಬಣ್ಣಿಸುವ ಪಿತಾಮಹಂ ಗಮರಿದೆಗ್ಗ ಮೊಗ್ಗೆ ನಿನಗಮದೆನಗಂ (ಶಾಂತಿಪು. ೦-೬೦); ಆ ಕಳಮಧಾತ್ರಿ ಕಣಿಶಕುಚಾಕಲಿತಪಯಃಪ್ರತಾನದಿಂ ಬಳೆಯಿಸೆ ನಿರ್ವ್ಯಾಕುಳಮೆನೆ ರಾಜಶುಕಾನೀಕಶಿಶುಪ್ರತತಿ ಬಳೆವುದುಚಿತಸ್ಥಿತಿಯಿಂ (ಚಂದ್ರಪ್ರ. ೦-೯೩). ೨. ಅಭಿವೃದ್ಧಿಗೊಳಿಸು; ಏಳಿಗೆ ಹೊಂದುವಂತೆ ಮಾಡು : ಪಲವು ಧರ್ಮಂಗಳ ಬಳೆಯಿಪುದಾಯಾಸಫಲವ ಭೋಗಿಪುದಾನಂದ (ಹರಿಶ. ೨-೩೩). ೩. ಹೆಚ್ಚಿಸು; ಅಧಿಕಗೊಳಿಸು : ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ ಬಳೆಯಿಸಿದತ್ತು . . . ಮೆಯ್ಗೆ ಪುಳಕೋದಯಮಂ ಪಡೆದತ್ತು (ಆದಿಪು. ೦೦-೦೫೭); ಇಲ್ಲದ ತಪ್ಪಂ ಕಲ್ಪಿಸಿ ಮೆಲ್ಲನೆ ಮುಳಿದೊಲ್ದು ಕೂರ್ಮೆಯಂ ಬಳೆಯಿಸುತುಂ ಪಲ್ಲವಕರ್ವೆರಸಿಸೆ ದರ್ಸಲ್ಲೀಲೆಯನಾಂತು ಲೋಲೆಯರ್ ಮುದದಿಂದಂ (ಉದ್ಭಟ. ೦೦-೬೦) ; ದೇವಪೂಜೆಯ ದೇವರಿಗೆಚಿಗುವುದು . . . ತನ್ನ ಭಾಷಶುದ್ಧಿಯ ಬಳೆಯಿಪುದು (ಹರಿಶ. ೪-೯). ೪. ಉಂಟುಮಾಡು; ಹುಟ್ಟಿಸು : ಚಕ್ರೇಶ್ವರಂ ವಾರ್ಧಿಭೂತಲನಾಥಂಗನುರಾಗಮಂ ಬಳೆಯಿಸಲ್ಕರ್ಘ್ಯ ಕ್ರಿಯಾತಂಡುಲಂಗಳೆವೆಂದಾದರದಿಂದೆ ಕೊಂಡನವಜಿಳ್ ಪತ್ತೆಂಟು ರತ್ನಂಗಳಂ (ಆದಿಪು. ೦೨-೦೨೦). ೫. ಚಾಚು; ನೀಡು : ಆ ಕೇಶಿಯಂ ಮುಂಜಕೇಶಿ ಮಾರ್ಕೊಂಡು ಕರಮಂ ತೂಂತಿ ತದಾಸ್ಯದೊಳ್ ಬಳೆಯಿಸಲ್ ತದ್ವರ್ಧನೋದ್ರೇಕದಿಂ ಸೆರೆಗಳ್ ಬಿಗಿ ನೇಲಲ್‌ನೆಳ್ಲೆರೆಯೆ (ಜಗಪಿ. ೩-೯೭). ೬. ನಡೆಸು; ನೆರವೇರಿಸಂ; ಜರುಗಿಸು : ಉತ್ಪಾತಶಾಂತಿಕಪೌಷ್ಟಿಕಕ್ರಿಯೆಗಳಂ ಮಹಾಬ್ರಾಹ್ಮಣರಿಂದಂ ಬಳೆಯಿಸಿ (ಕಂಪಹಾ. ೦-೧೩೩ ವ). ೭. [ಗಣಿತ] ಗುಣಿಸು; ಗುಣಾಕಾರ ಮಾಡು : ಕೊಳಗವೆನಿತಾದೊಡಂ ನೀಂ ಬಳೆಯಿಸು ನಿಧಿಯಂಗ್ಮದಿಂದೆ ಖಂಡುಗ ಮಕ್ಕಂ ಬಳೆಯಿಸು ನಿಧಿಯಿಂದರ್ಧಿಸುಯಿಳೆಯೊಳು ವರುಷಕ್ಕೆ ಬಳ್ಳ ಖಂಡುಗಮಕ್ಕಂ (ವ್ಯವಹಾ. ಇಕ್ಕಾರಿ). **ಬಳಯಿಸು :** ೧. ಎಳನೀರಿಂ ನಾಳಿಕೇರಂ ಬಳೆಯಿಸೆ ಕದಳೀಷಂಡಮುಂ . . . ಸೊಗಯಿಕುಂ ತತ್ಪುರೋದ್ಯಾನಷಂಡಂ (ಮಲ್ಲಿಪು. ೨-೩೯); ಅಂಗಜಂ ಪರ್ವಿಸಿದ ಲತೆ ಸುಧಾಸೂತಿ ಪೀಯೂಷಧಾರಾಂಬುವೆ ಪೊಯ್ಯಾರಾಗೆ ಮುದ್ದಿಂ ಬಳ [ಶಾಕಾಂ. ಳೆ]ಯಿಸಿ ದೆಳದೆಂಗೆಯ್ದೆ ಮಂದಾನಿಲಂ ತೋಂಟಿವೆಸಂಗೆಯ್ದುಟ್ಟಿಜಿಂ ಪೆರ್ಚಿಸಿದ ವಿಚಕಿಳಂ ರಯ್ಯಂ (ಚಂದ್ರಪ್ರ. ೦-೬೭); ಕೆಳೆಯ ಪಗೆಯೊಡನೆ ಪಗೆಯಂ ಬಳ[ಶಾಕಾಂ. ಳೆ]ಯಿಪುದಂ ಬಿಟ್ಟು ಕೂಸುಗೊಟ್ಟನುನಯಮಂ ಬಳ [ಶಾಕಾಂ. ಳೆ]ಯಿಸುವುದು (ಚಂರಾಪೂ. ೦೩-೩೭): ಉಗುರ್ಗಳ ಚೆಲ್ವಿಕೆಯಿಂದುಡುರಾಜಿದು ಮೊಗಗಡಿಸುತ ಪಲ್ವೆಳಗಿನ ಒಗುಮಿಗೆಯಂ ಬಳಯಿಸುತ ಚೆಲ್ದಿಂಗಳ ಬಗೆಗಾರ್ತಿಯರೆಯ್ದಿದರು (ಕುಶಾಶಾಂ. ೩೬-೧೪). ೪. ಕುಸುಮಾವಳಿಯಂ ತಳೆಯದ ನಿನ್ನ ಬಟಲ್ಮಾಡಿ ಬಳಯಿಸಿದಪುದೆನ್ನ ಮನಕೆ ಖೇದಮನೀಗಳ್ (ಕಾದಂಬ. ೩೩೪); ದಳಿತಲಸತ್ಕುಂದದ್ಯುತಿ ಯಳಂಕೃತಾಶೇಷಭುವನಮಾ ನೃಪನ ಯಶಂ ಬಳಯಿಪುದರಿನೃಪ ವನಿತೋಜ್ಜ್ವಳಮುಖಚಂದ್ರಂಗೆ ಮಳಿನತೆಯನಿದು ಚಿತ್ರಂ (ವರ್ಧಪು. ೦-೭೯). ೭. ಪೊಡೆ . . . ಬಳಯಿಸು ಏಕಂದೊಡರಿಪ ವಾಕ್ಯಂಗಳ್ ತಾಂ ಪೊಡವಿಯ ನರರ್ಗಲ್ಲ ಗುಣಿಯಿಸೆಂಬುದು ನಿರತಂ (ವ್ಯವಹಾ. ೦೦-೦೦). **ಬಳೆಸು :** ೩. ವಿಲಾಸಮನಲರ್ಚಿಸುತುಂ ಮುಳಿಸಂ ನೆಗೞ್ಚುತುಂ ವಿಕಸಿತ ಮೋದಮಂ ಬಳೆಸುತುಂ ಸಲೆ ಕಾಂತೆಯರಾದಮೊಪ್ಪಿದರ್ (ಉದ್ಭಟ. ೦೦-೬೯). [ಬಳ್$_1$+–ಇಸು$_3$]

**ಬಳೆವೋಗು** (ಕ್ರಿ). ಆನೆಯ ದಂತದ ತುದಿಗೆ ಅಳವಡಿಸಿದ ಅಣಸು ಕಳಚಿ ಬೀಳು : ಕಟ್ಟದಿರೊಳೆ ನೂಂಕಿದಾನೆಗಳ ಕೋಡುಗಳಂ ಬಳೆವೋಗೆ ಪೊಯ್ದುಂ (ಕಂಪಹಾ. ೦೦-೪೦). [ಬಳ್ಕೆ$_2$+ಪೋಗು$_1$ (<ಪೋ$_1$)]

**ಬಳೆಸು** 'ಬಳೆಯಿಸು' ನೋ.

**ಬಳೋನ್ಮತ್ತ** 'ಬಲೋನ್ಮತ್ತ' ನೋ.

**ಬಳ್ಕಿಸು,** ಬಳುಕಿಸು (ಕ್ರಿ). ಬಾಗುವಂತೆ ಮಾಡು; ಬಾಗಿಸು : ಫಲಭರದಿಂದೆಜಗುವ ಚೂತಲತಿಕೆಯಂತಿರೆ ಕುಚದ್ವಯಂ ಬಳ್ಕಿಸೆ . . . ಲಲನೆ ಭೂಪತಿಗೆ ಪೊಡಮಟ್ಟಳ್ (ಕುಸುಮಾ. ೫-೪೬); ಕ್ಷೋಣಿಯಂ ಪಯದೇಟ್ಗೆ ಬಳ್ವಳ ಬಳ್ಕಿಸುತ್ತಿರೆ . . . ನೃತ್ಯಮನಾಡಿದಂ ಸುರನಾಯಕಂ (ಅನಂಪು. ೦೯-೬೦); ಕೈಯಂ ಮುಗಿದು ಬಳ್ಕಿಸಿ ನಡುವನೊಯ್ಯನೆ ನಗೆ ಮುನ್ನಿನ ತನ್ನ ಭಾವದಲಿ ಸೇರಿ (ಬಸವಪು. ೪-೧೨). **ಬಳುಕಿಸು:** ವಾಸುಗಿಯ ಬಳುಕಿಸುವ ತಾರೆಗಳ ತಟಾದಗಿವ ಗರ್ವಿತ ಗೌರವರನರ್ಬುದವಷ್ಟಂಗದವೀರ ತೋಜಿಸಿ ಮೆಚ್ಚಿಸಿದನು (ಕೂರಶಾ. ೪-೭-೨೦). [ಬಳ್ಕು$_1$ (<ಬೆಳ್ಕು$_1$) + – ಇಸು$_3$]

**ಬಳ್ಕು$_1$** 'ಬೆಳ್ಕು$_1$' ನೋ.

**ಬಳ್ಕು$_2$** 'ಬೆಳ್ಕು$_2$' ನೋ.

**ಬಳ್ಕುಡಿ** 'ಬಕ್ಕುಡಿ$_1$' ನೋ.

**ಬಳ್ಕುಡಿಗೆಯ್** 'ಬಕ್ಕುಡಿಗೆಯ್' ನೋ.

**ಬಳ್ಕುವೋಗು** (ಕ್ರಿ). ನಡುಕವನ್ನು ಹೊಂದು ; ನಡುಗು : ನಯಹೀನರ್ಪಿಡಿದೊತ್ತಿ . . . ನಿರ್ದಯಂದಿ ಪೀಡಿಸಿ ಬಳ್ಕುವೋಪಿನೆಗೆ ಮೆಲ್ಲಂ ತಾಪಿನಂ ಮೇಗೆ ಮಾಗಿಯ ಮೂಗಂ ತಲೆವಾರ ಕೊಯ್ದು (ಸುಕುಮಾ. ೭-೩೯). [ಬಳ್ಕು$_2$(<ಬೆಳ್ಕು$_2$)+ಪೊಗು$_1$(<ಪೋ$_1$)]

**ಬಳ್ಕುಱು** 'ಬೆಳ್ಕುಱು₁' ನೋ.

**ಬಳ್ದು** 'ಬಾಟಿಸ್₁' ಪರಾ.

**ಬಳ್ವಳ್₁** (ನಾ). ೧. ಹೆಚ್ಚಳ; ಅತಿಶಯ; 'ಬಳ್ವಳಿಕೆ' ಪರಾ. ೨. ಹಿರಿದಾದುದು: "ಬಳ್ವಳಮೆಂದು ಪಿರಿದಾಗಿ ಬೆಳೆದುದು" (ಕಕಾ. ೬೦-೬೦೨). ೩. ವಿಸ್ತಾರವಾದುದು; ವಿಶಾಲವಾದುದು: ಆತನ ಪಡೆಗೆ ನಡೆಯಲಿಡೆ ಮಾಡಿದಂತೆ ಬಳ್ವಳಾದ ದೆಸೆಗಳುಮಾತನ ವಿಜಯಸೈನ್ಯಕ್ಕೆ ತಡೆಯದೆ ಪಾಯಲ್ವೇಟ್ಕು ಮುಂಬಂತೆ ನೆಲೆಯಾದ ಮಹಾನದಿಗಳುಂ . . . ತನ್ನ ಬರವಂ ಪ್ರಕಟಂಮಾಡೆ (ಆದಿಪು. ೧೧-೩ ವ).

**ಬಳ್ವಳ್₂** 'ಬಳ್ವಳಂ' ನೋ.

**ಬಳ್ವಳಂ.** ಬಳುವಳ, ಬಳ್ವಳ್₂ (ಅ). ಹೆಚ್ಚಾಗಿ: ಅಧಿಕವಾಗಿ: ಅತಿಶಯವಾಗಿ: ಪರಿಕಿಪೊಡಗ್ನಿಗವಾಕೆಯ ವಿರಹಾಗ್ನಿಗವಿಲ್ಲ ಭೇದ ಮಲ್ಲದೊಡೇಂ ಕಪ್ಪುರದ ರಜಕ್ಕಂ ವೀಜನದೆರಲ್ಗಮುದು ಕಿಡದೆ ಬಳ್ವಳಂ ಬೆಳೆನಪುದೇ (ಕಂಪ್ರಪು. ೩-೧೨೯); ಬಲ್ಸೇದೆ ಬಳ್ವಳಮುಣ್ಮಲ್ಕೆರ್ದೆಯೊಳ್ದಡಂ ಬಡಿದು ನೇತ್ರಂ ಕೆಂಡದಂತಾಗೆ ಗಲ್ಗಲನಾಗಳ್ಕೊರಮಟ್ಟಸಂದಿರಿದು ತೇರಂ ಮಾತ್ರಿಯುಬ್ಬೆಗದಿಂ (ಕಂಪ್ರಪು. ೧೬-೧೩). **ಬಳುವಳ** : ಕಿಡೆ ವೆಳಗಳು ಬಳುವಳ ಬಳೆಯೆ ತೆಳುಮಸಿಕ್ಕೋಮಳಾಂಗಮುಂ ಜವಜವಾಗೆ ಬೆಳೆದುದೆ(ದು) ಗರ್ಭಂ (ಕಇ. I, ೨೩-೩೦ ; 1186) : ಪಳನಳಿಸಿ ಬಳು[ಹಾಕಾಂ. ಳಿ]ವಳ ಬೆಳೆದೆಳಲತೆಯ ತಾಂಬೂಲಲತೆಯ . . . ಚಂದಕಲತೆಯ ಶಿಂತಿಣಿಯುಂ ಸಲ್ಲಲಿತಮಾದ ವಲ್ಲೀವನಪ್ರದೇಶದೊಳ್ (ಧರ್ಮಾಕ. ೦-೩೨ ವ). **ಬಳ್ವಳ್₂** : ಪದ್ಮಬಾಂಧವಂ ಬಳ್ವಳ ನೀಡಿದಂ ಕರಸಹಸ್ರಮಂ (ಆದಿಪು. ೬-೬೯) : ಅಳ್ಕೆ ರಿಪುವಂಶರಥಮಂ ಬಳ್ವಳ ಬಗೆದೊಗೆದ ತನ್ನ ವಿಕ್ರಮದಹನಂ ತೋಳ್ವಲಮಂ ಸರ್ವಾರ್ಥನಂದನಂ ಸಿದ್ಧಾರ್ಥಂ (ವರ್ಧಮಾ. ೧೧-೨೨); ಬಳ್ವಳ ಬೆಳೆದ ಬಾಳೆಯೊತ್ತದ ಬಾಟಿಕ್ಕೊಂಪಂಗಳುಮಂ (ಅರ್ಧನೇ. ೩-೧೧ ವ). [< ಬಳ್ವಳ್₁]

**ಬಳ್ವಳನೆ** (ಅ). ಅಧಿಕವಾಗಿ; ಹೆಚ್ಚಾಗಿ: ತುಂಬಿ: ಎಳೆಯುಂ ಕೋಳ್ವಟ್ಟುಂ ಮುಂ ಬಳೆದೊಟ್ಟುಂ ಮುಟ್ಟುಗಟ್ಟುವಿರ್ದೀಗಳ್ ಬಳ್ವಳನೆ ಸಾಮದಪುದೆ (ಶಂಶಕಾ. ೧೨-೦೬೭) : ಬಳ್ವಳನೆ ಬಳಿದ ಸಿಜರುಚಿಗಳ್ವೆರಸುಜ್ಜ್ವಲಶಿಲಾತ್ರಳಂ ಮನಮಂ ಬೆಂಕೊಳ್ವಘಮಾನರ್ಘಚಂದ್ರಂಗೊಳ್ವಂತೆಸೆದಿರ್ಪ್ಪ ಪರ್ಧಚಂದ್ರಾಕೃತಿಯಿಂ (ಅಜಿಪು. ೪-೩೩) ; ಅಂಬುದನಿನದಾಡಂಬರ ಮಂಬರದೊಳೆಳಂಬಮಾಗಳೆಸೆದಪುದೆನೆ ಬೇಗಂ ಬಳ್ವಳನೆಸೆದುದು ಭೋರೆಂಬಿನವಾ ಮುನಿನಿಸುಬಾಹುವಿಭುನುನಿನದಂ (ಸುಕುಮಾ. ೧೨-೪೯).

[ ಬಳ್ವಳ್₂ ( < ಬಳ್ವಳಂ ) + — ಅನೆ₁ ]

**ಬಳ್ವಳಿಕೆ** (ನಾ). ೧. ಅಧಿಕವಾದ ತೂಗಾಟ ; ಅತಿಶಯವಾದ ಬೀಸಾಟ : ತನ್ನ ಬಾಯ್ವಿಡಿಸಿಯೊಳಾಲದ ವಣ್ಣನೆ ಮೈಯ ಬಣ್ಣದೊಳ್ ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪೋಲ್ತು (ಆದಿಪು. ೦೨-೩೬) ; ತಳರ್ದುದು ಕರ್ಣತಾಳಪವನಾಹತಿಯಿಂ ಜಳರಾಶಿ ಕೆಯ್ಯ ಬಳ್ವಳಿಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ದುವು (ಶಂಶಕಾ. ೦೦-೬೦). ೨. ಅಧಿಕವಾದ ಚಲನವಲನ : ಕಿಡುತಂದುದು ಮನದಜೀಯುಮೆ ನುಡಿಯ ತೊದಳ್ ಪಿಂಗಿ ಪೋಯ್ತು ತಳರ್ವಡಿಯೊಳ್ ಬಲ್ಪಡರ್ದುದು ಬಳ್ವಳಿಕೆಗೆ ತನುವೆಡೆಗೊಟ್ಟುದು ನೋಡೆ ಶೃತವಾತಿಕ್ರಮದೊಳ್. (ಚಂದ್ರಪು. ೪-೨). ೩. ವಿಸ್ತಾರವಾದುದು ; ವ್ಯಾಪ್ತವಾದುದು : ಬಿಳ್ವ ಪುಳಕ . . . ವೈವರ್ಣತ್ವ ಮನು ತಾಳ್ದ ಮೊಗಂ ತವಕಿಪ ತನು ತೂಳಂಗೊಳ್ವಂಗಂ ಹರ್ಷಜಲಂ ಕೀವಿದ ಬಳ್ವಳಿಕೆಯ ನೋಟಂ ಕಣ್ಗೊಪ್ಪಿದುವಾ ನೃಪವಿಂಘುನದೊಳು (ಜಯಾಕಾ. ೬-೩೦). [ ಬಳ್ವಳ್₁ + — ಇಕೆ ]

**ಬಳ್ವಳಿಕೆವಡೆ** (ಕ್ರಿ). ವಿಸ್ತಾರವಾಗು; ಪೃಥುಲವಾಗು : ನಡೆ ನೋಟ್ಪರ ಕಡೆಗಣ್ಣಿಂ ಕಡುನಲ್ಲರ ಮನಮುಂಮೊಡನೆ ಪೋತ್ತುವು ಪುರದೊಳ್ ಮಡದಿಯರ ಮೊಲೆಯನಲ್ಲದೊಡುಡಿಯದೆ ಬಳ್ವಳಿಕೆ[ಹಾಕಾಂ. ಬಳನಳಿಕೆ, ಬಳುವಳಿಕೆ]ವಡೆದ ಬಡನಡು ಭರದಿಂ (೦೯೮ಾವ. ೬-೦೦; ಅರ್ಧನೇ. ೪-೨೨ ನೋ).

[ಬಳ್ವಳಿಕೆ + ಪಡೆ₁]

**ಬಳ್ವಳಿಸು** (ಕ್ರಿ). ದೊಡ್ಡದಾಗಿ ಬೆಳೆ; ಹಿರಿದಾಗು: ಶಬರನ ಬೀಸುಂಬಲೆಯ ಪಾಸಮನಿಸಿ ಬಳ್ವಳಿಪ . . . ಲಾಂಗೂಲಲತೆಯೊಳಂ (ವರ್ಧಪು. ೧೧-೩ ವ); ಗುಲ್ಮಕಂಟಕ ವಿಕೀರ್ಣಮಾಗಿ ಬಳಸಿ ಬಳ್ವಳಿಪ ಬಾಟಿಕ್ಕೆಲಿಗನತಿದೂರದೊಳ್ (ಕೃಷ್ಣಕೃ. ೨-೬೦ ವ).

[ಬಳ್ವಳ್₁ + — ಇಸು₃]

**ಬಳ್ಳ**, ಬಳ್₁ (ನಾ). ೧. ಒಂದು ಅಳತೆಯ ಪ್ರಮಾಣ; ನಾಲ್ಕು ಸೇರಿನ ಅಳತೆ: P ಎರಡು, ನಾಲ್ಕು, ಹತ್ತು ಅಥವಾ ಹನ್ನೆರಡು ಸೇರಿನ ಅಳತೆಗಳು ಬಳ್ಳವೆಂಬ ಹೆಸರಿನಲ್ಲಿ ಬೇರೆ ಬೇರೆ ಕಡೆಗಳಲ್ಲಿ ಪ್ರಚಾರದಲ್ಲಿದೆ : " ನಾಲ್ಕು ಸೊಲ್ಲಗೆಗೆ ಮಾನಮುವು ನಾಲ್ಕಾಗೆ ಬಳ್ಳಮುವು ನಾಲ್ಕೆನಲು ಕೊಳಗ" (ಮಂಗರಾ. ೦೦೪-೦೦); ಧಾನ್ಯಂಗಳೊಳೆಲ್ಲಂ ಪೊಂಗೆರಡು ಬಳ್ಳಮಂ ಕೊಳ್ವಂತಾಗಿ (ಕಾಇ. IX-i, ೪೯-೦೯; 1036); ಕಂಡುಗ ಕೊಳಗ ಬಳ್ಳ ಮಾನ ಸೊಲ್ಲಗೆಯಿನಿತು ಮೊದಲಾಗಿ (ಸಿದ್ಧರಾ. ೬-೬೦). ೨. ಧಾನ್ಯವನ್ನು ಅಳೆಯುವ ಸಾಧನ; ನಾಲ್ಕು ಸೇರು ಹಿಡಿಸುವ ಒಂದು ಸಣ್ಣ ಕೊಳಗದಾಕಾರದ ಸಾಧನ : ಸಟ್ಟೆಯ ಬಳ್ಳಂ ಕಿಱಿದು (ಶಂಶಕಾ. ೦೨-೦೬೩): ಬಳ್ಳದ ಬಾಯಂತೆ ಒಂದೇ ಮನವ ಮಾಡಿ (ಬಸವ. ೬೩೩); ನಮ್ಮ ಸಟ್ಟೆಯ ಮಾತೊಳ್ಳಿದುವು ಬಳ್ಳಂ ಕಿಱಿದು (ಧರ್ಮಾಮೃ. ೬-೨೩೨). ೩. ತಟ್ಟೆ; ತಳಿಗೆ : ಊಟಕ್ಕೆ ಬಳ್ಳ ಹಾಕಿದ್ದಾರೆ (ಕೂಶಿ). **ಬಳ್₁** : ೧. ಸಲಿಗಿನೊಳಂದೊರ್ಬಳ ನೆಲ್ಲಂ ಕಟ್ಟಿಕೊಂಡವಂ ಪೊಜಿಮುಟ್ಟಂ (ದಕಉ. ೧೨-೦೦೬); ಸಲಿಕೆಯ ಹಾಗೆಯಲಿ ಭತ್ತ ಬಳ ೩೦ ಲೆಕ್ಕದ ಮೂಡೆ (ಕಾಇ. ಮಂಗಳೂರು. ೪೬೩-೨೪: 1312).

[ದ್ರಾ.೩ ತಮಿ. ಮಲ. ವಳ್ಳಮ್; ತುಳು. ತೆಲು. ಬಳ್ಳ]

**ಬಳ್ಳಂಗಱಿ**, ಬಳ್ಳಗಱಿ, ಬಳವಗೆಱಿ (ನಾ). ಒಂದು ಕೆರೆಯ ಹೆಸರು : ಬಳ್ಳಂಗೆಱಿಕ್ಷೇತ್ರೇ ಸಹಸ್ರವಲ್ಲೀಮಾತ್ರ ಕ್ಷೇತ್ರಂ ದತ್ತಂ (ಎಇ. XIII. ೦೯೩-೦೦ : 902). **ಬಳ್ಳಗೆಱಿ** : ಉತ್ತರತಃ ಬಳ್ಳಗೆಱಿಯ ಪಡುವ (ಇಆ. XII. ೦೬-೪೬; 813). **ಬಳ್ಳವಗೆಱಿ** : ಬರಡ ಕೆಱೆಯ ಮೂಡ ಕಡೆಗೋಡೆ ಬಳ್ಳವಗೆಱೆಯ ಮೂಡಣ ಕಡೆಗೋಡೆ (ಮೈಲಾಂ. ೦೯೦೪. ೦೨-೬೭; 900). [ಬಳ್ಳ ? + ಕೆಱಿ]

**ಬಳ್ಳಂಗೊಱಿ** (ಕ್ರಿ). (ಬಳ್ಳದಷ್ಟು) ದೊಡ್ಡದಾಗಿ ಕೊರೆದು ರಂಧ್ರ ಮಾಡು : ಪಲ್ಗಳಂ ನುರ್ಗುಗುಟ್ಟುವುದುಂ ಕೈಗಳಂ ಗೊಟ್ಟಂಗೊಱಿವುದುಂ ಬಾಯುಂ ಬಳ್ಳಂಗೊಱಿವುದುಂ (ಸುಕುಮಾ. ೦೨-೪೭ ವ).

[ಬಳ್ಳ + ಕೊಱಿ₁]

**ಬಳ್ಳಗೆಱಿ** 'ಬಳ್ಳಂಗೆಱಿ' ನೋ.

**ಬಳ್ಳಜ್ಜ** (ನಾ). ಒಬ್ಬಾತನ ಹೆಸರು : ಕೊವುಳಗೆಱಿಯ ಗವುಣ್ಡ ಬಳ್ಳಜ್ಜನ್ನನ್ಸು[ಮ]ಡಿಸಿದ ದೇಗುಲಕೆ ಬಿಟ್ಟ ಕೆಯು . . . ಕಱಿದು [ಕೊ]ಣ್ಡರಪ್ಪಡೆ ಕವಿಲೆಯುವ ಕಱುನಱಿದರ ಲೋಕಕೆ ಸಲ್ಗು (ಕಾಇಇ. XI — i. ೩೩-೩; 933). [? + ಅಜ್ಜ₂]

**ಬಳ್ಳವ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು (?) : ಗಣೀಗೂರಾ ನರೆವೆವರಂ ಬೆಳ್ಳಿಮಣಿಯರುಂ ಸನ್ನಿಗಾಲಾ ಪುಚ್ಚಿರುಂ ಬಳ್ಳವರುಂ ಪಸುನ್ನಾಯ ಕಬ್ಬಾಜರು ಬಿರದರುಂ ಇ ಪೊಱನಂ ನಡಯಿಸಿದೋರ್ (ಎಕ. XVI ಗುಬ್ಬಿ. ೬೩-೩೯; 738). [?]

**ಬಳ್ಳವಗೆಱಿ** 'ಬಳ್ಳಂಗೆಱಿ' ನೋ.

**ಬಳ್ಳವಳ್ಳಿ** 'ಬಱಿವಟಿ₁' ನೋ.

**ಬಳ್ಳವಾಡಿ** (ನಾ). ಒಂದು ಊರಿನ ಹೆಸರು : ಬಬ್ಬುದು ಬಳ್ಳವಾಡಿ

ನೆಱೆ ನಂಬಿರ್ದುರ್ದ್ದಾರುಹತಂ ಜಿನೇಂದ್ರನಂತಿರ್ದ ಮಹಾನುಭಾವರ್ ××× (ಕಮುದ. ೨೪ ಶ್ರಯೋ). [ಬಳ್ಳಿ₁ + ಪಾಡ್ಡಿ₂]

**ಬಳ್ಳಿವಿನಾಡು** (ನಾ). ಒಂದು ಸ್ಥಳದ ಹೆಸರು : ಇದಕ್ಕಾರ್ಗಿ ಸನ್ನಿನಾಡಯ್ಯುಱುಂ ಮಯ್ಯುಸ್ನರ್ಾಡೆಬ್ಬತ್ತು ಬಳ್ಳಿವಿನಾಡು ಸಾಕ್ಷಿ (ಎಕ. IV, ಕಡೂರು, ೯–೨೩; ಸು. ೨೨೦ ?); ಬಳ್ಳಿವಿನಾಡ ಹಡಿಯವೊಳಲು (ಎಕ. V ಬೇಲೂರು. ೩೬–೬೨; 1117). [ಬಳ್ಳವಿ₁ + ನಾಡು]

**ಬಳ್ಳಿ** (ನಾ). ೧. ಹಬ್ಬಿ ಬೆಳೆಯುವ ಸಸ್ಯ; ಹಂಬು; ಲತೆ : "ಲತಾ, ಪ್ರತಾನಿನೀ . . . ಪ್ರತತಿಃ—ಈ ಐದು ಬಳ್ಳಿ (ಹಲಾಯು. ೩೦–೨೬); ಬಳ್ಳಿಯಂ ಕೊರಲೊಳ್ ತಗುಳ್ಚಿಯೆಟಲೆ ಪಿಡಿದುಕೊಂಡು (ವಡ್ಡಾರಾ. ೦೨೦–೦೧); ತವರಾಜದ ಸಸಿಯು ಮೇಲೆ ಸವಿಯ ಬಳ್ಳಿಯಸಡರಿಸುವಂತೆ (ವಂಶಕ. ೦೯–೬೯) ; ಪಡೆಯು ಕಾಲ್ಲುಳಿಗಾಗ ಗಿಡು ಬಳ್ಳಿ ಪೆಮ್ಮಾರ ಪುಡಿಯಾಗೆ (ಕಂಪಪ. ೦೨–೬). ೨. ವೀಳೆಯದೆಲೆಯ ಬಳ್ಳಿ; ನಾಗವಲ್ಲಿ: ಚನ್ದ್ರತೇಜಭಟ್ಟಾರರ್ಗ್ಗೆ ಮಾವಿನೂರ್ರೊಳ್ ಬಗಗ[ನು] ಕೊಟ್ಟಂ ಸಾವಿರಂ ಬಳ್ಳಿಯು ತೋಣ್ಣದ ಸಾಮ್ಯಮು ಮುಗಿನ ಕಾಡಮ್ಮನುಂ ಎಱೆನಾಗನುಂ ಕುಪ್ಪನುಂ ಮಾದನುಂ ಒಕ್ಕಲ್ಗನಂಗೆಯ್ಯೆ (ಎಕ. XXVI, ೬೨–೦೩; ೨೦೪); ಪನ್ನಿರ್ಮತ್ತರು ಸಾಯಿರ ಬಳ್ಳಿಯ ಎಳಕ್ಕಿಯ ತೋಣ್ಣಮುಮವ್ ಕೊಟ್ಟರ್ (ಎಕ. XI. ಹತ್ತ್ರದು. ೨೬–೦೬; 947 ?); ಸಾಯಿರ ಬಳ್ಳಿಯ ತೋಂಟಮುಂ ದೇವರ್ಗ್ಗೆ ಕೊಟ್ಟರ್ (ಇಕ. XII, ೨೩೬–೬; ೨೬೦). ೩. ಹಗ್ಗ; ಕಣ್ಣಿ : ಎಳೆತಂದು ಕಡೆಗೋಲ್ವಳ್ಳಿಯಲಿ ಕೈಗಟ್ಟಿ ಕಂಬದಲಿ ಬಂಧಿಸಿದಳು (ಪಾಳ್ಯಾ. ೨೦–೦೩); ಮೇವಿಗೆ ಬಿಟ್ಟಿದ್ದ ಹಸು ಕತ್ತಲಾದರೂ ಮನೆಗೆ ಬರಲಿಲ್ಲವಂತೆ. ಕೈಯಲ್ಲಿ ಬಳ್ಳಿ ಹಿಡಿದು ಮಂಜರೇ ಹಕ್ಕಲ ತುಂಬ ಹುಡುಕಾಡಿದರು (ದೇಪಹಂ. ೩೬). ೪. ಸುತ್ತು; ಕೊಂಕಾದ ಭಾಗ : ಒಂದು ಬಳ್ಳಿ ಚಕ್ಲಿ ಕೊಡು, ಚಹಾದ ಜೋಡಿ (ಗಂಪಾಱು. ೪೦). ೫. ದೀರ್ಘದ ಗುರುತು ಮುಂತಾದ ಕಾಗುಣಿತ : ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಟ ಚೆಲ್ವು . . ಬಳ್ಳಿಯೊಳೊಡಂಬಡುತಿರ್ಪ ನಯಂ (ಕೃತ್ತ್ಯ. ೦೯–೩೬); ನಂತರ ಅವರು ಕಾಕ ಬಳ್ಳಿ ಕಲಿಸಿದರು (ಸ್ಮಾತಿಕ. ೧೨೦). ೬. ಸಂಬಂಧ; ನಂಟು : ತಮ್ಮಂ ಸಯೆ ಬಳ್ಳಿಯುಂ ನಿಗಳಮುಂ ತ[ಳ್ತ್ರಿ]ಂದುವೃಂ ಬಳ್ಳಿ ಸಂಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹನಶೃಂಖಲೆ ಪಾಱೆ್ಎಱೆ ತಪೋವನಕ್ಕೆ ತಳರ್ದು (ಶಾಂತಿಪು. ೪–೦೦೬). ೭. ವಂಶದ ಕುಡಿ; ಸಂತಾನ : ನಿನ್ನ ಬಳ್ಳಿ ಹಬ್ಬುತ್ತದೆ. ಧಾರ್ಮಿಕವಾಗಿ ಬಾಳು (ಹಬ್ಬಿ. ೪); ಹಾಲುಂಡ ತವರಿಗೆ ಏನೆಂದು ಹಾಡಲಿ ಹೊಳೆದಂಡೆಲಿರುವ ಕರಕೀಯ ಕುಡಿಯಂಗ ಹಬ್ಬಲಿ ಅವರ ರಸಬಳ್ಳಿ (ಜನಗೀ. ೩೩). ೮. (?): ಶ್ರೀಲೋಕಪಾಲೇಶ್ವರಕಂ ಪಾಱೆ ಬಳ್ಳಿ (ಇಕ. X, ೦೬೩–೬; 733).

**ಬಳ್ಳಿವಳ್ಳಿ** (ದ್ವಿರುಕ್ತಿ) = ೧. ಹಬ್ಬಿಕೊಂಡಿರುವಿಕೆ; ವ್ಯಾಪಿಸಿರುವಿಕೆ; ಹಬ್ಬುಗೆ : ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳ ಬಳೆದೆಳೆದಳಿಸುವ ಪೊಸ ಕೆಂದಳಿರ ಗೊಂದಳದೊಳ್ (ಅಜಿತ. ೦೦–೩೦ ವ). ೨. ಆಧಿಕ್ಯ; ಅತಿಶಯ; ಹೆಚ್ಚಳ; ರತ್ನಭೂಷಣದ ಚೆಲ್ವನುರಾಗದ ಬಳ್ಳಿವಳ್ಳಿಯಂ ಹೃದಯದೊಳೆಂದು ಪರ್ವಿಸುವುದುಂ (ಮಲ್ಲಿಕ. ೪–೬೪). ೩. ಸಮೂಹ ; ಗುಂಪು : ಒಳಿವಟ್ಟು ಬರ್ಪ ಶುಖಿದ ಬಳ್ಳಿ[ಪಾಠಾಂ. ಳ್ಳಿ]ವಳ್ಳಿಗಳುಮಂ (ಅಂತಿ. ೦೨–೬೯ ವ). ೪. ಪರಂಪರೆ : ಅದಿರದೆ ಮೋಹವಿರೋಧಿಯ ಪುದಿದೊದವಿದ ಬಳ್ಳಿವಳ್ಳಿಯಂ ಪಱಿದು (ಶಾಂತಿಪು. ೬–೪೬) ; ಪಿತೃಗಳುಪಾರ್ಜಿಸಿಟ್ಟ ಸಿರಿ ಜವ್ವನದೇಟ್ಗೆ ಪೆಱಂಗಿದಿಲ್ಲನಿಪ್ಪತಿಶಯರೂಪುಶಕ್ತಿಗಳಿವಲ್ಲವೆ ಹಾನಿಯ ಬಳ್ಳಿವಳ್ಳಿ ನಿಶ್ಚಿತಂ (ಕಾದಂಪೂ. ೩೩೪). **ಬಳ್ಳಿಗುರುಡ**=ಒಬ್ಬನ ಕೈಯನ್ನು ಹಿಡಿದ ಇನ್ನೊಬ್ಬನಂತೆ ಸಾಲಾಗಿ ನಿಂತ ಕುರುಡರಲ್ಲಿ ಒಬ್ಬ : ಮೂಢಮತಿಯಿಂದ ಕಾಡ ಲಿಂಗವ . . . ಪೂಜಿಸುವ ಶಿಷ್ಯನು ಬಳ್ಳಿ ಗುರುಡನ ಕಯ್ಯ ಬಳ್ಳಿಗುರುಡವಿಡಿದು ಕಾಣದೆ ಡೊಂಗುರವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮಗುಂಡದಲ್ಲಿ ಬೀಳುವರು (ವಚಕಾ. I, ೯೬); ಜನಾಂಗವು ಬಳ್ಳಿಗುರುಡರಂತೆ ಮುನ್ನುಗ್ಗದೆ ಅದರ ಸಿದ್ಧಾಂತಗಳ ಸಾಧಕ ಬಾಧಕ ಪ್ರಮಾಣಗಳಿಂದ ಒರೆಹಚ್ಚಿ ವಿಚಾರಮಾಡಿ (ಕೂವಾದ. ೦ ಎರಡು ಮಾತುಗಳು). [< ಸಂ. ವಲ್ಲೀ. / ತಮಿ. ಮಲ. ವಳ್ಳಿ; ತುಳು. ಕೊಡ. ಬಳ್ಳಿ; ತೆಲು. ವ್ಲಲ್ಲಿ]

**ಬಳ್ಳಿಕೌಂಗು** 'ಬಳ್ಳಿಗವುಂಗಂ' ನೋ.

**ಬಳ್ಳಿಕ್ಕು** (ಕ್ರಿ). ನಾಯಿ, ನರಿ ಮೊದಲಾದುವು ಅರಚು,– ಬಗಳು,– ಊಳಿಡು : ಬೀದಿಯನಲೆವ ಶುನಕಸಮುದಯು ಬಳ್ಳಿಕ್ಕಿದುವು ಕೂಡೆ (ಶ್ರೀರಾಮಾ. ೪೬೦–೦) ; ಬಳ್ಳಿಕ್ಕುತಿದೆ ಪೊಳ್ಳು ಜಂಬುಕಂ ಸಿಂಗದಿದಿರಿನಲಿ ! (ತಕ್ರಾಂಗ. ೬೯–೨೦೪೦). 'ಬಳ್ಳಿಡು' ಪರಾ. [ಬಳ್ಳು₂ (<ಬಗುಳ್ಳು₂) + ಇಕ್ಕು]

**ಬಳ್ಳಿಗಂಟಕ** (ನಾ). (ಮುಳ್ಳಿನ) ಬಳ್ಳಿಯಲ್ಲಿರುವ ಮುಳ್ಳು : ಒಳ್ಳಿಣಿಸೊಳ್ವೆಂದಿರ ಭೋಗಿಪನೆಂಬ್ಳೊತಪ್ಪನ್ನೀ ತನುಗೆ ಬಳ್ಳಿಗಂಟಕ ಮಾದುದೀ ಮುಪ್ಪೆಂದಾಗ ತಳ್ಳಂಕವಡೆದನಾ ನೃಪತಿ (ಶ್ರೀಪಾಂ. ೦೯–೩೨). [ಬಳ್ಳಿ + ಕಂಟಕ]

**ಬಳ್ಳಿಗತ್ತಿ** (ನಾ). ಬಳ್ಳಿಯಂ ಹಾಗೆ ಬಳುಕುವ ತೆಳುವಾದ ಕತ್ತಿ: ಆ ಬಳ್ಳಿಗತ್ತಿಯೇನಾದರೂ ಅವನ ಕಯ್ಯಲ್ಲಿದ್ದುಬಿಟ್ಟರೆ (ಶುಂತ್ರಕ. ೪೦–೨೨). [ಬಳ್ಳಿ + ಕತ್ತಿ]

**ಬಳ್ಳಿಗರುಳು** (ನಾ). ಬಳ್ಳಿಯ ಹಾಗೆ ಸುತ್ತಿಕೊಂಡಿರುವ ಕರುಳು : ಬುಳ್ಳನಂ ಹೊಯ್ಸಿತು . . . ಬಳ್ಳಿಗರುಳುಚ್ಚಿದುದು (ಸಾಳ್ಯಾ. ೩–೩೩). [ಬಳ್ಳಿ + ಕರುಳು (< ಕರುಳ್)]

**ಬಳ್ಳಿಗವರ್ತೆ** (ನಾ). ವೀಳೆಯದೆಲೆಯ ಮೇಲೆ ಹಾಕುತ್ತಿದ್ದ ತೆರಿಗೆ : ಈ ವಿಷಯದ ವಿನ್ನಾಣಗಳಾ ಬಳ್ಳಿಗವರ್ತ್ತೆಯನುಱಿಪಿದ ಆಚಾರಿಯ (ಇಕ. X, ೦೬೪–೬; 7ನೆಯ ಶತ). [ಬಳ್ಳಿ + ಕವರ್ತ್ತೆ₂]

**ಬಳ್ಳಿಗವುಂಗು**, **ಬಳ್ಳಿಕೌಂಗು**, **ಬಳ್ಳಿಗೌಂಗು** (ನಾ). ಬಳ್ಳಿಗಳು ಹಬ್ಬಿಕೊಂಡಿರುವ ಅಡಕೆಮರ : ಬಳ್ಳಿಗವುಂಗಂ ತಳ್ತಿಲೆವಳ್ಳಿಯ ಕಟ್ಟಲೆಯುನಲೆವ ಸೊಡರ್ಗುಡಿಗಳಂ (ಆಂತಿ. ೦೦–೬೩); ರಾಜಿಪವು ಬಳ್ಳಿಗವುಂಗಿನ ತಟ್ಟಿ ಬಳ್ಳಿಮಾವಿನ ಮನೆ (ಶಾಂತಿಪು. ೬–೦೩೦). **ಬಳ್ಳಿಕೌಂಗು**: ಕಾಯ್ತು ಬಳ್ಳಿಕೌಂ[ಪಾಠಾಂ. ಗೌಂ]ಗಿನ ಪಸುರ್ವಣ್ಣದರುಮಂ ಪಣ್ತ ಮಧುರದ್ರಾಕ್ಷೆಯ ಬಾಟ್ವಿಂದರುಮನಿರ್ಕಿಲದೊಳಿಕ್ಕಿ (ಅರ್ಧನೇ. ೬–೦೦ ವ). **ಬಳ್ಳಿಗೌಂಗು** : ಎಳಲತೆ ತಳ್ತ ಚಂದನದ ಸಾಲೆಳ ವಳ್ಳಿಗಳೆಂಡುಗೊಂಡು ಗೊಂದಳಿಸಿದ ಬಳ್ಳಿಗೌಂಗು . . . ಮೆಱೆವುದು (ಸೂತ್ರಸು. ೪–೬೨). [ಬಳ್ಳಿ + ಕವುಂಗು]

**ಬಳ್ಳಿಗಱುಕೆ** (ನಾ). ಬಹಳ ಉದ್ದವಾಗಿ ಹಬ್ಬಿ ಬೆಳೆಯುವ ಹುಲ್ಲು : "ಗಂಡೋರೀಃ, ಶಕುಲಾಕ್ಷಕಃ – ಈ ೨ ಬಳ್ಳಿಗಱುಕೆ" (ನಾಕರಾ. ೦೦೨). [ಬಳ್ಳಿ + ಕಱುಕೆ (<ಕಱುಂಕೆ)]

**ಬಳ್ಳಿಗಾಮೆ** 'ವಳ್ಳಿಗಾಮೆ' ನೋ.

**ಬಳ್ಳಿಗಾವಣ** (ನಾ). ಬಳ್ಳಿಗಳಿಂದ ರಚಿತವಾದ ಮಂಟಪ; ಲತಾಗೃಹ : ಬೀಡುಮಾಣಂಗಳೊಳಿಕ್ಕಿದ ಬಳ್ಳಿಗಾವಣಂಗಳೊಳಂ ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತುಂ (ಶಂಪಕಾ. ೨–೯೬ ವ); ಬಗ್ಗವಳ್ಳಿಯ ಬಳ್ಳಿಗಾವಣ ದೋಳಿಯಿಂ ಸೊಗಯಿಪ್ಪ ಸಮ್ಯಗ್ಗವಾಕ್ಷದ ಮಂಕದಾರದ ಕೇತಕಿರ್ಗ ಮಿನೊಂದಿ ನಿಂದು (ಶಾಂತಿಪು. ೩–೬೯). [ಬಳ್ಳಿ + ಕಾವಣ₁]

**ಬಳ್ಳಿಗಾವೆ** 'ವಳ್ಳಿಗಾವೆ' ನೋ.

**ಬಳ್ಳಿಗುರುಳ್** (ನಾ). ಬಳ್ಳಿಯಂತೆ ಕೊಂಕಾಗಿರುವ ಕೂದಲು;

ಗಂಗಂಗರಂಕೊಡದಲು ; ಅವಳ ಪೆಜಿನೊಸಲನಲವ ಬಳ್ಳಿಗುರುಳೊಳ್ ಕೊಡಂಕಿದ ಕಣ್ ಕಣ್ಣಿವಲೆಯೊಳ್ ಕೆಡದೆರಲೆಯುಂತಡಿಯಿಡಲಾರ್ತುವಿಲ್ಲ (ಕ್ಮಾ. ೬೬). [ಬಳ್ಳಿ + ಕುರುಳ್$_1$]

**ಬಳ್ಳಿಗೊಳಿಸು** (ಕ್ರಿ). ಸಂಬಂಧವನ್ನುಂಟು ಮಾಡು ; ಹೊಂದಿಸು : ಮತ್ತಮಾ ರಾಗಂಗಳಂ ಪಾಡುವಲ್ಲಿ ಗ್ರಾಮವರ್ಜಂಗಳಂ ತೋಜಿದು ಜನ್ಯ ಜನಕಂಗಳು ಬಳ್ಳಿಗೊಳಿಸಿ (ಏಪೇಳ. ೨೪೬). [ಬಳ್ಳಿ + ಕೊಳಿಸು]

**ಬಳ್ಳಿಗೊಂಗು** 'ಬಳ್ಳಿಗವುಂಗು' ನೋ.

**ಬಳ್ಳಿಗ್ಗಮ** (ನಾ). ಒಂದು ಊರಿನ ಹೆಸರು : ನಿಮ್ಮನೂರ ಕಿಳ್ಳಮ್ಮನ್ ಅಣ್ಣುಗಿಯ ರಟ್ಟಗನ್ ಬೆದೆಮೆಟ್ಟಿಯಾಲಮ್ಮನ್ ಬಳ್ಳಿಗ್ಗಮಯ ಗಾಮುಣ್ಣನ್ (ಎಕ. VIII, ಸೊರಬ. ೦೦-೦೬; ಕ್ರಿ. ೮೦೦).

[ಪ ಇದು 'ಬಳ್ಳಿಗಾವೆ' ಎಂಬುದರ ಅಪಲಿಖಿತ]

**ಬಳ್ಳಿಡು, ಬೊಳ್ಳಿಡು** (ಕ್ರಿ). ೧. = ಬಳ್ಳಿಕ್ಕು : ಲಿಂಗನಿಷ್ಠಾಹೀನರು ಓದಿ ಹಾಡಿದರೆ ನಳ್ಳಿಗುಳ್ಳಿಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬಗುಳ್ದಂತೆ (ಸಿದ್ಧೇಶ. ೬೫-೨೦೭). ೨. (ನಾಯಿ, ನರಿಗಳ ಹಾಗೆ) ಅರಚು; ಕೂಗಾಡು; ಬೊಬ್ಬಿಡು : ಕೊಟ್ಟರೆ ಹರಸುವೆನು ಕೊಡದಿದ್ದರೆ ಬಳ್ಳಿಟ್ಟು ಬಗುಳುವಂಥ ಭ್ರಷ್ಟದಾಸನು ನಾನು (ಪೋಳ್ಡರಿ. ೬೫-೨೬); ಹರಿಹರನ ಹರಣಕ್ಕೆಂದು ಬಳ್ಳಿಟ್ಟು ಬೊಗಳುತ್ತ ಬಂದು ಪ್ರಾಂತದೊಳು ಹದುಳಮಿಹನು (ಹಾಶಕ. ೦೯-೬೭). **ಬೊಳ್ಳಿಡು** : ೨. ಬಳ್ಳಿಯ ಮಾತಿಂಗೆಯುಳ್ಳೊಡವೆ ಕೊಡೆನೆಂದು ಬೊಳ್ಳಿಟ್ಟು ಬೊಗಳಿ ಹುಸಿದು ಸಾಲವ ನುಂಗಿ ಇಲ್ಲೆನುತಲಿಹನು (ಸರ್ವಜ್ಞ. ೦೩೯೯).

[ ಬಳ್ಳು$_2$ (<ಬಗುಳ್ಳು$_2$) + ಇಡು$_1$ ]

**ಬಳ್ಳಿತುಚುಚಿ** 'ಬಳ್ಳಿದುಚುಚಿ' ನೋ.

**ಬಳ್ಳಿದಲೆಯ** (ನಾ). (ಬಳ್ಳಿಯಂ ಹಾಗೆ ಹಬ್ಬಿರುವ) ಅನೇಕ ತಲೆಗಳನ್ನುಳ್ಳವನು; ರಾವಣ : ಬಳ್ಳಿದಲೆಯನ ತರಳನಾಗಲಿ ಬಂದನಿಂದ್ರಾರಿ (ತೊರಾ. ೦೯-೩). [ ಬಳ್ಳಿ + ತಲೆ$_1$ + — ಅ$_7$ ]

**ಬಳ್ಳಿದುಚುಚಿ, ಬಳ್ಳಿತುಚುಚಿ** (ನಾ). ಒಂದು ಬಗೆಯ ಔಷಧೀ ಸಸ್ಯ; ಹಬ್ಬಿ ಬೆಳೆಯುವ ತುರಚಿಗಿಡ : "ಯಾಸಃ, ಯವಾಸಃ, ದುಃಸ್ಪರ್ಶಃ, ಧನ್ವಯಾಸಃ . . . ದುರಾಲಭಾ—ಈ ೧೦ ಬಳ್ಳಿದುಚುಚಿ" (ಸಾಪಶಾ. ೦೦೯) ; ಬಳ್ಳಿದುಚುಚಿಯ ಬೇರು . . . ಅರೆದು ಪೂಸಲು ನಸುಗುನ್ನಿಯ ವಿಷ ಶಮನವಹುದು (ವೈದ್ಯಸಾ. II, ೨೬೯) ; ಬಳ್ಳಿದುಚುಚಿ ನೆಲಬೇವು ಮುಸ್ತೆ (ಕಮ್ಮಾಕ. ೩-೩೨) ; ಬಳ್ಳಿದುಚುಚಿ ನೆಟಿ ಮುಳ್ಳುನೆಗ್ಗಿಲು ಕಾಡಕಳ್ಳಿ . . . ಬೆಳೆದು (ಕೃಶಪ. ೦೬-೩೯). **ಬಳ್ಳಿತುಚುಚಿ** : ಬಳ್ಳಿತುಚುಚಿಯ ಬೇರ ಒಳ್ಳಿತಾಗಿಯೆ ಹಣಿದು ಬೆಳ್ಳಿಯ ರಸದಿ ಬೆರೆಯಲ್ಕೆ ಹೇಮ ತಾ ಬಳ್ಳದಲಿ ಬಕ್ಕು (ಸರ್ವಜ್ಞ. ೦೯೬೪). 'ತುರಚಿಬಳ್ಳಿ' ಪರ್ಯಾ. [ಬಳ್ಳಿ + ತುಚುಚಿ]

**ಬಳ್ಳಿಬರೆ** (ಕ್ರಿ). (ದೀರ್ಘ ಮಂಂತಾದ) ಕಾಗುಣಿತವನ್ನು ಬರೆ : ವಾಡಿಕೇ ಮೀರ ಕಾಗದ ಪುಸ್ತಕ ಓದುವ ಹುಡುಗರು ತಲೆಗೆ ಒಂದು ದುಡ್ಡನ್ನೂ, ಹಲಗೇ ಬರೆಯುವವರು ಮೂರು ಕಾಸನ್ನೂ, ನೆಲದ ಮೇಲೆ ಬಳ್ಳಿಬರೆಯುವವರು ಎರಡು ಕಾಸನ್ನೂ ತಂದು ಪಂತರಿಗೆ ಆ ದಿವಸ ಕೊಟ್ಟು ಶಾರದಾಪೂಜೆಯನ್ನು ಮಾಡಿದರು (ಪೂಹುರಾ. ೩೯). [ಬಳ್ಳಿ + ಬರೆ$_1$]

**ಬಳ್ಳಿಬೆಳಗು** 'ಬಳ್ಳಿವೆಳಗು' ನೋ.

**ಬಳ್ಳಿಮಾಡ, ಬಳ್ಳಿವಾಡ** (ನಾ). ಬಳ್ಳಿಗಳಿಂದ ರಚಿತವಾದ ಮನೆ; ಲತಾಕುಂಜ : ಮೂವತ್ತಿರಟ್ಟಿಬಳ್ಳಿಮಾಡಂಗಳುಮಂ ಮಾಡಿಸಿ(ವಡ್ಡಾರಾ. ೯೩-೨೦); ಸುರತಸುಖದ ಬಳ್ಳಿವಳ್ಳಿಯೆನಿಪ ಬಳ್ಳಿವಾಡದಿಂ ಮಹಾವಿನೋದನೀಡದಿಂ (ಹಂಶಭಾ. ೦-೩೬ ರಗಳೆ) ; ನಲವಿಂದಂ ಬಳ್ಳಿಮಾಡಂಗಳೊಳ್ ಗುಡಿಯಂ ಬೇಗನೆ ಕಟ್ಟಿಂ (ಕ್ಮಾಕ. ೩೨೨). **ಬಳ್ಳಿವಾಡ** : ರತ್ನದೀಧಿತಿಯೊಳೊಂದಿ ಪಳಂಚುವ ಬಳ್ಳಿವಾಡದಿಂ ಕಳಸದ ಮತ್ತವಾರಣದ ಶೋಭೆಗಳಿಂ (ಶಶಾಂಕ. ೫-೯೩) ; ಬಿರಿಮುಗುಳಿನೊಪ್ಪುವ ಕಾಡುಮಲ್ಲಿಗೆಯ ಬಳ್ಳಿವಾಡಮುಂ (ರಾಜಶೇ. ೬೦-೦೬) ; ನಂದನವನಂ ದ್ರಾಕ್ಷಾರಸಾಲಂಗಳಂ ಮಿಂಚುಂದೀವಿಗೆ ಬಳ್ಳಿವಾಡಮೆಸೆಯೆ (ವೃಸೂಪು. ೬-೬೬). [ಬಳ್ಳಿ+ಮಾಡ$_1$]

**ಬಳ್ಳಿಮಾವು** (ನಾ). ಬಳ್ಳಿಗಳು ಹಬ್ಬಿರುವ ಮಾವಿನ ಮರ : ರಾಜಿಪುವು ಬಳ್ಳಿಗವುಂಗಿನ ತಟ್ಟ ಬಳ್ಳಿಮಾವಿನ ಮನೆ ಬಳ್ಳಿಮಲ್ಲಿಗೆಯ ಮಂಡಪಂ (ಕಾಂತಿಪು. ೬-೧೩೦) ; ಇವ್ಮಾವಿನ ಬಳ್ಳಿಮಾವಿನೆಳಮಾವಿನ ಸೊಂಪೆಸೆಗುಂ ವನಾಂತದೊಳ್ (ಜಗಪು. ೦೯-೨೬) ; ಮೆಲ್ಲನೆ ನಡೆವಂಚೆಗಳಂ ತಳೆದಿರ್ಪ ಬಳ್ಳಿಮಾವಿನ ಸಾಲ್ಗಳ್ (ಕಮ್ಮಾಕ. ೦೦೬). [ಬಳ್ಳಿ + ಮಾವು]

**ಬಳ್ಳಿಮಿಂಚು** (ನಾ). ಬಳ್ಳಿಯ ಹಾಗೆ ಕವಲಾಗಿ ಕೋರೈಸುವ ಮಿಂಚು ; ಕೋಲುಮಿಂಚು : ನೆಗೆದುದು ಬಾಳ್ಗೊಗೆ ಕಾರಮುಗಿಲ್ ಬಳ್ಳಿಮಿಂ[ಚಿನಿಂದು]ಳ್ಕುಪವೋಲ್ (ಹಂಶಭಾ. ೦೦-೬೯); ಅರ್ದತ್ತ ತ್ರೈಲು ಬಳ್ಳಿಮಿಂಚಂ ತಳೆದಾಶಾಮಂಡಲಂ ಕಟ್ಟನೆ ಕುನಿಯೆ ಜಳಸ್ಫೀತ ಜೀಮೂತಜಾತಂ (ಜಗಪು. ೯-೦೪) ; ಬಂದಳೂರ್ವಶಿ ಬಳ್ಳಿಮಿಂಚಿನ ಮಂದಿಯಲಿ (ಕುವ್ಯಾಕ. ೯-೦೬). [ಬಳ್ಳಿ + ಮಿಂಚು$_2$]

**ಬಳ್ಳಿವರಿ** (ಕ್ರಿ). ಬಳ್ಳಿಯ ಹಾಗೆ ಹಬ್ಬು,—ವಿಸ್ತಾರವಾಗು,—ಹರಡು : ಬೆಟ್ಟದ ಮೇಲೊಂದು ದಳ್ಳುರಿ ನಿಮಿರಿ ಬಳ್ಳಿವರಿದು ಆಕಾಶಕ್ಕಡರಿ ಜಗದೊಳ್ಪರಿಸಿ ಸಪ್ತಸಮುದ್ರಂಗಳ ನುಂಗಿತ್ತು (ಅದವ. ೩೩-೯೬) ; ಮೂಡಿದುದು ನೆಯ್ದಿಲ ಬೆಳ್ಪು ಮಡಲ್ದುದಚ್ಚವೆಳ್ದಿಂಗಳ ಬಳ್ಳಿವರಿದತ್ತೆಳವೆಂಡಿರ ಕಣ್ಣ ಬೆಳ್ಪು (ಲೀಲಾವ. ೨-೨೦) ; ಸೆಜ್ಜೆವನೆಯ ಸಿರಿಮಂಚದೊಳ್ ಕುಳ್ಳಿರ್ದು ಬಳ್ಳಿವರಿವ ನೇಹಂ ಕುಡಿ ನಿಮಿರೆ(ಗಿಂಕ. ೨-೦೦೩ ವ). [ಬಳ್ಳಿ + ಪರ್$_2$]

**ಬಳ್ಳಿವಲೆ** (ನಾ). ಬಳ್ಳಿಯಂ ಹಾಗೆ ಇರುವ ಬಲೆ : ತಳ್ಳಿವಲೆ ಬಳ್ಳಿವಲೆ ತೊಡಕುವಲೆ . . . ಮಂದನಿನ ವಲೆಯು ಹೊಜಿಗಳ ಬೇಡವಡೆ ನೆರೆದುದು (ಹಕಕಾ. ೫-೬) ; ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬುಗದೆ ಬಿರ್ಚಿ ಬೀಸಿದಾಗಳ್ (ರಾಜಶೇ. ೫-೦೦೪ ವ). [ಬಳ್ಳಿ + ಬಲೆ$_1$]

**ಬಳ್ಳಿವಾಡ** 'ಬಳ್ಳಿಮಾಡ' ನೋ.

**ಬಳ್ಳಿವಾಯ್** (ಕ್ರಿ). ಬಳ್ಳಿಯು ಹಬ್ಬುವಂತೆ ಸಾಲುಗಟ್ಟಿ ನುಗ್ಗು,—ಸಾಲಾಗಿ ನುಗ್ಗು : ಸಪ್ತಚ್ಛದ ಗಂಧದ ಸೊವಡು ಮುಟ್ಟೆ ಮದಕರಿ ಕುಳವೋವದೆ ಬಳ್ಳಿವಾಯ್ದು ಗರಿ ತುಳ್ಕಿದ ಗಿರಿ ಪರಿವಂತೆ ಪರಿದು ಮರವಾಯ್ದಿರ್ಕುಂ (ಕಾಂತಿಪು. ೯-೦೯೦). [ಬಳ್ಳಿ + ಪಾಯ್$_1$]

**ಬಳ್ಳಿವಿಡಿ** (ಕ್ರಿ). ಬಳ್ಳಿಯನ್ನು ಆಧಾರವಾಗಿ ಹಿಡಿ : ದುರಾರೋಹ ಮುಮಾದೊಡಂ ಬಗೆಯದೆ ಬಳಸಿದ ಬಳ್ಳಿವಿಡಿದಡರ್ದೇಜಿ (ಕಾದಂಪೂ. ೦೬೬).

[ಬಳ್ಳಿ + ಪಿಡಿ$_1$]

**ಬಳ್ಳಿವೆರ್ಚು**(ಕ್ರಿ). ಬಳ್ಳಿಯು ಹಬ್ಬುವಂತೆ ವ್ಯಾಪಿಸಂ; ಹರಡಂ :ಆಕಾಶಗಂಗಾ ಪ್ರವಾಹಮನಾಧಾರತೆಯಿಂದವನಿಗಿಳಿಕ್ಕಿತೆಂಬಂತೆ ಒರೊಂದೆಡೆಯ ಬಯಲೊಳ್ ಬೆಳ್ಪಂಗೆಡೆದು ಬಳ್ಳಿವೆರ್ಚಿಯುಂ (ಕಂದ್ರಪ್ರಕ. ೮-೪೪ ವ).

[ಬಳ್ಳಿ + ಪೆರ್ಚು$_1$]

**ಬಳ್ಳಿವೆಳಗು, ಬಳ್ಳಿಬೆಳಗು** (ನಾ). ಬಳ್ಳಿಯಂ ಹಬ್ಬಿದಂತೆ ಹರಡಿರುವ ಕಾಂತಿ : ನನೆಗೆಜಪ ತುಂಬಿ ಗಜಿಯೆನೆ ಕೊನೆವೆಳಗಿಂ [ ವೆರಲಿಂ ] ನಿಮಿರ್ವ ಬಳ್ಳಿವೆಳಗುರ್ದಿದ ಕಾಲೆನೆ ಗಜಿಗಟ್ಟುವುದತನುಗೆ ನನೆಗಟ್ಟುವ ನೆವದೆ ಪುಷ್ಪಲಾವೀನಿವಹಂ (ಪರ್ವಕ. ೦-೬೩) ; ನುಣ್ಪೆಳಗನೀವ ಪೊಂಬಟ್ಟೆಯ ಬಳ್ಳಿವೆಳಗಂ ಕಟಿವ ಬೆಳ್ಪಟ್ಟೆಯ . . . ಮೇಲ್ಕಟ್ಟನ ಬೆರಕೆವೆಳಗು ಮಂಟಪದೊಳಗಂ ಪೊಜಗಂ ತೆಕ್ಕನೆ ತೀವೆ (ಗಿಂಕ. ೦೦-೨೬ ವ) : ಹರಿದು ಹಬ್ಬುವ ಬಳ್ಳಿವೆಳಗಿನ ಮುರಿವು ಮಂಡಳಿಸಿದುದು (ಕುಪ್ಪಾಶೀ. ೬-೩೩). **ಬಳ್ಳಿಬೆಳಗು** : ಓರೆನೋಟದ ಬಳ್ಳಿಬೆಳಗುಗಳ. . . ಗರುವೆಯರಡಸಿದರು ದ್ರುಪದಾತ್ಮಜೆಯ ದಂಡಿಗೆಯ ಬಳಸಿನಲಿ (ಕುಪ್ಪಾಸ. ೦೩-೦೦೦).

[ಬಳ್ಳಿ +ಬೆಳಗು$_1$]

**ಬಳ್ಳಿವೆಳ್ಳು** (ನಾ). ಬಳ್ಳಿವೆಳಗು : ಗಂಗೆ ಬೞಲ್ದವೋಲ್ನೆಲಕೆ ಬೆಳ್ಳಿಯ ಬೆಟ್ಟದ ಬಳ್ಳಿವೆಳ್ಳು ಬೆಳ್ಳಂಗೆಡೆದೊಪ್ಪೆ (ಅರ್ಜನೀ. ೨-೬೦); ಕಡುನೆಗೆದಬ್ಬರಂ ಪೊಡಗಿನಂತಿರೆ ಬಿಲ್ಲೊಳಮರ್ಕವೆತ್ತ ಕನ್ನಡಿಗಳ್ ಬಳ್ಳಿವೆಳ್ಳು ಬಡುಮಿಂಚಿನ ವೋಲಿರೆ ... ಮುೞಿಯಂ ಕೞಿದರ್ ವಿಗೆ ಬಿಲ್ಲ ಬಲ್ಲಹರ್ (ಶಬ್ದಶಾ. ೨೬೭).
[ಬಳ್ಳಿ + ಬೆಳ್ಳು$_2$]

**ಬಳ್ಳಿಸುಂಡೆ,** ಬಳ್ಳಿಸೊಂಡೆ (ನಾ). (ಬೇಲಿಗಳ ಮೇಲೆ ಹಬ್ಬುವ, ಕೆಂಪಾದ ಹಣ್ಣು ಬಿಡುವ) ಒಂದು ಬಗೆಯ ಸಸ್ಯ : "ಕರ್ಣಿಕಾ— ಬಳ್ಳಿಸುಂಡೆ" (ಓಷಧಿ. ೫೦): ಬಳ್ಳಿಸುಂಡೆಯು ಸಹಮೂಲವು ಮಂಗರವಳ್ಳಿ ರಸಂಗಳು ಸಹಿತ (ಶಾಳಿಸಂ. ೦೪); ಗರುಗವ ಸೊಪ್ಪು ಕುರುಟಿಗೆ ಸೊಪ್ಪು ಹೊನಗನ್ನೆ ಬಳ್ಳಿಸುಂಡೆ ಇದರ ರಸವನು . . . ಅಭ್ಯಂಗವ ಮಾಡಿಸಲು ಪಕ್ಷಿಗ್ರಹ ದೋಷ ಶಮನವಹುದು (ವೈದ್ಯಸಾ. II. ೦೪). **ಬಳ್ಳಿಸೊಂಡೆ :** ಹೀರೆಕಾಯಿ, ಬಳ್ಳಿಸೊಂಡೆ . . . ಜ್ವರದವರಿಗೆ ಪಥ್ಯ ದ್ರವ್ಯಗಳೆಂದು ಮತಾಂತರದಲ್ಲಿ ಹೇಳಲ್ಪಟ್ಟದೆ (ಸಕವೈ. ೧೦೨); ಬಳ್ಳಿ ಸೊಂಡೆ ಬೇರು ನರುವಲಬೇರು ಕಡವದ ಬೇರು (ದ್ರಾಕ್ಷಾಪೂ. ೨-೨).
[ಬಳ್ಳಿ + ಸುಂಡೆ$_1$]

**ಬಳ್ಳಿಸೊಂಡೆ** 'ಬಳ್ಳಿಸುಂಡೆ' ನೋ.

**ಬಳ್ಳಿಹಾಲೆ** (ನಾ). ಬಳ್ಳಿಯಾಗಿ ಹಬ್ಬುವ ಹಾಲೆ ಸಸ್ಯ : "ಮಧು ಪರ್ಣಿಕಾ—ಬಳ್ಳಿಹಾಲೆ" (ಚಾಹಟೀ. ೨-೨-೬೦ ವ).
[ ಬಳ್ಳಿ + ಹಾಲೆ$_2$ (< ಪಾಲೆ$_2$) ]

**ಬಳ್ಳಿಹುಸಿಕ** (ನಾ). (ಬಳ್ಳಿ ಹಬ್ಬುವ ರೀತಿಯಲ್ಲಿ) ಅನೇಕ ಸುಳ್ಳು ಹೇಳುವವನು; ಬಹಳ ಸುಳ್ಳುಗಾರ : ಶಿಳ್ಳನೆಂದೆಂಗೆ ಕಡುಪಾಪಿಯಿವ ನೆಂದೆಂಗೆ ಬಳ್ಳಿಹುಸಿಕಂ ಬೞಿಯ ಕೋಪಿಯಿವನೆಂದೆಂಗೆ ಶಿವಭಕ್ತಿಡಂಬ ನೆಂದೆನಿಸಲಾಱೆಂ (ತಿರುಕ. ದೇ. ೨೦-೦೫). [ಬಳ್ಳಿ + ಹುಸಿಕ (< ಪುಸಿಕ)]

**ಬಳ್ಳು$_1$** (ನಾ). ನರಿ; ಜಂಬುಕ : "ಜಂಬುಕಂ ಸೃಗಾಲಂ ನರಿ ಫೇರವಮಱೀಗೆ ಬಳ್ಳು" (ವಸ್ತುಕೋ. ೪೦-೩); ಇಂದ್ರಜಾಲಿಗನಂತುರಿಯುನುಗುಳ್ವ ಬಳ್ಳು ಗಳಂ (ಕಾವ್ಯಸಾ. ೫೨೪ ಕಂದ್ರ೪); ಆಕಾಶಕ್ಕೆ ಬಾಯಂ ತೆಱೆದೂಳ್ವ ಬಳ್ಳುಗಳುಮಂ (ಶಂಶಪು. ೦೩-೪೭ ವ); ಬಳ್ಳೊರಲ್ದುದು ಮುಂದೆ ಮಾರ್ಗವಂ ದಾಂಟಿದುದು ಕುಳ್ಳಿರ್ದ ಮೃಗಮೆದ್ದು (ಜೈಮಿಭಾ. ೦೪-೩).
[ದೇ. ‖ ಮಲ. ವವ್ವಾಯಿ, ವವ್ವಾಲಿ]

**ಬಳ್ಳು$_2$** 'ಬಗುಳ್ಳು' ನೋ.

**ಬಳ್ಳುಗರೆ,** ಬೊಳ್ಳುಗರೆ, ಬೋಳುಗರೆ (ಕ್ರಿ). ೧. (ನಾಯಿ, ನರಿಗಳ ಹಾಗೆ) ಅರಚು ; ಬೊಬ್ಬಿಡು : ಮುತ್ತ ಮುದು ನರಿಯಂತೆ ಬಳ್ಳು ಗರೆವರ್ಕಲರು ಕತ್ತೆಯಂತರಚಿ ಕಾಳ್ಗೆಡೆವುತಿರ್ಪರ್ಕಲರು (ಬಸವಪುರಾ. ಹ. ೨೬೭-೦೦); ಕೊರೆವಳ್ ಪಲ್ಲಿಂ ಬಳ್ಳುಗರೆವಳ್ ಕನಪರಿಸಿ ಬಳ್ಳುಗರೆವಳ್ (ಸೂಕ್ತಿಸು. ೬-೪೯೯); ನೀ ಬಳ್ಳುಗರೆಯಲು ದಡಿಗ ಹಾಲಿನ ಸವಿಯ ನೋಡುವೆ (ಕೌಶಿರಾ. ೦೬-೪೬). **ಬೊಳ್ಳುಗರೆ :** ೧. ಹುಚ್ಚುನಾಯಿ ಕಚ್ಚಿದುದರಿಂದ ಅವನು ನಾಯಿಯಂತೆಯೇ ಬೊಳ್ಳುಗರೆಯುತ್ತಿದ್ದನು (ರೂಢಿ). **ಬೋಳುಗರೆ :** ೨. = ಬಳ್ಳಿಕ್ಕು : ಸೂರನ ಬೊಳ್ಳುನಾಯಿ ಬೋಳು ಗರೆಯಿತು (ಮರಮು. ೩೫). [ಬಳ್ಳು$_2$ (< ಬಗುಳ್ಳು$_2$) +ಕರೆ$_1$]

**ಬಳ್ಳುಗೆಡೆ** (ಕ್ರಿ). = ಬಳ್ಳುಗರೆ ೧ : ಕಡಿತಲೆಯು ನಾಯಕರ್ ಕೆಯ್ಯೊಂಡು ಬಳ್ಳುಗೆಡೆದೆ[ಪಾಠಾಂ. ಬಳುಗೆಡೆದಿ, ಬಳ್ಳುಗೆಡೆ ]ಕೈವಾಱು ವಾಱೆ (ಶಂಶಪು. ೦೦-೬೦ವ); ಕೊಳ್ಳಿಗಳಂ ಬಿಡದೋವದೆ ಬೀಸುವ ಬಳ್ಳು ಗೆಡೆದು ಬಿಸುವುಡಿಯಂ ಸೂಸುವ . . . ಮರುಳ ನೆರವಿಗಿನಿಸಪ್ಪುಡಮಾಗಿ ಯದೆ (ವರ್ಧಮಾ. ೦೩-೨೦ ರಗಳೆ); ಎಲವೊ ರಕ್ಕಸ ಬಳ್ಳುಗೆಡೆಯದಿರುಳಿದು ಹೋದರೆ ನೀನು ವೀರನು (ಕೌಶಿರಾ. ೨೨-೨೪).
[ ಬಳ್ಳು$_2$ (<ಬಗುಳ್ಳು$_2$) + ಕೆಡೆ$_2$ ]

**ಬಳ್ಳುಪಿಳ್ಳೆ** (ನಾ). ನರಿಯ ಮರಿ : ರಣದೆ ಮೈಸೋಲದ ಸಾಲದ ಬಾಲ ಸೊರ್ಪನಂ ಬಳ್ಳುಪಿಳ್ಳೆಯನೆಂತಂತು ಕೊಂಡುಯ್ವುದಿದಾವ ನಾಯಂ ? (ರಾಜಶೇಖ. ೦೫೬-೦೦). [ ಬಳ್ಳು$_1$ + ಪಿಳ್ಳೆ ]

**ಬಳ್ಳೆ$_1$** (ನಾ). ಒಂದು ಬಗೆಯ (ಮಾದಕತೆಯನ್ನುಂಟು ಮಾಡುವ) ಸೊಪ್ಪಿನ ಬಳ್ಳೆ: "ಕುಶಲತೆಯೆನಲ್ ಬಳ್ಳೆ" (ಮಂಗರಾ. ೪೫-೪೭); ಬಳ್ಳೆ ಭಂಗಿ ನುಗ್ಗೆ ಉಳ್ಳಿ ಮೊದಲಾದ ಇವನೆಲ್ಲವ ಬಿಡಬೇಕು (ಏಕೀಕ್ಷ. ೬೪); ಬಳ್ಳೆ ಬೆಲ್ಲವತ್ತದ ಕಾಯಿ ಸೋರೆಯ ಕಾಯಿ ಅತ್ತಿ ಅರಳಿ ಆಲ ಬಸುರಿ ಗೋಣಿ . . . ಕಳವಿಗೆಯ ಹಣ್ಣುಮಂ ತೊಱೆವುದಂ (ಕಸಾರ. ೪೪).
[ <ಬಳ್ಳಿ./ತಮಿ. ವಳ್ಳಿ$_{10}$=ಬಿಳಿಹಂಬು ]

**ಬಳ್ಳೆ$_2$** 'ಬಾಟಲ್' ನೋ.

**ಬಳ್ಳೊಳ್ಳಿ** 'ಬೞಿವೞಿ$_1$' ನೋ.

**ಬಱಿ,** ಬರ$_1$, ಬರನು, ಬಱಿನ್, ಬಱಿನು (ನಾ). ೧. ಕ್ಷಾಮ; ದುರ್ಭಿಕ್ಷ: ಇಂಚೆಯ ಪಸವಿನ ಬಱಿದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ . . . ವಿರಿಂಚಿಯ ಕಯ್ಪುಡಿವೊಲಾದುವಾ ನಾಡರ್ಗಳ್ (ಶಂಶಪು. ೬-೫೦); ಎಲೆ ಮುನೀಶ್ವರ ಬಱಿಗಳಾದುವು ಮಳೆಗಳಿಲ್ಲದೆ ವರುಷ ಹನ್ನೆರಡಾಯ್ತು (ಕೌಶಿರಾ. ೦-೫೬). ೨. ಒಣಗಿರುವುದು; ಶುಷ್ಕವಾಗಿರುವುದು; ಬತ್ತಿ ದುದು : ಕಟ್ಟುಱಿದ ಬಱಿದ ಬಾಯಾಯ್ತುರಿಯಂ ಗೆಲಲಾರ್ಪೊಡೆ ಪೋರ್ಪೊಡೆ . . . ಅಂತು ಸಂಕಿಪರೊಳರೇ (ರಾಜಶೇಖ. ೦೫೬-೦೭). ೩. ತಾಪ ಹೆಚ್ಚಾದುದು : ವಿರಹಾನಳನಿಂ ನೆಱೆ ಬಱಿವಾಗಿರೆ ಪಡುನೇಸ ಱೊಳಳುರ್ದುವಗಲ್ದು ಚಕ್ರವಾಕದ್ವಂದ್ವಂ (ಸೂಕ್ತಿಸು. ೬-೩೦). ೪. ಆತ್ಯಾಸೆ ; ಅತ್ಯಪೇಕ್ಷೆ : ದಿವ್ಯಸ್ವರೂಪನಂ . . . ಕಂಡನ್ನ ಕಂಗಳ ಬಱಿ ಹಿಂಗಿತ್ತಿಂದು (ಮಹಾದೇ. ಬ. ೩೨-೬೬); ಧರಾಜನದ ಕಣ್ಣ ಬಱಿ ತಿಳಿದವು (ಸಿದ್ಧರಾ. ೭-೪೫); ಇರ್ವರ ಬಾಳ ಬಾಯ್ಗಳ ಬಱಿಂ ಪಿಂಗಲ್ಕೆವೇಡಂ (ಅನಂಪು. ೦೩-೫೦). **ಬರ$_1$ :** ೧.ಮಳೆ ಬಂದರೆ ಬೆಳೆ, ಇಲ್ಲವಾದರೆ ಬರ (ನನಂ.೩); ಈ ಬರದೊಡನೆ ಅನೇಕ ಪಿಡುಗುಗಳೂ ಪ್ರಾರಂಭವಾದವು (ಕಳಹು. ೦೦೦). ೫. ಅಭಾವ ; ಕೊರತೆ : ಸಕ್ಕರೆ ಬರ ಬಿದ್ದಾಗ ಕಾಫಿಗೆ ಉಪ್ಪು ಸೇರಿಸಿ ಕುಡಿಯುವಿರಾ (ಹುಚ್ಚುಹು.೩೭). **ಬರನು:** ೫. ಭಕ್ತಿ ಬರನಾದೀತು ಸತ್ಕಾವ ತಪ್ಪಾರು (ಏಕಕಾ. ೦೨೦-೦೨). **ಬಱಿನ್ :** ೧. ಮರನೊಳ್ ದೇವೇಂದ್ರಚಾಪಂ ನೆಗೆದಿರೆ ಬೆಳೆಗುಂ ಧಾತ್ರಿಯೊಳ್ ಮುಂದೆ ಸಸ್ಯೋ ತ್ಕರನಾಶಂ ವಾರಿಯೊಳ್ ಪುಟ್ಟಿರೆ ಬಱಿನೊಗೆಗುಂ (ಲೋಕೋಪ. ೪-೨೬) ; ಅಂತು ಬಱಿನಱಿಯುಟ್ಟೆ ಕಂದಮೂಲಫಲಂಗಳಂ ಮೆಲ್ದು ಜೀವಿಪೆವೆಂದು ಕೆಲಂಬರ್ . . . ಅರಣ್ಯಕ್ಕೆ ಬಂದು (ದಶಕು. ೩-೦೨ ವ). ೨. ನಾಲ್ವೆರಲುದ್ದ ದೊಳಗೆ ಕತ್ತರಿಸಿಕೊಂಡೀರ ಪಲಸಿನಕಾಯಂ ಹುಳಿಯುಪ್ಪಮೆಱೆದು ಮೊಸರಂ ಕಲಸಿ ಬಱಿನಾಗುವಂತಟ್ಟು (ಸೂಪಶಾ. ೫-೬೦). ೪. ಎನ್ನ ಗುರು ವಿನ್ನೆಂದು ಬಿಜಯಂಗೈದು ಕರುಣದಲಿ ಕಣ್ಣ ಬಱಿನನು ತಿಳುಹಿ . . . ಮನ್ನಿಸುವನೋ ಎನುತಲಾ ಬಸವಣ್ಣ ಚಿಂತಿಸಿದ (ಪ್ರಭುಲೀ. ೨೨-೩). ೫. ಬಯಕೆಯೊಳು ಬಱಿನುಮಂ ಮೌನದೊಳು ನುಡಿಯುಮಂ . . . ಬಯಿ ಡುತೆ (ತಿರುಕ.ದೇ. ೭-೯). ೬. (ಅಲಂ) ಇಲ್ಲವಾದುದು; ಹಾಳಾದುದು; ನಾಶವಾದುದು : ಬಱೆತುದು ಧೈರ್ಯವಾರ್ಧಿ ಬಱಿನಾದುದು ಪೆರ್ಚಿದ ಶಕ್ತಿ ಬಿಂಕಮುಂ ತೊಱೆದುದು ಚಿತ್ತವೃತ್ತಿ (ಶಬಶಂ. ೪-೬೪). **ಬಱಿನು :** ೪. ಕಿಱುನಗೆವೆರಸಿ ರಾಮನ ನೋಡುವಳು ಕಣ್ಣ ಬಱಿನೆಲ್ಲ ಬಱಿತು ಹೋಹಂತೆ (ಭರತ. ೩-೬೬).

**ಬಱಿಬಱಿ,** ಬಱಿಬಱಿಗು, ಬಱಿಬಱಿನು (ದ್ವಿರುಕ್ತಿ) : ಬಱಿಬಱಿಯಾಗಿ ಬಾಯ್ ಬತ್ತುವೊಡಂ. . . ಸಾಯ್ತುಂ ತುರಗಂ (ಅಶ್ವಶಾ. ೬-೩೭); ಬಱಿತು ಬಸಿವ ಕಂಬನಿಯಿಂದ ನಾಂದಿರ್ದ ಗಱಿಗಳು ವಿರಹಾಗ್ನಿಯಿಂದ ಬಱಿಬಱಿ ಗಾದವು (ಕಂಪ್ರಸಾಂ. ೦೬-೦೪) ; ಬಱಿಬಱಿನಾಗೆ ತಾಳಿಸಿದಸುರ್ವರೆಯಂ ರವಿ

(ಅಜಿತ. ೯-೦೩); ಬೇಗೆಯ ಬೆಂಕಿಯಿಂ ಕರಂ ಬಱಬಱನಾಗಿ ತಾಳಿಸಿದವೊಲ್ ಕರಿವೋದುವು ಬೆಂದು ಬೆಟ್ಟುಗಳ್ (ಪಾರ್ಶ್ವ. ೯-೬೯). **ಬಱಬಱಿಂ ಬತ್ತು, ಬಱಬಱ ಬತ್ತು** = ಪೂರ್ತಿ ಒಣಗು; ಸಂಪೂರ್ಣವಾಗಿ ಶುಷ್ಕವಾಗು: ಬೆಂದು ಬೆಂಡೆಳ್ದು ಬಱಬಱಿಂ ಬತ್ತಿ . . . ಕೋಟರಗೊಳುತಿರ್ಪ ಹೊಳೇನಕುಲದಿಂ (ಗಿರಿ. ೯-೨೬ ಅ); ಕೆಱೆ ಬತ್ತಿ ಬೀಡೇಳೆ ಬಱಬ[ಪಾಠಾಂ. ವ]ಱಿಂ ಬತ್ತೆ ಪಥಿಕರ ಬಾಯ್ಗಳು . . . ಬೇಸಗೆ ಬಂದುದು (ಕುಮುದೇ. ೬-೬೩); ಅಱಿಯೆಂ ಪಾಱಲ್ ಬಾಯುಂ ಬಱಬಱ ಬತ್ತಿತ್ತು (ಗಿರಿಜಾ. ೦೯೦); ಬಱಬಱ ಬತ್ತೆ ಬಾಯ್ . . . ಚಂದ್ರನಱಿ ಶೋಕರಸಾಕುಳಚಿತ್ತೆಯಾಗಿ (ಸಂಗಾಮ ೯-೩೦).

[ದೇ.॥ ತಮಿ. ವಾಲ. ವಱವ್; ತುಳು. ಬರ ; ತೆಲು. ವರವು ]

**ಬಱಿಂ** (ಪ್ರ). 'ವರೆಗೆ', ಎಂಬರ್ಥದಲ್ಲಿ ಬಳಕೆಯಾದ ಪ್ರತ್ಯಯ: ಉಟ್ಟಗೆರಡುವರಿಸಬಟ್ಟೆವರಿಯರ ಪತ್ತುವರಿಸಂಬಱಿಂ ಮಾತ್ರವರ್ಣಂ ಉಟ್ಟಗೂರ್ವಱಿನ್ದು ಮೂಣಲಾಗ ತವ್ವ ಸ್ವೇಚ್ಛೆಯೊ[ಳಂ] ನೆಗೞ್ದುದು (ಶಾಇ. XI-i, ೯೩-೦೯; 970). [☞ ಇದು 'ಬರಂ' ಎಂಬುದರ ಅಪಲಿಖಿತ]

**ಬಱಿಗಾಲ, ಬರಗಾಲ** (ನಾ). ದುರ್ಭಿಕ್ಷಕಾಲ ; ಕ್ಷಾಮಂ : ಬಱಗಾಲದ ಕೆಱೆಯಂತೆ ನೆಱೆ ಬತ್ತಿದ ಬಾಯುಂ . . . . ಬೆನ್ನಂ ಪತ್ತಿದ ಬಸಿಱುಂಬೆರಸು ಬರ್ಪ ವೃದ್ಧ ತಾಪಸನಂ ಕಂಡು (ಶಂಕರ. ೬೩-೬) ; ಬಱಗಾಲದ ಬೆಳಸಿನಂತೆ ಮೞೆಗಾಲದ ಬಿಸಿಲಂತೆ . . . ಸಂಶಯಕ್ಕೆಡೆಯಾದರ್ಥಮುಮಂ (ರಕ್ಷೋಕು. ೯-೨೩). **ಬರಗಾಲ :** ಅವರು ಬರಗಾಲ ಮತ್ತು ಕಷ್ಟಕಾಲ ಸಮಯಗಳಲ್ಲಿ ದೀನದರಿದ್ರರನ್ನೂ ಸಾಮಾನ್ಯಜನರನ್ನೂ ಸಂತೈಸುವುದರಲ್ಲಿ . . . ಹಿಂದೆ ಮುಂದೆ ನೋಡಿದವರಲ್ಲ (ಸಸ್ಯ. ೯೩) ; ಬರಗಾಲವಿಲ್ಲದ ದಕ್ಷಿಣದೇಶಕ್ಕೆ ಅವರು ಹೊರಟರು (ಕಥೆ. ೯-೦೦೦) ; ಬರಗಾಲವು ಬಂದು ರೈತರು ದಣಿದಿದ್ದಾರೆ (ಶ್ರೀಣಾಯ. ೦೮೮). [ಬಱ + ಕಾಲ]

**ಬಱಿಗೇಡು** (ನಾ). ಕ್ಷಾಮದಿಂದ ಉಂಟಾಗುವ ಕೇಡು, ಹಾನಿ : ಆ ಮಂಡಚನೂ ಬಾನಗೇಡು ಬಱಗೇಡು ಎಂನದೆ (ಶಾಇ. ೦೯೩೨, ಉಷುಶಿ. ೩೦೩-೨೨ ; 1293) ; ಬಾನಗೇಡು ಬಱಗೇಡು ಯೆಂನದೆ ೧೨ ಮುಡಿ ಅಕ್ಕಿಯನೂ . . . ನಡಸಿ ಬಹರು (ಶಾಇ. IX-ii, ೪೯೯-೩೩ ; 1433). 'ಬಾನಗೇಡು' ಪರಾ. [ಬಱ + ಕೇಡು]

**ಬಱಿಗೋಡಿ** (ನಾ). ನೀರು ಬತ್ತಿಹೋದ ಕೋಡಿ : ಮಿಗೆ ಬಸಿಲ ಬೇಗೆಯನು ಬಱಗೋಡಿಗಳ ಮೀನ್ಗಳು ದಿನದಿನಕೆ ಮೈದೆಗೆಯದನುಭವಿಸುತ್ತ ಕುದಿಕುದಿಕುದಿದು ಮಗ್ಗಿದವು (ಶಿಶಾಗ. ೦೦-೦೯-೦೬). [ಬಱೆ + ಕೋಡಿ₁]

**ಬಱಿಟಿ, ಬೆರಣಿ, ಬೆಱಟಿ, ಬೆಱಣಿ, ಬೆಱಣೆ, ಬೆಱಳಿ** (ನಾ). ೧. (ಇಂಧನವಾಗಿ ಉಪಯೋಗಿಸುವ) ತಟ್ಟಿ ಒಣಗಿಸಿದ ಸಗಣಿ ; ಕುರುಳು : ತರ್ದುಗಳೞಿಗುಂ ಬ[ಪಾಠಾಂ. ಬೆ]ಱಟಿಯೊಳುರ್ದಿ ನೆಲಾವರೆಯ ಬೇರ ನಾಮುಳಕಮುಮಂ . . . ಪೊಸೆ ದಿನಪಂಚಕದೊಳ್ (ಕಮುದ. ೨೬೦ ಕ್ರಿಯೋ). **ಬೆರಣಿ :** ೧. "ಕರೀಷಂ-ಸಗಣಿ, ಬೆರಣಿ" (೬ಶಧ. ೨೦); ಅವರಿಕೆಸೊಪ್ಪು . . . ಸಹ ಇದರಲ್ಲಿ ರಸವ ಹಿಂಡಿ ಬೆರಣಿ ಬೂದಿಯ ಕಲಸಿ ನೆತ್ತಿಬಾಯಿಗೆ ಒತ್ತಿದಾಕ್ಷಣವೇ ರಕ್ತವಾಂತಿ ನಿಲ್ವುದು (ಸಶಕ್ಯ. ೦೯೯) ; ಬೆರಣಿಯನ್ನು ಪುಡಿಮಾಡಿ ಚಕಮಕಿಯನ್ನು ಹೊಡೆದು ಬೆಂಕಿಯನ್ನು ಮಾಡಿದಳು (ದೇಜೀಶಾ. ೩೬) ; ಬಿದ್ದ ಬಳೀಲಿ ಬೆರಣಿ ಆಯಬೇಕು ಇದ್ದ ಬಳೀಲಿ ಇರಬೇಕು (ಗಾದೆ). **ಬೆಱಟಿ :** ೧. ಅಂದು ಗೋವರ್ಧನಗಿರಿಯನಿಳೆಗೊಂದು ಬೆಱಟಿಯನಿಳುಹುವಂತಿಳುಹಿದನು ಮುರವೈರಿ (ಪಾಳ್ಯಶಾ. ೨೦-೬೬). **ಬೆಱಣಿ :** ೧. ಬೆಱಣಿಯ ನಾಯಲ್ಲಲ್ಲದೆ ಅಟ್ಟುಣ್ಣ ತೆಱಹಿಲ್ಲವೆನಗೆ (ಬಸವ. ೨೬೦) ; ತನಯನುಂ ತನ್ನೊಡನೆ ಬರುತಿರೆ ಜನನಿ ಬೆಱಣಿಯನಾಯ್ದುಕೊಂಡಾ ಮನೆಗೆ ಬರುತಿರ (ಅಶ್ವ. ೯೬-೯). ೨. ಸಗಣಿ ; ಗೋಮಯ : ಪುಳ್ಳಿ ಬೆಱಣಿ [ಪಾಠಾಂ. ಬೆರಟ]ಯೊಳಗಣ ಪುಟುವಂ ಸಾರ್ಚುವಲ್ಲಿ ದಯೆಯಿಂದಾರ್ಚುವುದೆನಿಪ್ಪ ಮನೆಗಳಲ್ಲದೆ ತೀರ್ಥಂ (ಸಮಶ. ೬-೯೯); ಉದಧಿಯೊಳ್ ಬೆಱಣಿಯಂ ಹಾಕಿದಂತಾಯ್ತು ಜಿತಶತ್ರುಭೂಪನ ವಾಹಿನಿ (ಸಮ್ಯಕ್. ೯-೩೨). **ಬೆಱಣೆ :** ೧. ಆ ಶಂಕರಾನಂದಂಗಂ ಪಂಚಪಾಯಸವ ಲೇಸಪ್ಪ ಭಕ್ಷ್ಯಗಳ ಬೆಱಣೆ ಮುಳ್ಳುಂ ದಸಿಯು ಪಾಷಾಣದೊಡಕುಗಳನೊಡಗೂಡಿ ಗಡಣಿಸಲು (ಗುರುಶಾ. ೬-೪೨). **ಬೆಱಳಿ :** ೩. (ಆಲಂ) (ಸಗಣಿಯ ಬಿಲ್ಲೆಯಂತೆ) ಅಗಲವಾಗಿರುವುದು : ದೊಡ್ಡದು : 'ಬೆಱಳಿವಲ್' ಪರಾ.

[ದೇ.॥ ತಮಿ. ವರಟ್ಟಿ, ಪರಾಟ್ಟಿ, ವಱಳಿ; ಮಾಲ. ವರಡಿ, ವರಳಿ, ವಱಟಿ; ತುಳು. ಬೆಜಂಟ್; ತೆಲು. ವರಟ]

**ಬಱಿಡ** (ನಾ). ೧. ನಿರುಪಯೋಗಿಯಾದ ವ್ಯಕ್ತಿ: ಕೆಲಸಕ್ಕೆ ಬಾರದವನು : ಬಱಡನಿವನೀ ದೈವದೊಡನಬ್ಬರಿಸಿದೊಡೆಯೊ ಇಬ್ಬರಭ್ಯಂತರವನಿವರಱಿಯರೆ ಮುನೀಂದ್ರರು (ಕುಮಾ. ೯-೩೧). ೨. ಬುದ್ಧಿಯಿಲ್ಲದಿರುವವನು; ದಡ್ಡ; ಅವಿವೇಕಿ : ವಶಗ್ರೀವಪುರದ ಹನನವು ಪುರದ ಹನನಿಂ ದೊರಕುವುದಲಾಯೆಂಬ ಬುದ್ಧಿಗೆ ಬಱಡನಾಗಿ ಬಳಿಕ್ಕ ರಕ್ಕಸರಾಯನಿಂತೆಂದ (ತೊರಣಿ. ೩-೮-೬). ೩. ಜಿಪುಣ : ತ್ಯಾಗಿಯುಂ ಬಱಡಂ ಬಾಲರ ಮುದ್ದ ಬಂಜೆ . . . ಜಱೆಯಲ್ (ಸೋಮೇಶ. ೯೩). ೪. ಪುಂಸತ್ವವಿಲ್ಲದವನು; ಷಂಡ : ಬಱಡರು ಬಾಳರೆನ್ನದೆ ಪೋಪವರ ಕೈವಿಡಿದು ಕೊಂಡೊಯ್ದು ತೋಳ ತೆಕ್ಕೆಯೊಳಿರಿಕಿ ನಿಮಿಷಕೆ ಮೇಳವಿಸಿ ಹಣಗೊಂಡು ಹೋರುವ ಖೂಳರೆಂಬಾಕೆಯರ ಕಂಡಸುರಾರಿ ನಗುತಿರ್ದ (ಅಕ್ರೂ. ೬-೬೩). [ಬಱಡು + — ಅ₁/ ತಮಿ. ವಱಟನ್]

**ಬಱಿಡಾವು** (ನಾ). ಗೊಡ್ಡು ಹಸು : ಬಂಜೆಯಾದ ಆಕಳು : ಸುರಧೇನು ಚಿಂತಾಮಣಿ ಕಲ್ಪವೃಕ್ಷವ ಬಱಡ[ಡಾ]ವು ಕಲ್ಮರವೆನಿಸಿ ಮುರಹರ ತ್ಯಾಗವ ಕುಡುತಿರ್ದ ಲಕ್ಷ್ಮೀವರನಾದ ಕಾರಣದಿಂದ (ಸೋಹಕ. ೦೬-೩೬). 'ಗೊಡ್ಡಾವು' ಪರಾ. [ಬಱಡು + ಆವು]

**ಬಱಿಡಿ, ಬರಡಿ** (ನಾ). ೧. ಹೆಣ್ಣಿನ ಸತ್ವವಿಲ್ಲದವಳಂ; ಸ್ತ್ರೀತ್ವವಿಲ್ಲದವಳಂ ; ಗೊಡ್ಡಿ : ಬರಡ[ಬಱಡಿ]ಗೆ [ಪಾಠಾಂ. ಬರಗಡೆ]ಯೇಱಿದಂದಸಿಯ ಸೂಲಮನೇಱಿದನೊತ್ತಗೊಟ್ಟವಂ ಕರೆದಭಿಮಾನವಾಂ ಪೆಱರ್ಗೆ ಕೊಟ್ಟನಟ್ಟಿಱದುಯ್ದು ರಾಗದಿಂ (ಲೀಲಾವ. ೨-೦೦೦). ೨. ಮಕ್ಕಳಾಗದೆ ಇರುವವಳು; ಬಂಜೆ : ಬಱಡಿಯ ಕೈಯಲ್ಲಿ ಮಕ್ಕಳಿದ್ದಡೆ ತೊರೆವುದೆ ಮೊಲೆ (ಸೋಮೇಶು. ೨೩-೦೦೦). **ಬರಡಿ:** ೧. ಬಸುರಿ ಬಾಣತಿಯರು ಶಿಶುವ ಮುದ್ದಾಡುವ ಶಶಿಮುಖಿಯರು ಒಕ್ಕಿಯಿಹರು ಅಸಿಯಳು ಬಂಜೆ ಬರಡಿ ಯೆಂಬ ನುಡಿಗಳ ಘಸಣೆಯಿಲ್ಲವು ಸೀಮೆಯಲಿ (ಪಾರ್ವತೀಶಾಂ. ೦-೩೮).

[ಬಱಡ + — ಇ₂./ತಮಿ. ವಱಟಿ]

**ಬಱಡು, ಬರಡು** (ನಾ). ೧. ನಿಸ್ಸಾರವಾದುದು; ವ್ಯರ್ಥವಾದುದು; ಪೊಳ್ಳು : ಮನೋಮುದಂ ಬಱಡೆನಿಸಿತ್ತು ಮತ್ತುಸಿರ್ವುದೇನೊ ವಿಧಿಪ್ರತಿಬಂಧಕಾರ್ಯಮಂ (ರಶಕು. ೩-೩೬); ದೇವಯಾನಿಯ ಬಯಕೆ ಬಱಡಾಯ್ತು (ಸಂಶಕ. ಶಂ. ೩೨೯); ನರರ ತುತಿಸಿ ನಾಲಿಗೆ ಬಱಡಾಯಿತಲ್ಲ (ಪುರಂದ. ೦-೨೯-೦). ೨. ನಿಸ್ಸಾರನಾದವನು : ನಿರ್ವೀರ್ಯ ; ದುರ್ಬಲ : ಬ[ಪಾಠಾಂ. ಜ]ಱಡುಗಳು ನೀವೀ ಜನಾರ್ದನನೂರಿಗೆ ಬಹಿರೇ . . . ಹೋಗಿಯೆಂದನು ಭೂಪರಿಗೆ ಭೀಷ್ಮ (ಕುಮಾ., ೬೦೩. ೦೦-೩೩). ೩. ಗೊಡ್ಡು ಹಸು; ಬಂಜೆದನ : ನೀನೊಲಿದರೆ ಬಱಡು ಹಯನಹುದಯ್ಯಾ (ಬಸವ. ೬೬) ; ಸುರಧೇನು ಬಱಡಾದೊಡಿನ್ನೆಂತು ಮಾಡುವೆಂ (ವಾಗೀಶ. ದೇ. ೨೬೦-೦) ; ಕಱೆಯದ ಬಱಡುಗಳು ಹಯನಾದುವು (ಶ್ರೀಕುಂ. ೬-೨೩). (ಗರು). ೪. ನಿಸ್ಸಾರವಾದ: ಪೊಳ್ಳಾದ : 'ಬಱಡುಮನ' ಪರಾ. ೫. ಗೊಡ್ಡಾದ; ಬಂಜೆಯಾದ: ಮುಂದೆ ಕಟ್ಟಿರ್ದೀ ಬಱಡುಪಶುವಿಂದೆ ಹಾಲಂ ಪಿಂಗೆ ಪಡೆವೆ (ಜಕ. ೯-೨೬). **ಬರಡು :** ೧. ನನ್ನ ಜೀವನ ಬರಡು (ಹಳ್ಳಿ. ೮೬); ಇಂದ್ರಿಯಾನು

ಭವದ ಎಲ್ಲೆಯನು ಮೀರಿದ ಭಾವನೆಗಳು . . . ಬರೀ ಜಳ್ಳು, ಬರಡು (ಕಬಕೋ. I, ೬೬೭) ; ಕೃತಿಯಾಗಿ ನಿಲ್ಲದ ಜ್ಞಾನ ಬರಡು (ಮಾವಾದ. ೫೫). ೩. ಕೊರಡು ಕೊನರುವುದು ಬಲು ಬರಡು ಹಯನಹುದು (ಪ್ರಭುಲಿಂ. ೧೦–೨೬) ; ಬರಡು ಹಯನಾಗಿ ಕರುವ ಪಡೆದೀತು ಆವು (ಸೂರ್ಯನಾ. ೪೬–೩). [ದೇ. ‖ ತಮಿ. ವಱಟು ; ಮಲ. ವಱಡು ; ತುಳು. ಬರಡು]

**ಬಱಿದುಗಱಿ³** (ಕ್ರಿ). (ಗೊಡ್ಡು ಹಸುವಿನ ಹಾಲು ಕರೆಯುವಂತೆ) ನಿಷ್ಪ್ರಯೋಜಕವಾದ ಕೆಲಸವನ್ನು ಮಾಡು : ಮೃತ್ಯುವಿನ ಬಾಯ ತುತ್ತಾಗುತಿರ್ದಂ ದೇವ ಕತ್ತಲೆಯೊಳಗೆ ಬಱಿದುಗಱಿವುತಿರ್ದಂ ದೇವ (ವಾಗೀಶ. ದೇ. ೨೬೦–೦೪). [ಬಱಿದು + ಕಱಿ³$_1$]

**ಬಱಿದುಮನ** (ನಾ). ಭಕ್ತಿ, ಶ್ರದ್ಧೆ, ಪ್ರೀತಿಗಳಿಲ್ಲದ ಅಂತರಂಗ : ಪರರ ಸತಿಯುನನಂಗರತಿಯಲಿ ಬೆರಸಿತಿಲ್ಲ . . . ದೈವದ್ವಿಜರ ಪೂಜೆಯಲಿ ಬಱಿದುಮನಸವನು ಮಾಡಿತಿಲ್ಲ (ಕೊರಂಾ. ೧–೩–೦೯). [ಬಱಿದು + ಮನ]

**ಬಱಿದೆ**, ಬರಡೆ (ನಾ). = ಬಱಿಡಿ ೨ : ಬಱಿದೆಯಲ್ಲಾಕೆ ಮರೀಚಿರಾಜನ ನೊಬ್ಬ ಹಿರಿಯ ಪುತ್ರನ ಪೆತ್ತಳೆಹುದು (ಭರತ. ೫೯–೬೦). **ಬರಡೆ :** ಗಂಡಂಗೆ ಮಮಕಾರವಿರಲು ಬರಡೆಯಾದರು ಭಾಗ್ಯಲಕ್ಷ್ಮಿಯೆಂತೆಹಳು (ಶಂಕ. ೧೦೪–೬). [ಬಱಿಡ + — ಎ$_2$]

**ಬಱಿನ್** 'ಬಱಿ' ನೋ.

**ಬಱಿನು** 'ಬಱಿ' ನೋ.

**ಬಱಿಪ** (ನಾ). ಅತ್ಯಪೇಕ್ಷೆ ; ಅತ್ಯಾಸೆ : ಸಾಱಿ³ ಬಟಲ್ದ ಮೆಯ್ಗೆ ಚೇತರಣೆಯಲರ್ಚಿ ಬಾಯ್ಗೆ ಬಱಿಪಂ ಬರಿಸುತ್ತಿರೆ ಪೋದ ಕೂಟಮಂ ಪರಿವಿಡಿಗೆಯ್ಯೆ ಚಿತ್ರಮೆಳಸಿತ್ತು ರತಾಂತಸುಖಾಂತಮೋಪರಾ (ಚಂದ್ರಪ್ರ. ೯–೭೦). [< ಬಱಿ]

**ಬಱಿಲು**, ಬರಲು, ಬರ್ಲು (ನಾ). ೧. (ಎಲೆ, ಹೂವು, ಮೊದಲಾದು ವುಗಳು ಇಲ್ಲದೆ) ಒಣಗಿ ಕಡ್ಡಿಯಾದುದು ; ಬೋಳಾದುದು : 'ಬಱಿಲುಗೊಳ್' ಪರಾ. ೨. ಒಣಗಿದ ಕಡ್ಡಿ : ಕಲ್ಲಿಂದಿಟ್ಟು ಕರಂ ಬಡಿಯಿಂದವೆ ನಿಲ್ಲದೆ ಬಡಿದು ಬಱಿಲ ಬಲ್ವೊಯ್ಲಿಂದಲ್ಲೆಡೆ ಬಾಸುಳೆನೇಳಿಸಿ (ಜಗನ್ನಾ. ೦೩–೪೦) ; ಲಂಡೆಯನು ಹಿಡಿತರಿಸಿ ನುಡಿದಾ ಬಾಯೊಳು ಮಣ್ಣು ತುಂಬಿಸಿ ಬಱಿಲ ತರಿಸಿ . . . ಮೆಯ್ಯೊಳಂ ಹುಣ್ಣು ಹುಣ್ಣಾಗು ವಂತ ನೆಱಿ³ ಕೊಲಿಸಬೇಕು (ಸಪ್ತಶೀ. ೬–೫೬). **ಬರಲು:** ೨. ಬಂಬಲೀ ಮರದ ಬರಲಿನಿಂದ ಕೈಗೆ ಬಂದಂತೆ ಹೊಡೆದನಂತೆ (ಹೊಸಕ್ಷ. ೦೬೬) ; ಅವನನ್ನು ಅಲ್ಲಿಯೇ ಒಂದು ಮರಕ್ಕೆ ಬಿಗಿದು ಹುಣಸೆಯ ಬರಲುಗಳಿಂದ ಮನ ಬಂದಂತೆ ಬಡಿಯಹತ್ತಿದನು (ಕಗದ್ಯ. ೩೭) ; ಒಂದು ಬುಟ್ಟಿ ಕುಳ್ಳು, ಒಂದು ಕಟ್ಟು ಬರಲು ಕೊಟ್ಟು ಕಳಿಸಿದನು (ಪಟ್ಟಹೂ. ೪೪). ೩. ಒಣಗಿದ ಕಡ್ಡಿಗಳ ಕಟ್ಟು ; ಕಸಬರಿಗೆ : ಪೊರಕೆ, ಬರಲು (Broom. ಇಂಕಕ). **ಬರ್ಲು :** ೨. ಒಣಗಿದ ಮುಳ್ಳುಗಳು, ಬರ್ಲುಗಳು, ಟೊಂಗೆಗಳು ಸಾಮ್ರಾಜ್ಯದ ಸೀಮೆಯನ್ನು ಭದ್ರಪಡಿಸಿದ್ದವು (ಮೇಲಿವು. ೯೨). [ಬಱಿ + — ಅಲು(< — ಅಲ್$_2$)]

**ಬಱಿಲುಗೊಳ್** (ಕ್ರಿ). (ಎಲೆ, ಹೂವು ಮೊದಲಾದುವುಗಳಿಲ್ಲದೆ ಗಿಡವು) ಬೋಳಾಗು : ಅಱಿಲುಗೊಂಡ ಕೆಱಿ³ಗೆ ತೂಱಿ³ ಬಂದು ಹಾಯ್ದಂತೆ ಬಱಿಲುಗೊಂಡ ಸುಗಿಗೆ ಮಳೆ ಸುರಿದಂತಾಯಿತ್ತು (ಮಹಾದೇ. ೩. ೨೪–೯೩). [ಬಱಿಲು + ಕೊಳ್$_1$]

**ಬಱಿಸಿಡಿಲ್**, ಬರಸಿಡಿಲು, ಬಱಿಸಿಡಿಲು (ನಾ). ೧. ಮಳೆಯಿಲ್ಲದೆಯೇ ಹೊಡೆಯುವ ಸಿಡಿಲು ; ಅಕಾಲದಲ್ಲಿ ಬೀಳುವ ಸಿಡಿಲು : ಬಱಿಸಿಡಿಲ್ ಪೊಡೆದು ಪ್ರಿಯಸೇನೆ ಸತ್ತಳ್ (ವಡ್ಡಾರಾ. ೩೬–೨೪) ; ಬಱಿಸಿಡಿಲ್ ಪೊಡೆಯೆ ಕೆಡೆದ ಶಾಲತರುಗಳೆಂತಿರ್ದ ನಾಲ್ವರ್ ತಮ್ಮಂದಿರುಮಂ ಕಂಡು ಬೆಕ್ಕಸಂಬಟ್ಟು (ಶಂಕಕಾ. ೬–೪೫ ಪ) ; ಕಲ್ಪಾಂತರ ಬಱಿಸಿಡಿಲೆಯ್ದಂದು ಪೊಯ್ಯಲ್ವೆಲಂ ಕಂಪಿಸುವಂತೆ (ಗಾದಂಭೂ. ೬೦೦). **ಬರಸಿಡಿಲು :** ೧. ಮರುತಾತ್ಮಜನ ಬೆದರಿಸಿದಳೇನೆಂಬೆ ಕಾರ್ಮುಗಿಲ ಬರಸಿಡಿಲ ಪೋಲ್ವ ಬಿರುನುಡಿಗಳಿಂದ (ಕಂಭಾರ. ೫–೩–೫) ; ಪ್ರಳಯಕಾಲದಲ್ಲಿ ನಡೆಯುವಂತೆ ಬರಸಿಡಿಲು ರಾಜರ ಸವಿಸಾಪದಲ್ಲಿಯೇ ಬಿತ್ತು (೬೭೪. ೬). ೨ (ಅಲಂ) ಅನಿರೀಕ್ಷಿತವಾದ ಹೊಡೆತ, — ಆಘಾತ : ಇಲ್ಲದೆ ಹೋದರು ತಂದೆ ಬರಸಿಡಿಲೆರಗಿದ ಹಾಗಾದೆ ನಾನಾಗ (ಇಂಹಾಶ. ೨೨–೯೬). **ಬಱಿಸಿಡಿಲು:** ೧. ಕಾಲವಲ್ಲದ ಕಾಲ ಬಱಿಸಿಡಿಲೇಳಿಗೆಯುಲುಬ್ಬಿದ್ದು ಮಲ್ಲರ ಪಾಳಯವ ನೆಱಿಗುವುದ ನಾನದ ಕಂಡೆ ಸ್ವಪ್ನದಲಿ (ಕುಮಾರಾ. ೬೦೩. ೪–೨೨) ; ಹೊಡೆಸಿದ ಪಟಹ ನಿಸ್ಸಾಳ ಭೇರಿ ಪಱಿ³ ಬಱಿಸಿಡಿಲಿನಂತಾಯ್ತು (ಕೌರಾ. ೦೪–೦೦) ; ಬಱಿಸಿಡಿಲಂತೆ ಭಾರಿಯ ಭೇರಿ ಸೂಳೈಸೆ (ಭರತ. ೨೩–೫೦). [ಬಱಿ + ಸಿಡಿಲ್$_2$]

**ಬಱಿಸಿಡಿಲು** 'ಬಱಿಸಿಡಿಲ್' ನೋ.

**ಬಱಿಹಾಳೆ** (ನಾ). ಒಣಗಿ ತರಗಾದ ಅಡಕೆಯ ಹಾಳೆ : ವಿಜಯಾರ್ಧ ಶೈಲದೊಳಿಕ್ಕಿದ ಪಡಿಯ ನಾಳೆ ಹೋಳ್ಮಾಡಿ ಬಿಡುವೆನೊಣಗಿದ ಬಱಿಹಾಳೆ ಯನೊಡೆಯ ಹೊಯ್ದಂತೆ (ಭರತ. ೨೯–೫). [< ಬಱಿ³ + ಹಾಳೆ$_1$ (< ಪಾಳೆ$_1$) ]

**ಬಱಿಹು** (ನಾ). ಕ್ಷಾಮ ; ದುರ್ಭಿಕ್ಷ: ವ್ಯಾಧಿಯಲ್ಲಿ ಕ್ಲೇಶದಲ್ಲಿ ಬಱಿಹಿನಲ್ಲಿ ಹಗೆಗಳ್ ಕೊಲಬಂದಲ್ಲಿ ಅರಮನೆಯ ದ್ವಾರದಲ್ಲಿ ಶ್ಮಶಾನದಲ್ಲಿ ತನಗಾದ ವರೇ ಬಂಧುಗಳ್ (ಕಂಕಹಂ. ೬೨–೦೬) ; ಪಱಿ³ಯ ಬಱಿಹಿನಲ್ಲಿ ಅವಗ್ರಾಹ, ಅವಗ್ರಹ ಎನಿಸುಗು (ನಾಶಂ. ೪). [ಬಱಿ + — ಹು$_2$ ( < ಪು$_2$)]

**ಬಱಿ³** 'ಬಱಿ' ನೋ.

**ಬಱಿ³ಕಯ್** 'ಬಱಿಗೆಯ್$_2$' ನೋ.

**ಬಱಿ³ಕೆಯ್** 'ಬಱಿಗೆಯ್$_1$' ನೋ.

**ಬಱಿ³ಕೈ** 'ಬಱಿಗೆಯ್$_1$' ನೋ.

**ಬಱಿ³ಗಂಟು** (ನಾ). ೧. ಒಳಗೆ ಏನೂ ಇಲ್ಲದ ಗಂಟು ; ಬೆಲೆಯಿಲ್ಲದ ಗಂಟು. ೨. ಪೊಳ್ಳಾದ ಸಂಬಂಧ ; ಸುಳ್ಳು ಸಂಬಂಧ,—ನಂಟು : ಬಱಿ³ಗಂಟು ಬಱಿ³ಮಾತು ಸುಳ್ಳುಸುದ್ದಿಯ ಹೇಳಿ ಹಿರಿಯವಾಗ ನಂತೂಡಲ ಹೊರಕೊಂಬೆ ಮನವೆ (ಕುರಂಠ. ದಾ. ೨–೦೦–೪). [ ಬಱಿ³ (<ಬಱಿ³ದು) + ಗಂಟು ]

**ಬಱಿ³ಗಲ್ಲು**, ಬರುಗಲ್ಲು (ನಾ). (ಮಣ್ಣಿಲ್ಲದಿರುವ) ಕಲ್ಲಿನಿಂದ ಕೂಡಿದ ನೆಲ; ಹರಳುಹರಳಾಗಿರುವ ಕಲ್ಲಿನ ನೆಲ : ನಿಱಿ³ಗುರುಳಬಲೆ ನಿನ್ನಯ ದಿವ್ಯದೇಹವ ಬಱಿ³ನೆಲದೆಡೆಯಲ್ಲಿ ಹರಹಿ ಬಱಿ³ಗಲ್ಲ ಗಾಯದಿ ಮಿಡುಕುವ ನಾಗರಪಱಿ³ಯಂತೆ ಹೊರಳಬೇಡ (ಪೋಹಕ. ೩೩–೪೮). **ಬರುಗಲ್ಲು :** ಬರುಗಲ್ಲ ಗಾಯದ ಮರಿನಾಗರದ (ಶಂಕ. ೦೨೫–೦೦). [ ಬಱಿ³ (<ಬಱಿ³ದು) + ಕಲ್ಲು (<ಕಲ್$_3$) ]

**ಬಱಿ³ಗಾಲು** 'ಬಱುಗಾಲು' ನೋ.

**ಬಱಿ³ಗುಟ್ಟು** (ಕ್ರಿ). ಬರಿದು ಮಾಡು ; ಇಲ್ಲವಾಗಿಸು : ಮಕ್ಕಳು ಹುಟ್ಟಿ ಕಡೆಯಲಿ ವಂಶವನು ಬಱಿ³ಗುಟ್ಟದಲ್ಲದೆ ಮಾಣರು (ಕಭಾಗ. ೩–೦–೨೦). [ ಬಱಿ³ (<ಬಱಿ³ದು) + ಕಟ್ಟು$_1$ ]

**ಬಱಿ³ಗೂಟ್** 'ಬಱುಗೂಟ್' ನೋ.

**ಬಱಿ³ಗೆಂಡ** 'ಬಱುಗೆಂಡ' ನೋ.

**ಬಱಿ³ಗೆಯ್** 'ಬಱುಗೆಯ್$_1$' ನೋ.

**ಬಱಿ³ಗೆಱಿ³** 'ಬಱುಗೆಱಿ³' ನೋ.

**ಬಱಿ³ಗೈ$_1$** 'ಬಱುಗೆಯ್$_1$' ನೋ.

**ಬಱಿ³ಗೈ$_2$** 'ಬಱುಗೆಯ್$_2$' ನೋ.

**ಬಱಿ³ಗೋಪ** (ನಾ). ವ್ಯರ್ಥವಾದ ಕೋಪ : ಗನ್ನದಿಂ ಬಱಿ³ಗೋಪವಮಂ

ತಾಳ್ದು ರ್ನುಂಕಿಸುತೆ (ತಿರುಕ. ದೇ. ೦೩-೦೨). [ಬಱಿ (<ಬಱಿದು) + ಕೋಪ]

**ಬಱಿತನ** (ನಾ). ಬರಿದಾದುದು ; ಹುರುಳಿಲ್ಲದುದು : ಶರಣರಿಂತೀಹರೆಂಬು ದನೊಲ್ದು ನೋಡದೀ ಬಱಿತನದುಕ್ತಿಚಾಪಲದ ಗೌರವದಿಂ ಫಲವೇಂ (ಶಕಳ. ೦-೬೨). [ಬಱಿ (<ಬಱಿದು) + — ತನ]

**ಬಱಿದಲೆ** 'ಬಱುದಲೆ' ನೋ.

**ಬಱಿದು,** ಬರಿದು(ನಾ). ೧. ಏನೂ ಇಲ್ಲದಿರುವುದು ; ಶೂನ್ಯವಾದುದು : ಖೇಚರಮಹೀಚರಕೋಟಿಗೆ ಬಾಯಿನಂಗಳಂ ತೀವಿವಿಶೇಷ ಕೋಶಗೃಹಮಂ ಬಱಿದಾಗಿರೆ ಕೊಟ್ಟು (ಶಾಂತಿಪು. ೬-೦೯) ; ಎನಿತು ಕುರುಕ್ಷೇತ್ರದೊಳೆಡೆಯನಿತುಂ ಬಱಿದಿಲ್ಲದಂತು ಶವಶತದಿಂ ತೆಕ್ಕನೆ ತೀವೆ (ಗದಾಯು. ೭-೬೩) ; ದಿವಸಗತಿಯಿಂ ಕಿಱುಗಪ್ಪೆಗಳಿಲ್ಲಮುಮಂ ಬಱಿದಾಗೆ ಮಾಡಿ (ಶಂಶತಂ. ೨೬೪-೦೦). ೨. ವ್ಯರ್ಥವಾದುದು ; ನಿರರ್ಥಕವಾದುದು ; ಪೊಳ್ಳು : ಬಱಿದಲ್ತು ಮೆಚ್ಚು ಶೌಚಂ ಕಿಱಿದಲ್ತು (ಸೌಇಇ. XI-i, ೪೦-೨೩ ; 969). **ಬರಿದು :** ೨. ಜಗಕ್ಕೆಸೆಯೆ ಶಿವಾಲಯಮಂ ಮಾಡಿಸುವಂಗೆ ನೊಳಂಬವಟ್ಟಮೆಂಬುದು ಬರಿದೇ (ಸೌಇಇ. IX-i, ೪೯-೬೩ ; 1076 ?).

**ಬಗ್ಗಬಱಿ, ಬಗ್ಗಬರಿ, ಬಚ್ಚಬಱಿ** (ದ್ವಿರುಕ್ತಿ) : ಭರ್ಗನಂ ಕಾಣುತ್ತ ಬಗ್ಗಬಱಿಯಾದಳು (ಶಬಶು. ೦೯-೨೬) ; ಪುಡಿಪುಡಿಯಾಗಿ ಹಾಱುವವು ರಥಂಗಳು ಒಡಲು ಬಗ್ಗಬಱಿಯಾಗಿ ಕೆಡೆವುವು ಹಯ (ಜ್ಞಾನಶ. ೩೦-೦೮) ; ಗಡಿ ಪೊಯ್ಯಲಿನಿಂದ ತಾಂ ಬಗ್ಗಬರಿಯಂ ತೂ[ವ್ರಾ]ಡಿ ಕೌರವಾನುಜರ ಸದೆದಗ್ಗಳೆಯರಂ ಪೊಯ್ಕೆ ದುಶ್ಶಾಸನಂ ರಥವ ಪರಿಸಿದಂ ಪಟುತರದೊಳು (ಲಕ್ಷ್ಮಭಾ. ೮-೪-೭); ಕಳಕಳವಿದೇನೆಂದು ನೆರೆಯಂಗಡಿಯು ಮುಂದಣಂಗಡಿಯ ಪರದರಂ ಕಂಡು ಬೆಸಗೊಳ್ವ ಬಚ್ಚಬಱಿ[ಪಾಠಾಂ. ಪಚ್ಚುಪಸಿ]ಯೊಗ್ಗರುಮಂ . . . ನೋಡಿ (ಗದಾಯು. ೯-೩೪). **ಬಚ್ಚಬಱಿದಾಗು, ಬಚ್ಚಬರಿದಾಗು** = ಏನೂ ಇಲ್ಲದಂತಾಗು ; ಶೂನ್ಯವಾಗು : ಹೊಱಗೆಲ್ಲವ ತೊಱೆದೊಳಗೆ ನಿರ್ಮಲವಾಗಿ ಮೆಱೆವವರುಂಟು ಲೋಕದೊಳು ಹೊಱಗೆಲ್ಲವಿದ್ದೊಳಗೇನುವಿಲ್ಲೆನೆ ಬಚ್ಚಬಱಿದಾದರಾರು ನಿನ್ನಂತೆ (ಶರಶ. ೨-೩೯) ; ದೇಶಕೋಶಗಳೆಲ್ಲಾ ಬಚ್ಚ ಬರಿದಾಗಿ, ಅವರೂ ಅವನಂತೆಯೇ ನಾಡಾಡಿಗಳಾಗುವ ದುರವಸ್ಥೆಗುರುಳ್ದಿರುವುದು ಪ್ರತ್ಯಕ್ಷಪ್ರಮಾಣವಾಗಿದೆ (ಮಂತ್ರಶ. ೦೯-೨೩). **ಬಚ್ಚಬಱಿಯ, ಬಚ್ಚಬರಿಯ** = ಕೇವಲವಾದ; ಅಪ್ಪುಮಾತ್ರದ : ಕೂಡಲಸಂಗಮದೇವಾ ನಿಮ್ಮ ಶರಣರು ಸ್ವತಂತ್ರರು ಎನ್ನ ಬಚ್ಚಬಱಿಯ ಬಸವನೆನಿಸಯ್ಯಾ (ಬಸವ. ೬೦೬) ; ಮಾಡಿಸಿ ಸಂಗವನು ನೋಡಿಸು ನಿನ್ನವರ ಕೂಡಿಸು ಬಚ್ಚಬರಿಯ ಭಕ್ತಿ ನನಗಿನ್ನು ನೀಡು ಪಾದೋದಕ ಪ್ರಸಾದವ (ಸಿದ್ಧಕೃ. ೩೪-೩೦). **ಬಱಿದು ಮಾಡು** = ಖಾಲಿ ಮಾಡು; ಇಲ್ಲದಂತೆ ಮಾಡು : ಕುಡಿಪೆನೂ ಲವಣಾಬ್ಧಿಯನೀಗಡೆ ತೋಳೊಳ್ ತುಳ್ಕಿ ಬಱಿದು ಮಾಟಿಪ್ಪೆನೊ ಪೇೞಿಮ್ (ಅಜಿಪು. ೧೨-೬೬). **ಬಱಿಯ, ಬರಿಯ₂** = ೧. ಕೆಲಸಕ್ಕೆ ಬಾರದವನು ; ನಿರುಪಯುಕ್ತ : ವರಧರ್ಮಮನುತ್ಸವದಿಂ ಸ್ಥಿರಮನದಿಂ ಕೇಳಲೊಲ್ಲದಾತನೆ ಕಿಱಿಯಂ ವರಧರ್ಮಮನಱಿವಿಂದಂ ಸ್ಥಿರಮನನಾಗಱಿಯಲೊಲ್ಲನಾತನೆ ಬಱಿಯಂ (ಧರ್ಮಾಮೃ. ೨-೦೬೩). ೨. ಖಾಲಿಯಾದ ; ಬೋಳಾಗಿರುವ : ಬಱಿಯ ಗೋಡೆಯ ಮೇಲೆ ಬರೆದ ಚಿತ್ರವ ಕಂಡು ಮಱುಗಿ ಮಾಡುವುದೇನು (ಮೋಹತ. ೯-೦೭). ೩. ವ್ಯರ್ಥವಾದ : ಬಱಿಯ ಕಾರ್ಪಣ್ಯದಲಿ ಮೇಘದ ಮಱಿಯ ಹೊಕ್ಕರೆ ರಾಹು ಬಿಡುವನೆ (ಕುಮಾರವ್ಯಾಸ. ೨-೪೪) ; ಬರಿಯ ಮಾತಿನಲ್ಲಿ ಕಾಲ ಕಳೆಯಬೇಡ (ರೂಢಿ). ೪. ಅಪ್ಪು ಮಾತ್ರದ ; ಕೇವಲ : ನವಮಾಸಂ ತೀವಿ ಬಱಿಯ ಮುಂಡವಮಂ ಬೆಸಲೆಯಾಗಿ (ಧರ್ಮಶ. ೯-೩೨ ವ) ; ಬಱಿಯ ಬಾಯಿಯಲಿ ನಿನ್ನ ಹೊಗಳುವ ಭಟ್ಟರಾರು (ಸಂಶತ. ೪-೨೦). [ದೇ.॥ ತಮಿ. ವೆಱಿತು]

**ಬಱಿದೂಱು** 'ಬಱುದೂಱು' ನೋ.

**ಬಱಿದೆ,** ಬರಿದೆ (ಅ). ವ್ಯರ್ಥವಾಗಿ ; ಸುಮ್ಮನೆ : ಆತನೊತ್ತಂಬದಿನಾಂ ತೊಡಾಂ ಬಱಿದೆ ತಪ್ಪಿದೆನೆಂದು ಕಿರೀಟಿ ತನ್ನ ಬಿಲ್ಲಂ ಬಿಸುಟಿರ್ದೊಡೆ (ಪಂಪಭಾ. ೦೦-೬೪); ಅಮರಾಪಗೆ ಕೆಟಗೆ ನಿಂದ ಜನಬಿಂಬದ ಮೇಲಮರ್ದಿರೆ ಪರಿತಂಮುದಱಿಂದಮು ಪಾವನವಾಯ್ತು ಬಱಿದೆ ಪಾವನಮಾಯ್ತೇ (ಸಮಪ. ೨-೫೩); ನಂಬರು ನೆಚ್ಚರು ಬಱಿದೆ ಕರೆವರು (ಬಸವ. ೦೦೬). **ಬರಿದೆ :** ಕೌತುಕಕೆ ಬೆಚ್ಚದಿರ್ ಬರಿದೆ (ಶಿಶ್ವಾಂಗ. ೨೩-೬೪೨). [<ಬಱಿದು]

**ಬಱಿದೇರು** (ನಾ). ಯಾವ ಅಲಂಕಾರವಿಲ್ಲದ ಮತ್ತು ಯಾರೂ ಕುಳಿತಿಲ್ಲದ ಬರಿಯ ರಥ; ಬರಿದಾದ ತೇರು : ನಿನ್ನೊಳಿರ್ದಪುದು ಬಱಿದೇರೆನ್ನ ಕೈಯೊಳಿದೆ ಪನ್ನಗಾರಿಧ್ವಜ ಕಿರೀಟಿಗಳ್ವೆರಸಿರ್ದ ಸನ್ನುತಸ್ಯಂದನಂ ನೋಡು (ಜೈಮಿನಿ. ೨೬-೪೫).

[ಬಱಿ (<ಬಱಿದು) + ತೇರು₂ (<ತೇರ್₂)]

**ಬಱಿದೊಱೆ** 'ಬಱುದೊಱೆ' ನೋ.

**ಬಱಿನುಡಿ** 'ಬಱುನುಡಿ' ನೋ.

**ಬಱಿಮಾತು** 'ಬಱುವಾತು' ನೋ.

**ಬಱಿಮಾಯೆ** (ನಾ). ಕೇವಲ ಕಣ್ಕಟ್ಟು,–ತಂತ್ರ : ಎಲವೊ ಬಱಿಮಾಯೆಗಳನೆಸಗಿ ಮೋಸದೊಳ್ತುರಗಮಂ ಕೊಂಡು ಬಾಂದಳಕಡರ್ದೊಡೆ ನಿನ್ನನು ಉಳುಹುವರೆ (ಜೈಮಿನಿ. ೪-೦೩). [ಬಱಿ(<ಬಱಿದು)+ಮಾಯೆ]

**ಬಱಿಮುಳಿಸು** (ನಾ). ಹುಸಿ ಕೋಪ : ಮುರುಹು ಮುದ್ದು ವಿನೋದ ಠಕ್ಕುಪಚಾರ ಬಱಿಮುಳಿ[ಪಾಠಾಂ. ನಿ]ಸು . . . ಎಂಬೀ ಪರಿಪರಿಯ ಮಾಯೆಗಳ ಮಹಿಳಾಜನ ವಿರಾಜಿಸಿತು (ತೊರವೆ. ೦-೫-೩೨).

[ಬಱಿ (<ಬಱಿದು) + ಮುಳಿಸು₂]

**ಬಱಿಮೆಯ್,** ಬರಿಮೈ, ಬಱಿಮೈ (ನಾ). ೧. ಬತ್ತಲೆ ದೇಹ ; ನಗ್ನ ಶರೀರ: ಎಲೆಗೇ ನೀನೆಲ್ಲರೊಂದಂದದಿನಿರೆ ಬಱಿಮೆಯ್ಯಿಂದಮಿರ್ಪಂ ತುಟಕ್ಕುಂ (ಚಂದ್ರಪು. ೮-೬೩). **ಬರಿಮೈ :** ೧. ಬರಿಮೈ ತಣ್ಣಗೆ, ಮನದಲಿ ಬಿಸಿ ಹಗೆ (ಕಂಜೆವ. ೦೫೨) ; ಕಿಡಿಗೇಡಿ ಮಗು ! ಬರಿಮೈಯಿಂದ ಮಂಜಿನಲ್ಲಿ ಶಿರುಗುತ್ತಿದೆ ! (ಎರಶ. ೦೭). **ಬಱಿಮೈ :** ೨. ಅಲಂಕಾರರಹಿತವಾದ ಮೈ,—ಶರೀರ : ಕೃಷ್ಣನಾಮಸ್ಮರಣೆ ಮಾಡುತ ಮರುತಸುತನಾ ಕರ ವಿಡಿದು ಬಱಿಗಾಲು ಬಱಿಮೈಯಿಂದ ಬರುತಿರಲು (ಸಂಭಶ. ೨೦-೦೦೩).

[ಬಱಿ (<ಬಱಿದು) + ಮೆಯ್₂]

**ಬಱಿಮೈ** 'ಬಱಿಮೆಯ್' ನೋ.

**ಬಱಿಯಾಟ,** ಬರಿಯಾಟ (ನಾ). ಕೇವಲ ಆಟ,–ಕ್ರೀಡೆ : ಮುನ್ನ ಬಱಿಯಾಟಂಗಳಿಂ ಬೆಳಗನ್ನ ಕಾಡಿದಡೆನ್ನ ಜಠರವದಿನ್ನು ತುಂಬದು (ಬಸಪು. ೦೫-೨೪). **ಬರಿಯಾಟ :** ಯುವಕರ್ಗೆ ಪಯಣವೇದರೆ ಏನು ? ಬರಿಯಾಟವೈಸೆ ! (ಚಂದ್ರಸ. ೬೭). [ಬಱಿ (<ಬಱಿದು) + ಆಟ]

**ಬಱಿವಾತು** 'ಬಱುವಾತು' ನೋ.

**ಬಱಿವಾತುಗಾಱ** (ನಾ). ವ್ಯರ್ಥವಾದ ಮಾತಂಗಳನ್ನಾಡುವವನು : ಪೊಱಮಿಂಚುಗೈವನಂ ಬಱಿವಾತುಗಾಱನಂ. . . ತೊಱೆಯದುದೆಗ್ಗತನವಲ್ತೇ (ರಾಜಶೇ. ೦೦-೯೨). [ಬಱಿವಾತು (<ಬಱುವಾತು) + —ಗಾಱ]

**ಬಱಿವಾಯ್** 'ಬಱುವಾಯ್' ನೋ.

**ಬಱಿಸೂಱೆ** 'ಬಱುಸೂಱೆ' ನೋ.

**ಬಱಿಸೂಱೆಗೈ** (ಕ್ರಿ). ವ್ಯರ್ಥವಾಗಿ ಸೂರೆಮಾಡು; ಅನ್ಯಾಯವಾಗಿ ಹಾಳುಮಾಡು : ಇಟ್ಟ ಮರಂಗಳಂ ಒಟ್ಟಿದ ಕಲ್ಗಳಂ ದೈವಮೆಂದು ಪೆಸರಿಟ್ಟು ಕೊಂಡಾಡಿ ವರಮಿಗುಮೆಂಬಾಸೆಯಿಂ ತಮ್ಮೊಳರ್ಥಮಂ ಬಱಿಸೂಱೆಗೈವರ್ (ಧರ್ಮಾ. II, ೮೨೦ ವ).

[ಬಱಿಸೂಱೆ (< ಬಱುಸೂಱೆ) + ಗೈ (< ಕೆಯ್₁)]

**ಬಱಿಸಜ್ಜೆ** (ನಾ). ಖಾಲಿಯಿರುವ ಕರಡಿಗೆ : ಗಳದ ಬಱಿಸಜ್ಜೆಯಲಿ ಲಿಂಗವು ನೆಲಸಿದುದು (ಬಸವು. ೩೯ ಸ೩೪೩). [ಬಱಿ (<ಬಱಿದು) + ಸಜ್ಜೆ₂]

**ಬಱಿಹುಂಡ** (ನಾ). ನಿರುಪಯುಕ್ತನಾದವನು; ನಿಷ್ಪ್ರಯೋಜಕ : ಬಱಿಹುಂಡನ ಗಡಿವಾಡದಲ್ಲಿರಿಸಿದಂತೆ ಒಡೆಯರಿಲ್ಲದ ಮನೆಯ ತುಡುಗುಣಿ ಹೊಕ್ಕು ಗಡಬಡಿಯ ಮಾಡಿದಂತೆ (ಸಕವ. I, ೨೦೩-೭೯೦).
[ಬಱಿ(<ಬಱಿದು) + ಹುಂಡ]

**ಬಱು**, ಬರಿ₂, ಬರು₂, ಬಱಿ (ಸಪೂರೂ) 'ಬಱಿದು' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಱುಗಾಲು', 'ಬಱುಗಿವಿ' ಪರಾ. **ಬರಿ₂** : 'ಬರಿಗಾಲು', 'ಬರಿಮನ' ಪರಾ. **ಬರು₂** : 'ಬರುಗನಸು', 'ಬರುಮರುಳ' ಪರಾ. **ಬಱಿ** : 'ಬಱಿಗಾಲು', 'ಬಱಿದಲೆ' ಪರಾ. [<ಬಱಿದು]

**ಬಱುಂಟು**, ಬೆರಟು, ಬೆಱಂಟು, ಬೆಱಟು₁ (ಕ್ರಿ). ೧. (ಕಾಲ್ಬೆರಳಿಂ ಅಥವಾ ಕೈಬೆರಳಿನಿಂದ) ಕೆರೆ ; ಗೆಬರು; ಗೀರು : ಮತ್ತಮಾ ಹಸ್ತಿ . . . ಭೂಮಂಡಳಮನುಂಡಿಗೆ ಸಾಧ್ಯಂ ಮಾಡಿ ಕುಡುವೆಂದಱಿವಂದದಿಂ ದಕ್ಷಿಣಪಾದದಿಂ ಮೇದಿನಿಯಂ ಬಱುಂಟುತ್ತುಂ (ಪಾರ್ಶ್ವಪು. ೬-೩೪ ವ). ೨. ಕೆದಕು ; ಬೆದಕು : ಪೇೞಲ್ಬಾರದ ಮನದೊಳ್ ಪುಗಲ್ಬಾರದ ಬಱುಂಟ[ಪಾಠಾಂ. ಟೆ] ಕೇಳ್ದವರಾರುಂ ಬಾೞಲ್ಬಾರದ ಕನಸಂ . . . ಕಂಸಂ ಕಂಡಂ (ಅರ್ಜನೇ. ೭-೩೭); ಪೊಗೆಯುಡಂಗೆಗವಿದ ದೂವೆಯಂತಿರೆ ಬಱುಂಟಿದೊಡೆ ಬಿಸಿಯುನುಗುಳ್ವ ಕಪ್ಪುರದ ನುಣ್ಮಳಲ ಜಗುಲಿಯುಂ (ವರ್ಧಪು. ೩-೩೩ ವ). ೩. ಚಿವುಟು ; ಜಿಗುಟು : ತಂದೆಯ ಮಱಲುಂದಿದಲ್ಲಿಗಪೋಗಿ ಬಱುಂಟಿ[ಪಾಠಾಂ. ಬೆಱಂಟಿ] ಎಬ್ಬಿ ಪೊಟ್ಟಳಿಗೆಯಂ ತಂದೆಗೆ ಕೊಟ್ಟಳ್ (ವಡ್ಡಾರಾ. ೦೭-೨೩). ೪. ಕೆಣಕು ; ಕೆರಳಿಸು : ಕಾಮನ ತೋಳೊಳಿರ್ದ ರತಿ ಶಂಭುಕುಮಾರನುಮಂ ಬಱುಂಟಳೇ (ಅಪಂಪು. ೦೦-೩೩). **ಬೆರಟು** : ೧. ಬೆರಟಿದೊಡಂಗುಟದಿಂ ಪೊನ್ನೊರೆದೋರ್ಪುರ್ವರೆ ಕಡಲ್ಗೆ ಪಡಿಯೆಂಬಿನೆಗಂ ಪರಿಕಾಲೆತ್ತಂ ಪರ್ವಿರೆ (ಧಮುಶ. ೦-೪); ಐದು ಕುದುರೆಗಳು . . . ನೆಲವನ್ನು ಮುಂಗಾಲಿನಿಂದ ಬೆರಟುತ್ತಿದ್ದುವು (ಪೀರಶಾಂ. ೨೦). **ಬೆಱಂಟು** : ೧. ಭೂಭಾಗ ಮನತ್ಯುತ್ಸಾಹದಿಂ ದಕ್ಷಿಣ ಖುರದೆ ಬೆಱಂಟಿತ್ತು ದಿವ್ಯಾಶ್ವಮಾಗಳ್ (ಸಾಹಂಪು. ೪೬೩); ಉಗುರಿನಿಂದಂಟಿ ಬೆಱಂಟಿಯಂಜನಮುದಕ್ಕುಂ . . . ತಾನಿದೆಂಬಂತಿರೇ ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆಱೆ ದಟ್ಟಯಿಸ್ಸುತ್ತನಿತ್ತುಂ ತಮಂ (ಗಿರಿಕ. ೪-೭೩); ಅಂಗದಿಬ್ಬದಿಗಳನುಱುಂಗಿ ಬೆಱಂಟಿ . . . ಪಲ್ಗಿರಿದು ಗೋಲಾಂಗೂಲಂ ಪುರ್ಬಿಕ್ಕಿ ನಗಿಸುವವಲ್ಲಿ ಮಟುಕವಳವ (ಜಗದೇಕು. ೩-೦೭). **ಬೆಱಟು₁** : ೧. ನೆಲನ ತಟ್ಟು ಬೆಱಟುವ ಪದಂ ನೆಗೆದಳ್ಳು ಬೆಂಗಡರ್ದ ಬಾಲದಿಂ . . . ಜುಗುಟಿಟ್ಟು ಹರಿಯಿತ್ತು (ಹಕಶಾ. ೩-೪೦); ಕಾಲಲ್ಲಿ ನೆಲನಂ ಬೆಱಟುತ್ತುಂ . . . ಬಾಲವನೆತ್ತಿ ಬೀಸುತ್ತ (ಜಸಪು. ೩೨-೨೩); ಕಯ್ನುಡಿಯನೊಳ್ಳುಗುರಿಂ ಬೆಱಟುತ್ತೆ ಬೆಳ್ಳಗಂ ಸಮನಿಸೆ ಕಾಲ್ಪೆರಲ್ ಬರೆಯೆ ಭೂಮಿಯುನಿರ್ದಳದೊಂದು ಚೆಲ್ವಿನಿಂ (ರಸರ. ೪-೦೬೩). ೩. ಕೇರಿಯೊಳ್ತಮಱಮಗೆ ಬೆಱಟುತಂ ಕೆರಟುತಂ ಸನ್ನೆಯಿಂ ಮುಗುಳ್ನಗುವರು (ಶತಿಳ. ೩-೭೬). ೪. ತಿರುಗಿ ನೋಡಿದ ಬೇತಾಳನ ಬೆಱಟ ಪಲ್ಮೊರೆದೌಡುಗರ್ಚಿಯುಂಜಿಸುತ ತರಹರದಿಂದ ನಿಟ್ಟಿಸುತಿರ್ದನಾ ಭೂವರನು (ಶ್ರೀಪಾಂ. ೬-೪೭). ೫. ಕೀಳು ; ಎಬ್ಬು : ಬೆರಲೊಂದು ಬೊಗ್ಗಿಸುತ್ತವನ ಭಾಳಾಕ್ಷಿಯಂ ಬೆಱಟ ತೆಗೆವುತ ಬಾಯ್ಗೆ ಹಾಕಿಕೊಳಲು (ಶೀಕ್ಷಪು. ೬-೨-೩೪) ; ತನ್ನ ಮುಂದೆ ಮಸಣಿಯೆಂಯೆನುತ ಪಣೆಗಣ್ಣ ತೆಗೆಯೆ ಬೆರಳಿಂದದಂ ಬೆಱಟ ನುಂಗಲ್ಕಹಂಕರಿಸಿರ್ದನೆಂದು ಪೊಗಳಲ್ ಮಸಣಿಯಿಂದೆ ಬಳಿಕಾತಂಗೆ ಪಣೆಗಣ್ಣನುಗುಳಿಸಿದನು (ಕಂಪು. ೩೭-೨೪). '**ಪರಡು**' ಪರಾ.

[ದೇ.॥ ತಮಿ. ವಱಣ್ಣು, ವಱುಕು ; ತೆಲು. ಬಱಟು, ಬರಟು, ಬರಕು]

**ಬಱುಕಟೆ**, ಬಕ್ಕಟ, ಬರ್ಕಟ (ನಾ). ನಿಷ್ಪ್ರಯೋಜಕವಾದುದು ; ನಿರರ್ಥಕವಾದುದು : ತ್ರಿವಿಧದ ಹುಱಿಯಲ್ಲಿ ಅಡಿಯನಿಕ್ಕಿ ಅಡಗೊಡ್ಡಿದಂತೆ ಬದ್ದಿರುತ್ತ ಮತ್ತಱಿಕೆಯ ಮಾತನಾಡಿದಡೆ ಅದು ಬಱುಕಟೆ [ಪಾಠಾಂ. ಟಿ]ಯೆಂಬರು (ಚಾಕೂಮ್ಯ. ೪. ೩೩೭-೦೬); ಇಂತೀ ಬಱುಬರ ಅರ್ಚನೆ ಹುರಿಯ ಬೊಂಬೆಯಂತೆ ಇಂತಿ: ಅಱಿಗುಱಿಗಳ ಪೂಜೆ ಬಱುಕಟೆಯಂತೆ (ಗುತ್ತಬಂ. ೪. ೨೨೨-೩೩); ಬೆಳಗದ ಕಂಬು ತೋಳೆಯದ ಕುಂಭ ಪಕ್ವ ಕಳಿಯದ ಫಲ ನೆಱಿಯರಿಯದವನ ಸತ್ಕ್ರಿಯೆ ಮಾಟ ಬಱುಕಟೆ ಹೋಯಿತ್ತು (ಸರ್ವಶ. ೦೨೬-೬೩೨). **ಬಕ್ಕಟ** : ಆತ್ಮಜರಾಶ ಬಕ್ಕಟಪಕ್ಕು ದೆಂಬಳವಳಿಗೆಗೊಳಲಾಗವನಿನಾಯಕನು (ಶರಾಮೂ. ೨೭-೩೭). **ಬರ್ಕಟ** : 'ಬರ್ಕಟಬಯಲ್'ಪರಾ. [ಬಱು (<ಬಱಿದು) + ?]

**ಬಱುಕಾಯ** (ನಾ). [ವೀಶೈ] ಇಷ್ಟಲಿಂಗವನ್ನು ಧರಿಸಿದವನು : ಹಲವು ಕೊಂಬಿಂಗೆ ಹಾಯಬೇಡ ಬಱುಕಾಯಕ್ಕೆ ನೀಡಬೇಡ (ಚಶಪ. ೬೨೨); ಅಂಗದ ಮೇಲೆ ಲಿಂಗವುಳ್ಳವರ ಮನೆಯ ಹೊಗಿಸಲಾಗದು ಬಱು[ಪಾಠಾಂ. ಬಱಿಯ]ಕಾಯರಿಗೆ ನೀಡಲಾಗದು (ಕನ್ನಶ. ೪. ೬೩೯-೦೪೩೦) ; ಹುಸಿ ಡಂಭಕ ದುರ್ಮತಿ ಬಱುಕಾಯನಿಗೆ ಅಖಂಡೇಶ್ವರ ಎಂತು ಮಚ್ಚುವನು (ಅಖಂಡೇ. ೪೭-೦೩). [ಬಱು ( < ಬಱಿದು) + ಕಾಯ ]

**ಬಱುಗ** (ನಾ). ಹಣ ಇಲ್ಲದವನು ; ಬಡವ ; ದರಿದ್ರ : ಮತ್ತವನ ವಿತ್ತದೊಳಗನಿತುಳಿಯದಂತೆಲ್ಲವಂ ಕವರ್ದುಕೊಂಡು ಬಱುಗನಂ ಮಾಡಿ (ಶೀರಮ. ೬-೩೪). [ಬಱು ( < ಬಱಿದು) + — ಗ₂]

ಬಱಗಯ್ 'ಬಱುಗೆಯ್' ನೋ.

**ಬಱುಗಾಲು**, ಬರಿಗಾಲು, ಬರುಗಾಲು, ಬಱಿಗಾಲು (ನಾ). ಪಾದರಕ್ಷೆಗಳನ್ನು ಧರಿಸದ ಕಾಲು ; ಜೋಡು ಮೆಟ್ಟದಿರುವ ಕಾಲು ; ಬರಿಯ ಕಾಲು : ದಂತಿಯಿಂದಿಳಿದು ನಡೆದಱಿಯದವ ಬಱುಗಾಲೊಳೆಂತಡಿಯನಿಡುವೆ (ಹಕಶಾ. ೪-೭). **ಬರಿಗಾಲು** : ಕಾಲೇಜಿಗೆ ಬರಲು ಬರಿಗಾಲಿನಲ್ಲಿ ಮೈಲುಮೈಲಿಗಳ ದೂರ ನಡಿಗೆ (ರಂಗವ. ೦೨೩); ಎಂಟು ವರುಷದ ಮಗ ಹೊಂಟಾನ ಬರಿಗಾಲ ಬಾಟರಂಗ ಗಿರಿಯ ಏರೂತ (ಸಿದ್ಧಪು. ೩-೩೨); ಈ ಮುಳ್ಳುನೆಲದ ಮೇಲೆ ಬರಿಗಾಲಿನಲ್ಲಿ ಏಕೆ ನಡೆಯುತ್ತೀಯೆ (ಶುಭ್ರಶು. ೭೭). **ಬರುಗಾಲು** : ಕೊಳಗದಷ್ಟಲೆಯನ್ನು ಹೊತ್ತ ಬರುಗಾಲಿನ ಹೆಂಗಸರಿಬ್ಬರು . . . ಹೊರಗೆ ಬಂದರು (ಕೃಪರು.೬೪). **ಬಱಿಗಾಲು** : ಕೃಷ್ಣನಾಮಸ್ಮರಣೆಮಾಡುತ ಮರುತಸುತನಾ ಕರವಿಡಿದು ಬಱಿಗಾಲು ಬಱಿಮೈಯಿಂದ ಬರುತಿರಲು (ಸಂಕಶ. ೨೧-೦೦೩); ಕರೆಯದಲೆ ಬರುವವನ ಬರೆಯದಲೆ ಓದುವನ ಬಱಿಗಾಲಿನಿಂದ ನಡೆವವನ ಕರೆತಂದು ಕೆರದಿ ಹೊಡೆಯೆಂದ (ಸರ್ವಜ್ಞ. ೦೩೦೦).
[ ಬಱು ( < ಬಱಿದು) + ಕಾಲು₁ ( < ಕಾಲ್₁) ]

**ಬಱುಗಿವಿ** (ನಾ). (ಒಡವೆಯನ್ನು ಧರಿಸದಿರುವ) ಕಿವಿ : ಬರಿದಾದ ಕಿವಿ: ಬೋಳಾದ ಕಿವಿ : ಹಾರಪದಕವಿದ್ದು ಬಱುಗಿವಿಯಾದ ಶೃಂಗಾರ ರಮ್ಯವೆ ಹೇಳೆಂದ (ಭರಪ. ೩೭-೩೦). [ಬಱು ( < ಬಱಿದು) + ಕಿವಿ₂]

**ಬಱುಗುತ್ತ** (ನಾ). ಬರಿಯ ರೋಗ ; ಸದಾ ಇರುವ ರೋಗ : ಕಟಕಿ ಹುರುಡು ಮೂದಲೆ . . . ಕಲಹ ಸಟೆ ಬಱುಗುತ್ತಗಳನು ಮಾಡೆ ಬೆಲೆವೆಣ್ಗೆ ವಿಟರು ಸೋಲುವರೆ ಧನವನು (ಗುರುಚಾ. ೦-೦೦೬); ಕೊಜಬಾಟ ಹೋರಟೆ ಕಲಹ ಬಱುಗುತ್ತ ಬಯಲೊಲ್ಮೆಗಳ ಮಾಡೆ[ಪಾಠಾಂ. ಬಱುಗುತ್ತು ಬಯಲೊಲ್ಮೆಱಿಗಳ ಮಾಡಿ] ಬೆಲೆವೆಣ್ಗೆ ತೆಱುವರೆ ಧನವ ಬಲ್ಲವರು (ಶುರಾಶಾಂ. ೨೬-೭೯). [ಬಱು ( < ಬಱಿದು) + ಕುತ್ತ₂]

**ಬಱುಗೂಳ್**, ಬಱಿಗೂಳ್ (ನಾ). (ಸಾರು ಅಥವಾ ಮಜ್ಜಿಗೆ ಬೆರಸದ) ಅನ್ನ ; ಬರಿಯ ಅನ್ನ : ಬಱು[ಪಾಠಾಂ. ಱಿ] ಗೂಳನುಂಬ

ನಿಬ್ಬುಗಡಿಯುಂ ಕಳಿಯುಂ ಕೂಟನುಂಬ ಆಯಂಬಿಲವುಮೆಂದಿವಂ ತನ್ನ ಶಕ್ತಿಯಿಂ ಮಱಸದಾವುದಂ ಮಾಡಿದೊಡಂ ಪ್ರೋಷಧೋಪವಾಸಮುಂ ಬೆರಡನೆಯ ಶಿಕ್ಷಾವ್ರತಮಕ್ಕುಂ (ಕನಾರ. ೩೦೬). **ಬಱಿಗೂಟ್** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಬಱು (<ಬಱಿದು) + ಕೂಟ್$_1$]

**ಬಱುಗೆಂಡ**, ಬಱಿಗೆಂಡ (ನಾ). ಉರಿಯಿಲ್ಲದ ಕೆಂಡ; ಬರಿಯ ಕೆಂಡ : ಬಱು[ಪಾಠಾಂ. ಱ]ಗೆಂಡದೊಳ್ ಸುಟ್ಟಡಗು ಬೂಲಿಕೆಯೆನಿಕ್ಕು (ಬುಂಗರಾ. ೬೯-೪). **ಬಱಿಗೆಂಡ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಬಱು (<ಬಱಿದು) + ಕೆಂಡ]

**ಬಱುಗೆಯ್$_1$**, ಬರಿಗೈ$_1$, ಬಱಿಕೆಯ್, ಬಱಿಕೈ, ಬಱಿಗೆಯ್, ಬಱಿಗೈ$_1$ ಬಱುಗೈ (ಕ್ರಿ). ೧. ಇಲ್ಲದಂತೆ ಮಾಡು; ನಾಶಮಾಡು; ಸಂಹರಿಸು: ಅಲಘುಸಾಹಸಿ ಹೊಡೆದ ಗಾಯಕೆ ಖಳರ ಮುಂಡಗಳಾಡುತಿ ರ್ದವು ಬಲವ ಬಱಿಗೆಯ್ದು (ಕೌಶಿರಾ. ೨೮-೯೨). **ಬರಿಗೈ$_1$** : ೨. ಬರಿದು ಗೊಳಿಸು ; ನಿಷ್ಫಲಗೊಳಿಸು : ಬರಿಗೈಯೆ ನಾ ನಿನ್ನ ಬಯಕೆಯನು (ಕುಮಾರರಾಮ. ೧೨೪). **ಬಱಿಕೆಯ್** : ೧. ಮಱಿದೊಱಗಿರ್ದ ಕಾಕಬಲಮೆಲ್ಲಮಂ ಬಱಿಕೆಯ್ದು (ಶಂಕಶಂ. ೨೦೨-೨೦) ; ಅದಟರನಾನ್ತು ಕೊಲ್ವದಟನಣ್ಮದರಂ ಬಱಿಕೆಯ್ದು . . . ನಿತ್ತರಿಪ ಕಾದುವ ಮೆಯ್ಗಲಿ ಯಾರ್ದ್ಧರಿತ್ರಿಯೊಳ್ (ಶಾಇ. XX. ೬೪-೨೪ ; 1112). ೨. ಬಾಯ್ಸ ವಿಯ ಮಾತುಗಳಂ ಬಱಿಕೆಯ್ವ ಚರ್ಚೆಯಲ್ಲ (ಅವಂಪು. ೦-೩೬). **ಬಱಿಕೈ** : ೧. ಒಂದೆರಡೆಂದು ಸಲುಗೆಗೆ ಸಲಿಸಿ ಬಂದ್ಯೆನೂಱ ಬಱಿಕೈದು (ಕುಮಾವ್ಯಾದ್ರೋ. ೩-೬೮); ಹರಿಬಲವ ಬಱಿಕೈವುತಿರ್ದುದು ಹರಿಬದತಿಬಲ ಖಳಕದಂಬಕ ಮಸಮುಸಮುರದಲಿ (ಕೊರರಾ. ೬-೩೦-೭). ೨. ಮಾರುತಾಸುರನ ಭಾರ ಣೆಯ ಬಱಿಕೈವ ವೀರರದಾರು (ಏಶಾಗ. ೨-೩-೦೮). **ಬಱಿಗೆಯ್** : ೧. ತಲೆ ನಡುಗುತಿರ್ದುವೆನ್ನದೆ ತರದಿಂ ಬಱಿಗೆಯ್ಯುತಿರ್ದ ಮಾಯ್ದಱಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ (ಕಾದಂಪೂ. ೦೬೪) ; ಪೊಯ್ದು ಪೊಯ್ದು ಭರದಿಂ ಬಱಿಗೆಯ್ದುನಭೇದ್ಯವಿಕ್ರಮಂ (ಗೀತಗೋ. ೩೩-೦೬). **ಬಱಿಗೈ$_1$** : ೧. ಎಲವೊ ನಿನ್ನಯ ಬಲವನೆಲ್ಲವ ತುಳಿದು ಬಱಿಗೈವನ್ನಬರ ನೀಸಱಿದು ನೋಡಾ (ಸಂಕಶ. ೯-೦೦೦) ; ಚಾರಿವರಿದನು . . . ಪಡೆಯ ಬಱಿಗೈದು (ಕೌಶಿರಾ. ೨೨-೭). **ಬಱುಗೈ** : ೧. ಥಟ್ಟುಗೆಡಹಿದನೇನನೆಂಬೆನು ಪಡೆಯ ಬಱುಗೈದ (ಕೌಶಿರಾ. ೩೫-೦೪). [ಬಱು (<ಬಱಿದು) + ಕೆಯ್$_1$]

**ಬಱುಗೆಯ್$_2$**, ಬರಿಕೈ$_1$, ಬರಿಗೈ$_2$, ಬರುಗೆಯ್, ಬಱಿಕೆಯ್, ಬಱಿಗೈ$_2$, ಬಱುಗಯ್ (ನಾ). ಆಹಾರ, ಹಣ, ಹಣ್ಣು ಹಂಪಲು ಆಯುಧ ಇತ್ಯಾದಿಗಳನ್ನು ಹೊಂದಿರದ ಕೈ ; ಖಾಲಿಕೈ ; ಬರಿದಾದ ಹಸ್ತ; ರಿಕ್ತಹಸ್ತ : ವಿಜಯಿಸುತ್ತಿರೆ ಸರ್ವಾಂಗಂ ಬಱುಗೆಯ್ಯಿಂ ಬಯಲ ನೀಗುತ್ತಿರೆ (ಕಲ್ಯಾಕಾ. ೨-೦). **ಬರಿಕೈ$_1$** : ತೊಳಲಿ ಶೋಧಿಸಿ ಬಳಲಿ ಬಂದು ಬರಿಕೈಯಾದುದೆನುತ ಚಿಂತಿಸಿ (ವಂಕಾರಾ. ೫-೫-೦). **ಬರಿಗೈ$_2$**: ಇವಕ್ಕೆ ಬಲಿಬಿದ್ದು ಅನೇಕರು ಬರಿಗೈಯಾಗಿದ್ದಾರೆ (ಏಕಪ್ಪ. ೨೨); ಹೀಗೆ ಬರಿಗೈಲಿ ಮರಳುವದು ನನಗೆ ಎಳ್ಳಷ್ಟೂ ಸರಿ ಕಾಣುವುದಿಲ್ಲ (ಬಂಗಾಹ. ೫೪) ; ಆನಂದ ಇತ್ತೀಚೆಗೆ ಬರಿಗೈಯಿಂದ ಮನೆಗೆ ಹೋಗಲಾರದೆ ಬಾರಿಬಾರಿಗೂ ನೊಂದುಕೊಳ್ಳುತ್ತಾನೆ (ಕೇಪೋಕ. ೨). **ಬರುಗೆಯ್** : 'ದೇಹಿ' ಎಂದು ಸೇರೆಗಯ್ಯನೆತ್ತಿದ ಆರೂ . . . ಬರುಗಯ್ಯಿಂದ ಹಿಂದಿ ರುಗಿದರಿಲ್ಲ (ಶಿಲ್ಪ. ೪೨-೨). **ಬಱಿಕಯ್** : ಮನಸಿಜನಾತ್ಮಜ ಬಱಿ ಕಯ್ಯೊಳಿರ್ಪುದು ಸನುಮತವಲ್ಲ (ಪೋಹಶ. ೩೩-೬೦). **ಬಱಿಗೈ$_2$** : ಸಂಬಂಧಿ ಗಳಪ್ಪರಲ್ಲಿಗೆ ಬಱಿಗೈಯಿಂ ಪೋಗಲಾಗದೆಂಬರ್ (ಶಂಕಶಂ. ೨೬೦-೨); ತೆಱನಂ ಕಾಣದ ಬಾಟ್ಕಿ . . . ದುರ್ಮಾರ್ಗರೊಳ್ ಸ್ನೇಹಮುಂ ಬಱಿ ಗೈಯಂ ಸುಱಿವಂತೆಕ್ಕೆ (ಸೋಬಸೋಕ. ೦೭); ಬರುತೇನು ತಂದೆ ಬಱಿಗೈಲಿ ಬಂದೆ (ಕರಂದ. ೨-೩೩-೧). **ಬಱುಗಯ್** : ಬಱುಗಯ್ಯೊಳ್ ಗುರ್ದೆಯುಂ ಪುಡುಕುನೀರೊಳರ್ದೆಯುಂ (ಅಕಪು. ೦೦-೦೦ ಪ).

**ಬರಿಕೈಯಲ್ಲಿ ಮೊಳಹಾಕು, ಬರಿಗೈಯಲ್ಲಿ ಮೊಳಹಾಕು**=ಹಣವಿಲ್ಲದೆ ಖರ್ಚಿಗೆ ಯೋಜನೆ ಹಾಕು : ಬರಿಕೈಯಲ್ಲಿ ಮೊಳಹಾಕಿದರೆ ಪುರುಷಾರ್ಥ ವೇನಿದೆ (ವಾಗ್ಗೇಶ. ೦೦೩) ; ಅವುಗಳನ್ನೆಲ್ಲ ಕಂಡುಹಿಡಿದು ಕನ್ನಡಿಗರಿ ಗೊಪ್ಪಿಸುವ ಶಕ್ತಿಯಾಗಲಿ, ಬರಿಗೈಯಲ್ಲಿ ಮೊಳಹಾಕುವ ನಮ್ಮಂಥ ವ್ಯಕ್ತಿ ಗಳಿಗೆಲ್ಲಿಂದ ಬರಬೇಕು (ವಾಡೋಱ. ೦೯೬). **ಬರಿಗೈಲಿ ಬರು** = ಕೆಲಸವಾಗದೆ ಹಿಂತಿರುಗು ; ನಿಷ್ಫಲನಾಗಿ ಹಿಂದಿರುಗು : ಹೋಗಿ ಬಂದವರು ಬರಿಗೈಲಿ ಬಂದರು (ಪುಟ್ಟರ. ೬೪). **ಬಱಿಗೈಯವರು**=ಹಣವಿಲ್ಲದವರು; ದರಿದ್ರರು : ನಾವು ಬಱಿಗೈಯವರು ಬರಲಿಮಗಾವುದಲ್ಲಿಯ ಕೆಲಸ (ಕುಮಾವ್ಯಾಉ. ೦-೯೩). [ಬಱು (<ಬಱಿದು) + ಕೆಯ್$_2$]

**ಬಱುಗೆಱೆ**, ಬರಿಗೆರೆ, ಬಱಿಗೆಱೆ (ನಾ). ನೀರಿಲ್ಲದೆ ಖಾಲಿಯಾಗಿರುವ ಕೆರೆ : ಕೆಱೆಯು ಬಱುಗೆಱೆಯಾಗಲೀಕ್ಷಿಸಿ (ಶಾಕ್ಯಶಾ. ೩೦-೩೬). **ಬರಿಗೆರೆ** : ಬರಿಗೆರೆಯೊಳಗೊಂದು ಬಕಪಕ್ಷಿ ಕುಳಿತಂತೆ (ಸಾಂಪಕಾ. ೭-೦೩೪). **ಬಱಿಗೆಱೆ**: ಕೆಱೆ ನೆಱೆ ನೀರ್ ತವುತರೆ ಬಱಿ[ಪಾಠಾಂ. ಱು]ಗೆಱೆಯಾದುವು . . . ಕಾಲವಶಮದೇನಾಗಿಸದೋ (ಜಗಂ. ೦೭-೬೪). [ಬಱು (< ಬಱಿದು)+ಕೆಱೆ$^3$]

**ಬಱುಗೈ** 'ಬಱುಗೆಯ್$_1$' ನೋ.

**ಬಱುಗೊಂದೆ** (ನಾ). ಕ್ಷುಲ್ಲಕವಾದ ಪಶು; ಹೀನಜಂತು : ಇನ್ನೆಬರಂ ತಮಗೆ ಜಗಂ ತೋಡಾಗದೆಂದು ಸೊರ್ಕಿನುರ್ಕಿಂ ಬಱುಗೊಂದೆ ಪಂದೆರಾಯರಂ ಕಾಡಿ ಬೇಡಿ ಕೂಡಿದ ಜಾಳಿಗವೊನ್ನಂ ಕೋಳುಗೊಂಬೆಂ (ರಾಪಾಶ್ಯ. ೦೨೭-೨೮). [ಬಱು (<ಬಱಿದು) + ಗೊಂದ್ಲೆ]

**ಬಱುಜಗಳ** (ನಾ). ವ್ಯರ್ಥವಾದ ಕಲಹ; ಒಣಗುದ್ದಾಟ: ಅಕಟಕಟ ಬಱುಜಗಳಗೋಪ ಜಾಣೆಯಿತಿವಳಾ (ಜಕಶ. ೬-೨೬೦). [ಬಱು (< ಬಱಿದು) + ಜಗಳ (< ಜಗಟು)]

**ಬಱುಜೋಗಿ** (ನಾ). ನಿಷ್ಪ್ರಯೋಜಕನಾದ ಜೋಗಿ : ಪೋ ಪೋಗಿರೆ ! ಬೂದಿಯ ಬಱುಜೋಗಿಯನುಱಿದತ್ತಂ (ರಾಪಾಶ್ಯ. ೬೧ ೨೬). [ಬಱು (< ಬಱಿದು) + ಜೋಗಿ$_1$]

**ಬಱುದಲೆ**, ಬರಿದಲೆ, ಬರುದಲೆ, ಬಱಿದಲೆ (ನಾ). ೧. ಬೋಳುದಲೆ ಯುಳ್ಳವನು ; ಲೋಚುಮಾಡಿಕೊಂಡ ತಲೆಯುಳ್ಳವನು ಜೈನ ಸಂನ್ಯಾಸಿ : ಪೆಱರಂ ದೂಱುವರೊಳ್ ತಱಿಜುಱಿಯದೆ ನುಡಿವವರೊಳ್ . . . ಪುರುಡಿಗರೊಳ್ ಬಱುದಲೆಯೆಂದೆಳಸಿ ಕೇಳಲಾಗದು ಪುರುಷಂ (ಧರ್ಮಾಮೃ. ೬-೨೦೩). **ಬರಿದಲೆ**: ೨. ಏನನ್ನೂ ಧರಿಸದೆ ಇರುವ ತಲೆ; ಬೋಳಂತಲೆ: ಹಿಂದೆ ಟೋಪಿ ಅಥವಾ ಮುಂಡಾಸಿಲ್ಲದೆ ಬರಿದಲೆಯಲ್ಲಿ ಯಾರೂ ಓಡಾಡುತ್ತಿರಲಿಲ್ಲ (ರೂಢಿ). **ಬರುದಲೆ**: ೩. ಕೂದಲುಂ ಬೆಳೆಯದಿರುವ ಅಥವಾ ಮುಂಡನ ಮಾಡಿಸಿಕೊಂಡ ತಲೆ ; ಬೊಕ್ಕ ತಲೆ : ಆ ಬೋಳ ಚಾಮರಾಜನ ಬರುದಲೆಯನ್ನು (ಸಂಗುಗಂ. ೬೨-೦೩). **ಬಱಿದಲೆ**: ೨. ತಂಡಲಲಿ ಬಱಿದಲೆಯಲಿಹರು (ಸರ್ವಜ್ಞ. ೦೬೦೬). [ಬಱು (< ಬಱಿದು) + ತಲೆ$_1$]

**ಬಱುದೂಱು**, ಬಱಿದೂಱು (ನಾ). ಮಿಥ್ಯಾಪವಾದ : ಅಱುಹಿನವರು ಬಂದು ಕಾಱಿಯ ಕೊಂಡೊಯ್ದರೆ ಬಱುದೂಱೀತಕೋ (ಅಕಕಂ. ೩೦೦-೦೩೦೭). **ಬಱಿದೂಱು** : ಆರಱಿಯದಂತದಱೊಳಗೆ ಹೃದಯಾರ ವಿಂದದಿ ನೀನಿರಲು ಬಱಿದೂಱು ಜೀವನಿಗುಂಟೆ (ಹಂಸಾ. ೯೪). [ಬಱು (<ಬಱಿದು) + ದೂಱು$_1$]

**ಬಱುದೊಡಂಬೆ** (ನಾ). ಹೂವಿರದ ಬರಿಯ ತೊಟ್ಟು : ಮಾವಿನ ಪೊಸ ಗೊಂಚಲೊಳ್ ಬಱುದೊಡಂಬೆಗಳಿರ್ಪುವೆ ಕಟ್ಟು ಸೂಸೆಯುಂ (ಅಱಾವ. ೦೦-೪). [ಬಱು (<ಬಱಿದು) + ತೊಡಂಬೆ$_1$]

**ಬಱುದೊಱೆ**, ಬಱಿದೊಱೆ (ನಾ). ೧. ನೀರಿಲ್ಲದೆ ಬರಿದಾಗಿರುವ ತೊರೆ, —ಹೊಳೆ. ೨. (ಅಲಂ) ಮರೀಚಿಕೆ: ನೀನೆನ್ನ ಪರಿ ಬಱು[ಪಾಠಾಂ· ಱು]ದೊಱೆಯಲೋಲಾಡಿಸಿದೆ ನೀ ಹಸಿದಿರಿಸಿ ಹಾರುವನ (ಶಿಶಾಗ. ೯-೩-೩೯). ೩. ವ್ಯರ್ಥವಾದುದು; ನಿಷ್ಪ್ರಯೋಜಕವಾದುದು: ಕಾಮೇಚ್ಛೆಯುಂಲಿ ಪಡೆದ ಹೊಟ್ಟೆ ಬಱುದೊಱೆಯಾಯಿತೇ . . . ಹಾಯೆಂದೊಟ್ಟೈವೂಱಲಿ ದಳಬಲೆ (ಕೊರಂಜ. ೨-೩-೩೭). ೪. ನಾಶ; ಅಳಿವು : ಕುದುರೆ ಬಱು ದೊಱೆಯಾಯ್ತು ಕರಿಯು ಹಿಂಡಡಗಿದುದು (ಜಂಪು. ೨೮-೩೦). **ಬಱಿದೊಱೆ** : ೧. ಅಱಿವು ತಲೆಕೆಳಗಾಯ್ತು ಧೈರ್ಯದ ನಿಱಿಗೆ ನಗೆಗೆಡೆ ಯಾಯ್ತು ಲಜ್ಜೆಯ ಹೊಱಿಗೆ ಬಱಿದೊಱೆಯಾಯ್ತು (ಕುಪ್ಪಾ೩. ೨-೦೨). ೩. ನಿಮ್ಮಾ ತಾತ ಶಂಕರ ಕೊಟ್ಟ ನಿರುತದ ಮಾತು ಬಱಿದೊಱೆಯಾಗದು (ಸಂಶಶ. ೩೦-೩೭). [ಬಱು (<ಬಱಿದು) + ತೊಱೆ₂]

**ಬಱುದೊಱೆವೊಗು** (ಕ್ರಿ). ೧. ನೀರು ಬತ್ತಿದ ತೊರೆಗೆ ಇಳಿ. ೨. (ಅಲಂ) ಫಲ ದೊರಕದ ಕೆಲಸಮಾಡು ; ವ್ಯರ್ಥವಾದ ಶ್ರಮ ವನ್ನು ಹೊಂದು : ಮಾಯದ ಸಂಸಾರದ ನಚ್ಚಿ ವಾಯಕ್ಕೆ ಕೆಟ್ಟು ಬಱುದೊಱೆವೊಱಬೇಡ (ಬಸವ. ೬೨೪). [ಬಱುದೊಱೆ + ಪೊಗು]

**ಬಱುದೊಱೆವೋಗು**, ಬಱುದೊಱೆಹೋಗು (ಕ್ರಿ). (ನೀರು ಬತ್ತಿದ ಹೊಳೆಯಂತೆ) ವ್ಯರ್ಥವಾಗು : ನಿಷ್ಪ್ರಯೋಜಕವಾಗು : ಕರಣ ದಿಚ್ಛೆಗೆ ಹರಿದು ನರಕದಲ್ಲಿ ನೆರೆದು ಬಱುದೊಱೆವೋಗದೆ ಮಱೆಯದೆ ಪೂಜಿಸು (ದೇಪಾವ. ೩೩-೩೪); ಬಱುದೊಱೆವೋದುದು ಕೆಱೆಗಂ ದೇಗುಲಕ ಮಾಗದುಱಿದವರರ್ಥಂ (ಎಕ. v. ಬೇಲೂರು. ೧೧೩-೧೬; 1161); ಬಱು ದೊಱೆವೋದುದೆನ್ನಯ ವಿವೇಕಂ (ವೃಹಪ. ೩೦-೩೩). **ಬಱುದೊಱೆ ಹೋಗು** : ಮೋಹನ ಮೊಲೆ ಮುದ್ದುಮೊಗದ ಭಾವಕಿಯರ ಲಲ್ಲೆನುಡಿ ಯೆಂಬ ನಯಗತ್ತಿ ಎಲ್ಲರ ಹೃದಯವ ಕೊಱೆವುತ್ತಿದೆ ನೋಡಾ . . . ಬಲ್ಲತನ ಬಱುದೊಱೆಹೋಯಿತ್ತು (ಸಿದ್ಧೇಶ. ೪೦-೧೦೬).

[ಬಱುದೊಱೆ + ಪೋಗು₁ (<ಪೋ₁)]

**ಬಱುದೊಱೆಹೋಗು** 'ಬಱುದೊಱೆವೋಗು' ನೋ.

**ಬಱುನುಡಿ**, ಬಱಿನುಡಿ (ನಾ). ಬರಿಯ ಮಾತು ; ಒಣಮಾತು : ಒಡ ವುಟ್ಟಿದರೆಂಬೀ ಬಱುನುಡಿವಡೆವರ್ಪಱದಿರ್ಕೆ ಮಱುಮಯ್ಯೊಳದಾರೊಡ ವುಟ್ಟುವರ್ (ಶಾಂತೀಶ್ವ. ೧೩-೨೨೦); ನಂಬದೊಡೆ ಬಱುನುಡಿಯೊಳಾದ ಫಲ ವೇನು (ಅಕಶಂ. ೯-೯). **ಬಱಿನುಡಿ** : ದಿಟವೀರನೇ ಕೂರಲಗಿನಲಿ ಮಾತಾಡು ಬಱಿನುಡಿ ಭಂಡತನ (ಕುಮ್ಯಾರಿಮ್ಮ್ರಾ. ೦೯-೩).

[ಬಱು (<ಬಱಿದು) + ನುಡಿ₂]

**ಬಱುನೆನಹು** (ನಾ). ಬರಿಯ ನೆನಪು : ಬಱುನೆನಹು ಸ್ವಪ್ನಂ (ಮಂಗರಾ. ೯೯-೩). [ಬಱು (< ಬಱಿದು) + ನೆನಹು (<ನೆನಪು)]

**ಬಱುನೋಟ** (ನಾ). ಬರಿಯ ದೃಷ್ಟಿ, —ನೋಟ : ಬಱುನೋಟವನೆ ಪಸರಿಸುವಾ ಮೋಹಮಿಂತೀಕೆವರೊಳೆನಗೆಂಬಾ ಹದನನಱವಡೆ (ಶಾಸ್ತ್ರಸಾ. ೯-೩೦). [ಬಱು (< ಬಱಿದು) + ನೋಟ]

**ಬಱುಬ** 'ಬಱುವ' ನೋ.

**ಬಱುಬೆಸನಿಗ** (ನಾ). ಬರಿಯ ದುರಭ್ಯಾಸಗಳುಳ್ಳವನು; ದುಶ್ಚಟ ಗಳುಳ್ಳವನು : ಪಸಗೆಟ್ಟುರವಣಿಸುವ ಬಱುಬೆಸನಿಗನೊಳ್ಪಸೆಗೆ ಸಂದು (ಹರಿ. ೬-೦೯೬). [ಬಱು (< ಬಱಿದು) + ಬೆಸನಿಗ]

**ಬಱುಮಂಡೆ** (ನಾ). ಏನನ್ನೂ ಧರಿಸದಿರುವ ತಲೆ; ಬೋಳುತಲೆ: ಬಱುಮಂಡೆ ಬಳಿದ ಬಾವನ್ನ ಸುಲಿದ ಪಲ್ಲು ಮಿಱುಪ ಸಬಳಕೈಕತಿ ಮೆಱೆಯೆ ಸಬಳಿಗೆರೆಯ್ತಂದರು (ಕುಂಠಾಸಾಂ. ೦೯-೨೦).

[ಬಱು (<ಬಱಿದು) + ಮಂಡೆ]

**ಬಱುಮನ**, ಬರಿಮನ (ನಾ). ಭಕ್ತಿ, ಶ್ರದ್ಧೆ, ಪ್ರೀತಿಗಳಿಲ್ಲದ ಅಂತರಂಗ: ಅಮರ್ದರ್ ಬಸವಣ್ಣನಂ ಬಂದಿವಿಡಿಯಲ್ಕೆಂದು ಬಱುಮನದ ಹೊಱ ವಿಭೂತಿಯನಲ್ಲಿ ಶೀವಿಟ್ಟು (ಬಸವ. ೯-೯೩). **ಬರಿಮನ**: ಬರಿಮನ ಸಲ್ಲದಣ್ಣಾ! ಬಲ್ಲವರೊಳೆಲ್ಲಗ್ಗವನೆ ಮನುಜನಣ್ಣಾ (ಕುಂಪು. ೩೭-೬).

[ಬಱು (<ಬಱಿದು) + ಮನ]

**ಬಱುಮಾಟ** (ನಾ). ಶ್ರದ್ಧೆಯಿಲ್ಲದ ಕೆಲಸ : ಮನಸ್ಸಿಲ್ಲದ ಕಾರ್ಯ : ಶ್ರೀ ಗುರುವಿನುಪದೇಶವಿಲ್ಲದೆ ಹೋಗಿ ದೇವಾರ್ಚನೆಯ ಮಾಡಿದೊಡೇಗು ವುದು ಬಱುಮಾಟ ನಿಷ್ಫಲವೆಂದಳಾ ವಿಮಳೆ (ಶ್ರಶುಂ. ೭-೬).

[ಬಱು (<ಬಱಿದು) + ಮಾಟ₁]

**ಬಱುಮಾತು** 'ಬಱುವಾತು' ನೋ.

**ಬಱುವ**, ಬಱುಬ (ನಾ). ೧. ಬರಿಯ ಕೈಯಲ್ಲಿರುವವನು; ನಿರಾಯುಧ; ಅಸಹಾಯಕ : ಬಱುವಂ ಸಾರಥಿಯಿಲ್ಲ ಮೆಯ್ಗೆ ಮಱೆಯುಂ ತಾನಿಲ್ಲದೆಂತೀಗಳಾನಿಱುವೆಂ (ಪಂಪಭಾ. ೧೨-೨೦೭); ಬಱುವನನಾಜಿ ಶ್ರಾಂತನಂ ಯಶೋಧನನಿಱಿಯಂ (ಶಾಂತಿಪು. ೯-೫೦). ೨. ದರಿದ್ರ ; ಬಡವ ; ನಿರ್ಗತಿಕ : ಕಱಿಯಂ ಮುತ್ತಂ ಧನದಂ ಬಱುವಂ [ಪಾಠಾಂ. ಱಿಯಂ]ತೊಱೆದಂ ಗೃಹಸ್ಥನೆನ್ನದೆ ಮುಂ ಬಿಟ್ಟಱಿಸಿ ಕೊಲುತಿರ್ಪ ಜವ ನೆಂಬಱಿಕೆಯ ಪಗೆವಂಗದೆಂತು ಪಂಗಿಗನನಪ್ಪಂ (ಆದಿಪು. ೯-೭೭); ಅಱಿ ವಿಲ್ಲದೆ ಮತ್ತೆಲ್ಲಂ ನೆಱೆದಿರ್ದೊಡಮೇನೊ ಬಱುವನಾತಂ ದಿಟದಿಂ (ಶೀಶಿಮು. ೨-೪೦೦) ; ಜರೆಯ ನರೆಯ ಮಡಲ್ತ ಸೆರೆದುಱುಗಲ ಸುರ್ಕುಂ ದೊವಲ ಅಸಿದೊಡಲ ಬಱುವಂ ಜೋಗಿಯಂ ಮಾಲಿಸುತುಂ (ರಾಮಾಶ್ವ. ೫೬-೦೬). **ಬಱುಬ** : ೧. ಬಱುಬಂ ಪೊಯಿಲ್ವೆತ್ತಂತೇನುಮನಱಿ ಯದೆ . . . ನಡನಡಂಗಿ (ಪಂಪಭಾ. ೬-೭೦ ವ) ; ಬ[ಱುಬ]ನನೇಳಿದನಂ ಮೆಯ್ಯುಱಿಯದೊನಂ ಬೆರಲನಳಿಪಿ ಕರ್ಚಿದೊನಂ ಕಾಲ್ಗೆಱಗಿದನನಿಱಿಯ ಲಾಗದು (ಶಂಕಶಂ. ೦೦-೦೯). ೨. ಅದು ಒಡೆಯರೊಡವೆಯಲ್ಲದೆ ಬಱುಬಂಗೆ ಅರಗದು [ಪಾಠಾಂ. ಬಱುಬರಿಗರಗದು] (ಕೋಟೀಶಾಂ. ೩೭); ಬಱುಬನು ನಿಧಿಗಂಡ ತೆಱನಂತೆ ಸಂತಸದೊಱೆಯೊಳಾಳುತಲೇಳುತಿರ್ದ (ಪರ್ವತ. ೦೦-೯೩). ೩. ತಿಳಿವಳಿಕೆಯಿಲ್ಲದವನು ; ಅಜ್ಞಾನಿ : ಬಱುಬರನುಱಿ ಬಲ್ಲರೆಂಬ . . ನೆಱೆ ಜಾಣರು (ಕುಂಠಾಸಾಂ. ೩೩-೮೮) ; ಬಲ್ಲವನೀತ ಬಱುಬ [ಪಾಠಾಂ. ಡವ]ನೀತ ಚವಳೀಕನೆಲ್ಲಶಾಸ್ತ್ರಂಗಳಱಿವನು ಬಲ್ಲಿದನೀತ ಬಡವ ನೆಂದು ಪೂಜಿಪಗೆಲ್ಲಿಯು ಶೀಲ (ಅಮಬಾ. ೯-೦೦೭).

[ಬಱು (< ಬಱಿದು) + — ಅ₇]

**ಬಱುವಣ್ಣನೆ** (ನಾ). ಅರ್ಥವಿಲ್ಲದ ವರ್ಣನೆ ; ಬರಿಯ ವಿವರಣೆ : ಪುರುಳಿಲ್ಲದ . . . ಬಱುವಣ್ಣನೆಯ ಬೇಸಱಿಕೆಯು ಪಾಟ್ಟಗ್ಗಬಮಂ ಪೊಳ್ಳೆಂದೆ ನುಡಿದಂ (ರಾಮಾಶ್ವ. ೦೬೯-೯)

[ಬಱು (< ಬಱಿದು) + ಬಣ್ಣನೆ]

**ಬಱುವನೆ** (ನಾ). ಹಾಳುಮನೆ : ಗೃಹಿಣಿಯೊಳ್ ಸುಗುಣಮಿಲ್ಲದೊಡೆ ಗೃಹಮದು ಬಱುವನೆಯೆ (ಶೀಶಿಮು. ೩-೨೨).

[ಬಱು (<ಬಱಿದು) + ಮನೆ]

**ಬಱುವಾತು**, ಬರಿಮಾತು, ಬಱಿಮಾತು, ಬಱಿವಾತು, ಬಱುಮಾತು (ನಾ). ಕೆಲಸಕ್ಕೆ ಬಾರದ ಮಾತು; ವ್ಯರ್ಥವಾದ ಮಾತು: ಮಾತಱಿ ಯದ ಮಾತು ತಮ್ಮ ಬಱುವಾತುಗಳೊಳ್ ಪುದಿದು (ಪಂಪಭಾ. ೪-೯೫) ; ವಾಕ್ಕಿನೊಳಿಲ್ಲ ಮೇಣ್ ಪರಿಚಯಂ ಬಗೆ ಮೊಕ್ಕಳಮಂತುಟಲ್ತೆ ಗಂಟಿಕ್ಕುವ ರೆಂಜಲಾದ ಬ[ಪಾಠಾಂ. ಬ]ಱುವಾತುಗಳು (ಸೂಕ್ತಿಸು. ೦-೩೬). **ಬರಿ ಮಾತು** : ಬರಿಮಾತಿನಿಂದ ಏನು ಪ್ರಯೋಜನ ? (ರೂಢಿ). **ಬಱಿ ಮಾತು** : ಈ ಸವಿಾರಜನೀಗ ಹೃದಯನಿವಾಸಮಾರುತನಜ ಹರೀಶ್ವರ ರೋಸರದ ಬಱಿಮಾತದಲ್ಲಿದು ವೇದಮಂತವೆಂದ (ಕೊರಂಜ. ೯-೦೨-೦೩). **ಬಱಿವಾತು** : ಬಱಿವಾತನಿನಿಸು ಪೊಟ್ಟುಂ ಮೆಱೆವಿನೆಗಂ ಗಟಪಲೇಕೆ

(ಶಬ್ದಮ. ೧೭೯). **ಬಱುಮಾತು** : ಏನೆಂದಱಿಯರು ಎಂತೆಂದಱಿಯರು ಬಱುಮಾತಿನ ಬೊಮ್ಮವನಾಡುತಿಪ್ಪರು (ಅಕಸಂ. ೧೧೭-೪೮೫).

[ಬಱು (< ಬಱಿದು) + ಮಾತು₁]

**ಬಱುಮಾತುಂಗುಟ್ಟು, ಬಱುಮಾತುಗುಟ್ಟು** (ಕ್ರಿ). ಕೆಲಸಕ್ಕೆ ಬಾರದ ಮಾತನ್ನಾಡು ; ವ್ಯರ್ಥವಾದ ಮಾತನ್ನಾಡು : ಸಂಗರಕೆ ಬಂದು ಬಱುಮಾತುಂಗುಟ್ಟದಿರು (ಪಂಪಭಾ. ೧೧-೦೫). **ಬಱುಮಾತುಗುಟ್ಟು** : ಬಱುಮಾತುಗುಟ್ಟಿ ಪೋಪರೇ ಗಂಡರುಂ (ಕವಿರಾ. ೧೬೭ ಪ್ರಯೋ).

[ಬಱುಮಾತು + ಕುಟ್ಟು₁₁]

**ಬಱುಮಾತುಗುಟ್ಟು** 'ಬಱುಮಾತುಂಗುಟ್ಟು' ನೋ.

**ಬಱುಮಾನಿಸ** (ನಾ). ನಿಷ್ಪ್ರಯೋಜಕನಾದ ಮನುಷ್ಯ : ತಾಮಸರ್ ಲೋಕಕಂಟಕರಾಗೆ ರಕ್ಕಸರೆನಿಸಿ . . . ಬಡವು ಬಱುಮಾನಿಸರಂ ಕೊಂದು ತಿಂದು ಬಿಕ್ಕೞಿಸಿ ಪೆರ್ಚೞಿಸಿ ತಿರೆಗೆ ಪೊಱೆಯಾದರ್ (ರಾಮಾಶ್ವ. ೧೧೯-೨೫).

[ಬಱು (<ಬಱಿದು) + ಮಾನಿಸ₁ (< ಮಾನುಸ)]

**ಬಱುವಾಯ್, ಬಱಿವಾಯ್** (ನಾ). ೧. ಬರಿಯ ಬಾಯಿ ; ಖಾಲಿ ಬಾಯಿ. ೨. (ಅಲಂ) ವ್ಯರ್ಥವಾಗಿ ಗಳಹುವ ಬಾಯಿ ; ನಿಷ್ಪ್ರಯೋಜಕವಾದ ಮಾತನ್ನು ಆಡುವ ಬಾಯಿ : ಉಂಡೆ ದಲೆಯೋತಿಗಳು ಬಱುವಾಯ ಬಳ್ಳಿಗಳು . . . ಅಗ್ಗದ ಚರಿಗೆಗಳ ನರಿಗಳು (ಸೋಮೇಶ. ೪-೪೦). **ಬಱಿವಾಯ್** : ೨. ಬಾಲೆಯರ ಮುಂದೆ ತಿರುಗುತ್ತಿಪ್ಪ ಬಱಿವಾಯ ಭಂಜಕರುಗಳು ತಾವು ಅಱಿವುಳ್ಳವರೆಂದು ಬೇಗ ಬೆಱೆಯುತ್ತಿಪ್ಪರು (ಮೋಹಮೂ. ೧೮೮-೭೦೯).

[ಬಱು (< ಬಱಿದು) + ಬಾಯ್]

**ಬಱುವಾೞ್ಕೆ** (ನಾ). ನಿರರ್ಥಕವಾದ ಬದುಕು : ವ್ಯರ್ಥವಾದ ಜೀವನ : ಪುರುಳೇಂ ಬಱುವಾೞ್ಕೆಯ ಬರ್ದುಂಕಿನೊಳ್ (ರಾಮಾಶ್ವ. ೬೫-೧೧). [ಬಱು (<ಬಱಿದು) + ಬಾೞ್ಕೆ]

**ಬಱುವೆ** (ನಾ). ನೆರವಿಲ್ಲದವಳು ; ಅಸಹಾಯಕಳು : ಆನೊರ್ವಳೆ ಬಡವೆ ಬಱುವೆಯಾದೆಂ (ರಾಮಾಶ್ವ. ೪೦-೫). [ಬಱುವ + — ಎ₂]

**ಬಱುಸೂಱೆ, ಬಱಿಸೂಱೆ** (ನಾ). ವ್ಯರ್ಥವಾದ ಸೂರೆ,—ಲೂಟಿ : 'ಬಱುಸೂಱೆವೋಗು' ಪರಾ. **ಬಱಿಸೂಱೆ** : 'ಬಱಿಸೂಱೆಗೈ' ಪರಾ. [ಬಱು (< ಬಱಿದು) + ಸೂಱೆ]

**ಬಱುಸೂಱೆವೋಗು** (ಕ್ರಿ). ವ್ಯರ್ಥವಾಗಿ ಸೂರೆಹೋಗು ; ಹಾಳಾಗು : ಮೂಜಗಲೋಕವೆಯ್ದೆ ಬಱುಸೂಱೆವೋಯಿತ್ತು (ಅಕಸಂ. ೧೧೯-೪೪೬).

[ಬಱುಸೂಱೆ + ಪೋಗು₁ (<ಪೋ₁)]

**ಬಱೆ₁** (ಕ್ರಿ). ಬಱಿತ (ಭೂತಕೃ). ೧. ಒಣಗು ; ಆರು : ಬತ್ತು : ಸಚ್ಚಿನ ಮುಗ್ಧಾಲಾಪವಿಂಪು ಬಱಿದು ಬಱೆತುದೆಂಬನ್ನೆಗಂ ಬತ್ತಿರಲ್ಪಾಯ್ (ಕಾದಂಬ. ೫೨೩); ಬಾಡಿದ ಮೊಗಂ ಬಱಿತ ಬಾಯ್ . . . ಮಾಸಿದ ಮುದಂ ಕೂಡೆ . . . ಪುರಜನಂಗಳಂ ನೋಡಿ ತೋಱಿಸಿ ಬೇಱೆ ವೇಱೊಪ್ಪುಗೊಡುತಿರ್ದನಾ ಧೈರ್ಯನಿಧಿ ಭೂಪನು (ಹಕಕಾ. ೯-೦) ; ಕೆಱೆ ತೊಱೆಗಳೊಱತ ಬಱೆತುವು (ಕೃಬಾಭಾ. ೧೫-೨). ೨. ಒರಟಾಗು: ಬಿರುಸಾಗು ; ಕಠಿಣವಾಗು : ಇನ್ನೆಗಂ ನೆಲಸಿ ನೀರ್ ಸೆಱೆಗೊಂಡ ಪೊಲಿರ್ದುದರ್ಕೆ ಮೈ ಬಱಿತವೊಲಾಗಿ (ಚಂದ್ರಪ್ರ. ೪-೦೫). ೩. (ಜ್ವರ, ಬಿಸಿಲು. ಕಾವು ಮೊದಲಾದುವುಗಳಿಂದ) ಬಾಡು; ಕುಗ್ಗು : ಸೊರಗು: ಸುರಿತಂದಶ್ರುಪ್ರವಾಹಂ ಬಱುತೊಣಗಿದ ಬಾಸುಱೆಗ್ಗಂ . . . ವ್ಯಸ್ತಾಳಕಂಗಳ್ವೆರಸಲರ್ವಸೆಯೊಳ್ ಕಾಂತೆಯಿಂತಿರ್ದಳಾಗಳ್ (ಶಾಂತಿಪು. ೧೩-೭೯).

[ದೇ.॥ ತಮಿ. ವಱು, ವಱ್ಱು : ಮಲ. ವಱ್ಱು, ವಱ್ಱು; ತೆಲು. ವರುಟು; ಕೋತ. ವರ್ಱ]

**ಬಱೆಂಜು** 'ಬಣಜು' ನೋ.

**ಬೞಕೆ, ಬಳಕೆ** (ನಾ). ೧. ಉಪಯೋಗಿಸುವಿಕೆ ; ಬಳಸುವಿಕೆ : ಏಕವಚನವೊರ್ವನ ಬೞಕೆಗೆ ಬಹುವಚನವೆಲ್ಲರಂ ಪೇೞ್ವೆಡೆಯೊಳ್ (ಕವಿರಾ. ೨೨೪). ೨. ವಿಶೇಷವಾದ ಪರಿಚಯ,–ಗುರುತು ; ನಿಕಟವಾದ ಸಲುಗೆ : ತನ್ನಳವಂ ಕಲಿತನವುಂ ನಂಬಿ ಬಲಂ ತಳರದೆ ಸಾಧಿಸುವೆನೆಂಬ ಬೞಕೆಯುನಾತಂ . . . ರಾತ್ರಿಯೊಳ್ ಗಂಧವತಿಯ ತಡಿವಿಡಿದು ಬಂದು (ರಮಾಸ್ಕ. ೧೩-೧೯). **ಬಳಕೆ** : ೧. ನಿಶ್ಚಲದ ನೋಟದ ಲಿಂಗಭಾವದ ಬಳಕೆಯುನೆ ಬಲಿದಿರುತಲಿರ್ದನು ನಿಜನಿವಾಸದಲಿ (ಪ್ರಭುಲಿ. ೧೧-೩೭); ಕಲಿತನವೆ ಹೃದಯದಲಿ ಕಾರ್ಯದ ಬಳಕೆ ಕೈಯಲಿ ನಡುವೆ ನಾಲಗೆಯುಲಿದಡೇನಗ್ಗಳಿಕೆಯಹುದೋ (ಕುಮಾವ್ಯಾ. ೧೧-೪೩). ೨. ಸುಳಿದಳೂರ್ವಶಿ ಸುರಪತಿತ್ವದ ಬಳಕೆಯುವರಿಗಸಾಧ್ಯವೆಂಬುಜ್ವಲತೆಯಲಿ (ತೊರವೆರಾ. ೦-೫-೦೨); ಸಕಲಸೀಮೆಯ ಬಳಕೆಗಳೆದಳು ಸಕಲಕುಶಲವ ನೊರೆದಳು (ಹೊಂಗಳು. ೩-೧೧). ೩. ರೂಢಿ ; ಅಭ್ಯಾಸ : ಮುಂದಕೆ ಪೋಪುದು ತನುವಿದು ಹಿಂದೆಸೆಗೋಡುವುದು ಬಳಕೆಗೈದದ ಮನವೇನೆಂದಪೆನೊ (ಶಾಕುಂತ. ೧೮-೩೪). ೪. ರೀತಿ; ಕ್ರಮ : ಮುನಿಹರಜಲಜಭವರಂತಲ್ಲ ಪಾರ್ಥನ ಬಳಕೆ (ಕೋಗಡು. ೧೧-೫೭).

[ದೇ.॥ ತಮಿ. ವೞಕ್ಕಮ್, ವೞಕ್ಕು ; ತುಳು. ಬಳಕೆ , ಬೞಕೆ ; ತೆಲು. ವಡುಗು]

ಬೞಪ 'ಪಟಹ' ನೋ.

ಬೞಲ್, ಬಳಲ್, ಬಳಲು, ಬೞಲು₁ (ಕ್ರಿ). ೧. ಬಾಡು ; ಒಣಗು : ಅರಸಿಯರ ತೊಟ್ಟ ಪೂದುಡಿಗೆಗಳೆಲ್ಲಂ ಬೞಲ್ದು ಕಱಲ್ದು (ಶಾಂತಿಪು. ೮-೩೦ ವ) ; ಪುಷ್ಪವೊಂದು ಬೞಲಲ್ ಭೃಂಗಕ್ಕೆ ಪೂವಿಲ್ಲವೇ (ಸೋಮೇಶ. ೨೬). ೨. ದಣಿ ; ಆಯಾಸಗೊಳ್ಳು : "ಬೞಲ್—ಶ್ರಾಂತಾ" (ಶಮದ) ; ಅರಿಭೂಪಾನೀಕಭಯಂಕರನುಂ ಗಡಮೇಕೆಂದಱಿಯೆಂ ಬೞಲ್ದು ಜೋಲ್ದಂ ಧರೆಯೊಳ್ (ಶಂಕಥಾ. ೮-೪೦) ; ಮಱುಮಾತುಗುಡದೆ ರವಿಸುತ ಮಱಿವಿಂದಿರ್ದಪೆಯೊ ಮೋಣ್ಬೞಲ್ದಿರ್ದಪೆಯೋ (ಗದಾಯು. ೫-೦೫) : ರುಧಿರಮುಂ ನೆಱೆ ಕಾಱೆ ಬೞಲ್ದು ಬಿಟ್ಟಂ (ದಶಕು. ೪-೧೧೯). ೩. ಜೋಲು ; ನೇತಾಡು : ನನೆಯನೆ ಪೇೞ್ ಕೆಂದಳಿರೊಳೆಯ್ದೆ ಬೞಲ್ದೆಳಮಾವು ಬಂದ ಮಾವನೆ ಮಱೆಗೊಂಡು ಬಗ್ಗಿಸುವ ಕೋಗಿಲೆ (ಅದಿಪು. ೦-೬೫) ; ಮುಗುಳಂ ಪೇೞ್ ಬೞಲ್ವ ಗೊಂಚಲೆಡೆಯೊಳ್ ಪುಷ್ಪಾಸ್ತ್ರಪತ್ರಂಗಳಂ ತೆಗೆದು (ಅನಂಪು. ೭-೧೧). ೪. ಜಾರು ; ಸರಿ : ಬೞಲೆ ಪೆಗಲಿಂ ಚಂಚದ್ಜಲ್ಯಾಂಚಲಂ ಪೆಗಲಿಂಗೆ ಬಂದೆ ಬೞಲೆ ಜಡೆಗಳ್ . . . ಪರಿಪಟ್ಟೋರಂತೆ ಆಕಾಶಮಾರ್ಗದೆ ಬಂದ ಪಾಡಳ್ತಿದ ಸಖನಂ ಮುಂದಾಂ ಕಂಡೆಂ (ಕಾದಂಬ. ೭೦೩). ೫. (?) : ಕಡಿದ ಶರನಿಕರದುಡಿ ನಭದೆಡೆವರೆಗಂ ಬೞಲೆ (ನೇಮಿಪು. ೦೨-೦೬೪). **ಬಳಲ್** : ೨. ಖೇಚರರ್ ಬಿಸಿಲ್ಗಂಜುತ್ತುಂ ಭರದೊಳ್ ಬಳಲ್ದು ಬಂದಾ ಗಿರಿಶಿಖರದ ಮರದ ತುದಿಯ ನೆಳಲಂ ಸಾರ್ವರ್ (ಗಿರಿಕ. ೦-೫೫) ; ಮೞಲೊಟ್ಟಿಲನೇಱೆ ಪಾಱುಗುಪ್ಪೆಯನಾಡಿ ಬಳಲ್ದವಯವ ಬೆಮರಾಂತು (ಮೋಹತ. ೪-೫೮) ; ಚರಿಸಿ ನೆಱೆ ಬಳಲ್ದ ಪಥಿಕರಕ್ಷಿಗಳಿಗೆ ಕಲಶಕುಚದ ಲಾವಣ್ಯಾಂಬುವೆಱೆಯುತೆ (ಕಂಸವ. ೭-೮೦) ; ಬರಿದೆ ಬಲು ಬಳಲ್ದೆ (ಬಸಣ. ೭೯-೬). **ಬಳಲು** : ೨. ಸೆಳಲನುಡಿಸುವೆನೆಂದು ಬಳಲುವನಂತೆ (ಅಡಪ. ೨-೬) ; ಸತ್ಯವಱಿಯದತ್ತಲಿತ್ತ ಸುತ್ತಿ ಬಳಲುತಿರ್ದನಯ್ಯ (ಹಂಕರ. ಹ. ೫೧೦-೧೧) ; ಭಟರು ಬಳಲಿದರಿಂಬು ರಣವುತ್ಕಟವು (ಕುಮಾದ್ರೋ. ೦೫-೪೨). **ಬೞಲು₁** : ೨. ಗಾಯಂಬಡೆದೆನಸು ಬೞಲುತಿರ್ದಂ ಪಡುನೇಸಱ ತೆಱದೆ ರಾಜಹಂಸನರೇಂದ್ರಂ (ದಶಕು. ೨-೩೭).

[ದೇ.॥ ತಮಿ. ಮಲ. ವಯಂಕು ; ತೆಲು. ಬಡಲು]

**ಬೞಲಿಕೆ** 'ಬೞಲ್ಕೆ' ನೋ.

**ಬಟಲಿಸು, ಬಳಲಿಸು** (ಕ್ರಿ). ಆಯಾಸಪಡಿಸು ; ದಣಿಸು ; ಶ್ರಮ ಪಡಿಸು : ಎಮ್ಮಂ ನಿಮ್ಮಡಿ ಕಿವ್ಮನೆ ಬಟಲಿಸಲ್ವೇಡ (ಶಂಶಚ. ೯-೪೯ ವ); ಬಿಸಿಲ್ ಬಟ್ಟೆಗನಂ ಬಟಲಿಸಿತ್ತು (ಶಬ್ದಮ. ೫೪೬ ವ್ಯಾಖ್ಯಾ). **ಬಳಲಿಸು :** ಬಾರದೆ ತೋಱುತ್ತಳಲಿಸುವನೆ ಜಯ ಸಾರದೆ ಸಾರುತ ಬಳಲಿಸುವನೆ ಜಯ (೫ಚುರ. ೯-೨೦) ; ಮಾತಾಪಿತರನು ಬಳಲಿಸುವ ಮಗ ಯಾತ್ರೆಯ ಮಾಡಿ ದರೇನು ಫಲ (ಪುರಂದ. ೦-೬೦-೩) ; ತಂಗಿಯ ಬಳಲಿಸಿದ ಬಲುವೀರನೆನು ತುಱಿಗೊಳುವ ಕಡುಗೋಪದಲಿ ಕಿಡಿಕಿಡಿಯೋದನಸುರೇಂದ್ರ (ಕೂರಾ. ೩-೬-೦೪). [ಬಟಲ್ + —ಇಸು₂ ]

**ಬಟಲು₁** 'ಬಟಲ್' ನೋ.

**ಬಟಲು₂** (ನಾ). ೧. ಸಡಿಲವಾದುದಂ ; ಬಿಗಿಯಲ್ಲದುದು : "ಜಂಗಳ ಬಟಲು ಸೋರ್ಸಡಿಲ್ದುದಕ್ಕಂ" (ಶಬ್ದಮ. ೫೦). ೨. ದಣಿವು ; ಆಯಾಸ : "ಸೇದೆಯೊಳು ಜೋಲ್ದುದಱೊಳಂ ಬಟಲು" (ಶಬ್ದಮ. ೦೪೯). [< ಬಟಲ್]

**ಬಟಲ್ಕೆ, ಬಳಲಿಕೆ, ಬಳಲ್ಕೆ, ಬಟಲಿಕೆ** (ನಾ). ೧. ಆಯಾಸ ; ದಣಿವು : "ಬಟಲ್ಕೆಯೊಳ್ ಸೇದೆಯಕ್ಕಂ" (ಶಬ್ದ. ೦೪೬) ; ಆ ನೀರ್ದಾಣಮಂ ನೋಡಿ ಮೆಲ್ಲನೆ ಸಾರ್ದಲ್ಲಿ ಬಟಲ್ಕೆಯಂ ಕಳೆದು ಪೋಪಂ (ಕಾದಂಪೂ. ೬೪೯) ; ಬಟ್ಟೆಯ ಬಟಲ್ಕೆಯಂ ಕಳೆದು (ಧರ್ಮಾಮೃ. ೬೨-೦೪೫) ; ತನುವಿಂ ಬಟಲ್ಕೆ ಪೆಱಪಿಂಗೆ (ಕುಸುಮಾ. ೦೦-೯). **ಬಳಲಿಕೆ :** ೧. ಕಂಡುದ ಹಿಡಿಯಲೊಲ್ಲದೆ ಕಾಣದುದನಱಸಿ ಹಿಡಿದಹೆನೆಂದರೆ ಸಿಕ್ಕದೆಂಬ ಬಳಲಿಕೆಯು ನೋಡಾ (ಅಪಶಂ ೦೩-೫) ; ಸುರಪಥದಲಿ ತಿರುಗಿದ ಬಳಲಿಕೆಯನು ಭರದಿಂ ನೀರೊಳು ಮುಳುಗಿ ಪರಿಹರಿಸುವೆನು (೫ೀಶುಶಾಂ. ೪-೩೦). **ಬಳಲ್ಕೆ :** ೧. "ಆಯಾಸಕೆ ಬಳಲ್ಕೆಯೆನಿಕುಂ" (ಕಶಿ. ೦೨೬) ; ತೊಳಲ್ಕೆಯುಂ ಬಳಲ್ಕೆಯುಂ ಕಾಳೆಗ ದೊಳಗಮುಂ ಕನಸಿನೊಳಮಿಲ್ಲೆನಿಸಿ (ಎಕ. XI, ಪೊಳಾ. ೨೦-೪೨ ; 1278 ?). ೨. (ಅಲಂ) ಬಾಯಾರಿಕೆ ; ದಾಹ : ನಡೆ ನುಡಿ ಬಳಲ್ಕೆ ಮುನ್ನಂ ಪೆಟಟಲ್ಕೆಯ ರೂಪುಗಂಡ ಬಳಿಕಂ ನಡೆಯರ್ ನುಡಿಯರ್ ನೀರಂ ಕುಡಿ ಯರ್ (ಗಂಕ. ೨-೨೫). **ಬಟಲಿಕೆ :** ೧. "ದವಥುಃ, ಪರಿತಾಪಃ—೨ ಬಟಲಿಕೆ" (ಹಲಾಯು. ೯೯-೪೪೬). [ಬಟಲ್ + —ಕೆ./ ತಮಿ. ವಟಲಿಕ್ಕೈ; ತುಳು. ಬಳಲಿಕೆ ; ತೆಲು. ಬಡಲಿಕೆ]

**ಬಟಲ್ಕೆಗಳೆ, ಬಳಲ್ಕೆಗಳೆ** (ಕ್ರಿ). ದಣಿವಾರಿಸು ; ಆಯಾಸವನ್ನು ಪರಿ ಹರಿಸು : ಪೀಲಿ ಬಿಜ್ಜಣಿಗೆಯನೊಯ್ಯನೆ ಬೀಸುತ್ತಿರೆ ನೃಪನಂದನನಿನಿಸಿನಿಸಂ ಬಟಲ್ಕೆಗಳೆಯುತ್ತಿರ್ದಂ (ಕಾದಂಪೂ. ೪೫೫). **ಬಳಲ್ಕೆಗಳೆ:** ಶ್ರೀಪುರವನಿಪ್ಪುದ ಸೇರಿದೊಂದುಂಗಡಿಯೊಳಗೆ ವ್ಯಯ್ಯಾರೆ ತನ್ನ ಬಳಲ್ಕೆಗಳೆಯಲಿಕ್ಕಿರ್ದಂ [ ಲ್ಕಿರ್ದಂ ] (ಸುಕೃಶಾ. ೦೬-೬೯). [ಬಟಲ್ಕೆ + ಕಳೆ₁]

**ಬಟಲ್ಕೆವೋಗು** (ಕ್ರಿ). ಆಯಾಸಗೊಳ್ಳು ; ದಣಿವುಹೊಂದು : ದಿವ್ಯಾ ಹಾರವಮಂ ಕೈಯೊಳಿಕ್ಕುವುದುಮಾಕಂಠಂ ಉಂಡು ಬಟಲ್ಕೆವೋಗಿರ್ಪುದುಂ (ಧರ್ಮಾಮೃ. ೦-೦೫೦). [ಬಟಲ್ಕೆ + ಪೋಗು₁ ( <ಪೋ₁ ) ]

**ಬಟಲ್ಚು** (ಕ್ರಿ). ೧. ಬಳಲಿಸು ; ಆಯಾಸಗೊಳಿಸು ; ದಣಿಸು. ೨. ಕೆಳಕ್ಕೆ ಬೀಳಿಸು : "ಬಟಲ್ಚು—ಅಧಃಸ್ರಂಸನೇ (ಕೆಳಕ್ಕೆ ಬೀಳು, ಬೀಳಿಸು), ನಿಶ್ಚೇಷ್ಟಾಯಾಂ (ಅಲುಗೆ ಮಾಡು)" (ಕಪಾರ).
[ಬಟಲ್ + —ಚು₁ ]

**ಬಟಲ್ಮುಡಿ, ಬಳಲುಮುಡಿ, ಬಳಲ್ಮುಡಿ** (ನಾ). ಸಡಿಲವಾಗಿ ಜೋತಾಡುವ ಮುಡಿ ; ಇಳಿಬಿದ್ದಿರುವ ಕೂದಲು ; ಜೋಲು ದುರುಬು : ಆಕೆಯ ಮುದ್ದುವೆರಸಿದ ತೊದಳ್ನುಡಿಗಂ ಪೂಮಾಲೆ ವೆರಸಿದ ಬಟಲ್ಮುಡಿಗಂ. . . ಒಲ್ದುಮೊಱಲ್ದು ಮಿರೆಯಿರೆ(ಶಂಶಚ. ೫-೦೬ ವ); ಕುಸುಮಮಾಲೆಯುಂ ತಳೆಯದ ನಿನ್ನ ಬಟಲ್ಮುಡಿ ಬಳಯಿಸಿದವುದೆನ್ನ ಮನಕೆ ಪೇದಮನೀಗಳ್ (ಕಾದಂಪೂ. ೩೩೯); ಬಟಲ್ಮುಡಿ ಜೋಲ್ದು . . . ಮಿಳಿರ್ದು ನರ್ತಿಸೆ (ಸುಕುಮಾ. ೦೦-೦೦). **ಬಳಲುಮುಡಿ :** ಬಳಲುಮುಡಿ ಬಟ್ಟಮೊಲೆಗಳ್ ಬೆದರುಗಣ್ಗಳ . . . ಕಾಮಿನಿ (ನೇಮಿಚಾ. ೫-೬-೩೯) ; ಬಳಲುಮುಡಿ ಬಲ್ಮುಡಿಯು ಸೋರ್ಮುಡಿಯು (ನವಮೋ. ೨೪-೦೯). **ಬಳಲ್ಮುಡಿ:** ಕುಡಿತೆಗಣ್ ಬಳಲ ಕಲ್ತುವು ಕವಲ್ತುವು ಬಳಲ್ಮುಡಿಯ ನವಿಲ್ ( ಶದ್ಮಚ. ೪-೨೯ ) ; ಸೂಸೆ ಬಳಲ್ಮುಡಿ ಪುಷ್ಪವೃಂದವಂ (ರಾಜಶೇ. ೭-೦೭). [ಬಟಲ್ + ಮುಡಿ₂ ]

**ಬಟಲ್ಪಂದರ್** (ನಾ). ತೂಗುವ ಬಳ್ಳಿಗಳಿಂದಾದ ಚಪ್ಪರ : ಮಡಲಿಱಿದ ಬಟಲ್ಪಂದರ್ ಪೊದೆಯೆ ಕಾಂಚನಲತೆಯುಂ ತುಱುಗಿ ಜಂಬೂವೃಕ್ಷದಿನೆಸೆವ ಪೊಂಬೆಟ್ಟದಟ್ಟದ ದಟ್ಟದಟ್ಟಲಂ ಗೆಲೆವಂದಂ(ರಾಜಾಕ್ಯ. ೬೫-೨೦).
[ಬಟಲ್ + ಪಂದರ್]

**ಬಟಸು₁, ಬಳಸು₂** (ಕ್ರಿ). ೧. ಉಪಯೋಗ ಮಾಡು; ಉಪಯೋಗಿಸು : ಬಟಸಿದ ಪಾತ್ರೆಯಂ ಬರುತೆ ಕೆಪ್ಪಿನ ಕಾಲೊಳೆ ನೂಂಕಿ (ಸವುಕ. ೦೦-೯೦). ೨. ಭೋಗಿಸು ; ಅನುಭವಿಸು : ಕೂಡದನ್ನೆಗಂ ಕೂಡದಂ ತಿರಲಕ್ಕುಂ ಬಸಮಾಗದನ್ನೆಗಂ ಬಟಸಲಕ್ಕುಂ (ಸುಕುಮಾ. ೭-೦೩). **ಬಳಸು₂:** ೧. ಗುರುಲಿಂಗಜಂಗಮದಲ್ಲಿ ಸಟೆಯ ಬಳಸಿದೊಡೆ ಆತನು ತ್ರಿವಿಧಕ್ಕೆ ದ್ರೋಹಿ (ಮಹಾದೇ. ೫. ೫೬-೦೪೦) ; ಸುಣ್ಣದ ಕೊಱತೆಗೆ ಬೆಳ್ದಿಂಗಳಂ ಬಳಸುವಂತೆ (ಅದಾ. ೪೩೫-೦೨) ; ನಯ ಪ್ರಪಂಚವ ಬಳಸಿದೆನು ಕೆಲ ಕೆಲವನಿನ್ನುಱೆ ಬಳಸುವೆನು (ಕುಮಾಸ. ೦-೩೪). ೨. ನಿಮ್ಮ ಶರಣರು ಉಂಡು ಉಪವಾಸಿಗಳು ಬಳಸಿ ಬ್ರಹ್ಮಚಾರಿಗಳು (ಅದಾ. ೪೭-೦೩೩) ; ತನ್ನಾಯತನ್ನ ಭೂತಳವ ತಂದು ನಿರಾಯಸದಲೆ ಬಳಸುತ್ತಿರ್ದನು (ಕುಮಾಅ. ೦೪-೩೯) ; ನಳ ಹರಿಶ್ಚಂದ್ರಾದಿ ರಾಘವನೃಪರು ಹಳುವದಲಿ ಲಲನೆಯರ ತಾವಗಲಿ ಕಷ್ಟವ ಬಳಸಿದಂತೆ (ಪಳಕ. ೦-೦೫). [ದೇ. ॥ ತುಳು. ಬಳಸು]

**ಬಟಸು₂, ಬಳಸು₄** (ನಾ). ೧. ಭೋಗ ; ಉಪಭೋಗ: ಪೆಂಡಿರ ವಶಮಾಗಿ ಮಹೀಮಂಡಲದೊಳ್ ಪಲರುಮೆಯ್ದಿದರ್ ದುರ್ಗತಿಯಂ ಪಂಡಿತರಪ್ಪ ವರದಱಿಂ ಪೆಂಡಿರ ಬಟಸಿಂಗೆ ಬೇಗಮೆಳಸುವರಲ್ಲಂ (ಧರ್ಮಾಮೃ. ೦೦-೨೪). **ಬಳಸು₄:** ೨. ಉಪಯೋಗ ; ಬಳಕೆ : ಮಹಾವಿಕ್ರಮನ ಚಳಕವನೇನ ಹೇಳುವೆ ರಥದ ಬಳಸಿನಲಿ (ಕುಮಾದ್ರೋ. ೦೬-೪೩). [<ಬಟಸು₁]

**ಬಟಸುವಿಡು** (ಕ್ರಿ). ಸುತ್ತುವರಿ ; ಆವರಿಸು : ಆ ಎರಮ್ಮನುಂ ಅಯ್ವದಿ ಮ್ಬರುಂ ನಕರಮುಂ ಸೇಣಿಯುಂ ಬಟಸುವಿಟ್ಟು ಗೆಲ್ವಲ್ಲಿ (ಎಕ. VI. ಕಡೂರು. ೦೪೫-೬ ; ಸು. 750). [☞ ಇದು 'ಬಳಸುವಿಡು' ಎಂಬುದರ ಅಪಲಿಖಿತ]

**ಬಟ್₁, ಬಡಿ₂, ಬಳಿ₁** (ಕ್ರಿ). ೧. ಗುಡಿಸು ; ಉಡುಗು : ಸ್ವಚ್ಛಮಾಡು : "ಬಟ್—ಸಮ್ಮಾರ್ಜನ, ಮಾರ್ಗ, ಮಂಶೇಷು, ಆಹ್ವಾನಪುರುಷೇ ಚ" (ಕಪಾರ). ೨. ತೊಡೆ ; ಒರೆಸು : ನಿಟಲಾಗ್ರಘರ್ಮಜಲಮಂ ಬೆರಲಿಂ ಬಟಿಯುತ್ತುಂ (ಕುಸುಮಾ. ೦೦-೯). ೩. ಗೋರು ; ಬಾಚು; ದೋಚು : ಬಿದಿರ ಸೀಳಿಕೆಯಲ್ಲಿ ಕಾಲ ಕೆಸಱಿಲ್ಲವಂ ಬಟಿದು ಕಳೆದು (ಪುಣ್ಯಾಸ್ರ. ೩-೦೬ ವ). ೪. ಲೇಪಿಸು ; ಹಚ್ಚು ; ಸವರು : "ಕರೆವಲ್ಲಿ ಲೇಪನಂ ಗೆಯ್ವಲ್ಲಿ . . . ಬಟಿಯೆನಿಸುಗುಂ" (ಶಂಶೇವ. ೦೯). ೫. ಅಲಂಕರಿಸು; ಶೃಂಗರಿಸು : ತನ್ನ ತಂದನರ್ಘ್ಯರತ್ನದಿಂ ವಿವಿಧವರ್ಣಕಿರಣಚಯದಿಂದವನಿ ಪನಂ ಬಟಿದು ಕೊಟ್ಟನರ್ಥಿಜನಕ್ಕಾ ದಿವಿಜೇಂದ್ರಂ (೫ಾಂತಿಪು. ೦೦-೦೦). ೬. ನಿವಾಳಿಸು ; ಸುತ್ತಿಸು : ಇನಮಾರದಂದು ಬಸುರಿಯ ಕೊನೆಯಂ ಕೊಂಡಡದೆ ಬಟಿದು(ಳಸಿ) [ಪಾಠಾಂ. ಡಿರದೆ ಬಳಸಿ ?] ಕೆಸಱೊಳದಂ ಪೂಟ್ದನಿತಱೊಳ್ (ಲೋಕೋಪ. ೯-೦೩೦). ☞ ಈ ಪ್ರಯೋಗಕ್ಕೆ ಇರುವ ಅರ್ಥಕ್ಕೆ ದುಂಡುಕಂಸದಲ್ಲಿ ಕೊಟ್ಟಿರುವ ಕುಳಸಹಿತವಾದ ಶಬ್ದ ರೂಪವೇ ಸರಿಯಿರಬಹುದು. **ಬಡಿ₂ :** ೪. ಹಣೆಗೆ ಮಟ್ಟೆಯ ಬಡಿದು ದರ್ಭೆಯ ಹಣೆದು (ಕುಮಾವಿ. ೭-೦೨) ; ಪಗಲೊಳೆಸೆವ ಸುದೀಪ ಕಾಂತಿಯೊ ಹೊಗೆ ಬಡಿದ [ಪಾಠಾಂ. ಹೊಗೆಯೊಳೆಸಗಿದ] ಚಿತ್ರರದ

ಬೊಂಬೆಯೊ ಎಂಬ ತೆಱದಿಂದ (ಶಳಕ. ೬-೨೪) ; ಬೇಡುವಾತನ ಮೋಱೆ ಕಾಡಿಗೆಯುಂ ಬಡಿದಿಕ್ಕು ಬೇಡಲೀಯದನ ಮೋಱೆ ಉರಿಕೆಂಡವನು ನೋಡಿ ದಂತಕ್ಕು (ಸರ್ವಜ್ಞ. ೩೦೩). ಬಳಿ₁ : ೧. ಜವಾನನು ಕೋಣೆಯ ಕಸ ಬಳಿಯುತ್ತಿದ್ದಾನೆ (ರೂಢಿ). ೨. ಮೋಱೆಯುಳಿವ ಬೆವರನು ಬೆರಳ ಕೊನೆಯಲಿ ಬಳಿದು (ಕುಮಾರವ್ಯಾ. ೦೩-೩೦); ಮಹೋಗ್ರಚಾಪದ ಗುಣವ ಸಡಿಲಿಸಿ . . . ರಕ್ಕಸರಣಭಯಂ ಕರಸ್ವೈದಿದನು ಬಸಿವ ವ್ಯಸನಗಳನು ಬಳಿದಿಕ್ಕಿ (ಕೂರಾ. ೩-೬-೫೭). ೩. ಹೇರೊಡಲಿನ ಗರುಡನ ಪಕ್ಷಪುಳಯುಸಮೀರಣನುಬ್ಬಟೆಯಿಂದೆ ವಾರಾಶಿ ಬಳಿದುವು ನೆಗಳಾನೆಗಳು ಕೂಡಿ ನೀರ ಚೆಲ್ಲಿದರೆಂಬ ತೆಱದಿ (ಮೋಹತ. ೩೭-೩೦); ಏನಾದರೂ ಇದ್ದರೆ ಬಳಿದುಕೊಂಡು ಹೋಗಲು ಬಂದಿದ್ದರು (ಗಂಗಾಸಾ. ೪೦). ೪. ಕಾಡಿಗೆಯೊಳಗೆ ಕಾರಿರುಳ ತಿರುಳ ರಸವಂ ಕಲಸಿ ಮೊಗೆವು ಬಳಿದಂತೆ ಬಳವೆತ್ತ ಕತ್ತಲೆ ಸಿದ್ಧರಾಮಂಗೆ ಬೆಳಗಾದುದು (ಸಿದ್ಧರಾ. ೩-೩೦); ಕಳೇವರಕೆ ಬಳಿದು ಚಂದನವಂ (ಪದ್ಮರಾ. ೯-೯೨) ; ಬೆಂದ ಹುಣ್ಣಲಿ ಸಾಸಿವೆಯ ಬಳಿಯದಿರು ಸಂಜಯ (ಕುಮಾರವ್ಯಾ. ೧-೮). ೭. (ನೆಲವನ್ನು) ಸಾರಿಸು : ರೋಗಿಗಳು ಮಲಗಿದ ನೆಲವನ್ನು ಕ್ರಿಮಿ ನಾಶಕವನ್ನು ಬೆರಸಿದ ನೀರಿಂದ ಬಳಿಯಬೇಕು (ರೂಢಿ).

**ಬಳಿಬಚ್ಚು** = ಅನ್ನವನ್ನು ಕಲಸಿ ಕೈತಂತ್ರು ಹಾಕುವಾಗ ಕೊನೆಯಲ್ಲಿ ಬಳಿದು ತೆಗೆದುದು : ಹಂಚಿದವರಿಗೆ ಬಳಿಬಚ್ಚೆಯೇ ಗತಿ (ರೂಢಿ).

[ದೇ.॥ ತಮಿ. ವಟಿ ; ಮಲ. ವಟ ; ತೆಲು. ಬಡಿಯು]

**ಬಟ್ಟಿ₂** (ನಾ). ಸಾರಿಸುವಿಕೆ ; ಸ್ವಚ್ಛಗೊಳಿಸುವಿಕೆ : "ಸನಿಹ ಪಥ ವಂಶ ಸಮ್ಮಾರ್ಜನಗಳೊಳ್ ಬಟಿ" (ಶಬ್ದಮಂ. ೦೦೬) 'ಕಾಲ್ವಟಿ' ಪರಾ. [<ಬಟ್ಟು₁]

**ಬಟ್ಟಿ₃, ಬಳ್ಳಿ₂** (ನಾ). ೧. ದಾರಿ ; ಮಾರ್ಗ : ಅನಿತು ಬಟ ಬಲ್ಲೊನವನೆ, ಜಾಣನೆ (ಶಾಂತಿಗೂ. ೦೬-೩೪೦) ; ಬಯಕೆ ಬಟ ಕವಲೊಡೆಗುಂ (ವಸ್ತುಕೋ. ೦೫-೦೦೨). ೨. ಎಡೆ ; ಸ್ಥಳ ; ತಾಣ ; ಪ್ರದೇಶ : "ಬಟ- ಎಡೆ, ತಾವು" (ನಾಚಾರ. ೬. ೦೨೮) ; ಸುಟಿವೆಳಮೊಡರ ಕಡೆಗಣ್ ಬಟಿಯಂ ಪಸರಿಸುವ ಬೆಳಗು ಬೆಳದಿಂಗಳ ಪೊಂಪುಟಿಯೆಂದು (ಚಂದ್ರಪು. ೬-೪೭) ; ಬಾಸುಟ್‍-ಪೊಯ್ದು ಬಟಿ (ಕವಿರ. ಶಂ. ೦). ೩. ಸಮೀಪ ; ಹತ್ತಿರ : ಕುಱಿತು ಸಮುಚ್ಚಯದಾ ಬಟಿವಿಕಲ್ಪದಾ ತೆಱದೊಳೆ ದೋಷ ಮುಮನಂತೆ ಗುಣಮುಮಂ ಕಿಱಿದಱಿಯೊಳ್ ನೆಱೆಯೆ ಪೇಟ್ದಿಂ (ಕವಿರಾ ೧-೦೩೭) ; ಚಂದ್ರಗುಪ್ತಮುನಿಯ ಬಟಿಯಂ ಋಷಿಸಮುದಾಯಮೆಲ್ಲಂ ತಗುಳ್ದು (ವಡ್ಡಾರಾ. ೯೦-೪) ; ಕರಿಕಳಭಂಗಳ ಶಿಶು ಕೇಸರಿಗಳ ಬಟಿಯಂ ತಗುಳ್ದು (ಶಂಕಶಾ. ೨-೦೦) ; ಗಟಿಯ ಬಟಿಯ ಪಾವಿನಂತೆ ಬೆಂಬಟಿಯಂ ತಗುಳ್ದು (ಸುಕುಮಾ. ೬-೫೩ ವ). ೪. ಹಿಂಭಾಗ ; ಹಿಂದಂಗಡೆ : ಅಂತು ಪೊಱಲಂ ಪೊಱಮಡೆ ಬಟಿಯನೆ ತಗುಳ್ದು ಬರ್ಪ ತಮ್ಮೊಡನಾಡಿಗಳಪ್ಪ ಮೇಳದ ಸಬ್ಬವದ ನಗೆಯ ತಗಟಿನವರೆಮ್ಮ ಬಟಿಯಟ್ಟಿದಂದು ಬನ್ನಿ ಮೆಂದು ಪ್ರಿಯಂ ನುಡಿದಿರಿಸಿ (ಶಂಕಶಾ. ೨-೯೫ ವ) ; ಮಿಂಚಿನ ಬಟಿಯ ಪೊಱಗುವೋಲ್ ಬೆನ್ನನೆ ಬಂದಳ್ (ಶಾಂತಿಪು. ೬-೨೮) ; ಸೂಜಿಯ ಬಟಿಯ ದಾರದಂತೆ (ಧರ್ಮಾಮೃ. ೦೪-೦೦೪). ೫. ವಂಶ ; ಪೀಳಿಗೆ; ಕುಲ; ಮನೆತನ : "ಬಟಿ = ಬಟ್ಟಿ, ವಂಶಂ, ಕರವಂ, ಲೇಪಿಸುವುದು, ಪಿಂಗಲಿಯ ಬಟಿಗೊರಲ್, ಮತ್ತೆ" (ಕಮುದ. ಶಂ. ೦) ; ಅತ್ತಿಗೇರಿಯ ಬಟಿ ಇದಕ್ಕೆ ಸಾಕ್ಷಿ (ಕಇ. II. ೩-೦೨ ; 859) ; ಅವರ ಪಿಡಿವ ಬಿಲ್ ಬಿಲ್ಲೆಮ್ಮಂಬುಗಳುಮಪರಿತ್ತ ನಲ್ಲಂಬುಗಳೆಸೆ ಬಟಿಗಾಯದಂತು ಚಲಮನೆ ಕಾವೆಂ (ಶಂಕಶಾ. ೦೨-೩೪) ; ಅಯೋಧ್ಯಾನಗರದೊಳ್ ನೇಸಱ ಬಟಿಯ ಪಲಂಬರರಸರಸುಗೆಯ್ಯುತಿರ್ದರ್ (ರಾಮಾಶ್ವ. ೬-೪). ೬. ಪಕ್ಷಿಗಳ ಗಂಟಲಿನ ಇಳಿಜಾರಾದ ಭಾಗ ; ಪಿಂಗಳಾನಾಡಿಯ ಮುಂದಕೆ ಇರುವ ಗಂಟಲಿನ ಭಾಗ : "ಬಟಿ = ಬಟ್ಟಿ, ವಂಶಂ, ಕರೆವಂ, ಲೇಪಿಸುವುದು, ಪಿಂಗಲಿಯ ಬಟಿಗೊರಲ್, ಮತ್ತೆ" (ಕಮುದ. ಶಂ. ೦). ೭. ಕರೆ ; ಆಹ್ವಾನ : "ಕರೆವಲ್ಲಿ ಲೇಪನಂಗೆಯ್ವಲ್ಲಿ ಬಟ್ಟೆಯೊಳ್ ವಂಶದೊಳ್ ಪಲ್ಲಕ್ಕಿಯಾ ಸ್ವರಭೇದದಲ್ಲಿ ಬಟಿಯೆನಿಸುಗುಂ" (ಸಂಜೀವ. ೦೬) ; ಕುಬೇರಸೆಟ್ಟಿಯ (ಧನಮಿತ್ರ) ಶಿರೋರುಹದೊಳ್ ಪಳಿತಾಂಕುರಮಂ ಧನಪತಿ ಕಂಡು ನಿನಗೆ ಬಟಿ ಬಂದುದೆಂದು ನಗುತುಂ ತೋಱಿದೊಡೆ (ಜಾವುಂಕ. ೬೦) ; ಯೌವರಾಜ್ಯಾಭಿಷೇಕಪ್ರಾರಂಭಪ್ರೀತಿಯಿಂದಟ್ಟಿದ ಬಟಿಗೆ ಮಗಂ ಬರ್ಪುದುಂ (ಕಾದಂಪೂ. ೫೬೬). ೮. ಯಾವುದಾದರೊಂದು ಸುದ್ದಿ ಅಥವಾ ಆಹ್ವಾನವನ್ನು ಒಯ್ಯುವ ದೂತ : ರಿಸಿಯರ್ಕಳ್ಗೆಲ್ಲಂ ಬಟಿಯನಟ್ಟಿ ಬರಿಸಿ (ವಡ್ಡಾರಾ. ೫೫-೦೬) ; ದುಶ್ಶಾಸನಾದಿಗಳ್ಗೆಲ್ಲಂ ಬಟಿಯ ನಟ್ಟಿ ಬರಿಸಿ (ಶಂಕಶಾ. ೬-೩೩ ವ) ; ಒಡಗೊಂಡು ಬರ್ಪಂತು ವೈಶಂಪಾಯನಂಗೆ ಬಟಿಯನಟ್ಟುವಂ (ಕಾದಂಬ. ೪೬೬). 'ಬಟಿಯಟ್ಟು' ಪರಾ. ೯. ಉಡುಗೊರೆ ; ಕಾಣಿಕೆ ; ಕೊಡುಗೆ : 'ಬಟಿವಟ್ಟಿ₁' ಪರಾ. ೧೦. ನಡೆವಳಿಕೆ ; ವರ್ತನೆ : 'ಬಟಿಯಂ' ಪರಾ. **ಬಳ್ಳಿ₂** : ೧. ಬಳಿವಿಡಿದು ನಡೆತಂದು ಕಂಡನು ಮುಂದೆ ಮುನಿವರೇಣ್ಯನನು (ಹಕಶಾ. ೩-೬೫) ; ಬಂಡಿಯನೇಱಿ ಪೋಪಾ ಬಳಿಯಲಿರೆ ಪೆರ್ಬಾವು (ಶಾಕ್ಯಶಾ. ೨೦-೮೩). ೨. ಹಳ್ಳಿಯಲಿ ನಗರಂಗಳಲಿ ನಗಕುಲದ ಬಳಿಗಳಲಿ ಬಳಕವರು ಕಾಣದೆ ಹೋಳಲ ಸಾರ್ದರು (ಕೂರಾ. ೩-೨-೦೬) ; ಇಳಿದಿರ್ದ ಬಳಿಯಿಂದ ಪಾಳಿಯದೆಗೆದೊಡೆ (ಕಂಸವ. ೦೪-೫೨) ; ಪರಮಪತಿವ್ರತೆಯಿದ್ದ ಬಳಿಸೂಳಾ ಸಿರಿರಾಣಿ ಸೇರಿ ಬಂದಿಹಳು (ಹರಿಶ. ೨-೦೬). ೩. ಮಣ್ಣಲಿ ಸಾಸಿಗವ ಬಳಿಯ ಚಾಡಂ (ಎಕ. VII. ಶಿಕಾ. ೯೭-೦೬ ; 1113) ; ಸೈಂಧವನ ತಲೆಯನು ಕೊಡೆದು ನಿನ್ನಯ ಕಾಲ ಬಳಿಯಲಿ ಕೆಡಹುವೆನು (ಕುಮಾರವ್ಯಾ. ೯-೩೩) ; ನೆಳಲು ತನುವಿನ ಬಳಿಯೊಳಲ್ಲದೆ ಚಲಿಸುವುದೆ (ಶಳಕ. ೦-೦೦). ೪. ಬಂದರು ವಸಂತರಾಜನ ಬಳಿಯ ಲತೆಯಂತೆ (ಇಹರ. ದೇ. ೫೩-೦೫). ೫. ಅಣನೂರ್ದರು ಮೂನೂಱ ಬಳಿಯ ಅಂಕುಲಗೆಯ್ಯವ್ರಹಿಱೊಳಗಣ [ಬ]ಟ್ಟೆಯನ ಕರಂಜಿಗೆಯ (ಎಇ. XXVII. ೦೫-೪೪ ; 1114) ; ಅರಿಯ ಬಳಿಯವರ ಗಡಿಯಿಂ ಕೊಳಹರ ಬಳಿಯವರ ಗಡಿಯಿಂದಂ (ಸೌಇಇ. XI-ii. ೪೨೪-೦೭ ; 1401) ; ಜನಿಯಿಸಿದೆನು ನಾನು ಮೂರನೆಯವನಾಗಿ ಬಳಿಯ ಬಳ್ಳಿಯ ಕುಡಿಯಾಗಿ (ಇಂಶಾಕ. ೩-೨೪). ೮. ನಗರೇಶ್ವರ ದೊಳಿರ್ದ್ದೇವರ್ಗಂ ಬಳಿಯನ(ಘ)ಟ್ಟಿಯರಸರಿಂ ಕಾಲು ಕಟ್ಟಿಸಿ (ಸೌಇಇ. IX — i, ೦೦೦-೫೭ ; 1045) ; ಬಳಿಯನಟ್ಟಿ ಬರಿಸಿ ಕಾಲಂ ಕಟ್ಟಿ (ಎಇ. XVI. ೬೭-೦೩ ; 1058).

**ಬಳಿಯಣ** = ಹತ್ತಿರದ ; ಸಮೀಪದ : ಉತ್ತರಕೆ ವೆಂಸೊಬನ ಹಳಿಬಳಿಯಣ ಮುಂಡುಬಂಡೆ ದಕ್ಷಿಣಕೆ ಹುರಳಿಗೆರೆಯೇ ಮೇರೆ (ಎಕ. XII. ಪಾವಗ. ೯೬-೫೪ ; 1670). **ಬಳಿಯತನ** = ಪಾರಂಪರ್ಯ : ಎರಡಿಲ್ಲದ ಬಳಿಯತನದಿಂ ಪಿಂತಣ ಕಬ್ಬಿಗರುಮೊಳರುಂ ಧರೆಗವತರಿಸಲ್ಕಿರ್ಪಾ ಸಾರ್ವಲೌಕಿಕಕವಿಗೆ ಬಲ್ಲಂತಿರೆ ತಾಂ ಮಾರ್ಗಪರಿಷ್ಕರಣಕಾರಿಗಳ್ ಭುವನಮನವಂಗಳ್ವರಿಸಿ ಸಿದ್ಧಂ ಮಾಳ್ಪರ್ ಸೂಳಾಯ್ತುರುದಯರಾಗವ ಪಾಡುತುಂ (ಸಂಸಕ. ೬-೫). **ಬಟಿವಟ್ಟಿ₂, ಬಳಿಬಳಿ, ಬಳಿವಳಿ** (ದ್ವಿರುಕ್ತಿ) : ಇವರೆಲ್ಲಿಗೆ ಪೋದಪ್ಪರೋ ಎಂದು ಬಟಿವಟಿಯನೆ ವಂದು (ವಡ್ಡಾರಾ. ೬೬-೦) ; ನರನಂದನನ ಬಟಿವಟಿಯಂ ತಗುಳ್ದು ಗಟಿವಟಿಯ ಪಾವಿನಂತೆ ಚಕ್ರವ್ಯೂಹಮಂ ಪುಗಲೆಂದು ಬರ್ಪ ದ್ರುಪದ . . . ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ (ಶಂಕಶಾ. ೦೦-೯೬ ವ) ; ಹರನು ಮೂಲಿಗನಾಗಿ ಪುರಾತರೊಳಗಾಗಿ ಬಳಿಬಳಿಯಲು ಬಂದ ಮಾದಾರನ ಮಗ ನಾನಯ್ಯಾ (ಬಸವ. ೩೪೭) ; ಕಱುಗಳೋಡದಂತೊಡನೆ ಬಳಿವಳಿಯಲಿದ್ದಲ್ಲರೋಪಾದಿಯಿಂ ನಡೆವುದು (ಸಿದ್ಧರಾ. ೨-೦೪).

[ದೇ.॥ ತಮಿ. ಮಲ. ವಟಿ; ತೊದ. ಪೊಳಿ; ತುಳು. ಬರಿ]

ದೇಶದಲ್ಲಿ ಪುಟ್ಟುವ ವಜ್ರವು ಬಾಗೀಹೂವಿನ ವರ್ಣದಿಂದಿರುವದು (ಶೌಗಂಧಿ. ೩೭೩-೨೩) : ಮರಗಳು ಹೆಸವ, ಹೆಬ್ಬಲಸು . . . ತೇಗ, ಕೋಲುತೇಗ, ಬಾಗಿ, ಬಿಲ್ವಾರ, ದಿಂಡಿಗ (ವಿಮ್ಮ.ಸು. ೨೩೬).

[ದೇ.॥ ತಮಿ. ವಾಕೈ; ಮಲ .ವಾಕ; ತುಳು. ಬಾಗೆ]

**ಬಾಗೆ₂** 'ಬಾಗು₂' ನೋ.

**ಬಾಗೆ₃** 'ಬಾಗ' ನೋ.

**ಬಾಗೆಯ** (ನಾ). ಒಬ್ಬಾತನ ಹೆಸರು : ಸಲಿನಾಡಾ ಬಾಗೆಯುಮೆಜಿದು ವಿಟ್ಟಾನ್ (ಎಕ. XVI, ತುಮುಕೂ. ೯೩-೮ ; ಸು. 780).

[ಬಾಗೆ₁ + ಅಯ್ಯ₁ (<ಅಯ್ಯ₆₁)]

**ಬಾಗೆಯೂರ್** (ನಾ). ಒಂದು ಊರಿನ ಹೆಸರು : ಬಾಗೆಯೂರ ಬಲ್ಲಹನೇಱೀ ನೊಳ್ಳಿಯಾನ್ . . . ಪಡೆಯುಳಿಱದು ಸತ್ತನ್ (ಎಕ. XVI, ತುಮುಕೂ. ೯೨-೬ ; ಸು. 780) ; ಇದಕ್ಕೆ ಸಕ್ಕಿ ಜಮ್ಮೂರ ಪೆಮ್ಮಾಡಿ ಗಾವುಣ್ಡನು ಬಾಗೆಯೂರ ಕಮ್ಮಾಱಗಾವುಣ್ಡನು (ಎಕ. V, ಚನ್ನರಾ. ೨೫೦-೦೨ ; ಸು. 925). [ಬಾಗೆ₁ +ಊರ್]

**ಬಾಗೆವಾಡಿ** (ನಾ). ಒಂದು ಊರಿನ ಹೆಸರು ; ಬಸವಣ್ಣನವರ ಜನ್ಮಸ್ಥಳವಾದ, ಈಗಿನ ವಿಜಾಪುರಜಿಲ್ಲೆಯ ಬಸವನ ಬಾಗೆವಾಡಿ: ಸಿ[ದ್ಧರ್]ಲಗೆ ಪೂರ್ವ್ವದಿಗ್ಭಾಗೇ ಕೃಷ್ಣಬೇಣ್ಣೋತ್ತರ ಪಥೇ ಬಾಸುರಿಕೋಪು ಇಂಗಳಿಸರ ಬಾಗೆವಾಡಿ ಸಾಮುಳವಾಡಿಗೆ ಒಡ್ಡಪೂಡಿಗೆ ಮಾಧ್ಯವತ್ರಿ[ಗೆ] ಓಪ್ಪರಗೆನಾಮಗ್ರಮೋ (ಕಾಇಇ. XI — i, ೮-೦೮ ; 862) ; ಅಗ್ರಹಾರಂ ಬಾಗೆವಾಡಿಯೊಳಗೆಸೆದಿರ್ಪ ಅಗ್ರೇಶ್ವರಂ ಕಮ್ಮೆಕುಲ ದಿಂದೆ ಮೆಱೆದಿರ್ಪ ವಿಪ್ರನಿರ್ಪಂ (ಬಸರ. ೦-೯೬). [ಬಾಗೆ₁ + ಪಾಡಿ₂]

**ಬಾಗೇಶ್ರೀ**, ಬಾಗೇಶ್ವರಿ (ನಾ). [ಸಂಗೀತ] ಒಂದು ರಾಗದ ಹೆಸರು : ಹತಭಾಗ್ಯೆಯಾದ ಚಿತ್ರಾಂಗದೆ ತನ್ನ ಪೂರ್ವಕಥೆಯನ್ನು ಬಾಗೇಶ್ರೀಯಲ್ಲಿ ತೋಡಿಕೊಳ್ಳುತ್ತಾಳೆ (ಕೃಷ್ಣಹೂ. ೩೨೯). **ಬಾಗೇಶ್ವರಿ** : ಬಾಗೇಶ್ವರಿ ಪೂರಿಯಾ ದರ್ಬಾರಿ ಕಮಾಚ್ ರಾಗಗಳು ಉನ್ಮಾದವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರಭಾರತದಲ್ಲಿದೆ (ಶಾರದ. ೫೪೪).

[←ಹಿಂ. ಬಾಗೇಸರೀ; ಮರಾ. ಬಾಗೇಶ್ರೀ, ಬಾಗೇಸರೀ, ವಾಗೇಶ್ವರೀ]

**ಬಾಗೇಶ್ವರಿ** 'ಬಾಗೇಶ್ರೀ' ನೋ.

**ಬಾಚಂಗೆ** 'ಬಾಚಣಿಗೆ' ನೋ.

**ಬಾಚಣಿಗೆ**, ಬಾಚಂಗೆ, ಬಾಸಣಿಗೆ₁ (ನಾ). ೧. ಒಂದು ಬಗೆಯ ಮರ : ಈಜಿಗಿಡ, ಅಗ್ನಿಮಂಥ, ತಕ್ಕಿಲೆ, ಬಾಚಣಿಗೆಮರ (ಮೈಕಿಗಿ. ೬೪-೦೩೦೦). ೨. ಕೂದಲನ್ನು ಹಿಕ್ಕುವ ಒಂದು ಬಗೆಯ ಸಾಧನ ; ಹಣಿಗೆ ; ಕಂಕತಿಕೆ : ಅಣದು ವೀಳೆಯದೆಲೆಗೊಡುತ ಬಾಚಣಿಗೆ ಬೊಕ್ಕಸವಾಂತು ಬಲುಸಂದಣಿಸುತಾಳೀಜನ ನಡೆಯಿತಾ ಬಾರಾಚಪ್ಪರಕೆ (ಸನತ್ಕು. ೯-೫೭) ; ತಲೆಯ ಕೂದಲೆಲ್ಲಾ ಬಾಚಣಿಗೆ ಕಾಣದೆ ಗಾಳಿಯಲ್ಲಿ ಹಾರಾಟದ ಅಭ್ಯಾಸ ನಡೆಸುತ್ತಿವೆ (ಅಂಹೂ. ೦೦೬). **ಬಾಚಂಗೆ** : ೧. ಬಾಚಂಗೆ (ಪನಿಯಾರ) —ಎತ್ತರವಾದ ವೃಕ್ಷವು. ಇದರ ಕಟ್ಟಿಗೆಯಿಂದ ಹಣಿಗೆಗಳನ್ನೂ ಕರಡಿಗೆ ಮುಂತಾದ ಶೋಭೆಯ ಒಡವೆ ಗಳನ್ನೂ ಮಾಡುತ್ತಾರೆ (ಕಭಾಗ. ೪೪). **ಬಾಸಣಿಗೆ₁** : ೨. ಕಾಳಾಂಜ ಕೈಪಿಡಿ ಬಾಸಣಿಗೆ ಬಂಧುರದಾಲವಟ್ಟ ಚಾಮರದ . . . ನಾರಿಯ ರೈದಿದರು (ಕಂಸವ. ೯-೭೮) ; ರನ್ನದ ಬಾಸಣಿಗೆ ಚಿನ್ನದ ಸೀರಣಿಗೆ ಕೈಕಟ್ಟಿನವ ಕಟಿನರಿಗೆ ಸೀರೆಯ ತಾಯಿ ನಮ್ಮವ್ವ ಕಳುವ್ಹಾಳೇ (ಗ್ರಾರಕ. ೦೦). [ಬಾಚು (<ಬಾರ್ಚು) + ಹಣಿಗೆ./ತುಳು. ಬಾಚಣಿಗೆ]

**ಬಾಚಣಿಸು₁**, ಬಾಸಣಿಸು₁ (ಕ್ರಿ). ಕೂದಲನ್ನು ಹಿಕ್ಕು.— ಬಾಚು : ಕುರುಳ ಬಾಚಣಿಸುತಲಿ ಬೈತಲಿಸರವು ಮುತ್ತಿನ ಬೊಟ್ಟು . . . ಇಟ್ಟು ಶೃಂಗರಿಸೆ (ಸಂಪಿಂ. ೩-೬೪) ; ಹೆದ್ವಾರವಿಂತು ಕಡುಚೆಲುವೆಸೆಯೆ ತತ್ಪುರದ ಮಧ್ಯ ಭೂದೇವಿ ತನ್ನಸ್ತಕವ ಬಾಚಣಿಸಿ ತಿದ್ದಿದ ಸುಬೈತಲೆಯ ರೇಖೆ ಯೆನೆ (ನವಮೋ. ೨-೨೯). **ಬಾಸಣಿಸು₁** : ರುಕ್ಮಿಣಿಸತ್ಯಭಾಮಾದೇವಿಯರ್ ಕುರುಳ ಬಾಸಣಿಸಿ ಪೂವಿಡಿಕಿಱದು ಪೆರ್ಜಡೆವೆಣೆದರು (ಮೋಹತ. ೦೪-೪೦); ಶ್ರೀತಳೋದರಿಯ ಕೇಶವ ಬಗಿದು ಬಾಸಣಿಸಿ ಬೈತಲೆಯ ತೆಗೆದು ತಿದ್ದಿದರು (ನವಮೋ. ೨೩-೦೨). [<ಬಾಚಣಿಗೆ + — ಇಸು₃]

**ಬಾಚಣಿಸು₂** 'ಬಾಸಣಿಸು₂' ನೋ.

**ಬಾಚಿ₁** (ನಾ). ಮರವನ್ನು ಕೆತ್ತಲು, ಬಡಗಿಗಳು ಬಳಸುವ ಅಗಲ ಬಾಯಿಯ ಒಂದು ಬಗೆಯ ಕಬ್ಬಿಣದ ಸಾಧನ : "ದುಡಿಯೇನೆ ಬಾಚಿ" (ಮಂಗರಾ. ೦೦೩-೮) ; ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ (ಧರ್ಮಾಮೃ. ೩-೭೩) ; ಬಾಚಿಯೊಳು ಕೆತ್ತುವ ಕತ್ತಿಯಿಂ ಕಡಿವ ಕರಗಸದಿ ಕೊಱೆವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೮-೨೪). 'ಕೈಬಾಚಿ' ಪರಾ.

[<ಸಂ. ವಾಶೀ, ವಾಸೀ./ತಮಿ. ವಾಚ್ಚಿ, ವಾಯ್ಚ್ಚಿ ; ಮಲ. ವಾಚ್ಚಿ ; ತುಳು. ಬಾಚಿ, ಬಾಜಿ ; ತೆಲು. ಬಾಡಿಸ]

**ಬಾಚಿ₂** (ನಾ). ಮೈಜೋಡು; ಕಂಚುಕ : "ಆ ವಾರವಾಣಕಂ ಕಂಚುಕಂ ಚೋಳಕಂ ಕುಪ್ಪಸಂ ಬಾಚಿಯುಕ್ಕುಂ " (ಮಂಗರಾ. ೦೦೦-೨೯). [?]

**ಬಾಚಿಸು₁** (ಕ್ರಿ). ೧. (ಕಸವನ್ನು) ಒಟ್ಟಾಗುವಂತೆ ಸೇರಿಸು; ಗೋರಿಸು: (೬). ೨. ಹಣಿಗೆಯಿಂದ ಕೂದಲನ್ನು ಹಿಕ್ಕುವಂತೆ ಮಾಡು : ಶಾಂತಿಯೇನೋ . . . 'ಅಕ್ಕ' ನಿಂದ ತಲೆ ಬಾಚಿಸಿಕೊಳ್ಳಲು ಒಪ್ಪಿದಳು (ವಾತ್ಸಲ್ಯ. ೫೬). [ಬಾಚು (<ಬಾರ್ಚು) + — ಇಸು₃]

**ಬಾಚಿಸು₂**, ಬಾಜಿಸು₁ (ಕ್ರಿ). ಓದು ; ವಾಚಿಸು : ವಾಚಕನೋಲೆಯರ್ಥ ಮನಱಿಯದೆ ವಿಪರೀತಮಾಗಿಂತೆಂದು ಬಾಚಿ[ಕಾತಾಂ. ಜಿ]ಸಿದಂ (ವಡ್ಡಾರಾ. ೬೫-೦೬); ಯುವರಾಜನೃಪಂ . . . ರಾಜಾದೇಶವನಾಗಳ್ಬರ್ಜೆ ನೋಡಿ ತಾಂ ಬಾಚಿಸಿದಂ (ಕಾದಂಬ. ೨೫೭); ಒಂದಂ ಬಾಚಿಸುತಿರೆ ಮತ್ತೊಂದಂ ಬೆಸಗೊಳ್ವಂ . . . ಇದು ಕಾವ್ಯಮಂ ಖಿಳಂ ಕೇಳ್ವಂದಂ (ಸೂಕ್ತಿಸು. ೦-೫೩). **ಬಾಜಿಸು₁** : ಅದಂ ಸಂಧಿವಿಗ್ರಹಿ ಕೊಂಡು . . . ಅತಿಮಧುರೋದ್ಭಾವಿತಗಂಭೀರನಾದದಿಂ ಬಾಜಿಸಿದಂ (ಆದಿಪು. ೦೪-೯೬); ಸಂಧಿವಿಗ್ರಹಿ ರಾಜಾಜ್ಞೆಯಿಂ (ರಾಜಶ್ರೇಷ್ಠಿಯಾ) ಲೇಖಮನಿಂತೆಂದು ಬಾಜಿಸಿದಂ (ಶಾಪುಂಪು. ೦೬೩); ಬರೆಯಲುಂ ಬಾಜಿಸಲುಂ ಬಲ್ಲ ಶಬ್ದ ಸಂಸ್ಕಾರವುಳ್ಳಾತ ನಾಗದೇಸಿಗರ್ಗ್ಗೆ ನಿತ್ಯಸ್ಥಿತಿಯೊನ್ದು ಪೊಟ್ಟೞಾಹಾರಮುಂ ವರಿಷಕ್ಕೊನ್ದು ಕಪ್ಪಡಮುಮನಿಕ್ಕಿಯೋದಿಸಿ (ಎಇ. XX, ೬೮-೨೬; 1012).

[< ಬಾಜನೆ₁ + — ಇಸು₃]

**ಬಾಚು** ' ಬಾರ್ಚು ' ನೋ.

**ಬಾಚುಗಱು** (ನಾ). ತಲೆ ಬಾಚಿಕೊಳ್ಳುವ ವ್ಯಕ್ತಿ; ಶೃಂಗಾರದಲ್ಲಿ ಆಸಕ್ತನಾದ ವ್ಯಕ್ತಿ : ಲೋಚಿನೊಳಗಿರ್ದಿಂತು ಬಾಚುಗಱುವಾದನೇ ವಾಚಾಲರೊಳಗಿರ್ದನಾಚಾರಿಯಾದನೇ (ಹಾಗೀರ. ದೇ. ೨೫೬-೭).

[ಬಾಚು (< ಬಾರ್ಚು) + ಕಱು₂]

**ಬಾಚುಮುದ್ದೆಬೆಲ್ಲ** (ನಾ). ಉಂಡೆಬೆಲ್ಲ : ಒಳ್ಳೆಯ ಬಾಚುಮುದ್ದೆಬೆಲ್ಲ ಒಂದು ತಟ್ಟೆಯಲ್ಲಿತ್ತು (ಮರಳು. ೦೨೫).

[ಬಾಚು (<ಬಾರ್ಚು) + ಮುದ್ದೆ₁ + ಬೆಲ್ಲ]

**ಬಾಚುವಲೆ** (ನಾ). (ಬೇಟೆಯಲ್ಲಿ ಪ್ರಾಣಿ, ಪಕ್ಷಿಗಳನ್ನು ಒಟ್ಟಾಗಿ ಗೋರಲು ಸಾಧ್ಯವಾಗುವಂತೆ ಹೆಣೆದ) ಒಂದು ಬಗೆಯ ಬಲೆ : ಬಡಿಗೆವಲೆ ಬಾಚುವಲೆ ಗಾಢವಲೆ ಗೂಢವಲೆ ಮಡಿಕೆವಲೆ ಮಂದಸಿನ ವಲೆಯ ಹೊಱಿಗಳ ಬೇಡವಡೆ ನೆರೆದುದು (ಹಕಾ. ೫-೮).

[ಬಾಚು (< ಬಾರ್ಚು) + ಬಲೆ₁]

**ಬಾಜಂತ್ರಿ**, ಬಜಂತ್ರಿ (ನಾ). ಒಂದು ಬಗೆಯ ಚರ್ಮವಾದ್ಯ.: ತ್ರಿಸಂಧ್ಯೆ

ಯೊಳಂ ಸಂಜೀವಜೀಯಂ ಬಾಜಂತ್ರಿಯುಂಣ ಹಜೀಕಾಜಿಗೆ[ಕೆ]ಯ್ಮುತ್ತರು ಹಂಸೆರಡು (ಶಾಸಕ. ೯೭-೦೦೦ ; 1178). **ಬಜಂತ್ರಿ :** ಬಜಂತ್ರಿಗಳು ಡಮುರುಗವು . . . ಮೊರವುತಿರ್ದವು ಸರ್ವವಾದ್ಯವು ಸಕಲಘೋಷದಲಿ (ಜ್ಞಾ.ಸಿಂ. ೦೩-೨೯) ; ಬಜಂತ್ರಿಯು . . . ಒಡಕುದನಿ ಕಿವಿಯನ್ನು ಗಡಚಿಕ್ಕಿಸಿಬಿಟ್ಟಿತು (ಕೃ.ಶಿ. ೬). [← ಮರಾ. ವಾಜಂತ್ರೀ./ಸಂ. ವಾದಿತ್ರ]

**ಬಾಜಣೆ** 'ಬಾಜನೆ₂' ನೋ.

**ಬಾಜನೆ₁** (ನಾ). ಓದು ; ಓದುವಿಕೆ ; ವಾಚನ : ಬರೆಪದ ಬಲ್ಮೆ ಬಾಜನೆಯ ಬಿನ್ನಣಮೊಪ್ಪುವ ಲೆಕ್ಕದೋಜೆ ಸಂಕರಸುತನೊಳ್ಸರಸ್ವತಿಯೊಳಂಬುರುಹಾಸನನೊಳ್ವಿಚಾರಿಸಲ್ದೊರೆ ಸರಿಪಾಟಿಯೆಂದು ನಿಖಿಳೋರ್ಬ್ಬರೆ ಬಣ್ಣಿಸುತಿರ್ಪ್ಪುದೆಂದೊಡೇಂ ಓದಿಯನೊ ಸಿಂಗು (ಎಕ. VII, ಶಿಕಾ. ೦೨೪-೨೯; 1077) ; ಚಕಾರಕ್ಕೆ ಜಕಾರಂ . . . ವಾಚನಾ_ಬಾಜನೆ (ಶಬ್ದ. ೨೩೩ ಕ್ರಿಯೋ). 'ಬಾಜನೆಗಬ್ಬ' ಪರಾ. [< ಸಂ. ವಾಚನ]

**ಬಾಜನೆ₂**, ಬಾಜಣೆ (ನಾ). ವಾದ್ಯಗಳನ್ನು ನುಡಿಸುವಿಕೆ, — ಬಾರಿಸುವಿಕೆ: ಆಟಂ ಬಾಜನೆ ಗಾಡಿಗಳ್ ಪಸದನಂ ಬೆಳ್ದಿಂಗಳೊಳ್ವಾತು ಕೊಂಡಾಟಂ ಕತ್ತುರಿ ಕಪ್ಪುರಂ . . . ಎಂದಿಂತಿವಂ ಬೇಟಕ್ಕಾಗರಮೆಂಬೆನಣ್ಣ (ಕಾವ್ಯಾ.ಪ. ೩೩೩); ಪಾಡುವ ಸುರಗಣಿಕಾಜನವಮಾಡುವ ದೇವಾಂಗನಾಜನು ಬಾಜನೆಯಂ ಮಾಡುವವಮರಿ ಜನಂ ತೇಂಕಾಡಿಸುವುದು ರಾಗರಸದೊಳೆಮರನ ಸಭೆಯಂ (ಅಜಂಪು. ೦೨-೪೦); ನಾಡಿಗೆ ನಾಡೇ ಉರಿಯುತ್ತಿರುವಾಗ ಎಲ್ಲಿಯ ಹಾಡುಗಾರಿಕೆ ? ಬನ್ನವೇ ಅನ್ನವಾದಾಗ ಎಲ್ಲಿಯ ಬಾಜನೆ ? (ಅಶ್ವ. ೦). **ಬಾಜಣೆ :** ಪರುಟಪಣೆಯು ಗಾನದ ನಚ್ಚಣೆಯು ಬಾಜಣೆಯು ಬಿಚ್ಚೋದರರ ಗಂದರರಚ್ಚರರ ಗಜಬಜಿಂ ತೆರ್ರ್ಯಸಿದ . . . ದೇವಾಂಗನೆಯರ ಗೊಂದಣಂ (ರಾಜಶೇಕ. ೬೬-೨೬). [<ಸಂ. ವಾದನ]

**ಬಾಜನೆಕಾಱ** (ನಾ). ವಾದ್ಯವನ್ನು ನುಡಿಸುವವನು ; ವಾದಕ ; ವಾದನಕಾರ : ರಾಜಸುತೆಯನು ತಜ್ಜಾತಿಗೆ ಕುಡುವುದೊಂದೋಜೆಯು ಮಿಱೆ ದುಷ್ಕುಲದ ಬಾಜನೆಕಾಱಗೆ ಕುಡುವುದುಚಿತವೆ (ಶೇಬಸಂ. ೦೨-೬೩).
[ಬಾಜನೆ₂ + — ಕಾಱ]

**ಬಾಜನೆಗಬ್ಬ** (ನಾ). ಒಂದು ಬಗೆಯ ಕಾವ್ಯ : ಪಲತೆಱದ ಪದ್ಯದಿಂದಂ ಲಲಿತವಚೋರಚನನಿಚಯಪದ್ದತಿಕೆಗಳಂ ಸಲೆ ನಿಲೆ ಸಮೆದುದು ಸರಸಾಖಿಲ ವರ್ಣನವಮಾದೊಡದುವೆ ಬಾಜನೆಗಬ್ಬಂ (ಕಾವ್ಯಾ.ಪ. ೯೩೩) ; ಕನ್ನಡದ ಮಟ್ಟಿಗೆ ಪಾಡು, ಮೆಲ್ವಾಡು, ಬಾಜನೆಗಬ್ಬಗಳಿದ್ದುವು (ಕಸಾಇ. ೨೯೯).
[ಬಾಜನೆ₁ + ಕಬ್ಬ₁]

**ಬಾಜವಣೆ** 'ಬಜಾವಣೆ' ನೋ.

**ಬಾಜಾ**, ಬಾಜೆ₁ (ನಾ). ೧. ಊದುವ ಅಥವಾ ಬಾರಿಸುವ ವಾದ್ಯ : ಆ ಬಾಜಾಗ್ಯಾಗ ಬಾಜಾ ತಗೋತೀನಿ (ಎಸ್ಮು.ಪ. ೦೯೬). ೨. ವಾದ್ಯಗಳನ್ನು ಬಾರಿಸುವಿಕೆ ; ವಾದನ : ಬೇಂಡು ಬಜಂತ್ರಿ ಎರಡೂ ಬಾಜಾ ಸುರುಮಾಡಿದವು (ಕೃ.ಶಿ. ೯). **ಬಾಜೆ₁ :** ೧. 'ಬಾಜೆಬಜಾವಣೆ' ಪರಾ.
**ಬಾಜಾ ಬಜಂತ್ರಿ** — ಹಲವಾರು ಬಗೆಯ ವಾದ್ಯಗಳ ಮೇಳವಾದನ: ರಾಜರಾಜೇಶ್ವರಿ ಕಂಪೆನಿ ಬಹಳ ವೈಭವದಿಂದ ಬಾಜಾಬಜಂತ್ರಿ ಮಾಡಿಸಿಕೊಂಡು ಬೆಂಗಳೂರಿಗೆ ಬಂತು (ಪಟಿಶಾ. ೪೯).
[← ಹಿಂ. ಮರಾ. ಬಾಜಾ. / ಸಂ. ವಾದ್ಯ]

**ಬಾಜಾಣೆ** (ನಾ). ನಾಲ್ಕಾರು ಬಗೆಯ ಧಾನ್ಯಗಳನ್ನು ಹುರಿದು ಕೂಡಿಸಿ ಮಾಡಿದ ಹಿಟ್ಟು ; ಇದರಿಂದ ತಾಲೀಪಿಟ್ಟು, ಕೋಡುಬಳೆ ಮೊದಲಾದ ತಿಂಡಿಗಳನ್ನು ಮಾಡುತ್ತಾರೆ : ಗಿರಿಣ್ಯಾಗ ಬೀಸಿದ ಬಾಜಾಣಿ ಜಿಗಟ ಇರಾಕಿಲ್ರಿ (ಬಾಬಾ. ೩).
[← ಮರಾ. ಭಾಜಣೇ, ಭಾಜಾಣೀ]

ಬಾಜಾರ್ '**ಬಾಜಾರ**' **ನೋ.**

**ಬಾಜಾರ**, ಬಜಾರ್, ಬಜಾರ, ಬಜಾರು, ಬಾಜಾರ್, ಬಾಜಾರು (ನಾ). ದಿನಸಿ ಮುಂತಾದ ಪದಾರ್ಥಗಳನ್ನು ವ್ಯಾಪಾರ ಮಾಡುವ ಸ್ಥಳ ; ಪೇಟೆ ; ಮಾರುಕಟ್ಟೆ : ಪುರದ ಬಾಜಾರದೈಶ್ವರ್ಯಮಂ ಪೊಗಳಲಳವೆ (ಗುರುಚಾ. ೦-೨೯) ; ಪುರದ ಬಾಜಾರದಿಂದೈತಂದರಾನಂದದಿಂ (ಮಹಾಪು. ೦೪-೦೦೦) ; ರೇವತಿ ಗಂಡನಿಂದ ಇಪ್ಪತ್ತು ರೂಪಾಯಿಗಳನ್ನು ಪಡೆದುಕೊಂಡು ಸಾಮಾನುಗಳನ್ನು ತರಲು ಬಜಾರಕ್ಕೆ ನಡೆದಳು (ಮುಕ್ತ್ಯ.ರ. ೬೦). **ಬಜಾರ್ :** (ಪ್ರ.ಗಕ. IV, ೬೬೪). **ಬಜಾರ :** ಬಾಜ ಬಜಾರವು ಬಯಲೆದ್ದು ಹೋದೀತು (ಎಜಕಾ. ೦೨೬-೨೯). **ಬಜಾರು :** ಬಜಾರಿನಲ್ಲಿ ಕಬ್ಬಿಣದ ಧಾರಣೆ ಹೇಗೆ ಏರುತ್ತಿದೆ ಬಲ್ಲಿರಾ ? (ಕಾಮಕಾಂ. ೦೦೩). **ಬಾಜಾರ್ :** ಚಾರುತರದ ಬುರುಜಿನೊಳು ಬಾಜಾರ್ ಹೂಡ್ರೇ (ಜಾಶಿ. ೨೩). **ಬಾಜಾರು :** ಸರಹದ್ದಿನ ಬೆಟ್ಟ ಪರಿಯಂತ್ರ ಲಷ್ಕರಿನ ಬಾಜಾರು ಇಳಿಸಿ ಇದ್ದರು (ರಾಜೇಂದ್ರ. ೧೩೪) ; ಬಾಜಾರಿನಲ್ಲಿ ಅಕ್ಕಿ ತುಟ್ಟಿ (ಮುಂಬಯಿ. ೩-೨೩೯).
[← ಪಾರ. ಹಿಂ. ಮರಾ. ಬಾಜಾರ್]

**ಬಾಜಾರಬೀದಿ** (ನಾ). ಪೇಟೆಯ ಬೀದಿ : ಮಹಾಲಿಂಗೇಂದ್ರಂ . . . ಮಂಟಪವನುಳಿದು ಬಾಜಾರಬೀದಿಯೊಳ್ಕೈದಲು (ಮಹಾಪು. ೨೯-೫೪).
[ಬಾಜಾರ + ಬೀದಿ]

**ಬಾಜಾರಮುಖ್ಯ** (ನಾ). ಪೇಟೆಯ ಮುಖಂಡ ; ವರ್ತಕಪ್ರಮುಖ : ಲಲಿತ ತೊಂಬತ್ತೆಂಟು ಬಾಜಾರಮುಖ್ಯರ್ಗೆ ಗೆಲವಿನಿಂ ವೀಥಿಗಳ ಶೃಂಗರಿಸ ವೇಳ್ಕೆಂದು ದಲಿತದಿಂ ಬಸವರಸ ಪೇಳಲು (ಪ್ರಭುಲಿ. ೯-೦೬).
[ಬಾಜಾರ + ಮುಖ್ಯ]

**ಬಾಜಾರಿ**, ಬಜಾರಿ (ಗು). ೧. ಪೇಟೆಗೆ ಸಂಬಂಧಿಸಿದ ; ವ್ಯಾಪಾರ ವಿಷಯಕವಾದ. ೨. ನೀಚ ; ಕೀಳುಮಟ್ಟದ : ನಿಜಗಂಡನ ಸಂಗವನೊಲ್ಲದೆ ಭುಜಗರ ಸಂಗವ ಮಾಡುವ ಬಾಜಾರಿ ತೊತ್ತಿಗೆಲ್ಲಿಯದೋ ನಿಜ ಮುಕ್ತ್ಯೆದಿತನ (ವಚಶಾ. I, ೩೩೩). **ಬಜಾರಿ :** ೩. ಕಳಪೆಯಾದ ; ಅತಿಸಾಮಾನ್ಯವಾದ : ಎಣ್ಣೆಯಲ್ಲಿ ಕರಿದಿದ್ದ ವಡೆ, ಹಳಸಿದ ಕೊಬ್ಬರಿ ಮಿಠಾಯಿ, ಬಜಾರಿ ಪರಬತ್ತು ಅವುಗಳ ಕೆಲಸ ಅವು ಮಾಡಿದ್ದವು (ಕಾಂಶ. ೨೬). (ನಾ). ೪. ಮಾನಗೆಟ್ಟ ಹೆಣ್ಣು ; ಸೂಳೆ ; ಬೀದಿಬಸವಿ : ಮಗನಿಗೆ ಆಸ್ತಿಯನ್ನು ತಪ್ಪಿಸಿ ಚಲ್ಲುಚಾಲಿನ ಬಜಾರಿಗೆ ಸ್ವತ್ತು ಸೇರುವಂತೆ ಮಾಡಬಾರದು (ಹುಟ್ಟಿಹ. ೦೮೬) ; ನನ್ನ ಚಾರಿತ್ರ್ಯದ ಬಗ್ಗೆ ಮಾತನಾಡಿದಳೇ ಈ ಮೂರು ಕಾಸಿನ ಬಜಾರಿ ? (ಮೂರುದಾ. ೦೯೩).
[← ಹಿಂ. ಮರಾ. ಬಾಜಾರೀ]

**ಬಾಜಾರು** 'ಬಾಜಾರ' ನೋ.

**ಬಾಜಿ** (ನಾ). ೧. ಪಣವನ್ನಿಟ್ಟು ಆಡುವ ಗಂಜೀಫು, ಇಸ್ಪೀಟು ಮುಂತಾದ ಆಟ ; ದ್ಯೂತ ; ಜೂಜು : ಸಾಕುಸಾಕು ಬಾಜಿಯ ಬಟ್ಟು ತೊಲಗಿರಿ (ಸಮುಖು. ೨೦). ೨. ದ್ಯೂತಕ್ಕೆ ಒಡ್ಡುವ ಪಣ ಅಥವಾ ವಸ್ತು : ಅವ್ರೇನೂ ಬಾಜೀ ಮಡಗ್ಸೇಕಾದ್ದಿಲ್ಲ (ಕಮ್ಮು.ಪು. ೨೨). 'ಬಾಜಿಕಟ್ಟು' ಪರಾ. [← ಪಾರ. ಹಿಂ. ಮರಾ. ಬಾಜೀ]

**ಬಾಜಿಕಟ್ಟು** (ಕ್ರಿ). ೧. ಜೂಜಿನಲ್ಲಿ ಪಣವಿಡು, — ಪಣಕಟ್ಟು : ಯಾರು ಗೆಲ್ಲುತ್ತಾರೆ, ಯಾರು ಸೋಲುತ್ತಾರೆ ಎಂಬುದಾಗಿ ಅನೇಕರು ಬಾಜಿ ಕಟ್ಟಿದ್ದರು (ಅಜಕಾ. ೦) ; ಇಬ್ಬರು ಸ್ನೇಹಿತರು ಬಾಜಿಕಟ್ಟಿ ಅದರ ಅರ್ಥವನ್ನು ನಿರ್ಣಯಿಸುವ ಭಾರವನ್ನು ವಹಿಸಿಕೊಂಡರು (ಶಂಶ. II, ೯೦). ೨. ಒತ್ತೆಯಾಗಿ ಒಡ್ಡು ; ಒಪ್ಪಿಸು : ಇವರು ಒಂದು ಹಗಲೆಲ್ಲ ಅನ್ನ ನೀರು ಇಲ್ಲದೆ ತಮ್ಮ ಪ್ರಾಣವನ್ನೇ ಬಾಜಿಕಟ್ಟಿ ಹಿಂಬಾಲಿಸಿದ ಮೇಲೆ, ಕಳ್ಳರು . . . ಮೊಕ್ಕಾಂ ಮಾಡಿದರು (ಪಪದಾ. III, ೬೬೨).
[ಬಾಜಿ + ಕಟ್ಟು₁]

**ಬಾಜಿಗ** (ನಾ). ವಾದ್ಯಗಾರ ; ವಾದಕ : ಮೊಳಗಿತು ಬಾಜಿಗರಲ್ಲಿ ಬಾಜಿಸಲ್ ಶುಭವಾದ್ಯ (ಮಹಾತ. ೯೨-೭೭).
[<ಬಾಜಾ + – ಇಗ./ತುಳು. ಬಾಜಿಗೆ]

**ಬಾಜಿಸು₁** 'ಬಾಚಿಸು₂' ನೋ.

**ಬಾಜಿಸು₂**, ಬಾರಿಸು₃ (ಕ್ರಿ). ವಾದ್ಯವನ್ನು ನುಡಿಸು.-ಧ್ವನಿಮಾಡುವಂತೆ ಬಡಿ : ದೇವಲೋಕದ ಪಟಹಂಗಳಂ ಬಾಜಿಸುತ್ತಂ . . . ಇಂತೆಂದು ಪೇಟ್ದಿಡಿದಂ (ಪಡ್ಮಾರಾ. ೯೪-೭) ; ಸುರಸುದತಿ ಪೆಱಿಳ್ ಮೆಱೆದು ಬೀಣೆಯಂ ಬಾಜಿಸಿದಳ್ (ಆದಿಪು. ೬-೨೦) ; ಆ ಸುರದುಂದುಭಿಯುಂ ಕೊಯ್ಯದೆ ಸೂಸಿದವು ಬಾಜಿಸದೆ ಮೊಳಗಿದವಾ ಸುರಾನಕವು (ಶಾಳ್ವಭಾ. ೩೩-೯). **ಬಾರಿಸು₃** : ಬಾರಿಸುವ ಕೊಂಬು ಮದ್ದಳೆ ಘಂಟೆಯಿಂದುಗೆಯು ಘೋರತರರಭಸದಲಿ . . . ಎಯ್ತಂದರು (ಸಿದ್ಧರಾ. ೬-೯೯) ; ರಾಜಕುಮಾರಿ ವೀಣೆಯನ್ನು ಬಾರಿಸಲಾರಂಭಿಸಿದಳು (ಬಾಡಿಳ. ೪೦).
[ಬಾಜನ್ನೆ + – ಇಸು₃./ತುಳು. ಬಾರಿಸು; ತೆಲು. ವಾಯಿಂಚು]

**ಬಾಜೀಬಂದು** 'ಬಾಜುಬಂದ' ನೋ.

**ಬಾಜು**, ಬಾಜೂ (ನಾ). ೧. ತೋಳು ; ಭುಜ. ೨. ಪಕ್ಕ; ಮಗ್ಗುಲು; ಪಾರ್ಶ್ವ : ವಿಕ್ರಮನ ಬಾಜುಯಲ್ಲಿ ತಾನೂ ಪವಳಿಸಿ ನಿದ್ರೆಯಂ ಗೆಯ್ಯಲು (ಹಿಮಾ. ೦೩); ಪರವ್ವ ಯಾರದೋ ಮಾರ್ಗಪ್ರತೀಕ್ಷೆ ಮಾಡುತ್ತ ತನ್ನ ಮನೆಯ ಬಲ ಬಾಜುವಿನ ಕಟ್ಟೆಯ ಮೇಲೆ ನಿಂತಿದ್ದಾಳೆ (ಗಂಗಾಗ. ೬೪). ೩. ಪಕ್ಷ ; ಪರ : ಆ ಮುದಿಹದ್ದು ತನ್ನ ಮಗನ ಬಾಜು ಹಿಡಿದು ನನ್ನನ್ನು ದೂಡಬೇಕೆಂದ (ತೀಪಡಾ. ೭೮) ; ಅವರು ಚಂದ್ರಭಾಗಕ್ಕನ ಬಾಜು ಹಿಡಿದು . . . ಭೀಮಾರೀ ಹಾಕಿದರೆ ಚಂದ್ರಭಾಗಕ್ಕನ ಪಾಡು ನಾಯಿ ಪಾಡಾಗುತ್ತಿತ್ತು (ಮೂರುದಾ. ೬೭). **ಬಾಜೂ** : ೨. ಆನೆಗೆ ಬಾಜೂ ಘಂಟೆಗೆ ಕಬ್ಬಿಣದ ಸರಪಣಿ ಸಹಾ ಪೋಣಿಸಿರುವ ಹಿತ್ತಾಳೆ ಸರಪಣಿ ೧ (ಎಕ. XIV. ಹಂಸಿನ. ೨೯೨-೯೫; 1847); ಎಡಬಲದ ಎರಡು ಬಾಜೂದಲ್ಲಿಯೂ ಒದ್ದುಹಾಕಿಸಬೇಕು (ಕೃಷಿಶ್ರ. ೩೩) ; ವಿವಾಹಕಾಲದಲ್ಲಿ ಅಂತಃಪಟವನ್ನು ಹಿಡಿದಿರುತ್ತಾರೆ. ಕೊನೆಗೆ ಚಪ್ಪಾಳೆ ಹೊಡೆದ ಕೂಡಲೆ ಬಾಜೂಕ್ಕೆ ಸರಿಸುತ್ತಾರೆ (ಭಾರತಂ. ೩೨೩). ೪. ದಿಕ್ಕು ; ಕಡೆ : ಭಾಳ ದಿನಾ ಆತು ನೀವು ಈ ಬಾಜೂಕು ಬಂದು ! (ಬಂಕಿ. ೬೬೨).
[←ಪಾರ. ಹಿಂ. ಮರಾ. ಬಾಜೂ]

**ಬಾಜುಬಂದ**, ಬಾಜೀಬಂದು. ಬಾಜುಬಂದಿ, ಬಾಜುಬಂದು, ಬಾಜೂಬಂದು (ನಾ). ಸ್ತ್ರೀಯರು ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ತೋಳುಬಂದಿ : ಕೈಗಳಲ್ಲಿ ರತ್ನಜಡಿತ ಕಂಕಣಗಳು, ಭುಜದಲ್ಲಿ ಬಾಜುಬಂದಗಳು ಒಪ್ಪುತ್ತಿದ್ದವು (ವಿಶಾ. ೦೦೬); ವಜ್ರದ ಬೆಂಡೋಲೆ ಮುತ್ತಿನ ಕಂಠಿ ಬಸವ್ಮು ಬಾಜುಬಂದ ನಾಗಮುರಿಗೆ (ಸಿದ್ಧಕೃ. ೦೯-೬೭). **ಬಾಜೀಬಂದು** : ನಾಗಮುರಿಗೆ, ವಂಕಿ, ಬಾಜೀಬಂದು . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೪). **ಬಾಜುಬಂದಿ** : ವಂಕಿಯು ಭಾಪುರಿ ಕಂಕಣಗಳುಲಿಯೆ ಬಾಜುಬಂದಿ ನೆರವಿನ ಮಣಿ ಸಿರಿಯೆ (ಕುಚೇಲೋ. ೦೩೭). **ಬಾಜುಬಂದು** : ತೋಳಿಗೊಂಕಿ ಬಾಜುಬಂದು ಗೊಂಡೆಗಳು (ಕರ್ನಾಕ. ೨೮೭). **ಬಾಜೂಬಂದು** : ತೋಳಿಗೆ ಬಾಜೂಬಂದು, ಕತ್ತಿನಲ್ಲಿ ಅಡ್ಡಿಕೆ (ಮಲ್ಲಿ. ೪೦).
[←ಪಾರ. ಹಿಂ. ಬಾಜೂಬಂದ್ ; ಮರಾ. ಬಾಜುಬಂದ, ಬಾಜೂಬಂದ]

**ಬಾಜುಬಂದಿ** 'ಬಾಜುಬಂದ' ನೋ.

**ಬಾಜುಬಂದು** 'ಬಾಜುಬಂದ' ನೋ.

**ಬಾಜೂ** 'ಬಾಜು' ನೋ.

**ಬಾಜೂಬಂದು** 'ಬಾಜುಬಂದ' ನೋ.

**ಬಾಜೆ₁** 'ಬಾಜಾ' ನೋ.

**ಬಾಜೆ₂** (ಗು). ಚಿಲ್ಲರೆಬಾಬುಗಳನ್ನೊಳಗೊಂಡ ; ಸಾದಿಲ್ವಾರಿಗೆ ಸೇರಿದ : ಚಿಲರ ಬಾಜೆಬಾಬು ಬೇರೀಜು ಮೇರೆ (ವ್ಯಕಂ. ೦೯೩೮, ೨೦-೦೪; 1817) ; ಬಾಜೆಬಾಬುಗಳು ಸಹಾ ಯಾವತ್ತನ್ನೂ . . . ಅನುಭವಿಸುವದೂ (ವ್ಯಕಂ. ೦೯೩೯, ೯೨-೯೪ ; 1825). [← ಮರಾ. ಬಾಜೇ]

**ಬಾಜೆಬಜಾವಣೆ** (ನಾ). ಹಲವಾರು ಬಗೆಯ ವಾದ್ಯಗಳ ಮೇಳವಾದನ : ಮದುಮಕ್ಕಳನ್ನು ಬಾಜೇಬಜಾವಣೆಗಳೊಂದಿಗೆ ಮೆರೆಯಿಸುತ್ತ . . . ನಿಬ್ಬಣ ಹೊರಡಿಸಿದರು (ಹೂಬಿಸಿ. ೦೪).
[ಬಾಜೆ₁ (< ಬಾಜಾ) + ಬಜಾವಣೆ]

**ಬಾಟಲಿ** 'ಬಾಟಲು' ನೋ.

**ಬಾಟಲು**, ಬಾಟಲಿ (ನಾ). ಗಾಜಿನ ಸೀಸೆ ; ಕುಪ್ಪಿ : ಏಳು ಬಾಟಲು ಬ್ರಾಂದಿ ಮೊದಲೇ ತರಿಸಿ ಇಟ್ಟುಕೊಂಡಿದ್ದೆವು (ಬಂಗಾರ. ೭). **ಬಾಟಲಿ** : ನನ್ನ ಶಾಂಪೆನ್ ಬಾಟಲಿ ಎಲ್ಲಿ ಅದೆ ? (ಮೋಚಿಪಿ. ೩೬) ; ಬಾಟಲಿ ಕೊಟ್ಟು ಕಳಿಸಿರಿ. ಔಷಧ ಕೊಡುವೆ (ಅಕೋಕ. ೨೪). [← ಇಂ. Bottle]

**ಬಾಟಾ** 'ಭಾಟಾ' ನೋ.

**ಬಾಟಾಮಾರ್ಗ** 'ಭಾಟಾಮಾರ್ಗ' ನೋ.

**ಬಾಟಿ** (ನಾ). ೧. ಒಂದು ಬಗೆಯ ರೊಟ್ಟಿ : ಎಲ್ಲರೂ ದೂರದಲ್ಲಿ ಬದಿಯಲ್ಲಿ ಕುಳಿತು ಬಾಟಿ ತಿನ್ನುತ್ತಿದ್ದರು (ಹೊಸಬೇ. ೨೮೪). ೨. ಜೋಳದ ತೆನೆ : ಸುಗ್ಗಿಯ ಪೂರ್ವದಲ್ಲಿ ಕೂಲಿಕಾರ ಜನರು . . . ಹೊಲಗಳಲ್ಲಿಯ ಬೆಳೆಗಳನ್ನು ಕೊಂಡು, ಬಾಟೀ ಮಾರಿ ಬಹಳ ರೊಕ್ಕಗಳಿಸುವರು (ಕಥಾಗ. ೪೩೪) ; ನಾನು ಕೈಯಲ್ಲಿ ಕುಡಗೋಲು ಹಿಡಿದು ಬಾಟಿ ಕೊಯ್ಯುವವ (ಬಾಡಿ. ೬೦). [← ಹಿಂ. ಮರಾ. ಬಾಟೀ]

**ಬಾಟು** (ನಾ). ಎತ್ತರದಲ್ಲಿ ಸಪಾಟಾಗಿದ್ದು, ವ್ಯವಸಾಯಯೋಗ್ಯವಾಗಿರುವ ಭೂಮಿ : ಸ್ಥಳದ ಪೂರ್ವದ ಮಾನ್ಯ ಆಯ ಸ್ವಾಮ್ಯ ಬಾಟು ಬೋಟು ಸಹ ತೋಗುರಿಗಟ್ಟಿಕೆ ಸಲುವ ಉಪಗ್ರಾಮ ೯ ಹಳಿ ಸಹ . . . ಅನುಭವಿಸಿಕೊಣ್ದು (ಎಕ. XII. ಮಧ್ಯಗಿ. ೯೩-೬; 1684 ?).
[← ಹಿಂ. ಭಾಟ್, ಭಾಠ್ ; ಮರಾ. ಭಾಟ್]

**ಬಾಟೆ** 'ಭಾಟಾ' ನೋ.

**ಬಾಡ**, ಬಾಡೆ, ವಾಡ, ವಾಡ್ಯೆ (ನಾ). ೧. ಹಳ್ಳಿ ; ಗ್ರಾಮ : ಇಂತಗ್ರಾಸನಮನುಣುತ್ತಮುಟುವತ್ತುಬಾಡಮನಾಳುತ್ತಂ ಸುಖಸಂಕಥಾ ವಿನೋದದಿಂ ಕಾಲಂ ಸಲೆ (ವಡ್ಡಾರಾ. ೦೯೫-೦೨) ; ಅವರ್ಗಿೀವುದೊಳ್ಪು ನಿಲೆ . . . ಅಯ್ದು ಬಾಡಮಂ (ಪಂಪಭಾ. ೯-೯೩) ; ಸಂಧಿಗೆಯಲ್ಕೆ ಬೇಡಿದರೆ ಪಾಂಡುತನೂಭವರಯ್ದುಬಾಡಮಂ (ಗದಾಯು. ೩-೨೦). ೨. ಒಂದು ಊರಿನ ಹೆಸರು : ಕಿಱುಯೂರ ಜಾದಿಯೂರ ಕೊಡಂಗನೂರ ಬಾಡದ ಮಹಾಜನವುಂ (ಎಕ. XI. ಚಿತ್ರದು. ೭೪-೨೮; 968) ; ಕದಂಬಳಿಗೆ ಸಾಸಿರದ ಬಳಿಯಗ್ರಹಾರ ಬಾಡದ ಶ್ರೀನಾರಾಯಣದೇವರ್ಗ್ಗೆ ನಿವೇದ್ಯಕ್ಕೆ . . . ಬಿಟ್ಟ ಗಟ್ಟಿದ್ದಿಯ ಕಮ್ಮ ೨೩೩ (ಎಕ. XI. ದಾವಣ. ೦೪೦.೦೩; 1060). ೩. ಕೆಲವು ಊರಿನ ಹೆಸರುಗಳ ಕಡೆಯಲ್ಲಿ ಸೇರುವ ಶಬ್ದ : 'ಗಂಗವಾಡ' ಪರಾ. **ಬಾಡೆ** : ೪. ಮನೆ ; ನಿವಾಸ : ಅವಳು ಆ ರಾತ್ರಿ ನೆಲಕ್ಕಿ ಬಾಡೆಯಲ್ಲಿ ಬೆಳಗುತ್ತಿದ್ದ ದೀಪಕ್ಕೆ ನಮಸ್ಕರಿಸಿ . . . ಮೆಟ್ಟಿಲಿಳಿದಳು (ಹುಲಿಹಾ. ೦೪). ೫. ಹಜಾರ ; ನಡುಮನೆ : ಅತ್ತೆ . . . ಗಂಡನನ್ನೂ ಮಗನನ್ನೂ ಕರೆದುಕೊಂಡು ಬಂದು ಬಾಡೆಯಲ್ಲಿ ಊಟಕ್ಕೆ ಕುಳಿತರು (ಮನಕೂ. ೯೯). **ವಾಡ** : ೬. ದನಗಳ ಹಟ್ಟಿ ; ಕೊಟ್ಟಿಗೆ : ವಾಡ-ವಾಡಿ ಪದಕ್ಕೆ ಗೋವುಗಳ ಹಟ್ಟಿ, ಎಂದರ್ಥ (ಕರ್ನಾಟ. ೯೯). 'ಕೊಂಡವಾಡ' ಹೋ. **ವಾಡ್ಯೆ** : ೪. ಅವರು . . . ಹಳೇ ಹುಬ್ಬಳ್ಳಿಯ ಒಂದು ಮೂಲೆಯೊಳಗಿನ ಒಂದು ವಾಡೆಯಲ್ಲಿ ಒತ್ತಟ್ಟಿಗಿನ ಒಂದು ಕೋಣೆಯನ್ನು ಬಾಡಿಗೆ ಹಿಡಿದರು (ಮೋಚಿಪ. ೩).

೭. (ಅರಸರು, ಜಮೀನುದಾರರು ಮುಂತಾದವರು ವಾಸಿಸುವ) ಭವ್ಯವಾದ ಗೃಹ ; ಪ್ರಾಸಾದ ; ಭವನ : ದೊಡ್ಡ ವಾಡೆಯಂತಿಪ್ಪ ಮನೆ ಅವರದು. ಅದಕ್ಕೊಂದು ಮಹಾದ್ವಾರ (ಸಮಾಜ. ೦೨೯) ; ವಾಡೆಯ ಹೆಬ್ಬಾಗಿಲಿನ ಭವ್ಯವಾದ ಹೊಸ್ತಿಲನ್ನು ಅವಳಿನ್ನೂ ದಾಟಿರಲಿಲ್ಲ (ಗ್ರಾಮಾಯ. ೬). 'ಪಾಡ್ಯ' ಪರಾ.

[< ಸಂ. ವಾಟ./ತಮಿ. ವಾಟ್ಟಿ. ಮಲ. ವಾಡ ; ಕೊಡ. ಬಾಡೆ ; ತೆಲು. ವಾಡ = ಮನೆಗಳ ಸಾಲು. / ಮರಾ. ವಾಡ, ವಾಡಾ]

**ಬಾಡಗ** (ನಾ). ತೋಟ ; ವನ : "ವಾಟಕಮೆನೆ ಬಾಡಗವಾದು" (ಶಬ್ದ. ೦೮).  [< ಸಂ. ವಾಟಕ]

**ಬಾಡಗೆ, ಬಾಡಿಗೆ, ಭಾಡಿಗೆ** (ನಾ). ಮನೆ, ಕೊಠಡಿ, ಯಂತ್ರ ಮೊದಲಾದುವುಗಳನ್ನು ನಿಯಮಿತ ಅವಧಿಗೆ ಉಪಯೋಗಿಸಿಕೊಳ್ಳುವವನು, ಅವುಗಳ ಒಡೆಯನಿಗೆ ಕೊಡಬೇಕಾದ ಹಣ : "ಭಾಟಕಃ, ಅವಕ್ರಯಃ_ಈ ೨ ಬಾಡಗೆ" (ಹಲಾಯು. ೯೯-೯೦೯) ; ಕೆಯ್ಯ ಗುತ್ತಗೆಯಿಂ ಮನೆಯ ಬಾಡಗೆಯಿಂ ವಿಶೇಷಂ ಗದ್ಯಾಣ ಧರಣವಾಗಿಯುಳಿದಡೆ ಪಸಿದು ಬಂದವರ್ಗಂಬಲಿಯ ಸತ್ರವಂ ನಡೆಯಿಸುವರು (ಶಾಸನ. XX, ೦೦೦-೩೯; 1129) ; ಬಾಡ[ಪಾಠಾಂ. ಡಿ]ಗೆಯ ಮನೆಗೆ ಹೊಯಿದಾಪಲೇತಕ್ಕೆ (ಕೋಲಶಾ. ೭-೨೯) ; ಕೊಳಚೆಯಾದಕಕೆ ಕೊಂಬುದೇ ಹಬಿಗೋಲ ಬಾಡಗೆಯ (ಕುಮ್ಯಾ. ೨೨-೩೦). **ಬಾಡಿಗೆ** : ಲೋಗರ ಕಾರ್ಯಕ್ಕೆ ಬಡಿದು ಕೊಳ್ವ ಬಾಡಿಗೆಯ ಮನೆಗೆ ತಿವಿದುಕೊಳ್ವ . . . ಕಟ್ಟಿಗ್ಗರಂತೆ (ಧರ್ಮಾಮೃ. ೯-೦೬೨); ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ (ಪುರಂದ. ೦-೦೨೬-೦) ; ಬಾಲಕರಿಲ್ಲದ ಬಾಲೆಯದು ಯಾತರ ಜನ್ಮ ಬಾಡಿಗೆ ಎತ್ತು ದುಡಿದ ಹಾಗೆ (ಹಳ್ಳಿ. ೭೯). **ಭಾಡಿಗೆ** : ವೊಂದು ತೇಣೆ ಮನೆಗೆ ಮಾಡಿದ ಯೆರಡು ವಸರದ ಭಾಡಿಗೆಯಿಂದ . . . ದಿನ ೧ ಕೆ ಸೊಲ್ಲಗೆ ತೆಂಗಿನ ಯೆಂಣೆ (ಕಾ. III-i, ೦೯-೩೦; 1545); ಸಾಹೇಬರು . . . ಆ ಜಾಗಾ ಭಾಡಿಗೆಗೆ ಪಡಕೊಂಡರಂತೆ (ಅಶಾ. ೦೦೯).

[<ಸಂ. ಭಾಟಕ./ತಮಿ. ವಾಟಕೈ; ಮಲ. ವಾಡಕ. ತುಳು. ಬಾಡಿಗೆ, ಬಾಡಾಯಿ; ತೆಲು. ಬಾಡಿಗೆ, ಬಾಡಿಗ. ಬಾಡುಗ./ಮರಾ. ಭಾಡೇ]

**ಬಾಡಗೆಕಾಟಿ** (ನಾ). ಕೂಲಿಗೆ ಗೊತ್ತುಮಾಡಿಕೊಂಡ ಆಳು ; ಹಣವನ್ನು ಕೊಟ್ಟು ನೇಮಿಸಿಕೊಂಡವನು : ಬಾಡಗೆಕಾಟಿ ನನ್ನ ಸ್ತ್ರೀಯೆನಲು ತವರೂರಲ್ಲಿರ್ದ ಜಾರ ನನ್ನ ಸ್ತ್ರೀಯೆನಲು . . . ಅವಳ ಸೀಳಿ ಎರಡು ಹೆಣ್ಣುಗಳ ಮಾಡಿಯುವರಿಬ್ಬರಿಗೆ ಕೊಟ್ಟು (ಭೈರಸೂ. I, ೩೩೭).  [ಬಾಡಗೆ + — ಕಾಟಿ ]

**ಬಾಡಗೆಗೊಳ್** (ಕ್ರಿ). ಬಾಡಿಗೆಯನ್ನು ಕೊಡುವ ಕರಾರಿನಿಂದ ವಸ್ತುವನ್ನು ಪಡೆ : ಕೆಲವತ್ತಂ ಬಾಡಗೆಗೊಂಡು ಭಂಡಮಂ ಪೇಱಿ . . . ಪೆರ್ಬಟುವಿನೊಳ್ ಬಿಟ್ಟಲ್ಲಿ (ಬಂಹು. ೯-೦೦ ವ).  [ಬಾಡಗೆ+ಕೊಳ್₁]

**ಬಾಡಬ** (ನಾ). ೧. ಕುದುರೆ ; ಅಶ್ವ : ಶ್ರೀರಾಮಚರಿತಮಂ ಕೇಳಿಸಲೊಡಂ ಬಾಡಬಂಗಂ ಬಾಡಬಕ್ಕಂ ವಿಮೋಚನಮಕ್ಕುಂ (ರಾಮಾಶ್ವ. ೦೩೬-೯). ೨. ಕಡಲೊಳಗಿರುವ ಕುದುರೆಯ ಮುಖದಿಂದ ಹುಟ್ಟಿದುದೆಂದು ನಂಬಲಾದ ಬೆಂಕಿ; ಔರ್ವಾನಳ; ಕಡಲ್ಗಿಚ್ಚು : "ಔರ್ವಃ, ಸಮುದ್ರವಹ್ನಿಃ, ಬಾಡಬಃ, ಬಡಬಾಮುಖಃ — ಈ ೪ ಸಮುದ್ರದ ಕಿಚ್ಚು" (ಹಲಾಯು. ೦೩-೭೦); ಭವಗರ್ವರಸಜೀವನಿಧಿಬಾಡಬ ಉಮಾವಲ್ಲಭ (ಶೀಕೃ ಕೃ. ೩-೦೦-೦); ನೊರಜು ಬಾಡಬನುದರವರಿವುದೆ (ಉತ್ತ. ೨೩-೦೯). ೧, ೨ : ಆ ಮಹಾರ್ಣವಂ . . . ಮದ್ಯಜನ್ಮಸ್ಥಾನವಾಗಿಯುಂ ಬಾಡಬೋಪಭೋಗಯೋಗ್ಯಮುಂ . . . ಎನಿಸಿದುದು (ಶಗಬಿ. ೦-೯೯ ವ). ೩. ಹಾರವ; ಬ್ರಾಹ್ಮಣ ; ವಿಪ್ರ : "ಬ್ರಾಹ್ಮಣಂ ಬಾಡಬಂ ಭೂಮಿದೇವಂ ದ್ವಿಜಂ" (ಮಂಗರಾ. ೬೩-೦); ಆ ಕಲ್ಲಿದೇವಯ್ಯ . . . ಆ ಬಾಡಬರ್ಗಿಂತೆಂದು ನುಡಿದನು (ಬಸವ. ೩೫-೩೬); ಘೋರನೆಬಂದು ತುಱುಗಿರ್ದ ಜನರು ಬಾಡಬರು ವೈಷ್ಣವರು ತನತನಗಿದು ಚೋದ್ಯವೆನುತ ವೆಂಗಿಸ ಕೋಪ ಕೊಸರಿತು ಭೈರವಾಂಕನಿಗೆ (ಭೈರವೇ. ೩-೩೦). ೪. [ಕಾಮಶಾ] ರತಿಕ್ರೀಡೆಯಲ್ಲಿ ಒಂದು ಬಗೆ : 'ಬಾಡಬಕರಣ' ಪರಾ.  [ಸಂ. ]

**ಬಾಡಬಕ** (ನಾ) = ಬಾಡಬ ೪ : ಅಗಲಿರ್ದ ಸ್ತ್ರೀ ತನ್ನಯ ಯೋನಿಯ ಇರ್ದೆಶೆಯುಂ ಸಂಪುಟಂಗಳಿಂ ಪುರುಷನ ಲಿಂಗವೇಳದಿರ್ದೊಡೆಯಲ್ಲಿ ಈ ಸ್ತ್ರೀಯಿಾ ಕರಣದಿಂದೊತ್ತಲ್ಕೆ ರಮಿಸೋದು ಬಾಡಬಕಂ (ಕಾಮಶಾ. ೨೩೩).  [ ಸಂ. ]

**ಬಾಡಬಕರಣ** (ನಾ). = ಬಾಡಬ ೪ : ಪುರುಷನ ಪತಾಕೆಯೊಬಗಿರೆ ಮಗುಳ್ದು ಮಲಗಿರ್ದ ಗುರುಕುಚೆಯುತ್ತನುಗ್ರಹದೆರಡುಕಡೆಯೊಳು ಪಿರಿದೊತ್ತಲವಗೆಚ್ಚಱುರವಣಿಸಿ ನೆರವುತಿಪ್ಪರವದೇ ಬಾಡಬಕರಣಂ (ಜನವ. ೯-೦೯).  [ಸಂ.]

**ಬಾಡಬಕ್ಕ, ಬಾಡಬಾಕ, ಬಾಡಬಾಕು, ಬಾಡುಬಕ್ಕೆ, ಬಾಡುಬುಕ್ಕ** (ನಾ). ೧. ಒಂದು ಬಗೆಯ (ದ್ವಿದಳಧಾನ್ಯದ) ಬಳ್ಳಿ: "ಬಾಡಬಕ್ಕ, ಬಾಡಬುಕ್ಕಬಳ್ಳಿ" (ಸಸ್ಯಪಿ. ೦೦೦); (ಮ್ಯಾಶಿಗ. ೬೩-೦೩೧೯). ೨. ಒಂದು ಬಗೆಯ ಮುಳ್ಳುಗಿಡ : ಚರ್ವಿತಚರ್ವಣಲಬ್ಧವಾದ ವರ್ಣನೆಗಳನ್ನು ತುರುಕಿ, ಸಾಹಿತ್ಯ ಸೀಗೆ ಗಜ್ಜುಗ ಬಾಡಬಕ್ಕಗಳ ಏಗ್ಗಾಡಾಗುವಂತೆ ಪರಿವರ್ತಿಸುತ್ತಾರೆ (ಪಂಜುಂಡ. ೯೯). **ಬಾಡಬಾಕ** : ೧. ಬಾಡಬಾಕನ ಸೊಪ್ಪಂ ನೀರಿಂ ಅರೆದು ಎಣ್ಣೆಯಾಗಲಿ ಹಸುವಿನ ತುಪ್ಪವಾಗಲೀ ಕೂಡಿಸಿ ಆಜುದಿನ ಕೊಂಡರೆ ಅಂಡವಾತ ಮಾಣ್ಗುಂ (ಚಿಕ್ಕಿ. ೬೩). **ಬಾಡಬಾಕು** : ೨. ಬೆತ್ತ ಕೆಂಜಿಗೆ ಸೀಗೆ ಗಜುಗ ಬಿದಿರು ಮುಳ್ಳುಮುತ್ತುಗ ಬಾಡಬಾಕುಗಳು (ಶ್ಯಾನಶ. ೧೦-೨೩). **ಬಾಡುಬಕ್ಕೆ** : ೨. 'ಬಾಡುಬಕ್ಕ ಮುಳ್ಳು' ಎಂಬ ಚೂಪಾದ ಕೊಕ್ಕೆಯ ಮುಳ್ಳುಂಟು. ಇದಕ್ಕೆ ಮೈ ತಾಗಿದರೆ ಒಂದಿಷ್ಟಾದರೂ ಬಾಡು ಕಿತ್ತು ಬರದೆ ಇರುವುದಿಲ್ಲ (ಪಮ್ಮರು. ೩೯೭). **ಬಾಡುಬುಕ್ಕ** : ೧. "ಬಾಡಬಕ್ಕ, ಬಾಡುಬುಕ್ಕಬಳ್ಳಿ" (ಸಸ್ಯಪಿ. ೦೦೦).  [ ? ]

**ಬಾಡಬಾಕ** 'ಬಾಡಬಕ್ಕ' ನೋ.

**ಬಾಡಬಾಕು** 'ಬಾಡಬಕ್ಕ' ನೋ.

**ಬಾಡಬಾಗ್ನಿ** (ನಾ). = ಬಾಡಬ ೨ : ಹಿಡಿದು ಬಲುಹಿಂ ಕಡಲ ಕುಡಿಸುವೆ ಬಾಡಬಾಗ್ನಿಯನು (ಕೌರಾ. ೦೩-೯೨); ಕಾಲಾಗ್ನಿ ಬಾಡಬಾಗ್ನಿ ಪಾಷಾಣಾಗ್ನಿ ವೈದ್ಯುತಾಗ್ನಿ ಸೂರ್ಯಾಗ್ನಿ ಎಂಬ ಸೂಕ್ಷ್ಮಬಿಂದುರೂಪ ಪಂಚಾಗ್ನಿಧ್ಯಾನಯುಕ್ತನಾಗಿ (ಶಿವೇಶ. ೦೨೬).  [ಸಂ.]

**ಬಾಡಬಾನಲ, ಬಾಡಬಾನಳ** (ನಾ). = ಬಾಡಬ ೨. **ಬಾಡಬಾನಳ** : ಪರಸೈನ್ಯಸುಭಟಮಹಾರ್ಣವಕೆ ಬಿಡು ನಿನ್ನ ವಿಪ್ರಮಬಾಡಬಾನಳನ (ಕುಮ್ಯಾದ್ರೋ. ೦-೦೭).  [ಸಂ.]

**ಬಾಡಬಾನಳ** 'ಬಾಡಬಾನಲ' ನೋ.

**ಬಾಡಬೇಯ** (ನಾ). ಎತ್ತು; ವೃಷಭ : "ಉಕ್ಷಾ . . . ಬಾಡಬೇಯಃ, ಶಾಕ್ವರಃ — ಈ ೧೧ ಯೆ(ಎ)ತ್ತು" (ಹಲಾಯು. ೯೯-೦೦೮).  [ಸಂ.]

**ಬಾಡವ** (ನಾ). ೧. ಕುದುರೆ; ಅಶ್ವ : ಬಾಡವಂಗಳಂ ಹಂಸೆಗಳಂ . . . ಅಂಬರಚರೇಶ್ವರ ಪ್ರಭು ಮಗಳ್ಗೆ ಬಟಿವಟಿಗೊಟ್ಟಂ (ವರ್ಧಮಾ. ೩-೯೯). ೨. = ಬಾಡಬ ೨ : ಕೃತ್ರಿಮಸೌಷ್ಠವದಿಂ ಸಲಿಲಮುಮಂ ಬಾಡವನುಮನೊಳಕೊಂಡ ಕಡಲನರಸಂ ಪೋಲ್ತಂ (ಲೀಲಾವ. ೯-೭) ; ವಾರಿಧಿಯೊಳಡಗಿ ನಿದ್ರಿಪ ಬಾಡವವೊ ತೃಷ್ಣೆ (ಮಂಕುಶ. ೨೭೭). ೧, ೨ : ಧರದೊಳ್ ಶೂದ್ರನೂರ್ಜ್ಜಿತಾತ್ಮಚಯದಿಂ ಧೈರ್ಯಕ್ರಮಕ್ಷತ್ರಿಯಂ ಪರಸೈನ್ಯಾಂಬುಧಿಬಾಡವಂ ದಲ್ ಅದಱಿಂ ತಾಂ ವರ್ಣ್ಣಸಾಂಕರ್ಯಮಂ ನರಸಿಂಹಂ

ತಳೆದಿರ್ದನ್ (ಎಳ. V, ಬೇಲೂರು. ೧೯೩-೪೦; 1161). ೩. ಬ್ರಾಹ್ಮಣ; ವಿಪ್ರ : "ಬ್ರಾಹ್ಮಣಃ, ಬಾಡವಃ, ವಿಪ್ರಃ . . . ದ್ವಿಜಃ — ಈ ೧೦ ಬ್ರಾಹ್ಮಣಂ" (ಹಲಾಯು. ೬೫-೨೩೭). [ಸಂ.]

**ಬಾಡವಾಗ್ನಿ** (ನಾ). = ಬಾಡಬ ೨ : ತವೆ ಕುಡಿಯಲ್ಕೆಬೆಯದು ಬಾಡವಾಗ್ನಿ ಪೋಗೆಂದು ಕುಂಭಸಂಭವಕೋಪಾಗ್ನಿ ವಿಯತ್ತಳದಿಂ ಕಿಡಿ ವಿಡುತುವಿಟಿವವೊಲ್ತಪನನವರಜಳನಿಧಿಗಿಟಿದಂ (ಚುಳ್ಳಿ. ೬-೦೪). [ಸಂ.]

**ಬಾಡವಾನಳ** (ನಾ). = ಬಾಡಬ ೨ : ಬಾಡವಾನಳಾವಿಳಜಳಮುಂ ಮನಂ ಬಯಸಿ ನೋಡಿದರ್ನವಮುಂ ಗುಣಾರ್ಣವಂ (ಶಂಕರಾ. ೪-೨೫).

[ಸಂ. ಬಾಡವಾನಲ]

**ಬಾಡವೆ** (ನಾ). ಬ್ರಾಹ್ಮಣ ; ಹಾರವ : ಕನ್ನಡ ಯಾತ್ರಿಕರು ಪಂಢರಪುರಿಗೆ ಹೋದಾಗ ಅಲ್ಲಿನ ಬಾಡವೆಗಳು ಅದೇ ಸ್ತಂಭವನ್ನು ದಾಸರ ಸ್ತಂಭವೆಂದು ತೋರಿಸುತ್ತಾರೆ (ಳಕಂ. ii, ಋಷ್ನು). [ಸಂ. ಬಾಡವ]

**ಬಾಡಿಗೆ** 'ಬಾಡಗೆ' ನೋ.

**ಬಾಡಿಗೆದಾರ** (ನಾ). (ಮನೆ ಮೊದಲಾದುವನ್ನು) ಬಾಡಿಗೆಗೆ ಹಿಡಿದಿರುವವನು : ಈ ಸಲ ಬಾಡಿಗೆದಾರರ ಪೈಕಿ ನಾರಾಯಣನು . . . ತುಂಬಾ ಕಂಗಾಲಾಗಿ ಹೋಗಿದ್ದನು (ಕಂಬಹು. ೧೨೩).

[ಬಾಡಿಗೆ (< ಬಾಡಗೆ) + — ದಾರ್₁]

**ಬಾಡಿಗೆಮನೆ** (ನಾ). ಬಾಡಿಗೆ ಕೊಡುವ ಕರಾರಿನಿಂದ ಪಡೆದ ಮನೆ : ಶ್ಯಾಮಲಾಲರು . . . ಕಲಕತ್ತೆಯ ಬಾಡಿಗೆಮನೆಯಲ್ಲಿ ಹೆಂಡತಿ ಬೀಗರೊಡನೆ ವಾಸಿಸುತ್ತಾರೆ (ಕುಂಹಿಂ. ೦೪೪) ; ಬಾಡಿಗೆಮನೆ, ಕೂಡಿಕೆಸೆಂಟರು (ಗಾದೆ). [ಬಾಡಿಗೆ (< ಬಾಡಗೆ) + ಮನೆ]

**ಬಾಡಿಸು**, ವಾಟಿಸು (ಕ್ರಿ). ೧. ಸೊಪ್ಪು, ತರಕಾರಿ, ಮಾಂಸ ಮುಂತಾದುವನ್ನು ಬಾಣಲಿಯಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಹುರಿ,– ತಾಳಿಸು : ಚಮ್ಮಟಿಗೆಗಂಶುಕಕಿಟ್ಟೊಳಗಾಗಿ ಬೆಟ್ಟದರ್ ಬಾಡಿಸುವೇಟ ಬಾಡಿಸುವ ಹೇಟುವ ಕಟ್ಟುವ ಕುಟ್ಟುವಾವಗಂ ಕೂಡುವ ದುಃಖದಿಂ ತಿರಿಕಜಾತಿಯ ಕೋಟಲೆ ಕುಂದದೊರ್ಮೆಯುಂ (ಅಪಂಪು. ೯-೪೩); ಪಿಸಿತವನು ಕತ್ತರಿಸು ಹುರಿ ಹುರಿ ಕಾಸು ತಾಳಿಸು ಬಾಡಿಸು (ವಾಗಹ. ೦೩-೪೭); ಈ ಕಾಡುತರಕಾರಿಗಳನ್ನು . . . ಬೇಯಿಸುವುದು ಬೇಕಿಲ್ಲ, ಒಗ್ಗರಣೆ ಹಾಕಿ ಬಾಡಿಸಿದರೆ ಸಾಕು ! (ಹಸುಹೂ. ೩೦೦). ೨. ಕಳೆಗುಂದಿಸು ; ಒಣಗಿಸು ; ಕಂದಿಸು : ತೇಜಂ ಬಾಡಿಸುತಿರ್ಪ ರೇಖೆಯೊ ಚಿರಂ ಬಾಟ್ಯಾಸೆಯಿಂದೀ ಮಹಾರಾಜನರ್ನೋಡುವ ತೀವ್ರತೇಜದ ಮಹಾಸಪ್ತಾರ್ಚಿಗಂಡುಂ ಮಹಾತೇಜಂ ಭಾಸ್ಕರನಸ್ತದೊಳ್ ಕೆಡೆವುದುಂ ಕಂಡುಂ ಮಹೋಳ್ಕಂ ಜ್ವಳತ್ತೇಜಂ ಬೀಟ್ವುದುಗಂಡುಮುದ್ಧತಮಹಾಮೋಹಾಂಧಕಾರಾಂಧಕರ್ (ಆರ್ದಸೇ. ೪-೩೪). ೩. ಹಪ್ಪಳ, ಉಪ್ಪಿನಕಾಯಿ, ಚಕ್ಕಣ ಮೊದಲಾದ ಪದಾರ್ಥಗಳನ್ನು (ಆಹಾರ ಅಥವಾ ಕಳ್ಳಿನೊಂದಿಗೆ) ನಂಜಿಕೊಳ್ಳು : ಉಪದಂಶಃ, ಅವದಂಶಃ, ಭಕ್ಷಣಂ—ಈ ೩ ಕುಡಿವುತ್ತೆ ಬಾಡಿಸುವುದು (ಹಲಾಯು. ೩೪-೦೬೩) ; ಕುಂಟಣಿಯುಂ ನೊಣೆಗಬ್ಬೆ ತಿಂಗೆ ಬೆಂಗುರುಟೆ ಬಳಾರಿ ಬಾಡಿಸುಗೆ (೦೬ಲಾವ. ೨-೦೦೬) ; ಮೊಸರನ್ನ ಉಂಡ ಮೇಲೆಯೂ ಹಾಗೆಯೆ ಪಲ್ಲೆಕಾಯಿ ಬಾಡಿಸುತ್ತ, ಅವು ತೀರಿದ ಮೇಲೆ ಬರಿಯ ಉಪ್ಪನ್ನೆ ಬಾಡಿಸುತ್ತ . . . ಕುಳಿತಾಗ ಬಡಿಸುವವರ ಹುಚ್ಚುನಗೆ ಕಂಡಾಗ ನನ್ನ ಊಟ ಮುಗಿದುದರ ಕಲ್ಪನೆ ಬಂದುದೂ ಗೊತ್ತಿದೆ (ಮುಂಗಾಳಿ ೯೩). **ವಾಟಿಸು** : ೧. ಪೆರ್ನೊಣಂಗಳಿಂ ತಗುಳ್ದಾಟಿಸಿಯುಂ ಕಾವಲಿಯೊಳಿಕ್ಕಿ ವಾಟಿಸಿಯುಂ ಇಂತನೇಕವಿಧದಂಡನೆಗಳಿಂ ದಂಡಿಸಿಯುಂ ಸೈರಿಸಲಾಟದೆ (ಧರ್ಮಾಮೃ. ೩-೬೩). [ಬಾಡು₂ + — ಇಸು₃./ತೆಲು. ವಾಡಿಂಚು]

**ಬಾಡು₁** (ಕ್ರಿ). ೧. (ಹೂವು, ಚಿಗುರು ಮುಂತಾದುವುಗಳು) ಒಣಗು ; ಮುರುಟು : "ಬಾಡು—ಮ್ಲಾನೇ, ಮಾಂಸೇ ಶಾಕೇಚ" (ಕವಿರಾ. ಪ) ; ಸಸ್ಯಾವಳಿ ಸುಗಿದುಗಿದು ಕೂಡೆ ಬಾಡಿರ್ದುದು (ಅದಿಪು. ೦೨-೬೬) ; ಹೂ ಬಾಡಿದಲ್ಲಿ ಪರಿಮಳವನಜುಸುವರೆ (ಬಸವ. ೦೨೬) ; ಕಟ್ಟಿಯುಮೇನೊ ಮಾಲೆಗಾಜಿನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ (ಅಸಂಪು. ೦-೪೫) ; ಭಯದಲಿ ಬಾಡುವುದಲೇ ರಿಪುನೃಪಾಲರ ಸಮರಜಯಬೀಜ (ಕುಮ್ಯಾಸ. ೦೨-೪೬). ೨. ಕಳೆಗುಂದು ; ಕಾಂತಿಗುಂದು ; ಮಂಕಾಗು : ಇಂದೆಮ ಗುಣಕ್ಕೆ ಬಗೆಯಿಲ್ಲುವವಾಸಂಗೆಯ್ದಪ್ಪೆಮೆಂದು ಪರಿಚ್ಛೇದಿಸಿ ನುಡಿದೊಡೆ ಬಿನ್ನನೆ ಮೊಗಂ ಬಾ[ಪಾಠಾಂ. ಮಾ]ಡಿ ಭಟಾರರಂ ವಂದಿಸಿ ಪೋಗಿ (ವಡ್ಡಾರಾ. ೬೦-೦೦); ಈ ಮೊಗವಿಂದಿಂತೇತರ್ಕೆ ಬಾಡಿರ್ದುದು (ಅದಿಪು. ೩-೨೫); ಅರಾತಿನೃಪವಕ್ತ್ರಾಬ್ಜಂ ಕರಂ ಬಾಡುಗುಂ (ಕಾವ್ಯಾವ. ೦೨-೬೨). ೩. ಸೊರಗು ; ಕಂಗು : ಇಂತೀಕೆ ಬರ್ದ ಬಂಬಳಂಬಾಡಿ ಪಾಡಟಿದುಬ್ಬೆಗಂಬಟ್ಟಿರ್ದ (ವಡ್ಡಾರಾ. ೩೯-೬) ; ಬಾಡಿ ಪಾಡಟಿದು ಬಟಲ್ದು ಜೋಲ್ದಿರವು . . . ಕನ್ನಡಿಸಿದಪ್ಪುವು ಕನ್ನೆಯ ಕನ್ನೆವೇಟವುಂ (ಶಂಖಪು. ೪-೬೦) ; ಹೂಡಿದಂಬಿನ ತೋಳ ತೆಗಹಿನ ಬಾಡಿದುತ್ಸಾಹದ ವಿಕಾಳದ ಬೀಡಿಕೆಯ ಬೇಳುವೆಗೆ ಬೆಬ್ಬಳೆವೋದನಾ ಪಾರ್ಥ (ಕುಮ್ಯಾಳ. ೦೪-೦೦).

[ದೇ. ॥ ತಮಿ. ವಾಟು, ವಾಟ್ಟು ; ಮಲ. ವಾಟುಕ, ವಾಟ್ಟುಕ; ತುಳು. ಬಾಡು ; ಕೊಡ. ಬಾಡ್ ; ತೆಲು. ವಾಡು ; ಪರ್ಜಿ. ವಾಡ್]

**ಬಾಡು₂** (ನಾ). ೧. ಅಡಗು ; ಮಾಂಸ : "ಅಡಗು, ಬಿಕ್ಕ, ಬಾಡು— ಈ ೩ ಮಾಂಸಂ" (ಕಕಾ. ೩೨-೦೨೩) ; ಲೇಸಾಗಿ ಬೆಂದ ಬಾಡಂ ಬಾಸಣಿಸಿಟ್ಟದನೆಯಮೃತಮತಿಗಟ್ಟಿಸಿದಂ (ಯಶೋಧ. ೩-೬೦) ; ಸಗರ್ವಭೀಮನ ಬಾಡ ಕೊಯ್ಕೊಯ್ದು ಮರುಳ ಬಳಗವ ತಣಿಸಿದಡೆ ಹಿರಿಯರಸರಲಿ ಸಂಧಾನವೆಂಬ್ಬೆ (ಕುಮ್ಯಾಗ. ೫-೨೯) ; ಜೀಮೂತವಾಹನ . . . ತನ್ನೊಡಲ ಬಾಡ ಗರುತ್ಮನಿಗಿತ್ತು ಸತ್ಕೀರ್ತಿಯ ನಾಡೊಳು ಪಡೆದುದನಟಿಯಾ (ಸೋಹಕ. ೫-೫೩) ; ಸೊಕ್ಕಿದೀ ಬಾಲ ಹೆಮ್ಮಾರಿ ಕಾಲಿನಂತೋಡದಿದು ; ಹಲ್ಗಳೊಲು ಕಡಿಯದಿದು ; ನಾಲಗೆಯ ತೆರ ಬಾಡ ಸವಿ ತಿಳಿಯದು (ಕುಪು. ೪೩-೬). ೨. ತರಕಾರಿ ; ಕಾಯಿಪಲ್ಯ : ಹೆಡಗೆಗೆ ವೊಂದು ಹಿಡಿ ಬಾಡು (ಬೂಂಕಶಾ. ೦೯೩೮, ಇಂಡಿ. ೪೬-೦೦ ; ?). 'ಬಾಡುಕಾಯ್' ಪರಾ. ೩. ಊಟದ ಮಧ್ಯೆ ಮಧ್ಯೆ ನಂಜಿಕೊಳ್ಳಲು ಬಳಸುವ ಹುರಿದ ಅಥವಾ ಕರಿದ ಮಾಂಸ, ತರಕಾರಿ ಮುಂತಾದುವುಗಳಿಂದ ಮಾಡಿದ ಪದಾರ್ಥ : ತುಪ್ಪಮುಂ ಪಲವೂ ತೆಱದ ಬಾಡು[ಪಾಠಾಂ. ಶಾಕಂ]ಗಳುಂ ತುಯ್ಯಲುಂ . . . ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ . . . ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ (ವಡ್ಡಾರಾ. ೬೪-೦೬) ; ಆ ಪರದಂ ಕೂಟುಂ ಕಲಸಿ ಪಲವುಂ ಬಾಡುವೆರಸಿ ಕೂಟನೊಂದು ದಳಿಂಬದ ಕಪ್ಪಟದೊಳ್ ಕಟ್ಟಿ ಕೊಟ್ಟಡೆ (ಬಾಹಂ. ೦೪-೩೦ ಶ). [ದೇ. ॥ ತಮಿ. ಪಾಟ್ಟು; ತುಳು. ಬಾಟಣೆ]

**ಬಾಡು₃** (ನಾ). ೧. ತೆರೆ ; ಮರೆ : ಕೃಷ್ಣನುಯಿಲ್ಲ ಪೋದನುಯೆನುತ್ತೆ ನಲ್ಲೆಯರು ಕೈಗಳನು ಹೊಸಕೊಳುತ ಬಾಡ ಮರೆಯಲ್ಲಿ ಮರೆಗೊಂಡಿರ್ಪನೆಂದು ಪೊಕ್ಕರಸಿ ಕಾವೆಲ್ಲ[ವಲ್ಲಿ] ಕಾಣದೆ ಮರಳಿ ಬಂದು (ಚಚಸೋ. ೦೦ ೩೪). 'ಪಂಬಾಡು' ಪರಾ. ೨. ಗುಡಾರ ; ತಂಬು : ಸುತ್ತುವಳೆಯುವರಿ[ಲಿ] ಶುಭ್ರಪಚ್ಚಡಗಳಲಿ ರಚಿತ ಪೊಸಬಾಡನುರೆ ಬಂಧಿಸಿದರು (ನವಮೋ. ೩೯-೬೬). [← ತೆಲು. ಬಾಡು./ ಮರಾ. ಬಾಡ್]

**ಬಾಡುಂದಳಿರ್** (ನಾ). ಒಣಗಿದ ಎಲೆ ; ಮುರುಟಿದ ಚಿಗುರು : ಬಟ್ಟೆವೋಪರ್ಬಟಲ್ಕೆಗಟಿದುದನಟಿಪುವ ಬಾಡುಂದಳಿರ ಪಾಸಿಕೆಗಳುಮಂ (ಕಾದಂಬ. ೨೬೬). [ಬಾಡು₁ + ತಳಿರ್₂]

**ಬಾಡುಕಟ್ಟು** (ಕ್ರಿ). (ಹೊಲಗದ್ದೆಗಳ ರಕ್ಷಣೆಗಾಗಿ ಸುತ್ತಲೂ ಬಾಡಿದ ಸೊಪ್ಪು, ರೆಂಬೆ ಮುಂತಾದುವುಗಳಿಂದ) ಬೇಲಿಯನ್ನು ಕಟ್ಟು : ಗಿಡಗಳು ದೊಡ್ಡವಾಗುವವರೆಗೂ ಸುತ್ತಲೂ . . . ಈಚಲುಬರಿಗಳಿಂದಾ

ಗಲಿ ಕರಕಲ ಕಟ್ಟಿಗೆಯ ಬರಿಗಳಿಂದಾಗಲಿ ತಟ್ಟಿಗಳನ್ನು ಹೆಣೆದು ಸುತ್ತಲೂ ಬಾಡು ಕಟ್ಟಿದ ಹಾಗೆ ಕಟ್ಟಿ ಚಾಟು ಮಾಡಬೇಕು (ಕೃಶಿಕ್ರ. ೦೬೩).
[ ಬಾಡು$_0$ (ಪ ← ತುಳು. ಬಾಡು = ಬೇಲಿ) + ಕಟ್ಟು$_{1}$ ]

**ಬಾಡುಕಾಯ್**, ಬಾಡುಕಾಯಿ (ನಾ). ತರಕಾರಿಯಾಗಿ ಉಪಯೋಗಿಸುವ ಕಾಯಿ : ಬಾಡುಕಾಯೆಂಬಿವು ಭಂಡಿಗೆ ಹತ್ತು ತಲೆವೊಜಿಗೆ ನಾಲ್ಕಕ್ಕುಂ (ಎಇ. XIX. ೩೩-೩೦ ; 1135); ಶಾಕಶಾಕಟಂ, ಶಾಕಶಾಕಿನಂ_ ಈ ೨ ಬಾಡುಕಾಯ ತೋಂಟಂ (ಹಲಾಯು. ೨೭-೯); ಮಾರುವ ಹೆಡಗೆಯ ಹಣ್ಣುಹಂಪಲ್ ಬಾಡುಕಾಯ್ಗೆ ಹಿಡಿಬಾಡು ಹಿಡಿಹಣ್ಣಂ ಕೊಟ್ಟರ್ (ಎಇ. V. ೨೦-೩೯; 1161). **ಬಾಡುಕಾಯಿ:** [ಬೋವ]ಕ್ಕಳು ತಂದು ಮಾರುವ ಬಾಡುಕಾಯಿಗೆ ಶಿಪ್ಪೆಸುಂಕವ ಕೊಟ್ಟರು (ಸೌಇಇ. XX. ೨೪೮-೭೩; 1228).
[ಬಾಡು$_2$ + ಕಾಯ್$_4$]

**ಬಾಡುಕಾಯಿ** 'ಬಾಡುಕಾಯ್' ನೋ.

**ಬಾಡುಣಿ** (ನಾ). ಮಾಂಸವನ್ನು ತಿನ್ನುವಂಥದು; ಭೂತ; ಪಿಶಾಚಿ : ಓಡಂ ಪಿಡಿದಿರ್ದೊಡೆಯುಂ ಬಾಡುಣಿಗಳ ಕೂಡಿ ಬೆತ್ತಲೋಡಾಡಿಯು ನೀಂ ಬೇಡಿದ ವರಗಳ ನೀಡುವೆ (ಶಂಶತ. ೪-೧೦). [ಬಾಡು$_2$+ –ಉಣಿ]

**ಬಾಡುಬಕ್ಕ** 'ಬಾಡಬಕ್ಕ' ನೋ.

**ಬಾಡುಬುಕ್ಕ** 'ಬಾಡಬಕ್ಕ' ನೋ.

**ಬಾಡುಮೋಱೆ** (ನಾ). ಮಂಕಾದ ಮುಖ; ಕಾಂತಿಹೀನವಾದ ಮುಖ : ಭೀತಿಯಲಿ ಬಾಡುಮೋಱೆಯನೆತ್ತಿ ಕೈಗಳ ನೀಡಿ ಕಂಗಳ ಮುಚ್ಚಿ . . . ಬೆಚ್ಚಿದನಡಿಗಡಿಗೆ ಭೀಮ (ಕುವ್ಯಾಆ. ೧೦-೩೬). [ಬಾಡು$_1$ + ಮೋಱೆ]

**ಬಾಡೆ** 'ಬಾಡ' ನೋ.

**ಬಾಣ$_1$** 'ಬಾಣೆ' ನೋ.

**ಬಾಣ$_2$**, ವಾಣ$_1$ (ನಾ). ಒಬ್ಬಾತನ ಹೆಸರು: 'ಬಾಣರಸ', 'ಬಾಣಸಾಮಿ' ಪರಾ. **ವಾಣ$_1$** : ಪ್ರಶಿಪನ್ನಮಂದರಂ ವಾಣಸ್ಕನ್ವಯಪುರಂದರಂ . . . ಶ್ರೀಮನ್ಮಹಾಪ್ರಧಾನಂ ಕಿಡಿತವೆರ್ಗ್ಗಡೆ (ಕಇಆ. ೭-೩-೨೬೨; 1062). 'ವಾಣರಸ' ಪರಾ.

**ಬಾಣನ ಪಳ್ಳಿ** = ಒಂದು ಊರಿನ ಹೆಸರು : ದೇವಕೊಮಾರನುಂ ಧೋರನುಮಿಬ್ಬಾರರಪೆ ಬಾಣನ ಪಳ್ಳಿಯ ಕೊಣ್ಡು ಶ್ರೀ ಕೇಸಿಗ × × × ತಲೆಸೆಱೆಯಲು ಕಟ್ಟನ್ ಕಟ್ಟು ವುದಕ್ಕೆ ಕೊಟ್ಟ ಸ್ಥಿತಿಕ್ರಮವೆಂತುವೆಂದೊಡೆ (ಎಕ: III. ಶ್ರೀರಂಗ. ೦೪೬-೦೨; 904 ?). **ಬಾಣರವಾಡಿ** = ಒಂದು ಸ್ಥಳದ ಹೆಸರು : ಗಂಗವಾಡಿ ತೊಮ್ಬತ್ತಱುಸಾಸಿರವುಂ ಬಾಣರವಾಡಿ ಪನ್ನಿಚ್ಛಾಸಿರದ ಬಳಂಜಮೆಲ್ಲ ಸೆರೆದು (ಎಕ. X (8). ಮುಳಬಾ. ೩೦೬-೩; ಸು. 950).

**ಬಾಣ$_3$** (ನಾ). ೧. ಬಿಲ್ಲಿಗೆ ಹೂಡಿ ಬಿಡುವ ಅಸ್ತ್ರ ; ಅಂಬು; ಕಣೆ : " ಚಿತ್ರಪುಂಖಂ ಮಾರ್ಗಣಂ ಬಾಣಂ . . . ಕಾಂಡಮೆಂದೆನಲ್ಕಂಬೆನಿಕ್ಕು" (ಮಂಗರಾ. ೩೬-೩೪); ಗುಣಾರ್ಣವಂ ಮತ್ತಮೈಂದ್ರ ವಾರುಣವಾಯವ್ಯಾಗ್ನೇಯಪಾರ್ವತಾದಿ ಬಾಣಂಗಳಂ ತುಡೆ (ಪಂಪಭಾ. ೨-೭೬ ವ); ಐದುಬಾಣವ ಕೊಂಡು ಯಂತ್ರದ ಹೊಳಹನೀಕ್ಷಿಸಿದ (ಕುವ್ಯಾಆ. ೦೫-೨೬) ; ವನಜಾಕ್ಷಿ . . . ನಂದನನ ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆಬಾಣ ತಾಗಿದ ಹುಲ್ಲೆಯಂತೆ (ಬೋಹತ. ೯-೭೯). ೨. ಶಬ್ದ ; ಸದ್ದು : ಶಬರಶಬಲ ಬಾಣಮಯ ಬಾಣಮಯ ಬಾಣಮಯವಾಗಿ ಕಾವನಂ ಕಣ್ಗೆಸೆದುದು (ಪಕಾ. ೫-೦೬). ೩. ಬೆಂಕಿ ; ಅಗ್ನಿ : ಮೇಲಿನ ' ಹಚಕಾ ' ಪ್ರಯೋಗವನ್ನು ನೋಡಿ. ೪. ಒಂದು ಬಗೆಯ ಸಸ್ಯ ; ನೀಲಿಗೋರಂಟೆ : " ನೀಲೀ, ಝಂಟೀ, ಬಾಣಃ_ಈ ೩ ಕರಿಯ ಗೋರಂಟೆ " (ಹಲಾಯು. ೩೯-೫೨). ೫. ಈಶ್ವರ ಸಂಕೇತವಾದ ಲಿಂಗಾಕೃತಿಯಲ್ಲಿ ಪಾಣಿಪಟ್ಟಲಿನ ಮೇಲೆ ಕಾಣುವ ರುಬ್ಬುಗುಂಡಿನಾಕಾರದಲ್ಲಿರುವ ಭಾಗ ; ಅವರು ಶಿವಲಿಂಗದ ಬಾಣವೇ ಪುರುಷಚಿಹ್ನೆಯೆಂದೂ ಅದರ ಕೆಳಗಿರುವ ಯೋನಿಯೇ ಶಕ್ತಿಯೆಂದೂ ಹೇಳುತ್ತಾರೆ (ಭಾರದ. ೨೦೬). ೬. ಶಿವಭಕ್ತನಾದ ಒಬ್ಬ ರಾಕ್ಷಸರಾಜ; ಬಲೀಂದ್ರನ ಮಗ : ಏನು ಕಾರಣ ನೀವು ಬಾಣನ ಬಾಗಿಲ ಕಾಯ್ದಿರಿ (ಬಸವ. ೭೪೨); ಸಂಬಂಧಿ ಬಾಣನು ಹಾರೈಸುವೊಡೆ ನಿನ್ನ ಬೇಗೊರ್ಲೆಗೆ ಶಿವನಿಪ್ಪ ಕಾರಣಮಸಂಗತ್ವಮೋ ಪ್ರಾಪ್ತಮೆಂದು ಹರಿ ತನ್ನ ಸುತನಂ ಜಱೆದನು (ಜೈಮಿಭಾ. ೭-೪೦). ೭. ಹುಲ್ಲು : ತೃಣ. ೮. ಹರ್ಷವರ್ಧನನ ಕಾಲದಲ್ಲಿ ಕಾದಂಬರೀ. ಹರ್ಷಚರಿತಗಳೆಂಬ ಕಾವ್ಯಗಳನ್ನು ಬರೆದ ಒಬ್ಬ ಪ್ರಸಿದ್ಧ ಸಂಸ್ಕೃತಕವಿ : ಬಾಣಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗಬ್ಜೋದ್ಭವಂ ಜಾಣಂ ಬಾಣೆಯೆನಿಪ್ಪದೊಂದು ಪೆಸರಂ ಮುನ್ನಿತ್ತಂ (ಕಾದಂಪೂ. ೩). ೯. ದೀಪಾವಳಿ ಮುಂತಾದ ಹಬ್ಬದ ದಿನಗಳಲ್ಲೂ ಸಂತೋಷಸಮಾರಂಭಗಳಲ್ಲೂ ಹಾರಿಸುವ ಹೂಬಾಣ ಮುಂತಾದ ಸಿಡಿಮದ್ದು : ಬುದ್ಬುದ ನಾನಾ ಚಿತ್ರಭೆ ತೋರುವ ಬಾಣ ಬಿರಿಸು ಬಹಳಿನಲಿ (ಜದಾವ. ೦೪೩-೬); ಹಗಲುಬತ್ತಿಯು ಬಾಣಬಿರಿಸು ಮಹತಾಪುಗಳು (ಕೃಷ್ಣಏ. ೩-೦೦); ಬಾಣ ಬಿರುಸು ರಂಭೋಲುಪಾದ್ಯ (ಹುಬ್ಬಹ. ೧೦). ೧೦. ಒಂದು ಬಗೆಯ ಬಟ್ಟೆ,-ವಸ್ತ್ರ. ೧೧. [ಗಣಿತ]ಐದು ಎಂಬ ಸಂಖ್ಯೆಯ ಸಂಕೇತ : ಕ್ಷೋಣೀಶ ವಾಯು ದಿನೇಶ ರುದ್ರನುಂ ಬಾಣಸ್ಥಾನದೊಳಾಗೆ ವಿಶ್ರಮಂ ಜಾಣಂ ನಿಲ್ತಿರೆ ಸಂದುದಲೆ ಕಲ್ಯಾಣಂ (ಛಂದೋಂಬು. ೨-೦೦೨); ಹಿಮಕರ ಬಾಣೇಂದುವಾಗಲಾ ಪುಷ್ಪತೆಯಂ ವಿಪ್ರ ೧ ಕೆ ತಾವರೆಪುಷ್ಪ ೯ ಕೊಡುತ್ತಿರಲು (ಭಾಸ್ಕರ. ೦೬-೬); "ಎಲ್ಲ ಶರದೊಳು ತೃಣದೊಳಸುರನೊಳು ಗೋರಟೆ[ಶಾಕಾಂ.. ಗದೆ]ಯೊಳುಂ ಬಾಣಶಬ್ದಮಕ್ಕುಂ " (ಮಂಗರಾ. ೦೪೮-೪೦); " ಪುಲ್ಲು ವಸನ ದೈತ್ಯ ಸಂಖ್ಯೆ ಶರ ಗೋರಟೆ ಎಂಬಿವು ಬಾಣ ವಾಚಕಂ " (ನಾನಾರ. ೮). ೧೨. [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ಅಕ್ಷರವೃತ್ತ : ' ಬಾಣವೃತ್ತ ' ಪರಾ.
[ಸಂ.]

**ಬಾಣಂತನ** 'ಬಾಣಂತಿತನ' ನೋ.

**ಬಾಣಂತಿ** 'ಬಾಳಂತಿ' ನೋ.

**ಬಾಣಂತಿಕಾಯಿ** (ನಾ). ಪಗಡೆಯಾಟದಲ್ಲಿ (ಬಾಣಂತಿಯಂತೆ) ಪೇಲವವಾಗಿರುವ ಕಾಯಿ ; ಹಳದಿಕಾಯಿ : ದುಗವನೆಸೆ ಭಾರಗಳನಿಡುಯಿಡು ನೆಗೆದು ಹೊಯ್ ಬಾಣಂತಿಕಾಯ್ಗಳ ಚಿಗುಟಬಿಡು ಹಸುರ (ಅಂಬಿಗಾ. ೪೮-೭೦). [ ಬಾಣಂತಿ (< ಬಾಳಂತಿ) + ಕಾಯಿ$_4$ (< ಕಾಯ್$_4$) ]

**ಬಾಣಂತಿಖಾರ** (ನಾ). ಬಾಣಂತಿಗೆ ಪ್ರತಿದಿನ ತಿನ್ನಲು ಕೊಡುವ, ಪುಷ್ಟಿಕರವಾದ ಔಷಧೀದ್ರವ್ಯಗಳಿಂದ ಕೂಡಿದ ಒಂದು ಬಗೆಯ ಖಾರಪದಾರ್ಥ : ಮೆದುವಲ್ಲ ಸಿಹಿಯಿಲ್ಲ ಹಾಲುಬಾಯಿಯಪೋಲು ಬಾಣಂತಿಖಾರವೂ ಚಾಳು (ಇಂಚಾಕ. ೮೭-೨೪).
[ಬಾಣಂತಿ (< ಬಾಳಂತಿ) +ಖಾರ$_1$ (< ಕಾರ$_2$). /ಮರಾ. ಬಾಳಂತಕಾಢಾ]

**ಬಾಣಂತಿಜ್ವರ** (ನಾ). ಸಾಮಾನ್ಯವಾಗಿ ಹೆರಿಗೆಯಾದ ಹತ್ತು ದಿನಗಳಲ್ಲಿ ಬಾಣಂತಿಗೆ ಬರುವ ಜ್ವರ : ಜನನಾಂಗಗಳ ಸೋಂಕುರೋಗ ಬಾಣಂತಿ ಜ್ವರಕ್ಕೆ ಬಹಳಷ್ಟು ಪ್ರಮುಖ ಕಾರಣ (ಕವಿಕೋ. XII. ೨೬).
[ಬಾಣಂತಿ (< ಬಾಳಂತಿ) + ಜ್ವರ]

**ಬಾಣಂತಿತನ**, ಬಾಣಂತನ, ಬಾಲಂತಿತನ (ನಾ). ೧. ಹೆರಿಗೆಯಾದವಳಿಗೆ ಮಾಡುವ ಆರೈಕೆ,_ಉಪಚಾರ : ನನ್ನ ಬಾಣಂತಿತನ ಮಾಡಿದವಳು ಅತ್ತೆಯೇ (ಸ್ವಕಿಜ. ೭೬) ; ಎರಡನೇ ಬಾಣಂತಿತನಕ್ಕಾಗಿ ತವರೂರಿಗೆ ಹೋಗಬೇಕೆಂದು ರಮಾದೇವಿಯ ಮನಸ್ಸಿನಲ್ಲಿತ್ತು (ಸ್ಕೂಲಖ. ೨೨೯). **ಬಾಣಂತನ** : ೧. ಬಾಣಂತನ ಯಾರು ಮಾಡುವರಪ್ಪಾ ? ತಾಯನ್ನೂ ದೂರ ಮಾಡಿದ್ದಾನೆ (ಪಿಕಲು. ೨೫೦) ; ತನ್ನ ಬಾಣಂತನಕ್ಕೆ ತನ್ನ ತಾಯಿ,

ವಾತ್ಸಲ್ಯದೇವಿ ಬರಬಹುದೇ ? (ವಾತ್ಸಲ್ಯ. ೩೭೨). ೨. ಬಾಣಂತಿಯಾಗಿರುವಿಕೆ : ಇಂಥಾ ದಿನಗಳಲ್ಲಿ ವರ್ಷಕ್ಕೊಂದು ಬಾಣಂತನವು ಬೇರೆ ! (ಕೃಡಸ. ೩). **ಬಾಲಂತಿತನ** : ೧. ಬಾಲಂತಿತನಕ್ಕಾಗಿಯೇ ಎಂದು ಬೇವಿನ ಗಿಡದ ಬುಡದಲ್ಲಿ ಹಾಕಿದ ಗುಡಿಸಲಿನಲ್ಲಿ ತಾಯಿ ಶಚೀದೇವಿಯಿಂದ ಅವತರಿಸಿದನು (ಗೌರಾಂಗ. ೬). [ಬಾಣಂತಿ (< ಬಾಳಂತಿ) + — ತನ]

**ಬಾಣಂತಿಬೋಳ** (ನಾ). ಬಾಣಂತಿಯರಿಗೆ ಔಷಧಿಯಾಗಿ ಕೊಡುವ ಕರಿಬೋಳ ಎಂಬ ಸಸ್ಯದ ಅಂಟು : ಲವಂಗಪತ್ರಿ ೧/೨ ಪಾವು. ಬಾಣಂತಿಬೋಳ ೧/೨ ಪಾವು . . . ಇಡಿದು ವಸ್ತ್ರಗಾಳಿತವಂ ಮಾಡಿ . . . ತಾರೆಕಾಯಿಪ್ರಮಾಣವಂ ತೆಗೆದುಕೊಳ್ಳಲು ಸಮಸ್ತಪೈತ್ಯವ್ಯಾಧಿ . . . ಪರಿಹರವಕ್ಕುಂ (ಸಕವೈ. ೦೩೩).

[ಬಾಣಂತಿ(< ಬಾಳಂತಿ) + ಬೋಳ್ಳ (< ಬೋಟ್ಬ)./ಮರಾ. ಬಾಳಂತಬೋಳ]

**ಬಾಣಂತಿಸನ್ನಿ** (ನಾ). ಬಾಣಂತಿಗೆ ಜ್ವರದಿಂದುಟಾಗುವ ಸನ್ನಿಪಾತ : ತುಮುವೆ:—ಈ ಬೇರಂ ನರಮೂತ್ರದಿಂದ ಅರೆದು ತೆಗೆದುಕೊಳ್ಳೆ ಬಾಣಂತಿಸನ್ನಿ ಹರ (ವಿವೈಶಿ. ೪); ಪುತ್ರಜೀವಿ ತಿರುಳು, ಬೇವಿನ ಬೀಜದ ತಿರುಳು . . . ನಿಂಬೆಹುಳಿಯಲ್ಲರೆದು ನಾಲಗೆಗೆ ಲೇಪ ಮಾಡೆ ಸುಖಸನ್ನಿದೋಷಂ ಮಾಣ್ಗುಂ ; ಬಾಣಂತಿಸನ್ನಿ, ತಲೆಯ ಪಿತ್ತ ಸಹ ಕೆಡುಗುಂ (ಸಕವೈ. ೦೬೧). [ಬಾಣಂತಿ (< ಬಾಳಂತಿ) + ಸನ್ನಿ]

**ಬಾಣಂತಿಸೂಳೆ**, ಬಾಣತಿಸೂಳೆ (ನಾ). ಇನ್ನೂ ಬಾಣಂತಿಯಾಗಿರುವ ವೇಶ್ಯೆ ; ಕೂಸುಳ್ಳ ಸೂಳೆ : ಹೆತ್ತ ಶಿಶುವಿಂಗಲ್ಲ ವಿತ್ತವನಿತ್ತ ವಿಟನಿಂಗಲ್ಲದೆಡೆಯಾಡುತ್ತಲಿಹ ಬಾಣಂತಿಸೂಳೆಯ ಚೇಷ್ಟೆಯಂದದಲಿ ವ್ಯರ್ಥವಾಗಿಯೆ ಕೆಡುವನಕಟಾ ಮರ್ತ್ಯನೆತ್ತಲು ಮುಟ್ಟ (ಅಮೃಕ. ೨-೦೦೬). **ಬಾಣತಿಸೂಳೆ** : ಬಾಣತಿಸೂಳೆಯಂತೆ ಸಿಡಿಮಿಡಿಗೊಂಡು ತಳಾಜನಂ ಕಂಡ ಕಳ್ಳನಂತೆ ಕುಸಿದು (ಧರ್ಮಾಮೃ. ೩-೨೩).

[ಬಾಣಂತಿ (< ಬಾಳಂತಿ) + ಸೂಳೆ$_1$]

**ಬಾಣಗಗೆಜಿ** (ನಾ). ಒಂದು ಕೆರೆಯ ಹೆಸರು : ಅನ್ತೆ ಬನ್ದು ಬಾಣಗಗೆಜಿಯ ಏರಿಯ ಮೇಗಣಿಂ (ಎಕ. III, ತಂಜನ. ೦೩೯-೨೨; 915 ?). [ಬಾಣಗ$_1$ + ಕೆಜಿ]

**ಬಾಣಗತ್ತಲು** (ನಾ). ಕಣೆಗಳ ದಟ್ಟಣೆಯಿಂದುಂಟಾದ ಕತ್ತಲೆ : ಹತ್ತು ಬಿಲ್ಲಲಿ ಸರಳ ಸುರಿದನದೆತ್ತ ನಭ ದೆಸೆಯೆತ್ತ ರಾಘವನೆತ್ತಲಂಬರ ಮಣಿಯ ಮುಸುಕಿತು ಬಾಣಗತ್ತಲದು (ತೊರಾ. ೨೨-೯೩). 'ಮೊಲಗಟ್ಟಿಲೆ' ಪರಾ. [ಬಾಣ$_3$ + ಕತ್ತಲು (< ಕಟ್ಟಲೆ) ]

**ಬಾಣಗಾಜಿ** (ನಾ). ಬಿಲ್ಲಿಗೆ ಕಣೆಗಳನ್ನು ಹೂಡಿ ಬಿಡುವವನು : ರಾಜರು ರಕ್ಕಸಮಾಂತರು ಲಾಳಿ ಬಲ್ಲೋಜರು ಪೆಟಲಂಬಿನವರು ತೇಜೋಮಯ ಬಾಣಗಾಜಿರೇಜಿತು ಖಗರಾಜನೆಜಿಂಕೆಯಿಕ್ಕಲದಿ (ಪೋಹಶ. ೩೬-೪೨). [ಬಾಣ$_3$ + — ಕಾಜಿ]

**ಬಾಣಗೇಹ** (ನಾ). ಕಣೆಗಳನ್ನಿಡುವ ಚೀಲ ; ಬತ್ತಳಿಕೆ ; ಮೂಡಿಗೆ : ಬಾಣಗೇಹನದ್ಯಂಬುಧಿಕಾನನಂ ಶರಧಿ ಎಂದೆನಿಕುಂ (ನಾವಾರ. ೦೨). [ಸಂ.]

**ಬಾಣಜಾತ** (ನಾ). ಕಣೆಗಳ ಸಮೂಹ : ಮುರಹರನ ಮೊಮ್ಮನಾಂ ಬೆಚ್ಚುವೊಡೆ ಬಿಡು ಹಯುವನಲ್ಲದೊಡೆ ನೋಡೆನ್ನ ಬಾಣಜಾತವನು (ಕೈಮಿಜಾ. ೨೩-೨೦). [ಸಂ.]

**ಬಾಣಜಾತೆ** (ನಾ). ಬಾಣಾಸುರನ ಮಗಳು; ಅನಿರುದ್ಧನ ಹೆಂಡತಿಯಾದ ಉಷೆ : ಬಾಣಜಾತವನೀಗ ನೋಡಲಿರ್ದಪುದೆ ನೀಂ ಬಾಣಜಾತೆಯ ರಮಣನು (ಕೈಮಿಜಾ. ೨೩-೨೦). [ಸಂ. ಬಾಣಜಾತಾ]

**ಬಾಣತಟ್ಟರ** (ನಾ). ಒಬ್ಬಾತನ ಹೆಸರು : ಬಾಣರಸರ್ ಪ್ರಿಥುವೀರಾಜ್ಯಂಗೆಯೆ ವಿಜಯಿತ್ತನಾಳು ಬಾಣತಟ್ಟರನ್ ತನ್ನ ಆಳು ಉಗೆ ಪೋಗಿ ಮಜುಬಪ್ಪೊಂಗೆ ಕುಂತಿಆಲದಲಿ ಕುದುರೆ ಏಜಿ ಬರುತಿರೆ ಗಣಮುರ್ತ್ತಿ ಎಚ್ಚೊಡೆ . . . ತಟ್ಟು ಸತ್ತ (ಸೌಇಇ. IX-i, ೬-೬; ೪ನೆಯ ಶಕ). [?]

**ಬಾಣತಿ** 'ಬಾಳಂತಿ' ನೋ.

**ಬಾಣತಿಸೂಳೆ** 'ಬಾಣಂತಿಸೂಳೆ' ನೋ.

**ಬಾಣದಾಯಕ** (ನಾ). (ಯುದ್ಧದಲ್ಲಿ ಯೋಧನಿಗೆ) ಕಣೆಗಳನ್ನು ತಂದು ಕೊಡುವವನು : ಹಡಪಿಗ ಚಮರ ಬಾಹೆಯ ಬಾಣದಾಯಕರ ಕರೆದು ಮನ್ನಿಸಿ . . . ರಣಸುಮ್ಮಾನದಲಿ ಹೊಗರೇಜಿದನು ಕರ್ಣ (ಕುವ್ಯಾಕ. ೨೦-೩). [ಸಂ.]

**ಬಾಣಧಿ** (ನಾ). = ಬಾಣಗೇಹ : ಅಂತಮೋಘಬಾಣಮುಂ ಬಾಣಧಿಯಿಂದುರ್ಚಿಕೊಂಡು ಪುರುಪರಮೇಶ್ವರಪುತ್ರಂ ಭರತೇಶ್ವರಚಕ್ರವರ್ತಿ ಬಂದಿರ್ದಂ (ಆದಿಪು. ೦೨-೯೮ ವ) ; ಲುಬ್ಧಕರ್ತಂಡದೆ ಸುತ್ತಿ ಮುತ್ತೆ ಗೊಲೆಗೊತ್ತಿದನೇ ಧನುವಂ ಸರಲ್ಗಳಂ ಕೊಂಡನೆ ದಿವ್ಯಬಾಣಧಿಯಂ . . . ಜನಾರ್ದನಂ (ಶಂಣಪು. ೬-೦೦೩). [ಸಂ.]

**ಬಾಣಪಂಚಕ** (ನಾ). ಐದು ಕಣೆಗಳನ್ನುಳ್ಳವನು ; ಕಾಮ ; ಮನ್ಮಥ : ಬಾಣಪಂಚಕಭಸ್ಮಧಾರಣ ಪರಾಕು (ಪಪವೋ. ೨೪-೯೦); ಬಾಣಪಂಚಕಗಿತ್ತು ಚೆಲ್ವನು . . . ಜಾಣರೆಲ್ಲರಿಗೊಡೆಯನಾದ ನಿರ್ವಾಣಲಕ್ಷ್ಮೀಕಾಂತರೀಗೆ ಮಗಿಷ್ಟಸಿದ್ಧಿಯನು (ನಾಗಚ. ೦-೦). [ಸಂ.]

**ಬಾಣಪೀಠ** (ನಾ). ಈಶ್ವರಸಂಕೇತವಾದ ಲಿಂಗಾಕೃತಿಯಲ್ಲಿ (ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ) ಲಿಂಗದ ಸುತ್ತಲೂ ಇರುವ ತಗ್ಗಾದ ಪೀಠ : ಸ್ಫುರಿತರುಚಿರಸ್ಫಟಿಕಲಿಂಗವು ಬಾಣಪೀಠದಲಿ ಸ್ಫುರಿತರುಚಿರಸ್ಫಟಿಕಪೀಠಕೆ ಸುರುಚಿರೋನ್ನತ ಬಾಣಲಿಂಗವು ಕರಮೆಸೆವುತಿರೆ ಸುಪ್ರತಿಷ್ಠಿತವಾದವೆಯಿತೆಂದು (ಬಸಪು. ೫೬-೬೬). 'ಬಾಣಲಿಂಗ' ಪರಾ. [ಸಂ.]

**ಬಾಣಪ್ರಯೋಗ** (ನಾ). ಕಣೆಯನ್ನು ಎಸೆಯುವುದು,—ಬಿಡುವುದು : ಬಾಣಪ್ರಯೋಗದಲ್ಲಿ ಲಾಘವ . . . ವಿಕ್ರಮ ಇವು ಯಾವುದರಲ್ಲೂ ಅರ್ಜುನನು ನನಗೆ ಸಮನಲ್ಲ (ವಚಭಾ. ೨೯೩). [ಸಂ.]

**ಬಾಣಬೆಟ್ಟು** (ನಾ). ಎತ್ತರದ ಪ್ರದೇಶದಲ್ಲಿರುವ ಗದ್ದೆ : ಬಾಣಬೆಟ್ಟಿನಲ್ಲಿ ಬಿದ್ದು ಸುಟ್ಟು ಸಾಯುಂ ಅಂತಿಯಾ ? (ಪಠಾವ. ೩೬).

[ಬಾಣ$_1$ (< ಬಾಣ) + ಬೆಟ್ಟು$_2$ (< ಬೆಟ್ಟ). / ತುಳು. ಬಾನೆಬೊಟ್ಟು]

**ಬಾಣರಸ**, ವಾಣರಸ (ನಾ). ಒಬ್ಬಾತನ ಹೆಸರು : ಮಹಾರಾಜರು[೦] ಬಾಣರಸರುಂ ಸೋರೆಪುಟಿ ಕೋಟ್ಟಂ(ಕೋಟ್ಟ) ಯಿಟ್ಟಲ್ಲಿ (ಎಇ. XXIV, ೧೯೦-೩; ಶ. 885) ; ಪೊಮ್ಬಲ್ಲಮೊಡೆಯುಮಗ್ಗ್ರ್ ಪಾಡಿಯೊಳೊಡ್ಡಿ ಬಾಣರಸರುಳ್ ಕಾದಿ ಪಲರನಿಜಿದು ಬಿಟ್ಟು ಬೀರಲೋಕಮೆಯ್ದಿದ (ಎಕ. X, ಕೋಲಾರ. ೬೯-೦೦ ; ಶ. 890). **ವಾಣರಸ** : ಸ್ವಸ್ತಿಗುವಳಾಲಂ ಗೊಂಗುಂ ವಾಣರಸ ಆಳೆ (ಎಕ. X, ಮುಳಬಾ. ೨೬೩-೦; ಶ. 860).

[ಬಾಣ$_2$ + ಅರಸ$_1$]

**ಬಾಣರಾಸ** (ನಾ). ಒಬ್ಬಾತನ ಹೆಸರು : ಸಪ್ರತಿಹಾರೀಕ್ರಿಶ್ರಮಹಾ × × × ಮತ್ ಬಾಣರಾಸರ್ ಗಜ್ಜನಜಿ × × × ಳುತಿರೆ (ಎಕ. X (s), ಬಾಗೇಪ. ೬೬-೩; ಶ. 820).

[೯ ಇದು 'ಬಾಣರಸ' ಎಂಬುದರ ಅಪಲಿಖಿತ]

**ಬಾಣರಾಸಿ** 'ಬಾರಣಾಸಿ' ನೋ.

**ಬಾಣಲಿ**, ಬಾಂಡಲಿ, ಬಾಂಡಲೆ, ಬಾಂಡ್ಲಿ, ಬಾಂಡ್ಲೆ, ಬಾಣಲೆ, ಬಾಳಣಿ, ಬಾಳಲಿ (ನಾ). ಆಹಾರಪದಾರ್ಥಗಳನ್ನು ಕರಿಯಲು ಅಥವಾ ಹುರಿಯಲು ಬಳಸುವ, ಬಳಪದ ಕಲ್ಲು ಅಥವಾ ಲೋಹದಿಂದ ಮಾಡಿದ, ಅಗಲಬಾಯಿಯ ಒಂದು ಸಾಧನ : "ಅಂಬರೀಷಃ, ಭ್ರಾಷ್ಟ್ರಃ— ೨ . . . ಹುರಿಯುವ ಹೆಚು, ಬಾಣಲಿ"

(ಸಿದ್ಧಾಂಶಿ. ೨೬೩): ಕ್ಷೋಣಿಯೊಳೀ ಬಲ್ಪಿಸಿಲಿಂದೆ ಕಡುಗಾದ ಬಾಣಲಿ ಯಣ್ಣೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ದುದು ವನಚರಶ್ರೇಣಿ ಬೆಂಡೆದ್ದು ತೇಲಿದುವು (ಪೋಚಕ. ೦೯-೪೩); ಬೀದಿ ಮಗ್ಗುಲಲ್ಲಿ ಬಾಣಲಿ ಇರಿಸಿಕೊಂಡು ಕರೀತಾರಲ್ಲಾ ಅಂಬೊಡೆ, ಅದರ ಹೆಸರು ಕೇಳಿದರೆ ಸಾಕು ಅವಳಿಗೆ ಬಾಯಲ್ಲಿ ನೀರು (ಕಂಗೂಂ. ೪೨). **ಬಾಂಡಲಿ :** ಬಾಂಡಲಿಯೊಳಗೆ, ಕಾದಿರುವ ಎಣ್ಣೆಯೊಳಕ್ಕೆ ಆಹಾರವನ್ನು ಹಾಕಿ ಕರಿಯಬಹುದು (ಗೃಹಂ. ೩೪). **ಬಾಂಡಲೆ :** ಏನು ಕಪ್ಪು, ಎಂತಹ ಆಕಾಶ_ಬಾಂಡಲೆಯನ್ನು ಮೇಲೆ ಕವಿಚಿದಂತೆ, ಏನು ನೀರವತೆ! (ರಾಜಾಪ. ೦೦೩). **ಬಾಂಡ್ಲಿ:** "ಬಾಣಲಿ (ಲೆ, ಬಾಂಡ್ಲಿ) ಭ್ರಾಷ್ಟ್ರ" (ಶಬ್ದಕೋ. ೩೦). **ಬಾಂಡ್ಲೆ:** ಕಾವಲಿ, ಬಾಂಡ್ಲೆ ಇಟ್ಟುಕೊಂಡು (೬ಕೆಮು. ೨). **ಬಾಣಾಲೆ :** "ಅಂಗಾರಶಕಟಿಯೆಂದರೆ ಬಾಣಲೆಯೆನಿಕ್ಕು" (ಶುಂಗಾ. ೬೩-೨೪); ಸಂಪಂಗಿ ಹೂಗಳನ್ನು ಬಾಣಲೆಯಲ್ಲಿ ಹೊಗೆ ಹೋಗದ ರೀತಿಯಲ್ಲಿ ಏಳಾವರ್ತಿ ಹುರಿದು ನಯವಾಗಿ ಅರೆದು ಜೇನುತುಪ್ಪದೊಡನೆ ಕೊಟ್ಟರೆ ಕೆಮ್ಮು ಹೋಗುವುದು (ಶಕೃ. ಹು. ೪೩೩); ಅವರ ಹೊಗಳಿಕೆ ಕೇಳಿ ಎದೆ ಕಾದ ಬಾಣಲೆ ! (ಕಕಬಂ. ೬೬-೬). **ಬಾಳಣೆ :** ಅವರ ನಾದಿನಿ ಅವರಿಗೆ ಹುಚು ಬಾಳಣೆ ಮುಂತಾದವುಗಳನ್ನು ತರಹೇಳಿದ್ದಳು (ಕೃಷಿಶ. ೩೪೨). **ಬಾಳಲಿ:** "ಖುಜೇಷ, ಓಷ್ಮಪಚನ-ಎಣ್ಣೆಯಲ್ಲಿ ಹಿಟ್ಟನಡುವ ಬಾಳಲಿ" (ಬಾಶಾ. ೪).
[ದೇ. ॥ ತಮಿ. ವಾಣಲಿ, ವಾಣಾಲಿ; ತುಳು. ಬಾಣಲೆ; ತೆಲು. ಬಾಣಲಿ]

**ಬಾಣಲಿಂಗ** (ನಾ). ೧. ನರ್ಮದಾನದಿಯಲ್ಲಿ ದೊರಕಿದುದೆಂದು ಭಾವಿಸಿ, ಶಿವಲಿಂಗವೆಂದು ಪೂಜಿಸುವ ಒಂದು ಬಗೆಯ ಬಿಳಿಯ ಶಿಲೆ : ಸ್ಫುರಿತರುಚಿರಸ್ಪಟಿಕಲಿಂಗವು ಬಾಣಪೀಠದಲಿ ಸ್ಫುರಿತರುಚಿರ ಸ್ಪಟಿಕಪೀಠಕೆ ಸುರುಚಿರೋನ್ನತ ಬಾಣಲಿಂಗವು ಕರವೆಸೆವುತಿರೆ ಸುಪ್ರತಿಷ್ಠಿತ ವಾದವೆಯಿಂತೆಂದು (ಶಿತ್ವ. ೩೬-೬೩) ; ವಾರಣಾಸಿಯಿಂದ ಬಾಣಲಿಂಗವನು ತರಿಸಿ ವಿಶ್ವೇಶ್ವರ ಲಕ್ಷ್ಮೀನಾರಾಯಣದೇವರ ಪ್ರತಿಷ್ಠೆಯನು ಮಾಡಿಸಿ (ಎಕ. X, ಗೌರಿಬಿ. ೩೪-೬ ; 1408). ೨. [ವೀಶೈ] ಒಂದು ಲಿಂಗಾಕೃತಿಯ ಹೆಸರು ; ಸ್ವಯಂಭುಲಿಂಗ, ಬಾಣಲಿಂಗ, ಚರಲಿಂಗ, ಸಂಕೀರ್ಣಲಿಂಗ ಮತ್ತು ಪ್ರಾಣಲಿಂಗವೆಂಬ ಐದು ಬಗೆಯ ಲಿಂಗಗಳಲ್ಲಿ ಒಂದು : ಸಜಂಗಿನಲಿ ಕಟ್ಟಿರ್ದ ಬದನೆಯ ಕಾಯಿ ನಿಮಿಷದಲಿ ಸಂಗಮೇಶ್ವರ ಬಸವರಾಜನ ಸಂಗಭಾವದಿ ಬಾಣಲಿಂಗ ಸುರಂಗಮಾದುವು (ಬಸಪು. ೯-೩) ; ಶೈವಸಿದ್ಧಾಂತಸಮ್ಮತಮಾದ ಪಂಚಲಿಂಗಾರ್ಚನದೊಳು ಸ್ವಯಂಭುಲಿಂಗ ಬಾಣಲಿಂಗ . . . ಪ್ರಾಣಲಿಂಗಮೆಂಬೈದಱೊಳಗೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಅರ್ಚನತತ್ಪರರಾಗಬೇಕೆಂದು ನಿಶ್ಚಯಿಸಲಕ್ಕುಂ (ಶಿವೇಕ. ೦೦೨). 'ಪಂಚಲಿಂಗ' ಪರಾ. [ಸಂ.]

**ಬಾಣಲೆ** 'ಬಾಣಲಿ' ನೋ.

**ಬಾಣವರ್ಷ** (ನಾ). ಅಂಬುಗಳ ಮಳೆ,—ವೃಷ್ಟಿ : ಅಶ್ವತ್ಥಾಮನು ಅರ್ಜುನನಿಗೆ ಅಡ್ಡವಾಗಿ ಬಂದು ಮೇಘವು ಮಳೆಗರೆದಂತೆ ಅವನ ಮೇಲೆ ಬಾಣವರ್ಷವನ್ನು ಕರೆದನು (ಶಕಥಾ. ೨೦೩). [ಸಂ.]

**ಬಾಣವೃತ್ತ** (ನಾ). [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ವರ್ಣವೃತ್ತ: ಸಭರಯಂ ಬರೆ ಬಾಣವೃತ್ತಮಕ್ಕುಂ (ಕೃಬಿಧಿ. ೫೦).
[ಸಂ.]

**ಬಾಣವೃಷ್ಟಿ** (ನಾ). = ಬಾಣವರ್ಷ : ಇಷ್ಟರೊಳ್ ಪ್ರಸಾದಸೌಮ್ಯದೃಷ್ಟಿಯಲ್ಲದೆ ವಿಷ್ಣುಪತಿ ಪೇಳು ಬಾಣವೃಷ್ಟಿ ಬೀಳ್ವುದೆ (ಶಾಕುಂತ. ೯೬ ೪೩೮). [ಸಂ.]

**ಬಾಣಶಯನ** (ನಾ). ಕಣೆಗಳ ಹಾಸುಗೆ ; ಶರಶಯನ : ಭೀಷ್ಮ . . . ನೋವಿನ ಕಳಕಳಿಕೆ ಧೃತಿಗೆಡದೆ ಮೆಱೆದನು ಬಾಣಶಯನದಲಿ (ಕುವ್ಯಾಭೀ. ೦೦-೨೩). [ಸಂ.]

**ಬಾಣಸ, ಬಾಣಸು** (ನಾ). ೧. (ಅಧಿಕಸಂಖ್ಯೆಯ ಜನರ ಭೋಜನ ಕೂಟಕ್ಕೆ ಉಪಯೋಗಿಸುವ) ದೊಡ್ಡ ಅಡುಗೆಮನೆ.–ಪಾಕಶಾಲೆ : "ಬಾಣಸ(ಸು) — ಮಹಾನಸ = ಪಾಕಶಾಲೆ" (ಶಬ್ದಕೋ. ೩೦) ; ಅರ್ಣವದೊಳ್ ನೀಂ ಮತ್ಸ್ಯನಾಗಲಾನಂದು ಸಮುದ್ಭವಿಸಿದೆನಪ್ಪೊಡದಂ ಗಾಣವಿಕ್ಕಿ ಬಾಣಸಕ್ಕೊಪ್ಪಿಸನೇ (ಜಗಂ. ೦೬-೩೪) ; ಅವರನೊತ್ತಿಟ್ಟ ಮನೆಯನೇವೊಗಳ್ವೆನದು . . . ಅಂತಕನ ನಗರ ಮೃತ್ಯುವಿನ ಬಲುಬಾಣಸದ ಹಂತಿ (ಶಕಾ. ೦೨-೨). ೨. ಅಡುಗೆ ; ಪಾಕ : ಸಿರಿಯಾಳನ ಮಗನ ಬಾಣಸವ ಮಾಡಿಸಿ ಉಣಲೊಲ್ಲದೆ ಕಾಡಿದೆ (ಬಸವ. ೬೪೦); ಸಿಡಿಲುವಕ್ಕಿಯ ಪಕ್ಕವನು ಕಿತ್ತಡಬಳದ ಬಾಣಸವ ಮಾಡುವ ಕಡುಗಲಿಗಳಾರುಂಟು (ಶ್ರೀಕುಂ. ೮-೦೩) ; ಹೆಣ್ಣಾಗಿ ಬಾಣಸದ ಪವಣಱಿದುದಿಲ್ಲಲಾ (ಕೃರಾಜ. ೨-೩೦). 'ಬಾಣಸಗೈ' ಪರಾ. ೩. ಅಡುಗೆಯ ಕೆಲಸ,—ಕಸುಬು : ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು (ಬಸವ. ೩೩೦). ೪. ಉಣಿಸಂ ; ಆಹಾರ ; ಭಕ್ಷ್ಯ : ಇಂದಿನ ಬಾಣಸಕ್ಕೆನ್ನಂ ನಿವೇದಿಸಿದಂ ದೇವರ್ ಕೈಕೊಳ್ಳಿಂ (ಶಂಕಶಂ. ೦೪೩-೩) ; ಅಂಜಬೇಡ ಮಹಾಸುಪನ ಬಾಣಸದ ಬೇಯಿಕೆ ರವಣಿ ಮೆಂಟೆಮಗೆ (ಕುವ್ಯಾಭೀ. ೦-೦೪) ; ಬೆರೆಕೆಯಲಿ ಜವನುಂಡು ಚೆಲ್ಲಿದ ಪರಿಪರಿಯ ಬಾಣಸಗಳೆಸೆದಿಹ ಹರಿಯಣದವೊಲು ಕಣ್ಗೆ ಕೌತುಕವಾಯ್ತು ರಣಭೂಮಿ (ಉತ್ತರಾ. ೨೦-೨೩). ೫. ಅಡುಗೆಮಾಡುವವನು ; ಅಡುಗೆಯವನು : ವಣಿಗ್ವರರ್ ಗಂಧಿಗರ್ ಬಾಣಸರ್ ತಾಂಬೂಲಿಗರ್ . . . ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರ್ (ಕಂಪು. ೪೬-೪೦). **ಬಾಣಸು :** ೧. ನೃಪೇಂದ್ರತನುಜಾತರ್, ನಿಶ್ಚಿತಂ ಪೊಕ್ಕರ್ ಪಸಿದ ಕೃತಾಂತನ ಬಾಣಸುವೊಲಿರ್ದ ಮಾರಿಯ ಮನೆಯಂ (ಯಶೋಚ. ೦-೩೩) ; ಲಲಿತ ಬೋನದ ವಿವಿಧ ಭಕ್ಷ್ಯಾವಳಿಯ ಬಾಣಸಿನೊ[ಪಾಠಾಂ. ಸದೊ]ಳಗೆ ಬಂದಳು ಮತ್ತಗಜಗಮನೆ (ಕುವ್ಯಾಭೀ. ೩-೩೬). ೨. ವಿರಾಟಂ . . . ನಿನ್ನ ನಾಳ್ವನೆಂದು ಬಾಣಸಿನ ಕರಣಕ್ಕೆ ನಿರೂಪಣಂಗೆಯ್ದಂ (ಶುಶಕಾ. ೬-೩೪ ವ) ; ಅಂತು ಮನೆಗಟ್ಟ ಬಾಣಸಿನ ಕೂಟಿಲ್ಲಮುನುಂಡುಮುವ್ವಾ ಪಸಿವು ಪೋಗದೆಂದಡರಿಸಿ ಚೋದ್ಯಂಬಟ್ಟು (ಬಿಂಹು. ೯-೨೮ ವ); ಅದೊಂದು ನೀಲಪರ್ವತಂ . . . ನಿಚ್ಚವಯಣಾಬರ್ಪ ಜಾತ್ರೆಯ ಜನರ ಬರ್ದಿನ ಪಗಲೂಟದ ಬಾಣಸಿನಾವಿಗೆಯು ತನಿಗೆಂಡದೋವರಿಯೆಂಬಂತು ತಟತಟನೆ ಪೊಳೆವ ರಂಗು ಮಾಣಿಕದಗಟ್ಟಿಯಿಂ . . . ಮನೋಜ್ಞಂ (ಕುವ್ಯಾಭೀ. ೬೨ ೨೩).

**ಬಾಣಸದ ಭವನ** = ಅಡುಗೆಮನೆ ; ಪಾಕಶಾಲೆ : ಸ್ವೈರಿಸರು ಬಾಣಸದ[ಪಾಠಾಂ. ಸಿನ] ಭವನದ ನಾರಿಯರು ದುರ್ಜನರು (ಕುವ್ಯಾಭೀ. ೩-೪೦) ; ಹನ್ನೆರಡುಯೋಜನತರದ ಭೋಜನಶಾಲೆಗಳು ವಿಸ್ತರಿಸಿದವು ಬಾಣಸದ ಭವನಂಗಳು ಸುವೀಥಿಯಲಿ (ಕೊರಾ. ೦-೬-೬). **ಬಾಣಸದ ಮನೆ, ಬಾಣಸಿನ ಮನೆ** = ಬಾಣಸದ ಭವನ : ಬಾಣಸದ ಮನೆ–ರಸವತಿ, ಪಾಕಸ್ಥಾನ, ಮಹಾನಸ" (ಬಾಶಾ. ೪) ; ಗುಹೇಶ್ವರ ನಿಮ್ಮ ಶರಣ ಕಟ್ಟಿದಿರ ಬಾಣಸದ ಮನೆಗೆ ಬಂದನು (ಅವಸಂ. ೦೪೩-೬೬೨) ; "ಪಾಕಸ್ಥಾನಂ, ರಸವತೀ, ಮಹಾನಸಂ—ಈ ೩ ಬಾಣಸಿನ ಮನೆ" (ಹಲಾಯು. ೪೯-೦೪೦) ; ಸಹಸ್ರಸಿಂಹಬಲನೆನಿಪ ಸಿಂಹಬಲನ[ನ]ಶ್ರಮದೊಳೆ ಕೊಂದು ಜವಂಗೆ ಬಾಣಸುಗೆಯ್ದಂದಿನಂದದೊಳೆ ಬಾಣಸಿನ ಮನೆಯೊಳ್ ಬಂದಿರ್ದಂ (ಕಂಶಕಾ. ೬-೬೯ ವ); ಕಳವಳದ ಕರಣದ ಮುಗುದೆ ಬಂದಳು ಬಾಣಸಿನ ಮನೆಗೆ (ಕುವ್ಯಾಭೀ. ೩-೩೩). **ಬಾಣಸದ ಶಾಲೆ** = ಬಾಣಸದ ಭವನ : ಮೃತ್ಯುವಿನ ಬಾಣಸದ ಶಾಲೆಯೋ ಸಮರಾಂಗಣವೊ (ಕೊರಾ. ೬-೩೬-೪೩).
[< ಸಂ. ಮಹಾನಸ. / ಪ್ರಾ. ಮಹಾಣಸ. / ತೆಲು. ಬಾನಸ]

**ಬಾಣಸಂಧಾನ** (ನಾ). ಬಿಲ್ಲಿನ ಹೆದೆಗೆ ಕಣೆಯನ್ನು ಹೂಡುವುದು ; ಶರಸಂಧಾನ : ಕರ್ಣನು ಎರಡು ಸಾರಿ ಗುರಿಯಿಟ್ಟು ಬಾಣಸಂಧಾನ ಮಾಡುವುದಿಲ್ಲ (ವಕಥಾ. ೨೪೯). [ಸಂ.]

**ಬಾಣಸಗಿತ್ತಿ** (ನಾ). ಅಡುಗೆಯ ಕೆಲಸ ಮಾಡುವವಳು; ಅಡುಗೆಯವಳು : ಶೂಲಧರ ನಿಮ್ಮಡಬಳಂ ಸಿರಿಯಾಳ ಬಾಣಸಗಿತ್ತಿ ಚಂಗಳೆ (ಬಸವ. ೯-೫೦). [ಬಾಣಸ + –ಗಿತ್ತಿ]

**ಬಾಣಸಗೈ**, ಬಾಣಸುಗೆಯ್, ಬಾಣಸುಗೈ (ಕ್ರಿ). ಅಡುಗೆ ಮಾಡು; ಆಹಾರವನ್ನು ಸಿದ್ಧಪಡಿಸು : ಅನಲ ಬಾಣಸಗೈಯುನೋ ತಿಥಿವಿಸವ ಸುರಗುರುವುಸುರನೋ (ಶಂಕರಗಂ. ೬ ಶಂ. ೭೦೦). **ಬಾಣಸುಗೆಯ್** : ಸಹಸ್ರಸಿಂಹಬಲನೆನಿಪ ಸಿಂಹಬಲನ[ನ]ಶ್ರಮದೊಳೆ ಕೊಂದು ಜವಂಗೆ ಬಾಣಸುಗೆಯ್ದುಂದಿನಂದದೊಳೆ ಬಾಣಸಿನ ಮನೆಯೊಳ್ ಬಂದಿರ್ದಂ (ಶಂಕರಗಂ. ೯-೭೯ ವ); ಪಿರಿಯಣ್ಣನ ನನ್ನಿಯನಾದರದಿಂ ಕಾಯಲ್ಕೆ ಪೆಜರ್ಗೆ ಬಾಣಸುಗೆಯ್ದಿಂ ಕುರುವಂಶಜ ಕೇಳ್ ನಿನ್ನೀ ಶರೀರವಮಾಂಸದೊಳೆ ಮರುಳ್ಗೆ ಬಾಣಸುಗೆಯ್ವಂ (ಗದಾಯು. ೭-೩೯). **ಬಾಣಸುಗೈ** : ಅಗ್ಗಿವೊಗರ್ಗೆ ಬಾಣಸುಗೈದು ನಿಚ್ಚಪುಂಯ್ವ ಜನ್ನದುರಿಯ ನಡುಬೀದಿಯೆನೆ ಮುಗಿಲುದ್ದವೊಂದಿದ ಕರ್ವೊಗೆಯಿಂ . . . ತೋರ್ಪ ತಪೋವನವೊಂದು ಕಣ್ಗೊಳಿಸಲ್ (ರಾಮಚಂ. ೬೯-೨). [ಬಾಣಸ + ಗೈ (< ಕೆಯ್$_1$)]

**ಬಾಣಸಮನೆ** 'ಬಾಣಸವನೆ' ನೋ.

**ಬಾಣಸವನೆ**, ಬಾಣಸಮನೆ (ನಾ). = ಬಾಣಸ ೧ : ಜವನ ಕಣಜವೊ ವೇಣು ಲಯವೃತ್ಯುವಿನ ಬಾಣಸವನೆಯೊ (ಕೂರಾರ. ೬-೦೩-೪೩). **ಬಾಣಸಮನೆ** : ಮರ್ತ್ಯವೆಂಬುವದು ಕರ್ತಾರನ ಕಮ್ಮಟವು ಮತ್ತೆ ಅಟ್ಟನ ವೊಳೆ ಬಾಣಸಮನೆ ದೇವನ ಸೊತ್ತಿಹುದು ನೀನೇನು ಕೊಟ್ಟೆ ಬಸವ (ಸಿದ್ಧಕೃ. ೩೦-೪೯). [ಬಾಣಸ + ಮನೆ]

**ಬಾಣಸವಿದ್ಯೆ** (ನಾ). ಅಡುಗೆಯ ವಿಧಾನವನ್ನು ತಿಳಿಸುವ ಕಲೆ; ಪಾಕವಿದ್ಯೆ : ಹದ್ದು ಕಾಗೆಯ ಮನೆಯ ಬಾಣಸವಿದ್ಯೆಯೆಮ್ಮದು ಯಮನ ನಿಳಯಕೆ ಬಧ್ದಿನರು ನೀವು (ಕುಮಾವ್ಯಾ.ಶ. ೯-೨೩). [ಬಾಣಸ + ವಿದ್ಯೆ]

**ಬಾಣಸವಿರು** (ಕ್ರಿ). ಅಡುಗೆಯ ಕೆಲಸಕ್ಕಿರು : ಹದ್ದು ಕಾಗೆಯ ಮನೆಗೆ ಬಾಣಸವಿದ್ದುದೋ ಗಜವೆನುತ ಬೊಬ್ಬಿಡುತಿದ್ದುದರಿಬಲವು (ಕುಮಾವ್ಯಾ.ದ್ರೋ. ೩-೪೩). [ಬಾಣಸ + ಇರು$_1$ (< ಇರ್$_1$)]

**ಬಾಣಸವೆರ್ಗಡೆ**, ಬಾಣಸಿವೆರ್ಗಡೆ, ಬಾಣಸುವೆಗ್ಗಡೆ, ಭಾಣಸವೆರ್ಗಡೆ, ಭಾಣಸುವೆರ್ಗಡೆ(ನಾ). ಪಾಕಶಾಲೆಯ ಮೇಲ್ವಿಚಾರಕ,–ಮುಖ್ಯಸ್ಥ : ಶ್ರೀಮಹಾಪ್ರಧಾನ ಬಾಣಸವೆರ್ಗ್ಗಡೆ ಮನೆವೆರ್ಗ್ಗಡೆ ದಣ್ಣನಾಯಕನನನ್ತ ಪಾಳಯ್ಯಂಗಳ ಪೆರ್ಗ್ಗಡೆ ಸಿರಿಪತಿನಾಯಕಂ . . . ಮೂಜುಗದ್ಯಾಣ ಪೊನ್ನಂ ಬಿಟ್ಟರ್ (ಸಾಂದೇರ್. ೦೯-೦೦; 1116). **ಬಾಣಸಿವೆರ್ಗಡೆ** : ಶ್ರೀಮಂನ್ಮಹಾಪ್ರಧಾನಂ ದಣ್ಣನಾ[ಯ]ಕ ಬಾಣಸಿವೆರ್ಗ್ಗಡೆ ಅನನ್ತ ಪಾಳಯ್ಯಗಳ [ಪ(ತ)]ತುಪಾದಪದ್ಮೋಪಜೀವಿ (ಕಇ. IV. ೩-೦೨; 1114). **ಬಾಣಸುವೆಗ್ಗಡೆ** : "ಪೌರೋಗವಃ, ಸೂದಾಧ್ಯಕ್ಷಃ — ಈ ೨ ಬಾಣಸುವೆಗ್ಗಡೆ" (ಹಲಾಯು. ೬೦-೨೭೭). **ಭಾಣಸವೆರ್ಗಡೆ** : ಶ್ರೀಮನ್ಮಹಾಪ್ರಧಾನಂ ಭಾಣಸವೆರ್ಗ್ಗಡೆ ಮನೆವೆರ್ಗ್ಗಡೆ ಪ(ಂ)ಣ್ಣಾಯದಧಿಷ್ಠಾಯಕನ ನನ್ತಪಾಳಯ್ಯದಣ್ಣನಾಯಕರು . . . ಸುಂಕವುಂ ಸರ್ವ್ವಾಯ ಶುದ್ಧಿಯಿಂ ಬಿಟ್ಟರು (ಕಇ. IX — i, ೦೩೩-೭೭; 1083); ಶ್ರೀಮನ್ಮಹಾಪ್ರಚಂಡದಂಡನಾಯಕಂ ಭಾಣಸವೆರ್ಗ್ಗಡೆ ಅನನ್ತಪಾ[ಳ]ದಂಡನಾಯಕಂಗೆ ಬಿನ್ನಪಂಗೆಯ್ದು . . . ಬಿಟ್ಟ ಧರ್ಮ್ಮಮೆಂತೆಂದ[ಡೆ] (ಕಇ. XI — ii, ೧೯೦-೭; 1106). **ಭಾಣಸುವೆರ್ಗಡೆ** : ಶ್ರೀಮನ್ ಮಹಾಪ್ರಧಾನಂ ಭಾಣಸುವೆರ್ಗ್ಗಡೆ ಅನನ್ತಪಾಳರಸರ ದೆಸೆಯಿಂಸವರೆಯಂ . . . ಬೆಟ್ಟಿಲವೆರಡಾಜುಸೂಜುಮಂ ದುಷ್ಟನಿಗ್ರಹಶಿಷ್ಟಪ್ರತಿಪಾಳನದಿಂದಾಳುತ್ತಮಿರ್ದ್ದ (ಎಇ. XVIII, ೦೯೦-೪; 1104); ಶ್ರೀಮನುಮಹಾಪ್ರಧಾನಂ ಭಾಣಸುವೆರ್ಗ್ಗಡೆ ಮನೆವೆರ್ಗ್ಗಡೆ ಸೇನಾಧಿಪತಿ ದಂಡನಾಯಕನ ನನ್ತಪಾಳಯ್ಯಂಗಳು... ಧಾರಾಪೂರ್ವ್ವಕವಾಗಿ ಕೊಟ್ಟು (ಕಇ. IX — i, ೨೨೪-೦೭; 1130). [ಬಾಣಸ + ಪೆರ್ಗಡೆ$_1$]

**ಬಾಣಸಾವಿ** (ನಾ). ಒಬ್ಬಾತನ ಹೆಸರು : ಬೆಣ್ಣೆಗೂರ ಕರ್ವ್ವಣೆ ಬಾಣಸಾವಿ ಮಗನ್ ಪುಜಕಿರಾಮನ್ . . . ಸತ್ತನ್ (ಎಕ. X, ಬಂಗ. ೪೩-೩; ಸು. 880?). [ಬಾಣ$_2$ + ಸಾವಿ$_1$]

**ಬಾಣಸಿ** (ನಾ). ಅಡುಗೆ ಮಾಡುವ ಕೆಲಸಕ್ಕೆ ನಿಯುಕ್ತನಾದವನು; ಅಡುಗೆಯವನು : "ಬಾಣಸಿಯೆನಲ್ ಅಡಿಗವಳ್ಂ" (ಶಬ್ದಮ. ೨೦೭); ಬಾಣಸಿಯಾನು ಭೀಮನ ಮನೆಯವನು (ಕುಮಾವ್ಯಾ.ವಿ. ೦-೨೨); ಭೂಮಿ ತಾನೋ ವಾರಿ ತಾನೋ ವ್ಯೋಮಚರ ಬಾಣಸಿಯು ತಾನೋ (ಜಿಮಾಗ. ೦೦-೦೭-೦೩).

[ಬಾಣಸ + –ಇ$_3$. / ಸಂ. ಮಹಾನಸೀ. / ಪ್ರಾ. ಮಹಾಣಸಿ. / ತಮಿ. ಪಾನಚಿ ; ತೆಲು. ಬಾನಸೀಂಡು]

**ಬಾಣಸಿಗ** (ನಾ). = ಬಾಣಸಿ : "ಆರಾಳಿಕಃ, ಸೂಪಕಾರಃ, ಸೂದಃ, ಪಲ್ಲವಃ — ಈ ಳ ಬಾಣಸಿಗಂ" (ಹಲಾಯು. ೬೦-೨೭೩); ಬಾಣಸಿಗಂ ಬಂದು ಬೋನಸಮೆತ್ತಿಯೋಗರವಮಾಜಿದಪ್ಪದೆಂದು ಪೇಟ್ದೊಡೆ (ವಡ್ಡಾರಾ. ೪೬-೦೭); ವಿರಾಟಂ . . . ತನ್ನ ಬಾಣಸಿಗನಾಗಿರ್ದ ವಲ್ಲಲನಂ ಕರೆದು ಪೇಟ್ದಾಗಳ್ (ಶಂಕರಗಂ. ೯-೫೭ ವ); ಎಸರನಿಡುವ . . . ಕಂಚುಗರ್ಚುವ ಬೆಸನಂ ಬೆಸನಲ್ಲದೆ ಮತ್ಸ್ಯನ ಬಾಣಸಿಗಂಗಾರಿತ್ತರೆಲವೊ ನಿನಗೀ ಬೆಸನಂ (ಗದಾಯು. ೭-೩೭). [ಬಾಣಸ + –ಇಗ]

**ಬಾಣಸಿಗತನ** (ನಾ). ಅಡುಗೆಯವನ ಕೆಲಸ ; ಬಾಣಸಿಗನ ಕಾರ್ಯ : ಬಾಣಸಿಗತನಕ್ಕೆ ಸಂದು ವಿಗೆ ಮತ್ಸ್ಯನೃಪಂಗುಣಾಲಿಕ್ಕಿ ಭೀಮ ಜೀವಿಸಿದನು (ಕಜೇಶಂ. ೦೭). [ಬಾಣಸಿಗ + – ತನ]

**ಬಾಣಸಿಗಿತಿ** 'ಬಾಣಸಿಗಿತ್ತಿ' ನೋ.

**ಬಾಣಸಿಗಿತ್ತಿ**, ಬಾಣಸಿಗಿತಿ (ನಾ). = ಬಾಣಸಗಿತ್ತಿ : ಆ ಸತ್ಯಭಾಮೆಯುಂ ಯತಸನ್ನೆ ಬಾಣಸಿಗಿತ್ತಿಯಾಗಿರ್ದೊಂದುದಿವಸಂ . . . ಪಂಚಾಶ್ಚರ್ಯಂ ನೆಗಟ್ (ಧಾವುಂಪು. ೦೯೩). **ಬಾಣಸಿಗಿತಿ** : ಪೂಜಾರಿ ಬಾಣಸಿಗಿತಿ ದವಸಿಗ × × × ತೋಟಿಗಂ ಸಂಕಿಮಯನೊಳಗಾಗಿ ಜೀರ್ಣ್ಣೋದ್ಧಾರಕಂ ವಿತ್ತಿ ಮೂವತ್ತು (ಎಕ. XII, ಗುಬ್ಬಿ. ೦೯-೭೨ ; 1140); ಬಿಡದಮ್ಮತಾನ್ನಮ ನೊಜಲ್ದು ಬಾಣಸಿಗಿತಿವೊಲ್ ಕುಡುತಿರ್ದಳ್ (ಕಾವ್ಯಾವ. ೩೩೦).

[ಬಾಣಸಿಗ + – ಇತ್ತಿ]

**ಬಾಣಸಿಗೆ**, ಭಾಣಸಿಗೆ (ನಾ). = ಬಾಣಸಗಿತ್ತಿ : ಕಿಜುಕಬೆ ಸೆರ್ಗ್ಗತನ ಬಾಣಸಿಗೆಯಾಕೆಯ ಪಿರಿಯ ಮಗಂ × × ಟ್ಟಯಕ್ಕಂ (ಎಕ. VIII, ನಗರ. ೪೩-೩; ಸು. 950); ಬಾಣಸಿಗೆಯರ್ . . . ಹಯ್ಯಂಗವೀನಮುಮನರಸಂಗು ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೦೦-೨೯ ವ). **ಭಾಣಸಿಗೆ** : ನಿವೇದ್ಯಮನಡುವ ಭಾಣಸಿಗೆಗೆ ಮತ್ತುರು ೯ (ಕಇ. ೯-೩-೩೨೩; 1085). [ಬಾಣಸಿಗ + – ಎ$_2$]

**ಬಾಣಸಿತನ** (ನಾ). = ಬಾಣಸಿಗತನ : ಬಾಹುಕನು . . . ತುರಗನಿಕರದ ಶಿಕ್ಷೆಯಲಿ ಮಂದಿರದ ಬಾಣಸಿತನದ ಕೆಲಸದಿ ನೆಜೆ ನಿಪುಣನೆಂದೆನಿಸಿಕೊಂಡಿಹ ನೃಪನ ಸಭೆಯೊಳಗೆ (ನಳಚ. ೯-೦೯); ಅಗ್ನಿಯು ಅನವರತಂ ಬಾಣಸಿತನಮುಂ ಕೈಕೊಂಡಿರ್ಪನು (ಕುಕಸ. ೦೯೪). [ಬಾಣಸಿ + –ತನ]

**ಬಾಣಸಿವೆರ್ಗಡೆ** 'ಬಾಣಸವೆರ್ಗಡೆ' ನೋ.

**ಬಾಣಸು** 'ಬಾಣಸ' ನೋ.

**ಬಾಣಸುಗೆಯ್** 'ಬಾಣಸಗೈ' ನೋ.

**ಬಾಣಸುಗೈ** 'ಬಾಣಸಗೈ' ನೋ.

**ಬಾಣಸುವೆಗ್ಗಡೆ** 'ಬಾಣಸವೆರ್ಗಡೆ' ನೋ.

**ಬಾಣಹತಿ** (ನಾ). ಅಂಬಿನ ಹೊಡೆತ,– ಪೆಟ್ಟು : ದೇವ ನಿಜೋಗ್ರ ಬಾಣಹತಿಯಿಂ ತಲೆಗಳ್ ಗಗನಕ್ಕೆ . . . ಪಾಜುತಿರ್ಪನಂ . . . ರಾವಣನಂ ರಘುಪ್ರಭವರೂಪದೆ ಮರ್ದಿಸಿದೈ ಜನಾರ್ದನಾ (ಜಗನ್ನಾ. ೦-೬೦);

ಬಾಣಹತಿಗಕ್ಕುಡಿಸಿ ರಾಜ್ಯಶ್ರೀಣಿ ಜರುಗಿತು (ಕುವ್ಯಾಕ ೨೪–೪೩). [ಸಂ.]

**ಬಾಣಹರ** (ನಾ). ಬಾಣನೆಂಬ ರಾಕ್ಷಸನನ್ನು ಕೊಂದವನು ; ಕೃಷ್ಣ : "ಮುರಹಿರಣ್ಯ ಕಂಸಮಧುಕೇಶಿಬಲಿಬಾಣಹರನೆನಲು . . . ಕೃಷ್ಣಂ" (ಮಂಗರಾ. ೬-೧೮). [ಸಂ.]

**ಬಾಣಾಗ್ನಿ** (ನಾ). ಬಾಣದಿಂದ ಉತ್ಪತ್ತಿಯಾಗುವ ಬೆಂಕಿ : ಆ ಮಹಾ ರಿಪುಭಯಂಕರನೀಗಳೆನಗಾಗಿ, ತನ್ನೊಲಿದ ಕೈಹಿಡಿದಬಲೆಗಾಗಿ, ಶೋಷಿಸನೆ ಶರಧಿಯಂ ಬಾಣಾಗ್ನಿಯಿಂ ? (ಶ್ರೀರಾಮಾ. ೫೦೬-೪೪೩). [ಸಂ.]

**ಬಾಣಾಯಿತ** (ನಾ). (ಬಿಲ್ಲಿಗೆ) ಅಂಬನ್ನು ಹೂಡುವವನಂ; ಬಿಲ್ಲು ಗಾರ : ಕಠಾರಾಯಿತರ ಬಾಣಾಯಿತರ ಮಲ್ಲಜಟ್ಟಿಗಳ . . . ಮೊತ್ತ ದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು (ಬಸರ. ೬-೨೩). [ಬಾಣ್ಣ$_2$ + – ಆಯಿತ (< –ಆಯ್ತ)]

**ಬಾಣಾರಸಿ** 'ಬಾರಣಾಸಿ' ನೋ.

**ಬಾಣಾಶ್ರಯ** (ನಾ). ಅಂಬಿಗೆ ಆಶ್ರಯಸ್ಥಾನವಾದುದು ; ಬತ್ತಳಿಕೆ : "ತೂಣೀರಂ. ಉಪಾಸಂಗಃ . . . ಬಾಣಾಶ್ರಯಃ, ಕಳಾಪಃ — ಈ ೮ ಮೂಡಿಗೆ" (ಹಲಾಯು. ೭೬–೩೦೦). [ಸಂ.]

**ಬಾಣಾಸನ** (ನಾ). ೧. ಬಿಲ್ಲು; ಧನುಸ್ಸು : "ಧನು ಕೋದಂಡಂ ಬಾಣಾಸನಮಸ್ತ್ರಂ ಕಾರ್ಮುಕಾಖ್ಯಮದು ಚಾಪಂ" (ವಸ್ತುಕೋ. ೮೫–೦೬) ; ಪಂಚವಿಂಶತ್ಯನ್ವಿತಸಪ್ತಶತಬಾಣಾಸನೋಚ್ಛ್ರಿತನುಂ ನಲಿನಪ್ರಮಾಣಾ ಯುಷ್ಯನುಮಾಗಿ . . . ಪುಟ್ಟಿ (ಆದಿಪು. ೬-೫೭ ವ) ; ಬಾಸಣಿಸಿದ ಮದನನ ಬಾಣಾಸನದವೊಲೆಸೆವ ಚಾರುರ್ಭುಂಪಾಣದೊಳುದ್ಭಾಸಿನಿಯರ್ ನೃಪಸುತನ ವಿಳಾಸಿನಿಯರ್ ಬಂದರೇಱಿ ಪೊನ್ನಂದಣಮಂ (ಶಬ್ದಪು. ೫–೨೦). ೨. ಬಿಲ್ಲಿನ ಹಗ್ಗ; ನಾರಿ : ವಿನುತ ಶಿವಪದವೆಂಬ ಬಾಣಾಸನವನೇಱಿಸಿ ತಿರುಗುವಿಂದ್ರಿಯವೆನಿಪ ಬಲು ಸಾರಂಗವಂ ನಿಮಿಷಕೆ ಪಱಿಯಲೆಚ್ಚು (ಬಸಪು. ೩೪–೩೫). [ಸಂ.]

**ಬಾಣಿ**$_1$ 'ಪಾನೆ' ನೋ.

**ಬಾಣಿ**$_2$ (ನಾ). ೧. ಮಾತು ; ವಚನ ; ನುಡಿ. ೨. ಶಬ್ದ ; ಧ್ವನಿ. ೩. ಮಾತಿನ ಅಧಿದೇವತೆ ; ಸರಸ್ವತಿ ; ವಾಣಿ : "ಬಾಣಿ ಬಿಜ್ಜೆ ವೆಣ್ಣುಂ ಬಾಸೆವೆಣ್ಣು ಸರಸತಿಯುಮೆನೆ ವಾಣಿಯಕ್ಕುಂ" (ಕಬ್ಬಿಕ್ಕ. ೯) ; ಬಾಣಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗಬ್ಜೋದ್ಭವಂ ಜಾಣಿಂ ಬಾಣಿಯೆನಿಪ್ಪದೊಂದು ಪೆಸರಂ ಮುನ್ನಿತ್ತಂ (ಕಾದಂಪೂ. ೩) ; ಬೀಣೆ ಹೊತ್ತಗೆಗಳಂ ಪೊತ್ತ ಕೈಯ ಚೆಲ್ವೆ ! ಸುವ್ವಿ ! ಸುವ್ವಿ ! ಬಾಣಿ (ರಾಮಾಶ್ವ. ೬೬-೭). [<ಸಂ. ವಾಣೀ]

**ಬಾಣಿಗ**, ಬಾಣಿಗ್ಗ, ವಾಣಿ$_2$, ವಾಣಿಯ$_2$ (ನಾ). ೧. ವ್ಯಾಪಾರ ಮಾಡುವವನು ; ವ್ಯಾಪಾರಿ : ಬಾಣಿಗ ಬೀಮಯ್ಯನ ಮಗ . . . ಸಾನ್ತಯ್ಯ ಕೊಟಗವ್ಪನ್ನು ತುಱುವ ಕೊಣ್ಡು ಪೋಪಾಗ (ಮ್ಯಆರ. ೧೯೪೦, ೨೫–೧೧; 1030); ಬಾಣಿಗರ ಬೆಳ್ಳಿಗವುಣ್ಡನ ಮಗ ಬಿಟ್ಟಿಗಾವುಂಡನು . . . ನಡಿಸಿದ ಕಲ್ಲ ಗಾಣ (ಮ್ಯಆರ. ೧೯೩೩, ೬೭-೬ ; 1179) ; ಚಲುಡೋಜನ ಬರಹ ಸಮಸ್ತ ಬಾಣಿಗರ ಒಪ್ಪ (ಎಕ. III, ಮಳವ. ೨೦–೨೦ ; 1388). **ಬಾಣಿಗ್ಗ** : ೧. ಸಮಸ್ತ ಬಾಣಿಗ್ಗರ ಅರುಹನಹಳ್ಳಿಯ ಬಾಗಿಗಾಗಿ ನಟ × × × (ಎಕ. III, ಮಳವ. ೨೦–೦೩; 1388). **ವಾಣಿ**$_2$ : ೨. ವ್ಯಾಪಾರ ಮಾಡುವ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : ಮಾರವಾಡೀ ಬ್ರಾಹ್ಮಣರು . . . ಹಲಕೆಲವರು ಮಾರವಾಡೀವಾಣೀ ಜನರಲ್ಲಿ ಅಡಿಗೆ ಮಾಡುವರು (ಕಭಾಗ. ೯೪); ಸಿಂಪಿ, ವಾಣಿ (ಬಣಜಿಗ), ಕುಣಬಿ (ಒಕ್ಕಲಿಗ) ಮುಂತಾದವರು ಶ್ರೇಷ್ಠಸಾಧುಗಳೆಂದು ಎಲ್ಲರಿಂದ ಮನ್ನಣೆ ಪಡೆದಿರುವರು (ಕರ್ನಾಸಂ. ೯೭). ೩. ವ್ಯಾಪಾರದ ಸರಕು : 'ಹಸುರುವಾಣಿ' ಪರಾ. ☞ ಈ ಶಬ್ದದ ರೂಪದಲ್ಲಿ ಮರಾಠಿಯ ಪ್ರಭಾವವಿದ್ದಂತೆ ಕಾಣಬರುತ್ತದೆ. **ವಾಣಿಯ**$_2$ : ೧. ವಾಣಿಯರುಂ ವಾರಸ್ತ್ರೀಜಾಣರುಗಳ್ . . . ಶಿಲ್ಪಿಗರ್ ಪೊಱಮಟ್ಟರ್ (ಸೂಕ್ತಿಸು. ೦೮–೨೬); ಶೌರ್ಯನಗರದ ವಾಣಿಯರು ಹೊಕ್ಕಿಱಿದು ಹೋಗಾಡಿದರು ಪತಿರಿಣವ (ಕುವ್ಯಾಕ. ೨೪–೪೩) ; ವಾಣಿಯರ್ ಚಿನ್ನವರದರ್ ದೂಸಿಗರ್ . . . ಜೂಜುಗಾಱರ್ ಮುಖ್ಯರೊದಗಿ ಬರುತ್ತಿರ್ದರ್ (ಜಲಪು. ೪೬–೪೦). 'ಬನಿಯ' ಪರಾ.

[<ಸಂ. ವಾಣಿಜ./ಪ್ರಾ. ವಾಣಿಅ./ಮರಾ. ವಾಣಿಯಾ, ವಾಣೀ./ತಮಿ. ವಾಣಿಯನ್, ವಾಣಿಕನ್ ; ತೆಲು. ವಾಣಿಜುಡು]

**ಬಾಣಿಗ್ಗ** 'ಬಾಣಿಗ' ನೋ.

**ಬಾಣಿನೋಟ** (ನಾ). ಸರಸ್ವತಿಯ ದೃಷ್ಟಿ,–ಕಟಾಕ್ಷ : ಚಂಚಳಿಸುವ ಭಾವವಾಂತೆಡೆಗಳೊಳ್ ನೆಲೆನಿಲ್ವ ಬೆಡಂಗಿನಿಂದಮೋಂ ಬಳೆದುವೊ ಬಾಣಿ ನೋಟದವೊಲೀ ಚಿಕದೇವನ ತಾನದೊಳ್ಪುಗಳ್ (ಚಿಕವಿ. ೪–೦೨೩). [ಬಾಣಿ$_2$ + ನೋಟ]

**ಬಾಣೆ**. ಬಾಣ$_1$ (ನಾ). ಗದ್ದೆಯ ಸಮಿಾಪದಲ್ಲಿರುವ, ಸಾಮಾನ್ಯವಾಗಿ ಕುರುಚಲುಗಿಡಗಳಿಂದ ತುಂಬಿರುವ ಕಾಡುಪ್ರದೇಶ : (ಕಿಸಂಗ್ರಾ. ೦೩೦); ಕಾನ, ಬಾಣೆ, ಕುಮುಕಿ, ದರ್ಕಾಸ್ತು, ತೋಡು, ಕೆರೆ ಇವುಗಳ ವಿಸ್ತೀರ್ಣ ಗಳೆಲ್ಲ ಬಾಯಿ ಪಾಠ (ಕರುಳ. ೭). **ಬಾಣ**$_1$ : 'ಬಾಣಬೆಟ್ಟು' ಪರಾ.

[ದೇ. ‖ ತುಳು. ಬಾಣೆ, ಬಾನೆ ; ಕೊಡ ಬಾಣೆ]

**ಬಾತ** 'ಬಾ$_1$' ಪರಾ.

**ಬಾತಖಾನಿ**, ಬಾತಾಖಾನಿ (ಗು). ೧. ಹರಟೆ ಹೊಡೆಯುವ ಸ್ವಭಾವದ : ಆ 'ಬಾತಖಾನಿ' ಮುದುಕಿಗೆ ತನ್ನ ಮಾತು ಕೇಳುವವರು ಒಬ್ಬರು ಬೇಕು (ಶಾಲೀಮು. ೦೦೫). **ಬಾತಾಖಾನಿ** : ೨. ಹರಟೆ ಹೊಡೆಯುವ ಸ್ವಭಾವವುಳ್ಳ ವ್ಯಕ್ತಿ ; ನಿರರ್ಥಕವಾಗಿ ಮಾತನಾಡುವ ವ್ಯಕ್ತಿ : "ಬಾತಾಖಾನಿ=ಮಾತುಗಂಟ" (ಜಾನಕೋ. ೨೦).

[← ಮರಾ. ಬಾತೇಖಾನೀ]

**ಬಾತಮಿ** 'ಬಾತಮಿಾ' ನೋ.

**ಬಾತಮಿದಾರ** 'ಬಾತಮಿಾದಾರ' ನೋ.

**ಬಾತಮಿಾ**, ಬಾತಮಿ, ಬಾತ್ಮಿ, ಬಾತ್ಮೆ (ನಾ). ೧. ವರ್ತಮಾನ ; ಸುದ್ದಿ ; ಸಮಾಚಾರ : ಈ ಬಾತಮಿಾ ತಿಳಿದು ನವಾಬರು ಪಟ್ಟಣದ ದಂಡಿನ ಮೇಲೆ ಬಿದ್ದು . . . ಪತ್ತೆಮಾಡಿದರು (ಹೈದರ. ೫೦). **ಬಾತಮಿ** : ೧. ಯಾರಾದರೂ ಈ ಬಾತಮಿಯನ್ನು ಹೊರಡಿಸಿದರೇ ಎಂದು ಸಂಶಯವು ಆತನ ಮನಸ್ಸಿಗೆ ಫಕ್ಕನೆ ಹೊಳೆಯಿತು (ಎಧಿಪ್ಕ. ೦೨೭) ; ಒಂದೆರಡು ಸಲ ನನ್ನಿಂದ ಬಾತಮಿಯನ್ನು ಹೊರಡಿಸುವ ಬೇತಿನಿಂದ . . . ಕೇಳಿ ನೋಡಿದ್ದ (ದೀಶಹ. II. ೧೪). ೨. ಬೇಹು ; ಗೂಢಚರ್ಯೆ : ಇವರನ್ನು ನವಾಬರ ಕಡೆ ಬಾತಮಿ ಕುದುರೆಯವರು ಹಿಡಿದು ಹೈದರಲ್ಲಿಯ ಸಮಿಾಪಕ್ಕೆ ಕರೆದು ತಂದರು (ಚಿತ್ರಬಾ. ೮೭). **ಬಾತ್ಮಿ** : ೧. ತಿೀರ ತಾಜಾ ಬಾತ್ಮಿ ಯಾವುದರಲ್ಲಿ ಇದೆ ? (ಗಾಳಿಪ. ೩೭). **ಬಾತ್ಮೆ** : ೨. ದುಷ್ಮಾನರ ಲಷ್ಕರಿನ ಬಾತ್ಮೆ ಸಮಾಚಾರ ತರಿಸಿಕೊಡಬೇಕು (ರಾಜೇಂದ್ರ. ೦೭೦).

[ ←ಮರಾ. ಬಾತಮಿಾ. / ಸಂ. ವಾರ್ತಾ ? ]

**ಬಾತಮಿಾದಾರ**, ಬಾತಮಿದಾರ, ಬಾತ್ಮಿದಾರ, ಬಾತ್ಮೀದಾರ (ನಾ). ೧. (ವರ್ತಮಾನಪತ್ರಿಕೆ ಮುಂತಾದುವುಗಳಿಗೆ) ಸುದ್ದಿ, ಸಮಾಚಾರ ಗಳನ್ನು ಸಂಗ್ರಹಿಸಿ ತಿಳಿಸುವವನು ; ಸುದ್ದಿಗಾರ ; ವರದಿಗಾರ : ಎಲ್ಲ ಪತ್ರಿಕೆಗಳವರೂ, ಬೇರೆಬೇರೆ ಪ್ರದೇಶಗಳಲ್ಲಿ ಬಾತಮಿಾದಾರರನ್ನು ನಿಯಮಿಸಿರುತ್ತಾರೆ (ರೂಪ). ೨. ಬೇಹುಗಾರ ; ಗೂಢಚಾರ : "ಯಥಾರ್ಹಃ, ವರ್ಣಃ . . . ಗೂಢಪುರುಷಃ — ೭ ಬಾತಮಿಾದಾರನ ಹೆಸರುಗಳು, ಗೂಢಚಾರನು, ವೇಷಧಾರಿಯಾಗಿ ಕಪಟದಿಂದ ತನ್ನನ್ನು

ತಿಳಿಯಪಡಿಸದೇ ಹೊಂಚಿ ವಿಷಯವನ್ನು ತಿಳಿದು ತಂದರಿಕೆ ಮಾಡುವ ದೂತನು" (ಸಿದ್ಧಾಂತಿ. ೨೩೮). **ಬಾತಮಿದಾರ :** ೧. "(ಸಂಗತಿ) ಹೇಳುವವನು ; ವರ್ತಮಾನ ಕೊಡುವವನು ; ಬಾತಮಿದಾರ್" (Informant· ಇಂಕಿಡಿ). ೨. ಗೊಲ್ಲರವನು ದುರ್ಗಕ್ಕೆ ಹೋಗಿ ದಕ್ಷಿಣ ಪ್ರಾಂತದ ಬಾತಮಿದಾರನ ಸಮೇತ ದೊರೆಯ ಸನ್ನಿಧಾನದಲ್ಲಿ ಈ ಸಂಗತಿಯನ್ನು ಅರಿಕೆಮಾಡಿದನು (ಚಿತ್ರಬಾ· ೬೩). **ಬಾತ್ಮಿದಾರ :** ೧. ಸಾಕ್ಷಿಗಳು ಬಾತ್ಮಿದಾರರು ಎಲ್ಲಾ ಬಂದಿದ್ದಾರೋ ? (ವೀರಯೋ· ೩೦); ಪತ್ರಿಕಾಬಾತ್ಮಿದಾರನ ಅಸೂಯೆಯಿಂದ ಆ ವಿಷಯವು ಬರಲಿಲ್ಲವೆಂದು ಸಮಾಧಾನ ಮಾಡಿ, ರಾಯರ ಮನಸ್ಸಿಗೆ ಶಾಂತಿಯನ್ನುಂಟುಮಾಡಲು ಪ್ರಯತ್ನಿಸಿದೆ (ರಾಯಕ· ೬೩). **ಬಾತ್ಮೀದಾರ:** ೧. ಒಬ್ಬೊಬ್ಬ ಸಂಪಾದಕರು ಬಗಲಿಗೆ ಇರಲಿ ; ಕೊನೆಗೆ ಬಾತ್ಮೀದಾರ (ಅರಳು. ೩೯೬-೯) ; ಅದರಲ್ಲಿ ಸಮ್ಮೂರಿನ ಬಾತ್ಮೀದಾರನಿಂದ, ರಾಯರ ವಿಷಯವಾಗಿ ಈ ರೀತಿ ಬರೆದಿತ್ತು (ರಾಯಕ. ೬೩).

[ಬಾತಮಿ + — ದಾರ್$_4$ ./ ಮರಾ. ಬಾತಮಿದಾರ್]

**ಬಾತಾಖಾನಿ** 'ಬಾತಖಾನಿ' ನೋ.

**ಬಾತಾಳಿಸು** (ಕ್ರಿ). ಕಿರಿಚು; ಅರಚು ; ಒರಲು : ಕೇಳಿ ದಶಕಂಧರನು ಕೋಪ ಚಡಾಳಿಸಲು . . . ತೋಳುಬಲುಹನು ನೋಡೆನುತ ಬಾತಾಳಿಸಲು (ಅನಂರಾ. ೦-೦೦-೨೦); ತೊಡಕಿ ಕಾದುವ ಸುಭಟನಸುವನು ತುಡುಕಿನುತ ಬಾತಾಳಿಸುತಲಾ ವ್ಯಂತನ ಭೂತಗಣಂಗಳಿನಲರುಬಿದರು ಕಪಿವರರು (ಅನಂರಾ· ೬-೦೦-೩೨). [ ← ತೆಲು. ಬಾತಳಿಂಚು, ಬೂತಲಿಂಚು]

**ಬಾತು$_1$** 'ಬಾ$_1$' ಪರಾ.

**ಬಾತು$_2$** (ನಾ). ಊತ ; ಬಾವು : ಉಡಿಯಿಂದ ಮೇಲೆ ಬಾತು ಉಂಟಾಗಿ ಹಣ . . . ಅಪಾನಪ್ರದೇಶ, ಗುಹ್ಯಪ್ರದೇಶಗಳಲ್ಲಿ ಬಾತುವುಂಟಾಗಿ ಇಹಣ . . . ಈ ರೀತಿಯುಳ್ಳಿರಲು ಆತನು ಸರ್ವಥಾ ಜೀವಿಸುವುದಿಲ್ಲ (ವೈದ್ಯಸಾ. I. ೩೩೩). 'ಬಾತುಗಾಲು' ಪರಾ.

[< ಬಾ$_1$ ./ ತುಳು. ಬಾತ್ = ಊದು]

**ಬಾತು$_3$** (ನಾ). ಒಂದು ಬಗೆಯ ನೀರುಹಕ್ಕಿ : "ಬಾತೆನೆ ತಾಂ ಕೋಳಿಯೊಂಬುದರ್ಥಂ" (ಶಾರಪ. ೨೯); ಚಿಮ್ಮುವ ಬಾಲದ ಬಾತುಗಳು . . . ಉದ್ದಕಾಲಿನ ಬಾತುಗಳೂ ಈ ಗುಂಪಿಗೆ ಸೇರುವುವು (ಕಲಕೋ. XII. ೨೮).

[ ← ಅರ. ಬತ್; ಪಾರ. ಬತಕ್; ಹಿಂ. ಬತ್, ಬತಕ್, ಬತಖ್; ಮರಾ. ಬತಕ್, ಬದಕ್. / ತಮಿ. ವಾತ್ತು; ಮಲ. ಬಾತ್ತು; ತುಳು. ಬಾತ್, ಬತ್ತ್; ಕೊಡ. ಬಾತ್; ತೆಲು. ಬಾತು./ಪೋರ್ಚ್. ಪಾತೊ]

**ಬಾತುಕೋಳಿ** 'ಬಾತುಗೋಳಿ' ನೋ.

**ಬಾತುಗಾಲು** (ನಾ). ಊತ ಬಂದ ಕಾಲು ; ಬಾವಿನಿಂದ ಕೂಡಿರುವ ಕಾಲು : ಸಿತ್ರಾಣವಾದ ಬಿಳಿಯ ಕುದುರೆಯೂ ಬಾತುಗಾಲಿನ ಬಜಕಲ ಕುದುರೆಯೂ . . . ನಿಧಾನವಾಗಿ ಸಾಗುತ್ತಿದ್ದುದರಿಂದ ಅವನು ಅಪರಿಚಿತ ವ್ಯಕ್ತಿಯನ್ನು ಮಾತಾಡಿಸಬೇಕೆಂದು ಕಾತರನಾಗಿದ್ದನು (ಪುನರು. ೨೮೩).

[ಬಾತು$_2$ + ಕಾಲು$_1$ (< ಕಾಲ್$_1$)]

**ಬಾತುಗೋಳಿ,** ಬಾತುಕೋಳಿ (ನಾ). = ಬಾತು$_3$ : ಬಾತುಗೋಳಿ ಹಾಂಗ ಬಾತಕದ ಜಾತ್ಕಲ್ಲ (ಮೂರ್ತಿಕಾ· ೯೬-೦೩). **ಬಾತುಕೋಳಿ :** "ಕಾರಂಡ, ಕಾರಂಡವ — ಕಾಗೆಯ ಹಾಗೆ ಇರುವದೊಂದು ಹಕ್ಕಿ, ಬಾತುಕೋಳಿ" (ಗಂಗಾಮ· ೬೦); ಯಂತ್ರದ ಬಳಿಯ ನೀರಿನಿಂದ ಬಾತು ಕೋಳಿಗಳ ಕೇಕಾರವ ಕೇಳಿಸುತ್ತಿತ್ತು (ಪುನರು. ೨೯೭).

[ಬಾತು$_3$ + ಕೋಳಿ$_1$ (< ಕೋೞಿ$_1$) ]

**ಬಾತೆ** 'ಬಾಬ್ತಿ' ನೋ.

**ಬಾತೆಗೆಡು** 'ಬಾರ್ತೆಗೆಡು' ನೋ.

**ಬಾತೆಗೇಡಿ** (ನಾ). ಬದುಕು ಕೆಟ್ಟವನು ; ಹಾಳಾದವನು : ಬಾತೆಗೇಡಿಗಳೆ ಮೈಕೇಕಿಸಿತು ರೋಷವೆಲೆ ಪಾತಕರನಡಿದಡಿದು ಮಾಡಲೇಸಲೇಕೆ ಸಲೆ (ಶಾನಂಕ. ೪-೨೦೩).

[ಬಾತೆ (< ಬಾಬ್ತಿ) + ಕೇಡಿ$_1$]

**ಬಾತ್ಮಿ** 'ಬಾತಮಿ' ನೋ.

**ಬಾತ್ಮಿದಾರ** 'ಬಾತಮಿದಾರ' ನೋ.

**ಬಾತ್ಮೀದಾರ** 'ಬಾತಮಿದಾರ' ನೋ.

**ಬಾತ್ಮೆ** 'ಬಾತಮಿ' ನೋ.

**ಬಾದಣ$_1$** 'ಬಾದವಣ' ನೋ.

**ಬಾದಣ$_2$** (ನಾ). ತಟ್ಟೆ; ತಳಿಗೆ : ದೇವವಿತತಿ ಚಂದಿರನ ಬಾದಣಕೆಱೆ ದಮೃತಸೇವನೆಯ ಮಾಡುತಿರೆಯೊಸರ್ದುದೋ ಎಂಬವೊಲು ಕಳಂಕಾಂಕ ನೆಸೆದಿರೆ ಜೊನ್ನಮುಱೆ ಪರ್ಬಿತು (ಸಿದ್ಧೇಶ. ೦೫-೨೦). [< ಸಂ. ಭಾಜನ]

**ಬಾದಣಂಗೈಸು** (ಕ್ರಿ). ತೂತು ಬೀಳುವಂತೆ ಮಾಡು : ದನುಜೇಂದ್ರ ನಂಗವ ಬಾದಣಂಗೈಸಿದರು ಶಿವಶಿವ ಶೂಲ ಚಕ್ರದಲಿ (ಅಂಬಿಕಾ· ೪೦-೨೫).

[ಬಾದಣ$_1$ (< ಬಾದವಣ) + ಕೈಸು (<ಕೆಯ್ಸು) ]

**ಬಾದಣಗಂಡ** (ನಾ). ಬಿರುಕು ಬಿಟ್ಟ ಗಾಯದ ಮಾಂಸ : ಬಾಗಿ ಮುರಿದವುಡಿ ಕೆಡವುವ ಮೊಗ ಬಿಗಿದು ಬಾದಣಗಂಡವ ಒಡೆಕಾಱೆ ಓರಿ ಹಿಂಡುವ ಕಂಠ . . . ಮೆಱೆಯೆ ಕರಿಗಳಂ ಕೆಡಹಿದುವು ಸಿಂಹಂಗಳು (ಹಕಕಾ. ೩-೩೬).

[ಬಾದಣ$_1$ (< ಬಾದವಣ) + ಕಂಡ$_1$]

**ಬಾದಣಗೊಱೆ** (ಕ್ರಿ). ೧. ತೂತಾಗುವಂತೆ ಕೊರೆ; ರಂಧ್ರಮಾಡು : ನೀ ಬಱೆದೇಕೆ ಚುಚ್ಚುವೆ ಕಾಸಿ ಬಾದಣಗೊಱೆದ ಘಾಯದಲಿ (ಕುಮಾ್ರ.ಗ. ೬-೩೪); ಬಾದಣಗೊಱೆದು ಪಾತಾಳಕಿಳಿದು ಭೋಗಾಪತಿಯ ಮುತ್ತಿದರು (ಸಿದ್ಧೇಶ. ೪-೪೬). ೨. ರಂಧ್ರವಾಗು ; ತೂತಾಗು : ರಣದೊಳು ಖಾನಖಾನರ ಮೆಯ್ಗಳು ಬಾದಣಗೊಱೆದವು (ಕುಂರಾಸಾಂ. ೪೩-೪೬); ಇಭ ನಕ್ರಪತಿಗಳ ಪರಮಸತ್ವೋತ್ಕರ್ಷವೆಂತುಟೊ ಗಿರಿ ಬಿರಿಯೆ ಧರೆ ದೆಸೆಗೆ ಬಾದಣಗೊಱೆಯೆ ಪದಹತಿಗೆ (ಶಿಜಾಗ. ೮-೩-೮).

[ಬಾದಣ$_1$ (< ಬಾದವಣ) + ಕೊಱೆ$_1$]

**ಬಾದಣದಲೆ** (ನಾ). ತೂತು ಬಿದ್ದ ತಲೆ : ಸೂಕರನ ದಾಡೆಗಳಿಱೆತದಂಗದ ಬರಿಯ ಬಾದಣದಲೆಯ ಭಟರದೆ ದೇವ ನೋಡು (ತೊರರಾ. ೬-೨೦-೬೦).

[ಬಾದಣ$_1$ (< ಬಾದವಣ) + ತಲೆ$_1$]

**ಬಾದಣದೆಗೆ** (ಕ್ರಿ) . ತೂತುಮಾಡು; ರಂಧ್ರವನ್ನು ಕೊರೆ : ಜೀವಂ ನೆಗೆದು ತಾಗಿ ನಡುನೆತ್ತಿಯಂ ಬಗಿದು ಬಾವಣದೆಗೆದು ಮೇಗಡರ್ದು ಗಗನಕ್ಕೆ ದಂಡಾಯುಮಾನದುರಿಯಾಗಿ ನೆಗೆಯಲ್ಕೆ (ಸಿದ್ಧರಾ. ೪-೩೪).

[ಬಾದಣ$_1$ (< ಬಾದವಣ) + ತೆಗೆ$_1$]

**ಬಾದಣವಾಗಿಲು** (ನಾ). ರಂಧ್ರದ ದ್ವಾರ; ಬಿಲದ ಬಾಯಿ : ಇಂದು ನಿನ್ನೈಶ್ವರ್ಯಲಕ್ಷ್ಮೀಕ್ಕಲಿದು ಭಂಡಾರಮಂದಿರವೊಗಲ್ಪಂಜಿ ಗಡ ಸಾರ್ಚಿರಲು ತಿರುಗುವಂದಗಂಡೊಳಹೊಗಿಸಲಭವ ನಿರ್ಮಿಸಿದ ಬಾದಣವಾಗಿಲದು ಕನ್ನವೆ (ಸಿಂಗಿರಾ· ೦೬-೦೬).

[ಬಾದಣ$_1$ (< ಬಾದವಣ) + ಬಾಗಿಲು (< ಬಾಗಿಲ್) ]

**ಬಾದಣಿಸು,** ಬಾದಳಿಸು (ಕ್ರಿ). ತೂತಾಗು ; ರಂಧ್ರವಾಗು : ಬಾದಣಿಸಿ ದೇಹುಗಳ ಬಾಯೊಳು ಕಾದ ಬಾರಂಗಿಗಳನಳೆಗೆ ಕೋದು ವಾಮ ದೊಳೆಯ್ದೆ ಹಿಡಿದರು ತೈಲಧಾರೆಗಳ (ಕುಮಾ್ರ.ಕೀ. ೩-೪೦). **ಬಾದಳಿಸು :** ಬಿಲ್ಲ ನಾರಿಯ ನೀವಿ ರೆಳೀಗ್ಯೆಯುಲಬ್ಧಿ ತುಳುಕೆ ಮೇದಿನಿಯು ನಡುಗಲಚಲ ಗಳಲುಗೆ ಖಗರ ಹೃದಿ ಬಾದಳಿಸೆ (ಚನಮು. ೨೯-೦೩).

[ಬಾದಣ$_1$ (< ಬಾದವಣ) + — ಇಸು$_1$]

**ಬಾದಮಿ** 'ಬಾದುಬ್ಬೆ' ನೋ.

**ಬಾದಮ್ಮ** (ನಾ). ಒಬ್ಬಾತನ ಹೆಸರು : ಬಾಳುಗುಳಿಯ ಮಹಾಜನ ಅಯ್ವದಿಂಬರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೂದಗೂಟನಿತ್ತೂರ್ (ಶಾಇ. IX–i, ೩೧–೬ ; ಸ. 10ನೆಯ ಶತ).
[? + ಅಮ್ಮ$_1$]

**ಬಾದರ್** 'ಬಹಾದುರ್' ನೋ.

**ಬಾದರ** (ಗು). ೧. ಎಲಚಿಮರಕ್ಕೆ ಸಂಬಂಧಿಸಿದ. ೨. ಹತ್ತಿಯಿಂದ ಮಾಡಿದ. ೩. ಒರಟಾದ ; ನಯವಿಲ್ಲದ. (ನಾ). ೪. ಹತ್ತಿ ಮತ್ತು ಅದರ ಗಿಡ ; ಅರಳೆ : "ಬಾದರಂ ಪಿಚವ್ಯಾಖ್ಯಮುಚಾಗೆ ಪಿಚು ಕಾರ್ಪಾಸಂ" (ವಸ್ತುಕೋ. ೩೬–೩೦). ೫. ಹತ್ತಿಯಿಂದ ತಯಾರಿಸಿದ ಬಟ್ಟೆ : "ಕಾರ್ಪಾಸಂ, ಬಾದರಂ—ಈ ೨ ಹತ್ತಿಯಿಂದಾದ ಸೀರೆ" (ಹಲಾಯು. ೯೦–೩೯೬). ೬. ಎಲಚಿಗಿಡ ಮತ್ತು ಅದರ ಹಣ್ಣು ; ಬೋರೆ. ೭. ನೀರು ; ಜಲ. ೮. [ಜೈನ] ಸೂಕ್ಷ್ಮವಲ್ಲದುದು ; ಸ್ಥೂಲವಾದುದು : ಸುಗಮಸಂಜ್ವಲನದ ಮುನಿಸೊಮ್ಮೆ ಹಮ್ಮೊಮ್ಮೆ ತೆಗೆದುಹೋದುವು ಮುಂದೆ ಲೋಭ ವಿಗೆ ಸೂಕ್ಷ್ಮದೊಳು ನಿಂದುದದಜ ಬಾದರಗೂಡಿ ಜಗುಳಿತು ಮಾಯೆ ಲೆಕ್ಕಿಸದೆ (ಭರತ. ೩೧–೭೩). 'ಬಾದರರೂಪ' ಪರಾ. ೯. (ಹಾಲು, ನೀರು ಇತ್ಯಾದಿ ದ್ರವ ಪದಾರ್ಥಗಳಂತೆ) ವಿಭಾಗ ಹೊಂದಿದ ಮೇಲೆ ಮೂರನೆಯ ವಸ್ತುವಿನ ಸಹಾಯವಿಲ್ಲದೆ ಏಕರೂಪವಾಗುವ ಪುದ್ಗಲಸ್ಕಂಧ : ಅಂತರ್ಮುಹೂರ್ತನಿರುದ್ಧಾಶೇಷಮನೋವಾಗ್ಬಾದರಕಾಯಯೋಗಸೂಕ್ಷ್ಮಕಾಯಯೋಗಪರಿಣತಂ (ಅಂಪು. ೦೬–೯೯ ವ) ; ಬಾದರಸೂಕ್ಷ್ಮೈಕೇಂದ್ರಿಯ ದ್ವಿತ್ರಿಚತುರಿಂದ್ರಿಯಸಂಜ್ಞಾಸಂಜ್ಞಿಗಳು ಅದವು ಪರ್ಯಾಪ್ತಾಪರ್ಯಾಪ್ತದ ಭೇದದಿ ಜೀವಸಮಾಸೆ (ದ್ವಾದಶಾ. ೩–೩). ೧೦. ಜೀವಾದಿತತ್ತ್ವಗಳಲ್ಲಿ ವಿವಕ್ಷಿತವಾಗಿರುವ ಹದಿಮೂರು ಪ್ರಕೃತಿಗಳಲ್ಲಿ ಒಂದು : ಸ್ವಕೀಯಚರಮಸಮಯದೊಳನ್ಯತರವೇದನೀಯ . . . ಬಾದರ ಯಶಸ್ಕೀರ್ತಿರುಚ್ಚೈರ್ಗೋತ್ರತೀರ್ಥಕರನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಅಂಪು. ೦೬–೯೯ ವ) ; ಚರಮ ಸಮಯದೊಳ್ ಪರಿಶಿಷ್ಟಾನ್ಯತರವೇದನೀಯ ಮನುಷ್ಯಾಯುರ್ಮನುಷ್ಯ ಗತಿ ಪಂಚೇಂದ್ರಿಯ ಜಾತ್ಯಾನುಪೂರ್ವೀತ್ರಸನಾಮಬಾದರಪರ್ಯಾಪ್ತಕ ಸುಭಗಾದೇಯಯಶಸ್ಕೀರ್ತಿ ತೀರ್ಥಂಕರನಾಮೋಚ್ಚೈರ್ಗೋತ್ರಂಗಳೆಂಬ ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ (ಶಾಂತಿಪು. ೦೬–೮೦ ವ). 'ಪ್ರಕೃತಿ' ಪರಾ. [ಸಂ.]

**ಬಾದರಕೃಷ್ಟಿ**(ನಾ). [ಜೈನ] "ಅನಿವೃತ್ತಿಕರಣಗುಣಸ್ಥಾನದಲ್ಲಿ ಸಂಜ್ವಲನಕ್ರೋಧ–ಮಾನ–ಮಾಯಾ_ಲೋಭಗಳ ಅನುಭಾಗಗಳನ್ನು ಕಡಿಮೆಮಾಡಿ ಸ್ಥೂಲಖಂಡ ಮಾಡುವುದು" (ಅಂಪು. ೭೭ ಶೈನಪಾರಿಭಾಷಿಕ ಶಬ್ದಕೋಶ) : ಬಾದರಕೃಷ್ಟಿಕರಣಕಾಲಪ್ರಮಾಣಮೇನೆಂದೊಡೆ (ಕ್ಷಪಣ. ೨೩–೩೫). [ಸಂ.]

**ಬಾದರರೂಪ** (ನಾ). [ಜೈನ] ಸೂಕ್ಷ್ಮವಲ್ಲದ ರೂಪ ; ಸ್ಥೂಲವಾದ ರೂಪ : ಪದವು ಜಿನೇಂದ್ರಪಾದಕಮಲಂಗಳೊಳಾಪಗಮಾಗೆ ಕರ್ಮ ಬಂಧದ ಬಿಗಿಪೊಯ್ಯನೊಯ್ಯನೆ ಸಡಿಲ್ದಿರೆ ಬಾದರರೂಪದಿಂದೆ ಕೊಲ್ಲದ ಪರನಾರಿಗಾಟಿಸದ ಕಳ್ಳದಸತ್ಯದೊಳೊಂದದಾಗಳುಂ ಕುದಿದಪತೃಷ್ಣೆಯುಂ ಕುಸಿದು ಮಾಣಿಸುವಯ್ದುಮಣುವ್ರತಂಗಳಂ . . . ತಾಳ್ದಿ (ಅಂಪು. ೬–೭). [ಸಂ.]

**ಬಾದರಸೂಕ್ಷ್ಮ** (ನಾ). [ಜೈನ] "ಸ್ಥೂಲರೂಪವಾಗಿ ಕಂಡರೂ ಯಾವ ಪುದ್ಗಲಗಳನ್ನು ಭೇದಿಸಲಿಕ್ಕೂ ಅವುಗಳಲ್ಲಿ ಛಿದ್ರವನ್ನು ಮಾಡುವುದಕ್ಕೂ ಅನ್ಯಗಳನ್ನು ಹಿಡಿಯುವುದಕ್ಕೂ ಬರುವುದಿಲ್ಲವೋ ಅವು ಬಾದರಸೂಕ್ಷ್ಮಗಳು" (ಕೈಪಿ. ೩೩). [ಸಂ.]

**ಬಾದರಸ್ವರೂಪ** (ನಾ). = ಬಾದರರೂಪ : ಅಲ್ಲಿ ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱ ನಾಲ್ವತ್ತೆಂಟುವಿಕಲ್ಪಮಾದುತ್ತರ ಪ್ರಕೃತಿಗಳುಮನೊಳಕೊಂಡನುಬಂಧಿಸುವ ಬಂಧಂ ಪ್ರಕೃತಿಬಂಧಮೆಂಬುದಕ್ಕುಂ (ಸುಕುಮಾ. ೬–೨೭ ವ). [ಸಂ.]

**ಬಾದರಾಯಣ** (ನಾ). ಬ್ರಹ್ಮಸೂತ್ರ ಮತ್ತು ಮಹಾಭಾರತಗಳನ್ನು ಬರೆದವನೆಂದು ನಂಬಲಾದ ಒಬ್ಬ ಮಹರ್ಷಿ ; ವ್ಯಾಸ ; ಕೃಷ್ಣದ್ವೈಪಾಯನ ; ᴘ ಈ ಋಷಿಯು ಬದರೀವನದಲ್ಲಿ ಆಶ್ರಮವನ್ನು ಹೊಂದಿ ತಪಸ್ಸನ್ನಾಚರಿಸುತ್ತಿದ್ದ ಕಾರಣ ಈ ಹೆಸರು ಬಂದಿದೆ ಯೆಂಬ ನಂಬಿಕೆಯಿದೆ : ದ್ವಾಪಾರದಲಿ ಭಾವಜಜನಕನಾವಿರ್ಭವಿಸಿದ ತ್ರಿಜಗವಜಾಯಲು ಬಾದರಾಯಣನೆಂಬ ನಾಮದಲಿ (ದಕಪು. ೩೧–೩೨) ; ಶಾಲಿಹೋತ್ರಾಶ್ರಮವನಸಿಬರು ಬೀಳುಕೊಂಡರು ಮತ್ತೆ ಕಂಡರು ಬಾದರಾಯಣನ (ಕುವ್ಯಾಕ. ೦೦–೦) ; ಹ್ಯಾಂಗೆ ನೀ ದಾಸನಾದಿ ಪ್ರಾಣಿ . . . ಬಾದರಾಯಣಕೃತ ಭಾಗವತ ಕೇಳದೆ (ಕನಕ. ೦೦೭–೯).

**ಬಾದರಾಯಣಸಂಬಂಧ**=(ಆಲಂ) ಕಲ್ಪಿತವಾದ ಅಥವಾ ಅತ್ಯಂತ ದೂರದ ಸಂಬಂಧ ; ಬಹುದೂರದ ನಂಟುತನ : ಚೌಲಕರ್ಮಕ್ಕೂ ಸ್ತ್ರೀಯರ ನಗ್ನಚಿತ್ರಗಳಿಗೂ ಯಾವ ಬಾದರಾಯಣಸಂಬಂಧವೋ ಕಾಣೆ (ನಾಗಿಲ. ೨೬೭) ; ಅವರು ಮನೆ ಬಿಟ್ಟು ಹೋಗುವುದಕ್ಕೂ ನನ್ನ ವಿದ್ಯೆಗೂ ಇರುವ ಬಾದರಾಯಣಸಂಬಂಧವಾವರೂ ಯಾವುದು ? (ಭಾರತಿ. ೦೦೦). [ಸಂ.]

**ಬಾದರಾಯಣಸಿದ್ಧಾಂತ** (ನಾ). ಬಾದರಾಯಣಮಹರ್ಷಿಯಿಂದ ರಚಿತವಾದ ವೇದಾಂತಸೂಕ್ತಿ : ಈ ವಾದದಲ್ಲಿ . . . ಪುರುಷಾರ್ಥಕ್ಕೆ ಲೋಪವಿಲ್ಲವೆಂಬುದು ತಾತ್ಪರ್ಯವಾಗುತ್ತದೆ. ಬಾದರಾಯಣಸಿದ್ಧಾಂತದಲ್ಲೂ ಇದೇ ತಾತ್ಪರ್ಯವು (ಹಿಂದಸಾ. ೬೩). [ಸಂ.]

**ಬಾದರಾಯಣಸೂತ್ರ** (ನಾ). =ಬಾದರಾಯಣಸಿದ್ಧಾಂತ : ಈ ಬ್ರಹ್ಮಸೂತ್ರಕ್ಕೇ ಬಾದರಾಯಣಸೂತ್ರ, ವೇದಾಂತಸೂತ್ರ, ಶಾರೀರಕಮೀಮಾಂಸಾ, ಬ್ರಹ್ಮಮೀಮಾಂಸಾ ಎಂಬ ಹೆಸರುಗಳು ಬಂದಿವೆ (ಭಾರದ. ೨೭೦). [ಸಂ.]

**ಬಾದಲಿ**$_1$, ಬಾದ್ಲಿ, ಬಾಲ್ದಿ (ನಾ). (ನೀರನ್ನು ಸೇದಲು ಅಥವಾ ತೆಗೆದುಕೊಂಡು ಹೋಗಲು ಬಳಸುವ) ಒಂದು ಬಗೆಯ ಪಾತ್ರೆ : ಬಾದಲಿಯ ಮೇಲೆ ಬಾದಲಿ ಬಿಸಿನೀರು ತಾ, ತಣ್ಣೀರು ತಾ ಎಂದು ಇವನ ಅಜ್ಜ ಇರತಕ್ಕದ್ದೆ ! (ಗಾಳಕ. ೪೩). **ಬಾದ್ಲಿ** : ಚಿನ್ನಿ . . . ಬಾದ್ಲಿಯನ್ನು ನೀರಲ್ಲಿ ಮುಣುಗಿಸಿದಳು (ಹೊಸಪ. ೬೩). **ಬಾಲ್ದಿ** : ಕೆಲವೇಳೆ ಬಾಲ್ದಿ ತೆಗೆದುಕೊಂಡು ಸಸಿಗಳಿಗೆ ನೀರು ಹಾಕುತ್ತಿದ್ದೆವು (ಕಂಳ. ೨೨); ಸೊಸೆ ಬಾಲ್ದಿಯಲ್ಲಿ ನೀರು ತಂದು, ಒದ್ದೆಬಟ್ಟೆಯಿಂದ ನೆಲವನ್ನೊರಸಿದಳು (ಬಾಳಿಗ. ೪೨).

[ ←ಹಿಂ. ಬಾಲಟೀ, ಬಾಲ್ಟೀ ; ಮರಾ. ಬಾದಲೀ, ಬಾರಡೀ, ಬಾಲಟೀ, ಬಾಲಡೀ, ಬಾಲದೀ, ಬಾಲ್ಟೀ./ಇಂ. Bucket]

**ಬಾದಲಿ**$_2$ (ಗು). ಜರತಾರಿಯ ; ಕಲಾಬತ್ತಿನಿಂದ ಕೂಡಿದ : ಯಾರ ತಲೆಯ ಮೇಲೆ ನೋಡಿದರೂ ಗಾಂಧಿಟೊಪ್ಪಿಗೆಯ ಬದಲು 'ಬಾದಲಿ' 'ಕೋಟಾ' ಪಟಕೆಗಳೇ ಕಾಣಹತ್ತಿದವು (ವಿಚಿತ್ರ. ೪).

[ ← ಹಿಂ. ಬಾದಲಾ = ಜರತಾರಿ ; ಮರಾ. ಬಾದಲೀ ]

**ಬಾದವಣ**, ಬಾದಣ$_1$, ಬಾದಳ (ನಾ). ೧. (ಮನೆಯಲ್ಲಿ ಗಾಳಿ ಬೆಳಕು ಬರುವುದಕ್ಕಾಗಿ ಮಾಡಿರುವ) ಗವಾಕ್ಷಿ : "ಬಾದವಣಂ ವಾತಾಯನಂ ಗವಾಕ್ಷಂ ಜಾಳಂ" (ವಸ್ತುಕೋ. ೪೭–೦೦). ೨. ತೂತು ; ರಂಧ್ರ : 'ಬಾದವಣಂಬೋಗು' ಪರಾ. **ಬಾದಣ**$_1$ : ೧. ನೃಪತಿಯ ಪ್ರಾಸಾದದ ಶಿಖರದ ಮಧ್ಯಪ್ರದೇಶಮಂ ಬಾದಣ[ಪಾಠಾಂ. ವ]ದಂತಿರೆ ಛಿದ್ರಂ ಮಾಡಿ (ವಡ್ಡಾರಾ. ೦೬೩–೦೧); ಕುದುರೆ ಕಟ್ಟಿವರ್ ಬಾದಣಮಂ ನೋಡಿದ

ರೆಂಬಂತೆ ನಾಣ್ಣುಡಿಯುಂ ನನ್ನಿ ಮಾಡಿ (ಧರ್ಮಾಮೃ. ೧೨-೬೩); ಸೂಳೆಗೇರಿಯೋವರಿಯ ಬಾದಣದಿನೊಗೆವ ಅಗುರುಪಿನ ಕರ್ಬೊಗೆಯ ಸುರ್ಬಿನೊಳ್ ತಳ್ಕೊಯ್ದು (ಚಂದ್ರಪ್ರ. ೮-೯೩ ವ). ೨. ಬಸುಱ ಬಾದಣಕೆ ಬಾಯ್ವಿಟ್ಟು ದುಱದುಱನೊಗುವ ಬಿಸಿನೆತ್ತರಂ ಕಂಡಿದು (ಹಕಾ. ೬-೧೬); ಜೋಡನೊಡೆಹಾಯ್ದಂಬು ಧರಣಿಯೊಳಾಡಿದವು ಗುಳ ಸರಿದ ಕರಿಗಳ ತೋಡಿ ನೆಟ್ಟವು ಬದ್ಧರಂಗಳ ಬಾದಣವ ಕೊಱೆದು (ಕುವ್ಯಾಭಾ. ೮-೪೭); ಬೆಟ್ಟಕ್ಕೆ ಬಾದಣವ ತೆಗೆದಂತೆ ಫಾಯುವಿರೆ (ಪ್ರಭುಲಿ. ೩-೬೯). **ಬಾದಳ :** ೧. ಆ ಮನೆಗೆ ಒಂಬತ್ತುಬಾಗಿಲು ಈಡ ಪಿಂಗಳವೆಂಬ ಗಾಳಿಯು ಬಾದಳ (ಗಣಕಾ. ೧೩-೩); ಅನುನಯದೆ ಹಣಿಹಣಿಕಿ ನೋಡುತ್ತ ಬಾದಳದಿ . . . ಕಳ್ಳರೆಸೆದರ್ ತಮದೊಳು (ಚಕುಕ. ೧-೬-೧೨). ೨. ಬಿಲುಗಜಕ್ಕೆ ಬಾದಳದಲ್ಲಿ ಹಾದಿಯುಂಟೆ (ಬಿಜ್ಞಾಶಾ. ೯. ೭೦-೬೬). [<ಸಂ. ವಾತಾಯನ]

**ಬಾದವಣಂಬೋಗು** (ಕ್ರಿ). ರಂಧ್ರವಾಗು ; ತೂತಾಗು : ಪೂಗಣೆಯಿಂ ಬಾದವಣಂಬೋಗಿರೆ ಹೃದಯಂ (ವರ್ಧಪು. ೬-೧೩).
[ಬಾದವಣ + ಪೋಗು₁ (< ಪೋ₁)]

**ಬಾದಶಹ** 'ಪಾತಶಹ' ನೋ.

**ಬಾದಶಾಹ** 'ಪಾತಶಹ' ನೋ.

**ಬಾದಷಹ** 'ಪಾತಶಹ' ನೋ.

**ಬಾದಷಹಜಾದೆ** (ನಾ). (ಮುಸಲ್ಮಾನ) ದೊರೆಯ ಮಗಳು ; ರಾಜಕುಮಾರಿ : ಬಾದಷಹಜಾದೆಯರು ಮದುವೆಯ ಕಟ್ಟಿಗೆ ಸಿಕ್ಕಿ ಸಂಕಟಪಡಬೇಕಾಗಿಲ್ಲ (ಖಂಕಪು. ೨೪೬). [←ಪಾರ. ಹಿಂ. ಬಾದಶಾಹ್‌ಜಾದೀ]

**ಬಾದಷಾಹಿ** 'ಪಾತಷಾಹಿ' ನೋ.

**ಬಾದಳ** ' ಬಾದವಣ ' ನೋ.

**ಬಾದಳಗಂಡಿ** (ನಾ). ಗವಾಕ್ಷಿಯ ಕಂಡಿ, ರಂಧ್ರ : ಬಾದಳಗಂಡಿಯೊಳಗೆ ಕಂಡನಸ್ತಾದ್ರಿಗಾದಿತ್ಯಬಿಂಬ ಸಾರ್ದುದನು (ಭರತ. ೧೧-೧೨೫).
[ಬಾದಳ (<ಬಾದವಣ) + ಕಂಡಿ₁]

**ಬಾದಳಗೊಯಿ** (ಕ್ರಿ). ತೂತಾಗುವಂತೆ ಕತ್ತರಿಸು ; ರಂಧ್ರವಾಗುವಂತೆ ಕೊಯ್ಯು : ಸುರಗಿಯಂ ಕಿತ್ತು ಹಱುಗೋಲ ತೊಗಲಂ ಹಱಿಯಲಿಱಿದು ಬಾದಳಗೊಯಿದುಯೆಲವೊ ನಿನ್ನಯ ಹರಿಯ ಚರಣದೊಳಗುದಿಸಿದುದು ದಿಟವಾದೊಡಿವರೆಲ್ಲರಂ ರಕ್ಷಿಸೆಂದೆನುತಿರೆ (ಗುರುಚಾ. ೦೩-೧೨).
[ಬಾದಳ (<ಬಾದವಣ) + ಕೊಯಿ (< ಕೊಯ್)]

**ಬಾದಳಿಸು** ' ಬಾದಣಿಸು ' ನೋ.

**ಬಾದಾಮಿ₁,** ಬಾದಾವಿ (ನಾ). (ಚಾಲುಕ್ಯರ ರಾಜಧಾನಿಯಾಗಿದ್ದ) ಒಂದು ಊರಿನ ಹೆಸರು : " ಬಾದಾಮಿ-ವಾತಾಪಿ = ಒಂದು ಪಟ್ಟಣ " (ತದ್ಭಕೋ. ೩೦) ; ತೊಱೆಗಲ್ಲು ಬಾದಾಮಿ ಮುದಿಗಲ್ಲು ಕೊಪಣದ ತೆಱಪಿನ ರಾಜ್ಯವೆಲ್ಲವನು ಇಱಿದು ಕೆಡಿಸುತ (ಕುಂರಾಸಾಂ. ೦೯-೪೮) ; ಶ್ರೀತಾವರಗೆರೇ ರಾಜ್ಯೇ ಗ್ರಾಮಂ ಬಚ್ಚನಹಾಳುಕಂ ಗ್ರಾಮಂ ತಥೈವ ಬಾದಾಮಿದೇಶೇ ಖ್ಯಾಡಾಭಿದಂ ಪರಂ (ಎಕ. III (R), ನಂಜನ. ೦೦೨-೨೦; 1576); ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಸುಪ್ರಸಿದ್ಧ ಅತ್ಯಂತ ಪ್ರಾಚೀನ ಕೋಟೆಯೆಂದರೆ ಬಾದಾಮಿಯ ಕೋಟೆ (ಕಶಾಶ. ೨೫೬). **ಬಾದಾವಿ:** ಬಾದಾವಿಯ ಸಿದ್ಧಾಯದೊಳಗೆ ಹತು(ತ್ತು) ಗದ್ಯಾಣ ಪೊನ್ನು . . . ಬಿಟ್ಟರು (ಇಆ. VI. ೦೪೦-೨೩ ; 1139). P ಕ್ರಿ. ಶ. ಎರಡನೆಯ ಶತಮಾನದ ಟಾಲೆಮಿಯು ಬಾದಾಮಿಯನ್ನು ' ಬದಿಯ ಮೈಒ ' (Badia maioi) ಎಂಬ ಹೆಸರಿನಿಂದ ಸೂಚಿಸಿರುವುದರಿಂದ. ಆರನೆಯ ಶತಮಾನದ ಜಯಸಿಂಹನಿಗಿಂತ ಹಿಂದೆಯೇ ಇದು ಪ್ರಮುಖಸ್ಥಳವಾಗಿದ್ದಿತೆಂದು ಎಇ. XXVII. ೨ನೆಯ ಶಾಸನದ ವಿವರಣೆಯಿಂದ ತಿಳಿದುಬರುತ್ತದೆ. [← ತಮಿ. ವಾತಾಪಿ. ವಾತಾವಿ]

**ಬಾದಾಮಿ₂,** ಬದಾಮಿ, ಬದಾಮು (ನಾ). ಒಂದು ಬಗೆಯ ಮರ ಮತ್ತು ಕಠಿಣವಾದ ಕವಚವುಳ್ಳ, ಪೌಷ್ಟಿಕವಾದ ಅದರ ಬೀಜ : ಕತ್ತರಿಸಿದ ಕಬ್ಬು ಬಾದಾಮಿ ಬುಗುರಿಯು ಅತ್ತ ಪನ್ನೀರಳಿ ನೆನೆಗಡಲೆಯು (ಮುಂಡೀ. ೦೪೯-೨); ಮುದಿಕುರುಡಿ ಪೊಂಗೆಯನು "ಬಾದಾಮಿ, ಕೋ" ಯೆನುತ ಪದುಳದಿಂ ಮೊಮ್ಮಂಗೆ ಕೊಡಲು ಸಿಹಿಯಹುದೆ? (ಮುಂಕುಕ. ೬೬೩). **ಬದಾಮಿ :** ಬದಾಮಿಯ ಆಗಿಗಳನ್ನು ಒಂದು ವರ್ಷಪರಿಯಂತರ ಚನ್ನಾಗಿ ಬೆಳಸಿ ಬೇರೆ ಒಂದು ಕಡೆಗೆ ತಗ್ಗುಗಳನ್ನು ತಯಾರುಮಾಡಿ ಆಗಿಗಳನ್ನು ಕಿತ್ತಿ ಹಚ್ಚಬೇಕು (ಕೃಷಿಶ. ೦೫೦). **ಬದಾಮು :** ಈ ಹಡಗಗಳಲ್ಲಿ ಅರಬಸ್ತಾನದಿಂದ ಉತ್ತತ್ತಿ, ಖಜೂರ, ಡಾಳಿಂಬ, ಬದಾಮು . . . ಪಿಸ್ತೆ ಮುಂತಾದ ಸರಕುಗಳು ಬರುತ್ತವೆ (ಕಭೂಗ. ೩೦೭) ; ಹುಣಚಿ ಬದಾಮು ಮುಂತಾದ ಫಲವೃಕ್ಷಗಳು (ಮುಂಂಬಯಿ. ೬-೨೭೬).
[← ಪಾರ. ಬಾದಾಮ್; ಹಿಂ. ಬದಾಮ್, ಬಾದಾಮ್; ಮರಾ. ಬದಾಮ್, ಬಾದಾಮ್, ಬಾದಾಮಿ. / ತಮಿ. ವಾತುಮೈ; ಮಲ. ಬಾದಾಮ್; ತುಳು. ಬಾದಾಮ್, ಬದಾಮು; ತೆಲು. ಬಾದಮು, ಬಾದಾಮು, ಬಾದಾಮುಮು]

**ಬಾದಾಮಿಮಾವು** (ನಾ). (ಬಾದಾಮಿಯ ಆಕಾರದ) ಒಂದು ಬಗೆಯ ಉತ್ತಮಜಾತಿಯ ಮಾವು : ಬಾದಾಮಿಮಾವು ಇತರ ಮಾವಿನ ಹಣ್ಣುಗಳಿಗಿಂತ ಸಿಹಿಯಾಗಿರುತ್ತದೆ (ರೂಢಿ). [ಬಾದಾಮಿ₂ + ಮಾವು]

**ಬಾದಾಮಿಹಲ್ವ** (ನಾ). ಬಾದಾಮಿಬೀಜದಿಂದ ತಯಾರಿಸುವ ಒಂದು ಬಗೆಯ ಸಿಹಿತಿಂಡಿ : ದುರೋಟ್, ಬಾದಾಮಿಹಲ್ವ . . . ಗರಮಾ ಗರಂ ಬಾದೂಷಾ _ ಏನು ಕೊಡಲಿ ಸಾರ್ (ಮಹಾಂ. ೯೬); ಅವಲಕ್ಕಿ, ಬಾದಾಮಿಹಲ್ವ, ಕೋಸುಂಬರಿ (ರೂಪಕಂ. ೦೭).
[ ಬಾದಾಮಿ₂ + ಹಲ್ವ (< ಹಲ್ವಾ) ]

**ಬಾದಾಮಿಹಾಲು** (ನಾ). ಬಾದಾಮಿಯ ಪುಡಿಯನ್ನು ಮಿಶ್ರಮಾಡಿ ಕಾಯಿಸಿದ ಹಾಲು : ಮೇಜೊಂದರ ಮೇಲಿದ್ದ ಬಾದಾಮಿಹಾಲು ಅಲ್ಲೇ ಆರಿ ತಣ್ಣಗಾಗಿತ್ತು (ಕೀಲುಗೊಂ. ೯೩); ಗೋವಿಂದಪ್ಪನ ಬಾದಾಮಿಹಾಲು ಬಿಟ್ಟರೆ ಹೊಟ್ಟೆಗೆ ಮತ್ತೇನೂ ಬಿದ್ದಿರಲಿಲ್ಲ (ಮಹಾಂ. ೩೦).
[ ಬಾದಾಮಿ₂ + ಹಾಲು₁ (<ಪಾಲ್₁) ]

**ಬಾದಾವಿ** ' ಬಾದಾಮಿ₁ ' ನೋ.

**ಬಾದಿ** (ನಾ). ಭಾರ ; ಹೊರೆ : ಬದುಕು ಬಾದಿ ಇದು ಅನಾದಿ ಹಿಡಿದ ಹಾದಿ ಲೇಸೋ (ಕಲ್ಯಾಂಕದ್ಯ. ೪-೨೦) ; ಹೆಣ ಹೊರುವವನಿಗೆ ರೋಮ ಬಾದಿಯೇ ? (ಗಾದೆ). [←ತುಳು. ಬಾದಿ = ಭಾರವಾದ]

**ಬಾದಿಪೊಡ್ಡಿ** (ನಾ). ಒಬ್ಬಾಕೆಯ ಹೆಸರು : ಗೋಯಿನ್ದಪೊಡ್ಡಿಯ ಮಗಳು ಬಾದಿ(?ಳ)ಪೊಡ್ಡಿಯೆಮ್ಬಾಳ್ . . . ಅಶ್ವರಥ[ಂ]ಗೊಟ್ಟೊಳ್ (ಇಆ. XI. ೦೨೩-೪ ; ಸು. 778). [ ಬಾದಿ₂ + ಪೊಡ್ಡಿ ]

**ಬಾದಿಶರ್ಮ** (ನಾ). ಒಬ್ಬಾತನ ಹೆಸರು: ಪುನ ಬಾದಿಶರ್ಮ್ಮನಾ ಎಕ್ಕಂಶಃ (ಇಆ. VII. ೦೫೦-೬೬ ; 668). [ಬಾದಿ₂ + ಶರ್ಮ]

**ಬಾದು₁,** ವಾದು (ನಾ). ೧. ಮಾತು ; ನುಡಿ : ಬಾದೆನಾ ಮದೀಯ ಕರ್ಮಫಳೋದಿತಸಂತಾಪರೂಪಪಾಪಕಳಾಪಚ್ಛೇದನಕರಮಾಯ್ತು ಭವತ್ಪಾದಪ್ರಕ್ಷಾಳನೋದಕಂ ಮುನಿನಾಥಾ (ಶಂಶಕಾ. ೬-೦೩) ; ಆದರಿಸಿ ಭವ್ಯಜನಮುಂ ಸೋದರರಿವರೆಂದು ತಮ್ಮ ಸುಕೃತದ ಫಲದೊಪಾದಿಯನೀವ ಜೈನರು ಬಾದಿನೊಳೇನನ್ಯಸಮಯದವರಿತ್ತಪರೆ (ಶಮುಕ. ೪-೬೬) ; ಓದಿನೊಳಂ ರೂಪಿನೊಳಂ ಬಾದಿಂ ನಮ್ಮೂರೊಳಿರ್ದ ಮುನಿಗಳವೋಲೀ ಮೇದಿನಿಯೊಳೊಳರೆ (ಧರ್ಮಾಮೃ. ೪-೦೦೬). ೨. ಚರ್ಚೆ; ತರ್ಕ; ವಾದ: ಬಾದಿನೊಳವೋದಿನೊಳಂ ವಿಬುಧಾಳಿಯಂ ತೊದಲ್ಮಾಡುವ ಕೀರವೀ ಪೊಸ ಪಡಂಗಿಲಿಯೊಪ್ಪುವ ನಂದನಂಗಳೊಳು . . . ರಂಜಿಕುಂ (ಶಾಇಆ. IX-i.

೧೧೬ ೨೪ ; ಸು. 1057) : ತರ್ಕದೊಳ್ ಬಾದುಂ ಬರ್ಪುದಿಗುಟ್ಟಿ ಪೊಟ್ಟು ಪಡೆದೊ (ಸುಕುಮಾ. ೩-೯೩) : ಆದಿಯಾಗಿಪ್ಪುರ್ದಾರ್ಹತಸಮಯುಕ್ತಿ ಮೂಲ ಸಂಘಂ ಕೊಣ್ಡಕುನ್ದಾನ್ವಯಂ ಬಾದುವೇಡದಂ ಬಳಯಿಪುದಲ್ಲಿಯ ದೇಸಿಗ ಗಣದ ಪುಸ್ತಕಗಚ್ಛದ . . . ಗಂಗಚಮೂಪತಿ (ಎಕ.11. ೬೩-೩೦ : 1118). 'ಬಾದುಗುಟ್ಟು'. 'ಬಾದುಗೆಯ್' ಪರಾ. ೩. ಭಾಷೆ ; ಶಪಥ : ಬಾದುಂಬೆಂದು ಪತ್ರನೆಯ ತಲೆಯುಮಂ ನೇರ್ದಾಗಳ್ (ಶಮಿ. ೨೪೦ ಕ್ರಯೋ). ೪. ಜೊತೆ ; ಜೋಡಿ : ತಿಬಿ'ಕಲ್ಲಾಡುವ ಬೊಟ್ಟುಪೋರಿಸುವ ಸಂಡಂ ಪೊಪ್ಪು ಬಾದಿಂಗೆ ಕೈನಿಬಿ'ದೇರ್ದಾಡುವ . . . ನಾನಾಕ್ರೀಡೆಯಿಂದಿ ರ್ವರುಂ ತಳಿಸುದು (ಸುಕುಮಾ. ೨-೬). 'ಬಾದುಗ್ಯೆ' ಪರಾ. **ವಾದು** : ೨. ಇಲ್ಲಿ ಪ್ರಸಾದಮಂ ಕುಡದಿರ್ದ ಬಳಿವಿಡಿದು ಅಲ್ಲಿ ಪ್ರಸಾದಮಂ ವಾದಿನಿಂದಂ ಪಡೆವ . . . ಎನ್ನ ಪ್ರಸಾದಸಾಮರ್ಥ್ಯಮಂ ತೋಱುತಂ ಮನ್ನಣೆಯೊಳಿಲ್ಲಿಗೈತಪ್ಪುದು (ಬಸ. ೦-೮೦). 'ವಾದುಗುಟ್ಟು' ಪರಾ. **೩. ಮೂದಲಿಕೆ ; ನಿಂದೆ**: ಸೇದುವೆರಳಿನ ತಿರುವಿನಂಬಿನ ವಾದಿನೆಸುಗೆಯ ಬಿರುದರಗ್ಗದ ಕೈದುಕಾಱರು ಕೆಣಕದವರರ ಹೊಟ್ಟಿ ತೂಱಿದರು (ಕುಮ್ಮಾ. ೬-೨೬). [<ಸಂ. ವಾದ. / ತಮಿ. ವಾತು ; ತೆಲು. ವಾದು]

**ಬಾದು₂** (ನಾ). ೧. (ಉಕ) ವ್ಯರ್ಥವಾದುದು ; ನಿಷ್ಪ್ರಯೋಜಕ ವಾದುದು : ಈ ಹೆಣ್ಣುಮಕ್ಕಳ ಬುದ್ಧಿ ಅಂದರ ವ್ಯವಹಾರಕ್ಕೆ ಬಾದು (ವಚನ. ೫೬). ೨. (ಸಂಖ್ಯೆ, ಪಟ್ಟಿ ಮುಂತಾದುವುಗಳಿಂದ) ಕಳೆದುದು ; ವಜಾಮಾಡಿದುದು : (?).

**ಬಾದಮಾಲು**=ವಿಕ್ರಯವಾಗದ ಉಳಿದ ಸರಕು ; ನಿಷ್ಪ್ರಯೋಜಕ ವಾದ ಮಾಲು : ಅಂಗಡಿಯಲ್ಲಿ ಉಳಿದ ಬಾದಮಾಲಿನ ಪ್ರಮಾಣ ದಿಂದ, ಆ ಅಂಗಡಿಗೆಂದು ಸರುಕಗಳನ್ನು ಕೊಳ್ಳುವವನ ದಡ್ಡತನ ಜಾಣತನಗಳನ್ನು ತಿಳಿದುಕೊಳ್ಳಬಹುದು (ತಕ್ಕಡಿ. ೦೨೯). **ಬಾದಾಗು**= ೧. ವ್ಯರ್ಥವಾಗು ; ನಿರರ್ಥಕವಾಗು : ಒಂದು ವರ್ಷಂತೂ ಬಾದಾತು. ಇನ್ನು ಮುಂದಿನ ವರುಷರ . . . ಪರೀಕ್ಷಾಕ ಕೂಡಪ (ಅನ್ನ. ೯೬). ೨. ಊನವಾಗು ; ವಿಕಲವಾಗು : ನಡುವಿನ ಸ್ಥಿತಿಯಲ್ಲಿ ಕಳವು ಹೆಚ್ಚಾಗಿ ಒಮ್ಮೊಮ್ಮೆ ರೋಗಿಯ ಯಾವುದಾದರೊಂದು ಅವಯವವೇ ಬಾದಾಗುತ್ತದೆ (ಗೃಹವೈ. ೪೬). ೩. ಶೂನ್ಯವಾಗು ; ತೆರವಾಗು : ಶೋಲಿಗಳೆಲ್ಲಾ ಬರಬರತಾ ಬಹಳ ಬಾದಾಗಲಿಕ್ಕೆ ಹತ್ಯಾವರೆಪಾ (ಜಾದುಜಾ. ೪೦). [← ಅರ. ಬಆದ್ ; ಹಿಂ. ಬಾದಿ; ಮರಾ. ಬಾದ್]

**ಬಾದುಂಬೆ** 'ಬಾದುಬ್ಬೆ' ನೋ.

**ಬಾದುಗುಟ್ಟು**, ವಾದುಗುಟ್ಟು (ಕ್ರಿ). ವಾದಮಾಡು ; ತರ್ಕಮಾಡು ; ಚರ್ಚಿಸು : ಪರಮತ ಪೋಲ್ವಿಗೆ ಬರ್ಪಂತಿರೆ ತನ್ನೊಳ್ ಬಾದುಗುಟ್ಟಿ ಸುರಡಿಂಭರ್ ಬಿತ್ತರಿಸಿದ ವಿಕ್ರಿಯೆಯೊಳ್ಪಂತಿರೆ ಸಹಜಾತಿಶಯದಿಂದೆ ಸೊಬಗಂ ಸೋಲ್ವರ್ (ಅನಂಪು. ೬-೧೧). **ವಾದುಗುಟ್ಟು** : ವಾದುಗುಟ್ಟ ನಶೇಷಶಾಸ್ತ್ರವನಾದರಿಸನು . . . ವೈಯಾಕರಣನವನು (ಶಿಶಾಗ. ೫-೪-೩೦); ವಾದುಗುಟ್ಟದೆ ಕೊಡು ಮಗನೆ (ಶಿಶಾಗ. ೯-೨-೪೨). [ಬಾದು₁ + ಕುಟ್ಟು₁]

**ಬಾದುಗೆಯ್**, ಬಾದುಗ್ಯೆ, ವಾದುಗೆಯ್ (ಕ್ರಿ). ೧. =ಬಾದುಗುಟ್ಟು: ಇರ್ವರುಮೊಂದುದಿವಸಮಜಿತಂಜಯನೊಡನೆ ಪೋಗಿ ತತ್ಪುರೋಪ ವನದೊಳಿರ್ದ ಮತಿಸಾಗರಮುನಿಪತಿಯೊಳ್ ಬಾದುಗೆಯ್ದು (ಅಂಪು. ೩-೬೩ ವ) ; ಬಿಡೆ ಬಾದುಗೆಯ್ದೊಡರಿಸುವ ತಮ್ಮ ಕಡುಪಿಂದೆ . . . ಹಾಸ ಬೀಭತ್ಸಾದಿ ನಾನಾರಸಂಗಳಿಂದೊಂದಿದ ಜರದ್ದ್ರವಿಳಧಾರ್ಮಿಕಜನಂಗಳಿಂ (ಕಾದಂಬ. ೨೭೦); ಎಕ್ಕಿಯ ಬೇರ್ . . . ಅರೆದು ಲೇಪಿಸೆ ವೃಶ್ಚಿಕಮೊಱೆ ದೊಂದು ತಾಣಕ್ಕೆ ಬಟಿಕ್ಕಮುಗ್ರುಮೆನಿಸಿರ್ಪ ವಿಷಂ ಕಿಡುಗುಂ ಜನಂಗ ಳ್ಕೆಕ್ಕೆಗೆ ಬಾದುಗೆಯ್ದು ಕಿಮುವಂತಿರೆ ಲೋಕದ ಪಕ್ಷಪಾತದಿಂ (ಖಮದ. ೧೧-೬೨). **ಬಾದುಗ್ಯೆ** : ೨. ಜೊತೆಗೂಡು ; ಸೇರು : ಹೆಣೆದು ಕೊಳ್ಳು : ಅದು . . . ನೀಳ್ಪುವರಿದಡ್ಡಂಬಾಯ್ಪುಳ್ಳಿಗೊಂಬುಗಳೊಳ್ ಬಾದುಗ್ಯೆದು ಬಳೆದು ಮುಗಿಲಂ ಮುಟ್ಟಿ ಮುಗುಳ್ವಂತೆ ನಸುಬಾಗಿ ನಿಂದ ಕೀಟಿ'ಗ್ಗೊಂಬುಗಳೊಳಂ . . . ಸೊಗಯಿಸಿದುದು (೮೯೮ಾವ. ೯-೯೦ ವ). **ವಾದುಗೆಯ್** : ೧. ಸ್ಕಂದಕುಮಾರಋಷಿಯೊಡನೆ ವಾದುಗೆಯ್ದು ಸೋಲ್ತೊಡೆ (ವಡ್ಡಾರಾ. ೧೬೬-೧೨) ; ಶೂನ್ಯವಾದಿಗಳ್ . . . ಮತಿಸಾಗರ ಮುನಿಪತಿಯೊಳು ವಾದುಗೆಯ್ಯು (ಶಾಪುಂಕ. ೨೨). [ಬಾದು₁ + ಕೆಯ್₁]

**ಬಾದುಗ್ಯೆ** 'ಬಾದುಗೆಯ್' ನೋ.

**ಬಾದುಬೆ** 'ಬಾದುಬ್ಬೆ' ನೋ.

**ಬಾದುಬ್ಬೆ**, ಬದುಬೆ, ಬಾದವಿ, ಬಾದುಂಬೆ, ಬಾದುಬೆ, ಬಾದುವೆ, ಬಾದುವೆ, ಬಾಳುಬೆ (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಅದರ ಅತಿ ಪ್ರಾಚೀನರೂಪ ಕ್ರಿ. ಶ. ೮೭೨ರ ಶಾಸನದಲ್ಲಿರುವ ಬಾದುಬ್ಬೆ ಎಂಬುದು. ಕಾಲಕ್ರಮದಲ್ಲಿ ಇದರ ಬೆಳವಣಿಗೆ ಬಾದುಬ್ಬೆ > ಬಾದುಂಬೆ > ಬಾದುಬೆ, ಬಾದುವೆ > ಬಾದವಿ ಎಂದಿರುವಂತೆ ತೋರು ತ್ತದೆ. ಸಾಹಿತ್ಯದಲ್ಲಿ ಈ ಪದ ಹೆಚ್ಚಾಗಿ ಬಳಕೆಯಾಗಿಲ್ಲ (ಕಬ್ಬಿ. ೪೯). ೨. ವೈಶಾಖಮಾಸದ ಅಮಾವಾಸ್ಯೆಯಂದು ಆಚರಿಸುವ ಒಂದು ಹಬ್ಬ—ಉತ್ಸವ : ಅಂತಹ ಹಬ್ಬಗಳಲ್ಲಿ ಮುಖ್ಯವಾಗಿ ಮೂರು ಹಬ್ಬ ಗಳನ್ನು ಶಾಸನಗಳು ಹೆಸರಿಸಿವೆ—ಬಾದುಬ್ಬೆ, ದೀಪಾವಳಿ, ಕಾರ ಹುಣ್ಣಿವೆ. ಈ ಮೂರು ಹಬ್ಬಗಳು ಇಂದಿಗೂ ಉಳಿದುಕೊಂಡಿವೆ (ಕಶಾಅ. ೦೯೩). **ಬದುಬೆ** : ೨. ಬದುಬೆಯ ಅಮಾವಾಸೆಯಂದು ಸ್ವಸ್ತಿಶ್ರೀಮತು ದಣ್ಡ ನಾಯಕಂ . . . ವಿನಾಯಕಗ್ಗೆ ಬಿಟ್ಟ ಕರಿಯ ಕೆಯಿ (ಕೌಇ. VIII. ೩:೫೦ ; 1090). **ಬಾದವಿ**. **ಬಾದುಂಬೆ** : ೧. ಸಾಯಿರಖಂಡುಗಮಂ ಬೆಳದಾಪೊಕ್ಕಲ ಮಗನದೊಂದು ಕಂಬಮನೊಯಿದಿಟ್ಟಾ ಪೂರಿನ ಬಾದುಂಬೆಗೆ ಸಾಯಿರಮಂ ಬೆಳದನೆಂದು ನುಡಿವಮರ್ಮೂರ್ಢರ್ (ಸಮಪ. ೯-೪೨); ಪೆಟಿ'ಯಂ ಗೋಕುಳಮಂ ಗಿರಿಪ್ರಕರಮಂ ಬಾದುಂಬೆಯಂ ಶಾಂತಿಯಂ . . . ದೈವಂಗಳೆಂದಿಂತು ಕೂರ್ತೆಱಗುತ್ತಿರ್ಪವರೆಂತು ಮುಕ್ತಿವಡೆವರ್ (ಕಚಿ. I. ೦೩೪ ಕೈರೋಕ್ಯ ಕೂಡಾಮಣಿಸ್ತೋತ್ರ) : ಬಾದುಂಬೆ ದೇಶ್ಯವೋ ಅನ್ಯದೇಶ್ಯವೋ ಎಂಬುದನ್ನು ನಿರ್ಣಯಿಸುವುದಕ್ಕೊ, ಅದು ಯಾವ ದೇವತೆಯೆಂಬುದಕ್ಕೊ ಇದುವರೆಗೆ ದೊರೆತಿರುವ ಸಾಕ್ಷ್ಯಗಳು ಸಾಲವು (ಕಬ್ಬಿ. ೫೩). ೨. ದೀಪಾವಳಿ ಬಾದುಂಬೆ ಕಾರ ಪುಣ್ಣಮೆಯೆಂಬೀ ಮಹಾಪರ್ವ್ವಗಳೊಳ್ (ಬೊಂಕಶಾ. ೦೯೩೪, ಹಾವೇಂ. ೬೦-೪೬ ; ?). ೩. ಬಾದುಂಬೆಯೆಂಬ ದೇವತೆಯ ವಿಗ್ರಹವಿರುವ ಒಂದು ಸ್ಥಳದ ಹೆಸರು (?) : ಬಳ್ಳಿಗೊಳನೆ ಮೇರೆ ಯಲ್ಲಿಂ ಪಡುವಲು ಬಾದುಂಬೆಯನಿಂ ಬಡಗಲು ಪೂದೋಂಟ ಕಂಬ ನಾಲ್ವತ್ತುಮನಾ ದೇವರ ಪೂಜೆ ಪುನಸ್ಕಾರಕ್ಕಂ . . . ಜೀರ್ಣೋದ್ಧಾರಕ್ಕ ವೆಂದು ಕೊಟ್ಟರು (ಎಕ. VII. ಶಿಕಾ. ೧೨೫-೪೦ ; 1019) ; ಅಲ್ಲಿಯ ಬಾದುಂಬೆಯನಿಂ ಬಡಗಣ ಗದ್ದೆಕಟ್ಟು (ಎಇ XIV. ೨೬೩-೯೩ ; 1173). **ಬಾದುಬೆ** : ೧. ವಟವಾರವೆ ಬಾದುಬೆ ಶತ್ರುಸಾಲೆಯಂ ದೇವವಿನಿ ರ್ಮ್ಮಿತಂಗಳೆನೆ ಮಾಡಿಸಿ[ದೀ]ಶ್ವರನೇಂ ಕೃತಾರ್ತ್ಥನೋ (ಕಇ. V. ೨೦-೫೪ ; 1080) ; ಪಡುವ ಚಂದಣಗೇರಿಯೆಕ್ಕಸಂದಿಯಿಂ ಬಡಗದಾರಿಯಿಂ ಮೂಡಣ ಮನೆಯ ನಿವೇಶಣಮಂ ಬಾದುಬೆಯ ದೇಗುಲದಿಂ × × × (ಕೌಇ. XIV. ೦೨೯-೯೯ ; 1176) ; ಬನದಬ್ಬೆ ಬಳಿ ಬಾದುಬೇ ಕಿನಿಸಂಬರಿ [ಪಾಠಾಂ. ಬಾದುಮೆ ಕಿನಿಸಂಬಲಿ, ಬಾದುಂಬೆ ಕಿನಿಸಂಬಲಿ] ಜಲದ ಜಕ್ಕಿ ಜಾತ್ರೆಯ ದೈವಂ ಮನೆದೈವಮೆಂಬಿವೆಲ್ಲಂ ಜಿನಭಕ್ತಂಗೆಡದ ಕಾಲ ಕಪ್ಪಂ ಕಪ್ಪಂ (ಶಸಾರ. ೪೬೯). ೨. ಬಲಂ ಗೊಣ್ಡು ಸಪ್ತಸ್ತು ಪೋದನೆಸವೀ ಗ್ರಾಮಾಧಿಪಂ ಸಂದ ಬಾದುಬೆ ದೀಪಾವಳಿ ಕಾರ ಪುಣ್ಣಮೆಯೆನಿಪ್ಪೀ ಮೂಱುಪರ್ವ್ವಂಗಳೊಳ್ (ಕೌಇ. XI–1. ೫೨-೬೬ ; 1007) ; ಬಾದುಬೆ ಕಾರ ಪುಣ್ಣಮಿ ದೀಪಾಳಿಗೆ ಮೂಱುಪರ್ವ್ವ

ದೊಳಾ ಪ್ರತ್ಯೇಕವೊನ್ದು ಗದ್ಯಾಣ (ಎಇ. XX, ೬-೩೩; 1012). **ಬಾದುಮೆ:** ೧. ಹರಮಲ್ಲಿಕಾರ್ಜುನಂಗಪ್ಪ ಪೂಜೆಯ ಕೊಟ್ಟ ಪರಿಸೂತ್ರದೊಳಗಿರ್ದ ಬಾದುಮೆ[**ಪಾಠಾಂ.** ದುಮಿ, ದುವೆ, ಧುಮೆ]ಯ ಕಟ್ಟಿ . . . ಕೈಲಾಸಕ್ಕೆ ಹೋಗಿ (ಸಿದ್ಧರಾ. ೯-೬೧); ಸೊನ್ನಲಿಗೆಯ ಮಲ್ಲಿಕಾರ್ಜುನದೇವಸ್ಥಾನದ ಒಳವಲಯದಲ್ಲಿ ("ಪರಿಸೂತ್ರ") ಬಾದುಮೆದೇವತೆ ಇದ್ದಳೆಂಬುದು ಇದರಿಂದ ತಿಳಿಯಬರುತ್ತದೆ (ಸಂಕೋಶ. ೦೩೩). **ಬಾದುವೆ:** ೧. ಕ್ರಿ. ಶ. ೧೨೦೩ರ ಶಾಸನದಲ್ಲಿ 'ಬಾದುವೆಯ ನಾಯಕ' ಎಂಬ ವ್ಯಕ್ತಿಯ ಹೆಸರಿದೆ . . . ಇಲ್ಲಿ ಬಾದುವೆದೇವತೆಯ ಹೆಸರನ್ನು ಕಾಣಬಹುದು (ಸಂಕೋಶ. ೦೩೬). ೪. ಬಾದುಬ್ಬೆಯೆಂಬ ದೇವತೆಯ ದೇವಸ್ಥಾನ: × × × ಕುಡಿಸುದೆ ಜೀಯ್ಯಂ ಅಯ್ದು ಬ್ರಹ್ಮಪುರಿಯ ಬಾ[ದು]ವೆಯ ಕಾಹಳಿಗಳ ಕೈಯಲು × × × ಮಂ ಪಾದಪ್ರಕ್ಷಾಲನಂ ಮಾಡಿ ಧಾರಾಪೂರ್ವಕವಾಗಿ ಬಿಟ್ಟರು (ಸೌಇಇ. XV, ೬೨-೩೭; 1186). **ಬಾಳುಬೆ:** ೧. ಪಶ್ಚಿಮದೊಳ್ಪುಷ್ಕರಿಣಿ ವಾಯುವ್ಯದೊಳ್ಗೋಣೇಶ್ವರದೇವರ ತೋಂಟಂ ಉತ್ತರದೊಳ್ ಬಾಳುಬೆಯೇರಿ (ಎಕ. VIII, ಸಾಗರ. ೦೦೯-೬೦; 1042); ಸಾಗರತಾಲ್ಲೂಕಿನ ಶಾಸನವೊಂದರಲ್ಲಿ 'ಬಾಳುಬೆಯೇರಿ' ಎಂದಿದೆ. ಈ 'ಬಾಳುಬೆ' ಎಂಬುದು ಬಹುಶಃ 'ಬಾದುಬೆ' ಎಂದಿರಬೇಕು (ಸಂಕೋಶ. ೦೩೩).

**ಬಾದಮಿಅಮವಾಸೆ** = ಬಾದುಬ್ಬೆಯ ಉತ್ಸವ ನಡೆಯುವ ವೈಶಾಖಮಾಸದ ಅಮಾವಾಸ್ಯೆ: ವೈಶಾಖಮಾಸದ ಅಮಾವಾಸ್ಯೆಗೆ 'ಬಾದಮಿಅಮವಾಸೆ'ಯೆಂದು ಉತ್ತರಕರ್ಣಾಟಕದ ರೂಢಿಯ ಹೆಸರು (ಶಬ್ದವಿ. ೯೯); ಬಾದಮಿಅಮವಾಸೆಯಲ್ಲಿ ಬಾದಾಮಿಯಲ್ಲಿ ಬನಶಂಕರಿಪೂಜೆ ನಡೆಯುತ್ತದೆ (ಶಬ್ದವಿ. ೩೦). **ಬಾದಮಿನೈವೇದ್ಯ**=ವೈಶಾಖದ ಅಮಾವಾಸ್ಯೆಯಂದು ಆಚರಿಸುವ ಬಾದುಬ್ಬೆಯ ಹಬ್ಬದಲ್ಲಿ ಮಾಡುವ ಎಡೆ: ನದಿಯಿಂದಲಾಗಲಿ ಹೊಲದಿಂದಲಾಗಲಿ ಐದು ಚಿಕ್ಕ ಕಲ್ಲುಗಳನ್ನು ಆಯ್ದು ತಂದು ... ಮನೆಯ ಯಜಮಾನ ಅವುಗಳನ್ನು ಪೂಜಿಸಿ ಹೂರಣದ ಹೋಳಿಗೆಯ ನೈವೇದ್ಯ ಮಾಡುವನು . . . ಪ್ರತ್ಯೇಕವಾದ ಎಡೆಯಲ್ಲಿ ಬಡಿಸುವ ಈ ನೈವೇದ್ಯವನ್ನು 'ಬಾದಮಿನೈವೇದ್ಯ' ಎಂದು ಹೇಳುವರು (ಸಂಕೋಶ. ೦೩೮). **ಬಾದುಂಬೆಯ ಕಟ್ಟೆ**=ಬಾದುಬ್ಬೆಯೆಂಬ ದೇವತೆಯ ಹೆಸರಿನಲ್ಲಿರುವ ಕೆರೆ (?): ಬಾದುಂಬೆಯ ಕಟ್ಟೆಯಿಂ ಮೂಡ ಹಿರಿಯೋಣಿಯಿಂ ಬಡಗ ಕೆಂಗಾಡು ಮತ್ತರೆರಡು (ಸೌಇಇ. IX-i, ೩೨೯-೩೩; 1209). **ಬಾದುಬ್ಬೆಯ ಪರ್ವ, ಬಾದುಂಬೆಯ ಪರ್ವ**=ವೈಶಾಖದ ಅಮಾವಾಸ್ಯೆಯಂದು ಉತ್ತರಕರ್ಣಾಟಕದಲ್ಲಿ ಆಚರಿಸುವ, ಬಾದುಬ್ಬೆಯೆಂಬ ದೇವತೆಯ ಒಂದು ಹಬ್ಬ: ಆ ನಗಿಸಿದ ಪಗರಣೆ ಗಂಗೆ ಪಿರಿದು ಕಸವರಮನಿತ್ತೊನಾದಿಂದಿತ್ತ ಬಾದುಬ್ಬೆ[**ಪಾಠಾಂ.** ಂಬೆ]ಯ ಪರ್ವಮುಂ ಪಗರಣದಾಟಪಾಟಮುಮಾದುವು (ಪಮ್ಪಾರಾ. ೦೦೯-೨೦); ಬಾದುಬ್ಬೆಯ ಪರ್ವ್ವದನ್ದು ಪೆಗ್ಗಡೆ ಗೊಪಗರಣದ ದ್ರಮ್ಮಮೆಣ್ಬತ್ತು (ಕಇಆ. ೯೬-೦೮-೨೯; 932); 'ಬಾದುಂಬೆಯ ಪರ್ವ'ವೆಂದು ಶಾಸನಗಳಲ್ಲಿ ಹೇಳಿರುವ ಹಬ್ಬ ಈ ದೇವಿಯ ಜಾತ್ರೆಯ ಕಾಲವೆಂದು ತೋರುತ್ತದೆ (ಶಬ್ದವಿ. ೩೦). **ಬಾದುಬ್ಬೆಯ ಪಾಳು, ಬಾದುಂಬೆಯ ಪಾಳು**=ಬಾದುಬ್ಬೆಯೆಂಬ ದೇವತೆಯ ದೇವಸ್ಥಾನಕ್ಕೆ ಬಿಟ್ಟ ಭೂಮಿ,—ಜಮೀನು: ಶ್ರೀಮತ್ತತ್ಪುರುಷ ಪಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಕಿಸುಕಾಡೆಪ್ಪತ್ತರ ಒಳಿಯ ಬಾದುಬ್ಬೆಯ ಪಾಳನವರ ವಿದ್ಯಾರ್ತ್ಥಿತಪೋಧನರ ಗ್ರಾಸಕ್ಕಂ ದೇವರ ಪೂಜೆಗಂ . . . ಶ್ರೀ ಬಲ್ಲವರಸರ್ಕ್ಕೊಟ್ಟರ್ (ಸೌಇಇ. XI-i, ೬೦೬-೨೯; 1076); ಈ ದೇವಿಗಾಗಿ ಬಿಟ್ಟ ಭೂದತ್ತಿಗಳಿಗೆ 'ಬಾದುಂಬೆಯ ಪಾಳು' ಎಂಬ ಹೆಸರಿತ್ತೆಂದು ಊಹಿಸಬಹುದು (ಶಬ್ದವಿ. ೩೦). **ಬಾದುಬ್ಬೆಯಮಾವಾಸ್ಯೆ, ಬಾದಮಿಅಮಾವಾಸ್ಯೆ, ಬಾದುಂಬೆಅಮಾವಾಸ್ಯೆ, ಬಾದುಬೆಯಮಾವಾಸ್ಯೆ** = ಬಾದಮಿಅಮವಾಸೆ: ಜಯಸಂವತ್ಸರದ ಬಾದುಬ್ಬೆಯಮಾವಾಸ್ಯೆ ಸೂರ್ಯ್ಯಗ್ರಹಣದನ್ದು . . . ಶ್ರೀಖಣ್ಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನೈಯ್ದು (ಸೌಇಇ. XI-i, ೯೨-೩೦; 1054); ಈಗಲೂ ಆ ಅಮಾವಾಸ್ಯೆಯನ್ನು 'ಬಾದಮಿಅಮಾವಾಸ್ಯೆ' ಎಂದು ಕರೆಯುತ್ತಿರುವುದು, ಆ ದಿನ ಬನಶಂಕರಿಗೆ ವಿಶೇಷಪೂಜೆ ನಡೆಯುವುದು—ಇವೆಲ್ಲಾ ಬನಶಂಕರಿ (=ಬನದಬ್ಬೆ) ಮತ್ತು ಬಾದುಬ್ಬೆ ಒಂದೇ ಎಂಬುದನ್ನು ಸೂಚಿಸುವುದಿಲ್ಲವೇ? (ಸಂಕೋಶ. ೦೩೯); ವೈಶಾಖ ಬಹುಳಅಮಾವಾಸ್ಯೆಯನ್ನು ಬಾದುಮೆ, ಬಾದುಂಬೆಅಮಾವಾಸ್ಯೆಯೆನ್ನುವರು. ಈ ಅಮಾವಾಸ್ಯೆಯ ದಿವಸ ಬಾದಾಮಿಯ ಬನಶಂಕರಿಯ ಉತ್ಸವ ನಡೆಯುತ್ತದೆ (ಕಾಹಬ್ಬ. ೯೬); ಬಾದುಬೆಯಮಾವಾಸ್ಯೆಯಾದಿವಾರಂ ಸೂರ್ಯ್ಯಗ್ರಹಣದಂದು . . . ಎಲೆಯ ಪೇಜಿನ ಸುಂಕಮುಂ ದೇವಸಿಂಗಜೀಯರ ಪುತ್ರಂ ನೀಲೇಶ್ವರಪಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ಬ್ಬಕ(ಂ)ಮ್ಮಾಡಿ ಕೊಟ್ಟಂ (ಸೌಇಇ. IX-i, ೦೯೯-೨೦; 1119). **ಬಾದುಬ್ಬೆಯ ಹಬ್ಬ**=ಬಾದುಬ್ಬೆಯ ಪರ್ವ: ಬಾದುಬ್ಬೆಯ ಹಬ್ಬವು ಮೂಲತಃ ಜೈನರ ಹಬ್ಬ ಎಂದು ಸಾಧಿಸುವ ಪ್ರಯತ್ನವಿದೆ. ಆದರೆ ನಮಗೆ ಮುಖ್ಯವಾದದ್ದು ಈಗಿನ ರಂಜಾನ್ ಹಬ್ಬದಲ್ಲಿನಂತೆ ಬಾದುಬ್ಬೆಯ ಹಬ್ಬದಲ್ಲಿಯೂ ವೇಷಗಳನ್ನು ಕಟ್ಟುತ್ತಿದ್ದರು ಎಂಬುದು (ಸಂಕೋಶ. ೦೩೩). **ಬಾದುಮೆಯ ಮದುವೆ**=ಬಾದುಬ್ಬೆಯೆಂಬ ದೇವತೆಯ ಮದುವೆ; ಅಸಂಭವವಾದುದು: ಗೀಜಗನ ಗೂಡು ಕೋಡಗದಣಲ ಸಂಚ ಬಾದುಮೆಯ ಮದುವೆ ಬಾವುಲ ಬಿದ್ದಿನಂತೆ ಜೂಜುಗಾಜಿನ ಮಾತು ಬೀದಿಯ ಗುಂಡನ ಸೊಬಗು ಓಡಿನೊಳಗಗೆಯ ಹೊಯ್ದಂತೆ (ಬಸಪ. ೩೩೬); 'ಬಾದುಮೆಯ ಮದುವೆ' ಎಂಬುದು 'ಗಣಪತಿಯ ಮದುವೆ' ಎಂಬ ಉಕ್ತಿಗೆ ಸಮಾನವಾದುದು (ಸಂಕೋಶ. ೦೩೮). ☞ ಈ ಶಬ್ದದ ವ್ಯುತ್ಪತ್ತಿಯ ಬಗೆಗೆ ಬೇರೆಬೇರೆ ಊಹೆಗಳಿವೆ. ಶ್ರೀ ಪಿ. ಬಿ. ದೇಸಾಯಿಯವರು 'ವಸಂತಾಂಬೆ' ಎಂಬುದರಿಂದಲೂ ಶ್ರೀ ಡಿ. ಎಲ್. ನರಸಿಂಹಾಚಾರ್ ಅವರು 'ಭದ್ರಾಂಬೆ' ಎಂಬುದರಿಂದಲೂ ಮತ್ತು ಡಾ. ಎಂ. ಚಿದಾನಂದಮೂರ್ತಿಯವರು 'ಬನದಬ್ಬೆ' ಎಂಬುದರಿಂದಲೂ ಈ ಶಬ್ದವು ಬಂದಿರಬೇಕೆಂದು ಊಹಿಸಿದ್ದಾರೆ.

[ ? ]

**ಬಾದುಮಾಯ** 'ಬಾದುಮಯ್ಯ' ನೋ.

**ಬಾದುಮಯ್ಯ, ಬಾದುಮಯ** (ನಾ). ೧. ಒಂದು ದೇವತೆಯ ಹೆಸರು (?): ಅರಗಿನ ರೂಪನುರಿಯ ಕೊನೆ ಪತ್ತಿದಂತಾಗೆ ಬಾದುಮಯ್ಯನ ಮೆಯ್ಯಂ ಬಜಸಿಡಿಲು ಪೊಡೆದಂತಾಗೆ (ಶಂದಾರ. ಪ. ೯೦೩-೦೬); ನಮ್ಮ ದೇವರು ಮಾರಿ ಮಸಣಿ ಬೀರ ಮೈಲಾರ ಉಡಿಸಿಕಾರಿ ಬಾದುಮಯ್ಯ ವೀರನ ಬಿಡಲಾಟಿ[3] (ಶೃಂಗಸೂ. I. ೨೦೪). **ಬಾದುಮಯ:** ೨. ಒಬ್ಬಾತನ ಹೆಸರು (?): ಅದಕೆ ಒಡೆಯ ಮಲೆಯರ ಪಾರಿಸಯ್ಯಾ ಬಾದುಮಯಂಗೆ ಮತ್ತರು ೨ (ಕೊಪ್ಪಾಶಾ. ೩೭-೩೦; 1049).

[ಬಾದುಮೆ(<ಬಾದುಬ್ಬೆ) + ಅಯ್ಯ$_{1}$]

**ಬಾದುಮೆ** 'ಬಾದುಬ್ಬೆ' ನೋ.

**ಬಾದುರ** 'ಬಹಾದುರ್' ನೋ.

**ಬಾದುವೆ** 'ಬಾದುಬ್ಬೆ' ನೋ.

**ಬಾದುಶ** 'ಪಾತಶಹ' ನೋ.

**ಬಾದೂಷಾ** (ನಾ). ಒಂದು ಬಗೆಯ ಸಿಹಿತಿಂಡಿ: ಜಿಲೇಬಿ, ದಂರೋಟ್ . . . ಬಜ್ಜಿ, ಗರಮಾಗರಂ ಬಾದೂಷಾ—ಏನು ಕೊಡಲಿ ಸಾರ್? (ಮುಹಾಂ. ೩೬). [← ಹಿಂ. ಬಾಲೂಸಾಹೀ, ಬಾಲೂಶಾಹೀ]

**ಬಾದೆಯ** (ನಾ). ಒಬ್ಬಾತನ ಹೆಸರು: ಶ್ರೀಗಚ್ಛಮಹಾಚಾರ್ಯ್ಯರಾ

ಮಗನ್ಬಾದೆಯನ್ನಿರಟ್ಟೆ ತುಱುಗೊಳ್ಳೊಕ್ಕಾದಿ ತುಱುವನಿಕ್ಕಿಸಿ ಸುರ ಲೋಕದ ಭೋಗಿ ಆದನ್ (ಎಳ. IX. ಹೊಸಕೋ. ೬೪-೨; ಸು. 720).
[? + ಅಯ್$_1$ (<ಅಯ್ಯ$_1$)]

**ಬಾದೆಯಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮೂಡಲ ದೇಶಕ್ಕೆ ಹೋದ್ಯಲ್ಲೊ ಗೀಜುಗ ಬಾದೆಯಹುಲ್ಲ ತಂದ್ಯಲ್ಲೊ ಗೀಜುಗ (ಜಾಪದ. ೦೧). [? + ಹುಲ್ಲು (<ಪುಲ್)]

**ಬಾದೋವೋಜ** (ನಾ). ಒಬ್ಬಾತನ ಹೆಸರು : ಬಾದೋವೋಜ ಮಾಡಿದ (ಎಳ. VIII. ಸೊರಬ. ೯-೬; ಸು. ೮೦೦). [? + ಓಜ$_1$ (<ಒವಜ್ಝ)]

**ಬಾದ್ಲಿ** 'ಬಾದಲಿ$_1$' ನೋ.

**ಬಾಧ** (ನಾ). ೧. ನೋವು ; ವೇದನೆ. ೨. ಕಷ್ಟ ; ತೊಂದರೆ. ೩. ಹಿಂಸೆ; ಕಾಟ; ಕಿರುಕುಳ. ೪. ಕೆಡುಕು ; ಹಾನಿ. ೫. ಅಪಾಯ; ಆಪತ್ತು. ೬. ತಡೆ ; ಅಡ್ಡಿ. ೭. ವಿರೋಧ ; ಪ್ರತಿಷೇಧ. ೮. [ನ್ಯಾಯಶಾ] ಹೇತ್ವಾಭಾಸದಲ್ಲಿ ಹೇಳಿರುವ ವ್ಯಭಿಚಾರ, ವಿರುದ್ಧ, ಸತ್ಪ್ರತಿಪಕ್ಷ, ಅಸಿದ್ಧಿ ಮತ್ತು ಬಾಧ ಎಂಬ ಐದುಬಗೆಯ ದೋಷಗಳಲ್ಲಿ ಒಂದು : ಸವ್ಯಭಿಚಾರ ವಿರುದ್ಧ ಸತ್ಪ್ರತಿಪಕ್ಷ ಅಸಿದ್ಧಿ ಬಾಧಗಳೆಂಬ ಹೇತ್ವಾಭಾಸದೋಷಗಳಿಲ್ಲದಿರುವಿಕೆಯುಂ (ಶಬ್ದಾನು. ೦೮); ಬಾಧ ಎಂದರೆ ಪ್ರಮಾಣಜ್ಞಾನದ ವಿಷಯವು ಅಸತ್ ಎಂದು ಸಿದ್ಧಿಸೋಣ (ತ್ರಾಕಸ್ತ್ವ. ೩೨೫). ೯. ಮನುಷ್ಯನು ಆಚರಿಸಬೇಕಾದ ನಾಲ್ಕುಬಗೆಯ ಆಶ್ರಮಗಳ ವಿಷಯದಲ್ಲಿರುವ ಮೂರು ರೀತಿಯ ಮತಗಳಲ್ಲಿ ಒಂದು : ಆಶ್ರಮವಿಷಯದಲ್ಲಿ ಬಾಧ ವಿಕಲ್ಪ ಸಮುಚ್ಚಯವೆಂದು ಮೂರು ಮತಗಳಾದವು. ಬಾಧಪಕ್ಷವು ಜೈಮಿನಿ ಸಮ್ಮತವು (ಹಿಂದೂಶಾ. ೦೩೪). [ಸಂ.]

**ಬಾಧಕ** (ನಾ). ತೊಂದರೆ ; ಕಷ್ಟ : ಒಬ್ಬನಿಗೆ ತಲೆ ಸರಿಯಿಲ್ಲ ಅನ್ನುತ್ತಾರೆ. ಏನು ಬಾಧಕ ಅದರಿಂದ ? (ಜುಟ್ಟು. ೨೪೦) ; ಅಳದಿದ್ದರೆ ಮಗುವಿನ ಶರೀರವೃದ್ಧಿಗೆ ಬಾಧಕವೆಂದು ವಿಕಾಸವಾದಿಗಳ ಮತ (ಜೀವಾಸ್ತ್ರ. ೦೬೦). [ಸಂ.]

**ಬಾಧಾಕರ** (ನಾ). ತೊಂದರೆಯನ್ನುಂಟುಮಾಡುವುದು ; ಉಪದ್ರವಕಾರಿಯಾದುದು : ದೃಷ್ಟಾದೃಷ್ಟಬಾಧಾಕರಮಿದುವೆ ಪರಪ್ರೇಯಸೀಪ್ರೇಮಂ (ಶಂಕರಪೂ. ೦೦-೬೦). [ಸಂ.]

**ಬಾಧಿಸು** (ಕ್ರಿ). ೧. ಕ್ಲೇಶಪಡಿಸು ; ಸಂಕಟಪಡಿಸು : ಶೂಲೆ ಬಾಧಿಸುತಿಪ್ಪ ಸಂಕಟಕಾಱದಿಳೆಯೊಳು ದೊಪ್ಪದೊಪ್ಪನೆ ಕೆಡೆದು ಹೊರಳುತ ಮಿಗೆ ನರಳುತಿರಲು (ಜಸಪು. ೪೯-೨೬) ; ಪಾತಕದ್ರೋಹಿಗಳ ಮುಂದಲೆಯ ಒಡಿದೆಳೆದುಕೊಂಡೊಯ್ದು ಕೈಕಾಲ ಸಂದುಗಳ ಬಿಡಿಸಿ ಕೊಱದಿಱದರಿದು ಬಾಧಿಸುವುದು (ಶಂಕ್ರ. ೫೬-೯೦); ರಮಣೀಯವಾದ ಆ ಗಿರಿಯನ್ನು ನೋಡಿ ರಾಮನ ಮನಸ್ಸನ್ನು ಆ ವ್ಯಥೆ ಬಾಧಿಸುವುದು ನಿಂತುಹೋಯಿತಂತೆ (ಸಪರಾಓ. ೦೦೦). ೨. ಪೀಡಿಸು ; ಹಿಂಸೆಮಾಡು : ಸಾಧುಗೆ ಸಾಧು ಮಾಧೂ(ಧು)ರ್ಯ್ಯಂಗೆ(ಂಗೆ) ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ (ಇಳ. X. ೬೦-೫; ೨ನೆಯ ಶತ); ಹೆಱರ ಬಾಧಿಸುವುದು ತನು ಕೆಡುವನ್ನಕ್ಕ ಮಾಣದು (ಬಸವ. ೦೦) ; ಬಾಧಿಸುವುದೀ ದೇಹವಂ ನರೆ ತೆರೆಗಳಿನ್ನು (ಕೈಲಾಸ. ೦೦-೪೮). ೩. ನಿಗ್ರಹಗೊಳಿಸು ; ದಂಡಿಸು : ಸಾಧಿಸುವೊಡಮುಸ್ತ್ರಚಯಮನಿನ್ನುಂ ತನುವಂ ಬಾಧಿಸು ತಪೋಗ್ನಿಯಿಂದಾರಾಧಿಸು ನೀಂ ಮಗನೆ ದುರಿತಹರನಂ ಹರನಂ (ಶಂಕರಪೂ. ೬-೬).
[ಬಾಧೆ + – ಇಸು$_3$]

**ಬಾಧುರ** 'ಬಹಾದುರ್' ನೋ.

**ಬಾಧೆ** (ನಾ). ೧. ನೋವು ; ವೇದನೆ : "ಪೀಡಾ, ಬಾಧಾ . . . ಆಭೀಲಂ, ೯ ಸಾಮಾನ್ಯವಾಗಿ ದುಃಖದ ಹೆಸರುಗಳು" (ಸಿದ್ಧಾಂತಿ. ೭೩). ೨. ಹಿಂಸೆ; ಕಾಟ ; ಕಿರುಕುಳ : ಇಂಚೆಯ ಪಸವಿನ ಬಱದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯು ಕೆಯ್ಪುಡಿವೊಲಾದುವಾ ನಾಡೂರ್ಗಳ್ (ಶಂಕರಪೂ. ೬-೩೦) ; ಜನವೆಲ್ಲ . . . ದೇಶದೊಳಗಾದ ಖಗಮೃಗದ ಬಾಧೆಯನು ಧರಣೀಶನೆನಿಸುವ ಹರಿಶ್ಚಂದ್ರರಾಯಂಗೆ ತವಮ್ಮಾಸಱಿವಂತೆ ಬಿನ್ನೈಸುತ್ತ ಕೈಮುಗಿಯುತಿರ್ದರು (ಹರಿಶ. ೩-೬೩); ಇನ್ನು ಕೆಲವರು ಇದು ಪಿಶಾಚಿಯ ಬಾಧೆಯೆಂದೂ ಹೇಳತೊಡಗಿದರು (ಕಾಓರ. ೦೧ ಕಥಾಸಾರ). ೩. ಅಪಾಯ ; ಆಪತ್ತು. ೪. ನಿಷೇಧ ; ನಿರೋಧ : "ಆಪತ್ತಿನೊಳು ನಿಷೇಧದೆ ಬಾಧೆಯೆಂದೆಂಬುದು" (ಚುಂಗಣ. ೦೪೬-೨೩). ೫. ಅಡಚಣೆ ; ಅಡ್ಡಿ. ೬. [ನ್ಯಾಯಶಾ] ವಾದದಿಂದ ಖಂಡಿಸುವಿಕೆ ; ಆಕ್ಷೇಪಣೆ. [ಸಂ. ಬಾಧಾ]

**ಬಾಧೆಬಡಿಸು** (ಕ್ರಿ). ಸಂಕಟಪಡಿಸು ; ಹಿಂಸಿಸು : ಋಣವೆಂಬ ಸೂತಕವು ಬಹುಬಾಧೆಬಡಿಸುತಿದೆ ಗುಣನಿಧಿಯೆ ನೀ ಎನ್ನ ಕಡೆಹಾಯಿಸಯ್ಯ (ಪುರಂದ. ದಾ. ೨-೨೦ ಪಲ್ಲವಿ). [ಬಾಧೆ+ ಪಡಿಸು]

**ಬಾಧ್ಯ$_1$** (ಗು). ೧. ನೊಂದ ; ವೇದನೆಗೊಳಗಾದ. ೨. ಪೀಡೆಗೊಳಗಾದ ; ಹಿಂಸೆಗೊಂಡ. ೩. ವಿರುದ್ಧವಾದ ; ಹೊಂದಿಕೆಯಾಗದ : ಪ್ರಕಟಂ ಪಾರ್ಥಿವೇಲ ಪಾರ್ಥಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ ನೆಗಟಲ್ಕೆ ನಿಲ್ವ ತೆಱದಿಂದೀ ಸೃಷ್ಟಿಗನ್ಯೋನ್ಯ ಸೈನಿಕ ಸಂಗ್ರಾಮದ ಬಾಧ್ಯಬಾಧತೆ ಪುಟ್ಟಲ್ ನಿಲ್ವನಾನಿಂತು ಸೃಷ್ಟಿ ಕರಂ ಪರ್ಚದೆ ದೇವ ತಾಳ್ದು ನಿಲಲಾಱಂ ತನ್ಮಹಾಭಾರಮಂ (ಜಗನ್ನಾ. ೦-೪೦). ೪. ಪ್ರತಿಭಟಿಸಲು ಯೋಗ್ಯವಾದ ; ವಿರೋಧಿಸಲು ತಕ್ಕುದಾದ. ೫. ಅಸಂಬದ್ಧವಾದ ; ಅಸಂಗತವಾದ. [ಸಂ.]

**ಬಾಧ್ಯ$_2$** (ನಾ). ೧. (ಆಸ್ತಿಯ ಮೇಲಿರುವ) ಹಕ್ಕು, – ಸ್ವಾಮ್ಯ : ತಂದೆಯ ಆಸ್ತಿಯ ಮೇಲೆ ಮಗನಿಗೆ ಬಾಧ್ಯವುಂಟು (ರೂಢಿ). ೨. ಕಟ್ಟು ; ಬಂಧನ ; ಸಂಬಂಧ : "ಬಧನಂ, ಬಧನೀಯಂ, ಬಧ್ಯಂ, ಬಾಧ್ಯಂ, ಈ ೪ ಕಟ್ಟು" (ಅಭಿಧಾ. ೦೬೦). ೩. ಹಕ್ಕನ್ನು ಹೊಂದಿರುವ ವ್ಯಕ್ತಿ ; ಸ್ವಾಮ್ಯವನ್ನು ಪಡೆದಿರುವ ವ್ಯಕ್ತಿ : ಹ್ಯಾಗಾದರೂ ಹೆಣ್ಣುಮಕ್ಕಳು ನೆರೆಮನೆಗೆ ಬಾಧ್ಯರಾಗುವರು (ಕಥಾಮಂ. IV. ೭). ೪. ಹೊಣೆಗಾರಿಕೆಯನ್ನು ಹೊಂದಿದ ವ್ಯಕ್ತಿ ; ಜವಾಬ್ದಾರ : ಮಂಡಲೇಶ್ವರರಾದ ಶ್ರೀರಂಗರಾಯರು ನಮ್ಮನ್ನು ರಕ್ಷಿಸಲು ಬಾಧ್ಯರಾಗಿದ್ದಾರೆ (ಶ್ರೀರಾಮ. ೦೨೭). ೫. ಆಸ್ತಿ ; ಸ್ವತ್ತು : ''ದಾಯ–ಬಾಧ್ಯ'' (ಗಂಗಾಜು. ೦೬೫).

**ಬಾಧ್ಯಪಡು** = ಸಂಬಂಧಪಡು ; ನಂಟುತನವನ್ನು ಹೊಂದು : ಆಜಂಪಾನನೂ ದಿಲ್ಲಿಯಲ್ಲಿಯೂ ಆಗ್ರಾದಲ್ಲಿಯೂ ಇದ್ದ ಉಮರಾಗಳೂ ಉತ್ತರಭಿನ್ನೀಸಗೆ ಬಹಳ ಬಾಧ್ಯಪಟ್ಟವರಾಗಿದ್ದರು (ಕಥಾಸಂ. ೬೮).

[< ಸಂ. ಬಾಂಧವ್ಯ?./ ತಮಿ. ಪಾತ್ತಿಯವ್ಮ್; ಮಲ. ಬಾಧ್ಯಮ್; ತುಳು. ಬಾಧ್ಯ = ಸಂಬಂಧಿಸಿದ; ತೆಲು. ಬಾಧ್ಯಮು]

**ಬಾಧ್ಯತನ** (ನಾ). ಒಡೆತನ ; ಹಕ್ಕು; ಅಧಿಕಾರ : ಸ್ವಾಮ್ಯ = ಬಾಧ್ಯತನ, ಒಡೆಯತನ (ಗಂಗಾಜು. ೩೪೪). [ಬಾಧ್ಯ$_2$ + – ತನ]

**ಬಾಧ್ಯತೆ** (ನಾ). ೧. ಸಂಬಂಧ ; ನಂಟುತನ : ಈ ಬಾಧ್ಯತೆಯನ್ನು ಪಂಡಿತರು ಅನುಗ್ರಹಿಸಬೇಕು (ಶಾಂತಲಾ. ೯೭). ೨. (ಆಸ್ತಿಯ ಮೇಲಿರುವ) ಹಕ್ಕು ; ಅಧಿಕಾರ : ರಾಜ್ಯದ ಮೇಲೆ ನ್ಯಾಯವಾಗಿದ್ದ ತನ್ನ ಬಾಧ್ಯತೆಯನ್ನು ಸ್ಥಿರಪಡಿಸಿಕೊಂಡನೆಂದೂ ವ್ಯಕ್ತವಾಗುತ್ತದೆ (ಕರ್ನಾಟ. ೦೩೭); ಲಾಜೆಯನ್ನು ಎತ್ತಿ ವಧುಗಳ ಬೊಗಸೆಗಳಿಗೆ ತುಂಬುವ ಬಾಧ್ಯತೆ ವಧುಗಳ ಸೋದರರಿಗೆ ಮಾತ್ರ ಸೇರಿದ್ದು (ಶಾಂತಲಾ. ೦೦೦). ೩. ಹಕ್ಕಿಗೆ ಒಳಗಾಗಿರುವುದು ; ಸ್ವಾಮ್ಯಕ್ಕೆ ಒಳಪಟ್ಟುದು : ಬಾಧ್ಯತೆಗೆ ಬಾಧ್ಯನಾದರೆ ಚೋದ್ಯವೇನು? (ಗಾದೆ). ೪. ಹೊಣೆಗಾರಿಕೆ; ಕರ್ತವ್ಯ : ಒಪ್ಪಂದಗಳು ಮತ್ತು ಇತರ ಅಂತರರಾಷ್ಟ್ರೀಯ ಕಾನೂನುಗಳಿಂದ ಉದ್ಭವಿಸಿದ ಬಾಧ್ಯತೆಗಳು(obligations) ತೃಪ್ತಿಕರವಾಗಿ

ಗೌರವಿಸಲ್ಪಡುವಂತಹ ವಾತಾವರಣವನ್ನು ಕಾಪಾಡಿಕೊಂಡು ಬರಬೇಕು (ಅಂತಕಂ. ೧೫). [ಬಾಧ್ಯ$_2$+ –ತ್ವ$_3$]

**ಬಾಧ್ಯತ್ವ** (ನಾ). ಕಳೆದುಕೊಳ್ಳುವಿಕೆ; ನಿರರ್ಥಕಗೊಳಿಸುವಿಕೆ : ಬಾಧ್ಯತ್ವ ವೆಂದರೆ ತಮ್ಮ ಶಕ್ತಿಯನ್ನು ಕಳೆದುಕೊಳ್ಳುವಿಕೆ, ಅಷ್ಟೆ (ಕೃಷ್ಣಾರೋ. ೦೬೯).
[ ಸಂ. ]

**ಬಾಧ್ಯಸ್ತ** (ನಾ). ೧. ಹಕ್ಕನ್ನುಳ್ಳ ವ್ಯಕ್ತಿ ; ಅಧಿಕಾರವಿರುವ ವ್ಯಕ್ತಿ : ಗಂಡಸುಮಗ ಹುಟ್ಟಿದರೆ . . . ತಾನೂ ಸಕ್ಕರೆ ಹಂಚಲು ಬಾಧ್ಯಸ್ತನಲ್ಲವೇ ? (ಗಂಪೂಯು. ೨೩೮). ೨. ಹಕ್ಕುದಾರ; ಒಡೆಯ : (೬). ೩. (ಯಾವುದಾದರೂ ಒಂದು ಕರ್ತವ್ಯವನ್ನು ಮಾಡಲು) ನಿಯೋಜಿತನಾದವನು ; ಹೊಣೆಗಾರ: (೬). 'ಬಾಧ್ಯಸ್ಥ' ಪರಾ.
[ ಬಾಧ್ಯ$_2$+ –ಸ್ತ ]

**ಬಾಧ್ಯಸ್ಥ** (ನಾ). ಹಕ್ಕುದಾರ ; ಉತ್ತರಾಧಿಕಾರಿ : ಜೊಚ್ಚಲ ಮಕ್ಕಳಾದ ಆಲ್ಬರ್ಟ ಎಡ್ವರ್ಡ ಎಂಬವರು ಚಕ್ರವರ್ತಿನಿಯವರ ಪಟ್ಟಕ್ಕೆ ಬಾಧ್ಯಸ್ಥರು (ಮುಂಬಯಿ. ೯-೩); ರಾಂಪುರದಲ್ಲಿ ದೂರದ ನೆಂಟರು, ಬಾಧ್ಯಸ್ಥರು ಇದ್ದಾರೆ ಅಂತ ಯಾರೋ ಹೇಳಿ ಇಲ್ಲಿಗೆ ಕಳಿಸಿದರಂತೆ (ಮರೀ. ೯೦). 'ಬಾಧ್ಯಸ್ತ' ಪರಾ. [ಬಾಧ್ಯ$_2$+ –ಸ್ಥ]

**ಬಾನ್$_1$** (ಕ್ರಿ). ಮಡಕೆ, ಕುಡಿಕೆ ಮುಂತಾದುವುಗಳನ್ನು ಮಾಡು ; ಕುಂಬಾರನ ಕೆಲಸವನ್ನು ಮಾಡು : " ಬಾನ್-ಕುಲಾಲಕರಣೇ, ಆಕಾಶ, ಗೋಮಯಪಿಂಡಪುಂಜಯೋಃ (ಸಗಣಿಯ ಉಂಡೆಯ ರಾಶಿ) " (ಶಮಧಾ); ತಾನಕ್ಕರೆಯಿನೊಪ್ಪಿ ಬಾಂದೊಡವೆಯೊಡೆವನೇ ಹಿಂಗಿನಿಸ ಕಾಲಂ ? (ಗಿರಿಂ. ೦೨೩-೪೩).

[ದೇ.॥ ತಮಿ. ಮಣ್ಣು, ಪನ್ನೈ=ಆಕಾರ ಕೊಡು ; ಮಲ. ಮನಯು, ಮನಿಯು ; ತೆಲು. ವಾನು ; ಪರ್ಜಿ. ವಾನ್]

**ಬಾನ್$_2$, ಬಾಂ$_1$, ಬಾನು$_1$** (ನಾ). ೧. ಮಡಕೆ, ಕುಡಿಕೆ ಮುಂತಾದುವು : 'ಬಾನಿಗ' ಪರಾ. ೨. ಮಣ್ಣಿನ ಪಾತ್ರೆಗಳ ರಾಶಿ; ಮಡಕೆ, ಕುಡಿಕೆಗಳ ಒಟ್ಟಿಲು : (೬). ೩. (ಒಣಗಿದ) ಸಗಣಿಯ ರಾಶಿ ; ಬೆರಣಿಯ ರಾಶಿ : "ಬಾನ್—ಕುಲಾಲಕರಣೇ. ಆಕಾಶ, ಗೋಮಯ ಪಿಂಡಪುಂಜಯೋಃ (ಸಗಣಿಯ ಉಂಡೆಯ ರಾಶಿ)" (ಶಮಧಾ). **ಬಾಂ$_1$** : ೧. 'ಬಾಂಬ$_1$' ಪರಾ. **ಬಾನು$_1$** : ೨. "ಸಗಣಿಪಿಂಡದ ಪುಂಜದಲ್ಲಿ ಯೂಕಾಶದೊಳ್ ವಿಂಗೆ ಕುಂಬದೊಟ್ಟಿಲೊಳ್ ಬಾನು" (ಶಬ್ದಮಂ. ೦೦೦). ೩. ಮೇಲಿನ 'ಶಬ್ದಮಂ' ಪ್ರಯೋಗವನ್ನು ನೋಡಿ. [<ಬಾನ್$_1$]

**ಬಾನ್$_3$, ಬಾಂ$_2$, ಬಾನ$_2$, ಬಾನು$_3$** (ನಾ). ೧. ಆಕಾಶ ; ಗಗನ : "ಆಗಸಂ . . . ಮುಗಿಲ್ವಟ್ಟೆ, ಬಾನ್—ಈ ೬ ಆಕಾಶಂ" (ಕಶಾ. ೯೯-೯೦); ನಾರದನೆಯ್ದೆ ನೋಡಿ ಬಾನೊಳ್ಕಣದಾಡೆ ದೇವತತಿ ನೋಡೆ (ಶಾಂತಿಪು. ೩-೬೯) ; ಆಗಳ್ ಬಾನತ್ತಣಿನರಟ್ಟಿಟಿ ಸುರಿದತ್ತು ರಾಮನ ಸಿರದೊಳ್ (ಅದ್ಭುತ. ೩೬-೨೦) ; ಬಾನಾಚೆಯಿಂ ವಿಶ್ವಸತ್ತ್ವ ತಾನಿಳಿದಿಳೆಗೆ ನಾನೆನುವ ಚೇತನದಿ ರೂಪುಗೊಂಡಿಹುದೋ ? (ಮಂಕುತಿ. ೦೩೮). ೨. ಸ್ವರ್ಗ: 'ಬಾನಂದ', 'ಬಾನಾಳ್ಕೆ' ಪರಾ. ೩. ಆಕಾಶದಿಂದ ಸುರಿಯುವ ಮಳೆ : 'ಬಾನಗೇಡು' ಪರಾ. **ಬಾಂ$_2$** : ೧. ಪೊಂಗಾಲಿ ವಿಬುಗ ಪಟಿಯಿಂಗೆ ಬಾಂಗೆ ಪೆಡಂಮಗುಟಿ . . . ರಥಂಗಳ್ ಪರಿದುವು ಬಳಾಬ್ಧಿ ಸಕ್ರಾಕೃತಿಯೊಳ್ (ಜಗಪು. ೭-೬೨) ; ಜೋಡಿಸುವೇನೀ ತುರಗವಂ ತನ್ನ ತೇರ್ಗಂದು ಗಾಡದಿಂ ಬಾಂಗೆತ್ತಿಕೊಂಡೊಯ್ಯುದಿರನಬ್ಜಸಖಂ (ಕೈಬಿಡಾ. ೯-೦೯) ; ಆಗಳಾಸುರುಳ್ವ ಬಾಂಗಿಟ್ಟಿನೀ ಮೊರೆಯಂ (ಗಿರಿಂ. ೦೨೦-೨೪). ೨. 'ಬಾಂಬಸು', 'ಬಾಂಬೆಣ್' ಪರಾ. **ಬಾನ$_2$** : ೧. ಬಾನ ದೊಳಾಗಸವಟ್ಟೆಗರ್[ಶಾಕಾಂ. ಬಾನೊಳು ಸಗ್ಗವಟ್ಟೆಗ, ಬಾನೊಳಾಗಸ ವಟ್ಟೆಗ] ನೆಲದೊಳು ಮಾನವಬಲ ಕಿಕ್ಕಿಱಿದು ಸಾನುರಾಗದೊಳೆಯ್ದಿತು ಪುಂಡರೀಕಿಣಿಗಾ ನರನಾಥನೊಂದಾಗಿ (ಶ್ರೀಶಾಂ. ೦೩-೦೬) ; ಬಾನದಿಂದಿಳಿದು ಬಂಡಾ ಬಾಲಭಾಸ್ಕರನೀ ನೆಲದೊಳು ನಡೆವಂತೆ (ಶ್ರಶಂಕ. ೨-೭೩) ; ಇಟ್ಟೆರಡಡಿಯುಂ ಯತಿಗತಿ ಪುಟ್ಟದೆ ಬಾನವನೊರಲ್ದು ನಿಟ್ಟಿಸಿ ಹಸಿರಿಂದಟ್ಟಿಸಿ ಹಲಗೆಯ ತೊಟ್ಟನೆ ಪಟ್ಟಿರಿಸುವ ಹೊಟ್ಟುಗಬ್ಬಿಗಂ ಕಬ್ಬಿಗನೇ (ಶೀಶಾ. ೬೦).

**ಬಾನು$_3$** : ೧. ತನ್ನ ದಾಂಗುಡಿಯ ಗೊನೆ ಬಾನು ಮಣ್ಣೊಂದಾಗಿ ಒಂದಾಗಿ ಕೆಲವಾಗಿ ಇರುವ ಹರುಹಿನ ತುಂಬ . . . ವಿಂಚಿತ್ತು ಒಂದೇ ಬಿಂಬ (ಪುಕ್ಕಕಂ. ೩೨-೩) ; ನಿನ್ನ ಬಾಳ ಬಾನಿನಲ್ಲಿ ಗುಡುಗು ಸಿಡಿಲುಗಳಷ್ಟೇ ಇಲ್ಲ ಇಂದ್ರಚಾಪವೂ ಇದೆ (ಕಲ್ಯಾಣಿ. ೨-೦೬). ೨. ಬಾನ್ ಕೊಂಡ ಕೃಷ್ಣನ್, ನೆಲನೆಲ್ಲಮನ್ ಗೆಲ್ದು, ಬಾನುವಮನ್ ಕೊಂಡ ಕೃಷ್ಣನ್ ! (ಹೊಂಗಳು. ೨೯-೦೦).

ಬಾನಗಣ್ಣು=ಸೂರ್ಯ: ಬಾನಗಣ್ಣಿನ ಬಿಸಿಯ ಹಸಿಯಾರದಲೆ ಕುಡಿದು ಬೆಳಕ ನೀರಡಿಕೆಯನು ಪುಟ್ಟಿಸುವದು (ಸೂರ್ಯಕಾ. ೦-೩). **ಬಾನ ಜೊಡರ್** =ಆಕಾಶದ ದೀಪ ; ಸೂರ್ಯ ; "ನೇಸಱ್" (ಕಶುಂ. ೬. I. ೯). **ಬಾನದರ್** = ದೇವತೆಗಳು ; ಸುರರು : ಬಾನದರುಘೋಯೆಂದು ಪೊಗಳೆ ಪೆರ್ಬಿನವನು ಕೃಶಾನು ಪೊಕ್ಕಂತೆ ಸಂಹರಿಸಿದಂ ಸತ್ಯಸಂಧಾನಿ ಗಾಂಗೇಯಂ (ಲಕ್ಷ್ಮೀಶಾ. ೯-೬). **ಬಾನವರ್**=ಬಾನದರ್ : ಬಾನವರೊರ್ಮೆ ಕಾಡಲ್ ಮನೆಯನ್, ತಪ್ಪದೆ ಕಾಡುಗುವುದದಱಾ ಕಾಟವನ್ (ಅಂತಿಗೂ. ೨೭-೩೫೯); ಸಟೆಯ ಕರೆದಪರ್ ಬಾನವರ್, ಪ್ರಮಿಾತ್ಯೂಸ್ ಮುನ್ನೆಣಿಕೆಯುಳ್ಳವನ್ ಎಂದು (ಬಿದ್ಮಕ್ರಿ. ೬.೦೦೬). **ಬಾನುದ್ದಂ**=ಆಕಾಶದ ವರೆಗಿರುವ ಎತ್ತರ; ಆಕಾಶದಷ್ಟು ಉದ್ದ : ಬಾನುದ್ದಂ ; ಏನಾಯ್ತು (ಶಮಧ. ೬೯ ಪ್ರಯೋ); ಬಾನುದ್ದಂಬರವೊಗೆದಂದೇನೆಸೆದುದು ರತ್ನವಪ್ರಂ (ಪುಣ್ಯಾಸ್ರ. ೦೦-೨೫); ತಣಿವೀವುದು ಬಾನುದ್ದಮುಪ್ಪ ಪೇರೊಡಲವರ್ಗಂ (ಶಬ್ದಾನು. ೫೯೨ ವ್ಯಾಖ್ಯಾ). **ಬಾನುದ್ದಮಾಗು**=(ಅಲಂ) ಅತಿಯಾಗಿ ಗರ್ವಿಸು,– ಅಹಂ ಕಾರಪಡು : ಆನುಂ ಬುಧರೊಡನೆ ನೃಪಾಸ್ಥಾನದೊಳಿರ್ದಪ್ಪೆನೆಂದು ಕುಕವಿಕದಂಬಂ ಬಾನುದ್ದಮಪ್ಪುದೇಕುದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ (ಲೀಲಾವ. ೦-೨೬). [ದೇ.॥ ತಮಿ. ಮಲ. ವಾನ್, ವಾನವ್ ; ತುಳು. ಕೊಡ. ಬಾನ, ಬಾಣ ; ತೆಲು. ಕೋಲಾ. ನಾಯ್ಕಿ. ವಾನ; ಕೋತ. ವಾನ್ಮ್ ; ಪರ್ಜಿ. ವಾನಿ]

**ಬಾನ$_1$** ' ಪಾನೆ ' ನೋ.

**ಬಾನ$_2$** ' ಬಾನ್$_3$ ' ನೋ.

**ಬಾನಂಗುಳಿಗೆ** (ನಾ). (ಒಣಗಿದ) ಸಗಣಿಯ ಉಂಡೆ ; ಬೆರಣಿ : ನಕಾರಕ್ಕೆ — ಮಿಾನಂಬುಬು, ಬಾನಂಗುಳಿಗೆ (ಶಮಧ. ೦೬೨ ಪ್ರಯೋ). P 'ಶಮದ. ನ. ೧೮೩ ಆಡಿಟಿ' ಯಲ್ಲಿ ಈ ಶಬ್ದಕ್ಕೆ 'ನಕ್ಷತ್ರ' ಎಂಬ ಅರ್ಥವನ್ನು ಕೊಡಲಾಗಿದೆ. 'ಬಾಂಗುಳಿಗೆ' ಪರಾ.
[<ಬಾನ್$_2$+ಗುಳಿಗೆ$_1$]

**ಬಾನಂಗುಟಿ$_1$** 'ಬಾಂಗುಟಿ' ನೋ.

**ಬಾನಂಗುಟಿ$_2$** (ನಾ). (?) : ಪೂದ್ದ ಬಾಯಾ ಬೇಕರಿಯೋದಂತಿರ್ದ ಬಾನಂಗುಟಿ[ಶಾಕಾಂ. ಬಾನಂಗುಳಿ, ಬೆನ್ನಂಗುಳಿ] ಗಿಟಿಗಿಟಿಜಂತ್ರಂಬೊ ಲಾಗಿರ್ದ ಮೈ ಮೆಯ್ಸಿರಿ ಚಿದ್ರೂಪಕ್ಕೆ ಪಕ್ಕಾಗಿರ ಚರಿಗೆಗೊಡಲ್ಬಂದ ನೊರ್ವಂ ಮುನೀಂದ್ರಂ (ಅರ್ಧನೇ. ೭-೨); P "ಇಲ್ಲಿ ಬರುವ ಬಾನಂಗುಳಿ ಎಂಬುದು ಮೈಯ ಒಂದು ಭಾಗವಿರಬಂತೆ ತೋರುತ್ತದೆ" (ಕಂಶಪ. ೯೯೦).
[ ? ]

**ಬಾನಂಗುಟಿಗೆ ?** (?). (?) : ತಾನುಂ ಹಿಡಿಂಬೆಯುಂ . . . ಕೂಕಿಱಿದುಂ ತೇಗಿಯುಂ ಪಸಿಗೆವರಿದುಂ ಬವಳಿವರಿದುಂ ಬಾನಂ[ಶಾಕಾಂ. ಸಂ] ಗುಟಿಗೆವಱಿದುಂ ಸೂಟ್ಟಿರಿದುಮಾಡುವಾಗಳುಬಯಬಲಂಗಳ್ ಬೆಕ್ಕಸಂ ಬಟ್ಟು ನೋಡಿ (ಕಂಶಭಾ. ೦೨-೦೫೮ ವ) ; "ಬಾನಂಗುಟಿಗೆ — ಒಂದು

ಬಗೆಯ ನಡಿಗೆ " (ಶಂಶಬಾ. ೬೦೮) ; " ಬಾನುಗುಳಿಗೆವರಿದುಂ—ನಕ್ಷತ್ರ ಮಂಡಲಕ್ಕೆ ನೆಗೆದೂ" (ಶಂಶಂ. ೪೮೯).

**ಬಾನಂಚು** (ನಾ). ಭೂಮಿಯೂ ಆಕಾಶವೂ ಸೇರುವಂತೆ ಕಾಣುವ ಭಾಗ ; ಕ್ಷಿತಿಜ ; ದಿಗಂತ : ಕಣ್ಣು ತುಂಬುವ ಹೋರೆ ಬಾನಂಚಿಗೆ (ಶಿಲಬಂ. ೨೦ ೦೪). [ಬಾನ್$_3$ + ಅಂಚು$_2$]

**ಬಾನಂದ** (ನಾ). ಸ್ವರ್ಗದ ಸೊಬಗು; ದೇವಲೋಕದ ಮನೋಹರತೆ: ಬಾನಂದವನು ಸವಿದ ಸುಖದ ಯಮಭೂಪರ್ . . . ಕಲೆತೆಲ್ಲ ಬಂದರ್ (ಹೊಂಗಳು. ೩೦-೧೨). [ಬಾನ್$_3$ + ಅಂದ]

**ಬಾನಕ್ಕಿ** ' ಬಾನ್ವಕ್ಕಿ ' ನೋ.

**ಬಾನಗಡಿ** ' ಭಾನಗಡಿ ' ನೋ.

**ಬಾನಗಿತ್ತಿ** ' ಬೋನಗಿತ್ತಿ ' ನೋ.

**ಬಾನಗೇಡು** (ನಾ). ಆಕಾಶದಿಂದ ಸುರಿಯುವ ಮಳೆಯಿಂದ ಉಂಟಾಗುವ ತೊಂದರೆ; ಅತಿವೃಷ್ಟಿಯಿಂದಾಗುವ ಕೆಡುಕು: ಆ ಮಂಡಚನುಂ ಬಾನಗೇಡು ಬಜಗೇಡು ಎಂಬದ (ಶಾಶ್ವಂ. ೦೯೩೨, ಉಡುಪಿ. ೩೦೮ ೨೨; 1293): ವರುಷಂಪ್ರತಿ ಬಾನಗೇಡು ಬಜಿಗೇಡುಯೆಂಬದೆ ೧೨ ಮುಡಿ ಅಕ್ಕಿಯನೂ . . . ನಡಸಿ ಬಹರು (ಶಾಶ್ವ. IX—ii, ೪೪೪-೩೫ ; 1434). [ಬಾನ್$_2$ (<ಬಾನ್$_3$) + ಕೇಡು]

**ಬಾನಲ್** (ನಾ). ೧. ಧಾರೆ; ಪ್ರವಾಹ : ಪೊವಟ್ಟ ಕಣ್ಬನಿಯ ಬಾನಲ ತಣ್ಣಸದೊಳ್ ಪಗಿಲ್ತು ಪಾವಸೆಗೊಳೆ ಕಾರ ತಂದಲೊಳಗುಂದಲೆಯಾಗಿರೆ ನಟ್ಟು ಸೋರ್ವ ಪಾಟ್ಬಸದಿಯ ಪೆಣ್ಣ ಜೋಹದವೊಲೊಪ್ಪಿದಳೊರ್ವಳನಂಗರಾಗದಿಂ (ಶಾಂತಿಪು. ೬-೮೬); ಕಣ್ಣೀರ ಬಾನಲ್ಗಳಿಂ ಬಸಿವಾಸ್ಯಂ . . . ಪಿಸುಣಾಡಿತ್ತಸಮಾಸ್ತ್ರನಸ್ತ್ರಹತಿಯಂ ತತ್ಕಾಮಿನೀರೂಪಕಂ (ಲೀಲಾವ. ೪-೦೯೩) ; ಕಪೋಲದೊಳ್ ಬಳೆಯಿಸೆ ಬಾನಲಂ ಸುರಿವ ಬಾಷ್ಪಜಳಂ ಕರುಣಾರ್ದ್ರಹಾರವಂ ಬಳೆಯಿಸೆ ಬಾಯ ಬತ್ತುಗೆಯನಿಂತೆರ್ದೆಗೆಟ್ಟುಜುತ್ತುಂ . . . ಬಿದ್ದಳಂದಜತಸೇನೆ ನೃಪಾಲಪದಾಬ್ಜಯುಗಲದೊಳ್ (ಚಂದ್ರಪ್ರ. ೫-೦೦). ೨. ನಿಂತ ನೀರು; ಕಂಟೆ; ಬೆಂಚೆ : ನಾನಲ ಬಾನಲ ನೀರಂ ಮೀನೊಲ್ಲುಂ ರಾಜಹಂಸನೊಲ್ಲುಮೆ (ಪಂಪ್ಲಪು. ೦೩-೦೩೩): ಮೆಳೆಯುಮಂ ನಾನಲುಮಂ ಬಾನಲುಮಂ ಸಡಿಂಬಮನಿಡಿಂಬಮಂ . . . ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ (ಲೀಲಾವ. ೬-೦೩ ವ). ೩. (ಕಣ್ಣೀರು, ಬೆವರು ಇತ್ಯಾದಿಗಳ ತೇವದಿಂದ) ಕದಡಿರುವ ಸ್ಥಿತಿ ; ಮಸುಕಾಗಿರುವಿಕೆ : "ಬಾನಲೆನೆ [ಪಾಠಾಂ. ಬಾಸುಳೆನೆ] ಮಸುಳಿದುದುಂ" (ಕಕುಕ. ೬೦) ; ಉಣ್ಮೆ ಬೆಮರ್ ನಸುಬಾನಲಾದ ಬೊಟ್ಟೆಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಚಂದ್ರಪ್ರ. ೮-೬೨) ; ತಾಜಿಬಂಬಟಿಯಟ್ಟ ಚುಂಚುಬೆಮರಿಂ ಕಡೆಗೆನ್ನೆಯ ಬಾನಲಾದ ಬೊಟ್ಟು (ಕಕುಕ. ೦೬೨ ಪ್ರಯೋ) ; ಚಿತ್ರಭುಮಣದ ಮಂಕಿನಿಂದ ಬಾನಲಾಗಿ, ರಣಧೀರನಿಗೆ ಅನಿಮಿಷಾಕ್ಷಿಯೂಗಿರುವಳು (ಮಂಕ್ರಶ. ೦೪೩-೬). 'ಬಾನಲ್ಗೊಳ್', 'ಬಾನಲ್ಪೊರೆ' ಪರಾ.

[ದೇ.॥ ತಮಿ. ಪಾಣಲ್ = ವ್ಯವಸಾಯದ ಭೂಮಿ, ಸಮುದ್ರ, ಒಂದು ಬಗೆಯ ಸಸ್ಯ ; ಮಲ. ಪಾಣಲ್ = ಒಂದು ಬಗೆಯ ಸಸ್ಯ]

**ಬಾನಲೆ** (ಕ್ರಿ). ಆಕಾಶದಲ್ಲಿ ತಿರುಗು, —ಸುತ್ತಾಡು: ಗಾಳಿ ಬಾನಲೆಯುತಿದೆ ದೆಸೆಗೆಟ್ಟ ತಿರುಕನಂತೆ (ಗೋಕುಂ. ೦-೦೩).

**ಬಾನಲೆವರ್** = ಆಕಾಶದಲ್ಲಿ ಸಂಚರಿಸುವವರು ; ದೇವತೆಗಳು : ಬನ್ನಿ, ಓ ಬಾನಲೆವರೆ, ನಮ್ಮ ತೋಟಕೆ, ನಂದನವನೆ ಮೀರಿಸುವೀ ದಿವ್ಯ ತೋಟಕೆ (ಹಂಸೇ. ೨೦-೧). [ಬಾನ್$_3$ + ಅಲೆ$_1$]

ಬಾನಲ್ಗೊಳ್ (ಕ್ರಿ). ಮಸುಕಾಗು ; ಕಾಂತಿಹೀನವಾಗು : ಬೆಳ್ಳೇಜಿ ಬಾನಲ್ಗೊಂಡ ವದನಮಂಡಲಮುಮಂ ... ಜಡತೆಗೆಡೆಯಾದ ಯಾನಮುಮಂ ಬೆರಸು ಮೆಲ್ಲನಲ್ಲಿಗೆ ವಂದು (ಕುಸುಮಾ. ೦೩-೯೬ ವ). [ಬಾನಲ್ + ಕೊಳ್$_1$]

**ಬಾನಲ್ಪೊರೆ** (ಕ್ರಿ). (ಕಣ್ಣೀರಿನ) ಧಾರೆಯಿಂದ ಕೂಡಿಕೊಳ್ಳು : ವ್ಯಸ್ತಭೃಂಗಾಳಕಂ ಪ್ರಸ್ಖಲಿತೋದ್ಯದ್ವೇಣಿ ಬಾನಲ್ಪೊರೆದಮಳಕಪೋಳ[ಸ್ಥ]ಳಂ . . . ಕಣ್ಗೊಳೆ ತಳೆರ್ವಸೆಯೊಳ್ಕಾಂತೆಯುಂತಿರ್ದಳಾಗಳ್ (ಶಾಂತೀಶ್ವ. ೦೦ ೬೯). [ಬಾನಲ್ + ಪೊರೈ]

**ಬಾನಲ್ವರಿ** (ಕ್ರಿ). ಧಾರೆಯಾಗಿ ಸುರಿ, — ಹರಿ : ಬಲ್ವೆಣನುರ್ಚಿ ಕೋಡೂಳಿರೆ ನೆತ್ತರುರೋಮಣಿಯಿಂ ನೆಲಕ್ಕೆ ಬಾನಲ್ವರಿವನ್ನೆಗಂ ಪ್ರಹತ ದಿಂಡಿಬಂದೆತ್ತಿದೊಡತಗ್ರಹಸ್ತದೊಳ್ (ಕಾವ್ಯಾವ. ೬೮); ಕಣ್ಣೀರೆ ಬಾನಲ್ವರಿದು ಬೆಳಪ ಮೈ ಮೈಯ ಸಂತಾಪದಿಂ ಬಾಡುವ ವಕ್ತ್ರಂ (ಜಗು. ೦೦-೩) ; ಆ ನುಡಿಗೇಳುತಾಸಂದಾಶ್ರು ಕಣ್ಗೊಳು ಬಾನಲ್ವರಿದುದು (ಕುರಾಶಾಂ. ೩೬-೪೦). [ಬಾನಲ್ + ಪರಿ$_2$]

**ಬಾನಳ್ಳಿ** (ನಾ). ಒಂದು ಹಳ್ಳಿಯ ಹೆಸರು : ಬಾನಳ್ಳಿಯ ಬನ್ನಿಯಮ್ಮ ಸೆಟ್ಟಿಯ ಮಗ ಪೆಮ್ಮಣ್ಣ (ಎಕ. IV(R), ಶಾಮುಂಠ. ೦೦೩-೪ ; 10ನೆಯ ಶತ). [ ? + ಹಳ್ಳಿ (<ಪಳ್ಳಿ$_1$) ]

**ಬಾನಾಡಿ** (ನಾ). ಆಕಾಶವನ್ನು ಮುಟ್ಟುವಂತೆ ಕಾಣುವಷ್ಟು ಎತ್ತರಕ್ಕೆ ಹಾರಾಡುವ ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಬಾನಾಡಿಯೆಂದು ಟಿಟ್ಟಿಭಂ" (ಕಶಾ. ೩೦-೯೭) ; ಶುಕಂ ಬಾನಾಡಿ . . . ರತ್ನಬಿಗಮುಕುರ್ಗಾತದ್ವನಾಗೌಘದೊಳ್ (ರಾಜಶೇ. ೩-೩೯) ; ಈ ದೃಷ್ಟಿಯಿಂದ ಹಲ್ಲಿ ಕವಿಯ ಬಾನಾಡಿ (Skylark) ಒಂದು ಹಕ್ಕಿ ಮಾತ್ರವಲ್ಲ ; ಅದೊಂದು ಚೈತನ್ಯ (ಶಾಂದಸ. ೩೫). [ಬಾನ್$_3$ + —ಆಡಿ$_1$]

**ಬಾನಾವರ** (ನಾ). ಒಂದು ಬಗೆಯ ಸಸ್ಯ: ಬಾನಾವರ, ನೀರುಸಲ್ಲಿ, ಹನಕೆ (ವೃಶಿಗಿ. ೩೯-೭೭೩). [?]

**ಬಾನಾಳ್ಕೆ** (ನಾ). ಸ್ವರ್ಗದ ಆಳ್ವಿಕೆ,— ರಾಜ್ಯಭಾರ : ಸರ್ವಜೀವಂಗಳುಂ ಮುಕ್ತಿಯುಂ ಕಾಣ್ಗೆ . . . ಸಾವುದೆಲ್ಲಾ ಸತ್ತು, ಬಾನಾಳ್ಕೆ ಪೂಣ್ಗೆ (ಹೊಂಗಳು. ೩೮-೨೦). [ಬಾನ್$_3$ + ಆಳ್ಕೆ]

**ಬಾನಿ**$_1$ 'ಪಾನೆ' ನೋ.

**ಬಾನಿ**$_2$, ಭಾನೆ (ನಾ). ಗಾಯನದ ರೀತಿ,_ಪದ್ಧತಿ : ಆ ರಾಗವನ್ನು ಹಾಗೆ ಹಾಡಬಹುದೆಂದು ಅವನು ತಿಳಿದಿರಲಿಲ್ಲ. ಆ 'ಬಾನಿ' ಅವನಿಗೆ ತುಂಬ ಹಿಡಿಸಿತ್ತು (ರಾಗಿಶ. ೦೩೬). **ಭಾನೆ :** ನಿಮ್ಮ ಭಾನೆ ನೋಡಿದರೆ ನಿಮಗೆ ಕರ್ನಾಟಕಸಂಗೀತ ಚೆನ್ನಾಗಿ ಬರುತ್ತೆ ಎಂದು ಕಾಣುತ್ತೆ (ರಾಮಶಾಸ. ೯೦). [←ಹಿಂ. ಬಾನಾ ; ಮರಾ. ಬಾಣೀ]

**ಬಾನಿಗ** (ನಾ). ಮಡಕೆಯನ್ನು ಮಾಡುವವನು ; ಕುಂಬಾರ : ನಾಗಪಣ್ಡಿತರ ಮಕ್ಕಳು ಮಲ್ಲಪನವರು ಕಾಳಿಭಕ್ತನ ಮಕಳು ಮಾರಹಳಿ ಬಾನಿಗ ಕಾಲಭಕ್ತಗೆ . . . ವಿಕ್ರಮಸಂವತ್ಸರದ ಕಾರ್ತಿಕ ಶು ೧ ಪರಿಯಸ್ತರ × × × (ಎಕ. III, ಮಳವ. ೦೦೯-೦೯ ; 1338) ; ಒಳ್ಳೂರಿಗಂ ಬಾನಿಗಂ, ಪಟ್ಟಣಿಗಂ (ಶಬ್ದಾಮ. ೪೧೯ ಪ್ರಯೋ). [ಬಾನ್$_2$ + — ಇಗ]

**ಬಾನು**$_1$ 'ಬಾನ್$_2$' ನೋ.

**ಬಾನು**$_2$ 'ಪಾನೆ' ನೋ.

**ಬಾನು**$_3$ 'ಬಾನ್$_3$' ನೋ.

**ಬಾನುಲಿ** (ನಾ). ೧. ಆಕಾಶದಲ್ಲಿ ಕೇಳಿ ಬರುವ ಶಬ್ದ : ಅಶರೀರವಾಣಿ: ನೀರಡಿಸಿದುದರಿಂದ . . . ಕೊಳದೊಳಗೆ ಕಾಲಿಟ್ಟನು. ಅಷ್ಟರಲ್ಲಿ ಒಂದು ಬಾನುಲಿಯು ಕೇಳಬಂದಿತು (ಯುಕ್ಷಪ್ರ. ೨) ; ನನ್ನ ದೇಹದ ಬೂದಿಯೊಳಗೊಂದಿನಿತು ಗಂಗೆಯ ಸೇರಲಿ. ಅಲ್ಲ ಧಾರ್ಮಿಕನಂಬಿಕೆಯು ; ಅದು ನನ್ನ ಬಾಲ್ಯದ ಬಾನುಲಿ (ನೆಲಬಂ. ೩೩-೨). ೨. ರೇಡಿಯೋ ; ಆಕಾಶವಾಣಿ : ಅದು ಸಂಗೀತಕಚೇರಿ ಇಲ್ಲವೆ ಬಾನುಲಿ ಇವುಗಳಿಂದ ಕೇಳಿ ಬರುವ ಸಂಗೀತವಲ್ಲ (ಶರಶ. ೩೦) ; ಬಾನುಲಿಯೇ ಕಂಪಿಸಿ ವಿಶ್ವವೆಲ್ಲ

ರ್ಘೋಂಪಿಸಿ ಏನನರ್ಥ ಏನನರ್ಥ ಎಂದು ಕೂಗೆಕೂಗಿತು (ಸೂರ್ಯಶಾ. ೧೦-೯).
೩. ನಿಸ್ತಂತುವಾರ್ತಾಪ್ರಸರಣವನ್ನು ಮಾಡುವ ಕೇಂದ್ರ : ಆಕಾಶವಾಣಿನಿಲಯ ; ರೇಡಿಯೋಕೇಂದ್ರ : ಬಾನುಲಿ ಅಧಿ ಉಪಅಧಿಕಾರಿಗಳಿಗೆ ಮಾತಿಗೊಮ್ಮೆ ಕೈಮುಗಿದು ನಗಲು ಸಹ ಸವುಡಿಲ್ಲದಾಯಿತು (ಹುಚ್ಚುಹು. ೧೯) ; ಬಾನುಲಿಯಲ್ಲಿಯು ತನ್ನ ಕಾರ್ಯಕ್ರಮವನ್ನು ಮುಗಿಸಿಕೊಂಡು ಮರುದಿನ . . . ರಹೀಮ ಊರಲ್ಲಿದ್ದ (ಪಂಚಕ್ಷ. ೬೩).
[ಬಾನ್$_3$ + ಉಲಿ$_2$]

**ಬಾನುಲಿಕೇಂದ್ರ** (ನಾ). = ಬಾನುಲಿ ೩ : ದೆಹಲಿಯ ಬಾನುಲಿಕೇಂದ್ರದೊಳಿರುವವರು ಆ ರಾಮಕೃಷ್ಣನೆನುವವರು (ಶಂಕಾಪ. ೩೯-೬೦) ; ಬಾನುಲಿಕೇಂದ್ರದ ಮಂತ್ರಿಗಳಿಂದ ಹಿಡಿದು . . . ಪ್ರತಿಯೊಬ್ಬರಿಗೂ ಪತ್ರಗಳನ್ನು ತಂದ (ಹುಚ್ಚುಹು. ೦೭). [ಬಾನುಲಿ + ಕೇಂದ್ರ]

**ಬಾನೆ** 'ಪಾನೆ' ನೋ.

**ಬಾನೆಡೆ** (ನಾ). ಗಗನಸ್ಥಳ; ಆಕಾಶ : ಎನ್ನೊಡೆಯನ ಬಲ್ಪಂ . . . ಬಾನೆಡೆಯೊಳ್ ಸುಟುದಾಡುವವರೇನಱಿಯರೆ (ಕಬ್ಬಿಗಕಾ. ೦೬೭) ; ಏನೆಂಬೆ ನತುಳಸಂತೋಷಮುಂ ರೋಷಮುಂ ಬಾನೆಡೆಗೆ ನೆಗೆವ ಬೊಬ್ಬಾಟಮುಂ ಘಾಟಮುಂ . . . ದೇವಾಸುರರೊಳೆಸೆದುದು (ಜಂಭು. ೪೩-೩೬).
[ಬಾನ್$_3$ + ಎಡೆ$_3$]

**ಬಾನೆರೆಯ** (ನಾ). ದೇವತೆಗಳ ಒಡೆಯ ; ದೇವರಾಜ : ಮಣಿಯುವೆನು ಮಾತಾಯಿ, ಬಾನೆರೆಯನೆರಗುವೆನು (ನಡಿದಾ. I, ೪೩೩).
[ಬಾನ್$_3$ + ಎರೆಯ (< ಎಱೆಯ)]

**ಬಾನೊಡತಿ** (ನಾ). ದೇವತೆ; ಅಪ್ಸರೆ : ಮುಡಿ ಮುಗಿಲ್ಕಣ್ಮಿಂಚುಗುರು ತಾರೆ ಮೊಗ ಸಸಿ ಬಡನಡುವಾಗಸವಾಗೆ ಕಡುರಯ್ಯಮಾದಳು ಯ್ಯಲಿಯೊಳೊರ್ವಳು ಬಾನೊಡತಿ[ಪಾಠಾಂ. ಲಿ]ಯಂತೆ (ಶಬರಶಾಂ. ೨೮-೩೩).
[ಬಾನ್$_3$ + ಒಡತಿ]

**ಬಾನೊಡಲ** (ನಾ). ಆಕಾಶವೇ ದೇಹವಾಗುಳ್ಳವನು; ಸ್ವರೂಪರಹಿತ : ನುಡಿವುದು ಪುದ್ಗಲ ಕೇಳ್ವುದು ಪುದ್ಗಲ ಕಡೆಗೆ ಪುದ್ಗಲ ಸ್ನೇಹ ಕೋಪ ಜಡಿದಿವ ನೂಂಕಿ ಸನ್ನಿದೆಯೊಳಿರಯ್ಯ ಬಾನೊಡಲಾ ಚಿದುಂಬರಪುರುಷ (ಭರತ. ೯೬.೦೨೩). [ಬಾನ್$_3$ + ಒಡಲ್ + — ಅ$_7$]

**ಬಾನ್ಕೆ** (ನಾ). "ಕುಂಬಾರಿಕೆ" (ಶ್ರಶಣ) : ಬಾನ್ಕೆ, ಆನ್ಕೆ, ಸೀನ್ಕೆ (ಶಬ್ದಾನು. ೩೩೭ ಶ್ರವೋ.). [ಬಾನ್$_1$ + — ಕೆ]

**ಬಾನ್ನವಿರ** (ನಾ). ಆಕಾಶವೇ ಕೂದಲಾಗಿರುವವನು ; ವ್ಯೋಮಕೇಶ ; ಶಿವ : "ಎಣ್ಮುಯ್ಯಂ . . . ಬಾನ್ನವಿರಂ, ದಪ್ಪಕವಗೆಯುಂ . . . ಅಯ್ಮೊಗಂ — ಈ ೩೩ ಈಶ್ವರಂಗೆ ಪೆಸರ್" (ಕಶಣಾ. ೦-೯೭) ; ಬೆಳ್ಳಸುಂದಳಿದೆಸದಿರ್ದ ಬಾನ್ನವಿರನೊಳ್ವರಿಜಂ ತಳೆದೊಪ್ಪಿ ತೋಱಿದಂ (ಲಠಂ. ೩-೯) ; ಬಾನ್ನವಿರನ ತಲೆಯಿಂಸಡರ್ದುಂ ಪಾರ್ವತಿಗೆ ಸಪತಿಯಾಗಿಯುಂ . . . ಪಾತಾಲದತ್ತಣ್ಗೆ ಪೋದ ತ್ರಿಪಥಗೆ ಕಾಣಿಸಿಕೊಂಡಳ್ (ರಾವಣಕ. ೩೦-೦೦). [ಬಾನ್$_3$ + ನವಿರ್ + — ಅ$_7$]

**ಬಾನ್ನಿಗಾರ್ಲಕುಪ್ಪೆ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ಬಾನ್ನಿಗಾರ್ಲಕುಪ್ಪೆಯ ವಾಟಿಯೊಟ್ಟಿಯು ಸನ್ದು ಪಾದರಿಯುಳ್ ಕೂಡಿತ್ತು (ಪ್ರಾಆಂ. ೦೯೩೭,೦೦೬-೯೯ ; 726). [?]

**ಬಾನ್ನೀಱಿ** (ನಾ). ಸ್ವರ್ಗಲೋಕದ ಹೆಣ್ಣು ; ಅಪ್ಸರೆ : ಮುಡದಿ ಬಾನ್ನೀಱಿಯೊರ್ವಳ್ ಚಂಚಲದೃಷ್ಟಿಯಿನತ್ತಮಿತ್ತಂ ನೋಟ್ಟಿಳ್ (ರಾವಣಕ. ೦-೯). [ಬಾನ್$_3$ + ನೀಱಿ]

**ಬಾನ್ನುಡಿ** (ನಾ). = ಬಾನುಲಿ ೧ : "ಎಲ್ಲೈ ರಾಯ . . . ಇವಳಂ ಮನೆಗುಯ್ದು ಮಗಳೆಂದೆ ಪಾಲಿಸು" ಎಂದು ಬಾನ್ನುಡಿಯೊಂದಾದುದು (ಅಮೃತ. ೩೦-೨೩). [ಬಾನ್$_3$ + ನುಡಿ$_2$]

**ಬಾನ್ಬಟ್ಟೆ, ಬಾಂಬಟ್ಟೆ** (ನಾ). ಆಕಾಶದ ದಾರಿ ; ಅಂತರಿಕ್ಷಮಾರ್ಗ : ಗಿರಿಶನೊಡವೆರಸಿ ಗಿರಿಜಾತೆ ಬಾನ್ಬಟ್ಟೆಯೊಳು ಬರುತಲಿ (ಶಾಂಭ. ೦೨-೩೮); ಬಾನ್‌ಬಟ್ಟೆಯಲೆವ ಬರ್ದಿಲರಾ ಚಾಚರೆಯೊಳೇಗಳುಂ ಕಳಕಿರ್ದ ಶಿಖರ ಗಾತ್ರದ ಪರ್ದುಮುದಿಯನಂ ಕಂಡದಕೆ 'ಶಕುನಿಶಿಲೆ' ಪೆಸರಿಟ್ಟರನ್ವರ್ಥಮಂ (ಶ್ರೀರಾಮಾ. ೩೩೩-೩೬). **ಬಾಂಬಟ್ಟೆ** : ಇಂದಿರವಿಲ್ಲ ಪಾಂಗನೆನಸಂ ಬಾಂಬಟ್ಟೆಯೊಳ್ ಬೀಱಿ ಕಣ್ಗೆತ್ತಂ ಸೋಲಮನೀವ ರತ್ನವಸರಂ ಚೆಲ್ವಾದುದಾ ಬೀದಿಯೊಳ್ (ಕನ್ನಕಾ. ೩೩) ; ಆಸಜ ಕೊಲಗಿಪ ಜಲವುಂಟೆ ಬಾಂಬಟ್ಟೆಯೊಳು (ನಾಗಕು. ೦-೩೩). [ಬಾನ್$_3$ + ಬಟ್ಟೆ$_1$]

**ಬಾನ್ಬರೆಪ** (ನಾ). (ಅಲಂ) ವಿಧಿಲಿಖಿತ ; ದೈವಸಂಕಲ್ಪ : ಆ ಭಯಂಕರ ಗಗನಶಕುನವಮಂ ನೋಡಿ, ದೊರೆ ದಶರಥಂ ತನ್ನ ಕೊನೆಗಡೆ ಬಾನ್‌ಬರೆಪವೆಂದು ಬಗೆದು . . . ಒರೆದನಿಂತುಟು (ಶ್ರೀರಾಮಾ. ೩೩-೩೩).
[ ಬಾನ್$_3$+ಬರೆಪ ]

**ಬಾನ್ಬೆಳಕು** (ನಾ). ಆಕಾಶದ ಬೆಳಕು ; ಗಗನದ ಕಾಂತಿ : ಕಂಡರಾ ಬಡುಗಣ್ಣು ಬೆಳಕನ್, ಪೊಳದು ಪೊಳೆಯುಸುತಿರ್ಪ ಬಿಳಿಯ ಬಾನ್‌ಬೆಳಕನ್ (ಹೊಂಗಳು. ೩೭-೦೨). [ಬಾನ್$_3$ + ಬೆಳಕು$_3$ (<ಬೆಳಗು$_3$)]

**ಬಾನ್ಮಣಿ, ಬಾಮ್ಮಣಿ** (ನಾ). ೧. ಸೂರ್ಯ : "ತಾವರೆಗೆಳೆಯಂ, ಪಗಲ ಬೊಜಂಗಂ . . . ಬಾನ್ಮಣಿ . . . ಗರಂಗಳಾಣ್ಮಂ — ಈ ೧೧ ಸೂರ್ಯನ ಪೆಸರ್" (ಕಶಣಾ. ೪೯-೨೮) ; "ಬೆಂಗದಿರಂ . . . ಬಾನ್ಮಣಿ ಪಿಂಗದೆ ತಾಂ ನೇಸಱೆಂದು ತಾವರೆಗೆಳೆಯಂ" (ಕಶಕಂ.೪೦). **ಬಾಮ್ಮಣಿ** : ೨. (ಬೇಡಿದುದನ್ನು ಕೊಡಬಲ್ಲುದೆಂದು ಭಾವಿಸಲಾದ) ಸ್ವರ್ಗಲೋಕದ ಒಂದು ರತ್ನ ; ಚಿಂತಾಮಣಿ : ಮದನನ ಬಾಗದೇಳ್ಗೆಯನ ಭೀಕ್ಷಿಸಿ ಬಾಮ್ಮರಮಂದು ನಾಡೆ ನಿಂದುದು ಬೆದರ್ದತ್ತು ಬಾಂಬಸು ಕರಂ ಮಿಗೆ ಬಾಮ್ಮಣಿ ಕಲ್ಲಿದೆಂದು ತೋರ್ದುದು ಜಗದಲ್ಲಿ (ಚಂದ್ರಕ್ಕು. ೦೩-೦೯೩).
ಬಾನ್ಮಣಿಗಣ್ಣ = ಸೂರ್ಯನನ್ನು ಕಣ್ಣಾಗುಳ್ಳವನು ; **ಶಿವ** : ಬಾನ್ಮಣಿಗಣ್ಣನು . . . ನೆಲದಳಿದನಣುಗಿಯಾಣ್ಮಂ ಸಿದ್ಧನಂಜೇಶ ರಕ್ಷಿಸುಗೆ ಬಿಡದೆಮ್ಮನು (ರಾಶಕ. ೦-೯). [ಬಾನ್$_3$ + ಮಣಿ$_3$]

**ಬಾನ್ಮೀನ್** (ನಾ). (ಆಕಾಶದ) ನಕ್ಷತ್ರ ; ತಾರೆ : ಬಾರ, ಓ ಬಾನ್ ಮಿನ್ನಗಳ ಮೇಟೀ ! (ಕಂಠಗೂ. ೩೦-೦೦೬). [ಬಾನ್$_3$ + ಮೀನ್$_1$]

**ಬಾನ್ಮೀನ** (ನಾ). = ಬಾನ್ಮೀನ್ : ನನ್ನಲ್ಲಿ ಏನೊ ಮಿಸುಗುತ್ತಲಿಹುದು ಬಾನ್‌ಮಿನ ಮಿಣುಕುವಂತೆ (ಕೃದು. ೯-೮). [ಬಾನ್$_3$ + ಮೀನ]

**ಬಾನ್ವಕ್ಕಿ, ಬಾನಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಬಾನಾಡಿ : ನರ್ತಿಪ ನವಿಲು ಕೊಂಡಾಡುವ ಬಾನ್ವಕ್ಕಿ ಪಕಿಯ ಬೇಡುವ ಗಿಳಿವಿಂಡು ದೈನ್ಯದಿಂ ಬಿನ್ನಹ ಮಾಡುತಿರ್ದುವು ಮನ್ಮಥಗೆ (ಸೋಬಹಕ. ೩-೩೯). **ಬಾನಕ್ಕಿ** : ಬಾನಕ್ಕಿಯು ಬೇರೆ ತರದಿಂದ ತನ್ನ ಗೂಡು ಕಟ್ಟಿಕೊಳ್ಳುತ್ತದೆ (ಮುಂಬಯಿ. ೩-೦೦೯); ಸುಗ್ಗಿಯಡೆಗಯುದ್ದಾವಾ ಬಾನಕ್ಕಿಯಂತೆ (ಗೂಡೊಕಾ. ೯೯-೩೩೯). [ಬಾನ್$_3$ + ಪಕ್ಕಿ]

**ಬಾಪು** 'ಬಾಪ್ಪು' ನೋ.

**ಬಾಪುರಿ, ಬಾಪೂರಿ, ಬಾಪ್ಪುರಿ, ಬಾಹುಪುರಿ, ಬಾಹುರಿ** (ನಾ). ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; ಕೇಯೂರ : "ಬಾಪುರಿ (ಬಾಹುರಿ)–ಬಾಹುಪುರ(ಯ) = ಕೇಯೂರ" (ಕರ್ಣಕೋ. ೩೦) ; ಕಂಕೆಲ್ಲಿಯ ಕರ್ಣಪೂರಮದಿರ್ಮುತ್ತೆಯ ಬಾಪುರಿ ಮೆಱೆವ ಪೂವಿನ ಸಂತೆ ಕರಂ ಮನೋಹರಂ (ಪ್ರಕಾ. ೯-೬೭) ; ಅಳವಡಿಸಿ ತೋಳ ಬಾಪುರಿ ಬಂದಿ ಭುಜ ಕೀರ್ತಿಗಳನು (ನವಮೋ. ೦೦-೨೩). **ಬಾಪೂರಿ** : ಗೌರವ್ವ ಉಟ್ಟಿಹಳು ಭರಜರಿ ಹೊನ್ನ ಹಾರ ತೋಳಿಗೆ ಒಂಕಿ ಬಾಪೂರಿ (ಜಿಲ್ಲಾಪು. ೦೯-೬೦) ; ಹರಡೇ ಕಂಕಣ ಕಮಲಾದೇವಿ ಒಂಕೀ ಬಾಪೂರೀ ನಿಟ್ಟಿನೊಳಗೇ ಕುಪುಸಾಪೂ (ಹುಟ್ಟಿಹ. ೦೬೩). **ಬಾಪ್ಪುರಿ** : ಬಾಲೆಯು ಕಡಗ ಕಂಕಣ

ತೋರ ಬಾಪ್ಪುರಿ ಮೇಳೈಸಿರೆ ತನುವಿನೊಳು (ತಕ್ಕಕಾ. ೭ ೭೭).
**ಬಾಹುಪುರಿ :** ಪೊಳೆವ ರನ್ನದ ಬಾಹುಪುರಿ ಭುಜಕೀರ್ತಿ ತೋಳ್ವಳೆ . . ಧರಿಸಿ ಕಳಿಪುವೆನು (ಗೀತಗೋ. ೭-೪) ; ವಜ್ರದ ಕಡಗಗಳಂ ರತ್ನಬಾಹುಪುರಿ ಉಂಗುರಗಳು . . . ತರಿಸಿ ಅವರನ್ನು ತಾನೇ ಅಲಂಕರಿಸಿ (ಮುದ್ರಾಮಂ. ೦೦೪). **ಬಾಹುರಿ :** ರನ್ನಬಾಹುರಿಯು ಕರಮೆಸೆವ ಜಡ್ಲ್ಗುಣಿತಕಂಕಣ ಬೆರಳ ಮುದ್ರಿಕೆ ಚಿಳ್ಳುಗುರ ಸಿಂಗರಪಿಡಾಯದೊಳ್ (ಅನಂತಾ. ೭ ೭-೧೪) ; ಬಿಂಕದೊಡ್ಯಾಣ ಬಾಹುರಿ ಪಿಲ್ಲಿ ಮುಂಟಿಕೆ ಕುಂತೂಮಾಂಗಯು ಧರಿಸಿಹಳು (ಕಂದಕೂ. ೦೯೧). 'ಬಾಹುಪೂರಕ', 'ಬಾಹುಪೂರಯು' ಪರಾ.
[<ಸಂ. ಬಾಹುಪೂರ./ ತೆಲು. ಬಾಹುಪುರಿ]

**ಬಾಪುರೆ** 'ಬಾಪ್ಪುರೆ' ನೋ.

**ಬಾಪೂರಿ** 'ಬಾಪುರಿ' ನೋ.

**ಬಾಪ್ಪು,** ಬಾಪು, ಬಾರ್ಪು, ಭಾಪು, ಭಾಪ್ಪು (ಅ). ಶೌರ್ಯ, ಸಾಹಸಗಳನ್ನು ಕುರಿತು ಮೆಚ್ಚುಗೆ, ಸಂತೋಷ, ಅಭಿನಂದನೆ ಮುಂತಾದುವುಗಳನ್ನು ಸೂಚಿಸುವಾಗ ಬಳಸುವ ಒಂದು ಶಬ್ದ : ಪೊಗಳಲ್ ಬಾಪ್ಪಪ್ಪುಕೆಯ್ವಂ ನೃಪಗುಣಗಣಮಂ ರಟ್ಟಕಂದರ್ಪ್ಪದೇವಂ (ಎಪಿ. XIII, ೩೩೦:೯ ; ೫೧೧) ; ಅರೆ ಪೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟ್ವಂ (ಪಂಪಭಾ. ೨-೬೦) ; ಸ್ಥಿರನೇ ಬಾಪ್ಪಮರಾದ್ರಿಯಿಂದಧಿಕ ಗಭೀರನೆ ಬಾಪ್ಪು (ಪ್ರಾಆಂ. ೦೯೪೩, ೦೩-೪ ; 1170). **ಬಾಪು :** ಉತ್ತುಂಗಂ ಬಾಪೆಂದು ಧಾತ್ರಿ ಕೈಮುಗಿವಿನೆಗಂ ಉಪವಾಸದೊಳ್ನಿಗಟ್ವಂ ಪ್ರೋಷಧೋಪವಾಸನೆಂಬ ನಾಲ್ಕನೆಯ ಶ್ರಾವಕನಕ್ಕುಂ (ಧರ್ಮಾಮೃ. ೩-೦೩೮) ; ಬಾಪು ಭಾಗ್ಯವೆ ನರಜನ್ಮದೊಳು ಬಂದು ಗುರುಕರುಣವಂ ಹೊತ್ತು ಹರಕಿಂಕರನಾಗಿ ಶರಣರ ಬರವಂ ಪಡೆದೆಂ (ಬಸರ. ೬-೯೮). **ಬಾರ್ಪು :** ಆ ಶೇಷನಂ ತಾಂ ಪಡೆಯಿಂ ಬಾಲಂಬರಂ ಬಾಜ್ಪುಮಮ ಮಾಲೆವರಾಗ್ಗೆಲ್ದಪಂ . . . ಏಕ್ಕಲಕ್ಷ್ಮೋಣಿಪಾಳ (ಎಕ. VIII, ಸೊರಬ. ೧೩೯-೩೦ ; 1145). **ಭಾಪು :** ಒಬ್ಬರೊಬ್ಬರ ವಿಧಿಯನೊಮ್ಮಿಂಗೆ ಕೈಗೊಳ್ಳು ಉರ್ವಿಶ ಸೊಡ್ಡಳಾ ಭಾಪು ಭಾಪುರೆ (ಸರ್ವಪ. ೧೬೩-೭೭೩) ; ಪೂತು ಸಾರಥಿ ಭಾಪು ಮಝರೇ ಸೂತ ಧಿರುಧಿರು ಎನುತ ರಥಿಕವ್ರಾತ ಏಗೆ ಬೋಳೈಸಿಕೊಂಡರು ಹಯದ ವಾಘೆಗಳ (ಕುಮಾ.ಭಿ. ೪-೯೩); ದಶಾಸ್ಯನ ಪದವಿಘಾತಿಗೆ ಪೂತು ಮಝು ಭಾಪೆಂದುದಮರಗಣ (ತೊರಟ. ೦-೦೩-೩೦). **ಭಾಪ್ಪು :** ಅಂಬರದೊಳ್ ನಿಂದು ಗಜಪ್ರಿಯಾಂಬರಚರರ್ ಜೀಯುಯ್ಯ ಭಾಪ್ಪೆಂದು ಜೀಂಕರಿಪನ್ನಂ ವನದಂತಿ ಪೋರ್ವುದು ನಿಷಾದ್ಯರ್ದಾಢದಿಂ ಪೋರ್ವವೊಲ್ (ಶಾಂತಿಪು. ೨-೦೦೦); ಭಾಪ್ಪೆನೆ ಪಂಚಾಚರಣಂಗಳಿಂ . . . ದಯೆಗೆಯ್ಗೆ ಸೂರಿಗಳಶೇಷರ್ ನಮ್ಮೊಳಾ ಚಾರಮಂ (ಜಮರ. ೦-೩).

**ಬಬಾಪ್ಪು, ಭಾಪುಭಾಪು, ಭಾಪ್ಪುಭಾಪ್ಪು** (ದ್ವಿರುಕ್ತಿ): ವಂದಿಜನ ಕಲ್ಪಕುಜಾತನೆನಲ್ಕೆ ಸಾಲ್ದು ಲಕ್ಷ್ಮೀನಿಳಯಂ ಬಬಾಪ್ಪೆಸೆದನೀ ಕಲಿಸಿಂದರ ಬಾಚಿಭೂಮಿಪ (ಕೌಇಇ. IX-i, ೨೨೭-೨೯; 1132); ವಿಳಸದ್[ಉ] ಭೋಗಾವತಿಯೆನೆರೆ (ಸ)ಲೆ ಭೋಗಿಗಳಿಂ ಬಬಾಪ್ಪು ಮಾಳಿಗೆ ರಮ್ಯಂ (ಎಪಿ. XV. ೩೨೦-೩೩; 1172); ಅಭಿನವಭಂಗಿಯೊಳರಿಯಂ ವಿಭು ಮಡಿಪಿದೆ ಭಾಪುಭಾಪೆನುತ್ತುತ್ಸವದಿಂ ನಭದೊಳ್ ಮುನಿಪತಿ ನಾರದಂ . . . ಹರಿಗಿಂತೆಂದಂ (ಜಗಂ. ೩-೪೮); ಗಗನದಿ ಸುರರು ಕೊಂಡಾಡಿದರು ರಾವುತರರಸನಹುದೋ ಭಾಪುಭಾಪೆಂದುದು ಸಮಸ್ತಜನ (ನಳಚ. ೭-೬); ಸಂಗರರಂಗಭೂಮಿಯೊಳ್ಪರಿದುದು ಭಾಪ್ಪುಭಾಪ್ಪು ಮಝು ಭಾಪ್ಪೆನಲಂಣನ ಗಂಧವಾರಣಂ (ಎಕ. VIII, ಸಾಗರ. ೦೦೯-೨೭; 1079).

**ಬಾಪ್ಪುರಿ** 'ಬಾಪುರಿ' ನೋ.

**ಬಾಪ್ಪುರೆ, ಬಾಪುರೆ, ಭಪ್ಪರೆ, ಭಾಪುರೆ** (ಅ). ಶೌರ್ಯ, ಸಾಹಸಗಳನ್ನು ಕುರಿತು ಹೊಗಳುವಾಗ ಬಳಸುವ ಒಂದು ಕೊಂಡಾಟದ ನುಡಿ : ಬಾಪ್ಪುರೆ ಸಿಂಗಂ ಭಬ್ಯ(ವ್ಯ)ಸೇಬ್ಯ(ವ್ಯ)ಂ ಸು(ಶು)ಚಿ ಸು(ಶು)ಭ ಚರಿತಂ ಧಾತ್ರಿಯೊಳು ಪುಣ್ಯಪುಂಜ[ಂ] (ಇಇ. XVIII, ೩೯-೦೬; ೫೫೫); ನಾನಾವಿಷಯುತತಿಗೆ . . . ತನ್ನುಣ್ಡೆಗೆಯೆನೆ ವಿದಿತಜ್ಞಾನ್ವಿತಂ ಮಾಡಿದಂ ಬಾಪ್ಪುರೆ ಪಮ್ಮನುದತೇಜಂ (ಕೌಇಇ. XI-i, ೦೦೬-೭ ; 1075); ಭಲಾ ! ಭಲಾ ! ಭಲಾ! ಬಾಪ್ಪುರೇ! (ಚಂದ್ರಕ. ೯೩-೦೪). **ಬಾಪುರೆ :** ಬಾಪು [ಕಾಂಚಿಪಂ. ಪುರ್]ರೆ ಲೋಕೋತ್ತರಮಾರ್ಹತವ್ರತಮದಂ ಬಣ್ಣಿಪ್ಪನೇವ ಣ್ಣಿಪಂ (ಕಮಪ. ೪-೭೦); ಶಿವ ಶಿವ ಮಹಾದೇವ ಬಾ[ಕಾಂಚಿಪಂ. ಭಾ ]ಪುರೇ ಸೌಂದರಾ (ನುಚರ. ೦೭-೦೯೩). **ಭಪ್ಪರೆ :** ಭಪ್ಪರೆ ! ಎರಡು ಹೆಚ್ಚಿನ ಕಣ್ಣು ಉಪಯೋಗಿಸಿದ್ದಕ್ಕೂ ಸಾರ್ಥಕ ಆಯ್ತು (ತಂದುಟಿ. ೫೨); ಭಪ್ಪರೇ ವಿದ್ಯಾಪುರ್ವಿಣ! (ರಂಗವ. ೨೦೩). **ಭಾಪುರೆ :** ಭಾಪುರೇ ಕಾವ್ಯನಾಥಂ ಗಿರಿಜಾನಾಥಂ (ಗಿರಿಕ. ೦-೩೩); ಭಾಪುರೇ ಕೌರವಮಹಾರ್ಣವವೆನುತ ಮಕುಟವ ತೂಗಿದನು ಪಾರ್ಥ (ಕುಮಾ.ಕ. ೦೯-೩೯); ಸಮ್ಮಾಪಸವ್ಯಧಿ ಬಿಡದೆಸುವ ಚಾಪಗಾಬರ ಪೊಗಳ್ದರು ಭಾಪುರೆ ಮಝು ಭಾಪುರೆಯೆಂದು ಸಗ್ಗಿಗರು (ಪಂಶ್ರಸಾಂ. ೮-೪೦). 'ಬಾಪ್ಪು' ಪರಾ. [<ಬಾಪ್ಪು./ತೆಲು. ಬಾಪುರೆ, ಬಾಪುರೇ]

**ಬಾಬಂದಿ** (ನಾ). ಒಂದು ಬಗೆಯ ತೆರಿಗೆ: ಬಾಳ್ಗಳಿಯೂರೊಡೆಯಂ ಪಶುಪತಿ ಧಟ್ಟಿಜಗ್ಗಿ ಬಾಬನ್ದಿಯ ಸಂಬನ್ಧದ ರಾಜದ್ರವ್ಯಮಾದುದೆಲ್ಲಮಂ ಬಿಟ್ಟರ್ (ಕೌಇಇ. IX-i. ೭೭-೦೦; ಸು. 956). [ ? ]

**ಬಾಬತ್** 'ಬಾಬತ್ತು' ನೋ.

**ಬಾಬತು** 'ಬಾಬತ್ತು' ನೋ.

**ಬಾಬತ್ತು,** ಬಾಬತ್, ಬಾಬಿತು (ನಾ). ವಿಷಯ ; ಸಂಗತಿ : ಇನ್ನೊಂದಷ್ಟು ಖರ್ಚಿನ ಬಾಬತ್ತಿದೆ (ಸಂಸ್ಕಾರ. ೦೨೩) ; ನಲ್ಲಿ ದೀಪ ಇವುಗಳ ಬಾಬತ್ತೆಲ್ಲಾ ನಿಮಗೇ ಸೇರಿದ್ದು (ರಂಟಿಬ. ೫೨). **ಬಾಬತ್ :** ಮೊದಲು ಈ ಬಾಡಿಗೆ ಬಾಬತ್ ಫೈಸಲ್ ಮಾಡಿ (ರಂಟಿಬ. ೩). **ಬಾಬತು :** ಫಸಲಿನ ಮಾರಾಟದಿಂದ ಸಿಗುತ್ತಿದ್ದ ದ್ರವ್ಯ ಇತರ ಬಾಬತುಗಳಿಗೆ ವ್ಯಯವಾಯಿತು (ಶಾಸಗ. ೩೨); ನಿನ್ನ ಮುಖದ ಗೆಲವು ನೋಡಿದರೆ ಅದೇನೋ ಭಾರೀ ಬಾಬತ್ತೇ ಇದ್ದಾಗಿದೆ (ನಡಿದಾ. I, ೩೩೩).

[←ಅರ. ಪಾರ. ಹಿಂ. ಬಾಬತ್ ; ಮರಾ. ಬಾಬತ್, ಬಾಬದ್]

**ಬಾಬಯ್ಯ** (ನಾ). ಅಂಗೈ ಅಥವಾ ಪಂಜದ ಆಕಾರದಲ್ಲಿರುವ ಒಂದು ಪ್ರತೀಕ ; **P** "ಮಧ್ಯ ಇರಾನ್ ಮತ್ತು ಮೆಸೊಪೊಟೇಮಿಯವನ್ನು ಆಳಿದ ಬುವಯ್ಹಿ ಸಂತತಿಯವರು ಅಲಿಸಂತತಿಗೆ ಭಕ್ತಿಯಿಂದ ನಡೆದುಕೊಂಡು ಕರ್ಬಲದ ದುರಂತಪ್ರಕರಣದ ನೆನಪಿಗಾಗಿ ಕೂಟ ಕೂಡುವುದಕ್ಕೆ ಪ್ರೋತ್ಸಾಹ ಕೊಟ್ಟರು . . . ಇದೇ ರೀತಿ ಇಂಡಿಯದಲ್ಲೂ ವರ್ಷಂಪ್ರತಿ ಕೂಟಗಳು ಏರ್ಪಟ್ಟವು. ಆದರೆ, ಶೋಕಮೂಲವಾದ ಈ ಕೂಟಗಳು ಬರಬರುತ್ತ, ಇಂಡಿಯದಲ್ಲಿ ಉತ್ಸವಸಂದರ್ಭವಾಗಿ ಪರಿಣಮಿಸಿಬಿಟ್ಟವೆ. ಆದರೆ, ಹುಲಿಯ ವೇಷ ಕರ್ಬಲದಲ್ಲಿ ಸತ್ತು ಕೆಡೆದ ವೀರರ ದೇಹವನ್ನು ಕಾದುವೆಂದು ಹೇಳುವ ಹುಲಿಗಳಿಗೂ, ಅಲಾವಹ್ ಅಥವಾ ಹೊಂಡ ಪಾಳಯದ ಹಿಂಭಾಗದಲ್ಲಿ ಹಾಕಿದ್ದ ಬೆಂಕಿಗೂ, ಪಂಜ ಅಥವಾ ಕೈ ಆಕಾರದ ಗುಡಿ (ಬಾವುಟ) ಮುಹಮ್ಮದ್, ಅಲಿ, ಫಾತಿಮ, ಹಸನ್ ಮತ್ತು ಹುಸೇನರಿಗೂ ಚಿಹ್ನೆಯಾಗಿರಬಹುದು" (ಇಸ್ಲಾಂಸಂ. ೩೭೯): ಮುಸ್ಲಿಮರು ಹಿಂದುಗಳ ಮಧ್ಯ ಬೀದಿಯಲ್ಲಿ ಸಣ್ಣಕುಂಡವನ್ನು ತೋಡಿ, ಎದುರಿಗಿದ್ದ ಕೃಷ್ಣಾಚಾರಿಯ ಮನೆಯ ಜಗುಲಿಯ ಮೇಲೆ ಅಂಗೈ ಆಕಾರವಿರುವ ಬಾಬಯ್ಯನ ಬೆಳ್ಳಿಯ ವಿಗ್ರಹಗಳನ್ನು ಸ್ಥಾಪಿಸಿ, ಹೂವು, ಗಂಧ, ಚಂದನದಿಂದ ಪೂಜಿಸುತ್ತಿದ್ದರು (ಮಗವಾ. ೦); ಬಾಬಯ್ಯನ ಹಸ್ತಗಳನ್ನು ಕೆರೆಯಲ್ಲಿ ತೊಳೆದು ಅಲ್ಲಿ

ದಾಯ' ಪಾಡುತ್ತಾ ಅವನು ಬರುವಾಗ . . . ಹಿಂದುಗಳ ಕಣ್ಣಿನಲ್ಲೂ ನೀರು ಬಗುತ್ತಿತ್ತು (ಊರುಕ. ೩೦).

**ಬಾಬಯ್ಯನ ಜಲ್ದಿ** = ಮೊಹರಂ ಹಬ್ಬದ ಕೊನೆಯ ದಿನದ ಉತ್ಸವ : ಹಿಂದೆ ಹೆಮ್ನಳ್ಳಿಯಲ್ಲಿ ಬಾಬಯ್ಯನ ಜಲ್ದಿ ಎಂದರೆ ಹಿಂದುಗಳಿಗೆ ಒಂದು ದೊಡ್ಡ ಹಬ್ಬ (ಮಗಮೊ. ೧). 'ಜಲ್ದಿ' ಪರಾ. **ಬಾಬಯ್ಯನ ಹಬ್ಬ** = ಬಾಬಯ್ಯನ ಜಲ್ದಿ : ಬಾಬಯ್ಯನ ಹಬ್ಬದ ಸಂದರ್ಭದಲ್ಲಿ ಹುಲಿವೇಷದ ಜೊತೆಗೇ ಬರುವ ಮತ್ತೊಂದು ಮನರಂಜನೆಕಲೆ ಕರಿಬೇವಿನ ಸೊಪ್ಪಿನ ವೇಷ (ಕಜಕ. ೦೮೯).

[ಬಾಬ್ಬ₀ (p ← ಪಾರ. ಹಿಂ. ಮರಾ. ಬಾಬಾ) + ಅಯ್ಯ₆₁]

**ಬಾಬರ** (ನಾ). ಒಂದು ಬಗೆಯ ಸಿಹಿಯ ಭಕ್ಷ್ಯ: ನೆಱ ಸಣ್ಣಗೋದುವೆಯ ಹಿಟ್ಟ ಸಿಹಿವಾಲೊಳಗೆ ನುಱುಗುವಂದದಿ ಕಲಸಿ ಹೆಬ್ಬೆಟ್ಟ ತೋರದೊಳು ಕೊಱದ ಕರಟಕೆ ತುಂಬಿ ಪೊಡೆಯದೊಲು ತುಪ್ಪದೊಳಗಡಲು ಚಿಲುಮುರಿಯಾದುದು ಎಱಯಪ್ಪದಂತೆ ಬೇಯಿಸಲು ಬಾಬರವಾಯ್ತು, ಬಱಮೊಸರು ಕೆನೆಯನದಱೊಳು ಕಲಸಿ ಪುಂಡೆಯಂತೆಱಯೆ ಪಾವುಡವಾಯ್ತು ದೋಸೆಯಂದದಿನಡಲು ತಾನೆ ಬಾಬ[ಪಾಠಾಂ. ಬಾ]ರ ಮಾದುದು (ಸೂಶಾ. ೦-೩೩).

[ ?./ಹಿಂ. ಬಾಬರ್ = ಒಂದು ಬಗೆಯ ಮಿಠಾಯಿ ]

**ಬಾಬರಿ** (ನಾ). ಒಂದು ಬಗೆಯ ಸಸ್ಯ : "ಕಗ್ಗೊಱಲೆ ಬಾಬರಿ ಕ್ಷುದ್ರ ಪತ್ರಂ" (ಮಂಗರಾ. ೩೯-೨೭). [ ?./ಪಾರ. ಬಾಬಾರೀ = ಕರಿಮೆಣಸು : ಮರಾ. ಬಾಬರೀ = ತೃಣಧಾನ್ಯ]

**ಬಾಬಿಂಜಿ** 'ಬಾಗುಜಿ' ನೋ.

**ಬಾಬು₁** (ನಾ). ೧. ವಿಷಯ ; ಸಂಗತಿ : ವಿಳಾಸದಾರ ಸಿಗಲಿಲ್ಲ ಎನಿಸುವುದು ಅಷ್ಟೇನೂ ಖರ್ಚಿನ ಬಾಬಲ್ಲ (ಬಕಾಂಗಿ. ೨೦೦); ಅಲ್ಲಿಯವರೆಗೆ ಅದು ಕೇವಲ ಖರ್ಚಿನ ಬಾಬು (ಅಕೋಕ. ೬೪). ೨. ವಸ್ತು; ಪದಾರ್ಥ : ನಮ್ಮ ತಾಯಿಯವರು ಇನ್ನೂ ಕೆಲವು "ಬಾಬು"ಗಳನ್ನು ಹೆಚ್ಚಾಗಿ ಬೇಡಿದರೂ ಅವುಗಳನ್ನು ಸುಬ್ಬರಾಯರು ಕೊಡಲೊಪ್ಪದ್ದರಿಂದ ಮಾಧವನ ಮದುವೆಯ ನಿಶ್ಚಯವೇ ಆಗಿಹೋಯಿತು (ಕೋಕಮು. ೨೨೭). ೩. ವಿಭಾಗ; ಬಾಬತ್ತು : ಈ ವರ್ಷ ಆ ಬಾಬುಗಳಿಂದಲೂ ಹಣ ಬಂದಿಲ್ಲ ಪ್ರಭೂ (೧೦ಪ. ೦೭೯); ಸೊಸೆಗೆ ಮರದ ಬಾಗಿಣ ಮೊದಲಾದ ಬಾಬುಗಳಿಂದ ಸಿಗುವ ಸಂಭಾವನೆಯ ಲೆಕ್ಕವನ್ನೂ ಆಚಾರ್ಯರು ಹಾಕಿದರು (ಮನಬಿ. ೪೪). ೪. ಸುಂಕ; ತೆರಿಗೆ : ಈ ಜನಗಳು . . . ಕಾಣಿಕೆ ಕಡ್ಡಾಯ ಮನೆದೆರಿಗೆ ಮುಂತಾದ ಬಾಬುಗಳನ್ನು ಕೊಡಕೆಲಸವಿಲ್ಲ (ಮಹಾಮಂ. I, ೦೦೬); ರೈತರನ್ನು ತಗ್ಗಿಸುವ ನಿಮಿತ್ತವಾಗಿಯೂ, ಅರಮನೆಗೆ ಕೂಡಿ ಬರುವಂತೆಯೂ, ಹೆಚ್ಚಾಗಿ ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು (ಮಹಾಮಂ. I, ೦೨೪). ೫. ಪರಿಪಾಠ; ಕ್ರಮ; ವಾಡಿಕೆ : ಜೀರರಿಗೂ (ಹೂಗಾರ) ಒಕ್ಕಲಿಗನ ಕಣದಲ್ಲಿ ರಾಶಿಗೆ ಪತ್ರಿ ಹೂದಂಡೆಗಳನ್ನು ಕೊಡುವ ಬಾಬಿದೆ (ಕನ್ನಜಾ. ೦೩೪). ೬. ರೂಢಿಯಾಗಿ ಕೊಡುವ ಪದಾರ್ಥ; ಮಾಮೂಲು : ತುಂಬುವ ರಾಶಿಯಲ್ಲಿ ತಟ್ಟೆಯ ತುಂಬ ಜೋಳವನ್ನು ಒಕ್ಕಲಿಗನು ಹೂಗಾರನಿಗೆ 'ಬಾಬು' ಎಂದು ಕೊಡುವ ವಾಡಿಕೆಯು ಈಗಲೂ ಇರುವುದು (ಕನ್ನಜಾ. ೦೩೪); ಹನ್ನೆರಡು ಕಸಬಿನವರೂ ತಮ್ಮ ತಮ್ಮ ಬಾಬಿಗಾಗಿ ಹೊರಗಡೆ ಕಾದಿರುವರು (ಸುವಸಂ. ೩೦).

**ಬಾಬುವಾರು** = ಆಯಾ ವಿಷಯಗಳ ಪ್ರಕಾರ : ಆರು ಬಾಬುಗಳಲ್ಲಿ ಕ್ರಿಮಿನಲ್ ಕೋರ್ಟ್ ಕಾನೂನಿನ ಅರ್ಥವನ್ನು ಹೇಗೆ ತಿರುಗುಮುರುಗು ಮಾಡಿತ್ತೆಂಬುದನ್ನು . . . ಬಾಬುವಾರಾಗಿ ಅವನು ಸಮರ್ಥಿಸಿದನು (ಪುನರು. ೩೭೩). [←ಅರ. ಹಿಂ. ಮರಾ. ಬಾಬ್]

**ಬಾಬು₂, ಬಾಬೂ** (ನಾ). (ಸಭ್ಯಗೃಹಸ್ಥ, ಮಹಾಶಯ ಎಂದು ಮುಂತಾಗಿ ಒಬ್ಬ ವ್ಯಕ್ತಿಯನ್ನು ಸೂಚಿಸಲು) ಗೌರವಸೂಚಕವಾಗಿ ಬಳಸುವ ಪದ : ನಯನಜೋರದ ಜಮೀನುದಾರರು ಒಂದಾನೊಂದು ಕಾಲಕ್ಕೆ ಬಾಬು ಎಂಬುದಾಗಿ ವಿಶೇಷ ವಿಖ್ಯಾತರಾಗಿದ್ದರು (ಇಶ್ವಕ. ೦೨೯); ಬಂಗಾಲಿ ಬಾಬುಗಳು ಒಳಗಿದ್ದಾರೆ (ಕಾರಹಿ. ೦೩೩). **ಬಾಬೂ** : 'ಬಾಬೂಜಿ' ಪರಾ. [←ಹಿಂ. ಮರಾ. ಬಂಗಾಲಿ. ಬಾಬೂ]

**ಬಾಬುಗಾರ** (ನಾ). ಆಯಾ ವಿಭಾಗದ ಕೆಲಸಕ್ಕೆ ಸಂಬಂಧಪಟ್ಟ ವ್ಯಕ್ತಿ : ಅವನಿಗೆ ಎಲ್ಲ ಆಯಗಾರರೂ, ಬಾಬುಗಾರರೂ ಬರಲೇ ಬೇಕು (ಕನ್ನಜಾ. ೬೮). [ ಬಾಬು₁ + – ಗಾರ (<– ಕಾಱ) ]

**ಬಾಬುಜಿ, ಬಾಬೂಜಿ** (ನಾ). = ಬಾಬು₂ : ಆ ರಮಣಿಯು ಎದ್ದು ನಿಂತು, "ನಮಸ್ಕಾರ ಬಾಬುಜಿ!" ಎಂದಳು (ಇಶ್ವಕ. ೦೯೭). **ಬಾಬೂಜಿ**: ಈ ಜನವೆಲ್ಲ ನಿಷ್ಕರುಣಿಗಳು ಬಾಬೂಜಿ (ಕಾರಹಿ. ೬೮).

[ಬಾಬು₂ + – ಜಿ]

**ಬಾಬುದಾರ** (ನಾ). = ಬಾಬುಗಾರ : ಪ್ರಿಯಜನರು, ಅತಿಥಿಗಳು, ಪೂಜ್ಯಮಂಡಲಿಯು, ಬಾಬುದಾರರು ಇವರೆಲ್ಲರನ್ನು ಅರಸನು ಸಂತೋಷಪಡಿಸಿದನು (ತುಳಸೀ. ೯೯); ಬಗೆಬಗೆಯ ಬಾಬುದಾರರು ತಮ್ಮ ತಮ್ಮ ಕರ್ತವ್ಯಗಳಲ್ಲಿ ತಲ್ಲೀನರಾದರು (ಗಂಗಾಜಾ. ೪೯). [ಬಾಬು₁ + – ದಾರ₄]

**ಬಾಬೂ** 'ಬಾಬು₂' ನೋ.

**ಬಾಬೂಜಿ** 'ಬಾಬುಜಿ' ನೋ.

**ಬಾಬೂನ** (ನಾ). ಒಂದು ಬಗೆಯ ಔಷಧೀಸಸ್ಯ : ಬಾದರನ ಬೋಯು, ಬಾದ್ವಾನ, ಬಾಬೂನೆ (ಮುಂಬಪ್ರ. ೦೭೭).

[←ಪಾರ. ಬಾಬೂನಹ್ ; ಹಿಂ. ಬಾಬೂನಾ ; ಮರಾ. ಬಾಬುನಾ]

**ಬಾಬೆಹುಕುಮತ್** (ನಾ). ಧರ್ಮದರ್ಶಿಗಳ ಸಭೆ : ಸರ್ಕಾರದವರಿಂದ ನಿಯಮಿಸಲ್ಪಟ್ಟ ಧಾರ್ಮಿಕಕಲಹವಿಮರ್ಶನಸಂಘದವರ ರಿಪೋರ್ಟು ಬಾಬೆಹುಕುಮತ್ ಅಂದರೆ ಕೌನ್ಸಿಲ್‌ದವರಿಂದ ಅನುಮೋದಿಸಲ್ಪಟ್ಟು (ಗುರುದ. ೪೮). [ ← ಹಿಂ. ? ]

**ಬಾಮ** (ನಾ). ಸೊಗಸು ; ವಿಲಾಸ : ಅವರೊಳೊರ್ವಳ್ . . . ತನ್ನೊಂದು ಬೆಡಂಗಿನ ಬಾಮದಿಂ ಬಳ್ಕಿ ಬಾಗಿ ಕುಪ್ಪಸಮಂ ಸಡಿಲ್ಚಿದಳ್ (ರಾಮಾಶ್ವ. ೦೨೩-೦೪) ; ಆ ಸುಶೀಲೆ ಬಾಗಿ ಬಾಮದಿಂ ಬಲ್ಲಿದರ್ಗೆಂದಳ್ (ಅದ್ಭುತ. ೩೯-೩). [< ಸಂ. ಭಾಮ. /ತಮಿ. ವಾಮ; ತುಳು. ಬಾಮ]

**ಬಾಮ್ಮಣಿ** 'ಬಾನ್ಮಣಿ' ನೋ.

**ಬಾಮ್ಮರ** (ನಾ). (ಬೇಡಿದುದನ್ನು ಕೊಡಬಲ್ಲುದೆಂದು ಭಾವಿಸಲಾದ) ಸ್ವರ್ಗಲೋಕದ ಒಂದು ಮರ ; ಕಲ್ಪವೃಕ್ಷ : ಏನೆಮಗಾ ಬಾಂಬಸು ವಿಂದೇನೆಮಗಾ ಬಾಮ್ಮರಂಗಳಿಂ ಬರ್ಪುದು (ಅಶ್ರಿತ. ೪೦-೦೩) ; ಸಂಕಿನ ಪಾಱುಂಬಳೆಯ ಬಾಮ್ಮರದ ಪಱಯಿಗೆಯ ತಾವರೆಯಂಱಸದ ಬಜ್ಜರದ ಮೆಯ್ಸಿರಿವೆತ್ತ ನುಣ್ಗೆಱಗಳಿಂದೆಸೆವ ಕೆಂದಳಿರ್ಗಳುಮಂ . . . ಕೂರ್ತು ನೋಡುತ್ತಿರ್ದೊಡಂ (ಜಕವಂ. ೩೯-೪). [ಬಾಂ₂ (< ಬಾನ್₃) + ಮರ₁]

**ಬಾಯ್, ಬಾಯಿ₁** (ನಾ). ೧. ಮನುಷ್ಯರ ಹಾಗೂ ಪ್ರಾಣಿ, ಪಕ್ಷಿಗಳ ಮುಖದಲ್ಲಿ, ಆಹಾರ ಪಾನೀಯಾದಿಗಳನ್ನು ಸೇವಿಸುವುದಕ್ಕೂ ಶಬ್ದದ ಉದ್ಗಾರಗಳಿಗೂ ಸಹಾಯಕವಾಗಿರುವ ಒಂದು ಅವಯವ; ವಕ್ತ್ರ : ತಾಳತರುವಿತತಿಯೊಳ್ ಬೇತಾಳಂಗಳ್ ಪೊಱದು ತೆಱದು ಬಾಯ್ಗಳನಾ ಪಾತಾಳಬಿಲಂಗಳವೋಲ್ . . . ಕಱಯೆ ಭಯಮಯನಾದಂ (ಕಬಿರಾ. ೩-೦೯೩) ; ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ ಕಳ್ಳ ಬೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯುಂ ಕಚ್ಚಿ ನೆಲಕ್ಕಿಱದ ರಾಹುವಂ ನೆಱ ಪೋಲ್ತಳ್ (ಕಾವ್ಯಸಾ. ೯೭೭ ಶೂದ್ರಕ) ; ಪಾತಾಳಗಣಂ ಗಳಿವೆತ್ತಂ ತಾಳುಗೆವರೆಗಂ ತೆಱದ ಬಾಯನನುಕರಿಸಿರ್ಕುಂ (ಆದಿಪು. ೦೨-೭೯). ೨. ಪಾತ್ರೆ, ಚೀಲ ಮೊದಲಾದುವುಗಳ ತೆರೆಯುವ

ಭಾಗ : (ಕ). ೩. ಕೆರೆಯ ತೂಬು, ಬಚ್ಚಲು, ಮೋರಿ ಮೊದಲಾದುವುಗಳ ಹೊರತುದಿ,– ಕಂಡಿ : (ಕ). ೪. ಚರ್ಮವಾದ್ಯದ ಮೇಲುಭಾಗ : (ಕ). ೫. ಹುಣ್ಣು, ಗಾಯ ಮೊದಲಾದುವುಗಳ ಬಿರುಕು,–ತೂತು : ಮೇಲ್ವಾಯ್ದು ಪೊಯ್ದತ್ತು ಕೈಯೇಱಿದಯಿಂ ಬಾಯೇೞ ಬಾಯಿಂದೊಡನೆ ರುಧಿರಮುಂ ಕಂಡಮುಂ ಸೂಸುವನ್ನಂ ಸಿಡಿಲೆಂಬಾಶಂಕೆಯಿಂ ಪೆಣ್ಬುಲಿ ಪಡೆದು ಮೃಗೇರಕ್ತಸೇವಾನುರಕ್ತಂ (ಕಂಠಾಮ. ೨-೫೫) ; ಏೞು ಬಾಯ್ಗಳ ತಳಿತ ಖಂಡದ ಸೂೞಿಗೊಂಡವು ಹಿಂದಣಂಬುಗಳು (ಕುವ್ಯಾದ್ರೋ. ೧೬-೩೬). ೬. ಪ್ರವೇಶದ್ವಾರ ; ಬಾಗಿಲು : ಹುತ್ತಕ್ಕೆ ಏಸು ಬಾಯಾದರೇನು ಸರ್ಪನಿರ್ಪುದು ಒಂದೇ ಸ್ಥಾನ (ಬಸವ. ೯೫೦) ; ಏೞ್ವಾಯ್ ಥೇಬಾಯ್ಗಳೆಂದುವ್ ಮಾಡದ ಓ ಮುನ್ನಗದಿರೇ ! (ಅಂತಿಗೊ. ೫-೬೬). ೭. ಚೂರಿ, ಕತ್ತಿ, ಕೊಡಲಿ ಮೊದಲಾದುವುಗಳ ಅಂಚು,–ತುದಿ : ಎನ್ನಯ ಸಂತತಿಗಾಗಿಸಿರ್ದ ಷಿನ್ನನೆ . . . ಕರವಾಳ ಬಾಯ್ಗುಮಂಬಿನ ಮೊನೆಗಂ ಮಹಾರಥರ ತಿಂತಿಣಿಗಂ ಓಡಿದೆಂತು ನೂಂಕುವೆಂ (ಕಂಕಥಾ. ೧೧-೯೦); ಬೆಲ್ಲದ ಮೋಹಕ್ಕೆ ಸುರಗಿಯ ಬಾಯ ಧಾರೆಯ ನೆಕ್ಕುವಂತಾನುಂ (ರವರ್ಮ. ೬-೧೬೫); ಜಮದಗ್ನಿರಾಮನು . . . ಪರಶುಗೊಡಲಿಯ ಬಾಯ ಮಸೆವುತ ಬಂದು ಭೂಪನ ದಾಯಿಗರ ಹರೆಗಡಿದು ಹಿಡಿದನು ಕಾರ್ತವೀರ್ಯಕನ (ಸಂಭಶ. ೨೬-೩೦). ೮. ನುಡಿ ; ಮಾತು ; ವಚನ : ಬಲ್ಲರ ಬಾಯಂ ಪೊಕ್ಕೋದಿ ಕಲ್ಗೆ ಕವಿ ಸಕಲಮುಮಂ (ಅರ್ಥನೇ. ೧-೩೪) ; ಬಾಯಲಿ ಬಲ್ಲಿದನು ನೀನಹೆ ಭಟಾಂಗದ ಮಾತದಂತಿರಲಿ (ಕುವ್ಯಾದ್ರೋ. ೫-೫೩).

**ಬಾಯಿ$_1$** : ೧. "ವದನಂ ಮುಖಂ . . . ಆಸ್ಯಂ ಮೋೞ ಬಾಯಿಯೆನೆ ಕಬಳಿಕಂ" (ಕುಂಗಣಾ. ೯೩-೧) ; ಒಱಲುವಮಾರರ ಬಾಯಿ ಕೈಗಳ ಮೊೞೆಯ ತೆಗಸಿ . . . ನಂದೀಶ್ವರನು ಹೊಕ್ಕನು ಹೊಯ್ದು ದಾನವರ (ಕುವ್ಯಾ೪. ೬-೨೯) ; ಅಡಸಿ ಗಿರಿಯನು ನುಂಗುವ ವೀರನ ಬಾಯಿ ಹಿಡಿಯದೆ ಪಣ್ಬಲಗಳನು (ಕಂಪಅ ೧೯-೯೩). ೨. ಅಷ್ಟೊಂದು ಹತ್ತಿ ತುಂಬಿದರೆ ದಿಂಬಿನ ಚೀಲದ ಬಾಯಿ ಹೊಲಿಯುವುದು ಹೇಗೆ ? (ಕೂಶ). 'ಬಾಯಿಕಟ್ಟು$_2$' ಪರಾ. ೪. ಪುಷ್ಕರಂ . . . ಡೋಲು, ಮದ್ದಳೆ, ಝಾಡಾ ಮುಂತಾದ ವಾದ್ಯಗಳ ಬಾಯಿ (ಸಿದ್ಧಾಂತಿ. ೯೦೬). ೬. ಅರಮನೆಗೆ ಆರು ಬಾಯಿ (ಗಾದೆ). ೭. ವರದಾನ ಹೃದಯದಲ್ಲಿ ಎರಡು ಬಾಯ ಅಲಗನ್ನು ಹಾಕಿ ತಿರುವಿದಂತಾಯಿತು (ಜಯಂತ. ೬). ೮. ಬಿನ್ನಹಕೆ ಬಾಯಿಲ್ಲವಯ್ಯ ಅನ್ನಂತ ಅಪರಾಧ ಎನ್ನಲ್ಲಿ ಇರಲಾಗಿ (ಪುರಂದ. ೨-೧೫೦ ಪಲ್ಲವಿ) ; ಈ ವಿಷಯವನ್ನು ಸವತಿಯಾದ ಅವಳೊಡನೆ ನಾನೇ ಪ್ರಸ್ತಾಪಿಸಲು ನನಗೆ ಬಾಯಿ ಬಾರದು (ಪಕಥಾ. ೧೩) ; ಬಾಯಿ ಒಳ್ಳೆಯದಾದರೆ ಊರು ಒಳ್ಳೆಯದು (ಗಾದೆ). ೯. (ಅಲಂ) ಮಾತನಾಡುವ ಚಾತುರ್ಯ ; ವಾಕ್ಚಾತುರ್ಯ : ಬಾಯಿಯುಳ್ಳವನಾದರೆ ಬರದಲ್ಲಿಯಾದರೂ ಬದುಕಿಯಾನು (ಗಾದೆ).

**ಬಾಯಂ ಬಡಿ, ಬಾಯ ಬಡಿ** = ಇನ್ನೊಬ್ಬರಿಗೆ ಮಾತನಾಡಲು ಅವಕಾಶ ಕೊಡದಂತೆ ಮಾತಾಡು; ವಾದಿಸು : ಮಾದೇವನ ಪೊದ್ದ ಬಟ್ಟೆಯಂ ತಿಳಿಯದವರ್ ವೇದಗಳೊಳಗುಳ್ಳುದೆಲ್ಲಂ ಮಾದೇವನ ಚರಿತಮೆಂದು ಬಾಯಂ ಬಡಿವರ್ (ಸಮಶ. ಅನುಬಂಧ. I, ೩೬೪-೫೦) ; ಪೆಱರ ಬೈಗುಳಂ ಸೈರಿಸುವುದರಿಂದೊ ಪೆಱರೊಡನೆ ಬಾಯಂ ಬಡಿವುದರಿಂದೋ (ರವರ್ಮ. ೬-೮೦); ಬಲ್ಲಿದ ನೀನೆಂದು ಬಡವರ ಬಾಯ ಬಡಿಯದಿರೆಚ್ಚಱಿಕೆ (ಪುರಂದ. ೧-೧೬೦-೧). **ಬಾಯಂ ಬಿಡು, ಬಾಯ ಬಿಡು** = ೧. ಪ್ರಲಾಪಿಸು; ಅಸಹಾಯಕತೆಯಿಂದ ಹಲುಬು; ಹಳಹಳಿಸು : ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಱಿಂಗಳ್ಕಿ . . . ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ (ಕಂಕಥಾ. ೫-೯೮ ವ); ಸೇದೆವಟ್ಟು ಬಾಯಂ ಬಿಟ್ಟುಕಾ[ಪಟೀದು] (ಗದಾಯು. ೯-೨೦ ವ); ಆ ಯುವತಿ ಮೃತವಾಗೆ ಮಱುದಿನ ತಾಯಿ ತಂದೆಯರಳುತ್ತೊಱಲುತಂ ಬಾಯ ಬಿಡುತಂ ಕೊಂಡು ಬಂದೆಯ್ತಂದು (ಬಸವು. ೩೨-೪೨); ಬಾಯ ಬಿಟ್ಟುದು ಸೇನೆ ಕೌರವರಾಯನಾವೆಡೆ ದಳಕೆ ಬಲುಗೈನಾಯಕರು ಕೃಪ ಗುರುಸುತರು ಕೈಗೊಟ್ಟರೇ ಹಗೆಗೆ (ಕುವ್ಯಾ೪. ೧೨-೨೮). ೨. (ಅಭಿಲಾಷೆ ಪೂರೈಸುವುದನ್ನು) ನಿರೀಕ್ಷಿಸು : ಚಾದಗೆಯಂತಾಕಾಸವನಿಗೆ ಬಾಯಂ ಬಿಡುತ್ತುಂ (ರವರ್ಮ. ೧-೧೬೦); ಪಾರ್ಥಿವಶರಾಗ್ನಿಯಿಂ . . . ಎಮ್ಮನುಳುಹೆಂದು ಫಣಿಕುಲಂ ಬಾಯ ಬಿಡಲು (ಜೈಮಿಭಾ. ೨೪-೩೬). ೩. ಬೆರಗಾಗು ; ಆಶ್ಚರ್ಯಪಡು; ದಿಗ್ಭ್ರಾಂತಿ ಹೊಂದು : ಬೆಕ್ಕಸಂಬಟ್ಟು ಬಾಯಂ ಬಿಟ್ಟರ್ ಭೀಷ್ಮರ್ (ಕಮುದ. ೨೯೦ ಪ್ರಯೋ); ಬಲ ಬಾಯ ಬಿಡೆ ಚಿಗಿದುಬು ಕಡಿದುದು ಕರ್ಣನಂದನನ (ಕುವ್ಯಾ೪. ೨೦-೩೫). ೪. ಸ್ಪಷ್ಟವಾಗಿ ನುಡಿ ; ಪ್ರಕಟಪಡಿಸು: ಕಾಯವಳಿದರು ಅಂತರಂಗವ ಬಾಯ ಬಿಡರು (ನಳಚ. ೩-೨೩). ೫. ಬಿರಿ ; ಸೀಳು ; ಬಿರುಕು ಬಿಡು : ಅರಸ ಕೇಳಾಶ್ಚರ್ಯವನು ಗಜಪುರದೊಳಗೆ ನೆಲ ಬಾಯ ಬಿಟ್ಟುದು (ಕುವ್ಯಾಸ. ೧೫-೮೦). **ಬಾಯ ಕಟ್ಟು** = ಮಾತಿಗೆ ಸಿಕ್ಕಿಸು ; ಮಾತಿಗೆ ಕಟ್ಟುಬೀಳಿಸು : ಸೂರುಳಿಸಿ ನೆಱೆ ಬಾಯ ಕಟ್ಟಿ ಹಣವಂ ಕೊಳಲು ಕಲಿವುದೆಂದೊಬ್ಬ ಕುಂಟಣಿ ಮಗಳ ಬೋಧಿಸಿದಳು (ಸೋಮಕ. ೨-೪೦). **ಬಾಯ ಕಲ್ಲಿ** = ದನಗಳಂ ಬೆಳೆಗಳನ್ನು ಮೇಯದಂತೆ ನಿರ್ಬಂಧಿಸುವುದಕ್ಕಾಗಿ ಅವುಗಳ ಬಾಯಿಗೆ ಕಟ್ಟುವ ಹೆಣಿಕೆಯ ಬಲೆ ; ಬಾಯಿಕುಕ್ಕೆ : ದಾನಧರ್ಮ ಮಾಡಿ ಉಳಿದ ಹುಡುಗರ ಗಾದಿಯ ಕಾತಿಯಿಂದ ನಾವಿಬ್ಬರೂ ಹಗ್ಗ, ಬಾಯ ಕಲ್ಲಿಗಳನ್ನು ಮಾಡಿದ್ದೆವು (ಸ್ವತಿಚ. ೩೪೦). **ಬಾಯ ತುತ್ತು** = ಬಾಯಿಗೆ ಸೇರಬೇಕಾದ ಕಬಳ: ಆ ತಾಪಸಾಗ್ರ್ಯನ ಬಾಯ ತುತ್ತಿದನೀ ಪವನಸುತ ತಂದನಱಿಯದೆ (ಕುವ್ಯಾಅ. ೬೦೩. ೪-೨೨); ತುಡುಗುಣಿಗಳಿವದಿರು ನಭೋಗ್ರಕೆ ಸಿಡಿದು ಹವಿಗ್ಗೊಂಬಮರನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ತೊರರಾ. ೧-೧೧-೮). **ಬಾಯ ಬಡಕ, ಬಾಯ ಬಡಿಕ, ಬಾಯ ಬಡುಕ** = ಬಡಾಯಿ ಕೊಚ್ಚಿಕೊಳ್ಳುವವನು: ಬಾಯ ಬಡಕ[ಪಾಠಾಂ. ಬಾಯಿಬಡಿಕ]ರು ಬಗುಳಿದೊಡೆ ಹರಿಯಾಯಿತಕೆ ಪಾಸಟಿಯೆ (ಕುವ್ಯಾಸ. ೯-೪೬); ಬಾಯ ಬಡಿಕರು ಬಂದ ಬಣ್ಣಿಗೆಯೊಸಗಿ ಬಗುಳುವರು (ಕೃಷ್ಣಾಕಾ. ೦೪-೨೯); ಬಾಯ ಬಡುಕನದೆಂದಿರದೆ ಸಮರಾಯತದಿ ನೋಡೆನ್ನ ಭುಜಬಲದಾಯತದ ರಣಕೌಶಲವ ನೀನು (ಕೋಗಯು. ೦೮-೨೦). **ಬಾಯ ಬಡಾಯಿ** = ಜಂಬದ ಮಾತು : ಕೇರಿಯವರ ಮುಂದೆ ವೇಳೆ ಅವೇಳೆಯಲ್ಲಿ ಬರಿಯ ಬಾಯ ಬಡಾಯಿ ಹೊಡೆಯುತ್ತಿದ್ದರು (ಮೂರುದಾ. ೬೦). **ಬಾಯ ಬಿಯಗ, ಬಾಯ ಬೀಗ, ಬಾಯ ಬೀಯಗ** = ೧. ಮಾತನಾಡದಂತೆ ಮಾಡಿದ ತಡೆ,— ಕಟ್ಟು : ದೇವರ್ಕಳ ಬಾಯ ಬಿಯಗಮಂ ಕಳೆಯಿಸುವೈ (ಅವಂತಿ. ೧೩-೩೫). ೨. (ಹರಕೆಯನ್ನು ಹೊತ್ತು) ಬಾಯಿಗೆ ಚುಚ್ಚಿಸಿಕೊಳ್ಳುವ ತಂತಿಯ ಸಾಧನ : ಬೇವಿನುಡಿಗೆ ಬಾಯ [ಪಾಠಾಂ. ಯಿ] ಬೀಗದಿಂ ನಿನ್ನಡಿದಾವರೆಗಳಿಗೆಱಗುವೆನು (ಕುರಾಶಾಂ. ೨೩-೬೬). ೩. ಮಾತಿನಿಂದ ಹೇಳಲಾಗದುದು; ವಚನಾತೀತವಾದುದು: ನಿಗಮದ ಬಾಯ ಬೀಯಗವೀ ಮುಕುಂದನನಱಿವರಾರು (ಕುವ್ಯಾಸ. ೯-೪೬); ವೇದಶ್ರುತಿಯ ಬಾಯ ಬೀಯಗ . . . ಸಜ್ಜನಸಮಾಧಿಗಳ ಭೇದಕ್ಕೆ ನಿಲುಕವ ಶ್ರೀಕೃಷ್ಣರಾಯನ ಪಾದವ ಕೂರ್ತು ಪೇಳ್ಗತೆಯ (ಪೋಹತ. ೮-೧). **ಬಾಯ ಬೊಬ್ಬೆ** = ಕೂಗಾಟ ; ಕೇಕೆ : ನಾಯಕರ ಕಡೆನುಡಿವ ಬೈಗುಳ ಬಾಯ ಬೊಬ್ಬೆಯ ಕೈಯ ಹೊಯ್ಗಳ ದಾಱಿಗರಲೇ ಎನುತ ಮೂದಲಿಸಿದನು ತಮ್ಮೊಳಗೆ (ಕುವ್ಯಾ೪. ೨-೧೩) ; ಬಾಯ ಬೊಬ್ಬೆಯ ಬಿಱುಬುಗಳಲಡಹಾಯಿದೋಡುವ ನಿಖಿಳಮೃಗಸಮುದಾಯವನು ಸಂಹರಿಸುತಿರ್ದುದು ಶಬರಸಂದೋಹ (ತೊರರಾ. ೩-೩-೧೫). **ಬಾಯಲಿ ಬೆರಳನಿಡು** =

(ಶರಣಾಗತಿಯ ಸೂಚಕವಾಗಿ) ಬಾಯಲ್ಲಿ ಬೆರಳನ್ನಿಟ್ಟುಕೊಳ್ಳು : ಕೈಯ ಕೈದುವನಿಳುಹಿ ಬಾಯಲಿ ಬೆರಳನಿಟ್ಟುದು ವೈರಿಪಾಯದಳ (ಕುಮಾ‌ರವ್ಯಾ. ೩-೦೪). **ಬಾಯ ಲೆಕ್ಕ** = ಮನಸ್ಸಿನಲ್ಲಿಯೇ ಲೆಕ್ಕ ಮಾಡಿ, ಬಾಯಲ್ಲಿ ಉತ್ತರವನ್ನು ಹೇಳಬಹುದಾದ ಲೆಕ್ಕ ; ಲೇಖನಿ, ಬಳಪ ಮುಂತಾದುವುಗಳ ಸಹಾಯವಿಲ್ಲದೆ ಮಾಡುವ ಲೆಕ್ಕ ; ಮೌಖಿಕವಾದ ಲೆಕ್ಕ : ಕೇಂಬ್ರಿಜ್ಜಿನಲ್ಲಿ ಬಾಯ ಲೆಕ್ಕ ಕೇಳಿದ ಹಾಗೆ ರ್‍ಯಾಂಗ್ಲರ್ ಮಹಾಜನರು ನನಗೆ ತಿಳಿಸಿಲ್ಲ (ಗಾಳಿಪ. ೦೭೯). **ಬಾಯಲ್ಲಿ ಅಕ್ಕೀಕಾಳು ಹಾಕಿಕೊಳ್ಳು** = ಆಗಬೇಕಾಗಿದ್ದ ಕೆಲಸವಾಗದೆ ದೀರ್ಘನಿರೀಕ್ಷೆಯಲ್ಲಿ ಇರು : ನಾವೆಲ್ಲರೂ ಮುಂದೇನಾಗುವದೋ ಎಂದು ಬಾಯಲ್ಲಿ ಅಕ್ಕೀಕಾಳು ಹಾಕಿಕೊಂಡು ಕುಳಿತೆವು (ಮೇದಪು. ೯೪). **ಬಾಯಲ್ಲಿ ನೀರೂರಿಸು** = ಆಸೆ ಹುಟ್ಟಿಸು ; ಅಪೇಕ್ಷೆಯನ್ನುಂಟುಮಾಡು : ಅಂಬಾಸಮುದ್ರದ ಶಾಸನ . . . ಬಾಯಲ್ಲಿ ನೀರೂರಿಸುವಂಥ ಭಕ್ಷ್ಯ ಭೋಜ್ಯಗಳನ್ನು ಹೆಸರಿಸುತ್ತದೆ (ಶಾಸಗ.೩೬) **ಬಾಯಲ್ಲಿ ನೀರೂರು** = ಅಪೇಕ್ಷೆಯುಂಟಾಗು : ಆ ಕಾಲದಲ್ಲಿ ಕವಿಗಳು ಚಕ್ರವರ್ತಿಗಳ ಜೊತೆ ಕುಳಿತು ಊಟ ಮಾಡುತ್ತಿದ್ದರು, ಆದರ ನೆನಪಾದಾಗಲೆಲ್ಲಾ ಬಾಯಲ್ಲಿ ನೀರೂರುತ್ತದೆ (ಅಕ್ಷರಪು. ೯೩). **ಬಾಯಾರೆ** = ೧. ಬಾಯಿಗೆ ತೃಪ್ತಿಯಾಗುವಂತೆ; ಬಾಯಿ ತುಂಬ; ಮಚೋಕ್ತಿಯಲಿ ಬಾಯಾರೆ ನುತಿಸಿಸುತಿಸಿ (ಚಿತ್ರ. ೬-೨೬) ; ಶಾಸ್ತ್ರಿಗಳೂ ಹಿರಿಯರೂ ಆತನಿಗೆ ಬಾಯಾರೆ ಚುಟುಕಿಯಾಡಿದರು (ಗೊರೂರುಕಾ. VIII, ಪುಟ್ಟಮ್ಮ). ೨. ಬಾಯಿಬಿಟ್ಟು; ಸ್ಪಷ್ಟವಾಗಿ ; ಖಚಿತವಾಗಿ : ನಾನು ಬಾಯಾರೆ ಕೇಳುವುದಕ್ಕಿಂತ, ಆತ ಸಂತೋಷದಿಂದ ತಾನಾಗಿ ಕೊಡುವುದನ್ನು ಕೊಂಡರೆ ಭೂಷಣ (ಚಾರುದಾ. ೨೦೦). **ಬಾಯಿ ಕೆಡು** = (ರೋಗ ಮೊದಲಾದುವುಗಳ ಪರಿಣಾಮವಾಗಿ) ನಾಲಗೆಗೆ ರುಚಿ ತಿಳಿಯದಂತಾಗು : ಬಾಯಿ ಕೆಟ್ಟು ಹೋಗಿ ತಿನ್ನಲು ಏನೂ ಸೇರುವುದಿಲ್ಲ (ರೂಢಿ). **ಬಾಯಿಗೆ ಬೀಗ** = ಮಾತಿಗೆ ಹಾಕಿದ ತಡೆ,–ಪ್ರತಿಬಂಧ : ಬಾಯಿಗೆ ಬೀಗವಾಯಿತಲ್ಲ ಖಳರ (ವೈಕುಂವ. ೨-೨೦); ಅವಳ ತಾಯಿ ಎಷ್ಟೋ ಸಲ ಗದ್ದರಿಸಿ ಅವಳ ಬಾಯಿಗೆ ಬೀಗ ಹಾಕುತ್ತಾಳೆ (ಇಶ್ವಕ. ೩೨). **ಬಾಯಿಗೆ ಬೀಳು** = ೧. ತುತ್ತಾಗು ; ಬಲಿಯಾಗು : ನಾನು . . . ತೋಳಗಳ ಬಾಯಿಗೆ ಬೀಳುತ್ತೇನೆ (ಕಾವ್ಯಸ. ೭); ಬಾಧೆಪಡುವ ಬಾಳಿಗಿಂತ ಬಕನ ಬಾಯಿಗೆ ಬೀಳೋದುತ್ತಮ (ಗಾದೆ). ೨. ಜನರ ನಿಂದೆಗೆ ಗುರಿಯಾಗು ; ಜನಾಪವಾದಕೆ ಒಳಗಾಗು : ಇದ್ದುದನ್ನು ಇದ್ದಂತೆ ಹೇಳಲು ಹೋಗಿ ಅವನು ಎಲ್ಲರ ಬಾಯಿಗೆ ಬೀಳುತ್ತಾನೆ (ರೂಢಿ). **ಬಾಯಿಗೆ ಮಣ್ಣು ಬೀಳು** = ಏನೂ ಉಳಿಯದಿರು ; ಎಲ್ಲವೂ ಹಾಳಾಗು : ಇನ್ನು ನನ್ನ ಜೀವನದ ಬಾಯಿಗೆ ಮಣ್ಣು ಬಿದ್ದು ಹೋಗುವುದು (ಗೆನ್ನಬೀ. ೧೭೮). **ಬಾಯಿಗೆ ಮಣ್ಣು ಹಾಕು** = ಪೂರ್ತಿಯಾಗಿ ಗತಿಗೆಡಿಸು ; ನಿರ್ಗತಿಕಸ್ಥಿತಿಗೆ ಇಳಿಸು : ಇದ್ದದ್ದನ್ನೆಲ್ಲಾ ಲೂಟಿ ಮಾಡಿ, ಅವನ ಬಾಯಿಗೆ ಮಣ್ಣು ಹಾಕಿದ (ರೂಢಿ). **ಬಾಯಿಗೆ ಹಾಕು** = ಲಂಚ ಕೊಡು : ಆ ಗುಮಾಸ್ತನ ಬಾಯಿಗೆ ಹಾಕದೆ ಈ ಕೆಲಸ ಆಯಿತು (ರೂಢಿ). **ಬಾಯಿಯಿಲ್ಲದವ** = ಅಗತ್ಯ ಬಿದ್ದಾಗ ತನ್ನ ಅಭಿಪ್ರಾಯವನ್ನು ತಿಳಿಸಲಾಗದವನು : ಈ ಕಾಲದಲ್ಲಿ ಬಾಯಿಯಿಲ್ಲದವ ಬದುಕಲು ಸಾಧ್ಯವಿಲ್ಲ (ರೂಢಿ). **ಬಾಯಿ ಹಾಕು** = ೧. ತಿನ್ನುವುದಕ್ಕೆಂದು ಬಾಯಿಯಿಡು : ಗಬಕ್ಕಂತ ಸಿಂಹ ಕರುಳಿಗೆ ಬಾಯಿ ಹಾಕೋ ಹಾಗೆ ಒಂದೇ ಉಸಿರಿಗೆ ಆ ಬೆತ್ತ ಎಳಕೊಂಡು . . . ತುಕ್ಡ ತುಕ್ಡ ಮಾಡಿ ಹಾಕಿದ್ಲು (ಬಾಗಿವ. ೪೦) ; ಹಸು ಬಂದು ಸಸಿಗೆ ಬಾಯಿ ಹಾಕಿತು (ರೂಢಿ). ೨. ಬೇರೆಯವರ ಮಾತಿನಲ್ಲಿ ಮಧ್ಯೆ ಪ್ರವೇಶಿಸು ; ಬೇರೊಬ್ಬರ ಮಾತಿನಲ್ಲಿ ತಲೆ ಹಾಕು,—ತೂರಿಸು : ಬೇರೊಬ್ಬನು ಮಾತಾಡುವಾಗಲೂ ಮಾತಾಡುವ ಅಪೇಕ್ಷೆ ತೋರಿಸುವಾಗಲೂ ನಾವು ನಡುವೆ ಬಾಯಿ ಹಾಕಬಾರದು (ಮುಂಬಯಿ. ೪-೯೯); ಈವರೆಗೆ ತುಟಿ ತೆರೆಯದಿದ್ದ ವೀರಣ್ಣ ಈಗ ನಡುವೆ ಬಾಯಿ ಹಾಕಿದ (ಹಾಹುತ್ತ. ೯೩). **ಬಾಯ್ಗೆವರ್, ಬಾಯಿಗೆ ಬರು, ಬಾಯ್ಗೆ ಬರ್** = ೧. ಮಾತಿನಲ್ಲಿ ಹತೋಟಿಯಿಲ್ಲದಿರು : ಈ ಪಾರ್ವಂಗಕ್ಕಟ ಮೆಯ್ಯೊಳೊಂದು ಮರುಳುಂಟಕ್ಕುಂ ಎಂದು ಬಾಯ್ಗೆ ವಂದುದನೆ ನುಡಿಯೆ (ಶಂಕಥಾ. ೬-೬೨ ವ); ಮಹಾತ್ಮನ ವಚನಕ್ಕುತ್ತರಮಂ ಕುಡಲಾಱದೆ ಬಾಯ್ಗೆವಂದಂತೆ ನುಡಿದಪಂ (ರಘುನಾಥ. ೯-೦೩೨) ; ಹಿಂದೆಗಳೆಹುವನಿವನು ಬಾಯಿಗೆ ಬಂದ ಪರಿಯಲಿ (ಕುಮಾ‌ರಕ. ೦-೦೦) ; ಕಾಗೆ ಬಾಯ್ಗೆ ಬಂದುದಂ ಗಟಪಿದೊಡೆ (ಶಂಕಶಂ. ೦೪೪-೮೦) ; ಬಾಯ್ಗೆ ಬಂದ ತೆಱದಿಂ ಪೆಱರೆಂದೊಡೆ ಕೇಳ್ದು (ಶಂಚಾಮೂ. ೦೩-೬೨). ೨. ಕಂಠಪಾಠವಾಗಿರು ; ಉರುಹೊಡೆದಿರು : ಸಂತರ ಎಲ್ಲ ಗೀತೆಗಳೂ ಬಾಯಿಗೆ ಬರುತ್ತವೆ (ದೂರಸ. ೬೩). ೩. ದಕ್ಕು; ಲಭಿಸು : ಕೈಗೆ ಬಂದದ್ದು ಬಾಯಿಗೆ ಬರಲಿಲ್ಲ (ಗಾದೆ). **ಬಾಯ್ಮಾಡು, ಬಾಯಿ ಮಾಡು** = ೧. ಪ್ರತಿಜ್ಞೆ ಮಾಡು ; ಶಪಥಮಾಡು : "ಬಾಯ್ಮಾಡು (ಬಾಯ್ + ಮಾಡು)—ಪ್ರತಿಜ್ಞಾಯಾಂ" (ಕಪಾಧಾ); ಅಶ್ವತ್ಥಾಮಂ . . . ಹಸ್ತಿನಪುರದೊಳ್ ಪಾಂಡವರ್ದರೆ ಗೆತ್ತುಮಲ್ಲಿಗೆ ನಿಟ್ಟಾಲಿಯಾಗಿ ದಾಟಿಯನಿಟ್ಟು ಮುಟ್ಟೆವಂದು ಬಾಯ್ಮಾಡಿ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಸರಂ ಕೊಂದು (ಶಂಕಥಾ. ೦೩-೦೦೬ ವ). ೨. ಕೂಗಾಡು ; ಗಲಾಟೆ ಮಾಡು : ಸುಮ್ಮನೆ ಬಾಯಿಮಾಡಿ ಏನಾಗಬೇಕಾಗಿದೆ ? (ಕರುಹ. ೨೦೯). **ಬಾಯ್ನಾಯ್** = ಮುತ್ತು; ಚುಂಬನ: ಬಾಯ್ನಾಯೊಳಾವಟ್ಟಱೊಂದೊದವಿ ತಂಬುಲಮಂ ಕೊಳಲ್ ಮಱೆದು ನೀನಿರ್ದಂದಮೇಂ (ಅಧಿಪು. ೩-೨೩) ; ಹೃದಯ ಮನಿತ್ತಪನಾ ಸಮಯದೊಳೆನೆ ಬಾಯ್ನಾಯೊಳಿತ್ತು, ತಂಬುಲಮನಲಂಪೊದವಲ್ಕೆ ಪರಸಿ ಬೀಟಿಕ್ಕೊಳಿಸಿದನೆಂತಾನುಂ ನಿಜಾತ್ಮಜನನಧಿರಾಜಂ (ಕಾದಂಬ. ೩೦೦). [ದೇ. ‖ ತಮಿ. ಕೋತ. ಪರ್ಜಿ. ವಾಯ್; ಮಲ. ವಾಯ್, ವಾ ; ತುಳು. ಬಾಯಿ; ಕೊಡ. ಬಾಯ್; ತೆಲು. ವಾಯಿ; ಕುರುಖ್. ಬಾಈ ; ಬ್ರಾಹುಈ. ಬಾ]

**ಬಾಯಕ್ಕಿ** (ನಾ). ಬಾಯಿಗೆ ರುಚಿಯಾದ ಆಹಾರ; ಮೃಷ್ಟಾನ್ನ (?): ಬಾಯಕ್ಕಿಯ ಬೇಡುವವರೆಲ್ಲರೂ ಬಡವಾಯಿವಂತರ ನೋವು ಬಲ್ಲರೆ ಹಿ[ಶಾಕಾಂ. ಹ]ಸಿವ ಪಿಹಂಗ ಪಶುವಿನ ನೋವ ಬಲ್ಲುದೆ (ಕೂಶ್ವಸಂ. ೩೦೬-೦೪).        [ಬಾಯ್ + ಅಕ್ಕಿ₁]

**ಬಾಯನ, ಬಾಗಿನ, ಬಾಯಿನ** (ನಾ). ಮದುವೆ, ಹಬ್ಬ, ವ್ರತ ಮುಂತಾದ ಶುಭಪ್ರಸಂಗಗಳಲ್ಲಿ ಮುತ್ತೈದೆ, ಬ್ರಾಹ್ಮಣ ಮೊದಲಾದವರಿಗೆ ಕೊಡುವ (ಆಹಾರಪದಾರ್ಥ ಇತ್ಯಾದಿಗಳ) ಕಾಣಿಕೆ : ಉಪಾಯನ: ಬಲಿ ಬಾಯನಂಗಳುಂ ಮಂಗಲತೂರ್ಯ ಮುಮೆಸೆಯೆ . . . ಗೋಪಕಾಂತೆಯರ್ ನೆರೆದಾಗಳ್ (ಜಗಂ. ೩-೨೭); ಸುತನಂ . . . ವಿಜಯಾವತೀಮಹಾಸತಿ ಪಡೆದಳ್ ಸಮಂತಿರದೆ ಬರ್ಪುದು ಬಾಯನಕೆ (ಕುಸುಮಪು. ೬-೦೦೬); ಮುನಿಕಾಮಿನಿಯರ್ಗೆಂದು ಕಟ್ಟಿದ ಬಾಯನಂಗಳಂ ಮಱೆತನಲಾ ! (ರಾಜಾಶ್ವ. ೨೮-೨೩). **ಬಾಗಿನ** : ಹರನರಸಿಗೌರಿಗೆ ಸಮರ್ಪಿಸಿ ಹರುಷದಿಂ ಬಾಗಿನವನೀಯೆಂದುಱುವ ವೇದವ್ಯಾಸಮುನಿ ಗಾಂಧಾರಿಗಱುಹಿದನು (ಸಪುಶ. ೨೦-೬); ಬಾಗಿನಕ್ಕಾಗಿ ಚಕ್ಕುಲಿ ಉಂಡೆಗಳು ಮುಂತಾದ್ದು ತುಂಬಾ ಇತ್ತು (ಶೀಕೈಸಂ. II, ೭) ; ಅರಮನೆಯಿಂದ ಮೊರದ ಬಾಗಿನ ತಗೆಸಿಕೊಂಡು ಬಂದಿದ್ದೇನೆ (ಇಬ್ಬದು. ೬೪). **ಬಾಯಿನ** : ಮಣಿಮಯಭಾಜನಂಗಳೊಳ್ ತೆಕ್ಕನೆ ತೀವಿದ ಪಂಚರತ್ನದ . . . ಕಪ್ಪುರದ ಪಳಿಕಿನ ಬಾಯಿನಂಗಳಂ ಬೀಱು (ಅಧಿಪು. ೪-೩೪ ವ); ರನ್ನದ ಬಾಯಿನಕ್ಕೆ ಪಲವಂದದ ಚಂದದ ಸೀರೆಗೆನ್ನವರ್ತನ್ನವರೆನ್ನದಿತ್ತು (ಮಲ್ಲಿಪು. ೪-೦೦೪) ; ಕೂಡಲಸಂಗಮದೇವರಿಗೆ ಚೀಲಾಳನೆಂಬ ಬಾಯಿ[ಶಾಕಾಂ. ೧]ನವನಿಕ್ಕಿದರೆ ಹೇಳಾ (ಬಸವ. ೦೩೨) ; ಶಾಕಿನಿಯರನು ಕರೆಯಿಸಿ ನಿನ್ನ ಕಯ್ಯಲಿ ಧುರದೊಳಗೆ ಬಾಯಿನವ ಕೊಡಿಸುವೆನು (ಕುವ್ಯಾಸ. – ೦೦೩.

೧೬-೪೬). 'ಉಪಾಯನ' ನೋ.

[< ಸಂ. ವಾಯನ. / ಪ್ರಾ. ವಾಯಣ. / ತುಳು. ಬಾಯನ, ವಾಯನ ; ತೆಲು. ವಾಯನ]

**ಬಾಯುರು** 'ಬಾಯಾಱು₂' ನೋ.

**ಬಾಯಳಿ** 'ಬಾಯಟಿ' ನೋ.

**ಬಾಯಱಿಕೆ** 'ಬಾಯಾಱಿಕೆ' ನೋ.

**ಬಾಯಱು** 'ಬಾಯಾಱು₁' ನೋ.

**ಬಾಯಟಿ**, ಬಾಯಳಿ (ಕ್ರಿ). ೧. ಬಾಯಿಯುಹರಿದು ಹೋಗು, — ಸೀಳಿ ಹೋಗು : ಆಯದ ನೀರೊಳಗೆ ತನ್ನನಡಸಿದ ನೆಗಟಿಂ ಬಾಯಟಿ ವಿನಮಿಸಿಸಿಯುಮರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟ್ದಂ (ಪಂಪಭಾ. ೨-೩೦). ೨. ಬಾಯಿ ಸೋಲು ; ಬಾಯಿ ಬಿದ್ದುಹೋಗು: ಸಂಬೋಧನೆ ದೀರ್ಘೋಕ್ತಿಯೊಳಿಂಬಾಗಿರೆ ಬರ್ಕುಮದನೆ ಪಲವೆಡೆಗಳೊಳೆಂದುಂ ಬಲ್ಲವರಿಡದಿರ್ಕಾದಂ ಬಾಯಟಿದೂಳ್ವೊಲ್ ಕರಂ ವಿರಸತರಂ (ಕವಿರಾ. ೨-೨೩) ; ಭಾನುಮತಿ ಬಾಯಟಿದು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು (ಪಂಪಭಾ. ೭-೩೩ ವ) ; ಹಾಹಾರವದಿಂ ಶೂಲಾಗ್ರದೊಳ್ ಬಾಯಟಿದೊಳಱಿವಿನಂ ಕೊಲ್ವುದಂ ಕನ್ನೆ ಕಂಡಳ್ (ಸುಕುಮಾ. ೬-೩೫). ೩. ಗೋಳಾಡು ; ದುಃಖಿಸು : ಇಂತುಟು ಸಂಸೃತಿಧರ್ಮಮೇಕೆ ಬಾಯಟಿವುದದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ (ಅನಂತ. ೩-೫೩); ತರಳಕೆ . . . ಕಾದಂಬರಿ ಯನುಟಿದೆತ್ತ ಪೋಪೆಯೆಂದು ಬಾಯಟಿದು ಪಳವಿಸುತ್ತಮಿರ್ದಳ್ (ಕಾದಂಉ. ೩೭೬) ; ಗಾಂಗೇಯರ ಮಾತುಗೇಳದಟಿದಂ ಕುರುರಾಜ ನದರ್ಕೆ ದುಃಖದಿಂ ಬಾಯಟಿಯಲ್ಕೆವೇಡ (ಗದಾಯು. ೧೦-೧೨). **ಬಾಯಳಿ** : ೩. ಕಾವುದೆಂದೊಱಲುತ್ತುಂ ಬಾಯಳಿವ ಮದನನಂ ಕಾತ್ಯಾಯನಿ ದಯೆ ಯಿಂದೆ ನೋಡಿ ನಯದಿಂ ನುಡಿದಳ್ (ಗಂಕ. ೮-೦೬) ; ಒರ್ವಬಳಿ . . . ಮೊಱೆಯಿಟ್ಟೊಱಲಿ ಬಾಯಳಿಯುತ್ತಿರ್ದಳೆ (ಶಾಪಸಂ. ೮-೩೨). ೪. ಕಿರಿಚು; ಬೊಬ್ಬೆ ಹಾಕು : ಸತ್ಯಶ್ರೀಯನು ಒಳಗಱಿಯದೆ ಪೊಱಗಱಿಯದೆ ಕುಕವಿ ಗಳಿಳಿಕೆಯ್ವುತಿಹರು ಬಾಯಳಿದು (ಶರಣಸಾಂ. ೦-೭೭). ೫. ಬಾಯಿಬಿಡು ; ಬಾಯಿ ತೆರೆ : ಆ ಮೃಗನೇತ್ರೆಯು ರೂಪಳವ ಬಣ್ಣಿಸಲು ಬಾಯಳಿದು (ಶರಣಸಾಂ. ೨೯-೦೦೭) ; ಪೋಯೆಂದು ಬಂದೆಮ್ಮ ಕೊರಳ ತಕ್ಕಿಸಿಕೊಂಡು ಬಾಯಳಿದುಱು ಹಲುಬುವರು (ಭರತ. ೬೩-೯೭) ; ಮದಮುಖನೆ ಬಾಯಳಿದು ಪೇಳಲೇಂ ನಮ್ಮಂಗಮಂ ಪರಿಕಿಸು (ಘೋರಾಸು. ೨೩-೨೪). ೬. (ನಾಚಿಕೆ ಅಥವಾ ಸಂಕೋಚದಿಂದ) ಮಾತಾಡಲಾಗದಿರು ; ಮಾತು ತೋಚದಿರು : ತಲೆಗುತ್ತಿ ಕಡುನಾಣ್ಚಿ. . .ಭೂಪಾದಿಗಳ್ ಬಾಯಳಿವುತಿರಲು (ಕದ್ಮಗಾ. ೬-೬೯). [ಬಾಯ್ + ಅಟಿ₁]

**ಬಾಯಾಚಾರ** (ನಾ). ಹೊರಗಿನ ನಡವಳಿಕೆ ; ಬೂಟಾಟಿಕೆ ; ಕಪಟಾ ಚರಣೆ : ತಾವು ಕುಂಪಣಿಗೆ ಬಾಯಾಚಾರ ದೋಸ್ತಾರರಾದ್ದರಿಂದ, ಇದಕ್ಕಿಂತ ಅಧಿಕವಾಗಿ ಬರದು ಕಳುಹತಕ್ಕದಿಲ್ಲವ್ವಷ್ಟೆ (ರಾಜೇಂದ್ರ. ೬೭); ತಾವು ನಾವು ದೋಸ್ತಾರರಾದ್ದರಿಂದಾ ಬಾಯಾಚಾರಕ್ಕೆ ಸಲುವಾಗಿ ಬಹಳ ಫಲವಾಗಿ ಇರುವಂಥಾದ್ದು ವರ್ತನೆ ಆಗಿ ಇರಬೇಕು (ರಾಜೇಂದ್ರ. ೦೬೦).

[< ಸಂ. ಬಾಹ್ಯಾಚಾರ]

**ಬಾಯಾಡಿಸು** (ಕ್ರಿ). ಆಸ್ವಾದಿಸು ; ರುಚಿ ನೋಡು : ಸತ್ಯ ಲೋಕದಲಿ ತ್ರಿದಶರುಱಿ ಬಾಯಾಡಿಸಿದರಗ್ಗದ ಧ್ರುವಾದಿಗಳನು (ಕುಮಾರ. ೭-೩೪); ಬಾಯಾಡಿಸುತ ಬಣ್ಣಿಸುತ ಕೈಗಳ ನೀಡಿ ಬಹುವಿಧಭಕ್ಷ್ಯ ಭೋಜ್ಯಂ ಗಳನು ಜಠರದಲಿ ಕೂಡಿದನು ಗೋಪರಿಗೆ ಹರುಷವ ಮಾಡಿದನು (ಶಿಭಾಗ. ೧೦-೨೨-೨೮); ಚಿರೋಟಿಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲ ರಿಗೂ ಹಂಚಿದರು. ಇಂಥ ಸಂದರ್ಭದಲ್ಲಿ ಇವನ್ನು ಬಾಯಾಡಿಸುವುದರಿಂದ ಬಹಳ ಪ್ರಯೋಜನವಿದ್ದಿತು (ಶೂಲಾಪ. ೦೨೩). [ಬಾಯಾಡು + — ಇಸು₃]

**ಬಾಯಾಡು** (ಕ್ರಿ). ಆಹಾರವನ್ನು ಅಗಿ, — ಜಗಿ : ಬಾಯಾಡಿದರೆ ಕೈಯಾಡೀತು (ಗಾದೆ). 'ಬಾಯಾಡಿಸು' ಪರಾ. [ಬಾಯ್ + ಆಡು₁]

**ಬಾಯಾನ್** (ಕ್ರಿ). ೧. ಬಾಯಿ ನೀಡು ; ಬಾಯೊಡ್ಡು : ಪಕ್ಕಿ ಸೋವ ವರಸ್ತ್ರೀಯರ . . . ತಂಬುಲಕೆ ಬಾಯಾಂಪಂದದಿಂ ಬಂದು ಪಾಯ್ವುವು ಕೀರಾಳಿಗಳಲ್ಲಿ ಪಾಮರರವಧೂಬಿಂಬಾಧರಕ್ಕಾವಗಂ (ಧರ್ಮಾಪಾ. ೨-೨೯). ೨. ಆಸೆ ಪಡು ; ಹಾತೊರೆ : ನಮ್ಮ ಉದಾರಾತಿಥ್ಯಕ್ಕೆ ಬಾಯಾಂತು ಹರಿತರುತ್ತಿರುವ ಆ ತಿರಿಕೂಳ ತೆಲುಂಗರೊಡೆಯನಿಗೆ ಉತ್ತರವೇನು (ಮಂತ್ರಶ. ೦೯-೦೪). [ಬಾಯ್ + ಆನ್₁]

**ಬಾಯಾರ್**, ಬಾಯಾರು₁ (ಕ್ರಿ). ೧. ಕೂಗಾಡು ; ಬೊಬ್ಬಾಟ ಮಾಡು ; ಆರ್ಭಟಿಸು : ವರರುಚಿಭಟ್ಟನಂ ಪಲರ್ ದುಷ್ಟರೊಂದಾಗಿ ಪೊಲೆಯನೆಂದು ಗೆಲೆ ಬಾಯಾರ್ವರೆಂದೊಡುಟಿದರಳವಾವುದು (ಪಂಪಶಂ. ೦೪೬-೦೩); ಧರ್ಮ ಬುದ್ಧಿ ತತ್ಕೂರ್ಮಗಿಡಲ್ಕುಡಿದು ನೀಂ ಗೆಲೆ ಬಾಯಾರ್ದು ಪೋಗಲ್ವಡೆಯೆ ವಿಚಾರಂಗೆಯ್ವಂ (ಪಂಪಶಂ. ೦೭೦-೮). ೨. ಆಕ್ರಂದಿಸಂ ; ಪ್ರಲಾಪಿಸಂ ; ರೋದಿಸು : ಗರಳಭಯದಿಂದೆ ಬಾಯಾರ್ವರಂ ಚೀರ್ವರಂ . . . ಚಂದ್ರ ಚೂಡಂ ಕಂಡನು (ಜಪು. ೨೨-೦೮); ನಡೆಗೊಳಲ್ ಕಂಡು ಬಾಯಾರ್ವಳಂ ಚೀರ್ವಳಂ . . . ಭರತಾವರಜನಗಲ್ದು ಅಡಿಗಡಿಗೆ ತಿರುತಿರುಗಿ ನೋಡುವಂ ಬಾಡುವಂ (ಕೈಬಿಭಾ. ೦೯-೩೦). **ಬಾಯಾರು₁** : ೩. ಬಾಯಿಬಡಿ ; ಅಲ್ಲಗಳೆ : ಬೆಟ್ಟಕ್ಕೆ ಬೇಗೆಯುಕ್ಕಿದನಿವಂ ಸಾಲವಂ ಕೊಟ್ಟುದಿಲ್ಲೆಂದು ಬಾಯಾರಿದನಿವಂ . . . ಬಟ್ಟೆಯಂ ಬಡಿದು ಬಾಳಿದನಿವಂ (ಜಪು. ೩೬-೩೭).

[ಬಾಯ್ + ಆರ್₁]

**ಬಾಯಾರಿಕೆ** 'ಬಾಯಾಱಿಕೆ' ನೋ.

**ಬಾಯಾರು₁** 'ಬಾಯಾರ್' ನೋ.

**ಬಾಯಾರು₂** 'ಬಾಯಾಱು₁' ನೋ.

**ಬಾಯಾಲ್** (ಕ್ರಿ). ಬಾಯಿಗೆ ಬಂದದ್ದು ಆಡು ; ಮನಸ್ವಿಯಾಗಿ ಮಾತನಾಡು : ಕಂಡುದ ನುಡಿದೆನು ಸ್ತುತಿಯೆನ್ನದಿರು ಲೇಸ ಕಂಡು ಬಾಯಾಲ್ವನು ಕವಿಯೇ (ಭರತ. ೨-೬೨). [ಬಾಯ್ + ಆಲ್]

**ಬಾಯಾಳಿ** (ನಾ). ಅತಿಯಾಗಿ ಮಾತನಾಡುವ ವ್ಯಕ್ತಿ: 'ಬಾಯಾಳಿತನ' ಪರಾ. [ದೇ.॥ ತಮಿ. ವಾಯಾಟ ; ತುಳು. ಬಾಯಾಳಿ, ಬಾಯಾಡಿ]

**ಬಾಯಾಳಿತನ** (ನಾ). ಅತಿಯಾಗಿ ಮಾತಾಡುವ ಸ್ವಭಾವ : ಅವಳು ಅತಿಕೋಪಸ್ವಭಾವವುಳ್ಳವಳೂ ಬಾಯಾಳಿತನವುಳ್ಳವಳೂ ಆದುದರಿಂದ . . . ಅವಳನ್ನು ಗಯ್ಯಾಳಿಗೌರಿಯೆಂದು ಕರೆಯುತ್ತಿದ್ದರು (ಕಥೆ. ೪೪).

[ಬಾಯಾಳಿ + — ತನ]

**ಬಾಯಾಱಿಕೆ**, ಬಾಯಱಿಕೆ, ಬಾಯಾರಿಕೆ (ನಾ). ೧. ನೀರಿಗಾಗಿ ಬಾಯಿ ಒಣಗುವುದು, — ಗಂಟಲು ಒಣಗುವುದು ; ತೃಷೆ ; ನೀರಡಿಕೆ : ದೇಶಾಂತ್ರಿಯಾದವ ತಿಗುಣಿ ಚಿಕ್ಕುಟ ಪಸಿವು ಬಾಯಾಱಿಕೆ ಗಂಜಿದರೆಂತಹುದು (ಶಿವರ. ಹ. ೩೬೭-೦೪) ; ಮಗಮಗಿಪ ಪರಿಮಳವನಿಕ್ಕ ಲದು ನವ್ಯೋದಕಂ ಬಾಯಾಱಿಕೆ[ಪಾಠಾಂ. ಯಱಿಕೆ, ಯಱಿತೆ]ಯಂ ಕೆಡಿಪುದು (ಸೂಶಕಾ. ೨-೯೩). **ಬಾಯಱಿಕೆ** : ೧. ಬಾಯ್ದೆಱೆಯುನೊಲ್ದು ಕರ್ಮಂಕಿ ಕರ್ಮಂಕಿ ಪೀರ್ದು ಪೀರ್ದೊಡನಡಸಿರ್ಪ ಬಾಯಱಿಕೆಯಂ ತವಿಪೆಂ ಸವಿ ಪೆಂಪುಗೊಂಬಿನಂ (ಜಕಿವಿ. ೬-೨೦೨). **ಬಾಯಾರಿಕೆ** : ೧. ತೃಷ್ಣೆಯೆಂದೊಡಂ ದಾಹಮೆಂದೊಡಂ ಬಾಯಾರಿಕೆಯೆಂದೊಡಂ ನೀರಡಿಕೆ ಯೆಂದರಿವುದು (ಸಕಪ್ರ. ೨೮೨); ಬಹಳ ದೂರ ನಡೆದು ಬಂದಿದ್ದೀಯೆ. ನಿನಗೆ ಬಾಯಾರಿಕೆಯಾಗಿರಬೇಕು (ದೇಪೀಠಾ. ೦೦) ; ಬಾಯಾರಿಕೆ ಬಂದಾಗ ಬಾವಿ ತೋಡಿದ ಹಾಗೆ (ಗಾದೆ). ೨. ನೀರಡಿಕೆಯನ್ನು ಹಿಂಗಿಸುವ (ಎಳನೀರು, ಪಾನಕ ಮೊದಲಾದ) ಪಾನೀಯ ಅಥವಾ ಬೆಲ್ಲದೊಡನೆ ಕೊಡುವ

ನೀರು ಇತ್ಯಾದಿ : ನಾರಾಯಣನು . . . ಒಂದು ಲೋಟ ಬಾಯಾರಿಕೆ ಯನ್ನು ತಾನೇ ತಂದು ಕೊಟ್ಟನು (ಮುಂಗಾರು. ೬೪) ; ಬಂದವರಿಗೆ ಬಾಯಾರಿಕೆ ಕೊಡುವುದು ಬೇಡವೆ ? (ದೇವಹೂ. ೧೬೦) ; ಆತ ಬಂದಷ್ಟು ಹೊತ್ತು ಅಲ್ಲೇ ವಿರಮಿಸಿದ. ಬಾಯಾರಿಕೆ ಕೇಳಿದ (ಮೂಕಜ್ಜ. ೩೩).

[ ಬಾಯಾಱು$_1$ + — ಇಕೆ. / ತುಳು. ಬಾಯಾರಿಗೆ ]

**ಬಾಯೂಟಿಸು** (ಕ್ರಿ). ಬಯಕೆಯನ್ನು ಹುಟ್ಟಿಸು : ಆತ್ಮೇಶ್ವರನ ದಿಟ್ಟಿಗೆ ರೂಹುಗಾಣಿಸಿ ಬಾಯಾಱಿಸುತೆ ಬಾಣತಿರೂಹಿಂದೆ ಬಂದಳು ಹರಿನೀಲವೇಣಿ ತೊಟ್ಟಿಲ ಕಟ್ಟುವೆಡೆಗೆ (ನೋಹತ. ೧೬-೯೭). [ಬಾಯಾಱು$_1$ + — ಇಸು$_3$]

**ಬಾಯೂಱು$_1$**, ಬಾಯಱು, ಬಾಯ್ಯಾರು$_2$ (ಕ್ರಿ). ೧. ಬಾಯಿ ಒಣಗು ; ನೀರಡಸು ; ದಾಹವುಂಟಾಗು : ಅರಗಿನ ಪುತ್ಥಳಿಯನುರಿ ಕೊಂಡಡೆ ಉದಕ ಬಾಯಾಱಿ ಬಳಲುತ್ತಿದೆ ಅಗೆಯಿಂ ಭೋ ಭಾವಿಯನಗೆಯಿಂ ಭೋ (ಅವತಂ. ೬-೩೦); ಬಾಯಾಱಿತು ಎಂದು ಬಾವಿನೀರಿಗೆ ಪೋದೆ ಬಾವಿಲಿ ಜಲ ಬತ್ತಿ ಬಱಿದಾಯ್ತು (ಶ್ರೀರಂಗ. ೪-೬೩-೦). ೨. ಹಂಬಲಿಸು ; ಹಾರೈಸು ; ತೀವ್ರವಾಗಿ ಅಪೇಕ್ಷಿಸು : ಚೆನ್ನಮಲ್ಲಿಕಾರ್ಜುನಯ್ಯ ಬಂದಾನೆಂದು ಬಟ್ಟೆಗಳ ನೋಡಿ ಬಾಯಾಱುತ್ತಿಹೆನು (ಮಹಾದೇ. ವ. ೦೪೦-೩೨೦) ; ನೂಱು ಜನ್ಮವ ತಿರುತಿರುಗಿ ಬಾಯಾಱಿ ಕಾವಿಸಲೀತನಂದದ ನೀಱಿರುಂಟೇ ನಳಿನ ಭವ ನಿರ್ಮಿಸಿದ ಸೃಷ್ಟಿಯಲಿ (ಕೊರಂ. ೩-೩-೩೬). ೩. ಗಾಬರಿ ಯಾಗು ; ದಿಗಿಲುಗೊಳ್ಳು : ಬಾಯಾಱದಿರಿ ಕಳ್ಳೀಱುಕಾಱನ ಕರುಳ ಹರಹುವೆನು (ಕುಮಾ.ದ್ರೋ. ೦೬-೩೦); ಬಾಯಾಱಿದುದು ಜನಕೆ ಲಯ ದೋಱಿದುದು ಜಗಕೆ (ಕಿರಾ. ೩೦-೪). ೪. ಆಯಾಸಗೊಳ್ಳು; ಬಳಲು : ಮಿಥ್ಯಾದೃಷ್ಟಿಗಳ್ . . . ಕುಚರ್ಚೆಗಳಿಂ ಬಾಯಾರ್ಪೊಡಂ ಸಜ್ಞಾನಮಿಲ್ಲದೆ ದರ್ಶನಮಂ ಪೊರ್ದದೆ ಮೋಕ್ಷಮನೈದಲ್ಬಾರದು (ಧರ್ಮಾಮೃ. ೭-೫೨) ; ದೂರದಲ್ಲಿರ್ದನೆಂದು ಆನು ಬಾಯಾಱಿ ಬಳಲು ತ್ತಿರ್ದೆನಯ್ಯ (ಮಹಾದೇ. ೪. ೧೧೧-೨೫೬); ಬಾಯಾಱಿ ಬೇಱಿ ಚಿತ್ರಾಂಗದೆ ಹಲುಬಲು (ಜೈಮಿಭಾ. ೨೪-೦). **ಬಾಯಱು** : ೧. ಬಱತಯಾಱಿತು ವರುಣಶರ ಬಾಯಱಿತು ನೀರಡಿಸಿದುದು (ಕುಮಾ.ದ್ರೋ. ೦೯-೪೮). **ಬಾಯಾರು$_2$** : ೧. ಬಳಲಿ ಬಾಡಿ ಬಾಯಾರಿ ಹಸಿದ ತೋಳನು ಹರಿವ ಹಳ್ಳವನೆ ಸಾರಿ ತೃಷೆಯ ಕಳೆಯಲು ನೀರಿಗಿಳಿಯೆ (ಕಿಪು. ೦೨-೧) ; ಪ್ರೇಮಲತೆ ಬಾಯಾರಿ ಕಾತರಿಸಿತಾವುದನೊ ತಾನರಿಯದುದ ಬಯಸಿ (ಚಿತ್ರಾಂಗ. ೭-೦೭೩). ೨. ಯುವತಿ ಪುರುಷನ ಬಯಸಿ ಬಾಯಾರು ವದನರಿದಾಯವಳ ಸತ್ಕಾರ್ಯ ತನ್ನಿಂದ ತಡೆದಿದೆಯೆನುತ ರವಿಯಸ್ತ ಮಯವಾಗಲು (ನವಮೋ. ೨೬-೭). ೩. ನುಡಿ ನನ್ನಿಯೊಂದೆನಲ್ ಬಡವ ಬಾಯಾರಿದಂ (ಕಾಂಚೀ. ೦೬೦-೩೫೬). ೪. ವೀರವಿಕ್ರಮವಿಜಯ ರೆಂದಾಗೆ ದೈನ್ಯದಲಪಾರಚಿಂತೆಯೊಳು ಬಾಯಾರುವರೆ ದೇವ ನೀಂ (ವಂಶಾರಾ. ೪-೦-೨೩). [ ಬಾಯ್ + ಆಱು$_1$ ]

**ಬಾಯಾಱು$_2$**, ಬಾಯರು (ನಾ). ೧. = ಬಾಯಾಱಿಕೆ ೧: ಬಾಯಾಱಿದ ವರುಷ್ಟುನೀರ್ಗುಡಿಯಲು ಮತ್ತು ಬಾಯಾಱು ಪೆಚ್ಚುವಂದದೊಳು (ಶಠಕ. ೬೩-೩೪). **ಬಾಯರು** : ೨. = ಬಾಯಾಱಿಕೆ ೨ : ಮನೆಗೆ ಬಂದು ಬಾಯರು ಕೊಡಿ ಅಂದಾಗ ಬರಿ ನೀರು ಕೊಟ್ಟರೆ ಸೂರನ ಮುಖ ಸಪ್ಪಗೆ ಆಗುತ್ತದೆ (ಮಠಮ. ೫೭). ೩. (ಕರಾ) ದನಕರುಗಳಿಗೆ ಕಂಡಿ ಯಲು ಇಡುವ, ತವಡು ಬೆರಸಿ ಕುದಿಸಿದ ನೀರು : ದನಗಳು ಹಟ್ಟಿ ಯನ್ನು ಸೇರುತ್ತವೆ . . . ಅವಕ್ಕೆ ಪ್ರೈಲಿಗೆಯಲ್ಲಿರುವಾಗಲೇ ಅಕ್ಕಚ್ಚು, ಬಾಯರು ಹಾಕಿ. ಬಳಿಕ ಸ್ನಾನ ಮಾಡಿ . . . ಕಾಲುದೀಪ ಉರಿಸಬೇಕು (ಮರಿಮ. ೦೨). [< ಬಾಯಾಱು$_1$]

**ಬಾಯಿ$_1$** 'ಬಾಯ್' ನೋ.

**ಬಾಯಿ$_2$** (ನಾ). ೧. ಹೆಂಗಸರ ಹೆಸರಿನ ಕೊನೆಯಲ್ಲಿ ಗೌರವಾರ್ಥ ವಾಗಿ ಸೇರಿಸುವ (ತಾಯಿ ಅಥವಾ ಅಮ್ಮ ಎಂಬರ್ಥದ) ಪದ : ಹಾಗೆಯೇ ಒರಗಿಕೊಂಡ ಕಮಲಾಬಾಯಿಗೆ ಕ್ರಮೇಣ ಎಚ್ಚರಾಗಿತ್ತು (ಸಮಾಜೀ. ೯೩೯). ೨. ಮನೆಯ ಒಡತಿ ; ಯಜಮಾನಿ : ಆಚಾರ್ಯರು ಬಂದ ಮೇಲೆ 'ಬಾಯರು' ಒಬ್ಬರ ಬೇಕೇ ಬೇಕು (ಶ್ರೀರಂಗ. ೦೬೦) ; ಬಾಯಿ, ರಾಯರು ಎರಡು ಊಟ ಕಳಿಸಿದ್ದಾರೆ (ಕಥ್ನಹು. ೨೮). ೩. ಹೆಂಗಸು ; ಸ್ತ್ರೀ : ಮರಾಠರ ಬಾಯಿಯೊಬ್ಬಳನು ಪಾತ್ರ ತಿಕ್ಕಲು ಗೊತ್ತುಮಾಡಿದೆ (ಸ್ವ.ಕಿತ. ೨೩೩). ೪. ಸಂಗೀತ, ನೃತ್ಯಗಳಿಂದ ಜೀವಿಸು ವವಳು ; ಪಾತ್ರದವಳು ; ವೇಶ್ಯೆ : ಇಷ್ಟು ಪ್ರಸಿದ್ಧ 'ಬಾಯಿ' ಯ ಮನೆಯಲ್ಲಿ ಸಂಗೀತಸಾಮಗ್ರಿಯೊಂದೂ ಕಾಣಲಿಲ್ಲ (ಶ್ರೀಕಾಂತ. II, ೦೪೦).

[ ← ಹಿಂ. ಮರಾ. ಬಾಈ ]

**ಬಾಯಿಕ** (ನಾ). ಒಬ್ಬಾತನ ಹೆಸರು : ಆಯುದ ಮೆಯ್ಗಲಿ ಬಾಯಿಕ ನೆಪ್ಪು ನೆಗಟ್ಟಿಯಂ ಪ್ರಕಟಿಸಿದನ್ ಶ್ರೀದಯಿತನ ಬಾಯಿಕನ ಮನೋ ದಯಿತೆಗೆ . . . ತಾಮಾದರ್ ತನಯರ್ ಪೇಟಲ್ ಮಾದುವರಂ ದೋಯಿ ಲಮ್ಮನೆಪ್ಪರ್ ಪೆಸರಿಂ (ಎಕ. II. ೦೩೯-೨ ; ಸು. 950). [ ? ]

**ಬಾಯಿಕಟ್ಟು$_1$** 'ಬಾಯ್ಕಟ್ಟು$_1$' ನೋ.

**ಬಾಯಿಕಟ್ಟು$_2$** 'ಬಾಯ್ಕಟ್ಟು$_2$' ನೋ.

**ಬಾಯಿಕಡಾಣೆ** (ನಾ). ಕುದುರೆಯ ಬಾಯಿಗೆ ಹಾಕುವ ಕಡಿವಾಣ : "ಕವಿಕಾ, ಖಲೀನಃ– ೨ ಬಾಯಿಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿ ಕಡಾಣೆ, ಕಣಿಕೆ" (ಸಿದ್ಧಾಂತಿ. ೨೫೦). [ಬಾಯಿ$_1$ (< ಬಾಯ್) + ಕಡಾಣೆ]

**ಬಾಯಿಕಲು** 'ಬಾಯ್ಕಾಲ್' ನೋ.

**ಬಾಯಿಕಲ್ಲಿ** (ನಾ). (ದನಗಳ ಬಾಯಿಗೆ ಕಟ್ಟುವ) ಬಾಯಿಕುಕ್ಕೆ : "(ಕಚ್ಚದಂತೆ, ತಿನ್ನದಂತೆ, ತೋಡದಂತೆ, ಪ್ರಾಣಿಗಳ ತಲೆಗೆ ಕಟ್ಟುವ) (ಬಾಯಿ)ಕುಕ್ಕೆ, ಬಾಯಿಕಲ್ಲಿ" (Muzzle. ಇಂಕಸಿ).

[ಬಾಯಿ$_1$ (< ಬಾಯ್) + ಕಲ್ಲಿ$_1$]

**ಬಾಯಿಕಲ್ಲು** 'ಬಾಯ್ಕಾಲ್' ನೋ.

**ಬಾಯಿಕಾಲು** 'ಬಾಯ್ಕಾಲ್' ನೋ.

**ಬಾಯಿಕುಕ್ಕೆ** (ನಾ). = ಬಾಯಿಕಲ್ಲಿ : ಆಡಿಕೊಳ್ಳುವ ಬಾಯಿಗಳಿಗೆ ಬಾಯಿಕುಕ್ಕೆ ಹಾಕುವುದಕ್ಕಾದೀತೆ ? (ಬೆಳುಮ. ೬೮).

[ಬಾಯಿ$_1$ (<ಬಾಯ್) + ಕುಕ್ಕೆ$_1$]

**ಬಾಯಿಕೊಚ್ಚು**, ಬಾಯ್ಕೊಚ್ಚು (ಕ್ರಿ). ತನ್ನನ್ನು ತಾನೇ ಹೊಗಳಿ ಕೊಂಡು ಮಾತಾಡು; ಜಂಬ ಕೊಚ್ಚಿಕೊಳ್ಳು; ಬಡಾಯಿ ಕೊಚ್ಚು: ಸೊಸೆಯನ್ನು ಹೊಟ್ಟೆಯ ಮಗಳಿಗಿಂತ ಹೆಚ್ಚಾಗಿ ನೋಡಿಕೊಂಡಿದ್ದೇನೆ . . . ಎಂದು ಬಾಯಿಕೊಚ್ಚಿಕೊಂಡರು (ಕದ್ಮ.ಸ. ೧೧). **ಬಾಯ್ಕೊಚ್ಚು** : ಚೆಂಬೊನ್, ಕರ್ಬೊನ್, ಬೆಳ್ಳಿ, ಬಂಗಾರಂಗಳನ್, ನಾನಲ್ಲದಾರ್ ತೋರ್ದರಯ್ ಬಱಿದೆ ಬಾಯ್ಕೊಚ್ಚುವನನುಚಿದು ಆರುಮಲ್ತೆಂದೆ ಬಗೆದಪೆನ್ (ಬಿದ್ಮಶ್ರ. ೨೬-೫೭೦). [ಬಾಯಿ$_1$ (< ಬಾಯ್) + ಕೊಚ್ಚು$_1$]

**ಬಾಯಿಕೊಬ್ಬು** 'ಬಾಯ್ಕೊಬ್ಬು' ನೋ.

**ಬಾಯಿಕೋಲು** 'ಬಾಯ್ಕಾಲ್' ನೋ.

**ಬಾಯಿಗರೆ** (ಕ್ರಿ). ನುಡಿ ; ಧ್ವನಿ ಮಾಡು : ಪಿರಿದು ರಂಜಿಸುವುದಂತದ ಜೋಳಿಗ್ಗಡಿಸುವ ಗೊರವ ಬಂದುದ ಬಾಯಿಗರೆವ ಅರಗಿಳಿ (ನೇಮಿಸಂ. ೦-೭೪). [ಬಾಯಿ$_1$ (<ಬಾಯ್) + ಕರೆ$_1$]

**ಬಾಯಿಗಾಳೆಗ** 'ಬಾಯ್ಗಾಳೆಗ' ನೋ.

**ಬಾಯಿಗೂಡಿಸು** (ಕ್ರಿ). ಹೊಂದಿಸು ; ಸರಿಗೊಳಿಸು : ಲೆಕ್ಕ ಬಾಯಿ ಗೂಡಿಸುವ ಬಗೆ ಇದಲ್ಲ (ಇತ್ಯಕ. ೨೩೦).

[ಬಾಯಿಗೂಡು (<ಬಾಯ್ಗೂಡು) + — ಇಸು$_3$]

**ಬಾಯಿಗೂಡು** 'ಬಾಯ್ಗೂಡು' ನೋ.

**ಬಾಯಿಚಪಲ** (ನಾ). ತಿನ್ನುವ ಬಯಕೆ ; ಜಿಹ್ವಾಚಾಪಲ್ಯ : ಬಾಯಿ ಚಪಲದವರು ಏನಾದರೂ ಮಾಡಿಕೊಂಡು ತಿಂದದ್ದು ಪತ್ತೆಯಾದರೆ ನೇದಾದೀಪದ ಖರ್ಚನ್ನೆಲ್ಲಾ ಅವನೊಬ್ಬನೇ ದಂಡವಾಗಿ ತೆರಬೇಕಾಗಿತ್ತು (ಹುಬ್ಬಿಹ. ೫೦). [ಬಾಯಿ$_1$(<ಬಾಯ್)+ಚಪಲ]

**ಬಾಯಿಚಿಕ್ಕ** (ನಾ). = ಬಾಯಿಕಡಾಣಿ : "ಕವಿಕಾ, ಖಲೀನಃ — ೨ ಬಾಯಿಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿಕಡಾಣ, ಕಣಿಕೆ" (ಸಿದ್ಧಾಂತಿ. ೨೫೦). [ಬಾಯಿ$_1$ (< ಬಾಯ್) + ಚಿಕ್ಕ$_2$ (< ಸಿಕ್ಕ$_1$)]

**ಬಾಯಿಚ್ಚೈ** (ನಾ). = ಬಾಯಿಚಪಲ : ಕೊಲ್ಲೆನಯ್ಯಾ ಪ್ರಾಣಿಗಳ ಮೆಲ್ಲೆನಯ್ಯಾ ಬಾಯಿಚ್ಚೈಗೆ (ಬಸವ. ೬೩೫).
[ಬಾಯಿ$_1$ (<ಬಾಯ್) + ಇಚ್ಛೈ]

**ಬಾಯಿಜಾಳಿಗೆ** (ನಾ). = ಬಾಯಿಕಲ್ಲಿ : ಇವೆಗಳಿಗೆ ಸಹಿತ ಬಾಯಿಜಾಳಿಗೆ ಹಾಕಲಿಕ್ಕೆ ಸುರೂ ಮಾಡ್ಯಾರ ! (ಬಸಟೀ. ೬) ; ಎಡೆಕುಂಟೆ ಹೊಡೆಯುವಾಗ ದನಕ್ಕೆ ಬಾಯಿಜಾಳಿಗೆ ಹಾಕಬೇಡವೆ ? (ಅದೇ).
[ಬಾಯಿ$_1$ (<ಬಾಯ್) + ಜಾಳಿಗೆ$_1$]

**ಬಾಯಿಜ್ವರ** (ನಾ). (ಸಾಮಾನ್ಯವಾಗಿ ಬೇಸಗೆಯಲ್ಲಿ) ದನಗಳಿಗೆ ಬರುವ ಒಂದು ಬಗೆಯ ಬಾಯಿಹುಣ್ಣು: ಈ ಎಮ್ಮೆಗೆ ಒಂದು ಸಲ ಕಾಲುಜ್ವರ ಬಾಯಿಜ್ವರ ಆಯಿತು (ಹೇಮಾಹೀ. ೬೯). 'ಕಾಲುಜ್ವರ' ವರಾ. [ಬಾಯಿ$_1$ (< ಬಾಯ್) + ಜ್ವರ]

**ಬಾಯಿಡಬ್ಬು** (ನಾ). ಮಾತಿನ ಆಡಂಬರ ; ಒಡಾಯಿ : ಶೀನಮಯ್ಯರ ಹತ್ತಿರ ಆಪಾಟ ರೂಪಾಯಿ ಎಲ್ಲಿಂದ ಬರಬೇಕು ? ಸುಮ್ಮನೆ ಬಾಯಿ ಡಬ್ಬಿಗೆ ಹೇಳಿರಬೇಕು (ಮರಳು. ೦೩೯).
[ಬಾಯಿ$_1$ (< ಬಾಯ್) + ಡಬ್ಬು$_4$ (< ದಂಬ)]

**ಬಾಯಿತಪ್ಪು$_{-1}$** (ಕ್ರಿ). ಮಾತಾಡುವಾಗ ಎಚ್ಚರವಿಲ್ಲದಿರು ; ಅಜಾಗರೂಕತೆಯಿಂದ ಬಾಯಿ ಬಿಡು : ಇಂದಿರೆಯು ಒಂದು ದಿನ . . . ಬಾಯಿತಪ್ಪಿ "ಇದು ಕಾಲಾದಿಳಿಯ ಡಕಾಯಿತಿ!" ಎಂದು ಬಿಟ್ಟಳು (ಬಂಕಿಮು. ೦೦೯) ; ನಾನು ಬಾಯಿತಪ್ಪಿ ಒಂದು ಹೇಳುವುದಕ್ಕೆ ಬದಲು ಇನ್ನೊಂದು ಹೇಳಿದ್ದೆ (ಶೂರ್ಗದ. ೯೩). [ಬಾಯಿ$_1$ (<ಬಾಯ್)+ತಪ್ಪು$_{-1}$]

**ಬಾಯಿತಪ್ಪು$_{-2}$** (ನಾ). ಎಚ್ಚರ ತಪ್ಪಿ ಆಡುವ ನುಡಿ ; ಅರಿವಿಲ್ಲದೆ ಹೊರಬರುವ ಮಾತು : (?). [< ಬಾಯಿತಪ್ಪು$_{-1}$]

**ಬಾಯಿತೀಟೆ** (ನಾ). ಇತರರನ್ನು ದೂರಬೇಕೆಂಬ ಆತುರ,–ಆಡಿಕೊಳ್ಳಬೇಕೆಂಬ ಚಾಪಲ್ಯ: ಈಗಲೆ ನಮ್ಮ ಮೇಲೆ ಕತ್ತಿ ಕಠಾರಿ ಹಿಡಿದು ಎಷ್ಟೋ ಜನ ನಿಂತಿದ್ದಾರೆ. ಅವರ ಬಾಯಿತೀಟೆಗೆ ಗ್ರಾಸ ಒದಗಿಸಿದ ಹಾಗಾ ಗುತ್ತೆ (ಪಟಿಶಾ. ೩೦). [ಬಾಯಿ$_1$ (< ಬಾಯ್)+ತೀಟೆ (<ಶೀಂಟೈ$_1$)]

**ಬಾಯಿತೆಗೆ** 'ಬಾಯ್ದೆಗೆ' ನೋ.

**ಬಾಯಿತೆರೆ** 'ಬಾಯ್ದೆಟೆ$_1$' ನೋ.

**ಬಾಯಿದುತ್ತು** 'ಬಾಯ್ದುತ್ತು' ನೋ.

**ಬಾಯಿದೆಟೆ$_1$** 'ಬಾಯ್ದೆಟೆ$_1$' ನೋ.

**ಬಾಯಿದೆಟೆ$_2$** 'ಬಾಯ್ದೆಟೆ$_2$' ನೋ.

**ಬಾಯಿಧಾರೆ** 'ಬಾಯ್ದಾರೆ' ನೋ.

**ಬಾಯಿನ** 'ಬಾಯನ' ನೋ.

**ಬಾಯಿನಂಗುಡು** 'ಬಾಯಿನಂಗೊಡು' ನೋ.

**ಬಾಯಿನಂಗೊಡು**, ಬಾಗಿನಕೊಡು, ಬಾಯಿನಂಗುಡು (ಕ್ರಿ). ಬಾಗಿನವನ್ನು ನೀಡು ; ಉಪಾಯನವನ್ನು ಕೊಡು : ಆಗಳಾ ಶಿವದೇವಿ ಮಹಾದೇವಿಯುಂ ಕನ್ಯಕಾಕದಂಬದಂಬಿಕಾನಿಕುರುಂಬಮುಂ . . . ತೆಕ್ಕನೆ ತೀವಿದ ಕನಕರಜತಭಾಜನಸಮಾಜಮಂ ಭೋಜನಂ ಪೊಗಟೆ ಬಾಯಿನಂಗೊಟ್ಟು (ಶಾಂತಿಪು. ೦೩–೩೩ ಪ) ; ಬಾಯಿನಂಗೊಟ್ಟು ನಾನಾನವರತ್ನಸ್ವರ್ಣ ವಸ್ತ್ರಂಗಳಿನಖಿಳಜನಂ ಕೂಡೆ ಸಂಪನ್ನಮಪ್ಪನ್ನಂ (ಶಾಂತಿಪು. ೪–೦೩).

**ಬಾಗಿನಕೊಡು** : ಮುತ್ತೈದೆಯರಿಗೆ ಬಾಗಿನಕೊಡುವ ಶಾಸ್ತ್ರವನ್ನೂ ಮಾಡಿ ಆಯಿತು (ಜೀಟು. ೬೩). **ಬಾಯಿನಂಗುಡು** : ಮನಮುದು ಮನದನ್ನನ ಬೆನ್ನನೆ ಪೋಗಿರೆ ತನ್ನ ಬಸನದಿಂದಪಳೊಲ್ದಂ ಮನಮಂ ಬಿಡೆ ಬಳೆಯಿಪ ಬೆಳ್ಳನವಿಂದು ಪಾಟ್ಟನೆಗೆ ಬಾಯಿನಂಗುಡುವಂದಂ (ಶಂಭುಪು. ೮–೩೯). [ಬಾಯಿನ (<ಬಾಯನ) + ಕೊಡು$_1$]

**ಬಾಯಿನಂದೀವು** (ಕ್ರಿ). ಉಪಾಯನವನ್ನು ತುಂಬಿ ಸಿದ್ಧಪಡಿಸು ; ಬಾಗಿನವನ್ನು ತುಂಬಿಡು : ರಂಗವಲಿಯಿಕ್ಕುವ ಕಾಲ್ವಳಿಗೊಳ್ವ ಬಾಯಿನಂದೀವುವ . . . ನಾನಾವಿಧಮಂಗಳಾಚರಣದಕ್ಷೆಯರಿಂ ಪತಿಪತ್ನಿಯರ್ಕಳಿಂ ತೀವಿ ಜನಾವಳೀಲೋಕಹೃದಯಾಸ್ಪದಮಾಯ್ತು ವಿವಾಹಮಂಟಪಂ (ವರ್ಧಪು. ೬–೩). [ಬಾಯಿನ (<ಬಾಯನ) + ತೀವು]

**ಬಾಯಿನೀರು** 'ಬಾಯ್ನೀರ್' ನೋ.

**ಬಾಯಿಪಂತ** (ನಾ). ಕೇವಲ ಮಾತಿನ ಜರ್ಬು : ನೋಡನ್ನ ಕೈಚಳಕವ ಬಾಯಿಪಂತವನಾಡುವರಾಪಲ್ಲ (ಮೋಹಕ. ೩೯–೦೯).
[ಬಾಯಿ$_1$ (<ಬಾಯ್) + ಪಂತ$_1$]

**ಬಾಯಿಪಾಠ** (ನಾ). ೧. ಉರು ಹೊಡೆಯುವುದು ; ಕಂಠಪಾಠ : ರಂಗನು ಪ್ರಾಥಮಿಕಶಾಲೆಯ ಅಭ್ಯಾಸವನ್ನು ಮುಗಿಸುವ ಹೊತ್ತಿಗೆ ಅವನಿಗೆ ಅನೇಕ ದೇವರ ಸ್ತೋತ್ರಗಳು ಬಾಯಿಪಾಠವಾದವು (ರಂಗರೋ. ೦೯); ಹಸ್ತಪ್ರತಿಗಳನ್ನು ಓದಿ ಓದಿ ಇವನಿಗೆ ಅವು ಬಾಯಿಪಾಠವಾಗಿತ್ತು (ಕನ್ನಸಂ. ೨೬) ; ಬೇಕಾದರೆ ನಿಮ್ಮ ಬಾಯಿಪಾಠ ಪ್ರಕಾಶನಿಗೇ ಒಪ್ಪಿಸಿ (ಮರಳ. ೦೯೬). ೨. ಉರುಹೊಡೆದು ಕಂಠಗತ ಮಾಡಿಕೊಳ್ಳಬೇಕಾದ ಪದ್ಯ, ಕೋಷ್ಟಕ ಮೊದಲಾದುವು :ವಾಸುದೇವನು ಬೆಳೆಯುತ್ತ ಬಂದ ಹಾಗೆಲ್ಲ . . . ಅಕ್ಷರಾಭ್ಯಾಸವಾಯಿತು. ಬಾಯಿಪಾಠಗಳನ್ನು ಬಹುಬೇಗನೆ ಕಲಿತನು (ಶಾರದ. ೨೬೦).

**ಬಾಯಿಪಾಠ ಮಾಡು** = ಉರು ಹೊಡೆ ; ಕಂಠಪಾಠ ಮಾಡು : ಇಬ್ಬರಲ್ಲಿ ಯಾರೂ . . . ಲಕ್ಷಣಗ್ರಂಥಗಳನ್ನು ಬಾಯಿಪಾಠ ಮಾಡಿ ಪ್ರತಿ ವಿಷಯಕ್ಕೂ ಒಂದು ಶ್ಲೋಕವನ್ನುದಾಹರಿಸಬಲ್ಲವರಲ್ಲ (ಗಾನಕ. ೩೮).
[ಬಾಯಿ$_1$ (<ಬಾಯ್) + ಪಾಠ$_1$]

**ಬಾಯಿಬಡಕ** 'ಬಾಯ್ಬಡಿಕ' ನೋ.

**ಬಾಯಿಬಡಿ** 'ಬಾಯ್ಬಡಿ' ನೋ.

**ಬಾಯಿಬಡಿಕ** 'ಬಾಯ್ಬಡಿಕ' ನೋ.

**ಬಾಯಿಬಡಿಕತನ** 'ಬಾಯ್ಬಡಿಕತನ' ನೋ.

**ಬಾಯಿಬಡುಕ** 'ಬಾಯ್ಬಡಿಕ' ನೋ.

**ಬಾಯಿಬಡುಕಿ** 'ಬಾಯ್ಬಡಿಕಿ' ನೋ.

**ಬಾಯಿಬಿಡು** 'ಬಾಯ್ಬಿಡು' ನೋ.

**ಬಾಯಿಬೀಗ**, ಬಾಯ್ಬಿಯ್ಯಗ, ಬಾಯ್ಬಾಗ (ನಾ). ೧. (ಹರಕೆ ಹೊತ್ತ ಭಕ್ತರು) ಬಾಯಿಗೆ ಚುಚ್ಚಿಸಿಕೊಳ್ಳುವ ತಂತಿಯ ಸಾಧನ : ಬಾಯಿ ಬೀಗ ಅಕ್ಕಸಾಲಿಗನಿಂದ ಮಾಡಿಸಿದ ಸಣ್ಣ ಬೆಳ್ಳಿಯ ಕಡ್ಡಿ. ಚಚ್ಚೌಕವಾಗಿರುತ್ತದೆ. ಒಂದು ಕಡೆಯ ಮೊನೆ ತುಂಬಾ ಹರಿತವಾಗಿದ್ದು ಚೂಪಾಗಿರುತ್ತದೆ. ಮತ್ತೊಂದು ಕಡೆ ಒಂದು ತೂತಿರುವಂತೆ ಗುಂಡಗೆ ಮಾಡಿಸಿರುತ್ತದೆ (ಜೋಕಿದೇ. ೯೫); ದೇವರಿಗೆ ಬೇವಿನುಡುಗೆ ನಗನಾಣ್ಯ ಮಾಡಿಸಿಕೊಡುವುದಾಗಿ . . . ಬಾಯಿಬೀಗ ಚುಚ್ಚಿಸಿಕೊಳ್ಳುವುದಾಗಿ ಹರಕೆ ಕಟ್ಟಿಕೊಳ್ಳುತ್ತಾರೆ (ವಂಶಾಂಡ. ೧೩೯) ; ಕೆಲವು ಹೆಂಗಸರು ಬಾಯಿಬೀಗದ ಹರಕೆ ಮಾಡಿಕೊಂಡಿರುತ್ತಾರೆ. ಅಂಥವರು ಬೆಳಗಿನಿಂದ ಉಪವಾಸವಿದ್ದು, ರಂಗದಲ್ಲಿ ಗುಡಿಗೌಡನಿಂದ ಬಾಯಿಬೀಗ ಚುಚ್ಚಿಸಿಕೊಂಡು, ದೇವರ ಹಿಂದೆ ಕೈಯಲ್ಲಿ ಹೊಂಬಾಳೆ ಹಿಡಿದು ಹೋಗುತ್ತಾರೆ (ವನ್ಯೂರು. ೩೦).

**ಬಾಯ್ಬುಯ್ಯಗ :** ೨. (ಆಲಂ) ಬಾಯಿಯ ತಡೆ.—ಹತೋಟಿ : ಸದ್ದು ! ಸಿಂಗಾರಿ ! ಬಾಯ್ಬುಯ್ಯಗವಿರಲಿ ! (ಪಟ್ಟ.ಆ. ೩೬-೦). **ಬಾಯ್ಬಾಗ :** ೧. ಚಿಕ್ಕ ಚಿಕ್ಕ ಹುಡುಗರೂ ಕೂಡ ಬಾಯ್ಬಾಗ ಚುಚ್ಚಿಸಿಕೊಂಡಿದ್ದರು (ರೂಢಿ). [ಬಾಯಿ$_1$ (< ಬಾಯ್) + ಬೀಗ$_1$]

**ಬಾಯಿಬೂಟಕ** (ನಾ). ಡಂಭಾಚಾರದ ಮಾತು : ಸಾಟಿಯಿಲ್ಲೀಕೆಗೆ ಜಗತ್ತಿನ ಕೋಟಲೆಯನಪಹರಿಪಳುರೆ ಬಾಯಿಬೂಟಕದ ನುಡಿಯಲ್ಲ ಸತ್ಯವಿದು (ಕಾವೇಮು. ೦-೦೦೨). [ಬಾಯಿ$_1$ (<ಬಾಯ್) + ಬೂಟಕ]

**ಬಾಯಿಮಾತು** ' ಬಾಯ್ಮಾತು ' ನೋ.

**ಬಾಯಿಮುಚ್ಚು** 'ಬಾಯ್ಮುಚ್ಚು' ನೋ.

**ಬಾಯಿಲೆಕ್ಕ** (ನಾ). ಮನಸ್ಸಿನಲ್ಲಿಯೇ ಬಿಡಿಸಿ, ಬಾಯಿಮಾತಿನಲ್ಲಿಯೇ ಉತ್ತರಿಸಬೇಕಾದ ಗಣಿತಪ್ರಶ್ನೆ,—ಲೆಕ್ಕ : ಗಣಿತ, ಬಾಯಿಲೆಕ್ಕ, ಮುಂತಾದುವುಗಳಲ್ಲದರಲ್ಲೂ ಈ ಹುಡುಗಿಯು ಪ್ರಥಮತರಗತಿಯಲ್ಲಿ ತೇರ್ಗಡೆಯಾದಳು (ರೂಢಿ). [ಬಾಯಿ$_1$ (< ಬಾಯ್) + ಲೆಕ್ಕ$_2$]

**ಬಾಯಿಬಿಡು** 'ಬಾಯ್ಬಿಡು' ನೋ.

**ಬಾಯಿವೆಣ್ಣೆ** 'ಬಾಯ್ವೆಣ್ಣೆ' ನೋ.

**ಬಾಯಿಸವಿ** 'ಬಾಯ್ಸವಿ' ನೋ.

**ಬಾಯಿಸು** (ಕ್ರಿ). ಉಬ್ಬುವಂತೆ ಮಾಡು ; ಊದಿಸು : ಧನಂಜಯ ವಾಯುವೆಂಬುದು ತಾನು ನಿಕ್ಷೇಪಿಸುವಂತಹ ದೇಹವಾದರೆ ಆ ದೇಹವನ್ನೆಲ್ಲ ಉಕ್ಕಿಸಿ ಬಾಯಿಸಿ ಊದಿಸಿ ಓಡಿಸಿ ಭೌತಿಕಾಗ್ನಿಯ ಕೂಡಿ ಹೋಗುವುದು (ಷಟ್ಪಾ. II, ೯೭) ; ಆ ದಿನ ಹುಸೇನಿ . . . ಸೋಮನ ಕಪಾಳವನ್ನು ಬಾಯಿಸಿದನು (ರಂಗರೋ. ೪೬) ; ಆ ದೇಶಪಾಂಡೆಯ ಕೆನ್ನೆ ಬಾಯಿಸ ಬೇಕಾಗಿತ್ತು (ಹಶ್ಮಬಿ. ೨೦೩). [ಬಾಯು (<ಬಾ$_1$) + — ಇಸು$_3$]

**ಬಾಯಿಹಗ್ಗ** (ನಾ). = ಬಾಯಿಕಡಾಣಿ : "ಕವಿಕಾ, ಖಲೀನಃ — ೨ ಬಾಯಿ ಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿಕಡಾಣಿ, ಕಣಿಕೆ" (ನಿಘಂ.ತಿ. ೨೩೦). [ ಬಾಯಿ$_1$ (<ಬಾಯ್) + ಹಗ್ಗ (<ಪಗ್ಗ) ]

**ಬಾಯಿಹುಣ್ಣು** (ನಾ). ಬಾಯಿಬೊಕ್ಕೆ ; ಬಾಯಿಯಲ್ಲಿ ಏಳುವ ಹುಣ್ಣು : ನಿರ್ನಿದ್ರೆ, ನೂತಿ, ಬಾಯಿಹುಣ್ಣು, ಗಂಟಲುಹುಣ್ಣು, ಕಾವುಗಣ್ಣುಗಳಿಗ ಇದು ಸಂಜೀವನ (ಬಶಿ. ೪). [ ಬಾಯಿ$_1$ (<ಬಾಯ್) + ಹುಣ್ಣು (<ಪುಣ್) ]

**ಬಾಯು** 'ಬಾ$_1$' ನೋ.

**ಬಾಯುಗಿ** (ನಾ). ದಂತಕ್ಷತ (?) : ತೆಱಪಱಿದೋಪನಪ್ಪಿದೊಡೆ ಮೆಯ್ಮಱೆವಪ್ಪು ಸಡಿಲ್ದುದಕ್ಕೆ ಮೆಯ್ಯಱಿವ ಪೊದಟ್ದು ಬಾಯುಗಿಗೆ ಮೆಯ್ಮಱೆವಂತದು ಮೆಲ್ಲನಾಗೆ ಮೆಯ್ಯಱಿವ . . . ಎಡೆ ಸಾವ ಪುಟ್ಟು ವೆಡೆಯಾದುದವಳ್ಗೆ ರತಾತಿರೇಕದೊಳ್ (ಲೀಲಾವ. ೦೩-೨೦) ; ತವದ ಕಾಮೋದ್ರೇಕದಲಿ ಕೂಡುವ ಸಮಪ್ರಣಯಿಗಳ ನಿಡುಗಣ್ಣೆವೆಗಳರೆ ಮುಗಿವುತಿರೆ ... ಸವಿವ ಬಾಯುಗಿಯುಡಗೆ ಮೈ್ಯಮಿಗೆ ಬೆವರೆ ಸೂಳೋಸರಿಸೆ ಕೆಡಪಿದ ಜವಳಿಜಂತ್ರದ ಬೊಂಬೆಯೆನಲೀರ್ವರು ಮಱೆದರೊಡಲ (ಶಾಳ್ಯಭಾ. ೦೬-೩೭). [ಬಾಯ್ + ಉಗ್ಗಿ]

**ಬಾಯುಪಚಾರ** (ನಾ). ಕೇವಲ ಬಾಯಿಮಾತಿನ ಮನ್ನಣೆ ; ಹೃತ್ಪೂರ್ವಕವಲ್ಲದ ಗೌರವ ; ಬರಿ ಬಾಯಿಮಾತಿನ ಸತ್ಕಾರ : ಅವರು ಬಾಯುಪಚಾರಕ್ಕಾದರೂ ಬನ್ನಿ ಎಂದು ಕರೆಯಲಿಲ್ಲ (ರೂಢಿ). [ಬಾಯ್ + ಉಪಚಾರ]

**ಬಾಯೂರಿಸು** (ಕ್ರಿ). ೧. ಬಾಯಲ್ಲಿ ನೀರು ಸಂರಿಸು. ೨. (ಆಲಂ) ಅತಿಯಾಗಿ ಹಂಬಲಿಸು,—ಬಯಸು : ಕೆಲವು ಜನ ಅವಳನ್ನು ವರಿಸಲು ಬಾಯೂರಿಸುತ್ತಿದ್ದರು (ಮಸಕೂ. ೪). [ಬಾಯ್ + ಊರಿಸು$_1$]

**ಬಾಯೆಣಿಕೆ** (ನಾ). ಉದ್ಗಾರ ; ಉದ್ಘೋಷ : ಕಾಯಗಟ್ಟಿತು ಭೀತಿ ಬಿರುದಿನ ಬಾಯೆಣಿಕೆ ಬಯಲಾಯ್ತು ಜೀವದ ಬೀಯಕಿವರಂಜಿದರು (ಕುಮಾ.ಭಾ. ೬-೭೧). [ಬಾಯ್ + ಎಣಿಕೆ]

**ಬಾಯೆತ್ತು** (ಕ್ರಿ). (ಮಾತಾಡಲೆಂದು) ಬಾಯಿ ತೆರೆ ; ಬಾಯಿ ಬಿಡು : ವಂತ್ರಿಯುಂ ಪರಸಮಯಿಗಳು ಬಾಯೆತ್ತಲಂಜಿಂತೆಂದರು (ಬಸಪು. ೩೩-೬೦) ; ಬಾಯೆತ್ತದಂತೆ ನುಡಿವುತೆ ಕಾಯಜರಿಪು ಭಕ್ತನೆಲ್ಲರಂ ಗೆಲೆ (ವೃಷಪು. ೩೭-೩೩) ; ಕೋಲಾಹಲವ ಸಂತವಿಸಲವಂ ಎನಿತೊ ಸಲ ಬಾಯೆತ್ತಿ ಮಾತೊಂದು ಕೇಳಿಸದೆ . . . ಕಲಕಲವೆ ಎದ್ದೆದ್ದು ನಡುವೆ ತವಿವಂದು (ಗೊಲ್ಗೊಥಾ. ೬-೦೩೦). [ಬಾಯ್ + ಎತ್ತು$_1$]

**ಬಾಯೆಸಳ್ ?** (ನಾ). ಬಾಯಿ ಹುಣ್ಣು : ಬಿಸುಸುಯ್ಯೆ ಬಾಯ್ ಕರಂ ಕೆಂಪೆಸೆದಿರೆ ಬಿಡೆ ಲೋಳೆ ಸುರಿಯೆ ಬಾಯಿ(ಎ)ಸಳದನೋಡಿಸುವೊಡೆ ಕಾಗೆಯ ಗಱಿಯಿಂ ಬಿಸುನೀರೊಳ್ ಕರ್ಚಿ ತೊಡೆಗೆ ಕಟುಕತ್ರಯವುಂ (ಲೋಕೋಪ. ೯-೦೯೯). [ಬಾಯ್ + ಎಸಳ್?]

**ಬಾಯೊದರು** (ಕ್ರಿ). ಕೂಗು ; ಕಿರಿಚು : ವಾನರದಳಂ ಬೆದರಿ ಬಾಯೊದರಿ ದೆಸೆದೆಸೆಗೆ ಕೆದರೆ(ಶ್ರೀರಾಮಪ. ೬೦೩-೧೦೧). [ಬಾಯ್ + ಒದರು$_2$(<ಒದಱು$_2$)]

**ಬಾಯೊರೆಸು** (ಕ್ರಿ). ಸ್ಪರ್ಶವನ್ನು ಪಡೆ (?) : ಇಱಿಯದ ವೀರವುಂ ಪೊಗಳೆ ಮೆಚ್ಚುವ ರಾಯರ ಗಂಡ ಯಾವ ಸೊಂಪಱಿಯದೆ ಕೀರ್ತಿಸಲ್ ಬರಿದೆ ಹಿಗ್ಗುವ ರಾಯರ ಗಂಡವೊಂಬ್ಯೆ ಬಾಯೊರೆಸದೆ ಪೆಂಣ್ಗಳಂ ಸೊಬಗರೆಂದವ ರಾಯರ [ಗಂಡ]ನೆಂದು ಬೊಬ್ಬಿಱಿಉದು ಕೀರ್ತಿ ಡಿಂಡಿಮವುಮಿಂ ಜಗದೊಳ್ ವಿಜಯಕ್ಷಿತೀಂದ್ರನಾ (ಎಕ. XI, ಚಿತ್ರದು. ೩-೬ ; ?). [ ? ]

**ಬಾಯೊಱೆ** (ಕ್ರಿ). ೧. ಬಾಯಲ್ಲಿ ನೀರು ಸುರಿ : ಆ ಸಿಂಹಂ ಮುಱಿದು ಗುತ್ತಂಬಟ್ಟು ಗೊಂಕರ ಕಟ್ಟಿಯಂ ಬಯಸಿ ಬಾಯೊಱೆತು ತನಗನುಚರ ನಪ್ಪುದೊಂದು ನರಿಗೆ ಪೇಟ್ದುದುಂ (ಪಂಚತಂ. ೨೬೨-೨೦) ; ಮಿಸುಪ ಪುಳಿಗೆ ಬಾಯೊಱೆತು ಬಾತಂತಿರೆ ತಿಂದು ಕೈಗರ್ಚಿ (ಪುಣ್ಯಾಸ್ರ. ೩-೪೬ ಪ). ೨. ಬಯಸು ; ಹಂಬಲಿಸು ; ಹಾತೊರೆ : ನವಯೌವನಕ್ಕೆ ರತಿ ಬಾಯೊಱೆಯೆ . . . ಹದಿನಾಱು ಹರೆಯವುದಾಗಲ್ (ಪಂಪರಾ. ೩-೦೬) ; ಶೃಂಗಾರ ವೀರಕ್ಕೆ ಬಾಯೊಱೆತೀ ತಸ್ಕರಜಾರವೀರವಿಟವೇಶ್ಯಾಕಾಮ್ಯವುಂ ಕೇಳ್ದು ಮೆಯ್ ಮಱೆವರ್ . . . ಭೂಪರ್ (ರತ್ನಾಕ. ೯೭). [ ಬಾಯ್ + ಒಱೆ$_1$ ]

**ಬಾಯ್ಕಟ್ಟು$_1$**, ಬಾಯಿಕಟ್ಟು$_1$ (ಕ್ರಿ). ೧. ಬಾಯಿಚಪಲವನ್ನು ನಿರೋಧಿಸು ; ಪಥ್ಯ ಮಾಡು ; ಅಪಥ್ಯವಾದ ಆಹಾರವನ್ನು ಸೇವಿಸದೆ ನಿರ್ಬಂಧದಲ್ಲಿರು : ಅವರು ವೈದ್ಯರು ಹೇಳಿದಂತೆಲ್ಲ ಚೆನ್ನಾಗಿ ಬಾಯ್ಕಟ್ಟಿ ಖಾಯಿಲೆಯನ್ನು ಬೇಗ ವಾಸಿಮಾಡಿಕೊಂಡರು (ರೂಢಿ). ೨. ವಾದದಲ್ಲಿ ಎದುರಾಳಿಯನ್ನು ಬಾಯ್ಮುಚ್ಚುವಂತೆ ಮಾಡು ; ನಿರುತ್ತರಗೊಳಿಸು : ಬಾಯ್ಬಡಿ : ಅಈ ಇಟ್ಟು ಬಾಯ್ಕಟ್ಟಿ ಬಿಟ್ಟ ಮೇಲೆ ಪಾಪ ಅವನೇನು ಮಾಡಿಯಾನು ? (ರೂಢಿ). ೩. ಮಂತ್ರ ಮಾಟಗಳಿಂದ ಮನುಷ್ಯನ ಅಥವಾ ಪ್ರಾಣಿಯ ಬಾಯನ್ನು ತೆರೆಯಲಾಗದಂತೆ ಮಾಡು,—ಮುಚ್ಚಿಸು : (೪). **ಬಾಯಿಕಟ್ಟು$_1$ :** ೨. ನಾನು ಯಾವಾಗಲೂ ಪ್ರಶ್ನಿಸುತ್ತೇನೆ ; ಆಗ ನೀವು ಹೀಗೆ ಹೇಳಿ ನನ್ನ ಬಾಯಿಕಟ್ಟುತ್ತೀರಿ (ಋಷಾರಾತ. ೦೬) ; ಎಲ್ಲರೂ ಸೇರಿಕೊಂಡರು ತೆನ್ನಾಲಿ ಹೇಳಿದ್ದು ಸುಳ್ಳು ಅಂತ ಬಾಯಿಕಟ್ಟುವುದಕ್ಕೆ (ತಪ್ಪೂರು. ೫೦೬). ೪. ಮಾತಾಡಲು ಅವಕಾಶವಿಲ್ಲವಾಗು : ಅಪ್ಪಾಜಿಗೆ ಬಾಯಿಕಟ್ಟಿತು. ಆದರೂ ಕಡೆಯದೊಂದು ಪ್ರಯತ್ನ ಮಾಡಲು ಬಯಸಿದ (ಹಳೆಪ. ೬೪). ೫. ಮಡಕೆ ಅಥವಾ ಪಾತ್ರೆಗಳ ಬಾಯಿಗೆ ಬಟ್ಟೆಯನ್ನು ಕಟ್ಟು : ಮಡಬಟ್ಟೆಯಿಂದ ಮಡಿಕೆಯ ಬಾಯಿಕಟ್ಟಿ, ವಿಭೂತಿಕಟ್ಟಿ ಹಾಕುತ್ತಾಳೆ (ತಪ್ಪೂರು. ೪೨). [ಬಾಯ್ + ಕಟ್ಟು$_1$]

**ಬಾಯ್ಕಟ್ಟು₂**, ಬಾಯಿಕಟ್ಟು₂ (ನಾ). ೧. (ನಾಯಿ, ಎತ್ತು ಮೊದಲಾದ ಪ್ರಾಣಿಗಳಿಗೆ) ಬಾಯಿ ತೆರೆಯಲಾಗದಂತೆ ಮುಖಕ್ಕೆ ಅಳವಡಿಸುವ ಬಂಧನ ; ಪ್ರಾಣಿಯ ಬಾಯಿಗೆ ಕಟ್ಟುವ ಕುಕ್ಕೆ,–ಚೀಲ : ಸಳಿಗೋಲು ಒಂದಟ್ಟೆಯ ಕಿರಹು ನಾಯಿಗಳ ಬಾಯ್ಕಟ್ಟು ಒಳಿಯಿಂದಿವು ಮೆಱೆಯೆ ನಡೆದು (ಬಸವು. ೩೦-೪). ೨. ಮಾಟಮಂತ್ರಗಳಿಂದ ಬಾಯಿ ಮುಚ್ಚಿಸು ವಿಕೆ,–ಬಾಯಿ ತೆರೆಯದಂತೆ ಮಾಡುವಿಕೆ: (?). **ಬಾಯಿಕಟ್ಟು₂ :** ೩. ಮುಚ್ಚಳದಂತೆ ಪಾತ್ರೆಗಳ ಬಾಯಿಗೆ ಬಿಗಿದ ಬಟ್ಟೆಯ ಕಟ್ಟು : ಎಕ್ಕದ ಮೊಗ್ಗು ೧ ಬಳ್ಳವಂ ಒಂದು ಮಡಕೆಯಲ್ಲಿ ಹಾಕಿ ನೀರು ಹಾಕಿ: ಪಾವಡೆ ಕಟ್ಟಿ ಜೆಳತಿಗೆ ಅಕ್ಕಿಯನ್ನು . . . ರೊಟ್ಟಿ ಮಾಡಿ ಆ ಬಾಯಿಕಟ್ಟಿನ ಮೇಲಿಟ್ಟು ಬೇಯಿಸಿ ತೆಗೆದು (ಸಕವೈ. ೨೦೬). [ಬಾಯ್ + ಕಟ್ಟು₂]

**ಬಾಯ್ಕಡಿಗೊಳ್** (ಕ್ರಿ). ಔಡುಗಚ್ಚು ; ಹಲ್ಲುಕಡಿ: ಮಿಗೆ ಮಾತಾಡ ದಿರೇಟಿದಿರ್ ಮಿಡುಕದಿರ್ ಮೇಲ್ವಿಬಿದಿರ್ ಸೋರ್ಕದಿರ್ ನಗದಿರ್ ಬಾಯ್ಕಡಿಗೊಳ್ಳದಿರ್ (ಕಬ್ಬಿಗಾ. ೧೬೬). [ಬಾಯ್ + ಕಡಿ₁ + ಕೊಳ್₁]

**ಬಾಯ್ಕಲ್** 'ಬಾಯ್ಕಾಲ್' ನೋ.

**ಬಾಯ್ಕಾಲ್**, ಬಾಯಿಕಲು, ಬಾಯಿಕಲ್ಲು, ಬಾಯಿಕಾಲು, ಬಾಯಿ ಕೋಲು, ಬಾಯ್ಕಲ್, ವಾಯ್ಕಾಲು (ನಾ). ಕಾಲುವೆ ; ನಾಲೆ : ಅನ್ತೆ ಬನ್ದ ಕಳರಾ ಬಾಯ್ಕಾಲುಳ್ ಕೂಡಿ . . . ಅನ್ತೆ ಬನ್ದ ತೊಱೆ ಯುಳ್ ಕೂಡಿತ್ತು (ಮೈಆಂ. ೧೯೩೬, ೩೩-೨೪; ಸು. 700 ?). **ಬಾಯಿಕಲು:** ಮೂಡಲು ದಿಬ್ಬ ಬಡಗಲು ಪಳ್ಳ ಪಡವಲು ಬಾಯಿಕಲು ತೆಂಕಲು ಭಂಡಿ ವಟ್ಟೆ (ಸೌಇಇ. IX-i. ೧೬೫-೬೯ ; 1099) ; ತೆಂಕಲು ಕಱುಂಬಗದ್ದೆಯ ಬಾಯಿಕಲು (ಸೌಇಇ. IX-i. ೩೯೩-೫೬ ; 1226). **ಬಾಯಿಕಲ್ಲು :** ಹಿರಿಯ ತುಂಬಿನ ಬಾಯಿಕಲ್ಲ ಮೂಡ ದೆಸೆಯ ಮೊದಲೇರಿಯ ಗದ್ದೆ (ಮೈಆಂ. ೧೯೩೬. ೧೬-೯೬ ; 1196) ; ತುಂಬಿನ ಬಾಯಿಕಲ್ಲಿಂದಂ ಪಡುವಲು ಮೇರೆ (ಎಕ. XVI, ಶಿಕ್ಕನಾ. ೭೦-೦೬ ; 1235) ; ಮಿಡಿಚ್ಚೆಯ ಬಾಯಿಕಲ್ಲಿಂ ತೆಂಕಲು ಕೋಡಿಯ ಗೋವಿಂದ ಶಣಂಗಿಂ ಮೂಡಲು ಗದ್ದೆ ಮತ್ತರು ೧ (ಸೌಇಇ. IX-i, ೩೭೦-೯೮ ; 1259). **ಬಾಯಿಕಾಲು :** ವರುಶಕ್ಕೆ ಗದ್ಯಾಣಂ ಮೂವತುವನುವು ಆ ಕೆಱೆಗೆ ಆ ತುವ್ಬಿಂಗೆ ಆ ಬಾಯಿಕಾಲಿಗೆ . . . ಆ ಮಹಾಜನಂಗಳು ನಡೆಸುತೆ ಬಹರು (ಎಕ. VI, ಕಡೂರು. ೯೩-೦೬ ; 1259 ?). **ಬಾಯಿಕೋಲು :** ಮಚಣನ ಕೆಱೆಯ ತಾಯಿವಳದಿಂದು ಬಡಗಲು ಅಲಕೆಱೆಗೆ ಹೋದ ಬಾಯಿಕೋಲಿಂ ದೇವಿಹೊಲದ ಕಟ್ಟೊಬೆಯಿಂ ಅಲಕಱ ವೊಳಗೆಱೆಯಿಂ ಮೂಡಲು ಯಿಂತೀ ಚತುಃ ಸೀಮೆಯ ವೊಳಗಣ ಭೂಮಿ (ಎಕ. XIV, ಎಳಂದೂ. ೦೬೭-೦೪ ; 1631). **ಬಾಯ್ಕಲ್ :** ಬೂಚಿಸೆಟ್ಟಿಯ ಕೆಱೆಯ ಪಡುವಣ ಬಾಯ್ಕಲ್ಲ ಬಳಿವಿಡಿದು ಹುಣಿಸೆಯ ಬಾಯ್ಕಲ್ಲಿಂ ತೇೞಲು ಗದ್ದೆ ಮತ್ತರು ೨ ಹೊಸಗೆಱೆಯ ಬಾಯ್ಕಲ್ಲಿಂ ಮೂಡಲು ಗದ್ದೆ ಕಮ್ಮ ೬೦೦ (ಸೌಇಇ. IX-i, ೧೪೫-೩೦ ; 1079). **ವಾಯ್ಕಾಲು :** ಮೂಡಲು ಪಳ್ಳ ವಾಯ್ಕಾಲು (ಕೃಆಸಿ. ೫-೬-೨೯ ; 1088). 'ಕಾಲ್ವಾಯ್' ಪರಾ.
[ಬಾಯ್ + ಕಾಲ್₂./ತಮಿ. ವಾಯ್ಕ್ಕಾಲ್ ; ಮಲ. ವಾಯ್ಕ್ಕಾಲ್]

**ಬಾಯ್ಕುಟುಕು** 'ಬಾಯ್ಗುಟುಕು' ನೋ.

**ಬಾಯ್ಕುಟ್ಟು** 'ಬಾಯ್ಗುಟ್ಟು' ನೋ.

**ಬಾಯ್ಕೇಳ್** (ಕ್ರಿ). ಮಾತು ಕೇಳು ; ಆಜ್ಞಾಧಾರಕನಾಗು ; ವಿಧೇಯ ನಾಗಿರು : ಆಳುವಱಿಡಮುಱುಸಾಸಿರನುಮಾನ್ ಚಿತ್ರವಾಹನನಾಳುತ್ತುಂ ಬಾಯ್ಕೇಳದಿರೆ ಮುನಿದು ಕೊಲ್ಲಿ ಪಲ್ಲವ ನೊಟಂಬಂ ನೊಟಂಬರಾದಿತ್ಯನನ್ ವೆಸಸಲ್ (ಎಕ. VIII, ಸೊರಬ. ೦೦-೩ ; ಸು. 800) ; ಅರಸುಗಳೆಲ್ಲಂ ಬಾಯ್ಕೇಳ್ವರೆಂದುಮಾಶಾಂತರಂಗಳಿಕ್ಕಿದುವೆಂದುಂ ಧರಣಿತಳಂ ಕೀರ್ತಿಸೆ (ಆದಿಪು. ೦೯-೯೯) ; ವರುಣಂ ಬಾಯ್ಕೇಳನೆಂಬೀ ಮುನಿಸನುವಿಸೆ ಮೇಲೆತ್ತಲೆಂದೀಗಳೆಮ್ಮಂ ಬರವೇೞ್ದಂ ದಾನವೇಂದ್ರಂ (ಪಂಪಾಪು. ೧೧-೨೦೩).

**ಬಾಯ್ಕೇಳ್ದಂ** = (ಜಲದುರ್ಗ ಮುಂತಾದುವುಗಳನ್ನು) ವಶ ಪಡಿಸಿಕೊಂಡವನು : ಎಂತಾನುಂ ಸ್ಥಳ ಜಳದುರ್ಗಂ ತವೆ ಬಾಯ್ಕೇಳ್ದ ನೀತನದೆ ದಿಗ್ವಿಜಯಯಾತ್ರ್ಯಂತರೋತ್ಸವಂ (ಶಾಂತಿಪು. ೫-೦೧೦).
[ಬಾಯ್ + ಕೇಳ್]

**ಬಾಯ್ಕೇಳಿಕೆ** (ನಾ). ಬಾಯಲ್ಲಿ ಹೇಳುವ ಮಾತು (?) ; ಪರಾಕು ; ಸ್ವಾಗತದ ಮಾತು (?) : ಬಾಳೆಲಗ್ಗುಡಿ ಪಿಕಪುತಿ ಬಾಯ್ಕೇ [ಶಾಶಾಂ. ಯೇ]ಳಿಕೆ ಮಾಂದಳಿರ ಕೆಂಪು ದೀವಿಗೆಯೆನೆ ಭೂಪಾಳಂ ಬರೆ ಶೋಧಿಪ ವನಪಾಳನವೊಲ್ಮಂದೆ ಬಂದುದಂದು ವಸಂತಂ (ಯಶೋಚ. ೯-೨).
[ಬಾಯ್ + ಕೇಳಿಕೆ₁]

**ಬಾಯ್ಕೇಳಿಸು** (ಕ್ರಿ). ಗೆದ್ದುಕೊಳ್ಳು ; ವಶಪಡಿಸಿಕೊಳ್ಳು ; ತನ್ನ ಆಜ್ಞೆಗೆ ಒಳಪಡಿಸಿಕೊಳ್ಳು : ಆ ಮುನಿರಾಜು ಕರ್ಮಂಗಳಂ ಗಾಳಿಸಿದಂ ಈ ರಾಜರಾಜಂ ಷಟ್ಖಂಡಮಂಡಲಮಂ ಬಾಯ್ಕೇಳಿಸಿದಂ (ಆದಿಪು. ೬-೨೪ ವ); ಮಾಳವಪತಿ . . . ಲೀಲೆಯೊಳೆ ವೀರದೊಳೆ ಬಾಯ್ಕೇಳಿಸುವಂ ಗಡ ಸಮಸ್ತವಸುಧಾತಳಮಂ (ಧರ್ಮಾಮೃ. ೧೦-೨೨೮) ; ರಣವಥೂವಲ್ಲಭಂ ದೇಶ ದೇಶಂ ಗೆಲ್ಲುತಪಟಿನಿಂ ಬಾಯ್ಕೇಳಿಸುತೆ, ಚಂಡಜವದಿಂದಮಿತ್ರಶ್ರೇಣಿ ಸುಗುರ್ತಿಹಂ (ಜಗನ್ನಾಥ. ೭೦-೧೯೯). [ಬಾಯ್ಕೇಳ್ + –ಇಸು₃]

**ಬಾಯ್ಕೊಡು** (ಕ್ರಿ). ಬಾಯಿ ಬಿಡು ; ಬಾಯಿ ತೆರೆ : ಬಿಕ್ಕಿ ಬಿಕ್ಕಿ ಅತ್ತಳು ; ಎದ್ದು ಕುಳಿತಳು ; ಬಾಯ್ಕೊಟ್ಟು ಗೋಳಿಟ್ಟಳು (ಬಡ್ತಿಟ. ೬).
[ಬಾಯ್ + ಕೊಡು₁]

**ಬಾಯ್ಕೊರ್ಚು** 'ಬಾಯಿಕೊರ್ಚು' ನೋ.

**ಬಾಯ್ಗಳೆ** (ಕ್ರಿ). ಬಾಯಿ ಬಿಡು; ಬಾಯಿ ತೆರೆ : ನುಂಗಲೆಂದು ಬಾಯ್ಗಳೆದು ಬರ್ಪಸರಿದಿರೊಳ್ ಪಲ್ಗಿಱಯುತೆ (ಅದ್ಭುತ. ೯೭-೭). [ಬಾಯ್ + ಕಳೆ₁]

**ಬಾಯ್ಗಾಳಗ**, ಬಾಯಿಗಾಳಗ (ನಾ). ಬರಿಯ ಮಾತಿನ ಯುದ್ಧ ; ವಾಕ್ಕಲಹ: ಆಂ ಬಿಲ್ಗಾಳಗಮೆಂದೇ ಬಗೆದೆಂ ಬಾಯ್ಗಾಳಗಮನೀಗಳಱಿದೆಂ (ಶಾಂತಿಪು. ೯-೫೦ ವ). **ಬಾಯಿಗಾಳಗ :** ಕಕ್ಕ ಮಾಡುವುದು ಮಗನಿಗಾಗು ತ್ತಿರಲಿಲ್ಲ, ಮಗನವು ಕಕ್ಕನಿಗಾಗುತ್ತಿರಲಿಲ್ಲ. ಯಾವಾಗಲೂ ಬಾಯಿಗಾಳಗ ನಡೆದಿರುತಿತ್ತು (ಶ್ರೀವಮೃ. ೬). [ಬಾಯ್ + ಕಾಳಗ]

**ಬಾಯ್ಗುಟುಕು**, ಬಾಯ್ಕುಟುಕು (ನಾ). ಒಂದು ಸಲ ಬಾಯಿ ತುಂಬ ಹಾಕಿಕೊಳ್ಳುವಷ್ಟು ಆಹಾರ ; ಒಂದು ತುತ್ತು : ಸಲಿಸುವೆಂ ಇವರಸುವ ಬಾಳ ಬಾಯ್ಗುಟುಕೆಂದು (ವೀರರ. ಹ. ೯೯೩-೨೮). **ಬಾಯ್ಕುಟುಕು :** ಕೊಡು ತಂದೇ, ಇನ್ನೊಂದೇ ಒಂದೇ ಬಾಯ್ಕುಟುಕು (ಅರಳು. ೩-೦೦). [ಬಾಯ್ + ಕುಟುಕು₁]

**ಬಾಯ್ಗುಟ್ಟು**, ಬಾಯ್ಕುಟ್ಟು (ಕ್ರಿ). ಹರಟು ; ಗಳಹು: ಪಂಪಾ ಸನ್ನಿಧಾನದ ಸಮುಖದಲ್ಲಿ ಹಾಗೆ . . . ಆ ಸಲ್ಗೆಯಿಂದ ಬಾಯ್ಗುಟ್ಟದಿರಿ ! (ಪಟ್ಟಿಶ. ೧೮೪-೦೬). **ಬಾಯ್ಕುಟ್ಟು :** ಪುಟ್ಟೊಗುರುದಂ ಕಾಣ್ಬನೆ ಬಟ್ಟೆಯನಮಳಾಕ್ಷನಂತೆ ಸದ್ದಲ್ಲಿಪ್ಪಿಯೆ ಬಾಯ್ಕುಟ್ಟದೆ ಕಾಣ್ಗುಂ ಧರ್ಮದ ಬಟ್ಟೆಯ ನೆಱೆ ಕಾಣಲಱಿವ[ಯ]ನಕ್ಕು ಮದಾಂಧಂ (ಅರ್ಹನೇ. ೯-೫೫).
[ಬಾಯ್ + ಕುಟ್ಟು₁]

**ಬಾಯ್ಗೂಟ** (ನಾ). ಮುತ್ತಿಡುವಿಕೆ ; ಚುಂಬನ : ಬಾಯ್ಗೂಟದೊಳ ಟ್ಟಿಱಿ ಪಡೆದು ಕೂಟದೊಳುಣ್ಮಿದ ಬೆಚ್ಚ ತಟಕ್ಕಿಯೊಳ್ ಕೂಟಸುಖಂಗಳಂ ಪಡೆದನೇಂ ಚದುರಂ ಗಳ ಬದ್ದದಲ್ಲಟಂ (ಕಂಪಜಾ. ೩-೬೨); ಮನಸಪ ನಸುಲಜ್ಜೆಯಂ ಮಾಣಿಸಿದುದು ಬಾಯ್ಗೂಟದಿಂಪು (ಚಂದ್ರಪು. ೬-೮೩).
[ಬಾಯ್ + ಕೂಟ₁]

**ಬಾಯ್ಗೂಡು**, ಬಾಯಿಗೂಡು (ಕ್ರಿ). ೧. ಒಕ್ಕೊರಲಾಗು; ಏಕಕಂಠ ವಾಗು ; ನೋಡಿದರಾನಂದಿಸಿದರು ಪೌರರು ಬಾಯ್ಗೂಡಿ ಬಣ್ಣಿಸಿ

ಪೊಗಳಿದರು (ಕುಣಸಾಂ. ೬-೧೪೬). ೨. (ಆಯುಂಧ ಮೊದಲಾದುವುಗಳ) ಬಾಯಿ ಅಥವಾ ಧಾರೆ ಹರಿತವಾಗು,– ಮಸೆದು ತೀಕ್ಷ್ಣವಾಗು : ಬಾಯುೂಡಿದುದಾ ಕುಸುಮಾಸ್ತ್ರನ ಚಕ್ರಮಿದೆಂಬೆಸಕವನಾಳ್ದತ್ತು ಪಸದನಂ ದ್ರೌಪದಿಯಾ (ಸಂಪಭಾ. ೩-೯೭). ೩. ಮುದ್ದಿಸು ; ಚುಂಬಿಸು: ಸಾರ್ಚಿ ಬಾಯುೂಡಿ ವಿಲಾಸದಿಂ ಕೆಲೆವ ಪಾರಿವಂ . . . ಕುಕಿಲ್ವ ಪಿಕಂ ವಿಯೋಗಿಗೇಂ ಮಾಡದೆ ಪೋಕುಮೇ ಮದನನಂಡಲೆಯಂ (ಕಬಕಾಂ. ೧-೩೨); ಇಲ್ಲಿ ಬಾಯುೂಡಿದೆವದಿಲ್ಲಿ ಸರಸಕ್ಕೆಳಸಿ ಕೂಡಿದೆವು (ಪಂಣಾರಾ. ೩-೨-೨೯). ೪. (ಲೆಕ್ಕ ಖರ್ಚು ಮುಂತಾದಂವು) ಹೊಂದಾಣಿಕೆಯಾಗು ; ಸರಿದೂಗು : ಇಷ್ಟು ವೆಚ್ಚಗಳು ಬಾಯುೂಡಿಯುೂ ಉಳಿತಾಯವಿತ್ತು (ಕೃ೯ಮೂಕ್ರ. ೨೪೪). **ಬಾಯಿಗೂಡು :** ೩. ಮಡಿಸಿದೆಲೆಯು ಗಳಿಗೆಯು ಕೆಂಬಲ್ಲುದಿಗಡಸಿ ಬಾಯೊಳು ಬಾಯಿಗೂಡಿ ತುಡುಕುತ್ತ ಸವಿಮುತ್ತ ನಿವಗೀವ ಪುಣ್ಯವ ಪಡೆವುದೆಂದಿಗೆ ನಾನು (ಕೆಂಪಪ. ೯-೧೨೩). ೪. ಖರ್ಚು– ಜಮಾ ಬಾಯಿಗೂಡಿತು (೦೬ಪಹ. I. ೦೭೩). [ಬಾಯ್ + ಕೂಡು₁]

**ಬಾಯ್ಗೆಡು** (ಕ್ರಿ). ೧. ಬಾಯಿ ರುಚಿಯಿಲ್ಲದಾಗು, –ರುಚಿಗೆಡು : (*). ೨. ಕಳವಳಿಸು ; ದುಃಖಿಸು : ಕುತ್ಸಿತರ್ . . . ಪರೀಷಹಂಗಳಡಸಿ ದಂದು ದೆಸೆಗೆಟ್ಟು ಬಾಯ್ಗೆಟ್ಟು ಮಱುಗುತ್ತಿರ್ಪರ್ (ಧರ್ಮಾಮೃ. ೦-೦೭೪). 'ಬಾಯಟಿ' ಪರಾ. ೩. ಕೆಟ್ಟ ಮಾತನ್ನಾಡು ; ದೋಷಾರೋಪಣೆ ಮಾಡು (?) : ಉನ್ಮತ್ತವಪ್ಪ ವಿಶ್ವಾಸಘಾತುಕಂಗೆ ಮಂದಿಸಿ ನಿಂದಿಸು ವಂಗೆ ಹಿಂದೆ ಮುಂದೆ ಬಂದುದ ಬಾಯ್ಗೆಡುವಂಗೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಸಂಧಿಸನವರಿಗೆ (ವಚಸಂಪ. ೨೪೦-೯೭). [ಬಾಯ್ + ಕೆಡು₁]

**ಬಾಯ್ಗೆಯ್** (ಕ್ರಿ). ದೊಡ್ಡ ಧ್ವನಿ ಮಾಡು ; ಅಬ್ಬರಿಸು : ವರಾಹ ರೂಪದ ಮೂಕದಾನವಂ . . . ಬಾ[ಯ್ಗೆ]ಯೆ ದಿಗ್ಗಜಂ ಪೆಱಗಿಟ್ಟುವಾಂ [ತ]ರದೆ ತೊಟ್ಟನೆ ದಾಡೆಗುಟ್ಟೆ ಕಟಲ್ದು ತಾರಗೆಗಳ್ ನಭಂಬೆರಸು ಬಿರ್ದುವು (ಶಂಪಭಾ. ೮-೦೫) ; ಇನ್ನು ನಿಮ್ಮ ಸಟೆಗಳ ಸರಗಳನ್ನು ಪವಣಿಸಿ ಬಾಯ್ಗೆಯ್ದು ಕತೆಗುಟ್ಟಿರಿ (ಕಟ್ಕ೬. ೩೦-೦೨). [ಬಾಯ್ + ಕೆಯ್₁]

**ಬಾಯ್ಗೇಡಿ** (ನಾ). ಬಾಯಿಗೆ ಬಂದಂತೆ ಮಾತಾಡುವವನು,– ಗಳಹುವವನು : "ಜಲ್ಪಾಕ, ವಾಚಾಲ, ಬಹುಗರ್ಹ್ಯವಾಕ್–ಬಾಯ್ಗೇಡಿ" (ಶಾಶಂಶ. *). 'ಬಾಯ್ಗೇಡಿತನ' ಪರಾ. [ಬಾಯ್ + ಕೇಡಿ₁]

**ಬಾಯ್ಗೇಡಿತನ** (ನಾ). ಬಾಯಿತೀಟೆ ; ಬಾಯಿಚಪಲ : ಬಾಯ್ಗೇಡಿ ತನದೊಳೇನೆಂದಾದೊಡಂ ಜರೆದು ಬಯ್ಗುವೋ ಪಟುಭಟರ್ (ಕೆಬಕ್ರ. ೪೯-೦೩). [ಬಾಯ್ಗೇಡಿ + – ತನ]

**ಬಾಯ್ಗೊಬ್ಬು, ಬಾಯಿಕೊಬ್ಬು** (ನಾ). ಮಾತಾಡದೆ ಇರಲಾಗದಂತಹ ಚಪಲ ; ಬಾಯಿತೀಟೆ : ಬಾಯ್ಗೊಬ್ಬಿನಿಂದಲನ್ಯರನು ಜಱಿಯ ಲಾಗದು (ತಿಮ್ಮಣಾಂ. ೬-೦೭) ; ಪಂದೆಗಳ ಬಾಯ್ಗೊಬ್ಬು ಪಿಂದೆ ನಾರಿಯ ರೆಡೆಯೊಳ್ (ಅದ್ಭುತ. ೪೭-೦೦). **ಬಾಯಿಕೊಬ್ಬು :** ಬಯ್ವ ಜನರು, ಜರಿವ ಜನರು, ಅವರಿಗೇನು, ಬಾಯಿಕೊಬ್ಬು ನೋವ ತೆಗೆವರೆ ? (ಕಬಿಸೋ. ೬೦-೨೦). [ಬಾಯ್ + ಕೊಬ್ಬು₂ (<ಕೊರ್ವು₂)]

**ಬಾಯ್ಗೊಲೆ** (ನಾ). ಬಾಯಿಂದ ಕಚ್ಚಿ ಕೊಲ್ಲುವಿಕೆ : ಕಯ್ಗೊಲೆ ಬಾಯ್ಗೊಲೆ . . . ಕೋಲ್ಗೊಲೆಯಂ ಕಲಿಪ ಕಡುಬಿನ್ನಣಂಬಡೆದು ಕಟ್ಟಾಳ್ತನಂಬೆತ್ತಿಂತು ಗಜಾರೋಹಣಧುರೀಣರಾದಾ ಧೋರಣರ್ ನೆರೆ ನೆರೆದು (ರಾಜಶೇ. ೬-೦೦ ವ). [ಬಾಯ್ + ಕೊಲೆ]

**ಬಾಯ್ಗೊಳ್** (ಕ್ರಿ). ೧. ಧ್ವನಿಮಾಡು ; ಕೂಗು : ತಳಿತ ಪಾಲ್ಮರ ನೇಱಿ ಪಿಂಗಲಿ ಬಳಿದು ಬಾಯ್ಗೊಂಡವು ಸರಾಗದಿನೊಲಿದು ದಂಪತಿ ತಾಱನಿತ್ತವು ಕರಿಯ ಹಕ್ಕಿಗಳು (ಕೊರಠ. ೦-೬-೬). ೨. ಬಾಯಲ್ಲಿ ಸೇರು; ಬಾಯಿಮಾತಾಗು : ಮಹಾಕವಿಯಾದ ಅವನ ಹೆಸರನ್ನೊಂದಿದ ಆ ನಾಮವು . . . ಮತ್ತಿನವರ ಬಾಯ್ಗೊಂಡು ರೂಢವಾದುದಾಗಿರ ಬೇಕು (ನಾಡೋಜ. ೦೬೨). [ಬಾಯ್ + ಕೊಳ್₁]

**ಬಾಯ್ಚಳಕ** (ನಾ). ಮಾತಿನಲ್ಲಿರುವ ಚಾಲಾಕು,– ಜಾಣ್ಮೆ,– ಕೌಶಲ ; ವಾಕ್ಚಾತುರ್ಯ : ಕೈಚಳಕ ಬಾಯ್ಚಳಕದಿಂದ ಸಮಾಜದ ದುಡ್ಡನ್ನು ಹೀರಿ ಸ್ವಾರ್ಥ ಸಾಧಿಸುತ್ತಿರುವ ಶೀಲಭ್ರಷ್ಟರ ಕುಲ, ಯಾವ ಕುಲ ? (ಮುಕ್ತಕ್ರ. ೦೬೪). [ಬಾಯ್ + ಚಳಕ₂]

**ಬಾಯ್ಚು** 'ಬಾಚುರ್' ನೋ.

**ಬಾಯ್ತರೆ** 'ಬಾಯ್ದೆಱೆ₁' ನೋ.

**ಬಾಯ್ದಂಬುಲ** (ನಾ). ಬಾಯಲ್ಲಿಯ ತಾಂಬೂಲ; ಎಂಜಲು : ನಿನಗೆ ಕಿಂಕರವೆರಡು ಸಂತತಿಯೆನಿಸಲೊಲ್ಲದೆ ನೀನು ದುರಿಯೋಧನನ ಬಾಯ್ದಂಬುಲಕೆ ಕೈಯಾನುವರೆ ಹೇಳು (ಕುಪ್ರಾ‌ಉ. ೦೦-೬). [ಬಾಯ್ + ತಂಬುಲ]

**ಬಾಯ್ದಣೆ** (ಕ್ರಿ). ಬಾಯಿ ಸೋತುಹೋಗು : ಬಾಯ್ದಣೆಯೆ ಬೈಗುಳಿನಲುಭಯದ ಕಯ್ದುಗಾಱರು ನೀಗಿದರು ನಿಜಪತಿಯ ಹಣರುಣವ (ಕುಪ್ರಾ೩. ೦೯-೦೦). [ಬಾಯ್ + ದಣಿ₁ (< ತಣಿ₁)]

**ಬಾಯ್ದಾರ** (ನಾ). ಚೀಲ, ಹಸಿಬೆ ಮೊದಲಾದುವುಗಳ ಬಾಯನ್ನು ಕಟ್ಟುವ ದಾರ : ಚಿನ್ನದ ಚೀಲಕ್ಕೆ ರನ್ನದ ಬಾಯ್ದಾರ (ಜಗೀತ. ೨೦). [ಬಾಯ್ + ದಾರ₁]

**ಬಾಯ್ದಾರೆ** (ನಾ). ಕತ್ತಿ, ಕುಡುಗೋಲು ಮೊದಲಾದುವುಗಳ ಹರಿತವಾದ ಅಂಚು : "ಬಾಯ್ದಾರೆಗಳೆಂದಸಿಧಾರೆಗಳೊಳ್" (ಕರ್ಣಾಟ. ೩೯); ಬಾಯ್ದಾರೆ ನಿಲೆ ಕುಮಾರಂ ಪೊಯ್ದೊಡೆ . . . ಪಱಿದುದಾ ವಂಶವನಂ (ಶಂಪುಮಾ. ೯-೨೩); ಬಾಳ ಬಾಯ್ದಾರೆಯು ಸೋಂಕೆಂದು ಕದಳೀದಳಸ್ಪರ್ಶನಕ್ಕೆ ದರ್ಪಂಗೆಟ್ಟೊಪ್ಪಂಗುಂದುತ್ತುಂ (೧೦೩. ೪-೦೦೬೮). [ಬಾಯ್ + ದಾರೆ₁]

**ಬಾಯ್ದುಂಬಿಸು** (ಕ್ರಿ). ಬಾಯಲ್ಲಿ ಗಿಡಿ, – ತುರುಕು : ಬಿಸಿಯ ಮಳಲಂ ತರಿಸಿ ಬಾಯ್ದುಂಬಿಸಿದಪೆಂ ನಾನು (ಬಸಕ್ರ. ೦೦-೧೯). [ಬಾಯ್ + ತುಂಬಿಸು]

**ಬಾಯ್ದುತ್ತು, ಬಾಯಿದುತ್ತು** (ನಾ). ಬಾಯಿಗೆ ನೀಡುವ ಆಹಾರ; ಬಲಿ ; ಆಹುತಿ : ಶಸ್ತ್ರಾವಳಿಯ ಬಾಯ್ದುತ್ತುಗಳ ಸೆಳೆಯದಿರೆಂದರುಬ್ಬಿ ನಲಿ (ಕುಪ್ರಾ೩. ೨-೦೬). **ಬಾಯಿದುತ್ತು :** ಕಾಲನ ಬಾಯಿದುತ್ತಾಗಿ ಸತ್ತು ಹುಟ್ಟುವರೆಲ್ಲ . . . ಎತ್ತ ಬಲ್ಲರು ಲಿಂಗ ಭೋಗೋಪಭೋಗಿ ಶರಣನ ಲಿಂಗಸುಖವ ? (ಪೋ೯ವಸಾ. ೦೩೨ ಕೃ ಸ್ವಾ ವಚ). [ಬಾಯ್ + ತುತ್ತು₂]

**ಬಾಯ್ದೆಗೆ, ಬಾಯಿತೆಗೆ** (ಕ್ರಿ). ೧. ಬಾಯನ್ನು ತೆರೆ ; ಬಾಯಿ ಬಿಡು : ಸುರಿವ ಖಂಡದ ರಕುತಧಾರೆಗೆ ತರತರದಿ ಬಾಯ್ದೆಗೆದು ಶಾಕಿನಿಯವರ ಸಮೂಹವು ಬಳಿಯಲೈದಿತು ಪಾರ್ಥನಂದನನ (ಕುಪ್ರಾದ್ರೋ. ೬-೪೦) ; ಅಗಣಿತಾತ್ಮಕನೆನಿಪ ಹರಿಚರಿತಗಳನಂತವ ಮುನಿವರನು ಬಾಯ್ದೆಗೆದು ಪೇಳಲು ಶೇಷಗೆಯು ಶ್ರುತಿನಿಕರಕಳವಲ್ಲ (ಪಶಾಗ. ೦೦-೬-೨). ೨. ಬಿರಿ; ಬಿರುಕುಬಿಡು : ಅರಮನೆಯೊಳಗೆ ನೆಲ ಬಾಯ್ದೆಗೆದುದು (ಶಾಕ್ಟಶಾ. ೨೦-೩೪). ೩. ಅರಳು ; ವಿಕಾಸವಾಗು : ಮುಗಿದು ದಬ್ಬಾಳಿ ಬಾಯ್ದೆಗೆದುದುತ್ಪಲನಿಕರಮುಗಳ್ಪುದು ರಥಾಂಗಕುಲಂ (ಚಂಪಕ್ರ. ೪೯-೨೯). **ಬಾಯಿತೆಗೆ :** ೪. ಮಾತನಾಡಲು ಆರಂಭಿಸು; ಸಭೆಯಲ್ಲಿ ಆ ಹಿರಿಯರು ಬಾಯಿತೆಗೆದ ಕೂಡಲೆ ಜನಸಂದಣಿ ತನ್ಮಯತೆಯಿಂದ ಆಲಿಸಿತು (ಲೂಕ). [ಬಾಯ್ + ತೆಗೆ₁]

**ಬಾಯ್ದೆರೆ₁** 'ಬಾಯ್ದೆಱೆ₁' ನೋ.

**ಬಾಯ್ದೆರೆ₂** 'ಬಾಯ್ದೆಱೆ₂' ನೋ.

**ಬಾಯ್ದೆಱಿಸು** (ಕ್ರಿ). ೧. ಬಿರಿಯುವಂತೆ ಮಾಡು ; ಬಿರುಕು ಬಿಡುವಂತೆ ಮಾಡು : ಬಳಭಾರಂ ಭೂಮಿಯಂ ಬಾಯ್ದೆಱಿಸೆ . . . ಪರ್ವಿತ್ತು ಮರವಥಮನಾ ಸೈನ್ಯಧೂಳೀತಮಿಸ್ರಂ (ಜಗಪು. ೦೩-೦೪). ೨. (ಆಸೆಯಿಂದ) ಬಾಯಿಬಿಡುವಂತೆ ಮಾಡು ; ಹಂಬಲಿಸುವಂತೆ ಮಾಡು : ಗಾಳಿಯೊಲಪ್ಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ ಬಾಳೆ ಬಾಯ್ದೆಱ[ಱ]ಸುವವು ಬಿರಿವಣ್ಣಿನ ರಸಾವಳಿಗೆ ಬಾಲಕಿನ್ನರಿಯರನು (ಕೊರಡಾ ೩-೩-೦೩). [ಬಾಯ್ + ತೆಱಿಸು (< ತೆಱಿಯಿಸು)]

**ಬಾಯ್ದೆಱೆ**$_1$, ಬಾಯಿತೆರೆ, ಬಾಯಿದೆಱೆ$_1$, ಬಾಯ್ತೆರೆ, ಬಾಯ್ದೆರೆ$_1$ (ಕ್ರಿ). ೧. ಬಾಯನ್ನು ತೆಗೆ,— ಬಿಚ್ಚು ; ಬಾಯಿಬಿಡು : ಆ ಮಿಟ್ಟು ಪೋ ಬಾಯ್ದೆಱೆದತ್ತು (ಶಾಂತಿಪು· ೪-೧೨) ; ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆಱೆಯೆನಯ್ಯಾ (ಬಸವ. ೪) ; ಮಾರಿ ಬಾಯ್ದೆಱೆದಳೋ ಮಹಾದೇವ (ಕುಮಾರವ್ಯಾ. ಶಾಂ· ೨೯೩-೦೦). ೨. ನುಡಿ ; ಮಾತಾಡು : ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಶಂಕರಾ· ೬-೫೮) ; ಮತಿವಂತಂಗೆರ್ದೆದೆಱೆದನಲ್ತೆ ಬಾಯ್ದೆಱೆದಾತಂ (ಶಾಂತಿಪು· ೨-೫೬) ; ಬಾಯ್ದೆಱೆಯಲಂಜಿತು ಸಭೆ (ಸಿಶಾಗ. ೪-೪-೦೯). ೩. ಬೇಡಿಕೊಳ್ಳು ; ಅಂಗಲಾಚು ; ಯಾಚಿಸು : ಹುಯ್ಯಲ ಕಂಡು ಬಿರುತ್ತೋಡಿ . . . ಬಾಯ್ದೆಱೆವವಂ ರಾಜನೇ ಹಗರಣದ ರಾಜನಲ್ಲದೆ (ಜಿನಪು· ೯-೦೨). ೪. ಬಯಸು ; ಹಂಬಲಿಸು : ಪುದಿದುರಿಗಣ್ಣನಾಣೆಯನದೇಪೊಗಟ್ವಿಂ ಮುಗುಳೆಂದು ಮುಟ್ಟಬಾರದು ಬನಮೆಂದು ಬಾಯ್ದೆಱೆಯಬಾರದು ಸಂಪಗೆಯೆಂದು ಸೂಡಬಾರದು (ಕಬ್ಬಿಗ. ೦೯೬) ; ಸುತನ ಬರವಿಗೆ ಬಾಯ್ದೆಱೆದ ತೆಱದಿ ಪರಮಸತಿಗಾಗುಳಿಕೆ ಬಂದುದು (ಜಿನಪು. ೩-೨). ೫. ಅರಳು; ವಿಕಾಸವಾಗು : ಮುಗುಗಿದವು ಕೋಕ ಕೋಕನದಂಗಳಾಗ ಬಾಯ್ದೆಱೆದುವು ಚಕೋರ ಕೋರಕಕುಮುದರಾಜಿಗಳ್ (ಶೃಂಗಾ. ೨೬-೦೪). **ಬಾಯಿತೆರೆ :** ೧. ರುಕ್ಮಿಣಿಯೂ ಗರ ಬಡಿದವಳಂತೆ ಬಾಯಿ ತೆರೆದುಕೊಂಡು ನೋಡ್ತಿದ್ದಳು (ಪರ್ವ.ಸ. ೨೦೬). ೨. ಭಾವ ಬಾಯಿ ತೆರೆಯುವ ಸ್ಥಿತಿಯಲ್ಲಿರಲಿಲ್ಲ (ಜಾರುದಾ· ೯೨). ೩. ಎರಡನೆಯವರಿಗೆ ನಾನು ಎಂದೂ ಬಾಯಿ ತೆರೆದವನಲ್ಲ (ಮುಂಜಯು· ೪-೪೩). ೪. ಪ್ರತಿಯೊಬ್ಬನೂ ಲಂಚಕ್ಕಾಗಿ ಬಾಯಿ ತೆರೆದುಕೊಂಡಿರುವಾಗ, ನನ್ನೊಬ್ಬನಿಂದ ಲಂಚನಿರ್ಮೂಲನ ಹೇಗೆ ತಾನೆ ಸಾಧ್ಯ? (ಕೃನಕು. ೫೬೬). **ಬಾಯಿದೆಱೆ**$_1$ **:** ೧. ಪ್ರಾಣಪದವಾದಿರವಿಗಲ್ಲದೆ ಬಾಯಿದೆಱೆಯದು ಕರಮೆಸೆವ ಸಿಂಪೊಂದು ನೆನವುತಮಿಹುದು ಮಳೆಗಳಿಗೆ (ಬಸವು. ೫೧-೨೪). **ಬಾಯ್ತೆರೆ :** ೧. ಜಯಸೇನನು ಮಾಧವಿಯೆಂದು ಹೇಳುವುದಕ್ಕೆ ಬಾಯ್ತೆರೆಯುವಷ್ಟರಲ್ಲಿ ಅವಳು . . . ಮಾತಾಡಬಾರದೆಂದು ಸಂಜ್ಞೆ ಮಾಡಿದಳು (ಮಚಿಸ. ೮೮) ; ಗಳಗಳನೆ ಬಾಯ್ತೆರೆದು ಶಾಯಿಯಳುತಿಹಳು (ಕಾಲೂರ· ೦೬೨-೩೮೫). ೨. ಸಯ್ತುರ್ಪುದೀಗ ನೀಂ ಬಂದಾಗ ನೋಳ್ಪಂ ಕಯ್ಪಿಡಿಯೊಳಳಿವರ್ಪುದೊಳ್ತಿತನೆ ಬೀಳ್ಕೊಂಡ ಬಾಯ್ತೆರೆಯದೆಯೆ ಕಾಳು (ಕಾಲೂರ· ೦೪೫-೩೦೫). ೩. ಜೆಂದೆಂಗು ತಲೆದೂಗೆ ಕೆಂದಳಿರ್ ಬಾಯ್ತೆರೆಯೆ (ಕಾಲೂರ. ೬೭-೦೦೬). **ಬಾಯ್ದೆರೆ**$_1$ **:** ೧. ಬಹು ಗುಣಿತ ಜನಗಣದ ಸಂಸ್ತುತಿಯ ಧವಳಧಾರಾಸ್ವಾತಿವರ್ಷಕ್ಕೆ ಬಾಯ್ದೆರೆಯುತೆನ್ನ ಹೃದಯದ ಭಕ್ತಿಶುಕ್ತಿಯಲಿ ಮುತ್ತುಗಳ ರಚಿಸಿ ಕೋದಿಹೆ ವರಣಮಾಲೆಯಂ (ಚಿತ್ರಾಂಗ. ೩೬-೦೦೦೩) ; ಕಟ್ಟಳಲ ಬಿಚ್ಚಿ ಕರು ಕರೆಯೆ ಬಾಯ್ದೆರೆದು (ಕಾಲೂರ· ೬೭-೦೦೬). ೨. ದಾರಿಗನು ಬಾಯ್ದೆರೆಯುವುದರೊಳಗಾಗಿ ಮೂವರು ಸೈನಿಕರೂ, ಸೈನ್ಯಾಧಿಪತಿಯೊಬ್ಬನೂ . . . ಮುಂದೆ ನಿಂತರು (ಮಚಿಸ. ೬). ೪. ಕುದಿಯಿಲ್ಲದೆ ಎಸರಿಲ್ಲದೆ ಕಸುಕಿಗೆ ಬಾಯ್ದೆರೆದವು (ನಂಮಯು. ೨೫-೪). [ಬಾಯ್ + ತೆಱೆ$_1$]

**ಬಾಯ್ದೆಱೆ**$_2$, ಬಾಯಿದೆಱೆ$_2$, ಬಾಯ್ದೆರೆ$_2$ (ನಾ). ೧. ಬಾಯನ್ನು ತೆರೆದಿರುವ ಸ್ಥಿತಿ; ತೆರೆದ ಬಾಯಿ : ಲಲನೆ ಮುದ್ದಾಡುತ್ತ ಬಾಯ್ದೆಱೆಯೊಳಗೆ ಕಾಣಿಸೆ ಸಕಲಭುವನಾವಳಿಯನು (ನಿಶಾಗ. ೨-೩-೨೩). ೨. ತುಟಿ ; ಅಧರ : ಮಿಸುಗುವ ತನ್ನ ಬಾಯ್ದೆಱೆಯೊಳಾಲದ ಪಣ್ಣನೆ ಮೆಯ್ಯ ಬಣ್ಣದೊಳ್ ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪೋಲ್ತು ನೋಡ ಮಾನಸೆಯುಣಮಲ್ಲಿಕೆ (ಆದಿಪು· ೦೨-೩೮) ; ಬಾಯ್ದೆಱೆಯಂ ಧವಳಿಸೆ ನಿಜದಂತಕಾಂತಿಸಂತಾನಂಗಳ್ ಪೂರ್ಣೇಂದುವದನೆ . . . ನೆಱೆ ನುಡಿದಳ್ (ಮಲ್ಲಿಪು· ೪-೯೬) ; ಮಾತನಾಡಿದ ಬಾಯ್ದೆಱೆಯ ಚೆಲ್ವನೆ ಕಂಡು ಸೋತನೀಶ್ವರ ಮನದೊಳಗೆ (ಪ್ರೋಹಚ. ೨೫-೦೪). ೩. ಬಿರುಕು; ಬೀಡೆ : ಎಱೆಯ ಭೂಮಿಯ ಬಾಯ್ದೆಱೆ ಧಾನ್ಯಮಾನ್ಯರ ಕರೆವ ಗೋಳಿಗೆ ಗಂಡು ಮೊರೆವ (?) . . . ನಾಮಾಂಕಿತ ವರವೃಕ್ಷ ವಿಪಿನದೊಳಿಹವು (ಪ್ರೋಹಚ. ೬-೩). ೪. ಬಾಗಿಲು ; ದ್ವಾರ : 'ಚೆಂಬಾಯ್ದೆಱೆ' ಪರಾ. **ಬಾಯಿದೆಱೆ**$_2$ **:** ೫. ಬಾಯಿ ; ವದನ ; ಮುಖ : ಬಾಯಿದೆಱೆಯಿ ನಾಣೆಯಾಯ ತಪ್ಪದ ಗೀತಗಾಯಕಿಯರುಗಳೊಪ್ಪಿದರು (ಪ್ರೋಹಚ. ೦೯-೪೪). **ಬಾಯ್ದೆರೆ**$_2$ **:** ೧. ಭರದಿಂದ ಯೆಕ್ಕಲನ ಹೊಕ್ಕಿರಿದು ಕರಡಿ ಬಾಯ್ದೆರೆಯ ಮುಸುಡಂ ಮುರಿಯಲಿಕ್ಕಿ (ನವಮೋ· ೦೬-೨೩). ೨. ಮೊನೆಯ ನಗೆ ಬಾಯ್ದೆರೆಯ ಸೊಂಪ ಬೀರಿದುವು (ಕಾಲೂರ. ೬೯-೦೨೦). ೬. ಬಾಯಿಮಾತು ; ಬರೆಯದೆ ಇರುವ ಬಾಯ್ದೆರೆಯಾಗಿ ಹರಿದು ಬಂದ ಮತೀಯ ಆಚರಣೆಗಳ ಕಟ್ಟಳೆಗಳು, ಹಾಡುಗಳು, ಗಾದೆಗಳು ಸಹ ಸಹಾಯ ಮಾಡಬಹುದು (ಜಾನಗೀ· ೫೦) ; ನನಗೆ ನಿಮ್ಮ ಆಸ್ತಿಯಿಂದ . . . ತೊಂದರೆಯಿಲ್ಲವೆಂಬುದು ಖಾತ್ರಿಯಾದ ಬಳಿಕ ಮಾತ್ರ ಕೊಟ್ಟೇನು. ಅದು ಬಾಯ್ದೆರೆ (ಮುಗಿಯು. ೦೯೯). [ಬಾಯ್ + ತೆಱೆ$_2$]

**ಬಾಯ್ಧಾರೆ**, ಬಾಯಿಧಾರೆ, ವಾಯಿಧಾರೆ (ನಾ). = ಬಾಯಧಾರೆ : ಕಠೋರದ ಮೊರಹುಗಳ ಬಾಯ್ಧಾರೆಗಳ ಕಿಡಿಹೊರಳಿಗಳ ಹೊಗರಂಬು ಹೊಕ್ಕವು ಪಾಂಡುಸೈನ್ಯದಲಿ (ಕುಮಾರವ್ಯಾ. ೨-೫೫). **ಬಾಯಿಧಾರೆ :** ಈ ಉಭಯದ ತಟಗಾಜಿದೆ ಹೊತ್ತು ಹೋರುವ ಮಾತಿನ ಕತ್ತಿಯ ಬಾಯಿಧಾರೆಯ ಘಾಯಕ್ಕೆ ಇನ್ನೇತಱ ಮದ್ದು (ಪ್ರೋಚಪಾ. ೪೪-೦೫೦); ತಳಿತ ಹೊಗರಿನ ಬಾಯಿಧಾರೆಯ ಹೊಳಹುಗಳ ಹೊಗರಂಬು ಕವಿದವು (ಕುಮಾರವ್ಯಾ. ೫-೦೩). **ವಾಯಿಧಾರೆ :** ಹೊಳೆವ ಕೆಂಗಂಪುಗಳ ಮಹಾಳಿಯ ಲಲಿತರತ್ನದ ರೋಚಿಗಳ ಗಜಗಲಿಸುವಂಬಿನ ವಾಯಿಧಾರೆಯ ಕಿಡಿಯ . . . ಜ್ವಾಲೆಗಳೆನಲು ಹೊಕ್ಕನು ಮಹಾಹವವ (ಕುಮಾರವ್ಯಾ. ಶಾಂ· ೨೯೪). [ಬಾಯ್ + ಧಾರೆ]

**ಬಾಯ್ನೀರ್**, ಬಾಯಿನೀರು (ನಾ). ೧. ಬಾಯಲ್ಲಿ ಬರುವ ನೀರು; ಜೊಲ್ಲು ; ಲಾಲಾರಸ : ಪಿಪಾಸೆಯೊಳಿಲ್ಲದುದರ್ಕೆ ಬಾಯ್ನೀರೊಱೆತು ಬಣ್ಣಂಗುಂದುವರ್ (ಶಬವಂ· ೯-೦೨). **ಬಾಯಿನೀರು :** ೨. ಬಾಯಲ್ಲಿ ನೀರು ಸುರಿಯುವಿಕೆ : ಶ್ವಾಸವು, ಕೆಮ್ಮು, ಬಾಯಿನೀರು . . . ಇನಿತುಂ ಕರ್ಣಿಕ ಸನ್ನಿಪಾತವೆಂದರಿವುದು (ಸಚಿವೈ. ೦೬೦). [ಬಾಯ್ + ನೀರ್./ತಮಿ. ವಾಯ್ನೀರ್]

**ಬಾಯ್ನುಡಿ** (ನಾ). ಹುರಿಯ ಬಾಯಿಮಾತು ; ಬಾಯಿಬಡಾಯಿ : ನಿನ್ನನ್ನರಂ ಬಾಯ್ನುಡಿಯ ಬೀರರನ್ನೆನಿತೊ ಕಂಡಿಹೆನೊ ನಾಂ (ಚಿತ್ರಾಂಗ. ೬೯-೨೦೫೦). [ಬಾಯ್ + ನುಡಿ$_2$]

**ಬಾಯ್ಪರೆ** 'ಬಾಯ್ವಱೆ' ನೋ.

**ಬಾಯ್ಬಡಕ** 'ಬಾಯ್ಬಡಿಕ' ನೋ.

**ಬಾಯ್ಬಡಿ**, ಬಾಯಿಬಡಿ (ಕ್ರಿ). ೧. ಇನ್ನೊಬ್ಬರಿಗೆ ಮಾತಾಡಲು ಅವಕಾಶವಿಲ್ಲದಂತೆ ದಬಾಯಿಸಿ ಮಾತನಾಡು; ಇತರರು ಮಾತನಾಡದಂತೆ ಮಾಡು : ಪೊಡವಿಯೊಡೆತನವೆಮ್ಮದೆಂದು ಬಾಯ್ಬಡಿವರೇ (ಸೌಂದಪು. ೪-೬೭). ೨. ಬಡಾಯಿ ಕೊಚ್ಚಿಕೊಳ್ಳು : ವ್ಯಥಾಭಿಮಾನದಲಿ ಹಣುಕಿ ಬಾಯ್ಬಡಿದೇನಹುದು ಕೈಗುಣವ ತೋಱಿರೆ

(ಕುವ್ಯಾ.ಸ. ೦೦-೩೯). **ಬಾಯಿಬಡಿ :** ೧. ಗುಣ ಮಾತನಾಡಿತು ಹಣ ಬಾಯಿಬಡಿಯಿತು (ಇಂಶಾಶ. ೨೦೩-೨) ; ಗಿರಾಕಿಗಳ ಬಾಯಿ ಬಡಿದ ಹಾಗೆ ಹೆಂಡ್ತಿ ಬಾಯಿಬಡಿಯೋಕೆ ಬರಬೇಡಿ (ಹೇಪುಕೂ. ೬) ; ತಪ್ಪು ಮಾಡುವುದು ಮೇಲೆ ಬಾಯಿಬಡಿಯುವುದು (ಕೂತಕಾ. ೩೦).
[ಬಾಯ್+ಬಡಿ$_1$]

**ಬಾಯ್ಬಡಿಕ**, ಬಾಯಿಬಡಕ, ಬಾಯಿಬಡಿಕ, ಬಾಯಿಬಡುಕ, ಬಾಯ್ಬಡಕ (ನಾ). ೧. ಬಡಾಯಿ ಕೊಚ್ಚಿಕೊಳ್ಳುವವನು : ಒತ್ತಿ ನೀನೆನ್ನಂ ಬಲುಹು ಮಾಡುತ್ತ ಕಾಡಲದೆಂತು ಬಹುದಾನೆತ್ತಲ್ಯೆ ನೀನೆತ್ತಲೀತಜ ಮಾತು ಬಾಯ್ಬಡಿಕ (ಬಸಪು. ೯೦-೯೬); ಬಱಿಯ ಬಾಯ್ಬಡಿಕನೇ ಶಿಶುಪಾಲನೀ ಪರಿ ನಡೆವುದೇಕೈ ಹರಿಯೊಡನೆ ಸಮಬೆಸನ ಬಿಂಕದಲಿ (ಕುವ್ಯಾ.ಸ. ೦೦-೬೬); ಕತ್ತ ಹಿಡಿದೀಗಳೀ ಬಾಯ್ಬಡಿಕನಂ ನೂಂಕು (ಕಬಿಕ್ಕ. ೩೦-೨೩). (ಗು). ೨. (ಇನ್ನೊಬ್ಬರಿಗೆ ಮಾತನಾಡಲು ಅವಕಾಶ ಕೊಡದಂತೆ) ಬಹಳ ಮಾತನಾಡುವ ; ಅತಿಯಾಗಿ ಹರಟುವ : ಕೆಡುವೀ ಪ್ರಪಂಚಮಂ ನಿತ್ಯವೆಂದೆಂಬ ಬಾಯ್ಬಡಿಕ ಮೀಮಾಂಸಕರಾ ನೀಂ ಸುಮ್ಮನಿರ್ (ಶಬ್ಧಗಾ. ೧೦-೧೯) ; ಬಾಯ್ಬಡಿಕ ಹೆಂಗುಸ ಕೊಲುವೆನೆನುತುಗ್ಗಡದ ಕೋಪದಲೆತ್ತಿದನು ಖಂಡೆಯವ ನಸುರೇಂದ್ರ (ಕೂರರಾ. ೩-೩-೩೮). **ಬಾಯಿಬಡಕ :** ೧. ನಾನು ಬಾಯಿ ಬಡಕನಲ್ಲದುದರಿಂದ ಜಗಳವನ್ನು ಬಯಸುವುದಿಲ್ಲ (ಹೋಛರು. ೩೯); ಇದನ್ನು ತಿಳಿದೂ ತಿಳಿದೂ ತಾನು ಅಂಧಶ್ರದ್ಧೆಯ ಬಾಯಿಬಡಕರ ಬಾಲ ವಾಗಬೇಕೇ ? (ಏದ್ಯಾ.ರಿ. ೬೯); ಬಾಯಿಬಡಕ ಬರದಲ್ಲಿ ಗೆದ್ದ (ಗಾದೆ). **ಬಾಯಿಬಡಿಕ :** ೧. ಹತ್ತಿರಕೆ ಕರೆವರು ಬಾಯಿಬಡಿಕರ ಜಗದ ಭಂಡರನು ಅರಸುಗಳು ದುಶ್ಶೀಲರೆಂಬುದನಱಿಯದೇ ಜಗ (ಕುವ್ಯಾದ್ರೋ. ೦೩-೮) ; ಬಾಯಿಬಡಿಕನಲಾ ವೃಥಾ ರಾಧೇಯ ಮದವೇಕಿನ್ನು . . . ನೀನುಳಿವಾಯಿತಿಕೆಯಿನ್ನೆಂತು (ಕುವ್ಯಾ.ಕ. ೩೬-೭). ೨. ಆಯತಿ ಹೆಣ್ಣು ಗಳೇನು ಗಹನವೆಂಬ ಬಾಯಿಬಡಿಕ ತಪಸಿಗಳ ತಾಯೆ ನೀ ಕಡೆಮೆಟ್ಟು (ಮೋಹತ. ೨೩-೯೬). **ಬಾಯಿಬಡುಕ :** ೧. ರಾಯ ಬಿನ್ನಪವಿದನೊಂದ ಚಿತ್ರಸೇನ್ನ ಬಾಯಿಬಡು[ಪಾಠಾಂ. ಡಿ]ಕನೆನ್ನದಿರು (ಕುರಾಶಾಂ. ೦೯-೭೦); ವರ್ಣಾಶ್ರಮಗಳಿಂದ ದೇಶ ಹಾಳಾಯಿತೆಂಬ ಬಾಯಿಬಡುಕರೂ ಬಹಳ (ಕಥಾ. VIII ಮುನ್ನುಡಿ). **ಬಾಯ್ಬಡಕ :** ೧. ಮಾತು ಹಡೆಯುವದೆಲ್ಲ, ಮೌನಗರ್ಭದ ಬದುಕು ಬಾಯ್ಬಡಕರಿಗೇನು ಗೊತ್ತು! (ಅರಳು. ೨೩೯-೦೭); ಅಂಥಾ ಕಥೆಗಳಲ್ಲಿ ಅರ್ಧಕ್ಕರ್ಧ ಸಂಖ್ಯೆ ಊರ ಬಾಯ್ಬಡಕರ ಕಪೋಲ ಕಲ್ಪಿತವೆಂಬುದೇನೂ ಸುಳ್ಳಲ್ಲ (ಒಡ್ಡಿಉ. ೩೯). ೨. ಕೊನೆಗೆ ಬಾಕ್ಮೀದಾರ, ಇಲ್ಲವೋ ಬಾಯ್ಬಡಕ ಸಾಯ್ಕಲ್‌ಸ್ವಾರ- (ಅರಳು. ೩೪೭-೦೦).
[ಬಾಯ್ + — ಬಡಿಕ$_1$]

**ಬಾಯ್ಬಡಿಕತನ**, ಬಾಯಿಬಡಿಕತನ (ನಾ). ಜಂಬದಿಂದ ದಬಾಯಿಸಿ ಮಾತಾಡುವಿಕೆ ; ಜಂಬಕೊಚ್ಚಿಕೊಳ್ಳುವಿಕೆ : ಘಡ ವಿಕಾರವೆ ನಮ್ಮೊಡನೆ ಬಾಯ್ಬಡಿಕತನವೇ ಕುರುಮಹೀಪತಿಯೊಡನೆ ಹುಟ್ಟಿದೆಯಾದ ಕಾರಣ ಬಿಟ್ಟೆವು (ಕುವ್ಯಾ.ಸ. ೦೯-೯೭) ; ಗಂಡುತನವೇನಾಯ್ತು ಹೆ.ಳಲೆ ಭಂಡ ನೀ ಬಾಯ್ಬಡಿಕತನದಲಿ ತೊಂಡುಗೆಡೆವರೆ (ಕೌಶಿರಾ. ೨೦-೩೦); ಅವ ನಿನ್ನಿಂದ ಬಾಯಲಿ ಬಲ್ಲಿದನು ಬಾಯ್ಬಡಿಕತನದಲಿ ಬಗುಳಿ ಬಾಲವನು ಕೊಳ್ಳಿಗಿಡಿಯಲಿ ಸುಡಿಸಿಕೊಂಡವ (ಕೂರರಾ. ೬-೦೦-೩೬). **ಬಾಯಿಬಡಿಕತನ :** ಹಿರಿದು ರಕ್ಷಿಸಿದೊಡತಿಯೆಂದಾನಱಿಯದುಸುರಿದೆ ನಿಮಗಿನಿತು ನಿಷ್ಠುರತೆಯಾದಡೆ ನಮಗಿದೇಕೀ ಬಾಯಿಬಡಿಕತನ (ತೊರಸಾ. ೨-೦-೩೦). [ಬಾಯ್ಬಡಿಕ+—ತನ]

**ಬಾಯ್ಬಡಿಕಿ**, ಬಾಯಿಬಡುಕಿ (ನಾ). ಇನ್ನೊಬ್ಬರಿಗೆ ಮಾತನಾಡಲು ಅವಕಾಶವಿಲ್ಲದಂತೆ ದಬಾಯಿಸಿ ಮಾತನಾಡುವವಳು : ಕೊಡ ಸಮರ್ಥರೆ ಬೇಡಿದುದ ನೀವ್ ನುಡಿದು ತಪ್ಪುವರಲ್ಲಲೇ ಬಾಯ್ಬಡಿಕಿ ಯಿವಳೆಂದೆನ್ನಿರಲೆ (ಕೂರರಾ. ೨-೨-೬). **ಬಾಯಿಬಡುಕಿ :** ರಿಪುರಾಯರಿಗೆ ದಾಸತ್ವವಾಗಲು ಬಾಯಿಬಡುಕಿ[ಪಾಠಾಂ. ಬಾಯ ಬಡಿಕೆ]ಯದಾರೊಡವೆ ತದ್ದಾಸ ಧನವಲ್ಲ (ಕುವ್ಯಾ.ಸ. ೦೩-೦೨). [ಬಾಯ್ಬಡಿಕ + — ಇ$_2$]

**ಬಾಯ್ಬಡಿಕೆ** (ನಾ). = ಬಾಯ್ಬಡಿಕೆ : ನಿರ್ಬುದ್ಧಿವಂತೆ ಬಾಯ್ಬಡಿಕೆ . . . ಮಧುಗೋಷ್ಠಿಗೊರ್ಬಳೆಡೆಯಾಡುತಿರೆ ಕಂಡಾ ವಿದೂಷಕಂ ಸರ್ಬವದೊಳೆ ಲ್ಲರಂ ನಗಿಸುತಿವಳೀಗ ಹಸ್ತಿನಿಯೆಂದುಸಿರ್ದನು (ಕಬಿಕ್ಕ. ೦೦-೨೩) ; ಹೆಣ್ಣ ವಾದಿಸಬೇಡ ಬಲ್ಲೆ ಬಾಯ್ಬಡಿಕೆಯೆಂದಳು ಖಿದ್ರು ಖಾತಿಯಿಂದ (ಕುರಂಗ. ೩-೨೦). [ಬಾಯ್ಬಡಿಕ + — ಎ$_2$]

**ಬಾಯ್ಬಿಡು** 'ಬಾಯ್ವಿಡು' ನೋ.

**ಬಾಯ್ಬಿಯ್ಯಗ** 'ಬಾಯಿಬೀಗ' ನೋ.

**ಬಾಯ್ಬೀಗ** 'ಬಾಯಿಬೀಗ' ನೋ.

**ಬಾಯ್ಮಱುಕ** (ನಾ). ಅಭಿವ್ಯಕ್ತಿಗೊಳ್ಳುವ ಪ್ರೀತಿ, — ವ್ಯಾಮೋಹ : ಸೂಟ್ಟಿಡೆದ ಕೂಟಂ ಪಲ್ಲಟಂಬಾಯ್ವ ಬಾಯ್ಮಱುಕಂ ತಾಂಗಿಗಟಲ್ವ ನಾಣಲಿತನಂ . . . ಅಳುಂಬಂ ಕೂಟದೊಳ್ ನಲ್ಲರಾ (ಚಂದ್ರಕ. ೬-೬೮).
[ಬಾಯ್ + ಮಱುಕ]

**ಬಾಯ್ಮಾತು** 'ಬಾಯ್ವಾತು' ನೋ.

**ಬಾಯ್ಮಿಡುಕು** (ಕ್ರಿ). ಧ್ವನಿ ಮಾಡು; ಮಾತಾಡು: ಬಱಿದೆ ಬಾಯ್ಮಿಡು ಕದಿರಿ ಮಱಿಯೊಳಡಿಗಡಿಗಬ್ಬರೊಂದಾಗಿ ನುಡಿಯದಿರಿ (ಶಾಂಡಿಕ. ೦-೩೯).
[ಬಾಯ್ + ಮಿಡುಕು$_1$]

**ಬಾಯ್ಮುಚ್ಚು**, ಬಾಯಿಮುಚ್ಚು (ಕ್ರಿ). ೧. ಬಾಯಿ ಬಿಡದಿರು ; ಮಾತಾಡದಿರು ; ತೆಪ್ಪಗಿರು : ಬಾಯ್ಮುಚ್ಚಿರಲ್ ಚೆಲ್ವು ಪೆಣ್ (ಅಕ್ಕತಾ. ೦೨-೨೩೩). **ಬಾಯಿಮುಚ್ಚು :** ೧. ಹೆಣ್ಣನ್ನು ತರುವಾಗ ಬಾಯಿಮುಚ್ಚಿಕೊಂಡಿರಬೇಕು ಅನ್ನುತ್ತೀಯಾ ? (ಮೂಕಜ. ೦೨೪). ೨. ಬಾಯಿ ಮುಚ್ಚಿಸು ; ಬಾಯನ್ನು ಕಟ್ಟು : ಮಾಯೆ ಎನ್ನ ಕಾಯ ವನ್ನುಪಾಯದಿಂದ ನೋಯಿಸಿ ಬಾಯಿಮುಚ್ಚಿ ಕೊಲ್ಲುತ್ತಾಳೆ ಕಾಯೊ ಲಕ್ಷ್ಮಿಯರಸನೆ (ಪುರಂದ. ೦-೧೬೬ ಪಲ್ಲವಿ). [ಬಾಯ್ + ಮುಚ್ಚು$_1$]

**ಬಾಯ್ಮೋಸ** (ನಾ). ಮಾತಿನ ತಪ್ಪು ; ಉಕ್ತಿದೋಷ : ಅನಿವರೊಳ್ ವ್ಯವಹರಿಪುದರ್ಕೆನಗೆ ತಿಳಿವಂತೆ ನಿರಪಿಸಿ ರಾಯಸವುಂ ದಯೆಗೆಯ್ವುದು ಇದಱಿಳೇನಾನುಂ ಕೆಯ್ಮೋಸ ಬಾಯ್ಮೋಸಂಗಳುಳ್ಳೊಡವೆಪೊಲ್ಮೆಯಿಂ ಸೈರಿಪುದು (ಜಕವಂ. ೨೩-೯). [ಬಾಯ್ + ಮೋಸ]

**ಬಾಯ್ವಲ** (ನಾ). ಮಾತಿನ ಶಕ್ತಿ ; ವಾಗ್ಬಲ : ಚಲಮಂ ತೋಳ್ವಲಮು ನೃಪಾಳನಳವಂ ನಾವಿನ್ತು[ಟಿ]ನ್ದೆಯ್ದಿ ಬಾಯ್ವಲದಿಂ ಬಣ್ಣಿಸದಿರ್ದೆ [ಳ]ಣ್ಣ (ಕಇಶ. ೨-೨-೪೦; 1058); ಪಲವುಂ ಮತಂಗಳಂ ಬಾಯ್ವಲದಿಂದಂ ಬಾದುಗೆಯ್ದು ಬಸನದೆ ಮಾಱ್ಪರ್ ಕೆಲಬರದನೊಲುವರೊಲ್ಲರ್ ಪಲರೆಂತುಂ ಮೋಕ್ಷಮಾರ್ಗಮಂ ಜಿನಮತಮಂ (ಸಮುಶ. ಅನುಬಂಧ. I, ೩೬೩-೩೮).
[ಬಾಯ್ + ಬಲ$_3$]

**ಬಾಯ್ವಸ** (ನಾ). ಬಾಯಿಯ ಉತ್ಕಟವಾದ ಅಪೇಕ್ಷೆ : ಬಾಯ್ವಸಪೋಡ ದಂತಡರ ಚುಂಬಿಸೆಯುಂ ಬಗೆದೆಂತು ತಳ್ತೊಡಂ ಮೆಯ್ವಸಪೋಡದಪ್ಪು ಗಡ ಕಣ್ಬಸಪೋಡದಿದೆಂತು ನೋಡೆಯುಂ (ಅರ್ಧನೇ. ೬-೭).
[ಬಾಯ್ + ಪಸ$_1$]

**ಬಾಯ್ವಱಿ**, ಬಾಯ್ಬರೆ (ನಾ). ಬಾಯಿಂದ ಮಾಡುವ ಶಬ್ದ; ಬೊಬ್ಬೆ : ಸುರಿಗೆ ಶುಭ್ರಂಗತ್ತಿಗೆ ಕರಗಂ ತಲೆಮಂಡೆ ಮರುಳ ಬಾಯ್ವಱಿ ಪಱಿಯಾಗಿರೆ ಕಳದೊಳಿಱಿಯಲಿರ್ದುವು ನೆರೆದು ನಿಶಾಚರರ ತಕ್ಕಿನೆಕ್ಕತುಳಂಗಳ್ (ಕಾವ್ಯಾವ. ೬೬). **ಬಾಯ್ಬರೆ :** ನಾನಾಶಕುಂತವ್ರಜಂ . . . ಪಾಮರಿಯ ಬಿರುದನಿಗೆ ಕೃಪರೆಗೆ ಬಾಯ್ಬರೆಗೆ ಕಲ್ಗವಣೆ ಗೊಂದಿನಿತು ಪೆಳರಿ ಗಾರಾಗುತುಂ . . . ತೊಡಗಿದಪವಿನ್ನೊರ್ಕೆ ನೆಲ್ಕೀವಿಗೆ

(ಶಶ್ಯಾಂಗ. ೩೩–೦೧೩೦). 'ಕೆಯ್ವಿಡಿ' ಪರಾ. [ಬಾಯ್+ಪಡಿ₁]

**ಬಾಯ್ವಿಡಿಗುಟ್ಟು** (ಕ್ರಿ). ಬಾಯಿಂದ ಜೋರಾಗಿ ಶಬ್ದ ಮಾಡು ; ಬೊಬ್ಬೆಯಿಡು : ಘಟೋತ್ಕಚನ ತಲೆಯಂತೆ ಮರುಳ ಕಾಳೆಗರ್ಕ್ಯಾರ್ವ ಸೂಲದ ತಲೆಗಳಂ ತಮ್ಮಟ್ಟೆಯಾಟಕ್ಕೆ ಬಾಯ್ವಡಿ[ಪಾಠಾಂ. ಯ್ವಿಡಿ]ಗುಟ್ಟುವ ಸಿಡಿದಲೆಗಳುಮಂ (ಅರ್ಜನ. ೩–೧೦ ವ). [ಬಾಯ್ವಡಿ+ಕುಟ್ಟು₁]

**ಬಾಯ್ವಾತು**, ಬಾಯಿಮಾತು, ಬಾಯ್ಮಾತು (ನಾ). ೧. ಬರಿ ಮಾತು ; ಶುಷ್ಕವಾದ ನುಡಿ ; ತೋರಿಕೆಯ ಮಾತು : ಈ ಬಾಯ್ವಾತಿನೊಳೇವಂದಪುದಮ್ಮಣ್ಣಿ ಕಾದುಕೊಳ್ (ಶಂಕಭಾ. ೦೨–೦೬೩). **ಬಾಯಿಮಾತು** : ೧. ನನ್ನ ಕನ್ನಡಾಭಿಮಾನವು ಬರೀ ಬಾಯಿಮಾತಿನಲ್ಲೇ ಉಳಿಯಿತು (ಕಂಗಾಳ್. II, ಮುನ್ನುಡಿ). ೨. ಮುಖತಃ ಹೇಳಿದ ಮಾತು ; ವ್ಯಕ್ತವಾಗಿ ನುಡಿದ ಮಾತು : ಬಾಯಿಮಾತಿನ ದಾಯದೊಳು ಶವಮಗಾಯಿತೆಂದೇ ಹಂಕರಿಸಿ . . . ತರಣೋಪಾಯವರಿಯದವರಿಂಗೊರೆಯದಿರು ಮಾಯಹರ ಚಿತ್ಕಾಯ ಘನಗುರುರಾಯ ವಚನವನು (ಗಗಪಾ. ೦೬–೨) ; ಅವಳ ಬಾಯಿಮಾತಿನಲ್ಲಿ ಅರ್ಥವೊಂದಾದರೆ, ಕಣ್ಣಿನ ಭಾಷೆಯ ಅರ್ಥವೇ ಬೇರೆಯಾಗಿತ್ತು (ಪುನರು. ೩೨೨).

**ಬಾಯ್ಮಾತು** : ೧. ನಾವೀಗ ಬಾಯ್ಮಾತಿನ ಗೌಡಿಕೆಯನ್ನೂ ಸ್ವಪ್ರತಿಷ್ಠೆಯನ್ನೂ ಮೆರೆಸುವುದರಲ್ಲಿ ಮುಳುಗಿದ್ದೇವೆ (ಸ್ವಕಿಶ. ೩೭೦).
[ಬಾಯ್ + ಮಾತು₁]

**ಬಾಯ್ವಿಡು**, ಬಾಯಿಬಿಡು, ಬಾಯಿವಿಡು, ಬಾಯ್ಬಿಡು (ಕ್ರಿ). ೧. ಬಾಯನ್ನು ತೆರೆ ; ಬಾಯಿ ತೆಗೆ : ಕರಿಗಳ್ ಭೀಮಂ ಪಿಡಿದಡದರ್ೊಡೆ ಬಾಯ್ವಿಟ್ಟೆಲ್ವಡಗಾದುವು (ಶಂಕಭಾ. ೨–೫); ನೀಂ ಭಕ್ತಿಯಂ ಮಾಡಿದ್ದೆನ್ನಯ ಕೂರ್ಮೆಯೊಳ್ಳಿತೆನುತಂ ಬಾಯ್ವಿಟ್ಟು ಪುಯ್ಯಲ್ಚಿದಳ್ (ಕಾದಂಶಾ. ೬೬೨); ಪೆಡರ್ಗ ಪೇಟಲಂಜಿ ಲಜ್ಜೆಯಿಂ ಮಾಗಿಯ ಕೋಗಿಲೆಯಂತೆ ಬಾಯ್ವಿಟ್ಟಾಡದೆ (ಧರ್ಮಾಮೃ. ೦–೦೫೬). ೨. ಮಾತನಾಡು ; ನುಡಿ : ತಾಯಿ ಮೋರೆಯ ನೋಡಿಯೇನಾದುದೆಂದೊಡಂ ಬಾಯ್ವಿಡದೆ ಹಾಸನೋಸರಿಸಿ ಮಲಗಿದಳು (ಕಾಲೂರ. ೦೩೨–೨೬೨). ೩. ಆಶ್ಚರ್ಯಪಡು ; ಬೆರಗಾಗು : ಷೋಡಶಯುತ್ವಿಜರ್ಗಿತ್ವುದರ್ಕೆ ಬಾಯ್ವಿಟ್ಟರೆ ವಿಪ್ರಕೋಟಿ . . . ಯಮನಂದನನೇಂ ಕೊಡದಿಲ್ಲದಿತ್ತನೋ (ಶಂಕಭಾ. ೬–೪೯). ೪. (ನೋವಿನಿಂದ) ನರಳು ; ಚೀರು ; ಕಿರಿಚು : ನೊಂದು, ಬಾಯ್ವಿಡದಿನಿಸಪ್ಪೊಡಂ ಪೆಳಬದಳ್ಕದೆ . . . ಬಿಟ್ಟುವಿರ್ದ ನೆಲೆಯಿಂ ಕಲವುನ್ಮದಗಂಧಸಿಂಧುರಂ (ಶಂಕಭಾ. ೦೦–೯೧) ; ಪಟ್ಟಿರ್ದ ನಾಯ ನಡುವಂ ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ದದು ಶಿನೆ ಬಾಯ್ವಿಟ್ಟು ಲಲಿತಾಂಗನಿಡಿದಂ ಕೆಟ್ಟೆನೆನ್ನುತ್ತೋಡುವಾತನಂ ಮತ್ತೊರ್ವಂ ತಾಂ ಕಂಡು (ಧರ್ಮಾಮೃ. ೨–೩೬). ೫. ಮರುಗು ; ಸಂಕಟಪಡು ; ದುಃಖಿಸು : ಮತಿಗೆಟ್ಟಿರ್ದೆಗಟ್ಟು ಬಟಲ್ದಟಲ್ದು ಬಾಯ್ವಿಟ್ಟು ಕುಯೋನಿಯೊಳ್ ತಿರಿದು ಪೋದುವು ಕಾಲಮನಂತಂ (ಸುಕುಮಾ. ೦೦–೬೨); ತಾಯ್ ಸತ್ತ ಶಿಶುವಿನಂತೆ ಬಾಯ್ವಿಡುತ್ತುಂ (ಧರ್ಮಾಮೃ. ೦–೦೯೧) ; ಘುಂಡೋದರಿ . . . ಬಸುರ ಹೊಡೆದಳಲುತ್ತ ಗರುವಿಕೆಗೆಟ್ಟು ಹೊರಳಿ ದೆಳಕಟ ಬಾಯ್ವಿಡುತ (ತೊರಾ. ೩೭–೧). ೬. (ದೈನ್ಯದಿಂದ) ಬೇಡಿಕೊಳ್ಳು ; ಯಾಚಿಸು : ಇನಿಸೆಟ್ಟು ನೋಡಿ ನುಡಿಯೆಂದೆನಿತುಂ ತೆಜದಿಂ ಕಪಿಂಜಲಂ ದೆಸೆದೆಸೆಗಂದು ಬಾಯ್ವಿಡುತಮಿರ್ದುದನಾಲಿಸಿದೆಂ (ಕಾದಂಪೂ. ೯೦೩) ; ತಂದೆ ಕರುಣಿಸು ವಿಶಾಪವನೆಂದು ಬಾಯ್ವಿಡುವ ಮಂದಮತಿಗಳಿಗೆ ದೊರಕದ ಲೇಸನೀಯಬೇಕು (ಸಿದ್ಧರಾ. ೦–೨೫) ; ಗತಿವಿಹೀನೆಗೆ ಕೃಷ್ಣ ನೀನೇ ಗತಿಯೆನುತ ಬಾಯ್ವಿ[ಪಾಠಾಂ. ಯ್ಬಿ]ಡಲು ಲಜ್ಜಾಸ್ಥಿತಿಯನುಳುಹಿದ ದೈವ ನೀ ಮೈದೋಜದೈ ತನಗೆ (ಕುಮಾವ್ಯಾ. ೨–೦೩). ೭. ಬಯಸು ; ಹಂಬಲಿಸು : ಘನದುಃಖಂಗಳನೆಯ್ದೆ ಮಾಟ್ಟ ವನಿತಾಸೌಖ್ಯಕ್ಕೆ ಬಾಯ್ವಿಟ್ಟು ದುರ್ಮನುಜಂ ಸಿಕ್ಕಿ ವಿಶೇಷದಿಂದೆ ಬಟಲುತ್ತಿರ್ಪಂ ದಲಾತ್ಮಜ್ಞನೆಂದೆನಿಪಂ ಬಾಯ್ವಿಡನಂಬುವೆಂಬ ಬಗೆಯಿಂ ಗಾಂಪಂ ಮರೀಚೀಜಲಕ್ಕೆನಸುಂ ಬಾಯ್ವಿಡುವಂ ಪರೀಕ್ಷಕನದಕ್ಕಿಂ ತಾದೊಡಂ ಬಾಯ್ವಿಡಂ (ಭಾರತ. ೩–೩೯). ೮. ಬಿರಿ ; ಬಿರುಕು ಬಿಡು ; ಸೀಳು : ನೆಲಂ ಮೊಟಗೆ ಕಂಪಿಸೆ ಬಾಯ್ವಿಡೆ ಬೆಟ್ಟು ಬೀಟ ಮಂದಿರವಮುಡಿದಟ್ಟಿ ತರ್ಗೆ . . . ಘನಾಗಮದೊಳ್ ವಿನಿಂದಿತಂ (ಲೋಕೋಪ. ೯–೭೧). ೯. ಚೆದರು ; ಸಿಡಿದುಹೋಗು : ಮಂದರದ ಘಾರಾಘಾರಿಯಲಿ ಬಾಯ್ವಿಡುವ ಕಡಲಂತೆ ಅರಿವರೂಥಿನಿ ಕೆದಱ ತಳಿತವು (ಕುಮಾವ್ಯಾದ್ರೋ. ೦೨–೧೯). **ಬಾಯಿಬಿಡು** : ೨. ಅವನ ಆಗಿನ ಮನಸ್ಥಿತಿಯನ್ನು ಸರಿಯಾಗಿ ಅರಿತವಳ ಹಾಗೆ ತುಂಗಕ್ಕ ಮೆಲ್ಲನೆ ಬಾಯಿ ಬಿಟ್ಟಳು (ಮೂರುದಾ. ೯೨) ; ತಮ್ಮ ಯಜಮಾನ ಬಾಯಿ ಬಿಡುವುದನ್ನೇ ನಿರೀಕ್ಷಿಸುತ್ತ ರೈತರು ಅವನನ್ನೇ ನೋಡುತ್ತಿದ್ದರು (ಪುನರು. ೨೬೯); ಬಾಯಿ ಬಿಟ್ಟರೆ ಬಣ್ಣಗೇಡು (ಗಾದೆ). ೬. ಪಡೆದೊಡವೆಯ ಧರ್ಮಕೆ ಈಯದವ ಬಾಯಿಬಿಡುವುದೆ ಪರರಿಗೆ ಸಾಕ್ಷಿ (ಪುರಂದ. ೨–೦೬–೨) ; ಭ್ರಷ್ಟದೈವಕೆ ಬಾಯಿಬಿಟ್ಟಲ್ಲಿ ಫಲವಿಲ್ಲ (ಸರ್ವಜ್ಞ. ೦೯೫). ೭. ಮುನ್ನೂಱುಮುವತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪುದೆ ಸಿಂಪು ಅದು ಸ್ವಾತಿಗಲ್ಲದೆ ಬಾಯ್ದೆಱೆಯದು ಕೇಳು ಕೇಳಾ ತಂದೇ ಎಲ್ಲವಕ್ಕೆ ಬಾಯ ಬಿಟ್ಟರೆ ತಾನೆಲ್ಲಿಯ ಮುತ್ತಪ್ಪುದೊ (ಬಸವ. ೬೦೯) ; ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ ಹರಿ ಕೊಡದ ಕಾಲಕ್ಕೆ ಬಾಯಿಬಿಡುವುದಲ್ಲೊ ಪ್ರಾಣಿ (ಪುರಂದ. ೬–೯೭ ಪಲ್ಲವಿ). ೧೦. ಗೌಪ್ಯವಾದುದನ್ನು ಬಯಲು ಮಾಡು,— ರಟ್ಟುಮಾಡು : ಇವನು ತಂದೆ ತಾಯಿ ಬಂಧು ಬಳಗದ ಹೆಸರನ್ನು ಬಾಯಿಬಿಡ (ಪರದಾ. II, ೬೫೭). **ಬಾಯಿವಿಡು** : ೧. ತುರಗದಟಂ ಪಡಲ್ವಡೆ ಕಡಂಗಿ ಘಟಾವಳಿ ತಾಗಿ ಮತ್ತೆ ನಿತ್ತರಿಸದೆ ಭೀತಿಯಿಂ ಪೆಳಱ ಬಾಯಿವಿಡೆ (ಎಕ. VIII, ಸಾಗರ. ೦೦೯–೨೬ ; 1042). **ಬಾಯ್ಬಿಡು** : ೧. ಪಿಡಿವ ಪುಲಿ ಕರಡಿ ಬಾಯ್ಬಿಡುವ ಭೂತಂಗಳಸುಗುಡಿವ ಪಾವುಗಳಟ್ಟಿ ಸುಡುವ ಕಾಳ್ಕಿಚ್ಚುಳಿಯಗೊತವು (ಕೈಮಿಥಾ. ೯–೨೩) ; ಬಾಯ್ಬಿಟ್ಟು ಹೇಳುವುದಿಲ್ಲವೇಕೆ, ನಿನಗೀಗ ಬಾಯ್ಗೆ ನೀರು ಬಂದು ಮನ ಸೋತಿದೆಯೆಂದು ? (ಏಕ್ಕಳ. ೨೬೯). ೫. ಸಂಸ್ಕೃತಿದುಃಖದಿಂದೆ ಬಾಯ್ಬಿಟ್ಟು ಪಲುಂಬುವೆಲ್ಲ ಜನಮಂ ನಡೆ ನೋಡಿ (ಉದ್ಭಟ. ೦೦–೩೯) ; ಇರುಳು ತಸ್ಕರಬಾಧೆಯಲಿ ಭೂಸುರರು ಬಾಯ್ಬಿಡುತ್ತಿದೆಯಿಂದ್ರಪ್ರಸ್ಥಪುರವರವ (ಕುಮಾವ್ಯಾಆ. ೦೯–೨) ; ಹೆಂಡಿರುಗಳ ಬಿಟ್ಟೋಡಿಪವರ . . . ಗಂಡನ ಬಿಟ್ಟು ಬಾಯ್ಬಿಡುತ್ತಿದಿದ ಹೆಂಗಳಂಡಲೆಗಳನೇವೇಳ್ವೆ (ಕಂಪನ. ೦೦–೩೨). ೬. "ಬಾಯ್ಬಿಡು (ಬಾಯ್+ಬಿಡು)—ದೈನ್ಯೇ" (ಶಮಣಿ) ; ಬಿಟ್ಟಲ ಪಿಡಿದು ಬಾಯ್ಬಿಟ್ಟು ಕೇಳಿದರಿಲ್ಲ ಅಟ್ಟಡವಿಗೆ ಅತ್ತರಿಲ್ಲ (ಪುರಂದ. ಧಾ. ೨–೩೨–೩). ೭. ನೀನೊಲ್ದಡೇನೊಲ್ಲದಿರ್ದೊಡಮೇಂ ನಾನೆರಡಿಲ್ಲದೊಲ್ಲೆ[ಲ್ದೆ]ನದಱಂ ಬೇಱಾರ ಬೇಟಕ್ಕೆ ಬಾಯ್ಬಿಡಲಾಱೆಂ (ಅನಂಪು. ೦೦–೯೫). [ಬಾಯ್ + ಬಿಡು₁]

**ಬಾಯ್ವೂಸು** (ಕ್ರಿ). ೧. ಬಾಯನ್ನು ಸವರು, — ಒರೆಸು. ೨. (ಅಲಂ) ಬಾಯಿ ಮುಕ್ಕಳಿಸು : ಸಮಕಟ್ಟದಾಯುದೆ ಹರಿಗರ್ಘ್ಯ ಮೆತ್ತಿ ನಿಂದಿರ್ದ ಯಜ್ಞಮದು ಮೊದಲೊಳ್ ಶಾಸಮರ್ದುಮಮರ್ದಿ[ರದೆ] ತಣೆಯುಂಡಮರ್ದಂ ಗೋಮೂತ್ರದಿಂದೆ ಬಾಯ್ವೂಸಿದವೋಲ್ (ಶಂಕಭಾ. ೬–೯೮) [ಬಾಯ್ + ಪೂಸು₁]

**ಬಾಯ್ವೆಣ್ಣೆ**, ಬಾಯಿವೆಣ್ಣೆ (ನಾ). ನವಜಾತಶಿಶುವಿಗೆ ತಿನ್ನಿಸುವ ಬಜೆ ಮತ್ತು ಬೆಣ್ಣೆಗಳ ಮಿಶ್ರಣ: ಆತನುಂ ಚಂದ್ರಭುಕ್ತನೆಂದು ಪೆಸರನಿಟ್ಟು ಬಾಯ್ವೆಣ್ಣೆಯೊಡನೆ ಕಿಱುಕಿಱುದೆ ನಂಜನೂಡಿ ಬಟಿಕೆ ಬಳೆದೊಡಾ ಹಾರದೊಳೂಡಲ್ ತಗುಳ್ದೊಂ (ವಡ್ಡಾರಾ. ೦೯೬–೨೧) ; ತಿರುತಲೆಯೂರ ಶಿವನ ಪ್ರಸಾದವಂ ತಂದು ಬಾಯ್ವೆಣ್ಣೆಯುಕ್ಕಿದರತಿಸ್ವಾದುವುಂ (ರುದ್ರರ.

ಹ. ೨೦-೩) ; ಶಂಕರಶಿಶುಗೆ ಪರಮಪ್ರಸಾದದಿಂ ಬಾಯ್ವೆಣ್ಣೆಯಿಟ್ಟು ಮೊಲೆಗೊಟ್ಟು (ಶಧ್ಯಾ. ೨-೬೬). **ಬಾಯಿವೆಣ್ಣೆ** : ಊರೊಡೆಯ ನಾಚರಸರು ಕರುವರ ಕಲ್ಲಗಾವುಂಡಂಗೆ ಬಾಯಿವೆಂಣೆಗೆ ಕೊಟ್ಟ ಮನೆ (ಕೊಲ್ಹಾಶಾ. ೦೩-೩೮ ; 1166). [ಬಾಯ್ + ಬೆಣ್ಣೆ]

**ಬಾಯ್ಬೆಸ** (ನಾ). (ರತಿಕ್ರಿಯೆಯಲ್ಲಿ ಮಾಡುವ) ಚುಂಬನ ಮುಂತಾದ ಬಾಯಿಯ ಕೆಲಸ : ಮೆಯ್ಬೆಸದಿಂ ಕೆಯ್ಬೆಸದಿಂ ಬಾಯ್ಬೆಸದಿಂ ಮಂತ್ರ ತಂತ್ರದಿಂದಂ ಸುಖಮಂ ಮೆಯ್ವಿಡೆ ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ವನೆಟ್ಟುವೊಜಂಗಂ (ಕಾವ್ಯಾವ. ೬೭). [ಬಾಯ್ + ಬೆಸ$_1$]

**ಬಾಯ್ಬೞ³ ?** (ನಾ). (?) : ತೋಳ ವಾಯಸದ ಮೊಲದ ಕರಡಿಯಾ ಕೂಲದೊಂದಿರದ ಬೆಂದ ಮೊರಡಿಯಾ ನರಿಯ ಕೋಡಗದ ಗೂಗೆ(ಬೆ)ಯಂದಮಂ ಮರೆಯ ಪಾಟ್ಮನೆಯ ಬಾಯ್ಬೞ³ಯಂದಮಂ . . . ಪೋಲ್ವೊಡಿಲ್ಲ ಮಟ³ (ಜಟ್ಯಮ. ೩-೦೨). [?]

**ಬಾಯ್ಸನ್ನೆ** (ನಾ). ಬಾಯಿಯ ಸಂಜ್ಞೆ ; ಮುಖದ ಇಂಗಿತ : ಕೈಸನ್ನೆಯಿಇದ ಕಾತರದಿಂದ ಪೊಯ್ವನು ಬಾಯ್ಸನ್ನೆಯಿಂದಾನು ಬೈವೆ ಮೈಸನ್ನೆಯಿಂದ ಚಿತ್ತದೊಳೊಡಗೂಡುವೆನ್ಸೆಸರಲನ ಸಮರೂಪ (ಕುರಾಶಾಂ. ೨೬-೦೯೦). [ಬಾಯ್ + ಸನ್ನೆ]

**ಬಾಯ್ಸವಿ**, ಬಾಯಿಸವಿ (ನಾ). ೧. ಬಾಯಿಗೆ ಸಿಹಿಯಾದುದು,– ಮಧುರವಾದುದು : ಜಾರ ಚೋರ ವೀರರ ಕಥೆಯಂ ಬಾಯ್ಸವಿಯ ಮಾತುಗಳಂ ಬಜಿ³ಕೆಯ್ವ ಚರ್ಚೆಯಲ್ಲ (ಅನಂತ. ೧-೩೬). ಬಾಯ್ಸವಿಗೆ ಮೆಯ್ಸವಿ ಕಣ್ಸವಿಯಪ್ಪ ರೂಪು (ಶಮದ. ೬೮ ಕ್ರಯೋ). ೨. ಬಾಯಿಗೆ ರುಚಿಯೆನಿಸುವ ಪದಾರ್ಥ ; ಪ್ರಿಯಂವಾದ ಖಾದ್ಯವಸ್ತು : ಕಲ್ಲಗವಿಯೊಳಗೊಕ್ಕ ಬಾಯ್ಸವಿಯ ನಾಲಗೆಯಿಂದೊಕ್ಕನೆ ಸವಿಯುತ ಮುಂಗಾರ ಪನಿಯೊಳು ಮಿಕ್ಕಿರ್ದವಾ ಪುಲಿವಿಂಡು (ಅನಂತ. ೦೨-೯೦); ಹಸಿವಿಗೆ ಬಾಯ್ಸವಿ ಬೇಡ, ನಿದ್ದೆಗೆ ಹಾಸಿಗೆ ಬೇಡ (ಗಾದೆ). **ಬಾಯಿಸವಿ** : ೨. ಬಾಯಿಸವಿಗೆ ತಿಂದು ನಾಯಿಸಾವು ಸತ್ತ (ಗಾದೆ). [ಬಾಯ್+ಸವಿ$_3$]

**ಬಾಯ್ಸೋವು** (ನಾ). ಬಾಯಿಗೆ ಸಿಕ್ಕ ಬೇಟೆ,—ಬಲಿ : ಕೋಟಿಕೋಟಿ ಜನ, ಪರ್ಸದ **ಪೂವು**, ತುರುಗಿತು ಜವರಾಯನ ಬಾಯ್ಸೋವು ! (ಪಾರಸಿ. ೩೩-೮೦೦). [ಬಾಯ್+ಸೋವು$_2$ (<ಸೋಪು$_1$)]

**ಬಾರ್$_1$** (ಕ್ರಿ). ೧. (ಚರ್ಮವನ್ನು) ಸುಲಿ ; ಕೀಳು : ಕಡಿಯಲ್ಗಳೊಗ್ಗಂ ಕರ್ಕಿ ಪಂದೊವಲಂ ಬಾರ್ದುಂ ಸಾರ್ದುಂ ನಲಿವ ಕಾಗೆ ಗೂಗೆಗಳುಂ. . . ನರಿ ನಾಯ್ಗಳ್ ಪಗಲುಮಿರುಳುಂ ಕಾವಲಿರ್ದುವು (ರಾಮಾಶ್ವ. ೯೭-೦೬). ೨. ಚರ್ಮವನ್ನು ಸುಲಿದು ತೆಳಂವಾದ ಉದ್ದನೆಯಂ ಪಟ್ಟಿಗಳನ್ನು ತಯಾರಿಸಂ : "ಬಾರ್ – ಚರ್ಮವಲ್ಲೀಕರಣೇ (ಚರ್ಮವನ್ನು ಪಟ್ಟಿಯಾಗಿ ಮಾಡು) ದ್ರವದ್ರವ್ಯನಿರ್ಮುಕ್ತೌ (ಸುರಿ)" (ಶಮಧಾ); ಸೇರ್ದಂ, ಬಾರ್ದಂ, ಗೋರ್ದಂ, ನೋರ್ದಂ ತಾನೆಂದೊಡಂ ಗುರೂಪಧೆಯಿನಿತುಂ (ಶಮದ. ೪೦). ೩. (ಮಣ್ಣನ್ನು) ಅಗೆದು ತೆಗೆ,—ಬಾಚು : ದರಿಗೊಂಡೀಡಿಜಿ³ ದಾಡುತುಂ ಕೊಣಕುತುಂ ಬಾರುತ್ತುಮೊಳ್ಗಡೊಳೆದರದಿಂ ಮೇದೆಳವುಲ್ಗಳಂ ತೊರೆದು ಪಾಲ್ಗಳ್ ಕೆಚ್ಚಲಿಂದೆಚ್ಚು ಪಾಯ್ತರೆ ಪಟ್ಟಿರ್ದುವು. . . ಕಾಡೆರ್ಮೆಗಳ್ (ಜಗನ್ನಾ. ೪-೨೩). ೪. (ನೀರು ಮೊದಲಾದ) ದ್ರವ ವಸ್ತುವನ್ನು ಬಸಿ,– ಸುರಿ : "ಬಾರ್ — ಚರ್ಮವಲ್ಲೀಕರಣೇ (ಚರ್ಮವನ್ನು ಪಟ್ಟಿಯಾಗಿ ಮಾಡು) ದ್ರವದ್ರವ್ಯನಿರ್ಮುಕ್ತೌ (ಸುರಿ)" (ಶಮಧಾ). ೫. ತಲೆಗೂದಲನ್ನು ಹಣಿಗೆಯಿಂದ ಹಿಕ್ಕು,– ಬಾಚು : 'ಬಾರ್ಚು' ಪರಾ.

[ದೇ.॥ ತಮಿ. ವಾರ್, ವಾರು; ಮಲ. ತೆಲು. ವಾರು; ತುಳು. ಬಾರು]

**ಬಾರ್$_2$**, ಬಾರಿ$_2$, ಬಾರು$_1$ (ನಾ). ೧. ತೊಗಲು ; ಚರ್ಮ : ವೀರೊಳ್ ನೀರಿಟ³ವನಲ್ಲ ಪಂದಿಯ ಬಾರಂ ಕೊಜ³ದದಜ ನೆತ್ತರೊಳ್ ನೀರಿಟ³ವೆಂ (ಸೂಕ್ತಿಸು. ೩-೨೨೬). ೨. ಚರ್ಮದ ಪಟ್ಟಿ : ಸೊಗಯಿಪ್ಪೊಳ್ಪೊಡೆ ನೋಯೆ ಸೂತ್ರದೆಟ³ವೋಲ್ ನೀಳ್ದಿರ್ದ ಬಾರಂತೆ ತೋರ್ಪುಗಿಯಂ ಪುಣ್ಮಯಮಾಗಿ ಮಾಡಿ ಬಿದಿ ಮುಂ ಜಂಘಾಪ್ರಮಾಣಕ್ಕೆ ಸೂಲ್ದೆಗೆದಂತಿರ್ಪ ನಖವ್ರಣಾವಳಿಗಳಂ ನಲ್ಲಂಗೆ ಕಣ್ಗೆತ್ತುತುಂ ನಗುತುಂ ಸಾರ್ದು ಸವಂಗಮಂ ಕಳೆಯಿಸುತ್ತಿರ್ಪಾಕೆ ಕಣ್ಗೊಪ್ಪಿದಳ್ (ಕಾವ್ಯಾವ. ೬೦೦); ಗೀರ್ವಾಣಮುನಿ ಪೊಜಮಡುತ್ತುಂ ಸಾಣೆಯ ಬಾರಂತೆ ಪೋದ ಕೆಯ್ಯೊಳೆ ಮಗುಟ್ದಂ (ಅನಂತ. ೦೩-೨೩). ೩. ಚರ್ಮದ ತೆಳುವಾದ ಪಟ್ಟಿಯಿಂದ ಮಾಡಿದ ಬಾಯಿಹಗ್ಗ ; ಲಗಾಮು : ನಕುಳನುಮಂಕವಣಿಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೊರ್ವ ಕೀಲಾಳಿಂ ಪಿಡಿಯಿಸಿಕೊಂಡು ಬಂದು ವಿರಾಟನಂ ಕಂಡು (ಪಂಪಭಾ. ೮-೫೪ ವ). **ಬಾರಿ$_2$** : ೪. ಚರ್ಮದ ಹಗ್ಗ,– ಮಿಳಿ : ಸುತ್ತಿದ ಮುಪ್ಪುರಿಯ ಬಾರಿ ಕಡ್ಡಣಿಗೆಯ . . . ಕಲಿವೀರ ಬಾಹುಕ ಬರುತ್ತಂ (ಹಕಾ. ೦೦-೦೬); ನೂಲ ಹರಿಗೆಯ ಹೆಗಲ ಬಾರಿಯ . . . ಛಲದಂಕರಾವುತರೊತ್ತಿ ನೂಕಿದರು (ಕುವ್ಯಾಭೀ. ೪-೫೬). **ಬಾರು$_1$** : ೧. ತಳವಾಜ³ನುಟ್ಟ ಸೀರೆಯ ಸುಲಿದ ನಾಚಿ ಹೋದರೆ ಮನೆಯ ಗಂಡ ಬೆನ್ನ ಬಾರನೆತ್ತಿದ (ಬಸವ. ೦೦೦) ; ಬಾಲಬ್ರಹ್ಮಚಾರಿಯ ಬಾರನೆತ್ತಿತ್ತ ಕಂಡೆ (ಅವಕಂ. ೯೩-೪೨೬) ; ಕರ್ಣನೆ ಕೊರಳ ಬಾರಲಿ ನಿಲುಕಿಸುವೆನೀ ಶರಸಲಾಕೆಗಳ (ಕುವ್ಯಾಕ. ೨೪-೨೬). ೨. ಮಾಸಾಳ್ಗಳ ಬಾರ ಸಂಕಲೆಯ ತೊಡರ ತೋಟಿಯ ಕಠಾರಾಯಿತರೆ . . . ಮೊತ್ತದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕ ದಾಸ್ಥಾನದೊಳು (ಬಸರ. ೬-೨೨) ; ಬಾರ ಸಂಕಲೆ . . . ಕೈಹಾರೆ ಕೂರಂಕುಶದ ಬಿರುದರು ಹೊದ್ದಿದರು ಗಜವ (ಕುವ್ಯಾಭೀ. ೪-೭೦). ೩. ಉಗ್ರಾಣಗಳಲ್ಲಿ ನೂಲೇಣಿ, ಹೊರಜಿ, ಮಿಣಿ, ಬಾರು . . . ಬತ್ತಳಿಕೆಗಳ ಎಲ್ಲ ವಿಚಾರವನ್ನು ಬಿಡಿಬಿಡಿಯಾಗಿ ನೋಡುವನು (ಸಮ. ೪೯) ; ಕಡಿವಾಳಕ್ಕೆ ಬಾರಿಲ್ಲದೆ ಇದ್ದುದರಿಂದ . . . ಹುಲ್ಲುಸರವಿಯನ್ನು ಗಂಟು ಹಾಕಿ ಕಟ್ಟಿದರು (ನಗಗ. ೪೯). ೫. ಉದ್ದ ; ನೀಳ : (*). ೬. ಸಾಲು; ಪಂಕ್ತಿ : (*). ೭. ಚರ್ಮದ ಮೇಲೆ ಪೆಟ್ಟಿನಿಂದಾಗುವ ಪಟ್ಟಿಯಾಕಾರದ ಗುರುತು ; ಬಾಸುಂಡೆ : ಸೊಸೆಯ ಮೈ ಮೇಲಿನ ಬಾರುಗಳನ್ನು ನೋಡಿ ಮಗನನ್ನು ಕರೆದು : "ಕಡಬಿನಂತ ಬಾರು ಏಳುವ ವರೆಗೆ ಬಡಿಯಬೇಕೆ ?" ಎಂದು ಸಿಟ್ಟು ಮಾಡಿದಳು (ಕನ್ನಡಾ. ೬೩).

**ಬಾರಗುಣಿ** = ಬಾರುಕೋಲು : ಬಾರಗುಣಿಯಿಂದ ಅವನ ಬೆನ್ನಿಗೆ ಬಲವಾಗಿ ಏಟುಗಳನ್ನು ಕೊಟ್ಟು ಚಕ್ಕಡಿಯನ್ನು ಹೊಡೆದುಕೊಂಡು ನಡೆದನು (ಖಿದ್ಯಜಾ. ೪೦). **ಬಾರುಕಾಲವನು** = ಉದ್ದವಾದ ಕಾಲುಗಳಿರುವವನು ; ದಾಪುಗಾಲು ಇಡುವವನು : "ಊರ್ಧ್ವಜ್ಞುಃ, ಊರ್ಧ್ವಜಾನುಃ — ೨ ಉದ್ದವಾದ ಮೊಳಕಾಲುಳ್ಳವನು, ಬಾರುಕಾಲವನು" (ಸಿದ್ಧಾಂತಿ. ೦೯೦).

[<ಬಾರ್$_1$./ತಮಿ. ಮಲ. ವಾರ್; ತುಳು. ಬಾರ; ತೆಲು. ವಾರು]

**ಬಾರ್$_3$**, ಬಾರು$_2$ (ನಾ). ೧. ಬಂದೂಕು, ತೋಪು ಮೊದಲಾದುವುಗಳಿಗೆ ತುಂಬುವ ಸಿಡಿಮದ್ದು : (*). ೨. ಬಂದೂಕಂ, ತುಪಾಕಿ ಮೊದಲಾದುವುಗಳನ್ನು ಮದ್ದು ಗುಂಡು ತುಂಬಿಸಿ ಉಡಾಯಿಸಲು ಅಣಿಗೊಳಿಸಿರುವಿಕೆ : ಬಂದೂಕು ಬಾರಾದವು (ಸಳಕ. ೪೦). ೩. ತುಪಾಕಿ ದಳ; ಬಂದೂಕುಸಿಪಾಯಿಗಳ ಪಡೆ : (ಕೈಸ್‌ಗ. II. ೫೪೩). 'ಬಾರ್ಸಿಪಾಯಿ' ಪರಾ. **ಬಾರು$_2$** : ೧. "ಯಾವುದಾದರೂ ಒಂದಕ್ಕೆ ತುಂಬ ಬೇಕಾದ ಪದಾರ್ಥದ ನಿಯತವಾದ ಮೊತ್ತ (ಮು. ಬಂದೂಕಿಗೆ ತುಂಬುವ ಸಿಡಿಮದ್ದು; ಬಂದೂಕಿನ ಬಾರು)" (charge. ಇಂಕಿ). ೩. ಬಾರು :– ಬಾರಿನವರ ಸಂಖ್ಯೆಯು . . . ಹೆಚ್ಚಿ ಇಂಗ್ಲೀಷ್‌ಪದ್ಧತಿಯಂತೆ ಕವಾಯಿತು ಕ್ರಮದಲ್ಲಿ ಸುಶಿಕ್ಷಿತವಾಗಿತ್ತು (ಮಹಾಪಂ. II, ೫೦). ೪. ತುಪಾಕಿ

ಮೊದಲಾದುವುಗಳ ಸ್ಫೋಟ : (೩). ೩. ಹೊಗೆಸೊಪ್ಪು ತಿನ್ನುವುದಕ್ಕೆ ಪೂರ್ವಸಿದ್ಧತೆಯಾಗಿ ಬಾಯಿಗಿಟ್ಟುಕೊಳ್ಳುವ ವೀಳ್ಯದ ಕವಳ: ಚಹಾ–ತಂಬಾಕದ ಬಾರು ಇಲ್ಲದೆ ಅವರಿಗೆ ನಡೆಯುತ್ತಿರಲಿಲ್ಲ (ದೀಶಹ. II, ೯೦). ೬. ನೋಂದಣಿ ; ದಾಖಲೆ : 'ಬಾರನಿಸಿ' ಪರಾ.

ಬಾರಕೋತು = ಕಾಲುದಳದ ಯೋಧರ ವಾಸಸ್ಥಾನ,–ಪಾಳೆಯ : (೩). ಬಾರು ಮಾಡು = ೧. ಸಿಡಿಮದ್ದನ್ನು ಬಂದೂಕಿಗೆ ತುಂಬಿ ಉಡಾಯಿಸಲು ಅಣಿಮಾಡು : ತನ್ನ ಬಾರು ಮಾಡಿದ ಬಂದೂಕನ್ನೆತ್ತಿ ಅದರ ಹಣಿಗೆ ಗುರಿ ಇಕ್ಕಿದನು (ಬಂಗಾಹ. ೩). ೨. ವೀಳ್ಯವನ್ನು ಸಿದ್ಧಪಡಿಸು,—ಅಣಿ ಮಾಡು : ರಾವಜೀಕಾಕಾ . . . ತಂಬಾಕದ ಬಾರು ಮಾಡುತ್ತ ನಿರ್ಣಾಯಕ ಅಭಿಪ್ರಾಯ ಕೊಟ್ಟರು (ದೀಶಹ. I, ೬). ೩. (ದಾಖಲೆ) ಪುಸ್ತಕದಲ್ಲಿ ಬರೆದು ಸೇರಿಸು; ನೋಂದುವಮಾಡು : (೩).

[← ಮರಾ. ಬಾರ್]

**ಬಾರ್₄**, ಬಾರು₃ (ನಾ). ೧. ಗಟ್ಟಿಯಾಗಿಯೂ ಉದ್ದವಾಗಿಯೂ ಇರುವ ಲೋಹ, ಮರ, ಸಾಬೂನು ಮೊದಲಾದುವುಗಳ ತುಂಡು : ಒಂದು ಬಾರ್ ಸಾಬೂನು ತಂದು ಈ ಬಟ್ಟೆಗಳನ್ನೆಲ್ಲ ಒಗೆಯಬೇಕು (ರೂಢಿ). ೨. ಮಾದಕಪಾನೀಯಗಳನ್ನು ಅಥವಾ ಖಾದ್ಯ ವಸ್ತುಗಳನ್ನು ಒದಗಿಸುವ ಸ್ಥಳ; ಪಾನಶಾಲೆ : ಮಧುಪಾನದ ಸಲಕರಣೆಗಳನ್ನಿಡುವುದಕ್ಕೂ ನಾಲ್ಕುಜನ ಸ್ನೇಹಿತರು ಸೇರುವುದಕ್ಕೂ ಅನುಕೂಲಿಸುವಂತೆ ಒಂದು ಸಣ್ಣ 'ಬಾರ್' ಏಕೆ ಕಟ್ಟಬಾರದು ? (ಯೋಶಕ್ತಿ. ೨೯) ; ಒಂದೆರಡು ದಿನದೊಳಗಾಗಿ . . . ಹಡಗಿನ "ಬಾರ್" ನಲ್ಲಿ ಕುಳಿತುಕೊಳ್ಳುವ ಚಟ ಬರುತ್ತದೆ (ಕಪೂಪ. ೧೧). **ಬಾರು₃** : ೧. ನನಗೆ ಎರಡು ಬಾರು ಸಾಬೂನು ಬೇಕು (ರೂಢಿ). ೩. (ಕಿಟಕಿ, ಬಾಗಿಲು ಮೊದಲಾದುವುಗಳಲ್ಲಿ ತಡೆಗಾಗಿ ಉಪಯೋಗಿಸುವ) ಕಂಬಿ ; ಸರಳು : ಕಿಟಕಿಗಳಿಗೆ ಉದ್ದುದ್ದವಾಗಿ ಬಾರುಗಳನ್ನು ಅಳವಡಿಸುವುದುಂಟು (ರೂಢಿ).

[← ಇಂ. Bar]

**ಬಾರ್‌ಕಛೇರಿ**, ಬಾರಕಚೇರಿ (ನಾ). ಹಿಂದೆ ಮೈಸೂರು ಅರಸರ ಆಡಳಿತಕಾಲದಲ್ಲಿದ್ದ ಹದಿನೆಂಟು ಕಚೇರಿಗಳಲ್ಲಿ ಒಂದು ; ಕಾಲ್ದಳದ ವಿಷಯವನ್ನು ನೋಡಿಕೊಳ್ಳುವ ಕಚೇರಿ : ೧. ದಿವಾನ್‌ಕಛೇರಿ . . . ೧೨. ಬಾರ್‌ಕಛೇರಿ (ಮಹಾಪಂ. II, ೩೯). **ಬಾರಕಚೇರಿ** : ಶ್ರೀಮದ್ರಾಜಾಧಿರಾಜ ಕೃಷ್ಣರಾಜಒಡೆಯರವರು ಅವಲ್‌ಬಾರಕಚೇರಿ ಬಕ್ಷಿ ಗುಲಾಮು ಮಹಮ್ಮದಖಾನರಿಗೆ ಪುತ್ರ ಪವುತ್ರಪಾರಂಪರ್ಯವಾಗಿ ನಡಿಯುವ ಮ್ಯರೆಗೆ ಕೊಟ ಸರ್ವಮಾನ್ಯವಾದ ನಾಚನಹಳ್ಳಿ ಗ್ರಾಮದ ಯಲ್ಲಿಕಲ್ಲು (ಎಕ. III, ಮೈಸೂರು. ೩೬–೩ ; ಸು. 1825?). 'ಅಠಾರಾ ಕಚೇರಿ' ಪರಾ. [ಬಾರ್₃ + ಕಛೇರಿ (<ಕಚೇರಿ)]

**ಬಾರ್₁** (ನಾ). ಬಾಗಿಲು ; ದ್ವಾರ : ದರ ದಾರ ಬಾರಮಕ್ಕುಂ ಪರದಾ ದ್ವಾರಕ್ಕೆ ಪೂರ್ವದೊಳ್ ತದ್ಭವಮಾಗಿರೆ ಸಿರಿಯ ವಂಕ ವಾಣಿಯವಿರೆ ಕಂಟಿಯುಮುಚಿತವಿಧಿ ವಿಕಲ್ಪವಿಧಾನಂ (ಶಮದ. ೨೯೬) ; ಶ್ರೀದ್ವಾರ— ಸಿರಿಯದರ, ಸಿರಿಯದಾರ, ಸಿರಿಯಬಾರ. ವಕ್ರದ್ವಾರ—ವಂಕದರ, ವಂಕದಾರ, ವಂಕಬಾರ (ಶಮದ. ೨೯೬ ವೃತ್ತಿ). 'ದಾರ್₂' ಪರಾ.

[< ಪ್ರಾ. ಬಾರ, ವಾರ ; ಹಿಂ. ಬಾರ /ಸಂ. ದ್ವಾರ]

**ಬಾರ್₂** (ನಾ). ತೂಕ ; ಭಾರ : "ಬಾರ (ರು) _ಭಾರ" (ತದ್ಭಕೋ. ೩೦).

[< ಸಂ. ಭಾರ]

**ಬಾರ್₃**, ಬಾರಹ, ಬಾರಾ (ನಾ). ೧. ಒಂದು ಸಂಖ್ಯೆ ; ಹನ್ನೆರಡು : ಬಾರಹವೆಂಬುದು ದ್ವಾದಶದ ಪ್ರಾಕೃತರೂಪ ; ಬಾರ ಎಂದರೆ ಹದಿನೆರಡು (ಶಳಂಜಾ. ೨೬೯). 'ಬಾರವಮಾಹೆ' ಪರಾ. ೨. ಲೆತ್ತದಾಟದಲ್ಲಿ ಬೀಳುವ ಹನ್ನೆರಡರ ಗರ : ದುಗನು ಪಂಚಕ ಬಾರವೆರಡಿತ್ತಿಗೆಯು ಬೇಡಿದಡಲ್ಲಿ ಬೀಳ್ವುದು ವಿಗಡ ಪುಷ್ಕರ ನೃಪನ ಗೆಲಿದನು ಹಲಗೆಂಒಂದಟಿಲಿ (ನಳಚ. ೪–೨೯). **ಬಾರಹ** : ೧. ನಾರಿ ಸಹಿತಾ ಪತಿ ಚರಿಸುವುದು ಬಾರಹದ್ವಿಜರಿಂಗೆ ಭೋಜನ ಭೂರಿಭೂಷಣ ವಸನ ತಿಲದಾನಾದಿ ಸತ್ಕೃತಿಯಾ (ಶಿಶಾಗ. ೬–೧೬–೦೬). **ಬಾರಾ** : ೧. ನಿನ್ನಂಥ ಬಾರಾ ಹಜಾರ ಮಂದಿನ್ನ ಬಗಲಾಗ ಹಾಕೀನ್ನಾನು (ಬಾಂಡಾಯ. ೬೯). ೩. ಹನ್ನೆರಡು ಘಂಟೆ: ಇದೆಲ್ಲಾ ಉದ್ಯೋಗ ನಡಿಯೋದು ರಾತ್ರಿ ಬಾರಾದಿಂದ ನಸುಕು ಹರಿಯೋ ತನಕ (ಅನ್ನ. ೨೩೩).

ಬಾರಖೂನ್ ಮಾಫ್, ಬಾರಾಖೂನಿ ಮಾಫ್ = ಎಷ್ಟು ತಪ್ಪು ಮಾಡಿದರೂ ಕ್ಷಮಿಸುವುದು : ತಪ್ಪು ಅನುಗ್ರಹಕ್ಕೆ ಪಾತ್ರರಾದವರಿಗೆ 'ಬಾರಖೂನ್ ಮಾಫ್, ಏನು ಉಪಕಾರವನ್ನಾದರೂ ಮಾಡಿ ಕೊಟ್ಟುಬಿಡುವರು (ಕಲಿಶಿ. ೯೦) ; ಒಮ್ಮೊಮ್ಮೆ ಬಾರಾಖೂನಿ ಮಾಫ್ ಅಂತೂ ಅನಬೇಕಾಗತದ (ಧರ್ಮಂ೩. ೩೨).

[← ಹಿಂ. ಬಾರಹ್, ಬಾರಾ; ಮರಾ. ಬಾರಾ]

**ಬಾರಂಗಧ್ವಜ** (ನಾ). (?) : ಮದನಕೈಯಿದರ ಬೊಂದಿಗೆಯು ಬಾರಂಗಧ್ವಜ ಕದಳಿಗೊನೆ ಕಬರಿದ ಸುಲೋವೆ ಚಿತ್ರದ ಭಿತ್ತಿ ವುದಿವ ನವರತ್ನಗಳ ದೀಪ್ತಿ (ನವನೋ. ೨–೬೦). [? + ಧ್ವಜ]

**ಬಾರಂಗಿ** (ನಾ). ಒಂದು ಬಗೆಯ ಔಷಧೀಸಸ್ಯ ; ಅಂಗಾರವಲ್ಲಿ ; ಬ್ರಾಹ್ಮಿ : ಬಾದಣಿಸಿದೇಬುಗಳ ಬಾಯೊಳು ಕಾದ ಬಾರಂಗಿಗಳನಳತೆಗೆ ಕೋದು ಪಾವುದೊಳೆಯ್ದು ಹಿಡಿದರು ತೈಲಧಾರೆಗಳ (ಕುಮ್ಮಾಭಾ. ೩–೪೦) ; ತಡಸಿ ಸುವರ್ಣ ಬಿಳಿಯ ಬಾರಂಗಿ ಗಿಡವು ಕಗ್ಗಲಿ ಕಂಪು ಪರಿಮಳಯಡಿಗಡಿಗೆ ರಸದಾ ಮಡುಗಳು (ಪಂಚಂಲೀ. ೬–೧೬). [< ಸಂ. ಭಾರಂಗೀ]

**ಬಾರಕಚೇರಿ** 'ಬಾರ್‌ಕಛೇರಿ' ನೋ.

**ಬಾರಗಿರಿ** 'ಬಾರ್ಗೀರಿ' ನೋ.

**ಬಾರಗೀರ** 'ಬಾರ್ಗೀರ್' ನೋ.

**ಬಾರಗೀರು** 'ಬಾರ್ಗೀರ್' ನೋ.

**ಬಾರಗುತ್ತು** 'ಬಾರ್ಗುತ್ತ' ನೋ.

**ಬಾರಗೆಯ್** (ಕ್ರಿ). (?) : ಕ್ಷೀರ ದಧಿ ಮಧು ಘೃತಂ ಸಿತ ನಾಗರಂ ಮರಿಚ ಜೀರಕಂ ಲವಣವೆ[ಮ]ಲ್ಲಾ ದಶಾಮೃತಸಾರಪೂರಕಳಸಂ ನಾಲ್ಕು ಕನಕ ಪುಷ್ಪಾನ್ವಿತ ತಮಂಧಕಳಸಂ ಪೀಲಿಯಿಂ ಬಾರಗೆಯ್ದೊಂದಗ್ರಜಲಭರಿತಮಾಗೆ ಮಂದಾರಮಂಜರಿವಿಡಿದ ಹದಿಮೂಱು ಕಳಸವಿಂತೀರೊಂಭತ್ತಿನ್ನೂಱದ ವಿಭವವೀ ಪರಿಯಿಂದ ನೇಮದಿಂ ನಡಸೆಂದಳು (ಸಿದ್ಧರಾ. ೩–೬). "ಅಂದವಾಗಿಸು (?)" (ಸಿದ್ಧರಾ. ಕೋಶ). [?]

**ಬಾರಡ** (ನಾ). ಚರ್ಮದ ಪಟ್ಟಿ : "ಕುಟ್ಟಿಗೋಲ್ ಬಾರಡಮದಕ್ಕು" (ಪಂಗರಾ. ೦೦೨–೩). [ದೇ. ; ತಮಿ. ವಾರಾಟ್ಟೈ]

**ಬಾರಣ** (ನಾ). ಆನೆ: ದಾರುದಾರುಣನು ದಾನವಾರಿವಾರಿತಲೋಕನಂ ಬಾರ ಬಾರಣಮಂ ನೋಡಾ ಸಾರಸಾರಾಂಬುದಾಭಮಂ (ಶವರಾ. ೨–೦೩೨).

[< ಸಂ. ವಾರಣ]

**ಬಾರಣಸಿ** 'ಬಾರಣಾಸಿ' ನೋ.

**ಬಾರಣಾಸಿ**, ಬಾಣರಾಸಿ, ಬಾಣಾರಸಿ, ಬಾರಣಸಿ, ಬಾರ್ಣಾಸಿ, ವಾಣರಾಸಿ, ವಾರಣಶಿ, ವಾರಣಾಸಿ (ನಾ). ಗಂಗಾನದೀತೀರದಲ್ಲಿರುವ ಪ್ರಸಿದ್ಧವಾದ ಯಾತ್ರಾಸ್ಥಳ; ಕಾಶಿ ಕ್ಷೇತ್ರ; ಇದು ವರುಣಾ ಮತ್ತು ಅಸಿ(ಅಥವಾ ಅಸೀ)ಯೆಂಬ ಎರಡು ನದಿಗಳನ್ನು ಒಳಗೊಂಡಿದೆಯೆಂದು ಪ್ರತೀತಿಯಿದೆ ; ಇ ದರ್ಮ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಳ್ ಸಾಸಿರ್ವ್ವ ಪಾರ್ವ್ವರುಂ ಸಾಸಿರಂ ಕವಿಲೆಯುಂ ಕೊನ್ದ ಪಾತಕನಕ್ಕೆ (ಮೈಆಂ. ೬೪೩೬, ೩೩–೩೫ ; ಸು. 550) ; ಇದನಟಿದುಣ್ಡೋನುಂ ಕೊಣ್ಡೋನುಂ ಪಸುವುಂ ಪಾರ್ವ್ವರುಂ ಕೆಱೆಯುಂ

ಅರವೋಯುಂ ಬಾರಣಾಸಿಯುಮನಟಿದೊಂ (ಎಕ. III, ಶ್ರೀರಂಗ. ೧೪೭-೦೬; ಸು. ೯೦೦ ?). **ಬಾಣರಾಸಿ :** ದುದ್ಧರಸಂ ಮಾಡಿಸಿದ ತೋಟ[3] ಗಟ್ಟಿಯಂ ಮಾಟಿಕೊಣ್ಡವಂ ಬಾಣರಾಸಿಯುಲು ಹಸುವುಂ ಹಾರುವನಂ ಕೊಂದ (ಎಕ. I (R), ೬೨-೩೬; 1095) ; ಇದನಳಿದಂ ಬಾಣರಾಸಿಯುಮಂ ಕವಿಲೆಯುಮಂ ಲಿಂಗಮಂ ಕಿತ್ತ ಬ್ರಹ್ಮತಿಗೆ ಸನ್ದಂ (ಎಕ. III, ನಂಜನ. ೪೪-೦೦; 1113) ; ಇದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರೋರ್ವ್ವಿಯೊಳ್ ವಾಣರಾಸಿಯೊಳೇಳ್ಕೋಟಿಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊನ್ದುದೊನ್ದಯಸಂ ಸಾಗ್ಗರ್ಗಂ (ಎಕ. II, ೬೩-೪೯; 1118). **ಬಾಣಾರಸಿ:** ಇದನಟಿವಂಗೆ ಕವಿಲೆಯುಂ ಬಾಣಾರಸಿಯುಂ ಅಟಿದ ಪಾತಕಂ (ಎಕ. I (R), ೬೯-೦೦; 10ನೆಯ ಶತ). **ಬಾರಣಾಸಿ:** ಇದನಟಿವೊ ಬಾರಣಸಿಯುನಟಿದೊ ಪಾತಕಂ (ಕಇ. II, ೩-೦೯ ; 859). **ಬಾಣಾರ್ಸಿ :** ಇದನಟಿದೋಂ ಬಾ[ಣಾರ್]ಸಿಯುಂ ಕವಿಲೆಯುಮನಟಿದೋಂ (ಎಕ. IV (R), ಚಾಮರಾ. ೩೧-೦೦ ; ೧ನೆಯ ಶತ). **ವಾಣರಾಸಿ :** ಈ ಧರ್ಮ್ಮವಮನಳಿದಂ ವಾಣರಾಸಿ ಕುರುಕ್ಷೇತ್ರದೊಳ್ ಸಾಸಿರಕವಿಲೆಯುಂ ಸಾಸಿರಬ್ರಾಹ್ಮಣರನಳಿದ ಪಂಚ ಮಹಾಪಾತಕನಕ್ಕು (ಎಇ. XIX, ೦೯೯-೨೯ ; 1079). **ವಾರಣಾಶಿ :** ಇದಕ್ಕಾರಾನುಂ ಪ್ರತಿಬಂಧಕರಾಗಿ ಕಿಡಿಸಿದರಪ್ಪಡೆ ವಾರಣಶಿಯುಲು ಕವಿಲೆಯಂ ವಧಿಯಿಸಿದ ದೋಷವುನೆಯ್ದುವರು (ಕಇಆ. ೩೬-೪೯-೨೦ ; 1134). **ವಾರಣಾಸಿ :** ಅಟಿದೊನ್ವಾರಣಾಸಿಯೊ ಸಾಸಿರ್ವ್ವಪಾರ್ವ್ವರುಂ ಸಾಸಿರ ಕವಿಲೆಯುಮನ್ಕೊನ್ದ ಪಞ್ಚಮಹಾಪಾತಕನಕ್ಕು (ಎಕ. V (R), ತಿರುಮ. ೪೬-೬ ; 8ನೆಯ ಶತ) ; ಗಂಗೆಯೊಳು ಮಿಂದು ಭಾಸುರವಾರಣಾಸಿಯಂ ಹೊಕ್ಕು (ಷಕ್ಷಕಾ. ೦೦-೩೩).

[< ಸಂ. ವಾರಣಸೀ, ವಾರಾಣಸೀ, ವಾಣಾರಸೀ, ವರಾಣಸೀ]

**ಬಾರಣೆ** (ನಾ). ಊಟ ; ಪಾರಣೆ : ಬಾಯೊಳ್ಳಿಗೆದ ಹಲ್ಲ ನೋಳ್ಪುದೊಂದೆ ಕ್ಷಣದಿ ನುಂಗಿ ಬಾರಣೆಯ ಸವನಿಸುವೆನು (ಪಾರ್ತಿಸು. ೬೬) ; ಹುಲಿರಾಯನು ಓಲಸರಿಯ ಬಾರಣೆಗಾಗಿ ಹೊರಟನೆಂಬುದು ಅವರಿಗೆ ಗೊತ್ತಾಯಿತು (ಹೀರದಂ. ೨೩) ; ಪಶುಪಕ್ಷ್ಯಾದಿಗಳನ್ನೂ ನೀವು ಮನುಷ್ಯರು ಶಕ್ತಿಯುಕ್ತಿಗಳಿಂದ ಬಡಿದು ಬಾರಣೆ ಮಾಡುತ್ತೀರಂತೆ (ಹಗಂ. ೪೦). 'ಪಾರಣೆ₁' ಹೋ. [← ತುಳು. ಬಾರ್ಣೆ. / ಸಂ. ಪಾರಣಾ]

**ಬಾರದ** (ನಾ). ಒಂದು ಮನೆತನದ ಹೆಸರು : ಇದಕ್ಕೆ ಸಕ್ಕಿ ಮುದಿರೆ ಬೂವಯ್ಯ ಬೆಳ್ಳನ ಕರುಕುಡಿ ಬಾರದರೆಟಿಯುಮ್ಮ ಕೆದಟಿಯುರಯ್ಯಪ (ಎಕ. IV, ಹುಣಸೂ. ೯೨-೦೨ ; ಸು. 920). [?]

**ಬಾರದಾನ, ಬಾರ್ದಾನು** (ನಾ). ೧. ವ್ಯಾಪಾರದ ಸರಕುಗಳನ್ನು ತುಂಬಲು ಬಳಸುವ ಚೀಲ, ಡಬ್ಬಿ, ಪೀಪಾಯಿ ಮೊದಲಾದುವು : ಬಾರದಾನಗಳನ್ನು ತಿರುಗಿ ಕಳುಹಿಸುವುದಕ್ಕೆ ಬಹಳ ಸಾರಿ ಪತ್ರ ಬರದಿದ್ದು ಇನ್ನೂ ಯಾಕೆ ರವಾನೆ ಮಾಡಲಿಲ್ಲ ? (ಮುಂಬವ್ಯಾ. ೬ ಕೃಷ್ಣಾವತಿ). ೨. ಗೋಣಿತಟ್ಟು ; ಗೋಣಿಚೀಲ : ಹೆಗಲಿಗೊಂದು ಬಾರದಾನ ಒಗೆದುಕೊಂಡು, ದಂಡಪಾಣಿಯಾಗಿ ಗೃಹತ್ಯಾಗ ಮಾಡಿದೆವೆಂದರೆ ತೀರಿತ್ತು, ಮರಳಿ ನಮ್ಮ ಗೃಹಾಭಿಗಮನ ಅಪರಾಹ್ನ ಎರಡಕ್ಕೆ (ದೀಶಹ. II, ೧). **ಬಾರದಾನು :** ೧. ಒಂದೊಂದು ಸಾಮಾನು ಒಂದೊಂದು ವಿಧವಾಗಿ ಕಟ್ಟಿ ಬರುವದರಿಂದ, ಅವೆಲ್ಲವುಗಳ ಬಾರದಾನು ಅಥವಾ ಹೊರಗಿನ ಆವರಣ ಒಂದೇ ತರವಾಗಿರುವದಿಲ್ಲ (ಮುಂಬವ್ಯಾ. ೬).

[← ಪಾರ. ಬಾರ್ದಾನ್ ; ಹಿಂ. ಬಾರದಾನಾ ; ಮರಾ. ಬಾರದಾನ್]

**ಬಾರದಾನು** 'ಬಾರದಾನ' ನೋ.

**ಬಾರದೂರ್** (ನಾ). ಒಂದು ಊರಿನ ಹೆಸರು : ಬಾಣಶರ್ಮ್ಮಣೇ ತೇಗಟ್ಟೂರ್ವ್ವಿಷಯೇ ಬಾರದೂರ್ನ್ನಾಮಗ್ರಾಮಸ್ಸರ್ವ್ವಪರಿಹಾರೋಪೇತ ಉದಕಪೂರ್ವ್ವನ್ದತ್ತಃ (ಮೈಆಂ. ೧೯೪೪, ೦೩-೩೪ ; ಸು. 725). [? + ಊರ್]

**ಬಾರನಿಸಿ** (ನಾ). ೧. ದಾಖಲೆಗಳನ್ನು ನೋಂದುಮಾಡಿ, ಅದರ ಮೇಲೆ ನೋಂದಿಸಲಾಗಿದೆಯೆಂದು ಬರೆಯುವ ಅಧಿಕಾರಿ ; ನೋಂದಣಿಯ ಅಧಿಕಾರಿ : ಹೊರಟು ಹೋಗಲಿದ್ದ ಬಾರನಿಸಿಯಿಂದ ಕಾಗದಪತ್ರಗಳ ಚಾರ್ಜ್ ತೆಗೆದುಕೊಂಡೆ (ಬಂಗಾರ. ೬೯). ೨. ನೋಂದಣಿ ಮಾಡುವ ಕೆಲಸ, – ಹುದ್ದೆ : "ಬಾರನಿಸಿ ಕಾರಕೂನ್" ಸ್ಥಳಕ್ಕೆ ನನ್ನ ನೇಮಕವಾಗಿತ್ತು (ಬಂಗಾರ. ೬೯).

[← ಪಾರ. ಬಾರನವಿಶೀ ; ಮರಾ. ಬಾರನಿಶೀ, ಬಾರನಿಸೀ, ಬಾರನೀಸ್]

**ಬಾರಮಾಹೆ** (ನಾ). ಹನ್ನೆರಡುತಿಂಗಳು : ಯಿಾ ನಿರೂಪ ಸ್ವಳಕೆ ತಲಪಿದ ತಾರ್ರಿಖಿನಾರಭ್ಯಾ ಸಾಲ್ಲಿಯಾನಾ ಯೆರಡು ಖಿಸ್ತಿನ ಮೇರ್ರಿಗೆ ಬಾರಮಾಹೆ ಬಜಿನ್ಸ ಕೊಡತಕದು (ಮೈಆಂ. ೦೯೩೮. ೨೬-೦೨; 1830). [ಬಾರ₃ + ಮಾಹೆ]

**ಬಾರವಟ್ಟಗೆ, ಭಾರವಡ್ಡಿಗೆ** (ನಾ). ಬಾಗಿಲಿನ ಚೌಕಟ್ಟು ; ಬಾಗಿಲುವಾಡ: ಬಕುಳದ ಬೋದಿಗೆಗಳಿಂ ಬಂಧುರಕದ ಬಾರವಟ್ಟಗೆಗಳಿಂ ಕೇತಕಿಯ ಕಂಟವಲಗೆಗಳಿಂ . . . ಕಂಪಿನ ಕಡಾರವುಂ ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಕುಸುಮಾ. ೦೨-೦೩೬ ವ). **ಭಾರವಡ್ಡಿಗೆ :** ಶ್ರೀರನ್ಗದಂಣ್ನಾಯಕರ ಪಟ್ಟಸಾಹಣಿ ಮಣ್ಡಲಸಾಹಣಿ ಮಾಡಿಸಿದ ಭಾರವಡ್ಡಿಗೆ (ಎಕ. XIV, ಎಳಂದೂ. ೦೬೨-೨; 1243).

[< ಸಂ. ದ್ವಾರಪಟ್ಟಿಕಾ]

**ಬಾರವಿಗೊಂಡ** (ನಾ). ಒಬ್ಬಾತನ ಹೆಸರು : ಶ್ರೀಬಾರವಿಗೊಣ್ಡಂ ನರಸಿಂಘ ಆತನ ಭ × × × ಬಾಚಿಯ ನನ್ದಿವರ್ಮನ ಮಗಂ ಶ್ರೀಮನ್ ಸತ್ಯಮಂಗಲದ ಚೋ × × (ಎಕ. IX, ಹೊಸಕೋ. ೦೦೬-೨; ಸು. 900 ?).

[ಬಾರವಿ? + ಗೊಂಡ₁ (< ಗಾವುಂಡ)]

**ಬಾರಸ** (ನಾ). ೧. ಹನ್ನೆರಡು : "ಬಾರಸ – ದ್ವಾದಶ = ಹನ್ನೆರಡು" (ತದ್ಭಕೋ. ೩೦). 'ಬಾರಸನಾಮ' ಪರಾ. ೨. ಜನನವಾದ ಹನ್ನೆರಡನೆಯ ದಿನದಂದು ಮಗುವಿಗೆ ಮಾಡುವ ನಾಮಕರಣದ ಉತ್ಸವ : ಬಾಲುಗೆ ಬಾರಸವ[ಶಾಕಾಂ. ಬಾರಸೆಯ, ದ್ವಾದಶ] ಮಾಡಿ ತೊಟ್ಟಿಲೊಳಿಕ್ಕಿ ಏಲೇಶನೆಂದು ನಾಮವ ಕೊಟ್ಟು (ಸಿದ್ಧರಾ. ೯-೨೮). 'ಬಾರಸಂಗೆಯ್' ಪರಾ.

[< ಪ್ರಾ. ಬಾರಸ. / ಹಿಂ. ಬಾರಸ ; ಮರಾ. ಬಾರಸಾ. / ಸಂ. ದ್ವಾದಶ]

**ಬಾರಸಂಗೆಯ್** (ಕ್ರಿ). ಹುಟ್ಟಿದ ಹನ್ನೆರಡನೆಯ ದಿನದಂದು ಮಗುವಿಗೆ ನಾಮಕರಣದ ಉತ್ಸವವನ್ನು ಮಾಡು: ಬಾರಸಂಗೆಯ್ದೊಡೆ ಬೋವಂಗೆ ಪಣ ಮೂಱು ತಳಾರಂಗೆ ಪಣ ಮೂಱು (ಹೈಆಂ. ೦೯೩೬, ೨೭-೩೩; 872).

[ಬಾರಸ + ಕೆಯ್₁]

**ಬಾರಸನಾಮ** (ನಾ). ದೇಹದ ಮೇಲೆ ಧರಿಸುವ ಹನ್ನೆರಡು ನಾಮ: ಕಿಸುವೊನ್ನ ಬಟ್ಟಗೊಡೆ ಬಾರಸ[ಶಾಕಾಂ. ಭಾರಸ, ಭಾಸುರ]ನಾಮದ ಬೊಟ್ಟು . . . ಬಗೆವುಗೆ ಬಂದನಂದು ಬಲಿಯಲ್ಲಿಗೆ ವಾಮನನಾಗಿ ಕಾಮದಂ (ಅರ್ಜಶೀ. ೬-೨೩). [ಬಾರಸ + ನಾಮ]

**ಬಾರಸಿ, ಬಾರಸೆ** (ನಾ). ಚಾಂದ್ರಮಾನ ಪಕ್ಷದ ಹನ್ನೆರಡನೆಯಂ ದಿನ ; ದ್ವಾದಶಿ : ಮಾಘಬಹುಳಬಾರಸಿ ವಿಶ್ವಯೋಗದೊಳ್ ತ್ರಿಜ್ಞಾನಧರಂ ಪುಟ್ಟೆ (ಚಾಪುಂಶ. ೦೩೩); ವ್ಯಯಸಂವತ್ಸರದ ಪುಷ್ಯದ ಬಹುಳದ ಬಾರಸಿಯ ಕುಜನ ವಾರದೊಳ್ (ಎಕ. VII, ಶಿವಮೊ. ೬೬-೨; 1227 ?). **ಬಾರಸೆ :** ಆರಯ್ಯೆ ಬಿದಿಗೆ ಸಪ್ತಮಿ ಬಾರಸೆಯೆಂಬಿವಱೊಳರ್ಕಸುತ ಕುಜ ದಿನ ಕೃದ್ವಾರಂಗಳುಂ ತ್ರಿಪಾದದ ತಾರೆಗಳುಂ ಕೂಡೆ ತಾಂ ತ್ರಿಪುಷ್ಕರಯೋಗಂ (ಲೋಕೋಶ. ೧-೨೦); ರೇವತಿಯುಗ ಭಾದ್ರಪಾ(ಪ)ದದೆರಡಷ್ಟಮಿ ಭಾರಸೆ ವಾಯುರಿಕ್ಷೆಯಂದತಿಶಯಮಾಗಿ ಗಾಳಿ ಬಿಡೆ ಬೀಸಿದೊಡಾಸಡಿಯಂದು ಮತ್ತೆ ಭೂನುತಮೆನೆ ನಾಡೆ ಪೆರ್ಮ್ಮಟಿಗಳಪ್ಪುವು (ಜಟ್ಟವು. ೮-೯೦).

[< ಪ್ರಾ. ಬಾರಸೀ. / ಮರಾ. ಬಾರಶೀ. / ಸಂ. ದ್ವಾದಶೀ]

**ಬಾರಸೆ** 'ಬಾರಸಿ' ನೋ.

**ಬಾರಹ** 'ಬಾರ್$_3$' ನೋ.

**ಬಾರಹೆ** (ನಾ). ಒಂದು ಬಗೆಯ ಕೊಳಲು : ರಾಗಸಾಗರನೆಂಬ ವಾಸುಕಾರಂ ಭಾಸುರತೆವಡೆದ ಬಾರಹೆಯೆಂಬ ವಾಸಮಂ ಕಳೆದುಕೊಂಡು . . . ಆದಿಗ್ರಾಮ ರಾಗಬ್ಬಾಯೆ ಸುಚ್ಚವಿಯಿಂ ಪುದಿದು ತೋಱಿ (ಶಾಂತೀಶ್ವ. ೬-೯೬ ವ). [ ? ]

**ಬಾರಾ** 'ಬಾರ್$_3$' ನೋ.

**ಬಾರಾಅಲುತೆ** 'ಬಾರಾಬಲೂತಿ' ನೋ.

**ಬಾರಾಂದರವಯ್ಯ** (ನಾ). ಒಬ್ಬಾತನ ಹೆಸರು : ಪೊಂಕುನ್ದದ ಬಾರಾನ್ದರವಯ್ಯ ತಗಡೂರ ಕೆಳೆಯ ಕಾಳೆಗದೊಳೆ ಬಸವಯ್ಯನ ಮುನ್ದೆ ಕಾದಿ ಸತ್ತು ಸಗ್ಗಯದ (ಎಕ. X. ಚಿಕ್ಕಂ. ೪೪-೨; ಸು. ೯೬೦). [? + ಅಯ್ಯ$_1$]

**ಬಾರಾಗೀರ** 'ಬಾರ್ಗೀರ್' ನೋ.

**ಬಾರಾಬಂಗಾಲಿ**, ಬಾರಾಬಂಗಾಳಿ (ನಾ). ೧. "ಮೋಸಗಾರ" (ಜಾನಪದ. ೨೨). ೨. ಮೋಸಗಾರಿಕೆ; ತಂತ್ರಗಾರಿಕೆ : 'ಬಾರಾಬಂಗಾಲಿವಿದ್ಯೆ' ಪರಾ. ೩. "ಜಪುಣ, ಜೀನ, ಕೈಬಿಡದವ" (ರವಶಾಕಾಂ. ೯೨೦). **ಬಾರಾಬಂಗಾಳಿ** : ೨. ಏನೇನೊ 'ಬಾರಾಬಂಗಾಳಿ' ಮಾಡಿ ಹುಡುಗನನ್ನು ಒಪ್ಪಿಸಿಕೊಂಡು ಬಂದಿದ್ದೀನೆ (ಬೆಳುವು. ೩೯). ೪. ತೀರ ಮೇಲಿನ ನ್ಯಾಯಸ್ಥಾನ ; ಸುಪ್ರೀಂಕೋರ್ಟು ; ✱ ಈಸ್ಟ್‌ಇಂಡಿಯಾ ಕಂಪನಿಯವರ ಆಡಳಿತಕಾಲದಲ್ಲಿ ಕಲಕತ್ತೆಯ ಸುಪ್ರೀಂಕೋರ್ಟು ಕೊಟ್ಟಕೊನೆಯ ಅಪೀಲ್‌ಕೋರ್ಟಾಗಿತ್ತು. ಹಳ್ಳಿಯ ಪಂಚಾಯಿತಿ ನ್ಯಾಯಾಲಯದಿಂದ ಈ ಕೋರ್ಟಿನವರೆಗೆ ಹನ್ನೆರಡು ಕೋರ್ಟುಗಳಿದ್ದುವು : ನೀನು ಏನು ಬೇಕಾದರೂ ಮಾಡು, ನಾನು ಬಾರಾಬಂಗಾಳಿ ನೋಡಿ ಬಿಡುತ್ತೇನೆ (ಲೂಬ).

[ಬಾರಾ (< ಬಾರ್$_3$) + ಬಂಗಾಲಿ]

**ಬಾರಾಬಂಗಾಲಿವಿದ್ಯೆ**, ಬಾರಾಬಂಗಾಳಿವಿದ್ಯೆ (ನಾ). ಮೋಸಗಾರಿಕೆ ; ಕಪಟವಿದ್ಯೆ : ಅದೇನಾ ಹುಡುಗ 'ಬಾರಾಬಂಗಾಲೀವಿದ್ಯೆ' ಕಲ್ತಿದ್ದನೋ ಏನೋ ದೇವರೇ ಬಲ್ಲ ! (ಜಾಗಿಪ. ೪೭). **ಬಾರಾಬಂಗಾಳಿವಿದ್ಯೆ** : (೧).

[ಬಾರಾಬಂಗಾಲಿ + ವಿದ್ಯೆ]

**ಬಾರಾಬಂಗಾಳಿ** 'ಬಾರಾಬಂಗಾಲಿ' ನೋ.

**ಬಾರಾಬಂಗಾಳಿವಿದ್ಯೆ** 'ಬಾರಾಬಂಗಾಲಿವಿದ್ಯೆ' ನೋ.

**ಬಾರಾಬನೂತಿ** 'ಬಾರಾಬಲೂತಿ' ನೋ.

**ಬಾರಾಬನೋತಿ** 'ಬಾರಾಬಲೂತಿ' ನೋ.

**ಬಾರಾಬಲುತೆ** 'ಬಾರಾಬಲೂತಿ' ನೋ.

**ಬಾರಾಬಲೂತಿ**, ಬಾರಾಅಲುತೆ, ಬಾರಾಬನೂತಿ, ಬಾರಾಬನೋತಿ, ಬಾರಾಬಲುತೆ (ನಾ). ಹನ್ನೆರಡು ಜನ ಆಯಂಗಾರರಾದ ಗ್ರಾಮಾಧಿಕಾರಿಗಳು ; ✱ "ಗೌಡ, ಶಾನುಭೋಗ, ಪಂಚಾಂಗಿ, ತಳವಾರ, ತೋಟಿ, ನೀರ್ಗಂಟಿ, ಅಗಸ, ನಾಯಿಂದ, ಕುಂಬಾರ, ಲೋಹರ, ಬಡಗಿ, ಅಗಸಾಲೆ" (ಮೈಗೆ. IV, ೬೬೪). ಈ ಪಟ್ಟಿಯ ಹೆಸರುಗಳಲ್ಲಿ ವ್ಯತ್ಯಾಸವಿರುತ್ತದೆ : ಇನಾಮುದಾರರು ಬಾರಾಬಲೂತಿ ಜನರು ತಮಗೆ ಸರಕಾರದಿಂದ ಜಾರಿಯಾಗಿರುವ ಭೂಮಿ ಅಲ್ಲದೆ ಜಾಸ್ತಿ ಭೂಮಿ . . . ಅನುಭವಿಸುತ್ತ ಇರುವಂಥಾದ್ದು ಸಹ ಚೆನ್ನಾಗಿ ದರಿಯಾಪ್ತು ಮಾಡಿ (ಮಹಾಪು. II. ೬೦); ಗ್ರಾಮಗಳಲ್ಲಿ ಸೇಕದಾರ, ಶಾನುಭೋಗ, ಗೌಡ, ಬಾರಾಬಲೂತಿಯವರು ಇವರೆಲ್ಲಾ ಈಗಿನಂತೆಯೇ ಇದ್ದರು (ಕಾಳೆಗ. ೫೪). **ಬಾರಾಅಲುತೆ** : "ಬಾರಾಅಲುತೆ-೧೨ : ಗಾಣಿಗ, ವೀಳೆಯದೆಲೆ ಮಾರುವವನು, ಪಯ್ಗ್ಣಯಪನು, ತೋಟಗಾರ, ಜಂಗಮ (ಶಿವಾಲಯದ ಅರ್ಚಕ), ಕಲೆಗಾರ, ಬುಡುಬುಡಿಕೆಯವನು, ಠಕಾರೆಯವನು, ಕುಂಬಾರ, ತಳವಾರ, ಅಕ್ಕಸಾಲಿ, ಚೌಗಲೆ (ಪಟೇಲನ ಕೆಳಗೆ ಕೆಲಸ ಮಾಡುವವನು)" (ಶ್ರೀವತ್ಸ. ೨೬೧). **ಬಾರಾಬನೂತಿ** : ೧೨ ಕೈವಾಡ ಬಾರಾಬನೂತಿ ಸಹ ಯಿಟ್ಟುಕೊಂಡು ದೇವತಾಶೇವೆ ವಗ್ಯೆರೆ ನಡಶಿಕೊಂಡು ಹೋಗಲುಳ್ಳವರು (ಮೈಅಂ. ೦೬೨೯. ೯೭-೨೭ ; 1593). **ಬಾರಾಬನೋತಿ** : ಊರ ಈ ನೌಕರರ ಸಂಖ್ಯೆಯು ಸಾಧಾರಣವಾಗಿ ಹನ್ನೆರಡು ಇರುವದರಿಂದ ಇವರ ಸಂಘಕ್ಕೆ ಬಾರಾಬನೋತಿಯೆನ್ನುವರು (ಮಿಚಾರ. ೦೬೦). **ಬಾರಾಬಲುತೆ** : "ಬಾರಾಬಲುತೆ- (i) ನಂಬಿ, ರೆಡ್ಡಿ, ಕರಣ, ಪುರೋಹಿತ, ತಳವಾರ, ಬಡಗಿ, ಕಮ್ಮಾರ, ಕುಂಬಾರ, ಅಗಸ, ಕ್ಷೌರಿಕ, ಹೊಲೆಯ, ಮಾದಿಗ (ಕಂಕೃ. ೬೮೦). (ii) ಬಡಗಿ, ಕಮ್ಮಾರ, ಹೊಲೆಯ, ಮಾದಿಗ, ಕುಂಬಾರ, ಚಮ್ಮಾರ, ಅಗಸ, ನಾಯಿಂದ, ಪುರೋಹಿತ, ಮುಲ್ಲಾ, ಗೊರವ, ಬೆಸ್ತ" (ಶ್ರೀವತ್ಸ. ೨೬೦).

[ ← ಮರಾ. ಬಾರಾಬಲೂತೀ, ಬಾರಾಬಲುತೇ]

**ಬಾರಾಭಾಯಿ** (ನಾ). (ಆಡಳಿತದ ನಿರ್ವಹಣೆಗಾಗಿ ನೇಮಕವಾದ) ಹನ್ನೆರಡು ಜನ ; ✱ ನಾರಾಯಣರಾವ್‌ಪೇಶ್ವೆಯ ವಧೆಯ ನಂತರ ನಾನಾಫಡಣವೀಸ, ಸಖಾರಾಮಬಾಪೂ ಮೊದಲಾದ ಹನ್ನೆರಡು ಜನ ಮುತ್ಸದ್ದಿಗಳು ರಾಜ್ಯಭಾರ ನಡೆಸಿದರು. ಇದಕ್ಕೆ 'ಬಾರಾಭಾಯಿ ಕಾರಭಾರ'ವೆಂಬ ಹೆಸರಾಯಿತು : ರಾಜರ ಕಾಟ ಕಾಯಿಗಳು ಹೆಚ್ಚುತ್ತಾ ಬಂದ ಹಾಗೆಲ್ಲಾ ಬಿಗಿಯಾದ ದರಬಾರನ್ನು ನಡಿಸುವುದಕ್ಕೆ ಅಗತ್ಯವಾದ ಏರ್ಪಾಡುಗಳನ್ನು ಮಾಡಿ ಬಾರಾಭಾಯಿಗಳನ್ನು ನೇಮಿಸಿ ಮರಾಟೆಸಂಸ್ಥಾನವನ್ನು ವಿಸ್ತರಿಸಿ ಉದ್ಧಾರ ಮಾಡಿದವರು ಪೇಷ್ವೆಗಳಲ್ಲವೆ ? (ಮುಕುಗ. ೩೦).

[←ಮರಾ. ಬಾರಾಭಾಈ, ಬಾರಭಾಈ]

**ಬಾರಾಮಾರ್ಗ**, ಭಾರಾಮಾರ್ಗ (ನಾ). ೧. ಹೆದ್ದಾರಿ; ರಾಜಮಾರ್ಗ : ಅವರಿಬ್ಬರೂ ಬಾರಾಮಾರ್ಗದ ಮಗ್ಗುಲ ಮಾಲೀಕನ ಕಾಡಿನಲ್ಲಿ . . . ಕುದುರೆಯ ಹಿಂಡನ್ನು ಮೇಯಿಸುವ ಸಲುವಾಗಿ ಅಟ್ಟಿಕೊಂಡು ಹೋಗುತ್ತಿದ್ದರು (ಪುಪಕು. ೨೯೩). ೨. "(ಒಂದು ದೇಶದ ಮೂಲಕ ಹಾದು ಹೋಗಲು ತೆರುವ) ಸಾಗಣೆಸುಂಕ, ಹೆದ್ದಾರಿಯ ಸುಂಕ" (ಕಸಂಗ್ರ. ೦೫೨) : ಕಾಕೋಲಂ ಬುಚಯ್ಯನ ವಟಿತಾ ಬಾರಾಮಾರ್ಗದ ಮುಂಡಿ ಶಿಲದಯನ ವಟಿತಾ (ಎಕ. X (S). ಕೋಲಾರ. ೨೩೬-೯೬; 1761); ಬಾರಾಮಾರ್ಗದ ವೀರತ್ತೈಯಶೆಟ್ಟರು ಹನಿಕೆ ಚೆನ್ನದೇವರು ಬಿಗ ದೇವನಹಳ್ಳಿ ನಿರಂಜನಯ್ಯ . . . ಮೊದಲಾದ ೫೬ ದೇಶದ ಬಾರಾಮಾರ್ಗದವರು ಬರಸಿಕೊಟ್ಟ ದಾನದ ವರದಿ ಕ್ರಮ (ಎಕ. IX (S). ಹೊಸಕೋ. ೦೬೭-೨; 1771). **ಭಾರಾಮಾರ್ಗ** : ೨. ಸ್ಥಳ ಪುಸ್ತಳದ ಚತುರ್ದಿಕ್ಕು ಐವತ್ತಾರುದೇಶದ ಭಾರಾಮಾರ್ಗ್ಗದ ದೇಶದವರು (ಎಕ. X (S). ಕೋಲಾರ. ೨೩೬-೦೦; 1761). 'ಭಾಟಾಮಾರ್ಗ' ಪರಾ. [ ? + ಮಾರ್ಗ]

**ಬಾರಾಸುಂಕ** (ನಾ). = ಬಾರಾಮಾರ್ಗ ೨ : ಇನ್ನೀ ಧರ್ಮವನುತ್ತರಾಯಣಸಂಕ್ರಾನ್ತಿ ನಿಮಿತ್ತದಿಂ ಕೊಟ್ಟು ಬಾರಾಸುಂಕದ ಭೇಣಿ ಕಾಱಿರ್ಕ್ಕೊಡಸದೆ . . . ತಪ್ಪದೆ ಪ್ರತಿಪಾಲಿಸುವರು (ಕಇಅ. ೩೬-೯೯-೦೬; 1134). [ ? + ಸುಂಕ$_1$]

**ಬಾರಿ$_1$**, ವಾರಿ$_1$ (ನಾ). ೧. ಸಲ ; ಸರದಿ ; ಸಾರಿ : ಪಶುಗಳ ಮೆಯ್ಯೊಳೆನಿತು ರೋಮಮುಂಟನಿತು ಬಾರಿ ತಾಂ ಕೊಲಿಸಿಕೊಂಬಂ ವೃಥಾ ಪಶುವಧೆಯಂ ಮಾಡಿದವಂ (ಕಂಕಕಂ. ೬೨-೦೬); ಎನಿತು ಬಾರಿ ಪಲಾಯನದ ಸಿರಿ ನಿನಗೆ ಸೇರಿತು (ಕುಮಾದ್ರೋ. ೦೮-೯೩); ಬಲಗೊಂಡನುಱಿ ಮುಂಬು ಬಾರಿ ತನ್ನೊಳು ತಾನು ಗೆಲವೇಱಿ ಮುನಿಗಳರ್ವರಿಗೆ ನಲಿದೆಬ ಗಿದನು (ಚಕ. ೩-೬೦). ೨. ಆಹುತಿಯಾಗುವ ಸರದಿ ; ಬಲಿಯಾಗುವ ಪಾಳಿ : ಪಾಳಿನ ಬಾರಿಯೆಮ್ಮ ಮೇಲೆ ಬಂದುದು (ಕಂಕಜಾ. ೩-೨೩ ವ);

ಅಬ್ಬಾ ನಿಮ್ಮ ಮನೆಗೆ ಬಾರಿ ಬಂದುದು ನಾಳೆ ರಕ್ಕಸನಲ್ಲಿಗಟ್ಟಿಂ (ಜೀವಸಂ. ೩೮-೨೩ ವ); ಎನಗೆ ಬಂದುದು ತಾಯಿ ನಾಳಿನ ದಿನದ ಬಾರಿ (ಕುವ್ಯಾಅ. ೧೧-೦೨). ೩. ಬಲಿ; ಆಹುತಿ : ಆತನಂ ಪವಮಾನಸೂನು ಬಾರಿಯ ನೆವದಿಂ ಪೋಗಿ ಕೀನಾಶಂಗಾಪೋಶನಮನಿತ್ತು ಮತ್ತಂ ಬರೆ (ನೇಮಿಪು. ೯-೩೨ ವ); ಎಲ್ಲರುಮಿರ್ದು ಮಾಡಿದೊಡೆ ಮಾಡಿದ ಬಾರಿಯು ಸೂಟಿಸ್ ನಿಯೋಗದಿಂದಲ್ಲಿಯ್ಯುವಂತೆ ಬಂದು ಬಟಿಕಾ ಮನೆಯಲ್ಲಿಗೆ ಬಂದುದು (ಜೀವಸಂ. ೩೬-೨೩). ೪. ಬಾಯಿ ; ದವಡೆ : ಬೇಟದುಬ್ಬಿದಿಗಮನಾಂತ ನಲ್ಲಳ ಮುಖಾಂಬುಜಮಂ ನಡೆ ನೋಡಿ ನೋಡಿ ಸಾಯದೆ ಬರ್ದು ಕಾಡಿದಂ ಜವನ ಬಾರಿಯೊಳಂ ಬರ್ದುಕಿಪಡದಿರ್ಕುಮೋ (ಅದಿಪು. ೦೨-೨೩); ಪೆಂಡತಿಯ ಮೂಗನಕಾರಣದಿನರಿವವನಂ ಜವನ ಬಾರಿಗಟ್ಟುವುದೆ ಧರ್ಮಂ (ಪಂಚತಂ. ೬೯-೯); ಅರಣ್ಯದೊಳ್ ಚರಿಯಿಪ ರೌದ್ರರಾಕ್ಷಸರ ಬಾರಿಗೆ ಬಿಟ್ಟಳೋ ಕಾಂತೆ (ಕುಸುಮಾ. ೧೪-೦೦೪). ೫. ದಾಳಿ; ಆಕ್ರಮಣ; ಲಗ್ಗೆ : ತಳವಾರ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬರ್ದುಕಿ ಬಂದಂದ ಮಿದಾರಳವು (ಸುಕುಮಾ. ೬-೨೪); ನೀನಾ ನಿಷ್ಠುರನ ಕೆಯ್ಯೊಳಿರಡಿಲ್ಲದೆ ಪೇರಾನೆಯ ಬಾರಿಗೆ ಬಿರ್ದಾ ಶ್ವಾನನ ತೆಱದಂತೆ ಬಾಧೆಗೊಳಗಾಗಿಪ್ಪೆ (ಧರ್ಮಾಮೃ. ೬-೧೩೦); ಇನನಿದಿರೆಟ್ಟಿ ಕಾರ್ಮುಗಿಲ ಬಾರಿಗೆ ಬಿಟ್ಟನೊ ತಳ್ಳ ಬಳ್ಳಿಮಿಂಚಿನ ಬಲೆಯಲ್ಲಿ ಸಿಕ್ಕಿದನೊ . . . ಘನಜಳಧಾರೆಯಿಂ ಕರಗಿ ಹೋದನೊ (ಅನಂಪು. ೯-೦೫). ೬. ಅಧೀನ ; ವಶ ; ಹತೋಟಿ : ಪೊದೆದ ಮಡಿ ಬಟಿಯಂ ಧೂಳಿಯೊಳ್ ಮಾಸಿಯುಸಗನ ಬಾರಿಯೊಳ್ ಬಿರ್ದು ನಿಗ್ರಹಕ್ಕೊಳಗಪ್ಪಂತೆ ಚವಳರ್ . . . ದುಃಖಂಬಡುವರ್ (ಧರ್ಮಾಮೃ. ೯-೩೮); ಭೀಮ ಧರಿತ್ರೀಭೃತ್ಸ್ಯನುಜೆ ನಳನೃಪಂಗೆರ್ದೆದೆತ್ತು ಕರಂ ಚಿತ್ರಭವನ ಬಾರಿಗೆ ಬಂದಳ್ (ದಮಯಂ. ೩-೦). ೭. ಕಪಿಲೆಬಾವಿಯ ಬಳಿ(ನೀರು ಎಳೆಯುವ) ಎತ್ತುಗಳು ಕೆಳಗೆ ಇಳಿಯುವುದಕ್ಕಾಗಿರುವ ಇಳಿಜಾರುಪ್ರದೇಶ : ಮೊಟ್ಟೆಯ ಬಾರಿಯ ಕಡೆಗೆ ಮಣ್ಣು ಭರತಿ ಹಾಕದೆ ಗುಣಿಗಲ್ಲುಗಳನ್ನು ಅಥವಾ ಗರಸುಮಣ್ಣನ್ನು ಹಾಕಿ . . . ಮೊಟ್ಟೆಯ ಬಾರಿಯನ್ನು ತಯಾರು ಮಾಡಿ ಮೊಟ್ಟೆಯನ್ನು ಸಾಗಿಸಬೇಕು (ಕೃಷಿಶ್ರ. ೦೦೪) ; ಬಾವಿಗೊಂದು ಹೊಸ ಮೊಟ್ಟೆಯಾಗಿದೆ; ಬಾರಿಯಾಗಿದೆ (ಬಾಬಂ. ೧೭), ಜೀವ ನೀಗುವ ಈರ್ಷೆಯಿಂದ ಧಡಧಡನೆ ಬಂದ ಬಸವಂತಿ, ಬಾರಿಯ ಮೇಲಿಂದಲೇ ನೀರಿಗೆ ಧುಮುಕಿದಳು (ದೀಶಹ. II. ೦೪೪). ೮. ಕಾಮೋದ್ರೇಕ ; ಬೆದೆ : ಪುಗಿಲಂ ಪೋಗು ಬಾರಿಯಂ ಸನ್ನೆಯಂ ನೂಱುವಮರ್ಬುವ ನಿಲ್ವೆಡೆಯಂ ಬಗೆಯಂ ತೆಗೆಯನಲ್ಲಾಟಮಂ . . . ನೀಂ ಬಲ್ಲೆ ಬೇಂಟೆಕಾಱರೊಳೆಲ್ಲಮಾನೆ ಬಲ್ಲೆಂ (ಶಂಶಿಶಾ. ೫-೪೩); ಹಸು ಬಾರಿಗೆ ಬಂದಿದೆ, ಹೋರಿ ಕೊಡಿಸಬೇಕು (ರೂಢಿ). ೯. ಕೂಟ ; ಸುರತ : ಆ ಮುದುಪಂ ಗಡ ಕೊಟ್ಟನೊತ್ತಿಯಂ ಗರಗರನಾಯ್ತು ಬಲ್ಮೆ ಮುದು ಗೂಗೆಯ ಬಾರಿಗೆ ಕೈನೆ ತಾನೆ ಮೈಗರೆದೆನಗೊತ್ತೆಗೊಟ್ಟ ಸುಖ ಮಾಟ್ಕಿಪೆ ವಟ್ಟದನಕ್ಕ ಬಟ್ಟಪೆಂ (ಸೂಕ್ತಿಸು. ೯-೯೨೨) ; ಅವನ ಬಾರಿಯೊಳ್ ಮಗಳ ಮೆಯ್ ಕಳೆಯೇಱುವುದೊಳ್ಮೊಗಂ ಪೊಗರ್ತೀವುದೋಜೆಯುರ್ಕುವುದು (ಶಶಿ. ೬-೯೬). ಬಾರಿ$_1$ : ೧. ವಾರಿ ಇಲ್ಲದ ಸುಂಕ ದಾರಿಗೆ ದಾರಿಯೇ ? (ಗಾದೆ). ೨. ಬಿರುದರ ಗೋವ ವಾರಿಗೆ ತಪ್ಪುವ ಲೆಂಕರ ಗಂಡ (ಎಕ. VII. ಶಿಕಾಂ. ೦೪೪-೯ ; 1181).

ಬಾರಿಬಾರಿ (ದ್ವಿರುಕ್ತಿ) : ಬಾರಿಬಾರಿಗೆ ಪಾತಿವ್ರತ್ಯವ ಬೋಧಿಸೆ ಜಾರೆಗದಟ ನಿಜ ಸೊಗಸೀತ (ಭರಂದ. ೦-೦೫೬-೦); ಆ ರಣದೊಳಂತಿವನ ಸ್ಯಂದನಸಹಸ್ರಮಂ ಬಾರಿಬಾರಿಗೆ ಕತ್ತರಿಸಿ ಕೆಡಹಿ ಫಲುಗುಣಂ ಪೂರೈಸಿದಂ ದೇವದತ್ತಮಂ (ಕೃಪಿಶಾ. ೨೫-೩೪) ; ಇಂದ್ರನೂ ಜಯಂತನೂ . . . ಬಾರಿಬಾರಿಗೂ ಸೋತು ಓಡಿ ಹೋಗಲಿಲ್ಲವೆ ? (ಕೃಪಾಉ. ೦೬೬).

[ದೇ.॥ ಕೊಡ. ಬಾರೀ ; ತೆಲು. ಬಾರಿ./ಹಿಂ. ಬಾರ್; ಮರಾ. ಬಾರಿ]

ಬಾರಿ$_2$ ' ಬಾರ್$_2$ ' ನೋ.

ಬಾರಿ$_3$ (ನಾ). ಆನೆಯನ್ನು ಹಿಡಿಯಲು ಮಾಡುವ ಉಪಾಯ : ಗಂಧಹಸ್ತಿಯೊಡನೆ ಬಾರಿ [ಪಾಠಾಂ. ಚಾಲಿ, ಬಾಳಿ, ಬಾಲಿ, ಬಾವಿ]ಯೊಳ್ ಮೂವತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿಯಾನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿಯೋಱ (ಪತ್ತಾಶಾ. ೩೯-೦೪) ; ತೋರದೆರೆ ಮುರಿಯ ಮೂಡುವ ವಾರಣಮಂ ಪೋಲ್ತುದಡಸಿ ನಿಡುಗೆಯ್ಯಂ ಭಂಡಾರಿಸಿ ಮೆಡಱದ ತಳಿಯಂ ಬಾರಿಯುಮಂ ಮುಱಿಯೆ ಪೊಯ್ದು ಪೋಱಮಡು ವಿಭಮಂ (ಅರ್ಧನೇ. ೫-೦೦೩). ' ಕೆಡ್ಡಾ ' ಹೋ. [< ಸಂ. ವಾರೀ]

ಬಾರಿಕ (ನಾ). ೧. ಸರದಿಯನ್ನು ತಿಳಿಸುವವನು : ಬಾಯಾಳೆಂಬ ಬಳ್ಳುಮಂ ಬಾರಿಕನಂ ಮಾಡಿ ಪಲಕಾಲಂ ಸಲುತುಮಿರ್ಪುದಂ (ಪಂಚತಂ.೪೮-೦೨) ; ಬಾರಿಕಂ ಬಂದಾ ಪಾರ್ವನಂ ಕಾಣದಬ್ಬಾ ನಿಮ್ಮ ಮಗನ ಮೇಲೆ ಬಾರಿ ಬಂದುದು ನಾಳೆ ರಕ್ಕಸನಲ್ಲಿಗಟ್ಟಿಂ ಎಂದು ಪೇಟ್ದು ಪೋದಾಗಳ್ (ಜೀವಸಂ. ೩೮-೨೩ ವ) ; ಬೊಪ್ಪೆಯಿಂ ಪೇಳ್ದ ಬಾರಿಕನ ನುಡಿಯಂ ಕೇಳ್ದು ತಬ್ಬಿಬ್ಬುಗೊಂಡು (ಲಕ್ಷ್ಮಿಶಾ. ೩೮-೯). ೨. ಗ್ರಾಮದ ಕಾವಲುಗಾರ : ಸಾಸಿರ್ವ್ವರ ಬಾರಿಕಂಗೆ ಮನೆದೆಱ (ಇಎ. ೦೯೪೬, ಹಾನಗಲ್. ೨೫೦-೩೩ ; 993) ; ಬಂಟ ಸಾಸಿರ್ವ್ವರ(ರುಂ) ಬಾರಿಕಂಗೆ ಮನೆದೆಱ ಬಿಟ್ಟ ಬೆಸಕೂಳ್ದೆಱ ಮೊದಲಾಗೆ ಸರ್ವ್ವಮಾನ್ಯಮಾಗೆ ಬಿ[ಟ್ಟ]ರ್ (ಕಇ. II. ೯-೩೩ ; 1072).

[ಬಾರಿ$_1$ + — ಕ$_3$]

ಬಾರಿಕಾರ (ನಾ). ಹಳ್ಳಿಯನ್ನು ಕಾವಲು ಕಾಯುವವನು ; ಗ್ರಾಮದ ಕಾವಲುಗಾರ : ಮನೆಯಲ್ಲಿ ನಿತ್ಯ ಕಸ ಮುಸುರೆಯನ್ನು ಮಾಡುವ ತಳವಾರ, ಬಾರಿಕಾರರಿಂದ ಮದುವೆ ಮುಂಜಿಗಳನ್ನು ಮಾಡಿಸುವ ಪುರೋಹಿತರ ವರೆಗೂ . . . ಬೇರೆ ಬೇರೆ ಮನೆತನಗಳಿರುವವು (ಪಳಶಾ. ೦೩೬).

[< ಬಾರಿಕ + — ಕಾರ$_1$ (< — ಕಾಱ)]

ಬಾರಿಕಿ, ಬಾರೀಕಿ (ನಾ). = ಬಾರಿಕಾರ : ಬಾರಿಕಿ_ಈತನು ಗೌಡನ ಅಪ್ಪಣೆಯಂತೆ ಹಳ್ಳಿಯಲ್ಲಿ ಮುಸುರೆ ತಿಕ್ಕುವದು, ಹಿಲಾಲು ಹಿಡಿಯುವದು ಮುಂತಾದ ಕೆಲಸ ಮಾಡುವನು (ಮಹಾರ. ೦೬೨). ಬಾರೀಕಿ : ತೋಟಿ_ತಳವಾರ, ವೆಟ್ಟಿ, ಬಾರೀಕಿ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಮಾಶ. ೦). [< ಬಾರಿಕ. / ತೆಲು. ಬಾರಿಕವಾಡು]

ಬಾರಿಗುಱ (ನಾ). ಬಲಿಯಾಗಿ ಕೊಡುವ ಕುರಿ ; ಆಹುತಿಯಾಗಿ ಕೊಡುವ ಕುರಿ : ಕುತ್ತಮಂ ಕಿಡಿಸುವ ನಿಮಿತ್ತದಿಂ ಚಂಡಿಕೆಗೆ ಪಿಂಡಮನಿಟ್ಟುಂ ಮಾರಿಗೆ ಬಾರಿಗುಱಯನಿತ್ತುಂ . . . ಇಂತನೇಕಪ್ರಕಾರಂಗಳಿಂ ರೌದ್ರದೇವತೆಗಳಂ ಪಿಡಿದು ದುರ್ಗತಿದುಃಖದಿಂದಾಳುತ್ತಂ ಮುಱುಗುತ್ತಮಿರ್ಪರ್ (ಪಶಾರ. ೪೬೯). [ಬಾರಿ$_1$ + ಕುಱ$_3$]

ಬಾರಿಗೆ (ನಾ). ಕಸ ಗುಡಿಸುವ ಸಾಧನ ; ಪೊರಕೆ : ಹನುಮಂತಪ್ಪನು . . . ಅಡುಗೆಮನೆಯನ್ನು ಬಾರಿಗೆಯಿಂದ ಸ್ವಚ್ಛವಾಗಿ ಗುಡಿಸಿದನು (ರಕ್ತರ್ಕೃ. ೦೦೯). ' ಬೋಹರಿಗೆ ' ಪರಾ. [ ? ]

ಬಾರಿದಿ (ನಾ). ವೇಶ್ಯೆ ; ಸೂಳೆ : ಮೊಳ ಬಟ್ಟೆಗೆ ದೇಹವನ್ನು ಮಾರುವ, ಮಾರಿಕೊಂಡ ಬಾರಿದಿಯಾಗಿದ್ದಾಳೆ (ಒಡಮು. ೨೦೦).

[← ಹಿಂ. ಬಾರತಿಯ. / ಸಂ. ವಾರಸ್ತ್ರೀ]

ಬಾರಿಯಿಕ್ಕು (ಕ್ರಿ). (ಸರದಿಯ ಪ್ರಕಾರ) ಕಾವಲಿಡು ; ಕಾವಲು ಹಾಕು : ಅರಸನಪ್ಪಣೆಯಿಯಾಯಲೂರ ಸೀರೆಯನೆಲ್ಲ ಗಿರಿಯಂತೆ ಮಡಿವಳಯ್ಯನ ಮುಂದೆಯೊಟ್ಟುತ್ತೆ ಕರಿ ತುರಗ ರಥ ಪತ್ತಿ ಮುಂತಾದ ಬಹುಬಲವ ಬಾರಿಯಿಕ್ಕುತ್ತ ಭಟರು ಮಾರುಳಿಸಗ ಭೂವರಗೆ ನೀನಿದಿರೆ . . . ಎನ್ನಲು (ಪ್ರಭುಪು. ೬-೬೨). [ಬಾರಿ$_1$ + ಇಕ್ಕು]

ಬಾರಿಯಿಡು (ಕ್ರಿ). ಬಲಿಯಾಗಬೇಕಾದ ಪ್ರಾಣಿಯ ಸರದಿಯನ್ನು ಗೊತ್ತುಮಾಡು ; ಸರದಿಯ ಮೇರೆಗೆ ಬಲಿಯನ್ನು ತೆಗೆದಿಡು :

ಫಣಿರಾಜಂ ಬಾರಿಯಿಟ್ಟಟ್ಟಿದೊಡನಾದಿನದಿಂ ಬರ್ಪ ಸರ್ಪಂಗಳಂ ಬಲ್ಕಣಿ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ ಬಲಂ ಕೇಳಿರೇ (ಕಾವ್ಯಾವ. ೯೦೦). [ ಬಾರಿ$_1$ + ಇಡು$_1$ ]

**ಬಾರಿಲುಮಕ್ಕಿ** (ನಾ). ಒಂದು ಬಗೆಯ ಭೂಮಿ : ಬಾರಿಲುಮಕ್ಕಿಯು ಗಳ್ದೆಗೆ ಇಕ್ಕಿ ಹೊನ್ನ . . . ಏಳು ಭೆಯದ ಬತ್ತ ಇಂನೂಱ ಮೂವತ್ತು ಇಕ್ಕಿದಂ (ಎಕ. V, ಹಾಸನ. ೩೮-೧೭ ; ಸು. 1000 ?). [ ? + ಮಕ್ಕಿ$_1$ ]

**ಬಾರಿಸು$_1$** (ಕ್ರಿ). ೧. ಚಾವಟಿಯಿಂದ ಹೊಡೆ ; ಚರ್ಮದ ಪಟ್ಟಿಯಿಂದ ಏಟುಕೊಡು : ಆರು ಬಾರಿಪ್ಪನಾರಂ ನಿನಗೆಱಗಿಪಂ. . .ಬೆಸಸು ಬೆಸಸು (ಅರ್ಜವೆ. ೭-೬೯) ; ತುಡುಗುಣಿಗಳವದಿರು ನಭೋಗ್ರಕೆ ಸಿಡಿದು ಹವಿ ಗೊಂಬಮರನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೊರಗಾ. ೧-೧೧-೮). ೨. ಜೋರಾಗಿ ಏಟು ಕೊಡು ; ಬಿಗಿ : ರೋಷ ಗೊಂಡ ಇನ್ಸ್‌ಪೆಕ್ಟರ್ ಅವನ ಕೆನ್ನೆಗಳಿಗೆ ಬಾರಿಸಿದ (ಆತ್ಮಾರ್ಪ. ೧೧೯).
[ ಬಾರ್$_2$ + – ಇಸು$_3$. / ತುಳು. ಬರ್ಜು ]

**ಬಾರಿಸು$_2$** (ಕ್ರಿ). ೧. ನಿರೋಧಿಸು ; ಪ್ರತಿಬಂಧಿಸು : ದೇವತೆಗಳ ಮಾಡಿದಾಹಾರಮಂ ರಿಸಿಯರ್ಗೆ ಚರಿಗೆ ಮಾಡಲಾಗದೆಂದು ಬಾರಿಸಿ (ವಡ್ಡಾರಾ. ೯೦-೨೯); ಕಡುಕೆಯ್ದು ಕೃತಾಂತನಿಂತು ನಿರ್ದಯಮೆಱೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ (ಆದಿಪು. ೪-೯) ; ಇಪ್ಪರ್ ಬಾರಿಸಿದೊಡಂ ಮಾಣದೆ ದುಪ್ಪರನೊಳಕೊಂಡು ಕಟ್ಟರ ಕಥೆಗಳಂ ಪೇಟ್ದಿಂ (ಶಂಕಕಂ. ೧೨೨-೦೨). ೨. ಎಚ್ಚರಿಕೆ ಕೊಡು,—ನೀಡು: ಈ ರೂಪೆಂಬುದು ಭುವನಜನಾರಾಧ್ಯಂ ಚಕ್ರಿಜನನಿಷೇವಿತಮಿದಱೊಳ್ ಸಾರದಳಿಪೆಂದು ಪೆಳ್ಗನೆ ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್ (ಆದಿಪು. ೯-೯೩) ; ಅಂದೆನ್ನಂ ನೀಂ ಬಾರಿಸಿದುದು ಸನ್ನಿದವಾಯ್ತು ನ್ನಿದರ್ಕೆ ಪೇಟ್ಟೆಗೆಯ್ವೆಂ (ಶಂಕಕಂ. ೬೮-೦೮); ಬಾರಿಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ (ಕೃಷ್ಣಪು. ೭-೩೩). ೩. ಪರಿಹರಿಸು ; ನಿವಾರಿಸು : "ಬಾರಿಸೆಂದು ನಿವಾರಿಪುದು" (ಶಶಾ. ೭೦-೬೧೦) ; ಚಂದ್ರಾಂಶುಚಂದ್ರಕಾಂತದ್ರವ ಕರ್ಪೂರ ಮೃಣಾಲಾದಿಗಳುಂ ಬಾರಿಸಲಾಱವೆ ದಲವನ ದಾಹಜ್ವರವುಂ (ಆದಿಪು. ೨-೧೩). ೪. ಹೀಯಾಳಿಸು ; ಧಿಕ್ಕರಿಸು : ಕ್ಷೀರೋದವಾರಿಧಾರಾ ಪೂರದ ಚೆಲ್ವಿಂಗೆ ಸೆಣಸುವಂತಭಿನವನೀಹಾರದ ಬೆಳ್ಪನೆ ಬಾರಿಸಿ ಪಾಂಡುಕ ಶಿಲಾತಲಂ ಸೊಗಯಿಸುಗುಂ (ಆದಿಪು. ೭-೭೯) ; ಕೀರ್ತಿ ದಿಗ್ವಳಯಭಿತ್ತಿಯ ನೋವದೆ ಬಾರಿಸಿತ್ತು ಭಾಸುರರುಚಿಯಿನ್ದೆ ಚನ್ದ್ರಮನ ಚನ್ದ್ರಿಕೆಯಂ (ಎಕ. V. ಅರಸೀ. ೧೨೭-೩೭ ; 1185); ನೇರಿತೆಳಮಾಱೆಗಂಬಮನೋರಂತಿರೆ ನುಣ್ಪುವೆತ್ತು ಸೋಲಿಪ ಚೆಲ್ವಿಂ ಬಾರಿಸಿ ಸೊಬಗಿಂಗೆತ್ತಿದ ತೋರಣ ಗಂಬಂಬೊಲಿದಿರ್ದುವಾಕೆಯ ತೊಡೆಗಳ್ (ಕಬ್ಬಿಗಾ. ೭೩). ೫. ಬಿಡು ; ತೊರೆ ; ತ್ಯಜಿಸು : ಬಾರಿಸುತಿಂದ್ರಿಯಜ್ಞಾನವ ಪ್ರಾಣಾಪಹಾರಿಯಾಗಿರ್ದ ಕ್ಷುಧೆಯೊಳು ಸಾರನಿಜಾತ್ಮಭಾವನೆಯೆಂಬಮೃತಾಹಾರವ ಕೊಳುತಿರ್ದ ರೊಲಿದು (ಶಾಂತೀಶ. ೯-೭೩). [< ವಾರಿಸು]

**ಬಾರಿಸು$_3$** 'ಬಾಜಿಸು$_2$' ನೋ.

**ಬಾರೀಕ** (ಗು). ದಪ್ಪವಾಗಿಲ್ಲದ ; ತೆಳುವಾದ : ತುಂಬುಗಲ್ಲ. ಬಾರೀಕ ಮಿಸೆ, ಭರ್ತಿ ಆಳು (ಹೊಸಕ್ಷ. ೭೯).
[←ಪಾರ. ಹಿಂ. ಮರಾ. ಬಾರೀಕ್]

**ಬಾರೀಕಿ** 'ಬಾರಿಕಿ' ನೋ.

**ಬಾರು$_1$** 'ಬಾರ್$_2$' ನೋ.

**ಬಾರು$_2$** 'ಬಾರ್$_3$' ನೋ.

**ಬಾರು$_3$** 'ಬಾರ್$_4$' ನೋ.

**ಬಾರುಕೋಲು** 'ಬಾರ್ಕೋಲು' ನೋ.

**ಬಾರುಗಿ** (ಕ್ರಿ). ಚರ್ಮವನ್ನು ಎತ್ತು,—ಸುಲಿ : ಒದೆದುಗುರಿಂದೆ ಬಾರುಗಿದುದೆಯ್ದದೆ ಕುತ್ತಿದಳಪ್ಪ ಕಂಟಕೌಘದಿನಳಿ ಪಾಱಿದಮ್ವಳಿಸಿ ಕೆಂದಳದಿಂದೊಳಪೊಯ್ದು ಪೊಯ್ದುದೆಯ್ದದೆ . . . ಕಡೆಗಣ್ಗಳಿಂ ಪಡೆದಳೋಪನನೋಪಳನಂಗಯುದ್ಧದೊಳ್ (ಲೀಲಾವ. ೧೩-೨೧).
[ ಬಾರ್$_2$ + ಉಗಿ$_1$ ]

**ಬಾರುಗುತ್ತ** 'ಬಾಗುರ್ತ್ತ' ನೋ.

**ಬಾರುಗುತ್ತು** 'ಬಾಗುರ್ತ್ತ' ನೋ.

**ಬಾರುಗೋಲು** 'ಬಾರ್ಕೋಲು' ನೋ.

**ಬಾರುದಾರಿ** (ನಾ). ಚರ್ಮದ ಮೇಲೆ ಬಿದ್ದ ಪೆಟ್ಟಿನ ಗುರುತು; ಬಾಸುಂಡೆ : ಏರಗಯ್ಯನು ಕಟ್ಟಿ ಬಿಜ್ಜನ ಚೇರ ಬಂದನು ಹೆಚ್ಚಿ ಬಡಿಯಲು ಬಾರುದಾರಿಗಳು ಎದ್ದು ಗುರುಗಳ ಬೆನ್ನಿನ ಮೇಲೆ (ನಂದಿಲಿ. ೩-೨೭). [?]

**ಬಾರುಸಿಪಾಯಿ** 'ಬಾರ್ಸಿಪಾಯಿ' ನೋ.

**ಬಾರುಳಿ** (ನಾ). (?) : ನೋಟ್ಪ ತರಳಲೋಚನದ ಸರಳಾಪಾಂಗಂ ಹರಿಣೀ ಭಾವಮಂ ಮನಂಗೊಳಿಸಿ ನಿಱಿದಳಿದೊಂಗಲಂ ತೆಗೆಯೆ ಬಾ[ಪಾಠಾಂ. ಬಾ] ರುಳಿಯಂ ದನಿಗೆಯ್ದ ಶೋಕೆಯೊಳ್ ಕಿಱುಮುಗುಳ್ಗಂಜಿಯಂ ತಳೆದು ಪೂವಿನ ಬಿಲ್ ನನೆಯಂಬು ಕೆಯ್ಕೊಳಚ್ಚಱಿದಿರೆ ಮೇಚಕಚ್ಛವಿಯ ತಾವರೆ ಗಣ್ಗಳ ಗಾಳುವೆಣ್ಗಳೀಂ ಮೆಱೆದ್ದರೊ ಕೇಳಿಶೈಲಶಿಖಿರಾವಳಿಯೊಳ್ ಶಬರೀವಿಲಾಸಮಂ (ಅನಂಪು. ೭-೦೭). [?]

**ಬಾರೂತ್** 'ಬಾರೂದು' ನೋ.

**ಬಾರೂದು, ಬಾರೂತ್** (ನಾ). ತುಪಾಕಿಗಳಿಗೆ ತುಂಬುವ ಮದ್ದು ; ಸಿಡಿಮದ್ದು : ಮತ್ತೊಂದು ಜಹಜಿನಲ್ಲಿ ಬಾರೂದಿಗೆ ಬೆಂಕಿ ಹತ್ತಿ ಬೆಂದುಹೋಯಿತು (ರಾಜೇಂದ್ರ. ೦೫೦) ; ಒಂದೆರಡು ಕಡೆ ಪೋಲೀಸು ಠಾಣೆಗಳಿಂದ ಕೋವಿ, ಬಾರೂದುಗಳು ಕಾಣೆಯಾಗಿವೆ (ಗೊಂದಾರ. ೬). **ಬಾರೂತ್** : ಬಾರೂತ್ ಜನಗಳು, ಎಂದರೆ . . . ಖಾಸಾಬಾರು, ಕಂದಾಚಾರ ವಗೈರೆ ಜನರಿಗೆ ಸೇರಿಸಿಕೊಂಡು ನಿಂತರು (ಚಿತ್ರಶಾ. ೬೯).
[← ಪಾರ. ಹಿಂ. ಮರಾ. ಬಾರೂದ್, ಬಾರೊತ್]

**ಬಾರೆ** 'ಬೋರೆ$_2$' ನೋ.

**ಬಾರೆತ್ತು** (ಕ್ರಿ). ಚರ್ಮವನ್ನು ಕೀಳು; ತೊಗಲನ್ನು ಸುಲಿ : ಬಾರೆತ್ತಿ ಸೀಳೆಯುಂ ಗುಗ್ಗುಳಂಬೊತ್ತಿಸೆಯುಂ ಅಸಗವೊಯಲ್ವೊಯ್ಯೆಯುಂ (ಅಜಿತ. ೧೧-೧೦ ವ) ; ಮಾದೆಗನಂತೆ ಬಾರೆತ್ತುವರ್ ನಾಯಂತೆ ಕಚ್ಚಿ ತೆಗೆವರ್ (ಧರ್ಮಾಮೃ. ೩-೭೩) : ಮಡದೀ ಹೆಡತಲೆವರಂ ಬಾರೆತ್ತುವುದುಂ ಕೂರಸಿಗಳಿಂದೆತ್ತಿ ಕುತ್ತುವುದುಂ (ಶಾಂತೀಶ. ೯-೧೧೦ ವ).
[ಬಾರ್$_2$ + ಎತ್ತು$_1$]

**ಬಾರೇಟ್** (ಕ್ರಿ). ಹೊಡೆತದಿಂದ ಚರ್ಮದ ಮೇಲೆ ಬಾಸುಂಡೆ ಬರು : ತೋರಮುಡಿವಿಡಿದು ಕುಡಿಯಂ ನಾರಂ ಸದೆವಂತೆ ತದೆದು ಬೀಟೆಯ ಕಾಲಿಂ ಬಾರೇಟ ಬದಿಯನೊದೆದೊಡೆ ಕೇರು ಪೊರಳ್ವಂತೆ ಕಾಲ ಮೇಲೆ ಪೊರಳ್ದಳ್ (ಯಶೋಚ. ೨-೫೦) ; ಎನಗಿನ್ನಾರಾಸೆಯಾರ್ಶರಣರಾರ್ಶರಣೆಂದಾ ಕಳಕಂಠನಾದೆ ಬಸಿಱಿಂ ಬಾರೇಟ್ವಿನಂ ಮೋದಿದಳ್ (ಅನಂಪು. ೧೧-೯೬).
[ಬಾರ್$_2$ + ಏಟ್$_1$]

**ಬಾರ್ಕೋಲು, ಬಾರುಕೋಲು, ಬಾರುಗೋಲು** (ನಾ). ಚರ್ಮದ ಹೆಣಿಕೆಯುಳ್ಳ ಚಾವಟಿ ; ತುದಿಯಲ್ಲಿ ಚರ್ಮದ ಪಟ್ಟಿಗಳನ್ನು ಹೊಂದಿಸಿದ ಚಾವಟಿ ; ಬಾರುಗುಣಿ (ಉಕ) : ಹೇರು ಕಟ್ವಾಗ ಬಾರ್ಕೋಲ ನಾ ಮರೆತೆ . . . ನಮ್ಮೆತ್ತು ಮುಂದೆ ಮೂರ್ಛೆಚ್ಚಿ ತೂಯೊಲ್ಲೊ (ಹಳ್ಳಿಪಾ. ೩೩). **ಬಾರುಕೋಲು** : ಬಂಡಿಕಾರಣ್ಣನ ಬಂಡಾಟ ನೋಡಿರೊ ಬಾರುಕೋಲವನ ಬಲಗೈಲಿ (ಹಳ್ಳಿಯು. ೪೮); ಬಿರು ಗಾಳಿ ಮೈದುಂಬಿ, ಆಗಸದ ಮೂಲೆಮೂಲೆಯಲಿ ಸಿಡಿಲು ಮಿಂಚಿನ

ಬಾರುಕೋಲು ಬೀಸಿ (ಕಂಪಬು. ೯೨-೦೯). **ಬಾರುಗೋಲು :** ಬಂಡಿಗಾರ ತನ್ನ ಬಾರುಗೋಲನ್ನು ನಡುಪಟ್ಟಿಯಲ್ಲಿ ಸಿಕ್ಕಿಸುತ್ತ . . . ನುಡಿದನು (ಭುವರು. ೫೬೦). [ಬಾರ್$_{2}$+ಕೋಲು$_{1}$ (<ಕೋಲ್$_{1}$)]

**ಬಾರ್ಗಿರ್** ' ಬಾರ್ಗೀರ್ ' ನೋ.

**ಬಾರ್ಗೀರ್**, ಬಾರಗೀರ, ಬಾರಗೀರು, ಬಾರಾಗೀರ, ಬಾರ್ಗಿರ್ (ನಾ). ಕುದುರೆದಳದ ಸಿಪಾಯಿ ; ಅಶ್ವಾರೋಹಿಯೋಧ : 'ಬಾರ್ಗೀರ್‌ಕಛೇರಿ ' ಪರಾ. **ಬಾರಗೀರ :** ಹತ್ತು ಮಂದಿ ಸಿಲೇದಾರರೂ ನಾಲ್ವತ್ತು ಮಂದಿ ಬಾರಗೀರರೂ ಅವರನ್ನು ಹಿಂಬಾಲಿಸಿದ್ದರು (ಕಪುಂ. ೯೭). **ಬಾರಗೀರು :** ಅರವತ್ತು ಸಾವಿರ ಕುದುರೆಗಳಿಗೆ ಜೀನು ಹಾಕಿ ಸವಾರರು ಏರಿಕೊಂಡು ಯುದ್ಧಕ್ಕೆ ಹೊರಡಲು ಈ ಕ್ಷಣ ಸಿದ್ಧವಾಗಿದಾರೆ. ಬಾರಗೀರು ಸೇರಿ ಇದಕ್ಕೆ ಎರಡರಷ್ಟು ಫೌಜು ಇದೆ (ಮುಸುರ. ೯೯). **ಬಾರಾಗೀರ :** ದರ್ಬಾರದಲ್ಲಿ ಬಾದಶಹನು ನಮ್ಮನ್ನು ಒಬ್ಬ ಬಾರಾಗೀರನಂತೆ ಭಾವಿಸಿ, 'ದೂರ ನಿಂತುಕೊಳ್ಳುವಂತೆ ಸಂಜ್ಞೆ ಮಾಡಿದನು (ಛತ್ರಪ. ೦೯೨). **ಬಾರ್ಗಿರ್ :** ಇಂಗ್ಲಿಷ್ ಕಂಪೆನಿಕ್ಯಾವಲ್ರಿಯ ಪದ್ಧತಿಯಂತೆ ಏರ್ಪಟ್ಟ ೫೦೦ ಮಂದಿ ಸವಾರರು ಕ್ಲೋಸ್‌ಪೇಟೆಯಲ್ಲಿ ಮೊಕ್ಕಾಂ ಮಾಡಿದ್ದರು. ಇವರಿಗೆ ಬಾರ್ಗಿರ್ ಎಂಬ ಹೆಸರು ಕೊಟ್ಟಿತ್ತು (ಮುಹಾಪು. II, ೯೯). [← ಪಾರ. ಬಾರ್ಗೀರ್ ; ಮರಾ. ಬಾರ್ಗೀರ್, ಬಾರಗೀರ್ ; ಹಿಂ. ಬಾರಗೀರ್]

**ಬಾರ್ಗೀರ್‌ಕಛೇರಿ** (ನಾ). ಹಳೆಯ ಮೈಸೂರು ಸರಕಾರದ ಅಠಾರಾ ಕಛೇರಿಗಳಲ್ಲಿ ಒಂದು ; ಅಶ್ವದಳದ ಕಚೇರಿ : ಕಛೇರಿಗಳು—೧. ದಿವಾನ್‌ಕಛೇರಿ. . ೪. ಬಾರ್ಗೀರ್‌ಕಛೇರಿ (ಮುಹಾಪು. II, ೫೬).
[ಬಾರ್ಗೀರ್+ಕಛೇರಿ(<ಕಚೇರಿ)]

**ಬಾರ್ಗೀರಿ**, ಬಾರಗಿರಿ (ನಾ). ಕುದುರೆ ದಳದ ಕೆಲಸ ; ಅಶ್ವಾರೋಹಿ ಸೈನಿಕರ ವೃತ್ತಿ : ಅಶ್ವಸೇನೆಯಲ್ಲಿ ಬಾರ್ಗೀರಿಯವರೂ ಸಿಲೇದಾರರೂ ಎಂದು ಎರಡು ಬಗೆಯವರಿದ್ದರು (ಛತ್ರಪ. ೦೬೨). **ಬಾರಗಿರಿ :** ಬಾಗಿಲ ಕಂದಾಚಾರದ ಚಾವಡಿ— ಇಲ್ಲಿ ಸವಾರರು, ಬಾರಿನವರು, ಬಾರಗಿರಿಯವರು . . . ಮುಂತಾದವರ ಲೆಕ್ಕವನ್ನು ಬರೆವಂತೆ ಗೊತ್ತುಮಾಡಿದರು (ಮುಹಾಪು. I, ೦೯೭). [← ಮರಾ. ಬಾರಗಿರೀ ]

**ಬಾರ್ಗುತ್ತ**, ಬಾರಗುತ್ತು, ಬಾರುಗುತ್ತ, ಬಾರುಗುತ್ತು (ನಾ). ಒಂದು ಬಗೆಯ ಜೂಜು ; ಪಣವೊಡ್ಡಿ ಆಡುವ ಒಂದು ಬಗೆಯ ಆಟ : ನೆತ್ತಂ ಚದುರಂಗಂ ಬಾರ್ಗುತ್ತಂ ಕಡುದೊಂಟಿ ಗೊಟ್ಟಿ ಜೂದೆಂಬಿವ ನಾಡುತ್ತಮಿರಲಾಗದು (ಸಮಚ. ೬-೯೮). **ಬಾರಗುತ್ತು :** ವಾರನಾರಿಯ ಗೊತ್ತು . . . ಬಾರಗುತ್ತು ನಿಯೋಗ ಜೂಜಿನ ಧನ ಸುಭಾಷಿತವು ಏಳುವಾಜು ವಿವಾಹ ರತಿಯುಪಕಾರ ನೆಗಳಿದ ರಾಜಕಾರ್ಯವಿವಾರನಾ ಹದ ತಪ್ಪ ತಪ್ಪುಗಂ (ಜೀವಂಕ. ೯-೭೭); ಭೂಕಾಂತರಾತ್ಮಜರು . . . ತಂ ತಮಗೆ ಬಾರಗುತ್ತಾದಿ ಬಹು ಜೂಜುಗಳನಾಡುತಿಹರು (ಪಂಪಪೋ. ೨-೯೯). **ಬಾರುಗುತ್ತ :** ಲೆತ್ತ ಪಗಡೆ ರಾಯುಬೊಗರಿ ಸೊಲ್ಲೆಹ ಬಾರುಗುತ್ತದೊಪ್ಪಿಯ ಸರಿಬೆಸದಿ ವಿತ್ತನಾಶವ ಮಾಡುವ ಜೂದುಗಾಜಿರ ಮೊತ್ತವಿರ್ದುದು ಮಾನೆಮನೆಗೆ (ಪೋಚಕ. ೨೦-೩೩). **ಬಾರುಗುತ್ತು :** ಬೇಯ ಜೂಜಿನ ಬಾರುಗುತ್ತಿದು ನಿಮ್ಮ ಚಿತ್ತಕೆ ಬಹಡೆ ಮಾಡುವೆವು (ಕುಪ್ಪಾಲ. ೯-೬೨); ಹೊಣೆ ಬಾರುಗುತ್ತು ಕಬ್ಬಿನ ಹಣಿದಂ ಏರಿದೊತ್ತೆ ಗೊಂಬ ಸೂಳೆಯ ಸಂಗಂ ಕ್ಷಣದೊಳ್ ಕೊಲ್ಲದೆ ಮನುಜನ ತೃಣದಿಂ ಕಡೆ ಮಾಡದಿಹವೆ (ಶೀಶಿಶಾ. ೨೯೯). [?]

**ಬಾರ್ಚು**, ಬಾಚು, ಬಾಯ್ಚು, ಬಾಸ್ಕು (ಕ್ರಿ). ೧. ಎಳೆದುಕೊಳ್ಳು ; ಸೆಳೆ ; ಗೋರು : ಅಸುವಂ ತೀರ್ಚಿ ಕೆಲವರ ಮಹಾ ಡುಂಕಾರದಿಂದಂ ತಲರ್ಚಿ ಕೆಲವರನೊಡನೆ ವಾಳಾಗ್ರದಿಂದಿರದೆ ಬಾರ್ಚಿ ಕೆಲಬರನಿಂತು ಭಂಗವಂ ಮಾಡುತ್ತೈತರುತಿರ್ದನು (ಕಂಪು. ೯೯-೦೯). ೨. ಉತ್ಕಟವಾದ ಬಯಕೆಯಿಂದ ತಬ್ಬಿ ಹಿಡಿ,— ಬಾಚಿ ಹಿಡಿ ; ಸೆಳೆದಪ್ಪಿಕೊಳ್ಳು : ಪೆರ್ಚುವೆತ್ತ ಪರಂಜಗಳಶವನಷ್ಟವಿಧಾರ್ಚನೆಯಿಂದ ಸತ್ಕರಿಸಿ ಬಾರ್ಚಿ ಕೈವಿಡಿದನು ಮಾಂದಳಿರಿಗೆ ಪಣ್ಣ ಸಾರ್ಚಿದಂತೊಪ್ಪಿತಾ ಭಾವ (ಧರ್ಮ. ೦೬-೬೫). ೩. ಒಟ್ಟುಗೂಡಿಸು ; ರಾಶಿಮಾಡು : " ಬಾರ್ಚು—ಪುಂಜೀಕರಣೇ (ರಾಶಿ ಮಾಡು)" (ಶಮಂದ). ೪. ತಲೆಗೂದಲನ್ನು ಹಣಿಗೆಯಿಂದ ಹಿಕ್ಕು,— ಸಿಕ್ಕು ಬಿಡಿಸಿ ಓರಣಗೊಳಿಸು : ಪಸರಿಸಿ ಪಂದಲೆಯಂ ಮೆಟ್ಟಿಸಿ ವೈರಿಯ ಪಲ್ಲ ಪಣಿಗೆಯಿಂ ಬಾರ್ಚಿ ಪೊದಟ್ಟೊಸಗೆಯಿನವನ ಕರುಳ್ಗಳೆ ಪೊಸವಾಸಿಗ ಮಾಗೆ ಕೃಷ್ಣೆಯಂ ಮುಡಿಯಿಸಿದಂ (ಸಂಕಭಾ. ೦೨-೦೫೫); ಮದಿರಾರಸದಿಂದಂ ಬಾರ್ಚಿದರೋ ಪೇಟಿಸಿಸಿ ಪೊಳೆವ ತಲೆದುಡಿಗೆಯ ರನ್ನದಿನೊಸರ್ವ ರಾಗ ರುಚಿಯಂ ಪುದಿದೆಸೆದುದು ಕೇಶಪಾಶವಮಾ ಕಾಮಿನಿಯಾ (ಕಾದಂಕಾ. ೨೦).
**ಬಾಚು :** ೧. ಸಪ್ತಕುಲಪರ್ವತಂಗಳನೋರ್ವ ಬಾಚಿಯಂಗೈಯೊಳಾಂತು ಓರಂತೆ ತಿರಿಕಲ್ಲನಾಡುತ . . . ಗಹಗಹಿಸುವಂ ಬಾಲಲೀಲೆಯ ಕುಮಾರಂ (ವೀಕೈಪು. ೩-೨೦-೯೯) ; ನಿದ್ರಾಂಗನೆ ಕರುಣೆ ತೋರಿ ಆಕೆಯನ್ನು ಬಾಚಿ ತಬ್ಬಿದಳು (ಕೂನಿಸೇ. ೨೦೦) ; ಜಗದ ಒಲವನೆಲ್ಲ ಬಾಚಿ ಜ್ವಲಿಸುವಳೀ ಜರ್ಬರಾ ! (ಅಂಕೀ. ೦೬-೩). ೨. ನಯದೊಳ್ವನೇ ಬಳಸಿ ಕೈಚಾಚಿ ಬಾಚಿದಿರಿ ಬಳಿಗೆ (ಅಮಕಂ. ೨೨-೦೯). ೪. ಕಲಿಭೀಮು ಮಾಡಿದ ರಹವನದನೇ ನೆಂಬೆನ್ನೆ ಕೂರಿಹ ಕಠಾರಿಯ ಹಣಿಗೆಯಲಿ ಬಾಚಿದನು ಸಿರಿಮುಡಿಯ (ಕುಪ್ಪಾಲ ೨೨-೯೦). ೫. ಕಿತ್ತುಕೊಳ್ಳು ; ದೋಚು : ಭಟನು ನಾನಿರಲುಭಯರಾಯರ ಕಟಕದೊಳಗಿನ್ನಾವನೆಂದುಬ್ಬಟೆಯ ನುಡಿಗಳ ನುಡಿದು ಬಾಚಿದೆ ಕೌರವನ ಧನವ (ಕುಪ್ಪಾಲ. ೯-೦೯) ; ತುಡುಗುಣಿಗಳವದಿರು . . . ಹವಿಗೊಂಬಮರನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೊರರಾ. ೦-೦೦-೮); ನಾನಾ ಪರಿಯಲರಮನೆಯ ರೊಕ್ಕವಂ ತೀದು ಹೊಳ್ಳಿಸಿ ಬಾಚಿ ದಕ್ಷಿಣೆಯ ನೆವದೊಳಿಗೆ (ಕುರಂಗ. ೬೭-೦೯). ೬. ಒಟ್ಟುಗೂಡು ; ಗುಂಪಾಗು : ಈ ಚತುರ್ದಶ ಭುವನಜೀವರ ಸ್ವೋಚಿತವ್ರತಪುಣ್ಯವೆಲ್ಲವು ಬಾಚಿ ಪುಟ್ಟಿತು ಕಾಮಧೇನುವಿನಂಗವಮಧ್ಯದಲಿ (ಸಂರಕ. ೫-೨೮) ; ಕಡಲೆಡೆಯೊಳಿರ್ದ ವಿಗಿಲಾಣಿಮುತ್ತುಗಳ್ ಬಾಚಿ ಬರಲುರ್ವರೆಗೆ ಮಗುಳೊಗುವ ಬಗೆಯೊ . . . ಎನೆ ಬೆಳ್ಸರಿ ಶರತ್ಸಮಯದೊಳ್ ಮೆಜಿದವು (ಸಂರಿಕೂ. ೨೨-೫೬).
**ಬಾಯ್ಚು :** ೪. ಮಾನಿನಿಯರುಂ ಪೊಸೆದು ತಲೆಗರೆದು . . . ಬಾಯ್ಚಿ ಬೈತಲೆಯ ತೆಗೆದು (ಪಪಪೋ. ೯-೬). **ಬಾಸ್ಕು :** ೨. ಪ್ರಿಯುದಿಂ ಬಾಚಿ ಪಿಡಿದೈತಂದು ಕುಳಿತರು ತುಪ್ಪುಳಾಸನದಿ (ಕರಾಪೂ. ೨೦೬-೫೬).
[ಬಾರ್$_{1}$ + — ಚು$_{1}$./ತುಳು. ಬರ್ಚು, ಬಾಚು]

**ಬಾರ್ಣಾಸಿ** 'ಬಾರಣಾಸಿ' ನೋ.

**ಬಾರ್ತೆ** 'ಬಾಟ್ಟೆ' ನೋ.

**ಬಾರ್ತೆಗಿಡು** 'ಬಾರ್ತೆಗೆಡು' ನೋ.

**ಬಾರ್ತೆಗೆಡು**, ಬಾತೆಗೆಡಂ, ಬಾರ್ತೆಗಿಡು (ಕ್ರಿ). ಅವಮಾನ ಹೊಂದು ; ಹೀಯಾಳಿಕೆಗೊಳಗಾಗು : ಕೊಳದೊಳಗೆ ಪೊಕ್ಕು ಮೊಯ್ಗರೆದ್ದೆ ಚಿಃ ಖಲ್ಕನೆನೆ ಬಾರ್ತೆಗೆಟ್ಟುಪಮುಲ್ಕಯಶೋರತ್ನಮೆಂಬುದಂ ಮಾಡುವೆನೇ (ಗದಾಯು. ೬-೨೪) ; ದಾನವರುಪಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂಜಿದ ಬರ್ಹಿಲರ್ಗೆ ನಾರಾಯಣಂ . . . ಪಡಿನುಡಿದಂ (ರಾಪುಕೃ. ೦೯-೬). **ಬಾತೆಗೆಡು :** ಯಾಗದಗ್ರದೊಳ್ ಬಾತೆಗೆಟ್ಟಳನು ಪಟ್ಟರಿಸಿ (ಏಕೋಕ್ಕ. ೯-೭೫). **ಬಾರ್ತೆಗಿಡು :** ನಡೆಗಿಡೆ ಕೀರ್ತಿ ಬಾರ್ತೆಗಿಡೆ ಲಕ್ಷ್ಮಿ ಮೊದಲ್ಗಿಡೆ ಮಾನಸಿಕ್ಕೆ ನೇರ್ಪಡುಗಿಡೆ ಸತ್ಯಶೌಚಗುಣಸಂಪವವೇಳಿದನಾದಂ (ಸಂರಾಪೂ. ೯-೯೫). [ಬಾರ್ತೆ (<ಬಾಟ್ಟೆ)+ಕೆಡು$_{1}$]

**ಬಾರ್ತೆಗೆಯ್** 'ಬಾಟ್ಟೆಗೆಯ್' ನೋ.

**ಬಾರ್ಘ** 'ಬಾಪ್ಪು' ನೋ.

**ಬಾರ್ಲಿ** (ನಾ). ಒಂದು ಬಗೆಯ ಧಾನ್ಯ : ಕ್ರಿ.ಪೂ. ೫೦೦೦ರಲ್ಲಿ ಈಜಿಪ್ಟಿನಲ್ಲಿ ಗೋಧಿಯನ್ನೂ ಬಾರ್ಲಿಯನ್ನೂ ಬೆಳೆಯುತ್ತಿದ್ದರು (ಶಿಲ್ಪನಾ. ೪೬೯) ; ಬಾರ್ಲಿ . . . ಇದನ್ನು ಜವೆಗೋದಿ ಎಂದು ಕರೆವುದುಂಟು (ಕವಿಕೋ. XII, ೩೯). [← ಇಂ. Barley]

**ಬಾರ್ಸಿಪಾಯಿ**, ಬಾರುಸಿಪಾಯಿ (ನಾ). ತುಪಾಕಿಯನ್ನು ಹಿಡಿದು ಕಾಲ್ನಡಿಗೆಯಿಂದ ಸಾಗುವ ಪದಾತಿ : "ಪದಾತಿಃ , ಪತ್ತಿಃ . . . ಪದಿಕಃ – ೭ ಕಾಲುನಡೆಯ ಭಟರ ಹೆಸರುಗಳು, ಬಾರ್‌ಸಿಪಾಯಿಗಳು" (ಸಿದ್ಧಾಂತಿ. ೨೩೬). **ಬಾರುಸಿಪಾಯಿ** : ದಳವಾಯಿ ನಂಜರಾಜಅರಸಿನವರ ಅಧಿಕಾರದಲ್ಲಿ ಬಾರುಸಿಪಾಯಿಗಳು ೧,೦೦೦ ಮಂದಿ ಮಾತ್ರ ಖಾಯಮ್ಮಾಗಿದ್ದರು (ಮಹಾವಂ. II, ೦೮). [ಬಾರ್$_3$ + ಸಿಪಾಯಿ]

**ಬಾರ್ಹತ** (ನಾ). ಹೆಗ್ಗುಳ್ಳದ ಕಾಯಿ ; ಬೃಹತೀಫಲ : "ಅಶ್ವತ್ಥಂ, ವೈಣವಂ, ಪ್ಲಾಕ್ಷಂ, ನೈಯಗ್ರೋಧಂ, ಐಂಗುದಂ, ಬಾರ್ಹತಂ . . . ಕ್ರಮವಾಗಿ ಅಶ್ವತ್ಥಾದಿ ವೃಕ್ಷಗಳ ಫಲಗಳಿಗೆ ಹೆಸರುಗಳು" (ಸಿದ್ಧಾಂತಿ. ೧೦೩). [ಸಂ.]

**ಬಾರ್ಹಸ್ಪತ್ಯ** (ಗು). ೧. ಬೃಹಸ್ಪತಿಗೆ ಸಂಬಂಧಿಸಿದ. (ನಾ). ೨. ಬೃಹಸ್ಪತಿಯಿಂದ ರಚಿತವಾದ ಶಾಸ್ತ್ರ. ೩. ಬೃಹಸ್ಪತಿಯ ಅನುಯಾಯಿ. ೪. ಕಾಲವನ್ನು ಅಳೆಯುವ ಒಂದು ಬಗೆಯ ಲೆಕ್ಕಾಚಾರ : ಆ ಸಂವತ್ಸರವೇ ಸೌರ ಚಾಂದ್ರ ಬಾರ್ಹಸ್ಪತ್ಯ ನಾಕ್ಷತ್ರ ಸಾವನಭೇದದಿಂದೈದು ತೆಱನಾಗಿರ್ಪುದು (ಶಿವೇಶ. ೩೨೧); ಪರಿ ಇಡಾವತ್ಸರನು . . . ಬಾರ್ಹಸ್ಪತ್ಯ ಸೌರಭ ಚಾಂದ್ರಮಾನಯೆನಿಸಿ ಇರುತಿಹ (ಹಸಾರ. ೩-೪೦). ೫. ಅಗ್ನಿ. ೬. [ಜ್ಯೋತಿ] ಒಂದು ನಕ್ಷತ್ರದ ಹೆಸರು ; ಪುಷ್ಯನಕ್ಷತ್ರ. [ಸಂ.]

**ಬಾಲ$_1$**, ಬಾಳ$_4$ (ನಾ). ೧. ಪ್ರಾಣಿಗಳ ಹಿಂಭಾಗದಲ್ಲಿ ಗುಹ್ಯಾಂಗವನ್ನು ಮುಚ್ಚುವಂತಿರುವ ಹಾಗು ಅಲುಗಾಡಿಸಬಲ್ಲ ಉದ್ದವಾದ ಚಾವಟಿಯಂತಹ ಅಂಗ ; ಲಾಂಗೂಲ ; ಪುಚ್ಛ : "ವಾಳಧಿಯು ಲಾಂಗೂಲಮೆನೆ ಬಾಲವೆಸರಕ್ಕು" (ಮಂಗರಾ. ೬೧-೦೩) ; ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ . . . ಕೊಂಡುದು (ಶಂಶಭಾ. ೬-೧೬) ; ನಾಯ ಬಾಲಮಂ ಕಾಸಿ ತಿದ್ದಿದೊಡಂ ಕೊಂಕು ಮಾಣದಹಗೆ (ಶಂಶಶಂ. ೧೦೩-೨) ; ಹೊನ್ನ ಹುಳವ ಕಂಡು ನರಿ ತನ್ನ ಬಾಲವ ಹುಣ್ಣುಮಾಡಿಕೊಂಡರೆ ಹೋಲಬಹುದೆ (ಬಸವ. ೨೬೭). ೨. ಕೂದಲು. **ಬಾಳ$_4$**: ೧. ವಾಲ–ಬಾಳ (ಶಮದ. ೨೪೮ ಶ್ರಯೋ).

**ಬಾಲ ಅಲ್ಲಾಡಿಸು** = ೧. ಬಾಲವನ್ನು ಅಲುಗಾಡಿಸು : ಅವನನ್ನು ಕಂಡ ಕೂಡಲೇ ಆ ನಾಯಿಯು ಬಾಲ ಅಲ್ಲಾಡಿಸುತ್ತಾ ಅವನ ಬಳಿಗೆ ಬಂದು (ಮುಂಬಯು. ೪-೦೦೭). ೨. (ಆಲಂ) ಇನ್ನೊಬ್ಬ ವ್ಯಕ್ತಿಯು ಹೇಳಿದುದಕ್ಕೆಲ್ಲ ಒಪ್ಪಿಗೆ ನೀಡು : ಮುಂದಾಳುಗಳ ಎದುರಿನಲ್ಲಿ ಬಾಲ ಅಲ್ಲಾಡಿಸುತ್ತಿರುವುದೆ ಅವನ ಕಸುಬಿನ ಗುಟ್ಟು (ರೂಢಿ). **ಬಾಲಕೊಳ್ಳಿ** = (ಹನುಮಂತನನ್ನು ನೆನಪಿಸುವ) ಒಂದು ಬಿರುದು : ಪಟಹನುರುವ ಬಾಲಕೊಳ್ಳಿ ಚಬುಕು ಜೇಗಟೆ ಚೋಹ ಜಗಜಾಪು ಚೆಂಡು ನಿಟಿಲದ ನೇತ್ರದ ಬಲುಬಿರುದಿನ ಬಲುಭಟರಲ್ಲದಿಲ್ಲವವನಿಗೆ (ರಾಮವಿ. ೦೪-೪೨). **ಬಾಲ ಬಡಿ** = ಅನುಗ್ರಹ ಸಂಪಾದನೆಗಾಗಿ ಅನುನಯದಿಂದ ವರ್ತಿಸು, –ಅನುಚರನಂತೆ ನಡೆ : ದೈವವಶದಿಂದ ಒಂದು ವೇಳೆ ಕಾಲೀಪದನು ತನ್ನ ವಶವರ್ತಿಯಾಗಿ ಬಾಲ ಬಡಿಯುತ್ತ ಬಂದಿದ್ದರೆ ಇಂದು ಶೈಲೇಂದ್ರನ ಲಜ್ಜೆಗೆ ಸೀಮೆಯೇ ಇರುತ್ತಿರಲಿಲ್ಲ (ಇಶ್ವಕ. ೩೮೮). **ಬಾಲಬಡುಕ** = (ಆಲಂ) ಅನುಚರ ; ಹಿಂಬಾಲಕ; ಅನುಯಾಯಿ : ಆಂಗ್ಲೇಯ ಬಾಲಬಡುಕರಂತಿದ್ದ ರಂಗನಾಥ, ನಾಗೇಂದ್ರ . . . ಮುಂತಾದವರು ಸ್ವರಾಜ್ಯ ಬಂದ ನಂತರ . . . ಶುದ್ಧ ಖಾದಿಧಾರಿಗಳಾದರು (ಶಂಜಶಂ. ೯೩). **ಬಾಲ ಬಿಚ್ಚು** = (ಆಲಂ) ಚೇಷ್ಟೆ ಮಾಡು; ಕಿತಾಪತಿ ಮಾಡು : ಇವ ಬಾಲಾ ಬಿಚ್ಚಿದರ ಸಾಕು, ಕೊಯ್ದು ಒಗೀತೀವಿ (ಮಣ್ಣುಹ. ೬೪). **ಬಾಲ ಮಡಿಚು** = (ಆಲಂ) ಸೋತುಹೋಗು ; ಸುಮ್ಮನಾಗು : ನಾವು ಹೆಂಗಸರೇ ಇದ್ದುದಾದರೂ ಗೋವಿಂದಯ್ಯ ಬಾಲ ಮಡಿಚಿ ಹೋಗಲಿಲ್ಲವೇ ? (ತ್ಯಾಗವು. ೦೬೦). **ಬಾಲಸುಡುಕ** = ಬಾಲವನ್ನು ಸುಡಿಸಿಕೊಂಡವನು ; ಹನುಮಂತ : ಹೇಳಲೇನದನವನ ವಿಧಿಯನು ಕೇಳಿತಿಲ್ಲವಲಾ ಕಪೀಂದ್ರನ ಪಾಳೆಯವ ಹೊಗಗೊಡದೆ ಕಪಿಪ್ರೋತಂಗಳು ಬ್ಬಿಱಿದು ಬಾಲಸುಡುಕನ ತವರಲಾ ಕಪಿಯೂಳಿಗವು ನಮಗಾಯ್ತು (ತೊರಣಾ. ೬-೧೦-೩೯). **ಬಾಲ ಹಿಡಿ** = ಹಿಂಬಾಲಿಸು ; ಅನುಸರಿಸು : ಸುಮ್ಮನೆ ಕಣ್ಣು ಮುಚ್ಚಿಕೊಂಡು ದುರ್ಯೋಧನನ ಬಾಲ ಹಿಡಿದು ಹೋಗುತ್ತ ಪಾಂಡವರನ್ನು ಸದಾ ದ್ವೇಷಿಸುತ್ತಿರುವ ಈ ಕರ್ಣನೊಬ್ಬನೆ ನನ್ನ ಎದೆಗಿಚ್ಚಾಗಿದ್ದಾನೆ (ಪಶಶಾ. ೨೬೧) ; ಗೆದ್ದ ಎತ್ತಿನ ಬಾಲ ಹಿಡಿ (ಗಾದೆ). ☞ ಈ ಉಲ್ಲೇಖದಲ್ಲಿ ಸೂಚಿಸಿರುವ ಎರಡು ಅರ್ಥಗಳೂ ಸಂಸ್ಕೃತಕೋಶಗಳಲ್ಲಿ 'ಬಾಲ' ಉಲ್ಲೇಖಕ್ಕೆ ಇರುವುದಾದರೂ ಇದು 'ವಾಲ' ಎಂಬುದರ ತದ್ಭವವೆಂದು ಪರಿಗಣಿಸಿದೆ. [<ಸಂ. ವಾಲ]

**ಬಾಲ$_2$**, ಬಾಳ$_5$ (ಗು). ೧. ಬಲಿಯದ ; ಎಳಸಾದ : ಬಾಲ ಮೃಣಾಳಮಂ ಪಿಡಿದು ಕೀಳ್ವವೊಲಶ್ರಮದಿಂ ಮನೋಭವವ್ಯಾಲಗಜೇಂದ್ರ ದಂತಯುಗಳಂಗಳನೇಕೆಯೊ ಕಿಟ್ಟಿಂ (ಶಂರಾಮಾ. ೬-೩೦). ೨. ಚಿಕ್ಕ ವಯಸ್ಸಿನ; ಎಳೆಯ: ಬಾಲಜಾಯಿಲನಿಂದ ವೇದವನೋಳಿಯಿಂದೋದಿಸನೆ ಹಾವಿನ ಹಾಳ ಕಲಿದೇವಂ (ಬಸಶ್ರೀ. ೫೫-೫೩) ; ಬಾರಯ್ಯ ನಮ್ಮ ಮನೆಗೆ ಬಾಲಗೋಪಾಲ (ಪುರಂದ. ೩-೦೦೩ ಅನುಪಲ್ಲವಿ). ೩. ಆದೇ ಉದಯವಾಗಿ (ಸೂರ್ಯ ಅಥವಾ ಚಂದ್ರನಂತೆ) ಬೆಳೆಯುತ್ತಿರುವ ; ಏರುತ್ತಿರುವ. ೪. ಬಾಲಿಶವಾದ ; ಹುಡುಗಾಟಿಕೆಯ ; ಮಕ್ಕಳಾಟಿಕೆಯ. ೫. ದಡ್ಡತನದ ; ತಿಳಿಗೇಡಿಯಾದ. (ನಾ). ೬. ಬಲಿಯದುದು ; ಎಳಸಾದುದು : ಮೂಲಕಂ ಬಾಲಂ ದೋಷಹರಮಬಾಲಂ ದೋಷಕರಂ (ಶಾಂತಿಪು. ೮-೦೨೮ ವ). ೭. ಮಗು ; ಶಿಶು : ಆತನುಂ ಬಾಲನಾಕಾಂಕ್ಷೆಗಚ್ಚರಿವಡುತ ಮೌನವಿರೆ (ಶ್ರೀರಾಮಾ. ೨೦-೫೩೮). ೮. ಹುಡುಗ ; ಬಾಲಕ: "ಬಾಲಃ, ಬಾಲಕಃ–ಈ ೨ ಹುಡುಗಂ" (ಕಾಶಕ್ಯ. ೦೪೭);ನಾನುಂಡು ಇದ್ದದ್ದು ಬಾಲರಿಗುಣಲಿಕ್ಕೆ ಮೇಲಿಟ್ಟು ಮುಚ್ಚಿಡೋ ಎನ್ನ ಗುಡ (ಪುರಂದ. ೩-೧೬೭-೬). ೯. ಪ್ರಾಣಿಗಳ ಮರಿ ; ಪೋತ. ೧೦. ದಡ್ಡ ; ಮೂರ್ಖ. **ಬಾಳ$_5$** : ೧. ಮುತ್ತಿನ ಸೂಸಕಂಗಳಂ ಬಾಳಮೃಣಾಳಮೆಂದೆ ಕರ್ದುಕಲ್ಪುಗೆಗುಂ ಕಳಹಂಸಪೋತಕಂ (ಮಲ್ಲಿಪು. ೨-೭೭). ೭. "ಬಾಳಃ , ಪಾಕಃ, ಅರ್ಭಕಃ . . . ಡಿಂಬಃ — ಈ ೯ ಮಗವು" (ಹಲಾಯು. ೮೩-೩೪೮) ; ಬಾಳನ ನಾಸಾಪುಟದೊಳ್ ಮೇಳಿಸೆ ದುಗ್ಧೋದಬಿಂದುಸಂದೋಹಂಗಳ್ ಲೀಳೆಯಿನಾಂತುಸಿರ್ದೊಡೆ ಕಡುಗಾಳಿಯ ತಱಗೆಲೆಗಳಂತೆ ಪಾಱಿದರಮರರ್ (ಅಜಿತ. ೪-೬೩). ೮. ಬಾಳಂ ನಿಜಾನುಜಂ ರಣಲೋಳಂ ಸಲೆ ದ್ರುಪದನೆನ್ನದರ್ಜುನನು ತತ್ಕಾಳಸುತನಟ್ಟಿ ಪೋಗಿ ವಿಶಾಳಬಳಂ ಕಾದಿ ಕಟ್ಟಿತಂದೊಪ್ಪಿಸಿದಂ (ನೇಮಿಪು. ೯-೩೦). ೧೦. "ವೈಧೇಯಃ, ಬಾಲಿಶಃ, ಬಾಲಃ, ಜಡಃ . . . ಮಾತೃಶಾಸಿತಃ — ಈ ೧೧ ಅಱಿಯದವಂ" (ಹಲಾಯು. ೫೬-೦೮೦). [ಸಂ.]

**ಬಾಲಂಗಚ್ಚಿ** 'ಬಾಲಗಚ್ಚಿ' ನೋ.

**ಬಾಲಂಗೋಚಿ**, ಬಾಲಂಗೋಸಿ (ನಾ). ೧. ಗಾಳಿಪಟದ ತಳಕ್ಕೆ ಕಟ್ಟುವ ಉದ್ದವಾದ ಪಟ್ಟಿ ; ಬಾಲಂಗಚ್ಚಿ : ಗಾಳಿಪಟ ಮೇಲೇರಲು ಬಾಲಂಗೋಚಿ ಅಗತ್ಯ (ರೂಢಿ). ೨. ಉದ್ದವಾದ ಪಟ್ಟಿ ; ದೀರ್ಘವಾದ

ಯಾದಿ : ಉದಾಹರಣೆಗಳ ಬಾಲಂಗೋಚಿ ಬೆಳೆಯುತ್ತಲೇ ಹೋಗುತ್ತಿತ್ತು (ಶಾಹೇಬ್. ೪೦೯). **ಬಾಲಂಗೋಸಿ :** ೧. ಬಣ್ಣದ ಕಾಗದ ಬೇಕು . . . ಬಿದಿರಿನ ಕಡ್ಡಿಗಳು. ಒಂದು ಸಣ್ಣ ಬಾಲಂಗೋಸಿ ಮತ್ತು ಅಂಟು ಬೇಕು (ಕಪಪು. ३-೨೦). [ಬಾಲ$_1$ + ಗೋಚಿ]

**ಬಾಲಂಗೋಸಿ** 'ಬಾಲಂಗೋಚಿ' ನೋ.

**ಬಾಲಂತಿತನ** 'ಬಾಣಂತಿತನ' ನೋ.

**ಬಾಲಕ,** ಬಾಳಕ$_3$ (ಗು). ೧. ಎಳೆಯ ವಯಸ್ಸಿನ ; ಶೈಶವಾವಸ್ಥೆಯ: ಚಿಕ್ಕಂದಿನ : 'ಬಾಲಕತನ' ಪರಾ. (ನಾ). ೨. ಮಗು ; ಶಿಶು : "ಶಿಶು ಪೋತ ಬಾಲಕ ಶಾಬ ಡಿಂಬಮರ್ಭಕ ಪಾಕಮೆನೆ ಪಡೆದ ಕೂಸೆನಿಕ್ಕು" (ಮಂಗರಾ. ೯೧-೮) ; ಬಾಲಕನಮೃತಮೆ ಕೆಯ್ಯುಂ ಕಾಲುಂ ಬಳೆವಂತೆ ಮಧುರಗಂಭೀರಂ . . . ಎನಿಸಿದಂ ಕಿಱಿಯಂದುಂ (ಶಾಂತಿಪು. ೬-೧೧೬) ; ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ಬಾಡೀಗಿ ಎತ್ತು ದುಡಿದಂಗ (ಗರತಿ. ೧೦೬). ೩. ಹುಡುಗ ; ಕುಮಾರ : ಕಾಳೆಗದೊಳಂಗೈಸಲಮ್ಮದೆ ಬಾಲಕನ ನೂಕಿದಿರಲಾ ನಿಮ್ಮಾಳುತನವನು ತೋಱಿದಿರಲಾ (ಕುವ್ಯಾದ್ರೋ. ೬-೨೪). ೪. ಮೂರ್ಖ; ತಿಳಿಗೇಡಿ. **ಬಾಳಕ$_3$ :** ೨. ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್ ಕಾಲಮಂ ಬಱಿದೆ ಕಳೆದೆಂ (ವಡ್ಡಾರಾ. ೨೬-೨೪); ಪುಂಡರೀಕನೆಂಬ ಬಾಳಕನಂ ಸಂತಾನಪಾಲನಾರ್ಥಂ ನಿಱಿಸಿ (ಆದಿಪು. ೪-೬೦ ವ). [ಸಂ.]

**ಬಾಲಕತನ** (ನಾ). ಚಿಕ್ಕಂದು; ಬಾಲ್ಯ : ಬಾಲಕತನದಲ್ಲಿ . . . ಕಾಳಿಯ ಮಡುವ ಕಲಕಿದ ಕಾರಣ ಕಾಲು ನೊಂದಿತೆ ನಿನಗೆ ರಂಗಯ್ಯ (ಪುರಂದ. ೩-೧೦-೩). [ಬಾಲಕ + -ತನ]

**ಬಾಲಕಾಲ,** ಬಾಳಕಾಲ (ನಾ). ಚಿಕ್ಕಂದು; ಬಾಲ್ಯಾವಸ್ಥೆ : ಮೃಗಶೃಂಗನೆಂಬೋಂ ತಾಪಸಕುಮಾರನಾತಂ ಬಾಲಕಾಲಪರಿಗೃಹೀತತಾಪಸಾಚರಣಂ (ಶಾಂತಿಪು. ೭-೪೩ ವ). **ಬಾಳಕಾಲ :** ಮದದಂತಿದಂತದೊಳೆ ಕಟ್ಟಿದ ತೊಟ್ಟಿಲಂ ನಯದಿಂದಮೇಱಿ[ಸೆ] ಬಾಳ[ಪಾಠಾಂ. ಟ್ವಿ]ಕಾಲದೊಳ್ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ (ಪಂಪಭಾ. ೧-೪೩) ; ನಡೆದುದು ಬಾಳ[ಪಾಠಾಂ. ಟ್ವಿ]ಕಾಲದೊಳೆ ತೊಟ್ಟಿನಗಂಕದ ಶೌಚಮೀಗಳೋಗಡಿಪುದೆ (ಪಂಪಭಾ. ೧೦-೪೭). [ಸಂ.]

**ಬಾಲಕಿ,** ಬಾಳಕಿ (ನಾ). ೧. ಹುಡುಗಿ; ಕನ್ನೆ : ಕೈಯ ಬಟ್ಟಲ ಹಾಲಿಗಂ ತಾಂ ಕೈಯ ನೀಡುತ್ತೀಂಟೆ ಬಾಲಕಿ ಅಯ್ಯನಂ ಬಿಟ್ಟೊದಱಲು (ಬಸಪು. ೦೪-೩೨). ೨. ತರುಣಿ ; ಯುವತಿ : ಗರ್ಭಂ ಬಳೆಯದ ಬಾಲಕಿಯ ಬಸಿಱಿನರ್ಥಕಮಲ್ತೇ (ಮಲ್ಲಪು. ೩-೧೧೦); ಬಾಲಕಿಯಲರ್ಗಣ್ಗಳ್ ಸಂಲಾಲಿತ ಲಾವಣ್ಯರಸಮಯಾಬ್ಜಾಕರದೊಳ್ ಬಾಳೆಯ ಮೀಂಗಳ ತೆಱದಿಂ ಲೀಲೆಯೊಳಂ ಪೊಳೆದು ತಳೆದವತಿಚಪಳತೆಯಂ (ಪಾರಪು. ೨-೫೦); ನಿಶಾಚರಿಯರಲ್ಲವೇ ನರಕಾಸುರನ ಮನೆಯ ಬಾಲಕಿಯರು (ಜೈಮಿಭಾ. ೨-೫೯). **ಬಾಳಕಿ :** ೨. ಬಾಳಕಿಗಳಿನಿಚಯಾಳಂ ಬಾಳಕಿಗಾ ರೋಮರಾಜಿ ರಂಜಿಸುತಿರ್ಕುಂ ನೀಳದ ಕಾಂಚೀಮಧ್ಯದ ನೀಳದ ನೆಗೆದುನ್ಮುಖ ಪ್ರಭಾರೇಖೆಯ ವೋಲ್ (ಜಗಪ. ೧೦-೨೯); ಉಡೆ ಬಾಳಕಿಯರ ಪಱಿಕೈದುಡುಕಿಂದಂ ಪಱಿದ ಮುಂಜಿ . . . ಬದ್ದೆಯರುಡಿಸಿದೊಡುಡಕಲ್ತಕೊವರನಭಿನವಮದನಂ (ಅನಂಪು. ೧-೫೬). [ಬಾಲಕ + -ಇ$_2$]

**ಬಾಲಕೇಲಿ,** ಬಾಲಕೇಳಿ, ಬಾಳಕೇಳಿ (ನಾ). ೧. ಮಗುವಿನ ಆಟ; ಬಾಲಲೀಲೆ ; ಮಕ್ಕಳಾಟ : (ಓ). **ಬಾಲಕೇಳಿ :** ೧. ದಾರಕರೂಪದೆ ಜಿನವೃಂದಾರಕನೊಡನೊಡನೆ ಬಾಲಕೇಳಿಗಳಂ ವೃಂದಾರಕರೆ ಮಾಡಿ ದುರಿತವಿದಾರಕನ ಮನಕ್ಕೆ ಮಾಡಿದರ್ ಸಂತಸಮಂ (ಅಜಿಪು. ೫-೬೨); ಎನಿತೊಳವು ಬಾಲಕೇಳಿಗಳನಿತಱೊಳಂ ಮುದ್ದುವಡೆದು ಮನೆಯಂಗಣದೊಳ್ ಮನಮೊಸೆದಾಡುವ ಮಕ್ಕಳ ವಿನೋದಮಂ ಕಾಣ್ಬ ದಿವಸಮೆಂದಾದಪುದೋ (ಸುಕುಮಾ. ೯-೧೦೦). ೨. ಮೂರ್ಖತನದ ನಡವಳಿಕೆ : ನೆಱೆ ಕೇಳಿದೈ ಕೌರವನ ಕದನದ ಬಾಲಕೇಳಿಗಳ (ಕುವ್ಯಾದ್ರೋ. ೧-೧). **ಬಾಳಕೇಳಿ :** ೧. ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಪಂಪಭಾ. ೨-೪); ಸುತ ನಿನ್ನ ಬಾಳಕೇಳಿಯನತಿಮುದದಿಂ ನೋಡಿ ಹರ್ಷಮಂ ತಳೆಯಲ್ ಸಂಸ್ತುತ ನೋಂತೆನಿಲ್ಲೆನಲ್ (ನೇಮಿಪು. ೭-೧೯೦). [ಸಂ.]

**ಬಾಲಕೇಳಿ** 'ಬಾಲಕೇಲಿ' ನೋ.

**ಬಾಲಕ್ಕಿ** (ನಾ). ಉದ್ದವಾದ ಪುಚ್ಛವಿರುವ ಒಂದು ಬಗೆಯ ಪಕ್ಷಿ : ಹಾರುತ್ತಿರುವ ಬಾಲಕ್ಕಿಗಳಿಂದ ಬಾನೆಲ್ಲ ಸುಗ್ಗಿಯ ಸ್ವರ್ಗದಂತೆ ಕಾಣಿಸುತ್ತಿದೆ (೧೦ಬಾ. ೩). [ಬಾಲ$_1$ + <ಪಕ್ಕಿ]

**ಬಾಲಕ್ರೀಡೆ,** ಬಾಳಕ್ರೀಡೆ (ನಾ).= ಬಾಲಕೇಲಿ ೧ : ಬಾಲಕ್ರೀಡೆಯೆ ಪೂತನಾ ಬಕಮುಖವ್ಯಾಪಾದನಂ (ವಸ್ತವಂ. ೩-೧೧). **ಬಾಳಕ್ರೀಡೆ :** ಬಾಳಕನಾಗಿ ಬಱಿಕ್ಕಾ ಬಾಳಕ್ರೀಡೆಗಳನೆಯ್ದೆ ತೋಱಿ ಸಮಂತಾ ಲೀಳಾನಿಧಿ ನಿಜರೂಪಂ ಬಾಳಂ ತಳೆದಿರಲ್ (ನೇಮಿಪು. ೭-೧೯೦). [ಸಂ. ಬಾಲಕ್ರೀಡಾ]

**ಬಾಲಗಚ್ಚೆ,** ಬಾಲಂಗಚ್ಚೆ (ನಾ). ೧. ಹಿಂಭಾಗದಲ್ಲಿಯ ಕಚ್ಚೆ ; ಹಿಂಗಚ್ಚೆ : ಕೆಂದಳಿಗೊರ್ಂಚಲ ಚೆಲ್ಲಣಂ ಪ್ರವಾಳಲತೆಯ ಬಾಲಗಚ್ಚೆ ಬಲಕಿಕ್ಕಿದ ಚಂಪಕಮಾಲೆ ಶೋಭೆಯಂ ಬಳೆಯಿಸೆ ನಿಂದ ಸಚ್ಚಣಿಯ ಭಾವಮನಾವನೊಱಲ್ದು ನೋಡಿದಂ (ಲೀಲಾವ. ೧೧-೩೫) : ಬದ್ದಿಗೆಯ ತೊಂಗಲ್ದೆಗೆದು ಬಿಗಿದೆಬಿಲ್ವ ಬಾಲಗಚ್ಚೆಯ ವಿಳಸದ ಸೆಱಗಂ ಸೆಳೆದಳ್ಳಿಱಿಯೆಯುಂ (ಅನಂಪು. ೧೧-೮೫ ವ) ; ಸಕಲರತ್ನರಚನೆಯಿಂ ಸಲ್ಲಲಿತಮಾದ ಚೆಲ್ಲಣದ ಚಿತ್ರಿಸಿದ ಪತಾಕಾಂಚಲದಂತೆ ಪಲ್ಲವದ ಶೋಭೆಯಂ ಪಳಚ್ಚನೆ ಮೆಱೆವ ಬಾಲಗಚ್ಚೆಯ ಬೆಳ್ದಿಂಗಳಂ ಬೀದಿವರಿಯಿಸುವ ಪೊಸಮುತ್ತುಗಳ ಮೊತ್ತದಿಂ . . . ಮಂಡಿತಮಾದ ಮಂಡನದ ತಂಡದಿಂ (ಶಾಂತೀಶ. ೭-೯೩ ವ). **ಬಾಲಂಗಚ್ಚೆ :** ೨. ಗಾಳಿಪಟದ ತಳಕ್ಕೆ ಅಳವಡಿಸಿರುವ ಬಾಲದಂತಹ ಬಟ್ಟೆಯ ಅಥವಾ ಹುರಿಯ ತೆಳುವಾದ ಪಟ್ಟಿ : (ಓ). ೩. (ಆಲಂ) ಯಾವಾಗಲೂ ಹಿಂಬಾಲಿಸಿಕೊಂಡು ಬರುವವನು ; ಅನುಯಾಯಿ; ಹಿಂಬಾಲಕ : ಕೆಲವು ರಾಜಕಾರಣಪಟುಗಳಿಗೆ ಅನೇಕ ಬಾಲಂಗಚ್ಚೆಗಳಿರುತ್ತಾರೆ (ರೂಢಿ). [ಬಾಲ$_1$ + ಕಚ್ಚೆ]

**ಬಾಲಗೀಸು** (ಕ್ರಿ). ೧. (ಗಾಡಿಗೆ ಹೂಡಿದ ಎತ್ತನ್ನು ವೇಗಗೊಳಿಸಲು) ಬಾಲ ಹಿಡಿದು ಎಳೆದು ತಿರಿಚು ; ಬಾಲವನ್ನು ಮುರಿ. ೨. (ಆಲಂ) ಪ್ರೇರಿಸು ; ಎತ್ತಿ ಕಟ್ಟು ; ಪ್ರಚೋದಿಸು : ಈ ಗಾಣಿಗನ ಎಲುವು ಇಡದ ಹಾಗೆ ದಬಾಯಿಸು – ಎಂದು ಬಚ್ಚನ ಬಾಲಗೀಸಿ ಬಿಟ್ಟಿದ್ದೇನೆ ! (ಹಹಸ. ೬೬). [ಬಾಲ$_1$ + ಕೀಸು$_1$]

**ಬಾಲಗುರಿ** (ನಾ). (ಬಾಲವು ಉದ್ದವಾಗಿರುವ) ಒಂದು ಬಗೆಯ ಕುರಿ : ದೊರೆ ಸೀಮೆಹಸು, ಬಾಲಗುರಿ, ಸೀಮೆಕುದುರೆ ಮುಂತಾದುವುಗಳನ್ನು ಸಾಕಿದ್ದ . . . ಬಾಲಗುರಿರೊಪ್ಪವೂ ಇತ್ತು (ನನ್ನೂರು. ೫). [ಬಾಲ$_1$ + ಕುರಿ$_3$(<ಕುಱಿ$_3$)]

**ಬಾಲಗ್ರಹ** (ನಾ). ಎಳೆಯ ವಯಸ್ಸಿನ ಮಕ್ಕಳಿಗೆ ಬರುವ ಒಂದು ಬಗೆಯ ಭೀಕರವಾದ ಅಪಸ್ಮಾರರೋಗ ; ☞ ಮಕ್ಕಳಿಗೆ ಈ ಬಗೆಯ ಪೀಡೆಯನ್ನುಂಟುಮಾಡುವ ಒಂಬತ್ತು ಬಗೆಯ ಗ್ರಹಗಳುಂಟೆಂದು ಭಾವಿಸಲಾಗಿದೆ. "ಸ್ಕಂದ, ಸ್ಕಂದಾಪಸ್ಮಾರ, ಶಕುನೀಗ್ರಹ, ಪೂತನಾಗ್ರಹ, ಅಂಧಪೂತನಾಗ್ರಹ, ಶೀತಪೂತನಾ, ರೇವತೀ, ಮುಖಮಂಡಿಕಾಗ್ರಹ, ನೈಗಮಗ್ರಹ (ಸಂಶ್ರುತ. ಸಂ. ೧೬೭)." (ಶ್ರೀವತ್ಸ. ೨೯೦). [ಸಂ.]

**ಬಾಲಗ್ರಾಸ** (ನಾ). ಎಳೆಯ ಹುಲ್ಲು,—ಮೇವು : ಘರ್ಮಕಾಲಂ ಸಮನಿಸಿರೆಯುಮೆತ್ತೆತ್ತಲುಂ ಬಾಲಗ್ರಾಸಾಳಿಗಳೀ ವರ್ಷತರ್ಮವೊಲ್ದೆಳ್ತರ್ಪ

ಪೋಲೆಡೆಕಿರಿದಿರ್ದತ್ತು ಪಾನೀಯಪೂರಂ (ವಿಷ್ಣುಪು. ೫-೨-೩೩).

[P ಇದು 'ಬಾಲಘಾಸ' ಎಂದಿರಬಹುದೇ ?]

**ಬಾಲಘಾತಿನಿ** (ನಾ). ಮಕ್ಕಳನ್ನು ಕೊಲ್ಲುವವಳು : ಈತನೆ ಗಡ ವಿಷಸ್ತನ್ಯೆಯಾದ ಬಾಲಘಾತಿನಿಯಾದ ಪೂತನಿಯೆಂಬ ರಕ್ಕಸಿಯನೆಡೆಗೆಡಹಿ . . . ನಿಂದಿರ್ಪ ಬೆಡಂಗನು ನೋಡಿರಯ್ಯ (ಕಗಪ. ೬೭). [ಸಂ. ಬಾಲಘಾತಿನೀ]

**ಬಾಲಚಂದ್ರ**, ಬಾಳಚಂದ್ರ (ನಾ). ೧. ಶುಕ್ಲಪಕ್ಷದ ಪ್ರಾರಂಭದಲ್ಲಿ ಕಾಣುವ ಚಂದ್ರ ; ಬಿದಿಗೆಯ ಚಂದ್ರ : ಬಾಲಚಂದ್ರನ ಸೂಡ ದಂದು . . . ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು (ಅಬಂಡೇ. ೨-೩). **ಬಾಳಚಂದ್ರ :** ೨. (ಜೈನಮುನಿಯಾದ) ಒಬ್ಬ ಕನ್ನಡ ಕವಿಯ ಹೆಸರು : ಅಧ್ಯಾತ್ಮಕಳಾಧರನುಜ್ವಳಕೀರ್ತಿ ಬಾಳಚಂದ್ರ ಮುನೀಂದ್ರಂ (ಎಕ. II. ೨೪೯-೬೫ ; ಸು. 1180) ; ಧರಣೀಚಕ್ರದೊಳತಿ ಚಿತ್ರಂ ಕವಿಚಕ್ರಪ್ರಿಯನೆನಿಸಿ ಬಾಳಚಂದ್ರಂ ನೆಗಟ್ದಂ (ಪಾರ್ಶ್ವಪು. ೦-೬೮). [ಸಂ.]

**ಬಾಲಚಮೂ** (ನಾ). 'ಸ್ಕೌಟ್' ಎಂಬ ದಳ; ಸ್ಕೌಟುದಳ ; P ಶಾಲೆಗಳಲ್ಲಿ ಮಕ್ಕಳಿಗೆ ಪಠ್ಯೇತರವಿಷಯಗಳಲ್ಲಿ ತಿಳಿವಳಿಕೆ ಕೊಡಲು ಪಾಶ್ಚಾತ್ಯದೇಶದಲ್ಲಿ 'ಬಾಡನ್‌ಪಾವೆಲ್' ಎಂಬ ಪ್ರಸಿದ್ಧ ಪುರುಷನಿಂದ ೧೯೦೮ರಲ್ಲಿ ಇದು ಸ್ಥಾಪಿತವಾಯಿತು : ಮಕ್ಕಳ ಜೀವನದಲ್ಲಿ ಪರಿಣಾಮಕಾರಿಯಾಗುವಂತೆ ಶಿಕ್ಷಣವೀಯುವ ಸಂಘಸಂಸ್ಥೆಗಳಲ್ಲಿ . . . ಬಾಲಚಮೂ, ರೆಡ್‌ಕ್ರಾಸ್, ರೋಟರಿ ಸಂಘ, ಯುನೆಸ್ಕೋ ಮುಂತಾದುವು ಪ್ರಧಾನವಾದುವು (ಶಿಕ್ಷಣ. ೫೩). [ಸಂ.]

**ಬಾಲಚಾರ** (ನಾ). ಸ್ಕೌಟುದಳಕ್ಕೆ ಸೇರಿದ ಹುಡುಗ : ಅಗ್ರಚಾರ (ಸ್ಕೌಟ್) ಬಾಲಚಾರನಿಗಿಂತ (ಬಾಯ್‌ಸ್ಕೌಟ್) ಭಿನ್ನ (ಕವಕೋ. I. ೦೬೬); ನಾಣಿ ನಮ್ಮ ಊರಿಗೆ ಒಬ್ಬ ಬಾಲಚಾರ (ನಮ್ಮೂರ. ೩೯). [ಸಂ.]

**ಬಾಲಚಿಕ್ಕೆ** 'ಬಾಲಚುಕ್ಕೆ' ನೋ.

**ಬಾಲಚುಕ್ಕಿ** 'ಬಾಲಚುಕ್ಕೆ' ನೋ.

**ಬಾಲಚುಕ್ಕೆ**, ಬಾಲಚಿಕ್ಕೆ, ಬಾಲಚುಕ್ಕಿ (ನಾ). (ಸೌರವ್ಯೂಹದಲ್ಲಿದ್ದು) ಆಗೊಮ್ಮೆ ಈಗೊಮ್ಮೆ ಅಡ್ಡವಾಗಿ ಬಂದು ಕಾಣಿಸಿಕೊಳ್ಳುವ, ಬಾಲದಂತೆ ಗುಂಜುಗುಂಜಾದ, ಪ್ರಕಾಶವಾದ ಪಟ್ಟಿಗಳನ್ನುಳ್ಳ ಉಲ್ಕೆ ; ಧೂಮಕೇತು; P ಇದು ಉತ್ಪಾತಸೂಚಕವೆಂಬ ನಂಬಿಕೆಯಿದೆ : ಸೂರ್ಯನೂ, ಸೂರ್ಯನ ಸುತ್ತಲೂ ತಿರುಗುವ ಗ್ರಹಗಳೂ, ಬಾಲಚುಕ್ಕೆಗಳೂ ಇವುಗಳಿಗೆ . . . ಎಂದು ಹೆಸರು (ಭೂಗೋಳ. ೯). **ಬಾಲಚಿಕ್ಕೆ :** ಈಗ ನಾವು ನೋಡುವ ಬಾಲಚಿಕ್ಕೆಗಳ ಸ್ಥಿತಿಯಂತೆ ಆ ಕಾಲದಲ್ಲಿ ಭೂಮಿಯ ಸ್ಥಿತಿಯಿತ್ತೆಂದು ಹೇಳಬಹುದು (ಮುಂಬಯಿ. ೬-೨೪೨). **ಬಾಲಚುಕ್ಕಿ :** ನಭದೊಳಿಕ್ಕೆಡೆವಿಡದೆ ತುಂಬಿದ ವಸುರರುದಯಕೆ ಬಾಲಚುಕ್ಕಿಗಳು (ಕೃಷ್ಣಾತ. ೨-೭೩) ; ೧೫೭೭ರಲ್ಲಿ ಒಂದು ಬಾಲಚುಕ್ಕಿಯು ಕಾಣಿಸಿತು (ಶಿಲ್ಪಾವಾ. ೦೦೦). [ಬಾಲ್ + ಚುಕ್ಕೆ]

**ಬಾಲಜ್ವರ** (ನಾ). ರೋಗಿಗೆ ಆಗ ತಾನೇ ಪ್ರಾರಂಭವಾಗಿರುವ ಜ್ವರ : ರಾಸ್ನೆ . . . ಬೆಳ್ಳುಳ್ಳಿ ಇವುಗಳನ್ನು ಕುಟ್ಟಿ ಅರೆದು ಕೊಡಲು ವಾತದೋಷಜ್ವರ ಮತ್ತು ಬಾಲಜ್ವರ ಸಹ ಪರಿಹಾರವಾಗುವುವು (ಸಕವ್ಯ. ೦೦೪). [ಸಂ.]

**ಬಾಲತನ** (ನಾ). ಚಿಕ್ಕಂದು ; ಎಳವೆ : ಬಾಲ್ಯ : ನಿಮಗಾನುಜುವುದೆನ್ನ ಬಾಲ[ಪಾಠಾಂ. ಲ್ಯ]ತನದಿಂದಂದಾದುದೆಂದಾದುದೇ ನಿಮಗಾನಂಜದೊಡಂಜಸಲ್ ನೆಱೆವೆನೇ ತ್ರೈಲೋಕ್ಯಮಂ ಯುದ್ಧದೊಳ್ (ಪಂಪಭಾ. ೦೦-೦೩೪); ಬಾಲತನವೇನೂಣಯವೆ ಕಟ್ಟಾಳುತನವಾಭರಣ ವವನೀಪಾಲಸುತರಿಗೆ (ಕುಮಾದ್ಯ. ೫-೩೦). [ಬಾಲ್ + -ತನ]

**ಬಾಲತನಯ** (ನಾ). ಒಂದು ಬಗೆಯ ಮರ ; ಕಗ್ಗಲಿಮರ ; ಖದಿರ ವೃಕ್ಷ : "ಗಾಯತ್ರೀ, ಬಾಲತನಯಃ, ಖದಿರಃ, ದಂತಧಾವನಃ – ೪ ತರೆಯದ ಮರದ ಹೆಸರು; ಕಗ್ಗಲೀಮರ" (ಸಿದ್ಧಾಂತ. ೦೨೩). [ಸಂ.]

**ಬಾಲತಪ** (ನಾ). [ಜೈನ] ಶುದ್ಧವಾದ ದರ್ಶನವಿಲ್ಲದೆ, ವ್ಯರ್ಥವಾದ ದೇಹದಂಡನೆಯೊಡನೆ ಆಚರಿಸುವ ತಪಸ್ಸು ; ಮೂರ್ಖತನದ ತಪಸ್ಸು : ಮಿಥ್ಯಾದರ್ಶನೋಪೇತತಪಂ ಬಾಲತಪಂ ನಿಕೃತಿಬಹುಲವ್ರತಧಾರಣಂ ಅನುಪಾಯಕಾಯಕ್ಲೇಶಪ್ರಚುರಂ ಎಂಬಿವು ಮೊದಲಾಗೊಡೆಯವು ದೇವಾಯುಷ್ಯಾಸ್ರವಕಾರಣಂಗಳಪ್ಪುವು (ತತ್ತ್ವಾಪ್ರ. ೫೩೩). [ಸಂ.]

**ಬಾಲತೆ**, ಬಾಳತೆ (ನಾ). ೧. = ಬಾಲತನ : ಬಾಲತೆಯೊಳ್ ದರ್ಶನಮುಂ ಮೇಲೆನಿಪೀ ವ್ರತಮುಮೊಡನೆ ಸಂಭವಿಸಿದುವು (ಧರ್ಮಾಮೃ. ೬-೨೦). **ಬಾಳತೆ :** ೧. ಬಾಳತೆಯಂ ಕಳಿಪಿ ಸುದಂಭೋಳಿಧರಾನತಪದಂ ಕುಮಾರತೆಯಂ ಸಲ್ಲೀಲಾನಿಧಾನನಾಂತಂ . . . ಭಾಸುರರೂಪಂ (ನೇಮಿಪು. ೯-೪). ೨. ಹುಡುಗುತನದ ವರ್ತನೆ ; ಬಾಲಿಶವೃತ್ತಿ : ಪಾಲಿಪುದು ವಿನಯಮಂ ಬಾಳತೆಯನುಳಿವುದಿದನೇಳಿಸದಿರೆಂದು ಸೌಮಿತ್ರಿ ನುಡಿದಂ (ಕುಮುದಾ. ೬-೦೦೬). [ಸಂ. ಬಾಲತಾ]

**ಬಾಲತ್ವ**, ಬಾಳತ್ವ (ನಾ). = ಬಾಲತನ : ಬಾಲತ್ವದೊಳಂ ಗುಣಮಣಿಮಾಲಿನಿ ಶಿಶುಮಾಲತಿ . . . ಜನಪತಿಗೆ ವಿನಯವಿನಮಿತೆಯಕ್ಕುಂ (ಶಾಂತಿಪು. ೯-೯೬) ; ಬಾಲತ್ವದಿಂದೆಲ್ಲಿಯುಂ ವಿನಯೋಲ್ಲಂಘನಮಾದುದಿಲ್ಲ (ಗದಾಯು. ೫-೭) ; ಬಾಲತ್ವದೊಳಮುದಾತ್ತಗುಣಾಲಯಮೆನಿಸಿದ ತನೂಜಮುಖಚಂದ್ರಮನಂ ಲೀಲೆಯಿನೀಕ್ಷಿಸಿ ದಶರಥನೋಲಾಡಿದನಧಿಕರಾಗರಸವಾರಿಧಿಯೊಳ್ (ಪಂಪರಾಮಾ. ೩ ೦೩೨). **ಬಾಳತ್ವ :** ಗಗನಕ್ಕೀಡಾಡಿ ವಾಮೇತರಾಯತಹಸ್ತಾಗ್ರದೊಳಾಂತು ತಾಳ್ದಿದುದಱಿಂ ಬಾಳತ್ವದೊಳ್ ಕೋಟಿಕಾಂತಿತಮಾ ಕಲ್ ತಿರಿಕಲ್ ತ್ರಿಪೃಷ್ಠಮಹಿಪಂಗಕ್ಕುಂ ಪೆಱಂಗಕ್ಕುಮೇ (ಶಾಂತಿಪು. ೫-೨೭); ಬಾಳತ್ವದೊಳಂದಗಮಂ ಬಾಳಿಸಿದೀ ಕೃಷ್ಣನಳಿಯನಲ್ಲನೆ ಶೌರ್ಯಾಭೀಳನರತನುಜನಲ್ಲನೆ ಪೇಳ್ಮಿದೆಂ ಗಹನಮೆನಗೆ ಬೆಸಸಿಂ ನೃಪತೀ (ನೇಮಿಪು. ೦೨-೩೩). [ಸಂ.]

**ಬಾಲದುಡಿಗೆ** 'ಬಾಲದೊಡಿಗೆ' ನೋ.

**ಬಾಲದುಡುಗೆ** 'ಬಾಲದೊಡಿಗೆ' ನೋ.

**ಬಾಲದೆರಿಗೆ** 'ಬಾಲದೆಱಿಗೆ' ನೋ.

**ಬಾಲದೆಱಿಗೆ**, ಬಾಲದೆರಿಗೆ (ನಾ). ದನಕರುಗಳ ಮೇಲೆ ಹಾಕುತ್ತಿದ್ದ ತೆರಿಗೆ; P ದನಕರುಗಳ ಗಣನೆಯ ಸಮಯದಲ್ಲಿ, ಬಾಲಗಳ ಎಣಿಕೆಯಿಂದ ಕಾಲ್ನಡೆಯ ಸಂಖ್ಯೆಯನ್ನು ಸೂಚಿಸುವ ಪರಿಪಾಠವಿದ್ದಿರಬಹುದು : ಪಳ್ಳಿಗರ ಜಾತಿದೆಱಿಗೆ ಬಾಲದೆಱಿಗೆ ನಾಮಗಾಣಿಕೆ ಗೋಪಾಲಸ್ವಾಮಿವರ್ತ್ತನೆ ಸುಂಕಕ್ಕೆ ಸಲ್ಲುವ ಪಟ್ಟಡಿಯೇರುಸುಂಕ (ಎಕ. III. ಶ್ರೀರಂಗ ೦೦೦-೦೬೫; 1724). **ಬಾಲದೆರಿಗೆ :** ಈಚಲುಕಂದಾಯ ಬಾಲದೆರಿಗೆ ಹೊರಾದಾಯ ಚರಾದಾಯ . . . ಈ ಸಂಖ್ಯೆಯ ಮಹಾಜನರಿಗೂ ಯಥಾಂಶವಾಗಿ ನಿರ್ವಿವಾದವಾಗಿ ಸಲುವದು (ಎಕ. III. ತಿರುಮ. ೬೩-೦೩೬೮: 1748); ಕುರಿದೆರಿಗೆ ಬಾಲದೆರಿಗೆ ಹುಲ್ಲುಹಣ (ಮೈಆಆ. ೦೯೩೬. ೨೪-೦೪; 1820). 'ಬಾಲವಣ' ಪರಾ. [ಬಾಲ್ + ತೆಱಿಗೆ]

**ಬಾಲದೊಡಿಗೆ**, ಬಾಲದುಡಿಗೆ, ಬಾಲದುಡುಗೆ (ನಾ). ಮಕ್ಕಳಿಗೆ ತೊಡಿಸುವ ಆಭರಣ : ತಾಲಿ ಕಡಗಂ ಜಣ್ಣಸರವುಂ ತೋಳಬಂದಿಯೆನಿಪ್ಪ ಚಲ್ವಿನ ಬಾಲದೊಡಿಗೆಗಳ . . . ತಂದಪೆವು (ಬಸವಪು. ೦೯-೯); ಈತನರ್ಜುನನರಮನೆಯೊಳಭಿಜಾತನೆನಿಪಭಿಮನ್ಯುವನು ಸಂಪ್ರೀತಿಯಿಂ ದಪ್ಪಿದನು ಕೊಟ್ಟನು ಬಾಲದೊಡಿಗೆಗಳ (ಕುಮಾಭಾ. ೨೦ ೦೦). **ಬಾಲದುಡಿಗೆ :** ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತು (ಶಂಕರ. ೦೬೭-೮); ಇಂತು ಸಕಲಸೌಂದರ್ಯಮಂ ಬೀಱುವ ಬಾಲದು [ಪಾಠಾಂ. ದೊ]ಡಿಗೆ

ವೆರಸು ಲೀಲೆ ಮಿಕ್ಕು (೧೦೪. ೩-೭೪ ವ). **ಬಾಲದುಡುಗೆ:** ಜನ್ಮಾಭಿಷೇಕವುಂ ಮಾಡಿ ತದನಂತರಮನೇಕಬಾಲದುಪು[ಶಾಶಾಂ. ಡಿ]ಗೆಗಳಂ ತುಡಿಸಿ ತಾಯಿ ತಂದೆಗೆ ನಂದನನಂ ಕೊಟ್ಟಾಖಂಡಳಂ . . . ನಿಜನಿವಾಸಕ್ಕೆ ಪೋದಂ (ಪುಷ್ಪಾಸ್ರ. ೧೦-೦೬ ವ). [ಬಾಲ$_2$ + ತೊಡಿಗೆ (<ತೊಡುಗೆ)]

**ಬಾಲಪಂಡಿತಮರಣ** (ನಾ). [ಜೈನ] ಐದು ಬಗೆಯ ಮರಣಗಳಲ್ಲಿ ಒಂದು; P "ಸಮ್ಯಕ್‌ದರ್ಶನಜ್ಞಾನ, ಏಕದೇಶಚಾರಿತ್ರಗಳನ್ನು ವಶಮಾಡಿಕೊಂಡಿರುವ ದೇಶವ್ರತಿಯ ಮರಣ" (ಜೈನಕೋ. ೦೮೫): ಸಮ್ಯಗ್ದರ್ಶನ ಸಂಯಮಾಸಂಯಮಚಾರಿತ್ರಂಗಳಂ ತನಗೆ ವಶಂಮಾಡಿ ನೆಗಟ್ಟ ಸಂಯತಾಸಂಯತನ ಸಾವು ಬಾಲಪಂಡಿತಮರಣಂ (ವಸಾರ. ೩೬೬). [ಸಂ.]

**ಬಾಲಪತ್ರ** (ನಾ). ಕಗ್ಗಲಿಮರ; ಖದಿರವೃಕ್ಷ. [ಸಂ.]

**ಬಾಲಪಾಶ್ಯೆ** (ನಾ). ೧. ಸ್ತ್ರೀಯರು ಬೈತಲೆಗೆ ಧರಿಸುವ ಒಂದು ಬಗೆಯ ಆಭರಣ. ೨. ಒಂದು ಬಗೆಯ ಆಭರಣ; ಜಡೆಬಿಲ್ಲೆ. [ಸಂ. ಬಾಲಪಾಶ್ಯಾ]

**ಬಾಲಪುಳು, ಬಾಲಹುಳು** (ನಾ). ಬಚ್ಚಲುಹರಿ ಮೊದಲಾದ ಕೊಚ್ಚೆ ಸ್ಥಳಗಳಲ್ಲಿ ಹಾಗೂ ಗೊಂಡೆಗಟ್ಟಿದ ಅಕ್ಕಿ ಮೊದಲಾದುವುಗಳಲ್ಲಿ ಹರಿದಾಡುವ ಚಿಕ್ಕ ಬಾಲವುಳ್ಳ ಹುಳು: ಪುರಾಣಿಕನೊಡಲು ಬಿಕ್ಕನೆ ಬಿರಿದುದಾಗಳೆ ಬಾಲಪುಳುಗಳ ರಾಶಿಯಾಯಿತ್ತು (ಬಸವು. ೩೬-೭೦). **ಬಾಲಹುಳು:** ಅಹಂಕಾರವಿಲ್ಲದಿಹಂತಹ ಪುರಾತನರ ಮನೆಯ ಬಚ್ಚಲ ಬಾಲಹುಳುವಾಗಿ ಹುಟ್ಟಿಸಯ್ಯಾ (ಸವಚವ. ೬-೩೦): ಜಾತಿಪೂರ್ವವ ವಿತ್ತಿ ದೂಷಿಸುವ ಪಾತಕರ ಬಾಯಲ್ಲಿ ಬಾಲಹುಳುಗಳು ಸುರಿಯದೆ ಮಾಣ್ಬವೆ ಹೇಳಾ (ಅಬಂಡಿ. ೨೦೬-೪೦). [ಬಾಲ$_1$ + ಪುಳು (<ಪುಟು)]

**ಬಾಲಬಂದು, ಬಾಳಬಂದು** (ನಾ). ೧. ಸರಳವಾದುದು; ಸುಲಭವಾದುದು: (ಕ). ೨. ಒಂದು ಬಗೆಯ ಲಿಪಿ: ದೇವನಾಗರೀ ಲಿಪಿ. **ಬಾಳಬಂದು:**(ಕ). [<ಮರಾ. ಬಾಳಬಂದ, ಬಾಳಬಂದ]

**ಬಾಲಬಾಲಮರಣ** (ನಾ). [ಜೈನ]ಐದು ಬಗೆಯ ಮರಣಗಳಲ್ಲಿ ಒಂದು; ''ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ, ತಪಸ್ಸುಗಳೆಂಬ ಆರಾಧನೆಗಳಲ್ಲಿ ಒಂದೂ ಇಲ್ಲದ ಮಿಥ್ಯಾದೃಷ್ಟಿಯ ಸಾವು" (ಜೈನಕೋ. ೦೮೫): ಬಾಲಬಾಲಮರಣಂ ಬಾಲಮರಣಂ ಬಾಲಪಂಡಿತಮರಣಂ ಪಂಡಿತಮರಣಂ ಪಂಡಿತಪಂಡಿತಮರಣಮೆಂದಿಂತು ಪಂಚ ಪ್ರಕಾರಮಕ್ಕುಂ . . . ಚತುರ್ವಿಧಾರಾಧನೆಗಳೊಳೊಂದಾರಾಧನೆಯುಮಿಲ್ಲದ ಮಿಥ್ಯಾದೃಷ್ಟಿಯ ಸಾವು ಬಾಲಬಾಲಮರಣಂ (ವಸಾರ. ೩೬೬). [ಸಂ.]

**ಬಾಲಬೋಧೆ** (ನಾ). ೧. ಚಿಕ್ಕಮಕ್ಕಳಿಗೆ ಕೊಡುವ ಆರಂಭದ ಪಾಠ. ೨. ಮಕ್ಕಳಿಗೆ ಓದು ಕಲಿಸುವುದಕ್ಕಾಗಿ ಬಳಸುವ ಪ್ರಾಥಮಿಕ ಪುಸ್ತಕ; ಬಾಲಪಾಠದ ಪುಸ್ತಕ: (ಕ). [ಸಂ. ಬಾಲಬೋಧಾ]

**ಬಾಲಬ್ರಹ್ಮಚಾರಿ** (ನಾ). ಚಿಕ್ಕಂದಿನಲ್ಲಿಯೇ ಸಂನ್ಯಾಸವನ್ನು ಸ್ವೀಕರಿಸಿದವನು: ಬಾಲಬ್ರಹ್ಮಚಾರಿಯ ಬಾರನೆತ್ತಿತ್ತ ಕಂಡೆ ಭಕ್ತರೆಲ್ಲರೂ ಸತ್ತು ನೆಲಕಿಕ್ಕಿತ್ತ ಕಂಡೆ (ಅವಚಂ. ೯೫-೪೨೬). [ಸಂ. ಬಾಲಬ್ರಹ್ಮಚಾರಿನ್]

**ಬಾಲಭಾವ** (ನಾ). ಬಾಲ್ಯ; ಎಳೆತನ: ಆ ಬಾಳಕೇಳಿಗಳ ಬಟೆಯಿಂ ಬಾಲಭಾವವುಂ ಪೆಚಿಗಿಕ್ಕಿ ಯೌವನಪ್ರಾದುರ್ಭಾವಕ್ಕಿದಿರಾಗಿ (ಶಾಂತಿಪು. ೧೦-೪೦ ವ); ಕಳಾಗುಣಾ ಪೊದಟ್ಟಳವಡೆ ಬಾಲಭಾವದೊಳೆ ಭಾವಕಿಯರ್ ಬಳಿವರ್ ನಿರಂತರಂ (ಶಮಚ. ೦೪೫ ಪ್ರಯೋ). [ಸಂ.]

**ಬಾಲಭಾಷಿತ** (ನಾ). ಹುಡುಗುತನದ ಮಾತನ್ನಾಡುವವನು; ಅರ್ಥವಿಲ್ಲದ ಮಾತನ್ನಾಡುವವನು: ಬೀಳುಕೊಂಡಿರೇ ಸಾಕು ಭೀಮನು ಬಾಲಭಾಷಿತನಾದನೀ ಭೂಪಾಲ ಕೌರವನೆಂಬೆನೇ ಮೊದಲಿಗನು ಮೂರ್ಖರಿಗೆ (ಕುಮ್ಮಾಭಿ. ೧೦-೩೬). [ಸಂ.]

**ಬಾಲಭಾಷೆ** (ನಾ). ೧. ಮಕ್ಕಳ ಮಾತು; ಅಪ್ರಬುದ್ಧವಾದ ಭಾಷೆ: ರಂಗನು . . . ತನ್ನ ಬಾಲಭಾಷೆಯಲ್ಲಿ ಏನೇನೋ ಬರೆದು ಮಹಾದೇವಯ್ಯನವರಿಗೆ ತೋರಿಸಿ ತಿದ್ದಿಸಿಕೊಳ್ಳುತ್ತಿದ್ದನು (ರಂಗರೋ. ೩೪). ೨. ಪ್ರಾಕೃತ ಭಾಷೆ: ಪ್ರಾಕೃತಭಾಷೆಗೆ ಸಾರಸ್ವತವೆಂತಲೂ ಬಾಲಭಾಷೆಯೆಂತಲೂ ಹೆಸರುಗಳುಂಟು (ವಮುಂಬಯಿ. ೪-೧೩೫). ೩. (ಅಲಂ) ಬಾಲ್ಯದಲ್ಲಿ ಕಲಿತ ವಿದ್ಯೆ: ಚಾಪದ ಚಾರುವಿದ್ಯೆಯ ನಿಪ್ಪೊಳಚಿದುದ ನಿಮಗೆ ತೋಱಿಸುವೆ ಸೈರಿಸುವುದೀ ಬಾಲಭಾಷೆಗೆ ವೈರಬಂಧವಬಿಡುವದು (ಕುಮ್ಮಾಭಿ. ೬-೩೫). [ಸಂ. ಬಾಲಭಾಷಾ]

**ಬಾಲಮುಂಡನ** (ನಾ). = ಬಾಲದೊಡಿಗೆ: ಭುವನೈಕಪುಂಡನನೊಳೇನೆಸೆದಿರ್ದುದೊ ಬಾಲಮುಂಡನಂ (ಅಜಿಪು. ೫-೬೦). [ಸಂ.]

**ಬಾಲಮರಣ** (ನಾ). [ಜೈನ]ಐದು ಬಗೆಯ ಮರಣಗಳಲ್ಲಿ ಒಂದು: ಅಜ್ಞಾನ ಅಥವಾ ಅವಿವೇಕದಿಂದ ತಂದುಕೊಳ್ಳುವ ಸಾವು: ಸಮ್ಯಗ್ದರ್ಶನಾರಾಧನೆಯನುಳ್ಳಸಂಯತ ಸಮ್ಯಗ್ದೃಷ್ಟಿಯ ಸಾವು ಬಾಲಮರಣಂ (ವಸಾರ. ೩೬೬); ಯಾವುದೋ ಕ್ಷುದ್ರದೇವತೆಗೆ ಹರಕೆ ಹೊತ್ತು ಉಪವಾಸ ಮಾಡಿ ಸಾಯುವುದು, ವಿಷಪಾನ ಮಾಡಿ ಅಥವಾ ನೀರಲ್ಲಿ ಮುಳುಗಿ ಸಾಯುವುದು, ಇರಿದುಕೊಂಡು ಸಾಯುವುದು—ಇವುಗಳನ್ನು "ಬಾಲಮರಣ"ವೆಂದೂ (ಬಾಲ = ಅಜ್ಞಾನಿ, ಅವಿವೇಕಿ). ಸಲ್ಲೇಖನವನ್ನು "ಪಂಡಿತಮರಣ"ವೆಂದೂ ಕರೆಯುತ್ತಾರೆ (ಕಶಾಶ. ೯೨). [ಸಂ.]

**ಬಾಲಮೆಣಸು** (ನಾ). (ತೊಟ್ಟು ಉದ್ದವಾಗಿರುವ) ಒಂದು ಬಗೆಯ ಮೆಣಸು: "ಚವಿಕೆ, ಗಂಧಮೆಣಸು, ಮರಮೆಣಸು, ಬಾಲಮೆಣಸು, ಕಪ್ಪರಚಿನ್ನಿ" (ಸಸ್ಯನಿ. ೦೦೬): ಕಾಳುಗಳು . . . ಪಕ್ವವಾಗುತ್ತಿದ್ದಂತೆ ಫಲಾವರಣದ ಬುಡ ಅಸಾಧಾರಣವಾಗಿ ಬೆಳೆಯುವುದರಿಂದ ಪ್ರತಿಕಾಳಿಗೂ ಒಂದು ತೊಟ್ಟು (ಬಾಲ) ಹೊರಟಂತೆ ಭಾಸವಾಗುತ್ತದೆ. ಅದರಿಂದಲೇ ಇದಕ್ಕೆ ಬಾಲಮೆಣಸು ಎಂಬ ಹೆಸರು (ಕಂಕೋ. XII, ೩೬). [ಬಾಲ$_1$ + ಮೆಣಸು (<ಮೆಣಸು)]

**ಬಾಲರಕ್ಷೆ** (ನಾ). ದುಷ್ಟಗ್ರಹ ಅಥವಾ ಭೂತಬಾಧೆಯಾಗದಂತೆ ಮಕ್ಕಳಿಗೆ ಕಟ್ಟುವ ತಾಯಿತ, ದಾರ ಮೊದಲಾದ ಪ್ರತಿಬಂಧಕ ಸಾಧನ. [ಸಂ. ಬಾಲರಕ್ಷಾ]

**ಬಾಲರಸ** (ನಾ). [ವೈದ್ಯಶಾ] (ಮಕ್ಕಳ ಹಳೆಯ ಜ್ವರ, ಕೆಮ್ಮು, ಶೂಲೆ ಇತ್ಯಾದಿಗಳಿಗೆ ಕೊಡುವ ಗಂಧಕ, ಸೋನಾಮುಖಿ ಮುಂತಾದುವುಗಳ ಮಿಶ್ರಣದಿಂದ ತಯಾರಿಸುವ) ಒಂದು ಬಗೆಯ ಔಷಧ: ಮಣಿಶಿಲಾಸಿದ್ಧರಸವು ಸಮವಾಗಿ ಕರಗಿಸಲು ಬಾಲರಸವಾಗುವುದು (ಗಂಧಶ್ರ. ೯-೦). [ಸಂ.]

**ಬಾಲರಾಕ್ಷಸ** 'ಬಲರಾಕ್ಷಸಿ' ನೋ.

**ಬಾಲರಾಕ್ಷಸಿ** 'ಬಲರಾಕ್ಷಸಿ' ನೋ.

**ಬಾಲರ್ಷಿ** (ನಾ). ಋಷಿಸತ್ವವುಳ್ಳ ಬಾಲಕ: ಸನ್ನೊಳ್ಮೈಗೇಂ ಕಡಮೆ, ಹೇಳವ್ವ, ನಿನಗೆ ಬಾಲರ್ಷಿ ಭರತನ ಕೂರ್ಮೆ? (ಶ್ರೀರಾಮಾ. ೬೩-೧೫೨). [ಸಂ.]

**ಬಾಲಲೀಲೆ** (ನಾ). = ಬಾಲಕೇಳಿ: ಶಿಶುವಾಗಿ ಬಾಲಲೀಲೆ ತೋಱದೆ (ಪುರಂದ. ೩-೬೪-೩); ಕಂದನಾಡುವ ಬಾಲಲೀಲೆಯಂ ನೋಡಿ . . . ಪ್ರೀತಿಯಂ ಪಡೆವರ್ (ಜೈಮಿಭಾ. ೦೬-೨೦). [ಸಂ. ಬಾಲಲೀಲಾ]

**ಬಾಲವ** (ನಾ). [ಜ್ಯೋತಿ] ಹನ್ನೊಂದು ಬಗೆಯ ಕರಣಗಳಲ್ಲಿ ಎರಡನೆಯದು; ಒಂದು ಬಗೆಯ ಕಾಲಮಾನ: ಬವ ಬಾಲವ ಕೌಲವ ತೈತಿಲ ಗರಜೆ ವಣಿಜೆ ಭದ್ರೆಗಳೆಂಬವೇಳುಂ ಚರಕರಣಂಗಳು . . . ವರ್ತಿಸುತ್ತಿಪವು (ಜಿವೇಕ. ೨೬೨); ಚರ ಮತ್ತು ಸ್ಥಿರ ಎಂದು ಕರಣ ಎರಡು ವಿಧ. ಬವ ಬಾಲವ ಕೌಲವ ತೈತುಲೆ ಗರಜೆ ವಣಿಜೆ ಭದ್ರೆ ಈ ಏಳು ಚರಕರಣಗಳು (ಜಾತಕ. ಪಂ. ೩-೩೬೬). 'ನಾಗವ' ಪರಾ. [ಸಂ.]

**ಬಾಲವಂದ, ಬಾಳವಂದ** (ನಾ). ಮಕ್ಕಳಿಗೆ ತೊಡಿಸುವ ಉಡುಪು, ಆಭರಣ ಇತ್ಯಾದಿ ; ಮಕ್ಕಳ ಉಡುಗೆ ತೊಡುಗೆ : ಅರಳೆಲೆಯತ್ತಿ ಕಾಯ್ ಪುಲಿಯುಗುರ್ . . . ಗೊಂದಳಿಸಿರೆ ಬಾಲವಂದದ ತೆರಳ್ಕೆಯಿ ನಚ್ಯುತನಾದವೊಪ್ಪಿದಂ (ಸೂಕ್ತಿಸು. ೬-೭೩). **ಬಾಳವಂದ** : ಬಾಳವಂದಂಗಳ ನೊಯ್ಯನೆ ತುಡಿಸಿದಾಗಳಾ ಶಿಶು ಜಿನಶಿಶುವೆಂಬಿನಗವೋಂ ಮನಂಗೊಳಿಸಿ ದನೋ (ಸುಕುಮಾ. ೦೦-೩೪) ; ಅರಳೆಲೆ . . . ನೂಪುರಂ ವರವಲಯಂ ಗಳೆಂಬ ಪಲವಂದದ ಚಂದದ ಬಾಳವಂದವೊಪ್ಪಿರೆ ಪಿತೃಮಾತೃಗಳ್ಗೆ ಪಡೆದರ್ ತನಯರ್ ನಯನೋತ್ಸವಂಗಳಂ(ಶಂಖಾಪು. ೬-೦೪೦).
[ ←ಹಿಂ. ಬಾಲಾಬಂದ / ಸಂ. ಬಾಲಬಂಧ ]

**ಬಾಲವಕರಣ** (ನಾ). = ಬಾಲವ : ಬಾಲವಕರಣಕ್ಕೆ ವರ್ಜ ೪ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೬೦-೩). [ಸಂ.]

**ಬಾಲವಣ** (ನಾ). = ಬಾಲದೆಱಿಗೆ : ಬಾಲವಣಮುಮಪಾಯಿಲದೆಱೆ ಗಳುಮನ್ನೆಲದ ನೇಸಱ ಉಳ್ಳನ್ನೆಗ ಬಿಟ್ಟು (ಕ್ಕಿಇ. XI–i, ೩೪-೬ ; ೨ನೆಯ ೩೩ ೧) ; ಬಾಲವಣಂ ಬೇಡೂವನೊಂದೆ ಗೊಂದೆಗಂ (ಕವಿಚ. ೭೩ ಕ್ರಿಯೋ).
[ ಬಾಲ$_1$ + ಪಣ$_3$ ]

**ಬಾಲವಣದೆಱೆ** (ನಾ). = ಬಾಲದೆಱಿಗೆ: ಚಿಕ್ಕ ಬೆಳುಗಲಿಯ ಹೊಗೆದೆಱೆ ಬಾಲವಣದೆಱೆಯೊಳಗೆ ಎಳ್ಳೇಶ್ವರದೇವರ ನಂದಾದೀವಿಗೆಗೆ ವರುಷ ನಿಬಂದ್ಧಿಯಾಗಿ ಕೊಟ್ಟ ಪ ೨ (ಎಕ. XV. ಹೊಳನ. ೯೪-೦೦; 1237).
[ ಬಾಲವಣ+ತೆಱೆ$_3$ ]

**ಬಾಲವತಿ**, ಬಾಳವತಿ (ನಾ). ಹೆರಿಗೆಯಾಗಿ ಇನ್ನೂ ಆರೈಕೆಯನ್ನು ಹೊಂದುತ್ತಿರುವವಳು ; ಬಾಣಂತಿ : ಮಾಡಿದರ್ . . . ಬಾಲವತಿ ಗಂದಭಿಷೇಕವಂಸಂಗನಾಜನಂ (ಶಾಂತೀಶ್ವ. ೪-೩೨). **ಬಾಳವತಿ** : ಮಾಡಿದರ್ . . . ಬಾಳವತಿಗಂದಭೀಷೇಕಮನಿಂತು ಕಾಂತೆಯರ್ (ಕುಸುಮಾ. ೬-೭೮). 'ಬಾಳಂತಿ' ಪರಾ [ ಸಂ. ಬಾಲವತೀ ]

**ಬಾಲವದ್ದೆ** (ನಾ). ಬಾಲ್ಯಾವಸ್ಥೆಯಲ್ಲಿರುವವನು ; ಹಸುಮಗು (?): ಬಾಲವದ್ದೆಯಂ ಕೂಸಂ ಸಿಸುವನವ್ಯಕ್ತನಂ ವಿಸುಟ್ಟೆಂತು ತಪಂಬಟ್ಟೆ ಪಾಪ ಕರ್ಪುರ ದಯೆಯಿಲ್ಲದೊಂ ನಿಷ್ಕರುಣಿ ಎಂದು ಬಯ್ದಳ್ (ಪದ್ಮಾರಾ. ೪೩-೦೦); ಮಗನೆ ನೀನಿನ್ನುಂ ಕೂಸನ್ನೆ ಬಾಲ[ಪಾಠಾಂ. ಳ]ವದ್ದೆ . . . ಪಶ್ಚಾತ್ಕಾಲದೊಳ್ ತಪಂಬಡುವುದೆಂದೊಡೆ (ಪದ್ಮಾರಾ. ೧೦೩-೬). "ಮಂಗಳ ಕರನಾದ ಬಾಲಕ ? " (ಪದ್ಮಾರಾ. ಟಿಪ್ಪಣಿ. ೨೪೬). [ಬಾಲ$_2$ + ? ]

**ಬಾಲವಧ** (ನಾ). ಮಕ್ಕಳ ಕೊಲೆ ; ಶಿಶುಹತ್ಯೆ : ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ (ಗದಾಯು. ೯-೩೪). [ ಸಂ. ]

**ಬಾಲವಿಧವೆ** (ನಾ). ಚಿಕ್ಕವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡ ವಳು : ಹೀಗೆಯೇ ಇನ್ನೊಬ್ಬ ಬಾಲವಿಧವೆಯಿದ್ದಳು (ಹುಮುಚ. ೯೩).
[ ಸಂ. ಬಾಲವಿಧವಾ ]

**ಬಾಲವೂರು**, ಬಾಳವೂರು (ನಾ). ಒಂದು ಊರಿನ ಹೆಸರು ; P ಈಗಿನ ಧಾರವಾಡಜಿಲ್ಲೆಯ ಹಾನಗಲ್ಲು ತಾಲ್ಲೂಕಿನ ಬಾಳೂರು : ಪಾನು ಙ್ಗಲ್ ಕಿಱುವಳ್ಳಿ ಬಾಲವೂರು . . . ಗ್ರಾಮಾನ್ ಮಧ್ಯೇ (ಎಇ. VIII, ೨೭ : 758). **ಬಾಳವೂರು** : ಬಾಳವೂರು ಇತ್ಯೇತೇಷಾಂ ಗ್ರಾಮಾಣಾಂ (ಎಇ. V, ೨೦೪-೬೬; 757). [ ? + ಊರು$_3$ (<ಊರ್) ]

**ಬಾಲಶಯ್ಯೆ** (ನಾ). (ಮಗುವನ್ನು ಮಲಗಿಸುವ) ತೊಟ್ಟಿಲು : "ಶೈಶವಿ ಬಾಲಶಯ್ಯೆಯೆನೆ ತೊಟ್ಟಿಲಕ್ಕುಂ " (ಮಂಗರಾ. ೬೦-೦೬).
[ ಸಂ. ಬಾಲಶಯ್ಯಾ ]

**ಬಾಲಶಶಿಮೌಳಿ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ : ಪ್ರಮಥರಜಿಯಿದೆ . . . ಆದ್ಯರಜಿಯುದೆ ಬಾಲಶಶಿಮೌಳಿ ಕ್ಷಮೆ ಯುಳಿದು . . . ಭಕ್ತೈಕಭಾವದ ಸಮತೆಯುಳಿದಿಬ್ಬರನು ಮಡಗಿದ ಬೆಡಗು ಲೇಸಾಯ್ತು (ಬಸವ. ೬೭-೪೦); ನಿಮ್ಮ ನೆಱೆ ಕಟ್ಟಾಡಿದರ ಬಾಯ್ ಹುಳುವುದೆಂದನು ಬಾಲಶಶಿಮೌಳಿ (ಕುಮಾ.ಆ. ೦೬-೨೫).
[ ಸಂ. ಬಾಲಶಶಿಮೌಲಿನ್ ]

**ಬಾಲಶಿಕ್ಷೆ** (ನಾ). ಚಿಕ್ಕ ಮಕ್ಕಳ ಶಿಕ್ಷಣ ; ಬಾಲಕರಿಗೆ ಕೊಡುವ ವಿದ್ಯಾಭ್ಯಾಸ : ಬಾಲಶಿಕ್ಷೆಗಂ ವಿನ್ಯಾಸದ ಪಕ್ಷ್ಯಾಣಕ್ಕಂ ವೃತ್ತಿಯ ಭೂಮಿಯೊಳಗೆ ಬಿಟ್ಟ ಭಟ್ಟವೃತ್ತಿಯೊಂದು (ಕ್ಕಿಇ. XX, ೯೩-೬೦ ; ೧). [ಸಂ. ಬಾಲಶಿಕ್ಷಾ]

**ಬಾಲಸಂಗಡ** (ನಾ). ೧. ಕುಸ್ತಿಯ ಒಂದು ಪೇಚು; ಮಲ್ಲಯುದ್ಧದ ಒಂದು ವರಸೆ. ೨. ಕತ್ತಿವರಸೆಯಲ್ಲಿ ಒಂದು ಬಗೆ : ಬಾಲಕರೊಡನೆ ಕೂಡಿದಂಥಾ ಗೊಣೆಯಿದಕ್ಕೆ ಬಾಲಸಂಗಡಯೆಂಬ ಹೆಸರು (ಖಡ್ಗಟೀ. ೨-೬೦).
[ ←ಹಿಂ. ಬಾಲಸಂಗಾಡಾ, ಬಾಲಸಿಂಗಡಾ ; ಮರಾ. ಬಾಳಸಾಂಗಾಡಾ ]

**ಬಾಲಸನ್ಯಾಸಿ** (ನಾ). ಚಿಕ್ಕವಯಸ್ಸಿನಲ್ಲಿಯೇ ಸಂನ್ಯಾಸಿಯಾದವನು : ಉಡುಪಿಯಲ್ಲಿ ಬಾಲಕೃಷ್ಣನ ಪ್ರತಿಷ್ಠೆಯೂ ಬಾಲಸನ್ಯಾಸಿಗಳ ಪೂಜಾ ಪದ್ಧತಿಯೂ . . . ಭಕ್ತಿಯ ಸಾಕ್ಷಿಯಲ್ಲದೆ ಬೇರೆ ಅಲ್ಲ (ಭಾರದ. ೨೯೭) ; ಬಾಲಸನ್ಯಾಸಿ ಕಟ್ಟಿರೆ ಮೂಳನಾಯಿಗಿಂತ ಕಡೆ (ಗಾದೆ).
[ <ಸಂ. ಬಾಲಸಂನ್ಯಾಸಿನ್ ]

**ಬಾಲಸರ** (ನಾ). ಗಾಳಿಪಟಕ್ಕೆ ಕಟ್ಟುವ ಉದ್ದವಾದ ಪಟ್ಟಿ : ಬಾಲಂಗಚ್ಚೆ ; ಬಾಲಂಗೋಸಿ : ಪಟ ಬಾಲಸರ ಕೂಡಿದ್ದರೇನು ಸೂತ್ರ ಕಿಂಚಿತ್ತು ತಪ್ಪಿದಡೆ ಅದು ಖೇಚರತ್ವದಲ್ಲಿ ಆಡಲರಿಯದು (ಪೋಣವಚ. ೩೭-೦೩೬) ; ಪಟದೊಳಗಣ ಬಾಲಸರಕ್ಕೆ ಪ್ರತಿಸೂತ್ರ ನೇಣಂಟೆ (ಪುದೇವ. ೨೭೪-೨೦). [ ಬಾಲ$_1$ + ಸರ$_3$ ]

**ಬಾಲಹುಳು** 'ಬಾಲಪುಳು' ನೋ.

**ಬಾಲಳಿ** (ನಾ). ಎಳೆಯ ದುಂಬಿ ; ಮರಿದುಂಬಿ : 'ಬಾಲಳಿಗುರುಳು' ಪರಾ. [ಸಂ. ಬಾಲಲಿ]

**ಬಾಲಳಿಗುರುಳು** (ನಾ). ಮರಿದುಂಬಿಯಂತೆ ಕಪ್ಪಾಗಿರುವ ಕೂದಲು : ಸುಳಿಗುರುಳವರುಂಗುರಗುರುಳವರು ಬಾಲಳಿಗುರುಳವರು . . . ಆ ಕುವರಿಯ ಬಳಿವಿಡಿದೈದಿತೊಗ್ಗಿನಲಿ (ಪೋಹತ. ೩೪-೦೦).
[ ಬಾಲಳಿ+ಕುರುಳು$_1$ (<ಕುರುಳ್$_1$) ]

**ಬಾಲಾಖಾನೆ** (ನಾ). ಉಪ್ಪರಿಗೆ ; ಮೇಲ್ಮಾಡ ; ಮಹಡಿ : ಅರಮನೆ ಯೊಳಕ್ಕೆ . . . ಎಡಪಾರ್ಶ್ವದ ಬಾಲಾಖಾನೆಯಲ್ಲಿ ಮಹಾರಾಜರವರು ನವರತ್ನಾಲಂಕೃತವಾದ ದಂತದ ಸಿಂಹಾಸನದ ಮೇಲೆ ಮುಹೂರ್ತ ಮಾಡಿಸಿದ್ದರು (ಮಹಾವಂ. II, ೩೩). [←ಪಾರ. ಹಿಂ. ಬಾಲಾಖಾನಾ]

**ಬಾಲಾಟ** (ನಾ). ಮಗುವಿನ ಆಟ ; ಬಾಲಕೇಳಿ : ಬಲು ಪರಿ ಒಂದೊಂದು ಬಾಲಾಟದಲಿ ನಲಿದು ಒಲಿಮೆಯಿಂದಲಿ ನೋಡ ಬಂದ ಯೌವನಸ್ತ್ರೀಯರ ನಿಲಿಯ ಬಿಡಿಸಿ (ವಿಷ್ಣುತೀಸು. ೦೯-೩). [ಬಾಲ$_2$+ಆಟ]

**ಬಾಲಾತಪ**, ಬಾಳಾತಪ (ನಾ). ೧. ಆಗ ತಾನೆ ಉದಯವಾದ ಸೂರ್ಯನ ಬೆಳಕು ; ಎಳೆಬಿಸಿಲು; ಬಲಿಯದಿರುವ ಬಿಸಿಲು : ಹರಿ ಚಂದನವಿಚ್ಛುರಿತಾಂಗರಾಗನತಿರುಚಿರಹಾರನೇನೆಸೆದನೊ ನಿರ್ಝರಮುಂ ಬಾಲಾತಪಮುಮಂ ಬೆರಸಿರ್ದದ್ರೀಂದ್ರನಂತೆ ಪಾಂಡ್ಯನೃಪೇಂದ್ರಂ (ಶಾಂತಿಪು. ೫-೦೩೬) ; ಪೆಣ್ದುಂಬಿಗಳ್ಪಾಯ್ದು ಪುಷ್ಪರಸಾಸಾರದ ತುಂತುಱಿಂದೆಱಕೆ ನಾಂದಾಂದೋಳಿತಾಶೋಕಮಂಜರಿಯಂ ಸಾರ್ದುವು ಪಲ್ಲವೋಲ್ಲಸಿತಮುಂ ಬಾಲಾತಪಭ್ರಾಂತಿಯಿಂ (ಮಲ್ಲಿಪು. ೨-೭೬). **ಬಾಳಾತಪ** : ೧. ಮಾತ್ತೂರ್ವಳ ಲೋಚನಕುಮುದಂ ಮುಗಿದುವು ಕುಮುದಿನಿಗಳ್ ಬಾಳಾತಪಕ್ಕೆ ಮೊಗವಿಾಸುದಪೋಲ್ (ಮಲ್ಲಿಪು. ೬-೦೨೪). ೨. ಕಿರುಪ್ರಕಾಶ ; ಮಂದಕಾಂತಿ : ಅರಿಕೇಸರಿಯ ಪಾದತಳಂಗಳಡಿಗೆಜಿಗಿದರಿನರಪಾಲರ ಮಕುಟಮಾಣಿಕ್ಯಮರೀಚಿಜಾಲಬಾಳಾತಪಂಗಳನಲೆದು ಕೆಂಕಮಾದಂತಾದುವು (ಪಂಪಭಾ. ೨-೩೯ ವ). [ಸಂ.]

**ಬಾಲಾಭ್ಯಾಸ** (ನಾ). ಚಿಕ್ಕವಯಸ್ಸಿನಲ್ಲಿ ಮಾಡುವ ಸಾಧನೆ: ಬಾಲಾಭ್ಯಾಸವ ಮಾಡಹೋದರೆ ಎನ್ನ ಸುರಿಗೆ ಎನ್ನ ನಟ್ಟಿತ್ತು, ಎಂತಯ್ಯಾ ಕಲಿಯೊಡನೆ ಕ್ರುವವ ಮಾಡುವೆನು (ಬಸವ. ೬೨೪). 'ಬಾಲಸಂಗಡ' ಪರಾ. [ಸಂ.]

**ಬಾಲಾರಿಷ್ಟ** (ನಾ). = ಬಾಲಗ್ರಹ. [ಸಂ.]

**ಬಾಲಾರ್ಕ**, ಬಾಳಾರ್ಕ (ನಾ). ಆದೇ ತಾನೆ ಹುಟ್ಟಿದ ಸೂರ್ಯ; ಉದಯರವಿ: ತದಂಗನಾಂಕತಲದೊಳ್ ಬಾಲಾರ್ಕನಂ ಪೋಲ್ತು ಭಾಸುರ ತೇಜೋಧಿಕನಪ್ಪ ಬಾಲನನೊಱಲ್ದಟ್ಟಿಕೊರ್ತು ನೋಡುತ್ತಮಿರ್ಪರುಮಂ ಮಾೞಮೆ . . . ಬಲಗೊಂಡು (ಅಂಕ. ೭-೪೪).; ದಿನದೇವಿ ತಾಂ ಬಾಲಾರ್ಕಕಲಶದೀಪಂಬಿಡಿದು ಹೊತ್ತರೆಯು ಹೊಸ್ತಿಲಂ ದಾಂಟುತಿರೆ, ಸೇರ್ದುದಾ ತೇರಯೋಧ್ಯೆಯ ನಾಡಿನೆಲ್ಲೆಯಂ (ಶ್ರೀರಾಮಾ. ೯೬-೪೯೭). **ಬಾಳಾರ್ಕ**: ವೇಲೆಯ ತವಮಾಳವನವಮಂ ಕಾಳದ ಕಟ್ಟಲೆಯೆ ಗೆತ್ತು ಮುತ್ತಿದುವಕ್ಕುಂ ಬಾಳಾರ್ಕಬಿಂಬಶತಂ (ಮಲ್ಲಿ. ೦೩-೧೨೭). [ಸಂ.]

**ಬಾಲಾಶೋಕ** (ನಾ). ೧. ಎಳೆಯ ಅಶೋಕವೃಕ್ಷ. ೨. ತರುಣಿಯರಿಗಂಟಾಗುವ ದುಃಖ; ಯುವತಿಯರಿಗಾಗುವ ಶೋಕ: ೧, ೨: ಬಾಲಾಶೋಕಂ ವಿಗ್ರಹಲೀಲೆ ರಜೋವಿಕೃತಿ . . . ಇಲ್ಲ ಬನದೊಳ್ಳಲ್ಲದೆ ಜನದೊಳ್ (ಪುಷ್ಪ. ೩-೨೮).
[ಸಂ. (ಬಾಲ+ಅಶೋಕ; ಬಾಲಾ+ಶೋಕ)]

**ಬಾಲಾಸು** (ನಾ). ಭಾರ ಹೇರುವುದಕ್ಕೆ ಮುಂಚೆ ಎತ್ತು, ಕುದುರೆ ಮುಂತಾದುವುಗಳ ಬೆನ್ನಿನ ಮೇಲೆ ಹಾಕುವ ಬಟ್ಟೆಯ ತಡಿ: ಒಳ್ಳೆ ಒಳ್ಳೆ ಎತ್ತುಗಳ ತಲಾಸು ಮಾಡಿಸಿ ಕವುದಿ, ಗೋಣಿ, ಬಿಗಿ, ಬಾಲಾಸು ಸಹಾ ತಯಾರು ಮಾಡಿಸಿ . . . ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿದರು (ರಾಜೇಂದ್ರ. ೭೭). [←ಪಾರ. ಬಾಲಾಸ್]

**ಬಾಲಿಕೆ**, ಬಾಳಿಕೆ₂ (ನಾ). ೧. ಹುಡುಗಿ; ಬಾಲಕಿ: ಬಾಲಿಕೆ[ಪಾಠಾಂ. ಲಕಿ]ಮುಗ್ಧೆ ತಕ್ಕುದಱಿಯಳ್ ಪಲರಂ ಪೆಱಗಿಕ್ಕಿ ಸೂಡಿದಳ್ ಮಾಲೆಯುಂ (ಶಂಠಾಸಾ. ೩-೯೭). ೨. ಚಿಕ್ಕ ಗಾತ್ರದ ಏಲಕ್ಕಿ. ೩. ಉಸುಕು; ಮರಳು. ೪. ಶ್ರೇಷ್ಠವಾದ ನೆಲ್ಲಿಯ ಮರ; ರಾಯನೆಲ್ಲಿ; ಅರನೆಲ್ಲಿ (?): "ಅರನೆಲ್ಲಿ ಬಾಲಿಕೆ[ಪಾಠಾಂ. ಲಕಿ]ಯೆನಿಸಿಕ್ಕು" (ಮಂಗರಾ. ೩೬-೦೯). **ಬಾಳಿಕೆ₂**: ೧. ಶಿಖಂಡಿಯು ಕೇಳಿ ನಮ್ಮಾ ಮಾನ ಹೋಗುವುದೆನುತ ರಾತ್ರಿಯಲಿ ಅಲಯುವ ಬೀಳ್ಕೊಂಡು ಗಹ್ವರದೊಳು ವನಕ್ಕೆ ತರಲು ತುಂಬುರು ಬಾಳಿಕೆಯ ಕಂಡುದು ದುಗುಡವಿದೇನು ಹೇಳೆಂದ (ಸಂಶಶ. ೦೩-೭೦). [ಸಂ. ಬಾಲಿಕಾ]

**ಬಾಲಿಶ** (ಗು). ೧. ಮಗುವಿಗೆ ಸಂಬಂಧಿಸಿದ; ಶಿಶುಸಹಜವಾದ; ಬಾಲಸ್ವಭಾವದ. ೨. ದಡ್ಡತನದ; ಜ್ಞಾನಹೀನವಾದ: ಹೀಗೆ ಸ್ಥಿರವಾಗಿ ಬಂದ ಬಾಲಿಶ ಭಾವನೆಗಳ ಪುಂಜವಾದ ಅಂತಃಕರಣವು ವ್ಯಕ್ತಿ ವ್ಯಕ್ತಿಗೂ . . . ಕಾಲಕಾಲಕ್ಕೂ ಬೇರೆಯಾಗುತ್ತದೆ (ಏಶಾಪಾ. ೩೦); ಮೊದಲು ಅರಿವೃ, ವಿಚಾರಶಕ್ತಿ ಎಂಬುದೇ ಇಲ್ಲ. ಕೇವಲ ಬಾಲಿಶ ಕಲ್ಪನೆ; ಒರಟು ತರ್ಕ (ಭಿನ್ನಶ್ರ. XXIX ಪ್ರಸ್ತಾವನೆ). ೩. ಎಚ್ಚರಗೇಡಿಯಾದ; ಅಜಾಗರೂಕತನದ. ೪. ಮಕ್ಕಳಾಟಿಕೆಯ; ಹುಡುಗುತನದ. (ನಾ). ೫. ಮಗು; ಶಿಶು: "ಮಗುವಿನಲ್ಲಿಯುಂ ಬಾಲಿಶನೆಂಬುದು" (ಶಬ್ದಮ. ೦೩೪-೨೦); "ಬಾಲನೊಳ್ ಬಾಲಿಶನೆಂದೆಂಬುದು" (ಮಂಗರಾ. ೧೪೦-೦೦). ೬. ಮೂಢ; ತಿಳಿಗೇಡಿ; ಮೂರ್ಖ: ಅಜ್ಞಜನಂಗಳ್ ಬಾಲಿಶರೆಂದಜಿತರ್ ಪೇಳ್ವುಂ (ವಿಷ್ಣುಪು. ೧-೪-೦೩೪); ಬಾಲಿಶರ ನುಡಿಗಳಿಂ ಮರುಳಾಗಿ ಸಂತತಿಯ ಕಾಲವಶಗೆಯ್ಯಲೇಂ ಜೀಯ (ಪಂಕಾರಾ. ೬-೪-೨೦); ಬಾಲ ಬಾಲಿಶರು ಗುರುಪೀಠಗಳನೇರಿದರು (ಹುಚೋರ. ೩೪-೨೨). ೭. ಹುಡುಗಾಟ; ಮಕ್ಕಳಾಟ: ಎನ್ನ ಮೇಣೆನ್ನ ಪೊನ್ನ ಪಿಳುಕಿನ ಕೋಲ ಬಾಲಿಶವಮಂ ನೋಡು (ರಾಮಾಶ್ವ. ೦೬೦-೧೨). ೮. ದಿಂಬು; ಮೆತ್ತೆ. [ಸಂ.]

**ಬಾಲಿಶತೆ** (ನಾ). ದಡ್ಡತನ; ಮೂಢತೆ: ಜಗತಿಯುದ್ದಂಡ ರಣಪಂಡಿತ ಸುರೇಂದ್ರಸುತನಿಗೆ ಸಿಲುಕಿದೀ ರಾಜ್ಯ ತನಗೆಂತಡಸಿತೆಂಬ ಬಗೆಯನರಿಯದೆ ಪೋದ ಬಾಲಿಶತೆಗೊಳಗಾದನುಪಕೃತಿಯನೆಣಿಸದಾದ (ಪಂಕಾರಾ. ೪-೦೪-೬). [ಸಂ. ಬಾಲಿಶತಾ]

**ಬಾಲಿಶತ್ವ** (ನಾ). = ಬಾಲಿಶತೆ: ಎಲೆ ಮೂಢ ಬಾಲಿಶತ್ವದ ನುಡಿಗಳಿಂ ಮನ ಬಂದ ತೆರದೊಳುಸಿರಿದೆ (ಪಂಕಾರಾ. ೬-೨೬-೬೭). [ಸಂ.]

**ಬಾಲು** (ನಾ). ರಬ್ಬರು, ಪ್ಲಾಸ್ಟಿಕ್ಕು ಮುಂತಾದುವುಗಳಿಂದ ಮಾಡಿದ ಆಟದ ಗುಂಡನೆಯ ವಸ್ತು; ಚೆಂಡು: ಬಾಲು ನಮ್ಮ ಗೋಲಿನ ಒಳಗೆ ಬಂದು ಬಿದ್ದಿತ್ತು (ಶಾರೆಮ. ೭೭). [← ಇಂ. Ball]

**ಬಾಲೆ**, ಬಾಳೆ₃ (ನಾ). ೧. (ಹದಿನಾರುವರ್ಷದ ಒಳಗಿನ) ಹುಡುಗಿ: ವಯಸವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೋಲೆಯೆಂದಿಂತು ಧರಿತ್ರಿಯೊಳಪ್ಪರ್ ನಾಲ್ವರ್ ಕಾಂತೆಯರ್ (ಮದನ. ೭-೦); ಸಲೆ ಬರಿಸವಿಶಾರಾಜಜಲಿ ಬಾಲೆ (ಬಸವ. ೫-೪). ೨. ಯುವತಿ; ತರುಣಿ: ಬಾಲೆಗೆ ಗುಣಕಾಂತಿ ವಯೋಲೀಲೆಗೆ ವಿನಯಪ್ರಧಾನಗುಣಗಣಗೆಣೆ ಭೂಪಾಲಂ (ಶಾಂತಿಪು. ೫-೦೫೫); ಬಾಲೆಯು ಕಡೆಗಣ್ನೋಟವೆ ಸಾಲದೆ ನನೆಗಣೆಗಳೇವುವು (ಶಂಠಾಸಾ. ೩-೪೪); ಕೇಳೆಲೆ ಬಾಲೆ! ಬಾಲೇಂದು ಫಾಲೆ! (ರಾಮಾಶ್ವ. ೭-೦). ೩. ಮಗು; ಶಿಶು: ಬಾಲೇನ ತೊಟ್ಟಿಲಿಗೆ ಮಲಗಿಸಕ್ಕೆ ಮುಂಚೆ ಮೈಗೆ ಎಣ್ಣೆ ಹಚ್ಚದೆ ಅಂತಾ ಕಾಣ್ದದೆ (ಮಲೆಮ. ೪೬೦). ೪. ಒಂದು ಬಗೆಯ ಮಲ್ಲಿಗೆ. ೫. ಒಂದು ಬಗೆಯ ಸಸ್ಯ: "ಬಾಲೆ, ಸೊಟಗೆ, ಸೋಟಿಗೆ" (ನಸ್ವಾ. ೯೯); ಸೊಟಗೆ, ಬಾಲೆ (ವೈಶಿಶಿ. ೫೮-೧೦೬೩). ೬. ಸಣ್ಣಗಾತ್ರದ ಏಲಕ್ಕಿ. ೭. ಅರಿಸಿನ. ೮. ತೆಂಗಿನ ಕಾಯಿ. **ಬಾಳೆ₃**: ೨. ಕೇಳಿರೆ ಕಂಕಭಟ್ಟನೆ ಯುಧಿಷ್ಠಿರನಾ ವಲಲಂ ವೃಕೋದರಂ ಬಾಳೆಯುರಂ ದಲಾಡಿಪ ಬೃಹಂದಳೆ ಫಲ್ಗುಣಂ (ಪಂಪಭಾ. ೯-೬); ತೋಳ ನಖವ್ರಣಕೆಱಗಿ[ದ] ಬಾಳೆಗಳ ನೋಟ್ಟಿ ಬಾಳೆ ಕಣ್ಮೀನೆಂಬಾಳೋಳಮನೊಡರಿಸೆ ಸಲೆ ನೃಪಮಾಳೆಗೆ ಪಡೆದಳ್ ಮೃಗಾಕ್ಷಿ ಪರಿಸಂಭ್ರಮಮಂ (ಶಾಂತಿಪು. ೮-೪೩). [ಸಂ. ಬಾಲಾ]

**ಬಾಲೆಮರ** (ನಾ). ಒಂದು ಬಗೆಯ ಮರ: "ಬಾಲೆಮರ, ಮಲ್ಲಲಿ, ಅಬನಾಸ, ಕರೀಮರ" (ನಸ್ವಾ. ೫೦); (ವೈಶಿಶಿ. ೩೦-೫೪೯). [ಬಾಲೆ+ಮರ]

**ಬಾಲೆವೆಣ್ಣು** (ನಾ). = ಬಾಲೆ ೨: ತೋಳೊಳೊಪ್ಪುವ ಸರ ಶಾತಿ ಹೊಂಬಳೆಗಳ ಬಾಲೆವೆಣ್ಣುಗಳ್ಳಿದಿದರು (ಕಂಸವ. ೨೦-೦೩).

**ಬಾಲೆವೆಂಗಳು** (ಬಹುವ): ಹೊಸಪರೆಯುವ ಹೊಮ್ಮಿನ ಬಾಲೆವೆಂಗಳು ಜಸವಡೆದೆಸೆದರೇನೆಂಬೆ (ಕುಸವ. ೨೪-೪೦). [ಬಾಲೆ+ಪೆಣ್ಣು(<ಪೆಣ್)]

**ಬಾಲೇಂದು** (ನಾ). = ಬಾಲಚಂದ್ರ ೧: ಕೇಳೆಲೆ ಬಾಲೆ! ಬಾಲೇಂದು ಫಾಲೆ! (ರಾಮಾಶ್ವ. ೭-೦). [ಸಂ.]

**ಬಾಲೇಂದುಗೆಱೆ** (ನಾ). [ಕಾಮಶಾ] ಬಾಲಚಂದ್ರನ ಆಕಾರದ ನಖಕ್ಷತದ ಗುರುತು; ಅರ್ಧಚಂದ್ರಾಕೃತಿಯ ನಖಕ್ಷತದ ಗುರುತು: ಒಪಳ ಗುರುಕುಚಯುಗಳವ ಪುಂಡ್ರೇಕ್ಷುಚಾಪ ಕಣ್ಣಿಟ್ಟು ನಿಟ್ಟಿಸಲು ಸ್ಥಾಪನೆವಡೆದಿರ್ದ ಬಾಲೇಂದುಗೆಱೆ ಸುಸ್ಪರೂಪವಾಗಿರ್ದುದೇನೆಂಬೆ (ಸೋಹತ. ೦೬-೫೦). [ಬಾಲೇಂದು+ಗೆಱೆ]

**ಬಾಲೇಂದುಧರ** (ನಾ). ಬಾಲಚಂದ್ರನನ್ನು ಧರಿಸಿದವನು; ಶಿವ: ಅಕ್ಕಱಿಂ ಬಾಲೇಂದುಧರನೊಳು ಪೊಕ್ಕು ಪೊಕ್ಕಲರ್ದಲರ್ದು ಕೂಡುತ ಸೊಕ್ಕಿ ತಲ್ಲಿಂಗದೊಳಗಿಂತು ವಿಲೀನನಾಗಿರ್ದು (ಚಾಪು. ೩೫-೪). [ಸಂ.]

**ಬಾಲೇಯ** (ಗು). ೧. ಬಲಿ ಕೊಡಲು ಯೋಗ್ಯವಾದ. ೨. ಮಕ್ಕಳಿಗೆ ಯೋಗ್ಯವಾದ, -ಉಚಿತವಾದ. ೩. ಕೋಮಲವಾದ; ಮೃದು

ಪಾದ. (ನಾ). ೪. ಕತ್ತೆ : "ಬಾಲೇಯಮಾ ಗರ್ದಭಂ ಚಕ್ರೀವತ್ಸರಂ ರಾಸಭಮ ಕತ್ತೆಯಕ್ಕುಂ" (ಮಂಗರಾ. ೫೩-೮). [ಸಂ.]

**ಬಾಲೇಯಶಾಕ** (ನಾ). ಒಂದು ಬಗೆಯ ಸಸ್ಯ : "ಹಂಚಿಕಾ . . . ಬಾಲೇಯಶಾಕಃ, ಬರ್ಬರಃ, ಪಂಡಕಃ — ಈ ಭಾರಂಗೀ ಹೆಸರುಗಳು" (ಸಿದ್ಧಾಂತಿ. ೧೩೨). [ಸಂ.]

**ಬಾಲೋತ್ತರ** (ನಾ). "ಬಾಲಿಶನುಡಿ, ಹುಡುಗತನದ ಮಾತು" (ಮೋಳಮಾ.ಸ. ಕೋಶ) : ಹಸಿವ ಕೊಂದೆನೆಂದು ಘೃತ ಹಾಲು ಸಕ್ಕರೆ ಹಣ್ಣುಕಾಯಿ ಮುಂತಾದ ಫಲಾಹಾರವ ಕೊಂಡು ಫಲಕ್ಕೆ ಬಾರೆವೆಂಬ ಬಾಲೋತ್ತರವ ನುಡಿದು ಬಾಲಹರಾದೆವೆಂಬ ಗೆಲ್ಲಗೂಳಿಗಳು ಕೇಳಿರೋ (ಮೋಳಮಾ. ೫೭-೨೩೯). [ಸಂ.]

**ಬಾಲ್ಕನಿ** (ನಾ). ೧. ಮನೆಯ ಗೋಡೆಯಿಂದ ಮುಂಚಾಚಿಕೊಂಡು, ಕಂಬಗಳ ಆಧಾರದಿಂದ ನಿಂತಿರುವ (ಕಟಕಟೆಯುಳ್ಳ) ಭಾಗ : ರಾಮಕೃಷ್ಣ ಹಾಗು ಜಾನಕಿಯರು ತಮ್ಮ ಕೋಣೆಯ ಹೊರಗಿನ ಬಾಲ್ಕನಿಗೆ ಬರುವಾಗ ಅತ್ಯಂತ ಉಲ್ಲಸಿತ ಮನಃಸ್ಥಿತಿಯಲ್ಲಿದ್ದರು (ಅಬೋಲೀ. ೦೨೬): ರೇಣು ಅಲ್ಲಿಂದ ಮೇಲಕ್ಕೆದ್ದು ಬಾಲ್ಕನಿಯೆಡೆಗೆ ಸರಿದುಹೋದಳು (ಹೇಮಂತ. ೨೪೩). ೨. ಚಿತ್ರಮಂದಿರ ಅಥವಾ ನಾಟ್ಯಮಂದಿರಗಳಲ್ಲಿ ಪ್ರೇಕ್ಷಕರು ಕುಳಿತುಕೊಳ್ಳುವುದಕ್ಕಾಗಿ ನಿರ್ಮಿಸಿದ ಮೇಲಟ್ಟದ ಪ್ರದೇಶ : ಶ್ರೀಧರ ಬಾಲ್ಕನಿಗೆ ತಾನೇ ಟಿಕೀಟು ತೆಗೆದ (ದೂಜೆಟ್ಟಿ. ೦೦೬).
[← ಇಂ. Balcony]

**ಬಾಲ್ದಿ** 'ಬಾದಲಿ$_1$' ನೋ.

**ಬಾಲ್ಯ** (ನಾ). ೧. ಚಿಕ್ಕಂದು ; ಎಳವೆ ; ಶೈಶವ : ಚಕ್ರಿಗೆ ಬಾಲ್ಯಕ್ಕನು ರೂಪಕ್ರಮವಾಯ್ತೆನಿಸಿ ಮುತ್ತಿನುಡೆವಣಿಯೆಸೆಗುಂ (ಜಗವಿ. ೩-೪೬); ಹುಟ್ಟಿದ ಒಂದು ವರ್ಷ ತೊಡಗಿ ಹದಿನಾರು ವರ್ಷ ಪರ್ಯಂತಕ್ಕೂ ಬಾಲ್ಯವೆನಿಸಿಕೊಂಬುದು (ಸಕಪ್ಯ. ೦೫). ೨. ಹುಡುಗುತನದ ಅವಿವೇಕ : ಮೂರ್ಖತನ. ೩. ವಿನಯ ; ನಮ್ರತೆ. [ಸಂ.]

**ಬಾಲ್ಯವಿನೋದ** (ನಾ). = ಬಾಲಕೇಲಿ ೧ : ಭವದೀಯಮನೋಹರಬಾಲ್ಯ ವಿನೋದಾಮೃತದೊಳೆಯ್ದೆ ತೀವಿದ ಮತ್ಸ್ವಾಂತವನಿಂತೀ ವಿಷದಿಂ ತೀವುವುದೇ ಶ್ರೀವತ್ಸವತ್ಸವತ್ಸಾ (ಜಗವಿ. ೩-೯೨). [ಸಂ.]

**ಬಾಲ್ಯವಿವಾಹ** (ನಾ). ಎಳೆಯ ವಯಸ್ಸಿನಲ್ಲಿ ಮಾಡುವ ಮದುವೆ ; ವಯಸ್ಸಿಗೆ ಬರುವ ಮುನ್ನವೇ ಮಾಡುವ ಮದುವೆ : ಹಿಂದೆ ಬಾಲ್ಯವಿವಾಹಗಳು ನಡೆಯುತ್ತಿರಲಿಲ್ಲ (ಶಾರದ. ೩೯೦); ಬಾಲ್ಯವಿವಾಹ ಒಳ್ಳೆಯದಲ್ಲ (ಸಿಶಉ. ೬೪). [ಸಂ.]

**ಬಾಲ್ಯಾವಸ್ಥೆ** (ನಾ). ೧. ಚಿಕ್ಕಂದು; ಬಾಲ್ಯಕಾಲ : ಬಾಲ್ಯಾವಸ್ಥೆಯ ಪ್ರಾರಂಭದ ಹೊತ್ತಿಗೆ ಜ್ಞಾಪಕಶಕ್ತಿ ತಕ್ಕಮಟ್ಟಿಗೆ ಬೆಳೆದಿರುತ್ತದೆ (ಕವಿಕಜೀ. XII, ೬೬). ೨. ಪ್ರಾರಂಭದ ಹಂತ, –ಸ್ಥಿತಿ : ಈ ಸಂಘದ ಕಾರ್ಯಯೋಜನೆಗಳು ಇನ್ನೂ ಬಾಲ್ಯಾವಸ್ಥೆಯಲ್ಲಿವೆ (ರೂಢಿ).
[ ಸಂ. ಬಾಲ್ಯಾವಸ್ಥಾ ]

**ಬಾವ** 'ಭಾವ$_1$' ನೋ.

**ಬಾವಂಚಿ** 'ಬಾಗುಜಿ' ನೋ.

**ಬಾವಂಜಿ** 'ಬಾಗುಜಿ' ನೋ.

**ಬಾವಂತಿ** 'ಭವಂತಿ' ನೋ.

**ಬಾವಟೆ** 'ಬಾವುಟ' ನೋ.

**ಬಾವಡಿ** (ನಾ). ಸೋಪಾನವುಳ್ಳ ಅಗಲವಾದ ಬಾವಿ ; ಹೊಕ್ಕರಣೆ ; ಪುಷ್ಕರಿಣಿ : 'ಬಾವಡಿದಸವಂದ' ಪರಾ.
[ ←ಹಿಂ. ಮರಾ. ಬಾವಡೀ, ಬಾವಲೀ ]

**ಬಾವಡಿದಸವಂದ** (ನಾ). "ಬಾವಿ, ಕೊಳ ಮುಂತಾದವನ್ನು ಅಗೆಯಿಸುವ ಹಾಗು ಅವುಗಳನ್ನು ನಡೆಸಿಕೊಂಡು ಹೋಗುವ ಕಾರ್ಯಕ್ಕಾಗಿ ಕೊಡಲಾಗುತ್ತಿದ್ದ ದ್ರವ್ಯಾದಾಯ" (ಕಸಂಗ್ರಾ. ೯೨). 'ದಶಬಂಧ' ಪರಾ. [ ಬಾವಡಿ + ದಸವಂದ (<ದಶವಂಧ) ]

**ಬಾವಡೆ** (ನಾ). ಮಣ್ಣಿನ ಮುಚ್ಚಳ : ಶಿವಮ್ಮ ಒಂದು ಬಾವಡೆಯಲ್ಲಿ ಗಂಜಿಯನ್ನು ಎತ್ತಿಕೊಂಡು ಹೊರಗೆ ಬರುತ್ತಾನೆ (ಮೊಮಗು. ೬೨).
[ ←ತುಳು. ಬಾವಡೆ ]

**ಬಾವಣಯ್ಯ** (ನಾ). ಒಬ್ಬಾತನ ಹೆಸರು : ಬರೆದಂ ಬಾವಣಯ್ಯಂ (ಎಕ. I, ೨೮-೮೭ ; 944). [ ? + ಅಯ್ಯ$_{61}$ ]

**ಬಾವಣಿಕೆ** (ನಾ). ಆದರ ; ಗೌರವ : ಬಾವಣಿಕೆಯಿಲ್ಲದ ನಂಟರ ಮನೆಗೆ ಹೋಗಬಾರದು (ರೂಢಿ). [< ಭಾವ$_2$]

**ಬಾವಣಿಸು** (ಕ್ರಿ). ಆದರಿಸು ; ಗೌರವಿಸು : ಇಂಕರನಾವರೂ ಬಾವಣಿಸ ಬೇಕಲ್ಲ ನನ್ನ ಮಾತಾ ? (ಸರ್ವಮಂ. ೦೭). [ಬಾವಣಿಕೆ + —ಇಸು$_1$]

**ಬಾವನಂಟ** (ನಾ). ಸೋದರಿಯ ಗಂಡ ; ಭಾವ : ಬಾವನಂಟ ಬಂದಾಗ್ಲೂ ಹಾಲು ಚೆಲ್ಲೋದು ಬಿಡಲಿಲ್ಲ (ಗಾದ).
[ಬಾವ (< ಭಾವ$_1$) + ನಂಟ]

**ಬಾವನ್ನ$_1$** (ನಾ). ಒಂದು ಸಂಖ್ಯೆ ; ಐವತ್ತೆರಡು : ತಿಳಿವುದಾಯತಾಂ ಬಕಿಯ ಬಾವನ್ನಾದಿ ಸಂಜ್ಞೆಯಿಂದೆನುತಲಾಕೃತಿಯುಗದೊಳು . . . ಅವ ರ್ಗಳು ಯೋಚಿಸಲು ಬಾವನ್ನ ತತ್ಕಳಾರೂಪರಹರಾ (ವೀಕೈಪು. ೭-೬-೦೭).

ಬಾವನ್ನಮೂರ್ತಿ = ಶಿವನ ಐವತ್ತೆರಡು ಮೂರ್ತಿಗಳು : ಸೃಷ್ಟಿಗಳ ಸವಿಸಯದ ಬಾವನ್ನಮೂರ್ತಿಗಳ ಭೇದಮಂ ನಂಜುಂಡಮೂರ್ತಿ ನೋಡೆ ವಿವರಿಸಿದನಾ ಹಲಗೆಯಾರ್ಯನು (ವೀಕೈಪು. ೦-೬-೪೯). ೫ ಸಾದಾಖ್ಯಗಳು ೫, ಶಿವನ ಅಷ್ಟತನುವಿನ ಅಧಿದೈವಗಳು ೮, ಶಿವನ ಲೀಲಾ ಮೂರ್ತಿಗಳು ೨೫. ರುದ್ರರು ೧೧, ಅವಯವಮೂರ್ತಿಗಳು ೩–ಹೀಗೆ ೫೨ ಕಲೆಗಳು ಅಥವಾ ಮೂರ್ತಿಕಲೆಗಳೆಂದು ವೀಕೈಪು. ೧–೬–೪೪ರಲ್ಲಿ ಹೇಳಿದೆ. ಬಾವನ್ನರು = "ಬುದ್ಧಿಶಾಲಿಗಳು, ವೀರರು" (ಶಿವಗೀ. ಕೋಶ. ೪೪೫) : ಕಣ್ಣಾರೆ ಕಂಡೆ ನಾ . . . ಅಘಹರರೂಪಾಗಿ ಅಗಣಿತವಹ ಘನಮಹಿಮರನು ಬಗೆಗೊಳ್ಳದೆ ಬಾವನ್ನರ ಸಂಗವನೊಗೆದು ಈಡಾಡುವ ಓಜೆವಂತರನು (ಶಿವಗೀ. ೦೫೩-೭೮೫); "ಐವತ್ತೆರಡು ಅಕ್ಷರ ಗಳು" (ಶಿವಗೀ. ವ್ಯಾಖ್ಯಾ. ೪೨೬).
[ < ಪ್ರಾ. ಬಾವನ್ನ. ಬಾವಣ್ಣ. / ಹಿಂ. ಬಾವನ : ಮರಾ. ಬಾವನ. ಬಾವನ್ನ]

**ಬಾವನ್ನ$_2$** (ನಾ). (ಉತ್ತಮಬಗೆಯ) ಚಂದನ : ಶ್ರೀಗಂಧ : "ಸಿರಿಕಂಡಮೆಂದುಂ, ಬಾವನ್ನಮೆಂದುಂ ಮಲಯಜಂ" (ಕಶಾ. ೫೦-೭೦) ; ಬಾವನ್ನದ ವೃಕ್ಷ ಊರೊಳಗಿದ್ದಡೇನು ಅಡವಿಯೊಳಗಿದ್ದಡೇನು ಪರಿಮಳ ವೊಂದೆ (ಚನ್ನವ. ಕ. ೪೬-೦೦೮) ; ಜಾತಿಬಾವನ್ನದಲಿ ಸರ್ಪದ ಭೀತಿ ಸತ್ಪುರುಷರಿಗೆ ದುರ್ಜನಭೀತಿ (ಕುಮ್ಮಾಅ. ೮-೪೯).
[ ← ಮರಾ. ಬಾವನ್ನ. ಬಾಪನ. ಬಾವನಾ]

**ಬಾವನ್ನವೀರ** (ನಾ). ೧. ಐವತ್ತೆರಡು ಸಂಖ್ಯೆಗಳಿರುವ ದೇವತೆ ಗಳ ಒಂದು ಗುಂಪು, –ದೇವತಾಸಮೂಹ. ೨. ಮಹಾವೀರ ; ಪರಾಕ್ರಮಿ : ಅಷ್ಟಾದಶಪಟ್ಟಣಾಧಿಷ್ಠಿತ ಪಂಚಮಟ್ಟಗಾದಿ ಬಾವನ್ನ ವೀರಂ ಶಾಸನಪಟ್ಟಸಾಲಿಗಸಮುಚ್ಚಯಮುದಿತಲಲಾಟಪಟ್ಟಂ ವೈರಿಘರಟ್ಟಂ (ಸೌಇಇ. IX–i, ೭೮-೮೨; 1045) ; ಏಂದೊರೆಯುಸ್ಸೆರ್ಡಿಂಬದ ನಾಡೆಯ ಬಾವನ್ನವೀರರೊಳ್ಮಚ್ಚರದಿಂ ಕಾದುವಗಾರ್ (ಕಇಅ. ೯೭-೪-೫೩ ; 12ನೆಯ ಶತ) ; ಬಾವನ್ನವೀರ ಕಂಸನ ಕಡುಗೈಗೇಳಿದಾ ವಸುಧಾಮಂಡಲದ ಚಾವಡಿ ಚಾವಡಿಯೊಳಗುಳ್ಳ ವೀರಭಟಾವಳಿ ಬಂದು ಸೇರಿದುದು (ನೇಮಿಸಂ. ೦೪-೨).
[← ಹಿಂ. ಬಾವನಬೀರ ; ಮರಾ. ಬಾವನ್ನವೀರ ]

**ಬಾವರಿ** (ನಾ). [ಜೈನ] (ದುಂಬಿಯು ಮಧುವಿನ ಸಂಗ್ರಹಕ್ಕಾಗಿ ಹೂಗಳನ್ನು ಹುಡುಕಿಕೊಂಡು ಸುತ್ತುವಂತೆ) ಜೈನಮುನಿಗಳು ಭಿಕ್ಷೆಗಾಗಿ ಶ್ರಾವಕರ ಮನೆಗಳನ್ನು ಕುರಿತು ಹೋಗುವುದು ; ಚರಿಗೆ ಹೋಗುವುದು; ಮಾಧುಕರಿ : ಜಿನಮುನಿಚರ್ಯಾಯೋಗ್ಯಮಲ್ಲದ ಕಾಲದೊಳ್ ಭಾ[ಬಾ]ವರಿಯುಂ ನೋಡಿ ತಾಂ ಭೋಜನಮಂ ಮಾಳ್ಪ ಕಾಲಾತಿಕ್ರಮಮುಂ (ತತ್ತ್ವಸ್ರ. ೨೬೪) ; ಬನಮೆ ಬನಕ್ಕೆ ಬಾವರಿಗೆ ಬಂದವೊಲಾದುದು ತಂಡತಂಡದಿಂ . . . ಸಾಧುಜನಸಂಗಸಮಾಗಮನಪ್ರಪಂಚದೊಳ್ (ಅನಂತ. ೩-೩೦) ; ಅರಸನಸಾಜ್ಞೆಯಿಂದರಸಿ . . . ಯತಿಗಳ್ಗೆ ನಮೋಸ್ತುಗೆಯ್ದು ಬಾವರಿಯನೊಡರ್ಚವೇಳ್ಕುಮೆನೆ (ಧರ್ಮಾಮೃ. ೯-೮).

[ < ಸಂ. ಭ್ರಾಮರೀ ]

**ಬಾವರಿಗೊಡು** (ಕ್ರಿ). ಚರಿಗೆಗಾಗಿ ಹೊರಡು : ಮಾಧುಕರಿವೃತ್ತಿ ಮಾಡು: ಆ ಸುರವಂದಿತ ಕೈಯೆತ್ತಿ ನಾನಾದೇಶಗಳಲ್ಲಿ ವಿಹರಿಸಿ ಕೌಶಂಬಿಪುರಕೆ ಭಾ[ಬಾ]ವ[ಪಾಠಾಂ. ಭವಾ]ರಿಗೊಟ್ಟು ವೃಷಭದತ್ತಸೆಟ್ಟಿ ಮನೆಯೊಳಗಿರ್ದ (ವರ್ಧಮ. ೧೧-೬೫). [ಬಾವರಿ + ಕೊಡು₁]

**ಬಾವರಿಯಿಡು** (ಕ್ರಿ). = ಬಾವರಿಗೊಡು : ಸಾಗರದತ್ತಮುನಿಗಳು ಲೋಕವಂದ್ಯರು ಭಿಕ್ಷೆಗೆಂದು ಆ ಕೇರಿಯೊಳು ಬಾವರಿಯಿಡಲ್ (ಜೀವಂಧರ. ೬-೨೦). [ಬಾವರಿ + ಇಡು₁]

**ಬಾವರಿವುಗು** (ಕ್ರಿ). = ಬಾವರಿಗೊಡು : ನಿನ್ನ ತಂದೆವಿರ್ . . . ಪೊಟಲೊಳಗೆ ಚರಿಗೆವೊಕ್ಕು, ಬಾವರಿವುಗುತ್ತುಂ[ಪಾಠಾಂ. ತಿರಿಯುತ್ತುಂ, ತಿರುಗುತ್ತುಂ] ಬಂದು ನಿನ್ನ ಮನೆಯುಂ ಪೊಕ್ಕು ಪೂಜಿಮುಟ್ಟು ಪೋದರ್ (ವಡ್ಡಾರಾ. ೪೬-೨೯). [ಬಾವರಿ + ಪುಗು (< ಪೊಗು)]

**ಬಾವಲ್** 'ವಾವಲ್' ನೋ.

**ಬಾವಲಿ₁** 'ವಾವಲ್' ನೋ.

**ಭಾವಲಿ₂** 'ಬಾವುಲಿ₂' ನೋ.

**ಬಾವಲಿ₃** (ನಾ). ಒಂದು ಬಗೆಯ ತೆರಿಗೆ : ಹರುಗೋಲು ಹಣ ಬಾವಲಿ ಬಿರಾಡ . . . ಸರ್ವಬಾಧೆ ಪರಿಹಾರಕ್ಕೆ ಗದ್ಯಾಣ ಗ ೧೧ ವರಹ (ಮೈಆರ್. ೧೯೩೪, ೨೬-೨೨; 1430). [?]

**ಬಾವಲು** 'ವಾವಲ್' ನೋ.

**ಬಾವಾ** (ನಾ). ಊರೂರು ಅಲೆಯುವ ಜಟಾಧಾರಿಯಾದ ಜೋಗಿ,-ಬೈರಾಗಿ : ಈ ಬಂಕಗಳ ಉಪಯೋಗವನ್ನು ಭಿಕ್ಷುಕರು ಬಾವಾ ಬೈರಾಗಿಗಳು ಇನ್ನೂ ಮಾಡಿಕೊಳ್ಳುತ್ತಾರೆ (ಹಬ್ಬ. ೯) ; ಮುಂದೆ ಹೋಗುವಾಗ ಒಬ್ಬ ಬಾವಾ ಭೆಟ್ಟಿ ಆದನಂತ (ಅಮಾ. ೮೮). [←ಮರಾ. ಬಾವಾ]

**ಬಾವಾಜಿ** (ನಾ). = ಬಾವಾ : ನಾನು ಅನೇಕ ಸಲ . . . ಭಿಕ್ಷುಕರನ್ನು ಬಾವಾಜಿಗಳನ್ನು ನೋಡಿದ್ದೇನೆ (ಗಾಳಿಗು. ೬೫); ಬಾವಾಜಿಗಳಂತೆ ಜಟಾಧಾರಿಯಾದೆನು (ಇಂದುಮು. ೮೨). [←ಮರಾ. ಬಾವಾಜೀ]

**ಬಾವಿ, ಭಾವಿ₁, ವಾವಿ₁** (ನಾ). ಭೂಮಿಯ ಒಳಗಿರುವ ನೀರನ್ನು ತೆಗೆದುಕೊಳ್ಳುವುದಕ್ಕಾಗಿ ಅಗೆದು ಮಾಡಿದ ಕೂಪ : "ಅಂಧುಃ, ಕೂಪಃ—ಈ ೨ ಬಾವಿ" (ಹಲಾಯು. ೧೧೩-೬೨) ; ನೀರಂ ತರಲ್ಕೆಂದು ಬಾವಿಗೆವೋದಾಕೆಯುಂ ಕಂಡರಸನೆಲೆ ಕೂಸೆ ನೀರಂ ಕುಡಿಯಲೆಱೆಯಾ ಎಂದೊಡೆ (ವಡ್ಡಾರಾ. ೧೧೧-೨೫) ; ರಸರಸದ ಬಾವಿ ಮನೆಮನೆಗೆ ಬೇಱೆ ಕಿಸುಗಲ್ಗಳ ರಜದ ಕಣೆವೆರಸು ತೋಱೆ (ಪಂಪಶ. ೪-೧೧); ಮುಱಿಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಕೆ ನೀರ್ವೊಯ್ದಂ (ಪಂಚತಂ. ೧೨೬-೨). **ಭಾವಿ₁** : ಅನುರಾಧೆ ಭಾನು . . . ಉತ್ತರೆಯೆಂಬಿನಿತಱೊಳಂ ವಿಧಿಯಿಂ ವರುಣನನರ್ಚಿಸಿ ಭಾವಿ ತೋಡೆ ಶುಭಮಂ ಮಾಳ್ಕುಂ (ಲೋಕೋಪ. ೫-೨); ಎಲ್ಲೆಡೆಯೊಳಂ . . . ಮಱೆ ಸುರಿದೊಡಂ ನೀರ್ ಪುಣ್ಯಮಿಲ್ಲದ ಸ್ಥಾನಮಂ ಪರಿಹರಿಸಿ ಬಂದು ತೋಱೆ ಕೆಱೆ ಭಾವಿಗಳೊಳ್ ತೀವುವಂತೆ (ಧರ್ಮಾಮೃ. ೬-೧೨೬). **ವಾವಿ₁** : ವಾವಿಯುಂ ಬಡಗ ತೋಂಟಿ ೧ (ಕೌಇಇ. IX-i. ೨೦೦-೩೦ ; 1125).

**ಬಾವಿ ಮುಟ್ಟುವದು** = ಬಾಣಂತಿಯು ಹತ್ತು ದಿನ ಕಳೆದ ಮೇಲೆ ಮೈಲಿಗೆಯನ್ನು ಕಳೆಯುವುದಕ್ಕಾಗಿ, ಊರಿನ ಬಾವಿಯ ಕಟ್ಟೆಯ ಬಳಿಗೆ ಹೋಗಿ ಗಂಗೆಯ ಪೂಜೆ ಮಾಡುವುದು : "ಹಡೆದ ಮೇಲೆ ಬಾಣತಿಯು ಗಂಗೆಯ ಪೂಜಿಸುವದು" (ಜಾನಕೋ. ೨೨). **ಬಾವಿ ಮೆಟ್ಟುವದು** = ಬಾವಿ ಮುಟ್ಟುವುದು: "ಹಡೆದ ಮೇಲೆ ಬಾಣತಿಯು ಗಂಗೆಯ ಪೂಜಿಸುವದು" (ಜಾನಕೋ. ೨೨). 'ಪೊಱೆ ಮುಟ್ಟು' ಪರಾ. [<ಸಂ. ವಾಪಿ]

**ಬಾವಿಗಪ್ಪು** (ನಾ). (ಆನೆಯನ್ನು ಹಿಡಿಯಲು ತೋಡುವ) ಆಳವಾದ ಕುಳಿ ; ಬಾವಿಯಂತಹ ಹಳ್ಳ : ತೆರೆದ ಬಿಂಬಾಧರವು ನೃಪಮತಿಯ ಗಜಗತಿಗೆ ಸತಿಯುಗವ ಬಾವಿಗಪ್ಪಿನ ಕಾವಿಮಣ್ಣಾಗೆ (ಶ್ರೀರಾಮಪ. ೬೮-೩೯೬).

[ಬಾವಿ + ಕಪ್ಪು₃]

**ಬಾವಿಗೆ** (ನಾ). = ಬಾವಿ : 'ಪಟಿವಾವಿಗೆ' ಪರಾ. [<ಸಂ. ವಾಪಿಕಾ]

**ಬಾವಿದೋಡು** (ಕ್ರಿ). ಬಾವಿಯನ್ನು ಅಗೆ : ಕಿಚ್ಚಿಟ್ಟು ಬಱಿಕೆ ನಂದಿಸಲಿಚ್ಚೆಗದು ಬಾವಿದೋಡುವಂತಿರೆ ಕಣ್ಣಂ ಮುಚ್ಚಿ ಜಪಿಯಿಸುವೆ ರಾಘವ ನೆಚ್ಚಂಬಿಂ ಕಾಯಲಾರ್ಪುವೇ ದೇವತೆಗಳ್ (ಪಂಪರಾಮಾ. ೧೪-೧೧೧).

[ಬಾವಿ + ತೋಡು₁]

**ಬಾವು** (ನಾ). ೧. (ಪೆಟ್ಟು, ಖಾಯಿಲೆ ಮುಂತಾದುವುಗಳಿಂದ ಉಂಟಾಗುವ) ಊತ ; ಉಬ್ಬು ; ಶೋಫ : ತಗರಂ ಕೊಕ್ಕುಳಿ . . . ಹರಿದ್ರಾದ್ವಂದ್ವಮಿಾ ಪೇಟ್ಟು ಮರ್ದುಗಳಂ ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಮ್ಯಾವ ಬಾವುಗಳುಂ ತೀರ್ಚುಗುಂ (ಲೋಕೋಪ. ೯-೨೪೦); ನೊಸಲ ಬಿಸಿಗಣ್ಣನೇಱೆಂದು ಶಿವಲಿಂಗಮಂ ಮುಸುಕಿ ಬೆಳೆದುತ್ತಮಾಂಗ ವನು ಬಾವೆಂ[ಪಾಠಾಂ. ಹೆಂ]ದು . . . ಶಂಕಿಸಿ ನೋಡಲಮ್ಮದೊಯ್ಯನೆ ದೂರದಿಂದೆ ದೀವಿಗೆವಿಡಿದು ದಿಟ್ಟಿಸಿದರು (ಸಿದ್ಧರಾ. ೨-೪). ೨. ಹುಣ್ಣು ; ಕುರು ; ವ್ರಣ : ಪಿಡಿಯದು ದೋಷಮಿಲ್ಲದತಿನಿರ್ಮಲಮಪ್ಪೆಡೆಯಂ ಜಲೂಕನೋಗಡಿಸದೆ ಬಾವು ತರ್ದು ತುಱಿಯುಳ್ಳ ತ್ರಿದೋಷದ ತಾಣಮಂ ಕರಂ ಪಿಡಿವುದು (ಜೀವಸಂ. ಪ್ರ. ೧, ೨೩೯-೧೧); ನಾರುಬೇಳೆಸೊಪ್ಪು, ಕಕ್ಕೆಯ ತಿಗುಡು, ನವಣೆಅಕ್ಕಿ ಇವಂ ಅಕ್ಕಿಗಚ್ಚಿನಲ್ಲಿ ಅರೆದು ಪೂಸೆ ಬಾವು ಮಾಣ್ಗುಂ (ಖಗೇಂ. ೬೬). 'ಬಾಪು₁' ಪರಾ. [ಬಾ₁ + -ವು]

**ಬಾವುಂಜಿಗೆ** 'ಬಾವುಜಿಗೆ' ನೋ.

**ಬಾವುಗ** (ನಾ). ಗಂಡುಬೆಕ್ಕು ; ಗಡವಬೆಕ್ಕು : ಬಲುಕಾಲ ಮುದ್ದಿಸಿ ಕಲಿಸಿ ಮಾತುಗಳ ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು (ಪುರಂದ. ೪-೧೪೩-೪) ; ಮುಳಿಗೆ ಹಂದರ ಹೊಲ್ಲ ಗಿಳಿಗೆ ಬಾವುಗ ಹೊಲ್ಲ (ಸರ್ವಜ್ಞ. ೧೯೯೮).

[ದೇ.॥ ತೆಲು. ಬಾವುರು, ಬಾವುರುಗಾಂಡು, ಬಾವುರುಗಾಡು, ಬಾವುರು ಪಿಲ್ಲಿ, ಬಾವುರಂಬಿಲ್ಲಿ ; ಪರ್ಜಿ. ಬಾವ್ಕಿ ; ಕೂಇ. ಬಾಒಡಿ, ಬಾಒಲಿ; ಮರಾ. ಬಾವಗಾ]

**ಬಾವುಜಿ** 'ಬಾಗುಜಿ' ನೋ.

**ಬಾವುಜಿಗೆ, ಬಾವುಂಜಿಗೆ, ಬಾಹುಜಿಗೆ** (ನಾ). ಒಂದು ಬಗೆಯ ಸಸ್ಯ : ಕಾಡುಜೀರಿಗೆ : "ವಾಕುಚೀ—ಸೋಮವಲ್ಲಿ, ಬಾವುಜಿಗೆ" (ಓಷಧಿ. ೦೩೦); ಆವಿನಳೆಯೊಳ್ ಚಗಚ್ಚೆಯ ಬಾವುಜಿಗೆಯ ಬಿತ್ತನಲ್ಲಿ ನಿಶೆಗಂಧಕಮೆಂಬೀ ವಸ್ತುವನರೆದೊಂದಿರೆ ಲೇಪಿ(ಪಿ)ಸಿದೊಡೆ ಚಿಬ್ಬಿನುರ್ಬು ಪರ್ಬದೆ ಕಿಡುಗುಂ (ಲೋಕೋಪ. ೯-೧೦೨) ; ರಜನಿ, ಸುದಾರ್ವಿ ಬಾವುಜಿಗೆ ಬೇವಿನ ಬಿತ್ತು . . . ನಿಜದೆ ಸಮಾನಮಾಗರೆದು ಲೇಪಿಸೆ . . . ಉಗ್ರವಿಷಂ ಪರೆಗುಂ (ಖಮದ. ೦೩-೦೪). **ಬಾವುಂಜಿಗೆ** : "ಅವಲ್ಗುಜಃ, ಸೋಮರಾಜೀ . . . ಪೂತಿಫಲೀ—ಈ ೮ ಬಾವುಂಜಿಗೆ" (ನಾಚರಾ. ೧೦೯). **ಬಾಹುಜಿಗೆ** :

"ಅವಲ್ಗುಜ ; . . . ಪೂತಿಫಲೀ—ಅ ಬಾಹುಜಿಗೆಯು ಪೆಸರುಗಳು" (ಸಿದ್ಧಾಂತಿ. ೦೩೩). [ < ಬಾವುಜಿ ]

**ಬಾವುಟ**, ಬಾವಟೆ, ಬಾವುಟೆ (ನಾ). ಧ್ವಜ ; ಪತಾಕೆ ; ನಿಶಾನೆ : ಏರಿಸಿ, ಹಾರಿಸಿ ಕನ್ನಡದ ಬಾವುಟ (ಕನ್ನಬಾ. viii ಪ್ರಸ್ತಾವನೆ) ; ಎತ್ತಿ ಕಟ್ಟಿದ ಬಾವುಟಗಳು ಪಟಪಟನೆ ಹಾರುತ್ತಿದ್ದವು (ಕಣಾ. ೦೮). **ಬಾವಟೆ** : ಭಾರಿಗಾಳಿಯು ಬಾವಟೆ ಹಾರೆ, ಮೊಳಗಿಸಿ ಮಿಂಚು ಬೆಳಗಿಸಿ, ತೇರ ನಡೆಯಿಸಿ ಸರಿವೆನ್ನ (ಕಪು. ೩೦-೦೦). **ಬಾವುಟೆ** : ಎದುರಿಗೆ ನೋಡು ರಾಠೋರ ಸೇನಾಪತಿಯ ಕೆಂಪುಬಾವುಟೆಯು ಕಾಣುತ್ತದೆ (ಕೋಹಿನೂ. ೪೦).
[ ← ಮರಾ. ಬಾವಟಾ, ಬಾವಹಟಾ, ಬಾಹುಟಾ]

**ಬಾವುಟೆ** 'ಬಾವುಟ' ನೋ.

**ಬಾವುದಿವಸ** (ನಾ). "ಬಲಿ ಕೊಡುವ ದಿವಸ—ವ್ರತದ ಪಾರಣೆ ದಿನ" (ಜೀವಸಂ. ಕೋಶ) : ಅಷ್ಟೋಪವಾಸಮುರ್ಧಾಷ್ಟಮಿಯೆಂಬಿನ ವಷ್ಟಮಿಯಾ ಬಾ[ಪಾಠಾಂ. ನಾ]ವುದಿವಸಮಂ ನೋಂತೀವೆ ಜ್ಯೇಷ್ಠಪುತ್ರಕನೆ ಬಿಸುಡಿದಂ (ಜೀವಸಂ. ೨೩೨-೫೨). [ಬಾವು₁ + ದಿವಸ]

**ಬಾವುದೇವಸ** (ನಾ). = ಬಾವುದಿವಸ : ನಾಳೆ ಬಾವುದೇವಸ[ಪಾಠಾಂ. ಜಾವದಿವಸ, ಬಾಯುದೇವಸ, ಬಾಉದೇವಸ]ದೊಳ್ ದೇವತೆಗೆ ಪರಕೆಗುಡುವ ವಿಾತನನಿಂದಿನ ದೆವಸಂ ಕಾದಿರಿಂ (ಜೀವಸಂ. ೫೬-೩೬೮). [ಬಾವು₁ + ದೇವಸ]

**ಬಾವುಲಿ₁** 'ವಾವಲ್' ನೋ.

**ಬಾವುಲಿ₂**, ಬಾವಲಿ₂, ಬಾಹುಲಿ (ನಾ). ೧. ಕಾಲಿನ ಒಂದು ಆಭರಣ ; ಕಾಲ್ಗಡಗ ; ಪೆಂಡೆಯ : ಪಗಲ ಕೈದೀವಿಗೆಯ ಕಾಲ ಪಾಹೆಯ ಮೊತ್ತದ ಬಾವುಲಿಯ ಮಾಲೆದೊಡರ ಮಾಸಾಳ್ಗಳ ಮಂತಣದೊಳಂ (ಗಂಕ. ೨-೦೦೫ ವ) ; ಚರಣದ ತೊಡರ ಮೊಳಗಿನ ಬಾವುಲಿಗಳಲಿ ಘಣಘಣಧ್ವನಿಯ ನಿಡಿಯೊಡಲು . . . ದಾನವನವನಿ ಹಜ್ಜೆಗೆ ನೆಗ್ಗಲ್ಕೆ ತಂದ (ಕುವ್ಯಾದ್ರೋ. ೦೫-೪೪) ; ಕಾಲಲಿ ಕಿರುಗೆಜ್ಜೆ ನೀಲದ ಬಾವುಲಿ (ಪುರಂದ. ೦-೦೪೦-೫). ೨. ಕಿವಿಯ ಒಂದು ಆಭರಣ; ಕಿವಿಯ ಹಾಲೆಯ ಮೇಲುಭಾಗದಲ್ಲಿ ನೇತಾಡುವಂತೆ ಇಟ್ಟುಕೊಳ್ಳುವ ಮುತ್ತು, ಹರಳುಗಳನ್ನು ಜೋಡಿಸಿದ ಉಂಗುರದಂತಿರುವ ಚಿನ್ನದ ಆಭರಣ : ಮೌಕ್ತಿಕಗಳ ಮುಡಿವಲೆ ಮೆಟ್ಟಿವ ಬಾವುಲಿಯ ನಿಡುಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಪಿಡಗಾಗಿ ಮೆಚ್ಚಿವರರ್ತಿಯಲಿ (ಕಂಸವಿ. ೨೪-೪೨) : ಕಿವಿಯೊಳ್ ಮಾತನಾಡುವವೆಂಬಂತೆ ನವಿಲು ಗಿಣಿ ಬಾವುಲಿ ಗಳನ್ನಿಟ್ಟು (ಶಿಗಂಂ. ೨೦೦-೬) : ಕಿವಿಯಲ್ಲಿ ಹರಳು ಮುತ್ತಿನ ಬಾವುಲಿ (ತಿರುಗು. ೬೫). **ಬಾವಲಿ₂** : ೨. ಕಿವಿಯಲ್ಲಿ ಹರಳಿನ ಬಾವಲಿ, ಹಣೆಯ ಮೇಲೆ ತಿಲಕ (ಕುಂಹಿಂ. ೦೫೨) ; ಬಲಗಿವಿಯಲ್ಲಿ ಮುತ್ತು ಕಳಚಿ ಹೋದ ಬಾವಲಿಯ ಚಿನ್ನದ ಉಂಗುರವೊಂದು ತೂಗಾಡುತ್ತಿತ್ತು (ಚಸಾ. ೨೬). **ಬಾಹುಲಿ** : ೨. ಥಳಥಳಿಸುವ ಬಾಹುಲಿ . . . ಕಂಕಣ ದಿಂದ ಬಲುಸೊಬಗಾಂತನರ್ತಿಯಲಿ (ಕಂಸವಿ. ೨೩-೬೪).
[ದೇ.॥ ತಮಿ. ಪಾವಿಲಿ; ತುಳು. ಬಾವಲಿ, ಬಾವೊಲಿ; ತೆಲು. ಬಾವಿಲಿ./ ಸಂ. ಬಾಲೀ]

**ಬಾವುಲಿಗಾಜ** (ನಾ). ಬಿರುದಿನ ಕಾಲ್ಗಡಗವನ್ನು ತೊಟ್ಟವನು ; ಬಿರುದಾಂಕಿತನಾದ ವೀರ : ಹಿಣಿಲ ಬಾವುಲಿಗಾಜರಾವೆಡೆ ಭಾಷೆಯುತಿ ಒಳರು (ಕುವ್ಯಾಭೀ. ೪-೩೯). [ಬಾವುಲಿ₂ + — ಕಾಜ]

**ಬಾವುಲು** 'ಪಾವಲ್' ನೋ.

**ಬಾವೆಮಣ್ಣು** (ನಾ). ಒಂದು ಬಗೆಯ ಮೆದುವಾದ ಮಣ್ಣು : ಅಗೆದ ಎಲ್ಲ ಕಡೆಗಳಲ್ಲೂ ಕಲ್ಲುಗಳಿರಲಿಲ್ಲ. ಕೆಲವು ಕಡೆ ಬಾವೆಮಣ್ಣು (ಬಾಳಿನ. ೬೨). [ ← ತುಳು. ಬಾವೆಮಣ್]

**ಬಾಶಿಗ** 'ಬಾಸಿಗ' ನೋ.

**ಬಾಷೀಕಾಗದ** (ನಾ). (ಛಾಪಾಕಾಗದವಲ್ಲದ) ಸಾದಾಕಾಗದ : ಅಸಲು ಚಂಗಡಿ ಸಹ ಸಂತಂದು ಒಳ್ಳೇ ಬಾಷೀಕಾಗದದಲ್ಲಿ ರಶೀತಿ ಬರೆದು . . . ಕಳುಹಿಸಿಬಿಟ್ಟನು (ಕಥಾವಂ. IV, ೪೩).
[ಬಾಷೀ₀ + ಕಾಗದ. / ತುಳು. ಬಾಶಿಕಾಗಜ]

**ಬಾಷ್ಕಳ₁** (ನಾ). ೧. ಋಗ್ವೇದದ ಒಂದು ಶಾಖೆ. ೨. ಶತೋಪನಿಷತ್ತುಗಳಲ್ಲಿ ಒಂದು : ಶ್ರೀರುದ್ರಬೃಹದಾರಣ್ಯಕ . . . ಬಾಷ್ಕಳ [ಪಾಠಾಂ. ಭಾಷ್ಕಳ, ಭಾಸ್ಕಳ] . . . ಮೊದಲಾದವೇ ಉಪನಿಷತ್ತುಗಳು (ವಿವೇಕ. ೫).
[ಸಂ. ಬಾಷ್ಕಲ]

**ಬಾಷ್ಕಳ₂** (ನಾ). ೧. ಸುಳ್ಳು; ಹುಸಿ ; ಅಸತ್ಯ : ಪತಿ ವಿಸರ್ಜಿಸಿದಾಕೆ ಗಾವುದಿನ್ನಧಿಕಾರ ಮೃತಿಯೆ ನಿಷ್ಕೃತಿ ಮಗನೆ ಬಾಷ್ಕಳವೆ ಕೇಳ್ ವೀಸುನಿ ಹುತವಹನನಲ್ಲಿಟ್ಟರಪ್ಪುದೆಲೆ ಕಡೆಯಾಣೆಯಂತಿದಂ ಗ್ರಹಿಸು ನೀನು (ಹರಿಚ. ೧೬-೦೬). ೨. ನಡತೆಯಲ್ಲಿ ಅಥವಾ ಮಾತಿನಲ್ಲಿ ಹಿಡಿತವಿಲ್ಲದಿರುವುದು ; ಸ್ವೈರವೃತ್ತಿ ; ಸ್ವಚ್ಛಂದವರ್ತನೆ. ೩. ಅಸಭ್ಯತೆ : ಎಂಥ ಬಾಷ್ಕಳ ಮಾತಾಡತೀ ನಿಂಗೀ. ಜನಲಜ್ಜಾ ನಿನಗ ಎಳ್ಳಷ್ಟೂ ಇಲ್ಲಲ್ಲಾ (ರಕ್ತರ್ಕ. ೨೦೬). ೪. ಅಪ್ರಾಮಾಣಿಕನಾದ ವನು : ಏನಪಾ ರಾಮಾಚಾರಿ, ನೀ ಏನು ಬರೇ ಬಾಷ್ಕಳ ಕಾಣತೀದಿ (ತಿರುಗು. ೪೬). [← ಮರಾ. ಬಾಷ್ಕಲ, ಬಾಷ್ಕಳ, ಬಾಸ್ಕಳ]

**ಬಾಷ್ಕಳಂಗೆಯ್** (ಕ್ರಿ). ಅಸಂಬದ್ಧವಾಗಿ ಮಾತನಾಡು ; ಗಳಹು : ಕೇಳಲೆ ನಿರೀಶ್ವರ ಸಾಂಖ್ಯವಾದಿ ನೀಂ ಮತ್ತತ್ವದಿಂ ಭಾಷ್ಕಳಂಗೆಯ್ಯುದಿರ್ (ಅಂಕ. ೩-೬-೦೨). [ಬಾಷ್ಕಳ₂ + ಕೆಯ್₁]

**ಬಾಷ್ಕಳಗೆಡೆ** (ಕ್ರಿ). = ಬಾಷ್ಕಳಂಗೆಯ್ : ಎಲ್ಲಾ ಜಾತಿಗೂ ನಾವೇ ಮಿಗಿಲೆಂದು . . . ಬಳ್ಳಿಟ್ಟು ಬಾಷ್ಕಳಗೆಡೆವುತ್ತಿಪ್ಪರಿ ನೋಡಾ (ಸರ್ವಶಿ. ೧೭೫-೮೨೪) ; ಮನೆಯಲಿ ಸೂಳೆಯರ ಮುಂದೊದಱಿ ಬಾಷ್ಕಳಗೆಡೆದು ಬಂದೀಗ ಕೋಲನಿಕ್ಕದೆ ಗಾಯವಡೆಯದೆ ಕಾಲುವೇಗವ ತೋಱಿದೊಡೆ ನಿನ್ನೋಲಗದೊಳೆಂತಕಟ ನಾಚದೆ ಕುಳ್ಳಿತಿಹೆಯೆಂದ (ಕುವ್ಯಾವಿ. ೬-೨೪) ; ವೀರಭದ್ರೇಶ್ವರನ ಬೋಧೆಯಂ ಕೇಳದಾ ನಾರಸಿಂಹಂ ಕೊಬ್ಬಿ ಭಾ [ಬಾ] ಷ್ಕಳಂಗೆಡೆದು . . . ಜಱಿವುತ್ತಿರ್ದಂ (ವೀಕೃಕೃ. ೩-೫-೨೪). [ಬಾಷ್ಕಳ₂+ಕೆಡೆ₂]

**ಬಾಷ್ಟ** (ನಾ). ನಂಜು ; ವಿಷ : ಗಾಯ ಬಾಷ್ಟವೇರಿ ತುಂಬಾ ನೋವಾಗಿದೆ (ರೂಢಿ). [← ತೆಲು. ಬಾಸಟ. / ಮರಾ. ಬಾಸಟ, ಬಾಸೂಟ]

**ಬಾಷ್ಪ** (ನಾ). ೧. ಕಣ್ಣೀರು ; ಅಶ್ರು : "ಅಶ್ರು, ಬಾ(ಷ್ಪಂ)ಟ್ಪಂ, ರೋದನ, ನಯನಜಳಂ, ಅಸ್ರಂ—ಈ ೫ ಕಣ್ಣ ನೀರ್" (ಹಲಾಯು. ೬೬-೩೬೫) ; ಕುಚಾಂತರದೊಳ್ ಕೊಳ್‍ಗೊಂಡು ಮೋಹವಲ್ಲಿಗೆ ಬಿದಿ ತಿರ್ದಿಸುತ್ತಿಸಿದ ನೀರ್ಗಣೆಯಾದುದು ಬಾಷ್ಪವೋಪಳಾ (ಶಾಂತಿಪು. ೮-೬೨) ; ಕ್ಷಣದೊಳೊದಗುವ ಬಾಷ್ಪಲುಳಿತೇಕ್ಷಣನು ಬಂದನು ಮನೆಗೆ (ಕುವ್ಯಾಕ. ೩-೨೫). ೨. ಹಬೆ ; ಆವಿ : ಹವೆಯೊಳಗೆ ತೊಯ್ದ ವಸ್ತ್ರಗಳನ್ನು ಬಿಚ್ಚಿ ಹರವಿದರೆ, ಅವುಗಳಲ್ಲಿಯ ನೀರು ಬಾಷ್ಪರೂಪದಿಂದ ಹಾರಿ ಹೋಗಿ ವಸ್ತ್ರಗಳು ಒಣಗುತ್ತವೆ (ಮುಂಬಯಿ. ೫-೦೩೪). ೩. ಒಂದು ಬಗೆಯ ಸಸ್ಯ. [ಸಂ.]

**ಬಾಷ್ಪಜಲ** (ನಾ). ಕಣ್ಣೀರು : ಅಕ್ಷಿಗಳ್ ಬಾಷ್ಪಜಲಪ್ರಶಮಿತರುಚಿಗಳ್ (ಜಗ. ೩-೬೬). [ಸಂ.]

**ಬಾಷ್ಪವಾರಿ** (ನಾ). = ಬಾಷ್ಪಜಲ : ಅನವರತಬಾಷ್ಪವಾರಿಧಾರಾಪೂರ ಪರಿವಾರಿತಪಲ್ಲವನೇತ್ರೆಯುಂ (ಗದಾಯು. ೦-೫೫ ವ) ; ವಿಲೋಲಲೋಚನೆಯಕಟ ನೆನೆದಳು ಬಾಷ್ಪವಾರಿಯಲಿ (ಕುವ್ಯಾವಿ. ೩-೫೪). [ಸಂ.]

**ಬಾಸ** (ನಾ). ಒಬ್ಬಾತನ ಹೆಸರು : ಶ್ರೀ ಬಾಸ (ಎಕ. II, ೪೨೨ ; ಸು. 1000) ; ಶ್ರೀ ಬಾಸನಣ್ಣನ ದಣ್ಡೆ (ಎಕ. II, ೪೫೩-೦ ; ಸು. 1000). 'ಬಾಸಬೆ' ಪರಾ. [?]

**ಬಾಸಂತಿ** (ನಾ). ಒಂದು ಬಗೆಯ ಮಲ್ಲಿಗೆ ; ವಾಸಂತಿ : ವಾಸಂತೀ — ಬಾಸಂತಿ (ಕಮರ. ೨೫೬ ಪ್ರಯೋ) ; ಉಪವನದಲಾಡುತ ಬಾಲೆಯರು ಬಾಸಂತಿ ಮರುಗ ತವಾಲ ಮಾಲತಿ ಮಲ್ಲಿಗೆಗಳ ಮನೋಜ್ಞ ಸೌರಭದ ಲೋಲಭೃಂಗಾವಳಿಯ ಗೀತವನಾಲಿಸುತ (ಶಿಭಾಗ. ೯-೨೦-೦೩).
[<ಸಂ. ವಾಸಂತೀ]

**ಬಾಸಂಬಳ್ಳಿ** (ನಾ). ಒಂದು ಊರಿನ ಹೆಸರು: ಪಡುವಣ ತೊರೆವಳ್ಳಿಯ ಬಾಸಂಬಳ್ಳಿಯ ಊರ ಮುನ್ನ ದಣ ಕೆಱೆಯೊಳಿಸಾರ್ಬ್ಬ ನಮ್ಮಸ್ಯಮನ್ದೇವ ಭೋಗಂ ಬಿಟ್ಟಂ (ಎಕ. III, ಮೈಸೂರು. ೩೭-೦೫ ; ಸು. ೯೯೦ ?).
[ಬಾಸ + ಪಳ್ಳಿ$_1$]

**ಬಾಸಗವುಂಡ** 'ಬಾಸಗಾವುಂಡ' ನೋ.

**ಬಾಸಗಾವುಂಡ**, ಬಾಸಗವುಂಡ (ನಾ). ಒಬ್ಬಾತನ ಹೆಸರು: ಉಚ್ಚಂಗಿಯ ಕೋಟೆಗೆ ರಾಜಾದಿತ್ಯನ ಕಾಳೆಗಕೆ ಚಣ್ಣಡೆ ಬಾಸಗಾವುಣ್ಡನ್ಗೆ ಕೊಟ್ಟ ಕೊಡನ್ಗೆ (ಎಕ. XV, ಬೇಲೂರು. ೩೦೬-೯ ; 971). **ಬಾಸಗವುಂಡ** : ಉಪ್ಪರ್ವಳ್ಳಿಯ ಬಾಸಗವುಣ್ಡನ ಬಿಟ್ಟಿಗವುಣ್ಡನ ಮಗಂ ಬಿಟ್ಟಯಣ್ಣ (ಎಕ. VI, ಚಿಕ್ಕಮ. ೩೯-೬; 1012). [ಬಾಸ+ಗಾವುಂಡ (<ಗಾವುಂಡ)]

**ಬಾಸಟ** (ನಾ). (ಆಯುಧಗಳನ್ನು ಹರಿತಗೊಳಿಸುವುದರಿಂದಂಟಾದ) ಹೊಳಪು ; ಕಾಂತಿ : ಕಂತಂ ಪಿಡಿದ ಖಡ್ಗಕೆ ಬಾಸಟವೇಱುವಂತೆ ಜವ್ವನವೇಱಿದಳು (ಶ್ರೀಪಾಲ. ೩-೪೦); ಆ ತನುಜಾತೆಗೆಣ್ಣೆಯನೊತ್ತಿಸಿದಳು ಪ್ರೀತಿಯಿಂದಂಗಭವನ ಪುಷ್ಪಬಾಣಕ್ಕೆ ಓತು ಬಾಸಟಮಿಕ್ಕುವಂತೆ (ನೇಮಿಸಂ. ೨೩-೨೨೩) ; ಸ್ಮರಗಜಕುತ್ತುಮಮದವೇಱುವವೋಲ್ ಸುರಭಿಶರಕೆ ಬಾಸಟವೇಱುವವೋಲು ಹರಿಣಧರಗೆ ಹದಿನಾಱು ಕಲೆಗಳೇಱುವವೋಲ್ ... ವಿದ್ಯಾಧರರಾಯನ ಮಿಸುಂಕುವ ರೂಪಿಗೆ ಹೊಸಹರೆಯಂ ಬಂದುದು (ಜಯುಕಾ. ೦೩-೭). [?]

**ಬಾಸಟವಿಡು** (ಕ್ರಿ). ಮಸೆದು ಕಾಂತಿಗೊಳಿಸು : ಅಂಗೋದ್ಭವನೆಂಬ ಮಹಾಸಾಹಸಿಗಂಗೊಲಿದು ರತಿ ಬಾಸಟವಿಟ್ಟಲರ್ಗಯ್ದಂ ಕುಡುವಂತೆ (ಜಯುಕಾ. ೦೪-೨೨). [ಬಾಸಟ+ಇಡು$_1$]

**ಬಾಸಣ**, ಬಾಸಣೆ (ನಾ). ೧. ಹೊದಿಕೆ ; ಮುಸುಕು : ಆಚ್ಛಾದನ : ಚರಣದ ಧೂಳಿ ಬಾಂದೊಱೆಗೆ ಬಾಸಣವಾಗಿರೆ . . . ಅದ್ಭುತವಾಹವ ಭೂಮಿಗಪ್ಪಿನಂ (ಗಂಕ. ೩-೬೬); ಪಂಚರಂಗದ ಚೂಣಿಕೆ, ಬಿಳಿಯ ಬಟ್ಟೆಯ ಬಾಸಣ . . . ರತ್ನಾವಳಿಗಳಿಂದ ಮಂಟಪ ಸುಂದರವಾಗಿ ರಾರಾಜಿಸುತ್ತಿತ್ತು (ಗಿಂಪ. ೦೨೩). ೨. ಯಾವುದಾದರೂ ವಸ್ತುವನ್ನು ಒಳಗೊಳ್ಳುವ ಸಂಪುಟ ; "ಬುಟ್ಟಿ ; ಪೆಟ್ಟಿಗೆ ; ಪಾತ್ರೆ" (ಪ್ರಕಣ್ಣ). ೩. ಜ್ಞಾನ ; "ತಿಳಿವಳಿಕೆ" (ಪ್ರಕಣ್ಣ). **ಬಾಸಣೆ** : ೧. "ಬಾಸಣೆಯೆನೆ ಮುಸುಂಕಿ [ಪಾಠಾಂ. ಮಾಸಣೆಯೆನೆ ಮಿಸುಂಕಿ]ದರ್ಥಂ" (ಕಶಬ್ದ. ೬೦); ತೊಳಲ್ವ ಮಂಜಿನ ತಪ್ಪಲೊಳಗೆ ತನ್ನೊಡಲ ಮರೆಗೊಳಿಪ ಹೂವುಲ್ಲುಗಳ ಬಾಸಣೆಯೊಳು ಸುಳುಹು ಕಾಣಿಸದೆಲರ ತೆಳುವ ಬಣ್ಣದ ಚೆಲ್ಲ ತಳಿವ ಮಿಸುನಿಯ ಮಿಂಚುಹುಳುವೊ ನೀನು ? (ಗಿಳಿವಿಂ. ೩-೫೭).
[<ಸಂ. ವಾಸನ./ಪ್ರಾ. ವಾಸಣ./ಹಿಂ. ಮರಾ. ಬಾಸನ ; ಗುಜ. ವಾಸಣಾ]

**ಬಾಸಣೆ** 'ಬಾಸಣ' ನೋ.

**ಬಾಸಣಿಗೆ$_1$** 'ಬಾಚಣಿಗೆ' ನೋ.

**ಬಾಸಣಿಗೆ$_2$** (ನಾ). ಹೊದಿಕೆ ; ಆಚ್ಛಾದನ ; ಮುಸುಕು : ಪೊಸಮುತ್ತಿನ ಬಾಸಣಿಗೆಯೊಳ್ ಬಾಸಣಿಸಿದ ಬಿರಿಮುಗುಳ್ಗಳೊಳ್ (ಶಂಕಭಾ. ೫-೫ ವ) ; ಇರ್ವುಪೊರೆದ ದುಗುಲದ ಬಾಸಣಿ[ಪಾಠಾಂ. ೧೧]ಗೆಯುಂ ಕಳೆದು (ಕಾದಂಬ. ೦೬೮) ; ಸ್ಮರನಲರ್ವಿಲ್ಲ ಬಾಸಣಿ[ಪಾಠಾಂ. ಬಾಣಸಿ]ಗೆಯುಂ ಕಳೆವಂತೆ ಮುಸುಂಕನೋಸರಿಸೆ (ಲೀಲಾವ. ೦೩-೦೨). [< ಬಾಸಣ]

**ಬಾಸಣಿಗೆಗಳೆ** (ಕ್ರಿ). ಮುಸುಕನ್ನು ಓಸರಿಸು: ಗವಸಣಿಗೆಯನ್ನು ತೆಗೆ : ಶಂಖಮುಂ ಬಾಸಣಿಗೆಗಳೆದು . . . ವಿಕ್ರಮಾರ್ಜುನಂಗೆ ಕೊಟ್ಟು (ಶಂಕಭಾ. ೬-೩ ವ). [ಬಾಸಣಿಗೆ$_2$+ಕಳೆ$_1$]

**ಬಾಸಣಿಸು$_1$** 'ಬಾಚಣಿಸು$_1$' ನೋ.

**ಬಾಸಣಿಸು$_2$**, ಬಾಚಣಿಸು$_2$ (ಕ್ರಿ). ೧. ಆವೃತವಾಗು : ಆ ಸಭೆಯು ಮನೇಱಿದ ಸಿಂಹಾಸನವುಮನೊಡನೆ ಬೆಳಗೆ ಬೆಳಗಿಂದೆ ಜಗಂ ಬಾಸಣಿಸಿ ದುದೆನೆ ಸಕಲಸುರಾಸುರಪತಿಯುಂರದೊಳೆಸೆದುದಿಂದ್ರವೃಂದಂ (ಆದಿಪು. ೯-೭). ೨. ಹೊದಿಸು ; ಮುಚ್ಚು : ಕರಡಿಯ ತೊವಲಂ ಕಾಡಿಗೆಯೊಳರ್ದಿ ವಿಧಾತ್ರಂ ಲೋಕಮುಂ ಬಾಸಣಿಸಿದನೆಂಬಂತಪ್ಪ ಕತ್ತಲೆಯೊಳ್ (ಧರ್ಮಾಪ್ಪ. ೦೨-೨೦). ೩. ಆವರಿಸು ; ಹಬ್ಬು : ಆ ಸುಗಂಧಕಪದುಮಪರಿಮಳ ಬಾಸಣಿಸಿತೀ ಜನಮನೋವಿನ್ಯಾಸವನು (ಕುಮ್ಮಾರ. ೧೧-೩). ೪. ಧರಿಸು ; ತೊಟ್ಟುಕೊಳ್ಳು : ಎಕ್ಕಡವ ಬಾಸಣಿಸಿ ಪದತಳಕೆ ಪೀತಸುವಾಸವನು ತೆಗೆದುಟ್ಟು . . . ಎಲೆವನೆಯ ಹೊಱವಂಟನಾ ರಾಮ (ತೊರರಾ. ೩-೯-೩೪). ೫. ರಕ್ಷಿಸು ; ಕಾಪಾಡು : ಸ್ಥಾಣುಗಾದಿಯ ಹಳೆಯರಣಕಿಸೆ ಪ್ರಾಣವಂ ಬಾಸಣಿಸಲಱಿಯದ ಹೂಣಿಗರು ಜಾಣರುಗಳಭವನೊಳಗಲದವಿರಳರು (ಶಾಸಂಕ. ೯-೧೧). **ಬಾಚಣಿಸು$_2$** : ೨. ಕರಿಮೊಗಂ ಸುಂಡಲದಿಂ ಸ್ತನ್ಯಪಾನಂಗೈವುತಿರಲ್ . . . ಸೆರಗ ಬಾಚಣಿಸಿದಗಜೆ ಸಲಹಾ (ನವಮೋ. ೬-೨). [ಬಾಸಣ + — ಇಸು$_3$]

**ಬಾಸಬೆ** (ನಾ). ಒಬ್ಬಾಕೆಯ ಹೆಸರು : ತಾಮ್ಮೇಱಿದ ಕದಮ್ಬನಗ್ಗಳದ ಬಾಸಬೆಗಾದನೇಂ ಪುತ್ರನುತ್ತಮನ್ನೆರದಿಕೆ ನೋಂನ್ತು ಮೂಱುದಿನಮಂ ಸುರನಾಗಿದನಿನ್ತು ರಾಚಯಂ (ಎಕ. XV, ಹೊಳೆನ. ೬೭-೧೧ ; ಸು. 960).
[ ಬಾಸ + ಅಬೆ (<ಅಬ್ಬೆ$_1$ ) ]

**ಬಾಸರ$_1$** 'ವಾಸರ$_1$' ನೋ.

**ಬಾಸರ$_2$** (ಗು). ೧. ಬಿಳಿಚಿಕೊಂಡ ; ಪೇಲವವಾದ : ಮಿಡಿದು ಪಾಯ್ದುದಳ್ಕೆರ್ದೆ ಬತ್ತೆ ತೊಂಡೆವಾಯ್ ಬಾಸರವರ್ಣಮಾಯ್ತು (ಅಸಂಪು. ೯-೧೧). ೨. ಮ್ಲಾನವಾದ ; ನಿಸ್ತೇಜವಾದ : ಕೆದಱಿದ ಕೇಶಬಂಧದ ಮಲಿನದೇಹದ ಬಾಸರದ ಶಶಿಮುಖದ ಸೂಸುವ ಸುಯ್ಲ ಸಂದಣಿಯ ಬೇಸಱಿನ ಬೆಜಗಿನಲಿ (ಶಿಭಾಗ. ೬-೦೩-೨೭). (ನಾ). ೩. ಕಾಂತಿ ; ಮೆರುಗು ; ಶೋಭೆ : ಮೃದುಪದಪಂಕಜಂ ನಡೆದು ಕೆಂಪು ಮರಲ್ದು ನಿಜಾರುಣಾಂಶು ಪಾಸಿದ ದುಗುಲಕ್ಕೆ ಬಾಸರದ ಮಾಸರವಂ ಕುಡೆ ಬಂದ ಯೋಗಿರೂಪದ ನಿಧಿಯಂ (ಅಸಂಪು. ೯-೬೫) ; ಒಪ್ಪುವ ಯಜ್ಞಸೂತ್ರಕಂ ಕಿವಿಯ ತೊಳಂಚಿಯುಟ್ಟುಡೆಯ ಬಾಸರಮಿಕ್ಕಿದ ದರ್ಭೆ ಶೋಭಿಪೆತ್ತ ವಿರಳಕೂರ್ಚಂ . . . ಒಪ್ಪೆ (ಮಹಾನೇ. ೧೦-೯೭). ೪. ಶುಭ್ರವಸ್ತ್ರ : ಉಟ್ಟ ಬಾಸರದ ಬಂಬಲ್ ದೊಳ್ಳು ಚೆಲ್ವಾಗೆ ಸಂಭಿನ್ನಶ್ರೋತ್ರ ಧರಾಮರಂ ನೃಪತಿಗಾಶೀರ್ವಾದಮಂ ಮಾಡಿದಂ (ಶಾಂತೀಶ್ವ. ೨-೪೯); ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗ ನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುಮ್ಮಾಶ. ೦೫-೦೫). [<ಸಂ. ಭಾಸ್ವರ]

**ಬಾಸಳು** 'ಬಾಸುಟಿ' ನೋ.

**ಬಾಸಾಳ** 'ಬಾಸಂಟಿ' ನೋ.

**ಬಾಸಾಳು** 'ಬಾಸಂಟಿ' ನೋ.

**ಬಾಸಿಂಗ** 'ಬಾಸಿಗ' ನೋ.

**ಬಾಸಿಕಾಱ** (ನಾ). ದೇವಸ್ಥಾನದ ಪರಿಚಾರಕ (?) : ಬೀಹಳಿಯರೆನಿ ಬರಾವಡಂ ಮೊಯಲು ವಿ ೧೦ ಬಾಸಿಕಾಱಂ ಪ ೧ × × × (ಸೌಇಇ. XV, ೩೯-೦೦ ; 1148). [ ಬಾಸಿ$_1$ + — ಕಾಱ ]

**ಬಾಸಿಕೆ** (ನಾ). (?) : ಸೂಸುವ ಕಣ್ಣ ಕೆಂಪು ಪೊಸಬಾಸುಟ ಮೈ ಜಡೆ ಬಿಟ್ಟ ಮಂಡೆ . . . ಕಿಱುಲಜ್ಜೆ ತೊಡಳ್ಕುಡಿ ದೋರೆವಲ್ಲು ಕೈ ಬಾಸಿಕೆ

ಕೊಯ್ದು ಮುಂದಲೆ ಕಱಂಗಿದ ಕೆಂದುಟಿಯೊಪ್ಪೆ ಬರ್ಪ ಸಂತೋಷದ ಲೇಸು ಬಾಸಣಿಸಿತಾ ಕವಿರಾಜಕಲಾವಿಲಾಸನಾ (ಕಾವ್ಯಸಾ. ಕೃಟ. ૩૪૪). [?]

**ಬಾಸಿಗ**, ಬಾಷಿಗ, ಬಾಸಿಂಗ (ನಾ). ೧. (ಹೂವಿನ) ಮಾಲೆ, ದಂಡೆ : "ಬಾಸಿಗವೊಂದು ಪೂಮಾಲೆ" (ಕಶಸಾ. ೬೩-೯೦೭) ; ಸೂಡಿದ ಪಾರಿಜಾತದ ನವೇರುವ ಬಾಸಿಗವೊಯ್ಯನೊಯ್ಯನಿರ್ಪೊಡಿದುದು (ಆದಿಪು. ೩-೩) ; ಕಟ್ಟಿಯುಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದ ಬಾಡಿ ಪೋಗದೆ (ಅಸಂಭ. ೦-೯೪) ; ಪಂದಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ದಲೆಯ ಬಂದಿಗೆ . . . ಇವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩). ೨. ವಿವಾಹಸಮಯದಲ್ಲಿ ವಧೂವರರ ಹಣೆಗೆ ಕಟ್ಟುವುದಕ್ಕಾಗಿ (ಚಿನ್ನ, ಮುತ್ತು, ರತ್ನಗಳಿಂದ ಅಥವಾ ಕಾಗದ, ಬೆಂಡುಗಳಿಂದ) ರಚಿಸಿದ, ಎಡಬಲಕ್ಕೆ ಗೊಂಚಲುಗಳನ್ನುಳ್ಳ ಒಂದು ಬಗೆಯ ಅಲಂಕಾರಸಾಧನ : ಪೊಳೆವ ಬಾಸಿಗಕೆ ಹದಿನಾಱು ವಂಡೆ (ಅವಶಂ. ૩೯೩-೦೩೦೯); ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ (ಮಹಾದೇ. ೬. ೩೭-೭೬) ; ಮಗ ಸೊಸೆಗೆ . . . ಸಿಂಗರಗೆಯ್ದು ರನ್ನದ ಬಾಸಿಗವನು ಕಟ್ಟಿದರು (ಪೋಹತ ೦೩-೬೪). **ಬಾಷಿಗ :** ೨. ಬಣ್ಣದ ಸೊಡರು ಮೆಟ್ಟಕ್ಕಿಗಳ ಗೂಡೆಯು ಸಡಗರದ ಪುತ್ಥಳಿಯು ವಿರಚಿತ ರತುನಬಾಷಿಗದ . . . ಗಂಧಾಕ್ಷತೆಯಗಿಲುಗಳೆಸೆದವು (ಅಂಬಿಕಾ. ೯೬-೩೦). **ಬಾಸಿಂಗ :** ೧. ವಿಂದು ದಳಿಂಬ ಮಾನುಟ್ಟುಂ ಚಂದನಮಂ ಪೂಸಿ . . . ನವಕುಸುಮದಾಕೃತದಿಂದಂ ಬಾಸಿಂಗಮ ನಿಮಿರಿ ಕಟ್ಟಿದ ಬಲ್ಕೆಕಂ (ಜಿನ್ಮಮು. ೯-೨೫); ಅದಟುಳ್ಳ ಭಟರು ಸೂಡುತೆ ಬಾಸಿಂಗ ಡಾಂಡೆ ಚೇಗಟೆ ದನಿಮಾಡಿಸುತ್ತಿದಿದರು (ಪೋಹತ. ೩೩-೩೪). ೨. ಆಗಮೋಕ್ತಿಯಲಿ ಬಾಸಿಂಗವ ಸೂಡಿದರ್ . . . ಪರಮ ಶೋಭನದಿಂದೆ ಮದುವೆಯಂ ಮಾಡಿದರ್ (ಪೋಹತ. ೪೨-೬೨); ಆಸೆಯಿಲ್ಲದ ದೋಸೆ ಮಿಸೆಯಿಲ್ಲದ ಮೋಱೆ ಬಾಸಿಂಗವಿರದ ಮದುವೆ ಇವು ಮೂಱು ಹೇಸಿ ಕಾಣಯ್ಯ (ಸರ್ವಜ್ಞ. ೦೯೮೨).

**ಬಾಸಿಂಗಬಲ**=ಬಾಸಿಂಗವನ್ನು ಕಟ್ಟುವ ಯೋಗ ; ಮದುವೆಯ ಯೋಗ : ಬಾಸಿಂಗಬಲ ಬರಲು ಬಾಸೆ ಕೊಡುವೆನು ತಂಗಿ (ಕನ್ನಜಾ. ೬೯). 'ಕಂಕಣಬಲ' ಪರಾ.

[ದೇ.॥ ತಮಿ. ವಾಚಿಕೈ; ತುಳು. ಬಾಸಿಂಗ, ಬಾಶಿಂಗ, ಭಾಷಿಂಗ ; ತೆಲು. ಬಾಸಿಕ./ಮರಾ. ಬಾಶಿಂಗ, ಬಾಸಿಂಗ ]

**ಬಾಸಿಗಂಗಟ್ಟು** (ಕ್ರಿ). ೧. ಹೂಮಾಲೆಯನ್ನು ಹೆಣೆ ; ಹೂದಂಡೆಯನ್ನು ಕಟ್ಟು : ಬಾಸಿಗಂಗಟ್ಟುವನಂತು ಕಟ್ಟುವುದು ಕಬ್ಬಮನುಬ್ಬಿನವಾಗೆ ಕಬ್ಬಿಗಂ (ಲೀಲಾವ. ೦-೬೨). ೨. ಮದುವೆಯ ಕಾಲದಲ್ಲಿ ಬಾಸಿಗವನ್ನು ಧರಿಸು : ಬಾಸಿಗಂಗಟ್ಟಿದ ಶೀರ್ಷದಿಂದೆಬಗಿದಂ ವಸುದೇವಂ (ಆಸಂ. ೨-೩೦) ; ಮುತ್ತಿನ ಬಾಸಿಗಂಗಟ್ಟಿ ನಂದಿಯಂ ಮೃಡನೇಱಿದಂ (ಕವಿಶಿ. ೩೭-೯). [ ಬಾಸಿಗ + ಕಟ್ಟು$_1$ ]

**ಬಾಸಿಗಹುವ್ವು** 'ಬಾಸಿಗಹೂ' ನೋ.

**ಬಾಸಿಗಹೂ,** ಬಾಸಿಗಹುವ್ವು (ನಾ). ಮಾಲೆಯಾಗಿ ಕಟ್ಟಿದ ಹೂವು ; ಹೂವಿನ ಹಾರ : ಶ್ರೀಗೊಮ್ಮಟದೇವರ ನಿತ್ಯಾರ್ಚನೆಗೆ ೨೦ ಬಾಸಿಗ ಹೂವಿಂಗೆ ಶ್ರೀಮನ್ಮಹಾಮಣ್ಡಳಾಚಾರ್ಯ್ಯರು . . . ಕೊಟ್ಟ ದತ್ತಿ (ಎಕ. II, ૩೩೭-೩; 1196 ?). **ಬಾಸಿಗಹುವ್ವು:** ಯಿ ಮರಿಯಾದೆಯಲು ಕುನ್ದದೆ ೬ ಬಾಸಿಗಹುವ್ವನಿಕ್ಕುವರು (ಎಕ. II, ૩೯೩-೦೯; 1274 ?).

[ ಬಾಸಿಗ + ಹೂ$_2$ (< ಪೂ) ]

**ಬಾಸು$_1$** (ಕ್ರಿ). ಮಲವಿಸರ್ಜನೆ ಮಾಡು : "ಬಾಸು — ಪುರೀಷೋತ್ಸರ್ಗೇ" (ಶಮಂದ) ; ಬಾಸುತಂ ಹೇಸುತಂ ಮೂಸುತಂ (ಚವಮು. ೩೩-೦೩); ಲವಂ . . . ಮೂಸಿಯುಂ ಬಾಸಿಯುಂ ಮೇದುಂ ಪಾಯ್ದುಂ ವನವಮಂ ಮನವಮಂತುಟಾಱಿ ಪುಡಿಗುಟ್ಟಿ ಕಿಱಿಕಿಲ್ವ ಹಯಮಂ ದಿಟ್ಟಿಸಿ (ರಾಮಾಶ್ವ. ೧೩೨-೧೦).

[ದೇ.॥ ತಮಿ. ಪಾಚನ = ಭೇದಿ; ತೆಲು. ಪಾಸನ = ಮಲವಿಸರ್ಜನೆ]

**ಬಾಸು$_2$** 'ಬಾರ್ಚು' ನೋ.

**ಬಾಸುಂಡೆ** 'ಬಾಸಂಟ್' ನೋ.

**ಬಾಸುಂದಿ,** ಬಾಸುಂದೆ (ನಾ). ಹಾಲನ್ನು ಗಟ್ಟಿಯಾಗುವಂತೆ ಕುದಿಸಿ ಅದರಲ್ಲಿ ಸಕ್ಕರೆ, ಬಾದಾಮಿ, ದ್ರಾಕ್ಷಿ ಮೊದಲಾದುವುಗಳನ್ನು ಬೆರಸಿ ಮಾಡುವ ಮಂದದ್ರವವಾದ ಒಂದು ಬಗೆಯ ತಿನಿಸು : ಮನೆಯಲ್ಲಿ ತಾನೇ ನಿಂತು ಬಾಸುಂದಿ ಪೂರಿ ಅಡಿಗೆ ಮಾಡಿ ಕಮಲೆಯು ಬಯಕೆಯ ಊಟ ಆರಂಭಿಸಿದಳು (ಕಹಾರ. ೦೦೦); ಕರ್ನಾಟಕ ಕ್ಲಬ್ಬಿನಲ್ಲಿ ಇಂದು "ಬಾಸುಂದೀ ಪುರೆ"ಯಿತ್ತು (ಸಮಜೀ. ೦೦೦). **ಬಾಸುಂದೆ :** ಕಾರ್ಯದರ್ಶಿಯು . . . "ಬಾಸುಂದೆ, ಪುರೆ" ಯಾಗಬೇಕೆಂದು ನಿರ್ಣಯಿಸಿದ್ದನು (ಸಮಜೀ. ೦೦೦).

[← ಮರಾ. ಬಾಸುಂದೀ. ಬಾಸುದೀ. ಬಾಸೋಂದೀ]

**ಬಾಸುಂದೆ** 'ಬಾಸುಂದಿ' ನೋ.

**ಬಾಸುಗಿ** 'ವಾಸುಗಿ' ನೋ.

**ಬಾಸುರಕಬ್ಬು** (ನಾ). ಒಂದು ಬಗೆಯ ಕಬ್ಬು : "ಇಕ್ಷಾಳಿಕ :— ಬಾಸುರಕಬ್ಬು. ಹೆಗ್ಗಬ್ಬು. ಈಶ್ವರಿ" (ಓಸಧ. ೦೩).

[ ಬಾಸುರ$_0$ + ಕಬ್ಬು$_2$ (< ಕರ್ಬು$_1$) ]

**ಬಾಸುರಿಕೋಡು** (ನಾ). ಒಂದು ಊರಿನ ಹೆಸರು : ಬಾಸುರಿಕೋಡು ಇಂಗಳಿಸರ •ಬಾಗೆವಾಡಿ ಸಾಮಾಳವಾಡಿಗೆ ಒಡ್ಡವೊಡಿಗೆ ಮಧ್ಯವತ್ತಿ[ಗ] ಪಿಪ್ಪರಗೆನಾಮಗ್ರಮೋ . . . ದತ್ತಿ (ಸೌಇಇ. XI-i, ೯-೦೭; 862). [ ? ]

**ಬಾಸುಳ್** 'ಬಾಸುಟ್' ನೋ.

**ಬಾಸುಳ** 'ಬಾಸುಟ್' ನೋ.

**ಬಾಸುಳಿ** 'ಬಾಸುಟ್' ನೋ.

**ಬಾಸುಳು** 'ಬಾಸುಟ್' ನೋ.

**ಬಾಸುಳುವಡೆ** (ಕ್ರಿ). ಮೈ ಮೇಲೆ ಬಾಸುಂಡೆಗಳನ್ನು ಬರಿಸಿಕೊಳ್ಳು : ಬಳೆಯ ಮುಱಿಯಂ ತೋಳೊಳಗೆ ನೆಲೆಮೊಲೆಗಳಲಿ ಕೊರಳಲಿ ಬರೆದು ಬಾಸುಳುವಡೆದು ಮುಸುಕಿಟ್ಟು ಮಲಗಿದಳರಸ ಕೇಳು (ಶಾಲ್ಯಭಾ. ૩೯-೦೯).

[ ಬಾಸುಳು (< ಬಾಸುಟ್) + ಪಡೆ$_1$ ]

**ಬಾಸುಳೆ** 'ಬಾಸುಟ್' ನೋ.

**ಬಾಸುಳೇಳು** 'ಬಾಸುಟೇಳ್' ನೋ.

**ಬಾಸುಟ್**, ಬಾಸಳು, ಬಾಸಾಳ, ಬಾಸಾಳು, ಬಾಸುಂಡೆ, ಬಾಸುಳ್, ಬಾಸುಳ, ಬಾಸುಳಿ, ಬಾಸುಳು, ಬಾಸುಳೆ (ನಾ). ಗೀರಿದ ಅಥವಾ ಹೊಡೆದ ಪೆಟ್ಟಿನಿಂದ ಚರ್ಮದ ಮೇಲೆ ಉದ್ದವಾಗಿ ಉಬ್ಬಿಕೊಳ್ಳುವ ಗುರುತು : ಮಿಳಿರ್ವಸಿಯ ಪಸಿಯ ಪೊಸವಾಸುಟಿ ಕರರುಹರೇಖೆ ತುಱುಗಿ ರತನಾಟ್ಯಪರಿಸ್ಫುಟಿತಕ್ಕೆ ಮುಳಿದು ದಂಪತಿಗಳ ನಂಗಜನಟನ ಸೆಳೆದ ಬಾಸುಟನಿಳಿಕುಂ (ಆದಿಪು. ೦૩-೦૩) ; ಎಲ್ಲರ ಮೆಯ್ಗಳೊಳಂ ತಳುವಿಲ್ಲದೆ ಬಾಸುಟ್ಟಿಳೊಗೆಯೆ (ರಮಾಪು. ૩-૩೦૩); ವಿರಹ ದಿನಬಿಲ್ಲು ಬಸವೞದು ಪೋದೆ ತನ್ನುರದೊಳ್ ಬಾಸುಟಿ ತಳ್ತು ಶೋಕಶಿಖಿಯಂ ಕಟಿಲ್ಚಲೆಂದೊಟ್ಟಿದಸುಗೆದಳಿರಂ ಪೋಲ್ಕುಂ (ಕಾವ್ಯಾವ. ૩೦೦). **ಬಾಸಳು :** ಬಾಳಿಯ ಸುಳಿಯ ಕಟ್ಟಿಗೆಕೋಲೊಳವ ಹೊಯ್ದು ನೇಳೇಳು ಮೂಲೆಗೋಡಾಡಿ ಆ ಲೇಸುವೆಂಗಳ ಮೈಗೆ ಬಾಸಳು ಪುಷ್ಪಮಾಲೆಯಂ ತೆದ್ದುವಾಕ್ಷಣವೆ (ಛಂತ. ೯೬-೬೪) ; ಓಡಿತಂದೊಡನನಿಬರಾಕ್ಷಣ ನೋಡದೆಡಬಲಗಳನು ದೈತ್ಯರ ತ್ರಾಡನೆಯ ಬಾಸಳಿನ ತಲೆಬೋರುಗಳ ಯೋರಿನಲಿ (ಅಂಬಿಕಾ. ೯೦-೪೯) ; ಬೆತ್ತದೇಟಿಗೆ ಬಾಸಳು ಎದ್ದಿದ್ದುವು (ಕೂಡಕಾ. ૩೯).

**ಬಾಸಾಳ :** ಪಂಡಿತನಿಗೆ ತನ್ನ ಕೆನ್ನೆಯ ಮೇಲೆ ಮೂಡಿದ ಬಾಸಾಳದ ನೆನಪಾಯಿತು (ಸಮಚೀ. ೧೨೦೮) ; ಅವಳ ಬೆನ್ನು ಗಲ್ಲಗಳ ಮೇಲೆ ಬೆತ್ತದ ಬಾಸಾಳಗಳು ಮೂಡಿದ್ದುವು (ದೇವದಾ. ೦೩). **ಬಾಸಾಳು :** ಸಿಕ್ಕವರ ಬೆನ್ನಿಗೆ ಬಾಸಾಳು (ಬಾಬಿ೦. ೫೪) ; ಕೈಕಾಲುಗಳ ಮೇಲೆ ಬಾಸಾಳು ಮೂಡಿದ್ದಲ್ಲದೆ ಅವನ ಹಣೆಯಿಂದ ರಕ್ತವು ಸುರಿಯತೊಡಗಿತು (ಸಮಚೀ. ೨೩). **ಬಾಸುಂಡೆ :** ಬಾಸುಂಡೆ ಬರುವಂತೆ ಸೆಳೆದ (ಅರಳು. ೦೯೭–೦೦) ; ನೀವು ಈ ಅರಿಯದ ಕಂದನಿಗೆ ಬಾಸುಂಡೆ ಬೀಳುವಂತೆ ಹೊಡೆದಿದ್ದೀರಿ (ಹಿಂದಿನ. ೯೬). **ಬಾಸುಳ್ :** ನೋಡಯ್ಯ ಮಗನೆ ಎನ್ನಯ್ಯ ಮಯ್ಯ ಬಾಸುಳಂ (ನಾಚಿರ. ೦೬೭–೨೫) ; ಬಾಸುಳಂ ತೋರದಂದದಿ ಬೆರಳ್ಪೊಡೆತವಂ ಕೊಡು (ವಂಕಾರಾ. ೫–೨–೯೦). **ಬಾಸುಳ :** ನೊಂದನೆಂದು ಮಯೂರನ ಸಂತೈಸಿ ಬಾಸುಳವ ನೋಡುವ ನೆವದಿಂದ ಕುಪ್ಪಸವ ಕಳೆದು ನೋಳ್ಪಾಗ ಮಯೂರನ ಮೈ ಸುವರ್ಣವಾಗಿರೆ (ಭೈರಸೂ. I, ೯೫). **ಬಾಸುಳಿ :** ಕರಿಕಾಲಚೋಳನಾಳ್ಗಳ ಭರದಿಂದಂ ಹೊಡೆದೊಡಿಲ್ಲ ಬಾಸುಳಿಯೆಂದುಂ (ಭೈರಕೃ. ೦೫–೨೮). **ಬಾಸುಳು :** ತಟ್ಟಿದ ಬಾಸುಳ ಬರಿಯ ಮುಸುಕುವ ನೊಣದ ಹುಣ್ಣುಗಳ . . . ಕುಹುಹನಡಗಿಸಿಕೊಂಡು ಹಸ್ತದ ನಿಟ್ಟಿಗೆಯಲಿ ನೆಟ್ಟಿ ಸುಳಿದನಾ ಪ್ರಭುಲಿಂಗ ಲೀಲೆಯಲಿ (ಪ್ರಭುಲೀ. ೨೨–೩೯). **ಬಾಸುಳೆ :** ಮಯೂರನಂ ನರಪ ತಾನೆಸೆದು ಬಾಸುಳೆಯ ನೋಡುವ ನೆವದಿ ಶರೀರಮಂ ಮರೆಕಿಸೆ ಸುವರ್ಣದಂತಿರಲು (ಪ್ರೌರಂಗ. ೨–೯೦) ; ಬೆತ್ತದಿಂ ಬಡಿಯೆ, ಬಾಸುಳೆಗಳಿಂ . . . ನೆತ್ತರೊಡಮೂಡಿದೊಡಮವನೊಂದು ಮಾತನೆತ್ತಿಲ್ಲ! (ಗೂರ್ಲ್ರಿಕಾ. ೯೬–೨೯೮).

[ದೇ.॥ / ಪ್ರಾ. ಭಾಸುಂಡ = ಹೊರಸೆಳೆಯುವುದು]

**ಬಾಸುಟೀಟು್**, ಬಾಸುಳೇಳು (ಕ್ರಿ). ಮೈಮೇಲೆ ಬಾಸುಂಡೆಯೇಳು,— ಬಾರೇಳು : ಮೈ ಬಾಸುಟೀಟ್ಟಿನ್ನೆಗಂ ಪಟ್ಟದತ್ತಕ್ಕಟ ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ (ಸೂಕ್ತಿಸು. ೦೦–೬೦). **ಬಾಸುಳೇಳು :** ಹೊಯ್ಲಿನ ಬಿಟ್ಟುಸಿನಲಿ ಬಾಸುಳೆದ್ದಾ ತನುಗಳಂ ನಸುಮುಟ್ಟಿ ನೋಡುತ ಹೆದಟುತೋಡುತ್ತ (ಬಸಪು. ೫೨–೦೦) ; ಅರಿದು ನೆತ್ತರಗಾಣದಲಗಿದು ನೆಟ್ಟಿ ಬಿಗಿಯೆ ಮೈ ಬಾಸುಳೇಳದ ಹುರಿ ಬಲಿದ ನೇಣ್ ಸೋಂಕಿದೊಡೆ ಹೊಗೆ ಮಸಗದೆದೆಗಿಚ್ಚು (ಕುವ್ಯಾಬಿ. ೩–೦೦). [ಬಾಸುಟ್ + ಏಟ್$_1$]

**ಬಾಸೆ$_1$** (ನಾ). ಎದೆಯ ಮಧ್ಯಭಾಗದಿಂದ ಹೊಕ್ಕುಳ ಮೇಲು ಭಾಗದ ವರೆಗೆ ರೇಖಾಕೃತಿಯಾಗಿರುವ ತೆಳುಕೂದಲಿನ ಸಾಲು,— ರೋಮರಾಜಿ : "ನಾಭಿಯ ರೋಮ ಬಾಸೆಯೆನಿಸಿಕ್ಕು" (ಮಂಗರಾ. ೯೪–೫); ಆಕೆಯ ಬಾಸೆಗಳುಂ ಪಗವರ ಬಾಟಿಬ್ಬಾಸೆಗಳುಮೊಡನೊಡನಸಿಯವಾದುವು (ಶಂಪಭಾ. ೦–೦೯೦ ವ); ಭ್ರೂಲತೆಯ ಬಿಲುಗಳ ಕಟಾಕ್ಷದ ಕೋಲ ಹೊದೆಗಳ ಬಾಸೆಗಳ ಕರವಾಳಗಳ . . . ಮನ್ಮಥನಾಳು ನಡೆದುದು ದ್ರೌಪದಿಯ ದಂಡಿಗೆಯ ಬಳಸಿನಲಿ (ಕುವ್ಯಾಆ. ೦೩–೩೯).

**ಬಾಸೆ$_2$**, ಭಾಸೆ (ನಾ). ೧. ಜನರು ತಮ್ಮ ಅಭಿಪ್ರಾಯವನ್ನು ಇತರರಿಗೆ ತಿಳಿಸಲು ಉಪಯೋಗಿಸುವ ಪದಪ್ರಯೋಗ ; ಭಾಷೆ : "ಬಾಸೆಯೆ ಭಾಷೆ" (ಕರ್ಣಾನಿ. ೬೯); ಭಾಷಾ–ಬಾಸೆ (ಶಮದ. ೨೫೨ ಪ್ರಯೋ). ೨. ಕನ್ನಡ, ತಮಿಳು ಇತ್ಯಾದಿ ಬೇರೆಬೇರೆ ಮಾತು,—ವಾಙ್ಮಯ : ಆತನನಾಕೆಗಳ್ ಬಾಸೆಯೊಳಿಂತೆಂದರ್ (ಶಾಂಭಾ. ೯–೯೫ ವ); ಕೆಲದೊಳಿರ್ದ ವಿದಗ್ಧಸೌಂದರಿಯೆಂಬ ವಿಳಾಸಿನಿ ಅರಸಿಯ ಮನಮನಱಿದು ಆಕೆಯ ಬಾಸೆಯೊಳಿಂತೆಂದಳ್ (ಧರ್ಮಾಮೃ. ೯–೦೯೯). ೩. ಆಣೆ; ಶಪಥ; ಪ್ರತಿಜ್ಞೆ: ದೇವಿ ತನ್ನಯ ತನುವಂ ನಿಲೆ ಪಿಡಿವ ಬಾಸೆಯಂ ಮಾಡುಗುಮೋ (ಕಾದಂಬ. ೩೭೯). ೪. ವಚನ; ವಾಗ್ದಾನ : ಬಾಸೆಯಂ ಬೇಡಿ ನಾನರಚುವಂದೆನ್ನ ಕಯ್ಯೊಳಾರ್ಮರಸಿಟ್ಟರೀ ಗಿರಿಕೆಯನ್ನ? (ಗಿರಿಜಾಂ. ೫೦–೫). **ಭಾಸೆ:** ೪. ಒಲ್ದು ಮಾಟ್ಕೆಯಿಂ ಭಾಸೆಯನಿತ್ತು ಪುಚ್ಚಳಿವರಲ್ಲದೆ ಭಾಸೆಯನುದ್ಧರಿಪ್ಪರೇ (ಎಕ. V, ಬೇಲೂರು. ೦೦೨–೦೦೨; ಸು. 1220 ?).

**ಬಾಸೆಯ ಕೊಡು** = ಮಾತು ಕೊಡು; ವಚನ ಕೊಡು; ಭಾಷೆ ನೀಡು : ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ ಜೀವನಿಗೆ (ಪೋಹಕ. ೫–೬೦). **ಭಾಸೆಗೆ ತಪ್ಪು** = ಆಡಿದ ಮಾತನ್ನು ನಡೆಸದಿರು; ಕೊಟ್ಟ ಮಾತಿಗೆ ತಪ್ಪು; ಭಾಷೆಗೆ ತಪ್ಪು: ಭಾಸೆಗೆ ತಪ್ಪ ವಂಕದ ನೆಗಟ್ಟಿಯ ಲೆಂಕರ ಗಂಡಂ (ಎಕ. V, ಬೇಲೂರು. ೦೦೨–೦೨೨; ಸು. 1220 ?). [<ಸಂ. ಭಾಷಾ]

**ಬಾಸೆಗೆಡು** (ಕ್ರಿ). ಕೊಟ್ಟ ಮಾತಿಗೆ ತಪ್ಪು; ವಚನಭ್ರಷ್ಟನಾಗು : × × × ಬಾಸೆಗೆಟ್ಟೊಡೆ × × × (ಸೌಇಇ. IX–i. ೨೨–೦೦; 923). [ಬಾಸೆ$_2$ + ಕೆಡು$_1$]

**ಬಾಸೆಗೊಡು** (ಕ್ರಿ). ವಚನ ಕೊಡು; ಮಾತು ಕೊಡು : ಎಲೆ ಶುಕ ನೀನಾವನನೀ ಲಲನೆಗೆ ಪತಿಯೆಂದು ತರ್ಪೆಯಾತನೆ ನಿನ್ನುಜ್ವಲಸಖಿಗೆ ಭರ್ತೃವೆಂದೆನಶೋಲವಿಂದಂ ಬಾಸೆಗೊಟ್ಟು ಕಟಿಪಿಪರೆನ್ನಂ (ಉದ್ಭಟ. ೬–೧೨೨); ಸುಭುಜಂ ಪಗೆರಾಯರಂ ಕೊಲ್ವೆನೆಂಬಾಸೆಯಿಂ ಬಾಸೆಗೊಟ್ಟು ತನ್ನ ಪಡೆಯಂ ಕೊಂಚೆಗಟ್ಟಿನ ಕೋಟೆಯಂತೆ ಸಮೆದು (ರಾಮಾಶ್ವ. ೯೪–೨೬). [ಬಾಸೆ$_2$ + ಕೊಡು$_1$]

**ಬಾಸೆದೋಱು** (ಕ್ರಿ). ಮಾತಾಡು; ಧ್ವನಿ ಮಾಡು : ಆ ಶಶಿಮುಖಿ ಮೂಗಿಯ ಕೋಗಿಲಂದದಿ ಬಾಸೆದೋಱದೆ ಸುಮ್ಮನಿರಲು (ಜ್ಞಾನಚ. ೨–೬೪). [ಬಾಸೆ$_2$ + ತೋಱು]

**ಬಾಸೆಯಿಲಿ** (ನಾ). ಸುಳ್ಳು ಹೇಳುವ ವ್ಯಕ್ತಿ : ಮೋಸಮನೀವ ಬಾಸೆಯಿಲಿಗಳ್ ದ್ರವಿಡಾಂಗನೆಯರ್ (ಚಕವಿ. ೫–೦೬೫). [ಬಾಸೆ$_2$ + –ಇಲಿ$_3$]

**ಬಾಸೆವಕ್ಕಿ** (ನಾ). ಮಾತನ್ನಾಡುವ ಹಕ್ಕಿ ; ಗಿಳಿ : ಮೊರೆವ ಕುಕಿಲ್ವ ಪಾಡುವ ಬಾಸೆವಕ್ಕಿಗಳ ಗಜಬಜದಿಂ . . . ತಪೋವನಮೊಂದು ಕಣ್ಗೊಳಿಸಲೊಡಂ (ರಾಮಾಶ್ವ. ೬೪–೬). [ಬಾಸೆ$_2$ + ಪಕ್ಕಿ]

**ಬಾಸೆವತ್ತಳೆ** (ನಾ). ಆಶ್ವಾಸನೆಯ ಪತ್ರ ; ಸಹಾಯದ ವಾಗ್ದಾನ ಕೊಡುವ ಪತ್ರ : ಇದು ನಿಶ್ಚಿತಂ ಇನಿತಱೊಳವರುಪಟಳಕ್ಕೆ ಬೆಚ್ಚದೆಮ್ಮಂ ನಚ್ಚಿರ್ಪುದು — ಎಂದನಿಬರುಂ ಕಳುಪಿದ ಬಾಸೆವತ್ತಳೆಗಳನಿತ್ತು ಬಿನ್ನವಿಪುದುಂ (ಚಕವಂ. ೯೫–೫) ; ಈ ಬಾಸೆವತ್ತಳೆಯು . . . ರಾಕತಾಳೀಯದ ಫಲಸಿದ್ಧಿಯಾಗಿ. ನಮಗೆ ಬಹಳಮಟ್ಟಿಗೆ ಉಪಕಾರವಾಗುವುದು (ಬಟ್ಟಆ. ೬೩–೦೬). [ಬಾಸೆ$_2$ + ಪತ್ತಳೆ$_1$]

**ಬಾಸೆವಾಲ** (ನಾ). ರೋಮಮಯವಾದ ಬಾಲ (?) : ಶೇಷಕಾಯದ ನಿಡಿದ ನಿಳಿಕೆಯ ದೀರ್ಘತರ ಬಾಸೆವಾಲಂ ಮಿಳಿರೆ ನೇತ್ರತ್ರಯಂಗಳೊಂದೇ ಸಮಯದಿಂ ವಿಸ್ಫುಲಿಂಗಂಗಳ ಸೂಸುತಿರೆ ದಿವ್ಯಶಾರಭರೂಪದಿಂ ಬಾಸಂಗಳಿಗೆ ಭಯಭ್ರಾಂತಿಯಂ ತಳೆದು . . . ದುಷ್ಟನರಕೇಸರಿ ಗಗನದೊಳಿರೆ ಮೇಗಣ್ಗೆ ಜಿಗಿದು ಪಕ್ಷಂಗಳಿಂದಪ್ಪಳಿಸಿದಂ (ರಾಘಚ.೦೯–೧೮). [ಬಾಸೆ$_1$ + ಬಾಲ$_1$]

**ಬಾಸೆವೆಣ್**, ಬಾಸೆವೆಣ್ಣು (ನಾ). ವಾಗ್ದೇವತೆ ; ಸರಸ್ವತಿ : "ನುಡಿವೆಣ್, ಬಾಸೆವಣ್ . . . ಸಾರದೆ, ಸರಸತಿ — ಈ ೬ ಸರಸ್ವತಿಗೆ ಪೆಸರ್" (ಕಶಸಾ. ೯೮–೧೬); ಬಾಸೆವೆಣ್ಣೊಂದೊಲ್ದೆದಾಳ್ದಿ ವಾಕ್ಸಿದ್ಧಿಯಂ ಪಡೆದು ನಿನ್ನಂ . . . ರತಿಯಿಂ ನೂರ್ಮಡಿ ಮಿಗಿಲೆನಿಸಿ ಬಣ್ಣಿಪೆಂ (ರಾಮಾಶ್ವ. ೮೮–೨). **ಬಾಸೆವೆಣ್ಣು :** "ನಿರುತಂ ತಾಂ ಬಾಸೆವೆಣ್ಣು ಶಾರದೆಯುಕ್ಕುಂ" (ಕವಿಕಾ. ೩೦).

**ಬಾಸೆವೆಣ್ಣನಿಯ** = ಸರಸ್ವತಿಯ ಪತಿ ; ಬ್ರಹ್ಮ : "ಪೊಂಬೊಡೆಯಂ . . . ಬಾಸೆವೆಣ್ಣನಿಯ . . . ಬ್ರಹ್ಮಗೆಸೆವ ನಾಮಂ" (ಕಬ್ಬಿಕ್ಕೈ. ೯) ; ಬಾಸೆವೆಣ್ಣನಿಯ ಕೇಳ್ ಭೂಸುರರ ಸಲಹುವರೆ ವಾಸಿಯಿಂದುದಯಿಸುವೆ ವಸುಮತಿಯೊಳು (ವಂಕಾರಾ.೦–೨–೦೬). [ಬಾಸೆ$_2$ + ಪೆಣ್]

**ಬಾಸೆವೆಣ್ಣು** 'ಬಾಸೆವೆಣ್' ನೋ.

**ಬಾಸೆಹೀನ** (ನಾ). ಕೊಟ್ಟ ಮಾತಿಗೆ ತಪ್ಪುವವನು ; ವಚಸಭ್ರಷ್ಟ : ಬಾಸೆಹೀನನ ಹೆಣವನೀಸನಿವಾಸದೊಳಗಿರಿಸುವುದನುಚಿತಂ (ಬಸಪು. ೨೬-೨೦). [ಬಾಸ್ಕೆ + ಹೀನ]

**ಬಾಸ್ತಿಮಲ್ಲಿಗೆ** (ನಾ). ಮಲ್ಲಿಗೆಯಲ್ಲಿ ಒಂದು ಬಗೆ ; ಕಸ್ತೂರಿಮಲ್ಲಿಗೆ : ಬಾಸ್ತಿಮಲ್ಲಿಗೆ, ಕಸ್ತೂರಿಮಲ್ಲಿಗೆ (ವೃ. ಶಿಗ. ೯೭-೯೩೭). 'ಬಾಸಂತಿ' ಪರಾ. [ಬಾಸ್ತಿ + ಮಲ್ಲಿಗೆ]

**ಬಾಹ** 'ವರ್' ಪರಾ.

**ಬಾಹಟ** (ನಾ). ೧. ಒಬ್ಬ ಪ್ರಾಚೀನವೈದ್ಯನ ಹೆಸರು. ೨. ಆ ವ್ಯಕ್ತಿಯು ಬರೆದ ವೈದ್ಯಗ್ರಂಥ: "ಅಷ್ಟಾಂಗಹೃದಯವೆಂಬ ವೈದ್ಯಗ್ರಂಥ" (ವಡ್ಡಾ. ಟಿಪ್ಪಣಿ) : ಸಾಮುದ್ರಿಕಂ . . ಬಾಹಟಂ[ಶಾಣಂ ಲಂ] ಸಂಸ್ಕೃತಂ ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ . . . ನೆಱೆಯೆ ಕಲ್ಪಿಸಿ (ವಡ್ಡಾರಾ. ೯-೦). ೩. ವೈದ್ಯಶಾಸ್ತ್ರ : ನ್ಯಾಯ ವೈಶೇಷಿಕ . . . ಬಾಹಟ . . . ಧರ್ಮ ವೇದಾಂತ ಸಿದ್ಧಾಂತಗಳಲ್ಲಿ . . . ಸದ್ಯುಕ್ತಿನಿರೂಪಕರಾದ ವಾದಿಗಳಿಂ (ವಿವೇಕ. ೨೨೬); ಮಾನವರಿಗೆಂದೆನಿಸಲಪ್ಪುದನೂನವಿಲ್ಲದ ಬಾಹಟದ ಸಂಜ್ಞಾನಿಬಂಧನ ಪೀಟಿಕೆಯನು ಕರ್ನಾಟಕ ಭಾಷೆಯಲಿ (ವಿವೇ. ೦೬-೩೨). ೪. [ಸಂಗೀತ] (?) : ಗತಿ ಸಂಗತಿ ವಡೆಯೆ ಗಮಕಂ ಗಾರವಂಬಡೆಯೆ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣಿ ನಿಸ್ಸರಡೆ ರಂಗರಕ್ತಿ ಬೇಗವಣಿತು ತರಹರಂ ಸುಳಿವೊಟ್ಟಜಿ ದಾಳವಾಳಂ ಪದಿರ್ಪುಜೆ ಕೊಂಕು ಕವ್ಯಣೆ ಪೆಸರಂ ಬೆಡಂಗು ವಡೆಯೆ ಪಾಡುತ್ತಿರ್ದೆಯುಂ (ಶಾಂತೀಶ. ೦೬-೬೬ ಪ). [ಸಂ.]

**ಬಾಹಣ** (ನಾ). ಬರುವಿಕೆ ; ಆಗಮನ : ಪಿಂಗ್ಗಳವಾಗಿಹ ತತ್ತ್ವ ಗ್ರಂಥವ ಹೇಳಿ ವಸ್ತುವಾಗಿ ಪರದು ಹೇಗೆ ಬೊಗ್ಗುವಡವೆ ಮಾಡಬಾಹಣವಲ್ಲದೆ ಬೊಗ್ಗು ಕಟ್ಟಿಗೆಯಾಗದಾಗ್ಗೆ (ಚಿವಾಕೋ. ೪೪-೩) ; ಅದು ಹೋಪಣ ಬಾಹಣೆಲ್ಲವಮ್ಮಾ (ಚಿವಾಪ ೭೬-೯) ; ಸೊಗಸಿನಾಟಕೆ ಪಗಲೆಯಿರುಳೆ ಹೋಗಿ ಬಾಹಣವಾಗಿರುತಿಪ್ಪಾ (ಕಕ್ಕೋ. ೬-೭).

[< ಬರ್ (< ವರ್) + – ಅಣ]

**ಬಾಹತ್ತರ** (ನಾ). ಒಂದು ಸಂಖ್ಯೆ ; ಎಪ್ಪತ್ತೆರಡು : ಸೋಮನಾಥಲಿಂಗ ನಿಮಗೆನ್ನ ಕಾಯ ಮುಂತಾಗಿ ಬಾಹತ್ತರ ಡಿಂಗರಿಗರಯ್ಯ (ವಚಸಂ. ೨೩೩-೪೩).

**ಬಾಹತ್ತರನಿಯೋಗ, ಬಹತ್ತರನಿಯೋಗ** = ರಾಜ, ರಾಣಿಯರಿಗೆ ಎಪ್ಪತ್ತೆರಡು ಬಗೆಯ ಸೇವೆ ಮಾಡುವವರ ಸಮೂಹ : ಅಲ್ಲಿಗಲ್ಲಿಗೆ ಗುಜಿಗುಜಿಗೊಂಡು . . . ಮಱುಗುವ ಬಾಹತ್ತರನಿಯೋಗದಧಿಕಾರಿಗಳುಮಂ (ವರ್ಧಮಾ. ೩-೯ ಪ); ದರ್ಪಣದ ಹಡಪದ ಶಂಖದ ಬಿಂಕದ ಬಾಹತ್ತರನಿಯೋಗಂ (ಸಂಬಿರ. ೮-೦೭); ಭೂವರಂ ಬಹತ್ತರನಿಯೋಗವನು ಪುರಜನವಲ್ಲಭಂ ಬರಿಸಿ ಇಂತೆಂದನು (ಸಮ್ಯಕ್ತ್ವ. ೨-೯೦). **ಬಾಹತ್ತರನಿಯೋಗಾಧಿಪತಿ, ಬಾಹತರನಿಯೋಗಾಧಿಪತಿ** = ರಾಜ, ರಾಣಿಯರ ಎಪ್ಪತ್ತೆರಡು ಬಗೆಯ ಸೇವಾಕಾರ್ಯಗಳಿಗೆ ನಿಯಮಿತರಾದ ಗುಂಪಿನ ಪ್ರತಿಯೊಬ್ಬ ವ್ಯಕ್ತಿ : ಸರ್ವಾಧಿಕಾರಿ ಸೇನಾಧಿಪತಿ ಬಾಹತ್ತರನಿಯೋಗಾಧಿಪತಿ ಸಕಳಲಕ್ಷ್ಮೀಪತಿ (ಸೌಇಇ. IX–i. ೪೦೭-೯; 1225); ಪರಮವಿಶ್ವಾಸಿ ಬಾಹತರನಿಯೋಗಾಧಿಪತಿ ನಿಯೋಗಯೋಗಂಧರನುಂ (ಎಕ.XVI. ಚಿಕ್ಕನಾ. ೭೦-೦೧; 1235). **ಬಾಹತ್ತರನಿಯೋಗಿ**=ಬಾಹತ್ತರನಿಯೋಗಾಧಿಪತಿ : ಚಾಳುಕ್ಯಚಕ್ರೇಶ್ವರಕಟಕ ಬಾಹತ್ತರನಿಯೋಗಿ ನಿವಾಹಾರಾಧ್ಯನುಂ (ಎಇ. XV. ೬೦-೧೬ ; 1060); ಮಕ್ಕಳ ದೆಸೆಯುವವರನೋಲಗಿಸುವರ ಬಾಹತ್ತರನಿಯೋಗಿಗಳ ನಂಬುವುದುಚಿತವೇ (ಕುಮ್ಯಾಭ. ೬-೩೩).

[< ಪ್ರಾ. ಬಾಹತ್ತರ./ಸಂ. ದ್ವಿಸಪ್ತತಿ./ಹಿಂ. ಬಹತ್ತರ್ ; ಮರಾ. ಬಹಾತ್ತರ್, ಬಾಹತ್ತರ್]

**ಬಾಹತ್ತರನಿಯೋಗ** 'ಬಾಹತ್ತರ' ಪರಾ.

**ಬಾಹಪ್ಪಳಿಸು** (ಕ್ರಿ). ತೋಳುಗಳನ್ನು ಚಪ್ಪರಿಸು ; ಸೆಡ್ಡು ಹೊಡೆ ; ಬಾಹಾಸ್ಫಾಲನಮಾಡು : ಮಲೆತು ನಿಂದು ಅಖಿಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿಸಿದ ಮಲ್ಲನನುರ್ಬುತ್ತೊಯ್ಯನೊಳಪೊಕ್ಕು (೧೦೬. ೨-೦೦೩ ಪ) ; ಒಲಿದು ಮುದದಲಿ ಭೀಮ ಬಾಹಪ್ಪಳಿಸಿದನು (ಕುವ್ಯಾಭ. ೦೦-೨೦); ಗಾಢಮುಷ್ಟಿಯೊಳೌಕಿ ಬಿಡದಲ್ಲಾಡಿಸಿದನಾ ಧನುವನದು ಕೈಗೂಡದಿರೆ ಕೈದೆಗೆದು ಬಾಹಪ್ಪಳಿಸಿ ಬೊಬ್ಬಿಱಿದ (ಕೌರಂ. ೦-೦೩-೦೬). [ಬಾಹು + ಅಪ್ಪಳಿಸು]

**ಬಾಹರಪುಟ** (ನಾ). (?) : ಬತ್ತೀಸಕಡಿಯ ಬಾಹರಪುಟದ ಗುಳಿಪದ ಕಣಂಗಳ ಕುಳಿಶದಳಂ (ಅನಂತ. ೦೯-೬ ಪ). [?]

**ಬಾಹಲ್ಯ** (ನಾ). ಅಗಲ ; ವಿಸ್ತಾರ : ತ್ರಿಭುವನಭವನಕಲಶಾಯಮಾನವುಂ ಯೋಜನದ್ವಿತಯಾಂತ್ಯಬಾಹಲ್ಯಮುಮಷ್ಟಯೋಜನಮಧ್ಯಬಾಹಲ್ಯಮುಂ . . . ಸ್ಫಾಟಿಕಶಿಲಾತಲದ ಮೇಗರ್ಧಯೋಜನಬಾಹಲ್ಯದಿಂ ಘನೋದಧಿಯಿರ್ಕುಂ (ಸುಕುಮಾ. ೧೦-೭೩ ಪ); ಸೀಮಂತಕಾಭಿಧಾನೇಂದ್ರಕಂ ಕ್ರೋಶೈಕಬಾಹಲ್ಯಂ . . . ತತ್ಪ್ರಕೀರ್ಣಕನಿಕರಂ ತದುಭಯಬಹಲ ಕಲಿತಸಂಖ್ಯಾಬಾಹಲ್ಯಂ (ತತ್ತ್ವಸೂ. ೦೩೦). [ಸಂ.]

**ಬಾಹಾಬಲ** (ನಾ). ತೋಳ್ಬಲ; ಭುಜಶಕ್ತಿ: ಪಲರಾ ವಂಶಜರವನೀತಲಮಂ ಪಾಳಿಸಿದರ[ಳ]ವಿನದಟನ ಬಾಹಾಬಲದ ಕಲಿತನದ ಚಾಗದ ನೆಲೆಯ[ನಿಸಿ] ದುದಾರವೀರಗುಣಗಣನಿಳಯರ್ (ಕಇಉ. ೨-೨-೦೬ ; 1058). [ಸಂ.]

**ಬಾಹಾವಿಹೀನತ್ವ** (ನಾ). ತೋಳುಗಳಿಲ್ಲದಿರುವಿಕೆ ; ಭುಜಗಳಿಲ್ಲದಿರುವಿಕೆ : ವಿಚಾರವಿಲ್ಲದುಲಿಯಲ್ ಬಾಹಾವಿಹೀನತ್ವದಾಯಾಸಂ ಬಂದುದು (ಶಾವಕ. ೨೯). [ಸಂ.]

**ಬಾಹಾಸ್ಫಾಲನ, ಬಾಹಾಸ್ಫಾಳನ** (ನಾ). (ಕದನಕ್ಕೆ ಸಿದ್ಧವಾಗಿರುವುದನ್ನು ಸೂಚಿಸಲು) ತೋಳುಗಳನ್ನು ಚಪ್ಪರಿಸುವುದು ; ಸೆಡ್ಡು ಹೊಡೆಯುವುದು : ಕುವರನ ಬಾಹಾಸ್ಫಾಲನರವಮುರ್ಬಿಸಿಯಗಿದು ಪಾಡಿ ಬಿಡದೊದಱುತ್ತಿರ್ದಪೊಲಾದುದು ತದ್ಗಪ್ಪರನಿವಹಪ್ರಭವಾತಿಭೀಷಣಂ ಪ್ರತಿಘೋಷಂ (ಚಂದ್ರಪು. ೩-೭೭). **ಬಾಹಾಸ್ಫಾಳನ** : 'ಬಾಹಾಸ್ಫಾಳನಂಗೆಯ್' ಪರಾ. [ಸಂ.]

**ಬಾಹಾಸ್ಫಾಲನಂಗೆಯ್, ಬಾಹಾಸ್ಫಾಳನಂಗೆಯ್** (ಕ್ರಿ). ತೋಳುಗಳನ್ನು ಚಪ್ಪರಿಸಿಕೊಳ್ಳು ; ಭುಜಗಳನ್ನು ತಟ್ಟಿಕೊಳ್ಳು : ಸಂತಸದೆ; ಬಾಹಾಸ್ಫಾಲನಂಗೆಯ್ದು ದಿಗ್ವಲಯಂ ಮಾರ್ದನಿಯಿಟ್ಟಪೋಲ್ ಗಜಱಿದಂ ಚಾಳುಕ್ಯಕಂಠೀರವಂ (ಗದಾಯು. ೬-೪೭) ; ಓರೊರ್ವರುದೀರ್ಣರೋಷಾವೇಷಪರುಷಪಾಟಲಿತಕಟಾಕ್ಷದಿನಡರೆ ನೋಡಿ ಬಾಹಾಸ್ಫಾಲನಂಗೆಯಲೊಡನೆ (ಶಬಶಂ. ೯-೭೦ ಪ). **ಬಾಹಾಸ್ಫಾಳನಂಗೆಯ್** : ಅಲ್ಲಿ ಪರಿಪರಿದಾಡಿ ಮುಂತೆ ಬಾಹಾಸ್ಫಾಳನಂಗೆಯ್ದು ಕುಣಿದಾಡಿ (ಬಸರ. ೯-೩೦).

[ಬಾಹಾಸ್ಫಾಲನ + ಕೆಯ್[1]]

**ಬಾಹಾಸ್ಫಾಳನ** 'ಬಾಹಾಸ್ಫಾಲನ' ನೋ.

**ಬಾಹಾಸ್ಫಾಳನಂಗೆಯ್** 'ಬಾಹಾಸ್ಫಾಲನಂಗೆಯ್' ನೋ.

**ಬಾಹಿ** (ನಾ). ದೇವಸ್ಥಾನದ ಹೊರಗಿನ ಪರಿಚಾರಕರಲ್ಲಿ ಒಬ್ಬ : ಬಾಣಸದ ಅಪ್ಪಣೆ ಐದಕ್ಕಂ ಗದ್ಯಾಣಂ ಇಪ್ಪತ್ತು ಬಾಹಿಯವರು ಐದಕ್ಕಂ ಗದ್ಯಾಣಂ ಇಪ್ಪತ್ತು ಮಾಲೆಗಾಱರು ಹತ್ತೂ ಅರ್ಧಕ್ಕಂ ಗದ್ಯಾಣಂ ನಾಲ್ವತ್ತೆರಡು (ಎಕ. III. ತಿರುಮ. ೯೭-೯೩ ; 1276). [?]

**ಬಾಹಿಗೆ** (ನಾ). ಹೊರಭಾಗ ; ಹೊರವಲಯ : ಪೊಬಲಂ ಪೊಱಮಟ್ಟು ಪುರದ ಬಾಹಿಗೆಯನೆಯ್ದುವಾಗಳ್ ಗಾಂಗೇಯದ್ರೋಣಕೃಪವಿದುರಾದಿಗಳ್ ಕೊಂತಿವೆರಸೆಯ್ದೆವಂದು (ಶಂಶಪಾ. ೭-೨೦ ಪ). [<ಸಂ. ಬಾಹೀಕ]

**ಬಾಹಿತ್ಥ** (ನಾ). ಆನೆಯ ಕುಂಭಸ್ಥಳದ ಕೆಳಗಿನ ಹಣೆಯ ಪ್ರದೇಶ : ಕರಮುಂ ಸಂ[ಜೋ]ಗಮುಂ ಕುಂಭಮನುರವಣೆಯುಂ ಗ್ರಾಹಮುಂ ಕರ್ಣ

ಜಾಲಾಂತರವುಂ ನಿರ್ಯಾಣವುಂ . . . ಪುಷ್ಕರವುಂ ಬಾಹಿಸ್ಥ [ತ್ಥ] ಮುಂ ಲೋಚನಫುಟವುನಿಷ್ಕೋಶಾಂತವುಂ ಕೂಡೆ ತೀರೀ ಶರಸಂಘಾತಂಗಳುಚ್ಚುತ್ತಿರೆ ಕೆಡೆದುವಿಭಾನೀಕಂ (ವರ್ಧಮಾ. ೯-೭೯).

[<ಸಂ. ವಾಹಿತ್ಥ. /p ಸಂಸ್ಕೃತದಲ್ಲಿ 'ವಾಹಿಸ್ಥ' ಎಂಬ ಶಬ್ದರೂಪವೂ ಇರಬಹುದೆಂದು ಕೋಶಗಳಲ್ಲಿ ಹೇಳಿದೆ]

**ಬಾಹಿತ್ರ** 'ಬಹಿತ್ರ' ನೋ.

**ಬಾಹಿರ** (ಗು). ೧. ಹೊರಭಾಗಕ್ಕೆ ಸೇರಿದ. ೨. ಹೊರದೂಡಲಾದ; ಬಹಿಷ್ಕೃತವಾದ. (ನಾ). ೩. ಹೊರಭಾಗ ; ಪೊರವಲಯ : ಬಹಿಃಪ್ರದೇಶ : ಕಟ್ಟಿದ ಮುಟ್ಟು ಬಾಹಿರಿಗೆ ಕಿಚ್ಚೊಡವಂದುದು (ತಂತ್ರಪು. ೯-೮೨) ; ಬಾಹಿರದ ಪಾಳ್ದೇಗುಲದೊಳಗೆ ಸಾವಿರ ಸೊಡರು ಗಳನೆತ್ತಿ ಭಜಿಸುವ ನೇಮವಾತಂಗೆ (ಬಸವು. ೩೦-೩೯). ೪. ಹೊರತಾದುದು; ಸಂಬಂಧವಿಲ್ಲದುದು : ಅತೀತವಾದುದು : ಆ ತಪ್ಪುತೀರ್ಮಾನ ವೇನೆಂದರೆ. ಭಾರತದ ಪ್ರಾಚೀನ ತತ್ತ್ವಜ್ಞಾನ ಬೌದ್ಧಿಕತತ್ತ್ವಜ್ಞಾನಕ್ಕೆ ಬಾಹಿರ ವೆಂಬುದು (ತತ್ತ್ವಶಾ. ೯) ; ಪುಣ್ಯಪಾಪಗಳಿಂದ ಬಾಹಿರವಾದ . . . ಬ್ರಹ್ಮವೆ ನಸ್ಸುಗಮ್ಯ (ಸಚಿವಾ. I, ೫೯೧). ೫. ಅಯೋಗ್ಯವಾದುದಂ : ಬಾಹಿರವ ಕಳೆದು ಎಡೆನಾಣ್ಯವನುಳಿದು ಹಲವು ನಾಣ್ಯವ ಕಳೆದು ಸಲುವ ನಾಣ್ಯವ ಹಿಡಿದು ನೋಡುವೆನಯ್ಯಾ (ಶಿವ. ೨೭-೭೭). ೬. ಅನರ್ಹ : ಅಯೋಗ್ಯ; ಭರತವಂಶದ ಬಾಹಿರರು ನಿಮ್ಮರಸುಗಳು (ಕುವ್ಯಾಉ. ೬-೧೨) ; ಕ್ಷಿತಿಗೆ ಬಾಹಿರನಾದೆನ್ನ ಜೀವಿತವ ಹಿಡಿದಿರಲಾಜಿಸು (ಕೌಶಿಕಾ. ೨೨-೭೩). ೭. ಕ್ಷುದ್ರ : ಅಲ್ಪ ; ಹೀನ : ವಚನಿಸಿ ಮಾಡದಿಹ ಬಾಹಿರರು ನಾವಲ್ಲ (ಕುವ್ಯಾದ್ರೋ. ೧-೪೦) ; ಅಂತಕನ ಬಾಳ ಘಲ್ಲಣೆಗೆ ಬೆದರುವರೆ ಬಾಹಿರರಂತೆ ಮರಣದಲಿ (ಭಿಭಾಗ. ೨-೦-೨೬). [ಸಂ.]

**ಬಾಹಿರಂಗ** (ಗು). ೧. ಹೊರಭಾಗಕ್ಕೆ ಸಂಬಂಧಿಸಿದ ; ಬಾಹ್ಯದ ; ಬಹಿರಂಗದ. (ನಾ). ೨. ಹೊರಗೆ ಕಾಣುವಂಥದು : ರಾಕ್ಷಸರ ವಧೆಗಾ ಸುಲಭ ತನ್ನಿಚ್ಛೆಯಲ್ಲಿ ಜನಿಸಿಯೆ ನಳಿನನಾಭನು ಬಾಹಿರಂಗದ ರೂಪ ಧರಿಸುವನು (ಭಿಭಾಗ. ೦೦-೩೬-೬೭). ೩. (ಅಲಂ) ತೋರಿಕೆ ; ಆಡಂಬರ : ಮೋಹವುಳ್ಳೊಡೆ ತಪ್ಪತ್ತೈಲಪೂರಿತ ಘನಕಟಾಹದೊಳ್ಕಡಪ ಸುವನೇ ತಂದೆ ತನಯನಂ ಬಾಹಿರಂಗದ ಶೋಕವೊಂದು ಜಜೀಯದೆ ಶೋಕಂ (ಕೈಮಾಹಾ. ೦೩-೫೬). [ಸಂ.]

**ಬಾಹಿರಗಿತ್ತಿ** (ನಾ). ವೇಶ್ಯೆ : ಸೂಳೆ : ಕೃತ್ರಿಮದ ರೂಪುಗಳು ಬಾಹಿರಗಿತ್ತಿಯರು (ಬಸವು. ೪೦-೫೫). [ಬಾಹಿರ + — ಗಿತ್ತಿ]

**ಬಾಹಿರತನ** (ನಾ). ಅಯೋಗ್ಯತನ : ನಿನಗೆ ಸಾರಥಿಯಾದ ಬಾಹಿರತನವೇ ತಾನದು ಸಾಲದೇ (ಕುವ್ಯಾಕ. ೯-೩೭). [ಬಾಹಿರ + — ತನ]

**ಬಾಹಿರವಟ್ಟ** (ನಾ). ಹೊರಗಿನವರ ನಾಣ್ಯ ವಿನಿಮಯಕ್ಕಾಗಿ ಕೊಡ ಬೇಕಾದ ಸೋಡಿ : ಪಟ್ಟಣದೊಳು ಜನ ಕೊಟ್ಟು ಹಣವನೆಡೆವಟ್ಟ ಬಾಹಿರ ವಟ್ಟವೆಂದು ದಿಟ್ಟತನದೆ ಪೆಸರಿಟ್ಟು ವಟ್ಟವ ಕೊಂಬ ಸೆಟ್ಟಿಗಳಿರುತಿಹರಲ್ಲಿ (ಅಂಜನ. ೩-೬೩). [ಬಾಹಿರ + ವಟ್ಟ]

**ಬಾಹಿರಸುಂಕ** (ನಾ). ಒಂದು ಬಗೆಯ ತೆರಿಗೆ : ಮಾಜಲಿ × × ಕೊಳಲಿ ಬಾಹಿರಸುಂಕವಿಲ್ಲ (ಕರ್ನಾಇ. XX, ೨೦೬-೦೦ ; ೯). [ಬಾಹಿರ + ಸುಂಕ$_1$]

**ಬಾಹಿರಾತ್ಮ** (ನಾ). ನೀಚವ್ಯಕ್ತಿ ; ದುಷ್ಟಾತ್ಮ : ಬಾಹಿರಾತ್ಮರು ಗೌಳತಾಪಸರೋಹಿಲುಯ್ಯನು ಹುಗದಹಗೆ ಶಿವಗೇಹದಲಿ ಹಗಲೆಯ್ದೆ ಕಾವಲನಿರಿಸಿ . . . ಬಾಗಿಲ ಕದವನುಜೆ ಮೋಹಿ ಬೀಯಗವಿಕ್ಕಿಯನಿಬರು ಗಹಗಪಿಸಿ ನಗುತ (ಬಸವು. ೯೩-೯೬). [ಸಂ. ಬಾಹಿರಾತ್ಮನ್]

**ಬಾಹು$_1$, ಬಾಕು$_1$** (ನಾ). ೧. (ಪೆಟ್ಟು, ಖಾಯಿಲೆ ಮೊದಲಾದುವು ಗಳಿಂದ ಉಂಟಾಗುವ) ಊತ ; ಉಬ್ಬು ; ಶೋಫ : "ಶೋಫಃ, ಶ್ವಯಥುಃ — ಈ ೨ ಬಾ(ವು) ಹು" (ಹಲಾಯು. ೯೬-೪೯೬) ; ಮರುಳ ಮನ್ನಣೆಯಂತೆ ಬಾಹಿನ ದೊಳ್ಳಿನಂತೆ ಸೂಳೆಯ ಕರೆಪದಂತೆ . . . ಕಡೆ ಬೊಳ್ ಪೇಸುಪಥಮುವಾಶೋಭೆಯುಮಾಗದೆ ಪೋಗದು (ರಮಾನ್ಯ. ೭-೧೨೨) ; ತೊಡೀಗಣೆಗಿಲಿಗಳವೊಂದಿರೆ ಮಡುಗಿಸಿ ಕಟಿಯಿಂದವಂತದಂ ಕಟ್ಟಲೊಡಂ ನೆಜೀಯುಡುಗುಂ ಬಾಹು ವಿಷಂ ಪಜಾಪಡುಗುಂ (ಖವುದ. ೧೬-೭೦). ೨. ಹುಣ್ಣು ; ವ್ರಣ : ವೇದವತಿಯ ಮೊಗ ದೊಳೊಂದು ಬಾಹು ಪುಟ್ಟಿ ಪೊಲ್ಲರಲ್ಲದರು ಪೊಲ್ಲಲಿಂದು ನುಡಿದೊಡೀ ಬಾಹಾದುದೆಂದೆಲ್ಲರ್ಗಂ ತಿಳಿಯೆ ಪೇಟ್ದು (ಪಂಪರಾಮಾ. ೧೬-೩೬ ವ).

**ಬಾಕು$_2$** : ೧. ಮಂಡಲವಿಷಕ್ಕೆ ಆರುವೇಗ. ಅದರಲ್ಲಿ ಮೊದಲ ವೇಗ ಮುಖ ದಲ್ಲಿಯು ದೇಹದಲ್ಲಿಯು ಹಳದಿವರ್ಣವನು ಮೈಯಲ್ಲಿ ಬಾಕನು ಉಂಟು ಮಾಡುವದು (ಖಪ್ತ. ೯-೩) ; ನಡುಮಳಿಗಾಲದಲ್ಲಿ ಚಂದ್ರಯ್ಯಗೌಡರ ಮೈಗೆ ಬಾಕು ಬಂದಿತು (ಕಾನೂರು. ೫೬೩). 'ಬಾವು' ಪರಾ.

[ಬಾ$_1$ + — ಹು$_2$ (< — ಪು$_2$)]

**ಬಾಹು$_2$** (ನಾ). ೧. ತೋಳು ; ಭುಜ : "ದೋರ್ಬಾಹು ಭುಜಮೆನಲು ತೋಳಿಂಗೆ ನಾಮಂ" (ಮಂಗರಾ. ೯೩-೭) ; ದಿಕ್ಕರಿಕರಾನುಕಾರಿಗಳಪ್ಪ ಬಾಹುಗಳಿಂದಮೋರೊರ್ವರಂ ತೆಗೆದಪ್ಪಿ (ಶಂಕಥಾ. ೯-೩೩ವ); ಖಳನ ಬಾಹುವ ನೊದೆದು ತುಜಬಿಗೆ ನಿಲುಕಿ ಕುಸುಬಿದನು (ಕುವ್ಯಾಶ. ೨೨-೩೩). ೨. ಹನ್ನೆರಡುಅಂಗುಲದ ಒಂದು (ಉದ್ದಳತೆಯ) ಪ್ರಮಾಣ. ೩. [ಜ್ಯೋತಿ] ಆರ್ದ್ರಾನಕ್ಷತ್ರ. ೪. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮ ನಯನ ಕರ್ಣ ಕರ ಪದ . . . ಬಾಹು ಕಿವಿಗಳೆರಡಜಿ ನಾಮಂ (ವ್ಯವಹಾ. ೯-೨). ೫. [ರೇಖಾಗ್ರಣ] ಆಕೃತಿಗಳ ಹೊರಮೈಯನ್ನು ರಚಿಸುವ ರೇಖೆ ; ಭುಜರೇಖೆ : ಎರಡು ತ್ರಿಭುಜಗಳ ಕೋಣಗಳು ಪರಸ್ಪರ ಸಮನಾಗಿದ್ದರೆ, ಅವುಗಳ ಪರಸ್ಪರ ಬಾಹುಗಳು ಒಂದೇ ಪ್ರಮಾಣದಲ್ಲಿರುತ್ತವೆ (ಗಣಿತ. ೦೯). [ಸಂ.]

**ಬಾಹುಗಡಿ** (ನಾ). ಮುರಿದ ತೋಳು ; ತುಂಡಾದ ತೋಳು : ಕಂಧರ ಗಡಿ ಬಾಹುಗಡಿ ಹಸ್ತಗಡಿ ನೇರಂದದ ನಡುತೊಡೆಗಡಿಯ ವೃಂದಾರಕ ವಿರೋಧಿಗಳು ಬಿದ್ದರು ಕಾಮನಂದನಬಾಣಗಳಿಂದೆ (ಪೋಹತ. ೩೩-೨೨).

[ಬಾಹು$_2$ + ಕಡಿ$_3$]

**ಬಾಹುಗತ್ತರಿ** (ನಾ). ಮಲ್ಲಯುದ್ಧದ ಒಂದು ಪಟ್ಟು ; ತೋಳು ಗಳಿಂದ ಪಟ್ಟಿಗೆ ಸಿಕ್ಕಿಸಿ ಹಿಡಿಯುವುದು : ತುಡುಕಿ ಪಿಡಿದು ತೊಡೆಗಳಂ ನಡುವಂ ಚೂರ್ಕರಿಸಿ ಬಾಹುಗತ್ತರಿಯಿಂ ಗಳವನೊತ್ತುವುದುಂ (ಮಹಾನೀ. ೬-೭೭ ವ). [ಬಾಹು$_2$ + ಕತ್ತರಿ$_2$]

**ಬಾಹುಜ** (ನಾ). ೧. ಕ್ಷತ್ರಿಯ ; ಪಾರ್ಥಿವ ; p ವಿಷ್ಣುವಿನ ತೋಳಿನಿಂದ ಕ್ಷತ್ರಿಯರು ಹುಟ್ಟಿದರೆಂಬ ಪೌರಾಣಿಕನಂಬಿಕೆಯಿದೆ : ಕಾದಿ ಸಾವುದು ಮೇಣು ರಿಪುಭಟನಾದವನ ನೆತ್ತಿಯಲಿ ಸಬಳವ ಕೋದು ಕೊಂಬುದು ನೆಲನನಿದು ಬಾಹುಜರ ಮಕ್ಕಳಿಗೆ (ಕುವ್ಯಾಉ. ೦-೯) ; ವೈಹಾಳಿಯನುಜಿದು ಬಾಹುಜನಿವಹಂ ಬೀಡಂ ಪುಗುತರೆಯುಂ (ರಾಮಾಶ್ವ. ೨೨-೦೬) ; ಕಾದುವುದು ಬಾಹುಜರ ಧರ್ಮ (ನಾಗಂ. ೩೯-೦೩). ೨. ಗಿಳಿ. [ಸಂ.]

**ಬಾಹುಜಿಗೆ** 'ಬಾವುಜಿಗೆ' ನೋ.

**ಬಾಹುತಳ** (ನಾ). ಕುಸ್ತಿಯ ಒಂದು ವರಸೆ ; ಎದುರಾಳಿಯನ್ನು ತೋಳಿನ ಒಳಗೆ ಸಿಕ್ಕಿಸಿಕೊಳ್ಳುವುದು,— ಹಿಡಿಯುವುದು : ಭುಜಗ ಬಂಧಂ ತೋರಹಸ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಜಿದರ್ (ಶಬಶಂ. ೯-೭೫ ವ). [ಸಂ. ಬಾಹುತಲ]

**ಬಾಹುದಣೆ** (ನಾ). ಮಲ್ಲಯುದ್ಧದ ಒಂದು ಪಟ್ಟು,— ವರಸೆ : ಪಾಸಗೆ ವನ್ನಿಮುಟ್ಟಿ ಚಟ್ಟು ಸಿರಣವಟ್ಟಿ ಬಾಹುದಣೆ ಖಮ್ಮರಿ ಕತ್ತರಿ . . . ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಶಂಪ್ರಪು. ೫-೭೬) ;

ತಿರುಣಿ ಕುಳಾಡೆ ಬಾಹುಗ್[ದ್]ಣೆ ಸುಭಾಹುಡೆ . . . ಪಟ್ಟಿಕತ್ತರೆಗಳೆ ನಿಪ್ಪ ಜಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ಶ್ರೀಪುರಿ. ೨೬-೦೬). 'ದಣುವಟ್ಟಿ' ಪರಾ. [ಬಾಹು$_2$ + ದಣ್$_0$]

**ಬಾಹುದೆಕ್ಕೆ** (ನಾ). ತೋಳಿನ ತೆಕ್ಕೆ ; ಬಾಹುಬಂಧನ : ಭರತೇಶ . . . ಶ್ರೀಹಂಸನಾಥಯೆಂದೊಡನೆದ್ದು ಕುಳಿತನಾ ಬಾಹುದೆಕ್ಕೆಯು ಪಟ್ಟದರಸಿ ಆ ಹೊಶ್ತಿನೊಳೆ ರಾಯನಳುವ ಕನಸ ಕಂಡು ದೇಹ ಕಂಪಿಸುತಿರ್ದಳೊಡನೆ (ಭರತ. ೭೩-೦೦). [ಬಾಹು$_2$ + ತೆಕ್ಕೆ$_1$ (<ತಟ್ಕೆ)]

**ಬಾಹುಪುರಿ** 'ಬಾಪುರಿ' ನೋ.

**ಬಾಹುಪೂರ** (ನಾ). ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ಕೇಯೂರ : " ಬಾಹುರಿಕೆಯೆನಲ್ಕೆ ಬಾಹುಪೂರಕೆ [ಶಾಣಂ. ರಕ್ಷೆಗೆ] ನಾಮಂ " (ಶಾಠಿ. ೩೩); ಬಂದುಗೆಯ ಬಾಹುಪೂರಮುಂ ದಾಡಿಮಿಬೀಜದ ಕರ್ಣಾವತಂಸಮುಂ . . . ಮಿಗೆ ಸೊಗಸಂ ಮೂವಡಿಸೆ (೧೦೪. ೭-೦೦ ವ); ಸಲ್ಲಲಿತಕಾಂತಿಯ ಕಳಲ್ಚುವ ಭುಜಗಳಿಂದುರಗಬಾಹು ಪೂರಗಳಿಂದಲವಿರತಂ ವಿಶ್ವತೋಬಾಹು ಸಿಂಹಾಸನಾಗ್ರದೊಳು ಕಣ್ಗೊಳಿ ಸಿರ್ದನು (ಸಂಪಿಷಾ. ೩-೬). [ಸಂ.]

**ಬಾಹುಪೂರಕ** (ನಾ).= ಬಾಹುಪೂರ : ಒದವಿದ ನವ್ಯಲತಾಮಧ್ಯದ ಕುಸುಮಾಳಿಯೊಳೆ ಮೊರೆವ ಮಱಿದುಂಬಿಗಳಂ ಮುದದಿಂ ಕೀಲಿಪವೋಲ್ ನೀಲದ ರವೆಯುದ ಬಾಹುಪೂರಕಂಗಳನಿತ್ತರ್ (೧೦೪. ೦೦-೩೬); ಶ್ರೀಪಥು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮಶ್ರೀವಧು ಬಾಹು ಪೂರಕದವೋಲ್ ಭುಜದೊಳ್ ನಲಿವಂತು . . . ಪಾಲಿಸಿದನುರ್ವರೆಯಂ ಕಲಿ ಸೋಯಿಬಲ್ಲಹು (ಎಕ. VI, ಕಡೂರು. ೦೨-೨; 1233). [ಸಂ.]

**ಬಾಹುಪೂರಯ**(ನಾ).= ಬಾಹುಪೂರ : "ಕೇಯೂರಮೆನೆ ಬಾಹುಪೂರಯ ಮಕ್ಕು" (ಮಂಗರಾ. ೦೦೦-೨೩); ಬಾಹುಪೂರಯಮಂ ತೋಳ್ಗೆ ಕೈ ಕೊಳಿಸಿ (ಬಸವ. ೬-೦೯); ಪದಕದ ಬಾಹುಪೂರಯುದ ತೊಳತೊಳಗುವೆಳ ಮಾಣಿಕದ ಕರ್ಣಪೂರದ ಮಹಾಮುದ್ರಿಕೆಗಳ . . . ಸೊಬಗನಡಿಯಿಟ್ಟನ ಪ್ರತಿಮಾನವನೀಶನು (ಹಕಶಾ. ೪-೨). [<ಸಂ. ಬಾಹುಪೂರಕ]

**ಬಾಹುಬಲ** (ನಾ). ತೋಳಿನ ಬಲ ; ಭುಜಶಕ್ತಿ : ಬಾಹುಬಲವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು(ಶಾಂತಿಪು. ೪-೪೦ ವ); ಬಾಹುಬಲ ಬಲವಲ್ಲ ದೈವ ದ್ರೋಹಿಗಳಿಗೆ (ಶಬ್ದಾಶಿ. ೦೩-೦೯) ; ಭರತಖಂಡದ ಆಧುನಿಕ ದುರ್ಗತಿಗೆ ಪ್ರಧಾನಕಾರಣ ಬಾಹುಬಲದ ಅಭಾವ (ಏಕೀಕಮ.೯೭೭). [ಸಂ.]

**ಬಾಹುಬಲಿ** (ನಾ). ೧. ಬಾಹುಬಲವುಳ್ಳವನು. ೨. ಆದಿತೀರ್ಥಂಕರನ ಎರಡನೆಯ ಮಗ : ಇಂತಾದೊಡೆಮಗೆ ಬಾಹುಬಲಿಯ ಸಮರಸಂಘಟ್ಟ ದೋಹಳಮಿದು ದರಿದ್ರಂಗೆ ಹೀನಗರ್ಭದೋಹಳದಂತಾದುದು (ಆಂಪು. ೦೪-೨೦೨ ವ). [ಸಂ. ಬಾಹುಬಲಿನ್]

**ಬಾಹುಬಳೆ** (ನಾ). = ಬಾಹುಪೂರ : ಬಾಹುವಳಯ — ಬಾಹುಬಳೆ (ಕವಿಮ. ೨೯೯ ಪ್ರಯೋ). [<ಸಂ. ಬಾಹುವಲಯ]

**ಬಾಹುಮುರಿ** (ನಾ). = ಬಾಹುಪೂರ : ಶರೀರಕ್ಕೆ ಆನಂದಕರವಾಗಿ . . . ಅರಸುಗಳ ಮನಸ್ಸೆಂಬ ಸಮುದ್ರಕ್ಕೆ ಕೆರೆಯೋಪಾದಿಯಲ್ಲಿ ಪ್ರಕಾಶಿಸುವುದೇ ಬಾಹುಮುರಿಯು ಗುಣಗಳು (ಸಕಶ್ಕೃ. ೩೯) ; ಪೂರ್ವದ ಕವಿಗಳು . . . ರಾಜರು ಧರಿಸುವ ಕಿರೀಟ, ಭುಜಕೀರ್ತಿ, ಏದೆಹಾರ, ಬಾಹುಮುರಿ . . . ಮಂಜೂರಿ ಮುಂತಾದುವುಗಳನ್ನೂ ಬಣ್ಣಿಸಿರುವರು (ಹುಬ್ಬಿಹ. ೬೩). [ಬಾಹು$_2$ + ಮುರಿ$_3$ (< ಮುರಿವು)]

**ಬಾಹುಮೂಲ** (ನಾ). ಕಂಕುಳು ; ಬಗಲು : "ಕಕ್ಷಂ, ಬಾಹುಮೂಲಂ— ಈ ೨ ಕೌಂಕುಟೆಟ್" (ಹಲಾಯು. ೯೬-೩೭೦) ; ಎವೆಯಿಕ್ಕದೆ ನೋಡುವ ನರರಮರರ ಕಣ್ಗಳೊಳಂಗರಾಜನ ಬಯ್ತಿಟ್ಟವುರ್ದಂ ಕೊಳೆ ತಳೆದು ನಾಭಿಮೂಲಮುಂ ಬಾಹುಮೂಲಮುಂ ಸುರವಧುವಾ (ಆರಿಕೃ. ೯-೩೩) ; ಒಂದು ಸರಿಸಿಯ ತಡಿಯುಲಳವಡೆ ನಿಂದು ಸಂವರಿಸಿದನು ಗದೆಯನು ಬಾಹುಮೂಲದಲಿ (ಕುಮ್ಯಾಗ. ೪-೭). [ಸಂ.]

**ಬಾಹುರಕೆ** 'ಬಾಹುರಕ್ಕೆ' ನೋ.

**ಬಾಹುರಕ್ಕೆ**, ಬಾಹುರಕೆ (ನಾ). ೧. ಯೋಧರು ತೋಳಿಗೆ ರಕ್ಷಣೆ ಯಾಗಿರಲೆಂದು ತೊಡುವ ಕವಚ ; ಭುಜತ್ರಾಣ : ಗುರು ಕವಚ ಕರ್ಣಂ ಬಾಹುರಕ್ಕೆ ಸುರಸಿಂಧುನಂದನಂ ಸೀಸಕಂ (ಗದಾಯು. ೨-೨೩) ; ಎಕ್ಕತುಳಕ್ಕೆಜಿವ ವೈರಿ ನಿನ್ನಿಕ್ಕಿದ ವಜ್ರದಮುಪ್ಪುರಕೆ ಸೀಸಕವೊನ್ನಿದ ಬಾಹುರಕ್ಕೆ ತಾವಕ್ಕಟ ತಾಯ ಉಟ್ಟ ನಿಜಿ ಬಿಟ್ಟ ಸಿರಂ ಮುಗಿದಿರ್ದ್ದ ಕಯ್ ಸಮನ್ನಿಕ್ಕಿದ ಕೈದು ಹೊಕ್ಕ ಜಳ . . . ಆಜಿಯೊಳ್ (ಎಕ. VI, ಕಡೂರು. ೩೫-೩೯ ; 1136) ; ನುಗ್ಗಾದ ಗುಳವನು ಬಿರಿದ ಸೀಸಕ ಬಾಹುರಕ್ಕೆಯ ಮುಱಿದ ಬಲ್ಲೆಹದ ಅರೆಗಡಿದ ಬಿಲ್ಲುಗಳ . . . ಮುಕ್ಕಾದ ಕೈದುವ ತರಿಸಿ ಕಳುಹಿಸುತಿರ್ದನತಿರಭಸದಲಿ ಕಲಿದ್ರೋಣ (ಕುಮ್ಯಾದ್ರೋ. ೦೩-೦೬). ೨. ಆನೆಯ ಎರಡು ಪಕ್ಕಗಳಿಗೂ ರಕ್ಷೆಯಾಗಿ ಕಟ್ಟುವ ರಂಚೆ ; ಪಕ್ಕರಕ್ಕೆ: ಮದಜಳದ ಕವಡಂ ಕದರಿ ಕೆದಱುವ ಕರ್ಣ ಚಾಮರದ ಕತ್ತಲೆಸಿರ್ಪಿನ ಬಾಹ[ಹು]ರಕ್ಕೆಯುಂ (ಅಜಿತಪು. ೦೪-೬ ವ). P ಇದು 'ಪಕ್ಕರಕ್ಕೆ' ಎಂಬ ಶಬ್ದ ಮತ್ತು ಅರ್ಥಗಳ ಸಾಮ್ಯದಿಂದ ಆದ ಪ್ರಯೋಗವಿರಬಹುದು. **ಬಾಹುರಕೆ:** ೧. ಕರತುಷಾರದ ಲಿವರು ಮೋಜಿಯ ತಿರುಹೆ ನನೆದವು ಬಾಹುರಕೆ ಹಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚಮರಿಗಳು (ಕುಮ್ಯಾದ್ರೋ. ೩-೪೦). P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. [<ಸಂ. ಬಾಹುರಕ್ಷಾ]

**ಬಾಹುರಕ್ಷೆ** (ನಾ). = ಬಾಹುರಕ್ಕೆ ೧ : ಜೋಡು ಸೀಸಕ ಬಾಹುರಕ್ಷೆಗಳ ಮುರುಹಿ ಬಗಿದನು . . . ರಥವೇಱಿದನು ಕಲಿದ್ರೋಣ (ಕುಮ್ಯಾದ್ರೋ. ೯-೦೩) ; ವೀರಪಟ್ಟದ ಬಾಹುರಕ್ಷೆಗಳಿಂದ ಖಳನೆಸೆದ (ಕೌರಾ. ೪೦-೨). [ಸಂ. ಬಾಹುರಕ್ಷಾ]

**ಬಾಹುರಿ** 'ಬಾಪುರಿ' ನೋ.

**ಬಾಹುರಿಕೆ** (ನಾ). ಬಾಹುಪೂರ ; ಕೇಯೂರ : "ಬಾಹುರಿಕೆಯೆನಲ್ಕೆ ಬಾಹುಪೂರಕೆ [ಶಾಣಂ. ರಕ್ಷಗೆ] ನಾಮಂ" (ಶಾಠಿ. ೩೩). [< ಬಾಹುರಿ]

**ಬಾಹುಲ** (ಗು). ೧. ಅನೇಕವಾದ ; ಅಧಿಕವಾದ. (ನಾ). ೨. ಹೆಚ್ಚಳ ; ಆಧಿಕ್ಯ ; ವಿಪುಲತೆ. ೩. ಕಾರ್ತೀಕಮಾಸ. ೪. ಬಾಹುರಕ್ಷೆ. ೫. ಅಗ್ನಿ. [ಸಂ.]

**ಬಾಹುಲಿ** 'ಬಾವುಲಿ$_2$' ನೋ.

**ಬಾಹುಲೇಯ** (ನಾ). ಕಾರ್ತಿಕೇಯ ; ಸ್ಕಂದ. [ಸಂ.]

**ಬಾಹುಲ್ಯ**, ಬಾಹುಳ್ಯ (ನಾ). ೧. ಹೇರಳ ; ಆಧಿಕ್ಯ. ೨. ಮಹತ್ತ್ವವುಳ್ಳದು ; ಘನವಾದುದು : ಕೃತಿ ಬಾಹುಲ್ಯಮಪ್ಪುದೆಂದವ ಬುಧರು ಬಲ್ಲಂತನೇಕರೊರೆದಿಹರು (ಕೃಷ್ಣಪಿ. ೧-೨೨). ೩. ವಿಸ್ತಾರ : ಚಿತ್ರೆಯೆಂಬ ಧಾತ್ರಿ ಮೊದಲ್ಗೊಂಡು ಕೆಳಗಶೀತಸಹಸ್ರೋತ್ತರಲಕ್ಷಯೋಜನಬಾಹುಲ್ಯ ಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿರ್ಕುಂ (ಸುಕುಮಾ. ೦೦-೪೦ ವ). **ಬಾಹುಳ್ಯ:** ೧. ಸಂಗ್ರಹಣದ ಬಾಹುಳ್ಯ ನಮ್ಮ ಶಕ್ತಿಗೆ ಮೀರಿದು ದೆನ್ನಿಸಿತು (ಹಸುಹೂ. ೦೦೩). [ಸಂ.]

**ಬಾಹುವಳನ** (ನಾ). ತೋಳುಗಳ ಚಲನೆ : ಅಕೆಯುರ ನವವಿಧ ಬಾಹು ವಳನದಿಂದೆಲಲತೆಯ ಬಳ್ಳಿ ಚಳಿಸಿದಂತೆಯುಂ . . . ಅತಿಮನೋಹರವಾಗೆ (ಚಂದ್ರಪ್ರಭ. ೦೨-೦೯೪ ವ). [ಸಂ. ಬಾಹುವಲನ]

**ಬಾಹುವಳಯ** (ನಾ). = ಬಾಹುಪೂರ : ಬಾಹುವಳಯ — ಬಾಹುಬಳೆ (ಕವಿಮ. ೨೯೯ ಪ್ರಯೋ). [ಸಂ. ಬಾಹುವಲಯ]

**ಬಾಹುವಿಕ್ರಾಂತ** (ನಾ). ತೋಳಿನ ಬಲ ; ಬಾಹುಬಲ : ಚಳುಕ್ಯರುನ್ನತಿ

ಯದಾರ್ಗ್ಗಂ ಬಣ್ಣಿಸಲ್ಬಾರದೆಂಬಿನೆಗಂ . . . ಭೂತಳಮನಾಳ್ದರ್ಬಾಹುವಿಕ್ರಾಂತದಿಂ (ಕಇಅ. ೨-೨-೨೬ ; 1058) ; ಪತಿಗೇಕಚ್ಛತ್ರದಿನ್ನಾಳಿಸನೆ ವಸು[ಧೆ]ಯಂ ಬಾಹುವಿಕ್ರಾನ್ತದಿಂ ಚಾಳಿತ ಚೋಳಂ (ಕಇಅ. ೯-೨-೦೩೦ ; 1058). [ಸಂ.]

**ಬಾಹುವಿಕ್ಷೇಪ** (ನಾ). =ಬಾಹುವಳನ : ಮೂವತ್ತೆರಡುಂ ತೆಱದ ಚಾರಿ ಚಾರಿಸ ತಮ್ಮೊಳ್ ಪತ್ತಿಸಿದುವು ದೃಷ್ಟಿಗಳಂ ಪತ್ತುಂ ತೆಱನೆನಿಪ ಬಾಹುವಿಕ್ಷೇಪಂಗಳ್ (ಮಲ್ಲಿಪು. ೬-೩೦). [ಸಂ.]

**ಬಾಹುವೀರ** (ನಾ). ತೋಳಿನ ಬಲದಿಂದ ಶೂರನೆನಿಸುವವನು ; ಭುಜಬಲಶಾಲಿ: ಕ್ಷತ್ರಿಯನು ಬಾಹುವೀರ, ವಚನವೀರನಲ್ಲ (ವಚಚಿ. ೬೮). [ಸಂ.]

**ಬಾಹುಳ್ಯ** 'ಬಾಹುಲ್ಯ' ನೋ.

**ಬಾಹೆ** (ನಾ). ೧. ಹೊರಭಾಗ ; ಹೊರವಲಯ : ಕೊಂದು ದನುಜನ ಪೆಣನ ಬಂಡಿಯ ಹಿಂದೆ ಬಂಧಿಸಿ ಪುರದ ಬಾಹೆಗೆ ತಂದುಬಿಟ್ಟನು (ಕುವ್ಯಾಅ. ೧೦-೩೯) ; ಅರಸ ಪುರದ ಬಾಹೆಯೊಳರೆ ಜೀವಂಧರ ಪರಸೇನೆಯ ತಱಿದು ತುಱುವಿಂಡ ತಾನೊರ್ವನೆ ತಿರುಪುವನೆಂದಿರದೆ ನೆನೆದನೆದೆಯೊಳಗೆ (ಜೀವಂಸಾ. ೧೫-೨೮) ; ನಿಜ ಚತುರಂಗವನು ನೆರಹಿದನು ನೃಪನಾ ಪುರದ ಬಾಹೆಯಲಿ (ಉರಲಾ. ೬-೩೩). ೨. ಬದಿ ; ಮಗ್ಗುಲು ; ಪಾರ್ಶ್ವ: ತನ್ನಿಳಯಮನ್ನೊಳಪುಗುವ ಕಾಂತೆಯರ ಹಂತಿಯೆಸೆಯಿತ್ತು ಬಸದಿಯ ಬಾಹೆಬಾಹೆಗಳೊಳು (ಸೋಮಚ. ೪-೬೨) ; ತುರಗವೈಸಾವಿರಸಹಿತ ಮೋಹರಿಸಿ ಸಿಂದನು ಶಕುನಿ ಥಟ್ಟನ ಬಲದ ಬಾಹೆಯಲಿ (ಕುವ್ಯಾಗ. ೦-೪) ; ತನ್ನಯ ಬೆರಲು ಮಣಿಮುದ್ರಿಕೆಯು ತೆಗೆದಂಬುರುಹಮುಖಿ ಸುತಗಿಟ್ಟು ತೂಲಗಿದಳೊಂದು ಬಾಹೆಯಲಿ (ಜೀವಂಚ. ೫-೩೯). [< ಸಂ. ಬಾಹ್ಯ]

**ಬಾಹ್ಯ** (ಗು). ೧. ಹೊರಗಿನ ; ಹೊರಗಡೆ ಇರುವ : ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ದ್ವಾದಶವಿಧಮಪ್ಪ ತಪದೊಳ್ ನೆಗಟ್ದು (ವಡ್ಡಾರಾ. ೦-೯). ೨. (ಊರಿನ ಅಥವಾ ಪ್ರದೇಶದ) ಹೊರಗಿರುವ ; ಹೊರಭಾಗದಲ್ಲಿರುವ. ೩. ಬಹಿಷ್ಕೃತವಾದ : ಹೊರದೂಡಿದ ; ನಿಷಿದ್ಧವಾದ. (ನಾ). ೪. ಹೊರಭಾಗ : ಹೊರವಲಯ : ಭರಧಿ ನಂದಿಗ್ರಾಮ ಬಾಹ್ಯದಲುರಿವ ದಳ್ಳುರಿಗಂಡು ಚಿಂತೆಯ ತಾಳ್ದ ಹನುಮಂತ (ತೊರಾ. ೪೪-೩೫). ೫. ಹೊರಗಡೆ ; ಬಹಿರಂಗ : ಒಳಗೆ ಹೊಳೆದನು ಬಾಹ್ಯದಲಿ ಪ್ರಜ್ವಲಿಸಿದನು (ಕುವ್ಯಾಉ. ೯-೩೪) ; ಬಿಡು ಬಾಹ್ಯದೊಳು ಡಂಭವ (ಕೈಕವ. ೬೨-೭ ಪಲ್ಲವಿ). ೬. ಹೊರಗಿನದು ; ಬಹಿರಂಗಕ್ಕೆ ಸಂಬಂಧಿಸಿದುದು : ಬಾಹ್ಯವಾದ ಉಪಪ್ಲವ ಒದಗಿದಾಗ ಕೌಟಿಲ್ಯಾದಿ ನೀತಿಜ್ಞರು ರಾಜರಿಗೆ ಮಾರ್ಗದರ್ಶಿಗಳಾಗಿದ್ದಾರೆ (ಪುಕ್ಕಾರ. ೧೦೩ ಸೂ೩೪). ೭. ಹೊರಗಿನವನು ; ಅಪರಿಚಿತ ; ಹೊಸಬ. [ಸಂ.]

**ಬಾಹ್ಯತಪ** (ನಾ). [ಜೈನ] ದೇಹವನ್ನು ದಂಡಿಸಿ ಕರ್ಮನಿರ್ಜರೆಯನ್ನು ಸಾಧಿಸುವ ತಪಸ್ಸು : ಅಂತು ಬಾಹ್ಯತಪದೊಳಸಹ್ಯಮಾನಸಾಹಸನಾಗಿ ಮತ್ತಮುತ್ತರೋತ್ತರಂ ನೆಗಟ್ದು (ಸುಕುಮಾ. ೯-೦೯ ವ) ; ಅನಶನ ಅವಮೋದರ್ಯ ವೃತ್ತಿಪರಿಸಂಖ್ಯಾನ ರಸಪರಿತ್ಯಾಗ ವಿವಿಕ್ತಶಯ್ಯಾಸನ ಕಾಯಕ್ಲೇಶ ಎಂಬಿವಾಱುಂ ಬಾಹ್ಯತಪಂಗಳು (ಚಾರಾ. ೩೬೬). [ಸಂ.]

**ಬಾಹ್ಯದರ್ಶನ** (ನಾ). ಹೊರಗಿನ ನೋಟ ; ಹೊರಗಣ್ಣಿಗೆ ಗೋಚರವಾಗುವ ದೃಶ್ಯ : ಭಯಾಕುಳಿ . . . ಬಾಹ್ಯದರ್ಶನಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿಪೋಗಿ ತಣ್ಣೆಲರಲೆಪಿಂದೆ ಮೂರ್ಛೆದಿಳಿದಳ್ (ಸಂರಾಮಾ. ೯-೦೦೦). [ಸಂ.]

**ಬಾಹ್ಯಪ್ರದರ್ಶನ** (ನಾ). ಹೊರಗೆ ಗೋಚರವಾಗುವಂತೆ ಮಾಡುವಿಕೆ; ಪ್ರಕಟವಾಗಿ ತೋರ್ಪಡಿಸುವಿಕೆ: ಒಳಿತಿಗೆ ಬಾಹ್ಯಪ್ರದರ್ಶನಯೋಗ್ಯವಾದ ಶಕ್ತಿಯಿಲ್ಲವಾದರೂ ಆಂತರಿಕಶಕ್ತಿಯಿದೆಯೆಂದು ಸಮಾಧಾನಪಟ್ಟುಕೊಳ್ಳಬಹುದು (ಬಿದ್ಯಪ್ರ. LXVII ಪುಟ೪೪). [ಸಂ.]

**ಬಾಹ್ಯಪ್ರಪಂಚ** (ನಾ). ಹೊರಜಗತ್ತು : ಹಿಮಚೂಳಂ ಯಮಕೋಪಲೀಲನುಪಸರ್ಗಂಗೆಯ್ಯೆ ಬಾಹ್ಯಪ್ರಪಂಚಮನಾತ್ಮಾಶ್ರಿತಮಂ ಬಿಸುಟ್ಟಿರೆ (ಶಾಂತಿಪು. ೯-೨೩). [ಸಂ.]

**ಬಾಹ್ಯಪ್ರಮಾಣ** (ನಾ). ಹೊರಗಿನ ಆಧಾರ; ಬೇರೆಯ ಪ್ರಮಾಣ : ಬಾಹ್ಯಪ್ರಮಾಣಗಳಿಂದ ಆಂಡಯ್ಯನ ಕಾಲಪರಿಮಿತಿಯು . . . ೧೨೬೩ ಎಂದಂತಾಯಿತು (ಸಾಹಿಸ. ೦೫೩). [ಸಂ.]

**ಬಾಹ್ಯಮತಿ** (ನಾ). ಇಂದ್ರಿಯಗೋಚರವಿಷಯಗಳಲ್ಲಿರುವ ಆಸಕ್ತಿ : ಅನಘನೊಳ್ ನಿರವಸ್ಥನೊಳೊಡವೆರದು ಬಾಹ್ಯಮತಿಯುಱಿತಿರ್ದಂ (ಶಬಶಂ. ೨-೦೦೩). [ಸಂ.]

**ಬಾಹ್ಯರತ** (ನಾ). [ಕಾಮಶಾ] ಸಂಭೋಗಕ್ಕೆ ಪೂರ್ವಭಾವಿಯಾಗಿ ಕಾಮೋದ್ದೀಪನಕ್ಕಾಗಿ ನಡೆಸುವ ನಖಕ್ಷತ, ದಂತಕ್ಷತ, ಆಲಿಂಗನ, ಚುಂಬನಾದಿ ಕ್ರಿಯೆ : ಆಲಿಂಗನ ಚುಂಬನ ದಂತಕ್ಷತ ತಾಡನ ಚಪೇಟನ ಆಕರ್ಷಣ ಮರ್ದನ ಮೊದಲಾದ ಕೃತ್ಯಗಳೆಂಬ ಬಾಹ್ಯರತವಂ ತಿಳಿದು ಸುರತವಂ ಮಾಳ್ಪುದು (ಕಾಮಶಾ. ೨೨೦); ಈ ಉಭಯರತದೊಳು ಬಾಹ್ಯರತ ಮೊದಲು ಮಾಡಬೇಕು ಆ ಬಾಹ್ಯರತದೊಳು ಆಲಿಂಗನ ಮೊದಲು ಮಾಡಬೇಕು (ಕಾಮಶಾ. ೨೨೦). [ಸಂ.]

**ಬಾಹ್ಯವ್ಯಾಪಾರ** (ನಾ). (ದೇಹದ) ಹೊರಗಿನ ಚಟುವಟಿಕೆ : ನಿದ್ದೆಯ ಹೊತ್ತಾಯಿತೆಂದರೆ ಶರೀರದ ಬಾಹ್ಯವ್ಯಾಪಾರಗಳು ಮೆಲ್ಲನೆ ನಿಲ್ಲುತ್ತವೆ (ಮುಂಬಯಿ. ೯-೦೩೦). [ಸಂ.]

**ಬಾಹ್ಯಶೌಚ** (ನಾ). ದೇಹದ ಹೊರಭಾಗದ ಶುದ್ಧಿ; ಬಹಿರಂಗಶುದ್ಧಿ: ಮೃತ್ತಿಕಾಜಲಾದಿಗಳಿಂದ ಶರೀರದ ಮಲವಂ ನಿವೃತ್ತಿಸುವುದರ ಪೆಸರು ಬಾಹ್ಯಶೌಚವೆನಿಸುವುದು (ಮುಮುಕ್ಷುದ್ವಿತೀಯಸೋಪಾನ) ಮೃಜ್ಜಲದಿಂದಾ ಮಾಡೋಣ ಯಿದು ಬಾಹ್ಯಶೌಚವು (ಈಶ್ವಸ್ತ. ೨೨-೨). [ಸಂ.]

**ಬಾಹ್ಯಸಂಭಾವ್ಯತೆ** (ನಾ). ಗ್ರಂಥಸಂಪಾದನೆಯಲ್ಲಿ ಕವಿಪಾಠವು ಅಕ್ಷರಭ್ರಾಂತಿ ಇತ್ಯಾದಿ ವಿಧಾನಗಳಿಂದ ಹೇಗೆಯೋ ಕೆಟ್ಟಿದೆ ಎಂಬುದನ್ನು ಸ್ಪಷ್ಟವಾಗಿ ತೋರಿಸುವಿಕೆ : ಯೋಜಿತಪಾಠಾಂತರವು . . . ಇತರ ಪಾಠಾಂತರಗಳೊಡನೆ ಸಾಂಪ್ರದಾಯಿಕ ಅಥವಾ ಪರಂಪರಾಗತಪಾಠದಲ್ಲಿ ಉಳಿದಿರುವಂಥದಾಗಿದ್ದರೆ ನಮ್ಮ ಊಹಾಪಾಠಕ್ಕೆ ಅಂತಸ್ಸಂಭಾವ್ಯತೆ ಮತ್ತು ಬಾಹ್ಯಸಂಭಾವ್ಯತೆ (Extrinsic probability) ಈ ಎರಡರ ಬೆಂಬಲವೂ ಇದೆಯೆಂದು ಹೇಳಬಹುದು (ಭಾರಚ. ೬೮). [ಸಂ. ಬಾಹ್ಯಸಂಭಾವ್ಯತಾ]

**ಬಾಹ್ಯಸೌಂದರ್ಯ** (ನಾ). ಹೊರನೋಟಕ್ಕೆ ಕಾಣುವ ಚೆಲುವು : ಮಾನವನು ಸತ್ಯದ ಕಡೆಗೆ ಗಮನಿಸದೆ ಕೇವಲ ಬಾಹ್ಯಸೌಂದರ್ಯಕ್ಕೆ ದಾಸನಾಗಿ ಅದರ ವ್ಯಾಮೋಹದಿಂದ ನರಳುತ್ತಿರುವನು (ಕಕ್ಕಿ. ೧). [ಸಂ.]

**ಬಾಹ್ಯಸ್ಥ** (ಗು). ೧. ಹೊರಗಿರುವ. (ನಾ). ೨. ಹೊರಗೆ ಇರುವುದು; ಹೊರಗೆ ಗೋಚರವಾದುದು: ತೀರ ಬಾಹ್ಯಸ್ಥವೂ ವ್ಯಕ್ತವೂ ಗಾಢವೂ ಆದ . . . ಆಂಗ್ಲಕಾವ್ಯಗಳನ್ನು ವಿವೇಚಿಸಿದ್ದಾರೆ (ನವ್ಯಕಾ. ೦೦೬). [ಸಂ.]

**ಬಾಹ್ಯಾರ್ಥಸಿದ್ಧಿ** (ನಾ). ಪ್ರಕೃತಕ್ಕೆ ಸಂಬಂಧಪಡದ ಅರ್ಥವನ್ನು ಉಂಟುಮಾಡುವುದು, – ವ್ಯಕ್ತಪಡಿಸುವುದು : ವಿಜ್ಞಾನವ್ಯತಿರಿಕ್ತ ಸಾಧನವಾಕ್ಯೋಪನ್ಯಾಸದಿಂ ಸಾಧಿಸುವೊಡಾ ವಾಕ್ಯಮೆ ಬಹಿರರ್ಥಮಪ್ಪುದಱಿಂ ಬಾಹ್ಯಾರ್ಥಸಿದ್ಧಿಯಕ್ಕುಂ (ಆದಿಪು. ೨-೦೦ ವ). [ಸಂ.]

**ಬಾಹ್ಯಾಳಿ** (ನಾ). ಕುದುರೆಗಳನ್ನು ಓಡಾಡಿಸುವ ಸ್ಥಳ; ಕುದುರೆ ಸವಾರಿಯ ಮೈದಾನ, – ಬಯಲು : ಸಂಚಾರಿತತುರಗಪರಿಮಾಳಗ್ರಾಹ್ಯಾಳಿಗಳೆನಿಪ ಬಾಹ್ಯಾಳಿಗಳುಂ ಅನುದಿನವಿನೋದಿತಾನೇಕಕರಿಗಳೆನಿಸು ವಾನೆವಱಿಗಳುಂ . . . ತನಗನೂನಶೋಭೆಯಂ ಪಡೆಯೆ (ಪುಷ್ಪಪು. ೯-೨೨ ವ). 'ವೈಹಾಳಿ' ಪರಾ. [<ಸಂ. ವಾಹ್ಯಾಲೀ]

**ಬಾಹ್ಯೋಪಕರಣ** (ನಾ). ಹೊರಗಿನ ಸಾಧನ : ಕೃಷ್ಣಶುಕ್ಲಮುಂತಲು ಅಭ್ಯಂತರೋಪಕರಣಮಕ್ಕುಂ ಅಕ್ಷಿಪತ್ರಪಕ್ಷ್ಮದ್ವಯಾದಿ ಬಾಹ್ಯೋಪಕರಣಾ (ತತ್ತ್ವಸೂ. ೯೬). [ಸಂ.]

**ಬಾಹ್ಯೋಪವನ** (ನಾ). (ಊರಿನ) ಹೊರವಲಯದಲ್ಲಿರುವ ತೋಟ: ಹಯವರಸಮಾರೂಢನಾಗಿ . . . ಬಾಹ್ಯೋಪವನಕೆ ಬರಲು (ಕೃಷಿಭಾ. ೨೯-೪೪). [ಸಂ.]

**ಬಾಹ್ಲಿಕ** (ನಾ). ೧. ಒಂದು ದೇಶದ ಹೆಸರು : ದ್ರವಿಳ ಕಾಶ್ಮೀರ ಬಾಹ್ಲಿಕ ಭೋಟಭೂ ಕಾಂಬೋಜ . . . ಕೇರಳಮುಖಾಪಾರದೇಶಂ ಗಳೊಳೆಸೆವ ಜಂಗಮವು ಭಕ್ತಾಳಿ (ಬಸವು. ೬-೧೯). ೨. ಆ ದೇಶದ ರಾಜ ಮತ್ತು ಪ್ರಜೆ : ಬಾಹ್ಲಿಕ ಶೂರಸೇನ ಕಳಿಂಗ ಸಲೆ ಗಾಂಧಾರ . . . ದಂತವಕ್ರರು ಬಂದರೊಗ್ಗಿನಲಿ (ಕುಮ್ಮಾ.ಸ. ೬-೩). ೩. ಆ ದೇಶದ ಕುದುರೆ. ೪. ಕುಂಕುಮಕೇಸರಿ. ೫. ಇಂಗು. [ಸಂ.]

**ಬಾಹ್ಲೀಕ** (ನಾ). ೧.=ಬಾಹ್ಲಿಕ ೧ : ಲಾಳಚೋಳವರಾಳಯುವಬಂಗಾಳ ಬಾಹ್ಲೀಕ . . . ನಿಷಧ ವಿದರ್ಭಧರಣೀಪಾಲಸಂತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರವಿ. ೦-೬-೦೯). ೨.=ಬಾಹ್ಲಿಕ ೨ : ಬಾಹ್ಲೀಕ ಸ್ವಾಂತ ಕುಂತ ಪರಾಕು (ಹರಿದಂ. ೩-೦ ವ). ೩.=ಬಾಹ್ಲಿಕ ೩ : ಬಿಸಕಾಂಭೋಜಕ ಬಾಹ್ಲೀಕ ಸೈಂಧವಾರಟ್ಟ ತ್ರೈಶಿಲಂ ವಾನೇಯಂ ಪೆಸರ ಕ್ಷೇತ್ರದ ಹಯಕಾ ಪೆಸರೆ ಪೆಸರ್ (ಅಶ್ವಶಾ. ೬-೬೬). ೪. = ಬಾಹ್ಲಿಕ ೪ : "ಕುಂಕುಮಂ, ಕಾಶ್ಮೀರಜನ್ಮ, ಅಗ್ನಿಶಿಖಂ, ವರಂ, ಬಾಹ್ಲೀಕಂ . . . ಚಂದನಂ—೧೧ ಕುಂಕುಮದ ಹುವ್ವಿನ ಹೆಸರುಗಳು, ಕುಂಕುಮಕೇಸರಿ" (ಸಿದ್ಧಾಂತಿ. ೨೦೩). ೫. = ಬಾಹ್ಲಿಕ ೫ : "ಸಹಸ್ರವೇದಿ, ಜತುಕಂ, ಬಾಹ್ಲೀಕಂ, ಹಿಂಗು, ರಾಮಠಂ—೫ ಹಿಂಗು, ಇಂಗಿನ ಪೆಸರುಗಳು" (ಸಿದ್ಧಾಂತಿ. ೨೦೫). [ಸಂ.]

**ಬಾಳ್**$_1$ 'ಬಾಟ್$_1$' ನೋ.

**ಬಾಳ್**$_2$ 'ಬಾಟ್$_3$' ನೋ.

**ಬಾಳ್**$_3$, ಬಾಳ$_1$, ಬಾಳಿ, ಬಾಳು$_3$ (ನಾ). ೧. ಕತ್ತಿ ; ಖಡ್ಗ : ಬಾಳಾ ಮೇಲ್ಮಿಖಿ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ಸಲ್ವಪೋಲ್ ಸಾಲಾಮ್ಬಾಲ ತಪೋಗ್ರದಿನ್ತು ನಡದೊಂ ನೂಱಿಂಪ್ಪುಸಂವತ್ಸರಂ . . . ಪೆಗ್ಗೊರಪಂ ಸಮಾಧಿ ನೆಱಿದೋನ್ (ಎಕ. II, ೨೨-೦; ಸು. 700) ; ನಾಗಗುಟ್ಟರಸರ್ . . . ಬಾಳಂ ಕಿಟ್ಟು ನಡದು ಪಲರನಿಱಿದು ಸತ್ತೊಡೆ (ಎಕ. X, ಕೋಲಾರ. ೨೦೦-೦೦; ಸು. 890 ?) ; ಮಸೆದುದು ಮದನನ ಬಾಳ್ (ಶಂಕರಾ. ೩-೯೭). ೨. ಉಳುಮೆ ; ವ್ಯವಸಾಯ : 'ಇರ್ವಾಳ್' ಪರಾ. ೩. ನೇಗಿಲಿನ ಗುಳ. ಬಾಳ$_1$: ೪. ಕಾಳಗ; ಯುದ್ಧ; ಕದನ: ಶ್ರೀ ಜುದ್ದನ್ . . . ಊರೊಳ್ವಲ್ಲಹನಾ ಬಾಳದುಳೆಱಿದು ವಿಟ್ಟೋದನ್ (ಎಕ. XVI, ತುಮಕೂ. ೯೦-೨ ; ಸು. 780) ; ಬಲ್ಲವರಸರ ಬಾಳದುಳ್ . . . ಬಾಗೆಯು ಪೆಱಿದು ವಿಟ್ಟೂದನ್ (ಎಕ. XVI, ತುಮಕೂ. ೯೩-೪ ; ಸು. 780). ಬಾಳಿ: ೪. ಬಾಗೆಯೂರ ಬಲ್ಲಹನೇಱಿ ನೊಳ್ಬಿಯಾನ್ ವೈರಾಳ್ ಸಹುಪದ ರುಳ್ ಕೊಪುಳವೂರ ಬಾಳಿಯೊಳ್ ಪೊಣ್ಣದಿಕ್ಕಿಜ್ಜಿಯ ತಮ್ಮುಳಿ ಪಡೆ ಯುಳಿಱಿದು ಸತ್ತನ್ (ಎಕ. XVI, ತುಮಕೂ. ೯೨-೦೦ ; ಸು. 780). ಬಾಳು$_3$ : ೧. ಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ (ಬಸವ. ೨೦೦); ಬಾಳ ಚಾಚಿದಳಿಪಳೆನಗೆ ಗೋಣಾಳಿಗೊಡ್ಡಿದ ಬಂದಿಯಲಿ ತುದಿ ನಾಲಗೆಗೆ ನರಸುಕ್ಕನಿಕ್ಕಿದಳಿವಳು ತನಗೆ (ತೊರವಿ. ೨-೨-೩೮) ; ತೋಳ ನೀಡಿದಳು ಮನ್ಮಥನೊಱೆಯಿಂದುರ್ಚಿ ಬಾಳ ನೀಡಿದನೊಯೆಂಬಂತೆ (ಭರತ. ೦೨-೬೬).

**ಬಾಳ್ವಾಳ್** (ದ್ವಿರುಕ್ತಿ) : ಬಾಳ್ವಾಳ್ಗಳ ಘಟ್ಟಣೆಯೊಳ್ ಬಳ್ವಳ ಬಳಿ ದೊಗೆದು ನೆಗೆದ ಕಿಡಿಗಳ ಬಂಬಲ್ಗಳ್ಪೆರಸು ಪೊಳೆದು ನೆಗೆದುದು ಬಾಳ್ಪೊಗೆ (ಶಂಕರಾ. ೦೦-೪೧). ಬಾಳಬಟ್ಟು = (?) : ಆತನ ಕಿಲದೊಳ್ ಬಾಳ ಬಟ್ಟಂ [ಶಾಕಾಂ. ಬಾಳಪಟಂ] ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪ ಕುಮಾರರಣಿಯು ನಡುವೆ ಪೊನ್ನ ರಥಮನೇಱಿ ನಿಂದಾತನೆನ್ನ ತಮ್ಮಂ ಕೃತವರ್ಮಂ (ಶಂಕರಾ. ೦೦-೫೭ ವ). ಬಾಳವಣ್ಣ, ಬಾಳ ಬಣ್ಣ=(ತೊಳೆದ) ಕತ್ತಿಯ ಬಣ್ಣ ; ನೀಲಿಬಣ್ಣ : ತೊಡರ್ದವರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ ನೊಸಲೊಳೊಡಂಬಡುವರಳೆಲೆಯುವಱಿಂ ಚೆಲ್ವಿಡಿದಿರ್ದುದು ಬಾಳಕೇಳಿ ಧವರ್ಮಾತ್ಮಜನಾ (ಶಂಕರಾ. ೨-೪) ; ಪುಳಿಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ವಾಕಾಶಂ (ಶಂಕರಾ. ೬-೬೦). ಬಾಳುಗತ್ತಿ = ಉದ್ದವಾದ ಕತ್ತಿ ; ನೀಳವಾದ ಖಡ್ಗ : ಜಾಡಿಯ ಹರಿಗೆ ಸಿಂಗಾಡಿ ಕರಾಚೂರಿ ನೀಡುವ ಬಾಳುಗತ್ತಿಗಳ ಪಾಡುಪಂಥದ ಸುಭಟರು ಕೋಟೆಯನಾಗ ರೂಢಿಯೊಳಗೆ ಕಾದಿಹರು (ಕಂನವಿ. ೦೦-೦೯೬). ☞ ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪ. ಕೊಡವ ಭಾಷೆಯಲ್ಲಿ 'ಬಾಳಿಕತ್ತಿ' ಶಬ್ದಕ್ಕೆ 'ಉದ್ದವಾದ ಕತ್ತಿ' ಎಂಬರ್ಥವಿದೆ.

[ದೇ.॥ ತಮಿ. ಮಲ. ಕೋತ. ವಾಳ್; ತುಳು. ಬಾಳು; ತೆಲು. ವಾಲು]

**ಬಾಳ**$_1$ 'ಬಾಳ್$_3$' ನೋ.

**ಬಾಳ**$_2$, ಬಾಳು$_4$ (ನಾ). ಒಂದು ಬಗೆಯ ಸಂಗಂಧದ ಬೇರು ; ಮುಡಿವಾಳ ; ಲಾಮಂಚ : "ಬಾಳಮೆಂದುಂ ಲಾಮಂಚಂ" (ಕಶಸಾ. ೫೪-೦೬೧) ; ಕುಳಿರ್ವ ಬಾಳದ ಬೇರ್ಗಳ ಕೇರ್ಗಳಿಂ . . . ಒಪ್ಪಿ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ಕಾದಂಬ. ೪೩೬); ಬಾಳದ ಕಂಪು ಬಾಳ್ವನುಗುವಾಱಿಡಿಯಾಱಿಡಿ ಹಂಸೆ ಹಿಂಸೆ . . . ಬಾಲಿಕೆಗಾದುದೀ ವಿರಹದಿಂದೆ (ಉದ್ಭಟಿ. ೬-೫೬). 'ಬಾಳವೇರ್' ಪರಾ. ಬಾಳು$_4$ : ಬಾಳು ಜವಾಜಿ ಕುಂಕುಮಕೇಸರಿ ಅಡಕೆಯ ಹೇರು ಮೆಣ್ಸಿನ ಭಾರ . . . ಮುನ್ತಾದ ಸಮಸ್ತಬೆಪಹಾರಕೆ (ಎಕ. XII, ಶಿರಾ. ೭೬-೦೪; 1379). 'ಕರಿಯ ಬಾಳ', 'ಮುಡಿವಾಳ' ಹೋ. ☞ ಸಂಸ್ಕೃತದ 'ಬಾಲ' ಶಬ್ದಕ್ಕೆ ಮೇಲೆ ಸೂಚಿಸಿರುವ ಅರ್ಥವು ಕೋಶಗಳಲ್ಲಿ ಸಿಗುವುದಾದರೂ ಇದನ್ನು ದೇಶ್ಯಶಬ್ದವೆಂದು ಪರಿಗಣಿಸಲಾಗಿರುವುದರಿಂದ 'ಬಾಲ' ಉಲ್ಲೇಖದ ಜೊತೆಯಲ್ಲಿ ಇದನ್ನು ಪರ್ಯಾಯ ಪದವಾಗಿ ಕೊಟ್ಟಿಲ್ಲ.

**ಬಾಳ**$_3$ (ನಾ). ಹಣೆ ; ನೊಸಲು : "ಬಾಳ–ಭಾಲ=ಹಣೆ" (ಕರ್ಣಕೋ. ೫೦); ಒಪ್ಪಿದುದೆನಸುಂ ಕಂದರ್ಪನ ವಿಮಾಳರುಚಿವಿಶಾಲಂ ಬಾಳಂ (ಕುಸುಮಾ. ೬ ೦೦೩) ; 'ಬಾಳದೊಳೆಸೆವ ಮುತ್ತಿನ ಬೊಟ್ಟ ತಳೆದಿಹ ನೀಲಾಳಕಿಯರೊಪ್ಪಿದರು (ಕಂನವಿ. ೬-೦೦೩). [<ಸಂ. ಭಾಲ]

**ಬಾಳ**$_4$ 'ಬಾಲ$_1$' ನೋ.

**ಬಾಳ**$_5$ 'ಬಾಲ$_2$' ನೋ.

**ಬಾಳಂಗೆಣಸೆ** (ನಾ) ಒಂದು ಬಗೆಯ ಸಸ್ಯ : ಬಾಗುಂಜಬೀಜ, ಗೀರುಗೊಟ್ಟೆ, ಬಾಳಂಗೆಣಸೆ ಇವಂ ಸರಿಯಾಗಿ ತೂಗಿಕೊಂಡು . . . ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಗ ಮೂರು ತೂಕವನ್ನು ಕಲಸಿ ಕೊಡುವುದು (ವೈದ್ಯಾಮೃ. ೪೦). [?]

**ಬಾಳಂತಪಣ** (ನಾ). ೧. ಹೆರಿಗೆ ; ಪ್ರಸೂತಿ : ಫಲ್ಗೂಬಾಯಿ ಕಮಲೆಯನ್ನು ಮುಂಬಯಿಗೆ ಆಮಂತ್ರಿಸುತ್ತ . . . ದವಾಖಾನೆಯಲ್ಲಿಯೇ ಬಾಳಂತಪಣ ಮಾಡಿಸಿಕೊಳ್ಳಲು ಸಲಹೆಯಿತ್ತಳು (ಶ್ರೀಹಾರ. ೧೯೨). ೨. ಬಾಣಂತಿಗೆ ಮಾಡುವ ಶುಶ್ರೂಷೆ ; ಬಾಣಂತನ.

[← ಮರಾ. ಬಾಳಂತಪಣ]

**ಬಾಳಂತಿ**, ಬಾಣಂತಿ, ಬಾಣತಿ (ನಾ). ಹೆರಿಗೆಯಾಗಿ ಇನ್ನೂ ಆರೈಕೆಯನ್ನು ಹೊಂದುತ್ತಿರುವವಳು ; ಹಡೆದವಳು ; ಪ್ರಸೂತೆ :

ಬಾಳಂತಿಗೆ ಮಂತ್ರಪೂರ್ವಕಮುಂ ಸುಖೋಷ್ಣಮುಮಪ್ಪ ಜಲಂಗಳಂ ಮಿಾಯಲೆಱೆದು (ಹಾಪುಂಪು. ೯೦). **ಬಾಣಂತಿ :** "ಪ್ರಸೂತೆಯೆನೆ ಬಾಣಂತಿ ಯಕ್ಕು" (ಮಂಗರಾ. ೯೦-೮); ಕಳವೂಕ್ಷತಚೂರ್ಣಂ ಪೋಣ್ ನೆಲಗುಂಬಳ ಮಿವಜೆಯೊಳೊಂದನೆರ್ದೆಯು ಪಾಲಿಂ ಕಲಸಿ ಕುಡಿಯಿಸುಗೆ ತೊರೆ(ಱ)ಗುಂ ಪೊಲೆಗಳ್ ಬಾಣಾಂ(ಳಂ)ತಿಗೆಟ್ಟು ಪಾಲ್ ಪಾಯ್ವನೆಗಂ (ಲೋಕೋಪ. ೯-೧೮೨); ಬಾಣಂತಿಯೆಂಬೋ ಬಗೆದು ನೀನಱಿತು ಬಾರೆಂದು ಕರೆವೋಮುಚಿತವೆ ರಂಗ (ಹರಿಂತ. ೩-೯೩ ಪಲ್ಲವಿ): ಗೌರಿ ಬೊಜ್ಜೆಲು ಬಾಣಂತಿ (ಮಂಗಾಮು. ೨೩). **ಬಾಣತಿ:** ಬಸುಱ ಬಾಣತಿ ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ . . . ಕೇತಯ್ಯಗಳೆಂಬ ನೂಱುಮಡಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೫೭); ಎರಡಡೆ ಯೊಳೋಲಗವೆಂತು ನಿನಗೆಳವಡುವುದಿದು ಬಾಣತಿಯ ಸೂಳೆಯ ಪಡಪಿ ನಂದದಲಿ (ಬಸವು. ೫೩-೧೨); ಕೂಸುಳ್ಳ ಸೂಳೆಗೆ ಹೇಸದೊತ್ತೆಯ ಕೊಟ್ಟು ಕೂಸತ್ತು ನಲ್ಲ ಬೇಸತ್ತು ಬಾಣತಿಯುಂ ವೀಸಕ್ಕು ಬೇಡ (ಸರ್ವಜ್ಞ. ೧೪೦೭).

[ದೇ.॥ ಮಲ. ವಣ್ಣ ; ತುಳು. ಬಾಣಂತಿ ; ತೆಲು. ಬಾಲಿಂತ. ಬಾಲೆಂತ./ ಸಂ. ಬಾಲವತೀ./ಮರಾ. ಬಾಳಂತ, ಬಾಳಂತೀ೯]

**ಬಾಳಂಬಾಕಂತಿ** (ನಾ). ಒಬ್ಬಾಕೆಯ ಹೆಸರು : ನವಿಲೂರ ಗಣದ ಬಾಳಂಬಾಕನ್ತಿಯರ ಮಗಳ್ ವಿಜಕ್ಕಂ ಪರೋಕ್ಷವಿನಯಂಗೆಯ್ದು ಕಲ್ಲ ನಿರಿಸಿದಳ್ (ಎಕ. VI. ಕಡೂರು. ೧೫೯-೦೩; 961). [ಬಾಳ್‌ಬ್ಬಾ$_0$+ಕಂತಿ$_2$]

**ಬಾಳಕ$_1$** 'ಬಾಟುಕ' ನೋ.

**ಬಾಳಕ$_2$** (ನಾ). =ಬಾಳ್$_2$ : "ಹ್ರೀಬೇರಂ, ಬಾಳಕಂ, ಜಳಂ — ಈ ೩ ಕರಿಯ ಬಾಳಂ" (ಹಲಾಯು. ೧೦೨-೪೬೮); ಮಗಧ ಕತ್ತುರಿಯಿಂ ಮಳಯಂ ಶ ಚಂದನಂ ಲಾಳನ ಬಾಳಕಂ ನೆಱೆಯಮೆಂದು ಚರರ್ ಸಲೆ ಬಿನ್ನಪಂಗಳಂ ಕೇಳಸುತಿರ್ಪರೋಲಗದೊಳಂ ವಿಭು ಸಂಕಮದೇವಭೂಪನಾ (ಎಕ. VII, ಶಿಕಾರಿ. ೯೬-೦೫; 1179; ಶಾಸಪಂ. ೯೦೦ ನೋ). [<ಬಾಳ್$_2$]

**ಬಾಳಕ$_3$** 'ಬಾಲಕ' ನೋ.

**ಬಾಳಕಾಲ** 'ಬಾಲಕಾಲ' ನೋ.

**ಬಾಳಕಿ** 'ಬಾಲಕಿ' ನೋ.

**ಬಾಳಕೇಳಿ** 'ಬಾಲಕೇಲಿ' ನೋ.

**ಬಾಳಕ್ರೀಡೆ** 'ಬಾಲಕ್ರೀಡೆ' ನೋ.

**ಬಾಳಗಟ್ಟು** 'ಬಾಳ್ಗಟ್ಟು' ನೋ.

**ಬಾಳಚ** (ನಾ). ಒಬ್ಬಾತನ ಹೆಸರು : ಬಾಚಗಾವುಣ್ಡ ಕಂಭಯ್ಯನು ಕಳ್ಳವುಣಿಯೂರ ಮಹಾಜನಮುಂ ಗೊಗಿಯವುರದ ಬಾಳಚನು . . . ಸಾಕ್ಷಿ (ಎಕ. XI. ಚಿತ್ರದು. ೫೦-೨೨; 968). [?]

**ಬಾಳಚಂದ್ರ** 'ಬಾಲಚಂದ್ರ' ನೋ.

**ಬಾಳಣೆ** 'ಬಾಣಲಿ' ನೋ.

**ಬಾಳತೆ** 'ಬಾಲತೆ' ನೋ.

**ಬಾಳತ್ವ** 'ಬಾಲತ್ವ' ನೋ.

**ಬಾಳನಯನ** (ನಾ). ೧. ಹಣೆಯಲ್ಲಿ ಇರುವ ಕಣ್ಣು. ೨. ಹಣೆಯಲ್ಲಿ ಕಣ್ಣುಳ್ಳವನು; ಭಾಳನೇತ್ರ : ಶಿವ : ಬಾಳನಯನನದೇನು ಕಾರಣ ಹೇಳಿದನು ಋತುಪರ್ಣಗರುಹುವದೆಂದು ಈ ಕಥೆಯ (ಅಂಬಿಕಾ. ೩-೫೭). [< ಸಂ. ಭಾಲನಯನ]

**ಬಾಳಪರ್ಣ** (ನಾ). ಲವಂಗ : "ಬಾ[ಪಾಠಾಂ. ಭಾ, ರಾ]ಳಪರ್ಣಂ ಲವಂಗ ಮೆನಿಕ್ಕು" (ಮಂಗರಾ. ೪೨-೪೦). [?]

**ಬಾಳಬಂದು** 'ಬಾಲಬಂದು' ನೋ.

**ಬಾಳ ಬಟ್ಟು** 'ಬಾಳ್$_3$' ಪರಾ.

**ಬಾಳ ಬಣ್ಣ** 'ಬಾಳ್$_3$' ಪರಾ.

**ಬಾಳಮತಿ** (ನಾ). ಹುಡುಗುಬುದ್ಧಿಯುಳ್ಳವನು; ಅವಿವೇಕಿ; ಮೂರ್ಖ : ಆ ಕೋಳನನಂ ಬಾಳಮತಿ ಪುರುಷರತ್ನದ ಪೇಳಿಗೆಯಂ ಮುಚ್ಚುವಂತೆ ಮುಚ್ಚಿದನಗದಿಂ(ಶಾಂತಿಪು. ೮-೫೦). [ಸಂ. ಬಾಲಮತಿ]

**ಬಾಳಮೃತಿ** (ನಾ). ತಿಳಿವಳಿಕೆಯಿಲ್ಲದೆ, ಬಾಲಿಶಬುದ್ಧಿಯಿಂದ ತಂದು ಕೊಂಡ ಮರಣ.—ಸಾವು : ಅತಿವಯನಾಗಿ ಬಾಳಮೃತಿಯಿಂದಟಿ ದಂದಿನ ಮೂರ್ಖವೃತ್ತಿ ಪಂಡಿತಮೃತಿಯಿಂದಮಲ್ಲದದು ನೀಗದು ಪೋಗೆನಗೆ (ಶಾಂತಿಪು. ೬-೪೦). [ಸಂ. ಬಾಲಮೃತಿ]

**ಬಾಳರ** (ನಾ). ಗರಗಸದ ಹಲ್ಲುಗಳನ್ನು ಹರಿತಗೊಳಿಸಲು ಬಳಸುವ, ಎರಡು ಅಲಗುಳ್ಳ ಅರ : ಗಾಳದ ಡೊಂಕಿಯುಗ್ರಮನೆ ಬಾಳರನಿಂ ಪಿಡಿದರ್ದುವಾರ್ದ್ರಮುಂ ಜಾಳಿಸಿ ಜಾಲಮುಂ ಬಿಸಿಲೊಳಿಕ್ಕುವ ಬೆಂಕೆ ಯೊಳೊಡ್ಡಿ ಕಾಸಿ ಕೂಂಡಾಳಿಸಿ ಸಂದುಕೀಲನುಡಿಗಟ್ಟುವ ಕೆಂಗಱಯಂ ಸರಾಳಿಯೊಳ್ ಪೋಳಿಸಿ ಸುತ್ತುತಿರ್ಪ ಶಬರರ್ಕಳಿನಿಂತೆಸೆದತ್ತು ಪಕ್ಕಣಂ (ಶಾಂತೀಶ. ೩-೭೪). [←ತಮಿ. ವಾಳರಮ್]

**ಬಾಳರಾಕ್ಷ** 'ಬಲರಾಕ್ಷಸಿ' ನೋ.

**ಬಾಳಲಿ** 'ಬಾಣಲಿ' ನೋ.

**ಬಾಳವಂದ** 'ಬಾಲವಂದ' ನೋ.

**ಬಾಳವಚ್ಚ** (ನಾ). = ಬಾಲವಂದ : ರಕ್ಕೈವಣೆ ಪುಲಿಯುಗುರ್ . . . ಪೊಕ್ಕಳಗಾಡಿಗೆ ಜಡೆ ಸೊಡರ್ವಕ್ಕಿನ ಬೊಟ್ಟೆಂಬ ಬಾಳವಚ್ಚದಿನೆಸೆವಂ (ಪುಷ್ಪಪು. ೪-೪೯). [ಬಾಳ್$_5$ (= ಬಾಲ್$_2$) + ಪಚ್ಚ$_2$]

**ಬಾಳವಣ್ಣ** 'ಬಾಳ್$_3$' ಪರಾ.

**ಬಾಳವತಿ** 'ಬಾಲವತಿ' ನೋ.

**ಬಾಳವಾಳಿಗೆ** (ನಾ). ಒಂದು ಬಗೆಯ ತೆರಿಗೆ : ಮನೆವಾರ್ತೆ ಹಣ ಕಾಹು ಕಾಣಿಕೆ ಕಡಾಯ ಬಾಳವಾಳಿಗೆ ಉಡುಗರೆ ಉಲುಪ್ಪ ಮನೆದೆರೆ ಅಳಿಲು ಅನ್ಯಾಯ ಮುಂತಾದ ಸರ್ವಬಾಧೆಯು (ಮೈಆಂ. ೧೯೩೪, ೫೮-೨೪: 1435). [?]

**ಬಾಳವಿದ್ಯೆ** (ನಾ). ಬಾಲ್ಯದಲ್ಲಿ ಕಲಿತ ವಿದ್ಯೆ : ಎಮ್ಮ ಕಂಡುಂ ಕೇಳ್ದು ಮಱೆಯದ ವಸ್ತುಗಳಿಲ್ಲ ಗಾಂಧರ್ವಮೆಂಬುದೆಮ್ಮ ಬಾಳವಿದ್ಯೆಯದ ಱೊಳೆಮ್ಮಂ ರಂಜಿಸುವನ್ನರ್ ಪ್ರೌಢರಿಲ್ಲ (ಶಾಂತಿಪು. ೨-೨೦ ವ). [ಸಂ. ಬಾಲವಿದ್ಯಾ]

**ಬಾಳವೂರು** 'ಬಾಲವೂರು' ನೋ.

**ಬಾಳವೇರ್** (ನಾ). ಬಾಳದ ಬೇರು ; ಲಾಮಂಚದ ಬೇರು: ಕೆಂದಳಿರ ಪಂದರೊಳಗಣ ಬಾಳವೇರ ಈರ್ಗಟ್ಟಿನೋವರಿಯೊಳಗೆ (ಚಂದ್ರಪ್ರಪು. ೯-೬೭). [ಬಾಳ್$_2$ + ಬೇರ್$_1$]

**ಬಾಳಾಂಬಕ** (ನಾ). =ಬಾಳನಯನ ೨: ಬಾಳಾಂಬಕನ ಭಕ್ತನಾಗಿ ಭಕ್ತಿಯ ತಾಳಲಱಿಯನೆಂದಡೆ ಅದು ಬಾಲನ ಚಿತ್ತದ ಲೀಲೆಯಂತೆ (ಸೋಸವಾ. ೨೪-೯೮). [< ಸಂ. ಭಾಲಾಂಬಕ]

**ಬಾಳಾಕ್ಷ** (ನಾ). = ಬಾಳನಯನ ೨ : ಪಾಲು ಸಕ್ಕರೆ ತುಪ್ಪ ಹಾಲನ್ನ ಸವಿವಂತೆ ಬಾಳಾಕ್ಷ ಪೇಳ್ದಾನು (ಕಂಕ. ೩-೧೧). [< ಸಂ. ಭಾಲಾಕ್ಷ]

**ಬಾಳಾತಪ** 'ಬಾಲಾತಪ' ನೋ.

**ಬಾಳಾಯಿ** (ನಾ). ಒಂದು ಬಗೆಯ ಮರ ; ತುಮ್ರಿಮರ: ಬಾಳಾಯಿ (ತುಮ್ರಿ) . . . ಇದರ ಕಟ್ಟಿಗೆಯು ಗಟ್ಟಿ, ಜಿಗುಟುಳ್ಳದ್ದು, ತಾಳಿಯುಳ್ಳದ್ದು ; ಆದಾಗ್ಯೂ ಇದಕ್ಕೆ ಬಹಳ ಬೆಲೆ ಬರುವದಿಲ್ಲ. ಘನಪೂಟಿನ ತೂಕ ೫೦ ರಿಂದ ೭೦ ಪೌಂಡುಗಳ ವರೆಗೆ. ಇದರ ಹಣ್ಣು ಗಳನ್ನು ಜನರು ಪ್ರೀತಿಯಿಂದ ತಿನ್ನುವರು (ಕಥಾಗ. ೪೪). [?]

**ಬಾಳಾರ್ಕ** 'ಬಾಲಾರ್ಕ' ನೋ.

**ಬಾಳಾಳ್** (ನಾ). ಖಡ್ಗವಿದ್ಯೆಯನ್ನು ಬಲ್ಲವನು ; ಪರಾಕ್ರಮಿ :

ಸಿಂಗದೀಕ್ಷರ್ಬ್ಬಾಳಾಳ್ ಅರಟ್ಟೇತೀರಾರ್ ಕೂಡಲೂರ್ ಆಳಿ (ವ್ಯಅಂ. ೧೯೦೬, ೦೩-೪; ಸು. 726). [ಬಾಳ್$_3$ + ಆಳ್$_3$]

**ಬಾಳಿ** 'ಬಾಳ್$_3$' ನೋ.

**ಬಾಳಿಕೆ$_1$** 'ಬಾೞ್ಕೆ' ನೋ.

**ಬಾಳಿಕೆ$_2$** 'ಬಾಲಿಕೆ' ನೋ.

**ಬಾಳಿಸು** 'ಬಾೞಿಸು' ನೋ.

**ಬಾಳು$_1$** 'ಬಾೞ್$_1$' ನೋ.

**ಬಾಳು$_2$** 'ಬಾೞ್$_3$' ನೋ.

**ಬಾಳು$_3$** 'ಬಾಳ್$_3$' ನೋ.

**ಬಾಳು$_4$** 'ಬಾಳ$_2$' ನೋ.

**ಬಾಳುಕ** 'ಬಾೞುಕ' ನೋ.

**ಬಾಳುಗುಳಿ** 'ಬಾೞ್ಗುೞಿ' ನೋ.

**ಬಾಳುಗೇಡಿ** (ನಾ). ಜೀವನವನ್ನು ಹಾಳುಮಾಡುವವನು ; ಬದುಕನ್ನು ಕೆಡಿಸುವವನು : ನೆಟ್ಟನೆಲೆ ಧೃತರಾಷ್ಟ್ರನೃಪ ನೀನಿಟ್ಟ ಕಿಚ್ಚಿದು ಪಾಪಿ ಮಗನನು ಹುಟ್ಟಿದಂದೇ ಬಿಸುಡದಾದೆವು ಬಾಳುಗೇಡಿಯನು (ಕುವ್ಯಾಉ. ೯-೪೯). [ಬಾಳು$_2$ (< ಬಾೞ್$_3$) + ಕೇಡಿ$_1$]

**ಬಾಳುಗೇಡು** (ನಾ). ಬದುಕಿಗೆ ಕೇಡು ತರುವಂತಹುದು ; ಜೀವನವನ್ನು ಹಾಳುಮಾಡುವಂತಹುದು : ಆಳುಕೂಳುಗಳ ಮೇಳವಿಲ್ಲದ ಮನೆಯು ಬಾಳುಗೇಡು (ಸರ್ವಜ್ಞ. ೧೯೯೯).

[ಬಾಳು$_2$ (<ಬಾೞ್$_3$) + ಕೇಡು]

**ಬಾಳುಡಿ** (ನಾ). ಖಡ್ಗದ ತುಂಡು; ಕತ್ತಿಯ ತುಂಡು : ನೆಣದೊಳ್ಗೆ ಸೞ್ಗೊಳ್ ಜಿಗಿಲ್ತುಗುರ್ವಡರೆ ನಿರಂತರಂ ಪೊಳೆವ ಬಾಳುಡಿ ಸುಯ್ವ ನವವ್ರಣಂಗಳೊಳ್ ಪೊಡರೆ ಪೊದಱ್ದದದ್ಭುತಭಯಾನಕಮಾಹವರಂಗ ಭೂಮಿಯೊಳ್ (ಪಂಪಭಾ. ೦೦-೩೯) ; ಬಾಳುಡಿ ಪಾಱೆ ಬೀೞೆ ಪಗಲುಳ್ಕದ ಪೋಲ್ತ್ . . . ಭಯಂಕರಮಾಯ್ತು ತುರಂಗಸಂಗರಂ (ಪಂಪರಾಮಾ. ೦೩-೬೩). [ಬಾಳ್$_3$ + ಉಡಿ$_6$]

**ಬಾಳುತ್ತಾರ** (ನಾ). ಉಂಬಳಿಯಾಗಿ ಕೊಟ್ಟ ಭೂಮಿ : ಯಿಾಗ ಉತ್ತಾರವ ಕೊಟ್ಟ ಭೂಮಿ ಸಹ ಬಾಳುತ್ತಾರವಾಗಿ ವಿಂಗಡಿಸಿ ಕೊಡ ಹೇಳಿ (ಎಕ. IX (S), ಬೆಂಗಳೂ. ೦೩೦-೪ ; ಸು. 1700).

[ ಬಾಳು$_2$ (<ಬಾೞ್$_3$) + ಉತ್ತಾರ ]

**ಬಾಳುದಲೆ** 'ಬಾೞ್ದಲೆ' ನೋ.

**ಬಾಳುದಲೆವಿಡಿ** ' ಬಾೞ್ದಲೆವಿಡಿ ' ನೋ.

**ಬಾಳುಬೆ** 'ಬಾದುಬ್ಬೆ' ನೋ.

**ಬಾಳುಮನೆ** 'ಬಾೞ್ಮನೆ' ನೋ.

**ಬಾಳುವೆ** 'ಬಾೞ್ವೆ' ನೋ.

**ಬಾಳೆ$_1$** 'ಬಾೞೆ$_1$' ನೋ.

**ಬಾಳೆ$_2$** (ನಾ). ಒಂದು ಬಗೆಯ ಉದ್ದವಾಗಿರುವ ಮೀನು : ಪೇೞ್ದಿ ನಿಸನಾಂ ಮಗುೞ್ದಾಗಳೆ ಸೂಸಿ ಕಣ್ಣ ನೀರೊಡನೊಡನುಣ್ಮೆ ಕುಂಕುಮದೊಳರ್ದಿದ ಬಾಳೆಗಳನ್ನವಾಗಿ ಕೆಂಪಡರ್ದಲರ್ಗಣ್ಗಳಿಂದುಗುೞ್ದ ನೋಡಿದುದಂ ನೆನೆವೇಂ ಮೃಗಾಕ್ಷಿಯಾ (ಆದಿಪು. ೦೨-೨೪); ಬಾಲಕಿಯುಲರ್ಗಣ್ಗಳ್ . . . ಬಾಳೆಯು ಮೀಂಗಳ ತೆಱದಿಂ ಲೀಲೆಯೊಳೇಂ ಪೊಳೆದು ತಳೆದವತಿಚಪಳತೆಯಂ (ಜಾರಪು. ೨-೩೦) ; ತೊಡೆಯುಮೆಸೆವಕ್ಷಿಯುಂ ಬಾಳೆಯುಂ ಬಾಳೆಯುಂ ನಡುವುಂ ಸುವಾಣಿಯುಂ ಹರಿಯುಮಂ ಹರಿಯುಮಂ ಬಿಡದೆ ಪೋಲ್ತಿರೆ ಮೆಱೆವ ಕಾಂತೆಯರ್ . . . ಸೊಗಯಿಸಿದರು (ಕೃಬಿಶಾ. ೬-೨೩). [ದೇ.॥ ತಮಿ. ವಾಳೈ; ಮಲ. ವಾಳ; ತುಳು. ಬಾಲೆ; ಕೊಡ. ಬಾಳ್; ತೆಲು. ವಾಲುಗ, ವಾಲುವ]

**ಬಾಳೆ$_3$** 'ಬಾಲೆ' ನೋ.

**ಬಾಳೆಕಂಬ** 'ಬಾಳೆಗಂಬ' ನೋ.

**ಬಾಳೆಕೊನೆ** 'ಬಾಳೆಗೊನೆ' ನೋ.

**ಬಾಳೆಗಂಬ, ಬಾಳೆಕಂಬ** (ನಾ). ಬಾಳೆಗಿಡದ ತಾಳು,—ಕಾಂಡ : ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊಳ್ ಭಾವಿಸೆ ಬಾಳೆಗಂಬಮೊಗೆದಂದು ಲತಾಗ್ರದೊಳದ್ರಿ ಪುಟ್ಟಿದಂದು . . . ಸತಿಯಂಗಮನಾಂ ಪೊಗಳಲ್ಕೆ ಸಾಲ್ದಪೆಂ (ರಾಜಶೇ. ೬-೨೬). **ಬಾಳೆಕಂಬ** : ಚಪ್ಪರ ಕಟ್ಟುವುದಕ್ಕೆ ಇನ್ನೂ ಎರಡು ದೊಡ್ಡ ಬಾಳೆಕಂಬಗಳನ್ನು ತರಬೇಕು (ರೂಪ). [ಬಾಳೆ$_1$ (<ಬಾೞೆ) + ಕಂಬ$_1$ (<ಕಂಭ)]

**ಬಾಳೆಗಣ್** (ನಾ). ಮೀನಿನ ಆಕಾರದ ಕಣ್ಣು : ಚಂಚತ್ಕಾಂಚನಾಬ್ಜಾಸ್ಯ ಮಂಡಳಮಿಂಬಾಗಿರೆ ಬಾಳೆಗಣ್ಪೊಳೆಯೆ . . . ಸರಿದ್ವಧು ರಥಾಂಗೋರೋಜೆ ಕಣ್ಗೊಪ್ಪಿದಳ್ (ವೃಷಪು. ೪-೮) : ಪೊಳೆದೊಪ್ಪೆ ಬಾಳೆಗಣ್ ಬಿಸಜಮುಖಿಂ ಮರುಚ್ಚಳಿತವೊಂದೆ (ಶಬಶಂ. ೨-೩೩). [ಬಾಳೆ$_2$ + ಕಣ್]

**ಬಾಳೆಗೊನೆ, ಬಾಳೆಕೊನೆ** (ನಾ). ಬಾಳೆಯಕಾಯಿ ಅಥವಾ ಹಣ್ಣುಗಳ ಗೊಂಚಲು : ಜವರ, ನಿಂಗ, ಬೋರಿ ಮುಂತಾದವರು ಕಾಯಿ, ಕೊಬರಿ, ಬಾಳೆಗೊನೆಗಳನ್ನು ಹೇಳದೆ ಕೇಳದೆ ಚಾವಡಿಗೆ ತಂದು ಒಪ್ಪಿಸುತ್ತಾರೆ (ನಮ್ಮೂರು. ೧೯೬). **ಬಾಳೆಕೊನೆ** : ಬಾಳೆಕೊನೆ ತರಾಕೆ ಹೇಳಿದಾರೇನು ನಿನ್ನ ಸಾಹುಕಾರರು ? (ಮರಿಮು. ೨೮೮).

[ಬಾಳೆ$_1$ (<ಬಾೞೆ) + ಗೊನೆ$_3$ (< ಗೊಲೆ$_2$)]

**ಬಾಳೆದೊಡೆ** (ನಾ). ಬಾಳೆಕಂಬದಂತೆ ದುಂಡಗೆ, ನುಣುಪಾಗಿ ಇರುವ ತೊಡೆ : ಪಸುಗೆಳಿವಾತಿನ ಬಾಳೆದೊಡೆಯ ಬಣ್ಣಗೆಗಾಲ . . . ನೀಱೆಯ ನವಲಾವಣ್ಯದ ಸಿರಿಯನದೇನಂ ಬಣ್ಣಿಪೆನು (ಜಯುಕಾ. ೩-೬೩); ಪೇರೆದೆ ಹೊನ್ನ ಸೆಳೆಸಡು ಬಾಳೆದೊಡೆ ಮೆಱೆದೆನ್ನರಂ ಸೋಲಿಸುವ ಜವ್ವನವಾಂತನಾಕುವರ (ಸಾಳ್ವಭಾ. ೪-೬): ಬಾಳೆದೊಡೆಯ ಕೊನಬುಗಾತಿಯುಳ ಕೊಸರಿ ರಂಗಾಯೆಂಬ ವನಿತೆ ತಾ ವಶವಪ್ಪಳೆಂದೊ (ಶಶಿಸಾಂ. ೨೨-೧೦).

[ಬಾಳೆ$_1$ (<ಬಾೞೆ) + ತೊಡೆ$_2$]

**ಬಾಳೆಮೀನ್, ಬಾಳೆಮೀನು** (ನಾ). = ಬಾಳೆ$_2$ : ಅದನೊಂದು ಬಾಳೆ ಮೀನ್ನುಂಗಿ ಗರ್ಭಮಂ ತಾಳ್ದಿದೊಡೆ (ಪಂಪಭಾ. ೧-೬೩ ವ); ಕಣ್ಣನೀರಿೞಿದುವು ಬಾಳೆಮೀನ್ ಜಲಮನೞ್ಕಸಲಾಱದೆ ಕಾಱುವಂತೆವೋಲ್ (ಕಾವ್ಯಸಾ. ೬೦೦). **ಬಾಳೆಮೀನು** : ಸೂಳೆ ಸೂತ್ರದ ನೇಣು ಗಾಳವಾಕಿಯ ಮೊಗವು ಮೇಳಯಿಸುವವಳು ಸಲೆ ಬೆಂಡು ಮಿಂಡ ತಾ ಬಾಳೆಮೀನು (ಸರ್ವಜ್ಞ. ೧೯೪೪).

[ಬಾಳೆ$_2$ + ಮೀನ್$_2$. /ತಮಿ. ವಾಳ್ಮೀನ್; ತುಳು. ಬಾಲೆಮೀನ್]

**ಬಾಳೆಮೀನು** ' ಬಾಳೆಮೀನ್ ' ನೋ.

**ಬಾಳೆಲೆ** ' ಬಾೞೆಲೆ ' ನೋ.

**ಬಾಳೆವಣ್** ' ಬಾೞೆವಣ್ ' ನೋ.

**ಬಾಳೆವಸುಳೆ** (ನಾ). ಬಾಳೆಮೀನಿನ ಮರಿ : ಬಾಳೆವಸುಳೆದಿಟ್ಟಿಯ ಬಂಧಕಿಯರ ಜಾಳಂ ನಡೆತಂದುದು (ಜಯುಕಾ. ೦೩-೬೯). [ಬಾಳೆ$_2$ + ಪಸುಳೆ]

**ಬಾಳೆಹಣ್ಣು** ' ಬಾೞೆವಣ್ ' ನೋ.

**ಬಾಳ್ಕಟ್ಟು** ' ಬಾಳ್ಗಟ್ಟು ' ನೋ.

**ಬಾಳ್ಕೆ** ' ಬಾೞ್ಕೆ ' ನೋ.

**ಬಾಳ್ಗನಸು** (ನಾ). (ಆಲಂ) ಜೀವನದಲ್ಲಿ ಒಳ್ಳೆಯದನ್ನು ಬಯಸಿ ಕಲ್ಪಿಸಿಕೊಂಡಿರುವ ಬದುಕಿನ ಭವಿಷ್ಯ : ಹಿಂದಾವ ಮುದಿಯ ಮೆಯ್ . . . ಸುಖದಮಾಗಿರ್ದತ್ತೊ, ತಾನದೆ ಇಂದು ಸೂಡಿನೊಲ್, ಕಟ್ಟಾಸೆ ಬೀಡಿನೊಲ್, ಬಾಳ್ಗನಸುಗಳಿಗೆಲ್ಲ ಕೊನೆಯ ಸುಡುಗಾಡಿನೊಲ್ ಕಾಣುತಿರೆ (ಶ್ರೀರಾಮಾ. ೦೦೯-೦೯೦). [ಬಾಳ್$_2$ (< ಬಾೞ್$_3$) + ಕನಸು]

**ಬಾಳ್ಗರ್ಚು** ' ಬಾಳ್ಗಟ್ಟು ' ನೋ.

**ಬಾಳ್ಗರ್ಚುಗೊಡು** ' ಬಾಳ್ಗಟ್ಟುಗೊಡು ' ನೋ.

**ಬಾಳ್ಗಟ್ಟು**, ಬಾಳಗಟ್ಟು, ಬಾಳ್ಕಟ್ಟು, ಬಾಳ್ಗರ್ಚು, ವಾಳ್ಗಟ್ಟು (ನಾ). ಯುದ್ಧದಲ್ಲಿ ಪರಾಕ್ರಮವನ್ನು ತೋರಿದುದಕ್ಕಾಗಿ ಯುದ್ಧಾಂತ್ಯದಲ್ಲಿ ವೀರನ ಕತ್ತಿಯನ್ನು ತೊಳೆದು, ಕೊಡುವ ಮಾನ್ಯ: ಕೇಕಯ ಪಲ್ಲವರಂ ಕಾದಿಱಿದು ಪೆತ್ತ ಜಯನಾ ವಿಜಯರಸನ್ಗೆ ಬಾಳ್ಗಟ್ಟು ಪಲ್ಮಡಿಉ ಮೂಱುವಳ್ಳಿಉಂ ಕೊಟ್ಟಾರ್ (ಮ್ಯಕಂ. ೧೯೩೬, ೧೬-೦೨ ; ಸು. 450); ಬಾಳ್ಗಟ್ಟು ಕೊಟ್ಟೊದು ಅಯ್ಯುಗ . . . ಕಟನಿ (ಎಕ. XVI. ತುಮಕೂ. ೯೮-೪ ; ಸು. 780); ಅವರ ಮಾವು ತಿಮ ಮೊದೆಯಮಾದವಾಡಿಯ ಬಾಳ್ಗಟ್ಟು ಕೊಟ್ಟೊ (ಮ್ಯಕಂ. ೧೯೩೦, ೪೯-೪ ; ಸು. 886). **ಬಾಳಗಟ್ಟು :** ನಾಗಗುಟ್ಟರಸಂ ತಮ್ಮ ಏಱಿದ ಕುದುರೆಯನ್ಮಗುಱಿ ಅಟ್ಟಿ ಬಾಳಂ ಕಿಟ್ಟು ನಡದು ಪಲರನಿಱಿದು ಸತ್ತೊಡೆ ಬೆಳ್ಳವ್ಪರವಿ ಮಾ × ಬಾಳಗಟ್ಟು ಆಗೆ ಕೊಟ್ಟೊದು (ಎಕ. X, ಕೋಲಾರ. ೨೦೦-೦೫ ; ಸು. 890 ?). **ಬಾಳ್ಕಟ್ಟು :** ಬಲಮಾನ್ನಾಳ್ದಿ ಎಱಿದು ಬಿಟ್ಟರ್ ಬಿಟಿಟ್ಟೊಡೆ ಮೆಚ್ಚಿ ಲಕುನ್ದಮಾ ಬಾಳ್ಕಟ್ಟು ಕೊಟ್ಟ (ಎಕ. X (s). ಬಾಗೇಪ. ೬೬-೮ ; 820). **ಬಾಳ್ಗರ್ಚು :** 'ಬಾಳ್ಗರ್ಚುಗೊಡು' ಪರಾ. **ವಾಳ್ಗಟ್ಟು :** ಶಾನ್ತನೂರೂ ಎರೆಡಿಯೂರುಉಂ ವನ್ದು ತೂವ್ಪುಕಟನಿಯುಂ ಅವರ ಮನೆಯುಂ ವಾಳ್ಗಟ್ಟುಂ ಪ್ರಸಾದಜಿಗ್ಯಿಯ್ದಾರ್ (ಎಕ. X, ಮುಳಬಾ. ೨೫೫-೦೨ ; ಸು. 750) ; ಮೂಱುಕೊಡೆ ಅಣ್ಣಿಯರ್ಪಿಣ್ಯಾನೂರಾ ಏಱಿನುಳ್ಳೆಱಿದು ಬಿಱ್ದಾರ್ ಕ[ನ್ನ]ರಸರುಳ್ ಇದರ್ಕೆ ಚಿವಾನಿ ಕಳನಿ ವಾಳ್ಗಟ್ಟು ಕೊಟ್ಟೊದು ರೊಣಮೊಡೆಯೊಗೆ ಕೊಟ್ಟರ್ (ಎಕ. XVI, ತುಮಕೂ. ೬೬-೫; ?).

[ಬಾಳ್$_3$ + ಕಟ್ಟು]

**ಬಾಳ್ಗಟ್ಟುಗೊಡು**, ಬಾಳ್ಗರ್ಚುಗೊಡು (ಕ್ರಿ). ಯುದ್ಧದಲ್ಲಿ ಶೌರ್ಯವನ್ನು ತೋರಿದುದಕ್ಕಾಗಿ ಮಾನ್ಯವಾಗಿ ಭೂಮಿಯನ್ನು ಕೊಡು ; ನೆತ್ತರುಕೊಡುಗೆಯನ್ನು ಕೊಡು: ಆತಂಗೆ ಬಾಣವಿದ್ಯಾಧರಂ ಮೆಚ್ಚಿ ಬಾಳ್ಗಟ್ಟುಗೊಟ್ಟದು (ಕಾಇಇ. IX-i, ೪-೦೦; ಸು. 9 ನೆಯ ಶತ). **ಬಾಳ್ಗರ್ಚುಗೊಡು :** ನೀತಿಮಾರ್ಗ್ಗ ಪೆಮ್ಮಾರ್ನಡಿಗಳು ನೊಟಮ್ಬಾಧಿರಾಜರು ಸೂಡೂರಂ ಬಾಳ್ಗರ್ಚುಗೊಟ್ಟರ್ (ಎಕ. X, ಕೋಲಾರ. ೬೯-೦೩ ; ಸು. 890).

[ ಬಾಳ್ಗಟ್ಟು + ಕೊಡು$_1$ ]

**ಬಾಳ್ಗೀಟ್** (ಕ್ರಿ). ಖಡ್ಗವನ್ನು ಹಿರಿ ; ಕತ್ತಿಯನ್ನು ಒರೆಯಿಂದ ಕೀಳು: ಸಂಗ್ರಾಮವಿದ್ಯಾನ್ವಿತರ್ × × × ಯಂ ಪತಿ ಕೋಗಿಯೂರ ಬಯಲೊಳ್ಬಾಳ್ಗಿಟ್ಟುಕೊಣ್ಡಿಯ್ದದಂ (ಎಕ. XIV, ಎಡತೊ. ೩೧-೪; ಸು. 900) ; ಅನಿಬರುಂ ಬಾಳ್ಗಿಟ್ಟು[ಪಾಠಾಂ. ತ್ತು] ಮೇಲ್ವಾಯ್ದೊಡರ್ಬಿಸೆ ಶಿಣ್ಣಂ ತೆಗೆದರ್ಧಚಂದ್ರಶರದಿಂ ಸೂಟ್ ಸೂಟಿಳೊಟ್ಟಾಗಳರ್ಚಿಸಿದಂತಿರ್ದು ದುರುಳ್ದ ಕೌರವಶಿರಃಪದ್ಮಂಗಳಿಂ ಕೊಳ್ಗುಳಂ (ಪಂಪಭಾ. ೧೨-೧೯೫); ಬಾಳ್ಗಿತ್ತು ಮಚ್ಚರದಿಂ ಸಾರ್ಚಿದರಂ ಪಡಲ್ವಡಿಸಿ (ಅಜಪು. ೦-೩೬).

[ಬಾಳ್$_3$ + ಕೀಟ್$_1$]

**ಬಾಳ್ಗುಡತೆ** (ನಾ). (ರಾಜರು ಧರಿಸುತ್ತಿದ್ದ) ಅಧಿಕಾರಸೂಚಕವಾದ ಅಂಗಿ : ತೊಟ್ಟ ಮಹಾರಾಜಮುದ್ರೆಯ ಬಾಳ್ಗುಡುತೆಗೂ, ಹಿಡಿದ ವೀರದಣ್ಮನ ಕಯ್ದುವಿಗೂ ಕಟ್ಟೀಪವು ಜಕ್ಕುಳಿಕೆಯು ಅಪಮಾನವು ಅಡಸಿ ಮುಸಗುವಂತೆ-ನೀವು ಕುಬುದ್ಧಿಯನೆಣಿಸಿ (ಚಿಟ್ಟಿಅ. ೨೦೪-೦೪).

[ಬಾಳ್$_2$ (< ಬಾಟ್$_3$) + ಕುಡುತ್ತೆ$_3$ (< ಕುಡತಿ)]

**ಬಾಳ್ಗುಳಿ** ' ಬಾಟ್ಗುಟಿ ' ನೋ.

**ಬಾಳ್ಗೆಡು** (ಕ್ರಿ). ಜೀವನವನ್ನು ಹಾಳುಮಾಡಿಕೊಳ್ಳು : ಕೆಟ್ಟೆವೋ ! ಕಂಗೆಟ್ಟೆವೋ ! ಮನೆಗೆಟ್ಟೆವೋ ! ಬಾಳ್ಗೆಟ್ಟೆವೋ ! (ಶ್ರೀರಾಮಾ. ೭೦೩-೦೨೦).

[ಬಾಳ್$_2$ (< ಬಾಟ್$_3$) + ಕೆಡು$_1$]

**ಬಾಳ್ಗೆಳೆಯ** (ನಾ). ಬಾಳಿನುದ್ದಕ್ಕೂ ಸ್ನೇಹಿತನಾಗಿರುವವನು : ವತ್ಸ ! ಕಾಣದು ಕಣ್ಗೆ ! ಬಗೆಗೆ ಸುಳಿದಿದೆ ಬರವು ಬಾಳ್ಗೆಳೆಯನೆರ್ರ್ವನಾ ! (ಶ್ರೀರಾಮಾ. ೨೮೮೪-೮೭).

[ ಬಾಳ್$_2$ (< ಬಾಟ್$_3$) + ಕೆಳೆಯ ]

**ಬಾಳ್ಗೊಲೆ** (ನಾ). ಜೀವಹಾನಿ : ಪ್ರಾಣಹತ್ಯೆ : ಗಳಹದಿರು ಕೆಲಬಲದ ಹಂಗಿನ ಬಳಕೆಯೇ ಘಡ ಸೂತಸೂತ ಬಾಳ್ಗೊಲೆಯು ಬಾಹಿರ ಬಿಸುಗ ಬೆದಱಿಸಿ ಬಱಿದೆ ಬೆಜಿತೆಯಲ (ಕುವ್ಯಾಕ. ೧೧-೨೫) ; ನಿರ್ಜನ ನಿಶಾವೇಳೆಯಲಿ ಚಿತ್ರೆ, ಕ್ಷಾತ್ರಕುಲರಮಣಿ. ಬಾಳ್ಗೊಲೆಗುಜ್ಜುಗಂಗೈದು . . . ಶಶಿತಾರೆಗಳಿಗೆ ಬಿನ್ನೈಸಿದಳ್ ಕೈಮುಗಿದು (ಚಿತ್ರಾಂಗ. ೬೫-೦೬೯೩).

[ ಬಾಳ್$_2$ (< ಬಾಟ್$_3$) + ಕೊಲೆ$_2$ ]

**ಬಾಳ್ತರ** (ನಾ). ತಾಳಿಕೆ ; ಬಾಳಿಕೆ : ಬೆತ್ತದ ಸಂದುಕ ನೂರುವರ್ಷ ಬಾಳ್ತರ ಬರುತ್ತದೆ (ಮೂಕಜ್ಜಿ. ೦೯೩).  [ ← ತುಳು. ಬಾಳ್ತರ ]

**ಬಾಳ್ತಿ** ' ಬಾಟ್ತಿ ' ನೋ.

**ಬಾಳ್ತಿಗ** (ನಾ). ಮನೆವಾರ್ತೆಗಾರ : ನಮ್ಮಯ ಮನೋವಿಧಾನಗಳನ್ನು ನವಗೆ ಕೈಗೂಡಿಸಿ ಕುಡುವುದು . . . ನಿಮ್ಮಂತಹ ಕುಲಕ್ರಮಯುಕ್ತವಾದ ಸ್ವಧರ್ಮನಿಷ್ಠೆಯ ಬಲ್ಲ ಬಾಳ್ತಿಗರಿಗೆ ಬಿರುದಾಗಿದೆ (ಚಿಟ್ಟಿಅ. ೦೯೯-೦೭). [ ಬಾಳ್ತಿ ( < ಬಾಟ್ತಿ) + – ಗ$_2$ ]

**ಬಾಳ್ತಿಗೆಯ್** ' ಬಾಟ್ತಿಗೆಯ್ ' ನೋ.

**ಬಾಳ್ದಲೆ** ' ಬಾಟ್ದಲೆ ' ನೋ.

**ಬಾಳ್ದಲೆಗೊಳ್** ' ಬಾಟ್ದಲೆಗೊಳ್ ' ನೋ.

**ಬಾಳ್ದಲೆವಿಡಿ** ' ಬಾಟ್ದಲೆವಿಡಿ ' ನೋ.

**ಬಾಳ್ದುದಿ** (ನಾ). ಖಡ್ಗದ ಮೊನೆ ; ಕತ್ತಿಯ ತುದಿ : ಬಾಳ್ದುದಿವೊಲಿರ್ಪ ನಖದಿಂ ಸೀಳ್ದಸುರನ ಕುಕ್ಷಿಯಂ . . . ಬೇಳ್ದಂ ನಿಜವಿಕ್ರಮಾಗ್ನಿಯೊಳ್ ನರಸಿಂಹಂ (ವಿಷ್ಣುಪು. ೦-೫-೨೫೦). [ ಬಾಳ್$_3$ + ತುದಿ ]

**ಬಾಳ್ಬೀಟ್** (ಕ್ರಿ). (ಅಲಂ) ಶತ್ರುವಿನ ಖಡ್ಗಕ್ಕೆ ಸಿಕ್ಕಿ ಸಾಯು : ತುಱುವನಿಕ್ಕಿಸಿ ರಣದೊಳ್ಬಾಳ್ಬೀಟ್ಟೊ ಸುಗತಿಯ ಪಡೆದನ್ (ಎಕ. VIII, ಸೊರಬ. ೨೦೪-೦೫ ; 965). [ಬಾಳ್$_3$ + ಬೀಟ್$_1$]

**ಬಾಳ್ಮೆ** ' ಬಾಟ್ಮೆ ' ನೋ.

**ಬಾಳ್ಮೊದಲ್** ' ಬಾಟ್ಮೊದಲ್ ' ನೋ.

**ಬಾಳ್ಮೊನೆ** (ನಾ). = ಬಾಳ್ದುದಿ : ಬಾಳ್ಮೊನೆ ; ಪಾಟ್ಮನೆ (ಶಬಮ. ೬೭ ವೃಹೋ); ದಾದಿ ಬಟಿ ಪಸುಳೆಯನ್ ಬಾಳ್ಮೊನೆಗೆ ಚುರ್ಚಿದನ್ (ಅಕ್ರಮ್ಮಾ. ೩-೯೭).  [ಬಾಳ್$_3$ + ಮೊನೆ]

**ಬಾಳ್ವಂದರ** ' ಬಾಟ್ವಂದರ್ ' ನೋ.

**ಬಾಳ್ವನೆ** ' ಬಾಟ್ವನೆ ' ನೋ.

**ಬಾಳ್ವಲ** (ನಾ). ಖಡ್ಗಬಲ ; ಆಯುಧಬಲ : ಪರವಿಗ್ರಹದ ಮೇಲಣ ತೋಳ್ವಲಮುಮಂ ನಿಜವಿಗ್ರಹದ ಮೇಲಣ ಬಾಳ್ವಲಮುಮೋಸರಿಸದೆ ಸುತ್ತಿಱಿದ ಮುತ್ತಿದ ಬೀಡಂ ತೆಗೆಯಿಸಿ ಮುಗುಟ್ದು ಬರ್ಪಾಗಳ್ (ಅನಂತಪು. ೦೨-೨೭ ವ) ; ಅಳ್ವಲದ ತೋಳ್ವಲದ ಬಾಳ್ವಲದ ಗರ್ವದಿಂದುರ್ವಿ ಮಲೆತ ಗರ್ವಿತರೋರ್ವೀಶಬಳಮನೆಟ್ಟಿಟ್ಟ (ಪುಷ್ಪಪು. ೫-೫೦ ವ). [ಬಾಳ್$_3$+ಬಲ$_3$]

**ಬಾಳ್ವಲಿ** (ನಾ). ಪ್ರಾಣದ ಬಲಿದಾನ,—ಆಹುತಿ : 'ಬಾಳ್ವಲಿಗುಡು' ಪರಾ.  [ ಬಾಳ್$_2$ (< ಬಾಟ್$_3$) + ಬಲಿ$_3$ ]

**ಬಾಳ್ವಲಿಗುಡು** (ಕ್ರಿ). ಪ್ರಾಣವನ್ನು ಆಹುತಿ ಕೊಡು,—ಬಲಿಯಾಗಿ ಅರ್ಪಿಸು : ಈ ನಮ್ಮ ನಾಯಕರ ಶರಭಾವತಾರದ ಪ್ರಚಣ್ಡಮೂರ್ತಿಗೆ ಬಾಳ್ವಲಿಗುಡಬೇಕು (ಮುಂತ್ರಕ. ೯೯-೨೫).

[ಬಾಳ್ವಲಿ + ಕುಡು$_1$ (< ಕೊಡು$_1$)]

**ಬಾಳ್ವಿಕೆ** ' ಬಾಟ್ಕಿ ' ನೋ.

**ಬಾಳ್ವಿಡಿ$_1$** (ಕ್ರಿ). ಜೀವಧಾರಣೆ ಮಾಡು ; ಬದುಕು : ಮತ್ತೆಂತೊ

ಬಾಳ್ವಡಿದು ಬಂದರೊಡಗೂಡಿ (ಕಾಲೂರ. ೯೬-೧೯೪).

[ ಬಾಳ್$_2$ (< ಬಾೞ್$_3$) + ಪಿಡಿ$_1$ ]

**ಬಾಳ್ವಿಡಿ$_2$** (ಕ್ರಿ). ೧. ಕತ್ತಿಯನ್ನು ಹಿಡಿ ; ಖಡ್ಗವನ್ನು ಹಿಡಿ. ೨. (ಅಲಂ) ಯುದ್ಧಮಾಡು ; ಸೆಣಸು : ಬಾಳ್ವಿಡಿದಾರ್ ಬಾಟ್ವಪ್ಪರಾತ ನಿದಿರೊಳ್ ಪಗೆವರ್ (ಕಬ್ಬಿಕಾ. ೯೯). [ ಬಾಳ್$_3$ + ಪಿಡಿ$_1$ ]

**ಬಾಳ್ವೀಡು** (ನಾ). ಬಾಳುವ ಮನೆ ; ಮೂಲಾಶ್ರಯ ; ನೆಲೆವನೆ : ಸಿಂಹಪುರ ಕಂತುವಿನ ನೆಲೆವೀಡು ಸೊಬಗಿನ ಸಂತತಿಯ ತಾಯ್ನಾಡು ಲಕ್ಷ್ಮಿಯ ಸಂತಸದ ಬಾಳ್ವೀಡೆನಿಸಿ ಶೋಭಿಪುದು ಸೊಬಗಾಗಿ (ಸಾಳ್ವಭಾ. ೩-೦). [ ಬಾಳ್$_1$ (< ಬಾೞ್$_1$) + ಬೀಡು$_2$ ]

**ಬಾಳ್ವೆ** 'ಬಾೞ್ವೆ' ನೋ.

**ಬಾಳ್ವೆಗೆಡಿಸು** (ಕ್ರಿ). ಬಾಳುಗೇಡು ಮಾಡು ; ಬದುಕನ್ನು ಹಾಳು ಮಾಡು : ಇದಿರಾದರಂ ಬಾಳ್ವೆಗೆಡಿಸುತ್ತಸುಂಗೊಂಬೆನೀ ಬ್ರಹ್ಮಾಂಡಮಂ ಪೊಳ್ವೆಂ (ಕೆಬವು. ೩೦-೦೦). [ಬಾಳ್ವೆ (< ಬಾೞ್ವೆ) + ಕೆಡಿಸು$_1$]

**ಬಾಳ್ವೆಣ** 'ಬಾೞ್ವೆಣ' ನೋ.

**ಬಾಳ್ವೆಳೆ** (ನಾ). (ಹೊಲಗದ್ದೆಗಳ) ಬೆಳೆಯುತ್ತಿರುವ ಪೈರು ; ಹಸುರಾಗಿರುವ ಬೆಳೆ: ಬೆಳ್ವೆಳಗಿನ ಬಾಳ್ವೆಳೆಯಂ ತಳ್ವದೆ ಬಾಂಬೊಲದೊಳರುಣಕರ ಶಿಖಿಶಿಖೆ ಪಾಳೇಳ್ವಿಸಮಳುರ್ದುದಿ ಚಿಂತೆಯನಾಳ್ವಂತೆಪೊಲೋಪಧೀಶ್ವರಂ ಕಳೆಗಟ್ಟಂ (ರಾಜಶೇ. ೦೨-೧೩). [ಬಾಳ್$_1$ (< ಬಾೞ್$_1$) + ಬೆಳೆ$_2$]

**ಬಾಳ್ವೇಲಿ** 'ಬಾೞ್ವೇಲಿ' ನೋ.

**ಬಾಳ್ವೊಗರ್** (ನಾ). ಕತ್ತಿಯ ಹೊಳಪು,—ಕಾಂತಿ : ಧರಣೀರಕ್ಷಣ ಮಂತ್ರಾಕ್ಷರಮಂ ವಿದ್ವಿಷತ್ಸೈನ್ಯಮಾರಣಮಂತ್ರಾಕ್ಷರಮಂ ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ವೊಗರೆಸೆಗುಂ (ಮಲ್ಲಿಪು. ೩-೦೩). [ಬಾಳ್$_3$ + ಪೊಗರ್]

**ಬಾಳ್ವೊಗು** (ಕ್ರಿ). ವೈವಾಹಿಕಜೀವನವನ್ನು ಮೊದಲು ಮಾಡು ; ಸಾಂಸಾರಿಕಜೀವನವನ್ನು ಪ್ರಾರಂಭಿಸು ; ಮದುವೆಯಾಗು : ಪಳೆಯ ರೋಗಕ್ಕೌಷಧಂಗೊಳಲ್ ನವರೋಗಮೊಲಿದು ಬಂದಂತೆ ಮೊದಲಾಣ್ಮನೊಲ್ಲೆಂದೊರ್ವ ಬಲವಂತನಂ ಬಯಸಿ ಬಾಳ್ವೊಗಲ್ ಬಡಿವ ಗಂಡಂ ದೊರಕಿದಂತೆ (ಚಿಬಪು. ೩೩-೭). [ಬಾಳ್$_2$ (< ಬಾೞ್$_3$) + ಪೊಗು]

**ಬಾಳ್ವೊಗೆ** (ನಾ). ಕತ್ತಿಗಳು ಪರಸ್ಪರ ತಾಗಿದಾಗ ಅವುಗಳ ಘರ್ಷಣೆಯಿಂದ ಹೊರಡುವ ಹೊಗೆ : ಬಾಳ್ವಾಳ್ಗಳ ಘಟ್ಟಣೆಯೊಳ್ ಬಳ್ಳಳ ಬಳೆದೊಗೆದು ನೆಗೆದ ಕಿಡಿಗಳ ಬಂಬಲ್ಗಳ್ವೆರಸು ಪೊಳೆದು ನೆಗೆದುದು ಬಾಳ್ವೊಗೆ [ಕಾರ ಮುಗಿಲ್] ಬಳ್ಳಿಮಿಂ[ಚೆನಿಂದು]ಳ್ಕುವವೋಲ್ (ಶಂಕರಭಾ. ೧೧-೮೪). [ಬಾಳ್$_3$ + ಪೊಗೆ$_1$]

**ಬಾೞಿಗೊಬ್ಬೆ** (ನಾ). ಬೆಳೆಯುವ ಪೊದೆ, ಕಂಟಿ ಮೊದಲಾದುವುಗಳಿಂದ ರಚಿಸಿದ ಬೇಲಿ : ಉತ್ತರಸ್ಯಾನ್ ದಿಶಿ ಬಾೞಿಗೊಬ್ಬೆ (ಪ್ರಕಂ. ೦೯೭೪. ೬೦-೯೬ ; 799).

[P ಇದು 'ಬಾೞಿಗೊಬ್ಬೆ' ಎಂಬುದರ ಅಪಲಿಖಿತವಿರಬಹುದು]

**ಬಾೞ್$_1$, ಬಾಳ್$_1$, ಬಾಳು$_1$** (ಕ್ರಿ). ಬದ್ದು$_1$, ಬರ್ದು$_2$, ಬಳ್ದು, ಬಟ್ದು (ಭೂತನ್ಯೂ). ೧. ಬದುಕು; ಜೀವಿಸು : ಪತ್ರಿ ಪ್ರಮಾದ ಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯನೆ ಬಟ್ದಳಿಂತು ಬಾೞ್ವುದೆ ಚೋದ್ಯಂ (ಕವಿರಾ. ೨-೬೬); ಅರಾತಿಗಳ್ಗಳ್ಕಿ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ ಬಾೞ್ವಂ ಗಂಡರೂಪಿನೊಳ್ ಗಂಡನಲ್ಲಂ ಪೆಂಡತಿಯೆ ವಲಂ (ಆದಿಪು. ೦೨-೯೬) ; ಸಮಸಂದ ತನ್ನ ಸಂತತಿಗೆ ಮಕ್ಕಳುಳ್ಳವಳಿ ಬಟ್ದು ಬಾೞ್ವಳ್ [ಕ್ಷಿ]ತಿಯೊಳ್ ಸಮಸಂದೆಸೆಗುಮೆ ಸಂತತಿಗೆ ಮಕ್ಕಳಿಲ್ಲದಳ್ ಬರ್ದುದೇಂ ಬಾೞದುದೇಂ (ಸುಕುಮಾ. ೯-೦೦೪) ; ಸುಖದಿಂ ಅನುಭವಿಸಿಕೊಂಡು ಸರ್ವಮಾನ್ಯವಾಗಿ ಬದ್ದು ಬಹಿರಿ (ಪ್ರಕಂ. ೦೯೩೪, ೩೦-೨೩; 1640). ೨. ಹೊಟ್ಟೆ ಹೊರೆ: ಉದರ ನಿರ್ವಾಹ ಮಾಡು; ಉಪಜೀವನ ನಡೆಸು : ಜೀವಿತಮಂ ಕೊಂಡು ಬಾೞ್ವೆನೆಂಬವಂ ಪ್ರಾಣಮಂ ಕುಡಲ್ವೇೞ್ಕುಂ (ಶಂತಿಕಂ. ೫೨-೦೦). ೩. ನೆಮ್ಮದಿಯಾಗಿರು ; ಸುಖದಿಂದ ಜೀವಿಸು; ಸಂತುಷ್ಟವಾಗಿರು: ಬತ್ತಲೆಗರ ಮಾತುಗೇಳದಿರು ಬಾೞ್ವೆನಮಿಂದ್ರಿಯವರ್ಗದಿಚ್ಛೆಯಂ ಸಲಿಸಿ . . . ಬಿಚ್ಚತಂ ನಲಿವುದು (ಅಂಪು. ೨-೯) ; ನಾಲಿಗುಳ್ವನೆ ಬಾೞ್ಗುಂ (ಶಾಪಾಶೂ. ೨೦ ಕೃದೋ); ಬಾೞ್ವ ಮನೆಗೊಂದು ಬಗುಳ್ವದು ಬೇೞ್ಕು ಮೆನ್ನಿರೇ (ಅನಂಪು. ೦-೪೦). ೪. ಒಕ್ಕಲಾಗು ; ನೆಲಸು ; ವಾಸಮಾಡು : "ಬಟ್ದಂ (ಬಾೞ್ದಂ)=ಜೀವಿಸಿದಂ ; ಒಕ್ಕಲಾದಂ" (ಕಮದ. ಶಂ. ೦) ; ಬಿಸಿಗೂರುಳ್ಬಾೞ್ವ ಪ್ರಜೆಗೆಲ್ಲಂ ಕೊಟ್ಟೊದು ಕಟ್ಟಾಣೆ ಮರ್ಯಾದಿ ಕಾರಾಳ್ಕೆಗೊಟ್ಟಾರ್ (ಎಪಿ. IX (8), ಮಾಗಡಿ. ೦೨೯-೪ ; ಸು. 900). ೫. (ಆನೆಯನ್ನು) ನೆಲೆಯಾಗಿ ನಿಲ್ಲಿಸು: 'ಬಾೞಿಸು', 'ಬಾೞ್ಗಂಬ' ಪರಾ.

**ಬಾಳ್$_1$**: ೧. ಕೆಮ್ಮಿ ಕುಪ್ಪುತ್ತೊಡಲನೊಲೆಯುತ್ತಂ ಮುಗ್ಗಿ ಬಳ್ದುಂ ನಿತಾಂತಂ ಕೆಡವಲ್ಲಿಂ ಮುನ್ನ . . . ರಕ್ಷಿಪ್ಪುದೆನ್ನಂ (ಚೆನ್ನಶ. ೩೬); ಮೋಹನ ರೂಪನೆ ನಿನ್ನ ಬಿಟ್ಟೀಪರಿಯಲಿ ಬಾಳ್ವ ಜೀಯ (ಮೋಹತ. ೯-೦೯). ೩. ಸಪ್ತಋಷಿಗಳ್ ನುಡಿದಾಪ್ತವಚನಂ ಕರ್ಣರಸಾಯನಮಾಗೆ ಗಿರಿರಾಜಂ ಕೇಳ್ದು ಬಾಳ್ದು ಸಂದಣಿಸಿದ ಪುಳಕದಿಂ ದಳವೇಱ (ಗಿಂಕ. ೦೦-೨೬ ವ). ೬. ಬಾಳುವೆಮಾಡು ; ಒಗೆತನಮಾಡು ; ದಾಂಪತ್ಯಜೀವನವನ್ನು ನಡೆಸು : ವನಿತೆ ನಿನ್ನಂ ಬಾಳಲೀಯೆವು ಮನೆಯೊಳಿರಬೇಡೀಗ ಹೊಱವಡು ನಿನಗೆ ನಾವಂಜುವೆವು (ಜಸಪು. ೫೨-೨೦).

**ಬಾಳು$_1$**: ೧. ಬಾಣಾತ್ಮ ಸಂಭವೆಯಿಲ್ಲದಾನೊರ್ವ ಬಾಳೆನು (ಮೋಹತ. ೩೪-೨೫). ೩. ತಾ ಬಾಳ ಲಾಱದೆ ವಿಧಿಯ ಬೈದನೆಂಬ ನಾಣ್ನುಡಿಯಾಯಿತ್ತಲ್ಲ ಬಸವಣ್ಣ (ಕೂನ್ನಸಂ. ೦೦೯-೬೭) ; ಆಯುವಂತನೆ ಬಾಳು ದನುಜನಿಕಾಯಮಸ್ತಕಶೂಲ ಬಾಳೆನ್ನು ತಾಯತಾಂಬಿಕೆ ಹರಸೆ ಮಾರುತಿ ಪದನ ವಿವರಿಸಿದ (ಕಾಶೀಖಂ. ೪೩-೩); ಸೊಕ್ಕಾನೆ ಸಿಂಗದೊಳ್ ಕದನವ ಕಟ್ಟಿಕೊಂಡೊಕ್ಕಲಾಗಿರ್ದು ಬಾಳುವುದೇ (ಮೋಹತ. ೩೩-೨೪). ೬. ಎಳೆವೆಣ್ಗಳೀ ಕೃತಿಗೇಳೆ ತಮ್ಮಿನಿಯರನೆಳಮೆಯೊಳೆಳವುಗಿಡಿಸದೆ ಬೆಳಿಸಂದು ಬಾಳುವರು (ಹರಿಬಿ. ೦-೫೩). ೭. ಬೆಲೆಯಾಗು ; ಬೆಲೆ ತರು : ಸಂತೆಯಲ್ಲಿ ಒಂಬು ರೂಪಾಯಿ ಬಾಳುವ ಜೋಡು ಶ್ರೀಮಂತನ ಮೂಲಕವಾಗಿ ಎರಡು ರೂಪಾಯಿ ಬಾಳೀತೆಂಬುವ ಹಾಗಲ್ಲ (ಮುಂಬಯಿ. ೫-೦೨೦).

**ಬರ್ದಂ, ಬರ್ದೊಂ** = ಬದುಕಿದವನು ; ಬಾಳಿದವನು : ಬರ್ದರೊಳಾನೆ ಬ[ರ್ದಂ] [ಪಾಠಾಂ. ರ್ದೆಂ] (ಶಂಕಭಾ. ೯-೬೩) ; ಕಲ್ಲೆರ್ದೆತನದಿಂದೆನ್ನಂತು ಬರ್ದನಾವನುಮೊಳನೇ (ಗದಾಯು. ೫-೨೮) ; ಶಾಂತಿಮನುತಾಪ ಮನಾಱಿಸಿತಂ[ದುದಂ]ದು ಬರ್ದೊಂ ಪರೆದಿರ್ದವೋಲ್ ಮುನಿಗೆ ಕಲ್ಲೆಲೆ ಬಲ್ಲೆಲೆಯಂ ನಿದಾಘದೊಳ್ (ಶಾಂತಿಪು. ೯-೦೦೬).

[ದೇ.॥ ತಮಿ. ವಾೞ್; ಮಲ. ವಾೞು; ತುಳು. ಬಾಳು; ಕೋತ. ವಾಳ್]

**ಬಾೞ್$_2$** (ಕ್ರಿ). ೧. ಸೀಳು ; ಹೋಳು ಮಾಡು : ಕರಗಸಂಗಳಿಂದಂ ಮರನಂ ಪೋೞ್ವಂತೆ ಕೆಯ್ಯಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿಯುದ್ದಂ ಬಿಡಿದು ಬಾೞ್ವುದುಂ (ವಡ್ಡಾರಾ. ೦೨೭-೦೩). ೨. (?) : ಬಾೞುಕಂ— ಸೀಳ್ದೊಣಗಿ ಬಾೞ್ದ ಶಾಕಂ (ಅಭಿ. ಶಂ. ೦).

**ಬಾೞ್$_3$, ಬಾಳ್$_2$, ಬಾಳು$_2$** (ನಾ). ೧. ಬದುಕು ; ಇರವು ; ಜೀವನ : ಅವುದು ನಿನ್ನ . . . ಗಮೆಮ್ಮ ಬಾೞನಿತೆ ನೀನಿಂತಿರ್ದೊ ಡಾವಾಸೆಯೋ (ಆದಿಪು. ೩-೨೫) ; . . . ದ ಶಂಕಾತಂಕದ ಸುತ್ತಿನೊಳ ಗುಂಟಿದುದಿ ನಮೆವ ಬಾೞುಂ ಬಾೞೇ (ನೇಮಿಪು. ೦೩-೬೪) ; ನೀನೆಂತೊ ಮಱಿವೆಯೊಳ್ ಪೞಿರೊಡನುಸಿರ್ದು ಗುಟ್ಟಂ ಬಿಟ್ಟೊಡೆಮ್ಮನ್ನರ ಬಾೞ್ ಪಾೞಕ್ಕುಂ (ರಾಮಾಶ್ವ. ೧೦೯-೧೭). ೨. ನೆಮ್ಮದಿ

ಯಾದ ಬದುಕು; ಸುಖಜೀವನ: ಪೞಿಪಟ್ಟು ಪಗೆವರಂ ನೆೞ್ ಪೞಿಪಡಲೞಿಯುವವರನವರ್ಗಳ ಬಾೞೊಳ್ ನಿಱಿಸಲ್ ಬಗೆದ್ಯ (ಶಂಪು. ೯-೪೩); ನೆಲನ ಈ ಗೆಂಟೞಿಡೆಗೆ, ಬೞಿಯಿರದ ಬಾೞಿರದ ಸಿದಿಯದೀ ಪಾೞ್ಗೆ ಮೆಟ್ಟಿದೆವು ಬಂದು ಕಟ್ಟಕಡೆಗೆ (ಬದ್ಧಶ್ರ. ೦-೦). ೩. ದಾಂಪತ್ಯಜೀವನ; ಸಂಸಾರ: ಸ್ನೇಹವಿಲ್ಲದ ಕೋಡುಂ ಮೋಹವಿಲ್ಲದ ಬಾೞುಂ ಭಕ್ತಿಯಿಲ್ಲದ ಕೊಂಡಾಟವುಂ ಶಕ್ತಿಯಿಲ್ಲದ ಸೆಣಸುಂ. . . ಒಪ್ಪಲಾರ್ಕುಮೆ (ಧರ್ಮಾಮೃ. ೦-೭೩). ೪. ಜೀವನಾಂಶ; ಜೀವಿತ: ಶಸ್ತ್ರಂಗಳಂ ಬಲೆಱಿಂಗು ಮಂತ್ರಿಪದವಿಯುಂ ಬಾೞುಮಂ ಪ್ರತಿಪತ್ತಿಯುಮಂ ಕೊಟ್ಟುದಂ ಕೇಳ್ದು (ವಡ್ಡಾರಾ. ೨-೨೩). ೫. ಜೀವ; ಪ್ರಾಣ: 'ಬಾೞ್ವಣ' ಪರಾ. ೬. (ಜೀವಿತಕ್ಕಾಗಿ) ಕೊಡುವ ಭೂಮಿ: ಗಾಡಿಯೊಮ್ಮನಾ ಬಾೞುಂ ಪ್ರತಿಪಾಳಿಸ ನಿಲೆ ಪಡೆದೊಂ (ಎಕ. VII, ೨೦೩-೦೪;874). ೭. ಹಸುರಿನಿಂದ ಕೂಡಿದುದು; ಹಸುರಾದುದು: 'ಬಾೞ್ಗೊಂಪ' ಪರಾ. ೮. ಹಸಿಯಾದುದು; ತೇವವುಳ್ಳುದು: 'ಬಾೞ್ಗಿಣ' ಪರಾ. **ಬಾೞ್$_2$**: ೧. 'ಪುದುವಾೞ್$_2$' ಪರಾ. ೫. 'ಬಾೞ್ಗೊಲೆ' ಪರಾ. **ಬಾಳು$_2$**: ೧. ಬಾಳಿ ನೋಡಕಟಕಟ ಎನಗಿದು ಬಾಳೆ (ಬಸವ. ೪೩-೪೦); ಸೇವಾಪರನ ಬಾಳು ನಿರರ್ಥವವನಿಯಲಿ (ಜೀಶಂತ. ೪-೯೯); ಉತ್ತಮಮಾನವನ ಬಾಳೂ, ಬದುಕೂ ಇರಬೇಕು ನದಿಗಳಂತೆ (ಕವಂ. ೦೭). ೩. ಬಾಳಿಲ್ಲದವಳ [ಓ]ಲೆಯಂತಾಯಿತ್ತೆನಗೆ (ಬಸವ. ೨೯೭); ನನ್ನ ಬಾಳು ತಪ್ಪಿಸಿದ ನನ್ನ ಗಂಡನ ವಂಶದ ಹೆಣ್ಣುಮಕ್ಕಳು ಚೆನ್ನಾಗಿ ಬಾಳದೆ ಇರಲಿ (ಒತೆ. ೨೦). ೬. ಹಿತ್ತಿಲ ಕೇರಿಯ ಉತ್ತರೇಶ್ವರ ದೇವರ ಬಾಳೊಳು ಹೂದೋಟದಿಂ ಪಡುವಲು (ಸೌಇಇ. IX-i, ೩೭೦-೩೩; 1258); ಅನ್ತು ಮೂ ೧೨ ಹ ೨೦ ಗದೆಯೂ ಆ ಬಾಳಿಂಗೆ ಬಂದ ತೋಟಮನೆಯೂ (ಸೌಇಇ. XI-ii, ೪೦೭-೨೬; 1364); ಧರಣಿದೇವಂಗಳು ಧನಿಯರ ಕಯ್ಯಲು ಧಾರಾಪೂರ್ವ್ವಕವಾಗಿ ಕೊಂಡ ಬಾಳಿನ ವಿವರ (ಸೌಇಇ. IX-ii, ೪೦೯-೮; 1365).

**ಬಾಳದಿರಿಕೆ** = ಭಿಕ್ಷೆಯನ್ನು ಬೇಡಿ ಜೀವಿಸುವಿಕೆ, – ಬದುಕುವಿಕೆ: ವಿಳುಧರಣಿಯನಾಳುವರಸನಂ ಪೊಲೆಯನಿಗೆಯಾಳುಮಾಡಿದೆ ಪಂಚನರಸಾರ್ವಭೌಮರಿಗೆ ಬಾಳದಿರಿಕೆಯನಿತ್ತೆ ಶಂಭುಲಿಂಗೈಕ್ಯರೊಳು ಕೀಲಿಸಿದೆ ಪ್ರಾರಬ್ಧಭೋಗನೀತಿಯನು (ಕೈಶಂ. ೩-೦೦-೩). **ಬಾಳು ಮಾಡು** = ದಾಂಪತ್ಯಜೀವನವನ್ನು ನಡೆಸು; ಬಾಳುವೆ ಮಾಡು: ನೋಡು. ನೀನಿನ್ನೂ ಹುಡುಗಿ, ಅದರಲ್ಲೂ ಗಂಡನ ಮನೇಲಿ ಸುಖವಾಗಿ ಬಾಳು ಮಾಡ್ತಾ ಇರೋಳು (ಬಾಗಿವ. ೭). [<ಬಾೞ್$_1$]

**ಬಾೞಗಾವುಂಡ** (ನಾ). ಒಬ್ಬಾತನ ಹೆಸರು: ಬಾೞಗಾವುಣ್ಡ ಕಂಭಯ್ಯನುಂ ಕಳ್ವೆಣುಯೂರ ಮಹಾಜನಮುಂ (ಎಕ. XI. ಹಿರ್ದು. ೫೦-೨೦; 968). [ಬಾೞ್$_0$ + ಗಾವುಂಡ (< ಗಾಮುಂಡ)]

**ಬಾೞಿಕೆ** 'ಬಾೞ್ಕೆ' ನೋ.

**ಬಾೞಿಗೆ** 'ಬಾೞ್ಕೆ' ನೋ.

**ಬಾೞಿಮೆ** 'ಬಾೞ್ಮೆ' ನೋ.

**ಬಾೞಿಸು**, ಬಾಳಿಸು (ಕ್ರಿ). ೧. ಬದುಕಿಸು; ಉಜ್ಜೀವಿಸು: ರಸ[ಂ] ಶಿಂಡ ಮೆಯ್ಗೆ ತಕ್ಕ ಪ್ರತೀಕಾರದ ಮರ್ದುಗಳಂ ಮಾಡಿಯಾತನಂ ಬಾೞಿಸಿ ಕಟುಪಿದಂ (ವಡ್ಡಾರಾ. ೦೪೭-೦೯); ಎನ್ನಿಂ ಮುನ್ನಮೆನ್ನ ಮಗಂ ಸತ್ತನಾತನಂ ಬಾೞಿಸಲ್ವೇೞ್ಕುಂ (ಜಾವುಂಪು. ೪-೭). ೨. ಸಲಹು, ಕಾಪಾಡು: ಆರುಮಂ ತಂತಮ್ಮ ಪುಣ್ಯಮೆ ಬಾೞಿಸುಗುಂ (ಬಂಹಂ. ೩-೦೩ ವ). ೩. ಜೀವನವನ್ನು ಸಾಗಿಸಲು ಅವಕಾಶ ಮಾಡಿಕೊಡು; ಬಾಳಲು ಅನುಕೂಲ ಮಾಡಿ ಕೊಡು: ಅಯ್ವರುಮುನಯ್ದುೞಿಯುೂರೊಳೆ ಬಾೞಿಸು (ಶಂಪಾ. ೦೨-೪೮); ಪೆರ್ಗ್ಗಡೆ ಮಾಚಯ್ಯ ಮಜ್ಗಲದ ಗಾವುಣ್ಡ ಗೞಿಯ ಮೆಟ್ಟಿಟ್ಟಡೆ ಬಾೞಿಸಿದ ಸ್ಥಿತಿಕ್ರಮಮಾವುದೆನ್ದೊಡೆ (ಎಕ. IV (R). ಕಾಮರಾ. ೦೩೮-೯; 965). ೪. (ಆನೆಯನ್ನು) ನೆಲೆಯಾಗಿ ನಿಲ್ಲುವಂತೆ ಮಾಡು: ನೀಳ್ದ ತೋಳ್ ಮೆಱೆವುವು ಪೇರುರದೊಳ್ ನೆಲಸಿದ ಲಕ್ಷ್ಮೀಕರಿಣಿಗೆ ಬಾೞಿಸಿದ ರನ್ನದಮಳ್ಗಂಬದವೋಲ್ (ಜಗೋಚ. ೨-೬). **ಬಾಳಿಸು**: ೩. ನೀವು ಪ್ರೀತಿಯಿಂದ ನನ್ನನ್ನು ಬಾಳಿಸುವುದು ನನಗೆ ಬೇಕು (ಪದ್ಮಸ. ೨೦೨). [ಬಾೞ್$_1$ + – ಇಸು$_3$]

**ಬಾೞುಕ**, ಬಾಳಕ$_1$, ಬಾಳುಕ (ನಾ). ಸಂಡಗೆಯಂತೆ ಕರಿದು ನಂಜಿಕೊಳ್ಳಲೂ ಅಗತ್ಯ ಬಿದ್ದಾಗ ತರಕಾರಿಯಂತೆ ಬಳಸಲೂ ಅನುಕೂಲವಾಗುವಂತೆ ಸೀಳಿ ಅಥವಾ ಹೆಚ್ಚಿ, ಉಪ್ಪು ಬೆರಸಿ ಒಣಗಿಸಿದ ಮೆಣಸಿನಕಾಯಿ, ತರಕಾರಿ ಮೊದಲಾದುವು: "ಬಾೞುಕಂ = ಸೀಳ್ದೊಣಗಿ ಬಾಟ್ದ ಶಾಕಂ" (ಕಪುದ. ಕಂ. ೦). **ಬಾಳಕ$_1$**: ನೊರೆಸಂಡಗೆಯನು ಹುರಿಸಂಡಗೆಯನು ಬಾಳಕವನು ತಪ್ಪದೆಲ್ಲಾ ಸಾಧನವನು ಸಂಪರಿಸಿ ತಂದು (ಸಿದ್ಧರಾ. ೬-೫೨); ಪರಿಪರಿಯುಪ್ಪಿನಕಾಯಿ ಹಪ್ಪಳ ಸವಿವೆರಸಿದ ಬಾಳಕವ . . . ತರುಣಿಯರೆಡೆಮಾಡಿದರು (ಕಂವಿ. ೬-೮೪); ಪಡುವಲಕಾಯಿ, ಬದನೆಕಾಯಿ, ಅವರೆಕಾಯಿ, ಹಾಗಲಕಾಯಿ ಇತ್ಯಾದಿ ತರಕಾರಿಗಳ "ಬಾಳಕ" ಮಾಡಿಟ್ಟುಕೊಂಡರೆ ಬೇಕಾದಾಗ ಕರಿದು ಊಟದ ಸಮಯದಲ್ಲಿ ಉಪಯೋಗಿಸಬಹುದು (ಅತುಶಾ. ೦೦೩). 'ಬಾೞ್$_2$' ಹೋ. **ಬಾಳುಕ**: ಉಪ್ಪಿನಕಾಯ್ ಪಳಿದ್ಯ ಕಚ್ಚರಿ ಬಾಳುಕಂಗಳೊಪ್ಪುವ ಪಕ್ವಫಲ ರಸಾಯನದ ಸೀಕರಣೆಗಳನು . . . ಉಣಿ ನೀಡಿಸಿದನಾ ಮಹಾಚರಕೊಲ್ದು ಚೆನ್ನಬಸವೇಶ ನಂದು (ಚಬಪು. ೫-೭೦); ರಸರಸಾಯನ ಸಾರ್ಗಳುಪ್ಪಿನಕಾಯ್ವಾಳುಕಂ ಕಸರಿ ಕಚ್ಚಡಿ ಪಾಲ್ಗೊಸರ್ಗಳಿವು ಬಗೆಗೊಳಿಸಿ ಪೊಸತೆನಿಸಿರಲ್ಸವಿದನಚ್ಯುತಂ (ಕೃಬಧಾ. ೬-೪೪); ಸಂಡಗೆಯ ಬಾಳುಕಗಳಂ ಕಲಸೋಗರಂಗಳನು . . . ನೈವೇದ್ಯಮಂ ಮಾರ್ತಂಡಕೋಟಿಪ್ರಭೆಯ ಬೆಳಗುವನರ್ಪಿಸಿದರೊಲಿದು (ಶಂಕರಾ. ೨-೬೦).

**ಬಾೞುಕಮಾಗು** = (ಆಲಂ) (ಚಿಂತೆಯಿಂದ) ಸತ್ತ್ವಹೀನವಾಗು; ಬೆಂಡಾಗು: ಒಂಭತ್ತುತಿಂಗಳ್ ಬತ್ತಿ ಬಾೞುಕವಾಗಿ ಪೊತ್ತ ಬೇನೆಯುಂ ಸತ್ತ ಬೇನೆಯುಮಂ ನೀಗಲಾೞಿಂ (ಅರ್ಕವೇ. ೭-೩೩ ವ).

[ದೇ. ॥ ತುಳು. ಬಾಳಕ, ಬಾಳುಗ]

**ಬಾೞ³**, ಬಾೞ್$_1$ (ನಾ). ಅಗಲ ಹಾಗೂ ಉದ್ದವಿರುವ ಎಲೆಗಳಿದ್ದು, ಒಂದು ದಂಟಿಗೆ ಒಂದೇ ಗೊನೆ ಬಿಡುವ ಒಂದು ಬಗೆಯ ಹಣ್ಣಿನ ಗಿಡ; ಕದಳಿ: "ರಂಭಾ ಮೋಚ ಕದಳಿಯೆನಲು ಬಾೞಿಯಕ್ಕುಂ" (ಮಂಗರಾ. ೩೪-೯); ಭೀಮಸೇನಂ . . . ಬಾೞಿಯ ಚೆಲ್ವನಪ್ಪ ಬನಮಂ ಕಾಡಾನೆ ಪೊಯ್ದಂತೆ ಪೊಯ್ದಿನಿಸುಂ ಮಾಣದೆ ನೀಚಕೀಚಕನಿಕಾಯಧ್ವಂಸನಂ ಮಾಡಿದಂ (ಪಂಪಭಾ. ೮-೮೦); ಬಾೞಿಯ ಪಣ್ಣದೊಂದು ರುಚಿ ನೇೞಿಲ ಪಣ್ಗೊಳಗುಂಟೆ (ಧರ್ಮಾಮೃ. ೪-೦೨೭). **ಬಾೞ್$_1$**: ಬಾಳೆ ತೋಟ್ಟುಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X. ಕೋಲಾರ. ೨೩೦-೫; ಸು. 800 ?); ಕಬ್ಬು ಬಾಳೆ ಹಲಸು ನಾರಿವಾಳಕ್ಕೆ ಸಿಹಿನೀರನೆೞಿದವರಾರಯ್ಯ (ಮಹಾದೇ. ೩. ೦೦-೩); ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ (ಪಂಬರ. ೦೪-೦೮).

**ಬಾಳೆಕಂದು** = ಬಾಳೆಯ ಸಸಿ: ಕಂಬ ತರುವುದು ಎಂದರೆ ಒಂದು ಬಾಳೆಕಂದು ಕಡಿದು ಅದನ್ನು ತೊಳೆದು ಪೂಜೆ ಮಾಡಿ . . . ಅಡಕೆ ಹೊಂಬಾಳೆ ಸಮೇತ ಕಟ್ಟುವುದು (ಜನ್ನರು. ೪೩). **ಬಾಳೆಕಾಯಿ** = ೧. ಬಾಳೆಗಿಡದ ಕಾಯಿ; ಪಕ್ವವಾಗದ ಬಾಳೆಹಣ್ಣು: ಬಾಳೆಕಾಯಿಯ ಪಲ್ಯ ಎಂದರೆ ನನಗೆ ಇಷ್ಟ (ರೂಢಿ). ೨. (ಸೀರೆಯನ್ನು ಉಡುವಾಗ) ನಿರಿಗೆಗಳನ್ನು ಬಾಳೆಕಾಯಿಯ ಆಕಾರದಲ್ಲಿ ಮೇಲಕ್ಕೆ ತಿರುವಿ, ಸೊಂಟದಲ್ಲಿ ಮಡಿಸಿ ಸಿಕ್ಕಿಸಿದ ಸೀರೆಯ ಅಂಚು:

ಬಾಳೆಕಾಯಿಯಲ್ಲಿ ಸಿಕ್ಕಿಸಿಟ್ಟುಕೊಂಡಿದ್ದ ದುಡ್ಡು ಭದ್ರವಾಗಿಯೇ ಇದೆ (ರೂ). ೩. (ಉಕ) ಬಾಳೆಯ ಹಣ್ಣು: ಪೇಟೆಗೆ ಹೋಗಿ ಬೇಗನೆ ದೇವರ ಪೂಜೆಗೆ ನಾಲ್ಕು ಬಾಳೆಕಾಯಿ ತೆಗೆದುಕೊಂಡು ಬಾ (ರೂ). **ಬಾಳೆದಿಂಡು** = ಬಾಳೆ ಗಿಡದ ಕಾಂಡದ ಒಳಭಾಗ: ಬಾಳೆದಿಂಡನ್ನು ಅಡಿಗೆಗೆ ಉಪಯೋಗಿಸುತ್ತಾರೆ (ರೂ). **ಬಾಳೆಪಟ್ಟೆ** = ಬಾಳೆಕಂಬದ ತೊಗಟೆ.— ಸಿಪ್ಪೆ: ಫಲಗಳ ವೃಕ್ಷಗಳ ಬಿತ್ತಗಳಂ ಚೆನ್ನಾಗಿ ಕಳಿತ ಬಾಳೆಹಣ್ಣುಗಳಿಂದಾ ಬಾಳೆನಾರುಗಳಿಗೆ ಲೇಪವಂ ಮಾಡಿ ಆ ಪಟ್ಟೆಗಳಲ್ಲಿಯಿರಿಸಿ ಮೇಲುಗಡೆ ಬಾಳೆಪಟ್ಟೆಗಳಂ ಮುಚ್ಚಿ (ಶಾಗಂ. ೪೨೬-೦೦).

[ದೇ. ॥ ತಮಿ. ವಾಟ್ಟಿ; ಮಲ. ವಾಟಿ; ತುಳು. ಕೊಡ. ಬಾಳೆ]

**ಬಾಟಿಪಣ್** 'ಬಾಟಿವಣ್' ನೋ.

**ಬಾಟಿಲೆ**, ಬಳ್ಳೆ, ಬಾಳೆಲೆ (ನಾ). ಬಾಳೆಯ ಗಿಡದ ಎಲೆ; ಕದಳೀಪತ್ರ: ಬಾಟಿಲೆಯುಂ ತಿಂದು ಪಣ್ಣಂ ತಿಂದೆನೆಂಬಂತೆ (ಧರ್ಮಾಮೃ. ೦೩-೦೬೦); ಪಚ್ಚನೆ ಬೆಳೆದ ಬಾಟಿಲೆಯೆ ಪೊಸಕಾವಣವಾಗೆ . . . ಸಮೆದೊಂದೋಲಗದ ಶಾಲೆಯೊಳ್ (ರಾಮಾಶ್ವ. ೫೬-೨೫). **ಬಳ್ಳೆ₂**: ಅಣ್ಣಯ್ಯಾ ಬಳ್ಳೆ ಹಾಕಿದ್ದಾರೆ, ಉಣ್ಣಕ್ಕೆ ಬರಬೇಕಂತೆ (ಕಾನೂರು. ೩೨೬); ಸಾಲಾಗಿ ಬಳ್ಳೆ ಹಾಕಿದ್ದರು ಒಳಗೆ (ಕೃಕ್ಷ. ೦೩೦). **ಬಾಳೆಲೆ**: ತುಪ್ಪ ಮಜ್ಜಿಗೆ ಬಾಳೆಲೆ ತಾಂಬೂಲ ಮುಂತಾಗಿ (ಬೊಂಕಶಾ. ೦೯೯೦, ಕುಮಟಿ. ೦೦೩-೨೭; 1475); ಒಪ್ಪಿರೆ ಬಾಳೆಲೆಯಲ್ಲಿ ಭಕ್ಷ್ಯಭೋಜ್ಯಾದಿಗಳಂ ಗಡಣಿಸಿ . . . ದೇವರಾರೋಗಿಪುದೆಂದೊಡನುಸಿರ್ದು ಕೆಯ್ಯುಗಿದಳೊಲ್ದುಡುಪತಿಮುಖಿ (ವೃಷಭ.೩೬-೨೫); ಬಾಲಕರಿಲ್ಲದ ಬಾಲಿದ್ಯಾತರ ಜನ್ಮ . . . ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದಂಗ (ಗರತಿ. ೦೦೬). [ಬಾಟ್ + ಎಲೆ₁]

**ಬಾಟಿವಣ್**, ಬಾಳೆವಣ್, ಬಾಳೆಹಣ್ಣು, ಬಾಟಿಪಣ್ (ನಾ). ಬಾಳೆಯ ಹಣ್ಣು; ಕದಳೀಫಲ: 'ನಲ್ವಾಟಿವಣ್' ಪರಾ. **ಬಾಳೆವಣ್**: ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ ಪಚ್ಚೆಯಂ ಬಾಳೆವಣ್ಣೊಳ್ಗೊನೆಯಂ (ರಾಜಶೇ. ೦೦-೨). **ಬಾಳೆಹಣ್ಣು**: ಬಾಳೆಹಣ್ಣು, ತುಪ್ಪ ಮುಂತಾದುವುಗಳನ್ನು ಸೇರಿಸಿ ಮಾಡಿದ ಬೂವ ತಟ್ಟೆಯಲ್ಲಿರುತ್ತದೆ (ನವ್ಯೂರು. ೯೯); ಬಾಳೆಹಣ್ಣು ತಿನ್ನು ಬಾರೋ ಎಂದರೆ ಸುಲಿದು ಇಟ್ಟದ್ದೀಯಾ ಎಂದ (ಗಾದೆ). **ಬಾಟಿಪಣ್**: ಬಾಟಿಪಣ್ಣಿನಿದಪ್ಪುದೆಂತು ಸಹಜಂ ಸಕ್ಕರೆಗೆ ಸಿಹಿಯಾಗಿರ್ಪುದೆಂತು ಸಹಜಂ . . . ಅಂತೆ . . . ಭಕ್ತಿಯುಂ ಸಹಜವಮಾಗಿರ್ಕುಂ (ಧರ್ಮಾಮೃ. ೪-೯೦).

[ಬಾಟ್ + ಪಣ್₃]

**ಬಾಟಿಒಟ್ಟಿ**, ವಾಟಿಒಟ್ಟಿ (ನಾ). ಬೆಳೆಯುವ ಪೊದೆ, ಕಂಟಿ ಮೊದಲಾದುವುಗಳಿಂದ ರಚಿಸಿದ ಬೇಲಿ; ಹಸುರುಬೇಲಿ: ಅಂತೆ ವಂದು ಮುಂಜಳ್‌ತೊಣೆವಿ ಬಾಟಿಒಟ್ಟಿವಿ ಸಂದು (ಮೈ.ಆಂ. ೦೯೨೭. ೦೦೬-೯೯; 726). **ವಾಟಿಒಟ್ಟಿ**: ಅಂತೆ ಬಂದು ಬಾನ್ನಿಗಾರ್ಲಕುಪ್ಪೆಯ ವಾಟಿಒಟ್ಟಿಯೆ ಸಂದು ಪಾದರಿಯುಳ್ ಕೂಡಿತ್ತು ಸೀಮೆ (ಮೈ.ಆಂ. ೦೯೨೭, ೦೦೬-೫೦; ಶು. 726). [ಬಾಟ್₁ + ಒಟ್ಟಿ (< ಒಟ್ಟಿ)]

**ಬಾಟ್ಕೆ**, ಬಾಳಿಕೆ₁, ಬಾಳ್ಕೆ, ಬಾಳ್ವಿಕೆ, ಬಾಟಿಕೆ, ಬಾಟಿಗೆ (ನಾ). ೧. ಬದುಕು; ಜೀವನ: ಅಂಧನಾದೆನಾಗ್ ಶರಣೆನಗೆನ್ನ ಬಾಟ್ಕೆಯ ನಿರರ್ಥಕಂ (ಕಾದಂಪೂ. ೯೦೨); ಸತ್ತೊಡೆ ಪುಟ್ಟಿರೆ ತನಗಿದೇಕೆ ಬಾಟ್ಕೆಯ ಮೋಹಂ (ಧರ್ಮಾಮೃ. ೪-೯೦); ಪಾಪಪುಣ್ಯದಿಬಿಂದಿರದಾತನ ಬಾಟ್ಕೆ ನಿಷ್ಫಲಂ (ದಶಕು. ೦೯-೨೫). ೨. ಉಸಿರು; ಜೀವ; ಪ್ರಾಣ: ಶಾರದಂಗಳ ಜಸದೇಟ್ಗೆ ಲಕ್ಷ್ಮಿಯ ಮುಗುಳ್ನಗೆ ಜೊನ್ನದ ಬಾಟ್ಕೆ ರತ್ನಸಂಕುಳ ದಧಿದೈವಮೆಂದೆಸೆದುದುಜ್ವಳಮೌಕ್ತಿಕಹಾರಮಂಡಲಂ (ಕಾದಂಬ. ೦೦೬); ಒಕ್ಕನಿನಿಯಂ ತನ್ನಿಕ್ಕೆಯಂ ಬಾಟ್ಕೆಯಂ (ಅರ್ಧನೇ. ೩-೮೦). ೩. ಜೀವನಕ್ಕೆ ಹಿತವಾದುದು; ಪ್ರಯೋಜನವುಳ್ಳುದು: ಪದಿನೆಂಟುಂ ದೋಸವುಂ ಪೊರ್ದದಾಡಿದ ಮಾತ್ತಲ್ಲರ ಬಾಟ್ಕೆಯಪ್ಪುಜೀವಿನೊಳ್ ಮೂಲೋಕಮಂ ಕಾಣ್ಬ . . . ಅರುಹಂತಂ ನಲ್ಮೆಯಿಂ ಮಾಟ್ಕೆ ಬೇಡಿದುದಂ ತನ್ನಜವಟ್ಟೆಗರ್ಗೆ (ಕಬ್ಬಿಗಕಾ. ೩೯೯). ೪. ಬದುಕಿನ ಅವಧಿ; ಸಮಗ್ರಆಯುಷ್ಯ: ಅನಿವಿರಿದವಂತಿ ·ಮಾಳವವುನಾಳ್ವ ವೃಷಭಾಂಕನೃಪನ ಬಾಟ್ಕೆಯ ಸಿರಿಯಾತನ ದಿವಸದ ಭೋಗದನಿತಿಲ್ಲನೆ ಪರವನ ಪಿರಿಯ ಸಿರಿಯೆನಸಿಜೆಯಂ ಪೊಗಟಲ್ (ಸುಕುಮಾ. ೯-೬೫). **ಬಾಳಿಕೆ₁**: ೧. ಮೇಲನಜೆಯದ ನೃಪನ ಬಾಳಿಕೆ ಗಾಳಿಗೊಡ್ಡಿದ ಸೊಡರು (ಕುಮ್ಮಾ.ಸ. ೦-೩೦); ಮಾನವಿಲ್ಲದ ಬಾಳಿಕೆಗಿಂತ ಸಾವು ಲೇಸು (ಮುಂಬಯಿ. ೪-೦೯೦). ೪. ಹೊಸಕದ ಶಾರಿಯದ ಬಾಳಿಕೆಯೇಸು ದಿನವೈ (ಕುಮ್ಮಾದ್ರೋ. ೬-೨೦); ತನುವಿದು ತಾವರೆಸಜೆಾಂಧವನ ಬಾಳಿಕೆ ತನಕ ಶಾಶ್ವತವೆ (ತೊರರಾ. ೩-೬-೫೪). ೫. ಗೃಹಸ್ಥಜೀವನ; ದಾಂಪತ್ಯ ಜೀವನ: ಸತಿಸುತಕೂಟ ಭಯವೆಂದು ಬಾಳಿಕೆಯನತಿಗಳೆದು ಮರಳಿಯು ಬೋಳು ಮಂಡೆಯ ಕೀರ್ತಿಗೋಸುಗ ಕೋಳುಹೋದನೆ ರಾಮನು (ಶ್ರಭುಲೀ. ೦೩-೫). ೬. ಹೆಚ್ಚುಕಾಲ ಕೆಡದೆ ಇರುವಿಕೆ; ಚೆನ್ನಾಗಿ ಉಳಿಯುವಿಕೆ; ತಾಳಿಕೆ: ಅಡುಗೆಮನೆಯ ಸಲಕರಣೆಗಳು . . , ಒಳ್ಳೆಯ ತರಗತಿಯವುಗಳಾಗಿರಬೇಕು. ಇವುಗಳಿಗೆ ಕ್ರಯ ಹೆಚ್ಚಾದರೂ ಹೆಚ್ಚು ಕಾಲ ಬಾಳಿಕೆ ಬರುತ್ತವೆ (ಅಡುಗೆ. ೩೨); ರೆಯಾನ್‌ಬಟ್ಟೆ . . . ಇದು ತಕ್ಕಮಟ್ಟಿಗೆ ಬಾಳಿಕೆ ಬರುತ್ತದೆ (ಗೃಹಶಾ. ೭೦). ೭. ದತ್ತಿ ಕೊಟ್ಟ ಜಮೀನು; ಮಾನ್ಯದ ಭೂಮಿ: ಹಿರಿಯರು ಲೋಕ ಬೆಟ್ಟಂಬ ಬಾಳಿಕೆಯನು ಬಾಳಿ ಬಂದಲ್ಲಿ ಅಲ್ಲಿಯ ತೆರು [ಸಿ]ದ್ದಾಯ ಬಡ್ಡಿ ವಾಸಿ ಹೊಂನು ಭತ್ತವನು ಕಾಲಕಾಲಕೆ ನಡಸತೀರದೆ ಯಿರಲಾಗಿ (ಶಾಇಇ. IX—ii, ೪೬೦-೦೨; 1465); ಮುಂದಕ್ಕೆ ನಿಂಮ ಬಾಳಿಕೆಯಲು ಪಟ್ಟಲಬಿದ ಕಾರು ಬಿತು ಬಳ್ಳ ೩೦ (ಶಾಇಇ. IX—ii, ೪೬೦-೦೬; 465). **ಬಾಳ್ಕೆ**: ೨. ವಿರೋಧಿಯ ಬಾಳ್ಕೆ ತನ್ನದೆಮ್ಬುದನೆನೆ ಪೆರ್ಮೆಯಂ ತಳೆದನೋ ನ್ರಿಪರೊಳ್ ನ್ರಿಪತ್ಯೆಲಶಾಸ್ತ್ರಂ (ಎಕ. VIII. ಸಾಗರ. ೦೫೯-೦೩; 1159). ೪. ಜವನುಮಾತನ ಬಾಳ್ಕೆಯ ಲೆಕ್ಕದೋಲೆಯಂ ತೊಡದು ಬಿಸುಟ್ಟನೆಂದಜಿವುದು (ಶಾಇಇ. IX—i, ೨೯೬-೩೦; 1177). ೫. ದುಗುಡದಿ ಬಾಳ್ವ ಗೃಹಸ್ಥರ ಬಾಳ್ಕೆಯ ನಗುವಂತೆ ನಗುತ ನಡೆದರು (ಶರಪ. ೨೦-೩೩); ಬಿಟ್ಟನೆ ರಘುಶ್ರೇಷ್ಠ ನೆನ್ನನು . . . ನೆಗಳ್ದ ಬಾಳ್ಕೆಗೆ ಸಂಚಕಾರವಂ ಕೊಟ್ಟನೆ (ಶ್ರೀವಿಭಾ. ೦೯-೦೫). **ಬಾಳ್ವಿಕೆ**: ೧. ಛೀ ನನ್ನ ಬಾಳ್ವಿಕೆಯೆ, ಛೀ ನನ್ನ ಚೆಲ್ವಿಕೆಯೆ (ಕೃಪಾಕು. ೨-೨೦).'ಅಳ್ವಿಕೆ' ಹೋ. **ಬಾಟಿಕೆ**: ೧. "ಜೀವನ ಮೆನಲು ಬಾಟಿಕೆ" (ತುಂಗರಾ. ೦೦೨-೦). **ಬಾಟಿಗೆ**: ೭. ಜಿಡ್ಡಾರಾಳ್ಗೆ ಯೆಟ್ಟಿತ್ತರ್ಕ್ಕಂ ಬಳ್ಳಿಗಾವೆಯ ಬಾಟಿಗೆ ಸಹಿತ ನಾಟ್ಗಾವೃಟ್ಟುಗೆಯ್ಯೆ (ಮೈ.ಆಂ. ೦೯೨೯, ೭೫-೭; 964). [ಬಾಟ್₁ + -ಕೆ]

**ಬಾಟ್ಕೆಗೊಡು** (ಕ್ರಿ). ಉಪಜೀವನಕ್ಕಾಗಿ ಭೂಮಿಯನ್ನು ದಾನವಾಗಿ ಕೊಡು,—ವೃತ್ತಿಯನ್ನು ಕಲ್ಪಿಸು: ಕರಣಗ್ರಾಮುಮನೀ ಮಾಮರಕ್ಕೆ ಮಧು ಬಾಟ್ಕೆಗೊಟ್ಟು ಕಿಸುವಲಿಗೆಗಳಿಂ ಬರೆದೆತ್ತಿದ ಶಾಸನಕೇಂ ದೊರೆಯಾದುವೊ ಸೊನೆಯ ಪನಿ ಪಗಿಲ್ತೆಳದಳಿರ್ಗಳ್ (ಮಲ್ಲಿತ. ೬-೩೦). [ಬಾಟ್ಕೆ + ಕೊಡು₁]

**ಬಾಳ್ಗಂಬ** (ನಾ). ಆನೆಯನ್ನು ನೆಲೆಯಾಗಿ ಕಟ್ಟಲು ಕಂಬದಂತೆ ಉಪಯೋಗಿಸುವ ಮರ; ಆಲಾನಸ್ತಂಭ: ಅಂಬುಜಸೂತ್ರಮೆಂಬ ಪಣೆದಾವಣಿಯಂ ಪಜಿದಾವಲೆಂಬ ಬಾಳ್ಗಂಬಮನೊತ್ತಿಕಿಟ್ಟು . . . ಸೋವುದು ಸವಿಾರಣವಾರಣಂ (ಕಾವ್ಯಾವ. ೬೮೯); ಆ ಮಹಾಮದೇಭಂ . . . ಬೀಡಿಂಗೊರ್ಗಾವುದದಟಿ ಬಾಳ್ಗಂಬದೊಳ್ ಸೆಜೆಗೆಯ್ದುಮಿರ್ದೊಂದುದಿವಸಂ ಕ್ರೋಧಿನಿಯೆಂಬ ಸಪ್ತಮದಾವಸ್ಥೆಯಿಂದಾದ ಮನದ ಮುಸಕದಿನಸವಸದೆ ನೆಲದ ನಾಲಗೆಯಂ ಕೀಟ್ತಂತೆ

ಬಾಟ್ಗಿಂಬವಮಂ ಕಿಟ್ಟು (ಚಂದ್ರಪು. ೯-೦೦೦ ವ); ಅವಳ . . . ನುಣ್ಗೊಡೆಯೆಂಬ ಪೊಂಬಾಟಿಯು ಬಾಟ್ಗಿಂಬವುಲರ್ಗಣೆಯನೆಂಬ ಸೊರ್ಕಾನೆಯುಂ ತೊಲಗಲೀಯದೆ ನಿಲಿಸೆಯುಂ (ಕಬ್ಬಿಕಾ. ೦೨೩).

[ ಬಾಟ್$_1$ + ಕಂಬ$_1$ ( < ಕಂಭ) ]

**ಬಾಟ್ಗುಡಿ** (ನಾ). (ಆಲಂ) ಚಲಿಸುತ್ತಿರುವ ಕುಡಿ ; ಚಂಚಲವಾದ ಚಿಗುರು: ಬಳ್ಳಿಳಿಪ ಬಹುಳಹಿಂಸಾವಿಷವುವಿಷವಲ್ಲಿಯು ಬಳೆದ ಬಾಟ್ಗುಡಿಯೆನೆ ಬೆಡಂಗುವಡೆದ ಲೋಳಲಾಂಗೂಲಲತೆಯೊಳಂ . . . ಭಯಂಕರ ಮಾದುದು (ಪರ್ಣಪು. ೦೦-೩ ವ). [ ಬಾಟ್$_3$ + ಕುಡಿ$_2$ ]

**ಬಾಟ್ಗುದಿ** (ನಾ). ಜೀವಂತವಾಗಿ ಅನುಭವಿಸುವ ಅತಿಯಾದ ಹಿಂಸೆ ; ಪ್ರಾಣಸಂಕಟ : ತೋ[ಕೋ]ಳ್ಗುದಿ ಬಾಟ್ಗುದಿಯಾಗಿ ಬೇವ ದಳ್ಳುರಿಗಳ ಮಾಲೆಗೂಂಡ ಬೆಳಗಿಂ ಬೆಳಗಾಯ್ತುರಡುಂಬಲಂಗಳೊಳ್ (ಅನಂಪು. ೦೦-೯೭). [ ಬಾಟ್$_3$ + ಕುದಿ$_3$ ]

**ಬಾಟ್ಗುಳಿ**, ಬಾಳುಗುಳಿ, ಬಾಳ್ಗುಳಿ (ನಾ). ಒಂದು ಊರಿನ ಹೆಸರು : ಬಾಟ್ಗುಳಿಯೂರ ಬೊಜಜ್ಗೇಶ್ವರದೇವರ ಪಬ್ಬರ್ದಭೂಮಿ ಎಡೆಯೊಳೆ ರಾಶಿಕವಾಗಿಟ್ಟೊಡೆ ಬಿಡಿಸಿ (ಎಕ. IV (R), ಕಾಮುರಾ. ೦೦೯-೯; 10ನೆಯ ಶತ). **ಬಾಳುಗುಳಿ** : ಬಾಳುಗುಳಿಯ ಮಹಾಜನ ಅಯ್ನೂದಿಂಬರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೂದ ಗೂಟನಿತ್ತೊರ್ (ಸೌಇಇ. IX–i, ೫೯-೭; ಸು. 10ನೆಯ ಶತ). **ಬಾಳ್ಗುಳಿ** : ಬಾಳ್ಗುಳಿಯೂರೊಡೆಯಂ ಪಶುಪತಿಭಟ್ಟಜ್ಗೆ ಬಾಬನ್ದಿಯ ಸಂಬನ್ಧದ ರಾಜದ್ರವ್ಯಮೊದುದೆಲ್ಲವಂ ಬಿಟ್ಟರ್ (ಸೌಇಇ. IX–i, ೬೭-೦೦ ; 956) ; ಶ್ರೀಮತುಹರಿಶ್ಚಂದ್ರ ದತ್ತಿಯ ಮಹಾಗ್ರಹಾರಂ ಬಾಳ್ಗುಳಿಯೂರೊಡೆಯ ಪ್ರಮುಖವಿಶೇಷಮಹಾಜನಂ ( ಸೌಇಇ. IX–i, ೨೫೫-೦೯ ; 1143 ) ; ಶ್ರೀವೀರಬಲ್ಲಾಳದೇವರು ಶ್ರೀಮತುಹರಿಶ್ಚಂದ್ರ ದತ್ತಿಯಗ್ರಹಾರ ಬಾಳ್ಗುಳಿಯ ನೆಲೆವೀಡಿನೊಳು . . . ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರ್ದು (ಸೌಇಇ. IX–i, ೩೦೯-೩೨ ; 1193).

[ಬಾಟ್$_3$ + ಕುಟ್ಟು]

**ಬಾಟ್ಜೊಂಪ** (ನಾ). (ಹಸುರಾದ) ಬಳ್ಳಿಗಳ ಮಂಟಪ; ಲತಾಕುಂಜ : ಮನಮೊಲ್ದಾತನ ಗಾಡಿಯಂ ದರಪುರಂಗಂಡಾಕೆಗಳ್ ಪೂವಿನಂಬಿನ ಕೋಲ್ಗಂ . . . ಬಾಟ್ಜೊಂಪಕ್ಕಮೊಂದೊಂದೆ ತಣ್ಬನಿಯೊಳ್ ಕೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಅಂಪು. ೦-೭೫); ಬಾಟ್ಜೊಂಪವೋ ಕೋಗಿಲೇ ಗಿಳಿಯೋ ಕಂಡಿರೆ ಪೇಟೆಮೆಮ್ಮ ಪತಿಯಂ (ಸುಕುಮಾ. ೦೨-೨೦); ಅಸುಕೆಯ ಕೆಂದಳಿರ್ಗಳ ಬಾಟ್ಜೊಂಪಂ ಪಸರಿಸಿ ಪಡೆದುದು ಚಿತ್ತದಲಂಪಂ (ಅನಂತ್ಪು. ೦೦-೦೯ ರಗಳೆ). [ಬಾಟ್$_3$ + ಜೊಂಪ$_1$]

**ಬಾಟ್ತಿ**, ಬಾತೆ, ಬಾರ್ತೆ, ಬಾಳ್ತೆ, ವಾಟ್ತಿ (ನಾ). ೧. ಬದುಕು ; ಬಾಳುವೆ ; ಜೀವನ : ಸ್ಫಟಿನೊತ್ತಂಬರಂ ಪೊಗರ್ವೆತ್ತಂಗದ ಸಿಂಗರಂ ಸೊಗಸಿನೊಪ್ಪಂ ಬಾಟ್ತಿಯೊಂದೆಟ್ಟರಂ ಮಿಗುತೇಂ ಬಂದಪುವು ( ೫ಕಿರಿ. ೬-೨೫೯ ) ; ಪಗೆದೊರೆಗಳುಮೊಂದಿದರಾ ಬರ್ದಿಲನಾಡ ಬಾಟ್ತಿಯ ಸಿರಿಯಂ (ಅಕ್ರತಿ. ೦೭-೦೩). ೨. ಉಪಯೋಗ ; ಪ್ರಯೋಜನ : "ಬಾಟ್ತಿ ಪ್ರಯೋಜನಂ" (ಕಮುದ. ಶಂ. ೦) ; ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ಪದೇವಾಟ್ತಿ (ಕಂಶಭಾ. ೦-೯೨); ದ್ರಷ್ಟವ್ಯ ದರ್ಶನಫಲ ಲೋಚನಮೆಂಬಂತೆ ನೋಡುವುದೆ ಬಾಟ್ತಿ (ಕಾಂತಿಕಿ. ೬-೭೭ ವ) ; ನಾಲಗೆಯುಮಂ ನಲ್ಲನುಮನೊಲ್ಲದ ಪಣ್ಣ ಸವಿಯುಂ ಪೆಣ್ಣ ರೂಪುಮೇಂ ಬಾಟ್ತಿ (ಅರ್ಜನೇ. ೩-೦೦ ವ). ೩. ಇಷ್ಟವಾದುದು ; ಬೇಕಾದುದು ; ಬಯಸಿದುದು : ಎಮಗೆ ಮರ್ದು ಬಾಟ್ತಿಯಪ್ಪುಡೆಮಗಾಮೆ ಮರ್ದಂ ಬಲ್ಲೆವೆಮಗದು ಬಾಟ್ತಿಯಲ್ತು (ವಡ್ಡಾರಾ. ೬೯-೨೪) ; ನಿಮಗೆ ಬಾಟ್ತಿಯಪ್ಪುದಂ ಬೇಡಿಕೊಳ್ಳಿಂ (ಕಂಶಭಾ. ೩-೬೦ ವ). ೪. ಉಪಯುಕ್ತವಾದುದು ; ತಕ್ಕುದು ; ಯೋಗ್ಯವಾದುದು : "ಬಾಟ್ತಿಯೆನೆ ಯೋಗ್ಯಂ" (ಸಂಚೀವ. ೨) ; ಎಮಗೊಂದು ಪೇಟು ಮಣ್ಣು ಬಾಟ್ತಿಯಾಗೆ ತರಿಸಿಕೊಂಡೆವೀಯುಟಿದ ಮಣ್ಣಮಗೆ ಬಾಟ್ತಿಯಲ್ತು ನಿಮ್ಮ ನಿಮ್ಮ ತಂದ ಮಣ್ಣಂ ಕೊಂಡು ಪೋಗಿಂ (ವಡ್ಡಾರಾ. ೦೯೯-೪) : ಈ ವ್ರತಂ ನಮಗೆ ಬಾಟ್ತಿಯಲ್ಲಿದುಂ ಬಿಡುವುದು (ನೇಮಿಪು. ೬-೦೯ ವ). ೫. ಯೋಗ್ಯನಾದವನು ; ತಕ್ಕಹನು : ಅರಸಿಯರ್ಕಳೆಲ್ಲಂ . . . ನುಡಿವ ಮಾತುಗಳಂ ಜಿನದತ್ತೆ ಕೇಳ್ದು ಕಿನಿಸಿ ಇನ್ನಾತನೆನಗೆ ಬಾಟ್ತಿಯಲ್ಲನೆಂದು ತನ್ನ ಮಾಡದಿಂ ಪೊಱಮಟ್ಟು . . . ಪೋಗಿರ್ದೊಳ್ (ವಡ್ಡಾರಾ. ೦೦೦-೨೫). ೬. ಕೆಲಸ ; ಕಾರ್ಯ ; ಉದ್ಯೋಗ : ಬಾಟ್ತಿಯುಳ್ಳೊಡೆ ನೀನೆ ಬರ್ಪನ್ನೆಗಂ ಬಾಡದುದ ಪೇಟ ನೀಂ ಬಟಿಯಟ್ಟಲಾಗದೆ (ಕಂಶಭಾ. ೦೨-೯೯) ; ಬಸನದ ಬಾಟ್ತಿಗಪ್ಪೆಡೆಗಳಲ್ಲದೆ ನಲ್ಲರ್ . . . ಮನದೊಳ್ಳೊಟಲ್ದಿಸುವರ್ಬಸನದೊಳ್ ಕೃತಕಾಚಲಂಗಳಂ (ಪುಲ್ಲತಿ. ೨-೩೫) ; ಏಬಾಟ್ತಿಗೆ ಬಂದರಿಲ್ಲಿಗಿವರೆಂದಾರಯ್ವುಂ (ನೇಮಿಪು. ೦-೭೭). ೭. ಅಗತ್ಯ ; ಅವಶ್ಯಕತೆ : ಎಂದಾನುಂ ನಿನಗೆ ಬಾಟ್ತಿ [ಪಾಠಾಂ. ರ್ತೆ]ಯಾದಂದೆನ್ನಂ ನೆನೆವುದು (ವಡ್ಡಾರಾ. ೦೩೯-೦೧). **ಬಾತೆ** : ೧. 'ಬಾತೆಗೇಡಿ' ಪರಾ. ೨. ಸಿಂಗದ ನಡು ಮುಱಿಯಲಾ ಸಿಂಗವೇನು ಬಾತೆ ಸುಂಡಿಲು ಮುಱಿದರೆ ಗಜವೇನು ಬಾತೆ (ಬಸವ. ೬೩೪) ; ದಯವಿಲ್ಲದವನ ಭಕ್ತಿ ಏತಕ್ಕೆ ಬಾತೆ (ಗಣಭಾ. ೦೬೦-೩) ; ಹಣವೇನು ಬಾತೆ ನಿನ್ನಯ ಗುಣವೆಂಬುದು ಮಣಿಹಾರವಾಗೆನ್ನ ಮನವ ಕ್ಷಣದಲಿ ಬೀಱುಗೊಂಡುದು (ಕಂನಪ. ೬-೦೬೪). ೩. ನಿನ್ನ ಧನಗಿನವೆನಗೆ ಬಾತೆಯೆ ಎನ್ನ ಸೊಬಗಂ ನೋಳ್ಪೆಯಾದಡೆ ಹೊನ್ನನೀಗಳೆ ಬಿತ್ತಿಸುವೆನೇ ಬೀದಿಬೀದಿಯಲಿ (ಬಸಪು. ೨೯-೦೪). ೪. ಮಕ್ಕಳನು ಪಡೆವಡೆ ಸುನೀತಿಗೆ ತಕ್ಕುದಲ್ಲದೆ ಒಡಲ ಕೇಡಿನ ಮಕ್ಕಳೇತಕೆ ಬಾತೆ (ಸಿಕಾಗ. ೪-೯-೩೭). **ಬಾರ್ತೆ** : ೨. ನೀನೀ ಸಾಮ್ರಾಜ್ಯಮನಾವಗಂ ಕೈಕೊಳ್ವುದೆನಗಿದೇನುಂ ಬಾರ್ತೆಯಲ್ಲ (ಶಾಪುಂತ. ೪೯) ; ಧರ್ಮಾರ್ಥಂಗಳಿಗೆ ಶಾಸ್ತ್ರಂ ಬಾರ್ತೆ ಕಾಮಕ್ಕೆ ಶಾಸ್ತ್ರಂ ನೀಪ್ರಯೋಜನಂ (ಸುರತ. ೦-೩೯ ವ) ; ಪರಿವಾರವಿಲ್ಲದ ರಾಯನ ಸಿರಿಯ ದೇತಕ್ಕೆ ಬಾರ್ತೆ (ಜಕೋಪು. ೦೪-೭೭). ೪. ಅರಲ್ದಿರೆ ಕೊರಗಿ ದುಸ್ಸಹ ವಿರಹಶಯನರಚನೆಗೆ ಬಾರ್ತೆಯಾಗಲಾಱೆವೆಂದಗಿದು ಮೆಯ್ದೆಗೆದವೆಂಬಂತೆ ತಾವರೆಗಳ್ ಮುಗಿಯೆ (ಕಾದಂಅ. ೩೭೫) ; ಹರದನ ಬಡ್ಡಿಗೊಟ್ಟೊಡಪೆ ರಾಜಕುಮಾರನ ತೇಜದೇಟ್ಗೆ . . . ಚೆನ್ನಪೊಂಗರ ಕುಡಿಮುಱಿಜಿಂಗು ನಿಡುಬುಯ್ಯಲೆ ಬಾರ್ತೆಯೆ (ಅನಂಪು. ೬-೪೯). ೫. ಮಱಿಗೆ ಪಂದರಂ ಕಾಯದೆ ನೀಳ್ದೊದವಿದ ಜಸಮನುಪಾರ್ಜಿಸದಧಮನದೇತರ್ಕೆ ಬಾರ್ತೆ (ಅದಿಪು. ೦೨-೯೭) ; ಭಕ್ತಿಯಿಲ್ಲದವನೇತರ್ಕಂ ಬಾರ್ತೆಯಲ್ಲಂ (ಕಂಚಕಂ. ೪೨-೨೦). ೬. ಬೆಸನಂ ಪಾರ್ವುವು ಮಂತ್ರದೇವತೆಗಳಾದೇಬಾರ್ತೆಗಂ ಬೇಗಮಾಗಸದೊಳ್ ವಿದ್ಯೆಗಳೆಯ್ದೆ ಬರ್ಪುವು (ಅಂತಿ. ೦-೬೯). ೭. ಆಂ ಪದ್ಮನಗರದೊಳಿರ್ಪೆಂ ನೀಮೆತ್ತಾನುಂ ಬಾರ್ತೆಯಪ್ಪೊಡಲ್ಲಿಗೆ ಬನ್ನಿಂ (ಕಂಶಕಂ. ೦೦೦-೦). ೮. ಬದುಕಿನ ಕ್ಲೇಶ ; ಜೀವನದ ಜಂಜಾಟ : ವಿಪಿನೋಲ್ಲಂಘನ ಸಿಂಧುಯಾನ ನಗಕೂಟಾರೋಹಣ ಕ್ಲೇಶಮಂತ್ರ ಪದಧ್ಯಾನ ಬಿಲಪ್ರವೇಶರಸವಾದಾಯಾಸದೊಳ್ ಬಾರ್ತೆ ತೀರ್ದಪುದೇ (ಅಂತಿ. ೦೭-೭). **ಬಾಳ್ತೆ** : ೧. ಬಾಳ್ತೆಯೊಳ್ ನಲ್ಬೆಯೆನೆ ತೊನೆಯಿತಿವೆ ಚೆಲ್ವಂ (ಕಾಬೂರ. ೬೦-೦೨೩). ೨. ಕಾಡ ಕಾಪಿನವರ್ಗೆ ದೂರಿದೊಡೆ ಬಾಳ್ತೆಯೇಂ (ಕಾಬೂರ. ೪೯-೭೨). **ವಾಟ್ತಿ** : ೯. ಸುದ್ದಿ; ಸಮಾಚಾರ : 'ವಾಟ್ತಿಗೊಳ್' ಪರಾ.

**ಬಾತೆಗೆ ಬರು** = ಉಪಯೋಗವಾಗು : ಬಾತೆಗೆ ಬಾರದ ವಸ್ತು ಬಹಳಿದ್ದರೇನು (ಪುರಂದ. ೩-೦೯೩ ಪಲ್ಲವಿ). **ಬಾರ್ತೆ ಮಾಡು** = ಬಯಸು ;

ಇಷ್ಟಪಡು : ಪುದ್ಗಳಮನೆ ಪಾಟಿಸುವರ್ . . . ಪುದ್ಗಳಮಂ ಬಾರ್ತೆ ಮಾಡಿ ಪೊರೆಯರ್ ಜೈನರ್ (ಸಮಿಕ. ೬-೩೦). ಬಾೞ್ತಿಯಾಗು = ಬಾರ್ತೆಗೆ ಬರು : ಅರಸುಗೆಯ್ವಾತಂಗೊತಪ್ಪನುಂ ಬಾೞ್ತಿಯಾಗದನಿಲ್ಲಂ (ಶಂಕಶಂ. ೩೪-೧೦). [ಬಾೞ್$_1$ + — ತ್ತಿ]

**ಬಾೞ್ತಿಗೆಯ್**, ಬಾರ್ತೆಗೆಯ್, ಬಾಳ್ತಿಗೆಯ್ (ಕ್ರಿ). ೧. ಬಯಸು ; ಇಷ್ಟಪಡು : ಇಂದುಗತಿಯಂತೆ ರಾಜ್ಯಮನೊಂದರ್ಕಂ ಬಾೞ್ತಿಗೆಯ್ಯ ದಾವನೂ ತೊಱದಂ ಮಂದರಧೈರ್ಯಂ ನೃಪಂ (ಶಂಶಾಪೂ. ೬-೨೪). ೨. ಲೆಕ್ಕಿಸು ; ಗವನಿಸು : ಗಣನೆಗೆ ತರು : ಅರ್ಣವಮೇಖಲೆಯುಂ ಧರಿತ್ರಿಯುಂ ಬಗೆಯನೆ ಬಾೞ್ತಿಗೆಯ್ಯನೆ ಜರತ್ತೃಣಲಾಘವಮೆಂದೆ ರಾಘವಂ (ಶಂಶಾಪೂ. ೬-೧೦೨) ; ಅರಮನೆಯಂ ವಧೂವಿತತಿಯಂ ಸುತರಂ ಪರಿವಾರಮಂ . . . ಬಾೞ್ತಿಗೆಯದಾ ಮಹಿಪಂ ಪೊಱಮಟ್ಟಂ (ಶಂರ್ವಿಕೃ. ೨-೩೭). **ಬಾರ್ತೆಗೆಯ್** : ೨. ಶ್ರುತಮಂ ಕಯ್ಕೊಳ್ಳಳಾಚಾರಮನವ ಧರಿಸಳ್ ಸತ್ಯಮಂ ಬಾರ್ತೆಗೆಯ್ಯಳ್ . . . ಸಿರಿಯನಱವುತಂ ಬಣ್ಣಿಪಂ ಗಾಂಪನಲ್ತೇ (ಕಾದಂಪೂ. ೩೪೬) : ಈ ರಾಜೇಂದ್ರಸೌಂದರ್ಯಮ ನೆರಮಬಳಾಚಿತ್ತಸಂಮೋಹನಕ್ಕಾವುದುಮಿಂ ಪೇೞೇವುದೆಂದು . . . ಪುಂಸ್ಕೋಕಿಲಾಲಾಪಮಂ ಸಲೆಪಲರಂ ಬಾರ್ತೆಗೆಯ್ಯಂ ಮನೋಜಂ (ಮಲ್ಲಿಪು. ೩-೨೪) ; ಬಗೆಯುವ ಬಾರ್ತೆ[ಪಾಠಾಂ. ೞ್ತಿ]ಗೆಯ್ಯದೊಲವಂ ಪ್ರತಿಪಾಳಿಸ ದಾಳದೋರ್ಪ ಬಲ್ಮೆಗೆ ಬೆಸೆವಿರ್ಪ . . . ಅಂಗನೆಗೆ ಕೂರ್ತವನಗ್ಗದ ಕಟ್ಟಿಯಲ್ಲನೇ (ಪಾರ್ಶ್ವಪು. ೧೧-೬೪). **ಬಾಳ್ತಿಗೆಯ್** : ೧. ನಿನ್ನವ ರೊಲ್ದಂಡುಳುಪಿರ್ದ ಶೇಷಮನಗುಂಟೆಂದುಮಾ ಶೇಷಮಂ ಸವಿದಾನಂದ ಮನಾಳ್ದು ವಿಕ್ಕ ಸುಖಮೊಂದಂ ಬಾಳ್ತಿಗೆಯ್ಯಂ (ವೃಷಪು. ೬-೧೩). [ಬಾೞ್ತಿ + ಕೆಯ್$_1$]

**ಬಾೞ್ದಲೆ**, ಬಾಳುದಲೆ, ಬಾಳ್ದಲೆ (ನಾ). ೧. ಜೀವಂತವಾಗಿ ಸಿಕ್ಕಿರುವ ಸೆರೆ : ಮಲೆಪರ್ ಮಂಡಳಿಕರ್ ಕಱುಂಬರದಟರ್ ವೀರರ್ಕಳುಂ ತಮ್ಮ ಬಾೞ್ದಲೆಯುಂ ಬೇಡಿದ ವಸ್ತುವಾಹನಮುಮಂ ಮುಂದಿಟ್ಟು ಮೂಱವಿಟ್ಟ ಯೊಕ್ಕಲಪೋಲಿಂ ಬೆಸಕೆಯ್ಯೆ ಸಂತಮಿರುತುಂ ಕುಂತೀಸುತರ್ ತಮ್ಮ ತೋಳ್ವಲಮಂ ನಚ್ಚರೆ (ಶಂಪಂಭಾ. ೯-೧೧) ; ಪೋ ಬಾೞ್ದಲೆಯಿಂದೊ ಯ್ದಪನೇ ಬಗೆಯಿಂ ನೀರೊಳಿರ್ದೊಡಂತುಂ ಕೊಲ್ಲೆಂ (ನೇಮಿಪು. ೧೨-೦೪೫); ಮಧುವಿನ ಕುಮಾರಂ ಹಿರಣ್ಯನಾಭಂ ಬಲದೇವನ ಮಾಱಯಂ ಪೊಕ್ಕುಬಿಪುದುಮವಾತನ ಬಾೞ್ದಲೆವೆರಸು ಬಂದು ವಸುದೇವನ ಪಾದಾಗ ವಿಂದಕ್ಕೆ ತಾಳಧ್ವಜನುಂ ತಾರ್ಕ್ಷ್ಯಧ್ವಜನುಂ ಪೊಡಮಟ್ಟು (ಮಹಾನೇ. ೬-೩೪ ವ). **ಬಾಳುದಲೆ** : ೧. ಬಾಳುದಲೆಗಳನರಿದು ಹೋಮವ ಬೆಳಗುವೆನು (ರೇವಣಪು. ೨-೨೬). ೨. ಆಗ ತಾನೆ ಕತ್ತರಿಸಿ ಹಸಿರಕ್ತ ವನ್ನು ಸುರಿಸುತ್ತಿರುವ ತಲೆ ; ಹಸಿತಲೆ ; ಪಂದಲೆ : ಬಾಳುದಲೆಸಹಿತ ನಡೆತಂದು ಭೃತ್ಯಂ ಶಿರವ ಚೋಳರಾಯನ ಬಲದ ಕೈಗೆ ಕುಡೆ (ಭಾವಚಂ. ೯-೩೦); ತಲೆಯ ತರಹೇಳಂತಕನ ಬಾಳ್ದಲೆಯ ತರಹೇಳ ಜನನತಳಕೆ ನಿಲಿಸಪೇಳಮರೇಂದ್ರನಗರವನು (ಕೊರಂ. ೬-೨-೧೧) ; ಅ ಹರಿಯಜಸುರೇಂದ್ರಾದ್ಯರಂ ಬಾಳ್ದಲೆಗಳಂ ಕೊಂಬೆನುಳಿದವರ ಪೊದೆಗಳಂ ಸೀಳ್ದಿಕ್ಕುವೆಂ (ಚಬಪು. ೩೦-೧೪). **ಬಾಳ್ದಲೆ** : ೧. ಬಲವ ಮುಱಱು ಕಲುಗೋಟೆಯ ನೃಪನ ಬಾಳ್ದಲೆಯ ಖಂಡಿಸಿದುದನಱಯ (ಕಂಪಪು. ೧೮-೦೩೬). [ಬಾೞ್$_1$ + ತಲೆ$_1$]

**ಬಾೞ್ದಲೆಗೊಳ್**, ಬಾಳ್ದಲೆಗೊಳ್ (ಕ್ರಿ). ಜೀವಂತವಾಗಿ ಸೆರೆ ಹಿಡಿ ; ಕೈದುಮಾಡು : ರಘುವೀರಂ ಲಕ್ಷ್ಮಣಂ ರಾಷ್ಟ್ರಕಂಟಕನಂ ಬಾೞ್ದಲೆ ಗೊಂಡನುಯ್ದುನಿಭವುಂ ಪಂಚಾನನಂ . . . ಮಾಕೊರ್ಂಡು ಕೊಂಡುಯ್ವ ಪೋಲ್ (ಶಂರಾಪೂ. ೬-೬೨). **ಬಾಳ್ದಲೆಗೊಳ್** : ಚಟ್ಟನಂ ಮುತ್ತಿ ಬಾಳ್ದಲೆಗೊಂಡಂ (ಮುಂಬಶಾ. XI, ೨೩೦-೧೯ ; 1060) ; ವಿಕ್ರಮ ಭೂಪಂ . . . ಅನ್ಯ ಭೂ(ಮಿ)ಪರಂ ಬಾಳ್ವೆರಸೆಯ್ದಿ ಬಾಳ್ವೆರಸು ಬಾಳ್ದಲೆ ಗೊಣ್ಡನ್ (ಎಕ. XI, ದಾವಣ. ೩-೭ ; 1121); ಬಲರಾಮನನು ಬಾಳ್ದಲೆಗೊಂಡಪವನ ಕರತಳದ ಹಲಾಯುಧಸಹಿತ ಛಲದಂಕ ಕೇಳ್ನಿನ್ನ ತೆರಗಿಯ ಹಳ್ಳಿಯೊಳುಳುವೊಕ್ಕಲ ಮಾಡುವೆವು (ನೇಮಿಸಂ. ೨೬-೬೪). [ಬಾೞ್ದಲೆ + ಕೊಳ್$_1$]

**ಬಾೞ್ದಲೆದರ್** (ಕ್ರಿ). ಜೀವಂತವಾಗಿ ಸೆರೆಹಿಡಿದು ತರು : ಇಂದ್ರನ ಮಗನಪ್ಪ ಜಯಂತನನಿಂದ್ರಜಿತ್ಕುಮಾರಂ ಬಾೞ್ದಲೆದಂದೀಯೆ ರಾವಣ ನಭಯಘೋಷಣೆಯುಂ ಮಾಡಿಸಿ (ಶಂರಾಪೂ. ೧೧-೨೦೦ ವ); ಚಕ್ರಧರಂ . . . ಧುರದೊಳ್ ಬಾೞ್ದಲೆದಂದಂಬರಚರರಂ ಕರೆದು ಪೇೞ್ದು ಪೇೞ್ದುದು ಗೆಯ್ವಂತಿರೆ ಕೊಟ್ಟು ದಕ್ಷಿಣಶ್ರೇಣಿರಾಜ್ಯಮಂ ಕಟ್ಟಿದಂ (ವರ್ಧಪು. ೯-೬೯). [ಬಾೞ್ದಲೆ + ತರ್]

**ಬಾೞ್ದಲೆವಿಡಿ**, ಬಾಳುದಲೆವಿಡಿ, ಬಾಳ್ದಲೆವಿಡಿ (ಕ್ರಿ). = ಬಾೞ್ದಲೆ ಗೊಳ್ : ಪೞಱಯಂ ಬೀರದಿನಾ ಗೊರವನೆಯ್ದಿ ಬಾೞ್ದಲೆವಿಡಿದಂ (ಕಬ್ಬಿಕಾ. ೦೪೪) ; ದೆಸೆಗೆ ಬಿಟ್ಟಾ ರಾಯರ ಬಾೞ್ದಲೆವಿಡಿದುಂ ಜಯ ಕಾಂತೆಗೆ ತೊೞತ್ತಿರಂ ಮಾಡುತುಂ (ರಾಜಾಶ್ವ. ೯೯-೦೭). **ಬಾಳುದಲೆವಿಡಿ** : ದೇಪಗುಹೇಶ್ವರನ ಬಾಳುದಲೆವಿಡಿದೆ (ಅವಸಂ. ೬೭-೩೬೫). **ಬಾಳ್ದಲೆವಿಡಿ** : ಕಪಂಪನಗ್ನಿಯನಟ್ಟಿ ಬಾಳ್ದಲೆವಿಡಿದಭಯಘೋಷಣೆಯ ಮಾಡಿಸಿದೊಡನೆ ತತ್ಪತ್ತನವ ಪೊಕ್ಕು (ಶಾಲ್ಮಶಾ. ೨೭-೩೦). [ಬಾೞ್ದಲೆ + ಪಿಡಿ$_1$]

**ಬಾೞ್ದಾಣ** (ನಾ). ಬದುಕುವ ಸ್ಥಳ : ವಾಸಸ್ಥಳ : ನೀರ್ಗಂಡಿ, ಕೂರ್ಗಲಿ. ಕೂಟ್ಗಿಟ್ಟಿ. ಬಾೞ್ದಾಣಂ (ಕಬ್ಬಾಪ. ೯೦ ಕ್ರಿಯಾ). [ಬಾೞ್$_1$ + ತಾಣ]

**ಬಾೞ್ಣಿಣ** (ನಾ). ದೇಹದಿಂದ ಅದೇ ತಾನೆ ಹೊರಬಿದ್ದ ನೆಣ ; ಹಸಿಯ ಕೊಬ್ಬು : ಕರುಳ್ವಿಣಿಲ ಪೊದಟ್ಟಿ ರುಂಡದಡಕಿಲ್ ನರದುರ್ಬಿ ಕಪಾಲದೊಳ್ ಬಾೞ್ಣಿಣದೆಡೆ ಖಂಡದಿಂಡೆ ಬಿಸುನೆತ್ತರ ಪೆರ್ಬೊನಲರ್ಬಿ ಸಲ್ಕೆ ಮಾರ್ಗಣಗಣಘಾತದಿಂ ಕವಿಸಿದಂ ವಿರೋಧಿಸೈನ್ಯಮಂ (ಜಗಪು. ೬-೬೪). [ಬಾೞ್$_3$ + ನೆಣ]

**ಬಾೞ್ತೆ**, ಬಾಳ್ತೆ, ಬಾೞ್ಮೆ (ನಾ). ೧. ಬದುಕು ; ಜೀವನ : ಅನಱವು ಬಾೞ್ತೆಗಳೆಡೆಯೊಳ್ ನಿಂದಿರ್ಪೆಂ (ಶಿತ್ರಗೋ. ೨೬-೨೦). **ಬಾಳ್ತೆ** : ೧. ಅಪ ಕೀರ್ತಿಯುಂ ಪೊತ್ತು ಮೃತಜೀವರಂದ್ದದೋಳ್ಬಾವಿರ್ದ ಬಾಳ್ತೆಯಂ ಸುಡಲಿ (ತುರಂಗ. ೭೪-೬) ; ಕಯ್ವಾರಿಸಿದ ಬಿರುದಾವಳಿಯ ಸಮ್ಮೋಹನಕ್ಕೆ ನೀನೇ ಕರಗಿ, ಬೇರೊಂದಚ್ಚಿನ ಬಾಳ್ತೆಗೆ ಮಾರ್ಪಡುವುದೆ, ಶ್ರೀಮನ್ಮಹಾಶಯಾ? (ಚಿಟ್ಟಿಕ. ೨೦೪-೦೨) ; ಅರ್ಥಹೀನಂ ಬಾಳ್ತೆ ಒಲುಮೆಯಿಲ್ಲದಿರೆ (ಶಪ್ತಾಂಗ. ೬೬-೦೬೯). **ಬಾೞ್ಮೆ** : ೨. ವೃತ್ತಿ : ಅರಸನಾತಂಗಾದಮಾನು ಮೊಸೆದು ತಂದೆಯ ಬಾೞಂದಗ್ಗಳ ಬಾೞ್ಮೆಯುಂ[ಪಾಠಾಂ. ಬಾಳಂ,ದ ಬಾಳಂ] ಮಾಡಿದಂ (ವಡ್ಡಾರಾ. ೦೫೩-೨). [ಬಾೞ್$_1$ + — ಮೆ$_1$]

**ಬಾೞ್ಕೊದಲ್**, ಬಾಳ್ಕೊದಲ್ (ನಾ). ೧. (ಬದುಕಿಗೆ) ಬಂಡವಾಳ ವಾದುದು; ಮೂಲಧನವಾದುದು : ಮದುವೆಗಿದು ಪೆತ್ತ ಮಕ್ಕಳಿಗಿದು ಬಾೞ್ಕೊದಲೆನ್ನದುಳ್ಳುದಂ ಸವಣರ್ಗಿಕ್ಕಿದಪಂ (ಸಮಕ. ೩-೯೮). ೨. ಬದುಕಿಗೆ ಆಧಾರವಾದುದು; ಜೀವನಸರ್ವಸ್ವ : ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾೞ್ಕೊದಲದು ಚಿತ್ತಜಂಗೆ ಕುಲದೈವಂ (ಅಜಿಪು. ೨-೭೪); ಕವಿಗಳ್ಗಿದು ಕೆಯ್ಗನ್ನಡಿ ಕವಿತೆಗೆ ಬಾೞ್ಕೊ ದಲುದಾತ್ತವಾಗ್ದೇವತೆಗುದ್ಭವಹೇತು (ಕಾವ್ಯಾವ. ೪); ಬಿದಿ ಮೇರೆದಪ್ಪಿ ನಿಷ್ಕರುಣದೆ ನಿಮ್ಮ ಬಾೞ್ಕೊದಲನಕ್ಕಟ ವಂಚಿಸಿ ಕೊಂಡು ಪೋದನೇ (ವರ್ಧಪು. ೯-೭೦). ೩. ತವರು ; ನೆಲೆವೀಡು ; ಮೂಲಾಶ್ರಯ : ಒದವಿದ ಕೋಟೆಲೆಗಳ ಬಾೞ್ಕೊದಲೆನಿಸಿದ . . . ನನ್ನೀವೊಡಲಂ ನಿಲಿಸಿ ದುದರ್ಕೆನಾನುಮೊಂದು ನೆಪಮುಂಶಿರ್ದಪ್ಪೆ (ಕಾದಂಪೂ. ೩೩೩); ಅದು

ಪಿರಿಯ ಸಿರಿಯ ಬಾಳ್ಮೊದಲದು ಚಾಗದ ಭೋಗದಾಗರಂ (ಹುಓಲ. ೦-೬೩). **ಬಾಳ್ಮೊದಲ್ :** ೨. ಪುರು[ಷಾ]ರ್ತ್ಥದ ನೆಲೆ ಸತ್ಯದ ಕರು ಪರಹಿತಲಕ್ಷ್ಮಿಗಿಕ್ಕೆದಾಣಂ ಸೌಚಾಚಾರದ ಬಾಳ್ಮೊದಲೆಂನದೆ. ನರನೆಂಬುದು ಸಿಂ[ಗನ]ಣುಗನಂ ಶೋಭನನ (ಶಾಇ. XX, ೬೬-೨೬; 1118).

[ಬಾಟ್₃ + ಮೊದಲ್₁./ತಮಿ. ವಾಳ್ಮುತಲ್=ದೇವರು, ಸೃಷ್ಟಿಕರ್ತ]

**ಬಾಳ್ಮೊಸರ್** (ನಾ). (ಒಗ್ಗರಣೆ ಹಾಕಿದ) ಗಟ್ಟಿಮೊಸರು : ಇದು ಬಾಳ್ಮೊಸರಿದು ಕಟಲಿಂತಿದು ರುಚಿವೆತ್ತಿರ್ದ ಪಾನಮಿದು ಮಜ್ಜಿಗೆ ತಾನಿದು ಶಿಖರಿಣಿಯೆನುತುಂ ತಿಂಬಿದಿಂಬಿ ತಂದೆಟ್ದರಬಲೆಯರ್ ಸಿರ್ಪುಗಳಿಂ (ಸುಕುಮಾ. ೦೦-೩೧); ಸಮೆದಂ ಮೊಸರಂ ಬಾಳ್ಮೊಸರುಮನಾಂ ಘನವಾಗಿ ತಂದೆಂ (ಅರ್ಧನೇ. ೬-೭೩). [ಬಾಟ್₇ + ಮೊಸರ್]

**ಬಾಳ್ವಂದರ್**, ಬಾಳ್ವಂದರ (ನಾ) = ಬಾಳ್ಜೊಂಪ : ಕಾಯ್ತ ಬಳ್ಳಿ ಗೌಂಗಿನ ಪಸುರ್ವಂದರುಮಂ ಪಣ್ತ ಮಧುರದ್ರಾಕ್ಷೆಯ ಬಾಳ್ವಂದರು ಮಾಸಿರ್ಕೆಲದೊಳಿಕ್ಕಿಸಿ (ಅರ್ಧನೇ. ೩-೦೦ ವ). **ಬಾಳ್ವಂದರ :** ಕೆಂದಳಿರ ತುಱುಗಲಿಂದೊಪ್ಪಂಬೆತ್ತ ಬಾಲಸಹಕಾರದ ಬಾಳ್ವಂದರಂಗಳೊಳ್ . . . ಪಳುಕಿನ ವೇದಿಕೆಯೊಳ್ನಿಂದು (ನಾಗಕು. ೨-೨೩ ವ). [ಬಾಟ್₃+ಪಂದರ್]

**ಬಾಳ್ವಣ** (ನಾ). ಜೀವಂತವಾಗಿರುವ ಧನ,– ಸಂಪತ್ತು : ಎನ್ನ ಕೊಂಡಾಟದ ಬಾಳ್ವಣಮೆ ! (ರಾವಣಾಕ್ಷ. ೪೪-೦೦). [ಬಾಟ್₃ + ಪಣ್ಯ]

**ಬಾಳ್ವನೆ**, ಬಾಳುಮನೆ, ಬಾಳ್ವನೆ(ನಾ). ತವರುಮನೆ; ಮೂಲಾಶ್ರಯ: ಕನರ್ಗೊನರಿರ್ಕೆ ನುಣ್ದಳಿರ ಬಾಳ್ವನೆ ಕಂದಳಿರಿರ್ಪ ಬೀಡು . . . ನಸು ದೋರೆವಣ್ಣ ತಾಯ್ವನೆ ಪೊಸವಣ್ಣ ಗೊತ್ತಿದನೆ ಕಣ್ಗೆಸೆದಿರ್ದುದದೊಂದು ಮಾವುರಂ (ಕಬ್ಬಿಗಕಾ. ೦೦೦); ಪಾರ್ವರ ಬಂಚದಜನ ಬಾಳ್ವನೆಯೆಂಬೊಂದು ನೆಗಟ್ತೆಗಡರ್ಪಾಗಿ ಸಂದ ಅಹಿಚ್ಛತ್ರಪುರವರದ ರಾಯನ ಮನ್ನಣೆಯ ಬಿರ್ದಂ ಕೈಕೊಂಡು (ರಾವಣಾಕ್ಷ. ೬೩-೨೬). **ಬಾಳುಮನೆ:** ಖೂಳನೆಂಬೆನೆ ಸಕಲ ಕಲೆಗಳ ಬಾಳುಮನೆ ಗಡ ನಿನ್ನ ಬುದ್ಧಿ ವಿಶಾಲಮತಿ ನೀನೆಂಬೆನೇ ಜಗದಜ್ಞ ರಧಿದೈವ (ಕುವ್ಯಾಸ. ೦೩-೭೩). **ಬಾಳ್ವನೆ :** ನೆಲವೆಣ್ ಪೊಂಬೆಳಸನ್ನೆಟ್ಟನೆ ಪಡೆದವರ್ಗೀವೊಲ್ ಪಾಲ್ಗೊಜ್ಜನದ ತನೆ ಸುಜನರ ಬಾಳ್ವನೆ ಕಳಮದ ನಿಡಿದೆನೆಯೆಸೆಗುಂ (ಉದ್ಯದೀ. ೨-೨೬). [ಬಾಟ್₃ + ಮನೆ]

**ಬಾಳ್ವೆ**, ಬಾಳುವೆ, ಬಾಳ್ವೆ (ನಾ). ೧. ಜೀವನ ; ಬದುಕು : ಉಬ್ಬಿದಿರ್ಪಂತೆಮಗಾವ ಗರ್ವಮಿಱಿಯಲ್ವೇಡೆಮ್ಮನೆಮ್ಮುಳ್ಳುದಂ ನೆಱೆ ಕೊಂಡೆಮ್ಮಯ ಬಾಳ್ವೆಯೊಳ್ ನಿಱಿಸುವಂ ನೀಂ (ಶಂಕಭಾ. ೬-೩೦); ಅವಱ ಬಾಳ್ವೆ ಇಂದಿನದಲ್ಲ, ನಿನ್ನೆಯದುಮಲ್ಲ, ಎಂದೆಂದಿನದು (ಅಂತಿಗೂ. ೨೦-೪೪೦). **ಬಾಳುವೆ :** ೧. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗ ನಂತೆ ಎನ್ನ ಬಾಳುವೆ (ಬಸವ. ೩೪); ಅರ್ಥವಿಲ್ಲದ ಸಿರಿಯ ಸಡಗರ ಅರ್ಥಿಯಿಲ್ಲದ ಬಾಳುವೆಗಳಿವನರ್ಥಪಾರಂಪರೆ (ಕುವ್ಯಾಉ. ೪-೩೬) ; ಬಾಳುವೆಯ ಗೂಡೊಳಗೆ ತತ್ತ್ವಿಯಿದನೆಂದು ಮೃತ್ಯು ತಾನಿಕ್ಕಿ ಮೆಯ್ಗರೆಯಿತೆನಗರಿವೆ ? (ಗಳವಿಂ. ೫೦-೦). ೨. ಸಂಸಾರ; ದಾಂಪತ್ಯಜೀವನ : ಐದು ಮಾನವ ಕುಟ್ಟಿ ಒಂದು ಮಾನವ ಮಾಡು ಕಂಡಾ ಮದವಳಿಗೆ ಇದು ನಮ್ಮ ಬಾಳುವೆ ಮದವಳಿಗೆ (ಜನಪ. ೬೬೭) ; ಅವಳು . . . ಮತ್ತೆ ಕೈ ಹಿಡಿದವನ ಕೂಡ ಬಾಳುವೆ ಮಾಡಹತ್ತುವಳು (ಕನ್ನಡಾ. ೦೨೩). ೩. ಜೀವಮಾನ ; ಆಯುಷ್ಯ ; ಬದುಕಿನ ಅವಧಿ : ಏಸು ದಿನವೀ ಜಗದ ಬಾಳುವೆ (ಕುವ್ಯಾಅ. ೦೪-೩೨). ೪. ಅಭಿವೃದ್ಧಿ : ಕಾನನದಡವಿಯಲ್ಲಿ ಕಿಚ್ಚು ಬಾ[ಪಾಠಾ. ಬ]ಳುವೆಯಾಗಿ ಮಿಕ್ಕೊಡೆ ಒಱಲುವ ಬಳ್ಳುವಿನಂತಿಪ್ಪರಯ್ಯಾ ಮಾನುಜರು ನರವಿಂಧ್ಯದೊಳಗೆ (ಜನಪ. ೨೨೭) ; ಕೇಳಿದಳು ಹರುಷದಲಿ ಪುತ್ರಕರೇಳಿಗೆಯ ಮುತ್ತೈದೆತನದಲಿ ಬಾಳುವೆಯ ಕೈಕೊಂಡೆನೆಂದಳು ನಗುತ ಗಾಂಧಾರಿ (ಸಂಭಕ. ೨೦-೭). **ಬಾಳ್ವೆ :** ೧. ಏನಾದೊಡೇನೋ ಮಕ್ಕಳ ಹಡೆಯದರ ಬಾಳ್ವೆ ಹೆಣಕೆ ಸರಿ (ಸವ್ಯಾಕೌ. ೫-೯); ಸಕಲ ಪ್ರಾಣಿಗಳ ಪ್ರಯತ್ನವು ಬಾಳ್ವೆಗಾಗಿ, ಸಾವಿಗಾಗಿಯಲ್ಲ (ಜೀವಾಕ್ಷ. ೨೮೪). ೩. "ಆಯುಸ್ = ಆಯುಷ್ಯಂ, ಬಾಳ್ವೆ" (ಶಾಶಕ್ಷ. ೦೦೯).

**ಬಾಳುವೆ ಮಾಡು, ಬಾಳ್ವೆಮಾಡು** = ದಾಂಪತ್ಯಜೀವನ ನಡೆಸು ; ಒಕ್ಕತನ ಮಾಡು : ಇಂಥವರೊಡನೆ ತಾನು ಇಲ್ಲಿಯವರೆಗೆ ಹೇಗೆ ಬಾಳುವೆ ಮಾಡಿಕೊಂಡು ಬಂದೆಯೆಂದು ಅವಳೇ ಆಶ್ಚರ್ಯ ಪಟ್ಟಳು (ಹಳ್ಳಿಹಾ. ೬೦); ಯಾರೊಡನಾದರು ಬಾಳುವೆ ಮಾಡುವೆನಳಿವೆಣ್ಣೆನೊಡನಾಟ ಬೇಡ (ಇಂಜಾಕ. ೨೦೨-೪೮) ; ಗಂಡನ ಮನೆಯಲ್ಲಿ ಆರು ತಿಂಗಳ ಕಾಲ ಬಾಳ್ವೆ ಮಾಡಿದ ಗಂಗತ್ತೆಯನ್ನು 'ಆಟ' ತಿಂಗಳಲ್ಲಿ ತವರುಮನೆಯವರು ಪದ್ಧತಿಯಂತೆ ಕರೆದೊಯ್ದರು (ಒಬ್ಬಳ. ೦). [ಬಾಟ್₁ + — ವೆ]

**ಬಾಳ್ವೆಣ**, ಬಾಳ್ವೆಣ (ನಾ). ಜೀವವಿದ್ದರೂ ಸತ್ತಂತಿರುವ ವ್ಯಕ್ತಿ ; ಜೀವಚ್ಛವ : ಪಂದಲೆಯೋಳಿದೋರಣದ ಸೀಯದರಂ ಪೊಸ ದೂವೆ ದೂಪ ತೂಗುಂದಲೆ ಬಾಳ್ವೆಣಂ ಪೊಡರೆ ಬಳ್ಳುವ ಸಮ್ಮನ ಸೂಲಿಮಾಲದೊಳ್ ಸಂದಣಿಯಾಗಿ ನೇಲ್ವ ಪೆಣನೊಂದಿರೆ ನಿಂದುರಿಯುಯ್ಯಲೇಱ ಕೈರಂದಱಿಯಲ್ಕೆ ಮಾಡಿದಡೆ ಮಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೫೬) ; ವಿಜಯಸಾಪುರೀಶನಂ ಬಾಳ್ವೆಣನೆಂಬಿನಂ ಪಿಡಿದು ಕೆಯ್ಸೆಱೆ ಗೊಂಡುಱೆ ಪಾಡುಪಂತದಿಂ ಬಾಳ್ವನಭೇದ್ಯವಿಕ್ರಮನೆನಲ್ ಮೆಱೆವಂ ಚಿಕದೇವಭೂವರಂ (ಗೀತಗೋ. ೬೩-೦೪). **ಬಾಳ್ವೆಣ :** ಕಂಗಟ್ಟು ಬಾಯ್ಗಟ್ಟು ಕಲುಮರನಾಗಿ ಕಂಡು ಮತಿಗೆಟ್ಟು ದೆಸೆಗೆಟ್ಟು ಬಾಳ್ವೆಣನಾಗಿ (ಕಣ್ಣರ. ದೀ. ೦೪೬-೦೪) ; ಬದುಕಲೆಳಸಿದರಿಂತು ಬಾಳ್ವೆಣಗಳಾಗಿ ! (ಜಕ್ಷಕ್ಷ. ೦೩). [ಬಾಟ್₁ + ಪೆಣ]

**ಬಾಳ್ವೇಲಿ**, ಬಾಳ್ವೇಲಿ (ನಾ). = ಬಾಳೋಟ್ಟೆ : ಪೂತ ಚೂತವನಮೆ ಬಾಳ್ವೇಲಿಯಾಗೆ . . . ಅಶೋಕೋದ್ಯಾನಮಧ್ಯದೊಳ್ (ಶಾಂತಿಪು. ೪-೯೩ ವ) ; ಆ ವನಕ್ಕಿಕ್ಕಿದ ಬಾಳ್ವೇಲಿಯಂತೆ . . . ನವ ಫಲಂಗಳಿಂ ನೆಱೆದೊಪ್ಪುವ ಮಾತುಲುಂಗದ ಪೊದಱುಗಳುಮಂ (ಶಂಕತಂ. ೦೦೭-೦೨) ; ನಂದನಕ್ಕೆ ಬಾಳ್ವೇಲಿಯಾದ ಕೇದಗೆಯ ಬನದ ಬಳಸಿನೊಳಗೆ ಶಿವನರಿವೆಣ್ಣನಂ ಹರಿಯ ಹಾದರವಬ್ಜಜನೊಲ್ದ ಲಜ್ಜೆ ಹೇಱೆ ನನೆವಿಲ್ಲ ಬಲ್ಲಹನ ಶೌರ್ಯಮಂ (ಅನಂಪು. ೦-೬೦ ವ). **ಬಾಳ್ವೇಲಿ :** ಕಂಜಾಸ್ತ್ರನ ವನದುರ್ಗದಂತಾಯ್ತು ಪರಂಜಗೇದಗೆಯ ಬಾಳ್ವೇಲಿ (ಕ್ರಿಪಾಂ. ೦-೬೪); ಸುತ್ತಿದ ಜಲಖಾತಿ ಮಿಸುನಿಗೇದಗೆಯ ಬೆಳ್ವೆತ್ತ ಬಾಳ್ವೇಲಿ (ನಾಗಕು. ೨-೩೨). [ಬಾಟ್₁ + ಬೇಲಿ]

**ಬಾಳ್ಸಬ** (ನಾ). = ಬಾಳ್ವೆಣ : ಎಲೆಲೆ ಸಮ್ಮಂಗುಂದಿದ ಪುಚ್ಚಟಿಯ ಬಾಳ್ಸಬಮೆ ! (ರಾವಣಾಕ್ಷ. ೦೦೨-೦೩). [ಬಾಟ್₁ + ಸಬ (< ಶಬ)]

**ಬಿಂ, ಬಿಮ್ಮ₂** (ನಾ). ಶೂನ್ಯತೆಯನ್ನು ಸೂಚಿಸುವ ಒಂದು ಅನುಕರಣಶಬ್ದ : (*). **ಬಿಮ್ಮ₂ :** ಒಂದೆ ನಿಮಿಷದ ಆಯು ಮಾರುಚಣವೆ ಕತ್ತಲೆಯು ಬಿಮ್ಮೆಂಬ ಕತ್ತಲೆಯು (ಳವಿಸೋ. ೬೦-೯). 'ಬಿಮ್ಮಗೆಱ' ಪಠಾ.

**ಬಿಂಬಿಮ್ಮೆನ್** = ನಿರ್ಜನವಾಗಿರು ; ಬಿಕೋ ಎನ್ನು : ಬಿಂಬಿಮ್ಮೆಂಬ ಪೇರಡವಿಯಂ ನೋಡಿ ಜಳಜಮುಖಿ ನಾಡೆಯುಂ ತಲ್ಲಣಿದಿಂ ಭೋರೆಂದು ಸುಯ್ದು (ಧರ್ಮಾವ್ಯ. ೩-೩೩).

**ಬಿಂಕ₁** (ನಾ). ೧. ಗರ್ವ ; ಜಂಬ ; ಸೊಕ್ಕು : "ವಕ್ಕಿಮಂ, ಬಿಂಕಂ . . . ಆದಟು — ಈ ೭ ಗರ್ವಂ" (ಕಶಸಾ. ೫೬-೨೩೦) ; ಆ ದ್ರುಪದಜೆಯೊಳ್ ನೆರೆದೊಸಗೆಗೆ ತಮ್ಮ ಬೀರಮಂ ಬಿಂಕಮುಮಂ ತೆಱಪುಂ ತೆಲ್ಲಂಟಿಯುಮೆಂದರಿಕೇಸರಿಗಾಗಳೀವವೊಲ್ ಬೆನ್ನಿತ್ತರ್ (ಶಂಪಭಾ. ೩-೭೨) ; ಬೇಡಿದ ಶರಣರ್ಗಿಲ್ಲೆನ್ನದೀವೆನೆಂಬ ಗೀತದೊಳಗಣ ಬಿಂಕದ ಬಿರುದಂ ಕೇಳ್ದು ನಿನ್ನೊಳೊಂದಂ ಬೇಡಿ ಬಂದೆಂ (ಬಸರ. ೦೨-೪೬) ; ಕಡಲು ಪರಿವರುಣಾಂಬುಜಲಧಿಗೆ ಬಿಡಿಸಿದವು ಬಿಂಕವನು ಶಿವಶಿವ ನುಡಿವ ಕವಿ

ಯಾರಿನ್ನು ಪಾರ್ಥಕುಮಾರನಾಹವವ (ಕುಮಾ.ದ್ರೋ. ೩-೬). ೨. ಠೀವಿ ; ಗತ್ತು ; ಗಾಂಭೀರ್ಯ : ಬಿಂಕದಿಂ ಬಲಗೆಲದೊಳ್ ನೆಗಟ್ಟಿವಡೆ ದಿರ್ಪರಸಂಚೆಯು ಪಿಂಡು (ಕಬ್ಬಿಗ. ೧೨೯) ; ಆವ ಬಿಂಕವೋ ಎಡಗಾಲ ಗದ್ದುಗೆಯ ಮೇಲೋವಿ ಮಡಿದು . . . ಠೀವಿಯೊಳಿಸೆದನಾ ರಾಯ (ಭರತ. ೧-೪೦). ೩. ಹೆಮ್ಮೆ ; ಸ್ವಾಭಿಮಾನ : ಬಿಡೆ ನಿನ್ನ ಪಾದವ ಬಿಂಕವಿನ್ನೇಕೊ ಕೊಡು ಮನದಿಷ್ಟವ ಕೋಪವಿದೇಕೊ (ಪುರಂದ. ೧-೨೩ ಪಲ್ಲವಿ) ; ಲಂಕಾದುರ್ಗಕೆ ಸರಿಯೆಂದಾವೂರ ಬಿಂಕದೆ ಕೊಂಡಾಡು ತಿಹರು (ಕಂಸವ. ೦೬-೬೨) ; ಗಂಡನ ಬಿಂಕ ಹೆಂಡತಿಯು ವೈನ್ಯವನ್ನೇ ಬಯಸುತ್ತದೆ (ಮಹಾಗ. ೨೯). ೪. ಬೂಟಾಟಿಕೆ ; ಡಂಭಾಚಾರ : ಬಾಯ ಬಿಂಕದ ಸವಿನುಡಿಯನಾ ರಾಯರಾಡಿದರಲ್ಲಿ (ನಳಚ. ೩-೬೦) : ನಾವು ಯೋಧರು, ನೋವನ್ನೂ ಸಹಿಸಬಲ್ಲೆವು, ಸಂತೋಷವನ್ನೂ ಸಹಿಸ ಬಲ್ಲೆವು. ಈ ಎರಡೂ ನಿಮಗೆ ಸಾಧ್ಯವಿಲ್ಲ. ಇದೊಂದು ಬಿಂಕ (ಶಾಂತಲಾ. ೬೯). ೫. ಆಡಂಬರ : ಡೌಲು : ಪಾತ್ಸಾವು ರಣ ಧೂಳಿಖಾನನ ಬಿಂಕದೆ ಬೀಳ್ಕೊಟ್ಟನಾಗ (ಕಂಸವ. ೧೦-೯). ೬. ಒಯ್ಯಾರ; ಬೆಡಗು ; ಬಿನ್ನಾಣ : ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳ್ . . . ಆ ಬಿಂಕವಮಾ ತರಳಾಪಾಂಗವಿಲಾಸಂ . . . . ಏಂ ಮನಂಗೊಳಿಸಿತೋ ಚಾಳುಕ್ಯಕಂದರ್ಪನಾ (ಗದಾಯು. ೬-೩೦) ; ನಳಿತೋಳ್ಗಳ್ ಮುತ್ತಿನ ಸರಿಗೆಯುನಾಂತಸೆಯೆ ಕಾಂತೆ ಬಿಂಕಮನಾಂತಳ್ (ಜಗವಿ. ೧೦-೧೧೭) ; ನಿನ್ನ ನಡೆವ ಬಿಂಕದ ಗಾಡಿಯುಮಂ . . . ಆ ನಿನ್ನ ಕಿಱುನಗೆಯ ಬಗೆಯುಮಂ ಕಂಡು ಸೋಲ್ತು ಮೆಚ್ಚಿದೆನಲ್ತೆ ! (ರಾಮಾಶ್ವ. ೩೬-೯). ೭. ಸೊಬಗು : ವಿಲಾಸ ; ಸೊಗಸು : ಶ್ರೀವತ್ಸಾಂಕನ ಸುಲಲಿತ ಯಾನದ ಬಿಂಕಮನನುಕರಿಸಿ ತೋಱುತಿರ್ದಳದೊರ್ವಳ್ (ಜಗವಿ. ೫-೨೦): ನಿಡುಮುರ್ಬಿಂಗಂ ಕರ್ವಿಲ್ಲ ಬಿಂಕಮಂ ಸುಂಕಮಿಕ್ಕಿದಂತೆ . . . ಶೃಂಗಾರಕ್ಕೆ ಸೀಮೆಯಾಗಿಪ್ಪಳ್ (ಪುಣ್ಯಾಸ್ರ. ೨-೩೨ ವ); ಬಿಂಕದಿಂದಲಿ ಕೊಳಲೂದುತ್ತ ಪಾಡುತ್ತ ಪಂಕಜಾಕ್ಷನು ಬಂದ ಕಾಣಿರೇನೆ (ಪುರಂದ. ೧-೧೪೦-೩). ೮. ಹಿರಿಮೆ ; ಮೇಲ್ಮೆ : ಅತಿಶಯತೆ : ಶಂಕರಂಗೆ ಸಕಲ ಮಜ್ಜನಾದಿ ಪೂಜೆಯಂ ನಿಮಿರ್ಚಿ ಬಿಂಕದಿಂದೆ ಕನಕರತ್ನರಾಶಿಗಳನೆ ಹತ್ತೆ ಸಾರ್ಚಿ (ಮಲಹ.ಹ. ೨೨೦-೦೦) ; ಅರಸನಭ್ಯುದಯವನು ಭೀಮನ ಧರಧುರವನ ರ್ಜುನನ ಬಿಂಕವನು . . . ಕಂಡೆದೆ ಬಿರಿದುದು (ಕುಮಾ.ಸ. ೦೨-೫೯): ಸಾಸಿರದೆ ಬಿಂಕದ ಕರಿ ಹತ್ತು ಕೂಡಿದ ಬಲುಪೌಜನಂಕುಶಖಾನ ತೋಱಿದನು (ಕಂಸವ. ೧೦-೯೫). ೯. ಸಾಹಸ: ಪರಾಕ್ರಮ; ದಿಟ್ಟತನ : ಬಿಂಕದಿಂದ ಸಿಯಂ ಜಡಿದು (ಜಸಕೃ. ೦೬-೦೮); ಮನ್ನಣೆಯ ಬಿಲ್ಲ ಗುರುವಿನ ಬಿಂಕ ಬಯಲಾಯ್ತಿಲ್ಲಿಯೆಂಬಪಕೀರ್ತಿ ಹೋಱುವುದು (ಕುಮಾ.ದ್ರೋ. ೦೩-೦೧). ೧೦. ಅಟ್ಟಹಾಸ; ಆಟೋಪ : ಧರಾಧೀಶರಾಗಳ್ ಪೊಣರಲ್ ರಾಜೇಂದ್ರ ಹಮ್ಮೀರನ ತುರಗಿರಿಯಂ ಮುತ್ತಿದರ್ ಬಿಂಕದಿಂದಂ (ಹಮ್ಮೀ.ರ. ೩-೫). ೧೧. ಜಂಬದ ಮಾತು ; ಹೆಮ್ಮೆಯ ನುಡಿ : ಧನವ ಕೊಟ್ಟೆನು ತನುವ ಕೊಟ್ಟೆನು ಮನವ ಕೊಟ್ಟೆನು ಕೊಟ್ಟೆನೆಂಬೀ ಬಿನುಗು ಬಿಂಕವ ನಾಡಲಾ ಧನ ತನು ಮನಂಗಳನು ನಿನಗೆ ಕೊಟ್ಟವರಾರು (ಪ್ರಭುಲಿಂ. ೦೬-೯೯). ೧೨. ಶಸ್ತ್ರಪ್ರಯೋಗದಲ್ಲಿ ಒಂದು ರೀತಿ,–ಬಗೆ : ಬಿಂಕಂ ಭ್ರಮರೀಜ್ವಾಲೀಢಮಾಕೀರ್ಣತೆ . . . ಬೆಡಂಗೆಂದೆನಿಪನಿತಱ ವೈಚಿತ್ರ್ಯದಿಂ ತಾನೆ ಶಸ್ತ್ರಾಗಮಶಿಕ್ಷಾಚಾರ್ಯನೆಂಬೊಂದೆಸಕದಿನೆಸೆದಂ ನಾಡೆ ಕಂದರ್ಪ ದೇವಂ (ಕುಸುಮಾ. ೬-೭೯). 'ಬಿಗಿ$_1$' ಪರಾ.

[ದೇ. ॥ ತುಳು. ತೆಲು. ಬಿಂಕ]

**ಬಿಂಕ$_3$** 'ಬಿಂಗ$_1$' ನೋ.

**ಬಿಂಕಂಗುಂದು** (ಕ್ರಿ). ಶಕ್ತಿಯು ಕುಂದು: ಪರಾಕ್ರಮವು ಕಡಮೆ ಯಾಗು : ಬಾಣಪಟ್ಟಿಯೊಳ್ ಬಿಱುವಿಸಿಲ್ ಬೆನ್ನಂ ಸುಡೆ ಬಿಂಕಂಗುಂದಿ ಬಳಲ್ದು ಬರ್ಪ ಗರುಡದಂಪತಿಗೆ ತಂಪಂ ಪರೆಪಲೆಂದು . . . ರಂಜಿಪ ಪರ್ಣ ಪಾಳಿಯಿನೇಳ್ಗೆವೆತ್ತ ತಾಳಭೂರುಹದಿಂ . . . ಮಹಾಗಹನಮೊಪ್ಪಿರ್ದುದು (ಶಬರ. ೩-೩೫ ವ). [ಬಿಂಕ$_1$ + ಕುಂದು$_1$]

**ಬಿಂಕಂಗೆಡಿಸು** (ಕ್ರಿ). ಗರ್ವವು ನಾಶವಾಗುವಂತೆ ಮಾಡು; ಅಹಂಕಾರ ವನ್ನು ತಗ್ಗಿಸು : ಬಿದಿಗವೆಱೆಯ ಬಿಂಕಂಗೆಡಿಪಧರಂ . . . ಒಪ್ಪಿದುವಾ ಸತಿಗೆ (ಜಯಕಾ. ೨-೯). [ಬಿಂಕಂಗೆಡು + – ಇಸು$_3$]

**ಬಿಂಕಂಗೆಡು** (ಕ್ರಿ). ಗರ್ವವು ನಾಶವಾಗು ; ದರ್ಪವು ಅಳಿದುಹೋಗು ; ಅಹಂಕಾರವಡಗು : ಪೊಡವೀಶಬ್ಬೀತಿಯಿಂದಂ ಸೆಡವರಡಗುವ ಕ್ರೋಡುವಕ್ರೋಂಕಿ ಬಿಂಕಂಗೆಡುವರ್ (ಎಕ. XI, ಚಿತ್ರದು. ೫-೯೬ 1356).

[ ಬಿಂಕ$_1$ + ಕೆಡು$_1$ ]

**ಬಿಂಕಂಬಡೆ** (ಕ್ರಿ). ಸ್ವಾಭಿಮಾನದಿಂದ ಕೂಡಿರು : ಅತ್ಯಂತ ಚತುರ ಚಿತ್ರಕನೊರ್ವಂ ಬಿಂಕಂಬಡೆದೈತಂದು ಕಂತುನಿಭಂಗಭಿವಂದಿಸಿ (ಜಯಕಾ. ೩-೪). [ಬಿಂಕ$_1$ + ಪಡೆ$_1$]

**ಬಿಂಕಂಬೆಱು** (ಕ್ರಿ). ೧. ವಿಲಾಸದಿಂದ ಕೂಡಿರು ; ಸೊಗಸನ್ನು ಹೊಂದಿರು : ಬಿಂಕಂಬೆತ್ತೆಸೆವಂಚೆಯುಂ ಸಂಕುಳಮುಂ ತೊಂಡುಗೆಡೆವ ಶುಕಶಾರಿಕೆಯುಂ ಸೊಂಕಿ ಬಲವಂದು ತೀಡುವ ತೆಂಕಣಗಾಳಿಯುಮಿವೇಂ ಮನಂಗೊಳಿಸಿದುವೋ (ಕಾವ್ಯಾವ. ೦೯); ಬಿಂಕಂಬೆತ್ತಿರೆ ಪಸನ್ನುಖಾಂಕುರ ದೊಳ್ ಬಾಹುಶಾಖೆಯೊಳ್ ದಿವಿಜನಟೀಸಂಕುಳವಂಬವನುಗತಿಯಿಂದಂ ಕುರಶಾಖಾಭಿನಯಮನೇಂ ತೋಱಿದುದೋ (ಚಂದ್ರಪ್ರ. ೧೨-೮೧) ; ಬಿಂಕಂಬೆತ್ತರ ಮಕ್ಕಳ ತಂಡದ ಮಂತ್ರಿಗಳ ಗೊಂದಣದತಿಚತುರ ಕವೀಂದ್ರರ ಬಲುಸಂದಣಿಯೊಳು . . . ಓಲಗಮಿರ್ದಂ ಜಯಭೂಪರನು (ಜಯುಕಾ. ೩-೦). ೨. ಉಬ್ಬು ; ಸಡಗರಿಸು ; ಉತ್ಸಾಹಿಸು ; ಬಿಂಕಂ ಬೆತ್ತುಬಿಬೆಂದಾಡುತ್ತಂ ಆಡುವ ಗುಂಪಯ್ಯನ ಪೊಸನೃತ್ಯಂ (ಕಂಬನಿ. ೦೩೦-೨೪). ೩. ಗರ್ವಿಸು ; ಜಂಬಪಡು : (೬). [ಬಿಂಕ$_1$+ಪೆಱು$_1$]

**ಬಿಂಕಕಾತಿ** 'ಬಿಂಕಗಾತಿ' ನೋ.

**ಬಿಂಕಕಾರ್ತಿ** 'ಬಿಂಕಗಾರ್ತಿ' ನೋ.

**ಬಿಂಕಕಾಱ** (ನಾ). ಅಹಂಕಾರಿ; ಗರ್ವಿಷ್ಠ: ಬಿರುದಿನ ಬಿಂಕಕಾಱರ ವಾಸಿಗರ ನಲ್ಲೆ ನಿಸುವಲ್ಲಮನೆಂಬ ಪೆಸರೆನಗೆ (ಪ್ರಭುಲಿಂ. ೫-೦೩). [ಬಿಂಕ$_1$ + – ಕಾಱ]

**ಬಿಂಕಗಾತಿ,** ಬಿಂಕಕಾತಿ (ನಾ). ೧. ಒಯ್ಯಾರಿ; ಬಿನ್ನಾಣಗಿತ್ತಿ : ಕನ್ನಡಿ ಗಿಂಡಿ ಬಿಜ್ಜಣಿಗೆಗಳ ಪಿಡಿದೂಳಿಗಗೈವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹಂಬ. ೦-೦೬) ; ಗುರುವ ನೋಟದ ಬಿಂಕಗಾತಿ . . . ಸೋಗೆಗಣ್ಣುಗಳಿಂದ ಕರೆದಳಾ ಕಾಮುಕರರಸಿ (ಸೌಂದರಾ. ೩-೦೨). **ಬಿಂಕಕಾತಿ:** ೧. ಕರಜಾಣ ನಿನ್ನೋಪನೆಂದು ಸಿರಿವೆಣ್ಣು ಕಿವಿ ಸಾರ್ದು ಸೂಚಿಸು ತ್ತೋಲೈಸಿ ಬರೆ ಬಂದಳಾ ಬಿಂಕಕಾತಿ (ಭರತ. ೬೯-೦೦೯). ೨. ಸೊಕ್ಕಿನವಳು; ಗರ್ವದ ಹೆಂಗಸು : (೬). [ ಬಿಂಕ$_1$ + – ಕಾತಿ$_5$ ]

**ಬಿಂಕಗಾರ್ತಿ,** ಬಿಂಕಕಾರ್ತಿ (ನಾ). = ಬಿಂಕಗಾತಿ ೧ : ನಲವಿಂದಮೊಡ ನೊಡನಡಿಯಿಟ್ಟರ್ ನೆರೆದು ಬಿಂಕಗಾರ್ತಿಯರರೆಬರ್ (ಕಬ್ಬಿಗ. ೯೫) ; ನಡೆಯ ಬೆಡಗಿನ ಬಿಂಕಗಾರ್ತಿ[ ಪಾಠಾಂ. ಕಾತಿ ]ಯರ್ . . . ನಡೆ ತಂದರು (ಚಿಂಕೃ. ೯೫-೩೩). **ಬಿಂಕಕಾರ್ತಿ** : ಬಿಂಕಕಾರ್ತಿಯರಲ್ಲಿ ಕಡುಗಾಡಿ ವೆತ್ತಿರುತಿಹರು (ಕುರಾಸಾಂ. ೩-೩೫); ಜೆಡೆಯ ಗೊಂಡೆಯ ಬಿಗಿದೊತ್ತಿ ಕಟ್ಟಿದ ಜವದಾಡೆ ಚಿತ್ರಕೆಳಸಿ ಬಿಂಕಕಾ[ಪಾಠಾಂ. ಗಾ]ರ್ತಿ ಬಬ್ಬಿಯರವ ನೊತ್ತಿನೊಳೆಯ್ತಂದರಂದು (ಕುರಾಸಾಂ. ೦೮-೦೯).

[ಬಿಂಕ$_1$ + – ಕಾಱ + – ತಿ$_1$ (< – ಇತ್ತಿ)]

**ಬಿಂಕಣ** 'ಬಿಜ್ಜಣ' ನೋ.

**ಬಿಂಕಣಗಿವಿ,** ಬಿಂಕಣೆಗಿವಿ (ನಾ). ಬೀಸಣಿಗೆಯಂತೆ ದೊಡ್ಡದಾಗಿರುವ ಕಿವಿ : 'ಬಿಂಕಣಗಿವಿಯು' ಪರಾ. **ಬಿಂಕಣೆಗಿವಿ** : ಒರ್ವನೆಯ ಬಿಂಕಣ

**ಬಿಗಿಯಪ್ಪು** (ಕ್ರಿ). ಗಾಢವಾಗಿ ಆಲಿಂಗಿಸು, _ ತಬ್ಬು : ಕಳಿದುವು ಮೆಯ್ಯುಸುಯ್ಯುಪದವೆಂಕೆಗಳಂ ಬಿಗಿಯಪ್ಪಿದಪ್ಪುಗಳ್ (ಕಂಪಣ. ೫-೨೬); ಬಾ ಸುತರೆಯೆನುತೆ ತೆಗೆದು ಬಿಗಿಯಪ್ಪಿ (ಶದ್ಭಾ. ೩-೦೭) ; ಹಸುಳೆಯಂದಟನ ನುಡಿಯ ಕೇಳಿದು ನಸುನಗುತ ಧರ್ಮಜನು ಘನಪೌರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯಪ್ಪಿ (ಕುಮಾರವ್ಯಾ. ೪-೩೬).

**ಬಿಗಿಯಪ್ಪಿಕೊಳ್** = ಬಿಗಿಯಪ್ಪು : ನೀಜನ ಕರ ಬಿಗಿಯಪ್ಪಿಕೊಂಬೆನು ಬೆಚ್ಚಂತೆ (ಕಂಪಣ. ೪-೧೦೬). [ಬಿಗಿ$_1$ + ಅಪ್ಪು$_1$]

**ಬಿಗಿಯಿಸು,** ಬಿಗಿಸು (ಕ್ರಿ). ೧. ಕಟ್ಟು ; ಬಂಧಿಸು : ತ್ರಿಗುಣಿಸೆ ನಯನವಿಭೂಷಾಂಶುಗಳಲಗಿನ ರುಚಿಯನಲಗನೆರಡುಂ ಕೈಯೊಳ್ ತ್ರಿಗುಣಿಸಿ ಚಿತ್ರಂಬಡೆದಳ್ ಬಿಗಿಯೆ ಕುಚಂ ಬಿಗಿಯಿಪಂತು ಕಂತುಗೆ ದೋಣೆಯಂ (ಜಗ. ೫-೧೬). **ಬಿಗಿಸು : ೨.** ಕಟ್ಟಿಸು ; ಬಂಧಿಸುವಂತೆ ಮಾಡು : ಕಳ್ಳರಿರ್ಕೈಗಳಂ ಬಿಗಿಸಿ ತೊದಲಂ ನುಡಿಸಿ ಸುಳ್ಳು ನಾಲಗೆಯು ನಡುಗಿಸುತರವನೆರೆಗಂ (ರಾಜಶೇ. ೭೭-೧೪೦). ೩. ನಿರ್ಮಿಸು ; ರಚಿಸು ; ಕಲ್ಪಿಸು : ನಗರದುಪಕಂಠದಲಿ ಕೋಟೆಯ ಬಿಗಿದು ಬಿಡಿಸಿದನಧ್ವರಕೆ ಸಲುವಗಣಿತಾಖಿಳವಸ್ತುಗಳ ನೆರಹಿದನು ನರನಾಥ (ತೊರವೆ. ೦-೭-೪). ೪. ಕುದುರೆಗೆ ತಂಗುಪಟ್ಟಿಯನ್ನು ಕಟ್ಟಿ ಸಿದ್ಧಪಡಿಸು : ಚಂದ್ರಹಾಸಂ . . . ಬಳಿಕ ಬಿಗಿಸಿ ನಿಜವಾಜಿಯಂ ಬಂದಡರ್ದನು (ಕೃಮಿಭಾ. ೩೦-೪೨). ೫. ಹೊಡೆಸು ; ಥಳಿಸುವಂತೆ ಮಾಡು : ಅವನಿಗೆ ನಾಲ್ಕು ಬಿಗಿಸಿದರೆ ಸರಿ ಹೋಗುತ್ತಾನೆ (ರೂಢಿ).

**ಬಿಗಿಸಿಕೊಳ್ಳು** = ೧. ಕಟ್ಟಿಸಿಕೊಳ್ಳು : ಕಾಳಗದೊಳೆಲ್ಲರಸಿಕ್ಕಿ ಪಟ್ಟುವ ಬಿಗಿಸಿಕೊಂಡವರಲ್ಲವೇ (ಕುಮಾರ. ೬-೪೯). ೨. ಹೊಡೆಸಿಕೊಳ್ಳು ; ಪೆಟ್ಟು ತಿನ್ನು : ನೀನು ಹೀಗೆ ಒಂದೇ ಸಮನೆ ಹಠ ಹಿಡಿದರೆ ಚೆನ್ನಾಗಿ ಬಿಗಿಸಿಕೊಳ್ಳುತ್ತೀಯೋ (ರೂಢಿ). [ಬಿಗಿ$_1$ + —ಇಸು$_3$]

**ಬಿಗಿಯುಡುಪು** (ನಾ). ಸಡಿಲವಾಗಿಲ್ಲದಿರುವ ತೊಡುಗೆ ; ಮೈಗೆ ಅಂಟಿಕೊಂಡಿರುವ ಉಡುಗೆ : ಬೇಸಿಗೆಯಲ್ಲಿ ಬಿಗಿಯುಡುಪುಗಳನ್ನು ಧರಿಸಿದರೆ ತುಂಬ ಸೆಕೆಯಾಗುತ್ತದೆ (ರೂಢಿ). [ಬಿಗಿ$_1$ + ಉಡುಪು]

**ಬಿಗಿಯುಡೆ** (ನಾ). = ಬಿಗಿಯುಡುಪು : ಅವಳು . . . ರೇಷ್ಮೆಯ ಬಿಗಿಯುಡೆಯನ್ನು ಧರಿಸಿದ್ದಳು (ಕೃಪನು. ೪೨೦). [ಬಿಗಿ$_1$ + ಉಡೆ$_2$]

**ಬಿಗಿವಡು** (ಕ್ರಿ). ಕಟ್ಟಲ್ಪಡು ; ಜೋಡಣೆಯಾಗು : ಬಲಗಡೆಗಾಗಿ ಬಾಗಿ ಬಿಗಿವಟ್ಟುಜಿ$^3$ ಬಟ್ಟಿತೆಂಬಿನಮುಲ್ಲರ ಸರಂಗಳೊತ್ತರಿಸೆ (ಶಕಶ. ೫-೭). [ಬಿಗಿ$_2$ + ಪಡು$_1$]

**ಬಿಗಿವಡೆ** (ಕ್ರಿ). ೧. ಬಂಧನಕ್ಕೊಳಗಾಗು ; ಸೆರೆ ಸಿಕ್ಕು ; ಕಟ್ಟುಬೀಳು : ಅಡವಿಯಲಿ ಫಣಿಭೋಗದಲಿ ಬಿಗಿವಡೆದು ಬಳಲಿದ ಭೀಮಸೇನನ ಬಿಡಿಸಿದನು ಯಮಸೂನು ಧರ್ಮಕಥಾಪ್ರಸಂಗದಲಿ (ಕುಮಾರ. ೦೩ ಸೂಚನೆ); ರಾವಣಸುತನಿನಬುಜಭವಾಸ್ತ್ರದಲಿ ಬಿಗಿವಡೆದನಾ ಹನುಮ (ತೊರವೆ. ೫-೭ ಸೂಚನೆ). ೨. ಅಳವಡಿಕೆಯಾಗು ; ಹೊಂದಿಕೊಂಡಿರು : ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ . . . ಕಡುಚೆಲುವೆಯರೆಸೆದಿಹರು (ಕಂಪಣ. ೬-೦೦೪). ೩. ಉಬ್ಬು; ಗರ್ವಿಸು : ದೊರೆಕೊಂಡ ಪೊಸಸೊಗದ ಸುಗ್ಗಿಯ ಸುರ್ಗಿನೊಳ್ ಬಿಗಿವಡೆದಗ್ಗದ ಸಗ್ಗದ ಜೋಸೆಯರೊಂದು ನೆರವಿಯೊಳ್ ದೇಸಿಯಿಂ ಬೆರೆದಾಗಳುಂ ಬನದಿಸುತ್ತ (ರಾಮಾಶ್ವ. ೦೩೭-೦೭). ೪. ಕಠಿಣವಾಗು; ದೃಢವಾಗು : ಸತ್ಕೋಮಲಾಂಗಿಯ ಪೇರುರದಿ ಹೇಮಾಬ್ಜಮುಕುಳಸ್ತನ ಬಿಗಿವಡೆದಿರೆ ಭ್ರಾಮಕಗೊಂಡು ವೀಕ್ಷಿಸಿದ (ವೋಹಕ. ೦೭-೫೭). [ಬಿಗಿ$_2$ + ಪಡೆ$_1$]

**ಬಿಗಿವಾತು** (ನಾ). ಗಂಭೀರವಾದ ಮಾತು : ಬಿಗಿವಾತು ಮೆಲ್ವಾತು ನಗೆವಾತು . . . ಸೊಗವಾತುಗಳಿಂದ ಸೊಗಸ ಕಿವಿಗೆ ಸೂಸುವುದು (ಶಕಶ. ೬-೦೫೭ ಸಾಂಗತ್ಯ). [ಬಿಗಿ$_2$ + ಮಾತು$_1$]

**ಬಿಗಿವಿಡಿ,** ಬಿಗಿಹಿಡಿ (ಕ್ರಿ). ೧. ತಡೆ; ನಿಗ್ರಹಿಸು; ಹತೋಟಿಯಲ್ಲಿಟ್ಟುಕೊಳ್ಳು : ನೀನಡಕಮಿರವೇಟ್ಕುಂ ; ಸಿಡಿಲ್ದುಗುವ ಸೋರ್ಕನುಡಿ ಬಿಗಿವಿಡಿಯವೇಟ್ಕುಂ (ಐದ್ಯಕ್ರ. ೮೬-೩೬೨). **ಬಿಗಿಹಿಡಿ :** ೧. ಪರರ ರೀತಿಗೆ ಹರಿವ ಮನವನ್ನು ಬಿಗಿಹಿಡಿದು . . . ವರಸನಾತನಧರ್ಮವೇ ಮಾನ್ಯವೆಂದದನು ಧರಿಸಿ ತಲೆಯಲ್ಲಿ ಮರೆಯದೆ ಪೂರ್ವಿಕರನು (ಕಮ್ತು. ೦೫-೩) ; ಅವಳು ಉಕ್ಕಿ ಬರುತ್ತಿದ್ದ ನಗುವನ್ನು ಪ್ರಯಾಸದಿಂದ ಬಿಗಿಹಿಡಿದಳು (ಕೃಪನು. ೩೨೨). ೨. ಗಟ್ಟಿಯಾಗಿ ಹಿಡಿದುಕೊಳ್ಳು : ಭದ್ರವಾಗಿ ಹಿಡಿ : ಈ ಕುದುರೆಯೇರಿ, ಲಗಾಮು ಬಿಗಿಹಿಡಿದು ಸವಾರಿ ಮಾಡುವುದಷ್ಟು ಸುಲಭವಲ್ಲ (ಕಂಪಮು. ೩೦-೨೦).

**ಬಿಗಿ ಹಿಡಿದುಕೊಳ್ಳು** = ಅಂಕೆಯಲ್ಲಿಡು; ಹಿಡಿತಕ್ಕೆ ತರು : ಅವಳು . . . ಮನಸ್ಸನ್ನು ಬಿಗಿ ಹಿಡಿದುಕೊಂಡು ರೋಗಿಯ ಪರೀಕ್ಷೆ ಮಾಡಹೊರಟಳು (ಕಂಂಕಮು. ೬೪). [ಬಿಗಿ$_1$ + ಪಿಡಿ$_1$]

**ಬಿಗಿವೊಂದು** (ಕ್ರಿ). ಬಿಗಿಕಟ್ಟಿನಿಂದ ಕೂಡಿರು ; ಬಿಗಿಯಾದ ಬಂಧವನ್ನು ಹೊಂದು : ಅಚ್ಚಗನ್ನಡಂ ಬಿಗಿವೊಂದಿರೆ ಕಬ್ಬಿಗರ ಕಾವನೊಲವಿಂದೊರೆದೆಂ (ಕಬ್ಬಿಗ. ೦೬). [ಬಿಗಿ$_2$ + ಒಂದು$_1$]

**ಬಿಗಿಸು** 'ಬಿಗಿಯಿಸು' ನೋ.

**ಬಿಗಿಹಿಡಿ** 'ಬಿಗಿವಿಡಿ' ನೋ.

**ಬಿಗು** 'ಬಿಗುವು' ನೋ.

**ಬಿಗುಗಟ್ಟು** (ನಾ). ಬಲವಾದ ಕಟ್ಟು; ಬಿಗಿಯಾದ ಬಂಧನ : ಜಗದ ಜಂಜಡದ ಕವಡುಮಾಯೆಯ ಬಿಗುಗಟ್ಟಂ ಕಟ್ಟುವಡೆದಾಂ . . . ಬಲ್ಪಿದರ ನೆರೆಯ ಮಣಿಯ ನೆರವಂ ಪಾರುತುಮಿರ್ಪೊಡಾದೆ (ರಾಮಾಶ್ವ. ೦೧೯-೬). 'ಬಿಗಿಗಟ್ಟು' ಪರಾ. [ಬಿಗು (<ಬಿಗುವು) + ಕಟ್ಟು$_2$]

**ಬಿಗುಡು** (ನಾ). ಬೇನೆ ; ನೋವು : ಉಪ್ಪುನೀರಂ ದಿನಂಪ್ರತಿ ಪಾಕತನದಿಂದ ತಪ್ಪದೇ ಹೀರಿದಾ ತಲೆಬಿಗುಡು ಗಗನದೊಳಗೊಪ್ಪದಿಂ ಪರಿವ ದೇವಾಪಗೆಯ ಮಧುರತರವಾರಿಯ ಹೀರಿ ಹೀರಿ ಚಪ್ಪರಿಸಿವಲ್ಲದೇ ಹೋಗದೆಂದೆನುತುಮಾ ನೆಪ್ಪಿಂಗೆ ತದ್ವನಧಿಯಿಂದ ವಡಬಾಗ್ನಿಯೇ ಉಪ್ಪರಿಸಿ ನೆಗೆವಂತೆ ಉಷ್ಣಕಿರಣಂ ಮೂಡಿ ನೆಗೆದುದೆಂಬರತಳಕ್ಕೆ (ಸಮ್ಯ. ಕೌ. ೦೨-೯). 'ಬಿಗಡು$_2$' ಪರಾ. [ಬಿಗು (< ಬಿಗುವು) + — ಡು$_1$]

**ಬಿಗುನಡೆ** (ನಾ). ಕುದುರೆಯ ಒಂದು ಬಗೆಯ ನಡಗೆ : "ರೇಚಿತಂ— ಬಿಗುನಡೆ, ಜಾರುನಡಿಕೆ, ನೀಡುನಡಿಕೆ" (ಸಿದ್ಧಾಂತ. ೨೨೦). [ಬಿಗು$_1$+ನಡೆ$_2$]

**ಬಿಗುಪು,** ಬಿಗುಹು (ನಾ). ೧. ಭದ್ರವಾದ ಜೋಡಣೆ ; ಬಿಗಿಯಾದ ಸೇರುವೆ : ಕೂವಕಂಭಂ ಮುಱಿಯೆ ಬಂಧಂ ಬಿರಿಯೆ ರಣಂ ಮುಱಿಯೆ ಕೀಲ್ ಕಟಲೆ ಬಿಗುಪು ಬಟಲೆ . . . ನಾವಿಕಾಜನಮೆರ್ದೆಗೆಟ್ಟು ಬಾಯ್ವಿಟ್ಟು ಸುಯ್ಯುದ್ದ (ಕಂಹಂ. ೪-೦೪ ವ); ಇಸೆ ಬಗೆಯನುರ್ಚೆ ಧೈರ್ಯದ ಬೆಸುಗೆಯ ಬಿಗುಪಂ ಸಡಿಲ್ಚಿ (ವೃಷಪ. ೨೮-೨೦). ೨. ದೃಢತೆ ; ಬಿರುಸುತನ : ಭವಪಾಶದ ಪುದಿದ ಬಲ್ಕಟ್ಟು ಸಡಿಲುವ ತೆಱದಿ ಸಡಿಲಲಂಗದ ಬಿಗುಪು ಗರ್ಭಿಣಿಗೆ ನವಮಾಸ ಪೂರ್ಣವಾದುದು (ಭಾವಚಂ. ೩-೫೬). ೩. ಶಿಸ್ತು : ಕತ್ತೆತ್ತಿಕೊಂಡು ಸಿಪಾಯಿಗಳಂತೆ ಬಿಗುಪಿನಿಂದ ನಡೆಯುತ್ತಿದ್ದರು (ಪಪ್ಪಕ. ೦೯). ೪. ಗರ್ವ; ಠೀವಿ; ದರ್ಪ : ದುರ್ಬಲಂ ನಿನ್ನ ಒಳ್ಪಱಿವು ಇಲ್ಲಿ. ಏತಕೆನೆ, ಬೇರಿತಾರಯ್ಕೆಯಿಲ್ಲದ ಬಱಿಬಿಗೆಯ ಬಿಗುಪೊಂದೆ ವ್ಯರ್ಥಂ (ಐದ್ಯಕ್ರ. ೫೪-೦೦೭೩). ೫. ರಭಸ; ಜೋರು : ಬಲ್ಲುಲೇಸು ಗೆಲವರಿದೆಂಬಂತೆ ಬಿಗುಪು ಲೇಸು ಕಳನ ಮೇಗರಿದೆಂಬಂತೆ (ಧರ್ಮಾಮೃ. ೬-೬೦); ಕಾಳಗವೇ ಜೀವಾಳವಾಗಿರುವ ಬಯಲಾಟದಲ್ಲಿ, ಬಯಲಿನಲ್ಲಿ ಕುಳಿತು, ಬಡಿದು ರೂಢಿಯಾದ ಈ ವಾದ್ಯಕಾರರ ಕೈಗೆ ಬಿಗುಪು ಹೆಚ್ಚು ; ಅಬ್ಬರ ಹೆಚ್ಚು (ಯಕ್ಷಪ. ೯೦). **ಬಿಗುಹು : ೧.** ವಾನರರು ಹೊಱಲೆಡೆಗೆಡೆಗೆ ಜಱಿವಾ ಮಣ್ಣ ಬೆಟ್ಟಂಗಳ ಬಿಗುಹದೆನಿತು

(ಶಶಪು. ೧೯-೩೦) : ನಾಂಗಳ ಬಿಗುಹು ಸಡಿಲಿತು ಧರಣಿ ನೆಗ್ಗಿತು (ಕುಮಾವ್ಯಾ. ೬-೩೩) ; ಉಗುರುಸೋಂಕಿನಲಬುಜಜಾಂಡದ ಬಿಗುಹು ಬಿಡುವುದು (ತೊರವೆ. ೬-೮-೧೦). ೨. ಆರು ಮರುಳಾಗರು ವಧೂಟಿಯ ತೋರಮೊಲೆಗಳ ಬಿಗುಹನೀಕ್ಷಿಸಿ (ಐಸಪು. ೪೦-೬); ತಳಿತ ರೋಮದ ತೋಳ ಬಿಗುಹಿನ ಕಲಿಗಳಿದ್ದುದು ಕಲಿತ ಘನ ರೌದ್ರಾತಿರೇಕದಲಿ (ತೊರವೆ. ೬-೦೦-೬). ೩. ಓಸುಣಿಗರ ಒಂದು ಪರಿವಾರವೆ ದರ್ಬಾರಿನ ಸುತ್ತಲೂ ಅದರ ಬಿಗುಹನ್ನು ಶಿಥಿಲ ಮಾಡಲು ಹುಳಿದಾಡುತ್ತಿದೆ (ಪೂಕೆ. ೬೩). ೪. ಬಿಗುಹಿನೊಳ್ ಕೆಲಕೆಲಬರಂ. . . ಮೈದೆಗುಹಿನೊಳ್ ಕೆಲಕೆಲಬರಂ ಮರುಳ್ಮಾಡುತೀಶ್ವರನಡಿಯಿಡುತ್ತಿರ್ದನು (ಕಂಪು. ೧೯-೬೫) ; ಬಿಗುಹ ಬಿಡಿಸುವೆನಿಂದಿನಾಜೆಯೊಳ್ನೀಸು ಮೈದೆಗೆಯದಿರು (ಕುರುಂಗ. ೬೩-೩೯). ೫. ಕರತಳದ ಬಿಗುಹಿಗೆ ಕುಲಮಹೀಧರ ಕಳಲಿದವು (ತೊರವೆ. ೬-೫-೧೩). ೬. ಬಿಗುಮಾನ ; ಬಿಂಕ : ಮುಸುಡ ಬಿಗುಹಿನ ಸೆಳೆದಡಾಯುಧ ಹೊಸಪರಿಯ ಬಿರುದುಗಳ ಗಜರಥವಿಸರ ಮಧ್ಯದಲೆಂಟುಸಾವಿರರಥಿಕರೌಂಕಿದರು (ಕುಮಾವ್ಯಾ. ೦-೫೬); ದೇಸಾಯಿ ಕೊಬ್ಬುರೇ ಕಿಟ್ಟಿಯನ್ನು ಬಿಗುಹಿನ ಆದರದಿಂದ ಸ್ವಾಗತಿಸಿದರು (ಗಂಪೂಯು. ೪೯). ೭. ಜೊತೆ ; ಸಂಬಂಧ : ಹೊಗಳುಭಟ್ಟರ ಸಾಲ ಕೈದೀವಿಗೆಯ ಕಹಳಾರವದ ಅಗ್ಗಿಯ ಬಿಗುಹಿನಲಿ ಕುರುರಾಯ ಬಂದನು ರಾಜಮಂದಿರಕೆ (ಕುಮಾವ್ಯಾ. ೫-೨). ೮. ಸೆಳೆತ ; ಹಿಡಿತ ; ವಶ : ಮೇಲುಸುರ ಬಿಕ್ಕುಳಿನ ಬಿಗುಹಿನ ತಾಳಿಗೆಯ . . . ನರನಾಥ ತೆಗೆದಪ್ಪಿದನು ಫಲುಗುಣನ (ಕುಮಾವ್ಯಾ. ೧೬-೦); ಅರಿನೃಪರು ಮೈದೆಗೆವರುಲ್ಕಾಪಾತಭೀತಿಯ ಬಿಗುಹಿನಲಿ ಬಹಳಪ್ರತಾಪವದೆಂತೊ ದಶರಥನ (ತೊರವೆ. ೦-೩-೨೩); ಶೋಕದ ಬಿಗುಹಿನಲಿ ಚೆಂಡಾದ ಮಾತೆಯ ನಗೆಮೊಗದಿ ನಗಿಸುತ್ತಲೊಡಬಡಿಸಿದನು ಶೋಕವನು (ಕೃಪಾಶಾ. ೮-೨೬). ೯. ಕುದುರೆಯ ಜೀನನ್ನು ಬಿಗಿಗೊಳಿಸಲು ಸೊಂಟಕ್ಕೆ ಕಟ್ಟುವ ಪಟ್ಟಿ; ತಂಗುಪಟ್ಟಿ : ಬಿಗುಹನೇಱ [ಪಾಠಾಂ. ಬಿಗಿದು ತೆತ್ತಿ]ಸಿ ಹಯಗಳನು ಱಂಚೆಗಳ ಹಮ್ಮಿದರಾನೆಯಲಿ (ಶಳಕ. ೯-೫೬). ೧೦. ಆಲಿಂಗನ ; ಅಪ್ಪುಗೆ : ಬೆಸುಗೆ ಬಿಗುಹುಳು ಕೊತ್ತುಕಲೆಗಳ ರಸದ ಪಸರವನಱಿಯಬಾರದು ವಿಗಡವಿಟರುಗಳ (ಕುಮಾವ್ಯಾ. ೧೩-೨೫).

[ಬಿಗು + – ಪು]

**ಬಿಗುಪೇರು** 'ಬಿಗುಪೇಱು' ನೋ.

**ಬಿಗುಪೇಱು**, ಬಿಗುವೇರು, ಬಿಗುಹೇರು, ಬಿಗುಹೇಱು (ಕ್ರಿ). ೧. ಬಿಗಿಯಾಗು ; ಹಿಡಿದುಕೊಳ್ಳು : ಮೊಗಸಿರಿದೋಱೆ ವಿಾಱೆ ನವಿರುಂ ಸೆರೆಗಳ್ ಬಿಗುವೇಱೆ (ಶಳಾ. ೦-೪೯). ೨. ಗಾಢವಾಗು; ತೀವ್ರವಾಗು : ಅಪ್ಪಿರದೊರ್ಮೆಗೊರ್ಮೆ ಮತ್ತಂ ಬಿಗುಪೇಱುತಿರ್ಪುದು (ಚಂದ್ರಪು. ೬-೩೪); ಸಂದರ್ಭದೊಳ್ ಕ್ರಮದಿಂ ಬಿಗುಪೇಱೆ ಬರ್ಪುದುಂ ಕ್ರಮದಿಂದಿೞಿತರ್ಪುದುಂ ಸಮಾಧಿಯೆನಿಪುದು (ಅಶ್ರಶಿ. ೯-೦೪). **ಬಿಗುಪೇರು :** ೩. ಕಾಠಿಣ್ಯವನ್ನು ಪಡೆ ; ಕರ್ಕಶತೆಯನ್ನು ಹೊಂದು : ದಿನದಿನಕ್ಕೆ ಬಲಿಯಲುದರಂ ತುಂಗಕುಚ ಬಿಗುಪೇರಿದವು ಅಕ್ಷಿ ಜಡನಾದವು (ಧರ್ಮಾವ್ಯಾ. ೦-೯). **ಬಿಗುಹೇರು :** ೨. ಸೇರುವೆಯ ಸನ್ನಾಹದಿಂ ಬಿಗುಹೇರಿ ಮೊಳಗುವ ಮೊಳಗುಗಳ ವಿಸ್ತಾರದಿಂ ಬಲುನೇರದಿಂ ಕಾಣಿಸಿತು ವರ್ಷರುತು (ಶಾಪೇಱು. ೦೩-೪೦). ೪. ಗರ್ವಿಸು ; ಸೊಕ್ಕೇರು : ಬಿಗುಹೇರಿ ಮೈಮುರಿದು ನಿಲ್ಲಲಾಗದು ಮನಸ್ಸು ತೆಗೆದ ಹಾಗೆಲ್ಲ ಮಾತುಗಳಾಡಲಾಗದೀವಗೆಯಿಂದ (ಕೃಕೃಶ. ೪-೪). **ಬಿಗುಹೇಱು :** ೨. ಖತಿ ಬಿಗುಹೇಱೆ ಹಲುಹಲುದಿನುತೆ ಕಂಗಳಲುರಿಯನುಗುಳುತ . . . ಜನಪತಿಯ ಹಣೆಯೊಡೆಯಲಿಡೆ (ಕುಮಾಶಿ. ೯-೦೯) ; ನಗೆನುಡಿ ನೋಟ ಸರಸಗಾನದೊಳು ಹೊತ್ತುದೆಗೆವಾಗಲೊಬ್ಬರೊಬ್ಬರಿಗೆ ಬಿಗುಹೇಱುತಿದ್ದುದು ತವಕ (ಶರಕ. ೧೦-೭೩). ೩. ಬಿಡೆಯವಿಲ್ಲದ ಕುಚ ಬಿಗುಹೇಱೆ ರುತುಕಾಲವಡೆದ ಪುಷ್ಪಿಣಿಯರೊಪ್ಪಿದರು (ಮೋಹಕ. ೧೮ ೫೨) ; ನೀರೊಳು ನನೆದಾಗ ಬಿಗುಹೇಱೆ ವೃತ್ತಾಕಾರದೊಳುನ್ಮುಖವಡೆದು ಚಾರುತರದ ಮೊಲೆ ಮೆಱೆದುವು ಮೇಲಕ್ಕೆ ಪಾಱುವ ಕೋಕಗಳಂತೆ (ಕಂನವಿ. ೨೫ ೦೩೨). ೫. ಉಬ್ಬು ; ಉತ್ಸಾಹಿಸು : ಬೊಬ್ಬಿಱಿತದಲಿ ಬಾಹಪ್ಪಳಿಸಿ ಬಿಗುಹೇಱಿದನು ಹನುಮ (ತೊರವೆ. ೫-೪-೨) ; ತನುವ ಸಗ್ರಂಥದೊಳಿರಿಸಿ ನಿರ್ವಾಣವ ವಿನುತಾತ್ಮನೊಡಗೂಡಿ ನೋಡಿ ಜನಿಸಿದ ಸುಖದಿಂದ ಪರಿಪೂರ್ಣನಾಗಿ ಬಿಮ್ಮನೆ ಬಿಗುಹೇಱಿರ್ದನಾಗ. (ಭರತೇ. ೦೩-೭೦). [ಬಿಗುಪು+ಏಱು$_1$ (<ಏಱ್$_1$)]

**ಬಿಗುಮಾನ** (ನಾ). ಮನಸ್ಸು ಬಿಚ್ಚಿ ಮಾತನಾಡದಿರುವಿಕೆ ; ಅತಿಯಾದ ಸ್ವಾಭಿಮಾನ ; ದೊಡ್ಡಸ್ತಿಕೆ : ಮಾನ್ಯರಾದವರನ್ನು ಬಿಗುಮಾನ ಬಿಟ್ಟು ಗೌರವಿಸಬೇಕು (ವಚಶಾ. ೩೩೪) ; ಪ್ರಾಣೇಶಾಚಾರ್ಯರಿಗೆ ಉತ್ತರ ಹೊಳೆಯಿತು. ಆದರೆ ಹೇಳಲು ಬಿಗುಮಾನ (ಸಂಸ್ಕಾರ. ೧೦೩) ; ಸಿರಿವಂತಿಕೆಯ ಬಿಗುಮಾನವೂ ಪರಂಪರಾಗತವಾದುದೇನೋ ! (ಅಬೋಲಿ. ೪೫). [ದೇ.॥ ತೆಲು. ಬಿಗುಮಾನ, ಬಿಗಿಮಾನ]

**ಬಿಗುಮೊಗ** (ನಾ). ಪ್ರಸನ್ನತೆಯಿಲ್ಲದ ಮುಖ ; ಕೋಪದಿಂದ ಕೂಡಿದ ಮುಖ : ಆ ಕಟ್ಟಾನೆ ಭೋರನೆ ಬಿಟ್ಟ ಕಣು ಬಿಗುಮೊಗದಿನಿದಿರಾಯ್ತು (ಶಾಳ್ವಭಾ. ೦೬-೦೩). 'ಬಿಗಿಮೊಗ' ಪರಾ.

[ಬಿಗು (< ಬಿಗುವು) + ಮೊಗ]

**ಬಿಗುರ್$_1$**, ಬಿಗುರು$_1$ (ಕ್ರಿ). ಬಿಗುರ್ತ(ಭೂತಕೃ). ಬಿಗುರ್ತು (ಭೂತನ್ಯೂ). ಬಿಗುರ್ಪ, ಬಿಗುರ್ವ (ವರ್ತಕೃ). ೧. ಹೆದರು ; ಅಂಜು ; ಭಯಪಡು : "ಬಿಗುರ್-ಭಯೇ" (ಶಮದ) ; ತಕ್ಕಿನ ಕುಂಭಸಂಭವ ನದೀಜ ಕೃಪಪ್ರಮುಖಪ್ರವೀರರೆಕ್ಕೆಕ್ಕೆಯಿನೊರ್ವರೊರ್ವರೆ ಬಿಗುರ್ತಿರದಾಂತು ನಿಶಾತಬಾಣಜಾಲಕ್ಕೆ ಸಿಡಿಲ್ದು ಜೋಲ್ದು ಸೆರಗಂ ಬಗೆದೋಡಿದರ್ (ಪಂಪಭಾ. ೮-೦೦೮); ಕಂಠೀರವರವಮಂ ಕೇಳಲೊಡನೆ ಬೆಳ್ಚಾಗಿ ಬಿಗುರ್ತು ರಾಗಮಳಿದು (ಗಂಕ. ೧-೦೨೮ ವ) ; ದಿಕ್ಕುದಿಕ್ಕಿಂಗೆ ಪರಿದು ಬಲಮನಿತುಂ ಬಱಿದಾದುದಂ ಕಂಡು ಬೆರ್ಚಿ ಬಿಗುರ್ತು (ಶಕಪಿ. ೨-೧೦೫). ೨. ಕುಗ್ಗು ; ಕುಸಿ ; ಸೊರಗು : ತಮ್ಮನನಾಗಳಂಬರವರೇಶ್ವರಕನ್ನೆಗೆ ಕಾವುವೇಱಿ ತಮ್ಮಮ್ಮನದೊಳ್ ಬಿಗುರ್ತು (ಶಾಂತಿಪು. ೪-೨) ; ಬಲಭಾರಕ್ಕೆ ಬಿಗುರ್ತು ಸುಯ್ಯೆ ಫಣಿರಾಜಂ (ಪಂಪಾಪೂ. ೯-೫೪) ; ಇಂತ್ರಸಮಾಸ್ತ್ರವ್ಯಥೆಯಿಂ ಬಿಗುರ್ತಬಲೆ ಮೆಯ್ಯಿಕ್ಕಿರ್ದಳಾ ಶಯ್ಯೆಯೊಳ್ (ಕುಸುಮಪೂ. ೦೩-೧೦೬). ೩. ಗರ್ವಿಸು ; ಸೊಕ್ಕು; ಕೊಬ್ಬು: ಬಿಗುರ್ತೀ ಕೌರವರ್ ಕೂಡೆ ನೂರ್ವರುಮಂ ಕೊಲ್ವೆಂ (ಪಂಪಭಾ. ೭-೮೫) ; ಓರಿದೊಂದಜ್ಞಾನದಿಂ ಯವ್ವನವಿಕಳತೆ ಮೈದೋಱೆ . . . ತತ್ಕರಣಕ್ಕಾಳಾಗಿ ಹಾಳಾಗುತೆ ಬಱುದೊಱೆವೋದೆಂ ಬಳಲ್ದಂ ಬಿಗುರ್ತೆಂ (ರತ್ನಾಕ. ೫). ೪. ಎದುರು ನಿಲ್ಲು ; ವಿರೋಧವನ್ನು ವ್ಯಕ್ತಪಡಿಸು ; ವಿರೋಧಿಸು : ಚಕ್ರಿಗೆ ಬಿಗುರ್ಪ ಮಂಡಲಮೊಳವೇ (ಪರ್ರಾಪೂ. ೯-೬೯); ಬಿಗುರ್ತಯ್ತಂದೊಡಂ ಕೋಪದಿಂ ಕೊಲಲಕ್ಕುಂ ಗೆಲಲಕ್ಕುಂ (ಜೀವಸಂ. ೨೨೮-೪೦). ೫. ಬಾಡು ; ಮ್ಲಾನವಾಗು : ಕಣ್ಣ ನೀರಡಿಗಡಿಗುಣ್ಮೆ ಪಾಯ್ತರೆ ಮುಖೇಂದು ಬಿಗುರ್ತಿರೆ (ಅಜಪು. ೬-೦೨೧); ಮಧುಕರಧ್ವನಿಯಿನಲರ್ವಿಲ್ಲ ಜೇವೊಡೆಯ ರವವೆಂದು ಕಿವಿಯಿತ್ತು ಕೇಳಲುಮ್ಮಳಿಸಿ ತಮ್ಮೊಳ್ ಬಿಗುರ್ವ ಬಿರಯಿಗಳುಂ (ಶೃಪುಕೃ. ೨-೩೯ ವ). ೬. ಆಶ್ಚರ್ಯಪಡು ; ದಿಗ್ಭ್ರಾಂತವಾಗು : ಪಕ್ಕಿ ಸೋವವರ ಸ್ತ್ರೀಯರ ಸೀಯನಪ್ಪ ನುಡಿಯಂ ಕೇಳ್ದಾಗಳಂತಾತ್ಮಗರ್ವಪನೀಡಾಡಿ ಬಿಗುರ್ತು ತಂಬುಲಕೆ ಬಾಯಾಂಪಂದದಿಂ ಬಂದು ಪಾಯ್ವುವು ಕೀರಾಳಿಗಳಲ್ಲಿ ಪಾಮರವಧೂಬಿಂಬಾಧರಕ್ಕಾವಗಂ (ಧರ್ಮಾಮ. ೨-೭೯). **ಬಿಗುರು$_1$ :** ೪. ಅಕ್ಕಾಜಿಯದೇವಗೆಯೊಳ್ ಬಿಗಿದಪ್ಪುವಳೋ ಬಿಗುರದೆ ಮೊಗವಿಟ್ಟು ಮೊಗದೆ ಮುದ್ದಾಡುವಳೋ (ಶಕಶಿ. ೬-೨೩೯) ; ಬಗೆಯೊಳ್ಬಲ್ಪು ಕಟಲ್ದೊಡಂ

. . . ಮೆಯ್ಯುಂ ಪುರಂಬರ್ದೋಡಂ ಬಿಗುರುತ್ತೀನಳವೊಂದಿ ನಿಂದಳಪ ಚಾರಂ ಬರ್ಪುದೆಂದಾರ್ಪಿನಿಂ (ಚಳಪ. ೬-೨೩೦). 'ಬೆಗಡು$_1$', 'ಬೆಗಟು$^1$' ಪರಾ.

**ಬಿಗುರ್$_2$**, ಬಿಗುರು$_2$ (ನಾ). ೧. ಭಯ ; ಅಂಜಿಕೆ ; ಹೆದರಿಕೆ : "ಅಗುರ್ವು, ಬಿಗುರ್, ಬೆಗರ್ . . . ಅದಿರ್ಪು – ಈ ೧೦ ಭಯಂ" (ಕಠಶಾ. ೩೬-೨೨೩). ೨. ಆಶ್ಚರ್ಯ ; ಬೆರಗು : (ಈ). ೩. ಭಯಂಕರ ವಾದುದು : (ಈ). **ಬಿಗುರು$_2$** : ೧. ಚೋದ್ಯವೋಂ-ಬಿಗುರ ಬೀರಿದ ಬೀರವೊ ? ಬಲ್ಲ ಬಿಜ್ಜೆಯೊ ? (೧೯೦೦. ೩೨-೬) ; ಬಿಗುರಿಂದ ಬಾಯ್ಬಿಗಿದು ಗಾಳಿ ಬೀಸುವಳು (ಕಾಲೂರ. ೦೭೦-೩೩೩). ೨. "ಬಿಗುರೆನಲ್ ಬೆರಗು" (ಕಕಠ. ೬೯). ೩. 'ಬಿಗುರುಗಂಡೆಯ' ಪರಾ. [<ಬಿಗುರ್$^1$]

**ಬಿಗುರಿಸು** (ಕ್ರಿ). ಅಂಜಿಸು; ಹೆದರಿಸು ; ಭಯಗೊಳಿಸು : ಬಿಗುರಿಪ ವಹ್ನಿಜ್ವಾಲಾಖ್ಯಗತಿಗಿವರ್ ಸಲ್ಗುಂ (ವಿಷ್ಣುಪು. ೬-೦೯೭) ; ರವಿತನಯನ ದೂತರಾದೊಡಂ ಬಿಗುರಿಸಲಣ್ಮವರೆ (ವಿಷ್ಣುಪು. ೦೦-೯೩).

[ಬಿಗುರ್$_1$ + – ಇಸು$_3$]

**ಬಿಗುರು$_1$** 'ಬಿಗುರ್$_1$' ನೋ.

**ಬಿಗುರು$_2$** 'ಬಿಗುರ್$_2$' ನೋ.

**ಬಿಗುರುಗಂಡೆಯ** (ನಾ). ಭಯಂಕರವಾದ ಕತ್ತಿ; ರೌದ್ರವಾದ ಖಡ್ಗ: ಬಿಗುರುಗಂಡೆಯ ಪಚ್ಚ ರನ್ನವಾಹಾರ ಪಯ ಬೆಗಡು ನಗೆ ವೈಶ್ವಾನರ ವಿಂದ ಸುಮ ಕಸ್ತೂರಿಯೊಗುಮಿಗೆಯೊಳಾಂತು ಸುರಿಗಿಯ ಪುಚ್ಛಕಾಗ್ರ ದೊಳಗಿಹನೆಂಬರತಿಬುಧರ್ಕಳು (ಪ್ರಭುಪು. ೦-೩೮).

[ಬಿಗುರು$_2$ (<ಬಿಗುರ್$_2$) + ಕಂಡೆಯ$_1$ (< ಖಂಡೆಯ$_2$)]

**ಬಿಗುರೇಟ್** (ಕ್ರಿ). ಹೆದರಿಕೆಯಿಂದ ಕೂಡು ; ಅಂಜು : ಬಿಗುರೆಟ್ಟ ಬಗೆಯಿಂತು ಬಗೆಗುಂ (ಬಿಪ್ಪಶ್ರ. ೦೦-೨೨೩). [ಬಿಗುರ್$_2$+ ಏಟ್$_1$]

**ಬಿಗುರ್ತ** 'ಬಿಗುರ್$_1$' ಪರಾ.

**ಬಿಗುರ್ತು** 'ಬಿಗುರ್$_1$' ಪರಾ.

**ಬಿಗುರ್ಪ** 'ಬಿಗುರ್$_1$' ಪರಾ.

**ಬಿಗುರ್ಪಿಟಿ** (ಕ್ರಿ). ಉಬ್ಬರವು ಕಡಮೆಯಾಗು ; ಮದವಿಳಿ : ಪೊಸವಸಲಾದ ಪೆಣ್ಗಳ ಜವ್ವನದ ಬಿಗುರ್ಪಿಟಿದು ತಿಳಿವಂತೆ ತೊಱೆ ಮೆಂಡಿಗುರ್ಕಿನುಬ್ಬರಮುಡಂಗಿ ತಿಳಿದುದು (ರಾಮಾಶ್ವ. ೯೩-೯).

[ಬಿಗುರ್ಪು+ಇಟಿ]

**ಬಿಗುರ್ಪು** (ನಾ). ೧. ಭಯ; ಅಂಜಿಕೆ : ದೇವ ನಿನ್ನ ಧಾಟಿಯೊಳ್ಕರಾಟ ಗಳ್ಬಿಗುರ್ಪಿನಿಂ . . . ಅಳ್ಕಿ (ಅಶ್ವತಿ. ೨೯-೨). ೨. ತೀವ್ರತೆ; ಆಧಿಕ್ಯ ; ಹೆಚ್ಚಳ : ರಾವಣಾರಿ ಬಾಗುಬಿಓಂದು ಬಿಗುರ್ಪಿಂ ತಲೆ ತಿಣ್ಣಮಾಗೆ . . . ಲಕ್ಷ್ಮಣನಂ ಕರೆದು (ರಾಮಾಶ್ವ. ೨೬-೩). ೩. ಸೊಕ್ಕು ; ಮದ : 'ಬಿಗುರ್ಪಿಟಿ' ಪರಾ. ✱ 'ಬಿಗಿಪು' ಶಬ್ದರೂಪದ ಸಾಮ್ಯದಿಂದ ಈ ರೂಪವನ್ನು ಮಾಡಿರುವ ಸಾಧ್ಯತೆಯಿದೆ. [ಬಿಗುರ್$_1$+ –ಪು$_2$]

**ಬಿಗುರ್ಪುಗೊಳ್** (ಕ್ರಿ). ಹೆದರು; ಭಯಪಡು : (ಹಿಂದಿರುಗಿ ನೋಡಿ ಬಿಗುರ್ಪುಗೊಂಡು) (ಮಿತ್ರಗೋ. ೨೨-೦೪). [ಬಿಗುರ್ಪು+ ಕೊಳ್$_1$]

**ಬಿಗುರ್ವ** 'ಬಿಗುರ್$_1$' ಪರಾ.

**ಬಿಗುರ್ವರಿಜ** (ನಾ). ಭಯಂಕರವಾದ ರೂಪವುಳ್ಳವನು ; ಭೈರವ : "ತೀಟಿದ್ದೀರಂ, ಬಿಗುರ್ವರಿಜಂ – ಈ ೨ ಭೈರವಂಗೆ ಪೆಸರ್" (ಕಠಶಾ. ೪೬-೬): ಬಿಗುರ್ವರಿಜಂ, ಹಳಿಗಂ, ಕೊಂಡಂ, ಗುಳಿಕಂ ಮುಂತಪ್ಪ ಭೂತ ವೇತಾಳಂಗಳ ಮುರುಳ್ವಡೆವೆರಸು . . . ನಡೆತಂದು (ರಾಮಾಶ್ವ. ೦೩೦-೦೭).

[ಬಿಗುರ್$_2$ + ಪರಿಜು + – ಅ$_7$]

**ಬಿಗುರ್ವು** (ನಾ). ೧. ಭಯ ; ಹೆದರಿಕೆ : "ಮಲ್ಲಬಿ ಬೆಜ್ಜರ ಬೆಬ್ಬಳ ತಲ್ಲಟ ಬಿಗುರ್ವಗುರ್ವದಿರ್ಪು . . . ಭಯನಾಮ" (ಕಂಶಿಂ. ೦೦೬) ; ವಿಧುಂತುದಂ ಸಮಿಪಾಪವರ್ತಿಯಾದೊಡಂ ದಿನಕರಂ ಬಿಗುರ್ವನಾನಲಿಲ್ಲ (ನರಪ. ೦೦೯-೩). ೨. ಬೆರಗು ; ಆಶ್ಚರ್ಯ : "ಬಿಕ್ಕುಡಿ ಬಿಗುರ್ವಗುರ್ವು ಬೆಬ್ಬಳ . . . ಮಲ್ಲಬಿಯೆನಲ್ಕೆ ಬೆಱಗಪ್ಪ ಭಾವಂ" (ಕಪ್ಪಿಕೈ. ೪೦).

[ಬಿಗುರ್$_1$ + – ವು]

**ಬಿಗುವು**, ಬಿಗು (ನಾ). ೧. ಬಿಗಿಯಾದ ಕಟ್ಟು, – ಬಂಧನ : ಎಲುವಿನ ಪಂಜರ ನರಗಳ ಬಿಗುವು ತೊಗಲಿನ ಹೊದ್ದಿಕೆ (ಹರಿಕಂದ. ೦-೦೬೦-೩); ಬಂಧನಂಗಳ ಬಿಗುವು[ಪಾಠಾಂ. ಹು] ಬಿಡೆ(ಕಬಿಕ್ಕಿ. ೪೭-೩೦). ೨. ಬಿಗಿ ; ಹಿಡಿತ ; ಹತೋಟಿ : ತನ್ನ ರಾಜಮಂಡಲದಲ್ಲಿಯೂ ಬಿಗುವು ತಪ್ಪಿಹೋಗಿದೆ (ಶ್ರೀರಾಮು. ೩೦೦) ; ಗೋವಿಂದಮಾಸ್ತರರ ಬಿಗುವಿಲ್ಲದ ಆಡಳಿತವೇ ಅದಕ್ಕೆ ಕಾರಣ (ಬಾವಂ. ೦೦). ೩. ಗತ್ತು ; ಠೀವಿ ; ಬಿಂಕ : ಬಂಧು ಬಂದರೆ ಎನ್ನ ಬಿಗುವ ಬಿಂಕವ ತೋಱೆ ಬಂದೋಡ್ಡುರ್ಕೆ ಎನ್ನ ಬೇಕೆಂದು ಕೋಱಿದೆ (ಪುರಂದ. ೨-೯-೦) ; ಬಲವಂತನೆಂಬೊ ಪೆಗ್ಗಳ ಗರ್ವಿಕೆಯೊ ಸಕಲಲೋಕ ನಿನ್ನ ವಶವೆಂಬೊ ಬಿಗ[ಗು]ವೊ (ಮೋಕ್ಷದೀ. ೨೦-೦) ; ರಾಯರು ಬಿಗುವಿನಿಂದ ಉತ್ತರ ಕೊಟ್ಟರು (ಸಪಾಜೀ. ೪೦). ೪. ಬಿಗಿಯಾದ ಬಂಧ, – ರಚನೆ : ಅವರ ಹಾಡುಗಳಲ್ಲಿ ಅಲ್ಲಲ್ಲಿ ಅಶ್ಲೀಲಪ್ರಯೋಗಗಳು ಕಂಡುಬಂದರೂ . . . ತುಚ್ಛಶೃಂಗಾರವೆಂದು ನಿರಾಕರಿಸಕೂಡದು. ಹಾಗಾದರೆ ಆ ಹಾಡಿನ ಬಿಗುವೆ ಸಡಿಲಾಗುವುದು (ಕನ್ನಜಾ. ೯೬). **ಬಿಗು** : ೧. ಬಿಗು ಹಿಂದುಗಡೆಯಿಂದ [ಪಾಠಾಂ. ಬಿಗುಹಿಂದ ಗದೆಯಿಂದ] ಸಡಿಲಿಸಲು ಸಡಲದಿರೆ ಬಿಗುಹೇರಿ ಭೀಮ ಮಂದರಗಿರಿಗೆ ಸರ್ಪನಾ ತೆಗೆನೇಣದೆಂಬ ಮರಿಯಾದೆಯಲಿ ಬಿಗುಹತ್ತಿ ಕಣ್ಣಾಲಿ ಮೇಲ್ಸಿಕ್ಕಿತು (ಕುರಂಗ. ೩೦-೩೦). ೫. ಬಿಗಿಯಾದ ಸೇರುವೆ : ಕುಲಾಚಲಾದ್ರಿಗಳ ಬಿಗು ಸಡಿಲೆ ರಣಭೇರಿಗಳೊಗ್ಗಳಿಗಿದುವು (ಕುರಂಗ. ೭೩-೦). ೬. ವ್ಯಗ್ರತೆ ; ಅಪ್ರಸನ್ನತೆ ; ಕೋಪ : 'ಬಿಗುಮೊಗ' ಪರಾ.

[ದೇ.॥ ತಮಿ. ಪಿಕು, ಪಿಕುವು ; ತುಳು. ತೆಲು. ಬಿಗು, ಬಿಗುವು]

**ಬಿಗುವುಗುಂದು** (ಕ್ರಿ). ದರ್ಪವಿಲ್ಲದಾಗು ; ಠೀವಿಯನ್ನು ಕಳೆದು ಕೊಳ್ಳು : ದುಗುಡದಿಂ ಬಂದು ಪೊಕ್ಕನು ಬೀಡ ಬಲ್ಲಾಳ ಬಿಗುವು [ಪಾಠಾಂ. ಹು]ಗುಂದಿದ ಬಿಂಕದೊಳು (ಕರಾಕಾಂ. ೦೩-೦೫೩).

[ಬಿಗುವು + ಕುಂದು$_1$]

**ಬಿಗುಹಡಗು** (ಕ್ರಿ). ತೀವ್ರತೆಯು ಕುಗ್ಗು : ರಣಬೇಳುವೆಯು ಬಿಗುಹಡಗಿದ ಪೊಲನಿಬರು ತವತವಗೆ ನಾಚಿದರು ಕೋಳಾಹಳಿಕೆ ಪವನಜನ (ಕುಪ್ಪಾಪ. ೨೩-೦). [ಬಿಗುಹು (<ಬಿಗುವು) + ಅಡಗು$_1$ (<ಅಡಂಗು$_1$)]

**ಬಿಗುಹತ್ತು** (ಕ್ರಿ). ಬಂಧನವು ತೀವ್ರವಾಗು : ಬಿಗು ಹಿಂದುಗಡೆಯಿಂದ ಸಡಿಲಿಸಲು ಸಡಲದಿರೆ . . . ಬಿಗುಹತ್ತಿ ಕಣ್ಣಾಲಿ ಮೇಲ್ಸಿಕ್ಕಿತು (ಕುರಂಗ. ೩೦-೩೦). [ಬಿಗು (< ಬಿಗುವು) + ಹತ್ತು$_1$ (< ಪತ್ತು$_1$)]

**ಬಿಗುಹಿಕ್ಕು** (ಕ್ರಿ). ಬಿಗಿಮಾಡು ; ಗಟ್ಟಿಗೊಳಿಸು : ಕುಂಬಳದ ಕಾಯ ಮೇಲಣ ಹಸುರ ಕೆತ್ತಿ ಹಳ್ಳೆಯ ಮಾಡಿ ಕುಯಿದು ಜಾವಡೆಯಿಂದವೊತ್ತಿ ನೀರಂ ಹಿಂಡಿ ಕಟ್ಟಿ ಬಿಗುಹಿಕ್ಕಿ (ಸೂಪಶಾ. ೩-೩೦).

[ಬಿಗುಹು (<ಬಿಗುವು) + ಇಕ್ಕು]

**ಬಿಗುಹು** 'ಬಿಗುವು' ನೋ.

**ಬಿಗುಹುಕಾಱ** (ನಾ). ದರ್ಪವುಳ್ಳವನು ; ಗರ್ವಿಷ್ಠ : ಬೆಳ್ನುಡಿಯಿಂದ ಬಿಗುಹುಕಾಱರ ಬಲ್ಮೆಯಿಂದ ಬಗೆಗಾಱರನೆದೆಗೆಡಿಸುವರಲ್ಲಿಯು ಬಗಸೆ ಗಂಗಳ ಬಾಲೆಯರು (ಕುಶಾಕಾಂ. ೪-೦೦೫).

[ಬಿಗುಹು (< ಬಿಗುವು) + – ಕಾಱ]

**ಬಿಗುಹುಗುಂದು** (ಕ್ರಿ). ದೃಢತೆಯನ್ನು ಕಳೆದುಕೊಳ್ಳು ; ಕಾಠಿಣ್ಯ ವಿಲ್ಲದಿರು : ಹೊಯ್ವಳ್ಳಿ ಬಿಗುಹುಗುಂದಿದ ಕುಚಂ ಬೆಳರ್ತ ಮುಖ (ಹಕಶಾ. ೪-೩೩). [ಬಿಗುಹು (< ಬಿಗುವು) + ಕುಂದು$_1$]

**ಬಿಗುಹುಗೊಳ್** (ಕ್ರಿ). ಬಿಗಿದುಕೊಳ್ಳು ; ಸೇರು ; ಒಂದಾಗು : ಕುಡಿಮಿಸಗಳು ಕೌಱಿದವಂಗ ಕಾಪೇಱಿದುದು ಕಡುಹಿನಲಿ ಬಿಗುಹು ಗೊಂಡುಪ್ಪರಿಸಿದವು ಹುಬ್ಬುಗಳು (ತೊರರಾ. ೨-೩-೬).

[ಬಿಗುಹು (< ಬಿಗುಪು) + ಕೊಳ್$_1$]

**ಬಿಗುಹೇರು** 'ಬಿಗುಪೇಱು' ನೋ.

**ಬಿಗುಹೇಱು** 'ಬಿಗುಪೇಱು' ನೋ.

**ಬಿಘಡಾಯಿಸು** 'ಬಿಗಡಾಯಿಸು' ನೋ.

**ಬಿಘಾ** 'ಬಿಘೆ' ನೋ.

**ಬಿಘೆ,** ಬಿಘಾ (ನಾ). (ಇಪ್ಪತ್ತೈದು ಗುಂಟೆಗಳಿಂದಾದ) ಜಮೀನಿನ ಒಂದು ಅಳತೆ : ೧ ಬಿಘೆಯೆಂದರೆ ಸುಮಾರು ೧ ರ್ದ ಯಿಂದ ೧ಕ್ಷಿ ಯೆಕರು ಆಗುತ್ತದೆ (ಕಜಾಗ. ೨೯೦) ; ಒಂದು ಬಿಘೆಯಲ್ಲಿ ಸರಾಸರಿ ಎಷ್ಟು ಉತ್ಪತ್ತಿ ಯಾಗುತ್ತದೆಂಬುದನ್ನು ಗೊತ್ತುಮಾಡುವುದು (ಅಕ್ಬರ. ೦೨೫) ; ತಮ್ಮ ಭೂಮಿ ಹೋದರೆ ಎಷ್ಟು ಹೋದೀತು ? ಇನ್ನೂರು ಬಿಘೆಗಳಿಗಿಂತ ಹೆಚ್ಚು ಹೋಗಲಿಕ್ಕಿಲ್ಲ (ತೋರಚಿ. ೨೦೫). **ಬಿಘಾ :** ಅವನು . . . ನೂರು ಬಿಘಾ ಭೂಮಿಯನ್ನೂ 'ಮುಲ್ಲಾಜವೂಸ್' ಎಂಬ ಬಿರುದನ್ನೂ ಪಡೆದನು (ದಾದಾನ. ೩). [←ಮರಾ. ಬಿಘಾ ; ಹಿಂ. ಬೀಘಾ]

**ಬಿಚವಾ,** ಬಿಚ್ವ (ನಾ). ಒಂದು ಬಗೆಯ ಔಷಧಪದಾರ್ಥ: ಸೂರ್ತಿವುಣದ ಮೇಲೆ ಕಿವುತ್ತು ಆಗತಕ್ಕ ಜೇನಸುಗಳು. ೧. ಅಕ್ಕಲಖಾರ . . . ೧೬. ಬಿಚವಾ (ನಿರಗುಂಡಿ) (ವುುಂಬಿವ್ಯಾ. ೦೨೨). **ಬಿಚ್ವ:** ಬಿಚ್ವ . . . ಬೀಜಬಂದ (ಸೂರ್ತಿ ಚವಾಳ ವುಣ) (ವುುಂಬಿವ್ಯಾ. ೦೬೭). [?]

**ಬಿಚಾಣಿ** 'ಬಿಚಾನ' ನೋ.

**ಬಿಚಾನ,** ಬಿಚಾಣಿ, ಬಿಛಾನಾ (ನಾ). ಹಾಸುಗೆ, ಚಾಪೆ ಮುಂತಾದ ಹಾಸುವ ಸಾಧನ : (೬). **ಬಿಚಾಣಿ :** ಹಾಸಲಿಕ್ಕೆ ಒಂದು ಬಿಚಾಣಿ, ಹೊದೆಯಲಿಕ್ಕೆ ಒಂದು ಚಾದರ — ಇಷ್ಟಿದ್ದರೆ ಸಾವಿರ ಊರು ತಿರುಗೇವು (ರೂ೦). **ಬಿಛಾನಾ :** ನಡೀರಿ, ಎತ್ರಿ ಬಿಛಾನಾ (ಸಹೂರ. ೦೬).

[←ಪಾರ. ಬಿಛಾನ್ ; ಹಿಂ. ಬಿಚಾನಾ ; ಮರಾ. ಬಿಛಾನಾ, ಬಿಛೋನಾ ; ಬಂಗಾಲಿ. ಬಿಚಾನ್ ; ಒರಿಯಾ. ಬಿಚಾಣ]

**ಬಿಚಾಯಿತ** 'ಬಿಛಾಯತ' ನೋ.

**ಬಿಚಿಗದವ್ಮ್ಮಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಗೊಗ್ಗಿಯ ವುನೆ ಮಗತಿ ಬಿಚಿಗದವ್ಮ್ಮಸೆಟ್ಟಿ ಉತ್ತವಗಳ್ಳಂ ಕ್ರ(ವು)ದೊಳೆ ನಿಲೆ (ಎಕ. III, ಮೈಸೂರು. ೪೩-೨ ; ಸಂ. ೯೯೧ ?). [? + ಸೆಟ್ಟಿ]

**ಬಿಚುವಾ,** ಬಿಚ್ಚುವ, ಬಿಚ್ವಾ (ನಾ). ಚೇಳಿನಾಕಾರದ ಒಂದು ಬಗೆಯ ಕತ್ತಿ : ಒಂದೊಂದು ಜನಕ್ಕೆ ಬಾರುಬಂದೂಕು ಒಂದು . . . ಬಿಚುವಾ ಒಂದು, ಈ ಸ್ನೋರೆ ಎರಡುಜನಕ್ಕೂ ಜಂಗಿಸಾಮಾನು ಕೊಟ್ಟು (ರಾಕೇಂಧ್ರ. ೦೦೫). **ಬಿಚ್ಚುವ :** ತೋಳಿನಲ್ಲಿ ಹುಡುಕಿ ನೋಡಿದ್ದರೆ ಚೇಳಿನ ಹಾಗೆ ಬಾಗಿಕೊಂಡಿದ್ದ ಒಂದು ಬಿಚ್ಚುವ ಎಂಬ ಕಠಾರಿ ಸಿಕ್ಕುತ್ತಿತ್ತು (ಛಾರವೀ. ೩೬). **ಬಿಚ್ವಾ :** ಶಿವಾಜಿಯು . . . ಅಂಗಿಯ ಬಲತೋಳಿನೊಳಗೆ ಬಿಚ್ವಾ ಎಂಬಾಯುಧವನ್ನು ಬಚ್ಚಿಟ್ಟುಕೊಂಡು . . . ಅಫ್ಜುಲ್‌ಖಾನ ನನ್ನು ನೋಡುವುದಕ್ಕೆ ಹೊರಟನು (ಛತ್ರಪಿ. ೬೬).

[←ಮರಾ. ಬಿಚವಾ ; ಹಿಂ. ಬಿಛೂಆ. /ಪ್ರಾ. ವಿಚ್ಚುಅ =ಚೇಳು]

**ಬಿಚ್ಚಂದ** 'ಬಿಚ್ಚೊಂದ' ನೋ.

**ಬಿಚ್ಚೊಂದ,** ಬಿಚ್ಚೊಂಡ (ನಾ). ಬಹುಮಹಡಿಗಳುಳ್ಳ ಮಹಲು, ಅರಮನೆ ಮುಂತಾದುವು : "ಬಿಚ್ಚೊಂದ(ಡ) — ವಿಚ್ಛಂದ — ಮುಖಮಂಟಪಗಳ ಸೌಧ ; ಮಂತ್ರಾಲಯ" (ಶಬ್ದಕೋ. ೩೦) ; ವಿಛ್ಛಂದ — ಬಿಚ್ಚೊಂದ (ಕವುದ. ೨೫೬ ಪ್ರಯೋ). **ಬಿಚ್ಚೊಂಡ :** ದತ್ವಕ್ಕೆ ದತ್ವಂ — ವಿಚ್ಛಂದ — ಬಿಚ್ಚೊಂಡ (ಕವುದ. ೨೬೭ ಪ್ರಯೋ). [<ಸಂ. ವಿಚ್ಛಂದ]

**ಬಿಚ್ಚಡಿ** (ನಾ). ದಾಪುಗಾಲು ; ದೊಡ್ಡ ಹೆಜ್ಜೆ (?) : ಕುಂಟನ ವೊಲು ಕೊಂಕಡಿಗಳನಿಡುತಂ ತುಂಟನ ವೊಲು ಬಿ[ಕಾಕಂ. ಬಿ]ಚ್ಚಡಿಗಳನಿಡುತಂ ಹೆಳವನವೊಲು ಮೊಳಕಾಲಿಕ್ಕುತ್ತಂ (ಶೃಂಗಾರ. ೦೯-೨೭).

[ಬಿಚ್ಚು$_{1?}$ + ಅಡಿ$_1$]

**ಬಿಚ್ಚಣಿಗೆ** (ನಾ). ಸ್ವಚ್ಛಂದವಾದ ಅಭಿನಯ,— ಹಾವಭಾವ : ಪಾಠಕರ ಸಫಾಟದಿಂ ನಚ್ಚಣಿಗರ ಬಿಚ್ಚಣಿಗೆಯಿಂ ಗಾಣರ ಗವುಕದಿಂ . . . ಮಹೋನ್ನತವ್ಯೆಭವಮನೊಳಕೊಂಡುದ್ಭಟರಾಜೇಂದ್ರಚಂದ್ರುವ ನೋಲಗಂ ವಿರಾಜಿಸುತ್ತಿರ್ದುದು (ಉದ್ಭಟಿ. ೨-೦೬ ವ). [<ಬಿಚ್ಚು$_2$]

**ಬಿಚ್ಚತ** (ನಾ). ೧. ವಿಸ್ತಾರ ; ಹರಹು ; ವಿಶದ : ಓಹಿಲದೇವಂ ನಲವಿಂ ಮುಱಿಚಂದರಹಚ್ಚನನೊಚ್ಚತ ಮುಚ್ಚಿದ ಬಿಚ್ಚತದಿಂ ತುತಿಸೆ (ಉದ್ಭಟ. ೩-೭೯) ; ಶ್ರೀಪಾದಕ್ಕೆ ಸಮುಕ್ಷದಲ್ಲಿ ಬಿಚ್ಚತವಾಗಿ ಬಿನ್ನಯಿಸಿ ಕೊಳ್ಳುವೆನು (ಮಂತ್ರಕ. ೦೨೫-೨೨). ೨. ಅಧಿಕವಾದುದು ; ಹೆಚ್ಚು : (೬). ೩. ಅನಿರ್ಬಂಧ ; ಸ್ವೇಚ್ಛೆ : ಅಚ್ಚರಕನ್ನೆಯರೊಳ್ ಸರಾಗದಿಂ ಬಿಚ್ಚತವಾಗಿ ಕೂಡಿ ಸುಖಮಿರ್ಪರನಂದಿತದೇವಲೋಕದೊಳ್ (ಜೀವಸಂ. ೯೯-೦೦). ೪. ನೆಮ್ಮದಿಯುಳ್ಳವನು ; ಸುಖಿ : ಅಂತು ಜನಮೆಲ್ಲಂ ಪಗಲ ತಾವರೆಯಂತೆ ಬಿಚ್ಚತರಾಗಿ . . . ಶೃಂಗಾರ ಮಾಡುವುದುಂ (ಧರ್ಮಾಮೃ. ೬-೨೦೫). [< ಸಂ. ವಿಸ್ಮೃತ]

**ಬಿಚ್ಚತಂ** (ಅ). ೧. ಸ್ವೇಚ್ಛೆಯಾಗಿ ; ಅನಿರ್ಬಂಧಿತವಾಗಿ : ಬಾಬ್ಬಿನ ಮಿಂದ್ರಿಯವರ್ಗದಿಚ್ಚೆಯಂ ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆ ಯಂತೆ ಬಿಚ್ಚತಂ ನಲಿವುದು (ಅಂಜ. ೨-೯); ಪರಮೋತ್ಸವದಿಂ ಪಱಿಗುಟ್ಟಿ ಬಿಚ್ಚತಂ ಕುಣಿದುವು ಭೂತಕೋಟಿ (ಶಂರಾಪು. ೦೦-೦೯೯); ಬಿಚ್ಚತಂ ನಲಿವ ಮದಕಳಾಪಿಗಳ ವೊತ್ತಮಂ ಚಿತ್ರಜನ ವಿಚಿತ್ರಫಲಕಾಯುತಪ್ರಜಮೆಂದಾ ತಂಕಮನೊಂದುತುಂ (ಕುಸುಪು. ೦೨-೦೩೬ ವ). ೨. ಸುಲಭವಾಗಿ ; ನಿರಾತಂಕವಾಗಿ ; ಸರಾಗವಾಗಿ : ಮುಂ ಮಹಿಯೆಲ್ಲಮಂ ಶಿಶಿರರಾಜನೆ ಬಿಚ್ಚತಮಾಳ್ದಂ (ಶಂಕರಾ. ೫-೩೦); ಬಿಚ್ಚತಂ ಬತ್ತೀಸಕೋಟಿ ಸಮುಚ್ಚಯದ ಧನವನು ಗಳಿಸಿದನು (ಸಾಕ್ಷರಾ. ೦೬-೯೫). ೩. ಅಧಿಕವಾಗಿ; ಯಥೇಚ್ಛವಾಗಿ : ಹರಿನ್ಮಣಿಮರೀಚಿಮೇಚಕಿತಸಾನು ಭಾಗಂಗಳೊಳ್ ಕುರಂಗತತಿ ಬಿಚ್ಚತಂ ಪಸಲೆಗೆತ್ತು ಕಾರ್ದಾಸೆಯಿಂ ನಿರರ್ಥ ಜನಿತಶ್ರಮಂ ಬಳ[ಟಿ]ಕದ[ವ]ಲ್ಲಿಯುಂ ಪುಲ್ಲುಮಂ ಗಿರೀಂದ್ರದೊಳ[ಗ]ಲ್ಲಿ ಮೇಯು [ವು] ಹರಿನ್ಮಣಿಭ್ರಾಂತಿಯಿಂ (ವರ್ಧಮಾ. ೫-೫೭) ; ಕರೀಂದ್ರೋತ್ಕರಂ . . . ಚಿತ್ತದೊಳಾದ ಮೋಹಮಚ್ಚುಡಿದಿರೆ ಬಿಚ್ಚತಂ ಕಡುಪನೊಲ್ಲದೆ ನಿಂದುದ ದೊಂದು ತಾಣದೊಳ್ (ಮಲ್ಲಿಪು. ೦೦-೭೬) ; ಧೂಮಸಂಪಾದಿತ ಕಾಳಿ ಮಾಂಕಿತ ನಭಸ್ಥಳಮೆಂದುಮಿದೆಂದು ಬಿಚ್ಚತಂ ಮೇದಿನಿ ಮೆಚ್ಚಿ ಬಣ್ಣಿಪುದು ಪೊಂಬೊಳಲಂ (ಸೌಇಇ. XV, ೭೩-೦೨ ; 1189). ೪. ನೆಮ್ಮದಿಯಾಗಿ ; ಸುಮ್ಮನೆ : ಬಿಚ್ಚತಮಿರ್ದು ಕಣ್ಣು ಪಸವೋಡುವಿನಂ ಸಲೆ ನೀನೆ ನೋಡ (ಕಾವ್ಯಾವ. ೯೯೯). ೫. ಗಟ್ಟಿಯಾಗಿ ; ಗಾಢವಾಗಿ : ನಿಜೇಶನಂಕದಿನಿಳೇಶನ ಕಾಂತೆ ಚಿಚ್ಚರಮೆರ್ದು ಬಿಚ್ಚತಮಪ್ಪಿದಳ್ (ಅನಂಪು. ೨-೯೬). [<ಬಿಚ್ಚತ]

**ಬಿಚ್ಚತಿಕೆ,** ಬಿಚ್ಚತಿಕ್ಕೆ, ಬಿಚ್ಚತಿಗೆ (ನಾ). ೧. ವಿಸ್ತಾರ ; ವ್ಯಾಪ್ತಿ ; ಹರವು ; ವೈಶಾಲ್ಯ : (೬). ೨. ನೆಮ್ಮದಿ ; ಸಮಾಧಾನ : ಪಗಲಂದಿರುಳಾದೊಡೆ ರಾಜ್ಯಮಾದವೋಲ್ ಪೆರ್ಚಿ ಮನಕ್ಕೆ ಬಿಚ್ಚತಿಕೆವಂದಿರೆ (ಶಂಕರಾ. ೬-೭೫) ; ಆತನ ತನುಜಾತರಪ್ರಮಿತಶಾಸ್ತ್ರ ವಿಶಾರದರಾದೊರಕ್ಕುಮೆಂಬಿನಿತನೆ ಮೆಚ್ಚಿ ಬಿಚ್ಚತಿಕೆಯಿಂ ಪರಿಭಾವಿಸದೀ ದುರಾತ್ಮ ದುರ್ಜನರ್ಗೆ ನಿಕೃಷ್ಟದುಷ್ಚರಿವರ್ಗಾನೊಸೆದಿತ್ತನುದಾತ್ತ ವೃತ್ತಿಯಂ (ಸುಕುಮಾ. ೨-೨೬). ೩. ಅಡ್ಡಿಯಿಲ್ಲದಿರುವುದು; ನಿರಾತಂಕ: "ವಿಶ್ರಂಭಃ—ಬಿಚ್ಚತಿಕೆ" (ಬೀಜಿವಾ. ೨೬-೦೦). ೪. ಅತಿಶಯತೆ ; ಹೆಚ್ಚು ಗಾರಿಕೆ : ನೆಱಿಯ ನೆಗರ್ತ್ತವೆತ್ತುದು ನಿಯೋಗವುಗುಂದಲೆಯಾಯ್ತು

ತೇಜ ಮಬ್ಬಿಱಿದುದು ಮಿಕ್ಕ ಬಿಚ್ಚತಿಕೆ ಸ × ದಮಾದುದು (ಕಇ. V, ೦೯-೩೭ ; 1099). ೫. ಸಲಿಗೆ ; ಆಪ್ತತೆ : ಜಲಜಾತಾಕ್ಷನೊಳಾಕೆ ಬಿಚ್ಚತಿಕೆಯುಂ ಮಾಡಲ್ ಬಟಿಕ್ಕಂ ಕಳಾನಿಲಯಂ ಮಾಡಿದನೊಲ್ದು ಚುಂಬನ ಪರಿಷ್ವಂಗಪ್ರಪಂಚಂಗಳಂ (ಜಗವಿ. ೧೦-೦೪೦). **ಬಿಚ್ಚತಿಕ್ಕೆ :** ೩. ಅಮಾತ್ಯರಂ ಕರೆದು . . . ಭೂಮಂಡಳಮಂ ಪಚ್ಚು ಬಿಚ್ಚತಿಕ್ಕೆಯಿನಾಳ್ವಂತವರಂ ನಿಯೋಜಿಸಿ (ನೇಮಿಪು. ೩-೯೫ ವ) ; ಬಾಯ್ಗೆ ವಂದಂದದೊಳೆಂದೊಡೆಂದು ದನೊಡಂಬಡಿಪಿಚ್ಚೆಯ ಬಿಚ್ಚತಿಕ್ಕೆ . . . ಇಂಗೊರಲ ಮೆಲ್ಲುಲಿಯೊಪ್ಪಿದುದು (ಚಂದ್ರಪು. ೬-೭೩). ೪. ಮಸೆವುದು ಮಾಸಲಿರ್ದ ಪಟವೇಟ ಮನಿಚ್ಚೆಯ ಬಿಚ್ಚತಿಕ್ಕೆಯಂ ಪೊಸಯಿಪುದು (ಶಾಂತಿಪು. ೬-೯೦). ೬. ಹೃದಯವೈಶಾಲ್ಯ ; ಧಾರಾಳತನ : ಆನೊಂದಂ ಬೇಡಿದಪೆಂ ನೀನಿನೆನಗೀವುದಣ್ಣ. . . ಮೋಸಂಗೊಂಡಿರದೆ ಬಿಚ್ಚತಿಕ್ಕೆಯೊಳಿನಿಸಂ (ರವರ್ಮಾವ್ಯ. ೨-೦೭೮). **ಬಿಚ್ಚತಿಗೆ :** ೪. ಅಂತು ಮುಟ್ಟ ಮೂದಲಿಸಿ ಪೆಟ್ಟಿನಿಂದೆಚ್ಚ ಬಿಚ್ಚತಿಗೆ[ಶಾಠಾಂ. ರಿಕೆ]ಗೊಚ್ಚತಂ ಕೆಳರ್ದು (ಅನಂಪು. ೦೯-೦೬ ವ). [ಬಿಚ್ಚತ + — ಇಕೆ]

**ಬಿಚ್ಚತಿಕ್ಕೆ** 'ಬಿಚ್ಚತಿಕೆ' ನೋ.

**ಬಿಚ್ಚತಿಗ** (ನಾ). ಶ್ರೇಷ್ಠನಾದ ವ್ಯಕ್ತಿ : ಬೆಚ್ಚರಿಗಂ ಪರಿವಾಯಂ ತುಚ್ಚಳನತ್ಯುಗ್ರಕೋಪಿ ಮೂರ್ಖಿಂ ಕಿಸಟಿಸೊಳ್ಕಿಚ್ಚಿಡುವನೆನಿಪ ಖಳನುಂ ಬಿಚ್ಚತಿ[ಶಾಠಾಂ. ರಿ]ಗನೆನಿಕ್ಕುಮೊಂದಿ ಜೈನರ ಕೆಲದೊಳ್ (ಸಮುಕ. ೬-೦೦೬). [ಬಿಚ್ಚತ + — ಇಗ]

**ಬಿಚ್ಚತಿಗೆ** 'ಬಿಚ್ಚತಿಕೆ' ನೋ.

**ಬಿಚ್ಚನೆ** (ಅ). ೧. ಅಗಲವಾಗಿ ; ವಿಶಾಲವಾಗಿ ; ದೊಡ್ಡದಾಗಿ : ಆತಂ ಕ್ರೋಧಾನಲದಿನೆನ್ನನುರಿಪುವಂತು ಕೆಚ್ಚನಾಗೆ ಬಿಚ್ಚನೆ ಬಿಟ್ಟ ದಿಟ್ಟಿಗಳಿಂ ನೋಡಿ (ಕಾದಂಉ. ೦೦೨); ಬಿಸುನೆತ್ತರನೆತ್ತಂ ಸೂಸು ವಂತೆ ಬಿಚ್ಚನೆ ಬಿಟ್ಟಿರ್ದರಡುಂ ಕಣ್ಗಳೊಳವರೊರ್ಬರನೊರ್ಬರ್ನುಂಗುವಂತೆ ನೋಡಿದರೆನಸುಂ (ಗದಾಯು. ೮-೪); ಬಿಚ್ಚನೆ ಬಿಟ್ಟ ದಿಟ್ಟ ಸಿಡಿಲಂ ಕೀಟ್ಮಾಡೆ ಬಂದೆಯ್ದಿ. . . ತಾಗಿದುವದ್ಭುತಸ್ತನಿತಮೆಂಬನ್ನಂ ಬೃಹದ್ಬೃಂಹಿತಂ (ಶಂರಾಮಾ. ೦೩-೭೬). ೨. ತಟ್ಟನೆ; ಕೂಡಲೆ : ಎಸೆವೀ ಬ್ರಹಾಂಡಮಂ ಬಿಚ್ಚನೆ ಬಿರಿಯಿಸುತುಂ ವಾರ್ಧಿಯಂ ಕೂಡೆ ತುಳ್ಕಾಡಿಸುತುಂ . . . ಪರ್ವಿತ್ತುರ್ವಿಂ ತಳೆದೊಗೆದ ಗಂಭೀರಭೇರೀನಿನಾದಂ (ಶಾಂತೀಶ್ವ. ೦೫-೩೪). ೩. ರಭಸವಾಗಿ ; ವೇಗವಾಗಿ : (*). [<ಬಿಚ್ಚತ + — ಅನೆ₁]

**ಬಿಚ್ಚಲರ್** (ನಾ). ಅರಳಿದ ಹೂವು : ಮಕರಂದಮಂ ಭ್ರಮರಾವಳಿಗೆ ಮಾಜದೊಲಿದಿತ್ತು ಮೆಱೆವ ಬಿಳ್ದಾವರೆಯ ಬಿಚ್ಚಲರ್ಗಳ ಪೆರ್ಚೆ ನೋಡು (ಕೈಪಿಶಾ. ೩-೩೯). [ಬಿಚ್ಚು₁ (<ಬಿರ್ಚು) + ಅಲರ್₂]

**ಬಿಚ್ಚಳ₁, ಬಿಚ್ಚಳೆ** (ನಾ). ಹರಹು; ವಿಸ್ತಾರ; ವೈಶಾಲ್ಯ : "ಬಿಚ್ಚಳ ಮುಮೆನಲ್ ವಿಸ್ತರಾರ್ಥಮಕ್ಕುಂ " (ಶವಿಕಂ. ೦೯೩). ' ಬಿಚ್ಚಳಿಸು ' ಪರಾ. **ಬಿಚ್ಚಳೆ :** ನರನೆಚ್ಚ ಕೆಂಗಱಿಗೋಲ ಬಿ [ಶಾಠಾಂ. ಬ]ಚ್ಚಳೆಯ ಪೊಸಮಸೆಯ ನಿಚ್ಚಳದ ನಿಡುಸರಳ್ಪಿಚ್ಚಿದವು . . . ಕೊಚ್ಚಿದವು ಪರಬಲವನು (ಕೈಪಿಶಾ. ೦೩-೦೬). [<ಬಿತ್ತರ./ಸಂ. ವಿಸ್ತರ]

**ಬಿಚ್ಚಳ₂** 'ಬಿಜ್ಜಣ' ನೋ.

**ಬಿಚ್ಚಳಿಕೆ** (ನಾ). ೧. ಹರಹು ; ವೈಶಾಲ್ಯ : "ಬಿಚ್ಚಳಿಕೆಯೆಂದು ವಿಸ್ತಾರಮಕ್ಕುಂ" (ಶಬ್ದಸ್ಮ. ೦೭) ; "ಬಿತ್ತರಮೆನಲ್ ಬಿಚ್ಚಳಿಕೆಯೆನಲು ವಿಸ್ತಾರಮಕ್ಕು" (ಕಶರ. ೬೦). ೨. ಧಾರಾಳತನ ; ಹೃದಯವೈಶಾಲ್ಯ: ದಾನಧರ್ಮಾನುರಾಗಮುಂ ಬಿಚ್ಚಳಿಕೆಯುಂ ಪಾಪಕ್ಕಂ ಪಟಿಗಮುಂಜು ವುದುಂ . . . ಅಖಂಡಿತಚಾರಿತ್ರರಾಗಿ ನೆಗಟ್ಟುದುಂ ತಪೋಭಾವನೆಯುಂ ಮೆಂದಿವಱಿಂ ಸಾತಾವೇದನೀಯಾಸ್ರವಮಕ್ಕುಂ(ಶಚಾರ. ೪೪). ೩. ನೆಮ್ಮದಿ; ಸಮಾಧಾನ : ಅನುನಯದಿಂ ಬಿಚ್ಚಳಿಕೆವೆರಸಿ ಮನದೊಳ್ ಮೆಚ್ಚಿ ಮಹೇಶ್ವರನನಲ್ಲಿ ಚಿನ್ನಿಸುತಿರ್ದ್ದಂ(ಇಳ. XX, ೬೯-೬; ೨ನೆಯ ಶತ). ೪. ಹರಡಿರುವುದು ; ಚೆದರಿರುವುದು : (*). [ಬಿಚ್ಚಳ₁ + — ಇಕೆ]

**ಬಿಚ್ಚಳಿಕೆಗೆಯ್** (ಕ್ರಿ). ವಿಸ್ತಾರವಾಗಿ ನಿರೂಪಿಸು : ಸೌಂದರ್ಯ ಶಾಲಿತನಯಂಗೆ ನೃಪಂ ಯುವರಾಜಪಟ್ಟಮಿತ್ತನುಭವಮಂ ಬಿಚ್ಚಳಿಕೆ ಗೆಯ್ವುದುಚಿತಂ ತನುಜಾ (ಕಮುಮಾ. ೦೨-೪೭). [ಬಿಚ್ಚಳಿಕೆ + ಕೆಯ್₁]

**ಬಿಚ್ಚಳಿಸು** (ಕ್ರಿ). ೧. ಹಬ್ಬು : ಹರಡು ; ಪಸರಿಸು : ಸ್ಫುರಿತ ಕಮನೀಯಂಗಳಾಗಿ ಬೆಳತಿಗೆಬೆಳಗನಿರದೆಂಟುದೆಸೆಗಳೊಳ್ ಬಿಚ್ಚಳಿಸಿ ಥಳಥಳಿಸುತಿರಲ್ (ಆರಾಕ. ೪-೫-೪) ; ಸೌದಾಮಿನಿಯ ಕರೆಗೆಱೆದ ಪ್ರತಿಮೆಯಂದದೊಳಗಜೆಯಚ್ಚರಿಯ ಬಿಚ್ಚಳಿಸುತಿಸೆದಳಾಗ (ನಂದಿಮಾ. ೬-೩). ೨. ವಿಸ್ತಾರಗೊಳಿಸು; ವ್ಯಾಪಿಸುವಂತೆ ಮಾಡು : ನಿಚ್ಚಲುಂ ಬಿಚ್ಚಳಿಸಲ್ ವಿಖ್ಯಾತನಾದಂ (ಬೊಂಕಶಾ. ೦೯೩೬, ೦ಕ್ಷ೯ಶ್ವರ. ೧೦-೦೩; ?). ೩. ಅತಿಶಯಗೊಳಿಸು; ದೊಡ್ಡದು ಮಾಡು : ತಮ್ಮ ಪಂಡಿತಿಕ್ಕೆ ಯನಱಿಪಿದೊಡೆ ಸಭೆಯೊಳಿರ್ದ ಪಂಡಿತಜನಮೆಲ್ಲಂ ಮೆಚ್ಚಿ ಬಿಚ್ಚಳಿಸಿ ಪೊಗಟ್ದೊಡೆ (ವಡ್ಡಾರಾ. ೪-೨೭) ; ಸಭಾಸದರ್ ಮೆಚ್ಚಿ ಬಿಚ್ಚಳಿಸಿ ಪೊಗಟ್ವಿನಂ (ಸುಕುಮಾ. ೭-೩೬ ವ). ೪. ಬಿತ್ತರಿಸು; ವಿಶದೀಕರಿಸು; ವಿವರಿಸು : ನಾಯಿಕಾನಿಕುರುಂಬಮುಮಂತವರ ತೆಱನನುಱಿ ಬಿಚ್ಚಳಿಪೆಂ (ರಶರ. ೩-೭೦ ಸೂತ್ರ) ; ನಿಗಮಾಗಮಪುರಾಣವಾಣಿಗಳಿಂ ಸಹಜಸಿದ್ಧಶಿವಾಧಿಕ್ಯಮಂ ಬಿಚ್ಚಳಿಸುತ್ತುಂ (ವೃಷವಿ. ೩೭-೦೩೨ ವ). ೫. ಅಧಿಕವಾಗಿ ಹೊಗಳು,— ಪ್ರಶಂಸಿಸು : ಆತಂಗೆ ಮೆಚ್ಚಿ ಬಿಚ್ಚಳಿಸಿ ತನ್ನಂಗಚಿತ್ತಮುಮಂ ಕೆಲವು ಬಾಟುಮಂ ಕೊಟ್ಟು (ವಡ್ಡಾರಾ. ೦೫೨-೬); ತದನಂತರಮೇ ಲೋಕಾಂತಿಕಾಮರವೃಂದಂ ಬಂದು ಬಿಚ್ಚಳಿಸಲೊಡಂ ವಜ್ರಕ್ಕೆ ಬಳಮಿತ್ತಂತೆ ವಜ್ರಸೇನಮಹಾರಾಜಂ . . . ತಪಂಗೊಂಡಂ (ಆದಿಪು. ೬-೨೩ ವ); ಸುರರಂಬರದೊಳ್ ತಗುಳ್ದು ಬಿಚ್ಚಳಿಸೆ ನದೀಘನುಚ್ಚಳಿಸೆ ಕಾದಿದನೇಂ ಕಲಿಯೋ ಗುಣಾರ್ಣವಂ (ಪಂಪಭಾ. ೦೦-೪೩). ೬. ಹೆಚ್ಚಾಗು ; ಅಧಿಕಗೊಳ್ಳು : ಪೊರೆವ ಪೆಣ್ದುಂಬಿಯ ಬಿಚ್ಚಳಿಪ ಪರಭೃತದ ಕಳಕಳದೊಳೆ ಮುಸುಳ್ದುದು ದಿವಿಜಯುಗಲಕಲಕಲ ನಿನದಂ (ಆದಿಪು. ೬-೯೪); ಸಾಹಸಂ ಬಿಚ್ಚಳಿಸಲು ಕೊಡಲಿಯಿಂ ಖಂಡಿಸಿದನಾ ತನ ಶಿರಸ್ಸನು (ಆರಾಕ. ೨-೨-೨೦). ೭. ಸಂತೋಷಪಡು; ಹರ್ಷಗೊಳ್ಳು: ತಳಿರ್ತಳಮಾವು ಮಾವಿನಂಕುರಮನೆ ಕರ್ಚಿ ಬಿಚ್ಚಳಿಪ ಕೋಗಿಲೆ ಕಂಪನವುಂಕಿ ಪೊತ್ತು ನಿತ್ತರಿಪೆರಲೆಂಬಮೇವುವೊ (ಪಂಪಭಾ. ೫-೦೦); ನಡುವ ಸರಲ್ ಸರಲ್ಕೊಳೆ . . . ಮೆಯ್ವೊಣರ್ಚುವ ಮಹಾರಥರಾಜಿಯೊಳಂತ ಗುರ್ವಿನಚ್ಚುಡಿದಿರೆ ಕಾದಿ ಬಿಚ್ಚಳಿಸಿದರ್ ಬಿಸುನೆತ್ತರ ಸುಟ್ಟುರೆ ಸೂಸುವನ್ನೆಗಂ (ಪಂಪಭಾ. ೦೦-೦೦೪). ೮. ಶೋಭಿಸು; ಪ್ರಕಾಶಿಸು; ಹೊಳೆ: ನಚ್ಚಣಿಯರನು ನೋಡುತ್ತೈತರೆರೆ ಬಿಚ್ಚಳಿಪ ಚೆಂಬೊನ್ನ ಸೊಬಗಿನ ಸ್ವಚ್ಛವಾದಾ ಸಿದ್ಧಮಂಡಪಮೆಯ್ದಿ (ಶಾಲ್ಯಶಾ. ೪-೩೨).

[ ಬಿಚ್ಚಳ₁ + — ಇಸು₃ ]

**ಬಿಚ್ಚಳೆ** ' ಬಿಚ್ಚಳ₁ ' ನೋ.

**ಬಿಚ್ಚಾಲೆ** ' ಬಿಚ್ಚೋಲೆ ' ನೋ.

**ಬಿಚ್ಚಾಳು** (ನಾ). ಸ್ವಾತಂತ್ರ್ಯವುಳ್ಳವನು ; ಬಿಡುಗಡೆ ಹೊಂದಿದವನು: ಚನ್ನಮ್ಮಾಜಿಯು ಮಾಳೋಚಿಸಿ ತಮ್ಮ ರಾಷ್ಟ್ರಕಾಗಿಯವಂ ಬಿಚ್ಚಾಳಾಗಿ ಪೋದುದಹುದಾವಾಳುತ್ತಿರ್ಪಳೆಯೊಳಿಲ್ಲವೆಂದರುಹಿಸಿದಳ್ (ಕೆಳನೃ. ೬-೮೪).

[ ಬಿಚ್ಚು₂ + ಆಳು₃ (<ಆಳ್₃) ]

**ಬಿಚ್ಚಿಸು** ' ಬಿರ್ಚಿಸು ' ನೋ.

**ಬಿಚ್ಚು₁** ' ಬಿರ್ಚು ' ನೋ.

**ಬಿಚ್ಚು₂** (ನಾ). ೧. ಸಡಿಲವಾಗುವಿಕೆ : (*). ೨. ಸಡಿಲಗೊಂಡುದು : (*). ೩. ಸರಳತೆ : ' ಬಿಚ್ಚುಗನ್ನಡ ' ಪರಾ. ೪. ವಿರಳಗೊಳಿಸುವ

ಸಾಧನ : ಮಚ್ಚರಿಸುವರ ಬಿಚ್ಚು ಕುಜನರ ಬೆಚ್ಚು ಶಾಂತಿಯು ಹೆಚ್ಚು ಧೂರ್ತರ ಕೊಚ್ಚು ಕಲಿತನದಚ್ಚು ಸುಖಕಣಿ ಮುಚ್ಚುಮರೆಯಿಲ್ಲ (ಬಸಪು. ೨೮-೪೯) ; ಜಾರರ ಚೋರರ ಬಿಚ್ಚು ಸಂತತಂ ಕುವಲಯದ ಮನೋವಿಲಾಸದ ಮಚ್ಚು (ನವಮೋ. ೧೬-೨೯). (ಗು). ೫. ಬಿಡಿಯಾದ ; ಚಿಲ್ಲರೆಯಾದ : ' ಬಿಚ್ಚುರೊಕ್ಕ ' ಪರಾ. [<ಬಿಚ್ಚು₁ ]

**ಬಿಚ್ಚು₃** ' ಬಿಕ್ಕು₄ ' ನೋ.

**ಬಿಚ್ಚು₄** ' ಬಿಜ್ಜು₂ ' ನೋ.

**ಬಿಚ್ಚುಕಣ್ಣು** ' ಬಿಚ್ಚುಗಣ್ ' ನೋ.

**ಬಿಚ್ಚುಕತ್ತಿ** ' ಬಿಚ್ಚುಗತ್ತಿ ' ನೋ.

**ಬಿಚ್ಚುಗಣ್,** , ಬಿಚ್ಚುಕಣ್ಣು, ಬಿಚ್ಚುಗಣ್ಣು (ನಾ). ಅಗಲವಾಗಿ ತೆರೆದಿರುವ ಕಣ್ಣು : ಎಚ್ಚು ಹಾಯ್ದುಂಬುಗಳು ಭೂತದ ಬಿಚ್ಚುಗಂಗಳ ಕೊಂಡದುರಿಯುಲಿ ಒಚ್ಚಿಸಿದ ಗಱಿ ಸೀದು ಸೀಕರಿಯೋಗಿ ನಿಮಿಷದಲಿ (ಕುವ್ಯಾಗ. ೯-೧೮) ; ಅನಿಲಜನ ಕರಪುಟದಿ ಮಿರುಗುತಿರ್ದವತಂಸಮಂ ಬಿಚ್ಚುಗಣ್ಗಳಿಂ ನೋಡುತಿರ್ದು (ಶ್ರೀರಾಪಟ್ಟಾ. ೫೨೩-೬೦೫). **ಬಿಚ್ಚುಕಣ್ಣು:** ಅವಳನ್ನು ಬಿಚ್ಚುಕಣ್ಣಿನಿಂದ ನೋಡುತ್ತ . . . ಎಂದಳು (ದೌಲತ್. ೧೧೧). **ಬಿಚ್ಚುಗಣ್ಣು:** ನೀರಲುಗಿ . . . ಸಾವಿನಲ್ಲಿ ತೆರೆದ ಬಿಳಿಯ ಬಿಚ್ಚುಗಣ್ಣು, ಪಾಚಿಯ ಮೂಲಕ ಕಂಡಿತು (ಹೊಸಕ್ಷ. ೧೬೯).

[ ಬಿಚ್ಚು₁ (<ಬಿಚ್ಚುರ್) + ಕಣ್ ]

**ಬಿಚ್ಚುಗಣ್ಣು** ' ಬಿಚ್ಚುಗಣ್ ' ನೋ.

**ಬಿಚ್ಚುಗತ್ತಿ,** ಬಿಚ್ಚುಕತ್ತಿ (ನಾ). ಒರೆಯಿಂದ ಹೊರತೆಗೆದ ಕತ್ತಿ ; ಹಿರಿದ ಕತ್ತಿ : ಹರಿಗೆ ಬಿಚ್ಚುಗತ್ತಿಯು ಹೊಳೆವ ಕಟಿಯು ಮುಂಡುಗಳ ಬಲಗಳ ಮಧ್ಯದೆ ಸರ್ವಸಂಭ್ರಮದೊಳು ಮಳೆಯಾಳದವನೀಶ ಬಂದ (ಕಂನಬಿ. ೨೦-೬೫) ; ಬಿಚ್ಚುಗತ್ತಿಪಹರೆಯವರು ಬಲುಜಾಗರೂಕತೆಯಿಂದ ಕಾವಲು ಕಾಯುತ್ತಿದ್ದಾರೆ (ದೌಲತ್. ೯). **ಬಿಚ್ಚುಕತ್ತಿ :** ಬಿಚ್ಚುಕತ್ತಿಗಳಂ ಪಿಡಿದು (ಸೌಗಂಧಿ. ೨೬೨-೧೧) ; ಆಪ್ತಭಟರು . . . ಬಿಚ್ಚುಕತ್ತಿಗಳನ್ನು ಹಿಡುಕೊಂಡು ನಿನ್ನ ಸುತ್ತಲು ನಡೆದು ಬರುವರೆ ? (ಕೃವಾಸ. ೧೧) ; ಬಿಚ್ಚುಕತ್ತಿಗಳನ್ನು ಕೈಲಿ ಹಿಡಿದು ಮುಂದೆ ನುಗ್ಗಿದರು (ರಾಜಸೂ. ೫೪). [ಬಿಚ್ಚು₁ (<ಬಿಚ್ಚುರ್) + ಕತ್ತಿ ]

**ಬಿಚ್ಚುಗನ್ನಡ** (ನಾ). ಸರಳವಾದ ಕನ್ನಡ ; ತಿಳಿಗನ್ನಡ : ಒಮ್ಮೆ ಕಂಡನೆಂಬರೆ ಆಗ ಆಗುವ ಆನಂದವನ್ನು ಬಿಚ್ಚುಗನ್ನಡದಲ್ಲಿ ಬಣ್ಣಿಸಿದ ವಚನಗಳನ್ನು ನೋಡಿ ! (ಕನ್ನಮ. I, ೧೬೫). [ಬಿಚ್ಚು₂ + ಕನ್ನಡ₁ ]

**ಬಿಚ್ಚುಗಯ್ದು** (ನಾ). ಒರೆಯಿಂದ ಸೆಳೆದ ಆಯುಧ : ಮಲ್ಲರಾಜನನ್ನು ಬೆನ್ನಟ್ಟಿ ಬಂದ ಬಿಚ್ಚುಗಯ್ದುಗಳ ತನ್ನವರನ್ನು ಕೆಯ್ಸನ್ನೆಯಿಂದ ಹಿಂದಣ್ಗೆ ಕಳಿಹಿಬಿಡುವನು (ಬಿರುಗಂ. ೩೪-೦೪).

[ಬಿಚ್ಚು₁ (<ಬಿಚ್ಚುರ್) + ಕಯ್ದು (<ಕೆಯ್ದು) ]

**ಬಿಚ್ಚುಜಡೆ** (ನಾ). ಬಿಚ್ಚಿಕೊಂಡಿರುವ ಜಟೆ ; ಹರಡಿಕೊಂಡಿರುವ ಜಟೆ : ಮೆಚ್ಚಿದನು ಮದನಾರಿ ಹೋಮದ ಕಿಚ್ಚು ತುಡುಕದ ಮುನ್ನ ತೆಗೆದನು ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದನು ಭಟನ (ಕುವ್ಯಾಗ. ೯-೨೩). [ಬಿಚ್ಚು₁ (<ಬಿಚ್ಚುರ್) + ಜಡೆ₁ ]

**ಬಿಚ್ಚುನುಡಿ** (ನಾ). ಮುಚ್ಚುಮರೆಯಿಲ್ಲದ ಮಾತು ; ಸ್ಪಷ್ಟವಾದ ನುಡಿ ; ನೇರವಾದ ಮಾತು : ಅವರ ಬಿಚ್ಚುನುಡಿಗಳನ್ನು ನಾನು ಪ್ರೀತಿಸಿದೆ (ಪಾಪೋಲಿ. ೪೯) ; ' ಎನ್ನ ತಪ್ಪು ಅನಂತಕೋಟಿ ; ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ ! ' ಎಂಬ ಬಿಚ್ಚುನುಡಿ (ಸಾಹಿಜಂ. ೩).

[ಬಿಚ್ಚು₁ (<ಬಿಚ್ಚುರ್) + ನುಡಿ₂]

**ಬಿಚ್ಚುಪೇಣಿ** (ನಾ). ಒಂದು ಬಗೆಯ ಸಿಹಿತಿಂಡಿ : ಬೆಂದುದಂ ಪಿಡಿದು ತೆಗೆದಿರಿಸಿಯುತ್ತಮದ ಸಕ್ಕರೆಯನದಱ ಪದರೊಳು ತುಂಬಲದು ಬಿಚ್ಚುಪೇಣಿಯಾಯ್ತು (ಸೂಪಶಾ. ೧-೪೯). [ ಬಿಚ್ಚು ? + ಪೇಣಿ ]

**ಬಿಚ್ಚುಫಿರಂಗಿ** (ನಾ). "ದೊರೆಯ ಸಂಗಡ ತೆಗೆದುಕೊಂಡು ಹೋಗುವ ಆಯುಧ" (ಚಿತ್ರಪಾ. ೨ ಅನುಬಂಧ) : ಓಬಳಣ್ಣನಾಯಕನಿಗೆ ಪಟ್ಟವಾಯಿತು. ಇವನಿಗೆ ಬಿಚ್ಚುಫಿರಂಗಿ ಹಿಡಿಸಿದರು (ಚಿತ್ರಪಾ. ೧೬).

[ ಬಿಚ್ಚು ? + ಫಿರಂಗಿ ]

**ಬಿಚ್ಚುಫೇಣಿ** (ನಾ). = ಬಿಚ್ಚುಪೇಣಿ : ಈಪೋಪಾದಿಯಲ್ಲಿ ಎಲ್ಲ ಫೇಣಿಗಳನೂ ಅಟ್ಟು ಇರಿಸಿ ಎಲ್ಲ ಪದರಿನೊಳಗೆ ಸಕ್ಕರೆಯ ತುಂಬಿ ತಳಿವುದು. ಇದರ ಹೆಸರು ಬಿಚ್ಚುಫೇಣಿ ಎನಿಸಿಕೊಂಬುದು (ಸೂಪಶಾ. ೧-೪೯ ಅಡಿ). [ ಬಿಚ್ಚು ? + ಫೇಣಿ ]

**ಬಿಚ್ಚುಮನಸ್ಸು** (ನಾ). ಮುಚ್ಚುಮರೆಯಿಲ್ಲದ ಹೃದಯ ; ತೆರೆದ ಮನಸ್ಸು : ಪದ್ಮಾಕರ ಬಿಚ್ಚುಮನಸ್ಸಿನಿಂದ ಮಾತನಾಡತೊಡಗಿದ (ರತ್ನಗೋ. ೨೨) ; ಒಬ್ಬರನ್ನೊಬ್ಬರು ಬಿಚ್ಚುಮನಸ್ಸಿನಿಂದ ಮೆಚ್ಚಿಕೊಂಡುದು ಜನರಿಗೆ ಮಹದಾನಂದವಾಯಿತು (ಸಂಗೀತ. ೩೦).

[ ಬಿಚ್ಚು₁ (<ಬಿಚ್ಚುರ್) + ಮನಸ್ಸು ]

**ಬಿಚ್ಚುಮಾತು** (ನಾ). = ಬಿಚ್ಚುನುಡಿ : ನಿನ್ನ ಬಿಚ್ಚುಮಾತನ್ನು ನಾನು ಮೆಚ್ಚುತ್ತೇನೆ (ದೂರಕ. ೧೧೩) ; ಇದನ್ನು ಬಿಚ್ಚುಮಾತಿನಿಂದ ಶ್ರೀಮದಾನಂದತೀರ್ಥರು . . . ಉಪದೇಶಿಸಿದ್ದಾರೆ (ಭಾರದ. ೨೯೦).

[ ಬಿಚ್ಚು₁ (<ಬಿಚ್ಚುರ್) + ಮಾತು₁ ]

**ಬಿಚ್ಚುಮೊಗ್ಗೆ** (ನಾ). ಅರಳಿದ ಮೊಗ್ಗು : ಹೌದು ಧಣಿಯೆ, ನಾ ಬಿಚ್ಚುಮೊಗ್ಗೆ, ನನಗಿಲ್ಲ ಸೆರಗುಮುಚ್ಚು (ಮುಕ್ತಕಂ. ೨೪-೩).

[ ಬಿಚ್ಚು₁ (<ಬಿಚ್ಚುರ್) + ಮೊಗ್ಗೆ ]

**ಬಿಚ್ಚುರಥಿಕ** (ನಾ). ಏಕಾಕಿಯಾಗಿ ಕಾದಬಲ್ಲ ರಥಿಕ : ಹೆಚ್ಚಿ ವೀರಾವೇಶದಲಿ ಬಹ ಬಿಚ್ಚುರಥಿಕರನಾಯ್ದು ಧೈರ್ಯದ ಕೆಚ್ಚ ಮುಱಿದನು (ಕುವ್ಯಾಕ. ೦೫-೨೨). [ ಬಿಚ್ಚು₂ + ರಥಿಕ ]

**ಬಿಚ್ಚುರೊಕ್ಕ** (ನಾ). ಚಿಲ್ಲರೆ ಹಣ ; ಪುಡಿಗಾಸು : ಬಿಚ್ಚುರೊಕ್ಕ ಇರಲಿಲ್ಲ. ಗುಮಾಸ್ತ ರೂಪಾಯಿ ಮುರಿಸಿಕೊಂಡು ಬರಲು ಹೋದ (ಪ್ರೇಮಾಶ್ರ. ೦೯೬). [ ಬಿಚ್ಚು₂ + ರೊಕ್ಕ ]

**ಬಿಚ್ಚುವ** (ನಾ). ಸಂನ್ಯಾಸಿ ; ಭಿಕ್ಷುಕ : ಒರ್ವ ರಸವಾದಕನೆಂಬ ಬಿಚ್ಚುವಂ [ಪಾಠಾಂ. ಭಿಕ್ಷುಕಂ] . . . ಎಂದೊಡೆ (ವಡ್ಡಾರಾ. ೦೬೬-೧೧); ಆ ಬಿಚ್ಚುವಂ . . . ತನ್ನೊಳವಧಾರಿಸಿ (ಸುಕುಮಾ. ೩-೬ ವ).

[ < ಸಂ. ಭಿಕ್ಷುಕ ]

**ಬಿಚ್ಚೂರಿಗೆ** (ನಾ). ಒಂದು ಬಗೆಯ ಭಕ್ಷ್ಯ : ಮಾಡಗೆ ಪೇಣಿ ನಲ್ಗೈದ ಲಡ್ಡುಗೆಯ ಬಿಚ್ಚೂರಿಗೆಗಳಂ ಬಡ್ಡಣಿಸಿದರಂಗನೆಯರು (ಮದೇಪು. ೧೬-೨೪) ; ಗಾರಿಗೆ ಲಡ್ಡುಗೆ ಬೀಸೂರಿಗೆ ಬಿಚ್ಚೂರಿಗೆ . . . ಮಧು ಸಕ್ಕರೆಗಳ ಸಾರಂಗಳ ಸುಳಿಪಾಳೆಯ ದೊನ್ನೆಯೊಳಾರ್ಕೈದೆರೆದರ್ಸವಿಗಾತಿಯರ್ (ಮದೇಪು. ೦೯-೫೮).

[ಬಿಚ್ಚು ? + ಹೂರಿಗೆ (<ಪೂರಿಗೆ)]

**ಬಿಚ್ಚೆ** ' ಬಿಕ್ಕೆ₂' ನೋ.

**ಬಿಚ್ಚೆಕಾರ** (ನಾ). ಭಿಕ್ಷುಕ ; ತಿರುಪೆಯವನು : ಈ ಬಿಚ್ಚೆಕಾರ ಭಿಕಾರಿ ರಾಯ . . . ಕೊಸವ . . . ವೃದ್ಧಜಂಬುಕ (ಮಂತ್ರಶ. ೧೧೧-೧೯).

[ಬಿಚ್ಚೆ (< ಬಿಕ್ಕೆ₂) + —ಕಾರ₁ (< —ಕಾಱ). /ತಮಿ. ಪಿಚ್ಚೈಕ್ಕಾರನ್]

**ಬಿಚ್ಚೋಗರ** (ನಾ). (ಹೂವಿನಂತೆ) ಉದುರುದುರಾಗಿರುವ ಅನ್ನ ; ಮಿಡ್ಡೆಯಾಗಿಲ್ಲದ ಅನ್ನ : ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸರು . . . ರಸರಸಾಯನವ ಚಪ್ಪಿರಿದು ನೀರ್ವಜ್ಜಿಗೆ ಹಸಗೆಯ್ದಿರಲೀಂಟಿದರು (ಮೋಹತ. ೩-೫೬). [ಬಿಚ್ಚು₁ (< ಬಿಚ್ಚುರ್) + ಓಗರ]

**ಬಿಚ್ಚೋಲೆ,** ಬಿಚ್ಚಾಲೆ (ನಾ). (ಮುತ್ತೈದೆಯರು) ಕಿವಿಗೆ ಆಭರಣದಂತೆ ಧರಿಸುವ ತಾಳೆಗರಿಯ ಸುರುಳಿ : ಬಿಚ್ಚೋಲೆ ಹರಿಹು ಹೆಱೆ

ತಿಲಕಂ ಕಂಗಳನಲಸದೆ ಕೇದಗೆವೂಗಳೊಳೆತ್ತಂ ಮಾಡಿ ತೊಟ್ಟರಬಲೆಯರೆಲ್ಲಂ (ಸೂಕ್ತಿಸು. ೧೧-೩೧); ಮಱಿನ ಬಿಚ್ಚೋಲೆಗಳ ಬಣ್ಣದ ಪೊನ್ನ ನೂಲುಂಗಳ ಗಿಗಿಗಳೇ ಫಲವಾದುವಾ ಸುರಕರಿಯ ನೋಂಪಿಯ ದಾನಕೆ (ಸಂಭಶ. ೨೦-೨೦); ತಾನೆ ಐರದಾಳಿಯ ಬಿಚ್ಚೋಲೆಯ ಚಂದನದ . . . ಕರಂಡವುಂ ಕೈಯೊಳ್ಕೊಂಡು (ರಾಮಾಶ್ವ. ೫೯-೧೭). **ಬಿಚ್ಚಾಲೆ :** ಶ್ರೀರಂಗಮ್ಮನು ಆಭರಣಗಳನ್ನೆಲ್ಲಾ ಪರಿತ್ಯಜಿಸಿ ಅರಿಶಿನ ಕುಂಕುಮವನ್ನು ಇಟ್ಟುಕೊಂಡು ಬಿಚ್ಚಾಲೆಯನ್ನು ಧರಿಸಿಕೊಂಡು . . . ಹೇಳಿ ಕಳುಹಿಸಿದಳು (ಶ್ರೀರಾಯ. ೩೭೦); ಮದುವೆಯಾಗಿದ್ದರೆ ಹೆಂಡತಿಯು ಅರಿಶಿನಕುಂಕುಮ ಬಳೆ ಬಿಚ್ಚಾಲೆಯನ್ನು ತೆಗೆಸುತ್ತಿದ್ದರು (ದೂರಸ. ೨೬೯).

**ಬಿಚ್ಚೋಲೆ ಗೌರಮ್ಮ, ಬಿಚ್ಚೋಲೆಯ ಗೌರಮ್ಮ** = ಯಾವ ಆಭರಣಗಳನ್ನೂ ಹಾಕಿಕೊಂಡಿರದ ಬಡಮುತ್ತೈದೆ: ಅವಳು ಬಿಚ್ಚೋಲೆ ಗೌರಮ್ಮನಂತೆ ಮದುವೆಮನೆಗೆ ಹೊರಟಿದ್ದಳು (ರೂಢಿ); ತಾಯಿಯ ಜಂಬ ಆಡಂಬರಗಳನ್ನೇ ಅರಿಯದ ಬಳೆ ಬಿಚ್ಚೋಲೆಯ ಗೌರಮ್ಮ (ದೂರಸ. ೯೩).

[ಬಿಚ್ಚು₁ (<ಬಿರ್ಚು) + ಓಲೆ . / ತುಳು. ಬಿಚ್ಚೋಲೆ]

**ಬಿಚ್ಚ್ಚವ** 'ಬಿಚುವಾ' ನೋ.

**ಬಿಚ್ವ** 'ಬಿಚುವಾ' ನೋ.

**ಬಿಚ್ವಾ** 'ಬಿಚುವಾ' ನೋ.

**ಬಿಛಾನಾ** 'ಬಿಚಾನ' ನೋ.

**ಬಿಛಾಯತ,** ಬಿಚಾಯಿತ, ಬಿಛಾಯಿತ (ನಾ). ದಲ್ಲಾಳಿ ; ಕಮಿಷನ್ ಏಜೆಂಟ್ : ಇಲ್ಲಿ ಲೋಕಬಂದ ಜೀನಸಗಳ ಒಡವೆ ಬಹಳ, ಅಂತ ನಮ್ಮ ಬಿಛಾಯತರು ಇದು ಧ್ಯಾನದಲ್ಲಿ ತಂದು (ಮುಂಬವ್ಯಾ. ೩೦). **ಬಿಚಾಯಿತ :** ಪರವೂರಿಂದ ಬಂದ ಬಿಚಾಯಿತರು ಊರಿನೊಳಗಿನ . . . ಅಂಬೋಣ ಏನಿರುವದು ಇದನ್ನು ಕೇಳಿಕೊಂಡು ಅದರಂತೆ ವ್ಯವಸ್ಥೆಯನ್ನು ಮಾಡುವದು (ಮುಂಬವ್ಯಾ. ೨೬೦). **ಬಿಛಾಯಿತ :** ಈ ಮಾಹಿತಿಯು ಬಿಛಾಯಿತರಿಗೆ ಬಹು ಅಗತ್ಯ ಇರತಕ್ಕದ್ದು (ಮುಂಬವ್ಯಾ. ೨೯).

[← ಮರಾ. ಬಿಛಾಯತ್, ಬಿಛಾಇತೀ, ಬಿಛಾಯತೀ]

**ಬಿಛಾಯಿತ** 'ಬಿಛಾಯತ' ನೋ.

**ಬಿಜ** 'ಬಿಜಯ' ನೋ.

**ಬಿಜಆ** (ನಾ). ಒಬ್ಬಾಕೆಯ ಹೆಸರು : ಪೊಳಲಿನಾಡುಳ್ಳೊಳಗೆಯೂರು ಬರಗೂರು ಬಿಜಆ ಮಾದೇವಿಯಾಳುತ್ತಿರೆ (ಎಕ. XII, ಶಿರಾ. ೨೯-೩೬; ಸು. 900). [< ಸಂ. ವಿಜಯಾ]

**ಬಿಜಯ,** ಬಿಜ (ನಾ). ೧. ವಿಜಯ ; ಗೆಲುವು : "ಬಿಜಯ (ಬಿಜ)—ವಿಜಯ=ಗೆಲುವು" (ತದ್ಭಕೋ. ೩೦). ೨. ಪ್ರಯಾಣ ಮಾಡಿ ಬರುವುದು ; ಆಗಮನ ; ಬರವು : ಮಾಡುವುದು ನೀವ್ ಬಿಜಯವಲ್ಲಿಗೆ (ಸಂಭಶ. ೦೭-೩೦) ; ವರದರಾಜದೇವರ ತೇಕಲ ಪಟ್ಟಣಕೆ ಬಿಜಯಂ ಮಾಡ್ಸಿಕೊಂಡು (ಎಕ. X (S), ಮುಳಬಾ. ೩-೦೭; 1430). ೩. ತೆರಳುವಿಕೆ; ಹೊರಡುವಿಕೆ ; ನಿರ್ಗಮನ : ಬಿಜಯಮೆಸಗಲಿಕೆಮಗನುಜ್ಞೆಯೇಂ (ಶರಕು. ೫-೦೩). ☞ ಇದು ಸಾಮಾನ್ಯವಾಗಿ ರಾಜರು, ಗುರುಗಳು, ಹಿರಿಯರು ಮುಂತಾದವರ ಆಗಮನ, ನಿರ್ಗಮನಗಳಿಗೆ ಅನ್ವಯಿಸುವ ಗೌರವಸೂಚಕವಾದ ಶಬ್ದ. ೪. (?) : ಆ ಊರ ಬಿಜಯರು ಕಂಮಾಜಿರು ಅಗಸಾಲೆಯರು ನಾಯಿಂದರು (ಎಕ. IV (R), ಎಳಂದೂ. ೦೩೯-೯ ; 14ನೆಯ ಶಶ). **ಬಿಜ :** ೧. ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ.

**ಬಿಜಯ ಮಾಡಿಸು, ಬಿಜ ಮಾಡಿಸು**=೧. ಬರುವಂತೆ ಮಾಡು; ಕರೆತರು : ಸರಸ್ವತೀಮಂದಿರದೊಳಗೆ ಅವರನ್ನು ಬಿಜಯ ಮಾಡಿಸು (ಶದೇಶ. ೦೦೫) ; ಆಗ ಹುಜೂರ್‌ಸವಾರಿ ಬಿಜಯ ಮಾಡಿಸುವುದೆಂದರೆ ಬಹಳ ದೊಡ್ಡ ಉತ್ಸವ (ಕೆಂಸ. ೩೪). ೨. (ಉತ್ಸವದಲ್ಲಿ ದೇವರ ವಿಗ್ರಹ ಮುಂತಾದುವುಗಳಂತೆ) ತೆಗೆದುಕೊಂಡು ಹೋಗು ; ಸಾಗಿಸಿಕೊಂಡು ಹೋಗು ; ಒಯ್ಯು : ಆ ಶ್ವೇತವರಾಹಸ್ವಾಮಿಯ ಪ್ರತಿಮೆಯನ್ನು ಬಿಜ ಮಾಡಿಸಿಕೊಂಡು ಶ್ರೀರಂಗಪಟ್ಟಣವನ್ನು ಸೇರಿದರು (೬ಚಿಕ. ೪೪) ; ಛತ್ರಕ್ಕೆ ಈಶ್ವರದೇವರ ಉತ್ಸವಮೂರ್ತಿಯನ್ನು ಬಿಜ ಮಾಡಿಸಿಕೊಂಡು ಹೋದರು (ಗರುದಾ. ೦೩೧). ೩. ಬರು ; ಆಗಮಿಸು : ಭರತಪ್ರಭುಗಳ ಸವಾರಿ ಬಿಜ ಮಾಡಿಸುತ್ತಿದೆ (ಹುಬ್ಬಿಹ. ೦೬೨) ; ಮಹಾರಾಣಿಯವರು . . . ಕೈಸಾಲೆಗೆ ಬಿಜ ಮಾಡಿಸಿದರು (ಪುಟ್ಟರ. ೭). **ಬಿಜಯ ಮಾಡು, ಬಿಜ ಮಾಡು** = ೧. ದಯಮಾಡು ; ಬರು ; ಆಗಮಿಸು : ಈಯಟವಿಯಲಿ ದುಷ್ಟಮೃಗಸಮುದಾಯವಿದೆ . . . ಬೇಂಟೆಗೆ ಬಿಜಯ ಮಾಡು (ತೊರರಾ. ೩-೩-೬) ; ದ್ವಿಜತಿಲಕ . . . ನಿಜಶಿಷ್ಯನಂ ಕೂಡಿಕೊಂಡು ಮುಖಮಂಟಪಕೆ ಬಿಜಯ ಮಾಡಿದ ಕಜ್ಜಮಾವುದು (ಕೈಬಂಶಾ. ೨೬-೩೨) ; ನಿಜವಾಗಿ ತೆರಳಬೇಕಾಯಿತಾದಡೆ ಜೀಯ ಬಿಜ ಮಾಡಿ ಬೆನ್ನಾಂತುಕೊಂಬೆ (ಮೋಹತ. ೩೭-೩೬); ಶ್ರೀ ಜ್ಞಾನಸಂಬಂಧರನ್ನು ಮನೆಗೆ ಬಿಜ ಮಾಡುವಂತೆ ಮಾಡಿರಿ (ಪುರಾ೬. ೦೬೦). ೨. ತೆರಳು ; ನಿರ್ಗಮಿಸು ; ಹೊರಡು : ನಿಮ್ಮ ಪದ ದರುಶನದಿ ಧನ್ಯನು ಬಿಜಯ ಮಾಡುವುದೆನುತ ಕಂದೆಱೆದೀಕ್ಷಿಸಿದನಂ ದುಭಯಸೈನಿಕವ(ಕುವ್ಯಾದ್ರೋ. ೦೮-೬೦); ನಿರುತದಾರೋಗಣೆಯ ಮಾಡಿಯೆ ಮರಳಿ ಬಿಜ ಮಾಡು (ಸಂಭಶ. ೨೬-೦೩) ; ಆಶ್ಚರ್ಯವನು ತೋಱುವೆ ಬಂದಿರಾದರೆಯೆನಲು ಬಿಜ ಮಾಡೆಂದು ಮುನಿಪನ ಕೂಡೆ ಹೊಱಮಂಟರು ಕುಮಾರಕರು (ಕಾಶಿರಾ. ೦-೯೭). ೩. ಆರಂಭವಾಗು ; ಮೊದಲಾಗು : ಈ ಸೂತ್ರಸಮುದಾಯ ಮತ್ತು ಇದರೊಂದಿಗೆ ಉಪನಿಷತ್ತುಗಳು ಮತ್ತು ಭಗವದ್ಗೀತೆ ಈ ಮೂರೂ ಸೇರಿ ವೇದಾಂತಶಾಸ್ತ್ರದ ಆಧಾರಶಿಲೆಯೆನಿಸಿದೆ. ವೇದಾಂತವು ಬಿಜ ಮಾಡುವುದು ಇಲ್ಲಿಂದಲೇ (ಶಾರದ. ೨೬೦).

[< ಸಂ. ವಿಜಯ]

**ಬಿಜಯಂಗೆಯ್,** ಬಿಜಯಂಗೆಯಿ, ಬಿಜಯಂಗೈ, ಬಿಜಯಂಗೈಯಿ (ಕ್ರಿ). ೧. ಬರು ; ದಯಮಾಡು ; ಆಗಮಿಸು ; ಚಿತ್ತೈಸು : ಭಟ್ಟಾರಾ ಕಿತ್ತಯ್ಯಂಗಳನೆಮ್ಮಲ್ಲಿಗೊಡಗೊಂಡು ಬಂದು ಚರಿಗೆದೋಱ ನೀಮುಂ ಬಿಜಯಂಗೆಯ್ಯಿಮೆನೆ (ವಡ್ಡಾರಾ. ೬೦-೦೫) ; ನಿಮ್ಮಯ್ಯಂ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡಮಂ ಸಮೆದಿಟ್ಟನಲ್ಲಿಗೆ ಬಿಜಯಂಗೆಯ್ಯಿಂ (ಕಂಪಭಾ. ೩-೨ ವ) ; ಎಲೆ ದೇವಾ ಭೀಷ್ಮರಿತ್ತಲಿರ್ದಪರಿತ್ತ ಬಿಜಯಂಗೆಯ್ಯಿಂ (ಗದಾಯು. ೫-೩೭ ವ). ೨. ಹೊರಡು ; ತೆರಳು ; ನಿರ್ಗಮಿಸು ; ಹೋಗು : ಎಮ್ಮ ಪಾಸಿದ ಚಿತ್ರಪಟವೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಮಿಗಂಗಳಾಗಳೆ ತೊಡರ್ಗುಮುಸಿರದೆ ಬಿಜಯಂಗೆಯ್ಯಿಂ (ಆದಿಪು. ೩-೯೯ ವ) ; ದೇವ ನೀಮಿಂ ತಡೆಯದೆ ಬಿಜಯಂಗೆಯ್ಯುವ ದೌಚಿತ್ಯಂ (ಕುಸುಮಾ. ೯-೧೦೫) ; ವಿಮಳವ್ಯೋಮಕೇಶನು ನಗುತ ಬಿಜಯಂಗೆಯ್ಯಲನುವಾದ (ಕುವ್ಯಾಕ. ೭-೧೧). ೩. ಇರು ; ವಿರಾಜಿಸು : ಇಂತು ಬಂದು . . . ಗಿರಿಜೆ ಭರದಿಂ ಗಿರಿರಾಜನ ತೊಡೆಯ ಮೇಲೆ ಬಿಜಯಂಗೆಯ್ದಳ್ (ಗಿಂಕ. ೪-೪೪). **ಬಿಜಯಂಗೆಯಿ :** ೧. ಆ ಶಂಕರಪ್ರತಿಮಾನ ನಪಿತಭಯಂಕರಂ ಬಿಜಯಂಗೆಯಿದನಿಂದು (ಬಸವು. ೫೦-೭). **ಬಿಜಯಂಗೈ :** ೧. ಸಿರಿಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೦-೫೩) ; ಕರುಣಿ ಬಿಜಯಂಗೈದು ಮೃತ್ಯುವಿನುರಿವ ಗಂಟಲೊಳಿಳಿವ ತನ್ನನು ಬರಸೆಳೆದನೆಂದಮಳಿಮಾರ್ಕಂಡೇಯಮುನಿ ನುಡಿದ (ಕುವ್ಯಾಅ. ೧೪-೦೭); ನೀವು ಬಿಜಯಂಗೈದಡಧಿಕೃತಪಾವನರಲೇ (ತೊರರಾ. ೦-೫ ೩೦). ೨. ಹರಂ ಕರುಣದಿಂ ನೋಡಿ ಬಸವನ ಚಿತ್ತದೊಳ್ ಪೊಕ್ಕು . . . ನೆಲಂ ಮೆಚ್ಚೆ ಮೆಱೆ ದಪೆಂ ಎಂದು ಬೆಸಸಿ ನಿಜಲಿಂಗಕ್ಕೆ ಬಿಜಯಂಗೈವುದುಂ (ಬಸರ. ೨-೩೨); ಹರನ ಕರುಣದ ಹದನನೀತಂಗೊರೆದು ಶತರುದ್ರೀಯುವನು ವಿಸ್ತರಿಸಿ ಬಿಜಯಂ

ಗೈದನಾ ಮುನಿಪತಿ ನಿಜಾಶ್ರಮಕೆ (ಕುಮ್ಮಾರ್ಲ್ಯೋ. ೧೯-೫೪). **ಬಿಜಯಂಗೈಯಿ :** ೨. ನಮಗೆ ನಿಮಗಿನ್ನಾವ ಜಂಜಡ ಬೇಡ ತಪದ ಫಲಾವಳಿಯೆ ಸಾಕಿನ್ನು ಬಿಜಯಂಗೈಯಿ ನೀವು (ತೊರರಾ. ೦-೧೭-೦೭).

[ಬಿಜಯ + ಕೆಯ್₁]

**ಬಿಜಯಂಗೆಯಿ** 'ಬಿಜಯಂಗೆಯ್' ನೋ.

**ಬಿಜಯಂಗೆಯಿಸು** 'ಬಿಜಯಂಗೆಯ್ಸು' ನೋ.

**ಬಿಜಯಂಗೆಯ್ಸು**, ಬಿಜಯಂಗೆಯಿಸು, ಬಿಜಯಂಗೈಯಿಸು, ಬಿಜಯಂಗೈಸು (ಕ್ರಿ). ೧. ಕರೆದು ತರು ; ಬರುವಂತೆ ಮಾಡು : ಜಂಗಮವ ಕಂಡು ಗೃಹಕ್ಕೆ ಬಿಜಯಂಗೆಯ್ಸಿ ತಂದು (ಚನ್ನವ. ೪. ೩೪-೬೪); ಅವರ್ಗಳನೀಗ ಬಿಜಯಂಗೆಯ್ಸಿ ತಹೆ (ಬಸವು. ೬-೮೨) ; ಅರಸನನುಜರು ಸಹಿತ ಮುನಿಮುಖ್ಯರನು ಕಂಡಿದಿರೆದ್ದು ಚರಣದೊಳೆಱಗಿ ಬಿಜಯಂಗೆಯ್ಸಿ ತಂದನು ತಳಿರ ಮಂಟಪಕೆ (ನಳಚ. ೦-೦೦). ೨. ಒಳಹೊಗುವಂತೆ ಮಾಡು; ಪ್ರವೇಶಿಸುವಂತೆ ಮಾಡು : ಪಾರ್ವತಿಯಂ ಪರ್ವತರಾಜಂ ಪುಷ್ಪಕದೊಳ್ ಬಿಜಯಂಗೆಯ್ಸಿ ತಾನುಂ ಕುಳ್ಳಿರ್ದು (ಗಿಂಕ. ೫-೦೩ ಪ) ; ಸಜ್ಜಾಮಂದಿರಕೆ ಸಡಗರಿಸಿ ಮಾಯೆಯನಲ್ಲಮನನೊಲಿಸಿ ತಂದು ಬಿಜಯಂಗೆಯ್ಸಿದರು ಬಳಿಕಿಂದುಮುಖಿಯರು (ಪ್ರಭುಲೀ. ೫-೪೪). **ಬಿಜಯಂಗೆಯಿಸು :** ೧. ಋಷಿಕುಮಾರನಂ . . . ಒಲವಿನಿಂ ಬಿಜಯಂಗೆಯಿಸಿ ಕರೆತಂದು (ಉದ್ಭಟ. ೨-೨೨ ಪ) ; ದಯಾಳುವಂ ಬಿಜಯಂಗೆಯಿಸಿ ತಂದೊಳಗೆ ಕುಳ್ಳಿರಿಸಿ (ಬಸವು. ೫೨-೪). **ಬಿಜಯಂಗೈಯಿಸು :** ೧. ಸೌಂದರವತಿಯಂ . . . ಒಯ್ಯನೆ ಕನಕಾಂದೋಳನದೊಳ್ ಬಿಜಯಂಗೈಯಿಸಿಕೊಂಡೆಟ್ಟಿಂದುಪವನಮಂ ಪೊಕ್ಕು (ಉದ್ಭಟ. ೭-೩೩ ಪ). **ಬಿಜಯಂಗೈಸು :** ೧. ಹರಿಯ ಬಿಜಯಂಗೈಸಿ ತಂದಸುರರಸು ಭಂಗಿಸಿ ಯಜ್ಞಕರ್ಮವ ಧರಿಸಿ ಸುಖಿಯಹೆನು (ಕಾಶಿರಾ. ೦-೭೬) ; ಬಂದನತಿಹರುಷದಲಿ ಮುನಿಕುಲವೃಂದದೊಡನೈತರಲು ರಘುಕುಲಸಂದು ಬಿಜಯಂಗೈಸೆ ತಂದನು ರಾಜಮಂದಿರಕೆ (ರಾಮಚ. ೩೪-೦೨೭). ೨. ಮತ್ಸ್ಯದೇವರಸೊಯ್ದು ಗಂಗೆಯಲಿ ಒಯ್ದು ಬಿಜಯಂಗೈಸೆ ಗಂಗೆಯುನ್ನೈದೆ ತುಂಬಿದನೊಂದು ರೂಪಿಲಿ (ಸಂಭಕ. ೪-೬).

[ಬಿಜಯ + ಕೆಯ್ಸು]

**ಬಿಜಯಂಗೈ** 'ಬಿಜಯಂಗೆಯ್' ನೋ.

**ಬಿಜಯಂಗೈಯಿ** 'ಬಿಜಯಂಗೆಯ್' ನೋ.

**ಬಿಜಯಂಗೈಯಿಸು** 'ಬಿಜಯಂಗೆಯ್ಸು' ನೋ.

**ಬಿಜಯಂಗೈಸು** 'ಬಿಜಯಂಗೆಯ್ಸು' ನೋ.

**ಬಿಜಯಿತ**, ಬಿಜಯಿತ್ತ, ಬಿಜಯ್ತ, ಬಿದಿಯಾಯ್ತ, ಬಿದೆಯಿತ್ತ, ಬೆಜಯಿತ್ತ (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಬಿಜಯಿತನು ಮರಿಯಸೆಯೊಳ್ ಭಗವತಿಯಂ ಪದಿಷ್ಠೆಗೆಯ್ಸಿದೊಡೆ (ಪ್ರಸಂ. ೧೯೨೪, ೩೪-೦ ; ೮ನೆಯ ಶತ). **ಬಿಜಯಿತ್ತ :** 'ಬಿಜಯಿತ್ತಯ್ಯ' ಪರಾ. **ಬಿಜಯ್ತ :** ಗವಚಿ ಬಿಜಯ್ತನ ನಟ್ಟ ಬೆಲ್ಲಪಾತ್ರುದ ಮರಂಗಳ್ (ಎಕ. III (R), ತಂಜನ. ೨೩೪-೦೩; ಸು. 10ನೆಯ ಶತ). **ಬಿದಿಯಾಯ್ತ :** ಬದಿಯಾಯ್ತ ತುಱುವ ನಿಕ್ಕಿಸಿ ಕಾದು ಸತ್ತು ದಿವನೇಱಿದಂ (ಎಕ. II, ೩೯೪-೪; 884 ?). **ಬಿದೆಯಿತ್ತ :** ಪೆರ್ಬಟ್ಟಕ್ಕಂ ಬದಿರೂರ ಅಗ್ಗಳಮಿಳವಲ್ಲಿ ಅಂಕಕೆ ಕಾದಿದ ಬಿದೆಯಿತ್ತ ಸತ್ತನ್ (ಎಕ. X, ಶ್ರೀನಿವಾ. ೨೭-೨೪; 870). **ಬೆಜಯಿತ್ತ :** ಬೆಜ[ಯಿ]ತ್ತನ್ . . . ಆಣೆಯುಳ್ ಕುದುರೆಯುಳ್ ತಾಗಿ ಪಲರನಿಱಿದು ಸತ್ತೊಡೆ (ಎಕ. X, ಮುಳಬಾ. ೨೨೬-೭; ಸು. 890 ?).

[< ವಿಜಯಾದಿತ್ಯ]

**ಬಿಜಯಿತಗಾವುಂಡ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ . . . ಬಿಜಯಿತಗಾವುಣ್ಡನುಂ ಬನ್ದಗಾವುಣ್ಡನುಂ (ಎಕ. XI, ಹೊಳಲ್ಕೆ. ೩೦-೦೦ ; 964) ; ಬಿಜಯಿತಗಾವುಣ್ಡನ ಮಗಂ ಅಪ್ಪುಡಿಗಾವುಣ್ಡಂ (ಪ್ರಸಂ. ೧೯೩೦, ೪೩-೫; 994).

[ಬಿಜಯಿತ + ಗಾವುಂಡ (< ಗಾಮುಂಡ)]

**ಬಿಜಯಿತಮಂಗಲ** (ನಾ). ಒಂದು ಸ್ಥಳದ ಹೆಸರು : ಶ್ರೀಮನ್ನೊಟಿಮ್ಬಾಧಿರಾಜರ್ ಪೃಥ್ವೀರಾಜ್ಯಂಗೆಯ್ಯುತ್ತಿರೆ ಜೋಟಿ ಬಿಜಯಿತಮಂಗಲದ ನೊಟಮ್ಬನ ದಣ್ಡಂ ಕಾದು ಪೆಜ್ಜಿಟಿಯೊಳ್ನೊಟಮ್ಬರಸ ಕಾದಿ ಸತ್ತಂ (ಎಕ. IX, ಹೊಸಕೋ. ೪೭-೬; ಸು. 980 ?).

[ಬಿಜಯಿತ + ಮಂಗಲ]

**ಬಿಜಯಿತಾಚಾರಿ** (ನಾ). ಒಬ್ಬಾತನ ಹೆಸರು : ಬೆಸಂಗೆಯ್ದೊಂ ಕೊಯತೂರ ಬಿಜಯಿತಾಚಾರಿಯ ಮಗಂ ವಿಕ್ರಮಾದಿತ್ಯಂ (ಎಕ. X, ಮುಳಬಾ. ೦೦೬-೯; ಸು. 950).

[ಬಿಜಯಿತ + ಆಚಾರಿ]

**ಬಿಜಯಿತ್ತ** 'ಬಿಜಯಿತ' ನೋ.

**ಬಿಜಯಿತ್ತಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಬಿಜಯಿತ್ತಯ್ಯಂ ಮಾದಾಮತ್ತರಸರಾ ಪೊಟಲಮ್ಮನಾ ಮೇಗೆಟ್ಟು (ಎಕ. X, ಶ್ರೀನಿವಾ. ೪೦-೧; ಸು. 900).

[ಬಿಜಯಿತ್ತ (< ಬಿಜಯಿತ) + ಅಯ್ಯ₁]

**ಬಿಜಯಿಸು** (ಕ್ರಿ). ಬರು; ಆಗಮಿಸು; ದಯಮಾಡು : ಲಂಕೇಶ್ವರಂ ಶ್ರಮನಿವಾರಣಾರ್ಥಂ ಪುರಕೆ ಬಿಜಯಿಸಿದನು (ಶ್ರೀರಾಮಾ. ೬೦೦-೨೩೯); ಲಕ್ಷ್ಮಿ, ಪಡಸಾಲೆಯಿಂದ ದೇವರ ಮನೆಗೆ ಬಿಜಯಿಸಿದ ಭಾಸವಾಯಿತು (ದೀಪಹ. II. ೦೯೦).

[ಬಿಜಯ + — ಇಸು₃]

**ಬಿಜಯ್ತ** 'ಬಿಜಯಿತ' ನೋ.

**ಬಿಜಲಿ** (ನಾ). ೧. ಮಿಂಚು; ವಿದ್ಯುತ್ತು : ಈ ನಿನ್ನ ಹುಡುಗೆಯಂತೂ ಕೇವಲ ಬಿಜಲಿಯಾಗಿದ್ದಾಳೆ — ಬಿಜಲಿ (ಹಂಸಾ. ೪೮). ೨. ವಿದ್ಯುದ್ದೀಪ: ಅದು ಸಂಜೆಗೆ ಬಿಜಲಿಗಳನ್ನು ಹಚ್ಚಿದಾಗ ಆಟದ ಚಪ್ಪರ . . . ಒಳ್ಳೆ ಸಿಂಗಾರವಾಗಿ ಕಾಣುತ್ತಿದ್ದಿತು (ಪುನರ್ಜ. ೦೫೩).

[← ಹಿಂ. ಮರಾ. ಬಿಜಲೀ. / ಪ್ರಾ. ವಿಜ್ಜುಲಿಯಾ]

**ಬಿಜವರ** (ನಾ). ಒಂದು ಬಗೆಯ ಆಭರಣ : ಕೆಂದ ಪೀತಾಂಬರವ ಸುಥ್ಥ ಉಟ್ಟಿರುವಳು ಅಂದಮುಡಿಗೆ ಮುತ್ತಿನ ಸೊಂಡಿಲ ಬೈತಲ ಬಿಂದಿ ಬಿಜವರ ಬಲುಚೆಂದ (ಸಿದ್ಧಕೃ. ೦೯-೬೦).

[← ಮರಾ. ಬಿಜವರಾ, ಬಿಜೋರಾ]

**ಬಿಜಾಗರಿ** (ನಾ). ತಿರುಗಣೆ; ತಿರುಪುಮೊಳೆ ; ಕೀಲು : ಅದರ ಮೇಲೆ ತಲೆಯು ಹಿಂದೆ ಮುಂದೆ ಮಣಿಯುವ ಹಾಗೆ (ಬಿಜಾಗರಿಯಂತೆ) ಕೂಡ್ರಿಸಲ್ಪಟ್ಟಿದೆ (ಮುಂಬಯಿ. ೬-೩೦೨); ಬಿಜಾಗರಿಯನ್ನು ಟೆಲಿಗ್ರಾಫ್ ಸುತ್ತಿನ ತಂತಿಗೆ ಜೋಡಿಸಿರುತ್ತಾರೆ (ಬಿಜ್ಞಾ.ವಿ. ೨೩); ಬೀಗ, ಬಿಜಾಗರಿ, ಅರ, ಕೊಡತಿ ಮೊದಲಾದ ಸಾವಿರಾರು ಸಲಕರಣೆಗಳಿದ್ದುವು (ಅಘೂಕ. ೭೭).

[← ಮರಾ. ಬಿಜಾಗರೀ, ಬಿಜಾಗರೇ. / ತುಳು. ಬಿಜಾಗ್ರಿ, ಬಿಜಾಕ್ರಿ, ಬಿಜಗ್ರಿ]

**ಬಿಜಿಕ್, ಬಿಝಿಕ್** (ನಾ). ಒಂದು ಬಗೆಯ ಇಸ್ಪೀಟು ಆಟ ; ಇಬ್ಬರು ಅಥವಾ ನಾಲ್ವರು ಸೇರಿ ಆಡುವ ಆಟ; ಕಪ್ಪುರಾಣಿ ಮತ್ತು ಕೆಂಪು ರಾಜರನ್ನು ಸೇರಿಸಿ ಅಂಕಗಳನ್ನು ಆಡುವ ಆಟ : ಗಂಜೀಫ ಆಡೂ ಹಾಂಗಿಲ್ಲಾ, ಬಿಜಿಕ್ ಆಡೂ ಹಾಂಗಿಲ್ಲಾ (ಹಿಡುಗು. ೩೫); ಮಧ್ಯಾಹ್ನಕ್ಕ ಬಿಜಿಕ್ಕಿಗೆ ಬರತೀವಲ್ಲೋ ? (ಹಿಡುಗು. ೪೫). **ಬಿಝಿಕ್ :** ನಿನಗೆ ಬಿಝಿಕ್ ಬರುವುದೋ (ಗಾಳಿಕ. ೦೯) ; ಈ ಮಿತ್ರರನ್ನು ಕರೆದುಕೊಂಡು ಎರಡನೇ ಕೋಣೆಯಲ್ಲಿ ಬಿಝಿಕ್ ಆಡಲಿಕ್ಕೆ ಹೋಗುತ್ತೇನೆ (ಮೋಹಿನೀ. ೫೯).

[← ಮರಾ. ಬಿಜಿಕ್, ಬಿಝಿಕ್./ಇಂ. Bezique]

**ಬಿಜಿಲು** (ಗು). ಗಜಿಬಿಜಿ : ದೊಳ್ಳ ಹೆಬ್ಬಾಗಿಲಲ್ಲಿ ಕಾಣಿಸಿಕೊಂಡು ಬಿಜಿಲು ಬಿಜಿಲು ಮಾತಿನಲ್ಲಿ "ಅಂವಿನ್ನೂ ಬಂದಿಲ್ಲಂತೆ" ಎಂದನು (ಮಲಿಮ. ೩೭೭).

[?]

**ಬಿಜ್ಜ₁** (ನಾ). ಒಬ್ಬಾತನ ಹೆಸರು : ಸತ್ಯಳ್ಗೆ ಎಟ್ಟಿತ್ರಜೋ[ಳೆ] ಬಿಜ್ಜಂ ನಾಟ್ಟು[ವು]ಣ್ಡುಗೆಯೆ (ಸೌಇಇ. XX, ೦೫-೦೦; 904); ಮುಂ ಬಿಜ್ಜನಂ [ಬಾಕಾಂ. ವಜ್ರಿಯಂ ?] ಕಾದರಿಗನುಱಿದರಂ ಕಾವುದೇಂ ಚೋದ್ಯ

ಮಾಯ್ತೋ (ಶಂಶಭಾ. ೦೦-೬೦); P "ಬಿಜ್ಜನಂ=ವಿಜಯಾದಿತ್ಯನೆಂಬ ರಾಜನನ್ನು" (ಶಂಶದೀ. ೪೦೦).

ಬಿಜ್ಜನ ಬಂಟ=ಒಂದು ಬಿರುದು : ಬಲಪದರಿನ್ರಿಪತಿ ನಿಷ್ಕಂಟಂ ಬಿಜ್ಜನ ಬಂಟಂ (ಎಕ. VIII, ಸಾಗರ. ೦೧೯-೦೦; 1042). [<ಬಿಜಯ]

**ಬಿಜ್ಜ₂, ಬೆಜ್ಜ₂** (ನಾ). ಒಂದು ಬಗೆಯ ತೆರಿಗೆ : ಬೆಳುದಂಡ ಎಸೆ ಒಸಗೆ ಬಿಜ್ಜ ಬಿಡಾರವತ್ತ್ರಗಾಯಿ ಮೊದಲಾಗಿ ಆಉದೂ ಸಲ್ಲ ಸರ್ವ್ವಮಾನ್ಯವಾಗಿ (ಕಇ. I, ೩೯-೩; 1433 ?); ತುಳುವದ ಶಾಸನಗಳಲ್ಲಿ ಬರುವ ತೆರುವಣಗಳು: ತೆರು. . . ಒಸಗೆ, ಬಿಜ್ಜ, ಬಿಡಾರ (ತುಳುಶಾ. ೨೬೦). **ಬೆಜ್ಜ₂:** ಆ ಮಳಲೂರ ಪಟ್ಟಣದ ಹೊಚಿಕೇರಿಗೆ ಸಲುವ ಬೆಜ್ಜನೂ (ಎಕ. IX (s), ೩೪ವಿ. ೦೫೨-೦೦; 1535 ?). [ ? ]

**ಬಿಜ್ಜಣ, ಬಿಂಕಣ, ಬಿಂಕಣಿ, ಬಿಚ್ಚೆಳ₂, ಬಿಜ್ಜಣಿ, ಬಿಜ್ಜಲ, ಬಿಜ್ಜಳ, ಬೀಜನ, ವಿಜ್ಜನ** (ನಾ). ಬೀಸಣಿಗೆ; ವೀಜನ; ಪಂಕ : "ಬಿಜ್ಜಣವೆನ ಲಾಲವಟ್ಟಂ" (ಚಕಸೂ. ೦೫೨); ಹಿಮಾನಿಲನಿಂ ನಿಮಿರುವ ಪೊಂಬಾಳೆಯ ಸುಳಿಯೆಲೆಯ ಬಿಜ್ಜಣಂಗಳಿಂ . . . ಹಿಮಗೃಹಮಂ ಸಮೆದು (ಕುಸುಮಾ. ೦೩-೪೬ ವ) ; ಸೊಗಸಿ ತಂಗಾಳಿಗೊಲೆವೆಲೆಯಿಂದೆ ಬಿಜ್ಜಣಮೆಸಗಿ . . . ಬಾಳೆಗಳ್ ಮೆಱೆದುವು (ಪದ್ಮರಾ. ೮-೩೫). **ಬಿಂಕಣ :** "ಬಿಂಕಣ (ಣಿ)— ವ್ಯಜನ" (ಕರ್ಣಕೋ. ೩೦). 'ಬಿಂಕಣಗಿವಿಯ' ಪರಾ. P 'ಬಿಂಕಣ' ಶಬ್ದಕ್ಕೆ ಬೇರೆಯ ವ್ಯುತ್ಪತ್ತಿ ಸಾಧ್ಯವಿದೆಯೆ ಎಂಬುದು ಪರಿಶೀಲನಾರ್ಹ. **ಬಿಂಕಣಿ :** 'ಬಿಂಕಣಿಗಿವಿ' ಪರಾ. **ಬಿಚ್ಚೆಳ₂ :** ಸೂಱಿ ದೊಯ್ಯನೊಯ್ಯನೆ ಮಹೀಧರನಂದನರೊಲ್ದು ಬೀಸುವಾ ಬಾಳದ ಪೊಚ್ಚ ಬಿಚ್ಚಳದ ತಂಬೆಲರಿಂಪಿಗೆ ಮೆಯ್ಯನಿತ್ತು . . . ಉದ್ಭಟದೇವನೊಪ್ಪಿದಂ (ಉದ್ಭಟ. ೨-೦೦೩). **ಬಿಜ್ಜಣಿ :** ಅನಂತಮೆನಿಪ್ಪ ವೃತ್ತವದನದ ಲಕ್ಷ್ಮಿಯತ್ತಿ ಕೈನೀಡಿ ಬೀಸುತ್ತಲಿಹ ಬಿಜ್ಜಣಿಯು ಮೊತ್ತಮೆಂಬಂತಿರ್ದುದು (ರುಕ್ಮಾಂಗ. ೩-೬). **ಬಿಜ್ಜಲ :** ಚೂರ್ಣ ಹಿಮತಾಂಬೂಲ ಪರ್ಣ ಪೂಗಂಗುಡುವೆಲರ್ ನಯದ ಬಿಜ್ಜಲದ ವರ್ಣನೆಯ ಸತಿಯರೊಳು ಮಾರ್ನಡೆದೆಳರಸಿ (ಶಾಪಷಂ. ೯-೨೦). **ಬಿಜ್ಜಳ :** ಬಿಜ್ಜಳ ಹಡಪ ಚಾಮರ ಗಿಂಡಿ ಕಾಳಾಂಜಿ . . . ಮುಕುರ ಬಾಚಣಿಗೆಯು ಕಜ್ಜದರೊಱಗಿರ್ದರು ಸುತ್ತ (ಸೊಬಗೋ. ೨೩-೨೭); ಬಿಗಂಧದಣ್ಪಿಗೆ ಬಿಜ್ಜಳದೆಲರಿಗೆ ಪರಿಮಳಿಸುವ ಪನ್ನೀರ್ಗೆ ಪಿರಿದು ಬಯಸುತವರಿರ್ವರೆಸೆದರಾಗ (ಕಂಸವಿ. ೦೦-೩೨). **ಬೀಜನ:** ಹಿಮರೋಚಿಯು ತಣ್ಗದಿರ್ಗಳ್ಗೆ ಶೀತಶೀತಳಿಕೆಯ ಬೀಜನಕ್ಕೆ ಗುಱಿಯಾಯ್ತು [ವಿ]ಯೋಗಿಜನಂ ಬಸಂತದೊಳ್ (ವರ್ಧಮಾ. ೦೦-೪೯). **ವಿಜ್ಜನ :** 'ವಿಜ್ಜನಸತಿ' ಪರಾ.

ಬಿಜ್ಜಣದೂಳಿಗ=ಬೀಸಣಿಗೆ ಹಿಡಿದು ಬೀಸುವ ಸೇವೆ, -ಊಳಿಗ : ಅಂಗಮರ್ದನದ ಬಿಜ್ಜಣದೂಳಿಗವಮಾಂತ ಭೃತ್ಯರಿಂದಂಚಿತ ಚಿಕ್ಕದೇವನರನಾಯಕನಾ ಸಭೆಯೊಳ್ ವಿರಾಜಿಕುಂ (ಚಿಾದಕಂ. ೨-೬೯).

[< ಸಂ. ವೀಜನ./ಪ್ರಾ. ವಿಜ್ಜ=ಗಾಳಿ ಹಾಕುವುದು.-ಬೀಸುವುದು]

**ಬಿಜ್ಜಣಂದಳೆ** (ಕ್ರಿ). ಬೀಸಣಿಗೆಯನ್ನು ಹಿಡಿ: ಹಸ್ತಕಂಜದಿಂ ಕರೆದುಱಿ ಬಿಜ್ಜಣಂದಳೆದು ಬೀಸಿ ಮುದಂಬಡೆ (ವಿಷ್ಣುಪು. ೩-೬-೬೦). [ಬಿಜ್ಜಣ+ತಳೆ₁]

**ಬಿಜ್ಜಣವಿಕ್ಕು, ಬಿಜ್ಜಳವಿಕ್ಕು** (ಕ್ರಿ). (ಬೀಸಣಿಗೆಯಿಂದ ಬೀಸುವಂತೆ) ಗಾಳಿ ಹಾಕು ; ಗಾಳಿ ಬೀಸು : ಗಱಿಗೆದಱಿ ಕೊಡೆವಿಡಿದು ನಿಂದುವು ಬಿಸಿಲ್ಗೆ ನವಿಲೆಱಕೆಯಿಂ ಬೀಸಿ ಬಿಜ್ಜಣವಿಕ್ಕಿತಂಚೆ (ಶೃಂಗಾ. ೨೬-೩೬); ಆ ಪಾಂಥದೊಳು ಮಂದಾನಿಲಂ ಕುಳಿರಾಂತು ಬಿಜ್ಜಣವಿಕ್ಕಿದುದು (ಶಂಕರಾ. ೨-೦೯). **ಬಿಜ್ಜಳವಿಕ್ಕು:** ಬಳಲಿದರ್ಗೆಸೆವ ಗಱಿಯಿಂದ ಬಿಜ್ಜಳವಿಕ್ಕಿದಪುವು ಶಿಖಿವಿಸರಂ (ವಂದಿಮಾ. ೨೦-೨೬). [ಬಿಜ್ಜಣ + ಇಕ್ಕು]

**ಬಿಜ್ಜಣಿ** 'ಬಿಜ್ಜಣ' ನೋ.

**ಬಿಜ್ಜಣಿಗ** (ನಾ). ಬೀಸಣಿಗೆಯಿಂದ ಗಾಳಿ ಹಾಕುವವನು,— ಬೀಸುವವನು : ಹಡಪದವರಂ ಬಿಜ್ಜಣಿ[ಗಾ]ಗರನಾ ಕಾಳಾಂಜಿವಿಡಿವರಂ . . . ಎಳೆವಕ್ಕಳ ಕಡುವಿಲಾಸದೊಳಮರ್ಚಿಸಿ ಕೊಟ್ಟು (ಪಂಪು. ೩-೯೩). [ಬಿಜ್ಜಣ + — ಇಗ]

**ಬಿಜ್ಜಣಿಗೆ, ಬಿಜ್ಜಳಿಗೆ, ವಿಜ್ಜಣಿಗೆ** (ನಾ). = ಬಿಜ್ಜಣ : "ಬಿಜ್ಜಣಿಗೆ. ಆಲವಟ್ಟಂ — ಈ ೨ ತಾಲವೃಂತಂ" (ಕಶಶಾ. ೭೨-೬೩೨) : ಪೊಸ ತಳಿರ್ಗಳ ಬಿಜ್ಜಣಿಗೆಯಿನೆಸೆವೆಲರ್ಗಳಿನೊಗೆವ ಘರ್ಮಜಲಮಂ ಪೀರ್ದಾಱಿಸಿದುವು . . . ಲತಾಂಗಿಯರ್ಗೆ (ಅಂಪು. ೦೦-೬೩); ಅಂತಾ ಕಂತು ಸಂತಾಪಕ್ಕೆ ಪಕ್ಕಾಗಿ . . . ಬೀಸುವ ಕುಱುವೆಯ ಬಿಜ್ಜಣಿಗೆಯೊಳಂ ಪಾಸುವ ಬಾಳಪ್ಪಾಳತಳ್ಪತಳದೊಳಂ . . . ಶಿಶಿರೋಪಚಾರಚಾತುರತ್ವಂ ಮೆಱೆಯೆ (ಅನಂಪು. ೦೦-೨೯ ವ). **ಬಿಜ್ಜಳಿಗೆ :** ಅಹಿಗಳಂ ಸಂತೈಸಿ ಬಿಜ್ಜಳಿಗೆಯಾ ಮೇಲೆ ಬೀಸುತ್ತಲರುಣಿಸನಿತ್ತು ಸಂತೈಸಿ (ಪೀಕೃಪು. ೭-೩-೦); ವಿಳಿರ್ವೆಳದಲಿರ್ದೊಂಗಲ ಬಿಜ್ಜಳಿಗೆಯು . . . ಎಲರಿಂ ಕುಳಿರ್ದುದು ಮೆಯುರ್ ಬನದೊಳೊಯ್ಯನಾ ಅರಮಗನಾ (ಕಬ್ಬಾಸು. ೬೩ ವ್ಯಾಖ್ಯಾ). **ವಿಜ್ಜಣಿಗೆ :** ಸೊರಗುವವಗೆಯ ತಿಳಿದಳವಳಿದು ವಿಜ್ಜಣಿಗೆ ಬೀಸಿದುದು ನಿನಗೆ ಮಿಗೆ ಬೇಸಱುದುದಕಟಾ (೩೪ಕ. ೪೯). 'ಬಿಜ್ಜಣ', 'ಬೀಸಣಿಗೆ' ಪರಾ. [ < ಸಂ. ವ್ಯಜನಕ. / ತುಳು. ಬಿಜ್ಜಣಿಗೆ]

**ಬಿಜ್ಜಣಿಸು** (ಕ್ರಿ). (ಬೀಸಣಿಗೆಯಂತೆ) ಅತ್ತಿತ್ತ ಓಲೆದಾಡು,— ತೂಗಾಡು : ಕುಕ್ಕಿದಡುಗುರಲಿಳೆ ಬಿಜ್ಜಣಿಪ ಲಂಘನೆಗುದಯಗಿರಿಗಸ್ತಾದ್ರಿ ದಡದಡಿಪ . . . ಸಿಂಗಣಿಕಗಳನರ್ಬುದವನತಿಬಲ ತಾರ ತೋಱಿಸಿದ (ತೊರರಾ. ೪-೬-೨೩). [ಬಿಜ್ಜಣ + — ಇಸು]

**ಬಿಜ್ಜಲ** 'ಬಿಜ್ಜಣ' ನೋ.

**ಬಿಜ್ಜವಳ** 'ಬಿಜ್ಜೆವಳ₁' ನೋ.

**ಬಿಜ್ಜಳ** 'ಬಿಜ್ಜಣ' ನೋ.

**ಬಿಜ್ಜಳವಿಕ್ಕು** 'ಬಿಜ್ಜಣವಿಕ್ಕು' ನೋ.

**ಬಿಜ್ಜಳಿಗೆ** 'ಬಿಜ್ಜಣಿಗೆ' ನೋ.

**ಬಿಜ್ಜಾದರ, ಬಿಜ್ಜೋದರ, ವಿಜ್ಜಧರ** (ನಾ). ೧. ದೇವತೆ; ವಿದ್ಯಾಧರ: ಆ ಡಂಗುರದನಿಗೇಳಿ ಬಿಜ್ಜಾದರನಾಡ ನರೇಂದ್ರನಂದನರು . . . ಗತಿ ಯುದ್ಧವ ಮಾಡುವೆವೆಂದೆಯ್ದಿದರು (ನೇಮಿಸಂ. ೩-೩೩). **ಬಿಜ್ಜೋದರ:** ೧. "ಅಮರ್ದುಣಿಸುಂಗಳ್ . . . ಬಿಜ್ಜೋದರರ್ . . . (ಬೋಳೆಯರ್) — ಈ ೯ ದೇವರ್ಕಳ ಪೆಸರ್" (ಕಶಶಾ. ೪೬-೦೯); ವಿದ್ಯಾಧರ—ಬಿಜ್ಜೋದರ (ಶಮುದ. ೨೩೯ ಪ್ರಯೋ); ನರರ ಬಿಜ್ಜೋದರರ ಸುರರ ಮುನಿವರರ ಮನದಟಲುರಿ ಪಿರಿದಾಗೆ (ರಾಮಾಕ್ಶ. ೦೨-೦೬). **ವಿಜ್ಜಧರ :** ೨. ಒಬ್ಬಾತನ ಹೆಸರು : ಶ್ರೀಮದುಗ್ಗಮರರ ಪ್ರೋ ಇತ್ತರ್ ವಿಜ್ಜಧರರ ದೇಗುಲ (ಎಕ. VI, ಕಂಕಕ. ೩೦-೨; ಸು. 750). [ < ಸಂ. ವಿದ್ಯಾಧರ]

**ಬಿಜ್ಜಾದರಿ, ಬಿಜ್ಜೋದರಿ** (ನಾ). ವಿದ್ಯಾಧರ ಸ್ತ್ರೀ; ಹೆಣ್ಣುದೇವತೆ : ಆದರದಿಂ ಪುಣ್ಯನಿಧಿ ನಿನ್ನ ಕಂಡು ಬಿಜ್ಜಾದರಿಗೀಗಲೆಯ್ದಿದವು (ಕ್ರೀಪಾಂ. ೬-೩). **ಬಿಜ್ಜೋದರಿ :** "ಬಿಜ್ಜೋದರಿಯರೆ ವಿದ್ಯಾಧರಿಯರ್" (ಚಕಸೂ. ೬೪) ; ಮುಂಗಿಲೆಡೆಯೊಳೆಡೆವಿಡದಡೆಯಾಡಿ ಬಟಲ್ದ ಬಿಜ್ಜೋದರಿಯರ್ಕಳೆಱವಟ್ಟಿಗೆದಾಣಮೆಂಬಂತೆಸೆವೆಳನೀರ್ಗಳಂ ಪೊತ್ತಾಗಸದೆಡೆಗಡರ್ವ ಬೆಂದೆಂಗಿನ ಮರಂಗಳೊಳಂ (ಕಬ್ಬಿಗಾ. ೩೦) ; ಇಲ್ಲೆ ಹುಟ್ಟಲುಬಹುದು ಗಂಗೆಯುಂ ಇಲ್ಲೆ ಬಿಜ್ಜೋದರಿಯುಂ (ಪೂಷಕ. ೨೦-೬). [<ಸಂ. ವಿದ್ಯಾಧರೀ]

**ಬಿಜ್ಜು₁** (ನಾ). (ಅತಿಯಾಗಿ ತಿನ್ನುವ) ಒಂದು ಬಗೆಯ ಪಕ್ಷಿ : ಪಾರಿವ ಕೌಡೆ ಬಿಜ್ಜು ಹೊಂಗಱಿ ಚರಣಾಯುಧಂ ಗಿಡುಗ ಗೀಜಿಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಪಪ್ಪಶಾ. ೬-೨೦೩); ಪಕ್ಷಿಗಳ ಗೂಡು ಗುಂಪುಗಳ ಗುಯರ್ಗಾಡುವ ಗಿಡುಗ ಲಗಡು ಬಿಜ್ಜುಗಳಂ (ಶಾಗಂಂ. ೩೦-೬).

[ದೇ. ‖ ಕೊತ. ವಿಜ್]

**ಬಿಜ್ಜು₂, ಬಿಚ್ಚು₄** (ನಾ). ೧. ಸಿಡಿಲು : ಕೂಸು ಉಣ್ಣುತ್ತಿರಲಾಗಿ ಆಕಾಶದ ಬಿಜ್ಜು ಹೊಯಿದಿತ್ತು . . . ಆ ಬಿಜ್ಜು ಹೊಟ್ಟೆಗೆಯ್ದುದೆ ಅಪ್ಪ ಅಪ್ಪೆ ಎನ್ನುತ್ತಿದ್ದಿತ್ತು (ವಚನಗಂ. ೪. ೨೩೨-೨೪). ೨. (ಅಲಂ) ಹಾನಿ ಕೆಡುಕು: ಎಲ್ಲರಿಗಿಂತಲೂ ಹೆಚ್ಚಾಗಿ ತಾವು ಮೇಲಕ್ಕೆ ಏರಬೇಕೆಂದು ಯತ್ನ ಮಾಡುವಾಗ, ಏನೋ ಒಂದು ಬಿಜ್ಜು ಬಡಿದು ಅವರು ಕೆಳಕ್ಕೆ ಬೀಳುತಾರೆ (ಸಂಚಿಕ. ೨೩೬). **ಬಿಚ್ಚು₄** : ೧. ಚತುರನೆ ಒಂದು ಸಿಡಿಲು ಬಡಿಯಿತು . . . ಆ ಅಧಿಕಾರಿಯು ತಾನೇ ಆ ಸ್ಥಳಕ್ಕೆ ಬಂದು ನೋಡಿ ಬಿಚ್ಚು ಬಡಿದು ಆ ಹಗರಣವೆಲ್ಲಾ ಆಯಿತೆಂದು ನಿಷ್ಕರ್ಷೆ ಮಾಡಿಕೊಂಡು (ಅದೂಚಿ. ೦೬೯).

[<ಪ್ರಾ. ವಿಜ್ಜು, ವಿಜ್ಜುಆ./ಹಿಂ. ಬಿಜ್ಜು; ಮರಾ. ವೀಜ್; ಪಂಜಾಬಿ. ಬಿಜ್ಜು; ಸಿಂಧಿ. ವಿಜು]

**ಬಿಜ್ಜೆ, ವಿದ್ದೆ** (ನಾ). ೧. ತಿಳಿವಳಿಕೆ : ಜ್ಞಾನ ; ವಿದ್ವತ್ತು : "ಬಿಜ್ಜೆಯೆಂದು ವಿದ್ಯಂ" (ಕಶಸಾ. ೩೭-೨೪೦); ಉದ್ಯೋಗ_ಉಜ್ಜುಗ ; ವಿದ್ಯಾ–ಬಿಜ್ಜೆ (ಶಮದ. ೨೫೯ ಪ್ರಯೋ); ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ ಬಿಜ್ಜೆಯ ಬೇರ್ . . . ಅನುವಾತುವಣ್ಣ ಬಿಡೊಗ್ನೆಯೆನೆ ಚಿಕ್ಕದೇವ ನೆಸೆದಂ (ಅಶ್ವ. ೦೩-೨೦). ೨. ಕಲಿಕೆ; ವಿದ್ಯೆ ; ಶಿಕ್ಷಣ: ಸುಗಜಾಶ್ವರೋಹಣ ಭರವಿರಿಂಚಿಯೆನಿಪ್ಪ ಬಿಜ್ಜೆಯ ಕಲಿತನಾ ಕುವರ (ಸುಕ್ಕಳಾ. ೪-೩); ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದ್ಯೆಸೆ (ಹರಿಶ. ೦-೨೯). ೩. ಜಾಣ್ಮೆ ; ಪ್ರೌಢಿಮೆ ; ಚಾತುರ್ಯ ; ಕೌಶಲ : ಅಲರುವಿಲ್ಲನ ಬಿಜ್ಜೆಯೆಂಬುಗ್ಗಲದ ಬಿನ್ನಣ ಸವೆದ ನರಪುತ್ಥಳಿಗಳೆನಿಸಿದರಾಂತು ನಿಂದಖಿಳಾವನೀಶ್ವರರು(ಸುಕ್ಕಳಾ. ೩೦-೬೩); ಬಿಗುರ ಬೀರಿದ ಬೀರವೊ ? ಬಲ್ಲ ಬಿಜ್ಜೆಯೊ (ಗಿರಿಜಾ. ೫೨-೬). ೪. [ಜೈನ] ದೇಹವನ್ನು ಮಾರ್ಪಾಟುಗೊಳಿಸುವ ಶಕ್ತಿ ; ವೈಕುರ್ವಣವಿದ್ಯೆ : ದೇವಕೋಟಿಗಳ ಬಿಜ್ಜೆಗಳೊಳ್ ತೊಡರ್ದೇಕಿ ಪೋಪನೀ ದೊರೆಯನನಾಳ್ದನಂ ಪಡೆವುಪಾಯಮದಾವುದೊ ಜನ್ಮಜನ್ಮದೊಳ್ (ಆದಿಪು. ೯-೭೩) ; ನಾಲ್ಕುಂ ತೆಱದ ಪುಸಿವಡೆಯಂ ಬಿಜ್ಜೆಯಿಂ ಪುಟ್ಟಿಸಿ (ಕಬ್ಬಿಗಾ. ೦೯೬). **ವಿದ್ದೆ** : ೧. "ವಿದ್ದೆ_ವಿದ್ಯಾ" (ತದ್ಭವೋ. ೪೦); ಓದದೋವದುಱುದ ವಿದ್ದೆ ಸಲ್ಲದ ಚದುರ್ ನೆಱೆ ಕಲ್ಲದ ಕಲ್ಪಿ (ಕಂಕಥಾ. ೪-೯೩); ಶ್ರೀಗೆ ವಿಜಯಕ್ಕೆ ವಿದ್ದೆಗೆ ಚಾಗಕ್ಕದಟಂಗೆ ಜಸಕೆ ಪೆಂಪಿಂಗಿನಿತಕ್ಕಾಗರಂ (ಎಕ. II, ೦೬೩-೬೪; 982) ; ಅವರವರುಗಳ ವಿದ್ದೆಯ ನೋಡಿ ಮೆಚ್ಚಿ ಸದ್ವಿಪರದಿಂದುಡುಗೊಱೆಯಿತ್ತು (ಬೋಹಕ. ೦೬-೦೭). ೨. ಗುರುಗಳೆನಗಂ ಭಾರದ್ವಾಜಂಗಮೊರ್ವರೆ ವಿದ್ದೆಯೊಳ್ ಪುರುಡು ಪಿರಿದುಂಟು (ಕಂಕಥಾ. ೦೨-೦೯); ತದಂಬಿಕೆ ಲಸದ್ವೈರಾಗ್ಯ ಸಂಯುಕ್ತೆ ಸಂಜಾತಾನಂದದಿನಿತ್ತು ವಿದ್ದೆಗಳನಾ ಭೀಷ್ಮಂಗೆ (ಕೇಖಪು. ೩-೨೨).

[<ಪ್ರಾ. ವಿಜ್ಜಾ./ಸಂ. ವಿದ್ಯಾ]

**ಬಿಜ್ಜೆಗ** (ನಾ). ೧. ವಿದ್ವಾಂಸ ; ಪಂಡಿತ : 'ಬೇದಬಿಜ್ಜೆಗ' ಪರಾ. ೨. ಚತುರ ; ಕುಶಲ ; ಜಾಣ : ಸರಭಸದಿಂದೆರಟ್ಟಬಲದ ಬಿಲ್ವಡೆಯೊಳ್ ಸಲೆ ಬಿಲ್ಲ ಬಿಜ್ಜೆಗರ್ ಸುರತನಡುತುರ್ತೆಕೊಳ್ವ . . . ಬೇಗಮದೇತಟಿಯೊ (ಶಾಂತೀಶ್ವ. ೬-೭೭).

[ಬಿಜ್ಜೆ + –ಗ₂]

**ಬಿಜ್ಜೆಗಲ್, ಬಿಜ್ಜೆಗಲಿ** (ಕ್ರಿ). ವಿದ್ಯೆಯನ್ನು ಕಲಿ ; ಶಿಕ್ಷಣವನ್ನು ಹೊಂದು : ಆವಗಂ ಬಿಜ್ಜೆಗಲ್ವುದುಂ ಬಿನಯಂದೋರ್ಪುದುಂ . . . ಜಯಮುಮಂ ಸಂಪಾದಿಪುದುಂ ಮೊದಲಾದೊಳ್ಗ್ಯುದೊಳೆ ಪೊತ್ತುಗಳೆಯುತ್ತ (ತಕಾ. ೩-೦೪). **ಬಿಜ್ಜೆಗಲಿ** : ಪಿರಿಯರ ಮಗಳಿಂದು ಬಿಜ್ಜೆಗಲಿತೆನೆಂದು . . . ಬೆಱೆಯುವನುಸರಿಸುವುದಾತ್ಮವಲ್ಲಭನ (ಹರಿಶ. ೩-೩೦).

[ಬಿಜ್ಜೆ + ಕಲ್₁]

**ಬಿಜ್ಜೆಗಲಿ** 'ಬಿಜ್ಜೆಗಲ್' ನೋ.

**ಬಿಜ್ಜೆಗಲಿಸು** (ಕ್ರಿ). ಶಿಕ್ಷಣ ಕೊಡು ; ವಿದ್ಯೆಯನ್ನು ಹೇಳಿ ಕೊಡು : ನಿನಗೆ ಬಿಜ್ಜೆಗಲಿಸಿದ ಬೊಜ್ಜು ಹಾರುವ, ಆ ಗಾಲವ, ಹಾಳಾಗಿ ಹೋಗಲಿ ! (ಚಂದ್ರಕ. ೪೦-೦೯).

[ಬಿಜ್ಜೆಗಲ್ + – ಇಸು₁]

**ಬಿಜ್ಜೆಗುಱುಹು** (ನಾ). ವಿದ್ಯೆಯ ಗುರುತು.– ಚಿಹ್ನೆ : ಗುತ್ತಿಗೆವಿಡಿದಂತೆ ನೆಱೆ ಸಾಧಿಸಿದೆಱುವತ್ತುನಾಲುಕು ಬಿಜ್ಜೆಗುಱುಹ ವ್ಯಕ್ತಿಕಿಚಾಸ್ತಿತೆಯರ ಪರಿಕೆಯ ನೋಡು ಚಿತ್ತಯಿಸೆಂದರಂಗಜಗ (ಮೋಹತ. ೧೬-೦೦).

[ಬಿಜ್ಜೆ + ಕುಱುಹು (<ಕುಱುಪು)]

**ಬಿಜ್ಜೆವರು** (ನಾ). ಒಂದು ಊರಿನ ಹೆಸರು : ಬನ್ನಗಾವುಣ್ಣನುಂ ಕೊಳ್ಳವ್ಮಗಾವುಣ್ಣನುಂ ಗಾವುಣ್ಣ ಗಣ್ಣಯ್ಯನುಂ ಬಿಜ್ಜೆವರುವಯಿನ್ದ ಮಯ್ಯನೆಱೆಯಮ್ಮನುಂ (ಎಕ. XI, ಮೊಳಕ. ೩೦-೦೦; 964).

[☞ ಇದು 'ಬಿಜ್ಜೆವರ' ಎಂದಿರಬಹುದೆ ?]

**ಬಿಜ್ಜೆವಳ, ಬಿಜ್ಜವಳ** (ನಾ). ೧. ವಿದ್ಯಾವಂತ : ಪಂಡಿತ ; ವಿದ್ವಾಂಸ : ಸರಸತಿಯಡಿದಳೆಗೆ ತಲೆದುಡುಗೆಯೆಂನೆ ಪೆಸರ್ಪಡೆವ ಬಿಜ್ಜೆವಳನಿಂ ಸಮೆದ ಕಾವಪ ಗೆಲ್ಲಂ ಮೆಱೆಯುತಿರ್ಪುದು (ಕಬ್ಬಿಗಾ. ೩೮೯); ಪೊಜಗಣ ತೋಪುಗಳೊಳಂ ಬಿಜ್ಜೆವಳರ ನೆರವಿಗಳೊಳಂ . . . ತವ್ಮ ಚಾರರಂ ನೆಲೆಗೊಳಿಸಿ (ಭಾರತಾಂ. ೪೩೩-೭೦); ನಾನಾ ನಾಡುಗಳಿಂದೆ ಬಿಜ್ಜೆವಳರುಂ ಕೈಗೈಯ್ತುದೊಳ್ಪಾಣರುಂ ತೇನಂತೇನಮೆ ಬಂದು ಬೀಡುಗೊಳುತಂ (ವ್ಯಸೂಮ. ೧-೩೪). ೨. ವಿದ್ಯೆಯ ಅಧಿದೇವತೆ ; ಗಣಪತಿ : "ಕರಿಮೊಗಂ, ಇಲಿದೇರಂ, ಎಡರ್ಗೇಡಿ, ಬಿಜ್ಜೆವಳಂ . . . ತಂದೆಯ ತಂದೆಯಿಲ್ಲದವಂ ಈ ೭ ವಿನಾಯಕಂಗೆ ಪೆಸರ್" (ಕಶಸಾ. ೪೭-೪). **ಬಿಜ್ಜವಳ** : ೨. "ಬಂಕಣಗಿವಿಯನೆನೆ ಬಿಜ್ಜವಳನೆನಲ್ ವಿಘ್ನೇಶಗಭಿಧಾನವು" (ಕಶರ. ೬೦).

[ಬಿಜ್ಜೆ + –ವಳ]

**ಬಿಜ್ಜೆವಳ್ತಿ** (ನಾ). ವಿದ್ಯಾವತಿ ; ಪಂಡಿತೆ : ಕಿರಿದು ಪೊಳ್ತೀ ನೆಲದೊಳಾಂ ಬಿಜ್ಜೆವಳ್ತಿಯರೆನಿಸಿದುದರ್ಕೆ . . . ಮೆಚ್ಚಂ ಪಡೆಯದಿರ್ದೊಡೆಮಗೆ ಪೆಸರ್ವಾಸಿಯಿಲ್ಲಂ (ಮರಾಚ. ೬-೦೯).

[ಬಿಜ್ಜೆವಳ + < – ಇತಿ₁ (< – ಇತ್ತಿ)]

**ಬಿಜ್ಜೆವೆಣ್ಣು** (ನಾ). ವಿದ್ಯೆಯ ಅಧಿದೇವತೆ ; ಸರಸ್ವತಿ : "ಬಾಣಿ ಬಿಜ್ಜೆವೆಣ್ಣುಂ ಬಾಸೆವೆಣ್ಣು ಸರಸತಿಯುಮೆನೆ ವಾಣಿಯಕ್ಕುಂ " (ಕಬ್ಬಿಕೈ. ೯).

[ಬಿಜ್ಜೆ + ವೆಣ್ಣು (< ಪೆಣ್)]

**ಬಿಜ್ಜೋದರ** 'ಬಿಜ್ಜಾದರ' ನೋ.

**ಬಿಜ್ಜೋದರಿ** 'ಬಿಜ್ಜಾದರಿ' ನೋ.

**ಬಿಝಿಕ್** 'ಬಿಜಿಕ್' ನೋ.

**ಬಿಟಿ** 'ಬಿಟ್ಟಿ₁' ನೋ.

**ಬಿಟೆ** 'ಬಿಟ್ಟಿ₁' ನೋ.

**ಬಿಟೋಜ** (ನಾ). ಒಬ್ಬಾತನ ಹೆಸರು : ಕಲಿವಿಟ್ಟಯ್ಯನ ಲಿಖಿತ ಬಿಟೋಜನ ಸಿಲಾಕರ್ಮ್ಮ (ವ್ಯಕಂ. ೦೯೨೯, ೭೬-೦೩; 964).

[<ಬಿಟ್ಟು₂ + ಓಜ₁ (< ಒಪಿರ್ಝ)]

**ಬಿಟ್ಟ** 'ಬಿಡು₁' ಪರಾ.

**ಬಿಟ್ಟಪು** (ನಾ). ಬಿಗಿ; ದಾರ್ಢ್ಯ ; ಅಡವು (?) : ಸಱೆಗೊಂಡ ಪೆರ್ಬಸಿಱ್ ಬಿಟ್ಟಪುಗೆಟ್ಟ ತೋಳ್ ತೊಡೆ ತೆರಳ್ದ ಮೊಗಂ ನೆರೆ ವತ್ತೆ ಮಾಣಳೀ ಬಟ್ಟಿಯ ಚಿಕ್ಕಣಿಕ್ಕೆ ಪೊಸ ಬರ್ಚರ ಸೂಳೆಯರಾಳಿಗೊಂಬುದಂ (ಸೂಕ್ತಿಸು. ೬-೩೩೪). [?]

**ಬಿಟ್ಟರಸ** (ನಾ). ಒಬ್ಬಾತನ ಹೆಸರು : ಸಿಡಿಯನೂರ ಗಾವಿಂಗಗೆಯ್ತು ಮಿದೊ ಊರ ಬಿಟ್ಟರ[ಸ] ರ[ಸ]ವಟಗೆಯ ಗಂಗರ ಕಾಳೆ × × × (ಸೌಇಇ. XX. ೦೦-೪; ೩ ನೆಯ ಶಕ).

[ಬಿಟ್ಟು₂ + ಅರಸ₁]

**ಬಿಟ್ಟಿ₁, ಬಿಟಿ, ಬಿಟೆ, ಬಿಟ್ಟೆ** (ನಾ). ೧. ಸಂಬಳವಿಲ್ಲದೆ ಮಾಡುವ ಕೆಲಸ ; ಪುಕ್ಕಟೆ ಕೆಲಸ : ನಾಡ ಗಾದೆಯ ಬಿಟ್ಟಿಯಿಂದ ಕಟಕವ ಕಂಡೆನೆಂಬು

ದೆನಗಾಯ್ತೆನುತ್ತೆಱಗಿದಂ ಭೂನಾಥನು (ಹಪಲಾ. ೫-೮೪); ಪಂಪಾಕ್ಷೇತ್ರಮಂ ಕಾಣ್ಬುದನಂತತಪಃಫಲವಿಲ್ಲದೆ ಸಮನಿಸದು ನೀಂ ಬಿಟ್ಟಿಯಂ ಬಂದು ಕಟಕಮಂ ಕಂಡ ತೆಱನಾಯ್ತು (ಉದ್ಭಟ. ೩-೫೨ ವ); ಬೆಸಸುತಂ ತವೆ ಬಿಟ್ಟಿಯಂ ಮಾಡಿಸಿಕೊಳುತ ಬಡಕೆಲಸವಂ ಸಂತಸದಿ ಮಾಡಿಸೆ ಮಾಡಿ ಬದುಕುವೆವು (ಬಸಪು. ೨೩-೧೮). 'ಮೂವಿಟ್ಟಿ' ಪರಾ. ೨. ಕೆಲಸ; ಕಾರ್ಯ; ವೃತ್ತಿ : ಅಷ್ಟವಿಧಾರ್ಚನೆ ಷೋಡಶೋಪಚಾರವನು ಅರಸಱಿಯದ ಬಿಟ್ಟಿಯ ಮಾಡುವೆನು (ಬಸವ. ೩೭೯); ಎನ್ನ ಮಾಟ್ಟಿ ಬದಗೇಂ ಪೆಱತಾದುದೆ ಬೇಡ ಕೆಮ್ಮಗಂ ಮನೆಗುಸುಟೀಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಿಟ್ಟಿಯೋ (ಲೀಲಾವ. ೨-೧೧೪); ಕಾಯಕ ಯಾವುದಾದರೇನು ? ಶಿವನ ಬಿಟ್ಟಿಯೆಂದು ಮಾಡುವ ಮಾಟವೆಲ್ಲ ಕಾಯಕ (ತುಂಗಭ. ೮). ೩. ಪುಕ್ಕಟೆ ; ಉಚಿತ : ಸಿಟ್ಟು ಸೆಡವಿಲ್ಲದೆಯೆ ಬಿಟ್ಟಿ ದುಡಿದವ ಕೋಣ (ಅರಳು. ೩೪೭-೬) ; ಈ ಮನೆ ೧೮,೦೦೦ ಕ್ಕೆ ಮುಗಿದರೆ ಬಿಟ್ಟಿ ಆದ ಹಾಗೆ (ಯೋಧಪು. ೨೯) ; ಚಟ್ಟದಿನ ಬಿಟ್ಟಿಗೂ ಹೋಗಬೇಡ (ಗಾದೆ). ೪. ವ್ಯರ್ಥವಾದುದು; ನಿರುಪಯುಕ್ತವಾದುದು : 'ಬಿಟ್ಟಿವೇಟಿ' ಪರಾ. ೫. ಒಂದು ಬಗೆಯ ಸುಂಕ: ನೀರುಣಿಸುಂಕಂ ಬಿಟ್ಟಿ ಮೊದಲಾಗಿ ಎಲ್ಲಮಂ ಬಿಟ್ಟೋವು (ಸೌಇಇ. XI–i, ೦೫-೫; 873) ; ನಕರಕ್ಕಂ ಮಹಾಜನಕ್ಕಂ ಗಾವುಣ್ಡಗಳ್ಗಂ ಪಟ್ಟಮಟಸ್ಥಾನಕ್ಕಂ ಬಿಟ್ಟಿಯಿಲ್ಲ (ಸೌಇಇ. IX– 1, ೭೭-೩೫ ; 992). **ಬಿಟಿ :** ೫. ಮನೆವಣ ಸೊಲಗೆ ಬಿಟಿಯಿನ್ನಿಷ್ಟು ಸರ್ವ್ವಮಾನ್ಯವಾಗಿ ಸ್ವರುಚಿಯಿನ್ದ ಕೊಟ್ಟರು (ಎಕ. 1, ೫೦-೮; ಸು. 13ನೆಯ ಶತ) ; ಹಳದು ಹೊಸ್ತು ಗ್ರಾಮ ವೆಚ ಬಿಟಿ ಬಿರಾಡ ಸೊಲ್ಲಗ ಆಉದೂಯಿಲ್ಲ (ಎಕ. X, ಕುಳಬಾ. ೧೭೨-೦೫; 1496). **ಬಿಟಿ :** ೫. ಏರುಗಾಣಿಕೆ ಕಾಣಿಕೆ . . . ಬಿಟಿ ಮೊದಲಾಗಿ ಎಲ್ಲವನು ಸರ್ವ ಮಾನ್ಯವಾಗಿ ಬಿಟ್ಟೆಉ (ಎಕ. IX, ಹೊಸಕೋ. ೪-೧೧; 1581). **ಬಿಟ್ಟಿ :** ೫. ಜೋಲಕಾರುಣ್ಯ ಜೆಡೆದೆರ್ಗೆ ೯ ಪ ೩ ೧೧ ಬಿಟ್ಟಿಯ ಭಂ ೧ಕ್ಕಂ ಗ ೨ ಎತ್ತಿಲು ಪೊತ್ತರ ಪ ೫ (ಎಕ. XVI, ಚಿಕ್ಕನಾ. ೭೦-೨೦; 1330).

**ಬಿಟ್ಟಿಗಂಟು** = ಯಾವ ಬಗೆಯ ಶ್ರಮವೂ ಇಲ್ಲದೆ ದೊರೆತ ಹಣ; ಪುಕ್ಕಟೆಯಾಗಿ ಲಭ್ಯವಾದ ದುಡ್ಡು : ಬಿಟ್ಟಿಗಂಟು ಸಿಕ್ಕಿದರೆ ತೆಗೆದು ಕೊಳ್ಳುವುದು ಸರಿಯೇ ? (ಕೂಶ). **ಬಿಟ್ಟಿಬೇಗಾರಿ** = ಯಾವ ಪ್ರತಿ ಫಲವೂ ಇಲ್ಲದೆ, ಪುಕ್ಕಟೆಯಾಗಿ ಮಾಡುವ ಕೆಲಸ : ಬಲವಂತದಿಂದ ಬಿಟ್ಟಿಬೇಗಾರಿಯಲ್ಲಿ ಹೊಲಗದ್ದೆಗಳ ಮಾಡಿಸಿಕೊಂಡು ಯಿದ್ದಾಗ್ಯೂ (ಮುಹಾಪಂ. II, ೫೪) ; ಹೆಣ್ಣುಗಂಡು ಆದಿಯಾಗಿ ಇವರ ಅರಮನೆಯಲ್ಲಿ ಬಿಟ್ಟೀಬೇಗಾರಿ ಚಾಕರಿಯನ್ನು ಮಾಡಿ ಮಾಡಿ ಮುಪ್ಪಾಗುತ್ತಾ ಇದ್ದರು (ಸುಮುಚ. ೦); ಧನಿಯರ ಬೇಸಾಯ ಬಿಟ್ಟಿಬೇಗಾರಿ ಇದ್ದದ್ದೇ (ಬಾಳಗ. ೫೫). **ಬಿಟ್ಟಿಯ ಮಾನಿಸ** = ಹಣ ಪಡೆಯದೆ ಕೆಲಸಮಾಡುವವನು ; ಬಿಟ್ಟಿಯಾಳು : ಪ್ರಕಾಶಾಪ್ರಕಾಶರೂಪಂಗಳಾದ ತೇರಾನೆಕುದುರೆಕಾಲಾಳ್ಗಳುಂ ಬಿಟ್ಟಿಯ ಮಾನಿಸರುಂ ಗೂಢಚರರುಂ (ಚಾರಚಾಂ. ೩೭೭-೫೯). **ಬಿಟ್ಟಿಹಣ** = ಬಿಟ್ಟಿಗಂಟು : ಸುಲಭವಾಗಿ ಸಂಪಾದಿಸಿದ ಬಿಟ್ಟಿಹಣದ ಮಾಲೀಕತ್ವ ವನ್ನು ಸೂಚಿಸುವ ದುಂದುವೈಭವ ಆ ವಾತಾವರಣದಲ್ಲಿ ತುಂಬಿ ತುಳುಕು ತ್ತಿತ್ತು (ಪುನರು. ೨೦೦). [< ಪ್ರಾ. ವಿಟ್ಠಿ / ಸಂ. ವಿಷ್ಟಿ]

**ಬಿಟ್ಟಿ$_2$** 'ಬಿಟ್ಟು$_2$' ನೋ.

**ಬಿಟ್ಟಿಕೂಳು** 'ಬಿಟ್ಟಿಗೂಳು' ನೋ.

**ಬಿಟ್ಟಿಕೆಲಸ** 'ಬಿಟ್ಟಿಗೆಲಸ' ನೋ.

**ಬಿಟ್ಟಿಗ** (ನಾ). ೧. ಒಬ್ಬಾತನ ಹೆಸರು : ನರಸಿಂಘಅಮ್ಮ × × × ಳಥುಜ್ಞಮರಾ ಬಿಟ್ಟಿಗ ಗೋನಾಥನಾ[ಗುಟೆ]ಪೋತ ಬಮ್ಮ (ಸೌಇಇ. XI–i, ೦೩-೦೭; 869 ); ಬಿಟ್ಟಿಗ ಸಟ್ಗಿವುಣ್ಡುಗೆಯ್ಯೆ (ಎಕ. VIII, ಸೊರಬ. ೨೦೨-೩; 955). ೨. ಹೊಯ್ಸಳರ ಒಬ್ಬ ಪ್ರಸಿದ್ಧರಾಜನ ಹೆಸರು ; ವಿಷ್ಣುವರ್ಧನ : ವೀರಾರಿನೃಪಾಳರಂ ಬಂಸಿದಂ ಮೂವಿಟ್ಟಗಂ ಬಿಟ್ಟಿಗಂ (ಎಕ. VIII (R), ಹಾಸನ. ೦೫೮-೨೩ ; ?).

[ಬಿಟ್ಟಿ$_2$ (< ಬಿಟ್ಟು$_2$) + –ಗ$_2$]

**ಬಿಟ್ಟಿಗೂಳು, ಬಿಟ್ಟಿಕೂಳು** (ನಾ). ಪುಕ್ಕಟೆಯಾಗಿ ಲಭ್ಯವಾಗುವ ಆಹಾರ : ಅರಮನೆಯ ಬಿಟ್ಟಿಗೂಳಿಂದ ಕೊಬ್ಬಿ ಉಬ್ಬಿದ ತನ್ನ ಊಳಿಗ ದವರಿಗೆ ಸಶ್ರಮದ ಕಾರ್ಯಕಲಾಪಗಳು ಸ್ವಲ್ಪಮಟ್ಟಿಗಾದರೂ ಅಳವಡಿಕೆಯಾಗಿ (ಬಿಟ್ಟಿ. ೧೭೯-೩). **ಬಿಟ್ಟಿಕೂಳು :** ಅಷ್ಟೈಶ್ವರ್ಯವು ವೃಷ್ಟಾನ್ನವಿರುತಿರೆ ಬಿಟ್ಟಿಕೂಳನು ತಿನ್ನಲ್ಯಾಕಯ್ಯ (ಜಾನಗೀ. ೩೮); ತಮ್ಮ ಮನೆಯಲ್ಲಿ ಬಿಟ್ಟಿಕೂಳು ಉಣ್ಣಬೇಕು, ಹುಡುಗನಿಗೆ ಪಾಠ ಹೇಳಿಕೊಂಡಿರಲಿ ಎಂಬ ಭಾವನೆಯೂ ಇರಲಿಲ್ಲ (ಮರಳಿ. ೪೨).

[ಬಿಟ್ಟಿ$_1$ + ಕೂಳು$_2$ (< ಕೂೞ್$_1$)]

**ಬಿಟ್ಟಿಗೆಯ್, ಬಿಟ್ಟಿಗೈ, ಬಿಟ್ಟಿಗೆಯ್** (ಕ್ರಿ). ಪ್ರತಿಫಲವಿಲ್ಲದೆ ಸೇವೆ ಮಾಡು; ಬಿಟ್ಟಿಯಾದ ಕೆಲಸಮಾಡು : ಉಜ್ವಲವೀರಶೈವಭಕ್ತಂ ಬಿಟ್ಟಿ ಗೆಯ್ಯದಿರೆ ತಳುವದಾತನ ಸೊನ್ನಲಿಗೆಯಿಂದೆ ಪೋಗೆಂದು ಸಿದ್ಧರಾಮಯ್ಯ ನುಡಿಯೆ (ಚಾಸೋಪು. ೧೦-೨೯). **ಬಿಟ್ಟಿಗೈ :** ಅಷ್ಟದಿಕ್ಪಾಲಕರು ದನುಜಗೆ ಬಿಟ್ಟಿಗೈವುದ ಕಂಡನಂಗದ (ಕೌಶಿರಾ. ೧೮-೧೭). **ಬಿಟ್ಟಿಗೆಯ್ :** ಅನ್ಯ ಪರಮಂಡಲಿಕರೆಲ್ಲ ತಂತಮ್ಮ ವಸ್ತುವಾಹನಂಗಳಂ ಕೊಟ್ಟು ಕಂದು × × ಬಿಟ್ಟಿಗೆಯ್ಯುತ್ತಮಿರೆ (ಸೌಇಇ. XX, ೪೯-೨೭; 1076). [ಬಿಟ್ಟಿ$_1$ + ಕೆಯ್$_1$]

**ಬಿಟ್ಟಿಗೆಯ್ಮೆ** (ನಾ). ಪ್ರತಿಫಲವಿಲ್ಲದ ಊಳಿಗ; ಪುಕ್ಕಟೆ ಕೆಲಸ : ಆವಗಂ ಜಗಮನೊಗಯಿಪ ಬಿಟ್ಟಿಗೆಯ್ಮೆ ಇವಳೊಲ್ದು ನಿಟ್ಟಿಪ ದಿಟ್ಟಿಯಿಂ ಸಫಲಮೆಂದೆನಿಸಿರ್ಕುಂ (ಚಕವಂ. ೦೦೪-೦೯).

[ಬಿಟ್ಟಿ$_1$ + ಗೆಯ್ಮೆ (< ಕೈಮೆ$_1$)]

**ಬಿಟ್ಟಿಗೆಲಸ, ಬಿಟ್ಟಿಕೆಲಸ** (ನಾ). = ಬಿಟ್ಟಿಗೆಯ್ಮೆ : ಹಿಂದೆ ನಿನ್ನೊಳು ಪುಟ್ಟಿದುದು ಮೊದಲಿಂದುತನಕೊಂದಡಕೆ ಹಂಗಿನೊಳೊಂದೆನುಸಿಕನೆ ನಿನ್ನ ನಾನೋಲೈಸಿದೆನು ಹೊದ್ದಿ ಕುಂದದಲಸದೆ ಬಿಟ್ಟಿಗೆಲಸಕೆ ಸಂದು ಮಾಡು ತ್ತಿರ್ದಡೆ (ಬಸಪು. ೬೦-೫೭). **ಬಿಟ್ಟಿಕೆಲಸ :** ಸಂಸ್ಥಾನದಲ್ಲಿ ಬಿಟ್ಟಿಕೆಲಸ ಮಾಡಿದರೂ ಅದಕ್ಕೆ ಸರಿಯಾದ ರಿಯಾಯತಿಯು ದೊರಕುತ್ತಿದ್ದಿತು (ಝೂರಾಣಿ. ೦೬೦). [ಬಿಟ್ಟಿ$_1$ + ಕೆಲಸ]

**ಬಿಟ್ಟಿಗೈ** 'ಬಿಟ್ಟಿಗೆಯ್' ನೋ.

**ಬಿಟ್ಟಿದೇವ** (ನಾ). ಹೊಯ್ಸಳರ ಒಬ್ಬ ಪ್ರಸಿದ್ಧರಾಜನ ಹೆಸರು : ವಿಷ್ಣುವರ್ಧನ : ಸಖವರ್ಷ ೧೦೧೭ ಯುವಸಂವಚ್ಛರದ ಸೋಮವಾರ ಸಂಕ್ರಾಂತಿಯಲು ಬಿಟ್ಟಿದೇವ . . . ಬ್ರಹ್ಮೇಸ್ವರದೇವರ್ಗ್ಗೆ ಬಿಟ್ಟ ಗದ್ದೆ ಕಣ್ಡುಗ ೧೫ (ಎಕ. VI (R), ಕೃಷ್ಣರಾ. ೩೭-೭; 1095); ಮಹಾಮಣ್ಡಳೇಶ್ವರ ಪೊಯ್ಸಳ ಬಿಟ್ಟಿದೇವನ ದಣ್ನಾಯಕ (ಎಕ. VII, ಶಿಮೊ. ೦೨-೫ ; 1120).

[ಬಿಟ್ಟಿ$_2$ (< ಬಿಟ್ಟು$_2$) + ದೇವ]

**ಬಿಟ್ಟಿಬೆಸ** 'ಬಿಟ್ಟಿವೆಸ' ನೋ.

**ಬಿಟ್ಟಿಬೆಸಕೆಯ್** 'ಬಿಟ್ಟಿವೆಸಗೆಯ್' ನೋ.

**ಬಿಟ್ಟಿಬೆಸನ** 'ಬಿಟ್ಟಿವೆಸ' ನೋ.

**ಬಿಟ್ಟಿಯಾಳ್, ಬಿಟ್ಟಿಯಾಳು** (ನಾ). ಸಂಬಳವಿಲ್ಲದೆ ದುಡಿಯುವವನು; ಪುಕ್ಕಟೆಯಾಗಿ ಕೆಲಸ ಮಾಡುವವನು : ಓ! ಬಿಟ್ಟಿಯಾಳ್ಗಳಂ ಬಿಟ್ಟಂತಾಗದೆ! ಎಂತೀತಂಗಳ್ ಪೋಗಲಾರ್ಪರ್ (ರಾಮಾಶ್ವ. ೦೦೭-೨೩). **ಬಿಟ್ಟಿಯಾಳು :** ಬಿಟ್ಟಿಯಾಳು ಆದರೆ ಹಟ್ಟಿ ಕಟ್ಟಬಾರದೇ ? (ಗಾದೆ).

[ಬಿಟ್ಟಿ$_1$ + ಆಳ್$_3$]

**ಬಿಟ್ಟಿಯಾಳು** 'ಬಿಟ್ಟಿಯಾಳ್' ನೋ.

**ಬಿಟ್ಟಿಯೆಸಗು** (ಕ್ರಿ). ಪ್ರತಿಫಲವಿಲ್ಲದೆ ದುಡಿ,–ಕೆಲಸ ಮಾಡು: ತವಿವಾಲಿಂ ಘೃತದಿಂ ಕರುಳೆನಸುಂ ಬಾಲ್ಯದೊಳೆ ನಾಂದುದಿಲ್ಲದೞಿಂ ತಾನೆನಿತು

ತಿರಿದುಂಡೊಡಂ ಪಸಿವನುಗೆಡದಿರೆ ಬಸಿರ್ಗೆ ಬಿಟ್ಟಿಯೆಸಗಿದವನಲ್ತೆ (ವೃಷಭ. ೯-೦೦೬). [ಬಿಟ್ಟಿ$_1$ + ಎಸಗು$_1$]

**ಬಿಟ್ಟಿವಿಡಿ**, ಬಿಟ್ಟಿಹಿಡಿ (ಕ್ರಿ). ಸಂಭಾವನೆಯಿಲ್ಲದೆ ಒತ್ತಾಯದಿಂದ ಕೆಲಸ ಮಾಡಿಸು ; ಪುಕ್ಕಟೆಯಾಗಿ ದುಡಿಸಿಕೊಳ್ಳು: ಭೂತದಯಾರಹಿತ ನೀ ಬಿಟ್ಟಿವಿಡಿವುದು ಯೋಗ್ಯವಲ್ಲ (ಸಿಶಾಗ. ೫-೭-೩೦). **ಬಿಟ್ಟಿಹಿಡಿ :** ನಮ್ಮನ್ನು ಬಿಟ್ಟಿಹಿಡಿದು ನಮ್ಮ ಕೈಲಿ ಈ ತೋಟದಲ್ಲೆಲ್ಲ ಅಗತೆ ಮಾಡಿ ಸುತ್ತಾರಂತೆ (ಕುಟ್ಟಿರ. ೨೦). [ ಬಿಟ್ಟಿ$_1$ + ಪಿಡಿ$_1$ ]

**ಬಿಟ್ಟಿವೆಸ**, ಬಿಟ್ಟಿಬೆಸ, ಬಿಟ್ಟಿಬೆಸನ (ನಾ). = ಬಿಟ್ಟಿಗೆಯ್ಮೆ : ಪೊಲೆಯರುಂ ವಣ್ಣಾದಿಗರುಂ ಕೀಲಿಗರುಮೆನಿಸಿ ಬಿಟ್ಟಿವೆಸಂಗಳಂ ಮಾಡಿ (ಶಸಾರ. ೨೬೩). **ಬಿಟ್ಟಿಬೆಸ :** ಗಂಗಸಿದ್ಧಾಯ ಹೊಜಿಗಾಗಿ ಆಯ ದಾಯ ಬಿಟ್ಟಿಬೆಸ ಪಡುವಗೇರಿಗೆ ಪರಿಹಾರವಂ ಬಿಟ್ಟ (ಎಕ. I, ೮೭-೦೩ ; 1175); ಬಿಟ್ಟಿಬೆಸ . . . ಇದು ದೈಹಿಕಶ್ರಮರೂಪವಾದ ತೆರಿಗೆ (ಕಶಾಶ. ೯೦೦). **ಬಿಟ್ಟಿಬೆಸನ :** ಎಲ್ಲ ಮಾನ್ಯಂಗಳಂ ಭಕ್ತರ್ಗೆ ಸಾರ್ಚುತಂ ಬಿಟ್ಟಿಬೆಸನಂ ಶಿವನ ಭಕ್ತರ್ಗೆ ಮಾಡುತಂ (ಬಸವ. ದೀ. ೪೯-೦೩). [ಬಿಟ್ಟಿ$_1$ + ಬೆಸ$_1$]

**ಬಿಟ್ಟಿವೆಸಗೆಯ್**, ಬಿಟ್ಟಿಬೆಸಕೆಯ್ (ಕ್ರಿ). ಸಂಭಾವನೆಯಿಲ್ಲದೆ ದುಡಿ ; ಪುಕ್ಕಟೆಕೆಲಸ ಮಾಡು : ಜೀಯೆನುತನುದಿನವೆಯ್ದೆ ಬಿಟ್ಟಿವೆಸಗೆಯ್ವದ ಜೆಟ್ಟಿಗರಿಲ್ಲ (ಎಕ. XI, ದಾವಣ. ೮೫-೯ ; 1143). **ಬಿಟ್ಟಿಬೆಸಕೆಯ್ :** ಘೋಷಾಕರಸಂಗ್ರಹಾಕರಗೋವ್ರಜಂಗಳುಮನವನಾಳ್ವ ತೆಱಿಗೊಳ್ವ ಬಿಟ್ಟಿಬೆಸಕೆಯಿಸಿಕೊಳ್ವ ಭೋಗಿಪ ನಿಯೋಗಂಗಳುಮನಿಂತು ಮಾಡಿ (ಆದಿಪು. ೯-೬೩ ವ). [ಬಿಟ್ಟಿವೆಸ + ಕೆಯ್$_1$]

**ಬಿಟ್ಟಿವೇೞ್**, ಬಿಟ್ಟಿಹೇಳು (ಕ್ರಿ). ೧. ವ್ಯರ್ಥವಾದುದನ್ನು ಹೇಳು ; ಕೆಲಸಕ್ಕೆ ಬಾರದುದನ್ನು ನಿರೂಪಿಸು, — ತಿಳಿಸು : ಕಾವ್ಯಲಕ್ಷಣದೊಳೊಳ್ಪಳವಟ್ಟಿರೆ ಪೇೞ್ವುದಲ್ಲದೇಕಾರಣವಯ್ಯ ಕೆಮ್ಮಗಿರಲಾಗದೆ ಕಬ್ಬ[ವ] ಬಿಟ್ಟಿವೇ[ೞ್ವು]ದೇ (ಬಂಹಂ. ೦-೦೦). **ಬಿಟ್ಟಿಹೇಳು :** ೨. ಕೆಲಸಕ್ಕೆ ನಿಯಮಿಸು, — ಗೊತ್ತುಪಡಿಸು : ಲಿಂಗಕ್ಕೆ ಇಲ್ಲೆಂಬ ಜಂಗಮಕ್ಕೆ ಇಲ್ಲೆಂಬ ಬಂದ ಪುರಾತರಿಗೆ ಇಲ್ಲೆಂಬ ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹೆಣ ಬಿಟ್ಟಿಹೇಳಿತ್ತೆ (ಬಸವ. ೨೨೨). [ಬಿಟ್ಟಿ$_1$ + ಪೇೞ್]

**ಬಿಟ್ಟಿವೊಱು** (ಕ್ರಿ). ಪುಕ್ಕಟೆಯಾಗಿ ಕಾರ್ಯಭಾರವನ್ನು ಹೊರು, — ವಹಿಸಿಕೊಳ್ಳು : ರಾಜ್ಯಭಾರವಂ ಬಿಟ್ಟಿವೊತ್ತವಂ ಕಲ್ಲ ಭಾರವ ನೀಡಾಡುವಂತೀಡಾಡಿ (ಧರ್ಮಾಮೃ. ೯-೩೨). [ಬಿಟ್ಟಿ$_1$ + ಪೊಱು]

**ಬಿಟ್ಟಿವೋಗು** (ಕ್ರಿ). ಪುಕ್ಕಟೆಕೆಲಸಕ್ಕೆ ಹೋಗು : ಎಲ್ಲವನ್ನು ಬಿನ್ನವಿಸಿ ಪಟ್ಟಾದೇಶನಿರ್ಧಾರವ ಸೋದಿಸಿಂದೇ ಹೋಗಿ ನಾಳೆ ಬಹುದೆನಲವರು ಮೇದಿನಿಯ ನಾಣ್ನುಡಿಯ ವಾರಣಸಿಯ ಬಿಟ್ಟಿವೋದರೆಂದೆಂಬುದೆನ ಗಾಯ್ತೆಂದು ಹರುಷ ಮಿಗಲಾ ಪುರಕ್ಕೈತಂದರು (ಸಿದ್ಧರಾ. ೯-೦೬). [ಬಿಟ್ಟಿ$_1$ + ಪೋಗು$_1$ (< ಪೋ$_1$)]

**ಬಿಟ್ಟಿಹಿಡಿ** ' ಬಿಟ್ಟಿವಿಡಿ ' ನೋ.

**ಬಿಟ್ಟಿಹೇಳು** ' ಬಿಟ್ಟಿವೇೞ್ ' ನೋ.

**ಬಿಟ್ಟು$_1$** 'ಬಿಡು$_1$' ಪರಾ.

**ಬಿಟ್ಟು$_2$**, ಬಿಟ್ಟಿ$_2$, ವಿಟ್ಟು, ವಿನ್ನು (ನಾ). ೧. ಒಬ್ಬಾತನ ಹೆಸರು : ವಂಶಿಗ ಬಿಟ್ಟು ಕೃತಂ (ಇಕ. IX, ೬೪-೩೦ ; 6 ನೆಯ ಶತ). **ಬಿಟ್ಟಿ$_2$ :** ೧. 'ಬಿಟ್ಟಿಗ', 'ಬಿಟ್ಟಿದೇವ' ಪರಾ. **ವಿಟ್ಟು :** ೨. ತ್ರಿಮೂರ್ತಿಗಳಲ್ಲಿ ಒಬ್ಬ; ವಿಷ್ಣು : "ವಿಟ್ಟು - ವಿಷ್ಣು" (ಶಾಸಕೋ. ೪೦) ; ವಿಟ್ಟುವುಂ ಬ್ರಹ್ಮನುಂ ಕಣ್ತಲೆಗಳಂ ಶಿವಗೆ ಕೊಟ್ಟು ಡಿಂಗರಿಗರಾದವರವಸೇಶಂಗೆ ವಡಿಗಟ್ಟುವರೆ (ಕಬಿಪು. ೫೨-೨೪). **ವಿನ್ನು :** ೨. "ವಿನ್ನು — ವಿಷ್ಣು" (ಗುಣಮೋ. ೦೩೦); ಜನ್ಮಾಂತರದೆ ಮಾಡಿದ ನನ್ನ ದುಷ್ಕರ್ಮಾನುಸಾರವೆ ವಿನ್ನುವಿನ ಸುತನೀಗ ಪೊಸದಾದ ಶಸಿಯನು ಮಾಡಿ ಸನ್ನುತಾಂಗಿಯನೊಯ್ದು . . . ಸಮಕೌಶಲ್ಯವನೆ ತೋರಿಸಿದನು (ಶಭುವಂ. ೯-೪೬). [< ಸಂ. ವಿಷ್ಣು]

**ಬಿಟ್ಟುಳಿ** (ನಾ). (?) : ಅವುರೆ ಮಾಡಿದ ಬಿಟ್ಟುಳಿಯ ಕಕ್ಕುಂಬ ತೊಡಂಬೆಯ ಮೂಡಿಗೆಯ ಕವಳಿಕೆಯ ಕಂಡಪಟಂಗಳುಮಂ ಪಲವು ತೆಱದ ಪಲವುಂ ಪೊಱೆಯಾಗಿ ಕಟ್ಟಿದ ಬಲೆಗಳುಮಂ . . . ಆಳವಿಯೊಳ್ ಕೂಡಿ ನಡೆಯಲ್ವೇಟ್ಟು ಬೇಂಟೆವಸದನಂಗೊಂಡು (ಶಂಶಭಾ. ೫-೪೭ ವ). [?]

**ಬಿಟ್ಟೆ** 'ಬಿಟ್ಟಿ$_1$' ನೋ.

**ಬಿಟ್ಟೆಗೆಯ್** 'ಬಿಟ್ಟಿಗೆಯ್' ನೋ.

**ಬಿಟ್ಟೋಱು**, ಬಿಟ್ಟೋಱು$_2$ (ನಾ). (ಕೈಯಿಂದ ದೂರದವರೆಗೆ ಎಸೆಯುವ) ಉದ್ದವಾದ ಈಟಿ ; ಎಸೆಯೀಟಿ : "ಬಿಟ್ಟೋಱು ಮೊದಲಾದುದು ಕಯ್ಯಿಂ ಬಿಡಲ್ಪಡುವುದು ಪಾಣಿ(ಕರ)ಮುಕ್ತಮೆಂಬುದು" (ಪಲಾಯು. ೬೬-೩೦೪) ; ವೀರದೊಳ್ ಕೂಡಿ ಪರಿಗೆಯುಂ ಬಿಟ್ಟೋಱುಂ ಬೆರಸಿರ್ಪಂತೆ (ಧರ್ಮಾಮೃ. ೦೧-೨) ; ಬಿಟ್ಟೋಱುಟ್ಟಿ ನಖಿಂ ಚಕ್ರ ಪರಶು . . . ಫಳಕಂಬಿಡಿದಮರರ್ ನೆರೆದುದು (ಚಿರೇಶ. ೨-೩೦); ಇಟ್ಟ ಸಲ್ಲೆಹ ಸಬಳ ಬಿಟ್ಟೋಱುಟ್ಟಿಗಳ ಮಳೆ ಸಾದಿದವು ಕಾದಿದರು ಚೂಣಿಯಲಿ (ಕುಮಾ.ಕ. ೦೯-೦೦); ಈಟಿಯಲಿ ಬಿಟ್ಟೋಱನಲಿ ಹೊಗುವ ಹರಿಕದಂಬವ ಹೊಡೆವುತಿಱುವುತ ಜರಿಯುಗೆಡಹಿದರು (ತೊರಂರಾ. ೬-೦೦-೦೦). **ಬಿಟ್ಟೋಱು$_2$ :** ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ ಖಡ್ಗದಿಂ ಪೊಣಿಸಿ ಪೊಯ್ದುಂ ಬಿಟ್ಟೋಱುಗಳಿಂ ಪರಿತಂದಿಟ್ಟುಂ . . . ಸೈರಿಸಲಾಱದೆ (ಧರ್ಮಾಮೃ. ೩-೭೩).

ಬಿಜ್ಜಲ ಬಿಟ್ಟೋಱು, ಬಿಜ್ಜಬಿಟ್ಟೋಱು = (?) : "ಬಿಜ್ಜಲ ಬಿಟ್ಟೋಱು = ಹಿರಿಯ ಬಿಟ್ಟೋಱು" (ಶಮದ. ಶಂ. ೨); "ಬಿಜ್ಜ[ಶಾಶಾಂ. ಜ್ಜ] ಬಿಟ್ಟೋಱೆಂದು ಹಿರಿಯ ಬಿಟ್ಟೋಱಿನಿಕ್ಕುಂ" (ಶಬ್ದಕ. ೪೮).

[ದೇ.॥ ತಮಿ. ವಿಟ್ಟೇಱು, ವೆಟ್ಟೇಱು ; ಮಲ. ವಿಟ್ಟೇಱು]

**ಬಿಟ್ಟೋಱುಕಾಱ** (ನಾ). ಉದ್ದವಾದ ಈಟಿಯನ್ನು ಹಿಡಿದಿರುವವನು : ಐಶ್ವರ್ಯಮದಮೆಂಬ ಬಿಟ್ಟೋಱುಕಾಱವೀರಸು ಬಲಮದಮೆಂಬ ಕಟ್ಟಿಗೆ ಕಾಱವೀರಸು . . . ನಿಲ್ಲದೆಲ್ಲಿಯುಂ ಬೆನ್ನಟ್ಟಿ ತಗುಳ್ದು (ಧರ್ಮಾಮೃ. ೦೦-೮೭ ಅಂತಿನ್ವ) ; ನಿಗಳಂಕಮಲ್ಲಂ ಭುಜಬಳವೀರಂ ಕೊಟ್ಟೋಡುವ ಬಿಟ್ಟೋಱು ಕಾಱರ ಗಣ್ಡಂ (ಎಕ. VI, ಕಡೂರು. ೩೪-೨೦ ; 1148).

[ಬಿಟ್ಟೋಱು + — ಕಾಱ]

**ಬಿಡ** (ನಾ). ಒಂದು ಬಗೆಯ ಉಪ್ಪು ; ಡೊಣೆಯುಪ್ಪು : "ಪಾಕ್ಯಂ, ಬಿಡಂ . . . ತೊಳೆದು ಕಾಯಿಸಿ ತೆಗೆದ ಉಪ್ಪು, ಡೊಣೆಉಪ್ಪು ಮತ್ತು ಪೆಟ್ಲುಪ್ಪು ಮುಂತಾದ ಅಡಿಗೆಯಿಳಿಸಿದ ಕೃತ್ರಿಮಲವಣಕ್ಕೂ ಬಿಡಾಲವಣಕ್ಕೂ ಪೆಸರುಗಳು" (ಸಿದ್ಧಾಂತಿ. ೨೩೬); ಸುರದಾರು ಸೈಂಧವಂ ಜಳಧರಂ ಬಿಡಂ ಬೀಟಿಲಕ್ಕಿ ಸದ್ಯಃಕ್ಷಾರಂ ಸುರಭಿಜಳಮೆಣ್ಣೆಯೆಂಬಿವನಿರದಟ್ಟಿಱಿ ನಸ್ಯಮುಂ ಕಬಿಲ್ಗಂ ಸೆಂಬುಂ (ಲೋಕೋಪ. ೯-೨೨೪). [ಸಂ.]

**ಬಿಡಕಿ** (ನಾ). ಗಳಹುವವಳು ; ಜಗಳಗಂಟಿ ; ಗಯ್ಯಾಳಿ : ಮಗಳಿಗೆ ದುಡಕಿಯ ಕಟಕಿಟಿ ಬಲು ಜೋರ ನಿನ್ನಂಥ ಬಿಡಕಿಗೆ ಹೆಣ್ಣಲ್ಲತಿಗೆ ಹೆಣ್ಣಲ್ಲತಿಗೆ (ಜನಗೀ. ೯೨) ; ಕೆಲವರು ಬಿಡಕಿಯರು ಮಾತ್ರ 'ಅಯ್ಯೋ . . . ಮದಲಿಂಗಿತ್ತಿಯೋ ಸೋಬಾನೆ ಹೇಳ್ತಾರೆಯೋ ತುಂಬಿದ ಸಭೆಯಾಗ' ಎಂದು ಮೂತಿ ತಿರುವಿದರು (ಶಳುಮ. ೩೪). [< ಬಿಡು$_1$]

**ಬಿಡತ** (ನಾ). [ಸಂಗೀತ] ಮೃದಂಗವನ್ನು ಬಾರಿಸುವಾಗ ಎರಡು ಹೊಡೆತಗಳ ನಡುವೆ ಇರುವ ಅವಧಿ, — ಕಾಲಮಾನ : ಚಮತ್ಕಾರಲಾಗು ಹಿಡಿತ ಬಿ[ಡ]ತಗಳ ಮೋಹನವನ್ನು ತೋಱಿ ನುಡಿಸಿದ ಮಾರ್ದಂಗಿಕನು (ಗೋಮಟೇ. ೭-೦೬). [< ಬಿಡು$_1$ + — ತ$_2$]

**ಬಿಡತಿ** 'ಬಿಡದಿ' ನೋ.

**ಬಿಡದಿ**, ಬಿಡತಿ (ನಾ). ೧. ಅತಿಥಿಗಳ ಬಿಡಾರಕ್ಕೆಂದು ತೆರವು

ಮಾಡಿರುವ ಮನೆ ; ಬಿಡಾರ : ಮಡದಿ ನೀಯೊನ್ನ ವಡನೆ ಬಾಯೆಂದು ನಡದಾರು ಖಳನಾ ಬಿಡದಿಗೆ (ವಾರಿಶೀ. ೬೩-೧೭) ; ಯುಧಿಷ್ಠಿರನು . . . ಬಿಡದಿಯಲ್ಲಿ ತಂಗಿ ಶ್ರಮಪರಿಹಾರ ಮಾಡಿಕೊಂಡ (ವ್ಯಾಸಭಿ. ೧೨೦). ೨. ತಂಗುವಿಕೆ ; ಮೊಕ್ಕಾಮು ; ವಾಸ್ತವ್ಯ : ನಮ್ಮ ಬಿಡದಿಗೆ ಬೇರೆ ಮನೆಯನ್ನು ಏರ್ಪಾಟು ಮಾಡಿರಬೇಕು (ಶಾಂತ್ರಿ. ೯೩). **ಬಿಡತಿ :** ೧. ನಮ್ಮನ್ನು ನಿಜವಾದ ಆದರದಿಂದ ಸತ್ಕರಿಸಿ, ಅವನ ಭಾರಿ ಹೊಸ ತೋಟ್ಟಮನೆಯಲ್ಲಿನ ಮುಖ್ಯಭಾಗವನ್ನು ನಮಗೆ ಬಿಡತಿ ಮಾಡಿ ಕೊಟ್ಟ (ಕಂಷ. ೩೩೪).

**ಬಿಡದಿ ಬಿಡು**=ಬಿಡಾರ ಹೂಡು; ತಂಗು : ಸುಲ್ತಾನರು ಚಿತ್ರದುರ್ಗ ದಲ್ಲಿಯೇ ಬಿಡದಿ ಬಿಟ್ಟಿದ್ದರು (ಬೌಂಕ್. ೨೦೯) ; ಎಲ್ಲರೂ ಬಿಡದಿ ಬಿಟ್ಟಿದ್ದ ಮನೆಗೆ ಪ್ರಯಾಣ ಮಾಡಿದರು (ಮೂಲಾನ. ೦೨೪). **ಬಿಡದಿ ಮನೆ, ಬಿಡದಿಯ ಮನೆ**= (ಮದುವೆ ಮೊದಲಾದ ಸಂದರ್ಭಗಳಲ್ಲಿ) ಅತಿಥಿಗಳ (ವಿಶೇಷವಾಗಿ ಬೀಗರ) ಬಿಡಾರಕ್ಕಾಗಿ ತೆರವು ಮಾಡಿರುವ ಮನೆ: ಬಿಡದಿಮನೆಯಲ್ಲಿ ಸರಿಯಾದ ವ್ಯವಸ್ಥೆಯಿಲ್ಲ (ಮುಳ್ಳಿಹಾ. ೩೭) ; ಲಲನೆ ಲಕುಮಿಯು ಸಹಿತ ವೇಂಕಟನಿಲಯನನ್ನೈದಿಸುತ ಬಿಡದಿಯ ಮನೆಯೊಳಿಳಿ ಸಿದನು (ಅರ್ಜಾಲಿ. ೦೩-೪೪) ; ಬಿಡದಿಯ ಮನೆಯಲ್ಲಿ ಇವನ ಅತ್ತೆ ಮತ್ತು ಇವನ ತಾಯಿಯವರು ಮಾತನಾಡುತ್ತಿದ್ದುದು (ಬಂಗಾರಾ. ೧೭).

[<ಬಿಡು$_1$ + — ದಿ./ತಮಿ. ಮಲ. ವಿಟುತಿ ; ತೆಲು. ವಿಡಿದಿ]

**ಬಿಡದಿವುಳಿಗ** (ನಾ). ಬಿಡಾರದಲ್ಲಿ ಸಲ್ಲಿಸುವ ಸೇವೆ,—ಊಳಿಗ : ಬಿಡದಿವುಳಿಗದ ಲಿಂಗಣ ಮಡಿವುಳಿಗದ ದೊಡ್ಡಯ್ಯ (ಎಕ. XIV, ಗುಂಡ್ಲುಪೇ. ೦೪೬-೩೩ ; 1087). [ಬಿಡದಿ + <ಊಳಿಗ]

**ಬಿಡಯ್ಯ**$_1$ 'ಬಿಡೆಯ'$_1$ ನೋ.

**ಬಿಡಯ್ಯ**$_2$ 'ಬಿಡೆಯ್ಯ$_2$' ನೋ.

**ಬಿಡಯ್ಯ**$_3$ 'ವಿಡಾಯ' ನೋ.

**ಬಿಡಲವಣ** (ನಾ). ಒಂದು ಬಗೆಯ ಉಪ್ಪು ; ಡೋಣೆಯುಪ್ಪು : "ಕೃತ್ರಿಮಕಂ – ಬಿಡಲವಣ" (ಓಕಂ. ೩೯). [ಸಂ.]

**ಬಿಡವೆ** (ನಾ). ಬಿರುಕು ; ಸೀಳು ; ಸಂದು : ಕಲ್ಲ ಬಿಡವೆಯೊಳಿರ್ದ ಪಣವಿನಂತೆ ಸಿಡಿಲೊಳಗಿರ್ದ ಸಕ್ಕರೆಯಂತೆ (ಧರ್ಮಾಮೃ. ೦೩-೦೮೩).

[ದೇ.॥ ತಮಿ. ವಿಟವು, ವಿಟಪ್ಪು ; ಮಲ. ವಿಟವು]

**ಬಿಡವೆಳಗು** (ನಾ). ಹೊರಹೊಮ್ಮುವ ಕಾಂತಿ,— ಪ್ರಭೆ : ಎಡೆಯಾಡು ವಬಲೆಯರಡಿರುಚಿತಳಿರನು ಪಡೆದು ನೀಲದ ನೆಲನಂಗುರ ಬಿಡವೆಳಗಿಂದಲರಾಗಿ ನೋಡುವರಕ್ಷಿಗೊಡರಿಪುದದುವೆ ಸತ್ಪಲವ (ವರ್ಧಶ. ೩-೪೪).

[? + ಬೆಳಗು$_2$]

**ಬಿಡಾಡಿ** 'ಬೀಡಾಡಿ' ನೋ.

**ಬಿಡಾಡಿಗ** (ನಾ). ಕೀಳಾದ ವ್ಯಕ್ತಿ; ಹೀನವಾದ ವ್ಯಕ್ತಿ: ಹಾದರದೆ ಮುಪ್ಪುಗೊಂಡಾ ಬಿಡಾಡಿಗ ಪೆಣ್ಗಳಾದರದೆ ಕಂಥಾಕಮಂಡಲುಗಳಂ ಬಿಳಿಯ ಸೀರೆಯಂ ಧರಿಸಿಕೊಂಡು (ಮಹಾಂತೇ. ೦೩-೨೩).

[ಬಿಡಾಡಿ (< ಬೀಡಾಡಿ) + — ಗ$_2$]

**ಬಿಡಾಯ** 'ವಿಡಾಯ' ನೋ.

**ಬಿಡಾರ** 'ಬೀಡಾರ' ನೋ.

**ಬಿಡಾರುವಾರ,** ಬಿಡಾರ್ವರ (ನಾ). ಚರ ಹಾಗೂ ಸ್ಥಿರ ಆಸ್ತಿಗಳನ್ನು ಭೋಗಕ್ಕೆ ಪಡೆಯುವುದು, — ವಾರಕ್ಕೆ ಮಾಡಿಕೊಳ್ಳುವುದು : ಹದಿನಾರು ಹಾನೆ ಗದೆಯನು ಬಿಡಾರುವಾರವಾಗಿಯಿರಿಸಿ (ಕಾಇಂ. ೦೯೭೦, ಕುಂಬಾಪುರ. ೯೬೩-೩೩; 1467); ಆ ಜಂನಕೆ ಉಂಟಾದ ಸೀಮೆ ಸಾಮ್ಯ ಯಿಪ್ಪನೂ ಬಿಡಾರುವಾರವಾಗಿ ಮಾಡಿಕೊಂಡು ದುಗ್ಗಣ ಸೆಟಿಯರು ಕೊಟ್ಟ ಅರ್ಥ ಕಾಟಿ ಗ ೬೫೦ (ಕಾಇ. IX-ii, ೪೬೩-೪೩ ; 1472); ಕಂದವರದ ಗ್ರಾಮಿಣ ಅಂಣಉಡುಪರು ಕೊಟ್ಟ ಬಿಡಾರುವಾರದ ಪತ್ರದ ಕ್ರಮವೆಂತೆಂದರೆ (ಕಾಇ. IX-ii, ೬೩೩-೦೫ ; 1554).

**ಬಿಡಾರ್ವರ :** ತೊಳಹನ ಕಯ್ಯಲೂ ಬಿ[ಡಾ]ರ್ವ್ವರ ಮಾಗ ಹಿಡಿವ [ಸುಗೆ] ಬಿತುವ ಬಿದಿರ ಗದ್ದೆಯು ಮೋಲಿಕ್ಕಿದ ಪಾಣ್ಯಗದ್ಯಾಣಂ (ಕಾಇ. VII, ೩೯೦-೦೪ ; 1140). [<ಬಿಡಾರ + ಅರುವಾರ]

**ಬಿಡಾರ್ವರ** 'ಬಿಡಾರುವಾರ' ನೋ.

**ಬಿಡಾಲ,** ಬಿಡಾಳ (ನಾ). ೧. ಬೆಕ್ಕು; ಮಾರ್ಜಾಲ : "ಮಾರ್ಜಾಲಂ ಬಿಡಾಲಂ . . . ಓತುವೆನೆ ಬೆಕ್ಕೆನಿಕ್ಕುಂ" (ಮಂಗರಾ. ೯೯-೦೦); ಆ ಕಾಗೆ ಸತ್ತು ಬಿಡಾಲನಾದುದಾ ಬಿಡಾಲಂ ಮುನ್ನಿನ ಕುಕ್ಕುಟನಂ ತಿಂದುದು (ಕಂಪಾಪುಪಾ. ೦೫-೩೭ ಪ). ೨. ಕಣ್ಣುಗುಡ್ಡೆ. **ಬಿಡಾಳ :** ೧. ಬಿಡಾಳಕ್ಕಂ ಪಾಲ ಕಾಪನಿತ್ತವೊಲಾಯ್ತು (ಪಾರ್ಶ್ವಪು. ೩-೧೦೩). [ಸಂ.]

**ಬಿಡಾಳ** 'ಬಿಡಾಲ' ನೋ.

**ಬಿಡಿ,** ಬಿಡು$_3$ (ನಾ). ೧. ಒಂದು; ಒಂಟಿಯಾದುದು : 'ಬಿಡಿತನ', 'ಬಿಡಿಮುತ್ತು' ಪರಾ. ೨. ಪ್ರತ್ಯೇಕವಾದುದು; ಭಿನ್ನವಾದುದು; ಬೇರೆಯಾದುದು : ಚರಣಕಾಂಡಂಗಳ್ಗೆ ಬಿರಿಮುಗುಳ ಬಿಡಿಗಳಿಟ್ಟಳವಾದ ಪಾಯವಟ್ಟಂಗಳನರ್ಚಿಯುಂ (ಶಾಂತೀಶ್ವ. ೫-೧೨೬ ವ); ಅಯ್ದು ಕೊಂಡರೆ ಸಾಕು ಸಾವಿರ ಬಿಡಿಗಳೊಬ್ಬೊಬ್ಬರೊಂದೊಂದರಂತೆ ಸಂತೋಷಪಡುವೆನು (ಇಂಕಾಶ. ೬೦-೪೦). ೩. ಒಂದು ಊರಿನ ಹೆಸರು : ಅನ್ನಿಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ ಬಯ್ಯರಜೋಗನುಂ ಇನ್ನಿನಿಬರುಂ ಸಾಕ್ಷಿಯಾಗೆ ಕೊಟ್ಟರ್ (ಎಕ. XI, ಹೊಳಲ್ಕೆ. ೩೦-೦೩; 964). **ಬಿಡು$_3$ :** ೨. 'ಬಿಡುಗೆಲಸ', 'ಬಿಡುಮುತ್ತು' 'ಬಿಡುವೆಸರ್', 'ಬಿಡುವೊನ್' ಪರಾ.

**ಬಿಡಿಬಿಡಿ** (ದ್ವಿರುಕ್ತಿ): ಬಿಡಿಬಿಡಿಯಾದ ಹಾಳೆಗಳನ್ನು ಒಟ್ಟಿಗೆ ಸೇರಿಸಿ ಕಟ್ಟಿದು (ರೂ). [ದೇ.॥ ತಮಿ. ವಿಟಿ; ಮಲ. ವಿಡು ;ತೆಲು. ವಿಡಿ]

**ಬಿಡಿಕಸಬಿ** (ನಾ). ಪ್ರತ್ಯೇಕವಾಗಿ ಕೆಲಸ ಮಾಡುವ ವ್ಯಕ್ತಿ : ಕೈಗಾರಿಕೆಗಳನ್ನೆಲ್ಲ ಬಿಡಿಕಸಬಿಗಳ ಅಡ್ಡಕಸಬಿಗಳ "ಕೈ" ತಪ್ಪಿಸಿ ದೊಡ್ಡ ಪ್ರಮಾಣದಲ್ಲಿ ಅದೇ ಕಸಬಿಗಳನ್ನು ಕೂಲಿಗೆ ಇಟ್ಟು ನಡೆಯಿಸಬಾರದೇಕೆ ? (ಮಾವಾದ. ೯೭). [ಬಿಡಿ + ಕಸಬಿ$_2$]

**ಬಿಡಿಕಾರು** (ನಾ). ಪ್ರತ್ಯೇಕವಾಗಿ ಮಳೆಯ ನೀರಿನಿಂದ ತೆಗೆದ ಫಸಲು (?) : ಉಳುಕೊಳುವ ಭೂಮಿಯಲು [ಬ]ಯಲು ಬಿತ್ತು ಬಿಡಕಾಡು ಮು ೫೦ × × × [ದ್ದು] ಬಿಡಿಕಾರು ಮೂ ೨ (ಕಾಇ. ೦೯೨೯, ಮಂಗಳೂರು. ೪೭೦-೦೩; 1329). [ ಬಿಡಿ + ಕಾರು$_2$ (< ಕಾರ್$_2$) ]

**ಬಿಡಿಕಾಸು** 'ಬಿಡಿಗಾಸು' ನೋ.

**ಬಿಡಿಕೆ** (ನಾ). ೧. ಬಿಡಬೇಕಾದುದು; ತ್ಯಾಜ್ಯ : ಒಂದು ಹೇಳಿಕೆಯಲ್ಲಿ ಅತ್ಯುಕ್ತಿಗಾಗಿ ಬಿಡಬೇಕಾದ ಭಾಗ; ಬಿಡಿಕೆ ; ಕಳಿತ ; ತ್ಯಾಜ್ಯಾಂಶ (Discount. ಇಂಕಪ). ೨. ಬೇರೆಯಾಗುವುದು; ಬೇರ್ಪಡುವುದು. ೩. ಜಟ್ಟಿಕಾಳಗದಲ್ಲಿ ಒಂದು ಪಟ್ಟು,— ವರಸೆ : ಬಿಡದೆ ಬಿಗಿಗಳ ಬಿಡಿಸಿ ಕಳಚುವರು . . . ಅಡಿಮಗುಚಿಯುಪ್ಪರಿಸಿ ಬಿನ್ನಣ ಬಿಡಿಕೆಗಳ ಬಂಧವಲಿ ಹೆಣಗಿದರುಭಯಪಟುಭಟರು (ಅಂಬಿಕಾ. ೦೩-೨೦).

[ಬಿಡು$_1$ + — ಇಕೆ]

**ಬಿಡಿಗಮ್ಮಟ** (ನಾ). ಪ್ರತ್ಯೇಕವಾದ ಕೆಲಸಕ್ಕೆ ಗೊತ್ತುಮಾಡಿರುವ ಟಂಕಸಾಲೆ (?) : ಉಣ್ಣಿಗೆಯ ಕಮ್ಮಟದಲು ತಿಂಗಳಿಗೆ ಸ ಒನ್ದು ಬಿಡಿಗಮ್ಮಟದಲು ತಿಂಗಳಿಗೆ ಹ ೧ (ಎಕ. XII, ಶಿರಾ. ೩೭-೨೦; ಸು. 1040).

[ಬಿಡಿ + ಕಮ್ಮಟ]

**ಬಿಡಿಗಾಸು,** ಬಿಡಿಕಾಸು (ನಾ). ೧. (ಹಿಂದೆ ಬಳಕೆಯಲ್ಲಿದ್ದ) ತಾಮ್ರದಿಂದ ಮಾಡಿದ ಒಂದು ಅತಿ ಸಣ್ಣ ನಾಣ್ಯ; ಚಿಕ್ಕಾಸು.

೨. ಚಿಲ್ಲರೆಹಣ; ಪುಡಿಗಾಸು : ರಸೀತಿ ಕೊಡದೇ ಇದ್ದರೆ ಒಂದು ಬಿಡಿಗಾಸು ಬಿಚ್ಚಲು ಅವನು ಸಿದ್ಧನಿರಲಿಲ್ಲ (ಪ್ರಾರ್ಗದ. ೬೯); ಅವರು ಕೊಡುವ ನಾಲ್ಕು ಬಿಡಿಗಾಸುಗಳ ಮೇಲೆ ಅವನು ಬದುಕಬೇಕಿತ್ತು (ಬಣಾತ್ಯ. ೩೩). **ಬಿಡಿಕಾಸು :** ೨. ಕೆಲಸ ಮಾಡಿ ರೂಪಾಯಿ ಸಂಪಾದಿಸಬಹುದಾದ ಕಡೆ ಕೆಲಸ ಮಾಡದೆ ಬಿಡಿಕಾಸು ಬಂದರೂ ಅವನಿಗೆ ತೃಪ್ತಿ (ಯೋಧಕ್ಷ. ೬೩). [ಬಿಡಿ + ಕಾಸು$_2$]

**ಬಿಡಿಗಾಳು** (ನಾ). ಒಂದಕ್ಕೊಂದು ಅಂಟಿಕೊಂಡಿರದೆ ಬೇರೆಬೇರೆಯಾಗಿರುವ ಕಾಳು : ಬಿಡಿಗಾಳು ಬದ್ಧ; ಇಡಿಹಣ್ಣು ಸಿದ್ಧ, ಬಯಲಲ್ಲೆ ಇರುವ ಬುದ್ಧ (ಅರಳು. ೪೨೬-೯). [ಬಿಡಿ + ಕಾಳು$_2$ (< ಕಾಳ್$_2$)]

**ಬಿಡಿತನ** (ನಾ). ಏಕಾಂತತೆ; ಒಂಟಿತನ : ಬಿಡಿತನದ ಬಿಕ್ಕಟ್ಟಿನಲ್ಲಿ ಇಡಿತನದ ಒಕ್ಕಟ್ಟು ಹುಟ್ಟಿಸುವ ಹುಟ್ಟೀ ಬಳಗ (ಬಿಣಾಮಂ. ೬೩). [ಬಿಡಿ + – ತನ]

**ಬಿಡಿತೆ** 'ಬಿಡುತೆ' ನೋ.

**ಬಿಡಿದರ** (ನಾ). ಸಗಟುಮಾರಾಟದವರಿಂದ ಪದಾರ್ಥಗಳನ್ನು ತಂದು ಬಿಡಿಬಿಡಿಯಾಗಿ ಮಾರುವಾಗ ಹಾಕುವ ಬೆಲೆ : ಬಿಡಿದರದ ಅಂಗಡಿಯ ಮಾತು ಬೇರೆ, ಈ ಅಂಗಡಿಕಾರನು ತನ್ನ ಸರಕುಗಳನ್ನು ದೊರಕಿಸುವುದು ಇಡಿಯ ದರದ ಅಂಗಡಿಗಳಿಂದ . . . ಪೂರೈಸುವುದು – ಪುಡಿಗಿರಾಕಿಗಳಿಗೆ (ತಕ್ಕಿ. ೨೨). [ಬಿಡಿ + ದರ$_3$]

**ಬಿಡಿದಳ** (ನಾ). ಒಂದಕ್ಕೊಂದು ಸೇರಿಕೊಂಡಿರದೆ ವಿರಳವಾಗಿರುವ ಪಕಳೆ : ಹೂವುಗಳು ಬಿಡಿದಳಗಳಿಂದ ಕೂಡಿದ್ದರೆ ಅವುಗಳನ್ನು ಬಿಡಿದಳದ ಹೂವುಗಳೆಂದು (Polypetalous) ಕರೆಯುತ್ತಾರೆ (ಸಸ್ಯಶಾ. ೫೬). [ಬಿಡಿ + ದಳ$_2$ ( =ದಲ)]

**ಬಿಡಿದಿವಸ** (ನಾ). ಯಾವ ಬಗೆಯ ಉತ್ಸವವಾಗಲಿ, ವಿಶೇಷವಾಗಲಿ ಇಲ್ಲದ ದಿನ : ಉಡುಪಿ ಶ್ರೀಕೃಷ್ಣನ್ನ ಬಿಡಿದಿವಸದಾಗೆ ತೋರಿಸಿದಿರಿ (ಹನ್ನೊಂದ. ೨೨). [ಬಿಡಿ + ದಿವಸ]

**ಬಿಡಿನುಡಿ** (ನಾ). ಪ್ರತಿಯೊಂದು ವಚನವೂ ಬೇರೆ ಬೇರೆಯಾಗಿಯೆ ಉಪಯೋಗವಾಗುವಂತೆ ರಚಿತವಾಗಿರುವ ಪದ, ವಚನ ಇತ್ಯಾದಿ: ಬಿಡಿನುಡಿಯ ಬಂಟ, ಸತ್ಯವಾದಿ, ಸರ್ವಜ್ಞಕವಿಗೆ ಗಂಗಪ್ಪ ಮನಸೋತಿದ್ದಾರೆ (ಹಾಸಪೂ. ೦೫೩). [ಬಿಡಿ + ನುಡಿ$_2$]

**ಬಿಡಿಬಿಲ್** (ನಾ). ಒಂದು ಬಗೆಯ ಜೂಜಾಟ : ನೆತ್ತ ಚದುರಂಗ ಪಗಡೆಯುಂ ಚಿತ್ರಾಯುಂಬ್ಯೆದುದಾಯ ಬಿಡಿಬಿಲ್ ಸೊಗುಳಿಯುತ್ತಮರಾದರು ಅಡಲ್ಬೆತ್ತಲೆಯುಹ ಭಂಗ ಬಪ್ಪನೆಂಬುದು ಪುಸಿಯೇಂ (ಸೀತಾ. ೬೦೦). [ ? ]

**ಬಿಡಿಬೇಸಱು** (ನಾ). ಅನಾದರ; ಅಲಕ್ಷ್ಯ; ಉದಾಸೀನ : ಸೊರ್ಕಿನುರ್ಕಿನ ಬಿಡಿಬೇಸಱಿಂ ನೆರೆಯೊಳೆಘಮರ್ಷಣದೊಳ್ಪರ್ ಮುನಿಗಳಂ ಲೆಕ್ಕಿಸದೆ ಶಕ್ಕಟಿದು ಮುಕ್ಕುಳಿಸಿ ಜಕ್ಕುಳಿಸಿದಂ (ರಾಜಶಾಕ್ಯ. ೦೩೬-೨೦). [ಬಿಡಿ + ಬೇಸಱು$_2$]

**ಬಿಡಿಮುತ್ತು**, ಬಿಡುಮುತ್ತು (ನಾ). ಪೋಣಿಸದೆ ಬಿಡಿಯಾಗಿರುವ ಮುತ್ತು; ಒಂಟಿಮುತ್ತು : ಕ್ಷೀರಸಾಗರದಲ್ಲಿ ನಿರುತ ಬಿಡುಮುತ್ತಿ ನಕ್ಷತ್ರೆಯ ಸುರಿಸಿದವೋಲು (ನವಪೋ. ೦೦-೫೩). **ಬಿಡುಮುತ್ತು:** ಕಡೆಯಿಕ್ಕಿದ ಬಿಡುಮುತ್ತಿನ ಪೊಡರ್ದುಣ್ಮುವ ಬೆಳಗು ಪೊಳೆವ ದುಗುಲದ ಪಸೆಯೊಳ್ ತೊಪರ್ದಿರೆ ಪೆಱತಲ್ಲಿದೆ ಪಾಲ್ಗಡಲೆನಿಸಿದುದು (ಅಜಿತ. ೯-೦೬) ; ಕಾವಿಲ್ಲದ ಕರ್ನೆಯ್ದಿಲ ಪೂವಿಂ ಬಿಡುಮುತ್ತು ಬಿಡದೆ ಬಿಡುತಂದಪುವೆಂಬೀ ವಿಸ್ಮಯಮಮಂ ಮಾಡಿದುವಾ ವನಿತೆಯ ನೀಳ್ದ ಕಣ್ಗಳುಂ ಕಣ್ಬನಿಯುಂ (ಶುಭ್ರ. ೯-೦೩) ; ಬಿಡುಮುತ್ತಿನ ಮಣಿಗದ್ದುಗೆಯೊಳಾಗ ಕಡುನೀಱಿ ಕಣ್ಗೊಪ್ಪಿದಳು (ಶ್ರೀಶಾಂ. ೨-೦೪). [ಬಿಡಿ + ಮುತ್ತು$_3$]

**ಬಿಡಿಮೊಳೆ** (ನಾ). (ಮುದ್ರಣದಲ್ಲಿ ಬಳಸುವ) ಬಿಡಿಬಿಡಿಯಾದ ಮೊಳೆ, – ಅಚ್ಚು : ಸರ್ವಸಮರ್ಪಕವಾಗಿ ಬಿಡಿಮೊಳೆಗಳಿಂದ ಮುದ್ರಿಸುವುದನ್ನು ಕಂಡುಹಿಡಿದವನು ಗೂಟೆನ್ಬರ್ಗ್ (ಮುದ್ರ್ಯಕ. ೯). [ಬಿಡಿ+ಮೊಳೆ$_3$]

**ಬಿಡಿಯ$_1$** 'ಬಿಡೆಯ$_2$' ನೋ.

**ಬಿಡಿಯ$_2$** 'ವಿಡಾಯ' ನೋ.

**ಬಿಡಿಯುತ್ತರ** (ನಾ). ಸಂಬಂಧವಿಲ್ಲದ ಮಾತು; ಅಸಂಬದ್ಧವಾದ ಮಾತು : ದಾನವೇಶ ರೋಷದಿಂ ಬಿಡಿಯುವಿಲ್ಲದೆ ಸಭಾಂತರದಿ ಬಿಡಿಯುತ್ತರವ ನುಡಿಯಬಹುದೇ (ನವಪೋ. ೨೬-೬೩). [ಬಿಡಿ + ಉತ್ತರ]

**ಬಿಡಿಸರಳು** (ನಾ). ಒಂದೊಂದಾಗಿ ಬಿಟ್ಟ ಅನೇಕಬಾಣಗಳ ವರ್ಗ : ಕಡುಗಿ ನೂಕುವ ಕದನರಾಗಿಗಳೊಡನೆ ಕಾದುವ ಪಾರ್ಥತನಯನ ಬಿಡಿಸರಳು ಬೀಱಿದವು ರಮಣರನವರವಧುಗಳಿಗೆ (ಕುಪ್ಯಾದ್ರೋ. ೫-೬೬). [ಬಿಡಿ + ಸರಳು$_1$ (< ಸರಲ್$_1$)]

**ಬಿಡಿಸು**, ಬಿಡಿಸು (ಕ್ರಿ). ೧. ಕಳಚು ; ಸಡಿಲಿಸು; ಕಳೆ : ನಿನ್ನ ಪೆಡಗೆಯ್ಗ[ಟ್ಟ]ಂ ಶರದಿಂ ಬಿಡಿಸಿದನಲ್ಲದೆ ಸರಿತ್ಸುತಂ ಬನ್ನವಿನ್ನವೆಂಬುವು ಮೊಳವೇ (ಶಂಕಪ. ೬-೫೩) ; ವಕುಳದ್ರುಮಕಂ ಮಾಲತಿಗಂ ಮದುವೆ ಮಾಡಿದೆಂ ಬಿಡಿಸವರ್ಕೆ ನೀಂ ಕಂಕಣಮಂ (ಕಾದಂಬ. ೫೯೩); ಈ ಕಟ್ಟುಗಳಂ ಬೇಗಂ ಬಿಡಿಸೆಂದು [ಪಾಠಾಂ. ಬಿಡೆಂದು] ಬಿಡಿಸಿಕೊಂಡು ಪೋದಳ್ (ಶಂಕಶಂ. ೬೬-೦೬). ೨. ಹೋಗಲಾಡಿಸು; ನಿವಾರಿಸು: ನುಡಿಸಿದನೆನ್ನಂ ನಲ್ಲಂ ಬಿಡಿಸಿದನೆನ್ನಂತರಂಗದನುತಾಪಮಂ (ಶಬರ. ೩-೨೩೫); ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಂ . . . ಬಲ್ಲಂ (ಶಂಕಪ. ೫-೯೩ ವ); ಎನ್ನ ಸುತ್ತಿದ ಮಾಯಾಪ್ರಪಂಚವ ಬಿಡಿಸಾ ನಿಮ್ಮ ಧರ್ಮ (ಮಹಾದೇ. ಬಿ. ೦೯-೨೯); ಎನ್ನ ಗರ್ವಾಂಧಕಾರವ ಬಿಡಿಸಿ ರಕ್ಷಿಸು (ಪುರಂದ. ೨-೯ ಪಲ್ಲವಿ). ೩. ಬಿಡುಗಡೆ ಮಾಡು ; ವಿಮೋಚನೆಗೊಳಿಸು ; ಬಂಧಮುಕ್ತವನ್ನಾಗಿ ಮಾಡು : ಅಂತಪ್ಪೊಡೆ ನಿನ್ನಂ ಕಾವ ಗಂಧರ್ವರೆ ಬಿಡಿಸುಗೆ ಪೋಗೆಂದು ಪೊಯ್ದಂ ದುರಾತ್ಮಂ (ಶಂಕಪ. ೬-೬೦) ; ಈ ಕರುಣಿ ಸಾವಿರಹೊನ್ನನಾದಡೆ ಕೊಟ್ಟು ಕುಱಿಯಂ ಬಿಡಿಸದಿರನು (ಬಸಪು. ೨೯-೦೬); ಖೂಳ ಬಿಡಿಸಾ ಭೀಮಸೇನನ ತೋಳುವಲೆಯಲಿ ಸಿಕ್ಕಿದನು ಭೂಪಾಲನು (ಕುಪ್ಯಾಕ. ೦೩-೪೪). ೪. ಅಗಲಿಸು; ಬೇರ್ಪಡಿಸು; ಪ್ರತ್ಯೇಕಿಸು : ಬಿಡಿಸಿ ಭುಜಂಗಿಯ ತಟ್ಟಿಂ ಪಿಡಿದುಯ್ವಂತೆಳೆಯ ಮಲಯಜಾತಮನಳಿಪಿಂ ತೊಡರ್ದಾ ಖಚರಿಯ ತಟ್ಟಿಂ ಬಿಡಿಸಿ ನೃಪಾತ್ಮಜನನೊರ್ವನುಯ್ದಂ ಖಚರಂ (ಅರ್ಜನೆ. ೬-೯); ಬಲಿದ ಮುಳಿಸಂ ತಿಳುಹಲಿಕೆಯೆಮ್ಮಳವಿಯಲ್ಲೆನು ತಾತ್ಮಜನ ಕೈಗಳನೆರಡನೊಯ್ಯನೆ ಬಿಡಿಸಿ (ಬಸಪು. ೪೬-೨೩). ೫. ತೆಗೆದು ಹಾಕು; ವಜಾ ಮಾಡು : "ನಿಮ್ಮ ಆಗಸನನ್ನು ಬಿಡಿಸಿ ನೋಡಿರಿ" ಎಂದು ನಾನು ಸಲಹೆ ಮಾಡಿದೆ (ದೇಶಸ್ವ. ೨೬). ೬. ಕೀಳು; ಕಿತ್ತು ಹಾಕು : ಬಿಱುಗಾಳಿಂಗೆ ಕೆದಱಿರ್ಪಸಿಯ ಹೂಗಳನು ಬಿಡಿಸದೆ . . . ನವಪರಿಮಳದ ಬಿರಿಮುಗುಳ್ಗಳನವಿಕಳಾತ್ಮನು ಸೆಜ್ಜೆದುಂಬಲು ತವಕದಿಂ ತವೆ ಕೊಯ್ದುಕೊಂಡು (ಬಸಪು. ೨೨-೪); ಅದನ್ನು ಬಿಡಿಸಿ, ತಂದು ಆರಿಸಿ ಕಾಳು ಬೇರೆ ಮಾಡುತ್ತಾರೆ (ಮುಂಬಯಿ. ೯-೨೬). ೭. ಕತ್ತರಿಸು; ಕಡಿ; ಛೇದಿಸು: ದುರುಳ ನುಡಿದನ ನಾಲಗೆಯ ನಿಡುಸೆರೆಯ ಬಿಡಿಸುವೆ (ಕುಪ್ಯಾಕ. ೦೨-೩೦); ನಿನ್ನ ಗಂಟಲ ಬಳೆಯ ಬಿಡಿಸುವ ಮೃತ್ಯುವಿದೆ ನೋಡಿತ್ತ ತಿರುಗು (ಕೊರಗಾ. ೦-೦೦-೦೩); ಮುಳಿದು ಕೊಂಡೊಯ್ದೊಡೆ ಜವನ ಗಂಟಲ ಬಳೆಯ ಬಿಡಿಸುವೆನು (ಸಾಕ್ಷಿಶಾ. ೨೬-೨೨). ೮. ಲೆಕ್ಕ, ಒಗಟು ಮುಂತಾದುವುಗಳಲ್ಲಿಯ ಸಮಸ್ಯೆಗೆ ಉತ್ತರವನ್ನು ಕಂಡುಹಿಡಿ,– ಸಮಸ್ಯೆಯನ್ನು ಬಗೆಹರಿಸು : ನೀವಿಕ್ಕಿದ ತೊಡಕ ಬಿಡಿಸಬಾರದು ನೀ ಬಿಡಿಸಿದ ತೊಡಕನಿಕ್ಕಬಾರದು (ಸಿದ್ಧವ. ಕ. ೦೦೬-೩೫೫); ನಮಗಿದರಿದರಿದು ನಮ್ಮಳವಲ್ಲ ಆಸುರದ ತೊಡಕಿದಂ ಬಿಡಿಸ ಬಲ್ಲವರಿಲ್ಲ (ತರುಣ. ದೇ. ೨೪-೬);

ಪರೀಕ್ಷೆಯಲ್ಲಿ ಎಲ್ಲ ವಿಷಯಗಳನ್ನು ಚೆನ್ನಾಗಿ ಬಿಡಿಸಿದ್ದನು (ಜಯಂತ. ೬೮). ೯. (ಹಾಸುಗೆ, ಚಾಪೆ, ಬಟ್ಟೆ ಮೊದಲಾದುವನ್ನು) ಹಾಸು ; ಹರಡು ; ಹರವು : ಹಂಸಾವಳಿ ಗಜಾವಳಿ ಮೊದಲಾದ ಪಟ್ಟಾವಳಿಯ ದಿಂಡುಗಳಂ ತರಿಸಿ [ಚೆ]ಂಪದೊಳಿರಿಸಿ ತರತರದಿಂ ಬಿಡಿಸಿ (ಜಸರ. ೯-೦೩); ಬಿಡಿಸುತ್ತುಂ ಬೆಳ್ಳಾರವಮಂ . . . ಸಡಿಲಿಸು ಘಾಸಮನೆನುತುಗ್ಗಡದಿಂ ಮುತ್ತಿದುದು ಪುಲ್ಲೆಯಂ ಭಿಲ್ಲಾಘಂ (ಉದ್ಭಟ. ೨-೬೦). ೧೦. (ಚಿತ್ರ, ರಂಗವಲ್ಲಿ ಮುಂತಾದುವುಗಳನ್ನು) ಬರೆ ; ರೇಖಿಸು ; ಚಿತ್ರಿಸು : ಆಗಿನ ಕಾಲದಲ್ಲಿ ಚೀನಿಯರು . . . ಹೂ, ಹಕ್ಕಿ, ನಿಸರ್ಗದ ದೃಶ್ಯ ಮೊದಲಾದುವನ್ನು ಬಿಡಿಸುತಿದ್ದರು (ಜಾಂಕ್ರ. II, ೬೯೦); ಚಿತ್ರ ಬಿಡಿಸುವುದು ಮಕ್ಕಳಿಗೆ ಬಹು ಪ್ರಿಯವಾದ ಒಂದು ಹವ್ಯಾಸ (ಕವಿಕೋ. VII, ೩೯೩). ೧೧. ಕೊರೆ ; ಕಂಡರಿಸು ; ಕೆತ್ತು : ಅಲ್ಲಿ ನಿತ್ಯಮಹ ಮೆಂಬುದು . . . ಭಕ್ತಿಪೂರ್ವಕದಿಂ ಶಾಸನಂ ಬಿಡಿಸುವುದುಂ ಮುನಿಜನಂ ಗಳಂ ಪೂಜಿಸುವುದುಮುಕ್ಕುಂ (ಅಜಿಪು. ೦೨-೦ ವ); ಇಷ್ಟನ್ನೂ ಅಭಿನ್ನಕಲ್ಲಿನಲ್ಲಿ ಕೆತ್ತಿ ಸುತ್ತಲೂ ಅಂಚಿನಲ್ಲಿ ಪ್ರಭಾವಳಿ ಬಿಡಿಸಿದೆ (ಬೋಕದೇ. ೯). ೧೨. (ಅತಿಥಿಗಳು) ಬೀಡು ಬಿಡುವಂತೆ ಮಾಡು ; ತಂಗಲು ಅನುವು ಮಾಡಿಕೊಡು ; ವಸತಿಗೊಳಿಸು : ಗಂಗಾಸಿಂಧುಮಧ್ಯಕ್ಷಿತಿ ಪತಿಗಳುಮಾ ತಾಣದೊಳ್ ಬಂದು ಕಾಣ್ಬರ್ ಪಲರೆಂದೆಂತಲ್ಲಿ ಚೆಲ್ವಾಗಿರೆ ಬಿಡಿಸಿದನುರ್ವೀಶ್ವರಂ ತನ್ನ ಬೀಡಂ (ಆದಿಪು. ೦೩-೨೦); ಅರಮನೆಯೊಳ ವರವರ ಹವಣಱಿದರಸುಗಳ ನೆಱೆ ಬಿಡಿಸಿ ವಾಣಿಜವರನು ನಾಂದೀಮುಖದ ಬಳಿಕೊಂದಿಸಿದನೊಲವಿನಲಿ (ಜೀವಂಚ. ೭-೪೪); ಪೊಡೆಸು ಭೇರಿಯನಿಂದೆ ನಡೆಸು ಮತ್ಸ್ಯನ್ಯಮಂ ಬಿಡಿಸು ಪಾಳೆಯವನು (ಜಬಿಪು. ೪೭-೨೨). ೧೩. ನೆಲೆಗೊಳಿಸು ; ಇರಿಸು ; ಇಡು : ಅಲ್ಲಿ ಜಲಕೇಳಿಯಾಡುವ ಗಾಡಿಕಾರ್ತಿಯರಂ ಕಾಡಲೆಂದೊಕ್ಕಿಗಳಂ ತಂದು ಬಿಡಿಸಿಯವರ್ಕೆ ಪಾಲನೆಱೆದು ಸಡೆಪುತಿರ್ಪನ್ನೆಗಂ (ಶಂಶಶಂ. ೧೨೩-೦೯) ; ಆ ಸುರನರ ಭುಜಂಗಮರಿತ್ತ . . . ವಸ್ತುಗಳ ಸರಯುವಿನ ತೀರದಲಿ ಯೋಜನವೆರಡ ಬಳತೆಯ ವಿಶ್ವಕರ್ಮೋದ್ಧರಣರಮ್ಯಾಗಾರದಲಿ ಬಿಡಿಸಿದನು ಭೂಪಾಲ (ತೊರರಾ. ೦-೭-೩). ೧೪. ಸಂಬಂಧವನ್ನು ಕಳೆದುಕೊಳ್ಳು ; ಅಗಲು : ಅರಸನುಮಂ ಸ್ವಜನಪರಿಜನಬಂಧುವರ್ಗಮುಮಂ ಬಿಡಿಸಿ ಶ್ರೀವರ್ಮ ರೆಂಬಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು (ವಡ್ಡಾರಾ. ೬೪-೨೮); ಎನ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಖೇಚರಂ ಬಿಡಿಸಿದನಾಪ್ತರಂ ಬಿಡಿಸು ವಂತಿರೆ ಮೋಹದ ಬಳ್ಳಿವಳ್ಳಿಯಂ (ಆದಿಪು. ೨-೫೦) ; ಗಂಧರ್ವರಾಜ ನಂದನೆಯಿಂ ತನ್ನನೆಂತಾನುಂ ಬಿಡಿಸಿ ಬೀೞ್ಕೊಂಡು ನಿಜಸ್ಕಂಧಾವಾರಕ್ಕೆ ಪೋಗಲೆಂದು ತದೀಯಭವನವಮಂ ಪೊಱಮಟ್ಟು (ಕಾದಂಸಂ. ೨೫೩). ೧೫. ಸಡಿಲಗೊಳಿಸು ; ಸುಗಮವಾಗಿಸು : ಕೈದುಕಾಱರ ಬಿಗುಹು ಘನ ನೀ ಹೊಯ್ದು ಮೊದಲಲಿ ಬಿಡಿಸು ಬಳಿಕಾವ್ಯೆದಿ ನಿನ್ನನು ಕೂಡಿಕೊಂಬೆವು (ಕುವ್ಯಾದ್ರೋ. ೪-೪೪) ; ಮಾಧವನ ಸಮ್ಮುಖವ ಬಿಡಿಸುವ ಸುದಂಡ ಧಾರಿಗಳು ಪೊಲಿದುಗ್ಘಡಿಸಲು (ವವಮೋ. ೦೦-೦೮). ೧೬. (ಸಿನಿಮಾ, ನಾಟಕ ಮುಂತಾದುವಕ್ಕೆ) ಪುಕ್ಕಟೆಯಾಗಿ ಪ್ರವೇಶಿಸಲು ಅವಕಾಶವಾಗು ವಂತೆ ಮಾಡು : ಇವತ್ತು ನಮ್ಮನ್ನು ಬಿಡಿಸುತ್ತೀರಾ ನಾಟಕಕ್ಕೆ ? (ವಾಪೋಲೀ. ೦೬೨). ೧೭. ನೀಡು ; ಕೊಡು : ಬಳಿಯಕ್ಕಿಯುಂ ಸೊಲ್ಲಗೆಯುಂ ಬಿಟ್ಟಿಯುನ್ನುಪ್ಪಮುಮನೆಲ್ಲಾ ಕಾಲಕ್ಕಂ ಸರ್ವ್ವಬಾಧಾಪರಿ ಹಾರವಾಗೆ ಬಿಡಿಸಿದರ್ (ಎಕ. III, ಶ್ರೀರಂಗ. ೦೪೭-೦೪ ; ಸು. 900?) ; ಶ್ರೀಮತ್ಪ[ದ್ಮ]ಬ್ಬರಸಿಯುತ್ತರ್ಮಮ್ಮ ಬಸದಿಗೆ ದಾನಸಾಲೆಗೆ ಬಿಡಿಸೆ (ಕಾಇ. XI—i, ೩೮-೭ ; 950). ೧೮. ಚಿತ್ರಿಸಿ, ಕಸೂತಿಮಾಡು : ಕೌಶೇಯ — ತೆರಳೆಯ ಹುಟು ಮುಕುಲಾಕಾರದಿಂದ ಮಾಡಿದುದ ಬಿಡಿಸಿ ನೆಯ್ದ ಸೀರೆ (ಶಾಶಾ. ೬) ವಿಡಿಸು : ೧೭. ಇಗ್ಗಲಿಯುರಾ ಗವತೆಯ ವಿಡಿಸಿದರ್ (ವ್ಯಆಂ. ೦೯೩೦, ೪೦-೮ ; ೨ನೆಯ ಶತ).

**ಬಿಡಿಸಿ ನೋಡು** = ವಿಶ್ಲೇಷಿಸು ; ವಿವರವಾಗಿ ಪರಿಶೀಲಿಸು : ಅದರ ಇತಿಹಾಸವನ್ನು ನೋಡುವುದಕ್ಕೆ ಮುಂಚೆ ನಿಟ್ಷೂರನ್ನು ಬಿಡಿಸಿ ನೋಡುವ (ನಿಟ್ಷೂಶಾಂ. ೨). [ಬಿಡು$_1$ + – ಇಸು$_3$]

**ಬಿಡಿಹೂ, ಬಿಡಿಹೂವು** (ನಾ). ಮಾಲೆಯಾಗಿ ಕಟ್ಟದಿರುವ ಹೂವು ; ಪ್ರತ್ಯೇಕಪ್ರತ್ಯೇಕವಾಗಿರುವ ಹೂವು : ಸ್ವಲ್ಪ ಬಿಡಿಹೂಗಳನ್ನು ಬೇರೆ ತೆಗೆದಿಡು (ರೂಢಿ). **ಬಿಡಿಹೂವು** : ಬಿಡಿಹೂವಾದರೂ ಮುಡಿಗಿ ಮುಡಿದುಕೊಳ್ಳಬಾರದೇ ? (ಗಾದೆ.) [ಬಿಡಿ + ಹೂ$_2$ (<ಪೂ$_2$)]

**ಬಿಡಿಹೂವು** ' ಬಿಡಿಹೂ ' ನೋ.

**ಬಿಡಿಹೋರೆ** (ನಾ). ಒಬ್ಬನೇ ಮಾಡುವ ಕೆಲಸ, —ವೃತ್ತಿ, —ಕಸಬು : ಕೈಕಸಬುಗಾರರು ತಮ್ಮ ಬಿಡಿಹೋರೆಗಳನ್ನು ಬಿಟ್ಟು ಕಾರಖಾನೆ, ಗಿರಣಿ ಮುಂತಾದ ಪ್ರಚಂಡಸಂಘಟನೆಯ ಒಳಕೀಲುಗಳಾಗಿ ದುಡಿಯತೊಡಗು ವರು (ಮಾವಾದ. ೧೦೦). [ಬಿಡಿ + ಹೋರೆ$_2$]

**ಬಿಡು$_1$**, ವಿಡು (ಕ್ರಿ). ಬಿಟ್ಟ, ವಿಟ್ಟ$_1$ (ಭೂತಕೃ). ಬಿಟ್ಟು$_1$ (ಭೂತನ್ಯೂ). ೧. ತೊರೆ ; ತ್ಯಜಿಸು : ಪರಲೋಕಮಿಲ್ಲದೆಂದು ತಲ್ಲೋಕಸುಖಾನುಭಾವನಾಪೇಕ್ಷೆಯಿನ್ನೈಹಿಕಸುಖವಿಮುಖನಾಗಿ ಶರೀರಾರ್ಥ ವ್ಯಯಂ ಮಾಡುವಾತಂ ಕಯ್ಯದಂ ಬಿಟ್ಟು ಕಾಲದರ್ಕೆಱಗುವಾತನಂ ಪೋಲ್ಕುಂ (ಆದಿಪು. ೨-೯ ವ) ; ಪಗೆ ಸಮೀಪವಾದೆಡೆಯಲ್ಲಿರಲಾಗದು ಯುದ್ಧಂ ಮಾಡಲಾಗದು ಆ ದೇಶಮಂ ಬಿಟ್ಟು ಪೋಪುದು (ಶಂಶಶಂ. ೩೯-೨೩); ಪದ್ಮವ್ಯೂಹದಲಿ ಹೊಕ್ಕಾಳು ಮರಳಿದಡಸ್ತ್ರವಿದ್ಯಾಭಾಳಲೋಚನ ನೆಂಬ ಬಿರುದನು ಬಿಟ್ಟೆ ನಾನು (ಕುವ್ಯಾದ್ರೋ. ೪-೯). ೨. ಅಡ್ಡಿಯಿಲ್ಲ ದಿರು; ತಡೆಯಿಲ್ಲದಿರು: ಎಲೆಲೆ ದೊರೆ ಸಿಕ್ಕಿದನು ಸಿಕ್ಕಿದನಳಿದುದೋ ದ್ರೌಪದಿಯ ಸಿರಿಯೆಂಬುಲುಹ ಕೇಳುತ ಪಾರ್ಥ ಬಂದನು ಬಿಟ್ಟ ಸೂಠಿಯಲಿ (ಕುವ್ಯಾದ್ರೋ. ೨-೩). ೩. ಕಟ್ಟನಿಂದ ಸಡಿಲಗೊಳಿಸು ; ಹಿಡಿತದಿಂದ ಕಳಚು ; ವಿಮೋಚನೆಗೊಳಿಸು ; ಬಿಡುಗಡೆ ಮಾಡು : "ಬಿಡು-ವಿಮೋಚನೇ" (ಶಮಧಾ); ಒಂದಂ ಕ್ರಿಯಾವಿಶೇಷಣಮಂ ದೊರೆಕೊಳೆ ಸಯ್ತು ಪೇಟದದಱೊಳೆ ಪೆಱತಂ ಸಂಧಿಸಿ ಪೇೞ್ದೊಡೆ ಕೃತಿಯೊಳ ಗೊಂದಿರದೆರಡಕ್ಕೆ ಬಿಟ್ಟ ಕಱುವಂ ಪೋಲ್ಗುಂ (ಕವಿರಾ. ೨-೯); ಕೊಂದೊಡೇ ವಂದಪುದೆಂದು ದುರ್ಯೋಧನನಲ್ಲಿಗೆ ಪೋಗೆಂದು ಕಟ್ಟಿದ ಕಟ್ಟುಗಳಂ ಬಿಟ್ಟು ಕಳೆದೊಡೆ ಜಯದ್ರಥಂ ಸಿಗ್ಗಾಗಿ (ಶಂಶಭಾ. ೭-೩೨ ವ) ; ತಂಗಿನ ಪೊಸ ನೇಣಿಂದಱಿದಿಂಗಳ್ವರಮಡಸಿ ಕಂಬಿಯಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ರಕ್ಷೋಸ್ವ. ೨-೯೨). ೪. ಕಳಚಿಕೊಳ್ಳು ; ಬೇರೆಯಾಗು; ಉಚ್ಚು ; ಸಡಿಲವಾಗು: ಮಾಯಾ ಪಾಶ ಹಿಂಗಿ ಮನದ ಗಂಟು ಬಿಡದನ್ನಕ್ಕ ಕೂಡಲಸಂಗಮದೇವನೆಂತೊಲಿ ವನಯ್ಯಾ (ಬಸವ. ೨೦೨); ಹೊಗರುಗೆಟ್ಟುದು ಕುಮುದ ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು ಹೇಳೆನಲು ರಂಜಿಸಿತು ದೀಪಾಳಿ (ಕುವ್ಯಾದ್ರೋ. ೦೫-೩೪). ೫. (ಉಸಿರು ಮುಂತಾದುವನ್ನು) ಹೊರ ಹಾಕು; ಸೂಸು; ಹೊರಹೊಮ್ಮಿಸು : ನಾಸಿಕದಿ ಬಿಡುವಾನಿಲಂ ರೇಚಕ ಮೆನಿಕ್ಕು (ಮಂಗರಾ. ೦೭-೦೪); ಕುಲಶೈಲಂಗಳಾಸಱಿಂ ಕಂದರದ ಮೊಗದಿಂದೆ ಬಿಡುವ ಬಿಸುಸುಯ್ಕೆಲರ್ ಬಂದಪುದೆನಲ್ಕೆ ರಭಸದಿಂ ಬಿಡದೆ ಬೀಸು ತಿರ್ದುದು ಗಾಳಿ ಬೇಸಗೆಯೊಳು (ಜೈಮಿಭಾ. ೦೫-೩). ೬. (ನಾಯಿಯನ್ನು) ಮೇಲೆ ನುಗ್ಗಿಸು, – ಛೂ ಬಿಡು : ಸೀಳ್ನಾಯ್ಗಳಂ ಬಿಡು ಕೋಲಂ ತುಡು (ಕಾದಂಪೂ. ೦೬೦) ; ಒಂದು ಮೊಲಕ್ಕೆ ನಾಯನೊಂಬತ್ತ ಬಿಟ್ಟಂತೆ ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ (ಬಸವ. ೩೭). ೭. ತೆಗೆ ; ತೆರೆ; ಅಗಲಿಸು : ಅಂತು ಕಾದೆ ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇ ಱಿಂಗಳ್ಕೆ . . . ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ

(ಶಂಕಭಾ. ೫-೬೬ ವ) ; ಬಿಡುಗುಂ ಬಾಯುಂ ನೆಲದೊಳ್ ಪಡುಗುಂ . . . ವಸುಭೂತಿ ಧೈರ್ಯವಿಲ್ಲದೆ ಮನದೊಳ್ (ಧರ್ಮಾಮೃ. ೦-೦೫೭); ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯು ಕೂಡಲಸಂಗಮದೇವ ಹಿಡಿವಡೆದ (ಬಸವ. ೬೦೪). ೮. ವಾಹನ - ಕುದುರೆ ಮುಂತಾದುವನ್ನು ಓಡಿಸು._ನಡೆಸು : ತನ್ನ ಸಂಗಡದವರುಂ ಪರಿಗ್ರಹಮುಮೆಯ್ತರಲಾಱದೆ ಓಂದೆ ನಿಲ್ವಿನಂ ಕಡುಪಿನೊಳಂದು ಬಿಟ್ಟನತಿಶೀಘ್ರದೆ ವಾಜಿಯನಾ ನೃಪೋತ್ತಮಂ (ಕಾದಂಪೂ. ೬೨೦); ನೀನಾ ಪಶುವಂ ಬಿಡುವ ಪೊಡೆವ ಕಳಕಳಮಂ ಕೇಳ್ದು ಪಾರ್ವನೆಟ್ಟಿತ್ತೊಡೆಸ್ನ ಕಾರ್ಯಂ ಕಿಡುಗುಂ (ಶಂತಕಂ-೨೪೭-೦೪): ಬಿಡು ರಥವನಾ ದ್ರೋಣನಿದಿರಲಿ (ಕುಮಾವ್ಯಾ. ದ್ರೋ. ೨-೩೩). ೯. (ಬಾಣ, ಈಟಿ ಮುಂತಾದುವನ್ನು) ಎಸೆ; ಹಾಕು; ಪ್ರಯೋಗಿಸು : ಮತ್ತಮಲ್ಲಿ ಬಡಿವುದುಂ ಬಿಡುವುದುಂ ಚಾಪವಿದ್ಯೆಯೊಳ್ (ಎಇ. XIII, ೩೩೨-೪೦ ; 929) ; ದೋಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ ಧನುರ್ಗುಣದಿಂದಂ ಬಿಡುವಲ್ಲಿ ನೂಱು (ಗದಾಯು. ೩-೩) ; ತುಡುವಾಗಳೊಂದು ಬಿಲ್ಲಿಂ ಬಿಡುವಾಗಳು ಲಕ್ಕ . . . ಅಪ್ಪುವು ಗಡ ಪಾರ್ಥನ ಬಾಣವೆಂಬರ್ (ಸಮುಕ. ೧೧-೦೭೦). ೧೦. ಉಳಿ ; ಹೊರತು ಪಡಿಸು : ಭಟ್ಟರೆ ಕೇಳಿಂ ನಿಮ್ಮಂ ಬಿಟ್ಟು ಕೆಲರ್ಕುಲಜರೊಳರೆ (ಧರ್ಮಾಮೃ. ೦-೦೨೦) ; ಹರನಿಂದುರ್ವಿಗೆ ದೈವವೇ ಕಿರಣಕಂದುಂ ಬಿಟ್ಟು ಸೊಂಪುಂಟೆ (ಸೋಮೇಶ. ೬). ೧೧. ನಿರ್ಲಕ್ಷಿಸು ; ಗಣಿಸದಿರು : ಈ ನಡುಗುವುವಲ್ಲವೇ ತೊಡೆ ನಿತಂಬದ ಬಿಣ್ಪಿನೊಳೇವುದಕ್ಕ ಪೋ ಬಿಡು ಕಟಿಸೂತ್ರಮಂ(ಶಂಕಭಾ. ೩-೪೭); ಗುಣದೋಷಮನಱಿದವಱೊಳ್ಗುಣಮಂ ಕೈಕೊಂಡು ದೋಷಮಂ ನೆಱೆ ಬಿಡುವಾ ಗುಣವಂತನ ಮುಂದೋದುಗೆ (ಸಮುಕ. ೦-೬೫). ೧೨. ಬಿಡಾರ ಹಾಕು ; ತಂಗು ; ನೆಲಸು ; ವಸತಿ ಮಾಡು : ಮಹಾರಾಜರು[ಂ] ಬಾಣರಸರುಂ . . . ಸಮಸ್ತಬಲಂ ಬೆಱಿಸಿ ಬಿಟ್ಟೊಡೆ (ಎಇ. XXIV. ೦೬೧-೮ ; ಸು. 885) ; ಆರಾನುಂ ಬಿಟ್ಟೆ ಪೋಪರ್ ಬೀಡಂ ಬಿಟ್ಟಿರ್ದರ್ ನಿಱಿಸುವರ್ (ವಡ್ಡಾರಾ. ೬೬-೫) ; ಹರಿಗನಾ ಕುರುಕ್ಷೇತ್ರದೊಳಂತೇನುಂ ಮಾಣದ ಬಿಟ್ಟುದನಾ ನೆಗಟ್ದ ಸುಯೋಧನಸಂಗೆ ಚರರಱಿಪುವುದುಂ (ಶಂಕಭಾ. ೧೧-೧) ; ಎಲ್ಲಿಯುಂ ದುರ್ಯೋಧನನನಱಿಸಿ ಕಾಣದೆ ವಿಸ್ಮಯಂಬಟ್ಟವನ ಬಿಟ್ಟ ಬೀಡಿಂಗೆ ನಿಟ್ಟುರಿಗೊಂಡು (ಗದಾಯು. ೬-೨೮ ವ). ೧೩. ಅವಕಾಶ ಕೊಡು ; ಆಸ್ಪದ ಮಾಡಿಕೊಡು : ತನ್ನ ಪ್ರಕೃತಿ ಬಿಡದಿರಲ್ ಅಱಿಕೆಯೇನಂ ಮಾಡುವುದು (ಶಂತಕಂ. ೦೬-೨) ; ಆವರವರ ಸ್ವಸ್ಥಾನಂಗಳ ಸಲುಗೆಯುನಱಿದು ಬಿಡುತ್ತಿದ್ದ ಕೂಡಲಸಂಗಮದೇವರಲ್ಲಿ ಬಸವಣ್ಣನ ಕಾಲವೇಳೆಯುನಱಿದು (ಸರ್ವವ. ೬೦-೪೫೩). ೧೪. ಕೊಡು ; ನೀಡು : ಕಿಟ್ಟೂನದೇವಕೆ ಎಲ್ಲಮಾನ್ಯಸರ್ವಪರಿಹಾರಂ ಬಿಟ್ಟ (ಎಕ. VI, ಕೊಪ್ಪ. ೩೬-೭ ; 675?) ; ಪುನ್ನಾಡಱುಸಾಸಿರಕ್ಕೆ ಎಱೆಯುರ್ ನೆಲಕ್ಕಿ ಸೊಲ್ಲಗೆ ಬಿಟ್ಟು (ಎಕ. III, ನಂಜನ. ೨೬-೩ ; ಸು. 810) ; ನೈಷ್ಠಿಕತಪೋಧನಗ್ಗ್ರಂ ಬಿಟ್ಟು ಮತ್ತರ್ ೪ (ಕೌಇಇ. XI-i, ೦೦೦-೦೫; 1064). ೧೫. ಸುರಿಸು; ಚೆಲ್ಲು: ಮಿಡಿದೊಡೆ ತನಿಗ[ರ್ವು] ರಸಂ ಬಿಡುವುವು (ಶಂಕಭಾ. ೦-೫೬); ಬಿಟ್ಟೆಸೆದುದು ಪೊಱಮಾಱಂ ಮುಟ್ಟದ ತರುಣೀಸುಗಂಧಕೇಶಂ ತೆಗೆದಿಂ ಕಟ್ಟಿದಪರೆಂದು ಬಾಷ್ಪಂ ಬಿಟ್ಟೊಡನೆ ಬಱಿಲ್ದುವಟ್ಟಿಪೋಲಳಿರವದಿಂ (ಲೀಲಾವ. ೦೪-೦೩). ೧೬. ಸುರಿ ; ಹುಯ್ಯು : ಎರಕಕ್ಕೆ ಬಿಟ್ಟ ಕರುವಿನಂತೆ ಮಱುಗುತ್ತುಂ(ಧರ್ಮಾಮೃ. ೦-೦೬೨); ಖಿಡುಗದಪೊಯ್ಲುಗಳಲಡುಮಾದ್ದಡಸಿದರು ಸೂಕರನ ತುಪ್ಪವ ತೊಡೆದರಿಱಿದೇಱಿನೊಳು ಬಿಟ್ಟರು ತೈಲಧಾರೆಗಳ (ಕುಮಾವ್ಯಾ.ಭೀ. ೫-೪೨). ೧೭. ಚಿತ್ರಿಸು ; ಬರೆ : ಹೆಂಗಸರು ಮನೆ ಮುಂದೆ . . . ಆಕರ್ಷಕವಾಗಿ ರಂಗೋಲಿ ಬಿಡುತ್ತಾರೆ (ಬೋರಿದೇ. ೨೩). ೧೮. ಶಿಲೆಯಲ್ಲಿ ಕೆತ್ತಿಸಿ ದಾನಮಾಡು : ಜಿನಗೃಹಂಗಳ್ಗೆ ತನ್ನ ಮನೆಯಿಂ ಗಂಧಪುಷ್ಪಾಕ್ಷತಾದಿಗಳನುಯ್ವುದುಂ . . . ಶಾಸನಂಗಳಂ ಬಿಡುವುದುಂ ಮುನಿಜನಂಗಳಂ ಪೂಜಿಸುವುದುಂ ಚತುರ್ಮುಖಮೆಂಬುದು (ಜಾಪುಂಪು. ೨೦೦). ೧೯. ಹೋಗಲು ಅನುಮತಿಸು ; ಬೀಳ್ಕೊಡು ; ನಿರೂಪ ಕೊಡು : ಎಸ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಮೇಚರಂ ಬಿಡಿಸಿದನಾಪ್ತರಂ ಬಿಡುವಂತಿರೆ ಮೋಹದ ಬಳ್ಳಿವಳ್ಳಿಯುಂ (ಆದಿಪು. ೨-೫೦): ಬಹುಕಳಾಳಾಪಂಗಳಂ ಕಲ್ತು ಬರ್ಪವಮೋಘಂ ಬಿಡಿಮೆಂಬುದಂ (ಸುಕುಮಾ. ೨-೩೫). ೨೦. ಗಳಹು ; ಆಡು ; ನುಡಿ : ತೊಟ್ಟ ಜೋಹಕೆ ತಕ್ಕ ನುಡಿಗಳ ಬಿಟ್ಟವಲ್ಲದೆ ನಿಮ್ಮ ರಾಯನ ಕಟ್ಟಲಾಪವೆ (ಕುಮಾವ್ಯಾ.ದ್ರೋ. ೨-೫೨). ‘ಬಿಡಕಿ’ ಪರಾ. ೨೧. ಕೆಳಕ್ಕೆ ಇಳಿಬಿಡು: ನೇತಾಡುವಂತೆ ಮಾಡು ; ಜೋಲಾಡಿಸು : ವಾಯುರಥಂ ಪ್ರಭಾವತಿವೆರಸು ಸಿದ್ಧಕೂಟಚೈತ್ಯಾಲಯದ ಮುಂದಿರ್ದು ಬಿಟ್ಟ ಮಾಲೆಯಂ ನೆಲಂ ಮುಟ್ಟಲೀಯದೆ ಮೇರುವಂ ತ್ರಿಪ್ರದಕ್ಷಿಣಂಗೆಯ್ದು ಕೊಳಲಾಱದೆ (ಜಾಪುಂಪು. ೬೪) : ಬಿಡೋ . . . ಪರದೇನಾ (ರಾಜುಕ. ೭೪). ೨೨. ಕ್ಷಮಿಸು : ಕಕ್ಕಸದಿಂ ಕಾದಿ ಹಿಮ್ಮೆಟ್ಟಿ ಗಜ ಮಱಿಪೊಕ್ಕಡೆ ಬಿಡೆನೆಂದ ನಗುತೆ (ಮೋಹಕ. ೩೪-೩೬). ೨೩. ಹಾಸು ; ಹರಡು : ಒಂದು ಪರಿಣಿ ತನ್ನಯ ಪರಿಸ್ಪಂದಸಹಿತೆಯ್ದುತಿರೆ ಪರಿಪರಿಪ ಕಾಳ್ಕಿಚ್ಚು ಮುಂದುಗಡೆ . . . ಬಿಟ್ಟ ಬಳ್ಳಾರಬಲೆಯೆಡಗಡೆ . . . ಈ ಅನುವರವನು ಮಾಣಿಪರಿಲ್ಲ (ಸಮ್ಯಕೌ. ೨-೪೭). ೨೪. ತೊಡಗಿಸು ; ಆರಂಭಮಾಡಿಸು : ನಾಲ್ಕು ಆಳುಗಳನ್ನು ಈ ಕೆಲಸಕ್ಕೆ ಬಿಟ್ಟರೆ ಬೇಗ ಮುಗಿಸಬಹುದು (ರೂಢಿ). ೨೫. (ಸಾಲದಲ್ಲಿ ಅಥವಾ ವ್ಯಾಪಾರ ಮಾಡುವಾಗ ವಸ್ತುಗಳ ಬೆಲೆಯಲ್ಲಿ) ರಿಯಾಯಿತಿ ತೋರಿಸು ; ಸೋಡಿ ಕೊಡು : ಸಾವಿರಾರುರೂಪಾಯಿಗಳ ವ್ಯಾಪಾರ ಮಾಡಿರುವಾಗ ಹತ್ತು ರೂಪಾಯಿಯೂ ಬಿಡುವುದಿಲ್ಲವೆಂದರೆ ಹೇಗೆ ? (ರೂಢಿ).

ವಿಡು : ೧. ವಿದ್ರುಮಾಧರ ಶಾನ್ತಿಸೇನಮುನೀಶನಾಕ್ಕಿವಿ ವೆಳ್ಗೊಳದ್ರಿ ಮೇಲಶನಾದಿ ವಿಟ್ಟಪುನರ್ಭವಕ್ಕೆಱೆ ಆಗಿ (ಎಕ. II, ೩೦-೪ ; ಸು. 650). ೬.ಕೆಬಲೆನಾಡ ಬೆಳತೂರ ಪಡುವಣದೆಸೆಯ ಮೊಱಡಿಯೊಳ್ಪಿರಿಯ ಪನ್ದಿಗೆ ವಿಟ್ಟೊಡೆ ಪನ್ದಿಯುಂ ನಾಯುಮೊಡಸತ್ತುವು (ಎಕ. III, ಮಂಡ್ಯ. ೪೦-೦೦; 950). ೧೪. ಸಟ್ಬಿಜ್ಜದರ್ ವಿಚಾರಸರುಂ ಪಲ್ಮಡಿಗೆ ಕುಱುವ್ವಿಡಿವಿಟ್ಟಾರ್ ಅದಾನಳಿವೊನ್ಗೆ ಮಹಾಪಾತಕಮ್ (ಮೈಆಂ. ೦೯೩೭, ೦೬-೦೫ ; ಸು. 450) ; ಅನುಜೊ ಇನ್ದು ಕನಲ್ಗೊಳಿ ನನ್ದಿಯಾಲರಾ ವಿಟ್ಟದು ಪಡೆವ್ವೆಲಾಮು ಅಮುಸಪಾಲುಂ (ಎಕ. VI, ಚಿಕ್ಕಮ. ೫೦-೩ ; ಸು. 480 ?) ; ಶಿವಮಾರಂ ಪ್ರಿಥುವೀರಾಜ್ಯಂಕೆಯ ವೆಡಿರುನ್ ಸ್ವರ್ಗತ್ತಿಱಿಯ ಮರಿಯಾದಿ ಕೊಟ್ಟಾನ್ ಸೇಬೆಗೆ ವಿಟ್ಟಾರ್ (ಎಕ. IV (R), ಹೆಗ್ಗಡ. ೦೫೭-೪ ; ಸು.700).

ಬಿಟ್ಟ ಬಾಯಿ, ಬಿಟ್ಟ ವಾಯ್ =(ಆಶ್ಚರ್ಯ-ಭಯ ಮುಂತಾದಂವುಗಳಿಂದ) ತೆರೆದ ಬಾಯಿ : ಭಗವಂತನ ಮಹಿಮೆಯನ್ನು ದಾಸರು ಹೃದಯಂಗಮವಾಗಿ ವರ್ಣಿಸುತ್ತಲಿದ್ದಾಗ ನೆಟ್ಟ ಕಣ್ಣು ಬಿಟ್ಟ ಬಾಯೂ ಆಗಿ ಜನರು ಕೇಳುತ್ತಲಿದ್ದರು (ರಾಜಾಮ. ೨೫೨); ಬಿಟ್ಟ ವಾಯ್ ಬಿಟ್ಟಂತಿರೆ ಬಂದಾಕ ಪೊಕ್ಕಳಿರದರಮನೆಯಂ (ಶಾಂತಿಪು. ೪-೦೦೫). ಬಿಟ್ಟಾಡಿಕೊಳು = ಮನಸ್ವಿಯಾಗಿ ನಿಂದಿಸು ; ಮನ ಬಂದಂತೆ ತೆಗಳು : ಬಿಟ್ಟಾಡಿಕೊಳುವ ವೈರಿಯ ಮನೆ ಮುಂದೆ ಬಿಚ್ಚುಗತ್ತಿಗೆ ಪೊಳೆದೇನು (ಹಮಿಶ. ೨೨-೦೨). ಬಿಟ್ಟಿಕ್ಕು = ಮೇಲೆ ನುಗ್ಗುವಂತೆ ಮಾಡು ; ಚೋದಿಸು : ವಿರೋಧಿ ಸಾಧನಘಟಾಳಿಯನೋಡಿಸಲಾಗಳಾರ್ದು ಬಿಟ್ಟಿಕ್ಕಿದರುಗ್ರಸಿಂಧುರಘಟಾವಳಿಯಂ ಮುಳಿಸಿಂ ನಿಷಾದಿಗಳ್ (ಶಂಕಭಾ. ೧೦-೯೨) ; ಅಣೆದಿಭಮಂ ಕೇಱಿ ಬಿಟ್ಟಿಕ್ಕಿ (ಶಾಂತಿಪು. ೫-೩೮). ಬಿಟ್ಟು ಕೊಡು = ೧. ತೊರೆ ; ತ್ಯಜಿಸು ; ಬಿಟ್ಟುಬಿಡು : ಅದನ್ನು ಬೇಗ ಬಿಟ್ಟುಕೊಟ್ಟು . . . ಹೊಸಸಮಾಜದೊಂದಿಗೆ, ಬಾಳಿನೊಂದಿಗೆ ಬೆರೆಯಬೇಕು (ಹೊಸಕ್ಷಿ. ೨೬೯) ; ಬ್ರಿಟಿಶ್

ಸರಕಾರವು ದಯಪಾಲಿಸಿದ 'ಸರ್' ಪದವಿಯನ್ನು ಠಾಕೂರರು ಬಿಟ್ಟು ಕೊಟ್ಟರು (ರರ್ವೀಣಾ. ೬೭). ೨. ನೀಡು ; ಕೊಡು ; ದಾನಮಾಡು : ಅಯ್ಯಪಮಂಗಳದ ಪೂರ್ವ್ವಮರ್ಯ್ಯಾದೆಯು ಬಳನಂ ಬಿಟ್ಟು ಕೊಟ್ಟಂ (ಎಕ. XI, ಹಿಂದುಊ. ೧-೨೬ ; 975) ; ಕೂಚಿಭಟ್ಟಾರರ ಕಾಲನ್ ಕರ್ಚ್ಚಿ ಧಾರೆಯನೆಱೆದು ಬಿಟ್ಟು ಕೊಟ್ಟರ್ (ಎಕ. IV, ಕಾವಚಾ. ೦೮-೦೭ ; ಸು. 1000 ?) ; ಶ್ರೀಸ್ವಯಂಭುಸೋಮೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಬಿಟ್ಟು ಕೊಟ್ಟರ್ (ಸೌಇಇ. XX, ೪೯-೬೨ ; 1076 ?) ; ರಾಜ್ಯವನ್ನು ಈಗಾಗಲೇ ಬಿಟ್ಟುಕೊಟ್ಟಿದ್ದೇನೆ (ವಕಥಾ. ೪). ೩. ಹೋಗಲು ಅಪ್ಪಣೆ ಕೊಡು ; ಬೀಳ್ಕೊಡು : ನನಗೆ ತಪಸ್ಸಿನ ಮೇಲೆ ಮನಸ್ಸಾಗಿದೆ . . . ನನ್ನನ್ನು ಬಿಟ್ಟುಕೊಡಿ (ವಕಥಾ. ೩೬೯). ೪. ಓಡಿಸು; ಹರಿಯ ಬಿಡು: ಮನಸ್ಸನ್ನು ಲಂಗು ಲಗಾಮಿಲ್ಲದ ಕುದುರೆಯಂತೆ ಬಿಟ್ಟುಕೊಟ್ಟು . . ಆಡಂಬರದ ಆಟಗಳನ್ನು ಕಟ್ಟುತ್ತೇವೆ (ವಾರಾಕೃ. ೦೦೭). ೫. ಉಳಿಸು ; ಇರಗೊಡು : ಈ ರಾಜರು ಬಿಟ್ಟುಕೊಟ್ಟಿರುವುದರಿಂದ ನಾನು ಬದುಕಿದ್ದೇನೆಯೋ? (ವಕಥಾ. ೯೪). ೬. ಮನಸ್ಸಿನಲ್ಲಿರುವ ವಿಷಯ ವನ್ನು ಬಹಿರಂಗಗೊಳಿಸು,— ರಟ್ಟುಮಾಡು: ನಾನೆಲ್ಲ ಗುಟ್ಟನ್ನು ಅವನಿಗೆ ಬಿಟ್ಟು ಕೊಟ್ಟೆ (ಅಂಕಹೂ. ೫೯). ೭. ಪಕ್ಷದಿಂದ ಹೊರತುಮಾಡು; ಪಕ್ಷ ವಹಿಸದಿರು : ಜೀವದ ಗೆಳೆಯನಲ್ಲವೇ — ಒಬ್ಬರಿಗೊಬ್ಬರು ಬಿಟ್ಟು ಕೊಡುವವರಲ್ಲ (ಪೂರುದಾ. ೦೯೦). **ಬಿಟ್ಟು ಬಿಡು** = ೧. ತೊರೆ; ತ್ಯಜಿಸು : ಅವನು ಅದನ್ನು ಅಡವಿಗೆ ಒಯ್ದು ಬಿಟ್ಟು ಬಿಡಬೇಕೆಂದು ನಿಶ್ಚಯಿಸಿ ಅದರ ಸರ್ಪಾಳೀ ಬಿಟ್ಟಹೋದನು (ಮುಂಬಯು. ೨-೨೦). ೨. ಗಣನೆಗೆ ತೆಗೆದುಕೊಳ್ಳದಿರು; ಕಡೆಗಣಿಸು: ಆ ವಿಷಯವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಬಿಟ್ಟುಬಿಡು (ರೂಢಿ). **ಬಿಟ್ಟು ಹೋಗು** = ೧. (ಒಂದು ಸ್ಥಳದಿಂದ) ನಿರ್ಗಮಿಸು ; ಹೊರಡು : ನಿನಗೆ ಇಲ್ಲಿರಲು ಇಷ್ಟ ವಿಲ್ಲದಿದ್ದರೆ ಬಿಟ್ಟು ಹೋಗಬಹುದು (ರೂಢಿ). ೨. ಇಲ್ಲವಾಗು : ಸ್ವರದ ಮುಂದೆ ಸ್ವರವು ಬಂದರೆ ಸಾಮಾನ್ಯವಾಗಿ ಹಿಂದಿನ ಸ್ವರವು ಬಿಟ್ಟು ಹೋಗುತ್ತದೆ (ವರ್ಣವು. ೦೭). **ಬಿಡಬೀಸು** = ಕಡೆಗಣಿಸು ; ತಿರಸ್ಕರಿಸು ; ಬಿಟ್ಟು ಬಿಡು : ಎನ್ನ ಬಿಡಬೀಸದಿರು ಕಂಡಾ ಲಿಂಗವೇ (ಶಿವಗೀ. ೩೬-೦೬೮); ಬಿಡಬೀಸದಿರು . . . ಕಡೆಗೆ ಸದ್ಗುರುವೆ (ದೀಕ್ಷಾಬೋ. ೪. ೦೪-೨೯). ☞ ಈ ಧಾತುವು ಹಲವು ಶಬ್ದಗಳ ಜೊತೆಗೂಡಿ ವಿಶಿಷ್ಟ ವಾದ ಧಾತುವಾಗಿ ವಿಧವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ. ಕಾಯಿಬಿಡು, ಕೈಬಿಡು, ಮನೆಬಿಡು, ಹಾದಿಬಿಡು, ಹೂ ಬಿಡು ಇತ್ಯಾದಿ. [ಬೇ.॥ ತಮಿ. ಮಲ. ವಿಟು; ತುಳು. ಬುಡು; ತೆಲು. ವಿಡು; ಗೊಂಡಿ. ಬಿರ್ಸಾನ; ಬ್ರಾಹೂಈ. ಬಿಟ್ಟಿಂಗ್]

**ಬಿಡು₂** 'ಬಿಡುವು' ನೋ.

**ಬಿಡು₃** 'ಬಿಡಿ' ನೋ.

**ಬಿಡು₄** (ಅ). 'ಛೆ' ಎಂಬರ್ಥದಲ್ಲಿ ನಿಪಾತಾವ್ಯಯದಂತೆ ಬಳಸುವ ಒಂದು ಶಬ್ದ: ಕಲಿತನದಿಂದಂ ಲೋಗರ್ ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ (ರರ್ವಾವ್ಯ. ೦-೦೭೩); ಬಿಡು ಮರೀಚಿಯು ತೂಱಿಗೆ ಹಱು ಗೋಲಿಡುವರುಂಟೇ (ಕುವ್ಯಾದ್ರೋ. ೯-೩೮). [ < ಬಿಡು₁]

**ಬಿಡುಕುಳ** (ನಾ). ಪ್ರತ್ಯೇಕವಾಗಿರಿಸಿದ ಜಾತಿ ; ಬೇರೆಯಾಗಿರಿಸಿದ ಕುಲ : ಹರಿಜನರ ಚೋಮ, ಪಾತಿರ ಅಪ್ಪು ಮತ್ತು ಮೋದರ ಮುದ್ದ ಮೊದಲಾದವರಂತೆ ತಾನೂ ಬಿಡುಕುಳದ ಮಗನಂತಿದ್ದಾನೆ ! (ಮಸಕೂ. ೦೦). [ಬಿಡು₂ ( < ಬಿಡುವು) + ಕುಳ್₅ (= ಕುಲ)]

**ಬಿಡುಗಂಡಿ** (ನಾ). ಕೆರೆ, ಕಟ್ಟೆ ಮುಂತಾದುವುಗಳಲ್ಲಿ ನೀರು ಹೊರ ಹೋಗುವುದಕ್ಕಾಗಿ ಮಾಡಿರುವ ಕಂಡಿ ; ತೂಬು : ಸಸಿನವಹ ಕೊತ್ತಳದ ಸಾಲಿನ ನುಸುಳುಗಂಡಿಯ ಮುರುಹುಗಳ ಮುಂದೆಸೆವ ಕಲು ಮುಳುವೇಲಿ ಬಿಡುಗಂಡಿಗಳನೀಕ್ಷಿಸಿದ (ಪ್ರರಾಕಾ. ೨-೦೩); ನಾಲೆಯಲ್ಲಿ ಬರುವ ಹೆಚ್ಚು ನೀರನ್ನು ಹೊರಕ್ಕೆ ಸಾಗಿಸುವ ಬಿಡುಗಂಡಿಗಳು ಎರಡು ವಿಧವಾಗಿವೆ (ಶಿಲ್ಪಶಾ. ೩೯೦). [ಬಿಡು₁ + ಕಂಡಿ₁]

**ಬಿಡುಗಟ್ಟು** (ನಾ). (ಕರಾ) ಸಾಲದ ಹಣದ ಮೇಲೆ ಸಮಯಕ್ಕೆ ಸರಿ ಯಾಗಿ ತೀರಿಸದೆ ಇದ್ದಾಗ ಹೆಚ್ಚಾಗಿ ಪಡೆಯುವ ಬಡ್ಡಿ; ದುಬಾರಿ ಬಡ್ಡಿ: (ಕಸಂಗ್ರಾ. ೦೭೮). [ಬಿಡು₂ ( < ಬಿಡುವು) + ಕಟ್ಟು₂]

**ಬಿಡುಗಡೆ** (ನಾ). ೧. ಬಂಧನದಿಂದ ಪಾರಾಗುವಿಕೆ ; ವಿಮೋಚನೆ : ಆ ಉಭಯದ ಬಿಡುಗಡೆಯನಱಿದು ಅಡಗಿಯಲ್ಲದೆ ಸ್ವಯಂಭುವಲ್ಲ (ಮೋಳವಾ. ೨-೩) ; ಕರುಣೆಯ ಸ್ಪರ್ಶವಿಲ್ಲದ ಕಟ್ಟಳೆಯ ಪ್ರಭುತ್ವಕ್ಕೆ ನಾನು ಒಳಗಾದರೆ ಕರ್ಮದಿಂದ ನಮಗೆ ಬಿಡುಗಡೆ ಎಂದೂ ಸಾಧ್ಯವಿಲ್ಲ (ಕಕೃಪ್ರಾ. ೩೩೭). ೨. ಮೋಕ್ಷ ; ಕೈವಲ್ಯ ; ಮುಕ್ತಿ : ಕಡೆಯಿಲ್ಲ ಮೊದಲಿಲ್ಲ ತಡೆ ಬಿಡುಗಡೆಯಿಲ್ಲ (ಶರಬೋ. ೪-೬-೯) ; ಮೋಕ್ಷವೆಂದರೆ ಬಿಡುಗಡೆಗೆ ಹೆಸರು (ಶರಪ. ೬೨-೯). ೩. ಸ್ವಾತಂತ್ರ್ಯ; ಸ್ವತಂತ್ರತೆ : ಮುಂದೆಯುದು ತೋರುವುದು ಬಿಡುಗಡೆಯ ಹಬ್ಬದಲಿ ! (ಕಾಂತಪ. ೬-೪). ೪. ಅಂತ್ಯ ; ಕೊನೆ ; ಮುಕ್ತಾಯ : ನಡುಹೊಳೆಯ ಹಱಿಗೋಲ ಮೂಲೆಯ ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು (ಕುವ್ಯಾಭೀ. ೯-೩). [ ಬಿಡು₁ + ಕಡೆ₃ ]

**ಬಿಡುಗಣ್**, ಬಿಡುಗಣ್ಣು (ನಾ). ೧. (ಅಗಲವಾಗಿ) ತೆರೆದ ಕಣ್ಣು ; ಬಿಟ್ಟ ಕಣ್ಣು: ಬಿಡುಗಣ್ ಬಿಡುವಾಯ್ . . . ಅಱುಗೆಱೆಯೆಂಬಿವು ಪಡೆ ಯವು ಬಿಂದುವನುದಂತವೃತ್ತಿಯನಾಳ್ದಂ (ಶಬುದ. ೦೭೦) ; ಬಾಯ್ಗಳಂ ಬಿಡುವ ಬಿಡುಗಂಗಳ ಸುಜಾಣೆಯರ್ ಸಲೆ ದಶಾವಸ್ಥೆಯೊಳ್ ಕಣ್ಗೆಸೆದರು (ಕಿಬಪು. ೦೯-೩೦). ೨. (ಆಲಂ) ದಿವ್ಯದೃಷ್ಟಿ: ಗಿಡಿದ ಕತ್ತಲೆಯ ಗುಹೆ ಯೊಳಡಗಿರ್ದರಾ ಅಸುರರ್ ಕೀಳ್ದರಾ ಪಾಟವಂ ಪಲ್ಮೊರೆದು, ಕಣ್ದೆರಿಯೆ ಕಂಡರಾ ಬಿಡುಗಣ್ಣ ಬೆಳಕನ್ (ಹೊಂಗಳು. ೩೭-೦೦). **ಬಿಡುಗಣ್ಣು** : ೧. ಮೊಗದ ಹೊಗರವಗಡಿಸೆ ಸುಯಿಲಲಿ ಹೊಗೆಯ ಹೊದಱಂಕುರಿಸೆ ಬಿಡು ಗಣ್ಣುಗಳೊಳೊಕ್ಕುದು ಕೆಂಪು ಸೊಂಪಡಗಿತು ಮುಖಸ್ನೇಹ (ಕುವ್ಯಾಭೀ. ೬-೩೦); ಶಾಂತೆಯೂ . . . ಕುಳಿತುಕೊಂಡು ಬಿಡುಗಣ್ಣುಗಳಿಂದ ಮನೆಯ ನಾಲ್ಕು ಮೂಲೆಗಳನ್ನೂ ನೋಡುತ್ತಿದ್ದಳು (ಶಿರಾಕ. ೪೭). ೩. ರೆಪ್ಪೆ ಹೊಡೆಯದಿರುವ ಕಣ್ಣು ; ಅನಿಮಿಷನೇತ್ರ : ದೇವತೆಗಳು . . . ಬೆವರಿಲ್ಲದ ಮೈ, ಬಿಡುಗಣ್ಣು, ಬಾಡದ ಮಾಲಿಕೆ, ಭೂಮಿಯನ್ನು ಮುಟ್ಟ ದಿರುವುದು, ಈ ದೇವತೆಗಳ ವಿಶೇಷಚಿಹ್ನೆಗಳನ್ನು ತೋರಿದರು (ವಕಥಾ. ೦೫೦). 'ಬಿಡುಗಣ್ಣ' ಪರಾ. [ ಬಿಡು₁ + ಕಣ್ ]

**ಬಿಡುಗಣೆ** (ನಾ). ನಡುವೆ ಬಿಡುವಿಲ್ಲದಂತೆ ಪ್ರಯೋಗಿಸುವ ಬಾಣ ; ಏಕಪ್ರಕಾರವಾಗಿ ತೊಡುವ ಕಣೆ : ವಡಬಗೌತಣವಿಕ್ಕುವರೆ ಕಡ ಲೊಡೆಯಗಹುದು ಸಮರ್ಥನಲ್ಲಾ ಬಿಡುಗಣೆಯ ಬೀಱುವರೆ ಕಟಕಾ ಚಾರ್ಯನು (ಕುವ್ಯಾದ್ರೋ. ೬-೦೯). [ಬಿಡು₂ ( < ಬಿಡುವು) + ಕಣೆ₁]

**ಬಿಡುಗಣ್ಣ** (ನಾ). ೧. ತೆರೆದ ಕಣ್ಣುಳ್ಳವನು ; ಅಗಲವಾಗಿ ಕಣ್ಣು ಬಿಟ್ಟಿರುವವನು : ಪೊಂಜೊಡರು ತೂಗಿದೊಲು ನೆಲ ಬಾನ ತಳ್ಕೆಯಲಿ ನೇಸರನು ಬಿಡುಗಣ್ಣನಾಗುತ್ತಿರಲು . . . ಸ್ವರ್ಣಮಂದಿರದ ಛಾಯೆ ಯೊಲು ಬೆಟ್ಟ ಕಾನು ಗಂಭೀರಗುಂಭದಲಿ ಮೈದುಂಬಿ ನಿಂತಿಹವು (ಕಾವಚಾ. ೦-೭). ೨. ರೆಪ್ಪೆ ಬಡಿಯದಿರುವವನು ; ಬಿಟ್ಟ ಕಣ್ಣುಳ್ಳ ವನು ; ದೇವತೆ : "ಗಾಳಿವಟ್ಟೆಗರ್ . . . ಬಿಡುಗಣ್ಣರೆನೆ ನಿರ್ಜರರ್ಗ ಮರ್ದ ನಾಮಮಕ್ಕುಂ" (ಶಬ್ದಕೈ. ೦೦೦) ; ಬೇಡುವರನು ಮನ್ನಿಪ ಬಿಡು ಗಣ್ಣರ ನಾಡೆಱೆಯನ ಮಗನಂತೆ ಗಾಡಿವಡೆದ ರೂಪಿನ ಗರುವನ ನೀ ನೋಡು ಕಳಿಂಗನನಬಲೆ (ಜೀವಂಕಾಂ. ೦೦-೬೪).

**ಬಿಡುಗಣ್ಣರೆಱೆಯ** = ದೇವತೆಗಳ ಒಡೆಯ ; ಶಿವ : ಬಿಡುಗಣ್ಣ

ರೆಜೆಯುಂ ವಿಶ್ವನಾಥಂ ಪ್ರಸನ್ನನಾದಂ ಭಕ್ತರುಘೆಯುಘೆಯೆನೆ (ಶದ್ಮರಾ. ೬-೩೫). [ಬಿಡುಗಣ್ + —ಅ$_7$]

**ಬಿಡುಗಣ್ಣು** 'ಬಿಡುಗಣ್' ನೋ.

**ಬಿಡುಗಯ್**, ಬಿಡುಗೈ (ನಾ). ತೆರೆದ ಕೈ ; ಮುಕ್ತಹಸ್ತ : ಮಹತ್ಕಾರ್ಯಕ್ಕೆ ಉಜ್ಜುಗಿಸಲೆದೆಗೊಳ್ಳುವ ಸಾಹಸಾತ್ಮನು ಇಂತಹ ಕೋಟಿ ಸಾಧನಗಳನ್ನು ಬಿಡುಗಯ್ಯಿಂದ ಸೂಸಿ ವ್ಯವಸಾಯ ಮಾಡಬೇಕು (ಮಂತ್ರಶ. ೨೬-೧೦). **ಬಿಡುಗೈ :** ಸಾಹಿತ್ಯ ಸಂಗೀತಗಳಿಗೂ ಬೇಕಾದಷ್ಟು ಬಿಡುಗೈ ಉತ್ತೇಜನ ದೊರೆಯುತ್ತಿತ್ತು (ರಂಗನಾ. ೨೦೭).
[ ಬಿಡು$_1$ + ಕಯ್$_2$ (<ಕೆಯ್$_2$) ]

**ಬಿಡುಗಾವಲಿ** (ನಾ). ೧. (ಗದ್ದೆ, ತೋಟ ಮೊದಲಾದುವುಗಳಿಗೆ) ನೀರು ಹರಿಯಲು ಮಾಡಿರುವ ತೋಡು ; ಕಾಲುವೆ : ಗದ್ದೆಯ ನೆಲ್ಲಿಗೆ ಕೆರೆಯ ನೀರು . . . ಬೇಕಾದಾಗ ಬಿಡುಗಾವಲಿಯಿಂದ ಬಿಡುವದುಂಟು. ಬಿಡುಗಾವಲಿನೀರಿನ ಭೂಮಿಯಾದರೆ ಪ್ರತಿವರ್ಷಕ್ಕೆ ಎರಡು ಸಾರೆ ನೆಲ್ಲು ಬೆಳೆಯಾಗುವದು (ಕೃಷಿಶ. ೫೪).
[ಬಿಡು$_1$ + ಕಾವಲಿ$_3$ (<ಕಾಲ್ವಾಯ್)]

**ಬಿಡುಗಿವಿ** (ನಾ). ಆಭರಣವಿಲ್ಲದೆ ಬರಿದಾಗಿರುವ ಕಿವಿ ; ಬರಿಗಿವಿ : ಬಿಡುಗಿವಿ ಮಿಂಚುವೆತ್ತ ಸುಲಿಪಲ್ ಕುಣಿದಾಡುವ ಕುಂತಳಂ ನೊಸಲ್ಪಿಡಿದ ಬೆಮರ್ (ಸೂಕ್ತಿಸು. ೩-೨೦೦). [ಬಿಡು$_2$ (<ಬಿಡುವು) + ಕಿವಿ$_3$]

**ಬಿಡುಗು** (ನಾ). ಎರಚುವಿಕೆ ; ಇರಿಸಿಲು ; ಎರಚಲು : ಮಿಂಚಿನ ಕಡುಗು ಕತ್ತಿಯು ಬೆಡಗು ಮಳೆನೀರ್ ಕರಿಕರಾಯತದೀ ಬಿಡುಗು (ಕೃಕಣಾ. ೨-೭೮). [ಬಿಡು$_1$ + ?]

**ಬಿಡುಗುರುಳು** (ನಾ). ಬಿಚ್ಚಿರುವ ಕೂದಲು ; ಕೆದರಿದ ಕೇಶ : ತುರುಬು ಜಡೆಯೊಳು ಬಿಡುಗುರುಳು ಇವೆಲ್ಲವೂ ರುದ್ರನ ಅಡಿವೆಜ್ಜೆಯ ಕುರುಹು (ಸರ್ವವ. ೦೨೫-೬೩೭); ಮೊಗದೊಳ್ ಮುಸುರ್ವ ಬಿಡುಗುರುಳ ಬೆನ್ನೊಳ್ ನಟ್ಟ ಸರಳ ತಬ್ಬಿಬ್ಬೆಸೆವ ನಡೆನುಡಿಗಳ . . . ಸರ್ವದಿಕ್ಪಾಲರೋಟಂ ಗಾಣುತಜನಾಗ್ರಹಂದಾಳ್ದನು (ಕಂಪು. ೪೯-೨೪).
[ಬಿಡು$_1$ + ಕುರುಳು$_1$ (<ಕುರುಳ್$_1$)]

**ಬಿಡುಗುಜಾತನ** (ನಾ). ಮಂದೆಯನ್ನು ಬಿಟ್ಟು ಒಂಟಿಯಾಗಿ ಹೋಗುವ ಕುರಿಯಂ ನಡವಳಿಕೆ : ಹಾ ನುಡಿಯದಿರು ನಿಲು ಪಿತಾ ಮಹನೇನ ಬೆಸಸಿದುದಕೆ ಹಸಾದವು ನೀನು ನಡೆ ಪಾಳೆಯಕೆ ಬಿಡುಗುಜಾತನವ ಮಾಣೆಯುಲ ಮೌನಮುದ್ರೆಯ ಹಿಡಿ (ಕುಮಾ.ಭಾ. ೧೦-೩೭). [ಬಿಡು$_1$ + ಕುಜಾತನ]

**ಬಿಡುಗೂದಲು** (ನಾ). = ಬಿಡುಗುರುಳು : ಆಕೆಯ . . . ಬಿಡುಗೂದಲನ್ನು ಚಿತ್ರಿಸಿದ ಬಗೆ, ಅವುಗಳನ್ನು ಹೊಂಬಣ್ಣದಿಂದ ಮಿನುಗಿಸಿದ ಬಗೆ ಈತನ ಕಲಾನೈಪುಣ್ಯವನ್ನು ಎತ್ತಿ ತೋರಿಸುತ್ತವೆ (ಅಪೂಶ. ೨೯೩).
[ಬಿಡು$_1$ + ಕೂದಲು (<ಕೂಂದಲ್)]

**ಬಿಡುಗೆ** (ನಾ). ೧. ತ್ಯಜಿಸುವುದು ; ದೂರ ಮಾಡುವುದು : "ತ್ಯಜನಂ . . . ತ್ಯಕ್ತಿಃ, ಈ ೫ ಬಿಡುಗೆ" (ಕಾಶಕ್ಕ. ೭೮). ೨. ಬಿಡುಗಡೆ ; ವಿಸರ್ಜನೆ : "ಮುಚ—ಪ್ರಮೋಚನೇ, ಬಿಡುಗೆಯೊಳ್" (ಕಾಶಕ್ಕ. ೨೭೯); ಹಿಪ್ಪಲಿ . . . ಏಲಕ್ಕಿ, ಸೈಂಧವ ಇವುಗಳ ಚೂರ್ಣಿಸಿ ಜೇನುತುಪ್ಪ, ಸಕ್ಕರೆವೆರಸಿ ನಾಭಿಯಿಂದ ಕೆಳಕ್ಕೆ ಲೇಪಂಗೈಯಲು ಜಲ, ಮಲ ಬಿಡುಗೆ (ವೈದ್ಯಸಾ. I, ೪೮೦). ೩. ನಿವಾರಣೆ : "ಪರಿಹಾರಃ—ಬಿಡುಗೆ" (ಕಾಶಕ್ಕ. ೦೫೭). ೪. (ಬರಬೇಕಾದ ಹಣದಲ್ಲಿ ತೋರಿಸುವ) ರಿಯಾಯಿತಿ : ನೋಡಿ: ಎತ್ತಿನ ವ್ಯಾಪಾರದಲ್ಲಿ ಎಷ್ಟು ಬಿಡುಗೆ ಬಿಟ್ಟುಕೊಟ್ಟರು? (ಧೂ). ೫. ನಿರೂಪ ; ಅಪ್ಪಣೆ : 'ಬಿಡುಗೆಗೊಡು' ಪರಾ.೬. ಅವಕಾಶ ; ಆಸ್ಪದ : 'ಬಿಡುಗೆವಡು' ಪರಾ. [ಬಿಡು$_1$ + —ಗೆ]

**ಬಿಡುಗೆಗುಡು** 'ಬಿಡುಗೆಗೊಡು' ನೋ.

**ಬಿಡುಗೆಗೊಡು**, ಬಿಡುಗೆಗುಡು (ಕ್ರಿ). ೧. ಹೋಗಲು ಅನುಮತಿ ಕೊಡು, — ಅವಕಾಶಕೊಡು ; ಬೀಳ್ಕೊಡು : ಕೆಡುವ ದೇಹವನಿನ್ನು ತಪದಲ್ಲಿ ವೆಚ್ಚಿಸಿ ಕೆಡದ ಸಿದ್ಧಿಯ ಮಾಳ್ಪೆನದಕೆ ಬಿಡುಗೆಗೊಡೆಂದು ಸಾಷ್ಟಾಂಗವೆರಗಿದನು ಪೊಡವೀಶನೆದೆ ದಿಗಿಲೆನಲು (ಭರತ. ೩೦-೯೩); ಸರ್ವರಿಗೆ ಕೈವೀಸಿ ಬಿಡುಗೆಗೊಟ್ಟರಮನೆಯೊಳಗೆ ತಾ ಪೊಕ್ಕನಾ ಕಡುಗಾಡಿಕಾರನು (ಭರತ. ೬೨-೯೯). **ಬಿಡುಗೆಗುಡು :** ೨. ಬಿಡುಗಡೆಯನ್ನು ಮಾಡು ; ವಿಮೋಚನೆಗೊಳಿಸು ; ಬಿಟ್ಟು ಬಿಡು : (ಕಟ್ಟುವಟ್ಟವನಿಗೆ ಬಿಡುಗೆಗುಡುವವನು) (ಚಟ್ಟಿಕ. ೦೦೩-೭). [ಬಿಡುಗೆ + ಕೊಡು$_1$]

**ಬಿಡುಗೆಗೊಳ್** (ಕ್ರಿ). ಹೊರಡಲು ನಿರೂಪ ತೆಗೆದುಕೊಳ್ಳು ; ಬೀಳ್ಕೊಳ್ಳು : ಬಿಡುಗೆಗೊಂಡರು ವೃದ್ಧವ್ರತಿಕರು ಭರತೇಶನಡಿಗಳಿಗೆಚಿ ಭಕ್ತಿಯೊಳು (ಭರತ. ೦೬-೦೨೪). [ಬಿಡುಗೆ + ಕೊಳ್$_1$]

**ಬಿಡುಗೆಗೊಳಿಸು** (ಕ್ರಿ). ಬಂಧನದಿಂದ ಹೊರಹಾಕು ; ಸೆರೆಯಿಂದ ಹೊರಗೆ ಕಳಿಸು : ಆ ವೃದ್ಧ ವೆಂಕಟಾದ್ರಿನಾಯಕನನ್ನು ಕಾರಾಗೃಹದಿಂದ ಬಿಡುಗೆಗೊಳಿಸುವ ಸನ್ನಾಹದಲ್ಲಿ ಈ ದುರ್ಮೋಹನದ ಚಿನ್ಹೆಗಳನ್ನೆಲ್ಲ ಮರೆಯುವೆನು (ಸುಗುಗಂ. ೦೦೭-೦೪). [ಬಿಡುಗೆಗೊಳ್ + —ಇಸು$_3$]

**ಬಿಡುಗೆಚ್ಚಲು** (ನಾ). ಹಾಲಿನಿಂದ ತುಂಬಿರುವ ಕೆಚ್ಚಲು ; ತೊರೆದ ಕೆಚ್ಚಲು : ಈ ಉಷೆ ನರ್ತಕಿ ಚಿತ್ರಾಂಬರಧಾರಿ ಬಿಡುಗೆಚ್ಚಲ ಧೇನು ವಿನೊಲು ಎದೆ ತೋರಿ . . . ಬರುವಳು ಲೋಕಕೆ ಜ್ಯೋತಿಯನೆರೆದು ! (ಸೌಂದರ. ೯೭) [ಬಿಡು$_1$ + ಕೆಚ್ಚಲು (<ಕೆಚ್ಚಲ್)]

**ಬಿಡುಗೆಲಸ** (ನಾ). ಬಿಡಿಯಾದ ಕೆಲಸ ; ಪ್ರತ್ಯೇಕವಾದ ಕೆಲಸ : ತೊಡರಿಸಿ ಪೊಸದಳಿರ್ದೋರಂಬೆದೋರಣಗಳ ನಡೆಮುಡಿಗಳನಳವಡಿಸಿ ಬಿಡುಗೆಲಸದ ಪೆಣ್ಗಳೆಡೆಯಾಡದಿರಿಮಿನ್ನಡೆಯಿಮೆಂದವರನಟ್ಟುವುದು (ಚಕವಿ. ೬-೩೫ ಸಾಂಗತ್ಯ). [ಬಿಡು$_3$ (<ಬಿಡಿ) + ಕೆಲಸ]

**ಬಿಡುಗೆವಡು** (ಕ್ರಿ). ಅವಕಾಶ ಹೊಂದು ; ಆಸ್ಪದವನ್ನು ಪಡೆ : ಅರಸಿಯರೆಲ್ಲರು ಮುಂಡಿಬಾಗಿ ಚಿಂತಿಸುತಿರಲು ಎಡೆನರೆಹಾಯ್ದು ಪಾಟಿಯ ರಾಣಿಯೊರ್ವಳು ಬಿಡುಗೆವಟ್ಟಂತು ನುಡಿದಳು (ಭರತ. ೩೯-೭೨).
[ಬಿಡುಗೆ + ಪಡು$_1$]

**ಬಿಡುಗೇಶ** (ನಾ). = ಬಿಡುಗುರುಳು : ಹಾಸಿ ಹರಹಿದ ತೋಳುಗಳ . . . ಬಿಡುಗೇಶದನುಜನ ಕಂಡು ದೊಪ್ಪನೆ ಕೆಡೆವನವನಿಯಲಿ (ಕೂರಂ. ೬-೪೭-೫೭); ಸಿಖಿ ಗರಿಯ ಗೆದರ್ದಂತೆ ಬಿಡುಗೇಶದೋನೆ ಮನೆಯೊಕ್ಕು ಬರೆ ಕಾಣುತ್ತಲಿ (ನವಮೋ. ೨೭-೩೨). [ಬಿಡು$_1$ + ಕೇಶ]

**ಬಿಡುಗೈ** 'ಬಿಡುಗಯ್' ನೋ.

**ಬಿಡುಗೊಡೆ** (ನಾ). ದಾನವಾಗಿ ಬಿಟ್ಟು ಕೊಟ್ಟುದು ; ಕೊಡುಗೆ : ಪಳಥ ಬಿಡುಗೊಡೆಯಾಗಿ ಬಿಟ್ಟ ಗ ೨೧೪ ಪ ೬ (ಎಕ. VI, ಕಡೂರು. ೪೯-೩೩ ; 1291). [ಬಿಡು$_1$ + ಕೊಡೆ$_3$]

**ಬಿಡುಗೊಳ್** (ಕ್ರಿ). ಬಿಡುಗಡೆ ಹೊಂದು ; ವಿಮೋಚನೆಗೊಳ್ಳು : ಚೆನ್ನೆಯ ಕಂಠಾಲಿಂಗನದಿಂ ನೆಜೆ ಬಿಡುಗೊಂಡು ಪೊರಳ್ವ ತಾರಾವಳಿಯಿಂದೇಂ ನೇಹದೆ ಸಂತೈಕುಂ ತನ್ನವೊಲಿರ್ಪನ್ನ ತನುವನೊಳ್ಗೆ ಳದಿಯ ಪೋಲ್ (ಚಿತ್ರಗೋ. ೫೪-೯೦). [ಬಿಡು$_2$ (<ಬಿಡುವು) + ಕೊಳ್$_1$]

**ಬಿಡುಜಡೆ** (ನಾ). ತುರುಬು ಕಟ್ಟದೆ ಇಳಿಬಿಟ್ಟಿರುವ ಹೆರಳು, — ಜಡೆ : ಬಿಡುಜಡೆಯ ಬಿದುಮೊಗದ ಬಿರಿದೆಸಳ್ಗಣ್ಣ ಬಿಲ್ಪುರ್ಬಿನ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೪೯-೨೦).
[ಬಿಡು$_1$ + ಜಡೆ$_1$]

**ಬಿಡುತರ್** (ಕ್ರಿ). ೧. ವಿಮೋಚನೆಯಾಗು ; ಬಿಡುಗಡೆ ಹೊಂದು : ನವನಿರ್ಯತ್ಸಹಕಾರವಾರಿ ಮದವಂ ತತ್ಪಲ್ಲವಂ ಕರ್ಣಪಲ್ಲವಮಂ . . .

ಎಯ್ದೆ ಪೋಲೆ ಬಿಡುತಂದುಗ್ರದ್ವಿಪಂ ಬಂದು ತಾಂಗುವುದೆಂಬಂದೆಳಮಾವಿನೊಳ್ ದ್ವಿಪಮೆಗೆತ್ತೇಂ ಸೊರ್ಕು ಸೈತಿರ್ಕುಮೋ (ಶಾಂತಿಪು. ೯-೧೪೨) ; ವಿನತಾತ್ಮಜನಂ ಕಂಡಂ ವಿನತಾತ್ಮಜನಿಂದೆ ನಾಗಪಾಶಂ ಬಿಡುತಂದನಿರುದ್ಧನಾಗಿ ಮುಂದಿರ್ದನಿರುದ್ಧನನಾಗಳಪ್ಪಿಕೊಂ ಪ್ರದ್ಯುಮ್ನಂ (ಜಗನ್ನಾ. ೧೮-೬೦). ೨. ಬಿಚ್ಚಿಹೋಗು ; ಕಳಚಿಕೊಳ್ಳು: ಕಚಬಂಧಂ ಬಿಡುತಂದು ನೀವಿ ಶಿಥಿಲತ್ವಂಬೆತ್ತು . . . ಕಣ್ಗೆಸೆಯೆ ಬಂದರ್ . . . ಕಾಂತೆಯರ್ (ಜಗನ್ನಾ. ೧೪-೮೫) ; ಮುಡಿ ಬಿಡುತಂದು ಸೂಸೆ ಮುಗುಳಂ (ರಾಜಶೇ. ೬-೧೧). ೩. ಹೊರಸೂಸು ; ಹೊರಚೆಲ್ಲು : ಪರಚಕ್ರಭೂಪರಟ್ಟಿದ ಕರಿಗಳ್ ಬಿಡುತರ್ಪ ಮದದ ಪೊನಲಿಂದೆತ್ತಂ ನರಲೋಕಚಂದ್ರನಾ ಮಂದಿರದೊಳಗೆಲ್ಲ ಕಾಲಮುಂ ಕೆಸಱಕ್ಕುಂ (ಕವಿರಾ. ೩-೧೮೨) ; ಬಿಡದೆ ಬಿಡುತರ್ಪ ಸಹಕಾರದ ಸೊನೆಯ ಸೋನೆಯೊಳಂ . . . ಪಾಡುವಪೆ ಣ್ದುಂಬಿಯ ಮಂದ್ರನಾದದಿಂ ಶ್ರುತಿಸುಭಗಮಾಗೆ (ಮಲ್ಲಿಕಾ. ೩-೧೧೧) ; ತಂಗೊಳದ ಬಿಡುತರ್ಪ ಪುಷ್ಪವಾಸನೆಯಿಂದ ಪಥಶ್ರಮವಡಗಿಪ್ಪವೇನ ಬಣ್ಣಿಸುವೆ (ಕಂನವಿ. ೫-೧೧೪). [ಬಿಡು$_1$ + ತರ್]

**ಬಿಡುತೆ,** ಬಿಡಿತೆ (ನಾ). ೧. ಬಿಡುಗಡೆ; ಬಂಧನರಾಹಿತ್ಯ; ಸ್ವಾತಂತ್ರ್ಯ: ನಲವಿಂಸಿನ ಕೊಲೆ ಬಿಡುತೆ ಬಿತ್ತಿತ್ತು (ಶಾರಸಿ. ೨೨-೫೦೫). 'ಬಿಡುತೆಗೊಳ್ಳು', 'ಬಿಡುತೆಯಪ್ಪನ್' ಪರಾ. ೨. ಅವಕಾಶ ; ಆಸ್ಪದ : ಲಂಘನೆಲಾಗು ಬಿಡುತೆಗಳ ಬಿಡುಬಿನಿಂ ಕುಡಿಮಿಂಚು ಪೊಡವಿಯೊಳು ಕುಡಿದೋಱಿತು (ಜಳಸ. ೩೫) ; ಕಾರ್ಯಕರ್ತಮಂಡಲಿ ಮೊದಲಾದ ಕೆಲವು ಅಧಿಕಾರ ಸ್ಥಾನಗಳಲ್ಲಿ ಒಂದು ವರ್ಷ ಅಥವಾ ಒಂದು ಸಾರಿ ಇದ್ದವರು ಪುನಃ ಇರಬೇಕಾಮದಿಲ್ಲವೆಂಬ ಬಿಡುತೆಯ ಏರ್ಪಾಟೂ ಇತ್ತು (ಸೋಕ್ರಮ. ೦೩). ಬಿಡಿತೆ : ೩. (ಬಾಣ ಮುಂತಾದುವನ್ನು) ಬಿಡುವಿಕೆ ; ಪ್ರಯೋಗಿಸುವಿಕೆ ; ಎಸೆತ : ಸರಳಿನ ಬಿಡಿತೆ ಬಿನ್ನಣಗಳನು ತೋರುವೆವು (ಅಂಬಿಕಾ. ೩೧-೦೩). ೪. ಸ್ವಚ್ಛಂದತೆ ; ಸ್ವೇಚ್ಛೆ : ಸೊಲ್ಲಿನ ಹಿಡಿತೆ ಬಿಡಿತಗಳೆಲ್ಲ ತ್ರ್ಯಜಗದೊಡೆಯ ತಾ ಬಲ್ಲ (ಗಗತಾ. ೨-೧೪). [ಬಿಡು$_1$ + – ತ್ತೆ]

**ಬಿಡುತೆಗೊಳ್ಳು** (ಕ್ರಿ). ಬಿಡುಗಡೆ ಹೊಂದು ; ಮುಕ್ತಿಯನ್ನು ಪಡೆ : ಏಕಣ್ಣ ಕೆಳರಿಬಿರ್, ಇದೆ ತಾನೆ ಮೇಲೆ ಮೇಲೊತ್ತಿ ಬರ್ಪಬಿಲಿಂದೆ ಬಿಡುತೆಗೊಂಡಿದ್ದಳನ್ ? (ಅಕ್ಕಚ್ಚಾ. ೩೨-೬೦೭); ದೋಣಿ ಹೊರಟುನಿಂತಿದೆ ಎಂಬ ಮಾತು ಬಿಡುತೆಗೊಂಡ ಚೇತನದ ನಿಲುವನ್ನು ಧ್ವನಿಸುತ್ತದೆ (ಪಂಶೀ. ೨೩೨). [ಬಿಡುತೆ + ಕೊಳ್ಳು$_1$ (<ಕೊಳ್$_1$)]

**ಬಿಡುತೆಯಪ್ಪನ್** (ಕ್ರಿ). = ಬಿಡುತೆಗೊಳ್ಳು : ಕೇಡಿಂದೆ ನಾನ್ ಬಿಡುತೆಯಪ್ಪಂತುದೋ ಪೆರ್ನಲಿವು (ಅಂತಿಗೊ. ೨೦-೪೨೨). [ಬಿಡುತೆ + ಆನ್$_1$]

**ಬಿಡುತೆವೆಱು** (ಕ್ರಿ). = ಬಿಡುತೆಗೊಳ್ಳು : ರಾಣಿಯ ಕಯ್ಯೊಳ್ಪಂದಿಗೆ ಸಿಲ್ಕಿ ಪುಣ್ಯದಿಂದಮಾಂ ಬಿಡುತೆವೆತ್ತು ಈ ಕಣ್ಗಳಿಂದಮೆ ನಿನ್ನಂ ನೋಡಿದೆಂ (ಬಿತ್ರಗೋ. ೫೩-೦೫). [ಬಿಡುತೆ + ಪೆಱು$_1$]

**ಬಿಡುದಂಬುಲ** (ನಾ). (ನಿರ್ದಿಷ್ಟವ್ಯಕ್ತಿಗಾಗಿ) ಮೀಸಲಾಗಿಟ್ಟ ತಾಂಬೂಲ : ಪಲತೆಱದ ತೊಡುಗೆ ಬಿಡುದಂಬುಲಮೊಳ್ಳಣಸುಗಳನೆಯ್ದೆ ಸಲಿಸುಗೆ ಕೂರ್ತಂತಲಸದೆ ಸಂಭೋಗದೊಳಂ ಪಲವುಂ ಬಿನದದೊಳವರ್ಗೆ ಕಳೆವುದು ಪೊತ್ತಂ (ಪುದಾ. ೮-೬೩). [ಬಿಡು$_1$ + ತಂಬುಲ]

**ಬಿಡುದಲೆ** (ನಾ). ಕೂದಲು ಕೆದರಿದ ತಲೆ ; ಬಿಟ್ಟ ಮಂಡೆ : ಬಿಡುದಲೆಯ ಬಿಟ್ಟ ಬಾಯ್ಗಳ ಬಱತ ಬಸುಱ . . . ಭೂತವೇತಾಳಪಡೆ ಸುತ್ತಿ ಮುತ್ತಿ ಬೊಬ್ಬಿಟ್ಟು ರ್ಝುಂಕಿಸಿದವು (ಹಜಕಾ. ೦೨-೩೨) ; ಬಿಡುದಲೆಯ ಬಸಿವೇಱುಗಳ ಶೋಣಿತದ ನರಳುವಾರೋಹಕರ . . . ಭಂಗವನೇನನೆಂಬೆನು (ಕುಮಾರವ್ಯಾ. ೦೮-೩೪). [ಬಿಡು$_1$ + ತಲೆ$_1$]

**ಬಿಡುದಾಣ** (ನಾ). ಇಳಿದುಕೊಳ್ಳುವ ಸ್ಥಳ ; ತಂಗುದಾಣ ; ಬಿಡಾರ : ಮಂಗಳಿವೇಡಂ ಬಿಡುದಾಣಂ ತನಗೆನೆ ಜಸಮಂ ತಾಳ್ದಿದಂ ಕೃಷ್ಣರಾಜಂ (ಸೌಇಇ. XX. ೦೩೩-೦೬; 1067) ; ಪಾಂಡುಪುತ್ರರಲ್ಲಿಂದೆಟ್ಟು ತಮ್ಮ ಬಿಡುದಾಣಕ್ಕೆ ಪೋಪುದುಂ (ಮಹಾನೇ. ೧೦-೧೪ ವ); ಬಿಡುದಾಣವನೀಯುತ್ . . . ಪಡೆವಳನಂ ಕಳುಪಿದಳ್ ನಿತಂಬಿನಿ ಕಡುಪಿಂ (ನಳಚಂ. ೭೦೩). [ಬಿಡು$_1$ + ತಾಣ]

**ಬಿಡುದಾರ** (ನಾ). ಬರಿದಾದ ದಾರ ; ಮಣಿ ಕಳಚಿದ ಎಳೆ : ಮಡದಿ ಜಾನಕಿ ರತುನವಿಲ್ಲದೀ ಮೈಯೊಂದು ಬಿಡುದಾರವಾಯ್ತಲ್ಲೊ ತಮ್ಮಾ (ಶಾರ್ಕೆಸು. ೬೬). [ಬಿಡು$_2$ (< ಬಿಡುವು) + ದಾರ$_1$]

**ಬಿಡುದೇವಸ್ವ** (ನಾ). ದೇವಾಲಯಕ್ಕೆ ದತ್ತಿಯಾಗಿ ನೀಡಿದ ಆಸ್ತಿ: ದೇವರ ಸೇವೆ ನಡೆಸುವುದಕ್ಕಾಗಿ ಮಾಡಿದ ದಾನ : ಯಿಾ ಧರ್ಮಕೆ ಧಾರೆಯನೆಱದು ಆಚಂದ್ರಾರ್ಕಸ್ಥಾಯಿಯಾಗಿ ಬಿಡುದೇವಸ್ವವಾಗಿ ಸರ್ವಮಾನ್ಯವಾಗಿ ಕೊಟ್ಟೆವಾಗಿ ಸುಖದಿಂ ಭೋಗಿಸೂದು (ಸೌಇಇ. IX–ii, ೪೫೦-೦೭; 1447); ಆ ದೇವರಿಂಗೆ ನಡವ ಅಂಗರಂಗ ನೈವೇದ್ಯ ಮುಂತಾದ ಧರ್ಮಂಗಳಿಗೆ ಬಿಡುದೇವಸ್ವವಾಗಿ ಕ್ಷೇತ್ರಂಗಳ ಬಿ[ಟ್ಟು] (ಕಇ. III–i, ೬-೦೩; 1527). [ಬಿಡು$_1$ + ದೇವಸ್ವ]

**ಬಿಡುನಾಯ್** (ನಾ). ಸ್ವೇಚ್ಛೆಯಾಗಿ ತಿರುಗುವ ನಾಯಿ ; ಬೀದಿನಾಯಿ : ಕೊರಲೊಳ್ ಕಟ್ಟಿದ ಮಾಲೆಯ ಸಿರಿಖಂಡದ ತಳ್ಕಿನೊಂದು ಬಿಡುನಾಯ್ಬರ ಸಾದರದಿಂದನರ್ಘ್ಯಮಣಿವಿಷ್ಟರದೊಳ್ ಕುಳ್ಳಿರ್ದು ಸರುಗನುಣೆ ಕಂಡು ದಱಿಂ ಪ್ರತಹೀನರ್. . . ಅತಿಕಷ್ಟರಪ್ಪರವನಿಯೊಳತಿಥಿಗಳಿನ್ನನ್ನದಾನಮಂ ಕುಡುವೆಡೆಯೊಳ್ (ಆದಿಪು. ೦೫-೪೨). [ಬಿಡು$_2$ (<ಬಿಡುವು) + ನಾಯ್]

**ಬಿಡುನುಡಿ** (ನಾ). ಅಡ್ಡಿಯಿಲ್ಲದ ಮಾತು ; ತಡೆಯಿಲ್ಲದ ಮಾತು : ಮತ್ತೋರ್ವಳ್ ಪುರುಡಿನಿಂ ಪುಟ್ಟಿದ ಮುಳಿಸಂ ತಿಳಿಪಲೊಡರಿಸಿದ ವಲ್ಲಭಂಗೆಡೆಗುಡದೆ ಬಿಡುನುಡಿಯಂ ನುಡಿದು (ಚಂದ್ರಪು. ೮-೬೯ ವ): ಬಿಡುನುಡಿಗಳ ಬಿತ್ತರಿಸುವ ಬಿಡದೆ ಕಾದುವ ಗಂಡ ಪೆಂಡಿರನೇತಕೆ ಪಡೆದನಕಟ ಪದ್ಮಭವನು (ಹರಿಚ. ೬-೯); ಸೊರ್ಕಿಂ ಗುಱುಪುವರಗಿಳಿಯ ಬಿಡುನುಡಿಯ ಭಂಗಿಯಂತೆ, ಕರ್ಣರಸಾಯನಮಾಗೆ ಶ್ರೀರಾಮನಂ ಪಾಡಿ ಪೊಗಳ್ವ ಗಾಯಕಸಂದೋಹದಿಂ . . . ಕೇರಿಗಳ್ ಸೊಗಯಿಸೆ (ರಾಮಾಶ್ವ. ೨೩-೦೬). [ಬಿಡು$_2$ (<ಬಿಡುವು) + ನುಡಿ$_2$]

**ಬಿಡುಪಡು** 'ಬಿಡುವಡು' ನೋ.

**ಬಿಡುಬಿಸಿಲು** (ನಾ). ತಡೆಯಿಲ್ಲದ ಬಿಸಿಲು : ಒಂದು ಬೀಜವ ಬಿತ್ತಿವಡೆ ಮೂರು ಫಲವಾಯಿತ್ತು . . . ಅದು ಬಿಡುಬಿಸಿಲಿನಲ್ಲಿ ಒಣಗೆ ಪಡಿಪುಚ್ಚಕ್ಕೆ ಮೂಗಳವಾಯಿತ್ತು (ಪೋಳಪಾ. ೨೦೭-೬೭೧). [ಬಿಡು$_2$ ( < ಬಿಡುವು ) + ಬಿಸಿಲು ( < ಬಿಸಿಲ್ ) ]

**ಬಿಡುಬೀಸು** (ನಾ). ೧. ನಿರ್ಬಂಧವಿಲ್ಲದುದು ; ಯಾವ ಕಟ್ಟಿಗೂ ಒಳಪಡದುದು ; ಸ್ವಚ್ಛಂದವಾದುದು : ಆ ಸ್ವಾತಂತ್ರ್ಯದಲ್ಲಿ ನಮ್ಮ ಮನಸ್ಸು ಬಿಡುಬೀಸಾಗಿತ್ತು (ಬಿಬಂಧ. II, ೪೦). ೨. ವಿಶಾಲವಾದುದು; ವಿಸ್ತಾರವಾದುದು ; ಹರವು : ನಮ್ಮ ಮನೆ ಬಿಡುಬೀಸಾಗಿದೆ (ರಾಮಾನೆ. ೬೫); ಅವಳು . . . ಕೋಣೆಯ ಬಿಡುಬೀಸಾದ ಸ್ಥಳದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಸುತ್ತಾಡುತ್ತಿದ್ದಳು (ಶುನರು. ೦೪೩). [ಬಿಡು$_2$ (<ಬಿಡುವು) + ಬೀಸು$_2$]

**ಬಿಡುಬು** (ನಾ). [ನಾಟ್ಯ]ಒಂದು ಭಂಗಿ (?): ಅಡಿದೊಡರ್ಪನಿದು ಜಡೆಯ ನಡುಬಳಸಿಯನುಗೊಳಿಸಿ ಜಡಿಪವೋಲೆಯನೊಡಂಬಡಿಸಿ ಒಡನೆ ಲಂಘನೆಲಾಗು ಬಿಡುತೆಗಳ ಬಿಡುಬಿನಿಂ ಕುಡಿಮಿಂಚು ಪೊಡವಿಯೊಳು ಕುಡಿದೋಱಿತು (ಜಳಸ. ೩೫). [ ? ]

**ಬಿಡುಮಂಡೆ** (ನಾ). = ಬಿಡುದಲೆ : ಹಸುರುಮೈ ಹಾವಿನಾಭರಣ ಬಿಡುಮಂಡೆ . . . ಕೆಂಪಿನ ಪುಷ್ಪಸರವೊಪ್ಪುವಾ ಹೊಸ ವಿಜಯ

ಯಮುದಱಿ . . . ಅಜಿತೆಯೆಂಬೆಂಟು ಪೆಸರೆಸೆವ ದೇವಾಂಗನೆಯರು (ಸಿದ್ಧರಾ. ೪-೯); ತರಹರಿಕೆ ಕೈಗೂಡದವನೀಶ್ವರನು ಕೌಸಲೆಸಹಿತ ಬಳಲುವ ಶಿರದ ಬಿಡುಮಂಡೆಗಳ . . . ಕಟ್ಟಳಲಿಕೆಯಲ್ಲೈದಿದನವನಿಜಾ ಪತಿಯ (ತೊರೆರಾ. ೨-೩-೩೩); ಆರು ಅಳುಪಿದವರುಗಳು . . . ತೆಂಕಮುಖ ವಾಗಿ ಬಿಡುಮಣ್ಡೆಯಲ್ಲಿ ಸುರಾಪಾನವಂ ಸೇವಿಸಿ ಹೋದವನ ಪಾಪಕೆ ಹೋಹರು (ಎಕ. XI, ದಾವಣ. ೦೦೬-೨೭, 1528). [ಬಿಡು$_1$ + ಮಂಡೆ]

**ಬಿಡುಮಂದಿ** (ನಾ). ಕೆಲಸಕ್ಕೆ ತೊಡಗಿಸಿದ ಜನ ; ಕೆಲಸಕ್ಕೆ ಬಿಟ್ಟ ಜನ : ಕರದ ಕುಡುಗೋಲು ತಡಿಕೆ ಮಕ್ಕರಿ ಸಹ ಬಹ ಕಾಮಾಟದ ಬಿಡುಮಂದಿಗೆ ಲೆಕ್ಕವಿಲ್ಲ (ಕಂಠಿ. ೦೦-೪೦). [ಬಿಡು$_1$ + ಮಂದಿ$_1$]

**ಬಿಡುಮಿದುಳ್** (ನಾ). (ತಲೆಯಿಂದ) ಹೊರಚೆಲ್ಲಿದ ಮಿದುಳು : ಬಿಡುಮಿದುಳ ರಾಸಿಗಳ ರಚನೆಯು ರಾಜಹಂಸೆಗಳ . . . ಸರಸಿಯ ನಡುವೆ ನಲಿನಲಿದಾಡುತಿರ್ದುದು ಭೀಮುವನದಂತಿ (ಕುಮ್ಮಾರ್ಯ್ರೋ. ೦೨-೨೩) ; ಬಿಡುಮಿದುಳ ಜೊಂಡಿನಿಂ ನಡುತೊಡೆಯ ತುಂಡಿನಿಂ ಪೊಡೆಗೆಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣಿ ಕಣ್ಗೆಸೆದುದು (ಜಿಬಿಪು. ೩೯-೩೪) ; ಬಿಡುಮಿದುಳ ತುಂಡದಿಂ ತಂಡದಿಂ ರುಂಡದಿಂ ಮುಂಡದಿಂ . . . ಎಡೆವಿಡದೆ ಸತ್ತರಿಂದಿಡಿದಿರ್ದುದು (ಜೈಮಿಭಾ. ೦೨-೪೪).

[ಬಿಡು$_1$ + ಮಿದುಳ್]

**ಬಿಡುಮುಡಿ** (ನಾ). ೧. ತುರುಬು ಕಟ್ಟದಿರುವ ಕೂದಲು ; ಬಿಚ್ಚಿರುವ ತಲೆಗೂದಲು : ಸ್ಮರಕೃತಕಾಚಲಶಿಖರಾಂತರಲತೆ ಮೇಲ್ವಾಯ್ದುದೊಂದು ಸೋಗೆಯು ಬಿಣ್ಪಿಂ ಧರೆಗೆಱಗುವಂತದೊರ್ವಳ್ ಮರಾಗಿ ಬಿಡುಮುಡಿಯಿನೆಸೆದು ಪಿಡಿಯಿಂದಿಟಿದಳ್ (ಜಗಿಬಿ. ೦೪-೫೯) ; ನಿಕ್ಕುವಂ ಪೆಣ್ಣೆ ಇವಳ್. ಸರಸಕಮಲಮೆ ಮೊಗಂ: ಮೀನೆ ಕಣ್; ಪಾವಸೆ ಬಿಡುಮುಡಿ (ರಾಜಶೇಖ. ೯-೦೦). ೨. ಕೆದರಿದ ತಲೆ ; ಓರಣವಾಗಿ ಬಾಚದಿರುವ ಕೂದಲು : ಬಿಡುಮುಡಿಯ ಸುರಿವ ಕಂಬನಿವೊನಲ . . . ಮಡದಿಯರ ದನಿಯನಾಲಿಸಿ ಪರ್ಣಶಾಲೆಯಿಂ ಪೊಱಮಟ್ಟನು (ಹರಿಶಾ. ೬-೨೬) ; ಒಡನೆ ಬಂದರು ಕಂಬನಿಯ ಬಿಡುಮುಡಿಯ ಹಾಹಾ ರವದ ರಭಸದ ನಡೆಯಲಖಿಳವಿಲಾಸಿನಿಯರು ಸಹಸ್ರಸಂಖ್ಯೆಯಲಿ (ಕುಮ್ಮಾಸ. ೦೪-೬೯). ೩. ಸಡಿಲವಾಗಿ ಹಾಕಿದ ತುರುಬು ಅಥವಾ ಜಡೆ : "ಬಿಡುಮುಡಿ=ತುದಿಯಲ್ಲಿ ಮಾತ್ರ ಗಂಟುಹಾಕಿರುವ ಕೂದಲು" (ಕೃಶಬ್ದ). [ಬಿಡು$_1$ + ಮುಡಿ$_3$]

**ಬಿಡುಮುತ್ತು** 'ಬಿಡಿಮುತ್ತು' ನೋ.

**ಬಿಡುರಥ** (ನಾ). ಹರಿಯುವ ರಥ ; ಮುನ್ನುಗ್ಗುವ ತೇರು : ತುಡುಕುವಾನೆಯನೀಸಿನಲಿ ಖುರವಿಡುವ ಕುದುರೆಯನೊತ್ತಿ ಹಾಯ್ವುವ ಬಿಡುರಥವ ತಲೆವರಿಗೆಯಲಿ ತವಕಿಸುವ ಕಾಲಾಳ ಕಡಿದನಂಬಿನೊಳಾ ಗಜವನಾ ಕಡುಹಯವನಾ ರಥವನಾ ಮಂಗಡದ ಕಾಲಾಳುಗಳೆನೊಂದು ವಿಘಳಿಗೆ ಮಾತ್ರದಲಿ (ಕುಮ್ಮಾಕ. ೦೫-೨೩) ; ಅಶ್ವವನಶ್ವದಿಂದಪ್ಪಳಿಸುತೊಡ ಹಾಯ್ದು ಬಿಡುರಥವ ರಥದಿಂದ ಹೊಯ್ದುಱಿ ಹುಡಿಗೆದಱುತಱಿಯಟ್ಟಿ ಸದೆದನು (ತೊರೆರಾ. ೫-೬-೦೯). [ಬಿಡು$_1$ + ರಥ]

**ಬಿಡುರನ್ನ** (ನಾ). ಬಿಡಿಯಾದ ರತ್ನ : ಕಡೆಗರ್ಭ್ಯಶಾಂತಿಧಾರೆಯ ಮಾಡಿ ಮಿಸುನಿಪೂ ಬಿಡುರನ್ನಗಳ ವೃಷ್ಟಿಮಾಡೆ (ಭರತ. ೫೯-೨೪).

[ಬಿಡು$_3$ (<ಬಿಡಿ) + ರನ್ನ (<ರತ್ನ)]

**ಬಿಡುಲವಣ** (ನಾ). ಒಂದು ಬಗೆಯ ಕ್ಷಾರ ; ಡೊಣೆಯುಪ್ಪು : ಒಡಲೊದವಿ ಬಾತು ತೋರ್ಪೊಡೆ . . . ಆಡಿನ ಪಾಲಂ ಬಿಡುಲವಣ ಮುಮಂ ಕರಿಯ ತೊವರಿಯಶನಮೆ ಪಥ್ಯಂ (ಲೋಕೋಪ. ೯-೦೬೪); ಬಿಡುಲವಣ ಜೀರಕ ಚವ್ಯಲವಣ ಸಂವರ್ಚಕಮುಮ್ಮೃತಂ ಶ್ಲೇಷ್ಮವಾತ ಶೂಲಾಪಹರಂ (ಅಶ್ವಶಾ. ೦೦-೦೦). [< ಬಿಡಲವಣ]

**ಬಿಡುವಕ್ಕಲು** (ನಾ). ಪ್ರತಿಯೊಂದು ಒಕ್ಕಲು ; ಪ್ರತ್ಯೇಕವಾದ ಒಕ್ಕಲು : ತಳವಾರ ಮುಖಾಂತ್ರ ಬಾಹ ಬಿಡುವಕ್ಕಲ ತೆರು (ಎಕ. VII, ಶಿವಮೊ. ೩-೨೬ ; 1671). [ಬಿಡು$_3$ (<ಬಿಡಿ) + <ಒಕ್ಕಲು$_2$]

**ಬಿಡುವಡು**, ಬಿಡುಪಡು (ಕ್ರಿ). ಬಿಡುಗಡೆಯನ್ನು ಹೊಂದು; ಸ್ವತಂತ್ರ ವಾಗು; ಮುಕ್ತವಾಗು : ಜನಕಂ ತನ್ನ ಪುಣ್ಯದೊಳದ್ದಮಂ ಧಾರೆಯನೆಱೆ ವುದುಂ ಪಾಪಿಗಳೆಲ್ಲರ್ ಬಿಗಿವಟ್ಟ ನರಕಬಾಧೆಯಿಂ ಬಿಡುವಟ್ಟು . . . ಬರ್ದಿಲರ ನಾಡಂ ಪುಗುತಂದರ್ (ರಾಮಾಶ್ವ. ೦೦೬-೬). **ಬಿಡುಪಡು** : ಬಿಡುಪಟ್ಟ ನೊಸಲ ನುಣ್ಗುರುಳ ಸಾಲಿಂದೊಂದು ಬೆಡಗಾಗಿ ನಿಂದಿರ್ದ ರಾಗ (ಭರತ. ೦೪-೦೨). [ಬಿಡು$_2$ (<ಬಿಡುವು) + ಪಡು$_1$]

**ಬಿಡುವಡೆ** (ಕ್ರಿ). = ಬಿಡುವಡು : ಅಣೆಗಟ್ಟನಲ್ಲಿ ತುಂಬಿ ತುಳುಕುವ ಜೀವನಪ್ರವಾಹವು ಕಡೆಯಲ್ಲಿ ಬಿಡು(ಮೋಕ್ಷ)ವಡೆದು ಹರಿದು ಸಾಗರ ದಲ್ಲಿ ಸಂಗಮವಡೆದು ಶಾಂತವಾಗುತ್ತಿದೆ (ನಾಡೋಜ. ೩೩೪).

[ಬಿಡು$_2$ (<ಬಿಡುವು) + ಪಡೆ$_1$]

**ಬಿಡುವನಿ** (ನಾ). ಸಂರಿಯುತ್ತಿರುವ ಕಂಬನಿ,— ಕಣ್ಣೀರು : ಒಡನೆ ಕಳುಹುತ ಬಂದನಾ ನೆಲದೊಡೆಯನನುಜರುಸಹಿತ ನಯನನದಿ ಬಿಡುವನಿಯು ಸಾಲಿನಲಿ ನನೆದರು ಬಂದು ಕಿಱಿದೆಡೆಯ (ಕುಮ್ಮಾರ್ಯ್ರೋ. ೪-೫೩); ಹರಿನಂದನನ ಲಲನೆಯು ಲೋಚನದ ಬಿಡುವನಿಯನಂಶುಕದಗ್ರ ದಿಂದೊರಸಿದನು (ತೊರೆರಾ. ೪-೫-೨೬). [ಬಿಡು$_1$ + ಪನಿ$_2$]

**ಬಿಡುವನೆ** (ನಾ). ಇಳಿದುಕೊಂಡಿರುವ ಮನೆ ; ಬಿಡಾರ : ಮಹಾ ರಾಜನು . . . ಆ ವೇಶ್ಯೆಯ ಬಿಡುವನೆಗೆ ಎರಡುಸಾರಿ ಬಿಜಯ ಮಾಡಿ ದ್ದನು (ಮಂತ್ರಶ. ೦೫೦-೦೬). [ಬಿಡು$_1$ + ಮನೆ]

**ಬಿಡುವಯಣ** (ನಾ). ಪ್ರಯಾಣಮಧ್ಯದಲ್ಲಿ ತಂಗುವಿಕೆ ; ಉಪ್ಪಯಣ : ಬಿಟ್ಟ ಪಯಣದೊಳು ಬಿಡುವಯಣಮಿಲ್ಲದೆ ದಾಳಿಯಿಟ್ಟು (ಸಮ್ಯಕ್ತ್ವ. ೨-೦೦). [ಬಿಡು$_1$ + ಪಯಣ]

**ಬಿಡುವರಿ** (ನಾ). ಸ್ವೇಚ್ಛೆಯಾಗಿ ನುಗ್ಗುವುದು ; ಅಡೆತಡೆಯಿಲ್ಲದೆ ಸಾಗುವುದು : ಗಿಡುಮರನ ಸೆಳೆಸೆಳೆದು ಬಿಸುಡುತ ಬಿಡುಮರಿಯ ಬೀದಿ ಗಳಲಟ್ಟಿದವು . . . ಕಪಿಪಡೆಯ ಕೊಂದವು ಕೋಟಿಸಂಖ್ಯೆಯಲಾ ಮದೇಭ ಚಯ (ತೊರೆರಾ. ೬-೩೨-೫). [ಬಿಡು$_2$ (<ಬಿಡುವು) + ಪರಿ$_3$]

**ಬಿಡುವಲೆ** (ನಾ). ಒಂದು ಬಗೆಯ ಬಲೆ ; ಅಗಲವಾಗಿ ಹಾಸುವಂಥ ಬಲೆ : ಬಿಡುವ[ಶಾಕಾಂ. ವೆ]ಲೆ ಸೋರ್ಕುಮದುರ್ಗ ಪದವಿಲ್ . . . ಗಿಡಗ ಮೆಯಿಪ್ಪಿಮಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ (ರಾಜಶೇ. ೫-೫೨); ನಿಡುವಲೆ ಸಾಲ್ವಲೆ ಬಿಡುವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ (ಶಬಶಂ. ೩-೨೪). [ಬಿಡು$_1$ + ಬಲೆ$_1$]

**ಬಿಡುವಾಯ್**, ಬಿಡುವಾಯಿ (ನಾ). ಅಗಲವಾಗಿ ತೆರೆದ ಬಾಯಿ : ಬಿಡು ವಾಯ್ ತುಡುಜೊಡರಱುಗೆಱೆಯೆಂಬಿವು ಪಡೆಯವು ಬಿಂದುವನುದಂತ ವೃತ್ತಿಯನಾಳ್ದಂ (ಶಮದ. ೦೬೦) ; ಹೆಬ್ಬಲ್ಲ ಬಿಡುವಾಯ ಜೋಲ್ವ ಕೆನ್ನಾಲಗೆಯ ಗಬ್ಬಿನಾಯ್ಗಳ ಹಾಸನುಗಿದು ಬಿಡೆ ಪಂದಿಗಳನಬ್ಬರಿಸಿ ತುಡುಕಿದುವು (ಜೈಮಿಭಾ. ೨೮-೪೬). **ಬಿಡುವಾಯಿ** : ಬ್ರಹ್ಮಹತ್ಯೆ ಕಾರೊಡಲಿಂ ತಾಂ ಬಿಡುವಾಯಿಂ ಕಪ್ಪರವಂ ಪಿಡಿದೊಡನೊಡನೆಯ್ದಿ ಸುರಪನಂ ಪೀಡಿಪುದು (ಹಾಲಾಸ್ಯ. ೦-೨-೨೫). [ಬಿಡು$_1$ + ಬಾಯ್]

ಬಿಡುವಾಯಿ 'ಬಿಡುವಾಯ್' ನೋ.

**ಬಿಡುವಾರು** (ನಾ). ಬೇಟೆಯ ಒಂದು ಸಾಧನ (?) : ಪೆರ್ಬಲೆ ಬಿಡುವಾರು ಗೋಡುವಲೆಯೆಂಬಿನಿತಂ ಪೊಱೆಗಟ್ಟಿ ಕಾನನಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ದಶಕು. ೨-೦೦೫). [?]

**ಬಿಡುವೀಳೆಯ** (ನಾ). = ಬಿಡುದಂಬುಲ : 'ಬಿಡುವೀಳೆಯುದಂಬುಲ' ಪರಾ. [ಬಿಡು$_1$ + ವೀಳೆಯ]

ಬಿನುಗುಗಳ (ಕುವ್ಯಾ೪. ೭-೪೧). ೨. ಬಡವ; ದರಿದ್ರನಾದವನು : ಬಿನುಗಂ ನಂಬಿ ತೆಱುವೊಕ್ಕಲಂ ಕಳೆವ ಪ್ರಭುವುಮಂ (ಧರ್ಮಾಮೃ. ೬-೫೦). (ಗು). ೩. ಅಲ್ಪವಾದ ; ಕ್ಷುದ್ರವಾದ : ಇಂತೀ ಬಿನುಗುವಮಾನವನ . . . ಹೀನಯೋನಿಯಲ್ಲಿ ಬರಿಸದೆ ಮಾಣ್ಬನೆ (ಚನ್ನವ. ೮. ೯೫-೨೦೯); ಹಾರುವ ನಿನಗೆ ಬಿನುಗುಭೀಮಾರ್ಜುನರ ಪರಿಯಂತೇಕೆ (ಕುವ್ಯಾದ್ರೋ. ೦-೫೫).

ಬಿನುಗುಬಿಚ್ಚಟೆ, ಬಿನುಗುಬಿಕ್ಕಟೆ, ಬಿನುಗುಬಿಚ್ಚಟ = ಅಲ್ಪವ್ಯಕ್ತಿ; ಕ್ಷುದ್ರಮನುಷ್ಯ : ಆಳು ನಡೆದುದು ಮುಂಗುಡಿಯ ಹರಿಧಾಳಿ ನೂಕಿ ಹಿರಣ್ಯನಗರಿಯ ಮೂಲೆಗೈದಿತು ಹೊಯ್ದುರಲ್ಲಿಯ ಬಿನುಗುಬಿಚ್ಚಟೆಯ (ಕುವ್ಯಾಆ. ೧೨-೦೩); ಧನಿಕದೊರೆಗಳ ಬಿನುಗುಬಿಚ್ಚಟೆಯು ಹಲವುಜಾತದ ವರ್ಣಭೇದದ ಹೊಲಲ ಜನದ ಸಮಸ್ತಭುವನಾವಳಿಯ ಭರಭಾರವನು ಹೊಱಿಸಿದನಗ್ನಿದೇವರಿಗೆ (ತೊರರಾ. ೫-೬-೫೫); ಭಟರು ... ಮುಕ್ಕುರಿಕಿಯಿರಿದಿರಿದು ಕೊಂದರಗಣಿತ ಬಲವ ಬಿನುಗುಬಿಕ್ಕಟೆಜನಗಳ (ತುರಂಗ. ೪೫-೯); ಒರ್ವರ ಸುಳುವ ಕಾಣೆನು ಬಿನುಗುಬಿಚ್ಚಟರಲ್ಲದೀ ಪುರಿಗೆ (ಉತ್ತ. ೧೦-೩೫).

[ದೇ. ॥ ತೆಲು. ಬಿಲುಗು=ಕಪಟವಾದ]

**ಬಿನುಗು$_2$** 'ಬಿನುಂಗು' ನೋ.

**ಬಿನುಗುತನ** (ನಾ). ನೀಚತನ; ಕ್ಷುಲ್ಲಕತನ : ಷಟ್ಕರ್ಮದಿಂ ಬಾಳ್ವ ಬಿನುಗುತನಗಳನುಳಿದು . . . ಸರ್ವಾವಧಾನದಿಂ ಚರಿಪನೆ ನಿರಾಭಾರಿ ವೀರಶೈವಂ (ಪಾಸೋಪು. ೧೨-೫೬); ಬಿನುಗುತನದಿಂದಖಿಳವಿಷಯಗಳನುಂಡು ಅನುವರಿಯದ ಜ್ಞಾನದೊಳಗೆ ಬಳಿಸಂದು (ಶತ್ಪ. ೫೫-೧).

[ಬಿನುಗು$_1$ + — ತನ]

**ಬಿನೆಯ** (ನಾ). (?) : ಅರಳಿಹಳಿಯ ಬಿನೆಯ ಗ ೯೮೦ ಯಿಾ ಧಂರ್ಮಗಳಿಗೆ ಆವನಾನೊಬನು ನಡಪದೆ ಇದವನು ಗೋಉ ಭ್ರಾಂಹ್ಮರನು ವಾರಣಾಸಿಯಲಿ ಕೊಂದ ಪಾಪವ ಪೊಯಿದುವನು (ಎಕ. XI, ಹೊಳಲ್ಕೆ. ೦೧೩-೨೦; 1556).

[ ? ]

**ಬಿನ್ನ** 'ಬಿನ್ನಪ' ನೋ.

**ಬಿನ್ನಗೆ** (ಅ). ೧. ನೀರವವಾಗಿ; ಮೌನವಾಗಿ; ಸುಮ್ಮನೆ : "ಜಿಕ್ಕಟಂ, ಬಿನ್ನನೆ, ಬಿನ್ನಗೆ — ಈ ೩ ಸುಮ್ಮನೆಯೆಂಬರ್ಥಂ" (ಕಶಸಾ. ೫೬-೨೯೫); ಮಗನಟಿಲೊಂದು ಭೂಪತಿಯು ತಮ್ಮನೊಳಾದಟಿಲೊಂದು ನೊಂದು ಬಿನ್ನಗೆ ಮೊಗದಿಂದೆ ಕುಂದಿ ಫಣಿಕೇತನನಿರ್ದಟಿಲೊಂದು (ಶಂಶಭಾ. ೦೨-೦೭೦). ೨. ಬರಿದಾಗಿ; ಬಿಕೋ ಎಂದು: ಉರಮೇಕೆ ಹಾರಮಣಿಮಂಜರಿಯಿಲ್ಲದೆ ಬಿನ್ನಗಿರ್ದುದು (ಶಂಶಭಾ. ೯-೭೨); ಮಂದರಗಿರಿ ಬಿನ್ನಗಾಯ್ತು ಮದುವೆ ಪೋದ ಮಂದಿರವೊ ಎಂಬಂತೆ (ಶಂಶ್ರಸಾಂ. ೨೪-೦೬೬). ೩. ಖಿನ್ನವಾಗಿ; ಖೇದದಿಂದಿರುವಂತೆ: ಬೇನೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳ ವಚ್ಚರಿಯಾಗೆ ಕೆಲರ್ ಮಹಾರಥರ್ (ಶಂಶಭಾ. ೦೦-೩); ಇನ್ನಱುದಿಂಗಳುಂಟೆನೆ ನಿಜಾಯು ಸುರಪ್ರಕರಂ ಮೊಗಂಗಳಂ ಬಿನ್ನಗೆ ಮಾಡೆಯುಂ (ಶಾಂತಿಪು. ೭-೭೯).

[? + — ಅಗ್ಗೆ$_3$]

**ಬಿನ್ನಣ** 'ಬಿನ್ನಾಣ' ನೋ.

**ಬಿನ್ನಣಂದೋಱು**, ಬಿನ್ನಣದೋಱು (ಕ್ರಿ). ಕೌಶಲ್ಯವನ್ನು ತೋರು; ಚಾತುರ್ಯವನ್ನು ತೋರಿಸು : ಸುತ್ತಿ ಬಳಸಿ ಮೊನೆದೋಱುವ ಬಿರುದಿನಂಕಮನುರವಣಿಸಿ ಪತ್ತಿ ಪೊರಳ್ಚಿ ಕೊಳ್ವ ಬಿನ್ನಣಂದೋರ್ಪ ಗನ್ನದಂಕಮಂ ಬಿಡಿಸಿ (ಗಂಕ. ೨-೦೦೫ ವ). **ಬಿನ್ನಣದೋಱು** : ಬಿಲ್ಲ ಬಿನ್ನಣದೋಱಿದನು ನೃಪತಿ (ಸಾಳ್ವಭಾ. ೬-೭೦).

[ಬಿನ್ನಣ (< ಬಿನ್ನಾಣ) + ತೋಱು]

**ಬಿನ್ನಣಂಬಡೆ**, ಬಿನ್ನಣವಡೆ (ಕ್ರಿ). ಕೌಶಲ್ಯವನ್ನು ಪಡೆ ; ನೈಪುಣ್ಯವನ್ನು ಹೊಂದು : ಪೊಳ್ತಂ ಸನ್ನೆಯಂ ಜಾತಿಯಂ ಜವಂಗೆಡದಱಿವ ಬಿನ್ನಣಂಬಡೆದ ಬೇಡರೊಡವರೆ (ರಾಜಶೇ. ೫-೦೦ ವ). **ಬಿನ್ನಣವಡೆ** : ಭರತಕ್ಷೇತ್ರವಿಜಯಾಚಲದರ್ಕಿಲದೊಳು ಮಾನಧ್ವಜನಾಡುಂಬೊಲನೆಸಲೆದುದು ಸರಸಿಜನಣುಗನ ಕೈಮಾಟಕೆ ಕಡುವಿರಿದುಂ ಬಿನ್ನಣವಡೆದು (ಜಯಾ:ಕಾ. ೦-೩೪).

[ಬಿನ್ನಣ (< ಬಿನ್ನಾಣ) + ಪಡೆ$_1$]

**ಬಿನ್ನಣಕಾತಿ** (ನಾ). ಒಯ್ಯಾರ ಮಾಡುವವಳು ; ಬೆಡಗುಗಾತಿ : ಅಣಿಮಾದಿಸಿದ್ಧಿದೇವಿಯರೊಡನೆಯ್ದೆ ಬಿನ್ನಣಕಾತಿ ಬಂದಳಾ ದೇವಿ (ಪತ. ೭೬-೦೦೬).

[ ಬಿನ್ನಣ (< ಬಿನ್ನಾಣ) + — ಕಾತಿ$_5$ ]

**ಬಿನ್ನಣಗವಿ** (ನಾ). ಚಮತ್ಕಾರಗಳಿಂದ ಕೂಡಿದ ಕಾವ್ಯವನ್ನು ರಚಿಸುವವನು; ಕುಶಲನಾದ ಕವಿ : ಗತಪ್ರತ್ಯಾಗತಾದಿ ಸಂಧಾನ ಮುರಜಬಂಧಾದಿಗಳಂ ಮಾಳ್ಪ ಬಿನ್ನಣಗವಿಯುಂ (ಶೀಶಿಪಾ. ೩೦-೭).

[ ಬಿನ್ನಣ (< ಬಿನ್ನಾಣ) + ಕವಿ$_5$]

**ಬಿನ್ನಣಗಾರ್ತಿ** (ನಾ). = ಬಿನ್ನಣಕಾತಿ : ಕಂಬುಕಂಠದ ಕರಿಗತಿಯ ಬಿಂಬಾಧರದ ಬಿನ್ನ[ ಪಾಠಾಂ. ನ್ನಾ ]ಣಗಾರ್ತಿಯರವಲಂಬಿಸಿ ಕೊಳನ ತಡಿಯೊಳು (ಜೀವಂಸಾಂ. ೦೬-೩೯).

[ ಬಿನ್ನಣ (< ಬಿನ್ನಾಣ) + — ಕಾಱ + — ತಿ$_1$ (< —ಇತಿ$_3$ )]

**ಬಿನ್ನಣದೋಱು** 'ಬಿನ್ನಣಂದೋಱು' ನೋ.

**ಬಿನ್ನಣವಡೆ** 'ಬಿನ್ನಣಂಬಡೆ' ನೋ.

**ಬಿನ್ನಣಿ** 'ಬಿನ್ನಾಣಿ$_2$' ನೋ.

**ಬಿನ್ನಣಿಗ** 'ಬಿನ್ನಾಣಿಗ' ನೋ.

**ಬಿನ್ನಣಿಗೆ** (ನಾ). ಕೌಶಲ ; ಚಮತ್ಕಾರ : ಗಗನದಿಂದಲೊ ಗಗನದರುಗಿಂದಲೊ ಮೊಗೆವೆ ತುಂಬೆದೆಯ ಮುಂಬಗೆದಿಲ್ಲದಿಹ ಬಿನ್ನಣಿಗೆಯುಗುವುದಾರ ಗಾಯನದ ಝುರಿಯಿಂ (ಗಿಳಿಬಿಂ. ೪-೩). [ < ಬಿನ್ನಾಣ ]

**ಬಿನ್ನಣಿಸು** 'ಬಿನ್ನಾಣಿಸು' ನೋ.

**ಬಿನ್ನಣೆ** (ನಾ). ಜಂಬ ; ಹೆಮ್ಮೆ : ನಿನ್ನ ಮಗನ ಬಾಧೆ ಬಲು ಘನವಾಗಿದೆ ಇನ್ನೆಷ್ಟು ಕಾಲ ತಾಳುವೆವೆ ಗೋಪಿ ಬಿನ್ನಣೆಯನು ಬಿಡು ಬಲು ದುಷ್ಟನು ಕೇಳೆ (ಪುರಂದ. ೩-೨೦೭-೦). [ಬಿನ್ನಣ (<ಬಿನ್ನಾಣ)+_ಎ$_4$]

**ಬಿನ್ನತಿ** (ನಾ). ನಿವೇದನೆ ; ವಿಜ್ಞಾಪನೆ ; ಅರಿಕೆ: 'ಬಿನ್ನತಿಗೆಯ್' ಪರಾ. 'ವಿನಂತಿ' ಹೋ.

[<ಪ್ರಾ. ವಿನ್ನತ್ತಿ, ವಿಣ್ಣತ್ತಿ./ಹಿಂ. ಬಿನತಿ./ಸಂ. ವಿಜ್ಞಪ್ತಿ]

**ಬಿನ್ನತಿಗೆಯ್** (ಕ್ರಿ). ವಿಜ್ಞಾಪನೆ ಮಾಡು ; ಬಿನ್ನವಿಸು : ಅನುವೊಂದು ಬಿನ್ನತಿಗೆಯ್ವಂ (ಜಯಕಾ. ೫-೭೩); ಭಕ್ತಿಯಿಂ ಬಿನ್ನತಿಗೆಯ್ವೆನಾಲಿಪುದು (ಜಕಬಿ. ೫-೭೬) ; ಅಪ್ರತಿಮಂ ಯಾದವಗಿರಿಯೊಡೆಯನಡಿಗೆ ಬಿನ್ನತಿಗೆಯ್ದಂ (ಜಕಬಿ. ೦೩). [ಬಿನ್ನತಿ + ಕೆಯ್$_1$]

**ಬಿನ್ನತಿವತ್ತಳೆ** (ನಾ). ಅರಿಕೆಯ ಓಲೆ ; ವಿಜ್ಞಾಪನಾಪತ್ರ; ಬಿನ್ನವತ್ತಳೆ : ಈ ಬಿನ್ನತಿವತ್ತಳೆಗೆ ಮಹಾಸನ್ನಿಧಾನದ ಸಮುಖದ ಆವಸರದ ಆಜ್ಞಾಪನ (ಮಂತ್ರಶ. ೦೨೭-೦೦). [ಬಿನ್ನತಿ + ಪತ್ತಳೆ$_1$]

**ಬಿನ್ನನೆ** (ಅ). ೧. ಮೌನವಾಗಿ ; ನೀರವವಾಗಿ : "ಜಿಕ್ಕಟಂ, ಬಿನ್ನನೆ, ಬಿನ್ನಗೆ — ಈ ೩ ಸುಮ್ಮನೆಯೆಂಬರ್ಥಂ" (ಕಶಸಾ. ೫೬-೨೯೫); ಎನ್ನಂ ಬೆಂಕೊಂಡು ಕಾದಲುಂ ಬಂದೀಗಳ್ ಬಿನ್ನನೆ ಮೊಗದಿಂ ಬೀರರ್ ಬೆನ್ನಿತ್ತುದನಿನಿಸು ನೋಡ (ಶಂಶಭಾ. ೩-೭೩) ; ಲಕ್ಷ್ಮಣನುಂ ಬೆನ್ನನೆ: ಬಿನ್ನನೆ ನಡೆದಂ (ರಾಮಾಶ್ವ. ೩೩-೦೭). ೨. ಚಿಂತೆಯಿಂದ ಕೂಡಿ ; ಖಿನ್ನವಾಗಿ : ಪರಿಚ್ಛೇದಿಸಿ ನುಡಿದೊಡೆ ಬಿನ್ನನೆ ಮೊಗಂ ಮಾಡ (ವಡ್ಡಾರಾ. ೬೦-೦೦) ; ಎಮ್ಮಣುಗದಮ್ಮನಿಲ್ಲದೆ ಬಿನ್ನನೆ ಸಾಮ್ರಾಜ್ಯಮಿನಿತುಮಾದೆಱಕಮುಮತ್ಯುನ್ನತಿಯುಲ್ಲು (ಆದಿಪು. ೧೪-೭೨); ಚರನ ಬಿನ್ನಪದಿಂ ಬಿನ್ನನೆ ಮೊಗವಮಂ ಮಾಡಿ (ಸುಕುಮಾ. ೭-೪ ವ).

ಬಿನ್ನನಿರ್, ಬಿನ್ನನಿರು = ೧. ಸುಮ್ಮನೆ ಇರು ; ಮೌನವಾಗಿರು ; ನೀರವವಾಗಿರು : ನಾಣ್ಚಿ ತಲೆಯಂ ಬಾಗಿ ಬಿನ್ನನಿರೆಯುಂ

(ಕಾಲಾವ. ೪-೩೪ ವ); ಅಭಿಮಾನದಿಂದಮೋ ಸೊರ್ಕಿಂದಮೋ ನಾನ್ ಬಿನ್ನನಿರ್ದಪೆನೆಂದು ಬಗೆಯಲಿಂ (ಜಗನ್ನಾಥ. ೨೪-೪೬೬); ಕೆಲರು ವೀಣೆಯು ನುಡಿಸಿ ಕುವರಿಯನೊಲಿಸಲಱಿಯದೆ ಬಿನ್ನನಿರೆ (ಶಾಬ್ದಿಕಾ. ೬-೬). ೨. ಚಿನ್ನವಾಗಿರು; ಚಿಂತೆಯಿಂದಿರು: ತನ್ನಗಲ್ಕೆಗೆ ಬಿನ್ನನಿರ್ಪಂತೆ ಬಿನ್ನನಾಗಿರ್ಪ ವಿಮಾನದ ಮಣಿಕುಟ್ಟಿಮಭೂಮಿಗಳುಂ (ಅಂಜ. ೩-೩ ವ); ಮಾಸಿ ತಾಱಿದ ಕುರುಳ್ಗಳುಂ ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ (ಗದಾಯು. ೯-೩). ೩. ಬಿಕೋ ಎನ್ನು; ಬಣಗುಂಡು; ಬಿನ್ನನಿರ್ದುದು ಸುರಶೈಲಮದೊಂದು ಮದುವೆಗಳಿಪಿದ ಮನೆವೊಲ್ (ಅಂಜ. ೬-೧೦೮). [? + — ಅನ್$_1$]

**ಬಿನ್ನಪ**, ಬಿನ್ನ, ಬಿನ್ನಹ, ಬಿನ್ನಾಯ್$_1$, ವಿನ್ನಪ, ವಿನ್ನಪ್ಪ (ನಾ). ೧. ಅರಿಕೆ; ವಿಜ್ಞಾಪನೆ; ಮನವಿ; ವಿನಂತಿ: ದೇವ ಬಿನ್ನಪಂ (ಶಂಕರಾ. ೩-೪೯); ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ (ಮಹಾದೇ. ೨. ೩೬-೬೦); ಬಿನ್ನಪವ ಕೇಳದರಸಿನೋಲಗದಿಂದ ಸಂನ್ಯಾಸ ಲೇಸು (ಸರ್ವಜ್ಞ. ೬೬೩). **ಬಿನ್ನ**: ೨. [ವೀರಶೈ] ಜಂಗಮರನ್ನು ಊಟಕ್ಕೆ ಆಹ್ವಾನಿಸುವುದು: ನಿಮ್ಮನ್ನೇ ದೇವರೆಂತ ತಿಳ್ಕೊಳ್ಳ ಹೇವಿ. ಬಿನ್ನ ಬಿಡುಗಡೆ ಎಲ್ಲಾನು ನೀವೇ ತೀರಿಸ್ಬೇಕು (ಮಲ್ಲಿ.ಹಾ. ೦೬೩). **ಬಿನ್ನಹ**: ೧. ಕಿಂಕರನಾಗಿ ಬಿನ್ನಹವ ಮಾಡುವ ಸದ್ಭಕ್ತರ ತೋಱಯ್ಯಾ (ಬಸವ. ೪೪೪); ಬಿನ್ನಹವ ಕೇಳ್ಳೆ ಕೃಷ್ಣ (ಕುಮಾ.ಭಾ. ೩-೬); ಬಿನ್ನಹಕೆ ಬಾಯಿಲ್ಲವಯ್ಯ (ತೋಂಟ. ೨-೦೫೦ ಪಲ್ಲವಿ). **ಬಿನ್ನಾಯ್$_1$**: ೨. ಊರಿನ ಒಂದು ಬಿನ್ನಾಯದ ನೆವ ಮಾಡಿಕೊಂಡು . . . ಊರು ಬಿಟ್ಟು ಕೆಲ ತಿಂಗಳು ಅಸ್ತಂಗತರಾದರು (ಗ್ರಾಮಾಯ. ೨೦). **ವಿನ್ನಪ**: ೧. 'ವಿನ್ನಪಂಗೆಯ್' ಪರಾ. **ವಿನ್ನಪ್ಪ**: ೧. 'ವಿನ್ನಪ್ಪಂಗೆಯ್' ಪರಾ. [<ಪ್ರಾ. ವಿನ್ನಪ್ಪ, ವಿಣ್ಣಪ್ಪ, ವಿನ್ನವ. / ತಮಿ. ವಿಣ್ಣಪ್ಪ; ತುಳು. ಬಿನ್ನಯ, ಬಿನ್ನಹ; ತೆಲು. ವಿನ್ನಪ. / ಸಂ. ವಿಜ್ಞಾಪನ]

**ಬಿನ್ನಪಂಗೆಯ್**, ಬಿನ್ನಪಂಗೈ, ಬಿನ್ನಹಗೆಯ್, ಬಿನ್ನಹಗೈ, ವಿನ್ನಪಂಗೆಯ್, ವಿನ್ನಪ್ಪಂಕೆಯ್, ವಿನ್ನಪ್ಪಂಗೆಯ್ (ಕ್ರಿ). ಅರಿಕೆ ಮಾಡಿಕೊಳ್ಳು; ವಿಜ್ಞಾಪನೆ ಮಾಡು: ಮಂತ್ರಿಯರರಸುಗಿಂತೆಂದು ಬಿನ್ನಪಂಗೆಯ್ದಂ (ಪಂಪಭಾ. ೬೦-೦೩); ಕುರುಕುಳಗಗನಮೃಗಧರಂ ಬಂದನೆಂದು ಬಿನ್ನಪಂಗೆಯ್ವುದುಂ (ಶಂಕರಾ. ೦೩-೩೩ ವ); ಬಗೆಯುಱಿದು ಬಿನ್ನಪಂಗೆಯ್ದು (ಶಬ್ದಮ. ೦೩೦). **ಬಿನ್ನಪಂಗೈ**: ವಿರಚಿತಾಂಜಲಿಪುಟಘಟಿತಕರನಿಂತೆಂದು ಬಿನ್ನಪಂಗೈದಂ (ಶಾಂತಿಪು. ೨-೦೪ ವ); ಹಂಪೆಯ ಹರಿಹರಂ ಬಿನ್ನಪಂಗೈದಂ [ಪಾಠಾಂ. ಗೆಯ್ದಂ] (ಗಿರಿಜಾ. ಕಥಾಗರ್ಭಸಂಧಿ. ೩). **ಬಿನ್ನಹಗೆಯ್**: ಸುರಿವ ಕಂಬನಿಯಿಂದೆ ಬಿನ್ನಹಗೆಯ್ದಳು (ಜೈಮಿನಿ. ೬-೩೦). **ಬಿನ್ನಹಗೈ**: ಎನ್ನ ಮೇಲ್ನುಡಿಯ ನಿವಾರಿಸಬೇಡೆಂದು ಬಿನ್ನಹಗೈದಳು (ಜೈಮಿನಿ. ೦೦-೨೩). **ವಿನ್ನಪಂಗೆಯ್**: ಆ ಗ್ರಾಮದ ಪ್ರಜೆಗಳೆಲ್ಲಂ ಸುಖಮಿರೆ ಪುಣ್ಯಂ ನಿನಗಕ್ಕುಮೆನ್ನು ವಿನ್ನಪಂಗೆಯ್ದಡೆ (ಪ್ರಕಿಅಂ. ೦೪೩೦. ೬೬-೪೨; 1080). **ವಿನ್ನಪ್ಪಂಕೆಯ್**: ತಟಿಕ್ಕಾಡಾ ಯಿರ್ಪ್ಪತ್ತಯ್ವರ್ಕ್ಕಂ ಸಿನ್ದರಸರುಂ ದೇವಸತ್ತಿಅರಸರುಂ ಮನಸಿಜರುಂ ವಿನ್ನಪ್ಪಂಕೆಯೆ (ಎಕ. III, ತಿರುಮ. ೦-೬; 726). **ವಿನ್ನಪ್ಪಂಗೆಯ್**: ಎಟಿಯಿತಿಯಡಿಗಳ್ಪ್ರಸಾದಂಗೆಯ್ದು ಪೂರ್ವಾವತಾರಬಾಣರಾಜಱ್ಗೆ × ಣ್ಕಾರಂ ವಿನ್ನಪ್ಪಂಗೆಯ್ದೊಡೆ ಅಡಿಗಳಾ ಪ್ರಸಾದಂಗೆಯ್ದನ್ತೆ ಸಲ್ಗೆನ್ಡರ್ (ಕೌಇಇ. IX-1, ೪೬-೦೦; ಸು. 8ನೆಯ ಶತ). [ಬಿನ್ನಪ + ಕೆಯ್$_1$]

**ಬಿನ್ನಹಂಗೈ** 'ಬಿನ್ನಪಂಗೆಯ್' ನೋ.

**ಬಿನ್ನಯಿಸು** 'ಬಿನ್ನವಿಸು' ನೋ.

**ಬಿನ್ನಯ್ಸು** 'ಬಿನ್ನವಿಸು' ನೋ.

**ಬಿನ್ನವತ್ತಲೆ** 'ಬಿನ್ನವತ್ತಳೆ' ನೋ.

**ಬಿನ್ನವತ್ತಳೆ**, ಬಿನ್ನವತ್ತಲೆ (ನಾ). ೧. (ರಾಜ, ಅಧಿಕಾರಿ ಮೊದಲಾದವರಿಗೆ ಒಪ್ಪಿಸುವ) ಅರಿಕೆಯ ಓಲೆ; ಮನವಿಪತ್ರ; ವಿಜ್ಞಾಪನಾ ಪತ್ರ: ಕೊನಡಸಂಧಿವಿಗ್ರಹಿ ಬಿಂನವತ್ತಳೆಯ ಪ[ದ್ಮ][ರ]ಸನುಂ (ಕೌಇಇ. XI-i, ೫೦-೨೫; 1138); ಚರಣಕಾನತನಾಗಿ ಕೊಟ್ಟನು ಬಿನ್ನವತ್ತಳೆಯ (ಕೊರಟಾ. ೦-೦೬-೨); ದುರಗಲಿ ದಳವಾಯಿಯೊಡೆಯನ ಬಳಿಗಾಗ ಬರಿಸಿದ ಬಿನ್ನವತ್ತಳೆಯ (ಕಂಠೀ. ೦೬-೦೬೩). ೨. ಸನ್ಮಾನಪತ್ರ; ಮಾನ ಪತ್ರ: ಪುರಪ್ರಮುಖರು ಹಲವರು ಸೇರಿ ದಾದಾಭಾಯಿಗೆ ಬಿನ್ನವತ್ತಳೆಯನ್ನೂ ನಿಧಿಯನ್ನೂ ಅರ್ಪಿಸಬೇಕೆಂದು ನಿರ್ಧರಿಸಿದರು (ದಾದಾಭ. ೪೪). **ಬಿನ್ನವತ್ತಲೆ**: ೧. ಬಿನ್ನವತ್ತಲೆಯುಂ ತಂದಿರೆ ತೋಱುವೆಂದು ನುಡಿವುದುಂ (ಕಾರಂಶ. ೬೩೬); ಕಳುಹಿದ ಬಿನ್ನವತ್ತಲೆ ಚಂದದುಡುಗೊಱೆಗಳನು ಕಟ್ಟಿಸಿ . . . ತಾ ಮುದದಿಂದಲೈದುವ ಹದನ ತನ್ನಯ ತಂದೆಗಱುಹೆಂದಟ್ಟ ನಡೆತರುತಿರ್ದ (ಸವಕ್ಕು. ೦೨-೪೩); ಪಾಂಡ್ಯರಾಜನಿಗೆ ಬಿನ್ನವತ್ತಲೆಯಲ್ಲಿ ಬರೆದು ಮಧುರಾಪುರಕ್ಕೆ ಕಳುಹಿಸಿದನು (ಕಂಠೀ. ೫೯).

[ಬಿನ್ನ (<ಬಿನ್ನಪ) + ಪತ್ತಳೆ$_1$. / ತುಳು. ಬಿನ್ನತ್ತಲೆ]

**ಬಿನ್ನವಿಸು**, ಬಿನ್ನಯಿಸು, ಬಿನ್ನಯ್ಸು, ಬಿನ್ನೈಸು (ಕ್ರಿ). ಅರಿಕೆ ಮಾಡಿಕೊಳ್ಳು; ವಿನಂತಿಸು; ವಿಜ್ಞಾಪಿಸು: ಕೇಳ ಬಿನ್ನವಿಸುವೆನೆನ್ನ ಕಂಡುದನೆ (ಶಂಕರಾ. ೬-೪೦); ದೇವ ಕೈಕೊಂಡು ಕಾವುದು ನೀನೆಂದು ಸುರಾಳಿ ಬಿನ್ನವಿಸೆ (ಧರ್ಮಾಮೃ. ೦-೨೦೦); ತಪ್ಪದೆ ಬಿನ್ನವಿಸಿದನು ಮಾದ್ರ ರಾಜಂಗೆ (ಕುಮಾ.ಭ. ೫-೦೪). **ಬಿನ್ನಯಿಸು**: ಹರಭಕ್ತನಂ ಪದುಳದಿಂದೆ ಕಳುಪಿದೆನೆಂದನು ಬಿನ್ನಯಿಸೆ (ಸೌಂದ. ಪು. ೩೬-೬); ವಿನಯದಲಿ ಬಿನ್ನಯಿಸೆ ಕೃಪನೆಂದನು (ಕುಮಾ.ಭಾ. ೨-೩೪); ಎನ್ನ ಬಿನ್ನಪವ ಲಾಲಿಪುದೆಂದು ಸುಗುಣಂಗೆ ಬಿನ್ನಯಿಸಿದಳು (ಜೈಮಿನಿ. ೯-೨೩). **ಬಿನ್ನಯ್ಸು**: ಬಿನ್ನಯ್ಸಿದಂ ಸುರರೆಲ್ಲ ಚೋದ್ಯಮೆನೆ (ಶಬರ. ಪು. ೦೫೦-೨); ಪಣೆಯೊಳ್ಕೆಯ್ಗಳಿಟ್ಟು ಬಿನ್ನಯ್ಸಿದಂ (ಶಂಕು. ೩-೪). **ಬಿನ್ನೈಸು**: ಎಲ್ಲರ್ಗೆ ಕೊಟ್ಟೆನೆಂದಭವಂಗೆ ಬಿನ್ನೈಸೆ (ಬಸವ. ೦-೪೫); ಸಾತ್ಯಕಿ . . . ಉತ್ತಮಾಂಗಕೆ ಕರಯುಗವ ಚಾಚುತ್ತ ಬಿನ್ನೈಸಿದ ಧನುರ್ಧರಫಾಲನೇತ್ರಂಗೆ (ಕುಮಾ.ದ್ರೋ. ೦೦-೬); ಸನ್ನಿಧಿಯಲಿ ಬಿನ್ನೈಸಿದೆವು (ಮುದ್ರಾಮಂ. ೫೦).

[<ಬಿನ್ನಪ + — ಇಸು$_3$]

**ಬಿನ್ನಹ** 'ಬಿನ್ನಪ' ನೋ.

**ಬಿನ್ನಹಗೆಯ್** 'ಬಿನ್ನಪಂಗೆಯ್' ನೋ.

**ಬಿನ್ನಹಗೈ** 'ಬಿನ್ನಪಂಗೆಯ್' ನೋ.

**ಬಿನ್ನಾಣ**, ಬಿನ್ನಣ, ಬಿನ್ನಾಯ್$_2$, ವಿಂದಾಣ, ವಿನ್ನಾಣ (ನಾ). ೧. ವಿಶೇಷವಾದ ಜ್ಞಾನ; ಗಾಢವಾದ ತಿಳಿವಳಿಕೆ: ಬಂದು ನಿಂದನಂ ಕೆಡು ವಿರಾಟಂ ನಿನ್ನ ಬಿನ್ನಾಣಮೇನೆಂದು ಬೆಸಗೊಳೆ (ಪಂಪಭಾ. ೯-೫೩ ವ); ಎನ್ನೊಡಲೂ ಅಲ್ಲ ನಿನ್ನೊಡಲೂ ಅಲ್ಲ ಅದು ನೀ ಮಾಡಿದ ಜಗದ ಬಿನ್ನಾಣದೊಡಲು ಕಾಣಾ ರಾಮನಾಥ (ದೇವಾವ. ೦೬-೨೪); ವನ್ನಗಧರ ಕೊಟ್ಟ ಬಿನ್ನಾಣದಿಂದ ಸ್ತುತಿಗೈದರ ಪೊಗಳುವೆ (ಸರ್ವಜ್ಞ. ೨೪). ೨. ಕೌಶಲ್ಯ; ನೈಪುಣ್ಯ; ಚಾತುರ್ಯ; ಜಾಣ್ಮೆ: ಬೆಡಗು ಬಿನ್ನಾ[ಪಾಠಾಂ. ನ್ನ]ಣವೆಂಬುದೇನೋ (ಬಸವ. ೬೬); ಬಾಣಾವಳಿಯ ಬಿನ್ನಾಣವನು ತೋಱಿದನು (ಸಂಕರ. ೦೬-೬೦); ಎನ್ನೊಡಲೊಳಗೆ ತೋಱಿ ತೋಱಿ ಅಡಗುವ ನಿಮ್ಮ ಬೆಡಗು ಬಿನ್ನಾಣವನೆನಗೆ ತಿಳಿಯಬಾರದು (ಅಜಂದೇ. ೨೪೦-೬೫). ೩. ಚಮತ್ಕಾರದಿಂದ ದೊರಕಿದುದು; ಕೌಶಲದಿಂದ ಲಭ್ಯವಾದುದು: ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩). ೪. ಅಂದ; ಸೊಬಗು: ಪಚ್ಚೆಯ ಪಾಸುಗಲ್ಲ ಬಿನ್ನಾಣದಿನಿಂದ್ರನೀಲಮಣಿವೇದಿಕೆಯಿಂ . . . ಬಗೆಗೆ ಕೌತುಕಮಾಯ್ತು ವಿವಾಹಮಂಟಪಂ (ಅದ್ಭುತ. ೬-೪). ೫. ಒನಪು; ಒಯ್ಯಾರ:

ಹೆದರುವೆನು ನಾ ನಿನ್ನ ಬಿನ್ನಾಣಕೆಲೆ ಹೆಣ್ಣೆ (ಶಂಗೀತ. ೩೪-೧). ೬. **ವಿನೋದ; ಹಾಸ್ಯ; ಗೇಲಿ**: ಬಾಣ ನಿಷ್ಫಲವಾದುದಮರರ ಶ್ರೇಣಿಗಳು ಕೈಮುಚ್ಚಿ ನಗೆ ಬಿನ್ನಾಣವಾದುದು ದನುಜ ಕೈಗುಂದಿದನು ನಿಮಿಷದಲಿ (ಕೌಶಿರಾ. ೨೨-೪). **ಬಿನ್ನಣ: ೧.** ತನ್ನ ಬಿನ್ನಣಮಂ ನೆರೆದ ನೆರವಿಗೆ ಮೆಱೆಯಲ್ವೇಡಿ (ವಡ್ಡಾರಾ. ೦೨೦-೧೭); ಶಿವಭಕ್ತರೆಲ್ಲರು ಶೂನ್ಯಸಿಂಹಾಸನದ ಗುರುವಿನ ಬಿನ್ನಣಕೆ ಬೆಱಗಾಗುತಿರ್ದರು (ಪ್ರಭುಲಿ. ೨೩-೩). ೨. ನೆಗೞ್ದುದು ಬಿಲ್ಲ ಬಿನ್ನಣಮಿಳಾವಳಯಕ್ಕೆ ಸಮಸ್ತಧಾತ್ರಿ ಕೆಯ್ಮುಗಿವುದು ನಿಮ್ಮದೊಂದೆ ಪೆಸರ್ಗೇಳ್ವೊಡೆ (ಪಂಪಭಾ. ೦೩-೫೭); ಅಱಿಯಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ಲು ಪಿನಾಕಪಾಣಿಯುಂ ನೆಱಿಯನಿದಿರ್ಚೆ ನಿಮ್ಮೊಡನೆ ಕಾದಿ ಗೆಲಲ್ (ಗದಾಯು. ೪-೪೪); ಪಿರಿದುಂ ಬಿನ್ನಣದಿಂದೆ ನಿರ್ಮಿಸಿದ ನಾನಾಚಿತ್ರಸತ್ಪುತ್ರಿಕೋತ್ಕರಮಂ ತೆತ್ತಿಸಿ (ಶಾಧಪು. ೮-೩೨). ೪. ಬಿನ್ನಣದ ಮನೆ ಕಟ್ಟಿ ಕೋಟಿಕೊತ್ತಳವಿಕ್ಕಿ (ಪುರಂದ. ೦-೧೩೨-೨). ೬. ಬಿನ್ನಣದಿ ಮಿಗೆಯೋರೆನೋಟಡ ಕಣ್ಣಿನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು (ವಳಪ. ೩-೭೦). ೭. **ಹೆಚ್ಚುಗಾರಿಕೆ; ಅತಿಶಯ**: ಎನ್ನಟ್ಟಡುಗೆಯನುಂಡೊಡೆ ಬಿನ್ನಣಮೇನರಸ ನರೆಗಳಾಗವು (ಪಂಪಭಾ. ೯-೩೪); ಇನ್ನಿಷ್ಟುವುಮಿಾ ತೆಱದಿಂ ಬಿನ್ನಣಮೇಂ ಕಂದಲಕ್ಷಣಂ ಕಮಲಮುಖೀ (ಛಂದೋಂಬು. ೪-೨೩೨ ಅಂತರ್ಗ). ೮. **ಭ್ರಮೆ; ಭ್ರಾಂತಿ**: ಮುನ್ನಿಲ್ಲದುದಂ ಪಡೆವನೆ ಬಿನ್ನಣ ಮಾಕಾಶದಲ್ಲಿ ಪೂವಡೆವಂದಂ (ಸಮುಪ. ೦೦-೨೦). **ಬಿನ್ನಾಯ೧: ೨.** ಬಿಲ್ಲ ನಾಯಕರು ದೇವ ರಘುರಾಮರ ಹೊಗಳುವ ಭಟರು ಬಿನ್ನಾಯ ದಿಂದೊಪ್ಪುತಿಹರು (ಕರ್ಣಾಕ. ೨೭೮). **ವಿಂದಾಣ: ೯. ಮಲ್ಲಯುದ್ಧದ ಒಂದು ವರಸೆ,– ಪಟ್ಟು**: ವಿಂದಾಣಕೆ ಮೈಗೊಡುವವನು ಡೊಕ್ಕರದಿಂದ ಹಾಕಿದೊಡುರುಳುವನು . . . ಮುಕುಂದನದೇಂ ವೈಸಿಕನೊ (ಪೇಖಸಂ ೦೬-೧೨೩); ಸಂದ ಕೊಕ್ಕಸ ಗುಂಡು . . . ಚೀಣ ಪಟ್ಟಸು ಮೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಸಾಳ್ವಭಾ. ೨೨-೭೨). **ವಿನ್ನಾಣ: ೧೦. [ಕಾಮಶಾ] ಸುರತದ ಒಂದು ಬಗೆ, – ರೀತಿ**: ನಸುಸಡಿಲಿದ ತಳ್ಕೆಯು ವಿನ್ನಾಣದಿನಸಮಾಯುಧನ್ನಪನೀಕ್ಷಿಸುತಿರೆ ಭರವಸದಿಂ ಮೋಹನಮಲ್ಲಗಲಥಮಂ ಮಾಡಿದರಾ ಪ್ರಿಯರು (ಜಯಕಾ. ೯-೩೦).

[< ಪ್ರಾ. ವಿನ್ನಾಣ. ವಿಣ್ಣಾಣ; / ತಮಿ. ವಿಣ್ಣಾಣ; ತೆಲು. ವಿನ್ನಾಣ. /ಸಂ. ವಿಜ್ಞಾನ]

**ಬಿನ್ನಾಣಗಿತ್ತಿ** (ನಾ). ಒಯ್ಯಾರಿ; ಬೆಡಗುಗಾತಿ: ಫೋಟೋ ತೆಗಿಸಿ ಕೊಳ್ಳಲಿಕ್ಕೆ ಹೋಗಿದ್ದಳೇ ಈ ಬಿನ್ನಾಣಗಿತ್ತೀ? (ಮುರುದಾ. ೪೪); ಇನ್ನು ಕೆಲವರು ಬಿನ್ನಾಣಗಿತ್ತಿ ಎಂದರು(ಆಹೋರಾ. ೦೬೩); ಮನಸ್ಸು . . . ಒಬ್ಬ ಬಿನ್ನಾಣಗಿತ್ತಿಯನ್ನು ಆರಾಧಿಸಲೆಳಸಿತು (ಸಾಪಿಸ. ೩೮).

[ಬಿನ್ನಾಣ + — ಗಿತ್ತಿ]

**ಬಿನ್ನಾಣವತಿ** (ನಾ). = ಬಿನ್ನಾಣಗಿತ್ತಿ: ಬಿನ್ನಾಣವತಿಯ ತಿಸರದ ಚೆನ್ನೆಯ . . . ನೆರವುದಿನ್ನೆಂತೊ (ಶಶಸಾಂ. ೨೭-೩೮).

[ಬಿನ್ನಾಣ + — ವತಿ]

**ಬಿನ್ನಾಣೆ** (ನಾ). = ಬಿನ್ನಾಣಗಿತ್ತಿ: ಬಿನ್ನಾಣೆ, ಸೊಕ್ಕೆಲ್ಲ ಇಳಿಯುವುದು ನಾಳೆ! (ಪಂದ್ರಸ. ೯೯-೩); ಕೊಂಕುನೋಟದೊಳೆನ್ನನೇತಕೆ ಕೊಲ್ಲುವೆ ಬಿನ್ನಾಣೆ (ಶಂಕಾಶ. ೦೮೭-೦೭). [ಬಿನ್ನಾಣ + — ಇ₂]

**ಬಿನಾಣಿ₁**, ಬಿನ್ನಣಿ, ವಿನ್ನಾಣಿ (ನಾ). **೧. ಜಾಣ; ಚತುರ**: ಜಗದ ಬಿನ್ನಾಣಿಯ ತೊಡಕ ಬಿಡಿಸಬಾರದು (ಬಸವ. ೭೨೪); ಪ್ರೌಢಿಯೊಳೆಂತಪ್ಪ ರುಮಂ ಮೆಚ್ಚದೆ ಕಡುಬಿನ್ನಾ[ಶಾಂ. ನ್ನ]ಣಿಯಪ್ಪ ಪೞಿಯುಂಗೊಸೆ ದೊಡೆ (ಶಂಪು. ೩-೦೫); ಸಮಜೋಳಿ ಜೋಕಿಯಿಂ ಕಾದಿದರ್ ಬಿಲ್ಲ ಬಿನ್ನಾಣಿಗಳ್ (ಪಂತಿ. ೩೯-೦೦). ೨. **ಕುಶಲಕಾರ್ಯಗಳಲ್ಲಿ ನೈಪುಣ್ಯವುಳ್ಳವನು; ಕರಕುಶಲಿ**: ಸೂತ್ರಧಾರಿ ಶ್ರೀಗುಂಡನ್ ಅನಿವಾರಿತಾಚಾರಿಗೆ ಮೂಮೆ ಪೆರ್ಜ್ಜೆಱಿಪುಪಟ್ಟಮು ತ್ರಿಭುವನಾಚಾರಿಯೆಂದು ಪೆಸರಿತ್ತು ಪ್ರಸಾದಂಗೆಯ್ದು ಪ್ರಿ(ಪೃ)ಥಿ(ಥ)ವಿಯಾ ಬಿನ್ನಾಣಿಗಳಾ ಬಳ್ಳಿಗವಾರ್ತ್ತೆ ಇಲ್ಲ (ಇಇ. X, ೦೬೪-೭; ೮ನೆಯ ಶತ); ದೇಗುಲಮಂ ಬೆಸಗೆಯ್ದ ಬಿನ್ನಾಣಿ ಪೊಲ್ಲಮಂಗೆ ಪನ್ನೆರಡು ಮತ್ತರ್ (ಎಇ. IV, ೩೩೪-೩೭; 975); ಹಲವು ಚಿತ್ರವ ಬರೆದನವಱೊಳಿಹನೆ ಅಳವಟ್ಟ ಕೆಲಸಂಗಳೊಳಗಿಹನೆ ಬಿನ್ನಾಣಿ (ಶಿವಗೀ. ೩೪-೦೫೫). **ಬಿನ್ನಣಿ: ೧.** ಬಲ್ಲಾಳಪ್ಪ ಬಿಲ್ಲ ಬಿನ್ನಣಿಯಿದಿರ ರೂಪನೆತ್ತಲೀಯದೊಂದೆ ಕೋಲಿಂದಿಸುವಂತೆ (ಪಂಪಶಂ. ೦೨೬-೦೭). **ವಿನ್ನಾಣಿ: ೨.** ಸೂತ್ರಧಾರಿಗೆ ಮೂಮೆ ಪೆರ್ಜ್ಜೆಱಿಪುಗೆಯ್ದು ಬಟಿಕ್ಕೆ ಈ ವಿಷಯದ ವಿನ್ನಾಣಿಗಳಾ ಬಳ್ಳಿಗವರ್ತ್ತೆಯನುಟಿಪಿದ ಆಚಾರಿಯ ಪೆಸರಿವನಱಿಮಿ (ಇಇ. X, ೦೬೩-೬; ೮ನೆಯ ಶತ).

[ಬಿನ್ನಾಣ + — ಇ₃. /ಪ್ರಾ. ವಿಣ್ಣಾಣಿ. / ತೆಲು. ವಿನ್ನಾಣಿ]

**ಬಿನ್ನಾಣಿಗ**, ಬಿನ್ನಣಿಗ (ನಾ). **ಚತುರ; ನಿಪುಣ**: ಪ್ರಾಣ ಕೊರಳಲಿ ನಿಲಲು ರಣಬಿನ್ನಾಣಿಗರು ಜವಗುಂದೆ (ಕುಪ್ಪಾವಿ. ೭೦೫. ೩-೬೩). **ಬಿನ್ನಣಿಗ**: ಎಚ್ಚಾಡಿದರ್ ಬಿಲ್ಲ ಬಿನ್ನಣಿಗರಂದು (ಪಬಪು. ೪೮-೪೯); ಬಿಜ್ಜೆಯೊಳ್ ಬಿನ್ನಣಿಗರನಾಗಿಸಿ . . . ಬಿಲ್ಗಾಱಿಕೆಯೊಳ್ ಬಲ್ಗೈಗಲಿಗಳನೆಸಗಿ, ಪಾಟವಮಾಟಮಪ್ಪಂತು ಕಲಿಸಲೊಡಂ (ರಾಮಾಶ್ವ. ೦೫೦-೦೪).

[ಬಿನ್ನಾಣ + — ಇಗ]

**ಬಿನ್ನಾಣಿಸು**, ಬಿನ್ನಣಿಸಂ (ಕ್ರಿ). **೧. ಚಾತುರ್ಯವನ್ನು ತೋರು; ಕುಶಲತೆಯನ್ನು ತೋರಿಸು**: ತನ್ನ ಮಂತ್ರಿಯ ಕೈಗೆ ಕೊಟ್ಟು ನಿವಾಳಿಯ ಬಿನ್ನಾಣಿಸಿದನಕಂಪಾಂಕಾ(ಭರಪ. ೩೭-೫೭). **೨. ಚಾತುರ್ಯದಿಂದ ಹೇಳು; ಕುಶಲತೆಯಿಂದ ನಿರೂಪಿಸು**: ನೀವೊಮ್ಮೆ ದೇವನ ಮುನ್ನ ಕಂಡಿದ್ದುದರಿಂದ ಬಿನ್ನಾಣಿಸಿದಿರದು ನಮಗೆ ಕಂಡಂತಾಯ್ತು (ಭರಪ. ೬೭-೦೭೭); ಮುನ್ನಿನ ಪಾಂಡವವರಸುತಕಥನವ ಬಿನ್ನಾಣಿಸುವೆ ಧರೆಯೊಳಗೆ (ಕುಮಾಸಾಂ. ೦೦). ೩. **ಮಲ್ಲಯುದ್ಧದ ಪಟ್ಟು ಹಾಕು**: ಹುಗುವರು ಹೊಕ್ಕು ಹೋರುವರು ಬಿನ್ನಾಣಿಸಿ ಬಿಗಿವರು ಕೈ ಕಾಲ ಬೆರಲ ಸಿಗಿವರು ಸಿಕ್ಕಿದರಾಯೆನ್ನಲೊಲ್ಲದೆ ಸಗುಣಾತ್ಮಕರು ಕಾದಿದರು (ಪೋಹಪ. ೩೯-೩೭). **ಬಿನ್ನಣಿಸು: ೧.** ಲಸದ್ಭಿತ್ತಿಯೊಳಾ ಚಿತ್ರ ಪಟದೊಳೊಪ್ಪುವ ನವಬಾಲಿಕೆಯ ಅದ್ಭುತಮಪ್ಪ ವಿಲಾಸಶ್ರೀಯಂ . . . ಅತಿಚತುರಂ ಬಿನ್ನಣಿಸುತ ಬರೆದಂ (ಜಯಕಾ. ೩-೦೩). ೪. **ಕೌಶಲ್ಯದಿಂದ ರಚಿಸು**: ಮುನ್ನಮಿಾಶಾಲಯದೊಳಗೆ ಚಿತ್ರರಥನೆಂಬವಂ ನಿಖಿಲವರ್ಣಕದೆ ಚಿತ್ರಮುಮಂ ಬಿನದದಿಂ ಬಿನ್ನಣಿಸೆ (ಶಬ್ದರಾ. ೦೦-೦೪೩).

[ಬಿನ್ನಾಣ + — ಇಸು₁]

**ಬಿನ್ನಾಯ₁** 'ಬಿನ್ನಪ' ನೋ.

**ಬಿನ್ನಾಯ₂** 'ಬಿನ್ನಾಣ' ನೋ.

**ಬಿನ್ನೈಸು** 'ಬಿನ್ನವಿಸು' ನೋ.

**ಬಿಪ್ಪಂಡ** (ನಾ). **ಪಕ್ಷಿಗಳ ಕೂಗು,–ಕಲರವ**: "ಬಗ್ಗು, ಬಿಪ್ಪಂಡಂ, ಬೆಜ್ಜ, ಚಪ್ಪರಣೆ–ಈ ೪ ಜಂಕಣೆ" (ಕಶಸಾ. ೩೭-೨೫೭); ಪಪ್ಪುಕಂ, ಕಪ್ಪಡಿ, ಬಿಪ್ಪಂಡಂ, ಉಪ್ಪಂಡಂ (ಶಮದ. ೩೭ ಪ್ರಯೋ); "ವ್ಯರ್ಥ" (ಶಮದ. ನ. ೪೭ ಪ್ರಯೋ). [?]

**ಬಿಪ್ಪಂಡಿಸು** (ಕ್ರಿ). (ಅಲಂ) **ದೂಷಿಸು; ದೂರು**: ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆಣಿಸಳೌದಾರ್ಯಮಂ ಚಿಂತಿಸಳ್ (ಕಾದಂಪೂ. ೩೪೮); ಈ ನಡೆನುಡಿವಳಿಗಳಿಂದ ಜಂಕಿಸಿ ಬಿಪ್ಪಂಡಿಸಿ ನಮ್ಮನ್ನೊದೆದು, ಹುಚ್ಚಡಸುವಂತೆ ಹೀಗೆ ಕುಣಿಯಿಸಿ (ಪಂತ್ರಶ. ೦೩೦-೦೮). [ಬಿಪ್ಪಂಡ + — ಇಸು₁]

**ಬಿಬೀಚಣ** (ನಾ). **ರಾವಣನ ಸಹೋದರ; ವಿಭೀಷಣ**: ಸುಸೇಣಂ, ಬಿಬೀಚಣಂ ಮುಂತಪ್ಪ ಬೀರರ ಕೂಟಮುಂ (ಅದ್ಭುತ. ೪೯-೦೪).

[<ಸಂ. ವಿಭೀಷಣ]

**ಬಿಬ್ಬಚ್ಚ** (ನಾ). ೧. ಅಸಹ್ಯ : 'ಬಿಬ್ಬಚ್ಚೆ' ಪರಾ. ೨. (ಆಲಂ) ನಿವಾರಣೆ ; ಪರಿಹಾರ : 'ಬಿಬ್ಬಚ್ಚಿಸು' ಪರಾ. ೩. ನಿಷ್ಫಲ; ವ್ಯರ್ಥ: 'ಬಿಬ್ಬಚ್ಚಗೊಳಿಸು' ಪರಾ. [<ಸಂ. ಬೀಭತ್ಸ]

**ಬಿಬ್ಬಚ್ಚಗೊಳಿಸು** (ಕ್ರಿ). ನಿಷ್ಫಲಗೊಳಿಸು ; ವ್ಯರ್ಥಮಾಡು : ಮೆಚ್ಚಿದೆನೊ ಅಹಿತೆನ್ನ ಶರ ಬಿಬ್ಬಚ್ಚಗೊಳಿಸಿದಕೇಗಲುರುಗಾಸ್ತ್ರಚ್ಚಪೆನು ತಡೆಯೆಂದು ಬಿಡಲು (ಜಿರಾಮಾ. ೩೨೯-೪೬). [ಬಿಬ್ಬಚ್ಚ + ಕೊಳ್$_1$ + — ಇಸು$_3$]

**ಬಿಬ್ಬಚ್ಚಿಸು** (ಕ್ರಿ). ನಿವಾರಿಸು; ಹೋಗಲಾಡಿಸು : ತುಚ್ಛರಾಗುವರಂದು ಮಿಗಿಲ ಭೂಭುಜರು ಘುಂದೆಚ್ಚರದೊಳಿರ್ದಲ್ಲೆ ವಿಜಯಾಧಿನಾಥ ಬಿಬ್ಬಚ್ಚಿಸದಲಿರಲ್ (ಜಿನಪು. ೬-೩೦); ಆ ವ್ಯಸನವನು ಬಿಬ್ಬಚ್ಚಿಸಲು ಕಿಳುಹಾಗುದಲ್ಲಾಗೆನೆ ವಿಭೀಷಣನು (ಜಿರಾಮಾ. ೪೨೯-೨೦).

[ಬಿಬ್ಬಚ್ಚ + — ಇಸು$_3$]

**ಬಿಬ್ಬಚ್ಚು** (ನಾ). ಅಸಹ್ಯಕರವಾಗಿರುವುದು : ಬೇರಸಗಿತಿಂಬವನಿಸುರರಿರವೀರಣಕೆ ಬಿಬ್ಬಚ್ಚು . . . ಎಂದೊದರೆ ಕಹಳೆಗಳು (ಶಕುಭಾ. ೨೩-೦೦).

[< ಸಂ. ಬೀಭತ್ಸ]

**ಬಿಬ್ಬಚ್ಚೆ** (ನಾ). ಅಸಹ್ಯವನ್ನುಂಟುಮಾಡುವವಳು ; ಅಸಹ್ಯಕರಳಾದವಳಂ : ಮೆಚ್ಚಿದನುಕೂಲೆಯರ ಸಂಗ ಸುಖಪುಂಗ ಬಿಬ್ಬಚ್ಚೆಯರ ಬಲಾತ್ಕಾರ ನೋಟಮುಂ ಬೇಟವನು ಘೆಚ್ಚುವದೆ (ಜಿನಪು. ೨೮-೧೪).

[ಬಿಬ್ಬಚ್ಚ + — ಎ$_2$]

**ಬಿಬ್ಬನೆ** (ಅ). ಅತಿಶಯವಾಗಿ ; ಅಧಿಕವಾಗಿ : ಬೆಬ್ಬನೆ ಬೆಚಿತು ಬಿಬ್ಬನೆ ಬೀಗಿ ಅಹಂಕಾರಭರಿತನಾಗಿಪ್ಪವನ ಮನೆಯು ಲಿಂಗಸನುಮತರು ಹೊಗರು (ಸಕವ. II, ೩೩೦-೯); ಸಂತೋಷಂ ಸರ್ವಾಂಗದೊಳು ಶೀವಿ ಬಿಬ್ಬನೆ ಬಿರಿದಬ್ಬರಿಸುತ್ತಿ (ಸಂಬಿರ. ೬-೩೪); ಓಹಿಲದೇವಂ ಕೊಬ್ಬುತ್ತುಬ್ಬುತ್ತಂ ಬಿಬ್ಬನೆ ಬೀಗಿ (ಉದ್ಭಟೇ. ೩-೪೩). [ಬಿಬ್$_0$ + — ಅನೆ$_1$]

**ಬಿಬ್ಬಿ** 'ಬೀಬಿ' ನೋ.

**ಬಿಬ್ಬನಂ** (ಅ). ಕೂಡಲೆ : ಮತ್ತಾರ್ಂಗನಿಕಾಯಂ ಬಿಬ್ಬನಂ ಬೆಕ್ಕನೆ ಬಿರಿದಪುದು (ಸುಕುಮಾ. ೪-೦೦).

**ಬಿಬ್ಬುರಿವಲ್** 'ಬಿರ್ರಿ' ಪರಾ.

**ಬಿಬ್ಬೋಕ** (ನಾ). ೧. [ಕಾವ್ಯಮೀ] ಸ್ತ್ರೀಯ ದಶವಿಧಶೃಂಗಾರ ಭಾವಗಳಲ್ಲಿ ಒಂದು ; ಲೀಲಾ, ವಿಲಾಸ, ವಿಚ್ಛಿತ್ತಿ, ವಿಭ್ರಮ, ಕಿಲಕಿಂಚಿತ, ಮೊಟ್ಟಾಯಿತ, ಕುಟ್ಟಮಿತ, ಬಿಬ್ಬೋಕ, ಲಲಿತ ಮತ್ತು ವಿಹೃತ ಎಂಬ ಹೆಣ್ಣಿನ ಹತ್ತು ಸ್ವಭಾವಜನ್ಯ ಅಲಂಕಾರಗಳಲ್ಲಿ ಒಂದು ; ಗರ್ವದಿಂದ ಉಂಟಾಗುವ ಅನಾದರ : "ಬಿಬ್ಬೋಕಮೆಂದೊಡೆ ಕಾಂತನ ಕೂಟಂಗಳಲ್ಲಿ ಗರ್ವದಿಂದಿಹ ಅನಾದರಣಂಗಳು" (ನಾಕಿರಾ. ೯೬); ಲಲಿತವಿಲಾಸಬಿಬ್ಬೋಕವಿಭ್ರಮಗುಣ ಕಿಲಕಿಂಚಿತಲೀಲೆಗಳು ತೊಲಗದೆ ಸಲೆ ನೆಲಸಿಹವಾ ಕೇರಿಯ ಬೆಲೆವೆಣ್ಣಾಳ್ಗೊಳಗೆ (ಶಂರಾಶಾಂ. ೪-೦೦೬). ೨. ಹುಸಿಮುನಿಸಂ ; ಹುಸಿಕೋಪ ; ಉಳ್ಳುಡೆಯಂ ಮೆಲ್ಲನೆ ಲೀಲೆಯಿಂ ಸೆಳೆದೊಡೆನ್ನಂ ಸಸ್ಪೃಹಂ ಕೊಳ್ವವೋಲ್ ಕಡೆಗಣ್ಣಿಂದಮೆ ಕೊಂಕುವಳ್ ಸಹಜಮಾ ಬಿಬ್ಬೋಕಮೆನ್ನಾಕೆಯಾ (ರೀಲಾವ. ೨-೦೦೫) ; ಸೌಂದರಿ . . . ಬಿಬ್ಬೋಕಂ ಕುಡಿವರಿಯಲ್ ನಿಬ್ಬೆಗದೆ ನಿನಗಕಾರಣಂ ಹಸನಮುದೆಂದಳ್ (ಕಾದ್ಯಟಿ. ೦೦-೨೩). [ಸಂ].

**ಬಿಭೀಷಿಕೆ** (ನಾ). ಅಂಜಿಕೆ; ಭಯ : ಉತ್ಪ್ರತರಜತಾವದಾತಲೋಹಪುತ್ರಿಕಾನಂದ ಲಾಕ್ಷಾಹಿಂಗುಲಿ ಕಪಾಟಲಕಮರ್ಧನಕರವಾಳಚಾಲನಪ್ರಕಟಿತ ಭಟಬಿಭೀಷಿಕಾಡಂಬರಂ (ಆದಿಪು. ೦೩-೪೩ ವ); ಅಂತೆ ವೇಷದಲಿ ಮತವೆಂಬ ಕಾಣುವ ಬಿಭೀಷಿಕೆಯು ನಿಜವಾಗಿ ಮತವೆನ್ನಬಾರದೆಲೆ ಅದು ಬಿಭೀಷಿಕೆಯೆಂದು ತೋರುವುದು ನಿಜವಾದ ಮತಕೆ ಬೇರೆ ತಂದಂತೆ (ನವರಾ. II, ೪೦).

[ಸಂ. ಬಿಭೀಷಿಕಾ]

**ಬಿಮ್ಮಗೆ$_1$** (ಅ). ೧. ಬಿಗಿಯಾಗಿ ; ಬಲವಾಗಿ : ಗಟ್ಟಿಯಾಗಿ ಒಮ್ಮೆ ಯುಂಡವ ತ್ಯಾಗಿ ಇಮ್ಮೆಯುಂಡವ ಭೋಗಿ ಬಿಮ್ಮುಗುಂಡವ ನೆಜ ರೋಗಿ (ಸರ್ವಜ್ಞ. ೨೦೨೩); ಹಾಗೆಲ್ಲ ಬಿಮ್ಮಗೆ ಉಂಡು ತೇಗಬೇಕಾದರ . . . ಉಡುಪಿಗೇನೆ ಹೋಗಬೇಕು (ಮರವು. ೯೪) ; ಬೊಪ್ಪಣ . . . ಮಹಾರಾಣಿಯ ಕಾಲುಗಳನ್ನು ಬಿಮ್ಮಗೆ ಹಿಡಿದು, ಅದರ ಮೇಲೆ ತನ್ನ ತಲೆಯನ್ನಿಟ್ಟ (ಶಾಂತಲಾ. ೧೮೪). [ಬಿಮ್ಮು$_1$ + — ಅಗೆ$_3$./ತುಳು. ಬಿಮ್ಮಗೆ]

**ಬಿಮ್ಮಗೆ$_2$** (ಅ). ಮೌನವಾಗಿ; ಸುಮ್ಮನೆ : ಬೊಮ್ಮವನು ಅಜಿದಿಹರೆ ಬಿಮ್ಮಗಿದ್ದಿರಬೇಕು (ಸರ್ವಜ್ಞ. ೪೩೪); ಬಿರುಸು ಉಲ್ಲೆ ಮಣ್ಣಿಗಾಯ್ತು ಬಿಮ್ಮಗುಳಿದಳು (ಶರಾಹ. ೨೪-೬); ನಿಲ್ಲೆಂದ ಹಾಗಾಗಿ, ಅಲ್ಲೆ ನಿಂತೆ;ಹೊ, ಜಾಣ ಹೊರಟಾಗ ಕೇಳಿದರೆ ಬಿಮ್ಮಗಿಹರು (ಮುಕಾಹಿ. ೨೬).

[ಬಿಮ್ಮು$_2$ (< ಬಿಂ) + — ಅಗೆ$_3$]

**ಬಿಮ್ಮನಸೆ, ಬಿಮ್ಮನಿಸೆ** (ನಾ). ಬಸಿರಿ ; ಗರ್ಭಿಣಿ : ಹೆಣ್ಣು ಬಿಮ್ಮನಸೆಯಾಗಿ, ಒಡವೆಗಳು ಹೊರೆಯಾದಾಗಲೂ ಅವುಗಳ ಚಾಪಲ್ಯ ಹಿಂಗುವುದಿಲ್ಲ (ಸಂಜಿಂಂಡ. ೦೨೮) ; ಅಬ್ಬಬ್ಬ . . . ಎಂದು ಬಿಮ್ಮನಸೆ ಅಬ್ಬರಿಸಿದಳು (ಕುಸರು. ೨೬೮). ಬಿಮ್ಮನಿಸೆ : ಬಿಮ್ಮನಿಸೆ ಆಗಿಬಿಟ್ಟಳು (ನನ್ನೂರು. ೨೯೮).

[<ಬಿಣ್ + < ಮಾನಸೆ]

**ಬಿಮ್ಮನಿಸೆ** 'ಬಿಮ್ಮನಸೆ' ನೋ.

**ಬಿಮ್ಮನೆ$_1$** (ಅ). ೧. ವೇಗವಾಗಿ : ಶೀಘ್ರವಾಗಿ ; ರಭಸವಾಗಿ : "ಬಿಮ್ಮನೆ ಗಮ್ಮನೆ ವಹಿಲಂ" (ಶಕುಶ. ೮೦); ಈ ಪರಿಯಂ ಕೇಳಿಪುದುಂ ಪಡೆವಳರೆಲ್ಲರ್ ದಿಮ್ಮನೆಟ್ಟು ಬಿಮ್ಮನೈತಂದು (ರಾಮಾಶ್ವ. ೦೩೬-೧); ಹೆಮ್ಮೆಯ ಮುಗಿಲಿಗೆ ಬಿರುಗಾಳಿಯಿದೋ ಬಿಮ್ಮನೆ ಬೀಸುವುದು ನೋಡಿ (ನರದಾ. I, ೪೪೩). ೨. ಬಲವಾಗಿ ; ಗಟ್ಟಿಯಾಗಿ ; ಬಿಗಿಯಾಗಿ : ಬಾಯಲ್ಲಿ ತುತ್ತನಿಕ್ಕಲೊಲ್ಲದೆ ಬಿಮ್ಮನೆ ಬಾಯಂ ಮುಚ್ಚಿಕೊಳಲು (ಧರ್ಮಾಮೃ. ೦೦-೨೦೮). [ಬಿಮ್ಮು$_1$ + — ಅನೆ$_1$./ತುಳು. ಬಿಮ್ಮನೆ]

**ಬಿಮ್ಮನೆ$_2$** (ಅ). ೧. ಬಿಕೋ ಎನ್ನುವಂತೆ ; ಬಣಗುಟ್ಟುವಂತೆ : ಬಿಮ್ಮನೆಯಾಗಿ ಮದುವೆಗಳುಪಿದ ಮನೆಯಂದದಿನಿರ್ದುದು (ಅಜಿವು. ೬ ೪೦). ೨. ಸುಮ್ಮನೆ ; ತೆಪ್ಪಗೆ : ಪ್ರಭುವು ಅವರ ಯಾವ ಮಾತುಕತೆಗಳಲ್ಲಿಯೂ ಭಾಗವಹಿಸಲಿಲ್ಲ. ಬಿಮ್ಮನೆ ಕುಳಿತನು (ಬಟ್ಟಹೊ. ೨೬).

[ಬಿಮ್ಮು$_2$ (<ಬಿಂ) + — ಅನೆ$_1$]

**ಬಿಮ್ಮಿಸು** (ಕ್ರಿ). ಅಹಂಕಾರಪಡು ; ಗರ್ವಿಸು : ಪೂವಸಿಜಿ ಪೂವಿಲ್ಲ ಮೊದಲಹ ಜೀವಿಗಳ್ಬಿಮ್ಮಿಸಿದೊಡಸದಳ ದೇವನಲ್ತೆ ಕೇಳ್ಜವಂ ಜವಗೆಟ್ಟ ಮುಂಗಥೆಯ (ಮರೇಶು. ೩-೨). [ಬಿಮ್ಮು$_1$ + — ಇಸು$_3$]

**ಬಿಮ್ಮು$_1$** (ನಾ). ೧. ದೊಡ್ಡತನ ; ಘನತೆ ; ಹಿರಿಮೆ: ಬಲ್ಲವರ ಬೆಸಗೊಂಡರೆ ಎನ್ನ ಬಿಮ್ಮು ಕೆಟ್ಟಹುದೆಂದು ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ (ಬಸವ. ೮೮೮); ಭಕುತಿಯ ಬಿಮ್ಮಿನಲಿ ಬೀಸಾಡಿದನು ಪದದಲಿ ಕಳೇವರವ (ಸಿಶಾಗ. ೯-೭-೪೦). ೨. ಗರ್ವ ; ಅಹಂಕಾರ : ನಗುವುದು ನುಡಿವುದು ಶಿವಭಕ್ತರೊಡನೆ ಸುಮ್ಮಾನ ಹಮ್ಮು ಬಿಮ್ಮಾಗಿರ ಲೇಕಯ್ಯ (ಬಸವ. ೨೯೨); ಬಿಮ್ಮು ಬೀಸರಪಹುದೆ ನಿಮ್ಮ ಸೊಮ್ಮಿನವರಿಗೆ (ಶಿವಶ್ವಾಪಿ. ೮-೩೩). ೩. ಬಿಗುಹು ; ಬಿಗಿತ : ಪ್ರಾರಬ್ಧಕರ್ಮದ ಬಿಮ್ಮು ತೀರಲು . . . ಸುಖಿಯಹನು (ಅಮೃತ. ೬-೫೨) ; ಇತ್ತ ರವಿರಶ್ಮಿಗಳ ಬಿಮ್ಮು ಸಡಿಲುತ್ತಿರ್ದುದಂ ನೋಡಿ (ಕುರಂಗ. ೫೬-೦೮); ಈ ಪ್ರಸಂಗದಿಂದ ಹಿಂದಿನ ಹತ್ತಿಪ್ಪತ್ತು ದಿನಗಳ ಬಿಮ್ಮು ಒಮ್ಮೆಲೆ ಬಿಟ್ಟು ಬಯಲಾಯಿತು (ಕಾಳರಾ. ೦೦). 'ಬಿಮ್ಮಗೆ$_1$' ಪರಾ.

[ದೇ.॥ ತಮಿ. ವಿಮ್ಮು = ಭಾರ, ಹೊರೆ]

**ಬಿಮ್ಮು$_2$** 'ಬಿಂ' ನೋ.

**ಬಿಮ್ಮುಗಜು³** (ಕ್ರಿ). ಬಿಕೋ ಎನ್ನು ; ಬಣಗುಡು : ಪಾ[ಟ]

ದಾಟಿದ ಮುದ್ದಿನ ಬಿದ್ದಿನ ವಿಳಾಸಿನೀಜನದ ಬಿನದವಿಲ್ಲದೆ ಬಿಮ್ಮುಗಟಿ ಯುತ್ತಿರ್ದವಿನಾಣಿಗಳ ಬಾಗಿಲ್ಕೆತ್ತಂತೆ ಬಿನ್ನನಾಗಿ (ವರ್ಧಮಾ. ೫-೯ ವ).

[ಬಿಮ್ಮು$_2$(<ಬಿಂ) + ಕಡೆ$_1$]

**ಬಿಮ್ಮುಗಿಡು** ' ಬಿಮ್ಮುಗೆಡು ' ನೋ.

**ಬಿಮ್ಮುಗೆಡು**, ಬಿಮ್ಮುಗಿಡು (ಕ್ರಿ). ಅಹಂಕಾರವಿಲ್ಲವಾಗು ; ಗರ್ವ ನಾಶವಾಗು : ಗರಳವಂ ಕೊರಳ ಹೊಱಗಿಟ್ಟುಕೊಂಡಾ ಹೆಮ್ಮೆ ಬಿಮ್ಮು ಗೆಡುತಿರೆ (ಸಿದ್ಧರಾ. ೫-೧೬); ನಿಮ್ಮ ಶರಣಂಬೊಕ್ಕೆವೆನುತಂ ಬಿಮ್ಮುಗೆಟ್ಟ ಪ್ಪಾಂಗದಿಂ ಪೊಡವಡುತ ನಸು ಸಾರ್ದು (ಬಸವು. ೫೬-೯೭). **ಬಿಮ್ಮುಗಿಡು :** ಪೊಣರ್ದರಿಳೆ ಕಮಠಫಣಿರಾಜಾಳಿ ಬಿಮ್ಮುಗಿಡಲಲ್ಲಿ ಮಱೆದುದು ಭಾಪು ಚತುರವೈಹಾಳಿ ಹರ್ಷದ ಭಡಾಳಿ (ಭಾವಚಿಂ. ೯-೧೨). [ಬಿಮ್ಮು$_1$+ಕೆಡು$_1$]

**ಬಿಮ್ಮೆನ್ನಿಸು** (ಕ್ರಿ). ಬಿಕೋ ಎನ್ನಿಸು ; ಬಣಗುಟ್ಟು : ಏನು ಸೊಗಸು ಈ ಶರತ್ಕಾಲ . . . ಇಷ್ಟಾದರೂ ಏಕೋ ಬಿಮ್ಮೆನ್ನಿಸುತ್ತದೆ (ರಾಕ್ಷಸು. ೪೨). [ಬಿಮ್ಮು$_2$ (<ಬಿಂ) + ಎನ್ನಿಸು (<ಎನಿಸು$_1$)]

**ಬಿಯ,** ಬಿಯ್ಯ, ಬೀಯ್ಯ, ಬೆಯ, ಬ್ರಯ, ವೆಯ, ವ್ರಯ (ನಾ). ೧. ಖರ್ಚು ; ವೆಚ್ಚ ; ಪುಟ್ಟದಂದಿವಂಗಿದು ಬಿಯಮೊಳ್ಪಿವಂಗಿದು ವಿನೋದವಿವಂಗಿದು ಸಾವ ಪಾಂಗು (ಶಂಶಭಾ. ೧೨-೧೮೨); ಚಾರುದತ್ತಂ ಬಿಯಕ್ಕೆ ತಕ್ಕುದಂ ಬೇಡಿದನೆನೆ (ವಡ್ಡಾರಾ. ೯-೫೫ವ). 'ಉಪಬಿಯ' ಪರಾ. ೨. ದಾನ; ಕೊಡುಗೆ : ಬಿಯಮುಂ ಪರಾಕ್ರಮಮುಮೊಪ್ಪಿರೆ ತನ್ನೊಡ ವುಟ್ಟಿದರ್ ಸಮಂತೊಡವರೆ ವಾರಣಾವತಮನೆಯ್ದಿದನಮ್ಮನ ಗಂಧ ವಾರಣಂ (ಪಂಪಭಾ. ೨-೯೮); ಜನಕೆಲ್ಲಮಿಮಾವ ಸೂಸುವ ಕುಡುವೀಡಾಡುವ ವಸ್ತುಗಳಿಂದೆಡಱೋಡುವಿನಂ ಪರಿದನಿತ್ತು ಬಿಯಮಂ ಮೆಱೆದಳ್ (ಸುಕುಮಾ. ೧೧-೯೨). ೩. ಅಳಿವು ; ನಾಶ : ಹರಣದ ಬಿಯಕೊಂದಿನಿಸು ಮನೆಣಸದ ದೊರೆಗಲಿಗಳ್ ಬಿನದಕೆ ನಡೆವಂದದಿ ಹರಿಸಂ ಮಿಗೆ ನಡೆತಂದರ್ (ಜಗನ್ನಾ. ೬-೨೪). ೪. [ಗಣಿತ] ಭಾಗಿಸಿ ಉಳಿದ ಶೇಷ : ಧನಂ ತದವಾಪಂ ನಗಸಂಗುಣ ಫಣಿಹೃತಂ ಶೇಷಂ ಬಿಯಂ (ಲೋಕೋಪ. ೩-೨೦) ; ಧನಮಂ ಏೞಱಿಂ ಗುಣಿಸಿ ಎಂಟಱಿಂ ಭಾಗಿಸಲ್ ಉೞಿದ ಶೇಷಂ ಬಿಯಂ (ಲೋಕೋಪ. ೩-೨೦ ಟೀಕೆ). **ಬಿಯ್ಯ :** ೩. ಮಾರಿಯ ಮನೆ ಬಿಯ್ಯದ ಕಣಜಂ ಮತ್ತಾ ರಾಜಕೃತಾಂತನ ಬಳಕೆಯ ಭಂಡಾರಂ . . . ತಾವೆನಲಾ ದಾರುಣತರಸಂಗ್ರಾಮಧರಾತಳಮತಿಭೀಕರಮಾಯ್ತು (ಜಗನ್ನಾ. ೭-೨೦). **ಬೀಯ್ಯ$_3$ :** ೧. ಪಡದೊಡಮೆಯಂ ಮೂಱು ಭಾಗಂಗೆ ಯ್ದೊಂದು ಭಾಗಮಂ ಧರ್ಮಕ್ಕೆ ಮತ್ತೊಂದು ಭಾಗಮಂ ಮನೆಯ ಬೀಯಕ್ಕೆ . . .ಸಂವಿಭಾಗಂಗೆಯ್ದು (ಚಾವುಂಪು. ೨೦೬); ಆಯಕ್ಕೆ ಬೀಯ ಸರಿ ಮೇಲೆ ಭಂಡಾರಕ್ಕೆ ರಾಯರಿಕ್ಕಿದ ಕಪ್ಪ ತಾವುಪಾರ್ಜಿಸಿದರ್ಥ (ಅಕಚಂ. ೩೦-೪೦); ಆಯ ಬೀಯವನವಳೊಡನಾಳೋಚಿಸಿ ಕೈಯಡಕದೊಳಿರಿಸುವುದು (ಹಂಪ. ೬-೪೩). ೨. ಬೀರಕೆ ಬೀಯಕ್ಕೞಿವ ಬೆಡಂಗನೊಳಾರ್ದೊರೆ ನೆಱೆ ತೋರ್ಕುಮೆ ಶತ್ರುಜನಕಮರ್ಥಿಜನಕ್ಕಂ (ಗದಾಯು. ೧-೦೮) ; ಜನಕಂ ಬೀಯದ ಚಾಗದ ಪೆರ್ಮೆಯುಂ ಮೆಱೆವುದುಂ (ಶಂಶಾಪೂ. ೫-೦೯೧ ವ); ನಯದ ಬೀಯದ ಚಾಗದುಪಭೋಗದೆಸಕದೊಳಂ . . . ಅತಿ ಮನೋ ಹಾರಿಯಪ್ಪ ಸೂಱೆಗೇರಿಗಾಸನ್ನಮಾದ ವಿಪಣಿವೀಧಿಯೊಳ್ (ಪುಷ್ಪದ. ೨-೬೬ ವ). ೩. ಜೀವದ ಬೀಯಕಿವರಂಜಿದರು ನೆನೆದರು ಮನೆಯ ರಾಣಿಯರ (ಕುಮಾವ್ಯಾಸ. ೯-೩೧) ; ವಾಯುಸೂತ್ರದಲಿಂದು ರವಿ ಚಕ್ರಾಯುಧಂಗಳು ತಿರುಗುತಿರ್ದೊಡೆ ಬೀಯವಹವವ ನಿಲಿಸಲಱಿಯದ ಭವಿಗಳಾಯುಷ್ಯ (ಪ್ರಭುಲಿಂ.೬-೩೩). ೫. ವೆಚ್ಚಕ್ಕೆ ಆಧಾರವಾದ ದ್ರವ್ಯ ; ಧನ : ಪೊಂದರುತಿರೆ ಗಂಡಂ ಸಾಯೆಂದಡೆ ಜೀಯೆಂದು ಪೇಟಿದ್ದೊಡಂ ಮಾಡುವರಿಂತೊಂದು ದಿನ ಬೀಯ[ಪಾಠಾಂ. ವಿನಯ]ಮಿಲ್ಲದೊಡಂದಾ ಗಳ್ಮಾತುಗೇಳರ್ (ಸಮಚ. ೫-೧೧೧) ; ■ ಈ ಶಬ್ದವು ' ಬೀ ' ಎಂಬ ಧಾತುವಿಗೆ ಸಂಬಂಧಪಟ್ಟಿರಬಹುದೇ ಎಂಬುದು ಪರಿಶೀಲನಾರ್ಹ ವಾಗಿದೆ. **ಬೆಯ :** ೧. ಇಂತೀ ದೇವದಾನವಸ್ಥಳಂಗಳ ಆಯಕ್ಕೆ ಬೆಯ ಸರಿ (ಎಕ III, ತಿರುಮ. ೯೭-೬೪ ; 1276). ೭. (?) : ಭಟ್ಟವೃತ್ತಿರ್ ಸಾಸಿರ್ವ್ವರು ಒಲೆಯ ಅಯ್ನೂರ್ವ್ವರು ಬೆಯ ಮೂನೂರ್ವ್ವರುಂ . . . ಧರ್ಮನಿಮಿತ್ತ ಕೊಟ್ಟ ಸ್ಥಿತಿಯ ಕ್ರಮ (ಎಕ. XVI, ತುಮಕೂ. ೫೧-೯:೨೦:). **ಬ್ರಯ :** ೧. 'ಧರ್ಮಬ್ರಯ' ಪರಾ. ೭. (ಯಾವುದಾದರೂ ಖರ್ಚು, ವೆಚ್ಚಗಳಿಗಾಗಿ ವಸೂಲು ಮಾಡುತ್ತಿದ್ದ) ಒಂದು ಬಗೆಯ ತೆರಿಗೆ : 'ಮಳಬ್ರಯ' ಪರಾ. **ವೆಯ :** ೧. ನರನೊಂದು ವೆವಹಾರ ಕೆರಡಾಯವೆಯ ಲೆಕ್ಕ ಹೊರಗಣನುಭೋಗಕೊಂದೊಳನೀಕಿಗೊಂದು (ಮಂಕುಸ. ೬೬೪). **ವ್ರಯ :** ೧. ಇನ್ನಿನಿತುಂ ನಿತ್ಯವ್ರಯವಾಗಿ ನಡೆವುದು (ಹೈಆಸಿ. ೫-೬-೪೧ ; 1088). ' ಧರ್ಮವ್ರಯ ' ಪರಾ.

[<ಸಂ. ವ್ಯಯ./ಪ್ರಾ. ವಯ, ವಿಅ]

**ಬಿಯಂಗೆಯ್**, ಬಿಯ್ಯಂಗೆಯ್, ಬೀಯಂಗೆಯ್ (ಕ್ರಿ). ೧. ವೆಚ್ಚ ಮಾಡು ; ಖರ್ಚುಮಾಡು : ತವದಾಯುಷ್ಯದ ಕುಂದದಂದದ ಬಿಯಂ ಗೆಯ್ದುಂ ಪವಣ್ಗೋಱದುದ್ದವದೇ ನೋೞ್ಪೆನೆನಿಪ್ಪ ರೂಪಿನ ಮನಂಗೊಂ ಡಿರ್ಪ ಲಾವಣ್ಯದೊಪ್ಪುವ ನೇಪಥ್ಯದವರ್ಕೆ ನಿಲ್ಲವನಿಮೇಷೆಂದ್ರಾದಿಗಳ್ಗಿಂ ದೊಡಾರ್ಗಿವು ನಿಲ್ಕುಂ (ಶಾಂತಿಪು. ೭-೬) ; ಸಿರಿಯಂ ತಕ್ಕಲ್ಲಿಗಿನ್ನಿತ್ತನ ತೆಱದೆ ಬಿಯಂಗೆಯ್ಕಲ್ (ಎಕ. III, ಮಂಡ್ಯ. ೦೨೧-೩೨ ; 1235). **ಬಿಯ್ಯಂಗೆಯ್ :** ೧. ಪೂರ್ವೋಪಾರ್ಜಿತಪುಣ್ಯದಿಂ ಧನಂಬಡೆದ ಗೃಹಸ್ಥಂ ನಿರರ್ಥಕಂ ಬಿಯ್ಯಂಗೆಯ್ಯದೆ . . . ಸ್ವಸಮಯಿಗಳ್ಗೆ ಕೊಟ್ಟೊಡಕ್ಷಯದಾನಮಕ್ಕುಂ (ಪಸಾರ. ೩೨೨). **ಬೀಯಂಗೆಯ್ :** ೧. ಬೇಟ್ಪರ್ಥವನಾರ್ಜಿಸಿ ಬೀಯಂಗೆಯ್ದು ಧನಮಿತ್ರನುಮಾನುಂ ಸುಖದಿನಿರೆ (ದಶಕು. ೯-೧೫೪ ವ). ೨. ದಾನ ಮಾಡು ; ಕೊಡುಗೆ ನೀಡು : ನಿಧಿಗಳೊಳಿರ್ದೊಡಮೆಯಂ ಬೀಯಂಗೆಯ್ದು . . . ಅಹಮಿಂದ್ರನಾದೊಂ (ಚಾವುಂಪು. ೨೪೯) ; ಪೇರಾನೆಗಳ ತೇರ್ಗಳ ವಂಗಡಮಂ ತಂಡತಂಡದಿಂ ಬೀಯಂಗೆಯ್ವರಸುಮಕ್ಕಳ ಮುಂದೋದಿ ಮೆಚ್ಚಂ ಕೊಳ್ವಕ್ಕರಿಗರಬ್ಬರ ದೊಳಂ (ಶಬ್ದಾಭ. ೪೪) ; ಇನಿತಜಿನರತ್ನಮುಂ ನಚ್ಚಿ ನಿಜಾಲಯುದರ್ಥ ಮೆಲ್ಲಮುಂ ಬೀಯಂಗೆಯ್ದೆನಸುಂ ದರಿದ್ರೆಯಾದಳ್ (ದಶಕು. ೯-೨೦೬).

[ಬಿಯ + ಕೆಯ್$_1$]

**ಬಿಯಕಾರ್ತಿ** (ನಾ). ಬೆಲೆವೆಣ್ಣು ; ಗಣಿಕೆ ; ವೇಶ್ಯೆ : ಕಣ್ಗೆಸೆದರ್ . . . ಲೀಲೆಯಿನಾಂತು ನಿಂದ ಬಿಯಕಾ[ಪಾಠಾಂ. ಗಾ]ರ್ತಿಯರಗ್ಗದ ಗಾಡಿ ಕಾರ್ತಿಯರ್ (ಪಾರ್ಶ್ವಪು. ೦೨-೯).

[ ಬಿಯಕಾಱ + – ತಿ$_1$ ( < – ಇತ್ತಿ ) ]

**ಬಿಯಕಾಱ,** ಬೀಯಕಾಱ (ನಾ). ಹೆಚ್ಚಾಗಿ ಖರ್ಚುಮಾಡುವವನು ; ದುಂದುಗಾರ : " ಬಿಯಕಾಱರ್ ವ್ಯಯಶೀಲರೊಳ್" (ಕರ್ಣಾಟ. ೬೩) ; ನಯವಿದನೊಪ್ಪುವ ಬಿಯಕಾಱನೊಳ್ಪಿದ ಪ್ರಿಯಂತಮನಾಗೆ ತನ್ನ ಮುನ್ನೋಂತ ನೋಂಪಿಯ ಫಲವೈಸೆ ಬೆಲೆವೆಣ್ಣೆ (ಸೂಕ್ತಿಸು. ೯-೩೪೪). **ಬೀಯಕಾಱ :** ಬೀಯಕಾಱನಂ ಬಿಟ್ಟು ಬೇಂಟಗಾಱನಂ ಕರೆವ ಸೂಳೆಯುಮಂ (ಧರ್ಮಾಮೃ. ೯-೫೧). [ಬಿಯ + – ಕಾಱ]

**ಬಿಯುಗ$_1$** 'ಬೀಗ$_1$' ನೋ.

**ಬಿಯುಗ$_2$**, ಬಿಯ್ಯುಗ$_2$, ಬೀಗ$_2$, ಬೀಗು$_2$, ಬೀಯುಗ$_2$ (ನಾ). ೧. ಮದುವೆ ಯಿಂದ ಪರಸ್ಪರ ಸಂಬಂಧವನ್ನು ಬೆಳೆಸಿದವನು ; ಅಳಿಯನ ಅಥವಾ ಸೊಸೆಯ ತಂದೆ : ಬಿ[ಪಾಠಾಂ. ಬೀ]ಯುಗನನಟ್ಟುಱಿಂ ತಟ್ಟಯಿಸಿ (ವರ್ಧಪು. ೫-೯೩ ವ) ; ಅಂತಹ ಶ್ರೀಮತಿಯನ್ನು ...ದುವೆಯಾಗಬೇಕಾದರೆ ಬಿಯುಗರಿಗೆ ಸಮನೆನಿಸಿಕೊಳ್ಳುವಷ್ಟು . . . ಸೇರಿಸಬೇಕು (ಕಪಳ. ೨). 'ಬಿಯುಗತನ' ಪರಾ. **ಬಿಯ್ಯುಗ$_2$ :** ೧. ರುದ್ರದೇವ ಮಹಾದೇವ

ರಿಬ್ಬರೂ ಬಿಯ್ಯಗರಯ್ಯಾ ಒಬ್ಬರು ಹೆಣ್ಣಿನವರು ಒಬ್ಬರು ಗಂಡಿನವರು (ಸರ್ವವ. ೨೯-೧೬೯) ; ಬಿ[ಪಾಠಾಂ· ಬೀ]ಯ್ಯಗನಾದ ಜನಕನು ನಿಮಗೆ ಮತ್ತೇನು ಪಾಳೆಯವ ನೀನಿದಿರುಗೊಳ್ಳೆನೆ (ಕೌಶಿರಾ. ೨-೩೩); ಏಚಲದೇವಿ ಬಿಯ್ಯಗನನ್ನು ಸಂತೋಷದಿಂದ ನೋಡುವುದಾಗಿ ಹೇಳಿ ಕಳುಹಿಸಿದಳು (ಸವತಿ. ೬೨). **ಬೀಗ$_2$** : ೧. ನಿನ್ನ ಸತಿ ಸುತರ ಒಡಹುಟ್ಟಿದ ಬಂಧುಗಳು ಸ್ನೇಹಿತರು ಬೀಗರು . . . ಸಕಲರು ಅಳಿದು ಹೋಗುವದು ನೋಡುತ್ತಿದ್ದಿ (ವಚಶಾ. I, ೨೪೯-೨೩); ಬೀಗರುಂಬುವ ದಿನದಿ ಯೋಗಿ ಭಿಕ್ಷಕೆ ಬರಲು ಬೀಗರಿಗೆ ನೀಡಿ ಯೋಗಿಗಿಲ್ಲೆಂದವಗೆ ಕಾಗೆಯು ಜನುಮ (ಸರ್ವಜ್ಞ· ೬೩೨) ; ಜೋಯಿಸರು ಹಾರಿ ಬಂದು ಬೀಗರ ಕಿವಿಯಲ್ಲಿ ಏನೋ ಪಿಸುಮಾತಾಡಿ . . . ಎಂದರು (ಹುಟ್ಟಿಹ. ೦೦). **ಬೀಯ್ಯ$_1$** : ೨. ಭಾವಮೈದುನ : ನರನ ಬೀಯನೆ ಕೇಳು ವಿಜಯವಿಠ್ಠಲ ಇದಕ್ಕೆ ಕರುಣ ಮಾಡುವ ದೇವರ ದೇವನು ನೀನೆ (ಮೋಕ್ಷದೀ. ೮೩-೩). **ಬೀಯಗ್ಗ$_2$** : ೧. ಮಗನೆ ನೀಂ ಬಪ್ಪಾಶಿ ದಿವಸ ದೊಳ್ಕೈದಾಜು ಸೂಳುಂಡಲ್ಲದೆ ನಿಲಲಾಟಿ ಬೀಯ[ಪಾಠಾಂ. ಬಿಯ, ಬಿಯ್ಯ] ಗರ ಮನೆಯೊಳಿದು ಕಂಡೊಡೆ ಮರುಳಾಡುವರದಱಿಂ ಕಿಱಿದಾಗಿ ಯುಣ್ಬುದು (ಧರ್ಮಾಶ. ೯-೨೩ ವ) ; ನೃಪಾಲ ಮದುವೆಯ ಮನೆಗೆ ರಾಯರ ಧಾಳಿ ಬಿದ್ದಿನವಾಯ್ತು ನಡೆ ಸಂತ್ಯಸು ಬೀಯಗರ (ಕುಮಾ್ರಿ· ೦೫-೯೭); ತಾಯೊಂದೆಸೆ ಮಕ್ಕಳೊಂದೆಸೆ ಕೊಟ್ಟಿಹ ಬೀಯಗರೊಂದೆಸೆ ಯಾಗಿ . . . ಹೊಕ್ಕರಾಯಾಸಗೊಂಡು ಹೆಮ್ಮಲೆಯ (ಕಂಪವಿ. ೦೦-೯೭). ೩. = ಬಿಯಗತನ : ಕನಕಪುರದ ಜಯಭೂಭುಜ . . . ನಿಮ್ಮೊಡಗೆ ಬೀಯಗವುನೆ ತಮಗಾದುದರಿಂದೆಮ್ಮನೊಯ್ಯಾರ ವಿಂಗೆ ಕಳುಹಿದನು (ನಾಗಕು. ೩-೪೩); ಹರಿಕುಲಪಾಲಕರು ಶೌರೀಪುರವ ಪರಿಪಾಲಿಪರು ನಮ ಗಲ್ಲಿ ಬೀಯಗವುಂಟು (ಜನಭಾ. ೩-೦೨).

**ಬೀಗರೌತಣ** = ಸಾಮಾನ್ಯವಾಗಿ ಮದುವೆಯ ಮಾರನೆಯ ದಿನ ವರನ ಕಡೆಯವರು ವಧುವಿನ ಕಡೆಯವರಿಗಾಗಿ ಏರ್ಪಡಿಸುವ ಔತಣ : ಬೀಗರೌತಣ ಬಹಳ ವಿಜೃಂಭಣೆಯಿಂದ ನಡೆಯಿತು (ರೂ). **ಬೀಯ ಬಿಜ್ಜರು**=ಮದುವೆಯಿಂದ ಪರಸ್ಪರ ಸಂಬಂಧ ಬೆಳೆಸಿದವರು; ಬೀಗರು : ತಾಯಿ ಮಕ್ಕಳು ಸೊಸೆ ಒಂದೆಯಾದರೆ ಮದುವೆ ಬೀಯಾ ಬಿಜ್ಜರ ಗೋತ್ರಭೇದವಾಕೊ (ವಿಶಾಸು. ೩೯-೦). ಈ ಇದು ಒಂದು ಕೂಡುನುಡಿ. [ದೇ. ‖ ತುಳು. ಬೀಗೆ ; ತೆಲು. ವಿಯ್ಯ]

**ಬಿಯಗತನ**, ಬೀಗತನ, ಬೀಯಗತನ (ನಾ). ಮಕ್ಕಳ ಮದುವೆಯಿಂದ ಪರಸ್ಪರ ಉಂಟಾದ ಸಂಬಂಧ; ನಂಟಸ್ತಿಕೆ : ಪುಣ್ಯವಶದಿಂದಿನ ಕುಲೇಂದ್ರನ ಬಿಯಗತನವಿದು ನುತ್ಯಮೆನಿಪುದಲಾ (ರಾಮಾಸಂ. ೦-೯-೯೭). **ಬೀಗತನ** : ಬೀಗತನ ಮಾಡಿದ ಮೇಲೆ ಅವನ ಪರಿಚಯವಿಲ್ಲದ ಭಾಗವೇ ಇರಲಿಲ್ಲ ಆ ವಿಜಯನಗರದಲ್ಲಿ (ಹೇಮಕೂ· ೬೯); ಇಲ್ಲಿಯ ಮುಸ್ಲಿಂರು ಪಾಕಿಸ್ತಾನಿ ಮುಸಲ್ಮಾನರೊಡನೆ ಬೀಗತನ ಬೆಳೆಸುವುದು ಪರರಾಷ್ಟ್ರ ದೊಡನೆ ಸಂಬಂಧಮಾಡಿದಂತೆ (ಹುಚ್ಚಕೃ. ೦೬೨). **ಬೀಯಗತನ** : ಬೀಯಗ ತನದೆ ಆಳವಾಡಿದಿರಿ ಮತ್ಪಿತನಲಗರ್ಗೀಲಿಂದೆ ಭಾಳಾಕ್ಷ ತಪಗೆಟ್ಟನಱಿಯ (ಮೋಹತ. ೩೫-೯೩) ; ಜನಕರ ಕಾಲದೊಳ್ನಡೆದ ಬೀಯಗತನ ತನುಜ ರೊಳ್ಕೆಡಬಾರದು (ಭರತ. ೩೬-೯೪). [ಬಿಯಗ$_1$ + — ತನ]

**ಬಿಯದ** ' ಬ್ಯಾದ ' ನೋ.

**ಬಿಯದವೆಣ್** (ನಾ). ಬೇಡರ ಹೆಣ್ಣು ; ಶಬರಿ : ಬಿಂಕದ ಬೆಡಂಗಿನ ಬಿಯದವೆಣ್ಗಳೊಡನೆ ಸಂಭ್ರಮಾಡಂಬರಂ ಮಿಗೆ ಬಂದ ಗಿರಿತನೂಜೆ ವೆರಸು ಕಿರಾತಮಹೇಶ್ವರಂ . . . ನಡೆತಂದರ್ (ಕವಿಕಂ. ೩-೨೮ ವ).

[ಬಿಯದ ( < ಬ್ಯಾದ) + ಪೆಣ್]

**ಬಿಯದಿ$_1$** (ನಾ). = ಬಿಯದವೆಣ್ : ಬೆಳತಿಗೆಗಣ್ಣ ಬಲ್ಮೊಲೆಯ ತೊಳಪ ಗಲ್ಲದ ತೋರ ಪೊಜವಾಜ ಬಿಯದಿಯರೆಳಸಿ ನೋಡಿದರು ಭೂವರನ (ಶ್ರೀಪಾಂ. ೬-೩೦). [ಬಿಯದ ( < ಬ್ಯಾದ) + — ಇ$_2$]

**ಬಿಯದಿ$_2$** ' ಬ್ಯಾದಿ ' ನೋ.

**ಬಿಯಸ** (ನಾ). ವ್ಯಾಸಮಹರ್ಷಿ : "ಬಿಯಸ — ವ್ಯಾಸ = ಒಬ್ಬ ಋಷಿ " (ಶಬ್ದಕೋ. ೩೦) ; ಬಿಯಸಗೊಲಿದು ಸನತ್ಕುಮಾರನು ನಯದ ಗಸ್ತ್ಯೇಶಾದಿಲಿಂಗೋದಯವನಾ ಮಹಿಮೆಯನೊರೆಯಲು (ಕಾವೇಮ. ೯೬ ಪಲ್ಲವಿ). [< ಸಂ. ವ್ಯಾಸ]

**ಬಿಯಸಂಗ** (ನಾ). ಅಭ್ಯಾಸ ; ವ್ಯಾಸಂಗ : ವ್ಯಾಸಂಗ _ ಬಿಯಸಂಗ (ಕವಿಮ. ೨೩೯ ಪ್ರಯೋ). [< ಸಂ. ವ್ಯಾಸಂಗ]

**ಬಿಯಳ** ' ಬ್ಯಾಲ ' ನೋ.

**ಬಿಯಳಗಾವುಂಡ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ ಶಾನ್ತಿ ಭಟ್ಟಾರರುಂ ಉತ್ತಮರಾಸಿಭಟ್ಟಾರರುಂ ಬಿಯಳಗಾವುಣ್ಡನುಂ (ಎಕ. XI, ಹೊಳಲ್ಕೆ. ೩೦-೦೦ ; 964 ).

[ಬಿಯಳ ( < ಬ್ಯಾಲ) + ಗಾವುಂಡ ( < ಗಾಮುಂಡ)]

**ಬಿಯಳಚೋರ** (ನಾ). ಒಬ್ಬಾತನ ಹೆಸರು : ಬಿಯಳಚೋರ ತನ × ತುಱುಗೊಳೊಳ್ . . . ಸತ್ತ (ಎಕ. IX (ಶ), ಕಾನಕಾ. ೦೩೦-೬ ; ೪೦೦). [ಬಿಯಳ (<ಬ್ಯಾಲ) + ಚೋರ]

**ಬಿಯಳಮ್ಮ** (ನಾ). ಒಬ್ಬಾತನ ಹೆಸರು : ಕಿಱುವುಣಾಸೆಯ ಬಿಯಳಮ್ಮ ನ×ಗ ಪಡೆವಳ್ಳ ಅರಿಗನು ಎಱೆಯಬ್ಬೆಯುಂ . . . ಅಬ್ಯನ್ತರಸಿದ್ಧಿ ಪಡೆದರ್ (ಎಕ. VIII, ಸೊರಬ. ೩೦೦-೩ ; 958).

[ಬಿಯಳ (<ಬ್ಯಾಲ) + ಅಮ್ಮ$_1$]

**ಬಿಯಳಯ್ಯ** (ನಾ). ಒಬ್ಬಾತನ ಹೆಸರು : ಬಿಯಳಯ್ಯ ಮಗ ಚಟ್ಟಯ್ಯನಳಿಯ ಕನ್ನಯ್ಯ (ಎಕ. VIII, ಸೊರಬ. ೪೩೩-೬ ; 972).

[ಬಿಯಳ (<ಬ್ಯಾಲ) + ಅಯ್ಯ$_1$]

**ಬಿಯ್ಯ** ' ಬಿಯ ' ನೋ.

**ಬಿಯ್ಯಂಗೆಯ್** ' ಬಿಯಂಗೆಯ್ ' ನೋ.

**ಬಿಯ್ಯಗ$_1$** ' ಬೀಗ$_1$ ' ನೋ.

**ಬಿಯ್ಯಗ$_2$** ' ಬಿಯಗ$_2$ ' ನೋ.

**ಬಿಯ್ಯದ** ' ಬ್ಯಾದ ' ನೋ.

**ಬಿರಂಜಿ** (ನಾ). (ಅಕ್ಕಿಯಿಂದ ತಯಾರಿಸುವ) ಒಂದು ಬಗೆಯ ತಿನಿಸು : ಅಮ್ಮ ಬಿರಂಜೀ ಮಾಡತೀನಿ ಅಂತಿದ್ದಳು, ಕಳಿಸಿಕೊಡತೀನಿ. ಬಿರಂಜಿ ಅಂದರೇನು ಮತ್ತ ? ಅನ್ನ . . . ಇದು ಬರಿ ಬೆಣ್ಣಿಗ ಬೇಯುತೈತಿ (ಪಾಟಿಂ. ೩೭). [←ಪಾರ. ಬಿರಿಂಜ್./ತೆಲು. ಬಿರಂಜಿ]

**ಬಿರಟು** ' ಬಿರಡೆ$_2$ ' ನೋ.

**ಬಿರಟೆ** ' ಬಿರಡೆ$_1$ ' ನೋ.

**ಬಿರಡಿ** ' ಬಿರಡೆ$_2$ ' ನೋ.

**ಬಿರಡೆ$_1$**, ಬಿರಟೆ, ಬಿರುಡೆ (ನಾ). ೧. (ಸೀಸೆ, ಮೊದಲಾದುವು ಗಳಿಗೆ ಅಳವಡಿಸುವ) ಮುಚ್ಚಳ ; ತಿರುಪು ; ಬೂಚು (ಉಕ) : ಪದ್ಮಜಂ ಪದೆದಿಟ್ಟ ಪವಳದಂಕುರದ ಬಿರಡೆಗಳೊ ಲಾವಣ್ಯದ ಶಲಾಕೆಗಳ ತೆಱದ ಚರಣಾಂಗುಲಿಗಳೊಪ್ಪಿದುವವರೋಘದಿಂ ಶ್ರೀ ಪಾರ್ವತೀದೇವಿಯ (ಪಂಪಾಪು. ೬-೦೦) ; ತೌಟಿಗೆಯ ಮೇಲೆ ನೀರು ತುಂಬಿದ ಗಾಜು ಬಿರಡೆಯ ಸೀಸೆಯೂ ಬೆಂಕಿಪೊಟ್ಟಣವೂ . . . ಇದ್ದುವು (ಕೃಷಮ. ೨೬೩). ೨. ವೀಣೆ, ತಂಬೂರಿಗಳ ತಂತಿಯನ್ನು ಬಿಗಿಗೊಳಿಸಲು ಅಳವಡಿಸಿರುವ ಸಾಧನ, — ಕೀಲು : ಬಿರಡೆಯನ್ನು ನುಲಿದು ಎಳೆತವನ್ನು ಹೆಚ್ಚಿಸಿದರೆ ಸ್ಥಾಯಿಯು ಏರುವುದು (ಕಾಶಿಪ. ೦೪೨) ; ಈ ವ್ಯಾಳೀತಲೆಗೆ ನಾಲ್ಕು ಬಿರಡೆಗಳಿವೆ (ಸಂಗೀಶಂ. ೦೦೨). ೩. ಅಂಗಿ ಮೊದಲಾದ ಉಡುಪಿನ

ಗುಂಡಿ : ಕೋಟಿನ ಬಿರಡೆಗಳನ್ನು ಬಿಚ್ಚಿ, ಬೆವರಿನಿಂದ ಒಣಗಿ ಹೋದ ಶರ್ಟ್ ಒಣಗುವುದಕ್ಕೆ ಅವಕಾಶ ಮಾಡಿಕೊಟ್ಟೆ (ಹೆಂಡುಟಿ. ೬೩). **ಬಿರಟೆ:** ೧. ತೊಗಟೆಯಿಂದ ಬಿರಟೆ ತಯಾರಾಗುತ್ತದೆ (ಕಪಿಕೋ. I. ೬೬೦) ; ಅದರ ಬಾಯಿಗೆ ಬಿರಟೆಯಂತೆ ಇಡಬೇಕಾದ ಹತ್ತಿ ಎಲ್ಲವನ್ನೂ ಶುದ್ಧ ಪಡಿಸಿಕೊ (ಹೂಸಕ್ಟೆ. ೭) ; ಅಷ್ಟು ವಾಸನೆ ಸಹಿಸಲಾಗದಿದ್ದರೆ ಮೂಗಿಗೆ ಬಿರಟೆ ಹಾಕಿಕೊಳ್ಳಿ (ಹಸುಹೊ. ೦೬). **ಬಿರುಡೆ :** ೧. ಜಂತದಲಿ ಹೊಂಗರಡಿಗೆಗಡೆದು ಕರ್ವುಣಿಯು ಬಿರುಡೆಯು ಬಿಗಿದಿಟ್ಟನೆಂಬಂತೆ ಬಲ್ಮೊಲೆ ಯೆರಡರ ಮೊಗಪು ತೋಱಿದುವು (ಪೋಹತ. ೨೩-೨೩) ; ಕಲಧೌತಂಗಳ ಭರಣಿಗಳ ಬಾಯ್ಗರಿಸಿದಿಂದ್ರನೀಲದ ಮಣಿಯ ಬಿರುಡೆಗಳೊ ಪೇಳೆನಲ್ ಸ್ತನಚೂಚುಕದ ಕಪ್ಪು ಕರಮೊಪ್ಪಲೊಪ್ಪಿದಳ್ (ಜಿಂಪು. ೪-೦೪). ೨. ನಖಿಗಳಿಂ ಬಿರುಡೆಯಂ ಪಿಡಿದೌಂಕಿಯೊಡರ್ಚೆ ಮೇಳವಮಂ (ಚಿಕವ. ೬-೨೨೨). ೩. ಕತ್ತರಿಸಿತು ಬಾಸು ಬಿರುಡೆಯ ಶಕ್ತಿಗಳುತ್ತರಿಸಲು ಜೋಡು ಜರಿದು ಬಿತ್ತರಿಸಿದುವಂಬುಗಳು ಮೆಯ್ಯೊಳು ಬಿಸುನೆತ್ತರ ಬಸವಂತಗೊಳಿಸಿ (ಪೋಹತ. ೩೪-೫೨) ; ಚಿನ್ನದ ಬಿರುಡೆಯ ನೇಜೆಯದಧಟರ ಸನ್ನಾಹದೆ ಬಹವಾರೆ (ಕೆಂಪವ. ೨೩-೫೦).

[ದೇ.॥ ತಮಿ. ಪಿರಟ್ಟೈ ; ತೆಲು. ಬಿರಡ, ಬಿರಡಾ]

**ಬಿರಡೆ₂**, ಬಿರಟು, ಬಿರಡಿ (ನಾ). ಒಂದು ಬಗೆಯ ಸಸ್ಯ : ಹೆರಳೆ ಬಿರಡೆ ಬೇವು ಹಾಲೆ ತಾಳೆ . . . ಮೊದಲಾದ ಗಗನಮಂ ತುಡುಕುವ ವೃಕ್ಷಂಗಳ್ (ಸೌಗಂಂ. ೫೪-೩). **ಬಿರಟು :** ಬಿರಟು, ಸೀಸೆಬಿರಟುಮರ (ವೃ ಶಿಗ. ೫೪-೦೦೬೬) ; ಬಿರಟು, ಪಾದರು, ನೆಲವೆಂಬು (ವವ್ನುವು. ೨೩೪). **ಬಿರಡಿ :** ಶಿಸ್ಸು, ಬಿರಡಿ, ಶಿಪ್ಪಭಾಗೆ, ಬಿಂಡಿ, ಇರಗುಂಡಿಮಾವು (ವೃ ಶಿಗ. ೨೪-೫೫೨).

[?]

**ಬಿರದ** (ನಾ.) ಒಂದು ವಂಶದ ಹೆಸರು : ಸನ್ದಿಗಾಲಾ ಪುಟ್ಟರುಂ ಬಳ್ಳ ವರುಂ ಪಸುಂಗಾಯ ಕಟುಬ್ಬಾತರು ಬಿರದರುಂ (ಎಕ. XVI, ಗುಬ್ಬಿ. ೬೫-೬೯ ; 733).

[?]

**ಬಿರಬಿರ** (ನಾ). ಒಂದು ಅನುಕರಣ ಶಬ್ದ : 'ಬಿರಬಿರನೆ' ಪರಾ.

**ಬಿರಬಿರನೆ** (ಅ). ವೇಗವಾಗಿ ; ಶೀಘ್ರವಾಗಿ : ಶರಧಿಯೊಳ್ ಬಿರಬಿರನೆ ಮಂದರ ತಿರುಗಲಾಗ ಧಳಂಧಳಧ್ವನಿ ಮೊರೆಯಲು (ಅಹಂಂಚ. ೧-೨೨-೪) ; ಹೋಗಬೇಕು ಅಂತ ಎರಡು ದಿನ ಹೊರಟರು. ನಾನೇ ತಡೆದೆ . . . ಎಂದು ಬಿರಬಿರನೆ ಹೇಳಿದಳು (ಮಹೋನಂ. ೩೦). [ಬಿರಬಿರ + — ಅನೆ₁]

**ಬಿರಯ**, ಬಿರಹ (ನಾ). ಅಗಲಿಕೆ ; ವಿರಹ : "ಬಿರಯಮೆನೆ ವಿರಹಮಕ್ಕುಂ" (ಕಶರ. ೧೨೬). 'ಬಿರಯಿ' ಪರಾ. **ಬಿರಹ :** "ಬಿರಹಂ ಕೂಟದಗಲ್ಕೆಯಲ್ಲಿ" (ಕರ್ಣಾಶಿ. ೬೬) ; ಬಿರಹದ ಬೆಂಕೆಯಿಂ ಬೆಂದು ಕಡುಹರವಸಂಬೋದರಮರಿಯರ್ (ಕಬಿಪು. ೦೪-೪೩).

[<ಸಂ. ವಿರಹ]

**ಬಿರಯಿ** (ನಾ). ಅಗಲಿಕೆಯನ್ನು ಹೊಂದಿದವನು ; ವಿಯೋಗ ಹೊಂದಿದವನು ; ವಿರಹಿ : "ವಿಯೋಗಿಯೊಳ್ ಬಿರಯಿಯೆನಲ್" (ಕರ್ಣಾಶಿ. ೯೩) ; ನಂದನಂಗಳೊಳ್ ಸುೞಿವ ಬಿರಯಿಯಿಂ ಕಂಪು ಕಣ್ಮಲಿಯೆ ಪೂತ ಸುರಯಿಯಿಂ (ಶಂಶಭಾ. ೩-೨೨) ; ಮದನಾನಳನ ಕರ್ವೊಗೆಯಿಂದೆನಿಸಿ ಬಿರಯಿಗಳ ಕಣ್ಗಳೊಳು ಕಣ್ಬನಿಯನೊದವಿಸೆಯುಂ (ವರ್ಧಪು. ೬-೨೪ ವ) ; ಮಲ್ಲಿಗೆಗಳೇಂ ಬಿರಿದುವೋ ಬಿರಯಿಯೆರ್ದೆ ಬಿರಿವ ಮಾಳ್ಕೆಯಿಂದಾ ಬಸಂತದ ಮೊದಲೊಳು (ಜಿಂಪು. ೪೫-೦೬).

[<ಸಂ. ವಿರಹಿನ್]

**ಬಿರಯಿಸು** (ಕ್ರಿ). ಅಗಲಿಕೆಯನ್ನು ಅನುಭವಿಸು ; ವಿರಹವನ್ನು ಹೊಂದು : ಬಿರಯಿಸಿ ಬೇಟದೊಳ್ ಬಿರಿವ ನಲ್ಲರಗಲ್ದು ಕನಲ್ದೊನಲ್ದು ನಲ್ಲರ ದೆಸೆಯಿಂದಮಟ್ಟಿವರೆ (ಶಂಶಭಾ. ೪-೦೨೦) ; ಕಮಳಪತ್ರಚಯ ಮೆನಿತನಿತುಂ ಕೊರಗುವಿನಂ ಬಿಸುಸುಯ್ದೇಂ ಬಿರಯಿಸಿದುವೊ ಚಕ್ರವಾಕ ಮಿಥುನಮುವಿರುಳೊಳ್ (ಕಾವ್ಯಾವ. ೮೫೪) ; ಬಿರ[ಪಾಠಾಂ. ರಿ]ಯಿಸಿ ಬೇಂಟದೊಳ್ ಮನಮದಾಟಿಸೆಯುಂ ಮನವಿಾಯದಿರ್ದುಮಂತಿರದೆ ಬೞಿಕ್ಕವಾಖಿಳನ ಅಲ್ಲೆಗೆ ತಾನೊಳಗಾದಳ್ (ಪಾರ್ಶ್ವಪು. ೩-೧೦೦). [ಬಿರಯ + — ಇಸು₃]

**ಬಿರವ** (ನಾ). (?) : ಭಂಡಾರಿಯ ಟಾವಿನ ಬಿರವದಲು ಭತ ಮೂ ೧೦ (ಸೌಇಂ. ೦೪೩೦, ಮಂಗಳೂರು. ೩೪೪-೫೦ ; 1353). [?]

**ಬಿರಸ** (ನಾ). ರಸಹೀನತೆ ; ಅಸುಖ : ಖರತೆ ಬಾಸಿಂಗ ಕಟ್ಟಿ ಸರಸದಲಿ ಮೆರೆಸಲು ಹರುಷದ ಸೊಬಗು ತಿಳಿದಡೆ ಅದು ತಾನು ಬಿರಸದ ದಡ್ಡಿಗೆ ಮರಳುವುದು (ಉದ್ಭಟೇಶ್ವ. ೭-೪೦-೨೦). [< ಸಂ. ವಿರಸ]

**ಬಿರಹ** 'ಬಿರಯ' ನೋ.

**ಬಿರಾಡ** 'ಬೀಡಾರ' ನೋ.

**ಬಿರಾಡಿಸು**, ವಿರಾಡಿಸು (ಕ್ರಿ). (ಭೂಮಿಯ ಮೇಲೆ) ಸುಂಕ ಹಾಕು ; ತೆರಿಗೆ ಹಾಕು : ಗದೆ ಸಹವಾಗಿ ಬಿರಾಡಿಸಿ ಗದೆಯ ಮೇಲೆ (ಸೌಇಂ. ೦೪೩೪, ಮಂಗಳೂರು. ೦೫೬-೦೪ ; 1419). **ವಿರಾಡಿಸು :** ನಿಮ್ಮ ದಸವಂದದ ಗದೆ ಸಹವಾಗಿ ವಿರಾಡಿಸಿ ಗದೆಯ ಮೇಲೆ ರೊಕ ಭತ್ತವನೂ ವರಿಯನಿಕ ಎತ್ತಿ ಕೆಱೆಯನು ಕಟಿಸುವೆವು (ಎಕ. X, ಮುಳಬಾ. ೦೬೨-೦೪ ; 1496).

[ಬಿರಾಡ (< ಬೀಡಾರ) + — ಇಸು₃]

**ಬಿರಾಡು** 'ಬೀಡಾರ' ನೋ.

**ಬಿರಾದರಿ** (ನಾ). ಸೈನ್ಯದಲ್ಲಿ ಒಂದು ಭಾಗ ; ಒಂದು ನಿರ್ದಿಷ್ಟವಾದ ಸಂಖ್ಯೆಯಿರುವ ಕುದುರೆಯ ಸೇನೆ ; P "ಬಿರಾದರಿ — ಕುದುರೆ ಸೇನೆಯ ಒಂದು ಭಾಗ, ಸವಾರ ಕಚೇರಿ ಇಲಾಖೆಯಲ್ಲಿ ಬಿರಾದರಿಗೆ ಇರಬೇಕಾದ ಕುದುರೆ ಸಂಖ್ಯೆಯನ್ನು ಗೊತ್ತುಮಾಡಿದಾರೆ" (ಜಕ್ಕಪಾ. ಅನುಬಂಧ. ೨) : ಖಾಸಾ ಬಿರಾದರಿ . . . ಖಾಸಾಬಾರು, ಕಂದಾಚಾರ ವಗ್ಯೆರೆ ಜನರಿಗೆ ಸೇರಿಸಿಕೊಂಡು ನಿಂತರು (ಜಕ್ಕಪಾ. ೬೩) ; ಪೇಶ್ವೆ ಶ್ರೀಮಂತ ಬಾಜೀರಾಯರನ್ನು ಕೈಸೆರೆ ಹಿಡಿದ ಬಿರಾದರಿಯಲ್ಲಿ ನಾನು ಸೇರಿದ್ದೆ (ಮುಸುಗ. ೦೬೬).

[←ಪಾರ. ಹಿಂ. ಮರಾ. ಬಿರಾದರೀ = ಬಂಧುವರ್ಗ ; ಬಳಗ]

**ಬಿರಿ₁** (ಕ್ರಿ). ಬಿರಿದ (ಭೂತಕೃ), ಬಿರಿದು (ಭೂತನ್ಯೂ). ೧. ಒಡೆ ; ಬಿರುಕುಂಟಾಗು ; ಹಿಸಿದು ಹೋಗು : "ಬಿರಿ — ಸ್ಫುಟನೇ" (ಕವುಧಾ) ; ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್ ಬಿರಿದತ್ತು (ಆದಿಪು. ೦೩-೩೬) ; ಒತ್ತಂಬದಿಂ ಬರ್ಪ ಕೆಮ್ಮಿಂ ಬಿರಿಯಲ್ಬೆಟ್ಟಂಗಳ್ (ಕಾದಂಪೂ. ೦೬೩) ; ಬೆಳೆದು ಬೀಗಿ ತಮ್ಮಿಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿಪೊನಲ ಪರಿನೀರಾಗೆ (ಶಂಶಶಂ. ೦೦೬-೦೩). ೨. (ಹೂವು) ಅರಳು ; ವಿಕಾಸ ವಾಗು : ಬಿರಿದೊಂದು ಮುಗುಳ ಕಂಪಿನೊಳೆ ಮೊಗಂಗಿಡುವುವು ತುಂಬಿಗಳ್ (ಶಂಶಭಾ. ೦-೫೬) ; ಅಂಗಜಾತನ ಪುಷ್ಪಶರ ಬಿರಿದಪುವೆಂದು ಹೊಂಗಟ್ಟುಗಳ ಬಿಗಿದಂತೆ . . . ಉಂಗುರಗಳನಿಕ್ಕಿದರು (ಪೋಹತ. ೨೩-೪೨). 'ನಸುವಿರಿ' ಪರಾ.

**ಬಿಬ್ಬಿರಿ ಬಿರಿ**, ಬಿಬ್ಬರಂಬಿರಿ, ಬಿಬ್ಬರಬಿರಿ (ದ್ವಿರುಕ್ತಿ) : ಕರಿ ಮಕರಂಗಳ ಕಯ್ಯೊಱೆನೊಳ್ ಬಿಬ್ಬರಿ[ಪಾಠಾಂ. ಬಿಬ್ಬರಿ, ಬಿಬ್ಬಿರಿ]ಬಿಂದೊಡೆದ ಮುಕ್ತಾಪುಟೋದರಂಗಳೊಳಗಣಿಂದಮುಚ್ಚಳಿಸಿದ ತಾರಾತರಳಮುಕ್ತಾ ಫಳಂಗಳುಮಂ (ಆದಿಪು. ೦೨-೬೯ ವ) ; ಬಿಸಿಲೊಳೆ ಬಿಬ್ಬರಂ ಬಿರಿವ ಮುಸ್ತಿಕ ಶುಕ್ತಿಕೆಯಿಂದೆ ಮುತ್ತು ಮುಂದೆಸೆ ಕವಿತಂಬೊಡಾಂತಿರುತೆ . . . ಪುಷ್ಕರಮನೆತ್ತಿದುದಂದು ನಭಕ್ಕದೊಂದಿಭಂ (ಚಂದ್ರ ಪು. ೯-೬೩) ; ಬಡಿಗೊಳೆ ಬಿದು ಬಿಬ್ಬರ ಬಿರಿದೊಡನುಗೆ ಪೊಸಮುತ್ತು ಕೋಡನೂಱೆ ಮದೇಭಂ ಕೆಡೆದುವು (ಶಂಶಭಾ. ೦೦-೦೦೩) ; ಉರುಮುದದಿಂದಂ ಬಿಬ್ಬರ ಬಿರಿವಂತಿರೆ ಬಿರಿದುವಂದು ಮಲ್ಲಿಗೆ ವನದೊಳ್ (ನೇಮಿಪು. ೦೩-೦೪). **ಬಿಬ್ಬಿರಿವಲ್** = ಸಂದು ಬಿಟ್ಟಿರುವ ಹಲ್ಲು : ಪಱಿದಲೆ ಕುಱಿನೊಸಲಱಿಗಣ್ . . .

ಬಿಬ್ಬಿರಿ[ಶಾಕಾಂ.ಬಿ]ವಲ್ ಕುಸಿಗೊರಲ್ (ಚುಕೋಶ. ೩-೩೮).

[ದೇ.॥ ತಮಿ. ವಿರಿ; ಮಲ. ತೆಲು. ವಿರಿಯು; ತುಳು. ಬಿರಿ, ಬಿರಿಯು]

**ಬಿರಿ$_2$** (ನಾ). ೧. ಬಿರುಕು ; ಸೀಳು : ಮಣ್ಣಿನ ಬಿರಿ[ಶಾಕಾಂ.ರ]ಯು ತೆಱಂತೆ ಬಲ್ಲತನವಿಲ್ಲದವನ ಅನುಭಾವಕೂಟ ಕಲ್ಲಿನ ಹೋಟೆಯಂತೆ (ಗುತ್ತಮಂ. ೪. ೨೦೬-೩೬). 'ಕೋಟೆವಿರಿ', 'ಬಿರಿವಡು' ಪರಾ. ೨. ತಡೆ; ನಿಯಂತ್ರಣ : ತಿಮ್ಮಪ್ಪಯ್ಯ ಒಮ್ಮೆ ಬಾಯಿ ತೆರೆದರೆಂದರೆ ಅದಕ್ಕೆ ಬಿರಿಯೇ ಇಲ್ಲ (ಸರಸ. ೪). ೩. ಕಠಿಣ ; ಕಷ್ಟ ; ಬಿಗಿ : ನಿಮಗೆ ಅದೇನು ಬಿರಿಯಲ್ಲ, ಆದರೆ ಅದನ್ನು ಒಪ್ಪುವುದೇ ಬಿರಿ (ಅರಗಿ. ೧೦೦) ; ಒಬ್ಬರ ಮನಸ ಸಂಬಾಳಸೋದಂದರ ಭಾಳ ಬಿರೀ ಐತಿ (ಹಸಗ. ೦೬೩): ಸಂಸಾರವನ್ನು ಸರಿಯಾಗಿ ಮಾಡಿಕೊಂಡು ಹೋಗುವುದು ಅವನಿಗೆ ಬಿರಿಯಾಯಿತು (ಕಸಿಂಹಾ. ೧೦). ೪. ಒಂದು ಬಗೆಯ ಆಯುಧ : ಹಾರೆ ಬಿರಿ ಕೊಱಡು ಪೆಟಲ ತಿರುಗಣೆ ಬೀಸುವಲೆ ತಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಪ್ತಕ. ೬-೨೮). ೫. ಚಲಿಸುತ್ತಿರುವ ಯಂತ್ರವನ್ನು ನಿಲ್ಲಿಸಲು ಅಥವಾ ಅದರ ವೇಗವನ್ನು ಕಡಮೆ ಮಾಡಿ ಮುಂದೆ ಬೇಕಾಗಿರುವಷ್ಟು ಹೊತ್ತು ನಿಶ್ಚಲವಾಗಿಟ್ಟಿರಲು ಬಳಸುವ ವೇಗನಿರೋಧಕಸಾಧನ ; ಬ್ರೇಕು : "ಚಕ್ರದ ಚಲನೆಯನ್ನು ತಡೆಯಲು ಉಪಯೋಗಿಸುವ ಸಲಕರಣೆ ; ಬಿರಿ ; ತಡೆ" (Brake. ೨೦೪೩) ; ರೈಲುಬಂಡಿಗಳಲ್ಲಿನ ಪ್ರತಿಚಕ್ರಕ್ಕೂ ಬಿರಿ(brake)ಯನ್ನು ಒತ್ತಲು ಇವನ್ನೇ ಉಪಯೋಗಿಸುವರು (ಬಾಲಶ್ರ. I. ೦೬೩): ಕೆಲವು ಬಂಡಿಗಳಲ್ಲಿ ನಿರ್ವಾತ ಬಿರಿಗಳ ಬದಲಿಗೆ ವಾಯುಸಂಕೋಚನೆಯ ಬಿರಿಗಳಿವೆ (ವಿಜ್ಞಾವಿ. ೫೦). ೬. ಅಗಳಿ ; ಚಿಲಕ : ಮನೆಬಾಗಿಲು ಮುಚ್ಚಿ ಬಿರಿ ಕಟ್ಟಿಬಿಟ್ಟು ಊರು ಮುಂದಕ್ಕೆ ಹೊರಟು ಹೋದನು (ಕಥಾಮು. IV. ೩೨). [ < ಬಿರಿ$_1$ ]

**ಬಿರಿ$_3$** 'ಬಿಱು$_2$' ನೋ.

**ಬಿರಿಕಂಡ** (ನಾ). ಸೀಳಿಹೋದ ಮಾಂಸ : ನೇರ್ವಲ್ಲಿ ಕನ್ನೆತ್ತರುಂ ಬಿರಿಕಂಡಂಗಳೆ ಬೀಟಿಲ್ (ಹಂಪಭಾ. ೯-೬೩). [ ಬಿರಿ$_1$ + ಕಂಡ$_1$ ]

**ಬಿರಿಕೆ** 'ಬಿರಿಕೆ$_1$' ನೋ.

**ಬಿರಿಕು**. ಬಿರುಕು (ನಾ). ೧. ಒಡಕು ; ಸೀಳು : ಪುದಿದ ತನಿವಣ್ಣ ಬಿರಿಕಿಂದುದಿರ್ದೆತ್ತಂ ರಾಸಿಯಾದ ಬಿಟ್ಟುಗಳಿಂ (ಕಬ್ಬಿಕಾ. ೧೦೪). **ಬಿರುಕು** : ೧. ರಸದಾಳಿಂಬದ ಪಣ್ಣ ಬತ್ತು ಬಿರುಕಿಂ ತೋರ್ಪಂತೆ (ಸೂಕ್ತಿಸು. ೧೦ ೦೦೩) ; ಹೋಳಾದ ಕವಚವ ಹೊಲಿಸಿದರು ಬಾಹುರಕೆ ಸವಗದ ಬಿರುಕ ಬೆಸಸಿದರು (ಕುವ್ಯಾಭೀ. ೫-೩೬). ೨. (ಆಲಂ) ವೈಮನಸ್ಯ ; ಮಾನಸಿಕ ಒಡಕು : ಪಂತಕುಟುಂಬದಲ್ಲಿ ಮೂಡಿದ ಬಿರುಕು, ಈ ಒಂದು ಸಣ್ಣ ಮಾತಿನಿಂದಾಗಿ ಊರು ತುಂಬ ಹರಡುವುದು ಬೇಡ (ದೀಶಹ. II. ೪).

ಬಿರುಕು ಬಿಡು = ೧. ಸೀಳಿಹೋಗು : ನೆಲ ಕಿತ್ತು ಹೋಗಿದೆ, ಗೋಡೆಗಳು ಬಿರುಕು ಬಿಟ್ಟಿವೆ (ರಂಗಕ. ೧೦೦). ೨. (ಆಲಂ) ವೈಮನಸ್ಯ ಬರು : ಒಡಕುಂಟಾಗು : ತಪ್ಪುತಿಳುವಳಿಕೆಯಿಂದ ಆಪ್ತಸ್ನೇಹಿತರಿಬ್ಬರ ವಿಶ್ವಾಸದಲ್ಲಿ ಬಿರುಕುಬಿಟ್ಟಿತು (ರೂಢಿ). [< ಬಿರಿ$_1$./ತುಳು. ಬಿರ್ಕ]

**ಬಿರಿಕುಂಟೆ** (ನಾ). ಬಂಡಿಯ ಓಟವನ್ನು ನಿಯಂತ್ರಣ ಮಾಡುವ ಸಾಧನ ; ಗಾಡಿಯ ಓಟವನ್ನು ನಿಯಂತ್ರಿಸುವ ತಡೆಮರ : ಇಳುಕಲಲಿ ಬಿರಿಕುಂಟೆಯೊತ್ತಿ ಮುಲುಕಿತು ಕುಲುಕಿ . . . ಮುರುಕು ಬಂಡಿ (ತಂಡವ. ೨೯-೧೦). [ ಬಿರಿ$_2$ + ಕುಂಟೆ$_4$ ]

**ಬಿರಿಗಲ್ಲು** 'ಬಿಱುಗಲ್' ನೋ.

**ಬಿರಿಗಳಿಕೆ** (ನಾ). ಅರಳುತ್ತಿರುವ ಮೊಗ್ಗು : ಕುರುವಕದಂಕುರಮನದಱ ಬಿರಿಗಳಿಕೆಯುಮಂ . . . ತಾವರೆಯೆಲೆವಟ್ಟಲ್ಗಳೊಳಮೊಟ್ಟಿ ಕಟ್ಟಿ (ಲೀಲಾವ. ೦೩-೩೬ ವ). [ಬಿರಿ$_1$ + ಕಳಿಕೆ$_1$ (=ಕಲಿಕೆ$_2$)]

**ಬಿರಿನನೆ** (ನಾ). ಅರಳುತ್ತಿರುವ ಮೊಗ್ಗು : ಬಿರಿನನೆ ನಾರು ಬೀರದೇ ? (ಗೀಪಂ. ೨೮-೩೯). [ಬಿರಿ$_1$ + ನನೆ$_3$]

**ಬಿರಿಬಿರಿ** (ನಾ). ಒಂದು ಅನುಕರಣಶಬ್ದ : ದೂತರು ಬಿರಿಬಿರಿ ನೋಡುತ ಭರದೊಳು ಚಾಪದ ಸರಳಿನೊಳೆಸೆಯುತ ಹರಣವ ಕಳೆಯುತಲಿ (ಹಮಕ. ೦೬); ಆ ತರುಣಿ ಬಿರಿಬಿರಿ ನೋಡುತ್ತಲೇ ಇದ್ದಳು (ಹಿರೋಕ. ೦೬೬) ; ಭುವನದ ಭಾಗ್ಯವು ಬಿರಿಬಿರಿ ಬಿರಿದಾಗ ಕವಿ ರಚಿಪನು ತನ್ನ ಕೃತಿಯ (ಇಂಕಾಶ. ೬೬-೦೬).

**ಬಿರಿಮುಗುಳ್**, ಬಿರಿಮುಗುಳು (ನಾ). ಅರಳುತ್ತಿರುವ ಮೊಗ್ಗು: ತಳಿರ ನಿಱಿದಳಿರ ಮುಗುಳ ಬಿರಿಮುಗುಳ ಮಿಡಿಯ ಕಿಱುಮಿಡಿಯ ಬಲ್ಮಿಡಿಗಳೊಳೆಱಗಿ (ಹಂಶಭಾ. ೫-೫ ವ) ; ಇರವಂತಿಯೊಳ್ ಮೆಱೆವ ಬಿರಿಮುಗುಳ್ಗಳಂ ಕೊಂಡು (ಬಸರ. ೩-೨೨) ; ಸುರಯಿಯ ಬಿರಿಮುಗುಳು ಮನದಱ ಪೂವುಮಂ . . . ತಾವರೆಯೆಲೆವಟ್ಟಲ್ಗಳೊಳಮೊಟ್ಟಿ ಕಟ್ಟಿ (ಲೀಲಾವ. ೦೩-೩೬ ವ) . **ಬಿರಿಮುಗುಳು** : ತಳಿತಿಹ ಬಿರಿಮುಗುಳನೀಕ್ಷಿಸುವ ಮಱಿ ದುಂಬಿಗಳ ಮೇಳವದ . . . ಪಕ್ಷಿಮೃಗಕುಲವೆರಸಿ ಮೆಱೆದವು ಬನದ ಸುತ್ತಲು (ಕುವ್ಯಾಆ. ೩-೨); ನಸುನಗುವೊಲು ಬಿರಿಮುಗುಳ ಶೃಂಗಾರದ ಮಲ್ಲಿಗೆಯಿಹುವು (ಕಂನವಿ. ೬-೫೦). [ಬಿರಿ$_1$ + ಮುಗುಳ್$_2$]

**ಬಿರಿಮುಗುಳು** 'ಬಿರಿಮುಗುಳ್' ನೋ.

**ಬಿರಿಮೊಗ್ಗೆ** (ನಾ). = ಬಿರಿಮುಗುಳ್ : ಚಂಪಕದ ಬಿರಿಮೊಗ್ಗೆಯ ತುದಿಗಮೃತದ ಘುಟಿಕೆಯನಿರಿಸಿದವೊಲು (ಜಯುಕಾ. ೫-೯); ಸಾಂಗದಿಂ ಮೊಸಲಾಗಿರ್ದ ಬಿರಿಮೊಗ್ಗೆಯ ನವಿಂಗಳಿಂದರಿಯದೆಯತಿಸಾವಧಾನದಿಂದ . . . ತಿರುವುತಲಿರ್ದರು (ನವಮೋ. ೨೪-೫೬). [ಬಿರಿ$_1$ + ಮೊಗ್ಗೆ$_1$]

**ಬಿರಿಯಾನಿ**, ಬಿರ್ಯಾನಿ (ನಾ). ಮಾಂಸಮಿಶ್ರಿತವಾದ ಒಂದು ಬಗೆಯ ಕಲಸನ್ನ: ಕೋಳಿಮರಿಯ ಮಾಂಸ ಅಥವಾ ಸಿಗಡಿಮೀನುಗಳಿಂದಲೂ ಇದೇ ರೀತಿ ಬಿರಿಯಾನಿ ತಯಾರಿಸಬಹುದು (ಅಡುಗೆ. ೯೯). **ಬಿರ್ಯಾನಿ** : ಬಿರ್ಯಾನಿಯನ್ನು ತಯಾರಿಸುವ ವಿಧಾನವನ್ನು ಆ ಪುಸ್ತಕದಲ್ಲಿ ಹೇಳಿದೆ (ರೂಢಿ). [ ← **ಪಾರ.** ಬಿರ್ಯಾನ್ = ಬೇಯಿಸಿದ ಅಥವಾ ಹುರಿದ ; ಹಿಂ. ಬಿರಿಯಾನೀ; ಮರಾ. ಬಿರಿಯಾಣೀ, ಬಿರ್ಯಾಣೀ]

**ಬಿರಿಯಿಕ್ಕು** (ಕ್ರಿ). ತಡೆ ಹಾಕು ; ನಿಯಂತ್ರಿಸು : ಪಂತಿಪಂತಿಯ ಪೊಂಜುಗಳ ಕೆಂಜೊಡರ್ವೆಳಗು ತನ್ನನೆಣ್ದೆಸೆಯಿಂದಮಾವರಿಸುವಂತೆ ವೋಲ್ ಬಿರಿಯಿಕ್ಕಿದನು ತನ್ನಂಘ್ರಿಶೀಘ್ರತೆಗೆ (ಶ್ರೀರಾಮಾ. ೬೦೩-೬೦). [ ಬಿರಿ$_2$ + ಇಕ್ಕು ]

**ಬಿರಿಯಿಸು**, ಬಿರಿಸು$_1$ (ಕ್ರಿ). ೧. ಸೀಳು ; ಹೋಳು ಮಾಡು : ಆಭೀಳನಿಸ್ಸಾಳನಾದಂ ನೆಱೆ ವಿಷ್ಕಂಭೋಜಗರ್ಭಾಂಡಮನೆ ಬಿರಿ[ಶಾಕಾಂ. ರ]ಯಿಸುತ್ತಿರ್ಪನಂ ಬೇಗದಿಂ ತಾಂ ಪೊಱಮಟ್ಟಂ (ಕುಸುಮಾ. ೪-೯೨). ೨. ಅರಳಿಸು ; ವಿಕಾಸಗೊಳಿಸು : ಸುರಯಿಯ ಬಿರಿಮುಗುಳೊಳು ರವದಳಿಪತಿ ಬಿರಿ[ಶಾಕಾಂ. ರ]ಯಿಸೆ (ಅರ್ಧನೇ. ೬-೮). **ಬಿರಿಸು$_1$** : ೧. ವಿರಹಿಗಳೆದೆಯನು ಬಿರಿಸುವ ಮಳೆಮೋಡ ಗಗನದೊಳೆದ್ದಿದೆ ನೋಡ (ಇಂಚಾಕ. ೯-೪೦). ೨. ಕೇಳದೆ ಹೋದರು ತಾವರೆಹೂವನು ತಾನಾಗಿ ರವಿ ಬಿರಿಸುವನು (ಇಂಕಾಶ. ೦೦೬-೦೯). [ಬಿರಿ$_1$ + ಇಸು$_3$]

**ಬಿರಿಯೂರ್** (ನಾ). ಒಂದು ಊರಿನ ಹೆಸರು : ಮಹೇನ್ದ್ರಮ್ ಅಜಯೆತ್ ಬಿರಿಯೂರ್ ಸುಱೂರ್ ಅನ್ಯತ್ರ ಸಾಮಿಯರಣೇ (ಪ್ರಕಂ. ೦೯೨೦, ೦೦-೫೬; 962). [ ? + ಊರ್ ]

**ಬಿರಿವಡು** (ಕ್ರಿ). ಬಿರುಕು ಬಿಡು ; ಸೀಳಿಹೋಗು : ಬೆಳೆದು ಬೀಗಿ ತಮ್ಮಿಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿಪೊನಲೆ ಪರಿನೀರಾಗೆ (ಶಂಕಶಂ. ೧೦೬-೦೫). [ಬಿರಿ$_2$ + ಪಡು$_1$]

**ಬಿರಿವಣ್ಣು** (ನಾ). (ಚೆನ್ನಾಗಿ ಮಾಗಿ) ಸೀಳಿದ ಹಣ್ಣು ; ಬಿರಿದ ಹಣ್ಣು:

ಗಾಳಿಯೊಳಹಿಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ ಬಾಳೆ ಬಾಯ್ದೆರೆಸುವವು ಬಿರಿವಣ್ಣಿನ ರಸಾವಳಿಗೆ (ತೊರರಾ. ೩-೩-೧೩).
[ ಬಿರಿ$_1$ + ಪಣ್ಣು$_2$ (<ಪಣ್$_3$) ]

**ಬಿರಿವಾಯಿತ** (ನಾ). (?) : ತಿಗಳಾಂಣ್ಯ ಮಂಗಳಾಣ್ಯಾದಲ್ಲಿ ನೆಟ್ಟ ಕಲ್ಲು ಬಿಟ್ಟ ಬಸವಿ ಆಚಾರ ವ್ಯವಹಾರಕ್ಕೆ ಪವಾಡಪುರುಷ ಬಿರಿವಾಯಿತನೆಂದು ಕೊಟ್ಟಂಥಾ ಧರ್ಮ (ಎಕ. XVI. ಗುಬ್ಬಿ. ೭೩-೭೭ ; ಸು. 1672). [?]

**ಬಿರಿವೂ** (ನಾ). ಅರಳಿದ ಹೂವು : ಬಿರಿವೂವಂ ನಗುವ ನಾಲ್ಕು ಮೊಗಮುಂ (ಕಬ್ಬಿಗಕಾ. ೨೪೩) ; ಕೊಸಗಿನ ಬಿರಿವೂವಂ ಕೈವಿಡಿದಂದದಿನೊರ್ವ ಕಲಾವಿದೆ ಒಡಿದು ವಿರಾಜಿಸಿದಳು ಚಿನ್ನದ ಕಾಳಂಜಿಯನು (ಜಯಕಾ. ೨-೧೭).
[ ಬಿರಿ$_1$ + ಪೂ$_2$ ]

**ಬಿರಿವೊಡೆ** (ನಾ). ಒಡೆದ ಹೊಟ್ಟೆ ; ಸೀಳಿದ ಉದರ : ಗಜಮುಖನ ಬಿರಿವೊಡೆಯ ಪಾವಂ . . . ತನ್ನ ಬಸವನಂ ಇನ್ನಾನುಂ ಪಗೆಯಂ ಮಱೆತು ಸಂತಂ ಪುದುವಾಳ್ವುದೆಂದು ಬುದ್ಧಿವೇಳಲೊಡಂ (ರಾಜಶೇಕ. ೪೨-೦೨).
[ ಬಿರಿ$_1$ + ಪೊಡೆ$_3$ ]

**ಬಿರಿಸು$_1$** 'ಬಿರಿಯಿಸು' ನೋ.

**ಬಿರಿಸು$_2$** 'ಬಿಱುಸು' ನೋ.

**ಬಿರಿಹೊಳ್ಳೆ** (ನಾ). ಅರಳಿದ ಮೂಗಿನ ಹೊಳ್ಳೆ : ಮುರುಟಿದ ಮುಸುಡಿನ ಹಳ್ಳದ ಮೂಗಿನ ಬಿರಿಹೊಳ್ಳೆಗಳ . . . ಮೃಗವಿದಿಗೋ ಗುಂಡ್ಡೆಯ ಕಣ್ಣುಗಳ ! (ಶ್ರೀಂದಸ. ೩೭). [ ಬಿರಿ$_1$ + ಹೊಳ್ಳೆ$_1$ ]

**ಬಿರು$_1$** 'ಬಿಱು$_2$' ನೋ.

**ಬಿರು$_2$** 'ಬಿಱು$_3$' ನೋ.

**ಬಿರುಕಿಸು** (ಕ್ರಿ). ಬಿರಿಯುವಂತೆ ಮಾಡು ; ತೆರೆ : . . . ಬಿರುಕಿಸಿದ್ದ ತುಟಿ ಇನ್ನೂ ಹಾಗೆಯೇ ಇದ್ದಂತೆ ತೋರಿತು (ಯೋಧಪು. ೧೩)
[ ಬಿರುಕು (< ಬಿರಿಕು) +— ಇಸು$_3$ ]

**ಬಿರುಕು** 'ಬಿರಿಕು' ನೋ.

**ಬಿರುಗಡಲು** (ನಾ). ಕ್ಷೋಭೆಗೊಂಡ ಸಮುದ್ರ; ಪ್ರಕ್ಷುಬ್ಧವಾದ ಸಾಗರ : "ಭಾರಿ ಬಿರುಗಾಳಿ, ಚಂಡಮಾರುತ; ಬಿರುಗಡಲು" (Heavy-Storm, Sea. ಇಂಕ೩); ಬಿರಿದ ಕಮ್ಮಲರ್ಗಳಲಿ ಮುಗುಳುನಗುತಿಹನು ಬಿರುಗಡಲ ನಿಲುಗನ್ನಡಿಯಲಿ ನಿರುಕಿಪನು (ಗಳಿಬಿಂ. ೨-೯).
[ ಬಿರು$_2$ (<ಬಿಱು$_3$) + ಕಡಲು (<ಕಡಲ್$_2$) ]

**ಬಿರುಗಣ್ಣ** (ನಾ). (ಕೋಪದಿಂದ) ಕಣ್ಣನ್ನು ಉಗ್ರವಾಗಿ ತೆರೆದಿರುವವನು : ಲೇಖನಿ ಉದ್ದವಾಯಿತೆಂದು ಬಿರುಗಣ್ಣರಾಗಬೇಡಿರಿ (ಪುಂಗಾಪು. ೯). [ ಬಿರುಗಣ್ಣು + _ ಅ$_7$ ]

**ಬಿರುಗಣ್ಣು** (ನಾ). (ಕೋಪದಿಂದ) ಉಗ್ರವಾದ ಕಣ್ಣು : ಗುರುತರದಪರಾಧವೆನ್ನಿಂದಲಾಯಿತೆ ಬಿರುಗಣ್ಣನೇತಕೆ ಬಿಡುವೆ (ಇಂಜಾಕ. ೧೨೪-೯) ; ಭೀಮಸೇನನು ಕೆಂಪಾದ ತನ್ನ ಕಣ್ಣುಗಳನ್ನು ಅರಳಿಸಿ ಬಿರುಗಣ್ಣಿನಿಂದ ನೋಡುತ್ತ ... ಪ್ರತಿಜ್ಞೆ ಮಾಡಿದನು (ವಕಥಾ. ೦೦೩) ; ಆನೆಯು ಮುಟ್ಟಲಿಲ್ಲ, ಬಿರುಗಣ್ಣಿನಿಂದ ನೋಡಲಾರಂಭಿಸಿತು (ಶ್ರೀರಾಜು. ೧೯).
[ ಬಿರು$_1$ (<ಬಿಱು$_2$) + ಕಣ್ಣು (<ಕಣ್) ]

**ಬಿರುಗತ್ತಲು** 'ಬಿಱುಗತ್ತಲೆ' ನೋ.

**ಬಿರುಗಯ್ಪು** (ನಾ). ಅಧಿಕವಾದ ಕಹಿಯ ಅನುಭವ : ಈ ನಿಮ್ಮ ಬಿರುಗಯ್ಪುಯು ಬೆಟ್ಟಬೇಗುದಿಯು ಜುಗುಪ್ಸೆಯು . . . ಇಂದಿಗೆ ಹಿತವಾದುದಲ್ಲ (ಮಂತ್ರಕ. ೩೪-೦೩). [ ಬಿರು$_2$ (< ಬಿಱು$_3$) + ಕಯ್ಪು ]

**ಬಿರುಗಾರ್ಮುಳೆ** (ನಾ). ಕಾರ್ಗಾಲದ ಬಿರುಸಾದ ಮಳೆ : ಹೊರಗಡೆ ಹೊಯ್ಯುತಿದೆ ಬಿರುಗಾರ್ಮುಳೆ (ಅಗ್ನಿಹಂ. ೭೯).
[ಬಿರು$_2$ (<ಬಿಱು$_3$) + ಕಾರ್ಮುಳೆ (<ಕಾರ್ಮುಱಿ)]

**ಬಿರುಗಾವಲ್** (ನಾ). ಭದ್ರವಾದ ಪಹರೆ ; ಬಿಗಿಯಾದ ಕಾವಲು : ಅವರನ್ನೆಲ್ಲಾ ನಿರಾಯುಧರನ್ನಾಗಿಸಿ, ಬಿರುಗಾವಲ್ಗುಡುತ್ತಿರುವರು (ಬಿರುಗಂ. ೨೩-೧). [ಬಿರು$_2$ (<ಬಿಱು$_3$) + ಕಾವಲ್$_1$]

**ಬಿರುಗಾಳಿ** 'ಬಿಱುಗಾಳಿ' ನೋ.

**ಬಿರುಗು** (ನಾ). (ಆಲಂ) ಬೆಪ್ಪ ; ಪೊದ್ದ : ಪೆದ್ದ : ಹಾಂಗೆಲ್ಲಾ ಹೇಳಬ್ಯಾಡೇ ! ಅಯ್ಯೋ ನನ್ನ ಬಿರುಗುಮಗಳೇ ! (ಮಲೆಮ. ೯೭).
[< ಸಂ. ಭೃಗು]

**ಬಿರುಗುಟ್ಟು** 'ಬಿಱುಗುಟ್ಟು' ನೋ.

**ಬಿರುಗೂದಲು** (ನಾ). ಬಿರುಸಾದ ಕೂದಲು : ಒರಟುಕೂದಲು : ಇವುಗಳಲ್ಲಿ ಬಿರುಗೂದಲುಗಳಿದ್ದು ಚಲನೆಗೆ ಇವುಗಳಿಂದ ಸಹಾಯ ಒದಗಿದೆ (ಕವಿಕೋ. I, ೦೪೩) ; ಬಿರುಗೂದಲುರೂಪ – ಭಾಗಗಳು ಸಣ್ಣ, ದಪ್ಪ ಬುಡದಿಂದ ಕ್ರಮೇಣ ತುದಿ ಚೂಪು (ಕೀಟಬಿ. ೦೪).
[ಬಿರು$_2$ (< ಬಿಱು$_3$) + ಕೂದಲು (< ಕೂಂದಲ್)]

**ಬಿರುಜವ್ವನ** (ನಾ). ಕಠಿಣವಾದ ಕುಚ : ನಿನ್ನ ತುಂಬುವರಯದ ಗಂಡದೋಳ್ಗಳ ತಳ್ತಪ್ಪುಗೆಯಲ್ಲಿ ನನ್ನೀ ಬಿರುಜವ್ವನವ ಬಿಗಿಪಿನ ಅನಮ್ರತೆಯ ಕರ್ಕಶಾಹಂಕಾರವನ್ನೊಡೆದು ಮಣ್ಮಳಿಗಿಳಿಹಿ ಬಾಗಿಸಿಕೊ ! (ಚಿಬ್ರಅ. ೪೭-೩). [ಬಿರು$_2$ (<ಬಿಱು$_3$) + ಜವ್ವನ]

**ಬಿರುಡೆ** 'ಬಿರಡೆ$_1$' ನೋ.

**ಬಿರುದ** (ನಾ). ಗೌರವಸೂಚಕವಾದ ಪ್ರಶಸ್ತಿಯನ್ನು ಪಡೆದವನು ; ಬಿರುದು ಗಳಿಸಿದವನು : ಧನದರನ್ನರಿವರೆನಿಪ ಪರದರಿಂ ದೇವರನ್ನರಿವರೆನಿಪ ಬಿರುದರಿಂ (ಶಂಕಭಾ. ೩-೨೨ ರಗಳೆ) ; ಬಿರುದರ ಬಿಂಕಮಂ ಕಿಡಿಸಿ (ಎಕ. VII. ಶಿಕಾರಿ. ೩೩೪-೦೩ ; ಸು. 1100) ; ನುಗ್ಗಾಯ್ತು ಬಲ ಸುಮ್ಮಾನ ಬೀತುದು ಬಿರುದರಿಗೆ ಕಾಲೂಱಿತಪಮಾನ (ಕುವ್ಯಾಕ. ೩-೦೪). [ಬಿರುದು + — ಅ$_7$]

**ಬಿರುದಂಕ** (ನಾ). ೧. ಪ್ರಶಸ್ತಿಯಿಂದುಂಟಾಗುವ ಖ್ಯಾತಿ, – ಪ್ರಸಿದ್ಧಿ : ಬಿಂಕದ ಬಿರುದಂಕದ ವಿಡಾಯದ . . . ಪರಿಗೆಕಾಱರ ಮೊತ್ತದೊತ್ತಿನುಭಯಪಾರ್ಶ್ವದೊಳಿಂಬುಗೊಂಡು (ಹಮ್ಮೀರ. ೩-೩೩೩). ೨. = ಬಿರುದ : ಬಿರುದಂಕದ [ರ]ಂತೆ ಪೋಗದೆ ಕಾದುವರ್ (ಧರ್ಮಾಮೃ. ೩-೭೩).
[ಬಿರುದು + ಅಂಕ$_2$]

**ಬಿರುದನಿ** 'ಬಿಱುದನಿ' ನೋ.

**ಬಿರುದಾಯತ** (ನಾ). ಪ್ರಸಿದ್ಧಿಯನ್ನು ಹೊಂದಿದವನು ; ಪ್ರಖ್ಯಾತನಾದವನು : ರಾಯ ಮೆಚ್ಚಿದ ಸಾರಥಿಯ ಬಿರುದಾಯತ [ಕಾಕಾಂ. ಕ]ನು ನೀನೆಂದು ಕೊಂಡಾಡಿದನು ಬಾಹುಕನ (ನಳಚ. ೬-೩೨).
[ಬಿರುದು + — ಆಯತ$_3$ (< — ಆಯ್ತ)]

**ಬಿರುದಾವಲಿ, ಬಿರುದಾವಳಿ** (ನಾ). ೧. ಗೌರವಸೂಚಕವಾಗಿ ಕೊಡುವ ಪ್ರಶಸ್ತಿಗಳ ಸಮೂಹ : ಬಿರುದುಗಳ ಸಾಲು. ೨. (ಆಲಂ) ಅಡ್ಡಹೆಸರುಗಳ ಗುಂಪು : ಗುರುಗಳು ಕೊಟ್ಟ ಈ ಬಿರುದಾವಲಿಯಿಂದಲೇ ಒಬ್ಬರನ್ನೊಬ್ಬರು ಕೂಗಿ ಕರೆಯುತ್ತಿದ್ದರು (ಕಂಗರೋ. ೨). **ಬಿರುದಾವಳಿ:** ೧. ಕಹಳಾಧ್ವನಿಗಳಿಂ ಬಿರುದಾವಳಿಯನೋದುತ (ಪದ್ಮರಾ. ೯-೦೦); ಮಲೆತ ಹಗೆವನ ಪಡಿಮುಖದ ಬಲುವಲಗೆಯಲಿ ಗದೆಯಿಂದ ರಾಯನ ಬಲುಹ ಬಿರುದಾವಳಿಯ ಬರೆವೆನು (ಕುವ್ಯಾಗ. ೩-೩೩); ಬಿರುದಾವಳಿಯ ಪದ್ಯವ ನೋದಲಾಗಿ ... ಸಂತೋಷವಂ ಪಟ್ಟು (ವಕಾಕಾ. ೦) . [ಬಿರುದು + ಆವಲಿ]

**ಬಿರುದಾವಳಿ** 'ಬಿರುದಾವಲಿ' ನೋ.

**ಬಿರುದಿಕ್ಕು** (ಕ್ರಿ). (ಒಂದು ಉದ್ದೇಶಕ್ಕಾಗಿ) ಸವಾಲು ಹಾಕು ; ಸವಾಲು ಎಸೆ : ಧರಣಿಪಕುಲೋತ್ತುಂಗಚೋಳರಾಯಂ ತನ್ನ ಪುರಕೆ ರೋಗದ ಮೇಲೆ ಬಿರುದಿಕ್ಕೆ ಜಂಗಮುಂ ಭರದೆ ಕುಷ್ಠವ್ಯಾಧಿಯಿಂ ಬರಲ್ ಕಂಡು (ಚೆಬಸು. ೩೩-೩೨). [ಬಿರುದು + ಇಕ್ಕು]

**ಬಿರುದು** (ನಾ). ೧. ಗೌರವಸೂಚಕವಾಗಿ ಕೊಡುವ ಹೆಸರು,— ಪ್ರಶಸ್ತಿ: ಕುಡೆ ಪಡೆದಂ ವಶ್ಯವಾಣಿ ಕವಿಚಕ್ರವರ್ತಿಬಿರುದಂ ಬಾಣಂ (ಸೂಕ್ತಿಸು. ೪-೬); ಜಗಭಂಡರಿವರಿಗೆ ಮತ್ತೆ ಬಿರುದುಗಳಿ (ಕುವ್ಯಾದ್ರೌ. ೦೦-೪೩); ಭಕ್ತವತ್ಸಲನೆಂಬ ಬಿರುದ ಪೊತ್ತಾ ಮೇಲೆ ಭಕ್ತರಾಧೀನನಾಗಿರಬೇಡವೆ (ಶೀರಂದ. ೦-೯೩-೩). ೨. ಪ್ರಶಸ್ತಿಯ ಸೂಚಕವಾದ ಅಲಂಕಾರ ಸಾಧನ: ಹೇಡಿ ಬಿರುದ ಕಟ್ಟಿದಂತಾಯಿತ್ತೆನ್ನ ವೇಷ (ಬಸವ. ೩೦೦); ಬಿರುದಿನ ಪೊಂಬಾವಡೆ ಸೆಡಕಿನ ಛಲ್ಲಿ ಕೊರಳ ಮುತ್ತಿನ ಜೂಳಿಯುದ . . . ಹಯ ಖುರವೆತ್ತಿ ಕುಣಿಯುತ್ತೈದಿದುವು (ಕಂಪಾ. ೦೩-೦೪). ೩. ಪ್ರಖ್ಯಾತಿ; ಪ್ರಸಿದ್ಧಿ: 'ಬಿರುದಾಯುತ' ಪರಾ. ೪. ಸ್ಪರ್ಧೆಗೆ ನೀಡುವ ಆಹ್ವಾನ; ಸವಾಲು: 'ಬಿರುದಿಕ್ಕು' ಪರಾ.

**ಬಿರುದಂತೆಂಬರ ಗಂಡ** = ಪ್ರಶಸ್ತಿಯನ್ನು ಗಳಿಸಿದ ವೀರರನ್ನು ನಿಗ್ರಹಿಸಬಲ್ಲ ವೀರ; ಒಂದು ಬಿರುದು: ಬಿರುದಂತೆಂಬರ ಗಂಡ ಭೀಮಪರಾಕ್ರಮಿ ಧುರಧೀರನೇಕಾಂಗವೀರ (ಕಂಪಾ. ೦-೨೦); ಸಕಲಕಲಾ ಪ್ರವೀಣ ಬಿರುದಂತೆಂಬರ ಗಂಡಂ (ಶಳ. ೦-೯೭ ಪ); ಬಿರುದಂತೆಂಬರ ಗಂಡ ಎಂಬ ಮಹಾಬಿರುದು ಶ್ರೀಮನ್ಮಹೀಶೂರಮಹಾರಾಜವಂಶಕ್ಕಲ್ಲದೆ ಇತರರಿಗೆ ಸಲ್ಲುವುದಿಲ್ಲ (ಬಿರುಗಂ. ೨೦-೦೨). **ಬಿರುದಗುರ್ವ** = ತಾನು ಗಳಿಸಿದ ಪ್ರಶಸ್ತಿಗಳಿಂದ ವೈರಿಜನಕ್ಕೆ ಭಯಂಕರಸ್ವರೂಪನಾದವನು: ವೈರಿಮದಭಂಜನಂ ಬಿರುದಗುರ್ವ್ವನುಂ (ಶಾಇಇ. XX, ೪೦-೨೨; 1069). **ಬಿರುದನಿಕ್ಕು** = ಬಿರುದಿಕ್ಕು: ಸುರಪುರದ ಸೂಳೆಯರ ಸೊಬಗಿಗೆ ಬಿರುದನಿಕ್ಕುವ . . . ನವ್ಯಯವ್ವನಭರದ ವನಿತೆಯರೊಪ್ಪಿದರು (ಕೊರರಾ. ೦-೩-೨೭); ಬಿರುದನಿಕ್ಕುವೆನಿನ್ನು ದಶಕಂಧರಗೆ ಕೈ ಮಾಡಿದ ನಿಶಾಚರನರವೆ ನೆಂದುಬ್ಬರದ ಹರುಷವ ತಾಳ್ದನಾ ಹನುಮ (ಕೊರರಾ. ೩-೩-೨೭). **ಬಿರುದ ಭಂಗಾಱ** = ಪ್ರಶಸ್ತಿಗಳನ್ನು ಹೊಂದಿದವರಲ್ಲಿ ಶ್ರೇಷ್ಠ ನಾದವನು; ಒಂದು ಬಿರುದು: ತ್ಯಾಗವಿನೋದಂ ಮುಂಜು[ಡಿ]ಯ ಮಣ್ಡಳಿಕ ಬಿರುದ ಭಂಗಾಱಂ (ಶಾಇಇ. XI-i, ೯೭-೭; 1062). **ಬಿರುದ ರಂಕುಸ** = ಪ್ರಶಸ್ತಿಗಳನ್ನು ಗಳಿಸಿಕೊಂಡವರಿಗೆ ಅಂಕುಶದಂತಿರು ವವನು; ಒಂದು ಬಿರುದು: ಮಾವನ ಬಣ್ಣ ಬಿರುದರಂಕುಸ ಬಣ್ಣರ ಭೀಮ (ಎಕ. VI, ಶಕ್ಕಮ. ೬೦-೦೦; 1058 ?); ಪರಚಕ್ರಸಾಧನ ಬಿರುದ ರಂಕುಸಂ (ಶಾಇಇ. XI-i, ೯೭-೦೦; 1062). **ಬಿರುದರ ಸಿಂಗ** = ಪ್ರಶಸ್ತಿ ಯನ್ನು ಗಳಿಸಿದವರಿಗೆ ಸಿಂಹದಂತಿರುವವನು; ಒಂದು ಬಿರುದು: ಬಿರುದರ ಸಿಂಗಂ ಸಾಮನ್ತಭುಜಂಗಂ (ಶಾಇಇ. XI-i, ೬೪-೦೦; 1041). **ಬಿರುದರಾದಿತ್ಯ** = ಪ್ರಶಸ್ತಿಯನ್ನು ಗಳಿಸಿದವರಿಗೆ ಸೂರ್ಯನಂತಿರು ವವನು; ಒಂದು ಬಿರುದು: ಕಲಿಗಳ ಮೊಗದ ಕಯಿ ಬಿರುದರಾದಿತ್ಯಂ (ಎಕ. VII, ಶಿಕಾ. ೧೨೦-೯; 1048). **ಬಿರುದರೂವಾರಿ** = ಕೀರ್ತಿಯನ್ನು ಪಡೆದ ಶಿಲ್ಪಿ; ಒಂದು ಬಿರುದು: ದಾಸೋಜನಿಗೆ 'ಬಿರುದ ರೂವಾರಿ ಗೋಂದಲ ಬಡಿವ' ಎಂದೂ . . . ಬಿರುದುಗಳಿತ್ತೆಂದು ಶಾಸನ ಗಳಿಂದ ನಮಗೆ ಗೊತ್ತಾಗಿದೆ (ಭಾರಶ. ೩೦೩). **ಬಿರುದಿನಂಕ** = ಬಿರುದಂಕ ೧: ಎಡೆಯಂ ಕೋಲೊಡ್ಡಿದ [ಪಾಠಾ. ಕೋಲಾಡಿದ, ತೋಲಾಡಿದ]ಬಿರುದಿನಂಕ ದಂತಿರೆ ಖಚರಂ (ಅಂಥ. ೩-೬೪); ಭುವನಕ್ಕಾರಾಧ್ಯನೆಂಬೀ ನೆಗಬ್ದ ಬಿರುದಿ ನಂಕಕ್ಕೆ ತಕ್ಕಂದದಿಂ . . . ಬಿಲ್ಲೊಜಂ ಗಾಂಡೀವಿಯೊಳ್ಕಾದಿದಂ (ಗದಾಯು. ೨-೩೦); ಅದಿರದೆ ಪೆಱತೆಗೆಯದೆ ಬೆಚ್ಚದೆ ಬೆದಱದೆ . . . ಕೋಲೊಡ್ಡಿದ ಬಿರುದಿನಂಕದಂದದಿನದೇಂ ಪರಿಚ್ಛೇದಮಾತನೊಳ್ ಕೂಡಿದುದೋ (ತುಳುಕು. ೧೨-೬). **ಬಿರುದಿನ ತೊಡರ್** = ಬಿರುದಿನ ಸಂಕೇತವಾದ ಕಾಲಿನ ಬಳೆ: ಬಿರುದಿನ ತೊಡರ್ ಝುಣಝುಣಿಸಲೇಳ್ದು (ರಾಜಶೇ.೬-೦೦ ಪ). **ಬಿರುದಿನೋಲೆ** = ಪ್ರಶಸ್ತಿಸೂಚಕವಾದ ಪತ್ರ: ತನ್ನ ಬಿರುದಿನೋಲೆಗಂಜ ಜಾಯಿಲಗಳ ನನ್ನೊಡೆಯನ ಕೇಳದಾನು ತನ್ನವರೊಡನಟ್ಟುವಣ ಗಡವಿಾ ಕಜ್ಜಕಿನ್ನೆಣೆಯಿಲ್ಲ ಭೂಮಿಯಲಿ (ಕುರಾಸಾಂ. ೦೦-೦೦). **ಬಿರುದುಧ್ವಜ** = ಪ್ರಶಸ್ತಿಸೂಚಕವಾದ ಬಾವುಟ; ಲಾಂಛನದ ಧ್ವಜ: ಕೆಲವು ಭದ್ರ ಗಜಗಳು ಬಿರುದುಧ್ವಜಗಳನ್ನು ಮುರಿದು ತಿರುಗುತ್ತಿದ್ದವು (ಕೃವಾಇ. ೬೪). **ಬಿರುದುಪಾಡು, ಬಿರುದ ಪಾಡು** = ಪ್ರಶಂಸೆಯ ಕೀರ್ತನೆ; ಗುಣ ಗಾನ: ಬಿರುದುಪಾಡಿನ ಚೂಳಿಗಲಹದ ಕದಡುಜೂಜಿನ ತೋಳುವಲರೊಳ ತೋಟಿ ಮಸಗಿತು ದಿವಸದಿವಸದಲಿ (ಕುವ್ಯಾಕ. ೮-೦); ಪ್ರತಿಗರುಡಿಕಾಱ ಬಿರುದ[ಪಾಠಾ. ರಿದ, ರುದಿನ]ಪಾಡಿಂಗೆ ಒದಗಲು ವೀರಪಟ್ಟಿಯ ಕಟ್ಟಿ ತಿಗುರನೇಱಿಸಿಕೊಂಬೆ (ಬಸವ. ೬೦೦). **ಬಿರುದುಪೆಂಡೆಯ** = ಬಿರುದಿನ ತೊಡರ್: ಬಿರುದುಪೆಂಡೆಯ ಕಾಲೊಳಿಟ್ಟು ಪೊಗಳಿಸಿಕೊಂಬ ಧುರಧೀರ ಮಾವತಿಗರು . . . ಇರ್ದರವನೀಶನೋಲಗದೊಳು (ತಬಪು. ೬-೦೩). **ಬಿರುದುಬಾವಲಿ** = ಪ್ರಶಸ್ತಿಸೂಚಕವಾದ ವಸ್ತುವಿಶೇಷ: ಬಿರುದು ಬಾವಲಿ ಹೆಚ್ಚೆ? ಹೆಸರು ಹೊಗಳಿಕೆ ಹೆಚ್ಚೆ? (ಕೋಗಿಲೆ. ೯೩-೩); ಪೋಲೀಸ್ ಅಧಿಕಾರಿ . . . ಎದೆಯ ಮೇಲೆ ಬಿರುದುಬಾವಲಿಗಳನ್ನು ಧರಿಸಿದ್ದ ಹಳ್ಳಿಯ ಹೆಗ್ಗಡೆ–ಇವರೆಲ್ಲ ಅವನ ಬಳಿ ನಿಂತಿದ್ದರು (ಕೃಸರು. ೬೪); ಈ ರಾಜಾಸ್ಥಾನ ದಲ್ಲಿ ಬಿರುದುಬಾವಲಿಗಳನ್ನು ನೀವೇ ಹಂಚುವಿರಂತೆ (ತುಬಿಂಬ. ೩೨): 'ಬಾವುಲಿ$_2$' ಪರಾ. P ಇದು ದ್ವಿರುಕ್ತಿಯಂತಿರುವ ಒಂದು ದ್ವಂದ್ವಪದ.

[ದೇ.॥ ತಮಿ. ಮಲ. ವಿರುತು; ತುಳು. ಬಿರುದು, ಬಿರ್ದ್; ತೆಲು. ಬಿರುದು, ಬಿರುದ./ಸಂ. ವಿರುದ]

**ಬಿರುದುಗೆದಱು** (ಕ್ರಿ). (ತನ್ನ) ಪ್ರಶಸ್ತಿಯನ್ನು ಹೇಳಿಕೊಳ್ಳು; ಹಿರಿಮೆಯನ್ನು ಮೆರೆ: ಇದಿರಾಂತು ಸುರಗಿಯೊಳಹವಿಾನದಟರು ಬಿರುದುಗೆದಱುತ್ತಹಿತರಿಱಿದಾಡಿದರು (ಕುವ್ಯಾಭೀ. ೪-೨೦).

[ಬಿರುದು + ಕೆದಱು$_1$ (<ಕೆದಱ್$_1$)]

**ಬಿರುನಗೆ** 'ಬಿಱುನಗೆ' ನೋ.

**ಬಿರುನುಡಿ** 'ಬಿಱುನುಡಿ' ನೋ.

**ಬಿರುನೆಲ** (ನಾ). ಒರಟಾದ ಭೂಮಿ; ಬಿರುಸಾದ ನೆಲ: ಬಿರು ನೆಲವನ್ನು ಎಂದೂ ಮೆಟ್ಟದಿದ್ದ ಅವನ ಕಾಲುಗಳಲ್ಲಿ ನೆತ್ತರು ಹನಿಯುತ್ತಿತ್ತು (ಹೇಮಕೂ. ೩೯).

[ಬಿರು$_2$ (<ಬಿಱು$_3$) + ನೆಲ]

**ಬಿರುನೋಟ** 'ಬಿಱುನೋಟ' ನೋ.

**ಬಿರುಬ** 'ಬಿಱುಬ' ನೋ.

**ಬಿರುಬಿಸಿಲ್** 'ಬಿಱುವಿಸಿಲ್' ನೋ.

**ಬಿರುಬಿಸಿಲು** 'ಬಿಱುವಿಸಿಲ್' ನೋ.

**ಬಿರುಬು** 'ಬಿಱುಬು' ನೋ.

**ಬಿರುಮಳೆ** 'ಬಿಱುವಳೆ' ನೋ.

**ಬಿರುಮಾತು** 'ಬಿಱುವಾತು' ನೋ.

**ಬಿರುವರಿ** 'ಬಿಱುವರಿ$_2$' ನೋ.

**ಬಿರುವಳೆ** 'ಬಿಱುವಳೆ' ನೋ.

**ಬಿರುವುರಿ** (ನಾ). ತೀವ್ರವಾದ ಜ್ವಾಲೆ; ತೀಕ್ಷ್ಣವಾದ ಉರಿ: ಕಂಪಿಸಿತು ರೌಪ್ಯಗಿರಿ; ಸುಗಿದರಮರರ್ ಬೆದರಿ ಬಿರುವುರಿಗೆ! (ಶತ್ಯಾಂಗ. ೮೩-೨೬೯).

[ಬಿರು$_2$ (<ಬಿಱು$_3$) + ಉರಿ$_2$]

**ಬಿರುವೆಲರ್** 'ಬಿಱುವೆಲರ್' ನೋ.

**ಬಿರುವೆಲರು** 'ಬಿಱುವೆಲರ್' ನೋ.

**ಬಿರುವೇಸಗೆ** (ನಾ). ತೀಕ್ಷ್ಣವಾದ ಬೇಸಗೆಯ ಕಾಲ: ದವದ ದಳ್ಳುರಿ ದಹಿಸೆ ಬಿರುವೇಸಗೆಯ ಮಲೆಯ ನೀರಸಾರಣ್ಯಮಂ (ಶ್ರೀರಾಪಾ. ೯೩-೪೩೩).

[ಬಿರು$_2$ (<ಬಿಱು$_3$) + ಬೇಸಗೆ]

**ಬಿರುಸರ** 'ಬಿಱುಸರ' ನೋ.

**ಬಿರುಸು** 'ಬಿಱುಸು' ನೋ.

**ಬಿರುಸುಗಾಳಿ** (ನಾ). ರಭಸವಾಗಿ ಬೀಸುವ ಗಾಳಿ ; ಜೋರಾಗಿ ಬೀಸುವ ಗಾಳಿ : ಇರುಳುವೇಳೆಯ ಬಿರುಸುಗಾಳಿಯು ಕರಗಳಿಂದಲೆ ತರುವೆನು (ಶುಕ್ರ. ೨೯-೫) ; ಬಿರುಸುಗಾಳಿಯುದರ ಬರವ, ಕೇಳು, ಅದೋ ಸಾರುತಿದೆ ! (ಶಾಂತಪ. ೩೯-೦೪). [ ಬಿರುಸು (<ಬಿಱುಸು) + ಗಾಳಿ$_1$ ]

**ಬಿರುಸುಗೂದಲು** (ನಾ). ಒರಟಾದ ಕೂದಲು : ಸಿಂಹದ ಹೆಗಲುಗಳ ಮೇಲೆ ಬಿರುಸುಗೂದಲು ಉದ್ದವಾಗಿ ಬೆಳೆಯುವುವು (ಮುಂಬಯು. ೬-೨೦೬). [ಬಿರುಸು (<ಬಿಱುಸು) + ಕೂದಲು (<ಕುಂದಲ್)]

**ಬಿರೋಜಾ** (ನಾ). ನೀಲಿವಜ್ರದ ಬಣ್ಣವಿರುವ ಒಂದು ಬಗೆಯ ಶಿಲೆ : ಮೈಸೂರಲ್ಲಿ ದೊರೆಯುವ ಬಿರೋಜಾ ಎಂಬ ಶಿಲೆಯು (ಮುಂಬಯು. ೨-೨೫೨). [ ←ಪಾರ. ಬೀರೋಜನ್ ; ಮರಾ. ಬಿರೋಜಾ ]

**ಬಿರ್ಕು** 'ಬಿಕ್ಕು$_2$' ನೋ.

**ಬಿರ್ಕುಬಿರ್ಕು** (ನಾ). ಒಂದು ಅನುಕರಣ ಶಬ್ದ : ಮೆಯ್ಯ ಬಿರ್ಕು ಬಿರ್ಕನೆ ನಿಬ್ಬರಂ ಬಿರಿದೊಳಱುಗುಂ ಜೋಲ್ದುಂ ವೈಚಿತ್ರ್ಯಜೀವರ ರೂಪದಿಂ (ಶಾಂತಿಕೃ. ೬-೯೨).

**ಬಿರ್ಚಿಸು, ಬಿಚ್ಚಿಸು** (ಕ್ರಿ). ಕಳಚುವಂತೆ ಮಾಡು ; ತೆಗೆಸು : ದಿಗ್ದಂತಿಯಂ ಬಾಯ್ವಿಡೆ ಬೆದಱಿಸುತುಂ ನಭೋಬಂಧಮಂ ಬಿರ್ಚಿಸುತುಂ (ಶಾಂತೀಶ್ವ. ೦೫-೩೯). **ಬಿಚ್ಚಿಸು** : ಆ ಬಂಧನದಿಂದ ಅದಕ್ಕೆ ತೊಂದರೆ ಯೆಂದು ಆ ಕಟ್ಟನ್ನು ಬಿಚ್ಚಿಸಿದೆ (ಶಂಗಾಳ್ವ. ೦೫೦). [ಬಿರ್ಚು + -ಇಸು$_3$]

**ಬಿರ್ಚು, ಬಿಚ್ಚು$_1$** (ಕ್ರಿ). ೧. ಬೇರೆಮಾಡು ; ವಿಭಾಗಿಸು ; ಭಾಗ ಮಾಡು : "ಬಿರ್ಚು—ವಿಭಜನೇ" (ಶಮಂಧ) ; ಪಸುಳೆಯುನ್ ಬಾಳ್ ಮೊನೆಗೆ ಚುರ್ಚಿದನ್, ಬಿರ್ಚಿದನ್, ಕೊಯ್ದನ್ (ಅಶ್ವತ್ಥಾ. ೩-೦೬). ೨. ಬಿಡಿಸು ; ಸುಲಿ : ಬೆಳೆದೆಳ್ಳಂ ಬಿರ್ಚಿ ರಾಶಿಸ್ಥಿತಿಯಿನಿರಿಸಿ ತದ್ರಾಶಿಯಂ ಮತ್ತಮೋರಂತಳವಟ್ಟಿರ್ದಂದದಿಂದಾ ಕೊದಳಿಯ ಮಣಿಯೊಳ್ ಶೀವು ತಿರ್ದಾಗಳ್ (ಸುಕುಮಾ. ೫-೩೯). ೩. ತೆರೆ ; ಅಗಲಿಸು : ಧ್ಯಾನದೊಳಿರ್ದ ಲೋಚನಯುಗಳವ ಬಿರ್ಚಿಯಾನಂದ ಮನದೊಳು ಪೆರ್ಚಿ (ಪೋಹಶ. ೨೦-೩೯). ೪. ಕಳಚಿಕೊಳ್ಳು ; ಬಿಚ್ಚಿಕೊಳ್ಳು : ಹಱಿಗವಿಗಳ ಕಬ್ಬಂಗಳ ಹೊಱಗೆಳೆಯುಕ್ಕರದ ಹೊಲಿಗೆ ಬಿರ್ಚಿದೊಡಲ್ಲಂ ಬಱಿ ತಾಱಿಗೆ ಬೀಱಿಗ (ಗಂಕ. ೦-೨೩) ; ಸಂಧಿಬಂಧಮದು ಪೋ ಬಿರ್ಚಿತ್ತೆನಲ್ (ಸುಕುಮಾ. ೦೯-೦೦೦). ೫. ಇಬ್ಭಾಗವಾಗು ; ಬಿರಿ : ಆ ಗಿರಿ ಬಿರ್ಚಿದಂತೆಯುಂ ಸರ್ಪಂ ಸತ್ವಂಗಿಡ ದಂತೆಯುಂ ಪ್ರತ್ಯೇಕಮವರವರ್ಗೆ ಪ್ರಾಣವನಿತ್ತು (ಸಕಪ್ಟ. ೯). ೬. ಬೇರೆ ಯಾಗು ; ಅಗಲು : ಹಂಸಮಿಥುನಮಂ ನೋಡಿ ನಸುನಗುತ್ತುಮಿವು ಬಿರ್ಚಿ ಬಿರ್ಚುಗುಂ ತೊಲಗಿಮೆಂದು . . . ಪಂಜನಮುಮಂ ತೊಲಗಿಸಿ (ವರ್ಧಪು. ೪-೯ ವ) ; ಅಂತು ಬಿಚ್ಚಂತೆ ಬಿರ್ಚದಚ್ಚಳಿಯದ . . . ಶಿವಯೋಗ ನಿದ್ರಾಮುದ್ರಿತನಾಗಿ (ಕೃಷಬಿ. ೨೩-೦೦ ವ). ೭. ಇಲ್ಲವಾಗು ; ತೊಲಗು : ಪಕ್ಷ್ಮಯುಗ್ಮನಿದ್ರಾಳುತೆ ಬಿ[ಶಾಕಾಂ. ವೆ]ರ್ಚೆ ಬಳ್ಳಿಯುಲಿ ಪೆರ್ಚೆ ಮನಂ ಬಿಡೆ ಪೊಯ್ದು ಕರ್ಣಮಂ ಲೀಲೆಯಿನೀಶ ನಿನ್ನ ಗಜರಾಜಗಳೆಬ್ಬಿಪುವಲ್ತೆ ಸೆಜ್ಜೆಯಿಂ (ಶಾಂತಿಕೃ. ೫-೯೦). ೮. ಹರಡು ; ಅಗಲಿಸು : ರೂಢಿಯ ಪರಮಾತ್ಮನದೇಂ . . . ಕರಿಯಂ ಸೀಳ್ದಿಡಾಡುವನೆ ಬಿರ್ಚಿ ಜೆಡೆಯ ನೆರ್ದಾಡುವನೇ (ಸಮುಶ. ೬-೬೯) ; ಪಳಂಚಲೆದೊಲೆದು ಪಕ್ಕಮುಂ ಬಿರ್ಚಿ ಲಲ್ಲೆಗೆಯ್ದುತ್ತು ಪಾರಿವಂ ಪಾರಿವದೊಳ್ (ಗಂಕ. ೨-೩೨). ೯. ನೀರು ಕೋಡಿ ಹರಿ : ಒಲ್ದು ಕೂಟದೊಳ್ ನೆಗಳ್ವಿನಮುಂಗಱಾಂಬು ಕಱಿ ಬಿರ್ಚಿದ ಪೋಲ್ ಸತಿಯರ್ಗೆ ಪೊಣ್ಮುಗುಂ (ಮುಸ್ವಶಿ. ೩-೦೯). ೧೦. ವ್ಯಕ್ತಪಡಿಸು ; ಪ್ರಕಟಗೊಳಿಸು : ಒಡನೆ ಸುದರ್ಶನಶಿರೋಮಣಿ ನಿರ್ದೋಷಿ ತಾನೆಂದು ಹೃದಯದ ಮಾತ ಬಿರ್ಚಿದಳು (ಪೋಹಶ. ೬-೫). **ಬಿಚ್ಚು$_1$** : ೧. ಕಾಯದ ಜೀವದ ಹೊಲಿಗೆಯು ಸಂದ ಬಿಚ್ಚಲಱಿಯದವನು ನಾನು (ಸಿದ್ಧವ.ಶ ೪೦-೦೨೯). ೨. ಶಲ್ಯನ ಶರಹತಿಗೆ ಬಿಚ್ಚಿದವು ಹೂಡಿದ ಹರಿಗೆಯಿಬ್ಬಗಿಯಾದವಾ ಬದ್ದರದ ಬಂಡಿಗಳು (ಕುವ್ಯಾಕ. ೨-೩೯); ಫಣಿಪ ಕೂರ್ಮನ ಹೃದಯ ಬಿಚ್ಚಿತು . . . ದಶಾಸ್ಯನ ಪದವಿಘಾತಿಗೆ (ತೊರರಾ. ೦-೦೫-೨೦). ೬. ಇನಿಯರ್ ಬಿಚ್ಚದೆ ಮುಚ್ಚಿ ಬಾಟ್ಗೆ ಸೊಬಗಿಂ (ಅನಂತಪು. ೯-೩೦); ತಾಯುನೆಳಗಱು ಬಿಚ್ಚುವಂತೆಯ್ಯನೊಯ್ಯನತ್ಯಾಯಾಸದಿಂದಗಲ್ದು . . . ಸೌಮಿತ್ರಿ ಸಾಗಿದನು (ಕೃಪಿಶಾ. ೦೯-೩೦). ೧೦. ಕೋಪವಂ ಕಣ್ಗಳೊಳ್ ಬಿಚ್ಚುವರ್ (ಕಿಪಿಪು. ೨೯-೦೬); ಅವರ ಕಥೆ ಓದಿ ಎಂಥೆಂಥ ಪಂಡಿತರೂ ಸಹ ತಲೆದೂಗುವರೆಂಬ ಸುದ್ದಿಯನ್ನೂ ಬಿಚ್ಚುವರು (ಕಟ್ಟಹೂ. ೦೦). ೧೧. ಸಡಿಲಿಸು ; ಕಳಚು : ನಿಚ್ಚಟನೆ ನೀನವನ ಬಂಧನ ಬಿಚ್ಚುವೀ ಗಳಿಗೆಗಳ ಕಂಡುದೆ ಅಚ್ಚರಿ ಕಣಾ (ಕಾಳ್ಮಶಾ. ೦೬-೨೦); ಆ ಗಂಟುಗಳನ್ನು ಬಿಚ್ಚಲು ನಮ್ಮ ಯಾರ ಕೈಯಲ್ಲೂ ಆಗುವುದಿಲ್ಲ (ಆರ್ದಾಶ. ೬೬). ೧೨. ಸಡಿಲವಾಗು ; ಶಿಥಿಲವಾಗು : ಬಿಚ್ಚದಗಲದೆ ಲೆಕ್ಕಿಸದೆ ಧೃತಿ ಬಿಚ್ಚದತಿಬಳ ಬೊಮ್ಮದೇವಂ ಹೆಚ್ಚಿ ಹೋ ಹೋ ನಿಲ್ಲುನಿಲ್ಲೆಂದೆನುತ ರ್ಝಂಕಿಸಲು . . . ಮುದಕರಿ ಕೆಡೆದು ಮಡಿಯಿತು (ಬಿಕಪು. ೨೨-೩೩). ೧೩. ಕೆದರು ; ಹರಡು : ಕಿಡಿಗಳ ಬಿಚ್ಚಲುದುರಿತು ಚಾಪಮಾರ್ಗಣ ರಥ ತುರಂಗಚಯ (ಕುವ್ಯಾಕ. ೨೦-೦೯). ೧೪. ಅರಳಿಸು ; ವಿಕಾಸಗೊಳಿಸು : ಸೌರಭದ ಮುದ್ರೆಯನೊಡೆವಂತೆ ಹೂವಂ ಬಿಚ್ಚುತೊಳಗಣ ಪರಿಮಳದ ತೆನೆಯು ಪುಗ್ಗುಲೊಳೊಗ್ಗಿ (ಬಕಶ. ೬-೬೯). ೧೫. ಕತ್ತಿ ಮುಂತಾದು ವನ್ನು ಸೆಳೆ, —ಹಿರಿ : 'ಬಿಚ್ಚುಗತ್ತಿ' ಪರಾ. ೧೬. ವಿಶಾಲವಾಗು; ವೈಶಾಲ್ಯವನ್ನು ಹೊಂದು: 'ಬಿಚ್ಚುಮನಸ್ಸು' ಪರಾ. ೧೭. (ಆಲಂ) ಕೊಡು; ನೀಡು: ಐದು ರೂಬಲ್ ಬಿಚ್ಚು. ನಾನವಳನ್ನು ಬಿಡಿಸ್ತೀನಿ (ಪುನರು. ೬೭೪); ಸಣ್ಣ ಪುಟ್ಟ ಕೆಲಸಗಳಿಗೂ ಹಣ ಬಿಚ್ಚದಿದ್ದರೆ ಮದುವೆ ನಡೆಯುವುದಿಲ್ಲ (ನನ್ನೂರು. ೩೦೬).

**ಬಿಚ್ಚಿ ಹೇಳು** = ವಿವರಿಸಿ ಹೇಳು ; ವಿಶದೀಕರಿಸು : ದಯಮಾಡಿ ನನ್ನ ಸಹೋದರರನ್ನು ಹೊರಗೆ ಕಳುಹಿರಿ, ಅಂದರೆ ನಾನು ತಮಗೆಲ್ಲಾ ಬಿಚ್ಚಿ ಹೇಳುತ್ತೇನೆ (ಮುಂಬಯು. ೯-೬೬). 'ಬಿರಿ$_1$' ಪರಾ.

[ದೇ.II ತುಳು. ಬಿಚ್ಚು; ತೆಲು. ವಿಚ್ಚು, ವಿಜ್ಜು, ವಿರುಚು]

**ಬಿರ್ಚುವಲೆ** (ನಾ). ಅಗಲವಾಗಿ ಹರಡಿಕೊಳ್ಳುವ ಒಂದು ಬಗೆಯ ಬಲೆ : ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂ ಬುಗದೆ ಬಿರ್ಚಿ ಬೀಸಿದಾಗಳ್ (ರಾಜಶೇ. ೫-೦೦೯ ವ). [ಬಿರ್ಚು + ಬಲೆ$_1$]

**ಬಿರ್ದ** 'ಬೀಟ್$_1$' ಪರಾ.

**ಬಿರ್ದಿ, ಬಿದ್ದಿ** (ನಾ). ಮುದುಕಿ ; ವೃದ್ಧೆ : ಗಂಭೀರೆಯೆಂಬೊಳೊರ್ವಳ್ ಬಿ[ರ್ದಿ] [ಶಾಕಾಂ. ದ್ದಿ, ಳ್ದಿ]ಯಾಕೆಯ ಮಗಳ್ ಹರಿಣಿಯೆಂಬೊಳ್ (ವಡ್ಡಾರಾ. ೦೫-೦೨) ; ಬಿಸಿಯುಂಬಲಿಯಂ ಬಾಯೊಳಿಟ್ಟಾಗಳ್ ಕಯ್ಯುಂ ಬಾಯುಂ ಬೆಂದೊಡೆ ಮೆಯ್ಯನದಿರ್ಚಿ ಕೈಯಂ ಬಿದಿರ್ದವನಂ ಬಿರ್ದಿ ಕಂಡು ನಕ್ಕಂತೆಂದಳ್ (ವಡ್ಡಾರಾ. ೦೬೪-೨೦). **ಬಿದ್ದಿ** : ಬೆಕ್ಕಸಂಬಟ್ಟು ನಿಂದಂತೆ ನೋಟ್ಪಲ್ಲಿ ಪಳವಿಸುತ್ತಿರ್ದ ಬಡಬಿದ್ದಿಯಂ ಕಂಡು (ಬಂಹಂ. ೬-೦೨ ವ).

[< ಸಂ. ವೃದ್ಧಾ]

**ಬಿರ್ದಿಕ್ಕು, ಬಿದ್ದಿಕ್ಕು** (ಕ್ರಿ). ಔತಣವನ್ನು ಏರ್ಪಡಿಸು : ಈ ವಿದ್ಯಾಧರ ಸೈನ್ಯಮಂ ನಿಮಿಷದಿಂ ಪರ್ದಿಂಗೆ ಬಿರ್ದಿಕ್ಕುವೆಂ (ಕಂರಾಮಾ. ೯-೫೬) ; ಭೀಮಸೇನನುದ್ದಾಮಕೋಪದಿಂ ಕುರುರಾಜನನುಜವ್ರಾತಮಂ ಜವಂಗೆ ಬಿರ್ದಿಕ್ಕಿದಂ (ಸೇಮಪು.೦೨-೬೩ ವ). **ಬಿದ್ದಿಕ್ಕು** : ಬಿದ್ದಿ[ಶಾಕಾಂ. ಬಡಿದಿ]ಕ್ಕಿದ ಪೊಲಾಯ್ಮಮಮ ವಿಲಯದ ಮೃತ್ಯುದೇವತೆಗೆ (ತೊರರಾ. ೬-೨೬-೨೦).

[ಬಿರ್ದು$_2$ + ಇಕ್ಕು]

**ಬಿರ್ದಿನ, ದಿಬ್ಬಣ, ನಿಬ್ಬಣ, ಬಿದ್ದಣ, ಬಿದ್ದಿನ** (ನಾ). ೧. ಆತಿಥ್ಯಕ್ಕೆ ಪಾತ್ರನಾದವನು ; ಉಪಚಾರಕ್ಕೆ ಅರ್ಹನಾದವನು ; ಅತಿಥಿ :

